ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ ನಿಘಂಟು

ಆರನೆಯ ಸಂಪುಟ

"ಶಬ್ದಪಾರಮಾರ್ಗಮಶಕ್ಯಂ"

-ಕೇಶಿರಾಜ



ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ : : ಬೆಂಗಳೂರು-೧೮

೧೯೯೦

# ಕನ್ನಡ ನಿಘಂಟು ಸಂಪಾದಕ ಸಮಿತಿ

(೧೯೯೦ನೆಯ ಡಿಸೆಂಬರ್ ತಿಂಗಳಿನಲ್ಲಿ ಇದ್ದಂತೆ)

**ಅಧ್ಯಕ್ಷರು ಮತ್ತು ಪ್ರಧಾನ ಸಂಪಾದಕರು**

ಪ್ರೊ. ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ

**ಸದಸ್ಯರು**

ಡಾ. ಆರ್. ಸಿ. ಹಿರೇಮಠ, ಎಂ.ಎ., ಪಿಎಚ್.ಡಿ.
ಡಾ. ಜಿ. ಎಸ್. ಗಾಯಿ, ಎಂ.ಎ., ಪಿಎಚ್.ಡಿ.
ಡಾ. ಹಾ. ಮಾ. ನಾಯಕ, ಎಂ.ಎ., ಪಿಎಚ್.ಡಿ.
ಡಾ. ಜಿ.ಎಸ್. ಶಿವರುದ್ರಪ್ಪ, ಎಂ.ಎ., ಪಿಎಚ್.ಡಿ
ಡಾ. ಎಂ. ಚಿದಾನಂದಮೂರ್ತಿ, ಎಂ.ಎ., ಪಿಎಚ್.ಡಿ.
ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ, ಎಂ.ಎ., ಪಿಎಚ್.ಡಿ.
ಡಾ. ಕೆ.ವಿ. ರಮೇಶ್, ಎಂ.ಎ., ಪಿಎಚ್.ಡಿ.
ಡಾ. ಕೆ. ಕೃಷ್ಣಮೂರ್ತಿ, ಎಂ.ಎ., ಪಿಎಚ್.ಡಿ.
ಶ್ರೀ ಎನ್. ಬಸವಾರಾಧ್ಯ, ಎಂ.ಎ.,

**ಕರ್ನಾಟಕ ಸರ್ಕಾರದ ಪ್ರತಿನಿಧಿಗಳು**

ಡಾ. ಸಿದ್ಧಯ್ಯ ಪುರಾಣಿಕ, ಬಿ.ಎ., ಎಲ್ಎಲ್.ಬಿ.

**ಪರಿಷತ್ತಿನ ಅಧ್ಯಕ್ಷರು**

ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ

**ಪರಿಷತ್ತಿನ ಗೌರವ ಕಾರ್ಯದರ್ಶಿಗಳು**

ಶ್ರೀ ಗೊ.ರು. ಚನ್ನಬಸಪ್ಪ
ಶ್ರೀ ಟಿ. ರಾಮಯ್ಯ

**ಪರಿಷತ್ತಿನ ಗೌರವ ಕೋಶಾಧಿಕಾರಿಗಳು**

ಶ್ರೀ. ಎಸ್.ವಿ. ಶ್ರೀನಿವಾಸರಾವ್

# ನಿಘಂಟು ಕಛೇರಿಯ ಸಿಬ್ಬಂದಿ

ಪ್ರಧಾನ ಸಂಪಾದಕರು
**ಪ್ರೊ. ಜಿ. ವೆಂಕಟಸುಬ್ಬಯ್ಯ** ಎಂ.ಎ., ಬಿ.ಟಿ.

**ಸಹಾಯಕ ಸಂಪಾದಕರು**
ಶ್ರೀಮತಿ ಮಂಜುಳಾರಾವ್, ಎಂ.ಎ.
ಶ್ರೀಮತಿ ಎಂ. ಎನ್. ಜಾನಕಮ್ಮ, ಎಂ.ಎ.
ಶ್ರೀಮತಿ ಉಮಾದೇವಿ, ಎಂ.ಎ
ಶ್ರೀಮತಿ ವಿಜಯಲಕ್ಷ್ಮಿ, ಎಂ.ಎ
ಶ್ರೀಮತಿ ಎಂ.ಎಸ್. ಸುಜಯ, ಎಂ.ಎ
ಶ್ರೀ ಬಿ. ಆರ್. ಬಸವರಾಜ, ಎಂ.ಎ.

**ಒಪ್ಪೊತ್ತಿನ ಸಹಾಯಕರು**
ಶ್ರೀ ಕೆ. ಆರ್. ಶೇಷಗಿರಿ, ಎಂ.ಎ.
ಶ್ರೀ ಎ. ಎನ್. ಭಟ್, ಎಂ.ಎ.

**ಕಚೇರಿಯ ಸಿಬ್ಬಂದಿವರ್ಗ**

ಬೆರಳಚ್ಚುಗಾರ್ತಿಯರು : ಶ್ರೀಮತಿ ಎ. ನೇತ್ರಾವತಿಬಾಯಿ, ಶ್ರೀಮತಿ ಸಿ. ಎನ್. ವಿಜಯಲಕ್ಷ್ಮಿ

ಸಹಾಯಕರು : ಶ್ರೀ ರಾಘವೇಂದ್ರ ಪ್ರಸಾದ್. ಶ್ರೀ ಆರ್. ಶಂಕರಪ್ಪ, ಶ್ರೀ ರೇವಯ್ಯ,

# ಅಧ್ಯಕ್ಷರ ನುಡಿ

'ನಿಘಂಟು ಎಂದರೆ ಕನ್ನಡ ಸಾಹಿತ್ಯ ಪರಿಷತ್ತಿನ ಬೃಹನ್ನಿಘಂಟು' ಎಂದೇ ಖ್ಯಾತವಾಗಿರುವ ಈ ಮಹಾನಿಘಂಟಿನ ಎಂಟು ಸಂಪುಟಗಳನ್ನು ಅದು ಪ್ರಕಟವಾದ ೧೫ ವರ್ಷಗಳ ನಂತರ ಮತ್ತಷ್ಟು ಸುಂದರವಾಗಿ ಮರುಮುದ್ರಣಗೊಳಿಸಿ ಕನ್ನಡ ಕುಲಕೋಟಿಗೆ ಅರ್ಪಿಸಲು ನನಗೆ ಸಂತೋಷವೆನಿಸುತ್ತದೆ. ಕನ್ನಡ ಶಾಸ್ತ್ರೀಯ ಭಾಷೆಯ ಸ್ಥಾನಮಾನವನ್ನು ಪಡೆದುಕೊಂಡಿರುವುದು ಅದರ ಸಂಪನ್ನತೆ ಮತ್ತು ಅರ್ಹತೆಗಳಿಂದಾಗಿಯೇ ಎಂಬುದನ್ನು ಲೋಕದೆದುರು ಬಿಚ್ಚಿತೋರಿಸುವ ಸಾಧನಗಳಲ್ಲಿ ಮುಖ್ಯವಾದದ್ದು ಈ ಬೃಹತ್ ನಿಘಂಟು. ಕನ್ನಡದ ಸಮಸ್ತ ಜ್ಞಾನವನ್ನೂ ತನ್ನೊಳಗೆ ಐಕ್ಯಗೊಳಿಸಿಕೊಂಡಿರುವ ಈ ನಿಘಂಟಿನ ವಿವಿಧ ಸಂಪುಟಗಳಲ್ಲಿ ಶಬ್ದವೊಂದರ ಅರ್ಥ, ವಿವರಣೆ, ಉದಾಹರಣೆ ಒಮ್ಮೊಮ್ಮೆ ಅರ್ಧಪುಟವನ್ನು ದಾಟಿ ಒಂದು ಪುಟವನ್ನು ಆವರಿಸಿಕೊಂಡಿರುವುದುಂಟು.

ಕ್ರಿ.ಶ.೪೫೦ರ ಹಲ್ಮಿಡಿಶಾಸನದಿಂದ ಪ್ರಾರಂಭವಾಗಿ ಈ ಸಂಪುಟ ಯೋಜನೆ ಅನುಷ್ಠಾನಗೊಂಡ ೧೯೫೫ರವರೆಗೆ ಕನ್ನಡದಲ್ಲಿ ಪ್ರಕಟವಾದ ಎಲ್ಲ ಬಗೆಯ ಸಾಹಿತ್ಯ ಪ್ರಕಾರಗಳಿಂದಲೂ ಉಲ್ಲೇಖಗಳನ್ನು ನೀಡಲಾಗಿರುವುದು, ಕೆಲವೊಮ್ಮೆ ಒಂದೇ ಶಬ್ದಕ್ಕೆ ಬೇರೆ ಬೇರೆ ಅರ್ಥಗಳು ಪ್ರಾಪ್ತವಾಗುವ ಸಂದರ್ಭಗಳನ್ನು ಜೊತೆಗಿರಿಸಿ ಕೊಟ್ಟಿರುವುದು, ಪ್ರತಿಯೊಂದು ಶಬ್ದವನ್ನೂ ನಾಮಪದ ಅಥವಾ ಕ್ರಿಯಾಪದವೆಂದು ಖಚಿತವಾಗಿ ವಿಂಗಡಿಸಿಕೊಂಡಿರುವುದು, ಅರ್ಥ ಸ್ಪಷ್ಟೀಕರಣಕ್ಕೆಂದು ಉದಾಹರಣೆಯಾಗಿ ಕೊಟ್ಟಿರುವ ವಾಕ್ಯ ಅಥವಾ ವಾಕ್ಯತುಂಡುಗಳೇ ಮೂಲಕಾವ್ಯವನ್ನು ಓದಬೇಕೆನ್ನುವ ಆಸಕ್ತಿಯನ್ನು ಹುಟ್ಟಿಸುವುದು – ಈ ಎಲ್ಲ ಅಂಶಗಳು ಇದರ ಅಪೂರ್ವತೆಯನ್ನು ಎತ್ತಿ ಹಿಡಿಯುವ ಸಾಕ್ಷಿಕಲ್ಲುಗಳಾಗಿವೆ. ನಿಘಂಟು ಎನ್ನುವುದೇ ತುಂಬ ವೈಜ್ಞಾನಿಕವಾದ, ಒಂದು ಭಾಷೆಯ ಸೃಜನ ಸಾಹಿತ್ಯದಷ್ಟೇ ಪ್ರಮುಖವಾದ, ಭಾಷೆಯಲ್ಲಿರುವ ಶಬ್ದಗಳನ್ನು ಶುದ್ಧವಾಗಿ ಉಚ್ಚರಿಸಬೇಕೆಂದು ತಿಳಿಸಿಕೊಡುವ ರಚನೆಯಾಗಿರುವುದರಿಂದ ಜ್ಞಾನೇಂದ್ರಿಯಗಳೆಲ್ಲದರ ಎಚ್ಚರದ ದುಡಿಮೆಯನ್ನು ಬಯಸುತ್ತದೆ. ಕನ್ನಡದ ಅಭಿಮಾನವನ್ನು ಮೈತುಂಬಿಕೊಂಡ ಘನ ವಿದ್ವಾಂಸರ ಸತತ ಪರಿಶ್ರಮದಿಂದ ಈ ಯೋಜನೆ ಶಿಸ್ತುಬದ್ಧವಾಗಿ ಯಶಕಂಡಿದೆ. ಮೊದಲ ಮುದ್ರಣದ ೧೦,೦೦೦ ಪ್ರತಿಗಳು ಕೆಲವೇ ವರ್ಷಗಳಲ್ಲಿ ಕನ್ನಡಿಗರ ಮನೆಯ ಕಪಾಟುಗಳನ್ನು, ಗ್ರಂಥಭಂಡಾರಗಳನ್ನು, ಶಾಲೆಕಾಲೇಜುಗಳನ್ನು ಅಲಂಕರಿಸಿದ್ದರಿಂದ ಕನ್ನಡ ಸಾಹಿತ್ಯ ಪರಿಷತ್ತು ಧನ್ಯತಾಭಾವವನ್ನು ತಳೆಯುವಂತಾಯಿತು. ಆದರೆ ನಿಘಂಟುವಿನ ಉಪಯುಕ್ತತೆಯನ್ನು ತಡವಾಗಿ ಅರ್ಥಮಾಡಿಕೊಂಡವರು ಅಂದಿನಿಂದ ಇಂದಿನವರೆಗೆ ಸಾಹಿತ್ಯ ಪರಿಷತ್ತಿಗೆ ದೂರವಾಣಿ ಕರೆ ಮಾಡಿ, ಮಾರಾಟ ವಿಭಾಗದಲ್ಲಿ ವಿಚಾರಿಸಿ, ಪುಸ್ತಕ ಮಳಿಗೆಗಳಲ್ಲಿ ಹುಡುಕಾಡಿ ಸಿಗದೆ ನಿರಾಶರಾಗಿದ್ದಾರೆ. ಮರುಪ್ರಕಟಿಸುವಂತೆ ಒತ್ತಾಯ ಮಾಡಿದ್ದಾರೆ.

ಎಂಟು ಸಂಪುಟಗಳಲ್ಲಿ, ಒಂಬತ್ತು ಸಾವಿರಕ್ಕಿಂತಲೂ ಅಧಿಕ ಪುಟಗಳ ವಿಸ್ತಾರದಲ್ಲಿ ಹರಡಿಕೊಂಡಿರುವ, ಎಲ್ಲರ ಮನೆಯನ್ನೂ ಬೆಳಗಬೇಕಾಗಿರುವ ಈ ನಿಘಂಟನ್ನು ಮುದ್ರಿಸುವುದಾಗಲೀ, ಮುದ್ರಿತ ಪ್ರತಿಗಳನ್ನು ಒಂದೆಡೆ ಜೋಡಿಸಿಡುವುದಾಗಲೀ, ಮಾರಾಟದ ವ್ಯವಸ್ಥೆ ಮಾಡುವುದಾಗಲೀ, ಹೆಚ್ಚಿನ ಪ್ರಮಾಣದಲ್ಲಿ ಒಂದು

ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸುವುದಾಗಲೀ ಅಷ್ಟೊಂದು ಸುಲಭವಾದ ಕೆಲಸವಲ್ಲ. ಈ ಅಸಾಧ್ಯವನ್ನು ಸಾಧ್ಯವಾಗಿಸುವ ಧೈರ್ಯೋತ್ಸಾಹಗಳು ಪರಿಷತ್ತಿನೊಡಲಲ್ಲಿ ಚಿಮ್ಮುವುದಕ್ಕೆ ಕರ್ನಾಟಕ ರಾಜ್ಯ ಸರ್ಕಾರ ಕಾರಣವಾಯಿತೆಂದರೆ ಅದನ್ನು ಯಾರೂ ಅತಿಶಯೋಕ್ತಿಯೆಂದು ಭಾವಿಸಬೇಕಾಗಿಲ್ಲ. ಕರ್ನಾಟಕ ರಾಜ್ಯ ಸರ್ಕಾರ ಕನ್ನಡ ಸಾಹಿತ್ಯ ಪರಿಷತ್ತಿನ ಮಾತುಗಳನ್ನು ಪ್ರೀತಿಯಿಂದ ಆಲಿಸುತ್ತಿರುವುದು, ಕನ್ನಡ ಸಾಹಿತ್ಯ ಪರಿಷತ್ತನ್ನು ಕನ್ನಡದ ಸಾರ್ವಭೌಮ ಪ್ರತಿನಿಧಿಯೆಂದೇ ಭಾವಿಸುತ್ತಿರುವುದು ಕನ್ನಡದ ಭಾಗ್ಯವೆಂದೇ ಹೇಳಬೇಕು. ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರು ಹಲವು ಒತ್ತಡಗಳ ನಡುವೆಯೂ ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮಗಳಲ್ಲಿ ಅತ್ಯಂತ ಪ್ರೀತಿಯಿಂದ ಭಾಗವಹಿಸುತ್ತಿರುವುದು, ಸಮಾರಂಭಗಳಲ್ಲಿ ಕೊಟ್ಟ ಆಶ್ವಾಸನೆಗಳನ್ನು ಅತಿಶೀಘ್ರವಾಗಿ ಅನುಷ್ಠಾನಗೊಳಿಸುತ್ತಿರುವುದು, ಪರಿಷತ್ತಿನ ಎಲ್ಲಾ ಯೋಜನೆಗಳಿಗೂ ಹಸಿರು ನಿಶಾನೆ ತೋರುತ್ತಿರುವುದು, ಸಾಹಿತ್ಯ ಪರಿಷತ್ತಿನ ಪದಾಧಿಕಾರಿಗಳು ಮುಖ್ಯಮಂತ್ರಿ – ಕನ್ನಡ ಸಂಸ್ಕೃತಿ ಮಂತ್ರಿಗಳ ಕಚೇರಿಯ ಹೊರಗೆ ಕಡತಗಳೊಂದಿಗೆ ಗಂಟೆಗಟ್ಟಲೆ ಕಾಯುತ್ತಿದ್ದುದನ್ನು ತಪ್ಪಿಸಿರುವುದು, ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಿಂದ ತಾಲ್ಲೂಕು ಸಮ್ಮೇಳನಗಳವರೆಗೆ ಎಲ್ಲವೂ ಅದ್ದೂರಿಯಾಗಿ ನಡೆಯಲು ಬೇಕಾದಷ್ಟು ಪ್ರಮಾಣದಲ್ಲಿ ಹಣ ಬಿಡುಗಡೆ ಮಾಡುತ್ತಿರುವುದು – ಇಂಥವನ್ನೆಲ್ಲಾ ಕಂಡಾಗ ಪರಿಷತ್ತಿನ ಅಧ್ಯಕ್ಷನಾಗಿ ನನಗೆ ಮನಸ್ಸು ತುಂಬಿ ಬರುತ್ತದೆ. ಆರುಕೋಟಿ ಕನ್ನಡಿಗರ ಪರವಾಗಿ ಅವರಿಗೆ ಕೃತಜ್ಞತಾ ಕುಸುಮಗಳನ್ನು ಅರ್ಪಿಸಬೇಕೆನ್ನಿಸುತ್ತದೆ. 'ಕನ್ನಡದ ಮುಖ್ಯಮಂತ್ರಿ' 'ಕನ್ನಡಿಗರ ಮುಖ್ಯಮಂತ್ರಿ' ಎಂದು ಅಭಿಮಾನದಿಂದ ನುಡಿಯಬೇಕೆನ್ನಿಸುತ್ತದೆ. ಸನ್ಮಾನ್ಯ ಮುಖ್ಯಮಂತ್ರಿಗಳ ಕನ್ನಡದ ಮೇಲಿನ, ಕನ್ನಡ ಸಾಹಿತ್ಯ ಪರಿಷತ್ತಿನ ಬಗೆಗಿನ ಈ ಅಖಂಡ ಪ್ರೀತಿ ಹೀಗೇ ಮುಂದುವರಿಯಲೆಂದು ಆಶಿಸುತ್ತೇನೆ.

ಕರ್ನಾಟಕ ಸರ್ಕಾರ ನಿಘಂಟು ಯೋಜನೆಯ ಮಹತ್ವವನ್ನು ಮನಗಂಡು ಒಂದು ಕೋಟಿ ರೂಪಾಯಿಗಳನ್ನು ಸಾಹಿತ್ಯ ಪರಿಷತ್ತಿಗೆ ಉದಾರವಾಗಿ ನೀಡಿದೆ. ಸರ್ಕಾರ ಹಣ ನೀಡಿರುವುದು ಪರಿಷತ್ತಿಗಾದರೂ ಇದು ಜನತೆಯ ಹಣ ಮತ್ತು ಇದರ ಅಂತಿಮ ಫಲಾನುಭವಿಗಳೂ ಜನತೆಯೇ. ಈ ಎಚ್ಚರವನ್ನಿರಿಸಿಕೊಂಡೇ ಸಾಹಿತ್ಯ ಪರಿಷತ್ತು ಬಹುಬೇಡಿಕೆಯ ಬೃಹನ್ನಿಘಂಟಿನ ಎಂಟು ಸಂಪುಟಗಳನ್ನು ಪುನರ್ಮುದ್ರಣಗೊಳಿಸುತ್ತಿದೆ. ಸರ್ಕಾರದ ಉದಾರ ಆರ್ಥಿಕ ನೆರವಿನ ಪರಿಣಾಮವಾಗಿ ನಿಘಂಟಿನ ಬೆಲೆಯನ್ನು ಸಾಮಾನ್ಯರೂ ಕೊಳ್ಳಲು ಮನಸ್ಸು ಮಾಡುವಂತೆ ಕಡಿಮೆಗೊಳಿಸಲಾಗಿದೆ. ಭಾಷೆ ಮತ್ತು ಸಾಹಿತ್ಯಾಭಿಮಾನದ ಸಂಕೇತವೆಂಬಂತೆ ಈ ಯೋಜನೆಯ ಯಶಸ್ಸಿನಲ್ಲಿ ಪ್ರಮುಖ ಪಾತ್ರ ನಿರ್ವಹಿಸಿರುವ ರಾಜ್ಯ ಸರ್ಕಾರವನ್ನು ಹಾಗೂ ಕನ್ನಡ ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಜಯರಾಮರಾಜೇ ಅರಸ್ ಮತ್ತು ನಿರ್ದೇಶಕರಾದ ಶ್ರೀ ಮನು ಬಳಿಗಾರ್ ಅವರುಗಳನ್ನು ಈ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಕೃತಜ್ಞತೆಯಿಂದ ಸ್ಮರಿಸುತ್ತದೆ. ನಿಘಂಟು ಯೋಜನೆ ಪ್ರಾರಂಭವಾದಾಗ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಜಿ. ನಾರಾಯಣರಿಂದ ಮೊದಲಗೊಂಡು ಮುಕ್ತಾಯವಾದಾಗ ಅಧ್ಯಕ್ಷರಾಗಿದ್ದ ಡಾ. ಸಾ.ಶಿ. ಮರುಳಯ್ಯನವರವರೆಗೆ ಇದನ್ನು ಆಸಕ್ತಿಯಿಂದ ಮುನ್ನಡೆಸಿಕೊಂಡು ಬಂದ ಎಲ್ಲ ಅಧ್ಯಕ್ಷರುಗಳಿಗೂ ನಿಘಂಟು ಸಮಿತಿಯ ಅಧ್ಯಕ್ಷರು, ಸದಸ್ಯರುಗಳು, ಸಂಪಾದಕರು, ಸಿಬ್ಬಂದಿ ವರ್ಗದವರಿಗೂ ಅಂದವಾಗಿ ಮುದ್ರಿಸಿಕೊಟ್ಟ ರಾಜಾ ಪ್ರಿಂಟರ್ಸ್‌ನವರಿಗೂ ಮತ್ತು ಅವರ ಸಿಬ್ಬಂದಿ ವರ್ಗದವರಿಗೂ ಕನ್ನಡ ಸಾಹಿತ್ಯ ಪರಿಷತ್ತು ತುಂಬಾ ಆಭಾರಿಯಾಗಿದೆ. ಮರುಮುದ್ರಣದ ಈ ನಿಘಂಟಿನ ಸಂಪುಟಗಳನ್ನು ಕನ್ನಡ ಜನತೆ ಪ್ರೀತಿ ವಿಶ್ವಾಸಗಳಿಂದ ಬರಮಾಡಿಕೊಳ್ಳುವರೆಂದು ನಂಬಿದ್ದೇನೆ.

ಬೆಂಗಳೂರು
೫–೬–೨೦೧೦

ಡಾ. ನಲ್ಲೂರು ಪ್ರಸಾದ್ ಆರ್.ಕೆ.
ಅಧ್ಯಕ್ಷರು

# ಸಂಪಾದಕರ ಅರಿಕೆ

ಕನ್ನಡ–ಕನ್ನಡ ನಿಘಂಟಿನ ೬ನೆಯ ಸಂಪುಟವು ಪ್ರಕಟವಾಗುತ್ತಿರುವುದು ನನಗೆ ಸಂತೋಷದ ವಿಷಯ. ಈ ಸಂಪುಟದ ಮುದ್ರಣಪ್ರತಿಯು ಸಿದ್ಧವಾಗಿ ಆರು ವರ್ಷಗಳಾದುವು. ಆದರೂ ಮುದ್ರಣಕ್ಕೆ ಅನೇಕ ಅಡ್ಡಿಗಳುಂಟಾಗಿ ಐದನೆಯ ಸಂಪುಟ ಪ್ರಕಟವಾಗುವುದೇ ೧೯೮೭ರ ಅಂತ್ಯದ ವರೆಗೆ ತಡವಾಯಿತು. ಈಗ ೧೯೯೦ರ ಕೊನೆಯ ಭಾಗದಲ್ಲಿ ಈ ಆರನೆಯ ಸಂಪುಟ ಪ್ರಕಟವಾಗುತ್ತಿದೆ.

ಕನ್ನಡ ನಿಘಂಟಿನ ಈ ಮಹಾಕಾರ್ಯವನ್ನು ಸಾಧಿಸಲು ಕರ್ನಾಟಕ ಸರ್ಕಾರ ನೀಡುತ್ತಿರುವ ಧನಸಹಾಯವನ್ನು ಕುರಿತು ಭಾರತದ ಎಲ್ಲ ಭಾಷೆಗಳ ವಿದ್ವಾಂಸರೂ ನಿಘಂಟುಕಾರರೂ ಮುಕ್ತಕಂಠದಿಂದ ಹೊಗಳುತ್ತಾರೆ. ಶತಮಾನಕ್ಕೊಮ್ಮೆ ಕೈಗೊಳ್ಳಬಹುದಾದ ಇಂಥ ವಿದ್ವತ್ಕಾರ್ಯಗಳ ಬಗ್ಗೆ ನಮ್ಮ ಸರ್ಕಾರದ ನಿಲುವು ಎಲ್ಲರ ಗೌರವಕ್ಕೆ ಪಾತ್ರವಾಗಿದೆ. ಕನ್ನಡಿಗರೆಲ್ಲರೂ ನಮ್ಮ ಸರ್ಕಾರಕ್ಕೆ ತಮ್ಮ ಪ್ರೀತಿವಿಶ್ವಾಸಗಳನ್ನು ನೀಡಿ ಕೃತಜ್ಞತೆಗಳನ್ನು ಸಲ್ಲಿಸುತ್ತಾರೆ.

ಈ ಸಂಪುಟವನ್ನು ಸಿದ್ಧಪಡಿಸುವ ಸಂದರ್ಭದಲ್ಲಿ ನಮ್ಮ ನಿಘಂಟು ಸಂಪಾದಕ ಸಮಿತಿಯ ಸದಸ್ಯರೆಲ್ಲರೂ ನೀಡಿದ ಸಂಪೂರ್ಣ ಸಹಕಾರಕ್ಕೆ ನಾನು ಕೃತಜ್ಞನಾಗಿದ್ದೇನೆ. ನಿಘಂಟುಕಾರ್ಯ ಕ್ಲಿಷ್ಟವಾದ ವಿದ್ವತ್ಕಾರ್ಯ. ಇದಕ್ಕೆ ಬಹುಶ್ರುತತ್ವವೂ, ಒಬ್ಬ ವ್ಯಕ್ತಿಗೆ ಸಾಧ್ಯವಾಗದ ಅಗಾಧ ವಿದ್ವತ್ತೂ ಅಗತ್ಯವಾಗುತ್ತದೆ. ಆದುದರಿಂದ ಸಂಪಾದಕ ಸಮಿತಿಯ ಸದಸ್ಯರು ಬೇರೆ ಬೇರೆ ಕ್ಷೇತ್ರಗಳಲ್ಲಿ ಆಳವಾದ ಪರಿಜ್ಞಾನವುಳ್ಳವರಾಗಿ ಸಂಪಾದಕನಿಗೆ ಎದುರಾಗುವ ಅನೇಕ ಸಮಸ್ಯೆಗಳನ್ನು ತಮ್ಮ ತಿಳಿವಳಿಕೆಯ ಬೆಳಕಿನಲ್ಲಿ ಪರಿಹರಿಸಿ ಅವನ ಕಾರ್ಯವನ್ನು ಸುಲಭಗೊಳಿಸಿದ್ದಾರೆ. ಅವರ ವಿಶ್ವಾಸಕ್ಕೆ ನನ್ನ ಗೌರವವನ್ನು ಇಲ್ಲಿ ದಾಖಲಿಸುತ್ತಿದ್ದೇನೆ.

ನಿಘಂಟುಕಾರ್ಯದ ವ್ಯಾಪ್ತಿ ವಿಶ್ವವಿಶಾಲವಾದುದು. ಹೊಸ ಶಬ್ದಗಳ ಸೃಷ್ಟಿ ಆಗುತ್ತಲೇ ಇರುತ್ತದೆ. ಅದನ್ನು ಬೆನ್ನುಹತ್ತುವ ಕಾರ್ಯ ಮುಂದುವರಿದಿದ್ದರೂ ಎಷ್ಟೋ ವೇಳೆ ಈ ನಿಘಂಟು ಮುದ್ರಣವಾಗುವ ವೇಳೆಗೆ ಅವು ನಮ್ಮ ಕೈಸೇರಿರುವುದಿಲ್ಲ. ಇಂಥ ಶಬ್ದಗಳನ್ನೆಲ್ಲ ಪಟ್ಟಿ ಮಾಡಲಾಗುತ್ತಿದೆ. ಕೊನೆಯ ಸಂಪುಟದ ಅನುಬಂಧದಲ್ಲಿ ಅವುಗಳನ್ನು ಸೇರಿಸಬೇಕಾಗುತ್ತದೆ.

ಈಗ ಪರಿಷತ್ತಿನ ಅಧ್ಯಕ್ಷರಾಗಿರುವ ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯನವರು ನಿಘಂಟಿನ ಸಿಬ್ಬಂದಿಯ ಸಮಸ್ಯೆಗಳನ್ನು ಪರಿಹರಿಸುವುದರಲ್ಲಿಯೂ ಈ ಸಂಪುಟವು ಬೇಗ ಮುದ್ರಣವಾಗುವುದರಲ್ಲಿಯೂ ಆಸಕ್ತಿಯನ್ನು ತಳೆದು ಸಹಾಯಮಾಡಿದ್ದಾರೆ. ಸರ್ಕಾರಿ ಮುದ್ರಣಾಲಯದ ನಿರ್ದೇಶಕರಾದ ಶ್ರೀ ಇ. ಕೃಷ್ಣನಾರಾಯಣ ಅವರು ಪರಿಷತ್ತಿನ ೬೦ನೇ ಸಮ್ಮೇಳನದ ವೇಳೆಗೆ ಈ ಸಂಪುಟವನ್ನು ಪ್ರಕಟಪಡಿಸಲು ಎಲ್ಲ ಏರ್ಪಾಟುಗಳನ್ನೂ ಮಾಡಿ ನಮ್ಮನ್ನು ಋಣಿಗಳನ್ನಾಗಿ ಮಾಡಿದ್ದಾರೆ.

ನಿಘಂಟಿನ ಕರಡನ್ನು ತಿದ್ದುವುದು ಬಹು ಎಚ್ಚರಿಕೆಯಿಂದ ಮಾಡಬೇಕಾದ ಕಾರ್ಯ. ಇದಕ್ಕೆ ಕನ್ನಡಭಾಷಾಸಾಹಿತ್ಯಗಳ ಮತ್ತು ಮುದ್ರಣ ತಂತ್ರದ ಆಳವಾದ ಪರಿಜ್ಞಾನವಿರಬೇಕು. ಇಂಥ ಕ್ಲಿಷ್ಟಕಾರ್ಯವನ್ನು ಈ ನಿಘಂಟಿನ ಮುದ್ರಣಕಾರ್ಯ ಪ್ರಾರಂಭವಾದಾಗಿನಿಂದ ಸಮರ್ಥವಾಗಿ ನಿರ್ವಹಿಸಿದವರು ಶ್ರೀಮತಿಯರಾದ ಮಂಜುಳಾರಾವ್, ಉಮಾದೇವಿ, ವಿಜಯಲಕ್ಷ್ಮಿ, ಎಂ. ಎಸ್. ಸಂಜಯ. ಕೊನೆಕೊನೆಗೆ ಕರಡಿನ ಸಂಖೆ ಹೆಚ್ಚಾದಾಗ ಇವರ ಜತೆಗೆ ಶ್ರೀಮತಿ ಎಂ. ಎನ್. ಜಾನಕಮ್ಮ ಮತ್ತು ಶ್ರೀ ಬಿ. ಆರ್. ಬಸವರಾಜ ಅವರೂ ಸಹಾಯಮಾಡಿದ್ದಾರೆ. ಇವರಲ್ಲದೆ ನಿಘಂಟು ಕಚೇರಿಯ ಬೆರಳಚ್ಚುಗಾರ್ತಿಯರೂ ಸಹಾಯಕ ವರ್ಗದವರೂ ಬಿಡುವಿಲ್ಲದೆ ದುಡಿದಿದ್ದಾರೆ. ಇವರಿಗೆಲ್ಲ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಇನ್ನುಮುಂದೆ ಈ ನಿಘಂಟಿನ ೭ ಮತ್ತು ೮ನೆಯ ಸಂಪುಟಗಳು ಪ್ರಕಟವಾಗಬೇಕು. ಈಗಾಗಲೇ ಈ ಎರಡು ಸಂಪುಟಗಳ ಬಹುಭಾಗದ ಪರಿಶೀಲನಾಕಾರ್ಯ ಪೂರೈಸಿದೆ. ಇನ್ನು ಮೂರು ತಿಂಗಳುಗಳಲ್ಲಿ ಏಳನೆಯ ಸಂಪುಟವನ್ನು ಮುದ್ರಣಕ್ಕೆ ಸಿದ್ಧಮಾಡಲಾಗುತ್ತದೆ. ಅದರ ಮುದ್ರಣವು ಪೂರೈಸುವ ವೇಳೆಗೆ ಎಂಟನೆಯ ಸಂಪುಟದ ಮಿಕ್ಕ ಭಾಗಗಳನ್ನು ಅಂದರೆ 'ವ' ಕಾರ 'ಸ' ಕಾರ 'ಹ' ಕಾರಗಳ ಸಭಾಪ್ರತಿಯನ್ನು ಸಂಪಾದಕಸಮಿತಿಯ ಮುಂದೆ ತರಲು ಸಾಧ್ಯವಾಗುತ್ತದೆ. ಈಗಾಗಲೇ 'ವ' ಕಾರದ ಪರಿಶೀಲನೆಗೆ ಸಭಾಪ್ರತಿಯನ್ನು ಸಿದ್ಧಮಾಡಿ ಆಗಿದೆ. ಸಂಪಾದಕ ಸಮಿತಿಯ ಮುಂದಿನ ಸಭೆಯಲ್ಲಿ 'ವ' ಕಾರದ ಪರಿಶೀಲನೆ ಪ್ರಾರಂಭವಾಗುತ್ತದೆ.

ಈ ಆರನೆಯ ಸಂಪುಟದಲ್ಲಿ ನಮ್ಮ ಅವಜ್ಞತೆಯಿಂದ ಆಗಿರಬಹುದಾದ ಪ್ರಮಾದಗಳಿದ್ದರೆ ಅವುಗಳನ್ನು ವಿದ್ವಾಂಸರು ತೋರಿಸಿ ಕೊಡಬೇಕೆಂದೂ ಅಂಥವರ ಹೆಸರುಗಳನ್ನು ಉಲ್ಲೇಖಿಸಿ ಮುಂದೆ ಅವುಗಳನ್ನು ತಿದ್ದಿಕೊಳ್ಳಲಾಗುವುದೆಂದೂ ಈ ಮೂಲಕ ತಿಳಿಸಲು ನಾನು ಅಪೇಕ್ಷಿಸುತ್ತೇನೆ.

ಕನ್ನಡದ ಈ ಬೃಹತ್ ನಿಘಂಟು ಅನೇಕ ಬಗೆಯ ಇತರ ನಿಘಂಟುಗಳ ಪ್ರಕಟನೆಗೆ ಸಹಾಯಕವಾಗಲೆಂದೂ, ಈ ನಿಘಂಟಿನ ಪ್ರಯೋಜನ ಹೆಚ್ಚಲೆಂದೂ ನಾನು ಆಶಿಸುತ್ತೇನೆ.

ಬೆಂಗಳೂರು.
೨೮–೧೨–೧೯೯೦

ಜಿ. ವೆಂಕಟಸುಬ್ಬಯ್ಯ
ಪ್ರಧಾನ ಸಂಪಾದಕ

# ಅಧ್ಯಕ್ಷರ ಕೃತಜ್ಞತೆಗಳು

ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ಕನ್ನಡ-ಕನ್ನಡ ನಿಘಂಟುವಿನ ಪ್ರಥಮ ಸಂಪುಟ ಬಿಡುಗಡೆಗೊಂಡಿತು. ಸಂಪಾದಕ ಮಂಡಲಿಯ ತೀರ್ಮಾನದಂತೆ ಎರಡು ವರ್ಷಕ್ಕೊಂದು ಸಂಪುಟ ಹೊರಬೀಳಬೇಕಾದರೂ ಎರಡನೆಯ ಸಂಪುಟ ಹೊರಬಿದ್ದುದು ೧೯೭೦ರಲ್ಲಿ. ಹಾಗೆಯೇ ೩ನೇ ಸಂಪುಟ ೧೯೭೦ರಲ್ಲಿ, ೪ನೇ ಸಂಪುಟ ೧೯೭೯ರಲ್ಲಿ ಪ್ರಕಟವಾದವು. ೫ನೇ ಸಂಪುಟ ೧೯೮೭-೮೮ರ ವರೆಗೆ ಪ್ರಕಟಣೆಗೆ ಕಾಯಬೇಕಾಯಿತು. ೬ನೇ ಸಂಪುಟ ಕನ್ನಡ ಸಾಹಿತ್ಯ ಪರಿಷತ್ತಿನ ಅಮೃತ ಮಹೋತ್ಸವದ ಸಂದರ್ಭದಲ್ಲಿ ಪ್ರಕಟವಾಗುತ್ತಿರುವುದು ನೆಮ್ಮದಿಯ ಸಂಗತಿ. ಅದಕ್ಕೂ ಹೆಚ್ಚಾಗಿ ಇದರ ಬಿಡುಗಡೆ ಕನ್ನಡ ಸಾಹಿತ್ಯ ಪರಿಷತ್ತಿನ ೬೦ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ವಜ್ರಾಧಿವೇಶನ ಸಂದರ್ಭದಲ್ಲಿ ಆಗುತ್ತಿರುವುದು ನಮಗೆಲ್ಲಾ ಅತ್ಯಂತ ಹರ್ಷದ ವಿಷಯವಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟುವಿನ ಮೊದಲ ಎರಡು ಸಂಪುಟಗಳನ್ನು ಸಾಹಿತ್ಯ ಪರಿಷತ್ತಿನ ಬಿ. ಎಂ. ಶ್ರೀ. ಅಚ್ಚುಕೂಟದಲ್ಲೇ ಮುದ್ರಿಸಲಾಯಿತು. ಮೂರು ಮತ್ತು ನಾಲ್ಕನೆಯ ಸಂಪುಟಗಳನ್ನು ಬೆಂಗಳೂರು ನಗರದಲ್ಲಿರುವ ಸರ್ಕಾರಿ ಮುದ್ರಣಾಲಯವು ಮುದ್ರಿಸಿಕೊಟ್ಟಿತು. ಐದನೆಯ ಸಂಪುಟ ಭಗವಾನ್ ಇಂಡಸ್ಟ್ರೀಸ್ ಅವರಲ್ಲಿ ಮುದ್ರಿತವಾಯಿತು. ಆರನೆಯ ಸಂಪುಟದ ಮುದ್ರಣದ ಜವಾಬ್ದಾರಿಯನ್ನು ಮತ್ತೆ ಕರ್ನಾಟಕ ಸರ್ಕಾರದ ಮುದ್ರಣಾಲಯ ವಹಿಸಿಕೊಂಡಿದೆ.

ಬಹುಶಃ ಮುದ್ರಣಾಲಯಗಳ ಬದಲಾವಣೆಗಳು ಕಾರಣದಿಂದಾಗಿಯೇ ಈ ಸಂಪುಟಗಳು ಹೊರಬರಲು ಸ್ವಲ್ಪ ವಿಳಂಬವಾಯಿತು ಅನ್ನಿಸುತ್ತದೆ. ಆದರೆ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಾದ ಶ್ರೀ ಇ. ಕೃಷ್ಣನಾರಾಯಣ ಅವರ ವಿಶೇಷವಾದ ಕಾಳಜಿಯಿಂದಾಗಿ ಈ ಸಂಪುಟ ಮುದ್ರಣಗೊಂಡು ಹೊರಬರಲು ಸಾಧ್ಯವಾಯಿತು. ಈ ಮುದ್ರಣಕಾರ್ಯವನ್ನು ಆಗುಮಾಡಿಕೊಟ್ಟಿರುವ ಶ್ರೀ ಇ. ಕೃಷ್ಣನಾರಾಯಣ ಮತ್ತು ಅವರ ಸಹಾಯಕ ಸಿಬ್ಬಂದಿವರ್ಗದವರಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಈ ನಿಘಂಟುವಿನ ಮುದ್ರಣದ ಹಂತದಲ್ಲಿ ನಿಘಂಟು ಸಂಪಾದಕ ಸಮಿತಿಯ ಸದಸ್ಯರು ಮತ್ತು ಸಿಬ್ಬಂದಿಯವರು ವಿಶೇಷವಾದ ಶ್ರಮ ಮತ್ತು ಆಸಕ್ತಿಗಳನ್ನು ತೋರಿದ್ದಾರೆ. ಕರಡಚ್ಚನ್ನು ತಿದ್ದುವ ಕಾರ್ಯದಲ್ಲಂತೂ ನಿಘಂಟು ಸಿಬ್ಬಂದಿಯವರು ವಹಿಸಿದ ಪಾತ್ರ ಮುಖ್ಯವಾದುದು. ಅವರಿಗೆ ಪರಿಷತ್ತಿನ ಕೃತಜ್ಞತೆಗಳು.

ನಿಘಂಟುವಿನ ಪ್ರಧಾನ ಸಂಪಾದಕರೂ ಮತ್ತು ಸಂಪಾದಕ ಮಂಡಲಿಯ ಅಧ್ಯಕ್ಷರೂ ಆದ ಪ್ರೊ. ಜಿ. ವೆಂಕಟಸುಬ್ಬಯ್ಯನವರು ಅಪಾರ ಶ್ರಮ ವಹಿಸಿದ್ದಾರೆ. ಅವರಿಗೂ ಸಂಪಾದಕ ಸಮಿತಿಯ ಸದಸ್ಯರೆಲ್ಲರಿಗೂ ಹೃತ್ಪೂರ್ವಕವಾದ ಕೃತಜ್ಞತೆಗಳು.

ಈ ಕನ್ನಡ-ಕನ್ನಡ ನಿಘಂಟುವಿನ ಯೋಜನೆ ಪೂರ್ಣವಾಗಿ ಕರ್ನಾಟಕ ಸರ್ಕಾರದ ಯೋಜನೆಯಾಗಿದ್ದು, ಇದರ ಜವಾಬ್ದಾರಿಯನ್ನು ಕನ್ನಡ ಸಾಹಿತ್ಯ ಪರಿಷತ್ತು ಸುಸೂತ್ರವಾಗಿ ನಿರ್ವಹಿಸಲು ಸರ್ಕಾರ ನೆರವಾಗುತ್ತಿರುವುದಕ್ಕಾಗಿ ಪರಿಷತ್ತಿನ ಕೃತಜ್ಞತೆಗಳನ್ನು ತಿಳಿಸುತ್ತೇನೆ.

ಈ ಬೃಹತ್ ನಿಘಂಟು ಮೊದಲು ನಾಲ್ಕು ಸಂಪುಟಗಳಲ್ಲಿ ಮುಗಿಯುತ್ತದೆ ಎಂಬ ಯೋಜನೆಯಿಂದ ಕೂಡಿದ್ದರೂ ಈಗ ಎಂಟನೆಯ ಸಂಪುಟದವರೆಗೂ ವಿಸ್ತರಣೆಗೊಳ್ಳುತ್ತಿದೆ. ಇದಕ್ಕೆ ಕಾರಣ ನಿಘಂಟು ಸಮಿತಿ ಸಂಗ್ರಹಿಸಿ ವ್ಯವಸ್ಥೆಗೊಳಿಸಿರುವ ಅಪಾರವಾದ ಶಬ್ದ ಸಂಪತ್ತು.

ನಿಘಂಟುವಿನ ೫ನೆಯ ಸಂಪುಟವು ೧೯೮೭-೮೮ರಲ್ಲಿ ಪ್ರಕಟವಾಗುವಾಗ ನಿಘಂಟು ಸಂಪಾದಕ ಮಂಡಲಿ ಸದಸ್ಯರುಗಳ ಪಟ್ಟಿಯಲ್ಲಿ ಪರಿಷತ್ತಿನ ಆಡಳಿತಗಾರರ ಮತ್ತು ಸಹಾಯಕ ನಿರ್ದೇಶಕರ ಹೆಸರುಗಳ ಜೊತೆಗೆ ಅವರಿಗಿಂತ ಹಿಂದೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಹೆಚ್. ಬಿ. ಜ್ವಾಲನಯ್ಯ ಮತ್ತು ಗೌರವ ಕಾರ್ಯದರ್ಶಿಗಳಾದ ಶ್ರೀ ಜಿ. ವಿ. ಶಿವಸ್ವಾಮಿ ಮತ್ತು ಶ್ರೀ ಚಂದ್ರಕಾಂತ ಪಡೆಸೂರ ಹಾಗೂ ಕೋಶಾಧಿಕಾರಿಗಳಾದ ಶ್ರೀ ಎಂ. ಪಿ. ದೇವರಾಜ್ ಅವರ ಹೆಸರುಗಳು ಸೇರಬೇಕಾಗಿತ್ತು ಎಂಬುದನ್ನು ಇಲ್ಲಿ ನಮ್ರವಾಗಿ ಸೂಚಿಸಬಯಸುತ್ತೇನೆ.

ಇನ್ನು ಕೆಲವೇ ದಿನಗಳಲ್ಲಿ ೭ನೇ ಸಂಪುಟದ ಮುದ್ರಣಕ್ಕೆ ಪ್ರತಿಗಳು ಸಿದ್ಧಗೊಳ್ಳಲು ಸಾಧ್ಯವಾಗುತ್ತದೆ. ವಾಸ್ತವವಾಗಿ ಈ ನಿಘಂಟನ್ನು ರೂಪಿಸಲು ಪ್ರಾತಃಸ್ಮರಣೀಯರಾದ ಅನೇಕ ವಿದ್ವಾಂಸರುಗಳು ಅಪಾರವಾದ ಶ್ರಮವನ್ನು ವಹಿಸಿದ್ದಾರೆ. ಅವರೆಲ್ಲರ ಶ್ರಮ ಮತ್ತು ತಪಸ್ಸುಗಳ ಫಲವಾಗಿ ಈ ನಿಘಂಟಿನ ಯೋಜನೆ ೧೯೯೨ರ ಆರಂಭಕ್ಕೆ ಮುಗಿಯುವ ಭರವಸೆ ನಮಗಿದೆ ಎಂದು ತಿಳಿಸಲು ಸಂತೋಷವಾಗುತ್ತದೆ.

ಈ ನಿಘಂಟುವಿನ ೬ನೇ ಸಂಪುಟವನ್ನು ಕನ್ನಡಿಗರ ಕೈಯಲ್ಲಿರಿಸಲು ನಿಜವಾಗಿಯೂ ಹೆಮ್ಮೆಯಾಗುತ್ತದೆ. ಇದಕ್ಕೆ ಸಂಬಂಧಿಸಿದ ಎಲ್ಲರಿಗೂ ಹೃತ್ಪೂರ್ವಕವಾದ ಕೃತಜ್ಞತೆಗಳು.

ಬೆಂಗಳೂರು
೨೮-೧೨-೧೯೯೦

ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯ
ಅಧ್ಯಕ್ಷರು

**ಪಾಉಗ್ಗಮಣ** (ನಾ). [ಜೈನ] ಉಪವಾಸದಿಂದ ಮರಣ ಹೊಂದುವಿಕೆ; ಪ್ರಾಯೋಪಗಮನ : ಬಲದೇವಾಚಾರ್ಯ್ಯರ ಪಾಉಗ್ಗಮಣ (ಎಕ. II. ೬೨; ಸು. ೭೬೦). [<ಸಂ. ಪ್ರಾಯೋಪಗಮನ]

**ಪಾಂಕ್ತ** (ಗು). ೧. ಕ್ರಮಬದ್ಧವಾದ ; ಸಮಗ್ರವಾದ. (ನಾ). ೨. ಕ್ರಮಬದ್ಧವಾದುದು ; ಸಮಗ್ರವಾದುದು : ಹೊಸತಾರ್ಗದ ಗ್ರಂಥಕರ್ತನು . . . ಜನಾಂಗಗಳ ಚರಿತ್ರೆಗಳನ್ನೂ ಮನುಷ್ಯಜಾತಿಯ ಪಾಂಕ್ತವಾದ ಅಭ್ಯುದಯವನ್ನೂ ವಿವರಿಸುವನು (ಇಶಾ. ೯೯) ; ಎಲ್ಲಾನೂ ಪಾಂಕ್ತ ಆಗಿ ಆಗಬೇಕು. ಬಾಚೂ ಏನೂ ತಪ್ಪು ಹಾಗಿರಲ್ಲ (ದೀಶಿ. ೨೮) ; ಇಂಥ ಪೂರ್ವಸಂಬಂಧಕಲ್ಪನೆಯಿಂದ ಕವಿಯ ಬಹುಶ್ರುತತ್ವ ಪಾಂಕ್ತವಾಗಿ ಪ್ರಕಾಶವಾಗುತ್ತದೆ (ವಂಶಾಂಕ. ೧೬೦). [ಸಂ.]

**ಪಾಂಕ್ತೇಯ** (ಗು). ೧. (ಭೋಜನಕ್ಕೆ) ಜೊತೆಗೆ ಕುಳಿತುಕೊಳ್ಳಲು ಯೋಗ್ಯವಾದ. (ನಾ). ೨. ಜೊತೆಯಲ್ಲಿರಲು ಯೋಗ್ಯವಾದುದು ; ಸಹವಾಸಯೋಗ್ಯವಾದುದು : ಛಂದಸ್ಸೇ ಸಾಧುಕಾವ್ಯಭಾಷೆಯ ಏಕಮಾತ್ರ ಪಾಂಕ್ತೇಯವೆಂದು ಗಣ್ಯವಾಗಿತ್ತು (ಕವಿರ. II. ೩೦೯). [ಸಂ.]

**ಪಾಂಗ** 'ಪಂಗ$_1$' ನೋ.

**ಪಾಂಗತ**, ಪಾಂಗಿತ (ನಾ). ಕ್ರಮಬದ್ಧವಾದುದು: ತೊಟ್ಟಿಲಲ್ಲಿರುವುದು; ಅಂಬೆಗಾಲಿಕ್ಕುವುದು . . . ಎಲ್ಲಾ ಅಟ್ಟದ ಮೆಟ್ಟಲಿನಂತೆ ಪಾಂಗತವಾಗಿದೆ (ಪಾತಿಗೆ. ೦೬೯). **ಪಾಂಗಿತ** : ಆಯುವು ತೀರಿಯಲ್ಲಮತರಿಸಿದಿರಿ ಪಾಂಗಿತದೊಳ್ ನಿವ ಪಾಂಡುರಾಜನಿಗೆ (ಕವಶಾ. ೯೬-೨೩). [<ಸಂ. ಪಾಂಕ್ತ / ಮರಾ. ಪಂಗತ್]

**ಪಾಂಗಱ** (ಕ್ರಿ). ಕ್ರಮವನ್ನು ತಿಳಿ ; ಹದವನ್ನು ಅರಿತುಕೊಳ್ಳು : "ಪಾಂಗಱ (ಪಾಂಗು+ಅಱ)—ಪ್ರಕಾರಗವುನೇ (ರೀತಿಯನ್ನು ತಿಳಿ)" (ಶಮ); ಅಲಸದೆ ಪೀನಂ ಪಡೆಯದೆ ಪಾಂಗಱದು ದೋಷಮಂ ಪಿಂಗಿಸಿ ತಪ್ಪದೆ ಬಗೆದು ಪೇಳ್ವುದು (ಶಶಾ. ೦-೯೯) ; ಕಮ್ಮಿತ್ತಾಗೆ ಪಾಂಗಱೆ ದಮ್ಮತೋಪಮಾನವಿದು ತಾನೆನೆ ಪಾಟಿಪ್ಪುದು ಶ್ರೀಲದುಂಡೆಯಂ (ಲೋಕೋಶ. ೬-೦೦) ; ಅಱಯುಲಾಗದು ನೆಟ್ಟನೆಂದು ಬಿಸುಟ್ಟುದುಂ ನಯಮಲ್ತು ಪಾಂಗಱವ ವಿಪ್ರಪರ್ಕಳಿಂ ಚರಿಂ ವಿಚಾರಪರ್ಕಳಿಂ ಪೆಱರುಮನ್ನರಿನಿನ್ನುಮಾರಯಿಸಿಂ ವಿದಗ್ಧರಿನೊಯ್ಯನೆತ್ತಱಯಲ್ಕುಮೊ (ಕಾವ್ಯಾವ. ೮೫). [ಪಾಂಗು$_1$ + ಅಱ]

**ಪಾಂಗೞ** (ಕ್ರಿ). ಕ್ರಮತಪ್ಪು; ರೀತಿಗೆಡು : ಗಱಯಿಸಿದರ್ಥಂ ಸಲೆ ಪಾಂಗೞಯದೆಯುಂ ಶಬ್ದಮೋದದಿರ್ದೊಡೆ ಮುತ್ತುಂ ಪವಳಮುಂ ಕೋದಂತಿರ್ಕುಂ (ಶಶಾ. ೨-೫) ; ಫಳಲನ ನಡೆಯೋದು ಜಡಿದು ಸಾರಥಿಯಂ ಪಾಂಗೞದು ನಿಲಲೀಯದಲ್ಲಿಂದಟ್ಟಿದುಪ್ಪುಂತಯುದ್ಧಳಾತ್ಮಜರನಂ ನರನಂ (ಕಾವ್ಯಾವ. ೩೬). [ಪಾಂಗು$_1$ + ಅೞ$_1$]

**ಪಾಂಗಿತ** 'ಪಾಂಗತ' ನೋ.

**ಪಾಂಗು$_1$** (ನಾ). ೧. ಆಕಾರ; ಆಕೃತಿ ; ರೂಪು : "ಪಱಜು ಪಾಂಗಾಕಾರಂ" (ಶಬ್ದಮ. ೬೨). ೨. ಬಗೆ ; ಪ್ರಕಾರ ; ರೀತಿ : "ಪಾಂಗುಂ ಪ್ರಕಾರಾಹ್ವಯಂ" (ಕರ್ಣಾ. ೯೯) ; ಇರುಳುಂ ಪಗಲುಂ ಪಲವುದಿವಸ ಮೊಂದೆ ಪಾಂಗಿನೊಳ್ ಪ್ರಳಾಪಿಸಿ (ವಡ್ಡಾ. ೦೦೬-೧೦) ; ಈ ಮಾಂಗಳನಾವ ಪಾಂಗಿನೊಳ್ ನಾಂ ತಿಱಬೆಂ (ಪಂಪಭಾ. ೯೩-೯) ; ಲೋಕದೊಳಿನ್ನೇ ಪಾಂಗಿಂ ತಪದೊಳಿಸಗುವನ್ನರುಮೊಳರೇ (ಧರ್ಮಾಮೃ. ೨-೨೦೬) ; ಹೆಂಗಳ ರೂಪು ಗಂಡರಿಗೆ ಗಂಡರ ರೂಪು ಹೆಂಗಳ ಸೋಲಿವುದೆಂಬ ಪಾಂಗಲ್ಲವವನ ಚೆಲ್ವಿಕೆ (ಶರತ. ೧-೩೦). ೩. ಸರಿ; ಸಾಟಿ : "ಪಾಂಗೆಂದು ಗೆತ್ತೆಂದು ಸದೃಶಭಾವಂ" (ಶಶಾ. ೫೯-೨೯೯) ; ಒಂಬತ್ತುಂ ವಣ್ಣದ ನುಣ್ಣಿದಿರಿ ನೆಗೆದು ನೀಲ್ದೊಂದೊಂದರ್ಕೊಳ್ ಕೂಡಿ ಮಯ್ಮೆತ್ತಿರ್ದಿಂದಿರವಿಲ್ಲ ಪಾಂಗನೆನಸುಂ ಬಾಂಬಟ್ಟೆಯೊಳ್ ಬೇಱ ಕಣ್ಣೆತ್ತುಂ ಸೋಲಮನೀವ ರನ್ನಮಸರಂ ಚೆಲ್ವಾದುದು (ಕಬ್ಬಿಗ. ೩೬) ; ಸೊಗಯಿಸುತಿರ್ದರೆದು ಪೂಪಡಿಗವೆಣ್ಗಳು ಭಾವಕರ ಬಗೆಗೆ ಸರ್ಲ್ ಹಾಪಡಿಗವೆಣ್ಗಳ ಪಾಂಗನು (ಶಾಂರಪು. ೦೨-೩೦) ; ಸತ್ಯವಾಕ್ಯಂಗಳಂ ನುಡಿವಲ್ಲಿ ಸದ್ಭಾವ ನಿತ್ಯಹರ್ಷಾಂಗಿಯಪ್ಪ ದಜಾಂದರುಂಧತಿಯ ಪಾಂಗು (ಶಾಶಃ. ೨-೦೬). ೪. ಎಡೆ ; ಅನುವು; ಆಸ್ಪದ: ಬೆಡಂಗಿಗೆ ಪಾಂಗಾದ ದೇಸಿಗಂ . . . ಸೌಂದರ್ಯಕ್ಕೆ ನೆಲೆಮಾದಂದಕ್ಕಂ ಬೆಕ್ಕಸಂಬಟ್ಟು (ಶಾಂತಿಪು. ೬-೩೬೩) ; ಸಂಗತಮೆನೆರುಚಿಯಂ ಜನವುಗಿಂ ನಡೆಗೆಱಗುವಡೆಯೊಳಿನಿಸಿ ಸಱಯಲ್ ಪಾಂಗಾದುದು ಸುರಗಿರಿಕೂಟಂಗಳುಮಂ ಪ್ರಣಸಮಯಕಂಟಂಗಳುಮಂ (ಆಕಪು. ೩-೩). ೫. ಅಂದ ; ಸೊಗಸು ; ಚೆಲುವು : ಬರ್ಪ ಪಾಂಗುವರ್ಾಗಿರೆ ಚೆಲ್ವನಾಯ್ಯರಬೊಜಂಗರ ಲೀಲೆ ಸುರೇಂದ್ರಲೀಲೆಯಂ (ಶಂಶಶಾ. ೯-೬೭) ; ದರಹಾಸಂ ಭ್ರೂವಿಳಾಸಂ ನೆಗೞ್ದ ನಡುಗೆ ಪುಷ್ಪಂ ಸ್ವನಾಭೋಗಬಾಧ್ಯಂ ಸ್ಫುರಿತಾಂಗಂ ಬೇಱ ಪಾಂಗಂ ನೆರೆದುಮರುನಿತಂಬಂ ಪುರಸ್ತ್ರೀಕದಂಬಂ (ಜಗಪ. ೦೬-೭೮) ; ಪಾಂಗು ಬೆಡಂಗು ಭಂಗಿ ಸಂಗಳಿಸೆ ಸುಕಂಠೆ ಪಾಡಿ ಪುದಿದಳ್ ಮುದಮಂ ನರನಾಥಚಿತ್ತದೊಳ್ (ಕುಸುಮಾ. ೦-೩೭). ೬. ಕ್ರಮವಾದುದು ; ಅನುಕೂಲವಾದುದು ; ಯೋಗ್ಯವಾದುದು : ವಿಜಯಾರ್ಧಾದ್ರಿಯನೆಯ್ದಿ ತತ್ಕಟಕದೊಳ್ ಬೀಡಿಂಗೆ ಪಾಂಗಾಗೆ ತದ್ವಿಜಯಶ್ರೀಕಟಕೋಪಮಂ ಕಟಕಮಂ ಸಾಪ್ಪಾಗೆ ಬಿಟ್ಟಿರ್ಪನಂ ವಿಜಯಾರ್ಧೇಂದ್ರಕುಮಾರನಾ ನಗದಧೀಶಂ ಬಂದು ಕಂಡಂ (ಶಾಂತಿಪು. ೦೦-೩೯). 'ಪಾಂಗಱ', 'ಪಾಂಗುವೆಱು' ಪರಾ. ೭. ಸಂಬಂಧ; ಹೊಂದಾಣಿಕೆ : ಬೂದಿ ಜಡೆ ಲಕ್ಕನಾಂ ತಪಕಾದುವೆರಲ್ಟೊಣಿ ಶರಾಸನಂ ಕವಚವಿವೆಂತಾದುವೊ ಮುತ್ತುಂ ಮೆಚಿಸುಂ ಕೋದಂತಾಚೆ ನಿನ್ನ ತಪದ ಪಾಂಗೆಂತು ಗಡಾ (ಶಂಶಶಾ. ೭-೬೨) ; ಕಚುಪೂವಾಗಲೊಡಂ ಪುಚ್ಚಟಾ ದೂರ್ವಾಯ ಪಾಱ ಪೋಪ ಕಂಪಿನ ತೆಱದಿಂ ಕಚಕಾಟವಾದೊಡಲಿಂ ಪಾಂಗುಗೆಯದೆ ಪಱಪಟ್ಟು ಪೋದುದಸು ಮುನಿಪತಿಯಾ (ಶರಪಾ. ೦೦-೩೯). [ದೇ. ॥ ತಮಿ. ಪಾಙ್ಕು; ಮಲ. ಪಾಙ್ಙು, ಪಾಙ್ಙು]

**ಪಾಂಗು$_2$** 'ಪಾಗು$_1$' ನೋ.

**ಪಾಂಗುಪಡೆ** (ಕ್ರಿ). ಅಂದವನ್ನು ಪಡೆ ; ಚೆಲುವಾಗು : ಮುತ್ತಿನ ಸೂಸಕತ ಸೇರಿಸಿದಳೊರ್ಪ ಲಲಿತಾಂಗಿ ಪಾಂಗುಪಡೆಯೆ (ಶಾಂರಪು. ೦೪-೩೭). [ಪಾಂಗು$_1$ + ಪಡೆ$_1$]

**ಪಾಂಗುವೆಱು** (ಕ್ರಿ). ಕ್ರಮಬದ್ಧವಾಗು : ಅಸದೃಶಮೆನೆ ಮುನ್ನಂ ಶಬ್ದಶಾಸ್ತ್ರಾದಿ ವಿದ್ಯಾವಿಸರಮನುಚಿತಾಲಾಪಂಗಳಿಂ ಪಾಂಗವೆತ್ತೋದಿಸಿದಂ (ಕುಸುಮಾ. ೭-೯೭). [ಪಾಂಗು$_1$ + ಪೆಱು$_1$]

**ಪಾಂಚಜನ್ಯ** (ನಾ). ೧. ಕೃಷ್ಣನ ಶಂಖ ; P 'ಪಂಚಜನ' ಎಂಬ ರಾಕ್ಷಸನ ಮೂಳೆಗಳಿಂದ ಮಾಡಿದ ಶಂಖ : "ನಾರಾಯಣನ . . . ಶಂಖಮಂ ಪಾಂಚಜನ್ಯವೆಂಬುದು" (ಕಲಾಯು. ೭೭-೨೭) ; ಇಕ್ಕಿ ಪಂಚಜನನಂ ತತ್ಪಂಚಜನಾಸ್ಥಿಜನಿತಮಂ ಪಾಂಚಜನ್ಯಶಂಖಮನುಪೇಂದ್ರನೀಂಟ್ಗೊಂಡೊಲವಿಂ (ಜಗಪ. ೭-೨೩) ; ಮುರವಿಜಯ ನಿಜಪಾಂಚಜನ್ಯಮಸಿರವ ಫಲುಗುಣ ದೇವದತ್ತಸ್ಫುರಿತರವಮನು ರಚಿಸಿದನು (ಕುಮಾವ್ಯಾ. ೩-೨). ೨. ಕಶ್ಯಪ, ವಸಿಷ್ಠ, ಪ್ರಾಣ, ಆಂಗೀರಸ ಮತ್ತು ಚ್ಯವನ ಎಂಬ ಐದುಜನ ಋಷಿಗಳು ಮತ್ತು ಅವರಿಂದ ಪ್ರವೃತ್ತವಾದ ಐದು ಕುಲಗಳು. ೩. ಬೆಂಕಿ ; ಅಗ್ನಿ. ೪. ಚಂದ್ರ. ೫. ಮರ ; ವೃಕ್ಷ: "ಅನಲ ಹಿಮಾಂಶು ಶಂಖ ಕುಲಭೇದಗಳಿಂತಿವೆ ಪಾಂಚಜನ್ಯಮೆಂದೆನಿಕು" (ನಾನಾರ. ೬೬). ೬. ಒಂದು ಬಗೆಯ ಹುಲ್ಲು ; ಜಂಬುಹುಲ್ಲು. ೭. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ : ಪಂಚವ್ರತ ಇಂದ್ರಿಯ . . . ಹರವಕ್ತ್ರ ಪಾಂಚಜನ್ಯ

ಶುಕ್ಲ—ಇಂತಿನಿತುಂ ಶಿಕ್ಕೆ ಹೆಸರು (ಶೃವಹಾ. ೧೦-೨೩). "ಅಗ್ನಿ ಕುಜಂ ದ್ವಿಜರಾಜಂ ಶಂಖಂ ತಾಂ ನಿಜವೈದದಿ ಲಿಖ್ವಿ ಪಾಂಚಜನ್ಯಮೆನಿಕ್ಕುಂ" (ವಾಹಾಕಂ. ೯೮). [ಸಂ.]

**ಪಾಂಚಭೌತಿಕ** (ಗು). ೧. ಪಂಚಭೂತಗಳಿಂದಾದ; ಪ್ರಾಕೃತಿಕವಾದ; ಜಡಪ್ರಕೃತಿಯ: ವ್ಯಕ್ತಸ್ಥಿತಿಗೆ ಹೇತುಭೂತವಾದ ಪಾಂಚಭೌತಿಕ ಶರೀರತ್ಯಾಗವೇ ಸಾವು (ಭಾರಠ. ೧೦೯). (ನಾ). ೨. ಪಂಚಭೂತಗಳಿಂದಾದುದು; ಪ್ರಾಕೃತಿಕವಾದುದು: ದಶಾವತಾರರೂಪಗಳು ಅಜ್ಞರ ದೃಷ್ಟಿಗೆ ಪಾಂಚಭೌತಿಕವಾಗಿ ತೋರುತ್ತಿದ್ದರೂ ಪ್ರಾಜ್ಞರ ದೃಷ್ಟಿಗೆ ಜ್ಞಾನಾನಂದಮಯವಾಗಿಯೇ ತೋರುವುವು (ಹಿಂರಹಾ. ೨೮೩). [ಸಂ.]

**ಪಾಂಚರಾತ** (ನಾ). ೧. ವೈಷ್ಣವಾಗಮಗಳಲ್ಲಿ ಒಂದು; P ವಾಸಿಷ್ಠ, ನಾರದೀಯ, ಕಾಪಿಲ, ಗೌತಮೀಯಕ, ಸನತ್ಕುಮಾರೀಯ ಎಂಬ ಐದು ವಿಧ ಜ್ಞಾನಗಳನ್ನು ಉಪದೇಶಿಸುವ ಒಂದು ತತ್ತ್ವಶಾಸ್ತ್ರ: ಪಾಂಚರಾತ್ರ ಮೊದಲಾದ ಕೆಲವು ಆಗಮಗಳು ವೇದಾಂತವಿರುದ್ಧವಲ್ಲವೆಂದು ಕೆಲವರಿಂದ ಪರಿಗ್ರಹಿಸಲ್ಪಟ್ಟಿರುವುವು (ಹಿಂರಹಾ. ೯೪); ಶ್ರೀಪಾಂಚರಾತ್ರಾಗಮವು ಅನಂತ, ಗರುಡ, ವಿಷ್ವಕ್ಸೇನ, ಬ್ರಹ್ಮ, ಇಂದ್ರರೆಂಬ ಐದು ದೇವತೆಗಳಿಗೆ ಐದು ರಾತ್ರಿಗಳಲ್ಲಿ ಭಗವನ್ಮುಖದಿಂದ ಉಪದಿಷ್ಟವಾಗಿ ಅನ್ವರ್ಥವಾಗಿದೆ (ಭಾರಠ. ೬೬). 'ಪಂಚರಾತ್ರ' ಪರಾ. ೨. ಪಾಂಚರಾತ್ರಾಗಮವನ್ನು ಅನುಸರಿಸುವ ವೈಷ್ಣವಪಂಗಡ ಮತ್ತು ಅದರ ಸಂಪ್ರದಾಯ. [ಸಂ.]

**ಪಾಂಚರಾತ್ರಿಕ** (ನಾ). ವೈಷ್ಣವ ಪಂಗಡದವನು; ಪಾಂಚರಾತ್ರ ಸಂಪ್ರದಾಯದ ಅನುಯಾಯಿ: ಪಾಷಂಡಿಗಳು ಮಹಾಕ್ರೂರರಹ ಪಾಂಚರಾತ್ರಿಕರಾಗಿರೇಯೆಂದು ಗೌತಮಂ ಶಾಪವಿತ್ತಂ (ಶೀಕೃಪು. ೪-೨-೨೫). [ಸಂ.]

**ಪಾಂಚವಾರ್ಷಿಕ** (ಗು). ೧. ಐದು ವರ್ಷ ವಯಸ್ಸಾದ. ೨. ಐದು ವರ್ಷಗಳ ಅವಧಿಗೆ ಸಂಬಂಧಿಸಿದ: 'ಪಾಂಚವಾರ್ಷಿಕಯೋಜನೆ' ಪರಾ. [ಸಂ.]

**ಪಾಂಚವಾರ್ಷಿಕಯೋಜನೆ** (ನಾ). ವ್ಯವಸ್ಥಿತವಾಗಿ ಮಾಡಬೇಕಾದ ಕಾರ್ಯಗಳ ರೂಪರೇಷೆಯ ವಿಧಾನಗಳನ್ನು ಐದು ವರ್ಷಗಳಿಗೊಮ್ಮೆ ಸಮುಚಿತವಾಗಿ ರೂಪಿಸಿಕೊಳ್ಳುವುದು: ಭಾರತದ ಮೊದಲನೆಯ ಪಾಂಚವಾರ್ಷಿಕಯೋಜನೆಯಲ್ಲಿ ಕೃಷಿಗೆ ಪ್ರಾಧಾನ್ಯವಿತ್ತು (ಪ್ರಜಾ). 'ಪಂಚವಾರ್ಷಿಕಯೋಜನೆ' ಪರಾ.

[ಪಾಂಚವಾರ್ಷಿಕ+ಯೋಜನೆ]

**ಪಾಂಚಾಲ**, ಪಾಂಚಾಳ (ಗು). ೧. ಪಾಂಚಾಲದೇಶಕ್ಕೆ ಸಂಬಂಧಿಸಿದ: ಮುತ್ತಿಗೆ ತೆಗೆಸಿದರು ಪಾಂಚಾಲನಾಯಕರು (ಕುವ್ಯಾಳ. ೧೫-೪೪). (ನಾ). ೨. ಒಂದು ದೇಶದ ಹೆಸರು: ಲಾಳ ಮಾಳವ . . . ಪಾಂಚಾಲಮತ್ಸ್ಯಕುರಂಗವಂಗಕಳಿಂಗಬಂಗಾಳ (ಬಸಪು. ೬-೧೮). ೩. ಪಾಂಚಾಲದೇಶದ ಅರಸು: ಮರುಳೆ ಪಾಂಚಾಲನ ಕುಮಾರಿಯ ಪರಕಟಾಕ್ಷದ ಬೀಸುವಲೆಯಲಿ . . . ಧರಣಿಪಾಲಮೃಗಂಗಳನು ಸಲೆ ಬರಿಸಿಸದೆದನು (ಕುವ್ಯಾಳ. ೦೪-೧೮); ಬಂಗಾಳ ಬಾಹ್ಲೀಕ ಘೋಟ ಪರಪಾಂಚಾಲ . . . ಧರಣೀಪಾಲತತಿ ಸಂದಣಿಸಿದುದು ಸಾಕೇತನಗರಿಯಲಿ (ತೊರರಾ. ೦-೬-೧೮). ೪. ಉಪ್ಪಾರ: ಕಲ್ಲಾನೆ ಕುಟುಕೋರು ಚೆನ್ನೂರು ಪಾಂಚಾಲರ್ರು ಚಿನ್ನಾದಾ ಉಳಿಬಾ ಮಸಕೊಂಡು ರಂಗಯ್ಯ ಕಲ್ಲುಮಾಳಿಗೆ ಕಡದಾರೋ (ಹುಬ್ಬಿಹ. ೫೦). ೫. ಮರಗೆಲಸ ಮಾಡುವವನು; ಬಡಗಿ: ಪಾಂಚಾಲರಿಗೆ ಆಚಾರಿ ಎಂದೂ . . . ಹಳ್ಳಿಪ್ಯೇಠಲ್ಲಿ ಪೂಜಾರಿ ಎಂದೂ . . . ಕೌಟುಂಬಿಕ ಹೆಸರುಗಳಿವೆ (ಕುಲುವಾ. ೦೮೪). ೬. = ಪಾಂಚಾಲಿ ೪: ದ್ವಿತ್ರಿಪದರಚಿತಪದ್ಯಪ್ರವಿಚಿತ್ರೌಪಮ್ಯಾದ್ಯಲಂಕ್ರಿಯಾಸಮೇತಂ ಶ್ರೋತ್ರಸುಖಲಲಿತಪ್ಪುದುಪದಪಾತ್ರಂ ಪಾಂಚಾಲರೀತಿಯೆನೆ ಪೆಸರ್ವಡೆಗುಂ (ಕಾವ್ಯಾವ. ೭೮೪).

**ಪಾಂಚಾಳ**: ೧. ಪಾಂಚಾಳಗೋತ್ರಮವಾಹೇಂದ್ರನಗರದಿಂದಂ ಬಂದಂ (ಪೇಬಹು. ೯-೬೮). ೨. ಪಾಂಚಾಳ ಗಂಗೋತಟಾಂತರ ಕೌಶಾಂಬಿ . . . ಮತ್ಸ್ಯದೇಶಕ್ಕೆ ತಸ್ಕರರೋಗಾದಿ ಭಯಂಗಳಂ ಜನಿಯಿಕುಂ (ಅಭ್ರಿಪು. ೧೨-೭೦). ೩. ಪಂಚಕಾರುಕರು; P ಉಪ್ಪಾರ, ಕಮ್ಮಾರ, ಬಡಗಿ, ಕಂಚುಗಾರ ಮತ್ತು ಸೊನ್ನಾರರೆಂಬ ಐದು ಶಾಖೆಗಳಿಗೆ ಪಾಂಚಾಳರೆಂಬ ಹೆಸರು ಇರುವುದು; ಬಡಗಿ, ನೇತಾರ, ಕೆಲಸಿಗ, ಅಗಸ ಮತ್ತು ಸಮಗಾರ ಎಂಬ ಐದು ವರ್ಗಗಳಿಗೂ ಇದೇ ಹೆಸರುಂಟು: ಹೆಸರಿಸಿದ ಪಾಂಚಾಳ ಚಿಪ್ಪಿಗ ಕುಶಲಕಾರ್ಯದ ಶಿಲ್ಪಿಕ . . . ಮುಚ್ಚಿಗರೆಸವ ವೀಧಿಗಳೊಳಗೆ ಬರುತಿರ್ದನು ದಶಗ್ರೀವ (ತೃಠಾರಾ. ೨-೪೦). [ಸಂ.]

**ಪಾಂಚಾಲಿ** (ನಾ). ೧. ಪಾಂಚಾಲದೇಶದ ಹೆಂಗಸು. ೨. ಪಾಂಚಾಲದೇಶದ ರಾಜಪುತ್ರಿ; ದ್ರೌಪದಿ: ಪಾಂಚಾಲಿಯುಂ ಗಂಧದಾಯಕಿಯಾಗಿರ್ಪಿನಮಂದು ಮತ್ಸ್ಯಗೃಹದಿಂದೀ ನಿಗ್ರಹಂ ಪೊಲ್ಲದೇ (ಗದಾಯು.೩-೩೪); ಪಾಂಚಾಲಿಯ ಮನೋರಥಶಾಲೆಯಲಿ ಸಾರಿದರಲ್ತೆ ಸಭೆಯಲಿ ಬಾಹೀಸುರರ (ಕುವ್ಯಾಳ. ೧೫-೧); ಪಾಂಚಾಲಿ . . . ಸಲಹಿದು ಹರಿಚರಣಕೆಜಗಿದಳು (ಕೃಬಿಸಾ. ೨-೫೦). ೩. ಗೊಂಬೆ; ಪುತ್ಥಳಿ. ೪. [ಕಾವ್ಯಮೀ] ಕಾವ್ಯದ ರೀತಿಗಳಲ್ಲಿ ಒಂದು: ಗೌಡಿ ವೈದರ್ಭಿ ಪಾಂಚಾಲಿಯೆಂಬ ರೀತಿತ್ರಯಂಗೂಡಿ (ಎರೀಕ. ೨೭೬); ವಾಮನನು . . . ಓಜಸ್ಸು ಮತ್ತು ಕಾಂತಿಗಳುಳ್ಳದ್ದು ಗೌಡಿಯೆಂದೂ ಮಾಧುರ್ಯ ಸೌಕುಮಾರ್ಯಗಳುಳ್ಳದ್ದು ಪಾಂಚಾಲಿಯೆಂದೂ ಹೇಳುತ್ತಾನೆ (ಗ್ರಬಿಡಿ. ೨೨೨). ೫. [ನಾಟ್ಯ] ನಾಲ್ಕು ಬಗೆಯ ವೃತ್ತಿಗಳಲ್ಲಿ ಒಂದು: ಮನಾವತಿಯುಂ ದಾಕ್ಷಿಣಾತ್ಯೆಯುಂ ಪಾಂಚಾಲಿಯುಂ ಮಾದ್ರಮಾಗಧಿಯುಮೆಂಬ ನಾಲ್ಕುಂ ವೃತ್ತಿಯುಮಂ . . . ಪಾತ್ರಸಂಕ್ರಮಣದೊಳ್ ನೆಱೆಯೆ ತೋಱೆ (ಆಶಪು. ೩-೨೬ ವ). [ಸಂ. ಪಾಂಚಾಲೀ]

**ಪಾಂಚಾಲಿಕೆ**, ಪಾಂಚಾಳಿಕೆ (ನಾ). ೧. ಗೊಂಬೆ; ಪುತ್ಥಳಿ: ಚಿಂತಾಮಣಿಯನು ರತ್ನಪಾಂಚಾಲಿಕೆಸಂತಾನವನು ದಿವ್ಯಭೂಮಿ ಎಂತು ಪಡೆವುದಂತೆ ಜೈನಕುಮಾರನಾ ಕಾಂತೆ ಪೆತ್ತಳು ಭೂಮಿ ನಲಿಯೆ (ಪರಿಕ. ೧೦-೮೧). ೨. ದ್ರೌಪದಿ. ೧, ೨: ಆ ಮಂಟಪಂ . . . ಪಾಂಚಾಲಿಕೋದಂಚಿತಮಾಗಿಯುಂ ಕಲಶಜಾತಸಮನ್ವಿತಮುಂ . . . ಎನಿಸಿರ್ಪುದು (ಶಾಹಿಕ. ೮-೮ ವ). ೩. = ಪಾಂಚಾಲಿ ೪: "ಪಾಂಚಾಲಿಕಾ" ಬಂಗಾಲದ ಒಂದು ಕಾವ್ಯಪ್ರಕಾರ (ಇಶೃಕ. ೧೬.೨ ಅಡಿಟಿ).

**ಪಾಂಚಾಳಿಕೆ**: ೧. "ಚೇಲ ಶಿಲಾದಿಕೃತಂ ಪಾಂಚಾಳಿಕೆ ತಾನಕ್ಕುಮೆಸೆವ ಪುತ್ರಿಕೆ" (ವಸ್ತುಕೋ. ೫೦-೪೮); ಸೂರ್ಯನೋ ಕಲಶಮೋ ದಿಗ್ಭಿತ್ತಿಯೋ ಭಿತ್ತಿಯೋ ದೊರೆವೆತ್ತಾ ದೆಸೆವೆಣ್ಗಳೋ ಪರಿಲಸತ್ಪಾಂಚಾಳಿಕಾಜಾಲಮೋ ಪಿರಿದಂ ನಿಟ್ಟಿಸಬಾರದೆಂದೆನೆ ಜನಂ (ಎಕ. XI. ದಾವಡ. ೨೫-೬೧; 1224). ೩. ಕಾರುಣ್ಯಂ ಹಾಸ್ಯಂ ಶೃಂಗಾರಮಿವಿನಿತಱೊಳಮಕ್ಕೆ ವೈದರ್ಭಿ ಮನೋಹಾರಿ ಪ್ರಳಯಾದ್ಭುತರಸ ವೀರರಸಂಗಳ್ಗೆ ಪೇೞ್ಗೆ ಪಾಂಚಾಳಿಕೆಯಂ (ಕಾವ್ಯಾವ. ೭೮೮). [ಸಂ. ಪಾಂಚಾಲಿಕಾ]

**ಪಾಂಚಾಲೆ** (ನಾ). ದ್ರೌಪದಿ: ಪಾಂಚಾಲೆ ಪೊಕ್ಕಳು ಭದ್ರಮಂಟಪಶಾಲೆಯನು ಮರಳಿದುದು ಮನ್ಮಥನೊಡ್ಡು ಸತಿಯೊಡನೆ (ಕುವ್ಯಾಳ. ೧೪-೧); ದೇವ ನೀನಂದು ಗಾಂಡೀವಮಂ ತನಗಿತ್ತೆ ಭಾವಿಸಲ್ ಪಾಂಚಾಲೆ ನಿನ್ನೊಳುದ್ಭವಿಸಿದಳ್ ನಾವು ಲೋಗರೆ ನಿನಗೆ (ಕೃಜೈಭಾ. ೬-೭೩). [ಸಂ. ಪಾಂಚಾಲಾ]

**ಪಾಂಚಾಳ** 'ಪಾಂಚಾಲ' ನೋ.

**ಪಾಂಚಾಳಿಕೆ** 'ಪಾಂಚಾಲಿಕೆ' ನೋ.

**ಪಾಂಜ** (ನಾ). (ಕರಾ) ಒಂದು ಬಗೆಯ ಹಾರಾಡುವ ಅಳಿಲು : "ಪಾಂಜ ಎಂದರೆ ಪಾರಂಬೆಕ್ಕು." . . . ಒಂದು ಜಾತಿಯ ಹಾರಾಡುವ ಅಳಿಲು. ನೀವು ಕಾಡಲ್ಲಿ ಕೆಂಚಳಿಲನ್ನು ನೋಡಿಲ್ಲವೆ? ಇದೂ ಅದೇ ಜಾತಿಯದು (ಕಬ್ಬಿಣ. ೩೮).

[←ತುಳು. ಪಾಂಜಿ=ಒಂದು ಬಗೆಯ ಕಾಡುಬೆಕ್ಕು]

**ಪಾಂಜರಪೋಳ, ಪಿಂಜರಾಪೋಲು** (ನಾ). ೧. ವಯಸ್ಸಾಗಿ ನಿಃಶಕ್ತವಾದ ಅಥವಾ ಅಂಗಹೀನವಾದ ದನಗಳನ್ನು ಮುಖ್ಯತಃ ನೋಡಿಕೊಳ್ಳುವ ಸ್ಥಳ; ಧರ್ಮಾರ್ಥಗೋಶಾಲೆ : ಇತ್ತರನ್ನು ಬಲಾತ್ಕಾರವಾಗಿ ಎತ್ತಿಕೊಂಡು ಹೋಗಿ ಯಾವುದಾದರೊಂದು ಪಾಂಜರ ಪೋಳ(ಧರ್ಮಾರ್ಥ ದನದ ಹಕ್ಕೆ)ದಲ್ಲಿ ಬಿಟ್ಟು ಬರಬೇಕೆಂಬ ರೊಚ್ಚು ಒಮ್ಮೊಮ್ಮೆ ಉಕ್ಕಿ ಬರುತ್ತದೆ (ಕೇಳಕ್ಕ. ೦೦೦); ನೂರಾರು ದನಗಳಿರುವ ಪಾಂಜರಪೋಳಗಳಲ್ಲಿಯೂ ಡೇರಿಫಾರ್ಮುಗಳಲ್ಲಿಯೂ ಹಿನಿಯ ಳನಿಯ ಯಂತ್ರ ಇಟ್ಟರೆ ಅನುಕೂಲವಾಗುವುದು (ಗೋಗ್ರಾಸ. ೩೮). **ಪಿಂಜರಾ ಪೋಲು** : ೨. (ಅಲಂ) ಮುದುಕರು ಮಾತ್ರ ಅಧಿಕಾರದಲ್ಲಿರುವ ವ್ಯವಸ್ಥೆ : ಆ ಕಚೇರಿ ಒಂದು ಪಿಂಜರಾಪೋಲು. ಬರೀ ಮುದುಕರೇ ತುಂಬಿದ್ದಾರೆ (ರೂಢಿ).

[←ಹಿಂ. ಪಿಂಜರಾಪೋಲ್ ; ಮರಾ. ಪಾಂಜರಪೋಳ, ಪಾಂಜರಾಪೋಳ, ಪಿಂಜರಾಪೋಳ ; ಗುಜ. ಪಿಂಜರಾಪೋಳ, ಪಿಂಜರಾಪೋಲು]

**ಪಾಂಟ** (ನಾ). ಮಂತ್ರಪೂತವಾದ ದ್ರವ (?) : ಚನ್ನಬಸವಗೆ ಬಸವ ಪಾಂಟದಿಂ ಗುರುವಾಗಿ ಸುಜ್ಞಾನಬೋಧೆಯಂ ಉಂಟುಮಾಡೆನಲ- (ಶೃಕುಪು. ೬-೩೩); ಎಂಟುಧೀರರನೆಂಟುಪುಷ್ಪದ ಮೇಲಿಟ್ಟು ಪಾಂಟದಿಂ ಕೈಲಾಸಕೊಯ್ದು ಪರಶಿವನಿಪಂ (ಶೃಕುಪು. ೬-೦೪೮). [<ಸಂ. ಫಾಂಟ]

**ಪಾಂಟತ್ವ** (ನಾ). ಮಂತ್ರಪೂತವಾದ ದ್ರವದ ಗುಣ (?) : ಪಾಂಟತ್ವ ದಿಂದ ಪರಿಪರಿಯ ಶಾಖಾದಿಗಳ ನಾಂಟಿ . . . ರಾಜಿಸುವರಲ್ಲಿಪ್ಪ ಜನಪದಗಳು (ಶೃಕುಪು. ೩-೨೦) : ಸ್ವರ್ಗದೊಳಗೆ ದೇವೇಂದ್ರನು ಪಾಂಟತ್ವದಿಂದೆ ನಮುಚಿಯ ಕೊಂದು ಶ್ರೇಷ್ಠನಾಗಿರಲು (ಶೃಕುಪು. ೩-೬೪).

[ಪಾಂಟ + -ತ್ವ]

**ಪಾಂಟಮಾತ ?** (ನಾ). (?) : ಮತ್ತರು ಡಂಗೆಗೊಂಡು ಬಡಿಯಲ್ ಚಲ ದಿಂದನಸುಂ ದುರಾಗ್ರಹಂ ಚಿತ್ರದೊಳಾಗೆ ನಿನ್ನ ಬಟಿಯಂ ಬರಲೀ ಪುಳಿಸೇಂ ಟವಾಳದಿಂ ಸುತ್ತುವರ್ಗಲ್ಲದೊಲ್ಲೆ ಬಿಡು ನೀನೆನಗಿಲ್ಲಿ ಪೂಜಾ ತೋಟಿ ವೇಟುತ್ತಿರಲಾಸೆಯಂ ಬಿಸುಟು ನೀಂ ಕಳೆ ಪಾಂಟಮಾತಕ್ಕೆ [ಪಾಠಾಂ. ಕಳೆ ಪಾಂಡಿಮಾತಕ್ಕೆ, ಕಟಿ ಪಾಂಟಿಮಾತಕ್ಕೆ] ಸ್ಮರಿಸೆಂ (ಕಾವ್ಯಾಶ. ೯೩೦)

[?]

**ಪಾಂಡಪ್ಪ** (ನಾ). ಒಬ್ಬಾತನ ಹೆಸರು : ಕವ್ಯಿಲಿಗೆ ವಡೆವೋದಲ್ಲಿ ಕೊಮಾಲರಾ ಮಗನಪ್ಪಣ್ಣಪ್ಪನ್ ಕಾಳೆಗದುಳ್ಸತ್ತಲ್ಲಿ (ಎಕ. X. ಮುಳಬಾ. ೨೫೫-ಅ; ೭೮೦). [ಪಾಂಡು₁ + ಅಪ್ಪ₁]

**ಪಾಂಡರ** (ಗು). ೧. ಬಿಳಿಯ ಛಾಯೆಯ ; ಬಿಳಿಬಣ್ಣದ : ಋತು ವರ್ಣಕ್ರಮದಿಂದವೊಂದಿದ ದಿನಂ ನೀಲಾಭದಿಂ ಸ್ನಿಗ್ಧಮಚ್ಛಕರಂ ಪಾಂಡರ ಮಾಗಿ ಚಸ್ನೆಸೆಯೆ ಮೇಣ್ ಬೆಳ್ಪಾಗೆ ವೈಡೂರ್ಯದಾಕೃತಿಯಿಂ ತತ್ಪ್ರತಿ ಸೂರ್ಯನಲ್ಲಿ ಶುಭದಂ (ಲೋಕೋಪಕಾ. ೯-೩೭). ೨. ಬಣ್ಣಗುಂದಿದ ; ಪೇಲವವಾದ. (ನಾ). ೩. ಬಿಳುಪಾದುದು; ಬಿಳಿದು : "ಗೌರಃ . . . ಅವದಾತಃ. ಪಾಂಡರಃ—ಈ ೧೨ ಬಿಳಿದು" (ಕಅಭಿಧಾ. ೦೨೦-೯೬). ೪. ಬಿಳಿಬಟ್ಟೆಯನ್ನು ಧರಿಸಿದ ಭಿಕ್ಷು. ೫. ಕಾವಿಕಲ್ಲು ; ಗೈರಿಕಧಾತು.

[ಸಂ.]

**ಪಾಂಡರಂಗಪಲ್ಲಿ** (ನಾ). ಒಂದು ಊರಿನ ಹೆಸರು : ಮಹಾದೇವಗಿರೇಃ ಪೂರ್ವತ ಅನೇಪಂ ಬಾಲಕನ್ನಕ ದುದ್ದಪಲ್ಲಿ ಸಹಿತಾ ಪಾಣ್ಡರಜ್ಗಪಲ್ಲೀ ಪ್ರತಿಪ(ಪಾ)ದಿತೇ . . . ಆಜ್ಞಾಪಯತೀತಿ (ಪ್ರುಕಂ. ೦೬೨೪, ೦೦೬-೦೮ ; ಸಂ. ೩೬೪). [ಪಾಂಡರಂಗ₀ + ಪಲ್ಲಿ₂]

**ಪಾಂಡವ** (ನಾ). ೧. ಪಾಂಡುರಾಜನ ಮಗ ; ♦ ಧರ್ಮರಾಯ, ಭೀಮ, ಅರ್ಜುನ, ನಕುಲ ಹಾಗೂ ಸಹದೇವ ಈ ಐವರಿಗೂ ಅಥವಾ ಈ ಐವರಲ್ಲಿ ಯಾರಿಗಾದರೂ ಈ ಹೆಸರು ಅನ್ವಯವಾಗು ವುದು : "ಪಾಂಡವಂ ಧರ್ಮಜಂ ಯುಧಿಷ್ಠಿರನು ಧರ್ಮಪುತ್ರ ನೆಂಬಿನಿತು" (ಕುಂಗಅ. ೭೮-೩); ಆನೆಂಬುದನಿಂಬುಕಯ್ಯೊಯ್ಯಪ್ಪುದೆ ಪಾಂಡವರ ನೊಡಂಬಡಿಸಿ ಸಂಧಿಯಂ ಮಾಡಿ ಪೂರ್ವಕ್ರಮದೊಳ್ ನಡೆಸೆಂತು ಮಾಟ್ಪೆಂ (ಗದಾಯು. ೩-೪೪ ವ) ; ಪಾಂಡವರಾಜಿಯೊಳೆನ್ನಂ ೧೦ಡಾಂಪ ವರೊಳರೆ (ಜೇಬಾಪು. ೦೨-೦೪೪) ; ನೀವು ಸುಖದಲಿ ಪಾಂಡವರನು ಜೀವಿಸುವುದೆಮಗಿಲ್ಲಿದ ಯದುಭೂಪಾವಳಿಯ ಕೃಪೆ ಮಾಡವೇಕು (ಕುಭಾ.ಉ. ೦-೩೩). ೨. ಬಿಳಿಯ ಹಕ್ಕಿ ; ಬೆಳ್ಳಕ್ಕಿ. ೩. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ : ಶರ ಬಾಣ ವಿಷಯ ಪಾಂಡವ ಪುರವೈರಿಮುಖಂಗಳೈದಱ ನಾಮಂ (ಪ್ರಕಾ. ೯-೦೯).

**ಪಾಂಡವರ ಪೂಜೆ** = ದೀಪಾವಳಿಯಲ್ಲಿ ಪಾಂಡವರ ಗುರುತಾಗಿ ಸಗಣಿ ಬೆನಕಗಳನ್ನು ಇಟ್ಟು ಮಾಡುವ ಪೂಜೆ; ♦ "ಪಾಂಡವರು ಅಜ್ಞಾತ ವಾಸವನ್ನು ಮುಗಿಸಿ ಕೌರವರ ಕಣ್ಣಿಗೆ ಕಂಡುದು ಬಲಿಪ್ರತಿಪದೆಯ ದಿವಸವೇ. ಪಾಂಡವರು ಪುಣ್ಯಪುರುಷರು. ಅವರ ಕುರುಹು ಗಳನ್ನೂ ಮಾಡಿ ಈ ದಿವಸ ಪೂಜಿಸುವುದುಂಟು" (ಕಾವ್ಯ. ೦೪೮) : ಪಾಂಡವರ ಪೂಜೆಯನ್ನು ದೀಪಾವಳಿಯಲ್ಲಿ ಮಾಡುತ್ತಾರೆ (ರೂಢಿ). **ಪಾಂಡವರ ಹಬ್ಬ** = ದೀಪಾವಳಿಯಲ್ಲಿ ಪಾಂಡವರ ಪ್ರತಿಮೆಗಳನ್ನು ಪೂಜಿಸಿ ಮಾಡುವ ಹಬ್ಬ : ಪರವ್ವ ಪ್ರತಿವರುಷವೂ 'ಪಾಂಡವರ ಹಬ್ಬ'ಕ್ಕೆ ತನ್ನ ಮಗಳನ್ನು ಕರೆಯಿಸಿಯೇ ಕರೆಯಿಸುತ್ತಾಳೆ (ಗಂಗಾಗೌ. ೬೪).

[ಸಂ.]

**ಪಾಂಡವರ ಮದ್ದು** (ನಾ). ಬಿಳಿನೈದಿಲೆಯ ಗಡ್ಡೆ : "ಪುಷ್ಕರೀಣಿ, ಪೌಂಡರ್ಯಂ—೨ ಪುಂಡರೀಕವೆಂಬುವ ಗ್ರಂಥದ್ರವ್ಯದ ಹೆಸರುಗಳು. ಪೆಂಡಾರಗಡ್ಡೆ, ಪಾಂಡವರ ಮದ್ದು, ಇದು ಬಿಳೀನೈದಿಲಗಡ್ಡೆ" (ಸಿದ್ಧಾಂತಿ. ೦೯೦). [<ಪಾಂಡವ₁ + ಮದ್ದು (<ಮರ್ದು)]

**ಪಾಂಡವರ ಹರಿವೆ** (ನಾ). ಒಂದು ಬಗೆಯ ಹರಿವೆಸೊಪ್ಪು : ಸುನಿಷಣ್ಣವು (ಪಾಂಡವರ ಹರಿವೆ) ಅಗ್ನಿವರ್ಧಕ (ಅಷ್ಟಾಂಗ. ೦೩೩-೭೦ ಅರ್ಥ) ; ಕುಟಂಜರ (ಪಾಂಡವರ ಹರಿವೆ) . . . ಜೇಷ್ಠಮಧು ಇವೆಲ್ಲ ಮಧುರ (ಅಷ್ಟಾಂಗ. ೦೩೯-೯೩ ಅರ್ಥ). [<ಪಾಂಡವ₁ + ಹರಿವೆ₂ (<ಹಱುಹೆ)]

**ಪಾಂಡವರಾಜಾನ್ನ** (ನಾ). ಒಂದು ಬಗೆಯ ಧಾನ್ಯ : "ಮುನಿಧಾನ್ಯ—ಪಾಂಡವರಾಜಾನ್ನ" (ಓಶಂ. ೦೨೩). [ಪಾಂಡವ₁ + ರಾಜಾನ್ನ]

**ಪಾಂಡಿ₁** (ನಾ). ೧. ಹೆಣ್ಣುಮಕ್ಕಳು ಆಡುವ ಒಂದು ಬಗೆಯ ಆಟ ; ನೆಲದ ಮೇಲೆ ಪಕ್ಕಪಕ್ಕದಲ್ಲಿ ನಾಲ್ಕು ನಾಲ್ಕರಂತೆ ಎಂಟು ಚಚ್ಚೌಕ ವಾದ ಮನೆಗಳನ್ನು ಬರೆದು. ಕಲ್ಲಿನ ಬಿಲ್ಲೆಯೊಂದನ್ನು ಕುಂಟುತ್ತಾ ಮನೆಯಿಂದ ಮನೆಗೆ ತಳ್ಳಿಕೊಂಡು ಹೋಗುವ ಆಟ ; ಕುಂಟಾಟ : ಪಾಂಡಿ ಆಡೋಣ ಬರ್ತೀಯಾ ? (ರೂಢಿ). ೨. ಕುಂಟಾಟವನ್ನು ಆಡಲು ಬಳಸುವ ಚಪ್ಪಟೆಯಾದ ಕಲ್ಲು ; ಬಚ್ಚ : ನನ್ನ ಪಾಂಡೀನ ಎಷ್ಟು ಸಲ ಹಾಕಿದರೂ ಇನ್ನೂ ಒಂದೂ ಹಣ್ಣಾಗಲಿಲ್ಲ (ರೂಢಿ). ೩. ಕುಂಟಾಟದಲ್ಲಿ ಗೆದ್ದ ನಂತರ ಹಣ್ಣಾದ ಮನೆಯನ್ನು ಸೂಚಿ ಸಲು ಹೇಳುವ ಮಾತು : ನಾನೇ ಗೆದ್ದೆ. ನನ್ನದು ಐದು ಪಾಂಡಿ ಆಯಿತು (ರೂಢಿ). [←ತಮಿ. ಪಾಣ್ಡಿ]

**ಪಾಂಡಿ₂** (ನಾ). ಒಂದು ಬಗೆಯ ದೋಣಿ,—ನಾವೆ: ಅವರ ಖಿಟಾಟೋಪವೇನಿ ದ್ದರೂ, ಅದು ಕಡಲಿಗಿಳಿದಾಗ, ಮಾರಿಬಲೆ ಎಳೆಯುವಾಗ, ಪಾಂಡಿಯಲ್ಲಿ

ಕುಳಿತು ಹುಟ್ಟುಹಾಕುವಾಗ_ಆಗಲೇ ಕಾಣಬೇಕು (ಕಾರುಂಡ. ೩೨) : ವಾರಕಾಲರಲ್ಲಿ ಹಲವರು ಪಾಂಡಿಗಳಲ್ಲಿ ಪರದೇಶದ ವ್ಯಾಪಾರ ಮಾಡಿ ಪಾಂಡಿ ಎಂಬ ಹೆಸರನ್ನು ಗಳಿಸಿಕೊಂಡಿದ್ದರು (ತುಳುನಾ. ೫೯). [←ಮಲ. ಪಾಣ್ಡಿ]

**ಪಾಂಡಿ₄** (ನಾ). ಒಂದು ಬಗೆಯ ಹುಲ್ಲು (?): ಪುಣಿಸೂರ್ಪ್ಪೋಲ ನೆಲ್ಲು ಪಾಣ್ಡಿಯುಪಳಿವದು (ಪ್ರಕಅಂ. ೧೯೩೦, ೩೬-೮; 800). [?. / ತಮಿ. ಪಾಣ್ಡು. / ಸಂ. ಪಾಂಡು]

**ಪಾಂಡಿತ್ಯ** (ನಾ). ಅರಿವು ; ಜ್ಞಾನ : ದಶದಿಶಿಗಳೊಳೆಲ್ಲಂ ನಿನ್ನ ಪಾಂಡಿತ್ಯದ ಯಶವಂ ಪಸರಿಸಿ . . . ತಾಯ್ವೆಂದೆಗಂ ಸಂತೋಸಂ ಮಾಡಿಯಾಪರಂ ಬಿಡಿಸಿಯೊಡಂಬಡಿಸಿ ಬಂದೊಡೆ ತವವಂ ಕುಡಲಕ್ಕುಂ (ಕಣ್ಣಾಶಾ. ೭೯-೧೫): ಈ ಸರಸಪಾಂಡಿತ್ಯವೀ ನಿರಹಂಕಾರಣಭಕ್ತಿ . . . ಈ ಘನತೆ ಆರಿಗುಂಟು (ಅಸಪು. ೩-೩೦) ; ಈಗಿನ ಕಾಲದಲ್ಲಿ ಪಾಂಡಿತ್ಯವಿಲ್ಲದವರೆಷ್ಟೋ ಪಂಡಿ ಪಂಡಿತೋತ್ತಮರೆಂದು ಬರುವಾಂಕಿತರಾಗಿದ್ದಾರೆ (ಕಾಯುಕ. ೩೮). [ಸಂ.]

**ಪಾಂಡಿಮ** (ಗು). ೧. ಬಿಳುಪಾದ ; ಬೆಳ್ಳಗಾದ : ಚಂದನಾಪಾಂಡಿಮ ಗಾತ್ರಂ ಗ್ರೀಷ್ಮಸಾಯಂಸಮಯದೊಳೆಸೆದತ್ತಂದು ಬಾಲಾಕಲಾಪಂ (ಶಂಶೃಕು. ೯-೮೮). (ನಾ). ೨. ಬಿಳಿಯ ಬಣ್ಣ ; ಧವಳತೆ : ಣತ್ಪಾಂಡಿಮ ಭಾಸ್ವತ್ಪುರ ಶಶಿ ದಿನಕೃತ್ಪವಮಾನ ಸುಹೃತ್ಪರಪಸು ವಿಕಿರತ್ಕಟುನಯನ (ಕಾಶೃಬೇ. ೭-೨೬). [ಸಂ. ಪಾಂಡಿಮನ್]

**ಪಾಂಡಿಯ** (ನಾ). ಪಾಂಡ್ಯದೇಶದ ರಾಜನ ಹೆಸರು : ವಲ್ಲಿವರಸ ದೇವಯ ಮೂಡಲ ಗೋವನ್ ಬರುಪಾನಟ್ಟಿದ × × × ಅಗಳು ಪಾಣ್ಡಿಯನ ಮೇಗೆ ಎಟ್ಟು ಪಜೆಯಜೂಜೀಜೀದೊ (ಎಕ. ೫ ಕ್ರಿಶಿಪಾ. ೩೦-೯ ; ಸು. 800 ?). [←ತಮಿ. ಪಾಣ್ಡಿಯನ್./ ಸಂ. ಪಾಂಡ್ಯ]

**ಪಾಂಡಿಸೆಟ್ಟಿ** (ನಾ). ಒಬ್ಬಾತನ ಹೆಸರು : ಪಾಂಡಿಸೆಟ್ಟಿ ನಾಲ್ಸಾಸಿರಂ (ಎಇ. XIV. ೯೦-೨೩ ; 725). [<ಪಾಂಡ್ಯ + ಸೆಟ್ಟಿ]

**ಪಾಂಡು₁** (ಗು). ೧. ಹಳದಿ ಛಾಯೆಯುಳ್ಳ ಬಿಳಿಯ ಬಣ್ಣದ : ರಾಜಿಸುತಿರ್ದಪಂದರುಣವರ್ಣಜ ಪಾಂಡುಪಯೋಜನೀಲನೀರೇಜ ಕದಂಬಕಂಗಳ . . . ವರ್ಣಸಂಕರತೆಯಿಂದೆ ಕೊಳಂಗಳ್ (ಜಗಂ. ೪-೬೩). (ನಾ). ೨. ಬಿಳಿಯ ಬಣ್ಣ ; ಧವಳತೆ : "ಗೌರಃ, ಶ್ವೇತಃ . . . ಪಾಂಡುಃ, ಅವದಾತಃ , ಪಾಂಡರಃ __ಈ ೧೨ ಬೀಳದು" (ಶಬಾಪು. ೧೨೦-೧೪). ೩. ಒಂದು ಬಗೆಯ ರೋಗ ; ಕಾಮಾಲೆ ; ಅರಿಸಿನ ಮುಂಡಿಗೆ ರೋಗ : ತಪಸದ ಎಲೆ, ಆನೆನೆಗ್ಗಿಲು . . . ನೀರಲ್ಲಿ ಕಲಸಿ ಪ್ರಯೋಗಿಸಲು ಪಾಂಡು, ವ್ಯೆ ಬೆಳ್ಳಪ್ಪುದಂ, ಗುದದೊಳ್ಪುಟ್ಟಿದ ವ್ಯಾಧಿಗಳ ಕೆಡಿಸುಗುಂ (ಚಿಕ್ಕಿ. ೨೦). ೪. ಒಬ್ಬ ರಾಜ ; ಪಾಂಡವರ ತಂದೆ : ಎನಗಂ ಪಾಂಡುಗವಿಲ್ಲ ಭೇದಮೆಳೆಯಂ ಪಚ್ಚಾಳ್ವಂ (ಕಂಪಕಾ. ೦೩-೯) : ಈತನೇ ಧೃತರಾಷ್ಟ್ರನೆರಡನೆಯಾತ ಪಾಂಡು (ಕುಮ್ಯಾಅ. ೩-೧೦). [ಸಂ.]

**ಪಾಂಡು₂**, ಫಾಡ್ (ನಾ). ಭೂಮಿಯನ್ನು ಅಳೆಯುವ ಒಂದು ಪ್ರಮಾಣ ; ಒಂದು ಬಿಘೆಯ ೨೦ನೆಯ ಭಾಗ : ೨೦ ಕಾಠಿಗೆ ೧ ಪಾಂಡು, ೨೦ ಪಾಂಡಿಗೆ ೧ ಬಿಘೆ, ೧೨೦ ಬಿಘೆಗೆ ೧ ಚಾಹೂರು (ಕಪಾಗಿ. ೨೯೦). **ಫಾಡ್** : ೨೦ ಪಾಡ್—ಬಿಘೆ ೧ (ಹೂಮಿಅ. ೬೭). [←ಮರಾ. ಪಾಂಡ್]

**ಪಾಂಡುಕ** (ನಾ). ೧. ಹಳದಿಛಾಯೆಯ ಬಿಳಿಬಣ್ಣ. ೨. ಕಾಮಾಲೆ ರೋಗ ; ಅರಿಸಿನಮುಂಡಿಗೆರೋಗ. ೩. ಪಾಂಡುರಾಜ. ೪. ಒಂದು ಬಗೆಯ ಪಡವಲ ; ಕಹಿಪಡವಲ ; "ಅ.ಪಾಂಡುಕಂ ಕಹಿಪಡಲವುಕ್ಕು" (ಮಂಗರಾ. ೪೪-೪೪). ೫. [ಜೈನ] ಸುಮೇರು ಪರ್ವತದ ಮೇಲಿರುವ ಭದ್ರಪಾಲ, ನಂದನ, ಸೌಮನಸ ಮತ್ತು ಪಾಂಡುಕವೆಂಬ ನಾಲ್ಕುವನಗಳಲ್ಲಿ ಕೊನೆಯದು ; P ಇದರಲ್ಲಿ ಜನ್ಮಾಭಿಷೇಕಕಲ್ಯಾಣಕ್ಕಾಗಿ ಮೀಸಲಾಗಿರುವ ನಾಲ್ಕು ಶಿಲಾಪೀಠಗಳಿವೆ : ವಿನುತೋದ್ಯತ್ಫಲ ಭದ್ರಶಾಲೆಯೆಸೆದಶ್ರೀ ಭದ್ರಶಾಲಂ ಸುನಂದನವಾಗಿರ್ದುದು ದಿವ್ಯನಂದನವಿದಿಂತೊಪ್ಪಿರ್ದುದೀ ಸಾರ ಸೌಮನಸಂ ವಿಕಾಸಿಕುಸುಮಶ್ರೀಪಾಂಡುಕಂ ಪಾಂಡುಕಂ ಮನಕಿಂಬಾಯ್ತಾದೆ ನೋಡ ತ್ರನ್ನಿ ಗಿರಿಗೀ ನಾಲ್ಕುಂ ಬನಂ ಜನ್ಮನಂ (ಭಕ್ಪಪು. ೦೦-೩೬). 'ಪಾಂಡುಕವನ' ಪರಾ. ೬. ಪಾಂಡುಕವನದಲ್ಲಿರುವ ಅರ್ಧ ಚಂದ್ರಾಕೃತಿಯ ನಾಲ್ಕು ಪೀಠಶಿಲೆಗಳಲ್ಲಿ ಮೊದಲನೆಯದು ; P ಈ ನಾಲ್ಕೂ ಶಿಲೆಗಳು ನೂರುಯೋಜನ ಉದ್ದವಾಗಿಯೂ ಐವತ್ತುಯೋಜನ ಅಗಲವಾಗಿಯೂ ಎಂಟುಯೋಜನ ಎತ್ತರವಾಗಿಯೂ ಇದ್ದು ಪ್ರತಿಯೊಂದು ಶಿಲೆಯ ಮೇಲೆ ನಡುವೆ ತೀರ್ಥಂಕರನಿಗಾಗಿ ಒಂದು, ದಕ್ಷಿಣಕ್ಕೆ ಸೌಧರ್ಮೇಂದ್ರನಿಗಾಗಿ ಒಂದು ಹಾಗೂ ಉತ್ತರಕ್ಕೆ ಈಶಾನೇಂದ್ರನಿಗಾಗಿ ಒಂದು— ಹೀಗೆ ಮೂರು ಪೂರ್ವಾಭಿಮುಖವಾದ ಸಿಂಹಾಸನಗಳಿವೆ ಎಂಬ ನಂಬಿಕೆ ಇದೆ : ಕ್ಷೀರೋದವಾರಿಧಾರಾಪೂರದ ಚೆಲ್ವಿಂಗೆ ನೆಣಸುವಂತಘನವನೀಹಾರದ ಪೂರದ ಬೆಳ್ಪನೆ ಬಾರಿಸ್ಪಿ ಪಾಂಡುಕಶಿಲಾತಲಂ ಸೊಗಯಿಸುಗುಂ (ಅಂಪು. ೭-೭೯) ; ಬಳಸಿ ವಿದಿಕ್ಕತುಷ್ಟಯಮನುತ್ತರ ಪೂರ್ವದಿನರ್ಧವೃತ್ತಮಂ ಪೋಳೆವುವೆ ಪಾಂಡುರಪ್ರಭೆಯ ಪಾಂಡುಕವುಂ ಕವಿಲಾದ ರತ್ನಕಂಬಳಮುಮನಿಪ್ಪ ಜೈನಸವನೋತ್ಸವಪೀಠಶಿಲಾಚತುಷ್ಟಯಂ (ಮಲ್ಲಪು. ೧೨-೯೦). ೭. ನವನಿಧಿಗಳಲ್ಲಿ ಒಂದು; ಹದಿನೆಂಟು ಪ್ರಕಾರದ ಧಾನ್ಯಗಳನ್ನು ಒದಗಿಸುವ ಸಾಮರ್ಥ್ಯವುಳ್ಳ ನಿಧಿ : ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳಂ (ಅಂಪು. ೧೫-೩ ಪ); ಧಾನ್ಯಂಗಳು ಹದಿನೆಂಟುಪ್ರಕಾರವ ತಾನೀವ ಪಾಂಡುಕ ನಿಧಿಯು (ದ್ವಾರಕಾ. ೧೦-೪೨೮). [ಸಂ.]

**ಪಾಂಡುಕಂಬಲ**, ಪಾಂಡುಕಂಬಳ (ನಾ). ೧. ಬಿಳಿಯ ಕಂಬಳಿ: **ಪಾಂಡುಕಂಬಳ** : ೧. ತಗುಳ್ದಿ ಕಿಲಾಕ್ರಮಿಸಿ ಲೋಕಮನಯ್ದೆ ಸರೋಜಸಂಭವಂ ಪೊದಿಸಿದ ಪಾಂಡುಕಂಬಳವಿದೆಂಬವೊಲಾದುದು ಮಂಜಿನುರ್ವರಂ (ಭುಶೃಪು. ೬-೩೮). ೨. [ಜೈನ] ಪಾಂಡುಕವನದಲ್ಲಿರುವ ನಾಲ್ಕು ಪೀಠಶಿಲೆಗಳಲ್ಲಿ ಒಂದು : ಪಾಂಡುಕ ಪಾಂಡುಕಂಬಳ ರಕ್ತಕಂಬಳಾತಿರಕ್ತಕಂಬಳ ವಿಶಾಲರತ್ನಶಿಲಾತಳಪ್ರತಿಷ್ಠಿತ ಭಗವಜ್ಜನ್ಮಾಭಿಷೇಕಸಿಂಹಾಸನಾಲಂಕೃತಮುಮಾಗಿ (ಅಂಪು. ೧-೪೯ ವ) : ವಿಳಸತ್ಪಾಂಡುಕ ಪಾಂಡುಕಂಬಳ ಶಿಲಾಪಟ್ಟಂ ಶಿಲಾಪಟ್ಟಕಂಬಳ ಸತ್ಕಾಂತ್ಯತಿರತ್ನ ಸಂಚಳ ಶಿಲಾಪಟ್ಟಂಗಳಂ ನಾಲ್ಕು ಕೋಣ್ಗಳೊಳೊಪ್ಪಿರ್ಪುವು . . . ಜಿನವ್ರಜಕ್ಕೆ ಸವನಸ್ಥಾನಂಗಳೀ ಶೈಲದೊಳ್ (ಭುಶೃಪು. ೦೦-೩೮). P ಪಾಂಡುಕ, ಪಾಂಡುಕಂಬಳ, ರಕ್ತಕಂಬಳ, ಅತಿರಕ್ತಕಂಬಳ ಎಂಬ ಈ ನಾಲ್ಕು ಪೀಠಶಿಲೆಗಳು ಅನುಕ್ರಮವಾಗಿ ಭರತ ಕ್ಷೇತ್ರ, ಪಶ್ಚಿಮವಿದೇಹ, ಐರಾವತ ಹಾಗೂ ಪೂರ್ವವಿದೇಹದ ತೀರ್ಥಂಕರರ ಜನ್ಮಾಭಿಷೇಕಕ್ಕೆ ನಿಯಮಿತವಾಗಿವೆ ಎಂಬ ನಂಬಿಕೆ ಇದೆ. [ಸಂ.]

**ಪಾಂಡುಕಂಬಲಿ**, ಪಾಂಡುಕಂಬಳಿ (ನಾ). ಬಿಳಿಯ ಕಂಬಳಿಯನ್ನು ಹೊದಿಸಿದ ರಥ. **ಪಾಂಡುಕಂಬಳಿ** : "ಪಾಂಡುಕಂಬಳೀ . . . ಬಿಳೀ ಕಂಬಳಿ, ಪ್ಯಾನಲ್ ಮುಂತಾದವುಗಳಿಂದ ಹೊದಿಸಲ್ಪಟ್ಟ ರಥದ ಹೆಸರು" (ಕಿಶ್ಯಾಅ. ೨೫೨). [ಸಂ. ಪಾಂಡುಕಂಬಲಿನ್]

**ಪಾಂಡುಕಂಬಳ** 'ಪಾಂಡುಕಂಬಲ' ನೋ.

**ಪಾಂಡುಕಂಬಳಿ** 'ಪಾಂಡುಕಂಬಲಿ' ನೋ.

**ಪಾಂಡುಕವನ** (ನಾ). – ಪಾಂಡುಕ ೫ : ಭದ್ರಸಾಲಾನಂದನ ಸೌಮನಸ ಪಾಂಡುಕವನವಿರಾಜಿತಮುಂ (ಆದಿಪು. ೧-೫೫ ವ); ಪಾಂಡುಕವನಕೃದರ್ತಪ್ತು ಸುರೇಂದ್ರನಾರಣಂ (ಚಂಪ್ರಪು. ೧೨-೧೦೯). [ಪಾಂಡುಕ+ವನ]

**ಪಾಂಡುಕಾಮಾಲೆ** (ನಾ). ಕಾಮಾಲೆ ; ಅರಿಸಿನಮುಂಡಿಗೆ ರೋಗ : ವಜ್ರಗಿರಿ ...ರ ಆಕಳ ಮಜ್ಜಿಗೆಯಲ್ಲಿ ಕೊಳ್ಳಲು ಪಾಂಡುಕಾಮಾಲೆ ಮಾಣ್ಗು ...(...). [ಪಾಂಡು₁+ಕಾಮಾಲೆ]

**ಪಾಂಡುಗಾತ್ರ** (ನಾ) ಬಿಳಿಬಣ್ಣದ ಮೈಯುಳ್ಳವನು ; ನಾರದ : ಪಾಂಡುಗಾತ್ರಂ ತಳರ್ದನಘಲತಾಮಾತ್ರನಾ ಬ್ರಹ್ಮಪುತ್ರಂ (ಜಗಂ. ೨-೪೪). [ಪಾಂಡು₁+ಗಾತ್ರ]

**ಪಾಂಡುಚ್ಛತ್ರ** (ನಾ). ಬಿಳಿಯ ಕೊಡೆ ; ಶ್ವೇತಚ್ಛತ್ರ : ಜಾತಿವಾಜಿ ಸಮಾಜಂ ಮದವದ್ಗಜೇಂದ್ರಘಟೆ ಪಾಂಡುಚ್ಛತ್ರಮದಂ ನಿಗುಂದಿಸೆ ಪುತ್ರಂಗಿದಿರ್ವಂದರಂದರಸಿಯುಂ ಭೂಪಾಲನುಂ (ಚಂಪ್ರಪು. ೬-೫೮) [ಪಾಂಡು₁+ಛತ್ರ]

**ಪಾಂಡುದೇಹ** (ನಾ). ಬಿಳಿಯ ಮೈ ; ಧವಳಶರೀರ : ಮಹಾಪಾಂಡು ದೇಹಮುಮುಜ್ಜೃಂಭಿಪೆಜಂಕೆಯುಂ ಬಗೆಗೊಳಲ್ ... ಅಬ್ಜಭವಹಂಸು ವಾಜಿಳತ್ರಾಧ್ವದೊಳ್ (ಜಗಂ. ೧-೪೦). [ಪಾಂಡು₁+ದೇಹ]

**ಪಾಂಡುಪಕ್ಷ** (ನಾ). ಪಾಂಡವರ ಪಕ್ಷಪಾತಿ : ಪಕ್ಷಿವಾಹನ ಪೂರ್ಣ ಲಕ್ಷಣ ಸರ್ವೇಶ ಮೋಕ್ಷದಾಯಕ ಪಾಂಡುಪಕ್ಷ (ಜಿಬಾಕ್ಕ. ೬೬-೧). [ಪಾಂಡು₁+ಪಕ್ಷ]

**ಪಾಂಡುಪಲ್ಲಿ** (ನಾ). ಒಂದು ಬಗೆಯ ಮರ ; ಬಿಳಿಯ ಕಡವ : "ಧೂಸರಾ—ಪಾಂಡುಪಲ್ಲಿ" (ಟಿಕಂ. ೮೨). [ಸಂ. ಪಾಂಡುಪಲ್ಲೀ]

**ಪಾಂಡುಪಿಂಡ** (ನಾ). ಕುದುರೆಯ ತಿಗದ ಕೆಳಗಿನ ಭಾಗ : ಊರುವಿನ ಕಣ್ಣಾದೆಡೆ ತಾನಾರಯ್ ನೀಂ ಪಾಂಡುಪಿಂಡಮಂಬಭಿಧಾನಂ (ಅಶ್ವಶಾ. ೯-೫೯). [ಪಾಂಡು₁+ಪಿಂಡ]

**ಪಾಂಡುಭೂಮಿ** (ನಾ). ಬಿಳಿಯ ಮಣ್ಣುಳ್ಳ ಭೂಮಿ ; ಮೊಗೆಮಣ್ಣಿನ ನೆಲ : "ಪಾಂಡುಭೂ(ಒ)ಮಿಃ, ಉದಗ್ಭೂ(ಮ)ಮಿಃ —೨ ಈ ಮೊಗೆಯ ಭೂಮಿ" (ಹಲಾಯು. ೫೬-೩). [ಪಾಂಡು₁+ಭೂಮಿ]

**ಪಾಂಡುರ** (ಗು). ೧. ಬಿಳಿಯ ; ಬಿಳುಪಾದ : ಘನತರುಶಾಖಾಗ್ರಾನಾಗ್ರನಿಭೃತಪಾಂಡುರಕಪೋತಪಂಕ್ತಿ ಪ್ರಕರಂ ನೆನೆಯಿಪುದು ಶೂನ್ಯ ಮಾಗಿಯುಮನೇಕ...ನಿಪಾಗ್ನಿಹೋತ್ರಧೂಮಾವನಿಸ್ತಿ(ಂ) (ಕಾರಂಪು. ೧೧೯); ರಂಭಿಸುತ್ತು ರಘುರಾಮನ ಪಾಂಡುರದೇಹಮಂಡಲಂ (ಕಂರಾಜು. ೩-೧೫೨). (ನಾ). ೨. ಬಿಳುಪು ; ಬಿಳಿಯ ಬಣ್ಣವುಳ್ಳದು : "ಗೌರಃ ... ಪಾಂಡುರಃ, ಪಾಂಡುಃ, ಅವದಾತಃ, ಪಾಂಡರಃ —ಈ ೧೨ ಬೀರದು" (ಹಲಾಯು. ೧೨೦-೯೬) ; ಅಂಬಾಲೆ ಮದ್ರೂಪಮುಂ ಕಂಡು ಮೊಗಮಂ ಪಾಂಡುರಂ ಮಾಡಿದಳಪ್ಪುದಜಿಂದಾಕೆಗೆ ಮಗಂ ಪಾಂಡುರೋಗ ಸಂಗತನುಂ ಅತ್ಯಂತಪ್ರತಾಪನುಮಾಗಿ ಪಾಂಡುರಾಜನೆಂಬ ಮಗ ನಕ್ಕುಂ (ಕು. ೩. ೦-೫೩ ವ). ೩. ತೊನ್ನು ; ಶ್ವೇತಕುಷ್ಠ : "ಪಾಂಡುಃ, ಪಾಂಡುರಃ —ಈ ೨ ಬಿಳಿಯ ಬಣ್ಣವುಂ, ರೋಗವುಂ, ರಾಜನುಂ" (ಕಾಕಕ್ಕ. ೦೦೦). [ಸಂ.]

**ಪಾಂಡುರಂಗ₁** (ನಾ). ೧. ಬಿಳಿಯ ಬಣ್ಣದ ದೇಹವುಳ್ಳವನು. ೨. ಶಿವ ; ಈಶ್ವರ : ಪಾಂಡುರಂಗನ ಭಕ್ತರೀ ಭೂಮಂಡಲದೊಳಗೆ ಸುಳಿವ ಜಂಗಮಮಂಡಳಿಗಳಂ ಕರುಪಿದರು ಮಡಿಹಾಟಿರಂ ಕಳುಹಿ (ಆಶಪು. ೯-೩); ಕಂಗಳು ಮೂರಿರ್ದಾಗಸಗಂಗೆಯನು ಧರಿಸಿ ತಿಂಗಳ ಸೂಡಿಯುಂ ಪಾಂಡುರಂಗ ತಾನಲ್ಲವದು ನಾರಂಗದ ಫಲ ಪಾರ್ ಇಷ್ಟ ಲಿಂಗಾಭಿಷೇಕಂ (ಬ್ಯರಾಶ. ೨೦೩-೨೦). [ಪಾಂಡುರ+ಅಂಗ₂]

**ಪಾಂಡುರಂಗ₂** (ನಾ). ಪಂಢರಾಪುರದಲ್ಲಿ ನೆಲೆಸಿರುವ ವಿಷ್ಣುವಿನ ಅವತಾರ ; ವಿಠ್ಠಲ : ನಾ ನಿನ್ನ ಮನೆಗೆ ಬಾರನೆ ಜಯ ಪಾಂಡುರಂಗ (ಪುರಂದ. ೩-೦೨೬ ಪಲ್ಲವಿ) ; ನಾಮದೇವ ಪಾಂಡುರಂಗನ ಭಕ್ತ (ಕಾಕದ. ೨೯೩). [<ಪಂಢರ₂ (ಪ್ರಾ←ಮರಾ. ಪಂಢರ)+ರಂಗ]

**ಪಾಂಡುರಂಗವಿಟ್ಠಲ** (ನಾ). = ಪಾಂಡುರಂಗ₂ : ಅನಂತಕೋಟಿ ಬ್ರಹ್ಮಾಂಡನಾಯಕ ... ಪಾಂಡುರಂಗವಿಟ್ಠಲ (ಪುರಂದ. ೪-೬೭ ಸದ್ಯ). [ಪಾಂಡುರಂಗ₂+ವಿಟ್ಠಲ]

**ಪಾಂಡುರಕುಷ್ಠ** (ನಾ). ತೊನ್ನುರೋಗ : "ಪಾಂಡುರಕುಷ್ಠಂ ಶ್ವಿತ್ರಂ" (ಅಭ್ಯ ಕೋ. ೬೩-೩೬). [ಪಾಂಡುರ + ಕುಷ್ಠ]

**ಪಾಂಡುರತೆ** (ನಾ). ಬಿಳಿದಾಗಿರುವಿಕೆ ; ಧವಳತೆ ; ಬಿಳುಪು : ದುಗ್ಧಾರ್ಣವಫೇನಪಾಂಡುರತೆಯಂ ಕೆಯ್ಕೊಂಡು ಬೆಳ್ದಿಂಗಳಿಂತಿರೆ ಕೋಟಿಶ್ವರಮತ್ತರೀಯುಮಸನಂ ರಾಜೇಂದ್ರಚಂದ್ರಾಂಕನಾ (ಜಿರಂಪು. ೨೮). [ಸಂ. ಪಾಂಡುರತಾ]

**ಪಾಂಡುರಿತ** (ಗು). ೧. ಬೆಳ್ಳಗಾದ ; ಬಿಳಿಬಣ್ಣವನ್ನು ಹೊಂದಿದ : ಧವಳಕಲಮಾಕ್ಷತ ಕ್ಷೀರಗೌರಪಾಂಡುರಿತಶರ್ಕರೀತನಕರಂಡಕಂಗಳಿಂ ... ಮನಂಗೊಳಿಪ ದೇವಪೂಜಾಗೃಹಮಂ ಪೊಕ್ಕು (ಕಂಪಪು. ೦೨-೨ ವ) (ನಾ). ೨. ಬೆಳ್ಳಗಾದುದು : ಸುರಸ್ತ್ರೀಯರಪಾಂಗಾಕ್ಷಿಪ್ರಭಾಸಂಚಯ ದಿನುದಿತ ದೇಹಾಂಶುಸಂದೋಹದಿಂ ಮೇದುರ ಧಮ್ಮಿಲ್ಲಮುಕ್ತಿಸ್ತೋಮದಿ ನಧರಮಯೂಖಾಳಿಯಿಂದೆತ್ತಲುಂ ಪಾಂಡುರಿತಂ ವೈಸಂಗಿತಂ ಕರ್ಬುರಿತ ಮಾರುಣಿತಂ ವ್ಯೋಮಮಾರ್ಗಂ (ಚಂಪ್ರಪು. ೧೨-೬೮). [ಸಂ.]

**ಪಾಂಡುರೋಗ** (ನಾ). = ಪಾಂಡು₁ ೩ : ತ್ರಿಕಟುಕ, ಚಿತ್ರಮೂಲ, ಕಬ್ಬಿಣಕಿಟ್ಟ ಇವಂ ಚೂರ್ಣಿಸಿ ಮಾಡಿ ಅಳೆಲೆಯಲ್ಲಿ ಕುಡಿಯೆ ಪಾಂಡುರೋಗ ಕೆಡುಗುಂ (ಅಶ್ವಶಾ. ೦೬೩) ; ಪಾಂಡುರೋಗಕ್ಕೆ ... ಅಭ್ರಕವು ಬಹಳ ಉಪಯುಕ್ತವಾಗುವುದು (ಶಿಶಂ. ೦೩). [ಪಾಂಡು₁+ರೋಗ]

**ಪಾಂಡುರೋಗಿ** (ನಾ). ಕಾಮಾಲೆರೋಗದಿಂದ ನರಳುವವನು : ಪರ್ಮೆಯಾಹ ಪಾಂಡುರೋಗಿದೆ ಪುಂಸ್ನ ದೇವಗುರುಘಕ್ಕರ್ರ್ಘಾಮಹಾರೀ (ಬಿಕ್ಕಪು. ೯-೨೨-೩೩) ; ಅಂಜುಷಕಂಕುಷ್ಠ ಸುರತಂಗೆಮ್ಮುಲಪರುವರದಿ ನೆರೆ ಪಾಂಡುರೋಗಿ ಪುಟ್ಟುವನು (ವಚಮೋ. ೦೯-೪೪). [ಸಂ. ಪಾಂಡುರೋಗಿನ್]

**ಪಾಂಡುವಾತ** (ನಾ). ಒಂದು ಬಗೆಯ ವಾತರೋಗ (?) : ಒಂದು ಕವಾಟಕಂ ಕೊಂಡೊಡೆ ಪಂದ್ಯಾಗ್ನಿ, ಶೂಲೆ, ಪಾಂಡುವಾತ, ಮೇಹ, ವಾತಶೂಲೆ ಇಷ್ಟು ಮಾಣಾವುವು (ಅಶ್ವಶಾ. ೯೩). [ಪಾಂಡು₁+ವಾತ]

**ಪಾಂಡುಸಂಧಿ** (ನಾ). = ಪಾಂಡುಪಿಂಡ : ತ್ರಿಕದೆರಡುಂ ಕೆಲಕ್ಕಂ ರೋಹಿಣಿಸಂಧಿಯೆಂಬ ಪಸರಕ್ಕುಂ ಅಲ್ಲಿಂ ಕೆಳಗೆ ಪಾಂಡುಸಂಧಿಯೆಂಬ ಪಸರಕ್ಕುಂ (ಅಶ್ವಶಾ. ೭೯-೯) ; ತಿಕ(ಗ)ದಿರ್ಕೆಲ ರೋಹಿಣಿಯೆನಿಸುಗು ವುದುಮದಱ ಕೆಳಗೆ ಪಾಂಡುಸಂಧಿಯೆ (ಅಶ್ವಶಾ. ೯-೯೩); ಈ ಇಲ್ಲಿ ಧಂಡೆ..., ದೋಷವಿರುವುದರಿಂದ ಪಾಠ ಕೆಟ್ಟಿರಬಹುದು. [ಪಾಂಡು +ಸಂಧಿ]

**ಪಾಂಡ್ಯ** (ನಾ). ೧. ಭಾರತದ ದಕ್ಷಿಣಭಾಗದ ಒಂದು ದೇಶ ; ಈ ಮಧುರೆಯನ್ನು ರಾಜಧಾನಿಯಾಗಿ ಹೊಂದಿದ್ದ ದೇಶ : ಚೇರ ಪಾಂಡ್ಯ ಕಳಿಂಗ ಮಗಧ...ಯಾದಪದಮಹೀಭುಜಮೌಳಿಮಣಿಪ್ರಜ ಪ್ರಭಾಲಿಂಗಿತಪಾದಪೀಠಂ (ಎಪಿ. ಕ. XX, ೯೬-೩ ; 1072) ; ಚೋಳಚೇರ ಪಾಂಡ್ಯಕಳಿಂಗಾದಿ ವಿಷಯಂಗಳಂ ಸಾಧಿಸಿ ಕಪ್ಪಂಗೊಂಡು (ರಹ್ಮಾತ್ಯ. ೦೦-೬೦). ೨. ಪಾಂಡ್ಯದೇಶದ ರಾಜ : "ಪಾಂಡ್ಯಃ = ಪ..." ರಾಜನುಂ" (ಕಾಕಕ್ಕ. ೦೦೦); ಪಳಯಾಟಿ ಪಾಣ್ಡ್ಯಪೆನಾಟನ್ದು ಜಯ ಪಾಡಿಸಿದೊ ಪಾಣ್ಡ್ಯನ್ (ಎಳ. XI, ಚಿಕ್ಕರು. ೬೬-೪೭; 937); ಎಲೆ ಚಿಂತ...ಪಾಳ ಸನ್ನಮಿಟ್ಟಿಯಂ ನೀಂ ನೀವಿಕೆಯ್ ನಿನ್ನನುಂ ಗೋರೆಮಾಣ್ತಿರ್ತು

ಪಾಣ್ಡ್ಯ ಪಲ್ಲವ ಭಯಂಗೊಳ್ಳೋಡದಿರ್ (ಎಕ. II, ೫೯-೧೧೨; 974). [ಸಂ.]

**ಪಾಂಡ್ಯಗದ್ಯಾಣ** (ನಾ). ಒಂದು ಬಗೆಯ ಚಿನ್ನದ ನಾಣ್ಯ : ಪಾಂಡ್ಯ ಕುಲದವರಾದ ಆಳುಪರ ನಾಣ್ಯ : ಬಿದಿರಗದ್ದೆಯ ಮೇಲಿಕ್ಕಿದ ಪಾಣ್ಡ್ಯಗದ್ಯಾಣಂ ಮುವತ್ತುಮನಾ ಪೊನ್ನ ವೃದ್ಧಿಯುಮಂ ಅಗ್ರಕೆನ್ನ್ದ ಶಾಸನವಾಗೆ ಮಾಡಿಸಿದ ಧರ್ಮ (ಕೌಇಇ. VII, ೩೬೧-೧೩, 1140). [ಪಾಂಡ್ಯ + ಗದ್ಯಾಣ]

**ಪಾಂಡ್ಯಗಾವುಂಡ** (ನಾ). ಒಬ್ಬಾತನ ಹೆಸರು : ಪಾಣ್ಡ್ಯಗಾವುಣ್ಡಂ ತಮ್ಮ ಕೆಱೆಯೊಳ್ ಮಾಧವಯ್ಯಂಗೆ ಇರ್ಕಣ್ದುಗ ಮಣ್ಣ ಪೆನ್ನಸ ಬಿಟ್ಟ (ಎಕ. XV, ಹೊಳೆ. ೬೮-೩; 974). [ಪಾಂಡ್ಯ + ಗಾವುಂಡ(<ಗಾಮುಂಡ)]

**ಪಾಂಡ್ಯವಿಲ್ಲರಸ** (ನಾ). ಒಬ್ಬಾತನ ಹೆಸರು : ಪಾಣ್ಡ್ಯವಿಲ್ಲರಸರಾ ಮಗನ್ ದೇವ (ಎಇ. II, ೧೯-೧; ಸು. ೩೦೦). [ಪಾಂಡ್ಯ + ವಿಲ್ಲರಸ$_0$]

**ಪಾಂತ** (ನಾ). ಪಕಾರದಿಂದ ಕೊನೆಗೊಳ್ಳುವ ಶಬ್ದ : ಪಾಂತಕ್ಕೆ—ಅಪ್ಪು, ಆಲಿಂಗನೇ, ಉದಕೇ ಚ (ಕಘಠ); ಪಾಂತವರ್ಗಃ — ಪಕಾರವೇ ಅಂತವರ್ಣವಾಗುಳ್ಳ ನಾನಾರ್ಥ ಪದಸಮೂಹವು (ಸಿದ್ಧಾಂತಿ. ೪೦೩). [ಪ$_1$ + ಅಂತ$_2$]

**ಪಾಂತಿಪುರ** (ನಾ). ಒಂದು ಊರಿನ ಹೆಸರು ; ೲ ಧಾರವಾಡ ಜಿಲ್ಲೆಯ ಈಗಿನ ಹಾನಗಲ್ಲು : ಸ್ವಾಮಿಶರ್ಮ್ಮಣೇ ಪಾನ್ತಿಪುರ ವಿಷಯೇ ಕಿಱುಕುಪ್ಪಟೂರಗ್ರಾಮ[ಮ್] . . . ಸೋದಕಂ ಸದಕ್ಷಿಣಂ . . . .ದತ್ತವಾನ್ (ಕಇ. II, ೦-೦೦; ಸು. ೬೦೦) ; ಬನವಾಸಿಪುರವರೇಶ್ವರಂ ಪಾಂತಿಪುರಾಧಿಪಂ ಶ್ರೀಮನ್ಮಯೂರವರ್ಮ್ಮದೇವಂ (ಕೌಇಇ. XX, ೨೯-೬೪ 1034). [ಪಾಂತಿ$_0$ + ಪುರ$_1$]

**ಪಾಂಥ** (ನಾ). ದಾರಿಹೋಕ ; ಪ್ರಯಾಣಿಕ : "ಪಯಣಂಬೋಪಾತಂ ಮಾರ್ಗಯಾಯಿ ತಾಂ ಪಥಿಕನಧ್ವನೀನಂ ಪಾಂಥಂ" (ಶಬ್ದಕೋ. ೯೩-೨); ಎನಸುಂ ಕೈವಾರದಿಂದಿಲ್ಲದ ಗುಣಗಣಮಂ ರಾಗದಿಂ ಕೆಮ್ಮನೀ ಪಾಂಥ ನೊಳಧ್ಯಾರೋಪಣಂಗೆಯ್ದನಗನವರತಂ ಬಣ್ಣಿಸುತ್ತಿರ್ದರ್ (ಕಾದಂಬ. ೨೬೬); ಯುಂಷತಿಯರಾದರ್ ಚಪ್ಪರಿಸೆ ಕೋಗಿಲೆಯಾಂಚರಮೆಂದು ಬೆರ್ಚಿ ಪಾಱಿವು ಗಿಳಿವಿಂಡು ಪಾಂಥರೆರ್ದೆ ಪಮ್ಮನೆ ಪಾಱುವುವಾ ಪ್ರದೇಶದೊಳ್ (ಅನಂಪು. ೦-೬೨). [ಸಂ.]

**ಪಾಂಥಶಾಲೆ** (ನಾ). ಪ್ರಯಾಣಿಕರು ತಂಗುವುದಕ್ಕಾಗಿ ನಿರ್ಮಿಸಿದ ವಿಶ್ರಾಂತಿಗೃಹ ; ಛತ್ರ : ಪಾಂಥಶಾಲೆಗಳು ಮತ್ತು ಪಾಂಥಶಾಲಾ ಪಾಲಕರು (ಆರಾವ.೨೯೦). [ಪಾಂಥ + ಶಾಲೆ$_3$]

**ಪಾಂಥಸ್ತ** (ನಾ). = ಪಾಂಥ : ಅಂದು ಗುಡಿಯಲ್ಲಿ ಅತಿಥಿ-ಅಭ್ಯಾಗತ-ಪಾಂಥಸ್ತರಿದ್ದರೆ, ಕಾಕಾ, ಅವರಿಗೆ ಗುಡಿಯಲ್ಲಿಯೇ ಪ್ರಸಾದವಾಗಬೇಕೆಂದು ವಿನಮ್ರವಾಗಿ ಬಿನ್ನವಿಸುತ್ತಾರೆ (ಬೀಶಹ. II, ೬೯). [<ಪಾಂಥಸ್ಥ]

**ಪಾಂಥಸ್ಥ** (ನಾ). = ಪಾಂಥ : ಮಧ್ಯಾಹ್ನದ ಬಿಸಿಲಿನಲ್ಲಂತೂ ಸುತ್ತು ಮುತ್ತಲಿನ ಗ್ರಾಮಗಳು ಸದ್ಯಕ್ಕೆ ಸುಡುತ್ತವೆಂದು ಪಾಂಥಸ್ಥನು ಭ್ರಮೆಗೊಳ್ಳುತ್ತಾನೆ (ಕಭಾಗ. ೬); ತಾನೊಬ್ಬ ಮಾನವ, ಜನನ-ಮರಣಗಳ ನಡುವಿನ ದಾರಿಯನ್ನು ತುಳಿಯುವ ಪಾಂಥಸ್ಥ. ತನ್ನ ಮನಸ್ಸಿಗೆ ಶಾಂತಿಯಿಲ್ಲ ವೇಕೆ? (ಸಮಾಕೀ. ೩೦೦). [ಸಂ.]

**ಪಾಂಪು** ' ಪಾಪ್ಪು ' ನೋ.

**ಪಾಂಬ** ' ಪಾಣ್ಬ ' ನೋ.

**ಪಾಂಬಬ್ಬೆ** (ನಾ). ಒಬ್ಬಾಕೆಯ ಹೆಸರು : ಪಡಿಯಾಟ ದೊರಪಯ್ಯನ ಪಿರಿಯರಸಿ ಪಾಂಬಬ್ಬೆ ತಲೆಸಱಿದು ಮೂಮತ್ತುವರಿಸಂ ತಪಂಗೆಯ್ದುಯ್ದಂ ನೋನ್ತುಚ್ಛಪಾಠಾಣಮೇಱಿದರ್ (ಎಕ. VI, ಕಡೂರು. ೦-೦೫; 971). [ಪಾಂಬ$_0$ + ಅಬ್ಬೆ$_1$]

**ಪಾಂಬುಳಕುಂಟೆ** (ನಾ). ಒಂದು ಸ್ಥಳದ ಹೆಸರು : ತೆಂಕ್ಷಣದೆಸೆ ಗುಡ್ಡೆಗಲ್ಲು ತುಮ್ಮಕುಣ್ಟೆ ರೇವುಕುಣ್ಟೆ ಪಾಮ್ಬುಳಕುಣ್ಟೆ (ಎಕ. XII ಶಿರಾ. ೪೮-೫೬; 878). [ಪಾಂಬುಳ$_0$ + ಕುಂಟೆ$_2$]

**ಪಾಂಬೆ** ' ಪಾಣ್ಬೆ ' ನೋ.

**ಪಾಂಶು** (ನಾ). (ಮಣ್ಣಿನ) ಧೂಳು ; ಹುಡಿ ; ರಜ : ತೋಯ . . . ಕ್ಷೀರಘೃತಂಗಳೊಳ್ ಸ್ನೇಹಗುಣಂ ಪ್ರಕರ್ಷಾಪ್ರಕರ್ಷದಿಂ ವರ್ತಿಸುಗುಂ ಪಾಂಶುಕಣಶರ್ಕರಾದಿಗಳಲ್ಲಿ ರೂಕ್ಷಗುಣಂ ವರ್ತಿಸುಗುಂ (ಕರ್ನ್ನಾಕ್ರ. ೨೯೩). [ಸಂ.]

**ಪಾಂಶುಕೇಳಿ** (ನಾ). ಧೂಳಿನಲ್ಲಿ ಆಟವಾಡುವಿಕೆ ; ಧೂಳಾಟ : ತ್ವರಿತ ಗತಿಪ್ರಯುಕ್ತತುರಗೋತ್ಕರಸತುಟ್ಪ್ರರಘಟ್ಟನೋತ್ಥಿತೋದ್ಧುರರಜವಾರ್ಕ ಮಂಡಲಮನಾವರಿಸುತ್ತಿರೆ . . . ನಿರ್ಜರಕರಿ ಪಾಂಶುಕೇಳಿಯ ನೊಡರ್ಚುಗುಮಲ್ಲಿ ಜಯಪ್ರಯಾಣದೊಳ್ (ರಾಜಶೇ. ೩-೩). [ಪಾಂಶು + ಕೇಳಿ$_3$ (= ಕೇಲಿ)]

**ಪಾಂಶುಲೆ** (ನಾ). ೧. ಮುಟ್ಟಾದವಳು ; ಋತುಮತಿ. ೨. ಜಾರೆ ; ವ್ಯಭಿಚಾರಿಣಿ : " ಪಾಂಶುಲಾ = ಜಾರೆ " (ಶಾಕಕ. ೨೩೯). [ಸಂ. ಪಾಂಶುಲಾ]

**ಪಾಂಶೆ** ' ಪಾವಸೆ ' ನೋ.

**ಪಾಂಸು** (ನಾ). ೧. = ಪಾಂಶು : "ಪಾಂಸುಃ, ಕ್ಷೋದಃ, ರೇಣುಃ, ಚೂರ್ಣಂ, ಧೂಳೀ, ರಜಃ—ಈ ೬ ಧೂಳಿ" (ಹಲಾಯು. ೬೩-೨೬೯); ವಿವಿಧ ವೈಪಥಪಾಂಸುಗಳಿಂದೆ ನಾಡೆ ಸೀಱಿದ ಶಲೆಯುಂ ಕರಂ ಮಲಿನಮಾದ ಪಟಚ್ಚರಮುಂ ನೆಗಳ್ವಲಂದಿದಿರೊಳೆ ಲೇಖವಾಹನಿವಹಂ ಬರೆ ಕಂಡನಿಳಾಧಿನಾಯಕಂ (ಕಾದಂಬ. ೬೩೩); ಅರಿಚರಣಪಾಂಸು ಪತ್ತಿರೆ ಶರೀರಮಂ ತೊಡೆದು ಕಳೆದ ಪಸ್ತ್ರಾಂಚಲದಿಂ ಗುರುನಂಘನ ನೀನೆನ್ನೀ ಪರಿಭವಪಾಂಸು ವನದೆಂತು ಪೇಟ್ ಕಳೆದಪೆಯೋ (ಗದಾಯು.೯-೨೬); ಕುಸುಮಾಕರಗಳ್ ಮರುದಾಹತಿಯಿಂ ಪರಾಗಪಾಂಸುಪ್ರಸರಂಬೆರಸಲರ ಸುರಿವವ್ವು (ಜಗಂ. ೯-೭೦). ೨. ಹೂವಿನ ಧೂಳಿ ; ಪರಾಗ : ' ಪಾಂಸುಕೇಳಿ ' ಪರಾ. ೩. ಒಂದು ಬಗೆಯ ಗಿಡ ; ಪರ್ಪಟಕ : "ಪಾಂಸು ಪರ್ಪಟಕಮಕ್ಕು" (ಮಂಗರಾ. ೪೨—೩೮). [ಸಂ.]

**ಪಾಂಸುಕೇಳಿ** (ನಾ). ೧. = ಪಾಂಶುಕೇಳಿ : ಆತನ ಲಲಿತೋತ್ತಾನಶಯಿತ ದರಹಸಿತತರಂಗಿತಗತಿಸ್ಖಲಿತಮುಗ್ಧಜಲ್ಪಿತಾದಿ ಬಾಲ್ಯವಿಲಾಸಂಗಳಿಂದಂ ಕರಿಕರೋದ್ಧೂತಧೂಳೀವಿಲಾಸ ಪಾಂಸುಕೇಳಿಯಿಂದಂ . . . ಆನಂದಿತ ಹೃದಯನಾಗಿ (ಆದಿಪು. ೬-೩೦ ವ) ; ಆಡುವ ಪಾಂಸುಕೇಳಿಯೊಳೆ ಸಲ್ವ ತೊದಳ್ನುಡಿಯುಂ . . . ನಾಡೆಯುಂ ರೂಡಿಸೆ (ಜಗಂ. ೩-೭೦). ೨. ಹೂವಿನ ಪರಾಗದಲ್ಲಿ ಆಡುವಿಕೆ : ಪರಾಗಪುಂಜದೊಳ್ ಪಱಿಪಡಿ ಸಿತ್ತು ಭೃಂಗಶಿಶು ನೀರಜದೊಳ್ ನಿಜಪಾಂಸುಕೇಳಿಯಂ (ಶಂಕ್ರಪು. ೭-೬೦). [ಪಾಂಸು + ಕೇಳಿ$_3$ (= ಕೇಲಿ)]

**ಪಾಂಸುಲೆ, ಪಾಂಸುಳೆ** (ನಾ). ೧. ಮುಟ್ಟಾದವಳು ; ಋತುಮತಿ. ೨. ಜಾರೆ ; ಹಾದರಗಿತ್ತಿ ; ವ್ಯಭಿಚಾರಿಣಿ : "ಸ್ವೈರಿಣಿ . . . ಅಭಿಸಾರಿ ಪಾಂಸುಲೆ[ಶಾಶಾಂ. ಸಾಂಬಂಧಕಿ] ಬಂಧಕಿಯೆನಲ್ಕೆ ಹಾದರದ ನಾರಿಯೆನಿಸಿಕ್ಕು" (ಮಂಗರಾ. ೯೦-೯); ಒರ್ವಳ್ ಪಾಂಸುಲೆ ಈ ನೆಪದೆ ಪಾಣ್ಬನ ನೆರವೆನೆಂದು ಬಂದುದಂ ಭೂನುತನ ನೋಳ್ಪ ಸತಿಯರ ಗೋಷ್ಠಿಯಿಂ ಪಱಿಜಿಪಳು (ಶಬ್ದಾ. ೬.೬೯). ೩. ಭೂಮಿ. **ಪಾಂಸುಳೆ** : ೨. "ಪಾಂಸುಳಾ, ಬಂಧಕೀ, ಸ್ವೈರಿಣೀ, ಅಸತೀ, ಪುಂಶ್ಚಲೀ, ಇತ್ವರೀ, ಧರ್ಷಣೀ, ಕುಲಟಾ, ಅವಿನೀತಾ, ಅಭಿಸಾರಿಕಾ — ಈ ೧೦ ಹಾದರಿಗಿತ್ತಿ" (ಹಲಾಯು. ೬೦-೩೯೨) ಬಳಸಿದುದರ್ಕವಾಜಿಖುರಘಟ್ಟಿತವಾದಮರಾದ್ರಿಯಿಂದಮುಚ್ಚಳಿಸಿದ ಧಾತು

ರೇಣಾವನೆ ಚಕ್ರಯುಗಂಗಳಗಲ್ಕೆಗಿಟ್ಟು ಪಾಂಸುಳೆಯರ ರಾಗದೇಟ್ಗೆ . . . ಸಂಜೆಯ ಕೆಂಪು ಲೋಕಮಂ (ಚಂದ್ರಕೃ. ೯-೯). [ ಸಂ. ಪಾಂಸುಲಾ ]

**ಪಾಂಸುಳ** (ಗು). ೧. ಧೂಳು ಮುಸುಕಿದ ; ಧೂಳಿನಿಂದ ತುಂಬಿದ. (ನಾ). ೨. ಧೂಳು ತುಂಬಿದುದು : ಸಮೀರನುದಾರಕದಂಬಕೇಶರ ಪ್ರಸರರಜಃಸ್ಥರವ್ರಕಟಪಾಂಸು[ಪಾಠಾಂ. ಪಾತು]ಳಮಾದುದು ಮೇಘಕಾಲ ದೊಳ್ (ಚಂಶಕಾ. ೬-೨೨). [ ಸಂ. ಪಾಂಸುಲ ]

**ಪಾಂಸುಳೆ** 'ಪಾಂಸಲೆ' ನೋ.

**ಪಾಂಸೆ** 'ಪಾವಸೆ' ನೋ.

**ಪಾಕ$_1$** (ಗು). ೧. ತೀರ ಎಳೆಯ : ಪಾಕಕುಶಕಾಶವಿಶದಂ . . . ಕೃಷ್ಣಲಾವಮರೀಬಿಂಬಾಕೀರ್ಣಂ ತನ್ನದೀತಟಂ ಕದುರಯ್ಯಂ (ರಾಜಶೇ. ೬-೬೦). ೨. ಸರಳಸ್ವಭಾವದ ; ನಿಷ್ಕಪಟವಾದ. (ನಾ). ೩. ಬೇಯಿಸುವುದು ; ಪಕ್ವಗೊಳಿಸುವುದು : ಆ ಭೋಜ್ಯವಸ್ತುವಂ ಹಸನಾಗಿ ಪಾಕವಂ ಮಾಳ್ಪ ವಿವರದ ಶಾಸ್ತ್ರಮಂ ಮನಗೊಂಡು ಪೇಳ್ವೆಂ (ಸೂಪಶಾ. ೦-೩). 'ನಳಪಾಕ', 'ಪಾಕಶಾಸ್ತ್ರ' ಪರಾ. ೪. ಬೇಯಿಸಿ ಸಿದ್ಧಪಡಿಸಿದ ಅನ್ನ ಮೊದಲಾದುವು ; ಅಡುಗೆ : ಭವಿ ಮಾಡಿದ ಪಾಕವ ತಂದು ಲಿಂಗಕರ್ಪಿಸುವ ಕಷ್ಟರ ಕಂಡು ನಾಚಿತ್ತೆನ್ನ ಮನವು (ಬಸವ. ೬೩೮), ಪರಿವರಿಯ ಬಹುಭಕ್ಷ್ಯಪಾಕದ ಪರಿಮಳದ ಶಾಕಾದಿಗಳಪೊಗ್ಗರಣೆಗಳ ಸೌರಭಕೆ ತೀವಿದುದು ನಿದ್ರೆ ಪವನಜನ (ಕುಮಾ.ಭಾ. ೦೦-೨೨). ೫. ಪರಿಪಕ್ವತೆ; ಹಣ್ಣಾಗುವಿಕೆ; ಪರಿಪೂರ್ಣತೆ. ೬. ಬೆಲ್ಲ ಅಥವಾ ಸಕ್ಕರೆಯನ್ನು ಕುದಿಸಿ ತಯಾರಿಸಿದ ಮಂದವಾದ ದ್ರವ : ಸಕ್ಕರೆಗೆ ನೀರು ಸೇರಿಸಿ ಕುದಿಸಿ ಪಾಕ ನೂಲಿನಂತೆ ಎಳೆಯುಲು ಬರುವವರೆಗೆ ಕಾಯಿಸಬೇಕು (ಅಡುಗೆ. ೦೦೦). 'ಎಳೆಪಾಕ$_1$' ಪರಾ. ೭. ಮೂಲಿಕೆಗಳನ್ನು ಬಟ್ಟಿಯಿಳಿಸಿ ತೆಗೆದ ಸಾರ ; ಕಷಾಯ : ಅಡುಸೋಗೆಬೇರು, ಕಹಿಪಡವಲ . . . ಚೂರ್ಣಮಾಡಿ ಬಳ್ಳ ಹಸುವಿನ ಬೆಣ್ಣೆಯಲ್ಲಿ ಪಾಕವ ಮಾಡಿ ಹದದಲ್ಲಿಳುಹಿ ತೆಗೆದುಕೊಳ್ಳೆ ಹಳೆಯ ಜ್ವರ ಮಾಣ್ಗುಂ (ಸಕಶ್ಯ. ೦೨೬). ೮. ಕಾರ್ಯದ ಕೊನೆಯಲ್ಲಿ ದೊರೆಯುವ ಫಲ ; ಪರಿಣಾಮ ; ಸಿದ್ಧಿ : ಪಾಕದೊಳೆಶಿವಿಷಮುಂ ಕಿಂಪಾಕಫಲಪ್ರತಿಮಮುಮಖಿಲವಿಷಯಸುಖಂ (ಅಂಪು. ೯-೬೯). ೯. ಪಚನ ವಾಗುವಿಕೆ ; ಜೀರ್ಣವಾಗುವಿಕೆ. ೧೦. ಮಗು ; ಕೂಸು : "ಬಾಲಃ, ಪಾಕಃ . . . ಶಿಶುಃ, ಶಾಬಃ, ಡಿಂಬಃ — ಈ ೯ ಮಗುವು" (ಕರ್ಣಾಟ. ೬೩-೬೯೮). ೧೧. ಇಂದ್ರನಿಂದ ಹತನಾದ ಒಬ್ಬ ರಾಕ್ಷಸ : "ಪಾಕಃ = ರಕ್ಕಸಂ" (ಶಾಶಕ್ಯ. ೦೩೭೦). 'ಪಾಕಶಾಸನ' ಪರಾ. ೧೦, ೧೧ : ಕುಳಭೂಭೃತ್‌ಪರಿವಂಥಿಪಾವಕಪುಂಖಂ ಪಾಕಃ ಪಹಂ . . . ಸತತಂ ಸಂಕ್ರಂದನಂ (ಪಾಶ್ವ. ೬-೯). ೧೨. ಮನೆ ಯಲ್ಲಿ ಪೂಜೆಗೊಳ್ಳುವ ಅಗ್ನಿ ; ಗೃಹ್ಯಾಗ್ನಿ. ೧೩. ಚರು ; ಹವಿಸ್ಸು : "ಹವ್ಯಂ, ಪಾಕಃ, ಚರುಃ, ಸಾನ್ನಾಯ್ಯಂ, ಹವಿಃ — ಈ ೫ ಚರು" (ಕರ್ಣಾಟ. ೬೯-೨೬೩). ೧೪. ತೇಜಸ್ಸಿನ ಸಂಯೋಗ : ಪೃಥಿವಿಯಲ್ಲಿ ರೂಪ, ರಸ, ಗಂಧ, ಸ್ಪರ್ಶ ಇವು ಪಾಕದಿಂದ ಬದಲಾಪಣೆ ಹೊಂದುವುವು. ಪಾಕವೆಂದರೆ ತೇಜಸ್ಸಿನ ಸಂಯೋಗ (ಶಾಶಕ್ತ್ಯ. ೨೯೮). ೧೫. [ಕಾವ್ಯಮೀ] ಅರ್ಥಗಾಂಭೀರ್ಯ ; P "ಅರ್ಥಗಭೀರತೆಗೆ ಪಾಕವೆಂದು ಹೆಸರು. ಕೆಲವು ಕಾವ್ಯಗಳಲ್ಲಿ ಅರ್ಥವೂ ಅದರ ಸ್ವಾರಸ್ಯವೂ ಸಂಲಭವಾಗಿದ್ದು ಕ್ಲೇಶವಿಲ್ಲದೆ ತಿಳಿಯುವುದಂ ; ಮತ್ತೆ ಕೆಲವುಗಳಲ್ಲಿ ಅರ್ಥವು ಗೂಢವಾಗಿದ್ದು ಅದು ತಿಳಿಯ ಬೇಕಾದರೆ ಬುದ್ಧಿಕ್ಲೇಶವಾಗುವುದು" (ಕೃಶಶ. ೨೨೫.) : ಗುಣಗಣ ಮಣಿಯುರಮನೆನೆ ವೃತ್ತಿ ಬಿತ್ತರಂಬಡೆಯೆ ಪಾಕಂ ಲೋಕೋತ್ತರಮೆನೆ ಶಯ್ಯೆ ರಯ್ಯಮಾಗೆ ಬಂಧಮುಗುಂದಲವಡೆಯೆ . . . ಗದ್ಯಪದ್ಯ ಚಂಪು ಪ್ರಮುಖಪ್ರಬಂಧಂಗಳಂ ಪೇಳ್ವುದು (ರಾಜಶೇ. ೩-೦೯ ಆ). 'ದ್ರಾಕ್ಷಾಪಾಕ', 'ನಾರಿಕೇಳಪಾಕ' ಪರಾ. ೧೬. [ಜ್ಯೋತಿ] ಗ್ರಹಗತಿ : ದಶೆ : 'ಪಾಕನಾಥ' ಪರಾ. [ ಸಂ. ]

**ಪಾಕ$_2$, ಪಾಕು$_1$** (ನಾ). ಸ್ವಚ್ಛವಾದುದು ; ಸಾಫು ; ಚೊಕ್ಕಟ : ಎಲೆ ತುಂಬಾ ಬಡಿಸಿಕೊಂಡು ಪಾಕವಾಗಿ ಒಂದಗುಳನ್ನೂ ಬಿಡದೆ ಚೆನ್ನಾಗಿ ಕುಮ್ಮರಿಸುತ್ತಾಳೆ ಹೊಟ್ಟೆಯೊಳಕ್ಕೆ (ಪತಮಣ. ೧೦೭). **ಪಾಕು$_1$** : ಬೀದಿಗಳೆಲ್ಲ ಆ ದಿನ ಚೊಕ್ಕಟವಾಗಿದ್ದುವು. ಸುಬೇದಾರರು ಜಮಾಬಂದಿಗೆ ಬರುತ್ತಾರೆಂದು ಶೇಕದಾರರು ಮುದ್ದಾಗಿ ನಿಂತು ಪಾಕು ಮಾಡಿಸಿದ್ದರು (ಮಾಂಡ್ರ. ೩೩).

**ಪಾಕು ಮಾಡು** = ಹಸನುಗೊಳಿಸು; ಸ್ವಚ್ಛಮಾಡು: ಅಡವಿಯಲ್ಲಿನ ರಸ್ತೆಗಳ ಅಕ್ಕಪಕ್ಕಗಳಲ್ಲೂ ಪಾಕುಮಾಡಿ ಅಲ್ಲಿ ಸಸ್ಯಗಳು ಇರದಂತೆ ನಿರ್ಮೂಲಿಸುತ್ತಾರೆ (ಕರ್ಶೋ. I,೪೪೪) ; ಬಂಜರುಭೂಮಿಯನ್ನು ಪಾಕು ಮಾಡಿ ಉಳುಮೆಗೆ ಅರ್ಹಮಾಡುವುದು (ಅಂಶಸಂ. ೨೪೪).

[ ← ಪಾರ. ಹಿಂ. ಪಾಕ್ ]

**ಪಾಕಂಗೆಯ್** (ಕ್ರಿ). ಅಡುಗೆ ಮಾಡು: ಸಲುಮಿಂದೊದವಿಸಿದಳಖಿಲಸದ್ರವ್ಯಮಂ ಬಳಿಕ ಚಂಡಿ ಪಾಕಂಗೆಯ್ದಳು (ಕೃಮಣ. ೧೦-೨೯).

[ ಪಾಕ$_1$ + ಕೆಯ್$_1$ (< ಕೆಯ್$_1$) ]

**ಪಾಕಂಪೊಪ್ಪು** (ನಾ). (ಹೊಸ) ಬೆಲ್ಲದ ಪಾಕಕ್ಕೆ ಹುರಿದ ಕಡಲೆಕಾಯಿ ಬೀಜ, ಕಡಲೆ, ಗಸಗಸೆ, ಎಳ್ಳು ಮುಂತಾದುವನ್ನು ಹಾಕಿ ತಯಾರಿಸುವ ಒಂದು ಬಗೆಯ ಸಿಹಿತಿಂಡಿ : ಪಾಠಪ್ರವಚನ ರುಚಿಸದೆ ಹೋದರೆ ಪಾಕಂಪೊಪ್ಪನು ಮೆಲ್ಲುವೆವು (ಕಿರಾಂ. ೧೬-೨೦).

[ ಪಾಕ$_1$ + ಪೊಪ್ಪು (< ಪರುಪು) ]

**ಪಾಕಂಬೋಗು** (ಕ್ರಿ). ( ? ) : ನೆಲಪಾಳು ಪಾಕಂಬೋಪಲ್ಲಿ ಮೂಪರಲೋರ್ವರ್ ಸತ್ತಡಲ್ಲದೆ ಭೂಮಿ ನಿಲ್ಲದು (ಕಶಾಸ. IX-1. ೩೩-೦೪ ; 1059). [ ? ]

**ಪಾಕಗೂಳು** (ನಾ). ಕುದಿದು ಮಂದವಾದ ಕಬ್ಬಿನ ರಸ : ಸಂದುಸಂದನು ಕಡಿದು ಕಬ್ಬನು ತಂದು ಗಾಣದಲಿಕ್ಕಿ ಅರೆದಡೆ ಬೆಂದು ಪಾಕಗೂಳ [ಪಾಠಾಂ. ಪಾಕಗುಳ್ಳ] ಸಕ್ಕರೆಯಾಗಿ ನೊಂದೆನೆಂದು ಸಿಹಿಯ ಬಿಟ್ಟಿತ್ತೆ (ಮುಕಾರ. ಬ. ೨೬-೨೫). [ ಪಾಕ$_1$ + ಕೂಳು$_2$ (< ಕೂಟು$_1$) ]

**ಪಾಕಗೊಳ್** (ಕ್ರಿ). ಚೆನ್ನಾಗಿ ಬೇಯು ; ಪಕ್ವವಾಗು : ರಸಮಾದಿಗಳ್ ಪಾಕಗೊಂಡಿರಲು ಪರಿದೇಯುಮುಕ್ಕು ಬೇಯದ ರಸಂ ಪಾನಂಗಳೆಂದೆನಿಕ್ಕುಂ (ಮುಂಗಣ. ೬೯-೯). [ ಪಾಕ$_1$ + ಕೊಳ್$_1$ ]

**ಪಾಕಗೊಳಿಸು** (ಕ್ರಿ). ಹದಗೊಳಿಸು : ಈ ಉಷ್ಣತೆಗೆ ಅನುಗುಣವಾಗಿ ಹಸಿರನ್ನು ಪಾಕಗೊಳಿಸಲು ಹಾಗೂ ಅವನ್ನು ಕೆಡದಂತೆ ಇರಿಸಲು ಬರುತ್ತದೆ (ಗಂಜ್ಞಾಸ. ೯೪). [ ಪಾಕ$_1$ + ಕೊಳು (< ಕೊಳ್$_1$) + — ಇಸು$_3$ ]

**ಪಾಕಡ** 'ಫಾಕಡ' ನೋ.

**ಪಾಕಡಾ** 'ಫಾಕಡ' ನೋ.

**ಪಾಕದಂಡ** (ನಾ). (?) : ಚೋರ ಪಾಕದಣ್ಡ ದಶಾಪರಾಧಂಗಳಪ್ಪಬೆಳ್ಗು ಪೂರ್ವ್ವಾಚಾರಂ (ಎಕ. XIV. ೧೯೧-೧೯ ; 725). [ ? ]

**ಪಾಕನಾಥ** (ನಾ). [ಜ್ಯೋತಿ] ಮನುಷ್ಯನ ಜೀವನದ ಮೇಲೆ ಶುಭಾಶುಭ ಫಲಗಳನ್ನು ಬೀರುವ ಗ್ರಹ : ತ್ರಿದಶಷಡಾಯಾರಾಶಿಗಳೊಳಕ್ಕೆ ವಿಲಗ್ನದೊಳಕ್ಕೆ ಮೇಣ್ ಸುಹೃತ್‌ಸದನದೊಳಕ್ಕೆ ಸದ್ಗ್ರಹದ ವರ್ಗದೊಳಕ್ಕಿರೆ ಪಾಕ[ಪಾಠಾಂ. ಬಾಪ]ನಾಥನಲ್ಲದೊಡೆ ದಶಾಧಿನಾಥನ ಸುಹೃದ್ಭವನೋಪಚಯತ್ರಿಕೋಣಗೇಹದೊಳಿರೆ ಚಂದ್ರನಿರ್ದೊಡೆ ಶುಭಂ ನಿರೆ ಬೇಚಿಡೆಯೊಳ್ ಶುಭೇತರರ್ (ಜಾತಕ. ೯-೦೩).

[ ಪಾಕ$_1$ + ನಾಥ ]

**ಪಾಕನೇಮಿ** (ನಾ). ಬೇಯಿಸಿದುದನ್ನು ಸೇವಿಸುವುದಿಲ್ಲವೆಂಬ ನಿಯಮವುಳ್ಳವನು : ಸರ್ವಸಂಗಪರಿತ್ಯಾಗಿ ಎಂದೊಡೆ ಭೋಗಕ್ಕೆ ಪಾಙುಗಿಸುವ ಪಾಕನೇಮಿ ಎಂದೊಡೆ ಷಡ್ರಸಕ್ಕೆ[ಪಾಠಾಂ. ಷಡುರಸಾನ್ನಕ್ಕೆ]ಆಶಿಸುವೆ (ಸವಚ. ೧೨-೯೯). [ಪಾಕ$_1$+ನೇಮಿ$_1$]

**ಪಾಕಯಜ್ಞ** (ನಾ). ೧. ಮನೆಯಲ್ಲಿ ನಡೆಸುವ ಹೋಮಾದಿ ಕಾರ್ಯ ; ವೈಶ್ವದೇವಹೋಮ, ಬಲಿಕರ್ಮ, ನಿತ್ಯಶ್ರಾದ್ಧ ಮತ್ತು ಅತಿಥಿ ಭೋಜನ ಎಂಬ ನಾಲ್ಕು ಪಾಕಯಜ್ಞಗಳು ; ಹ "ಹುತ, ಅಹುತ, ಪ್ರಹುತ, ಪ್ರಾಶಿತ, ಬಲಿದಾನ (ಮಹಾಭಾ. ಅಶ್ವಮೇಧಿಕ. ವೈಪ ೩೭೭೭)" (ಕ್ರೀಪಕ್ಷ. ೨೫೪). ೨. ಅಡುಗೆ . [ಪಾಕ$_1$+ಯಜ್ಞ]

**ಪಾಕರ** 'ಪಕ್ಕರೆ$_1$' ನೋ.

**ಪಾಕರಿಪು** (ನಾ). ಪಾಕನೆಂಬ ದೈತ್ಯನ ವೈರಿ ; ಇಂದ್ರ : ಪಾಕರಿಪುತನಯನಂಗವನಾ ಕಪಟಕಿರಾತನೋವಿ ಮೆಲ್ಲನೆ ತಿವಿದಂ (ಕಖಕಂ. ೪-೮೩). [ಪಾಕ$_1$+ರಿಪು]

**ಪಾಕಲ್** 'ಪಾಗಾರ' ನೋ.

**ಪಾಕಲ$_1$** 'ಪಾಗಾರ' ನೋ.

**ಪಾಕಲ$_2$**, ಪಾಕಳ (ನಾ). ೧. ಆನೆಗೆ ಬರುವ ಜ್ವರ. ೨. ಒಂದು ಬಗೆಯ ಗಿಡ ; ಚಂಗಲಕೋಷ್ಠ : "ವ್ಯಾಧಿಃ, ಕುಷ್ಠಂ, ಪಾರಿಭಾವ್ಯಂ, ವಾಪ್ಯಂ, ಪಾಕಲಂ, ಉತ್ಪಲಂ—೬ ಚಂಗಲಕೋಷ್ಠ" (ಸಿದ್ಧಾಂತಿ. ೧೫೦). ಪಾಕಳ : ೧. 'ಕೂಟಪಾಕಳ' ಪರಾ. [ಸಂ.]

**ಪಾಕಲು** 'ಪಾಗಾರ' ನೋ.

**ಪಾಕವ್ಯ** (ನಾ). ಅಡುಗೆ : ಇದನಱಿತ ಬಳಿಕಿಲ್ಲವಜ್ಞಾತದ ಗಸಣಿ ನೋಡುವರೆ ಅಪ್ರುತವ ಮುದದಲೀಂಟಿದವಂಗೆ ಪಾಕವ್ಯದಲಿ ತೊಡಕಿಲ್ಲ (ಶಿಶಾಗ. ೧೧-೩೫-೨೩). [<ಸಂ. ಪಕ್ವವ್ಯ ?]

**ಪಾಕಶಾಲೆ** (ನಾ). ಅಡುಗೆಮನೆ: "ರಸವತೀ, ಪಾಕಸ್ಥಾನಂ, ಮಹಾನಸಂ—೩ ಅಡಿಗೆಯ ಸಾಲೆ, ಅಡಿಗೆಮನೆ, ಪಾಕಶಾಲೆ" (ಸಿದ್ಧಾಂತಿ. ३೮३). [ಪಾಕ$_1$+ಶಾಲೆ$_3$]

**ಪಾಕಶಾಸನ** (ನಾ). ಪಾಕನೆಂಬ ದೈತ್ಯನನ್ನು ದಂಡಿಸಿದವನು ; ಇಂದ್ರ : "ಇಂದ್ರಃ . . . ಪಾಕಶಾಸನಃ, ದಿವಸ್ಪತಿಃ, ಬಿಡೌಜಾಃ, ಮರುತ್ವಾನ್, ಮೇಘವಾಹನಃ — ಈ ೩೯ ದೇವೇಂದ್ರನ ಪೆಸರ್" (ಕಣಾಯು. ೧೧-೩೪); ಅನಿಮೇಷಾವಳಿ ಪಾಳಿಗಟ್ಟಿ ತರದಿಂ ದುಗ್ಧಾಬ್ಧಿಯಂ ಮುಟ್ಟಿ ಕಾಂಚನರೂಪ್ಯಕಂಗಳ ಕುಂಭದಿಂ ಮೊಗೆದು ಜೈಜೈಯೆಂಬಿನಂ ಪಾಕಶಾಸನಹಸ್ತಾಗ್ರದೊಳಿತ್ತು ತಂದು ಕುಡೆ ಕೊಂಡಿಂದ್ರಂ ಜಿನೇಂದ್ರಂಗೆ ಮಜ್ಜನಮಂ ಕುಂದದೆ ಮಾಡ್ಪಂ (ಸುಕುಮಾ. ೧-೬೭) ; ಪಾಕಶಾಸನನೈದಿ ವೃತ್ರನ ಧ್ವಾಂಸಗಿಡಿಸಿ ವಧೀಚಿಯಸ್ಥಿಯಲೌಕಿ ಹೊಯ್ಯಲು ದಾನವನ ತನು ನೀರೊಳಡಗೆಡೆಯೆ (ಕುವ್ಯಾಶಾ. ೪-೧೦೭). [ಸಂ.]

**ಪಾಕಶಾಸನಿ** (ನಾ). ೧. ಇಂದ್ರನ ಮಗ. ೨. ಜಯಂತ : "ಇಂದ್ರಃ . . . ಋಭುಕ್ಷಾ — ೩೫ ದೇವೇಂದ್ರನ ಹೆಸರುಗಳು . . . ಜಯಂತಃ, ಪಾಕಶಾಸನಿಃ — ೨ ಆತನ ಕುಮಾರನ ಹೆಸರುಗಳು" (ಸಿದ್ಧಾಂತಿ. ೧೧). ೩. ವಾಲಿ. ೪. ಅರ್ಜುನ. [ಸಂ.]

**ಪಾಕಶಾಸ್ತ್ರ** (ನಾ). ಅಡುಗೆಯ ವಿಧಾನವನ್ನು ತಿಳಿಸುವ ಶಾಸ್ತ್ರ ; ಸೂಪಶಾಸ್ತ್ರ : ಒಗ್ಗಾಲಿ ರಾಮಪಂಡಿತ ಮತ್ತು ನಂಜಭಟ್ಟರು . . . ತಮ್ಮ ವರುಷದ ಸಂಪಾದನೆಯನ್ನು ಪಾಕಶಾಸ್ತ್ರದ ಪಾಂಡಿತ್ಯದಿಂದ ಗಿಟ್ಟಿಸಿಕೊಂಡು ಬರುತ್ತಿದ್ದರು (ಕಂಶಿಜು. ೧೧). [ಪಾಕ$_1$+ಶಾಸ್ತ್ರ]

**ಪಾಕಶೇಷ** (ನಾ). ಅಡುಗೆಯನ್ನು ಬಳಸಿದ ನಂತರ ಉಳಿದುದು : ಕಿಂಚಿತ್ಪಾಕಶೇಷವ ಕೊಂಡು ಬಂದೊಡೆ ಕೃಷ್ಣನದ ಕೈಗೊಂಡು ಸವಿದನು (ಕುವ್ಯಾಅ. ೧೩-೪೦). [ಪಾಕ$_1$+ಶೇಷ]

**ಪಾಕಸ್ಥಾನ** (ನಾ). = ಪಾಕಶಾಲೆ : "ಪಾಕಸ್ಥಾನಂ, ರಸವತೀ, ಮಹಾನಸಂ —ಈ ೩ ಬಾಣಸಿನ ಮನೆ" (ಕಣಾಯು. ೪೯-೧೧೦). [ಪಾಕ$_1$+ಸ್ಥಾನ]

**ಪಾಕಳೆ** 'ಪಾಕಲ$_2$' ನೋ.

**ಪಾಕಾರಿ** (ನಾ). = ಪಾಕರಿಪು : ಪೆಜಿಸಾರ್ ಕೋಣನ ನೂಂಕಿದರ್ ಪವನ . . . ಪಾಕಾರಿ ಬಂದೆಜಿಗೈ (ಕಖಕಂ. ೧-೮೩). [ಸಂ.]

**ಪಾಕಿ** (ನಾ). ೧. ಹಣ : ಪರಹೆಣ್ಣುಗಳ ನೋಡಿ ಪಾಕಿಗಳನೀಡಾಡಿ ಅರಿತೊಂದು ಕಡೆಗೆ ಕರೆವೇ ಎಲೆ ಮರುಳೆ ಹರುಷದಿಂದವಳ ನೆರೆವೇ (ಪಾಂಡೀ. ೩೮) ; ಜೋಕೆಯಿಂ ಮಾಗೂತಿಯನೊಯ್ದು ಆಕೆ ಗಂಡನ ಕಣ್ಣಿಗೇ ತಾನ್ಹಾಕಿದನು ಪಾಕಿ ಕೊಡುಯೆನುತ (ಶಕಶ. ೨೩೩). ೨. ಚಿಕ್ಕ ಬೆಲೆಯ ನಾಣ್ಯ : ಪಾಕಿಗೆ ಚಿಂತಿಸಿ ಪಣವ ನೀಗಿದರೆಂಬ ವಾಕಿಗೆ ಬಹರೆ (ಶರಶ. ೭೦-೯೬) ; ಪಾಕಿಗೆ ಒಮ್ಮಣವಾದರೂ ಪಾಪಿಯು ಜರ ತಪ್ಪಲಿಲ್ಲ (ಗಾದೆ). [<ಪಾಗ$_1$]

**ಪಾಕಿಗ** (ನಾ). ಅಡುಗೆ ಮಾಡುವವನು ; ಬಾಣಸಿಗ : ಪಾಕುಳಿಗಂ, ಪಾಕಿಗಂ, ಪಾಕಕರ್ತೃ, ಅಡುಗುಳಿಗಂ, ಅಡುಗಿಗಂ ಸ ಏವ (ಕಣ್ಣಾಪ. ೪೦೦ ವ್ಯಾಖ್ಯಾ). [ಪಾಕ$_1$+ – ಇಗ]

**ಪಾಕಿಸು** (ಕ್ರಿ). ಬೇಯಿಸು : ಅಡು : ಹೃದಯದಲಿ ನೆಲಸಿಹ ಭರದ ಕೋಪವೆ ಬೀಜವದರಲಿ ನೆರೆದ ಬಲುಬೆಳೆ ಫಲವ ಮುಸಲದಿ ಥಳಿಸಿ ಪಾಕಿಸುತ ಧುರದ ಹಬ್ಬದಿ ಭೂತಕೋಟಿಗೆ ಚಿರದಲಾತಣವಿಕ್ಕುಸುವೆ (ಕೋಗಜು. ೨೩-೬೧) ; ತನಿವಾಲ ಶರ್ಕರೆಯ ನಾಡೆ ಪಚನಿಸುತ . . . ಎಲಕ್ಕಿಯಂ ಕೊನರಿಸುತ ಪಾಕಿಸುತ್ತ (ಶಂಗಶು. ೮-೩). [ಪಾಕ$_1$+ – ಇಸು$_1$]

**ಪಾಕೀಜಾ**, ಪಾಕೀಜು (ನಾ). ಸ್ವಚ್ಛತೆ ; ನೈರ್ಮಲ್ಯ ; ಶುದ್ಧಿ : ಪೂರ್ವದಲ್ಲಿ ಅಂಚೆಇಲಾಖೆಯು ಗ್ರಾಮಗಳ ಪಾಕೀಜಾ ಮತ್ತು ಬಂದೋಬಸ್ತು ಮೊದಲಾದ ಇಲಾಖೆಗಳೂ ಬೇರೆ ಇರಲಿಲ್ಲ (ಹಾಳಿಣ. ೫೫). ಪಾಕೀಜು : ಜಮಾನು ಪಾಕೀಜು ಮಾಡಿಸಿದ್ದು ಯಾರಪ್ಪನ ಮನೆ ಗಂಟು? (ಶಂಕರಕೋ. ೧೪೦); ಅಲ್ಲಿ ನೀರು ದೀಪಗಳ ಸೌಕರ್ಯವಾಗಲಿ ಪಾಕೀಜು ವ್ಯವಸ್ಥೆಯಾಗಲಿ ಇರಲಿಲ್ಲ (ದಾದಾಸ. ೧೫೦). [←ಪಾರ. ಪಾಕೀಜಹ್ ; ಹಿಂ. ಪಾಕೀಜಾ]

**ಪಾಕೀಜು** 'ಪಾಕೀಜಾ' ನೋ.

**ಪಾಕೀಟು**, ಪಾಕೆಟ್ಟು (ನಾ). ೧. ಲಕೋಟೆ : ಅವಳ ಪತ್ರವನ್ನು ತನ್ನ ಟ್ರಂಕಿನ ತೀರ ಬುಡದ ಇನ್ನೊಂದು ಪಾಕೀಟಿನಲ್ಲಿ ಬಚ್ಚಿಟ್ಟು . . . ಬೇಗ ಹಾಕಿದನು (ಅಶ್ವ. ೧೪೭); ಮೆಹಬೂಬ . . . ಒಂದು ಕಾಗದದ ಪಾಕೀಟನ್ನು ಹೊರಗೆ ತೆಗೆದು . . . ಅದರಲ್ಲಿ ಆ ಹತ್ತರ ನೋಟುಗಳ ಸುರುಳಿಯನ್ನು ಸೇರಿಸಿ ರಾಘಪ್ಪನ ಬರವನ್ನು ಎದುರು ಕಾಯುತ್ತ ಕುಳಿತುಕೊಂಡಳು (ಗಂಪಜಾಯು. ೧೯೩). ೨. ಜೇಬು ; ಕಿಸೆ : ಅಂಗಿಯ ಪಾಕೀಟಿನಲ್ಲಿ ಚಿಲ್ಲರೆಯಿರಲಿಲ್ಲ (ರೂಢಿ). **ಪಾಕೆಟ್ಟು** : ೩. ಹಣವಿಡುವುದಕ್ಕಾಗಿ ಮಾಡಿದ ಚರ್ಮದ ಪೆಡಿಕೆ ಚೀಲ : ಬಸ್ಸಿನಲ್ಲಿ ನನ್ನ ಹಣದ ಪಾಕೆಟ್ಟನ್ನು ಯಾರೋ ಹಾರಿಸಿದರು (ರೂಢಿ). [←ಇಂ. Pocket]

**ಪಾಕು$_1$** 'ಪಾಗು$_1$' ನೋ.

**ಪಾಕು$_2$** 'ಪಾಕ$_2$' ನೋ.

**ಪಾಕು$_3$** 'ಪಾಯ್ಕು$_2$' ನೋ.

**ಪಾಕುಳ** (ನಾ). ಅಮೇಧ್ಯ ; ಮಲ : ಭವಪಾಶದ ಪಾಕುಳದಲ್ಲಿ ಬಿದ್ದು ನಿಶ್ಚಟಭಕ್ತನೆಂದಡೆ ಒಪ್ಪುವನೆ ಐಘಟನಪುರ ರಾಮೇಶ್ವರಲಿಂಗ (ಮಹಾದೇವಿಂ.೪. ೫೩-೨೨) : ಪಾಕುಳದೊಳಗಣ ಕ್ರಿಮಿಯಂತೆ ಪೊವತಾಳಿಗೊಂಬಂದು ನೀನಾವ ಕುಲ ಹೇಳಿರೇ (ಸರ್ವಶ. ೧೭೫-೮೨೯) ; ಸಲೆ ಕಾಯ್ದುರ್ಕಿನ ದಾರೆಯಂ ಬಿಡು ನವದ್ವಾರಂಗಳೊಳ್ . . . ಬಾಲಪ್ಪುಟಾವಂ ಕೀಚಾಗಿ

ತೀವಿರ್ದ ಸೀಂಬುಟ್ಟುವಂ ಬಾಯ್ಗೆಟ್ಟಿ ನೂಂಕು ಪಾಕುಳರ್ದೊಳ್ . . . ಎಂಬ ಕಾಲಯವನಂ ಕಂಡೆಂ (ರಕಚ. ೩-೦೭). [?]

**ಪಾಕುಳಿಗ** (ನಾ). = ಪಾಕಿಗ: ಪಾಕುಳಿಗಂ, ಪಾಕಿಗಂ, ಪಾಕಕರ್ತ (ಕಣ್ಣ. ೧೦೦ ವ್ಯಾಖ್ಯಾ). [ಪಾಕ₁ + —ಉಳಿಗ₂]

**ಪಾಕುಳಿಗಿತಿ** (ನಾ). ಅಡುಗೆಯವಳು; ರಂದಣಗಿತ್ತಿ: ದೇವುಳಿಗಿತಿ, ಪಾಕುಳಿಗಿತಿ, ಕಯ್ಯುತ್ತಿಗಿತಿ (ಕಣ್ಣ. ೧೯೨ ಕೃಹೋ). [ಪಾಕುಳಿಗ + —ಇತಿ₁ (< —ಇತ್ತಿ)]

**ಪಾಕೀಟು** 'ಪಾಕೀಟು' ನೋ.

**ಪಾಕ್ಯ** (ಗು). ೧. ಬೇಯಿಸಬೇಕಾದ. ೨. ಬೇಯಿಸಿ ಸಿದ್ಧಪಡಿಸಿದ. (ನಾ). ೩. ಒಂದು ಬಗೆಯ ಉಪ್ಪು; ಅಟ್ಟುಪ್ಪು: "ಪಾಕ್ಯಂ, ಬಿಡಂ—ಈ ೨ ಅಟ್ಟುಪ್ಪಿನ ಹೆಸರು" (ಚಿತ್ರಾ. ೨೮೬). [ಸಂ.]

**ಪಾಕ್ಷಿಕ** (ಗು). ೧. ಹದಿನೈದು ದಿನಗಳ ಗಡುವಿನ; ಹದಿನೈದು ದಿನಗಳಿಗೊಮ್ಮೆ ಬರುವ: ಇಬ್ಬರು ಸದಸ್ಯರು ಪಾಕ್ಷಿಕ ಸಭೆಯಲ್ಲಿ ... ಒಂದೊಂದು ಪ್ರಬಂಧವನ್ನು ಓದಬೇಕಾಗಿತ್ತು (ಪಾಠಾತ. ೦೭). ೨. ಒಂದು ಪಕ್ಷಕ್ಕೆ ಒಲಿದ; ಒಂದು ಪಂಗಡಕ್ಕೆ ಸೀಮಿತವಾದ. (ನಾ). ೩. ಹದಿನೈದುದಿನಗಳಿಗೆ ಸಂಬಂಧಪಟ್ಟುದು; ಒಂದು ಪಕ್ಷಕ್ಕೆ ಸೀಮಿತವಾದುದು: ಪಾಕ್ಷಿಕವೊ ಮಾಸಿಕವೊ ವಾರ್ಷಿಕವೊ ಏನೇನೊ ಬರುವ ಯೋಜನೆ ಸಕಾಲಕ್ಕೆ ಬರಲಿ (ಕೀಶಂ. ೯೭-೧೦). ೪. ಹದಿನೈದು ದಿನಗಳಿಗೊಮ್ಮೆ ಪ್ರಕಟವಾಗುವ ಪತ್ರಿಕೆ: ಮಾಸಿಕವಾಗಿದ್ದ ಪತ್ರಿಕೆ ಈಗ ಪಾಕ್ಷಿಕವಾಗಿ ಮಾರ್ಪಟ್ಟಿದೆ (ಲೂಅ). ೫. [ಜೈನ] ಹಿಂಸೆಯನ್ನು ತ್ಯಾಗಮಾಡಿ ಶ್ರಾವಕಧರ್ಮವನ್ನು ಆಚರಿಸುವವನು. ಕಷಾಯಂಗಳ ಕ್ಷಯೋಪಶಮ ಹೀನಾಧಿಕಭಾವದ ವಶದತ್ತಣಿಂದವು ದಾರ್ಶನಿಕ ಮೊದಲಾದ ಹನ್ನೊಂದುಸ್ಥಾನದ ವಶವನುಳ್ಳ ಪಾಕ್ಷಿಕನಾಪೇಕ್ಷೆಯಿಂದವು ಹಿರಿದು ಸಂಪನ್ನನಾಹಾತನು ನೈಷ್ಠಿಕನಹನು (ಜಾನಾರ. ೫೯-೦). [ಸಂ.]

**ಪಾಖಂಡ** (ನಾ). ೧. ವೇದಧರ್ಮವನ್ನು ಖಂಡಿಸುವ ನಾಸ್ತಿಕ ಮತದವನು; ಧರ್ಮಲಂಡ; ನಾಸ್ತಿಕ. ೨. ಧರ್ಮಲಂಡತನ; ಸ್ತ್ರಿಕತೆ: ಠಾವುಗುಣಸಮೂಹವು ಕುಪಂಥ, ಕುತರ್ಕ . . . ದಂಭ, ಪಾಖಂಡಗಳೆಂಬ ಉರುವಲಗಳನ್ನು ಸುಡುವ ಪ್ರಚಂಡಅಗ್ನಿಯಾಗಿರುವುದು (ಕುಚಾಟ. ೯). [ಸಂ.]

**ಪಾಖಂಡಮತ** (ನಾ). ನಾಸ್ತಿಕಮತ: ಕೋಪರ್ಣಿಕಸನ ಹಿಂದೆ ಅವನ ಮತಕ್ಕೆ ಪಾಖಂಡಮತವೆಂಬ ಹೆಸರು ಬಿತ್ತು (ಋಜುಜಾ. ೩-೨೨೦). [ಪಾಖಂಡ + ಮತ]

**ಪಾಖಂಡಿ** (ನಾ). = ಪಾಖಂಡ ೧: ಬ್ರಹ್ಮವಿಷ್ಣುಮಹೇಶ್ವರರನ್ನು ಭೇದಬುದ್ಧಿಯಿಂದ ನೋಡುವವನು ಪಾಖಂಡಿಯೆಂದು ಹೇಳಿದೆ (ಶಾಕಿಶ. ೦೯೨); ಅವನ ಮನಸ್ಸು ಮರುಳಾರ್ಯನಂಥ ಪಾಖಂಡಿಯ ದರ್ಶನದಿಂದ ಇನ್ನಷ್ಟು ಕ್ಷುಬ್ಧವಾಯಿತು (ಅಕ್ರಸು. ೯೬). [ಸಂ. ಪಾಖಂಡಿನ್]

**ಪಾಗ₁**, ಹಾಗ (ನಾ). ೧. ಕಾಲುಭಾಗ; ನಾಲ್ಕನೆಯ ಒಂದು ಅಂಶ: "ಪಾಗ — ಪಾದ = ಕಾಲಂಶ" (ಕಲ್ಯಕೋ. ೨೩). ೨. ಚಿಕ್ಕಬೆಲೆಯ ಒಂದು ನಾಣ್ಯ; ಹಣದ ಕಾಲುಭಾಗ: ೨೦ ಸೀರೆಯ ಸುಂಕ ಪೊಡಕೆಗೆ ಪಾಗ ೨ ಸೀರೆಗೆ ಪಾಗ ೧ (ಪಾಂರೀಶ. ೩-೨೨ ಶ; 1042); ಅಯ್ನೂರ್ವ್ವರುಮಿಟ್ಟು ಪಸುಂಬೆಯು ಸೇಸೆಯುಲು ಪಾಗಮುಮಂ ಅಂಗಡಿಯುಲು ಸೊಟಿಗೆ ಭತ್ತವ ಬಿಟ್ಟರ್ (ಸೌಇಇ. IX-1, ೦೬೯-೯೦; 1074); ಕೊಯ್ನಾಳಿಗಳೆಲ್ಲರುಮತ್ತಿಕಾಱರು ದೇವರ್ಗೆ ನನ್ದಾದೀವಿಗೆಗೆ ಬಿಟ್ಟ ಧರ್ಮ ಏಣಿಗೆ ಪಾಗ (ಸೌಇಇ. IX-1, ೦೯೦-೩೫; 1130); ಸುಸಿಲೇಂ ಪೇಟ್ಟ್ ಪಾಗದೊಳ್ ತೀರದೇ (ಶಾಬ್ದ್ಯಾಶ. ೬೬೩). ೩. ತೂಕದ ಒಂದು ಪ್ರಮಾಣ: "ಪಾಗಮುವು ನಾಲ್ಕಾಗೆ ಪಣಂ . . . ಬಳ್ಳಮುವು ನಾಲ್ಕನಲು ಕೊಳಗಮುವು ವಿಂಶತಿಗೆ ಖಂಡುಗಾಖ್ಯಂ" (ಋುಗಣ. ೦೦೯-೧೦). ಹಾಗ: ೧. ಹಣದ ತಲೆಯಕ್ಕಿ ನೆಲದೆಟೆಯ ಹಾಗ ಶವದುಡಿಗೆಯನಾಯ್ತು (ಶಶಕಾ. ೦೧-೩೮); ಇಲ್ಲಿ ಅಭಿವ್ಯಕ್ತಗೊಂಡಿರುವುದೇನಿದ್ದರೂ ಆ ವಿರಾಟ್ಪುರುಷನ 'ಹಾಗ' ಮಾತ್ರ (ಶ್ರೀಂದಕ. ೦೦೮). ೨. ಸೆಟ್ಟಿಯರೊಕ್ಕಲಿಗೆ ಹಾಗ ಎಂಟು (ಸೌಇಇ. ೦೯೯೬, ಹಾನಗಲ್. ೩೪೯-೯೩; 1030); ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕ್ಕೆ ಬಿಲಿವರಯ್ಯಾ (ಬಸವ. ೧೩೮); ಹಾಗದ[ಕಾಣಂ, ವಚ್ಚಿಯ] ಪಸುರ್ಮಾಣಿಯುಂ ಕುಡಲಿಲ್ಲದಂತು ಬಾಯ್ತುಂಬುಲಮೆಂಬುದಂ ಪಡೆಯದಂತುಟಿ (೦೧ರಾಪ. ೨-೧೦೭); ಹಾಗದ ಕೋಶಿ ಮುಪ್ಪಾಗನ ಬೆಲ್ಲ ತಿಂತು (ಗಾದೆ). ೪. ಭಾಗ; ಪಾಲು: ಕಾವನಗೌಡು ತನ್ನ ಹಾಗದ ಬಳದೊಳಗೆ ಬಿಟ್ಟ ಮತ್ತರೆರಡು ಕಮ್ಮ (ಕಇ. I, ೨೯-೨೦; 1148); ಬಾಚಗಾವುಂಡನ ಹಾಗದಿಂ ಪಡುವಲು ಮತ್ತಂ (ಕಇ. I, ೨೫-೭೭; 1136); ಬೊಮ್ಮಗವುಡಂಗೆ ಹಾಗದ ಕೆಯ್ಯನು ಗಪುಡು ಗೊಡಗೆಯಾಗಿ . . . ಕೊಟ್ಟ (ಎಕ. VI, ಚಕ್ಕಸು. ೮೨-೪; ೯).

ಹಾಗದ ಕಾಸು = ಚಿಕ್ಕಬೆಲೆಯ ನಾಣ್ಯ: ಹಣ ತಿಂದು ಹುಟ್ಟಿದವನಿಗೂ ಹಾಗದ ಕಾಸು ತಿಂದು ಹುಟ್ಟಿದವಳಿಗೂ ಸಮವೆ? (ಚಂಗಾಳ್ಯ. ೯); ಮೇಲೆ ಬಿದ್ದು ಬರುವ ಸೂಳೆ ಹಾಗದ ಕಾಸಿಗೂ ಬೇಡ (ಗಾದೆ). [< ಸಂ. ಪಾದ]

**ಪಾಗ₂** 'ಪಾಗಾ' ನೋ.

**ಪಾಗಡ** 'ಪಾಡಗ₂' ನೋ.

**ಪಾಗಡಿ** 'ಪಗಡಿ₂' ನೋ.

**ಪಾಗಡೆ** 'ಪಾಡಗ₂' ನೋ.

**ಪಾಗದ** (ನಾ). ೧. ಪ್ರಾಕೃತಭಾಷೆ: ಸಕ್ಕದಮುಂ ಪಾಗದಮುಂ ಮದಕ್ಕಂ ಬಗೆದಂತೆ ಸಮಱ್ ಪೇಟಲ್ (ಕಶಿಂ. ೦-೯೦); ಸಕ್ಕದದೊಳ್ ಮುನ್ನಂ ಪಾಗದದೊಳಾದ [ಸು]ಕೃತಿಗಳೆಲ್ಲಂ ಕನ್ನಡ ಮಾಡಿಗವಿದಂತೆ ಜಗನ್ನುತವಿಪ್ಪಾ ಕೃತಿಯು ತಾನಲಂಕೃತಿಯೆನಿಪಾ (ವರ್ಧಮಾ. ೦೬-೪೯); ಪ್ರಾಕೃತ-ಪಾಗದ (ಕಚುಶ. ೨೬೬ ಕೃಹೋ). ೨. ಜನಸಾಮಾನ್ಯರ ಭಾಷೆ; ದೇಶಭಾಷೆ: "ಪಾಗದಂ ನರಭಾಷಿತಂ" (ಕಣಾರಿ. ೬೨); ಸಕ್ಕದದೊಳರ್ಥದಂ ನಲವಿಂ ಪಾಗದದಿಂ ರಚಿಯಿಸಿ ಕೇಳ್ವೊಳ್ಳಿದೆ ಸೆ (ಕಬ್ಬಸು. ೦-೩೯). [< ಪ್ರಾ. ಪಾಗಯ. / ಸಂ. ಪ್ರಾಕೃತ]

**ಪಾಗರ₁** 'ಪ್ರಾಗಾರ' ನೋ.

**ಪಾಗರ₂** 'ಪಕ್ಕರೆ₁' ನೋ.

**ಪಾಗರಗೋಡೆ** (ನಾ.) ಸುತ್ತುಗೋಡೆ; ಪ್ರಾಕಾರದ ಗೋಡೆ; ಪೌಳಿ: ಮಟಕೆ ಹಾಕಿದ ಪಾಗರಗೋಡೆ ಗಡಿ (ಎಕ. VIII, ತೀರ್ಥಹ. ೫೨-೦೭; 1641). [ಪಾಗರ₁ (< ಪ್ರಾಗಾರ) + ಗೋಡೆ]

**ಪಾಗಲ್₁**, ಹಾಗಲ್, ಹಾಗಲ, ಹಾಗಲು (ನಾ). ಒಂದು ಬಗೆಯ ಬಳ್ಳಿ ಹಾಗೂ ತರಕಾರಿಯಾಗಿ ಬಳಸುವ ಅದರ ಕಾಯಿ: ಸಲೆ ಪಂದಿಯ ನೆಣನುಮನಂಕೊಲೆಯ ಕಷಾಯಮುಮನೆಱೆಗೆ ಮೂಲದೊಳಾತುಂಡಲಗೆಗಿದಚ್ಚರಿಯೆನೆ ಪಾಗಲ ಕಾಯಕ್ಕಂ (ಸೂಶಾಂಕ. ೬-೩೯); ಸಾಗರವೊಂದು ಕಂಕಣದಿನುರ್ವರೆ ಕಾವಲಿಯಿಂ ಕುಲಾದ್ರಿಗಳ್ ಪಾಗಲ ಕಾಯ್ಗಳಿಂ . . . ಕರಂ ಕಿಱಿಯವಾದುವು ಕಣ್ಗೆ ಗುಣಾವಲೋಕನಾ (ಅರ್ಜುನ. ೬-೪); ಪೊತ್ತದೆ ಪೊಗಸುತ್ತದೆ ನಸುಬತ್ತದೆ ಕೆಂಪಡರ್ದ ಬಂದ ಪಾಗಲ ಕಾಯಂ ಪತ್ತೆಂಟು ತುತ್ತಿದಲ್ಲದೆ ಚಿತ್ತಂ ತಣಿಗುಮೆ (ಸೂಸು. ೧೧-೯೩). **ಹಾಗಲ್**: "ಹಾಗಲ್—ಕಾರವೇಲ್ಲ.

ಕಟಿಲ್ಲಕ, ಸುಷವಿ " (ಪಾಶಾ.೬.). **ಹಾಗಲ** : ಹಾಗಲ ಪಡಲಂ ಕುಳಂ ಕೂಗಲಿ ಕೊಪ್ಮಾಂಡವವರೆ ಬದನೆಗಳಿಂ ಲೇಸಾಗಿರೆ ಮಾಡಿದ ಸುಮೇಲೋಗರವಂ ತಂದು ಬಡಿಸಿದರ್ ಮಾನಿನಿಯರ್ (ರರ್ಮಚ. ೨-೫೫) : ಕತ್ತರಿಗುಳ್ಳ ಹಡಲ ಹಾಗಲ ಕೂಗರಿ ಬದನೆ ಮೊದಲಾದ ಕಾಯ್ಗಳ ರಸಂಗಳಂ ತೆಗೆದು (ಸೂಶಶಾ. ೫-೪೦) ; ಹಾಗಲ ಬದನೆ ಹೆಗ್ಗುಳ್ಳ . . . ಹಲವು ಫಲಕಂದಗಳ ಶಾಖಾವಳಿಯ ಸವಿಯೊಪ್ಪುರಣೆ ಘಮಘಮಿಸಲಿಕೆ ಬಡಿಸಿದರು (ಅನಂಶಾ. ೬-೨೫-೩೯) ; ಹಾಗಲ ಕಾಯನ್ನು ಹೇಗೆ ಅಟ್ಟರೂ ಕಹಿ (ಹಳ್ಳಿಶಾ. ೬೬). **ಹಾಗಲು** : "ಹಾಗಲು ಪೀತಪುಷ್ಪ ಕರ್ಕೋಟಕಿಯೆನಿಸಿಕ್ಕು" (ಮಂಗರಾ. ೪೪-೪೪) ; ಹರಳುಗಳಂ ಹಂದಿಗಳ ರಕ್ತವವೆಗಳಲ್ಲಿಯೂ ಅಂಕೋಲೆ ತೈಲದಲ್ಲಿಯೂ ನೆನಸಿ ಬಿತ್ತಲು ಅದರಲ್ಲಿ ಹಾಗಲುಕಾಯಿ ಹುಟ್ಟುವುದು (ಶ್ರೀಗುಂ. ೪೩೬-೦೪).

**ಹಾಗಲ ಕಾಯಿಗೆ ಬೇವಿನ ಕಾಯಿ ಸಾಕ್ಷಿ** = (ಅಲಂ) ದುಷ್ಟನಿಗೆ ಅದೇ ಮನೋಭಾವದ ಇನ್ನೊಬ್ಬನು ಕೊಡುವ ಸಾಕ್ಷಿ : ಹಾಗಲ ಕಾಯಿಗೆ ಬೇವಿನ ಕಾಯಿ ಸಾಕ್ಷಿ (ಗಾದೆ).

[ ದೇ.॥ ತಮಿ. ಪಾಕಲ್, ಪಾವಲ್ ; ಮಲ. ಪಾವಲ್ ]

**ಹಾಗಲ್₂** 'ಪಾಗಾರ' ನೋ.

**ಹಾಗಲ** 'ಪಾಗಾರ' ನೋ.

**ಹಾಗಲು** 'ಪಾಗಾರ' ನೋ.

**ಪಾಗಾ**, ಪಾಗ್ಗೆ (ನಾ). ಆನೆ ಮತ್ತು ಕುದುರೆಗಳ ಲಾಯ : ಪೂರ್ವಕಾಲದಲ್ಲಿ ಆನೆಗಳ ಪಾಗಾ ಈ ಬಾಜಾರಿನಲ್ಲಿ ಇತ್ತು (ಕಥಾಗ. ೫೨೪) ; ಮೋಜಿನ ಕುದುರಿ . . . ಪಾಂಡವರ ಮನಿಯೊಳಗ ಪಾಗಾದಾಗಿತ್ತು ಪಾಗಾದ ಗೂಟವ ಜ್ಯಾಡಿಸಿ ಕಿತ್ತು ಹೋಗುವಾಗ ಶಿಶುನಾಳಕೋಡ್ಯೋಡಿ ಬಂತು (ಕಂಠ. ೪೬). **ಪಾಗ್ಗೆ** : ಕುಮರಿಗೆ ಪಾಗದ ಮನೆಯುರಲಿ ಕೀಲ ಪಲ್ಲಕ್ಕಿ ಅಬಕಾಗಿರಿ ಚಿತ್ತರಿಗಿಮನಿಯುರಲಿ (ಕಸ್ಮಶಾ. ೩೨೮).

[ ← ಮರಾ. ಪಾಗಾ ]

**ಪಾಗಾಣತಿ** (ನಾ). ದಾಸಿ (?) : ಮಾರುವುದು ನಿನ್ನ ತೊತ್ತಿನ ಮಕ್ಕಳಿಗೆ ಮಾರುವುದು ನಿನ್ನ ಪಾಗಾಣತಿಯರಿಗೆ ಮಾರುವುದು ನಿನ್ನ ಬೋನಕಾರ್ತಿಯರಿಗೆ . . . ಮಾರದಿರು ಎನ್ನ ಮಾರಿಗೆ ಗುರಿಮಾಡಿ (ಶೋಚ್ಛರಂ. ೭೦-೬). [ ? ]

**ಪಾಗಾರ**, ಪಾಕಲ್, ಪಾಕಲ್₁, ಪಾಕಲು, ಪಾಗರ₁, ಪಾಗಲ್₂, ಪಾಗಲ, ಪಾಗಲು (ನಾ). ಸುತ್ತುಗೋಡೆ ; ಪ್ರಾಕಾರ ; ಪೌಳಿ : ಝಗೆಯ ಲಹರಿಯ ಜಾಳಿಗೆಯ ಪಟ್ಟಿಗಳ ಪಾಗಾರದ ಸುರಕ್ಷಾಳಿಗಳ ಲೆಸೆದುದು ರಾಜಸಭೆ (ಕುಮ್ಮಾಸ. ೦೩-೨೫) ; ಕಟೆಯ ಪಾಗಾರವು (ಕೋಳಶಾ. ೦೪೪೦. ಕುಮುಟ. ೧೦೩-೪; 1475) ; ಮರಳಿನ ಪಾಗಾರವಳಿವುದು ಖಚಿತವು (ಗಾಥಾಸ. ೩-೪೫) ; ಮನೆಯ ಸುತ್ತಲೂ ಎತ್ತರವಾದ ಪಾಗಾರವನ್ನು ಮಾಡಿಸಿದನು (ಮುಕಸ. ೪೨). **ಪಾಕಲ್** : ಪಳುಕಿನ ಪಾಕಲಂ ಬಳಸಿ ರಂಜಿಸುತಿರ್ಪ ಮಹೇಶಗೇಹದೊಳ್ (ಶೀರಶಿ. ೨-೪೦) ; ಪ್ರಾಕಾರ_ಪಾಗರ, ಪಾಕಲ್ (ಕಣ್ಣಾಕು. ೬೦ ಪ್ರಯೋ). **ಪಾಕಲ₁** : "ಪಾಕಲೆನಲು ಪಾಕಲ ಮೆನಲು ಕಂಗೊಳಿಕು ಪ್ರಾಕಾರದೊಳ್" (ಕಶಶ. ೬೫). **ಪಾಕಲು** : "ಪಾಕಲುಂಯೆಂಬ ಶಬ್ದಂ = ಪ್ರಾಕಾರದಲ್ಲಿಯುಂ, ಕಾಂಗಿನಲ್ಲಿಯುಂ" (ಕಮರ. ಸು. ೩೦೨ ವೃ). **ಪಾಗರ₁** : "ಕೋಟಾ = ಪಾಗರಂ" (ಶಾಕಶ್ಶ. ೨೫೫) ; ಕಳಸಾಸುಗೆಯ ಪಟ್ಟಿ ಪಳಿಸಿವ ಪಾಗರಂ ಹೊಳೆವ ವಜ್ರಸ್ತಂಭ (ಮುಸೋಶ. ೦-೨೩) ; ಬೇಲಿಯುಕ್ಕಿದ ಕಲ್ಲುಬಸ್ತಿಯ ಪಾಗರದಡಿ ತಂಕಲು ಹರಿದ ಅರಳೆಗಡ (ಕ್ಶ. I. ೪೦-೫೦; 1417) ; ಪಾಗರ[ಪಾಠಾಂ. ಬಾಗಿಲ] ಪೊಂದೆರದನು ದಾಟಿ ಮುಂದೊಂದು ಬಾಗಿಲೊಳ್ಮಿಂದನಾ ರಾಯ (ಕಶಶ. ೨೨-೬೬); ಧವಿದ್ಯಪ್ಪಿ ಪೂದೋಂಟಕಂ ಬೀಳದಂದದಿಂ ತವೆ ಪಾಗರವ ಕಟ್ಟಿಸುವುದಣೆಯರದೊಳು (ಹಾಸೋಪ. ೨-೬೬). **ಪಾಗಲ್₂** : ಸೌಧಶಿಖರಪ್ರಾಗ್ಭಾಗವಂ ಪತ್ತಿ ಪಾಗಲ[ನಾ]ಶ್ರೈಸಿ . . . ಅಟ್ಟಳವಮಂ ಮೆಟ್ಟಿ ನೋಟ್ಟಿ ಲತಾತನ್ವಿಯರಂಬರೇಚರಿಯರೆಂಬಾಶಂಕೆಯಂ ಮಾಡಿದರ್ (ಪ್ರತ್ಯ್ರಕು. ೮-೪೬) ; ಪ್ರಾಕಾರ _ ಪಾಗಲ್ (ಶಮರ. ೨೪೦ ಪ್ರಯೋ) ; ದೇಗುಲಮಂ ಗೋಪುರವಂ ಪಾಗಲ್ಗಳನಡಿಗೆಸೆಜ್ಜೆವಜ್ಜಣಮನೆ ಮುಂತಾಗಿ . . . ಒಡರಿಸಿದಂ (ಶಳಶಿ. ೨-೦೧೦). **ಪಾಗಲ** : ಪಾಗಲಂ = ಪ್ರಾಕಾರಂ (ಶಮರ. ೫೦-೨). **ಪಾಗಲು** : ಪ್ರಾಕಾರ _ ಪಾಗರ, ಪಾಗಲು (ಹೊಸಗ. ೧೦೮). [ < ಪಾಲಿ. ಪಾಗಾರ. / ಪ್ರಾ. ಪಾಕಾರ, ಪಾಗಾರ. / ಸಂ. ಪ್ರಾಕಾರ ]

**ಪಾಗಿವಾಳ** (ನಾ). ಕಾಲವನ್ನು ಅಳೆಯುವ ಒಂದು ಪ್ರಮಾಣ : ಅರುವತ್ತುಅಕ್ಷರ ಕೂಡಲು ಒಂದು ಪಾಗಿವಾಳ, ೬೦ ಪಾಗಿವಾಳ ಕೂಡಲು ೧ ಘಳಿಗೆ (ಚುರ್ತ್ಯಶಾ. ೮೫). [ ? ]

**ಪಾಗು₁**, ಪಾಂಗು₂, ಪಾಕು₁ (ನಾ). ೧. ತಲೆಗೆ ಸುತ್ತುವ ಉತ್ತಮ ವಸ್ತ್ರ ; ರುಮಾಲು; ಪೇಟ : ಧರೆಯ ಪಾಗನೆ ಮಾಡಿ ಸಿರಕೆ ಸುತ್ತಿದನೊಬ್ಬ (ಕೇಶಾಂಕು. ೩-೦೬೧) ; ಪತ್ತಿದ ಪನ್ನ ಸುತ್ತಿದ ನಿರಾಜಿಯ ಪಾಗುರೂಪೆತ್ತು ನಿಂದಿಹನಾರು (ಶ್ರೀಂರಶಾ. ೯-೬೬) ; ಚಂದ್ರಗಾವಿಯ ಅಂಗಿ ತೊಟ್ಟು ಇಂದ್ರನೀಲದ ಪಾಗು ಸುತ್ತಿ (ಗೋಕಾಕು. ೨೯); ಈ ಸೈನಿಕರಾದರೋ ಪೀತವಸ್ತ್ರಧಾರಿಗಳು, ಕೆಂಪುಪಾಗು ಸುತ್ತಿದ್ದರು(ಕುಚಿಖಾ.೮೨). ೨. ಒಂದು ಶ್ರೇಷ್ಠ ಬಗೆಯ ಸೀರೆ : ಚಿತ್ರ ಚಿತ್ರಾವಳಿ ಪಾಗು ಪಸುರ[ ಪಾಠಾಂ. ಪಾಂಗುಪಶು ]ಪಟ್ಟೆ ಸೂತ್ರವಳಿಯ ಚಿನ್ನಧಾರೆ (ಅಮುಶಾಂ. ೯-೮). **ಪಾಂಗು₂** : ೧. ಪಿಡಿದೆತ್ತಿ ತನ್ನ ಪಾಂಗಿಂ ಬಿಡದಡಿಯಂ ಕಟ್ಟಿ ತೂಗಿ ವಿತ್ತಮನಿಕ್ಕೆಂದಡಿಗಡಿಗೆ ಜಡಿಯುತುಂ ಬಿಡುನುಡಿಯಂ ನುಡಿಯುತ್ತು ವಿರ್ದನಾ ಶಿವಭಕ್ತಂ (ಹಾಕ್ಕಟ. ೦೨-೪೪) ; ಪೆಗಲ್ವರವಿಟಾದಾ ತುಜುಂಬರೆವ ಟೊಪ್ಪಿಗೆ ಕಟ್ಟಿದ ಪಾಂಗು ಪೂಸಿಸೂಗಿರಿಸಿದ ಗಡ್ಡವಿಪಾಸೆ ಕರದೊಳ್ ಸಲೆ ಚಿತ್ರಿತ ವೇತ್ರದಂಡಮೊಪ್ಪಿರೆ ಸಹಮಾಸಿಗಳ್ ತಳರ್ದರ್ (ಕಾಂತೀಕ್ಕ. ೦೫-೮೯). **ಪಾಕು₁** : ೧. ಪಾರು ಅವನಿಗೆ ವೀಳ್ಯದೆಲೆ - ಹೊಗೆಸೊಪ್ಪುಗಳನ್ನಿತ್ತಳು. ಅವುಗಳನ್ನು ಅವನು ತನ್ನ ಪಾಕಿನೊಳಗೆ ಸೇರಿಸಿದ (ರೂಕುಶು. ೨೬).

**ಪಾಗುಸುತ್ತು** = ರುಮಾಲನ್ನು ಸುತ್ತು,-ಕಟ್ಟು: ತಲೆಗೆ ಒಂದು ಥಾನು ಬಟ್ಟೆಯನ್ನು ಪಾಗು ಸುತ್ತಿ, ಕಾಲಿನಲ್ಲಿ ಪಾಪಾಸು ಮೆಟ್ಟಿ . . . ತೊರಡುತ್ತಿದ್ದರು (ಕಕಕ. ೮೦೬).

[ದೇ. ॥ ತಮಿ. ಪಾಕು ; ತೆಲು. ಪಾಗ, ಪಾಗಾ. / ಹಿಂ.ಪಾಗು, ಪಾಗ ]

**ಪಾಗು₂** (ನಾ). ಒಂದು ಬಗೆಯ ಚರ್ಮವಾದ್ಯ : ಮಣ್ಣಿನ ಮಕ್ಕಳು ಹಾಲಕ್ಕಿಒಕ್ಕಲು, ಭೂದಾಯಿ ನಕ್ಕಳು ಅವರಾಟಕೆ ಹರಿದಿನ ಹಗರಣ ಗುಮಟೆಯ ಪಾಗಿನ ಒಡೆ - ಕೊಟ್ಟೆ - ಪಾಯಸ ರಸದೂಟಕೆ ! (ಶ್ರೀಂಕರ್ಕ. ೩-೬). 'ಗಂಮಟೆಪಾಗಂ' ಪರಾ.

[ ದೇ. ॥ ತುಳು. ಪಾಂಕ್ ]

**ಪಾಗುಡ₁** 'ಪಾವುಡ₁' ನೋ.

**ಪಾಗುಡ₂** 'ಪಾವುಡ₂' ನೋ.

**ಪಾಗುಡಂಗಟ್ಟು** (ಕ್ರಿ). ಉಡುಗೊರೆಯನ್ನು ಗಂಟು ಕಟ್ಟು : ಪ್ರಜಾಪತಿಮಹಾರಾಜಂ ಪಾಗುಡಂಗಟ್ಟಿ ಸಂಪೂರ್ಣೇಂದುಮುಖಿಯನಿಂದು ನಾಳನ್ನದೆ ಬಂದ ಪೊಟ್ಟಿ ಪೊಟ್ಟಾಗೆ ರಥನೂಪುರಚಕ್ರವಾಳಕ್ಕೆ ಬೇಗಮಟ್ಟುವುದುಂ (ಶಾಂತಿಪು. ೫-೩೬ ವ). [ ಪಾಗುಡ₂ (< ಪಾವುಡ₂) + ಕಟ್ಟು₁ ]

**ಪಾಗುಡಂಗೊಡು**, ಪಾಗುಡಗೊಡು (ಕ್ರಿ). ಉಡುಗೊರೆಯನ್ನು ಕೊಡು : ಸೇಸೆಯುಕ್ಕುಮ ಪಾಗುಡಂಗೊಡುವಿ ಸಮಯದೊಳತ್ತ ನಾಕವಾಸದೊಳು ಸುರರೆಣ್ಣಗದೆಣ್ಣಗಿದವರ ಮಕುಟಗಳು (ಹಾಳ್ಶಾ. ೩-೦೮).

**ಪಾಗುಡಗೊಡು :** ಎಱಗೆ ಮಂತ್ರಿಗಳೊಂದಿ ಕಾಣಿಕೆಯಿಕ್ಕಿ ಪಾಗುಡಗೊಟ್ಟು (ಜಾಳ್ವಚಾ. ೩೦-೬). [ ಪಾಗುಡ$_2$ (<ಪಾವುಡ$_2$) + ಕೊಡು$_1$ ]

**ಪಾಗುಡಂತರ್** (ಕ್ರಿ). ಉಡುಗೊರೆಯನ್ನು ತರು : ಸ್ತ್ರೀರತ್ನಮಂ ದೇವರ್ಗೆ ಪಾಗುಡಂತಂದೆನೆಂದೊಪ್ಪಿಸುವುದುಂ (ಧರ್ಮಾಮೃ. ೩-೧೩೭).
[ ಪಾಗುಡ$_2$ ( <ಪಾವುಡ$_2$) + ತರ್ ]

**ಪಾಗುಡಗೊಡು** 'ಪಾಗುಡಂಗೊಡು' ನೋ.

**ಪಾಗುಪಟ್ಟೆ** (ನಾ). ಉತ್ತಮವಾದ ರೇಷ್ಮೆಬಟ್ಟೆ : ತೂಗುತೊಟ್ಟಿಲಿಗೊಂದು ಪಾಗುಪಟ್ಟೆಯು ಹಾಸಿ ಮಾಗಾಯಿ ಮಗನ ಮಲಗೀಸಿ ಅವರಪ್ಪಜೋಗುಳ ಹಾಡಿ ಹಿಗ್ಗ್ಯಾಳ (ಜಳ್ವಹು. ೭೭). [ ಪಾಗು$_1$ + ಪಟ್ಟೆ$_3$ ]

**ಪಾಗೋಟ,** ಪಾಗೋಟೆ (ನಾ). ಒಂದು ಬಗೆಯ ರುಮಾಲು ; ಪಗಡಿ : ಮುಂಡಾಸ, ತುರುಬಿನ ರುಮಾಲು, ಪಟಕಾ, ಪಾಗೋಟ ಎಂದು ರುಮಾಲಿನ ವಿಭಾಗಗಳು (ಗೋಹೂಕೃ. ೩೪). **ಪಾಗೋಟೆ :** ಪಾಗೋಟೆಯನ್ನು ಧರಿಸಿದ ಅವರ ತಂದೆಯೂ ಮುಖರೆಯನ್ನು ಧರಿಸಿದ ಅವರ ತಾಯಿಯೂ ಬಂದವರನ್ನೆಲ್ಲ ಸ್ವಾಗತಿಸುವದರಲ್ಲಿ ತೊಡಗಿದ್ದರು (ಕಮುಕ. ೬೩೩); ತಲೆಯ ಮೇಲೆ ಒಂದು ಗೋಲಾಕಾರದ ಪಾಗೋಟೆ ಮತ್ತು ವಾರ್ನಿಶ್ ಮಾಡಿದ ಹೊಸದೊಂದು ಜೋಡುಪಾದರಕ್ಷೆ ಧರಿಸಿ... ಹೊರಬಿದ್ದನು (ಇತ್ಯಳ. ೫೯). [←ಮರಾ. ಪಾಗೋಟೇ, ಪಾಗೋಟೇ ]

**ಪಾಗೋಟೆ** 'ಪಾಗೋಟ' ನೋ.

**ಪಾಚಕ** (ಗು). ೧. ಜೀರ್ಣಶಕ್ತಿಯನ್ನುಂಟುಮಾಡುವ : 'ಪಾಚಕರಸ' ಪರಾ. (ನಾ). ೨. ಬೇಯಿಸುವಿಕೆ ; ಅಡುಗೆಮಾಡುವಿಕೆ. ೩. ಅಡುಗೆ ಮಾಡುವವನು; ಬಾಣಸಿಗ : ಒಂದು ಕಬ್ಬಿನ ರಸವೆ ಪಾಚಕನಿಂದ ಗುಡ ಶರ್ಕರೆಗಳ ಬಹುಭೇದವಾದಂತೆ (ಗಗಹಾ. ೦೪ ೭); ಪಾಚಕನು ಬಂದು . . . ಇಂದು ಯಾವ ಬಗೆಯ ಖಾನಾ ಸಿದ್ಧಗೊಳಿಸಬೇಕು ಎಂದು ವಿಚಾರಿಸಿದನು (ಇತ್ಯಳ. ೦೩೪) ; ಅವನು . . . ವಿಚಾರಣೆ ಮಾಡಿಸಿ, ಆ ಪಾಚಕನಿಗೂ ಮಗನಾದ ನಾಗಪ್ಪನಿಗೂ ಮರಣ ದಂಡನೆಯನ್ನು ವಿಧಿಸಿದನು (ಜಾಳಗಾ. ೬೯). [ ಸಂ. ]

**ಪಾಚಕತ್ವ** (ನಾ). ಅಡುಗೆಯ ವಿದ್ಯೆ : ಪಾಚಕತ್ವವು ಪುರುಷನನ್ನು ಬಿಟ್ಟು ಸ್ತ್ರೀಯಲ್ಲಿರುವುದು (ಧಾಕತ್ತ್ವ. ೬೪೦). [ ಸಂ. ]

**ಪಾಚಕರಸ** (ನಾ). ಉಂಡ ಆಹಾರವು ಪಚನವಾಗಲು ಜಠರವು ಸ್ರವಿಸುವ ರಸ; ಪಿತ್ತಕೋಶದ ರಸ : ಒಂದೇ ಪ್ರಕಾರದ ಆಹಾರವನ್ನು ಯಾವಾಗಲೂ ಪಚನಮಾಡುವ ಪಾಚಕರಸದೊಳಗೆ ಅನ್ಯಜಾತಿಯ ಆಹಾರವನ್ನು ಪಚನ ಮಾಡುವ ಸಾಮರ್ಥ್ಯ ಉಳಿಯುವದಿಲ್ಲ (ಕುಂಬಾಯು. ೫-೦೬೪); ಆಮಾಶಯಲ್ಲಿರುವ ರಸದಿಂದ ಅನ್ನವು ಪಚನವಾಗುವ ಕಾರಣ ಅದಕ್ಕೆ ಪಾಚಕರಸವೆಂದು ಹೆಸರು (ಕುಂಬಾಯು. ೬-೩೦೬). [ಪಾಚಕ + ರಸ]

**ಪಾಚಕಶಕ್ತಿ** (ನಾ). ಉಂಡ ಆಹಾರವನ್ನು ಜೀರ್ಣಿಸುವ ಸಾಮರ್ಥ್ಯ : ಸಿಕ್ಕ ಹಾಗೆ ತಿನ್ನಬಾರದು. ತಿಂದರೆ ನಿಶ್ಚಯವಾಗಿ ಜೀರ್ಣಕೋಶದ ಪಾಚಕಶಕ್ತಿಯು ಕಡಿಮೆಯಾಗುವದು (ಕುಂಬಾಯು. ೪-೨೩).
[ ಪಾಚಕ + ಶಕ್ತಿ ]

**ಪಾಚನ** (ನಾ). ೧. ಅಡುಗೆ ಮಾಡುವಿಕೆ; ಬೇಯಿಸುವಿಕೆ. ೨. ಪಕ್ವಗೊಳಿಸುವಿಕೆ. ೩. ಜೀರ್ಣಗೊಳಿಸುವಿಕೆ ; ಪಚನಕ್ರಿಯೆ : ಲಂಘನವು ದೀಪನ ಪಾಚನಂಗಳನ್ನುಂಟುಮಾಡುವುದು (ಶಳತ್ಯ. ೦೦೧). [ಸಂ.]

**ಪಾಚವಾರಿ** (ನಾ). ಐದು ಗಜದ ಸೀರೆ : ವಸೂ ಪರಕರದ ಪೋರಿಯಾಗಿ ಉಳಿಯದೆ ಪಾಚವಾರಿಯಲ್ಲಿಯ ಸಣ್ಣ ಹೆಣ್ಣಾಗಿ ಬಂದಿದ್ದಳು (ಬಿಕಕ. I. ೦೦೭).
[ ←ಮರಾ. ಪಾಂಚ್‌ವಾರ್ = ಐದು ಗಜ ]

**ಪಾಚಿ$_1$** 'ಪಾವಸೆ' ನೋ.

**ಪಾಚಿ$_2$** (ನಾ). (ಮಕ್ಕಳ ಭಾಷೆಯಲ್ಲಿ) ಹಾಲು : (೬).
[ದೇ. ॥ ತಮಿ. ಮಲ. ಪಾಚ್ಚಿ]

**ಪಾಚಿ$_3$** (ನಾ). ಮೂಡಣದಿಕ್ಕು; ಪೂರ್ವದಿಕ್ಕು : "ಪಾಚಿ_ಪ್ರಾಚಿ= ಮೂಡುದಿಕ್ಕು" (ಕಶ್ಯಕೋ. ೨೩). [<ಸಂ. ಪ್ರಾಚೀ]

**ಪಾಚಿ$_4$** 'ಪಾಜಿ$_2$' ನೋ.

**ಪಾಚಿಕೆ** 'ಪಾಸಂಗೆ' ನೋ.

**ಪಾಚಿಬಳ್ಳಿ** (ನಾ). ಒಂದು ಬಗೆಯ ಔಷಧಿ ಸಸ್ಯ : ಬೇಲದ ತಿರುಳು (ಹಣ್ಣು), ಪಾಚಿಬಳ್ಳಿ (ಕರ್ನಾಟಕಿ), ಮಗ್ಗಾರೆಕಾಯಿ, ಮಗ್ಗಾರೆಬೇರು_ ಇವನ್ನು ಬಗೆಯೊಂದಕ್ಕೆ ಒಂದು ಸೇರಿನಂತೆ ಹಾಕಿ ಚೂರ್ಣಿಸಿ (ಶಳತ್ಯ. ಶಂ. ೪೩೬). [ ಪಾಚಿ$_1$ (<ಪಾವಸೆ) + ಬಳ್ಳಿ ]

**ಪಾಚಿಸು$_1$** (ಕ್ರಿ). ಸುಡು; ಒಯ್ಯಿಸು : ಪುಸಿದೊಡುಂತಕನವರ್ ಪಾಚಿಸರೆ ನರಕದೊಳ್ ವೈಯನು (ತ್ರಿಬಾಶಾ. ೫೭-೪೯). [ಪಾಚನ + _ಇಸು$_3$]

**ಪಾಚಿಸು$_2$** (ಕ್ರಿ). (ಮಕ್ಕಳ ಭಾಷೆಯಲ್ಲಿ) ಮಲಗಿಸು; ನಿದ್ರೆಮಾಡಿಸು : ಆಟವಾಡಿದ್ದು ಸಾಕು, ಪಾಚಿಸುತ್ತೇನೆ ಬಾ (ಕೂ೬).
[ ಪಾಚು+_ಇಸು$_3$ ]

**ಪಾಚಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ಕಾಡುಬೆಳಸಜ್ಜುಬು ಹುಲ್ಲು, ಪಾಚಿಹುಲ್ಲು (ಕೃಷಿಗ. ೪೯-೬೭).
[ ಪಾಚಿ$_1$ (<ಪಾವಸೆ) + ಹುಲ್ಲು (<ಪುಲ್) ]

**ಪಾಚು** (ಕ್ರಿ). (ಮಕ್ಕಳ ಭಾಷೆಯಲ್ಲಿ) ಮಲಗು; ನಿದ್ರಿಸು : ಬೂಚಿ ಬಂದಿದೆ ರಂಗ ಬೂಚಿ ಬಂದಿದೆ ಚಾಚಿ ಕುಡಿದು ಸುಮ್ಮನೆ ನೀ ಪಾಚಿಕೊಳ್ಳೊ ಕೃಷ್ಣಯ್ಯ (ಪುರಂದ. ೪-೧೦೧ ಅನುಕ್ರಮ). [ ? ]

**ಪಾಚೆ** 'ಪಾವಸೆ' ನೋ.

**ಪಾಚ್ಛಾ** 'ಪಾತಶಹ' ನೋ.

**ಪಾಚ್ಛಾಯಿ** 'ಪಾತಶಹ' ನೋ.

**ಪಾಛಾ** 'ಪಾತಶಹ' ನೋ.

**ಪಾಜಿ$_1$** (ಗು). ೧. ಕೀಳಾತರದ; ನೀಚ : (೬). (ನಾ). ೨. ಕ್ಷುಲ್ಲಕ ವ್ಯಕ್ತಿ ; ಅಲ್ಪ ; ಕೀಳುಮನುಷ್ಯ : ಇಂದು ಕಾಜಿಯಾದವ ನಾಳೆ ಪಾಜಿಯಾಗುತ್ತಾನೆ ! (ಶಿಜ್ಞಾಮ. ೧೪೩).
[←ಪಾರ. ಹಿಂ. ಮರಾ. ಪಾಜೀ]

**ಪಾಜಿ$_2$,** ಪಾಚಿ$_4$ (ನಾ). ಒಂದು ಬಗೆಯ ಬಲೆ : ಕೊರಲ್ಗೆ ನಿಡಿಸಲಿ ಪಾಜಿ ಬೆಳ್ಳಾರ ಬಡಿವಲೆ ಬಲುವಲೆಗಾಱರು ತೂಗಿ ಬೊಬ್ಬಿಡುತಲ್ಯೆದಿದರು ಮುಂಗಡೆಯ (ಕೋತಕ. ೧೯-೧೭). **ಪಾಚಿ$_4$ :** ಪಾಚಿ ಸಿಡಿಮು ಸಲೆ ಕಾಲು ಕಣ್ಣಿ ತಡಿಕೆ ಸೆಳೆಗೋಲಿನ ಬಲುನಾಯಕರೊವಗಿವರು (ಹಂಪಾ. ೧-೭೭).
[ ? ]

**ಪಾಜಿಕ** (ನಾ). (?) : ವರದನಾಪ್ಪರ್ನ್ನಡಸಂಗಡಿಯ ಪಾಜಿಕವಿಂದಿಟಯನನ್ಯಾಯದೊಳ್ಪರಧನಂ ಪೊಯ್ದಡೆ ಸಾವು ಸಾಲ್ವರ್ (ಶಾಇ. IX-I. ೭೭-೩೪; ೨೭೨). [ ? ]

**ಪಾಜು** (ನಾ). (ಕರಾ) ನೀರು ಮೇಲಿನಿಂದ ಕೆಳಗೆ ಹರಿಯಲು ಅಗಲವಾಗಿ ಕಟ್ಟಿರುವ ಕಲ್ಲಿನ ಪಾವಟಿಗೆ,–ಮೆಟ್ಟಲು. [ ? ]

**ಪಾಜೆ$_1$** (ನಾ). ಭಾಷೆ; ಮಾತು : ಇದು ಬಸವಯ್ಯ ಆಡೋ ಮಾತು . . . ಅವನ ಪಾಜೆ ನಿಮ್ಮ ಬಾಯಲ್ಲಿ ಬರಬಾರದಲ್ಲ (ಶಶಾ. ೦೯೨).
[ ←ತಮಿ. ಪಾಟ್ಟೈ / ಸಂ. ಭಾಷಾ ]

**ಪಾಜೆ$_2$** 'ಫಾಜೆ' ನೋ.

**ಪಾಟ$_1$** (ನಾ). ಹಾಡುವಿಕೆ; ಗಾಯನ : ವೀರಶ್ರೀಯುಮಂ . . . ಆ ರೂಪಂ ಕಂಡು ನಕ್ಕು ದುಃಖಮುಂ ಪಾಟದೊಳಾಗಳಾ ಸಗ್ಗಿಸ ಪಗರಣಿಗಂಗೆ ಒರಿದು ಕಸವರಮನಿತ್ತೂನಂದಿಂದಿತ್ತ ಬಾದುಬ್ಬೆಯ ಪರ್ವಮುಂ ಪಗರಣ

ದಾಟಪಾಟಪಾಮಪಾದುವು (ಶಬ್ದಾರ. ೧೧೮-೨೩) ; ಮಸದ ಪಾದನನಲಗಿ ನಲಗರ್ಣೆಗಳಂತ್ರ ಕಣ್ಣೊರ್ ಬೆಳೆದೆಳಸಿ ಬಂದಿರ್ದ ಪಾಟದಾಟದ ಮುದ್ದಿನ ಬರ್ದಿನ ಪರಿವಾರದೇವಿಯುತುಮಂ (ಆದಿಪು. ೨-೬೩ ವ) ; ತನ್ನ ಪಾದು ವಿಂಚರದಿಂದೆಪ್ಪ ಪಾಟಪಂ ಕೀಟಸ್ಪಾಡಿದಳಿವಳ್ ( ಕಾದಂಬ. ೩೩೪ ) ; ಎತ್ತ ಕೇಳ್ವೊಡಮೆಸೆವ ಪಾಟಮೆ [ಪಾಠಾಂ. ಗೀತಮೆ, ಪಾಡಮೆ] ಎತ್ತಲುಂ ಕಿ:ಡುವೊಡಮೊಳ್ಗುಂಧಮೆ (ಶೀವಸಂ. ೨೩೪-೨). 'ಪಾಟಪ್ಪು' ಹೋ. [<ಪಾಡು$_1$./ತಮಿ. ಮಲ. ಪಾಟ್ಟು ; ತೆಲು. ಪಾಟ್ಟು. ಪರ್ಜಿ. ಕೊಂಡ. ಪಾಟ ; ಗದಬ. ಪಾಟಿ]

**ಪಾಟ$_2$** (ನಾ). ೧. ಪಠ್ಯವಿಷಯಗಳ ಪಠನ ; ಗ್ರಂಥಗಳ ವಾಚನ : " ಪಾಠಃ — ಪಾಟಂ " (ಕಾಕಶ್ಶ. ೧೧) ; ಅಟ್ಟೆಯಿಟ್ಟೆಯಾಬಿದಂ ಪರಿವಾರಿಸಿ ಪಾಟವೋದಲಚ್ಚರಸಿಯರಾಡಲಚ್ಚರಸಿಯರ್...ಎಂದೊಡೇ ಪೊಗಟ್ಟುದೋ ಜಿನಚಂದ್ರವಿಭೂತಿಲೀಲೆಯಂ ( ಶಾಂತಿಪು. ೬-೬೩ ). ೨. ವಾಡಿಕೆ ; ರೂಢಿ ; ಅಭ್ಯಾಸ : ನಿಮಗೆ ಈ ಗಾಳೀಲಿ ಕೂತ್ಕೊಂಡು ಪಾಟ ಇಲ್ವೇನೋ ( ಕಾಟೀಮು. ೧೦೦ ) ; ಮಗರಂಗಿದನ ಚಿರತೆಗೆ ಪಾಟ ಆಗಿಬಿಟ್ಟಿದೆ. ಬೇರೆ ದನ ಇಷ್ಟು ರುಚಿ ಇಲ್ಲವೇನೊ ( ಸಣ್ಣಕ. VI, ೦೧೯ ); ಅವನಿಗೂ ಆ ಹೆಸರೇ ಪಾಟಾಗಿ ಹೋಗಿತ್ತು (ಪಕ್ಷಿಮರು. ೧೬೦ ). [<ಸಂ. ಪಾಠ]

**ಪಾಟ$_3$** ' ಪಟ್ಟ$_2$ ' ನೋ.

**ಪಾಟಕ$_1$** (ನಾ). ಓದುವವನು ; ಪಾಠಕ : ಶ್ರಾವಕರ ಪಾಟಕರ ಜನನಿಯು ಭಾವದಿಂ ಚಿಂತಕರ ಪೊರೆವುದದಾವ ಕೃತಿಯಿದನುಳಿದು ಧರಣೀತಲದೊಳಿರುತಿಹುದು ( ಶಿವೇಶ. ೧೮-೪೪ ). [<ಸಂ. ಪಾಠಕ]

**ಪಾಟಕ$_2$** (ನಾ). ೧. ಸೀಳುವವನು ; ಹೋಳುಮಾಡುವವನು ; ಕತ್ತರಿಸುವವನು : ಕರ್ನಾಟಕಚೇಣಾಪೋಟಕದರಸುಗಳಿರ್ದರು ರಿಪುಶಿರಪಾಟಕನೋಲಗದೊಳಗೆ ( ಕರ್ಣಕ. ೩-೬ ). ೨. ಗ್ರಾಮದ ಒಂದಂ ಭಾಗ. [ಸಂ.]

**ಪಾಟಕಾಜಿ** (ನಾ). ರಾಜನ ಬಿರುದಾವಳಿಗಳನ್ನು ಹಾಡಿ ಹೊಗಳು ವವನು ; ವಂದಿ ; ಪಾಠಕ : ಪಾಟಕಾಜಿರರಸಾಳ್ಗಳ ಬೇಬ್ಪರ ಕಳಕಳ ನಿನದಂ ಘೋರ್ಗರೆದಂಬುಧಿನಿನದದಂತುಟಾದುದು ( ಪರ್ಶಿಮಾ. ೩-೫೫ ) : ಬಗೆಕಾಜಿಂ ಪಾಟಕಾಜಿನೊಳ್ನುಡಿಕಾಜಿಂ ಪಗೆಕಾಜಿನಾಗಿಯುಂ ಕೆಯ್ಯಾಗೆ ತಕ್ಕಂ ಕೆಯ್ಯುದ್ದಕಾಜಿನೆನಿಸಲ್ಕಾಜಿಂ ( ಕಾವ್ಯಾಶ. ೩೨೫ ) ; ಅಲರ್ಗಳ್ ಘಟ್ಟಿಪಳ್ಳರ ಪಸರದಂತೆ ಕಂಪಂ ಪ[ರ]ಕಲಿಸೆ ತುಂಬಿಯೆ ಪಾಟಕಾಜನಂತೆ ಮೊರೆಯೆ ( ಜಂಹರಿ. ೫-೫ ವ ). [ಪಾಟ$_1$ + — ಕಾಜಿ]

**ಪಾಟಚ್ಚರ** (ನಾ). ಬಟ್ಟೆಯನ್ನು ಕಳವು ಮಾಡುವವನು; ವಸ್ತ್ರಚೋರ : "ಪಾಟಚ್ಚರಃ, ಪಟಚ್ಚರಃ—ಈ ೨ ಸೀರೆಗಳ್ಳಂ" (ಹಲಾಯು. ೫೬-೧೮೫). [ಸಂ.]

**ಪಾಟನ** (ನಾ). ಸೀಳುವಿಕೆ ; ಕತ್ತರಿಸುವಿಕೆ : ವನಕರಿಕುಂಭಪಾಟನ ಪಟುಷ್ಕಠೋರನಖಪ್ರಹಾರಭೇದನಗಳಿತಾಸ್ರರಕ್ತನವಮೌಕ್ತಿಕಪಂಕ್ತಿವಿಳಾಸ ಭಾಸುರಾನನಂ ( ಶಂಶಖಾ. ೧೩-೫೦ ). [ಸಂ.]

**ಪಾಟಲ, ಪಾಟಳ** (ಗು). ೧. ತಿಳಿಗೆಂಪು ಬಣ್ಣದ ; ನಸುಗೆಂಪು ಬಣ್ಣದ : ಪಾಟಲಲೋಲವಿಲೋಚನಂ ಮನೆಂಬಾಗೆ ಸಳಿತೋಳ ಕೋಳಿಸೆಯೆ (ಶಂಶಖಾ. ೮-೫೯); ಉದ್ಯಾನಲತೆಯನೀಕ್ಷಿಸಿ ನಾಂ ಪಾಟಲ ವರ್ಣಾಂಗ್ಯೆನಿಂದು ದೇವಿಯು ಮೊಗಮಂ ( ರ್ಕ್ಷ್ಮಿಶಿಂ. ೮೩ ). (ನಾ). ೨. ನಸುಗೆಂಪು ಬಣ್ಣ : ಸತಿ ಮುದದಿಂದೆ ಪಾಟಲಮನಾಂತ ಕಪೋಲದೆ ರಕ್ತಲೋಚನೋತ್ಪಲದೆ ವಿಲಾಸಮಂ ತಳೆದ (ಪಾರ್ಶ್ವಪು. ೨-೬೬); ಜಡದೆ ಪಾಟಲವಿಡಿದು ಶಿರದೊಳ್ ತೊಡರಿ ಮಿರುಗುತೆ ಪುಷ್ಪಭಾಗವ ಪೊಡೆವೊಡೆವ ಬಿಳಿಜಡದ ಜಡೆಗಳನಾಂತು (ಕಾವೇರು. ೫೪-೨೭).

೩. ಒಂದು ಬಗೆಯ ಹೂವಿನ ಗಿಡ ಮತ್ತು ಅದರ ಹೂವು: ಪಾದರಿ: ಪೂಗ ವಟ ದಾಡಿಮ ಪಾಟಲ . . . ಹಿಂತಾಳಮಹೀಜಮುಖ್ಯತರು ಸಂತತಿಯಿಂ ವನಬೃಂದವೊಪ್ಪುಗುಂ ( ಯಶೋಧ. ೦-೩೫ ). ೪. ಮಳೆ ಗಾಲದಲ್ಲಿ ಕೊಯ್ಲಾಗುವ ಒಂದು ಬಗೆಯ ಬತ್ತ. **ಪಾಟಳ** : ೧. ಕಳಕಂಠಲೋಚನಚ್ಛವಿವಿಳಾಸಮಂ ತಳೆದ ನೀಲಪಾಟಳಜಂಬೂಫಳಮಧುರ ರಸಮನೀಂಟಿದೆಂ (ಕಾದಂಪೂ. ೮೬). ೨. "ಅರುಣಃ . . . ಪಾಟಳಃ, (ಆ)ತಾಮ್ರಃ, ಲೋಹಿತಃ—ಈ ೭ ಕೆಂಪು" (ಹಲಾಯು. ೦೨೦-೪೮). ೩."ಪಾದರಿ ಪಾಟಳಂ ಪಾಟಳಿಯೆನಿಕ್ಕು"(ಮಂಗರಾ. ೩೬-೧೬); ವಿದಳಿತ ಚಂಪಕ ಲವಲೀನಾಗಂ ವಕುಳಪಾಟಳಾಶ್ವತ್ಥಬ್ರಾತಂ . . . ಆದಿಯಾಗೆ ಪಲವುಂ ಪೆಱವಂದದ ಪಾದಪಂಗಳಿಂದೊಪ್ಪುವ ಚಂದದ ಬನದೊಳೆತ್ತಲುಂ ಸುಚೀವರಗಿಳಿಗಳೆ (ಸುಕುಮಾ. ೧೦-೫೬ರಗಳೆ) ; ಸೊಗಯಿಸುವಾಟದ ಸುರರ ಭವನವುಂ ವಿಕಸಿತ ಪಾಟಳಗಂಧಯುತ ಕಂಡಳ್ (ಜಂಹರಿ. ೯-೧೦೪). [ಸಂ.]

**ಪಾಟಲದ್ಯುತಿ** (ನಾ). ತಿಳಿಗೆಂಪು ಬಣ್ಣ : ಬಿಂಬಾಧರದ ಕೆಂಬೆಳಗು ಸುಲಿಪಲ್ಲ ಸೂಸುವೆಳಗಿನೊಡವೆರೆದು ವದನವಿಧುಮಂಡಳದ ಪಾಟಲದ್ಯುತಿ ಯಂತೆ ಪಸರಿಸಿ ಬೀದಿವರಿಯೆ (ಕಾಳಕೀ. ೫-೧೯ ವ). [ಪಾಟಲ + ದ್ಯುತಿ]

**ಪಾಟಲಾಧರ, ಪಾಟಳಾಧರ** (ನಾ). ತಿಳಿಗೆಂಪುಬಣ್ಣದ ತುಟಿ : ಸುದತಿಯೆ . . . ಜಯಾನ್ವಿತನಾದೆಂ ಇದೊ ನಿನ್ನ ಪಾಟಲಾಧರವದನಾಬ್ಜವ ನಾಂ ವಿಲೋಕಿಸಿದ ಕತದಿಂದಂ (ಶಾಕುಂತ. ೧೨೯-೧೮೬). **ಪಾಟಳಾಧರ** : ಪಾಟಳಾಧರಸುಧಾರಸಮಂ ಸವಿದಟ್ಟಿಜಿಂ ಲತಾಂಗಮನಮರ್ದಪ್ಪಿ ದಕ್ಷಿಣ ವಿಟಾಂಗಣೆಯಾದುದು ದಕ್ಷಿಣಾನಿಳಂ (ಮಲ್ಲಿಪು. ೫-೨೩). [ಪಾಟಲ + ಅಧರ]

**ಪಾಟಲಿ$_1$, ಪಾಟಳಿ** (ನಾ). ೧. ಪಾದರಿಗಿಡ ಮತ್ತು ಅದರ ಹೂವು : "ಪಾದರಿ ಪಾಟಳಂ ಪಾಟಲಿ[ಪಾಠಾಂ. ಪಾಟಳಿ, ಪಾಡಳಿ]ಯೆನಿಕ್ಕು" (ಮಂಗರಾ. ೩೬-೧೭) ; ಮತ್ತೊರ್ವಳ್, ಸುರಭಿಪಾಟಲೀಪಾಟಲದಶನವಸನೆ (ಆದಿಪು. ೧೧-೧೧೦ ವ); ಜೀವನದೊಳಗೆಮ್ಮರಳನೊಂದಿಸಿ ನೆಱೆ ಸೇವಿಸಿದವರ ಶ್ರಮಗಳ ಗಾವಳಿಯನು ಪರಿದಪೆವೆಂದು ನಱುಗಂಪು ಕೀವಿದ ಪಾಟಲಿಯಿಹುವು (ಕಂಪಿ. ೭-೫೩). ೨. ಒಂದು ದೇಶದ ಹೆಸರು : ಮಹಾರಾಷ್ಟ್ರದೇಶದ ಸ್ತ್ರೀಯರು, ಪಾಟಲಿದೇಶದ ಸ್ತ್ರೀಯರು, ಪುಂಡು ಮಾತುಗಳಂ ಅಪೇಕ್ಷೆಯೊಡನೆ ಕೂಡಿ ಆಡುವರು ; ರತಿಯಲ್ಲಿ ನಾಚಿಕೆಯಿಲ್ಲ ದವರು (ಕಾಮಸೂ. ೨೧೯). **ಪಾಟಳಿ** : ೧. ಕಂಪುಗೊಳಲ್ ತೆಗೆದುಸಿರಿ ನಿಸಂ ಪೊಱಮಟ್ಟಸಟಿ ತುದಿಯನೆಯ್ದಲೊಡಂ ಮುನ್ನಂ ಪಟೆಯುವಪ್ಪ ಪೂಗಳ ತಂಪಿನೊಳೀಂ ಪೊಗಟ ಪಾಟಳೀಪರಿಮಳಮಂ (ಆದಿಪು. ೦೦-೦೦೦) ; ಪಾಟಳಿಗಳೆಸಕದಿಂ ಸಂಪಿಗೆಗಳಲಂಬದಿಂ . . . ಅನಂತತಿಲಕದ ಕುಜಂಗಳಿಂ . . . ಪೊಗಿ ಪೊಂಪುಟಿಯೆಲೀಗಿ (ಅದ್ಭುತ. ೩-೯೩). [ಸಂ.]

**ಪಾಟಲಿ$_2$, ಪಾಟ್ಲಿ** (ನಾ). ಸುಮಾರು ಕಾಲಂಗುಲದಷ್ಟು ದಪ್ಪವಾದ ಚಿನ್ನದ ಕೈಬಳೆ : ಭಿಕೂತಾಯಿ ನನಗೆ ಪಾಟಲಿ, ಬಿಲ್ವಾರ ಮುಂತಾದ ವಸ್ತ ಮಾಡಿಸಿದಳು (ಸ್ತ್ರೀಶಿ. ೨೧೪) ; ಬಂಗಾರದ ಗೋಟು ಪಾಟಲೀ ಬಿಡಿಸಿ ಕೊಡು . . . ವಂಕೀಜೋಡು ಕೊಡಸು (ಕಳ್ಳರ್. ೬೨) ; ಮೈಮೇಲಿ ಬಂಗಾರ ಹಾಗು ಮುತ್ತಿನ ಆಭರಣಗಳು, ಪಂಕಿ, ಸರಿಗೆ, ಗೋಟು, ಪಾಟಲಿ ಮೊದಲಾದ ಎಲ್ಲ ವಸ್ತುಗಳೂ ಇದ್ದವು (ಧ್ಯಾಸುಕಾ. ೦೦). **ಪಾಟ್ಲಿ** : ನಾ ಗೋಟು ಪಾಟ್ಲಿ ಎಲ್ಲಾ ಇಟಗೊಂಡರ ಕೈ ಹಿಂಗ ಮ್ಯಾಲ ಎತ್ತಲಿಕ್ಕ ಆಗತಿದ್ದಿಲ್ಲ (ಗಂಪಾಡು. ೧೬) ; ಒಂದು ಜತಿ ಪಾಟ್ಲಿ ಮಾಡಸರಿ ಅಂತ ಹೇಳಿವರ ಕೇಳಪಲ್ಲರಿ (ಕುಂಕುಮ. ೧೬). [←ಮರಾ. ಪಾಟಲೀ]

**ಪಾಟಲಿತ, ಪಾಟಳಿತ** (ಗು). ನಸುಗೆಂಪಾದ : ಶೂಲಧರಂ . . . ಮುಷ್ಟಿ ಯುದ್ಧಸನ್ನದ್ಧನಾಗಿ ನಿಂದ ಪಾರ್ಥನಿದಿರ್ಗಪಂದೋರೆರೊರ್ವರುದೀರ್ಣ ರೋಷಾವೇಶಪರುಷಪಾಟಲಿತಕಟಾಕ್ಷದಿನದರೆ ನೋಡಿ ಬಾಹಾಸ್ಫಾಲನಂ ಗೆಯ್ಯಲ್ (ಕಿರಾತ. ೪-೭೦ ವ). **ಪಾಟಳಿತ** : ಇದಿರ್ಲ್ದೀರ್ಪ್ಯಾರೋಷದಿಂ

ಶಶಿಪ್ರಭೆ ನವೋದಯಶಶಿಪ್ರಭೆಯಂತೆ ಪಾಟಳಿತವಾಯಿಯಾಗಿ (ಶಂರ್ಪ್ರಪು. ೬-೯೩ ಪ). [ಸಂ.]

**ಪಾಟಲಿಮ, ಪಾಟಳಿಮ**(ಗು). ೧. ನಸುಗೆಂಪುಬಣ್ಣದ : ಪರಿಣತಪ್ರವಾಳ ಪಾಟಲಿ[ಪಾಠಾಂ. ೪]ಮಲೀಲಾಧರಸಿದಾಧರಪಲ್ಲವನುಂ (ಶಂರ್ಪ್ರಪು. ೪-೬೦ ವ). (ನಾ). ೨. ನಸುಗೆಂಪು ಬಣ್ಣ. **ಪಾಟಳಿಮ** : ೧. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ. ಪಾಟಲಿಮಾನ್]

**ಪಾಟಲೀಪುತ್ರ, ಪಾಟಳೀಪುತ್ರ** (ನಾ). ಮಗಧದೇಶದ ರಾಜಧಾನಿ ; ಈಗಿನ ಪಾಟ್ನಾನಗರ : ಪಾಟಲೀಪುತ್ರದ ಮಾರ್ಗದಲ್ಲಿ ನಾಗಸೇನನಿಗೆ ಧಾನ್ಯವ್ಯಾಪಾರಿಯೊಬ್ಬನು ಸಿಕ್ಕಿದನು (ಬುದ್ಧಕ. ಮಿಲಿಂದ. ೨೪); ಮೂರನೆಯ ಸಂಗೀತಿ — ದೇವಾನಾಂಪ್ರಿಯ ಪ್ರಿಯದರ್ಶಿಯೆಂಬ ಅಶೋಕರಾಜನ ಕಾಲದಲ್ಲಿ ಪಾಟಲೀಪುತ್ರದಲ್ಲಿ ನಡೆದದ್ದು (ಬುದ್ಧ. ೨೦೩). **ಪಾಟಳೀಪುತ್ರ** : ಪಾಟಳೀಪುತ್ರಮೆಂಬ ಪುರದಲ್ಲಿ ಶ್ರೇಷ್ಠಿ ಸುದತ್ತನೆಂಬೊಂ (ಆರಾಧ. ೧೫-೦೪). [ಸಂ.]

**ಪಾಟಲೀಪುಷ್ಪ** (ನಾ). ಪಾದರಿ ಹೂವು : ಪಾಟಲೀಪುಷ್ಪ ಅಥವಾ ಪಾದರಿಹೂವನ್ನು ಧರಿಸುವುದರಿಂದ ಮನಸ್ಸಿನ ಕ್ಲೇಶವನ್ನು ಪರಿಹಾರ ಮಾಡಿ . . . ಮಹಾಪರಿಮಳದೊಡನೆ ಕೂಡಿರುವುದು (ಸಳಕ್ಕ. ೪೪); ಮಂತ್ರ ಇಪ್ಪತ್ತುಸಾವಿರಮಂ ಜಪಿಸಿ ಪಾಟಲೀಪುಷ್ಪದಿಂ ಹತ್ತುಸಾವಿರ ಹೋಮಮಂ ಮಾಡೆ ಮಂತ್ರಸಿದ್ಧಿಯಪ್ಪುದು (ಕಾಮಶಾ. ೨೩೦). [ಸಂ.]

**ಪಾಟಲೂನು, ಪಾಟಲೋಣ, ಪಾಟಲೋನು, ಪಾಟ್ಲೋನು** (ನಾ). ಐರೋಪ್ಯಮಾದರಿಯ ಷರಾಯಿ ; ಪ್ಯಾಂಟು : ಬೆಲೆಯುಳ್ಳ ಕೋಟು ಪಾಟಲೂನುಗಳ ಜೊತೆಗಳು ಅವರಲ್ಲಿ ಹತ್ತೆಂಟು ಇದ್ದವು (ಕೋಕು. ೨೩೦) ; ಪಾಟಲೂನು ಸಾಹೇಬರ ಪೋಷಾಕು. ಬೆಲೆಯುಳ್ಳದ್ದು (ಶ್ರೀರಾಂಕ. ೭); ಒಮ್ಮೆಲೇ ಅವಳ ಮೊಮ್ಮಗ ಗಾಡಿಯಿಂದ ಜಿಗಿದ, ಪಾಟಲೂನು, ಉದ್ದ ಕೈಯ ಅಂಗಿ ಹಾಕ್ಕೊಂಡು (ಹೊಸಕ್ಕ. ೭೩). **ಪಾಟಲೋಣ** : ಮೊಳಕಾಲ ಕೆಳಗೆ ಪಾದದ ಮೇಲೆ ಗೇಣು ಅಂತರದಲ್ಲಿ ನೇಣು ಹಾಕಿಕೊಂಡಂತೆ ಜೋತಾಡುವ ಇಸ್ತ್ರೀಯ ಅಸ್ಪರ್ಶದ . . . ಕಿರಮಂಜಿಬಣ್ಣದ ಪಾಟಲೋಣ (ಬೀಸಹ. I, ೨೪). **ಪಾಟಲೋನು** : ಪಾಟಲೋನಿನ ಜೇಬಿನೊಳಗಿಂದ ಸಿಗರೇಟಿನ ಡಬ್ಬಿಯನ್ನು ತೆಗೆಯುತ್ತ ಕೇಳಿದ ಗದ್ರೆ (ಕೃಹಸ. ೫೯). **ಪಾಟ್ಲೋನು** : ಬೂಟು ಪಾಟ್ಲೋನು ಧರಿಸಿ ದೇಶಭಾಷೆ ಮಾತನಾಡುವುದಕ್ಕೆ ನಾಚಿಕೆಯೆನಿಸಲಾರಂಭಿಸಿತು (ಹುಚ್ಚಕ್ಕ. ೨೫).

[←ಮರಾ. ಪಾಟಲೂಣ, ಪಾಟಲೋಣ. / ಇಂ. Pantaloon]

**ಪಾಟಲೋಣ** ‘ ಪಾಟಲೂನು ’ ನೋ.

**ಪಾಟಲೋನು** ‘ ಪಾಟಲೂನು ’ ನೋ.

**ಪಾಟವ** (ನಾ). ೧. ತೀಕ್ಷ್ಣತೆ; ಚುರುಕು. ೨. ಜಾಣತನ ; ಚಾತುರ್ಯ : ಒಳ್ಳೆಯ ಸಂಗ್ರಹಶಕ್ತಿಯೂ ಭೂಗರ್ಭಶೋಧನಪಾಟವವೂ ಬಂದುವಲ್ಲದೆ ಅವನಿಗೆ . . . ಪ್ರಾಣಿಶಾಸ್ತ್ರದ ಗಾಢಪರಿಚಯವಾಯಿತು (ಶಿಕ್ಷಾಕ. ೯೨) ; ಅವನು . . . ಊಹೆ ಮಾಡುವುದರಲ್ಲಿ ಪಾಟವ ಹೊಂದಿದತಕ್ಕವನು (ಕಾರಿಪಾ. ೩೭೪). ೩. ಪಟುತ್ವ ; ಶಕ್ತಿ ; ಸಾಮರ್ಥ್ಯ : ಮಾಟದಿಂದರಿವರ್ಜನರ್ನುಡಿಯಮಾಟದಿಂ ಪಂಡಿತರು ನೆನೆಹಿನ ಪಾಟವದೆ ದೇವರ್ಕಳಂಗೈನೆಲ್ಲಿಕಾಯಂದದಲಿ (ಪರ್ವೇಶ. ೬-೩೭) ; ಶತ್ರುಲೆಗೆ ಜಗದಾಂಧ್ಯ ಕರಣಪಾಟವವೀಯ (ವಂಕಾರಾ. ೩-೩೭-೨೩) ; ವಾದಗಳು ನಡೆಯುತ್ತಿದ್ದ ಕಾಲದ ಅವಾಂತರದಲ್ಲಿ . . . ಕವಿಗಳ ಪಾಟವವೇ ಕುಗ್ಗಿರಬೇಕೆಂದು ಅನೇಕರು ಸಿದ್ಧಾಂತ ಮಾಡುತ್ತಲೇ ಇದ್ದರು (ಕುರಾಯ. ೦೨೭). ‘ ದೃಷ್ಟಿಪಾಟವ ’ ಪರಾ. ೪. ಕಲಿತನ ; ಶೌರ್ಯ : “ಪಾಟವಂ ಬಂಟತನಂ” (ಕಾಕಕ್ಕ. ೨೭೪). ೫. ಆರೋಗ್ಯ : ಕೋಟಿಚಂದ್ರಪ್ರಸತ್ಕ ದೇಹಪ್ರಕಾಶಉದ್ಭಾಟಿತನೇತ್ರತೀಕ್ಷ್ಣಾಂಗಪಾಟವದಿವ್ಯಮಹಾಲಕ್ಷಣದೊಳ ಮಾಟವಲ್ಲವೆ ತೀರ್ಥಕರರು (ಮುನಿಪಂ. ೩-೩೪) ; ಊಟ ಉಪಚಾರಗಳ ಬೇಡವೆನ್ನದಿರು ಪಾಟವವು ಮೈಗಿರಲಿ ನೋಟ ತತ್ತ್ವದೊಳಿರಲಿ ಪಾಲಿಸು ಸಪವ್ವಯವ (ಮುಂಕಾಳ. ೨೩೦). ೬. ದುಡುಕುಸ್ವಭಾವ. [ಸಂ.]

**ಪಾಟಳ** ‘ ಪಾಟಲ ’ ನೋ.

**ಪಾಟಳಕಾಂತಿ** (ನಾ). ನಸುಗೆಂಪುಬಣ್ಣ ; ಪಾದರಿ ಹೂವಿನ ಹೊಳಪು : ನೇತ್ರಾಂಬುಜಂ ಪಾಟಳಕಾಂತಿಶ್ರೀಯನೊಪ್ಪುತ್ತಿರೆ . . . ಲೀಲೆಯಿಂದುಪ್ಪ ವಡಿಸಿವಳ್ ಹೃದ್ಯಾಂಗಿ ಶಯ್ಯಾಗ್ರದಿಂದಂ (ಜಗಪ. ೩-೭೪).

[ಪಾಟಳ (=ಪಾಟಲ) + ಕಾಂತಿ]

**ಪಾಟಳಾಧರ** ‘ ಪಾಟಲಾಧರ ’ ನೋ.

**ಪಾಟಳಿ** ‘ ಪಾಟಲಿ$_1$ ’ ನೋ.

**ಪಾಟಳಿತ** ‘ ಪಾಟಲಿತ ’ ನೋ.

**ಪಾಟಳಿಮ** ‘ ಪಾಟಲಿಮ ’ ನೋ.

**ಪಾಟಳೀಪುತ್ರ** ‘ ಪಾಟಲೀಪುತ್ರ ’ ನೋ.

**ಪಾಟಾಳಿ** (ನಾ). ದೇವಸ್ಥಾನದಲ್ಲಿ ಸ್ತೋತ್ರಗಳನ್ನು ಹಾಡಿ ಸೇವೆ ಸಲ್ಲಿಸುವ ಒಂದು ವರ್ಗ ಮತ್ತು ಆ ವರ್ಗಕ್ಕೆ ಸೇರಿದ ವ್ಯಕ್ತಿ : ಪಾರ್ತಿಸುಬ್ಬನೆಂದರೆ . . . ಕುಂಬಳೆ ಪಾಟಾಳಿಯೂ ಆಗಿದ್ದನು (ಪಾರ್ತಿಸು. ೪) : ಸುಬ್ಬನ ತಂದೆ ಊರ ದೇವಸ್ಥಾನದ ಪಾಟಾಳಿ (ಅಪಾಕ. ೧೪೩) ; ಪಾಟಾಳಿ ಕೆಲಸ ಮಾಡಿದ ಬಗ್ಗೆ ದೇವಸ್ಥಾನದಿಂದ ದಿನಕ್ಕೆ ಒಂದು ಸೇರು ಬೆಳ್ತಿಗೆ ಅಕ್ಕಿ ಸಿಗುತ್ತದೆ (ಹಹಸ. ೪೪).

[<ಪಾಠಾಳಿ. / ತಮಿ. ಪಾಟ್ಟಾಳಿ, ಪಾಟ್ಟಾಳ್]

**ಪಾಟಿ$_1$** ‘ ಪಾಟಿ$_2$ ’ ನೋ.

**ಪಾಟಿ$_2$** (ನಾ). ೧. ಹಲಗೆ ; ಫಲಕ : ತುಸು ಹೊತ್ತಿನಲ್ಲಿ “ಕರ್ನಾಟಕ ಖಾನಾವಳಿ” ಎಂಬ ಹೆಸರಿನ ಪಾಟಿಯು ಕಂಡಿತು (ರಕ್ತರ. ೧೪) ; ಅಲ್ಲಿ “ವಿಜಯಪುರಕರ ಹೋಟ್ಲು” ಎಂದು ‘ಪಾಟಿ’ ಹಚ್ಚಿದ ಒಂದು ಉಪ್ಪರಿಗೆಯ ಕಟ್ಟಡ ಕಂಡಿತು (ಶಿಕ್ಷಾಸು. ೩೩). ೨. ಬಳಪದಿಂದ ಬರೆಯುವುದಕ್ಕಾಗಿ ಸಿದ್ಧಪಡಿಸಿದ ಕಲ್ಲಿನ ಕಪ್ಪುಹಲಗೆ ; ಸ್ಲೇಟು : ತನ್ನ ಪಾಟಿ ಪುಸ್ತಕಗಳನ್ನು ಕಟ್ಟಿ ಅಲ್ಲಿ ಮೂಲೆಯಲ್ಲಿಟ್ಟು ವಾಪಸ್ಸರ ಕಡೆಗೆ ಸಿದ್ಧ ಹೊರಟನು (ಶಾಕಾರೆ. ೩೩) ; ವತ್ಸಲಾ ಇಡೀ ಪಾಟಿ ತುಂಬ ಅಆ ಬರೆದು ಆತನಿಗೆ ತೀಡಲಿಕ್ಕೆ ಹಚ್ಚಿದ್ದಳು (ಪ್ರಪಿ. ೩೩೭).

[←ಮರಾ. ಪಾಟೀ]

**ಪಾಟಿಕುಂಭ** (ನಾ). ದೊಡ್ಡಗಡಿಗೆ (?) : ಕಾಟಕೊಟಜನಿಸಿಪ್ಪ ಗೊಲ್ಲರ ಮೇಟಿ ಆಡಿನ ಹಿಕ್ಕೆಯಂ ಶಶಿಜೂಟನೀಶ್ವರನೆಂದು ಪಾಲು ಕಾನದಜ ಮೇಲೆ ಪಾಟಿಕುಂಭದಿ ಕಜಿದಜಿದು ಕಾಲಾಟದಿಂದಾಬುಟೆಂದು ಕುಣಿವುತ . . . ಭಜಿಸುತಿರೆ (ಶರಪು. ೯-೦೨). [ಪಾಟಿ$_2$ + ಕುಂಭ]

**ಪಾಟಿಗಾಣ್** (ಕ್ರಿ). ಸಮವೆಂದು ಭಾವಿಸು ; ಸರಿಸಮಾನವೆಂದು ತಿಳಿ : ಅದಿರದೆ ವೀರವೈರಿಭಟರುಂ ಘಟಕೋಟಿಗೆ ಪಾಟಿಗಾಣದು . . . ಘನಕಪಿತ್ಥಮನಾ ಬನದೊಳ್ ಕಡಂಗಿ ಕಿಟ್ಟಿದುದು ಪೋದುದೇ ನಿನಾವಿಪಾ ತೆಜದಿಂ ಕೆಡೆವಂತುಟಾಮದೇ (ಶರಪು. ೩-೦೫).

[ಪಾಟಿ$_1$ (<ಪಾಟಿ$_2$) + ಕಾಣ್]

**ಪಾಟಿಗೆಡಿಸು** (ಕ್ರಿ). ಸ್ಥಿತಿಗೆಡುವಂತೆ ಮಾಡು ; ನಾಶಮಾಡು : ಪಾಟಿಗೆಡಿಸುವೆಪಘವನೆಂಬಾ ನವಕೋಟಿಮುನಿಗಳ ಮೊಲ್ಲಡಿಗೆ ತಾಟಿಸಿ ಪಣೆಮ ನೇವಿಪಾಶಸಂಗತಿಯ ಸಘಾಟದಿಂದಾನುಸುರುವೆನು (ಪಂಪಾಶ. ೧-೨೦).

[ಪಾಟಿಗೆಡು (<ಪಾಟಿಗೆಡು) + -ಇಸು]

**ಪಾಟಗೆಡು** 'ಪಾಟಿಗೆಡು' ನೋ.

**ಪಾಟಗೆಯ್** (ಕ್ರಿ). ಸಮಾನವಾಗಿ ಕಾಣು; ಎಣೆಯೆಂದು ಎಣಿಸು: ಕಾಗೆ ಕರ್ರನ್ನಲಾ ಕೋಗಿಲೆಗೆ ಬನ್ನಮಪ್ಪುದೆಯದಂತಿಲ್ಲಾಗಿ ಪಾಟಗೆಯ್ಯಂ (ಸಿದ್ಧೇಶ. ೧-೧೪). [ಪಾಟ್ಚ₁ (<ಪಾಟ್ಚಿ₂) +ಕೆಯ್₁]

**ಪಾಟಿತ** (ಗು). ಸೀಳಿದ; ಒಡೆದ; ಮುರಿದ: ಕೂರಿಸೆ ಗುರು ಶುಶ್ರೂಷೆಯೊಳಾ ರಾಮನನುಗ್ರಹರಶುಪಾಟಿತರಿಪುವಂಶರಾಮನನಿತು ವಿದ್ಯಾಪಾರಗನೆನಿಸಿದುದು ಬಲ್ಮೆ ವೈಕರ್ತನನಾ (ಕಂಕಶಾ. ೧-೧೦೧); ಪರಿಮಳಾ ತಿಲಂಪಟಷಟ್ಚರಣಪಟಲಪಾಟಿತ ಕುಟ್ಮಲಾವಳೀಸ್ಯಂದಮಾನ ಮಕರಂದ ಬಿಂದುಸಂದೋಹಜನಿತ ದುರ್ದಿನಂಗಳಿಂ (ಕಂದ್ರಶ. ೧-೦೦೩ ವ).

[ಸಂ.]

**ಪಾಟದೈವ** (ನಾ). ಸರಿಸಮವಾದ ದೇವತೆ; ಸದೃಶವಾದ ದೇವತೆ: ಪಾಟದೈವವಿದೆಂದು ನಾಡೊಳು ಪಾಟಿಸುವರೆಲೊ ಜಿನನ ವಿಧಿಗಳ ಕೋಟಲೆ ಯನೆಣಿಸುವೊಡೆ ಶಾಂ ಫಣಿಪತಿಗೆ ಹವಣಲ್ಲ (ಐಶಪು. ೫೦-೭೩).

[ಪಾಟ್ಚ₁ (<ಪಾಟ್ಚಿ₂)+ದೈವ]

**ಪಾಟದೋಱು** (ಕ್ರಿ). ಸಮಾನವೆಂದು ಗಣಿಸು,-ಎಣಿಸು: ಅನೇಕ ನೃಪಾಲರಂ ಭುಜಾಬಳದಿನದಿರ್ಪಿ ತತ್ಕುಲಧನಂಪೆರಸೀಟ್ಕುಳಿಗೊಂಡ ಕನ್ಯಕಾ ಕುಳದೊಳಗಾರ ಪೋಲ್ವೆಯುವಳೀಕೆಯನೀಕೆಯೊ ಪಾಟದೋಱುವಿರ್ (ಕುಸ್ವಪು. ೬-೫೭). [ಪಾಟ್ಚ₁ (<ಪಾಟ್ಚಿ₂)+ತೋಱು]

**ಪಾಟಸವಾಲು** 'ಪಾಟೀಸವಾಲು' ನೋ.

**ಪಾಟಿಸು₁**, ಪಾಳಿಸು₁ (ಕ್ರಿ). ೧. ಸರಿಸಮಾನವೆಂದು ಎಣಿಸು: ನೋಟ ವೊಂದಲ್ಲದೆ ನುಡಿಯಿಲ್ಲ ಮೈಯೊಳೆದಾಟವಿಲ್ಲ ಕುವರರಿಗೆ ಮಾಟದ ಬೊಂಬೆ ಯಂತಿರೆ ಕಂಡು ದೇವೇಂದ್ರ ಪಾಟಿಸಿ ನುಡಿದನಿಂತೆಂದು (ಶರಶ. ೬೭-೩೯); ಪಾಟಿಸಿ ಕೇಳ್ಣಾ ನಾನು ನೀನಾಡುವರಾಟಕಾಱರು ನಮ್ಮ ಭಟರು ನೋಟ ಕಾಱರೆ ನೀನು ನೆನೆದ ಸಂಗ್ರಾಮ ಸಘಾಟಿಕೆಯಾಯ್ತು ಕಂಜಾಸ್ತ್ರಾ (ಶರಶ. ೫೦-೮೦). ೨. ವಿಮರ್ಶಿಸು; ಪರಾಮರ್ಶಿಸು; ಪರಿಶೀಲಿಸು: ನೀಟಿಂಗೆಜಗದ ಜೈತಜೇಕಾಟಕನಂ ಕಡಿದು ಬಿಸುಡೆ ಚೀರದೇವೇಂದ್ರಂ ಪಾಟಿಸಿ ಬಲ್ಲವರಲ್ಲದ ಮಾಟದ ರಾವಣನುಮಿಂದು ಮಡಿಪಿದನೆಂದರ್ (ಅಶ್ರಪು. ೬೧-೨೬). ೩. ಕೊಡು; ನೀಡು: ಒದಗಿಸು: ಹಾಟಕಭಿತ್ತಿಸಮನ್ವಿತ ನಾಟಕಶಾಲೆಗಳ ವಿವಿಧಸೌಧಂಗಳ ಕೋಡಗಾಟವನೆ ಮೆಚ್ಚಿದಾ ಮೆಚ್ಚಂ ಪಾಟಿಸುವುವು ಮಿಥುನನಿಕಗೆ ಗೃಹಮಹೀಜಾತಂ (ಅಂಪು. ೫-೩೭); ತೃಣಮನುಜರು ಕೈಮುಗಿದು ವಂದನೆ ಮಾಡೆ ಅನುಮಾನ ಇಲ್ಲದಲೆ ಪಾಟಿಸುವ ಕರ್ಣ (ಹೀಶ್ಚರು. ೧೬-೧). ೪. ಆದರಿಸು; ಗೌರವಿಸು; ಮೆಚ್ಚಿಸು: ವಿಹಾರು ಸಿಂಗರದಿಂಪುವಡೆದು ಮಿಗೆ ಬಯಸಿ ಬಯಸಿದ ಸುಮಸಸ್ತುಗಳನಿತ್ತು ಪಾಟಿಸುವ ಭೀಮಫಲ್ಗುಣರ . . . ಕೌತುಕದ ಮಾಳ್ಕೆಯಂ ಕಂಡು ನಲಿದಾಡಿತು ಜನಂ (ಕೃಬಾಶಾ. ೩೯-೧೧). ೫. ಅಪೇಕ್ಷಿಸು; ಬಯಸು: ಊಟದಿನಾಟದಿನೊಪ್ಪುವ ಪಾಟದಿ ನಾಟಿಸುವ ತೀಟದಿಂ ಕಂಪಿನ ಕಯ್ಯೂಟದಿನಪ್ಪ ಸುಖಂಗಳೆ ಪಾಟಿಸಿದ ಸುಖಂಗಳಿಂದ್ರಿಯಂಗಳ ದೆಸೆಯಿಂ (ಅಶಪು. ೩-೮೧); ಚೆನ್ನಿಗೆ ಮಱುಗಿ ಮಾಣದೆ ಚೆನ್ನಂ ಪಾಟಿಸುವರಂಗಳಿಂ ವಿಕಳಂಗರ್ (ಸಮಸ. ೬-೪೪); ಓಪರೊಳಾರುಂ ಬೇಟವುಂ ಪಾಟಿಸಿದವರೊಳೆ ನಿನ್ನಂತು ನಾಣ್ಗೆಟ್ಟು ಬಾಯ್ಬಿಟ್ಟರನಾರ್ ಲೋಕದೊಳ್ ಕಂಡಱಿಯೆಂ (ಕೃಂಗಾರ. ೪-೧೮); ಮೋಕ್ಷಮನು ಪಾಟಿಸುವ ನರ ನಿರಪೇಕ್ಷನಾಗಿಯೆ ಭಜಿಸ ಬೇಹುದು (ಶಮ್ಮಶ. ೩-೪೭). ೬. ಮಾಡು; ರಚಿಸು; ನಿರ್ಮಿಸು: ಪೊಸದುರ್ಗಮಂ ಪಾಟಿಸಿ ಒಱಿಯ ನಿಡುಬಾವಿಗಳನಗುಳಿಸಿ ದಾದೆಡಱಿಳಗೆ (ಐಶಪು. ೦೬-೧೧); ಕೋಟಿಯದ್ದುದು ಮುಂದೆ ಶಿವನ ಕರೋಟಮಾಲಾವಳಯದವೊಲುಱಿ ಪಾಟಿಸಿದ ಕೊತ್ತಳದ ಮುಗಿ ಲಟ್ಟಳೆಯ ಮುಂಬಿನಲಿ (ಕೂರಂಶ. ೫-೨-೪); ಬಳಸದಧಿಕಸ್ನೇಹವನು ವೆಗ್ಗಳ ಮೆನಿಪ ಹಗೆತನವ ಪಾಟಿಸಿ ಬಳಗವಲ್ಲವ ಕೊಲಿಸಿ ತಾನಳಿದನು ಸುಯೋಧನನು (ಕಿಮ್ಮಶ. ೧-೮೪). ೭. ಉಂಟುಮಾಡು; ಹುಟ್ಟಿಸು: ಬೇಟದ ಸುಗ್ಗಿ ನಾಲ್ಕೆ ದಿನಮಾ ದೆಸೆಯೊಳ್ ಬಸವಾದ ಗಂಡರಿಂಗೂಟವೆ ಕೋ [ಪಾಠಾಂ. ತೋ]ಟಿಯೆಂದು ಸಮಸಂದೆಮೆಯುಂ ಮಾಱಿಯಾಗದಂತು ಬಾಯ್ ನಾಟರೆ ಬಾಯೊಳಪ್ಪುದುಗದಂತು ತೊಡಂಕಿರದೇಕೆ ತೋಟಿಯಂ ಪಾಟಿಸೆ ತಾವೆ ತಮ್ಮಗಳನಾಱಿಡಿಗೊಳ್ಳರೊ ನಾಹ ಗೊಡ್ಡೆಯರ್ (ಅಂಹಶ. ೧೪-೪೦). ೮. ಹೊಂದು; ತಾಳು; ಅವಲಂಬಿಸು: ಸಂಸ್ಕೃತಿವಾರ್ಧಿಯಲ್ಲಿ ಬಿರ್ದುರುಳದೆ ವೀರವೃತ್ತಿಯನೆ ಪಾಟಿಸಿ ಮೋಕ್ಷಸುಖಕ್ಕೆ ಚಿತ್ರಮಂ ತಿರಿಪುತುಮಿರ್ದ ಜೈನಮುನಿಪುಂಗವರಿಂ ಮಿಗಿಲಾರೊ ಲೋಕದೊಳ್ (ಚರ್ಮರಾಮ್ಮ. ೧೨-೫೦). ೯. ಬೆರಸು; ಹೊಂದಿಸು; ಜೋಡಿಸು: ಮೋಟ ಪುರುವಳ್ಳಿ ಎಲೆಯುತ್ತಾ ಟಿಸುಗುಂ ಸ್ವಕರ್ಪುರದೊಳ್ ವಿಷಮನದುಂ ಪಾಟಿ[ಪಾಠಾಂ. ಪಾರಿ. ಲೋಟ]ಸಿ ಮರಿಚದೊಳಿ: ಟಲ್ ಕೋಟಿಲತಾ ಕುಲಮಂದೇವುದಿಂತಿದಱಿದಿರೊಳ್ (ಐಮರ. ೬-೮೯). **ಪಾಳಿಸು₁**: ೧೦. ಜೊತೆಸೇರು; ಬೆರೆ; ಜೊತೆಯಾಗು: "ಪಾಳಿಸು - ಸಂಯೋಗೇ" (ಕಮಲ.). P ಇಲ್ಲಿ ಕುಳಸಹಿತವಾದ ರೂಪವು ಪ್ರಾಚೀನವಲ್ಲದು ದರಿಂದ ಪರ್ಯಾಯಪದವಾಗಿ ಗಣಿಸಲಾಗಿದೆ. [ಪಾಟ್ಚ₁ + -ಇಸು₁]

**ಪಾಟಿಸು₂** (ಕ್ರಿ). ೧. ಓದು; ಪಠಿಸು: ಬಗೆಬಗೆ ಜೈನಮನೋದದ ಮಿಗೆ ಪಾಟಿಸಿ ಕುಮತಿ ಕುಮತಮಂ ಪಲ್ಲಂ ನಾಲಗೆ ತಪ್ಪುವನ್ನಮಿರ ದೋದುಗೆ ಸಮ್ಯಕ್ತ್ವನಿಯಾಗಲೇನಱಿದಪನೇ (ಸಮಶ. ೩-೩೩). ೨. ಹೊಗಳು; ಕೀರ್ತಿಸು: ಪಾಟದೈವವಿದೆಂದು ನಾಡೊಳು ಪಾಟಿಸುವ ರೆಲೊ ಜಿನನ ವಿಧಿಗಳ ಕೋಟಲೆಯನೆಣಿಸುವಡೆ ತಾಂ ಫಣಿಪತಿಗೆ ಹವಣಲ್ಲ (ಐಶಪು. ೫೦-೭೩). ೩. ತಿಳಿದುಕೊಳ್ಳು; ಕಲಿತುಕೊಳ್ಳು; ಅಭ್ಯಾಸ ಮಾಡು: ತೋಟಿಗಳಸದರನೊಯ್ಯನೊಯ್ಯನೆ ಮನೋಭವನ ಧಾಟಿ ಗೊಳಗಾಗಿ ನಿಲಿಸುವ ಮದನಕಲೆಗಳಂ ಪಾಟಿಸುವ ಬಗೆಯನೆಳೆಯರ್ಗೆ ಕಲಿಸುವ . . . ಚಾರುಚೀಟಿಯರ್ ಚಲಿಸುವರ್ (ಕೃಬಾಶಾ. ೬-೩೭). ೪. ಪಳಗು; ಹತೋಟಿಗೆ ಬರು: ಪಾಟಿಸಿದಯಾಹವಮೃಗಂಗಳ ಬೇಟೆಗೊಳಿಸಿದ ಶಬರರಟವಿಯ ಪಾಟಿಸಿಹ ಹೊಲಮರಿಗಳಿಂದೈದಿದನು ದೆಸೆ ಗಳನು (ಐತ್ರಶ. ೧೧-೩). ೫. ರೂಢಿಯಾಗಿರು; ಅಭ್ಯಾಸವಾಗಿರು; ವಾಡಿಕೆಯಲ್ಲಿರು: ಪಾಟಿಸಿ ಮಾಡಿದ ಸೋರ್ಕಿವಳಾಟವು ವಲವೊಸಿಸಿ ನೆಗಟ್ಟ ನೀರಾಂಜನೆ . . . ನೋಟಕರಂ ತವದ ವಪಾಟಕ್ಕೆಯಂ ವೋಹಿಸಿ ದರ್ (ಅಂಶ. ೯-೩೮); ಮಸೆವುದು ಮಾಸಲಿರ್ದ ವಱವೇಟವನಿಟ್ಟಿಯ ಬಿಚ್ಚತಿಕ್ಕೆಯುಂ ಪೊಸಯಿಸುವುದೊಕ್ಕಮಂ ನಡಪುತಿರ್ಪುದು ಧಾತುವನೊಳ್ಳಿ ತೆಯ್ದು ಪಾಟಿಸುವುದು ಕೂಟದೊಳ್ ಕುಶಲನಪ್ಪುದು . . . ಬೇಱ ಪೆಱಪಾವುದು ಕೇಳಿಕೆಯುಂ ವಿಟತ್ವಮುಂ (ಕಾಂತಿಪು. ೮-೯೧).

[ಪಾಟ್ಚ₂ + -ಇಸು₁]

**ಪಾಟಿಸು₃** (ಕ್ರಿ). ೧. ಸೀಳು; ಹೋಳುಮಾಡು; ಕತ್ತರಿಸು: ಕಾಟಕ ನಾಗಿಹುದಮಂ ಮಿಗೆ ಪಾಟಿಸಿ ಮಾಱುತ್ತಮಿರ್ಪ ವೈತಂಸಿಕಂ (ಕಸ್ತುಕೋ. ೬೬-೮೩). ೨. ಕಳೆ; ನಾಶವಾಗು; ನಿವಾರಣೆಯಾಗು: ಕೋಟದಿನ ದೊಂದು ಯಾತನೆ ಪಾಟಿಸುಗುಂ ಮಾಯೆಕಾರನೀತನ ಚದುರಿಂ(ಕಸ್ತಶಂ.೬೦). ೩. ಕೀಳು; ಉತ್ಪಾಟಿಸು: ಸಮಂತು ಪಾಟಿಸುವನೊಯ್ಯನೆ ಮುಳ್ಳೊಳೆ ಮುಳ್ಳನೆಂದು ತಾನೀ ನಯದಿಂದೆ ಪೆರ್ಚಿ ಪೊರೆದಟ್ಟ ಱಿಳಂದೊಡನಾಡನಲ್ಲನೇ (ಕಂಕಶಾ. ೯-೩೭). [ಪಾಟನ + -ಇಸು₁]

**ಪಾಟಹೆಂಡ** (ನಾ). ಹಿಂದಿನ ದಿನದ ಹೆಂಡ; ಹಳೆಯ ಹೆಂಡ: ಗೌಡರ ಮಗ . . . ಪಾಟಹೆಂಡ ಮತ್ತು ಹೊಸಹೆಂಡ ಎಷ್ಟು ಅಂತ ಬೇರೆಬೇರೆ ಅಳೆಸಿ ಇಷ್ಟು ಹೊಸಹೆಂಡಕ್ಕೆ ಅಷ್ಟು ಪಾಟಹೆಂಡ ಎಂದು

ಸೇರಿಸಿ, ಶಿಸ್ತಿಗೆ ತುಂಬಿಸಿ ಮರಾಟಕ್ಕೆ ಕಳುಹಿಸುತ್ತಿದ್ದ (ಕಪ್ಪೂರು. ೧೩೯). [ಪಾಟ₁ + ಹೆಂಡ (<ಪೆಂಡ)]

**ಪಾಟೀಕ**, ಪಾಠೀಕ(ನಾ). ವಿದ್ವಾಂಸ ; ಪಂಡಿತ : ಸದ್ಬುಧ ಪುರೋಹಿತ . . . ಪಾಂಡಿತ್ಯ ಪಾಟೀಕ ಸಕಲವಿನಿಯೋಗ . . . ಸಂದಣಿಸೆ (ಕಥಕೋ. ೩೯-೧೮). **ಪಾಠೀಕ** : ಎಂತಹ ಪಾಠೀಕನಾಗಲಿ . . . ದಾಸರನ್ನು ಕಂಡರೆ ಸನ್ಯಾಸಿಗಳಿಗೆ ಮಾಡುವಂತೆ ನಮಸ್ಕಾರ ಮಾಡುವುದು ರೂಢಿಗೆ ಬಂತು (ಕಥಾ. ೩೯೧). [←ಮರಾ. ಪಠೀಕ. / ಸಂ. ಪಾಠಕ]

**ಪಾಟೀಲ** 'ಪಟ್ಟಾಯಿಲ' ನೋ.

**ಪಾಟೀಸವಾಲು**, ಪಾಟಿಸವಾಲು (ನಾ). (ನ್ಯಾಯಾಲಯದಲ್ಲಿ ಹಿಂದೆ ನಡೆದ ವಿಚಾರಣೆಯಿಂದ ತಿಳಿದು ಬಂದ ವಿಷಯಗಳನ್ನು ತಾಳೆ ನೋಡುವುದಕ್ಕಾಗಲಿ, ಮುಚ್ಚಿಟ್ಟ ವಿಷಯಗಳನ್ನು ಹೊರಡಿಸುವುದಕ್ಕಾಗಲಿ ಮಾಡುವ) ಪ್ರಶ್ನಾವಳಿ ; ಅಡ್ಡಸವಾಲು : ವಕೀಲರು ಪಾಟಿ ಸವಾಲು ಹಾಕುವುದೆಂದರೆ ಅದೊಂದು ಚಿತ್ರಹಿಂಸೆ (ಶಾಶಿಗೇ. ೯೩); ತನ್ನ ಅಂತರಾತ್ಮ ಎದುರಿಗೆ ಬಂದು ನಿಂತು ತನ್ನನ್ನು ಪಾಟೀಸವಾಲು ಮಾಡುತ್ತಿದೆಯೇನೋ ಎನಿಸಿತು ಅವನಿಗೆ (ನ್ಯಾಟಸ್ಸೀ. ೦೫೨); ಮಾರುದಿನ ಬೆಳಗ್ಗೆ ಇಂದಿರೆಯ ಪಾಟೀಸವಾಲಿಗೆ ಆರಂಭವಾಯಿತು (ಹಂಶಕು. ೦೨೨). **ಪಾಟಿಸವಾಲು** : ಏನಾದರೂ ಕಳುವಾಗಿದ್ದರೆ ಅವಳೊಬ್ಬಳೇ ಅದಕ್ಕೆ ಜವಾಬ್ದಾರಳೆಂದೂ ಪಾಟಿಸವಾಲು ನಡೆಸಿದಾಗ ಅಪಾದಿತೆಯಾದ ಯೆವ್ ಘೇನಿಯಾ ಬಾಷ್ಕೋವ ಹೇಳಿಕೆಯಿತ್ತಳು (ಪುಕಕು. ೯೯); ಇವಳ ಪಾಟಿಸವಾಲಿನ ಮುಂದೆ ತಮ್ಮ ರಾಯರತ್ವ ಸತ್ತ್ವವಿಲ್ಲದ್ದೆಂದು ರಾಯರು . . . ಬಲ್ಲರು (ಮಾಪುಪ. ೦೬೮). [ಪಾಟೀ₀ + ಸವಾಲು (<ಸವಾಲ್)]

**ಪಾಟು₁** 'ಪಾಡು₃' ನೋ.

**–ಪಾಟು₂** (ಪ್ರ). ಒಂದು ಕೃದಂತ ಭಾವನಾಮ ಪ್ರತ್ಯಯ : 'ತಿದ್ದುಪಾಟು' ಪರಾ.

**ಪಾಟುಗೆಡಿಸು** (ಕ್ರಿ). ಕಷ್ಟಕ್ಕೆ ಗುರಿಪಡಿಸು ; ದುರ್ಗತಿಗೆ ಈಡು ಮಾಡು : ಆಟವಲ್ಲವು ಕಪಟನಾಟಕಧಾರಕನೆ ಕಾಟಕಾರು ಕ್ರೂರನೋಟದಿಂದ ಪಾಟುಗೆಡಿಸಿ ಹೀನಕೋಟಲೆಯೊಳು ನೂಕಿ ಬೂಟಕತನ ಮಾಯದಾಟದಂತೆ (ಹೋಳ್ಗೆಂ. ೫೦-೧). [ಪಾಟುಗೆಡು + –ಇಸು₁]

**ಪಾಟುಗೆಡು** (ಕ್ರಿ). ರೀತಿಗೆಡು ; ನಡತೆಗೆಡು : ಪಾಟುಗೆಟ್ಟು ಹಂಗಕೊಡನೆ ಕೋಟಲೆಗೊಂಡು ತಿರುಗಬೇಡಿ ನೀಟುಗಾತಿಯರೊಲುಮೆ ಬೂಟಕವೆಂದು ತಿಳಿಯಿರೊ (ಪುರಂದ. ೨-೧೬-೧).
[ಪಾಟು₁ (<ಪಾಡು₃) + ಕೆಡು₁]

**ಪಾಟುಪಡು** 'ಪಾಡುಪಡು' ನೋ.

**ಪಾಟುಬಡಿಸು** 'ಪಾಡುಪಡಿಸು' ನೋ.

**ಪಾಟುಬಡು** 'ಪಾಡುಪಡು' ನೋ.

**ಪಾಟ್ಟು** (ನಾ). ೧. ತಮಿಳು ಹಾಡು,— ಸ್ತೋತ್ರ : ಅಂದೆಸಗಿ ನಾಲ್ಕನೆಯ ತಿರುವಂದಾದಿಯುಮಂ ಚತುರ್ನವತಿಯಂ ಪಾಟ್ಟಂ ಸಂದ ತಿರುಚಂದ್ರವೃತ್ತಮನೊಂದಿಸಿ ಪೇಟ್ದರ್ ಕಡಂಗಿ ನೂಱೆರ್ಪತ್ತಂ (ರಾಕೃತ. ೩-೩೮). ೨. ಕವಿತೆ; ಕಾವ್ಯ : ಪುಲಿಗೆಱೆಯ ತಿರುಳ ಕನ್ನಡದ ಪುರುಳ ರಸರಸದ ಬಾವಿ ಮನೆಮನೆಗೆ ತೀವಿ ತನ್ನೆರಡು ಪಾಟ್ಟು ಮೆಸೆಯೆ . . . ಪೆಂಪನ್ ಎಮ್ಮ ತಾಯ್ನುಡಿಗೀಗೆ ಪೊಸಪೊಸತು ಪೆಂಪನ್ (ಹೊಂಗಳು. ೩೯-೯). 'ಪಾಡು₃' ಪರಾ. [←ತಮಿ. ಪಾಟ್ಟು]

**ಪಾಟ್ಲ** 'ಪಾಟಲಿ₃' ನೋ.

**ಪಾಟ್ಲೋಣು** 'ಪಾಟಲೂನು' ನೋ.

**ಪಾಠ₁** (ನಾ). ಒಂದು ಬಗೆಯ ಮೂಲಿಕೆ ; ಅಗುಳುಶುಂಠಿ : "ದೀಪನೀ—ಅೞಲೆ, ಪಾಠ, ಓವ, ಮೆಂಥೆಯ" (ಒಕಂ. ೬೬). [ಸಂ. ಪಾಠಾ]

**ಪಾಠ₂** (ನಾ). ೧. ಓದು; ವಾಚನ. ೨. ಉಗ್ಗಡಣೆ ; ಘೋಷ ; 'ಸ್ತುತಿಪಾಠ' ಪರಾ. ೩. ಅಭ್ಯಾಸ ; ಅಧ್ಯಯನ : "ಅಧ್ಯಯನೇ, ಪಾಠದೊಳ್" (ಶಾಕಕ್ಷ. ೨೬೪) ; ಅಂದು ಪಾಠವು ಕಾಟ ಎಂದು ತಿಳಿದಿದ್ದೆ (ಶಂಫ. ೯-೨); ಪಾಠ್ಯ ಪಾಠಕ್ಕಾಗದು, ಏಡೊಡ್ಡ ಕೆಲಸಕ್ಕಾಗದು (ಗಾದೆ). ೪. ಕಲಿಸುವಿಕೆ ; ಅಧ್ಯಾಪನ : "ಅಧ್ಯಯನಂ, ಅಧ್ಯಾಪನಂ . . . ಅಧೀತ್‍‌— ಈ ರ ಪಾಠಂ" (ಶಾಕಕ್ಷ. ೧೬೪). ೫. ಪರಂಪರಾಗತವಾದ ಗ್ರಂಥಸ್ವರೂಪ : ಮಹಾಭಾರತಕ್ಕೆ ದಾಕ್ಷಿಣಾತ್ಯಪಾಠ, ಉತ್ತರೀಯಪಾಠವೆಂದು ಎರಡು ಪಾಠಗಳಿವೆ (ಶಾಶಕ. ೯೬). ೬. ಲಿಖಿತ ಭಾಗ, —ರೂಪ : ಕೆಲವು ಸಂದರ್ಭಗಳಲ್ಲಿ ಕವಿಯ ಪಾಠ ಇದೇ ಎಂದು ನಿಷ್ಕೃಷ್ಟವಾಗಿ ಹೇಳುವುದಕ್ಕಾಗದಿರಬಹುದು (ಕಜ್ಞಸಂ. ೦೬೨). ೭. ಅಭ್ಯಾಸಕ್ಕಾಗಿ ಆಯ್ದುಕೊಂಡ ಭಾಗ ; ಕಲಿಯುವುದಕ್ಕಾಗಿ ನಿಯೋಜಿಸಿಕೊಂಡ ಭಾಗ : ಒಂದೊಂದು ಪಾಠಕ್ಕೂ ಆಗುವಷ್ಟನ್ನು ಅರಿಸಿಕೊಂಡು ಪಾಠಮಾಡುವುದು ಸಂಪ್ರದಾಯವಾಗಿ ಬಂದಿದೆ (ಕ್ಷಿರ. ೨೨೦). ೮. ವೇದಾಧ್ಯಯನ ; ಬ್ರಾಹ್ಮಣನು ಪ್ರತಿನಿತ್ಯ ಮಾಡಬೇಕಾದ ಪಂಚಯಜ್ಞಗಳಲ್ಲಿ ಒಂದಾದ ಬ್ರಹ್ಮಯಜ್ಞ : "ಪಾಠಃ—ವೇದಪಾರಾಯಣ ಜಪಾದಿಗಳು . . . ಪಾಠವೇ ಬ್ರಹ್ಮಯಜ್ಞ" (ಸಿದ್ಧಾಂತ. ೨೧೬); ಎನಗೀ ಶಾಸ್ತ್ರಂ ಪಾಠಂ ಜನರಂಜನ ಮಾಡಿ ಪೇಟ್ದು ಕಟುವೆಂ ಪೊಟ್ಟಂ (ಅಬ್ಬಕು. ೧-೨೬). ೯. ವಿವೇಕ ; ತಿಳಿವಳಿಕೆ : ಆ ಅಹಂಕಾರಿಗೆ ಸರಿಯಾದ ಪಾಠವನ್ನು ಕಲಿಸಬೇಕು (ದೂಪ).

**ಪಾಠಮಾಡು**=೧. ಕಲಿಸು ; ಪಾಠ ಹೇಳು : ಈಗ ಬಂದಿರುವ ಹೊಸ ಮೇಷ್ಟರು ಬಹಳ ಚೆನ್ನಾಗಿ ಪಾಠಮಾಡುತ್ತಾರೆ (ದೂಪ). ೨. ಉರು ಹೊಡೆ ; ಗಟ್ಟಿಮಾಡು ; ಬಾಯಿಪಾಠ ಮಾಡು : ಇನ್ನು ಅರ್ಥ ಗೊಟಿಯಲ್ಲಿ ಈ ನಾಲ್ಕು ಮಗ್ಗಿಗಳನ್ನು ಪಾಠ ಮಾಡು (ದೂಪ). [ಸಂ.]

**ಪಾಠಕ** (ನಾ). ೧. ಬಿರುದಾವಳಿಗಳನ್ನು ಹೊಗಳಿ ಹಾಡುವವನು ; ಭಟ್ಟಂಗಿ : ಕವಿಗಳಿಗೆ ಪಾಠಕಜನಕೆ ದೈವಜ್ಞರಿಗೆ ವೈದ್ಯರ್ಗೆ . . . ಎಱೆದು (ಶಬಕ್ಷ. ೫೯-೫೯); ಮುನಿಗಳೇ ಮಾಣಿಯರು . . . ಸೂರ್ಯಾದಿಗಳೇ ಸಹಚರರು ಘನಚತುರ್ದಶವಿದ್ಯೆ ಪಾಠಕಜನವೈ (ಶಂವ್ಯಾಸ. ೦-೯೦) ; ಬಪರದಾದಿಯಲುಸುರಪತಿಯುಪ್ಪವಡಿಸಿದನಿದ್ದೆಸಯ ಮಂಗಳರವದ ಪಾಠಕ ಸೂತಮಾಗಧರುಗಳ ಸೂಕ್ತಿಯಲಿ (ಕುರಂಗ. ೬-೨೦-೦೦). ೨. ಓದುವವನು ; ಓದುಗ ; ವಾಚಕ : "ಓದಾಳಿಯೆಂದು ಪಾಠಕಂ" (ಕಕಾ. ೬೦-೩೨೯); ಕೆಲವು ಪಾಠಕರು ಈ ಗ್ರಂಥದ ಕೊನೆಯನ್ನು ನೋಡಿ ದುಃಖಿತರಾಗಬಹುದು (ಹಂಶಕು. ೧೬೭); ಈ ದೀರ್ಘ ವಿವರಣೆಯು ಪಾಠಕರಿಗೆ ಬೇಸರವಾಗಬಹುದು (ಕೀವಾಕ್ಯ. ೦೮೦). ೩. ಕಲಿಸುವವನು ; ಶಿಕ್ಷಕ ; ಗುರು. ೪. ವೇದ, ಪುರಾಣ ಮೊದಲಾದುವುಗಳನ್ನು ಓದಿ ಹೇಳುವವನು ; ಪ್ರವಚನಕಾರ. [ಸಂ.]

**ಪಾಠಕರಣ** (ನಾ). [ಸಂಗೀತ] ನೂರೆಂಟಂ ತಾಳಗಳಲ್ಲಿ ಒಂದು : ಧ್ರುವ ಮಟಯ . . . ಪಾಠ[ ಪಾಠಂ. ಟೀ]ಕರಣ . . . ಜಯಾಳ ವೆಂಬವೇ ಮೊದಲಾದ ನೂಱೆಂಟು ತಾಳಂಗಳು (ಏಕೀಕ. ೦೯೨). [ಸಂ.]

**ಪಾಠಕಲಿ** (ಕ್ರಿ). ೧. ಅಭ್ಯಾಸಮಾಡು : ಜನನಿಯಿಂದ ಪಾಠಕಲಿತ ಜನನು ಧನ್ಯರು (ಕಕಪು. ೫-೧೧೮). ೨. ಅನುಭವದಿಂದ ತಿಳಿದುಕೊಳ್ಳು ; ಬುದ್ಧಿಕಲಿ : ಆ ದುಷ್ಟನು ಸರಿಯಾಗಿ ಪಾಠಕಲಿಯುವಂತೆ ಮಾಡಬೇಕು (ದೂಪ). [ಪಾಠ₂ + ಕಲಿ₁ (<ಕಲ್₁)]

**ಪಾಠಕಲಿಸು** (ಕ್ರಿ). ೧. ಪಾಠವನ್ನು ಹೇಳಿಕೊಡು : ಆ ಪಂಡಿತರು ತುಂಬ ಚೆನ್ನಾಗಿ ಪಾಠ ಕಲಿಸುತ್ತಾರೆ (ದೂಪ). ೨. (ಶಿಕ್ಷೆಗೊಳಗಾಗಿಸಿ) ತಪ್ಪನ್ನು ತಿದ್ದಿಕೊಳ್ಳುವಂತೆ ಮಾಡು ; ಬುದ್ಧಿಕಲಿಸು : ಬಲು

ಸೊಕ್ಕಿಗೆ ಬಂದಿದ್ದಾನೆ, ಅವನಿಗೆ ಪಾಠ ಕಲಿಸಬೇಕಾಗಿದೆ (ಕೂತಿ). [ಪಾಠ$_3$ + ಕಲಿಸು$_1$]

**ಪಾಠಕಾಱ** (ನಾ). ಭಟ್ಟಂಗಿ ; ಸ್ತುತಿಪಾಠಕ : ಪೊಗೞುತೆ ಪರ್ವಪರ ಸರಂಗಳೊಳಂ ಪಾಡುವ ಪಾಠಕಾಱರಿಂಚರಂಗಳೊಳೆಲ್ಲಂ ದಿಗ್ಭಿತ್ತಿಗಳ್ ತೆಕ್ಕನೆ ತೀವೆ (ಶಂಕರಾ. ೩-೫೪ ವ). [ಪಾಠ$_3$ + -ಕಾಱ]

**ಪಾಠಕಿ** (ನಾ). ಕಲಿಸುವವಳು ; ಅಧ್ಯಾಪಿಕೆ : "ಅಧ್ಯೇತ್ರೀ = ಪಾಠಕಿ" (ಶಾಶಕ. ೧೬೪). [ಸಂ. ಪಾಠಕೀ]

**ಪಾಠಕ್ರಮ** (ನಾ). ೧. ಓದಬೇಕಾದ ಕ್ರಮಂ ; ಅಭ್ಯಾಸ ಮಾಡಬೇಕಾದ ಕ್ರಮಂ : ವರ್ಣಂಗಳ ಪಾಠಕ್ರಮಮವರ್ಣವವ್ಯತಧಾತ್ರಿಯೊಳ್ ಪ್ರಸಿದ್ಧಂ (ಶಬ್ದ. ೪). ೨. ಗ್ರಂಥದಲ್ಲಿರುವ ವಿಷಯದ ಅನುಕ್ರಮ : ಜ್ಞಾನಾವರಣೀಯಂ . . . ಅಂತರಾಯಮೆಂದಿಂತು ಮುಂ ಪೇಳ್ದ ಪಾಠಕ್ರಮಮಪ್ಪ ಪ್ರಕಾರದಿಂದಂ ಸಿದ್ಧಮಾದುದು (ಗೂಢ್ಯಸಾ. ೨-೮). [ಪಾಠ$_3$ + ಕ್ರಮ]

**ಪಾಠಗ್ರಂಥಿ** (ನಾ). (ಹಸ್ತಪ್ರತಿಯಲ್ಲಿ) ಮೂಲಪಾಠವೇನಿರಬಹುದೆಂದು ಊಹಿಸಲಾಗದಂತೆ ಕೆಟ್ಟುಹೋಗಿರುವ ಪಾಠ ; ಸಮಸ್ಯಾತ್ಮಕವಾದ ಪಾಠ : ಇಂಥ ಅಪರಿಹಾರ್ಯವಾದ ಅತಿ ದುಷ್ಟ ಪಾಠಕ್ಕೆ ಪಾಠಗ್ರಂಥಿ (Crux) ಎಂಬ ಹೆಸರನ್ನು ಕೊಟ್ಟಿದೆ (ಕನ್ನಸಂ. ೨೦೭). [ಪಾಠ$_3$ + ಗ್ರಂಥಿ]

**ಪಾಠನ** (ನಾ). ಕಲಿಸುವಿಕೆ ; ಅಧ್ಯಾಪನ : ಓದಿಸುವ ಬುಧವರನ ಬರಿಸಿ ಪೊಲಿದು . . . ಪುತ್ರಚಿಂತಾಮಣಿಯ ಪಾಠನದ ಬುಧವರನ ಚರಣಗಳಿಗೆರಗಿಸುತ್ತ ಕಳುಹೆ (ಪಪಪೋ. ೧೫-೬೧). [<ಸಂ. ಪಾಠನ]

**ಪಾಠದೋಷ** (ನಾ). ಗ್ರಂಥಗಳಲ್ಲಿ ಕಾಣುವ ಅಶುದ್ಧವಾದ ಅಥವಾ ತಪ್ಪಾದ ಬರವಣಿಗೆ : ಈ ಎರಡು ಪ್ರಧಾನದೋಷಗಳಿಂದ ಉದ್ಭವಿಸುವ ಪಾಠದೋಷಗಳ ಬಗ್ಗೆ ಇನ್ನೊಂದು ಅಧ್ಯಾಯದಲ್ಲಿ ಹೇಳಲಾಗುತ್ತದೆ (ಭಾರಶ. ೩೦). [ಪಾಠ$_3$ + ದೋಷ]

**ಪಾಠನಿರ್ಣಯ** (ನಾ). (ಹಳೆಯ ಗ್ರಂಥಗಳ ಹಸ್ತಪ್ರತಿಗಳನ್ನು ತಾಳೆ ನೋಡಿ) ಸರಿಯಾದ ಪಾಠ ಯಾವುದೆಂಬುದನ್ನು ನಿರ್ಧರಿಸುವಿಕೆ : ಪಾಠನಿರ್ಣಯದ ವಿಷಯದಲ್ಲಿ ತೋರುವ ವ್ಯವಸ್ಥಿತವೂ ಕೌಶಲ್ಯಪೂರ್ಣವೂ ಆದ ವಿವೇಚನೆಯಿಂದು ಇದನ್ನು ಸೂತ್ರಿಸಬಹುದು (ಭಾರಶ. ೯); ಹಸ್ತಪ್ರತಿಗಳ ಆಧಾರದ ಮೇಲೆ ಅದರ ಪಾಠನಿರ್ಣಯ ಮಾಡುವುದು (ಕನ್ನಸಂ. ೨೮). [ಪಾಠ$_3$ + ನಿರ್ಣಯ]

**ಪಾಠಪರಿಷ್ಕರಣ** (ನಾ). ಹಳೆಯ ಹಸ್ತಪ್ರತಿಗಳಲ್ಲಿರುವ ಪಾಠದೋಷಗಳನ್ನು ನಿವಾರಿಸುವಿಕೆ : ಎಲ್ಲ ಸಿದ್ಧತೆಗಳನ್ನೂ ಮಾಡಿಕೊಂಡ ಮೇಲೆ ಗ್ರಂಥಸಂಪಾದನಕಾರ್ಯ ಪಾಠಪರಿಷ್ಕರಣದಲ್ಲಿ ಪರ್ಯವಸಾನವಾಗುತ್ತದೆ (ಕನ್ನಸಂ. ೦೬೩); ಅತ್ಯುತ್ತಮಹಸ್ತಪ್ರತಿ ಇಲ್ಲವೆ ದಾಖಲೆಗಳಲ್ಲಿಯೂ ಸಹ ಕಂಡುಬರುವ, ಆದರೆ ನಂಬಲು ಯೋಗ್ಯವಲ್ಲದ ಅಂಶಗಳನ್ನು ಹಸ್ತಪ್ರತಿಸಂಪ್ರದಾಯದಿಂದ ತೆಗೆದುಹಾಕುವುದೇ ಪಾಠಪರಿಷ್ಕರಣ . . . ಗ್ರಂಥಕಾರನ ಪಾಠದ ಮೂಲರೂಪವನ್ನು ಸಾಧಿಸುವುದು (ಭಾರಶ. ೪೧). [ಪಾಠ$_3$ + ಪರಿಷ್ಕರಣ]

**ಪಾಠಭೇದ** (ನಾ). ಪ್ರಾಚೀನಕಾವ್ಯಗಳ ಹಸ್ತಪ್ರತಿಗಳಲ್ಲಿರುವ ಬೇರೆ ಬೇರೆ ಪಾಠ ; ಪಾಠಾಂತರ : ಗ್ರಂಥಗಳಲ್ಲಿ ಪಾಠಭೇದಗಳುಂಟಾಗುವುದು, ಪ್ರಕ್ಷೇಪಗಳಾಗುವುದು, ಗ್ರಂಥಪಾತವಾಗುವುದು, ಅಸ್ತವ್ಯಸ್ತವಾಗುವುದು, ಪ್ರತ್ಯಂತರಗಳ ಸಹಾಯದಿಂದ ಪಾಠಶೋಧನೆ ಮಾಡುವುದು —ಇವೇ ಮುಂತಾದುವನ್ನು ಪ್ರಾಚೀನ ಭಾರತೀಯವಿದ್ವಾಂಸರು ಬಲ್ಲವರಾಗಿದ್ದರು (ಕನ್ನಸಂ. ೧೦) ; ಈ ಉಪನಿಷತ್ತಿನ ಎರಡು ಬೇರೆಬೇರೆ ಪ್ರತಿಗಳಲ್ಲಿ ಪಾಠಭೇದವಿದೆ (ಶಿಲಾಶ್ಯ. ೨೦೭). [ಪಾಠ$_2$ + ಭೇದ]

**ಪಾಠಭ್ರಾಂತಿ** (ನಾ). ಹಸ್ತಪ್ರತಿಯನ್ನು ಬರೆಯುವವನ ತಪ್ಪಿನಿಂದಾಗಿ ಉಂಟಾದ ಪಾಠ : ಪಾಠಭ್ರಾಂಶಿ ಮತ್ತು ಅವುಗಳನ್ನು ಪರಿಹರಿಸುವ ಪ್ರಯತ್ನಗಳು (ಭಾರಶ. ೬೭). [ಪಾಠ$_3$ + ಭ್ರಾಂತಿ]

**ಪಾಠಮಿಶ್ರಣ** (ನಾ). ಬೇರೆ ಬೇರೆ ಸಂಪ್ರದಾಯದ ಪಾಠಗಳನ್ನು ಮಿಶ್ರಣ ಮಾಡಿ ಬರೆಯುವಿಕೆ : ಭಿನ್ನಶಾಖೆಗಳು ಹೀಗೆ ಒಂದರೊಡನೊಂದು ಸೇರುವುದಕ್ಕೆ ಪಾಠಮಿಶ್ರಣ (Crossing or Intermixing) ಎಂದೂ . . . ಹೆಸರು (ಭಾರಶ. ೫೪) ; ಎಲ್ಲ ಪ್ರತಿಗಳ ಉತ್ತಮಾಂಶಗಳನ್ನೊಳಕೊಂಡ ಒಂದು ಪಾಠವನ್ನು (Eclectic text) ಸಂಪಾದಕನು ಕೊಡಬೇಕಾಗುತ್ತದೆ. ಆಗ ಅದರಲ್ಲಿ ಭಿನ್ನಸಂಪ್ರದಾಯಗಳ ಪಾಠಮಿಶ್ರಣ ಆಗಲೇಬೇಕಾಗುತ್ತದೆ (ಕನ್ನಸಂ. ೧೬೬). [ಪಾಠ$_3$ + ಮಿಶ್ರಣ]

**ಪಾಠಯಿಸು** 'ಪಾಠಿಸು' ನೋ.

**ಪಾಠಯೋಜನೆ** (ನಾ). ಭಿನ್ನಭಿನ್ನಪ್ರತಿಗಳ ಉತ್ತಮಾಂಶಗಳನ್ನು ಆಯ್ದುಕೊಂಡು ಬಹುಶಃ ಸರಿಯೆನ್ನಿಸಬಹುದಾದ ಪಾಠವನ್ನು ನಿರ್ಮಿಸುವುದು: ಈ ರೀತಿಯ ಪಾಠಯೋಜನೆಯನ್ನು ಕೆಲವರು ಸಂಪಾದನಶಾಸ್ತ್ರಜ್ಞರು ಒಪ್ಪುವುದಿಲ್ಲ . . . ಉತ್ತಮಪ್ರತಿಗಳು ದೊರೆತಂತೆಲ್ಲ ಇಂಥ ಪಾಠಯೋಜನೆಯಲ್ಲಿ ವ್ಯತ್ಯಾಸಗಳನ್ನು ಮಾಡುತ್ತಲೇ ಇರಬೇಕಾಗುತ್ತದೆ (ಕನ್ನಸಂ. ೧೬೬). [ಪಾಠ$_3$ + ಯೋಜನೆ]

**ಪಾಠವಿಕಲತೆ** (ನಾ). ಗ್ರಂಥಸ್ವರೂಪವು ಕೆಟ್ಟುಹೋಗುವಿಕೆ; ಗ್ರಂಥದ ಮೂಲಶಬ್ದಸ್ವರೂಪವು ಬದಲಾಗುವಿಕೆ : ಪಾಠವಿಕಲತೆ ಎಷ್ಟು ಶೀಘ್ರಗತಿಯಲ್ಲಿ ಘಟಿಸುತ್ತಾ ಹೋಗುವುದೆಂದರೆ ಹೊಸ ಸ್ವಾಲಿತ್ಯಗಳ ಹುಲುಸುಬೆಳೆಯಲ್ಲಿ ಮೂಲಪಾಠಾಂತರಗಳು ಮರೆಯಾಗಿ ಬಿಡುತ್ತವೆ (ಭಾರಶ. ೬೬). [ಪಾಠ$_3$ + ವಿಕಲತೆ]

**ಪಾಠಶಾಲೆ** (ನಾ). ವಿದ್ಯಾಭ್ಯಾಸ ಮಾಡುವ ಸಂಸ್ಥೆ ; ವಿದ್ಯಾಲಯ : ಸುರಬಾಲೆಯ ಸಂಗಡ ಒಟ್ಟಾಗಿ ಪಾಠಶಾಲೆಗೆ ಹೋಗಿದ್ದೇನೆ (ಇಶ್ಯಕ. ೮); ಮನೆಯೆ ಮೊದಲ ಪಾಠಶಾಲೆ (ಕಶಕು. ೫-೧೪೮). [ಪಾಠ$_3$ + ಶಾಲೆ$_2$]

**ಪಾಠಶೋಧಕ** (ನಾ). ಗ್ರಂಥದ ಸರಿಯಾದ ಪಾಠವನ್ನು ಕಂಡುಹಿಡಿಯುವವನು : ಅವನ ಮುಂದಿನ ಕೆಲಸ ಪ್ರಾಮಾಣಿಕನಾದ ಪಾಠಶೋಧಕನ ಕೆಲಸ, ಪಾಠವಿಮರ್ಶಕನ ಕೆಲಸವಲ್ಲ (ಭಾರಶ. ೬೭). [ಪಾಠ$_3$ + ಶೋಧಕ]

**ಪಾಠಶೋಧನೆ** (ನಾ). ಗ್ರಂಥದ ಸರಿಯಾದ ಪಾಠವನ್ನು ಗೊತ್ತುಪಡಿಸುವಿಕೆ : ಪ್ರತ್ಯಂತರಗಳ ಸಹಾಯದಿಂದ ಪಾಠಶೋಧನೆ ಮಾಡುವುದು (ಕನ್ನಸಂ. ೧೧). [ಪಾಠ$_3$ + ಶೋಧನೆ]

**ಪಾಠಸಂಪ್ರದಾಯ** (ನಾ). ಕಾವ್ಯಗಳಲ್ಲಿ ಸಾಂಪ್ರದಾಯಿಕವಾಗಿ ಬಂದಿರುವ ಗ್ರಂಥಪಾಠ ಮತ್ತು ಅದನ್ನು ಅನುಸರಿಸಿರುವ ಪದ್ಧತಿ : ಪ್ರತಿ ಮಾಡುವ ಕೆಲಸ ಯಾವ ಊರಿನಲ್ಲಿ ನಡೆಯಿತೆಂಬುದು ಗೊತ್ತಾಗುತ್ತದೆ. ಇದರಿಂದ ಪ್ರಾದೇಶಿಕ ಪಾಠಸಂಪ್ರದಾಯಗಳನ್ನು ತಿಳಿಯಲು ನೆರವಾಗುತ್ತದೆ (ಕನ್ನಸಂ. ೫೩). 'ಪಾಠಸಂಪ್ರದಾಯನಿರ್ಣಯ' ಪರಾ. [ಪಾಠ$_3$ + ಸಂಪ್ರದಾಯ]

**ಪಾಠಸಂಪ್ರದಾಯನಿರ್ಣಯ** (ನಾ). ಒಂದು ಗ್ರಂಥದಲ್ಲಿ ಯಾವುದಾದರೊಂದು ಶಬ್ದವು ಬೇರೆ ಬೇರೆ ಪರಂಪರೆಗಳಲ್ಲಿ ಉಲ್ಲೇಖಿತವಾಗಿದ್ದರೆ ಯಾವ ಸಂಪ್ರದಾಯಕ್ಕೆ ಹೆಚ್ಚು ಪ್ರಾಧಾನ್ಯ ಕೊಡಬೇಕೆಂದು ತೀರ್ಮಾನಿಸುವುದು : ಪಾಠಸಂಪ್ರದಾಯನಿರ್ಣಯ (Recension) : ಮೇಲೆ ಹೇಳಿದ ಸಾಮಗ್ರಿಗಳ ಮೂಲರೂಪವನ್ನು ಸಾಧಿಸುವುದು (ಭಾರಶ. ೪೧). [ಪಾಠಸಂಪ್ರದಾಯ + ನಿರ್ಣಯ]

**ಪಾಠಸಾಕ್ಷಿ** (ನಾ). ಹಸ್ತಪ್ರತಿಗಳನ್ನು ತಾಳೆ ನೋಡುವುದರಿಂದ ಸಿಕ್ಕುವ ಮೂಲಗ್ರಂಥಸ್ವರೂಪಗಳ ಆಧಾರ : ಹಸ್ತಪ್ರತಿಗಳ ಪಾಠಸಾಕ್ಷಿ

ಗಳನ್ನು ತೂಗಿನೋಡುವುದು ; ಅವು ತಪ್ಪಾಗಿದ್ದರೆ ಅವನ್ನು ತಿದ್ದುವುದು ಅಥವಾ ಸರಿಪಡಿಸುವುದು (ಕನ್ನಸಂ. ೨೦). [ಪಾಠ₂ + ಸಾಕ್ಷಿ]

**ಪಾಠಹೇಳು** (ಕ್ರಿ). ಕಲಿಸು ; ವಿದ್ಯಾಭ್ಯಾಸ ಮಾಡಿಸು : ಅವನ ಮೈಯನ್ನು ಮುಟ್ಟದೆ ಪಾಠ ಹೇಳಲಿಕ್ಕೆ ನನ್ನಿಂದಾಗದು (ಮರಚು. ೧೭೯). [ಪಾಠ₂ + ಹೇಳು (<ವೇೞ್)]

**ಪಾಠಾಂತರ** (ನಾ). ಹಸ್ತಪ್ರತಿಗಳಲ್ಲಿ ದೊರೆಯುವ ಬೇರೆಬೇರೆ ಪಾಠ : ಇದಕ್ಕೆ ಕೆಲವು ಪಾಠಾಂತರಗಳೂ ಉಂಟು (ಕುಮಾರಾ. ೨೩); ಹಸ್ತಪ್ರತಿಗಳನ್ನು ಪರಸ್ಪರ ಹೋಲಿಸಿ ಪಾಠಾಂತರಗಳಲ್ಲಿ ಉಚಿತವಾದುವನ್ನು ಆರಿಸಿಕೊಳ್ಳುವ ಕ್ರಮವನ್ನು ಈತನು ಅವಲಂಬಿಸಿರುವುದು ಮುಖ್ಯವಾದುದಾಗಿದೆ (ಕನ್ನಸಂ. ೦೫); ಲಭ್ಯಪ್ರತಿಗಳ ಪ್ರಮಾಣಗಳನ್ನು ಪಾಠಾಂತರದಿಂದ (Collation) ನಿರ್ಧರ ಮಾಡಿಕೊಳ್ಳಬೇಕು (ಶಾಲತ. ೯೧). [ಸಂ.]

**ಪಾಠಾಳಿ** (ನಾ). ದೇವಸ್ಥಾನದಲ್ಲಿ ಮಂತ್ರಗಳನ್ನೂ ಸ್ತೋತ್ರಗಳನ್ನೂ ಪಠಿಸುವವನು : ಉದಯಕಾಲದಲ್ಲಿ ನೈವೇದ್ಯಕ್ಕೆ ಪಾಠಾಳಿ ಹೊಯ್ದ ಪಡಿಯಿಂದಲೂ ದಿನವೊಂದಕ್ಕೆ ಪೇಟೆಯ ಮಾಡಿ ೪ ಅಕ್ಕಿಯ ಲೆಕ್ಕದಲ್ಲಿ (ಕ್ಯಶಾ. ೧೯೨೮, ೦೦೨-೦೯; 1698); ಈ ಹಾಡುಗಳನ್ನು ಹಾಡುವಾಗ ಪಾಠಾಳಿ (ಪಾಟಾಳಿ) ಎಂಬುವನು ಪ್ರತ್ಯೇಕ ವ್ಯಕ್ತಿ. ಅವನ ಕೆಲಸಗಳಲ್ಲಿ ದೇವರ ಸ್ತುತಿಪಾಠ ಒಂದು (ಜಾನಪ. ೦೫): ಈಗಲೂ ಪೆರಡೂರು, ಎಲ್ಲೂರು ದೇವಸ್ಥಾನಗಳಲ್ಲಿ ಪಾಠಾಳಿಯು ಶಿವಳ್ಳಿಬ್ರಾಹ್ಮಣವರ್ಗಕ್ಕೆ ಸೇರಿದವರು ಆಗಿರುವರು (ತುಳುಜಾ. ೧೦೯). [ಪಾಠ₂ + -ಆಳಿ₃]

**ಪಾಠಿ** (ನಾ). ಒಂದು ಬಗೆಯ ಸಸ್ಯ ; ಚಿತ್ರಮೂಲ : "ಪಾಠಿನ್, ಚಿತ್ರಕಃ, ವಹ್ನಿಸಂಜ್ಞಕಃ–ಇ ಚಿತ್ರಮೂಲದ ಪೆಸರುಗಳು" (ಸಿದ್ಧಾಂತಿ. ೧೩೦). [ಸಂ. ಪಾಠಿನ್]

**ಪಾಠಿಸು**, ಪಾಠಯಿಸು (ಕ್ರಿ). ೧. ಓದು ; ಪಠನಮಾಡು ; ಅಧ್ಯಯನ ಮಾಡು : ಪರಿಪ್ರಶ್ನಾನಂತರಂ ಪಾಠಿಸಲ್ ಪೋಗವೇಟ್ ಕನ್ಯಾಭವನಕ್ಕೆ ಪೋದರ್ (ಪಾರ್ಶ್ವಪು. ೫೫). ೨. ಓದಿಸು : ಕೃಷ್ಣಚರಿತೆಯ ಪೀಠಿಕೆಯೊಳಗೋದು ಪದನ ಪಾಠಿಸಿ ಕೇಳಿದ ಸುಜನರ್ಗೆ ಮುಕುತಿಪಥದೊಟಿಯ ಸಂಸರ್ಗವಹುದು (ಕೋಟಕ. ೦-೭೯). ೩. ಸಾಧಿಸು ; ರೂಢಿಸಿಕೊಳ್ಳು : ಘನವಿವೇಕವನುಳ್ಳವರು ಹಗೆತನವ ಪಾಠಿಸಿ ಮುಳುಗರಧಿಕಭವಾಂಬುರಾಶಿಯಲಿ (ತತ್ತ್ವಕ. ೦-೭); ಪಾಟವವು ಮೈಗಿರಲಿ ನೋಟ ತತ್ತ್ವದೊಳಿರಲಿ ಪಾಠಿಸು ಸಮನ್ವಯವ (ಮುಂಕುಶ. ೨೬೦). **ಪಾಠಯಿಸು** : ೪. ಉರು ಹೊಡೆ ; ಕಂಠಪಾಠ ಮಾಡು : ಕೋಟಿಗೀತವನೋದಿ ಪಾಠಯಿಸಿ ಫಲವೇನು ಕೂಟಸ್ಥನಲ್ಲದವನೋದು ಗಿಳಿ ಕಲಿತ ಪಾಠದಂತಕ್ಕು (ಸರ್ವಜ್ಞ. ೪೯೦). [ಪಾಠ + -ಇಸು₁]

**ಪಾಠೀಕ** 'ಪಾಟೀಕ' ನೋ.

**ಪಾಠೀನ** (ನಾ). ೧. ಸಾರ್ವಜನಿಕರಿಗೆ ಪುರಾಣ, ಪುಣ್ಯಕಥೆಗಳನ್ನು ಓದಿ ಹೇಳುವವನು; ಪುರಾಣಿಕ. ೨. ಒಂದು ಬಗೆಯ (ದೊಡ್ಡ) ಮೀನು,- ಮತ್ಸ್ಯ : "ಮೀನಂ ಶಫರಂ ತಿಮಿ ಪಾಠೀನಂ ಝಷಮನಿಮಿಷಂ ವಿಸಾರಂ ಮತ್ಸ್ಯಂ ಮೀನನಮೆಸರ್" (ಅಭಿನ್ನಕೋ. ೨೨-೫); ಉತ್ಕಟಮಕಲಾಹನಕಠಿನ್ನ ಪಾಠೀನಮತ್ಸ್ಯಕಚ್ಛಪದನಕ್ರಾದಿ ನಾನಾಜಲಚರನಿಕರ . . . ರೌದ್ರಂ ಸಮುದ್ರಂ (ಅನ್ನಾಣಾ. ೭೯). ೩. ಮತ್ಸ್ಯಾವತಾರಿಯಾದ ವಿಷ್ಣು : ಕೃಷ್ಣ ಪಾಠೀನ ಕಮಠ ವರಾಹ ವರ್ಧಿಷ್ಣು ನೃಸಿಂಹ ವಾಮನಾಖ್ಯ ಜಿಷ್ಣು ರಾಮತ್ರಯ ಬುದ್ಧರೂಪ ಕಲ್ಕಿವಿಷ್ಣು ರಂಗಾ ರಕ್ಷಿಸನ್ನ (ಕಠಸಾಂ. ೬೫-೨೫). [ಸಂ.]

**ಪಾಠೀನಪಾಳಿ** (ನಾ). ೧. ಮನ್ಮಥನ ಬಾವುಟ : ಮೀನಧ್ವಜ. ೨. ಮನ್ಮಥ ; ಕಾಮ : ಮಂತ್ರಿಯುಮನ್ನನಿಖಿಳಸೇನಾಧಿಪರು ಸಹಿತ ಒಂದು ಭಾವು ನೀನಲ್ಲದಿನ್ನಾರೆಮ್ಮ ಸಲಹೆಂಬುತಾ ಪೊಳೆವ ಪಾಠೀನಪಾಳಿಯಡಿಗೊಂದಿಸಲು . . . ಅವರ್ಗೆಯಭಯಮನಿತ್ತು ಮನ್ನಿಸಿದನು (ಕವಪೋ. ೧೨-೯೩). [ಪಾಠೀನ + ಪಾಳಿ₄ (=ಪಾಲಿ₂)]

**ಪಾಠೆ** (ನಾ). ೧. ಒಂದು ಬಗೆಯ ಮೂಲಿಕೆ ; ಅಗುಳ್ಚರಂತಿ ; "ಪಾಠೆಯೆಂದೆನಲಗುಳುಶುಂಠಿಯುಕ್ಕುಂ" (ಮುಂಗಣ. ೪೩-೯೦). ೨. ಒಂದು ಬಗೆಯ ವನಸ್ಪತಿಯ ಬೇರು ; "ಸಿತಪಾಟಲಿ" (ಕಂಠಿಕ. ೨೩೩). [ಸಂ. ಪಾಠಾ]

**ಪಾಠೋಪಕರಣ** (ನಾ). ಪಾಠವನ್ನು ಕಲಿಸುವಾಗ ಸಹಾಯಕವಾಗಿ ಬಳಸುವ ಚಿತ್ರ, ವಿಗ್ರಹ, ಫಲಕ ಮೊದಲಾದ ಸಲಕರಣೆ : ಬೋಧನಕ್ರಮ ಹೆಚ್ಚು ಫಲಪ್ರದವಾಗಬೇಕಾದರೆ ಹಲವು ಸಲಕರಣೆಗಳು ನೆರವಾಗುತ್ತವೆ. ಅವನ್ನು ಪಾಠೋಪಕರಣಗಳೆಂದು ಕರೆಯಬಹುದು (ಶಿಕ್ಷ. ೨೩೫). [ಪಾಠ₂ + ಉಪಕರಣ]

**ಪಾಠ್ಯ** (ಗು). ೧. ಓದಬೇಕಾದ ; ಪಠಿಸಬೇಕಾದ. (ನಾ). ೨. ಓದಬೇಕಾದುದು ; ಪಠಿಸುವಂತಹುದು : ಮೊದಲಿನಲ್ಲಿ ಸಾಹಿತ್ಯಕ ಕೃತಿಗಳು ಕೇವಲ ಗೇಯ ಅಥವಾ ಪಾಠ್ಯವಾಗಿದ್ದುವು (ಅಂಕಾ. ೨೦೫). ೩. ಹಾಡಿನ ಸಾಹಿತ್ಯ : ಬ್ರಹ್ಮನು . . . ಋಗ್ವೇದದಿಂದ ಪಾಠ್ಯವನ್ನೂ ಸಾಮವೇದದಿಂದ ಸಂಗೀತವನ್ನೂ ಯಜುರ್ವೇದದಿಂದ ಅಭಿನಯವನ್ನೂ ಅಥರ್ವವೇದದಿಂದ ರಸವನ್ನೂ ತೆಗೆದುಕೊಂಡು ನಾಟ್ಯವೇದವನ್ನು ನಿರ್ಮಿಸುತ್ತಾನೆ (ಭಾರರ. ೩೩೦). 'ಪಠ್ಯ' ಪರಾ. [ಸಂ.]

**ಪಾಡ್** 'ಪಾಂಡು' ನೋ.

**ಪಾಡಗ₁**, ಹಾಡಂಗಿ, ಹಾಡಗ (ನಾ). ತೇಗದ ಮರ : "ಪಾಡಗಮೆಂಬುದು ತೇಗು" (ಕಕಣಾ. ೩೦-೭೩); "ಪಾಡಗಮೆ ತೇಗು" (ಕಕ್ಕಿಶ್ಶಿ. ೭೦). **ಹಾಡಂಗಿ** : ಸಿರಿಸಂ ಹಾಡಂಗಿ ಭಾರಂಗಿ . . . ಎಂಬೀ ಮರಮಿಂಗಲಿ ಬುಂಬನಿಂದತಿಗಹನಮೆನಿಪ ಗಹನಾಂತರದೊಳಗೆ (ಪಾರ್ಶ್ವಪು. ೦೨-೫೦). **ಹಾಡಗ** : "ಹಾಡಗಂ ಸುರವತಿಯುಕ್ಕುಂ" (ಮುಂಗಣ. ೯೦-೬೨); ಹಾಡಗ, ಬಿಳೆಚಳ್ಳೆ, ಗವುಡಿ (ವೃಕಿಶ. ೨೮-೪೩೦) ; ತೇಗು ಮುಪ್ಪಾಗುವಾಗ ಹಾಡಗ ಹುಯಿಯಾರಲಿಲ್ಲ (ಗಾದೆ).

**ಪಾಡಗ₂**, ಪಾಗಡ, ಪಾಗಡೆ (ನಾ). ಕಾಲಿನ ಕಡಗ ; ಕಾಲಂಬಳೆ : ಗೆಜ್ಜೆಗಳ ಸಜ್ಜನೆಗೆ ಅಂದುಗೆಯಾನಂದೆಗೆ ನೇವುರದ ಭಾವಕಿಗೆ ಪಾಡಗದ ಪರಾಮಕ್ಕೆ . . . ತಂದೆ ನಿಯಾಮಿಸಿ ಕೊಟ್ಟ . . . ಷೋಡಶಸಹಸ್ರ ವಿಲಾಸಿನಿಯರ್ವೆರಸು ನಡೆತಂದು (೧೦೯. ೩-೯೦ ಪ) ; ಬೆರಳ ಚಿಲ್ಪಿಕೆಯಿಂದ ಮುದ್ರಿಕೆ ಮೆಂಜಿಯ ಪಾಡಗ ನೇವುರಂಗಳು ಕರಚರಣ ಸೌಂದರ್ಯದಲಿ . . . ಒಪ್ಪಿದವು (ಕುಮ್ಮಾಕ. ೦೩-೧೫) ; ಚಂದವ ನೋಡಿರೆ . . . ಅಂದುಗೆ ಪಾಡಗ ಗೆಜ್ಜೆಯ ಧರಿಸಿ ಧಿಂಧಿಮಿಕೆಂದು ಕುಣಿಯುವ ಕೃಷ್ಣನ (ಕೀರಂತ. ೩-೦೦೫ ಅಮಕಲ್ಪಾ) ; ಚರಣದಲ್ಲಿ ಗೆಜ್ಜೆ ಪಾಡಗವು ಶಬ್ದಮಾಡಿತು (ಕೋಹಿಸಿ. ೩೭). **ಪಾಗಡ** : "ಪಾಗಡ_ಕಾಲ ಕಡಗ" (ಶಾಸಕೋ. ೦೫). **ಪಾಗಡೆ** : ಬಾಗಿರೆ ಪತಿಯಾಳಿಕಮನಿಂಬಾಗಿರೆ ಮುಳಿಸಾಱುವನ್ನೆಗಂ ಸಿಲ್ಕಿಸುಗೀ ಪಾಗಡೆಯೆಂದೊದವಿರೆ ಪೆಂಪಾಗಡೆ ಪದಪದ್ಮದೊಳ್ ಪೆಜಿಳ್ ಪದಿಮಿಟ್ಟಳ್ (ಅಂಗಾವ. ೦೨-೭೭). [ದೇ.॥ ತಮಿ. ಪಾಟಕ ; ಮಲ. ಪಾಡಕ ; ತುಳು. ಪಾಡಗೊ ; ತೆಲು. ಪಾಡಗ./ಸಂ. ಪಾದಕಟಕ]

**ಪಾಡಳಿ** 'ಪಾಡಟಿ' ನೋ.

**ಪಾಡಱು** (ಕ್ರಿ). ೧. ಕ್ರಮವನ್ನು ತಿಳಿದುಕೊಳ್ಳು : ತೋಡುಂ ಬೀಡುಮದುಡುಗದೆ ಪಾಡಱಿದೆಚ್ಚುಜಿರಂಗದೊಳ್ ಪಾಜಿಯು[ನ]ಟ್ಯಾಡಿ ಸುರಾ[೦]ಗನೆಯರೊಳ[೦] ಕೂಡಿದೊನೇಂ ಕಲಿಯ ನೆಗಳ್ದ ಕಂ[ದರಕೇತಂ] (ಎಇ. XVIII. ೦೭೨-೮ ; 985) ; ಭಯಭಕ್ತಿಯಿಂ ಪಾಡಱಿದು ಭಜಿಸಿ

(ಶಬ್ದಮ. ೩-೪೦). ೨. ಸ್ಥಿತಿಯನ್ನು ತಿಳಿ : ಫಲುಗುಣನ ಚಿತ್ರದ ಪಾಡಱಿದು ನುಡಿವುತ್ತ ತಂದನು ಪಾಳಿಯಕೆ ರಥವ (ಕುಮಾ.ಭ. ೧೮-೨). ೩. ಅಂದವನ್ನು ಅರಿ : ಅಸುಗೆವಳರ ದುಪ್ಪಟಿಯುಂ ಪಾಡಱಿದುಟ್ಟು ಪೊಳೆಂದವುರಂಧ್ರಿಯರೊಪ್ಪವಡೆದರಲ್ಲಿ (ಜಗನ್ನಾ. ೦೩-೩೮). ೪. ಯೋಗ್ಯತೆಯನ್ನು ಅರಿತುಕೊಳ್ಳು : ರೂಢಿಪತಿ ಸತ್ಕರಿಸಿ ವಂಶದ ಪಾಡಱಿದು ಪೊಣಲಿಕ್ಕೆ ಕಳುಹಿದ (ಸಂಕಥ. ೨೬-೧೩). [ಪಾಡು₃+ಅಱಿ]

**ಪಾಡಟ್,** ಪಾಡಳಿ (ಕ್ರಿ). ೧. ಸ್ಥಿತಿಗೆಡು; ನೆಲೆಗೆಡು : ಕವಿಯ ನೆಯ್ದೆ ಕನ್ಯಾಕಲಕಂಠರವಂ ಶ್ರೀಕಂಠಂ ರಾಗರಸೋತ್ಕಂಠಂ ಪ್ರತಿಸ್ಯೆಯೊಳ್ ಪಾಡಟ್ಟಿದಂ (ಶಂಖಪು. ೧೦-೧೧೦). ನಾಡೆಯುಮಾ ನೃಪವರನಂ ಪಾಡಟ್ಟಿಡಲ್ಲಿ ಪೊಕ್ಕು ನಿಜವಲ್ಲಭೆಯಂ ಕೂಡೆ ತೊಟಿಲ್ದೋರಂದದ (ಶಾಂತಿಪು. ೦೪-೨೩೮). ಪಾಡಟ್ಟಿದು ಇಂತು ಶಿಕ್ಷಿಗಾನ್ ಸಂದೆನ್ (ಅದ್ವೈತ. ೦೪-೨೯೪). ೨. ಬಲಗುಂದು; ನಿಃಸತ್ತ್ವವಾಗು; ನಿರ್ವಿಣ್ಣವಾಗು : ವರಮಮಿತಾತ್ರು ಇಂತೇಕ ಬರ್ದಿ ಬಂಬಳಂಬಾಡಿ ಪಾಡಟ್ಟಿದುಬ್ಬೆಗಂಬಟ್ಟಿರ್ದೆ (ಶಬ್ದಮ. ೩೯-೬) : ಬಾಡಿ ಪಾಡಟ್ಟಿದು ಬಟಲ್ದು ಬೋಲ್ದಿರವು ಮೆಯ್ಯೊಳ್ ಮೆಯ್ಯುಡಿದನ್ನ ಕಣ್ಗಳೊಳ್ ಸುಟಿದುವು (ಶಂಕರ. ೪-೩೦) ; ಕೋಡನೂಱಿ ಪಾಡಟ್ಟಿದು ಪರಿಕಲಿಸಿ ಕೆಡೆದ ಮದಾಂಧಗಂಧಸಿಂಧುರಂಗಳಡಿಯೊಳಡಂಗಿದನೆ ಗೆತ್ತು ಕೈಗುತ್ತಿ ನೋಡಿಯುಂ (ಗದಾಯು. ೬-೨೮ ಪ). ೩. ಕಳೆಗುಂದು; ಕಾಂತಿಗೆಡು; ಬಣ್ಣಗೆಡು : ನಸುವಮಾಸಿ ಪಾಡಟ್ಟಿದ ರೂಪಿನೊಳುಣ್ಮುವ ಗಾಡಿ ನಾಡೆ ಕಣ್ಗೆದಱಿ (ಶಂಕಶಾ. ೦೩-೯೯) ; ಪೊಗೆಗೊಂಡ ಚಿತ್ರಲತೆ ಧೂಳಿಗೊಂಡ ಪುತ್ತಳಿಗೆ ಮಂಜುಗೊಂಡಬ್ಬನಿ ಕಾರ್ಮುಗಿಲೊಳಕೊಂಡೆಳೆ ಪಱಿಯನೆ ಮೃಗಲೋಚನೆ ಸೀತೆ ನಾಡೆ ಪಾಡಟ್ಟಿದಿರ್ದಳ್ (ಶಂಖಪು. ೧೦-೮೩). ಚಿತ್ರವಲ್ಲಭನುಟಿದ ವಿರಹಪರಿತಾಪದಿಂ ಬಾಡಿ ಪಾಡಟ್ಟಿದ ಗಾಡಿಕಾರ್ತಿಯಂ ನೋಡಿ (ಅವಂತ್ಕ. ೮-೨೬ ಪ). ೪. ಮೈಮರೆ; ಪರವಶವಾಗು : ವನಪುಂ ಪಾಡೆ ಪಾಡಟ್ಟಿದು ಸಾರ್ದೂಲಿದಾಲಿ ಸುತಿರ್ಪ ದಂತಿಯಂ ವನಚರನೆಚ್ಚೊಡೆ (ಲೀಲಾವ. ೮-೩೩). **ಪಾಡಳಿ:** ೧. ನಿಲ್ಲಬ್ಬಗೆಗಾಣದೆ ಪಾಡಳಿದಮರುಳ್ಗೊಂಡವಿನಸ್ಪ್ರುದ್ರಿಯ ಕೋಡುಂಗಲ್ಲಾ ಪರಿಮದಿಂ ಬಿಳ್ದನದಿತಿಸುತನಬುಧಿಯೊಳು (ಜಗನ್ನಾ. ೦೩-೫೮) ; ಶೀಡುವ ಸುಯ್ಯುಲ್ಬೆಗೊಂಡೊಡಲಿಂದವೆ ಪಾಡಳಿದನು ಸುಕುಮಾರ (ಶ್ರೀಚಾಂ. ೯-೫೩). ೨. ತೋಳಂ ತೂಗಿ ಬಾತ ಬೆರಳೊರಸಿ ಮಸೆದು ಪಾಡಳಿದ ತೊಡೆ ಹಲವು ಹರಳೊತ್ತಿ ಬೊಕ್ಕೆಗಳು ಮೂಡಿ ನಡೆಗೆಟ್ಟು ಬೆಲ್ಲಡಿಯ ನಿಜಪನಿತೆಯಂ ನೋಡಿ (ಶಕಶ. ೯-೨೪) ; ಬಾಡಲು ಪಂಕಜ ಕೂಡಲು ಬ್ರಾತಗೆ ಮೂಡಲು ಉತ್ಪಲರಾಗವನು ಪಾಡಳಿಯಲು ವಿರಹಿಗಳಂಬುಧಿ ಪೆಚ್ಚೆ ಮೂಡ ಮೂಡಲು ಚಂದ್ರಮನು (ಜೀವಂಧಾ. ೪-೩೦) ; ಕಡುಮಸವಿನಿಂ ಪಾಡಳಿದು ತದ್ವೇದಿಕಾಗ್ರದೊಳಗಿರುತಿರ್ದನು (ಶಂತ್ಕ. ೩೨-೪೭). [ಪಾಡು₃+ಅಟ್₁]

**ಪಾಡಾಟ** (ನಾ). ಹಾಡುವಿಕೆ : ದುಃಖ ಸುಖವಾಯ್ತೇ. ಪಗೆಯೆ ಪುಡಿಯಾಯ್ತೇ. ಗೋಳ್ಗಲ್ಲ ಪಾಡಾಟವಾಯ್ತೇ ! (ಹಾರಿ. ೦೩-೨೯೩).

[ಪಾಡು₃+ಆಟ]

**ಪಾಡಾವಿಗ** (ನಾ). (?) : ಗಾನ್ಧರ್ವಿಗರ್ಗ್ಗಂ ಪಾಡಾವಿಗಂಗಂ ಪಾತ್ರಕ್ಕೆ ಮರ್ದ್ದಳೆಯವಂಗಯಾ ಕೋಲ ಮ ೩೦ (ಸೌಇಇ. IX-1, ೦೩೫-೫ ; ಶ. 1086). [?]

**ಪಾಡಿ₁** 'ಪಾಟ್₂' ನೋ.

**ಪಾಡಿ₂,** ಪಾಳಿ₁, ವಾಡಿ₁, ಹಾಡಿ, ಹಾಡು₄, ಹಾಡ್ಯ (ನಾ). ೧. ಊರು; ಹಳ್ಳಿ ; ಗ್ರಾಮ : ಶ್ರೀಪುರುಷಮಹಾರಾಜರ್ ಪೃಥುವೀರಾಜ್ಯಗೆಯೆ ಕೊಡಲೂರ್ಪ್ಪಾಡಿಬಡೆಯ ನಂದಿ ಕಾದನಾ ಎಱನಾಗನಾ ವ್ಯವಹಾರವನ್ನರಂ ಸಾಲಮಿಲ್ಲಾಪ್ಪ್ (ಎಕ. X, ಕೋಲಾರ. ೭ ೨ ; 760) ; ಈ 'ಪಾಡಿ' ಯಿಂದಲೇ 'ಪಟ್ಟಿ' 'ಹಟ್ಟಿ' ಎಂಬುವುಗಳು ಹುಟ್ಟುತ್ತವೆ (ಶಂಕಜಾ. ೩೦) ; ಕಾಡುಮೇಡುಗಳಳಿದು ಪಾಡಿಗಳ ಬಳಿವಿಡಿದು . . . ನಡೆದು (ಕಾಂಡಚ. ೦೫೦-೩೩೦). ◆ ಅನೇಕ ಊರುಗಳ ಹೆಸರಿನ ಕೊನೆಯಲ್ಲಿ ಈ ಶಬ್ದ ಉಳಿದುಕೊಂಡಿದೆ. ಉದಾ : ಕನ್ನಂಬಾಡಿ, ಬಾಗೆವಾಡಿ, ಹೂಗಲವಾಡಿ. ೨. ಜಿಲ್ಲೆ; ನಾಡು; ಪ್ರಾಂತ್ಯ : 'ಗಂಗವಾಡಿ' ಪರಾ. ೩. ದನ ಮುಂತಾದುವನ್ನು ಕಟ್ಟುವ ಸ್ಥಳ : ಹಟ್ಟಿ; ಕೊಟ್ಟಿಗೆ : ಕೇಳಿದನು ಕುದುರೆಪಾಡಿಯೊಳಿರ್ದ ನಳ (ತುರಂಗ. ೩೭-೧೨). ೪. ಮನೆಗಳ ಶ್ರೇಣಿ; ಕೇರಿ : ಆತನು ಗೇರು ಬೀಜ ಶೇಖರಿಸುವ ರೀತಿಯೇ ಬೇರೆ. ಪರರ ಪಾಡಿಯಿಂದ ಕದ್ದು ಬೀಜ ತರುವುದಿಲ್ಲ (ಕಹಾ. ೯೨), ಗಿರಿಜನರು ಬಿದಿರಿನಿಂದ ಗುಡಿಸಲುಗಳನ್ನು ನಿರ್ಮಿಸಿ ಹುಲ್ಲಿನ ಮಾಡುಗಳನ್ನು ಕಟ್ಟಿ ಅವಲ್ಲಿ ವಾಸಿಸುತ್ತಾರೆ. ಇಂತಹ ಮನೆಗಳ ಗುಂಪಿಗೆ 'ಪಾಡಿ' ಎಂದು ಕರೆಯುತ್ತಾರೆ (ಶುಕಜಾ. ೨೨೦). ೫. ಪಡೆ; ದಳ; ಸೈನ್ಯ : ಆನೆ ರಿಪುಸೇನೆಗೆ ಸಾಲ್ವೆನವುಂಕಿ ಪೇದಿ ಪಾಡಿ ಗಟ್ಟಿಱಿವೆಡೆಗ್ಗೆಯ ಕೈಯುಗುರೆ ಸಾಲದೆ ನಚ್ಚಿನ ಕೈದುವೇಟ್ಟುದೇ (ಶಾಸ್ತ್ರಶಾ. ೪೧೧ ಪೂರ್ವಕ); ಪೊಡಿದ ಕಣೆ ಕುಣಿವ ತೆಗೆದ ಕೊಮರನ ಬಿಲ್ಲೊಳ್ ಮೂಡಿದುದು ಮುಂಗಲಹಿತರ ಪಾಡಿಗಳಂ ಮಸಗಿ ಮಿಟ್ಟು ಬಾಯ್ದುಱಿದ ತೆಱಂ (ಅರ್ಜನೇ. ೬-೪೨); ಕಟ್ಟೋಡಿ ಪಾಡಿಯುಲ್ಲುಂ ಪಿಟ್ಟುಂಪಿಟ್ಟಾಗಿ ಪೋದೊಡಂ . . . ಈಸನೋರ್ವನೆ ನಿಂದಂ (ಕಶ್ಯಶಾ. ೨೯೫); ಮನೆಯುಲ್ಲೆಡೆಯ ಮಾಡಿದ ನೃಪನ ಪಾಡಿಯ ಪಡಿತಳಿಸಿ ತತ್ಸೈನ್ಯಸಾಗರಕೊಂದು ನಿಮಿಷದಲಿ (ಸಂಕಥ. ೨೬-೦೫). ೬. ಸೈನ್ಯದ ಬೀಡು : ಪಾಳೆಯ : ನೆರೆದನುಬಾಗದಿಂ ಪಡೆಯ ಪಾಡಿಯ ಬೀರರ ಮಂಡಿರಬ್ಬಱಿಂ ಪರಸಿಯೊಱಲ್ದು ಸೇಸೆಗಳನಿಕ್ಕೆ . . . ಪೊಕ್ಕನಾತ್ಮಮಂದಿರಮನುದಾತ್ತಚಿತ್ರನವನೀತಳಪೂಜ್ಯಗುಣಂ ಗುಣಾರ್ಣವಂ (ಶಂಕಶಾ. ೦೦-೧೨೫). ೭. ಸೇವಕರ ಸಮೂಹ ; ಕೆಲಸಗಾರರ ಗುಂಪು : (೬). ೮. ಸೈನಿಕ ; ಯೋಧ : ಹಡಪದ ಹುಡುಗ ಸತ್ತಿಗೆಯೊಳು ಬಲ್ಲಿಹವಿಡಿದ ಪಾಡಿಗಳೊಡಬರಲು ಪಡಿಗುದುರೆಯ ರಾವುತರು ಪೊಳಲ ಪೊಱಮಡುತಿರ್ದರು (ಶ್ರೀಚಾಂ. ೦೩-೬೬). **ಪಾಳಿ₁** : ೫. ತುಂಬ ಪೊಸದಾಪರೆ ಮಲ್ಲಿಗೆಯೆಂಬಿವಾಂತರಂ ದೆಸೆಪಲಿಗೆಯ್ದು ಪಾಳಿ (ಶಬ್ದಶಾ. ೧೬೪). **ವಾಡಿ₁**: ೧. ಊರು, ಕೇರಿ. . .ವಾಡ, ವಾಡಿ. . .ಕೋಟೆ (ಶಂಕುಹು. ೬೯). ೩. 'ವಾಡಿ' ಪದಕ್ಕೆ ಇರುವ ದನಗಳ ಹಟ್ಟಿ ಎಂಬ ಅರ್ಥವು ಉತ್ತರ ಹಿಂದುಸ್ಥಾನದ ಪ್ರಾಚೀನಗ್ರಂಥದಲ್ಲಿ ದೊರೆಯುತ್ತಿದ್ದುದನ್ನು ಹೇಳಿದ್ದಾಗಿದೆ (ಕೆಶಾಲ. ೯೩). ೯. ಬೇಲಿಯಿಂದಾವೃತವಾದ ಹುಲ್ಲುಗಾವಲು, ತೋಟ ಮುಂತಾದುವು: (೬). ೧೦. ನಗರದ ಬಡಾವಣೆ; ಉಪನಗರ: (೬). ೧೧. (?) : ಜಿನಚಂದ್ರಮುನೀಂದ್ರರ ಪಾದಮೂಲದೊಳ್ನಿಮಿತ್ತ ರಾಗಿ ಕೊಂಡು ಕೊನೆವರ್ ಸಲೆ ವಾಣಿಯ ವಾಡಿಯೊಳ್ ಮಹಾಮನಿಪರ್ (ಶಾಂತಿಪು. ೧-೩೩). **ಹಾಡಿ** : ೧. ಕೂಲಿ ಆಳುಗಳು ರೈಟರಿಗೆ ತಮ್ಮ ಹೆಸರುಗಳನ್ನು ಕೊಟ್ಟು ತಾವು ವಾಸ ಮಾಡುವ ಹಾಡಿಗಳಿಗೆ ತೆರಳಿದರು (ಕಶಾಲ. ೨೦). 'ಹಾಡಿಹಕ್ಕಲು' ಪರಾ. ೪. ಪಣಿಯರ ಹಾಡಿಯಲ್ಲಿ ಕೊಳಂಬನ ಮನವನ್ನು ಸೆಳೆದ ಚೆಲುವೆಯ ಹೆಸರು ದೇಚು (೧೦೪. ೦). **ಹಾಡು₄** : ೧. ಮತ್ತಪವರೊಳಗೆ ಕರುಪರ ಕಲ್ಲಣಂ ಹಂದಿಗೆಯ್ಯ ಸ್ಥಳಂ ತಂನ ಏಸಂ ಕಾಣಿಯ ಬಳದೊಳಗೆ ಬಡಗಣ ಮೊದಲ ಹಾಡಿನಲಾ ಹಟ್ಟೇಶ್ವರದೇವರ ದೇವಕಾರ್ಯಕ್ಕೆ ಬಿಟ್ಟ ಏರೆಯ ಮತ್ತರೊಂದು (ಕಇ. I, ೨೫-೮೩ ; 1190). **ಹಾಡ್ಯ** : ೧೨. ಹುಲ್ಲು, ಸೌದೆ ಮುಂತಾದುವು ದೊರೆಯುವ ಸಣ್ಣ ಕಾಡು : ಬೈಸಿಕಲ್ಲನ್ನು ಮೋಹನನ ಮನೆಯ ಹಿಂದುಗಡೆ ಹಾಡ್ಯದಲ್ಲಿಟ್ಟು . . .

ನಿಂತು ನೋಡುತ್ತಿದ್ದನು (ಶಂಆಕಂ. ೧೨೩); ಅದರ ಒತ್ತಿಗೆ ಬ್ಯಾಣದ ಹಕ್ಕಲು, ಅದರಾಚೆಗೆ ಸೊಪ್ಪಿನ ಹಾಡ್ಯ ಕಣ್ಕೊಳ್ಳುವಂತಿತ್ತು (ಮರಿಮ. ೧೩೩). ಹಾಡ್ಯ—ಹುಲ್ಲುಸೌದೆಯ ಕುರುಚುಕಾಡು (ವಚ್ಚಕಪ. ೨೪೭) ; ಅಲ್ಲಿಂದ ಗದ್ದೆ, ಹಾಡ್ಯ, ಹಕ್ಕಲು, ಒಡ್ಡು ಇತ್ಯಾದಿಗಳನ್ನು ಸುತ್ತಿ ನೋಡಿಕೊಂಡು ಮನೆಗೆ ಹಿಂದಿರುಗುವಾಗ ಕಪ್ಪು ಕವಿದಿತ್ತು (ಗಂಗಾಳ. ೧೯).

[ದೇ. ೩ ತಮಿ. ಪಾಟ ; ಮಲ. ಪಾಡ ; ತುಳು. ಪಾಡಿ, ಹಾಡಿ ; ತೆಲು. ಪಾಡು ; ಕೊಡ. ಪಡಿ=ಕುರುಬರ ಹಟ್ಟಿ, —ಗಾಡಿಸಲು./ಮರಾ. ಪಾಡಾ, ವಾಡೀ./ಪ್ರಾ. ವಾಡಿ, ವಾಡೀ./ಸಂ. ವಾಟೀ]

**ಪಾಡಿ$_4$** 'ಪಹಡಿ' ನೋ.

**ಪಾಡಿ$_5$** (ನಾ). ಒಂದು ಬಗೆಯ ಬಲೆ : ಉರುಳು ಪಾಡಿ ಸಿಡಿ ಸೆಳೆ ಗಾಣ ಬೆಳ್ಳಾರ ತಡಿಕೆ ದೀವದ ಖಗಮೃಗಸಂತತಿಗೂಡಿ ನಡೆತಂದನಾ ವನ ಚರನು (ಶೀಐಸಂ. ೨-೩೮). 'ಪಾಜ್ಞಿ$_2$' ಪರಾ. [?]

**ಪಾಡಿಗೈ ?** (ಕ್ರಿ). ಮಲಗು ; ಒರಗು (?) : ಕಳಚಿ ನೊಗನನು ತೆಗೆದು ಕಬ್ಬಿಯನಿಳುಹಿ ಪಡಿವಾಘೆಗಳ ಸರಿದನುಕೊಳಿಸಿ ಒಡಿಯಲು ಪಾಡಿಗೈದವು ಮರಳಿದೆಡಬಲಕೆ (ಕುಮಾದ್ರೋ. ೧೦-೩೩); ಅಳಿದವೈನೂಱಾನೆ ಪಾಗ್ಗುಲ ನೆಲಕೆ ಕೀಲಿಸಿ ಪಾಡಿಗೈದವು ಬಲುಗುದುರೆ ಹದಿನೈದುಸಾವಿರವೇಳುನೂಱುರಥ ಮಲಗಿದವು (ಕುಮಾದ್ರೋ. ೦೮-೬). [ಪಾಡಿ ? + ಗೈ (<ಕೆಯ್$_1$)]

**ಪಾಡಿತನ** (ನಾ). ಒಂದು ಬಗೆಯ ಊಳಿಗ,—ಸೇವೆ (?) : ಭಕ್ತರ ಮಂದಿರಕ್ಕೆ ಹೂಕಾಯಿ ಹಣ್ಣು ಹುಲ್ಲ ಹೊಱೆ ಕಟ್ಟಿಗೆ ಬೊಕ್ಕಸ ಪಹರಿ ಪಾಡಿತನ ಬಾಗಿಲು ಮುಂತಾಗಿ ಶುಶ್ರೂಷೆಯ ಮಾಡಿ ಉಂಬಾಗ . . . ತುಡುಗುಣಿಗೆಲ್ಲಿಯದೋ ನಿಜಜಂಗಮಸ್ಥಲ (ಶೂನ್ಯಸಂ. ೪೩-೧೮೦).

[ಪಾಡಿ ? + —ತನ]

**ಪಾಡಿಯ** 'ಪಾಡಿವ' ನೋ.

**ಪಾಡಿರಾವುತ** (ನಾ). ಸರಿಸಮಾನವಾದ ರಾವುತ : ಒಡಿವ ಕುದುರೆಯ ನೇಱುತ ಪಾ [ಪಾಠಾಂ. ಪ] ಡಿರಾವುತರೆಡಬಲದೊಳಗೈನೂಱು ಬಿಡದೆ ಮೆಱೆಯೆ . . . ಪಡೆಗಿದಿರಾಗಿ ಮಲೆತನು (ಕುರಾಸಾಂ. ೦೪-೦೦೮).

[ಪಾಡಿ$_1$ (<ಪಾಟ್ಟಿ$_2$) + ರಾವುತ]

**ಪಾಡಿವ, ಪಾಡಿಯ, ಪಾಡ್ಯ** (ನಾ). ಪಕ್ಷದ ಮೊದಲನೆಯ ತಿಥಿ; ಪ್ರತಿಪದೆ : ''ಪ್ರತಿಪತ್ ಪಕ್ಷತಿ ನಾಮದ್ವಿತಯಂ ಪಾಡಿವಂ'' (ವಸ್ತುಕೋ. ೦೬-೭) ; ಚೈತ್ರಮಾಸ ಸುದ್ಧಪಕ್ಷದ ಪಾಡಿವದ ಬುಧವಾರಂ . . . ಈಶ್ವರಯ್ಯಗೆ ಕೊಟ್ಟರ್ (ಎಕ. VIII, ಸೊರಬ. ೭೧-೩; 938) ; ಪಾಡಿವದೆಳವೆಱೆ ಪೂರ್ಣಿಮಾವರೆಗಂ ರೂಡಿಸಿ ದಿನದಿನದಪ್ಪದೆ ಕಲೆಯೊಳ್ ಕೂಡಿ ಬಳೆದು ಕುವಲಯಕತ್ಯಾನಂದಮನೀವಂದದೊಳು (ಜಯುಕಾ. ೨-೬೩); ಪಾಡಿವದ ಶಶಿಯ ಮೂಡಿದುದನಾರ್ ಕಂಡರು ಇರುಳ್ ? (ಶ್ರೀರಾಮಾ. ೬೩೨-೮೩). **ಪಾಡಿಯ** : ನಾಡಿಯಾಱಾವತ್ತಕ್ಕೆ ಒಂದು ತಿಥಿಯಕ್ಕದಕೆ ಪಾಡಿಯ[ಪಾಠಾಂ. ವ]ಮೊದಲು ಪೌರ್ಣಮಿಯಾದಮಾವಾಸ್ಯೆ ಕಡೆ (ಮಂಗರಾ. ೨೦-೯). **ಪಾಡ್ಯ** : "ಪ್ರತಿಪತ್ತಿಂಗೆ ಪಾಡ್ಯಮೆಂದವತರಿಕು" (ಕಣ್ಣಕಂ. ೨೦); ಅಶುಭ ಷಷ್ಟಿ ಅಷ್ಟಮಿ ನವಮಿ ಪಾಡ್ಯ (ಗಗಕಾ. ೪-೬೭) ; ಪಾಡ್ಯ ಪಾಠಕ್ಕಾಗದು, ಮೌಢ್ಯ ಕೆಲಸಕ್ಕಾಗದು (ಗಾದೆ).

[<ಪ್ರಾ. ಪಾಡಿವಯಾ. / ಸಂ. ಪ್ರತಿಪದ್]

**ಪಾಡಿಸು, ಹಾಡಿಸು** (ಕ್ರಿ). ೧. ಹಾಡುವಂತೆ ಮಾಡು ; ಹಾಡು ಹೇಳಿಸು ; ಗಾಯನ ಮಾಡಿಸು : "ಪಾಡಿಸು—ಗಾಯನೇ" (ಶಮದ); ಬದ್ದವಣಮುಂ ಬಾಜಿಸಿ ಮಂಗಳಮುಂ ಪಾಡಿಸಿ (ಶಂಶಬಾ. ೦-೧೩೩ ವ) ; ಸಕಲಲೋಕಗಳಂ ಹೆತ್ತ ಮುತ್ತೈದೆ ಬಾಲಕತನದ ನಟನೆಯಂ ನೋಡಿ . . . ತೊಟ್ಟಿಲೊಳು ಪಟ್ಟಿರಿಸಿ ಜೋಗುಳಂ ಪಾಡಿಸಿದಳು (ಸಿದ್ಧರಾ. ೧-೫೮); ಪಾಡಿಸುತ್ತುಂ ಪೆಸರ್ವಡೆದ ಗಾಣರಿಂ (ಕಬ್ಬಿಕಾ. ೨೯೦). ೨. ಬಿರುದಾವಳಿ, ಗುಣಾತಿಶಯ ಮೊದಲಾದುವುಗಳನ್ನು ಹೊಗಳಿ ಹೇಳಿಸು ; ಸ್ತುತಿ ಮಾಡಿಸು : ಪೆಸರೆಸೆಯೆ ಬೀರಮುಂ ಪಾಡಿಸಿಯುಂ ಪೊಗೞ್ಚಿಸಿಯುಮುರ್ಕಿ ಬಿಱ್ದಾಹಪದೊಳ್ ಕುಸಿದು ಪೆಱಪಿಂಗಿ ಪೇೞ್ ಮಾನಸರೇನಿನ್ನೊಱು ಪರ್ಣಮಂ ಬಟ್ಟುಪರೇ (ಶಂಶಬಾ.೦೨ ೦೬೬); ಪೊಱಮಟ್ಟಂ ಲಲಿತಾಂಗನೆಂದೊಡಮಾಪರ್ . . . ಭೀತಿಯಿಂ ಬೀರಮಂ ಮಱೆದುಂ ಪಾಡಿಸಲಣ್ಣರ್ (ರಮಾಮೃ. ೨-೬೭) ; ಗಮಕಿತ್ವದ ವಾಗ್ಮಿತ್ವದೊಳ್ ಲೀಲೆ ಮಿಗಲ್ಕೆ ಪಾಡಿಸುತಪಾಡಿಸುತುಂ (ವಂಬಕ. ೦೦ ಸೂತನ್). **ಹಾಡಿಸು** : ೧. ಹಾಡಿಸ ಬೇಡ ನಾನಾವಾದ್ಯವ ದನಿಮಾಡಿಸಬೇಡ . . . ಸ್ವಸ್ತದಿ ನಿದ್ದೆಗೆಯ್ಯುದು (ಮೋಹಕ. ೨೭-೩೭); ಚಿಕ್ಕಪ್ಪನಿಗೆ ಹುಡುಗಿಯ ಬಾಯಿಂದ ಮತ್ತೊಂದು ಹಾಡನ್ನು ಹಾಡಿಸಬೇಕೆಂದು ಆಶೆಯುಂಟಾಗಿರಬಹುದು (ಜಪಶೀ. ೧೨೯).

[ಪಾಡು$_1$ + —ಇಸು$_3$]

**ಪಾಡಿಟ್ಟಿಸು** (ಕ್ರಿ). ಬಲಗುಂದಿಸು ; ಸೋಲಿಸು : ಇದಿರಾಂಪರೆಲ್ಲವನ ಸೆಱೆದು ಪಾಡಿಟ್ಟಿಸಿ ಬಸವಟ್ಟಿಸದೀ ಚೆಲ್ವೆಯರದೇಂ ನಿಲ್ವರೇ (ಚೆಂಪ. ೬-೧೫೪). [ಪಾಡು$_3$ + ಇಟ್ಟಿಸು]

**ಪಾಡು$_1$, ಹಾಡು$_1$** (ಕ್ರಿ). ೧. ಗಾಯನ ಮಾಡು ; ರಾಗಬದ್ಧವಾಗಿ ಗೀತೆಯನ್ನು ಹೇಳು ; ಸಂಗೀತ ಹೇಳು : ಲೋಗರ್ ಪಗರಣಿಗರಾಗಿ ಎನಿತಾನುಂ ತೆಱದ ರೂಪುಗಳಂ ಕೈಕೊಂಡು ಮುಖಮೊಗಂಗಳನಿಟ್ಟು ಬಂದು ಮುಂದೆ ಆಡಿಯುಂ ಪಾಡಿಯುಂ ನಗಿಸಿಯುಮೆಂತುಮಟ್ಟೆ ಮಾಣ್ದದಿರ್ದೊಡೆ (ವಡ್ಡಾರಾ. ೧೦೮-೦೩) ; ಎರಲೆಗೆ ಪಾಡುವ ಗೋರಿಯಸರಣ್ಯದೊಳ್ ಮೃಗವಿರೋಧಿಗಂ ಪಾಡುವುದೇ (ಆದಿಪು. ೧೪-೮೦) ; ರಸಮೊಸರ್ವಂತು ಪಾಡುತಿರೆ ಶುದ್ಧಮನೋಮಣಿದೀಪ್ತಿ ಪೊಣ್ಮೆ ರಾಜಿಸಿದಪುದೋ (ಕಾದಂಪು. ೬೭೩) ; ಸಕಲರಾಗಂಗಳಿಂದೊಸೆದು ತುಂಬುರ ನಾರದರ್ ಪಾಡುತಿರ್ದ ರೊಂದೆಸೆಯೊಳತಿವಿಭವದಿಂದೆ (ಚಂದ್ರ. ೨-೨೮). ೨. ಮಧುರವಾಗಿ ಧ್ವನಿಮಾಡು ; ಗುಂಜಾರವ ಮಾಡು : ಕುಕಿಲ್ವ ಕೋಗಿಲೆಯ ಪಾಡುವ ತುಂಬಿಯ ನಲ್ಲರೊಳ್ಮೊಗಂ ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋಟಱೊಪ್ಪಿಡಾವ ಬೆಟ್ಟುಗಳೊಳವಾವ ನಂದನವನಂಗಳೊಳಂ ಬನವಾಸಿದೇಶದೊಳ್ (ಶಂಶಬಾ. ೪-೨೮); ಪಾಡುವ ತುಂಬಿಯಿಂ ಕುಕಿಲ್ವ ಕೋಗಿಲೆಯಿಂ ಕಡುರಮ್ಯಮಾಗಿರಲ್ (ರಮಾಮೃ. ೨-೦೪೪) ; ಗಿಳಿ ಯೋದಿದಪುದು . . . ಅಳಿ ಪಾಡಿದಪುದು (ಶಬ್ದಾಸು. ೪೫೪ ಪ್ರಯೋ). ೩. ಹೊಗಳು ; ಕೀರ್ತಿಸು : ಪಾಡುವರು ಕೆಲರಲ್ಲಿ ಹರಿಯನು ನೋಡುವರು ನಿಜದೃಷ್ಟಿ ದಣಿಯಲು ಆಡುವರು ತಮ್ಮಿಂದ ಪುಣ್ಯರದಾರು ಲೋಕದಲಿ (ಕೌಶಿಕಾ. ೪೪-೦೩) ; ಭೂತಗಣ ಕರತಾಳದಲಿ ಕುಣಿದಾಡುತಿರ್ದವು ಪಾಡುತವನಿಪನ (ಕೂರಿಕಾ. ೩-೬-೦೩) ; ಕಂದರ್ಪತನಯನ ಕಡಿದಾಡಿ ತೆಗೆತಂದ ಮಂದರಧರನ ಪಾಡಿದರು (ಮೋಹಕ. ೪೨-೪೭). **ಹಾಡು$_1$** : ೧. ''ಗಾಯತೇ-ಹಾಡಿದಪಂ'' (ಕಾಕ್ಯ. ೧೨೮) ; ಎನ್ನ ಕಾಯುವ ದಂಡಿಗೆಯ ಮಾಡಯ್ಯಾ . . . ಬತ್ತೀಸರಾಗವ ಹಾಡಯ್ಯಾ (ಬಸವ. ೫೦೦); ಓತು ಕೊಂಡಾಡುತಂ ಹಾ[ಪಾಠಾಂ. ಆ]ಡುತಂ ಹರಸುತಂ (ಬಸರ. ೭-೮೨). ೨. ಕೈವಿಡಿದು ಕುಣಿವುತ ತಣಿವುತಂ ಬೊಬ್ಬಿಡುತ ಹಾಱುತ ಚಪ್ಪಳಿಕ್ಕುತ ಹಾ[ಪಾಠಾಂ. ಪಾ]ಡುತಾಡುತ್ತ (ಬಸಪು. ೫೯-೨೪). ೩. ತಮ್ಮಂಗದ ಮೇಲೆ ಲಿಂಗವಿರಲು ಅನ್ಯರನೆ ಹಾಡಿ ಅನ್ಯರನೆ ಹೊಗಳಿ ಅನ್ಯರ ವಚನವ ಕೊಂಡಾಡಲು ಕರ್ಮ ಬಿಡದು (ಬಸವ. ೦೦೭) ; ಎನ್ನನಲ್ಲದೆ ಬೇಡನೆನ್ನನಲ್ಲದೆ ನೋಡನೆನ್ನನಲ್ಲದೆ ಹಾಡನು (ಕಣ್ಣರ. ರೀ. ೦೪೪-೦೦) ; ನೋಡಿ ದಣಿಯನು ಬಿರುದ ಹೊಗಳಿಸಿ ಹಾಡಿ ದಣಿಯನು ನಿಚ್ಚಲುಚಿತವ ಮಾಡಿ ತಣಿಯನು ಮಾನನಿಧಿಯನದೆಂತು ಮಱೆದಪೆನು ಕಾಡಲಾಗದು ಕೃಷ್ಣ ಖಾತಿಯ ಮಾಡಲಾಗದು ಬಂದನಾದೊಡೆ ರೂಢಿ ಮೆಚ್ಚದು ಕೌರವನ ಹಗೆ ಹರಿಬ ತನಗೆ (ಕುಮಾಕಾ. ೧೦-೧೮).

**ಪಾಡಿ ಹರಸು** = ಹೊಗಳಿ ಆಶೀರ್ವದಿಸು.—ಹರಸು : ಮದನ ಹರನರಸಿ ಬಿಜಯಂಗೈದು . . . ಸಿದ್ಧರಾಮಯ್ಯನೆಂದು ಹೆಸರಿಟ್ಟಾಡಿ ಹಾಡಿ ಹರಸಿದಳು (ಸಿದ್ಧರಾ. ೨-೬) ; ಅಂದು ಸುಜನಸ್ತೋಮ ಪಾಂಡುವ ನಂದನರ ನೆಱೆ ಹಾಡಿ ಹರಸುತಲಿ (ಸಂಶಕ. ೧೩ ೧೦೩) ; ಜನತೆ . . . ಶಿಶುವಿಗೆ 'ಶ್ರೀನಿವಾಸ'ನೆಂದು ಹೆಸರಿಟ್ಟು ಹಾಡಿ ಹರಸಿತು (ಹೇಮುಕೂ. ೬). [ದೇ.॥ ತಮಿ. ಮಲ. ಪಾಟು ; ತೆಲು. ಪಾಡು ; ಕೋಲಾ. ಪಡ್ ; ನಾಯ್ಕಿ. ಗದಬ. ಪಾರ್ ; ಪರ್ಜಿ. ಪಾಡ್ ; ಗೊಂಡಿ. ಪಾರಾನಾ ; ಕುವಿ. ಪಾಟ್‌ಲೀ ; ಕುರುಖ್. ಪಾರ್ನಾ ; ಮಲ್ತೊ. ಪರೆ]

**ಪಾಡು$_2$**, ಹಾಡು$_2$ (ನಾ). ೧. ಗೀತ : "ಗೀತಮೆನೆ ಗಾನಮೆನೆ ಪಾಡೆ ನಿಕ್ಕಂ" (ಶಬ್ದಮ. ೨೩-೨) ; ಛಂದಮನಱಿಯದನೋದುಂ ಮುಂದಿರ್ದಾ ತಾಳದಳವನಱಿಯದ ಪಾಡುಂ ಬಂದುದ ಕೆಡೆವನ ನುಡಿಯುಂ ಒಂದರ್ಕುಂ ಬಾರ್ತೆಯಿಲ್ಲ (ಛಂದೋಂಬು. ೧-೪೯ ಅವ) ; ಪಾಡಿನೋಜೆಯುಂ ಗಡಣಿಸು ತುಂಬಿ (ಶಬ್ದಮ. ೧೨೬) ; ಅಂತದು ಪಾಡಿನ ಜೋಡಿನ ದಾಟಿಯ್ಯೆಸೆ (ರಾಮಾಶ್ವ. ೮೮-೧೨). ೨. [ಕಾವ್ಯವಿ.] ಒಂದು ಬಗೆಯ ಕಾವ್ಯಪ್ರಬಂಧ ; ೧೫ ಹದಿನೈದು ಅಥವಾ ಇಪ್ಪತ್ತೈದು ಭಾಗಗಳು ಪ್ರಬಂಧದ ಅಂಗವಾಗಿ ಹೊಂದಿಕೊಂಡಿರುವುದು: ಪದಿನಯ್ದುಮಿರ್ಪತ್ತಯ್ದುಂ ಪದಂ ಯಥಾಸಂಭವಂ ಪ್ರಬಂಧದ ಮೆಯ್ಯೊಳ್ ಪುದಿದೊದವಿ ನೆಗೞ್ದುದಂತದು ಸದಲಂಕಾರಂ ರಸಾಸ್ಪದಂ ಪಾಡಕ್ಕುಂ (ಕಾವ್ಯಾವ. ೯೫೩). 'ಪಾಡುಗಬ್ಬ' ಪರಾ. **ಹಾಡು$_2$** : ೧. "ಗೀತಂ, ಗಾನಂ . . . ಈ ೨ ಹಾಡಿನ ಪೆಸರ್" (ಹಲಾಯು. ೧೬-೯೩) ; ಕೊಂಡಾಡಲು ಜಿಹ್ವೆ ಪವಿತ್ರ ಹಾಡ ಕೇಳಲು ಕರ್ಣದೊಳಿರ್ದ ಪಾತ್ರಪ ಪೋಡುವುದಿಳೆಯು ಜೀವರಿಗೆ (ಮೋಹತ. ೪೧-೧೬) ; ಹೊಸಬಾಳಿನ ಬೆಡಗು ಸಾಕು — ಬೆಳಕು ಬೇಕು ಹಾಡಿಗೆ (ಅರಳು. ೩೫೧-೧೧). [<ಪಾಡು$_1$]

**ಪಾಡು$_3$**, ಪಾಟು$_1$, ಹಾಡು$_3$ (ನಾ). ೧. ರೀತಿ ; ಬಗೆ : "ಪಾಡನೆ ರೀತಿಯಕ್ಕು" (ಕಕರ. ೧೨೬) ; ಸ್ಥಳವೆ ಜಲರೂಪದಲಿ ಜಲವೇ ಸ್ಥಳದ ಪಾಡಿನಲ್ಲಿದ್ದುದದು (ಕುಮ್ಮಾಸ. ೧೨-೩೬) ; ೨ಳಿಯಂದಿರ ಪಾಡೆಲ್ಲಾ ಒಂದೇ (ಅರಾಕ. ೨). ೨. ಸ್ಥಿತಿ ; ಅವಸ್ಥೆ ; ಗತಿ : ಸುತರೊಳಗೆ ಸಿತಗರ ಸೀಳುವೆನು ಮಾನವರ ಪಾಡೇನು (ಕುಮ್ಮಾರದ್ರೋ. ೧೬-೩೨) ; ನನ್ನ ಮನಸ್ಸಿನ ಪಾಡು ವಿಪರೀತವಾಗಿತ್ತು (ಅಂಹೂ. ೧೧). ೩. ತನಗೆ ಮಾತ್ರ ಸಂಬಂಧಪಟ್ಟಿರುವ ಸ್ಥಿತಿ : ಅವರಿಗೆ ಕೊಟ್ಟು ಬಿಟ್ಟರೆ ತಮ್ಮ ಪಾಡಿಗೆ ಹೊರಟು ಹೋಗುತ್ತಾರೆ (ತ್ರಿಶಾಕ. ೪೬) ; ಆ ಹುಡುಗ ಬೇರೆಯವರ ತಂಟೆಗೆ ಬಾರದೆ ತನ್ನ ಪಾಡಿಗೆ ಓದಿಕೊಂಡಿದ್ದಾನೆ (ರೂಢಿ). ೪. ಕ್ಷೇಮ ; ಸುರಕ್ಷಿತತೆ ; ಸುಸ್ಥಿತಿ : ಪಾಡು ತಪ್ಪಿದ ಬಳಿಕ ವಿನಯವ ಮಾಡಿ ಮೆಱೆವುದು (ಕುಮ್ಮಾದ್ರೋ. ೧-೯) ; ಸರಿವುದೇ ಪಾಡನುತ . . . ಸಂವರಿಸಿಕೊಳುತಡರಿದನು ತನ್ನಯ ತೇರ ತವಕದಲಿ (ಕೊರವಂ. ೩-೨೩-೨೯). ೫. ಕಷ್ಟ ; ತೊಂದರೆ ; ದುಸ್ಥಿತಿ : ಗರುಡಿಗಳಿಹ ಪದಜೊಳಗೆ ಬಿರುದಿನ ಬಂಟರ್ಗೆ ಬಿಡದೆ ಪಾಡುಗಳನು ಬರಿಸುವಭ್ಯಾಸಿಗಳಿಹರು ; (ಕುರಾಸಾಂ. ೪-೬೬) ; ಒಡಲ ದಂಡಿಸುವಾಯಸವಿಲ್ಲ ಪಣವ ವೆಚ್ಚಿಸುವ ಪಾಡಿಲ್ಲ ಗುಣವಂತೆಯರೆಸಗುವ ಪತಿಶುಶ್ರೂಷೆಗೆಣೆಯಹ ತಪವಿನ್ನೊಳವೆ (ಹಂಪ. ೨-೨೨) ; ನಾವು ಅನುಭವಿಸ್ತಿರೋ ಪಾಡು ಅರ್ಥವಾಗಿದೇಂತ ತೋರುತ್ತೆ (ಲಂಗವ. ೧೨೧). ೬. ಪಂತ ; ಪ್ರತಿಜ್ಞೆ : "ಪಾಡನೆ ಪಂಥಂ" (ಶಾರೂ. ೩) ; ತನಗೆ ಮಾತಿನ ಪಾಡು ಬಿದ್ದುದು ವಿತಥವಾಣಿಯನಾಡಲಾಱೆನು (ಸಂಶಕ. ಶಂ. ೩೦೬-೨೦). ೭. ಪೆಂಪು ; ಮಹಿಮೆ : ಪಾಡುಳ್ಳ ಪರಮಸದ್ಭಕ್ತರಯೋಳೇಳು (ಪಶಮೋ. ೩೩-೩೮). ೮. ಸಮಾನ ; ಸಾಟಿ : "ಪಾಡನೆ ಸದೃಶಮುಮಾಕ್ಕುಂ" (ಶಾರೂ. ೩೯) ; ವಿರಿಂಚನ ಪಾಡು ಶಕ್ರನ ಸರಿಸದವರಿಗೆ ಭಂಗವೀ ವಿಧಿ (ಕುಮ್ಮಾಸ. ೧೬-೬೯) ; ಆ ಪರಿಹರಬ್ರಹ್ಮಾಮರೇಂದ್ರರು ಪಾಡೆ ನಿನಗೆ (ಕೊರವ. ೧-೩-೯) ; ಗಾಡಿಯೊಳಿಂದ್ರನ ನಗುವ ಚಕ್ರಿಗೆ ಶಚಿ ಪಾಡಲ್ಲವೆಂಬೆನ್ನ ಮಗಳು ಜೋಡಿಸಲೊಲ್ಲೆಯು (ಶರಕ. ೩೬-೩೩) ; ಈ ವೀರರೊಳಗೆ ಒಬ್ಬನೂ ನನಗೆ ಪಾಡಲ್ಲ (ಐರುರಿ. ೧೪೧). ೯. ಸರಿಯಾದುದು ; ಯೋಗ್ಯವಾದುದು ; ಉಚಿತವಾದುದು : ಓಡುಗೆಯ್ಯನ ಕಲಾತಿಯೊಳ ವರಿರುವನ್ನ ಪಾಡೆಂಬುದೆನಗೆ ಕಾಣಿಸಿತು (ಮೋಹತ. ೩೬-೩೩) ; ಇನ್ನಿಲ್ಲಿ ಕವಿಯ ವಂಶದ ಹೊಲಬನ್ನು ಒಂದಿಷ್ಟಾದರೂ ಹೇಳದೆ ಹರಿವುದು ಪಾಡಲ್ಲ (ವಾಕೋಜ. ೬೨) ; ಜಗತ್ತು ಪಾಡಾದರ ನಾವೂ ಪಾಡು (ಹೊಸಂಸಾ. ೬). ೧೦. ಹಣ್ಣಾಗೆ ಬರುತ್ತಿರುವ ಕಾಯಿ ; ಪಕ್ವವಾಗುತ್ತಿರುವ ಕಾಯಿ ; ದೋರೆಗಾಯಿ : ಉಚ್ಚತರಶಾಖಾಗ್ರಮಂ ಪತ್ತಿ ಪಾಡುಗಳನಾಯ್ದುತಿಹ ಪುಡುಗರುಗಳಂ ಅಟ್ಟಿಗಳಸೀಕ್ಷಿಸುತ್ತಂ (ಕುಹಾಂ. ೩-೬) ; ಇಂದಿನದು ತುಸು ಪಾಡು ನಾಳೆ ಹಣ್ಣಾದಾಗ ಬಂದೀತು ಹಾಡು (ಅರಳು. ೩೫೨-೧೮). **ಪಾಟು$_1$** : ೧. ಉಂಟು ನೀನುಲಿವಾಕು ಯಾವ ಕೈಛಂಟಿಕೆಯ ನೀನರಿಯ ಪೂರ್ವನು ಜಂಟಿಸಿದರನುಭವಗಳಲ್ಲದೆ ಬಿದ್ದ ಪಾಟುಗಳಾ ತುಂಟ ಬಲ್ಲನೆ (ಅರಾಮಾ. ೪೯೩-೪೬). 'ಪಾಟುಗೆಡು' ಪರಾ. ೨. 'ಪರಿಪಾಟು$_1$' ಪರಾ. ೫. ವಾಗ್ಬ್ರಹ್ಮಗಳೆಲ್ಲರು ಪಡುವ ಪಾಟ ನೋಡಿ ನಮ್ಮ ಭಕ್ತರು. . ಅನಿಷ್ಟವ ಪರಿಹರಿಸಿದರು (ಪಶಾ. II. ೨೫೩-೪) ; ಪಡದ ಪಾಟುಗಳಿಂದ ಪಡೆವುದವನ ಕೈವಿಡಿದ ಪೂಚೆಂಡ ಪೆರ್ಮೆಯೊಳ್ ಮುಡಿಗೆ ಕಣ್ಣಾಗಿಗೊತ್ತಿ ಮುಂಡಾಟ ಮನೆಗುಯ್ದು ಪೊಡಮಟ್ಟು ನಲಿದು ಪೂಜಿಪುದು (ಅಕಂ. ೬-೦೫೬). ೧೧. (ಸಮುದ್ರದಲ್ಲಿ) ತೆರೆಗಳ ಇಳಿತ : (ಕ). **ಹಾಡು$_3$** : ೨. ಬಾಹೆಮ್ಮಗೆ ಹೋದರೆ ಈ ಹಾಡು ಆಗುವುದು (ಮುಂಬಯು. ೨-೦೯). ೫. ಆರ್ಯಾವರ್ತದ ಜನರಿಗಾದ ಹಾಡೇ ನಮಗೂ ಉಂಟಾಗುವುದರಲ್ಲಿ ಸಂದೇಹವಿಲ್ಲ (ಕಸಿಂಹಾ. ೨೩).

**ಪಾಡ ಚಾಕರಿ**=ಕಷ್ಟದ ಕೆಲಸ: ಆ ಪಾಟ ಪಾಡ ಚಾಕರಿ ಅವನಂಥ ಭೋಳೆಯಲ್ಲದೆ ಇನ್ನಾರು ಮಾಡಬೇಕು ? (ಹೊಸಕ್ಕ. ೨೯). **ಪಾಡಾಗಿ** = ಚೆನ್ನಾಗಿ ; ಸರಿಯಾಗಿ : ಎರಡುದಿನದಿಂದ ಮಯ್ಯಾಗೆ ಯಾಕೋ ಪಾಡಾಗಿಲ್ಲ (ಕಳುವ. ೧೯) : ಈ ಗಿಳಿ ಪಾಡಾಗಿ ನೋಡಿಕೋರಿ (ಕರಿಹಾ. ೮). **ಪಾಡಾಗು**, ಹಾಡಾಗು = ೧. ಚೆನ್ನಾಗು ; ಸರಿಯಾಗು : ಇನ್ನೂ ಎಂಟು ದಿನ ಬಿಟ್ಟು ಮನೆಗೆ ಬಂದಿದ್ದರೆ ಪಾಡಾಗುತ್ತಿತ್ತು (ಸುಪಸಂ. ೩೮). ೨. ಹಣ್ಣಿನ ಹದಕ್ಕೆ ಬರು ; ದೋರೆಯಾಗು : ಕಾಯಿಗಳು ಪಾಡಾಗಿ ಬೀಳಹತ್ತಿದ ಬಳಿಕ ಅವುಗಳನ್ನು ಇಳಿಸಿ ಎಂಟು ಹತ್ತು ದಿನ ಒತ್ತಿಗೆ ಹಾಕುತ್ತಾರೆ (ಮುಂಬಯು. ೨-೬೨) ; ಅರಳಿದ ಕೆಲವು ಹೂಗಳೂ ಪಾಡಾದ ಕಾಯಿಗಳೂ ಕೆಳಗೆ ಬಿದ್ದಿದ್ದವು (ಕಸಿಂಹಾ. ೬೩). ೩. ಅವಕಾಶವಾಗು ; ಇಂಬಾಗು : ಗಾಡಿಗೆ ಪಾಡಾದ ಪಸದನಕ್ಕಂ ತೇಜಕ್ಕೊಡವಾದ ಕಾಂತಿಗಂ ಬೆಡಂಗಿಂಗೆ ಪಾಂಗಾದ ದೇಸಿಗಂ ಮಾಸರಿಕೆಗೆಕ್ಕಲಾವಣಮಾದ ಸೌಷ್ಠವಕ್ಕಂ . . . ಸೌಂದರ್ಯಕ್ಕೆ ನೆಲೆಯಾದುದಕ್ಕಂ ಬೆಕ್ಕಸಂಬಟ್ಟು (ಶಾಂತಿಪು. ೩-೫೩ ವ) ; ಗುರು ನದೀಸುತರಿದ್ದರೀ ಪರಿ ಪರಿಭವಕೆ ಪಾಡಹುದೆ (ಕುಮ್ಮಾಆ. ೨೦-೪). ೪. ಸ್ಥಿತಿಯಾಗು ; ಅವಸ್ಥೆಗೆ ಬರು : ತಾವು . . . ಸಂಶಯಪಟ್ಟಿದ್ದರಿಂದ ನನ್ನದು ಈ ಹಾಡಾಯಿತು (ಶ್ಯಾಂಶೂ. ೯) ; ಪೂರ್ಕೋವಿನ ಸಾಲೆಯ ದಿನಗಳಲ್ಲೂ ಇದೇ ಹಾಡಾಯಿತು (ಕಕ್ಕಶ. ೩). **ಪಾಡಿಗೆ ಬರು** = ಹಣ್ಣಾಗುವ ಸ್ಥಿತಿಯನ್ನು ಮುಟ್ಟು : ಆ ಕಾಯಿಗಳು ಪಾಡಿಗೆ ಬಂದು ಕೆಲ ಕೆಲವು ಹಣ್ಣುಪರಿದು ಸೊಂಪಾಗಿ ತೋರುತ್ತಿದ್ದವು (ಮುಂಬಯು. ೩-೩೬). **ಪಾಡುಮಾಡು**=ಸರಿಗೊಳಿಸು ; ತಿದ್ದು ; ತೀಡು : ಜೋಡುಸವಗ ಠೌಳಿ ಕತ್ತಿ ಖಂಡೆಯ ಲೌಡಿ ಖೇಡೆಯ ಚೂಡಾಯತಗಳ ಪಾಡು ಮಾಡುವ ಸಂಭ್ರಮವಂದೆರಡುಂ ಬೀಡಿನೊಳಗೆ ಮಸಗಿದುದು (ಕುರಾಸಾಂ. ೦೪-೬೬) ; ತೀಡು ತೀಡು ಮೇಲೆ ಮೇಲೆ ನೋಡಲು ಕಾಣಲಳವಲ್ಲದಿರ್ದ ನಡುವನು

ಇಳಿವ ನೆೞಲಿಯ ಪಾಡು ಮಾಡುವ ನೆವದಿಂದ ಪೊಳೆಯಿಸಿ ತೋಱಿಸು ತಿಹರು (ಕುಮಾರಾ. ೨೫-೭೦).

[<ಪಡು₁./ತಮಿ. ಮಲ. ತೆಲು. ಪಾಟು; ತುಳು. ಪಾಡು]

**ಪಾಡುಂಗಾಱ**, ಪಾಡುಕಾಱ, ಪಾಡುಗಾರ, ಪಾಡುಗಾಱ, ಹಾಡುಕಾರ, ಹಾಡುಕಾಱ, ಹಾಡುಗಾರ (ನಾ). ೧. ಹಾಡುವವನು; ಗಾಯಕ; ಸಂಗೀತಗಾರ: ಪಾಡುಂಗಾಱಂ, ಜೂದುಂಗಾಱಂ (ರಾಜಾಶೇ. ೦೬೬೩೮ಠ); ಪಾಡುಂಗಾಱಂ, ಅಲಸುಂಗಾಱಂ (ಕಮರ. ೨೦೦ ಕ್ರದೋ); ಕರಣಿಕ ರೊಳ್ಪಾಡುಂಗಾಱರ ಗಣಿಕೆಯರೆಸೆವ ಮಾಲೆಗಾಱರ ... ಆಲಯಂ ಗಳೆಸೆಗುಂ ಪುರದೊಳ್ (ಅಮೃ.ಕ. ೫-೭-೬೦). **ಪಾಡುಕಾಱ**: ೨. ಸ್ತುತಿ ಪಾಠಕ; ಹೊಗಳುವವನು; ವಂದಿ: ಸೊಗಸ ಹುಟ್ಟಿಸಿ ಸುಲಿವ ರಸಪಾದಿಗಳನಿವರ ವಿಡಾಯಿಗಳ ನಂಬುಗೆಯ ಕೀವಣ ಪಾಡು ಕಾಱರ ಕರ್ಣ ನೋಡು (ಕುಮ್ಮಾರ್ಕ್ರಿ. ೦೬-೨೫). **ಪಾಡುಗಾರ**: ೧. ಪುಟುಪಾಡುಗಾರ ತೆಲಿ ಮುಟ್ಟಿದನು (ಸೌಂಗೀ. ೭೩-೩). **ಪಾಡುಗಾಱ**: ೧. ಮೃಡನರೆಮೆಯ್ಯನಂಬಿಕೆಗೀಯೆ ತವಗಿಪ್ಪೆಡೆಗಾಣದೆ ಎಡಗಿವಿಯು ತೊಡವಿನೆಕ್ಕಲಗಾಣನಿಳಿಗಿಳಿದನೋಯೆಂಬ ಪಡಿಯಾದನಾ ಪಾಡುಗಾಱ (ಶ್ರೀಜಾಂ. ೩-೦೫). **ಹಾಡುಕಾರ**: ೧. "ಗಾಯಕ—ಹಾಡುಕಾರ" (ನಂಗಾರು. ೧೦೯). **ಹಾಡುಕಾಱ**: ೧. ಭವ್ಯನದೇಶದ ಹಾಡುಕಾಱಱೊಡೆ (ಶಾಸ. ೧೯೯೯, ಸೊಂಡೂರು. ೭೬-೨೦, 1480). **ಹಾಡುಗಾರ**: ೧. ಹಾಡು, ಹಾಡಿಕೆ ಮತ್ತು ಹಾಡುಗಾರ ಇದೊಂದು ತ್ರಿವೇಣೀಸಂಗಮವು (ಹಾಹಿಸಂ. ೧೭).

[ಪಾಡು₂ + —ಕಾಱ]

**ಪಾಡುಂಗಾಱಿಕೆ**, ಪಾಡುಗಾಱಿಕೆ, ಹಾಡುಗಾರಿಕೆ (ನಾ). ಹಾಡುವಿಕೆ; ಗಾಯನ; ಗಾನ: ನೀಂ ಪಾಡುಂಗಾಱಿಕೆಯೊಳ್ ಬಲ್ಲಿದನೆನಿಪ ಜಸಮಂ ಕೇಳ್ದಲ್ಲಿಗೆಯ್ತಂದೆಂ (ಅಮೃ.ಕ. ೦೭-೮). **ಪಾಡುಗಾಱಿಕೆ**: ಪಾಡುವ ಪ್ರಾತಃಕಾಲದ ರಾಗವ ಪಾಡುಗಾಱಿಕೆಯೊಳಾಲಿಸುತ (ಶಶಕ. ೨೫-೮). **ಹಾಡುಗಾರಿಕೆ**: "ಗೀತಂ, ಗಾನಂ—೨ ಹಾಡುಗಾರಿಕೆ ಹೆಸರುಗಳು" (ಅಭಿ೦.ಕಿ. ೫೭); ಅವರ ಹಾಡುಗಾರಿಕೆ ಯಾವುದೇ ಪ್ರಯಾಸವನ್ನು ಕಾಣದಂತಿತ್ತು (ಸಂಗೀತ. ೫೪).

[ಪಾಡುಂಗಾಱ + —ಇಕೆ]

**ಪಾಡುಕಾಯಿ** 'ಪಾಡುಗಾಯಿ' ನೋ.

**ಪಾಡುಕಾಱ** 'ಪಾಡುಂಗಾಱ' ನೋ.

**ಪಾಡುಕುಳಿ** (ನಾ). ಹಾಡುವುದೇ ಗೀಳಾಗಿರುವವನು; ಹಾಡುವುದರಲ್ಲಿ ಆಸಕ್ತಿಯುಳ್ಳವನು: ಪಾಡುಕುಳಿ, ಮಡಾಕುಳಿ (ಕಮರ. ೨೦೩ ಕ್ರದೋ).

[ಪಾಡು₁ + —ಕುಳಿ₂]

**ಪಾಡುಗ**, ಹಾಡುಗ (ನಾ). ೧. = ಪಾಡುಂಗಾಱ ೧: ಪಾಡುಗಂ, ಜೂದುಗಂ (ಶಬ್ದಾನು. ೩೯೯ ಕ್ರದೋ). **ಹಾಡುಗ**: ೧. "ಗಾಯಕಃ, ಗಾಯನಃ—ಈ ೨ ಹಾಡುಗಂ" (ಅಭಿ. ೬೯). ೨. = ಪಾಡುಂಗಾಱ ೨: ದಿವಿಜರ ರಾಯ ... ಶಿವಾದಿಗಳ ಸಾಹಸಕೆ ಮೂಱವಡಿಯ ರಾಯಭಟರಿದೆ ನೇವಿಸಾ ಸುರರಾಯನೂರಿನ ಹಾಡುಗರ ಹುಲುನಾಯಕರಿಗಿನಿತೇಕೆ ಖತಿ ಬೆಸಸೆಂದನಾ ಕರ್ಣ (ಕುಮ್ಮಾ.ಭಾ. ೦೯-೩).

[ಪಾಡು₁ + —ಗ₂]

**ಪಾಡುಗಬ್ಬ**, ಹಾಡುಗಬ್ಬ (ನಾ). [ಕಾವ್ಯವಿ] ಹಾಡುವುದಕ್ಕೆ ಅನು ಕೂಲವಾದ ಕಾವ್ಯ; ಈ ದೇಶೀಯಛಂದಸ್ಸಿನ ಷಟ್ಪದಿ, ಸಾಂಗತ್ಯ ಮತ್ತು ತ್ರಿಪದಿಗಳಲ್ಲಿ ರಚಿತವಾದ ಕಾವ್ಯ: ಪಾಡುಗಳಿಂದಂ ತಱಿಸಲೆ ಮಾಡಿದುದಂ ಪಾಡುಗಬ್ಬಮೆಂದು ಬುಧರ್ ಕೊಂಡಾಡುವರ್ (ಕಾವ್ಯಾವ. ೯೩೯); ನಾಡೊಳಗುಳ್ಳ ಜಾಣರು ಜಾಣೆಯರೊಡನಾಡುವ ಸವಿಮಾತುಗಳ ಪಾಡುಗಬ್ಬವ ಪರುಶವಿಸಿದ ಬಗೆಯು ನೀ ನೋಡು ಮಾನಿನಿ ಮುಂದೆ ಮುಂದೆ (ಶೋಕಶ. ೦-೩೫). **ಹಾಡುಗಬ್ಬ**: ಕಬ್ಬಿಗರೋದುಗಬ್ಬವ ಹಾಡು ಗಬ್ಬವ ಕಬ್ಬದೊಳೊರವರವೆರಡು ಕಬ್ಬಿನಂತಿರಬೇಕು ಬದಿರಂತೆ ರಚಿಸಲ್ಕೇಕಬ್ಬೆ (ಶಶಕ. ೦-೬); ನಿಬ್ಬಣಕೆ ಹೊರಟಂತೆ ಹಾಡುಗಬ್ಬಗಳ ಕೊಲ್ಲಾರಿಬಂಡಿ (ಕಂಪು. ೩೩-೮).

[ಪಾಡು₁ + ಕಬ್ಬ₁]

**ಪಾಡುಗವಿತೆ** (ನಾ). = ಪಾಡುಗಬ್ಬ: ಱಱಕುಳಕ್ಷಳ ಏತ್ವರೇಫೋಜ್ಝಳ ಱಕಾರ ಪ್ರಾಸಭೇದಂಗಳ ಸ್ವರವ್ಯಂಜನ ವಿಭಕ್ತಿ ಸಮಾಸ ಶಿಥಿಲಗಳಾ ಪಱಿಯ ನೇನುಂ ಪಾಡುಗವಿತೆಗಳೊಳು ವಿಚಾರಿಸ ಸಲ್ಲ (ಶಾಶ್ಕಣ. ೦-೪೩).

[ಪಾಡು₁ + ಕವಿತೆ]

**ಪಾಡುಗಾ** (ಕ್ರಿ). (ಪರಸ್ಪರರ) ಕ್ಷೇಮವನ್ನು ಉಳಿಸು, —ರಕ್ಷಿಸು: ಇಂತು ಪಾಡುಗಾದೊಡನೊಡನಿರ್ವರುಂ ಮೆಚ್ಚೆಯಲೆಂದೆ ಶರಾಸನ ವಿದ್ಯೆಯಿಂ ಪಡಲ್ವಡಿಸಿದರೆತ್ತವಿತ್ತಮಿದಿರೊಳ್ ಮಲೆದೊಡ್ಡಿದ ಚಾತು ರಂಗಮಂ (ಪಂಪಭಾ. ೧೧-೧೮).

[ಪಾಡು₂ + ಕಾ₁]

**ಪಾಡುಗಾಯಿ**, ಪಾಡುಕಾಯಿ, ಹಾಡುಗಾಯಿ (ನಾ). ಹುಳಿಯನ್ನು ಕಳೆದುಕೊಂಡು ಹಣ್ಣಿನ ಅವಸ್ಥೆಗೆ ತಿರುಗುತ್ತಿರುವ ಕಾಯಿ; ದೋರೆಗಾಯಿ: ನಾಲ್ವರು ಪಾಡುಗಾಯಿಯಗಳ ಗೊಂಚಲು ತುದಿಯಲ್ಲಿ ಬಾಗಿ ನಿಂತು ... ಎದುರಿಗೇ ಇರಬೇಕೆ? (ದೇಶಕೆ. ೦೩೮). **ಪಾಡುಕಾಯಿ**: ತಚ್ಚೂತಶಾಖಾಗ್ರದೊಳ್ ಜೊಂಪದಿಂ ತೂಗುತಿಹ ಪಾಡುಕಾಯಿಗಳೆರಲ್ ಕಂಡು (ಶುಕಾ. ೫-೩). **ಹಾಡುಗಾಯಿ**: ಹುಣಸೆ ಇನ್ನೂ ಹಾಡುಗಾಯಿ (ಜಾಶ).

[ಪಾಡು₂ + ಕಾಯಿ₁ (<ಕಾಯ್₄)]

**ಪಾಡುಗಾರ** 'ಪಾಡುಂಗಾಱ' ನೋ.

**ಪಾಡುಗಾಱ** 'ಪಾಡುಂಗಾಱ' ನೋ.

**ಪಾಡುಗಾಱಿಕೆ** 'ಪಾಡುಂಗಾಱಿಕೆ' ನೋ.

**ಪಾಡುಗೆಡಿಸು** (ಕ್ರಿ). ನೆಲೆಗೆಡುವಂತೆ ಮಾಡು; ದಂಸ್ಥಿತಿಗೆ ಒಳಪಡಿಸು: ಪವನಜಾದ್ಯರ ಪಾಡುಗೆಡಿಸಿದನಸ್ತ್ರಸಾರದಲಿ (ಕೊರಕಾ. ೬-೩೫-೩೩); ಪೋಡಿಯ ಹರಿಗಯ ಭಟರು ನೇಜೆಯಗಳ ನೀಡುತಿರುವ ಮುಲ್ಲಾಕರ ಪಾಡುಗೆಡಿಸಿ ಹೊಯ್ಯುಚೆಯಟ್ಟಿ ದೆಸದೆಸೆಗೋಡಿಸಿದುದನೇವೆಳ್ಳಿ (ಕಂಶಶಿ. ೦೫-೪೧).

[ಪಾಡು₂ + ಕೆಡಿಸು₁]

**ಪಾಡುಗೆಯ್**, ಪಾಡುಗೈ (ಕ್ರಿ). ಸಂಪರಿಸು; ಹದಗೊಳಿಸು; ಸಿದ್ಧ ಪಡಿಸು: ಒಯ್ಯನೆ ಗದೆಯನೂಂ ಪಾಡುಗೆಯ್ದುರ್ದುರ ಭೋರೆಂದೆಱಪು ಗ್ರಾರಾತಿಯೂರುದ್ವಯಮಂನಿಡೆ ... ಕೆಡೆದನ್ನೆಲಾಭಾಗದೊಳ್ ಧಾರ್ತ ರಾಷ್ಟ್ರಂ (ಪಂಪಭಾ. ೦೩-೯೭). **ಪಾಡುಗೈ**: ನಾವೀ ನಿಜಾಯುಧಗೂಡಿ ... ಸಂಗರವ ಪಾಡುಗೈವುದೆ ಪಂಥ (ಕೊರಕಾ. ೫-೯-೧).

[ಪಾಡು₂ + ಕೆಯ್₁]

**ಪಾಡುಗೈ** 'ಪಾಡುಗೆಯ್' ನೋ.

**ಪಾಡುಗೊಳ್** (ಕ್ರಿ). ಲೆಕ್ಕಿಸು; ಗಮನಿಸು; ಎಣಿಸು: ಕರಿಗಳ ಪಾಡು ಗೊಳ್ಳದ ಬಲದಿನಾಗಲು ನೋಡಿ ತಕ್ಷಣ ತನ್ನ ಮಗಳನು ಭೀಮಸೇನಂಗೆ ಪರವಿವಾಹವ ಮಾಡಿ ನುಡಿದನು (ಸಂಕಶ. ೦೭-೩೧).

[ಪಾಡು₁ + ಕೊಳ್₁]

**ಪಾಡುದಪ್ಪು** (ಕ್ರಿ). ನೆಲೆಗೆಡು; ಹದಗೆಡು; ಕೆಟ್ಟು ಹೋಗು: ಗೋಡೆ ಗಟ್ಟಾಗಿ ಬಳಸಿಕೊಂಡ ವೀರರ ನೋಡಿ ನಾಗೇಂದ್ರ ವೈರಿಬೆದಱಿ ಪಾಡು ದಪ್ಪಿತು ತನ್ನ ಕಾರ್ಯವೆಂದವರ ಬಿಟ್ಟೋಡಿದನಿರದೆ ತನ್ನೂರ್ಗೆ (ಶಶಕ. ೫೬-೪೧).

[ಪಾಡು₂ + ತಪ್ಪು₁]

**ಪಾಡುಪಂತ**, ಪಾಡುಪಂಥ (ನಾ). ಹೆಸರಾಂತ ಶಪಥ; ಜನಜನಿತವಾದ ಪ್ರತಿಜ್ಞೆ: ಈ ಪಾಡುಪಂತದ ಮಾತನಾಡುವ ಶರಜಾಪಾಗವಜ್ಞ ನೀನಹುದು (ಶೋಕಶ. ೧೨-೫೭); ಎಂತಾನುಮಿ ಪಾಡುಪಂತಮಂ ಮಗುಟ್ಟುವೇಟ್ಟೂಂ (ಅಶಪ. ೧೨-೮). **ಪಾಡುಪಂಥ**: ಕುಂದು ಹೆಚ್ಚಿನ ಪಾಡುಪಂಥವ ಕಂದುಕಸರಿನ ಕಲಿಮನದ ಕಡುಹಿಂದ ಕಯ್ಯುಡುಕಿದರು ಕಲಿಗಳಾಜಿಯಲಿ (ಕೊರಕಾ. ೪-೩-೬): ಬಡವ ಬಲ್ಲಿದರ ಕೂಡ ಪಾಡುಪಂಥರ ಮಾತು ತರವೆ (ಶ್ರೀಕಾ. ೦-೯೯).

[ಪಾಡು₁ + ಪಂತ₁]

**ಪಾಡುಪಂಥ** 'ಪಾಡುಪಂತ' ನೋ.

**ಪಾಡುಪಡಿಸು** 'ಪಾಡುವಡಿಸು' ನೋ.

**ಪಾಡುಪಡು,** ಪಾಟುಪಡು, ಪಾಟುಬಡು (ಕ್ರಿ). ಕಷ್ಟಪಡು; ತೊಂದರೆಯನ್ನು ಅನುಭವಿಸು : ಕಾಡಿನಲ್ಲಿದ್ದುಕೊಂಡು ಪಾಡು ಪಟ್ಟು ತಪಸ್ಸು ಮಾಡುವುದು ಆತ್ಮಜ್ಞಾನಕ್ಕಾಗಿ (ಶಕಾ. ೧೬೧); ಅದಕ್ಕೋಸ್ಕರವೇ ಅಲ್ಲವೇ ನಾನೂ ನಿನ್ನ ತಂದೆಯೂ ಇಷ್ಟೊಂದು ಪಾಡು ಪಡುತ್ತಿರುವುದು (ಮಹಾಗ. ೯೭) : ಹೀನಾಯವಾದ ನರಜನ್ಮಕ್ಕೆ ಹೇಗೆ ತಾನೆ ಹೋಗಿ ಪಾಡುಪಡಲಿ (ಕುಮಾರಾ. ೩೪). **ಪಾಟುಪಡು :** ಪಾಟುಪಡದರೆ ಜಗದಿ ಜೀವರ ಘೋಟಕಾಸ್ಯನು ಸೃಜಿಸಿ ಯೋಗ್ಯತೆ ದಾಟಗೊಡದರೆ ಸಲಹುತಿಪ್ಪನು ಸರ್ವಕಾಲದಲಿ (ಹರಿದಾ. ೧೯೭). **ಪಾಟುಬಡು:** ಒಬ್ಬನೊ ಇಹದಲ್ಲಿ ಬಂದು ಎಲ್ಲ ಪಾಟುಬಡುವದು (ಸೋಸ್ವರಂ. ೫೦-೩). [ ಪಾಡು₃ + ಪಡು₁ ]

**ಪಾಡುಬೀಟ್** (ಕ್ರಿ). ಕಷ್ಟ ಪಡು : ಪಾಡುಬಿದ್ದುಬಾರಂಬವ ಧಾನ್ಯ ಶತ್ರುಜಯ ಪುತ್ರೋತ್ಪತ್ತಿ . . . ಬೇಹಾರವಿಂತೆಲ್ಲ ಮುಂ ಪಲಕಷ್ಟಂ ಕಡೆಗೊಳ್ಳಿತ್ತೆ (ಸೋಕುಚ. ೯೩). [ ಪಾಡು₃ + ಬೀಟ್₁ ]

**ಪಾಡುಮ್ಮೆಮೆ** (ನಾ). ಹಾಡಿನ ಮಹಿಮೆ ; ಹಾಡುಗಾರಿಕೆಯ ಮಹಿಮೆ : ಸಾಡು ಸಡ್ಡೆಯಾ ಪಾಡೆ ಪಾಡುಮ್ಮೆಮೆಗೆ ಪಾಸಟಿ ಯಿಲ್ಲಂ (ಅರ್ಜು.ಕ. ೨೨-೧೧). [ಪಾಡು₃ + ಮ್ಮೆಮೆ ( <ಮೆಯ್ಮೆ ) ]

**ಪಾಡುವಡಿಸು,** ಪಾಟುಂಬಡಿಸು, ಪಾಡುಪಡಿಸು (ಕ್ರಿ). ತೊಂದರೆಗೊಳಗುಮಾಡು ; ಕಷ್ಟಪಡಿಸು ; ಪೀಡಿಸು : ಪಾಡುವಡಿಪರೆಂದು ಪರಿಹರಿಸದೆ ಚುನ್ನವಾಡದೆ ಮನೆವಾಳ್ತೆಯನು ಮಾಡುವುದವರ ಸಮ್ಮತದಿಂದ (ಕಂ. ೪-೧೩). **ಪಾಟುಬಡಿಸು:** ಪಾಟುಬಡಿಸದಿರು ಸಿರಿಲಕುಮಿನಲ್ಲ (ಶಂಕ್ಕ. ೯೩-೪) : ನೀಟಾದ ಭೋಜನವ ಬಯಸುವನು ಯಮರಾಯ ಪಾಟುಬಡಿಸುವ ಭಂಗ ಕೇಳಿ ಎಚ್ಚರಿಯವಲೆ (ಶಂಕ್ಕ. ೧೦೯-೧). **ಪಾಡುಪಡಿಸು :** ನಾವು ದೇವತೆಗಳ ಪಾಡುಪಡಿಸಿದೆವು (ಸೌಗಂ. ೦೦೦-೦೭) : ಒಂದು ವೇಳೆ ಮಕ್ಕಳಾದರೂ ಈಗ ನೀನು ನನ್ನನ್ನು ಪಾಡುಪಡಿಸುವಂತೆ ಅವರೂ ನಿನ್ನನ್ನು ಪಾಡುಪಡಿಸಲಿ (ಕರಿ. ೩೨). [ಪಾಡು₃ + ಪಡು₁ + –ಇಸು₃]

**ಪಾಡುವೇಳು** (ಕ್ರಿ). ಕ್ರಮವನ್ನು ಶಿಳಿಸು ; ವಿಧಾನವನ್ನು ಹೇಳಿ ಕೊಡು : ಅಧನು ಚೆಂಡಾಟವ ಚೆಂಡಾಟವನಾಡುವ ನೃಪತನಯರಿಗೆ ಪಾಡುವೇಳುತ ನಿಂದಿಹನು (ಕುಮಾರಾ. ೩೦-೪೮).

[ಪಾಡು₃ + ಪೇಳು ( <ಪೇಟ್ ) ]

**ಪಾಡೆ** (ನಾ). ದೋಣೆ ; ನಾವೆ : ಸಂಸಾರಾಂಬುಧಿಯಲ್ಲಿ ಶರೀರವೆಂಬೊ ಪಾಡೆಯಲ್ಲಿ ಕಂಸಾರಿ ವ್ಯವಹಾರ ಕಡುಲೋಭಿ ಜೀವಶಟ್ಟಿ ಕಾಲವೆಂಬೊ ಕಳ್ಳಪಾಡೆ ಕಲಹಂಸಾಪುಂಡಿರುವ ಕ್ರೂರವೆಂಬೊ ಕಳ್ಳಬಂಟ ಕಿಡಿಗೇಡಿ ನೋಡುತಿಹ ಬಾರಯ್ಯ ಈಗ (ಕ್ರಿಕಂದ. ೩-೦೩-೦). 'ಪಾಂಡಿ' ಪರಾ.

[ ದೇ. ॥ ಮಲ. ಪಾಣ್ಣಿ ; ತೆಲು. ಪಾದಿ ]

**ಪಾದ್ದನ,** ಪಾದ್ದನೆ, ಪಾರ್ದನ (ನಾ). (ಕರಾ) ಭೂತಗಳ ಹಾಗೂ ತುಳುನಾಡಿನ ವೀರರ ಹಳೆಯ ಕಥೆಗಳನ್ನು ಹೇಳುವ ಹಾಡು ; ಭೂತಾರಾಧನೆಯ ಹಾಡು : ತುಳುಭಾಷೆಯ ಕತೆಗಳಲ್ಲಿ ಪಾದ್ದನಗಳು ಎಂಬೊಂದು ವರ್ಗವಿದೆ; ಅದು ದೈವಗಳ ಪುರಾಣಗಳ ವರ್ಗ (ಸುಪರ್ಣ. ೧೨೦): ಈ ಪಾದ್ದನಗಳು ಮಾನವಶಾಸ್ತ್ರದ ಅಭ್ಯಾಸಿಗಳಿಗೆ ಧಾರಾಳವಾಗಿ ವಸ್ತುಗಳನ್ನು ಒದಗಿಸಬಲ್ಲುವು (ಶಾಹಗ. ೧೭). **ಪಾದ್ದನೆ :** ತುಳುನಾಡಿನ ನಿದರ್ಶನವನ್ನು ಹೇಳುವಲ್ಲಿ ಇಲ್ಲಿನ ದೈವಗಳ ಪಾದ್ದನೆ ಕೆಲವು ಜನರ ವ್ಯಕ್ತಿಯಾಗಿದೆ (ಶಾಹಗ. ೦೦) : ತುಳು ಪಾದ್ದನೆಗಳ ಸೊಲ್ಲನ್ನು ಹಾಡುತ್ತ . . . ಅವರು ನಡೆಯುತ್ತಿದ್ದರು (ಶಗುಂ. ೯೩). **ಪಾರ್ದನೆ :** ಕಳ್ಳು ಕುಡಿದು ಮಧ್ಯರಾತ್ರಿ ಕಳೆದ ಮೇಲೆ ಪಾರ್ದನ ಹೇಳುತ್ತಾ ಎಲ್ಲರನ್ನು ನಿದ್ರೆಯಿಂದೆಬ್ಬಿಸುತ್ತಾ ಮನೆ ಸೇರುವುದು ಆತನ ನಿತ್ಯದ ವಿಧಿಯೇ ಆಗಿತ್ತು (ಕಂಪ. ೪೨).

[ ←ತುಳು. ಪಾದ್ದನ, ಪಾದ್ದನೊ, ಪಾರ್ದನ ]

**ಪಾದ್ದನೆ** 'ಪಾದ್ದನ' ನೋ.

**ಪಾಡ್ಯ** 'ಪಾಡಿವ' ನೋ.

**ಪಾಡ್ಯಮಿ** (ನಾ). ಚಾಂದ್ರಮಾನಪಕ್ಷದ ಮೊದಲನೆಯ ತಿಥಿ ; ಪಾಡ್ಯ; ಪ್ರತಿಪದೆ : 'ಬಲಿಪಾಡ್ಯಮಿ' ಪರಾ. ☞ ಪಂಚಮಿ, ಸಪ್ತಮಿ, ಅಷ್ಟಮಿ, ನವಮಿ, ದಶಮಿ ಇತ್ಯಾದಿ ಶಬ್ದರೂಪಗಳ ಹೋಲಿಕೆಯ ಮೇಲೆ 'ಪಾಡ್ಯ' ಶಬ್ದಕ್ಕೆ 'ಮಿ' ಎನ್ನುವುದು ಸೇರಿ ಇದು ರೂಪಿತವಾಗಿರಬಹುದು. [ <ಪಾಡ್ಯ./ತೆಲು. ಪಾಡ್ಯಮಿ ]

**ಪಾಡ್ಯಾಹ್ನ** (ನಾ). (ಕರಾ) ಪಾಡ್ಯದ ದಿನ ಮದುಮಗಳಿಗೆ ಏರ್ಪಡಿಸುವ ಉತ್ಸವ : ಏತಾಳರು ತಮ್ಮ ಮನೆಯ 'ಪಾಡ್ಯಾಹ್ನ'ಕ್ಕೆ ಅವರನ್ನು ಬರಹೇಳಿದ ಬಳಿಕ, ಉಪಾಯವಿಲ್ಲದೆ ಮಾರಳಿದರು (ಮರಳು. ೨೩೪). [ ಪಾಡ್ಯ ( <ಪಾಡಿವ) + ಅಹ್ನ ]

**ಪಾಣ** (ನಾ). ೧. ನರ್ತನ ಮಂತ್ರ ಗಾಯನಗಳನ್ನು ವೃತ್ತಿಯಾಗಿ ಉಳ್ಳವನು ; ನಟ : ಇವರು ಹಿರಿಯರುಗಳೆೀ ಯಾಗ ನಟ್ಟುವಿಗ ಪಾಣರು (ಬಸವ. ೩೦೩) ; ಗಾಣರ ಪಾಣರ ವೈತಾಳಿಕರ ವಂದಿ ಮಾಗಧರ ಸಂದಣೆಯೊಳ್ ಸಂದಣಿಸಿ (ಮಹಾವೇ. ೦೨-೯ ವ); ನಟ್ಟುವ ಪಾಣ ಗಣೆಯಾಟ ವೀಣೆಯಾಟ . . . ಮೊದಲಾದ ಅಱುವತ್ತುನಾಲ್ಕು ವಿದ್ಯೆಗಳ ಸಾಧಿಸಿದ ಡೊಂಬನೆನು ಕಿಱಿಯನೇ (ಗಣಶಾ. ೧೨೦-೨). ೨. ಕುಣಿದು ಪೂಜೆ ಸಲ್ಲಿಸುವ ಪೂಜಾರಿ : ನಮ್ಮ ಊರಿನ ದೈವಾರಾಧನೆಗಳಲ್ಲಿ "ಪಾಣರು" ದೆವ್ವದ ವೇಷ ತೊಟ್ಟು, ಕೋಲವೆಂಬ ಉತ್ಸವಗಳಲ್ಲಿ ಕುಣಿಯುತ್ತಾರೆ (ಹುಟ್ಟುಬ. ೨೩). ೩. (ಕರಾ) ಓಲೆಗರಿಯಿಂದ ಕೊಡೆ ತಯಾರಿಸುವವನು. [ ದೇ. ॥ ತಮಿ. ಮಲ. ಪಾಣ ]

**ಪಾಣವಿಕ** (ನಾ). ಪಣವವೆಂಬ ವಾದ್ಯವನ್ನು ಬಾರಿಸುವವನು : ವೈಣಿಕ ಪಾಣವಿಕ ವಾಂಶಿಕ ಮಾರ್ದಂಗಿಕ ಗಾಯಕ ನರ್ತಕಾದಿ ಕುತಪಪ್ರತತಿಯುಮಂ . . . ಸಮಕಟ್ಟಿ (ಚಂದ್ರಪ್ರ. ೩-೦೩ ವ). [ಸಂ.]

**ಪಾಣಿ₁** 'ಪಾಣೀಯ' ನೋ.

**ಪಾಣಿ₂** (ನಾ). ೧. ಕೈ ; ಹಸ್ತ : "ಪಾಣಿ ಹಸ್ತಂ ಪಂಚಶಾಖೆ ಕರಮೆನಲು ಕೈ" (ಮಂಗರಾ. ೯೩-೮) ; ನೇತ್ರ ನಾಸಿಕ ಪಾದ ಪಾಣಿ ಶ್ರೋತ್ರವೆಂಬಿವು ತಮ್ಮೊಳೊಂದೇ ಸೂತ್ರದಲಿ ಸಂಸ್ಪೃಷ್ಟವಾಗಿ ಸಮಾನ ಬುದ್ಧಿಯಲಿ ಗಾತ್ರವಿದಿದಿಹವೋಲು (ಕುಮಾ.ಅ. ೪-೭) ; ಪಾಣಿ ಚಿಗುರಿನ ಹಾಗೆ ವಾಣಿ ಜೇನಿನ ಹಾಗೆ ಮನವೇಕೆ ಕಲ್ಲಿನ ಹಾಗೆ (ಇಂಚರಶ. ೮೩-೨). ೨. ಬೆರಳನ್ನು ಚಾಚಿದ ಅಂಗೈ : "ನೀಡಿದ ಬೆರಳ ತಳಂ ಪಾಣಿಯೆಂಬುದು" (ಹಲಾಯು. ೮೮-೩೮): "ಅಂಗುಲಿ ಮಾಡಿದ ಕಾಡಿತೆಯಾ ಪ್ರಸೃತಿಯೆನಿಕ್ಕು ನೀಡಿದ ಬೆರಳ್ ಪಾಣಿಯಕ್ಕುಂ" (ಮಂಗರಾ. ೯೩-೪).

[ಸಂ.]

**ಪಾಣಿ₃** 'ಪಹಣಿ' ನೋ.

**ಪಾಣಿಗೆ** (ನಾ). ಆನೆಗೆ ತೊಡಿಸುವ ಒಂದು ಬಗೆಯ ಅಲಂಕಾರ (?): ಮಾಣಿಕದ ಮೊಗರಂಬ ಚಿಪ್ಪಿನ ಪಾಣಿಗೆಯ ಕಿಂತೊರಡೆ ಮುರುಜೆಯ ಸೇಣಿನುರುಸಂಕಲೆಯ ಸೂಸಿಗೆ ಕೊಂಬಿನಣಚುಗಳ ಡಾಣೆದೊತ್ತಳ ನೂತ್ರಿನೊತ್ತುಗೆ ಕಾಣಪಗ್ಗರಣೆಗಳ ಚೌದಂತುನ ಪೊಕ್ಕುನು ರಕ್ಕಸ ವ್ರಜ ಮಟ್ಟಿ ಘಟ್ಟಿಸುತ (ಅಂಬಶಾ. ೧೪-೧೧). [?]

**ಪಾಣಿಗ್ರಹಣ** (ನಾ). ೧. ಕೈಹಿಡಿಯುವುದು ; ಮದುವೆ : "ಉಪಯಾಮಃ, ಪರಿಣಯನಂ, ಪಾಣಿಗ್ರಹಣಂ, ವಿವಾಹಃ, ಉದ್ವಾಹಃ –

ಈ ೫ ಮದುವೆ" (ಹರಿಭಾಯು. ೮೦-೩೯೦); ಅಹಹ ವೈರಿಗೆ ಧರೆಗೆ ಪಾಣಿಗ್ರಹಣವಾಯಿತೆ (ಶಂಕ್ರಾ.ಶ. ೩-೨೭); ಧರ್ಮದಾಸನಿಗೆ . . . ಕೆಲವು ದಿವಸದಲ್ಲಿಯೇ ದ್ವಿತೀಯ ಪಾಣಿಗ್ರಹಣವಾಯಿತು (ಅದೂಟಿ. ೭೭). ೨. (ಅಲಂ) ಕೈಸೆರೆ ಹಿಡಿಯುವಿಕೆ : ಪಟುಭಟರು ಅವ್ವಣ ಪ್ರಕಾರ ಪ್ರಾಣಯುಕ್ತವಾಗಿ ಪಾಣಿಗ್ರಹಣವೆಸಗಿದ ಆನೆ ೧೮೧ (ಎಕ. XII. ಕೊರಟಗು. ೫೩-೨೪ ; 1624). [ಸಂ.]

**ಪಾಣಿಗ್ರಹಣಂಕೆಯ್** 'ಪಾಣಿಗ್ರಹಣಂಗೆಯ್' ನೋ.

**ಪಾಣಿಗ್ರಹಣಂಗೆಯ್**, ಪಾಣಿಗ್ರಹಣಂಕೆಯ್ (ಕ್ರಿ). ೧. ಮದುವೆ ಮಾಡಿಕೊಡು : ಬಂಧುಗಳ್ ವಿವಾಹವಿಧಿಯನೊಡರ್ಚಿ . . . ವಾಲ್ಮರುಮಂ ತಂದು ಪಾಣಿಗ್ರಹಣಂಗೆಯ್ಕೆ (ಶಾಪುಂಪು. ೯೨೮). **ಪಾಣಿಗ್ರಹಣಂಕೆಯ್** : ೨. (ಅಲಂ) ನೀರನ್ನು ಧಾರೆಯೆರೆದು ಕೊಡು ; ದಾನ ಮಾಡು : ಭೂತಶರ್ಮ್ಮರ್ಗ್ಗೆ ಶಾಲಿಗ್ರಾಮಮ ಸರ್ವಪರಿಯಾರ ಪರಿಗ್ರಹದಿನ್ದು ಪಾಣಿಗ್ರಹಣಂಕೆಯ್ದು ಕೊಟ್ಟರ್ (ಕ್ಯಾಶಾ. ೦೫೯೦. ೦-೩೨ ; 788 ?). [ಪಾಣಿಗ್ರಹಣ + ಕೆಯ್$_1$]

**ಪಾಣಿಗ್ರಹಣಂಗೆಯಿಸು**, ಪಾಣಿಗ್ರಹಣಂಗೆಯ್ಸು (ಕ್ರಿ). ಕೈ ಹಿಡಿಸು; ಮದುವೆ ಮಾಡಿಸು : ಅಂತು ಕೈನೀರೆರೆದು ಪಾಣಿಗ್ರಹಣಂಗೆಯಿಸಿದಾಗಳ್ [ಪಾಠಾಂ. ಗೆಯ್ದಾಗಳ್] (ಆದಿಪು. ೪-೯೮ ವ). **ಪಾಣಿಗ್ರಹಣಂಗೆಯ್ಸು** : ಗುಣಾರ್ಣವನಾ ದ್ರುಪದಜೆಯನೊಡನೆ ಕುಳ್ಳಿರಿಸಿ . . . ಹುತವಹಸಮಕ್ಷದೊಳ್ ಕೆಯ್ನೀರೆರೆದು ಪಾಣಿಗ್ರಹಣಂಗೆಯ್ಸಿ (ಪಂಪಭಾ. ೩-೭೯ ವ). [ಪಾಣಿಗ್ರಹಣಂಗೆಯ್ + — ಇಸು$_1$]

**ಪಾಣಿಗ್ರಹಣಂಗೆಯ್ಸು** 'ಪಾಣಿಗ್ರಹಣಂಗೆಯಿಸು' ನೋ.

**ಪಾಣಿಘ** (ನಾ). ೧. ಹರೆ, ಮೃದಂಗ, ಢಕ್ಕೆ ಮೊದಲಾದ ವಾದ್ಯಗಳನ್ನು ಬಾರಿಸುವವನು,- ನುಡಿಸುವವನು. ೨. ಕೈತಾಳ ಹಾಕುವವನು; "ಹಾಡುವಾಗ ಕೈಮೇಲೆ ತಾಳವ ಹಿಡಿಯುವವನು" (ಗಂಗಾಕು. ೨೦೫): "ಪಾಣಿವಾದಃ, ಪಾಣಿಘಃ–೨ ಕೈತಾಳ ಹೊಡೆಯುವವನ ಹೆಸರು" (ಚಿಕ್ಕಾಂಕಿ. ೩೦೦). [ಸಂ.]

**ಪಾಣಿಚಳನ** (ನಾ). (ನೃತ್ಯದಲ್ಲಿ) ಕೈಗಳ ಚಲನೆ, — ವಿನ್ಯಾಸ : ಮೃದುಪಾದನ್ಯಾಸವಿಂಬಾಗೆ ಕಂಕಣರಾವಂ ಸೊಗಸಾಗೆ ಪಾಣಿಚಳನಂ ಚೆಲ್ವಾಗೆ . . . ನೀಳ್ದು ಮೆಟ್ಟಿದಳ್ ಲೀಲಾಲಸಲಾಸ್ಯಮಂ (ಅಂಬಿಕೆ. ೦೨-೬೨). [ಪಾಣಿ$_2$ + ಚಳನ ( = ಚಲನ) ]

**ಪಾಣಿಜ** (ನಾ). ಕೈಬೆರಳಿನ ಉಗುರು : "ಕಾಮಾಂಕುಶಾಃ, ಕರರುಹಾಃ, (ಪುನರ್ನವಾಃ), ಪಾಣಿಜಾಃ, ನಖಾಃ, ನಖರಾಃ – ಈ (೬) ಉಗುರ್" (ಕಣ್ಣಾಯು. ೮೪-೩೩೭) ; "ಪಾಣಿಜಂ ಕಾಮಾಂಕುಶಂ ನಖಮುನಲ್ಮುಗುರು" (ಮಂಗರಾ. ೯೩-೮). [ಸಂ.]

**ಪಾಣಿತಲ**, ಪಾಣಿತಳ (ನಾ). ಅಂಗೈತಳ; ಕರತಳ : "ಪಾಣಿತಲ [ ಪಾಠಾಂ. ೪ ] ಮೆಂದೊಡಂಗೈ" ( ಮಂಗರಾ. ೯೩-೮ ). **ಪಾಣಿತಳ** : ದೇಸೆ ವಿಳಾಸಮಂ ಪಡೆಯೆ ಗೊಂದಳವಕ್ಕಣಮಾಗಲು ನೃಪಾವಾಸದೊಳಾಡಿದತ್ತಸಿಯೆ ಪಾಣಿತಳಂ ಪಡೆವಂತೆ ಕುಂಕುಮಸ್ಥಾಸಕಮಂ (ಮಲ್ಲಿಪು. ೨-೦೦); ಪಾಣಿತಳಪ್ರಭೆ ಪಸರಿಸೆ ಶೋಣಿತಚಮರೀಜಮಾನಿಸಿದುವು ಸಿತಚಮರಶ್ರೇಣಿಗಳ್ (ಪುಷ್ಪಪು. ೭-೨೧). [ಪಾಣಿ$_2$ + ತಲ]

**ಪಾಣಿತಳ** 'ಪಾಣಿತಲ' ನೋ.

**ಪಾಣಿತ್ರಯ** (ನಾ). [ಸಂಗೀತ] ವಾದ್ಯವಾದನಕ್ರಮೇದಲ್ಲಿಯ ಸಮಪಾಣಿ, ಅರ್ಧಪಾಣಿ ಮತ್ತು ಉಪರಿಪಾಣಿಯೆಂಬ ಮೂರು ಬಗೆಯ ಹಸ್ತವಿನ್ಯಾಸ : ವಾದಕನುಪಪಾದನಿನೆಸೆವ ಹೃದ್ಯವಾದ್ಯವಿಶೇಷಂಗಳೊಳ್ ನೆಗಟ್ಟ ಸಮಪಾಣಿಯುಮರ್ಧಪಾಣಿಯುಮುಪರಿಪಾಣಿಯುಮೆಂಬ ಪಾಣಿತ್ರಯದೊಳಂ . . . ನೆಱೆದು (ಅಜಿಪು. ೩-೩೨ ವ). [ಸಂ.]

**ಪಾಣಿದ** (ನಾ). (?) : ಇವಕ್ಕೆ ಸಾಕ್ಷಿ ವಿಶಾಕಣೂರರು ಅಯಿರ್ಚ ಕೀಟಪರು ಆಣಿಗರು ಕಟಕ್ರಿಯರು ಚಂಗರಸನು ತಲಿಪರಿಯಾ ಕಿಬ್ಬಾಳ್ಗದೋರ್ ಕವುಳನ್ದೆಯಾರುಂ ಕಣ್ಣಾಟಿಕುಳ್ಳಿಯುಂ ಪಾಣಿದರುಂ ಅಕ್ಕಶಾಲೆಯಗಾಪುಲಿಯಣ್ಣಂಗಳು ಎರೆಕಾಡನಳೆದೋರ್ (ಕೌಇಇ. IX-1. ೪೭-೦೫ ; ಸು. ೯೨ನೆಯ ಶ) [ ? ]

**ಪಾಣಿದಂಡ** (ನಾ). ದೋಣಿಯನ್ನು ನಡೆಸುವ ಹುಟ್ಟು : "ಅಂಡ್ರಯನೆ ನೀರ ಹಜಿಗೋಲಕ್ಕಮಂ ತೆಗೆವ ಗಟಿ ಹುಟ್ಟು ಪಾಣಿದಂಡಾಖ್ಯ ಮಕ್ಕುಂ" (ಮಂಗರಾ. ೧೨೩-೧೩). [ಪಾಣಿ$_2$ + ದಂಡ]

**ಪಾಣಿಪಂಚೆ** (ನಾ). ಸ್ನಾನಕ್ಕಾಗಿ ಉಪಯೋಗಿಸುವ ಜಾಳುಜಾಳಾದ ಪಂಚೆ ; ನೀರುಪಂಚೆ (ಉಕ) : ಇನ್ನು ನಾನು ಅರ್ಧಪಾಟ ಬನೀನು ಪಾಣಿಪಂಚೇಲಿ ಕಾಲ ಕಳೆಯಬೇಕು (ಕೃಕೃಶಿ. ೧೦೨); ಉಳಿವನರ ಬಟ್ಟೆ ಕೊಳೆಯಿಂದ ರಟ್ಟಾಗಿದ್ದರೆ ಅವನದು ಬೆಳ್ಳಗಿರದಿದ್ದರೂ ಹಳ್ಳಿಯ ಹಾರುವರ ಪಾಣಿಪಂಚೆಯಷ್ಟರ ಮಟ್ಟಿಗಾದರೂ ಶುಚಿಯಾಗಿರುತ್ತಿತ್ತು (ಮರಿಮ. ೩೪). [ಪಾಣಿ$_1$ (< ಪಾಣೀಯ) + ಪಂಚೆ]

**ಪಾಣಿಪತ್ತು** 'ಪಾನಿಪತ್ತು' ನೋ.

**ಪಾಣಿಪಾಡು** (ನಾ). ತೋಟ ; ಉದ್ಯಾನ : ಇಲ್ಲ ಮರಾಳಮೀಲ್ಲದ ಕೊಳಂ ಕೊಳನಿಲ್ಲದ ಪಾಣಿಪಾಡು ಪಾಡಿಲ್ಲದ ತುಂಬಿ ತುಂಬಿಗಳ ಗೊಂದಣವಿಲ್ಲದ ಪೂ (ಶಬಂಪು. ೩-೯).

[ಪಾಣಿ$_0$ ( P ← ತಮಿ. ಪಾಣ = ಊರಿನ ಸುತ್ತಲಿನ ತೋಪು) + ಪಾಡು$_3$]

**ಪಾಣಿಪಾತ್ರ** (ನಾ). ೧. ಪಾತ್ರೆಯಂತೆ ಒಡ್ಡಿದ ಕೈ ; ಬೊಗಸೆ : ಶ್ರೇಯಾಂಸಂ . . . ಕನಕಕಳಶದೊಳ್ ತೀವಿದಮೃತರಸಸಮಾನಧವಳೇಕ್ಷುರಸಧಾರೆ ಪುಣ್ಯಧಾರೆಯಂತೆ ಸೊಗಯಿಸುವಿನಂ ಸಮುತ್ಪಾನಿತ್ಯಶವಿಪಾಲ ಪಾಣಿಪಾತ್ರದೊಳೆಱೆವುದುಂ (ಆಂಪು. ೧೦-೦ ವ); ಕಬ್ಬಿನ ರಸಮುಂ ಪಾಣಿಪಾತ್ರದೊಳೆಱೆವುದುಂ (ಶಾಪುಂಪು. ೩೯); ಮುನೀಂದ್ರನ ಮೃದುಕಿಸಲಯಸಮಪಾಣಿಪಾತ್ರದೊಳ್ ಶುದ್ಧಮನಂ ಪಸುಧೇಶನಿಕ್ಕಿದಂ ಪಾಯಸಮಂ (ಪುಷ್ಪಪು. ೧೪-೧೦). ೨ [ಜೈನ] ಪನ್ನೊಂದು ಬಗೆಯ ಶ್ರಾವಕರಲ್ಲಿ ಒಬ್ಬ ; ಬೊಗಸೆಯಲ್ಲೇ ಊಟ ಮಾಡುವವನು : ವೈದಿಕಗ್ರಂಥಗಳಿಂದ ದಿಗಂಬರರು, ಶ್ರಮಣರು, ಪಾಣಿಪಾತ್ರರು, ಮಹರ್ಷಿಗಳು, ವಾತರಶನರು ಇರುತ್ತಿದ್ದರೆಂದು ತಿಳಿದು ಬರುವುದರಿಂದ ಈ ಸಂಪ್ರದಾಯವು ಅನಾದಿಕಾಲದ್ದು ಎಂದು ತಿಳಿಯಬಹುದು (ಹಂದಶಾ. ೭೨). [ಪಾಣಿ$_2$ + ಪಾತ್ರ]

**ಪಾಣಿಪಾತ್ರೆ** (ನಾ). = ಪಾಣಿಪೀಠ : [ಲಿಂಗವ] ಪಾಣಿಪಾತ್ರೆಯೊಂದು ಅಂಗೈಯಲಿಕ್ಕಿದ ಗುರುವೆ (ಕಠಾರೀ. ೭೩-೩೩೩).

[ಪಾಣಿ$_1$ (< ಪಾಣೀಯ) + ಪಾತ್ರೆ]

**ಪಾಣಿಪೀಠ** (ನಾ). ಅಭಿಷೇಕದ ನೀರು ಹರಿದು ಹೋಗಲು ಅನುಕೂಲವಾಗುವಂತೆ ಲಿಂಗದ ಸುತ್ತಲೂ ತಗ್ಗಾಗಿರುವ ಪೀಠ: 'ಪಾಣಿಪೀಠಲಿಂಗ' ಪರಾ. [ಪಾಣಿ$_1$ (< ಪಾಣೀಯ) + ಪೀಠ]

**ಪಾಣಿಪೀಠಲಿಂಗ** (ನಾ). ಅಭಿಷೇಕದ ನೀರು ಹರಿದು ಹೋಗಲು ಅನುಕೂಲವಾಗುವಂತೆ ಸುತ್ತಲೂ ತಗ್ಗಾಗಿರುವ ಪೀಠವುಳ್ಳ ಲಿಂಗ: ಗರ್ಭಗುಡಿಯಲ್ಲಿ ಬಳಪದ ಕಲ್ಲಿನ ಪಾಣಿಪೀಠಲಿಂಗ ಮೂರು ಅಡಿ ಎತ್ತರವಿದೆ (ಹೂಮ್ಯುತಾ. ೧೨೨). [ಪಾಣಿಪೀಠ + ಲಿಂಗ]

**ಪಾಣಿಪೀಡನ** (ನಾ). ೧. ಕೈಯನ್ನು ಹಿಸುಕುವುದು. ೨. ಪಾಣಿಗ್ರಹಣ; ಮದುವೆ : "ಉಪಯಾಮ ವಿವಾಹೋದ್ವಾಹ ಪರಿಣಯಂ ಪಾಣಿಪೀಡನಕ್ಕಾಖ್ಯೆ" (ಪಸುಕೋ. ೫೩-೧೦). [ಪಾಣಿ$_2$ + ಪೀಡನ]

**ಪಾಣಿಪುಟ** (ನಾ). ಬೊಗಸೆ : ಮೌನಿಯುಂ ಮೌನಿಸಮಾನನುಂ ಪೋಗ್ ಯೋಗ್ಯಚರ್ಯಾಕಾಲದೊಳ್ ಒರ್ಮೆಯುಂ ತನುಮಂ ತೋರ್ಪನುಂ

ಪಾಣಿಪುಟವಮಾತ್ರಪಾತ್ರನುಂ . . . ಇಂತಪ್ಪ ಮುನಿಗೆ ಸಿಕ್ಕುವಂ ಅಲಾಭ ಪರೀಷಹಜಯಮಕ್ಕುಂ (ಕರ್ನಾ.ಶ್ರ. ೩೩೬). [ಪಾಣಿ + ಪುಟ]

**ಪಾಣಿಬಟ್ಟಲು** 'ಪಾಣಿವಟ್ಟ' ನೋ.

**ಪಾಣಿಮುಕ್ತ** (ನಾ). ಕೈಯಿಂದ ಎಸೆಯಬಹುದಾದ ಶಕ್ತಿ ಮೊದಲಾದ ಆಯುಧ : "ಬಿಟ್ಟೀಟು ಮೊದಲಾದುದು ಕೆಯ್ಯಿಂ ಬಿಡಲ್ಪಡುವುದು ಪಾಣಿ (ಕರ) ಮುಕ್ತವೆಂಬುದು" (ಶಬ್ದಾನು. ೬೬-೩೦೯) : ಅಗ್ನಿ ಪುರಾಣವು ಆಯುಧಗಳನ್ನು ಅಸ್ತ್ರ ಮತ್ತು ಶಸ್ತ್ರಗಳೆಂದು ಎರಡು ಭಾಗಗಳಾಗಿ ವಿಂಗಡಿಸುತ್ತದೆ. ಅವುಗಳಲ್ಲಿ ಮೊದಲನೆಯದನ್ನು (೧) ಯಂತ್ರಮುಕ್ತ, (೨) ಪಾಣಿಮುಕ್ತ, (೩) ಮಂತ್ರಮುಕ್ತ, (೪) ಮುಕ್ತಸಂಧಾರಿತ (ಬಿಟ್ಟು ಹಿಂದಕ್ಕೆ ಪಡೆವದ್ದು) ಎಂದು ನಾಲ್ಕಾಗಿ ವಿಭಾಗಿಸುತ್ತದೆ (ಕಶಾಂ. ೨೬೨). 'ಪಾಣಿಮುಕ್ತಗತಿ' ಪರಾ.

[ಪಾಣಿ + ಮುಕ್ತ]

**ಪಾಣಿಮುಕ್ತಗತಿ** (ನಾ). ಸಂಸಾರಿಜೀವಕ್ಕೆ ಇರುವ ನಾಲ್ಕು ಗತಿಗಳಲ್ಲಿ ಒಂದು ; ಒಂದು ದೇಹವನ್ನು ತೊರೆದು ಇನ್ನೊಂದನ್ನು ಪಡೆಯುವುದಕ್ಕಾಗಿ ಜೀವವು ಕೈಕೊಳ್ಳುವ ಗಮನಶಕ್ತಿ ವಿಗ್ರಹಗತಿಯೆಂದೂ ಹೆಸರಿದ್ದು, ಅದು ಇಷುಗತಿ, ಪಾಣಿಮುಕ್ತಗತಿ, ಲಾಂಗಲಗತಿ ಹಾಗೂ ಗೋಮೂತ್ರಗತಿ ಎಂದು ನಾಲ್ಕು ವಿಧವಾಗಿದೆ : ನಿರ್ಮುಕ್ತಬಾಣದಂತೆ ಋಜುವಪ್ಪ ಇಷುಗತಿಯುಂ ಇಟ್ಟ ಗುಂಡಿನವೋಲ್ ಏಕವಕ್ರಮನುಳ್ಳ ಪಾಣಿಮುಕ್ತಗತಿಯುಂ . . . ಗೋಮೂತ್ರಗತಿಯುಂ ಎಂದು ಗತಿ ನಾಲ್ಕುತೆಱಂ (ಕರ್ನಾ.ಶ್ರ. ೧೦೧); ಒಂದೇ ಸಮಯದೊಳ್ಬಂಬಿನಂತೆ ಸಯ್ಪೋಪಿಷುಗತಿಯುಮೆರಡುಸಮಯದೊಳಿಟ್ಟ ಗುಂಡಿನಂತೆ ಒಂದೇ ಕೊಂಕಿನಿಂ ಪೋಪ ಪಾಣಿಮುಕ್ತಗತಿಯುಂ ಮೂಱುಸಮಯದೊಳು ನೇಗಿಲಂತೆರಡು ಕೊಂಕಿನಿಂ ಪೋಪ ಲಾಂಗಲಗತಿಯುಂ ನಾಲ್ಕುಸಮಯದೊಳ್ ಗೋಮೂತ್ರದಂತೆ ಮೂಱು ಕೊಂಕಿನಿಂ ಪೋಪ ಗೋಮೂತ್ರಗತಿಯುಂ (ಕಶಾಂ. ೫೯೪).

[ಪಾಣಿಮುಕ್ತ + ಗತಿ]

**ಪಾಣಿಮೂಲ** (ನಾ). ಮಣಿಕಟ್ಟು ; ಮುಂಗೈ ಹರಡು; ಪ್ರಕೋಷ್ಠ : "ಪಾಣಿಮೂಲಮೆನೆ ಮಣಿಕಟ್ಟು" (ಚುಂಗಶಾ. ೯೩-೮).

[ಪಾಣಿ + ಮೂಲ]

**ಪಾಣಿಯ** 'ಪಾಣೀಯ' ನೋ.

**ಪಾಣಿಯದರ** 'ಪಾಣೀಯದಾರ' ನೋ.

**ಪಾಣಿಯದಾರ** 'ಪಾಣೀಯದಾರ' ನೋ.

**ಪಾಣಿಯಬಾರ** 'ಪಾಣೀಯದಾರ' ನೋ.

**ಪಾಣಿಯವಣ್ಣ** (ನಾ). ಒಂದು ಬಗೆಯ ವಸ್ತ್ರವಿಶೇಷ : ಉಟ್ಟ ಪಟ್ಟೆಗೆಯುಂ ಪೊದೆದ ಪಾಣಿಯವಣ್ಣಮುಮೆಸೆಯೆ (ಶಬ್ದಾಳಿ. ೮-೧೫೬). 'ಪಾಣಿಯವಾಸ' ಪರಾ. [ಪಾಣಿಯ + ಬಣ್ಣ]

**ಪಾಣಿಯವಾಸ** (ನಾ). ಒಂದು ಬಗೆಯ ವಸ್ತ್ರವಿಶೇಷ : ಈ ವನವೀಥಿಯೊಳ್ ಬೆಳೆದ ಬಾಳದ ಬೇರ್ಗಳ . . . ಕೇದಗೆಯಿಂಪುವೆತ್ತ ಕಂಪಾವಗಮಿಲ್ಲಿ ಪಲ್ಲವಿಸೆ ಪಾಣಿಯವಾಸಮನಿಕ್ಕಿದಂತೆ ಸೌಖ್ಯಾವಹಮೆಂದೊಡೀ ನದಿಯನೀಕ್ಷಿಸೆ ಪಾಂಥನ ತೃಷ್ಣೆ ಪೋಗದೇ (ಶಾಸ್ತ್ರಿ. ೬-೫). 'ಪಾಣಿಯವಣ್ಣ' ಪರಾ. [ಪಾಣಿಯ + ವಾಸ]

**ಪಾಣಿಲಾಘವ** (ನಾ). ೧. ಕೈಚಳಕ ; ಹಸ್ತಚಾತುರ್ಯ : ಕೇಣಮಿಲ್ಲದೆ ಚಾರಿ ಚಳಕ ಚಾಳೆಯ ಚದುರ್ ಪಾಣಿಲಾಘವ ಪಂಥವಾಡುಗಳನಱಿದು ಬಿನ್ನಾಣದಿಂ ಗಾಯಗಾಣಿಸಿದರತಿಬಲರಲ್ಲಿ ನಾನಾಪ್ರಹಾರದಿಂದೆ (ಕೃಷ್ಣಚ. ೨೨-೬). ೨. ಕೈನೆರವು ; ಹಸ್ತಾವಲಂಬನ : ಭೂಜಾತೆಯುಂ . . . ವ್ಯವಹಾಸನ್ನಂಟಮನಾಟಕಕ್ಕೆ ಕರೆದೊಯ್ಯಲವಸರದಲೊರ್ವ ಸದ್ವ್ರತಿಯಿಂ ಪಾಣಿಲಾಘವಮೀಯೆ ರಾಜಿಸಿತು ಮೇರಕೇತನಸಟ್ಟ ದೇವತೆಗೆ ನವಕಿಸಲಯೋಪಾಯನಂಗೈದೊಲು (ವಂಕಾಶಾ. ೧-೨೨-೧೬). [ಪಾಣಿ + ಲಾಘವ]

**ಪಾಣಿವಟ** 'ಪಾಣಿವಟ್ಟ' ನೋ.

**ಪಾಣಿವಟ್ಟ**, ಪಾಣಿಬಟ್ಟಲು, ಪಾಣಿವಟ, ಪಾಣಿವಟ್ಟಲು, ಪಾಣಿವಟ್ಟು, ಪಾನಿವಟ್ಟಲು (ನಾ). = ಪಾಣಿಪೀಠ : ದೇವರದಾಸ ನಾಥವರ್ಮ್ಮನಿ ದೇಗುಲವುಂ ಲಿಂಗ ಪೀಠ ಪಾಣಿವಟ್ಟಸಹಿತಂ ಕಲ್ಲೋಳ್ಮಾಡಿಸಿದಂ (ಎಕ. XI. ಜಗಳೂ. ೨೯-೧೦; ೧೨೦) ; ಲಿಂಗಗಳು ಪಾಣಿಪಟ್ಟಗಳು ಸಿಕ್ಕಿರುವುದರಿಂದ . . . ಶೈವಮತವನ್ನು ಅತ್ಯಂತಪ್ರಾಚೀನವೆಂದು ಹೇಳಲಾಗಿದೆ (ಶಾಶಕ. ೧೬). **ಪಾಣಿಬಟ್ಟಲು** : ಈ ದೇವಸ್ಥಾನದಲ್ಲಿರುವ ಲಿಂಗಕ್ಕೆ ಬಳಪದ ಕಲ್ಲಿನ ಪಾಣಿಬಟ್ಟಲಿದೆ (ಅದೇ). **ಪಾಣಿವಟ** : ಕೊಡಂದೇರ ಮೋದ್ಯೆಯ ದೇವರ ಪಾಣಿವಟ ತೆರೆಕಲವೆಟುಕಲಾ ಸಹ ಸಾಯ ಮಾಡಿದು (ಎಕ. IX. ಕೊಡಗು. ೨೯-೨೩; 1867). **ಪಾಣಿವಟ್ಟಲು** : ಪ್ರತಿಅಂಗಣದ ನಡುವೆ ಅಮೃತಶಿಲೆಯ ಪಾಣಿವಟ್ಟಲುಳ್ಳ ಸ್ಫಟಿಕದ ಲಿಂಗ (ಮುಸುಗ. ೦೩೦). **ಪಾಣಿವಟ್ಟು** : ಈ ಲಿಂಗಗಳು ಬಾಣ ಪಾಣಿವಟ್ಟುಗಳಿಂದ ಕೂಡಿದ ಆಕೃತಿಯಲ್ಲಿಲ್ಲ (ಶಾಶಕ. ೨೦೩). **ಪಾನಿವಟ್ಟಲು** : ಆ ದೇವಸ್ಥಾನದಲ್ಲಿರುವ ಕಪ್ಪುಶಿಲೆಯ ಲಿಂಗ, ಪಾನಿವಟ್ಟಲುಗಳು ತುಂಬಾ ಚೆನ್ನಾಗಿವೆ (ಅದೇ).

[ಪಾಣಿ$_1$ (< ಪಾಣೀಯ) + ಪಟ್ಟ. / ತಮಿ. ತೆಲು. ಪಾನವಟ್ಟ]

**ಪಾಣಿವಟ್ಟಲು** 'ಪಾಣಿವಟ್ಟ' ನೋ.

**ಪಾಣಿವಟ್ಟು** 'ಪಾಣಿವಟ್ಟ' ನೋ.

**ಪಾಣಿವಾದ** (ನಾ). ೧. ಹರೆ, ಮೃದಂಗ ಮೊದಲಾದ ವಾದ್ಯಗಳನ್ನು (ಕೈಗಳಿಂದ) ಬಾರಿಸುವವನು. ೨. ಕೈತಾಳ ಹಾಕುವವನು : "ಪಾಣಿವಾದಃ. ಪಾಣಿಘಃ — ೨ ಕೈತಾಳ ಹೊಡೆಯುವವನ ಹೆಸರು" (ಸಿದ್ಧಾಂತ. ೭೦೦). [ಸಂ.]

**ಪಾಣಿಶಾಖೆ** (ನಾ). ಕೈಬೆರಳು : "ಪಾಣಿಶಾಖೆಗಳಂಗುಲಿಗಳೆನಲು ಬೆರಲುಗಳು" (ಚುಂಗಶಾ. ೯೩-೮). [ಸಂ. ಪಾಣಿಶಾಖಾ]

**ಪಾಣೀಯ**, ಪಾಣಿ$_1$, ಪಾಣಿಯ (ನಾ). ನೀರು; ಜಲ: 'ಪಾಣೀಯದಾರ' ಪರಾ. **ಪಾಣಿ$_1$** : ಭೂನಾಥ ನೋಡಲು ಪಾಣಿಯೊಳ್ಪುಡಲು ತಾನೆಸೆಯಲು ಮುನ್ನಿನಂತೆ (ಶರಣ. ೮-೬೦); ಬಾ ಪಾಣಿ ಯವಸ್ಥಾನೂ ಆಗಬೇಕೇನರಿ ಮತ್ತ (ಕಕಶಾ. I. ೨೬೪). 'ಕಸ್ತೂರಿಪಾಣಿ' ಪರಾ. **ಪಾಣಿಯ** : "ಪಾಣಿಯ (ಪಾಣಿ) _ ಪಾನೀಯ" (ಕರ್ನಾಕೋ. ೨೬).

[< ಸಂ. ಪಾನೀಯ. / ಪ್ರಾ. ಪಾಣಿಅ]

**ಪಾಣೀಯದರ** 'ಪಾಣೀಯದಾರ' ನೋ.

**ಪಾಣೀಯದಾರ**, ಪಾಣಿಯದರ, ಪಾಣಿಯದಾರ, ಪಾಣಿಯಬಾರ, ಪಾಣೀಯದರ, ಪಾಣೀಯಬಾರ (ನಾ). ನೀರು ಹರಿದುಹೋಗುವ ಮಾರ್ಗ ; ಚರಂಡಿ ; ಜಲಮಾರ್ಗ : "ಪಾಣೀಯದಾರ (— ದರ, ಬಾರ) — ಪಾನೀಯದ್ವಾರ = ಜಲಮಾರ್ಗ" (ಕರ್ನಾಕೋ. ೨೬); ಪಾಣೀಯದರಂ, ಪಾಣೀಯದಾರಂ, ಪಾಣೀಯಬಾರಂ (ಶಬ್ದಾನು. ೩೭೮ ಪ್ರಯೋ.). **ಪಾಣಿಯದರ** : "ಪಾಣಿಯದರಂ, ಪಾಣಿಯದಾರಂ, ಪಾಣಿಯಬಾರಂ — ಈ ೩ ಪಾನೀಯದ್ವಾರಕ್ಕೆ ಪೆಸರ್" (ಶಬ್ದಾ. ೫೯-೩೦೦). **ಪಾಣಿಯದಾರ** : ಮೇಲಿನ 'ಕಶಸಾ' ಪ್ರಯೋಗವನ್ನು ನೋಡಿ. **ಪಾಣಿಯಬಾರ** : ಟಂಟಣಿಸುತ್ತವಿಪ್ಪರಿನ್ರ(ನ್ರ)ಪಾಳರ ಹಿಂಡ ನಿಜಾಸಿ ದಂಣ್ಣಾದಿಂ ಕಂಟಿಯ ಬಾರದೊಳ್ ಸುಳಿಸಿ ಪಾಣಿಯಬಾರದ ನೀರನೂಡಿ ನೀಕ್ಕ(ಕ)ಂಟಕವಾಗೆ ಮಾಡಿ ಪಡೆದಂ ಸಲೆ ದಂಡಿನ ಗೋವನೆಂಬುದಂ ಬಂಟರ ಬಲ್ಲಹಂ ನೆಗೆದ ಬಲ್ಲಹರೊಳ್ ಕಲಿ ಬರ್ಮ್ಮಭೂಭುಜಂ (ಎಕ. XII. ೯೬-೦೯; 1188 ; ಶಾಶಕಂ. ೦೬೯-೦೦೬೩ ನೋ.) ; **ಪಾಣೀಯ**

ದ್ವಾರ—ಪಾಣೆಯಬಾರ (ಶಬರ. ೨೯೬ ಪ್ರಯೋ). **ಪಾಣೇಯದರ :** ಮೇಲಿನ ‘ಪಾಣೇಯದಾರ’ ಉಲ್ಲೇಖದಲ್ಲಿರುವ ‘ಶಬ್ದಾನು’ ಪ್ರಯೋಗವನ್ನು ನೋಡಿ. **ಪಾಣೇಯಬಾರ :** ಮೇಲಿನ ‘ಪಾಣೇಯದಾರ’ ಉಲ್ಲೇಖದಲ್ಲಿರುವ ‘ಶಬ್ದಾನು’ ಪ್ರಯೋಗವನ್ನು ನೋಡಿ. [ <ಸಂ. ಪಾನೀಯದ್ವಾರ]

**ಪಾಣೇಯಬಾರ** ‘ಪಾಣೇಯದಾರ’ ನೋ.

**ಪಾಣ್ನಾಟ** (ನಾ). ಒಂದು ಪ್ರದೇಶದ ಹೆಸರು : ಶ್ರೀಮತ್ಕೊಙ್ಗಣಿ ವೃದ್ಧರಾಜೇನ ದುರ್ವಿನೀತ ನಾಮಧೇಯೇನ ಸಮಸ್ತಪಾಣ್ನಾಟ ಪುನ್ನಾಟಾಧಿಪತಿನಾ . . . ತ್ರೈತ್ರಿಯ ಚರಣ ಭೂತಶರ್ಮ್ಮರ್ಗ್ಗೆ ಶಾಲಿಗ್ರಾಮದೊ ಸರ್ವಪರಿಹಾರ ಪರಿಗ್ರಹದಿನಿತ್ತು ಪಾಣಿಗ್ರಹಣಂ ಕೆಯ್ದು ಕೊಟ್ಟಾರ್ (ಮೈಆ. ೧೯೪೧. ೦-೨೮; 788). [ ? ]

**ಪಾಣ್ಬ, ಪಾಂಬ** (ನಾ). ಜಾರ ; ಹಾದರಿಗ ; ವ್ಯಭಿಚಾರಿ : “ಜೊಡಂ ಪರಳಿಗನು ಪಾಣ್ಬ ಸಿತಗಂ ಜಾರಂ” (ಅಭಿ. ೦೬೦) ; ನಾಣಿಲಿ ಪಾಣ್ಬಂ ಹಂದೆ ಲೋಭಂ ಖಳಂ . . . ಎಂಬೀ ನಾಮನಾಮಾವಳಿಗೆ ನಿಳಯನಕ್ಕುಂ ವ್ರತಪ್ರಾಪ್ತಹೀನಂ (ಶಬ್ದಾಮ. ೦೦-೩೦); ಆನಲ್ಲಿಗೆ ಪರ್ವನೆಂ[ದಾ ಪಾಣ್ಬ]ನಂ ನಂಬಿ ನುಡಿದಾ ಪೊಟ್ಟಿಂಗೆನ್ನನಲ್ಲಿಗೆ ಪರಿಸು (ಪಂಪಭಾ. ೮-೬೨೫) ; ಪಾಣ್ಬನೆಟ್ದೊಯ್ಕೆ ನಿನ್ನ ಕುಟುಂಬಿನಿಯುಂ ಕಾದೆಯಿಲ್ಲ ರಾಮಾಕೃತಿಯಿಂ (ಜಗಿಂ. ೦೭-೯೦). **ಪಾಂಬ :** ಪಾಂಬನಂ ದ[ನುಜಸನು]ಗ್ರಖಡ್ಗಮುಖ ದಿಂದಿಱಿದೊತ್ತಿದ ದುರ್ಗಿ . . . ಪರಿರಕ್ಷಿಸುತಿರ್ಕೆ (ಪಂಪಶಂ. ೨-೨೦), ಪರ ಲಲನೆಗಳಿಪಿ ಬಿಡೆ ಚಪ್ಪರಿಸುತ್ತುಂ ಬಂದ ಪಸವ[ಪಾಠಾಂ. ದ]ನಂ ಪಾಂಬನ ನಟ್ಟಿರಿಯಾಗೆ ಕಾದುತಂ ಬೆರಸರಿದಿರದೆತ್ತಿಸುವೊಡೆಯೊಳ್ ಪಂದಲೆಯಂ (ಧರ್ಮಾಮೃ. ೪-೨೦).

**ಪಾಣ್ಬರಂಕುಸ, ಪಾಂಬರಾಂಕುಶ** = ಒಂದು ಬಿರುದು : ಸಂಸಾರ ಸಾರೋದಯಂ ಮಾಱುವಕ್ಕದಲ್ಲಟು ನೋಡುತ್ತೆ ಗೆಲ್ದಂ ಪಾಣ್ಬರಂಕುಸಂ ಅಮ್ಮನ ಗಂಧವಾರಣಂ (ಪಂಪಭಾ. ೧-೪೮ ವ) ; ಚಾಳುಕ್ಯವಂಶೋದ್ಭವಂ ಪಾಂಬರಾಂಕುಶನಮ್ಮನ ಗನ್ಧವಾರಣಂ (ಕ೨ಆ. ೨೪-೧೩-೭೪; ?).

**ಪಾಣ್ಬತನ** (ನಾ). ಹಾದರ ; ಜಾರತನ ; ವ್ಯಭಿಚಾರ : “ಜಾಡ— ವ್ಯಭಿಚಾರೇ. ಪಾಣ್ಬತನದೊಳ್” (ಧಾತ್ವ. ೨೬೬) ; ಆಗಳ್ ಜಸಂ ಕೆಯ್ದುವನಿಕ್ಕೆ ವೀರಶ್ರೀಗಾಣ್ಮನಯ್ ಪಾಣ್ಬತನಕ್ಕೆಳಪ್ಪುದು ಪೋಗೇಕೆ ನೀಂ ಮೆಯ್ಗರೆದಿರ್ಪಯೆಂದಾ ಭೋಗೀಶ್ವರಂಗಂದು ವಿನಮ್ರನಾದಂ (ಶಾಂತ್ಯಪು. ೦೬೩). [ ಪಾಣ್ಬ + —ತನ ]

**ಪಾಣ್ಬು** (ನಾ). = ಪಾಣ್ಬತನ : “ವಿಂ—ವ್ಯಭಿಚಾರೇ. ಪಾಣ್ಬಿನೊಳ್” (ಧಾತ್ವ. ೨೨); “ಹಾದರ—ಪಾಣ್ಬು” (ಧಾತ್ವ. ೮೩). [ಪಾಣ್ಬ + —ಉ]

**ಪಾಣ್ಬೆ, ಪಾಂಬೆ** (ನಾ). ಜಾರೆ ; ಹಾದರಗಿತ್ತಿ ; ವ್ಯಭಿಚಾರಿಣಿ : “ಪುಂಶ್ಚಲಿ ಕುಲಟೆಯಸತಿ ಕುಲಪಾಂಸುಳೆ ಬಂಧಕಿ ಜಾರೆ ಪಾಣ್ಬೆಯಿತ್ವರಿಕೆ ಯುವಳ್” (ಅಭಿಕೋ. ೫೨-೪) : ಪಾಣ್ಬರಂಕುಸನಾ ಪಾಣ್ಬೆಯರ ಗೆಯ್ದ ಗೆಯ್ತಂಗಳುಮಂ . . . ಕಂಡು ಚೋದ್ಯಂಬಟ್ಟು (ಪಂಪಭಾ. ೪-೮೩ ವ); ನಾರಾಯಣಭಟ್ಟಂ . . . ಆ ಪಾಣ್ಬೆಯ ಡಂಭತನಕ್ಕೆ ಬೆಱಗಾಗಿ (ಪಂಪಶಂ. ೨೪-೦೦); ಜಡನಂತವಿಚಾರಿಯಾಗದೆ ಪಾಣ್ಬೆಯಂತೆ ಮತ್ತೊಂದು ಮನಮಾಗದೆ ನಪುಂಸಕನಂತೆರಡಕ್ಕಾಸೆಗೆಯ್ಯದೆ (ಧರ್ಮಾಮೃ. ೧-೦೮೩). **ಪಾಂಬೆ :** ಕಾಂ ತನಗವಿಂಬಾದಾಗಳಾ ಪಾಂಬೆ[ಪಾಠಾಂ. ಪಾಣ್ಬೆ]ಯೆಂದು ದನೆಂಗುಂ ಸುಟ್ಟುಯುತ್ತ ಪೊತ್ತುಗಳಿಗುಂ ಜಾರಂ ಮಹಾಕ್ಲೇಶದಿಂ (ಜಿಮತ. ೫-೫೫); ಎಲವೆಲವೋ ನೀನಗಲ್ದೊಡೆ ನಿಲಲಾಱದ ಪಾಂಬೆ ಬಂದಳೀಯಿರ್ದಳೆ ಬಾ (ಧರ್ಮಾಮೃ. ೦೦-೨೨). [ ಪಾಣ್ಬ + —ಎ ]

**ಪಾತ** (ನಾ). ೧. ಹಾರುವುದು ; ಹಾರಾಟ. ೨. ಬೀಳುವುದು ; ಪತನ : ‘ಗರ್ಭಪಾತ’ ಪರಾ. ೩. (ಬಾಣವನ್ನು) ಬಿಡುವುದು : ಪಾತಂ ಲಕ್ಷ್ಯಂ ಶೀಘ್ರಂ ಘಾತಂ ಬಹುವೇಗಮೆಂಬಿವಯ್ದೀಸಿನೊಳಂಶೀತನ ದೊರೆಯಿಲ್ಲೆನಿಸಿದುದಾತನ ಬಿಲ್ಬಲ್ಮೆ ಸುರರಿನಂಬರತಲದೊಳ್ (ಪಂಪಭಾ. ೧೨-೦೮೫). ೪. ಪೆಟ್ಟು ; ಹೊಡೆತ : ಅಯ್ಯೊ ಏನೀ ಘಾತ! ಮರಣ ಮರ್ಮಾಘಾತ! ಅರಳಿಗಶನಿಯ ಪಾತ! (ಕ್ರಾಂಕರ್ಮ. ೩೨-೨೦). ೫. ಆಕ್ರಮಣ ; ಧಾಳಿ. ೬. (ಮಲ್ಲಯುದ್ಧದ) ಪಟ್ಟು ; ವರಸೆ : ಕಳಂಬೊಕ್ಕು ನಿಜೇಸುಗೆಯ್ದು ಸಮಹಸ್ತ ದಶಸಹತ್ತಿ ಪಾದಪಾತಂ ಮುಷ್ಟಿಪಾತಮೆಂಬ ದೋಷಂಗಳಂ ಪೂರ್ವದ ನಾಲ್ಕುಂ ಸ್ಥಾನದೊಳಂ . . . ಪಲತೆಱದ. ಪಾತಂಗಳೊಳಂ ನೆರೆದು (ಚಂದ್ರಪ್ರ. ೫ ೭೭ ವ); ಅಥಟಿಂದಂ ಮೂಱುಂ ಲಗ್ಗದ ನಾಲ್ಕುಸ್ಥಾನಮೆಯ್ದು ಡೊಕ್ಕರದ ಮಹೋಗ್ರದ ಮೊತ್ತರಡು ಬಿನ್ನಣದೊದವಂ ಪಲವು ತೆಱದ ಪಾತವ ಮೆಱೆದರ್ (ಶ್ರೀಪು. ೨೬-೧೭). ೭. ಹಾಳು : ನಾಶ : ‘ಗ್ರಂಥಪಾತ’ ಪರಾ. ೮. ತಪ್ಪು ; ದೋಷ. ೯. (ನೆಲಮಟ್ಟದ) ಇಳಿತ ; ತಗ್ಗು : ನಾಲೆಗಳು ವಿವಿಧವಾದ ಉಬ್ಬುತಗ್ಗಿನ ಭೂಮಿಯಲ್ಲಿ ನೂರಾರು ಮೈಲಿಗಳ ದೂರ ಹೋಗುವಾಗ ಅನೇಕ ಕಲ್ಲುಗಾರೆಯ ಕಟ್ಟಡಗಳು ಬೇಕಾಗುತ್ತವೆ. ಅವನ್ನು ಈ ರೀತಿ ವಿಂಗಡಿಸಬಹುದು. A. ಪಾತಗಳು (Drops) ಕಡಿದಾದ ಇಳಿಕಲುಗಳು (Rapids) . . . ಪಾತವು ನಾಲೆಯ ತಳವಲ್ಲಿ ಒಂದು ಮೆಟ್ಟಲಿನ ಹಾಗೆ (ಜಲ್ಸಾ. ೩೭೬). ೧೦. (ನೋಟವನ್ನು) ಹರಿಸುವಿಕೆ ; ಹೊರಳಿಸುವಿಕೆ : ಜಳಧರ ಸಮಯನಿಶಾಸಂಚಲಿತವಿದ್ಯುತ್ಕಿಂಗಳಾಕ್ಷಪಾತಂಗಳಿಂ ದೆಸೆಗಳಂ ನುಂಗು ವಂತೆ ಮುಳಿದು ನೋಡಿ (ಪಂಪಭಾ. ೧೩-೭೫ ವ). ‘ದೃಷ್ಟಿಪಾತ’ ಪರಾ. ೧೧. [ನಾಟ್ಯ] ನರ್ತನಕಾಲದಲ್ಲಿ ಕಣ್ಣಿನ ಆಲಿಗಳನ್ನು ಚಲಿಸುವ ಒಂದು ವಿಧಾನ : “ಕೆಳಗಡೆ ನೋಡುವುದು” (ಅಸ್ಕರಂ. ೨೭೪ ಗದ್ಯಾನುವಾದ): ಭ್ರಮಣ, ವಲನ, ಪಾತ . . . ಪ್ರಾಕೃತ — ಈ ಒಂಬತ್ತು [ಸ್ವನಿಷ್ಠ] ಆಲಿಯ ಭೇದಂಗಳ್ (ಅಸ್ಕರಂ. ೩-೫೪ ವ), ಕೆಳಗಂ ನೋಡಲ್ ಪಾತಂ (ಅಸ್ಕರಂ. ೩-೫೬). [ ಸಂ. ]

**ಪಾತ** (ನಾ). ಒಂದು ಬಗೆಯ ಸಸ್ಯ : ನೀಮುಪ್ಪು, ಪರೇರಾಬೇರು, ಪದ್ಮಲಿ. ಪಾತ, ಕಾಡುಬಳ್ಳಿ (ಮೈಶಿಗ. ೨೦-೩೯೪). [ ? ]

**ಪಾತಂಗ** ‘ಪತಂಗ’ ನೋ.

**ಪಾತಂಜಲ** (ನಾ). ೧. ಪತಂಜಲಿಮಹರ್ಷಿಯಿಂದ ರಚಿತವಾದ ಯೋಗ ಶಾಸ್ತ್ರ ; ಷಡ್ದರ್ಶನಗಳಲ್ಲಿ ಒಂದು : ಪಾತಂಜಲ ಯಮಾದ್ಯ ಷ್ಟಾಂಗಯೋಗಸಾಧನದಿಂ ಮನೋನಿಶ್ಚಲತೆಯುಂ ನಿಶ್ಚಲಪರಿಪಕ್ವಾಂತಃ ಕರಣಂಗೆ ಮೋಕ್ಷಸಿದ್ಧಿಯುಂ ಬೋಧಿಸಿ ಸಾಧಿಸುವುದು (ಶಿತೀ೪. ೦೦). ೨. ಪಾಣಿನಿಯ ಅಷ್ಟಾಧ್ಯಾಯೀಸೂತ್ರಗಳಿಗೆ ಪತಂಜಲಿಯು ಬರೆದ ವ್ಯಾಖ್ಯಾನ : ಮಹಾಭಾಷ್ಯ. [ ಸಂ. ]

**ಪಾತಕ** (ಗು). ೧. ಪಾಪ ಮಾಡಿದ ; ಪಾತಕಿಯಾದ : ರಾತ್ರಿಯ ಲೊತ್ತೆಯ ಕೊಂಬ ಪಾತಕಸೂಳೆಯಂತೆ ಬಱಿಯ ಮಾತಿಂಗೊಲೆವನೆ ನಮ್ಮ ಕೂಡಲಸಂಗಮದೇವ (ಬಸವ. ೪೬೮). (ನಾ). ೨. ಬೀಳುವಂತೆ ಮಾಡುವುದು ; ಬೀಳಿಸುವುದು. ೩. ಕೆಟ್ಟ ಕೆಲಸ ; ಪಾಪ ; ದೋಷ : “ವೃಜಿನಂ, ದುರಿತಂ . . . ಪಾತಕಂ—ಈ ೧೪ ಪಾಪಂ” (ಕರ್ಣಾಟಶ. ೦೦೩-೬); ಅಪವಿತ್ರನುಡಿಯ ನುಡಿವ ಸೂತಕವೇ ಪಾತಕ (ಬಸವ. ೭೬೯); ನಿನ್ನೊಡನೆ ನಗುತಿಪ್ಪ ಪಾತಕವೆನ್ನೊಳೆಂದಿಗೆ ಪರಿಹರಿಸುವುದು ನಿನ್ನುಮಂ ಕೋಪಿಸುವ ಪಾಪಂ ಹಱಿವುದೆನಗೆಂದೊ (ಬಸವ. ೪೫-೦); ನಟ್ಟ ದೃಷ್ಟಿಯ ತೆಗೆಯಲಾಱದೆ ನೇತ್ರ ಕೀಚಕ ಪಾತಕವ ನೆನೆದ (ಕುಭಾ. ೨-೯). ೪. ಪಾಪ ಮಾಡಿದ ವ್ಯಕ್ತಿ : ಪಾಪಿ ; ಪಾತಕಿ : ದಶಸ್ಥಾನಕದೊಳ್ ರವಿಸುತನಿರೆ ಶೂಲದೊಳಿಕ್ಕುವರಾ ಲಗ್ನ ಪ್ರಸೂತನಂ ಪಾತಕನಂ (ಜಾತಕ. ೨೩-೭); ಮಾತಿನಲಿ ಒಲಿಸಿ ಮಹತ್ತ್ರಪ್ಪ

ಲಿಂಗವ ಕಂಡತನೆಂಬ ಪಾತ್ರಕರ ಮೆಚ್ಚ ನಮ್ಮ ಕೂಡಲಸಂಗಮದೇವ (ಬಸವ. ೬೯೭); ಮುರಿಯಲಾಗದು ಕೊಂಡ ಹಜ್ಜೆಗಳ ಹೊರಳಿವೆಣನನ್ನು ಮೆಟ್ಟಿ ಮುಂದಣಗುರಪಣಿಸುವುದು ತಪ್ಪಿದವರಿಗೆ ನರಕವೀ ಪಾತಕರ ಗತಿ ನಮಗೆಂದು ಸಾಜೀವರು (ಕುಮ್ಮಾರ್ಯ. ೩-೭). [ ಸಂ. ]

**ಪಾತಕಿ** (ನಾ). ಪಾಪವನ್ನು ಮಾಡಿದ ವ್ಯಕ್ತಿ ; ಪಾಪಿಷ್ಠ : ಪಾತಕಿಯೊಳ್ ಲಕ್ಷ್ಮಿಯೊಳಿಕಿಪಾತರಕಾಪುರುಷಗಣನೆಯೊಳ್ ನೆರೆ ಯಲ್ಕಿಂತೀತನೆ ಬಗೆಗಾಂ ಪುರುತನುಜಾತರ ಬಗೆಮದನೆ ಬಗೆವೆನಜೀವಂ ಬಗೆಯಿಂ (ಆದಿಪು. ೧೫-೧೩೩); ಮಲಹರಂಗುಣ್ಣಿಸಿದ ಪಾಲಂ ನಲಿವು ನಿಚ್ಚಂ ಕುಡಿದ ಪಾತಕಿ ತಲೆಯನಟ್ಟಿಯೊಳಿತ್ತಿ ಬಿಸುಡದೆ ಪೊಣ್ಮೆನೇ ನಿನ್ನ (ಬಸಪು. ೧೫-೩೦); ತಾಯ ತುಱುಬಿಗೆ ಹಾಯ್ದ ಪಾತಕಿನಾಯ ಕೊಂಡಾಡುವರೆ (ಕುಮ್ಮಾರ್ಯ. ೫-೪೮). [ ಸಂ. ಪಾತಕಿನ್ ]

**ಪಾತಗಿತ್ತಿ** (ನಾ). ಪಾಪ ಮಾಡಿದವಳು ; ನೀಚಹೆಂಗಸು : ಭೂತಳ ದೊಳು ಪಸರಿಸಿತಪಕೀರಿತಿ ಪಾತಗಿತ್ತಿಯ ದೆಸೆಯಿಂದ (ಅಂಜಶ. ೯-೧೦೭); ಮದನೋದ್ರೇಕಮಾನಸೆಯಾಗುತಾ ದುಷ್ಟೆ ಸುಮತಿ ಮತ್ತಾ ಪಾತಗಿತ್ತಿ (ಶ್ರೀರಂಜ. ೩-೩೩); ಹೆತ್ತ ಮಗನ ಹೇಸದೆ ಕೊಂದ ಪಾತಗಿತ್ತಿ (ಶ್ರೀರಂಜ. ೩-೭೩).

[ ☞ ಇದು 'ಪಾತಕಗಿತ್ತಿ' ಎಂಬುದರ ಅಪಲಿಖಿತವಿರಬಹುದು]

**ಪಾತನ** (ನಾ). ೧. ಕೆಳಗೆ ಬೀಳುವಂತೆ ಮಾಡುವುದು ; ಬೀಳಿಸುವುದು : ಪಾತನ . . . ಚೂರ್ಣನ ವಿಮುಖೀಕರಣ ದುರ್ಭೋಗ್ಯ ನಾನಾವಿಧಾ ಸಂಖ್ಯಾತತೀವ್ರವೇದನಾರೂಪಂಗಳಾಗಿ ಶಿವದ್ರೋಹಿಗಳಿಗೆ ನಿಷ್ಕಾರಣ್ಯದಿಂ ಮಾಳ್ಪ ಶಿಕ್ಷಾಲೇಶಮೆಂದೆನಿಸಿ (ಏಕೇಕ. ೧೮೧); ನಿನ್ನ ಮಹಾಪೂರವಿಳಿವುದು ತಟನಿಯ ಜಲಧರಸಮಯವು ಕಳೆಯೆ ತಟತರುಪಾತನ ಪಾತಕವೊಂದೆಯೆ ಬಹುಕಾಲ ಉಳಿವುದು ತಿಳಿಯೆ (ಸಂಕಾತ. ೯೭-೭೩). ೨. ತಗ್ಗುವಂತೆ ಮಾಡುವುದು ; ತಗ್ಗಿಸುವುದು. [ ಸಂ. ]

**ಪಾತರ, ಪಾತ್ರರ** (ನಾ). ೧. ಪಾತ್ರೆ : ಈ ನನ್ನ ಲಟ್ಟುಗಡಸಿನ ಮೆಯ್ಯೆಂಬ ಹೊನಹಿನ ಪಾತರದಲ್ಲಿ ಎಸರಿಟ್ಟರುವ ರೂಪಸೌಂದರ್ಯಯುವ್ವನ ಶೃಂಗಾರ ಕಲೆಗಳೆಂಬ ಪಂಚಾಸವಗಳನ್ನು . . . ಸವಿನೋಡಿಯೇಬಿಡಬೇಕೆಂಬ ಮದನಾಗ್ರಹದ ಚಪಲಚೈಲವು ನಿಮಗೆ! (ಮುಂತ್ರಕ. ೨೯-೦೭). ೨. ಕುಣಿತ ; ನರ್ತನ ; ನಾಟ್ಯ : ಕೊಳು ಕುತ್ರವೆ ಕುತ್ತ ಕೂಳು ಮೇಳವೆ ಮೇಳ ಕೂಳೊಂದು ಗಳಿಗೆ ತಡೆದಿಹರೆ ಪಾತರದ ಮೇಳ ಮುಜಿದಂತೆ (ಸರ್ವಜ್ಞ. ೨೦೦೨); ಗುಡಿಯ ಮುಂದಿನ ಪಟಾಂಗಣದಲ್ಲಿ ಒಂದೆಡೆ ಗುಗ್ಗುಳವು ಹೊತ್ತಿ, ಮತ್ತೊಂದೆಡೆ ಪಾತರದ ಮೇಳವು ಕುಣಿಯಬೇಕು (ಕನ್ನಡ. ೯). **ಪಾತುರ** : ೩. ಅರ್ಹನಾದವನು ; ಯೋಗ್ಯ : ಹಯವದನರಾಯನ ಪ್ರಿಯಕೆ ಪಾತುರನಾಗಿ (ವ್ಯಕೆಂಪ. ೯-೯೩). ೪. ಅಭಿನಯ ಮಾಡುವವನು ; ನಟ : (ಕ).

ಪಾತರದವರು = ನಾಟ್ಯ ಮಾಡುವ ವೃತ್ತಿಯವರು ; ☞ ಕೆಲವರು ದೇವದಾಸಿಯರಲ್ಲಿ ಈ ವೃತ್ತಿಯನ್ನು ಅನುಸರಿಸುವವರು ಇರುವರೆಂದು ತಿಳಿದು ಬರುತ್ತದೆ : ವಿಜಾಪುರಜಿಲ್ಲೆಯಲ್ಲಿ ಪಾತರದವರು ಬಸುರಾದರೆ, ಅವರು ಗೊರವರ ಕೈಯಿಂದ ಹಲ್ಲುಪುಡಿ ಹಚ್ಚಿಸಿಕೊಳ್ಳಲಿಕ್ಕೆ ಬೇಕು (ಕಪಾಗಿ. ೧೧೮); ಗಂಗಾಸಾನಿ ಅಚ ಪಾತರದವರ ಮನೆತನದಾಕೆ. ಆ ಊರಿಗೆ ಇವರದೊಂದೇ ಮನೆ . . . ಸೋಮವಾರಕ್ಕೊಮ್ಮೆ ಅಷ್ಟಾವಧಾನದ ಕಾಲದಲ್ಲಿ ಆ ಮನೆತನದವ ರೊಬ್ಬರು ದೇವರ ಮುಂದೆ ನೃತ್ಯಮಾಡುತ್ತಿದ್ದರು (ಗಂಗಾಸಾ. ೧೦). [ <ಸಂ. ಪಾತ್ರ ]

**ಪಾತರಗಿತ್ತಿ** (ನಾ). ೧. ನರ್ತಕಿ ; ನಟಿ : (ಕ). ೨. (ಅಲಂ) ಬಣ್ಣ ಬಣ್ಣದ ಪಕ್ಕಗಳಿಂದ ಕೂಡಿದ ಚಿಟ್ಟೆ ; ಪತಂಗ : ಪಾತರಗಿತ್ತಿಯೆಂಬ ಹುಳವು ಗಿಡಗಿಡಾ ಹಾರಾಡುವುದನ್ನು ನಾವು ನೋಡುತ್ತೇವೆ (ಮುಂಬಯಿ. ೫-೧೧೨); ಪಾತರಗಿತ್ತೀ ಪಕ್ಕಾ ನೋಡಿದೇನ ಅಕ್ಕಾ (ಗರಿ. ೯೫-೧); ಬಣ್ಣ ಬಣ್ಣದ ಹಕ್ಕಿ ಮಾತ್ರ ಪಾತರಗಿತ್ತಿ ನನ್ನ ಗೆಳೆತನವಿತ್ತು ಬನದ ತುಂಬ (ಕಶಪು. ೬-೧೯೭). ೩. (ಚಿಟ್ಟೆಯಂತೆ) ಮೆರೆಯುವವಳು : ಪಟ್ಟಣಗಳಲ್ಲಿ, ಪಾತರಗಿತ್ತಿಗಳ ಮಧ್ಯದಲ್ಲಿ, ಕಾಲೇಜಿನ ವಾತಾವರಣದಲ್ಲಿ ಬೆಳೆದ ಹೇಮಾ ಹಾಗೂ ಅವಳ ಅನುರಾಗಕ್ಕಾಗಿ ಹವಣಿಸಿದ ವಿಶ್ವನಾಥರನ್ನು . . . ನಾಯಕಿ—ನಾಯಕರೆನ್ನಬಹುದು (ಹಾಕಮಾ. ೧೭೧). ೪. ವೇಶ್ಯೆ ; ಗಣಿಕೆ. [ ಪಾತರ + —ಗಿತ್ತಿ ]

**ಪಾತಶಹ, ಪಾಚ್ಛಾ, ಪಾಚ್ಛಾಯಿ, ಪಾಥಾ, ಪಾತಷಹ, ಪಾತಷಾಹ, ಪಾತುಶಾಹ, ಪಾತ್ಸಾಹ, ಪಾತ್ಸ್ಯಾವು, ಪಾದಶಾ, ಪಾದಶಾಹ, ಪಾದಷಹ, ಪಾದಷಹಾ, ಪಾದಷಾಹ, ಪಾದುಶಾಹ, ಪಾದುಷಹ, ಪಾದುಷಾ, ಪಾಷ, ಬಾದಶಹ, ಬಾದಶಾಹ, ಬಾದಷಹ, ಬಾದುಶ** (ನಾ). ೧. ಮುಸಲ್ಮಾನರ ದೊರೆ ; ಸುಲ್ತಾನ: ಪೂರ್ವಕಾಲದಲ್ಲಿ . . . ಒಬ್ಬ ಬಹು ಪರಾಕ್ರಮಶಾಲಿಯಾದ ಪಾತಶಹನು ಇದ್ದನು (ಕಗಕ್ಕ. ೦೪). **ಪಾಚ್ಛಾ** : ೧. ನಮಗೆ ಅರಸುಗಳಿಗೆ ಪಾಚ್ಛಾಗಳಿಗೆ ಪುಣ್ಯ ಲಭ್ಯ (ಮ್ಯಾಆ. ೦೯೩೮. ೬೩-೩೨; 1632). ೨. ಹಿರಿಯ ಕುಳ ; ಶ್ರೀಮಂತ : ಹೊನ್ನ ತೆತ್ತಲ್ಲದೆ ಹೊಲ ಮಾಡಬಾರದು . . . ಸರಕಾರಕ್ಕೆ ರುಜು ಇಲ್ಲದೆ ರೈತನಾಗಬಾರದು ಅದೆಂತೆಂದೊಡೆ ಇಷ್ಟುಳ್ಳರೈತನೆ ಪಾಚ್ಛಾರೈತ ಇಲ್ಲದಾತ ದುಬ್ಬಳುಕ (ಕಕಸಂ. ೭೦ — ೬೦). **ಪಾಚ್ಛಾಯಿ** : ೧. ಅರಸುಗಳಿಗೆ ಪಾಚ್ಛಾಯಿಗಳಿಗೆ ಪುಣ್ಯ ಲಭ್ಯವೆಂದು ನೋಡಿ ದಾನಪಾಲನೆ ಮಾಡುತ್ತಾ ಇರಬೇಕು (ಮ್ಯಾಆ. ೦೯೩೪. ೬೯-೭೩; 1638). **ಪಾಥಾ** : ೧. ಮೊಗಲ ಪಾಥಾಸಾಹೇಬರ ಆಳಿಕೆಯಲ್ಲಿ . . . ಕೊಡಗಿ ಹಾಕಿಕೊಟ್ಟ ಊರ ಮುಂದಣ ಗದ್ದೆಯಲಿ ಬೀಜಾವರಿ (ಎಕ. XI. ಹೊಳಲ್ಕೆ. ೦೨೬-೫ ; 1602?) ; ಟೀಪೂಸುಲತಾನ ಪಾಥಾರವರ ಧರ್ಮ (ಎಕ. XIV, ಶ್ರೀರಂಗ. ೦೬೫-೦; ?). **ಪಾತಷಹ** : ೧. ಈಗ ಟ್ರೂನಿಸದ ಪಾತಷಹನಾಗಿದ್ದೇನೆ (ಮುಂಬಯಿ. ೫-೭೩೯). **ಪಾತಷಾಹ** : (ಕ). **ಪಾತುಶಾಹ** : ೧. ಪಾತುಶಾಹ ಮಹಾಸೇನಾತ್ರಸ್ತ ದಕ್ಷಿಣ ಭೂಭುಜಾಂ ಅಭಯಸ್ಯ ವಿಧಾತ (ಎಕ. VII, ಶಿಕಾರಿ. ೩-೩೬ ; 1641); ನೆಲಮಾರ್ತಿಯಂ ಕೇಳಿ ಪಾತುಶಾಹಂ ಬಂದು ತಲೆದೂಗಿ ಸತ್ಯನೀತೂ ಪೊಡಾಸಹುದೆಂದು ಸಲೆ ಸಲಾಮಂ ಮಾಡಿ ಹೋದನು (ಗುರುಚಾ. ೦೯-೨೯). **ಪಾತ್ಸಾಹ**: ೧. ಅನಿತರೊಳ್ಪಾತ್ಸಾಹನೈತಂದು ರಾಯರಂ ಮುರಿದವಪಿ ಯಂ ಸೆಳೆಯಲು (ಜೀಕಸಂ. ೦-೦೨೬). **ಪಾತ್ಸ್ಯಾವು** : ೧. ಮುಂಕೊಂಡು ಪಾತ್ಸ್ಯಾವು ರಣಧೂಳಿಖಾನನ ಬಿಂಕದೆ ಬೀಳ್ಕೊಟ್ಟನಾಗ (ಕಂಕಚ. ೦೭-೯). **ಪಾದಶಾ** : ೧. ಟಿಪುಸುಲತ್ಸಾನ ಪಾದಶಾರ ಧರ್ಮ (ಮ್ಯಾಆ. ೦೯೯೬. ೩೪-೦; ಸು. 1795). **ಪಾದಶಾಹ** : ೧. ದಿಲ್ಲಿಯ ಪಾದಶಾಹನತಿಭಕ್ತಿಯಿಂ ಭಂಡಾರದಿಂ ದಿವ್ಯಕನಕಾದಿ ವಸ್ತುಗಳ ತಂಡಮಂ ತರಿಸಿತ್ತು (ಕಜಾಗಿ. ೨೭-೨೮). **ಪಾದಷಹ** : (ಕ). **ಪಾದಷಹಾ** : ೧. ಆ ಕಾಲದಲ್ಲಿ ಡಿಲ್ಲಿ ಪಾದಷಹಾ ಎಂಬ ಅಶ್ವಪತಿಯು . . . ಲೆಖ್ಖವಿಲ್ಲದ ಕುದುರೆ ಫೌಜು ಉಳ್ಳವನಾಗಿದ್ದನು (ಕಹಾಮು. IV, ೩೨). **ಪಾದಷಾಹ** : ೧. ಚ್ಚಲುವ ರಾಯಸ್ವಾಮಿಯವರಿಗೆ ಡಿಲ್ಲಿಯ ಪಾದಷಾಹರು ಒಪ್ಪಿಸಿದ್ದ ಗ್ರಾಮ ಭೂಮಿಗಳಂ ತಾವು ಅನುಭವಿಸಿಕೊಂಡು (ಕುಹಾಮು. I, ೪೨) **ಪಾದುಶಾಹ** : ೧. ವಿಜಯಾಪುರದ ಸುಂತಾಣ ಪಾಹವ್ಮದಪಾದುಶಾಹ ನೆಡೆಗೆ ನಡೆದವನಡಿವಿಡಿದು (ಕಳಹಂ. ೫೭-೬). **ಪಾದುಷಹ** : ೧. ಪ್ರಭು ಗಳೆ! ನೀವು ದೊಡ್ಡ ಪಾದುಷಹರು! (ಬಿಕ್ಕರು ೯). **ಪಾದುಷಾ** : ೧. ರಾಜರಿಗೆ ಪಾದುಷಾಗಳಿಗೆ ಅರಸುಗಳಿಗೆ ನಮಗೆ ಸಹ ಪುಣ್ಯ ಲಭ್ಯ ವೃದ್ಧಿ ಯಾಗಿ (ಮ್ಯಾಆ. ೦೯೩೮, ೬೫-೩೦ ; 1609). **ಪಾಷ** : ೧. ಅಲಂದೇವಿಯಾ

ದೇಶದ ಮಹಮ್ಮದಾಲಿ ಎಂಬ ಸೈನಿಕನೊಬ್ಬನು . . . ಪಾಷ ಅಥವಾ ಚಕ್ರವರ್ತಿ ಪ್ರಶಸ್ತಿ ಎಂದು ಕರಸಿಕೊಂಡನು (ಇತ್ಯಾಂಶಂ. ೫೭). **ಬಾದಶಹ:** ೧. ದಿಲ್ಲಿಯ ಬಾದಶಹನ ಹಸ್ತನಾದ ಒಬ್ಬ ಸರದಾರನು . . . ಅವನನ್ನು ದೇವರಾಜನಿಗೆ ಅಪ್ಪೇ ಹಣಕ್ಕೆ ಮಾರಿದನು (ಮೈಂಬಯು. ೪-೮೩); ಈಗಿನ ಹುಡುಗುರಿಗೆ ಸ್ವಾಮಿಗಳಿಗಿಂತ ಮೊಗಲ ಬಾದಶಹರು ಎಂದು ಪಟ್ಟಿಕ್ಕೆ ಬಂದವರೊಡನೇ ಹೆಚ್ಚು ಗೊತ್ತಿರತವ (ಅಕ್ಕಮಃ. ೭): 'ಬಾದಶಹ ಬಿರುದನ್ನು ಕಳೆದುಕೊಂಡ ಬಹದ್ದೂರಶಹನು . . . ಆಲ್ಫರ ರಾಜನಿಗೆ ಬರೆದ ಪತ್ರಗಳು (ಕೃಶಂಕ. iii, ಲೇಖನಗಳ ತಿರುಳು). **ಬಾದಶಾಹ:** ೧. ಟಿಪ್ಪುಸುಲತಾನ ಬಾದಶಾಹ ಶಾಹವನವರು (ಕೊಂಕಶಾ. ೧೯೩೪, ರಾಜಕೀಯಸ್ಮಾರ್. ೮೩-೦ ; ೫). **ಬಾದಷಹ:** ೧. ಆ ವಿಗ್ರಹವು ದೆಹಲಿಯ ಬಾದಷಹನ ಮಗಳ ಬಳಿ ಇದ್ದಿತೆಂದೂ . . . ಐತಿಹ್ಯವಿದೆ (ಕಶಾಂ. ೧೬೮); ತಲೆದಿಂಬಿಗೆ ಕೈಗಳ ರಡಸ್ಸೂ ಊರಿ ಬೆನ್ನು ಕೊಟ್ಟು ಕುಳಿತಿದ್ದರು — ಹುಕ್ಕಾ ಎಳೆಯುತ್ತ ಮಲಗುತ್ತಿದ್ದ ಜಹಾಂಗೀರ ಬಾದಷಹನಂತೆ (ಮುಂಗಾರುವು. ೩). **ಬಾದುಶ:** ೧. ಅರರೆ ಬಾದುಶ ಬಿದ್ದನೆಂದು ಮೊಗಲರೆಲ್ಲ ಮೊರದೆದ್ದು ಸುತ್ತಿ ಮುತ್ತಿದರು (ಸೌಂದಕಾ. ೭-೧೧೪).

[ ← ಪಾರ. ಪಾದ್‌ಶಾ, ಪಾದ್‌ಶಾಹ್, ಬಾದ್‌ಶಾಹ್ ; ಹಿಂ. ಪಾಚ್ಛಾ, ಪಾತಶಾಹ್, ಪಾತಸಾ, ಪಾತಸಾಹ್, ಬಾದಶಾ, ಪಾದಶಾಹ್, ಬಾದಶಾಹ್ ; ಮರಾ. ಪಾಚ್ಛಾ, ಪಾಛಾ, ಪಾತಶಹಾ, ಪಾತಶಾಹ್, ಪಾದಶಹಾ, ಬಾಚ್ಛಾ, ಬಾದಶಹಾ ]

**ಪಾತಷಹ** 'ಪಾತಶಹ' ನೋ.

**ಪಾತಷಾಹ** 'ಪಾತಶಹ' ನೋ.

**ಪಾತಷಾಹಿ,** ಪಾದಶಾಯಿ, ಬಾದಷಾಹಿ (ಗು). ೧. ಬಾದಷಹನಿಗೆ ಸಂಬಂಧಿಸಿದ ; ಸುಲ್ತಾನನಿಗೆ ಸೇರಿದ : (೬). ೨. ಶ್ರೇಷ್ಠವಾದ ; ರಾಜಯೋಗ್ಯವಾದ : (೬). (ನಾ). ೩. ದೊರೆತನ ; ಪ್ರಭುತ್ವ : (೬). **ಪಾದಶಾಯಿ:** ೧. ಗವರ್ನರ್‌ಸಾಹೇಬರವರು ಮುಂಬಾಯಿಯಿಂದಾ ಪಾದಶಾಯಿ ರಿಜಿಮೆಂಟು ಒಂದು . . . ಪೇಶ್ವೆಯುವರ ಬಳಿಗೆ ಕಳುಹಿಸಿದಲ್ಲಿ (ರಾಕೇಂಂಭ್ರ. ೧೬೪). **ಬಾದಷಾಹಿ:** ೧. ಯಾರ ಚಿಕ್ಕ ತಮ್ಮ ಅಲ್ಲಿಸಾಬರು ದೊಡ್ಡಬಳ್ಳಾಪುರದಲ್ಲಿ ಬಾದಷಾಹಿ ಸನ್ನದಿನ ಕಿಲ್ಲೆದಾರ ಬಳಿಯಲ್ಲಿ ನೌಕರಿ ನಿಂತರು (ಹೈದರ. ೨೨); ಈ ದೊರೆಯ ಬೊಕ್ಕಸದಲ್ಲಿದ್ದು ಹಗೆಗಳ ಕೈಗೆ ಸಿಕ್ಕಿದ ನಾಣ್ಯಗಳ ವಿವರ . . . ಶಿವರಾಯ ಹೊನ್ನು ಬಾದಷಾಹಿ ಹೊನ್ನು (ಐಕ್ಯಶಾ. ೧೧೪).

[ ← ಪಾರ. ಪಾದ್‌ಶಾಹೀ, ಬಾದ್‌ಶಾಹೀ ; ಹಿಂ. ಪಾತಶಾಹೀ, ಪಾದಶಾಹೀ, ಬಾದಶಾಹೀ ; ಮರಾ. ಬಾದಶಾಹೀ, ಬಾಚ್ಛಾಈ ]

**ಪಾತಳಿ** (ನಾ). ೧. ಸಮತಟ್ಟಾದ ಮೇಲ್ಭಾಗ, — ಮೇಲ್ಮೈ : ಹಗ್ಗ ಅಲುಗಾಡಿದ್ದರಿಂದ ನೀರ ಪಾತಳಿಯ ಮೇಲೆ ಸಣ್ಣ ತೆರೆ ಎದ್ದಿತು (ಮುರುರಾ. ೧೧೪); ಪ್ರತಿ ಕೊರೆಕಂಬಿಯೂ ಪಾತಳಿಯಿಂದ (Surface) ಒಳಬಾಗಿದ ಒಂದು ಸಣ್ಣ ಚೀಲದಲ್ಲಿದ್ದು ಒಳಸ್ಥಾನವನ್ನು ಪಡೆದಿದೆ (೬೬೬ಬ. ೮೪) : ಸಬ್‌ಮರೀನು ಇನ್ನೂ ನೀರಿನ ಪಾತಳಿಯ ಮೇಲೆಯೇ ನಡೆದಿತ್ತು (ಕತಸ. ೫೨). ೨. ಮಟ್ಟ ; ಹಂತ : ಧಾರವಾಡವು ಸಮುದ್ರ ಪಾತಳಿಯಿಂದ ೨೫೮೦ ಪೂಟು ಎತ್ತರದ ಬೋಲೆ ಇದೆ (೬೬ಬಬ. ೨೩); ಬರಿಯ ತರ್ಕದ ಪಾತಳಿಯಲ್ಲಿ ಶೋಭಿಸಬಹುದಾದ ಈ ಶಬ್ದಗಳಿಗೆ ವ್ಯವಹಾರಲೋಕದಲ್ಲಿ ಸ್ಥಾನವಿದೆಯೆ ? (ಮುರುರಾ. ೧೩೫).

[ ← ಮರಾ. ಪಾತಳೀ ]

**ಪಾತಳು** 'ಪತ್ತಲ' ನೋ.

**ಪಾತಾಲ, ಪಾತಾಳ** (ನಾ). ೧. ಭೂಮಿಯ ಕೆಳಗಿನ ಏಳು ಲೋಕಗಳಲ್ಲಿ ಒಂದು ; **ನಾಗಲೋಕ:** "ಅತಲಃ . . . ತಲಾತಲಃ, ಪಾತಾಲಃ — ಈ ೭ ಅಧಿಯಾದ ಲೋಕಂ" (ಶಾಶಕ್ಕ. ೨೬೦); ಸ್ವರ್ಗ ಮರ್ತ್ಯ ಪಾತಾಲ [ಪಾತಾಲಂ. ೪] ದೊಳಗುಳ್ಳಖಿಳಪ್ರವರ್ತನೆಯನಭಿಧಾನವಾಗಿ ಪೇಳ್ವೆಂ (ಮುಂಗರಾ. ೨-೩). ೨. ಸಮುದ್ರದ ಒಳಗಿನ ಬೇರೆ ಪಡಬಾಗ್ನಿ. **ಪಾತಾಳ:** ೧. "ಬಡಬಾಮುಖಂ . . . ನಾಗಲೋಕಂ, ರಸಾತಳಂ — ಈ ೬ ಪಾತಾಳಂ" (ಹಲಾಮು. ೧೧೩-೧) ; ಪಾತಾಳದಿಂದತ್ತ ಪಾತ ಇಲ್ಲಾರಿಲ್ಲ ಗಗನದಿಂದ ಮೇಲೆ ಅನುಭಾವ ತಾನಿಲ್ಲ (ಅಪತಂ. ೧೫-೫೮) ; ಸ್ವರ್ಗ ಮರ್ತ್ಯ ಪಾತಾಳದೊಳಗೆ ಒಬ್ಬನೆ ದೇವ (ಬಸವ. ೫೨೪) ; ಪಾತಾಳಂ ನಿಜಮೂಲವ್ಯಾಪ್ತವ ಸೀಮಂ ಪಿಯತ್ತಳಂ ಶಾಖಾಸಂಘಾತದ ಸೀಮವೆಲ್ಲಾ ಚೂತಮಹೀಜಾತಮನ್ನತಿಯ ನೇಪ್ವೊಗಟ್ಟೆಂ (ಕುಸುಮಾ. ೦-೧೧೧). ೨. "ಪಾತಾಳಂ ಪಡಬಾಗ್ನಿ ರಸಾತಳಮೆಂಬೆರಡುಮಾಜಿಗೆ" (ಪಸ್ತುಕೋ. ೧೨೦-೨೩). ೩. (ಆಲಂ) ಬಹಳ ಆಳವಾದ ಸ್ಥಳ: ಜೂನ್ ತಿಂಗಳಲ್ಲಿ ಎಲ್ಲ ಬಾವಿಗಳ ನೀರೂ ಪಾತಾಳ ಕಂಡವು (ಸೋಹಾಕ್ಕ. ೧೨೩) ; ಬೇಸಿಗೆಯಲ್ಲಿ ಅವರ ಬಾವಿಯಲ್ಲಿ ನೀರು ಪಾತಾಳದಲ್ಲಿರುತ್ತದೆ (ಅದೇ). 'ಪಾತಾಳಖಾತ' ಪರಾ. ೪. [ ಜ್ಯೋತಿ ] ಲಗ್ನದಿಂದ ನಾಲ್ಕನೆಯ ಸ್ಥಾನ,—ರಾಶಿ : ವ್ಯವಹರಿಪ ಸಂಜ್ಞೆ ಚತುರಸ್ರವೆಂದದಪ್ಪುದು ಚತುರ್ಥಗೃಹಕೆ ಚತುರ್ಥಕ್ಕೆ ಮಲಂ ಮುಕ್ತಂ ಪಾತಾಳ ಹಿಬ್ಕ ಸುಖ ಹಿಬುಕ ಬಂಧುವೆಂದೈದು ಪೆಸರ್ (ಜಾತಕ. ೧-೪೪); ಶೀ ತ ಮ ಯೂ ಖಾ ಪ ತ್ಯ ನಿ ಂ ದಂ ತ ನು ಧ ನ ದಶಧರ್ಮಾಯ ಪಾತಾಳ ಷಟ್‌ಪಂಚಮದೊಳ್ ಧಾತ್ರೀಜನಿಂ ಕೇಂದ್ರ ನಿಧನ ನವಮಾಯಂಗಳೊಳ್ ಪೂಜ್ಯನಕ್ಕುಂ (ಜಾತಕ. ೧೧-೧೧). ೫. [ ಗಣಿತ ] ಏಳು ಎಂಬ ಸಂಖ್ಯೆಯ ಸಂಕೇತ : ಸಪ್ತ, ಭಯ, ಅದ್ರಿ, ಗಿರಿ, ಮುನಿ, ಪಾತಾಳ . . . ದ್ವೀಪ, ಅಶ್ವ ಇಂತಿನಿತುಂ ೭ಕ್ಕೆ ಹೆಸರು (ಕೃತಹಾ. ೧೦-೨೭).

**ಪಾತಾಳಹೋಮ** = (ಆಲಂ) ರಹಸ್ಯಕಾರ್ಯಾಚರಣೆ : ಲಕ್ಷ್ಮಿಯ ಒಡವೆಗಳನ್ನೆಲ್ಲಾ ತಂದಿದ್ದಾವೆ . . . ಅವಕ್ಕೆ ಇಷ್ಟು ಪಾತಾಳಹೋಮವೇ? (ಲಕ್ಷ್ಮೀಶ್ರ. ೫೯). [ ಸಂ. ]

**ಪಾತಾಲಗಂಗೆ,** ಪಾತಾಳಗಂಗೆ (ನಾ). ಶ್ರೀಶೈಲದ ಬೆಟ್ಟದ ಬುಡದಲ್ಲಿ, ಆಳದಲ್ಲಿ ಪ್ರವಹಿಸುವ ನದಿ : ಮೇಲನೀಜುವ ಮನುಜರಂ ಪಾತಾಲ[ಪಾತಾಲಂ. ೪]ಗಂಗೆಯೊಳಾಡಿಸುತ್ತನುಕೂಲವಾಗಿಹ ತುಂಗಗಂಗಾ ವೃಕ್ಷಪಂಕ್ತಿಗಳ (ಬಸವ. ೧೯-೫೫). **ಪಾತಾಳಗಂಗೆ:** ಶ್ರೀಶೈಲ ಕಂಧರದೊಳಾಗಮ ಸುರಗಂಗೆ ಪಾತಾಳಗಂಗೆ ಸರಸತಿಯೆಂಬ ಪರಮ ನದಿಗಳ ಸಂಗಮದೆ ಶೋಭಿಪಾ ಮಹನಾಖ್ಯ ತೀರ್ಥಕ್ಕೆ ಮುದದಿಂ ನರಸೀಮಜಬಲದಿಂದೆ ಬಂದು (ಅರಾತ. ೩-೧೩-೩೯). [ ಪಾತಾಲ+ಗಂಗೆ₂ ]

**ಪಾತಾಲಗಡ** 'ಪಾತಾಲಗರಡಿ' ನೋ.

**ಪಾತಾಲಗರಡಿ,** ಪಾತಾಲಗಡ, ಪಾತಾಳಗಡ, ಪಾತಾಳಗಡೆ, ಪಾತಾಳಗರಡಿ, ಪಾತಾಳಗರುಂಡ₁, ಪಾತಾಳಗರುಡಿ (ನಾ). ೧. ಬಾವಿ ಮುಂತಾದ ಜಲಾಶಯಗಳಲ್ಲಿ ಬಿದ್ದ ವಸ್ತುವನ್ನು ಮೇಲಕ್ಕೆ ತೆಗೆಯಲು ಬಳಸುವ, ಕೊಂಡಿಗಳುಳ್ಳ ಒಂದು ಬಗೆಯ ಕಬ್ಬಿಣದ ಸಾಧನ: ಪಾತಾಲಗರಡಿ=ನೀರಲ್ಲಿ ಮುಳುಗಿದ ಸಾಮಾನುಗಳನ್ನು ಎತ್ತುವ ಉಕ್ಕಿನ ಸರಪಳಿ" (ಜಾನಕೋ. ೧೫). **ಪಾತಾಲಗಡ:** ೧. "ಪಾತಾಂಗಡ= ನೀರಲ್ಲಿ ಮುಳುಗಿದ ಸಾಮಾನುಗಳನ್ನು ಎತ್ತುವ ಉಕ್ಕಿನ ಸರಳು"(ಜಾನಕೋ. ೧೫). **ಪಾತಾಳಗಡ:** ೧. ಆ ಸರಪಳಿಯ ತುದಿಗೆ ಕಬ್ಬಿಣದೊಂದು ಪಾತಾಳ ಗಡ ಹಚ್ಚಿರುತ್ತದೆ (ಮುರುವ. ೩-೧೧೬); ಎಷ್ಟೋ ಸಲ ಆತ್ಮ ಹತ್ಯೆಯ ವಿಚಾರವು ಬಾವಿಯಲ್ಲಿಯ ಪಾತಾಳಗಡದಂತೆ ತಲೆಯಲ್ಲಿ ಅಸ್ಪಷ್ಟವಾಗಿ ಸುಳಿದಾಡುತ್ತಿತ್ತು (ಮುಕ್ತಿ. ೩೭). **ಪಾತಾಳಗಡ:** ೧. ಕೆಲಸ ಯಾರದೇ ಪ್ರೇರಣೆಯಿಂದವರು ನಿರ್ವಹಿಸಿರಲಿ . . . ಅವರ ಇತಿ ಮಿತಿ

ಯನ್ನು 'ಪಾತಾಳಗಡೆ' ಹಾಕಿ ಮಥಿಸುತ್ತಾರೆ (ಹಸ್ತಕೋ. ೯).

**ಪಾತಾಳಗರಡಿ :** ೧. ಮುಂಬಯಿಯಶಹರದಲ್ಲಿ ಆಗುವ ಜೀನಸಗಳ ವಿವರವು ನಮಗೆ ಕಂಡು ಬಂದ ಮಾಟ್ಟಿಗೆ ಕೆಳಗೆ ಬರಿಯಲ್ಪಟ್ಟಿದೆ. ೧. ಅಡಕೊತ್ತ್ರಗಳು . . . ೨೩. ಪಾತಾಳಗರಡಿ (ನೀರಿನಲ್ಲಿ ಹಾಕಿ ಏಳೆಗಿನ ಸಾಮಾನ ತೆಗಿಯುವದು) (ಮುಂಬಯಿ. ೧೦೦); ಆಕೆ ಬಯಸಿದ ವಸ್ತು, ಹಣ್ಣುಹಂಪಲು, ಮಾಂಸ ಯಾವುದನ್ನೆಲ್ಲ ಆತ ಆಕೆಗೆ ಒದಗಿಸಿದ್ದಾನೆ. ಪಾತಾಳಗರಡಿ ಹಾಕಿಯಾದರೂ ತಂದುಕೊಟ್ಟಿದ್ದಾನೆ (ಆಹಸ. ೧೬೯). ೨. (ಅಲಂ) ರಹಸ್ಯವನ್ನು ಹೊರಗೆ ತೆಗೆಯುವ ವ್ಯಕ್ತಿ : ಅಚ್ಯುತಪ್ಪನವರು ಹೆಂಡತಿಯ ಮಾತಿಗೆ ತಲೆದೂಗಿ, "ನೀನು ಪಾತಾಳಗರಡಿ ಕಣೇ ರಮಾ" . . . ಎಂದರು (ಗೃತಂ. ೧೧೯). **ಪಾತಾಳಗರುಡ$_1$ :** ೨. ನಾಗಯ್ಯನಿಟ್ಟರೊ! ಪಾತಾಳಗರುಡ ಅವರು (ಹಹಸ. ೬೩).

**ಪಾತಾಳಗರುಡಿ :** ೧. ಪಾತಾಳಗರುಡಿಯ ಕೊಂಡಿಗೆ ಸಿಕ್ಕಿಕೊಂಡ ವಸ್ತು ನಡುವೆಯೇ ತಪ್ಪಿಸಿಕೊಂಡಿತ್ತು (ಸೂರುರಾ. ೦೦೯).

[ ←ತಮಿ. ಪಾತಾಳಕ್ಕರಣ್ಟಿ ]

**ಪಾತಾಲನಿಲಯ** (ನಾ). ಪಾತಾಳದಲ್ಲಿ ನೆಲಸಿರುವವನು ; ದೈತ್ಯ : "ಅಸುರಃ, ದಾನವಃ . . . ಪಾತಾಲನಿಲಯಃ (ಸ್ತ್ರೀತಾಃ) – ಈ ೧ ಅಸುರರ ಪೆಸರ್" (ಕಣಾಮು. ೩-೩). [ ಪಾತಾಲ+ನಿಲಯ ]

**ಪಾತಾಲಲೋಕ, ಪಾತಾಳಲೋಕ** (ನಾ). ಭೂಮಿಯ ಕೆಳಗಿನ ಏಳು ಲೋಕಗಳಲ್ಲಿ ಒಂದು; ನಾಗಲೋಕ; ಪಾತಾಳ: "ಪಾತಾಳಮೆನಲು . . . ರಸಾತಲಮೆನಲ್ಕಧೋಭುವನಮೆಂದೆನಲು ಪಾತಾಲ[ಪಾತಾ. ಳ]ಲೋಕಕ್ಕೆ ನಾಮಂ" (ಮುಂಗರಾ. ೧೧೩-೦). **ಪಾತಾಳಲೋಕ :** ಪಾತಾಳಲೋಕ ವಿಜಯಂ ಮಾತಂಗಕನಿಷ್ಠಸಿದ್ಧಿಯಾಯೆರಡುಂ ಮಾಕ್ರೀಶಿಸಕಲಾವನೀವಿಖ್ಯಾತಿ ಯೆನುತ್ತ್ರವನಿಪಾಲತನಯಂ ನಲಿದಂ (ದಕಾಕು. ೩-೩೨) ; ವರವು ಜಂಗಮಾದಲ್ಲಿ ಹದಿನಾಲ್ಕುಲೋಕಂಗಳಡಗಿರ್ಪವು ನೋಡಾ ಅದೆಂತೆಂದೊಡೆ ಪಾದತಳದಲ್ಲಿ ಅತಳಲೋಕ . . . ಕಟಿಯಲ್ಲಿ ಪಾತಾಳಲೋಕ (ಆಂಪಂಕೀ. ೦೯೧-೦೨೪). [ ಪಾತಾಲ+ಲೋಕ ]

**ಪಾತಾಳ** 'ಪಾತಾಲ' ನೋ.

**ಪಾತಾಳಖಾತ** (ನಾ). ಬಹಳ ಆಳವಾದ ಕಂದಕ : ಉರುಳಿದೆನೊ ಪಾತಾಳಖಾತಕೆ ಎಂದು ಎದೆಯೊಳಗಾಗಿರೆ . . . ಯಾವ ಕೈಯೋ ಕೊಡುತ್ತಿದೆ ಈ ಮರಳುಮಾನವನು ಪಡೆಸಿ (ಜಾರುಪಾ. ೩೨-೨೦); ಅನಂತ್ಯದೊಂದು ನಿಃಜಲಧಿಯಲ್ಲಿ ಹೊರಟಿಹುದು ನನ್ನ ನಾವೆ . . . ಮಸುಕು ಮಸುಕು ಹಿಂದೆಲ್ಲ ಮುಂದೆ ಪಾತಾಳಖಾತಸಿಂಧು(ಕೃಕಾ೦-೦೨-೩).

[ ಪಾತಾಳ (=ಪಾತಾಲ)+ಖಾತ$_1$ ]

**ಪಾತಾಳಗಂಗೆ** 'ಪಾತಾಲಗಂಗೆ' ನೋ.

**ಪಾತಾಳಗಂಧಿ** (ನಾ). ಹಾವಿನ ವಿಷವನ್ನು ಪರಿಹರಿಸುವ ಒಂದು ಬಗೆಯ ಮೂಲಿಕೆ : ಸೂತ್ರನಾಭಿ, ಸರ್ಪಗಂಧಿ, ಪಾತಾಳಗಂಧಿ, ಶಿವನಾಭಿಬಳ್ಳಿ (ಮೈಶಿರಿ. ೬೬-೧೩೪೦).

[ ಪಾತಾಳ (=ಪಾತಾಲ)+ಗಂಧಿ ]

**ಪಾತಾಳಗಡ** 'ಪಾತಾಲಗರಡಿ' ನೋ.

**ಪಾತಾಳಗಡೆ** 'ಪಾತಾಲಗರಡಿ' ನೋ.

**ಪಾತಾಳಗರಡಿ** 'ಪಾತಾಲಗರಡಿ' ನೋ.

**ಪಾತಾಳಗರುಡ$_1$** 'ಪಾತಾಲಗರಡಿ' ನೋ.

**ಪಾತಾಳಗರುಡ$_2$** (ನಾ). ಹಾವಿನ ವಿಷವನ್ನು ಪರಿಹರಿಸುವ ಒಂದು ಬಗೆಯ ಮೂಲಿಕೆ ; ಸರ್ಪಾಕ್ಷಿ: ಪಾತಾಳಗರುಡನ ಬೇರು ಆದಿತ್ಯವಾರ ಮೋನದಿಂದ ತಂದು . . . ಮುಟ್ಟಸೆ ಸ್ತ್ರೀವಶ್ಯ (ಚಿಕ್ಕಿಶಿ. ೨೦೭); ಪಾತಾಳಗರುಡಸಮೂಲವಂ ಚೂರ್ಣಂ ಮಾಡಿ ಹಸುವಿನ ತುಪ್ಪದಲ್ಲಿ ಕಲಸಿ ಮೆಲ್ಲಲು ಬಹುಮೂತ್ರಂ ನಿಲ್ಲುವುದು (ಸಕಶ್ರ. ೩೩೪). 'ಗರುಡಪಾತಾಳ' ಪರಾ. [ <ಸಂ. ಪಾತಾಲಗರುಡೀ ]

**ಪಾತಾಳಗರುಡಿ** 'ಪಾತಾಲಗರಡಿ' ನೋ.

**ಪಾತಾಳತಳ** (ನಾ). ಪಾತಾಳಪ್ರದೇಶ : ಪಾತಾಳತಳಮನೆಯ್ದುದ ಪಾತಾಳ ಸುರೇಪುರಮನೆಯ್ದುದಟ್ಟಳೆ ಪೆಂಪು ದ್ಯೋತಿಸೆ ಪುರವಿದ್ಪುದು ಭೋಗಾ ಶಯದ ಭೋಗವತಿಯನಮರಾವತಿಯಂ (ಆಶಪು. ೨-೦೬); ವಿಲಸತ್ ಮಹೋಕ್ಷವಾಹನ ಮಹೋಕ್ಷಪಾತತರಲಘು ಪಾತಾಳತಳಮಾ ರಕ್ಷಾಕ್ಷರಂ ಲಲಿತ ತ್ರಿಯಕ್ಷಂ ಸಹಸ್ರೋದರಂ ದೀರ್ಘಲೋಚನಂ ಹ್ರಸ್ವಕಂಠಂ (ಅಬಿಶ. ೯-೯-೩೩).

[ ಪಾತಾಳ (=ಪಾತಾಲ)+ತಳ (=ತಲ) ]

**ಪಾತಾಳನಿವಾಸಿ** (ನಾ). ಪಾತಾಳದಲ್ಲಿ ನೆಲಸಿರುವವನು ; ರಕ್ಕಸ ದೈತ್ಯ : "ದನುಜರ್ ದೈತೇಯರ್ . . . ಪಾತಾಳನಿವಾಸಿಗಳ್ ಸುರದ್ವಿಷರೆನೆ ದೈತ್ಯರ್" (ಶಬ್ದಕೋ. ೬-೩೨).

[ ಪಾತಾಳ (=ಪಾತಾಲ)+ನಿವಾಸಿ ]

**ಪಾತಾಳಬಾಣ** (ನಾ). (ನೆಲವನ್ನು ಭೇದಿಸಿ) ಪಾತಾಳದ ವರೆಗೆ ಹೋಗಬಲ್ಲ ಒಂದು ಬಗೆಯ ಬಾಣ : ಆಕಾಶಗಾಮಿನಿ ಸೊರದಾಣ ನೊಪ್ಪರಿ ಪಾತಾಳಬಾಣ ವಡಬಾಬಾಣ ಮಾಯಾರೂಪಿ ಜೇಟಕ ಮುಂತಾದ ಶತ್ರುಜಯಾತ್ಮರಕ್ಷಾದಿಸಾಧನವಿಶೇಷಂಗಳಿಂವಲಂ (ಪಕೀಳ. ೩೬೩).

[ ಪಾತಾಳ (=ಪಾತಾಲ)+ಬಾಣ$_2$ ]

**ಪಾತಾಳಮರ** (ನಾ). ಒಂದು ಬಗೆಯ ಮರ : ಪೇನಾರಿಮರ, ಪೀನಾರಿ, ಪಾತಾಳಮರ, ಭೇತಾಳ, ತೊಕಡಕನ ಮರ, ಭಾತಾಳ (ಮೈಶಿರಿ. ೭೨-೦೯೭೩). [ ಪಾತಾಳ$_1$+ಮರ$_1$ ]

**ಪಾತಾಳಯಂತ್ರ** (ನಾ). ಔಷಧಿಗಳನ್ನು ಭಟ್ಟಿ ಇಳಿಸಲು ಬಳಸುವ, ಭೂಮಿಯಲ್ಲಿ ಹುಗಿದಿಡುವ ಒಂದು ಬಗೆಯ ಯಂತ್ರ : ಜೇಪಾಳದ ಬೀಜವಂ ಕಹಿಸೋರೆಯ ಬೀಜ ಸಹ ಪಾತಾಳಯಂತ್ರದಿಂ ತೈಲವ ತೆಗೆದು . . . ಲೇಪವ ಮಾಡೆ ಅಪಾಮೃತ್ಯ ವಿರೇಚನಮಕ್ಕುಂ (ಸಕಶ್ರ. ೩೦೫).

[ ಪಾತಾಳ (=ಪಾತಾಲ)+ಯಂತ್ರ ]

**ಪಾತಾಳಯಂತ್ರಿ** (ನಾ). ಗುಪ್ತಕಾರಸ್ಥಾನ ಮಾಡುವ ವ್ಯಕ್ತಿ : ಏನು ಇಂಥಾ ಪಾತಾಳಯಂತ್ರಿ ಎಂಬುವು ನಮಗೆ ತಿಳಿದಿರಲಿಲ್ಲ (ಆಪ್ರಾಡ. ೬೮); ಪಾತಾಳಯಂತ್ರಿಗಳಾದ ಪೋಲೀಸರು ಧೂರ್ತ ಪತ್ನಿಯಾಗಳನ್ನೊಂದು ಮಾಡುವಂತಹ ಪಾತಾಳಯಂತ್ರಿಗಳಿರುವರೆಂಬುದನ್ನು . . . ಕೇಳಿ ಅರಿತಿದ್ದರು (ಸ್ವಾಂಜು. ೦೦೯). [ ←ಮರಾ. ಪಾತಾಲಯಂತ್ರೀ ]

**ಪಾತಾಳಲೋಕ** 'ಪಾತಾಲಲೋಕ' ನೋ.

**ಪಾತಾಳಸುಳಿ** (ನಾ). ದನದ ಹೊಟ್ಟೆಯ ಕೆಳಭಾಗದಲ್ಲಿರುವ ಒಂದು ಬಗೆಯ ಕೆಟ್ಟ ಸುಳಿ : ದನಾ ಪರೀಕ್ಷೆ ಮಾಡೋವಾಗ ಹೀನಸುಳಿ, ಪಾತಾಳಸುಳಿ, ದಾಪಣಸುಳಿ . . . ಇವೆಲ್ಲಾನೂ ಚಂದಾಗಿ ನೋಡಿ ಒಳ್ಳೇ ಸುಳಿ ಇರೋದು ತಕ್ಕಾಲಾ (ಮುಕ್ತಿಕ. ೦೬೩).

[ ಪಾತಾಳ (=ಪಾತಾಲ)+ಸುಳಿ$_2$ (<ಸುಳಿ$_1$) ]

**ಪಾತಾಳಾಂಕಣ** (ನಾ). ನೆಲಮನೆಯ ಅಂಗಳ ; ಭೂಮಿಯ ಮಟ್ಟದಿಂದ ಕೆಳಗಿನ ಅಂಗಳ : ಪಾಳೆಯಗಾರರ ಕಾಲದಲ್ಲಿ ನೆಲವತ್ತು ಸ್ತಂಭಗಳ ಪಾತಾಳಾಂಕಣ ರಚಿತವಾಯಿತು (ಹೂಡ್ಯುಪಾ. ೯೨) ; ನೀನು ದನ ಕಾಯುವುದನಕ್ಕಾ ನಾಲಾಹಿಕ್ ಎನ್ನಿಸಿಕೊಂಡು ಮತ್ತೆ ಬಸವಣ್ಣದೇವರ ಗುಡಿಯ ಪಾತಾಳಾಂಕಣವನ್ನು ಹಿಡಿದಿದ್ದ (ಕಟುಕು. ೦).

[ ಪಾತಾಳ (=ಪಾತಾಲ)+ಅಂಕಣ ]

**ಪಾತಾಳಿ** (ನಾ). ಪಾತಾಳಲೋಕದ ಒಡೆಯ ; ವಾಸುಕಿ : ದಿನನೇ ಶರನಿಕರದಲಿ ಪವಮಾನಜನೊ ಪಾತಾಳಿಯೋ[ ಪಾತಾ. ಪವಮಾನತನುಜ

ಮೊ ಪಾಪಕನೊ]ಕಲಿ ವೈನತೇಯನೊ ಕರ್ಣನೋ ನಾಪಜ಼ಯೆವ್ರ (ಶಾವ್ಯಾಕ. ೧೨-೨೫). [ಸಂ. ಪಾತಾಲಿನ್]

**ಪಾತಿ₁**, **ಪಾತೆ₁** (ನಾ). ೧. ಮರ, ಗಿಡಗಳ ಬುಡದಲ್ಲಿ ನೀರು ನಿಲ್ಲಲು ಮಾಡಿರುವ ಕಟ್ಟೆ; ಆಲವಾಲ: ಶರತ್ಕಾಲದಲ್ಲಿ ಮಳೆಯಿಲ್ಲದೆ ಸ್ವಲ್ಪ ಬಾಡುವ ಸಮಯದಲ್ಲಿ ತರುಗಳ ಪಾತಿಯಲ್ಲಿ ತುಂಬಿದ ಜಲವು ಯಾಂಗಿ ಚನ್ನಾಗಿ ನೀರು ನಿಲ್ಲುವ ಪರಿಯಂತವು ಜಲವು ಕಟ ಬೇಕು (ಸೌಗಂಧಿ. ೯೨೭-೯); ಜನ . . . ಸಸಿಗಳಿಗೆ ಹತ್ತಿರುವ ಹುಳುಗಳನ್ನು ಬಿಡಿಸುವುದು. ಅವುಗಳ ಪಾತಿ ಸರಿಮಾಡಿ ಗೊಬ್ಬರ ಹಾಕುವುದು— ಇತ್ಯಾದಿ ಕೆಲಸಗಳಲ್ಲಿ ತೊಡಗಿದ್ದರು (ಐದ್ಯಾಕ. ೧). ೨. ಬೀಜ ಬಿತ್ತಲು ಮಾಡಿರುವ ಮಡಿ: ಓತು ಮಾಡುವ ಲಿಂಗವಂತರ ಭಾತಿಗಳು ಶಿವಭಕ್ತಿ ಬೀಜಕೆ ಪಾತಿಗಳು ಪರಮಾರ್ಥನಿಜಯೋಗಪ್ರಸೂತಿಗಳು (ಬಸವು. ೫೭-೯೭); ಇಂತಹ ಎರಡು ಬೀಜಗಳನ್ನು ಒಂದೇ ಹೊಲದ ಎರಡು ಪಾತಿಗಳಲ್ಲಿ ನೆಟ್ಟರೆ ಕೆಲವು ಕಾಲದ ನಂತರ ಒಂದು ಅರಳಿಮರವಾಗಿಯೂ ಮತ್ತೊಂದು ಆಲದ ಮರವಾಗಿಯೂ ಪ್ರಕಟವಾಗುತ್ತವೆ (ಕೀವಾತ್ಯ. ೦೬೪); ಸೊಪ್ಪಿನ ಬೀಜ ಬಿತ್ತುವುದಾದರೆ ಪಾತಿ ಮಾಡಬೇಕು (ಕಠಕ. ೬೭). **ಪಾತೆ₁**: ೧. ಯಾತದ ತುದಿಯಲ್ಲಿ ಕಟ್ಟಿದ ಮಡಕೆಯಂತೆ ಅದ ನೀತಿವಂತರು ಮೆಟ್ಟಿದಡೆ ಪಾತಾಳದ ಉದಕವ ತಂದು ಪಾತೆಗೆ ಹರಹಿದ ತೆಱನಂತೆ (ಪೋತ್ವಮ. ೦೦೪-೪೦೫); ಜಲವನದಾವರ್ಲೆಂಟಳೆರೆದಲ್ಲದೆ ನಿಮ್ಮಯ ಪಾತೆಗಂಬುಮಂ (ಶಾಕುಂತ. ೫೩-೮೭); ಸೀತೆ . . . ಹತ್ತಿಗಿಡದ ಪಾತೆಯೊಳಕ್ಕೆ ಧೊಪ್ಪನೆ ಬಿದ್ದಳು (ಅಕಾಶಂ. ೨೦೭). ೨. ಅದೇ ಸಂಸಾರಪಾತೆಯಲ್ಲಿ ಪುಟ್ಟದಾದ ಒಂದು ಗುಲಾಬಿಯು ಉದ್ಭವವಾಗಿ (ಬನಾಂ. ೮).

[ದೇ.॥ ತಮಿ. ಮಲ. ಪಾತ್ತಿ; ತುಳು. ಪಾತಿ; ತೆಲು. ಪಾದಿ. ಪಾದು]

**ಪಾತಿ₂** (ನಾ). ಒಬ್ಬರು ಕುಳಿತುಕೊಳ್ಳುವಂತಹ ದೋಣಿ: ಚಿಕ್ಕ ದೋಣಿ: ಶಾನುಭೋಗರು ದೋಣಿಯವನೊಬ್ಬನನ್ನು ಕರೆದು 'ಬೆಳ್ಳ, ಕೋಡಿಗೆ ಪಾತಿಯನ್ನು ಹಿಡಿ ನೋಡುವ' ಎಂದರು (ಮರಳು. ೪೭೬): ದೋಣಿ ಪಾತಿ ಹರಿಗೋಲು ಅಲ್ಲು ಇಲ್ಲು ಎಲ್ಲೆಲ್ಲೂ ಕಾಣಲಿಲ್ಲ ಈತನು (ವಠಾರ. ೬೮-೯); ಎಂತಹ ಸೆಳೆತಕ್ಕೂ ತಪ್ಪು ಪುಟ್ಟ ದೋಣಿ. ಪಾತಿಗಳನ್ನು ಒಯ್ಯಬಲ್ಲರು (ಶಾರದ್ರ. I. ೩೮೩). 'ಪಾತಿಗ' ಪರಾ.

[ದೇ.॥ ತಮಿ. ಪಾತ್ತೈ; ತುಳು. ಪಾತಿ]

**ಪಾತಿಗ** (ನಾ). ದೋಣಿಯನ್ನು ನಡೆಸುವವನು: ಮುನ್ನ ಹುಟ್ಟನರಿಯದನಳವೆ ನನ್ನ ಹುಟ್ಟುಸಿಕ್ಕಲು, ಪಾತಿಗ? (ಗಳಿಬು. ೫೫-೨೪).

[ಪಾತಿ₂+-ಗ₂]

**ಪಾತಿತ** (ಗು). ಬೀಳುವಂತೆ ಮಾಡಿದ; ಬೀಳಿಸಿದ; ಕೆಡವಿದ: ಪಾತಿತದ್ವಿಪಪತಾಕಂ ಕಾಂ[ದಿ]ಶೀಕಂ ಭಯಾಕುಳಿತಾನೀಕನಪಾಸ್ತವಿಕ್ರಮಂ ಗುಣೋದ್ರೇಕಂ (ಶಾಇ. XX. ೨೧-೨೬; 1010); ಅತನನುಜಂ ಜಗದ್ವಿಖ್ಯಾತಂ ಶ್ರೀ[ಬಾ]ಚಿರಾಜದಣ್ಣಾಧೀಶಂ ಪಾತಿತಸಮಸ್ತವೀರಾರಾತಿ ಬಲಂ (ಶಾಇ. ೪-೨-೧೧೨; 1058). [ಸಂ.]

**ಪಾತಿತ್ಯ** (ನಾ). ಅಧಃಪತನ: ದುರ್ಗತಿ: ಕಾಂಟಿಣೆವಿದ್ಯೆಯಲ್ಲಿ ಪಾರಂಗತಳಾದ ಆ ಹೆಣ್ಣು ತನ್ನ ಸಖಿಯನ್ನು ಶಿವಪ್ಪನ ಬದಲು . . . ಪಾತಿತ್ಯದ ರಸಾತಳಕ್ಕೆ ನೂಕುತ್ತಾಳೆ (ಶಾಂಬಾರ. ೬೩). [ಸಂ.]

**ಪಾತಿವ್ರತೆ** (ನಾ). ಗಂಡನ ಸೇವೆಯೇ ವ್ರತವಾಗಿ ಉಳ್ಳವಳು: ಹದಿಬದೆ: ಪತಿವ್ರತೆ: ಭುವನದೊಳು ನಾಮಹಗೆ ಪರಮೋತ್ಸವದ ಪಾತಿವ್ರತೆಯರಾಗಿಯು ಶಿವಚರಣ ಸಮಭಕ್ತಿಯುಕ್ತಿಯೊಳಾಚರಿಸುತಿಹೆವು (ಬಸವು. ೨೫-೩೭). [ಸಂ. ಪಾತಿವ್ರತಾ]

**ಪಾತಿವ್ರತ್ಯ** (ನಾ). ಪತಿವ್ರತೆಯಾಗಿರುವಿಕೆ: ಪತಿವ್ರತಾಧರ್ಮ: ಅಹಹ ಪಾತಿವ್ರತ್ಯವತಿಸನ್ನಿಹಿತವಲ್ಲಾ ನಿನಗೆ ಹಲಬರ ಮಹಿಳೆ ಸತಿಯೆನಿಸುವರೆ (ಶಾವ್ಯಾಕ. ೨೨-೨೧); ತರುಣಿಯರುಗಳಲಾ ಅರುಂಧತಿ ಪರಸರಸ್ವತಿಯಸಿಬರೀಕೆಯು ಸರಿಗೆ ಪೋಲಿಸಬಹುದೆ ಪಾತಿವ್ರತ್ಯಶೀಲದಲಿ (ಕೌಶಿಕಾ. ೪೩-೫೦); ಪರಮಪಾತಿವ್ರತ್ಯ ರೂಪವು ನಾರಿಗೆ ಸ್ವರ ದಿಂಪು ರೂಪು ಕೋಗಿಲೆಗೆ (ಶಾಕಾಶ. ೧೫೫-೬೪). [ಸಂ.]

**ಪಾತೀದಾರ** (ನಾ). ಪಾಲುಗಾರ: ಭಾಗಸ್ಥ: ಹಿಸ್ಸೆದಾರ: ತಾನೇ ರಾಚಪ್ಪನನ್ನು ನಾಕಾಣೆಯ ಪಾತೀದಾರನನ್ನಾಗಿ ಮಾಡಿಕೊಂಡು ಕಂತ್ರಾಟದ ವ್ಯವಹಾರದಲ್ಲಿ ತೊಡಗಿಸಬೇಕೆಂದು ಯೋಚನೆ ಹಾಕಿದಾಗ. ತಾನೇ ಅವನ ಮನೆ ತನಕ ನಾಕೆಂಟು ಸಾರೆ ಎಡತಾಕಬೇಕಾಯಿತು (ವಿಃಕಹ.II. ೩೨೬).

[←ಮರಾ. ಪಾತೀದಾರ್]

**ಪಾತುರ** 'ಪಾತರ' ನೋ.

**ಪಾತುರೆ** (ನಾ). (ಕೊಡವಜನರು ಹುತ್ತರಿಹಬ್ಬದ ಕೋಲಾಟದಲ್ಲಿ ಬಳಸುವ) ಒಂದು ಬಗೆಯ ನಾಗಬೆತ್ತದ ಕೋಲು: ಆತನ ಸಂಗಡ ಪರಿಯಾಕಳಿ ಆಡುವುದೆಂದರೆ ಪಾತುರೆ ಹೊಡೆತಗಳಿಂದ ತೊಡೆ ಮತ್ತು ಕಾಲುಗಳನ್ನು ಹುಣ್ಣು ಮಾಡಿಕೊಳ್ಳುವುದೆಂದು ಅವರೆಲ್ಲರೂ ಬಲ್ಲರು (ಹುರಿಹಾ. ೧೨೬). [←ಕೊಡ. ಪಾತೂರೆ]

**ಪಾತುರೆಕೋಲು** (ನಾ). =ಪಾತುರೆ: ಕುಳಿತಿದ್ದವ ಎದ್ದು ನಿಂತು ಎಡಗೈಯಲ್ಲಿ ಪರ್ಜವನ್ನು ಹಿಡಿದು. ಬಲಗೈಯಲ್ಲಿ ಪಾತುರೆಕೋಲನ್ನು ಎತ್ತಿ ಕುಣಿಯಲಾರಂಭಿಸಿದ (ಹುರಿಹಾ. ೧೨೬); ಚಿಮ್ಮಿ. ಪಾತುರೆಕೋಲ ಹೊಯ್ಲಿಗೆ ಕುಣಿವ ಪದ ಹೊರಹೊಮ್ಮಲಿ. (ಕಹವು. ೬-೧೫೨).

[ಪಾತುರೆ+ಕೋಲು₁ (<ಕೋಲ್₁). / ಕೊಡ. ಪಾತೂರೆಕೋಲ್]

**ಪಾತುಶಾಹ** 'ಪಾತಶಹ' ನೋ.

**ಪಾತೆ₁** 'ಪಾತಿ₁' ನೋ.

**ಪಾತೆ₂**, ಹಾತೆ (ನಾ). ೧. "ಪಾತರಗಿತ್ತಿ, ಚಿಟ್ಟೆ" (ಗಳಿಬು. ಟಿಪ್ಪಣಿ): ನಡುಚೈತ್ರದಿ ಮಸಗೆ ಗ್ರೀಷ್ಮ, ಬೇಯದೆ ಮನಸು? ಮಂಗಟದೆ ಮೃಗ ಜಲದೊಳೂಪ್ಪಕಡುದ ಕನಸು? ಪಾತೆಯೊಲರ ಪಾತಿಯಲ್ಲಿ. ತರಗೆಲೆಗಳ ಬಟ್ಟೆಯೊಲ್ಲದೇವುದೊ ನೆನಸು? (ಗಳಿಬು. ೦೦೬.೧೯). **ಹಾತೆ**: ೧. ವಿಡಿತ ಹಾತೆ ಹಾವುಗಳೆಲ್ಲ ಈ ಬೆಂಕಿಗೆ ಬದುಕಲುಂಟಾ? (ವಾಳಗ. ೫೦); ಗಿಡಗಳ ಸಂತಾನಕ್ರಮದಲ್ಲಿ, ಪರಾಗವಿನಿಮಯವು ಮುಖ್ಯವಾದ ಒಂದು ರೀತಿ. ಈ ಕೆಲಸವು ಹಾತೆ, ಹುಳು, ಹುಪ್ಪಟೆ ಮೊದಲಾದ ಕ್ರಿಮಿಕೀಟಗಳಿಂದ ಸಾಗುವದು (ಶಾಂತ್ರ. II. ೬೮೦). ೨. ಜಿರಲೆ ಮುಂತಾದ ಕೀಟ: ಎಲುವ ಕಡಿವ ಶ್ವಾನ (ಸ್ವಾನ)ನಂತೆ ಹಾತೆಯ (ಹತ್ತಿಯ ಹುಳುವ) ತಿಂಬ ಹಲ್ಲಿಯಂತೆ . . . ಭೋಗಕ್ಕೆ ಮುಚ್ಚಿ ಹುಚ್ಚಾದಿರಲ್ಲಾ (ಸಿದ್ಧಃಸ. ೦೬೫-೪೦೦); ಮೂಷಿನ ಮಾಲೆಯೂ ತೂತಾದ ಮಡಿಕೆಯೂ ಹಾತೆಯು ಹುಲ್ಲುಸರವೆಯು ಇವು ನಾಲ್ಕು ಐತಕ್ಕು ಬೇಡ (ಸರ್ವಜ್ಞ. ೧೪೪೬). ೩. ಪತಂಗ: ದೀಪದ ಹುಳು: 'ಹಾತೆಹುಳು' ಪರಾ.

[ದೇ.॥ ತುಳು. ಪಾತೆ, ಪಾಂತ; ಕೊಡ. ಪಾತ]

**ಪಾತೇಲಿ** (ನಾ). ಅಗಲವಾದ ಬಾಯುಳ್ಳ ಪಾತ್ರೆ: ಬೋಗುಣಿ; ಡಬರಿ: ದೊಡ್ಡ ದೊಡ್ಡ ಹಂಡೆಗಳು, ಕೊಳಗಗಳು. ಪಾತೇಲಿಗಳು ಅನುವದಲ್ಲದೆ ನಿತ್ಯದ ಕೆಲಸಕ್ಕೆ ಬೇಕಾಗುವ . . . ಪಾತ್ರೆಗಳು ಹೇರಳವಾಗಿ ಹುಟ್ಟುತ್ತವೆ (ಕಠಾಗ. ೪೭೦): ಒಲೆಯ ಮೇಲೆ ಒಂದು ದೊಡ್ಡ ಪಾತೇಲಿಯಲ್ಲಿ ಗಂಳಂಬ ಬೇಯುತ್ತಿತ್ತು (ಸ್ವಃಕಿತ. ೨೫೨).

[←ಮರಾ. ಪಾತೇಲಿ, ಪಾತೇಲೆ]

**ಪಾತ್ರ** (ನಾ). ೧. ದುಂಡಗಿರುವ ಸಣ್ಣ ಪಾತ್ರೆ: ಕುಡಿಯುವ ಬಟ್ಟಲು. ೨. ತಟ್ಟೆ, ಹರಿವಾಣ, ಮಡಕೆ, ಮುಂತಾದ ಪಾತ್ರೆ: ಭಾಂಡ: "ಪಾತ್ರಂ ಭಾಂಡಂ ಸ್ಥಾಲಿಯುಮತ್ರಂ ಭಾಜನಮೆನಿಕ್ಕುಂ" (ಅಭ್ಯಕೋಶ. ೪೯-೨೬); "ಅಮತ್ರಂ, ಭಾಜನಂ, ಪಾತ್ರಂ, ಸ್ಥಾಲಂ

—ಈ ೪ ತರಗೆ" (ಹರಿಹರ. ೩೬ ೦೭೩); ಪಾತ್ರವಿದ್ದಷ್ಟೆ ನೀರು ಸಿಕ್ಕೀತು (ಗಾದೆ). ೩. ಪೂಜೆ, ಯಜ್ಞಯಾಗಾದಿಗಳಲ್ಲಿ ಬಳಸುವ ಪಾತ್ರೆ : "ಪೂಜೋಪಹಾರಮವೆ ಬಲಿ ಭಾಜನಮುಪಯೋಗ್ಯಮಪ್ಪುದುಂ ತಾಂ ಪಾತ್ರಂ" (ಪಮ್ಪಭಾ. ೦೨೨-೨೪). ೪. ಎರಡು ದಡಗಳ ನಡುವಿನ ನೀರು ಹರಿಯುವ ಪ್ರದೇಶ ; ನದಿ, ಹೊಳೆ ಮುಂತಾದುವುಗಳ ಒಡಲು : "ಎರಡು ತಡಿಯ ನಡು ಪಾತ್ರವೇಬುದು" (ಹರಿಹರ. ೦೦೦ - ೯೩) ; ಕಾವೇರಿಯು ಶಿವನ ಜಡೆಯಿಂದಿಳಿದ ಗಂಗೆಯ ಹಾಗೆ ಮೈತುಂಬಿ ಹರಿಯುತ್ತಿದ್ದಾಳೆ. ಪಾತ್ರ ತುಂಬಿ ದಡಗಳನ್ನು ಅಲೆಗಳು ಅಪ್ಪಳಿಸುತ್ತಿವೆ (೩೩೬೮. ೦೨೬). ೫. ನೇಗಿಲಿನಿಂದ ಉತ್ತ ಸಾಲು, —ಗೆರೆ : "ಪಾತ್ರಂ ಸೀತಾಗ್ರಮುಂ" (ಪಮ್ಪಭಾ. ೦೩೯-೦೦೮). ೬. ದೋಣಿ ; ನಾವೆ : ಭವಾಂಭೋಧಿಯ ತಡಿಯನೆಯ್ದಿಸಮ್ಮಂ ನಯನಿಕ್ಷೇಪಪ್ರಮಾಣಪಾತ್ರದಿನರುಹಾ (ಶಂಕರಾ. ೬-೯೦). ೭. ಯೋಗ್ಯತೆ; ಅರ್ಹತೆ : ಸ್ನೇಹವನೆಣಿಸನು ಗಣಿಸನು ಪಾತ್ರವನಂತೆ ದಶಾಂತರಗಳನು . . . ಉತ್ತಮನು (೩೦೩೩೬. ೬೦-೩೮). ೮. ಯೋಗ್ಯತೆಯನ್ನು ಹೊಂದಿರುವಂತಹದು ; ಯೋಗ್ಯವಾದುದು: ಈ ನೆಲ ಗೌರವ ಹಾಗೂ ಕೀರ್ತಿಗಳಿಗೆ ಪಾತ್ರವಾಗಿತ್ತೆಂದು ಅರ್ಥ (ಪ್ರ೬೬. ೬೩). ೯. ಯೋಗ್ಯನಾದವನು ; ಅರ್ಹನಾದವನು : ಪಾತ್ರ ಅಪಾತ್ರವೆಂದು ಕಂಡರೆ ಶಿವನೆಂತು ಮೆಚ್ಚುವನು (೩೩೪. ೬೦೪); ಅಪರಿರವ್ವ ಸ್ವರ್ಗಗಿರ್ಗದ ಪದವಿಗಳ ಪಹಣೆ . . . ಎಂಬ ಕೀರ್ತಿಗೆ ತಾವೆ ಪಾತ್ರರಾಗಿರುತಿರಲು (೩೦೨೮. ೭೬. ೯-೦೩). ೧೦. ದಾನ ಮುಂತಾದುವುಗಳನ್ನು ಪಡೆಯಲು ಯೋಗ್ಯನಾಗಿರುವವನು–ಅರ್ಹನಾಗಿರುವವನು : ಪಾತ್ರಮುತ್ತಮಮಧ್ಯಮಜಘನ್ಯಭೇದದಿಂ ತ್ರಿವಿಧಮಕ್ಕು (೩೦೩೩. ೦೦-೯ ೨) ; ಉತ್ತಮಪಾತ್ರಂ ಸಕಲ ನಿವೃತ್ತಂ ವಿರತಾವಿರತನೆ ಮಧ್ಯಮಪಾತ್ರಂ ಮತ್ತಮಸಂಯುತ ಸಮ್ಯಗ್ದೃಷ್ಟಿಯುಮನೇ ತಾಂ ಜಘನ್ಯಪಾತ್ರಮನಿಕ್ಕುಂ (೩೦೩೩೩. ೩-೩೨). ದಾನಕ್ಕರ್ಹರಿವರಲ್ಲೆಂದು ನೋಡದೆ ಮೂಢಮಾರ್ಗದಲಿ ಕರೆದಪಾತ್ರಂಗಿತ್ತು ಪಾತ್ರನ ಪರಿಹರಿಸಲೀ ಎರಡಱಿಂ ಸಂಹರಣವೈದುವುದಾರ್ಜಿಸಿದ ಧನವು (೩೩ಮ್ಯಾ೬. ೩-೨೩) ; ಧನಿಕಂ ಕಳ್ಳೊಡವೆಗೆ ಕಳ್ಳನ ಪಾತ್ರನ ಗೈದ ತೆರದೆ (೩೩೩೦೩. ೬೬-೦೨೦). ೧೧. ಸಾಹಿತ್ಯಕೃತಿಗಳಲ್ಲಿ ಸೃಷ್ಟಿಯಾಗುವ ವ್ಯಕ್ತಿ, ವಸ್ತು, ಸನ್ನಿವೇಶ ಮುಂತಾದುವು : ಅವನು ನಿರ್ವಹಿಸಿದ ಪ್ರತಿಯೊಂದು ಪಾತ್ರಕ್ಕೂ ತನ್ನದೇ ಆದ ವೈಶಿಷ್ಟ್ಯವಿದೆ (೭೩೪೯೩. ೬೪); ವ್ಯಕ್ತಿಯೊಬ್ಬನ ನೈತಿಕದೃಷ್ಟಿಯನ್ನು ಪ್ರಕಟಿಸುವುದೇ ಪಾತ್ರ (೩೦೩೩. ೩೨ ೬೬೬೬) ; ಶಾಕುಂತಲ . . . ರಾಧ ಮುಂತಾಗಿ ನಾಯಕಿಯರ ಪಾತ್ರವಲ್ಲ ಇವಳ ಪಾಲಾಗಿದ್ದುವು (೩೦೯೩೩. ೦೬). ೧೨. ಮಂತ್ರಿ; ಸಚಿವ : ಶ್ರೀನಾಥರಾಜನ ಲಕ್ಷ್ಮೀಪತಿರಾಯ ಪಶ್ಚಿಮಬಾಲಚಂದ್ರಮಹಾಪಾತ್ರಾಯಿವರು ಮೊದಲಾದ ಪಾತ್ರಸಾಮಂತರನೂ ಮಂನಿಯರನೂ ಜೀವಗ್ರಾಹವಾಗಿ ಹಿಡಿದುಕೊಂಡು (೩೪೨೨. IX-ii, ೩೦೦ ೦೨; 1515) ; ವಿದ್ಯಾಧರನೆಂದೆಂಬ ಪಾತ್ರ[ತ್ರ] ಕೈಮುಗಿದು ನಿಂದು ನುಡಿದನು ರಾವುತಪಾಯಿಕೆಯ ಪಾಡೊಂದಿದ ಬಲುಪಂಥಗಳನು (೩೩೩೩೩೦. ೦೬-೬) ; ಉಳಿದ ಪಾತ್ರ[ತ್ರ]ಗಳು ಅಂದು ಬಿನ್ನವಿಸಿದರಾ ಗಜಪತಿಗೀತೆಂದು ರಾವುತಿಕೆಯಿರಾವನು (೩೩೩೩೦. ೦೬-೦೦). ೧೩. ಅಭಿನಯಿಸುವವನು ; ನಟ : ಅಂತು ಭಾರದ್ವಾಜ ನಾಗಾವಿಕ ಸಂಗ್ರಾಮರಂಗಕ್ಕೆ ಪಾತ್ರಂಗಳಂ ಸಮೆಯಿಸುವ ಸೂತ್ರಧಾರನಂತೆ ಶಸ್ತ್ರವಿದ್ಯಾಭ್ಯಾಸಂಗೆಯ್ವುತ್ತಿರೆ (೩೦೩೩೩. ೨-೩೯ ೨); ಮಂಗಳರವಂಗಳಂ ಮಾಣಬೇಡುಲಿವ ವಾದ್ಯಂಗಳಂ ನಿಲಿಸಬೇಡೋಲ್ಪಿಸತಿರ್ಪ ಪಾತ್ರಂಗಳಂ ತಡೆಯಬೇಡ (೩೩೩೩. ೬-೩೩) ; ಪಾತ್ರವಾಡಮಾದಕಂ ಬಾಜಿಸಿದಂ (೩೩೩೭. ೨೪೯ ತ್ರಯೋ) ; ಪಾತ್ರನ ಮಾತನು ಗೀತದ ನುಡಿಯನು ಕಟ್ಟಿ ಕೊಟ್ಟರು ನಮ್ಮ ತಂದೆ (೩೦೩೩೩. ೧೦-೯೩). ೧೪. [ನಾಟ್ಯ] ನೃತ್ಯ ; ಕುಣಿತ : ಪಾತ್ರದ ಭೋಗದವರೊಳು ಮಧುಕನಾಥಗೆ ಹೋಗಿ ಮಹಾಯಾಂಗನೆಯು ಲಾಸ್ಯದ ಕೇಳಿಯೂಳಿಗದ ಜೋಗವಿಸುತಿರುತಿರ್ದ . . . ಅಲ್ಲಮಪ್ರಭು ಲಿಂಗಲೀಲೆಯಲಿ (ಕ್ಕಶಾ೬. ೩-೬೨) : ಸ್ವಾನುಭವದ ಸುಖದಿಂದಧಿಕವೆ ಪಾತ್ರ ಗಾನ ಮುಂತಾದ ಸುಖಗಳು (೩೩೩. ೦೩-೦೬೦) ; ಬನವಾಸಿಯೆಂಬ ಪಟ್ಟಣದ ನಾ... ರಾಜನಲ್ಲಿ ಮದ್ದಳೆಕಾಜನಲ್ಲಮನೆಂಬವನು ಕಾಮಲತೆಯೆಂಬ ಪಾತ್ರದ ಸ್ತ್ರೀಗೆ ಮೆಚ್ಚಿರಲು (ಶ್ಲ೭೩೩. I, ೩೬). ೧೫. ಕುಣಿಯುವವಳು ; ನರ್ತಕಿ : ನೇತ್ರೋನ್ಮೀಲನವಿಲಾಲನಪಾತ್ರದೆ ನರಸುರವಿಭೇದಮಾವುದಲ್ಲದೊಡಾ ಪಾತ್ರಂಗಳಱುಗಲಾಗೆನೆ ಸುತ್ರಾಮನ ಸೂತ್ರಧಾರನಾಗಾಡಿಸಿದಂ (೩೩೩೩. ೩-೯೩). ೧೬. ದೇವಸ್ಥಾನಗಳಲ್ಲಿ ನರ್ತಿಸುವ ದೇವದಾಸಿ : ಸೂಳೆವಳಿಗಂ ಪಂಟಿಗಂಗಂ ಪಱೆಕಾಱಗ್ಗಂ ಪಾತ್ರಕ್ಕಂ ದೇಸಿಗ ಭಾತ್ರ ಭೋಗನಕ್ಕಮೆಂದು ಸಮಕಟ್ಟಿ . . . ಕುಡೆ (೩೪೨೨. XI-i, ೬೦-೦೩; 1018); ಪಂಸಿಗಂಗೆ ಮತ್ತರ್ ೧೨ ಪಾಡುವರ್ಬಗ್ಗಂ ಮತ್ತರ್ ೩೮ ಪಾತ್ರವೆದರ್ಕ್ಕಂ ಮತ್ತರ್ ೪[೮] ಭೋಗದ ಸೂಳೆಯರ್ ೪ (೩೪೨೨. XI-I, ೦೦೩-೩; ಸು. 1070) ; ಪಾತ್ರ ನಾಲ್ವರ್ಗ್ಗಂ ಎರೆಯ ಮತ್ತ ೩೨ ಮಗೆ ಮತ್ತ ೩೦ . . . ಸೂಳೆವಳಗೆರೆ ಮತ್ತರು ೪ (೩೪೨೨. XX, ೩೦೦-೯; ಸು. 12ನೆಯ ೩೩). ೧೭. (ಕಾರ್ಯದಲ್ಲಿ) ಭಾಗವಹಿಸುವಿಕೆ,–ಭಾಗಿಯಾಗಿರುವಿಕೆ ; ಸಕ್ರಿಯವಾಗಿರುವಿಕೆ : ಈಚೆಗೆ ನಡೆದ ಮಂತ್ರಾಲೋಚನೆಗಳಲ್ಲೆಲ್ಲಾ ಬ್ಲಾಂಡಿಂಗ್ಸನ ಹೆಂಡತಿಯದೇ ಮುಖ್ಯಪಾತ್ರ (೩೦೩೩. ೩೦) ; ಪುರಾಣೇತಿಹಾಸದಲ್ಲಿ, ನದಿಗಳ ಪಾತ್ರ ಬಹಳ ಪ್ರಧಾನವಾದುದು (೩೩೩. ೦೬).

**ಪಾತ್ರಜಗದಳೆ** = ಒಂದು ಬಿರುದು : ಪಡೆವಳೆ ರಾಮರೊಳವು ಕುಡೆ ಬಾಚಲದೇವಿ ಪಾತ್ರಜಗದಳೆವೆಸರಂ (ಎಕ. VII, ೩೩೩೩. ೯೬-೨೩; 1113). **ಪಾತ್ರಪಾವುಳ** = ದೇವಾಲಯದ ನರ್ತಕಿ ಮಂತಪ್ಪ ಪರಿಚಾರಕವರ್ಗ : ಶ್ರೀಸ್ವಯಂಭುಸೋಮೇಶ್ವರದೇವರ್ಗ್ಗೆ ಸೂಳೆಗೇರಿಯಂ ಮಾಡಿಸಿ ಅಲ್ಲಿಯ ಪಾತ್ರಪಾವುಳಕ್ಕಂ ಬಂದ ಸೂಳೆಯರು ಘ[ಗ]ಳಿಗೆ . . . ಸರ್ವ್ವಬಾಧಾಪರಿಹಾರಂ ಸರ್ವ್ವನಮಸ್ಯವಾಗಿ ಪಡೆದು ಬಿಟ್ಟ ಭೂಮಿಯ ಪ್ರಮಾಣು (೩೪೨೨. XX, ೬೪-೩೦; 1112); ಕೋಟೆಯ ಕೆಯ್ಯ ಸ್ಥಳದೊಳಗೆ ಪಾತ್ರಪಾವುಳಕ್ಕೆ ಬಿಟ್ಟ ಮತ್ತಗು ಇಂನೂಱ ಇಪ್ಪತ್ತು (೩೩. II, ೦೩-೯೩; 1122) ; ಶ್ರೀವಿಷ್ಣುದೇವರ ರಂಗಭೋಗದ ಪಾತ್ರಪಾವುಳಕ್ಕಂ . . . ವಿಷ್ಣುಭಟ್ಟೋಪಾಧ್ಯಾಯರ್ಗ್ಗೆ ಧಾರಾಪೂರ್ವ್ವಕಂ ಮಾಡಿ ಕೊಟ್ಟ ಮತ್ತರು ೪೦ (೩೪೨೨. VIII, ೩೬೦-೬; 1125).

[ಸಂ.]

**ಪಾತ್ರಂಬಡೆ** (ಕ್ರಿ). ಯೋಗ್ಯತೆಯನ್ನು ಪಡೆ ; ಅರ್ಹತೆಯನ್ನು ಹೊಂದು : ಪುತ್ರಂಬಡೆದನೆ ಪರಮಪವಿತ್ರೀಕೃತಭವಸುಖಾಮೃತಕ್ಕಾನೀಗಳ್ ಪಾತ್ರಂಬಡೆದೆಂ . . . ಎರಡುಂ ಭವಕ್ಕಮೊಳ್ಪಂ ಪಡೆದೆಂ (೩೩೩೩೩. ೦೦-೨೯). [ಪಾತ್ರ + ಪಡೆ]

**ಪಾತ್ರಂಸೂಳೆ** (ನಾ). ನರ್ತಿಸುವ ವೃತ್ತಿಯನ್ನು ಅವಲಂಬಿಸಿರುವ ವೇಶ್ಯೆ,–ಗಣಿಕಾಸ್ತ್ರೀ ; ದೇವದಾಸಿ : ಚಾಮರ ಹಾಕುವ ವೃತ್ತಿಯನ್ನು, ನರ್ತಿಸುವ ವೃತ್ತಿಯನ್ನು ('ಪಾತ್ರಂಸೂಳೆ') ನೋಡಿದರೆ . . . ಅವರ ವೃತ್ತಿಗಳನ್ನು, ಸ್ಥಾನಗಳನ್ನು ಹೆಸರಿಸಿರುವಂತೆ ಕಾಣುತ್ತವೆ . . . ಸೂಳೆಗೂ 'ಪಾತ್ರಂಸೂಳೆ'ಗೂ ವ್ಯತ್ಯಾಸವನ್ನು ಊಹಿಸಬಹುದು. ಎರಡನೆಯವಳು ನೃತ್ಯಾದಿ ಅಭಿನಯಗಳನ್ನು ಮಾಡುವವಳು (೩೩೩೦. ೧೮೪). [ಪಾತ್ರ + ಸೂಳೆ]

**ಪಾತ್ರಚಾರಿ** (ನಾ). ಪಾತ್ರವನ್ನು ಅಭಿನಯಿಸುವವನು: ನಟ: ಸೂತ್ರಧಾರಿಣಿ ನೀನು: ಪಾತ್ರಚಾರಿಯು ನಾನು: ಯಾವ ಪಾತ್ರ ವನಿತ್ತರೇನು ನೀನೆನಗೆ (ಅಗ್ನಿಹಂ. ೧೯-೧). [ಸಂ. ಪಾತ್ರಚಾರಿನ್]

**ಪಾತ್ರಚಿತ್ರಣ** (ನಾ). =ಪಾತ್ರನಿರ್ಮಾಣ: ಕಾಳಿದಾಸನ ಶಕುಂತಲೆಯ ಪಾತ್ರಚಿತ್ರಣ ತುಂಬ ಸೊಗಸಾಗಿದೆ (ಉದಾ). [ಪಾತ್ರ+ಚಿತ್ರಣ]

**ಪಾತ್ರತೆ** (ನಾ). ಯೋಗ್ಯತೆ; ಅರ್ಹತೆ: ಆಳಸಿಂಗರಾಚಾರ್ಯರ ಶಿಷ್ಯ ಯಾಗುವ ಪಾತ್ರತೆಯನ್ನು ಪಡೆದುದಕ್ಕೆ ಹೊನ್ನಮ್ಮನಿಗೆ ಸಂತೋಷ! (ಕರ್ಣಾಟ. ೧೯೭); ವಿದ್ಯೆಯಿಂದ ಬರಬೇಕಾದ ವಿನಯವನ್ನು ನೀನು ಪಡೆದಿದ್ದೀಯೆ. ಅದೇ ನಿನಗಿಂದು ಈ ಪಾತ್ರತೆಯನ್ನು ಕೊಟ್ಟದ್ದು (ಹೊಸಕ್ಕ. ೩೮). [ಸಂ. ಪಾತ್ರತಾ]

**ಪಾತ್ರತ್ರಿತಯ** (ನಾ). (ದಾನ ತೆಗೆದುಕೊಳ್ಳುವವರಲ್ಲಿ) ಉತ್ತಮ, ಮಧ್ಯಮ ಮತ್ತು ಅಧಮರೆಂಬ ಮೂರು ವಿಧದ ವ್ಯಕ್ತಿಗಳು: ಆ ಭೋಗಭೂಮಿಯೊಳ್ ಪಾತ್ರತ್ರಿತಯದಾನಫಲಂಗಳಿಂದೆ ಕದ್ವಿತ್ರಿ ಪಲ್ಯೋಪಮಾಯುಷ್ಯರುಂ . . . ಆರ್ಯಾಭಿಧಾನರುಮಾಗಿ ದಂಪತಿ ಸ್ವರೂಪದಿಂ ಪುಟ್ಟಿ (ತಂದ್ರಕೃ. ೩-೩೬ ಪ). [ಪಾತ್ರ+ತ್ರಿತಯ]

**ಪಾತ್ರತ್ವ** (ನಾ). ಅರ್ಹತೆಯನ್ನು ಹೊಂದಿರುವಿಕೆ: ಅತಿಬಾಲ ವಿದ್ಯಾಕುಲಾವಧಿವರ್ಣೋತ್ತಮತ್ವ ಪಾತ್ರತ್ವ ಸೃಷ್ಟ್ಯಧಿಕಾರ ವ್ಯವಹಾರೇ ಶಿತ್ವಾವಧ್ಯತ್ವಾದಂಡ್ಯತ್ವ ಮಾನಾರ್ಹತ್ವ ಪ್ರಜಾಸಂಬಂಧಾಂತರಮೆಂಬ ಪತ್ತುಮಧಿಕಾರಂಗಳುಮನಜಂಪ (ಆದಿಪು. ೧೫-೦೬ ಪ): ಅತಿಬಾಲ ವಿದ್ಯಾಕುಳಾವಧಿ ವರ್ಣೋತ್ತಮತ್ವಂ ಪಾತ್ರತ್ವ . . . ಪ್ರಜಾ ಸಂಬಂಧಾಂತರಮೆಂಬಿಪ್ಪತ್ತುಮಧಿಕಾರಂಗಳುಮನಜಾಪೆ (ಚಾವುಂಪು. ೨೦೩). [ಸಂ.]

**ಪಾತ್ರದ** (ನಾ). ತಕ್ಕಡಿ; ತ್ರಾಸು: "ಪಾತ್ರದಂ ತ್ರಾಸು ಸಮದಂಡಿ ತೂಗುವ ಕೋಲು" (ಮಂಗರಾ. ೧೦೫-೧೪). [ಸಂ.]

**ಪಾತ್ರದತ್ತಿ** (ನಾ). [ಜೈನ] ಮಹಾತಪೋಧನರಾದ ಮುನಿಗಳಿಗೆ ಶುದ್ಧವಾದ ಆಹಾರಾದಿಗಳನ್ನು ಮತ್ತು ಸಂಯಮೋಪಕರಣಗಳನ್ನು ವಿಧಿಪೂರ್ವಕವಾಗಿ ನೀಡುವುದು: ಪರಮತಪಶ್ಚರಣನಿರತ ಯತಿಸಮಿತಿಗೆಲ್ಲಂ ಪ್ರತಿಗ್ರಹಾದಿಪುರಸ್ಸರಂ ನಿರವದ್ಯಾಹಾರಾದಿ ವಿತರಣ ರೂಪಪಾತ್ರದತ್ತಿಯುಂ . . . ಬೆರಸು (ಆದಿಪು. ೧೫-೦೬ ಪ); ಪಾತ್ರದತ್ತಿಯೆಂಬುದು ಮಹಾತಪೋಧನರ್ಗೆ ಪ್ರತಿಗ್ರಹಾರ್ಚನಾ ವಿಧಿ ಪೂರ್ವಕಂ ನಿರವದ್ಯಾಹಾರಸಂಯಮೋಪಕರಣಂಗಳಂ ಕುಡುವುದು (ಚಾವುಂಪು. ೨೦೦): ಪಾತ್ರದತ್ತಿಯೆಂಬುದು ಮಹಾತಪೋಧನರ್ಗೆ ನಿರವದ್ಯಾಹಾರ ಮುಮಂ ಸಂಯಮೋಪಕರಣಮುಮಂ ಕುಡುವುದು (ಆದಿಪು. ೧೫-೧ ಪ). [ಪಾತ್ರ+ದತ್ತಿ]

**ಪಾತ್ರದಾನ** (ನಾ). =ಪಾತ್ರದತ್ತಿ: ಪಾತ್ರದಾನವಿಧಾನಮ ವಿನೋದ ಮಾಗಿಯುಮಿಂತು ನಿತ್ಯೋತ್ಸವಂಗಳೊಳ್ ಕೆಲವು ಕಾಲಂ ಸಲೆ (ಆದಿಪು. ೯-೩೨ ಪ); ಕ್ರಮದೆ ಪರಸ್ಪರದೇಶಂ ಸಮತ್ಸರತ್ವಂ ಸಚಿತ್ತನಿಕ್ಷೇಪ ಪಿಧಾನಮತಿಕ್ರಮ ಕಾಲಮತಿಕ್ರಮಮುಮಕ್ಕುಂ ಪಾತ್ರದಾನಮಂ ಕುಡುವೆಡೆ ಯೊಳ್ (ಸುಕುಮಾ. ೬-೨೨). [ಪಾತ್ರ+ದಾನ]

**ಪಾತ್ರದಾನಿ** (ನಾ). ಪಾತ್ರದತ್ತಿಯನ್ನು ಕೊಡುವವನು: ಮಾಯಾ ಚಾರಪರಿಣತರುಮಪ್ಪ ಪಾತ್ರದಾನಿಗಳುಂ ತಿರ್ಯಗ್ಗಾತಿತ್ವಮಂ ಪೊರ್ದಿದ ಮಿಥುನಂಗಳಾಗಿ ಪುಟ್ಟಿ ಪರಸ್ಪರವೈರಂಗಳಿಲ್ಲದೆ . . . ರಮಿಯಿಸುವುವು (ಆದಿಪು. ೩-೪೧ ಪ). [ಸಂ. ಪಾತ್ರದಾನಿನ್]

**ಪಾತ್ರಧರ** (ನಾ). ಊಟದ ತಟ್ಟೆ ಮುಂತಾದುವನ್ನು ಇಡುವ ಪೀಠ, — ಮಣೆ: ಅಡ್ಡಣಿಗೆ: "ಪಾತ್ರಮೆನೆ ತಟ್ಟೆ ಪಾತ್ರಧರ ಮಡ್ಡಣಿಗೆ [ಪಾಠಾಂ. ಪಾತ್ರಪದಡ್ಡಣಿಗೆ]" (ಮಂಗರಾ. ೬೩-೨೫). [ಸಂ.]

**ಪಾತ್ರಧಾರಿ** (ನಾ). ಪಾತ್ರ ವಹಿಸುವ ವ್ಯಕ್ತಿ; ನಟ: ಭಾಗವತ ಹಿಮ್ಮೇಳದೊಡನೆ ಕುಳಿತು ಪ್ರಸಂಗವನ್ನು ಹಾಡುತ್ತಿದ್ದರೆ ಪಾತ್ರಧಾರಿಗಳು ಪಾತುಗಳಿಂದ ಅರ್ಥಪ್ರತಿಪಾದನೆ ಮಾಡುತ್ತಾರೆ (ಯಕ್ಷಗ. ೦೬); ನೀನೂ ಅದರಾಗ ಪಾತ್ರಧಾರೀ ಆಗೀದಿ (ಬೀಚಿ. II. ೩). [ಸಂ. ಪಾತ್ರಧಾರಿನ್]

**ಪಾತ್ರನಿರ್ಮಾಣ** (ನಾ). ಸಾಹಿತ್ಯಕೃತಿಗಳಲ್ಲಿ ಸೃಷ್ಟಿಸುವ ವ್ಯಕ್ತಿ ಚಿತ್ರಣ: ದುಷ್ಯಂತನ ಪಾತ್ರನಿರ್ಮಾಣಕ್ಕಿಂತಲೂ ಶಕುಂತಲೆಯ ಪಾತ್ರ ನಿರ್ಮಿತಿಯಲ್ಲಿ ಕವಿ ಹೆಚ್ಚು ಗಮನ ಕೊಟ್ಟಿದ್ದಾನೆಂಬುದು ಹೇಳಿದರೆ ಅದು ಕಾಳಿದಾಸನ ಪ್ರತಿಭೆಗೆ ಧಕ್ಕೆ (ಕರ್ಣಾಸಾ. ೬೪). [ಪಾತ್ರ+ನಿರ್ಮಾಣ]

**ಪಾತ್ರನಿರ್ಮಿತಿ** (ನಾ). =ಪಾತ್ರನಿರ್ಮಾಣ: ಸಂಸ್ಕೃತ ನಾಟಕಕಾರರು ಪಾತ್ರನಿರ್ಮಿತಿಯಲ್ಲಿ ನಿಷ್ಣಾತರಲ್ಲ ಎಂಬ ಒಂದು ಅಭಿಪ್ರಾಯವುಂಟು (ಕರ್ಣಾಸಾ. ೬೩). [ಪಾತ್ರ+ನಿರ್ಮಿತಿ]

**ಪಾತ್ರಪಾವಳ** 'ಪಾತ್ರ' ಪರಾ.

**ಪಾತ್ರವಹಿಸು** (ಕ್ರಿ). ೧. ಪಾಲುಗೊಳ್ಳು; ಭಾಗವಹಿಸು: ಹಲವಾರು ಉಪಾಧ್ಯಾಯರು ಪಾತ್ರವಹಿಸಿ ಅಂಕಿ ಅಂಶಗಳನ್ನೂ ಅಭಿಪ್ರಾಯಗಳನ್ನೂ ಸೂಚಿಸಿರುತ್ತಾರೆ (ಶಿಕ್ಷಣ. ೩೬೯). ೨. ನಾಟಕ ಮುಂತಾದುವುಗಳಲ್ಲಿ ವೇಷ ಹಾಕು, -ನಟಿಸು: ನೀನೇ ಪಾತ್ರ ವಹಿಸಿ ನೀನೇ ತಗೋಬೇಕು ಬಹುಮಾನ (ರಂಗಪ್ಪಾ. ೯೩). [ಪಾತ್ರ+ವಹಿಸು]

**ಪಾತ್ರವಾಡು** (ಕ್ರಿ). ನರ್ತನ ಮಾಡು; ನರ್ತಿಸು: ಕಾಮಿನಿಯೊ ತಾ ಭರತಸಂಭವ ಭೂಮಿಯೋ ಪೇಳೆನಲು ಮಿಂಚಿದಾ ಶ್ಯಾಮೆ ಮಾಯಾ ದೇವಿ ಮೋಹಿಸಿ ಪಾತ್ರವಾಡಿದಳು (ಕೃಕುಂ. ೪-೩೭); ಪಾತ್ರ ವಾಡಿದ ಸತಿಯರಿಗೆ ತಂಪಹಂತೆ ಧಾತ್ರೀಶಗಿಂಪಾಗುವಂತೆ . . . ಪವಿತ್ರನೃತ್ಯಕಲೆಯ ಪಾಡಿದರು (ಶರಶ. ೦೩-೦೦೯); ನಟನ ತಾಂಡವ ನೃತ್ಯದುತ್ಕಟ ಶಿರುವು ನೇಟು ಗುಂಡಾಳವ ನಟಿಸಿ ಪಾತ್ರವಾಡಿದನು (ಕೃರಸೂ. I. ೨೫೬). [ಪಾತ್ರ+ಆಡು$_1$]

**ಪಾತ್ರವಿಕೀರ್ಣ** (ನಾ). ೧. ನದಿ, ತೊರೆ ಮುಂತಾದುವು ಹರಿಯುವ ಸ್ಥಳ, -ಪಾತಳಿ. ೨. ನಟಿಸುವವರಿಂದ ಆವೃತವಾದುದು. ೧, ೨: ಪಾತ್ರವಿಕೀರ್ಣಮಾತತಸುತಾಳಧರಂ ವಿವಿಧಾವನದ್ಧವಾ ಸೂತ್ರಿತ ವಂಶಕಾರನಿಕರಂ ಕಳಕಂಠಸಮೂಹಸಂಶ್ರಿತಂ ಚಿತ್ರಿತರೂಪಶೋಭಿಗೆಡೆ ಯಾದುದು ಭಾವಿಸಿ ನೋಡೆ ನಾಡೆ ತೂರ್ಯತ್ರಯಸಂಪ್ರದಾಯದಮೆನೆ ಕಾನನಮಾವೃತದಿಕ್ಕುಳಾನನಂ (ತಂದ್ರಕೃ. ೩-೫೩). [ಪಾತ್ರ+ವಿಕೀರ್ಣ]

**ಪಾತ್ರವೇಶ್** (ನಾ). ನರ್ತಕಿ: ಪರಿವರಿ ಪಾತ್ರವೇಶಗಳು ಸಿಂಗರಿಸಿಯೆ ಹರುಷದೊಳಗೆ ನಡೆತಂದು ಕರದಭಿನಯ ಕಟ್ಟಳೆ ಕಳಾಸಿಕೆಯಿಂದ ಸಿರಿ ಯರಸನನೋಲಗಿಪರು (ಕಂಸವ. ೬-೧೦೭). [ಪಾತ್ರ+ವೇಶ್]

**ಪಾತ್ರಸಂಕ್ರಮಣ** (ನಾ). ಪಾತ್ರಗಳ ಜೋಡಣೆ: ದಶರೂಪಲಕ್ಷಣ ಮುಮಂ ಪಾತ್ರಸಂಕ್ರಮಣದೊಳ್ ನೆಜಿಯೆ ತೋಜಿ ಭರತದ ಸಾರ ಸರ್ವಸ್ವ ಮುಮಂ ನಾಟ್ಯಧರ್ಮದೊಳ್ ಸೌಧರ್ಮಕಲ್ಪೇಶ್ವರಂ ಪ್ರತ್ಯಕ್ಷಂ ಮಾಡಿದಾಗಳ್ (ಆದಿಪು. ೫-೨೦ ಪ). [ಪಾತ್ರ+ಸಂಕ್ರಮಣ]

**ಪಾತ್ರಸೃಷ್ಟಿ** (ನಾ). =ಪಾತ್ರನಿರ್ಮಾಣ: ಪಾತ್ರಾಸೃಷ್ಟಿಯು ಕವಿಯ ಪ್ರತಿಭೆಗೆ ಒರೆಗಲ್ಲಾಗಿರುತ್ತದೆ (ಉದಾ). [ಪಾತ್ರ+ಸೃಷ್ಟಿ]

**ಪಾತ್ರಾಭಿಗರ** 'ಪಾತ್ರಾಭಿಗಾರ' ನೋ. ಪಾತ್ರ

**ಪಾತ್ರಾಭಿಗಾರ, ಪಾತ್ರಾಭಿಗರ** (ನಾ). ಊಟಕ್ಕೆ ಮುಂಚೆ (ಶುದ್ಧಿಗಾಗಿ) ಎಲೆಗಳಿಗೆ ಮತ್ತು ಎಲ್ಲ ಅಡಿಗೆಪಾತ್ರೆಗಳಿಗೆ ತುಪ್ಪವನ್ನು ಪ್ರೋಕ್ಷಿಸುವುದು: ಘೃತಸಮುದ್ರದ ಸಡಗರವು ಪಾತ್ರಾಭಿಗಾರವ್ಯಯಕೆ ತೀರುವುದೆ (ತಿಮ್ಮಂ. ೩-೭೦): ಪಾತ್ರಾಭಿಗಾರವಂ ಮಾಡಿಸಿ ಪದಾರ್ಥಂಗಳು ಬಡಿಸಂದು (ಉತ್ತರರಾ. ೦೦೫). **ಪಾತ್ರಾಭಿಗರ:** ಪರಮ

ಸೌಖ್ಯವನಾಂತು ಶಿಗಂಳರು ಪಾತ್ರಾಭಿಗರ ಪರವಪಾನ್ನ . . .ತೊವ್ವೆ ಪಳಿದ್ಯವ ತರತರದಲಿ ಬಡಿಸಿದರು (ಕೋಶಕ. ೩-೩೦).

[ಪಾತ್ರ + ಅಭಿಗಾರ]

**ಪಾತ್ರಿ** (ನಾ). ೧. ಪಾತ್ರ ವಹಿಸುವವನು : ಈ ಭೂತಾರಾಧನೆಯಲ್ಲಿ ಹಂದಿಯ ಮುಖವಾಡವನ್ನು ಅದರ ಪಾತ್ರಿಯು ಧರಿಸಿ ಕುಣಿಯುವುದು ವಾಡಿಕೆಯಾಗಿದೆ (ಜಾಶಗೀ. ೩೧) ; ಅವರಿಗೆ ಇದಿರಾಗಿ ನಾನನ 'ಪಾತ್ರಿ'ಯು (ಪಾತ್ರ ವಹಿಸುವಾತ) ಕೀಳಿಂಗಸರ್ಪದಂತೆ ಕುಣಿಯುತ್ತ ತಿರುಗುತ್ತಿನೆ (ಹುಹುಂ. ೨೫). ೨. (ಕರಾ) (ದೆವ್ವ, ದೇವರು ಮುಂತಾದ) ಅಲೌಕಿಕಶಕ್ತಿಗಳ ಆರಾಧಕ ; ಅಲೌಕಿಕಶಕ್ತಿಗಳು ಮೈ ಮೇಲೆ ಬರುವ ವ್ಯಕ್ತಿ : ಕೋಲ ಮಾಡಿಸಲು ಉಂಟಾದ ಮುಖ್ಯ ಅಡಚಣೆ ಎಂದರೆ, ದೈವದ ಪಾತ್ರಿ ಬಿರುಮಣ್ಣ ಸತ್ತದ್ದು (ಕುತಿಕೊ. ೩೩೯) ; ಕಂಡ್ಲೂರಿನ ಮುಜುರ್ಲಿದೆವ್ವದ ಪಾತ್ರಿಯನ್ನು ಕರೆಯಿಸಿ, ಬೊಬ್ಬರ್ಯನನ್ನು ಬಂಧಿಸಿ . . . ಗೋಳಿಮರದಲ್ಲಿ ಸ್ಥಾನ ಕಲ್ಪಿಸಿಕೊಟ್ಟರು (ರೇಪಹಂ. ೫೭). [ಸಂ. ಪಾತ್ರಿನ್]

**ಪಾತ್ರೀಕರಿಸು** (ಕ್ರಿ). ಅರ್ಹನನ್ನಾಗಿ ಮಾಡು ; ಯೋಗ್ಯನನ್ನಾಗಿ ಮಾಡು : ಧನಿಕಂ ಕಳ್ಳೊಡವಗೆ ಕಳ್ಳನ ಪಾತ್ರನ ಗೈದ ತೆರದೆ ನೀಂ ಪುಟ್ಟಿದ ನಂದನೆಯಂ ಬಹುಮಾತಿಸುತೆ ನಿನ್ನನೆ ಪಾತ್ರೀಕರಿಸಿ ಬಿಟ್ಟ ಮುನಿಯ ವಿಮಾನ್ಯಂ (ಶಾಕುಂತ. ೬೮-೧೨೦).

[ಪಾತ್ರೀಕರಣ + — ಇಸು]

**ಪಾತ್ರೀಭೂತ** (ಗು). ೧. ಅರ್ಹತೆಯನ್ನು ಹೊಂದಿದ ; ಯೋಗ್ಯತೆಯನ್ನು ಪಡೆದ : ಪಾತ್ರೀಭೂತ ವಿನೇಯಸಂತತಿಗೆ ಸಮ್ಯಗ್ದರ್ಶನ ಜ್ಞಾನಚಾರಿತ್ರಂಗಳ್‌ ನಿಜಮಪ್ಪನಂತಸುಖಮಂ ರಾಗಾದಿಗಳ್‌ ಜನ್ಮ ವ್ಯತ್ಯಾತ್ಪ್ರಸಂಗಳನೀವುವು (ಕುಣಾಪಾ. ೧-೪). (ನಾ). ೨. ಅರ್ಹತೆಯನ್ನು ಪಡೆದವನು ; ಯೋಗ್ಯ : ಶ್ರೋತ್ರೀಯರುಮಂ ಕ್ಷತ್ರಿಯರುಮಂ ಪಡೆಗುಟ್ಟ ಪಶುಯಾಗಂಗಯ್ದೆ ಲೋಕದೊಳ್‌ ಪಾತ್ರೀಭೂತರುಂ ಪವಿತ್ರಗೋತ್ರರುಮಾಗಿ ಪರಲೋಕದೊಳ್‌ ಪಾಕಶಾಸನ ಸಮಾನಭೋಗಿಗಳಪ್ಪರ್‌ (ಶಂಶಕಂ. ೬೩-೪). [ಸಂ.]

**ಪಾತ್ರೆ** (ನಾ). ೧. ಕೊಳಗ, ತಪ್ಪಲೆ, ತಟ್ಟೆ, ಹರಿವಾಣ ಮುಂತಾದ ಸಾಧನ; ಭಾಜನ : " ಪಾತ್ರಯನೆ ತಟ್ಟೆ . . . ಪಾತ್ರೆಯನೆ ಪಡಿಗಮನಿಸಿಕ್ಕ" (ಮುಂಗಲಾ. ೬೩-೨೫); ಕೆಡವಂತೆ ಬಯ್ಚಿಟ್ಟು ಕುಡುವುದೀ ಪಾತ್ರೆಯಂ (ತಿರುತಿ. ರೀ. ೧೧೦-೧೭); ವಿರಾಜಿಪ್ಪ ಮನೋಜ್ಞ ಪಾಯಸದ ಪಾತ್ರೆಗಳಿಂ . . . ಪಾಲ್ಮೊಸರಿಪ್ಪ ಕಟಾಹಕೋಟಿಯಿಂದೊಪ್ಪಿದುದಂದ ನೂನವಿಭವಂಬಡೆದಾ ವರಯಜ್ಞಮಂಟಪಂ (ಉತ್ಕೃಟಿ. ೪-೪೦) ; ಈ ಹಾಲನ್ನು ಮೊಂಡ ಚೂರಿಗಳಿಂದ ಪಾತ್ರೆಗಳಲ್ಲಿ ಸವರಿಕೊಳ್ಳುತ್ತಾರೆ (ಮುಂಐಸಾ. ೪-೪೦). ೨. ನದಿ, ಹೊಳೆ ಮುಂತಾದುವುಗಳ ಒಡಲು.— ಎರಡು ದಡಗಳ ನಡುವಿನ ಪ್ರದೇಶ : ಹೊಳೆ ತುಂಬಿದಾಗ ಅದರ ಪಾತ್ರೆಯು ಅಗಲ ಶಿಲಂ ಫೂಟು ಇರುತ್ತದೆ (ಕಜಾಗ. ೦೯); ಮೇಲಣ ಪರ್ವತಗಳ ನೀರು ಆ ಕೊರಕಲಿನ ಬಂಡೆಗಳ ಮೇಲಿಂದ ಉರುಳಾಡುತ್ತ ಹರಿದು ಬರುವಂತೆ ಕಂಡಿತು. ಇನ್ನು ಅದರ ಪಾತ್ರೆಯನ್ನು ತುಳಿದೇ ಬೆಟ್ಟವನ್ನು ಏರಬೇಕು (ಸ್ವಕೃಹ. ೦೬೩).

**ಪಾತ್ರೆಪಡಗ, ಪಾತ್ರೆಪಗಡ, ಪಾತ್ರೆಪಡಗು, ಪಾತ್ರೆಪಡದೆ** = ಕೊಳಗ, ತಪ್ಪಲೆ ಮುಂತಾದ ಪಾತ್ರೆ,-ಸಾಮಾನು : ಮನೆಯ ಪಾತ್ರೆ ಪಡಗಗಳೆಲ್ಲವೂ ದೇವಸ್ಥಾನಕ್ಕೆ ಸೇರಿದುವು (ಪಾಂಶಪ್ಪ. ೪೮೬); ಕಾಳು ಕಡಿ ತೀರಿದ ಮೇಲೆ ಮನೆಯಲ್ಲಿ ಹೆಂಗಸರು ಪಾತ್ರೆ ಹಿರಿಯರಿಗೆ ಕಾಣದಂತೆ ಪಾತ್ರೆ ಪಡಗಗಳನ್ನು ಕೊಟ್ಟು ದೋಸೆ, ಖಾರ ತಿಂದದ್ದೂ ಉಂಟು (ಎಂಕೀ. ೩); ದನಕರುಗಳು ಹೋದುವು, ದೊಡ್ಡ ಪ್ರಮಾಣದ ಪಾತ್ರೆ ಪಗಡಗಳೂ ಹರಾಜಾಗಿ ಹೋದುವು (ಹುಸಕೊ. ೯); ಇದ್ದ ಅಲ್ಪ ಸ್ವಲ್ಪ ಪಾತ್ರೆ ಪಡಗುಗಳು ಸೇಟನಂಗಡಿಯ ಹಾದಿ ಹಿಡಿಯಲೂ ಹೆಚ್ಚು ಕಾಲ ಬೇಕಾಗಿರಲಿಲ್ಲ (ಶಾಗಿಕ. ೨೭); ನಾಳೆ ಉಪವಾಸವಿದ್ದರೂ ಸರಿ, ಅವನ ಪಾತ್ರೆ ಪಡದೆಗಳಲ್ಲಿ ನಾನೇನೂ ಮಾಡಲಿಕ್ಕಿಲ್ಲ (ಶಾ. ೯೩).

**ಪಾತ್ರೆಪರಟ, ಪಾತ್ರೆಪರಡಿ, ಪಾತ್ರೆಪರಾಟು** = ಪಾತ್ರೆಪಡಗ : ಹರೇ ಕೃಷ್ಣನ ಪಾತ್ರೆಪರಟ . . . ವಶಪಡಿಸಿಕೊಂಡನು (ಶಂಕಿಸು. ೧೧೭); ಅವರು ದಿನಾಲು ಅಡುಗೆಗಾಗಿ ಕಾಳು ಕಡಿಗಳನ್ನು ಹಸನು ಮಾಡಿಕೊಡ ಬೇಕಾಗುತ್ತಿತ್ತು. ಪಾತ್ರೆ-ಪರಡಿಗಳನ್ನು ತಿಕ್ಕಿ ಕೊಡಬೇಕಾಗುತ್ತಿತ್ತು (ಮತ್ತಕು. ೦೬೩); ನಾಲ್ಕು ದಿನ ಬಿಟ್ಟು ಹೋದರೆ ಇಲ್ಲಿನ ಪಾತ್ರೆ ಪರಡಿ ಉಳಿದೀತೆ ? (ಕುಗಿಯು. ೧೪೯); ಪಾತ್ರೆ ಪರಾಟುಗಳು ಹೋಗಲಿ . . . ಈ ಕಣಜದ ಕಾಳನ್ನಾದರೂ ಬಿಟ್ಟುಬಿಡಿ ಸ್ವಾಮಿ (ಕೇಮುಕೊ. ೩೩).

**ಪಾತ್ರೆಪಳಿಗೆ** = ಪಾತ್ರೆ ಪಡಗ : ಒಗೆಯುವುದನ್ನು ಪೂರೈಸಿದ ಬಳಿಕ ಕೂಡ ನಲ್ಲಿ ಇದ್ದುದಾದರೆ, ಪಾತ್ರೆ-ಪಳಿಗೆಗಳನ್ನು ತೆಗೆದುಕೊಂಡು ಬಂದು ಬೆಳಗುವಳು (ಕೃತಿಂ. ೨೭).

**ಪಾತ್ರೆಪೇಣಿ** = ಪಾತ್ರೆ ಪಡಗ : ವಿಪರೀತ ಪಾತ್ರೆ ಪೇಣಿ ಕುರ್ಚಿ ಮೇಜುಗಳನ್ನು ಅಡುಕಿಕೊಂಡು ಮನೆಯಲ್ಲಿ ಓಡಾಡುವುದಕ್ಕೆ ಜಾಗ ಸಾಲವಂತೆ ಮಾಡುವುದು ಜಾಣತನವಲ್ಲ (ಗೃಹಂ. ೧೬೭). [ ಸಂ. ಪಾತ್ರ ]

**ಪಾತ್ಸಾಹ** 'ಪಾತಶಹ' ನೋ.

**ಪಾತ್ಸ್ಯಾವು** 'ಪಾತಶಹ' ನೋ.

**ಪಾಥ** (ನಾ). ೧. ನೀರು ; ಉದಕ : ''ಸಲಿಲಂ ಜೀವನಮಂಬು ತೋಯಮುದಕಂ ಪಾಥಂ . . . ಪಾನೀಯಮೆಂದಿಂತನಾಕುಳದಿಂದಂ ತಜ್ಜಸಲ್ಗೆ ನೀರ್ಗೆ ಪೆಸರಂ ಪರ್ಯಾಯದಿಂ ವಾಗ್ಮಿದರ್'' (ಶಬ್ದಕೋ. ೨೨-೧); ಬಂದೇಜಿದಂ ಧೀರಂ ಶೌರಿ ವರರಥವಂ . . . ಶಸ್ತ್ರ ತೂಣೀರವ್ರಾತಸನಾಥಮಂ ಧ್ವಜಪಕ್ಷಪಾಪ್ರವ್ಯಾಪ್ತದೀ ಪಾಥಮಂ (ಜಗಾ. ೧೫-೭೦). ೨. ಅಗ್ನಿ. ೩. ಸೂರ್ಯ. [ ಸಂ. ]

**ಪಾಥೆ** (ನಾ). ಒಂದು ಬಗೆಯ ಔಷಧದ್ರವ್ಯ ; ಅತಿಬಜೆ : ಲವಣ ಪಂಚಕಮಿಂಗು ಪಿಪ್ಪಲಿ ಶುಂಠಿ ತುಂಬುರುಧಾನ್ಯಕಂ ಶಿವೆ ದುರಾಲಭೆ ಪಾಥೆ ಚಿತ್ರಕಮೋಮಮೆಂಬಿವನೆಲ್ಲಮಂ ಸಮನೆ ಕೊಂಡು ಸುರಾನ್ವಿತಂ ಕುಡೆ (ಲೋಕೋಕ. ೯-೩೩೯). [ ? ]

**ಪಾಥೇಯ** (ನಾ). ಪ್ರಯಾಣಕಾಲದಲ್ಲಿ ದಾರಿಯ ಊಟಕ್ಕಾಗಿ ಸಿದ್ಧ ಮಾಡಿ ತೆಗೆದುಕೊಂಡು ಹೋಗುವ ಆಹಾರವಸ್ತು ; ಬುತ್ತಿ : "ಪಾಥೇಯಂ, ಸಂಬಳಂ—ಈ ೨ ಸಂಬಳ" (ಕರಾಹು. ೩೯-೨೦೩); ಮೋಕ್ಷಪುರಪ್ರಸ್ಥಿತ ಭವ್ಯಪಥಿಕಪಾಥೇಯಮಪ್ಪ ಸಮ್ಯಕ್ತ್ವಮುಮಂ (ಅಶಕ್ತಿ. ೧೨-೦ ವ) ; ಲಾಘವಂ ಜಾನಕೀಸ್ಮೇರಮುಖಾಬ್ಜಾಲೋಕನಂ ಲೋಚನಸುಖಮುಖಪಾಥೇಯವಾಗೆಯ್ದೆವಂದಂ (ಶಂಗಾಮಾ. ೬-೨೯); ಪಾಥೇಯಮಂ ಭೋಜನಂಗೈದು ವಿಶ್ರಮಿಸಾಗಿ ತಳಿತ ಮಾಮರನ ನೆಳಲಂ ಸಾರ್ದನು (ಕೃಖಾಕ. ೨೯-೪೦). [ ಸಂ. ]

**ಪಾಥೇಯಧನ** (ನಾ). ಪ್ರವಾಸಕ್ಕೆ ಬೇಕಾಗುವ ಹಣ ; ದಾರಿವೆಚ್ಚ : ಬೋಧಿದರ್ಶನಚಾರಿತ್ರಮೆ ಮೋಕ್ಷಮಾರ್ಗಪಾಥೇಯಧನಂ (ಅಪಂಕ್ಷ. ೩-೬೩). [ ಪಾಥೇಯ + ಧನ ]

**ಪಾಥೋಜ** (ನಾ). ನೀರಿನಲ್ಲಿ ಹುಟ್ಟಿದುದು ; ತಾವರೆ ; ಕಮಲ : "ಪಾಥೋಜಂ—ತಾವರೆ" (೬ಶಂ. ೯೭); ತತ್ಪ್ರಪನ್ನಿಯ ಪಾದಪಾಥೋಜ ಯುಗಲಮಂ ಚಿತ್ತದೊಳ್ನೆನೆಯುತ್ತ (ರುಶಪು. ೨೩-೩೭). [ ಸಂ. ]

**ಪಾಥೋದ** (ನಾ). ೧. ನೀರನ್ನು ಕೊಡುವಂತಹುದು ; ಮೋಡ. ೨. ಕೊನ್ನಾರಿಗಡ್ಡೆ : "ಪಾಥೋದಃ—ಭದ್ರಮುಸ್ತೆ" (೬ಶಂ. ೯೬).

[ ಸಂ. ]

**ಪಾಥೋದಂತಿ** (ನಾ). ನೀರಾನೆ : ಎನಸುಂ ಆಣ್ಗೆಯ್ದ ಚೆಲ್ವಂ ಪಡೆವುದು ವಿಚಳತ್ಕ್ರೂರ್ಮ್ಯ ಪಾಠೀನಸಂಘಟ್ಟನಪಾಥೋದಂತಿದಂತಾಹತಮಕರಕರ ಕ್ಷೋಭಸಂಜಾತಕಲ್ಲೋಲ . . . ಅಂಭೋನಿಧಾನಂ (ಎ೩. XV. ೩೯-೩ ; 1169). [ಸಂ. ಪಾಥೋದಂತಿನ್]

**ಪಾಥೋದರ** (ನಾ). ಮೋಡ ; ಮೇಘ. [ಸಂ.]

**ಪಾಥೋಧಿ** (ನಾ). ಸಮುದ್ರ : ಹರ್ಷೋನ್ಮಾದಕದ್ದುದು ಕಪಿಧ್ವಜಿನಿ, ಘೇ ಘೇ ಜಯಧ್ವನಿಗ್ರೈವ ರಾಕ್ಷಸಧ್ವಜಿನಿಯಂ ಕೂಡಿ, ಪಯೋಧಿಯುಮ್ಮನೂರ್ ಪಾಥೋಧಿಯೊಳ್! (ಶ್ರೀರಾಮಾ. ೬೯೬ ೩೭೯). [ಸಂ.]

**ಪಾಥೋನಿಧಿ** (ನಾ). = ಪಾಥೋಧಿ : ಅನತರಾಗಿ ಜೀವಿಸದೆ ದುಷ್ಟನೃಪರ್ ಕೆಲರೋಡಿ ಪೋಗಿ ಪಾಥೋನಿಧಿಯಲ್ಲಿ ಪೊಕ್ಕೊಡವರಂ ತವಿಸಲ್ ಬಟಸಂದು (ಕೃಪ್ಪ. ೩-೩೩). [ಸಂ.]

**ಪಾಥೋರುಹ** (ನಾ). = ಪಾಥೋಜ : "ಪಾಥೋರುಹಂ-ತಾವರೆ" (ಶಬ್ದ. ೯೩). 'ಪಾಥೋರುಹಾಕ್ಷ' ಪರಾ. [ಸಂ.]

**ಪಾಥೋರುಹಾಕ್ಷ** (ನಾ). ಕಮಲದಂತಹ ಕಣ್ಣುಗಳನ್ನುಳ್ಳವನು ; ಕೃಷ್ಣ : ಪಾಥೋರುಹಾಕ್ಷನಂ ದಾರುಕಂ ನಿಟ್ಟಿಸಿ ವರೂಥಮಂ ತಿರುಗಿಸಿದನು (ಕೃಷ್ಣಕಾ. ೬-೩೬). [ಸಂ. (ಪಾಥೋರುಹ+ಅಕ್ಷಿ+ –)]

**ಪಾದ** (ನಾ). ೧. ಕಾಲು ; ಚರಣ : "ಅಂಘ್ರಿಃ, ಚರಣಃ, ಪಾದಃ —ಈ ೩ ಕಾಲ್" (ಹಲಾಯು. ೬೯-೩೩೬); ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತೆ ಇರಿಸಯ್ಯಾ (ಬಸವ. ೨೬೯); ಸಾಕ್ಷರಸೇವ್ಯಂ ನಿಜವಿದ್ಯೆ ವಿಶ್ವವಿನುತಂ ಪಾದಂ ಸದಾಳಿಪ್ರಿಯಂ ವರದಾನೋನ್ನತಭದ್ರ ಲಕ್ಷಣಪದಂ . . . ದೇವಗಣಪಂ ರಕ್ಷಿಕ್ಕೆ ಭೂಚಕ್ರಮಂ (ಜಗಂ. ೦-೩); ಹರಿ ಪದ್ಮಾನಂದಿ ಪೀತಾಂಬರೋಲ್ಲಸಿತಂ ಚಕ್ರಸಹಾಯ ನಾಕ್ರಮಿಸಿದಂ ಭೂಚಕ್ರಮಂ ಪಾದದಿಂ (ಕೃಷ್ಣ. ೯-೨೩). ೨. ಕದಿರು ; ಕಿರಣ ; ರಶ್ಮಿ : "ಉಸ್ರಃ, ಧಾಮ . . . ಪಾದಃ, ವಿರೋಕಃ, ಗೌಃ—ಈ ೩೨ ರಶ್ಮಿಗಳ ಪೆಸರ್" (ಹಲಾಯು. ೯-೯೯). ೧, ೨ : ಜನಚಿತ್ತಾಹ್ಲಾದಪಾದಂ . . . ಉದ್ಯನ್ಮಂಡಲಾಗ್ರಂ ಸಲೆ ಘನಪವಮಿ ಶೋಭೆಯಂ ಪೆರ್ಚಿಸುತ್ತಿರ್ಪಿನಮೊಳ್ಪಂ ಪೆತ್ತುತ್ತ್ರದಾಂ ಬೆಳಗುಗೆ ಜಗಮಂ ಗೋಪನಾರ್ತಂಡದೇವಂ (ಜಗಂ. ೦-೪) ; ಭೂಭೃದ್ವರಂ ತಠೆಯುಲಿ ಮೆರೆಮುತ್ತ ಮೇಣಮಾತರ ಶಿರಭಾಗದಲಿ ಆ ಎರಡೂ ದಿನಪನ ಪಾದಗಳು ಸೌಖ್ಯದ ತರಲೆಮಗನವರತ (ಕೃಷ್ಣಕೋ. ೯೬). ೩. ಪರ್ವತಗಳ ಬುಡ : "ದರಿ ಕಂದರಂ . . . ಗಿರಿಪರ್ಯಂತಂ ಪಾದಂ" (ಚುತ್ರಕೋ. ೨೮-೩). ೪. ಸಣ್ಣಗುಡ್ಡ : "ಪಾದಾಃ, ಪ್ರತ್ಯಂತ ಪರ್ವತಾಃ—ಈ ೨ ಕೆಲದ ಕಿಱುಬೆಟ್ಟುಗಳ್" (ಹಲಾಯು. ೨೮-೧೩) ; "ಕಿಱುಗಿರಿ ಪಾದಮಕ್ಕು" (ಶಬ್ದಗಾ. ೩೦-೨). ೫. (ಮರದ) ಬೇರು ; ಮೂಲ : "ಪಾದಂ, ಮೂಲಂ—ಈ ೨ ಮರದ ಬೇರ್" (ಹಲಾಯು. ೩೦-೨೯) ; "ಪಾದಮೆನೆ ಮೂಲಮೆನೆ ಪಸರಿಸಿದ ಬೇರಕ್ಕುಂ" (ಶಬ್ದಗಾ. ೩೨-೨). ೬. ಗುರುಹಿರಿಯರಾದವರನ್ನು ಗೌರವಾರ್ಥವಾಗಿ ಸಂಬೋಧಿಸುವ ಒಂದು ನುಡಿ : ಪಾದ ಮರಳಿ ಚಿತ್ತವಿಪುದು (೩೯೦. ೪-೨೪); ಹಿಂದೆ ನಾಲ್ಕೈವರ್ಷಗಳ ಕೆಳಗೊಂದು ಸಲ ನಾನಿಲ್ಲಿಗೆ ಬಂದು, ಗೃದಾಟಕ್ಕೆ ಪಾದದ ತಂದೆ ತಂಗಿ ಸುನಂದೆಯು . . . ಹಿಂದೆ ಬಂದಳು ಪಾಪಿಯೂ (೯೨೬. ೪೦-೩೦). ೭. ಗುರು ಹಿರಿಯರ ಹೆಸರುಗಳ ಕೊನೆಯಲ್ಲಿ ಗೌರವಾರ್ಥವಾಗಿ ಸೇರಿಸುವ ಶಬ್ದ : "ಪಾದಃ, ದೇವಃ, ಭಟ್ಟಾರಕಃ —ಈ ಮೂಱುಂ ಪೆಸರ ಕಡೆಯೊಳ್ ಪೂಜಾವ(ಚ)ನಂ" (ಹಲಾಯು. ೨೩-೦೩೪). ೮. ಭಾಗ ; ಅಂಶ. ೯. ನಾಲ್ಕನೆಯ ಒಂದು ಭಾಗ,-ಅಂಶ ; ಕಾಲುಭಾಗ : "ಪಾದಂ ತುರ್ಯಾಂಶಂ" (ಚುತ್ರಕೋ. ೦೨೦-೨೨). ೧೦. ಹನ್ನೆರಡು ಅಂಗುಲಗಳ ಅಳತೆ : ಒಂದು ಅಡಿ. ೧೧. [ಛಂದ] ಪದ್ಯದ ಒಂದು ಸಾಲು : ಪಾದದೊಳೆರಡನೆಯಕ್ಕರಮಾದರದಿಂದಾದುದಾವುವದನ ಱಿದನಿತಂ ಪಾದದೊಳಿಡುವುದದಕ್ಕಂ ಭೇದೋಕ್ತಿಕ್ರಮವಿಚಾರಿತೋರು ಪ್ರಾಸಂ (ಛಂದೋ. ೨-೩೨); ಒಂದಿದ ಚತುಷ್ಪಾದಿಗಳೊಳೊಂದೇ ತೆಱನೆರಡು ಪಾದಮುಂ ಮೇಣ್ ಮುಂದಕೊರ್ಂದರೆ ಬಕರ್ಣ (ಛಂದೋಂಬು. ೩-೨೩೯ ೦೩೬); ಪದ್ಯವು ಪಾದದಿಂದ ಕೂಡಿರುವುದು. ಪದ್ಯದ ಪಾದವು ಗಣ ಮತ್ತು ಪ್ರಾಸಗಳ ನಿಯಮವುಳ್ಳ ಶಬ್ದಸಂಘಟನೆಯಾಗಿರುವುದು (ಕೃಬಿಂ. ೬೯). ೧೨. [ಜ್ಯೋತಿ] ಒಂದು ನಕ್ಷತ್ರದ ಕಾಲ ಮಾನದ ನಾಲ್ಕನೆಯ ಒಂದು ಭಾಗ ; ರಾಶಿಯ ಒಂಬತ್ತನೆಯ ಒಂದು ಭಾಗ : ಒಂದು ನಕ್ಷತ್ರಕೆ ನಾಲ್ಕು ಪಾದ, ಒಂಭತ್ತು ಪಾದಕ್ಕೆ ಒಂದು ರಾಶಿ (ಚಾಸ್ಕರ. ೬೪-೬): "ಪದಪೂರಣೆ ಕಾಲು ತೇಜ ಮಾರ್ಪಾದಾಖ್ಯಂ" (ಶಾಶಾಳಂ. ೦೩೩); "ಅಂಘ್ರಿ ಪದಪೂರು ತೇಜ ಪಾದಾಹ್ವಯಂ" (ನಾನಾರ. ೦೩೦).

ಪಾದ ಬೆಳಸು, ಪಾದ ಬೆಳೆಸು = (ಗೌರವಾರ್ಥದಲ್ಲಿ ಅಥವಾ ವ್ಯಂಗ್ಯವಾಗಿ) ಬರು ; ಆಗಮಿಸು; ದಯಮಾಡಿಸು : ನಾಮಕರಣದ ದಿನ ಸ್ವತಃ ಅವರೇ ಪಾದ ಬೆಳಸಿ ಬಂದು ನೋಡಿ ಹೋದರು (೬ಚ್ಚಿ. ೦೩) ; ಕಾಯಿ ತಕ್ಕ ಮಟ್ಟಿಗೆ ಸಂತೃಪ್ತಳಾಗಿ ದಿವಾನಖಾನೆಯ ಕಡೆಗೆ ಪಾದ ಬೆಳಸಿದಳು (ಕೃಪರು. ೩೬೬). [ಸಂ.]

**ಪಾದಕಟಕ** (ನಾ). ಕಾಲಿಗೆ ಹಾಕಿಕೊಳ್ಳುವ ಕಡಗ, – ಬಳೆ : "ಸಿಂಜಿನೀ, ಪಾದಕಟಕಃ—ಈ ೨ ಕಾಲ ಕಡಗಂ" (ಹಲಾಯು. ೯೨-೪೦೬): "ಪಾದಾಂಗದಂ . . . ಪಾದಕಟಕಃ—ಅಂದಿಗೆ, ಕಾಲುಸರಪಣಿ, ಪಾಗಡ, ಕಾಲುಕಡಗ, ಕಾಲುತೊಡಿಗೆ" (ಸಿದ್ಧಾಂತ. ೨೦೦). [ಪಾದ+ಕಟಕ$_3$]

**ಪಾದಕಡಗ** (ನಾ). = ಪಾದಕಟಕ : ಅಭಿಮನ್ಯುವನ್ನು ರಮಣೀಯವಾದ ಪೀತಾಂಬರಗಳಿಂದಲೂ . . . ಪಾದಕಡಗಗಳಿಂದಲೂ ಅಲಂಕರಿಸಿ (ಕೃಪಾಂ. ೦೨೯). [ಪಾದ+ಕಡಗ$_1$]

**ಪಾದಕೃಚ್ಛ್ರ** (ನಾ). ಪ್ರಾಯಶ್ಚಿತ್ತರೂಪವಾಗಿ ನಾಲ್ಕು ದಿನಗಳು ಮಾಡುವ ಒಂದು ವ್ರತ : ಮೊದಲ ದಿನ ಒಪ್ಪತ್ತು ಹಗಲು ಊಟ, ಎರಡನೆಯ ದಿನ ಒಪ್ಪತ್ತು ರಾತ್ರಿ ಊಟ, ಮೂರನೆಯ ದಿನ ಅಯಾಚಿತ ಅನ್ನ (ಬೇಯಿಸದೆ ಆಹಾರ), ನಾಲ್ಕನೆಯ ದಿನ ಪೂರ್ಣ ಉಪವಾಸ–ಹೀಗೆ ವ್ರತ ಮಾಡುವಿಕೆ. ಇದರ ಇನ್ನೊಂದು ಪ್ರಕಾರ–ಮೊದಲ ದಿನ ರಾತ್ರಿ ಊಟ, ಎರಡನೆಯ ದಿನ ಉಪವಾಸ, ಮೂರನೆಯ ದಿನ ಊಟ, ನಾಲ್ಕನೆಯ ದಿನ ಉಪವಾಸ : ದೋಷಪರಿಹಾರಾರ್ಥವಾಗಿ ಶರೀರಬಾಧಾತ್ಮಕತ್ವದಿಂ ಮಹತ್ಕಷ್ಟಸಾಧ್ಯಂಗಳಾದ ಪಾದಕೃಚ್ಛ್ರ ಮುಂತಾದವುಗಳ ಪಕ್ಷಮಾಸಾದಿಕಾಂಗಳಲಿ ಅನ್ನಮಂ ಪೇರ್ಚಿಸಿ ತಗ್ಗಿಸಿಕೊಂಬುದು (ಅಷೇಳ. ೦೩೯) : ಒಂದು ಉಪವಾಸಮಂ ಮಾಡಿ ಮರುದಿನ ಪಾರಣೆಯೇಕಭುಕ್ತ ಮೊದಲಾದ ನಾಲ್ಕುದಿನದ ವ್ರತವೂ ಪಾದಕೃಚ್ಛ್ರವೆನಿಸೂದು (ಕಾಡೀಕು. ೪೪೨-೩). [ಸಂ.]

**ಪಾದಗಟ್ಟೆ** (ನಾ). ೧. ತೇರನ್ನು ಕಟ್ಟಿ ಹೊರಡಿಸುವ ಸ್ಥಳ : ಕಳಸದಾರತಿ ಹಿಡಿದ ಐದೆಯರ ಗುಂಪು ತೇರಿಗೂ ಪಾದಗಟ್ಟೆಗೂ ಆರತಿಯನ್ನು ಬೆಳಗಿತು (ಚಪೊ. ೦೪೩), ಅವನಿಗೆ ಊರಿನ ಮುಂದಿನ ಪಾದಗಟ್ಟೆಯ ಬಸವನೂ ಬೇಕು ; ಊರ ಹೊರಗಿನ ಗರುಡಗಂಬದೆದುರಿನ ಹನುಮಾನೂ ಬೇಕು (ಕಪ್ಪಣ. ೬). ೨. ಕೆಳಗಿನ ಭಾಗ ; ಅಡಿಭಾಗ : ಪಾದಚಾರಿಯಾಗಿಯೇ ಅನಂತ 'ಚಾರಮಿನಾರ' ನೋಡಲು ನಡೆದ . . . ಪಾದಗಟ್ಟೆ ಮುಟ್ಟಿ, ಮೇಲೆ ಕೆಳಗೆ ನೋಡಿ ಮಾಳಿಗೆ ಹಿಂತಿರುಗಿದ (ಜಾಪಾತ. ೩೬). [ಪಾದ+ಕಟ್ಟೆ$_1$]

**ಪಾದಗಾಣಿಕೆ** 'ಪಾದಗಾಣ್ಕೆ' ನೋ.

**ಪಾದಗಾಣ್ಕೆ, ಪಾದಗಾಣಿಕೆ** (ನಾ). ಪೂಜ್ಯರಾದ ಗುರು ಹಿರಿಯರಿಗೆ ಒಪ್ಪಿಸುವ ಕಾಣಿಕೆ: ವಿಶ್ರವಣನಾಯಕಂ ಮತ್ತೆ ಕಿಲಂಬರ್ ಧೀರ ಕಿರಾತರುಂ ಬಂದು ವಂದಿಸಿ ಪಾದಗಾಣ್ಕೆ ಮಾಡಿದರ್ (ಜಮ್ಮ.೩. ೪-೬೨ ಪ). **ಪಾದಗಾಣಿಕೆ**: ಗುರುಗಳಿಗೆ ಪಾದಗಾಣಿಕೆ ಅರ್ಪಿಸಬೇಕು (ಲೂ೨). [ ಪಾದ+ಕಾಣ್ಕೆ ]

**ಪಾದಘಾತ** (ನಾ). ೧. ಹೆಜ್ಜೆಯ ಹೊಡೆತ, — ಪೆಟ್ಟು. ೨. ಹೆಜ್ಜೆಯಿಂದುಂಟಾದ ಶಬ್ದ; ಹೆಜ್ಜೆಸದ್ದು: ತಾಯಿಯ ಪಾದಘಾತ ಮಂದವಾಗಲು ತನ್ನ ವಿಚಾರವನ್ನು ಮುಂದುವರಿಸುವನು (ಆಮೂಲ. ೧). [ ಪಾದ+ಘಾತ ]

**ಪಾದಚಾರಿ** (ನಾ). ೧. ಕಾಲುನಡಗೆಯಲ್ಲಿ ಸಾಗುವಂತಹುದು: ಬರುವಾಗ ದುರದೃಷ್ಟ ಬೇಗನೆ ಬರುವುದು ಧಾವಿಸಿ ಕುದುರೆಯನೇರಿ ಬೀಳ್ಕೊಂಡು ಹೋಹಾಗ ಮೆಲ್ಲನೆ ಹೋಹುದು ಹೋಹುದು ಅದು ಪಾದಚಾರಿ (ಇಂಗಾಕ. ೧೩೨-೧೩). ೨. ಕಾಲುನಡಿಗೆಯಲ್ಲಿ ಸಾಗುವ ವ್ಯಕ್ತಿ: ಪ್ರಭುಗಳೂ ಇವರ ಸಂಗಡ ಸೇರಿ, ಪಾದಚಾರಿಗಳಾಗಿ ಬೆಟ್ಟ ಗುಡ್ಡಗಳನ್ನು ಹತ್ತಿ ಇಳಿದು . . . ವನಭೋಜನ ಮಾಡಿದುದುಂಟು (ಕಾಂಕಥಾ. ೧೨೨); ರಥದಿಂದ ಇಳಿದು, ಪಾದಚಾರಿಯಾಗಿ ಗುರುವಿನ ಬಳಿಗೆ ಸಾರಿ, ವಂದನೆ ಮಾಡಿ, ಒಂದು ಕಡೆ ನಿಂತಳು (ಪಕ್ಕುಕು. ೧೪). ೩. ಕಾಲುನಡೆಯ ಸೈನಿಕ; ಪದಾತಿ; ಕಾಲಾಳು: "ಪದಾತಿಃ . . . ಪದಿಕಃ, ಪಾದಚಾರೀ — ಈ ೮ ಕಾಲಾಳ್" (ಹಲಾಯು. ೬೯-೨೯೬). [ ಸಂ. ಪಾದಚಾರಿನ್ ]

**ಪಾದಚ್ಛಾಯೆ** (ನಾ). ಕಾಲಿನ ಪಡಿಯಚ್ಚು; ಹೆಜ್ಜೆಯ ಪಡಿಯಚ್ಚು: ಪಾದಚ್ಛಾಯೆಯುಮನಿಟ್ಟು ಜೋಯಿಸದಭಿಪ್ರಾಯಂಗಳಿಂ . . . ಪೇಟ್ಟ ಜೋಯಿಸಮದಾರ್ಗಂ ಮರ್ತ್ಯರೊಳ್ ದುರ್ಲಭಂ (ಸುಕುಮಾ. ೩-೨೦). [ ಸಂ. ಪಾದಚ್ಛಾಯಾ ]

**ಪಾದಜ** (ನಾ). ಭಗವಂತನ ಪಾದಗಳಿಂದ ಜನಿಸಿದವನು; ಶೂದ್ರ: ಸಂಪದದೊಳನೂನರಕ್ಕೆ ಪರದರ್ ಸಲೆ ಧಾರ್ಮಿಕರಕ್ಕೆ ಪಾದಜ[ರ್ಕಾಂ. ಶೂದ್ರ]ರ್ (ಶಂಕಕಾ. ೩೦೨-೮); ನಿಜ ಕೃಷಿವ್ಯವಸಾಯದಲಿ ತದ್ದ್ವಿಜಕುಲದ ಶಿಶ್ರೂಷೆಯಲಿ ಪಾದಜರು ಕೃತ್ಯರು (ಕುಮ್ಮಾ೯. ೦೯-೯೩). [ ಸಂ. ]

**ಪಾದತಲ, ಪಾದತಳ** (ನಾ). ಹೆಜ್ಜೆಯ ಕೆಳಭಾಗ; ಅಂಗಾಲು: ಮುಖ ಚಂದ್ರಕಾಂತವು ಕುಂತಲ ನೀಲವು ಪದ್ಮರಾಗವು ಪಾದತಲವು (ಇಂಗಾಕ. ೯೯-೩೩). **ಪಾದತಳ**: "ಪಾದತಳವಮದಡಿಯನೆ" (ಅಭ್ಯಕೋ. ೬೬-೨); ಸಿರದಲುವವನು ತೆತ್ತೀಸಕೋಟಿ ದೇವತೆಗಳು ಪಾದತಳದಲ್ಲಿ ಭೂವಿ ಜನವು (ಜಾಪ. ೩೬೬). [ ಪಾದ+ತಲ ]

**ಪಾದತಳ** 'ಪಾದತಲ' ನೋ.

**ಪಾದತಿಜುಗೆ** (ನಾ). ಪಾದಪೂಜೆಯ ಸಮಯದಲ್ಲಿ ಕೊಡುವ ಕಾಣಿಕೆ: ಹೊರನಾ ದಂಡದೋಷದಿಂ ಪಾದತಿಜುಗೆಯುಂ ಕೊಂಬು ದಿಲ್ಲೆಂದು [ಒ]ಂದು ಹೊನ ಪಾದಪೂಜೆಯುಂ ಕೊಂಡು (ಕಶಾ. ೪, ೬೦-೩, ೧೩೩೧). [ ಪಾದ+ತಿಜುಗೆ ]

**ಪಾದತ್ರಾಣ** (ನಾ). ೧. ಕಾಲಿನ ಶಕ್ತಿ, — ಬಲ: ಧಾರವಾಡದ ಜೀವಕ್ಕೆ ಪಾದತ್ರಾಣ ಬಹಳ ಬೇಕು (ದೇಶಕ್ಕ. ೦೯೦). ೨. ರಕ್ಷಣಾರ್ಥವಾಗಿ ಪಾದಗಳಿಗೆ ತೊಡುವ ಸಾಧನ; ಮೆಟ್ಟು; ಪಾದರಕ್ಷೆ: "ಪಾದ ತ್ರಾಣಮುಪಾನತ್ [ಪಾದುಕೆ] ತಾನೇತದನುಪದೀ[ನಾ]ನಾಮಂ" (ಅಭ್ಯಕೋ. ೯೯-೨೫). [ ಪಾದ+ತ್ರಾಣ ]

**ಪಾದದಾಹ** (ನಾ). ಒಂದು ವಿಧವಾದ ವಾತರೋಗ; ಪಿತ್ತರಕ್ತ ದಿಂದ ಕೂಡಿದ ವಾತಸಂಚಾರದಿಂದ ಉಂಟಾಗುವ ಉರಿವಾಯು: ಮಾದಿವಾಳ, ಲಾವಂಚ . . . ಪ್ರಾತಃಕಾಲದಲ್ಲಿ ದುಡ್ಡು ೧ ತೂಕ ಚೂರ್ಣವಂ ಜೇನುತುಪ್ಪದಿಂ ಕಲಸಿ ಸೇವಿಸೆ ಕ್ಷಯ, ರಕ್ತಪಿತ್ತ, ಪಾದದಾಹ, ಪ್ರಮೇಹ . . . ರಕ್ತಾರ್ಶರೋಗ ಸಹ ಕೆಡುಗುಂ (ಪಕ್ಕ. ೨೯೯). [ ಸಂ. ]

**ಪಾದಧೂಳಿ** (ನಾ). ಪಾದಕ್ಕೆ ಹತ್ತಿರುವ ಧೂಳು: ಅಂತರಂಗ ದೊಳಾಣ್ಮನ ಪಾದವ ಧರಿಪ ಭಾವರ ಪಾದಧೂಳಿಗಳಿಂದ ಪಾವನವಹುದೀ ಮೇದಿನಿಯನೆ ಮಿಕ್ಕುದೇನು (ಹರಿ. ೨-೩); ನಮ್ಮ ತಾಯಿಯ ಪಾದಧೂಳಿಯು ನಮ್ಮ ಪ್ರಾಣದ ನಿಲುಗಡೆ (ಕಂಕು. ೯೬-೨೩); ಶಿವಶರಣ — ಸಾಧು — ಸತ್ಪುರುಷರ ಪಾದಧೂಳಿಯಿಂದ ಕನ್ನಡನಾಡು ಪಾವನವಾಗಿದೆ (ಕಕ್ಕಾ. ೧೩). [ ಪಾದ+ಧೂಳಿ (=ಧೂಲಿ) ]

**ಪಾದನ್ಯಾಸ** (ನಾ). ಹೆಜ್ಜೆಯಿಡುವಿಕೆ: ಪಾದನ್ಯಾಸವಿಳಾಸಮಾರ್ವರೆಯು ವಿಭ್ರಾಂತ್ಯಂತಮಂ ತೂಳ್ದೆ . . . ಬಾವರಿಗೆ ವಂದಂ ಪಾರ್ಶ್ವ ಯೋಗೀಶ್ವರಂ (ಪಾರ್ಶ್ವ. ೦೩-೬೩). [ ಪಾದ+ನ್ಯಾಸ ]

**ಪಾದಪ** (ನಾ). ಬೇರಿನಿಂದ ನೀರು ಕುಡಿಯುವುದು; ಮರ, ಗಿಡ ಮುಂತಾದುವು: "ತರು ಶಾಖಿ ಪಾದಪಂ . . . ಶಿಖಿ ವೃಕ್ಷಂ" (ಅಭ್ಯಕೋ. ೩೦-೧); ಪಾದಪಂಗಳ ಪುಷ್ಪಸ್ತಬಕಂಗಳಂ ಮುಚ್ಚುವುತಂ (ಶಾಂತಿಪು. ೬೩೦); ಕೆದಿದರರಿಭಟಪಾದಪವನದ ಗೆಡಹಿದರು ಗಜಗಿರಿಗಳನು (ಕುಮ್ಮಾ೯. ೩-೯). [ ಸಂ. ]

**ಪಾದಪಟ್ಟಿ** (ನಾ). ಗೌರವಸೂಚಕಚಿಹ್ನೆಯಾಗಿ ಕಾಲಿನಲ್ಲಿ ಧರಿಸುವ ಒಂದು ಬಗೆಯ ಆಭರಣ; ಕಾಲ ತೊಡರು: (೬). [ ಸಂ. ]

**ಪಾದಪಲ್ಲಟ** (ನಾ). (ಪದ್ಯದ) ಸಾಲುಗಳ ಅದಲು ಬದಲು: ಈ ಮೇಲಿನ ಪದ್ಯಗಳಲ್ಲಿ ಅಕ್ಷರಪಲ್ಲಟ, ಪದಪಲ್ಲಟ, ಪಾದಪಲ್ಲಟ ಮತ್ತು ಪ್ರಾಸಪಲ್ಲಟಗಳೂ ಕಂಡುಬರುವುದನ್ನು ಗಮನಿಸಬಹುದು (ಕನ್ನಡಛಂ. ೯೩). [ ಪಾದ+ಪಲ್ಲಟ ]

**ಪಾದಪಾತ** (ನಾ). ಮಲ್ಲಯುದ್ಧದಲ್ಲಿಯ ದೋಷಗಳಲ್ಲಿ ಒಂದು; ಕಾಲಿನಿಂದ ಒದೆಯುವುದು: ಕಳಂದೊಳ್ಕು ನಿಜಸಾಗೆಯುದ್ಧ ನಖಹತಿ ದಶನಹತಿ ಪಾದಪಾತಂ ಮುಷ್ಟಿಪಾತಮೆಂಬ ದೋಷಂಗಳಿಂ ಪೂರ್ವದ ನಾಲ್ಕುಂ ಸ್ಥಾನದೊಳಂ . . . ಪಲತೆರದ ಪಾತಂಗಳೊಳಂ ನೆರೆದು (ಸಂಕೃತಿ. ೩-೬೩ ಪ). [ ಪಾದ+ಪಾತ ]

**ಪಾದಪಾಶ** (ನಾ). ೧. ದನ, ಕರು ಮುಂತಾದ ಪ್ರಾಣಿಗಳ ಕಾಲಿಗೆ ಕಟ್ಟುವ ಹಗ್ಗ: ಪಾದಪಾಶ—ಪಾದಪಾಸ (ಜಾಪ. ೨೯೩ ಪ್ರ.ಟೂ.). ೨. [ ಛಂದ ] ಮಧ್ಯಲಘುವುಳ್ಳ ಗಣ; ಅಗ್ನಿಗಣ; ರಗಣ: ಇದರಿಂ [ ಶೆಯಪ್ಪ ] ನಿಯಮಂಗಳಿಂದಹೀನ ತೃತೀಯ [ ಪಾದದೊಳ್ ] ಪಾದಪಾಶ [ ಸುರಪಾಕ್ಷರಂ ] ಮದವದ್ಗಜೇಂದ್ರಗತಿ ನಾಗವರ್ಮಾ (ಛಂದೋಂಬು. ೩-೨೦೩). [ ಸಂ. ]

**ಪಾದಪಾಶನ** (ನಾ). ೧. ಮರ, ಗಿಡ ಅಥವಾ ಸೌದೆಯೇ ಆಹಾರ ವಾದುದು; ಬೆಂಕಿ; ಅಗ್ನಿ. ೨. [ ಛಂದ ] ಮಧ್ಯಲಘುವುಳ್ಳ ಗಣ; ಅಗ್ನಿಗಣ: ನನಯುಗ ಮಿರೆ ಪಾದಪಾಶನನಿರೆ ಬಂದು ಕೋಕನದವದನೆ ನಾಶಿಯಿಂ ವಿನುತಮಿದುವೆ ನಾಮದಿಂ (ಛಂದೋಂಬು. ೨-೦೩). [ ಪಾದಪ+ಅಶನ ]

**ಪಾದಪೀಠ** (ನಾ). ಕಾಲಿಡುವುದಕ್ಕಾಗಿ ಮಾಡಿದ ಪೀಠ; ಕಾಲುಮಣೆ: ವಚನ ಪೂಡಮಡುವ ತೆಜನೆರ್ದೆಯೆಜಕಮನನುವಡಿಸಿ ಪೂಳಿವ ಪಾಕಟದ ಕಿಕ್ಕಿಣಿಗಿಜಿದ ಪೊನ್ನ ಪೂಗಳ ತಾಣಗಳ್ ಮಿಳಿಲಿಸಿ ಪಾದಪೀಠದ

ತೊದರೊಳ್ (ಶಾಂತಿ. ೦೦–೪೦); ಯಾದವವಂಶೋದ್ಭವವಂಶೀವಾಣಿಬ್ರಹ್ಮ ಪ್ರಭಾಲಿಂಗಿತಪಾದಪೀಠಂ (ಶಾಸ. XX. ೯೬–೬; 1072); ವಿನಯಂ ಗುಂದದೆ ಪಾದಪೀಠತಳದೊಳ್ ಕುಳ್ಳಿರ್ದ ಲೋಕೈಕಮಿತ್ರನ ನೊತ್ತಂಬದಿನೆತ್ತಿ (ಕ್ಷ.ಕೃ. ೯–೬೬). [ ಪಾದ + ಪೀಠ ]

**ಪಾದಪೂಜೆ** (ನಾ). ೧. ಗುರುಹಿರಿಯರ ಪಾದಗಳನ್ನು ಪೂಜಿಸುವುದು : ಅಂತು ಮಹಾಜನರ ಪಾದಪೂಜೆಯಂ ಕೊಟ್ಟು (ಶಾಸ. ೬–೪೬; 1079); ಮೇಗಣ ಅರೆಮತ್ತರು ಗದ್ದೆಯು ನೀರ್ಮಣ್ಣಿಗೆ ಕ್ರಯಾವಂ ಕೊಟ್ಟು ಊರಿಂಗೆ ಪಾದಪೂಜೆಯು ಕೊಟ್ಟು ಮಾನ್ಯವಾಗಿ ಆ ದೇವರಿಗೆ ಬಿಟ್ಟರು (ಶಾಸ. XX. ೬೬–೨೦; 1122). ೨. ಮಠಾಧಿಪತಿಗಳಿಗೆ ಪಂಥದ ಮೂಲಪುರುಷರ ಪಾದುಕೆಗಳಿಗೆ ಮಾಡುವ ಪೂಜೆ : ಇಂದು ಅವರ ಮನೆಯಲ್ಲಿ ಶೃಂಗೇರಿಮಠದ ಸ್ವಾಮಿಗಳನ್ನು ಕರೆಸಿ ಪಾದಪೂಜೆ ನಡೆಸಿದರು (ಕೂಡಿ). ೩. (ಅಲಂ) ಒದೆಯುವುದು; ಥಳಿಸುವುದು : ಸತ್ರುರ್ಗೆ ಪಾದಪೂಜೆಯನೆಸಪ ನಯಗಾಣಿಷ್ (ಅಕ್ಷ. ೧೦–೩೦೮); ಮೂರು ನಾಲ್ಕು ಜನ ಕಾಡಾಳುಗಳಿಗೆ ಅವರು 'ಪಾದಪೂಜೆ'ಯನ್ನು ಮಾಡಿದರು (ಎಚಶ. ೩೨೯). [ ಪಾದ + ಪೂಜೆ ]

**ಪಾದಪೂರಣ** (ನಾ). ಪದ್ಯದ ಸಾಲನ್ನು ಪೂರ್ಣಗೊಳಿಸಲು ಪದ ಅಥವಾ ಅಕ್ಷರವನ್ನು ಸೇರಿಸುವುದು; ಸಾಲನ್ನು ಭರ್ತಿಮಾಡುವುದು : ತನ್ನ ಆಶ್ರಯದಾತನಿಗೆ ಆದರವನ್ನು ತೋರಿಸಲೂ . . . ಪಾದಪೂರಕವಾಗಿಯು. ನೃಪತುಂಗನ ಹೆಸರನ್ನು ಗ್ರಂಥಕಾರನು ಬಳಸಿರುವನೆಂಬುದು ಸ್ಪಷ್ಟವಾಗಿದೆ (ಕವಿ. ೩೪). [ ಪಾದ + ಪೂರಕ ]

**ಪಾದಪೂರಣ** (ನಾ). ಪದ್ಯದ ಪಾದಗಳನ್ನು ಪೂರ್ಣಗೊಳಿಸುವುದು : "ನೆಱೆ ಸಲೆ ತವೆ ಮಿಗೆಯೊಗಮಿಗೆಯುಱೆಯೆಂಬಿವು ಪಾದಪೂರಣಾರ್ಥಂ" (ಶಬ್ದ. ೩೯); ಹಕಾರಪ್ರಾಸ ಪಾದಪೂರಣಕಾರ್ಯದಲ್ಲಿ ಅವುಗಳಿಗೆ ಸವಮ್ಮ ಹೋಗುತ್ತದೆ ; ಅವುಗಳಿಂದ ಮಾತ್ರಾರಕ್ಷಣವಾಗುವುದು ಮಾತ್ರ (ಕಾವ್ಯ. II. ೨೦೦). [ ಪಾರದ + ಪೂಣ ]

**ಪಾದಪೆಂಡೆಯ** (ನಾ). ದಿರುಂದಿನ ಚಿಹ್ನೆಯಾಗಿ ಕಾಲಲ್ಲಿ ಧರಿಸುವ ಒಂದು ಬಗೆಯ ಕಡಗ : ಪಾದಪೆಂಡೆಯಪಡೆದೆಸವ ಪೆಂಪು (ಶಾಸ. ೩೩). [ ಪಾದ + ಪೆಂಡೆಯ ]

**ಪಾದಪ್ರಕ್ಷಾಲನ**, ಪಾದಪ್ರಕ್ಷಾಳನ (ನಾ). ಕಾಲುಗಳನ್ನು ತೊಳೆಯುವುದು : ತನ್ನಿನಿಯಂಗಲಪಾದಪ್ರಕ್ಷಾಲ [ ಶಾಸಂ. ೪ ] ನೋದಕದೊಳ್ಪರಳ್ದು (ಅಂಕ. ೬–೨ ಪ); ಪಾದಪ್ರಕ್ಷಾಲನಮಂ ಸಾದರದಿಂ ಮಾಡಿ ಸಾರ್ತರಲ್ (ಶುಕಸ. ೦೦–೨೦). ಪಾದಪ್ರಕ್ಷಾಳನ : ಶ್ರೀಕೃಷ್ಣನು ಯಜ್ಞ ರಕ್ಷಣೆಯ ಭಾರವನ್ನೂ ಬ್ರಾಹ್ಮಣರ ಪಾದಪ್ರಕ್ಷಾಳನವಾದಿ ಕೈಂಕರ್ಯವನ್ನೂ ವಹಿಸಿದನು (ಅಕ್ಷ. ೦೦೦). [ ಪಾದ + ಪ್ರಕ್ಷಾಲನ ]

**ಪಾದಪ್ರಕ್ಷಾಳನ** 'ಪಾದಪ್ರಕ್ಷಾಲನ' ನೋ.

**ಪಾದಪ್ರಣತ** (ನಾ). ಪಾದಗಳಿಗೆ ನಮಸ್ಕರಿಸಿದವನು, –ಬಾಗಿದವನು : ದ್ವಾರಪಾಲಕರರಸುಂಗವರ ಬರವಱಿಪಿ ಬಂದು ಕಾಣಿಸೆ ಲೋಕಾಂತಿಕ ದೇವರವಿಶೇಷಕಾದಪ್ರಣತರಪಾಗಿ (ಶಾಂತಿ. ೦೦–೯೩ ಪ). [ ಪಾದ + ಪ್ರಣತ ]

**ಪಾದಪ್ರಣಾಮ** (ನಾ). ಕಾಲಿಗೆ ನಮಸ್ಕಾರ ಮಾಡುವುದು: ಕಾದಂಬರಿಯು ಮೆಯ್ಯು ವಲಪುಗೂಡಿ ಚಂದ್ರಾಪೀಡನಿಗೆ ಪಾದಪ್ರಣಾಮವ ಮಾಡಿ . . . ಕುಳಿತುಕೊಂಡಳು (ಕಕಾ. ೩೩). [ ಪಾದ + ಪ್ರಣಾಮ ]

**ಪಾದಬಂಧ** (ನಾ). (ಆನೆ ಮೊದಲಾದವುಗಳ) ಕಾಲಿಗೆ ಕಟ್ಟುವ ಸರಪಣಿ; ಸಂಕೋಲೆ : "ನಿಗಳಃ, ಪಾದಬಂಧಃ, ಹಿಂಜೀರಃ, ಶೃಂಖಲಾ, ಅಂದುಕಃ — ಈ ೫ ಆನೆಯ ಕಾಲ್ಗಟ್ಟು" (ಕರಾಕು. ೩೬.೩೦); " ಹಿಂಜೀರ ಮಂದುಕಂ ಶೃಂಖಲಂ ಪಾದಬಂಧಂ ನಿಗಳಮೆನಲು ಸಂಕಲೆಯಹೆಸರಕ್ಕುಂ " (ಶಬ್ದಸಾ. ೯೩–೨). [ ಪಾದ + ಬಂಧ ]

**ಪಾದಮಾರ್ಗ** (ನಾ). ೧. ಕಾಲುನಡಗೆಯ ದಾರಿ; ಕಾಲುದಾರಿ. ೨. ಕಾಲುನಡಗೆ : ಅವಧಿಜ್ಞಾನಿಗಳ್ ಪವನಮಾರ್ಗದಿಂದಿಳಿವುದಂ ಕಂಡು ಪಾದಮಾರ್ಗದೊಳ್ ಕಿಱಿದಂತರದೊಳ್ ಅವಿವರಿವುರಸ್ಸರಮಿದಿಗೊಳು (ಅಂಕ. ೩–೩೩ ಪ); ಪಾದಮಾರ್ಗದಿಂ ಪೋಗಿ ಸೌಧರ್ಮಕಲ್ಪದೊಳಗಳ್ ಕೃತಕಚೈತ್ಯಾಲಯಂಗಳಂ ಕಲ್ಪಪಾದಪಪ್ರತಿಪಾದಿತ ವಿವಿಧಾರ್ಚನಂಗಳಿಂದರ್ಚಿಸಿ (ಅಂತ್ರ.ಕೃ. ೯–೬೮ ಪ). [ ಪಾದ + ಮಾರ್ಗ ]

**ಪಾದಮೂಲ**, ಪಾದಮೂಳ (ನಾ). ೧. ಕಾಲಿನ ಕೆಳಭಾಗ ; ಅಂಗಾಲು. ೨. ದೇವಸ್ಥಾನದ ಸೇವೆಯಲ್ಲಿ ಕಾಯಮ್ಮಾಗಿ ನಿರತರಾದ ಪರಿಚಾರಕ ವರ್ಗ: ಶ್ರೀಮದ್ದಿವ್ಯಕಿಕ್ಷಪ್ಕತಭಾರರ ಮಯ್ಯಾಗಾವುನ್ನವಂ ಪಾದಮೂಲಮುಂ ಪನ್ನಿಕದೞಗಿವೃತ್ತಿಕ್ಕೆಳುಮಿಟ್ಟು (ಎಇ. X (೨). ಶಾ.೩. ೨೬–೩ ; ೧೩೩೬ ೫೫). ೩. (ಅಲಂ) ಕಾಲಿನ ಬಳಿ,—ಸಮೀಪ : ಅತನ ಪಾದಮೂಲದಲ್ಲಿ ಅರಿಂದಮನ ಅಸಮಸಾಹಸಿಯಾದ ವೀರವಿಕ್ರಮನೆಂಬ ನಾಯಿಯೊಂದು ಕುಳಿತುಕೊಂಡು ದೇವೇಂದ್ರನ ಮುಖವನ್ನೇ ನೋಡುತ್ತಿದ್ದಿತು (ಶಾಕು. ೦) ; ಒಂದು ದಾಸಿ ಎಲ್ಲಿಂದಲೋ ಬಂದು ಅವರ ಪಾದಮೂಲದಲ್ಲಿ ಬಿತ್ತು (ಮುಜಾಲ. ೯೯). ಪಾದಮೂಳ : ೨. ಶ್ರೀರಾಮೇಶ್ವರದೇವರ್ಗೆ ಅಂಗಭೋಗಕ್ಕಂ ರಂಗಭೋಗಕ್ಕಂ ಗನ್ಧಧೂಪದೀಪನಿವೇದ್ಯಕ್ಕೆ ದೇಗುಲದ ಖಂಡಸ್ಫುಟಿತಕ್ಕಲ್ಲಿಯ ತಪೋಧನರ ಗ್ರಾಸಕ್ಕ [೦] ಪಾದಮೂಳಪರಿಗ್ರಹಕ್ಕಂ . . . ಕೊಟ್ಟರು (ಕಶಾ. ೩೦–೯೦–೯೦; 1121); ಅಲ್ಲಿಯ ಬ್ರಾಹ್ಮಣರ ತಪೋಧನರ ದೇವರ ಬ್ರಹ್ಮಪುರಿ ನಾಗಿಯಣ್ಣಭಟ್ಟನ ಗ್ರಾಸಕ್ಕಂ ಪಾದಮೂಳ ಪರಿಗ್ರಹಕ್ಕಂ . . . ಬಿಟ್ಟರು (ಕಶಾ. ೫೦–೩೩–೨೬; 1141). [ ಪಾದ + ಮೂಲ ]

**ಪಾದಮೂಲಿ** (ನಾ). –ಪಾದಮೂಲ ೨ : ಆ ಊರ ೨೪ ಪ್ರಜೆ ಜನಂಗಳು ಯಮ್ಮಾಳದೇವರ ಪಾದಮೂಲಿಗಳು ಯವರೆಲ್ಲರ ಸನುಮತದಿಂದ . . . ಕೊಂಡ ಕ್ಷೇತ್ರದ ವಿವರ (ಶಾಸ. IX–II ; ೧೩೩–೮ : 1402) ; ತುಳುವರ ಶಾಸನಗಳಲ್ಲಿ ಬರುವ ಅಧಿಕಾರಿಗಳು ಯಾ ಅಧಿಕಾರವರ್ಗಗಳು . . . ಒಕ್ಕಲರು (ಒಕ್ಕಲ ಮಕ್ಕಳು), ಮೂಲಿಗರು, ಪಾದಮೂಲಿಗಳು ( ತುಳುಶಾ. ೩೩೦ ). [ ಸಂ. ಪಾದಮೂಲಿನ್ ]

**ಪಾದಮೂಳ** 'ಪಾದಮೂಲ' ನೋ.

**ಪಾದರ**[1] 'ಪಾರದಾರ' ನೋ.

**ಪಾದರ**[2] (ನಾ). ಒಂದು ಬಗೆಯ ಸಸ್ಯ : "ಮಟೋರಃ —ಹಲಸು. ಪಾದರ, ಪಾರಿವಾ(ಣ)ಳ, ಕಕ್ಕೆ, ಅರಸಿಕೆ, ಮುತ್ತುಗ, ಮಂದಾರ" ( ಲಿಂಗ. ೦೦೮ ). [ ? ]

**ಪಾದರಕ್ಕೆ** (ನಾ). –ಪಾದರಕ್ಷೆ : ಪರಪದಂ ತದ್ಭವವಪ್ಪಾದ ಸಮಾಸಕ್ಕೆ . . . ಪಾದರಕ್ಷಾ–ಪಾದರಕ್ಕೆ (ಶಬ್ದ. ೨೯೯ ವೃತ್ತಿ); ಪಾದರಕ್ಕೆ, ಪರದೂಪ್ಪಂ, ದಾನಸಾಲೆ ( ಕಶಾ. ೩೩. ೨೯೩ ವೃತ್ತಿ). [ <ಸಂ. ಪಾದರಕ್ಷಾ ]

**ಪಾದರಕ್ಷಣ** (ನಾ). –ಪಾದರಕ್ಷೆ : "ಉಪಾನತ್, ಪಾದರಕ್ಷಣಂ—ಈ ೨ ಪಾದರಕ್ಷೆ" ( ಕರಾಕು. ೩೨–೦೩೩ ). [ ಪಾದ + ರಕ್ಷಣ ]

**ಪಾದರಕ್ಷೆ** (ನಾ). ರಕ್ಷಣಾರ್ಥವಾಗಿ ಪಾದಗಳಿಗೆ ತೊಡುವ ಸಾಧನ ಮೆಟ್ಟು ; ಪಾದತ್ರಾಣ : "ಉಪಾನತ್, ಪಾದರಕ್ಷಣಂ — ಈ ೨ ಪಾದರಕ್ಷೆ" ( ಕರಾಕು. ೩೯–೦೩೩ ) ; ಆವನಾದರೇನು ಶ್ರೀಮಹಾದೇವನ ನೆನೆವವನ ಬಾಯ ತಂಬುಲ ಮೆಲುವೆ ದೀಳುಡಿಗೆಯ ಹೊದೆವೆ ಪಾದರಕ್ಷೆಯ ಕಾಯ್ದು ಬದುಕುವೆ ( ಬಸವ. ೯೬೩ ) ; ದೇವತಾದರ್ಶನಕ್ಕೆ . . . ಪಾದರಕ್ಷೆಗಳನ್ನು ಮೆಟ್ಟಿ ಹೋಗಬಾರದು ( ಶಾಂತಶಾ. ೪ ). [ ಸಂ. ಪಾದರಕ್ಷಾ ]

**ಪಾದರಗಿತ್ತಿ**, ಹಾದರಗಿತ್ತಿ (ನಾ). ವ್ಯಭಿಚಾರ ಮಾಡುವವಳು ; ಜಾರೆ : ಪರಿಜನಂಗಳ ಮೆಚ್ಚಿಸುವಾಗ ಪಾದರಗಿತ್ತಿಯೇ ಶರಣ ಸರ್ವರ ಮೆಚ್ಚಿಸುವಾಗ ಸಂತೆಯ ಸೂಳೆಯೇ ಶರಣ (ಸಿದ್ಧೇವ. ೧೧೦೩-೩೨೬). **ಹಾದರಗಿತ್ತಿ** : ಈ ಮಹಾಮಹಿಮರಿಗೆ ಜಗದ ಜಕ್ಕಿಗೆಯು ಹಾದರಗಿತ್ತಿಯು ಹದಿನೆಂಟುಜಾತಿಯು ಮನೆಯಲ್ಲಿ ತೊತ್ತಾಗಿ ಹುಟ್ಟಿದ ಶಿವದ್ರೋಹಿಯು ಲಿಂಗವಂತರ ಮನೆಯ ಹೊಗಿಸುವರೆ (ಚೂನ್ನಸಂ. ೨೪೪-೦೦); ಗೋಣಾಗೊಯ್ಯೆಯರು. . . ಹಾದರಗಿತ್ತಿಯರು ಬ್ರಹ್ಮಕ್ಷತ್ರಿಯರನವರತತವಮಂ ಹೊನ್ನುಬಾಕಿಯರು (ಚಕ್ಷ. ೯೦-೩೩); ಗುಡನಲ್ಲಿ ವಿಕಾರನಾದ ನೀಚವ್ಯಾಪಾರವಂ ಮಾಡುವಳು. ಹಾದರಗಿತ್ತಿಯಂತೆ ಒಯ್ಯಾರದಿಂ ನಟಿಪಳು (ಅಮಕಾ. ೨೦೯) ; ಹಾದರಗಿತ್ತಿ ಕಾಲು ಹಸಮಣೆ ಮೇಲೂ ನಿಲ್ಲುವುದಿಲ್ಲ (ಗಾದೆ).

[ ಪಾದರ$_1$ (<ಪಾರದಾರ)+ –ಗಿತ್ತಿ ]

**ಪಾದರಜ** (ನಾ). ೧. ಕಾಲುನಡಗೆಯಿಂದೆದ್ದ ಧೂಳು ; ಕಾಲುಧೂಳಂ : ಭಯವಶವಿಮುಕ್ತಭೂಷಣಚಯ ಕೇರಳಕಾಮಿನೀಮುಖಶ್ರೀನ್ಯವಸೇನೆಯ ಪಾದರಜದಿನುಂದೇನಯುತ್ತಕುಂಟುಮವಿಳ ಸವಂ ತಾಳ್ದಿದುದೋ ( (ಚಾಂತಿಪು. ೦೦-೦೩). ೨. ಹೆಜ್ಜೆಗಳಿಗೆ ಅಂಟಿರುವ ಧೂಳು : ಪಾದಧೂಳಿ : ಕಮುಳಭವಾದ್ಯರುಂ ಪಡೆವರೇ ಹರಿಪಾದರಜೋಲವಪ್ರಸಾದವಂ (ಜಗಪ. ೩-೯೨); ಕಾಲಿಗೆ ಬಿದ್ದು ನಮಸ್ಕರಿಸಿ, ಪಾದರಜವನ್ನು ನನ್ನ ತಲೆಯ ಮೇಲೆ ಸಿಂಪಿಸಿ . . . ಓಡಿ ಹೋದೆನು (ಶುಷಿ. ೩). [ ಪಾದ+ರಜ$_1$ ]

**ಪಾದರಸ** (ನಾ). ೧. ಒಂದು ಬಗೆಯ ದ್ರವರೂಪದ ಲೋಹ ; ಪಾರಜ : "ರಸ ಪಾರದ ಸೂತಕ ಚಪಲ[ಸಂ]ಜ್ಞಿತಂ ಗಿರಿಶವೀರ್ಯಮದು ಪಾದರಸಂ" (ಚನ್ನ್ಯಕೋ. ೯೯-೦೩); ವೈಕ್ರಯಕಶರೀರಂಗಳ್ ಪಾದರಸದ ಮಾರ್ಗದಿಂ ಪತ್ರಾತ್ರಾವಿರ್ಕುಂ (ಸುಕುಮಾ. ೦೦-೯೬೪) ; ಚೂರಿಸಿ ನಿಲುಕಿದರು ಫಣಿಯಂತೆ ಪಮುವೈಲುಳಿಯಲೊಲೆದರು ಪಾದರಸದಂದದಲಿ ಪಟುಭಟರು ((ಕುಮಾ.ಗ. ೬-೨) ; ಪಾದರಸ ಕರತಳದಲಿರುತದನಂಟದಂದದಿ ತಿಳಿವಿಗರು ಸಂಸ್ಕೃತಿಯಲಿರೆ ನಿರ್ಲೇಪರೆಂದೆನಿಸು (ಗಗಚಾ. ೦೩-೨೩); ಇಲಿ ಪಾದರಸ ಕುಡಿದ ಹಾಗೆ (ಗಾದೆ). ೨. (ಅಲಂ) ಚುರುಕಾದ ವ್ಯಕ್ತಿ: ಉರಿಯ ಬಂದಿಯ ಹಿಡಿದು ಹೆಚ್ಚುವ ದೊರೆಯಲೇ ದಿಟ ಪಾದರಸವೆಲೆಯರಸ ನಿನ್ನ ಕುಮಾರನು (ಕುಮಾ.ರಾ. ೯-೯೦).

[<ಪಾರದ+ರಸ./ತವಿ. ಪಾತ್ರರಚ ; ತುಳು. ತೆಲು. ಪಾದರಸ ]

**ಪಾದರಿ**$_1$ (ನಾ). ಜಾರೆ ; ವ್ಯಭಿಚಾರಿಣಿ ; ಹಾದರಗಿತ್ತಿ : ಪೋದಿರುಳಿನ ಕಿತ್ತಡವಂ ಮಾೂಣಲೆಯಾಗಿಂತು ನುಡಿದೊಡಜಿದುದನಜಿದಾ ಪಾದರಿ ಬೇಸತ್ತವೊಲಿರೆ ಪೋದು ಬಗೆ ಕದಡಿ ತಾಯ ಪೊರೆಗೆ ನೃಪೇಂದ್ರಂ (ಹುಕೋಚ. ೨-೬೦); ಚಪಲೆ ಚಂಚಲೆ . . . ಪರಪಶೆ ಪಾದರಿ ವಿಫಲೆ ವಿಹ್ವಲೆ . . . ತಾಮಸಿಯೆನಿಪ ವನಿತೆಯರ ನಿಜಕ ನಿಲಿಸಿ ನಿಶ್ಚೈಸಿದೊಡೆ ಬಳಿಕ ಬಳಲಿಕೆ ಬಾರದೆ (ಕೃಚಾಶಾ. ೩-೬೦) ; ಅತಿಪಾಂತಂ ಮಧುಪಾನವ್ಯಸನದೊಳ್, ಮಧುಪಾನವ್ಯಸನಪರಿಾಜಿದಿಯೊಳ್, ಅಜಿದಿ ಪಾದರಿಯೊಳ್, ಪಾದರಿ ಬನದೊಳ್ಳಲ್ದಿಲ್ಲಂ (ಅಶೂಶ್ಕ. ೯-೨).

[ ಪಾದರ$_1$ (<ಪಾರದಾರ)+ –ಇ$_2$ ]

**ಪಾದರಿ**$_2$, ಹಾದರಿ (ನಾ). ಒಂದು ಬಗೆಯ ಮರ ಮತ್ತು ಅದರ ಹೂವು ; ಪಾಟಲಿ : "ಪಾದರಿ ಪಾಟಳಂಖ್ಯಂ" (ಚನ್ನ್ಯಕೋ.೩೩-೦); ಪಾದರಿ ಪೂತಾವು ತೋರಿದುವಾದುವು ಮಲ್ಲಿಗೆಗಳ್ (ಅಂಕ್ಷ. ೦೦-೬೩); ಅತಿಪಾತಂ ಮಧುಪಾನವ್ಯಸನದೊಳ್, ಮಧುಪಾನವ್ಯಸನಪರಿಾಜಿದಿಯೊಳ್, ಅಜಿದಿ ಪಾದರಿಯೊಳ್, ಪಾದರಿ ಬನದೊಳ್ಳಲ್ದಿಲ್ಲಂ (ಅಶೂಶ್ಕ. ೯-೨). **ಹಾದರಿ** : "ಹಾದರಿ—ಪಾಟಲಾ—ಪಾದರಿ" (ಕರ್ಣಕೋ. ೯೯); ಕೇದಗೆ ಸಂಪಗೆ ನಾಗರ ಹಾದರಿಯದಿರ್ಗುಂತೆ ಸುರಿಯಿ ಪಕುಳ ಲವಂಗಂ ಜಾದಿ ಮೊದಲಾದನೇಕ ಪೂದೋಂಟಂ ಸುರಭಿಪರಿಮಳವೋದಂಗಳ್ (ಎಕ. VIII. ಶಾಗಿಕ.೦೦೯-೩೦೨, ೧೦೪೨); ಅಶೋಕೆಯನೊದೆದು ಪಲ್ಲವಿಸೆಂಬ ಹಾದ[ಹಾಕಂ. ಪಾದಿ] ಬೆಳ್ಳುಗೆ ನೆಳಲ್ಗೆ ಹರಿಣಂಗಳಂ ಹೊಡೆಯೆಂಬ ಕೆಲಸದ ನೆವದಿಂ ರತಿವಂಗಳಿ . . . ಕಳುಪಿ (ಶಂಚಿ. ೦೯-೩೯); ಹಾಲೆ ಹಾದರಿ ಬನ್ನಿ ಮೊದಲಾದ ತರುಗಳ ಜಾಲದಿಂದೆಸೆದುದಾ ವಿಪಿನ (ಅಕೂಪ. ೦೩-೩೯).

[ <ಸಂ. ಪಾಟಲಿ./ತವಿ. ಮಲ. ಪಾತಿರಿ ; ತುಳು. ಪಾದರಿ ; ತೆಲು. ಪಾದಿರಿ, ಪಾದಿಲಿ ]

**ಪಾದರಿ**$_3$ 'ಪಾದ್ರಿ' ನೋ.

**ಪಾದರಿಗ**, ಪಾರದರಿಗ, ಹಾದರಿಗ (ನಾ). ಹಾದರ ಮಾಡುವವನು ; ವ್ಯಭಿಚಾರಿ ; ವಿಟ : ಮಿಾನ್ಗಳಂತೆ ಗಾಳದೊಳ್ ತೊಡರ್ದಿರ್ದ ಪಾದರಿಗರಿಂ (ಅಕ್ಷರಾ. ೩೦೯ ಚೂಶ್ತ್ರ); ವೃತ್ತಿಯಂ ರಕ್ಷಿಸುವ ಸ್ವಾಮಿ ಚೋರ ಜಾರ ಪಾದರಿಗರ್ಕಳಂ ಕೊಲ್ಲದಿರ್ಕುಮೆ (ಚಚ್ಚಾಶಾ. ೬೦-೯); ಪಾದರಿಗೆಯ ಮಾೂಣನಿದು ಪಾದರಿಗನಂ ಕೊಲ್ವರು (ಕೌಇ. IX-1. ೬೬-೩೩; ೨೨೨); ನಾವಿದನ ಪೆಂಡತಿಯುಷ್ಪ ದೂದವಿ ಪಾದರಿಗನಂ ಸಂಕೇತಸ್ಥಾನದೊಳಿರಿಸಿ ಪರಿತಂದು (ಶಂಕಚಂ. ೬೩-೩). **ಪಾರದರಿಗ** : ಕ್ಷಮಾಕರನಿನಾತ್ಮಜಾಂಶಗತನಾಗೆ ನೋಡಲ್ ದಿನಾಧಿಪಪ್ರಭೃತಿ ಷಡ್ಗ್ರಹಂಗಳವನಲ್ಪಪುತ್ರಂ ಸುಖಮ್ಮಪೇತಧನಭಾಗಿ . . . ಪಾರದರಿಗಂ ಮಹಾಕೃಪಣನಕ್ಕುಮಾ ಲಗ್ನಜಂ (ಜಾತಕ. ೨೦-೨೨). **ಹಾದರಿಗ** : "ಜಾರಃ, ಉಪಪತಿಃ — ಈ ೨ ಹಾದರಿಗಂ" (ಕಣಾಷು. ೬೩-೨೭೯) ; ಕಳ್ಳ ಹಾದರಿಗರ ಸಂಪಾದನೆ ಹೊಳ್ಳ ಕುಟ್ಟಿ ಕೈ ಹೊಟ್ಟಾದಂತೆ ಕಾಣಾ (ಲೇರಾಶ. ೨೨-೩೮); ಕಡುಹುಗಳ್ಳನು ಹಾದರಿಗನುಂ ಗಡಣೆಗಿವರೆನೆ ಶಂದ್ರಿಕಂ ಕುಳಗಡಿಕನಹ ಕೀಚಕನು ನೆಟಿ ಕೆಡಿವಡೆದರು (ಬಸಪು. ೦೦-೩೦); ಹೋದನತ್ತಲು ಸತಿಯ ಕೊಂಡಾ ಹಾದರಿಗನು (ಕೌಶಿಕಾ. ೬-೯೩).

[ ಪಾದರ$_1$ (<ಪಾರದಾರ)+ –ಇಗ ]

**ಪಾದರಿಗೆ** (ನಾ). =ಪಾದರಿ$_1$ : ಪಾದರಿಗೆಯ ಮಾೂಣನಿದು ಪಾದರಿಗನಂ ಕೊಲ್ವರು (ಕೌಇ. IX-1. ೬೬-೩೩; ೨೨೨); ಪಾದರಿಗೆಯ ದೂದವಿಯಂತೆ ಪೆಜರಂ ಸಂಕೇತಂಗೊಳಿಸದೆ (ರಥೋಮ್ಮ. ೩-೯೯); ನಿಗ್ರಹಕ್ಕೆ ಪಾದರಿಗೆಯ ನೋಡಿ ನಿಗ್ರಹಮನೆಯ್ದುವರುಗ್ರದುರಂತದುಃಖಮಂ (ಚಶಾರ. ೩೦೦). [ ಪಾದರಿಗ+ –ಎ$_2$ ]

**ಪಾದರಿಸು** (ಕ್ರಿ). ಹಾದರ ಮಾಡು ; ವ್ಯಭಿಚಾರ ಮಾಡು : ಜಲಜಶರತಾಪವುಂ ನಿಲಿಸಲಾಜಿದೆ ಬಾಧೆಗಳು ತೀರಿಯದಂತೆ ಪಾದರಿಸು ತದೆಕದೋಳತಲು (ಅಶಿಚ. ೦೦-೩೯); ದನುಜೇಂದ್ರನಾತ್ಮಸುತೆ ಕರ್ಣಿಕೆಯು ಪಾದರಿಪುದನುಮತವೆ (ಚಚಷೋ. ೨೬-೬).

[ ಪಾದರ$_1$ (<ಪಾರದಾರ)+ –ಇಸು$_1$ ]

**ಪಾದಲೇಪೌಷಧಿ** (ನಾ). ಕಾಲಿಗೆ ಹಚ್ಚಿಕೊಳ್ಳುವ ಒಂದು ಬಗೆಯ ಅಂಜನ : ಪಾದಲೇಪೌಷಧಿಪ್ರಭಾವದಿಂ ವಿಂಶತಿಸಹಸ್ರಸೋಪಾನಂಗಳ ನಸಂಗದಿಂದಮೇಜಿ ಗಂಧಕುಟಿಯಂ ಪೊಕ್ಕು (ಚಂದ್ರಪ್ರ. ೩-೩ ಕ); ಅಲ್ಲಿ ಸರ್ವರೂ ಪಾದಲೇಪೌಷಧಿಸಾಮರ್ಥ್ಯದಿಂ ಆ ಸೋಪಾನಗಳನ್ನಾರೋಹಿಸಿದರು (ಪುಣ್ಯಾಶ. ೦೨೯). [ ಸಂ. ]

**ಪಾದವಟ್ಟ** (ನಾ). ಕಾಲಿನ ಒಂದು ಬಗೆಯ ಆಭರಣ : ಕಾಲಂದುಗೆ : ಪೆಂಡೆಯ ಪಾದವಟ್ಟಗಳೊಪ್ಪಿದುವು ಚಂದ್ರಮಂಡಲಮುಖಿಯಡಿಗಳೊಳು (ಚಿಕ. ೯೦-೬೦). 'ಪಾಯವಟ್ಟ' ಪರಾ. [ <ಪಾದಪಟ್ಟ ]

**ಪಾದವಟ್ಟಿಗೆ** (ನಾ). ಮೆಟ್ಟಿಲು ; ಸೋಪಾನ : ಪಾಸಿದ ತಣ್ಣಾದಿರಜೆಯ ಪಾದವಟ್ಟಿಗೆಗೊಳಗೇರಿಯ ನಿಡುಮಾರಂಗಳಿಜಿಂಬಿನ ಕಟ್ಟರಿಲೆಯನೊಳಕೊಂಡು. . . ಕಿಜುಗಾಳಿಯಲೆಪದಿಂ ಕಲ್ಪರಿಸ ತೆರೆಯನೊಂದು ಕೊಳಂ ಪಗಸ್ಸೆಣ್ಣಾ ಕ್ರೀಡಿಯೆಂಬಂತಿರೆ ಸೊಗಯಿಸಿದತ್ತು (ಅಶೂಶ್ಕ. ೩೩-೦೯).

[<ಸಂ. ಪಾದಪಟ್ಟಿಕಾ ]

**ಪಾದವಲ್ಮೀಕ** (ನಾ). ಆನೆಯ ಕಾಲಿನಂತೆ ಕಾಲು ದಪ್ಪವಾಗಿ ಊದಿಕೊಳ್ಳುವ ಒಂದು ಬಗೆಯ ರೋಗ; ಆನೆಕಾಲುರೋಗ: "ಶ್ಲೀಪದಂ, ಪಾದವಲ್ಮೀಕಂ ... ಈ ೨ ಬಚ್ಚೆಗಾಲ್" (ಕರಾಟು. ೯೯-೪೩೦). [ಪಾದ+ವಲ್ಮೀಕ]

**ಪಾದವಾಸ** (ನಾ). =ಪಾದವಾಶ ೧: ಪರಪದದ ಮೊದಲೊಳ್ ಪಕಾರ ಬಕಾರ ಮಕಾರಂಗಳಿರೆ ವತ್ವಮಕ್ಕುಂ . . . ಪಾದಪಾಶ_ಪಾದವಾಸ, ಯೋಗವಾಹಕಾ — ಜೋಗವಾವುಗೆ (ಶಬ್ದ. ೨೯೩ ವೃ ಯೋ). [<ಸಂ. ಪಾದಪಾಶ]

**ಪಾದವಿನ್ಯಾಸ** (ನಾ). ೧. ನಡೆಯುವಾಗ ಕಾಲನ್ನು ಇಡುವುದು. ೨. ಪದ್ಯದ ಪಾದಗಳನ್ನು ಜೋಡಿಸುವುದು. ೩. ಕಿರಣಗಳನ್ನು ಹರಡುವುದು, – ಪಸರಿಸುವುದು. ೨, ೩: ಅತಿಶಯಪದಾರ್ಥನಿಕರಪ್ರತೀತಿಯಿಂ ಪಡೆದ ಪಾದವಿನ್ಯಾಸಂ ಭೂನುತವಾಗದಲ್ತೆ ನಿರ್ದೋಷತೆಯಿಂದಲ್ಲದೆ ಸಮಂತು ಕವಿಗಂ ರವಿಗಂ (ಶಬ್ದಾನು. ೦-೯೬). [ಪಾದ+ವಿನ್ಯಾಸ]

**ಪಾದವಿಷ್ಟರ** (ನಾ). ಕಾಲಿಡುವುದಕ್ಕಾಗಿ ಮಾಡಿದ ಪೀಠ; ಕಾಲಿಣೆಮಣೆ; ಪಾದಪೀಠ: ಕ್ಷಮಾರಾಪ್ಪರ್ ನರಾಕೋವಿದರ್ ಸಕಳಶಾಸ್ತ್ರಾರ್ಥರ್ . . . ಕಾಲೀಸರ್ ನೃಪೇಂದ್ರಮೃಗೇಂದ್ರಾಸನಪಾದವಿಷ್ಟರದೋಳಿರ್ದರ್ (ಆದಿಪು. ೨-೨೪). [ಪಾದ+ವಿಷ್ಟರ]

**ಪಾದಶಾ** 'ಪಾತಶಹ' ನೋ.

**ಪಾದಶಾಖೆ** (ನಾ). ಕಾಲಿನ ಬೆರಳು. [ಸಂ. ಪಾದಶಾಖಾ]

**ಪಾದಶಾಯಿ** 'ಪಾತಷಾಹಿ' ನೋ.

**ಪಾದಶಾಹ** 'ಪಾತಶಹ' ನೋ.

**ಪಾದಶಿಲೆ** (ನಾ). ಕಂಬದ ತಳಕ್ಕೆ ಆಧಾರವಾಗಿ ಕೊಡುವ ಕಲ್ಲು; ಕಂಬದ ಅಡಿಗಲ್ಲು: ಎನ್ನ ಪಾದವೇ ಪಾದಶಿಲೆಯಾಗಿ ಎನ್ನ ಕಾಲೇ ಕಡಹದ ಕಂಬಗಳಾಗಿ (ಬಸವ. ೦೮೦-೬೫೦). [ಪಾದ+ಶಿಲೆ]

**ಪಾದಶೂಲೆ** (ನಾ). ಕಾಲಿನಲ್ಲಿ ಉಂಟಾಗುವ ನೋವು: ಮೂರು ಮಾನ ಪಚ್ಚೆಗೆ ಒಂದು ಹಿಡಿ ಲೊಕ್ಕಿಯ ಸೊಪ್ಪಿನೊಳಗೆ ಹೊಯ್ದು . . . ಸೇವಿಸಿ ವಾರ್ದನ ಪಾಪೆ ಪಾಂಡ್ವಾಗ್ನಿ. ಪಾತಶೂಲೆ. ಪಾದಶೂಲೆ. ಸರ್ವಾರ್ನ(ಗ)ಶೂಲೆ. ಮುಡುಬುಶೂಲೆ, ಹೋಗುವುವು (ವೈದ್ಯ. ೬೩). [ಪಾದ+ಶೂಲೆ₁]

**ಪಾದಶೃಂಖಲೆ** (ನಾ). ಕಾಲನ್ನು ಕಟ್ಟಲು ಉಪಯೋಗಿಸುವ ಸರಪಣಿ: ಪರಪದಂ ತದ್ಭವವಾದ ಸಮಾಸಕ್ಕೆ... ಉತ್ತರದೇಶ_ಉತ್ತರದೇಸ . . . ಪಾದಶೃಂಖಲೆ_ಪಾದಸಂಕಲೆ (ಶಬ್ದ. ೨೯೯ ವೃ ಯೋ). [ಪಾದ+ಶೃಂಖಲೆ]

**ಪಾದಷಹ** 'ಪಾತಶಹ' ನೋ.

**ಪಾದಷಹಾ** 'ಪಾತಶಹ' ನೋ.

**ಪಾದಷಾಹ** 'ಪಾತಶಹ' ನೋ.

**ಪಾದಸಂಕಲೆ** (ನಾ). = ಪಾದಶೃಂಖಲೆ: ಪರಪದಂ ತದ್ಭವವಾದ ಸಮಾಸಕ್ಕೆ — ಉತ್ತರದೇಶ — ಉತ್ತರದೇಸ . . . ಪಾದಶೃಂಖಲೆ — ಪಾದಸಂಕಲೆ (ಶಬ್ದ. ೨೯೯ ವೃ ಯೋ); ಮಾನಸಾಲೆ. ಬಾಹುಬಲೆ. ಪಾದಸಂಕಲೆ (ಕರ್ಣಾ. ಶು. ೨೯೬ ವೃ ಯೋ). [ಪಾದ+ಸಂಕಲೆ]

**ಪಾದಸರ** (ನಾ). ಕಾಲಿಗೆ ಧರಿಸುವ ಒಂದು ಬಗೆಯ ಸರಪಣಿಯಾಕಾರದ ಆಭರಣ; ಕಾಲುಸರ: ನಗನ್ಯೋಹನಾಕಾರದಿಂ . . . ಪಾದಸರ ಕಾಲುಂಗುರಗಳಿಂ ಬಂಧುರವಾದ ಪಾದದ್ವಂದ್ವವಿನ್ಯಾಸದಿಂ (ಸೌಗಂಂ. ೩೯-೦೦); ಹೆಜ್ಜೆಯ ಕುಣಿತಕ್ಕೆ ತಕ್ಕಂತೆ ಈ ಪಾದಸರಗಳ ಕಿರುಗೆಜ್ಜೆಯ ನಾದ ಅನುರಣಿಸುವಂತಿದೆ (ಸೂಳಂಂ. ೯೩). [ಪಾದ+ಸರ₃]

**ಪಾದಸಾಲೆ** (ನಾ). ಕಾಲಿನ ಆಭರಣ: ಬಜ್ಜಣೆಯು ಕಾಳಂಜಿಯಿಂದವಹ ಪಾದಸಾಲೆಯು ಮುಖ್ಯವುಪಕರಣವ್ರಂದವಂ ನೆರಪಿ . . . ಶೃಂಗರಿಸುತಿರಲು (ಪಶುಪತಿ. ೨೬-೬೩). [ಪಾದ+ಸಾಲೆ₁ / ತವಿ. ಪಾತ್ತಚಾಲ]

**ಪಾದಾಂಗುಲೀಯಕ** (ನಾ). ಕಾಲಿನ ಬೆರಳಿಗೆ ಇಟ್ಟುಕೊಳ್ಳುವ ಉಂಗುರ; ಕಾಲುಂಗುರ; ಕಾಲುಸುತ್ತು: ಪಾದಾಂಗುಲೀಯಕಗಳು_ಸ್ತ್ರೀಯರುಗಳು ಕಾಲುಬೆರಳುಗಳಲ್ಲಿ ಉಂಗುರಗಳು, ಓಲ್ಲಿ . . . ಧರಿಸಿದಲ್ಲಿ ಹೆಚ್ಚಾದ ಮಂಗಳವೂ, ಸರ್ವದುಷ್ಟಗ್ರಹೋಚ್ಚಾಟನವೂ ಸದಾ ಆನಂದವೂ ಆಗುವುವು (ಸಕಲ. ೯೦). [ಸಂ. ಪಾದಾಂಗುಲೀಯಕ]

**ಪಾದಾಂಬು** (ನಾ). ಪಾದದಲ್ಲಿ ಹುಟ್ಟಿದ ನೀರು: ನೈಜದಿಂದಜನ ಕರಪಾತ್ರದಗ್ರೋದಕಂ ವೈಜಯಂತೀಧರನ ಪಾದಾಂಬು . . . ತಾನಂತು ಗುಜ್ಜನತಿಪಾದಂಗಳ ಪ್ರೈಜೋಡನರಿಗಿದು ಬಿಸುಡುವ ಗಂಗೆ ಬೆಡಗಿಡಳ್ (ಕೈ.ಜಿಹಾ. ೯-೨೬). [ಪಾದ+ಅಂಬು₁]

**ಪಾದಾಕ್ಷ** (ನಾ). ಪಾದದಲ್ಲಿ ಕಣ್ಣುಳ್ಳವನು; ಶಿವ; ಪ ವಿಷ್ಣುವು ಕ್ಷುಪನೆಂಬ ರಾಜನ ನಿಮಿತ್ತವಾಗಿ ದಧೀಚಿಮುನಿಯನ್ನು ಚಕ್ರಾಯುಧದಿಂದ ಹೊಡೆದಾಗ ಅದು ಮುರಿದು ಹೋಗಲು, ಶಿವನನ್ನು ಮೆಚ್ಚಿಸಿ ಪುನಃ ಚಕ್ರವನ್ನು ಪಡೆಯುವೆನೆಂದು ವಿಷ್ಣುವು ಸಹಸ್ರಕಮಲಗಳಿಂದ ಅರ್ಚಿಸತೊಡಗಿದನು. ಆಗ ಒಂದು ಕಮಲವು ಸಾಲದಾಗಲು ಭಕ್ತಿಭರದಲ್ಲಿ ತನ್ನ ಕಣ್ಣನ್ನೇ ಕಿತ್ತು ಶಿವನ ಪಾದಗಳಿಗೆ ಅರ್ಪಿಸಿ, ಸಂತುಷ್ಟನಾದ ಶಿವನಿಂದ ತನ್ನ ಕಣ್ಣು, ಚಕ್ರ ಎರಡನ್ನೂ ಮರಳಿ ಪಡೆದನು. ಇದರಿಂದ ಶಿವನು 'ಪಾದಾಕ್ಷ'ನಾದನೆಂದು ಶೈವಪುರಾಣಗಳಲ್ಲಿ ಹೇಳಿದೆ: ಭಾಳಾಕ್ಷ ಪಾದಾಕ್ಷನಂ . . . ಶಿವನಂ ಸೋಮಾಭರಣಾಂಗನಂ ಹೃದಬ್ಜದೀಪ ದೋಟ್ಟು ನಾಡೆ ನೆನೆದಂ (ಹರಿಶ್ಚ. ೨-೬). 'ಕಣ್ಣಡಿಗ' ಪರಾ. [ಸಂ. (ಪಾದ+ಅಕ್ಷಿ+–)]

**ಪಾದಾಗ್ರ** (ನಾ). ಕಾಲಿನ ತುದಿ; ತುದಿಗಾಲು: "ಪಾದಾಗ್ರಂ. ಪ್ರಪದಂ — ಈ ೨ ತುದಿಕಾಲ್" (ಕರಾಟು. ೯೯-೪೩೩); ತೊಂಡರೆ ಪಾದಾಗ್ರದೆ ನೂಂಕಿದಂ ಮುಳಿದವಂ ಪಾರಾಶರಿಯೋಳ್ ಚೇಪ್ರಸಂ (ರಾಜಶೇ. ೯-೨೨). [ಪಾದ+ಅಗ್ರ₁]

**ಪಾದಾಘಾತ** (ನಾ). ಕಾಲಿನ ಹೊಡೆತ; ಒದೆತ: ಅಸುರಿತು ಪಾದಾಘಾತದಿಂದ ಧರೆ (ಜೈಮಿ. ೩೯೦); ಅಶೋಕವೃಕ್ಷಗಳು . . . ಧಾರಿಣಿಯುವತೀ ಪಾಲವಿಕೆಯಿಂದವೋ ಪಾದಘಾತದೋಹದ ಪಾಡಿಸಿಕೊಂಡಂತೆ ಪ್ಯೆಟುಲ್ಲ ಹೂ ತಳೆದಿತ್ತು (ಪಶು.ತ. ೦೬೦). [ಪಾದ+ಆಘಾತ]

**ಪಾದಾತ** (ನಾ). ೧. ಕಾಲುನಡೆಯ ಸೈನಿಕ; ಕಾಲಾಳು: "ಪದಾತಿ, ಪತ್ತಿ, ಪಾದಾತಃ . . . ಪಾದಚಾರೀ — ಈ ೮ ಕಾಲಾಳ್" (ಕರಾಟು. ೬೯-೨೯೬); "ಯಾತಂ ಪದಾತೀಃ . . . ಪಾದಾತಂ ಪದಾಜಿಯಂ ಪದಿಕನೆನೆ ಕಾಲಾಳ್" (ಚುಂಗಣ. ೬೩-೨೬). ೨. ಕಾಲಾಳುಗಳ ಸೈನ್ಯ: ಪಡೆ: ಪದಾತಿ ಸೈನ್ಯ: ನಡೆದುದು ಪಾದಾತಂ ಛತುರಶೀತಿಕೋಟಿ ಪ್ರಮಿತಂ (ಆದಿಪು. ೦೦-೩೩); ಆ ಪಾದಾತಂ ಲಕ್ಷಾಲಕ್ಷವಂ ಪ[ರಿ]ವೀಕ್ಷಿಸಲರಿಯಂಬುದರಿದಿರ್ ಕಾದುವವರೊಳರೇ (ಶಾಂತಿಪು. ೦೦-೦೦೬). [ಸಂ.]

**ಪಾದಾತಿ** (ನಾ). ಕಾಲಾಳು; ಪದಾತಿ. [ಸಂ.]

**ಪಾದಾತಿಕ** (ನಾ). ೧. – ಪಾದಾತ ೧: "ಪದಾತಿ, ಪತ್ತಿ, ಪಾದಾತಃ, ಪಾದಾತಿಕಃ . . . ಪಾದಚಾರೀ — ಈ ೮ ಕಾಲಾಳ್" (ಕರಾಟು. ೬೯-೨೯೬). ೨. = ಪಾದಾತ₂: "ಪದಿಕಂ ಪತ್ತಿ ಪದಾತಂ ಪದಾತಿ ಪಾದಾತಿಕಂ ಪಾದಾಜಗೆ ನಾಮಂ" (ಚಿತ್ರು ೬೩-೦೦). [ಸಂ.]

**ಪಾದಾದಿಯಮಕ** (ನಾ). [ಕಾವ್ಯಮೀ] ಶಬ್ದಾಲಂಕಾರಗಳಲ್ಲಿ ಒಂದು: ಪದ್ಯದ ಸಾಲುಗಳ ಮೊದಲಲ್ಲಿ ನಿಯತವಾಗಿ ಬರುವ ಯಮಕ: ಪತ್ತಿ

ಪಾದಾದಿಯವಾಕಕ್ಕೆ — ಉಪದಾತ್ತಸುತೋನ್ನತವಮಂ ದ್ವಿಪವುದವರ ಪೂರ್ಣಗಿರಿಸರಿತ್ಸಂತತಿಯುಂ ಉಪದಾತ್ತಸುತೋನ್ನತವಮಂ ತಪನಕರೋತ್ಕ್ರ ಪನತಪ್ರತಪನೋಪಲವಮಂ (ಆದಿಪು. ೩೬೯). [ಸಂ.]

**ಪಾದಾಪವಿದ್ಧ** (ನಾ). [ನಾಟ್ಯ]ನೃತ್ಯದ ಒಂದು ಭಂಗಿ ; ನೂರೆಂಟು ಕರಣಗಳಲ್ಲಿ ಒಂದು ; ❀ " ಕಟಕಾಮುಖ ಹಸ್ತಗಳೆರಡನ್ನು ಒಂದ ಕ್ಕೊಂದು ಹಿಮ್ಮುಖವಾಗಿರುವಂತೆ ನಾಭಿಯ ಹತ್ತಿರ ಹಿಡಿದು ಸೂಚೀಪಾದದಿಂದ ಅಪಕ್ರಾಂತಚಾರಿಯನ್ನು ಮಾಡುವುದು " (ಅಸ್ತ್ರಂ. ೨೧೯ ಗದ್ಯಾನುವಾದ) ; ತಲಪುಷ್ಪಪುಟ, ಲೀನ . . . ದಂಡಪಕ್ಷ, ಪಾದಾಪವಿದ್ಧ . . . ಗಂಗಾವತರಣ — ಈ ನೂಱೆಂಟು ಕರಣಂಗಳ್ (ಅಸ್ತ್ರಂ. ೪-೯೨ ವ). [ಪಾದ + ಅಪವಿದ್ಧ]

**ಪಾದಾಪವಿದ್ಧಕ** (ನಾ).=ಪಾದಾಪವಿದ್ಧ : ಸಲಿ ವಲಿತ ದಂಡಪಕ್ಷಂ ಸುಲಲಿತ ಪಾದಾಪವಿದ್ಧಕಂ . . . ಭುಜಗತ್ರಸ್ತರೇಚಿತಾಖ್ಯಮಿವಿಂತುಂ (ಅಸ್ತ್ರಂ. ೪-೩೦). [ಸಂ.]

**ಪಾದಾಭಿಘಾತ** (ನಾ).=ಪಾದಾಘಾತ : ಪಾದಾಭಿಘಾತವಿಚಲನ್ಮೇದಿನ್ಯುತ್ಥಿತ ವಿಶಾಲಧೂಳಿಪಟಲಾಚ್ಛಾದಿತಗಗನಂ ನಡೆದುದು ಪಾದಾತಂ ಚತುರಶೀತಿ ಕೋಟಿಪ್ರಮಿತಂ (ಅಜಿತ. ೧೦-೩೩). [ಪಾದ + ಅಭಿಘಾತ]

**ಪಾದಾಭಿಷೇಚನ** (ನಾ). ಪಾದಗಳಿಗೆ ಅಭಿಷೇಕ ಮಾಡುವುದು : ಪೌರವರ್ಗಾಡಿದ ನಲಿನೀಪತ್ರಪುಟಪ್ರಸಾದಿತಸಾರಜಲಪಾದಾಭಿಷೇಚನದೊಳ ಮಭಿಷೇಕವಿಧಿಯಂ ನಿರ್ವರ್ತಿಸಿ (ಅಜಿತ. ೬-೩೯ ವ). [ಪಾದ + ಅಭಿಷೇಚನ]

**ಪಾದಾಭ್ಯಂಗನ** (ನಾ). ಎಣ್ಣೆ ಮುಂತಾದ ಲೇಪನದ್ರವ್ಯಗಳನ್ನು ಪಾದಗಳಿಗೆ ಹಚ್ಚಿ ತೊಳೆಯುವುದು : ಪಾದಾಭ್ಯಂಗನದಿಂದ ನೇತ್ರ ರೋಗವೂ . . . ಶಿರೋಭ್ಯಂಜನದಿಂದ ಸರ್ವರೋಗವೂ ಹರವಾಗುವುದು (ಸಕಲ್ಯ. ೩೦). [ಪಾದ + ಅಭ್ಯಂಗನ]

**ಪಾದಾರ್ಚನೆ** (ನಾ). ಪಾದಗಳನ್ನು ಪೂಜಿಸುವುದು,—ಅರ್ಚಿಸುವುದು; ಪಾದಪೂಜೆ : ಭಕ್ತನ ಮಠವೆಂದು ಜಂಗಮ ನಡೆದು ಬಂದಲ್ಲಿ . . . ಕರೆದು ಕುಳ್ಳಿರಿಸಿ ಪಾದಾರ್ಚನೆಯಂ ಮಾಡಿ ಪಾದೋದಕಮಂ ಕೊಂಡು (ಬಸವ. ೬೬೪); ಪಾದಾರ್ಚನೆಯ ಮಾಡುವೆನಯ್ಯಾ ಪಾದೋದಕದ ಹಂಗಿಗೆ (ಬಸವ. ೬೬೭). [ಪಾದ+ಅರ್ಚನೆ]

**ಪಾದಾರ್ಧ** (ನಾ). ಪದ್ಯದ ಸಾಲಿನ ಅರ್ಧಭಾಗ ಯಮಕಂ (ಪ)ದ ಪಾದಾರ್ಧ ಸಮಶ್ಲೋ(ಕಾದಿ)ಗೋಚರಂ (ಕವಿರಾ. ೨-೦೨೯). [ಪಾದ+ಅರ್ಧ]

**ಪಾದಾವರ್ತ** (ನಾ). ೧. ಬಾವಿಯಿಂದ ನೀರನ್ನು ಮೇಲಕ್ಕೆತ್ತಲು ಉಪಯೋಗಿಸುವ (ಕಾಲಿನಿಂದ ತಿರುಗಿಸಬಹುದಾದ) ಒಂದು ಬಗೆಯ ರಾಟೆ,—ಯಂತ್ರ : " ಉದ್ಘಾಟಕಂ, ಘಟೀಯಂತ್ರಂ, ಪಾದಾವರ್ತಃ, ಅರಘಟ್ಟಕಃ — ಈ ೪ ಜಾಟಣೀ " (ಹಲಾಯು. ೦೦೩-೩೩). ೨. ಕ್ಷೇತ್ರದ ಒಂದು ಅಳತೆ; ಒಂದು ಚದರಡಿ : ಪಾದಾವರ್ತ ಶತತ್ರಯಮಂ (ಎಕ. III. ೩೨೦-೦೩ ; ೬೭೦). [ಸಂ.]

**ಪಾದಾಶ್ರಿತ** (ನಾ). ಪಾದಗಳಲ್ಲಿ ಆಶ್ರಯವನ್ನು ಪಡೆದವನು ; ಶರಣಾದವನು: ಹರಿಪಾದಾಶ್ರಿತರಾಗಿವಿಲ್ಲದೊಡೆ ಪಗೆಗೊಳ್ವಿಂ (ಜಗಚ. ೯-೦೦೩). [ಪಾದ + ಆಶ್ರಿತ]

**ಪಾದಾಶ್ರಿತೆ** (ನಾ). ಪಾದಗಳಲ್ಲಿ ಆಶ್ರಯವನ್ನು ಹೊಂದಿರುವವಳು ; ಶರಣಾಗತೆ : ನಾವೀಗ ಜಗದಂಬೆಯ ಪಾದಾಶ್ರಿತೆಯರಾಗಿದ್ದೇವೆ (ಕಥಾಸಂ. ೩೩). [ಪಾದಾಶ್ರಿತ + —ಎ]

**ಪಾದಾಸ್ತ್ರ** (ನಾ). ಕಾಲುಗಳನ್ನೇ ಆಯುಧವಾಗಿ ಉಳ್ಳುದು ; ಕೋಳಿ : ಪಾರಿವ ಶಿಖಿ ಗಂಡಭೇರುಂಡ ಕೆಂಗಣ್ಣಾ ಕೀರಂಚಿ ಕೊಂಚೆ ಪಾದಾಸ್ತ್ರ . . . ಖಂಜರೀಟ ಖಗದ ಸಂಚಾರ . . . ಆ ನಗದಿ ರಂಜಿ ಸುವವಪಾರ (ಕೃಕವೀ. ೦-೩೩). [ಪಾದ + ಅಸ್ತ್ರ]

**ಪಾದಾಹತಿ** (ನಾ). = ಪಾದಾಘಾತ : ಆಸ್ಥಾನದಲ್ಲಿರ್ದ ದುರ್ಧರವಿದ್ಯಾಧರ ವೀರರಂ ಜವನ ಬಾಯೊಳ್ ತೂಂಕಿದಂ ತನ್ನ ನಿಷ್ಠುರಪಾದಾಹತಿಯುಂ ಪ್ರಭಂಜನಸುತಂ ಹಸ್ತಪ್ರಹಾರಂಗಳಿಂ (ಪಂಪಾರಾ. ೦೦-೦೪೨). [ಪಾದ + ಆಹತಿ]

**ಪಾದಿ**, ಹಾದಿ (ನಾ). ೧. ಬಟ್ಟೆ ; ದಾರಿ ; ಮಾರ್ಗ : ಆ ಬಟ್ಟ ಹೇಱಿಂಗೆ ಮಾನ ೨ ಎಣ್ಣೆ ಕೊಡಕ್ಕೆ ×ಳಸಿಗೆ ೨ ಪಟ್ಟಣಸಾಮಿ ಗೊಯ್ದು ಸೆಟ್ಟಿದೇವರ್ಗೆ ಯೆತ್ತದೋಪಾದಿಯೆಲೆಯೆತ್ತಿ ಕೊಂಬನ್ನು ಊರು ಗಡಪೂರ ಗಂಗರ × × × ಬಾಚಗಳಾಡ ಬಮ್ಮಿಸೆಟ್ಟಿ ಕನುಲ್ವರುಂ ಗೊಯ್ದಿಸೆಟ್ಟಿಯ ಪಾದಿಯ ಸಂತೆಯ ಯೆತ್ತಿಕೊಂಬರು (ಎಕ. VII. ಶಿಕಪು. ೮೮-೩೩; 1203); ಇದುವೆ ಕಡವೆಯ ನೊರೆಯು ಭಲ್ಲಾಕಂ ಕೆದರ್ದೆಡೆಯುಯಿದು ಗಜಂ ಪೋದ ಪಾದಿ (ಶಾಕಶ. ೦೭-೬೯). **ಹಾದಿ** : ೧. ಇದು ಸಪ್ತಋಕ್ಕೆ ಎಯ್ದುವ ಹಾದಿ (ಜಲೀಕ್ಕ. ೪. ೪೨೯-೨೦), ಅಸುರರು ಹಾದಿಯನು ಸವೆಱದರು ಯುಮಪುರದತ್ತ ಪಯಣಕ್ಕೆ (ಳೌಶಿಪ. ೨೦-೦೭) ; ವಿದುರನ ಗೃಹದಿ ಬೋದದಿ ಬಕ್ಕಮುಡಿತೆಯ ಪಾಲನೆ ಕೊಂಡು ಹಾದಿಲಿ ಹರಿಸಿದ್ದು ಎಲ್ಲಿ ಕಲಿತೆಯ್ದು (ಕೃಶಂಕ. ೦-೯೬-೯), ಆದಿದೈವವನು ತಾ ಭೇದಿಸಲಿಕಱಯದಲೆ ಹಾದಿಯ ರಲ್ಲಿಗೆಡೆಮಾಡಿ ನವಿಸುವ ಮಾದಿಗರ ನೋಡು (ಸರ್ವಜ್ಞ. ೦೯೬). ೨. ಪಂಕ್ತಿ ; ಸಾಲು ; ಓಳಿ : ಕಟ್ಯೋಳರ ಹಾದಿಗಳೊಂದೆಸೆ ಯೊಳು ಬಯ್ಕೆಯ ಸತಿಯರ ಸಾಲೊಂದೆಸೆಯೊಳು (ಶಿರುಪ. ರೇ. ೨೨೨-೦೪). ೩. ರೀತಿ ; ಬಗೆ ; ಕ್ರಮ : ಮೊದಲು ಕವಿ ಕಾವ್ಯದೊಳ್ ಪೊಗಳ ಬೇಕೆಂಬ ಹಾದಿಯಿಂ ಪೊಗಳ್ದಡೀಶ್ವರನಾಣೆ ಶಿವಸಿದ್ಧರಾದಿತ್ಯ ಸಿದ್ಧರಾಮನ ಚರಿತ್ರವನೆಯ್ದೆ ಪೊಗಳಲಾಪೆನೆನಿತಱವನು (ಸಿದ್ಧಕಾ. ೦-೩) ; ಕಮಲೋದರನು ಕಾವಿನಿಯನೆದೆಯೊಳಗಾದರಿಸಿದನು ಕಮಲಭವ ಜಗವಱಯೆ ನಂದನೆಯ ಐದೆಯನು ನೆಱ ಮಾಡಿಯುರವೆಣ್ಣಾದನೀಶ್ವರನಿಂದ್ರಗಿಂದ್ರರ ಹಾದಿಯದು (ಕೂಶಿಕಾ. ೦-೩-೩೩); ಮುಂದಿನ ಪೀಳಿಗೆಗೆ ಅನುಕೂಲವಾಗುವಂತಹ ಮತ್ತು ಉಪಯೋಗವಾಗುವಂತಹ ಹಲವಾರು ಮಹತ್ವದ ವಿಷಯಗಳ ಬಗ್ಗೆ ಹಾದಿ ಹಾಕಿಕೊಡುವುದೂ . . . ಅಷ್ಟೇ ಮಹತ್ವದ್ದು (ಸಸ್ಯ೪. ೯೦).

**ಹಾದಿಗುಂಟ**=ದಾರಿಯ ಉದ್ದಕ್ಕೂ : ಹಳ್ಳವಾಗಿ ಬಂದ ಹಾಲು ಹಾದಿಗುಂಟ ಹರಿವುದಿನ್ನೂ (ಜಾನಪಾ. ೩೨-೩). **ಹಾದಿಗೆ ಬರು**=ದಾರಿಗೆ ಬರು ; ಸರಿಯಾದ ಕ್ರಮಕ್ಕೆ ಬರು ; ಸರಿಯಾಗು : ರಾಮನು ಒಬ್ಬ ಸ್ತ್ರೀಯನ್ನೇ ಉದ್ಧರಿಸಿದನು . . . ಆದರೆ ನಾವುದಿಂದ ಕೋಟ್ಯವಧಿಜನರ ವಿಪರೀತಬುದ್ಧಿಯು ಹಾದಿಗೆ ಬಂದಿರುವದು (ಕುಳಕಾ. ೬), ಅಂತೂ ಹಾದಿಗೆ ಬಂದಿದ್ದಾನೆ (ಕಳ್ಳಹು. ೬೦). **ಹಾದಿಗೆ ಹಚ್ಚು** = ದಾರಿಯನ್ನು ಕಾಣಿಸು ; ಸರಿಯಾದ ಮಾರ್ಗದಲ್ಲಿ ನಡೆಸು : ನನ್ನನ್ನು . . . ಈ ಹಳ್ಳದಿಂದ ಎತ್ತಿ ಹಾದಿಗೆ ಹಚ್ಚು ದೇವಾ (ಕಳ್ಳಹಾ. ೯೯). **ಹಾದಿಗೆ ಹತ್ತು**=ಹಾದಿಗೆ ಬರು : ಅಪ್ಪ . . . ಹಾಗೆ ನಡೆಸಿಕೊಂಡದ್ದ ರಿಂದಲೇ ಹುಡುಗ ಹಾದಿಗೆ ಹತ್ತಿದ (ಜೀವನ. ೦೬೬). **ಹಾದಿ ಬೀದಿ ರಂಪ** = ಬೀದಿಯಲ್ಲಿ ನಡೆಯುವ ಜಗಳ ; ಬೀದಿಜಗಳ : ಅಲ್ಲಿಗೇನು ಹೋಗಿ ನೀವು ಹಾದಿ ಬೀದಿ ರಂಪ ಎಬ್ಬಿಸಬೇಡಿ (ಗಂಗಾಕ. ೯೮).

[ದೇ.॥ ತಮಿ. ಪಾತೈ ; ಮಲ. ಪಾಥ ; ತುಳು. ಹಾದಿ. / ಸಂ. ಪಥ]

**ಪಾದಿ₂** (ನಾ). ಕಾಲಾಳು ; ಪದಾತಿ : ಥಳಥಳಿಸುವ ರಥಯೋಧಪಾದಿ ಗಳಿಂದ ಥಳಪಳನೆಸೆವ ಕೈದುಗಳ ಥಳಥಳಿಕೆಯೊಳು ಮೇಲಿಕ್ಕಿದ ಮಾಗಧನ ಥಳಕನೆ ಗೆಲಿದನೆ ಜಯಾತು (ಕಹಾಂ. ೬೦-೩೯). [ಸಂ. ಪಾದಿನ್]

**ಪಾದಿಕ** (ನಾ).=ಪಾದಿ₂ : "ಪದಾತಿಃ, ಪತ್ತಿಃ, ಪಾದಾತಃ, ಪಾದಾತಿಕಃ, ಪದಾ (ಜಿ)ಜಯಃ, ಪಾದಿಕಃ, ಪದಿಕಃ, ಪಾದಚಾರೀ—ಈ ೮ ಕಾಲಾಳ್" (ಹಲಾಯು. ೩೯-೨೯೩). [ಸಂ.]

**ಪಾದಿಲೋಣ** 'ಪಾದಲೋಣ' ನೋ.

**ಪಾದುಕ** (ನಾ). ಹಾವುಗೆ; ಪಾದುಕೆ : "ಪಾದುಕವುದನುಪದೀನವುನೆ ಹಾವುಗೆಯು" (ಶಬ್ದಮ. ೬೧-೦೪). [ಸಂ.]

**ಪಾದುಕಾಕಾರ** (ನಾ). ಹಾವುಗೆಯನ್ನು ತಯಾರಿಸುವವನು; ಚಮ್ಮಾರ : "ಚರ್ಮಕೃತ್, ಪಾದುಕಾಕಾರಃ — ೨ ಸಮ್ಮಗಾರಂ" (ಹಲಾಯು. ೧೬ ೧೧೩). [ಸಂ.]

**ಪಾದುಕಾಸಿದ್ಧಿ** (ನಾ). ಐದು ಬಗೆಯ ಸಿದ್ಧಿಗಳಲ್ಲಿ ಒಂದು; ಮಂತ್ರಶಕ್ತಿಯುಳ್ಳ ಪಾದುಕೆಗಳನ್ನು ಧರಿಸಿ ಇಚ್ಛೆ ಬಂದಲ್ಲಿ ಸಂಚರಿಸಬಹುದಾದ ಸಿದ್ಧಿ : ಪಾದುಕಾಸಿದ್ಧಿ ಅಂಜನಾಸಿದ್ಧಿ ಘಟಿಕಾಸಿದ್ಧಿ ಮೂಲಿಕಾಸಿದ್ಧಿ ರಸರಸಾಯನಾದಿ ಸಿದ್ಧಿಗಳಂ ಸಾಧಿಸುತ್ತಿರ್ದುಂ (ಶಿವೇಶ. ೦೦). [ಸಂ.]

**ಪಾದುಕೆ** (ನಾ). ೧. (ಮರ, ಲೋಹ ಮುಂತಾದುವುಗಳಿಂದ ಮಾಡಿದ) ಪಾದರಕ್ಷೆ; ಹಾವುಗೆ: "ಪಾದುಕಾ, ಅನುಪದೀನಾ — ಈ ೨ ಹಾವುಗೆ" (ಹಲಾಯು. ೩೨-೦೩೬); ಚರ್ಮದ ಪಾದುಕೆಗಳನ್ನು ಹಾಕಿಕೊಳ್ಳುವುದರಿಂದ . . . ಮಹಾಹಿತಕರವಾಗಿರುವುದು (ಸಕಶ್ಯ. ೩೩); ರಾಮನ ಪಾದುಕೆಯನ್ನು ತಂದಿಟ್ಟುಕೊಂಡು ರಾಮನ ಪ್ರತಿನಿಧಿಯಾಗಿ . . . ರಾಜ್ಯವನ್ನು ನೋಡಿಕೊಳ್ಳುತ್ತೇನೆ (ಪಾರಾಶ್ಯ. ೨೧); ಪೂಜ್ಯಪಾದುಕೆಗಳಂ ಪೂಜ್ಯಪಾದಂಗೆತ್ತು ಸಿಂಹಾಸನದೊಳಿಟ್ಟು ಪೂಜಿಸುವೆನಾಂ (ಶ್ರೀಆಶಾ. ೦೬೩-೩೬೬). ೨. ಕಲ್ಲು ಅಥವಾ ಮರದ ಮೇಲೆ ಮಾಡಿರುವ, ದೇವರು ಅಥವಾ ಗುರುಗಳ ಪೂಜಾರ್ಹವಾದ ಪಾದದ ಗುರುತು, — ಮುದ್ರೆ. [ಸಂ. ಪಾದುಕಾ]

**ಪಾದುಕೆಗೆಯ್**, ಪಾದುಕೆಗೈ (ಕ್ರಿ). ಪಾದರಕ್ಷೆಯಾಗಿ ಮಾಡು; ಹಾವುಗೆಯನ್ನಾಗಿ ಮಾಡು: ಗಣ್ಯ ಪುಣ್ಯರ ಚರಣಕೆನ್ನ ದೇಹವನೊಸೆದು ಪಾದುಕೆಗೆಯ್ವನು (ರಾಶಿಶ. ೦-೦೩). **ಪಾದುಕೆಗೈ** : ನಿರ್ಮಲಾತ್ಮಕ ಪರಮಶಿವಶರಣರಡಿಗೆಯನ್ನೆರ್ದೆಯ ಪಾದುಕೆಗೈವೆನು (ಷಡಕ್ಷರಿ. ೦-೦೧). [ಪಾದುಕೆ+ಕೆಯ್₁]

**ಪಾದುಕೆಗೈ** 'ಪಾದುಕೆಗೆಯ್' ನೋ.

**ಪಾದುಶಾಹ** 'ಪಾತಶಹ' ನೋ.

**ಪಾದುಷಹ** 'ಪಾತಶಹ' ನೋ.

**ಪಾದುಷಾ** 'ಪಾತಶಹ' ನೋ.

**ಪಾದೂಯುಗ್ಮ** (ನಾ). (ಹೆಜ್ಜೆಗಳ ಗುರುತುಳ್ಳ) ಹಾವುಗೆಗಳ ಜೊತೆ: ಶಿವನಾಮಾಂಕಿತಮಂ ರತ್ನವಿರಚಿತಮನುತ್ತಮಾಂಗದೊಳ್ ಪಾದೂಯುಗ್ಮವನೆಸೆಯೆ ತಳೆದು (ಕಾರಂಕು. ೬೬೦). [ಸಂ.]

**ಪಾದೆಲೋಣ**, ಪಾದಿಲೋಣ (ನಾ). ಒಂದು ಬಗೆಯ ಕಪ್ಪುಬಣ್ಣದ ಉಪ್ಪು; ಬಿಡಲವಣ: ಸೂಚಿಸುವವಾಳಮುವಣದ ಮೇಲೆ ಕಮ್ಮುತ್ತ ಇರತಕ್ಕ ಜೀನಸಗಳು. ೧. ಅಕ್ಕಲಪಾಂ . . . ೧೧೨೬. ಪಾದೆಲೋಣ (ಕುಂಬಾ. ೦೨೬). **ಪಾದಿಲೋಣ** : ಆ ಜೀನಸಗಳು . . . ಈ ಪ್ರಕಾರ- ಅಕ್ರೋಡ, ಅಕ್ಕಲಪಾರ . . . ಪಚ್ಚಕರ್ಪೂರ, ಪಾದಿಲೋಣ, ಪಿಸ್ತ, ಹಿಪ್ಪಲಿ (ಕುಂಬಾ. ೨೦೧). [← ಮರಾ. ಪಾದೇಲೋಣ]

**ಪಾದೋದಕ** (ನಾ). ೧. ಕಾಲುಗಳನ್ನು ತೊಳೆಯಲು ಕೊಡುವ ನೀರು : ಅತಿಥಿಗಳಿಗೆ ಪಾದೋದಕವನ್ನೀಯುವುದು ಆದರ ಸತ್ಕಾರದ ಪದ್ಧತಿ (ಶ್ರತಂರ. ೧೪). ೨. [ವಿಶಿಷ್ಟ] ಗುರುಹಿರಿಯರ ಕಾಲುಗಳನ್ನು ತೊಳೆದ ನೀರು; ಪಾದತೀರ್ಥ : ಒಳಗೆ ತೊಳೆಯಲರಿಯದೆ ಹೊರಗ ತೊಳೆದು ಕುಡಿವುತ್ತಿದ್ದರಯ್ಯ ಪಾದೋದಕಪ್ರಸಾದವನರಿಯದೆ ಬಂದ ಬಟ್ಟೆಯಲ್ಲಿ ಮುಳುಗುತ್ತೈದಾರೆ (ಅವಚನ. ೩೩-೦೬೦); ಗಂಡ ಕೊಂಬುದು ಪಾದೋದಕಪ್ರಸಾದ ಹೆಂಡತಿ ಕೊಂಬುದು ಸುರೆ ಮಾಂಸ (ಬಸವ. ೦೦೧); ಶ್ರೀಪಾದಮಂ ತೊಳೆದು ಪಾದೋದಕಮಂ ತಳೆದು . . . ಕೃತಾರ್ಥಮನನಾಗುತ್ತಿರಲ್ (ಶಂಕ. ೬-೩೦). ೩ ಪಾದೋದಕದಲ್ಲಿ ಹತ್ತು ಬಗೆಗಳನ್ನು ಹೇಳುತ್ತಾರೆ : "ದಶವಿಧಪಾದೋದಕ : ಗುರುಪಾದೋದಕ, ಲಿಂಗಪಾದೋದಕ, ಜಂಗಮಪಾದೋದಕ, ಸ್ಪರ್ಶನೋದಕ, ಅವಧಾನೋದಕ, ಅಪ್ಯಾಯನೋದಕ, ಹಸ್ತೋದಕ, ಪರಿಣಾಮೋದಕ, ನಿರ್ನಾಮೋದಕ, ಸತ್ಯೋದಕ" (ಚಸಬ. ೪ ೬೩೦ ಪಾಂಡಾಟಿಕಶಬ್ದಕೋಶ). [ಪಾದ+ಉದಕ]

**ಪಾದೋದಕಿ** (ನಾ). ಪಾದೋದಕವನ್ನು ಸ್ವೀಕರಿಸುವವನು, — ಸೇವಿಸುವವನು : ಹಸಿವಜಿತಲ್ಲದೆ ಪ್ರಸಾದಿಯಲ್ಲ ತೃಷೆಯಜಿತಲ್ಲದೆ ಪಾದೋದಕಿಯಲ್ಲ (ಅವಚನ. ೧೨೪-೩೬೩). [ಸಂ. ಪಾದೋದಕಿನ್]

**ಪಾದ್ಯ** (ಗು). ೧. ಕಾಲಿಗೆ ಸಂಬಂಧಿಸಿದ. (ನಾ). ೨. ಕಾಲುಗಳನ್ನು ತೊಳೆಯುವ ನೀರು : ಮುನಿಜನಪೂಜಾನ್ನದಾನಾದಿಕರಣಜನಗೃಹಜನ ಸತತೋಪನೀಯಮಾನಪಾದ್ಯಗಂಧಾಕ್ಷತಾಸುಮಚರುಧೂಪದೀಪಫಲದಾರ್ಚನಾತ್ಮಕಪುಷ್ಪ ನಿತ್ಯಮಹಮುಂ (ಆದಿಪು. ೧೫-೧೩೪); ರಾಘವಂಗಾನತರಾಗಿ ಮೌಳಿಮಣಿದೀಪ್ತಿಜಲಂಗಳನೀಯೆ ಪಾದ್ಯಮಂ (ಕುಂರಾಮಾ. ೧೬-೨೦); ಅಕ್ಕನ ಕೇಸದಿದರ್ಗೆ ಜಯಶ್ರೀಯು ಪಾದ್ಯಮಂ ಪ್ರಕಟಿಸಿದಳ್ (ಅರಾಚ. ೨-೩೦). ೩. ಕಾಲುಗಳನ್ನು ತೊಳೆಯುವುದು; ಪಾದಕ್ಷಾಲನ : ಜನಪತಿಗಂದು ಪಾದ್ಯಮನದೇಂ ಮೆಚ್ಚಿಂತೆ ಮೆಲ್ಲನೆ . . . ಸುರಿದತ್ತು ಸದ್ಮಸರಸೀಶರಶೀಕರ ಮಂದಮಾರುತಂ (ಜಗನ್ನಾ. ೭-೪೮); ಪಾದದೊಳಿದ್ದು . . . ಪುಣ್ಯಸಂಪದದ ಸಂಧ್ಯಾವಂದನ ಮಾಡಿ ಏಹಿಕಾರ್ಘ್ಯಪಾದ್ಯಮಂ ನಿರ್ವರ್ತಿಸಿ (ಶಶಕಾ. ೮-೫೯); ಮುನಿಯನಿದಿರ್ಗೊಂಡು ಪೊಡಮಟ್ಟು ಭದ್ರಾಸನದೊಳ್ಳಿರಿಸಿ ಅರ್ಘ್ಯಪಾದ್ಯಂಗಳಿಂ ಪೂಜಿಸಿ (ರುಶಾಕ್ಯ. ೦೦-೯); ಪಾದ್ಯಕ್ಕೆ ನೀರು ಇಲ್ಲ, ಊಟಕ್ಕೆ ಮಜ್ಜಿಗೆಯಲ್ಲಿ? (ಗಾದೆ). [ಸಂ.]

**ಪಾದ್ಯದ್ರವ್ಯ** (ನಾ). ಕಾಲುಗಳನ್ನು ತೊಳೆಯುವ ನೀರಿನ ಜೊತೆಗೆ ಉಪಯೋಗಿಸುವ ವಸ್ತು; ಪೂಜಾಸಾಮಗ್ರಿ : ಬಿಳಿಯ ಸಾಸುವೆ ಕುಸುಮ ದೂರ್ವೆ ಕೋಷ್ಠ ಲಾಮಂಚ ಕರ್ಪೂರವೆಂಬಾಱು ಪಾದ್ಯದ್ರವ್ಯಂಗಳಂ . . . ಸಂಪಾದಿಸಿ (ಶಿವೇಶ. ೯೪). [ಪಾದ್ಯ+ದ್ರವ್ಯ]

**ಪಾದ್ಯಪಾತ್ರೆ** (ನಾ). ಪಾದ್ಯದ್ರವ್ಯಗಳೊಂದಿಗೆ ಬೆರೆಸಿದ ನೀರಿರುವ ಪಾತ್ರೆ, — ಬಟ್ಟಲು : ವಿವಿಧಾಸ್ತಗಂಧ ಕರ್ಪೂರ ಲಾಮಂಚ ಸಾಸವೆ ಕೋಷ್ಠ ದೂರ್ವೆಯೆಂಬಾಱು ನೀರೊಳು ಬೆರಸಿ ಶಿವನ ಪಾದಕ್ಕೆಂದು ಸಲ್ಲಿಸುತ್ತೊಲಿದು ಪಾದ್ಯಪಾತ್ರೆಯೊಳಿರ್ಪುದು (ಗುರುಚಾ. ೩ ೫೯). [ಪಾದ್ಯ+ಪಾತ್ರೆ]

**ಪಾದ್ಯವಿಧಿ** (ನಾ). ಕಾಲುಗಳನ್ನು ತೊಳೆಯುವ ಕ್ರಿಯೆ; ಪಾದಕ್ಷಾಲನ : ನಿಜಪಾದಾಂಬುರುಹಕ್ಕೆ ಪಾದ್ಯವಿಧಿಯಂ ನೇತ್ರಾಂಬುವಿಂ ಮಾಡುವಗ್ರಜಂ (ಅಂಕು. ೧೮-೧೩೬). [ಪಾದ್ಯ+ವಿಧಿ]

**ಪಾದ್ರಿ**, ಪಾದರಿ (ನಾ). ಕ್ರೈಸ್ತರ ಧರ್ಮಗುರು; ಚರ್ಚಿನ ಒಬ್ಬ ಕಾರ್ಯಕರ್ತ : ಡುಬಾಯಿ ಪಾದ್ರಿ ತನ್ನ ಮಿತ್ರರಿಗೆ ಬರೆದ ಕೆಲವು ಪತ್ರಗಳು ಫ್ರಾನ್ಸ್‌ದೇಶದಲ್ಲಿ ನೊಟಡೋನ್ ವಿಶ್ವವಿದ್ಯಾಲಯದ ಪುಸ್ತಕ ಭಂಡಾರದಲ್ಲಿವೆಯಂತೆ (ಸಪ್ರ. II,೩ ೨೬); ಪಾದ್ರಿ . . . ನಮ್ಮನ್ನು ಭೆಟ್ಟಿಯಾಗಿ ಸಂತೆ ತಪ್ಪನ್ನು ಕಾಲು ಹೇಳಿದ್ದರು (ಅಕೋಲಿ. ೦೮). **ಪಾದರಿ** : ಆಂಗ್ಲರ ಆಳ್ವಿಕೆ ಆರಂಭದಿಂದ ಕೊಂಚಕಾಲ ಕ್ರಿಶ್ಚಿಯನ್ ಪಾದರಿಗಳಿಗೆ ಭರತಖಂಡದ ಪ್ರವೇಶಕ್ಕೆ ಅನುಮತಿ ಇರಲಿಲ್ಲ (ಹುಲ್ಯಾಕ. ೧೦೪ ೩೦೦೪). [← ಸ್ಪ್ಯಾನಿಷ್, ಪೋರ್ಚು. Padre]

**ಪಾನ್‌ದಾನು**, ಪಾನದಾನು (ನಾ). ೧. (ಉಕ) ಎಲೆಯಡಿಕೆ ತಾಂಬೂಲ; ವೀಳೆಯ : ಆ ಸಾಹೇಬರು . . . ಹರ್ಷಿತರಾಗಿ ಹೂವಿನ ಹಾರ ಪಾನ್‌ದಾನುಗಳನ್ನು ಸ್ವೀಕರಿಸಿ ಮಹಾಸ್ವಾಮಿಯವರಿಂದ ಅಪ್ಪಣೆ ತೆಗೆದುಕೊಂಡರು (ಮಹಾಹ. 'II, ೦೨೦). **ಪಾನದಾನು** : ೨. ತಾಂಬೂಲವನ್ನು ಇಡುವ ಡಬ್ಬಿ, — ಸಂಪುಟ : ಪಂಚಾರತಿಯ

ಕೈಲಿದ್ದ ಪಾನದಾನು ನೆಲದ ಮೇಲೆ ಬಿದ್ದು ರಘುನಾಥನ ಶಬ್ದವಾಯಿತು (ರೇಖಾ. ೬೫). [←ಹಿಂ. ಮರಾ. ಪಾನ್‌ದಾನ್]

**ಪಾನ್‌ಪಟ್ಟಿ**, ಪಾನಪಟ್ಟಿ (ನಾ). ೧.=ಪಾನ್‌ದಾನು ೧: ಪಟ್ಟದ ಆನೆ, ಪಟ್ಟದ ಕುದುರೆಗಳು ಕೆರೆಯ ಬಳಿಗೆ ಹೋಗಿ ಪೂಜೆ ಆಗಿ ಬಂದ ಮೇಲೆ ಎಲ್ಲರಿಗೂ ಹೂವಿನ ಹಾರ ಪಾನ್‌ಪಟ್ಟಿ ಮರ್ಯಾದೆ ಆಯಿತು (ಮಹಾಪು. II, ೧೦೪). **ಪಾನಪಟ್ಟಿ**: ೨. ಸಣ್ಣ, ಅಡಿಕೆಯನ್ನು ಹಾಕಿ ಸಿದ್ಧಪಡಿಸಿದ ವೀಳ್ಯ; ಬೀಡ: ಅವರು . . . ಭಜಿ, ಚಹ, ಪಾನಪಟ್ಟಿ ಇಷ್ಟರಿಂದಲೇ ಎದ್ದುಬಿಟ್ಟರು (ಮಣ್ಣು.ಹ. ೧೧೯). [←ಮರಾ. ಪಾನ್‌ಪಟ್ಟೀ]

**ಪಾನ್‌ಸುಪಾರಿ**, ಪಾನಸುಪಾರಿ, ಪಾನುಸುಪಾರಿ (ನಾ).=ಪಾನ್‌ದಾನು ೧: ಅಕ್ಷತೆಗೆ ಬಂದ ಅತಿಥಿಗಳಿಗೆಲ್ಲಾ ಸಾರಿಗೆ ಮೇಲೆ ಸಾರಿಗೆಯಂತೆ ಚಹಾ, ಪಾನ್‌ಸುಪಾರಿ ಮುಗಿಯುವವರೆಗೂ ತಾಸೆರಡು ತಾಸಾಯಿತು (ಪ್ರತಿ. ೧೫). **ಪಾನಸುಪಾರಿ**: ಪಾನಸುಪಾರಿ, ಅತ್ತರದಾಣಿ, ಗುಲಾಬದಾಣಿ, ಹೂಗುಚ್ಛ ಇವುಗಳನ್ನು ಕೊಡುವ ಕಾರ್ಯಕ್ರಮ ನಡೆಯಿತು (ಅಕ್ಕ. ೨೦೬); ಪಾನ-ಸುಪಾರಿಯ ಭರ್ಜರೀ ತಯಾರಿ ನಡೆಯಿತು (ರೀಕಶ. II. ೩೩೪). **ಪಾನುಸುಪಾರಿ**: ಪಾನುಸುಪಾರಿಯ ಕೆಲಸ ಮುಗಿದ ಮೇಲೆ ಸಿದರಾಮಪ್ಪನೂ ಅಲ್ಲಿಗೆ ಬಂದನು (ಅಕ್ಕ. ೨೧೪). [←ಹಿಂ. ಮರಾ. ಪಾನ್‌ಸುಪಾರೀ]

**ಪಾನ**₁ (ನಾ). (ಕಂದುರೆಯ) ಅಪಾನ; ಗುದಪ್ರದೇಶ: ಬಾಲದ ದಂಡಿಗೆ ಬಾಲದ ದಂಡೆಂಬ ಪೆಸರನನುಕರಿಸಿರ್ಪುದಂ ಬಾಲದ ಪಟ್ಟಿಯೊಳಗಿರ್ಪುದ ಲೀಲೆಯಿನಖಿಳ ಪಾನವೆಂಬ ಪೆಸರದಕೆಂದುಂ (ಅಶ್ವಶಾ. ೪-೪೭). [<ಸಂ. ಅಪಾನ]

**ಪಾನ**₂ (ನಾ). ೧. ಕುಡಿಯುವಿಕೆ; ಕುಡಿತ: ಜ್ಞಾನ ತಪ್ಪಿಸುವ ಪಾನಗಳನ್ನು ಮಾಡಬಾರದು (ಶೀಕಿಶಂ. II. ೬). ೨. ಪಾನೀಯ; ಪೇಯ: ಬಹುವಿಧವಾದ ರಸವನೆ ಕೂಡಿಸಿ ಪಾನಪ್ರಭೇದವನ್ನು ಅನುವಾಗಿ ಮಾಡಿ ತಂದು ವಸ್ತ್ರಕ್ಕೆ ಹಚ್ಚಿ ದೀವವನೆ ಮುಟ್ಟಿಸಿದರದು ಮಸನ ಸುಡದು (ಬಿರಾಕ್ಷ. ೧೪-೩). ೩. ಕುಡಿಸದ ಪದಾರ್ಥ: "ಬೀಯದ ರಸಃ ಪಾನಂಗಳಿಂದೆನಿಕ್ಕುಂ" (ಮಾಣಿಶಾ. ೬೪-೪). ೪. ಕಷಾಯ: ಪರಿಪಾಮ್ರತರುಚಿ ಚಾತುರ್ಜಾತಕಯುತಮಾಗೆ ಸುಧೋಪಮಾನಮಕ್ಕುಂ ಪಾನಂ (ಲೋಕೋಪ. ೮-೫೭). ೫. ಕುಡಿಯುವ ಬಟ್ಟಲು; ಚಷಕ. ೬. ನೀರಿನ ಕಾಲುವೆ; ನಾಲೆ. [ಸಂ.]

**ಪಾನಂದಿಪಡಿ** (ನಾ). ಒಂದು ಸ್ಥಳದ ಹೆಸರು: ಅನ್ನ ಬನ್ದು ಪಟ್ಟಗಲ್ಲ ನೈರಿತ್ಯನ್ನಿಂ ಪಾನನ್ದಿಪಡಿಯ (ಎಕ. IV (B). ಶಾಸನ. ೩೩೪-೪೩; ೨೦೪). [?]

**ಪಾನಕ** (ನಾ). ಬೆಲ್ಲ ಅಥವಾ ಸಕ್ಕರೆಯೊಂದಿಗೆ, ನಿಂಬೆ ಮುಂತಾದ ರಸ, ನೀರು – ಇವುಗಳನ್ನು ಸೇರಿಸಿ ತಯಾರಿಸಿದ ಪಾನೀಯ; ಪರಬತ್ತು: ಪಾನಕವು ಶ್ರಮ ಹಸಿವೆ ನೀರಡಿಕೆ ದಣಿವುಗಳನ್ನು ನಾಶ ಮಾಡುವುದು (ಅಷ್ಟಾಂಗ. ೦೨೨-೩೪ ಅರ್ಥ); ಬೆಳಗ್ಗೆ ಊಟವಿಲ್ಲದೆ ಬರಿಯ ಹಣಿಸಹಣ್ಣನ್ನು ಕಿವುಚಿ ಬೆಲ್ಲದಲ್ಲಿ "ಪಾನಕ" ಕುಡಿದಿದ್ದರು (ಅಂಕೂ. ೧೮); ವಿಧವಿಧವಾದ ಪಾನಕಗಳಿಗೆ ಮಂಜಿನ ಗಡ್ಡೆಗಳನ್ನು ಸೇರಿಸಿ ಕುಡಿಯುವುದು (ಪಾಕ್ಷಾ೦. ೦೨೪).

**ಪಾನಕ ಪಣ್ಯಾರ**=ಪರಬತ್ತು ಮತ್ತು ಪ್ರಸಾದರೂಪವಾದ ತಿಂಡಿ: ರಾಮನವಮಿಯಂದು ಮನೆಗೆ ಬಂದವರಿಗೆ ಪಾನಕ ಪಣ್ಯಾರ ಕೊಡುವುದು ಕೆಲವರ ಸಂಪ್ರದಾಯ (ಲೂ). [ಸಂ.]

**ಪಾನಕಪೂಜೆ** (ನಾ). (ನರಸಿಂಹಜಯಂತಿ, ರಾಮನವಮಿ ಮುಂತಾದ ಹಬ್ಬಗಳಂದು) ಪೂಜೆ ಮಾಡಿ ಪ್ರಸಾದರೂಪವಾಗಿ ಭಕ್ತಾದಿಗಳಿಗೆ ಇತರ ಖಾದ್ಯಗಳೊಡನೆ ಪಾನಕ, ಮಜ್ಜಿಗೆ ಮುಂತಾದುವನ್ನು ಹಂಚುವುದು: ನನ್ನ ಕಾಲದಲ್ಲಿ ಶ್ರೀರಾಮನವಮಿ ನಡೆಯುವುದು. ಎಲ್ಲೆಲ್ಲೂ ಅರವಟ್ಟಿಗೆಗಳನ್ನಿಡಿಸುತ್ತೇನೆ. ಪಾನಕಪೂಜೆಗಳನ್ನು ಮಾಡಿಸುತ್ತೇನೆ (ಶಂಕಕ. ೨೨): ಅವರು ರಾಮನವಮಿ ಪ್ರಯುಕ್ತ ಪಾನಕ ಪೂಜೆಗೆ ಕರೆದಿದ್ದಾರೆ (ಲೂ). [ಪಾನಕ+ಪೂಜೆ]

**ಪಾನಕೇಳಿ** (ನಾ). ಮದ್ಯ ಮುಂತಾದುವನ್ನು ಕುಡಿಯುವ ಲೀಲೆ, – ವಿನೋದ: ಎಲೆ, ತಡವೇಕೆ ಪಾನಕೇಳೀ ಮೊದಲಾಗಲೀಗ, ಅಂಗಡಿಯು ಕದವ ಈ ಕ್ಷಣಕೆ ತೆರೆಯ ಹೇಳಿ (ಅಕಕು. ೦೭೭-೪). [ಪಾನ₂+ಕೇಳಿ (=ಕೇಲಿ)]

**ಪಾನಕ್ರೀಡನ** (ನಾ).=ಪಾನಕೇಳಿ: ದುಶ್ಶಾಸನನ ನೆತ್ತರದಿ ಪಾನ ಕ್ರೀಡನಾಸೆಭಾಗ್ಯಸುವದಕೆ ಸರಿಯದಾವದು (ಕುಮಾ.ಭಾ. ೨೨-೯೩). [ಪಾನ₂+ಕ್ರೀಡನ]

**ಪಾನಕ್ರೀಡೆ** (ನಾ).=ಪಾನಕೇಳಿ: ಶಾಮಶ್ರೀಲೋಕೀಜಯಾಕರಶಾಖಾ ಲತಾಳಿಯೊ ಬಗೆವೊಡೆಂಬಂತಿರ್ಪುದಿಂದ್ರಾಂಕರ್ಬುರಕಾಯಂ ಶಬರೀಚಯಂ ನೆರೆದು ಪಾನಕ್ರೀಡೆಯೊಳ್ ನಾಡೆಯುಂ (ಚಂದ್ರಪ್ರ. ೫-೫೬). [ಪಾನ₂+ಕ್ರೀಡೆ]

**ಪಾನಗೋಷ್ಠಿ** (ನಾ). ೧. ಕೆಲವು ಜನ ಸೇರಿ ಒಟ್ಟಿಗೆ ಮದ್ಯಪಾನ ಮಾಡುವುದು, – ಕುಡಿಯುವುದು: "ಆಪಾನಂ, ಪಾನಗೋಷ್ಠಿ – ಈ ೨ ಕಳ್ಗುಡಿವುದು" (ಶಬ್ದಮ. ೫೧-೧೭೩). ೨. ಮದ್ಯಪಾನ ಮಾಡುವವರ ಗುಂಪು; ಕುಡಿಯುವವರ ಕೂಟ: (ಲೂ). ೩. ಮದ್ಯಪಾನ ಮಾಡುವ ಸ್ಥಳ; ಹೆಂಡದಂಗಡಿ: (ಲೂ). [ಪಾನ₂+ಗೋಷ್ಠಿ]

**ಪಾನಗೋಷ್ಠಿಕೆ** (ನಾ). ೧.=ಪಾನಗೋಷ್ಠಿ ೨: "ಪಾನಗೋಷ್ಠಿಕೆ – ಸರಾಪು ಕುಡಿಯುವುದಕ್ಕಾಗಿ ಕೂಡಿದ ಮಂದಿ" (ಗಂಗಾಮು. ೨೦೫). ೨.=ಪಾನಗೋಷ್ಠಿ ೩: "ಆಪಾನಂ, ಪಾನಗೋಷ್ಠಿಕಾ – ೨ ಅನೇಕ ಮಂದಿ ಕೂಡಿ ಮದ್ಯಪಾನ ಮಾಡುವ ಸ್ಥಳದ ಹೆಸರುಗಳು" (ಸಿದ್ಧಾಂತಿ. ೩೦೯). [ಪಾನ₂+ಗೋಷ್ಠಿಕೆ]

**ಪಾನದಾನು** 'ಪಾನ್‌ದಾನು' ನೋ.

**ಪಾನನಿರೋಧ** (ನಾ). ಮಾದಕಪಾನೀಯಗಳ ತಯಾರಿಕೆ ಮತ್ತು ಮಾರಾಟದ ಮೇಲೆ ಹಾಕುವ ನಿಷೇಧ, – ನಿರ್ಬಂಧ: ಪಾನನಿರೋಧ ಬಂದ ಮೇಲೆ ಕುಡಿಯುವವರು ಹೆಚ್ಚಾಗಿದ್ದಾರೆ (ಪತ್ರಿಕೆ. ೩೦೫). [ಪಾನ₂+ನಿರೋಧ]

**ಪಾನಪಟ್ಟಿ** 'ಪಾನ್‌ಪಟ್ಟಿ' ನೋ.

**ಪಾನಪಭಟಾರ** (ನಾ). ಒಬ್ಬಾತನ ಹೆಸರು: ಶ್ರೀನೆಡುಬೊಳೆಯ ಪಾನಪಭಟಾರನೊರ್ಕೆನ್ನು ಮುಡಿಪ್ಪಿದಾರ್ (ಎಕ. II, ೪-೦; ಸು. 700). [ಪಾನಪ₂+ಭಟಾರ]

**ಪಾನಪಾತ್ರ** (ನಾ). (ವಿಶೇಷವಾಗಿ ಮದ್ಯವನ್ನು) ಕುಡಿಯುವ ಪಾತ್ರೆ: "ಚಷಕಃ, ಪಾನಪಾತ್ರಂ, ಸರಕಃ, ಅನುತರ್ಷಣಂ—೪ ಹೆಂಡ ಕುಡಿಯುವ ಬಟ್ಟಲ ಹೆಸರು" (ಸಿದ್ಧಾಂತಿ. ೩೦೯). [ಪಾನ₂+ಪಾತ್ರ]

**ಪಾನಪಾತ್ರೆ** (ನಾ).=ಪಾನಪಾತ್ರ: ಈ ಸಾಂಗತ್ಯದ ಪುಟ್ಟಪುಟ್ಟ ಪಾನ ಪಾತ್ರೆಗಳಲ್ಲಿ ಸಂಸ್ಕೃತದ ಸುಭಾಷಿತಗಳನ್ನೂ ಮುಕ್ತಕಗಳನ್ನೂ ಕನ್ನಡಿಸಿ ಕೊಟ್ಟಿದ್ದೇನೆ (ಶಂಪಾಕ. IV, ೩೦೪). [ಪಾನ₂+ಪಾತ್ರೆ]

**ಪಾನಭಾಜನ** (ನಾ).=ಪಾನಪಾತ್ರ: "ಕಂಸಃ, ಪಾನಭಾಜನಂ — ೨ ಬಟ್ಟಲು" (ಸಿದ್ಧಾಂತಿ. ೨೪೩). [ಪಾನ₂+ಭಾಜನ]

**ಪಾನಭೂಮಿ** (ನಾ). ಮದ್ಯಪಾನ ಮಾಡುವ ಸ್ಥಳ: ಪಾನಭೂಮಿ ಯೊಳೇತು ಯಜ್ಞಕುಂಡದೊಳಂತು ಪ್ರಜ್ವಲಿಸುಮಮು ಕೃಶಾನು (ಗಾಥಾಸ. ೫೭-೨೬). [ಪಾನ₂+ಭೂಮಿ]

**ಪಾನವಾಟ** (ನಾ). ಮದ್ಯಪಾನ ಮಾಡುವ ಸ್ಥಳ; ಪಡಖಾನೆ; ಹೆಂಡದಂಗಡಿ: ಈ ವೇಳೆಗೆ ಪಾನವಾಟದ ಹೆಣ್ಣುಮಗಳು ವ್ಹಿಸ್ಕಿ ಮತ್ತಷ್ಟು ಬಿಯರ್ ತಂದಳು (ಸಿ.ಕೆ. VIII, ೦೦೨). [ಸಂ. ಪಾನವಾಟೀ]

**ಪಾನವ್ಯಸನ** (ನಾ). ಮದ್ಯಪಾನ ಮಾಡುವ ಗೀಳು; ಕುಡಿಯುವ ಚಟ: ಬೈದಿಗಳಲ್ಲಿ ಮನೆಮಾಡಿಕೊಂಡಿದ್ದ ದುಷ್ಪ್ರವೃತ್ತಿಗಳು ಪಾನವ್ಯಸನ, ದ್ಯೂತಕ್ರೀಡೆ, ಕ್ರೂರಹಿಂಸೆ, ನರಮಾಂಸಭಕ್ಷಣ ಮೊದಲಾದ ಘೋರಾಪರಾಧಗಳು . . . ನೆಕ್ಕಿದೋವನಿಗೆ ಮನಮಂಕಿಯಾಗಿತ್ತು (ಪ್ರಕು. ೩೩೪). [ಪಾನ₁+ವ್ಯಸನ]

**ಪಾನಸುಪಾರಿ** 'ಪಾನ್‌ಸುಪಾರಿ' ನೋ.

**ಪಾನಾಂಗ** (ನಾ). [ಜೈನ] ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು; ಮಧುರವಾದ ಪೇಯಗಳನ್ನು ಒದಗಿಸುವುದೆಂದು ನಂಬಲಾದ ಕಲ್ಪವೃಕ್ಷ: ಪಾನಾಂಗ: ಈ ಜಾತಿಯ ಕಲ್ಪವೃಕ್ಷದಿಂದ . . . ನೀರು ಮತ್ತು ಪೇಯಪದಾರ್ಥಗಳು ದೊರೆಯುತ್ತವೆ (ತ್ರಿಕಶಾ. ೨೬.೨). [ಸಂ.]

**ಪಾನಾಂಬು** (ನಾ). ಕುಡಿಯುವ ನೀರು: ಬೀಸಣಿಗೆ ತೆರೆಗಿಂಡಿ ತಂಬಾಗೆ ವಾಸಿಸುವ ಪಾನಾಂಬುಪೊಪ್ಪೆ (ಬಸಪು. ೧೨-೯). [ಪಾನ₁+ಅಂಬು₁]

**ಪಾನಿ₁** (ನಾ). ಕುಡಿಯುವವನು: ವಿಲೋಕಪ್ರಪಂಚವಿರಹಿತಾರಾಧ್ಯರಮಲ ಸದ್ಗೀತಪೀಯೂಷಪಾನಿ (ಚಕೋಚ. ೧-೩೧). [ಸಂ. ಪಾನಿನ್]

**ಪಾನಿ₂** (ನಾ). ೧. ವಸ್ತ್ರ; ಬಟ್ಟೆ: 'ಇರ್ಪಾನಿ' ಪರಾ. ೨. (?): ಅರಟ್ಟಗಳರಸರ್ ಬೊತ್ತಮ್ಮನ್ ಎಡೆತೊಱೆನಾಡುಸಾಸಿರವುಮಾಳುತ್ತಿರ್ದು ವಿಟ್ಟದು ಒನ್ದಡಿ ಪಾನಿಯುಮೇಟುಂ ಒನ್ದತ್ತು ದಿವಸಂ ಪಟ್ಟಿಂಟರ್ (ಎಕ. III, ಮೈಸೂರು. ೩೩-೮: ಸು. 750). [?]

**ಪಾನಿಗಟ್ಟು** (ಕ್ರಿ). [ಜೈನ] ಬರಿಗೆಗೆ ಬಂದ ಜೈನಸನ್ಯಾಸಿಗಳನ್ನು ಭಿಕ್ಷೆಗೆ ನಿಲ್ಲಿಸಿಕೊಳ್ಳು: ಭಟ್ಟಾರರೂಡವಂದ ಬ್ರಹ್ಮಚಾರಿ ತಪಂಬಟ್ಟು ಕೆಯ್ಯುದು ಕೀಳ್ಕೊಳಿಸಿದು ಮಾಣಿಕ್ಯಮ್ಮ ಮನೆಯೊಳಾಂಡು ತಪಂಬಟ್ಟುನಿಂ ಪಾಳೆ ತಮ್ಮ ಮನೆಯೊಳ್ ಪಾನಿ[ಪಾಠಾಂ. ನೆ]ಗಟ್ಟುವವರು ದು ಬಗೆದಿರ್ದು (ಶಬ್ದಾ.ಶಾ. ೭೯-೦೨); ಎಮ್ಮಲ್ಲಿಗೆ ನೀಮುಂ ಕಿತ್ತಯ್ಯಂಗಳನೂಡಗೊಂಡು ಬಂದು ಪಕ್ಕದಿರ್ದು ಪಾನಿ[ಪಾಠಾಂ. ನೆ]ಗಟ್ಟಿ ಮಾರ್ಗಮುಂ ತೋಱಿ ಮಗುಟೆ ಬಿಜಯಂಗೆಯ್ಯಿಂ (ಶಬ್ದಾ.ಶಾ. ೮೧-೧). ☞ ಇಲ್ಲಿ 'ಪಾನಿಗಟ್ಟು' ಎಂಬ ಕೃದಂತಪದವು ಶ್ರಾವಕ, ಶ್ರಮಣ ಈ ಇಬ್ಬರಿಗೂ ಅನ್ವಯವಾಗುವಂತೆ ಪ್ರಯೋಗವಾಗಿದೆ. ಆದುದರಿಂದ ಅರ್ಥಕ್ಲೇಶವಿದೆ. ಶ್ರಮಣರನ್ನು ಭಿಕ್ಷೆಗಾಗಿ ಆಹ್ವಾನಿಸಿ ಕಾಲು ತೊಳೆಯುವ ಸಮಯದಲ್ಲಿ ಅವರ ತಲೆಯ ಮೇಲ್ಭಾಗದಲ್ಲಿ ಚೌಕಾಕಾರದ ಶುಭ್ರವಸ್ತ್ರವನ್ನು ಕಟ್ಟುವ ಪದ್ಧತಿಯಿದೆಯಂತೆ. ಆದುದರಿಂದ ಇಲ್ಲಿ 'ಪಾನಿ' ಎನ್ನುವುದು ಯಾವ ಶಬ್ದದಿಂದ ಉತ್ಪನ್ನವಾಗಿದೆ ಎಂಬುದು ಚರ್ಚೆಗೆ ಆಸ್ಪದವನ್ನುಂಟುಮಾಡುತ್ತದೆ. 'ಇರ್ಪಾನಿ' ಹೋ.
[ಪಾನಿ₂ + ಕಟ್ಟು₁]

**ಪಾನಿಪತ್ತು**, ಪಾಣಿಪತ್ತು (ನಾ). ೧. ದಿಲ್ಲಿ ಮತ್ತು ಅಂಬಾಲಗಳ ನಡುವೆ ಇರುವ ಐತಿಹಾಸಿಕ ಪ್ರಸಿದ್ಧಿಯುಳ್ಳ ಒಂದು ಯುದ್ಧಭೂಮಿ. ೨. (ಆಲಂ) ಯುದ್ಧದಲ್ಲಿ ಉಂಟಾಗುವ ರಕ್ತಪಾತ: ಒಕ್ಕುಡಿತೆ ಅರೆಮುಕ್ಕು ಎನುತೆನುತೆ ಹಲಕೆಲವು ಪಾನಿಪತ್ತುಗಳನ್ನು ಮುಕ್ಕುಳಿಸುವೆ (ವಾರಂಗ. ೯೦-೦೨). **ಪಾಣಿಪತ್ತು**: ೩. ಮಹಾಯುದ್ಧ: ಪ್ರಪಂಚದ ಪಾಣಿಪತ್ತಿನಲ್ಲಿ ಇವೆರಡೇ ವರ್ಗಗಳು ಒಂದಕ್ಕೊಂದು ಇದಿರಾಗಿ ಪಡೆಗಟ್ಟಿ ನಿಲ್ಲುವವು (ಮಾಹಾರ. ೧೧೦). [←ಹಿಂ. ಪಾನೀಪತ್]

**ಪಾನಿಯಾಲಯ** (ನಾ). ಸಮುದ್ರ (?): ಕೀರಶಕ್ತಿಯಾಡುವೃದ ಕೆಳುತ ವಿಧೀಷಣಂ ಪಾನಿಯಾಲಯದ ಕಳೆದುತ್ತರದ ತಟದೊಳು ದಿನೆ ಸಸಂದಣ ನಿರ್ದೋಷದಲ್ಲಿಗೈತಂದು (ತೊರಾರಾ. ೬-೩-೪). [<ಪಾನೀಯ+ಆಲಯ]

**ಪಾನಿವಟ್ಟಲು** 'ಪಾಣಿವಟ್ಟ' ನೋ.

**ಪಾನಿಸು** (ಕ್ರಿ). ಕುಡಿ; ಪಾನಮಾಡು: ಶುನಕಮಾಂಸವ ಭಕ್ಷಿಸುರಿಯಂ ಪಾನಿಸುವವರ ಪಾಪಕೆ ಹೋಹರು (ಎಕ. XII, ಕುಣಿಗಲ್. ೮೪-೦೭: 1544) ಗಂಗೆಯಿಂದೆಸಗಿದಾ ಮದಿರೆಯಂ ಪಾನಿಪರೆ? (ಹರಿಕ. ೧೨-೭೯).
[ಪಾನ₂+–ಇಸು₃]

**ಪಾನೀಯ** (ಗು). ೧. ಕುಡಿಯಬಹುದಾದ; ಕುಡಿಯಲು ಯೋಗ್ಯವಾದ. (ನಾ). ೨. ಕುಡಿಯಲು ಯೋಗ್ಯವಾದ ಪಾನಕ, ಸೋಮರಸ, ಹಣ್ಣಿನ ರಸ, ಮದ್ಯಮುಂತಾದ ದ್ರವಪದಾರ್ಥ: ಸಹಕಾರಪಕ್ವರಸಸಾರಾಸಾರಪಾನೀಯದಿಂ ಸವಿಶೇಷಂ ಬೆಳೆದೊಪ್ಪುತೋರ್ಪ ಕಳಮಂ ಕಾನಲ್ಲಿಯುಂ (ಸುಕುಮಾ. ೦-೭೪). ೩. ನೀರು; ಜಲ: "ಆಪಃ(ಪ್), ತೋಯಂ . . . ಪಾನೀಯಂ . . . ಜೀವನೀಯಂ—ಈ ೨೬ ನೀರ್" (ಶಬ್ದಮ. ೧೧೭-೨೬): ಇತ್ತ ಶಿಷ್ಯಂ ಮುದದೊಳು ಪರಿಶುದ್ಧಪಾನೀಯದಿಂ ಸ್ನಾನಮಂ ಮಾಡಿ (ಶ್ರೀಕ. ೬-೪೦). [ಸಂ.]

**ಪಾನೀಯಖೇಯ** (ನಾ). (ಊರಿನ ಸುತ್ತಲೂ ತೋಡಿರುವ) ಕಂದಕ; ಅಗಳು: ಮೂಳೆಸಾವಳಿ ಸುತ್ತಿರ್ದುದಂಭೋಧಿಯೆಂಬಂತೆ ಗಭೀರಾರಾವದಿಂ ಪಲ್ಲೊರವಪೊರೆಸಿಗುಂ ಸುತ್ತಿ ಪಾನೀಯಖೇಯಂ (ಸುಕುಮಾ. ೯-೩೬). [ಪಾನೀಯ+ಖೇಯ]

**ಪಾನೀಯಜ** (ನಾ). ನೀರಿನಲ್ಲಿ ಹುಟ್ಟಿದುದು; ತಾವರೆ: 'ಪಾನೀಯಜಾಸನ' ಪರಾ. [ಸಂ.]

**ಪಾನೀಯಜಾಸನ** (ನಾ). ತಾವರೆಯನ್ನು ಪೀಠವಾಗಿ ಉಳ್ಳವನು; ಬ್ರಹ್ಮ: ಅಂಭೋಜಾಯತಾಕ್ಷನ ನಾಭಿಯಲಿ ಪಾನೀಯಜಾಸನನುದಿಸಿದನು (ಕೊಶರಾ. ೪-೨-೧೩). [ಪಾನೀಯಜ+ಆಸನ]

**ಪಾನೀಯಧಾರಕ** (ನಾ). ಮದ್ಯ ಮುಂತಾದ ಪಾನೀಯಂಗಳನ್ನು ಸದಾ ಹಿಡಿದು ಸಿದ್ಧವಾಗಿ ನಿಂತಿರುವ ಸೇವಕ: ತಾ ಭೋಗಿಸದೆ ಬಳಸದೆ ರಾಜನನೋಲಗಿಸುವವನೆ ಪಾನೀಯಧಾರಕನು (ಶಬ್ದಾ.ಶಾ. ೩-೯೩).
[ಪಾನೀಯ+ಧಾರಕ]

**ಪಾನೀಯಮಂಟಪ** (ನಾ). (ನೀರು, ಪಾನಕ, ಮಜ್ಜಿಗೆ ಮುಂತಾದ) ಪೇಯಗಳನ್ನು ದಾರಿಹೋಕರಿಗೆ ನೀಡಲು ದಾರಿಯ ಪಕ್ಕಗಳಲ್ಲಿ ಕಟ್ಟಿರುವ ಮಂಟಪ; ಅರವಟ್ಟಿಗೆ: ಪಾನೀಯಮಂಡಪಂಗಳೊಳ್ ಕಲಶಮನೆತ್ತಿ ನೀರೆಱೆವ ಕಾಂತೆಯ . . . ನೋಡಿ (ತಂಕೃಕ. ೧-೯೬).
[ಪಾನೀಯ+ಮಂಡಪ]

**ಪಾನೀಯಶಾಲಿಕೆ** (ನಾ). =ಪಾನೀಯಮಂಡಪ: "ಪ್ರಪಾ. ಪಾನೀಯಶಾಲಿಕಾ—೨ . . . ಅರವಟಿಕೆ" (ಸಿದ್ಧಾಂತಿ. ೦೦೦).
[ಸಂ. ಪಾನೀಯಶಾಲಿಕಾ]

**ಪಾನೀಯಶಾಲೆ** (ನಾ). =ಪಾನೀಯಮಂಡಪ: "ಪ್ರಪಾ. ಪಾನೀಯಶಾಲಾ — ಈ ೨ ಅಱವಟ್ಟಿಗೆ" (ಶಬ್ದಮ. ೩೦ (೪೨); ಅನಂಗಶೃಂಗಾರಲೀಲೆಗಳೆನಿಪ್ಪ ಪಾನೀಯಶಾಲೆಗಳುಂ (ಧಕಪ್ರ. ೯-೨೨ ವ): ಆ ಪಾನೀಯಶಾಲೆಯೊಳು ನಿಂದು ನೀರೆಱೆವ ನಾರಿಯರ ಲಾವಣ್ಯದ ಸುಂದರಲೋಚನದಿಂದ ಬಂದದೀಂಟುತ ಪಥಿಕರು ಜಲಪಾನ ಸಂಕೇತದೆನ್ನರಾಬಟ್ಟಿಗಳೊಳು (ಶರಕ. ೧-೩೮). [ಪಾನೀಯ+ಶಾಲೆ₃]

**ಪಾನೀಯಸಂಚರ** (ನಾ). ನೀರಿನಲ್ಲಿ ಸಂಚರಿಸುವಂತಹುದು; ಮೀನು: "ಮೀನಂ ಝಷಂ . . . ಪಾನೀಯಸಂಚರಂ ಶಲಿ ವೈಸಾರಿಣಂ ಪೃಥುರೋಮನೆ ಮೀನ್ಗೆ ನಾಮಂ" (ಶಬ್ದಗರಾ. ೧೨೧-೬). [ಪಾನೀಯ+ಸಂಚರ]

**ಪಾನು** (ನಾ). ೧. ಎಲೆ; ಪತ್ರ: (೬). ೨ ಪುಸ್ತಕದ ಅಥವಾ ಪತ್ರಿಕೆಯ ಹಾಳೆ: ಬಳವಂತನು ಅವಸರದಿಂದ ಪಾನು ತಿರುವುತ್ತ ಹೋದ್ದರಿಂದ ಆ ಚಿತ್ರಗಳು ಗೋದುವರಿಗೆ ನೆಟ್ಟಗೆ ಕಾಣಸಲಿಲ್ಲ

(ಅಕ್ಷ್ಯಗ್. ೬೦) ; ಒಂದು ಮಹಾಸಪ್ರಕ್ರಿಯೆಯನ್ನು ತೆಗೆದುಕೊಂಡು ಅದರ ಹಾನುಗಳನ್ನು ತಿರುವಿಹಾಕುತ್ತಿದ್ದರು (ಕುರಿಹಿ. ೪). ೩. ವೀಳ್ಯದೆಲೆ ; "ವೀಳ್ಯದೆಲೆ . . . ನಾಗಲತೆ, ತಾಂಬೂಲವಲ್ಲಿ, ಎಲೆಬಳ್ಳಿ, ಪಾನು, ಅಂಬಾಡಿಎಲೆ, ನಾಗವಲ್ಲಿ" (ಷ್ಟ.೬. ೦೦೬). 'ಪಾನುಸುಪಾರಿ' ಪರಾ. ೪. ಅಡಕೆ, ಸುಣ್ಣ ಮೊದಲಾದುವನ್ನು ಹಾಕಿ ಮಡಿಸಿರುವ ವೀಳೆಯದೆಲೆಯ ಸುರುಳಿ ; ಬೀಡ ; ಪಾನ್‌ಪಟ್ಟಿ: (೬). ೫. ಇಸ್ಪೀಟು ಎಲೆ : ಪಾನುಗಳು ಸರಿಯಾಗಿ ಬರದೆ ಈ ಸಲವೂ ಅವನು ಸೋತುಹೋದನು (ಹೂಹಿ). [←ಹಿಂ. ಮರಾ. ಪಾನ್]

**ಹಾನುಂಗಲ್**, ಪಾನಂಗಲ್ಲುಂ, ಹಾನಂಗಲ್, ಹಾನುಂಗಲು, ಹಾನುಗಲ್, ಹಾನೇಗಲ್ಲು (ನಾ). ಒಂದು ಸ್ಥಳದ ಹೆಸರು ; ೲ ಈಗಿನ ಧಾರವಾಡಜಿಲ್ಲೆಗೆ ಸೇರಿದ ಒಂದು ಊರು : ಮಾಧವಕರ್ಮಣಃ ಪಾನಂಗಲ್ಲಿಪಯೇ (ಎಳ. X. ಕೋಲಾರ. ೬೨–೬೬ ; 757). **ಹಾನುಗಲ್ಲು** : ಪಾನುಗಲ್ಲೆಂಬ ಪುರವರಕಿದ್ದು ಗೋವಿಂದವೆಗಡೆಯೆಂದೆನಿಪ ಶಿಷ್ಯನ ಸದನದಲ್ಲಿರಾತಿರೆ (ಜಾಸೋತ್ರ. ೬–೦೦೦). **ಹಾನುಂಗಲ್** : ಬನವಾಸಿ ಹಲಸಿಗೆ ಹಾನುಂಗಲ್ಲುಪಟ್ಟಂಗಿಗೊಣ್ಡು ಹೊಯ್ಸಳವೀರಬಲ್ಲಾಳದೇವರ ರಾಜ್ಯದ . . . ಬಿಲಗೋವಿಂದರಸರುಂ ಉಮ್ಮಡಿಯ ಬವರಕ್ಕೆ ನಡದಲ್ಲಿ (ಎಳ. X. ಗೋರಿಬಿ. ೪೦–೩ ; 1180) ; ಶ್ರೀಮತ್ಕ್ಕೈಲಪದೇವರಸರು . . . ಹಾನುಂಗಲ್ಲೈನೂರುಮಂ ಸ(ದಾ)ಹ್ವಾಭ್ಯಾಂತರಸಿದ್ಧ್ಯಾಯವಿನಯು ಸ್ವಾಮ್ಯವಮನಾಳುತ್ತಮಿರೆ (ಕಕುಂ. ೯–೬). **ಹಾನುಂಗಲು** : ನರಸಿಂಗವರ್ಮ್ಮ ನಿಮ್ಮಾರ್ಗ್ಗಳನಂ ಕಳಪಾಳಕಾಳಾನಳಂ ಹಾನುಂಗಲುಗೊಣ್ಡ ಚತುರ್ಮುರ್ಗಖಿಗಣ್ಡ (ಎಳ. II, ೦೪೩–೫೯; 1131); ಬನವಸೆ ಹಾನುಂಗಲು . . . ಯಿಂತೀ ಸಮಸ್ತ. ದುರ್ಗ್ಗಂಗಳಂ (ಎಳ. VII, ಶಿಕಮೊ. ೪೦–೩೩; 1180 ?). **ಹಾನುಗಲ್** : ಹಾನುಗಲ್ಸಾಡಯಲಂಬಿಯ ಕಂಪಣದ ಬಬಿಯ ಬಾಡಂ (ಎಳ. VII, ಶಿಕಾರಿ. ೯೨–೩೯ ; 1168). **ಹಾನುಗಲ್ಲು** : ಹಾನುಗಲ್ಲ ಮಹಾಸೀಮ್ನಿ ವಿಖ್ಯಾತಿಮಧಿಕಾಂಶ್ರಿತಂ (ಎಳ. VII, ಶಿಕಮೊ. ೯೩–೬೯ ;1527). [?]

**ಹಾನುಗಲ್ಲು** 'ಪಾನಂಗಲ್' ನೋ.

**ಹಾನುಸುಪಾರಿ** 'ಪಾನ್‌ಸಂಪಾರಿ' ನೋ.

**ಹಾನೆ**, ಬಾಣ್, ಬಾನ್ನ, ಬಾನ್ನಿ, ಬಾನಂ, ಬಾನೆ, ಹನ್ನೆ, ಹಾನೆ (ನಾ). ೧. ಲೋಹ, ಮರ, ಮಣ್ಣು ಮುಂತಾದುವುಗಳಿಂದ ಮಾಡಿದ ಅಗಲಬಾಯಿಯ ಪಾತ್ರೆ : ಕಟಕಕ್ಕವಿರ್ದ ನೆರೆ ಸಂಕಟಮೆನಿಸದೆ ತೀವುಗುಡುವವೋಲ್ ಪಾನೆಯ ಕೂಟ್ ಟಕಂ ನೆರೆದುಂಡೂಡಮುತ್ಕಟಮುಪ್ಪಕ್ಷೀಣಬುದ್ಧಿಯಂ ಮುನಿ ತಳೆದಂ (ಅಪಂಪು. ೯–೦೦೨) : ದೊಕ್ಕನೆ ಪಾನೆಯನಿಕ್ಕದೆ ಕೆಕ್ಕಳಿಸದೆ ಕಣ್ಣನುಗುಳದಗುಳಂ ಬೆರಳಿಂ ತಕ್ಕುದನೆರೆಯದೆ ಭಕ್ತಿಯನಿಕ್ಕಿದವೋಲುದರಗರ್ತಮಂ ಪೂಣ್ಕೆನಿತಂ (ಅಜಿತ. ೨೦–೦೩೩). ೨. ಅಳೆಯುವ ಒಂದು ಸಾಧನ : ಅವರ ತವೊ(ೋ) ಅಮ್ಮಯ್ಯಂದೇಗುಲವಮಂ ಮಾಡಿಸಿ ಭಟಾರಗ್ಗೆ ಊರಮ್ಮೂಡಣ ಕಿಳಾರೆಯ್ಯೊಳ್ಪಿರಿಯಪಾನೆಯೊಳಱು ಗಣ್ಡುಗಂ ಮಣ್ಣುಮಾ × × × ಕೀಸವಯ್ಯಂಗೆ ಬಿ × × ಟ್ಟ (ಎಳ. VII, ಶೀಕಾರ. ೨೬–೦೩; 920) ; ಗುಣಗನ ಒಂದು ಮತ್ತಲ್ಗೆ ಪಿರಿಯ ಪಾನೆಯೊಳ್ ಎರಡು ಪಾನೆ ಬತ್ತವ . . . ಎಲ್ಲ ಕಾಲಕ್ಕಮಟ್ ಕೊಟ್ಟೋರ್ (ಎಳ. VIII, ಸೊರಬ. ೬೩–೩; 941). 'ಇಪ್ಪಾನೆ', 'ಒಪ್ಪಾನೆ' ಪರಾ. ಬಾಣ್. ೩. ನೀರು, ಮುಂಸುರೆ ಇತ್ಯಾದಿಗಳನ್ನು ಹಾಕಿಡುವ ಅಗಲವಾದ ಬಾಯುಳ್ಳ ದೊಡ್ಡದಾದ ತೊಟ್ಟಿ : ಸಮತಟ್ಟಾದ ಬಯಲುಗಳಲ್ಲಿ ಕೈಲುಹಾದಿಯ ಎರಡು ಮಗ್ಗುಲಿಗೂ ಬಲು ಉದ್ದವಾದ ಎರಡು ನೀರಿನ ಬಾಣಗಳನ್ನು ಮಾಡುತ್ತಾರೆ (ಜಾಂತ್ರ.I. ೬೪೯). ೪. ದೋಣಿಯಲ್ಲಿ ಪ್ರಯಾಣಿಕರು ಕೂರಲು ಹಾಕಿರುವ ಅಡ್ಡಹಲಗೆ: ಅವಸರದಿಂ ದೋಣಿಹತ್ತಿ ಕುಳಿತಳಾಕೆ ಬಾಣಗೊಂಟ್ಟಿ (ಗ್ರಾಹಿ. ೬೩–೦೦); ಯಾವುದೋ ಒಂದು ಮಹಾ ಯಾಯಿ ದೋಣಿಯ ಬಾಣಿಯಲ್ಲಿ ಕುಳಿತ ಆ ಹುಡುಗನನ್ನು ಅಪ್ಪಳಿಸಿ ಸೆಳೆದು ಒಯ್ದುಬಿಟ್ಟಿತ್ತು (ಕ್ಯಂಬೂ. ೯೬). **ಬಾಣ್** : ೧. ಕತ್ತನುಡಿಣಾ ಜನನಿಯಲ್ಲದಡತ್ತಲಿತ್ತಲು ಪರಿಕಿಸುತ ಹಸಿವೆತ್ತಿ ಬಿಚ್ಚ ಬಾಣಂ ಬೋ ] ನದೊಳೊಂದು ಹೂರಿಗೆಯಂ ತೆಗೆದು ಮೆಲಲು (ಚಾಕ್ಷು. ೨೯–೩೩). **ಬಾನ್ನಿ** : ೧. ಆಕೆ ಕಮಂಡಲು ಒಂದನ್ನು ತಂದಿದ್ದಳು . . . ಈ ಮಣ್ಣುಬಾನಿಯಂತೆ ಎಡವಿ ಬಿದ್ದರೆ ಎಲ್ಲಿ ಒಡೆದುಹೋಗುವುದೋ ಎಂಬ ಭಯವೇ ಇಲ್ಲ (ಶಿಕಾ. ೦೩೬) ; ಸಟಕಾರದ ನೊರೆಯನ್ನು ಒಂದು ಬಾನಿಯಲ್ಲಿ ತುಂಬಿಟ್ಟು ದೋಳಿಸದೇಹಾದ ಮುಖವನ್ನು ನಾಲ್ಕಾರು ನಿಮಿಷ ಅದರಲ್ಲಿ ನೆನೆಯಿಟ್ಟು ತೆಗೆದರಾಯಿತು (ಕೀಕಕ್. ೬೬). ೩. ಕಲಗಚ್ಚನ್ನು ಬಾನಿಗೆ ಸುರಿಯಲು ಬಂದ ರಂಗವ್ವ . . . ಕೇಳಿದಳು (ಶಿಕಾ. ೯೬). ೫. ಹೂವಿನ ಸಸಿ ಮುಂತಾದುವುಗಳನ್ನು ಬೆಳೆಸುವ ಮಣ್ಣಿನ ಪಾತ್ರೆ ; **ಕುಂಡ** : ನಾನು ಬಾಗಿಲೆದುರು ಒಂದು ಸುಂದರವಾದ ಕೈತೋಟ ಮಾಡಿದೆ. ಐವತ್ತು ಬಾನಿಗಳನ್ನು ತಂದಿರಿಸಿದೆವು (ಸ್ಮಿತಿ. ೬೨೪) ; ಸಂಜೆಯ ಮುಂದೆ ಬಂಕದಲ್ಲಿಟ್ಟ ಬಾನಿಯೊಳಗೆ ಅರಳಿದ ಮಲ್ಲಿಗೆಯ ಹೂವಿನ ಗಂಧ ಬರುತ್ತಿತ್ತು (ಇಕ್ಷ್ಯ. ೨೩೩). **ಬಾನು** : ೫. ನಾಗಪ್ಪನು . . . ಹೂವಿನ ಬಾನುಗಳಿಗೆ ನೀರು ತಣಿಸುತ್ತಿದ್ದನು (ಕಶಕ. ೬೩). **ಬಾನೆ** : ೧. ಗಮಗಮಿಸುತ್ತಿದ್ದ ಕಾಫಿ ತುಂಬಿದ್ದ ಬೆಳ್ಳಿಯ ಗಡಿಗೆ, ಸಕ್ಕರೆಯ ಬಾನೆ . . . ರೊಟ್ಟಿಗಳನ್ನುಳ್ಳ ಬುಟ್ಟಿಗಳನ್ನು ಜೋಡಿಸಲಾಗಿತ್ತು (ಪ್ರಹು. ೦೩) ; ಬಾನೆಯನ್ನು ತಲೆಮೇಲೆ ಕವಿಚಿಕೊಂಡು ತಿರುಗಲಾರಂಭಿಸಿದನು (ಕಥಾಕು. IV. ೦೦೬). ೩. ಬಾನೇಯಂತಾ ಬಾಯಿದೆರೆಯೆ ಬಾಯಿ ತುಟಿಯು ವಿಪರಿದ ಹಲ್ಲು . . . ಆನಳರಾಜ ತಾನು ಯಿಂತಾ ರೂಪು ಧರಿಸಿದ (ಯಕಕ. ೦೦೦) ; ಒಳಗಿದ್ದ ದೊಡ್ಡ ಬಾನೆಗಳಲ್ಲಿ ಮದ್ಯ ತುಂಬಿದ್ದಿತು (ಜಾಂತಿಂ. ೨೨೪) ; ಈ ಕಲಗಚ್ಚಿನ ಬಾನೆಯಲ್ಲಿ ಅಲ್ಲಿದ್ದ ಗೋಗಣವು . . . ಅಕ್ಕೃತ್ರಿಮಸುಖವನ್ನು ಸವಿಯುತ್ತಿದ್ದಿತು (ಕಹುಳ. ೦೩೯). ೫. ಚಿತ್ರವಿಚಿತ್ರವಾದ ಅನೇಕ ಬಗೆಯ ಗಿಡ ಬಳ್ಳಿಗಳು ಇರುವ ಮಣ್ಣು ಬಾನೆಗಳು ಸಾಲಾಗಿ ಇವೆ (ಕುಕರ್. ೯೬). ೬. ಎತ್ತುಗಳನ್ನು ಹೂಡಿ, ಬಾವಿಯಿಂದ ನೀರೆತ್ತಲು, ಚರ್ಮದಿಂದ ಮಾಡಿದ ಒಂದು ಸಾಧನ; ಕಪಿಲೆ : ಧರ್ಮದೋಣಿಗೆ ನೀರ ಎತುವ ಕಬಿನದ ಎತದ ಬಾನ ಕಬಿನದ ಕಟ್ಟು ಬಿಷ್ಟಂ ಧರ್ಮವನು ತಪದೆ ನಡಸಿ ಬಾಹಲು (ಶ್ರೀಕ. IX–ii, ೬೬೦–೨೨ ; 1559). **ಹನ್ನೆ** : ೨. ಕೊಟ್ಟ ಧ್ರಂ(ಧ)ರ್ಮ್ಮ ಚೈತ್ರ ಪವಿತ್ರದಲಿ ಪೂಜ್ಕಲಿಗೆ ಹಾಗೆ ನೊಟ್ಟಲುಗೊಳಗ ಹನೆಗೆ ಮಾನಪತ್ತ ಸೊಂಟಿಗೆಯಣ್ಣೆ (ಶಾಇತಿ. XV. ೯೩–೬೨ ; 1156). **ಹಾನೆ** : ೨. ಶ್ರೀಪ್ರಸಂನಕೇಶವದೇವರ [ದೇವಡ್ಡಿ]ಗಳಿಗೆ ಗುಗ್ಗರಿಗೆ ಹಾನೆಯಲುಂ ಅಂಗಡಿಗಳಲು ಸಟ್ಟು ಗಾಯಮಂ ಬಿಟ್ಟರು (ಶಾಇತಿ. XV. ೩೪೩–೦೦ ; 1165); ನಃಸಿಂಹದೇವರ ಬಾಳಿನ [ತ] ಉಪರಾಹ ಪ ೬ ಭತ್ತ ಹಾನ ೪೫ ನೂ ಧಾರೆಯಾಗಿ ಎರೆದು ಕೊಟ್ಟರು (ಕಇ. III–i. ೨–೬ ; 1331); ಯಳ್ಳೆಣೆ ಹಾನೆ ೩.೬ (ಕ್ಯಾಂ. ೦೪೯೩. ೨೯–೦೩ ; 1673); ಎರಡು ಹಾನೆ ಭತ್ತಕ್ಕಾಗಿ, ಹನ್ನೆರಡು ಗಂಟೆ ದುಡಿಯುವ ಜನವಾಗಿರಲಿಲ್ಲ (ಕೀಕಹು. ೬೯). ೭. ಭೂಮಿಯ ಒಂದು ಅಳತೆ : ಯಿಾ ಅಕ್ಕಿಯ ಕೊಚಿತೆಗೆ ಕೊತ್ತಾರಿ ಗುಡಿಯ ನಾಲ್ವತ್ತು ಹಾನೆ ಗದ್ದೆಯ ಮೇಲಣ ಎಂಟು ಹಾನೆಯಕ್ಕಿಯೂ ಕೂಡಿ ಸಡಲುದು (ಶ್ರೀಕ. IX–ii, ೪೦೩–೨೬ ; 1572). [ ದೇ.▮ ತಮಿ. ಪಾನೈ, ಪಾನಾ; ಮಲ. ಪಾನ, ಪಾನಿ; ತುಳು. ಪಾಣೆ, ಪಾಣೆ, ಪಾನೆ, ಬಾಣ, ಬಾಣೆ, ಬಾನ, ಹಾನೆ ; ತೆಲು. ಬಾನ ; ಕೊಡ. ಪಾನಿ ]

**ಹಾನ್ನಾಡು** (ನಾ). ಒಂದು ಪ್ರದೇಶದ ಹೆಸರು : ಶ್ರೀಮತ್ ಕೊಙ್ಗಣಿ ವೃದ್ಧರಾಜೇನ ದುರ್ವ್ವಿನೀತ ನಾಮಧೇಯೇನ ಸಮಸ್ತ ಪಾನ್ನಾಡ (? ಪಾಪಾಡ) ಪುನ್ನಾಡಾಧಿಪತಿನಾ (ಇಇ. V. ೦೩೯–೦೦ ; 513). [? + ನಾಡು]

**ಹಾಪ್ಯ** 'ಪಾಪೆ' ನೋ.

**ಪಾಪ್ನ** (ನಾ). ೧. ದೋಷ ; ಪುಣ್ಯವಲ್ಲದ ಕಾರ್ಯ ; ದುರಾಚಾರ : "ವೃಜಿನಂ, ದುರಿತಂ . . . ಪಾಪಂ, ಪಾಪ್ಮಾ, ಪಾತಕಂ–ಈ ೧೪ ಪಾಪಂ" (ಹಲಾಯು. ೦೫೩–೩) : ಪಾಪವಿದು ಪುಣ್ಯವಿದು ಹಿತರೂಪವಿದುಹಿತಪ್ರಕಾರವಿದು ಸುಖವಿದು ದುಃಖೋಪಾತ್ತವಿದೆಂದರಿಪುಗುಮಾ ಪರಮಕವಿ ಪ್ರಧಾನರಾ ಕಾವ್ಯಂಗಳ್ (ಶಬ್ದ. ೦–೦೬): ಪಾಪದ ಪುಣ್ಯದ ಭೇದಮನೀ ಪರಿಯಿಂದರಿಯದಿರ್ದ ನಡೆವಾಪಿಯರ್ಗಾ ಶ್ರೀಪುರುಷೋತ್ತಮನಂ ಮನೆಗಾಪೆನಿಸಿದ ದಿವ್ಯಪಾದಕಾನೆಜಿಗಿದಪೆಂ (ಜಗ. ೬–೨೨೬). ೨. ದುರಾಚಾರದಿಂದ ಬಂದ ಕರ್ಮಫಲ : ಸಮಕೊಂಡ ಪುಣ್ಯಮುಂ ಪಾಪಮುಮಿಲ್ಲದೊಡಾಳ್ದನಾಳ್ ಸರೋಗ ನರೋಗಂ (ಶಾಂತಿಪು. ೬–೦೪೦): ಮುನ್ನ ಮಾಡಿದ ಪಾಪ ಬೆನ್ನ ಬಿಡದನ್ನಕ್ಕ ಇನ್ನು ಬಯಸಿದರುಂಟೆ (ಬಸವ.೨೪): ಬಸವ ಶರಣೆನೆ ಪಾಪವಳಿವುಗು (ಬಸವ. ೦–೨೫). ೩. ತಪ್ಪು ; ಅಪರಾಧ : ಭೂಪನಂ ಹೊದ್ದುವುದು ರಾಷ್ಟ್ರದ ಪಾಪ (ಬಸವ. ೩೩–೬). ೪. ಕೆಟ್ಟ ವಸ್ತು : "ಅವರ್ಣಂ, ಅಣಕಂ . . . ಪಾಪಂ, ರೇಫಸಂ—ಈ ೧೩ ಹೊಲ್ಲಹ ವಸ್ತು" (ಹಲಾಯು. ೩೬–೦೩೨). ೫. ಕೆಟ್ಟ ಮನುಷ್ಯ; ದುಷ್ಟ; ಪಾಪಿ :"ನೃಶಂಸಃ, ಘಾತುಕಃ, ಕ್ರೂರಃ, ಪಾಪಃ–೪ ಪರರಿಗೆ ಬಾಧೆಮಾಡುವ ಸ್ವಭಾವವುಳ್ಳವನ ಹೆಸರುಗಳು" (ಸಿಕ್ಕಾ.೫. ೩೩೬): ಮಿಟ್ಟು ಪುಟ್ಟು ಪಾರೆ ಪಾಪರ್ ದೇವರಂ ತೆಗಟಾಸಲೊಡವೋನಕ್ಕುಂ ? (ಅನುಕ್ಕ. ೨೪–೪). ೬. ದುರ್ದೈವ; ದುರದೃಷ್ಟ. ೭. ಕೇಡು ; ಅನಿಷ್ಟ : 'ಪಾಪಶಂಕೆ' ಪರಾ. ೮. ಅನುಕಂಪೆಯನ್ನು ಸೂಚಿಸುವಾಗ ಬಳಸುವ ಒಂದು ಶಬ್ದ : ಕೂಸಿಗಿಂತ ತ್ರಾಣೆಯುಳ್ಳ ಪಾಪ ರಾಯರು (ಅಮೃತ. ೯೬) ; ಏನೋ ಚೋರಚಾರು ಅಂತಿಂತಹ ಕಾಳುಕಡಿ ತಿಂದರೆ ತಿನ್ನಲಿ ಪಾಪ ಎಂಬಂತಿಲ್ಲ (ದೇವಕ್ಕ. ೪೪) : ಪಾಪ ಮಗು ಏನೆಂದುಕೊಂಡಿತೋ ಕಾಣೆ (ಶಕ್ತಿ. ೦೮.). ೯. [ಜೈನ] ಒಂಬತ್ತು ವಿಧವಾದ ಪದಾರ್ಥಗಳಲ್ಲಿ ಒಂದು : 'ನವಪದಾರ್ಥ', 'ಪಾಪಪದಾರ್ಥ' ಪರಾ. [ಸಂ.]

**ಪಾಪ್ನ** (ನಾ). ಒಂದು ಬಗೆಯ ಗಿಡ : "ಪರ್ವಣಃ—ಪಾಪ, ಚಪಲ, ಗೇರು" (ಓಷ. ೯೦). [?]

**ಪಾಪಕರ್ತ** (ನಾ). ದುರಾಚಾರವನ್ನು ಮಾಡಿದವನು : ಪಾಪಕರ್ತನು ನಾನು ಪಾಪನಾಶನ ನೀನು (ಪುರಂದ. ೪–೯೦–೦). [ಪಾಪ್ನ+ಕರ್ತ]

**ಪಾಪಕರ್ಮ** (ನಾ). ೧. ಕೆಟ್ಟ ಕೆಲಸ ; ದುರಾಚಾರ : ಆತನ ಭಾರ್ಯೆ ವೃಷ್ಟಿಶ್ರೀಯೆಂಬೋಳ್ಕೆಯ ಗರ್ಭದೊಳ್ ಪಾಪಕರ್ಮ ಜೀವಂ ನೆಲಸಿದೊಡೆ (ಕಬ್ಬಿಗ. ೩೬–೯): ಎಲವೂ ಎಲವೋ ಪಾಪಕರ್ಮವ ಮಾಡಿದವನೇ . . . ಒಮ್ಮೆ ಶರಣೆನ್ನಲವೋ ಒಮ್ಮೆ ಶರಣೆಂದರೆ ಪಾಪಕರ್ಮ ಓಡುವುವು (ಬಸವ. ೬೨೧): ಪಾಪಕರ್ಮವ ಮಾಡಿದಜಮಿಳನ ಯಮಭಟರು ಕೋಪದಿಂದಲಿ ಸೆಳೆಯೆ (ಪುರಂದ. ಶಾ. ೨–೯೩–೪): ಪಾಪಕರ್ಮಗಳ ನಶಿಗಳೆದು ನೀದವಗೆ ಕೋಪವೆಲ್ಲಿಯದು (ಸರ್ವಜ್ಞ. ೫೦೨). ೨. ಕೆಟ್ಟ ಕೆಲಸವನ್ನು ಮಾಡಿದವನು ; ದುಷ್ಕರ್ಮವನ್ನು ಮಾಡಿದವನು : ಪಾಪಿಷ್ಠ : ಎನ್ನ ಪಾಪಕರ್ಮನ ಕತದಿಂದಮಿಾ ನಿಮಗಮಿಾಯರವಾದುದೆ ಸಿಂಧುನಂದನಾ (ಗದಾಯು. ೩–೯೦): ತನಗಿಕ್ಕುವೆಜೀವ ಕರುಣಂ ಮನದೊಳವಿನಿತಿಲ್ಲ ಪಾಪಕರ್ಮನಪಂ ·ಮಾವನೆ (ಸುಕುಮಾ. ೨–೭೦) : ಇಂ(ಇ)ದನಾ(ರಾ)ನುಂ ಕಿಡಿಸಿಹೆನೆಂಬ ಪಾಪಕರ್ಮ್ಮಗಂಪೇಕ್ಷಿಸಿದಂಗಂ . . . ಸಾಸಿರಕವಿಲೆಮುಮಂ ವಾರಣಾಸಿಯೊಳಂ ಕುರುಕ್ಷೇತ್ರದೊಳಂ ತಂನ ಸ್ವಹಸ್ತದೊಳು ಕೊಂದ ದೋಷಮಕ್ಕು (ಎಪ. XXVII. ೬೩–೫೪: 1114). [ಪಾಪ್ನ+ಕರ್ಮ]

**ಪಾಪಕೃತ್ಯ** (ನಾ). ಕೆಟ್ಟಕೆಲಸ : ದುರಾಚಾರ : ಪಾಪಕರ್ಮ : ನಾವು ಅಹರ್ನಿಶಿ ಅನೇಕ ಪಾಪಕೃತ್ಯಗಳನ್ನೆಸಗುತ್ತಿದ್ದೇವೆ. (ಕುಪರು. ೪೯೩). [ಪಾಪ್ನ+ಕೃತ್ಯ]

**ಪಾಪಕ್ಷಯ** (ನಾ). ಪಾಪವು ನಾಶವಾಗುವುದು; ದುಷ್ಕರ್ಮಫಲ ಕಳೆಯುವುದು : ಪಾಪಕ್ಷಯಕ್ಕೆಂದು ಗಂಗೆಯೊಳ್ಮಿಂದರೆ ಪಾಪಿಯ ಕೊಣೆ ತಿಂದಂತೆ ತಾಪಸ್ಥರಿಂಗೆ ಹಿತಗೈಯು ಬಂದ ಪ್ರಾಣೋಪಮಮನು ನೀನು(ಬೋಧಕ. ೬–೩೩): ಶುಭತಾರೆಯಲಿ ಪಾಪಕ್ಷಯವು (ಗಗಂ. ೪–೩೬). [ಪಾಪ್ನ+ಕ್ಷಯ]

**ಪಾಪಗ್ರಹ** (ನಾ). ದುಷ್ಪರಿಣಾಮವನ್ನುಂಟುಮಾಡುವ ರಾಹು, ಕೇತು, ಶನಿ, ಮಂಗಳ ಮುಂತಾದ ಅಶುಭಗ್ರಹ : ಪಾಪಗ್ರಹಮುಂ [ಶಾಂತಿ. ಗೃಹಮದುದಯದೊಳಿರೆ ಪಾಪೇಕ್ಷಣಮಾಗೆ ತಳಟಿಯಕ್ಕುಂ (ಶಾಂತಿ. ೨೦–೨೦). [ಪಾಪ್ನ+ಗ್ರಹ]

**ಪಾಪಚಿತ್ತ** (ನಾ). ೧. ಕೆಟ್ಟ ಮನಸ್ಸು. ೨. ಕೆಟ್ಟ ಮನಸ್ಸುಳ್ಳವನು; ದುಷ್ಟ : ಪಾಪಚಿತ್ತರು ಗೋಣಿಯಲಿ ನರರೂಪನೆಣಂ ರಚಿಸಿಮುಡಿಯಲಿ ಕೌಪನುಡಿಸಿ ವಿಭೂತಿಯಂ ಸರ್ವಾಂಗದಲಿ ಪೂಸಿ (ಬಸವ. ೬೩–೫೦). [ಪಾಪ್ನ+ಚಿತ್ತ]

**ಪಾಪಚೇಲಿ** (ನಾ). ಒಂದು ಬಗೆಯ ಮೂಲಿಕೆ; ಅಗಳುಶುಂಠಿ : "ಅಗುಳುಸುಂಟಿ—ಪಾಠಿ, ಅಂಬಷ್ಠ, ವಿದ್ಧಕರ್ಣಿ, ಪಾಪಚೇಲಿ, ಪ್ರಾಚೀನ, ರಸ" (ಓಷಧಿ. ೬). [ಸಂ. ಪಾಪಚೇಲೀ]

**ಪಾಪಚ್ಚಿ** (ನಾ). ಮಕ್ಕಳನ್ನು ಪ್ರೀತಿಯಿಂದ ಕರೆಯುವಾಗ ಅಥವಾ ನಿರ್ದೇಶಿಸುವಾಗ ಉಪಯೋಗಿಸುವ ಒಂದು ಮಾತು : ಆ ಮಾಯಾನಗರಿಯಲ್ಲಿ, ಪಾತಾಳದಲ್ಲಿಯ ಪಾಪಚ್ಚಿಯಂತೆ, ಮಂದಾಕಿನಿ ಗಾಬರಿಯಾದಳೇನೊ (ಕೈಲಾ. ೨೦). 'ಪಾಪಣ್ಣಿ' ಪರಾ. [–ತಮಿ. ಪಾಪ್ಪಾಚ್ಚಿ]

**ಪಾಪಟ** 'ಪಾಪಟ್ಟಿ' ನೋ.

**ಪಾಪಟಿ** (ನಾ). ೧. ಬೈತಲೆ ; ಸೀಮಂತ. ೨. ಒಂದು ಬಗೆಯ ಆಭರಣ (?) : ಪೊಸಮಿಸುನಿಯೊಳು ಬಿಗಿದ ಕಕ್ಕದ ಯಸುಳುದೆಸಗಳ ಶಹಲೆದಿಂಡಿನ ಬೆಸದ ಬಂಕದ ಹಿಳುಕು ಪಾಪಟಿ ಪಚ್ಚೆ ನಿಚ್ಚಳದ . . . ವಜ್ರದ್ವಾರಸೊಬಗಿನೊಳೆಸದುದಾಕ್ಷಣ ಮಯನ ನಿರ್ಮಿತದಿಂದಲಾ ನಗರ (ಅಂಬಿಕಾ. ೬–೩) : ಕಡಗ ಸರಪಣಿ ಸಾರಸನ ಶಿರಕುಡುವ ಮಲಕುಗಳಿಂದ ಮುತ್ತುಗ ಳೊಡನೆ ತೊಡರಿದ ಮುದ್ದು ಪಾಪಟಿಬಲೆಯು ರಂಜಿಸುತ . . . ನಡೆತರುವ ಶಿಶುಗಳ ಬೆಡಗ ನೋಡುತಲಿ (ಬಸವ. ೬–೦೯). [ದೇ.೩ ತುಳು. ಪಾಪಟಿ ; ತೆಲು. ಪಾಪಟ ; ಕುವಿ. ಪಾಪೆಟ್ಟಿ]

**ಪಾಪಟ್ಟಿ**, ಪಾಪಟಿ, ಪಾಪಡ್ಗಿ, ಪಾಪಟೆ (ನಾ). ೧. ಒಂದು ಬಗೆಯ ಔಷಧಿ ಸಸ್ಯ; ಇಂದ್ರವಾರುಣಿ; ಹಾವುಮೆಕ್ಕೆ: "ಕಾಕಚ್ಛೇದಿ–ಪಾಪಟಿ" (ಓಷ. ೩೦): ನೆಲಗೋಣಿ ಪು(ಹು)ಣಿಸೆ ಪಾಪಟಿ ಹುಲಿಗಿಲ್ ದೊಗ್ಗಳೆಯ ಹಜಿಹಿಯೆಂಬಿವಜೆಲೆಯಂ ಕಟಿಯೊಳುಜಿ ಕಾಸಿ ಕಟ್ಟಿರ್ ತೊಲಗಗುರು ಮೊದಜಿಸುವ ಮುಳ್ಳ ವಿಷಮೆನಿತನಿತುಂ (ಜಮುಕ. ೨–೨೦೦): ಮುಳ್ಳುಮುತ್ತುಗದ ರಸ, ಪಾಪಟೆಸೊಪ್ಪಿನ ರಸ, ಹೆಗ್ಗುಳ್ಳಿಂಗಡಲೆಸೊಪ್ಪಿನ ರಸ . . . ಪ್ರಾತಃಕಾಲದಲ್ಲಿ ಗ ೪ ತೂಕವಂ ಸೇವಿಸುವುದು (ಸರ್ವಜ್ಞ. ೨೦೩). ೨. ಒಂದು ಬಗೆಯ ಮರ ಮತ್ತು ಉಪ್ಪಿನಕಾಯಿಗೆ ಉಪಯೋಗಿಸುವ ಅದರ ಹುಳಿಯಾದ ಕಾಯಿ : ಅಂಬಟೆಯ ತದುಕಿಲ ಸುಂಡೆ ಪಾಪಟಿಯ ಚಿಕ್ಕೆ ಮಾಗುಳಿ ತಳಿಲೆ ತೊಗರಿ ಗುಳ್ಳ ತಿಂತ್ರಿಣಿಯುಪ್ಪುಗಾಯಿ ಗಳೆಲ್ಲ ಸುಪ್ಪಾರಿಯರು ಬಡಿಸಿದರತಿವಿಚಿತ್ರದಲಿ (ಅಶಂಕಾ. ೬–೨೩–೩೬). **ಪಾಪಟಿ** : ೧. "ಪಾಪಟ—ಪರ್ಪಟ–ಒಂದು ಗಿಡ" (ಶಬ್ದಕೋ. ೨೬): ಗಸಗಸೆ. ಸಾಸಿವೆ . . . ಪಾಪಟ, ಮಂಗಾರೆ (ಜಮುಕ. ೨೩೪). **ಪಾಪಡ್ಗಿ**: ೧. ಸ(ಸಿ)ೀಗುಡಿತೆಯ ಮುಳ್ ಕೊಗ್ಗಿಯ ದಾಗುಡಿ ಚಿತ್ರಲಟ ಪಾಪಡಿಗ ಲಿಂಬಜಿಟೊಳ್ ಪ್ರಾಗುಕ್ತ ಮೂಲವಿರದರೆದಾಗಳ್ ಖರಮೂತ್ರ ಲೇಪಮುತ್ತೆ ವಿಷಘ್ನಂ (ಜಮುಕ. ೬–೩೨). **ಪಾಪಟೆ** : ೧. ಪಾಪಟೆ :—ಈ ಕಾಯಿ ಸಮೂಲವಂ ಕಲು ಅರೆದು ಬೆಣ್ಣೆಯಲ್ಲಿ ಕಲಸಿ ಮಾಡು

ಆದಿತ್ಯವಾರ ತೆಗೆದುಕೊಳ್ಳಿ ಮೂಲವ್ಯಾಧಿ ಗುಣ (ಅಶ್ವ. ೬): ಪಾಪಟೀ ಬೀಜ, ತಕ್ಕೋಲ . . . ಲಾಮಂಚ—ಇವನ್ನು ಪ್ರತ್ಯೇಕ ಕರ್ಷಪ್ರಮಾಣ ಹಾಕಿ ಚೂರ್ಣಿಸಿ ಹಾಲಿನಲ್ಲಿ ಕಲಸಿ ಹಾಕುವುದು (ಸಕಶ. ೯೫೦ ಪ).
[ದೇ. # ತಮಿ. ಪಾಪಟ್ಟಿ; ಮಲ. ಪಾಪಟ್ಟ; ತುಳು. ಪಾಪಟಿ ; ತೆಲು. ಪಾಪಟಿ]

**ಪಾಪಟ್ಟೆ₃**, ಪಾಪಡಿ₂ (ನಾ). ೧. "ಸುವಾಸನಾಯುಕ್ತವಾದ ಮಣ್ಣು" (ಶ್ರಕಾ). ೨. ಒಂದು ಬಗೆಯ ಸುಗಂಧದ್ರವ್ಯ: "ಜತುಕೆ ಪಾಪಟೆ [ಪಾಠಾಂ.ಡಿ] ಯೆನಿಕ್ಕುಂ" (ಮಂಗರಾ. ೬೨-೩೯). **ಪಾಪಡಿ₂**: ೧. ಘಟ ಅಂದರೆ ಉಸುಬು(?)ಮಣ್ಣು ಹೊಟ್ಟು (ಪಾಪಡಿ) ಮುಂತಾದವುಗಳು (ಸುಂಂಬಾ. ೩೯). ೨. ಮೇಲಿನ 'ಮಂಗರಾ.' ಪ್ರಯೋಗದ ಪಾಠಾಂತರವನ್ನು ನೋಡಿ.
[<ಸಂ. ಪರ್ಪಟೀ]

**ಪಾಪಡಕಾರ** ' ಪಪ್ಪಡಕಾರ ' ನೋ.

**ಪಾಪಡಿ₁** ' ಪಾಪಟ್ಟೆ ' ನೋ.

**ಪಾಪಡಿ₂** ' ಪಾಪಟ್ಟೆ₃ ' ನೋ.

**ಪಾಪಡಿ₃** (ನಾ). (ಉಕ) ಹಳದಿ ರೇಷ್ಮೆಯಲ್ಲಿ ಒಂದು ಪ್ರಕಾರ: ೧೯, ಪಾಪಡಿ ೨೦, ಮಾನಚುಂಗ . . . ೪೩, ಕುಬೀನ ಇದರ ಹೊರ್ತು ಮತ್ತೂ ರೇಶ್ಮಿಯಲ್ಲಿ ಬಹಳ ಜಾತಿಗಳುಂಟು (ಸುಂಂಬಾ. ೦೦೯ ).
[←ಮರಾ. ಪಾಪಡೀ]

**ಪಾಪಣ್ಣ** (ನಾ). ಮಕ್ಕಳನ್ನು ಪ್ರೀತಿಯಿಂದ ಕರೆಯುವಾಗ ಅಥವಾ ನಿರ್ದೇಶಿಸುವಾಗ ಉಪಯೋಗಿಸುವ ಒಂದು ಮಾತು: ಪಾಪಣ್ಣ ಸ್ಕೂಲಿಗೆ ಹೋಗಲು ಹಟ ಮಾಡಲಿಲ್ಲ (ಆಡು). 'ಪಾಪಚ್ಚಿ' ನೋ.
[ಪಾಪ₁ (<ಪಾಪ) + ಅಣ್ಣ₁]

**ಪಾಪನಾಯಕಿಹೊನ್ನು** (ನಾ). ಒಂದು ಬಗೆಯ ಬಂಗಾರದ ನಾಣ್ಯ: ದುರ್ಗವು ಕೈವಶವಾದ ಮೇಲೆ ಈ ದೊರೆಯ ಬೊಕ್ಕಸದಲ್ಲಿದ್ದು ಹಗೆಗಳ ಕೈಗೆ ಸಿಕ್ಕಿದ ನಾಣ್ಯಗಳ ವಿವರ . . . ೧ ಗಬರು . . . ೧ ಪಾಪನಾಯಕಿಹೊನ್ನು (ಚಿತ್ರಪಾ. ೦೦೯). [? + ಹೊನ್ನು₁ (<ಪೊನ್)]

**ಪಾಪನಾಶನ** (ನಾ). ೧. ಪಾಪದ ನಿವಾರಣೆ; ದುಷ್ಕರ್ಮದ ನಾಶ. ೨. ಪಾಪವನ್ನು ನಾಶ ಮಾಡುವವನು; ದುಷ್ಕರ್ಮವನ್ನು ಹೋಗಲಾಡಿಸುವವನು: ಗೌರಿಸಹಿತಂ ಮುಂದೆ ನಿಂದು ಮಹೇಶನೀಶನು ಪಾಪನಾಶನನು [ಪಾಠಾಂ. ಪಾಪಶರಕರನು] . . . ಮೆಚ್ಚಿ ತಾನೊಲಿದು (ಜಾಕ್ಷ. ೩೬-೨೬); ಪಾಪಕರ್ತನು ನಾನು ಪಾಪನಾಶನ ನೀನು (ಪುರಂದ. ೪-೧೦-೦). [ಸಂ.]

**ಪಾಪಪದಾರ್ಥ** (ನಾ). [ಜೈನ] ಜೀವ, ಅಜೀವ, ಪುಣ್ಯ, ಪಾಪ, ಆಸ್ರವ, ಸಂವರ, ನಿರ್ಜರ, ಬಂಧ ಮತ್ತು ಮೋಕ್ಷ ಎಂಬ ಒಂಬತ್ತು ವಿಧವಾದ ಪದಾರ್ಥಗಳಲ್ಲಿ ಒಂದು: ಜೀವಪದಾರ್ಥವು ಜೀವಪದಾರ್ಥಂ ಮೋಕ್ಷಪದಾರ್ಥಂ ಆಸ್ರವಪದಾರ್ಥಂ ಸಂವರಪದಾರ್ಥಂ . . . ಪುಣ್ಯಪದಾರ್ಥಂ ಪಾಪಪದಾರ್ಥಮೆಂಬ ನವಪದಾರ್ಥಮುಮಂ . . . ಕೈಕೊಂಡು (ಸುಕುಮಾ. ೩-೩೯ ವ). [ಪಾಪ₂ + ಪದಾರ್ಥ]

**ಪಾಪಪ್ರಜ್ಞೆ** (ನಾ). ತಾನು ಮಾಡಿದ ದುಷ್ಕರ್ಮದ ಅರಿವು, – ತಿಳಿವಳಿಕೆ: ಈ ಕರಾಳಸಾವಿಗೆ ತಾವೂ ಕಾರಣರು ಎಂಬ ಪಾಪಪ್ರಜ್ಞೆ ವಾಸುದೇವನ ವತ್ರದ ಕತೆಯಲ್ಲಿ ಬಿಡುಗಡೆ ಪಡೆಯುವ ಹವಣಿಕೆಯಲ್ಲಿತ್ತು (ವಾಸುರಾ. ೩೩೯): ವಾಗನಿಗೆ ತನ್ನ ವ್ಯವಹಾರವೆಲ್ಲ ಗೊತ್ತಾದಾಗ ಅವಳು ಪಾಪಪ್ರಜ್ಞೆಯಿಂದ ನರಳಲಾಗುತ್ತಾಳೆ (ಹೊಸಕ. ೨೩೦).
[ಪಾಪ₂ + ಪ್ರಜ್ಞೆ]

**ಪಾಪಭೀತಿ** (ನಾ). ಪಾಪದ ಅಂಜಿಕೆ: ಪಾರ್ಥನು ಪಾಪಭೀತಿಯಿಂದ ವಿಹ್ವಲನಾಗಿದ್ದಾನೆ (ಅಚರ. ೦೦೬). [ ಪಾಪ₂ + ಭೀತಿ ]

**ಪಾಪಭೀರು** (ನಾ). ಪಾಪಕ್ಕೆ ಹೆದರುವವನು; ದುಷ್ಕರ್ಮಕ್ಕೆ ಅಂಜುವವನು: ಅವನಾ ನಿಸ್ತ್ರಿಂಶಕರ್ಮಕ್ಕೆ ಕೊಕ್ಕರಿಸಿ . ಪಾಪಭೀರು ವಪ್ಪುದರಿಂ (ಅಂಕ. ೨-೦೯ ವ); ಜನಕತನೂಜೆ ನೆಟ್ಟನೆ ಮಹಾಸತಿ ಗರ್ಭಿಣಿ ಪಾಪಭೀರು (ಹಂಪಾಕು. ೦೫-೬೨); ಅಧಿಕಪಾಪಭೀರುಗಳೀ ಮಾಸದಲಿ ಓರಂತೆ ದೀಪಪೂಜೆಯ ಮಾಡಿದವರು ಮುರಾರಿಯ ಕೆಲದ ಲೊಪ್ಪುವರು (ಕುಕ್ಕಾಂಗ. ೬-೦೯). [ಪಾಪ₂+ಭೀರು]

**ಪಾಪಭೀರುತ್ವ** (ನಾ). ಪಾಪಕೆ ಹೆದರುವ ಸ್ವಭಾವ: ಅಂತುಪಶಮಭಾವಮುಂ ಪಾಪಭೀರುತ್ವಮುಂ ತನಗೆ ತೊಟ್ಟನೆ ಪುಟ್ಟೆ (ಹಂಪಾಕು. ೪-೦೫); ಇಲ್ಲಿ ಧರ್ಮರಾಜನ ಪಾಪಭೀರುತ್ವ, ಸತ್ಯಸಂಧತೆ ಅಭಿವ್ಯಕ್ತವಾಗುತ್ತದೆ (ಚಾಚರ. ೦೦೩). [ಸಂ.]

**ಪಾಪರ್** 'ಪಾಪರು' ನೋ.

**ಪಾಪರ್‌ಚೀಟಿ** (ನಾ).ದಿವಾಳಿ ; ಪಾಪರು : ಪಾಪರ್‌ಚೀಟಿ ತೆಗೆದುಕೊಂಡಿದ್ದ ಒಬ್ಬ ಸಾಲಗಾರನನ್ನು ದೋಷಾರೋಪಣೆಯಿಂದ ತಪ್ಪಿಸಿದ್ದಾಯಿತು (ಪ್ರಸಕು. ೨೦೨). [ಪಾಪರ್ (<ಪಾಪರು) + ಚೀಟಿ₂ (< ಚೀಟು₂)]

**ಪಾಪರತ** (ನಾ). ದುರಾಚಾರದಲ್ಲಿ ಆಸಕ್ತಿಯುಳ್ಳವನು: ಪಾಣ್ಬಂ ಖಳಪ್ರೀತಿ ಪಾಪರತಂ ಕಾನವರೋಹಿಯಪ್ಪ ದಶೆಯೊಳ್ ವಿಶ್ವಂಭರಾಪುತ್ರನಾ (ಪಾಕಾ. ೯-೨೨). [ಪಾಪ₂+ರತ]

**ಪಾಪರಹಿತ** (ನಾ). ೧. ಪಾಪವಿಲ್ಲದುದು ; ದೋಷಮುಕ್ತವಾದುದು : ಪಾಪರಹಿತಂಗಳುರುಸುಖರೂಪಂಗಳೆನಿಪ್ಪನೇಕವಿಧಕ್ಷೇತ್ರಂಗಳಿಂದಾ ಪುಣ್ಯ ದಂಪತಿಗೆ ನಿಮಿಷೋಪಮಮೆನೆ ಪೋಪ್ಪುವನೇಕವತ್ಸರನಿಕರು (ಶಂಕ್ರತಿ. ೦೦-೦೦೯). ೨. ಪಾಪದಿಂದ ದೂರವಾದವನು; ದುಷ್ಕರ್ಮದಿಂದ ದೂರವಾದವನು: ಆ ಪರಸುಕಾರುಣಿಕಗಜಗಿಯ ಪಾಪರಹಿತನು ಮಾಡಿದನು ಏನಯದಲಿ ಬಸ್ನಪ(?) (ಅಭಾಗ. ೦೦-೩೨-೩೩). [ಪಾಪ₂ + ರಹಿತ]

**ಪಾಪರು**, ಪಾಪರ್ (ನಾ). ದಿವಾಳಿಯಾದವನು ; ನಿರ್ಗತಿಕ: 'ಜನತಾ' ಎಂಬ ಆಧುನಿಕಯುಗದ ಈ ಹೆಸರು ಪ್ರಜಾಪ್ರಭುತ್ವದ ಪಾಪರು ಅಥವಾ ಅರ್ಧಪಾಪರುಗಳಾದ ಯಾತ್ರಿಕರನ್ನು ಸಾಗಿಸುವಂಥ ಬಂಡಿಯದು (ಅಲಾ. ೦); ಎಲ್ಲಾ ಹೋಯಿತು. ಪಾಪರಾದೆ (ಕಾಂಗ. ೦೫೯). **ಪಾಪರ್**: ಪಾಪರ್‌ಆಗಿ ಅಪ್ಪೀಲುಮಾಡಲಿಕ್ಕೆ ಅಪ್ಪನೆಗೋಸ್ಕರ ಮೂವತ್ತುದಿವಸಗಳು (ಗ್ರಾಕಾಶ. ೦೩೨); ಕೋರ್ಟಿಗೆ ಹೋದವರು . . . ಅಸ್ತಿಪಾಸ್ತಿ ಎಲ್ಲಾಸನ್ನು ಪರರ ಪಾಲುಮಾಡಿ ಪಾಪರ್ ಆಗ್ತಾರೆ (ಪದ್ಮ. ೯೯); ನೀವೂ ನಮ್ಮ ಹಾಗೆ ಬೇಗ 'ಪಾಪರ್' ಆಗ್ತೀರಿ (ಪದ್ಮಾ. ೮೬).
**ಪಾಪರು ಮಾಡು**=ನಿರ್ಗತಿಕನನ್ನಾಗಿ ಮಾಡು ; ದಿವಾಳಿಯಾಗುವಂತೆ ಮಾಡು : ಎಷ್ಟೋ ಜನ ಒಬ್ಬರ ಮೇಲೊಬ್ಬರನ್ನು ಕಡಹಿ ಅವರನ್ನು ಪಾಪರು ಮಾಡಿ ತಾವೂ ಹಾಳಾಗುತ್ತಾರೆ (ಹುಬ್ಬ. ೦೬೩).
[←ಇಂ. Pauper]

**ಪಾಪರ್ಧಿ** (ನಾ). ಬೇಟೆ; ಮೃಗಯಾವಿಹಾರ: "ಆಚ್ಛೋಟನಂ, ಮೃಗಯಾ, ಮೃಗವ್ಯಂ, ಪಾಪರ್ಧಿಃ, ಆಖೇಟಕಃ—ಈ ೫ ಬೇಟೆ" (ಕನಾಟು. ೬೦-೨೬೦); ಶಬರನ ಮಾತಂ ಶ್ರೇಣಿಕಂ ಕೇಳ್ದು ಪಾಪರ್ಧಿಗಿರ್ಕೆನಾಗಿ ಬೇಂಟೆಬಿನ್ನಣದಾಪರಂ ಕೂಡಿಕೊಂಡಟವ್ಯಮುಂ ಪುಗುತಪ್ಪುದುಂ (ಪುಣ್ಯಾಸ್ರ. ೬-೫೩ ವ); ದ್ಯೂತ ಮದ್ಯ ಪಿಶಿತ ವೇಶ್ಯಾಪಾಪರ್ಧಿ ಚೌರ್ಯ ಪರದಾರವೆಂಬ ಸಪ್ತವ್ಯಸನಮಂ ನಿರಾಕರಿಸಿಯುಂ (ಕೃತುಂ. ೦೯-೬೫ ವ).
[<ಸಂ. ಪಾಪರ್ದ್ಧಿ]

**ಪಾಪವಿಘಾತಿ** (ನಾ). ಪಾಪವನ್ನು ನಿವಾರಿಸುವಿಕೆ; ಪಾಪವನ್ನು ನಾಶಮಾಡುವಿಕೆ: ಕೇಳಿದನು ಜನಮೇಜಯಕ್ಷಿತಿಪಾಲಕನು ವರಸರ್ಪಯಜ್ಞಸ್ಥಾನದಲಿಪಾಪವಿಘಾತಿಗೋಸುಗವೀ ಮಹಾಕಥೆಯ (ಕುಮ್ಮಾಕ. ೨-೯).
[ ಪಾಪ₂ + ವಿಘಾತಿ ]

**ಪಾಪವಿನಾಶ** (ನಾ). ಪಾಪವನ್ನು ನಾಶಮಾಡುವವನು ; ದುಷ್ಕರ್ಮವನ್ನು ಹೋಗಲಾಡಿಸುವವನು : ಜಯಾಜಯ ನಂದನಂದ ಪರಮೇಶ್ವರ ಪಾಪವಿನಾಶ ಲೋಕವಿಸ್ಮಯಕರ ಶಂಭು ಶಂಕರ (ಅಂಕಿ. ೧೧-೩೩); ದಾಶರಥಿ ವೈಕುಂಠನಗರನಿವೇಶ ತ್ರೈಜಗದೀಶ ಪಾಪವಿನಾಶ (ಹಂಸ. ೧೧). [ಪಾಪ್ಮ + ವಿನಾಶ]

**ಪಾಪಶಂಕಿ** (ನಾ). ಅನಿಷ್ಟವಾಗುವುದೆಂಬ ಸಂದೇಹವುಳ್ಳುದು : ಅತಿಸ್ನೇಹವು ಪಾಪಶಂಕಿಯಾದವನ್ನು (ಶಾಕುಂತ. ೩೬-೨). [ಸಂ. ಪಾಪಶಂಕಿನ್]

**ಪಾಪಸತ್ವ** (ನಾ). ದುಷ್ಟಪ್ರಾಣಿ; ಕೆಟ್ಟ ಜೀವಿ : ನಾಲ್ಕನೆಯ ತಂಳಧರಂ ಪುಟ್ಟ ಪಾಪಸತ್ವಂಗಳ್ ಕಾಡೆ ಲಕುಟಯಷ್ಟ್ಯಾದಿ ರಕ್ಷಾವಿಧಿಯನುವ ದೇಶಂಗೆಯ್ವಾತಂ ಕ್ಷೇಮಂಧರನೆಂಬ ಪೆಸರಂ ಪಡೆದಂ (ಆದಿಪು. ೬-೩೬ಪ). [ಪಾಪ್ಮ+ಸತ್ವ೨]

**ಪಾಪಹರ** (ಗು). ೧. ಪಾಪವನ್ನು ನಾಶಮಾಡುವ ; ದುಷ್ಕರ್ಮವನ್ನು ಹೋಗಲಾಡಿಸುವ : ಪಾಪಹರಮೂರ್ತಿ . . . ಶಾಪಸುತನೆನ್ನನಂದು ಭೋಂಕನೆ ಕಂಡಂ (ರಕ್ಷಾ. ೯-೬೯). (ನಾ). ೨. ಪಾಪವನ್ನು ನಾಶಮಾಡುವವನು : ಪಾಪಹರಂ ಪ್ರಶಾಂತಿತನ್ನೃಪಂ ವೃಷಧ್ವಜಂ. . . ಉಪಾಶ್ರಿತಭವ್ಯಜನಾಭಿನಂದನಂ (ಅಂಕಿ. ೧-೯೦); ಆಹವಿಂದ್ರರಥಿಕ ಭಕ್ತಿಯಿಂ ನಹರ್ನಿಶಂ ತಪ್ಪು ನೆರೆಗಳಂ ತಳರದೆ ಪಾಪಹರಂಗೆಜಿಗುಪ್ಪರನಿಸಿದ ಮಹಿಮೆಯ ಪಟ್ಟಗಟ್ಟಿದ ಪರಮಾಂಕೋಟಯೊಳಿರ್ಪ್ (ಶಾಂತಿಪು. ೯-೧೨೪). [ಸಂ.]

**ಪಾಪಹೃತ್ತು** (ಗು). ಪಾಪವನ್ನು ಪರಿಹಾರ ಮಾಡುವ ; ಪಾಪವನ್ನು ಹೋಗಲಾಡಿಸುವ : ಶ್ರೀದೇವೇಂದ್ರಮುನೀಂದ್ರವಂದಿತಗುಣವ್ರಾತಂ . . . ಪಾಪಹೃತ್ಪಾದಾಬ್ಜಂ ದಯೆಗೆಯ್ವನಕ್ಕೆಮಾಗೆ ಮುಕ್ತಿಶ್ರೀಸುಖಾಪಾಪ್ತಿಯಂ (ಅಂಕಿ. ೧-೧). [ಸಂ. ಪಾಪಹೃತ್]

**ಪಾಪಾಂತಕ** (ಗು). ಪಾಪವನ್ನು ನಾಶಮಾಡುವ : ಆ ಪರಮಧರೆಯೊಳಾಶ್ರಿತಪಾಪಾಂತಕಪುಣ್ಯತೀರ್ಥವಾನಕಜನಸಂತಾಪಪನಳಿಪತಿ ಶುಭಕರದಾಪಗೆಗಳ್ ಮಹಿಮೆಯಿಂದೆ ಪರಿರಾಜಿರ್ಕುಂ (ಹಮ್ಮಿ. ೧-೩೯). [ಪಾಪ್ಮ+ಅಂತಕ]

**ಪಾಪಾತ್ಮ** (ನಾ). ದುಷ್ಟ ; ಪಾಪಿ : ಪಾಪಾತ್ಮ ನಾನಲ್ಲ ಪಾಪವನಗಿನಿತಿಲ್ಲ (ಕವಿಪ. ೦೯೦ ಕಲ್ಲರು); ಪಾಪಾತ್ಮನ ಪರಮಾತ್ಮ ತಿಳಿಯನೆ ? (ಗಾದೆ). [ಸಂ. ಪಾಪಾತ್ಮನ್]

**ಪಾಪಾಲೋಕನ** (ನಾ). [ಜ್ಯೋತಿ] ಅಶುಭಗ್ರಹಗಳ ದೃಷ್ಟಿ ; ದುಷ್ಟಗ್ರಹಗಳ ನೋಟ : ಪಾಪಗ್ರಹಮುದಯದೊಳಿರೆ ಪಾಪೇಕ್ಷಣವಾಗೆ ತಜಟಿಯಕ್ಕುಂ ಲಗ್ನಂ ಚಾಪ ವ ಪಮೀಷನಾಗಿರೆ ಪಾಪಾಲೋಕನದೆ ವಿಕೃತದಂತನೆನಿಕ್ಕುಂ (ಜಾತಕ. ೨೦-೨೦). [ಪಾಪ್ಮ + ಆಲೋಕನ]

**ಪಾಪಾಪಹ** (ನಾ). ಪಾಪದಿಂದ ಕೂಡಿದವನು ; ಪಾಪಿಷ್ಠ ; ಪಾಪಿ : ಖರರುಜ್ಜಿಂದನಂ . . . ತ್ರಿಕೋಣಸ್ಥನಾಗಿರೆ ಪಾಪಾಪ [ಪಾಠಾಂ. ಪಾಪ. ಪ] ಹನಕ್ಕುಂ (ಜಾತಕ. ೦೬-೧೯). [ಪಾಪ್ಮ+ಅಪಹ]

**ಪಾಪಾಸಕಳ್ಳಿ** 'ಪಾಪಾಸುಕಳ್ಳಿ' ನೋ.

**ಪಾಪಾಸು** 'ಪಾಪೋಸು' ನೋ.

**ಪಾಪಾಸುಕಳ್ಳಿ, ಪಾಪಾಸಕಳ್ಳಿ** (ನಾ). ಕಳ್ಳಿಯ ಜಾತಿಗೆ ಸೇರಿದ ಒಂದು ಬಗೆಯ ಮುಳ್ಳಿನ ಸಸ್ಯ; ಡಬ್ಬುಗಳ್ಳಿ (ಉಕ) : ಹಳ್ಳಿಯ ಸುತ್ತ . . . ಪಾಪಾಸುಕಳ್ಳಿಯ ಬೇಲಿಯೂ ಇದ್ದೆ(ತುರಿನ. ೨೩); ಆ ಹಸುವಿನ ಕೊರಳಿಗೂ ಹೊಟ್ಟೆಗೂ ಹುಡುಗರು ಬೇಕಾದಷ್ಟು ಪಾಪಾಸುಕಳ್ಳಿ ಹಣ್ಣಿನ ರಸವನ್ನು ಸ್ಪರಿದರು (ಕಳಹು. ೩೦). **ಪಾಪಾಸಕಳ್ಳಿ :** ಪಾಪಾಸಕಳ್ಳಿಬೇರು . . . ಗಜ್ಜುಗದ ಬೇರು ಇವನ್ನು ಪ್ರತ್ಯೇಕ ೧೦ ಪಲ ತೆಗೆದುಕೊಂಡು ಸಣ್ಣಗೆ ಕತ್ತರಿಸಿ (ಸಕಪ್ರ. ೧೯೦ ಕಂ). [ಪಾಪಾಸು (<ಪಾಪೋಸು)+ಕಳ್ಳಿ೩]

**ಪಾಪಾಸ್ರವ** (ನಾ). [ಜೈನ] ಜೀವನಲ್ಲಿ ಹರಿದು ಬರುವ ಪಾಪಕರ್ಮಗಳು: ಆಸ್ರವಮೆರಡುತೆಱಂ ಪುಣ್ಯಾಸ್ರವಮೊಂದದಱ ವೈಪರೀತ್ಯಥಮಂ ಪಾಪಾಸ್ರವಮಂತವಱೊಳ್ ಪುಣ್ಯಾಸ್ರವವಸ್ತುಸ್ವರೂಪಮಕ್ಕುಂ ತ್ರಿವಿಧಂ (ಶಾಂತಿಪು. ೦೨-೯). [ಪಾಪ್ಮ ೧ ಆಸ್ರವ]

**ಪಾಪಿ** (ಗು). ೧. ಕೆಟ್ಟ ; ದುಷ್ಟ. (ನಾ). ೨. ಪಾಪ ಮಾಡಿದವನು; ಕೆಟ್ಟ ಕೆಲಸವನ್ನು ಮಾಡಿದವನು ; ಪಾಪಿಷ್ಠ: "ಖಳನುಗ್ರಂ ಪಾಪಿ ದುಷ್ಕೃತ್ಯಕ(ನವನೆ) ಶಠಂ ದುರ್ಜನಂ ತಾನನಾರ್ಯಂ" (ಅಭಿ.ಕೋ. ೦೨೦-೦೦); ಕಱದಾನಾಂ ಬೇಗವಿರ್ದಲ್ಲಿ ಕಾರ್ಯವ್ಯಗ್ರಪಾಪಿ [ಪಾಠಾಂ. ಪಾಪಿ] ಪಾಪಾಶ್ರಿತರೆಲ್ಲರುಂ ಕೇಳಲೆಂದು ಮಹೀಭುಜನಿಂತೆಂದಂ (ಶಂಕರ. ೦೬-೮ ವ); ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯಾ (ಬಸವ. ೨೨೩); ಅಟಮಟಸಿ ಪರವಧುವ ತಂದುತ್ಕಟದ ಪಾಪಿಗೆ ಹೇಸಿ ವನವಧು ಚಟುಳ ಮಾರಿದವಳ್ (ತೊರವೆ. ೩-೯-೦೦) ; ಪಾಪಿ ಸಮುದ್ರಕ್ಕೆ ಹೋದರೂ ಮೊಳಕಾಲುದ್ದ ನೀರು (ಗಾದೆ).

**ಪಾಪಿಕೂಸು, ಪಾಪಿಯ ಕೂಸು** = ಶ್ರೀಶೈಲದಲ್ಲಿ ಕೆಲವರ ಕಣ್ಣಿಗೆ ಬೀಳುವುದೆಂದು ನಂಬಲಾದ ಒಂದು ಮಗು ; ☞ ಇದು ಎತ್ತಿಕೊಂಡವರನ್ನೇ ನಾಶಮಾಡುವುದೆಂದು ಹೇಳುತ್ತಾರೆ : ಕೂಸೊಂದು ಮುಟ್ಟಲು ಹೋದ ಏಸೊಂದು ಜನಗಳು ಆಸು ನೀಗಿ ತುತ್ತಾಗಿ ಹೋದರು ಪಾಪಿಕೂಸು ವಿಶಾಲರೂಪು ತಾಳಿ ನುಂಗುತಿರೆ (ಸಿದ್ಧ ಪು. ೬-೩೦); ಪಾಪಿಯ ಕೂಸನೆತ್ತಿದಂತೆ ಕೂಡಲಸಂಗಮದೇವರ ಭಕ್ತಿ ಅಳಿಮಾನದವರಿಗೆ ಅಳವಡದಯ್ಯಾ (ಬಸವ. ೩೩೩); ಬಾಬಾಯೆಂದು ಪಾಪಿಯ ಕೂಸನೆತ್ತಿಕೊಳ್ಳಂತಟುವ ಕೂಸನೆತ್ತಿಕೊಂಡು (ಅರಣೀ. ೬-೩೦ ವ); ಧರಿಸಿ ಪಾಪಿಯ ಕೂಸ (ಕೀಶಿರ. ೦೦೯-೨೩). [ಸಂ. ಪಾಪಿನ್]

**ಪಾಪಿಯಸಿ** (ನಾ). ಕೆಟ್ಟವಳು; ದುಷ್ಟೆ; ಪಾಪಿಷ್ಠೆ : ನಾನೆಂಥ ಪಾಪಿಯಸಿ ?— ಎಂದು ತನ್ನನ್ನು ತಾನೇ ಹಳಿದುಕೊಂಡಳು (ಕಿಂಪು. ೦೨). [<ಸಂ. ಪಾಪೀಯಸೀ]

**ಪಾಪಿಷ್ಠ** (ನಾ). = ಪಾಪಾತ್ಮ : ಲೋಕಂ ಪೊಗಳಲಿದಱಿಂದ ಹೋಗದ ಸಹ್ಯಭಾವನೆಯಿಂದಮಿಂದಿರು ಮಾತ್ರೆಯುಂ ಪಾಪಿಷ್ಠರಾಗಿರ್ದ (ಚಿಕ್ಕ. ೬೦-೨೦); ಆ ಸೂರ್ಯನು ಹ್ಯಾಗೆ ಪಾಪಿಷ್ಠನಾದನೋ ಪುನಃ ಯಾವ ಉಪಾಯದಿಂದ ಪರಿಶುದ್ಧನಾದನೋ (ಅಶೇಷು. ೨). [ಸಂ.]

**ಪಾಪಿಷ್ಠೆ** (ನಾ). ದುಷ್ಟೆ : ಪಾಪಿ : ನಿಮ್ಮಡಿಗಳ ವಕ್ಷಸ್ಥಳಮಂ ವಿದಾರಿಸಿ ರಕ್ತಪಾನಮಂ ಮಾಟ್ಪೆನೆಂಬ ದೋಹಳಮೆನಗೆ ಪಾಪಿಷ್ಠೆಗೆ ಪುಟ್ಟಿರ್ದು (ಪುಣ್ಯಾಸ್ರ. ೬-೩೬ ಕ); ನಿಮ್ಮಿಬ್ಬರಲ್ಲಾರೋ ಒಬ್ಬಳು ಆ ಪಾಪಿಷ್ಠೆಯಾಗಿರಬೇಕು (ದೇವೀಭಾ. ೦೯೬). [ಸಂ. ಪಾಪಿಷ್ಠಾ]

**ಪಾಪು, ಪಾಂಪು** (ನಾ). (ಕರಾ) ಸೇತುವೆ ; ಪೂಲು ; ಸಂಕ : ಅಬ್ಬಿಯ ನೀರು, ಕಳೆದ ವರ್ಷದ ಪಾಪನ್ನು ಕೊಚ್ಚಿಕೊಂಡು ಹೋಗಿದೆ (ಕುಶಿಕೊ.೬೩). **ಪಾಂಪು :** ಅಶ್ವತ್ಥಪುರಕ್ಕೆ ಈ ಪಾಂಪಿನ ಮೇಲಿಂದಲ್ಲದೆ ಬೇರೆ ಕಡೆಯಿಂದ ಹೋಗಲು . . . ಅಸಾಧ್ಯವೇ ಆಗಿತ್ತು (ಚಾಪ. ೩೩). [←ತುಳು. ಪಾಪು]

**ಪಾಪೆ, ಪಾಪ್ಪ, ಹಾಪ್ಪೆ** (ನಾ). ೧. ಗೊಂಬೆ ; ಪುತ್ಥಳಿ ; ವಿಗ್ರಹ ; ಪುದುಕೆಯುಂ ತೆಱದು ನೋಟ್ಟನೆಗೆಮದಱೊಳಗಿರ್ದ ಇಂದ್ರಜಾಲಿಗರ ಪಾಪೆಗಳುಂ ಸೀರೆಗಳುಂ ಝುಣಂಬವುಂ ಕೊಂಡು (ಕಬ್ಬಿಗ. ೦೯-೦೦); ಪಳುಕಿನ ಪಾಪೆಯನಮರ್ದಿಂ ತೊಳೆದಂತೊಪ್ಪೆಸೊಗದ ದಿವ್ಯವಪು ಮಣಿಮಯಕುಂಡಲಮಕುಟಕಟಕಭೂಷಣವಿಲಾಸದಿಂದೇಂ ವಿಲಾಸಮಂ ತಾಳ್ದಿದುದೋ (ಪುಷ್ಪ. ೬-೩೯) ; ಕದನದೊಳಾರ್ದು ಸಾರ್ದಿಸೆ ಮಹಾರಥರಚ್ಚು ಸಿಡಿಲ್ದುದು . . . ಪಾಪೆ ರೂಪುಗೆಟ್ಟುದು ನೊಗನೊರೆಮೋಯ್ತು (ಶಂಕರಪು. ೦೩-೬೯); ಲೋಗರ್ . . . ತಿಟ್ಟವಿಟ್ಟ

ಪಾಪೆಯನೆ ಮೂಗುವಟ್ಟಿರ್ದರ್ (ಅಜಿತಪು. ೧೦-೧೯). ೨. ಕಣ್ಣಿನ ಗೊಂಬೆ ; ಕನೀನಿಕೆ ; ಕಣ್ಣುಗುಡ್ಡೆ : ಸುಭದ್ರೆಯ ರೂಪು ಕಣ್ಣ ಪಾಪೆಯಂತೆ ಕಣ್ಗೊಳ್ಳೆ ತೊಡರೆ (ಪಂಪಭಾ. ೪-೬೯ ಕ); ಮೋಹಲತಾ ಪರಿವೃದ್ಧಿಗೀಗಳೇ ಸುರಿವುವೆ ಕಣ್ಣ ಪಾಪೆಯನೆ ಪೊಣ್ಮಿದುವುತ್ಸವಬಾಷ್ಪ ವಾರಿಗಳ್ (ಪುಷ್ಪದ. ೪-೬೯); ಅಡಿದಳಂ ಸುಟ್ಟ ವಣ್ಗಿಡೆಯಾಗೆ ಪಾಪೆ ಕಪ್ಪಡರೆ . . . ಧನಿಕಂ ಬೆಳ್ಳುವಿಡಿಯಲುಪಭಕ್ಷಭಕ್ಷಣನೆನಿಪನು (ಜಸ. ೧೦-೧೪); ಎನ್ನ ಮನದಲಿ ನೀನು ನಿನ್ನ ಮನದಲಿ ನಾನು ಎಮ್ಮ ಕಣ್ ಪಾಪೆಯೊಳು ನಾವು ನಾವುಗಳು (ಶಿಶು. ೩೦-೧೧). ೩. ಗೊಂಬೆಗಳಿಂದ ಕೂಡಿದ ಬಿರುದಿನ ಪೆಂಡೆಯ : (೪). ಪಾಪ₂: ೨. 'ಕಾಶಿಬಿಂದು' . . . ಇದರ ಮಧ್ಯ ಗುಂಡಾದ ರಂಧ್ರವಿರುತ್ತದೆ. ಇದಕ್ಕೆ 'ಪಾಪ' ಎಂದು ಹೆಸರು . . . ಈ ಕಾಶಿಬಿಂದುವಿನ ಮೇಲೆ ಬೆಳಕು ಬಿದ್ದರೆ ಪಾಪವು ಸಂಕುಚಿತವಾಗುತ್ತದೆ (ಶುದ್ಧ. ೦೦೩). ೪. ಮಗು ; ಕೂಸು : ಅವರ ಪಾಪ ಒಂದೇ ಸಮನೆ ಅಳುತ್ತಿತ್ತು (ಕೂಕಿ). ಪಾಹೆ₁: ೧. ಕರುಣದ ಹಾಹೆಯಂತೆ ದೈನ್ಯದ ಸೀಮೆಯಂತೆ . . . ಭೋಗದ ವಿಯೋಗಿಯೆನಿಸಿರ್ದ ತರುಣಿಯರ ವಿರಹಾತಿಶಯಮಂ ಗಿರಿಂದಾಂ ಕರುಣಿಸಿ ನೋಡಿ (ಗಿರಿಜಾ. ೪-೦೦೬ ಕ); ಕಾಳವಟ್ಟದೊಳ್ ಮೂಡಿದ ಹಾಹೆಯಂತಿಜಲೆ (ಅಜಿತಪು. ೦೩-೬೯): ನೀನಾಡಿಸುವ ಹಾಹೆಯಾನು (ಪದ್ಮರಾ. ೦-೩) : ಹಳಚುವುವು ಹಾಹೆಗಳು ಸೂತ್ರಸನಲುಗಿದೊಡೆ ತತ್ಪುಣ್ಯಪಾಪಾಪ್ತಿಗಳಾ ಹಾಪೆಗಳಗುಂಟೇ ಸೂತ್ರಧರನಿರಲು (ಕುಮ್ಮಾ. ೮-೬೨). ೨. ನೇತ್ರ ಹಾಹೆಗೆ ವಿಶ್ವರೂಪವೇ ಬಲುಹುಂಟಿ (ರೇಣುಕಾಂ. ೪೦-೦೩) : ರಾಹು ತೊಡಕಿದ ರವಿಯವೋಲು . . . ದಿಟ್ಟಿಸಿದ ಕಂಗಳ ಹಾಹೆಯುವೊಲೆಸೆದಿರ್ದ ನಾಹವರ್ಂಗವುಧ್ಯದಲಿ (ಕುಮಾ. ೪-೪-೩೨). ೩. "ತೊಡರೆಂದೊಡಕ್ಕಾ ಬಿರುದಿನ ಹಾಹೆ" (ಕಬ್ಬಿಗಂ. ೩೨) ; ಕಾಲ ಪೊಂದೊಡರ ದೈತ್ಯರ ಹಾಹೆಗಳೊಪ್ಪೆ ವೇಣುವಿಂ ತುತ್ತುರುನಿಸ್ವನಂ ನೆಗಟೆ ಗೋವಳರಾಯನ ಲೀಲೆ ರಂಜಿಕುಂ (ಜಗಪಿ. ೩-೯೩) ; ಅವರರ ತೊಡರ ಹಾಹೆಯನೆಡವ ಕಾಲಿಂಗಿಟ್ಟು ಹೊಜವಂಟ (ಕಾಶಿಪಾ. ೧೦-೩೨) ; ರಾಜರಾಜರ ಧುರದೊಳಗೆ ಗೆದ್ದವರ ಹೆಸರಿನ ಹಲವು ಹಾಹೆಗಳ ಬಿರುದುಗಳ ಜಡೆಯುವನು ಕಾಲಲಿ ಧರಿಸಿದನು (ಕೂಜಾ. ೬-೨೦-೦೩). ೫. ರೂಪ ; ಆಕಾರ ; ಮಾಟ : ಜಗವೆಲ್ಲವು ನಿನ್ನ ಹಾಹೆ ಉತ್ಪತ್ತಿ ಸ್ಥಿತಿಲಯವೆಲ್ಲವೂ ನಿನ್ನ ಹಾಹೆ ಶ್ರುತಿ ಸ್ಮೃತಿ ಎಂಬುದೆಲ್ಲವು ನಿನ್ನ ಹಾಹೆ (ಕೊಂಡಗು. ೦೦೩-೯೯೮) ; ಚಿತ್ರದ ಬೊಂಬೆಯ ಹಾಹೆ ಎಲ್ಲಕ್ಕೆ ಆತ್ಮನಿಂದ ಚೇತನಿಸಿ ನಡೆವುತ್ತಿವೆ (ಶುರೇಶ. ೨೬೬-೩೦). ೬. (ಅಲಂ) ನೋಟ ; ದೃಷ್ಟಿ ; ಆತ್ಮಂಗೆ ಕಾಯವೆ ರೂಪು ಆ ಕಾಯಕ್ಕೆ ಆತ್ಮನೆ ಹಾಹೆ ಆ ಹಾಹೆಗೆ ಅಜೀವ ಬೀಜ ಆ ಬೀಜಕ್ಕೆ ಗೋಪತಿ ನಾಥ ವಿಶ್ವೇಶ್ವರ ಲಿಂಗವೆ ನಿರ್ಬೀಜ (ಶುಕಾಗಿ. ೬-೩೦); ಕೆಟ್ಟದರೆ ವಿಷವೇಜ ಕಲ್ಲದೆ ವಿಷಕ್ಕೆ ಹಾಹೆಯಿಲ್ಲ . . . ಹಾವಿದ್ದಂತೆ ವಿಷವ ಕೊಲಬಹುದೆ (ಸಗಸಂ. ೪. ೬೩೬-೩೬). 'ಹೂಹೆ' ಪರಾ.

ಹಾಹೆಯ ಕಟ್ಟು=ಕೇಡಿನ ನಾಶಕ್ಕಾಗಿ ಗೊಂಬೆಗಳಿರುವ ಯಂತ್ರವನ್ನು ಕಟ್ಟು : ರತಿಗೆ ಹಾಹೆಯ ಕಟ್ಟುವಳು ತನ್ನತಿಶಯದ ಚೆಲುವಿನಲಿ ಯೆನಿಸಿದ ಸತಿಯನಾ ವಿಧು ತಾಂ ಸ್ವಯಂವರವಿಧಿಯುಲೀಯಲಿಕೆ (ಕಾಶ್ಯಕಾ. ೨೯-೪೦). ಹಾಹೆಯ ತೊಡರು=ಸಣ್ಣ ಸಣ್ಣ ಬೊಂಬೆಗಳಿಂದ ಕೂಡಿದ ಕಾಲಿನ ಆಭರಣ ; ಬಿರುದಿನ ಪೆಂಡೆಯ : ನಕ್ಷತ್ರಕುಲವಿಟ್ಟಣೆವ ಮುಡಿ ಹೂವನಿಟ್ಟು ಚರಣದೊಳಗಳವಟ್ಟ ಹಾಹೆಯ ತೊಡರನಿಟ್ಟು ವೀರೇಶ್ವರನ ಚರಣಾಂಬುಜಕ್ಕೆ ಶರಣು (ಚಚಿಪ. ೦೩-೧೮) ; ಹಾಪೆಯ ತೊಡರ ಭಂಡರು ಕೆಲರು ಕೆಲರು ಕುಲಕ್ರಮಾಗತದ ಗಡಬಡೆಯ ಭಂಡರು (ಕುಮ್ಮಾ೪. ೦೩-೩). [ದೇ.॥ ತಮಿ. ಪಾಪ್ಪಾ, ಪಾವೈ ; ಮಲ. ಪಾಪ ; ತುಳು. ಪಾಪೆ ; ತೆಲು. ಪಾಪ]

ಪಾಪೋಸು, ಪಾಪಾಸು, ಪಾಯಿಪೋಸು (ನಾ). ೧. ಕಾಲನ್ನು ಮುಚ್ಚುವಂತಹುದು ; ಮೊಚ್ಚೆ ; ಪಾದರಕ್ಷೆ : ಪಾಪೋಸು ಹೋದುವಲ್ಲ ಸ್ವಾಮಿ ಎನ್ನ (ಪ್ರಸಂರ. ೪-೦೦೯ ಕಪ್ಪಿಂ) : ಕಾಲ ಕುಪ್ಪಸ ಪಾಪೋಸು ಜೋಲುವ ಆವಿಕೆಯ ಮೊಲೆಕಟ್ಟುಗಳ ಚೆಲ್ವ ಸೂಳೆಯರೈದಿದರಾಗ (ಕಂಸಪ. ೧೦ ೪) : ಗೆಳೆಯರು . . . ತಮ್ಮ ಪಾಪೋಸುಗಳನ್ನು ಎಳೆಯುತ್ತ ಮುಂದೆ ಮುಂದೆ ನಡೆದರು (೪ತಕ. ೪೦) ; ಪಾದಕ್ಕೆ ತಕ್ಕ ಪಾಪೋಸು, ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ (ಗಾದೆ). ಪಾಪಾಸು: ೧. ವ್ಯಾಪಾರ ನಮಗಾಯಿತು . . . ಪರಮಪಾಪಿ ಕಲಿ ಎಂಬೊ ಪಾಪಾಸು ಮೆಟ್ಟಿ ದುರಾತ್ಮರಾದವರ ಎದೆ ಮೇಲೆ ನಡೆವಂಥ ಪ್ರಸಂರ. (೨-೦೩-೦) ; ಪಾಪಾಸು, ಎಕ್ಕಡ, ಛತ್ರಿ ಮುಂತಾದವುಗಳನ್ನು ಉಪಯೋಗಿಸಿದರೆ . . . ಕಾಲುಕಣ್ಣುಗಳಲ್ಲಿ ಹುಟ್ಟುವ ಸಕಲ ರೋಗಗಳನ್ನೂ ಕೆಡಿಸುವುವು (ಸಿಕ್ಷ. ೩೩) ; ಒಂದುದೇಶದ ಜನರು ಪಾಪಾಸು ಹಾಕುವರು, ಇನ್ನೊಂದು ಕಡೆಯವರು ಬೂಟ್ಸುಗಳನ್ನು ಉಪಯೋಗಿಸುವರು (ಪಂಪ್ರ. I. ೪೩೦). ೨. ಎಕ್ಕಡದ ಆಕಾರದಲ್ಲಿರುವ ಮತ್ತು ಮುಳ್ಳುಗಳಿಂದ ಕೂಡಿದ ಎಲೆಗಳುಳ್ಳ ಒಂದು ಬಗೆಯ ಸಸ್ಯ ; 'ಪಾಪಾಸುಕಳ್ಳಿ' ಪರಾ. ಪಾಯಿಪೋಸು: ೧. ಈ ಶರೀರ ನಿನ್ನ ದಾಸರ ಪದಕೆ ಪಾಯಿಪೋಸು ಮಾಡಿದರೂ ಋಣಾ ಸಲ್ಲಿಸುವೇನೆ (ಪುರಂದರಂ. ೨೬-೨). [←ಪಾರ. ಪಾಪೋಷ್ : ಹಿಂ. ಪಾಪೋಶ್, ಪಾಯಪೋಶ್ ; ಮರಾ. ಪಾಯ್‌ಪೋಶ್, ಪಾಯಪೋಸ್]

ಪಾಪೌಘ (ನಾ). ದುಷ್ಕರ್ಮದ ರಾಶಿ.–ಸಮೂಹ : ಕಲ್ಯಾಣದಾಯ ಕಾಪಲ್ಯಾಪನುತಿಪಾತ್ರ ಕಲ್ಯಾಣಾಚಲಧನ್ವ ಪ್ರಮಥತಕೌಲ್ತಿಪಾಪೌಘ ವಲ್ಕಲವಿತ್ರ ಧಾವಲ್ಯಾಂಗ (ಶೃಕಶಂ. ೪-೦೦); ಪಾಪೌಘಪ್ರಬದ್ಧಂ ಮರ್ಘರ ಗೆಲಡದೇಕರ್ಪನಾ ಗೆಲ್ವ ಪಾಂಗಂ ನಡೆ ನೋಳ್ಪಿಂ (ಶೃತಪ. ೨೬-೦೦೩).
[ ಪಾಪ₂ + ಓಘ ]

ಪಾಪ್ಪಳಿ 'ಪೊಪ್ಪಳಿ' ನೋ.

ಪಾಪ್ಮ (ನಾ). ಪಾಪ : ದುಷ್ಕರ್ಮ ; ಪಾತಕ : "ವೃಜಿನಂ, ದುರಿತಂ . . . ಅಶುಭಂ, ಪಾಪಂ, ಪಾಪ್ಮ, ಪಾತಕಂ_ಈ ೧೪ ಪಾಪಂ" (ಹಲಾಯು. ೦೦೩-೩). [ ಸಂ. ಪಾಪ್ಮನ್ ]

ಪಾಬ (ನಾ). (?) : ಸದಾಯ ಪಾಬ ಕೂಪ ತಟಾಕ ನಿಧಿನಿಕ್ಷೇಪ (ಎಕ. X (S). ಕೋಲಾರ. ೩೦೪-೦೫; 17ನೆಯ ಶತ). [ ? ]

ಪಾಭಸೆ (ನಾ). ಒಂದು ಸ್ಥಳದ ಹೆಸರು : ಇನ್ನು ವಿಂಧ್ಯಾಟವೀನಿಕಟ ತಾಪೀತಟವುಂ . . . ಜನಪಾಸಿ ದೇಶವುಂ ಪಾಭಸೆಯ ಕೋಟೆಯುಂ ಮೊದಲಾಗೆ (ಎಕ. 11, ೩೯-೦೦೦ ; ೯೭೩). [ ? ]

ಪಾಮ (ನಾ). ಒಂದು ಬಗೆಯ ಚರ್ಮರೋಗ ; ತುರಿಕೆ : "ಕಚ್ಚೂ ನಾಮಮುಜಿಗೆ ಪಾಮಂ" (ಪಟ್ಟುಕೋ. ೩೩-೩೬) ; "ಪಾಮಂ ಖಸಂ ಖತ್ತುವೆನೆ ಕೆರಕನಿಕ್ಕುಂ" (ಪಾಂಗಂ. ೦೦೩-೦). [ ಸಂ. ಪಾಮಾ ]

ಪಾಮನ (ಗು). ೧. ಕಜ್ಜಿ ಹತ್ತಿದ. (ನಾ). ೨. ಕಜ್ಜಿ ಹತ್ತಿದವನು : "ಚತ್ತು ಪಾಮನನಕ್ಕುಂ" (ಪಟ್ಟುಕೋ. ೬೪-೪೦). [ ಸಂ. ಪಾಮನ್ ]

ಪಾಮರ₁ (ನಾ). ನೆಲಬಾವಿಯಿಂದ ನೀರು ಸೇದುವಾಗ ಕಾಲಿಡಲು ಅನುಕೂಲವಾಗುವಂತೆ ಬಾವಿಗೆ ಅಡ್ಡಲಾಗಿ ಹಾಕುವ ಮರದ ಹಾಸುಹಲಗೆ. [ < ಪಾಯ್₂ + ಮರ₁ ]

ಪಾಮರ₂ (ಗು). ೧. ಅಲ್ಪವಾದ ; ತುಚ್ಛ : ಗರುವಪ್ಯಾತಕೊ ನಿನಗೆ ಪಾಮರಮಾನುಜನೆ (ಪ್ರಸಂರ. ೨-೦೬೩ ಕಪ್ಪಿಂ). ೨. ಏನೂ ತಿಳಿಯದ. ೩. ಕಜ್ಜಿ ಹತ್ತಿದ. (ನಾ). ೪. ಅಲ್ಪ ; ನೀಚ : "ವಿವರ್ಣಃ, ಪಾಮರಃ . . . ಕ್ಷುಲ್ಲಕಃ, ಇತರಃ–೧೦ ನೀಚನ ಪೆಸರು" (ಸಿದ್ಧಾಂತ. ೩೦೨). ೫. ಏನೂ ತಿಳಿಯದವನು ; ದಡ್ಡ ; ಮೂಢ : ಬರಿ ತಾರಾಡಿ ಅವನರಿವಿಗೆಟುಕುವವೊಲೊಂದಾತ್ಮನಯವ ಹವಣೆಸಿದನಿದನು

ಪಾಮರಜನದ ಮಾತಿನಲಿ (ಮುಂಕಾಳ. ೯೩೮) : ಪಾಮರ ಮೊದಲಾಗಿ ಪಂಡಿತರವರೆಗೆ ಯಾರೂ 'ನಾನಿರುವೆನೇ ಇಲ್ಲವೇ' ಎಂದು ಸಂಶಯಪಡುವುದಿಲ್ಲ (ಶಾರದ. ೨೩೫). ೬. ಒಕ್ಕಲಿಗ; ರೈತ: ಮೂಡೆಗಟ್ಟಂ ಕಟ್ಟಿ ಹುಡುಕುನೀರೊಳ್ ಮೆಟ್ಟಿ ಕಾಡುತಿಹ ಪಾಮರರ ಕೈವಿಡಿತಗೊಳಗಾಗಿ (ಶಾಶಂ. ೨-೬): ಗಗನಮೆನಿಪ್ಪ ಪಾಳ್ಗೊಲದೊಳ್ . . . ಮರ್ಬೆನಿಪ ಗೊಬ್ಬರಮಂ ತಳಿದಲ್ಲಿ ಚೆಲ್ಲಿ ತಾರಗೆಗಳೆನಿಪ್ಪ ಬಿಳ್ತುಗಳನಂತವ ಕೈಂದಪಬಿಂಬರಾಪ್ಯಕುಂಭಗತಸುಧಾಪಾರೀಚಿಜಳಮಂ ಸುರಿದಂ ಸಲೆ ಕಾಲ ಪಾಮರಂ (ಕಾಶೀ. ೧೧-೬೯). [ಸಂ.]

**ಪಾಮರಿ** (ನಾ). ೧. ಹಳ್ಳಿಯ ಹೆಂಗಸು; ಒಕ್ಕಲಗಿತ್ತಿ: ಪಾಮರಿಯರ್ ಜಿತಾಮರಿಯರಿರ್ಪರ್ಕಾದು ಕೇದಾರಮಂ (ಸುಲೋ. ೨-೨೦): ನೆಯ್ದಿಲ್ಗೊಪಡಿಯನೆತ್ತಿ ಬೈತಲೆದೀವುವ ಪಾಮರಿಯರಂ - ಮಹೀಪತಿ ಕಂಡಂ (ಅಂಶಾಪ. ೫-೬೮) : ನಸುಬಾಗಿ ಬೀಸುಗಲ್ಗಳನಿಡುತಿರ್ಪ ಪಾಮರಿಯರೊಪ್ಪುವರಾ ಕಳಮಪ್ರದೇಶದೊಳ್ (ದಳು. ೦-೨೯) : ಶಾಲಿಗಳ ಕೈಗಂಪ ಪೊಲಗಾವ ಪಾಮರಿಯರೋಳಿಗಳ ಮೈಗಂಪ . . . ಸೇವಿಸುತ ಪಥಿಕರಾಸರ್ಗಳಿಪರಾ ನಾಡೊಳು (ಕೃಶಾಶಾ. ೩-೮). ೨. ತಿಳಿವಳಿಕೆಯಿಲ್ಲದವಳು; ದಡ್ಡಿ. [ಸಂ. ಪಾಮರೀ]

**ಪಾಮರೀಜನ** (ನಾ). ಹಳ್ಳಿಯ ಹೆಂಗಸರು; ಚದುರಿಂದ ಗರ್ದೆಗಳ ನೊಲ್ದುಡಿಚಿ ಕಾವುದು ಪಾಮರೀಜನಂ (ಶ್ರೀಶೂ. ೨-೪೦). [ಸಂ.]

**ಪಾಮರೆ** (ನಾ). = ಪಾಮರಿ ೧: ಪಾಮರೆಯರ ಕಲಪದೊಳು ಗಿಳಿಯ ಸೋಪಲು (ಕರ್ಣಾ. ೦೩-೫). [ಸಂ. ಪಾಮರಾ]

**ಪಾಮಾಜಿ** 'ಪಾವಸೆ' ನೋ.

**ಪಾಮೆ** (ನಾ). ೧. = ಪಾಮ: "ಪಾಮಾ, ಕಚ್ಛ್ರು, ಖಸ - ಈ ೩ ಕಿರಕು (ಕೆರೆತ)" (ಹರಾಯು. ೯೬-೪೪೬). ೨. ಹೊಟ್ಟೆರೇವಂತ ಹೇದು; ಉಮಿಯಿಂದ ಕೂಡಿದುದು: ಪ್ರಾಲವಲ್ಲಿ ಪಾರವಾಳದ (ಪ್ರಾವಿ) ಬಣ್ಣನಂಥಾ ಕಾಳುಗಳು ಕೂಡಿರಬಾರದು. ಮತ್ತು "ಪಾಮಾ" ಅಂತಂದರೆ ಹೊರಟು ಕೂಡಿರಬಾರದು (ಮುಂಶಿವ್ಯಾ. ೫೬). [ಸಂ. ಪಾಮಾ]

**ಪಾಯ್₁**, ಪಾಯ್₁, ಹಾಯು (ಕ್ರಿ). ಪಾಯಿದ, ಪಾಯ್ದು, ಹಾದ, ಹಾಯ್ದು (ಭೂತಕೃ). ಪಾಯಿದು, ಪಾಯ್ದು, ಹಾದು, ಹಾಯಿದು (ಭೂತನ್ಯ). ೧. ನೆಗೆ; ಹಾರು: "ಪಾಯ್ - ಲಂಘನೇ" (ಶಮಧಾ) : ನೆಲಸಿರ್ದ ಪಜ್ರಪಂಜರಮಾಳಜಿವಿನಂ ಪಾಯ್ದು ಸಿಂಧುರಾರಾತಿಯುನುಜ್ಜ್ವಳತನುಪನಭ್ರಪಥವತ್ತ ಲಂಘಿಸಲ್ಕಿದರ್ಗದಂ ಚಮೂಪತಿ ಕಂಡು (ಅಂತಿ. ೦೬-೯೩) ಆಗಳಾ ಮಟುಪಂಗಳಿಂದ ಪಾಯ್ದು ಫಲಿಗಳ ನಾಳಿಗಳೊಳ್ ಪರಿದಾಡುವ ತರುಣಹರಿಣಂಗಳುಮಂ . . . ನೋಡಿ (ಶಂಶಶಾ. ೦-೦೦೫ ವ); ಧೀಂಕಿಟ್ಟು ಪಾಯುತ್ತೆ . . . ಕಿಡಪಿತೊಂದೇಣನಂ ಚಿತ್ರಕಾಯೆಂ (೧೦೪. ೦-೯೫) : ಮೇಗಣ್ಗೆ ಪಾಯ್ದು ಸೆಂಡಂ ವನಿತೆಯೊರ್ಪಳ್ ಕೀಳ್ವಡಿಸಿ ಪೊಯ್ಯೆ (ಶವ್ಯಶಾ. ೬-೯೬) ೨. ಮೇಲಿನಿಂದ ಕೆಳಕ್ಕೆ ಹಾರು; ಧುಮುಕು: ಆ ಕೋಡಗಂ . . . ಒಂದು ದಿವಸಂ ಪರ್ವತಶಿಖರದಿಂ ಪಾಯ್ದು ಬಂದು ಬರ್ದುಂಕಿ ಮುನಿಪರರ ಪಕ್ಕದೆ ಬಿರ್ದತ್ತಾಗಳ್ (ಶಶ್ಯಶಾ. ೦೩೨-೨೪): ಬೊದಿಲ್ಲನೆ ಪಾಯ್ದು ನೀರೊಳಾ ಬಾಳಸನಾದಮಾದರದೆ ಕಂಡೊಸೆದಂ ನಿಧಿಗಂಡನಂತೆವೋಲ್ (ಶಂಶಶಾ. ೦-೯೬) : ಕೋಪಾನಳನಳುರೆ ಮಹಾಕೂಪದೊಳಿಭವೈರಿ ಪಾಯ್ದು ಸತ್ತುದು (ಶಂಶಶಂ. ೯೦-೨); ರಥದಿಂದಾ ಕ್ಷೋಣಿಗೆ ಪಾಯ್ದಂ ಬಳಾಹಕಂ ಭಯದಿಂದಂ (ಶಾಸಾವಾ. ೦೦-೨೯). ೩. ತುಡಿ; ಸ್ಪಂದಿಸು; ಮಿಡುಕು; ಹೊಡೆದುಕೊಳ್ಳು: ಅಟ್ಟುಮಟ್ಟು ಪುಲ್ಲೆಯುಂತಿರ್ದ ಪತಪಡ ಪಾಯೆ (ಅಂಶಾಪ. ೦೦-೬೦ ವ). ೪. ಹೊರಸೂಸು; ಹೊಮ್ಮು: ಮುತ್ತುಗಳಂತಿರೆ ಸೂಸಿ ಪಾಯ್ದ ಶೀಕರದೊಳಿ ನಾಂದು ಸೇಡುಗೊಳುತಂ (ಕಾಶ್ಯಶಾ. ೬೮ ಜೊದ್ರ್ಯ) : ಎಚ್ಚ ಶರಾಳಿಗಳ್ ಛಟಿಲ್‌ಛಟಿಲೆನೆ ಪಾಯೆ ಪಾಯ್ವ ಬಿಸುನೆತ್ತರ ಸುಟ್ಟುರಿ ಚಾತುರಂಗಮಂ ಕಟಕಾಟವಾಗೆ ಪೇಟಿ ಪೊಸಲ್ಲೆನೆ ಪಾಯಿಸಿ ತೀರಂ (ಶಂಶಶಾ. ೯-೦೦೫) : ಪೂತ್ಕರಿಸುವ ಚಕ್ರಸಿಂಧುರದ ಪುಷ್ಕರದಿಂದಿರದುಣ್ಮಿ ಪಾಯ್ದ ಶೀಕರನಿಕರಂ (ಕಾಸಾಪು. ೯-೩೮) : ಚೆಟ್ಟನೆ ಪಾಯ್ತಂದು ಪೊದಟ್ದು ರಕ್ತಜಲದಿಂದಂ ತೋಯ್ದು ಕಂದರ್ಪದೇವನ ಚಕ್ರಕ್ಕೆಣೆಯಾಯ್ತು ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ (ಕಾಶ್ಯಶಾ. ೯೩೨). ೫. ದಾಟಿ ಹೋಗು; ದಾಟು; ಉತ್ತರಿಸು: ಜಲನಿಧಿಯಂ ಪಾಯ್ದೊರ್ವನೆ ನಿರಿಕಿ ದಶಾನನನ ಪೊಬಲನಾ ಲಂಕೆಯುಮಂ (ಶಿವಾ. ೩-೦೯೦) ; ನಿಜಪರಿಜನಂಬೆರಸು ಗಂಗೆಯುಂ ಪಾಯ್ದುದಲಿ ಪಡುವಣದೆಸೆಯ ಕಾಮ್ಯಕವನದ ಬಟ್ಟೆಯುಂ ತಗುಳ್ದು ಪೋಗೆಪೋಗೆ (ಶಂಶಶಾ. ೬-೨೦ ವ) ; ಗಂಗೆಯುಂ ಪಾಯ್ವಾಗಳಂಬಿಗರ ಮಗಳ್ ಮತ್ಸ್ಯಗಂಧಿಯೆಂಬ ಕನ್ನಿಕೆ ನಾವೆಗೆ ಹುಟ್ಟನಿಕ್ಕುವಲ್ಲಿ (ಶಶ್ರೀಶ. ೩-೦೦೦ ವ) ; ಕಬಿಂಗಿದ ತಮಾಲವೆಂಬ ಕಾಟಿಪ್ಪೊಟ್ಟವಾಂ ಪಾಯ್ದುಂ (ಶಾಮೂಶ್ಯ. ೫೩-೨೯). ೬. ಅಪ್ಪಳಿಸು; ಡಿಕ್ಕಿಹೊಡೆ; ತಾಟಿಸು: ಗಗನತಳಂಬರಂ ನೆಗೆದು ಮತ್ತಗಜಂಗಳ ಮಸ್ತಕಕ್ಕೆ ಪಾಯ್ದುಗಿಬಗಿ ಮಾಡುವಲ್ಲಿ (ಶಾಂಶೂ. ೯೯) ; ಬಲವದ್ವೃಕ್ಷಮನೊತ್ತಿ ಪಾಯ್ದು . . . ಸುಚಿಚಿತ್ತಂದೆಂದು ಜಂರಘಾನಿಲಂ (ಉತ್ಯಲ. ೬.೯೨) ; ಎನ್ನ ತ್ರಿವಿಧಸಪ್ತಕಜನ್ಮಸಾಫಲ್ಯವೆಂದು ಕಂಭದನೆ ಪಾಯಲ್ (ಶಾಶಂ. ೩-೬) ; ಕಾಯು ಬಲಿದಿಹುದೆಂದು ಬೆಟ್ಟದ ಪಾಯೆ ಕೆಡುತಿಹ ಬಹಳ ಪಾಪಿಯ ದೇಹ ಬಳಿಕವಗಾಯ್ತು (ಕೋಗಯು. ೫-೦೪). ೭. ಎರಗು; ಮೇಲೆ ಬೀಳು; ಆಕ್ರಮಣ ಮಾಡು: ತಾಜಾಗೆಳೆಯೊಳಿ ಸಾವುದು ಸೈಪಿದೆಂದು ಪಾಯ್ದುಜಾಕಿಯ ಗೋವರಣ್ಗೆ ಬರೆ (ಶಂಶಶಾ. ೬-೯೫) ; ಅರ್ಕಾಶ್ವಂಗಳಂ ನೀಳ್ಕೆ ಕೊಪ್ಪರದಿಂ ಪಾಯ್ದಳವಿಂದೆ ಕೇಶಿ ಪರಿತಂದಂ ಕಂಸಾನಾದೇಶದಿಂ (ಜಗಿ. ೫-೪೪) ; ಒಲಿದು ಒಡಿದ ಚಿನ್ನಿಗನೊಲ್ಲದೆ ಪೋದ ಬಲನಾಜನದ ರೋಷವನು ಗೆಲಜಾಯದು ಪಾಯ್ದು ಪಶು ತಪ್ಪಿ ಪೋದ ಪೆಣ್ಬುಲಿಯ ತೋಪಾಟೋಪದಾಟ (ಶಾಶಾಸಾಂ. ೩೩-೮೩). ೮. ಮುಸುಕು; ಮುತ್ತು: [ನವ]ಶಾಳಿಗೆ ಪಾಯ್ದು ಶುಕಾಳಿ ತೋಟಿ (ಶಂಶಖಾ. ೦-೩೨) ; ವಿಶಾಲವಪ್ಪ ಆಲದ ಮರದ ಮೇಲೆ ಕಾಗೆ ಬಂದು ಪಾಯ್ದುಂ ದುಸ್ವರದಿಂ ಕರೆವುದುಂ (ಶಂಶಶಂ. ೨೨೪-೦೦) ; ಬಂಡನುಣ್ಬಳಿಬಿನಿ ಪೆಣ್ದುಂಬಿಗಳ್ಪಾಯ್ದು ಪುಷ್ಪರಸಾಸಾರದ ತುಂತುಜಿಂದೆಜಿ ನಾಂದಾಂದೋಳಿತಾಶೋಕಮಂಜರಿಯುಂ ಸಾರ್ವುವು ಪಲ್ಲವೋಲ್ಲಸಿತಮಾಂ ಬಾಲಾತಪಭ್ರಾಂತಿಯಿಂ (ಸುಲೋ. ೨-೩೬) ; ಕೀಣವಿಲ್ಲದ ರೋಹಿತ ವಾರ್ಧಿಯೊಳು ಕಟ್ಟುಗಾಣಕ್ಕೆ ಪಾಯ್ದು ಮೀಸೆನಬು ಗೋಣರೆಗಡಿದು ಪೆರ್ಗಿದವಾಂತು ಮಿಡುಕುವ ಪ್ರಾಣದ ಶವಗಳೊಪ್ಪಿದುವು (ಕೋಹಕ. ೪೦-೬೦). ೯. (ಭೂತ, ಪಿಶಾಚಿ ಮುಂತಾದುವು) ಮೆಟ್ಟು; ಹಿಡಿದುಕೊಳ್ಳು: ಪಾಯ್ದತ್ತು ಭೂತವೆಂಬರ್ ಕೆಲರ್; ಮತ್ಸರದ ಕಾರಣ ಪ್ರೇತವೆಂಬರ್ ಕೆಲರ್ (ಅಶ್ವಶಾ. ೦-೦೨). ೧೦. ಮುಂದೆ ನುಗ್ಗು: ಸಂಜಾತರೋಷ ಮೋಷ ಮುಳಿದು ಕಿಡೆಯೆ ಪಾಯ್ದೊಡವಳ್ ಕಡುಮುಳಿದು ಪಿರಿಯದೊಂದುರಿಪ ಕೊಳ್ಳಿಯುಂ ತಂದಾ ತಗರಂ ಪೊಯ್ಯಲೊಡನವಜಿ ಮೆಯ್ಯನುರಿ ಪತ್ತಲ್ ಕಟ್ಟಿದ ಸೇಣಂ ಪಜಿಯೆ ಪಾಜ್ದು ತಗರ್ ಪರಿದು ಕುದುರೆಯ ಮಂದುರಮಂ ಪಾರಿ ಪೊಗುವಂತೆ ಪೊತ್ತು (ಶಂಶಶಂ. ೦೬೯-೦೦) ; ಆ ಕಲಕಂಠಜಾಲಕಂಗಳ ಕಳಕಳಕ್ಕೆ ತೆರಳ್ದು ಕೀಜಿ ಪಾಯ್ದು ಗೋಲಂಗೂಲಂಗಳ್ (ಶಾಸಾವಾ. ೨-೬೦ ವ) : ಮುತ್ತಿದ ಕಿರಾತರಂ ಕಾಣುತ್ತುಂ ನಾಲ್ದೆಸೆಗೆ ಪಾಯ್ದು ಮಿಗಮುಂ ಕಿಡೆಯೆ ಚೊಕ್ಕತ್ತಿ (ಉತ್ಯಲ. ೨-೬೦) ; ಕಂಡೆಡೆಗೆ ಪಾಯ್ವುರಿಂ ಕಾಯ್ವುರಿಂ

ಸುಯ್ಯರಿಂ ತದ್ರಣಾಂಕಣಮೆಸೆದುದು (ಶಂತೀ. ೦೬–೨೦). ೧೧. (ರಭಸದಿಂದ) **ಹೋಗು ; ಬಳಿಸಾರು ;** ಪಲತೆಱದಿಂ ಲೋಗರ್ದಾನಲಾಭಭೋಗೋಪಭೋಗವೀರ್ಯಾದಿಗಳಂ ಸಲಿಸುವೆಡೆಗೆಡೆಗೆವಾಯ್ದು ಬಟಸಂದೊಂಗಂತರಾಯಮನುಬಂಧಿಸುಗುಂ (ಸುಕುಚ. ೬–೨೬) ; ಹರಿಯುಜರ್ಪಂದಿ ಪರ್ದುಗಳಾಗುತೆ ಮೇದಿನಿಗೆ ನಭಕೆ ಪಾಯ್ದುಜಸಿ ಕಾಣದೆ (ಶವ್ರಣ. ೦೦–೨೫೦). ೧೨. **ಎಡೆಯಾಡು ; ತೊಳಲಾಡು :** ನೆಯ್ದಿಲ್ಗೊಳಂಗಳೊಳೋಲಾಡಿಯುಮೊಸರ್ವ ಚಂದ್ರಕಾಂತಶಿಲಾತಳಂಗಳೊಳ್ಕರಂಗಳನಟಿಯಿಯುಂ ವಿಘಟಿತ ಚಕ್ರವಾಕಂಗಳಪ್ಪ ಕಮಲವನಂಗಳೊಳ್ ಪಾಯ್ದುಮಿಂತು ಪಲತೆಱದೆ ಕೋಟಲೆಗೊಳುತ್ತಿರ್ಪ (ಕಾದಂಸಂ. ೯೯೬). ೧೩. **ಇರಿ ; ತಿವಿ ; ಗುಮ್ಮು :** ನಸವಣಕದೆ ಚೆನ್ನಂ ಸಂಧಿಸುವುದುಮಸಪಸದಿನೆಡೆಗೆ ಪುಗಲೊಡನಂತಾ ಬಸವಂ ಪಾಯ್ದೊಡೆ ಕೆಸಱೊಳ್ ಬಸವಟದಿರ್ದೋದು ಗೊಂದೆ ಪೊಂದಿತ್ತಾಗಳ್ (ಕಂತ್ರಕೃ. ೨–೨೯) ; ನಿಟ್ಟೊಡಲನಂ ನಿರ್ವ್ಯಗ್ರನಂ ತತ್ಕುರೋರುಪದಪ್ರಾಪ್ತನನೆಟ್ಟಿ ಪಾಯ್ದು ಪಸುಗೋರ್ದಿಂದೆ ಕೋದೆತ್ತಿ ಮಂಡಪಸೋಪಾನದ ಪಾರ್ಶ್ವದಲ್ಲಿ ಕೆಡಪಂತೀಹಾಡಿದತ್ರೈಸ್ತ್ರಲುಂ (ಶರಕೃ. ೩–೬). ೧೪. **ಆವರಿಸು ; ಹಬ್ಬು :** ಮಾಂದ್ಯೆಸಿ ಪಾಯ್ದು ಸಾಯಕಸಂದೋಹದಿನಭ್ರಮಾರ್ಗಮಾರ್ಗಂ ಕಾಣಲ್ ಬಂದುದಣಮಿಲ್ಲ ಶರಭಯದಿಂದೋಡಿದುದಕ್ಕುಮೇಚ ನುಡಿ ಪರಿಪಿನೆಗಂ (ಕಾಂತಿ. ೯–೦೯). ೧೫. **ತೆವಳು ; ನುಸುಳು :** ಪುಲುಪುಲ್ಲಾಯೆ ಮೃಗಂಗಳೋಡಲಿಕಾಶಂ ತಾನದಿಲ್ಲೆಂಬಂ ಸುಚೀದಂಭೋನಿಧಿ ಮೇರೆದಪ್ಪಿದ ತೆಱಂ ಬಂದತ್ರನೀಕಾರ್ಣವಂ (ಅಕ್ಕಚ. ೯೬೫). ೧೬. **ಕೈನೀಡು ; ಚಾಚು :** ಧರ್ಮಪತ್ನಿ ಬಾಯಬೀದು ಕೊರಲ್ಗೆ ಪಾಯ್ದು ಪರಿದಾಡುವ ಬಾಲಕನಾದ ಶೋಕದಿಂ ಗಳಗಳ ಕಣ್ಣ ನೀರ್ ಸುರಿಯೆ ಚಿಂತಿಪ ಪಾರ್ವನ ಕೋಪದೊಂದು ಪೊಂಪುಳಿಯನ ನೋಡಿ ನಾಡೆ ಕರುಣಂ ತನಗಾಗಿರೆ ಕೊಂತಿ ಚಿಂತೆಯಿಂ (ಪಂಪಭಾ. ೩–೨೫) ; ಮೋಕ್ಷಮಾರ್ಗದೊಳ್ ಪದವಿಡೆ ಪಾಯ್ದು ಮುಂದಲೆಗೆ ಪಾಯುಳಿ (ಕಂಸಿ. ೬೦). **ಹಾಯ್₁ :** ೧. ಷಡಾಧಾರ ಬಳಿವಿಡಿದು ನೆತ್ತಿಯಿಂದುತ್ತರಕ್ಕೆ ಉಚ್ಚಳಿಸಿ ಹಾಯ್ದು ನಡುನೆತ್ತಿ ತೂತಾದರೂ ಲಿಂಗಸಾಹಿತ್ಯವಿಲ್ಲ (ಅವಚ. ೧೨–೨೦) ; ಬಂದರಪರಿಬ್ಬರು ಮಹೀತಳಕಿಂದು ಪದನೆಗೆ ಸಾತರನಿತ್ತರು ಮುಂದಗಮನೆಯು ಉಳುಹಿ ಹಾಯ್ದರು ಗಗನಮಂಡಲಕೆ (ಸಂಚಿಕ. ೦೩–೯೦); ಆ ಲತಾಂಗಿಯು ಪತಿಯ ಕೀರ್ತಿ ವಿಶಾಲವಾದಂದದಲಿ ರಾಜಮರಾಳ ಗಗನಕೆ ಹಾಯ್ದು ಕಂಡಿಳಿತಂದುದಾ ಪುರಕೆ (ಪಳಚ. ೨–೨೬). ೪. ಅಜಲುಗೊಂಡ ಕೆಱೆಗೆ ತೊಱೆ ಬಂದು ಹಾಯ್ದಂತೆ ಬಜಲುಗೊಂಡ ಸಸಿಗೆ ಮಳೆ ಸುರಿದಂತಾಯಿತ್ತು ನೋಡಾ (ಬಸವ. ೨. ೨೯–೯೩) ; ಇದು ಹೊಸತು ಬಾಣಾಪ್ತಿಮೇಲೆಯನೊದೆದು ಹಾಯ್ದುದೊ ಭುವನಪಳಿಂದುದಯಿಸಿನ ಮಳೆಗಾಲವೋ ಮಹಾಮಾ ಶರಾವಳಿಯೊ (ಕುಮ್ಮಾರ. ೯–೪೭). ೫. ಆಭವನವ ದಾಂಟ ಮೇಲಣ ಬಾಗಿಲನ ಹಾಯ್ದು ಸಾಂಭವಿಯ ಮೊಲೆ ಪಾಲನುಂಡು ದಣಿಯದ ಶಿಶುವ (ಶಿವಗೀ. ೦೯೨–೯೯೦) ; ಆ ಭವನಮುಖದಲಿ ಕಿಚ್ಚನೊಟ್ಟಿಸಿ ಮನಸುತಸಹಿತವರು ಹಾಯ್ದರು ಬಲದ ಮಾರ್ಗದಲಿ (ಕುಮ್ಮಾರ. ೬–೯೮) ; ಆ ಭರತ ನಿಜಬಲಸಹಿತ ಭಾಗೀರಥಿಯು ಹಾಯ್ದೊಲವು ವಿಗಿರ್ಲ್ಲೆತಂದನಾ ಮುನಿನಾಥನಿದ್ದೆಡೆಗೆ (ಕಜಿಸಾ. ೨–೬–೦೯). ೬. ದಟ್ಟೈಸಿ ಮಡಲಿಱದ ಕಾಳದೊಳು ನಡುವಿರುಳು ನಟ್ಟ ಮುಳ್ಳುಗಳನೆಡಹಿದ ಕಲ್ಲ ಹಾಯ್ದು ಮರಮುಟ್ಟಿಂ . . . ಮುಱಿದು ಗೋಳಟ್ಟು ಬಾಯ್ಬಿಟ್ಟು ಮೊಱೆಯಿಡುತ ನಡೆತಂದು (ತತ್ವಾ. ೦೨–೨೦); ಸ್ಥಳಪನೇ ಜಲವೆಂದು ನಿರ್ಮಳಜಲಪನೇ ಸ್ಥಳವೆಂದು ಬಾಗಿಲ ನೆಳಲ ಭಿತ್ತಿಯು ಹಾಯ್ದು ಬಾಗಿಲ ಭಿತ್ತಿಯೆಂದಿಳಿದು (ಕುಮ್ಮಾಸ. ೦೩–೨೬). ೭. ಪೂಸ್ಸೊಳದ ಎಮ್ಮೆತುಱುಗಳೊ ××× ಹಾಯ್ದು ಪಾಡೆಕಪ್ಪಣ ಕಾದಿ ಸತ್ತು ಸಗ್ಗಿಯಾದ (ಮೈಶಾ. ೦೯೪೦, ೦೨–೩ ; ಸು. ೯೬೫) ; ಇರುಳುಗಳ್ಳನ ಕೂಡೆ ಸೇರಿದ ಮರುಳಿನಂತಿರೆ ನೀವು ರಣದಲಿ ತಱಸಿಕೊಂಬಿರಿ ಹಾಯ್ದರವದಿರು ನಿಮ್ಮನೆಡೆಯೊಡ್ಡಿ (ಕುಮ್ಮಾದ್ರೊ. ೦೬–೬೨). ೮. ಕಾಪರೆಯೆಸಳ ದೋಣಿಯು ಮೇಲೆ ಹಾಯ್ದವು ಕುಸುಮದುಬ್ಬರದ ತೊಱೆಯನು ಕೂಡೆ ತುಂಬಿಗಳು (ಕುಮ್ಮಾಶ. ೩–೯). ೧೦. ಹಲಉ ಕುದುರೆ ಹರಿಸಲು ಕಳ ಹಾಯ್ದು ಕುದುರೆಯ ಕೆಡಹಿ (ಕೃಷ್ಣಅ. ೦೯೪೦, ೬೬–೬ ; ಸು. ೧೧೬೪). ೧೧. ನಾರಿಯರು ಕಂಡರು ಸುಲಜ್ಜಾಭಾರದಲಿ ತಡಿಗಳಿಗೆ ಹಾಯ್ದರು [ಪಾಠಾಂ. ಹಾಯಿದು] ಸೀರೆಗಳ ತೆರೆವಿಡಿದರಂಗೋಪಾಂಗಲತೆಗಳಿಗೆ (ಕುಮ್ಮಾಆ. ೦೦–೪೦) ; ಹಾಯ್ದನು ಹಂಸೆಯ ಮುನಿಪ (ಕೊರಚ. ೦–೩–೨೩) ; ಸೇನಾಸಮುಗ್ರದಿಂ . . . ಕುದುರೆಗಳ ಹಿಂದುಗೊಂಡು ಬರಲು ತರ್ಮಾಯೊಳವು ಹಾಯ್ದುಪನಿಲಜವದಿಂ ಪಡೆಯೊಳೊರ್ವರುಮುಱಿಯದಂತೆ ಕುಂತಳನಗರಕೆ (ಕೈಮಿಚ. ೨೪–೩). ೧೨. ನುಡಿಯದಿರಸತ್ಯವನು ರಾಜ್ಯವ ಬಿಡು ವಿಭಾಡಿಸಿ ನಿನ್ನ ಪಥುವಿನ ಮುಡಿಗೆ ಹಾಯ್ದರೆ ನೀನಧರ್ಮದ ತಡಿಯನಡರದಿರು (ಕುಮ್ಮಾಸ. ೦೦–೪೦). ೧೩. **ಓಡಿಹೋಗು ; ಪಲಾಯನ ಮಾಡು :** ಕಪಿಸೇನೆ ಕಂಗೆಟ್ಟೊದಱ ಹಲುಗಿರಿಯುತ್ತ ಹಾಯ್ದುದು ಕದನ ಸಾಹಸನೊಡನೆನುತ (ತೊರವೆ. ೨೫–೨) ; ಗಡ್ಡದ ಮುದುಕರು . . . ಕಂಗೆಟ್ಟು ಹಾಯ್ದರು [ಪಾಠಾಂ. ಯ್ದುದು] ಹೊದಕೆ ದಂಡು ಉಮಂಡಲವ ಬಿಸುಟಖಿಳದೆಸೆದೆಸೆಗೆ (ಕೊರಚ. ೦–೦೦–೦೨) ; ಹಮಚತುಷ್ಪಯವನಿಸಲು ಉಗ್ರಶರಘಾತಿಗಳು ಸೂತನಂ ಕೈಕೊಳದೆ ವಿಗ್ರಹವನುಳಿದೊಂದು ಕಡೆಗೆ ಹಾಯ್ದುವು (ಕೈಮಿಚ. ೬–೫೨). ೧೪. **ದಾಟಿ ಹೊರಬರು ; ಹೊರಬೀಳು :** ಪಶುಪತೀಶ್ವರ ಕಡಿವ ತೆಱಹಿನೊಳಸುರನೆಚ್ಚಂಬಡಸಿ ರಾಮನ ಬಸುಱನುಚ್ಚಳಿಸಿದವು ಹಾಯ್ದುವು ತೋದ ರಕುತದಲಿ (ತೊರವೆ. ೪೫–೬೨) ; ಕೊಯ್ದ ಕೊರಳಿನ ಕೊಱೆದ ತೋಳಿನ ಹಾಯ್ದ ಮೂಳೆಯ ಸುರಿವ ಕರುಳಿನಲೆಯ್ದ ಪಡೆಗೇಟಾಯ್ತು ಚೋಣಿಯ ಚಾತುರಂಗದಲಿ (ಕುಮ್ಮಾಕ. ೨–೯) ; ಉಚ್ಚಳಿಸಿ ಹಾಯ್ದಂಬುಗಳವನ ಕಾಯದಿಂದಚ್ಚುಱಿಲ್ಲದೆ ನಿವಿಷಮಿರ್ದು ಚೇತರಿಸಿಕೊಂಡೆಚ್ಚನು (ಕೈಮಿಚ. ೬–೯೫). ೧೫. **ಉಂಟಾಗು ; ಸಂಭವಿಸು :** ಭೂಸುರವಿಷಯಕೀತನನು ಕೊಟ್ಟ ತಾನೆನೆ ಹಾಯ್ದು ನಾಲ್ವರ ಹೊಟ್ಟೆಯೊಳಗುರಿ ಬಳಿಕ ನಿವಿದ ಕೊಟ್ಟರೇಕೌ ತಾಯ ಭೀಮನನೇನ ಮಾಡಿದಿರಿ (ಸಂಭಪ. ೨೩ ೯೬). **ಹಾಯು :** ೧. ಮಾರನನೇಱದ ಮರ್ಕಟನಂತೆ ಹಲವು ಕೋಂಬೆಗೆ ಹಾಯು [ಪಾಠಾಂ. ಜಿಗಿ]ಬಿಡಿದೆ ಬೆಂದ ಮಾನವ ನಾನೆಂತು ನೀಬುಪೆನಯ್ಯಾ (ಬಸವ. ೩೩). ೪. ಎಲೋ, ಹುಡುಗಾ ! ನಿನ್ನ ಕೈಯೊಳಗಿಂದ ನೆತ್ತರ ಹಾಯುತ್ತದೆ (ಕುಂಬಚು. ೬. ೨–೯೬). ೫. ಕಿಂದರಜೋಗಿಗೆ ಮಕ್ಕಳೆಲ್ಲ ಮುಗ್ಧರಾಗಿ ಹಳ್ಳ ಹೊಳೆಗಳನ್ನು ಹಾಯ್ದು ಬೆಟ್ಟದ ಒಡಲಲ್ಲಿ ನುಗ್ಗಿದರಂತೆ (ಗಾಳಕ. ೩೩) ; ಈ ದೇವರ ರಥೋತ್ಸವದಲ್ಲಿ ಜನರು ಕಿಚ್ಚು ಹಾಯುವರು (ಕಕ್ಕಚಾ. ೦೦). ೬. ಅಲ್ಲಹುದೆಂಬ ಅಜ್ಞಾನಿಯೊಡನಾಟ ಇಲ್ಲು ಹಾದಂತೆ (ಸರ್ವಜ್ಞ. ೬೨೦) ; ತಲೆ ಗಟ್ಟಿಯೆಂದು ನೀ ಕಲ್ಲನು ಹಾಯ್ವರೆ (ಇಂಪಾಕ. ೯೨–೯೯). ೭. ಧನುಜರತಿಭಿತಿಯುಳಿ ಸೈನ್ಯವ ಕೂಡಿ ಧಾಳಿಯನು ನಿರುತ ಹಾಯುತೆ, (ಸಂಭಪ. ೩೦, ೬೦೯); ಲಖನೌಗೆ ಬಂದ ಬಳಿಕ ಅವರ ಕೀರ್ತನ ಶಬ್ದಗಳಲ್ಲಿ ಹೊರಡಲಾರಂಭಿಸಿತು. ಜೇಡರವನ ಸಿಟ್ಟು ಗಡ್ಡದ ಮೇಲೆ ಹಾಯುತ್ತಿತ್ತು (ಶ್ರೀಮಹ. ೬೫). ೧೦. ಕಾರು ಹಾಯ್ದರೆ ಬಾಯ್ಗೆ ಸಿಡಿವುದು ಕೆಂಪುಗೋದಿಯ ಕಿಚಡಿಯು (ಕೆಂಮು. ೦೨–೨೦). ೧೧. ಆ ಪೂರ್ಣಾತ್ಮಕಳ ಮಾನಸಿನೊಳಗ ಏನಿದೆಯೊ ಏನೊ . . . ಮೊದಲೇ ಒಂದು ಕಾಗೆ ಸಮೀಪ ಹಾಯಲೊಲ್ಲದು (ಅಕ್ಕಮೀ. ೬೯) ; ಮುಂದೆ ಎಂಟಾನೆಂಟು ದಿವಸಗಳಾದರೂ ಅವನ ಮನೆಯ ಕಡೆಗೆ ಹಾಯಲಿಲ್ಲ (ಕುಂಬಚು. ೯–೩೩) ; ಜೈನ ಕವಿಗಳು ಚಂಪುವಿನ ಹತ್ತಿರ ಹಾಯಲಿಲ್ಲವೆಂವರೂ ಸರಿ (ಕಚಾಕ. ೬೯೬).. ೧೨. ಮುಂದೆ ಬಂದರೆ ಹಾಯದಿರಿ ಹಿಂದೆ ಬಂದರೆ ಒದೆಯದಿರಿ (ಗೋಪಾಕು. ೬೦) ; ಒಂದು ಹಸುವು ಗೋಪಾಲಕನನ್ನು ಹಾಯಲಿಕ್ಕೆ ಹೋಯಿತು (ಪ್ರಾಚಿ. ೨೦೯)

೧೪. ಏಷ್ಯದ ದೊಡ್ಡಪರ್ವತಗಳೆಲ್ಲ ಪ್ರಾಯಶಃ ಪಶ್ಚಿಮದಿಂದ ಪೂರ್ವಕಡೆಗೆ ಹಾಯುತ್ತವೆ (ಭೂಗೋ೪. ೨೩). ೧೯. ನೆಗಡಿ ಹಾಯ್ದ ದಂತೆ ಅವನು ತನಗೇನೊ ಉಪಾಯ ಮಾಡಿಕೊಂಡಿದ್ದಾನೆ (ದೇಶಪ್ಪ. ೧೦). ೨೦. ಗೋಚರಿಸು; ಹೊಳೆ: ಚಹಾ ಗುಟುಕರಿಸಿದ. ಕೊನೆಯ ಗುಟುಕು ಗುಟುಕರಿಸುವಾಗ ತಾನು ಹೊರಗೆ ಹೋಗಬೇಕು ಎಂಬ ವಿಚಾರ ಹಾಯಿತು (ಅಪವಾ. ೨೩).

ಹಾದಾಟ=ಪರಸ್ಪರ ಹಾಯುವಿಕೆ: ಎತ್ತುಗಳ ಹಾದಾಟದ ನಡುವೆ ಸಿಕ್ಕ ಮಗು ಕಂಗಾಲಾಯಿತು (ಕೂಿ). ಹಾದು ಬರು=ದಾಟಿ ಬರು: ಕಳಿಸಿದರೆ ಕಳಿಸು ಬೆಲೆಬಾಳುವಂತಹ ಸರಕು ಎಲ್ಲ ಬಂದರುಗಳಿಗು ಹಾದು ಬರಲಿ (ಕಂಪು. ೦೬–೮); ಅವರಿಬ್ಬರು . . . ಒಂದು ತೋಟಕ್ಕೆ ಹೋಗಿ, ಅಲ್ಲಿಯ ಮಾವಿನ ತೋಪಿನೊಳಗಿಂದ ಹಾದು ಬರುತ್ತಿದ್ದರು (ಕುಂಬಳ. ೯. ೩–೩೭). ಹಾಯ್ದಾಡು, ಹಾದಾಡು=೧. ಓಡಾಡು; ನಡೆದಾಡು; ತಿರುಗಾಡು: ಆನೆ ಅರಣ್ಯವನ್ನು ದಾಟಿ ಬಂದು, ಜನರು ಹಾಯ್ದಾಡುತ್ತಿರುವ ಗುರುತಿನ ದಾರಿಯಲ್ಲಿ ಅವನನ್ನು ಇಳಿಸಿ (ಬಾರ್ಕ್ಲಾ. ೩೩). ೨. ಕೊಂಬಿನಿಂದ ಇರಿ,–ತಿವಿ: (೬). ೩. ದಾಟು: (೬). ಹಾಯ್ದು ಹೋಗು, ಹಾದು ಹೋಗು=ದಾಟಿ ಹೋಗು: ಗೌಡರ ಗರ್ಜನೆ ದೂರದಲ್ಲಿ ಹಾಯ್ದು ಹೋಗುವವರಲ್ಲಿಯೂ ಹೆದರಿಕೆ ಹುಟ್ಟಿಸುತ್ತದೆ (ಗುಳಿಗು. ೩): ಎಲ್ಲಾ ಗ್ರಹಗಳೂ . . . ಒಂದಕ್ಕೊಂದು ತಾಗದೆ . . . ಪ್ರತ್ಯೇಕವಾಗಿ ದೂರವಾಗಿವೆ. ಒಂದರ ಮೇಲೆ ಒಂದು ಹಾದು ಹೋಗಿಲ್ಲ (ಅಕಾಶ. ೦೩); ಬಗೆಬಗೆಯ ಸುಂದರ ಆಕೃತಿಗಳು ನಮ್ಮ ಕಣ್ಮುಂದೆ ಹಾದು ಹೋಗುತ್ತವೆ (ಚಾರಿತ. ೩೨೩).

[ದೇ.॥ ತಮಿ. ಕೊಡ. ಪಾಯ್: ಮಲ. ತೆಲು. ಪಾಯು]

**ಪಾಯ್$_{2}$, ಪಾಯ್$_{1}$, ಹಾಯ್$_{2}$, ಹಾಯಿ$_{1}$, ಹಾಹೆ$_{2}$** (ನಾ). ೧. ಚಲಿಸುವುದು; ನಡೆಯುವುದು: (೬). ೨. ರೀತಿ; ಕ್ರಮ: (೬). ೩. ಔಚಿತ್ಯ; ಯುಕ್ತತೆ: (೬). **ಪಾಯ್$_{1}$**: ೨. ದುಡ್ಡು ಇರೂತನಕ ಎಲ್ಲಾರೂ ಬೇಕಾಗೋದು. ದುಡ್ಡು ಹೋದ ಮ್ಯಾಲ ಎಲ್ಲಾರೂ ಘಾಸಾಘಾನಾ ಆಗೋದು. ಇದು ಲೋಕದ ಪಾಯಾನ ಅದ (ಗಂಡುಹು. ೧೦೧); ಪುಟ್ಟ . . . ಪೈಲವಾನನೇನಲ್ಲ. ಅವರೂ ಕುಸ್ತಿಯ ಪಾಯವನ್ನು ನೋಡುವುದು ಎಂದರೆ ಅವನಿಗೆ ತುಂಬಾ ಆಸೆ (ರೀಡುಕಾ. ೬೬). **ಹಾಯ್$_{2}$**: ೪. ದಾಟುವುದು; ದಾಟುವಿಕೆ: (೬). **ಹಾಯಿ$_{1}$**: ೫. ಗಾಳಿಯ ಅನುಕೂಲತೆಗಾಗಿ ದೋಣಿಯ ನಡುಗಂಬಕ್ಕೆ ಕಟ್ಟುವ ನೌಕಾಪಟ; ಹಡಗಿನ ಪಟ: ಕೇಲಿದ್ದು ತೇಲಿತ್ತು ಮುಳುಗಿದ್ದು ಮುಳುಗಿತ್ತು ಗಾಳಿ ನೀರ್ ಬಾಳು ಒಗುಮಿಗುತಲಿಹುದು. ಬೋರೆ ಕೀರ್ತಿಯ ಹಾಯಿ ಪಾಪ ಬಿಡುತಿದೆ ಬಾಯಿ ತೆರೆನೊರೆಯಲಿತಿಹಾಸ ನಗುತಲಿಹುದು (ಗಂ. ೯೯–೦೬); ಹಾಯಿ ಇರಲಿಲ್ಲ ದೋಣಿಗೆ: ಸುಮ್ಮ ಸುಮ್ಮನೆ ಗೊತ್ತುಗುರಿ ಇಲ್ಲದೆ ಅದು ನೀರ ಮೇಲೆ ತೇಲುತಿತ್ತು (ಬಡಕಂ. ೦೦೬); ಎತ್ತಿದ್ದ ಹಾಯಿಗಳನ್ನು ಅನುಕೂಲವಾರುತವು ತುಂಬಿ. ಹಡಗವನ್ನು ಸಮುದ್ರದ ಮೇಲೆ ವೇಗವಾಗಿ ಓಡಿಸಿತು (ಪುಟಿಸ. ೬೯). ೬. ಹಾಯಿಪಟವನ್ನು ಕಟ್ಟಿರುವ ದೋಣಿ; ನೌಕಾಪಟವನ್ನು ಹೊಂದಿಸಿರುವ ನಾವೆ: ಹಾಯಿ ವಿಹಾರ ಹಿಡಿಯುವವರು ನೀರ ಮೇಲೆ ಹೋಗಲು ಉಪಯೋಗಿಸುವ ಸಣ್ಣ ಹರಿಗೋಲು (ಕಮ್ಯುನು. ೦೯೯); ಹಲವಾರು ಮುನ್ನೂರು ಹಡಗುಗಳು . . . ಕಡುವೇಗ ಇನ್ನೂರು ಹಾಯಿಗಳು (ಕಾರು. ೦೯–೩೨೭); ಹಾಯಿ ಬಿಚ್ಚಿದ್ದನ್ನು ನೋಡಿ ಮನೆಯ ದಾರಿ ಹಿಡಿದಿದ್ದೆ. ತಾನು (ಹೊಸಕ್ಕಿ. ೫೭). **ಹಾಹೆ$_{2}$**: ೫. "ಹಡಗಿನ . . . ಪಟ ಹಾಹೆಯುಕ್ಕು" (ಶುಂಗಾರಾ. ೦೨೨–೫); ಗಾಳಿಗಿಷ್ಟು ಹರಿದೀತು ಹಾಹೆ ಹುಟ್ಟಿಲ್ಲದಾಗೆ ಹಡಗ? (ಸಿರಿಯೂರಾ. ೩೩–೨).

ಪಾಯ್ಕಟ್ಟು=ರೀತಿ; ವೈಖರಿ; ಕ್ರಮ: ದುರುಗೋಜಿಯು ಹೊಲಿಯುವ ಪಾಯ್ಕಟ್ಟಿನಲ್ಲಿ ಅಂಗಿಯನ್ನು ಹೊಲಿಯುವವರು ಈ ಊರಿನಲ್ಲಿ ಮತ್ತಾರು ಇಲ್ಲ (ಕೂಿ). [<ಪಾಯ್$_{1}$./ತುಳು. ಪಾಯಿ]

**ಪಾಯ್$_{1}$** 'ಪಾಯ್$_{2}$' ನೋ.

**ಪಾಯ್$_{2}$** (ನಾ) ೧. ಪಾದ; ಅಡಿ; ಚರಣ: "ಪಾಯ (ಪಾಯ್, ಪಾಯಿ)–ಪಾದ" (ಶಬ್ದಕೋ. ೨೬); ಗತಿ ಸ್ತಂಭಿಸಿ ಪಾಯಂ [ಕಾಕಂ.ದಂ] ಪೈಸರಂ ಬೋಗಿ ಪಸ್ತಂ ಪಾಲಂಗಿ ನೋಟಮಾಚಿಚ್ಚಿತ್ತಿ ಮೂರ್ಛಿಸುವ ಮಗಳಂ ಪದ್ಮಾಪತಿ ಕಂಡು (ಶುಲುರ.ಹ.೦೬೯–೦೮). ೨. ಬುನಾದಿ; ಅಸ್ತಿವಾರ; ಅಡಿಪಾಯ: ಸಹಿತ್ಯದಿಂದಲೂ ಸಂತೋಷದಿಂದಲೂ ಪಾಯ ಗಟ್ಟಿ ಮಾಡುವ ಬಗ್ಗೆ . . . ಒಂದು ದಾರಿ ಮಾಡಿ ಇರಿಸಬೇಕಾಗಿ ಇದೆ (ರಾಜೇಂದ್ರ. ೦೬೩); ಉಪ್ಪಾರನಾಗಿ ಪಾಯಾ ತುಂಬಬೇಕು (ಕುಂಬಳ. ೯–೦೯೩); ಸದ್ಯದಲ್ಲೇ ನಾನು ಮನೆಯ ಪಾಯ ತೆಗೆಸಬೇಕಾಗಿದೆ (ದೋಶಿ. ೩೨). ೩. ನಾಲ್ಕನೆಯ ಒಂದು ಭಾಗ; ಕಾಲುಭಾಗ: 'ಪಾಯದ್ರವ್ಯ' ಪರಾ.

ಪಾಯ ಹಾಕಿಸು=ಬುನಾದಿಯನ್ನು ಹಾಕಿಸು; ಅಡಿಪಾಯವನ್ನು ಹಾಕಿಸು: ಅತ್ತಿಮಬ್ಬೆ ಯೋಚಿಸಿ ಮೊಟ್ಟಮೊದಲು ಜಿನಾಲಯಕ್ಕೆ ಪಾಯ ಹಾಕಿಸಿದಳು (ದಾನಚಿಂ. ೦೬೩). ಪಾಯ ಹಾಕು=ಬುನಾದಿ ಹಾಕು; ಅಡಿಪಾಯ ಹಾಕು: ಪಾಯ ಹಾಕಿದ್ದಾರೆ; ಮೇಲೆ ಕಟ್ಟಡ ಎದ್ದಿಲ್ಲ (ಕಂಗಳ. ೦೫೩). [<ಪ್ರಾ. ಪಾಯ. /ಸಂ. ಪಾದ]

**ಪಾಯಕ** (ನಾ). ಕಾಲಾಳು; ಪದಾತಿ: ದಾಳಾಂಧ್ರ ದೇಶದ ಅರಸು ಆನೆಯನೇಜಿ ನಾಯಕ ಪಾಯಕ ಮಾವತಿಗರ ತಂತ್ರ ಮಾರ್ಬಲ ಸಹಿತ ರಾಜಬೀದಿಯೊಳು ಬರುತ್ತಿರಲು (ಸರ್ವಪ. ೨೦೩–೯೩೦); ಹರಿಗೆಯ ತುಳುವ ಪಾಯಕರು ಬಿಲ್ಲವರು ಕಾಡೆರೆಯ ವೀರರು. . .ನಡೆದರು ಶರಣಮಾಣಿಯೊಡನೆ (ಶಂಕರಾ. ೬–೩೫). 'ಕಾಲುಪಾಯಕ' ಪರಾ. [<ಪ್ರಾ. ಪಾಇಕ್ಕ. / ಸಂ. ಪಾಯಿಕ]

**ಪಾಯಕು** 'ಪಾಯಕ್ಕ$_{2}$' ನೋ.

**ಪಾಯಖಾನೆ, ಪಾಯಿಖಾನೆ, ಪಾಯ್ಖಾನೆ** (ನಾ). ೧. ಶೌಚಗೃಹ; ಕಕ್ಕಸು: ಕಾಮ ತುಚ್ಛವಾದ ಸಂಗತಿ–ಪಾಯಖಾನೆಗಳ ಗೋಡೆಗಳ ಮೇಲೆ ರೂಪಿಸುವ ಸಂಗತಿ–ಎಂಬ ಕಲ್ಪನೆ ಆಗ (ಮುಕ್ತಿ. ೦೦೬); ಉಳದವ್ವ ನಿದ್ದೀ ಪಾಯಖಾನ್ಯಾಗ ಮುಂಗಸಿದಿ ಎನಲೆ! ರ್ಝುಣಾಕ್ಯಾ! (ಶಂಕರು. ೦೦೦). ೨. ಮಲ; ಅಮೇಧ್ಯ: ಪಾಯಿರೆ ಬಿದ್ದ ಮಗುವಿನ ಪಾಯಖಾನೆ ತೆಗೆಯಲು ಅಲ್ಲಿ ಯಾರೂ ಇರಲಿಲ್ಲ (ಕೂಿ). **ಪಾಯಿಖಾನೆ**: (೬). **ಪಾಯ್ಖಾನೆ**: (೬).

[←ಪಾರ. ಪಾಖಾನಹ್, ಪಾಯಿಖಾನಾ; ಹಿಂ. ಪಾಖಾನಾ, ಪಾಯಖಾನಾ; ಮರಾ. ಪಾಯ್ಖಾನಾ]

**ಪಾಯಜಾಮ, ಪಾಯಜಾಮೆ, ಪಾಯಿಜಾಮ, ಪಾಯಿಜಾಮೆ, ಪೈಜಾಮ, ಪೈಜಾಮಾ** (ನಾ). ದೊಗಲೆ ಷರಾಯಿ; ಅಳ್ಳಕವಾದ ಇಜಾರ: ಸ್ವಲ್ಪ ಹರಿದಿದ್ದ ಪಾಯಜಾಮ, ಮಾಸಿದ ಅಂಗಿ (ಕಂಗಳ. ೦೨೯). **ಪಾಯಜಾಮೆ**: ಬಿಳಿಬಣ್ಣದ ರೇಶ್ಮೆಯ ನಿಲುವಂಗಿ, ಹತ್ತಿಕಾಲಿನ ನೂಲಿನ ಪಾಯಜಾಮೆ (ತ್ರಿಕಾಳ. ೩). **ಪಾಯಿಜಾಮ**: ಒಬ್ಬ ಸಂಗೀತಗಾರನು . . . ಕುತ್ತಿನ ಪಾಯಿಜಾಮ ಹಾಕಿಕೊಂಡು ಹಾಡುತ್ತಿರಲಾಗಿ (ಕಥಾಮಂ. IV. ೧೦); ಮೆಲ್ಲನೆ ಕಡಲ ತೆರೆ ಅಂಗರನ ಪಾಯಿಜಾಮೆಯನ್ನು ಮುತ್ತಿಡುತ್ತಿತ್ತು (ಹೊಸಕ್ಕಿ. ೬೨). **ಪಾಯಿಜಾಮೆ**: ಬಣ್ಣ ಬಣ್ಣದ ಪಾಯಿಜಾಮೆ, ಅದೇ ರೀತಿಯ ಅಂಗಿ ತೊಟ್ಟ ಈ ವ್ಯಕ್ತಿ ದೊಡ್ಡಪ್ಪನೇ ಏನು ಯಶೋದೆ ಒಂದು ಕ್ಷಣ ಶಂಕಿಸಿದಳು (ವಾತ್ಸಲ್ಯ. ೦೫). **ಪೈಜಾಮ**: ಅಜಾನು ವೃಷ್ಟಿ ಕಿಶೋರನ ಪೈಜಾಮದ ಕಡೆ ಹರಿಯಿತು (ಅತ್ಮಾರ್ಪ. ೨೩). **ಪೈಜಾಮಾ**: ಶ್ರೀಧರ . . . ಪೈಜಾಮಾ ಬದಲಿ

ಒಮ್ಮೆ ಶಾಂತ ಮಲಗಿದ್ದಲ್ಲಿಗೆ ಹೋಗಿ ಮಗುವಿನ ಹಣೆ ಮುಟ್ಟಿ ನೋಡಿದ (ವಾತ್ಸ. ೯೭): ಷರಟನ್ನು ತೆಗೆಯುವನು . . . ಪೈಜಾಮಾ ಕಳೆದೊಗೆಯುವನು (ಅಕ್ಷರ. ೦೦೭).
[ ← ಪಾರ. ಪಾಎಜಾಮಹ್, ಪಾಜಾಮಹ್ ; ಹಿಂ. ಪಾಯಜಾಮಾ, ಪಾಜಾಮಾ; ಮ.ರಾ. ಪಾಯ್‌ಜಮಾ, ಪಾಯ್‌ಜಾಮಾ ]

**ಪಾಯಜಾಮೆ** 'ಪಾಯಜಾಮ' ನೋ.

**ಪಾಯಣ್ಣೆ** (ನಾ). (?) : ಅರಸುಗಳ ಕೈ ಉತ್ತಾರರತ್ತ ಪಾಯಂಣೆ ನಂದಾದೀವ ಪುತಿವಟ್ಟು ಅಲಂಕರಿಸಿ ಪಕೆ ಸಹಾ ನಾಣ್ಯ ೩೦ ಲೌ ೦ (ಎಕ. XI. ಹೊಳಲ್ಕೆ. ೭-೩೯ ; 1544). [?]

**ಪಾಯದಳ**, ಪಾಯಿದಳ, ಪಾಯ್ದಳ (ನಾ). ಕಾಲಾಳುಗಳ ದಂಡು ; ಪದಾತಿಸೈನ್ಯ : "ಯಾತಂ ಪದಾತಿಕಂ ಪಾಯದಳ ಪತ್ತಿ ಪಾದಾತಂ ಪದಾಜಯಂ ಪದಿಕನೆನೆ ಕಾಲಾಳ್" (ಕಂಗಂ. ೯೫-೨೬); ಒಂದು ಕೊಡಗ . . .ಆ ಪುರವರಸು ತನ್ನ ಪಾ[ಕಾಕಂ. ಪಾಪ್]ಯದಳ ಸಹಿತ ಒಂದರ ಒಂದೇ ಬಾರಿ ಮುಜ್ಜದು ಸಂಗಿತ್ತು ಕಡೆ (ಅವಕಂ. ೯೯-೨೦೦); ನೂಕಿತೊಂದೇ ವಾಘೆಯಲಿ ರಥ ನಾಲ್ಕುಸಾವಿರ . . . ಲಕ್ಷಪಾಯದಳ (ಕುವ್ಯಾಕ. ೨-೯) ; ಕದನದ ಗಾಯದಲಿ ನೊಂದೆಂಜಲಿ ಬಾಯಲಿ ಬೆರಳನಿಟ್ಟುವು ವೈರಿಪಾಯದಳ (ಶಕತ. ೯-೩೯); ರಾವುತರ, ಪಾಯದಳ, ದಳದಳದ ಪರಿಗೆ, ಬಂದು ಬಂದೆತ್ತಲುಂ . . . ಬೀಡುಬಿಟ್ಟೀರೆಯೆ (ಹಾಕಸ. ೩-೦೦೯). **ಪಾಯಿದಳ** : ತುರಗ ಕರಿ ರಥ ಪಾಯಿದಳ ಬಲ ಹೊರಳಿಯೊಡೆದುದು (ಕುವ್ಯಾದ್ರೋ. ೦೨-೦೯); ಒಂದು ಭಂಡಾರ ಬೊಕ್ಕಸ ರಥ ಪಲ್ಲಕ್ಕಿ ವಟ್ಟಿ ಯ ಒಂದು ಉಳಿಯದೆ ಪಾಯಿದಳದ ಇಂದು ಒಪ್ಪಿಸಿ ಹೋಗು (ಹಂಹಂ. ೪೦-೦೦೩) ; ಅರ್ಜುನನು ಪಾಯಿದಳದ ಮೇಲೆ ಕಾಣಿಸಿಕೊಂಡು ಅದನ್ನು...ನೋಯಿಸಲು (ಕೃಹಾಂ. ೦೦೬). **ಪಾಯ್ದಳ** : "ಪಾಯ್ದಳ (ಪಾಯದಳ) _ಪಾದದಲ = ಕಾಲಾಳ ಸೈನ್ಯ" (ಕದ್ಯಕೋ. ೨೬); ಪಾಂಡುನಂದನನೊಗ್ಗಿನ ಪಾಯ್ದಳವನು (ಕುವ್ಯಾದ್ರೋ. ೩-೭೭); ನೆರೆದುದಗಣಿತವರಸುಗಳು ಕರಿತುರಗರಥವಾಯ್ದಳದ ಸಂದಣಿ (ಶಕತ. ೩-೩೦); ಪಾಜಿಯ ಕಾಪಿಂ ಪಾಯ್ದಳಂ ಸಡಗರದಿಂ ನಿಚ್ಚವಯಣದಿಂ ದೇಶದೇಶಂಗಳಂ ಕಟಾಕಟಂದು ಪೋಗುತುಮಿರ್ದುದು (ರಾಜಾಶೃ. ೩೦-೨). [ ಪಾಯ್ದ + ದಳ (=ದಲ ) ]

**ಪಾಯದಟ**, ಪಾಯಿದಟ (ನಾ). =ಪಾಯದಳ : ಪಾಯದಟವೆಲ್ಲ ಮೆಚ್ಚಿ ಮುಜ್ಜಂ ರಾಜಿಸಾಜಿಯಾಗಿ ತೆಜಃಪುಂಜದಿದಿರೊಡ್ಡಿ ನ ತೇರೊಡ್ಡುಗಳ್ ಶೂರಸಾರಥಿಪ್ರೇರಣದಿನೋರೊಂದು ಪತ್ತೆ ಸಾ ರ್ಚಿ ದಾ ಗ ಳ್ (ಚಂದ್ರಶೆ. ೧೦-೭೯ ವ ) **ಪಾಯಿದಟ** : ವಾಜಿ ಲ ಬ ಲ ದೊ ಳ್ . . . ನೊಜಾನೆಯಿಪಾಯಸಾಸಿರಕುದುರೆ ಲಕ್ಷಪಾಯಿದಟವಾಯ್ತೆಂನು ಲೆಕ್ಕಿಗಂ ಬಿನ್ನವಿಸೆ (ಶಕಹಂ. ೨೨-೦೯). [ ಪಾಯ್ದ + ವಟ ]

**ಪಾಯದೂತ** (ನಾ). ಕಾಲಾಳು : ವಣಾಯಪಾವರರಿಕಾಲನಾ ಪಾಯದೂತರತಿವೇಗದಿಂ (ಕಾಹಾಕ. ೨-೯-೩೯). [ ಪಾಯ್ದ + ದೂತ]

**ಪಾಯದೆ** 'ಘಾಯಿದೆ' ನೋ.

**ಪಾಯದ್ರಮ್ಮ** (ನಾ). ದ್ರಮ್ಮದ ನಾಲ್ಕನೆಯ ಒಂದು ಭಾಗ; ದ್ರಮ್ಮದ ಕಾಲುಭಾಗ : ಪಾಯದ್ರಮ್ಮಂ ಅಡಿಗಚ್ಚು ಕಾಣಿಕೆ (ಸೌಇಕಂ. ೦೯೩೯. ಬಂಕಾಪುರ. ೩-೦೯ ; ೯೩೨). [ ಪಾಯ್ದ + ದ್ರಮ್ಮ ]

**ಪಾಯನ್ನೇರಳೆ** (ನಾ). ಒಂದು ಬಗೆಯ ನೇರಳೆ : ಕರೀನೇರಳೆ, ಪಾಯನ್ನೇರಳೆ (ವೃಕಿಗ. ೬೬-೦೯೯೬). [? + ನೇರಳೆ (<ನೇಜ಼ಲ್)]

**ಪಾಯಬಂದ** (ನಾ). ಕುದುರೆಯ ಹಿಂಗಾಲಿಗೆ ಕಟ್ಟುವ ಹಗ್ಗ; ಪಿಚಾಡಿ: ಪುಶಳೀ. . .ಥಾಬೆಗೆ ಹೋಗಿ ಬಾವೂಸಾಹೇಬನ ಕುದುರೆಯ 'ಪಾಯಬಂದ ಕಾಡಣ'ಯನ್ನು ಬಿಚ್ಚಿಕೊಂಡು, ತಿರುಗಿ ಕೋಣೆಗೆ ಬಂದು ಬಾಗಿಲು ಹಾಕಿಕೊಂಡಳು (ಗ್ರಾಹಾಹ. ೦೬೦). [ ←ಮರಾ. ಪಾಯ್‌ಬಂದ್ ]

**ಪಾಯಭರಣ** (ನಾ). ತಳಪಾಯವನ್ನು ತುಂಬುವುದು ; ಅಡಿಪಾಯವನ್ನು ಮುಚ್ಚುವುದು : ಈಗ ಬಸವಂತಿ_ಶ್ಯಾಮರಾಯರ ನಡುವೆ ಬೈನಾ-ಭಿತ್ತಿ ನಿರ್ಮಿಸುವ ಹಂಚಿಕೆ ಹಾಕಿದ್ದ. ಭಿತ್ತಿಯ ಪಾಯಭರಣ ಸರಬಳಿಗೆ ಆಸುರಿಸಿತ್ತು (ಂಚಹ. II. ೩೪೩). [ ಪಾಯ್ದ + <ಭರಣ ]

**ಪಾಯರಿ** (ನಾ). ಅಂತಸ್ತು ; ಪದವಿ : ಏ ಪಾಯರಿ ಏರಾಕ ಹತ್ತೀದೆಲಾ. ಮೊದಲು ನನ್ನ ಇಲ್ಲಿ ಬರೇ ಮುಸುರಿ ತಿಕ್ಕಾಕ ಕರತಂದಿ. ಈಗ ಮದುವೆಗೆ ತಯಾರಾದಿ (ಕಕ್ಕರ್ಕ. ೦೦೬). [ ←ಮರಾ. ಪಾಯರೀ ]

**ಪಾಯಲಿ**, ಪಾಯಿಲಿ, ಪಾಯಿಲೆ (ನಾ). ಧಾನ್ಯವನ್ನು ಅಳೆಯುವ, ನಾಲು ಸೇರಿನ ಒಂದು ಅಳತೆ : ೪ ಶೇರಿಗೆ ೧ ಸೊಲಿಗೆ, ಪಾಯಲಿ ಅಥವಾ ಚಿಟ್ಟಿ . . . ೨೦ ಮಣಕ್ಕೆ ಅಥವಾ ೧೦ ಹೇರಿಗೆ ೧ ಖಂಡುಗ ; ಈ ಪರಿಮಾಣಗಳು ಬಹುತರವೊಂದೇ ಸಮನಾಗಿ ಎಲ್ಲ ಕಡೆಯಲ್ಲಿ ನಡೆಯುತ್ತವೆ (ಕಂಠಿಗ. ೨೬೦) . **ಪಾಯಿಲಿ** : ರೂಪಾಯಕ್ಕೆ ಇಪ್ಪು ಪಾಯಿಲಿ ಮೇಲೆ ಅಂತಾ ಇರತಕ್ಕ ಜೀನಸುಗಳು (ಮುಂಬಕ್ಯಾ. ೦೩೩). **ಪಾಯಿಲೆ** : ಚೂರುಮುರಿ (ಅಕ್ಕಿಅರಳು) ಮುಂಬಯಿಯಲ್ಲಿಯ ಅಳಿಯುವ ಪಾಯಿಲೆ ೨೦೪ ಸೂರ್ತಿ ರೂಪಾಯಿಯ ಭಾರ ಇರುತ್ತದೆ (ಮುಂಬಕ್ಯಾ. ೦೩೩).
[ ← ಮರಾ. ಪಾಯಲೀ ]

**ಪಾಯವಟ್ಟ**, ಪಾಯಿಪಟ್ಟ (ನಾ). ೧. ಕಾಲಿಗೆ ಹಾಕಿಕೊಳ್ಳುವ ಒಂದು ಬಗೆಯ ಅಭರಣ ; ಕಾಲಂದುಗೆ ; ನೂಪುರ : "ಸಿಂಜಿನಿ ಹಂಸಕಂ ಕಡೆಯ ಪೆಂಡೆಯಂ ಪಾಯವಟ್ಟಂ" (ವಾಂಗಂ. ೦೦೦-೩೦) : ಸಂದಿವಟ್ಟದ ಪಾಯವಟ್ಟದುಮಂ ... ವಿವಿಧ ಕಿಸಲಮುದ ಕಿಸಲಯಮುಮಂ ಮನೋಹರಮೆನೆ ಸಮೆದು ತನುತನುಗೆ ಪಸವನಂಗೊಂಡು (ಚಂದ್ರಪ್ರ. ೬-೦೦೯ ವ); ರಾಜೀವಲೋಚನೆ ಕಳುಹಿದಳು ವಿಕ್ರಯಿಸಲೆಂದದೆ ಪಾಯವಟ್ಟವನು (ಬಸಪು. ೯೨-೦೨) ; ಉಲಿವ ನೇವುರ ಪಾಯವಟ್ಟದ ಲಲಿತಕಂಣ ತೋಳ ಬಂದಿಯು . . . ಕೋದುಮಲೆಯರೆಯ್ದಿದರು (ಶ್ರೀಕುಂ. ೯-೨೯) ; ಬಾಯಿ ಬಡಿಕ ತಪಸಿಗಳ ಶಾಯಿ ನೀ ಕಡೆಮೆಟ್ಟಿನುತೆ ಕಾಲಂದುಗೆ ಪಾಯವಟ್ಟವ ತೇದಿಕ್ಕಿದರು (ವೀಪುಹ. ೨೩-೯೬). ೨. ಗೌರವಸೂಚಕಚಿಹ್ನೆಯಾಗಿ ಕಾಲಿನಲ್ಲಿ ಧರಿಸುವ ಒಂದು ಬಗೆಯ ಆಭರಣ ; ಕಾಲ ತೊಡರು ; ಪೆಂಡ್ರೆಯ : "ಪಾಯವಟ್ಟ_ಪಾದಪಟ್ಟ=ಪೆಂಡೆಯ" (ಕದ್ಯಕೋ. ೨೬) ; ಪಾದಪಟ್ಟ_ಪಾಯವಟ್ಟ (ಅಭಿತ. ೨೯೨ ಶ್ರಹೋ); ವೀರಮುದ್ರಿಕೆ ಪಾಯವಟ್ಟ ಕಾಂಚಿದಾಮ ಹಾರ ಕೇಯೂರ (ಬಕೋಕ್ತ. ೩-೭೦). **ಪಾಯಿವಟ್ಟ** : ೧. ರಘುಣರಂಬ ನೇವುರ ಪಾಯಿವಟ್ಟಂಗಳು ತರುಣಿಗೊಪ್ಪಿನವು (ಶಿಹಾಕಾ. ೨-೦೨೩) ; ಕೇವಾಪರದು ಬಂದುಣಿಸಿಗಳಸಿಯೆ ತಂದಿಹ ಮದ ಹಂಸೆಯಂತೆ ಚೆಂದನ ಮುತ್ತಿನ ಪಾಯಿವಟ್ಟದ ಪದವ್ಯಂದ್ವವೆಸೆದು ಮೆರೆವಳ (ಕಂಕಶ. ೯-೨೨). [<ಸಂ. ಪಾದಪಟ್ಟ]

**ಪಾಯವಧಾರು** (ನಾ). (ಆಚಾರ್ಯರು, ರಾಜರು ಮೊದಲಾದವರನ್ನು ಕುರಿತ) ಕೊಂಡಾಟದ ಒಂದು ನುಡಿ ; ಪರಾಕು ಹೇಳುವಾಗ ಬಳಸುವ ಒಂದು ಮಾತು : ಪಾಯವಧಾರುಯೆಸಲು ಗಜಮಸ್ತಕದೊಳಳವಟ್ಟು ಕೈವೀಸೆ ಭೋರೆಂಬ ಲಗ್ಗೆಪಜಿಗಳ ಬೊಬ್ಬೆಯಬ್ಬರಂಗಳೊಳು ಚಂದ್ರಾದಿತ್ಯ ಮುತ್ತಿದ ಶಿವಾಲಯುದವನು (ಸೋಕುತ. ೩-೬); ಇನನಂದನನು . . . ಮುಂದೆ ಪಾಯವಧಾರು ರಿಪುನೃಪಬಂದಿಕಾಜಿವಧಾರು ಧಿರುಪಯುದೆಂದು ಕಳಕಳ ಗಜಜಿ ಏಗೆ ಕುರುಭೂಪನಿಗೈತಂದ (ಕುವ್ಯಾದ್ರೋ. ೦-೦೯); ಕಿಲದ ಪಾಯವಧಾರುಗಳ ಪಾಂಗಳುನಾಹಾರವವೆಸೆಯಲುತ್ತಮರೊಳಗೆ ಸುಮುಹೂರ್ತದಲಿ ಹೊಕ್ಕರು ಪುರಬಲರು ಪುರವ (ಸಿಶಿಂಗ. ೦೦-೯೨-೩). [ ಪಾಯ್ದ + ಅವಧಾರು ]'

**ಪಾಯಶುದ್ಧಿ** (ನಾ). ಕಟ್ಟಡ ಮೊದಲಾದುವಕ್ಕೆ ತಳಹದಿ ಹಾಕುವಾಗ ಅಡಿಪಾಯದಲ್ಲಿ ಅಮಂಗಳಕರವಾದುದೇನೂ ಇಲ್ಲದಿರುವಿಕೆ,—

ಶುದ್ಧವಾಗಿರುವಿಕೆ : ಮನೆ ಕಟ್ಟುವಾಗ ಪಾಯಶುದ್ಧಿ ಚೆನ್ನಾಗಿರಬೇಕು (ಆಡು). [ ಪಾಯ್ಸು+ಶುದ್ಧಿ ]

**ಪಾಯಸ** (ನಾ). ೧. ಅಕ್ಕಿ, ರವೆ, ಗಸಗಸೆ, ಸೇವಗೆ ಮುಂತಾದುವುಗಳನ್ನು ತುಪ್ಪದಲ್ಲಿ ಹುರಿದು, ಹಾಲಿನಲ್ಲಿ ಬೇಯಿಸಿ ಸಕ್ಕರೆ ಅಥವಾ ಬೆಲ್ಲವನ್ನು ಸೇರಿಸಿ ಸಿದ್ಧಪಡಿಸುವ ಒಂದು ಬಗೆಯ ಸಿಹಿಪೇಯ : "ಕ್ಷೈರೇಯಂ, ಪಾಯಸಂ, ಪರಮಾನ್ನಂ—ಈ ೩ ತಾಯ್ಮಾಲ್" (ಕರ್ಣಾ. ೩೪–೦೬೩) ; ಮುದದೆ ಮಾಡಿದಳ್ ಪಾಯಸಮಂ ನವಘೃತಸಮನ್ವಿತಂ ಸಿತಸಹಿತಂ (ಶಂತಕಂ. ೦೫೯–೨೨) ; ದೇವ ಪರಡಿಯ ಪಾಯಸಪನಗ್ಗಿ ದಮ್ಮಯ್ಯ (ಬಸ. ೬–೦೨೬) ; ಶಾಕಶೀಕರಣೆಯ ಗುಡಪೋಡಣೆಯ ಸುಪಾಕ ಪೊಗ್ಗರಣೆ ಪಾಯಸವ. . . ಬಡಿಸಿದರು (ಹಿಕ. ೪–೬೪). ೨. ಒಂದು ಬಗೆಯ ಗಂಧದ್ರವ್ಯ ; ಲೋಬಾನ : "ಪಾಯಸಃ, ಶ್ರೀವಾಸಃ, ವೃಕ್ಷಧೂಪಃ, ಶ್ರೀವೇಷ್ಟಃ, ಸರಳದ್ರವಃ—೫ ಸರಳದೇವದಾರುವೃಕ್ಷದ ಬೊಂಕೆ, ರಾಳದ ಬೊಂಕೆ" (ಸಿದ್ಧಾಂತ. ೨೦೬). [ ಸಂ. ]

**ಪಾಯಸಂಕಲೆ** (ನಾ). ಕಾಲಿಗೆ ಕಟ್ಟುವ ಸರಪಣಿ,—ಸಂಕೋಲೆ : "ಪಾಯ(ಪಾದ) ಸಂಕಲೆ—ಪಾದಶೃಂಖಲಾ" (ಕನ್ನಕೋ. ೨೬). [ ಪಾಯ್ಸು+ಸಂಕಲೆ ]

**ಪಾಯಟಿ** (ನಾ). (?) : ಬಯ್ದಂಗೆ ಪಣಮುಮೊ[ದಂ] ಪೊಯ್ದಂಗಾಟು ಪಣಮಿಲ್ಲಯ ಪನ್ನೆರಡುಪಣಂ ಪಾಯಟಿದೆ ಸುರಿಗಿರ್ತಿರದೆಯ್ದಿದವಂ ಗೆಂಟುಪಣಮೆ ದಣ್ಡಂ (ಶಾಸನ. IX–೧, ೦೦೨–೯೫ ; ೧೦೪೬). [?]

**ಪಾಯಾಳ** (ನಾ). ದೂತ ; ಪರಿಚಾರ ; ಸಂದೇಶವಾಹಕ : ಪಂಚಶರನ ಪಾಯಾ[ ಪಾಠಾಂ. ಯ್ದಾ, ಯ್ದಾ ] ಳನಂತೆ ಚಂಚರೀಕದ ಕಂಚ ಮನೆತ್ತಿ ಕಿಂಜಲ್ಕದ ಕೆಂದೂಳಿಯೊಳ್ಪೊರೆದು ಮಕರಂದಬಿಂದುಮೆಂಬ ಬೆವರಂ ಪೇಱ ಪರಿತರ್ಪ ತಣ್ಣೆಲರಿಂ . . . ಮನಂಗೊಳಿಸಿ (ಆರಣ್ಯಕ. ೪–೬೮ ಕ); ಗಾಳಿಯ ಮುಂದೋಡುವ ಜಂಘಾಳಹಯಮದ್ವಯಮನೇಱ ಪಥಗತಪುರಮಾಳಿಗಳುಂ ಕಟ್ಟಿದಾ ಜಂಘಾಳರ್ ಪಾಯಾಳರೆಯ್ದಿ ಶೌರೀಪುರಮಂ (ಜಗನ್ನಾ. ೩–೬೬). [<ಪ್ರಾ. ಪಾಯಾಲ ]

**ಪಾಯಾಳು** (ನಾ). ಪಾದಚಾರಿ : ಗುರುವೆಂಬ ಅಂಜನ ಶಿಷ್ಯನೆಂಬ ಪಾಯಾಳು (ಶಸ್ತ್ರ. ೪. ೬೨೪–೦೯೦೦). [ಪಾಯ್ಸು+ಆಳು (<ಆಳ್) ]

**ಪಾಯಿ**, (ನಾ). ೧. ಪಾಪಿ ; ಪಾಪಿಷ್ಠ: "ಪಾಯಿ—ಪಾಪಿನ್. ೨. ಪಾದ (ಕನ್ನಕೋ. ೨೬). ೨. ಬಡವ ; ನಿರ್ಗತಿಕ : "ಪಾಯಿಃ = ಬಡವಂ" (ಅಭಿ. ೦೬೬). 'ಬಡಪಾಯಿ' ಪರಾ." [ <ಸಂ. ಪಾಪಿನ್ ]

**ಪಾಯಿ**, **ಪೈ** (ನಾ). ೧. ಒಂದು ನಾಣ್ಯದ ಹೆಸರು : ಪ್ರತಾಪ ಚೌಲ ನಾಲ್ಕುಂ ಸತತಂ ಚೌಲಕ್ಕೆ ನಾಲ್ಕು ಪಾಯಿಗಳಕ್ಕುಂ ಅತಿಶಯದ ಪಾಯಿಯೊಂದಕೆ ಗತಿಸಂಖ್ಯೆಯ ಗಿಣಿಯುಯೆಂದ (ಕ್ಷೇತ್ರ. ಅನುಬಂಧ I, ೩–೨೬); ಪ್ರತಾಪಕ ಪಣವು ಬಾಣಂ . . . ಪ್ರತಾಪಕಂ ಪದಿನಾಱುಪಾಯಿ ಚೌಪಣ್ಣಗಿತಿಗಳುಮಂ (ಕ್ಷೇತ್ರ. ಅನುಬಂಧ I, ೩–೨೮). **ಪೈ** : ೨. ಹಿಂದೆ ಚಲಾವಣೆಯಲ್ಲಿದ್ದ ತಾಮ್ರದ ಒಂದು ಸಣ್ಣ ನಾಣ್ಯ ; ಆಣೆಯ ಹನ್ನೆರಡನೆಯ ಒಂದು ಅಂಶ ; ಒಂದು ಬಿಡಿಗಾಸು : ಮುಪ್ಪಾಗವು ಮೂಱುವೀಸಕ್ಕವು ಪೈಗಳವಾಗುತ್ತಿರಲಿ ಧಾರಣೆಯೋಕಪ್ಪತ್ತು ಹಣವು ಹಾಗಕೆ ತಪ್ಪದೆಯೆನ್ನೆಂದು ಪೇಳು (ಶಿಶ್ನ. ೬–೦೯) ; ಜಗದೀಶ ಚಂದ್ರನು . . . ಒಂದು ಪೈಯನ್ನೂ ತೆಗೆದುಕೊಳ್ಳದೆ, ಶ್ರದ್ಧಾಸಕ್ತಿಯಿಂದ ತನ್ನ ಕೆಲಸವನ್ನು ನಿರ್ವಹಿಸಿಕೊಂಡು ಹೋದನು (ಜ್ಞಾ. ೪. ೯೬). ೩. ಈಗ ಚಲಾವಣೆಯಲ್ಲಿರುವ ರೂಪಾಯಿಯ ಮೂರನೆಯ ಒಂದು ಭಾಗ: ಒಂದು ಪೈಯನ್ನು ಖರ್ಚು ಮಾಡಲೂ ಹಿಂದುಮುಂದು ನೋಡುವ ಸ್ವಭಾವ ಅವರದು (ಆಡು).

[ ←ಮರಾ. ಪೈ. / ಪ್ರಾ. ಪಾಯ. / ಸಂ. ಪಾದ ]

**ಪಾಯಿ**, (ನಾ). ಮೊಳಕೆ : ಬೀಜದ ಚಿಳ್ಳಿಳ್ಳಿಯ ಹಿಳುಕುಗಳನ್ನು ಸೀಳಿದರೆ ಮೊಳಕೆ ಬಂದಿರುವುದು ಚೆನ್ನಾಗಿ ಕಾಣಿಸುತ್ತದೆ. ಅಂತಹ ಪಾಯಿಗಳನ್ನು ೪–೫ ಅಂಗುಲ ದೂರಕ್ಕೊಂದಿರುವಂತೆ ನೆಡಬೇಕು (ಅಡಿ. ೩೬). [?].

**ಪಾಯಿಂಟ್** 'ಪಾಯಿಂಟು' ನೋ.

**ಪಾಯಿಂಟು**, ಪಯಿಂಟು, ಪಾಯಿಂಟ್, ಪೈಂಟು (ನಾ). ೧. ವಿಷಯ; ಅಂಶ : ಈ ಕೆಳಗೆ ವಿವರಿಸಿರುವ ಪಾಯಿಂಟುಗಳನ್ನು ವಿಚಾರಿಸಿ ಅವುಗಳನ್ನು ನೋಟು ಮಾಡಿಕೊಳ್ಳಬೇಕು (ಗ್ರಾಮಸಾ. ೩೬); ಇಲ್ಲಿರೋ ಪಾಯಿಂಟನ್ನೆ ನೋಡು (ಎಮ್ಮೆ. ೩೯). **ಪಯಿಂಟು** : ೧. ನನಗೂ ನಿಮ್ಮ ಪಯಿಂಟು ಸಮನೆಂದೇ ಕಾಣಿಸುತ್ತದೆ (ಕುಹೀಕ. ೨೨೦). **ಪಾಯಿಂಟ್** : ೨. ಮುದ್ರಣದಲ್ಲಿ ಅಚ್ಚಿನ ಮೊಳೆಗಳ ಅಳತೆಯ ಒಂದು ಮಾನ : ಅಚ್ಚುಮೊಳೆಗಳ ತಯಾರಿಕೆ ಮತ್ತು ಇತರ ಕೆಲವು ಮುದ್ರಣಕ್ಷೇತ್ರಗಳಲ್ಲಿ ಪಾಯಿಂಟ್ ಎಂಬ ಕ್ರಮಬದ್ಧ ಅಳತೆಯು ಬಳಕೆಯಲ್ಲಿದೆ. ಪಾಯಿಂಟ್ ಎಂದರೆ ೧/೭೨ ಅಂಗುಲ (ಮುದ್ರಣ. ೦೨). **ಪೈಂಟು** : ೧. ಹೌದು ಅಮ್ಮ, ನೀವೆನ್ನುವ ಪೈಂಟು ಸಮ (ಕೃಷ್ಣಹೂ. ೯೧). [← ಇಂ. Point]

**ಪಾಯಿಕ** (ನಾ). ಕಾಲಾಳು ; ಪದಾತಿ. [ಸಂ.]

**ಪಾಯಿಕು** 'ಪಾಯ್ಕು' ನೋ.

**ಪಾಯಿಖಾನೆ** 'ಪಾಯಖಾನೆ' ನೋ.

**ಪಾಯಿಜಾಮ** 'ಪಾಯಜಾಮ' ನೋ.

**ಪಾಯಿಜಾಮೆ** 'ಪಾಯಜಾಮ' ನೋ.

**ಪಾಯಿತರ್** 'ಪಾಯ್ತರ್' ನೋ.

**ಪಾಯಿದಳ** 'ಪಾಯದಳ' ನೋ.

**ಪಾಯಿದಟ** 'ಪಾಯದಟ' ನೋ.

**ಪಾಯಿದೆ** 'ಫಾಯಿದೆ' ನೋ.

**ಪಾಯಿನಿ** (ನಾ). ಒಂದು ಬಗೆಯ ತಂತೀವಾದ್ಯ : ವಿಪಂಚಿ ಚಿತ್ರಿಕೆ . . . ಪಾಯಿನೀ ರಾಗವಾಲಿನೀ ಕಾಲಕೀಯೆಂಬ ಮೂವತ್ತುಮೂಱು ತಂತ್ರಿ ವಾದ್ಯಂಗಳಲ್ಲಿ (ಶಿವತ. ೨೩೬). [ ? ]

**ಪಾಯಿಪೋಸು** 'ಪಾಪೋಸು' ನೋ.

**ಪಾಯಿಲಿ** 'ಪಾಯಲಿ' ನೋ.

**ಪಾಯಿಲೆ** 'ಪಾಯಲಿ' ನೋ.

**ಪಾಯಿವಟ್ಟ** 'ಪಾಯವಟ್ಟ' ನೋ.

**ಪಾಯಿಸು**, ಪಾಯ್ಸು, ಹಾಯಿಸು, ಹಾಯ್ಸು, ಹಾಸು (ಕ್ರಿ). ೧. ಹಾರುವಂತೆ ಮಾಡು ; ನೆಗೆಯುವಂತೆ ಮಾಡು : (*). ೨. ಹರಿಯುವಂತೆ ಮಾಡು ; ಪ್ರವಹಿಸುವಂತೆ ಮಾಡು : (*). ೩. ದಾಟುವಂತೆ ಮಾಡು ; ದಾಟಿಸು : ತೊಱೆಯ ತಡಿಯೊಳ್ ತಾಱು ನಡೆಯಿಸುವ ಮತ್ಸ್ಯಗಂಧಿಯಂ ಕಂಡಮ್ಮನೀ ತೊಱೆಯಂ ಪಾಯಿಸೆಯಾದಮಂ (ಶಂತಕಂ. ೦–೬೮ ಕ) , ಮುನಿಯ ಮಸಃವಂ ಪಲ್ಲಿ ಸಲ್ಯನ್ಯಬ್ಬೇಶ್ವರನು ಹಿಮ್ಮಾದ್ರಿಯಂ ಪಾಯಿಸ(ಲ) (ಲಾ?) ದರಿಸುಪಂ . . . ಬಂಧರಾವಂ (ಕಲಂ. ೬–೬) . ೪. ಮೇಲೆ ಬೀಳುವಂತೆ ಮಾಡು ; ನುಗ್ಗಿಸು : ಹೆಸ್ಗಾರ ಸಮರದೊಳ್ ಮುರಾರಿ ಮಾರನಾಗಿ ಗುದುರೆಯ ಪಾಯಿಸಿ ಕಾಸ್ತ್ರಯನಿಱಿದು (ಎಕ. III. ಶಂಕರ. ೦೨೨–೦೫ ; ಸು. ೨೬೮ ?) ; ಮಂಜು ಪುಸಿದಿಪನಿಂತ ಪಾಯಿಸಿದನಿನ್ಹ ನೊಳಾದಿನರೇಂದ್ರರ್ರೆಲ್ಲರಂ, (ಶಂಕರಾ. ೩–೬೨) ; ನೂಂಕುವಿಭಸಂತತಿ ಪಾಯಿಸುವಶ್ವವೃಂದಮರ್ಬಿಸೆ ಕವಿತರ್ಪರಾತಿಚತುರಂಗಪತಾಕಿನಿಯಂ ಮುಕುಂದನೀಕ್ಷಿಸಿ ಮುಳಿದೆಚ್ಚನಾ ಪಡೆಗೆ ಮಾರ್ಪಡೆಯಂ (ಜಗ೦. ೦೪–೯೯);

೫. ಒಳಗಾಗುವಂತೆ ಮಾಡು ; ಒಳಗಾಗಿಸು : ಲೇಸಲ್ಲದ ಸುಖಕ್ಕೆ ಪಾಯಿಸಿ ನೋಯಿಸುವಿಂದ್ರಿಯಂಗಳುಮಂ (ರಾಮಾಶ್ವ. ೯-೨೩). ೬. ಹೋಗುವಂತೆ ಮಾಡು; ಚಲಿಸುವಂತೆ ಮಾಡು; ಮುನ್ನಡೆಸು : ಪೊಳೆವ ಬಾಳುಕ್ಕಂಗಳು ಪೋಲೆ ಪಾಯಿಸಲೆಂದಿರ್ದಳಿದಂ ಪೊದಟ್ಟಿಸೆಯೆ ಚಕ್ರಾರಾಮ (ಆದಿಪು. ೧೪-೧೧೧); ಬಿಲಗಸೆ ತೀವಿಕೊಂಡು ಕುಡಿಯರ್ ಮೊಗೆಯಲ್ ಕೊಡಗೊಂಡು ತಿರ್ದಿ ಬಚ್ಚಲ ಪರಿನೀರಿನೊಳ್ ಪರಿಯ ಲೋಳಿಯಿಸಲ್ ಪಜ್ಜೆಗೋಲನಿಕ್ಕಿ ಪಾಯಿಸಲ್ [ ಪಾಠಾಂ. ಪಾಯ್ಸಲೆ ] ನೆಲೆಯೆಂದು . . . ಜಗದುದಂಬು ಜನಂ ಘನಚಂದ್ರಿಕಾಂಬುವಂ (ಅಜಿತ ೬-೯೩). ಪಾಯ್ಸು : ೪. ಭೀಮಯ್ಯನ ಮಗಂ ಪೆರ್ಗ್ಗಡೆ ಬೆಣಾಯ್ಯಂ ಗಂಗರಾಣಿಯ ಕಂಭಸ್ಥಳಕ್ಕೆ ಕುದುರೆಯಂ ಪಾಯ್ಸಿ ಸತ್ತೊಡೆ (ಎಕ. XII, ತುಮ್ಕೂರ್. ೭೦-೯; ಸು. ೧೨೧೦). ೬. ಸೇರಿಸಿಕೊಳ್ಳು ; ಕೂಡಿಸಿಕೊಳ್ಳು : ವದನಂ ಗೆಲವಿಂ ವಿಧುಬಿಂಬದ ಕಳೆಗಳನೊಳಗೆ ಪಾಯ್ಸಿಕೊಂಡುದೆನಲ್ ಕುಂದದ ಕಾಂತಿಯಿನಾ ಕಾಂತೆಯ ರದನಾವಳಿಯೀಂ ಕರಂ ತಳತ್ತಳಿಸಿದುದೋ (ಧರ್ಮಾಮೃ. ೬-೯೬). ಹಾಯಿಸು : ೨. ಆ ಉಪೇಂದ್ರಂಗಾದ ಶೇಷಶಯನೀ ವಿಧಾತ್ರನು ಧರೆಗೆ ಹಾಯಿಸಲೀ ವಿಧದಿ ದಧಿ ಕಡಲು ಪುಟ್ಟಿದುದು (ಸಂಚಿತ. ೬-೧೧) : ನೆಟ್ಟ ಬೀಜಕ್ಕಾಗಲಿ ಪೈರಿಗಾಗಲಿ ನೀರು ಹಾಯಿಸಬೇಕು (ಕರಿಶ. ೬೬); ಬುದ್ಧಿವಂತರಮನುಷ್ಯ ಕಾಲುವೆ ತೋಡಿ, ಗದ್ದೆ ತೋಟಗಳಿಗೆ ನೀರು ಹಾಯಿಸಿ ಗಿಡ ಮರಗಳನ್ನು ಬೆಳೆಯಿಸುತ್ತಾ ಬಂದ (ಪಶು. ೪). ೩. ನಾನೀ ಹೊಳೆಯಂ ತಂದು ಅಂಬಿಗನ ಕೇಳಿದರೆ ನಾ ನಿನ್ನ ಹಾಯಿಸಿಕೊಟ್ಟೆಹೆನೆಂದನು (ಕೊನ್ನ.ಸಂ. ೦೨೭-೬೬) ; ತೊರೆಯುರಿರೆಮಾ . . . ಹೊತ್ತ ಹಿಂಗಿಸಿ ಹಾಯಿಸನ್ನ (ಗೀರ್ವಾ. ೩೩-೦೩) ; ಒಕ್ಕಲಿಗನು . . . ದನಗಳನ್ನು ಬಿಟ್ಟು, ಹೊಡೆದು ಕಿಚ್ಚು ಹಾಯಿಸುವನು (ಕನ್ನತಾ. ೦೬೬). ೪. ಈಯೊಳ್ಳಿಗನನೆಡಕಿಕ್ಕಿ ಹಾಯಿಸು ಕಲ್ಲೆಯುಲಿ ಮೂರಿನೊಳು ನಡೆ ಭೂಪತಿಯು ಸಮ್ಮುಖಕೆ (ಕುಮಾರವ್ಯಾ. ೨-೩೪); ಹೀಗೆ ತಾವೇ ಮೋಟಾರು ಹಾಯಿಸಿ ಕೊಲ್ಲುವವರಾದರೆ ನಮ್ಮ ಕಾಪಲುಯಾರುತಕ್ಕೆ ? (ಶ್ರೀ ಪಠ. ೬೬). ೮. ಬರುವಂತೆ ಮಾಡು : ತರು : ಆ ದಿವಸದ ಕನ್ನಡಕವಿಗಳೆಲ್ಲ . . . ಭಾರತದ ಇತರ ಭಾಷೆಗಳ ಸಾರವನ್ನು ಕನ್ನಡಕ್ಕೆ ಹಾಯಿಸಿದವರು (ರಾಷ್ಟ್ರ. ೯೩). ಹಾಯ್ಸು : ೪. ಪುಂಗಡೆಗೆ ಪ್ರಾಪ್ತರಾ ಮಾತಂಗವಂ ತವೆ ಹಾಯ್ಸಿ ನೋಡುತ ಲಿಂಗಲಂಭನ ಬರವಿಗವರುಗಳಡ್ಡಗಟ್ಟಿರಲು (ಬಸವ. ೨೦-೩೯) ; ಹಾಯ್ಸು ರಥವನು ಭೀಮಸೇನನ ರಥದ ಮುಂಗುಡಿಗೆ (ಕುಮಾರವ್ಯಾ. ೨೨-೨೩). ಹಾಸ್ಸು : ೯. ದಾಟು ; ಹೋಗು : ಆನೆ ಹುಬ್ಬುಗುಟಿಕ್ಕಿದಳು. ಕಾವಲುಗಾರನ ಮೇಲೆ ಹಾಸಿ ಹೋಯಿತು (ಜನಪದ. ೩೯). [ಪಾಯ್₁ + -ಇಸು]

**ಪಾಯು** (ನಾ). ಐದು ಕರ್ಮೇಂದ್ರಿಯಗಳಲ್ಲಿ ಒಂದು ; ನವದ್ವಾರಗಳಲ್ಲಿ ಒಂದು ; ಮಲದ್ವಾರ : ಗುದ : "ಗುದಃ, ಪಾಯುಃ, ಅಪಾನಂ—ಈ ೩ ಗುದ" (ಹಲಾಯು. ೩೩-೩೩೯) ; ಎಳೆಸಿಯಕಿಗಳಿಗೆ ಪಾಯು ಮೇಢ್ರ ಯೋನಿಯು ಉದಯಿಸುಗು (ಅಶಾಂ. ೩೯-೩೩) ; ಪ್ರಾಣ ಮಾರಾಂಶು ನಾಸಿಕಂ ಗಂಧ ಪಾಯುಗಳೈದು ಭೂಮಿಪಂಚಕವೆನಿಪವು (ಪಂಚಕೃ. ೬-೩-೦೩) ; ವಾಕ್, ಪಾಣಿ, ಪಾದ, ಪಾಯು, ಉಪಸ್ಥ—ಈ ಐದು ಕರ್ಮೇಂದ್ರಿಯಗಳು (ಶಿಂಚಿ. ೨೩೬). [ಸಂ.]

**ಪಾಯ್ಸು₁**, ಹಾಸು, ಹಾಯಿಸು, ಹಾಯಿಸ್ಕು, ಹಾಯ್ಸು (ಕ್ರಿ). ೧. ಕಳಚು ; ತೆಗೆ ; ಬಿಚ್ಚು : ಅವರ್ . . . ಅಸಗವೊಳಗೆ ಬಂದು ತಮ್ಮ ತಮ್ಮ ಸೀರೆಗಳಂ ಪಾಯ್ಸಲ್ಕಾ ತಿಜುಕಾಜುಪಿತೊಡಂ ಹನಾದವನುತ್ತೃಪಂ ನಿರ್ಮಳಪಾಪ್ತಂತೊಗೆಯುಬುದ್ಯುಕ್ತನಾದಂ (ಕೃತಿಕ. ೩೩-೯೬) ; ಹಿಡಿದ ವಿವಿಧವಸ್ತ್ರಂಗಳಂ ಪಾಯ್ಸಿ ಪೊಸತಾದ ವಸ್ತ್ರವನಲಂಕರಿಸಿಕೊಂಬಂದದಿಂ ಕರ್ಮದಿಂ ದಗ್ಧದೇಹವನೆ ಬಿಟ್ಟು (ಪಂಚಕೃ. ೬-೬-೩೩). ಹಾಕು : ೨. ಇಡು ; ಇರಿಸು : ಅಸುವಿಲ್ಲದಂಶಿರ್ದೊಡವು ಸತ್ತುವೆಂದು ಭಾವಿಸಿ ಬಿಡದೆ ನೆಲಕೆ ಹಾಕದ ಮಾಣಂ (ಸಮ್ಯ. ೨-೬೬) : ನಾನು ಅವರ ಮನೆಗೆ ಕಾಲು ಹಾಕುವುದಿಲ್ಲ (ಆಡು). ೩. ಧರಿಸು ; ತೊಡು ; ಬೇಸಗೆಯಲ್ಲಿ ಹತ್ತಿಬಟ್ಟೆ ಹಾಕಬೇಕು (ಆಡು). ೪. ಸ್ಥಾಪಿಸು : 'ಅಂಗಡಿ ಹಾಕು' ಪರಾ. ೫. ನೆಡು ; ಬಿತ್ತನೆ ಮಾಡು : ನಮ್ಮ ಮನೆಯ ಮುಂದೆ ಒಂದು ಮಲ್ಲಿಗೆಯ ಬಳ್ಳಿಯನ್ನು ಹಾಕಿದ್ದೇನೆ (ಆಡು). ೬. ಸುರಿ ; ಹೊಯ್ಯು ; ಎರೆ : ಗಿಡಗಳಿಗೆ ದಿನಾಲು ನೀರು ಹಾಕಬೇಕು (ಆಡು). ೭. ತೂರು ; ಎಸೆ ; ಬಿಸುಡು : ಒಚಲು ದಿಟವೆಂದಡೆ ಅದು ಒಡೆಯಹಾಕುವ ಕುಂಭ (ಕೋಟಿಶಿ. ೩-೦೩); ಉದಿತದಿನೇಶನೆಂಬ ಮಣಿಕಂದುಕಮಂ ಧರೆಯೆಂಬ ಕಾಂತೆ ತನ್ನುದಯಗಿರೀಂದ್ರಮೆಂಬ ಕರದಿಂದದು ಹಾಕಿ ತದಪ್ರಶೈಲವೆಂಬೊದವಿದ ಹಸ್ತದಿಂದೆ ಪಿಡಿವಲ್ಲಿ ಪುರಾಂಗನೆ ಮಧ್ಯದೊಳ್ ವಿನೋದದೆ ಪಿಡಿಯಲ್ಕದಂ ಕರತುನೆತ್ತಿದಪ್ಪೊಲ್ ಮೆಚ್ಚಿಗುಂ ನೃಪಾಲಯಂ (ಜಾತಕ. ೦-೦೩೩). ೮. ಪ್ರಸವಿಸು ; ಈಯು : ಅಪತೋಕಾ, ಸ್ರವದ್ಗರ್ಭಾ— ೨ . . . ಕಂಡು ಹಾಕಿದ ಹಸುವು (ಶಿಂಚಿ. ೨೯೯) ; ಈ ದಿನ ನಮ್ಮ ಮನೆಯ ಹಸು ಕರು ಹಾಕಿತು (ಆಡು). ೯. ಗುರುತಿಸು ; ರೇಖಿಸು ಬರೆ : ಈ ಚಿತ್ರದಲ್ಲಿ ಹಾಕಿರುವ ಗೆರೆಗಳು ಕಂಡೂ ಕಾಣದಂತಿವೆ (ಆಡು). ೧೦. ಆರಂಭಿಸು ; ತೊಡಗು : 'ಕೈಹಾಕು' ಪರಾ. ೧೧. ತೊಡಗಿಸು ; ವಿನಿಯೋಗಿಸು : ದ್ರವ್ಯ ಗಳಿಸುವುದಕ್ಕೆ ಎಂದಿಗೂ ಮನಸು ಹಾಕುತ್ತಿದ್ದಿಲ್ಲ (ಕುಂಬಾರಯ. ೩-೨೦೩); ಈ ವ್ಯಾಪಾರಕ್ಕೆ ಬಂಡವಾಳವನ್ನು ಹಾಕುವುದೇ ತುಂಬಾ ಕಷ್ಟದ ಕೆಲಸ (ಆಡು). ೧೨. ಸೇರಿಸು : ನಮ್ಮ ಹುಡುಗನನ್ನು ಸ್ಕೂಲಿಗೆ ಹಾಕಬೇಕು (ಆಡು). ೧೩. ನೀಡು ; ಬಡಿಸು : ನೂಕುವವನು ಹಾಕನು, ಬೋಕಿಯುವನು ಕೊಡನು (ಗಾದೆ) ; ನನಗೆ ಊಟ ಹಾಕು (ಆಡು). ೧೪. ಹೊಡೆ ; ಪೆಟ್ಟುಕೊಡು ; ಬಡಿ : ಅವನಿಗೆ ಎರಡು ಹಾಕು (ಆಡು). ೧೫. ಮಾಡು ; ರಚಿಸು : ಜಂಗಮವು ಬೇಡಿದಡೆ ಹೊಸ ವಸ್ತ್ರಂಗಳನೆ ಕೊಡುವಂ ನಿರಂತರ ಲಿಂಗಸಂಪದವೊದಗಿ ಹಾಕಿದ ಸೀರೆಗಳನರ್ಗೆ (ಬಸವ. ೨೦-೩೩) ; ಶ್ರೀಮಂತರು ಕರಿಯಪ್ಪಗಳ ಸಿಸ್ತ ತಮ್ಮಯುನು ಮಾತಾಪಿತೃಗಳಿಗೆ ಪುಣ್ಯವಾಗಲಿಯೆಂದು ಹಾಕಿದ ಬನಕ್ಕೆ ಮಂಗಳ (ಕೃ… ೦೯೨೯, ೨೬-೯; ೪). ೧೬. ತ್ಯಜಿಸು ; ತೊರೆ : ಆ ಕಲ್ಪದೊಳಗುಳ್ಳನೇಕಸುಖಂಗಳ ಸಾಕಲ್ಯಮಾಗನುಭವಿಸಿ ನಾಕೋದ್ಭವನು ನಿಜಾಯುವಿನಂತ್ಯದೊಳ್ ಹಾಕಿದ ನಿಜದೇಹವನು (ಅಂಚಿಕ. ೯-೨೩೯). ೧೭. ಹಚ್ಚು ; ಲೇಪಿಸು : ಎಣ್ಣೆ ಹಾಕಿದರೆ ಕಣ್ಣಿಗೆ ಗುಣ, ಮಣ್ಣು ಹಾಕಿದರೆ ಬಾಡಕ್ಕೆ ಗುಣ (ಗಾದೆ). ೧೮. ಹೇರು ; ಹೊರಿಸು : ನಿಶ್ಚಯಿಸಿದ ದರದಂತೆ ಅಡತಿ ಮಜೂರಿ ಮುಂತಾದುವುಗಳನ್ನು ಹಾಕಲು ತೊಂದರೆಯಾದೀತು (ಕುಂಬಾರ. ೪). ೧೯. ಹಾಸು : ಹೊಸ ಕೂಟವಜೀತು ಹಾಸಿಗೆಯನು ಹಾಕುವ ಶಿಶುವು ಏನೆ ಅವ್ವ (ಕೊಂಡ. ೨-೩೩-೩). ೨೦. ಒಟ್ಟು ; ಗಿಡಿ : ಆಳಿಯರ್ ಬೀಸುವ ಚಮರಾಲವಟ್ಟತಣ್ಣಾಳಿಯಿಂದವಳೊಡಲ್ಗಿಚ್ಚು ತಾಳಿಯ ಹಾಕಿ ಪೆರ್ಮೊಳಗೊಂಡ ತೆಜದಿ ಭಡಾಳಿಸಿತುಷ್ಣ ಸಂಘಟಿಸಿ (ಪ್ರಭು. ೨೬-೬೨). ಹಾಯಿಕು : ೧. ಘಾಯವಡೆದಾನೆಗಳು ಗುಳವನು ಹಾಯಿಕಲು ನೆಲಕುರುಳಿದವು ವಾನಾಯುಜಂಗಳು ಬಿಗುಹ ಬಡೆ ದೊಪ್ಪೆಂದವಾಜಿಯಲಿ (ಕುಮಾರವ್ಯಾ. ೩-೪). ೬. ಪುಳಕದಲ ಪುಬ್ಬರಿಸೆ ಕುಸುಮಾಂಜಲಿಯನಂಘ್ರಿದ್ವಯಕೆ ಘಾಯಿಕಿ ನಮಿಪವ

ವೈರಿಯಾಕ್ಕಿದನು (ಶಂಖ್ಯಾ.ಶ. ೬-೨೦). ೭. ಖಡುಗ ಕೋಂತವ ನಭಕೆ ಹಾಯಿಕಿ ಹಿಡಿವ ಸುಭಟರ ಭುಜವ ಹೊಯ್ಲಿನ ಕಡುಮುಸದ ರಣದವಕಿಗರ ಸೌರಂಭ ರಂಜಿಸಿತು (ಶಂಖ್ಯಾ.ದ್ರೋ. ೯-೨೬) ; ಇಡುವ ಡೇಂಕಣಿ ಹಾಯಿಕುವ ಗುಂಡು ಮೇಲಾಜ್ ಕಿಡಹುವ ತೊಲೆ ಪಕ್ಷಿದವರ ಬಡಿವ ಬಲ್ಲುಗಿಗೆ (ಶಂಖಾಶಾಂ. ೬೬-೩೩) : ಶಂದು ನಾ ಬಡಕುಮಾರಕನನು ಕಡಲೊಳ ಗಂದೆ ಹಾಯಿಕಿ ಮರ್ದಿಸಿದೆ (ಕೋಹಕ. ೦೨-೫). ೧೬. ಈ ದುರಾಗ್ರಹ ನಿಲಲಿ ಹಾಯಿಕು ಕೈದುವನು (ಶಂಖ್ಯಾ.ದ್ರೋ. ೦೬-೩೪). ೨೧. ಬೀಸು : ಸಿಲುಕಿದನು ಫಡ ಸ್ವಾಮಿದ್ರೋಹಿಗೆ ಬಲಿಯ ಹಾಯಿಕೊ ಗಂಡು ಮಿನಗ್ಗಳೆಯ ಗಾನವ ಕೊಳ್ಳವೆನುತ್ತೊಕಿದರು ಬಳಸಿನಲಿ (ಶಂಖ್ಯಾ.ಶ. ೦೪-೧೪). ೨೨. ಕೆಡೆಯಿಸು ; ಬೀಳಿಸು : ಬಲುಕಣಗಳಿವದಿರಸು ಕರಿ ಮುಂಕೋಳಿಸಿ ಕೆಡಹಿತು ಭುವನಕೌಸಲಬಲವ ಕೈಕೆಯುವಾಗಳಭೂವರ ಕೊಡಹಿ ಹಾಯಿಕಿತು (ಶಂಖ್ಯಾ.ದ್ರೋ. ೩-೨೪). ಹಾಯಿಕ್ಕು : ೨೧. ಮುನಿ ಹಾಯಿಕ್ಕಿದನರಾ ಬಲೆಯನಕಟಾ ಸಿಕ್ಕಿದಿರಲಾ ಸ್ವಾಮಿದ್ರೋಹರು (ಶಂಖ್ಯಾ.ಶ. ೨-೦೪). ಹಾಯ್ಯು : ೨. ಹೃದಯವಲ್ಲಭ ಓಬ್ಬಡಿಯ ಮಧ್ಯದಲಿ ಉದ್ದಿನ ಬೀಜವನು ಹಾಯ್ಯುವಡೆ ಬೀಳ್ವುದೊತ್ತು ತಳುವಿಂತನಿತು ಮಾತ್ರದಲಿ . . . ಶಿವನಂ ಕೀರ್ತಿಸಾ (ಬಸಪು. ೧೨-೩೫) : ಗಗನದಲಿ ರಥ ಯೋಜನಾಂತಕೆ ಜಿಗಿದು ಧರಣಿಯ ಮೇಲೆ ಬೀಳಲು ನಗುತ ಕರಣವ ಹಾಯ್ಯು ಮುಂಡಿಯೊಳಿರ್ದನಾ ದ್ರೋಣ (ಶಂಖ್ಯಾ.ದ್ರೋ. ೦೩-೦೪). ೩. ಒಮ್ಮಾರು ಕೇಶಪಾಶವ ಮಾಡಿ ತ್ರಿಭಾಗೆಯ ಘಮ್ಮನೆ ನಿಡುಜಡೆವೆಣೆದು ಕಮ್ಮಲರ್ಗಳ ಸೂಡಿ ಸಿರಿಮುಡಿಯಲಿ ವೀರಚಿಮ್ಮುರಿಯನು ಹಾಯ್ಯಿದನು (ಕೋಹಕ. ೩೩-೩೪) : ತಲೆಗಳ ಕೋದು ಕೊರಳೊಳಗೆ ಹಾಯ್ಯಿ . . . ವೆರ್ಮರುಳೊಂದಿರುತ್ತಿರಲ್ ಕಂಡು ಭಯಭಕ್ತಿಯಿಂ ಚರಣಕೆಜಗಿದುದೋಂಗು ಪುಲ್ಲರುಳ್ (ಕಬಪು. ೧೦-೨೬). ೪. ವೈಶ್ಯಕುಲಸಂಭವರು ಹಾಯ್ಯುನರಲ್ಲಿ [ ಪಾಠಾಂ. ಹೊಯಿಸಿದರು ] ಗೂಡಾರವನು (ಶಕಕ. ೫-೪೪). ೭. ಸದಮಲ ಭರಿಕೈಯೊಳಗೆ ಈರೇಳುಭುವನವನು ಒದಜ್ ಹಾಯ್ಯಿ ತಾನೆ ನಿಂದುದರಾ (ಕಕ್ಕಕ. ೪. ೩೧೬-೦೩೬) : ಪಾಕವೆಲ್ಲವಸಕ್ಕಟ ವ್ಯಥಾಪಾಟವಂ ಮಾಡಿದನಿವಂ ನಮಗೇಕೆನುತ್ತವೆ ತನಯನಂ ಕೊಂದೆಳೆದು ಹಾಯ್ಯಿದಳು (ಬಸಪು. ೨೫-೩೫) ; ಕಲಿಭೀಮಂ . . . ಶರ ಧನುವ ಹಾಯ್ಯಿದನಾ ಧೊಪ್ಪನೆ ಧರೆಗೆ ಧುಮ್ಮಿಕ್ಕಿದನು (ಶಂಖ್ಯಾ.ಶ. ೦೨-೨೬) ; ಹೆಗ್ಗರಿಯೊಂದ ಕಿತ್ತಿತ್ತಿ . . . ತಂದನು ಗಂಡುಗಲಿ ಹಾಯ್ಯಿದರೆ ಮುಳುಗಿತು ತಳದ ಪರಿಯಂತ (ಕೌಕಾ. ೦೬-೭) ; ಕರ್ಮುರಂಗವಹಾಗಿರ್ದ ಪಿಂಡವಂ ತೆಗೆದು ಮಡುವಿನೊಳೆ ಹಾಯ್ಯಿಂದೊದುದ್ದಂಡದಿಂದೆತ್ತಿ ಬೀದಿಗೆ ಬಿಸುಡಲ್ (ಕೈಬಾಶಾ. ೦೨-೩೦). ೨೧. ಹತ್ತಿ ಶದ್ರಿಗಿರಿಶಿಖರವನು ಮಾರವೊತ್ತಿದಲಿ ಬಲೆಗಳನು ಹಾಯ್ಯಿದರೊತ್ತಿ ಸೋಹಿದರು (ಕಕತ. ೨-೦೩). ೨೨. ಭುಜಗ ಸಮೂಹವ ಖಗರಾಜ ಹೊಕ್ಕಂತೆ ಕುಜನರ ಕುಟ್ಟಿ ಹಾಯ್ಯಿನನು (ಕೋಹಕ. ೩೩.೨೦). ೨೩. ತೊಡಿಸು ; ರಂತಿಗಳ ಹೆಗಲಲಿ ನಿಡುನೊಗನ ಟಟ್ಟಿದರು ಕಿವಿಯಲಿ ಕಿಬ್ಬಿಗಳ ಸರಿಸಿ ಹಿಡಿವ ಗುಳವನು ಹಾಯ್ಯಿ ಬೀಸಿದರೊಡನೊಡನೆ ಹಕ್ಕರಿಕೆ ಜೋ... ಗಾಲಿಯ ಜಗಿದು (ಶಂಖ್ಯಾ.ದ್ರೋ. ೬-೪೪) : ಸ್ಮರ ನಿವಹದಲಿ ನೀ ಹಾಯ್ಯು ಮಾನವಿದ್ದವನ ಕೊರಳಿಗೆನುತ್ತ ಕೊಟ್ಟನು ಪುಷ್ಪಮಾಲಿಕೆಯ (ಕಕತ. ೩-೩೭) ; ಅಂಗಲಾಚುತ್ತಿವನ ಹಾಯ್ಯಿಂದೆಗಳ್ . . . ಅಳುತಿರೆ ಚಿಕ್ಕಲಿಂಗಣ್ಣನಾ ಲಿಂಗವಂ ಕಂಡು ತಂದವನ ಕೊರಲಿಂಗೆ ಹಾಯ್ಯಿ ಜೊತೆನೆ ಲಿಂಗಣ್ಣನಸು ಬರಲ್ (ಕಬಪು. ೬-೨೦). ೨೪. ಕೊಡು : ಕುಡಿತೆಯಿಂ ರಡಜಿಳಿರ್ಘ್ಯಜಲವನು ಹಿಡಿದು ಹಾಯ್ಯುವ ಸಮಯದಲಿ ತಲೆ ನಡುವೆ ಬಿದ್ದುದು ಅರ್ಘ್ಯಜಲ ಸವರನ್ನಮುಯವಾಗಿ (ಶಂಖ್ಯಾ.ದ್ರೋ. ೨೧-೧೩) : ಕುಚದ ವೃತ್ತತೆಯ ಕೊಟ್ಟಳು ಕೋಕಪಕ್ಷಿಗೆ ಲಜ್ಜದ ಭಾರವ ಕೊಟ್ಟು

ನವಿಲ್ಗೆ ವೇಣ್ರನ ಸುಸ್ವರ ತನಗೇಕೆಂದು ಶುಕಪಿಕನಿಚಯಕ್ಕೆ ಹಂಚಿ ಹಾಯ್ಯಿದಳು (ಕೋಹಕ. ೯-೩೦). ೨೫. ಗುರಿಪಡಿಸು ; ಒಳಗಾಗಿಸು : ಕಾಮನ ಸೂನು ಬಾಣನ ಮಗಳಿಗೆ ಹೊಗಲವರ್ ಕಂಡು ವಿಗಡನ ಹಿಡಿದು ಸಂಕಲೆಗೆ ಹಾಯ್ಯಿನರು (ಕೋಹಕ. ೩೬-೩೦). ೨೬. ಉಂಟುಮಾಡು : ತಿವ್ರತೇಜವ ಹಾಯ್ಯಿ ಜನಿಯಿಸಿತಾ ವಿಧಾತ್ರವಿಹಿತವ ತಾಳ್ವುಜ್ಯೆಯಾ ವಸುಂಧರಯೊಳಗೆ ಬಡಬಾನಳವು ಮುನ್ನಹವು (ಸಂಭಕ. ೨೫-೬೨). ೨೭. ಹೊಂದಿಸು ; ಜೋಡಿಸು ; ಅಳವಡಿಸು : ಕಂಯುರ ವಣೆಸಿ ಬಂದು ದೀರ್ಘಶರಾಗ್ರದಿಂ ಒಡಿದು ಭರದೊಳುದ್ದಕೆ ಹಾಯ್ಯಿ ಕೊಂಬುಗಳೆರಡ ನೆಗ್ಗಲು (ಬಸಪು. ೨೨-೦೦) ; ನವಹೆ ಮುಮಂತದ ಹಳವಿಗೆಯ ತಂದಿವಲಗೆಯಲಿ ಹಾಯ್ಯಿದರು ಪನ್ನಗನ (ಶಂಖ್ಯಾ.ದ್ರೋ. ೬.೦೦-೪೦) : ಸೂಸಿದರ್ ಕಂಡಮಂ ಬಲ್ಲವಣೇಲ್ಲಳಂ ಬೀಸಿದರ್ . . . ಬೀರ್ವಗ್ಗವಂ ಹಾಯ್ಯಿ ಸೇದಿದರ್ ಮರುಳ್ವಿಂಗೇಂ ತೂಂತರು (ಕಬಪು. ೧೨-೩೬ ). ೨೮. ಪಕ್ಕಕ್ಕೆ ತಳ್ಳು ; ಸರಿಸು : ಹಿಡಿದ ಬಡುವೊಬ್ಬುಳಿಗೆ ತಹ ಬಲುನೆಡಕೆ ಹಾಯ್ಯುವ ಸುಪ್ರತೀಕಗಜ (ಶಂಖ್ಯಾ.ದ್ರೋ. ೩-೦೦). ೨೯. ಇರಿ ; ತಿವಿ ; ಗುಮ್ಮು : ಹಾವಿನಂತಿರೆ ನಿಲುಕಿದರು ಸೂಕರನವೊಲು ಕೋಡೆತ್ತಿ ಹಾಯ್ಯಿದರು (ಶಂಖ್ಯಾ.ಅ. ೪-೩೫). ೩೦. ಬಿಡು : ರಕ್ಕಸಿಯು ಜೀವವನೊದೆದು ಹಾಯ್ಯು (ಕೊರಾ. ೦-೦೭-೮).

**ಹಾಕಿಕೊಳ್ಳು**=೧. ಧರಿಸು ; ತೊಡು : ಹಬ್ಬದ ದಿನ ಹೊಸಬಟ್ಟೆ ಹಾಕಿಕೊಳ್ಳುವುದರಲ್ಲಿ ಮಕ್ಕಳಿಗೆ ತುಂಬಾ ಉತ್ಸಾಹ (ರೂಢಿ). ೨. ಹೊಂದು ; ವಶಪಡಿಸಿಕೊಳ್ಳು : ಅಣ್ಣನ ಹೆಂಡಿರ ತಮ್ಮ ಹಾಕಿಕೊಂಡು ಕೊಡದಿರಲಾಗಿ ಇದು ಅನ್ಯಾಯವೆಂದು ಅವನ ಕಿಜಲಾಯ ತಮ್ಮ ತಾ ತೆಕ್ಕೊಂಡ (ಶಕಶಾ. ೪. ೧೩೪-೫೮). **ಹಾಕಿಡು** = ಇರಿಸು ; ಇಡು : ನಾಗೊಂದಿಗೆ ಅಥವಾ ಹಲಿಗೆಗಳಲ್ಲಿ ಸಾಮಾನುಗಳನ್ನು ಹಾಕಿಡುವ ಪಾತ್ರೆಗಳನ್ನು ವ್ಯವಸ್ಥಿತವಾಗಿ ಇರಿಸಬೇಕು (ಅಡುಗೆ ೩೨). **ಹಾಕಿಯಾಡು, ಹಾಕ್ಯಾಡು** = **ಹೊಡೆದಾಡು** : ಅವನು ಹಾಗೆ ಹೇಳದರೆ, ನೀನು ತಿರಿಯಾರು ಮಾಡಬೇಕಾಗಿತ್ತು. ಮಹಾರಾಜ ! ನಾನು ಹಾಕಿಯಾಡಿದೆನು. ಆದರೂ ಅವನು ಕೇಳಲಿಲ್ಲ (೬೦೮ಲ. ೦೩೬) : ಗೋಕುಲದೊಳು ಪುಟ್ಟಿ ಅಕಾರವಡಗಿಸಿ ಹೋಕಿತನದಲ್ಲಿ ಹಾಕ್ಯಾಡುತ ಗೊಲ್ಲರ ಕೂಡಲಿ ಬೆಳೆದು (ಕೀರ್ತನೆ. ೨೦-೨) : ಇವು ತಮ್ಮ ಹುಡುಗರಿದೆ ಅಂತ ರಂಗಣ್ಣರಾಯರು, ಅಲ್ಲ, ತಮ್ಮ ಹುಡುಗರವು ಅಂತ ಯಂಕಣ್ಣರಾಯರು ಹಾಕ್ಯಾಡಿದರು (ಕೃಶಾಕ. ೧೫). **ಹಾಕ್ಯಾಟ** = **ಬಡಿದಾಟ** ; **ಗುದ್ದಾಟ** : ಯಾರ ಸಂಗಾಟಾದ್ರೂ ಹಾಕ್ಯಾಟ ಗೀಕ್ಯಾಟ ಆಗೇತೇನು ? (ಕೃಶಾಕೃ. ೯) ; ಮನ್ಯಾಗ ಏನಾರೇ ಹಾಕ್ಯಾಟ ಗೀಕ್ಯಾಟ ಆಗೇತೇನ್ರಿ ? (ಕಂಪಹು. ೨೬).

[ ಪಾಯ ೧ + -ಕು೧ ]

**ಹಾಯ್ಯು**೨, ಪಾಕ್ಕು, ಪಾಯಿಕು, ಪಾಯಿಕು (ನಾ). ಒಳ್ಳೆಯದು, ಭಲೆ ಎಂಬರ್ಥದ ಕೊಂಡಾಟದ ಒಂದು ನುಡಿ: "ಅರರೆ ಧಾಂ ಭಾಪು ಭಳಿರೇ ಧಿರುರೇ ಮಝು ಪೂತುರೆ ಪಾಯ್ಯು [ಪಾಠಾಂ. ಪಾಕು, ಪಾಯಿಕು] ಬಾಗು ಸಲೆ ಸುಂಪ್ರಯೆನೆ ಕೊಂಡಾಟದ ನುಡಿ" (ಚಉಂ. ೯೬) ; ಅನಿಮಿಷಾವಳಿ ಪೂತು ಪಾಯ್ಯನೆ ಹೊಗಳಿದರು ಘಟಿಸು (ಶಂಖ್ಯಾ.ದ್ರೋ. ೬-೩೬) ; ಆಯಿತಿದು ಸಮರದಲಿ ಗುರು ಗಾಂಗೇಯ ಕರ್ಣ ದ್ರೋಣರ ತಜಾಮಾಯ ಲೆಕ್ಕಕೆ ಸಂದನ್ನೆ ಮಝು ಪೂತು ಪಾಯ್ಯೆನುತ (ಶಂಖ್ಯಾ.ಶ. ೨೨-೩೫). **ಹಾಕ್ಕು** : ಮೇಲಿನ 'ಭಾರವಿ' ಪ್ರಯೋಗದ ಪಾಠಾಂತರವನ್ನು ನೋಡಿ. **ಹಾಯಿಕು** : ಸರಿಸ ಸಬಳಿಗೆ ಪೂತು ಪಾಯಲಾಯೆಂಬ ಕಳಕಳಕ . . . ಪಾಸಗಿದುದೊಂದು ಕಡೆಯಲಿ (ಶಂಖ್ಯಾ.ಶ. ೬-೬) ; ಪೂತು ಪಾಯಿಕು ಮಝು ಭಾಪು ಭಲರೆಯೆಂದು ಸೂತಸುತರು ಕೊಂಡಾಡೆ (ಶಂಖಾಶಾಂ. ೦೮-೯೨). **ಹಾಯಿಕು** : ಪೂತು ಪಾಯಿಕು ತತ್ತ ಹೊಕ್ಕಿನೊಳುತ್ತುಕೊಂಬವ

ಕವ್ವೆ ನೊಣಕ್ಕೆ ಹಾರುವಂತೆ ಅವ್ವಾಯನ ಬಿಡದು (ಕುಕಾರೀ. ಬ. ೩೬-೦೩೬); ಮಾವಣ್ಣಗಳಂ ಪೀರ್ವ ಕೀರವಿಟ್ಟಿಯ ಪಣ್ಗೆ ಚಿತ್ರಂ ಹಾರಿದವುದೇ (ಐಕಥೆ. ೦೦-೦೦); ಧಾರುಣಿಯ ಲಂಪಟರು ಕದನವ ಹಾರಿ ಬಂದರು ಗಡ (ಕುವ್ಯಾ.ಕೀ. ೦-೯); ಹಾರಿದ ಸಖಿಯರ ಪೊರೆವಿರಿ ನೀವೊಂದ ಹಾರವಿಲ್ಲದ ಬಲ್ಲೆನೆನ್ನ ಹಾರವಂತೊಪ್ಪದಿ ಬೇಳಿರಂದೊಂದೋದು ಹಾರವ ಹರಸಿಯುಕ್ಕಿದಳು (ಚಿತ. ೩೩-೬೦). ೪. ಹಾರಲತಿಶಯತೃಷ್ಣೆ ನಾಶಕೆ ಕಾರಣವರೇ ಮಾನ (ಕುವ್ಯಾ.ಸ. ೦೩-೩೩); ಅಧರ ಉರುಟತಿ ಮದನಮಂದಿರ ಸದರ ರೋಮಾವಳಿ ಪಿರಿದು ನುಡಿಗಳು ತೊದಳು ಲಜ್ಜೆಯು ಹೀನದ್ವಿಗುಣ ಹಾರಿ ನೋಡೆಂದ (ಕಕೃ.ಕ. ೩-೩೦). [ದೇಶ. ತಮಿ. ಮಲ. ಪಾರ್]

**ಪಾರ್₂** 'ಪಾಱು₁' ನೋ.

**ಪಾರ್₃** 'ಪಾಱು₂' ನೋ.

**ಪಾರ₁** (ನಾ). ೧. ನದಿ, ಸಮುದ್ರ ಮುಂತಾದುವುಗಳ ದಡ,-ತೀರ: "ಪಾರವೆಂಬುದು ತಡಿ". (ಹಲಾಯು. ೦೦೦-೯೩); ಕಣಾದಂಬುಧಿಯ ತೋಳ್ ನೀಡಿ ಸನ್ನೆಗೈದೀಸಿ ಪರಿದೆಡೆಯಾಯ್ತು ರಾಮಂಗೆ, ತನ್ನಾತ್ಮದತಿ ದೂರದಾ ಪಾರದಿಂ (ಕ್ರೀರಾಮಾ. ೦೩೭-೩೯೯); ಪಾರವಿರ್ಪ ಜಲರೂಪ ಸಿಂಧುವಂ ಪೀರಿದಾತನ ಮಹತ್ತ್ವಮೇನೊ ಪೇಳ್ (ಸೀಗಟ್ಟು. ೬೯). ೨. ಎಲ್ಲೆ; ಗಡಿ; ಮೇರೆ; ಸೀಮೆ: ಅಮಿತಮತಿಗುಣನಿತಿ ವಿಕ್ರಮಗುಣದಿಂ ಶಾಸ್ತ್ರಪಾ[ಪಾಠಾಂ. ಶಸ್ತ್ರ ಮಾ]ರಮುಂ ರಿಪುಬಳ[ಪಾ] [ಪಾಠಾಂ. ಮಾ. ಹಾ]ರಮುಮೊಡನೆ ಸಂದುವೆನಿಸಿದನಮೋಘಬಲಶಾಲಿ ಮನುಜಪಾರ್ತಾಂಡನೃಪಂ (ಶಾಶಿರಾ. ೦-೯೩); ಸ್ವಾರಸ್ಯಮಮಿತ ಪಾರಿಗಮಿರದು ಜೀವನದಿ ಪಾರದರ್ಶಿಯ ನೆನೆದು ನಡೆಯಲದು ಸಫಲ (ಮುಂಕುಕ. ೬-೬೬); ಅವರ ಸಂತೋಷಕ್ಕೆ ಪಾರವೇ ಇಲ್ಲ (ಕಿತ್ತೂರ. ೦೦೩). ೩. [ಸಾಂಖ್ಯ] ಒಂಬತ್ತು ಬಗೆಯ ತುಷ್ಟಿಗಳಲ್ಲಿ ಐದನೆಯದು: ಪಾರ ಎಂದರೆ ದ್ರವ್ಯಾರ್ಜನೆ. ಐದನೆಯದು (ಹಿಂಕಾ. ೬೩). [ಸಂ.]

**ಪಾರಂ** (ಅ). ಚೆನ್ನಾಗಿ; ಅತಿಶಯವಾಗಿ: ಆರೂಢವ್ಯಸನಕ್ಕೆಪೋಪ ಯುವರಾಜಾಗ್ರೀಸರಕಥ್ಯಾನದಿಂ . . . ಪಾರಸ್ತೀಗಪಾಸೋತ್ಥವಸ್ತುರಚನಾ ಲಂಕಾರರ್ಸಂಕಾರದಿಂ ಪಾರಂ ಪಟ್ಟಪದಂ ಜನಶ್ರುತಿಪಥಕ್ಕಾಗಿರ್ಪುದಾಹ್ಲಾದನಂ (ಮುಕ್ತಾಕೇ. ೦-೬೬). 'ಪಾರಂತಗುಳ್' ಪರಾ. [<ಪಾರ₁]

**ಪಾರಂಗತ** (ಗು). ೧. ಸಂಪೂರ್ಣವಾಗಿ ತಿಳಿದ; ಸಮಗ್ರವಾಗಿ ಅರಿತ: ಸುಪ್ರಸಿದ್ಧವೈದ್ಯನಾದ ಪಾರಂಗತ ಕಾನ್ಸೀನಾನೂ ಕೂಡ ಕಾಕನ ಸಂಶೋಧನೆಯಿಂದ ಬೆರಗಾಗಿ ಹೋದನು (೭೪ಚಿಸ. ೬೪). (ನಾ). ೨. ಚೆನ್ನಾಗಿ ತಿಳಿದವನು; ನಿಷ್ಣಾತ: ಪಾರಂಗತರಾಗುಂತರಾಳ ದೂರ ಗಳೇನು? ಸ್ವೈರಪಥವಾತ್ರರು (ಮುಂಕುಕ. ೬೯೩); ಆಂಡಯ್ಯನು . . . ತನ್ನ ಕುಲಪರಂಪರೆಗನುಗುಣವಾಗಿ ವಿದ್ಯೆಯಲ್ಲಿ ಪಾರಂಗತನಾದನು (ಪಾಚಿಸ. ೦೦೩). [ಸಂ.]

**ಪಾರಂಗಮತೆ** (ನಾ). ಪೂರ್ಣಪಾಂಡಿತ್ಯ; ಸಂಪೂರ್ಣಜ್ಞಾನ: ಪ್ರಸೇನಜಿತನ ತಂದೆಯು, ಮಗನು ಕಲಿತು ಬಂದ ವಿದ್ಯೆಯ ಪಾರಂಗಮತೆಯನ್ನು ಕಂಡು ಸಂತುಷ್ಟನಾಗಿ, ಅವನಿಗೆ ರಾಜ್ಯದಲ್ಲಿ ಅಭಿಷೇಕ ಮಾಡಿದನು (ಹಿಕ್ಕು.ಕು. ೦೩೯). [ಸಂ. ಪಾರಂಗಮತಾ]

**ಪಾರಂತಗುಳ್** (ಕ್ರಿ). ಎಲ್ಲವನ್ನೂ ಚೆನ್ನಾಗಿ ತಿಳಿ; ಪಾರಂಗತನಾಗು: ಕಾವ್ಯತತ್ತ್ವದಜ್ಞರ್ಪೊಳ್ ಪಾರಂತಗುಳ್ವೆಟ್ಟಿತಂಗುಡುವುದಲ್ಲಂತೊಡಗೂಡುವ . . . ಬರ್ಪಂಗಬಳೆಯುರ್ ಸೋಲ್ವರ್ ಮಹೋತ್ಸಾಹದಿಂ (ಮುಶ್ಕಾಂ. ೦೬-೭). [ಪಾರಂ + ತಗುಳ್₁]

**ಪಾರಂಪರೆ** (ನಾ). ೧. ಕುಲ; ವಂಶ; ಪರಂಪರೆ: ಹುಟ್ಟಿ ಹೊದ್ದದಂತೆ ನಡೆವ ಲಿಗಳಾರಯ್ಯ, ಹೇಳವರ ಪಾರಂಪರೆಗೆ ಸಲೆ ಸಂದ ರಾಜಗುರು ನೀನಜೀಯದವರಿಲ್ಲ (ಹಕಕಾ. ೨-೬); ಅವನಿಗೆ ಇಕ್ಷ್ವಾಕು ಮೊದಲಾದ ಪಾರಂಪರೆ[ಪಾಠಾಂ. ಪರಂಪರಿ, ಪರಂಪರೆ]ಯಿಂದ . . . ಸಲ ಕ್ಷತ್ರಿಯವರ್ಗ ಹಾಗೂ ಸಮಸ್ತ ಸ್ತ್ರೀವರ್ಗ ಜನಿಸಿತ್ತು (ಕೃಕಸೂ. ೧. ೦೩). ೨. ಸಂಪ್ರದಾಯ: ದಶರಥಧರಣಿಪತಿ ರವಿಕುಲದ ಪಾರಂಪರೆಯ ಪರಮಾಪ್ತ ಪ್ರಧಾನರ ಕರೆಸಿ (ತೊರರಾ. ೦.೩-೦).

[<ಪ್ರಾ. ಪಾರಂಪರ. / ಸಂ. ಪಾರಂಪರ್ಯ]

**ಪಾರಂಪರ್ಯ** (ನಾ). ಪರಂಪರೆಯಿಂದ ಬಂದಿರುವುದು; ಸಂಪ್ರದಾಯ; ಆಚಾರ: "ಆಮ್ನಾಯಃ, ಸಂಪ್ರದಾಯಃ, ಪಾರಂಪರ್ಯಂ, ಗುರುಕ್ರಮಃ— ಈ ೪ ಎಡೆವಜಾಯದ ಗುರೂಪದೇಶಂ" (ಕಣಾಹು. ೬೭-೨೯೬); ಅರ್ಧಗದ್ದದ ತೀರ್ಥಪಾರಂಪರ್ಯದಿಂದಂ ಸುರಥಮೆಂಬುದು ನಾಡಲ್ಲಿ ಪಳಭಿಯೆಂಬುದು ಪೊಬಲದನಾಳ್ವೋ ವಜ್ರಪಾಳಂ (ವಡ್ಡಾರಾ. ೯೩-೩); ಅನೇಕ ಶತಮಾನಗಳಿಂದ ಪಾರಂಪರ್ಯವಾಗಿ ನಡೆದು ಬಂದಿರುವ ದೈನ್ಯಭಾವವಿನ್ನೂ ತೊಲಗಿಲ್ಲ (ಅರ್ಚಿತ. ೯೩). [ಸಂ.]

**ಪಾರಂಪರ್ಯೆ** (ನಾ). = ಪಾರಂಪರ್ಯ: "ಮುಂತೆ ಪಾರಂಪರ್ಯ [ಪಾಠಾಂ. ಪರಿಯ]ಸಂಪ್ರದಾಯವೆನಲ್ ನಿರಂತರಂ ಗುರೂಪದೇಶವೆನಿಸ್ಕು" (ಮುಂಗರಾ. ೬೩-೩). [ಸಂ. ಪಾರಂಪರ್ಯ]

**ಪಾರಂಬಿ**, ಪಾರಂಬೆ (ನಾ). ಮರದ ಬೀಳಲು: ಕರುಳಿಗೊಂದು ಹೊಸ ಕರುಳ ಪಾರಂಬಿ ಇಳಿಬಿಟ್ಟು ನೆಲನ ನಿನ್ನದೆ ಮಾಡಿಕೊಂಬಿ (ತಪ್ಪ್ರ. ೬-೬). ಪಾರಂಬೆ: ಬಲಿತ ಬಟತರುಶಾಖೆಯಿಂ ನೇಲಕಿಳಿದ ಪಾರಂಬೆಗಳ ಪೋಲುವ ಬೆಳೆದ ಶ್ಮಶ್ರುಗಳೊಳ್ಳ ಸಟಿವರನತ್ರಿಗಳನು ಕೊಂಡು (ರಕಬಾಂ. ೦೯೯-೬೦). [← ಮರಾ. ಪಾರಂಬೀ, ಪಾರಂಬಾ]

**ಪಾರಂಬೆ** 'ಪಾರಂಬಿ' ನೋ.

**ಪಾರಕ₁** (ಗು). ೧. ಆಚೆಗೆ ಒಯ್ಯುವ; ದಾಟಿಸುವ: ಪಾರುಮಾಡುವ. (ನಾ). ೨. ಆಚೆಗೆ ಒಯ್ಯುವವನು; ದಾಟಿಸುವವನು: ದ್ವಾರ ದ್ವಾರಂಗಳೊಳಗಲದಿಹ ಪಾರಕರ ಬಗೆಗೊಳ್ಳದಂತರ್ದ್ವಾರದಾ ಸಾವಾಸಿಗಳ ವಿಸಾಜುತ್ತ ನಡೆತರಲು (ಚಕೃ. ೬೦-೨೯); ಕಟ್ಟಿದ ಮುಟ್ಟು ಪಟ್ಟೆಯು ಕಾಸೆಯು ಥಟ್ಟಿ ಕಟ್ಟಾಯತನ ಸಿಂಧಿವಾಳ ನಟ್ಟನೆ ಮುಟ್ಟಿಯೆ ಪಾರ[ಪಾಠಾಂ. ರು] ಕರು ಕಣ್ಗೆಸೆದರು ಪಟ್ಟವಾನೆಗಳಂತಲ್ಲಿ (ಕುರಾಸಾ. ೨೭-೬೦). [ಸಂ.]

**ಪಾರಕ₂**, ಪಾರಗ₂ (ನಾ). ೧. ಹರಿಗೆಯನ್ನು ಹಿಡಿದ ಯೋಧ; ಗುರಾಣಿಯನ್ನು ಹಿಡಿದಿರುವ ಸೈನಿಕ (?): ಬಿಜಲಿ ಗಜಮಡೆಗಳ ಕೈಗಳ ಹಣಿಯು ಹೊಯ್ವರು ಪಾರಕರು ಮುಕ್ಕಾಜಕದವೆ ಸಬಳಿಗರು ಕೋದೆ ತ್ರಿಗದಹ ಕರಿಘಟೆಯು (ಕುವ್ಯಾ.ಕ. ೨-೦೬); ಸೀಳ ಬಡಿದನು ಸವಾರಥರ ಪಾಂಚಾಳ ರಾವುತರನು ಮಹಾರಥಮೈಲರನು ಜೋಧರನು ಧಾರಿಯ ಪಾರಕಪ್ರಜವ (ಕುವ್ಯಾ.ಗ. ೯-೩೬). ಪಾರಗ₂: ೨. ಒಂದು ಬಗೆಯ ಆಯುಧ; ಹರಿಗೆ; ಡಾಲು: ಸೀರನಹಡಿದಿರಾಗೆನುತ ಬಹುಭಾರಣದ ಚಮ್ಮಟಿಗ ಖಿಡುಗವ ಪಾರಗವ ಪರಿಣತರು ಹೆಗಲಿದರು (ಕುವ್ಯಾ.ದ್ರೋ. ೦೯-೩); ಚಾರಣದ ಚಮ್ಮಟಿಗ ಖಿಡುಗದ ಪಾರಗಮಬಲ್ಲಿಟದ ಲಾಳಿಯು ಪ್ಯಾರದೊಡ್ಡಿನ ಹೊಯ್ಲು ಹೋರಟೆಗಳ ಸುರೇಟೆಗಳ ಸಾರತರಶ್ರುಮ ರೊರಗಿದರು (ಕುವ್ಯಾ.ಕ. ೦೯-೩೩). [<ಪ್ರಾ. ಫಾರಕ್ಕ ?./ಸಂ. ಸ್ಫಾರಕ ?]

**ಪಾರಕಾವಣೆ** 'ಪಾರಖಾವಣೆ' ನೋ.

**ಪಾರಕು**, ಪಾರಕ್ಕು, ಹಾರಕ, ಹಾರಕು, ಹಾರಕ್ಕಿ, ಹಾರಕ್ಕು (ನಾ). ಒಂದು ಬಗೆಯ ಧಾನ್ಯ: ಪ್ರಥಮದಿವಸದೊಳೆ ಪಾರಕಿನ ಕೂಳುಮಂ ಪರೆದುಂಮುಣ್ಣೆಯುಂಮಾಡಿನಳೆಯುಮಂ ಬಡ್ಡಿಸಿಯೊಡಮನಮ್ಮುತಮು ನುಣ್ಣುತ್ತುಂಡು (ವಡ್ಡಾರಾ. ೬೮-೨೩); ಪಾಂ ತ್ರಿವೊಳು ಪೊಯ್ದು ಪಾರಕಿನಂತೆ ತನ್ನ ಕಾಲದ ತಪಸಂತರದೊಳು ವರ್ಷಸಮೋಹನೀಯತ್ರಯ ದೊಳಾವುದಾನುಮೊಂದುಮುಕ್ಕಿ ಬಕ್ಕುಂ (ಹಕಾರ. ೯೦೦ ೦೨); ಬರಗಳ್ಳು

ಕೋರರ ಪಾರಕಂಪೆರಸಗಸಿ ಕಸುಂಬೆ ಕಬಿವ ನೆರ್ ಸಾವೆಗಳುಂ ತುರಗಶ್ಚಹಿತಂ (ಅಶ್ವಶಾ. ೬-೩೯). **ಪಾರಕ್ಕು :** ಆದರದೆ ಜ್ಯೇಷ್ಠದಪದ ಬೂದಿಯ ಮೃಗಶಿರದೆ(ರಾದಿ) ಕೊಂಡ ಮಬಿಯುಂ ಬೆಳೆಗುಂ ಪೋದಿನಿ ಪೂಜಗಣ(ವರ) ನಾಲ್ಕುಪೊಳಾದೊಡೆ ಪಾರಕ್ಕು ಬರ(ಬ)ಗು ಬೆಳೆಗುಂ ಸ್ವಲ್ಪಂ (ಜಲ್ಪಿಪು. ೬-೦೬೬); ಉಪ್ಪಿಲ್ಲದ ಪಾರಕ್ಕಿನ ಸಪ್ಪಾನೋ ಗರಡೊಳಾಪ್ಪುವೇಜಿದ ಬಿಯುಂ ತಪ್ಪದೆ ಬಲಿಸ್ಕೆ (ಪುಣ್ಯಸ್ರ. ೩-೯೬).
**ಪಾರಕ :** "ಕೋದ್ರವಾಃ ಪಾರಕಂಗಳು" (೬೬೩ಬಾ. ೦೬-೬೦); ಪಾರಕವಕ್ಕಿ ಅವರ ಹೆಸಱು ಗುಗ್ಗುರಿ ಹುಗ್ಗಿ ಪಾಯಸ. . . ನಿವಾಳಿಸಿ (೨೫೦೩. ೦೨೬-೬) : ಸಜೆ ನವಣೆ ನೆಲು ಪಾರಕ × × × ಧಾನ್ಯ ಕುಳಪಾಲ ಭತ ಖ ೧ (ಶಾಶ್ವ. IX-ii, ೩೩೪-೨೯; 1633); ಹಾರುವರ ಹೊಲಕ್ಕೆ ಪಾರಕ, ದೇವರ ಹೊಲಕ್ಕೆ ಹುಚ್ಚೆಳ್ಳು (ಗಸುಂಬಿ. ೯೨). **ಪಾರಕು :** "ಉನ್ಮಾಳಃ, ಕೋದ್ರವಃ, ಕೋರದೂಷಕಃ—ಈ ೩ ಪಾರಕಃ" (ಹಲಾಯು. ೯೩-೯೨೬).
**ಪಾರಕ್ಕಿ :** ಕ್ಷೀರಸಿತಪಾನದಿಂ ಧುತ್ತೂರದ ಕೂಷ್ಮಾಂಡರಸದೊಳಂ ಬೆಲ್ಲ ದೊಳಂ ಪಾರಕ್ಕಿನ(ಯ) ಸೊರ್ಕಬಿಗುಂ (ಕೋಳಕೋಶ. ೦೦-೯೨).
**ಪಾರಕ್ಕು :** ಪಾರಿಚಂ ಕುಂಬಳದೆಲೆಯುಮನರೆದ ರಸಂ ಸಿಂಧುಜಾತಮುಂ ಕೂಡಿ ಬಟ್ಟೆಕ್ಕರದೀಂಟಲ್ ಪಾರಕ್ಕಿನ ಪಿರಿದೆನಿಪ ವಿಷಾಪಹರಣಮಕ್ಕು ಮಮೋಘಂ (ಏಂದ. ೨-೦೫೯).
[ದೇ. II ತೆಲು. ಆರಿಕ, ಆರಿಕೆ, ಆರುಕ, ಆರುಗ]

**ಪಾರಕ್ಕು** 'ಪಾರಕಂ' ನೋ.

**ಪಾರಖು** (ನಾ). (ಮುತ್ತು, ರತ್ನ ಮೊದಲಾದುವುಗಳ) ದರ್ಜೆ ; ಕಿಮ್ಮತ್ತು ; ಯೋಗ್ಯತೆ : ಪಾರಖ ನಮೂನೆ—ತೂಕದ ಸಮಯ ಗಿರಾಯಿಕರು ಅದಲಿ ತೆಗೆದುಕೋಡದರೆ, ಈ ಖರ್ಚಿನ ರಕಮು ಬೀಳುವದಿಲ್ಲ (ಮುಂಬಿ. ೦೬). [←ಮರಾ. ಪಾರಖ್]

**ಪಾರಖಾವಣೆ** 'ಪಾರಖಾವಣೆ' ನೋ.

**ಪಾರಖಾವಣೆ, ಪಾರಕಾವಣೆ, ಪಾರಖಾವಣಿ, ಪಾರ್ಖಿವಣೆ** (ನಾ). ೧. (ನಾಣ್ಯ, ಮುತ್ತು, ರತ್ನ ಮೊದಲಾದುವುಗಳನ್ನು) ಪರೀಕ್ಷಿಸಿ ನೋಡುವುದು ; ಪರೀಕ್ಷೆ ; ತಪಾಸಣೆ : (೪). ೨. ಸಲ್ಲಿಸುವುದು ; ಜಮಾ ಮಾಡುವುದು ; ಪಾವತಿ ಮಾಡುವುದು : ಅದು ವರ್ತಕ ಧರ್ಮವಲ್ಲ. ಹಾಗಿದ್ದರೆ ಜಾಗ್ರತೆಯಾಗಿ ಪಾರಖಾವಣೆಗೆ ಹಣ ತರಿಸು (ಅ೦ಬಿ. ೦೦); ಗ್ರಾಮದ ಕಂದಾಯವು ವಸೂಲಾದ ಕೂಡಲೇ ಪಟೇಲನ ಅಪ್ಪಣೆ ಪ್ರಕಾರ ಆ ಹಣವನ್ನು ತಾಲ್ಲೂಕು ಖಜಾನೆಗೆ ಪಾರ ಖಾವಣೆ ಮಾಡುವುದಕ್ಕಾಗಿ ತೆಗೆದುಕೊಂಡು ಹೋಗುವ ಕೆಲಸವು ಇವನದಾಗಿರುತ್ತದೆ (ಗ್ರಾಕಾಳ್. ೩). **ಪಾರಕಾವಣೆ :** ೧. ಲಿಂಗ ರಾಜ ಅನ್ಯಾಯ ಮಾಡಿದರು. ಅದರ ಲೆಕ್ಕ ದೇವರದಾರು ಪಾರಕಾವಣೆ ಆಗುತ್ತೆ (೬೪೦೨. ೦೬೪). **ಪಾರಖಾವಣೆ :** ೨. ಆ ಮೇರೆಗೆ ಐವಜು ಪಾರಖಾವಣೆ ಮಾಡಿಕೊಂಡು ಕಳಿಪಿಹಣವನ್ನು ವಾಪಸ್ ಕೊಟ್ಟು ಬಾಕಿ ಐವಜಿಗೆ ಆಗಿರುವಗ್ಗೆ . . . ರಶೀದಿ ಕೊಡಬೇಕು (ಮೈಹುಂ. II, ೬೬). **ಪಾರ್ಖಿವಣೆ :** ೨. (ಮ್ಯಸಿ. IV, ೬೮೨). 'ಪಾರುಖಾಣೆಯ' ಪರಾ.
[←ಮರಾ. ಪಾರಖಾವಣ್]

**ಪಾರಖೀ** (ನಾ). (ಮುತ್ತು, ರತ್ನ, ನಾಣ್ಯ ಮೊದಲಾದುವುಗಳನ್ನು) ಪರೀಕ್ಷಿಸುವವನು : ಪರೀಕ್ಷಕ : ಅದು ಸಂಸಾರದ ದಂಧೆಯಲ್ಲಿ ಕಳೆದ ೪೦ ವರ್ಷದ ಅನುಭವ. ಬಂಗಾರದ, ಮುತ್ತುರತ್ನದ ಪಾರಖೀ ನಾವು (ಗಾಸುಗ. ೯೨). [←ಹಿಂ. ಮರಾ. ಪಾರಖೀ]

**ಪಾರಗ$_1$** (ನಾ). ೧. ತೀರವನ್ನು ಮುಟ್ಟಿದವನು ; ದಡವನ್ನು ಕಂಡವನು : ಅನುಪಮಗುಣರನುಪಮತಪರನುಪಮಸಿದ್ಧಾಂತವಾರ್ಧಿ ಪಾರಗರೆಂದೀ ವಸಧಿಪರೀವೃತಸಕಳಭುವನ ಪೊಗಟ್ಟುದು ಸಕಳಚಂದ್ರ ಸೈದ್ಧಾಂತಿಗಳಂ (ಶಾಶಂಷ. ೦-೨೯) ; ಸ್ವಸ್ತಿ ಸಮಸ್ತಶಾಸ್ತ್ರಾಭ್ಯಾಸಪ್ರವೃತ್ತ ಪಾರಾವಾರಪಾರಗರುಂ ತದನುಕ್ರತಪೋನುಷ್ಠಾನನಿಷ್ಠತರುಂ (೯೨೬೩. ೯೯-೩-೯; 1124); ಸಂಗೀತಾಂಬುಧಿಪಾರಗರ್ ಪಲರುಮಿಪ್ಪ ತಾನಂಗಳಂ ಬಲ್ಲರೇ (ಅಶ್ವ ೩. ೯೨-೦೩). ೨. ಸಂಪೂರ್ಣವಾಗಿ ತಿಳಿದವನು ; ನಿಪುಣ ; ಪಂಡಿತ: 'ಚತುರ್ವೇದಪಾರಗ', 'ಶ್ರುತಪಾರಗ' ಪರಾ. [ಸಂ.]

**ಪಾರಗ$_2$** 'ಪಾರಕ್ಕು' ನೋ.

**ಪಾರಗತ್ವ** (ನಾ). ನೈಪುಣ್ಯ : ಅಪರುಪದೇಶಕೌಶಲಮುಮಂ ಪರಪಾರಗಪ ಪಾರಗತ್ವಮುಂ . . . ಭವ್ಯಜನಕಂ ಪರಿಕೀರ್ತಿಸಾತಿರ್ದು (ಮುಹಾಪು. ೩-೦೬).
[ಸಂ.]

**ಪಾರಗಾಣಿಸು** (ಕ್ರಿ). ಒಂದು ಕಡೆಯಿಂದ ಮತ್ತೊಂದು ಕಡೆಗೆ ದಾಟಿಸು ; ಪಾರುಮಾಡು : ಯಾರೂ ಕಾಯುವರಿಲ್ಲ ನೀರಿದೆ ನಿನಗಯ್ಯಾ ಧೀರ ವೇಣುಗೋಪಾಲ ಪಾರಗಾಣಿಸೊ ಸ್ವಾಮಿ (೯೬೦೬. ೩೩೪); ಸಂತಸ್ತಗಳ ಪಾರುವ ದಾಂಟಿಸಿ ಪಾರಗಾಣಿಸುವ ಒಂಟಿ ಇವನೆಂದು ಪಿಲಾತನಕಡಿರ ವನೇಂ (ಗೂರ್ಜ್ಜಾ. ೨-೯೬). [ಪಾರಗಾಣು + —ಇಸು]

**ಪಾರಗಾಣು** (ಕ್ರಿ). ದಡವನ್ನು ಸೇರು ; ಪಾರಾಗು : ಕಡಲ ಕಡೆದರು ಸುರಾಸುರರು ನಿಜಬಲದಿಂದ ಕುಡಿವನದನು ತಪಸ್ಸಿನಿಂದ ಕುಂಭಜನು ಕಡಮೆಜನ ಪಾರಗಾಂಬರೆ ಗಾಸಿಯನು ಪಡದೆ ? (ಮುಂಸಳ. ೨೫೯); ಈ ಸಲದ ಕೆಲಸದಲ್ಲಿ ನಾವು ಪಾರಗಾಣುತ್ತೇವೆಂಬ ಭರವಸೆಯೇ ಪನಗಿಲ್ಲ (೬೫೩೪. ೦೫). [ಪಾರ್$_2$+ಕಾಣು (<ಕಾಣ್)]

**ಪಾರಗಾವ** (ನಾ). ಒಂದು ಊರಿನ ಹೆಸರು : ದಕ್ಷಿಣತಃ ಪಾರಗಾವಾ ವ್ಯಾ(ಬ್ರಾ)ಹ್ಮಣ ಗ್ರಾಮಃ ಪಶ್ಚಿಮತಃ ವಿಲ್ವ ?ವಾಡೇಗ್ರಾಮಃ (೩೬. XI. ೦೦೩-೩೯; 753). [? +ಗಾವ (<ಗಾಮ)]

**ಪಾರಗೆಯ್** (ಕ್ರಿ). ಹಿಂಜರಿ ; ಹಿಂದೆಗೆ : ಅಕ್ಕುಳಿಸಿತೆಂದುಂ, ಮುಯ್ದು ಗೆದುದೆಂದುಂ . . . ನುಣ್ಚಿತೆಂದುಂ, ಪಾರಗೆಯ್ದೆಂದುಂ—ಈ ೧೩ ಅಪ ಸರಣಕ್ಕೆ ಪೆಸರ್ (೯೬೩೩. ೬೨-೬೪೯). [ಪಾರ್$_1$ + ಕೆಯ್$_1$]

**ಪಾರಜ** (ನಾ). ದ್ರವರೂಪದ ಒಂದು ಬಗೆಯ ಲೋಹ : ಪಾದರಸ : ರಸದೊಳು ಪಾರಜದೊಳು . . . ಷಡುರಸದೊಳಾ ರಸಾಖ್ಯಂ (ಮುಂಗಣ. ೦೯೩-೩೩) ; ಭಯ ಮತ್ತು ಧೈರ್ಯವು ಬೆಂಕಿ ಮತ್ತು ಬರ್ಫಕ್ಕೆ ತಗುಲಿದ ಪಾರಜದಂತೆ ಕೆಳಗೆ ಮೇಲೆ ಒಮ್ಮೆಲೆ ಸರಿದಾಡ ಹತ್ತಿದುವು (ಜಮುಂ೬. ೯೯); ಕನ್ನಡಿಯ ಒಂದು ಮೈಗೆ ಪಾರಜ ಹಾಕಿ . . . ನೋಡುವ ಕನ್ನಡಿಯನ್ನು ಮಾಡುತ್ತಾರೆ (ಮುಂಜಮು. ೯-೨೨೨). 'ಪಾದರಸ' ಪರಾ. [<ಸಂ. ಪಾರದ]

**ಪಾರಟ** 'ಪರಡ$_4$' ನೋ.

**ಪಾರಡೆ** 'ಪರಡ$_4$' ನೋ.

**ಪಾರಣಕ್ಷಮ** (ನಾ). ಬೇರೆಯವರ ಉಪವಾಸವನ್ನು ಕೊನೆಗೊಳಿಸಲು ವುದರಲ್ಲಿ ಸಮರ್ಥನಾದವನು : ಚಾರುಚಕೋರವಿದೂರಪಾರಣಕ್ಷಮ ನವವಲ್ಲಭಂ ಬೆಳಗಿದಂ ಪುರವೊಂದೆನೆ ಲೋಕಮೆಲ್ಲಮಂ (೩೦ದ್ರಪ್ರ. ೬-೩೩).
[ಸಂ.]

**ಪಾರಣಾವಾಸರ** (ನಾ). ಪಾರಣೆ ಮಾಡುವ ದಿವಸ : ಪಾರಣಾವಾಸರಾಳಿ ಗಳಿಂತಿರ್ದಜಿನಪ್ಪ ಪುಣ್ಯದಿನಮಂ ಸಮ್ಮಿಶ್ರಮಂ ಮಾಡೆ (ಸುಕುಮಾ. ೯-೮೨).
[ಸಂ.]

**ಪಾರಣಾವಿಧಿ** (ನಾ). ಪಾರಣೆಯನ್ನು ಮಾಡುವ ರೀತಿ,—ಕ್ರಮ : [ಪ್ರವ]ಜ್ಞಾಶ್ರಮಗುರುರೂಪರಾಸ್ಯತಿಲಕಂ ಯಾಮಿನೀವಿಯೋಗವಂ ನಿರ್ವರ್ತಿಸಿ ರಾಜಮಂದಿರಕ್ಕೆ ವಂದು ಪಾರಣಾವಿಧಿಯೊಳಮೃತಾಹಾರ ಮನಾರೋಗಿಸಿ (೬೩೬೩. ೯-೯೯ ೪) ; ಮಂಡೋದರಿಯುಂ ತಾನುಂ ಪಾರಣಾವಿಧಿಯಂ ಮಾಡಿಸಿ ರಾಮನಲ್ಲಿಗೆ ವಂದು (ಕಾಕ್ಷ೦ಪು. ೩೦೦). [ಸಂ.]

**ಪಾರಣೆ₁** (ನಾ). ೧. ವ್ರತೋಪವಾಸದ ಮಾರನೆಯ ದಿನ ಮಾಡುವ ಊಟ: ಪಕ್ಷೋಪವಾಸದ ಪಾರಣೆಗೆಂದು ಪೋಟಲಿಗೆ ಚರಿಗೆವೃಗುತಂದೊಡೆ (ಶಬ್ದಾ. ೬೬-೨೬); ಪಾರಣೆಯ ಎನಂಗಳೊಳವಧಾರಿಸಿ ಜಠರಾಗ್ನಿ ನಂದದಂದದಿನಧ್ಯಾಹಾರವನಾರೋಗಿಸುವಾಚಾರದಿನಳವಟ್ಟಿದವರೊ ಳವ ಬೋದರ್ಯಂ (ಸುಕುಮಾ. ೪-೩); ಘತ ತೊಲಗು ಕೌರಪಕ್ಷಕಶಾಂತನ ವತೆಗೆ ಪಾರಣೆಯಾಗಳೀಗಳೆ ನಡಸುವನು ನಾಳಕ್ಕೆ ನೆಜೆದ ಮಹಾ ರಥಾವಳಿಯ (ಕುಮಾರವ್ಯಾ. ಶಾ. ೨೪೮); ಪಾರಣೆಯಾದರೂ ಪಾರಾಯಣ ತೀರಲಿಲ್ಲ (ಗಾದೆ). ೨. ತೃಪ್ತಿ; ಸಂತೋಷ: ಅಲ್ಲವೊ ಬರಿಯ ವಾಸನೆ ಅಲ್ಲ ಬರಿ ಕಣ್ಣ ಪಾರಣೆ (ಜಾಹಿಗ. ೧೬-೦೬).

**ಪಾರಣೆ ಪರ್ವ**=ಪಾರಣೆ ಮಾಡುವ ಹಬ್ಬ: ಬರಿಸುವುದೊಂದೂ ರೋಳಿವರ್ಗಳನುಪಚಾರವರಸಿ ಪಾರಣೆ ಪರ್ವಗಳೆಗೆ ನೆರೆಯೂರೊಳು ಬಾಳುವ ನಿಜಜನಜಿಯ ಕರೆಯಿಸುವುದು ಕಾಲವಜಾತು (ಹರಿಜ. ೩-೨೯). **ಪಾರಣೆ ಮಾಡು**=ಉಪವಾಸ ಮುಗಿದ ನಂತರ ಊಟ ಮಾಡು: ಬಸವಂತಿ ತನ್ನ ಆರೋಗಣೆಯನ್ನು ಬಡಿಸಿಕೊಂಡು ಉಪವಾಸದ ಪಾರಣೆ ಮಾಡಿ ದಳು (ಚಿಜಾ. II, ೨೪೭). [ಸಂ. ಪಾರಣ]

**ಪಾರಣೆ₂** (ನಾ). ಒಂದು ಗ್ರಂಥದ ಪೂರ್ಣವಾದ ವಾಚನ (?): ಕವಿಳಾಸಪುರದೊಳಗೆ ಸ್ವಯಂಭುಮಲ್ಲಿಕಾರ್ಜುನ ಸಂಗಮೇಸ್ವರ ನಾಗೇಸ್ವರ ಯಾ ಪಮೂಜಲಿಂಗಕಂ ಅಂಗಭೋಗ ರಂಗಭೋಗ ಜೀರ್ಣೋದ್ಧಾರಕ್ಕಂ ಪಾರಣೆಯ ಜಂಗಮಾರಾಧನೆಗಂ . . . ಸಲುವಂತಿ (ಎಕ. XXI. ೦೪-೬೦; 1880). [<ಸಂ. ಪಾರಾಯಣ ?]

**ಪಾರಣೆ₃, ಹಾರಣೆ, ಹಾರಣೆ** (ನಾ). ಒಂದು ಬಗೆಯ ತೆರಿಗೆ: ಕೆಯ್ಗಂ ಮನೆಗಂ ತೊಣ್ಣಿಕ್ಕೆವಾರುಪಣಂ ಗದ್ಯಾಣಂ ಮೂಜು ಪಣವಾಜು ಪರಿವುಂ ಪಾರಣೆಯುಂ ಮೊದಲಾಗಿ ಕಿರುಕುಳಬಾಧೆಯೊನ್ನುವಿಲ್ಲದನ್ನಾಗಿ ಗಾವುಣ್ಡುಗಳ್ ಪ್ರತಿಪಾಳಿಸುವರ್ (ಕೌಶಾ. XI-1. ೬೮-೬೪; 1068); ಪರಿವು, ಪಾರಣೆ—ಇವೆರಡೂ 'ಕಿರುಕುಳ'ಗಳು. ಎಂದರೆ ಸಣ್ಣ ತೆರಿಗೆಗಳು (ಕೌಶಾ. ೯೦೦). **ಹಾರಣೆ**: ಆ ಪೆರುಮಾಳೆಪುರದ ಮಹಾ ಜನಂಗಳು ಹದಿಕೆ ಹಾರಣೆಯೆಂದೆನ್ನದ ಸರ್ವ್ವಬಾಧಪರಿಹಾರ ಸರ್ವ್ವ ಮಾನ್ಯವಾಗಿ . . . ನಡಸಿ ಕೊಡುವರು (ಎಕ. XI, ಚಿತ್ರದು. ೦೨-೯೩; 1286). **ಹಾರಣೆ**: ಕುನ್ನಿಪಣ ಪರಿವುಂ ಹಾರಣೆ ಮೊದಲಾಗಿ (ಕೊಂಕಣ. ೦೯೩೩, ಕಾಪಿಕಮ್ಮಾರ್. ೯-೩೨; 955). [?]

**ಪಾರಣೆಗೆಯ್** (ಕ್ರಿ). ಉಪವಾಸದ ನಂತರ ಊಟವನ್ನು ಮಾಡು: ಅಂಬರೀಷನವೊಲು ದ್ವಾದಶಿ ದ್ವಿಜಾಕುರಂಬಕ್ಕೆಯನ್ನದಾನಗಳ ಸಂಭ್ರಮ ದಲಿ ಪಡಿ ಪಾರಣೆಗೆಯ್ವನಾ ಕುಂಭಿನೀಪತಿ ಭಕ್ತಿಯಲಿ (ಕಂಶಪ. ೪-೯). [ಪಾರಣೆ₁ + ಕೆಯ್₁]

**ಪಾರತಂತ್ರತೆ** (ನಾ). ಇನ್ನೊಬ್ಬರ ಅಧೀನವಾಗಿರುವಿಕೆ; ಬೇರೆಯವರ ವಶವಾಗುವಿಕೆ: ಪುತ್ರದ್ರೋಹಹಕಾರಣವಂ ಧಾರಿಣೀಪತಿಗೆ ಸವಿಸ್ತರಂ ಬಿನ್ನವಿಸೆ ಕೇಳ್ದರಸನಂ ತತ್ಕ್ಷಣೋಪಗತತನೂಭವಾರಾಭಚಿಂತಾಪಾರ ತಂತ್ರತೆಯ ವ್ಯಾನವಮನನಂ ದೀನಾನನನುಮಾಗಿ (ಚಂದ್ರಪ್ರ. ೩-೬೨ ಕ). [<ಪರತಂತ್ರ]

**ಪಾರತಂತ್ರ್ಯ** (ನಾ). ಅನ್ಯರಿಗೆ ಅಧೀನವಾಗಿರುವುದು; ಪರಾಧೀನತೆ: ಶ್ರುತಿಯೊಳಗಾಡುವ ಹಾಡಿನ ತೆರದಿ ಸ್ವತಂತ್ರ ನೀನೀ ಪಾರತಂತ್ರ್ಯದಿ (ಹಜಕ. ೯-೬೯); ಧರ್ಮಪರಂಪರೆಯ ನಾಡು ಪಾರತಂತ್ರ್ಯದ ಸಂಕೋಲೆಯಿಂದ ಬಂಧಿತವಾಯಿತು (ಅಜ್ಞಾತ. ೨). [ಸಂ.]

**ಪಾರತೆ** (ನಾ). ವೀಕ್ಷಣೆ; ನಿರೀಕ್ಷಣೆ: ಹರಿಪಿಚಾರತೆಗಳೋ ನಿರುತ ಪಾರತೆ ಗಳೋ ನಿಷ್ಠೆ ತೋರತೆಗಳೊ ತಮವಿದೂರತೆಗಳೋ (ಕಶಂ. ೩-೩೪). [<ಪಾರ್₁ + −ತೆ₁]

**ಪಾರತ್ರಯ** (ನಾ). ಪರಲೋಕ: ಹಂತ್ರು ಮಕ್ಕಳಿಗಾಗಿ ಎನ್ನ ಹಿತವನೆ ಮರೆದು ಕಂಡಕಂಡವರ ಕಾಡಿ ಬೇಡಿ ಉಂಚುಟ್ಟು ಸುಖಬಟ್ಟು ಪಾರತ್ರಯವ ಮರೆದು ಕೊಂಡೆಯಲಿ ನಿಪುಣನಾಗಿ ತೂಗಿ (ಬಸವಕ. ೨೪-೬). [<ಸಂ. ಪಾರತ್ರ್ಯ]

**ಪಾರತ್ರಿಕ** (ಗು). ೧. ಪರಲೋಕಕ್ಕೆ ಸಂಬಂಧಪಟ್ಟ; ಪಾರಲೌಕಿಕ ವಾದ: ಐಹಿಕದ ನಾನಾಭೋಗವಮಂ ಮತ್ತಮನ್ನತಪಾರತ್ರಿಕಸೌಖ್ಯದೇಳ್ಗೆ ಯನನೂನಂ ಮಾಳ್ಪ . . . ಕವಿ ನೀಂ ಬೇಗಂ ಪೊಗಳ್ (ಶ್ರೀಕೃಷ. ೦-೨೬); ಪಾರತ್ರಿಕಾನಂದವಮಂ ಗಳಿಪ ನಾಯಕನಾಗೆ ಮತ್ತೃತಿಯದೇಂ ಸ್ವಪಾಂ ತರದೋ ಲೋಕದೊಳ್ (ಧ್ಯಸೂಪ. ೦-೨೨). (ನಾ). ೨. ಪರಲೋಕ: ಖರರುಚಿ ನಂದನನೊಂದಿದಂದಮುದಯದೊಳ್ ರೋಗಾನ್ವಿತಂ ಬಾಲ್ಯಕಾಲ ರುಜಾರ್ತಂ ಮಲಿನಂ ಸದಾಮನಲಸಂ ಪಾರತ್ರಿಕವ್ಯಾಪ್ತಿ[ಜಾತಕ. ಪಾತತ್ರಿಕವ್ಯಾಪ್ತಿ. ಪಾತತ್ರಿಕವ್ಯಾಪ್ತಿ]ತತ್ಪರನಕ್ಕುಂ (ಜಾತಕ. ೦೫-೦೯). ೩. ಪರಲೋಕಕ್ಕೆ ಸಂಬಂಧಿಸಿದುದು; ಪಾರಲೌಕಿಕವಾದುದು: ಬಟಾಕ್ಕೆ ಂದ್ರವೈಹಿಕಪಾರತ್ರಿಕಭೋಗವಮಂ ಕುಡುವಿನಂ ಮಾಣಿಕ್ಯಭಟ್ಟಾರ ಕಾಂತಿಕವಮಂ ಸಾರೆ ವಿನೇಯರಾಜಿಗೆ ಜಯಂ ಭವ್ಯಂ ಶುಭಂ ಮಂಗಳಂ (ಅಂತ. ೦೬-೮); ಸಾಂಸಾರಿಕ — ಪಾರತ್ರಿಕಗಳೆಂಬ ಇತ್ತರದ ಪುರು ಷಾರ್ಥಗಳೂ ನಿಕಟಸಂಬಂಧದಿಂದ ಒತಗೂಡಿ ಚತುರ್ವರ್ಗವನ್ನಿಸುವುದು (ಹಾಕಾಲ. ೩೩೭). [ಸಂ.]

**ಪಾರದ** (ನಾ). ೧. ದ್ರವರೂಪದ ಒಂದು ಬಗೆಯ ಲೋಹ; ಪಾದರಸ; ಪಾರಜ: "ರಸ ಪಾರದ ಸೂತಕ ಚಪಲ[ಸಂ]ಜ್ಞಿತಂ ಗಿರಿಶ ವೀರ್ಯಮದು ಪಾದರಸಂ" (ಷಟ್ಪ್ರಕೋ. ೯೪-೦೪); ಮಾಸರಮೆನೆ ಪಾರದದಿಂ ಪೂಸಿದ ಪೊಲ್ ಪೊನ್ನ ಮುಕುರವಮಂ ಹಿಮಾಲಿಪ್ತಂ ನೇಸರ ಬಿಂಬಂ ತಿಂಗಳ ಕೂಸಿನ ಪೊಲ್ ಕೋಡುತಿರ್ದುದಂದಿನ ದಿನದೊಳ್ (ಅಂಬಿಜ. ೯-೩); ಪಾರದಂ ಸಿದ್ಧರಸವಾದೊಂದು ಸಂತಸಂ ಬಾಲ ನರವಂ ಕಂಡೊಡಪ್ಪುದುಂ (ಅಜಿತಪು. ೬೬-೦೬). ೨. ಲೋಹವನ್ನು ಚಿನ್ನವನ್ನಾಗಿ ಮಾಡುವ ರಸ; ಸಿದ್ಧರಸ: ಪಾರದಂ ಪಾರದೆ ಬಂದ ತೋರ್ಕೆಗೆ ಸುಮನೋಮಣಿಸನ್ನಿಣಿಹಾರದಲ್ಲಿ ಬಂದೋರಣಮಾಗಿ ನಿನ್ನ ಪರಿಪನ್ನಿ ಜನಕ್ಕೆನಿಪೊನ್ನು ದಾನಗಂಭೀರತೆಯಾದುದೇಂ ಪೊಗಳ್ವೆಂ (ಎಕ. III, ಸೊತಂ. ೨೬೦-೨೬; 1408). [ಸಂ.]

**ಪಾರದಂದೊಡೆ** (ಕ್ರಿ). ಪಾದರಸವನ್ನು ಹಚ್ಚು,—ಲೇಪಿಸು: ಕಡೆವರೊ ಶಂಖದಿಂ . . . ರುಚಿರೋಜ್ವಲಾಗವುಂ ಬಿಡದಪ್ಪು ತಾಂಶುರಶ್ಮಿಗಳ ಕಾಂತಿಗೆಯುಂದಮೆ ಕರ್ಚಿ ಪಾರದಂದೊಡೆದರೊ ಪೇಟಿನಿತ್ ಕರಮೆ ಕಣ್ಗೆಸೆದಿರ್ದುದು ರೂಪು ಕಾಂತೆಯಾ (ಕಾದಂಬ. ೬೬೬). [ಪಾರದ + ತೊಡೆ₁]

**ಪಾರದರ** 'ಪಾರದಾರ' ನೋ.

**ಪಾರದರಿಗ** 'ಪಾದರಿಗ' ನೋ.

**ಪಾರದರಿಗೆ** (ನಾ). ಹಾದರ; ವ್ಯಭಿಚಾರ: ಹರವರಕ್ಕನಂಗದೊಳಾ ರ ದರಿಗೆಯ ಪಚ್ಚವಂ ಕೊಣ್ಣು ಪಾದರಿಗೆಯ ಮುಂಗನಿದು ಪಾದರಿಗನಂ ಕೊಲ್ವರು (ಕೌಶಾ. IX-1, ೬೬-೬೩; 992). [ಪಾರದರ (<ಪಾರದಾರ)+ −ಇಗೆ₂]

**ಪಾರದರ್ಶಕ** (ಗು). ೧. ತನ್ನ ಮೂಲಕ ನೋಡಿದರೆ ಆಚೆಯ ಕಡೆ ಇರುವ ವಸ್ತು ಸ್ಪಷ್ಟವಾಗಿ ಕಾಣಲಾಗುವಂತೆ ಬೆಳಕನ್ನು ತನ್ನ ಮೂಲಕ ಶುದ್ಧವಾಗಿ ಹಾಯಗೊಡುವ: ಗಾಜು ಪಾರದರ್ಶಕ ಪದಾರ್ಥವು (ಸುಬೋಧಿಯ. ೯-೨೨೦); ಬೆಳಕು ಕೆಲವು ವಸ್ತುಗಳ ಮೂಲಕ ಹೆಚ್ಚು ನಷ್ಟ ಹೊಂದದೆ ಹೊರಕ್ಕೆ ಬರುವುದು. ಇಂತಹ ವಸ್ತುಗಳನ್ನು ಪಾರದರ್ಶಕವಸ್ತುಗಳೆಂದು ಹೇಳುತ್ತೇವೆ (ಭೌತಶಾ. ೦೩೩). (ನಾ). ೨.

ತನ್ನ ಮೂಲಕ ಆಚೆಯ ಪಕ್ಕವನ್ನು ಕಾಣಿಸುವಂತೆ ಬೆಳಕನ್ನು ಸಾಗಿಸುವಂತಹುದು : ಈ ಬರ್ಫವು ಹೆಚ್ಚು ಕಡಿಮೆ ಪಾರದರ್ಶಕವಾಗಿರುತ್ತದೆ (ವಾಯುಬಲ. ೬-೦೯೦). 'ಅಪಾರದರ್ಶಕ' ಪರಾ. [ಸಂ.]

**ಪಾರದರ್ಶಕತೆ** (ನಾ). ಪಾರದರ್ಶಕ ಗುಣ : ಶಾಸ್ತ್ರಗಳ ಸಂಕ್ಷಿಪ್ತಶೈಲಿ ಇದಕ್ಕೆ ಎಷ್ಟರ ಮಟ್ಟಿಗೆ ಕಾರಣವೋ ಸಂಸ್ಕೃತಭಾಷೆಯು ಪಾರದರ್ಶಕತೆಯೂ ಅಷ್ಟರ ಮಟ್ಟಿಗೇ ಕಾರಣವಾಗಿರಬಹುದು (ಸವಾಲೋ. ೦೪೩); ಗುಟ್ಟುಗುಟ್ಟಿನ ಗಂಟು ವ್ಯಕ್ತಿವ್ಯಕ್ತಿಗಳಲ್ಲಿ ; ಈ ಗುಡಿಯುಮುದರ ನಂಟು ಈ ಮಹಾಗುಟ್ಟಿನೆಡೆ ಒಬ್ಬೊಬ್ಬನೂ ಪಡೆವ ಪಾರದರ್ಶಕತೆಯನು ಅರಿವರಾರುಂಟು ? (ಮರಿಚೇ. ೩೫-೦೦). [ಸಂ. ಪಾರದರ್ಶಕತಾ]

**ಪಾರದರ್ಶಿ** (ನಾ). ಯಾವುದೇ ವಿಷಯವನ್ನಾಗಲಿ ಪೂರ್ಣವಾಗಿ ತಿಳಿದುಕೊಂಡವನು ; ಪಾರಂಗತ ; ನಿಷ್ಣಾತ : ಆ ದ್ವಾರಕಿಯಾಲದನಜಿತಾವೃದ್ಧವಚೋವಿಶೇಷವಲಿ ಶೌರಿ ಕರೆಸಿದನಾತ್ಮವಿದ್ಯಾಪಾರದರ್ಶಿಯನೊಲಿದು ಮನದಲಿ ಸೀರಧರಸಹಿತಾತನೊಡನಿಂತೆಂದನಾಚಿತದಲಿ (ಕಿಭಾ.೧೦-೬೬-೯೮); ಅರ್ಜುನನು ಧನುರ್ಧರನೆನಿಸಿಕೊಂಡಂತೆಯೇ ಖಡ್ಗಪ್ರಯೋಗದಲ್ಲಿಯೂ ರಥಯುದ್ಧದಲ್ಲಿಯೂ ಕೂಡ ಪಾರದರ್ಶಿಯೆನಿಸಿಕೊಂಡನು (ಶೀಕೃಕ. ೫೯). [ಸಂ. ಪಾರದರ್ಶಿನ್]

**ಪಾರದಾರ**, ಪಾದರ, ಪಾರದರ, ಪಾರದ್ವಾರ, ಹಾದರ (ನಾ). ೧. ಮತ್ತೊಬ್ಬನ ಹೆಂಡತಿಯೊಡನೆ ಹೊಂದಿರುವ ಅನೈತಿಕಸಂಬಂಧ ; ಪರಸ್ತ್ರೀಗಮನ,— ಸಂಸರ್ಗ : ಅದು ಕಾರಣದಿಂದಂ ಮಹಾದುಃಖಕ ಪಾರದಾರವೆ ಮೊದಲೆಂದು ಬೆರ್ಚಿ ಪರಸ್ತ್ರೀಯರುಂ ತಾಯುಂ ಕಣ್ಬಂತೆ ಕಾಣ್ಬುದು (ರಕರ್ಣಾಟಕ. ೬-೦೯೩). ೨. ಪರಪುರುಷನೊಡನೆ ಇಟ್ಟುಕೊಳ್ಳುವ ಅನೈತಿಕ ಸಂಬಂಧ : ಪರಪುರುಷಗಮನ : ಪತಿ ತಪ್ಪಿ ಪಾರದಾರವ ಮಾಡಿದಲ್ಲಿ ಒಳಗಿಟ್ಟುಕೊಂಡು ಸಂದು ಸಂಶಯವಿಲ್ಲದೆ ಗುರುಲಿಂಗಜಂಗಮಕ್ಕೆ ಉದಾಸೀನವ ಮಾಡಿದಡೆ ತಪ್ಪನೊಪ್ಪಬಹುದೆ (ಸೋಶಿಖಾ. ೫೯-೨೨೯). ೩. ವ್ಯಭಿಚಾರ; ಚಾರತನ : ಪಾರದಾರ ಮಾಡಿದೊಡೆ (ಕೃಅಂ. ೦೯೩೬. ೨೫-೩೬: 872): ಪಾರದಾರ ಮಾಡಿದೊಡೆ ಇಬ್ಬೊಜಿ ಇಪ್ಪತ್ತನಾಲ್ಕು ದ್ರಮ್ಮ ಆ × × ಮಿಣಕ್ಕಡೆ ಇಪ್ಪತ್ತು ನಾಲ್ಕು [ದ್ರ]ಮ್ಮ (ಕಇಅ. ೬೬-೦೮-೩೬; 932). **ಪಾದರ** : ೩. ಪಸೆಯೊಳ್ಪಸುವರ್ಣಂವರೊಳಗ್ನಿಸಾಕ್ಷಿಯೊಳೆಯ್ದಂತ ಪಾಂಡುಪತಿಬುರೆ ಮೋಷಾವಸಥಪಾರ್ದರದಿಂ ಜನಿಯಿಸಿದರ್ (ಗದಾಯು. ೩-೩೬); ಪಾದರಂ ಲೇಸು ಸಾವುದರಿದು (ಕರ್ಣಾಮೃ. ೬-೯೮) ; ಪೆಸರನಡಗಿಸಿ ೯ಳವು ಪಾದರಂಗಳ ಹಿಂಸೆಯನುವ ತೊಲಗಿಸಿ ಧರಾತಳವನಾಜ್ಞೆಯೊಳ್ ಪಾಲಿಸುವ ರಾಜಂಗಿಹಪರಂಗಳೊಳ ಗನುಮಾನವಿಲ್ಲ (ಕರಾಕ. ೬-೧೬). **ಪಾರದರ** : ೧. ಸ್ಮಪತಸಂಚುಂ . . . ಪಾರದರದೊಳ್ ಪುಟ್ಟಿವನರಸುಂಗವಾರಸಿಗಂ ಪುಟ್ಟಿದನೇ (ಶಾಶಿಶಾ. ೧೨-೦೩೬) ; ಇನಿತೊಂದು ಪರಾಭವಪದವುನೆಯುಟ್ಟವರ್ ಪಾರದರದೊಳೆಂದಾಂ ಪರದಾರನಿವೃತ್ತಿಗೆಯ್ದಂ (ಸುಕುಮಾ. ೬-೩೯). ೩. ನುಡಿಯಲ್ಕಾರ್ತರುಮಿಲ್ಲ ಪಾರದರದೊಳ್ ಸತ್ತಂಗಳಬ್ಬಸ್ವರಾರ್ (ಶಾಶಿಶಾ. ೬-೬೦) ; ಶೋಭಮಿಪರ್ಶಿಶಯತೋಷಮಿಪರ್ ಮಾತ್ರಮಿಪರ್ಪಡೆಯೊಳ್ . . . ಪಾರದರಮಿಪರ್ ಪರಿಗ್ರಹಕಾಂಕ್ಷೆಯಿಪರ್ ಕುತ್ಸಿತಪಾತ್ರಮಿಪರ್ಪವಲ್ತು (ಅರನಾ. ೨-೫೯). **ಪಾರದ್ವಾರ**: ೩. ಹೋಗಬಿಟ್ಟು ಮರಳಿ ಹಿಂದೆ ನೋಡಿ ಮತ್ತಾಗಬೇಕೆಂಬ ಸಂದೇಹವುಳ್ಳನ್ನಕ್ಕ ಅದೆ ಪಾರದ್ವಾರ ನಾಯಕನರಕ ತಪ್ಪದು (ಬಸವ. ೬೫೫) ; ಸಾವಿರ ನೋಂಪಿಯ ನೋಂತು ಪಾರದ್ವಾರ ಮಾಡಿದಂತಾಯಿತ್ತು ಅವನ ವ್ರತ (ಶರಣ. ೦೬೯-೯೬೭)

**ಹಾದರ** : ೧. ಶಿಖನರೆವಣ್ಣನಂ ಹರಿಯು ಹಾ[ಪಾಠಾಂ. ಪಾ]ದರವಬ್ಬಜನೊಲ್ದುಬಚ್ಚಿ ಹೇಳುವ ನನಸಿಲ್ಲ ಬಲ್ಲಹನ ಶೌರ್ಯವುಂ (ಅಪಂಪು. ೦-೯೦); ಕೆಳಲರಾಗದ ರಹಿಯೊ ೯ಲ್ಲಿಯು ಕಲಸುಗಳೊಳೋ ಹಳ್ಳಿಕಾತಿಯರೊಳಗುಡಿಯ ಹಾದರವೊ . . . ಜಯುಸಿರಿಯು ಕಾಹಿನೊಳಾರು ನೀನು (ಕುವ್ಯಾಕ. ೨-೬೮). ೩. ಸಾಸಿರನೋಂಪಿಯೊಂದೆ ಹಾ[ಪಾಠಾಂ. ಪಾ]ದರದೊಳೆ ಕೆಟ್ಟುಪೋಕುಂ (ಸಮುಕ. ೩-೬೮); ಅನ್ಯದೈವವೆಂಬುದು ಹಾದರ (ಬಸವ. ೬೦೮); ಕಳವು ಹಾದರವೆರಡಱಿಂ ತಾನಳಿದವಂಗತಕೀರ್ತಿನರಕದೊಳಿಳಿವನಲ್ಲದೆ ಸಗ್ಗಸುಖವಿಲ್ಲ (ಕೌಶಿರಾ. ೩೮-೦೩); ಹಾದರಕ್ಕೆ ಹುಟ್ಟಿದ ಮಕ್ಕಳು ಚೆನ್ನ, ಹಲವು ಸೊಬ್ಬಿನ ಮೇಲೋಗರ ಚೆನ್ನ (ಗಾದೆ).

ಹಾದರವಾಸು, ಹಾದರವಾಡು = ವ್ಯಭಿಚಾರ ಮಾಡು: ಧುರದೊಳ್ . . . ಅಂತಕಾಸುರನಂ ಕೊಂದಂ ಕಪಾಲದೊಳ್ತಿರಿದುಂಡಂ ಸುರಮುನಿಪತ್ನಿಯರೊಳ್ಪ್ಪಾದರವಾಡಿದು (ಸಮುಕ. ಅನುಬಂಧ I, ೩೬೨) ; ಗೊಲ್ಲರಲ್ಲಿಗೆ ಬೆಣ್ಣೆಯುಂ ಕಳುಲ್ಲಿಗೆಯ್ದು ಮುರಾರಿ ಗೋಪಿಯರಲ್ಲಿ ಹಾದರವಾಡಿ (ಅಕೃ ೫೯-೯೦) ; ಏಡಿ ಹಾದರವಾಡೆ ಗೋಡಾರಗಪ್ಪೆಯು ಕೂಡಿ (ಜಗಾಕ. ೦೦-೯). [<ಸಂ. ಪಾರದಾರ್ಯ / ತುಳು. ಹಾದರೊ ; ಕೊಡ. ಪಾದರ]

**ಪಾರದಾರಿಕ** (ನಾ). ೧. ವ್ಯಭಿಚಾರ ; ಹಾದರ : ಸಾಧಾರಣವೆಂಬಧಿಕರಣಮುಂ ಚಾರಾಯಣಂ ಸಾಂಪ್ರಯೋಗಿಕಮುಂ ಸ್ವರ್ಣನಾಭಂ . . . ಪಾರದಾರಿಕಮುಂ ಗಾಣಿಕಾಪುತ್ರಂ . . . ಪೇಳ್ದಂ (ಮದತಿ. ೦-೩೪೫). ೨. ವ್ಯಭಿಚಾರ ಮಾಡುವವನು ; ಹಾದರಿಗ. [ಸಂ.]

**ಪಾರದಾರ್ಯ** (ನಾ). ಹಾದರ ; ವ್ಯಭಿಚಾರ : ಚೋರವಿದ್ಯವು ಸಹಜನಿನಗಾ ಪಾರದಾರ್ಯವು ನಿಯತ ದಿಟದಿಟ ಹಾರುವಂಗವು ಹಸನು (ಕೌಶಿರಾ. ೩೬-೯೩). [ಸಂ.]

**ಪಾರದಿ**, ಪಾರುಧಿ, ಹಾರುದಿ (ನಾ). ಬೇಟೆ ; ಮೃಗಯೆ ; ಶಿಕಾರಿ : ಬನವಾಸಿಪುರವರಾಧೀಶ್ವರಂ . . . ಅಭಿನವಪಾರ್ಥಂ ಸುಭಟರ ತೀರ್ಥಂ [ನಿಂ]ದಿರಿಪಾತಂ ಪಾರದಿಪರಸುರಾಮನುಭಯದೇಸಿವಲ್ಲಭಂ (ಕಾಇಇ. XX, ೦೦೦-೦೦; 1129); ಧಾರುಣಿಸು ಜನದ ಹುಯ್ಯಲ ನಿಲಿಸಬೇಕೆಂದು ಪಾರದಿಗೆ ಪೊಱಮಟ್ಟು ಮೃಗಪಕ್ಷಿಂಬಳ ಸಂಹಾರಿಸುತ ಹೇಮಕೂಟದಿ ಗುರುವಿರೂಪಾಕ್ಷನಂ ಕಂಡನವನೀಶನು (ಹಕಾ. ೩ ಸೊಪಿ) ; ವರಪುರೇಶ್ವರ ತನ್ನ ಸೇನೆಯ ನೆರಹಿ ಪಾರದಿ[ದಿ]ಯಾಡುತಲ್ಲಿಗೆ ಸರಿದು ಬಂದನು ಜಾಮದಗ್ನಿಯ ವರತಪೋವನಕೆ (ಸಂಶಕ. ೨೬-೦೨). **ಪಾರುಧಿ** : ಮಱುದಿವಸ ಪಾರುಧಿಯನಾಡಿಯೆ ಪರಮಹಾವಾಳಿಯುವಹೊಕ್ಕರು (ಸಂಶಕ. ಶಂ. ೩೨೯): ನೆಱೆಯು ಕಾಲದ ವೃಷ್ಟಿ ಸುರಿಯಲು ಪರಿಹರಿಸಿ ಪಾರುಧಿಯ ಭೂಪತಿ ಮರಳುತಲೆ ಪಾಳೆಗಂಜಿ ಹೊಕ್ಕನು ನೃತ್ಯನಂದನೆಯ ನಿರುತ್ತಮಂದಿರದೊಳಗೆ (ಸಂಶಕ. ಶಂ. ೩೨೯). **ಹಾರುದಿ** : ಅಖಿಳಜಗವಳಲುರಿಯು ನಂದಿಸುವ ಹಾರು[ಪಾಠಾಂ. ಪಾರ]ದಿಯೆ ಸಂಸಾರವಾರುಧಿಯಸುತ್ತರಿಪ ಗುರುಪಾದವ ತಂದು ತೋಱುತ್ತಲಾ (ಹಕಾ. ೩-೩೯). [<ಪ್ರಾ. ಪಾರದ್ಧಿ./ಸಂ. ಪಾಪರ್ದ್ಧಿ]

**ಪಾರದೃಶ್ಯ** (ನಾ). ದೂರದ ದೃಶ್ಯ.–ನೋಟ : ಪಾರದೃಶ್ಯವನ್ನು ಕಳುಹುವವರು, ಎದುರಿನ ನೋಟವು ಒಂದು ಕೆಮೆರಾಲೆನ್ಸಿನಿಂದ ಈ ಗೋಲಕದ ಒಳಗಿರುವ ಲೋಹದ ಹಾಳೆಯ ಮೇಲೆ ಬೀಳುವಂತೆ ಮಾಡುತ್ತಾರೆ (ಪಾಂಕ್ರ. III, ೦೩೫೩). [ಪಾರ$_2$ + ದೃಶ್ಯ]

**ಪಾರದೃಶ್ವ** (ನಾ). ಪೂರ್ಣವಾಗಿ ತಿಳಿದುಕೊಂಡವನು ; ಪಾರಂಗತ ; ನಿಷ್ಣಾತ : ಆ ನೃಪಾಲವಹಾಲಿಮಾಣಿಕ್ಯಂ ಪದವಾಕ್ಯಪ್ರಮೇಯನ್ಯಾಯರಾಜನೀತಿಭರತಸುರತಾದಿ ಸಮಸ್ತಶಾಸ್ತ್ರಪಾರಾವಾರಪಾರದೃಶ್ವನುಂ . . . ಇಕ್ಷ್ವಾಕುವಂಶಕುಶೇಶಯಾಕರಭೂಲೋಕದಿವಾಕರನುಮೆಂಬ ನೆಗಳ್ತೆಗಂ ಪೊಗಱ್ತೆಗತ್ತಳಗಪನಾದಂ (ಅಸಂಪು. ೨.೨೦ ವ). [ಸಂ. ಪಾರದೃಶ್ವನ್]

**ಪಾರದೇಶಿಕ** (ಗು). ಪರದೇಶಕ್ಕೆ ಸಂಬಂಧಿಸಿದ : 'ನವೀನಸಂಸ್ಕೃತಿಯಮರಿಗೆ ಅಪರೋಕ್ಷ ಅರಿತಿರುವ ಪಾರದೇಶಿಕಪಂಥದ ರೀತಿಯಲ್ಲಿ ಧರ್ಮವೆಂದರೆ ಮತವು . . . ಭಕ್ತಿಯು ಎಂದೇ ಭಾವನೆಯು (ಅರ್ಮರಿ. ೩). [ಸಂ.]

**ಪಾರದ್ವಾರ** ‘ ಪಾರದಾರ ’ ನೋ.

**ಪಾರದ್ವಾರಿ** (ನಾ). ಹಾದರಿಗ ; ಜಾರ : ಕಪ್ಪುರಕವಿರ್ಗೆ ಶಠಗೆ ಪಾರದ್ವಾರಿಗೆ . . . ಇಹಪರವಿಲ್ಲ (ಅಜಿತ. ೩-೪೦).

[ ಪಾರದ್ವಾರ (<ಪಾರದಾರ) + –ಇ ]

**ಪಾರಪತೆಗಾರ** ‘ ಪಾರುಪತ್ಯಗಾರ ’ ನೋ.

**ಪಾರಪತ್ತೆಗಾರ** ‘ ಪಾರುಪತ್ಯಗಾರ ’ ನೋ.

**ಪಾರಪತ್ಯ** ‘ ಪಾರುಪತ್ಯ ’ ನೋ.

**ಪಾರಪತ್ಯಗಾರ** ‘ ಪಾರುಪತ್ಯಗಾರ ’ ನೋ.

**ಪಾರಪತ್ರ** (ನಾ). ಒಂದು ಕಡೆಯಿಂದ ಮತ್ತೊಂದು ಕಡೆಗೆ ಪ್ರಯಾಣ ಮಾಡಲು ಪಡೆಯುವ ಅಪ್ಪಣೆಚೀಟಿ, ಅಧಿಕಾರಪತ್ರ ; ರಹದಾರಿ: ಭಾರತದೊಳಕ್ಕೆ ಪ್ರವೇಶ ಮತ್ತು ಅಲ್ಲಿಂದ ಉತ್ಪ್ರವಾಸನ ಮತ್ತು ನಿರ್ವಾಸನ ; ಪಾರಪತ್ರಗಳು ಮತ್ತು ದೃಷ್ಟಾಂಕಗಳು (ಕಾಶಾ. ೨೬೪).

[ ಪಾರ್ + ಪತ್ರ ]

**ಪಾರಮಾರ್ಥ** (ನಾ). ೧. ಮಹೋನ್ನತವಾದ ಸತ್ಯ. ೨. ಒಳ್ಳೆಯುದು; ಉತ್ತಮವಾದುದು : ನೀರ ದೊಬ್ಬುಳಿಕೆಯು ದೊರ್ಣನ್ನೊಳೆ ಕಟ್ಟಿಯಾ ಶೈಕೆಗೆಯ್ಯ ಮಾರುಳನಂತೆ ಶಾರೀರಸೌಖ್ಯದ ನಿಜವೆಂದು ತಿಳಿವುದು ಪಾರಮಾರ್ಥವೆ ಬಲ್ಲವರಿಗೆ (ತ್ರಿಶುಕ. ೯-೨೬). ೩. ಪರಮಾರ್ಥಕ್ಕೆ ಸಂಬಂಧಿಸಿದುದು ; ಮೋಕ್ಷ : ವಿಭ್ರಾಂತಿಯು ಪೊಂದಿ ದೂಷಿತಮನದಾಗಿ ನಿರಂತರಪಾರಮಾರ್ಥಸಜ್ಜಿಂತನೆಯುಂ ತೊಲಂಗಿಸಿ (ಅಮುತ. ೩೩).

[ < ಪರಮಾರ್ಥ ]

**ಪಾರಮಾರ್ಥಿಕ** (ಗು). ೧. ಪರಮಾರ್ಥಕ್ಕೆ ಸಂಬಂಧಿಸಿದ ; ಮೋಕ್ಷಮಾರ್ಗಕ್ಕೆ ಸಂಬಂಧಿಸಿದ : ಮುಕುಳಿತಕರೋಪೇತಂ ದೂತಂ ಪ್ರಜಾಪತಿ ಪಾರಮಾರ್ಥಿಕವಚನಸದ್ಭಾವಂ (ಶಾಂತಿ. ೩-೪೭); ನಿಮ್ಮ ನಿಮ್ಮ ಕರ್ಮಗಳನ್ನು ಅನಾಸಕ್ತವಾಗಿ, ನಿಮ್ಮ ನಿಮ್ಮ ಯೋಗ್ಯತೆಗನುಗುಣವಾಗಿ ಮಾಡುತ್ತ ಹೋಗಿರಿ. ಅದರಲ್ಲಿಯೇ ನಿಮ್ಮ ಐಹಿಕ, ಪಾರಮಾರ್ಥಿಕ ಸುಖವಿದೆ (ರಹಸ್ಯ. ೦೪೭). ೨. ತತ್ತ್ವವಿಚಾರದಲ್ಲಿ ಮನಸ್ಸನ್ನು ತೊಡಗಿಸಿದ. ೩. ಶ್ರೇಷ್ಠವಾದ ; ಮುಖ್ಯವಾದ. (ನಾ). ೪. ಪರಮಾರ್ಥಕ್ಕೆ ಸಂಬಂಧಿಸಿದುದು ; ಮೋಕ್ಷಮಾರ್ಗಕ್ಕೆ ಸಂಬಂಧಿಸಿದುದು : ಪಾರಮಾರ್ಥಿಕ ವ್ಯಾವಹಾರಿಕ ಪ್ರಾತಿಭಾಸಿಕ ತುಚ್ಛವೆಂದು ಪದಾರ್ಥಗಳು ನಾಲ್ಕಾಗಿ ತಿಳಿಯಲಕ್ಕುಂ (ವಿವೇಕ. ೨೦) ; ಮಾನವನ ಜೀವನಸಂಗ್ರಾಮ ಹೇಗೆ ದ್ವಿಮುಖವೊ ಹಾಗೆಯೇ ಮಾನವನ ಅನ್ವೇಷಣೆಗೆ ವಿಷಯವಾದ ವಿಶ್ವವೂ ದ್ವಿಮುಖಿ—ಪಾರಮಾರ್ಥಿಕ ; ವ್ಯಾವಹಾರಿಕ; ನಿತ್ಯ : ಅನಿತ್ಯ (ಕುಪ್ಪ. ೩ ಪೀಠಿ); ನಾನು ಎರಡು ಕೃತಿಗಳನ್ನು ರಚಿಸಿರುವೆನು. ಒಂದು ಲೌಕಿಕ, ಇನ್ನೊಂದು ಪಾರಮಾರ್ಥಿಕ (ಜಾತಕಂ. ೬). ೫. ಪರಮಾರ್ಥವನ್ನು ಕುರಿತ ಚಿಂತನೆ : ತತ್ತ್ವವಿಚಾರ : ಇವರು ನಿಶ್ಚಿಂತರಾಗಿ ವೃದ್ಧರಾಜಮಾತೆಯೊಡನೆ ತಮ್ಮ ಉಳಿದ ಆಯುಷ್ಯವನ್ನು ಪಾರಮಾರ್ಥಿಕದಲ್ಲಿ ಕಳೆಯುತ್ತಿದ್ದರು (ಪಟ್ಟ. ೨೪). ೬. ಅತಿಶ್ರೇಷ್ಠವಾದ ಸತ್ಯ : ಅದ್ವೈತವೇದಾಂತದಲ್ಲಿ ಪರಮಾತ್ಮನನ್ನು ವಿನಾಯಿಸಿ ಬೇರೆ ಯಾವ ವಸ್ತುವೂ ಪಾರಮಾರ್ಥಿಕವಾಗಿ ಇರುವುದಿಲ್ಲ (ಕನ್ನ. ೧೦). ೭. ವಿಚಾರಮಾಡತಕ್ಕವನು ; ಬಲ್ಲವನು ; ಪ್ರಾಜ್ಞ : ಪಾರಮಾರ್ಥಿಕನೆಂದೊಡೆ ಪ್ರಾಜ್ಞನೆಂಬುದರ್ಥಂ (ಕುಸೋ. ೬-೦೭ ಪೀಠಿ) ; ಒಂದೆ ಜಾಗ್ರದಿ ವ್ಯಾವಹಾರಿಕನೆಂದು ಸ್ವಪ್ನದಿ ಪ್ರಾತಿಭಾಸೀನೆಂದು ಸುಪ್ತಿಲಿ ಪಾರಮಾರ್ಥಿಕನೆಂದು ಪೆಸರದಕೆ (ಅಷ್ಟ. ೯-೨೪): ಸುಷುಪ್ತ್ಯವಸ್ಥೆಯಲ್ಲಿಯೂ ವ್ಯಷ್ಟಿಕಾರಣಶರೀರದಲ್ಲಿಯೂ ಅಭಿಮಾನವ ಮಾಡಿದ ಜೀವನಿಗೆ ಪ್ರಾಜ್ಞನೆನುತಲೂ ಪಾರಮಾರ್ಥಿಕನೆನುತಲೂ . . . ಹೆಸರು (ತೀಕಾ. ೬).

[ಸಂ.]

**ಪಾರಮೇಶ್ವರಾಗಮ** (ನಾ). ಆಗಮಂಗಳಲ್ಲಿ ಒಂದು ಬಗೆ : ಆ ಸಿದ್ಧಾಂತ ಭೇದಂಗಳಾವುವೆಂದೊಡೆ ಕಾಮಿಕಾಗಮ ಯೋಗಜಾಗಮ . . . ಪಾರಮೇಶ್ವರಾಗಮ ಕಿರಣಾಗಮ ವಾತೂಲಾಗಮವೆಂಬಿಪ್ಪತ್ತೆಂಟು ದಿವ್ಯಾಗಮಂಗಳಕ್ಕುಂ (ಏಕೋ. ೩೮). [ಸಂ.]

**ಪಾರಮೇಷ್ಠ್ಯ** (ನಾ). ಬ್ರಹ್ಮಪದವಿ ; ಬ್ರಹ್ಮತ್ವ : ಪಾರಮೇಷ್ಠ್ಯದ ಪರಮವಿಭವದ ಸಾರಭವನವದಾಗ್ಯು (ಭಾಗ ೧೦-೯-೨೦);ಪಾರಮೇಷ್ಠ್ಯದ ತನ್ನ ನಿಜಪದಸಾರಸುಖವಜ್ಞಾನ ಮೂಢಶರೀರಿಗಳಿಗಳಪದದನಾತ ಮನದೊಳಗೆ ಕರುಣಿಸಿದ (ಭಾಗ. ೧೦-೨೪-೩೪). [ಸಂ.]

**ಪಾರಮೈಶ್ವರ್ಯ** (ನಾ). ೧. ಅತಿಶಯವಾದ ಸಿರಿ ; ಉತ್ಕೃಷ್ಟವಾದ ಸಂಪತ್ತು. ೨. ಚಕ್ರವರ್ತಿತ್ವ ; ಸಾರ್ವಭೌಮತ್ವ : ಉತ್ತರಾಪಥದ ರಾಜರನ್ನು ಗೆದ್ದು ಅವರಿಂದ ಪಾಳಿಧ್ವಜಾದಿ ಪಾರಮೈಶ್ವರ್ಯಸೂಚಕ ಚಿಹ್ನಗಳನ್ನು ತೆಗೆದುಕೊಂಡನೆಂದು ಬರೆದಿದೆ (ಚಾಳು. ೮೨). [ಸಂ.]

**ಪಾರಮ್ಯ** (ನಾ). ೧. ಪರಾಕಾಷ್ಠೆ ; ತುತ್ತತುದಿ : ‘ ಬಾಳೆಗಂಗಾಭರಣಕ ’ ಎಂಬ ಹೆಸರು ಶಿವಗೆ ಬಿದ್ದೊಡನೆ . . . ಅತ್ಯತಿಮಪೂರ್ವೋತ್ಸಾಹ, ಪ್ರಸ್ಫುಟಿತ ಗಾಂಭೀರ್ಯ, ಪರಿಣತಿಯ ಪಾರಮ್ಯ—ಇವೆಲ್ಲವೂ ಮಾಸಿ ಪಟಲದೆದುರು ಸೋದುಹೋಗುತ್ತವೆ (ರತ್ನಾ. ೦೨೪). ೨. ಪ್ರಾಧಾನ್ಯ : ಜೀವ ಮಾನುಷ್ಯದೊಳು ಪಡೆದವಿತಭಾವಗಳ ಪಾರಮ್ಯ ವಿಲ್ಲಂಬ ಭೂಮಾನುಭೂತಿ (ಕುಶೀ. ೩೪-೬); ಈ ಗ್ರಂಥಗಳಲ್ಲಿ ದೇಶಭಾಷೆಗೆ ಕೊಟ್ಟಿರುವ ಪ್ರಾಶಸ್ತ್ಯ, ಜಾತಿಕುಲಗೋತ್ರಗಳನ್ನು ಬದಿಗೊತ್ತಿ ಭಕ್ತಿಗೆ ಕೊಟ್ಟ ಪಾರಮ್ಯ, ಅತಿಶಯ ಬೆಲೆಯುಳ್ಳದ್ದೆಂದು ಇಂದಿನವರಿಗೆ ತೋಚದೇ ಇರದು (ಕಾಲ. ೩೯೮). ೩. ಶ್ರೇಷ್ಠತೆ : ಸತ್ಯ, ಅಹಿಂಸೆ ಮತ್ತು ಗುರಿಯನ್ನು ಸಾಧಿಸುವ ಸಾಧುಮಾರ್ಗ—ಇವು ಮೂರೂ ಪರಸ್ಪರ ಸಂಬಂಧವುಳ್ಳವುಗಳಾಗಿವೆ ; ಮತ್ತು ನೀತಿನಿಯಮಗಳ ಹಿರಿಮೆಯೂ ಪಾರಮ್ಯವೂ ಅವಕ್ಕೆ ಮೂಲಾವಲಂಬನ (ತ್ರಿಶುಕ. ೦೪೪). [ಸಂ.]

**ಪಾರಯಿಸು**, ಪಾರಯಿಸು, ಪಾರೈಸಂ, ಹಾರಯಿಸಂ, ಹಾರಯಿಸು, ಹಾರವಿಸಂ, ಹಾರೈಸಂ (ಕ್ರಿ). ೧. ಬಯಸು ; ಅಪೇಕ್ಷಿಸಂ : ಮೇರುನಗೋಪಕಂಠವನದೊಳ್ ವನಕೇಳಿವಿಳಾಸಮಂ ಸ್ವಯಂಭೂರಮಣಾಂಬುರಾಶಿವಿಲಸತ್ತಟದೊಳ್ ಜಲಕೇಳಿಲೀಲೆಯಂ ಪಾರಯಿಸಿರ್ದುದಂ ನೆನೆವೂ ನೀಂ (ಆದಿಪು. ೩-೩೪) ; ಪರಿವರ್ತಿತ ಕಟಾಕ್ಷಕಿರಣಾಕ್ಷತಂಗಳಿಂ ನಿಜಾಂಘ್ರಿಗಳನರ್ಚಿಸುವ ಕನ್ಯಾರತ್ನಮಂ ನಿಜಕುಲಕ್ಕಿದುವೆ ಚೂಡಾರತ್ನಮೆಂದು ನೋಡಿ ಪಾರಯಿಸಿ[ಶಾಂತಿ. ಯ್ಸಿ] ಪಲವಂ ನಲ್ವರಕೆಯಂ ಪರಸಿ (ಆದಿಪು. ೩-೯೭ ಟಿ). **ಪಾರಯ್ಸು** : ೧. ಅದರ್ಕೆ ಪಾರಯ್ಸು ಸೌಭಾಗ್ಯಕಾಂತಿ ವಿಟ್ಟನಿಂತೆಂದಂ (ಶಾಂತಿ. ೯-೭೩ ಟಿ); ಸಚ್ಚಿಂ ತೊದಳಿಲೊಟ್ಟಿದಟ್ಟ ನುಡಿಯಂ ಪಾರಯ್ಸಿ[ಶಾಂತಿ. ರೈಸಿ] ಕೇಳಲ್ಕೆ ನೋಣನೊ (ಸುಕುಮಾ. ೯-೦೦೩). **ಪಾರೈಸು** : ೧. ಆ ರಾಜಸುತಂ ಪಸಿದಂ ನೀರಡಸಿದನೆನಗಿವಲ್ಲದ ಲ್ಲರಿನ್ನಂ ಪಾರೈಸಂ ಪಲವಂ (ಆದಿಪು. ೩-೫೬) ; ಆ ರಮಣೀರಮಣರ ಶೃಂಗಾರರಸಾಪೂರ್ವತರ ತರಂಗಿಣಿಯೊಳದೆಂ ಪಾರೈಸಿ ತೊಟಲ್ದುವೊ ರಸ ಪೂರದ ವಿಭಾಂಗಳನೆ ಪೋಲ್ತು ನೋಟ್ಪರ ಕಣ್ಗಳ್ (ಚಂದ್ರಪ್ರ. ೬-೬೭) : ಅದ್ಭುತಮೆನಿಪ್ಪ ತತ್ಪ್ರಕಟವೊಂದಲ್ಲದಟ್ಟ ವಿಕಾಸಂ ನೆರೆಗೊಂಡು ಕೋಕಮಿಥುನಂ ಪಾರೈಸಿರಲ್ ಮಬ್ಬು ಪಿಂಗುವುದೇ (ಕಳಾಸಂ. ೪೯೭). **ಹಾರಯಿಸು** : ೧. ಧಾರುಣೀಪತಿ ಧರ್ಮಸುತ ತಾ ಹಾರಯಿಸಿಯಿಹುದೆಂದು ಕಾಂತೀನಾರಿ ತಾ ಪತಿಕರಿಸೆ ಪಾರ್ಥನು ಚಲುವನಾತನದ (ಸಂಕ್ರಜ. ೨೩-೮೬) ಎನ್ನ ಪ್ರಾಣ ನಿಮ್ಮ ಪ್ರಸಾದವನೆ ಹಾರಯಿಸುತಿರ್ಪುದಯ್ಯಾ (ಬಸವೇ. ೦೧೩-೬೭); ಆರೋಗ್ಯಭಾಗ್ಯವನು ಮನಕೆ ತನುಗೆಂತಂತೆ ಹಾರಯಿಸುವೊಡೆ ಹಲವು ಸರಳನೀತಿಗಳ ಧಾರಯಿಸು ನೆನೆಸನಲಿ ನುಡಿಯಲ್ಲಿ ನಡತೆಯಲಿ ಪಾಲಾಗು ಸೋಲಿಯಿಂದ ( ಮಂಕುತ. ೯೦೩ ). ೨. ಒಳ್ಳೆಯುದನ್ನು ಬಯಸಂ ; ಹಂಥ

ಶಿಕದಪಳಸಿಯಳ್ (ಜಸ. ೬-೨೦). ೩. ಪರ್ಷಿಯಾದೇಶದ ಕುದುರೆ.

**ಪಾರ್ಶಿಕ**: ೨. ಕಾಳಗವ, ಶಾಂತಿ ನಿನಗಿಲ್ಲೆಂದು ಪಾರ್ಶಿಕಂಗಿತ್ತುದು ದೈವಂ (ಪಂಪಭಾ. ೬-೦೫೨). [< ಸಂ. ಪಾರಶೀಕ]

**ಪಾರಶೀಕ** (ನಾ). ಪರ್ಷಿಯಾದೇಶದ ಜನ: ಪಾರಶೀ[ಪಾಠಾಂ. ಸೀ]ಕ ಕಿರಾತ ಬರ್ಬರ ಪಾರಿಯಾತ್ರರ ಮುಂಚಿದು ಸರ್ಪವಿಹಾರವನು ಮಾಡಿದನು ಮ್ಲೇಚ್ಛ ಸಹಸ್ರಕೋಟಿಗಳ (ಕುವ್ಯಾಸ. ೬-೨೮). [ಸಂ.]

**ಪಾರಸ** (ನಾ). = ಪಾರಶಿಕ ೧: ಬಬ್ಬರಂ×[ಪಾರಸ]ದ್ವೈತವಾದ ಲಂಬ ಕರ್ನಾಟಕೀರರಾಜ್ಯ ಘೋಳಾವಾ×ಮೆಂಬ ನಾನಾದೇಶದೇಶಾಂತರ×××ಗಳ (ಶಾಸ. XX, ೦೦೨-೫೦; 1144?); ಪೂರ್ವಕಾಲದಲ್ಲಿ ಪಾರಸದೇಶವನ್ನು ಆಳಿದಂಥ ವಿಖ್ಯಾತರಾದ ಮುಸಲ್ಮಾನ ಅರಸರಲ್ಲಿ ಒಬ್ಬ ಬಹುಪರಾಕ್ರಮಶಾಲಿಯಾದ ಪಾತ್ಶಹನು ಇದ್ದನು (ಕಗದ್ಯ. II, ೦೩). [ಸಂ.]

**ಪಾರಸವ** (ನಾ). = ಪಾರಶವ ೧: "ಶಸ್ತ್ರಂ, ತೀಕ್ಷ್ಣಂ, ಅಯಃ, ಪಾರಸವಃ — ಈ ೪ ಉಕ್ಕು" (ಕರಾಹು. ೨೬-೦೩). [ಸಂ.]

**ಪಾರಸಿ** (ಗು). ೧. ಪರ್ಷಿಯಾದೇಶಕ್ಕೆ ಸಂಬಂಧಿಸಿದ. (ನಾ). ೨. ಪರ್ಷಿಯಾದೇಶದ ಭಾಷೆ: ಬರೆದು ನೋಡೀ ಲಿಪಿಯು ಓದಲ ಬಲ್ಲವರು ಆರೆ ಪಾರಸಿಯಲ್ಲ ಅರಬ್ಬಿಯಲ್ಲ (ಕರಂ. ೦೫೯-೬). [ಸಾ. ಪಾರಸೀ]

**ಪಾರಸಿಕ** (ನಾ). ೧. = ಪಾರಶಿಕ ೧: ಪಾರಸಿಕದೇಶದಲಿ ಪುಟ್ಟಿರ ವನಾಯುಜಂ (ಪುಂಗರಾ. ೮೩-೨೦); ದಿವ್ಯವನು ಯಾರೋಟಿಗೊಂದಿಸಿದ ಸೇತು, ಪಾರಸಿಕವೀರರಿಗೆ ಹಾ ರಾಹು ಕೇತು! (ಪಾಶಿ. ೬-೦೫೬). ೨. ಪರ್ಷಿಯಾದೇಶದ ಜನ: ಪಾರಸಿಕರಸಾಧ್ಯಬಲಂ ಪೆಚ್ಚಿದ ಹೊಸರಿಯು ಪೋಗೆ (ಪಾಶಿ. ೦-೦). ೩. ಪರ್ಷಿಯಾದೇಶದ ಕುದುರೆ. [ಸಂ.]

**ಪಾರಸಿಗ** (ನಾ). ಪರ್ಷಿಯಾದೇಶಕ್ಕೆ ಸೇರಿದವನು; ಪಾರಸಿಕ: ರುದ್ರದತ್ತಂ ಪಾರಸಿಗನುಪದೇಶವಂ ದೇಹಿಯುಂ ಕೇಳ್ದನಪ್ಪುದರಿಂ ತನ್ನ ಕಯ್ಯ ಕತ್ತಿಗೆಯಿಂದೇಱಿದ ಪೋರಿಗಳಂ ತಲೆಯನರಿದು (ಬಂಡಾ. ೯-೭೩ ವ). [ಪಾರಸ + -ಇಗ]

**ಪಾರಸೀಕ** (ನಾ). ೧. = ಪಾರಶಿಕ ೧: ಪಾರಸೀಕದೇಶದಲ್ಲಿ ಹುಟ್ಟಿದುವು ವನಾಯುಜಂಗಳೆಂಬುದು (ಕರಾಹು. ೬೨-೨೬೮): ಬರ್ಬರ ಪಾರಸೀಕ ಪಾರಿಯಾತ್ರ ಹವ್ಯಾರ ಡೊಕ್ಕಾರ ತುರುಷ್ಕ ಮರುಪ್ರಭೃತಿಭೂಪಾಲರಿಂ ಭಯಾನಕರಸಮುಂ . . . ನೆಗಟುತ್ತುವಿರೆಯಿರೆ (ಜಗ. ೨-೩೯ ವ). ೨. = ಪಾರಸಿಗ: ತುರುಕ ಬರ್ಬರ ಪಾರಸೀಕರ ತುರಗವೈಸಾವಿರ ಸಹಿತ ದೋಹರಿಸಿ ನಿಂದನು ಶಕುನಿ ಥಟ್ಟಿನ ಬಲದ ಬಾಹೆಯಲಿ (ಕುವ್ಯಾಗ. ೦-೯). ೩. ಪರ್ಷಿಯಾದೇಶದ ಭಾಷೆ; ಪಾರಸಿ: ಈ ಶಾಸನಗಳು ಬಾಣಮುಖಾಕ್ಷರದಿಂದ ಕೆತ್ತಲ್ಪಟ್ಟಿರುವುವು. ಇವುಗಳು ಪಾರಸೀಕ, ಸೂಸಾನ್ ಮತ್ತು ಶೇಪಿಯಾ ಎಂಬ ಮೂರು ಭಾಷೆಗಳಲ್ಲಿವೆ (ಕಶಾ. ೨-೩). ೪. ಪರ್ಷಿಯಾದೇಶದ ಕುದುರೆ: "ವಾನಾಯುಜ ವಾಜಿಕುಳಂ ಪಾರಸೀಕವೆಂದಜಗವಜೆಯೊಳ್" (ಅಭ್ಯಕೋ. ೫೩-೨೬). [ಸಂ.]

**ಪಾರಳತೆ** (ನಾ). (ಭೂಮಿಯ) ಒಂದು ತುದಿಯಿಂದ ಮತ್ತೊಂದು ತುದಿಯವರೆಗಿನ ಅಳತೆ; ವ್ಯಾಸದ ಅಳತೆ: ಭೂಗೋಳದ ವ್ಯಾಸವು ಅಥವಾ ಭೂಗರ್ಭದ ಪಾರಳತೆಯು ೭,೯೧೨ ಮೈಲುಗಳುಳ್ಳದ್ದಾಗಿದೆ (ಭೂಗೋಳ. ೩). [ಪಾರ೨ + ಅಳತೆ]

**ಪಾರಾ** 'ಪಹರೆ' ನೋ.

**ಪಾರಾಚೌಕಿ** (ನಾ). ಪಹರೆಯವರು ಕಾವಲು ಇರುವ ಚಾವಡಿ, -ಠಾಣೆ: ಅವರು ಹಗಲು ಟೀಪುಸುಲ್ತಾನರ ಸರಹದ್ದಿನಲ್ಲು ಇದ್ದುಕೊಂಡು, ರಾತ್ರಿ ಕಾಲದಲ್ಲಿ ಪಾರಾಚೌಕಿ ತಪ್ಪಿಸಿ, ಕಳ್ಳಮಾರ್ಗವಾಗಿ ಕೊಡಗಿನ ಸೀಮೆ ಸರಹದ್ದಿನ ಒಳಗೆ ಬರುವುದು (ರಾಜೇಂದ್ರ. ೦೦೩). [ಪಾರಾ (< ಪಹರೆ) + ಚೌಕಿ]

**ಪಾರಾಟ** 'ಪಾಱಾಟ' ನೋ.

**ಪಾರಾಪತ** (ನಾ). ಪಾರಿವಾಳ; ಕಪೋತ: ಮಯೂರಪಾರಾಪತಪ್ರಕರ ಕುಕ್ಕುಟ ಧಟಿಕತ್ಯೂಹಾಪ ತಿತ್ತಿರಿ ಕಪಿಂಜಳಾದಿ ವಿವಿಧವಿಹಂಗಪರಿಶೋಭಿತೋಪಾಂತದೊಳ್ (ಕರ್ಣಾಟ. ೩-೬೨ ವ); ಪ್ರಮತ್ತ ಪರಪುಷ್ಟಮಯೂರ ಕೀರಪಾರಾಪತಂಗಳುಲಿವವಮಾಂ . . . ಸೊಗಯಿಸುತ್ತುವಿರಲ್ (ಸುಕುಮಾ. ೬-೮೨ ವ). [ಸಂ.]

**ಪಾರಾಯಣ** (ನಾ). ೧. ದಾಟುವುದು; ಕಡೆಹಾಯುವುದು. ೨. ಗ್ರಂಥಾದಿಗಳನ್ನು ಮೊದಲಿನಿಂದ ಕಡೆಯವರೆಗೆ ಓದುವುದು; ಗ್ರಂಥಾದಿಗಳ ಆಮೂಲಾಗ್ರವಾದ ಪಠನ: "ಸಾಕಲ್ಯಮಾಚತಂ, ಪಾರಾಯಣಂ — ಈ ೨ ಕಡೆ ಮುಟ್ಟೋದುವುದು" (ಕರಾಹು. ೬೬-೨೯೬); ವೇದಪಾರಾಯಣದ ಫಲ ಗಂಗಾದಿ ತೀರ್ಥಸ್ನಾನಫಲ . . . ವಸ್ತ್ರಾದಿ ಕನ್ಯಾದಾನಫಲವಹುದಾದರಿಸಿ ಭಾರತದೊಳೊಂದಕ್ಷರವ ಕೇಳ್ದಂಗೆ (ಕುವ್ಯಾಗ. ೦೩-೨೦); ತಿರುಪರಾತ್ಪರವಾಸುದೇವನ ತಿರುವಡಿಗಳನು ನುತಿಸಿ ಪೂಜಿಸಿ ತಿರುಪ್ರಬಂಧಾದಿಗಳ ಪಾರಾಯಣವ ಮಾಡುತಲಿ (ರಗರಾ. ೦೯-೯೯); ಪಾರಾಯಣ, ಜಪಗಳು ಪೂಜೆಯಲ್ಲಿ ಆವಶ್ಯಕಗಳಾಗಿರುತ್ತವೆ (ಕಾರಿಪ. ೨೨೯). ೩. ಗ್ರಂಥಾದಿಗಳನ್ನು ಮೊದಲಿನಿಂದ ಕಡೆಯವರೆಗೆ ಓದಿದವನು: ಪಂಡಿತ; ಪಾರಗ: "ಅನಂತಪಾರಾಯಣಂ ವಿಗೆ ಓದಿದವನಕ್ಕುಂ" (ಶುಂಗರಾ. ೬೩-೩); ಸಿದ್ಧಾನ್ತಪಾರಾಯಣ ನಿಂತು ಸಂತತಿಗಡರ್ಪನೊಡರ್ಚಿದನುತ್ತರೋತ್ತರಂ (ಶಾಂತೀ. ೯-೦೦೩).

**ಪಾರಾಯಣ ಮಾಡು** = ೧. ಗ್ರಂಥಾದಿಗಳನ್ನು ಮೊದಲಿನಿಂದ ಕೊನೆಯವರೆಗೆ ಓದು: ಪಾರಾಯಣ ಮಾಡಿದ ಬ್ರಾಹ್ಮಣಭೋಜನಕ್ಕಂ ದಕ್ಷಿಣೆಗಂ ಬಿಟ್ಟರು (ಶಾಸ. XI-i, ೦೦೬-೯; 1076); ಶ್ರೋತ್ರಿಯರು . . . ದಿನವೂ ರಾಮಾಯಣವನ್ನು ಪಾರಾಯಣ ಮಾಡುತ್ತಿದ್ದರು (ಕಂಚ. ೦೯೬). ೨. ಒಂದೇ ವಿಚಾರವನ್ನು ಹಲವು ಸಲ ವಿವರಿಸಿ ಹೇಳು: ಮತ್ತೆ ಮತ್ತೆ ಅದೇ ವಿಷಯವನ್ನು ಪಾರಾಯಣ ಮಾಡಬೇಡ (ಆಪ್ರ). [ಸಂ.]

**ಪಾರಾವತ೧** (ನಾ). ಪಾರಿವಾಳ; ಕಪೋತ: "ಪಾರಾವತಮುಖ್ಯಂ ಕಪೋತಂ" (ಅಭ್ಯಕೋ. ೯೨-೦೯); ರಾಜಹಂಸ ಪಾರಾವತಮಿಥುನಂಗಳುತ್ತುಂಗ ಪ್ರಾಸಾದಶಿಖರಮಣಿಗವಾಕ್ಷಾಂತರಾಳವಿವಿಧಗೃಹಾಂತರಗತಂಗಳಾದುವು (ಕಂಚರಾ. ೯-೯೯ ವ); ಪಾರಾವತಂ ವಾನರನೆತ್ತುದಂಚೆ ಸಿಂಹಂ . . . ಕಾಪೋತ್ಯಾಟಿಯೊಂದಿ ತಿರಿಕವ್ರಾತಂಗಳೊಳ್ ಸಂಭವಿಸಿ ದುಃಖತದಿಂ ದುಃಖಮಂ ಪೆರ್ಚಿಸಾರ್ಚಿಂ (ಧರ್ಮಾಮೃ. ೦೪-೦೫೬); ಶುಕ ನೀಲಕಂಠ ಪಾರಾವತ ಮಧುಕರನಿಕರದಿಂದದು ಸೊಗಯಿಸುವುದು (ಶಬ್ದಾನು. ೯-೩೦). [ಸಂ.]

**ಪಾರಾವತ೨** (ನಾ). ಒಂದು ಬಗೆಯ ಮರ; ಹಾಲಿವಾಣ: ಪಾರಾವತ ಮೊದಲಾದ ಮರಗಳಂ ಪಶ್ಚಿಮದಲ್ಲಿ ನೆಲ್ಲಿಮರಗಳಂ ಉತ್ತರದಲ್ಲಿ . . . ಹಾಕಬೇಕು (ಶಾಗಂಧಿ. ೯೨೬-೦೯). [?]

**ಪಾರಾವಾರ** (ನಾ). ೧. ನದಿ, ಸಮುದ್ರ ಮೊದಲಾದುವುಗಳ ಎರಡು ದಂಡೆಗಳು, - ತೀರಗಳು. ೨. ಸಮುದ್ರ; ಕಡಲು: "ರತ್ನಾಕರಃ . . . ಪಾರಾವಾರಃ, ತೋಯಧಿಃ, ಅರ್ಣವಃ, ಜಲರಾಶಿಃ, ಸಾಗರಃ, ಸಮುದ್ರಃ — ಈ ೧೨ ಸಮುದ್ರಂ" (ಕರಾಹು. ೦೦೬-೩೦): ಶ್ರೀರಮಣಿಯಂ ದ್ವಿಷದ್ಬಲಪಾರಾವಾರದೊಳಗ್ರಭುಜವಿಜಯಮಹಾಮೇರು[ವಿ]ನ ಕಡೆದು ಪಡೆದಳವಾರುಮನಿಳಿಸಿದುದುದಾತ್ತನಾರಾಯಣನಾ (ಕಂಚರಾ. ೯-೦): ಸದಸದಾದಿಪಸುಸ್ವರೂಪನಿರೂಪಣಾಪ್ರವೀಣಸಿದ್ಧಾನ್ತಾದಿ ಸಮಸ್ತಶಾ[ಸ್ತ್ರ]ವ್ಯಾಕರಣಪಾರಾವಾರಪಾರಗರುಂ (ಶಾಸ. XX, ೯೬-೨೩; 1072); ಕಾಯದ್ದು ಬಾಯ್ಯಂಪುಮೇಬುಂ ಕುಲಪಾರಾವಾರವಿನಾ ಬೇಸಗೆಯ ದಿಸಿಲೊಳ್ (ಜಗ. ೦೩-೬೧). ೩. ಎಲ್ಲೆ; ಮೇರೆ: ಅಮ್ಮಯ್ಯನ

ಸಂತೋಷಕ್ಕೆ ಪಾರಾವಾರವೇ ಇಗಲಿಲ್ಲ (ಚಂಗಾಳ್ಯ. ೩೨೭) ; ನಾನು . . . ನನ್ನ ಪಾರಾವಾರವಿಲ್ಲದ ಅಂಧಜಗತ್ತಿನ ಪರಮೇಶ್ವರನನ್ನು ಕರೆಯುತ್ತಿದ್ದೆನು (ಗಿತ್ತ್ಯ. ೨೦೬). ೪. [ಜೈನ] ಒಂದು ದೀರ್ಘವಾದ ಅವಧಿ,- ಕಾಲ; "ಪಳತಕ್ಕಿಂತ ಬಹು ಮಹತ್ತಾದ ಕಾಲ" (ಕೃಶಕೋ. ೦೬೬): ಏಕಪಾರಾವಾರೋಪಮಾಯುಷ್ಯನುಂ ಪರ್ವಸಹಸ್ರಸಂಕಲ್ಪಕಲ್ಪಿತಾಪ್ಯಾಹಾರನುಂ . . . ಆಗಿ (ಎಂಸ್ಥೆ. ೨-೬೯ ಶ). [ಸಂ.]

**ಪಾರಾವಾರಗ** (ನಾ). ಎಲ್ಲವನ್ನೂ ಸಂಪೂರ್ಣವಾಗಿ ತಿಳಿದವನು ; ಪಂಡಿತ ; ನಿಷ್ಣಾತ : ಕುಮಾರಬ್ರಹ್ಮಚಾರಿಯಾಗಿ ಭದ್ರಬಾಹು ತಪಂಬಟ್ಟು ಕೆಲವುದಿವಸದಿಂದೊಳಗೆ ದ್ವಾದಶಾಂಗಚತುರ್ದಶಪೂರ್ವಮಪ್ಪಾಗಮಮೆಲ್ಲಮಂ ಗ್ರಂಥಾರ್ಥಸ್ವರೂಪದಿಂ ಕಲ್ತು ಸಕಲಶಾಸ್ತ್ರಪಾರಾವಾರಗನಾಗಿ (ಪಟ್ಟಾರಾ. ೬೯-೨೯). [ಸಂ.]

**ಪಾರಾಶರ** (ಗು). ೧. ಪರಾಶರಮುನಿಗೆ ಸಂಬಂಧಿಸಿದ. (ನಾ). ೨. ಪರಾಶರಋಷಿಯ ಮಗ ; ವೇದವ್ಯಾಸ : "ಪಾ[ರಾಶ]ರ ಪಾರಾಶರಂ ವ್ಯಾಸನಕ್ಕುಂ" (ಕುಂಗಣಾ. ೬೬-೦೦) ; ಇದಂ ಮುನಿಪಾರಾಶರನೊಲ್ದು ಪೇಳ್ದ (ಪಂಕಲ. ೬-೩). ೩. ಪರಾಶರಸಂಪ್ರದಾಯದ ಸೂತ್ರಗಳು,- ನಿಯಮಗಳು. [ಸಂ.]

**ಪಾರಾಶರಿ** (ನಾ). ಪರಾಶರಸಂಪ್ರದಾಯದ ಸಂನ್ಯಾಸಿ,—ಭಿಕ್ಷು : "ಭಿಕ್ಷುಃ, ಪರಿವ್ರಾಟ್, ಕರ್ಮಂದೀ, ಪಾರಾಶರೀ, ಮಸ್ಕರೀ—ಸನ್ಯಾಸಿಯ ಹೆಸರುಗಳು" (ಸಿದ್ಧಾಂತ. ೨೨೪). [ಸಂ. ಪಾರಾಶರಿನ್]

**ಪಾರಿ**[1] 'ಪಾಟಿ' ನೋ.

**ಪಾರಿ**[2] (ನಾ). ಗಾಡಿಯ ತೊಟ್ಟಿಲಿಗೆ ಆಸರೆಯಾಗಿರುವ ಎರಡೂ ಪಕ್ಕಗಳ ಮರದ ಪಟ್ಟಿ : ಬಂಡಿಯ ಪಾರಿ ತುಂಬಾ ಏರುಪೇರಾಗಿದೆ. ಈಗಿಟು ಪಾರಿ ಹಿಡಿಯುತ್ತೇನೆ. ನಿಧಾನವಾಗಿ ಬಿಡು (ರೂಢಿ). [ದೇ.॥ ತಮಿ. ಪಾರ್]

**ಪಾರಿ**[3], ಪಾರಿ[1] (ನಾ). ಒಂದು ಬಗೆಯ ಸಸ್ಯ : ಹಿಂಗು ಗಿಳಂಗ ಪಚ್ಚಿ ಕಟುಕತ್ರಯ ಸೈಂಧವಮುಂ ಫಲತ್ರಯಂ ಸಂಗತಪಾಪ್ಪ ಪಾರಿ [ಕಾಶಂ. ೮. ಲೆ]ಯುಡಮೋದ ಪುರಂದರಮೋಚಿಪಂ . . . ಕೊಳರ್ ಶೃಂಗಿ ಮಹೋರಗಾದಿ ವಿಷಸಂತತಿಯಂ ಕಳೆಗುಂ (ಪಕುಂಠ. ೩-೬೨). **ಪಾರಿ**[1] : "ಬಹುಪ್ರಜಾ_ಮೊದೆ, ಇಲಿ, ತಕ್ಕೋಲ, ಹಾರಿ" (ಒಕಧಿ. ೦೦೬). [ದೇ.॥ ತಮಿ. ಪಾರಿ]

**ಪಾರಿ**[4], ಹಾರಿ[2] (ನಾ). ಸಾಲು ; ಪಂಕ್ತಿ ; ಶ್ರೇಣಿ : "ಪಾರಿಯೆನಲಾದ ಪುದು ಹಾರಗಂ ಶ್ರೇಣಿಗಂ" (ಚಟ. ೬೯). 'ಪಾರಿಪಂಜು' ಪರಾ. **ಹಾರಿ**[2] : ಕಾದಿಟ್ಟು ಪೋರಿಯ ಹಾರಿಯಂತೆಯುಂ ಪಂದಿಯ ಗೊಂದಳದಂತೆಯುಂ (ಧ್ರತ್ರ. ೬-೦೭೬ ಶ) ; ಸುರಿವ ಘಟಾಳಿ ಶೀವುವ ಘಟಾಳಿ ಮರಳ್ವ ಘಟಾಳಿ ಹಾರಿಯೊಳ್ಪರಿವ ಘಟಾಳಿ ಸಾಗರದ ಮೇರುಮಿಸಂತರದೊಳ್ ನಿರಂತರಂ ಶಿರುಗೆ (ಅಪಂತಿ. ೩-೬೩). [ < ಸಂ. ಪಾಲಿ]

**ಪಾರಿ**[5] (ನಾ). ೧. ಕುಡಿಯುವ ಬಟ್ಟಲು ; ಪಾನಪಾತ್ರ ; ಲೋಟ. ೨. ಪುಡಿ ; ಹುಡಿ : ಅತಿಸುರಭಿಸಹಕಾರಕಸ್ತೂರಿಕರ್ಪೂರಪಾರಿ [ಶಾಕಂ. ೧ಲಿ]ಸಮ್ಮಿಶ್ರತಾಂಬೂಲರಾಗರಕ್ತಾಧರಪ್ರವಾಲಪ್ರಭಾಪ್ರಕಟಿತ ಪೂರ್ವಸಂಧ್ಯಾರಾಗನುಂ (ಆಂತ್ರಿ. ೬-೯೦ ಶ). [ಸಂ. ಪಾರೀ]

**ಪಾರಿ**[6] 'ಪಸರಿ' ನೋ.

**ಪಾರಿಕತ್ತು** 'ಫಾರೀಕತ್ತು' ನೋ.

**ಪಾರಿಕಾಂಕ್ಷಿ** (ನಾ). ಮುನಿ ; ಋಷಿ : "ತಪಸ್ವೀ, ತಾಪಸಃ, ಪಾರಿಕಾಂಕ್ಷೀ—ಇ ತಪಸುಳ್ಳವನ ಹೆಸರುಗಳು" (ಸಿದ್ಧಾಂತ. ೨೨೪) : ಆ ಕೌರವನ ನಗರಿಗೆ ಪಾರಿಕಾಂಕ್ಷಿಪ್ರವರನೊಬ್ಬನು ಬಂದು ಹೊಕ್ಕನು ರಾಜಮಂದಿರವ (ಕುಮ್ಯಾಕ. ೦ ೨೧): ಪೂಜಾಯೋಗ್ಯವಸ್ತುಗಳ ಕೈಕೊಂಡು ಪರಮಶ್ರದ್ಧಾನ್ವಿತದಿ ನರದೇವನೈತಂದನಾ ಪಾರಿಕಾಂಕ್ಷಿಯೆಡೆಗೆ (ಜಂಭಾಂ. ೦-೦೬-೪೩). [ಸಂ. ಪಾರಿಕಾಂಕ್ಷಿನ್]

**ಪಾರಿಕಾಯ** 'ಪಾರಿಖಾಯ' ನೋ.

**ಪಾರಿಕೆ** (ನಾ). ದರ್ಶನ ; ಕಾಣ್ಕೆ : ಪಾರ್ವರ ಪಾರಿಕೆ ತ್ರಿನೇತ್ರಶಿಖಿಯೊಲು ಉತ್ತರೋತ್ತರವು ಮೇಲುಮುಖ (ಸೂರ್ಯಕಾ. ೦೦೩-೯). [ಪಾರು[1] (<ಪಾರ್[1])+—ಇಕೆ]

**ಪಾರಿಖತ್ತು** 'ಫಾರೀಕತ್ತು' ನೋ.

**ಪಾರಿಖಾಯ**, ಪಾರಿಕಾಯ, ಹಾರಿಕಾಯ, ಹಾರಿಕಾಯಿ (ನಾ). ಒಂದು ಬಗೆಯ ತೆರಿಗೆ,—ಸುಂಕ : ಇದನುಪೇಕ್ಷಿಸಿದಾತಂ ಕಟಿಯನೊಡೆದ ಪಾತಕನಕ್ಕುಂ ಪಾರಿಖಾಯಂ ಮೊದಲಾಗೆಲ್ಲಮೂರ್ಗ್ಗೇ × × ನಿವೇಶನಂ ಕೊಟ್ಟ (ಎಕ.XX, ೬೮-೯೨; 1015); ತಿಪ್ಪೆಸುಂಕ ಪಾನದೆರೆ ಪಾರಿಖಾಯ ಹೊಲೆಗೊಟ್ಟ ಮಣಿಪ ಈಂಚಿನಿತುಮಂ . . . ಧಾರಾಪೂರ್ವ್ವಕಂ ಮಾಡಿ ಕೊಟ್ಟರು (ಶಾಇ. XX. ೦೩೮-೪೬ ; 1176). **ಪಾರಿಕಾಯ** : ಶ್ರೀಮಜ್ಜಗದೇವ ನಾರಾಯಣದೇವರಂಗಾಳ ಹೊಳಲು ಹುಸೆರದಬ ಬಳಿಯ ಓರಿಯ ಪೆಂಬಟ್ಟಿಯ ವಟ್ಟಂ ಪಾರಿಕಾಯಮುಮಂ ಕುಮವಿದೆಱೆಯುಮ[ಂ] ದೇವರಂಗಭೋಗಕ್ಕೆ ಧಾರಾಪೂರ್ವ್ವಕಂ ಮಾಡಿ ಕೊಟ್ಟರ್ (ಕಇ. ೫೬-೪೪-೦೯; 1107). **ಹಾರಿಕಾಯ** : ಕೇಮನ ಕೇಸಿಯಣನಾಯಕ ಸತ್ರಕ್ಕೆ ಬಿಟ್ಟ ಧ[ರ್ಮ್ಮ] ಹಾರಿಕಾಯ ತಿಪ್ಪೆಸುಂಕ ಗಾಣದಲಿ ಕಾಶ್ಮೀರಭೂಮಿ ಮತ್ತ ಇದಿನಿಸುವ ನಿರ್ವಾಣದೇವರ್ಗ್ಗೆ ಧಾರಾಪೂರ್ವ್ವಕಂ ಮಾಡಿ ಕೊಟ್ಟ ಧರ್ಮ್ಮ (ಶಾಇ. IX-1, ೨೩೫-೦೩ ; 1141) ; ಹಿರಿಯ ಕಟಿಯ ತುಂಬಿನ ಹರಿಯ ಎರಡು [ಭ]ರಣ ಕೋಟ ಪುರದೊಳಗೆ ಹಾರಿಕಾಯ ಹೊಂಗೆ ವೀಸದ ಆಯ ಗಾಣಂಗಳಲ್ಲಿ ಸೊಲ್ಲ[ಗೆ] ಎಣ್ಣೆ ಒಂದು ಗಾಣ . . . ಸರ್ವ್ವನಮಸ್ಯವಾಗಿ ಕೊಟ್ಟ ವೃತಿ (ಕಇ. IV. ೨-೦೮ ; 1241) ; ಮಗ್ಗ ಮುದ್ರೆ ಕ್ರಯ ಕಡ್ಡಾಯ ಹಾರಿಕಾಯ ಬಾಳಿಕ . . . ನೀಲು ಆಗುಮಾಡಿಕೊಂಡು . . . ಭೋಗಿಸಿ ಬಹುದು (ಶಾಇ. IX-11. ೪೪೦-೨೩ ; 1419). **ಹಾರಿಕಾಯಿ** : ಅನುಪು ಹಾರಿಕಾಯಿ ಮೊದಲಾದ ಏನುಂಟಾದನು ಸರ್ವಮಾನ್ಯವಾಗಿ . . . ಸಮರ್ಪಿಸಿದೆವು (ಶಾಇ. IX-11. ೪೯೦-೦೭ ; 1515). [?]

**ಪಾರಿಜಾತ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು; ೪ ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ ಮತ್ತು ಹರಿಚಂದನ ವೆಂಬ ಐದು ದೇವತರುಗಳು ಇಂದ್ರನ ನಂದನವನದಿಂದ ಬಂದುವೆಂದು ನಂಬಲಾಗಿದೆ : ಕನಕಧ್ವಜನೆಂಬ ದೇವಂ . . . ನಮೇರು ಮಂದಾರ ಸಂತಾನಕ ಪಾರಿಜಾತಂಗಳೆಂಬ ಪೂಗಳಂ ಸುರಿಯುತ್ತಂ ದೇವಕೆಳ ದೇವಿಯರ್ಕಳಿ ಸಹಿತಂ ಕ್ಷಪಣಕನ ವಿಮಾನದ ಮುಂದೆ ಇಂತೆಂದು ಪೇಟ್ಬಾಡಿದಂ (ಪಟ್ಟಾರಾ. ೬೪-೮) ; ದೇವರ್ಕಳೀಗಳ್ಬರ್ಿಸಿ ಹೋದರಲೆ ದೇವ ದೇವಲೋಕದ ಪಾರಿಜಾತದರಳೆವೆ ದೇವ (ಕಂಕಾಶ. ೯-೩೪) ; ಮಂದಾರ ಪಾರಿಜಾತ ಸಂತಾನ ಕಲ್ಪ ಹರಿಚಂದನಗಳೆಂಬ ಪೆಸರಿಂ ಪ್ರಸಿದ್ಧಮಾದ ಕಲ್ಪವೃಕ್ಷಪಂಚಕಮಿಪ್ಪುದು (ಏವೀಶ. ೨೦೦). [ಸಂ.]

**ಪಾರಿಜಾತಕ** (ನಾ). = ಪಾರಿಜಾತ : "ಮಂದಾರಃ, ಪಾರಿಜಾತಕಃ, ಹರಿಚಂದನಃ, ಕಲ್ಪವೃಕ್ಷಃ, ಸಂತಾನಃ—ಈ ೫ ದೇವರ ಮರಂಗಳ್" (ಕರಾಮು. ೨೨-೦೩೫) ; ನಂದನವನಸಂಭವಹರಿಚಂದನ ಸಂತಾನ ಪಾರಿಜಾತಕ ನಿಲಸನ್ಮಂದಾರನಮೇರುದ್ರುಮಸಂದೋಹದ ಕುಸುಮಕೋಟಿಯುಂ ವಾಸಿತಮುಂ . . . ಮದಾಳಿಗಳ್ ಮುಸುಱೆ (ಧ್ರತ್ರ. ೦೧-೪೪) ; ಅಲ್ಲಿ ಸಂಪಿಗೆಯುತ್ತು ಪಾರಿಜಾತಕವಿತ್ತು ಮಾವು ಮಲ್ಲಿಗೆಯುತ್ತು ಮನೆಯಿದಿರು (ಕಪೀಂಗ. ೧೭-೨೪೩). [ಸಂ.]

**ಪಾರಿಣಾಮಿಕ** (ಗು). ೧. ಪರಿಣಾಮಕ್ಕೆ ಸಂಬಂಧಿಸಿದ. (ನಾ). ೨. [ಜೈನ] ಜೀವತ್ವ, ಭವ್ಯತ್ವ, ಅಭವ್ಯತ್ವ ಮೊದಲಾದ ಕರ್ಮಗಳು

ಉದಯ, ಉಪಶಮ ಮೊದಲಾದುವುಗಳಿಂದ ಉತ್ಪನ್ನವಾಗದೆ ಇರುವುದು : ಭಾವೋಪಲಕ್ಷಣಂ ಜೀವನೆಂಬುದು ಅದಾವುವೆಂದೊಡೆ ಔದಯಿಕಭಾವಂ . . . ಕ್ಷಾಯೋಪಶಮಿಕಭಾವಂ ಪಾರಿಣಾಮಿಕಭಾವಮೆಂ ದಿಂತು ಭಾವಪಂಚಯುತ್ತಜೀವಕ್ಕುಂ (ಸುಕುಮಾ. ೮-೪೫) ; ಸಾಸಾದನ ಸಮ್ಯಗ್ದೃಷ್ಟಿಗೆ ಪಾರಿಣಾಮಿಕಭಾವಂ . . . ಅಕ್ಕುಂ (ತತ್ತ್ವಸೂ. ೪೦). [ಸಂ.]

**ಪಾರಿತಥ್ಯೆ** (ನಾ). ಹೆಂಗಸರು ತಲೆಯಲ್ಲಿ ಧರಿಸುವ ಒಂದು ಬಗೆಯ ಆಭರಣ : "ಪಾರಿತಥ್ಯೆ = ಮುಡಿಯ ಮೇಗಣ ಮುತ್ತಿನ ಸಂಡು, ಮುತ್ತಿನ ದಂಡೆಯೆಂದೂ ಎಂಬರು" (ಶಾಶಾ. ೩). [ಸಂ. ಪಾರಿತಥ್ಯಾ]

**ಪಾರಿತೋಷ** (ನಾ). ಬಹುಮಾನ : ಶಾಲಾವಾರ್ಷಿಕೋತ್ಸವದಲ್ಲಿ ಆ ಹುಡುಗನಿಗೆ ಅನೇಕ ಪಾರಿತೋಷಗಳು ಬಂದುವು (ಒಉ). [ಸಂ.]

**ಪಾರಿತೋಷಕ** (ನಾ). = ಪಾರಿತೋಷ : ಶ್ರೀಮಂತರ ಪಾರಿತೋಷಕದಿಂದ ನಾನೂ ಧನ್ಯೆಯಾದೆನಲ್ಲ! (ಕಲ್ಯಾ. ೦೩-೦೭); ಇಂದಿಗೆ ಸುಮಾರು ಸಲವತ್ತೇಳು ವರುಷಗಳ ಹಿಂದೆ ರವೀಂದ್ರನಾಥಠಾಕೂರ ಅವರಿಗೆ ಒಂದು ಪಾರಿತೋಷಕವು ಸಿಕ್ಕಿತು. ಅದು ನೋಬೆಲ್ ಪಾರಿತೋಷಕ (ಕಕಕ. ೩-೧೫೦). [< ಸಂ. ಪಾರಿತೋಷಿಕ]

**ಪಾರಿತೋಷಿಕ** (ನಾ). = ಪಾರಿತೋಷ : ಬಳಿದ ಮುನಿನಾಥವಾರ್ತೆ ವಿಳಸತ್ಪಲ್ಲಲತೆ ಫಲಿತವಾದತ್ತನೆ ಭೂತಳಪಾಲಂ ವನಪಾಲಂಗಳತಿಗೆ ವಿಗಿಲೆನಿಸು ಪಾರಿತೋಷಿ[ಪಾಠಾಂ. ಷ]ಕವಿತ್ತಂ (ಚಂದ್ರಪ್ರ. ೨-೧೦೦) ; ಅವರ ಆ ಕರಕೌಶಲಕೆ ಬೆರಗಾದರು . . . ಪಾರಿತೋಷಿಕಗಳನೇಕವನಿತ್ತರು ಮೆಚ್ಚಿದ ಸರಕಾರದವರು (ಇಂಚಾಕ. ೦೦-೩೬). [ಸಂ.]

**ಪಾರಿಪಂಜು** (ನಾ). ಪಾಲುದೀವಟಿಗೆ : ಸುತ್ತ ಕೋವರದ ಕಾವಲು ಪಾರಿ ಪಂಜಿನ ಮೊತ್ತವನೇನ ಬಣ್ಣಿಸುವೆ (ಅಭುಮಾಂ. ೨-೩೩). [ಪಾರ್ಶ್ವ + ಪಂಜು]

**ಪಾರಿಪಂಥಿಕ** (ನಾ). ದಾರಿಹೋಕರನ್ನು ಸುಲಿಯುವವನು ; ಕಳ್ಳ : "ಏಕಾಗಾರಿಕಃ, ತಸ್ಕರಃ, ದಸ್ಯುಃ . . . ಪಾರಿಪಂಥಿಕಃ,ಸ್ತೇನಃ — ಈ ೧೦ ಕಳ್ಳಂ" (ಹಲಾಯು. ೩೬೦-೬೩) ; ಅರಸುಗಳ ವನಿತೆಯರ್ಕಳ ಪಂಕರಪರಿಪೂರ್ಣಭೋಜನಂಗಳ ದುರಿತಾಚರಣರತಪಾರಿಪಂಥಿಕ ನರರಂ. ಕಥಾಶ್ರವಣಮಹಿತಮೆಂಬರ್ ಶ್ರಮಣರ್ (ಚಾಚಾರ. ೨೫-೦೯೯). [ಸಂ]

**ಪಾರಿಪಕ್ಷ** (ನಾ). ಕುದುರೆಯ ಬಾಯಲ್ಲಿರುವ ಕಡೆಯ ನಾಲ್ಕು ದವಡೆ ಹಲ್ಲುಗಳು : "ಎರಡು ಸಡುದಂತಗಳು ಸಂದಂಶವುಕೊಕ್ಕಿನೆರಡು" ಪಲ್ಗಳು ಮಧ್ಯಮಂಗಳಕ್ಕವಜಿಕೊಕ್ಕಿನೆರಡು ದ್ವಿಜಂ ಪಾರಿಪಕ್ಷಂಗಳ್ (ಕುಂಗಾಶಾ. ೩೩-೨೦); ಕಡೆಯ ಪಲ್ಗಳ್ ನಾಲ್ಕಕ್ಕಂ ಪಾರಿಪಕ್ಷ(ಕ್ಷ)ಮೆಂಬುದು (ಅಶ್ವಶಾ. ೮೩-೪). [ಸಂ.]

**ಪಾರಿಪತ್ಯ** 'ಪಾರುಪತ್ಯ' ನೋ.

**ಪಾರಿಪಾಟ್ಯ** (ನಾ). ರೀತಿ ; ಓರಣ ; ಕ್ರಮ : ವೇಣಿಯ ರಚನೆಯಲ್ಲಿ ಚಾತುರ್ಯದ ಪಾರಿಪಾಟ್ಯವು ಕಾಣುತ್ತಿದ್ದಿತು (ಕಪಾಳಂ. ೯೯). [ಸಂ.]

**ಪಾರಿಪಾರ್ಶ್ವಕ** (ನಾ). ೧. ಆಳು ; ಸೇವಕ ; ಪರಿಚಾರಕ. ೨. ನಾಟಕದಲ್ಲಿ ಸೂಂದಿಯನ್ನು ಹೇಳುವವನು : "ಸಾಮಾನ್ಯಾಭಿನಯ" ಪ್ರಕರಣ ಸಂಬಂಧದಲ್ಲಿಯೇ ನಾಯಕ ನಾಯಿಕೆಯರ ಭೇದ, ಅವರ ಶೀಲಸ್ವರೂಪಗಳು, ಪರಿವಾರ, ಸೂತ್ರಧಾರ, ಪಾರಿಪಾರ್ಶ್ವಕ ಮುಂತಾದವರ ಗುಣಗಳು . . . ಇವೆಲ್ಲಾ ನಿರೂಪಿಸಲ್ಪಟ್ಟಿವೆ (ಸಂಪಾಟಿ. ೦೨). [ಸಂ.]

**ಪಾರಿಪಾರ್ಶ್ವಿಕ** (ನಾ). = ಪಾರಿಪಾರ್ಶ್ವಕ. [ಸಂ.]

**ಪಾರಿಪ್ಲವ** (ಗು). ೧. ಅಲುಗುವ ; ಹೊಯ್ದಾಡುವ ; ಚಂಚಲವಾದ : ವಸ್ತುಹೀನವಾಭಿಧಾನಮುಂಟಕ್ಕುಮಪ್ಪೊಡೆ ಶಬ್ದಾರ್ಥಸಂಬಂಧಂ ಪಾರಿಪ್ಲವ ಪರಿಪ್ಲವಮಕ್ಕುಂ (ಶಾಂತಿಪು. ೬-೦೩೩ ವ) ; ಪಯಃಪ್ಲವದೊಳಗೆ ಮುಂಬ್ಮ ಪಾರಿಪ್ಲವನೇತ್ರೆಯರಮರಕಾಂತೆಯರ್ ಸೊಗಯಿಸಿದರ್ (ಅಜಿತ. ೪-೬೦). ೨. ತೇಲುವ (ನಾ). ೩. ಹೊಯ್ದಾಟ ; ಅಸ್ಥಿರತೆ ; ಚಾಂಚಲ್ಯ : "ಲೋಲಂ, ಚಪಳಂ . . . ಪಾರಿಪ್ಲವಂ, ಚಳಾಚಳಂ, ಸಂಚಲಂ — ಈ ೧೦ ಸಂಚಳಂ" (ಹಲಾಯು. ೦೦೩-೦೦) ; ಅವಬೋಧಂ ವಿಷಯಪರಿಪ್ಲವಂ (ಮನೋವಚನಕಾಯನಿಯಮಂ ಪಾರಿಪ್ಲವ)ವಿನಿಸಿಲ್ಲದೆ ಮೂಱುಂ ಭುವನಮನೆಱಗಿಸುವ ಸಮತೆ ಸಮನಿಸಿದಪುದೇ (ಶಾಂತಿಪು. ೯ ೦೦೧). ೪. ವ್ಯಾಪನೆ ; ಹರಡುವಿಕೆ ; ವಿಸ್ಫುರಣೆ : ವರ್ಣಾಕೃತಿಂತಲೂ ನಯನಗಳ ಗಿಂತಲೂ ಸೌಂದರ್ಯದಾ ಪಾರಿಪ್ಲವವು ಅತ್ಯಂತ ಮುಗ್ಧಕರವಾಗಿದ್ದಿತು (ಕಪಾಳಂ. ೯೩). ೫. ದೋಣಿ. ೬. ಒಂದು ದೇಶದ ಹೆಸರು : ಹಯಮುತ್ತರಾಭಿಮುಖವಾಗಿ ಪಾರಿಪ್ಲವಧರೆಯೊಳ್ಪಿದಿ ಪೆಣ್ಣುದುರೆಯಾಗಿ ಪುಲಿಯಾಗಿ . . . ಮುನ್ನಿನಂತೆ ನಿಯಮಿತಪಾರ್ಶ್ವಮಾದತ್ತು (ಕೈಜಾಶಾ. ೦೩-೬). [ಸಂ.]

**ಪಾರಿಬರುಹ** (ನಾ). (ಮದುವೆ ಮುಂತಾದ ಶುಭಸಮಾರಂಭಗಳಲ್ಲಿ ಕೊಡುವ) ಬಳುವಳಿ ; ಉಡುಗೊರೆ : ಪಾರಿಬರುಹಂಗಳನು ಕೊಂಡು ಮುರಾರಿ ಪಾರ್ಥ ಸುಭದ್ರೆಯರು ಸಹಿತೇಱ ರಥವನು . . . ವಿಜಯಂಗೈದನಿಂದ್ರಪ್ರಸ್ಥಪುರವರಕೆ (ಗಿಭಾಗ. ೦೦-೬೨-೩೬). [<ಸಂ. ಪಾರಿಬರ್ಹ]

**ಪಾರಿಬ್ರಾಜಕ** (ನಾ). ವಿರಕ್ತ ; ಸಂನ್ಯಾಸ : ಪಾರಿಬ್ರಾಜಮೆಂದಭಿಷ್ಟುತಗೆಯಲ್ ನಿನ್ನೊಲ್ಗುಂ ಪಸಾದೇ (ಸುಕುಮಾ. ೯-೩೦). [<ಪಾರಿವ್ರಾಜಕ]

**ಪಾರಿಭದ್ರ** (ನಾ). ೧. ಒಂದು ಬಗೆಯ ಮರ; ಹಾಲಿವಾಣದ ಮರ: "ಪಾರಿಭದ್ರಃ, ನಿಂಬತರುಃ, ಮಂದಾರಃ, ಪಾರಿಜಾತಕಃ—೪ ಹಾಲಿವಾಣದ ಮರದ ಹೆಸರುಗಳು" (ಸಿದ್ಧಾಂತ. ೦೦೭). ೨. ಬೇವಿನ ಮರ. ೩. ದೇವದಾರುವೃಕ್ಷ. ೪. ಚಂಗಲಕೋಷ್ಠ. [ಸಂ.]

**ಪಾರಿಭದ್ರಕ** (ನಾ.) = ಪಾರಿಭದ್ರ ೧:"ಮಂದಾರಃ, ಪಾರಿಭದ್ರ (ಜಾತ್ಯಕಃ —ಈ ೨ ಹಾರಿವಾಳಂ'' (ಹಲಾಯು. ೩೩-೯೬). ೨. ದೇವದಾರುವೃಕ್ಷ : "ಶಕ್ರಪಾದಪಃ, ಪಾರಿಭದ್ರಕಃ, ಭದ್ರದಾರು, ದ್ರುಕಿಲಿಮಂ, ಪೀತದಾರು, ದಾರು, ಪೂತಿಕಾಷ್ಠಂ—೭ ದೇವದಾರುವೃಕ್ಷದ ಹೆಸರು" (ಸಿದ್ಧಾಂತ. ೦೨೪). [ಸಂ.]

**ಪಾರಿಭಾವ್ಯ** (ನಾ). ಒಂದು ಬಗೆಯ ಮೂಲಿಕೆ : "ವ್ಯಾಧಿ." ಕುಷ್ಠಂ. ಪಾರಿಭಾವ್ಯಂ. . . . ಉತ್ಪಲಂ — ೬ ಚಂಗಲಕೋಷ್ಠ'' (ಸಿದ್ಧಾಂತ. ೦೯೧). [ಸಂ.]

**ಪಾರಿಭಾಷಿಕ** (ಗು). ೧. ಯಾವುದಾದರೊಂದು ಕಲೆ, ವಿಜ್ಞಾನ,ಶೈಗಾರಿಕೆ ಮೊದಲಾದುವಕ್ಕೆ ವಿಶಿಷ್ಟವಾದ ಅರ್ಥದಲ್ಲಿ ಬಳಕೆಗೆ ಬಂದಿರುವ; ತಾಂತ್ರಿಕವಾದ ಅರ್ಥವುಳ್ಳ. (ನಾ). ೨. ತಾಂತ್ರಿಕವಾದ ಅರ್ಥವುಳ್ಳುದು : ಅನುಭಾವ ಎಂಬ ಪದವನ್ನು ಪಾರಿಭಾಷಿಕವಾಗಿ, ಬಹುಮಟ್ಟಿಗೆ "mysticism" ಎಂಬರ್ಥದಲ್ಲಿ, ಕನ್ನಡದಲ್ಲಿ ವೀರಶೈವರಲ್ಲದೆ ಇನ್ನಾರೂ ಉಪಯೋಗಿಸಿಲ್ಲ (ಶೂನ್ಯಸಂ. ೦೬೦); ವಾಕ್ಯಗಳ ಅಂತಸ್ಸಿಗೆ ಹಿಡಿಯದ ಜಟಿಲವೂ ಪಾರಿಭಾಷಿಕವೂ ಆದ ಅಂಶಗಳನ್ನು ಕಡಿದು ಹಾಕುವುದುಂಟು (ಶಿಕ್ಷಿತ. ೦೫೦). [ಸಂ.]

**ಪಾರಿಭೋಗಿಕ** (ನಾ). ಬುದ್ಧನು ಉಪಯೋಗಿಸಿದ ವಸ್ತುಗಳು : ಬುದ್ಧನು ಉಪಯೋಗಿಸಿದ ಪದಾರ್ಥಗಳು (ಪಾರಿಭೋಗಿಕ) : ಇದರಲ್ಲಿ ಭಿಕ್ಷಾಪಾತ್ರೆ, ಕಮಂಡಲು ಮತ್ತು ಆಸನಗಳು ಮುಖ್ಯ ಉದಾಹರಣೆಗಳು (ಶಾಕೃತ. ೯೯೩). [ಸಂ.]

**ಪಾರಿಯ** 'ಪಾರಿವ' ನೋ.

**ಪಾರಿಯಪಟ್ಟಿ** 'ಪಾರಿಯಾಪಟ್ಟಿ' ನೋ.

**ಪಾರಿಯರ** 'ಪಾರಿಯಾರ' ನೋ.

**ಪಾರಿಯವಟ್ಟೆ**, ಪಾರಿಯಪಟ್ಟೆ, ಪಾರಿವಟ್ಟೆ (ನಾ). ಒಂದು ಬಗೆಯ ಬಣ್ಣದ ಬಟ್ಟೆ: ಪಸಿರ್ಪಟ್ಟೆ ಪಾರಿಯವ[ ಪಾಠಾಂ. ಪ ]ಟ್ಟೆ ಕೆಂಬಟ್ಟೆ ಕ್ಸಗಸವ ಹಳದಿಯ ಪಟ್ಟೆಗಳ ಪೊಸಗುಡಿಗಳ ಸಾಲು ಹೊಪ್ಪುವು ಗಗನಾ ವಿಸರಾಪಾಳಿಪುದೊಳಗೆ (ಶಂಂಖಾಂ. ೧೨-೬೨). **ಪಾರಿಯಪಟ್ಟೆ**: ಉಟ್ಟ ದುಕೂಲವೆಂಬುವದು ಪಾರಿಯಪಟ್ಟೆವೊಲಾಗೆ (ಶಿಕೆಂ. ೬-೩೦) ; ಕಂಗಾಣಿಸದೆ ಪಾರಿಯಪಟ್ಟೆ[ಟ್ಟೆ] ಕರ್ಪಗ್ಣಾ ಗೊಂಗಡಿ ಮುಸುಕಿಟ್ಟುಕೊಂಡು . . . ದುಸ್ಸಂಗದಂಪತಿಗಳೊಪ್ಪಿದರು (ಮೋಹತ. ೦೬-೨೩). **ಪಾರಿವಟ್ಟೆ**: ಭೂದೇವಿಯರ್ ಕುಜಾವಳಿಯೆಂಬ ಮಕ್ಕಳಿಗೆ ಸಾದರದಿ ಪಾರಿವಟ್ಟೆಯ ಪಾಸಿ ನಿಲಿಸಿದೊಲ್ (ಚಿಕೋಕು. ೦೦-೨೩).

[ ಪಾರಿಯ ( <ಪಾರಿವ$_2$ ) + ಪಟ್ಟೆ$_2$ ]

**ಪಾರಿಯಾತ್ರ** (ನಾ). ೧. ಏಳುಕುಲಪರ್ವತಗಳಲ್ಲಿ ಒಂದು ; ಇದು ವಿಂಧ್ಯಪರ್ವತದ ಪಶ್ಚಿಮಭಾಗದಿಂದ ನರ್ಮದೆಯ ಉತ್ಪತ್ತಿಸ್ಥಾನದ ವರೆಗೂ ಹಬ್ಬಿ ಅರಾವಳಿಬೆಟ್ಟಗಳಲ್ಲಿ ಸೇರಿಕೊಂಡಿದೆ. ೨. ಒಂದು ದೇಶದ ಹೆಸರು: ಪಾರಸೀಕ ಪಾರಿಯಾತ್ರ ಹಮ್ಮೀರ ಡೊಕ್ಕಾರ ತುರುಷ್ಕ ಮರುಪ್ರಭೃತಿಭೂಪಾಲಕರಿಂ ಭಯಾನಕರಸಮುಂ . . . ನೆಗಳುತ್ತುಮಿರೆ (ಆಗಂ. ೨-೩೯ ವ); ಪಾರಿಯಾತ್ರ ಮಿಥಿಲಾ ಪಾಂಚಾಳ . . . ವತ್ಸದೇಶಕ್ಕೆ ತಸ್ಕರ ರೋಗಾದಿ ಭಯಂಗಳಂ ಜನಿಯಿಕುಂ ಪಂಕೇಜಮಿತ್ರಾತ್ಮಜಂ (ಅಭ್ಯಮು. ೦೨-೬೦); ಪುಷ್ಕರ ಪಾರಿಯಾತ್ರ ಕರೂಷ ಕಾಂಭೋಜ . . . ಧರಣೀಪಾಲತತಿ ಸಂದಣಿಸಿದುದು ಸಾಕೇತನಗರಿಯಲಿ (ಕೊರಂ. ೦-೬-೦೬). ೩. ಪಾರಿಯಾತ್ರದೇಶದಲ್ಲಿ ಹುಟ್ಟಿದುದು: ಮನುಸತಗಮನದ ಪಾರಿಯಾತ್ರನ ತುರಗ ಕೂಡಿದ ಹೇಮನಿರ್ಮಿತ ಹಿರಿಯ ಟೆಕ್ಕೆಯದ . . . ತಳಿತ ಶಸ್ತ್ರದಿ ಭರದಿ ತುಂಬಿದ ಕೋಟರಥಗಳು ರಣಕೆ ಹೊಯಿವಡಲು (ಕೌತಂ. ೨೦-೬). [ ಸಂ. ]

**ಪಾರಿಯಾತ್ರಕ** (ನಾ). ೧. =ಪಾರಿಯಾತ್ರ ೧: '' ಹಿಮವಾನ್, ನಿಷಧಃ, ವಿಂಧ್ಯಃ, ಮಾಲ್ಯವಾನ್, ಪಾರಿಯಾತ್ರಕಃ, ಗಂಧಮಾದನಂ. . . ಹೇಮ ಕೂಟಾದಯಃ '' (ಸಿದ್ಧಾಂತ. ೦೦೬). ೨. = ಪಾರಿಯಾತ್ರ ೨: ಪಾರಿಯಾತ್ರಕ ಕೇರಳಮುಖಾಪಾರದೇಶಂಗಳೊಳಿಸೆಪ ಜಂಗಮವು ಭಕ್ತಾಳಿ ಎಡೆಯೆಡೆಯೋಳೀ ಗಡಣೆಯಿಂದೆಡೆವಿಡದೆ ನಡೆವುತ್ತಿರಲು (ಚಿಕು. ೬-೦೯); ಪಾರಿಯಾತ್ರಕದೇಶದಲ್ಲಿಪ್ಪ ಮಲ್ಲಿಕಾಪುರದಲ್ಲಿ ಪಾರಿಯಾತ್ರಕನೆಂಬ ರಾಜನಿಪ್ಪನು (ಕೈಕಸೋ. I, ೩೬೦). [ ಸಂ. ]

**ಪಾರಿಯಾತ್ರಿಕ** (ನಾ). ಪ್ರಯಾಣಕ್ಕೆ ಯೋಗ್ಯವಾದ ರಥ: ''ಅಧ್ವಸ್ಯಃ, ಪಾರಿಯಾತ್ರಿಕಃ, ಕರ್ಣೀರಥಃ ___ಈ ೩ ಪಯಣದ ರಥಂ'' (ಕರಾಘು. ೬೩-೨೯೧). [ ಸಂ. ]

**ಪಾರಿಯಾತ್ರೆ** (ನಾ). = ಪಾರಿಯಾತ್ರ ೧: ಸ್ವಸ್ತಿ ಅನೇಕಸುಧಾರಸ × ತ್ರವೀಚಿಚ್ಛಾಯಲವಣಾಬ್ಧಿ ಪಳಿಯಮಳಯುತವೇಳಾವನಗಂಗಾತೀರಪಾರಿಯಾತ್ರೆ ತನುಮಧ್ಯದೇಶಾಧೀಶ್ವರ ಮಾಹಿಷ್ಮತೀಪುರವರಾಧೀಶ್ವರನ ಹಿಹಯವಂಶೋದ್ಭವಂ (ಕಇಶಿ. ೦೨-೯-೬೪; 1148). [ ಸಂ. ಪಾರಿಯಾತ್ರ ]

**ಪಾರಿಯಾನಿಕ** (ನಾ). = ಪಾರಿಯಾತ್ರಿಕ. [ ಸಂ. ]

**ಪಾರಿರಕ್ಷಕ** (ನಾ). ಸಂನ್ಯಾಸಿ ; ಭಿಕ್ಷು: '' ಪರಾಶರೀ . . ಪಾರಿರಕ್ಷಕಃ, ಪಾರಿವ್ರಾಜಕಃ, ತಪಸ್ವೀ, ಕರ್ಮಂದೀ, ತಾಪಸಃ ___ಈ ೯ ತಪಸ್ವಿ '' (ಕರಾಘು. ೬೬-೨೫೫). [ ಸಂ. ]

**ಪಾರಿರ್ಯಾರ**, ಪಾರಿಯರ (ನಾ). ಪರಿಹಾರ: ಮನ್ನೆಗಾಮುಣ್ಣು ಪ್ರಪೆ ಕರಣ ಚೈತ್ರನಿತ್ಯುದ: ಮುವತ್ತವಿರದು ಸರ್ವ್ವಪಾದ ಪಾರಿರ್ಯ್ಯಾರ (ಸೌಇಇ. IX-1, ೫೨-೩; ?). **ಪಾರಿಯರ**: ಇ ಪಾರಿಯರಮನಃಪೊನ್ನಂದನ ನ್ಯಾಯ ತಪ್ಪಿಗೆಯುಮಾನ್ನಕೆಡಸೋನಕ್ಕು ತಾನ್ (ಸೌಇಇ. IX-1, ೫೨-೬ ;?).
[ <ಸಂ. ಪರಿಹಾರ ]

**ಪಾರಿವ$_1$** (ನಾ). ಒಂದು ಬಗೆಯ ಪಕ್ಷಿ; ಕಪೋತ; ಪಾರಿವಾಳ: ''ದ್ಯುಶದಾತನಂ ಪಾರಿವವೆನಿಕ್ಕು'' (ಶುಂಗರಾ. ೫೨-೯); ದಿವ್ಯಮ[ಖ]ಪಾಂ ಕೆಯ್ಯೊಂಡು ಸಗ್ಗಕ್ಕೆ ಪಾಱುವಾ ಪಾರಿವ ಜಕ್ಕವಕ್ಕಿಗಳ್ (ಶಂಕಾ. ೬-೩೮); ಕಾಮಿನೀಮಣಿತಮಿಲಿಬೆಂದು ಪಾರಿವದ ಮೆಲ್ಲುಲಿಯಂ . . . ತಣಿಯದೆ ಕೇಳ್ವರ್ (ಉದ್ಭಟ. ೦-೬೨); ಕಾಬುಖಿಲೆ ಲಾವುಗೆ ಗೌಜು ಪಾರಿವ . . . ಗಿಂಚಲು ಗರಿಗ ಮೊದಲಾದಖಿಳಖಗಕುಲ ಬಿದ್ದುದುರಿಯೊಳಗೆ (ಶುಮ್ನಾ. ೩೦-೩೩). [ <ಪ್ರಾ. ಪಾರಾವಯ, ಪಾರೇವಯ./ಸಂ. ಪಾರಾವತ./ತೆಲು. ಪಾರುವ, ಪಾರುವಾ, ಪಾವುರಾ]

**ಪಾರಿವ$_2$**, 'ಪಾರಿಯ (ನಾ). ೧. ಒಂದು ಬಗೆಯ ಬಣ್ಣ: ಪವಣ್ಣಾಡಿದ ಸುವರ್ಣಪಾರಿವದ ಕುಪ್ಪಸವೊಪ್ಪೆ ಬೆಡಂಗನಾಳ್ದು ಕಣ್ಗೆಡಿಸಿದ ಪೆಂಡವಾಸದ ವಿಳಾಸದ ಸೊಳೆಯರೊಪ್ಪಿ ತೋಱಿದರ್ (ಶಂಕಾ. ೯-೦೦೪); ''ಪಾರಿವಾಳದ ಬಣ್ಣ'' (ಶಂಕಾ. ೩೯೦); ಬೀಸುಬಡಿಗೆಯ ಧನುಸರಳ ಪಾರಿವ[ಪಾಠಾಂ. ಭಾಸುರ]ದ ಕುಪ್ಪಸದ ಕೇಶದಲಿ ತಳಿರುಗಳ ಕಟ್ಟಿ ವಿಲಾಸದಲಿ ಹರಿತಹ ಕಿರಾತರು ಘಾಸಿಯಾದರು (ಶುಮ್ನಾ. ೬೦೩. ೯-೦೦). **ಪಾರಿಯ**: ೨. ಒಂದು ಬಗೆಯ ಬಣ್ಣದ ಬಟ್ಟೆ: ದೈತ್ಯಮರ್ದನನ ದಾಸವಾರಿಯ ರಕ್ಕಸಜೂಜಿನ ಪಟ್ಟೆಯ ಪರಿಗೆಯ ಪಸರದ ಪಾರಿಯ ದೊಯ್ಯಾರದ ಕೆಂದಟ್ಟಿನ ಪಂತಿಯ . . . ತಟ್ಟನೊಟ್ಟಜೆಯ ಟ್ಟುಬ್ಬಟೆಯ ಬಿರುದಿನ ಹರಿಗೆರಾಜರ ಪರಿವೀಥಿಯೊಳು (ಗಂಕ.೬-೩೩ ವ); ತವೆ ಪಾರಿಯದಿ ನಿಂದ್ರಗೋಪದಿಂ ಶಿವನಾಂತ ತೊಪಲಿರದನಣಕಿಸುತೆ ಪೊಂಬಟ್ಟೆಯಿಂದೆ ಮಾಧವನ ಮಳ್ಗಿಸುತೆ . . . ಒಪ್ಪಿವರಲ್ಲಿ ದೂಸಿಗರ್ (ಶತ್ಸಾ. ೯-೬೬); ಬಟ್ಟಮುತ್ತಾಗಳು ಕೇವಣಿಸಿರ್ದ ಪಾರಿಯ ಪಟ್ಟಾವಳಿ ಚಲ್ಲಣದ ತೊಟ್ಟು (ಮೋಹತ. ೦೨-೯೩). [ <ಪ್ರಾ. ಪಾರಸು./ತಮಿ. ಮಲ. ಪಾರಿ]

**ಪಾರಿವಂಕ** (ನಾ). = ಪಾರಿವ$_1$. ಗೊರವ ಗೌಜನು ಕಾಡೆ ಗಿಡಗ ಸಬಲ ಮಂಡೆ ಹರಟಿ ಕೆಂಬೋತು ಪಾರಿವಂಕ . . . ಪರಿಯನಿನ್ನೇನ ಪೇಳುವೆನು (ಮೂರಚಾಂ. ೦-೬೨). [ <ಪಾರಿವ$_1$ ]

**ಪಾರಿವಗೂಗು** (ನಾ). ೧. ಪಾರಿವಾಳದ ಧ್ವನಿ. ೨. (ಅಲಂ) ಸಂಭೋಗ ಕಾಲದಲ್ಲಿ ಕೊರಳಿನಿಂದ ಹೊರಡುವ ಧ್ವನಿ; ಮಣಿತ; ರತಿ ಕೂಜಿತ: ನೇತ್ರೋಳಂ ಪಿಡಿದೀಟ್ಡು ಬಿಡ್ದೊಡೆಯ ಮೇಲಿಟ್ಟನ್ನ ಮೆಯ್ಯೋಳ್ಮೆಗೊಳ್ಳುಇಪ್ಪಂತಿರೆ ತಳ್ಕೆಗೆಯ್ದು . . . ಅಗ್ಗಳದೊಳ್ಪಾರಿವ ಗೂಗಿನಿಂ ತಣಿಪಂ (ಜಕ. ೬-೨೩೩). [ ಪಾರಿವ$_1$+ಕೂಗು$_2$ ]

**ಪಾರಿವಟ್ಟೆ** 'ಪಾರಿಯವಟ್ಟೆ' ನೋ.

**ಪಾರಿವಾಣ$_1$** 'ಪಾರಿವಾಳ$_1$' ನೋ.

**ಪಾರಿವಾಣ$_2$** 'ಪಾರಿವಾಳ$_2$' ನೋ.

**ಪಾರಿವಾಳ$_1$**, ಪಾರಿವಾಣ$_1$, ಪಾರಂವಾಣ$_1$, ಪಾಲ್ವಣ, ಹಾರವಾಣ$_1$, ಹಾಲುವಾಣ$_1$ (ನಾ). = ಪಾರಿವ$_1$: ''ಪಾರಾವತಃ, ಕಲರವಃ, ಕಪೋತಃ ___ಈ ೩ ಪಾರಿವಾಳ'' (ಕಾಶಾ. ೦೦೯); ಅಂಬಾಲಿಕೆ ನಿನ್ನಯ ಕಿವಿಯಿಂ ಬಿದ್ದವುದೆಂದು ಜಗುಬ್ಡ ಚೆನ್ನೆಯ್ದಿಲ ಪೂಸಂ ಭರದೆ ತೆಗೆದು ಬೀಸಿದೆನುಬರದೊಳ್ ಪಾರಿವಾಳಮಂ ಬೆದಱಿಪವೋಲ್ (ದಕಾ. ೬-೨೩೬); ಶುಕಪಿಕಪಾರಿವಾಳದ ಹುಯ್ಯಲುಬ್ಬಿತು ಸುಕರವಾಯ್ತೆಂದುಸುರಾವೆನು (ಥಕ. ೦೨-೯೬): ಅವನು ನಿರ್ಮಲಳು ಕೊಟ್ಟದ್ದು ಪಾರಿವಾಳದ ಕಾಲಿಗೆ ಒಂದು ಪತ್ರವನ್ನು ಕಟ್ಟಿ ಹಾರಿಬಿಟ್ಟನು (ಅಂಕಮು. ೨೨೪). **ಪಾರಿವಾಣ$_1$**: ''ಪಾರಾವತಃ, ಕಲರವಃ ಕಪೋತಃ . . . ಪಾರಿವಾಣದ ಹಕ್ಕಿ'' (ಸಿದ್ಧಾಂತ. ೦೫೬); ಶ್ಲೇಷ್ಮಾಧಿಕವಾದ ನಾಡಿಯು ಪಾರಿವಾಣದ ಹಾಗೆ ವೇಗ ಮಂದವಾಗಿ ಶೀತವಾಗಿ ಆಡುತ್ತಿಹುದು (ಸಕವ್ಯ. ೦೩); ಪಾರಿವಾಣ ಬಿಡೋಕೆ ಹೋಗಿದ್ದೆಯಾ? (ಶರ್ಬುಕ್ರಾ. ೩೦೦). **ಪಾರುವಾಣ$_1$**: (೬). **ಪಾಲ್ವಣ**: ಕಾಡ ಗೌಜಲು ಕರಿಯ ಲಾವುಗೆ . . . ಪರಿತ ಪಾಲ್ವಣ ಸ್ವೇತಸೋರೆಯು

ಪರಿತ ಗೀಜಗ ಮರೆದವು (ಗೋಪಾಲ. ೨೪). **ಹಾರವಾಣ₁** : (೪), **ಹಾಲುವಾಣ₁** : '' ಪಾರಾವತಃ, ಕಲರವಃ, ಕಪೋತಃ — ೩ ಹಾಲು ವಾಣದ ಹಕ್ಕೀ ಹೆಸರುಗಳು '' (ಶಿವ್ಯಾಖಿ. ೧೫೬). [<ಸಂ. ಪಾರಾವತ]

**ಪಾರಿವಾಳ₂**, ಪಾರಿವಾಣ₂, ಪಾರುವಾಣ₂, ಹರಿವಾಣ₂, ಹರಿವಾಳ₁, ಹಾರವಾಣ₂, ಹಾರಿಯಾಳ, ಹಾರಿವಾಣ, ಹಾರಿವಾಳ, ಹಾರುವಾಣ, ಹಾಲಿವಾಣ, ಹಾಲುವಾಣ₂ (ನಾ). ಒಂದು ಬಗೆಯ ಮರ; ಪಾರಿಭದ್ರ: '' ಪಾರಿಭದ್ರಃ, ನಿಂಬತರುಃ, ಮಂದಾರಃ, ಪಾರಿಜಾತಃ — ಈ ೪ ಪಾರಿವಾಳದ ಮರ '' (ಶಾಶಾ. ೧೦೬); ಪಾರಿವಾಳದಾ ತದಕಿನ...ಇಪ್ಪೆಯ ಪಾತಂಗಳ ಕೊಂಬುಗಳಂಬರಂಬರಂ ಪುದಿದು ಪೊದಟ್ಟು ಸಂರ್ಬಡರೆ ಪರ್ಬಿರೆ (೦೫ಾಪ. ೬-೨೨); ಅವರಿಕೆಸೊಪ್ಪು, ಕರಿಹತ್ತಿ ಸೊಪ್ಪು, ಪಾರಿವಾಳದ ಸೊಪ್ಪು . . . ರಸವ ಹಿಂಡಿ ಬೆರಣೆ ಬೂದಿಯ ಕಲಸಿ ನೆತ್ತಿಬಾಯಿಗೆ ಒತ್ತಿದಾಕ್ಷಣವೇ ರಕ್ತವಾಂತಿ ನಿಲ್ಲುವುದು (ಸಕವ್ವ. ೦೬೬). **ಪಾರಿವಾಣ₂** : '' ನಿಂಬತರುಃ — ಬೇವು, ಪಾರಿವಾ(ಳ)ಣ '' (೬ಸಂ. ೮೬); ಅ ತೈಲದಿಂ ಕೈಯಂ ಪೂಸಿ ಪಾರಿವಾಣದ ಕಾಯಂ ಒತ್ತಲು ಒಡೆಯುವುದು (ಶಿವ್ಯ.ಶಿ. ೩೩); ಪಾರಿವಾಣದ ಸೊಪ್ಪಿನ ರಸ, ಒಂದೆ ಲಗನ ರಸ . . . ಇವಿಷ್ಟನೂ ಪ್ರತ್ಯೇಕ ಒಂದು ಹಲವ ಹನಿಸಿ. ಮರ್ದಿಸಿ . . . ಕೊಡಿಸುವುದು (ವೈದ್ಯಸಾ. I. ೬೪). **ಪಾರುವಾಣ₂** : "ಪಾರುವಾಣ (ಹಾಲಿವಾಣ) — ಪಾರಿಭದ್ರ = ವೃಕ್ಷವಿಶೇಷ" (ಶಬ್ದಕೋ. ೨೩). **ಹರಿವಾಣ₂** : ಹರಿವಾಣ : — ಈ ಬಿತ್ತ ಮೂಜಿನ್ನು ನೀರಲ್ಲಿ ಅರೆದು ಕುಡಿಯ ಪಾಜುದಿವದಲ್ಲಿ ಖುತುವಾಗುವಳು (ಶಿವ್ಯ.ಶಿ. ೬). **ಹರಿವಾಳ₁** : ಈ ನಮ್ಮ ಊರ ಮುಂದಿನ ಹರಿವಾಳದ ಮರಗಳು (ಮುಂಜಾ. ೬-೨೬೬). **ಹಾರವಾಣ₂** : (೪). **ಹಾರಿಯಾಳ** : '' ಹಾರಿಯಾಳದ ಮರ = ಪಾರಿಜಾತಕ, ಪಾರಿಭದ್ರ, ಮಂದಾರ, ನಿಂಬತರು '' (ಶಾಶಾ. ೪). **ಹಾರಿವಾಣ** : "ಪಸಿರಃ — ಉತ್ತರಣೆ, ಚೆನ್ನಿಗ್ಗಿಲು, ಗಜಹಿಪ್ಪಲಿ, ಹಾರಿವಾಣದ ಮರ" (೬ಸಂ. ೦೯೬): ಅಪರಿಯ ಮೂಳಮುಪಂ ತ್ರಪ್ಪವುದುಂ ಮೇಣ್ ಹಾರಿವಾಳ(ಣ)ದೆಲೆಯಂ ತಿಳತ್ಯೆಲವುಪಂ ಮೇಣದು ಪಾಜ್ಯವುದನೆಜೆಯ ××× ಪೋಕುಂ ಕ್ರಿಮಿಗಳ್ (ಲೋಕೋಪ. ೯-೨೩೦). **ಹಾರಿವಾಳ** : ಅರುಟಾಳಂ ಹಾರಿವಾಳಂ ತುಡು ತಡಸೊಡವಂ ಲೊಕ್ಕಿ ಗೊಟ್ಟುಕ್ಕಿ . . . ತಜಿಮದಿಂಪೊಪ್ಪುತಿರ್ದತ್ತರಣ್ಯಂ (ಗಂಕ. ೦.೬೨); ಕುರುಟಿಗೆ ಹಾರಿವಾಳ[ಶಾಕಾಂ. ಣ]ದ ರಸಂಗಳೊಳಾಲದ ಪಾಲನಿಂಬಿನಿಂ ಬೆರಸಿದು (ಜಮತ. ೦೩-೩೬); ಹಾರಿವಾಳ (ಪಾಂಗಾರಾ)—ಮಧ್ಯಮ ಆಕಾರದ ವೃಕ್ಷವು. ಕಟ್ಟಿಗೆ: ಕೊರೆದು ಹಲಿಗೆಗಳನ್ನು ಮಾಡುವರು (ಕಕಾಗ.೩೦). **ಹಾರುವಾಣ** : (೪). **ಹಾಲಿವಾಣ** : ಹಾವಿನ ಹೆರೆ, ಹಾಲಿವಾಣದ ಎಲೆ, ಬೀಜ ಸಾಸುವೆಯುಮಂ ಸಮಂಗೊಂಡು ಶಿಶುವಿಂಗೆ ಧೂಪವಿಕ್ಕುವುದು (ಶಾಂತಿ. ೦೨೩-೬); ಸುರದುಂಬೆಯೆಕ್ಕೆಯೆಲೆ ನಾಗರಮುಂ ಬಜೆಯುಳ್ಳಿ ಹಾಲಿವಾಣದ ಕೊನರುಂ ಪುರಿಚುಬೆರಸರೆ ನಸ್ಯಂ ವರವಿದುವೆ ಸ್ಪರ್ಶಾತ್ರದಿಂ ವಿಷಘ್ನಮೆನಿಕ್ಕುಂ (ಜಮತ. ೬-೩೬); ಹಾಲಿವಾಣದ ಮರದಲ್ಲಿ . . . ಕಾಜಾಣವೊಂದು ಆಲಾಪನೆಗೆ ತೊಡಗಿತು (ಮಲೆಮ. ೪೦). **ಹಾಲುವಾಣ₂** : ವೀಳೆಯದೆಲೆ ಹಂಬು ಹಬ್ಬುವುದಕ್ಕೆ ಅನುಕೂಲವಾದ ಗಿಡಗಳನ್ನು ಪಕ್ಕದಲ್ಲಿ ಬೆಳೆಸಬೇಕು. ಇವು ಸಾಮಾನ್ಯವಾಗಿ ಅಗಸೆ ಮತ್ತು ಹಾಲುವಾಣ (ವ್ಯವಸು. ೩೩). [ <ಸಂ. ಪಾರಿಭದ್ರ ]

**ಪಾರಿವೂಳಿಗ** (ನಾ). ಕಾವಲು ಕಾಯುವ ಕೆಲಸ ; ಪಹರೆ ಊಳಿಗ : ತಿಮ್ಮದಾಸನ ಮಗ ಲೋವಿದಾಸಗೆ ಶ್ರೀ ಸ್ವಾಮಿಯವರ ಪಾರಿವೂಳಿಗ ಶಂಖು ಜಾಗಟೆ ಗುಡಿಕಾವಲು ಅಮೃತ ಮುದ್ರೆ ಸಹ ಅಪ್ಪಣೆ ಪಾಲಿಸಿ, ಧರ್ಮ ಕೊಟ . . . ಪೊಲ ೮ (ಮೈಆ. ೧೯೨೯. ೬-೦೩ : 1073).

[ ಪಾರಿ₆ (<ಪಹರಿ)+ಊಳಿಗ (<ಊಳಿಗ) ]

**ಪಾರಿವೇಂಟೆ, ಪಾರುವೇಟೆ** (ನಾ). ೧. ದೇವಸ್ಥಾನದಲ್ಲಿ ನಡೆಯುವ ಒಂದು ಉತ್ಸವ ವಿಶೇಷ: ಮಕರಸಂಕ್ರಮಣದ ಮರುದಿನ ಪಾರಿವೇಂಟೆಯಾಗಿ ಗಿರಿಪ್ರದಕ್ಷಿಣ ಮಾಡುವಾಗ . . . ಅವಧರಿಸುವ ಮಹಾನೈವೇದ್ಯದ ಹರಿವಾಣ ೨೦ (ಶಾಇಇ. IX — II, ೩೩೦-೬ . ೧೫೩೩). **ಪಾರುವೇಟೆ** : ೨. ಬೇಟೆ ; ಶಿಕಾರಿ : ಕೋಟೆಯ ಮುಂದಿನ ಪಾರುವೇಟೆಯ ಬಯಲಲ್ಲಿ ಬೋನನ್ನು ಇಳಿಸಿದಾಗ. ಸುತ್ತ ನೆರೆದಿದ್ದ ಜನರನ್ನು ಕಂಡು. . . ಹುಲಿರಾಯನಿಗೆ ದಿಗ್ಭ್ರಮೆಯಾಯಿತು (ಹುಲಿರಾ. ೪).

[ದೇ.॥ ತಮಿ. ಪಾರಿವೇಟ್ಟೈ ; ತೆಲು. ಪಾರುವೇಟ, ಪಾಱುವೇಂಟ]

**ಪಾರಿವ್ರಾಜ** (ನಾ). = ಪಾರಿವ್ರಾಜಕ ೨: ''ಭಿಕ್ಷು ಕರ್ಮಂದಿಯುಮಂತೀನಂ ಪಾರಿವ್ರಾಜಂ ತಾನಕ್ಕುಂ '' (ಅಭ್ಯಕೋ. ೩೩-೩೪). [ಸಂ.]

**ಪಾರಿವ್ರಾಜಕ** (ನಾ). ೧. ವಿರಕ್ತಿ ; ಸಂನ್ಯಾಸ : ಪಾರಿವ್ರಾಜಕ (ಪಾರಿವ್ರಾಜ್ಯ)ಮೆಂಬುದು ಗೃಹಸ್ಥಧರ್ಮಮಂ ಪ್ರತಿಪಾಳಿಸಿ ವಿರಕ್ತಚಿತ್ತಂ ದೀಕ್ಷೋದ್ಯುಕ್ತನಾಗಿ . . . ನಿರ್ಗ್ರಂಥಾಚಾರ್ಯರ ಪಕ್ಕದೆ . . . ದೀಕ್ಷೆಗೊಳ್ವುದು (ಶಾಪುಂ. ೨೨೪). ೨. ಒಂದೆಡೆ ನಿಲ್ಲದೆ ಬೇರೆ ಬೇರೆ ಕಡೆಗಳಲ್ಲಿ ಸಂಚರಿಸುವ ತಪಸ್ವಿ : '' ಪರಾಶರೀ, ಬ್ರತೀ, ಭಿಕ್ಷುಃ . . . ಪಾರಿವ್ರಾಜಕಃ, ತಪಸ್ವೀ, ಕರ್ಮಂದೀ, ತಾಪಸಃ — ಈ ೯ ತಪಸ್ವಿ'' (ಹಲಾಯು. ೬೮-೨೩೩). [ಸಂ.]

**ಪಾರಿವ್ರಾಜ್ಯ** (ನಾ). [ಜೈನ] ಶ್ರಾವಕನು ನಿರ್ವಾಣದೀಕ್ಷೆಯನ್ನು ತೆಗೆದುಕೊಳ್ಳುವುದು : ಸಜ್ಜಾತಿ ಸದ್ಗೃಹಿತ್ವಪಾರಿವ್ರಾಜ್ಯ ಸುರೇಂದ್ರತ್ವ ಸಾಮ್ರಾಜ್ಯಪರಮಾರ್ಹಂತ್ಯಪರಿನಿರ್ವಾಣಮೆಂಬೀಯುಂ ಪರಮಸ್ಥಾನಾವು ಕರ್ತ್ರನ್ವಯಕ್ರಿಯೆಗಳಂ (ಆದಿಪು. ೦೩-೦೬ ೩); ತಪದೊಳ್ ನೆಗಳ್ದೊರ್ದ ದಿವ್ಯವಿಜಯಪರಮನಿರ್ವಾಣಸುಖಭಾಜನರಪ್ಪರಿದು ಪಾರಿವ್ರಾಜ್ಯಕ್ರಿಯೆ (ಶಾಪುಂ. ೨೩೦). [ಸಂ.]

**ಪಾರಿಶುದ್ಧತೆ** (ನಾ). ಅತ್ಯಂತ ಶುದ್ಧವಾಗಿರುವುದು ; **ಪರಿಶುದ್ಧತೆ** : ನಡೆ ನುಡಿ ಎರಡರಲ್ಲೂ ಪಾರಿಶುದ್ಧತೆ ಈ ಸೌಂದರ್ಯದ ಲಕ್ಷಣ (ಕಂಶು. ೩೬); ನಮ್ಮ ಮಕ್ಕಳು . . . ಅಂತರಂಗದ ಪಾರಿಶುದ್ಧತೆಗೂ ನೆರವಾಗತಕ್ಕ ಶಿಕ್ಷಣವನ್ನೂ ಪಡೆಯಬೇಕು (ಶಿಕ್ಷದ. ೬೪).

[ಸಂ. ಪಾರಿಶುದ್ಧತಾ]

**ಪಾರಿಶೇಷಕ** (ನಾ). ಉಳಿದ ಅಂಶ ; ಪರಿಶೇಷ : ಮಹೀಭಾರಾಂತರವ ನಿಶ್ಚಯಿಸಿ ಭಾರತಪಾರಿಶೇಷಕವ ಅಂತಕಾಂತಕ . . . ಹೊಕ್ಕನು ದೋರಕಾಪುರಿಯ (ಕುವ್ಯಾಆ. ೨-೩೩). [ಸಂ.]

**ಪಾರಿಶೇಷನ್ಯಾಯ** (ನಾ). ಒಂದು ಬಗೆಯ ನ್ಯಾಯ ; ೫ ನಾಲ್ಕಾರು ವ್ಯಕ್ತಿಗಳಲ್ಲಿ ಒಬ್ಬ ವ್ಯಕ್ತಿಯನ್ನು ಅಥವಾ ನಾಲ್ಕಾರು ವಸ್ತುಗಳಲ್ಲಿ ಒಂದು ವಸ್ತುವನ್ನು ಗುರುತಿಸಬೇಕಾದಾಗ ಜೊತೆಗಿರುವ ಇತರ ವ್ಯಕ್ತಿ ಅಥವಾ ವಸ್ತುಗಳನ್ನು ಅಲ್ಲಗಳೆದು ಕೊನೆಗೆ ಉಳಿಯುವ ನಿರ್ದಿಷ್ಟ ವ್ಯಕ್ತಿ ಅಥವಾ ವಸ್ತುವನ್ನು ಒಪ್ಪಿಕೊಳ್ಳುವಿಕೆ: ಪಾರಿಶೇಷನ್ಯಾಯದಿಂ ಪರಮೇಶ್ವರನೇ ಜಗತ್ಕರ್ತೃವೆಂದು ನಿಶ್ಚಿತವಾಕ್ಕುಂ (ಅಪೀಕ. ೨). [ಸಂ.]

**ಪಾರಿಷದ** (ಗು). ೧. ಪರಿಷತ್ತಿಗೆ ಸಂಬಂಧಿಸಿದ ; ಸಭೆಗೆ ಸಂಬಂಧಿಸಿದ. (ನಾ). ೨. ಸಭಾಸದ ; ಸಭಿಕ : ಹೊಸಹೊಸ ಕವಿಗಳು ತಮ್ಮ ಹೊಸ ಹೊಸ ಕೃತಿಗಳಿಂದ ಪಾರಿಷದರಿಗೆ ಪರಿಚಿತರಾದರು (ಅಮೃತ. ೩೩); ತಮ್ಮಂತಹ ದೊಡ್ಡವರು, ರಸಿಕ ಪಾರಿಷದರು ಮಾಡುವ ಪ್ರಯತ್ನದಿಂದ ರಸಜೀವನವು ಪುನರುದ್ಧಾರವಾಗಬೇಕಾಗಿದೆ (ಶಾಹಿಃ. ೬೪). ೩. ರಾಜ, ದೇವತೆ ಮುಂತಾದವರ ಸೇವಕವರ್ಗ. ೪. [ಜೈನ] ಇಂದ್ರನ ಸಭೆಯಲ್ಲಿ ಸದಸ್ಯರಾಗಿರುವ ದೇವತಾವರ್ಗ : ಸಾಮಾನಿಕತ್ರಯ ಸ್ತ್ರಿಂಶತ್ಪಾರಿಷದಾತ್ಮರಕ್ಷಲೋಕಪಾಲಾಭಿಯೋಗ್ಯಕಿಲ್ಬಿಷರೊಡನೆ ಗಜ

ತುರಗ ರಥ ವೃಷಭಗಂಧರ್ವನರ್ತಕೀಪದಾತ್ಯನೀಕಂಬೆರಸು ಬಂದು ಮುಂದೆ ನಿಲ್ವುದುಂ (ಆದಿಪು. ೬-೯೨ ವ) ; ಅನೇಕ ಪ್ರಕಾರಪಾರಿಷದ ಪ್ರಕೀರ್ಣಕಾಭಿಯೋಗ್ಯ ಕಿಲ್ಬಿಷಿಕರುಮಂತರ್ಮಧ್ಯಬಾಹ್ಯಸ್ಥಿತಗಳಪ್ಪ ಮೂಱುಂ ಪರಿಷತ್ತುಮಾತ್ಮೀಯಪರಮೈಶ್ವರ್ಯಮಂ ಪ್ರಕಾಶಿಸುವಾಗೆ (ಪಾರ್ಶ್ವಪು. ೧೦-೬೦ ವ). ೫. [ವೀರಶೈ] ಚಂಡೀಶ್ವರ ಮುಂತಾದ ಶಿವ ಗಣ ; ಪ್ರಮಥಗಣ : ಕಲ್ಯಾಣದುದುರಪಾರಿಷದಗಣಸಂಕುಲಕೆ (ಬಸವ. ೦೬೦೩) [ಸಂ.]

**ಪಾರಿಪ್ಲವ** (ನಾ). ಗದಾಯುದ್ಧದಲ್ಲಿ ಒಂದು ವರಸೆ(?) : ಬವರಿ ಪಾತೊಪ್ರಸ್ಥಿತಿ ವಿಲಂಘನ . . . ಸಂಪ್ಲವನ ಪಾರಿಪ್ಲವ ಗದಾಪರಿರಂಭ ವಿಕ್ಷೇಪ . . . ಲಘುವಿನ್ಯಸ್ತವೆಂಬೀ ವಿವರದಲಿ ಕಾದಿದರು (ಕುಮಾ.ಗ. ೬-೨೫). [?]

**ಪಾರಿಸಿ, ಪಾರ್ಸಿ** (ನಾ). ೧. ಪರ್ಷಿಯಾದೇಶ ; ಇರಾಣ : ಪಶ್ಚಿಮದಲ್ಲಿ ಸುಮಾರು ಒಂದು ಲಕ್ಷ ಪಾರಿಸೀಜನರೂ . . . ವಾಸವಾಗಿದ್ದಾರೆ (ಭೂಗೋಳ. ೬೦). 'ಪಾರಿಸಿಲಿಪಿ' ಪರಾ. **ಪಾರ್ಸಿ** : ೨. ಪರ್ಷಿಯಾ ದೇಶದ ಜನ : ಹಿಂದೂದೇಶದವರಲ್ಲದ ಆಸ್ಯಾಖಂಡದ ವಂಶೀಯರು ... ಚೀನೀಯರು, ಮೊಗಲರು, ಪಾರ್ಸಿ ಪಠಾಣರು (ಕಾಳಜಾ. ೦೬೪). [<ಸಂ. ಪಾರಸೀ]

**ಪಾರಿಸಿಲಿಪಿ** (ನಾ). ಪರ್ಷಿಯಾದೇಶದ ಭಾಷೆಯ ಲಿಪಿ : ದ್ರಾವಿಳ ಲಿಪಿಯುಂ ಪಾರಿಸಿ[ಪಾಠಾಂ. ರಸ, ರಿಸ]ಲಿಪಿಯುಂ ಲಾಳಲಿಪಿ ಮೊದಲಾದ ಹಲವು ಲಿಪಿಗಳನೋದಬಲ್ಲಗ್ಗಳದ ಕರಣಿಕರಂ ಕರೆಸಿ ಬಿಜ್ಜಳಮಹೀಪತಿಯಾಗ ತಾ ಹಿಡಿದಿರ್ದ ಲೇಖೆಯನು ಅವರ ಕೈಯೊಳು ಕೊಟ್ಟು (ಬಸಪು. ೩-೩೩). [ಪಾರಿಸಿ+ಲಿಪಿ]

**ಪಾರಿಸು** (ಕ್ರಿ). ಉಪವಾಸ ಮುಗಿಸಿದ ನಂತರ ಆಹಾರವನ್ನು ಸೇವಿಸು ; ಪಾರಣೆ ಮಾಡು : ಎನ್ನ ಮಹಾಮಹಿಮೆಯೊಳೆಂತುಣ್ಬೆ ನೆಂದು ಪಾರಿಸದೆ ಮಾತ್ರಮಮೋಪವಾಸಂಗೆಯ್ದು (ಪಂಪಾರಾ. ೦೦೬-೦೬) ; ಅಪರಾಜಿತಂ ವಿಮಳವಾಹನ ಜಿನಪತಿಯಂ[ ಅರ್ಹದ್ದಾಸನಂ ] ಕಂಡಲ್ಲದುಣ್ಣೆನೆಂದೆಂಟುದಿವಸಮುಪವಾಸಂಗೆಯ್ದು ಪಾರಿಸಲೊಲ್ಲದಿರೆ ಸುರರಾಜನಱಿದು . . . ವಿಮಳವಾಹನನ [ಅರ್ಹದ್ದಾಸನ] ಪ್ರತಿ ಬಿಂಬಮಂ ತೋಱಿಸೆ ಕೃತಾರ್ಥನಾಗಿ ನಮಸ್ಕಾರಂಗೆಯ್ದು ಪಾರಿಸೆ (ಶಾಂತಿಪು ೩.೨೩); ಮುನಿಪಂ ಮಾಸೋಪವಾಸಾಂತರದೊಳನುನಯಂ ಪಾರಿ ಸಲ್ಕೆಂದು ಪೊಕ್ಕಯ್ಯನೆ ಚರ್ಯಾಮಾರ್ಗದಿಂದಂ ಬರೆ (ಬಾಹಂ. ೩-೩೪). [ಪಾರಣೆ₁+ – ಇಸು₁]

**ಪಾರಿಸೋಜ** (ನಾ). ಒಬ್ಬಾತನ ಹೆಸರು : ಹಿಟ್ಟಿನ ಅಕ್ಕಸಾಲೆ ಪಾರಿ ಸೋಜಂಗೆ ಮತ್ತರು ೪ (ಕರ್ಣಾಶಾ. ೩೬.೩೬ ; 1049). [ಪಾರಿಸ₁ +ಓಜ₁ (<ಉವಜ್ಝಾ)]

**ಪಾರಿಹಾರಿಕ** (ನಾ). ಮಾಲೆಯನ್ನು ಕಟ್ಟುವವನು ; ಮಾಲೆಗಾರ : "ಮಾಳಾಕಾರಃ, ಮಾಲಿಕಃ, ಪಾರಿಹಾರಿಕಃ—ಈ ೩ ಮಾಲೆಗಾಱಂ" (ಹಲಾಯು. ೯೬-೯೭೩). [ಸಂ.]

**ಪಾರಿಹಾರ್ಯ** (ನಾ). ಬಳೆ ; ಕಂಕಣ ; ಕಡಗ : "ಆವಾಪಃ, ಪಾರಿ ಹಾರ್ಯಃ, ಕಟಕಃ, ವಳಯಃ—ಈ ೪ ಕಂಕಣಾಂ" (ಹಲಾಯು. ೯೦-೯೦೩) ; ಮೇಖಳೆಯ ಪಾರಿಹಾರ್ಯದ ಮಣಿನೂಪುರದ ಮಧುರಸ್ವನಂ ಮುಪ್ಪುರಿ ಗೂಡಿದ ಮದನಪಾಶಮೆನೆ ನಡೆತಂದಳ್ (ಶಂಕರಪು. ೩-೬೪) ; ಮಣಿಕಾಂಚೀ ಮಣಿಪಾರಿಹಾರ್ಯಮಣಿಮಂಜೀರಸ್ವನಂ ಪೊಣ್ಮಲ್ . . . ಗಣಿಕಾಶ್ರೇಣಿ ಯುವೋಱಿ ನಿಂದುದು ತವಂಗಶ್ರೇಣಿಯಂ ಲೀಲೆಯಿಂ (ಜಗಚ. ೬-೯೯). [ಸಂ.]

**ಪಾರೀಕತ್ತು** ' ಫಾರೀಕತ್ತು ' ನೋ.

**ಪಾರೀಖತ್ತು** ' ಫಾರೀಕತ್ತು ' ನೋ.

**ಪಾರೀಣ** (ನಾ). ೧. ದಾಟುವುದು. ೨. ಎಲ್ಲಾ ವಿಷಯಗಳಲ್ಲಿ ಸಂಪೂರ್ಣಪರಿಚಯವನ್ನು ಪಡೆದಿರುವುದು ; ಪಾಂಡಿತ್ಯ. ೩. ಎಲ್ಲಾ ವಿಷಯಗಳಲ್ಲಿ ಸಂಪೂರ್ಣಪಾಂಡಿತ್ಯವನ್ನು ಪಡೆದಿರು ವವನು ; ಪಂಡಿತ ; ನಿಷ್ಣಾತ : ದ್ವಾದಶಗಣಸರಸ್ಸರೋಜವಿಮಳನ ಶೋಭಾಪ್ರಭಾವಪ್ರಸವಪಾರೀಣದಿವ್ಯವಚನಮರೀಚಿಮಾಲಿರೊ ಚಿರ್ನಿಚಯ ತ್ರಿಜಗಚ್ಚೂಡಾಮಣಿಯು . . . ಪೊಡೆವಟ್ಟು (ಶಾಂತಿಪು. ೯.೩೯ ವ) ; ನಿಜ ಗುರುಭಜನಪಾರಿ[ಪಾಠಾಂ. ರಿ]ಣನ . . . ನೋಡಿ (ಬಸವ ೩೯-೩೩). [ಸಂ.]

**ಪಾರು₁** ' ಪಾರ್₁ ' ನೋ.

**ಪಾರು₂** ' ಪಾಱು₁ ' ನೋ.

**ಪಾರು₃** (ಕ್ರಿ). ೧. ಬೆಳೆ ; ವೃದ್ಧಿಯಾಗು : (ಶಿ). ೨. ಉಂಟಾಗು ; ಸಂಭವಿಸು : (ಶಿ). [ದೇ. ; ತಮಿ. ಪಾರಿ ; ತೆಲು. ಪಾಱು]

**ಪಾರು₄** ' ಪಾಱು₂ ' ನೋ.

**ಪಾರು₅, ಹಾರು₃** (ನಾ). ೧. ಆಚೆಯ ದಡ ; ಪಾರ : "ಪಾರು– ಪಾರ=ಆಚೆವಡ " (ಶಬ್ದಕೋ. ೨೬); ಸಿರಿಯ ಪೊಸ ತವರೂರು ಪವಳರನ್ನದ ಪಾರು ಸುರರ್ಕೆರಿಯ ನಾಡು . . . ಕಾನೆಸುತ್ತಿಂಗಡಲ್ ಕಂಗೊಂಡುದು (ಕವಿತ. III, ೨೦೩ ಶ್ರೀಭಾಷಾಶಾಸನಂ). ೨. ಕೊನೆ ; ಅಂಚು : (ಶಿ). ೩. ಮನೆಯ ಮಾಡಿನ ಇಳಿಜಾರು ; ಸೂರಿನ ಇಳಿಜಾರು ಭಾಗ : (ಶಿ). ೪. ನೊಗದ ಎರಡು ಪಕ್ಕ, —ಕಡೆ : 'ಪಾರುವಿಳಿ' ಪರಾ. ೫. ಅಪಾಯದಿಂದ ತಪ್ಪುವಿಕೆ ; ಬಚಾವು : ಮೃಗಗಳಂ ನೋಡಾರ್ಯ ! ಬಲೆಗೆ ಬಲಿಯಾಗಿ, ಪಾರು ಬರಿಲ್ಲದಿರೆ, ರೋಸಿ, ಹಿಂದಿರುಗಿ, ಕುರುಡುಧೈರ್ಯದ ನೆವಿಂ, ಬೇಂಟೆಯನನೆಮ ರಿಸವೆ? (ಕಶಾರ. ೬೦-೬). **ಹಾರು₃** : ೩. ಈ ಗುಬ್ಬಚ್ಚಿಗಳಿಗೆ ಮನೆಯ ಹಾರಿನ ಸಂದಿಗಳಲ್ಲಿ ಗೂಡು ಕಟ್ಟುವ ಅಭ್ಯಾಸವಿಲ್ಲದಿದ್ದರೆ ಚೆನ್ನಾಗಿರುತ್ತಿತ್ತು (ಈಶಕೆ. ೩೦).

**ಪಾರಾಗು**=ಬಿಡುಗಡೆ ಹೊಂದು ; ಬಚಾವಾಗು : ಇವನ ಕೈಯಿಂದ ಪಾರಾಗಲು ಗಾಂಧೀಜಿ ಮಾಡಿಕೊಂಡ ಯೋಜನೆ ನನ್ನ ತಲೆಯನ್ನು ತುಂಬಿತು (ದೇಶಭಕ್ತ. ೩೮) ; ಆತ್ಮಸತ್ತ್ವವಿದ್ದ ಒಂದೇ ಒಂದು ಜೀವವೆಂದರೆ ಸತ್ತು ಪಾರಾಗಿ ಹೋದ ತಮ್ಮನ ಹೆಂಡತಿ (ಹೊಸಕ್ಷಿ. ೨೯೯). **ಪಾರು ಮಾಡು** = ಕಾಪಾಡು : ರಕ್ಷಿಸು : ನೀನು ನನ್ನನ್ನು ಪಾರು ಮಾಡಬೇಕು ರಂಗಣ್ಣ (ರಂಗರೋ. ೨೩) ; ಜೀವನದಲ್ಲಿ ಮೂರಾತ್ಮರಿಂದ ಕಷ್ಟಕ್ಕೆ ಸಿಕ್ಕಿದಾಗ ನನ್ನನ್ನು ಪಾರು ಮಾಡಿದವಳು ಅವಳು (ವಶಭಾ. ೦೬೩). [ <ಸಂ. ಪಾರ ]

**ಪಾರುಂಬಳೆ** ' ಪಾಱುಂಬಳೆ ' ನೋ.

**ಪಾರುಖಾಣ** ' ಪಾರುಖಾಣೆಯ ' ನೋ.

**ಪಾರುಖಾಣಯ** ' ಪಾರುಖಾಣೆಯ ' ನೋ.

**ಪಾರುಖಾಣೆ** ' ಪಾರುಖಾಣೆಯ ' ನೋ.

**ಪಾರುಖಾಣೆಯ**, ಪಾರುಖಾಣ, ಪಾರುಖಾಣಯ, ಪಾರುಖಾಣೆ (ನಾ). ೧. ಬಹುಮಾನ ; ಉಡುಗೊರೆ : "ಎಸೆವಂ ಕೊಡುವುಚಿತ ಪಾರುಖಾಣೆಯುಮಕ್ಕುಂ " (ಶಬ್ದ. ೨೩೩) ; ಪಾರುಖಾಣೆಯುವಿತ್ತನಾ ಜಂಭಾರಿಯೂರ್ವಶಿ ರಂಭೆ ಮೇನಕೆ ಗೌರಿ ಮೊದಲಾದಖಿಳಪಾತ್ರಕೆ (ಕುಮಾಅ. ೭-೯೬). ೨. ಕರಣಿಕರು ಇಡುವ ಲೆಕ್ಕಾಚಾರ : ತೀರ ದಿಬ್ಬರ ಸತ್ತಪವನಿಯ ಸಾರದಿಬ್ಬರ ಬಲುಹುಗಾಣಾವು ಪಾರುಖಾಣೆ ಯುಮವಟರಿಬ್ಬರ ಭುಜಬಲಾಟೋಪ ಸಾರಥಿಯಾದು (ಕುಮಾಸ. ೨-೦೦೬). **ಪಾರುಖಾಣ** : (ಶಿ). **ಪಾರುಖಾಣಯ** : ೧. "ಪಾರುಖಾಣಯ

ವೆಂದು ಉಚಿತವಱಿತು ಕುಡುವ ವಸ್ತು" (೪೬೫೩. ೬೬-೬೬೯) **ಪಾರುಖಾಣೆ**: ೧. ತುಂಬುರ ರಂಭೆ ಭೃಂಗಿಮುಂ ಪರಿಕಿಸಿ ಪಸಾಯವಮಂ ಪಾರುಖಾಣೆಯು ಕೊಡಲು ನೆರೆದಿರ್ದ ಹರನ ಸಭೆ ಸುಖದ ಸೊಗಸಿನ ಜೊಮ್ಮುವಿಡಿದು ಮೆಱೆದಿರಲು (ಸಿದ್ಧಕಾ. ೦-೩೬); ಶ್ರೀರಿ ಶಡವಿಯು ಕದಿತ ಗಿರಿಗಳ ಹೋರಟಗೆ ಹೊಗದೇಕು ಸೇನೆಗೆ ಪಾರು ಖಾಣೆಯ ಕೊಟ್ಟವಾಗಳ (ಕುಮ್ಮಾರ. ೯-೩೬). ೨. ಧಾರುಣೀಪತಿ ಕೇಳು ನಿನ್ನ ಕುಮಾರರಲಿ ತೊಂಬತ್ತರಯೊಂಟಱ ಪಾರುಖಾಣೆಯ ಲೆಕ್ಕ ಸಂದುದು ನಿಮ್ಮ ಚಿತ್ರದಲಿ (ಕುಮ್ಮಾರ. ೦೯-೨೬). ೩. ನಾಶ; ಕೊನೆ; ಮಂಕಿನ್ನಾಯಂ: ಕಂಡುದು ಪಾರುಖಾಣೆಯನುಸುರನಸು ಬಲು ಭಾರಿಯೊಡಲೊರ್ಗುಡಿಸಿ ಕೆಡೆದುದು ಬಿರಿದ ಗಿರಿಯಂತೆ (ಕುಮ್ಮಾರವ್ಯ. ೦೬-೩೯). ೪. ವಿರಹತಾಪ (?): "ಕರಣಕರ ಲೆಕ್ಕ ಸಯ್ಯೆಯೊಳರಸಿ ವಿಬುಧಾಳಿಗೇಯುಪರ್ವ್ವಂಗಳೊಳುಂ ವಾರಣದೊಳು ಮದನತಾಪದಿ ಪರಿವರ್ತಿಸು ಪಾರುಖಾಣೆಯಿಂದಱಿಗೆ" (ಭಾರತ. ೬೬). 'ಪಾರುಖಾಣೆ' ಪರಾ. [?. / ಮರಾ. ಪಾರುಖಣೇ=ನಾಶವಾಗು, ನಷ್ಟವಾಗು]

**ಪಾರುಗಟ್ಟಿಗೆ**, ಹಾರಕಟ್ಟಿಗೆ, ಹಾರಗಟ್ಟಿಗೆ, ಹಾರುಗಟ್ಟಿಗೆ, ಹಾರೆಗಟ್ಟಿಗೆ (ನಾ). ಚೂಪಾದ ಆಯುಧವನ್ನು ತುದಿಗೆ ಅಳವಡಿಸಿದ ಕೋಲು; ಅಂಕುಶ: ಪಾರುಗಟ್ಟಿಗೆಯುಪನುರ್ಬಿನೊಳೆಱಗುವ ಸೊರ್ಕಾನೆಯ ನಿನ್ನಪಕ್ಕೆ ಎರ್ದೆಯೊಡ್ಡಿ ಸೋಂಕದ ಮುನ್ನಮೆ ಒರ್ಮೆಯ್ಯೊಳೊಲೆದು ತಪ್ಪಿಸಿ ಎಡೆಗಡವುವಂತೆ ಕೆಡಪಿ (೩೪೩೦. ೦೬೩-೦). **ಹಾರಕಟ್ಟಿಗೆ**: ಕೊರಳ ಜೊತ್ತಿಗೆ ಹಾರಕಟ್ಟಿಗೆ ಸುರಳಿತದ ಮೊಗರಂಬ ಸಾವಿರ ಕರಿಗಳೆದಬಲಕೊಳುವೃತ್ತಿದಿರುವಥಿಣೀವಿಯಲಿ (ಸಂಚಿ. ೨೦-೯೦). **ಹಾರಗಟ್ಟಿಗೆ**: ನೀಲದ ಹಾರಗಟ್ಟಿಗೆಯೆಸುರಿರ್ದುದು ಬಾಲೆಯ ಬಾಸೆ (ತ್ರಿಕುಕ. ೨೦-೯೯). **ಹಾರುಗಟ್ಟಿಗೆ**. **ಹಾರೆಗಟ್ಟಿಗೆ**: "ಒತ್ತುವ ಹಾರೆಗಟ್ಟಿಗೆ ಅಯೋಮುಖಂ" (ಕುಂಗರಾ. ೯೬-೬); ಹಾಕಿದ ಬಿಱಿಕೆ ಸೂನಂಗಿ ಕೈಗತ್ತಿ ನೂಕುವ ಹಾರೆಗಟ್ಟಿಗೆಯು (ಅಮುಹಾಂ. ೨-೬೩).

**ಹಾರುಗಟ್ಟಿಗೆವಿದ್ಯೆ**=ಅಂಕುಶವನ್ನು ಬಳಸುವ ವಿದ್ಯೆ: ಆನೆಯೊಂದಿಗೆ ಕಾದುವ ಹಾರುಗಟ್ಟಿಗೆವಿದ್ಯೆ . . . ನಾನಾಸಂಜ್ಞೆಗಳನು ಅರಿತು (೪೩೪೩. ೯). 'ಅರೆಗಟ್ಟಿಗೆ' ಪರಾ. [<ಪಾರ್‌+ಕಟ್ಟಿಗೆ]

**ಪಾರುಗಡೆ** (ನಾ). ಬಿಡುಗಡೆ; ಪಾರಾಗುವುದು: ತಂದೆಯು ಪ್ರೇತವಾಗಿ ಎಲ್ಲೊ ವೈತರಣಿ ದಾಟಲಾರದೆ ಅಲೆಯುತ್ತಿರಬೇಕು. ಈ ಪಿಂಡ ಸಲಿಸಿದ ಮೇಲೆಯೂ ಅವರ ಪಾರುಗಡೆಯಾಗುತ್ತದೋ ಇಲ್ಲವೋ (ಹುಗಿಯು. ೯೬). [ಪಾರು+ಕಡೆ]

**ಪಾರುಗಾಣಿಸು** (ಕ್ರಿ). ೧. ದಡವನ್ನು ಸೇರಿಸು; ದಡ ಮುಟ್ಟಿಸು; ದುಃಖಸಾಗರದಲ್ಲಿ ತೇಲುತ್ತಿರುವ ನಮ್ಮ ಜೀವನನೌಕೆಯನ್ನು ಪಾರುಗಾಣಿಸಬೇಕು (ಕ್ಕಾ೩೦೦. ೯). ೨. ರಕ್ಷಿಸು: ನೀವೇ ನನ್ನ ಮಾನವನ್ನು ಕಾಪಾಡಿ ಪಾರುಗಾಣಿಸಬೇಕು (ಪಾಕಚೊ. ೨೮). ೩. ಕೊನೆಮುಟ್ಟಿಸು; ಮುಗಿಸು: ನಿನ್ನ ಕಾರ್ಯವನ್ನು ನೀನೇ ಪಾರುಗಾಣಿಸು ತಾಯಿ! (ಸುಂಹಿಂ. ೦೬೦). ೪. ಪರಿಹರಿಸು; ಹೋಗಲಾಡಿಸು: ಶನಿಮಹಾರಾಯನು ಹೆಗಲೇರಿದರೆ ಅದರ ಪರಿಣಾಮವನ್ನು ಪಾರುಗಾಣಿಸುವುದಕ್ಕೆ ತ್ರಿಮೂರ್ತಿಗಳಿಗೂ ಅಸಾಧ್ಯ (ಸಂಗಾಳ್ಯ. ೦೩೩).

[ಪಾರುಗಾಣು+-ಇಸು]

**ಪಾರುಗಾಣು** (ಕ್ರಿ). ೧. ಪಾರಾಗು; ಬಚಾವಾಗು: ಟಳಕರು ನನ್ನ ನಾಡಿ ಹಿಡಿದು ಕುಳಿತಿದ್ದರು. ಬೆಳಗ್ಗೆ ನಾನು ಪಾರುಗಂಡೆ (ಕ್ಕ. ೩೩. ೦೦೬) ೨. ಕೊನೆಮುಟ್ಟು: ನೀವು ಮಾಡಿದ ಲಗ್ನ ನಗನಗುತ ಪಾರುಗಂಡಿದ್ದರೆ ಅವನಿಗೆ ಎಷ್ಟೋ ಆನಂದವೆನಿಸಬಹುದಿತ್ತು (ಹುಶಕ. ೩೨). [ಪಾರು+ಕಾಣು (<ಕಾಣ್)]

**ಪಾರುಗೆಯ್** 'ಪಾಱುಗೆಯ್' ನೋ.

**ಪಾರುಧಿ** 'ಪಾರದಿ' ನೋ.

**ಪಾರುಪತ** 'ಪಾರುಪತ್ಯ' ನೋ.

**ಪಾರುಪತಿಗಾರ** 'ಪಾರುಪತ್ಯಗಾಱ' ನೋ.

**ಪಾರುಪತ್ತೆ** 'ಪಾರುಪತ' ನೋ.

**ಪಾರುಪತ್ತೆಗಾರ** 'ಪಾರುಪತ್ಯಗಾಱ' ನೋ.

**ಪಾರುಪತ್ಯ**, ಪಾರಪತ್ಯ, ಪಾರಿಪತ್ಯ, ಪಾರುಂಪತ, ಪಾರುಪತ್ತೆ, ಪಾರ್ಪತ್ಯ (ನಾ). ೧. ಮೇಲ್ವಿಚಾರಣೆ; ಉಸ್ತುವಾರಿ; ಯಜಮಾನ್ಯ: ಇಳೆಯಾಣ್ಮಂ ತನಗಲ್ತೆ ವೆಗ್ಗಳನೆನುತ್ತಂ ಪಾರುಪತ್ಯಂಗಳು ಳಿಳಗೀಯಲ್ (ಸೋಮೇಶ. ೬೯); ಛತ್ರದ ಯೆಲ್ಲಾ ಪಾರುಪತ್ಯವನೂ ಮಾಡಿಕೊಂಡಿಹ ಸಂಕರಪುಟ್ಟರಿಗೆ ೪೦ ಸಲಗೆ ಛತ್ರ (ಎಕ. VIII. ಶಿಕಾರಿ. ೨-೮೪; ೧೫೬೬); ಹಿಂದಕ್ಕೆ ಬೇಲೂರ ಚೆನ್ನಕೇಶವನ ಗುಡಿಯಲ್ಲಿ ಸೂರಯ್ಯನೆಂಬ ಒಬ್ಬ ಬ್ರಾಹ್ಮಣನು ಪಾರುಪತ್ಯವನ್ನು ಮಾಡಿಕೊಂಡಿದ್ದನು (ಶಿಶಿತಂ. II. ೨೪); ನೀರು ಹೊರುವ ಬಡ್ಡಿಗೆ ಊರ ಪಾರುಪತ್ಯವೇಕೆ? (ಗಾದೆ). ೨. ಆಳಿಕೆ; ಅಧಿಕಾರ: ಮನೆಯಲ್ಲೆಲ್ಲಾ ನಿನ್ನದೇ ಪಾರುಪತ್ಯವಾಗಿದೆಯಲ್ಲ (ಕಾಶಿಕು. ೦೦೩); ಅವನು ನಮ್ಮ ಕಡೆಗೆ ತಿರುಗಿಬಿಟ್ಟರೆ ಅವಳದೇನು ಪಾರುಪತ್ಯ ನಡೆಯುತ್ತದೆ? (ಕುಶಾಗ. ೦೬೯): ಚೇಳಿಗೆ ಪಾರುಪತ್ಯ ಕೊಟ್ಟರೆ ಜಾವ ಕ್ಕೊಂದು ಸರ್ತಿ ಮುಟ್ಟಿಸಿತು (ಗಾದೆ). ೩. (ಅಲಂ) ದೊಡ್ಡಸ್ತಿಕೆ; ಪ್ರತಿಷ್ಠೆ: ಅವಳು ಮಾಡುವ ಪಾರುಪತ್ಯಕ್ಕೆ ಕೊನೆಯೇ ಇಲ್ಲ (ಕೂಂ). **ಪಾರಪತ್ಯ**: ೧. ಮಾಡಿದವು ಗುರುಧಾರವನು ಮುರಗೇಡಿಯಲಿ ರಣಪಾರಪತ್ಯವ ಮಾಡುವಾತನು ಕೃಷ್ಣನು (ಕುಮ್ಮಾರ. ೦-೬೦); ಯಿಪಾ ಛತ್ರದ ಪಾರಪತ್ಯ x x ಬಿಟ್ಟದು ಕಾಲೆಯ ಬೀಜವರಿ ಖ ೨ ॥ (ಎಕ. VIII. ಶಿಕಾರಿ. ೦೬೯-೦೦; ೧೪೬೦); ಏನೂ ಚಿಂತೆಯಿಲ್ಲ. ಹಿಂದುಗಡೆ ಅವನ ಪಾರಪತ್ಯವನ್ನು ಮಾಡಲಿಕ್ಕೆ ಬಂದೀತು (ಹುಟಾಳ. ೦೨೩). ೨. ಇಷ್ಟಲ್ಲ ಅವಳ ಪಾರಪತ್ಯವೆಲ್ಲಾ ಎರಡೇ ತಿಂಗಳು (೬೦೯೬. ೨೬). **ಪಾರಿಪತ್ಯ**: ೧. ಚೆಂನಪ್ಪಅಯ್ಯನವರು ಪಾರಿಪತ್ಯವ ಮಾಡಿ ನಡಸಿಕೊಂಡಿಹರು (ಕೌಇಂ. ೦೯೬೨. ಉಡುಪಿ. ೩೦೬-೪೦; ೧೩೯೭): ಅವಳ ಪತಿಯುಂ ಗ್ರಾಮಮಂ ನಾಡ ಪಾರಿಪತ್ಯವನೆಸಗುವಾತನುಂ (೭೬೯ಕೃ. ೩-೨-೨೩). **ಪಾರುಪತ**: ೪. ಮೇಲ್ವಿಚಾರಕ; ಪಾರುಪತ್ಯಗಾರ: ಆಚಾರ್ಯರಿಗೆ ಗ ೬ ಪಾರುಪತರ ಸತ್ರಕ್ಕೆ ಗ ೭೨ . . . ಶ್ರೀ ವಿಶ್ವೇಶ್ವರದೇವರ ಅಮ್ರಿತಪಡಿ ಮೊದಲಾದ ಎಲ್ಲಾ ಧರ್ಮಕ್ಕಂ . . . ಧಾರಾಪೂರ್ವಕಂ ಮಾಡಿ ಕೊಟ್ಟರು (ಎಕ. XV. ಕೇಜಿಹು. ೩೯೬-೬೬; ೧೨೭೯). **ಪಾರುಪತ್ತೆ**: ೧. ಮಗನೆ ರಾಜ್ಯದ ಪಾರುಪತ್ತೆಗೆ ಪಾರೂ ಇಲ್ಲ (ಜಾಕೃಶಿ. ೬೬-೦). **ಪಾರ್ಪತ್ಯ**: ೧. ಕಳಿಚಿದಂ ಮಣಿಮಯದ ಮಕುಟಮಂ ದಂತಂಗಳಂ ಮುರಿಯಲೊದ್ದು ನಿಲಿಸಿದಂ ಪಗೆ ಪಾರ್ಪತ್ಯಮಂ (ಕುಕಂಗ. ೬೮-೬೨).

[ದೇ.॥ ತಮಿ. ಪಾರುಪತ್ತಿಯ, ಪಾರಪತ್ತಿಯ; ಮಲ. ಪಾರ್ಪತ್ಯ; ತುಳು. ಪಾರುಪತ್ಯ, ಪಾರುಪತ್ಯೊ; ತೆಲು. ಪಾರುಪತ್ಯ, ಪಾರ್ಪತ್ತೆ]

**ಪಾರುಪತ್ಯಗಾತಿ** (ನಾ). ಮೇಲ್ವಿಚಾರಣೆ ನಡೆಸುವವಳು; ಉಸ್ತುವಾರಿ ಮಾಡುವವಳು: ಅಗ್ರಪುಣಾವತೆತ್ರೀವ್ಯಾ . . . ಯಾಜವಸಾನಿಯ ಮಗನ ಬಳಿ ಪಾರುಪತ್ಯಗಾತಿಯಾಗಿಃಳದಳು (ಕ್ಕಶು. ೦೩).

[ಪಾರುಪತ್ಯ+-ಕಾತಿ]

**ಪಾರುಪತ್ಯಗಾರ** 'ಪಾರುಪತ್ಯಗಾಱ' ನೋ.

**ಪಾರುಪತ್ಯಗಾರಿಕೆ** (ನಾ). ಆಳ್ವಿಕೆ; ಪ್ರಭುತ್ವ: ಹಿಂದಿಯ ಪಾರುಪತ್ಯಗಾರಿಕೆಗಿರುವ ಹಕ್ಕನ್ನು ಪ್ರಶ್ನಿಸಿ ಹಲವಾರು ಪ್ರಾಂತ್ಯಗಳು ಪ್ರತಿಭಟಿಸಿದುವು (೩೪ದ. ೬೬೦). [ಪಾರುಪತ್ಯಗಾರ (<ಪಾರುಪತ್ಯಗಾಱ)+-ಇಕೆ]

**ಪಾರುಪತ್ಯಗಾಱ**, ಪಾರಪತೆಗಾರ, ಪಾರಪತ್ತ್ಯಗಾಱ, ಪಾರಪತ್ಯಗಾರ, ಪಾರುಪತಿಗಾರ, ಪಾರುಪತ್ತ್ಯಗಾರ, ಪಾರುಪತ್ಯಗಾರ, ಪಾರುಪತ್ಯೆಕಾಱ, ಪಾರ್ಪತ್ತ್ಯಗಾರ, ಪಾರ್ಪತ್ಯಗಾರ (ನಾ). ಮೇಲ್ವಿಚಾರಣೆ ನಡೆಸುವವನು ; ಉಸ್ತುವಾರಿ ಮಾಡುವವನು : ಆವಾವ ಪಾರುಪತ್ಯಗಾಱ ಬಂದ ಅವ ಯಿದ ಅಳುಹಿದರೆ ಯಾ ಶ್ಲೋಕಾರ್ಥದ ಪಾಪಕ್ಕೆ ಹೋಹರೂ (ಎಕ. III (R), ಗುಂಡ್ಲುಪೇ. ೦೩೩-೩೬ : 1492) ; ನಮ್ಮ ಬೂದಿಹಾಳಸೀಮೆಯ ಪಾರುಪತ್ಯಗಾಱ ಯುವರಾಜನ ತಿಮ್ಮಪಯನ ಆಳುಹಿಸಿದ ಶಾಸನದ ಕೊಡಗಿಯ ಕಲ್ಲನು × × × ನೆಟ್ಟಿಸಿ ಕೊಟ್ಟೆವು (ಎಕ. VI. ಕಡೂರು. ೦೨೬–೦೦ : 1532). **ಪಾರಪತೆಗಾರ :** ರಾಜಶ್ರೀದೊರೆಗಳು ತಮ್ಮ ಹುಜೂರು ಸಾಮದೀರು ಪಾರಪತೆಗಾರ ಕಸಬೆ ಗವುಡ ಗ್ರಾಮಾನುಗ್ರಾಮಗಳ ಗವುಡರು (ಎಕ. XI. ಹೊಳಲ್ಕೆ. ೨೫–೬೦ ; 1666). **ಪಾರಪತ್ತ್ಯಗಾಱ :** ಪಾರಪತ್ತ್ಯಗಾಱ ಸಹ ವರುಸ ೧ಕ್ಕೆ ಮಾಳಿಗೆಯ ಮರ್ದನೆಯ × × ತಿಂಗಳು ೧ಕ್ಕೆ . . . ಆಚಂದ್ರಾರ್ಕವಾಗಿ ನಡಸುದು (ಎಕ. VI (R), ಶೃಂಗೇ. ೦೬೨–೨೮ ; 1626). **ಪಾರಪತ್ಯಗಾರ :** ಮಹಾಪಾತ್ರರು ಎಂಬ ಹೆಸರುಳ್ಳ ಅಧಿಕಾರಿಗಳು . . . ಪಾರಪತ್ಯಗಾರರ, ಲೆಕ್ಕಪತ್ರಗಳ ಸಂರಕ್ಷಕರ ಮತ್ತು ನಾಣ್ಯನಿರ್ಮಾಪಕರ ಕೆಲಸಗಳನ್ನೂ ಸಹ ನೋಡಿಕೊಳ್ಳುತ್ತಿದ್ದರು (ಕುಳುಚ. ೮೫). **ಪಾರುಪತಿಗಾರ :** (೬). **ಪಾರುಪತ್ತ್ಯಗಾರ :** ಮಹಾರಾಜಶ್ರೀಯವರ ಅಪ್ಪಣೆ ಪ್ರಕಾರಕ್ಕೆ ಜಿಗಣಿಸ್ಥಳದ ಅಧಿಕಾರ್ರು ಪಾರುಪತ್ತ್ಯೆಗಾರ್ರು ಶಾನುಭಾಗರು ಗವುಡ ಜಿಗಣಿ ಪಂಚಾನನದವರು ಸಹ ಮಾನ್ಯದ ಭೂಮಿ × × × (ಎಕ. IX. ಆನೇಕ. ೯೦–೩; 1765); ಹೊಳೆಯ ದಡದಲ್ಲಿ ಇರುವುದು ನರಸಿಂಹಸ್ವಾಮಿಯ ದೇವಸ್ಥಾನ. ಇದರ ಪಾರುಪತ್ತ್ಯೆಗಾರರು ಒಳ್ಳೆ ವಯಸ್ಸಾದವರು (ಗಸುರಾ. ೦೬೩). **ಪಾರುಪತ್ಯಗಾರ :** ತೆರೆಕಾಂಬೆಯ ಚಾವಡಿಗೆ ಚಿಕ್ಕ ಪಾರುಪತ್ಯಗಾರರು ಈ ಲೆಕ್ಕದಲ್ಲಿ ಗೊಳವಾಸಿಯಕ್ಕೆ ಕೊಟ್ಟು ಆಳ್ವಾರದೇವರ ರಥೋತ್ಸವನು ಆಚಂದ್ರಾರ್ಕಸ್ಥಾಯಿಯಾಗಿ ನಡಿಸಿ ಬಹಿರಿ ಎಂದು ಬಿಡಿಸಿ ಕೊಟ್ಟ ಧರ್ಮಶಿಲಾಶಾಸನ (ಎಕ. XIV. ಗುಂಡ್ಲುಪೇ. ೭–೦೫; 1620) : ಪಾರುಪತ್ಯಗಾರನಾಗಲಿ ... ಸುಂಕದ ಮಣೆಗಾರನಾಗಲಿ ಆರು ಇದಕ್ಕೆ ವಿಗಡ ಆಚರಿಸಿದರು ಅವರು ತಂದೆ ತಾಯಿಗಳ ವಾರಣಾಸಿಯಲಿ ಕೊಂದ ಪಾಪಕೆ ಹೋಹರು (ಎಕ. IX. ದೊಡ್ಡಬ. ೩–೨೦ ; 1690) ; ನೀನು ಅಡಿಗೆಮನೆಯ ಪಾರುಪತ್ಯಗಾರರಿಗೆ ಅಧ್ಯಕ್ಷನಾಗಿ . . . ಸುಖವಾಗಿ ಇರು (ಕೃಪಾಶ. ೦೩) : ಅವರು ದೇವಸ್ಥಾನದ ಪಾರುಪತ್ಯಗಾರರಾಗಿದ್ದರು (ಬಕಸಂ. ೦೦೯). **ಪಾರುಪತ್ಯೆಕಾಱ :** ಕಾಳಮಲ್ಲಿಕಾರ್ಜುನ ದೇವರು ಪಾರುಪತ್ಯಕಾಱ ಕೆಂಚಿನಲಿಂಗಹೊಡೆಯರು ದೇವರು ಕೂಡಿ ಕಟ್ಟಿದ ಭಾವಿಯ ಜೀರ್ಣೋದ್ಧಾರವನು ಮಾಡಿದರೂ (ಎಕ. IV (R), ಕೊಳ್ಳೇಗಾ. ೨೬೨–೯ ; 1640). **ಪಾರ್ಪತ್ತ್ಯಗಾರ :** ನಾನೂ ಅಯ್ನೋರೂ ಮತ್ತು ಪಾರ್ಪತ್ತ್ಯೆಗಾರ್ರೂ ಮೂವರೂ ದೀವಟಿಗೆ ಹಿಡ್ಕೊಂಡು ಗುಡಿ ಮೂರು ಸುತ್ತ ಬಳಸಿ ನೋಡಿ (ಅಜಮ. ೩೮). **ಪಾರ್ಪತ್ಯಗಾರ :** (ಮೈಗೆ. IV, ೬೮೨).

[ ಪಾರುಪತ್ಯ + — ಕಾಱ ]

**ಪಾರುಪತ್ಯೆಕಾಱ** ' ಪಾರುಪತ್ಯಗಾಱ ' ನೋ.

**ಪಾರುಬ** ' ಪಾರ್ವ ' ನೋ.

**ಪಾರುವಾಣ**$_1$ ' ಪಾರಿವಾಳ$_1$ ' ನೋ.

**ಪಾರುವಾಣ**$_2$ ' ಪಾರಿವಾಳ$_2$ ' ನೋ.

**ಪಾರುವಿಳಿ** (ನಾ). ನೊಗದ ಆ ಕಡೆ, ಈ ಕಡೆಗಳಲ್ಲಿರುವ ಹಗ್ಗ : ಪಾರುವಿಳಿಯ ಹೆಗಲೊಳು ಹೂಡಿ ನೊಗನನು ಸಾರಥಿಗಳನು ಸತ್ಕರಿಸಿ . . . ಪೊಱಮಟ್ಟರಂದಾ ರಥಿಗಳು ರಥವೇಱಿ (ತ್ರಿಪುರಾ. ೦೩–೬೪).

[ ಪಾರು$_2$ + ವಿಳಿ$_2$ ]

**ಪಾರುವೀಳೆಯ** (ನಾ). (ದೇವರು, ಅರಸರು ಹಾಗೂ ಅಧಿಕಾರಿಗಳ) ದರ್ಶನವನ್ನು ಮಾಡಿದವರಿಗೆ ಕೊಡುವ ಗೌರವತಾಂಬೂಲ ; ಬೆಳ್ಳಿಬಟ್ಟಲದಂತೆಸೆವ ಸ್ವಪ್ನದ ಪಾರುವೀಳೆಯ[ಪಾಠಾಂ. ಳ್ಯ]ಗಳನು ಬಾದುರಗೆ ಡಿಳ್ಳಿಶ್ವರನೀಯೆ ಮಲ್ಲುಖಾನರು ತಳ್ಳಂಗೊಂಡಿರೆದೆಯೊಳು (ಕುಮಾರಾ. ೦೬–೯೬). [ ಪಾರು$_1$ (< ಪಾರ್$_1$) + ವೀಳೆಯ ]

**ಪಾರುವೇಟೆ** ' ಪಾರಿವೇಂಟೆ ' ನೋ.

**ಪಾರುಶದ** (ನಾ). ರಾಜ, ದೇವತೆ ಮುಂತಾದವರ ಸೇವಕವರ್ಗ,– ಪರಿವಾರ : ನಾರದಾದಿ ಮುನೀಶ್ವರರ ಪರಿವಾರವೊಂದೆಸೆಗೊಂದೆಸೆಗೆ ನಿಜ ಪಾರುಶದ ಪರಿವಾರವಾ ಸುರವರರ ಪರಿವಾರ . . . ಪರಿವರಿಸಿರಲು (ಶಿಭಾಗ. ೬–೯–೩೨). [ < ಸಂ. ಪಾರಿಷದ ]

**ಪಾರುಷ್ಯ** (ನಾ). ೧. ಒರಟುತನ ; ಕಾಠಿಣ್ಯ. ೨. ನಿಷ್ಠುರತ್ವ : ಪಾರುಷ್ಯ ಎಂದರೆ ನಿಷ್ಠುರತ್ವ (ಭಾಕಶ್ರ. ೦೯೦). ೩. ಕಠಿಣವಾದ ಮಾತು ; ಬಿರುನುಡಿ : "ಪಾರುಷ್ಯ, ಆಶಿವಾದಃ – ೨ ಅಪ್ರಿಯವಾಗಿ ನುಡಿಯುವಿಕೆ" (ಸಿದ್ಧಾಂತಿ. ೩೩). ೪. ಬೃಹಸ್ಪತಿ. [ಸಂ.]

**ಪಾರೆ**$_1$, ಆರೆ$_1$, ಹಾರೆ (ನಾ). ನೆಲವನ್ನು ಅಗೆಯುವುದು, ಕುಟ್ಟುವುದು ಮುಂತಾದ ಕೆಲಸಗಳಿಗೆ ಉಪಯೋಗಿಸುವ ಕಬ್ಬಿಣದ ಒಂದು ಉಪಕರಣ ; ಗಡಾರಿ : ಕಡುಗಾಯ್ದ ಪಾರೆಯಂತುಂ ಸುಡಲರಿಯದು ಸತ್ಯಮುಳ್ಳನಂ ಪುಸಿವವನಂ ಸುಡುವುದು (ಧರ್ಮಾಮೃ. ೬–೦೯೦) ; ಆಕೆ ತನ್ನ ಶುಚಿತನಕ್ಕೆ ದಿವ್ಯಮಂ ಪಿಡಿವೆನೆಂದು ಪಾರೆಯಂ[ಪಾಠಾಂ. ಪಾಳಮಂ] ಕಾಸುವ ಸಮಯದೊಳ್ (ಧರ್ಮಾಮೃ. ೩–೬೮ ವ) ; ದೋಣಿಕ್ಕೆ ದೆಗ್ಗಪರ ಪಾರೆ ನೆಲಗುಮ್ಮ ಡೊಂಣೆ ಸಬಳ ಶರಗಳ ಸಂಕುಳವೆಯ್ದುತು ಕೊಲ್ಲಾರದೊಳಾ ಬಂಕಕಾರ್ತಿಯ ದಂಡಿನೊಳಗೆ (ಕುಮಾರಾ. ೯೦–೩೦). **ಆರೆ**$_1$ **:** ಚರಿತ್ರದಿಂದೊಂದುದ್ದುವಾ[ಪಾಠಾಂ. ಬಾ]ರೆಯಂ ಪಿಡಿತಂದು ಪರಮವೈರಾಗ್ಯಯುಕ್ತಂ ಹರುಷದಿಂ ಬಂದು (ವಾಗೀಶ. ದೀ. ೨೬೯–೩). **ಹಾರೆ :** "ಹಾರೆ ಭೇದಿಯತ್ತ್ಯಂ" (ಶಬ್ದಮಾ. ೦೦೯–೨); ಕರ್ಪೂರವೆತ್ತ ಧಾರೆ ಕೋರೆ ಹಾರೆಗಾಸಿ ಗುದದೊಳಿಟ್ಟು . . . ಸುಡುವರು (ಸಾತಂಶ. ೬–೦೯೩); ಹಾರೆಯಾಕಾರದ ಚಂಡವೇಗಿಯಾ ರಾಯ ವೀರಭುಜದಿ ತೂಗಿ ನೋಡಿ ಪಾರುವಾಣೆಯ ತೆಕ್ಕಮುಖ ಮಾಡಿ ತೆಂಕಮುಖಾರವಿಂದಾಯತನಾದ (ಜೈಕ. ೨೯–೬೬); ಚಪ್ಪಡಿಕಲ್ಲನ್ನು . . . ಹಾರೆಯಿಂದ ಮೀಟಿ ಒಳಗೆ ಹೋಗಿ ನೋಡಲು ಒಂದು ಅಂಕಣದ ಚಿಕ್ಕ ಮನೆಯಾಗಿತ್ತು (ಹುಚ್ಚಹ. ೬೯).

[ದೇ.॥ ತಮಿ. ಪಾರೈ ; ಮಲ. ಕುವಿ. ಪಾರ ; ತುಳು. ಪಾರೆಂಗಿ ; ತೆಲು. ಪಾರ, ಪಾಱ; ಕೋತ, ತೊದ. ಪಾರ್]

**ಪಾರೆ**$_2$ (ನಾ). ಬಂಡೆ : ಆ ಪಾರೆಯನ್ನು ಹಳ್ಳದಲ್ಲಿ ತಳ್ಳುವುದಕ್ಕೆ ಅದರ ಕೆಳಗೆ ಡೊಗರು ತೋಡುತ್ತಾನೆ (ಕಥಾಮು. IV, ೯); ಪಾರೆಯನ್ನು ಹತ್ತಿ ಅದರ ಮೇಲೆ ಹೋಗಿ ನಿಂತರೆ, ಎಷ್ಟು ಚನ್ನಾಗಿ ಕಾಣುತ್ತದೂ ಸುತ್ತಲೆಲ್ಲ (ಕಾಡಿನೊ. ೨೩). [ದೇ.॥ ತಮಿ. ಪಾಱೈ. ಪಾರ್; ಮಲ. ಪಾಱ; ತುಳು. ಪಾಡೆ; ತೊದ. ಪಾರೆ ; ಪರ್ಜಿ. ಪಾರ]

**ಪಾರೆ**$_3$ 'ಪಹರೆ' ನೋ.

**ಪಾರೆ**$_4$ (ನಾ). ಶರೀರದ ಒಂದು ಭಾಗ ; ಅವಯವ : ವೆತ್ತರಂ ಕಡಿದು ಸೀನೆಣದೊರ್ಬಡಿಖಂಡಮಂ ಪತ್ತಿ ತೊಱಱ್ದು ಪೆಣದೊಟ್ಟಿದ ಪಾರೆಯುಮಾರೆಯುಮಂ ತುತ್ತಿ ನುಂಗಿ (ಕಾವ್ಯಾಶ. ೬೨೩).

[?. / ತುಳು. ಪಾರೆ=ಭುಜ]

**ಪಾರೆಯಂಬು** (ನಾ). ಹಾರೆಯಾಕಾರದ ಬಾಣ : ಓರೋಂದೆ ಪಾರೆಯಂಬಿನೊಳೋರೊಂದೆ ಗಜೇಂದ್ರಮುರುಳೆ (ಶಂಖಪು. ೦೦–೬೦); ವಿಜಯನು ಅವರ ಮೇಲೆ ಕೆಂಗರಿಗಳ ಪಾರೆಯಂಬುಗಳನ್ನು ಎರೆದು . . . ಸುಶರ್ಮನ ತಲೆಯನ್ನು ಹಾರಿಸಿದನು (ಕಾಮುಕ. ೨೩). [ಪಾರೆ$_1$ + ಅಂಬು]

**ಪಾರೆವಾಯ್** (ನಾ). ಹಾರೆಯ ತುದಿ, — ಮೊನೆ: ಪಂದಿಯ ಪಿಂದನೆಯ್ದಿ ಪಿಡಿವಿಟ್ಟಿಯ ನೆಟ್ಟಿಜ ಪುರ್ಲೆಯುಂ ತೆಱಿಂದುದೆಸು ಪಾರೆವಾಯ ಸರಲಿಂ (ಕುಶಾಕೀ. ೨.೦೬). [ಪಾರೆ₁+ಬಾಯ್]

**ಪಾರೈಸು** 'ಪಾರಯಿಸು' ನೋ.

**ಪಾರೋಕ್ಷ** (ನಾ). ಕಣ್ಣಿಗೆ ಕಾಣದಿರುವುದು; ರಹಸ್ಯವಾದುದು: ಪಾರೋಕ್ಷವೆಂಬುದು ತಿಳಿವುದದು ಅಪರೋಕ್ಷವೆಂಬುದು ನೆಲೆಗೆ ಕಂಡದು ಬಳಿಕ ಪಾರೋಕ್ಷವದು ಅದು ಪಾರೆಯು (ಜ್ಞಾಶಂ. ೩–೩೧). [ಸಂ.]

**ಪಾರೋಡು** 'ಪಾಱೋಡ' ನೋ.

**ಪಾರ್ಶ್ವ₁** (ನಾ). ಭುಜಾಗ್ರ; ಅಂಸ; ಹೆಗಲು: ಸೂಸಿದ ಖಂಡ ಮುರುಳ್ದ ತಲೆ ಪಱಿದು ಕರಂ ಪಸರಿಸಿದ ಪಾರ್ಶ್ವ ಕರುಳೊಕ್ಕಸುವಿಟ್ಟ ದೇಣಂ ದಲೆಸ್ತವಾ ರಣರಂಗಂ (ಕೇಚಂ. ೧೦–೦೫೪); ಬಾಣಘಾತದಿಂ ಪಾಱುವ ಪಾರ್ಶ್ವಗಳ್ ಪರೆದ ಪದ್ದಳಗಳ್ . . . ವಾಜಿ ವಾರಣ ವರೂಥವುಸಂಜೆಸಿದತ್ತು ಸುತ್ತಲುಂ (ಕುಶಾಕೀ. ೬–೦೦೯); ಅಲ್ಲಿ ಕಕುದ ಸಂಬಂಧಿಯಪ್ಪ ಪಾರ್ಶ್ವಗಳ್ಗೆ ಯಸಯ(ಅಂಸಮ)೦ಬ ಪೆಸರಕ್ಕುಂ (ಅಶ್ವಶಾ. ೬೬–೦೬). [<ಸಂ. ಪಾರ್ಶ್ವ]

**ಪಾರ್ಶ್ವ₂** (ನಾ). ವಿಹಾರಪ್ರದೇಶ; ಉದ್ಯಾನ: ಅವರು . . . ಭೇಟಿ ಕೊಡದ ಪಾರ್ಕುಗಳಿರಲಿಲ್ಲ (ಸೋಕುಗ. ೬೩). [←ಇಂ. Park]

**ಪಾರ್ಕೆ** (ನಾ). ಹಾರುವಿಕೆ; ನೆಗೆತ: ಲಂಘನಂ=ಒಣಗುಂ, ಪಾರ್ಕೆಯುಂ (ಅಭಿಕೌ. ೦೦); ಜಲಪರಿಪೀತವಾರಿದವಮಾನನೆಗಳಿಂದು ತುಡುಂಕು ಪಾನೆಗಳ್ಗಳಚಳನಂಗಳಿಂದೊಗೆದ ವ್ಯಾಕರಣವುಂ ಸೊದೆಗೆತ್ತು ನುಂಗುವಾ ಜಳಚರದಾ ಪರಿಸ್ಫುರಣವುಂ ವಿಗೆ ಮುತ್ತಿನ ಪಾರ್ಕೆಯೆಂದು ಕೈದಳೆ ವಪುರೀಜನಂಗಳ ಬೆಡಂಗಿನೊಳೊಪ್ಪಿತು ಸಿಂಧುಬಂಧುರಂ (ಚಂಪ್ರಕು. ೦–೬೨). [ಪಾರ್₂ (<ಪಾಱು₁) + — ಕೆ]

**ಪಾರ್ಖುವಣೆ** 'ಪಾರಖಾವಣೆ' ನೋ.

**ಪಾರ್ಗುಂಪ್ಪೆ** 'ಪಾಱುಂಗುಪ್ಪೆ' ನೋ.

**ಪಾರ್ಟಿ** (ನಾ). ೧. ಪಂಗಡ; ಪಕ್ಷ: ತಾನು ಕ್ರಾಂತಿಕಾರಿ ಪಾರ್ಟಿಗೆ ಸೇರಿದ್ದೇನೆ ಎಂದು ನಿನ್ನೆ ತಾನೇ ಆತ ಹೇಳಿದ (ಅಕ್ಕಾಶರ. ೬೩); ನಮ್ಮ ಹಳ್ಳಿಯಲ್ಲಿ ಹಿಂದೆ ಪಾರ್ಟಿಯಾಗಿ ಆದರ ಕಷ್ಟ ನಿಷ್ಠೂರಗಳನ್ನು ಅನುಭವಿಸಿ ಇತ್ತೀಚೆಗೆ ಒಂದೇ ಗುಂಪಾಗಿದ್ದರು (ಕುಬ್ಬಿಕ. ೬೦). ೨. ಸಂತೋಷ ಕೂಟ: ಗೆಳೆಯರ ಒತ್ತಾಯಕ್ಕೆ ಅನಂತ ಊರು ಮುಂದಿನ ಗುಡ್ಡದ ಮೇಲೆ ಪಾರ್ಟೀ ಕೊಟ್ಟನು (ಜಲಾಶ.೨). [←ಇಂ. Party]

**ಪಾರ್ಟು** (ನಾ). ೧. ವಿಭಾಗ; ಖಂಡ; ಭಾಗ: ಈ ಪುಸ್ತಕವನ್ನು ಮೂರು ಪಾರ್ಟುಗಳನ್ನಾಗಿ ಮಾಡಿ ಪ್ರಕಟಿಸಲಾಯಿತು (ರೂಢಿ). ೨. ನಾಟಕ, ಸಿನಿಮಾಗಳಲ್ಲಿ ನಟನಟಿಯರಿಗೆ ವಹಿಸುವ ಪಾತ್ರ: ಅವಳು ಮರಾಠಿ ನಾಟಕದಲ್ಲಿ ಬಹಳ ಚೆನ್ನಾಗಿ ಪಾರ್ಟು ಮಾಡುತ್ತಾಳೆ! (ಸ್ವಸ್ವಪೊ. ೨೫೯); ರಾಧಾ ನಾಟಕದಾಗ ಕೃಷ್ಣನ ಪಾರ್ಟ ಇದ್ದಾಂಗ ಕಾಣ್ತದ ನಿಂದು? (ಅಮ್ಮುಟ. ೦೬). [←ಇಂ. Part]

**ಪಾರ್ಥ** (ನಾ). ೧. ದೊರೆ; ರಾಜ. ೨. ಪೃಥೆಯ ಮಗ; ಅರ್ಜುನ: ಇದು ಚಕ್ರವ್ಯೂಹಮಿಾ ವ್ಯೂಹಮನೊಡೆಸದಟಂ ಪಾರ್ಥಂ (ಕಂಹೊ. ೦೦–೬೬): ಉರಗೇಂದ್ರಲೋಕಮಂ ಪೊಕ್ಕುರಗರೋಳಱುವುರಗ ಪತಿಯ ನಿಜಸುತೆಯೊಡನಾದರದಿಂ ಜಯಲಕ್ಷ್ಮಿಯೊಳೊಡವೆರೆದಂ ಕೀರ್ತಿಯೊಳಮೊಂದೆ ಪಸೆಯೊಳ್ ಪಾರ್ಥಂ (ಗದಾಯು. ೨–೯೨); ಸಂಹರಿಸು ಮುತ್ಪರಿಭವವನೆಂಮುರುತರದ ಭಕ್ತಿಯಲಂದು ಸ್ಮೆಗೆಡದಿರ್ದನಾ ಪಾರ್ಥ (ಕುವ್ಯಾಶಿ. ೬–೯೩). ೩. ಒಂದು ನಕ್ಷತ್ರದ ಹೆಸರು: ಪಾರ್ಥನನ್ನು ಗುರುತಿಸಲು ಸಮತ್ರಿಕೋನಾಕಾರದ ಮೂರುನಕ್ಷತ್ರಗಳು ಸಹಾಯಕ ವಾಗುತ್ತವೆ (ಜನಕ್ಕೆ. ೨೯). [ಸಂ.]

**ಪಾರ್ಥಕುಮಾರ** (ನಾ). ಅರ್ಜುನನ ಮಗ; ಅಭಿಮನ್ಯು: ಶಿವಶಿವ ನುಡಿಪ ೬ವಿ ಯಾರಿನ್ನು ಪಾರ್ಥಕುಮಾರನಾಹವವ (ಕುವ್ಯಾದ್ರೋ. ೬–೬).
[ಪಾರ್ಥ + ಕುಮಾರ]

**ಪಾರ್ಥಜ** (ನಾ). ೧. ಅರ್ಜುನನ ಮಗ. ೨. ಅಭಿಮನ್ಯು. ೩. ಬಭ್ರುವಾಹನ: ಪಾರ್ಥಜನ ಶರಪರ್ಪದೊಳ್ನೆಯುನಪಲ್ಲಿ ಪಾಂಡವನ ಪರಿವಾರದೊಳ್ (ಕೃಜಿಶಾ. ೨೨–೩೮); ಚಿತ್ರಾಂಗದೆಯು ಲೇಖರವಿರ್ದ ಶಿಬಿರೆಯೆಡೆ ಪಾರ್ಥ ಪಾರ್ಥಜರಿರ್ದರುಂ ಕಾಣ್ಬುತಗೆಯಿಂದೆ ಸಾರ್ದರ್ (ಅಶ್ವಾಗ. ೬೯–೨೯೯೬). [ಸಂ.]

**ಪಾರ್ಥಿ** (ನಾ). ೧. ಅರ್ಜುನನ ಮಗ. ೨. ಅಭಿಮನ್ಯು: ಹರನ ನಮನಪ್ಪಾಲೆ ಪಾರ್ಥಿಯ ಸರಳ ಕಿಡಿಯುಲಿ ಪಲ್ಲಟಿಸೆ ಸಂಗರದೊಳಗೆ ಸ್ವೆವರಿದು ಸದೆದನು ಸೇಲಸೈನಿಕರ (ಕುವ್ಯಾದ್ರೋ. ೬–೨). ೩. ಬಭ್ರುವಾಹನ: ಎನ್ನ ವಿಕ್ರಮವನೀಗ ನೋಡೆನುತೆವ್ವು ಕರೆಸಿದಂ ಪಾರ್ಥಿ ನಿಜಸೈನಿಕವನು (ಕೃಜಿಶಾ. ೨೯–೨೮). ೪. ಮತ್ತಿಯ ಮರ. [ಸಂ.]

**ಪಾರ್ಥಿವ** (ಗು). ೧. ಪೃಥ್ವೀ ಸಂಬಂಧವಾದ; ಭೌತಿಕವಾದ: ಭೂಮಿಗೆ ಸಂಬಂಧಿಸಿದ: ಈ ಅನಂತ-ಕೋಟಿ-ಬ್ರಹ್ಮಾಂಡದ ಅನಂತ ಅಸ್ತಿತ್ವದ ಹಿನ್ನೆಲೆಯಲ್ಲಿ ವಿಚಾರಿಸಿದಾಗ ಹೊಳೆದೀತು ನಮ್ಮಿಾ ಕ್ಷಣ ಭಂಗುರವಾದ ಪಾರ್ಥಿವ ಜನ್ಮವನ್ನು ನೋಡುವ ದೃಷ್ಟಿ (ಮುರುಲು. ೨೦೬). ೨. ಭೂಮಿಯನ್ನು ಆಳುವ; ಅರಸುವಂಶದ: ಪಾರ್ಥಿವ ಚೂಡಾರತ್ನಂ ತೀರ್ಥಂಕರೇಂದ್ರೂಪಮಾಚಳಂ ಪ್ರಾಪ್ತಾನೇಕಾರ್ಥಂ ಪರಿಪಾಳಿತಬುಧಸಾರ್ಥಂ ಸಿದ್ಧಾರ್ಥನೆಳೆಯೊಳೆಸೈ ಕೃತಾರ್ಥಂ (ವರ್ಧ. ೦೩–೩೯). ೩. ಇಹಲೋಕಕ್ಕೆ ಸಂಬಂಧಿಸಿದ; ಐಹಿಕವಾದ: ಪಾರ್ಥಿವ ಪರಿಧಿ ದಾಟುವಲ್ಲಿ ಮುಂದುಡಿ ಹೋಗದಂತೆ. . ಅನಂತತೆಯ ಚಿದಾನಂದದ ಆಸೆ ಪುಟ್ಟಿಸಿದ್ದು ಈ ಸ್ವಪ್ನಲೋಲತೆ (ದೀನ್ಯ. ೨). (ನಾ). ೪. ಪೃಥ್ವಿಗೆ ಸಂಬಂಧಿಸಿದುದು; ಭೌತಿಕವಾದುದು: ನಾಟಕವು ನಾಟಕಕಾರನ ಸಂತಾನವು, ಅವನ ಭಿನ್ನತೆಯು ಪಾರ್ಥಿವವಾಗಿದೆ (ಕೃಹಂರ ೪೦). ೫. ಭೂಮಿಯನ್ನು ಆಳುವವನು; ರಾಜ: "ರಾಜಾ:, ರಾಜನ್ಯ: . . . ಪಾರ್ಥಿವ:, ನರದೇವ:, ಲೋಕಪಾಲ: — ಈ ೧೨ ಅರಸು" (ಹಲಾಯು. ೬೬–೨೬೬); ಅವಲೋಕಿಪುದುಂ ನವವನಜ ವಲ್ಲಿಗೆಜಗುವ ರುಚಿಷವ್ಯಯುಂಗಳಿವೆನೆ ಪಾರ್ಥಿವನ ನಯನಂಗಳೆಱಗಿದು ನವಯುವದಿಂ ನಿಂದ ಗಾಯಿಕಾಯುವತಿಯರೊಳ್ (ಶಾಂತಿಪು. ೩–೩೩); ಇಱುಯದೆ ಬೇಡಿದೊಡೀಯದೆ ಬಱದೆ ಕುಲೀನತೆಗೆ ಬೆಸವ ಪಾರ್ಥಿವ ಕಬ್ಬುಕ್ಕೆಱವಟ್ಟನಿಸಿ ಧರಿತ್ರಿಗೆ ಪೊಱೆಯೆನಿಪಂ ರಾಜನಾಮಧಾರಕನಲ್ತೇ (ಪಂಚತಂ. ೯–೪೦). ೬. ಶಿವ; ಈಶ್ವರ. ೭. ಮಣ್ಣಿನಲ್ಲಿ ಹುಟ್ಟಿದುದು; ಮರ, ಗಿಡ ಮೊದಲಾದುವು. ೮. ಆಕಾಶ: "ಶಿತಿಕಂಠ ಭೂಪ ಸಭ ಮಾರವಿತಿ ನಾಲ್ಕುಂ ಪಾರ್ಥಿವಾಖ್ಯೆಮೆನಿಸಿಂ ಜಗದೊಳ್" (ನಾನಾಶಂ. ೬೩). ೯. ಅರುವತ್ತು ಸಂವತ್ಸರಗಳಲ್ಲಿ ಹತ್ತೊಂಬತ್ತನೆಯ ಸಂವತ್ಸರದ ಹೆಸರು: ಆ ಪರಾಭವ ಪ್ಲವ ವಿಭವ . . . ಪಾರ್ಥಿವ . . . ಅಕ್ಷಯವೆಂಬಅವತ್ತು ತೆಱನಾಗಿಹುವು (ಅಜೀಚ. ೩೨೦). ೧೦. ಮಣ್ಣಿನ ಪಾತ್ರೆ; ಗಡಿಗೆ. ೧೧. ದೇಹ; ಒಡಲು. [ಸಂ.]

**ಪಾರ್ಥಿವಕುಲ** (ನಾ). ರಾಜಮನೆತನ; ಅರಸುವಂಶ: ಶಾಂತಿರ್ಥಾಭಿಷಿಕ್ತ ಪಾರ್ಥಿವಕುಲಪ್ರಸೂತರುಂ ವಿನಯೋಪಪನ್ನರುಂ ಕೋವಿದರುಂ . . . ಪೂಜಗೆ ಕುರಗಾರೂಢರ್ ಪ್ರಣಾಮಲಾಲಸರಾಗಿ ಬಾಗಿಲೊಳ್ ಪಾರ್ಥಿವರ್ (ಕಾದಂಪೂ. ೯೩೦); ಸದ್ವಂಶಸಂಜಾತಂ ಪಾರ್ಥಿವಕುಲ ವರಿಷ್ಠವಂಶಸಂಭವಶ್ರೇಷ್ಠಂ! (ಅಶ್ವಾಗ. ೩೬–೯೯೦).
[ಪಾರ್ಥಿವ + ಕುಲ]

**ಪಾರ್ಥಿವಗುಣ** (ಗು). ೧. ಪೃಥ್ವಿಯ ಸಂಬಂಧವುಳ್ಳ; ಭೂಗುಣವುಳ್ಳ. ೨. ರಾಜಯೋಗ್ಯವಾದ ಗುಣದಿಂದ ಕೂಡಿದ; ಕ್ಷತ್ರಿಯ ಗುಣದಿಂದ ಕೂಡಿದ: ಪ್ರಿಯದಿಂದೊಡೆಯರವಂ ಬಯಸಿದ ಶೌರ್ಯಾದಿಸಕಲಪಾರ್ಥಿವಗುಣಸಂಪದುಪಕ್ರಮಾರ್ಥಿನದಿಂದಾಶ್ರಯರೂಪನನಾಪಾಡೀಶನು ಬಿದಿ ಪಡೆದಂ (ಕುಶ್ರಕ. ೩-೨೯). (ನಾ). ೩. ಪೃಥ್ವಿಯ ಸಂಬಂಧವುಳ್ಳುದು; ಭೂಗುಣದಿಂದ ಕೂಡಿದುದು. ೪. ರಾಜಯೋಗ್ಯಗುಣದಿಂದ ಕೂಡಿದವನು; ಕ್ಷತ್ರಿಯಗುಣದಿಂದ ಕೂಡಿದವನು. ೩. ೪: ಪಾರ್ಥಿವಗುಣಾಯುತನಾಗಿಯುಂ ಪಾರ್ಥಿವ ಫಲದಾಯಿಯಾಗಿಯುಂ ನಿನ್ನೊಳ್ ತಾಂ ಪೃಥ್ವರ್ತೆಯುಂ ಪಡೆಗುಂ ಪರಪಾರ್ಥಿವಚೇತನತೆಯಿಂದೆ ಕಲ್ಪಕಜಾತಂ (ಶಂಪ. ೩-೯೯).

[ಪಾರ್ಥಿವ + ಗುಣ]

**ಪಾರ್ಥಿವತ್ವ** (ನಾ). ಮಣ್ಣಿನ ಗುಣದಿಂದ ಕೂಡಿದುದು: ಅರಸು ಗುಣಾಗ್ರಗರವಾದರಸನೆ ಪಾರ್ಥಿವನದೊಂದುವಿಲ್ಲದೆ ಬೆಸದಿರ್ಪರರಸನವಂ ವ್ಯಕ್ತಿಂತಸ್ವರೂಪದಿಂ ಪಾರ್ಥಿವತ್ವಮಂ ಪ್ರಕಟಿಸುಗುಂ (ಶಾಪಂಕ್ತಿ. ೩೦೦).

[ಸಂ.]

**ಪಾರ್ಥಿವಪುತ್ರ** (ನಾ). ೧. ರಾಜಪುತ್ರ; ಕ್ಷತ್ರಿಯ ಕುಮಾರ: ಕುವರಿಯ ಕವಲುದೊಳ್ ಬರ್ಪ ಪಾರ್ಥಿವಪುತ್ರಸಾರ್ಥಮುಮಂ (ಶಂಪ್ರಕ. ೭-೬೦ ವ). ೨. ನೋಡಿ.

[ಪಾರ್ಥಿವ + ಪುತ್ರ]

**ಪಾರ್ಥಿವಶರೀರ** (ನಾ). ೧. ಜಡಶರೀರ; ಭೌತಿಕವಾದ ದೇಹ: ಸತ್ಯಸಾಕ್ಷಿಕನಂ ಧನ್ಯನೆಯುಸಿಲ್ಲಗ್ಯಪ್ಪುಲ್ಲೈಳಸಿ ಸಂಪಡಿಸಿ ಆ ಜರಾಜರ್ಝರಿತ ಪಾರ್ಥಿವಶರೀರಮಂ ಅನಾಯಾಸಂ ಘಾಸಿಸಿದರೇನಂತೆ! (ಅವುಕಂ. ೧೯ ೬); ಅವರ ಆತ್ಮವು ಪಾರ್ಥಿವಶರೀರದ ಬಂಧನವನ್ನು ತೊರೆದು ಹೋಯಿತು . . . ಹೋಗಿರಬೇಕು (ಸಂಗ್ರಹ. ೨೯). ೨. ಶವ; ಹೆಣ: ಶ್ರೀಶಂಕರ . . . ಪಾರ್ಥಿವಶರೀರವನ್ನು ಎಲ್ಲ ಸಮಾಜದವರು ತೇರು ಕಟ್ಟಿ . . . ಶಂಕರ ತಂದೆಯ ಸಮಾಧಿಯ ಜೊತೆಗೆ ಅಂತ್ಯವಿಧಿಯನ್ನು ಒಳ್ಳೆ ವಿಜೃಂಭಣೆಯಿಂದ ಮುಗಿಸಿದರು (ಕಲೀಶ. ೭೯ ಶರಣಾಕ್ಷರಸಿಕರು).

[ಪಾರ್ಥಿವ + ಶರೀರ]

**ಪಾರ್ಥಿವಸಂವತ್ಸರ** (ನಾ). ಅರುವತ್ತು ಸಂವತ್ಸರಗಳಲ್ಲಿ ಹತ್ತೊಂಬತ್ತನೆಯದು: ಕಳಚುರಿಚಕ್ರವರ್ತಿ ಭುಜಬಳಮಲ್ಲದೇವ ವರ್ಷದ ಹತ್ತನೆಯ ಪಾರ್ಥಿವಸಂವತ್ಸರದ ಶ್ರಾವಣ ಬಹುಳ ದ್ವಾದಶಿ ಬೃ[ಬೃ]ಹಸ್ಪತಿವಾರದಂದಿನ ಬ್ಯತಿಪಾತ ಪರ್ಬ್ಬ ನಿಮಿತ್ತದಿಂ (ಕೊಪ್ಪಳ.೮೩-೮೯; 1165); ದಂಡನಾಯಕರುಂ ಸಮಸ್ತಕರಣಂಗಳುಂ ಪಾರ್ತ್ಥಿವಸಂವತ್ಸರದಾಷಾಢ ಬಹುಳನವಮಿ ಮಂದವಾರ ದಕ್ಷಿಣಾಯನಸಂಕ್ರಾಂತಿಯಲು . . . ಧಾರಾಪೂರ್ಬ್ಬಕಂ ಕೊಟ್ಟರು (ಕೊಪ್ಪಳ. ೦೪-೩೯: 1166).

[ಪ್ರಾರ್ಥಿವ + ಸಂಪತ್ಸರ ]

**ಪ್ರಾರ್ಥೇನಿಯಂ** (ನಾ). (ಬೆಳೆಗಳಿಗೆ ಕಳೆಯಾಗಿರುವ) ಒಂದು ಕೀಳು ಬಗೆಯ ಸಸ್ಯ: ಈಚೀಚೆಗೆ ಕಂಡ ಕಡೆಯಲ್ಲೆಲ್ಲಾ ಪಾರ್ಥೇನಿಯಂ ಬೆಳೆ ಹೆಚ್ಚುತ್ತಿದೆ (ಪ.೨೦). [← ಇಂ. Parthaneum]

**ಪಾರ್ದನ** 'ಪಾಡ್ದನ' ನೋ.

**ಪಾರ್ಪತ್ತೆಗಾರ** 'ಪಾರುಪತ್ಯಗಾಜ' ನೋ.

**ಪಾರ್ಪತ್ತೆ** 'ಪಾರುಪತ್ಯೆ' ನೋ.

**ಪಾರ್ಪತ್ಯಗಾರ** 'ಪಾರುಪತ್ಯಗಾಜ' ನೋ.

**ಪಾರ್ಪಾಲಿ** (ನಾ). ಒಂದು ಬಗೆಯ ಸಸ್ಯ: ಪಾರ್ಪಾಲಿ, ಕೊಡಟಿ, ಗುಲ್ಲು (ವೈ.ಶಿ. ೭೯-೨೩೩). [ ? ]

**ಪಾರ್ಪು** (ನಾ). ನೋಟ; ದರ್ಶನ: ಏನ್ ನೋಸ್ತ ನೋಪ್ಪಿಯೋ, ಏನ್ ಪಾಪ್ತ ಪಾಪ್ಪೀ (ತೊಂಗಳು. ೩೯-೦೦). [ಪಾರ್$_1$ + — ಪು$_2$]

**ಪಾರ್ಬ** 'ಪಾರ್ವ' ನೋ.

**ಪಾರ್ಬಣ** (ನಾ). ಪರ್ವಕಾಲದಲ್ಲಿ ಪಿತೃಗಳಿಗೆ ತರ್ಪಣ ನೀಡುವ ಕ್ರಿಯೆ,—ವಿಧಿ; ಅಮಾವಾಸ್ಯೆಯ ದಿನ ಮಾಡುವ ಶ್ರಾದ್ಧ; ಪರ್ವಶ್ರಾದ್ಧ: ಕಳುಹಿ ಪಾರ್ಬಣಯೋಗ್ಯ ಮಾಂಸಂಗಳನು ರಾಜಾಲಯಕೆ ವನದಲಿ ಸುಳಿದು ಮೃಗಯಾವ್ಯಸನದಲಿ ವರನೃತ್ಯಗೀತದಲಿ ಬಳಲಿ ಬಸವಳಿವುತ್ತ ಹೋದನು ಫಲುಗುಣನು (ಕರ್ಣಾಟ. ೦೦-೩೮-೨೩).

[<ಸಂ. ಪಾರ್ವಣ]

**ಪಾರ್ಬಿಕೆ** 'ಪಾರ್ವಿಕೆ' ನೋ.

**ಪಾರ್ಲಿಮೆಂಟು** (ನಾ). ರಾಷ್ಟ್ರದ ಕೇಂದ್ರಸರ್ಕಾರಕ್ಕೆ ಸಂಬಂಧಿಸಿದ ಪ್ರಮುಖಪಟ್ಟಣಗಳ ಪ್ರಜಾಪ್ರತಿನಿಧಿಗಳನ್ನೊಳಗೊಂಡ ಪ್ರಧಾನ ಸಭೆ; ಲೋಕಸಭೆ; ಕೇಂದ್ರಸಂಸತ್ತಿನ ಉಭಯಸಭೆಗಳಲ್ಲಿ ಒಂದು: ಬ್ರಿಟಿಷ್ ಪಾರ್ಲಿಮೆಂಟಿನ ಉದ್ದೇಶ ನಮ್ಮನ್ನು ಹಿಂದಿನ ಅಂಧಕಾರದಲ್ಲೇ ತೊಳಲಿಸಬೇಕೆಂದು ಇರಲಿಕ್ಕಿಲ್ಲ (ಕಾರಿದ. ೯೨೬).

[← ಇಂ. Parliament]

**ಪಾರ್ವ, ಪಾರುವ, ಪಾರ್ಬ, ಹಾರವ$_1$, ಹಾರುವ$_1$, ಹಾರ್ವ** (ನಾ). ವೇದ ಮೊದಲಾದ ಧರ್ಮಗ್ರಂಥಗಳನ್ನು ಓದಿ ತಿಳಿದಿರುವವನು; ಬ್ರಹ್ಮಜ್ಞಾನಿ; ಬ್ರಾಹ್ಮಣ: "ಪಾರ್ವರೆನಲ್ ದ್ವಿಜರ್ಗಳ್" (ಶಬ್ದಾರ. ೫೬); ಆ ಧರ್ಮ್ಮಕ್ಕೆ ಬಕ್ರ ಬಪ್ಪೊಂ ಬಾರಣಾಸಿಯುಂ ಸಾಸಿರ್ವ[ರ್] ಪಾರ್ವ್ವರುಂ ಸಾಸಿರಂ ಕವಿಲೆಯುಂ ಕೊಂದ ಪಾತಕನಕ್ಕೆ (ವೈ.ಅ. ೦೯೩೬, ೫೩-೩೫: ಸು. ೨೨೦); ಪದಿನೆಂಟುಧರ್ಮಶಾಸ್ತ್ರಂಗಳುಮಂ ಬಲ್ಲೊಂ ಸೋಮಶರ್ಮನೆಂಬೊಂ ಪಾರ್ವಂ (ವಡ್ಡಾರಾ. ೭೩-೦೫); ಪರಮಾರ್ಪಾರ್ವ[ಪಾಠಾಂ. ರ್ಬ]ರ್ಗ್ಗವರಸಗ್ರಾ ಕುಡಿಯರಪ್ಪ ನಾಲ್ವರ್ಗ್ಗಗಳ್ ಸ್ವಿರಗೋಪಾಧ್ಯಾಯಕ್ಷ್ಮಾಪರಿಪಾಲ್ಯಕ್ಷೇತ್ರಸರ್ಪಣಂಗಳ್ಯಯೋಗಳ್ (ಶಂಪ. ೦ ೬೯); ಪಾರ್ವನೆಂದೆನ್ನೊಳ್ ಪುಸಿದು ಏದ್ದುದುಂ ಕೈಕೊಂಡುದರ್ಕೆ ಪಡೆಂ ಪೆಜಿಸಿಲ್ಲ (ಕಾಶಪಾ. ೦-೨೦೫೪); ಪರಿದಿರ್ದಂತೆಕನೊಳ್ ಪಾರ್ವರ ಪಿಳ್ಳೆಯ ಪೋದ ಜೀವಮುಂ ತಂದು (ಗದಾಯು. ೨-೩೫). **ಪಾರುವ**: ಪುರದೊಳಗಣ ಪಾರುವರೆಲ್ಲರುಮು ಪಾತ್ರಸಮಯ ಗಳುಮಂ ಕಳ್ಳರ್ ಭರದಿಂದಂ ಕಂಡು ಸುವರಮೋಘಂ ಸಿಲ್ಕು ಕೊಲೆ ತಳಾಜರ ಕೈಯೊಳ್ (ರಮಾಶ್ವ. ೯-೮೩); ಕಾದಿ ಕಲು ಮರ ಮೊಗದಿಗಳ ಪುದುಕಿ ತತ್ವಸಂಬೋಧೆಯಿಲ್ಲದೆ ಕೃಪಣ ಶಿಶ್ನೋದರಂಗಳಂ ಸಾಧನಂಗೈವ ಪಾರುವರೆಸೆವರು ಕಲಿಯೊಳು (ವಂಶಾರಾ. ೫-೨೨-೨೨); ಆ ಪಾರುವಂ ಗುರಿಗಟ್ಟಿ ಸೂಸಿದ ಪುಣಾಂಬುಗಳ್ಪ್ರವಾಂಗೆ ಕಪಿಗಳಂತೆ ಪೇರೊಲವನಾಂತು (ಕುಶಕಾ. ೦೯-೩೫). **ಪಾರ್ಬ**: ಕಮ್ಮ ಸಟ್ಟುಗದಿಂದ ಕಡೆಹೊಡೆದು ಕೊಂದು ಪಾರ್ಬನನೆಳೆದು ಹಾಯ್ಸಲು (ಶಿಕ. ೫೩-೯೦). **ಹಾರವ$_1$**: ಕೌರವರ ಪತ್ರಿರ ಬಾರಿದ್ದಾರೆ? ಕೆಲವರು ಪಂಚಾಂಗದ ಹಾರವರು; ಉಳಿದವರು ಮಾಂಸಾಕರು (ಸಿ.ಶಿಂ. III, ೩೦); ಅಭ್ಯಾಸವಿಲ್ಲದ ಪಾರವ ಅಗ್ನಿಕಾರ್ಯ ಮಾಡಿದರೆ ಗಡ್ಡ ಮೀಸೆ ಹೊತ್ತಿತು (ಗಾದೆ). **ಹಾರುವ$_1$**: ಅನಾಗತೋಕ್ತಿ ಕಾಲೋರಣನೇಕಮಂ ದ್ವಿಜರ್ಗಗೊಟ್ಟುದಜಿಂದಮುಪಗ್ರಹಾರವಾ ಹಾರುವ ರಿಂದ ಮಾಡಿ x x ದೆ (ಎಕ. VIII, ಸಾಗರ. ೦೦೯-೫೯; 1079); ಹಾಸನಿಕ್ಕಿ ಸಾಲಿಗನಾದ ವೇದಪನೋದಿ ಹಾರುವನಾದ (ಶಿಸ. ೫೯೦); ತಿರಿವ ಹಾರುವರೊಡನೆ ಭೂಮಿಶ್ವರರಿಗೆತ್ತಣ ಮೈತ್ರಿ (ಸಂಶಿ. ೦೭-೯೨); ಹಾರುವನು ಉಪಕಾರಿ ಹಾರುವನು ಅಪಕಾರಿ ಹಾರುವನು ತೋರ್ವ ಬಹುನಾರಿ ಮುನಿದರೆ ಹಾರುವನೆ ಮಾರಿ (ಸರ್ವಜ್ಞ. ೦೦೦೯). **ಹಾರ್ವ**: ಸಿಲ ಔಷಧಿಯನ್ನು ಕೊಟ್ಟು ಗುಣ ಮಾಡೆನುತ ಹೀನ ಹಾರ್ವಗೆ ವೇಳೆ ಒಪ್ಪಿಸುತ ಪೋದ (ಶರೀ. ೯೦೦-೭); ಆ ಹಾರ್ವನು ಹಾವು ಹಸಾ ಕೊಟ್ಟವನು (ಹಟಗ. ೭೨).

**ಪಾರ್ವತೇಯ** (ನಾ). ಪರ್ವತಪ್ರದೇಶದಲ್ಲಿ ಜನಿಸಿದವನು; ಪರ್ವತವಾಸಿ: ಪುಷ್ಪಂದಫೂಪಲ್ಲಭನುಂ ಹಿಮವತ್ಕಟಂಬಿಡಿದು ಪೊಡವೊಗದೆ ಪಮನಾಂಬರೆ ಪಾರ್ವತೇಯೋವಾದಪ್ರಧಾನಪುರಸ್ಸರನಾಗಿ (ಶಾಂತಿ. ೦೦-೩೬ ವ); ಈ ಜನಗಳ ಭೂಷಣಗಳು ಆಕಾರಗಳು ನೋಡಿದರೆ ಪಾರ್ವತೇಯರಂತೆ ಕಾಣುವರೆಂದು ನಿಶ್ಚೈಸಿ (ಮುದ್ರಾಮಂ. ೨೮). [ಸಂ.]

**ಪಾರ್ವರ** (ನಾ). (?) : ಸ್ವಸ್ತಿಶ್ರೀವಿಕ್ರಮವುಹಾರಾಜಸ್ಸ್ಯಥಿವಿರಾಜ್ಯಕೆಯ್ಯೆ ಪಬ್ಬು ರಕ್ಕಸನೂರುಕೆಯ್ಯಲ್ಲಿ ಪಾರ್ವರೊಡೊಳ್ ಸತ್ತಾನ್ ಪೆರಾಗ್ಗೋವನ್ (ಎಕ. X (೨). ಶ್ರೀಬಿವ. ೦೦೬-೪; ಕ್ರಿ. ೭೦೦): ಪಾರ್ವರೊಡೊಳ್ ಸತ್ತಾನ್ (ಪ್ರಸ. ೦೯೦೭. ೦೦-೪; ೭ನೆಯ ಶ). [?]

**ಪಾರ್ವಾಟ** (ನಾ). ಪರಿಪಣಗೆ: ᑭ ವರ್ಷದಲ್ಲಿ ಯಾವುದಾದರೂ ಹುಬ್ಬದಲ್ಲಿ ಒಂದು ಪ್ರಾಣಿಯನ್ನು ಬೇಟೆಯಾಡಿ ಅದನ್ನು ಕೊಲ್ಲುವುದಕ್ಕೆ ಮುಂಚೆ ಮೆರವಣಿಗೆ ಮಾಡುವುದೂ ಕೆಲವು ಹಬ್ಬಗಳಲ್ಲಿ ಮೊಲ, ನರಿ ಇತ್ಯಾದಿ ಪ್ರಾಣಿಗಳನ್ನು ಬೇಟೆಯಲ್ಲಿ ಹಿಡಿದು ಮೆರವಣಿಗೆ ಮಾಡಿ ಮತ್ತೆ ಕಾಡಿಗೆ ಬಿಡುವುದೂ ಉಂಟು: ವರ್ಷಕ್ಕೆ ಒಂದು ಸಲ ಇವರು ಒಂದು ಚಿರತೆಯನ್ನು ಹಿಡಿದು ಪಾರ್ವಾಟ ಮಾಡಿ ಮುಗಿಸುವುದು (ಕಪ್ರ. VI. ೦೦೪). [<ಪರ್ವ ? +ಆಟ]

**ಪಾರ್ವಿಕೆ, ಪಾರ್ಶಿಕೆ** (ನಾ). ಪಾಪ್ರಮ್ಯಣಿಕೆ; ಹಾರುವತನ: ಪಾರ್ವಿಕೆಯೊಳ್ ಇರ್ದ ಪಾರ್ವಂಗೆ ಕೂಳನ್ ಒಯ್ವರ್ (ಶ್ರಾಕ್ತ. ೩೪೬): ಕಡೆಗೆ ವಂದಿಸದಿದ್ದನಾಪತೆ ಕೆಡುಗು ಪಾರ್ವಿ[ಪಾಠಾಂ. ರ್ಬಿ]ಕೆ ಮುಂದೆ ವಂದಿಸಿದಡೆ ಕೆಡುಗು ಪ್ರಭಕ್ತಿಯುಂತಾಗಿಂತರತಲ್ಲಿಂದ ಕೆಡುವನಿಳಿಯೊಳು ಪಾರ್ಬನು (ಬಸಪು. ೩-೬೪). **ಪಾರ್ಬಿಕೆ**: ಅಲುಬಿದಭವನ ಭಕ್ತರಿಗಾವ ಕುಲ ಪಂದಿದನೆಣಿಸಿ ನೀ ಪಾರ್ಬಿಕೆಗೆ ಸಲಿಸುವೆಯಿಂತಿನಿತು ಮಾರ್ಗಂಗಳೆಂದು (ಬಸಪು. ೩-೦೪) [ಪಾರ್ವ + –ಇಕೆ]

**ಪಾರ್ವಿತಿ** 'ಪಾರ್ವತಿ' ನೋ.

**ಪಾರ್ವಿಸು** (ಕ್ರಿ). ಹಾರಿಸು; ನುಗ್ಗಿಸು (?) : ತ(ಂ)ನ್ನ ಪಾರುಪಮಂ ಪಿ(ಂ)ನ್ನಿತ್ತು ಮು(ಂ)ನ್ನ ಪಾರ್ವಿಸಿ ಮುರಾರಿಯೊಳು ದಬ್ಬಾದುಬ್ಬಿ ಬೊಳು ಕಾದಿ ತಳ್ಳಿಬಿದು ಗೆಲ್ದ (ಸೌಇಇ. IX-i. ೩೪೨-೨೦; 1148). [?]

**ಪಾರ್ವೆ** (ನಾ). = ಪಾರ್ವತಿ: ಪರಿಸದಾ ಪಾರ್ವೆ ನಡೆದು ಪರ ಮಾತ್ರ(ಥ)ರ್ಂ ಕೊನ್ಡಿಸ್ತು ಮುಸ್ಸರಿಯಂ ಹಾನೆರಡಿಲ್ಲದೆಂಬ ನಾಳನುಡಿ ಪೊರೆದು (ಪ್ರಸ. ೦೯೨೩. ೩೪-೩; ೧೧ನೆಯ ಶ). [ಪಾರ್ವ + –ಎ]

**ಪಾರ್ಶ್ವ** (ನಾ). ೧. ಪಕ್ಕ; ಮಗ್ಗುಲು; ಬದಿ: "ಕಲಂ ಪಾರ್ಶ್ವ ಸಂಜ್ಞಕಂ" (ಅಭಿಧಾ. ೬೮-೬); ಮಣಿವಿಚಿತ್ರಪಾರ್ಶ್ವಂಗಳುಮಧಸ್ತ್ಯಲೋಕ ಪರಿಮಿತಲಪಪಾನವಿಸ್ತಾರಂಗಳುಮಪ್ಪ ಹಿಮವನ್ಮಹಾಹಿಮವನ್ನಿಷಧನೀಲ ರುಗ್ಮಿಶಿಖರಿಗಳೆಂಬ ವರ್ಷಧರಮಹೀಧರಂಗಳಿಂದಂ . . . ಎಸೆದು (ಆದಿಪು. ೦-೪೬೩): ಆ ಮಹಾನುಭಾವನಾ ಮಹಾಕಾಳದೊಳ್ ಸುಪ್ರಸುಕ ಪ್ರದೇಶಮುಂ ಕಂಡು . . . ವಿಕಾಸ್ರಚಿತ್ರರೋಳೇಕಪಾರ್ಶ್ವಮೊಳ್ ಮೆಯ್ಯನಿಕ್ಕಿ (ಮುಕಮು. ೦೨-೦೬ ವ); ಕೆಳಗೆ ಪಶ್ಚಿಮಪಾರ್ಶ್ವದಲ್ಲಿ ಒಂದ ರೊಳಕ್ಕೆ ಒಂದಕ್ಕೆ ಪ್ರವೇಶವಿರುವ ಎರಡು ಕೊಠಡಿಗಳು (ಹಂಟಬು. ೦೬). ೨. ಎದೆಯ ಕೆಳಗಿನ ಎರಡು ಮಗ್ಗುಲು; ಪಕ್ಕೆ: "ಪಾರ್ಶ್ವಂ—೧ ಕಯೋರಧಃ—ಕಂಕಳ ಕೆಳಗಡೇ ಪಕ್ಕದ ಪೆಸರುಗಳು" (ಅಭಿಧಾ. ೦೯೨). ೩. ಸಮೀಪ; ಹತ್ತಿರ: "ಸಮೀಪಂ . . . ಪಾರ್ಶ್ವಂ, ಉಪಾಂತಂ, ಅಪದಾಂತರಂ—ಈ ೧೮ ಸಮೀಪಂ" (ಕಾರಯು. ೦೦೫-೪); ಪುರುಜಿನ ಪಾರ್ಶ್ವದೊಳ್ ವೃಷಭಸೇನಗಣಾಗ್ರಣಿ ತಜ್ಜಿನೋಕ್ತಮಂ ಭರತನೃಪಂಗೆ . . . ಒಲವಿಂದೆ ಪೇಳ್ದುದಂ . . . ಪೇಳ್ವೆಂ (ಪಾರ್ಶ್ವಪು. ೦-೪೪). ೪. ವಂಚನೆಯ ಉಪಾಯ; ಕುತಂತ್ರ: 'ಪಾರ್ಶ್ವಕ' ನೋ. ೫. ಒಂದು ವಸ್ತುವಿನ ಮೇಲ್ಮೈ. ೬. ಧಾರೆ; ಅಂಚು; ನೇಮಿ. ೭. ಕನ್ನಡದಲ್ಲಿ ಪಾರ್ಶ್ವನಾಥಪುರಾಣವನ್ನು ಬರೆದ ಒಬ್ಬ ಕವಿಯ ಹೆಸರು: ಲಲಿತಪದಾರ್ಥಾಲಂಕೃತಿಗಳಿನೊಸರ್ವ ರಸಂಗಳಿಂದೆ ಬುಧ ರೊಳ್ಪುಳಕಾಪಳಿಸಸ್ಯಮೊಗೆಯೆ ಕವೀಂದ್ರಳಕಿಳಕಂ ಶಾಸನಮನೊಲ್ದು ಪೇಳ್ದಂ ಪಾರ್ಶ್ವಂ (ಪಾರ್ಶ್ವಪು. ಅನುಬಂಧ. II. xii). ೮. ಒಂದು ದೇಶದ ಹೆಸರು: ಗೌಳ ಪಾರ್ಶ್ವ ಕರೂಷ ಕೋಸಲ ಚೇದಿ . . . ಹಮ್ಮೀರಾದಿ ಸಕಲದೇಶಾಧೀಶಸಮುದಯಸ್ಯೈಕತಸೇತುಮಹಾಸಿಂಧುಪ್ರವಾಹ ಮರಾಳ (ಮೂತಾಂ. ೩-೦ ವ). ೯. [ಜೈನ] ಇಪ್ಪತ್ತಮೂರನೆಯ ತೀರ್ಥಂಕರನ ಹೆಸರು; ಪಾರ್ಶ್ವನಾಥ: ವೃಷಭ . . . ಪಾರ್ಶ್ವ ವರ್ಧಮಾನ ರೆಂಬಿಪ್ಪತ್ತನಾಲ್ವರ್ ತೀರ್ಥಕರರ್ (ಶಾಂತಿಪು. ೪೦೨); ದಿವಿಜನಾಥಂ ಜನ್ಮಾಭಿಷೇಕಕಲ್ಯಾಣಾನಂತರಂ ಪಾರ್ಶ್ವನೆಂಬುದು ತ್ರಿಲೋಕಪೂಜಿತ ಮಪ್ಪ ಧರ್ಮಂ ಅದರಾಶ್ರಯಮಪ್ಪುದರಿಂ ಪಾರ್ಶ್ವನೆಂದು ಪೆಸರ ನಿಟ್ಟು ಪೋಗೆ (ಪಾರ್ಶ್ವಪು. ಅನುಬಂಧ. I. iii). [ಸಂ.]

**ಪಾರ್ಶ್ವಕ** (ನಾ). ೧. ಮೋಸದಿಂದ ಹಣವನ್ನು ಸಂಪಾದಿಸುವವನು. ೨. "(ಸೈನ್ಯದ ಪಕ್ಕವನ್ನು ರಕ್ಷಿಸುವ ಅಥವಾ ಅವನ್ನು ಅಪಾಯಕ್ಕೊಳ ಪಡಿಸುವ) ಸೈನಿಕರಕ್ಷಣೆಗಳು: ಪಾರ್ಶ್ವಕ" (Flank. ೩೦೪೪). [ಸಂ.]

**ಪಾರ್ಶ್ವಕೋಣಾಸನ** (ನಾ). [ಯೋಗ] ಒಂದು ಬಗೆಯ ಆಸನ: ಮುಖ್ಯವಾದ ಕೆಲವು ಆಸನಗಳು, ಅಷ್ಟವಿನ್ಯಾಸಗಳು ೧. ಉತ್ಥಿತಾಸನ . . . ೬೬. ಪಾರ್ಶ್ವಕೋಣಾಸನ (ಪಾಕತ. ೦೬೭). [ಸಂ.]

**ಪಾರ್ಶ್ವಕ್ರಾಂತ** (ನಾ). [ನಾಟ್ಯ] ಹದಿನಾರ ಬಗೆಯ ಮಾರ್ಗ ಆಕಾಶ ಚಾರಿಗಳಲ್ಲಿ ಒಂದು ᑭ "(i) ಕುಂಚಿತಚರಣವನ್ನು ಮೇಲಕ್ಕೆತ್ತಿ ನೆಲವನ್ನು ಹಿಮ್ಮಡಿಯಿಂದ ಗಟ್ಟಿಸುವುದು. [ಇದನ್ನೇ ಪಾರ್ಶ್ವ ದಂಡಚಾರಿಯೆಂದೂ ಕರೆಯುತ್ತಾರೆ] (ii) ಕುಂಚಿತಚರಣವನ್ನು ಮತ್ತೊಂದು ತೊಡೆಯವರೆಗೂ ಎತ್ತಿ ಉದ್ವೃಟ್ಟಿತ ಮಾಡಬೇಕು" (ಶಾಸ್ತ್ರರ. ೩೦೬ ಗದ್ಯಾನುವಾದ). ಒಂದು ಪದಂ ಕುಂಚಿತದಿಂದ[ದಂ] ಬಿಡೆದೆತ್ತಿ ತ[ನ್ನ] ಪಾರ್ಶ್ವದ ದೆಸೆಯಂ ಚಂದದೆ ಲಾಗಿಸಿ ಪಾದದಿಂದೊಂದಿಸೆ ಭೂತಳಮನಿಂತು ಪಾರ್ಶ್ವಕ್ರಾಂತಂ (ಶಾಸ್ತ್ರರ. ೬-೪೨): ಈ ಚಾರಿ ಪಾರ್ಶ್ವದಂಡಪಾದಮೆಂದು ಲೋಕಪ್ರಸಿದ್ಧಂ; ಮತ್ತೊಂದು ತೊಡೆ ಪರಿಯಂತರ ಎತ್ತಿ ಉದ್ವೃಟ್ಟಿತಪಾದಮಂ ಮಾಡಿದರೆ ಇದನ್ನೂ ಪಾರ್ಶ್ವ ಕ್ರಾಂತಮೆಂಬರು (ಶಾಸ್ತ್ರರ. ೬-೪೨೫). [ಸಂ. ಪಾರ್ಶ್ವಕ್ರಾಂತಾ]

**ಪಾರ್ಶ್ವಗತ** (ನಾ). = ಪಾರ್ಶ್ವಾಗತ: ಋಜು ಋಜುಪರಾವೃತ್ತಿ ಅರ್ಧ ಋಜು ಅರ್ಧಋಜುಪರಾವೃತ್ತಿ ಸಾಚಿ ಸಾಚಿಪರಾವೃತ್ತಿ ದ್ವ್ಯರ್ಧಾಕ್ಷಿ ತತ್ಪರಾವೃತ್ತಿ ಪಾರ್ಶ್ವಗತವೆಂಬ ನವಸ್ಥಾನಂಗಳೊಳು . . . ಅಳವಡೆ (ಚಂದ್ರಕ. ೦೫-೬೦). [ಸಂ.]

**ಪಾರ್ಶ್ವಚರ** (ನಾ). ೧. ಪಕ್ಕದಲ್ಲಿರುವವನು. ೨. ಸಮೀಪದಲ್ಲಿ ಸಂಚರಿಸುವವನು. ೩. ಸೇವಕ; ಆಳು: ಅಭಿನವರೂಪಹಾವನವ ಭಾವಸಮನ್ವಿತೆ ಪುಟ್ಟಿದಳ್ ಸ್ವಯಂಪ್ರಭೆ ಮಗಳಾಗಿ ಪಾರ್ಶ್ವಚರ ಭೂಚರ ಖೇಚರ ನೇತ್ರಪುತ್ರಿಕಾನಿಭೆ . . . ನಯನೋತ್ಪಲೇಂದುಕಿರಣ ಪ್ರಭೆಯಪ್ಪುದು ತಪ್ಪದೊಪ್ಪುಗುಂ (ಶಾಂತಿಪು. ೩-೦೭). [ಪಾರ್ಶ್ವ + ಚರ]

**ಪಾರ್ಶ್ವಭೇದ** (ನಾ). [ನಾಟ್ಯ] ನರ್ತನದಲ್ಲಿ ಒಂದು ಬಗೆ: ᑭ "ವೃಶ್ಚಿಕಕುಟ್ಟಿತ, ಊರ್ಧ್ವಜಾನು, ಆಕ್ಷಿಪ್ತ, ಸ್ವಸ್ತಿಕ ಈ ನಾಲ್ಕು ಕರಣಗಳನ್ನೂ ಮಾಡಿ ಒಂದಾವರ್ತಿ ಸುತ್ತಿ ಉರೋಮಂಡಲ, ನಿತಂಬ, ಕರಿಹಸ್ತ, ಕಟೀಭಿನ್ನ ಈ ನಾಲ್ಕು ಕರಣಗಳನ್ನೂ ಕ್ರಮ ವಾಗಿ ಮಾಡುವುದು" (ಶಾಸ್ತ್ರರ. ೩೦೦ ಗದ್ಯಾನುವಾದ): ವಿಸ್ತರಪಾಶ್ಚ್ಯರಿತ ಪಾರ್ಶ್ವಭೇದ ಸಹಿತಂ ಕೂಡಿಮತ್ತ ಮತ್ತಾಕ್ರೀಡಂ ಪಸರಿಪ ವಿದ್ಯು ದ್ಭ್ರಾಂತಂ ಶಿವಮುಖ ವಿಷ್ಕಂಭಕಾಪಸೃತಮೆಂಬಿನಿತುಂ (ಶಾಸ್ತ್ರರ. ೨-೪). [<ಸಂ. ಪಾರ್ಶ್ವಚ್ಛೇದ ?]

**ಪಾರ್ಶ್ವಜಾನು** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು ; ᴘ "ಸಮಪಾದದಿಂದ ನೀತುಕೊಂಡು ಒಂದು ಕಾಲಿನಿಂದ ತೊಡೆಯ ಓಂಭಾಗವನ್ನು ತಾಗಿಸಿ, ಒಂದು ಕೈಯನ್ನು ಮುಷ್ಟಿಹಸ್ತದಿಂದ ಎದೆಯ ಹತ್ತಿರದಲ್ಲೂ ಇನ್ನೊಂದು ಕೈಯನ್ನು ಅರ್ಧಚಂದ್ರಹಸ್ತದಿಂದ ಸೊಂಟದ ಹತ್ತಿರದಲ್ಲೂ ಹಿಡಿಯುವುದು. ಹೀಗೆ ಎರಡು ಪಾರ್ಶ್ವಗಳಲ್ಲೂ ಮಾಡುವುದು. ಯುದ್ಧ, ನಿಯುದ್ಧ[ಜಟ್ಟಿಕಾಳಗ] ಇವೇ ಮೊದಲಾದುವನ್ನು ಅಭಿನಯಿಸುವಾಗ" (ಶಾಸ್ತ್ರಂ. ೩೦೦ ಗದ್ಯಾನುವಾದ) ; ತಲಪುಷ್ಪಪುಟ, ಲೀನ . . . ತಲಸಂಸ್ಫೋಟಿತ, ಪಾರ್ಶ್ವಜಾನು . . . ನಾಗಾಪಸರ್ಪಿತ, ಗಂಗಾವತರಣ— ಈ ನೂರೆಂಟು ಕರಣಂಗಳ್ (ಶಾಸ್ತ್ರಂ. ೪-೩೨೮). [ಸಂ.]

**ಪಾರ್ಶ್ವದ್ವಯ** (ನಾ). [ನಾಟ್ಯ] ಹದಿಮೂರು ವಿಧವಾದ ಹಸ್ತಕ್ಷೇತ್ರಗಳಲ್ಲಿ ಒಂದು : ಪಾರ್ಶ್ವದ್ವಯ, ಪುರಸ್ತಾತ್, ಪಶ್ಚಾತ್ . . . ಕಟಿಶಿರ, ಊರುದ್ವಂದ್ವ— ಈ ಹದಿಮೂರು ಹಸ್ತಕ್ಷೇತ್ರಂಗಳ್ (ಶಾಸ್ತ್ರಂ. ೪-೦೫೨). [ಸಂ.]

**ಪಾರ್ಶ್ವನಾಥ** (ನಾ). ೧. = ಪಾರ್ಶ್ವ ೭ : ಕವಿಕುಳತಿಳಕಪ್ರಣೂತ ಪಾರ್ಶ್ವನಾಥಪ್ರಣೀತಮಪ್ಪ ಪಾರ್ಶ್ವನಾಥಚರಿತಪುರಾಣದೊಳ್ ಕಥಾವತಾರವರ್ಣನಂ(ಪಾರ್ಶ್ವಚ. ೧-೦೬೩ ಗದ್ಯ). ೨. =ಪಾರ್ಶ್ವ ೯ : ಸಂಪೂರ್ಣಮಾಯ್ತು ಲವಿಪ್ರಸ್ತುತಪಾರ್ಶ್ವನಾಥಚರಿತಂ ಪಾರ್ಶ್ವೋದಿತಂ (ಪಾರ್ಶ್ವಚ. ೧೬ ೦೫೬). [ಸಂ.]

**ಪಾರ್ಶ್ವನಿಕುಟ್ಟಕ** (ನಾ). [ನಾಟ್ಯ] ನೂರೆಂಟುಕರಣಗಳಲ್ಲಿ ಒಂದು; ᴘ "ಪತಾಕಹಸ್ತಗಳೆರಡನ್ನು ಸ್ವಸ್ತಿಕದಂತೆ ಹಿಡಿದು, ಒಂದು ಕೈಯನ್ನು ಮೇಲ್ಮುಖವಾಗಿಯೂ ಇನ್ನೊಂದನ್ನು ಕೆಳಮುಖವಾಗಿಯೂ ಮಾಡಿ, ಮೇಲ್ಮುಖವಾಗಿರುವ ಕೈಯನ್ನು ಪಾರ್ಶ್ವದಲ್ಲಿ [ಪಕ್ಕದಲ್ಲಿ] ನಿಲ್ಲಿಸಿ, ಕೆಳಮುಖವಾಗಿರುವ ಕೈಯನ್ನು ಪಾರ್ಶ್ವಕ್ಕೆ [ಪಕ್ಕಗೆ] ತರುವಾಗಲೇ ಆ ಪಾರ್ಶ್ವದ ಕಾಲನ್ನೂ ಅಂಗಾಲು ಮೇಲ್ಮುಖ ಮಾಡಿ ಪಕ್ಕದ ಹತ್ತಿರಕ್ಕೆ ತಂದು ಕೈಗೆ ಮುಟ್ಟಿಸುವುದಲ್ಲದೆ ಇನ್ನೊಂದು ಕೈಯನ್ನು ಮೇಲಕ್ಕೆ ಚಲಿಸುವುದು. ಹೀಗೆ ಎರಡು ಪಾರ್ಶ್ವಗಳಲ್ಲೂ ಪರ್ಯಾಯವಾಗಿ ಮಾಡುವುದು" (ಶಾಸ್ತ್ರಂ. ೨೧೬ ಗದ್ಯಾನುವಾದ) : ತಲಪುಷ್ಪಪುಟ, ಲೀನ, ವಿವರ್ತಿತ . . . ಪಾರ್ಶ್ವನಿಕುಟ್ಟಕ, ಚಕ್ರಮಂಡಲ, ಉರೋಮಂಡಲ . . . ವೃಷಭಕ್ರೀಡಿತ, ನಾಗಾಪಸರ್ಪಿತ, ಗಂಗಾವತರಣ— ಈ ನೂರೆಂಟು ಕರಣಂಗಳ್ (ಶಾಸ್ತ್ರಂ. ೪ ೨೨ ಕ). [ಪಾರ್ಶ್ವ+ನಿಕುಟ್ಟಕ]

**ಪಾರ್ಶ್ವಪಾದಾಸನ** (ನಾ). [ಯೋಗ] ಒಂದು ಬಗೆಯ ಆಸನ : ಮುಖ್ಯವಾದ ಕೆಲವು ಆಸನಗಳು. ಅಷ್ಟವಿನ್ಯಾಸಗಳು ೧. ಉತ್ತಾನಾಸನ . . . ೬೩. ಪಾರ್ಶ್ವಪಾದಾಸನ . . . ೭೯. ಭೈರವಾಸನ ಇತ್ಯಾದಿಗಳನೇಕವಿವೆ (ಶಾರದ. ೦೬೭). [ಸಂ.]

**ಪಾರ್ಶ್ವಭಾಗಿನಿ** (ನಾ). ಮಗ್ಗುಲಲ್ಲಿರುವವಳು; ಪತ್ನಿ : ನಿನ್ನನ್ನು ಸರಿಯಲ್ಲಿಟ್ಟು ತನ್ನ ಪಾರ್ಶ್ವಭಾಗಿನಿಯನ್ನಾಗಿ ಮಾಡಿಕೊಳ್ಳಲು ಪ್ರಯತ್ನಿಸುತ್ತಿರುವ ಆ ಅಧಮ ಕೇಶವರಾಯನೇ ನನ್ನ ಪತಿ (ಅಂಬಿಕೆ. ೩೬).
[ಸಂ. ಪಾರ್ಶ್ವಭಾಗಿನೀ]

**ಪಾರ್ಶ್ವಮಂಡಲ** (ನಾ). [ನಾಟ್ಯ] ಮೂವತ್ತು ಬಗೆಯ ನೃತ್ತಹಸ್ತಗಳಲ್ಲಿ ಒಂದು : ಚತುರಸ್ರ, ಉದ್ವೃತ್ತ, ತಲಮುಖ . . . ಪಾರ್ಶ್ವಮಂಡಲ, ಉರೋಮಂಡಲ . . . ಅಲಪದ್ಮ, ಉಲ್ಬಣ, ವಲಿತ, ಲಲಿತ— ಈ ಮೂವತ್ತು ನೃತ್ತಹಸ್ತಂಗಳ್ (ಶಾಸ್ತ್ರಂ. ೨-೪೪ ಕ) ; ಈ ಕೆಳಗೆ ಹೇಳಿರುವ ಹಸ್ತಗಳು ನೃತ್ತಹಸ್ತಗಳು—೧. ಚತುರಸ್ರ, ೨. ಉದ್ವೃತ್ತ . . . ೨೨. ಪಾರ್ಶ್ವಮಂಡಲ (ಅಭಾಕ್ಷ. ೯೯). [ಸಂ.]

**ಪಾರ್ಶ್ವವರ್ತಿ** (ನಾ). ಸಹಾಯಕ ; ಸೇವಕ . [ಸಂ. ಪಾರ್ಶ್ವವರ್ತಿನ್]

**ಪಾರ್ಶ್ವವಾಯು** (ನಾ). ದೇಹದ ಅರ್ಧಭಾಗದ ಚಲನೆಯನ್ನು ಉಡುಗಿಸುವ ವಾತರೋಗ; ಲಕ್ವ: ಮಾತು ನಿಲ್ಲಬಹುದು, ಪಾರ್ಶ್ವವಾಯು ಬರಬಹುದು (೪೦ಂ೬೦. ೩೦) ; ಪಮುಜಮುಕ್ತಿಗಾಗವು ಪಾರ್ಶ್ವವಾಯುವನ್ನು ಗುಣಪಡಿಸುವುದೆಂಬ ನಂಬಿಕೆಯಿದೆ (ಶಾರದ. ೩೯೯). 'ಅರ್ಧಾಂಗವಾಯು' ಪರಾ. [ಪಾರ್ಶ್ವ+ವಾಯು]

**ಪಾರ್ಶ್ವಶೂಲೆ** (ನಾ). ಪಕ್ಕೆಗಳಲ್ಲಿ ಉಂಟಾಗುವ ನೋವು; ಪಕ್ಕೆಶೂಲೆ : ಹೊಟ್ಟೆಶೂಲೆಗೆ, ಪಾರ್ಶ್ವಶೂಲೆಗೆ :—ಒಳ್ಳಿತಾದ ಮೆಣಸು ಹೊನ್ನುತೂಕವನ್ನು ವೀಳ್ಯದೆಲೆಗೆ ತೊಡೆದು ಆ ಎಲೆ ಮೆಲ್ಲಲು ಹರ (ವೈದ್ಯಾ. ೦೨೩) ; ಗರುಗ, ಒಳ್ಳೆಸೊಂಡೆ . . . ವಾಯುವಿಳಂಗ – ಇಷ್ಟನ್ನು ಚೂರ್ಣಿಸಿ, ಲಲ್ಕವ ಮಾಡಿ ಕವಡಿ, ತೈಲಪಕ್ವದಲ್ಲಿಳುಹಿ ಪಾನವ ಮಾಡಲು . . . ಪಾರ್ಶ್ವಶೂಲೆ, ಗ್ರಹಣಿ, ಅಗ್ನಿಮಾಂದ್ಯ, ಇವಿಷ್ಟು ಪರಿಹರಿಸುವುದು (ವೈದ್ಯ.೨೨೬).
[ಪಾರ್ಶ್ವ+ಶೂಲೆ]

**ಪಾರ್ಶ್ವಸ್ಥ** (ನಾ). ೧. ವಿಟಪುರುಷರಲ್ಲಿ ಒಂದು ಬಗೆ ; ಹತ್ತಿರದ ಮನೆಯಲ್ಲಿ ವಾಸಿಸುವ ವಿಟ,–ಜಾರಃಸ್ತ್ರೀಯಿದ್ದ ಮನೆಯ ಬಿಟ್ಟು ಕೆಲದ ಮನೆಯೊಳಿರ್ಪನಂ ಪಾರ್ಶ್ವಸ್ಥನೆಂಬುದು (ಕಾಮಶಾ. ೨೫೨). ೨. ಸೂತ್ರಧಾರನ ಸಹಾಯಕ. [ಸಂ.]

**ಪಾರ್ಶ್ವಸ್ವಸ್ತಿಕ** (ನಾ). [ನಾಟ್ಯ] ಮೂವತ್ತೆರಡು ಅಂಗಹಾರಗಳಲ್ಲಿ ಒಂದು; ᴘ "ಒಂದು ಪಾರ್ಶ್ವದಲ್ಲಿ ದಿಕ್‌ಸ್ವಸ್ತಿಕವನ್ನೂ ಇನ್ನೊಂದು ಪಾರ್ಶ್ವದಲ್ಲಿ ಅರ್ಧನಿಕುಟ್ಟಕವನ್ನೂ ಪುನಃ ಪಾರ್ಶ್ವವ್ಯತ್ಯಾಸದಿಂದ ಅದೇ ಕರಣಗಳನ್ನು ಮಾಡಿ ಅಪವಿದ್ಧ, ಊರೂದ್ವೃತ್ತ, ಆಕ್ಷಿಪ್ತ, ನಿತಂಬ, ಕರಿಹಸ್ತ, ಕಟೀಛಿನ್ನ ಈ ಕರಣಗಳನ್ನು ಕ್ರಮವಾಗಿ ಮಾಡುವುದು" (ಶಾಸ್ತ್ರಂ. ೩೦೬ ಗದ್ಯಾನುವಾದ) : ಸ್ಥಿರಹಸ್ತ, ಪರ್ಯಸ್ತ . . . ಪಾರ್ಶ್ವಸ್ವಸ್ತಿಕ, ಭ್ರಮರ . . . ಸ್ವಸ್ತಿಕರೇಚಿತ— ಈ ಮೂವತ್ತೆರಡು ಅಂಗಹಾರಂಗಳ ಪೆಸರು (ಶಾಸ್ತ್ರಂ. ೩-೬ ವ). [ಪಾರ್ಶ್ವ+ಸ್ವಸ್ತಿಕ]

**ಪಾರ್ಶ್ವಾಗತ** (ನಾ).[ಚಿತ್ರಶಾ] ಒಂದು ವಸ್ತುವಿನ ಮಗ್ಗುಲು ನೋಟ; ಋಜ್ವಾಗತ, ಅರ್ಧಋಜ್ವಾಗತ, ಪಾರ್ಶ್ವಾಗತ, ಸಾಚಿ ಮತ್ತು ದ್ವ್ಯರ್ಧಾಕ್ಷ ಎಂಬ ಪಂಚವಿಧ ಸ್ಥಾನಕಗಳಲ್ಲಿ ಒಂದು : ಋಜುಸಂಗಂ ಪಾರ್ಶ್ವಾಗತಂ . . . ತದ್ವಿದ್ವರಂ ಮೆಚ್ಚಸಂಗಂ ದ್ವ್ಯರ್ಧಾಕ್ಷಮೆಂಬಿತಿರೆ ಸೊಗಯಿಸುತಿರ್ಪಂಗನಾಭಂಗಿಯುಂ ಚಿತ್ರಿಸಿ ಚಿತ್ರಕ್ಕಾಯು ಪೊಯ್ದಂ ಮದನನೆನೆ ಮಹಾದೇವಿ ಕಣ್ಗೊಪ್ಪಿ ತೋರ್ಪಳ್ (ಅಚಿ. ೨-೯೩). 'ಪಾರ್ಶ್ವಗತ' ಪರಾ. [ಸಂ.]

**ಪಾರ್ಶ್ವೋತ್ತಾನಾಸನ** (ನಾ). [ಯೋಗ] ಒಂದು ಬಗೆಯ ಆಸನ: ಮುಖ್ಯವಾದ ಕೆಲವು ಆಸನಗಳು. ಅಷ್ಟವಿನ್ಯಾಸಗಳು ೧. ಉತ್ತಾನಾಸನ, ೨. ಚತುರಂಗದಂಡಾಸನ . . . ೬೬. ಪಾರ್ಶ್ವಕೋಣಾಸನ. ೬೭. ಪಾರ್ಶ್ವೋತ್ತಾನಾಸನ . . . ೭೯. ಭೈರವಾಸನ ಇತ್ಯಾದಿಗಳನೇಕವಿವೆ (ಶಾರದ. ೦೬೭). [ಸಂ.]

**ಪಾರ್ಷದ** (ನಾ). ೧. ಸಭೆಯಲ್ಲಿರುವವನು; ಸಭಾಸದ : ಸಕಲಧನೇಶಮುಖ್ಯರು ಪಾರ್ಷದೋತ್ತಮರು (ಭಾಗ. ೦೦.೬೨-೨೬). ೨. ಪರಿಚಾರಕ : ಅವರನ್ನು ಜಯವಿಜಯರೆಂಬ ಪಾರ್ಷದರು ತಮ್ಮ ಕೈಯೊಳಗಿನ ವೇತ್ರಯಷ್ಟಿಯಿಂದ ಪ್ರತಿಬಂಧಿಸಿದರು (ಭಾಷ್ಯ. ೭೦೦). [ಸಂ.]

**ಪಾರ್ಷ್ಣಿ** (ನಾ). ೧. ಪಾದದ ಹಿಂಭಾಗ; ಹಿಮ್ಮಡಿ : ಗೂ[ಢ]ಗುಲ್ಫ ಪಾರ್ಷ್ಣಿಗಳನೊಳಕೊಂಡ ಮನುಜಪಾಂಥಾತನ ಪೊಣಲಡಿಗಳ್ ವಿರೋಧಿಭೂಪಾಳರನಡಿಗೆಡಿಗುವ ಸಂತೋಷದೊಳನ್ನತಂಗಳಂತೆ ಕೂರ್ಮೋನ್ನತಂಗಳಾದುವು (ಶಂಕಾ. ೨-೩೯ ವ) ; ವಿಶಂಬಪರ್ಣನೆಯುಂ ಪಾರ್ಷ್ಣಿನಿಧಿಯೊಳೆ ಬೆಸಲೆತ್ತು ಕಾಲ್ಗೋಡು ಕೂರಂಬಸದಿಂದಗುಪ್ಪದಿಂ

ಪಾರ್ಷ್ಣಿಯಾನಳವಡಿಸುತ್ತುಂ . . . ಬಂಬಲ್ವರಿಯಿಸಿ (ಶಾಂತೀ. ೯-೯೩); ಪರಿವಾರ್ಶ್ವೀವೃತ್ತಂ ಪತಿತಂ . . . ಅಂಗುಲಿ ಸಂಗತವಿಾಯೆಂಟುಂ ಸಮಂತು ಪಾರ್ಷ್ಣಿಯ ಭೇದಂ (ಶಾಸ್ತ್ರಕಾ. ೩-೦೦೦). ೨. ಸೈನ್ಯದ ಹಿಂಭಾಗ. ೩. ಹಿಂಬದಿ; ಹಿಂಭಾಗ: "ಪರಭಾಗಂ ಪಾರ್ಷ್ಣಿ ಪಾದಂ" (ಚನ್ನಕೋ. ೩೩-೨). ೪. ಹಿಂದಿನಿಂದ ಹಿಡಿಯುವುದು,—ಆಕ್ರಮಿಸುವುದು: "ಹಿಂದೆ ಹಿಡಿವಲ್ಲಿ ಪಾಡವಲ್ಲಿ ಪಾರ್ಷ್ಣಿಯೆಂದೆನಿಕುಂ" (ತುಂಗಚಾ. ೦೯೨-೨೦). ೫. ಹಿಂದಿನಿಂದ ಹಿಡಿಯುವವನು,—ಆಕ್ರಮಿಸುವವನು; ಪಾರ್ಷ್ಣಿಗ್ರಾಹಕ: "ಹಿಂದೆ ಸೆಳೆವನಲ್ಲಿಯುಂ, ಪಾಡದಲ್ಲಿಯುಂ — ಪಾರ್ಷ್ಣಿಯೆಂಬುದು" (ಚಾಯು. ೦೩೩-೩೩). ೬. ರಥದ ಅಚ್ಚಿನ ಮುಂಭಾಗ,—ತುದಿ. ೭. ಒದೆತ; ತುಳಿತ. ೮. ಜಯವನ್ನು ಹೊಂದುವ ಅಪೇಕ್ಷೆ. ೯. ತನಿಖೆ; ವಿಚಾರಣೆ. ೧೦. ಸ್ವೇಚ್ಛಾಚಾರದಿಂದಿರುವವಳು; ಸ್ವೈರಿಣಿ. ೧೧. ಕುಂತಿಯ ಒಂದು ಹೆಸರು. [ಸಂ.]

**ಪಾರ್ಷ್ಣಿಗಮನ** (ನಾ). [ನಾಟ್ಯ] ಹಿಮ್ಮಡಿಗಳನೂರಿ ಹಿಂದಕ್ಕೆ ನಡೆಯುವುದು; ನೃತ್ಯದಲ್ಲಿ ಒಂದು ಭಂಗಿ: ಪಿಂತಣ್ಗೆ ಪಾದಗಳಿಂದಂ ಸಂತತ ನಡೆಯಲ್ಕೆ ಪಾರ್ಷ್ಣಿಗಮನಮೆನಿಕ್ಕುಂ (ಶಾಸ್ತ್ರಕಾ. ೨-೦೦೦).

[ ಪಾರ್ಷ್ಣಿ + ಗಮನ ]

**ಪಾರ್ಷ್ಣಿಗ್ರಾಹಕ** (ನಾ). ಹಿಂಭಾಗದಲ್ಲಿದ್ದು ಮೇಲೆ ಬೀಳುವ ಶತ್ರು: ಅದಂ ಕಂಡು ತಪ್ಪಮಾಡದೆ ಚಪ್ಪರಿಸುವ ಮಂಡಳೀಕರುಮಸಡಂಗದಾಟವಿಕರುಮಂ ಒತ್ತಿ ಬರ್ಪ ಪಾರ್ಷ್ಣಿಗ್ರಾಹಕರುಮನಱಿವು (ಆದಿಪು. ೯-೬೨ ವ).

[ ಪಾರ್ಷ್ಣಿ+ಗ್ರಾಹಕ ]

**ಪಾರ್ಷ್ಣಿಪಾರ್ಶ್ವಗತ** (ನಾ). [ನಾಟ್ಯ] ಇಪ್ಪತ್ತುಮೂರು ದೇಶೀಯ ಸ್ಥಾನಕಗಳಲ್ಲಿ ಒಂದು; ❡ "ಒಂದು ಪಾದದ ಒಳಭಾಗದಲ್ಲಿ [ಕೀಲಿನಲ್ಲಿ] ಇನ್ನೊಂದು ಕಾಲಿನ ಹಿಮ್ಮಡಿಯನ್ನು ಅಡ್ಡವಾಗಿರಿಸುವುದು" (ಶಾಸ್ತ್ರಕಾ. ೩೩೦ ಗದ್ಯಾನುವಾದ): ಪದದೊಳಪಾರ್ಶ್ವಮಾನಿತರದ ಪದಪಾರ್ಷ್ಣಿ[ಯುಮೊಂದೆ ಪಾರ್ಷ್ಣಿ]ಪಾರ್ಶ್ವಗತಾಖ್ಯಂ (ಶಾಸ್ತ್ರಕಾ. ೬-೪೦).

[ಸಂ.]

**ಪಾರ್ಷ್ಣಿರೇಚಿತ** (ನಾ). [ನಾಟ್ಯ] ಮೂವತ್ತೈದು ದೇಶೀಯಭಾವಚಾರಿಗಳಲ್ಲಿ ಒಂದು; ❡ "ಪಾರ್ಷ್ಣಿಪಾರ್ಶ್ವಗತಸ್ಥಾನಕದಲ್ಲಿ ಹಿಮ್ಮಡಿಯನ್ನು ರೇಚಿತ ಮಾಡುವುದು" (ಶಾಸ್ತ್ರಕಾ. ೩೨೨ ಗದ್ಯಾನುವಾದ): ರಥಚಕ್ರ, ಪರಾವೃತ್ತತಲ, ನೂಪುರ . . . ವಿಶ್ಲಿಷ್ಟ, ಪಾರ್ಷ್ಣಿರೇಚಿತ, ಊರುತಾಡಿತ . . . ಅರ್ಧಸ್ಖಲಿತ, ಸಮಸ್ಖಲಿತ; ಈ ಮೂವತ್ತೈದು ದೇಶೀಯ ಸಂಬಂಧದ ಭಾವಚಾರಿಗಳು (ಶಾಸ್ತ್ರಕಾ. ೬-೦೩ ವ).

[ ಪಾರ್ಷ್ಣಿ + ರೇಚಿತ ]

**ಪಾರ್ಷ್ಣಿವಿದ್ಧ** (ನಾ). [ನಾಟ್ಯ] ಇಪ್ಪತ್ತಮೂರು ದೇಶೀಯಸ್ಥಾನಕಗಳಲ್ಲಿ ಒಂದು; ❡ "ಒಂದು ಕಾಲಿನ ಹಿಮ್ಮಡಿಯ ಮೇಲೆ ಇನ್ನೊಂದು ಕಾಲಿನ ಹೆಬ್ಬೆಟ್ಟನ್ನು ಇಡುವುದು" (ಶಾಸ್ತ್ರಕಾ. ೩೩೦ ಗದ್ಯಾನುವಾದ): ಚತುರಸ್ರ, ಪಾರ್ಷ್ಣಿವಿದ್ಧ . . . ಚರಣಂ ಪಾದದೊಳಗನ್ಯದ ಚರಣದ ಪೆರ್ಬೆಟ್ಟನಿರಿಸೆ ಪಾರ್ಷ್ಣಿಯ ವಿದ್ಧಂ (ಶಾಸ್ತ್ರಕಾ. ೬-೩೯).

[ಸಂ.]

**ಪಾರ್ಸಲ್** 'ಪಾರ್ಸಲ್ಲು' ನೋ.

**ಪಾರ್ಸಲ್ಲು, ಪಾರ್ಸಲ್, ಪಾರ್ಸೆಲ್** (ನಾ). (ಸಾಮಾನ್ಯವಾಗಿ ಟಪಾಲು ಮೂಲಕ ಕಳಿಸುವ) ಕಟ್ಟಿದ ವಸ್ತು; ಭಾಂಗಿ: ಬಾಟ್ಲಿಗಟ್ಟಲೆ ಹಣ್ಣುಗಳನ್ನು ಪಾರ್ಸಲ್ಲು ಮಾಡಿ ಊರಿಗೆ ಕಳಿಸಿದರು (ರೂಢಿ). **ಪಾರ್ಸಲ್**: ನೀವು ನಮ್ಮಿಬ್ಬರಿಗೂ ಪಾರ್ಸಲ್ ಮಾಡಿ ಕಳಿಸಬೇಕು (ಸಮಾಜ. ೩೨೩). **ಪಾರ್ಸೆಲ್**: "ಪಾರ್ಸೆಲ್ . . . ಒಂದು ಕಟ್ಟಾಗಿ ಕಟ್ಟಿದ ಸಾಮಾನು; ಮೂಟೆ; ಭಾಂಗಿ" (Parcel· ಇಂಕೋ). [←ಇಂ. Parcel]

**ಪಾರ್ಸಿ** 'ಪಾರಸಿ' ನೋ.

**ಪಾರ್ಸಿಕ** 'ಪಾರಶಿಕ' ನೋ.

**ಪಾರ್ಸೆಲ್** 'ಪಾರ್ಸಲ್ಲು' ನೋ.

**ಪಾಲ್₁, ಪಾಲು₁, ಹಾಲು₁** (ನಾ). ೧. ಸಸ್ತನಿಗಳು ತಮ್ಮ ಸಂತಾನ ಪೋಷಣೆಗಾಗಿ ಅವುಗಳಿಗೆ ಕುಡಿಸುವ, ಸ್ತನಗ್ರಂಥಿಗಳಿಂದ ಉತ್ಪತ್ತಿಯಾಗುವ ಬಿಳಿಯ ಬಣ್ಣದ ದ್ರವ; ಕ್ಷೀರ: "ಕ್ಷೀರಂ ದುಗ್ಧಂ ಪಾಲ್" (ಚನ್ನಕೋ. ೯೨-೦); ಕಿಟ್ಟೂಗನೇಶ್ವರದಾ ದೇವರು ಪರಪರಿಯ ಭತ್ತಮುಂ ಕವಿಲೆಯ ಪಾಲುಂ ಎಟ್ಟುಂ × × × (ಎಕ. VI. ಕೊಪ್ಪ. ೩೬-೩; ಸು. ೧೨೬೯); ಪಾಱುಗುವ ಪಾಲ್ಗಳೆಯ ಪನಿಗಳಂ ಪೆರಚಿದಪೋಲ್ (ಕಬಾ. ೦-೩೬); ಬಡಿಗಂಡನಿಲ್ಲ ಪಾಲನೆ ಕಂಡಂ (ಶಾಬಾ. ೬-೦೯). ೨. (ಕಳ್ಳಿ, ಎಕ್ಕ ಮುಂತಾದ) ಕೆಲವು ಸಸ್ಯಗಳು ಸ್ರವಿಸುವ ಬಿಳಿಯ ರಸ: ಒಳಮೊಂಡಿನ ಪಾಲ್ಗಳುಮಂ ಪೀರ್ದಿಂಗೊರಲ್ಗಳಾವ ನೀರ್ವಕ್ಕಿಗಳ ಸುಶಿಲ ಮಾಸಕದಿಂಚರಂಗಳುಮಂ . . . ನೆಗಟುತ್ತುಮಿರ್ಪಂ (ಚಾರು. ೩೨೬); ಪಾಲೆಂಬ ತೆಱದೆ ಪಶುವಿನ ಪಾಲಂ ಪೋಲುವುವೆ ನಾಯ ಕಳ್ಳಿಯ ಪಾಲ್ಗಳ್ (ಅಜಿ. ೨-೩೩): ಪಾಲೆಂಬ ನಾಮಮಾವಿನ ಪಾಲಿಂಗಂ ನಾಯವಟದ ಕಳ್ಳಿಯೊಳಾದಾ ಪಾಲಿಂಗಮುಕ್ಕುಮಾದೊಡ ಪಾಲೊಳ್ಕುಂ ಸವಿಯು ಪಾದಱಿಳೀಂ ಸಮನೀಯಮೋ (ರಜೋಸು. ೦-೦೯೨). ೩. ತೆಂಗಿನ ಕಾಯಿ, ಕಬ್ಬು ಮುಂತಾದುವುಗಳ ರಸ; (೬). ೪. ಸಿಡುಬು ಮೊದಲಾದುವುಗಳಿಗೆ ಮದ್ದಿನಂತೆ ಉಪಯೋಗಿಸುವ ಲಸಿಕೆ: (೬). ೫. ಬಿಳಿಯ ಬಣ್ಣ; ಬಿಳುಪು: 'ಪಾಲ್ವತ್ತ' ಪರಾ. ೬. ಸಾಮಾನ್ಯವಾಗಿ ಬತ್ತ, ಗೋಧಿ ಇತ್ಯಾದಿ ಏಕದಳಧಾನ್ಯದ ಬಲಿಯದೆ ಇರುವ ಎಳೆಯ ಕಾಳಿನಲ್ಲಿರುವ, ಪಿಷ್ಟಾಂಶದಿಂದ ಕೂಡಿರುವ ಬಿಳಿಯ ರಸ: 'ಪಾಲ್ದೆಂಬು', 'ಪಾಲ್ದೆನೆ' ಪರಾ. **ಪಾಲು₁**: ೧. ಕಱೆಯುತ್ತ ಸುರಧೇನು ಪಾಲನು (ಸಂಹಿತ. ೬-೬); ಚಿಲುಪಾಲು ತಂದಾಲು ಕೆನೆವೆರಸಿದ ಪಾಲು ಸುಲಲಿತ ಬಟ್ಟಪಾಲುಗಳ್ ಸಲೆ ಕಟ್ಟು ಮೊಸರುಗಳ್ ಗಟ್ಟಿಪಾಜ್ಜಿಗೆಗಳ ಲಲನೆಯರುಣಬಡಿಸಿದರು (ಶಾಪು. ೬-೪೦); ಗೊಲ್ಲ ಕರೆದಾ ಧ್ವನಿಯ ಕೇಳಿ ಎಲ್ಲ ಪಶುಗಳು ಬಂದವಾಗ ಚೆಲ್ಲಿ ಸೂಸಿ ಪಾಲ ಕರೆದು ಅಲ್ಲಿ ತುಂಬಿತು ಬಿಂದಿಗೆ (ಗೋಪಾಲು. ೪೦). **ಹಾಲು₁**: ೧. "ಆ ಪೃಥಸ್ಯಂ ಪಯಂ ದುಗ್ಧವೂ ಕ್ಷೀರವೆಂಬಲಾವುಗಳು ಕಱೆವ ಹಾಲನ್ನು" (ತುಂಗಚಾ. ೩೯-೩); ಕಲ್ಲ ನಾಗರ ಕಂಡರೆ ಹಾಲನೆಱೆಯೆಂಬರು (ಜನಪ. ೦೯೪): ಹಾಲ ಸಾಗರ ಮನೆಯ ಸಜ್ಜೆಯ ಮೇಲೆ ಶೇಷನ ಹಾಸು (ಸಂಹಿತ. ೬-೦): ಹುಳಿಗಲಸಿದರೆ ಕೊಡನ ಹಾಲವೊಲಳಿವುದೇ ಕ್ಷೀರಾಂಬುನಿಧಿ (ಕೃಷ್ಣ. ೩-೬-೪೦). ೨. ಎಷ್ಟೆಲ್ಲ ಔಷಧ ಹಾಕಿಕೊಂಡವನಿಗೆ ಕಳ್ಳಿಹಾಲಿನ ಹೆದರಿಕೆಯೆ! (ಗಾದೆ. ೦೬); ಎಕ್ಕದ ಹಾಲು, ಕೋಲುಗಳ್ಳಿಹಾಲು ಮತ್ತು ಕಣಗಿಲುಹಾಲು ಈ ಮೂರು ಸಸ್ಯಕ್ಷೀರಗಳನ್ನು ಒಂದೊಂದು ತೊಟ್ಟು ಸೇರಿಸಿ ರೊಟ್ಟಿ ಹಾಕಿಸಿಕೊಂಡು ತಿನ್ನು (ಶಬ್ದ. ೦೩೩); ಈ ಗಿಡಗಳನ್ನು . . . ಮೈಸೂರ ನಾಡಿನಲ್ಲಿ ಬೆಳಸುತ್ತಾರೆ. ಇದರ ಹಾಲಿನಿಂದ ರಬ್ಬರನ್ನು ತಯಾರಿಸುತ್ತಾರೆ (ಸಸ್ಯಶಾ. ೦೩೩). ೩. ಮಾಘ ಫಾಲ್ಗುಣದಲ್ಲಿ ಗಾಣವನ್ನು ಹುಕಿದರೆ ಅಷ್ಟರಲ್ಲಿ ಬಿಸಿಲು ಬಲಿತು ಕಬ್ಬಿನ ಹಾಲು ಸ್ವಲ್ಪ ಕಡಿಮೆ ಆಗುವದು (ಕೃಷಿಕ. ೦೬೩); ಕಬ್ಬಿನ ಗಣೆ ಡೊಂಕು, ಅದರ ಹಾಲದು ಡೊಂಕೆ ರಸಿಕಾ ಪೇಳೊ (ಗಂ. ೩೨-೦); ಗಾಣದ ಚಕ್ರಗಳಲ್ಲಿ ಕಬ್ಬು ಜಜ್ಜಿ ಹೋಗಿ ಅದರಿಂದ ಹಾಲು ಸುರಿಯುತ್ತಿತ್ತು (ಕಪು. ೩-೬೨). 'ಕಾಯಿ ಹಾಲು' ಪರಾ. ೫. 'ಹಾಲುಗಲ್ಲ', 'ಹಾಲುಗಾರೆ' ಪರಾ. ೬. ಧೊರೆ ನನ್ನ ತಮ್ಮ ಬರುವಾಗ ಯಾಲಕ್ಕಿಗೊನಿ ಬಾಗಿ ಹಾಲ ಸುರಿದಾವ (ಜಾಪ. ೩೬). ೭. ಸುಕುಮಾರತೆ; ಕೋಮಲತೆ; ಮೃದುತ್ವ: 'ಹಾಲುಗಲ್ಲ', 'ಹಾಲುಗೆನ್ನೆ' ಪರಾ.

**ಹಾಲ ಪೊಸಲ್**=ಹಾಲಿನ ಹೊಳೆ : ಪಾಲ ಪೊಸಲ್ ಪೊದಟ್ಟೊದವಿ ಸೌಂದರಮಂದರಕಂದರಂಗಳುಂ ಶೈಲದರೀಗ್ಮಹಂಗಳುಮನೊರ್ಮೆಯ ತೆಕ್ಕನೆ ತೀವಿ . . . ಪರಿದತ್ತು ನಗೋಪಕಂಠದೊಳ್ (ಅಜಿತಪು. ೯-೬೩). **ಪಾಲ ಮುನ್ನೀರ್** =ಹಾಲಿನ ಸಮುದ್ರ; ಕ್ಷೀರಸಾಗರ: ಪಾಲ ಮುನ್ನೀರ್ ತೆರೆಯಂತಿರ್ದುತ್ತರೀಯಮುಂ ನೆಲದೊಳಲೆಯುತ್ತಿರ್ದ ಮೂಧಾF ಭಿಷಿಕ್ತರ್ ಬೆರಸು . . . ಬಂದನಾ ಸಾರ್ವಭೌಮಂ (ಶಾಂತಿಪು. ೨೬೪); ಎನ್ನ ದೇಹದ ಬೆಮರ್ವನಿಯೊಳೊಗೆನರ್ ಪಾಲ ಮುನ್ನೀರ ಮಗಳಿಜೆಯ ಬೊಮ್ಮರ್ (ಶಬ್ದಮ. ೦೦-೨೩). **ಹಾಲುಕ್ಕು, ಹಾಲುಕ್ಕ್ಕು**=ಹಾಲು ತುಂಬಿ ಕೊಂಡು ಹೊರಬರು; ಹಾಲು ಸೂಸು: ಭುವನಸಂಭ್ರಮದೊಡನೆ ತಾಯೆರ್ದೆಗೆ ಪಾಲುರ್ಕೆ ಬರಲೊಂದಿರುಳ್, ಕನಸಿನೊಳ್, ದುಗ್ಧಾಬ್ಧಿಯಂ ಕಂಡು ನಲಿದಳ್ ದೇವಿ ಕೌಸಲ್ಯೆ (ಶ್ರೀರಾಮಾ. ೦೫-೪೦೫); ಈ ಮನೆ ಹಾಲುಕ್ಕಿ ದಂತೆ ಬಳೆಯಲಿ (ಸತಿಶ. ೩೬). **ಹಾಲ್ಬೆಣ್ಣೆಯುಂಬಳಿ**=ಹಾಲು ಮತ್ತು ಬೆಣ್ಣೆಗಾಗಿ ಕೊಟ್ಟ ಕೊಡುಗೆ : ಸದಾಶಿವರಾಯನಾಮುಕನ ಪೊಮ್ಮದಿ ರಂಬ ವಾತ್ಸಲ್ಯದಿಂದಾ ಕುಮಾರರ್ಗೆ ಪಾಲ್ಬೆಣ್ಣೆಯುಂಬಳಿಗೆಂದು ನಿಯಾಮಿಸಿ ಮಾಸೂರಂ ಮಲ್ಲೂರು . . . ಸಂಕಣಭೂಮಂಗಾ ಸಮುಯದೊಳಿತ್ತು (ಕೆಳದಿ. ೩-೩). **ಹಾಲ ಕಾಗದ**=(ಹಾಲಿನಂತೆ) ಬೆಳ್ಳಗಿರುವ ಕಾಗದ: ಬಿಳುಪಾದ ಕಾಗದ : (ಕ). **ಹಾಲ ಕಾಜ**= ಗೋವಳಿಗ; ಕವಾಡಿಗ : ಹಾಲಕಾಜಿರ ಊರ ಚಿಕದೇವರು . . . ಯಿಾ ಶಾಸನವಲಾದ ಪ್ರಮಾಣಿನ ಭೂಮಿಯುನೂ ಶ್ರೀನರ[ಸಿಂಹ]ಭಾರತೀಶ್ರೀಪಾದ ಒ[ಡೆ]ಯರು × × × (ಕ್ರಾಇಂ. IX-ii, ೬೪೦-೪೬: 1406 ). **ಹಾಲ ಕೆನೆ**=ಪಾಲ್ಗೆನೆ: ಹಾಲ ನೇಮ ಹಾಲ ಕೆನೆಯ ನೇಮ (ಜಕಶ. ೨೩೨). **ಹಾಲಗಂಬ**=ಮದುವೆ ಯಲ್ಲಿ, ಧಾರೆಯ ಮಂಟಪಕ್ಕೆ ಸಮೀಪವಾಗಿ ನೆಡುವ (ಮುರಿದರೆ ಹಾಲು ಸುರಿಸುವ) ಮರದ ಕೊಂಬೆ : ಹುವರಗುಂಚಿಕ ಚೆಂದನ್ನ ಸಿಂಗಾರ ತಂದ ಕಟ್ಟಿದರ ಹಾಲಗಂಬ ಮಾವಯ್ಯ ಬಂದ ಹಂದರಕ ಬನ್ನಿ ದಾಗ (ಜೋಕಗೀ. ೪೭). **ಹಾಲಗಾಳು**=ಹಾಲು ತುಂಬಿದ ಕಾಳು; ಎಳೆಯ ಕಾಳು : ಉಳಿದ ಪಕ್ಷಿಗಳು ತಿನ್ನುವಾಗ ಬದ್ದಂಥ ಹಣ್ಣು ಹಂಪಲುಗಳನ್ನೂ ಹಾಲಗಾಳುಗಳನ್ನೂ ತಂದು ನನಗೆ ಗುಟುಕು ಕೊಟ್ಟು ಉಳಿದರೆ ತಾನು ತಿನ್ನುತ್ತಿತ್ತು (ಮುಂಜಾವು, ೩-೩೦೨). **ಹಾಲಗೋಳಿ**=ಹಂಸಪಕ್ಷಿ : ಹಾಲ ಗೋಳಿಯ ವಸ್ತ್ರದ ನೀರಗೋಳಿಯ ತಂದ ನೀರಾಗ ನಿರಿಗಿ ಒದೆಯೂವ ಹೆಣ್ಣೀನ ಹ್ಯಾಂವಕ ತಂದ ಶಿವರಾಯ (ಕಸ್ತೂರಾ. ೦೦೩). **ಹಾಲ ತೊಡೆ**= ಪಾಲ್ದೊಡೆ : ಹಾಲ ತೊಡೆಗೆ ಬೆಲ್ಲದ ಕೆಸಱು ಸಕ್ಕರೆಯ ಮಳಲು ತವರಾಜದ ನೊರೆ ತೆರೆಯಂತೆ ಆದ್ಯರ ವಚನವಿರಲು (ಜಕಶ. ೨೯೦). **ಹಾಲ ಧಾರೆ**=ಒಂದು ಬಗೆಯ ಪೂಜೆ : ಕ್ಷೀರಾಭಿಷೇಕ: [ಮು]ಚಿಂಪ್ರದೇವರುಗಳ ಹೆಸರಿನಲು ನಡ[ವ] ಹಾಲ ಧಾರೆಗು ಸಹ ಅಕ್ಕಿ ಮೂಡೆ ೧೦ ( ಎಇ. XX, ೯೯-೯೬; 1556 ). **ಹಾಲ ಬಾನ**= ಹಾಲಿನೊಂದಿಗೆ ಕಲಸಿದ ಅನ್ನ : ಹಾಲ ಬಾನುಣಲೊ ಹವಳ ಕೇರಾಡಲೊ (ಗಶಿಶಿ. ೧೨೩); ಹರಿಯಾಗೆದ್ದಮ್ಮಗಳು ಹಾಲಾ ಬಾನುಣ್ಣಲಿ ಳು (ಜೋಕಗೀ. ೮೦). **ಹಾಲ ಮಣಿ**=(ಹಾಲಿನಂತೆ) ಬಿಳುಪಾದ ಗಾಜಿನ ಮಣಿ : (ಕ). **ಹಾಲ ಸಹಸ್ರ**=ಹಾಲ ಧಾರೆ : ಶ್ರೀಸ್ವಯಂಭು ರಾಮೇಶ್ವರದೇವರ್ಗ್ಗೆ [ಹಾ]ಲ ಸಹಸ್ರ ಗದ್ದುಗೆಯುಂ ಕೊಟ್ಟು ರಕ್ಷಿಣಿಯಾಗಿ ಕಟ್ಟಿಪ ಕೆಯಿ ತೆ × × × ಬಟ್ಟೆಯಿಂ ಪಡುವಲು . . . ಬಟ್ಟ ಕೆಯಿ ಹಿರಿಯ ಕೋಲ ಮತ್ತರೇಳು (ಕಇ. II, ೨೪-೩೦; 1167). **ಹಾಲ ಹರವಿ**= ೧. ಹಾಲಿನ ಕೊಡ : ತಾಳಮರದ ಕೆಳಗೆ ಒಂದು ಹಾಲ ಹರವಿಯಿರ್ದೊಡೆ ಅದ ಹಾಲ ಹರವಿಯೆನ್ನರು ಸುರೆಯ ಹರವಿಯೆಂಬರು (ಜಕಶ. ೯೦); ಹಾಲ ರವಿಯ ಸುತ್ತ ಯಾಲಕ್ಕಿ ನಾತಾವ ಯಾರುಂಡರವ್ವ ಹಗಲೂಟ (ಗಶಿಶಿ. ೬೨). ೨. ಒಂದು ಊರಿನ ಹೆಸರು : ತಂಮ ಪ್ರವಿಷ್ಟದ ತುಱುಘಟಿಯ ಮೂಡಣ ಬಂಟಿಯಾಶಾನ್ಯದಲ್ಲಿ ಹಾಲ ಹರವಿಯ ದಾರಿಯ ನ್ನೆಂಕಲೂರ್ಪ್ಪೂರ್ವ್ವಕದೊಳಗೆಯಂ ಧಾರಾಪೂರ್ಬ್ಬಕಮ್ಮಾಡಿ ಕೊಟ್ಟ ಮತ್ತ ರಾಜು (ಕ್ರಾಇಂ. IX-i, ೨೯೩-೦೮; 1172). **ಹಾಲ ಹಸುಳೆ**=ಎಳೆಯ ಮಗು: ಆ ತರುಣಿಯು ವಯಸ್ಸಿನಲ್ಲಿ ದೊಡ್ಡವಳೇ ಆಗಿದ್ದರೂ ನಿರ್ದೋಷಿತ್ವದಲ್ಲಿ ಯಥಾರ್ಥವಾಗಿಯೂ ಹಾಲ ಹಸುಳೆಯಾಗಿದ್ದಳೆಂಬುದರಲ್ಲಿ ಯಾವ ಸಂದೇಹವೂ ಇಲ್ಲ (ಕಂಶ. ೩೩); ತನ್ನ ಭವಿತವ್ಯದ ಬಗ್ಗೆ ಏನೇನೂ ಅರಿಯದ ಹಾಲ ಹಸುಳೆ ಹಿಂದುಮುಂದಿನ ಯೋಚನೆಗೆ ಅವಕಾಶವಿಲ್ಲದೆ ಹಸೆಯನ್ನೇರುತ್ತಾಳೆ (ಅಶ್ರುಶ. ೯೨). **ಹಾಲ ಹೂರಣಗಡುಬು**=ಹಾಲಿನಲ್ಲಿ ನೆನೆಸಿ, ಸಿದ್ಧಮಾಡುವ ಒಂದು ಬಗೆಯ ಹೂರಣಗಡುಬು : ತಱುಪಿನೆಮ್ಮೆಯ ಹಾಲ ನಾಲ್ಕೊಂದೆನಿಸಿ ಕಾಸಿ ನೆಟ್ ಸಣ್ಣನಾದಕ್ಕಿಬಿಟ್ಟ ನಿನಿಸಂ ಹೊಯ್ದು . . . ಕರ್ಪೂರಂ ಮೊದಲಾದ ನಱುಗಂಪ ಪೂರೆಯೊತ್ತಿ ಹಾಲ [ಶಾಂತಿ.ಬು] ಹೂರಣಗಡುಬುಮೆಸರಾಂತು ಸವಿವಡೆದುದು (ಸೂಶಶಾ. ೦-೩೩). **ಹಾಲಿಗೆ ಸಕ್ಕರೆ ಬೆರಸು**=ಒಂದಕ್ಕೊಂದು ಪೂರಕವಾಗುವಂತೆ ಚೆನ್ನುಮಾಡು—ಸೊಗಸುಗೊಳಿಸು; ಈ ಎರಡು ಸಂಸಾರಗಳ ವಿವಾಹ ಬಂಧನ ಹಾಲಿಗೆ ಸಕ್ಕರೆ ಬೆರಸಿದಂತಾಗಿದೆ (ರೂಢಿ). **ಹಾಲಿಗೆ ಹುಳಿ ಹಿಂಡು**= ಕೆಡಿಸು; ಕೆಟ್ಟುದನ್ನು ಮಾಡು; ಹಾಳುಮಾಡು. **ಹಾಲಿನೊಡೆ**= ಹಾಲಿನಲ್ಲಿ ಬೇಯಿಸಿ ಮಾಡುವ ಒಂದು ಬಗೆಯ ವಡೆ : ತಿಳಿದುಪ್ಪದಿಂದ ಬೆಂದೊಡೆಯನೆಮ್ಮೆಯ ಹಾಲಿನೊಳಗೆ ಬೇಯಿಸಿ ಹಾಲಿನೊಡೆಯಾಯ್ತು (ಸೂಶಶಾ. ೧-೭೦). **ಹಾಲು ಕುಡಿದ ಹಾಗೆ ಆಗು**= ತೃಪ್ತಿಯಾಗು ; ತಣಿವನ್ನು ಹೊಂದು : ಈ ಸಂತೋಷದ ಸಂಗತಿಯನ್ನು ಕೇಳಿ ಹಾಲು ಕುಡಿದ ಹಾಗೆ ಆಯಿತು (ರೂಢಿ). **ಹಾಲುಕ್ಕಿಸು**=ಹೊಸ ಮನೆಯನ್ನು ಪ್ರವೇಶ ಮಾಡುವಾಗ (ಸಮೃದ್ಧಿಯ ಸಂಕೇತವಾಗಿ) ಹಾಲನ್ನು ಉಕ್ಕಿಸು : ಹೊಸಮನೆಗೆ ಹೋಗಿ ಹಾಲುಕ್ಕಿಸಿ ಬರಲು ಇಂದು ಒಳ್ಳೆಯ ಮುಹೂರ್ತವಿದೆ (ರೂಢಿ). **ಹಾಲುಜೇನು, ಹಾಲ್ಜೇನು**=ಜೇನು ಬೆರಸಿದ ಹಾಲು; ಜೇಂಬಾಲು : ರಸರಸವು ಹಾಲುಜೇನು (ಹೃದಶ. ೬೩-೨); ತನ್ನ ಒರಟುತುಟಿಗಳನ್ನು ಅವಳ ಹಾಲುಜೇನಿನಂತಹ ತುಟಿಗಳಿಗೆ ತಗುಲಿಸಿದ (ಹಾಡುಹು. ೩); ನಿನ್ನ ಬಾಯಲ್ಲಿ ಹಾಲ್ಜೇನು ಸುರಿಯಲಿ (ಕಾಂಚನ. ೬೯); ಹಾಲ್ಜೇನನ್ನೇ ತನ್ನ ಮೈಯಲ್ಲಿ ತುಂಬಿಟ್ಟುಕೊಂಡು ಬೆಳೆದಳು ಅವಳು (ಹೊಸ್ತಿ. ೩). **ಹಾಲುತುಪ್ಪ**=ಸತ್ತವರ ಸಮಾಧಿಗೆ ಮೂರನೆಯ ದಿನ ಮಾಡುವ ಒಂದು ವಿಧಿ. **ಹಾಲು ತುಪ್ಪ ಅನ್ನು**=ಒಳ್ಳೆಯದಾಗಲೆಂದು ಹೇಳು ; ಶುಭವನ್ನು ಹಾರೈಸು : ಥೀ, ಹುಚ್ಚ ! ಹಾಲು ತುಪ್ಪ ಅನ್ನು (ದಾಕಾಲಿ. ೦೦೦). **ಹಾಲು ತುಪ್ಪದಲ್ಲಿ ಕೈತೊಳೆ**=ಸುಖ, ಸಮೃದ್ಧಿಯ ಜೀವನವನ್ನು ನಡೆಸು : ನಮ್ಮಗಳು ಹಾಲು ತುಪ್ಪದಲ್ಲಿ ಕೈ ತೊಳೆಸಾಕೆ (ಕಕಶಾ. II, ೧೦೩೦). **ಹಾಲು ತುಪ್ಪ ಬಿಡು**=ಸತ್ತವರ ಸಮಾಧಿಗೆ ಮೂರನೆಯ ದಿವಸ ಹಾಲು ಮತ್ತು ತುಪ್ಪವನ್ನು ಹಾಕು : ಸತ್ತ ದಿನ ದುಃಖದಲ್ಲಿ ಭಾಗಿಗಳಾಗಲು ಬಾರದಿದ್ದವರು . . . ಮೂರನೇ ದಿನ ಹಾಲೂ ತುಪ್ಪ ಬಿಡುವ ಹೊತ್ತಿಗೆ ಎಷ್ಟು ಕೆಲಸವಿದ್ದರೂ ಬಿಟ್ಟು ಬರುತ್ತಿದ್ದರು (ಹುಟ್ಟಿಹ. ೭೩). **ಹಾಲು ಬಿಡಿಸು**=ಶಿಶುವಿಗೆ ಸ್ತನ್ಯ ಪಾನದ ಅಭ್ಯಾಸವನ್ನು ಬಿಡಿಸು : ಹಾಲು ಬಿಡಿಸುವ ಹೊತ್ತಿಗೆ ಮಕ್ಕಳಿಗೆ ಬಹಳ ತೊಂದರೆಯಾಗುತ್ತದೆ (ರೂಢಿ).

[ದೇ.೩ ತಮಿ. ಪಾಲ. ಕೊಡ. ಕೋಲಾ. ಗದಬ. ಗೊಂಡಿ. ಪಾಲ್; ತುಳು. ಪೇರ್ ; ತೆಲು. ಪಾಲು. ಪಾಡಿ ; ಕುಇ. ಪಾಲು. ಪಾಡು; ಕುವಿ. ಪಾಲು ; ಬ್ರಾಹುಈ. ಪಾಲ್]

**ಹಾಲ್**, **ಪಾಲು** (ನಾ). ೧. ಹಂಚಿದ ಭಾಗ ; ಹಿಸ್ಸೆ : ಮಿಂದು ಪೂಜ್ಯರ್ಗೆ ಮುಂ ಪಾಲು ನೀಡದೇನನುಮುಣ್ಣನುಂ ಅಧರ್ಮದಿ ಪಾಲ್ಗೆ ಗೋವಂಬೊಲ್ ಗೋವಂ ಕರೆಯಂ ದಿಟಂ (ಶಾಶಂಶ. ೨-೦೯).

**ಪಾಲು$_1$** : ೧. ಅತಿಬಳನ ನಿವಾಗೀವೆನಾತನ ಗತಿಯು ಪರಿ ವಿಪರೀತ ಹಾನಾ ಸುತನ ನಿಲಿಸಲಿಕಾಣ್ಣೀವೆನು ನಿಮ್ಮ ಪಾಲಿಗೆಯು (ಸಂಕಷ. ೨೩-೩೯); ಶ್ರೀಹರಿಹರದೇವರ ಅವಸರಸತ್ರಕ್ಕೆ ಸಮರ್ಪಿಸಿದ್ದ ಎರಡು ಪಾಲು (ಶಾ. IV, ಚಿಕ-೯ ; 1590) ; ಧನವನೊದವಿಸುವುದೊಕ್ಕಲಿಗ್ಗೆದು ಪಾಲರಸುಗೊಂದು ಪಾಲೀಕ್ರಮದೊಳು (ಶಂಕ. ೮-೮೦) ; ತಂನ ಪಾಲಿಗೆ ಬಂದ ಭೂಮಿಯು ವಳಗೆ ಕೊಟದು (ಎಕ. VII, ಶಿಕಾ. ೨೯-೩೦ ; 1712); ಪಾಲಿಗೆ ಬಂದದ್ದು ಪಂಚಾಮೃತ (ಗಾದೆ). ೨. ಬಣ ; ಪಂಗಡ : 'ಪಾಲುಮುಖಂಡ' ನೋ.

**ಪಾಲಾಗು**—೧. ಭಾಗಕ್ಕೆ ಬರು ; ಪಾಲಿಗೆ ಸೇರು : ಪಲಬರ ಪಾಲಾದರಮಾ ಕಲಹಂಸೋತ್ತುಂಗಗಮನಭಾಮಿನಿಯರನುಜ್ವಲಗುಣ ರಾಜಿ ಪತಿವ್ರತಕಲಿಕಾತಳಕಾಂತ ಗೌರಿಗೆಣೆಯೆನಲಹುದೇ (ಕಬ್ಬಿಗ. ೨-೩೩); ಹಣ್ಣು ಹಂಪಲಗಳು . . . ಪುಣ್ಯವಂತರ ಪಾಲಾಗುವವು (ಕಬ್ಬಿಕೂ. ೯೩) ; ನಮ್ಮ ರಹಸ್ಯವು ಪ್ರತಿಪಕ್ಷಿಗಳ ಪಾಲಾಯಿತು (ರಾಜ. ೦೫). ೨. (ಆಸ್ತಿಯಲ್ಲಿ) ತನ್ನ ಭಾಗವನ್ನು ತೆಗೆದುಕೊಂಡು ಹೋಗು ; ಹಿಸ್ಸೆಯಾಗು ; ಭಾಗವಾಗು : ಒಡೆದು ಪಾಲಾಗಿದ್ದ ಕಾನೂರಿನ ಆಸ್ತಿ ಮತ್ತೆ ಒಂದಾಯಿತು (ಕಾನೂರು. ೬೩೦). **ಪಾಲು ಮಾಡು**—೧. ವಿಭಾಗಿಸು ; ಭಾಗಮಾಡು : ತಿರುಗಿ ಹಪ್ಪಳವನ್ನು ಪಾಲು ಮಾಡಿ . . . ತಿನ್ನಿಸಿಯೇ ಬಿಟ್ಟಳು (ಮಲೆ. ೫೦). ೨. ಹಿಸ್ಸೆಮಾಡು : ಚರಸ್ವತ್ತುಗಳನ್ನು ಪಾಲು ಮಾಡುವಾಗಲೂ ಕೂಡ ಅನೇಕ ಉಪಾಯಗಳಿಂದ ತಮಗೆ ಹೆಚ್ಚು ಪಾಲು ಬರುವಂತೆ ಮಾಡಿಕೊಂಡರು (ಕಾನೂರು. ೩೯೯).

[ದ್ರಾ.: ತಮಿ. ಮಲ. ತುಳು. ಕೊಡ. ಪಾಲ್ ; ತೆಲು. ಪಾಲು ; ಪರ್ಜಿ. ಪೇಲ]

**ಪಾಲು$_2$** 'ಪಾಲ್ಯ$_1$' ನೋ.

**ಪಾಲು$_3$**, ಪಾಳ$_1$, ಹಾಲು (ನಾ). ೧. ನೊಸಲು; ಹಣೆ : ಫಾಲಕ್ಕೆ-ಪಾರಂ-ಅಳಿ-ಕಪ . . . ಫಾಲ—ಪಾಲ (ಶಬ್ದ. ೨೩೧ ಪ್ರಯೋ). **ಪಾಳ$_2$** : ೧. "ಪಾಲ (ಪಾಳ)—ಫಾಲ—ಹಣೆ" (ಕರ್ಣಕೊ. ೨೩). ೨. ಬೇಗಿಲಿನ ಗುಳ : "ಪಾಳ:, ಕುಷೀರ:—ಈ ೨ ಕುಂಟು (ಹಲಾಯು. ೯೯-೯೨೦) ; ಫಾಲ, ಪಾಳ ; ಫಣ, ಪಣಿ (ಶಬ್ದಸ್ಮ. ೦೯೨ ಪ್ರಯೋ). **ಹಾಲು$_1$** : ೨. ಬೇಗಸ್ಸ ಹಾವದಲ್ಲಿ ಕೊರಗೆಯ ಹಾಲದ ಪ್ರೊಳಗೆಯಾಡುವುದು (ಅಭಿಸ. ೯-೨೮ ವ). [< ಸಂ. ಫಾಲ]

**ಪಾಲು$_4$** (ನಾ). ೧. ರಕ್ಷಿಸುವವನು ; ಕಾಪಾಡುವವನು : ಕಾಯ ಬೇಕೆನ್ನ ಗೋಪಾಲ ಒಂದುಪಾಯವನಱಿಯೆನು ಭಕುತರ ಪಾಲ (ಪುರಂದ. ೨-೦೩೯ ಕ್ಷಿಪ್ರ). ೨. ಒಬ್ಬಾತನ ಹೆಸರು : ಬನ್ನೂರ್ಚಾವರಿಯ ವಾಗ ಪಾಲ ಒಳ್ಳದ ತುಱುಗೊಳೆ ಕಾದಿ ತುಱುವನಿಕ್ಕಿಸಿ ಸ್ವರ್ಗ್ಗಯಾದ (ಎಕ. X, ಮುಳಬಾ. ೯೯-೬ ; ಸು. ೯೭೦). ೩. ಪೀಕದಾನಿ ; ಪಡಿಗ. ೪. ರಕ್ಷಣೆ : ಕಾಪಾಡುವುದು. [ಸಂ.]

**ಪಾಲಂಕಿ$_1$** 'ಪಲ್ಲಂಗ' ನೋ.

**ಪಾಲಂಕಿ$_2$** (ನಾ). ಒಂದು ಬಗೆಯ ಸುಗಂಧದ್ರವ್ಯ; ಕುಂದುರುಷ್ಕ.

[ಸಂ. ಪಾಲಂಕೀ]

**ಪಾಲಕ** (ನಾ). ೧. ಕಾಪಾಡುವ ವ್ಯಕ್ತಿ ; ರಕ್ಷಕ ; ಪೋಷಕ : "ಅಮ್ಮಿತಾ=ಪಾಲಕಂ" (ಶಾಶ್ವ. ೯೦) ; ಆ ದಿನ ಶಾಲೆಗೆ ಇಬ್ಬರು ಪಾಲಕರು ಹಿರಿಯ ಗುರುಗಳನ್ನು ಕಾಣಲು ಬಂದಿದ್ದರು (ಕಾಲ. ೯-೨೯) ; ಅವಳ ದೊಡ್ಡಮ್ಮನೇನೊ ಒಳ್ಳೆಯವಳಾಗಿದ್ದಳು. ಆದರೇನು ಅವಳು ಎಷ್ಟಾದರೂ ಪಾಲಕಳೇ ಹೊರತು ತಾಯಿಯಲ್ಲ (ಅಂತರಂ. ೦೯೩). ೨. ಆಳುವವನು; ರಾಜ. ೩. ರಕ್ಷಿಸುವುದು; ರಕ್ಷಣೆ. ೪. ಕುದುರೆ. ೫. ಅಶ್ವರಕ್ಷಕ. [ಸಂ.]

**ಪಾಲಕಾಪ್ಯ** (ನಾ). ೧. ಕರೇಣುಮಹರ್ಷಿಯ ಮಗ ; ಆನೆ, ಕುದುರೆ ಮುಂತಾದುವುಗಳ ಲಕ್ಷಣಗಳನ್ನು ತಿಳಿಸುವ ಗ್ರಂಥವನ್ನು ಬರೆದ ಒಬ್ಬ ಮುನಿ. ೨. ಈತನು ಬರೆದ ಗಜಾಶ್ವಾದಿ ಲಕ್ಷಣಗಳನ್ನೊಳಗೊಂಡ ಶಾಸ್ತ್ರಗ್ರಂಥ : ಇರ್ಪರುಮನೋದಲಿಟ್ಟೊಡೇಟಿಯುಮರಾಪ ದೊಳಗೆ ವ್ಯಾಕರಣಂ . . . ಪಾಲಕಾಪ್ಯಂ ಚಾಣಕ್ಯಂ ವೈದ್ಯಂ ಮೊದಲಾಗೊಡೆಯ ಶಾಸ್ತ್ರಂಗಳನೆಲ್ಲಮನಿರ್ವರುಂ ಕಲ್ತು (ಶಬ್ದಾಶಾ. ೧೨೮-೨೨).

[ಸಂ.]

**ಪಾಲಕಿ** 'ಪಲ್ಲಂಗ' ನೋ.

**ಪಾಲಕೀಟ್** 'ಪಾಲ್ಕಿಟ್' ನೋ.

**ಪಾಲಕ್ಕಿ** (ನಾ). ಒಂದು ಬಗೆಯ ತರಕಾರಿ ಸೊಪ್ಪು : ನಮ್ಮ ಮನೆಯ ಹಿತ್ತಲಿನಲ್ಲಿ ಪಾಲಕ್ಕಿಯ ಸೊಪ್ಪು ಹೇರಳವಾಗಿ ಬೆಳೆದಿದೆ (ಜನ).

[< ಸಂ. ಪಾಲಕ್ಯಾ. / ತೆಲು. ಪಾಲಾಕು. / ಹಿಂ. ಪಾಲಕ್]

**ಪಾಲಕ್ಯ** (ನಾ). ಒಂದು ಬಗೆಯ ತರಕಾರಿಸೊಪ್ಪು ; ಹರಿವೆ : "ಪಾಲಕ್ಯವೆಂಬುದು ಹಱುಬೆ" (ಹಲಾಯು. ೨೩-೧೧) : ಪಾಲಕ್ಯವು (ಪಾನಕನ ಪಲ್ಲೆ) ಗುರು ಮತ್ತು ಶೀತವಿದೆ (ಸೂಪಶಾ. ೧೩೩).

[ಸಂ. ಪಾಲಕ್ಯಾ]

**ಪಾಲಕ್ಕೆ** (ನಾ). = ಪಾಲಕ್ಯ. [ಸಂ. ಪಾಲಕ್ಯಾ]

**ಪಾಲಖಿ** 'ಪಲ್ಲಂಗ' ನೋ.

**ಪಾಲಘ್ನ** (ನಾ). ಅಣಬೆ : ನಾಯಿಕೊಡೆ : "ಛತ್ರಾ, ಅತಿಛತ್ರಾ, ಪಾಲಘ್ನ: — ೩ ಕೊಡೆಹುಲ್ಲಿನ ಹೆಸರುಗಳು. ಛತ್ರಾಕಾರವಾದ ಹುಲ್ಲು, ಛತ್ರಾತಿಛತ್ರವೆಂದು ಏಕಪದವಾಗಿ ಕೆಲವರು ಹೇಳಿದರು" (ಸಿದ್ಧಾಂತ. ೧೩೧).

[ಸಂ.]

**ಪಾಲಡಕೆ**, ಹಾಲಡಕೆ (ನಾ). ಹಸಿಯ ಅಡಕೆ : ಮದನವೇದನೆಯ ವಿನ್ನಾಣಂಗಳಪ್ಪ ಪಸುರೆಸೆವ ಪಾಲಡ[ಪಾ.ಪಾಂ. ಡ]ಕೆಯ ಗೊಂಚಲುಮಂ . . . ಕತ್ತುರಿಯ ಕಂಪಿನಿಂ ಸೊಂಪಂ ತಳೆದ ಮಲಯಜವಿಲೇಪನಪುಂಜನರಸಂಗೆ ತೋಱಿ (ಕಾದಂಬ. ೧೮೮). **ಹಾಲಡಕೆ** : ಹಾಲಡಕೆ ಬಹಳ ಮತ್ತು ಬರುವಂತೆ ಮಾಡುತ್ತದೆ (ಜನ). [ಪಾಲ್$_1$ + ಅಡಕೆ$_1$]

**ಪಾಲನ** (ಗು). ೧. ನಡೆಸುವ ; ಪಾಲಿಸುವ. ೨. ಕಾಪಾಡುವ ; ರಕ್ಷಿಸುವ. (ನಾ). ೩. ನಡೆಸುವುದು ; ಪಾಲಿಸುವುದು. ೪. ಕಾಪಾಡುವುದು ; ರಕ್ಷಣೆ. ೫. ಆಗ ತಾನೇ ಕರು ಹಾಕಿದ ಹಸುವಿನ ಹಾಲು. [ಸಂ.]

**ಪಾಲನೆ** (ನಾ). ೧. ಕಾಪಾಡುವುದು ; ರಕ್ಷಿಸುವುದು ; ರಕ್ಷಣೆ : ನಿರ್ವ್ಯಸನದೊಳು ಪಾಲನೆಯೊಳು ಧನದೊಳು . . . ಭೋಗವುಳ್ಳ (ಮಂಗರಾ. ೧೫೨-೩೦) ; ಪಾಲನೆಯಿಲ್ಲದಿದ್ದರೆ ಲಾಲನೆಗೆ ಎಡೆಯುಂಟೆ ? (ಗಾದೆ); ಮಕ್ಕಳ ಪಾಲನೆಯ ವಿಷಯದಲ್ಲಿ ತಾಯಿಯಾದವಳು ಹೆಚ್ಚು ಗಮನ ಕೊಡಬೇಕು (ಜನ). ೨. ಸಾಕುವುದು : ಈಗಿನ ಕಾಲದಲ್ಲಿ ಸೀಮೆದನಗಳನ್ನು ಪಾಲನೆ ಮಾಡುವುದು ತುಂಬಾ ದುಬಾರಿ (ಜನ). ೩. ನಡೆಸುವುದು ; ಪಾಲಿಸುವುದು : ಯಾವುದೇ ಕೆಲಸದಲ್ಲಿ ನಿಯಮದ ಪಾಲನೆ ತುಂಬಾ ಮುಖ್ಯ (ಜನ). [ಸಂ. ಪಾಲನ]

**ಪಾಲಶರ್ಮ** (ನಾ). ಒಬ್ಬಾತನ ಹೆಸರು : ಕಾಶ್ಯ(ಶ್ಯ)ಪಗೋತ್ರ ಪಾಲಶರ್ಮ್ಮಣಚತುರಿಅಂಶ: (ಶಾ. VII, ೧೮೮-೯೦ ; ೬೬೮).

[ಪಾಲ್$_3$+ಶರ್ಮ]

**ಪಾಲಾ** (ನಾ). ಜೊತೆ ; ಸಂಗ ; ಸಹವಾಸ : ನೀನೂ ಅವನನ್ನು ಬರಿಗಟ್ಟಿಕೊಂಡು ಬರುವಿಯಾ ? ನಿನ್ನ ಪಾಲಾನೂ ಫೂ (ಚರಿತ. ೮೯).

**ಪಾಲಾ ಫೂ** — ಜೊತೆ ಬಿಡುವುದು ; ಸಂಗ ಬಿಡುವುದು ; ರೂ : ರಾಮನೂ 'ಪಾಲಾ ಫೂ' ಎಂದನು (ಚರಿತ. ೮೯). ; ನಿನ್ನ 'ಪಾಲಾ

ಪೂ !!' ಎಂದು ಸಿಟ್ಟಿನಿಂದು ಅತ್ತ ದೂರ ಹೋಗಿ ಒಂದು ಕಂಬದ ಕಡೆಗೆ ಮೋರೆ ಮಾಡಿ ನಿಂತು ಅಳುತ್ತಿದ್ದಳು (ರಾಸಹು. ೧೪). **ಪಾಲಾ ಪೂ ಬಿಡು** = ಜೊತೆ ಬಿಡು ; ಕೂಟ ಬಿಡು ; ಸಂಗ ಬಿಡು : ಮೊದಲಿನಿಂದಲೂ ಇಬ್ಬರೂ ಕೂಡೇ ಇರುತ್ತಿದ್ದೆವಲ್ಲ, ನೀನೇ ನನ್ನ ಪಾಲಾ ಪೂ ಬಿಟ್ಟ (ಶಿಶಿಲಿ. ೨೩). **ಪಾಲಾ ಬಿಡು** = ಪಾಲಾಪೂ ಬಿಡು : ಸಾಯಂಕಾಲವು ಗೆಳೆಯರು ಪಾಲಾ ಬಿಟ್ಟಿದ್ದರಿಂದ ಒಬ್ಬಂಟಿಗನಾಗಿ ಕೂತಿರುವ ಹುಡುಗನಂತೆ . . . ತೋರುತ್ತಿತ್ತು (ಕಥಾಕ. ೯೨) ; ನೀನು ರಂಗನ ಪಾಲಾ ಬಿಡು, ಅವನ ಸಂಗವನ್ನು ಮಾಡಬೇಡ (ಕಂಗಕೋ. ೭೪). **ಪಾಲಾ ಹಿಡಿ** = ಜೊತೆ ಸೇರು ; ಸಂಗ ಕಟ್ಟು : ತಾನಾಗಿ ಪಾಲಾ ಬಿಟ್ಟು ತಾನಾಗಿ ಪಾಲಾ ಹಿಡಿದಾನೆಂದು ಬಸವಂತನ ಕನಸುಮನಸಿನಲ್ಲಿಯೂ ಅನಿಸಿದ್ದಿಲ್ಲ (ಕಥಾಕ. ೯೮).

[ ← ಮರಾ. ಪಾಲವ = ಸಂಬಂಧ ]

**ಪಾಲಾಶ** (ಗು). ೧. ಮುತ್ತುಗದ ಮರಕ್ಕೆ ಸಂಬಂಧಿಸಿದ ; ಪಲಾಶವೃಕ್ಷದ. (ನಾ). ೨. ಮುತ್ತುಗದ ಮರ ; ಪಲಾಶವೃಕ್ಷ : ನೆಂದುವ ಕಿಚ್ಚುಮನಸ್ಸಮಯಂಡೋಜಾತ ಚಂದ್ರಸೂರ್ಯರೆಂಬರ ನಂಬದೆ ಸುಂದರವಿಧಿ ಕಂಟಳಗಂ ತಂದಿಟ್ಟವೊಲೆಯ್ದೆ ತೋಱಿತಾ ಪಾಲಾಶಂ (ಮಲ್ಲಿಗ. ೩-೩೩೬); ಪಾಲಾಶ ಕಲಧೌತಪುಷ್ಪಂಗಳುಂ ತುಳಸಿ ಮಾಲೂರ ಪತ್ರೆಯಿಂ ನಾಲ್ಕು ಲಿಂಗಕ್ಕೆ ಪ್ರಕ್ಷಾಲಿಸಿ ಪುನಃಪುನಃ ಧೂಪಬೇಕಾದುದುಂ ನಿವರ್ಾಲ್ಯವಲ್ಲ ಸತತಂ (ಗುರುಚಾ. ೬-೧೬). ೩. ಮುತ್ತುಗದ ಮರದಿಂದ ಮಾಡಿದುದು. ೪. ಹಸುರುಬಣ್ಣ ; ಮರಕತವರ್ಣ : "ಶ್ಯಾಮಂ, ಶ್ಯಾಮಳಂ, ರಾಮಂ, ಪಾಲಾಶಂ, ಹರಿತಂ, ಹರಿತ್—ಈ ೬ ಪ(ಹ)ಸುರ್" (ಕರಾಯು. ೦೨೦-೯೯). [ ಸಂ. ]

**ಪಾಲಾಶದಂಡ** (ನಾ). ಮುತ್ತುಗದ ಕೋಲು : ಕೈಗಳವಡುವ ತತ್ ಪಾಲಾಶದಂಡವ ವಿಷ್ಣುಕಂಕಾಳ ಇಡುವ ಮೇಧಾವಿಯ ಭಸಿತವು (ಬಸಪು. ೩-೫೪). [ ಪಾಲಾಶ + ದಂಡ ]

**ಪಾಲಾಸ** (ನಾ). ಮುತ್ತುಗದ ಮರ ; ಪಲಾಶವೃಕ್ಷ : ಪಾಲಾಸ ಬದರಿಕ ಮಾಮರ ತಳಿರ್ಗೆ ಗೋಳಿಯಾಲವು (ದೀಪಾಂಕು. ೩-೨೬೮).

[ < ಪ್ರಾ. ಪಾಲಾಸ./ಸಂ. ಪಾಲಾಶ ]

**ಪಾಲಿ₁** (ನಾ). ಕಾಪಾಡುವವನಂ ; ರಕ್ಷಿಸುವವನಂ : ಸೂರ್ಯಲೋಚನ ಶರಣ ಪಾಲಿ ನಗಧರ್ಮ ಸೃಷ್ಟಿಸ್ಥಿತಿಪ್ರಹರಣವಿನೋದಿತಂ . . . ವಿರೂಪಾಕ್ಷ ನನವರತ ನಿಮ್ಮ ಸಲಹುಗೆಯೆನುತೆ ಪರಕೆಯಿತ್ತಂ (ಶಾಶಿ. ೩-೦೨).

[ ಸಂ. ಪಾಲಿನ್ ]

**ಪಾಲಿ₂, ಪಾಳಿ₂** (ನಾ). ೧. ಸಾಲು ; ಪಂಕ್ತಿ : ಬೆಳದಿಂಗಳಿನಲ್ಲಿ ಎಲ್ಲವೂ ಸ್ಪಷ್ಟವಾಗಿ ಕಾಣದಿದ್ದರೂ ಸುಗಂಧದಿಂದ ಬಕುಳಪುಷ್ಪವೆಲ್ಲಿದೆ, ಸಿಂಧುವಾರದ ಪಾಲಿ ಎಲ್ಲಿದೆ, ಸಂಪಿಗೆ ಎಲ್ಲಿದೆಯೆಂಬುವನ್ನರಿಯಬಹುದಾಗಿತ್ತು (ಶಾಕಂ. ೩೬) ; ರಂಗಾದಲ್ಲೀ ಪಾಲಿ ತಿರುಗೋನೇ ಸೀಬೆಯ ರಂಗಾ ಸುಮ್ಮೇಲೇ ದಯವಾಗೋ (ಜುಟ್ಟಿಹ. ೩೬). ೨. ಗುಂಪು ; ಸಮೂಹ. ೩. ಭಿತ್ತಿ ; ಗೋಡೆ : "(ಎರಡು ಭಾಗಗಳನ್ನು ಪ್ರತ್ಯೇಕಿಸುವ) ತಡಿಕೆ, ಪಾಲಿ; ಅಂತರಪಟ" (Dissepiment. ತಂಕೋ). ೪. ಸೇತುವೆ; ಸಂಕ: "ಅಳಿ ಪಾಲಿ[ ಪಾಠಾಂ. ೪ ]ಯೆನಲೇರಿಯಾಕ್ಕುಂ" (ಶುಂಗಕಾ. ೧೨೩-೧೪). ೫. ಸಂತ್ರಲೂ ಬಿಗಿಯಂವುದಂ,—ಕಟ್ಟುವುದಂ. ೬. ಆಸ್ಪದ ; ಅವಕಾಶ. ೭. ಜಾಗ ; ಪ್ರದೇಶ. ೮. ದಿಕ್ಕು. ೯. ಪಾಲು ; ಭಾಗ. ೧೦. ಕತ್ತಿಯ ಹಿಡಿಕೆ : "ಪಾಲಿ[ ಪಾಠಾಂ. ೪ ] ಪರುಜು ಮನಲು ಗೋಹಳಮಾಕ್ಕು" (ಶುಂಗಕಾ. ೮೮-೩೬). ೧೧. ಆದಿ : ಪೂರ್ವ. ೧೨. ಕಿವಿ. ೧೩. ಹಾಲೆ. ೧೪. ನಿತಂಬ. ೧೫. ದೇಹ : ಶರೀರ. ೧೬. ಗುರುತು ; ಚಿಹ್ನೆ. ೧೭. ಬಾವುಟ. ೧೮. ದಾರ. ೧೯. ಬಿಲ್ಲು. ೨೦. ಬಾಣ ; ಸರಳು. ೨೧. ಬೆಂಕಿ. ೨೨. ವೇದವನ್ನು ಹೇಳುವ ಒಂದು ರೀತಿ ; ಸಂಹಿತಾಪಾಠ. ೨೩. ನಾಚಿಕೆ ; ಲಜ್ಜೆ. ೨೪. ತೇವ ; ಪಸಿ. ೨೫. ಹೇನು. "ಕ್ಷೇತ್ರದೊಳಾದಿಯೊಳ್ ಶರದೊಳಾದ್ರ್ರವದೊಳ್ ಪ್ರಕೃತಿಭೇದ ಭಿತ್ತಿಯೊಳ್ ಶ್ರೋತ್ರದೊಳಗ್ನಿಯೊಳ್ ಪರಜಿನೊಳ್ ಪರಮೋಕ್ಷನೊಳುಂ ಪ್ರಬಂಧದೊಳ್ ಗಾತ್ರದೊಳಾಸೆಯೊಳ್ ಧ್ವಜದೊಳಾಸ್ಪದದೊಳ್ ಲತೆಯೊಳ್ ವಿಭಾಗದೊಳ್ ಸೂತ್ರದೊಳ್ಕೆದ ಲಜ್ಜೆಯೊಳ್ ಪಂಚಮದೊಳ್ ಸಲೆ ಪಾಲಿ [ ಪಾಠಾಂ. ೪ ] ವಾಚಕಂ" (ಶಾಪಾಠ.೩೨). **ಪಾಳಿ₂** : ೧. ಸಾಲಿ ನಿಂಬೆಗೆ ಕರುಣಾಳು ದೇವರ ದೇವ ಪಾಳಿಯಿಂ ಪೊಮ್ಮುಗೆಗಱಿದನೆಳುದಿವಸ (ಶೃರಸೂ. ೭, ೧೪೬). ೨. ಚಿತ್ರಾಂಬುದಪಾಳೀಪಾಳದೊಳ್ಪೊಯ್ದುಳವೆಱೆಯಗೆಂಡುಬ್ಬು (ಅನಂಪು. ೨-೩೪) : ಗರುಡರ ಗಣಂ ಕಿನ್ನರರ ಕುಲಂ ವಿದ್ಯಾಧರರ ಪಾಳಿ ಸಿದ್ಧರ ಸಮೂಹ . . . ದಿಕ್ಪಾಲಕರು ಮುಖ್ಯರಾದ ಪರಿಪರಿಯ ನಿರ್ಜರರಿರ್ದರೀಕ್ಷನೊಡ್ಡೋಲಗದೊಳು (ಸಿದ್ಧೇಶ್ವ. ೧-೩೯) : ಚೂಳಿಯೊಳ್ ಮೈದೋಱಿದಂ ಮಂದಮಾರುತಂ ಪಾಳಿಯಿಂ ನಡೆಸಿದಂ ಸೇನೆಯುಂ ಸೇನಾನಿ (ಶಬ್ದ. ೩೫-೦೨). ೪. "ಅಳೀ, ಪಾಳೀ—ಈ ೨ ಏರಿ" (ಕರಾಯು. ೧೦೧-೫೪); ಕಳಮಕಾನನದ ಮುಂದೆ ಮಂದೈಸಿದ ಜಾದಿಯ ಮೆಳೆಗಳ ಬಳಸಿನಿಂ ಪೊಳೆವ ಪಾಳಿಯಿಂ ಮೆಟ್ಟಿ ನಿಂದು (ರೀರಾಶ. ೫-೩೮ ವ). ೭. ಪಾಂಡುಕುಮಾರರಟವಿಯ ಪಾಳಿಯಲಿ ಪರುಠವಿಸಿದರು ಪದಮುಗಮೃಗವಾಪ (ಕುಮಾ. ೪-೧): ನದಿಯಿಂ ನಂದನದಿಂ ಲತಾಪ್ರತತಿಯಿಂ ಪುಷ್ಪಾಳಿಯಿಂ ಪಾಳಿಯಿಂ . . . ತದಿಳಾಮಂಡಳಮೊಪ್ಪುಗುಂ (ರಾಜಶೇ. ೨-೨೮). ೧೨. ಪಾಳಿವರ್ಜಿತ ಪತಿವಿಭೂಷ ಸದ್ಯಕ್ತದುರಿತಾಳಿಪರ್ವನ್ಯಸಂರಕ್ಷಾವಾತ ಗಿರಿಜಾಲೋಲ ಪಾಲಿಸುಗೆ ರಾಮೇಶ್ವರಾ (ಪಪಮೋ. ೫-೧). ೧೭. ಪುಕರಪಾಳಿಪಪು ದುರ್ಗದಹ . . . ಭಾಸುರಚರಿತ್ರಾ (ಪಪಮೋ. ೨೫-೧೩). ೧೯. ವಿಧಿ ಮಾಯಾಪಾಶಯುತಪಾಳಿವಿಭೇದಕಲವಿತ್ರ ಭವಸಾಗರಬಹಿತ್ರ (ಪಪಮೋ. ೨೫-೦೩). ೨೨. ಋಗ್ಯಜುಸ್ಸಾಮಾಥರ್ವಣವೇದಂಗಳು ಸ್ವರವರ್ಣಭೇದದಿಂದಂ ಮಂತ್ರಸಹಿತ್ರ ಪಾಳಿಪದಕ್ರಮಜಟೆಭೇದದಿಂದಂ ಶತಸೂತ್ರಂ ಮೊದಲಾಗೆಲ್ಲಮಂ ಯಥಾಕ್ರಮದಿಂದುಚ್ಚರಿಸಿ (ಪಮ್ಮರಾ. ೨೩-೨೫) ; ಲೋಲಹು ಮತ್ಸ್ಯಾವತಾರದಿ ತಮನನಱಿಯಟ್ಟಿ ಬೀಳಲಪ್ಪಳಿಸಿದನು ವಾಲದಿ ಘೋಳಿನುತ ತಮ ಬಳಿ ವೇದದ ಪಾಳಿಗಳು ಕ್ರಮದಿಂದ ಹರಿಯನು ಹೊಗಳುತಿದಿರಾಗಿ (ಸಂಕಶ. ೪-೨೯); ಉದಾತ್ತ ಅನುದಾತ್ತ ಸ್ವರಿತ ಪ್ರಚಯ ಪಾಳಿ ಪದ ಕ್ರಮ ಜಟೆ ಚರ್ಚೆಯೆಂಬ ಋಗ್ಯಜುಸ್ಸಾಮಾಭಿಧಾನಮುಳ್ಳ ವೇದಶಾಸ್ತ್ರಂಗಳಂ ಪಟಿಸುವೆವು (ರಶಾಪ. ೨-೦೩ ವ). ೨೩. ಪಾಜಿತ್ತು ಪಾಳಿ ಮೈದೋಱಿತು ಮದನಾಗ್ನಿ ಜಾಱಿತು ಜಾಣ್ಮೆ (ಶುಕಾಸಾಂ. ೨೨-೯); ಜಾಱಿತು ಜಾಣ್ಮೆ ಬಿಂಕ ಪಾಱಿಗೊಂಕಿತು ಬಿಸ್ಸನೆಯಾಯ್ತು ಬಿಸ್ಸಣಂ ಪಾಜಿತ್ತು ಪಾಳಿ (ಶಕಿಬ. ೬-೨೨೯). "ಕ್ಷೇತ್ರಶರಪೂರ್ವದಿಶಪರಗಾತ್ರಾನಲ ಶ್ರುತಿ ವಿಭಾಗ ಧ್ವಜ ಲತೆ ಕಿವಿ ಜಹುಸೂತ್ರಪ್ರಮುಖಬಂಧಚಿಹ್ನ ಚಿತಪ್ರಸ್ಪದ ಭೀತಿ ಮಾನವಿಂಶತಿ ಪಾಳೀ" (ನಾನಾಕಂ. ೬೨). ೨೬. ತುದಿ ; ಅಂಚು : ಮೇಲೆ ನಿಂತರು ಮಡದೆಡೆಗೆ ನಾಲ್ವರಳನುಕೂಲ ಗೇಣಾಗಲಂ ಗಾಟದ ಪಾಳಿಗೆ ಋಜುಕೂಲಪಾಳಪಡಲಂಗದೊಳಾಲಿಗಳರೆಮಂಗುಳ್ಳರಲು (ಪರ್ವತ. ೦೧-೬೯). ೨೭. ಸರದಿ ; ಬಾರಿ. ಇಂದುಮತಿಗೆ ಪವನೆಯ ವಾರ್ಡಿನಲ್ಲಿ ಸಹಾಯ ಮಾಡುವ ಪಾಳಿ ಬಂದಿತ್ತು (ಅಕನಾ. ೧೬೦); ಅಂಬೆಯ ಭಕ್ತರು ಪಾಳಿಯಿಂದ ಆ ಪೆಚ್ಚವನ್ನು ಒದಗಿಸುತ್ತಿದ್ದರು (ಶರತ. ೨೬೬) ; ನಾಲ್ಕುಜನ ಸಿಪಾಯಿಗಳು ದಿವಸಾಗಲೂ ಪಾಳಿಯ ಪ್ರಕಾರ ಮನೆ ಕಾಯುತ್ತಿದ್ದರು (ಹಳ್ಳಿಹಾ. ೦೬). ೨೮. ಬೀಸುವ ಕಲ್ಲಿನ ಒಂದೊಂದು ಭಾಗ,—ಹೋಳು : ಈ ಬೀಸುವ ಕಲ್ಲು ಮಾತ್ರ ಪ್ರಕೃತಿ ಪುರುಷರಂತೆ ಅಚಲವಾದುದನ್ನು ನೋಡಿ ಬಾಬೂನಿಗೆ ಅಚ್ಚರಿಯಾಯಿತು. ಆ ಕಲ್ಲು, ಆ ಗೂಟ, ಆ ಮೊರ, ಆ ಬೀಸುವ ಪಾಳಿಗಳು, ಪಾಳಿಗಳೊಳಗಿಂದ ಹೊರಟ

ತುಳ್ಳನಾವಯಾಂಕಿತವಾದ ಆ ಹಿಟ್ಟು ಎಲ್ಲವೂ ಬಾಬೂನಿಗೆ ಆಕ್ಕೀಯ ವಾಗಿದ್ದವು (ಕಿಶ್ಕರ. ೦೯೩).

**ಪಾಳಿ ಹಚ್ಚು** = ಸಾಲಾಗಿ ನಿಂತು ಸರದಿಗಾಗಿ ಕಾಯುತ್ತಿರು : ಒಂದು ಬಚ್ಚಲಾ, ಐವತ್ತುಮಂದಿ ಪಾಳೀ ಹಚ್ಚ್ಯಾರ ಮ್ಯೆ ತೊಳಕೋಳಿಕ್ಕೆ (ವ್ಯ.ಶ. ೦೯) ; ನಾವು ಸಲೂನಿನಲ್ಲಿ ಪಾಳಿ ಹಚ್ಚಿ ಕುಳಿತುಕೊಳ್ಳುತ್ತೇವೆ (ದೀಪಕ್ಕ. ೬೦). [ ಸಂ. ]

**ಪಾಲ್ಕಿ, ಪಾಳಿ** (ನಾ). (ಬುದ್ಧನ ಉಪದೇಶಗಳ ಮೂಲಭಾಗವನ್ನು ಹೊಂದಿರುವ) ಪ್ರಾಕೃತಭಾಷೆಗಳಲ್ಲಿ ಒಂದು ; ☞ ಈ ಭಾಷೆಯ ಹೆಸರನ್ನು ತ್ರಿಪಿಟಕಗಳ ಟೀಕೆಗಳಲ್ಲಿ ಮಾತ್ರ ಬಳಸಲಾಗಿದೆ : ಪಾಲಿ ಸಾಹಿತ್ಯದ ಸಾಲಿನಲ್ಲಿ ಪ್ರಾಚೀನತೆಯ ಅಗ್ರಸ್ಥಾನವು 'ಬುದ್ಧವಚನ'ಕ್ಕೇ ವಿಹಿಸಲಾಗಿರುವುದು (ಬುಕೃಕ. ೩ ಕ್ರಕಆ). **ಪಾಲ್ಕಿ** : ಈ ಬಹುವಚನ ಪ್ರತ್ಯಯ ಪ್ರಾಕೃತ—ಪಾಳಿಭಾಷೆಗಳಲ್ಲಿ . . . ಸೇರಿ ಹೋಗಿದೆ (ಶ್ರಾ.೬೬. ೯೩೨).

**ಪಾಲಿಂಧಿ** (ನಾ). ಒಂದು ಬಗೆಯ ಸಸ್ಯ ; ಕರಿಯ ತಿಗಡೆ. [ ಸಂ. ಪಾಲಿಂಧೀ ]

**ಪಾಲಿಕೆ₁** 'ಪಲ್ಲಂಗ' ನೋ.

**ಪಾಲಿಕೆ₂** (ನಾ). ೧. ಕಾಪಾಡುವವಳು ; ಕಾಯುವವಳು : ಪೊಣ್ಮುವಾ ವುಳಿಂಗಳೆ ಸಸಿಗಳಾಗೆ ರತಿಸುಖವೆಂಬ ಫಲಮಂ ವಿಲಾಸಿಯುವಜನಕಿತ್ತು ಮನ್ಮಥನ ಕಳವುವನವೋಯೆನಲ್ ಕಳವುವನದೊಳ್ ಕಳವುವನಪಾಲಿಕೆಯ ರೊಪ್ಪುಗುಂ (ಚಕ್ರ. ೬-೧೬). ೨. ಮದುವೆಯಲ್ಲಿ ಬ್ರಹ್ಮ, ಇಂದ್ರ, ಯಮ, ವರುಣ ಮತ್ತು ಸೋಮದೇವತೆಗಳಿಗೆ ಅರ್ಪಿಸಲು, ದ್ವಿದಳ ಧಾನ್ಯಗಳನ್ನು ತುಂಬಿಡುವ ಐದು ವರ್ಣದ ಪಾತ್ರೆಗಳು : (ಕ). ೩. ಮಣ್ಣಿನ ಪಾತ್ರೆ ; ಪ್ರತ್ಯೇಕಂ—ಬೇರೆಬೇರೆ. ಪಾಲಿಕಾದಿನಾಂ- ಬಯಸಿಕೆ. ಶ್ರಾವೆ. ಮೊದಲಾದವರ ಸಂಪ್ಕೆ. ದಶ-ಹತ್ತು (ಕ್ರ.ಶಿಕ್ಷಾ. ೯-೦೬). [ ಸಂ. ಪಾಲಿಕಾ ]

**ಪಾಲಿಡಿ** (ಕ್ರಿ). ಹಾಲು ತುಂಬು : ಪೂಗೊಯ್ದು ಸರಸಿಜಾನನೆ ಪೋಗಲ್ ನೆರೆ ಮುಗಿದುದಿಲ್ಲ ಬಂಧನಕೋಶಂ ಕೈಗಳಸುಡಿದೀ ತಳಿರ್ಗಳ ಪೂಗಂ ಪಾಲಿಡಿದು ನಾಡೆ ಕಾಣೆವುದಿನ್ನುಂ (ಕಾಕ್ಯಂಕ. ೩೩-೩೬). [ಪಾಲ್₁+ಇಡಿ₂]

**ಪಾಲಿತ** (ಗು). ರಕ್ಷಿಸಲ್ಪಟ್ಟ ; ಕಾಪಾಡಲ್ಪಟ್ಟ : ಲೋಲಕಾರುಣ್ಯಾತ್ತ ಭಲರೇ ಪಾಲಿತಾರ್ಥಿನಿಕಾಯ ಭಲರೇ (ಜಕ್ಕ. ೩೦-೨೫) ; ಅಭಿಮನ್ಯುವನ್ನು . . . ದ್ರೋಣಾಚಾರ್ಯನಿಂದ ಪಾಲಿತವಾದ ವಾಹಿನಿಯನ್ನು ಪ್ರವೇಶ ಮಾಡೆಂದು ಹೇಳಿ, ಕೊಲ್ಲಿಸಿದನು (ಅಕ್ಕಕ. ೨೨೮). [ಸಂ.]

**ಪಾಲಿತಪುತ್ರಿ** (ನಾ). ಸಾಕುಮಗಳು : ನನ್ನ ಪಾಲಿತಪುತ್ರಿಯಾದ ನಿನ್ನ ಹಿತರಕ್ಷಣೆ ನನಗೆ ಸೇರಿದೆ (ರಾಕ್ಕೋವ. ೦೯೯). [ಪಾಲಿತ + ಪುತ್ರಿ₂]

**ಪಾಲಿಶ್** 'ಪಾಲಿಷ್' ನೋ.

**ಪಾಲಿಷ್, ಪಾಲಿಶ್** (ನಾ). ೧. ಉಜ್ಜುವುದರಿಂದ ಉಂಟಾಗುವ ಮೆರುಗು,-ಹೊಳಪು : ಮನುಷ್ಯರಲ್ಲದೆ ಪಕ್ಕಿಗಳಿಗೂ ಈ ಪಾಲಿಷ್ ಮಾಡಿದ ಅಕ್ಕಿಯನ್ನು ಕೊಟ್ಟರೆ ಬೆರಿಬೆರಿಯು ಎಂಬ ರೋಗ ಬರುತ್ತದೆ (ಗೃಹಣ. ೩೩) : ಅಕ್ಕಿಯನ್ನು ವಿಶೇಷವಾಗಿ ಪಾಲಿಷ್ ಮಾಡಿದರೆ ಅದರಲ್ಲಿರುವ ತವುಡು ಮತ್ತು ಭ್ರೂಣ ಹೊರಟುಹೋಗಿ . . . ಜೀವಾತ್ತುಗಳ ಅಂಶಗಳು ನಷ್ಟವಾಗುವುವು (ಅತಾಶಾ. ೬೪). ೨. ಮೇಲ್ಮೈಗೆ ಹೊಳಪು ಕೊಡಲು ಉಪಯೋಗಿಸುವ ಒಂದು ಬಗೆಯ ಮೆರುಗು ಪದಾರ್ಥ ಮತ್ತು ಅದರಿಂದಾದ ಹೊಳಪು : ಜವಾನನು ಬೂಟ್ಸುಗಳಿಗೆ ಪಾಲಿಷ್ ಕೊಟ್ಟು ಮೆರುಗು ಬರುವಂತೆ ಮಾಡಿಟ್ಟಿದ್ದನು (ಅಂಗಳ. ೨೨). **ಪಾಲಿಶ್** : ೨. ಪಾಲಿಶ್ ಮಾಡಿಸೋಣವೇ ? (ತಾಂಗಿ. ೬೪). [ ← ಇಂ. Polish ]

**ಪಾಲಿಸಿ** (ನಾ). ವಿಮೆಯ ಕರಾರುಪತ್ರ : ನನ್ನ ಸ್ನೇಹಿತನು ಬಹು ಒತ್ತಾಯಪಡಿಸಿದುದರಿಂದ . . . ಇನ್ನೊಂದು ಕಂಪನಿಯಲ್ಲಿ ಒಂದು ಪಾಲಿಸಿ ಯನ್ನೂ ತೆಗೆದುಕೊಂಡೆನು (ಪ್ರಾಂಗಿ. ೦೦೦). [ ← ಇಂ. Policy ]

**ಪಾಲಿಸು, ಪಾಳಿಸು₁** (ಕ್ರಿ). ೧. ಕಾಪಾಡು; ಸಲಹು: ವೈರಿಗಳ್ ತಳರ್ದಪರೆಂತು ತನ್ನ ಬಲವಿಲ್ಲದೆ ತಾಳ್ದುವೆನೊಪ್ಪುಗೊಳ್ಳೆ ತನ್ನಳಿಯನನಯ್ದೆ ಪಾಲಿಸುಗೆ ಬಂದಿದನೀಗಳನಾಥಯೂಥಮಂ (ಆದಿಪು. ೯-೬೯) ; ಕರುಣಿಸು ದೈವವೆ ಪಾಲಿಸು ಹರಾದ್ರಿ . . . ವನದೇವಿಯರಿರಾ ನೆರೆದೆಲ್ಲರುಮೆನಗೆ ಪುರುಷಭಿಕ್ಷಮನಿಕ್ಕಿಂ (ಅಜಿತಪು. ೯೨೪) ; ಪ್ರಜೆಯಂ ಪಾಲಿಸಬಲ್ಲೊಡಾತ ನರಸಂ (ಸೂಕ್ತಿಸು. ೯). ೨. ಆಡಳಿತ ನಡೆಸು ; ಆಳು : ತನ್ನ ವಿಕ್ರಮಮ ತನ್ನ ನೆಗಟ್ತೆಯ ತನ್ನ ಮಹಾ ತಾನೆಸೆವ ಜಗತ್ರಯಕ್ಕೆನಿಸಿ ಪಾಲಿಸಿದಂ ನೆಲನಂ ಗುಣಾರ್ಣವಂ (ಪಂಪಭಾ. ೦೯-೩೯) ; ಸಜ್ಜನನಹನಾಗಿ ಪಾಲಿಸು ಮಹಾವನಿಯಂ ರವಿಚಂದ್ರರುಳ್ಳಿನಂ (ರಹೂಗಾಕ್ಕು. ೦೩-೦೬೯) : ಚಲದಂಕಕಂಠೀರವನರಸೇಂದ್ರ ಭೂತಳವ ಪಾಲಿಸುತಿರ್ದಿಯಲಿ (ಕಂಕಕ. ೬-೨). ೩. ನೆರವೇರಿಸು ; ನಡೆಸು ; ಈಡೇರಿಸು : ದುಷ್ಕರಂ ತಿನ್ನದ ಸಿಂಹಂ ತನ್ನನೆ ನಂಬಿ ಬಂದಿರ್ದನ್ನನೆಂತುಂ ತಿಂಬುದಿಲ್ಲಮಾದೊಡಮಾನುಂ ನುಡಿದು ಮಾತಂ ಪಾಲಿಸುವೆನೆಂದು ಸಿಂಹದ ಸಮೀಪಕ್ಕೆ ಬಂದು . . . ಎನ್ನ ಶರೀರಮಂ ಕೈಕೊಳ್ಳಿಮೆನೆ (ಪಂಚತಂ. ೦೯೩-೦೫) ; ಆಲಿಸೆನ್ನ ಬಿನ್ನಪವ ಲಾಲಿಸೆನ್ನ ಬಿನ್ನಪವ ಪಾಲಿಸೆನ್ನ ಬಿನ್ನಪವ (ಭುಹಾರೀ. ಬ. ೩೯-೬೦) ; ಪಾಲಿಸುವೆನೇತು ನಿಷ್ಠೆಯಂ ಭಾವರಾಗದ ಜೀವಿ ಸಹಜ ಸಂಚಲ ವರಂ ತಾಂ ? (ಚಿತ್ರಾಂಗ. ೩೯-೦೦೬೦). ೪. ದಯಪಾಲಿಸು ; ಕೊಡು ; ನೀಡು : ಹಾಮಿರ್ವರುಂ ಪಟ್ಟಿಕೊಂಡು ಪೊಲ್ಲಗೆಂದು ಲಾಭದ ಪೋರ್ಚಂ ಬಸದಿಗೆ ಬಂದು ವರಧರ್ಮಭಟ್ಟಾರಕರಂ ಕಂಡು . . . ಇನ್ನೊಂದು ವ್ರತಮಂ ಪಾಲಿಸಿಮೆಂಬುದುಂ (ವಡ್ಡಾರಾಧನೆ. ೨-೦೯೯) ; ಸ್ವಾಮಿ ನಮಗೆ ಅಮರನಾಯಕ ತನಕ್ಕೆ ಪಾಲಿಸಿದ ಕೊಟ್ಟೂರ ಚಾವಡಿಗೆ(ಗೆ) ಸಲುವ . . . ಗ್ರಾಮವನು . . . ಶ್ರೀಹರಿಹರದೇವರ ಅವಸರಸತ್ರಕ್ಕೆ ಸಮರ್ಪಿಸಿದ್ದು (ಇ. I . ೩೨೯.೩ ; 1530) ; ಪೂತನಿ ವಿಷದ ಮೊಲೆಯನಿತ್ತ ಹಂಗಿಗೆ ಮಾತಾಸ್ಪದವ ಪಾಲಿಸಿದ (ಪುರಂದ. ೩೯-೦). ೫. ಅನುಸರಿಸು ; ಆಚರಿಸು : ತಾನಿತರ ಕನ್ಯಕೆಯಂತೆ ನಾಚ್ಗೆಟ್ಟು ಸ್ವೈರಣೆಯಂ ಬಟ್ಟು . . . ನಿಜಾಚಾರವಂ ಮಡಿದು ಶೀಲವಂ ತೊಡೆದು ಕುಲಕ್ರಮವಂ ಪಾಲಿಸದೆ ರಾಗಾಂಧೆಯೆನಾಗಿ (ಕಾದಂಬ. ೬೬೯) ; ಜಸವಂ ಧರ್ಮಮುಮಂ ಪಾಲಿಸುವೊಡಂ . . . ಅರ್ದು ಪರೀಕ್ಷಿಸುವುದು ಮನುಜಂ ಸಮಸ್ತಕಾರ್ಯಸ್ಥಿತಿಯಂ (ಪಂಚತಂ. ೦೯೯-೦೩) ; ನೀತಿಯ ಪಾಲಿಸದೆ ಕೊಲೆಗಡುಕತನದೊಳು ಮೇಲುಗಾಣದೆ ಬಂಧುಗಳ ಗುರುಗಳ ಸಹೋದರರ ಕೋಲ ಮೊನೆಯಲಿ ಕೊಂದು (ಕುಮಾರ. ೩-೯೨) ; ಪಿತೃವಾಕ್ಯವು ನ್ಯಾಯವಾಗಿದ್ದ ಪಕ್ಷದಲ್ಲಿ ಅದನ್ನು ಪಾಲಿಸುವುದು ಪುತ್ರನ ಕರ್ತವ್ಯ (ಕ್ರ.ಶಾಕ. ೯೨). ೬. ಮನ್ನಿಸು ; ಕ್ಷಮಿಸು: ಓಬಳನಾಯಕನು . . . ನನ್ನ ತಪ್ಪನ್ನು ಪಾಲಿಸಬೇಕೆಂದು ಅವರ ಪಾದಕ್ಕೆ ಬಿದ್ದನು (ಚಿತ್ರಶಾ. ೧೬). **ಪಾಳಿಸು₁** : ೧. ಬೇಳಲೆ ಬಗೆವೊಡೆ ಹರಿಯೊಡ ನಾಳೊಚಿಪಮೆಂದು ಬಟಿಯನಟ್ಟಿದನೆಮ್ಮಂ ಪಾಳಿಸುವೈ[ನಿಂ]ನಿನ್ನೊಡ ನಾಳೊಚಿಸದಮಗೆ ನೆಗಬಲೇಂ ನೆಜಿವುದೇ (ಪಂಪಭಾ. ೬-೨೨) ; ಮೂಳರಂ [ ಮಂ ] ಪಾಳಿಸಿಯುಂ ಕೋಶಮಂ ಪೋಷಿಸಿಯುಂ ಇಂತು ಸಾಮ್ರಾಜ್ಯಮಂ . . . ನಿಜಾಯತ್ತಮುಮೆನಿಸಿದಂ (ಚಂದ್ರಪ್ರ. ೨-೬೦) ; ಮನೋಕ್ಷತಂ ಬಿಡದೆ ಪಾಳಿಸಿ ಮೋಳಿಸಿ ಪುತ್ರರೋಹದಿಂ ನಡೆಪಿದ ಕೂರ್ಮೆಯಂ ಬಗೆವುದಿಲ್ಲಿ (ಪುಷ್ಪದ. ೦೩-೯೯). ೨. ಧರೆಯಂ . . . ಸುರಪತಿವಿಭವಂ ಪಾಳಿಸುತ್ತಿರ್ದ್ದಂ (ಮಾಂಪೀಬ್. ೩-೯ ; 1047) ; ಭೂಪಾಳರ್ ಪಾಳಿಪರಿಳೆಯಂ (ಅಬ್ಬಿಕು. ೬-೬೩). ೫. ರಾಮನರೇಂದ್ರನುಂ ನೆಗಟ್ದ ಪಾಂಡುನರೇಂದ್ರನ ಪುತ್ರರಯ್ವರುಂ ಪ್ರೇಮದಿನಾರ್ತಬ್ರತಮನೊಪ್ಪಿರೆ ಪಾಳಿಸಿ ಮುಕ್ತಿಕಾಮಿನೀಕಾಮರೆನಲ

ಸಂದರ್ (ಸಮತ. ೨-೩೬) ; ಜಿನಧರ್ಮವಂ ಬಿಸುಟರ್ತಿಯಿಂ ಪಾಳಿ ಪಾತನುಮಿಂದ್ರಿಯಂಗಳ ಭೋಗವಂ ಮರುಳಲ್ಲನೇ (ರಠರ್ಮತ್ಮ. ೩-೦೬೩).
೫. ಪಾಳಿಯಂ ಪಾ[ಪಾಠಾಂ. ಬಾ]ಳಿಸುವಂ ಬನ್ನಿಂ (ಶಂಕರಂ. ೦೧೯-೦೮).
೭. ನಡೆದಂಕೊಳ್ಳು ; ಸಲ್ಲು : ಹರಿಸುತಂಗೆ ಗಿರಿದುರ್ಗಮಾಗಿ ಪಾಳಿಸದ ಕೃತ್ರಶೈಲವಿಲ್ಲ (ಕೃಷ್ಣ. ೯-೨೨).

ಪಾಲಿಸಿ ಕೊಡು = ದಯಪಾಲಿಸು ; ಕರುಣಿಸು : ಆ ಗ್ರಾಮವನು ಹುಗಿನು ಹೊಯಿಸಿ ಪಾಲಿಸಿ ಕೊಟ್ಟರು (ಎಕ. VII. ಶಿಕಶಿಪು. ೦೦೮-೩೬; 1568 ?). [ಪಾಲನ+ ಇಸು]

**ಪಾಲ್ಕು₁** 'ಪಾಲ್₁' ನೋ.

**ಪಾಲ್ಕು₂** 'ಪಾಲ್₂' ನೋ.

**ಪಾಲುಂಡೆ,** ಹಾಲುಂಡೆ (ನಾ). ಹಾಲಿನಿಂದ ತಯಾರಿಸಿದ ಒಂದು ಬಗೆಯ ಸಿಹಿಭಕ್ಷ್ಯ : "ಪೀಯೂಷಪಿಷ್ಟಮೆನೆ ಪಾ[ಪಾಠಾಂ. ಹಾ] ಲುಂಡೆಯೆನಿಸಿಕ್ಕು" (ಸುಂಗಶಾ. ೬೯-೨) ; ಅಮರ್ದಿನುಂಡಿಗೆಗಳೆನಿಸುವ ಪಾಲುಂಡೆಗಳುಮಂ . . . ಅರಸುಂಗು ಪಂಕ್ತಿಯೊಳುಣ್ಬ ಪರಿಜನಕ್ಕೆಲ್ಲಂ ಬಡ್ಡಿಸಿದಾರ್ (ಸುಕುಮಾ. ೦೦-೨೯೫). **ಹಾಲುಂಡೆ :** ಹೂರಿಗೆಯ ಲಡ್ಡುಗೆಯ ಬೆಟ್ಟಂಗಳಲ್ಲಲ್ಲಿ ಹಾಲುಂಡೆ ಘೃತಪೂರದಾಲಯವದಲ್ಲಿ (ಜಕ. ೬-೦೦) ; ತುಪ್ಪದ ತೋರ ಹಾಲುಂಡೆಗಳ ಯೆಳ್ಳುಂಡಿಗೆಯ ಕೆನೆಮೊಸರ ಚಾರುಶಾಕಾವಳಿಯುಲಾ ವಿಸ್ತಾರ ಭಕ್ಷ್ಯಾವಳಿಯ ಪಾಕದೊಳೋರೆ ಹುಸಿಯುಂಟೆಂಬ ಯಂತ್ರವ ಕಳಚ ಬಲುಹುಂಟು (ಸಂಘಶ. ೩೦-೫) ; ಸಣ್ಣಸೇವಗೆ ಹಾಲುಂಡೆ . . . ಪೂರಣಗಡುಬು ಭೂವಗೆ ಮುದ್ದು ವೆಣ್ಣುಗಳೆಡೆ ಮಾಡಿದರು (ಕಂಪಶ. ೬-೬೬). [ಪಾಲ್₁+ಉಂಡೆ]

**ಪಾಲುಗ** (ನಾ). ಹಾಲು ಮಾರುವವನು ; ಹಾಲಿನ ವ್ಯಾಪಾರಿ : ಪೊನ್ನುಗಂ, ನಾರುಗಂ, ಪಾಲುಗಂ, ಪರಲುಗಂ (ಶಬ್ದಾ.ಮ. ೪೨೯ ಶ್ರ.ಯೋ.). [ಪಾಲ್₁+ –ಉಗ]

**ಪಾಲುಗದಲು** 'ಪಾಲ್ಗದಲ್' ನೋ.

**ಪಾಲುಗಾರ** 'ಪಾಲ್ಗಾಱ' ನೋ.

**ಪಾಲುಗಾರತಿ** 'ಪಾಲುಗಾರ್ತಿ' ನೋ.

**ಪಾಲುಗಾರಿಕೆ** (ನಾ). (ವಾಣಿಜ್ಯ ಮೊದಲಾದ ವ್ಯಾಪಾರದಲ್ಲಿ) ಪಾಲು ಪಡೆದಿರುವುದು; ಭಾಗವನ್ನು ಹೊಂದಿರುವುದು: ಅದು . . . ಎಲ್ಲ ಕಲೆಗಳಲ್ಲಿಯೂ ಪಾಲುಗಾರಿಕೆ ; ಎಲ್ಲ ಸೌಜನ್ಯದಲ್ಲಿಯೂ ಎಲ್ಲ ಸಂಪನ್ನತೆಯಲ್ಲಿಯೂ ಪಾಲುಗಾರಿಕೆ (ರಾಷ್ಟ್ರಸ. ೨೦) ; ಇವರ ಆಚಾರ್ಯಪದವಿಯು ಹೆದರಿ ಕೊಟ್ಟಿದ್ದಲ್ಲ . . . ಕೋಪಮಾರು ಪ್ರಾಂತವಾರು ಪಾಲುಗಾರಿಕೆಯಲ್ಲಿ ಬಂದದ್ದಲ್ಲ (ಪಾಶಮು. ೯೯). [ಪಾಲುಗಾರ (<ಪಾಲ್ಗಾಱ)+ –ಇಕೆ]

**ಪಾಲುಗಾರ್ತಿ,** ಪಾಲುಗಾರತಿ (ನಾ). ಭಾಗವನ್ನು ಪಡೆಯುವ ಹಕ್ಕುಳ್ಳವಳು ; ಹಿಸ್ಸೆದಾರಳು : ಎಲ್ಯೆ, ನನ್ನ ದುಃಖದ ಪಾಲುಗಾರ್ತಿ, ಸುಮ್ಮನೆ ಅಳುವುದರಲ್ಲಿ ಏನೂ ಅರ್ಥವಿಲ್ಲ (ಮುಂಜಾಯಿ. ೯-೧೩೦); ಬಸವಣ್ಣನ ಕಷ್ಟ–ಸುಖಗಳಲ್ಲಿ ನಾಗಲಾಂಬಿಕೆ ಪಾಲುಗಾರ್ತಿಯಾಗಿದ್ದಾಳೆ (ಶಬಸ. ೦೨೮).
**ಹಾಲುಗಾರತಿ :** ಅವರೆಲ್ಲರಿಗೂ ಬರುವ ಕಷ್ಟ ಸುಖಗಳಲ್ಲಿ ತಾನೂ ಪಾಲುಗಾರತಿಯಾಗಿದ್ದಾಳೆ (ಜನಸ. ೦೯) ; ತನು ಮನ ಧನದಲ್ಲಿ ಪಾಲುಗಾರತಿಯಲ್ಲ (ಸವೀಗಾ. ೬-೯೫).
[ಪಾಲುಗಾರ (<ಪಾಲ್ಗಾಱ)+ –ತಿ₁ (< –ಇತ್ತಿ)]

**ಪಾಲುಗುಣ,** ಫಾಲ್ಗುಣ (ನಾ). ಚಾಂದ್ರಮಾನ ವರ್ಷದ ಹನ್ನೆರಡನೆಯ ತಿಂಗಳು : ಬದಿರೂರ ಬಟ್ಟಗಣ್ಣಾನ ಮಗ ಚಿಕ್ಕಬಮ್ಮಗಣ್ಣಾ ಪಾಲುಗುಣ ಮಂಗಳವಾರದಂದು ಸುರಲೋಕಪ್ರಾಪ್ತನಾದ (ಮೈಶಿಶಂ. ೦೯೩೨. ೩೩-೫; 1190) ; ಫಾರಕ್ಕೆ ಪಕಾರಂ . . . ಫಾಲ್ಗುಣ—ಪಾಲುಗುಣ (ಶಮದ. ೨೫೫ ಶ್ರ.ಯೋ.). **ಫಾಲ್ಗುಣ :** ಫಾಲ್ಗುಣದ ಶುಕ್ಲಾಷ್ಟಮಿಯಂದು ಸಂದೀಶ್ವರ ಪೂಜೆಗೆಂದು . . . ಪೋಗಿ (ಕೃಷ್ಣಕೃ. ೬-೫೫೫) : ಅಖಿಳಮಂತ್ರಗಳ ಜಪ . . . ಫಾಲ್ಗುಣದಲ್ಲಿ ಸಕಲಜಯ (ಗಗಶಾ. ೯-೬೬); ಫಾಲ್ಗುಣದ ಸುವಾಸಿತ್ರವಾದ ಬಿಸಿಲುದಿನದಲ್ಲಿ . . . ಅವನು ಬರುತಲಿರುವನು (ರಠರ್ಮಾ. ೯೯). [<ಸಂ. ಫಲ್ಗುನ]

**ಪಾಲುಗೂಡು** (ಕ್ರಿ). ಪಾಲನ್ನು ಹೊಂದು,—ಪಡೆ: ಇಬ್ಬರೂ ಕೂಡಿಯೆ ಹೊಸಧಾಟಿಯ ಆರತಿಹಾಡು ಹಾಡಿದೆವು. ಶೇಷಣ್ಣ ಬಿಂದಣ್ಣ ಒಂದೊಂದು ರೂಪಾಯಿ ಹಾಕಿದರು . . . ನಾನು ಅಕ್ಕ ಹಂಚಿಕೊಂಡೆವು. ಜಯಣ್ಣನೂ ಪಾಲುಗೂಡಲು ಬಂದ. ಅಕ್ಕ ಬೈದು ಕಳಿಸಿದಳು (ಕೃಶಿ. ೦೯೩). [ಪಾಲು₂ (< ಪಾಲ್₂)+ಕೂಡು₁]

**ಪಾಲುಗೊಳ್ಳು** 'ಪಾಲ್ಗೊಳ್' ನೋ.

**ಪಾಲುಣ** (ನಾ). ದೇವರಿಗೆ ಮಾಡುವ ಹಾಲಿನ ನೈವೇದ್ಯ : ಯಿಪ್ಪತ್ತುಯೆಂಟು ಹೊನ್ನನ್ನು ನಿಮ್ಮ ಸ್ಥಾನದ ಬಯಿರವದೇವರ ಪಾಲುಣ ಕೋಸರ ತಿರುನಾಳನು ಹೊಸ್ತಾಗಿ ರಥೋತ್ಸವನೂ ಮಾಡುವ (ಎಕ. X. ಕೋಲಾರ. ೩೯-೦೩ ; 1493). [ಪಾಲ್₁+?]

**ಪಾಲುದಾರ** 'ಪಾಲ್ದಾರ' ನೋ.

**ಪಾಲುಪಂಚಾಯ್ತಿ** (ನಾ). ಹಿಸ್ಸೆಯ ಬಗ್ಗೆ ನಡೆಯುವ ಪಂಚಾಯ್ತಿ : ಊರಿನಲ್ಲಿ ಏನು ಗಲಾಟೆಯಾಗಲಿ, ಪಾಲುಪಂಚಾಯ್ತಿ ನಡೆಯಲಿ, ಅಲ್ಲಿ ಶ್ಯಾಮುಕಕ್ಕ ಇರಬೇಕು (ಹೊಸಕ್ಷಿ. ೨೯೯). [ಪಾಲು₂ (< ಪಾಲ್₂)+ಪಂಚಾಯ್ತಿ (<ಪಂಚಾಯತಿ)]

**ಪಾಲುಪಟ್ಟಿ** (ನಾ). ಆಸ್ತಿ, ಕೆಲಸ ಮುಂತಾದುವುಗಳಲ್ಲಿ ಯಾರ ಪಾಲು ಎಷ್ಟು ಎಂಬುದನ್ನು ನಮೂದಿಸುವ ಕರಾರುಪತ್ರ,—ದಾಖಲೆ ಪತ್ರ : ತಮ್ಮನೊಡನೆ ಪಾಲುಪಟ್ಟಿಯಾದ ಕೆಲವೇ ದಿನಗಳಲ್ಲಿ ನಂಜುಂಡ ಶ್ರೋತ್ರಿಯರ ಆದಾಯ ಬೆಳೆಯಲು ಪ್ರಾರಂಭಿಸಿತು (ವಂಶವೃ. ೯೩೫). [ಪಾಲು₂ (<ಪಾಲ್₂)+ಪಟ್ಟಿ₂]

**ಪಾಲುಪೊಂಗಲು,** ಹಾಲುಪೊಂಗಲು (ನಾ). ಹಾಲಿನಿಂದ ಮಾಡುವ ಒಂದು ಬಗೆಯ ಪೊಂಗಲು : ಪಾಲುಪೊಂಗಲನಿಕ್ಕಿಸದ್ಯ ಬಾಲ ಗೋವ್ಗಳ ಕೂಡಿ ಸಾಗಲು ಲೋಲಕೃಷ್ಣನು ನಿಮಗೆ ಒಲಿವನು (ಗೋಪಾಜ. ೦೦೦). **ಹಾಲುಪೊಂಗಲು :** ತಣ್ಣೀರುಸ್ನಾನ, ದೇವಪೂಜೆ, ಯಜ್ಞ ಕರ್ಮಗಳು ಮುಗಿದ ನಂತರ ಹಾಲುಪೊಂಗಲ ಉಪಾಹಾರ (ಶಾಂತಕಾ. ೬೬). [ಪಾಲು₁ (<ಪಾಲ್₁) + ಪೊಂಗಲು₁ (<ಪೊಂಗಲ್₁)]

**ಪಾಲುಮಾರಿಕೆ** (ನಾ). ಸೋಮಾರಿತನ ; ಆಲಸ್ಯ : ಪಾಲುಮಾರಿಕೆ, ಜನ್ಮಭೂಮಿಯಲ್ಲಿ ಆಶೆ, ರೋಗಿಯಾಗುವಿಕೆ, ಭಯಶೀಲತೆ, ಅಸಂತೋಷ ಈ ಐದೂ ಪೂಜ್ಯತೆಗೆ ವಿಘ್ನಕಾರಣಗಳು (ಮುಂಜಾಯಿ. ೬-೩೩೬) ;ಅದೇನೋ ಕಾಗದ ಬರೆಯಬೇಕೆಂದರೇ ನನಗೆ ಕಿಟ್ಟು ಪಾಲುಮಾರಿಕೆ (ಅಕಶ. ೮); ಕೆಲಸವನ್ನು ಮಾಡುವುದರಲ್ಲಿ ಪ್ರವುಲ್ಲೆಗೆ ಪಾಲುಮಾರಿಕೆಯಿಲ್ಲ (ಬೀಚಾ. ೩೦). [ಪಾಲುಮಾರು +– ಇಕೆ. / ತಮಿ. ಪಾಲ್ಮಾಚಿಕ್ಕೆ ; ತೆಲು. ಪಾಲುಮಾಲಿಕ, ಪಾಲ್ಮಾಲಿಕ]

**ಪಾಲುಮಾರು** (ಕ್ರಿ). ಆಲಸ್ಯಹೊಂದು ; ಸೋಮಾರಿಯಾಗು : ಪಾಲುಮಾರದೆ ಭಕ್ತಿಯಿಂದಲಿ ಮೂಲಮಂತ್ರಧ್ಯಾನದೊಳು ಪಗಲಿರುಳು ನೀನಿರ್ದು (ಮುಹೋಕ. ೦೩) ; ತನ್ನ ಕೆಲಸದಲ್ಲಿ ಎಂದೂ ಪಾಲುಮಾರುತ್ತಿರಲಿಲ್ಲ. ಕೈಲಿನ ಕಾಯಿದೆ ಕಟ್ಟಳೆಯ ಪ್ರಕಾರ . . . ಬಂದನನ್ನೂ ತಪ್ಪದೆ ನೋಡಿಕೊಳ್ಳುವನು (ಶಪ್ರೆ. IX. ೯೦) ; ಬೆಳಗಿನ ಝಾಮದ ಚಳಿಯಲ್ಲಿದ್ದು ಸ್ನಾನಾದಿಗಳನ್ನು ಮಾಡಲು ಪಾಲುಮಾರದ ಸ್ತ್ರೀಯರ ಹೊರತು ವಿಕ್ಕವರೆಲ್ಲರಿಗೂ ಇದು ಬಾಧಕರವಾಗಿಯೇ ಇದ್ದಿತು (ಅಕ್ಷ್ಯತ್ರ. ೯). [ದೇ.೩ ತಮಿ. ಪಾಲ್ಮಾಱು ; ತೆಲು. ಪಾಲುಮಾಲು, ಪಾಲ್ಮಾಱು, ಪ್ರಾಲುಮಾಲು, ಪ್ರಾಲ್ಮಾಲು]

**ಹಾಲುಮುಖಂಡ** (ನಾ). ಹಳ್ಳಿಗಳ ಬಣಗಳ ಮುಖ್ಯಸ್ಥ : ಅವ್ವ ಮಗಳ ಮದುವೆಯ ಸಂದರ್ಭದಲ್ಲಿ ಹಾಲುಮುಖಂಡರಿಂದ ಬಹಿಷ್ಕಾರ ಗಿಹಿಷ್ಕಾರದ ಅವಮಾನದ ಗೊಂದಲಕ್ಕೆ ಅವಕಾಶ ಒದಗದಿರುವುದಕ್ಕಾಗಿಯೂ . . . ಮದ್ದು ತೆಗೆದುಕೊಳ್ಳುತ್ತಿದ್ದಾಳೆ (ಮಲೆಮ. ೬೬೦).
[ಹಾಲು₃ (<ಹಾಲ್೪)+ಮುಖಂಡ]

**ಹಾಲುವಂತಿಗೆ** (ನಾ). ತನ್ನ ಪಾಲಿಗೆ ಸಲ್ಲಬೇಕಾದ ಹಣ ; ಪಾಲುಗಾರಿಕೆಯ ಹಣ : (?). [ಹಾಲು₃ (<ಪಾಲ್₄)+ವಂತಿಗೆ]

**ಹಾಲೆ¹**, ಹಾಲ್₁ (ನಾ). ಒಂದು ಬಗೆಯ ಹಕ್ಕಿ ; ಹಂಗನ ಹಕ್ಕಿ ; ಶಕುನದ ಹಕ್ಕಿ : "ಚಾಷಃ, ಕಿಕೀದಿವಿಃ — ೨ ಹಂಗನ ಹಕ್ಕೀ ಹೆಸರು, ಶಕುನದ ಹಕ್ಕಿ, ಆಂಧ್ರದಲ್ಲಿ ಪಾಲಪಿಟ್ಟ" (ಸಿದ್ಧಾಂತ. ೦೫೪). ಹಾಲ್₁ : (?).
[ದೇ.॥ ತಮಿ. ಪಾಲ್ಲ ; ತೆಲು. ಪಾಲ]

**ಹಾಲೆ²**, ಹಾಲ್₂ (ನಾ). ೧. ಒಂದು ಬಗೆಯ ಮರ ಮತ್ತು ಅದರ ಹಣ್ಣು : "ರಾಜಾದನಂ, ಫಲಾಧ್ಯಕ್ಷಂ, ಕ್ಷೀರಿಕಾ — ಈ ೩ ಪಾಲೆಯ ಮರ" (ಅಭಿಧಾ. ೦೦೩) ; ಜಳದಂ ಪಿಪ್ಪಲಿ ದೇವದಾರು ರುಜೆ ನಿಂಬಂ ಚಿತ್ರಕಂ ಪಾಲೆ . . . ಇಂತಿವಂ ಜಳದೊಳೆ ಮೂಡದಿಗೂಡಿ ಕಾಸಿ . . . ಕುಡಲೊಡಂ ಸರ್ವಜ್ವರಂ ಪಿಂಗುಗುಂ (ಕರ್ನಾಟಕ. ೯–೨೪೫) ; ಅಂಬಟೆ ಹಾಲೆ ಬಿಳ್ಪಾಲೆ (ಬಸ್ವಾಂಗ. ೦೦–೨). ಹಾಲ್₂ : ೧. ಹಾಲೆಯಂಕೋಲೆದಿಂದಂ . . . ಹೆಜ್ಜಾಲ ಹೆದ್ದುಂಬರೌದುಂಬುರಂಗಾಲಯವದೆನಿಸಿ ನಾನಾ ಭೂಜದೊಗ್ಗಿನಿಂ ಕಾನನಂ ಕಣ್ಗೆಸೆದುದು (ಸೋಮಶೇ. ೩–೨) ; ಹಲಸು ಹಾಲೆಯರಳಿ ಬಿಲ್ಲ ಚಿನ್ನೆಗೆ ತೇಗು ತುಂಬುರವರಗಳಿಂ ನಿಲ್ಲದೆ ಮೆಚ್ಚುದುದಾ ವಿಪಿನ (ಅಭಿಷಾಂ. ೨೬–೫೫) ; ಹಾಲೆ ಬದರಿಪ್ಪೆ ಹುಣಸಂಕೋಲೆಲಚಿಯು . . . ಬನ್ನಿ ಹೊನ್ನೆಯ ತರುಗಳ್ (ಹುಮ್ಮಾರ. ೯–೬೯). ೨. ಒಂದು ಬಗೆಯ ಔಷಧಿ ಸಸ್ಯ : "ಅಮೃತಶಿಪಾ — ಚಿಟಿಕೆ, ಹಾಲೆ" (೬೩೦. ೬) : "ಕೋಘ — ಚಿಟಿಕೆ, ಹಾಲೆ" (೬೩೦. ೧೬೨). ೩. ಪಡವಲದ ಬಳ್ಳಿ ಮತ್ತು ಅದರ ಕಾಯಿ : "ಹಾಲೆ ಕೋಶಾತಕಿ ಪಟೋಳಿಯಕ್ಕು" (ಶಬ್ದಗಾ. ೩೬–೨೦). ೪. (?) : "ಹಾಲೆ ಕಾಂಡಿಕೆ [ಪಾಠಾಂ. ಕಾಟಿಕೆ, ಕಾಡಗೆ]ಯಕ್ಕು" (ಶಬ್ದಗಾ. ೯೯–೯೭).
[ದೇ.॥ ತಮಿ. ಪಾಲೈ ; ಮಲ. ತೆಲು. ಪಾಲ; ತುಳು. ಪಾಲೆ]

**ಹಾಲೆ³**, ಆಲೆ₂, ಪಾಲ್₁, ಹಲ್ಲೆ₁, ಹಾಲ್₃ (ನಾ). ೧. ಕಿವಿಯ ವೃದುವಾದ ಕೆಳಭಾಗ, –ಕೊಪ್ಪು : ನಸುನೇಲ್ವ ಕರ್ಣಾಟೀಕರ್ಣಾಪೂರದ ಪಾಲೆಗಳಂ ಸರಸ್ವತಿಯಾಡುವ ಲೀಲಾಂದೋಳದಂತಾದುವು (ಶಬ್ದಮ. ೨–೪೯) ; ತಾಳಿದವಟಾದ ಕೇಶವಮನುಗುರ್ಗೊನೆಯಿಂ ತೆಗೆದೊತ್ತಿ ಪಾಲೆಯಂ ವಿಜಾಜದ ಸುತ್ತಿನೋಲೆಗಳನೆರೆವೃತ್ತವಾಯತವಾಗೆ ತೊಟ್ಟು (ಅಜಿತ. ೫–೦೦೬) ; ಪೊಸಮುತ್ತಿನ ಪುಂಜದ ರಂಜಿಸುವೋಲೆಯನವಂ ಪಾಲೆಯೊಳ್ ನಿಯಮಿಸಿದಳ್ (ಚಂದ್ರಪ್ರ. ೧೦–೧೩೨). ೨. ನೇತುವೆ ; ಸಂಕ : ಕೋಟಿಚಿನ್ನಯರು ಬಲ್ಲಾಳನ ಆಳುಗಳೊಂದಿಗೆ ಪಾಲೆ ದಾಟಿ . . . ದೆಯ್ಯಿಯ ಕಲಶದ ಬಿಳಿಯ ಉಪ್ಪರಿಗೆಯನ್ನು ಏರಿದರು (ಕೋಟಿಚ. ೦೪). ಆಲೆ₂ : ೧. ಮಿರುವ ತಳಿರೆಲೆ ಕೆಂಪಿನಾರೆಯ ಜೋಲ್ವ ಕರ್ನಗಳ (ಅಂಬಿಕಾ. ೫–೦೩) ; ಹಣೆ ಚಚ್ಚಿಕೊಳ್ಳುವಿಕೆ, ಕಿವಿಯ ಆಲೆಯನ್ನು ಅನಾವಶ್ಯಕವಾಗಿ ಉಜ್ಜಿಕೊಳ್ಳುವಿಕೆ (ಮಲೆಮ. ೧೯೨). ಪಾಲ್₁ : ೨. ಎಳೆನವಿಲಾ ತಡಿಯೊಳಾಡುತಿರಲೊರ್ವ ಲಲನೆ ನೋಡಲು ಕೇಕರಾಂಶು ಪೊಳೆದೆಯ್ದುತ ತತ್ಕೃತ್ರಿಮನದಿಗಟ್ಟ ಪಳುಕಿನ ಪಾಲದಂದದೊಳು (ತ್ರಿಷಾಂ. ೫–೩೬) ; ನೀರ ಮುಟ್ಟದೆ ಪೋಲಕತ್ತಿ ಪಾಲವ ಕಟ್ಟ ದಾರಿಯ ಮಾಡಬೇಕವಕೆ ಧಾರಿಣಿ ಚರರಾಗದಂಬರೇಚರರು ಕಠೋರವ್ಯಂತರರು ಬೇಕೆಂದ (ಮಹಾ. ೩೩–೬೯) ; ಕಾಡುಮೇಡುಗಳನ್ನು ಹಿಂದೆ ಹಾಕಿ ತೋಡುಗಳನ್ನೂ ಪಾಲಗಳನ್ನೂ ದಾಟಿದರು (ಕಾಂಚಿ. ೦೪ ಕಥಾಸಾರ). ಹಲ್ಲೆ₁ : ೧. ಕಿವಿಗಳ ಹಲ್ಲೆಗಳ ಪ ಏಕವಜ್ರದ ಬೆಂಡೋಲೆಗಳು ಕಿರಣಗಳನ್ನು ಸೂಸುತ್ತಿದ್ದುವು (ಮತ್ಸ್ಯಮ. ೨೦೩). ಹಾಲ್₃ : ೧. ವರಮುತ್ತಿನೋಲೆಗಳು ತೀವಿ ಹೊಳೆವುತ್ತವಿರೆ ಲೆಂಕರಸನೆಂಬ ಭಕ್ತಂ ಕಂಡು ಸರಸರನೆ ಭೋಂಕನೋಲೆಯನಲ್ಲಿ ತೆಗೆವುತಿರೆ ಸರಸರನೆ ತೆಗೆದ ಸಂಭ್ರಮದೊಳಗೆ ಹಾಲೆ ಸೊಪ್ಪಾಗುತಿರೆ (ಚಿತ. ೦೩–೦೩) ; ಹಾಲೆಗಳೊಳು ಥಳಥಳಿಪ ಮುತ್ತಿನ ಹರಳೋಲೆಗಳನು ಧರಿಸಿಹರು (ಸಂಶ್ರಸಾಂ. ೦೨–೧೦೬) ; ನಾ ತೂಗಿ ಬಾಗಿ ನೀರ ಮೊಗೆದ ಮಾವಯ್ಯ ಹಾಲೆ ಸವೆದು ಪಾಲೆ ಬಿತ್ತು, ಮಾವಯ್ಯ (ಹಳ್ಳಿಹು. ೦೬೯).
[<ಸಂ. ಪಾಳಿ, ಪಾಲೀ]

**ಹಾಲೆ⁴** (ನಾ). ಒಂದು ಬಗೆಯ ತೆರಿಗೆ : ಮುಂಡನಾಡ ಬಂಗೆಡಗ್ರಾಮ ವೃತ್ತನಕ ಪಾಲೆಯ ಗಲುಹ ಅಯ್ಯೂಹು ವರಹ (ಎಪಿ. XIV. ಗುಂಡ್ಲುಪೇ. ೦೩೯–೬೩ ; ಕಾ. 1410). [?]

**ಹಾಲೆಗೊರವಿ** (ನಾ). ಒಂದು ಬಗೆಯ ಮರ : (ಮೈಕಲಿನ. ೩೬–೦೦೬೬).
[ಹಾಲೆ²+ಗೊರವಿ₂]

**ಹಾಲೆರೆ** 'ಹಾಲೆಜು' ನೋ.

**ಹಾಲೆಜು**, ಪಾಲೆರೆ, ಹಾಲೆರೆ, ಹಾಲೆಜು (ಕ್ರಿ). ೧. ಹಾಲನ್ನು ಹೊಯ್ಯು, –ಸುರಿ : ದೊರೆಯಕ್ಕುಮೆ ನಿನಗೆ ಯುಧಿಷ್ಠಿರನರ್ಘ್ಯಾರ್ಘ್ಯವನೆತ್ತ ಶಂಖದೊಳ್ ಪಾಲೆಜುದಂತಿರೆ ಮಲಿನವಿಲ್ಲದೊಳ್ಗುಲದರಸುಗಳಿರೆ ನೀನಾ ಮಗ್ರಪೂಜೆಯನಾಂಪಾ (ಪಂಪಭಾ. ೬–೩೦). ೨. ಹಾಲಂ ಕೊಡು ; ಹಾಲು ಕುಡಿಸು : ಪಾಸಿನ ಮೇಲೆ ಪಟ್ಟಿರಿಸಿ ಪಾಲೆಜುದೆನ್ನೊಡಗೂಡಿ ಬಾಲಿಕಾಭ್ಯಾಸದಿನೆತ್ತಿ ಸತ್ತಿಗೆಯ ತಣ್ಣೆಳಲೊಳ್ ಬಳೆಪಂತು ಮಾಡಿ . . . ಕೊಲ್ವುದೇ (ಗಿರಿಜಾ. ೦–೦೦೬) ; ಕೆಜ್ಜಯಂ ಕಟ್ಟಿಸು . . . ಶಿಷ್ಯರಂ ಪೊರೆಯೆನು ತ್ತಿಂತೆಲ್ಲವಂ ಪಿಂದೆ ತಾ ಯೆಜಿದಳ್ಪಾಲೆಜುವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ (ಶಾಸನ. IV. ೨೩೬–೪೮ ; 1380) ; ಪಾಲೆಜುದೋವಿ ಚಜ್ಜನ ಪಕ್ಕೆಗ್ಯದಿದಳು (ಪಂಚಕ. ೯–೬೫). ಪಾಲೆರೆ : ೧. ವಿಜಯವರ್ಮ ನರೇಂದ್ರ ಬೇಗದಿಂ ತನ್ನ ಸತಿಯು ಪಾಲೆರೆಯುತಿರಲು (ಸುಗಂಧ. ೧೩೨–೧೧). ೨. ತೊಡೆಯ ತೊಟ್ಟಿಲೊಳಿಟ್ಟು ಪಾಲೆರೆದು . . . ಪಾಲಿಸಿದ ನಿನ್ನ ಮಯ್ಯೊದನೆಂತು ಪೇಳ್ ಕಾಂತಾರರಾಕ್ಷಸಿಗೆ ತಾತ್ತಾಗೂಳ್ ಕೊಡಲಿ? (ತ್ರಿಲೋಕಶ. ೭೯–೯೯). ಹಾಲೆರೆ : ೧. ಪುಷ್ಪಗಳ ಗೊಂಚಲುಗಳಂಬ ತೊಟ್ಟಲಿನೊಳ್ . . . ಮಕರಂದವೆನುವ ಹಾಲೆರೆದು (ಸುಗಂಧ. ೯೭೦–೦) ; ಹಾವಿಗೆ ಹಾಲೆರೆವರ ತನ್ನ ವಿಷ ಬಿಟ್ಟೀತೇ? (ಗಾದೆ). ಹಾಲೆಜು : ೧. ಹಾವಿಗೆ ಹಾಲೆಜುದೇನು ಫಲ (ಪುರಂದ. ೦. ೬೧ ಕೀರ್ತನೆ). [ಪಾಲ್₁+ಎಜು₁]

**ಹಾಲೇಜು** (ಕ್ರಿ). ಹಾಲು ಹೆಚ್ಚಾಗು : ಆಲದ ಅತ್ತಿಯ ಬಸರಿಯ ಪಾಲೇಜುವ ಕೊನೆಯನುಡಿದು ಮದಮಿಶ್ರಿತದಿಂದಾಲೋಚಿಸದಿಕ್ಕುವ ದಾರೇಜುದಿನಂ ತರದೆ ಹಯಕೆ ಖಾಸವಿನಾಶಂ (ಅಶ್ವಶಾ. ೬–೩೮).
[ಪಾಲ್₁+ಏಜು₁ (<ಏಜು₁)]

**ಹಾಲೈಸು** (ಕ್ರಿ). (?) : ಭೋರೆಂದು ಸುರಿವ ಕಿಬ್ಬರದ ಪೂರದಿಂ ಕಾರ ಕಾವಣಮಂ ಜಂರ್ಝಾನಿಳನೊತ್ತುವಂತೆ ಕುಜುಕುಜುಂಮೆಟ್ಟಿ ನಡೆಯುಸುತ್ತುಂ ಗಜಿಜುವ ಗಟಿಕೆಜುರ ಚಪ್ಪರಿಸುವುಪ್ಪಕಾಜುರ ಕರೆವ ಪರಿಕಾಜುರ ಪಾಳೈ[ಪಾಠಾಂ. ರೈ]ಸುವಾರೀಕಾಜುರ ನೆರವಿಗಳಂ ಕೈಸನ್ನೆಯಿಂ ನಿವಾರಿಸುತ್ತುಂ (ಆನಂಘ. ೬–೨೬೪). [?]

**ಹಾಲೋಗರ**, ಹಾಲೋಗರ (ನಾ). ಹಾಲಿನಲ್ಲಿ ಮಾಡಿದ ಅನ್ನ : ಪುಳಿತೆಜುವ ಪಾಲೋಗರದ ಕಟ್ಟೋಗರದ ಸೊಗಸುವಡೆದ ನೀರೋಗರದ ವಿಸುಗುಪಂಚಲಿಯ ವಿಧಮಂ ಪಧೂಜನಪಜೀವ ತೆಜದಿನೊರೆವಂ (ಸೂಪಶಾ. ೩ ಸೂಪಶಾ). ಹಾಲೋಗರ : ಹಾಲುಂಡೆ, ಘೃತಪೂರದಾಲಯ ವದಲ್ಲಲ್ಲಿ ಹಾಲೋಗರೂಡೆ ಸಣ್ಣ ಸೇವಗೆಗಳಲ್ಲಲ್ಲಿ . . . ಮೇಲೋಗರದ ಹಿರಿಯ ರಾಸಿ ಮಸಗಿದವಲ್ಲಿ (ಚಿತ. ೬–೦೨) : ಹಾಲೋಗರವ

ಹಿಂಡು ಬಾಲೆಯರ ತೋಳ ಮೇಲೆ ಒಱಗಿದರೆ ಬಾರದ ಭವದಲ್ಲಿ ಬಪ್ಪುದು ತಪ್ಪದು ಕಾಣಿರಣ್ಣ (ಸಿರ್ಪೆಚ. ೪೯–೧೫೦): ಪಾಲವನು ಕೊಂಬಾಗ ಹಾಲೊಗ ರೂಡೇತೆ [ಪಾಠಾಂ. ಹಾಲುಕೂಳೊಂಬಂತೆ. ಹಾಲುಹುಣ್ಣುಂಡಂತೆ] (ಸರ್ವಜ್ಞ. ೩೪೯೦). [ಪಾಲ್$_1$+ಒಗರ]

**ಪಾಲೌಗು**, ಹಾಲವುಗ (ನಾ). ಹಾಲು ಮತ್ತು ಅಕ್ಕಿಹಿಟ್ಟಿನಿಂದ ತಯಾರಿಸಿದ ಒಂದು ಬಗೆಯ ಖಾದ್ಯ : ಸೂಪಲಂಡಲಿಗೆ ಪಾಲೌಗು ಪಾಯಸ ಬೆಣ್ಣೆಗಾಸಿದ ತುಪ್ಪ ಕೆಂಗೂಳ ರಾಶಿ ರಂಜಿಸಲು (ಶಬರಶಂ. ೨೬–೨). **ಹಾಲವುಗ** : ಚಿಗುಳಿ ಚಕ್ಕುಲಿ ಹಾಲವುಗ (ಅನಘ. ೦೪–೦೩).
[ಪಾಲ್$_1$ + ಉಗು$_2$ (<ಅವುಗು)]

**ಪಾಲ್ಕಿ** 'ಪಲ್ಲಂಗ' ನೋ.

**ಪಾಲ್ಕೆ** 'ಪಲ್ಲಂಗ' ನೋ.

**ಪಾಲ್ಕೆಱೆ$^2$**, ಪಾಲಕೆಱೆ (ನಾ). ಒಂದು ಕೆರೆಯ ಹೆಸರು : ಅನ್ನೆ ಬರ ಪಾಲ್ಕೆಱೆಯ ತೆಂಕಣ ಕಡೆಗೋಡಿ (ಮೈಕಂ. ೦೪೨೧, ೧೦–೦೬೧ ; ೫೦೭). **ಪಾಲಕೆಱೆ** : ಅನ್ನೆ ಬನ್ನ ಪಾಲಕೆಱೆಗನೆ ಬಂ ಪುಣಿಸೆಯಿಂ ಅನ್ನೆ ಬನ್ನ ನಗರವಳ್ಳಿದ ಮೂಡಣ ಬೇಲಿಯಿಂ (ಎಕ. III. ಶಂಕಶ. ೦೬೯–೦೩ ; ೯೧೬ ?).
[ಪಾಲ್$_1$+ಕೆಱೆ$^2$]

**ಪಾಲ್ಗಂಟಿ** (ನಾ). ಒಂದು ಬಗೆಯ ಗಿಡ : (*). [ಪಾಲ್$_1$+ಕಂಟಿ$_1$]

**ಪಾಲ್ಗಂದಲ್** (ನಾ). ಹಾಲಿನ ಮಡಕೆ : ಪಾಲ್ಗಂದಲೊ ಮೂಱುಂ ಬೋದುದು ಬೆಣ್ಣೆಯೊಳ್ಗಿಯುಂತೆ ಕೃಷ್ಣಾ ಸೇನೆ ಕಿಂದಿರ್ಪ (ಚಕ್ರಶಂ. ೨೧).
[ಪಾಲ್$_1$+ಕಂದಲ್$_1$]

**ಪಾಲ್ಗಡಗ**, ಹಾಲ್ಗಡಗ (ನಾ). ಚಿಕ್ಕಮಕ್ಕಳ ಕಾಲಿಗೆ ತೊಡಿಸುವ ಒಂದು ಬಗೆಯ ಕಡಗ : ಅರಳೆಲೆಯು ಮಾಗಾಯಿ . . . ಪೊಕ್ಕಳು ಘಂಟೆ ಪಾಲ್ಗಡಗ ಗೆಜ್ಜೆ ಸಹ ಜಾಲದೊಡವಾ ಪರಿಪರಿಯ ರತ್ನಖಚಿತಾ ಭರಣಗಳನಿಟ್ಟು (ಪಂಪಮೋ. ೦೩–೭೦). **ಹಾಲ್ಗಡಗ** : ಹಸರಂಗಿ ತೊಡಸೀದ ಹಾಲ್ಗಡಗ ಇಡಸೀದ (ಗರತಿ. ೯೦). [ಪಾಲ್$_1$+ಕಡಗ$_1$]

**ಪಾಲ್ಗಡಲ್**, ಪಾಲುಗಡಲು, ಪಾಲ್ಗಡಲು, ಹಾಲುಗಡಲು, ಹಾಲ್ಗಡಲು (ನಾ). ಹಾಲಿನ ಸಮುದ್ರ ; ಕ್ಷೀರಸಾಗರ : P ಇದೊಂದು ಪೌರಾಣಿಕಕಲ್ಪನೆ. ಸಪ್ತಸಮುದ್ರಗಳಲ್ಲಿ ಒಂದು ; ವಿಷ್ಣುವಿನ ವಾಸಸ್ಥಾನ : ಜೈನಧರ್ಮದಲ್ಲಿ ಅರ್ಹಂತನ ಜನ್ಮಾಭಿಷೇಕಕ್ಕೆ ಬಳಸುವ ಜಲವೆಂದು ನಂಬಿಕೆ : "ಇಂಗಡಲೆಂದು ಪಾಲ್ಗಡಲೊಳ್" (ಕಬಾಗಿ. ೨೦) ; ಪೆಡೆ ಪಲವಪ್ಪ ವಾಸುಕಿಮಹೋರಗನಂ ಕಡೆಗಣ್ಣ ಮಾಡಿ ಪಾಲ್ಗಡಲನುಪಾಯದಿಂ ಕಡೆಯೆ (ಕಾವ್ಯಾವ. ೯೩೯ ಹೊರ್ಸ್ಕ) ; ಕಡೆಯುತ್ತಿರ್ದ ಪಿಡುಮುತ್ತಿನ ಪೊದರ್ದುನ್ನುವ ಬೆಳಗು ಪೊಳೆವ ದುಗುಲದ ಪಸೆಯೊಳ್ ತೊಡರ್ದಿರೆ ಪೆಱತಲ್ಪಿದ ಪಾಲ್ಗಡಲೆನಿಸಿದುದು ವಿವಾಹವೇದಿ ವಿಲಾಸಂ (ಅಂಪು. ೬–೦೬) : ಜಗವಿದು . . . ಪಾಲ್ಗಡಲಿಂದೊಗೆದುದೂ ಪೇಟೆಂಜನೆಗಂ ಸೊಗಯಿಸಿದುದು ಸಾಂದ್ರಚಂದ್ರಿಕಾವಿಸ್ತಾರಂ (ಕಾದಂಬ. ೦೯೩). **ಪಾಲುಗಡಲು** : ಪಾಲುಗಡಲಲಿ ಫಣಿಯ ಮಂಚದ ಮೇಲೆ ಪವಡಿಸಿ, ಪರಮನೆನಿಸಿದ ಲೀಲೆಯತ್ತಲು ಮಾನುಜಭಾವದ ನಟನೆ ತಾನೆತ್ತ (ಕೌಶಿಕ. ೪೬–೯೩): ಪಾಲುಗಡಲು ಮನೆಯಾಗಿರಲು ಒಂದಾಲದೆಲೆಯ ಮೇಲೆ ಮಲಗುವರೆ (ಪುರಂದ. ೪–೦೦೪–೦). **ಪಾಲ್ಗಡಲು** : ಪಾಲ್ಗಡಲೊಳ್ಪುಕ್ಕು ಶಶಿಯಂತೆ ಪೊಕ್ಕು ನೀರ್ಗಲ್ಗಳ್ ರಾಜಿ ಸರಸಿಯನು ಸಲ್ಲೀಲೆಯ ಸುರರೆಪ್ಪೆ ಪಿಂದು (ಪಲ್ಲಕ. ೯–೪೯) : ಕೊಡವಾಲು ಪುಳಿವೆರೆ ದಳವುದಲ್ಲದೆ ಪಾಲ್ಗಡಲು ನಾಶವಪ್ಪುದುವುದೆ (ನೋಂಪಕ. ೦–೪೦). **ಹಾಲುಗಡಲು** : ಇದು ಹಾಲುಗಡಲಿನ ಸೀಮೆ ; ಚಂದ್ರಮನೆ ಸ್ವಾಮಿ (ಕಾದಂಬ. ೭೩.೦೬). **ಹಾಲ್ಗಡಲು** : ಶಿರದಿಂದೆ ಹೆಪ್ಪಾದ ಹಾಲ್ಗಡಲಿನ್ನೈಕಿಲೊಳ್ಗ ಪ್ಪುದು ಕಡಕಡಿಯುತಿಟ್ಟಿಗೆಯನೊಟ್ಟಿ (ಚನ್ನಾಂಗ. ೯೦–೨೪೪೮): ಪಾಲ್ಗಡಲಿನ ತೆರತೆರೆಯ ಮೇಲೆ ಮಹಾವಿಷ್ಣು ನರ್ತಿಸಿದಾಗ ಲಾಸ್ಯಕಲೆ ಮೂಡಿ ಬಂದಿತು (ಶ್ರೀಂಪಕ. ೦೦೭).

**ಪಾಲ್ಗಡಲ ಕುವರಿ** – ಕ್ಷೀರಸಾಗರದಲ್ಲಿ ಜನಿಸಿದವಳು: ಲಕ್ಷ್ಮಿ : "ಸಿರಿ ಲಕುಮಿ ಮಾಲಕುಮಿ ಪಾಲ್ಗಡಲ ಕುವರಿ ಮಿಕ್ಕ ತಾವರೆವನೆಯಳೆಂಬ ಪೆಸರಿಂದಿರೆಗೆ" (ಕಬ್ಬಿಗಂ. ೬). **ಪಾಲ್ಗಡಲ ಮಗಳ್** = ಪಾಲ್ಗಡಲ ಕುವರಿ : ಪಾಲ್ಗಡಲ ಮಗಳನಿಯನೊಡನೆ ಬೊಮ್ಮಂ ಸರಿಮಿಗಿಲ್ಲೆ ಕನಿಸಿಂ ಪೋರೆ (ಚಾಪಚಂ. ೩. ೨೬). **ಪಾಲ್ಗಡಲೊಡೆಯ** = ಕ್ಷೀರಸಾಗರದ ಒಡೆಯ ವಿಷ್ಣು : ಕರಿಯ ವರನ ಚಕ್ರದಿ ಉದ್ಧರಿಸಿದ ಹರಿ ನಮ್ಮ ಪಾಲಿಪ ಪಾಲ್ಗಡ ಲೊಡೆಯನು (ಪುರಂದ. ೩–೦೩೫–೦) ; ಕರ್ಣಜ ಪಾರ್ಥರಾಸ್ಯಂಗಳಿ ಕಪುಟೆಲ್ಲುಕಾಂತಿಕಲೆಗಳನಾಂತುವಾಗ ಪಾಲ್ಗಡಲೊಡೆಯನಂ ಮುಂದೆ ಕಂಡು (ಕೃಷ್ಣಚಾ. ೨೪–೬೬). [ಪಾಲ್$_1$ + ಕಡಲ್$_2$]

**ಪಾಲ್ಗಡಲು** 'ಪಾಲ್ಗಡಲ್' ನೋ.

**ಪಾಲ್ಗಡೆ** (ಕ್ರಿ). ಹಾಲನ್ನು ಕಡೆ. — ಮಥಿಸು : ಒಂದೆ ಕೈಯೊಳ್ ಪಾಲ್ಗಡೆವನೆಂಬ . . . ಪೆರ್ಗಾವಿಲನಂ ಪೋಲ್ವುಂ (ರಮಾಕನ್ನ. ೫–೦೦೬ ಅಶಪದ್ಯ): ಘನಕುಚಿ ಗೋಪಿ ಪಾಲ್ಗಡೆಯುತುಂ ಮನೆವಾಟಿಗೆ ಪೋಗೆ (ಜಗಂ. ೩–೩೦). [ಪಾಲ್$_1$ + ಕಡೆ$_1$]

**ಪಾಲ್ಗಱೆ$^2$**, ಹಾಲುಕರೆ (ಕ್ರಿ). ಹಾಲನ್ನು ಕರೆ, – ಹಿಂಡು : ಇನಿತು ಪಾಲ್ಗಱೆದು ಹೋಟಟ್ಟಲೊಳಿರಿಸಿ ತಾಂ ನಿಲಿಸಿ ಬಂದಾ ಮಲಹರನ ಬಳಿಗದೆ ಯುವತಿ ಹೋದಹಳು (ಚಿಕ್ಕ. ೩೦–೦೨) ; ಕಾಡುವ ಪಶುವಿನ ಬಾಲವ ಕಟ್ಟಿಸಿ ಕೂಡೆ ಪಾಲ್ಗಱೆಯಲು ಒದೆಯುವುದೆ (ಪುರಂದ. ದಾ. ೨–೪೧–೨). **ಹಾಲುಕರೆ** : ಹಾಲುಕರೆದು ಮೊಸರು ಮಾಡಿ . . . ವ್ಯಾಪಾರ ಮಾಡುತ್ತೇವೆ (ಜಾನಪ. ೬೦) ; ಹೊಸದಾಗಿ ಬಂದು ಕೊಟ್ಟಿಗೆ ಸೇರಿರುವ ಕಾಳೆಮ್ಮೆಗೆ ಕರು ಬಿಟ್ಟು ಹಾಲುಕರೆದುಕೊಂಡಿದ್ದಾರೆ (ಕಳಸು. ೯೦).
[ಪಾಲ್$_1$ + ಕಱೆ$^2_1$]

**ಪಾಲ್ಗಾಱ**. ಪಾಲುಗಾರ (ನಾ). ೧. (ಆಸ್ತಿಯ) ಭಾಗಸ್ಥ; ಹಿಸ್ಸೆದಾರ : ಪಾಲು ಬರಬೇಕಾದ ಹಕ್ಕುಳ್ಳವನು : ಪಾಲ್ಗಾಱರಣ್ಣಂದಿರ್ ! ಎಲ್ಲಮನ್ ಪೇಟ್ಟಿನ್ (ಅಕ್ಷಿಣ್ಣ. ೧೨–೨೪೯). **ಪಾಲುಗಾರ** : ೧. ಕರಾರು ಪತ್ರಕ್ಕೆ ಎಲ್ಲ ಪಾಲುಗಾರರ ಒಪ್ಪಿಗೆ ಮತ್ತು ಅಂಕಿತಗಳು ದೊರೆತ ಮೇಲೆ, ಪಾಲುಗಾರಿಕೆಯು ಪೂರ್ಣವಾಗುತ್ತದೆ (ಚಕ್ರಾಂ. ೯೬) ; ಪ್ರತಿಸ್ಪರ್ಧಿ ಎಷ್ಟುವುವಕ್ಕಿಂತಲೂ ಪಾಲುಗಾರ ಎನ್ನುವುದೇ ಸರಿ (ಚೆಂಬಾಗಿದಿಯ. ೫೫). ೨. ಪಾಲುಗೊಳ್ಳುವವನು : ಊರಲ್ಲಿಯ ಎಷ್ಟು ಜನರ ದುಃಖದಲ್ಲಿ ಅವನು ಈಗಾಗಲೇ ಪಾಲುಗಾರನಾಗಿಲ್ಲ ? (ಮೂರುದಾ. ೧೬೨).
[ಪಾಲ್$_2$ + – ಕಾಱ]

**ಪಾಲ್ಗುಂಬಳ**, ಹಾಲಗುಂಬಳ, ಹಾಲುಕುಂಬಳ, ಹಾಲುಗುಂಬಳ, ಹಾಲ್ಗುಂಬಳ (ನಾ). ಒಂದು ಬಗೆಯ ಬಳ್ಳಿ ಮತ್ತು ತರಕಾರಿಯಾಗಿ ಬಳಸುವ ಅದರ ಕಾಯಿ : ಸೋರೆ : ಮುಟಿಗಾಲದೊಳೆಲೆವಾಡಂ ಹುಟಿಮಳ್ಳಿಂ ಹಿಟಿದ ತೈಲಮುಂ ಬಸತಿಯುಂ ಮೊಳೆಯುಳ್ಳುಮುಮಂ ಪಾಲ್ಗುಂಬಳಮುಂ[ಪಾಠಾಂ. ಯುಲ್ಲಮನುವ್ವುಂಗಾಯ್ಗಳಂ]ಸೇವಿಸಲುಮಾಗ ದೆಂಬ ಜೈನಂ (ಕಬಾಶ. ೬–೪). **ಹಾಲಗುಂಬಳ** : "ಶ್ರಮಪ್ಟುೀ – ಹಾಲ ಗುಂಬಳ" (೬ಕರ. ೦೬೨); ಕಹಿಸೋರೆಬಳ್ಳಿ, ಈಸುಗಾಯಿಬಳ್ಳಿ, ಹಾಲುಗುಂಬಳ (ಮೃಶಿಗಿ. ೯೯–೯೩೨). **ಹಾಲುಕುಂಬಳ** : "ಇಕ್ಷ್ವಾಕು_ಹಾಲುಕುಂಬಳಕಾಯಿ. ೨. ರಾಜವಿಶೇಷ" (ಗಂಗಾಮು. ೩೩). **ಹಾಲುಗುಂಬಳ** : "ದೀರ್ಘವೃಂತ ಫಲಾ–ಹಾಲುಗುಂಬಳ" (೬ಕಥ. ೬೬) ; ಹಾಲುಗುಂಬಳ ವನಸಫಲದ ಸಾರತರ ಶಾಕಭೇದವ ನಾನು ಬಲ್ಲನಿತ ಚಾರುಚಂದ್ರಾನನೆಯರಜೀವ ಮಾಳ್ಕೆ ಯೂನುರಾಗದಿಂದವೆ ಮುಸುರ್ವೆನು (ಸೂಪಶಾ. ೫ ಸೂಪಶ) ; ಹಾಲುಗುಂಬಳ . . . ಕಫವಾತಕರ (ಚನ್ನಾಂಗ. ೦೩೬–೬೩). **ಹಾಲ್ಗುಂಬಳ** : ಹಾಲ್ಗುಂಬಳ

**ಪಾಲ್ನೊರೆ** (ನಾ). ಹಾಲಿನ ನೊರೆ: ಪಾಲ್ನೊರೆವೆಳ್ಪಿನಂತೆ ... ಕಂಗಳ ಕಾಂತಿ ದೆಸೆದೆಸೆಗೆ ಪಸರಿಸಲ್ (ತಬಪು. ೩೭-೫೯). [ ಪಾಲ್$_1$ + ನೊರೆ$_1$]

**ಪಾಲ್ಪಡು** (ನಾ). ಒಂದು ಸ್ಥಳದ ಹೆಸರು: ಶ್ರೀ ಎರೆಯ್ಮರಿಯರ ಮಗ ಬೊಲ್ಪಗಂಗಗಾವುಣ್ಡನಿಜೀದು ಬಿಟ್ಟುನಾತಂಗೆ ಪಾಲ್ಪಡುವಿನುಳ್ಳೆದುವಣ ಕಿಜಿಯುಳ್ ತಾವರೆ ಕಟ್ಟಸ್ನೆಜಿಗೆ ಮೂವತ್ತು ಗೂಳಂ ಕಜನಿ ಕಲ್ನಾಡು ಸರ್ವ್ವಪರಿಹಾರಪ್ರಸಾದಂಗೆಯ್ದಾರ್ (ಎಕ. X, ಶ್ರೀಂಗ್. ೭೬-೯; ಸು. ೬೫೦); ತುಜುವ ವಾಗುಜ್ಜಿ ವಾಗ್ಮಯಾಚರಿಯುಜುವುಂ ಪಾಲ್ಪಡುವಿನ ಚೋಲಾ ಚರಿ ಇಜೀದು ಸರ್ಗ್ಗಸ್ಥನಾದಂ (ಎಕ. X, ಕೋಲಾರ. ೦೪-೯; 1036).

[ ? ]

**ಪಾಲ್ಪಸುಳೆ, ಹಾಲುಹಸುಳೆ** (ನಾ). ಹಾಲು ಕುಡಿಯುವ ಮಗು; ಹಸುಗೂಸು: ಸೃಷ್ಟಿಯುದು ನಿನ್ನೆರ್ದೆಯ ಪಾಲ್‌ಪಸುಳೆ, ಓ ತಾಯೆ (ಶ್ರೀರಾಮಾ. ೦೩೩-೨೦೭). **ಹಾಲುಹಸುಳೆ**: ಆಗಿದ್ದರೂ ಹಾಲುಹಸುಳೆಯಾಗಿದ್ದ ದಿನದಿಂದ ತನ್ನನ್ನು ಸಾಕಿ ಸಲಹಿದ ಅಜ್ಜಿಯ ಆವಶ್ಯಕತೆ (ಅತಹ. ೦೦೬). [ ಪಾಲ್$_1$ + ಪಸುಳೆ ]

**ಪಾಲ್ಬಟ್ಟಲ್** (ನಾ). ಹಾಲಿನ ಬಟ್ಟಲು: ನಾಬಿದಂ ನೋಡುವೆನುತ ಶಿವದೇವನಾ ಮ ಉ ಬಿ ವ ಸ ವ ಬ ಳಿ ಯ ನಾ ಬಿಧದೊಳೊಬ್ಬಳವಳೆಯ ಪಾಲ್ಬಟ್ಟಲಂ ಕೊಟ್ಟು ದೇವನೀಳಯಕೆ ಕಳುಹುತಂ (ಚಪು. ೦೯-೩೬); ಕಲ್ಲಿನಾಥನಂ ಬಂದಜಿಗಿ ಮುಂದೆ ಪಾಲ್ಬಟ್ಟಲನಿಟ್ಟು ದೇವ ಪಸಿದೆ ಪಾಲ್ಗುಡಿ ವುದೆಂದಾಸುರ್ವ (ಶೃಪು. ೯-೩೦೫). [ಪಾಲ್$_1$ + ಬಟ್ಟಲ್ ]

**ಪಾಲ್ಬತ್ತು** (ಕ್ರಿ). ಹಾಲು ಇಲ್ಲದಂತಾಗು; ಹಾಲು ಇಂಗಿ ಹೋಗು: ಪಾಲ್ಬತ್ತಿದಾಕಳಂತೆ ಮಕ್ಕಳಿಲ್ಲದ ಸತಿಯಂತೆ (ರಣಕಾಮ್ಯ. ೯-೨೩ ಅತಿಶದ್ಧ). [ ಪಾಲ್$_1$ + ಬತ್ತು$_1$ ]

**ಪಾಲ್ಮರ, ಹಾಲ್ಮರ** (ನಾ). ಹಾಲು ಬರುವ ಆಲ, ಅತ್ತಿ, ಅರಳಿ, ಇಪ್ಪೆ, ಗೋಣಿ, ಬಸರಿ ಮುಂತಾದ ಮರ; ಕ್ಷೀರವೃಕ್ಷ: ಮಧುಮಧ್ಯಮಾಂಸಂಗಳುಮಂ ಮುದ್ದ ಪಾಲ್ಮರದ ಪಣ್ಗಳುಮನಾಳಂಬೆಯುಂ ಸಣಬಿನ ಪೂವುಮೆಂದಿವಂ ಸ ೀ ವಿ ಸು ವ ರು ಂ . . . ಏಜು ನರಕಂಗಳೊಳ್ ಪುಟ್ಟ ದುಃಖಿಗಳಪ್ಪುದರ್ (ಧರ್ಮ್ಮಾಮೃ. ೦೩೬-೦೭); ಮರಂಗಳಲ್ಲಿ ಪಾಲ್ಮರಂಗಳನಿಸಿಯುಂ ಬಳ್ಳಿಗಳಲ್ಲನುವೃತವಳ್ಳಿಗಳನಿಸಿಯುಂ (ಅಪು. ೯-೬೭೫); ತಳತ ಪಾಲ್ಮರನೆಜೆ ಪಿಂಗಲಿ ಬಳಿದು ಬಾಯ್ಮೊಂದವು ಸರಣಾಗದಿನೊರೆದು ನಾಂಪತಿ ತಾಜನಿತ್ತವು ಕರಿಯ ಹಕ್ಕಿಗಳು (ಕೂರಗ. ೦-೬-೬); ಪಾಲ್ಮರದ ಚಕ್ಕೆ ಪವನ್ನು ಅಂಬಿನವಲ್ಲಿ ಅರೆದು ಮೈಗೆ ಪೂಸಲು ದಾಹಜ್ವರ ಪರಿಹಾರವು (ಕಶಪ್ರ. ೮೩). **ಹಾಲ್ಮರ**: ತಾಪ್ಪಂ ಸಾಸಿವೆ ಹಾಲ್ಮರನ ಸಮಿತ್ತು ಈ ಪ್ರವ್ಯಂಗಳಿಂದೆ ಅಗ್ನಿದೇವತಾರ್ಥಮಾಗಿರ್ದ ಮಂತ್ರಂಗಳಿಂ ಹೋಮಮಂ ಮಾಡಿಸಿ (ರೂಪಚೂಡ. ೯-೯೭ ಟೀಕು).

[ ಪಾಲ್$_1$ + ಮರ$_1$ ]

**ಪಾಲ್ಮಟೆ** (ನಾ). ಹಾಲಿನ ಮಳೆ; ಕ್ಷೀರಧಾರೆ: ಒಸರ್ವಪುದಮರ್ದಿನ ಪಾಲ್ಮಟೆ ಪರಿಯಿಸೆನೆ ಏಗಮನೊಡನೆ ಕರ್ಪೂರದ ರಜಂ ಮುಸುಕಿಯುದೆನೆ ಪುದಿದಿರ್ದನಾಜಸಿಯುಮುಳು ಫೊಳೆನಪ್ಪುಕತರಣನ್ಯುಕತರಣಂಗಳ್ (ಅಪು.೧೩-೭೦).

[ಪಾಲ್$_1$ + ಮಟೆ$^3$]

**ಪಾಲ್ಮುನ್ನೀರ್** (ನಾ). ಹಾಲಿನ ಸಮುದ್ರ; ಕ್ಷೀರಸಾಗರ: ಪಾಲ್ಮುನ್ನೀ ರೊಳ್ನೆಳತಳರಿನನ ಬಲ್ಪೆನೋಜ್ಞೊಯಿಯಿಟ್ಟಾಗಸದೊಜ್ ಮೇಲ್ವಿನ ಪೊಳ್ಪುಜೊರೊಳಗಲ್ಲಿಲ್ಲಿದು ಬೆಳ್ದಾವರೆಗೆಬ್ಬಿ (ಅಪ್ಪಲ. ೨-೩೭).

[ ಪಾಲ್$_1$ + ಮುನ್ನೀರ್ ]

**ಪಾಲ್ಮೊಲೆ** (ನಾ). ಹಾಲು ತುಂಬಿರುವ ಮೊಲೆ: ಶಿಶುವ ಪಾಲ್ಮೊಲೆಯುಂ ತಳವಲ್ಲೆಯುಂಬಾವಾಪರಿಸುತ ಕರ್ಬಿನ ಕಂದನ ಸಿದ್ಧ್ಯಾವಬಾಲಿಕ್ಷಿಸನಾತೆಯು ಕಣ್ಗಳ್ ಓಲಿಯ ಕಣ್ಣಿನೆ (ಅತುಗಾ. ೨-೩೭). [ ಪಾಲ್$_1$ + ಮೊಲೆ$_1$ ]

**ಪಾಲ್ಯ** (ಗು). ೧. ಕಾಪಾಡಬೇಕಾದ; ರಕ್ಷಿಸಬೇಕಾದ. (ನಾ). ೨. ಕಾಪಾಡಬೇಕಾದುದು; ರಕ್ಷಿಸಬೇಕಾದುದು: ಅಜಿತವಿಜಿತಕಲ್ಪಿಪ ನಿನಗಿಂ ಕ್ಷಾಜ್ಯಂ ಪರಿಗ್ರಹಂ ದಲ್ ಪ್ರಾಜ್ಯಂ, ತಪಮುದುವೆ ಪಾಲ್ಯಮಾ ಕ್ಕೈವಲ್ಯಂ (ಅಜಪು. ೬-೬೭). [ ಸಂ. ]

**ಪಾಲ್ಲಕೆ** ' ಪಲ್ಲಂಗ ' ನೋ.

**ಪಾಲ್ವಕ್ಕಿ, ಹಾಲಕ್ಕಿ, ಹಾಲವಕ್ಕಿ, ಹಾಲಹಕ್ಕಿ, ಹಾಲುವಕ್ಕಿ, ಹಾಲುಹಕ್ಕಿ, ಹಾಲ್ವಕ್ಕಿ** (ನಾ). ೧. ರಾತ್ರಿಯಲ್ಲಿ ಸಂಚರಿಸುವ ಗೂಬೆಯ ಜಾತಿಗೆ ಸೇರಿದ ಒಂದು ಬಗೆಯ ಪಕ್ಷಿ; ಶಕುನದ ಹಕ್ಕಿ; ಪಿಂಗಲಿ: "ಎಸೆವ ಪಿಂಗಲಿ ಶಕುಂತಂ ಭಾಸಮೆನಲು ಪಾಲ್ವಕ್ಕಿ[ಹಾಂ. ಹಾಲುವಕ್ಕಿ] ಯೆಂದೆನಿಸ್ಕುಂ" (ಶಬ್ದಮ. ೩೨-೯); ಪಾಲ್ವಕ್ಕಿ ಮೃಗಾಂಕ ಘೂಕ ದನುಜಂ ಪಾಲೀಸಿವಿಂತು ನಿಶಾಚರಪಕ್ಕುಂ (ಹಾಹಕ. ೨೯). **ಹಾಲಕ್ಕಿ**: ೧. ಚಿಲೀಪಿಲೀ ಚಿಲಿಪಿಲಿ ಎಂದೂ ಹಾಲಕ್ಕಿ ಉಲಿಯುತಲಿತ್ತು ಶುಭ ನುಡಿಯ (ಹಾದಲ. ೩-೯); ಹಾಲಕ್ಕಿ ನೀಲಕ್ಕಿ ನೀಲವರ್ಣದಕ್ಕಿ ಬೇಲೂರ ಗದ್ದೆ ಗೊನೆಬತ್ತದ ನೆಲ್ಲಕ್ಕಿ ಸೇರಾವೆ ನಮ್ಮ ಅರಮನೆಗೆ (ಜಾಕಪ್ರ.೦೦೫). **ಹಾಲವಕ್ಕಿ**: ೧. "ಪಿಂಗಲಃ — ಹಾಲವಕ್ಕಿ" (ಲಿಕಂ. ೯೭). **ಹಾಲಹಕ್ಕಿ**: ೧. ಹಾಲಹಕ್ಕಿಯನ್ನು ಹಿಂದುಗಡೆಯಲ್ಲಿ ಕಂಡರೆ ಬಹುಪುತ್ರಪ್ರಾಪ್ತಿ ಆಗುವುದು (ಶಾಗಂಂ.೫೫೫-೭); ಹಾಲಹಕ್ಕಿಯು ಜಗದಾಹ್ಲಾದಕರವಾದ ಚಂದ್ರನ ಪ್ರಣಯಿಯನ್ನು ಉಚ್ಚಕಂಠದಿಂದ ಸಪ್ರಮಾತಾರದಲ್ಲಿ ಮಾತನಾಡಿಸುತ್ತಿದ್ದಿತು (ಕೋಚಪೂ. ೩); ಹಾಲಹಕ್ಕಿ ಅದರೆ ಹಾಲು ಕರೆದೀತೇ? (ಗಾದೆ). **ಹಾಲುವಕ್ಕಿ**: ೧. "ನೀಡೋದ್ಭವಃ—ಹಾಲುವಕ್ಕಿ, ಪಕ್ಷಿಸಮುದಾಯ" (ಲಿಕಂ. ೮೯); ಕೊಟ್ಟ ಕೂಗಿತ್ತು ಹಾಲುವಕ್ಕಿ ಬಳಿಯಿತ್ತು ಹೂಗ ಕಟ್ಟಿತ್ತು ಅವನ ಅವಳ ಮದುವೆ ನಿಂದಿತ್ತು (ಅಜಾಜಾ. ೯. ೦೯೬-೦೫೭); ಅಂದು ಮಧ್ಯಾಹ್ನ 'ಎಣ್ಣೆ ಜೋಗಿ' ಬಂದು ಹಾಲುವಕ್ಕಿಯು ಶಕುನವನ್ನು ಒಡಟಿ ಹೇಳುವಾಗ . . . ಧೈರ್ಯ ಹೇಳಿ ಹೋಗಿದ್ದ (ಕಟಬು. ೮೯). ೨. ಒಕ್ಕಲಿಗರಲ್ಲಿ ಒಂದು ಬಣ, – ಪಂಗಡ: ಬಾಲೋಲಿಕಾರ, ಬಂಟ, ದಬ್ಬ, ಗತ್ತಿ, ಗಂಡ, ಹಲದವ, ಹಾಲುವಕ್ಕಿ . . . ಪಕ್ಕಲಿಗ, ವೆಲ್ಲಾಲ (ಕುಕುಜಾ. ೧೭೦). **ಹಾಲುಹಕ್ಕಿ**: ೧. "ವಾಮಸ್ಮಾಲಿಕಃ — ಹಾಲುಹಕ್ಕಿ" (ಲಿಕಂ. ೦೨೬); ಹಸುಬ ಹಂಗನು ಬಾವುಗ ಹಾಲುಹಕ್ಕಿಯು ಕುಶಲದಿಂದುಲಿವ ವಾಣಿಯನು ಹಸನಾಗಿ ಶಕುನದ ಪೇಳ್ವ ಪಕ್ಷಿಗಳು ಪಾತ್ರೆಸೆದವು ಆ ಮಲೆಯೊಳಗೆ (ಕುಮಾರಾ. ೦-೬೦). **ಹಾಲ್ವಕ್ಕಿ**: ೧. ಖಗಾವಳಿಯ ಗೂಡುಗಳಲ್ಲಿ ಗಲಗು ಪಿರಿದಾಯ್ತು ಹಾಲ್ವಕ್ಕಿ ಹರಿದವು ಪಕ್ಕೆಗೆ (ಪಟ್ಟಕ. ೦೦-೬೫); ಹಾಲ್ವಕ್ಕಿ ಕೋಗಿರೆ ಕೋಟಿದೇವನ ಕುಕ್ಕುವಾಯಿಯ ಕೆಂಡವಕ್ಕಿಗಳವಜ್ ಇಳಿಲೊಪ್ಪಿದುದು (ಪಾಕ್ಕಗಾ. ೫-೨೨).

**ಹಾಲಕ್ಕಿ ಒಕ್ಕಲರು**=ಒಕ್ಕಲಿಗರ ಒಂದು ಒಳಪಂಗಡ. ಕಾರವಾರ ಪ್ರದೇಶದಲ್ಲಿ ವಾಸಿಸುವ ಜನರಲ್ಲಿ ನಾಡವರು, ಹಾಲಕ್ಕಿ ಒಕ್ಕಲರು, ನಾಮಧಾರಿಗಳು ಮುಖ್ಯವಾಗಿ ಒಕ್ಕಲತನದಿಂದ ಜೀವಿಸುವರು (ಕಕಾಲ.೩).

[<ಪಾಲ್$_1$ + ಪಕ್ಕಿ]

**ಪಾಲ್ವಣ** ' ಪಾರಿವಾಳ$_1$ ' ನೋ.

**ಪಾಲ್ವಳ್ಳ, ಹಾಲುಹಳ್ಳ** (ನಾ). ಒಂದು ಹಳ್ಳದ ಹೆಸರು: ಸಜಂಕಿಯ ಸೀಮಾಸಂಯ್ಯೋಗದಿಯುನ್ನೊಡೆ ತೆಂಕ ಪಾಲ್ವಳ್ಳಂ ನೈರಿತಿಯೊ ಳ್ಪರಪುಲಿಗೆಜೆಯ ತೆಂಕಣ ಕೋಡಿಯುಂ (ಎಕಾಇ.XI-i, ೫೨-೫೬; ಸು. 1007). **ಹಾಲುಹಳ್ಳ**: ನಮ್ಮೂರಿಂತೂ ಹಾಲುಹಳ್ಳದ ದಂಡೆಯ ಮೇಲಿದೆ. ಅದರಿಂದಲೇ ನಮ್ಮೂರಿಗೆ ಹಾಲುಹಳ್ಳ ಎಂದು ಹೆಸರು ಬಂದಿದೆ. ಹಾಲುಹಳ್ಳವು ಊರ ಪೂರ್ವಕ್ಕಿದ್ದು ಹನ್ನೆರಡುತಿಂಗಳೂ ಜುಳುಜುಳು ಎಂದು ಹರಿಯುತ್ತಿದೆ (ಕಕಪು. ೬-೦). [ ಪಾಲ್$_1$+ಪಳ್ಳ ]

**ಪಾಲ್ಪೊನಲ್** (ನಾ). ೧. ಹಾಲಿನ ಹೊಳೆ : ಆ ಕುಮುದಾಕರಂಗಳ ತನಿವೆಳಗಿನ ಬೆಳಗಮಂ ಪಾಲ್ಪೊನಲ ಪೂರಮೆಂದು ಪೀರ್ವಾಸೆಯಿಂ ಪರಿತರುತಿರ್ಪ ತರುಣಾಲಹಂಸಪ್ರಸರಮುಂ (ಕುಸುಖಾ. ೨-೭೧ ಪ). ೨. ಕಬ್ಬಿನ ಹಾಲಿನ ಹೊಳೆ : ರಸದಾಳಿಯಸೆವ ಪಾಲ್ಪೊನಲೊ ಸೊಗಯಿಪ ಪೂಚ್ಚಪೂಸ ಜೇನ ಸೋನೆಯೋ (ಶಬ್ದಾ. ೧-೩೦). ೩. ಎಳೆಯ ಧಾನ್ಯದ ರಸದ ಪ್ರವಾಹ : ಕೀರಕಿಶೋರಚಂಚುಹತಿಯಿಂದೆನಸುಂ ಕಣೆಶಾಗ್ರಭಾಗದಿಂ ಭೋರನೆ ಸೋರ್ವ ಪಾಲ್ಪೊನಲೆ ಕಾಲ್ಪೊನಲಾಗೆ (ಕುಸುಖಾ. ೨-೯೩). [ ಪಾಲ್ $_1$ + ಪೊನಲ್ ]

**ಪಾಲ್ಪೊಸೆ** 'ಪಾಲ್ಪೊಸೆ' ನೋ.

**ಪಾಲ್ಪೊದೆ, ಪಾಲ್ಪೊಸೆ** (ನಾ). ಬೆಳ್ಳಗಿರುವ ಸುಣ್ಣ : ಅರಿದೊಡೆ ಸೌಧಸಂತತಿಗೆ ಪಾಲ್ಪೊದೆಯಪ್ಪ ಕಟಲ್ಗೆ ಕೂಡೆ ಕಪ್ಪುರವಳುಕಪ್ಪುಗುರ್ವ ನೊಳಕೊಂಡುದು ಚಂದ್ರಿಕೆ ಸಾಂದ್ರಭಾವದಿಂ (ಜಗು. ೧೩-೧೦೯).
**ಪಾಲ್ಪೊಸೆ** : ರೂಢಿವಡೆದ ನೃಪಾಲರ ನೆಲೆವಾಡ ಚಿನ್ನದ ಚಿನ್ನಕ್ಕಾಮಾಡಮೊಪ್ಪುವಮಾಣಿಕ್ಯಮುಖ್ಯರ ಪಾಲ್ಪೊಸೆಯ ಮಾಡ (ಜಾಣ್ಮ. ೨-೯). [ ಪಾಲ್ $_1$ + ಪೊದೆ ]

**ಪಾವಕ** (ಗು). ೧. ಶುದ್ಧಗೊಳಿಸುವ; ಪವಿತ್ರಗೊಳಿಸುವ. ೨. ಶುದ್ಧವಾದ. ೩. ಪ್ರಕಾಶಮಾನವಾದ. (ನಾ). ೪. ಶುದ್ಧಗೊಳಿಸುವಂತಹುದು : ಅವ ಜೀವದ ಪಾಪವನುಭವದಿನಹುದೊ . . . ನೋವೆಲ್ಲ ಪಾವಕವು (ಮುಂಕು. ೬೦೯). ೫. ಬೆಂಕಿ ; ಅಗ್ನಿ : "ಸಪ್ತಾರ್ಚಿಃ . . . ಪಾವಕಃ . . . ಹುತಾಶನಃ—ಈ ೪೦ ಕಿಚ್ಚಿನ ಪೆಸರ್" (ಕಣಾಭಿ. ೧೨-೬೨); ಪಾವಕನಟ್ಟಿ ಖಾಂಡವವನುಂಡಪನರ್ಜುನನೊಡಿದವ್ವಂ(ಕುಶಲಾ. ೩-೭೮) ; ಪಾವಕನು ನಿಜರೂಪದಿಂದಾ ದೇವಿಯರನೊಡಗೊಂಡು ಬಂದನು (ಕೌಶಿಂ. ೪೩ ೩೯). ೬. ಉತ್ತಮವಾದ ಆಚರಣೆ ; ಸದಾಚಾರ ; ಒಳ್ಳೆಯ ನಡತೆ. ೭. ದೀಪದ ಬತ್ತಿ. ೮. ಆಗ್ನೇಯಾಸ್ತ್ರ. ೯. ಮೇಲಕ್ಕೆ ಕಾಣುವಂತಹುದು ; ಸ್ಪಷ್ಟವಾದುದು. ೧೦. ಗೇರು ಮರ. ೧೧. ಒಂದು ಬಗೆಯ ಔಷಧಿಗಿಡ ಚಿತ್ರಮೂಲ. ೧೨. ವಾಯುವಿಳಂಗ. ೧೩. ಮುಕ್ಕಾಯ. ೧೪. ನೆಲ್ಲಿಗಿಡ. ೧೫. ವರುಣ. ೧೬. [ಛಂದ] ಅಕ್ಷರಗಣಗಳಲ್ಲಿ ಒಂದು; ನಡುವೆಲಘುವಿರುವ ಗಣ; ರಗಣ (–U–): ಪಾವಕೋದ್ಭಾವದಿಂ ಶ್ರೀವಧೂಪಾವನಂ (ಛಂದೋಂಬು. ೨-೩೦); "ಉತ್ತಮಾಚಾರದೊಳು ಗೇರಿನೊಳು ನಚುಪಲೊಳು ಚಿತ್ರಮೂಲದೊಳಗ್ನಿಯೊಳು ಕಿಚ್ಚುಗೋಲೊಳುರಿವತ್ತಿಯೊಳು ಪಾವಕ ವೆನಿಸ್ಕು" (ಸುಂಗಣ. ೦೫೩-೬೨); "ವೀತಿಹೋತ್ರಂಗೆ ಸಲೆ ಭಲ್ಲಾತಕಿಗಂ ಚಿತ್ರಮೂಲದೊಳು ತೀವ್ರದೊಳಂ ಆತುರದಿ ಮುಾಗಿದ ವಸ್ತುಗಳೀ ತೆಱದಿಂ ಪಾವಕಾಖ್ಯಮೆನಿಸಂ" (ಶಾಪಾಶಂ. ೦೧೩). [ಸಂ.]

**ಪಾವಕದಿಕ್ಕು** (ನಾ). ಅಗ್ನಿಯ ದಿಕ್ಕು ; ಆಗ್ನೇಯ : ಪಾವಕದಿಕ್ಕಿನಂತೆ ವನದಂತೆ . . . ಕಾಮಿಜನದಂತೆ ಸಮುತ್ಕಲಿಕಾಕುಳಂ ಕೊಳಂ (ಧಿಸ್ನ ಪು. ೨-೬೩). [ಪಾವಕ + ದಿಕ್ಕು]

**ಪಾವಕನಯನ** (ನಾ). ಬೆಂಕಿಗಣ್ಣ ; ಶಿವ : ಪಾವಕನಯನನಪಾಂವ ತಾರನು : . . ಸುಖದಿಂದೆ ಸುರಗಿಯ ಚೌಡರಸನಿರ್ದ (ಚಸಪು. ೩೩–೨೦) ; ಸಕಲಜನರಾ ಜಲಪ್ರಳಯವಾಗಲ್ಕೆ ಪಾವಕನಯನಗಂದು ವೊಜೆಯಿಡೆ (ಚಕ್ಕಪು. ೩-೧೧-೩). [ಪಾವಕ + ನಯನ]

**ಪಾವಕಪಾವನೆ** (ನಾ). ಅಗ್ನಿಪರೀಕ್ಷೆಯಿಂದ ಶುದ್ಧಳೆಂದು ತೀರ್ಮಾನಿಸಲ್ಪಟ್ಟವಳು; ಸೀತೆ : ಹಾ! ರಾಘವಾ! ಪಾವಕಪಾವನೆಯುಂ ತೊಜೆಯಲ್ಕೆಂತು ಮನಂದಂದೆಯ್ ? (ರಾಮಾಕ್ಕ. ೨೩–೧೩). [ಪಾವಕ+ಪಾವನೆ]

**ಪಾವಕಾಂಬಕ** (ನಾ). = ಪಾವಕನಯನ : ಪಾವಕಾಂಬಕಮೂರ್ತಿ ಸೊಡ್ಡಳದೇವ ಬಾಚರಸಯ್ಯನೆಸಲತಿಪಾವನಾತ್ಮನು (ಚಸಪು. ೩೩–೦) ; ಇಂತಪ್ಪ ಸತ್ಪುರುಷನಾವ ಕಾರ್ಯಕ್ಕೆ ಕಳುಹಲು ಮಿಾರುವವನಲ್ಲ ಪಾವಕಾಂಬಕನೆಡೆಗೆ ಕಳುಹುವುದೆಯುಸುಚಿತಂ ಕಳುಹದಿರೆ ಸಕಲಸುರರ ಬಾಧೆ ಹಿಂಗದು (ಶಶಪೋ. ೩-೬). [ಪಾವಕ + ಅಂಬಕ]

**ಪಾವಕಾಕ್ಷಿ** (ನಾ). (ಶಿವನ) ಬೆಂಕಿಯ ಕಣ್ಣು ; ಬೆಂಕಿಯನ್ನುಗುಳುವ ಕಣ್ಣು : ನೀನಖಿಳಪಂ ನಿನ್ನ ಭಾಳದ ಪಾವಕಾಕ್ಷಿಯುಂ ತೆಗೆದು ಸುಡುವಲ್ಲಿ (ಶಿಕ್ಕ ಪು. ೨-೩-೫೬). [ ಪಾವಕ + ಅಕ್ಷಿ ]

**ಪಾವಕಾಸ್ತ್ರ** (ನಾ). ಮಂತ್ರಿಸಿ ಬಿಟ್ಟಾಗ ಬೆಂಕಿಯನ್ನು ಸುರಿಸುವುದೆಂದು ನಂಬಲಾದ ಒಂದು ಅಸ್ತ್ರ ; ಆಗ್ನೇಯಾಸ್ತ್ರ : ಪಾವಕಾಸ್ತ್ರವು ವೊಜೆದು ಭುಗಿಭುಗಿಲೆಂದು ಹೊಗೆಯಾಸಿಸಿ ಕವಿತರಲು (ಕೌಶಿಂ. ೩೩-೫೭); ದಾಪರದೊಳೆನ್ನ ವಡಬಾಗ್ನಿಯೋ ವಿಲಯರುದ್ರನ ಹಣೆಯ ಕಣ್ಗಿಚ್ಚಿದೋ ಭಾವಿಸುವೊಡರಿಂದೆಂಟೊಲಾಮುದು ಧನಂಜಯನ ಪಾವಕಾಸ್ತ್ರಂ (ಕೃಬಿಪ. ೦೩-೦೧). [ ಪಾವಕ + ಅಸ್ತ್ರ ]

**ಪಾವಕಿ $_1$** (ನಾ). ೧. ಅಗ್ನಿಯ ಮಗ. ೨. ನೀಲ : ಪಾವಕಿಯ ಪಟುತನವ ಬಣ್ಣಿಪನಾವನಿಂದ್ರಾರಿಯನು ಗೆಲುವನು . . . ಕಲಿಗಳ ದೇವನೀ ಕಟಿಯಿಂದು ಹೊಗಳಿದ ರಾವಣನ ಮಗ ಮಂತ್ರರಂಗಳ ಬಿಟ್ಟು ಪರಿಣಮಿಸಿ (ತೌಶಿಂ. ೩೪-೧೩). ೩. ಕಾರ್ತಿಕೇಯ ; ಸ್ಕಂದ. [ ಸಂ.]

**ಪಾವಕಿ $_2$** (ನಾ). ಅಗ್ಗಿಷ್ಟಿಕೆ ; ಕುಮಟಿ : "ಪಾವಕಿ(ಕೆ)ಪೆಸರ್ ಬೆಸಕಿಲಕ್ಕು" (ಮುಂಗಣ. ೬೦-೨೦). [ಪಾವಕ + —ಇ ?]

**ಪಾವಟಣಿಗೆ** (ನಾ). ಮೆಟ್ಟಿಲು ; ಸೋಪಾನ : ನೀರು . . . ಮೊನ್ನೆ ನಾನು ಬಂದಾಗ ಎರಡು ಪಾವಟಣಿಗೆ ಕೆಳಗಿದ್ದವು (ಸಮುಕ. ೮೭): ಆಕೆ . . . ಪಾವಟಣಿಗೆಗಳನ್ನಿಳಿದು, ಕೆಳಗೆ ಬಂದಳು (ಕುಂಬಿಕಾ. ೦೦೬). [ ←ಮರಾ. ಪಾವಟಣೀ, ಪಾವಠಣೀ ]

**ಪಾವಟ** (ನಾ). = ಪಾವಟಣಿಗೆ : ಬಿಲುಪ ಪಾವಟಗಳನು ರಚಿಸುವ (ಜ್ಞಾಶಸಿಂ. ೧೭-೯) ; ನೆರೆದರಸುಗಳ ಮಧ್ಯದಲಿಯೆಂದಿದಸ್ಲಿ ಪಾವಟವು (ಕನಶಾ. ೨೭-೧೯) : ಯಶೋದೆ ಗಾಡಿಯಿಂದಿಳಿದಳು. ವಸುಧೆಯೊಂದಿಗೆ ತಿಂಗಳ ಹಿಂದೆ ಹತ್ತಿದ್ದ ಪಾವಟಗಳನ್ನೇ ಹತ್ತಿ ಮೇಲೆ ಬಂದಳು (ವಾತ್ಸಲ್ಯ. ೨೨೭). [ ←ಮರಾ. ಪಾವಟೀ / ತುಳು. ಪಾವಟಿ ; ತೆಲು ಪಾವಟ ]

**ಪಾವಟಿಕೆ, ಪಾವಟಿಗೆ** (ನಾ). = ಪಾವಟಣಿಗೆ : ನೂರಾರು ಪಾವಟಿಕೆಗಳನ್ನು ಇಳಿದ ಬಳಿಕ, ಬಾವಿಯ ಎರಡೂ ಪಾರ್ಶ್ವಗಳಿಗೆ ಬಂಕಗಳಿವೆ (ಕಲ್ಪಿ. ೯). **ಪಾವಟಿಗೆ** : ಮುತ್ತಿನ ಪಸೆಯ ಜಗುಲಿ ನೀಲದ ಪಾವಟಿಗೆ ಮಿಕ್ಕ ಮಾಣಿಕದುಸಿಕೊಸುರಿಗೆಲಸಂಗಳಿಂದಲಂಕರಿಸಿ . . . ಇಂಬುಪಡೆದುದ್ಭಾಹಮಂದಿರಂ ಮೆಱೆದುದು (ಹಾಲಾಕ್ಯ. ೧-೬-೨೭ ಪ); ರಾಜಪುತ್ರೆಯು ಹಣೆಯ ಮೇಲೆ ಮುಪ್ಪು ಇಳಿಯಬಲ್ಲೆಂದು ಪಾವಟಿಗೆಗಳನ್ನು ಇಟ್ಟಂತೆ ನಾಲ್ಕಾರು ಸುಕ್ಕುಗಳು ಇದ್ದುವು (ಸವತಿ. ೩೧). [ ಪಾವಟ + —ಇಕೆ ]

**ಪಾವಟಿಗೆ** 'ಪಾವಟಿಕೆ' ನೋ.

**ಪಾವಟಿ** 'ಪಾಪಟ್ಟೆ' ನೋ.

**ಪಾವಡ $_1$** 'ಪಾವುಡ $_1$' ನೋ.

**ಪಾವಡ $_2$** 'ಪಾವುಡ $_2$' ನೋ.

**ಪಾವಡ $_3$** (ನಾ). ಕಣದಲ್ಲಿ ಧಾನ್ಯವನ್ನು ಒಂದೆಡೆಗೆ ಸೇರಿಸಿ ರಾಶಿ ಮಾಡಲು ಅಥವಾ ನೆಲವನ್ನು ಸಮಮಾಡಲು ಬಳಸುವ (ಕಬ್ಬಿಣದ) ಸಾಧನ ; ಗೋರೆ : ಒಬ್ಬ ಕಮ್ಮಾರನು ಒಂದು ಗುದ್ದಲಿಯನ್ನು ಕೊಟ್ಟು ಪಾವಡವನ್ನು ತಕ್ಕೊಳ್ಳಲಿಕ್ಕೆ ಅಪೇಕ್ಷಿಸುತ್ತಾನೆಂದು ಕಲ್ಪಿಸುವ (ಮುಂಶಿಪಾ. ೩-೨೬೦). [ ←ಮರಾ. ಪಾವಡೇ, ಫಾವಡೇ ]

**ಹಾವಡ್ಯ**, ಪಾವುಡ್ಯ (ನಾ). ರಿಕಾಪು ; ಅಂಕವಣೆ : ಪಾವಡಗಳ ಮೆಟ್ಟಿ ವಾಘೆಗೆ ಕೈನೀಡಿ ರಾವುತರೊಡೆಯನೊಪ್ಪಿದನು (ಭರತ. ೨೯-೧೬). **ಪಾವುಡ್ಯ** : ತಂಡತಂಡದೊಳು ನಡೆವು ಬಹ ಪಾಜನು ಕಂಡು ಪಾವು [ಹಾಕಾ. ಪ್ಪು]ಡಗಳ ಮೆಟ್ಟಿ ಮುಂಡೆಯು ನೆಗಹಿ ನೋಡುವ ರಾವುತರ ಗಂಡ ಗಿಡಿಯು ಲಕ್ಕನೆಯ್ದಿದನು (ಕುಮಾರ. ೧೧-೩೯). [ ? ]

**ಪಾವಡಜಲ** (ನಾ). ಬಟ್ಟೆಯಿಂದ ಮುಚ್ಚಿ ತಂದ (ಅಭಿಷೇಕದ) ನೀರು: ಭಾವವೊಂದಿಲ್ಲದೆ ಪಾವಡಜಲ ತಂದು ತೀವಿ ಲಿಂಗಾರ್ಚನೆಗಳನು ಮೂವೇಳೆಯೊಳು ಮಾಡಿ (ಕರಸ್ಥ. ೨-೩೯).

[ ಪಾವಡ$_1$ (< ಪಾವುಡ$_1$) + ಜಲ$_2$ ]

**ಹಾವಡಿಗ**, ಹಾವಡಿಗ, ಹಾವಾಡಿಗ (ನಾ). ಹಾವುಗಳನ್ನು ಹಿಡಿದು ಆಡಿಸುವ ವೃತ್ತಿಯವನು : ಹಾವಾಡಿಸುವವನು : ಪಾವಡಿಗಂ ಪಾವಿನ ಬಟ್ಟೆಯೊಳ್ . . . ಇರುಳ್ವಟ್ಟೆಗಾಣಂ ಕಳ್ಳನ ಕಯ್ಯೊಳ್ ಸಿಕ್ಕು ವಂತೆ (ಧರ್ಮಾಮೃ. ೧೬-೧೮೮) ; ಪಾಪಂ ಪಿಡಿದನಿತಱೊಳೇ ಪಾವಡಿಗರ್ ಸುಭಟರಪ್ಪರೇ ಜಗುನೆಯು ನೀರ್ವಾಗಮಂ ಪಿಡಿವನಿತಱೊಳುರ್ವೀಶವಳಯಂ ಸುಭಟನೆಂಗುಮೇ ಹರಿ ನಿನ್ನಂ (ಜಗ. ೧೬-೯೯) : ಅಡಿಗ ಪ್ರತ್ಯಯಕ್ಕೆ – ದೇವಡಿಗಂ. ಪಾವಡಿಗಂ. ಪೂವಡಿಗಂ (ಶಮತ. ೨೦೩ ವೃತ್ತಿ). **ಹಾವಡಿಗ**: "ವ್ಯಾಳಗ್ರಾಹೀ, ಅಹಿತುಂಡಿಕಃ–ಈ ೨ ಹಾವಡಿಗಂ" (ಕರಾಮ. ೧೦೦-೯೩೯) ; ನಾನಾವರ್ಣದ ಸಂಸಾರ ಹಾವು ಹಾವ[ ಹಾಕಾ. ವಾ ]ಡಿಗನ ಸ್ನೇಹವಂತೆ (ಬಸವ. ೧೨) : ವೈನತೇಯನ ವಿಗಡಿಸಿದ ವಿಷವನು ಸದರವೊ ಹಾವಡಿಗರಿಗೆ (ಕುಮಾರ. ೦೫-೦೦) : ಹಾವ ಹರಿಕಟಕದಲಿ ಹರಹಿದ ಹಾವಡಿಗರೇ ನಾವು (ಕುರಾಣ. ೭-೦೬-೯). **ಹಾವಾಡಿಗ**: "ವ್ಯಾಳಗ್ರಾಹೀ, ಅಹಿತುಂಡೀ – ಈ ೨ ಹಾವಾಡಿಗನ ಹೆಸರು" (ನಾಚರಾ. ೯೪) ; ಕಳ್ಳ ಹಾದರಿಗ ಹಾವಾಡಿಗ ಅಪರಾರಾದಡು ಶಿವಲಾಂಛನವ ತಾಳ್ದು ಬಂದಲ್ಲಿ ಶಿವನೆಂದೇ ಪ್ರಮಾಣಿಸು ವುದು (ಸೋಮಾಮ. ೪೨-೧೭೫) : ಭೋಗಭಂಗಂ ಹಾವಾ[ ಹಾಕಾ. ವ ] ಡಿಗರೊಳ್ . . . ಅರ್ಥಪಾವಂ ಸ್ತೋತ್ರದೊಳಲ್ಲದೆ ತನ್ನೊಳಿಲ್ಲೆನಿಸಿರ್ಪುದು (ರಸ. ೧-೩೩ ವ) : ಹಾವಾಡಿಗರು. ಗೊಂದಲಿಗರು . . . ಎಲ್ಲರೂ ಸಂಘನಿಸಿ ಒಂದಾಗಿ ಇರುವವರ ತಾಳ್ಮೆಯು ಪರೀಕ್ಷೆಯನು ಮಾಡುವರೋ (ಅರಕೆ. ೩೩೪-೧೧).

[ ಪಾವು$_1$ + – ಅಡಿಗ$_2$ ]

**ಹಾವಡಿಗಿತಿ** (ನಾ). ಹಾವಾಡಿಗರ ಜಾತಿಯವಳು ಅಥವಾ ಹಾವಾಡಿಗನ ಹೆಂಡತಿ : ಪಾವಡಿಗಿತಿ. ಪೂವಡಿಗಿತಿ. ಪಾಲಿವಡಿಗಿತಿ . . . ಪಟ್ಟಸಾಲಿಗಿತಿ. ಗಾಂದಿಗಿತಿ (ಶಬ್ದಾನು. ೧೯೨ ವೃತ್ತಿ).

[ ಪಾವಡಿಗ + – ಇತಿ$_1$ (< – ಇತ್ತಿ) ]

**ಹಾವಡೆ** 'ಪಾವುಡ$_1$' ನೋ.

**ಹಾವಣೆ$_1$** 'ಪಾವುಣ' ನೋ.

**ಹಾವಣೆ$_2$** 'ಪಾವುಣೆ' ನೋ.

**ಹಾವತಿ** (ನಾ). ತಲುಪಬೇಕಾದ ವಸ್ತು. ಹಣ ಮೊದಲಾದುವು ತಲುಪಿದುವೆಂದು ಬರೆದು ಕೊಡುವ ದಾಖಲೆಪತ್ರ : ರಸೀದಿ : ತಾನು ಪೋಲೀಸ ಅಧಿಕಾರಿಯಾದುದರಿಂದ ಪಾವತಿಯನ್ನು ನೀಲಲೋಚನೆಯ ಹೆಸಿನಿಂದಲೇ ಬರೆಯಬೇಕೆಂದು ಹೇಳಿದ (ಶ್ರೀಪಕ. ೨೩) : ಅನೇಕ ಪಾವತಿಗಳಿಲ್ಲ. ಕೆಲವಂತೂ ಸುಳ್ಳುಪಾವತಿಗಳು ಎನ್ನುವದು ಸ್ಪಷ್ಟವಿದೆ (ಅಮಾ. ೧೩೦).

[ ←ಹಿಂ. ಮರಾ. ಪಾವತಿ ]

**ಪಾವತಿದಾರ** (ನಾ). ಹಣವನ್ನು ಕಟ್ಟಬೇಕಾದವನು, – ಕೊಡಬೇಕಾದವನು : (Drawer. ಶಾಶಿ. ೩೩).

[ ಪಾವತಿ + – ದಾರ$_4$ ]

**ಪಾವತಿಪುಸ್ತಕ** (ನಾ). ರಸೀದಿಗಳನ್ನು ಬರೆಯುವ ಪುಸ್ತಕ ; ರಸೀದಿ ಪುಸ್ತಕ : ಕಿಸೆಯಾಗ ಅದ ಅಲ್ಲಾ ಪಾವತಿಪುಸ್ತಕ (ತಿರುಗು. ೧೨).

[ಪಾವತಿ + ಪುಸ್ತಕ]

**ಪಾವನ** (ಗು). ೧. ಹಸನಂಗೊಳಿಸುವ ; ಪವಿತ್ರಗೊಳಿಸುವ : ಸುರವರ ಕಂ ಸುರವಕ್ತ್ರಪಾವನಸದಾಚಾರಂ . . . ನಂದನಂ ಪುಟ್ಟಿದಂ (ಪುಷ್ಪ. ೧೬-೧೧). ೨. ಪರಿಶುದ್ಧವಾದ ; ಪವಿತ್ರವಾದ : ಪಾವನಕ್ಷೀರವುಂ ಕೊಡುವ ಕೆಚ್ಚಲ ಮಾಂಸವಾವ ಲೇಸು (ಕವಿರಾ. ೭-೧೭); ವರಧನುಷ್ಕೋಟಿಯಲಿ ಮಿಂದೀಶ್ವರಪದಾಂಬುಜಕೆಱಗಿ . . . ತತ್ತೀರ್ಥ ಸೇವಾಪರಮಪಾವನಕರಣನಾದನು (ಕುಮಾ. ೦೯-೧೩) ; ಕಳೇಬರವನರ್ಪಿಸುವೆ ಪಾವನ ಸರಿತ್ಪತಿಯು ವಿಸ್ಫುರತೌದಾರ್ಯಕ್ಕೆ ! (ಚಿತ್ರಾಂಗ. ೩೩-೦೭೯೮). (ನಾ). ೩. ಶುದ್ಧವಾದುದು; ಪವಿತ್ರವಾದುದು: "ಶುಚಿ, ಮೇಧ್ಯಂ, ಪವಿತ್ರಂ, ಪುಣ್ಯಂ, ಪಾವನಂ — ಈ ೫ ಶುದ್ಧವಪ್ಪ ವಸ್ತು" (ಕರಾಮ. ೨೨-೧೩೨) ; ಶರಣ ನಡೆದುದೆ ಪಾವನ ಕಾಣಿರೊ (ಬಸವ. ೧೭೩) : ಪ್ರಚುರ ಕಾಳಿಂದೀವನಂ ಪಾವನಂ (ಜಗ. ೩-೩೬). ೪. ಪವಿತ್ರಗೊಳಿಸುವವನು : ದೇವನನಱಿದು ಪೂಜಿಸಿದಾತ ಷಡುದರಂ ಶನಕ್ಕಧಿಕ ಜಗಕ್ಕೆ ಪಾವನ (ಬಸವ. ೬೦೭) : ರಾಜೀವಪೀಠನ ಪಿತನೆ ಜಗತೀಪಾವನನೆ . . . ಕಾವುದಾನತಜನವ (ಕುಮಾ. ೧-೧) ; ಅವ ವರ್ಣದಲು ದಿಸಿರಲು ಸದ್ಭಾವನನೆ ಪಾವನನು (ಗಗಕಾ. ೧೯-೩೮). ೫. ಬೆಂಕಿ ; ಅಗ್ನಿ. ೬. ಶುದ್ಧಗೊಳಿಸುವ ನೀರು. ಗೋಮಯ ಮೊದಲಾದ ವಸ್ತು. ೭. ತಪಸ್ಸು. ೮. [ ಛಂದ ] ಪ್ರತಿಯೊಂದು ಪಾದದಲ್ಲಿ ಮೂರು ಅಕ್ಷರಗಳಿರುವ ಒಂದು ಸಮಪಾದ ವೃತ್ತ : ಪಾವಕೋದ್ಭಾವದಿಂ ಶ್ರೀವಧೂಪಾವನಂ (ಛಂದೋಂಬು. ೨-೩೮). [ಸಂ.]

**ಪಾವನಗೊಳಿಸು** (ಕ್ರಿ). ಪವಿತ್ರಗೊಳಿಸು ; ಪುನೀತಗೊಳಿಸು : ಬಾ ದೊರೆಯೆ ! . . . ಬಡೆಗಣನದಿರು ನಾನು ಬಡವನೆಂದು ಜೀವದಾಪೋಷಣೆಯನಿತ್ತು ಪಾವನಗೊಳಿಸು (ಬಿಕಾಸಿ. ೪೮-೩).

[ಪಾವನ + ಕೊಳ್$_1$ + – ಇಸು$_3$]

**ಪಾವನಚಾರಿತ್ರ** (ನಾ). ಒಳ್ಳೆಯ ಶೀಲ ; ಶುದ್ಧವಾದ ನಡವಳಿಕೆ : ಪಾವನಚಾರಿತ್ರಾಪಥಸೇವೆಯೆ ದೋಷತ್ರಯಂಗಳಂ ಕಿಡಿಸೆ ತಪೋಭಾವನೆಯೊಳಿಸೆಪನಾಮುಯನಾವನುಮಾ ಮುನಿಯೆ ಪರಮಧರ್ಮಾಕ್ಷ್ಯಾರ್ಥಂ (ಬಕೃ. ೬-೬೧).

[ ಪಾವನ + ಚಾರಿತ್ರ ]

**ಪಾವನತೆ** (ನಾ). ಪವಿತ್ರತೆ ; ಪಾವಿತ್ರ್ಯ ; ಪರಿಶುದ್ಧಿ : ಪಾವನತೆಗೆ ಜಯಿಸಿ ಜಗತ್ಪಾವನಂ ಗಂಗೆ ಪೊರ್ದಿ ಪೊಗಟ್ಟಂದದಿನಿಂದೀವರಪರಿಮಳರತ ಮಧುಪಾವಳಿರವದೆಸೆವುವಪಾಳಪರಿಖಾವಳಯಂ (ಶಾಕ್ಕರ್ಣ. ೧೬-೩೩) ; ಮಾಸುಟಿ ಬೌದಾರ್ಯ . . . ನಿಜಪಾವನತೆಯೊಪ್ಪಲು ನೋಡಿ ಶಿವ ಸಮಯಸ್ಥರಂ ಮಾಡಿ (ಬಸಕೃ. ೩೨-೩೩). [ಸಂ. ಪಾವನತಾ]

**ಪಾವನತ್ವ** (ನಾ). ಪಾವನತೆ ; ಪವಿತ್ರತೆ ; ಪರಿಶುದ್ಧಿ : ನೀವು ಬಿಜಯಂಗೆಯ್ದು ಕರುಣಾಭಾವಗುಣದಿಂ ನೋಡಿ ಮರ್ತ್ಯಪನೋದಿ ಮನುಜರನೆಲ್ಲರಂ ನಿಜಭಕ್ತಿಯುಕ್ತಿಯಲಿ ಪಾವನತ್ವವನಿತ್ತು ಪಾಲಿಸಿ ಕಾವುದೆನ್ನಯ ಜನ್ಮವನು (ಬಸಕೃ. ೧-೬೦) ; ಪಾವನತ್ವದಿ ನೋಡೆ ಅಮರಗಂಗಾಜನಕ ದೇವತ್ವದಲಿ ನೋಡೆ ದಿವಿಜರೊಡೆಯ (ಪುರಂದ. ೨-೧೩೪-೨).

[ಸಂ.]

**ಪಾವನಿ** (ನಾ). ೧. ವಾಯುದೇವನ ಮಗ. ೨. ಹನುಮಂತ ; ಆಂಜನೇಯ : ಪಾವನಿ ಜಾಂಬವಾಂಗದ . . . ಸುಗ್ರೀವ ವಿಯಚ್ಚರ ಪ್ರಮುಖರೇಱಿದ ರತ್ನವಿಮಾನಮಾಲೆ ಶೋಭಾವಹವಾಗಿ ಸುತ್ತಿ ಬರೆ (ಶಂರಾಮ. ೧೩-೯೨) ; ಭಾನುಜನೇಂಬುದು ಬೇಟ್ವವರ್ಗ್ಗೆ ಪಾವನಿ ಪರ ನಾರಿಗೆಂಬುದು ಧರಿತ್ರಿ ನೆಗಟ್ಟಿಯ ತಂತ್ರಪಾಟನಾಮನಂ (ಎಶಿ. XII. ಪಾವುಗ. ೪೩-೩೧ ; 1161). ೩. ಭೀಮಸೇನ : ಪಾವನಿಯೊಳ್ ಪೊಣರ್ದಂ ಮಗಧಾವನಿಪಂ ಪೊಣರಲಂಜಿದಂ ನಿನಗೆ (ಜಗ. ೧೬-೩).

[ಸಂ.]

**ಪಾೞ್ಗಿಡಪು.** ಹಾಳುಗೆಡವು. ಹಾಳುಗೆಡಹು (ಕ್ರಿ). ಹಾಳು ಮಾಡು; ಕೆಡಿಸು; ನಾಶಗೊಳಿಸು: ನಿಸತದಾವ ಪಾತಕಂ ಸೆಳೆದು ಸೇಡುಗಾಳಿ ಯನ್ ಪಾೞ್ಗಿಡಪಿದೆ ಕಿಡಿಸಿದೆ ದೇವಸಪಾಕೃತಿಯುಮನ್? (ಅಜಿತ. ೪೦-೬೬). **ಹಾಳುಗೆಡವು**: ಪರ್ಷಿಯನ್ನರು ಈ ಸುಂದರ ಮಂದಿರ ಗಳನ್ನು ಹಾಳುಗೆಡವಿದರು (ಕಂಕೊ. ೧, ೦೬೦). **ಹಾಳುಗೆಡಹು**: ಹಾಳುಗಳು ಹಾಳುಗೆಡಹುಹುದಾವ್ಯರೀದ ಒಪ್ಪಿಯೆ ಹೆಚ್ಚು ಕಾಳುಗಳನ್ನು ಕೊಂಡು ಇಡುವುದು ಹಿತವಲ್ಲ (ಅಜಾಗ. ೩೩). [ಪಾೞ್+ಕಿಡಪು]

**ಪಾೞ್ಗೆಱೆ** (ನಾ). ಹಾಳಾದ ಕೆರೆ; ಹಾಳುಬಿದ್ದ ಕೆರೆ: ಕುಕವಿಯ ಕಾವ್ಯಮಂ ಸುಕವಿ ಕೇಳ್ವ... ಕವಿತಾಗುಣಮಂ ಬೆದಕಲ್ಕೆ ರತ್ನಶುಕ್ತಿಕೆಯ ನೊಜಲ್ವ ಪಾೞ್ಗೆಱೆಯೊಳೀಕ್ಷಿಸುವಂಗೆಣೆಯಾಗದಿರ್ಕುಮೇ (ಜಕಚ. ೦-೦೦). [ಪಾೞ್+ಕೆಱೆ]

**ಪಾೞ್ಗೋಡೆ.** ಹಾಳುಗೋಡೆ (ನಾ). ಹಾಳು ಬಿದ್ದ ಗೋಡೆ; ಕಟ್ಟಡ ಬಿದ್ದು ಹೋಗಿ ಅವಶೇಷವಾಗಿ ನಿಂತ ಗೋಡೆ: ಅಂಗಡಿಯ ಸಂದಿಗೆಳೊಳುತ್ತುಂಗ... ಪಕ್ಕದಲಿ ಪಾೞ್ಗೋಡೆಗಳೊಳ್ ಪೊಂಗುತ್ತುಂ ನೆರೆದರ್ ಕುಟಿಲಾಂಗನೆಯರ್ ಜಾರಕಾಂತರಂ ನಲವಿಂದಂ (ಉದ್ಭಟ. ೦೦-೦೬೬). **ಹಾಳುಗೋಡೆ**: ಹಾದರಕ್ಕೆ ಹೋದರೆ ಕಳ್ಳದಮ್ಮ ಹಾಯಿತ್ತು ಹಾಳುಗೋಡೆಗೆ ಹೋದರೆ ಚೇಳೂರಿತ್ತು (ಜಕ. ೦೦೦); ಕತ್ತೆ ತಪ್ಪಿಸಿಕೊಂಡರೆ ಹಾಳುಗೋಡೆ (ಗಾದೆ). [ಪಾೞ್+ಗೋಡೆ]

**ಪಾೞ್ದಿನ** (ನಾ). ಹಾಳಾದ ದಿವಸ; ವ್ಯರ್ಥವಾದ ದಿವಸ: ಪಾೞ್ದಿನಂ ಜೀವದಪೂಜೆಯಿಸಗೆಯದೊರ್ವನ ಬಾೞ್ದಿನಸವ ಬಟೀಗಡಚುಗಲ್ಲು (ಕಂಜಕ್. ೦-೪-೮). [ಪಾೞ್+ದಿನ]

**ಪಾೞ್ದೇಗುಲ.** ಪಾಳ್ದೇಗುಲ. ಹಾಳುದೇಗುಲ (ನಾ). ಹಾಳು ಬಿದ್ದ ದೇವಸ್ಥಾನ; ಹಾಳಾದ ದೇವಾಲಯ: ಪಗಲೆಲ್ಲಂ ಪಾೞ್ದೇಗುಲ ದೇಳೆಯಾವಾಸದಿಂ ತಾಂ ತೊಸ್ಸನಾಗಿ... ಇರುಳಪ್ಪಾಗಳ್ ದಿವ್ಯಮಪ್ಪ ತನ್ನ ಸ್ವಾಭಾವಿಕಮಪ್ಪ ಮುನ್ನಿನ ರೂಪಮಂ ಕೈಕೊಂಡು (ವಡ್ಡಾರಾ. ೦೩೨-೨೦). **ಪಾಳ್ದೇಗುಲ**: ಬಾಹಿರದ ಪಾಳ್ದೇಗುಲದೊಳಗೆ ಸಾವಿರ ಸೊಡರುಗಳನಿಕ್ಕಿ ಭಜಿಸುವ ನೇಮವಾತಂಗೆ (ಬಸವು. ೩೦-೫೯). **ಹಾಳುದೇಗುಲ**: ಶಿವನಿಗೆ ಹಾಳುದೇಗುಲವುಂಟು (ಪಹಾರೀ. ಬ. ೬೮-೦೯೯). [ಪಾೞ್+ದೇಗುಲ]

**ಪಾೞ್ನೆಲ.** ಪಾಳ್ನೆಲ. ಪಾಳುನೆಲ (ನಾ). ೧. ಕೇಡು ಮಾಡುವ ಭೂಮಿ; ಅಶುಭಕರವಾದ ಭೂಮಿ: ಈ ನೆಲನಿದು ಪಾೞ್ನೆಲನೆನಗೆ ದಿನಪಸುತನಂ ಕೊಲಿಸಿದ ನೆಲನೊಡನೆ ಮತ್ತೆ ಪುದುವಾೞ್ದಪನೇ (ಗದಾಯು. ೩-೯೬). **ಪಾಳ್ನೆಲ**: ೨. ಹಾಳುಬಿದ್ದ ಭೂಮಿ: ವಿಮಲ ಪುಣ್ಯಕ್ಷೇತ್ರಮುಮಂ ಕಾಡ ಪಾಳ್ನೆಲಮುಮಂ... ನಿಜ್ಜೆಕದೃಷ್ಟಿಗೆ ಸಮಂ (ಶಬರ. ೦೨೪-೨೦). **ಪಾಳುನೆಲ**: ೩. ನಿಸ್ಸಾರವಾದ ನೆಲ; ಸತ್ವರಹಿತವಾದ ಭೂಮಿ: ಗೆಲವೇನಿಲ್ಲದ ಯುದ್ಧ ಪಾಳುನೆಲದೊಳ್ ಬೇಸಾಯ... ಫಲದ ಭ್ರಾಂತಿಯ ತೋರ್ಪುವೈ (ಸೋಮೇಶ. ೨೩). [ಪಾೞ್+ನೆಲ]

**ಪಾೞ್ಬಸದಿ** (ನಾ). ಹಾಳು ಬಿದ್ದ ಜಿನದೇವಾಲಯ,...ಬಸದಿ: ಪಾೞ್ಬಸದಿಯ ಪೆಣ್ಣ ಜೋಹವಪೊಲೊಪ್ಪಿದಳೊರ್ವಳನಂಗರಾಗದಿಂ (ಶಾಂತಿಪು. ೬-೮೮). [ಪಾೞ್+ಬಸದಿ]

**ಪಾೞ್ಬಾವಿ** 'ಪಾೞ್ಬಾವಿ' ನೋ.

**ಪಾೞ್ಮನ** (ನಾ). ಕೆಟ್ಟ ಮನಸ್ಸು; ದುರ್ಬುದ್ಧಿ: ಕೋಟಲೆಗೊಳಗಪ್ಪ ಪಾೞ್ಮನದ ಮಾನಸರಂ ಸುಡು ಸಂದ ಗೊಡ್ಡರಂ (ಶಂಕರಶ. ೯-೮೦). [ಪಾೞ್+ಮನ]

**ಪಾೞ್ಮನೆ.** ಪಾಳುಮನೆ. ಪಾಳ್ಮನೆ, ಹಾಳುಮನೆ, ಹಾಳ್ಮನೆ, ಹಾೞ್ಮನೆ (ನಾ). ಬಿದ್ದು ಹಾಳಾದ ಮನೆ; ಬಿದ್ದುಹೋದ ಮನೆ: ಪುಟಿತ ನಾಯಂ ಕಂಡಂತೆ ಕಂಡಕಂಡರೆಲ್ಲಮೊರ್ವಟ್ಟಿ ಪಾೞ್ಮನೆಯಂ ಪೊಕ್ಕು (ಶಾಂತಿಪು. ೩೫೦); ಕೆಮ್ಮನೆ ಪಾೞ್ಮನೆಯೊಳ್ ಗುಜುಗುಮ್ಮನೆ ಸುಟೀದಿರದೆ ಪೋಪಮಜಿತನ ಬಟೀಯಂ (ಅಜಿತ. ೩-೧೨೫); ಕೆಮ್ಮ್ನ ತೊನೆದು ಪಾಣಾದರಸಾಲ್ತಸದಿಂ ಪುಗುವಂತು ದೇವಗತಿ ಪಾೞ್ಮನೆಯೊ (ರಡ್ಡುಸ್. ೬-೦೬೨); ಆ ಲಕ್ಷ್ಮಿಯಾ ರೂಪುಮಾ ಹರಿಯಂ ಬೇವಿನ ಸುಗ್ಗಿ ಪಾೞ್ಮನೆಯ ಚಿತ್ರಂ ಕಾಡ ಚಂದ್ರಾತಪಂ (ಅನಂಪು. ೯-೩೯). **ಪಾಳುಮನೆ**: ಆಸೆಯಿಲ್ಲದ ಬದುಕು ಬದುಕೆ... ಪಾಳುಮನೆಯಲಿ ಬೆಳಕು ಬೆಳಕೆ? (ಕಾಂ. ೯೩-೦೩). **ಪಾಳ್ಮನೆ**: 'ಪಾಳ್ಮನೆಹಾಳೆ' ಪರಾ. **ಹಾಳುಮನೆ**: ಹಾಳುಮನೆಯ ಹೊಕ್ಕು ಒಡಲು ಉರಿಯುತಿದೆ (ಪುರಂದ. ೨-೯೯-೧); ಮೌನವಾಗಿ ಅವರು ನಡೆದು ಹೋಗಲು ಸ್ವಲ್ಪ ಸಮಯದಲ್ಲಿ ಒಂದು ಹಾಳುಮನೆಯು ತೋರಿತು (ಮತಕ. ೭). **ಹಾಳ್ಮನೆ**: ತೋಟದಲ್ಲಿ ಒಂದು ಹಾಳ್ಮನೆಯಿದೆ (ಆಡು). **ಹಾೞ್ಮನೆ**: 'ಹಾೞ್ಮನೆಹಾೞ' ಪರಾ. [ಪಾೞ್+ಮನೆ]

**ಪಾೞ್ಮನೆಪಾೞ**, ಪಾಳ್ಮನೆಹಾಳ, ಹಾೞ್ಮನೆಹಾೞ (ನಾ). ೧. ತುಡುಗು ನಾಯಿ; ಕಳ್ಳನಾಯಿ: "ಪಾೞ್ಮನೆಪಾೞು ತುತುಗುಣಿ" (ಶಶು. ೬೫). **ಪಾಳ್ಮನೆಹಾಳ**: ೧. ತೋಳ್ವಲಮಂ ರಣಾಂಗಣದೊಳೆಲ್ಲರ್ಗಂದು ನಾಂ ತೋಱುವೆಂ ಬಡವೆಂ ಪಾಳ್ಮನೆಹಾಳನು ಬಡಿವೋಲ್ಪಿಕ್ಕಾದ ದೇವರ್ಕಳಂ (ಜಂಬೂ. ೦೦-೩೫). **ಹಾೞ್ಮನೆಹಾೞ**: ೧. "ಹಾೞ್ಮನೆಹಾೞಂ-ತುಡುಗುಣಿ ನಾಯ್" (ಶಮದ. ಶಂ. ೦). ೨. ನಾಯಿ; ಶ್ವಾನ: "ಸೊಣಗ ಹಾೞ್ಮನೆ ಹಾೞ ಶ್ವಾನ ಕುಕ್ಕುರನೆಂಬಿವೆನಿಸೆ ನಾಯ್ವೆಸರು" (ಕಬ್ಬಿಗ. ೩೨). [ಪಾೞ್ಮನೆ+ಪಾೞ್+ ‑ಅ]

**ಪಾೞ್ಮಸಗು** (ಕ್ರಿ). ಹಾಳಾದಂತೆ ತೋರು; ಹಾಳುಸುರಿ; ಶೂನ್ಯ ವೆನಿಸು: ದೆಸೆ ಪಾೞ್ಮಸಗಿರ್ದಪುದಂಥನಾದೆನಾರ್ ಶರಣೆನಗೆ (ಶಾಂತಿಪು. ೯೦೨). [ಪಾೞ್+ಮಸಗು]

**ಪಾೞ್ವಕ್ಕೆ** (ನಾ). ಹಾಳುಬಿದ್ದ ಮನೆ: 'ಪಾೞ್ವಕ್ಕೆವಡು' ಪರಾ. [ಪಾೞ್+ಪಕ್ಕೆ₁(<ಪಟ್ಕೆ)]

**ಪಾೞ್ವಕ್ಕೆವಡು** (ಕ್ರಿ). ಹಾಳುಮನೆಯಲ್ಲಿ ವಾಸಿಸು: ಈ ಪಟುವಂ ಪ್ರಾಣಮಾನ ಕೈಯೊಡಗುಡುವಂತೆನ್ನ ಕೈಯೊಳ್ಕೊಟ್ಟು ಮದೀಯ ಪ್ರಾಣ ವಲ್ಲಭನಂ ... ಅಱಿಸೆಂದಟ್ಟಿದೊಡೆ ಬಂದಿದನಿಲ್ಲಿ ಪಸರಿಸಿ ಪಾೞ್ವ[ಟ್ಟಿ]ಕ್ಕೆ ವಟ್ಟಿರ್ದೆಂ (ಅಂಶು. ೪-೨೦ ಪ). [ಪಾೞ್ವಕ್ಕೆ+ಪಡು₁]

**ಪಾೞ್ವಸಿಱ್**, ಪಾಳ್ವಸಿಱ್ (ನಾ). ಬರಿಹೊಟ್ಟೆ; ಹಾಳುಹೊಟ್ಟೆ: ಪಾೞ್ವಸಿಱೊಳ್ ಸಾಸವೆಯಂ ಕುಡಿದರಂತೆ ಮಱಿಗಿ (ರಡ್ಡುಸ್. ೦೦-೦೬೨). **ಪಾಳ್ವಸಿಱ್**: ಕೆಕ್ಕಳಗಣ್ ಕೆದಱಿದ ಕೆಂಗೂದಲ್ ಮೊಕ್ಕ ನೊಸಲ್ ನಿಡುಕುಂಗೋಣ್ ಬಿಡುಬಾಯಕ್ಕುಳಿಸಿದ ಪಾಳ್ವಸಿಱ್ (ಕಮಲಾ. ೭-೨೬). [ಪಾೞ್+ಬಸಿಱ್]

**ಪಾೞ್ಬಾವಿ**, ಪಾಳುಬಾವಿ, ಪಾೞ್ಬ್ಬಾವಿ, ಹಾಳುಬಾವಿ, ಹಾಳುಭಾವಿ (ನಾ). ಬಳಕೆಯಿಲ್ಲದೆ ಹಾಳು ಬಿದ್ದ ಬಾವಿ; ನಿರುಪಯುಕ್ತವಾದ ಬಾವಿ: ತದ್ವಿಜಂ ಜಳಕುಟಪ್ರಹಾರದಿಂ ಕಾಲ್ಮುಱಿದು ಪುಟಿತು ಪಾೞ್ಬಾವಿ ಯೊಳ್ ಪೊಕ್ಕು ಸತ್ತು (ಶಾಂತಿಪು. ೩೫೦). **ಪಾಳುಬಾವಿ**: ಸಲೆ ಸೋಲಿತ್ತು ಪಾಳುಬಾವಿಯ ಜಲಮಂ ತೆಗೆಯಲ್ಕೆ ಮಕರಕೇತನನಿಂದಂಕುರಿ ಸಿಕ್ಕಿದ ನೀರದ ಬಟ ಲನನುಕರಿಸಿತ್ತು ಕಾಂತೆಯೋರ್ಪಳ ನಯನಂ (ರಡ್ಡುಸ್. ೭-೨೦೮). **ಪಾೞ್ಬ್ಬಾವಿ**: ಬೀಯದಂ ಭರದ ನೋಡು ತ್ತೊಂದು ಪಾೞ್ಬ್ಬಾವಿಯೊಳ್ ಕೆಡೆವಾಗಳ್ ಮರವಟ್ಟು ಮೂರ್ಛೆ ವಡೆದಿರ್ದಂ (ಧರ. ೪-೨೨೬). **ಹಾಳುಬಾವಿ**: ಮುಬಾರಕನು ಕಾಣದೆ ಒಂದು ಹಾಳುಬಾವಿಯಲ್ಲಿ ಬಿದನು (ಜೀತು. ೨೨೦); ಹಳಿಯೋರಿ ಇಳು

ಕಲು ಇಳಿದರೆ ತೀರಿತು, ಅಲ್ಲಿ ಹಾಳುಬಾವಿಯಿದೆ (ಹೊಸ್ತ. ೦೩೦). **ಹಾಳುಭಾವಿ** : ಹುಟ್ಟುಕುರುಡ ಹಾಳುಭಾವಿಲಿ ಬಿದ್ದ (ಗಾದೆ).

[ ಪಾಳ್ + ಬಾವಿ ]

**-ಪಿ** (ಪ್ರ). ಒಂದು ಕೃದಂತ ಭಾವನಾಮ ಪ್ರತ್ಯಯ : ಕನ್ನಡದಲ್ಲಿ 'ಪಿ' ಪ್ರತ್ಯಯವೆಂದು ಹೇಳುವ ಶಬ್ದಗಳೆಂದರೆ ನೋಂಪಿ ಮತ್ತು ಕಲ್ಪಿ ಎಂಬುವು ಎರಡು ಮಾತ್ರ (ಶಂಶಾಶ. ೨೦೦). 'ಕಲ್ಪಿ', 'ಕೇಳ್ಪಿ' ಪರಾ.

**ಪಿಂ** 'ಪಿನ್' ನೋ.

**ಪಿಂಕಣಸು** 'ಪೆಂಗಣಸು' ನೋ.

**ಪಿಂಕುಳಿ** 'ಪೆಂಕುಳಿ' ನೋ.

**ಪಿಂಗ** (ಗು). ೧. ಕಂದುಬಣ್ಣದಿಂದ ಕೂಡಿದ ; ಕಂದುಬಣ್ಣದ : ಪಿಂಗ ಜಟಾಳಿ ತಾವರೆಯ ಸೂತ್ರದೊಳಾದ ಜನ್ನವಿರಂ ಮಾಕೂಲದ ಕೋವಣಂ ಕರವೊಡಂಬಡೆ ನೋಟಕರ್ಕಳನಾ ತಪಸ್ವಿ ಮರುಳ್ಚಿದಂ (ಶಂಶಾ. ೬-೬). (ನಾ). ೨. ಕಂದುಬಣ್ಣ : ಕಪಿಲವರ್ಣ : "ಪಿಂಗಃ, ಪಿಶಂಗಃ — ಈ ೨ ಕಪಿಲವರ್ಣಂ" (ಶಬ್ದಾಯು. ೦೨೦-೩೦). ೩. ಒಂದು ಬಗೆಯ ಪಕ್ಷಿ ; ಕಾಡುಪಾರಿವಾಳ : "ಪಿಂಗಂ ಬೆಳುಪವೊಸಿಸಿಕ್ಕು" (ಮುಂಗರಾ. ೩೨-೦೦).

[ ಸಂ. ]

**ಪಿಂಗಚಕ್ಷು** (ನಾ). ೧. ಏಡಿ ; ನಳ್ಳಿ. ೨. ಕೆಂಗಣ್ಣುಳ್ಳವನು : ದುರ್ಯೋಧನ : ಕರ್ಣ ಭೀಷ್ಮಾದ್ಯುತಧ್ವಾನಕಠೋರಂ ಪಿಂಗಚಕ್ಷುರ್ಬಲ ಮನವಮು ವೂಲ್ರೊಪ್ಪುತಿರ್ದತ್ತರಣ್ಯಂ (ಕಶಂ. ೩-೨೯).

[ ಸಂ. ಪಿಂಗಚಕ್ಷುಸ್ ]

**ಪಿಂಗಟ** (ನಾ). = ಪಿಂಗ ೨. : ಕ್ರಮವಾಗಿ ಕಿತ್ತಳೆಬಣ್ಣ, ಅರಿಶಿಣ, ಹಸುರು ಪಿಂಗಟ, ನೀಲ . . . ಈ ಪ್ರಕಾರ ಬಣ್ಣಗಳ ಪಟ್ಟಿಗಳು ಕಾಣಿಸುವವು (ಮುಂಶಂತು. ೬-೯೯). [ ← ವೆರಾ. ಪಿಂಗಟ ]

**ಪಿಂಗಡಲು** (ನಾ). ಪಶ್ಚಿಮದಿಕ್ಕಿಗೆ ಇರುವ ಸಮುದ್ರ : ಪಿನ್ನೇಸಜು ಪಿಂಗಡಲೊಳಗಗುಳದ ಮುನ್ನಂ . . . ಉತ್ತಮಾಂಗಪನಾಗಸದ ಅತ್ತ ಪಾಜುವ ತೆಜದಿಂದೆಚ್ಚನು (ಶೀಮಸ. ೨೬-೦೬೬) ; ಪ್ರಿಯಮಿತ್ರಂ ಪಿಂಗಡಲ ಮಡುವಿನೊಳ್ ಲಯಮಾದುವನಜದಂ ಸುಖಿಸುವುದಿದು ನಯಮೋ (ಜಯಾ. ೦೩-೬೦). [ ಪಿಂ (< ಪಿನ್) + ಕಡಲು (< ಕಡಲ್) ]

**ಪಿಂಗಡೆ**, ಹಿಂಗಡ (ನಾ). ೧. ಹಿಂಭಾಗ : ಹಿಂದುಗಡೆ : "ಪಿಂತಿಲ್ ಪೆಜಗು ಪೆಪವೊನಲ್ ಪಿಂಗಡೆ" (ಅಭ್ಯ. ೯೩); ಪಿಂಗಡೆಯೊಳಗೆ ಜತನವಿರು ಮಾಚಿಭಟ್ಟ (ಅರಾಶ. ೦-೩-೦೩). ೨. ಪೂರ್ವಕಾಲ ; ಹಿಂದಿನ ಕಾಲ : ಒಡೆಯ ಪೇಳ್ವಿನಗೇನು ದುಗುಡವೆಂದೆನಲು ಪಿಂಗಡೆಯ ಶುಗ್ಧಿಯನುಸಿರಿದನು (ಪೋಕಶ. ೫೦-೦೬). **ಹಿಂಗಡೆ**$_1$ : ೧. "ಪಡಮಟ್ಟು, ಪೆಜಗು, ಪೆಜತು, ಪಿಂತಿಲ್ — ಈ ೪ ಹಿಂ[ನಾಶಾಂ. ಪಿಂ]ಗಡೆಗೆ ಪೆಸರ್" (ಶಬಾ. ೬೩-೯೩೩); ಸಂಗಡಿಸಿ ನಲಿನಲಿದು ನಡೆವ ತುರಂಗ ಕರಿಘಟೆಗಳ ವಿಕೀರ್ಣದ ಹಿಂಗಡೆಯ ಬಿಜ್ಜಳವಾಹೀಶನ ಮುಂಗಡೆಯೊಳೊಪ್ಪಿ (ಚಕ್ರ. ೩-೯೯) ; ಭೂವರನ ಹಿಂಗಡೆಯೆ ಪರಮಸಂತೋಷದೆ ನಡೆದು ಬರುವ ಬಲುಸಿರಿಯ ಸಂಭ್ರಮವನೇನೆಂಬೆ (ಕಂಸಾ. ೨೩-೩) ; ಕಳ್ಳನು ಅವರನ್ನು ಮನೆಯ ಹಿಂಗಡೆಯುದ್ದ . . . ಹಳ್ಳಕ್ಕೆ ಕರೆದೊಯ್ದು ಅಲ್ಲಿದ್ದ ಒಂದು ಕಲ್ಲನ್ನೆತ್ತಿದನು (ಮಹಿಶ. ೦೦). 'ಮುಂಗಡ' ಪರಾ.

[ ಪಿಂ (< ಪಿನ್) + ಕಡೆ ]

**ಪಿಂಗತೆ**, ಹಿಂಗತೆ (ನಾ). ಹಿಂದೆ ನಡೆದ ಕತೆ ; ಹಿಂದಿನ ಕತೆ : ಇಂತು ಪಿಂಗತೆಗಳಂ ಪೇಳ್ದುವಜನೀನಾದುದು (ಅರಾಶ. ೦-೦೦-೨೦). **ಹಿಂಗತೆ** : ಇದು ಮೂಲದಲ್ಲಿ ಅರಂಭವಲ್ಲಿಯೇ ಬಂದಿದೆ. ನಾಗಚಂದ್ರನಲ್ಲಿ ಒಂದು ಸಂದರ್ಭದಲ್ಲಿ ಹಿಂಗತೆಯಾಗಿ ಹೇಳಲಾಗಿದೆ (ಶಾಶ. ೦೨೬).

[ ಪಿಂ (< ಪಿನ್) + ಕತೆ ]

**ಪಿಂಗದಾಲ್ಚಿನ್ನಿ** (ನಾ). ದಾಲ್ಚಿನ್ನಿಯಲ್ಲಿ ಒಂದು ಬಗೆ : ಮಟ್ಟದಾಲ್ಚಿನ್ನಿ, ಪಿಂಗದಾಲ್ಚಿನ್ನಿ (ವ್ಯಶಿಗಿ. ೨೦-೬೨೦). [ ಪಿಂಗ + ದಾಲ್ಚಿನ್ನಿ (< ದಾಲಚಿನ್ನಿ) ]

**ಪಿಂಗಲ**, ಪಿಂಗಳ$_1$ (ಗು). ೧. ಕಂದುಬಣ್ಣದಿಂದ ಕೂಡಿದ ; ಕಂದುಬಣ್ಣದ : ಪಿಂಗಲ ಕಣ್ಣುಳ್ಳಾತನು ಧನಹೀನನು (ಶಾಮಂ. ೬-೬); ಪಿಂಗಲ ಜಟಾಜೂಟಕಟಂ, ತ್ರಿನೇತ್ರಂ (ಶ್ರೀಗಾಶಾ. ೯೭-೩೩೬). (ನಾ). ೨. ಕಂದುಬಣ್ಣ. ೩. ಸೂರ್ಯನ ಸೇವಕರಲ್ಲಿ ಒಬ್ಬ : ತಳೆಯೆ ಮುಂಚ್ಚಳವಂ ಪುರೋಗತ ಫಲಿತ ವೃಕ್ಷದ ಕಾಣಿಸುತ ವಿಧಿಯುಳಿದು ಮಾತರ ಪಿಂಗಲಕೋಳಿಕ್ಷುತೆಯನಾಡುವನ (ಶಶೀಶ. ೦೦-೫೦). ೪. ಸಂಸ್ಕೃತ ಛಂದಶ್ಶಾಸ್ತ್ರಕಾರರಲ್ಲಿ ಪ್ರಸಿದ್ಧನಾದ ಒಬ್ಬನು : ಇಂದುಧರನುಮಗೆ ಪೇಟ್ಟಾ ಛಂದಂ ಪಿಂಗಲ[ಶಾಶಾಂ. ಳ]ನಿನವನಿಯೊಳ್ ಪರಪಿದೊಡಾ ಛಂದೋಂಬುರಾಶಿಯೊಳ್ ಮೊಗೆತಂದದನಾತ್ಮೀಯಸತಿಗೆ ನಾಗಿನನುಸಿರ್ದಂ (ಛಂದೋಂಬು. ೦-೫೦). ೫. ಒಂದು ಬಗೆಯ ಸಣ್ಣ ಜಾತಿಯ ಗೂಬೆ. ೬. ಅರುವತ್ತು ಸಂವತ್ಸರಗಳಲ್ಲಿ ಐವತ್ತೊಂದನೆಯದು. ೭. ಒಂದು ಬಗೆಯ ಹಾವು. ೮. [ಜೈನ] ನವನಿಧಿಗಳಲ್ಲಿ ಒಂದು ; ಇದು ಮಕುಟ, ಹಾರ, ಕೇಯೂರ, ಕುಂಡಲ ಮುಂತಾದ ಭೂಷಣಗಳನ್ನು ಕೊಡುತ್ತದೆ : ಸ್ತ್ರೀಪುರುಷಯೋಗ್ಯಮಪ್ಪ ನಾನಾವಿಧಾಭರಣಂಗಳಂ ಕುಡುವ ಪಿಂಗಲನಿಧಿಯುಂ (ಶಾಸ್ತ್ರಶಿ. ೦೯-೪). **ಪಿಂಗಳ**$_1$ : ೧. ನೀರಾಂಬುದ ಶ್ಯಾಮನುಂ ಕನಕಪಿಂಗಳಜಟಾಬಂಧಕಲಾಪನುಂ . . . ಮೃಗತ್ವಕ್ಪರಿಧಾನನಿ ಮಾಗಿ ವ್ಯಾಸಭಟ್ಟಾರಕಂ ಪುಟ್ಟುವುದುಂ (ಪಂಪಭಾ. ೦-೬೫ ಶ); ಸೋಮ ಸೋಮವಿಭೂಷ . . . ಗುಣಗಾತ್ರಗಾತ್ರ ಪಿಂಗಳಜಟಾವಾರಾಮ (ಶಶಾ. ೦-೩) ; ಶೋಭಾಕರಂ ದುರಿತಭೀಕರಂ ಪಿಂಗಳಜಟಾಧಾರನಹ ರಾಜಹಾರಂ (ಉದ್ಭಟ. ೭-೦೩); ಇಹುದತುಳಪಿಂಗಳಜಟಾಪಟಲನಮಲವದ ಪದ್ಮಸದ್ಮಂಗಳಕಂಠಳದೇಶವು (ಶಾಶ. ೦-೫೦). ೬. ಪಿಂಗ್ಗಳ ಸಂವತ್ಸರದ ಭಾದ್ರಪದ [ ಮಾಸ ಬೃಹ ] ಸ್ಪತಿವಾರ ವ್ಯತಿಪಾತವಪ್ಪಾಷ್ಟಮಿಯಲು (ಕೊಪ್ಪ್ಹಾ. ೬-೯೯; 1137) ; ಸ್ವಸ್ತಿಶಕವರ್ಷಂ 1179ನೆಯ ಪಿಂಗಳ ಸಂವತ್ಸರದ ಚೈತ್ರಸು[ಶು]ದ್ಧ ೭ ಗುರುವಾರದಲು (ಕೊಪ್ಪ್ಹಾ. ೨೨-೬೬; 1257). ೮. ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ (ಆಪು. ೦೩-೩ ಶ); ಕಾಳ ಮಹಾಕಾಳ ಪಾಂಡುಕ ಪಿಂಗಳ ನೈಸರ್ಪ ಪದ್ಮ ಮಾಣವಕ ಶಂಖ ಸರ್ವರತ್ನ ನವನಿಧಿ ಪರಿಪೂರ್ಣವುಂ (ಆಪು. ೭-೨೦ ಶ); ಹಾರ ಹೀರಾವಳಿ ಮಕುಟ ಕುಂಡಲ ಕೇಯೂರಾದಿಯ ಭೂಷಣಗಳ ಮೇರೆಯಿಲ್ಲದೆ ಕೊಡುತಿಹ ಪಿಂಗಳನಿಧಿ ರಾರಾಜಿಸುತಿಹುದು (ಶಂಕ್ರಪಾಂ. ೦೯-೯೬). ೯. ತಿಳಿಯಾದ ಕೆಂಪು ಬಣ್ಣ ; ನಸುಗೆಂಪು : "ಹರಿಃ (ಕ್ರಮಂ), ಕದ್ರುಃ, ಕಡಾರಃ ಪಿಂಗಳಃ — ಈಳಿ ನಸುಗೆಂಪು" (ಶಬ್ದಾಯು. ೦೨೦-೩೦). ೧೦. ಹಳದಿ ಬಣ್ಣ ; ಹೊಂಬಣ್ಣ : ಪಿಂಗಳವಾದ ನೆಲ್ಲ ತೆನೆಯಂ ನಸುಗರ್ಚಿದ ರಕ್ತ ಚಂಚು ಪಕ್ಷಂಗಳ ಶಾದ್ವಲಚ್ಛವಿ ಮಾನಂಗೊಳೆ ಪಾಱುವ ಕೀರಮಾಲೆ . . ಪೊನ್ನ ಮಾಣಿಕದ ಪಚ್ಚೆಯ ತೋರಣದಂತೆ ರಂಜಿಕುಂ (ಜಾತ. ೪-೬೬).

[ ಸಂ. ]

**ಪಿಂಗಲಿ**, ಪಿಂಗಳಿ (ನಾ). ೧. ಒಂದು ಬಗೆಯ ಗೂಬೆ : "ಕಾಶಾರಿ ಕೌಶಿಕಾಖ್ಯಮುಲೂಕಂ ಪಿಂಗಲಿ ನಿಶಾಟನಂ ತಾನಕ್ಕುಂ" (ಅಭ್ಯಕೋ. ೯೨-೦೩). ೨. ಶಕುನದ ಹಕ್ಕಿ ; ಹಾಲಕ್ಕಿ : "ಶಕುಂತಃ, ಭಾಸಃ — ಈ ೨ ಪಿಂಗಲಿ" (ಶಬ್ದಾಯು. ೪೦-೯೯); ಪಿಂಗಲಿ . . ಗೂಗೆಯಾದಿಯಾದ ಖಗಂ ರಾಜಾಂಗಣದೊಳ್ ಚರಿಸುವೊಡೆ ಸರಂಗೆಯ್ವೊಡೆ ತಡೆಯದಾ ಗೃಹಂ ಪಾಟಕ್ಕುಂ (ಕೋಕೋಶ. ೪-೬೩) : ಉಜ್ವಲ ಶಾಸ್ತ್ರಸಿದ್ಧ ಶುಭಸೂಚನೆಯು ತೋಱಿದು ಪಿಂಗಳಿಗಳುಂ ತೋಱಿ ನಡೆದಾ ನೃಪಂ ಪೂಜಿದೀಡ ಬಟ್ಟಿನಾ ಕಾಲಿಂ

ದಳ್ಳಿ (ಜೈಮಿ. ೧೬-೯). **ಪಿಂಗಳಿ :** ೧. "ಶಾಕಿನಿ ಪಿಂಗಳಿ ನಿಶಾಟನಂ ಕೌಶಿಕವುಲೂಕಮೆನೆ ಗೂಗೆಯುಕ್ಕುಂ" (ಕುಂಗಾ. ೫೦-೯).

[< ಸಂ. ಪಿಂಗಲಾ]

**ಪಿಂಗಲೆ**, ಪಿಂಗಳೆ (ನಾ). ೧. ಒಂದು ಬಗೆಯ ಗೂಬೆ. ೨. ದಕ್ಷಿಣ ದಿಕ್ಕಿನ ಹೆಣ್ಣಾನೆ; ಕುಮುದ ದಿಗ್ಗಜದ ಪತ್ನಿ. ೩. ಶರೀರದ ಒಂದು ನಾಡಿ. **ಪಿಂಗಳೆ :** ೨. "ದ್ವಿಪವೆಗಳಭ್ರಮು ಕಪಿಲೆ ಪಿಂಗಳೆ ಸುತಾಮ್ರಪರ್ಣಿಪುರದಂತಿಯುದಂಜನಾಂಜನಾವತಿ ಸಿತದ್ವಿಪೆಯೆನಲು ಕ್ರಮದಿ" (ಕುಂಗಾ. ೧೯-೨೦) ; ಅಭ್ರಮು ಕಪಿಲೆ ಪಿಂಗಳೆ . . . ಅಂಜನಾವತಿಯುರೆಂಬ ತಮ್ಮ ತಮ್ಮ ಸ್ತ್ರೀಗಜಗಳೊಡಗೂಡಿ ಕ್ರಮದಿಂ ಭೂಮಿಯಂ ಪೊತ್ತಿರ್ದುವು (ಪಂಚ. ೧೭೭). ೩. ಇಡಾ ಪಿಂಗಳಾ ಸುಷುಮ್ನಾನಾಳ ವಿಡಿದು ಆಡುದಹೆನೆಂದರೆ ಕೂಡಲಸಂಗಮದೇವ ಮೂಗ ಕೊಯ್ಕದೆ ಮಾಣ್ಬನೆ (ಬಸವ. ೬೯೯); ಇಡೆ ಪಿಂಗಳೆಗಳೆನಿಪೆರಡು ನಾಡಿಯು ತುದಿ ಯೊಳಾಡುತ್ತಲಿರ್ದು (ಶೃಕಥ. ೪-೨-೩); ನೆಟ್ಟನಿರುತ ಸುಷುಮ್ನಾನಾಡಿಯು ಮುಟ್ಟಿ ಸವ್ಯದ ಭಾಗದೊಳು ತಾ ನಟ್ಟಿಹುದು ಈಡಾನಾಡಿ ದಕ್ಷಿಣದೊಳಗೆ ಪಿಂಗಳೆಯು (ಗಗಣ. ೪-೧೪). ೪. ಒಂದು ಬಗೆಯ ಮೃಗ,—ಪ್ರಾಣಿ : ಪಿಂಗಳೆ ಗೋಣಿ ಭಲ್ಲ ಶಶ ಜಂಬುಕ ವಾನರ ಪುಂಡರೀಕ . . . ಮೃಗೇಂದ್ರಮುಖ್ಯಮೃಗಸಂಕುಲದುಂಡುಗಾಡಿಯಿಂ ಕಂಗೊಳಿಸುತ್ತ ತುಂಗಬಹುಶೃಂಗವಿರಾಜಿತವಿಂಧ್ಯಭೂಧರಂ (ಶಾದ್ವಲಿ. ೨-೪೩).

[ ಸಂ. ಪಿಂಗಲಾ ]

**ಪಿಂಗಳ**$_1$ ' ಪಿಂಗಲ ' ನೋ.

**ಪಿಂಗಳ**$_2$ (ನಾ). ಶರೀರದ ಒಂದು ನಾಡಿ : ಈಡಾ ಪಿಂಗಳ ಸುಷುಮ್ನ ನಾಳ ಮಧ್ಯದ ಕೂಗ ಕಂಡು ಕೂಗಿದೆ (ಅನುಕಂ. ೧೫೨-೬೪೩); ನಾಸಿಕಾರಂಧ್ರದಿಂ ಇಡೆ ಪಿಂಗಳೆಂದೆರಡುನಾಡಿಗಳಿಂದೊಡಗೂಡಿದೆರಡುನಾಳಗಳಿಹವು (ಶಿವೇಶ. ೧೭೭); ಈಡ ಪಿಂಗಳ ಎರಡು ಜೋಡಿಸಿ ಸುಷುಮ್ನ ನೋಡಿ ಅರಿದೆ ಕೆವಲು ಕೊಯ್ಯನು ಮೂಗು ಕೂಡಲಸಂಗಮದೇವಯ್ಯನು (ಸಿದ್ಧಶಿ. ೭೪-೩). ' ಪಿಂಗಲೆ ' ಪರಾ. [ ಸಂ. ಪಿಂಗಲಾ ]

**ಪಿಂಗಳದೃಶ** (ನಾ). ಈಶ್ವರನಿಗೆ ಸಮಾನನಾದವನು; ಕುಬೇರ : ಪಿಂಗಳದೃಶನ ವಿಧಿಗಳನು... ಕೊಂಡೊಪ್ಪುಸವನು (ಶಿವಾಗ. ೧೦-೬೪-೩).

[ ಸಂ. ಪಿಂಗಲದೃಶ್ ]

**ಪಿಂಗಳನಾಡಿ** (ನಾ). = ಪಿಂಗಳ$_2$ : ದಕ್ಷಿಣಭಾಗದ ಪಿಂಗಳನಾಡಿಯೇ ಸೂರ್ಯನಾಡಿಯೆಂದು ಗಂಗಾನದಿಯೆಂದು ಪೇಳಲ್ಪಡುವುದು (ಅನುಕೇ. ೨೦೯-೩೩); ಗಂಗಾನಾಡಿ, ಪಿಂಗಳನಾಡಿ, ಸೂರ್ಯನಾಡಿ ಈ ಮೂರು ಹೆಸರು ಬಲಮೂಗಿನ ಉಸಿರಿಗೆ ಒಪ್ಪುವಂಥಹವು (ಚಿಕ್ಕಾಪ. ೧೩೯).

[ ಪಿಂಗಳ$_2$+ನಾಡಿ$_1$ ]

**ಪಿಂಗಳನೇತ್ರ** (ನಾ). ೧. ಕಂದುಬಣ್ಣದ ಕಣ್ಣು. ೨. "ಶಿವ" (ಹುಟ-ಕೋಶ): ಪಿಂಗಳನೇತ್ರನನೆಂತುಂ ಪಿಂಗದೆ ಪೂಜಿಸುತಮಿರ್ಪ ಮಹೇಶ್ವರಮಂ ಲಿಂಗಿಯುಮಂ ಶಿವಭಕ್ತನುಮಂ ಗಹನಂಗೆಯ್ಯರೆಮ್ಮ ಸಮಯಿಗಳೆನ್ನರ್ (ಶಬುಶ. ೪-೬೦). [ ಪಿಂಗಳ$_1$(=ಪಿಂಗಲ)+ನೇತ್ರ ]

**ಪಿಂಗಳಾಕ್ಷ** (ನಾ). ೧. ಕೆಂಗಣ್ಣು ಉಳ್ಳುದು : ಅದೆಯಂ ಕೋದೆತ್ತುತಂ ಮಾರ್ದನಿಗೆ ಮಸಗುತಂ . . . ಬಂದುದು ಮದವಿದಳಿತ್ಪಿಂಗಳಾಕ್ಷಂ ಮಹೋಕ್ಷಂ (ಅಜಿತ. ೩-೩೩). ೨. ಶಿವ. [ ಸಂ. ಪಿಂಗಲಾಕ್ಷ ]

**ಪಿಂಗಳಿ** ' ಪಿಂಗಲಿ ' ನೋ.

**ಪಿಂಗಳಿಕ** (ನಾ). ೧. ಒಂದು ಬಗೆಯ ಕೊಕ್ಕರೆ : ಕಳವಿಂಕ ಪಿಂಗಳಿಕ ಶಾಲ್ಮವರಳಿಗ (ಚನ್ನಾಂಜ. ೧೦-೩). ೨. ಒಂದು ಬಗೆಯ ಗೂಬೆ.

[ ಸಂ. ಪಿಂಗಲಿಕಾ ]

**ಪಿಂಗಳಿಸು** ' ಪೆಂಗಣಿಸು ' ನೋ.

**ಪಿಂಗಳೆ** ' ಪಿಂಗಲೆ ' ನೋ.

**ಪಿಂಗಾಕ್ಷ** (ಗು). ೧. ಕೆಂಪು ಬಣ್ಣದ ಕಣ್ಣುಳ್ಳ. (ನಾ). ೨. ಕೆಂಪು ಬಣ್ಣದ ಕಣ್ಣುಳ್ಳ ಒಂದು ಬಗೆಯ ಹಕ್ಕಿ : "ಪಿಂಗಾಕ್ಷಮೆನೆ ಕಣಜಂ" (ಕುಂಗಾ. ೫೨-೯). ೩. ಹುಲಿ : "ಪಿಂಗಾಕ್ಷ—ಬೆಕ್ಕಿನ ಕಣ್ಣಿನ ಹಾಗೆ ಕಣ್ಣುಳ್ಳದ್ದು ; ಹುಲಿ" (ಗುಂಗಾಕು. ೨೦೩). ೪. ಕೋತಿ. ೫.=ಪಿಂಗ ಚಕ್ಷು ೨ : ಪೊಕ್ಕುಡಿಮಂ ಪಿಂಗಾಕ್ಷನೂರುದ್ವಯುಮನುರುಗದಾಘಾತದಿಂ ನುಚ್ಚುನೂಱಾಗೊಡೆದುಂ . . . ಮಕುಟಮಂ (ಪಂಪಭಾ. ೬-೧೩); ಪಿಂಗಾಕ್ಷ ನತಿವಿಷಮಪರುಷವೇಷಾವೇಶಧರನಾಗಿ (ಗದಾಯು. ೩-೩೪೮). ೬. ಶಿವ : ಪಿಂಗಾಕ್ಷಂ ನಿಜಕಿಂಕರಾಗ್ನಿಬಲತೇಜೋಭಂಗದಿಂ . . . ಕೋಪಾಟೋಪಮಂ ತಾಳ್ದಿದಂ (ಶಗು. ೧೯-೧೮). [ ಸಂ. ]

**ಪಿಂಗಾಣಿ** (ನಾ). ೧. ಒಂದು ಬಗೆಯ ಬಿಳಿಯ ಜೇಡಿಮಣ್ಣು ; ಚೀನಿ ಮಣ್ಣು(ಉಕ): ಚೀನರು ಪಿಂಗಾಣಿಯನ್ನು (Porcelain) ಸುಡಲು ಕಲ್ಲಿದ್ದಿಲನ್ನು ಉಪಯೋಗಿಸುತ್ತಿದ್ದರು (ಶಿಲ್ಪಾ. ೧೫೫); ಪಿಂಗಾಣಿಯ ಫಲಕಗಳ ಮೇಲೆ ಚಿತ್ರನೆಮಾಡಿ ವ್ಯವಹರಿಸುವುದು ಬಳಕೆಗೆ ಬಂದಿತು (ಮುದ್ರಣ. ೭). ೨. ಬಿಳಿಯ ಜೇಡಿಮಣ್ಣಿನಿಂದ ಮಾಡಿದ ಪಾತ್ರೆ ಮುಂತಾದ ವಸ್ತುಗಳು : ಗಂಗೋದಕ ಹೂಜೆ ಘನರತ್ನಕೀಲಿತ ಪಿಂಗಾಣಿ ಗಂಧಲದ್ದಟ್ಟೆ . . . ಹೊಳೆವ ಬಿಜ್ಜಣಿಗೆಯು ಹೊಂಗಳು ತಂದಿರಿಸಿದರು (ಮೋಹಕ. ೧೭-೨೮); ಕೊಂಡು ಪಿಂಗಾಣಿಯನೆಸೆಯುತ್ತ ದೂರಕೆ ಮತ್ತೆ ಕೊಂಡುಕೊ ಮಿಕ್ಕ ಹಣಕೆ (ತಂಕಾಕ. ೨೩೨-೪೭); ರೇಶಿಮೆ, ಪಿಂಗಾಣಿ, ಚಾ ಈ ಮೂರು ವಸ್ತುಗಳ ಹೊರತು ಚೀನರ ಹತ್ತಿರ ವ್ಯಾಪಾರದ ಒಡವೆ ಬೇರಾವುದೂ ಇದ್ದಿರಲಿಲ್ಲ (ಶಿಶಂ. ೧೦). [ ← ಪಾರ. ಪಿಂಗಾಲ್, ಪಿಂಡಾನ್ ]

**ಪಿಂಗಾರ**, ಹಿಂಗಾರ (ನಾ). (ಕರಾ) ಅರ್ಧ ಬಿರಿದ ಅಡಕೆ ಹೂವಿನ ಕೋಶ ; ಹೊಂಬಾಳೆ : ಒಂದೆರಡು ಕಂಗುಗಳಲ್ಲಿ ಪಿಂಗಾರ ಒಡೆದು ಅಕ್ಕಿಯ ಕಣಗಳಂತೆ ಅದರ ಹುಸಿ ಹೂಗಳು ನೆಲಕ್ಕೆ ಬಿದ್ದಿದ್ದುವು (ಚಾಣ. ೧೫೫) ; ಅಲ್ಲಿನ ಗಡುಗಳು ಪಿಂಗಾರ, ಮೊಗಡ, ಕಾಯಡಕೆ, ಮಾಲೆ ಕಾಯಿ, ಪಣ್ಣಡಕೆ, ಗೋಟಡಕೆ, ಕರಿಗೋಟುಗಳನ್ನು ಉಳ್ಳವುಗಳಾಗಿದ್ದುವು (ಶಾಶಾಶಾ. ೨೩೬). **ಹಿಂಗಾರ :** ಅಡಕೆಯ ಹೂವಿನ ಹಿಂಗಾರದ ತೇರ್:— ಕೆಂಗಿನ ಹೂವಿನ ಬಂಗಾರದ ತೇರ್ . . . ಸುತ್ತುತ್ತೀವಾ ಮುತ್ತಿನ ತೇರ್ ಬಂತದೊ, ಬಂತದೊ, ಬಂತದೊ, ಪಾರ್ ! (ಅಗ್ನಿಹಂ. ೩೨-೨೨) ; ಕೈಯಲ್ಲಿ ಅಡಕೆಯ ಹಿಂಗಾರ ಹಿಡಿದು ಅವಳು ನಿಮಿತ್ತ ಹೇಳುತ್ತಿದ್ದಳು (ಕೃಕೃ. ೯೯) ; ಹಿಂಗಾರ ಇಲ್ಲದೆ ಶೃಂಗಾರ ಆಗದೋ ? (ಗಾದೆ).

[ದೇ.] ತುಳು. ಪಿಂಗರ, ಪಿಂಗರೆ, ಪಿಂಗಾರ]

**ಪಿಂಗಾಲ್**, ಹಿಂಗಾಲ್, ಹಿಂಗಾಲು (ನಾ). ೧. ಪಾದದ ಹಿಂಭಾಗ ; ಹಿಮ್ಮಡಿ : ಸೂತಿಕಾಸದನಮಂ ಪೊಕ್ಕು ದೇವಕಿಯ ಮುಂದೆ ಪಟ್ಟಿರ್ದ ಶಿಶುವಿನ ಪಿಂಗಾಲಂ ಪಿಡಿದುಕೊಂಡು ನಡೆತಂದು (ಶಗು. ೩-೧೨ ವ). ೨. ನಾಲ್ಕುಕಾಲುಗಳುಳ್ಳ ಪ್ರಾಣಿಗಳ ಹಿಂಭಾಗದ ಕಾಲುಗಳು : ನಿಮಿರ್ದಂಗಂ ನೀಳ್ದ ಮುಂಗಾಲುಡುಗಿ ನಡೆವ ಪಿಂಗಾಲ್ ಚಲದ್ವಾಲ ದಂಡಂ . . . ಕೂಡೆ ತನ್ನೊಳ್ ಬಗೆದಳವಿಗೆ ಮುಂಕೊಂಡು ಧೀಂಕಿಟ್ಟು ಪಾಯುತ್ತುಮಿರುತ್ತೋಡುತ್ತೆ ಪೀಱುತ್ತುಡಸಿ ಕೆಡಪಿತೊಂದೇಣನಂ ಚಿತ್ರಕಾಯಂ (ಗಿರಿಶ. ೦-೯೩) ; ಬಿಲ್ಲಂಬನೊಂದಾಗಿ ಪಿಡಿದೋಡಿ ಮೊಲನ ಪಿಂಗಾಲ್ವಿಡಿದು ತಿರುಪಿಟ್ಟು . . . ಕೆಡಪಿದನೋರ್ವ ಬಲವಂತ ಬೇಡನಾಗಳು (ರಾಶಿಶ. ೧೭-೭೩) ; ಪಿಂಗಾಲ್ಗಳಂ ಕೀಳ್ತು ದಾಂಟುವ ಪೂಜಿಕಾಲ್ಗೊಳ್ಳ ಮರಳಿ ಮೆಟ್ಟುವ . . . ಸುತ್ತೀಱುವ ಚಿತ್ರರಂಬಡೆದ ವಾಹಳಿತನದೊಳ್ (ರಾಜಶೇ. ೩-೧೧ ವ). **ಹಿಂಗಾಲ್ :** ೨. ಮುಂಗಾಲ ಮಡಿದು ಹಿಂಗಾಲ್ನೀಡಿ ರಥದ ತುರಂಗಮಾಲೆಗಳು ತೆಗೆದುವು (ಭರತ. ೨೪-೨೯). **ಹಿಂಗಾಲು :** ೧. ಮೇಲುಪಾಯ ರೋಹಕರ ಹಿಂಗಾಲ ಹಿಡಿದೀಡಾಡಿ ರಿಪುಗಜಘಟಾಲ

ದೊಳಗೊಂದಾನೆಯುಮಂ ತಾನೇಱಿ ಬೊಬ್ಬಿಱಿದು (ಶಬ್ದ. ೨-೦೬) ; ಕೋರದೊಡೆಗಳ . . . ಹೇರುರದ ಹಿಂಗಾಲ ಬಿರುದುಹಾಹೆಗಳಹಂಕಾರ ದಬ್ಬಿನ ದಡಿಗರಕ್ಕಸರ್ ಕೋಟಾನುಕೋಟಿಗಳದೇನೆಂಬೆನು (ಜಾತ. ೪೭-೦೪). ೨. ಸಿಂಳ ಹತಹಿತು ಕರಿಗಳನು ನೇಪಾಳಗುದುರೆಯ ಥಟ್ಟುಗಳ ಹಿಂಗಾಲಲಡೆಮದು . . . ಸುಪ್ರತೀಕಗಜ (ಶಬ್ದಕ್ರೀ. ೩-೦೩) ; ಮುಂಗಿದ ಮುಂಗಾಲಗಳ ಮುಂದಕೆ ಹೋಗುವ ಹಿಂಗಾಲುಗಳ . . . ಚಂಗುವಾಜಿನ ಮೃಗಮೃಗೀನಿಕುರುಂಬದೊಳಗಡಹಾಯ್ದುವಗಲವಲಿ (ಕೊರಟ. ೩-೬-೪೩).

[ಪಿಂ (< ಪಿನ್) + ಕಾಲ್₁]

**ಪಿಂಗಿಸು, ಹಿಂಗಿಸು** (ಕ್ರಿ). ೧. ತೊಲಗಿಸು ; ತೆಗೆ ; ಸರಿಸು ; ದೂರಮಾಡು : ಅಗ್ರಾಸನದಿಂ ಚಾಣಾಕ್ಯನಂ ಪಿಂಗಿಸೆಂದೊಡೆ (ಶಬ್ದ. ೧೪೩-೨೪) ; ಮಂದ್ರಶರ್ನೋತ್ಪನ್ನಲಜ್ಜಾರಸದಿಂದಂ ಮೋಲುದಂ ಪೆರ್ಮೊರೆಗೆ ತೆಗೆವ ಭೂಪಾಲ್ಯಗಾಳಂಗಳಂ ಪಿಂಗಿಸಿ ತತ್ಕಾಲೋಪಜಾತ ಪ್ರಚುರ ಪುಲಕಮಂ ಭೂಷಣಶ್ರೀಗೆ ಪಕ್ಕಾಗಿಸುವೀ ವ್ಯಾಪಾರಸಾರಂ ಸಮನಿಸುಗುವೆ ಕಾದಂಬರೀದೇವಿಗಾಗಳ್ (ಕಾದಂಬ. ೩೦೭) ; ಸನೆಯುಂಬು ಕಂತುವಿಂದಂ ಬಿಸುಡಿಸಿದಲರ್ಗಣ್ ಚಂದ್ರಬಿಂಬೋದಯಪ್ರಾರ್ಥನೆಯುಂ ಕರ್ನೆಯ್ದಿಲಿಂ ಪಿಂಗಿಸಿ ಕಳೆದ ಮೊಗಂ . . . ಆ ನಾಡ ಪೆಂಡಿರ್ಗೆ ಸಾಜಂ (ಸುಕುಮಾ. ೨-೨೬) ; ಅಂಗಜಫಣಿ ಪರೆಯಂ ಬಿಸುಟುಂದದಿ ಪಿಂಗಿಸಿ ಮೆಯ್ಯ ಮುಸುಕಿನಾ ಕನಕಲತಾಂಗಿಪೆಯ ನಿಜವದನಮಂ ನೀಕ್ಷಿಸೆ (ಚಿಮು. ೨-೯೩). ೨. ನಿವಾರಿಸು ; ಹೋಗಲಾಡಿಸು ; ಪರಿಹರಿಸು : ಮುಂತೆ ಪೇಟ್ಟ ಕುಜಾಪಂ ಕುಜಗೋಂದು ಕವೀಶರಾರ್ಪಂತು ಪಿಂಗಿಸುಗೆ ಕಾವ್ಯದಿನಾ ಲಘು ದೋಷಮಂ (ಕವಿರಾ. ೧-೨೪) ; ನಿವುಗರಮನೆಗೆ ಪೋಗಿ ಕೊಟ್ಟಂ ತಂದಪೆನ್ನೆವರಂ ನೀರಂ ಕುಡಿದು ತೃಷೆಯಂ ಪಿಂಗಿಸುವುದೆಂದೊಡೆ (ವಡ್ಡಾ. ೧೨೪-೧) ; ವಿಗಲದ್ಬಾಷ್ಪಾಂಬುದೀನಾನನೆಯೆನಿಸಿದ ಲಕ್ಷ್ಮೀಮತೀ ದೇವಿಯಂ ಮೆಲ್ಲಗೆ ಸಂತೈಸುತ್ತುಪಾತ್ತ್ಯಾನಂಜೆಯ ಮಾನವ ನಿರ್ವೇಗಮಂ ಪಿಂಗಿಸುತ್ತುಂ (ಆದಿಪು. ೩-೨೦) ; ತರುಕಾಂಡಂ ದೆಸೆಯಾನೆಗಳ್ಗೆ ಕಟಕಂಡೂ ವ್ಯಾಪ್ತಿಯಂ ಪಿಂಗಿಸುತ್ತಿರೆ (ಜಗ. ೧೬-೩೩) ; ಈ ನೃಪತಿಗಂತಕನ ಬಾಧೆಯಂ ಪಿಂಗಿಸುವ ಪಾನೆಸುತ್ತ (ರಾಪು. ೩೦-೦೨). ೩. ಬಿಡು ; ತೊರೆ ; ತ್ಯಜಿಸು : ಸಮುತ್ಕೃಷ್ಟದಿಜಾತಂಗಳ್ ಶಂಕಾವ್ಯಪ್ಪಪಾಲಂಗಳುಮೆಂಟು ಮದಂಗಳುಂ ಮಾಣಿಕುಮಾಳಾಧಮುನಾಜಾಜನಾಯತನಸೇವೆಗಳುಮೆಂದಿಂತಿ ವಿಪರ್ಪ್ಪತ್ಯದ್ಯಕ್ಷ್ಯಮಾಮಂ ಪಿಂಗಿಸಿ ನಿಶ್ಶಂಕಾದ್ಯಷ್ಟಗುಣಂಗಳಿಂ ಕೂಡಿದ ಶುದ್ಧಮಪ್ಪ ಸಮ್ಯಕ್ತ್ವಪೂರ್ವಕಂ ವ್ರತಂಗಳನೇಱಿಸಿಕೊಂಡು (ಶಬ್ದ. ೨೦೨೬-೧) ; ಅಂಗನೆಮರ್ಗಳ ಸವತಿ ಜರಾಂಗನೆ ತಾನವಳ ಸವತಿ ಸಂದಿರ್ದ ನಿಯಮಾಂಗನೆಯಾ ಸವತಿಯುಮಂ ಪಿಂಗಿಸಿ ಪುದುವಾಟ್ಟಿನಕ್ಕೆ ಮುಕ್ತ್ಯಂ ಗನೆಪೊಳ್ (ಆದಿಪು. ೨-೬೩) ; ಕ್ಷಿತಿಯ ಆಲಿಸಿ ಕೇಳ್ದಲ್ಲದುದು ಪಿಂಗಿಸ ಲೀಲೆಯಿಂನೋಳ್ಪಂ ಪಿಡಿವಾ ಬಂಧಜಾಲಂ (ಚಮಾ. ೦-೨೨). ೪. (ಸಮಯವನ್ನು) ಕಳೆ ; ತಳ್ಳು ; ನೂಕು : ವನಿತಾಸೂತನ ಗೀತನರ್ತನವಿನೋದಪ್ಪ್ಯೆಯೊಳ್ ಪಿಂಗಿಪರ್ ದಿನಮಂ ಮನ್ಮಥರೂಪ ರೂರ್ಜಿತಯುಶರ್ ನಾನಾವಿನೋದಂಗಳಿಂ (ಪುಷ್ಪ. ೧-೬೨). **ಹಿಂಗಿಸು** : ೨. ಚಿತ್ತದ ಪ್ರಾಣ್ತಿಯಂ ಹಿಂಗಿಸಿ ಮುಕ್ತಿಪಥದ ತೋಱಿದನಲ್ಲಾ ಅಸಂಖ್ಯಾತರುಗಳಿಗೆ (ಬಸವೇ. ೩. ೬೨-೦೩೩) ; ಹಿಂಗಿಸಂದೆನ್ನೆಲ್ಲರ ಮನೋ ಮಯದಂಗದೊಳಹೊಜಗಿಡಿದ ತಮದ ತರಂಗಗಳನೆಂದೆನುತ (ಶ್ರೀಶಂ. ೧೧-೨) ; ತಾಪವನು ಹಿಂಗಿಸುವ ಶಶೋಕೆಯ ತೋಪಿನಲಿ . . . ಇರಿಸಿದನು ತೊರವೆಯಮನಗನೆಮು (ತೊರವ. ೩-೧೧-೪೪) ; ಅಂಗಡಿಯಿಂದ ಅಬ ಲಕ್ಕಿ ಕೊಂಡು ತಿಂದು ನೀರು ಕುಡಿದು ಹಸಿವೆ ಹಿಂಗಿಸಿದರು (ಬ್ರಿ.ಕಾ. ೦೬). ೫. ಹಿಂದೆ ಹಾಕು ; ಹಿಮ್ಮೆಟ್ಟಿಸು ; ಸೋಲಿಸು : ಹೋಗಲಾರಿಯ ಕೋಲುವಿಡಿದುಲ್ಲಂಘಿಸುತ ಜಡಿಜಡಿದು ಚಿಮ್ಮುತ ಹೊಂಗಿ . . . ಸಂಗಡಿಗರಂ ಹಿಂಗಿಸುತ ತನ್ನಂಗವಂ ತಾನೇಱಲೀಯಲು ನೋಡಿದಾತಾಡುತ್ತ (ಜಾತ. ೨೬-೦೨) ; ಸರಳು ಮೂಱರಲೆಚ್ಚು ರಿಪುವನು ಧುರದಿ ಹಿಂಗಿಸಿ ಹಂಸಮಾಯು ಮೋಹರದೊಳಗೆ ಮೊಗಗಾದನು (ಗುಬ್ಬಿಕ್ರೀ. ೦೦-೦೫). ೬. ಕಡಮೆಯಾಗಿಸು ; ಮೊಟಕುಗೊಳಿಸು ; ತೊರೆಯಾರೆಯಾ ; ಏಕೆ ನಿನ್ನ ಹೊತ್ತಿಗಲ್ಲದೆ ಬಾರೆ ಮಾನ್ನ ? ಹೊತ್ತು ಹಿಂಗಿಸಿ ಹಾಯಿಸೆನ್ನ ಕಂಬನಿಯು ಕರೆ ಕೇಳದೆ ? (ಗೀತಾ. ೫೫-೩೬). ೭. ಬೇರೆ ಮಾಡು ; ಬೇರ್ಪಡಿಸು (?) : ಎರಡು ಭಾಗಿಸಿ ಹಿಂಗಿಸಿ ಸ್ಥಳ ಕದ್ದಳಗೆರೆ ಮು × × ಗಳಿಯ ಕೆಱೆ ದೊಡ್ಡಗಟ್ಟ ಗವುಡಿಗೆರೆ . . . ಆ ಕದ್ದಳಿಗೆಱೆಯ ಲಕ್ಷುಮಿ ನಾರಾಯಣದೇವರ × × × ಯ ಮೂಲಸಿದ್ಧಾಯವನೂ ಆ ದೇವರಿಗೆ ಕೊಟ್ಟದು (ಎಕ. III, ಶ್ರೀರಂಗ. ೨೦೪-೩೪; ಕ್ರಿ. 1200) ; ಆ ಸೋಮನಾಥಪುರದ ಮಹಾಜನಂಗಳು ತತ್ತು ವಿಭಾಗವಿಲ್ಲ ಹಿಂಗಿಸಿ ಕೊಟ್ಟ ಬಂದೂರ ತಕ್ಕಿನ ವೃತ್ತಿಯಪ್ಪತೊಂದರೊಳಗೆ (ಎಕ. III, ತಿಮು. ೯೪-೦೬; 1200).

[ಪಿಂಗು₁ + -ಇಸು₂]

**ಪಿಂಗು₁, ಹಿಂಗು₁** (ಕ್ರಿ). ೧. ಹಿಂದಕ್ಕೆ ಹೋಗು ; ಹಿಂದೆ ಸರಿ ; ಹಿಂದಿರುಗು : "ಪಿಂಗು–ಅಪಸರಣೇ (ಹಿಂದಿರುಗು)" (ಶಬ್ದಾ) ; ಲಲನೆಯ ಐದವುಗಳೊಳ್ ಮಾರ್ಮಲೆದೊಡಮಂ ಪಿಂಗವೇಟ್ಟು[ಶಾಂ. ಪಿಳ್ಳುವೇಳೆ] ಮಾಣಿಗಿರಿದುದಱಿಂದೆಲೆಗಳ ಲೋಕದೊಳ್ಲಿಯುಮೆಲೆಗಳ ಮಾಣಿಗೆವೃಮಾ ದುದಂದಿಂ ಬಟೆಯಿಂ (ಶಬ್ದಕಾ. ೩೩೬ ಕೊತ್ತಳ) ; ಏನ್ನ ಬೀಗಿ ಬಾರಿರ್ದ ಕುಚದ್ವಯಮಾದ್ಯದಲ್ಲಿ ತಾಂ ಪಿಂಗದೆ ನಟ್ಟ ದಿಟ್ಟಿಯಾನನಂ ಕಿಟಲಂದನಾ ಗೆಯ್ದು ತೂಗಿದಂ (ಆಪು. ೦೨-೦೩) ; ಎಳಸಿ ಪಿಪಾಸೆಯಿಂ ಮೃಗಜಯಂ ಪರಿತಂದೊಳಸಾರ್ದು . . . ಪಿಂಗುವುದು ತಾಂ ಜಲತೂನ್ಯವಿದೆಂದು (ಕುಸುಮಾ. ೦-೬೦) ; ಕಳಿಂಗ ಪಿಂಗು ಕದೆ ನಿಲ್ ಕರ್ಣಾಟಕಾಧೀಶ ಬಂದೆಜ್ಜಿಗೆ ಕೇರಳ ಪಾಂಡ್ಯ ನೀಂ ಗಳಪದಿರ್ . . . ಎನುತಲ್ಲಿ ಕಂಚುಕಿಗಳು ಗರ್ಜಿಸುತ್ತೊಪ್ಪಿದರ್ (ರಾಜಶೇ. ೫-೨೦). ೨. ಕಡಮೆಯಾಗು ; ತಗ್ಗು ; ಕ್ಷಯಿಸು : ಪಿಂಗದೆ ಬೆಳಗುವ ಗುಣಮಾದು ಪಿಂಗಲೊಡಂ ಚಕ್ರೇಶಿಯಾಣ ಭೂಪಂಗಳ ತೇಜಂಗಳ್ ಮಾಸುಳ್ದುವು (ಆಪು. ೩-೫೦) ; ಅಡವಿ ಮೂಣುಗು ವಟ್ಟಿರ್ದುದು ಬೇಟೆಯೊಳಾದ ಕಳಕಳಂ ಪಿಂಗುವಿನಂ (ಕಾದಂಬ. ೩೩) ; ತುಂಗಪರಾಕ್ರಮಂ ಪಿಂಗದು ಮಾನದಿಂ ತ್ರಿಪುರಂಗಳನಿಟ್ಟುತನಧಯಮಕ್ಕೆ (ಕೌಇಇ. XX, ೨೪-೨೪; 1034) ; ಪಿಂಗದ ಬೆಳ್ಪಿಂಗಳ್ ಉಣ್ಮಿಗೆಂತಲು ಶೋಭಿಪೆಡೆಯುದು (ರಘು. ೦೪-೦೪೦). ೩. ಕುಸಿ ; ಕುಗ್ಗು ; ಬಲ ಭಾರಮಿಹಿನಾಥನಿಕ್ಕ ತಲೆದೊಂಗಲ್ ಪಿಂಗಲ್ಪಾಡೆ ಭೂಮಿಪಾಲಿಂ ಬಾಲದ ಮೇಲೆ ಬಿರ್ದು ಕಡುನೊಂದು (ಶಬ್ದಕಾ. ೫೫೪ ; ರಘು. ೩-೦೦ ನೋ). ೪. ಬಿಟ್ಟುಹೋಗು ; ಹೊರಟುಹೋಗು : ತನ್ನಿಂ ಕಾಳಿಕೆ ಪಿಂಗಿದ ಪೊನ್ನಿನ ತೆಱದಂತೆ ಕಾಂತೆ ಕರಮೆಸೆದಿರ್ದಳ್ (ಧರ್ಮಾ. ೬-೬೦) ; ನಿಜರಾಜ್ಯಭಾರದಿಂ ಪಿಂಗಿ . . . ಧರಾಧೀಶ್ವರಂ ಪುರದಿಂದಂ ಪೊಱಮಟ್ಟಂ (ಧರ್ಮಾ. ೦-೦೭೩ ಕ) ; ಗಗನದಿಂದಿಳಿವಂಗಾಧಾರವಾಗುತ್ತೆ ತಪ್ಪುವರೆ ಕಾಳ್ಕಿಚ್ಚಿನಿಂ ಬೇವೆಗೆ ತಂಪಿನ ಸೋನೆಯ ಮಳೆಯಾಗುತ್ತೆ ಪಾಣ್ಬರ ಇಂತು ನಡುಗಡಲೊಳಾಳುವಂಗೆ ತೆಪ್ಪವಾಗುತ್ತೆ ಪಿಂಗುವರೆ (ಜಗ. ೪-೩೦) ; ಅವರ್ಗಂ ಪಿಂಗಿದಾ ಸ್ವರಂ ನಾಮಿಯೆಂದು ಪೇಟಲ್ಪಡುಗುಂ (ಶಬ್ದ. ೯). ೫. ಕಾಣದಂತಾಗು ; ಮರೆಯಾಗು : ಪಿಂಗಿ[ಪಾಠಾಂ. ಪೊಂಗಿ]ಪೋದುದು ಪಳಿಶ್ರಿತಯಂ . . . ಅನನಂ ವಿಸುಗೆ ಬೆಳತರ್ ಪೂರ್ಣಶಶಿಕಾಂತಿಯನಾಂತುದು ಗರ್ಭದೇಟ್ಕೆಯೊಳ್ (ಶಂಕರ. ೧೨೪-೦೨) ; ಖ್ಯಾತಿ ಧರಿತ್ರಿಗಾಗೆ ಕುಮಾರಾರ್ಕಗಣಂಗಳಡಂಗಿ ಪಿಂಗೆ ತದ್ಭಾತಿತಮಸ್ಸಮಂ ಬಿದಱಿ ಪೋಗೆ (ಸುಕುಮಾ. ೬-೩೩). ೬. ತೊರೆ ; ತ್ಯಜಿಸು : ತೆಂಗಿನ ಪೊಸನೇಣಂದಱಿದಂಗಳ್ವರೆಮುತಸಿ ಕಂಬಿಯಿಂ ಟಟ್ಟಿದೊಡಂ ತಾಂ ಗಡ ಬಿಟ್ಟೊಡೆ ಮತ್ತಂ ಪಿಂಗದು ಡೊಂಕಂಬ ನಾಯ ಬಾಲದ ತೆಱದಿಂ

ಫಡಫಡಲವೊ ಭೀಮಸೇನನನೆ ವ್ಯಡನ ವರ ಹಿಂಗುವುದೆ ಎಗೆ ತನ್ನೊಡೆಯ ಮುನಿವನ ಕರುಣ ಓದುಂಟಿನುತಲಸುರಪತಿ . . . ಕಾದಿದನು ಹದಿನೆಂಟು ಸೋಣನಲಿ (ಕುಮ್ಯಾ.ಕ. ೬೦೯. ೨-೫೬); ಬಯಲಿಗಳು ಬಸಿರುಗಳು ಹಡೆದದ್ದು ಹಿಂಗಿದ್ದು ವಮೂವತ್ತುವಮೂರುಕೋಟಿ (ಗಣ. ೫೦-೪). ೧೯. ವ್ಯತ ವಾಗು; ಸಾಯು; ವಡಿ: ಹಿರಿಯ ವಗನ ಕಾಲ ಮುಚಿದು ನಡುವಳ ವಗನ ಕಯ್ಯ ಮುಚಿದು . . . ಅವರು ಹಿಂಗಿ ನಾ ಬದುಕಿದೆನೆಂದು ತ್ರಿವಿಧದ ಸಂದ ಬಿಟ್ಟು ಸದಾಶಿವವಮೂರ್ತಿಲಿಂಗದಲ್ಲಿಗೆ ಸಂದಿತು ಚಿತ್ತ (ಅಪಾಚಾ. ೪. ೮೯೬-೮೩೬); ಅದಸಿದಾಪತ್ತಿನಲಿ ಧೈರ್ಯವ ಹಿಡಿವುದೆ ಸುಪ್ರೌಢಿ ಸಾಕಿನ್ನೊಡಲು ಕರಗಿದೊಡೆಃಕಲಹವನೆ ಹಿಂಗಿದಭಿ ಮಾನ್ಯ (ಕುಮ್ಯಾದ್ರೋ. ೭-೨೩); ಸತ್ತು ಹುಟ್ಟುವ ಹುಟ್ಟಿ ಹಿಂಗುಪ ಸುತ್ತ ತೊಡಃನು ವಹಾನಿಸಲೆ ಪುರುಷೋತ್ತಮನೆ (ಚಾಚಾ. ೬೦).

[ದೇ.₂ ತಮಿ. ಪಿನ್ನು ; ತೆಲು. ಹಿಂಗು]

ಪಿಂಗು₂ (ನಾ). ಹಿಮ್ಮೆಟ್ಟುವಿಕೆ; ಹಿಂಜರಿಯುವಿಕೆ: ಸಿಂಗದ ಮುಜುಂ ಮೇಃಪದ ಪಿಂಗುಂ ಪಡುವಿದರ ವಿನಯವಿಂತಿವು ಮೂಲಾಂ ಭಂಗಮೆನಿ ಪಲ್ಕೆ ಪಡೆಯವು ಕಂಗೆಡಿಕುಂ ಭರದನಿಟಿತರದಟಂ ಧುರದೊಳ್ (ಶಬ್ದಮ. ೨೬೮.೫); ಸಿಂಗದ ಹಳಿಗುಂ ಮೇಃಪದ ಪಿಂಗುಂ ಕೋವಿದರ ಭೀತಿಯೆಂಬೀ ಮೂರುಂ ಭಂಗವನಿಪಲ್ಕೆ ಪಡೆಯವು ಕಂಗೆಡಿಸಿಯ ಕೊಲ್ಲದಿರವು (ಶಬ್ದಮ. ೨೬೬). [< ಪಿಂಗು₁]

ಪಿಂಗುಗೆ (ನಾ). ತೊರೆಯುವಿಕೆ; ತ್ಯಜಿಸುವಿಕೆ; ವಿಸರ್ಜನೆ: ಅಂಗಾದಿ ದ್ವಿತಯಮಂಗಳ ಪಿಂಗುಗೆಯಂ ಮಾಡದಾತನಜ್ಞಾನಿ ಗಡ (ಜಜಜ ೦೬-೫೦). [ಪಿಂಗು₁ + -ಗೆ]

ಪಿಂಗುಡಿ, ಹಿಂಗುಡಿ (ನಾ). ಹಿಂದಿನ ಭಾಗ; ಹಿಂಭಾಗ: ನಾರಾಚದಲಿ ಬಲನೆಡನ ಕೀಲಿಸಿ ಪಿಂಗುಡಿಯ ಮುಂಗುಡಿಯ ಕಟ್ಟಿದನಂದನಲಿ (ಕುಮ್ಯಾಕ. ೨೦-೫೬); ಹಾಯಿಸಿಂತ ಭಟರೊಡಲಿದರು ಪಿಂಗುಡಿಗೆ ಬಿದ್ದುದು ಸಮರಸೌರಂಭ (ಜಶಾಗ. ೦೦-೫೬-೦೬). ಹಿಂಗುಡಿ: ಹರಿಯೊಡನೆಯೂಹದದ ಕೆಲಸಕೆ ಹರಣನಿಂತ ಹಿಂಗುಡಿಗೆ ಮಹಿಪತಿ ಮರಳಿಸಿದನೇನೆಂಬೆನಾಹವದರಾ ವಿಡಂಬನವ (ಜಶಾಗ. ೦೦-೬೦-೨೪). [ಪಿಂ (< ಪಿನ್) + ಕುಡಿ₂]

ಪಿಂಗುರು 'ಪ್ರೊಂಗುರು' ನೋ.

ಪಿಂಗೂಳೆಯ (ನಾ). ಹಿಂಭಾಗದಲ್ಲಿ ಇರುವ ಗುಂಪು: ಆರ್ತ ರೌದ್ರ ಧ್ಯಾನವೆಂಬ ಮುಂಗೂಳೆಯದ ನಾಯಕವರ್ಗರಸು ದುರ್ಜನರ ಕೂಟ ವೆಂಬ ಪಿಂಗೂಳೆಯದ ವೀರವರ್ಗರಸು . . . ನಿಲ್ಲದಲ್ಲೆಯುಂ ಬೆನ್ನಟ್ಟಿ (ಧರ್ಮಾಮೃ. ೦೦-೫೬). [ಪಿಂ (<ಪಿನ್) + ಗೂಳೆಯ]

ಪಿಂಗೊಳಿಸು (ಕ್ರಿ). ಹಿಂದಿರುಗುವಂತೆ ಮಾಡು; ಮರುಕಳಿಸು: ಅಂಗಜನ ಕೇಳಿಯಾಲಯನಿಕೇತನದಿ ದೀಪಂಗಳುರಿದುರಿದು ಭುಗಿಭುಗಿಮಂಡ ಕತ್ತಲೆಯ ಪಿಂಗೊಳಿಸಿ ಕಾರುವೂಃರ್ ಲಜ್ಜಲವು ತೋರುತಿಹುದು (ಜಶಜ. ೫೦-೬). [ಪಿಂ (< ಪಿನ್) + ಕೊಳ್₁ + -ಇಸು₂]

ಪಿಂಗೋಳ್ (ನಾ). ಹಿಂದುಗಡೆ; ಹಿಂದಿನ ಭಾಗ; ಹಿಂಭಾಗ: ಕೇಳಯ ವಿಷಯಾಧೀಶ್ವರರಪ್ಪ ಕೃ[ಕ]ಯತಯ್ಯರುಮೊಂದಕ್ಕೊಲಿಹಿನಃಬಲದೊಡನೆ ಸಿಡಿಲನುರುಳಿ ಮಾಡಿದಂತು ಪಿಂಗೋಳೊಳ್ ನಡೆಯೆ (ಚಂಚಾ. ೬-೯೩ ೫). [ಪಿಂ (<ಪಿನ್) + ಕೋಳ್]

ಪಿಂಚ (ನಾ). = ಪಿಂಛ ೨: ಪಿಂಚವ ಮಡಗಿ ಮಂಡೆಗೆ ವಿನುತಗುಣ ತನ್ನೊಳಗೆ ಸನ್ಯಾಸನವ ತಾಳಿಯ ಮುನಿಪನಂಘ್ರಿಯ ನೆನೆಯುತಿರ್ದು (ಅಅಜ. ೦೨-೬); ಮೈಮೇಲೆ ಚೆಲ್ಲಿದ್ದ ಕುರುಳನ್ನೆಲ್ಲ ಪಿಂಚದಿಂದ ಮೃದು ವಾಗಿ ಜಾಡಿಸಿಕೊಂಡರು (ದಾಕಜಂ. ೦). [< ಸಂ. ಪಿಂಛ]

ಪಿಂಚಣಿ 'ಪೆನ್ಷನ್ನು' ನೋ.

ಪಿಂಚಣಿದಾರ 'ಪೆನ್ಷನ್‌ದಾರ' ನೋ.

ಪಿಂಚನ್ 'ಪೆನ್ಷನ್ನು' ನೋ.

ಪಿಂಚನಿ 'ಪೆನ್ಷನ್ನು' ನೋ.

ಪಿಂಚನೂರ್, ಹಿಂಚನೂರು (ನಾ). ಒಂದು ಊರಿನ ಹೆಸರು: ತುಮಕೂರು ಜಿಲ್ಲೆಯ ತಿಪಟೂರು ತಾಲ್ಲೂಕಿನ ಈಗಿನ ಹೀಚ ನೂರು: ಪಿಯಗೆಲ್ಲರ್ ಮಜುಗಿರೆನಾಡು ಮೂನೂಱುಪಾಳೆ ಮೂಱು ಕೊಡೆ ಅಣ್ಣೆಯರ್ಪಿಳ್ಚ್ನೂರಾ ಏಱಂಳ್ಕೆಱು ಬಿಟ್ಟಾರ್ (ಎಕ. XVI. ಕುಣಿಗಲ್. ೬೬-೪; ಸು. ೭೫೦); ಪಿಳ್ಚ್ನೂರ ತೂಳ್ಸನ್ನರ[ಸ]ರಾಳೆಱದು ಸತ್ತನ್ (ಎಕ. XVI. ಕುಣಿಗಲ್. ೬೬-೩; ಸು. ೭೬೦). ಹಿಂಚನೂರು: ಹಿಳ್ಚ್ನೂರ ಕೊಣ್ಣೆಗೌಡನ ಸುಪುತ್ರನೇಚಗೌಣ್ಡನಾತನ ಸುತ ಹೊನ್ನಗೌಣ್ಡನು ಹಿಳ್ಚ್ ನೂರ ಕಲಿದೇವರಿಗೆ . . . ಧಾರಾಪೂರ್ವಕಂ ಮಾಡಿ ಬಿಟ್ಟ ದತ್ತಿ (ಎಕ. XII. ತಿಪಟೂ. ೫೬-೩೩; ಸು. ೧೧೨೦). [? + ಊರ್]

ಪಿಂಚನ್ನು 'ಪೆನ್ಷನ್ನು' ನೋ.

ಪಿಂಚು₁, ಹಿಂಚು₁ (ಕ್ರಿ). ೧. ಹಿಂದೆ ಉಳಿ; ಹಿಂದೆ ಬೀಳು; ಹಿಂದಾಗು: "ಪಿಂಚು-ಪಶ್ಚಾದರ್ಥೇ (ಹಿಂದುಳಿ)" (ಶಬ್ದಾ); ಇಂಚೆಯ ಪಸವಿನ ಬಜದ ಲಿಂಚನ ದಾವರದ ಬಾಧೆಯಿಲ್ಲದ ಪದದೊಳ್ ಮುಂಚದ ಪಿಂಚದ ಬಳೆವು ವಿರಿಂಚಿಯ ಕಯ್ಪಿಡಿವೂಶಾದಮಾ ನಾಡರ್ಗಳ್ (ಶಂಶಾ. ೯-೫೦); ತೀರ್ಥಜಲಂಗಳ್ ಪಿಂಚಿವರ್ಗಿಲ್ಲೆಂಬ ತಿರೆ ಮುಂಚಿವರಲ್ಲಿ ಮೆಗೆ ಯಾಲ್ಪಿವಿಜರ್ (ಅಜಂಕ. ೫ ೬೩); ಅನುಮಾನಿಸದೆ ಚೆಲ್ದಿಂದಿಟ್ಟು ಕೀಲ್ಕೆಯ ದನಿ ಪಿಂಚಲವಳ ತಲೆ ಮುಂಚಿ ಬೀಳ್ಕೆನುಡಲ್ . . . ಖ್ಯಾತಿಯ ದೇವನಂ ಪೊಃಯ್ಯು ನಿಮಿಃಷದೊಳಗೆ (ಶಂಶ. ೨೦-೨೬); ಸೀತೆಗೆ ವೈಷಾನಸರ ಮುತ್ತೈದೆಯರನೇಪೂಃತ್ತಂಗೆ ಕಾಣ್ಬೆನೋ ಎಂಬೊಂದು ತವಕದಿಂ ನಡೆ ಮುಂಚಿದುದು ಲಕ್ಷ್ಮಣಂಗೆ . . . ಎಂತು ದೇವಿಯಂ ಕೊಟಿವೆನೊ ಎದೆಂದು ದುಗುಡದಿ ಪಿಂಚಿದುದು (ರಾಜಶ್ಯ. ೩೩ ೩). ೨. ಮರಳು; ಹಿಂದಿರುಗು: ಮುಂಚಿದ ಷದ್ರುತು ಮತ್ತಂ ಪಿಂಚುವುದಸ್ಸಿಕೆ ಪೋದಂ ಪಿಂಚುವಮಾಃಗದಿರಂ ತಾಂ ಮತ್ತಂ ಮುಂಚಿದ ಪೂಚ್ಚಿದ ನೀರಂ ಮೂನಲನಾ ಯೌವನಮುಂ ಪಿಂಚದು (ಶಾಶಂತ. ೯-೨೬). ೩. ಹಿಂದೆ ಸರಿ; ಹಿಮ್ಮೆಟ್ಟು: ರಣದಿಂದೆ ಪಿಂಚದತಿವೀರಕ್ಷತ್ರಿಯರ್ (ಶಪ್ಪು. ೦ ೨.೩೫). ೪. "ತಡವಾಗು; ತಡಮಾಡು" (ಕ್ರಕ್ಕ). ಹಿಂಚು₁: ೧. ಏನೆಂಬೆ ನೇನೆಂದೆನೇನಾದಿಜಾಥನಂ ಅನಜಾಯಾನಾಜಯನುತವಣಿವ ಧೀವನಂ ಸಾಟಿ ಹಿಂಚಿತು ಮುಂಚಿತವನ ತಲೆ ಕಳನೊಳಗೆ (ಜಜಾಕ. ಡ. ೦೦೬-೭); ಹೋಗೆಂಬ ನುಡಿ ಹಿಂಚಿ ಮುಂಚಿ ಜೀವಂ ನೆಗೆದು ತಾಗಿ ನಡುನೆತ್ತಿಯಂ ಬಗಿದು ದಾದಣದೆಗೆದು ಮೇಗೆಡದರ್ಜ ಗಗನಕ್ಕೆ ದಂಡಾಯಪಾಸ್ವದರಿಯಾಗಿ ನೆಗೆಯಲ್ಕೆ (ಅದ್ರಜಾ. ೯-೩೪); ಮಾತು ಹಿಂಚಿತು ಮುಂಚಿ ಸಂಘಟ್ಟಾತ ಹೊಕ್ಕುದು (ಕುಮ್ಯಾದ್ರೋ. ೬-೨೩). ೩. ಪಂಚೆನುಹಾಪಾತಕಿಯಂ ಸಂಗತ ದೊಳ್ ಹಿಂಚುವನು ಪುಟಗಿಂಡದ ಸಚಿದೊಳಿಕ್ಕಾವ ಕಾಲಮೋಚದ ತೆಱದಿ (ಕಶಜ. ೩-೦೬); ಭಲರೆ ಭಲರೆಂಬಲರ ಹಿಂಚದಿರಿನ್ನು ಹೊಯ್ ಹೊಯ್ ಚೂಣಿಗರನೆಂತ ಬಲಜಲಧಿ ಮುಕ್ಕುಳಿಸಿ ವಿಗೆ ಹಕ್ಕಳಿಸಿ ಕವಿದುದು (ಕುಮ್ಯಾಅ. ೪-೩); ಪುಷ್ಪವ ಕಂಡ ಬರ್ಣನದನಲ್ಲಿಗಿಸೆ ಮಡಿಯ ದುತಾಳವುದೆಂದು ಬಗೆಗುಂದಿ ಹಿಂಚಲಿದೊ ಕಂಡ ಲಣ್ಣಿಗೆ ಪಾರ್ಥನದರ ಕಂಠದ ಮಣಿಯ ಕುರಿತೆಸೆಯೆ, ಲಣ್ಣಾಗಿದು ನೆಲಕೆ ಹೊರಳಿತು ಹಕ್ಕಿ! (ಪಕ್ಕಿಕ. ೯-೦೬). ೪. ಸಟಿವರ ಸತಿಯರ್ ನಾಲ್ವರ್ . . . ಪುತ್ರರನೆರ ಡೆರಡು ತಿಂಗಳಿಂ ಹಿಂಚಿ ಪಡೆವರನುಃನಯಮೆಸೆಯಲ್ (ದಕಜಾ. ೨-೭); ಕೋಕಿಳನು ಪಂಚಸ್ವರದೆ ಕೂಗಲು ಹಿಂಚದೆ ಪಂಚಬಾಣತು ಬಂದೆದ್ದು ವನು (ಅಅಜ. ೪-೦೯೩). ೫. ಬಿಡು; ಉಳಿ: ನೆಜ ಮಿಂಚುವ ಬೊಲ್ಲ ಬೋರನನು ಹುಂಚದಾಣನ ಪೆಸರಿನ ಮೇಃಘವರ್ಣನ ಹಿಂಚದೆ ನಡಸಿ ತೋಃಱದರು (ಅಜಜ. ೬-೫೩). 'ಮುಂಚು₁' ಪರಾ. [ಪಿಂ (<ಪಿನ್) + -ಚು₁]

**ಪಿಂಚು$_1$, ಹಿಂಚು$_1$** (ನಾ). ೧. ಹಿಂದಕ್ಕೆ ಇರುವಂತಹುದು; ಹಿಂದಿನದು: (ಕ). **ಹಿಂಚು$_1$ :** ೨. ತಡ ; ಸಾವಕಾಶ : ಏಟು ಮುಂಚು ಮಾತು ಹಿಂಚು, ಎಂದುಕೊಂಡು . . . ಇವ್ವ ಈ ಉಪಾಧ್ಯಾಯನ ಕೃಯಿಂದ ಯಾವಾಗಲಾದರೂ ಮಹಾದೇವನಿಗೆ ಒಂದೊಂದು ಪೆಟ್ಟು ಬೀಳುತಿತ್ತು (ಬಸವಪು. ೩೦) ; ಊಟಕ್ಕೆ ಮುಂಚು ದುಡಿಗೆ ಹಿಂಚು (ಗಾದೆ).

**ಪಿಂಚುಮುಂಚು, ಹಿಂಚುಮುಂಚು** = ಹಿಂದುಮುಂದು : ಕೊಡಲ್ ಜುಮ್ಮನಿರದೊಸರಿ ತೆಗೆವತ್ತಲೊವಗಿ ತಳವೋಲಿರ್ದಗಳೊಳ್ ಪಿಂಚು ಮುಂಚೆನಿಸದೆ ಸರಿಯೆನಿಸಿ ಕೂಡಿ (ಕಂಕ್ರ. ೦೦-೬೦) ; ಅವ ಬೀಜವ ಬಿತ್ತಿದರೂ ಮೊಳೆಯ ಮುಖ ಹಿಂಚುಮುಂಚುಂಟೆ? (ಹಿಮ್ಮಸಂ. ೩೨೯-೩೨) ; ಹಿಂಚುಮುಂಚೇನಕ್ಕ ನಿನಗೆನಗೊಂದಳದೇಂ ಚಮರಯೊ ಪಟ್ಟವರಸಿ (ಜಕ. ೪೨-೬೦): ಶಿವನಯಿಪ್ಪತ್ತೈದು ಲೀಲಾಕಥಾಕ್ರಮಂ ವಿವರಿಸಲು ಹಿಂಚು ಮುಂಚೆನ್ನದಿರಿ ಕೋವಿದರು (ಗಂಟುಚಾ. ೪.೪೭) ; ಇವುಗಳ ಕಾಲ ಬಹುಶಃ . . . ಕ್ರಿ. ಶ. ೧೨ನೆಯ ಶಕ ಅಥವಾ ಸ್ವಲ್ಪ ಹಿಂಚುಮುಂಚು ಇರಬಹುದೆಂದು ತಿಳಿಯಬಹುದು (ದ್ರಾ.ಹಿ. ೩೩). **ಹಿಂಚಾಗು** = ಹಿಂದೆ ಉಳಿ ; ಹಿಂದಾಗು : ಈ ಸಂಚಿತವನರಿಯದೆ ಮುಂಚೆ ತಾನುಂಬ ಅಶನಕ್ಕೆ ನೀಡಿ ತಾ ಹಿಂಚಾಗಿ ಕೊಂಬ ಪ್ರಸಾದಿಯ ನೋಡಾ (ಮೋಳಿಗಾ. ೬೦-೨೬೬) ; ಹಿಂಚಾದುದಾಹವದೊಳು ನಿನ್ನ ಪಾತಂದು ಪಂಚಾಸ್ಯ ನಗುತ ಕೋಲ್ಗಳ್ಬಿನ (ಮೋಹತ. ೩೯ ೩೨). **ಹಿಂಚು ಮಾತು** = ಹಿಂದೆ ಸರಿಯುವಂತೆ ಮಾಡು ; ಹಿಂದೆಗೆಸು ; ಹಿಮ್ಮೆಟ್ಟಿಸು : ಮಿಂಚುಗಳ ಸಂಚಯವ ಹಿಂಚು ಮಾಳ್ಪ ಮಳತರ ಚಂಚಲದೃಗಂಚಲದ . . . ಚಪಳೆಯಿರ್ದರ್ (ಶ್ರೀಂಕೃ. ೦೭ ೪೩). **ಹಿಂಚುಮುಂಚಾಗು** = ಹಿಂದುಮುಂದಾಗು : ಉಂಚಯ . . . ಚಿಟ್ಟ ದಕಿಗಳಂ ಚದುರರು ತಂದಲ್ಲಿ ಹಿಂಚುಮುಂಚಾ[ಪಾಠಾಂ. ಚಿ]ಗೆ ಪಾಟಿಸು ತಿಹರು (ಕುಮಾಸಾಂ. ೪-೬೪) ; ನವಗ್ರಹಗಳೊಂದೊಂದು ಮೂಜು ನಕ್ಷತ್ರಂಗಳೊಡಗೂಡುತಾ ತಾಂ ಚವುತ್ತಿತಿಯೊಳಿರ್ವತ್ತೇಳನೊಳಕೊಂಡು ಹಿಂಚು ಮುಂಚಾಗಿಹವು (ಜಕ್ಕೃ. ೪.೬ ೬೦); ನೂರರೊಳರಪತ್ತು ದೈವದ ಯತ್ನವು ಪುರುಷಯತ್ನವು ನಲವತ್ತು ಇದು ಹಿಂಚುಮುಂಚಾದರವುಗಾಗ ವಿಜಯವು ಕೇವಲ ಕನಸಿನ ಸೊತ್ತು (ಜಂತ್ರಜ. ೦೪೦-೬೪). [<ಪಿಂಚು$_1$]

**ಪಿಂಚು$_2$** 'ಪಿಂಚೆಯು' ನೋ.

**ಪಿಂಚೆಯು, ಪಿಂಚು$_2$, ಪಿಂಜೆ$_2$, ಪೆಂಚೆ, ಪೆಂಚೆಯು** (ನಾ). ೧. ನವಿಲುಗರಿ : ಪಿಂ[ಪಾಠಾಂ. ಪೆಂ]ಚೆಯುದ ದಂಡೆ ಸುತ್ತಿದ ಚಂಚತ್ಕಟಿಸೂತ್ರಮೊಪ್ಪೆ . . . ಚಾಟಿತಿಯಾ ವಿಪ್ರರಾಜಪಥು ಕಂಡಾಗಳ್ (ಕೃಷ್ಣಾಸ್ತ್ರ. ೦೨ ೩೨). **ಪಿಂಚು$_3$ :** ೨. ಅನ್ನದ ಗಂಜಿ : ಪಂಚಪಾಯಸ ಪಕ್ವಫಲ ಚತುಷ್ಟಂ ಒಹುಳದಿಂ ಚೆಲ್ವ ಸವಿಗೊಡುವ ನವರಸಾವಳಿಯುವಳ ಪಿಂಚೊಗೆದು ರುಚಿ ಅಡುವ ರಾಜಾನ್ನ ತೊಗೆ ತುಪ್ಪವುಂ ಚದುರಿನಿಂದ ನೀಡಿ (೮೬ಗಕ್ರ. ೦೬-೦೬). **ಪಿಂಜೆ$_2$ :** ೩. (ನವಿಲಿನ ಗರಿಯ) ಕುಂಚ ; ಪಿಂಛ : ಕನ್ನ ವರ್ವಳೀ ಲಳಿತಲತಾಂಗಿಯಂಗಜನ ಬಿಜ್ಜೆಯ ಪೀಲಿಯ ಪಿಂಜೆಯೆಂಬಿನಂ (೫೪೮. ೬-೦೬೦). **ಪೆಂಚೆ :** ೧. ಅನ್ನದಿ ಆಡಗ ಪೆಂಚೆಯ ಕುಂಚ . . . ಹೊಂಗುಟ್ಟುಬೆತ್ತಗಳ ಪಿಡಿದು ಸೇವಕಜನರು ಅಣ್ಣೆವೆಯಿಡದೆ ಹರಿಯ ನಿರೀಕ್ಷಿಸುತ ಬಂದು (ಅವಂತಾ. ೦-೩-೪೨). ೪. ನವಿಲು : ಅಂಚೆಗಳ್ಕೊಳರ್ವಕ್ಕಿಗಳ್ಕೊನ್ನವಕ್ಕಿಗಳ್ಪೆಂ[ಪಾಠಾಂ. ಳ್ಪಿಂ] ಚೆಗಳ್ಗಿಳಿಗಳಕ್ಕಿಗಳ್ಪಮೆಗಳ್ಕೊಂಚೆ ಗಳ್ಕೋಗಿಲೆಗಳಲ್ಲಲ್ಲಿಗೊಪ್ಪಿದುವು ಸಜ್ಜೀವಭಾವದಿಂದೆ (ಕೈಬಕಾ. ೦೭-೨೩). **ಪೆಂಚೆಯು :** . ನಿಂಬಪಾಲಿಯ ಕಿಚಿವೀಲಿಯ ಪೆಂಚೆಯುದ ಕೇಶಬಂಧದೊಳಂ . . . ಪಸದನಂಗೆಯ್ದು (ಜಾಂ. ೪-೬೦ ಕ).

[< ಸಂ. ಪಿಚ್ಛ, ಪಿಚ್ಛಾ]

**ಪಿಂಛ** (ನಾ). ೧. ಹಕ್ಕಿಗಳ ರೆಕ್ಕೆ,-ಗರಿ : "ತನೂರುಹಃ . . . ಛದಃ, ಪಿಂಛಂ, ವಾಜಃ, ಪಕ್ಷಃ—ಈ ೯ ಎಜ(೧)ಕೆ" (ಕಬಾಯು. ೪೦-೬೬) ; "ತನೂರುಹಃ, ಪಿಂಛಃ . . . ವಾಜಮೆನೆ ಪಕ್ಷಿಗಳ ಗರಿಯಾಕುಂ" (ಮುಂಗರಾ. ೩೦-೨). ೨. ನವಿಲುಗರಿ ; ಪೀಲಿ : 'ಪಿಂಛಾತಪತ್ರ' ಪರಾ. ೩. ನವಿಲುಗರಿಯ ಕುಂಚ : ಪಿಂಛ ಕಮಂಡಲಾದಿ ವ್ರತ ಹರಣ ವಿಲೋಚಮುಂಬಿವು ಮೊದಲಾದ ಸತ್ಕಲ್ಪಮಂ ಲಿಪ್ಸಿ ಪೇಟ್ಟ ಶ್ವೇತಪಟಯಾಪನೀಯ ಕಾಷ್ಠ ದ್ರಾವಿಡ . . . ಇಂದ್ರುಸಮಯ ಸಮುಚ್ಚಯುಮುಪ್ಪ ಸುಶಯುವಿಥ್ಯಾತ್ವವುಂ (ಜಾಂ. ೩). [ಸಂ.]

**ಪಿಂಛಚ್ಛತ್ರ** (ನಾ). ನವಿಲುಗರಿಯಿಂದ ಮಾಡಿದ ಕೊಡೆ,-ಛತ್ರಿ : ಧ್ವಜೋತ್ಕರಸಂದೋಹವುಮಂ ಬಿಸುಟ್ಟುಡುಗಿ ಪಿಂಛಚ್ಛತ್ರಮಂ . . . ಬಂದರ್ ಭಯಭ್ರಾಂತಿಯಿಂ (ಆಪ್ಕೃ. ೦೨-೬೬). [ಪಿಂಛ + ಛತ್ರ]

**ಪಿಂಛಧ್ವಜ** (ನಾ). ನವಿಲುಗರಿಯಿಂದ ಮಾಡಿದ ಧ್ವಜ,—ಬಾವುಟ : ಕುಂಡಲಾಲಪುರವರೆ ಶ್ವರಃ . . . ಭಗವದರ್ಹನ್ಮುಖ್ಯ ಪಿಂಛಧ್ವಜ ವಿಭೂಷಣಾ (೩೮. XVIII, ೩೦೦-೩ : 1164ರ ೬೩). [ಪಿಂಛ + ಧ್ವಜ]

**ಪಿಂಛನು** 'ಪೆನ್ನನ್ನು' ನೋ.

**ಪಿಂಛಾತಪತ್ರ** (ನಾ). = ಪಿಂಛಚ್ಛತ್ರ : ಗಗನತಳದೊಳ್ ವಜ್ರಸಾರಮೇಟ ರಥಾನೀಕಾ ಛತ್ರಚಾಮರ ಪಿಂಛಾತಪತ್ರ ಪಾಳಿಧ್ವಜ ಪತಾಕಾದ್ಯನೇಕ ಮಹಾವಿಭೂತಿಯೊಳ್ ಕೂಡಿ (ಪತ್ತಾರ. ೬೨-೬) ; ಇದಕ್ಕೊಳ್ ಮಾರ್ಧರ್ ಛಪೇಟಂ ತನಗೆ ಗತ ಸಂತಾಯ್ತು ಪಿಂಛಾತಪತ್ರಂ ಪುದಿದತ್ತಂ ತಣ್ಣೆಲಾಗ್ರಾಡುವುದು ಗಡ (ಹಂಪಶಾ. ೦೩-೯೬) ; ಛ ವಿಸೆ ಪೋಲ್ವುದು . . . ಜಲದೇವಿಯ ಪಿಂಛಾತಪತ್ರಮನೆ ಶತಪತ್ರಂ (ಗದಾಯು. ೬-೪೦) ; ಬರುಕೊಳ್ಗೆಂಬಿದ ಪುಡಿಗತ್ತುರಿಯಂ ಸುಳಿಗಾಳಿ ಪೂಸಿ ಮೇಲಕ್ಕೆತ್ತೆ ತರುಣಿಯ ಮುಖಲಕ್ಷ್ಮಿಗೆ ಪಿಡಿದುರುತರ ಪಿಂಛಾತಪತ್ರಮೆನೆ ಕಣ್ಗೆಸಗುಂ (ಶ್ರೀಕೃಂ. ೬-೧೧೨). [ಪಿಂಛ + ಆತಪತ್ರ]

**ಪಿಂಜ** (ಗು). ೧. ದಿಗ್ಭ್ರಮೆಗೊಂಡ ; ಭ್ರಾಂತಿಗೊಂಡ ; ತಬ್ಬಿಬ್ಬಾದ. (ನಾ). ೨. ಮನಸ್ಸಿನ ಗೊಂದಲ ; ದಿಗ್ಭ್ರಮೆ. ೩. ಚಂದ್ರ. ೪. ಶಕ್ತಿ. ೫. ಒಂದು ಬಗೆಯ ಕರ್ಪೂರ. ೬. ಕೊಲ್ಲುವಿಕೆ. [ಸಂ.]

**ಪಿಂಜಡಿ** (ಕ್ರಿ). ಹಿಂದಕ್ಕೆ ತಗ್ಗು,—ಬಡಿ,—ಅಪ್ಪಳಿಸು : ವನಜಾಕ್ಷಿಯಳ ವದನಪ್ರವಾದ ರಾಹು ತಾಃ ಕಿನಿಸಿಂದೆ ಪಿಡಿದು ನಿಂದಿರ್ದಂತೆ ನಿಡಿದಾದ ವೇಣಿಲು ಪಿಂಜಡಿವುತಿರೆ (ನವಮೋ. ೦೩-೬೭). [ಪಿಂ (< ಪಿನ್) + ಜಡಿ$_2$]

**ಪಿಂಜಣಿಗ** (ನಾ). ಒಂದು ಬಗೆಯ ವೃತ್ತಿ ಮತ್ತು ಆ ವೃತ್ತಿಯನ್ನು ಕೈಗೊಂಡವನು : ಪಿಂಜಣಿಗರು ಅಸಗರು ಸಹ × × × ನಾಡ ದಳವಾರಿಕೆ . . . ಸಮರ್ಪಿಸಿಯಿರಲಾಗಿ (ಎಕ. XI, ಮೊಳಕಾ. ೧-೧೪ : 1557).

**ಪಿಂಜಣಿಗಂಗುತ್ತಗೆ** = ಪಿಂಜಣಿಗ ವೃತ್ತಿಯವರ ಮೇಲೆ ಹಾಕುವ ತೆರಿಗೆ : ನಾಡ ತಳವಾರಿಕೆ ವರ್ತನೆ ಪಿಂಜಣಿಗಂಗುತ್ತಗೆ ಯಳೆಂಗ ಮುಮೂ ಮಹರ್ನವಮಿ ಉಲುಪೆ . . . ಕಾಣಿಕೆ ಇವುಗಳು ಸಹವಾಗಿ ಯೆಂವ ಉಂಟಾದ ಯಾತಿಬಾಧೆಗಳನು ಬಿಟು (ಶ್ರೀಇ. IX—II, ೩೩೩-೧೮ : 1550).

[ ? ]

**ಪಿಂಜರ** (ಗು). ೧. ಕಂದುಬಣ್ಣದಿಂದ ಕೂಡಿದ ; ಮಾಸಲುಕೆಂಪು ಬಣ್ಣದ : ಪಿಂಜರತನುಗಳ್ ಕೊಳದಿಂ ಕೊಳಕ್ಕೆಮುಯ್ವುಳಿತತಿಗಳ್ ಮನ ಮೊಸೆದು . . . ಅನುಕರಿಸಿತ್ತು (ಪರಹಾ. ೧-೫೪) ; ಮುರಿದ ಜಡೆಗಳ ರದಃಪಿಂಜರದ ಸಂತತಂ ಸುರನರೋರಗ ಶಂಃ ಶಿಕಾಗಾಶ್ರಯಮಾದ ಪರಮಮುಮಾವಿರೂಪಾಕ್ಷ ಲ್ಪದ್ರುಮಂ ಪೊರೆಯಲಾಪತ್ರಜನರನು (ಕಾಫ್ಕೃ. ೩ ೦). ೨. ಹಳದಿ ಬಣ್ಣದಿಂದ ಕೂಡಿದ ; ಹೊಂಬಣ್ಣದ : ಅಮೇಯ ಕನಕಾಬ್ಜಪಿಂಜರವಾಗಿಯಂ ಗಾತ್ರದೊಳ್ ತೆಮುಟ್ಟಿ ಕೊಳದಿಂ ಕೊಳಕ್ಕೆ ಅಗುತಿರ್ಪ . . . ಭ್ರಮರಸಂಕುಳು (ಸುಕುಮಾ. ೪.೩೦). (ನಾ). ೩. ಕೆಂಪು ಮಿಶ್ರಿತವಾದ ಹಸುರು ; ಹಳದಿ ಬಣ್ಣ : "ಕಂಬಸುರೆಸೆದಿರೆ ಪಿಂಜರಮೆಂಬುದು" (ಪಟ್ಟುಕೋ. ೦೦೯-೬೬). ೪. ಪಂಜರ ; ಬೋನು :

ಆ ಗಿಳಿಯು ಮೂಜುವವನೆಯು ಪಿಂಜರದಲ್ಲಿ ಕೂತು ಕುರುವ್ವ ಲಿಂಗ ಪೂಜಾಂ ಲಿಂಗ ಪೂಜಾಂ ಎಂಬುತ್ತಿದೆ (ಸಿದ್ಧ.ಪ. ೯. ೬೩-೨೦೦) ; ಹೊನ್ನ ಮಾಣಿಕವ ಸುಡಿ ಕಾಳಿ ತದಕಿನ ಪಿಂಜರದ ಮುನ್ನೆರಡು ಕಾಳಿ ನುಡಿದಾವ ಹೆಬ್ಬಾಗಿಲಕ (ಕೋಳಗಾ. ೧೯೯) : ಆದಿಮಧ್ಯಾಂತವಿಲ್ಲದವನನ್ನು ಸಣ್ಣದಾದೀ ನಮ್ಮ ಮನಸ್ಸೆಂಬ ಪಿಂಜರದಲ್ಲಿ ಹೊಗಿಸಲಾರೆವು (ದೇವೀಭಾ. ೩೯). ೫. ಒಂದು ಬಗೆಯ ಹಕ್ಕಿ : ಗಳಿಗಳಂಟಿಗೆ ಸಿಲುಕಿಸವು ಪಿಕ್ಕಾಳಿಗ ಪಿಂಜರ ಮಂಜರಿಗ ವಿಶಾಲಿಗ ಲಾವುಗೆ ಸರಲೆ ಬುಲುಲಿಗಳೆಚ್ಚ ವಿಂಟೆಯುಲಿ (ಕೂಶಾ. ೩-೩-೧೮). ೬. ಒಂದು ಬಗೆಯ ಕುದುರೆ. ೭. ಎಲುಬಿನ ಗೂಡು ; ಅಸ್ಥಿಪಂಜರ. ೮. ಬಂಗಾರ : ಚಿನ್ನ. ೯. ಹಳದಿಯ ಬಣ್ಣವಾಗಿ ಉಪಯೋಗಿಸುವ ಒಂದು ಬಗೆಯ ಖನಿಜ : ಹರಿದಾಳ. [ಸಂ.]

**ಪಿಂಜರಾಪೋಲು** ' ಪಾಂಜರಪೋಳ ' ನೋ.

**ಪಿಂಜರಿ$_1$**. ಹಿಂಜರಿ (ಕ್ರಿ). ಹಿಂದಕ್ಕೆ ಸರಿ ; ಹಿಮ್ಮೆಟ್ಟು : ಒಡನೆಯೆ ಸುದ್ಧಜನಂ ಪಿಂಜರಿದರಿಯು ಕೈಮುಂ ಕಟ್ಟಿದಂ (ಧರ್ಮಾಮೃ. ೯೩-೩೬) ; ಪಿಂಜರಿದು ಸಾವಿನತ್ತಲೆ ಪೋಪ ಪಯಣ ? ತಗೆ. ತಗೆ. ಒಲ್ಲೆನ್ (ಅಕ್ಕಪ್ಪ. ೧೯-೧೦೦). **ಹಿಂಜರಿ** : ಮಾನಕೆ ಮಾನಿಷ್ಠರಂಜಿ ಹಿಂಜರಿವರೆ . . . ತನಗೆಪಿ ಅಂಜಿ ಹಿಂಜರಿದರು ಭಾವುರೆ ಎಂದುಬ್ಬಿ ಮೆರೆವನು ಹೋಡಿ (ಇಂಶಾಶ. ೯೪-೩೯) ; ಅವಳ ಧೈರ್ಯವೇ ಧೈರ್ಯ, ಯಾವುದಕ್ಕೂ ಹಿಂಜರಿಯುತ್ತಲೇ ಇರಲಿಲ್ಲ (ಅಂಕೂ. ೩೬) ; ಚಣಚಣಕೆ ವೈರಿಯು ದಳ ಬಲ ಗುಂದುತಲಿದುಂಬಿದು ಹಿಂಜರಿಯುತೋಡುತಿದೆ ಲೆಕ್ಕಿಸದೆ ವೀರ ಪಾರ್ಥನ ವೀರವಾಣಿಯಂ (ಶತ್ರಾಂಗ. ೩೩. ೨೨೯೮).

[ ಪಿಂ (< ಪಿನ್) + ಜರಿ$_1$ (< ಸರಿ$_1$) ]

**ಪಿಂಜರಿ$_2$** (ನಾ). ಒಂದು ಬಗೆಯ ಸರ್ಪ : ಪಿಂಜರಿ ಕಂಧರಕೋಟ ಧನಂಜಯ ಪಾಂಡುರ ಆಶಾಲಿ ಪಿಂಡಾಂಶುಕ ಚಿತ್ರಾಂಜನ . . . ಮಣಿಜಯು ಸಮುದಂಗಳಾದಿಯಾವಹಿನಿವಹಂ (ವೃಷಾ. ೩೦-೨೮).

[ ← ತೆಲು. ಪಿಂಜರ./ಸಂ. ಪಿಂಜರಕ ]

**ಪಿಂಜರಿ$_3$** (ನಾ). ೧. ಚಿನ್ನ ; ಬಂಗಾರ : ವಾಸವದಿಕ್ಕಟಂ ಸಮೆದ ಮೂಷೆ . . . ಸಮೀರನೇರಣಗನಾಗೆ ಸಿದಾಳದ ದೀಪವರ್ತಿಯೋಳ್ ಕಾಸೆ ತೆರಳ್ದ ಪಿಂಜರಿಯವೋಲ್ ಕಿಪುಸಂಜೆ ತೆರಳ್ದಿನಂ (ಅಕ್ಷಿ. ೬-೭೦). ೨. ಬೆಳ್ಳಿ ; ರಜತ : " ಪಿಂಜರಿಯೆಂದು ಬೆಳ್ಳಿ " (ಶಶಾ. ೩೦-೬೨) ; ಪಿಂಜರಿಯ ನಗಮೊ . . . ಸುಧೆಯಾ ರಂಜಿಪ ರಾಶಿಯೊ ತಾನೆನೆ ನಂಜುಂಡನ ಸದನವೊಂದು ಸಲೆ ಶೋಭಿಸುಗುಂ (ಹಮ್ಮಿರ. ೬-೩೯) ; ಕಿಸುಂಪೊನ್ನ ಪಿಂಜರಿಯ ಚೆಂದವಗಲ್ಲ ಕೋಂಟೆಯು ಮೂಪಳಿಸಿನಗಟ್ಟಿದೊಳಗೆ . . . ಸಿಂಗರದೊಂದು ದೇಗುಲಂ ಕಣ್ಗೆಡ್ಡವಾಗಿ ರಂಜಿಕುಂ (ರಾಜಾಕ್ಷ. ೩೪-೧೯). [<ಸಂ. ಪಿಂಜರ]

**ಪಿಂಜರಿ$_4$** (ನಾ). ಮೇಲ್ಕಟ್ಟು ; ವಿತಾನ : " ಪಿಂಜರೀ_ಮೇಲ್ಕಟ್ಟು " (ಶಾಕಳ್ಯ. ೨೬೦). [ಸಂ. ಪಿಂಜರೀ ?]

**ಪಿಂಜರಿತ** (ಗು). ೧. ಹೊಂಬಣ್ಣದಿಂದ ಕೂಡಿದ ; ಹಳದಿ ಮಿಶ್ರಿತ ಕೆಂಪುಬಣ್ಣದ : ಆಭರಣದ ಮಾಣಿಕಂಗಳ ಪೊದಟ್ದುರುಕಾಂತಿಂಗಳಿಂದ ಮಂದು ಪಿಂಜರಿತಶಿಂಗಿತಾರುಣಿತದಿಬ್ಬುಖವಾದುದು ತನ್ನಹೋತ್ಸವಂ (ಅರಿಪು. ೭-೧೦೪) ; ಸುರಭಿಮಲಯಜರುಹಪಂಕಪಿಂಜರಿತ ರಜತಶುಕ್ತಿಕಗಳಿಂ (ಶಂಗಾಮಾ. ೧೨-೨ ವ) : ಕಿಂಜಲ್ಕಮಂಜರೀಪಿಂಜರಿತದಿಶಾವಲಯಂ (ಹಕಶಾ. ತಂ. ೨೩೦). (ನಾ). ೨. ಹಳದಿಮಿಶ್ರಿತವಾದ ಕೆಂಪುಬಣ್ಣವುಳ್ಳದು; ಹೊಂಬಣ್ಣವುಳ್ಳದು : ವಿಯತ್ತಳಂ ಬಗೆದು ನೋಟಟ್ಟೊಡೆ ನಾಡೆ ಪತತ್ಪತತ್ರಿಜರ್ಝರಿತಮೆ ದಿಕ್ತಟಂ ರಿಪುನರಾಧಿಪರಕ್ತಧುನೀಪ್ರವಾಹಪಿಂಜರಿತಮೆ ಬೀರಮಂ ಪೊಗಟ್ವನೇಪೊಗಟ್ವಂ ಕದನತ್ರಿಣೇತ್ರನಾ (ಶಂಶಕಾ. ೧೧-೪) ; ಮೇಣಲ್ಲಲ್ಲಿ ಮಂಜುಮೆಯ್ ರವಿಕಿರಣರಾಗದಿಂ ಕಿಂಜಲ್ಕಪಿಂಜರಿತಮಾಯ್ತು (ಶ್ರೀಧಾಕಾ. ೨೬೮-೮೦). [ಸಂ.]

**ಪಿಂಜರಿವಟ್ಟಲ್** (ನಾ). ಬೆಳ್ಳಿಯ ಬಟ್ಟಲು : ಪಿಂಜರಿವಟ್ಟಲೊಳ್ಪೆಱಚಿ ಸೀಧುವನೀಂಟುತೆ ನೋಡಲಲ್ಲಿ ಮೇಣ್ಣಂಜುವುಂತೇಂದು ಬಿಂಬಿಸೆ ಸುಧಾರುಚಿ ಸಿಲ್ಕಿದನೆಂದು ನೋಟ್ಪ ತತ್ಕಂಜದಳಾಕ್ಷಿಯಂ (ಚಾಕ್ಕಬ. ೩-೩೩).

[ಪಿಂಜರಿ$_3$ + ಬಟ್ಟಲ್]

**ಪಿಂಜರಿವೆಟ್ಟು**, ಪಿಂಜರಿವೆಟ್ಟು (ನಾ). ಬೆಳ್ಳಿಯ ಬೆಟ್ಟ ; ರಜತಾದ್ರಿ : " ರಜತಾದ್ರಿಯುಕ್ಕು ಪಿಂಜರಿವೆಟ್ಟುವನಲು " (ಶಶಾ. ೩೬). **ಪಿಂಜರಿವೆಟ್ಟು** : " ಪಿಂಜರಿವೆಟ್ಟೆಂದು ಬೆಳ್ಳಿವೆಟ್ಟಂ " (ಶಶಾ. ೪೯-೪೩); ಪಿಂಜುಂ ರೂಪಿಪ ಲಿಂಗದೊಂದು ಪರಿಜಂ ತಾಳ್ದೆಲ್ಲರಂ ರಕ್ಷಿಸಲ್ ನಂಜುಂ ಪಿಂಜರಿವೆಟ್ಟುವೇ ಮಣಿತದೇಂ ಕಂಗೊಳ್ವಸೋ ವೈಮಯಿಯಂ (ಕೃಷ್ಣಶೂರು. ೨-೦೩).

[ ಪಿಂಜರಿ$_3$ + ಬೆಟ್ಟು ]

**ಪಿಂಜರಿವೆಟ್ಟು** ' ಪಿಂಜರಿವೆಟ್ಟ ' ನೋ.

**ಪಿಂಜರಿಸು** (ಕ್ರಿ). ಹೊಂಬಣ್ಣದಿಂದ ಆವರಿಸು,—ವ್ಯಾಪಿಸು : ಜಂಬೂದ್ವೀಪದ ಮೇರುವಿನ ಸಮುತ್ಕಟದೊಳು ಸಂಜನಿಯಿಸಿದಾ ಜಂಬೂಫಲರಸದಿ ಪಿಂಜರಿಸಿದುದೋ ಭುವನತಳವನಿನೆ ರಂಜಿಸಿದುದು ಕಳ್ತಲೆ (ಅಹಿಂಶಾ. ೦೩-೬೨).

[ಪಿಂಜರ + — ಇಸು$_1$]

**ಪಿಂಜಲ**, ಪಿಂಜಳ (ಗು). ೧. ಅತಿಯಾಗಿ ದಿಗ್ಭ್ರಮೆಗೊಂಡ; ಕಂಗೆಟ್ಟ; ತಬ್ಬಿಬ್ಬಾದ. **ಪಿಂಜಳ**: (ನಾ). ೨. ಧೂಳು ; ಹುಡಿ : ಅಂಜನಗಿರಿಯಂ ಚೂರ್ಣಿಸಿ ಪಿಂಜಳಮಪ್ಪಂತೆಯುದಂ ಮೆಯ್ವುತ್ತದವೋಲ್ ರಂಜಿಪ ಜಾಂಡಕರಂಡದೊಳಂಜನವಂ ತುಂಬಿ ಬೊಮ್ಮನಿರಿಸಿದನೋ . . . ಎಂಬಂತೆ ದಿಕ್ಕಟ್ರದೊಳ್ ಕಾಳಾಭೀಳಮಹಾಂಧಕಾರಮೆಸಗುಂ (ಶಮ್ಮಿಕ. ೩-೦೩). [ಸಂ.]

**ಪಿಂಜಳ** ' ಪಿಂಜಲ ' ನೋ.

**ಪಿಂಜಳಕ** (ನಾ). ಧೂಳು ; ಹುಡಿ : " ಧರಣೀಸಮುತ್ಥಿತಂ ಪಾಂಸುರೇಣುಚೂರ್ಣಾಭಿಧಾನಕಂ ಕ್ಷೋದಂ ಧೂಳಿ ರಜಂ ಪರಾಗಮೆಂದಿವು ತೆರಳ್ದು ಪುದಿದಿರ್ದುದಕ್ಕುಮದು ಪಿಂಜಳಕಂ " (ಶಬ್ದಕೋ. ೯೦-೦೩).

[ಸಂ. ಪಿಂಜಲಕ]

**ಪಿಂಜಾರ**, ಪಿಂಜಾರಿ (ನಾ). ೧. ಹಿಂಜುವವನು ; ಹಿಕ್ಕುವವನು : " ಪಿಂಜಾರಃ = ಹಿಕ್ಕುವಂ " (ಶಾಕಳ್ಯ. ೨೬೦). ೨. ಅರಳೆಯನ್ನು ಬಿಡಿಸುವವನು,— ಹಿಂಜುವವನು: "ಪಿಂಜಾರಃ _ಅರಳೆಯನೆಕ್ಕುವಂ" (ಶಾಕಳ್ಯ. ೨೩೩); ಕುಂಬಾಜಿ ಹೊಟ್ಟೆಯಲಿ ಪಿಂಜಾರ ತಾ ಹುಟ್ಟಿ ಕುಂಥಕುಂಥಿಗಳನಳಿಯುತ್ತ ಕುಂಭಿನಿಯೊಳಿಂಬುಗೊಂಡಾನು (ಸರ್ವಜ್ಞ. ೦೦೯೯); ಅವಹೋನಿದ್ದೆ ಹೋದಾಗ ತುರುಗಳು ಊರ ಪಿಂಜಾರನ ಹೊಲ ಹೊಕ್ಕು ಬೆಳೆ ತಿಂದುಬಿಡುವುವು (ಜನಪ. ೬೦೬); ನಮ್ಮ ದೇಶದಲ್ಲಿ ವಸ್ತ್ರವನ್ನು ಹುಟ್ಟಿಸುವ ಕೆಲಸದಲ್ಲಿ ಪಿಂಜಾರ ... ನೇಕಾರ ಮುಂತಾದ ಕೈಕೆಲಸದವರು ಬೇರೆಬೇರೆ ಭಾಗಗಳನ್ನು ವಹಿಸಿಕೊಂಡು ಅಷ್ಟೇ ಮುಗಿಸುತ್ತಾ ಹೋಗುತ್ತಾರೆ (ಜುಂಬು. ೩-೨೩೩). ೩. ಸೇವಕ ; ಗುಲಾಮ ; ಆಳು : ಸಾವಿರ ಕುದುರೆಯ ಸರದಾರ್ರ ಮನೆಯ ಹೆಂಡತಿಗೆ ಪಿಂಜಾರ (ಜಾನಪ. ೦೩೩). **ಪಿಂಜಾರಿ**: ೨. ಪಿಂಜಾರಿಯರು ಪಸಾರಿಯರು . . . ಮೊದಲಾದ ನಾನಾ ಜಾತಿ (ಕಾಗಿಂಗ. ೦೫-೯). ೩. ಪಲ್ಲಕ್ಕಿಯ ಮೇಲ್ಮುಸುಕು,— ಆಚ್ಛಾದನೆ : " ಪಿಂಜಾರಿಃ = ದಂಡಿಕೊರ್ಧ್ವಾಚ್ಛಾದನಂ " (ಶಾಕಳ್ಯ. ೨೩೩).

[ ←ಹಿಂ. ಪಿಂಜಾರ; ಮರಾ. ಪಿಂಜಾರೀ ]

**ಪಿಂಜಾರಿ** 'ಪಿಂಜಾರ' ನೋ.

**ಪಿಂಜಾರಿಕೆ** (ನಾ). ಅರಳೆಯನ್ನು ಹಿಂಜುವ ಕೆಲಸ ; ಹಾಸುಗೆ, ಗಾದಿ ಮೊದಲಾದುವುಗಳನ್ನು ಮಾಡುವ ಕೆಲಸ,—ಉದ್ಯೋಗ : ಸಂಯುಕ್ತ ಪ್ರಾಂತದ ಹೊರತಾಗಿ ಉಳಿದ ಕಡೆಯಲ್ಲೆಲ್ಲ ಬಹುಶಃ ಪಿಂಜಾರರು ಮುಸಲ್ಮಾನರೇ ಇರುವುದರಿಂದ ಈ ಪಿಂಜಾರಿಕೆಯು ಉದ್ಯೋಗವು

ಮುಸಲ್ಮಾನರ ಆಳಿಕೆಯಲ್ಲಿ ಉದಯವಾಯಿತೆಂಬುದು ಸ್ಪಷ್ಟವಾಗುವುದು (ಜಾಹಿ. ೨೫). [ಪಿಂಚಾರ + –ಇಳಿ]

**ಪಿಂಚಾವಳಿ** (ನಾ). ಒಂದು ಬಗೆಯ ವಸ್ತ್ರ: ಮಲಯಜದ ಶ್ರೀಗಂಧಿಗೆಸೆಯುಂ ... ಚಂದ್ರಾತಪಂ ಭೂತಿಳಿಕವುಂ ವಣಿವಟ್ಟು ಪಿಂಚಾವಳಿಯು ಸಂಧ್ಯಾರಾಗವುಂ ಕೈದೊಡಕದಯರಾಗ (ಚಾಕ್ರಿ. ೧೦–೨೫). [? + ವಳ್ಳಿ (<ವಲ್ಲಿ)]

**ಪಿಂಜಿ**₁ 'ಪಿಂಜು₂' ನೋ.

**ಪಿಂಜಿ**₂, ಹಿಂಜಿ (ನಾ). ಅರಳೆಯ ಸುರುಳಿ; ಹಂಜಿ: (೩). ಹಿಂಜಿ: ಹತ್ತಿಯ ಹಿಂಜಿ (Sliver)ಯಲ್ಲಿ ಎಳೆಗಳೆಲ್ಲವೂ ಅಸ್ತವ್ಯಸ್ತವಾಗಿ ಇದ್ದರೆ ಉಪಯೋಗವಿಲ್ಲ (ಜಾಹ್ಮ. I. ೪೦೭); ಹಾಸುಹೊಕ್ಕಿಗೆ ಪಕ್ಕಾದ, ಗಂಜಿಗೆ ಹಿಂಜಿಯಾದ, ನನ್ನೀ ಕೈಲಾಳಿಯ ಮಗ್ಗಕ್ಕೆ ಪಂಜಾದ ಸಸ್ಯೂರಿಸ ಪಿರಿಯರೆಲ್ಲರ ಕ್ಷೇಮವಾರ್ತೆ ಹಾಗೂ ಆಶೀರ್ವಾದ ಕೋರುತ್ತೇನೆ (ಪಪ್ಪೂರು. ೩೧೦೩. ೦೫). [<ಸಂ. ಪಿಂಜಾ]

**ಪಿಂಜು**₁, ಹಿಂಜು (ಕ್ರಿ). ೧. ಬೇರೆ ಬೇರೆ ಮಾಡು; ವಿಭಾಗಿಸು: "ಪಿಂಜು–ಪೃಥಕ್ಕರಣೇ" (ಕಧಾ); ಹೊಂಜಾಳಿಗೆಯನಿತ್ತ ರಂಗಕೇಶವನಾಗ ಪಿಂಜಿ ಮನ್ನಿಸಿದ ಮೇಳವನು ಸಿಂಜಿನ ಖಿಯರಿಣಿಯರಿಗೆ ಪಂತ್ರೋಲಿದ ವರಂಜಿಯಾಭರಣವನಿತ್ತ (ಅರಕ. ೦೫–೧೧೫). ೨. ಅರಳೆಯನ್ನು ಹೆಕ್ಕು,—ಬಿಡಿಸು,–ಚೊಕ್ಕಟ ಮಾಡು: "ವಸುಗೆಯೊಳ್ ಕಾರ್ಪಾಸ ವಿವರಣವೊಳಂ ಪಿಂಜು" (ಕಧ್ಯಾಪಿ. ೫೫). ೩. ಬೇರೆ ಬೇರೆಯಾಗು; ಬಿಡಿಬಿಡಿಯಾಗು; ವಿರಳವಾಗು; ದೂರವಾಗು: ಮಂಜು ಮುಸುಂಕಿ ಕೊಂಕುಗೊಸರಿಂ ಮುಸುಳ್ಗಿಂಡ ಬಿಸಪ್ರಸೂನಮೋ ಪಿಂಜದ ಮೊಗ್ಗು ಪೂಕ್ಕ ಪೊಗೆಸುತ್ತಿದ ಪುತ್ತಳಿಯೋ . . . ಎನಲ್ (ಚಕಪು. ೩–೩೦). **ಹಿಂಜು**: ೧. ಮೋಡದ ಹಿಂಜಿ ಜನರಿಗೆ ಅಂಜಿ ರವಿ ಅಡಗಿದನೆಂದು (ಅರಳು. ೦೪೪–೦೫). ೨. ಹಿಂಜಿದರಳೆಯ ಹಿಂಡೊ? ಐರಾವತದ ದಂಡೊ? ಮಂಜೊ? . . . ಮಲೆಯು ಕಲೆಯಾ ಬಂಡೆಯಲ್ಲೀನ ನಾ ಕಂಡೆ? (ಅಳಲು. ೪–೦೭); ತೆರೆತೆರೆಯಾಗಿ ಹಿಂಜಿದ ಅರಳೆಯಂತೆ ಮೋಡಗಳು ತೇಲಿ ತೇಲಿ ಹೋಗುತ್ತಲಿದ್ದವು (ನಾಗು. ೦೩); ಶಾಂತಾಳು ಹಿಂಜಿದ ಹತ್ತಿಯಂತೆ . . . ಬಂಡೆಗಲ್ಲಿನೊಳಗಿಂದ ತಿಳಿನೀರು ಜುಳುಜುಳು ಹರಿದಂತೆ ನಕ್ಕದ್ದೂ ಕೂಡಿತು (ಅಕಾ. ೧೦೪); ಹಳತು–ಹೊಸತನು ಹಿಂಜಿ ಹೊಸೆದು ಹೊತ್ತಿಸಿ ಹಿಡಿದ ಶಾಂತಿ–ವಣತಿ (ಕಂಕು. ೩೦–೧೧): ಹಿಂಜಿದ ಹತ್ತಿಯ ಚೂರುಗಳಂತಿರುವ ಮೋಡದ ಚುಕ್ಕೆಗಳು . . . ಕಾಣಸಿಕೊಳ್ಳುತ್ತಿವೆ (ಹಟುಹೊ. ೨೫೩). ೪. ತೆಳುವಾಗು; ಚೊಕ್ಕಟವಾಗು; ಶುದ್ಧವಾಗು: ಕಸರು ಕಳೆದ್ಹಮ ಹಿಂಜಿ ಬಂತು ರವಿಕಿರಣ ನೂಲುವಂತೆ (ಅರಳು. ೪೦೪–೮); ಹೊಗೆ ಮೋಡ ಹಿಂಜಿ ಚಿಣ್ಣರೆಯಾಗುವಂತೆ ನೆನಸಿದ ರೂಪ ಹುಡಿಯಾಗುತಿದೆ (ಕಾವ್ಯಾಂಕಿ. ೪–೦); ಮುತ್ತಿದ ಮೋಡ ಚದರಿ, ಹಿಂಜಿ ಹೋಗಿ ಸಾಂದ್ರ ಚಂದ್ರಿಕೆ ಚೆಲ್ಲಬಹುದು (ಅನಿಲ. II. ೨೦೪). ೫. ಬಟ್ಟೆಯ ಎಳೆಗಳು ದೂರವಾಗು; ಜಾಳಾಗು: ಮೊನ್ನೆ ತಾನೇ ತೆಗೆದುಕೊಂಡ ಸೀರೆ ನೀರಿಗೆ ಹಾಕಿದ ಕೂಡಲೆ ಹಿಂಜಿ ಹೋಯಿತು (ಜಾ). ೬. ವಿಸ್ತಾರ ಮಾಡು; ವಿಸ್ತರಿಸು: ಓದುತ್ತಿರುವ ಕುದುರೆಯ ಒಂದು ಹಿಂಬಹುವನ್ನು ಹಿಂಜಿ ಹತ್ತು ಘಂಟೆಯ ಕಾಲವನ್ನಾಗಿ ಮಾಡಬಲ್ಲೆನಾದರೆ (ಚಿತಂ. I. ೨೫೭). ೭. ಸೂಕ್ಷ್ಮವಾಗಿ ಪರಿಶೀಲಿಸು; ಕೂಲಂಕಷವಾಗಿ ವಿಚಾರ ಮಾಡು: ಈ ಪ್ರಶ್ನೆಯನ್ನು ಇನ್ನೂ ಅಷ್ಟು ಹಿಂಜಿ ತೋರಿಸೋಣ (ಜಾಪದ. VI. ಎರಡು ಮಾತುಗಳು); ತನ್ನ ಚಿಂತೆಗಳ ಒಳಪದರನ್ನು ಗಳನ್ನು ಹಿಂಜುವುದರಲ್ಲಿ ಒಂದಾದಳು (ಕೂರುಕಾ. ೩೦); ಪಕ್ಕ ಬುದ್ಧಿಗೇಡೋ ದೌರ್ಬಲ್ಯ ಬಂದು . . . ಸಣ್ಣಮಾತನ್ನೇ ಹಿಡಿದು ಹಿಂಜುತ್ತಿದೆ (ಕಕಂಚಾ. ೨೫): ಈ ಹಾಡನ್ನು ಹಿಂಜಿ ಅರ್ಥ ಮಾಡಿ ನೋಡಿದರೆ ಈ ತೊಡಕು ಬಗೆಹರಿದು ಹೋಗುವುದು (ಕಶ್ಯಾ. ೪೫). [ದೇ.॥ ಮಲ. ಪಿಞ್ಚು, ಪೀಞ್ಚು; ತೆಲು. ಪಿಂಜು]

**ಪಿಂಜು**₂, ಪಿಂಜಿ₁ (ನಾ). ಹೀಚುಗಾಯಿ: ಮಿಡಿ: (೩). ಪಿಂಜಿ₁: "ಪಿಂಜಿ ತೀರ = ಸಣ್ಣ ಕಾಯಿ" (ಜಾಕಳೋ. ೧೫). 'ಪೀಚು' ಪರಾ. [ದೇ.॥ ತಮಿ. ಪಿಞ್ಚು; ಮಲ. ಪಿಞ್ಚು; ತೆಲು. ಪಿಂದಿಯ, ಪಿಂದೆ]

**ಪಿಂಜೂಲ** (ನಾ). ದರ್ಭೆಗಳ ಕಟ್ಟು: ಮುತ್ತೈದೆಗದ ದೊಣ್ಣೆಗಳಲ್ಲಿ ನೀರು ತುಂಬಿಕೊಂಡು ದರ್ಭೆ ಪಿಂಜೂಲಗಳನ್ನು ಹಿಡಿದು ಮಂತ್ರಜಲವನ್ನು ಪ್ರೋಕ್ಷಿಸುತ್ತ ಬಂದರು (ಮಹಾಭಾ. ೪೮). [ಸಂ.]

**ಪಿಂಜೂಷ** (ನಾ). ಕಿವಿಯ ಮಲ; ಗುಗ್ಗೆ. [ಸಂ.]

**ಪಿಂಜಿ**₁ (ನಾ). ನೆರಿಗೆ ಹಾಕಿ ಕಟ್ಟಿದ ಕಚ್ಚೆ. 'ಪಂಚಕಚ್ಚೆ' ಪರಾ.

ಪಿಂಜೇ ಹಾಕಿ ಧೋತ್ರವನ್ನುಡು=ಒಳ ಅಂಗಿಯ ಮೇಲೆ ಬರುವಂತೆ ಮಡಿಕೆಗಳನ್ನು ಒಳಸೇರಿಸು,—ಸಿಕ್ಕಿಸು: (ಗ್ರಾಂಥಿಕ). [← ತೆಲು. ಪಿಂಜೆ, ಪಿಂಜೆಯ]

**ಪಿಂಜಿ**₂ 'ಪಿಂಚಿಯ' ನೋ.

**ಪಿಂಜಿ**₃ (ನಾ). ೧. ಬಾಧೆ; ನೋವು. ೨. ಅರಿಸಿನದ ಪುಡಿ,—ಹುಡಿ. ೩. ಅರಿಸಿನದ ಬಣ್ಣ: ಮೆಯ್ಯ ಬಣ್ಣಮುಂ ಪುಣ್ಯಮುಮಾರಿಸಿನದ ಪಿಂಜೆ[ಪಾಠಾಂ. ಜೆ]ಯಂತ ವಾಟಿ ಪೋಕುಂ (ಅರಸೀ. ೩–೪ ವ). ೪. ಅರಳೆ; ಹತ್ತಿ. ೫. ಬೆತ್ತ; ಸೆಳೆ. [ಸಂ. ಪಿಂಜಾ]

**ಪಿಂಜೆಉಂಗು** (ನಾ). ಹಿಂಭಾಗದ ಸೆರಗು: ಪೊಂಜೆಳೆ, ಪಿಂಜೆಉಂಗು (ಕಪ್ಪಾಕು. ೯೩ ಶ್ರಯೋ). 'ಮುಂಜೆಉಂಗು' ಪರಾ. [ಪಿಂ (< ಪಿನ್) + ಸೆಉಂಗು]

**ಪಿಂಡ** (ನಾ). ೧. ಮುದ್ದೆ; ಉಂಡೆ: ಕುಂಡಲಿಯ ಕಂಡಾತ ಹೆಂಡತಿಗೆ ಒಲಿಯುವನೆ ಕಂಡಿತದೊಲಪ್ಪ ಶಿವಯೋಗಿ ಮಾಂಸದ ಪಿಂಡಕೊಲಿಯುವನೆ (ಸರ್ವಜ್ಞ. ೩೦೫). ೨. ಗುಂಪು; ಸಮೂಹ: "ಪಿಂಡಂ ಸಲೆ ಸಂತೆ ನೆರವಿ ಜಾಳಿಗೆ ತಿಪ್ಪುಳ್" (ಕಬಕ. ೧೦೭); ಅದೇಂ ಕಣ್ಗೊಳಿಸಿದುದೊ ವಿನ[ಕ್ಷ]ತ್ರಕಳ್ಳತ್ರಪಿಂಡಂ[ಪಾಠಾಂ. ಸಿಧಂ] (ಕಂಕಬಾ. ೦೫–೫೬); ರವಿಹಯಲಾಲಾಪಿಂಡಂ ದಿವಿಜನದೀಫೇನವಾಲೆ . . . ಎಂಬಿನಮಲ್ಲಲ್ಲಿಗೆ ಧವಳಾಂಬುದಪಟಲಮೆಸೆದುದು (ಜಗಪು. ೪–೬೧). ೩. ಆಹಾರ; ಊಣಸು: ರುಚಿಯುಲ್ಲದ ಪಿಂಡಂ ಕುದಿರೆಗೆ ತಾಂ ಪೊಲ್ಲದೆನಿಪ ಕವಳವುನಿಪ್ಪಂ (ಅಕ್ಕಾ. ೬–೬೦); ದಂಡ ತಪ್ಪಿಸುತ ಪಿಂಡ ಗಳಿಸಿ ಉಂಡಾಡಿಭಟ್ಟನಾಗಿ . . . ದಪ್ಪ ಅಕ್ಷರದ ಪದವಿ ಪಡೆದು ಇಹ ಮೇಲು ಸಾಲಿನಲ್ಲಿ (ಅರಳು. ೪೨೯–೩); ನಾವು ಹೀಗೆ ಮತ್ತೊಬ್ಬರು ಹಾಕಿದ ಪಿಂಡವನ್ನು ತಿಂದುಕೊಂಡು ಸದಾ ನರಕವನ್ನು ಅನುಭವಿಸದಂತೆ ಬೇಗ ಏನಾದರೂ ಏರ್ಪಾಡು ಮಾಡು (ಶಕಾ. ೨೮). ೪. ಒಂದು ಸಲಕ್ಕೆ ನುಂಗುವಷ್ಟು ಆಹಾರ; ತುತ್ತು; ಕಬಳ: ಒಂದು ಅನ್ನದ ಪಿಂಡವನ್ನು ನನ್ನನ್ನು ಳಸಲು ನೀಡುವವರಿಲ್ಲದಾಗ ಅದೇ ಸುಖವಾದ ಸುಲಭ ಹಾದಿ ಎಂದು ಕೊಂಡಿದ್ದೆ (ತಣಕಾ. ೩೧೧). ೫. (ದೇವತೆಗಳಿಗೆ, ಪಿತೃಗಳಿಗೆ ಅರ್ಪಿಸಲಾಗುವ) ಅನ್ನದ ಮುದ್ದೆ; ನೈವೇದ್ಯ: ಕುತ್ತಮುಂ ಕಿಡಿಸುವ ನಿಮಿತ್ತ ಚಂಡಿಕೆಗೆ ಪಿಂಡಮನಿಟ್ಟುಂ . . . ರೌದ್ರದೇವತೆಗಳಂ ಕೊಂಡಾಡಿ ದುಃಖದಿಂದಾಳುತ್ತಂ ಮುಳುಗುತ್ತಂ ಇಪ್ಪರು (ಶಾಸ್ತ್ರಸೀ. ೪೭–೮); ಇವನಿಂದ ಸತ್ತ ಮ್ಯಾಲ ಅಷ್ಟು ಪಿಂಡಾ ಕಂಡೇವು ಅನ್ನೋ ಒಂದು ಭರವಸೆ ಹುಟ್ಟತದ (ಗಂಗಾಪು. ೦೦೭). ೬. ಗರ್ಭದಲ್ಲಿರುವ ಭ್ರೂಣ: ಅಂಡಜವೆಂಬ ತತ್ತಿಯೊಡೆದು ಪಿಂ[ಪಾಠಾಂ. ಬಂ]ಡ ಪಲ್ಲಟವಾಗಿ ಗಂಡ ಗಂಡರನೆಬ್ಬಿ ಕೊಳಲಿ ಬಳಲುತ್ತೈದಾರೆ (ಅಕಕು. ೪–೦೫); ಕ್ಷಯರೋಗದ ರೋಗಾಣುಗಳು ತಾಯಿಯಿಂದ ಪಿಂಡಕ್ಕೆ

(ಶರೀರದ) ಹೋಗುವುದಿಲ್ಲ (ಕಂಠೀ. ೮ ಶಾಕೋದ್ಭಾಸ); ಮನುಷ್ಯನೊಡನೆ ಮನುಷ್ಯ ಶಿಕ್ಕಾದಿ ಶೀರ ಒಂದು ಪಿಂಡವನ್ನು ಸೃಷ್ಟಿಸಿಡಲಿಲ್ಲ (ಶಿಶಂಕ. ೩-೩೮). ೭. ಶಿಶು ; ಹಸುಳೆ ; ಮಗು : ಜಗ್ ಬೋದ್ಮದ ತನುಜೆ ಜನಿಸಲು ಬಗದು ನಮ್ಮಯ ಹೆಸರನಿಡುವುದು ಅಗಣಿತದ ಗಂಡೊಂದು ಪಿಂಡವು ಜನಿಸುವುದು ಬಳಿಕ (ಜಿಶಾ. ೬-೨೫); ಅವ ನಿನ್ನ ಕೊಲ್ಲದೆ ವಣಾ ಶಿಶುವೆಂದುದಾಸೀನ ಬ್ಯಾಡ ಮಾಯ ಮಂತ್ರದ ಪಿಂಡವು (ಕಕಕೋ. ೧೧-೨೫). ೮. ದೇಹ ; ಶರೀರ : "ತನುಃ, ತನೂಃ . . . ಪಿಂಡಂ, ಕ್ಷೇತ್ರಂ, ಗಾತ್ರಃ, ಅಪಘನಃ, ಮೂರ್ತಿಃ—ಈ ೧೭ ಶರೀರಂ" (ಕಹಾಯು. ೮೯-೩೩೬) ; ಆ ಗುಂಗುಬಿ ಬಾಯಲ್ಲಿ ಕತ್ತರಿವಾಣಿ ಕಾಲಿನಲ್ಲಿ ಕಂಡೆಹ ಅಂಡದಲ್ಲಿ ಕಾಳಕೂಟ ಪಿಂಡವೆಲ್ಲವೂ ಅಸಿಯ ಬಳಗ (ಜಾಲಿಯ. ೪. ೦೬೩-೦೦೮); ಪಿಂಡವೆಂದರೆ ಶರೀರವು (ಕೃಕ್ಷಾ. ೩೯೮ ಅಡಿ). ೯. (ಶರೀರದ) ಒಂದು ಭಾಗ ; ಅಂಗ : Brain (ಮೆದುಳು) ಎಂಬುದು ಶರೀರದ ಒಂದು ಪಿಂಡ (ಆಹಾಕ್ಕ. ೦೦೮). ೧೦. ದಪ್ಪ ; ಗಾತ್ರ : ಗೋಡೆಯ ಯತ್ತರವು ೩೦ ರಿಂದ ೫೦ ಘೂಟನವರೆಗೆ ; ಪಿಂಡವು ಸರಾಸರೀ ಮಾನದಿಂದ ೨೦ ಘೂಟು ಇರುತ್ತದೆಂದು ಹೇಳಬಹುದು (ಕರ್ಣಾಗ. ೩೩೩). ೧೧. ಗಟ್ಟಿಯಾದುದು. ೧೨. ಒಂದು ಬಗೆಯ ಸುವಾಸನಾ ದ್ರವ್ಯ ; ಸಾಂಬ್ರಾಣಿ. ೧೩. ಕಬ್ಬಿಣ.

ಪಿಂಡ ಒಗೆ=ಶರೀರವನ್ನು ಬಿಡು ; ಸಾಯು : ದೂರದ ಊರಿನಿಂದ ಮಗ ಬರುವ ಹೊತ್ತಿಗೆ ಶೀರಾ ಸುಸ್ತಾಗಿದ್ದ ಅವರು ಪಿಂಡ ಒಗೆದು ನಡೆದಿದ್ದರು (ಜೂಲಿ). [ಸಂ. ]

**ಪಿಂಡಂಗೆಯ್** (ಕ್ರಿ). ಮುದ್ದೆ ಮಾಡು; ಉಂಡೆಯಾಗಿ ಮಾಡು : ಆಕಾಶದೊಳ್ಚಂದ್ರನಂ ಮುನ್ನಂ ನಾಲ್ಮೊಗನೊಪ್ಪವಿಟ್ಟ ಬಗೆಯೋ . . ಚೆನ್ನಿಂ ಪೊಂದಿದ ಬೆಣ್ಣೆಯಂ ತೆಗೆದು ಪಿಂಡಂಗೆಯ್ದು ಮೇಲಿಟ್ಟನೋ (ಕಪ್ಪ್ಕ. ೨-೩೮). [ಪಿಂಡ + ಕೆಯ್$_1$]

**ಪಿಂಡಕ** (ನಾ). ಒಂದು ಬಗೆಯ ಸುಗಂಧವಸ್ತು ; ಲೋಬಾನ. [ಸಂ.]

**ಪಿಂಡಖರ್ಜೂರ** (ನಾ). ಒಂದು ಬಗೆಯ ಖರ್ಜೂರ ; ಮೆದುವಾಗಿ ಇರುವ, ಉತ್ತಮದರ್ಜೆಯ ಖರ್ಜೂರ : ಪಿಂಡಖರ್ಜೂರದಲ್ಲಿ ಬೇಸರವಟ್ಟು ಹುಣಿಸೆಹಣ್ಣನ್ನು ತಿನ್ನಲು ಬಯಸಿದವನಂತೆ ರಾಣೀವಾಸದ ಉತ್ತಮಾಂಗನೆಯರನ್ನು ತಿರಸ್ಕರಿಸಿ ನೀನು ಮುನಿಪುತ್ರಿಯನ್ನು ಬಯಸುವವನಾದೆ ! (ಶಾಕುಂತ. ೨೯-೦೮). [ಪಿಂಡ + ಖರ್ಜೂರ]

**ಪಿಂಡಗಲ್** (ಕ್ರಿ). ಗುಂಪಿನಿಂದ ದೂರವಾಗು ; ಒಂಟಿಯಾಗು : ನೆಗಟಿ ಕಳಸ್ವನಂ ಕಳವುದಿಂ ಕಳೆವುಕ್ಕೆ ವನಾಳಿಯಿಂ ವನಾಳಿಗೆ . . . ಪಿಂಡಗಲದೆ ಪಾಲಿಜಾತಿರ್ಪುವಿದಿರುಂಬಟಿಯುಂ ಶುಕಭೃಂಗಹಂಸಕೇಕಿಗಳ್ (ಶಗಂ. ೯-೯೭). [ಪಿಂಡು$_3$ + ಅಗಲ್$_1$]

**ಪಿಂಡಗೊಳ್ಳು** (ಕ್ರಿ). ಒಟ್ಟಾಗಿ ಸೇರು ; ಒಂದಾಗು : `ಕಾವ್ಯಾಕ್ಷಿ'ಯ ಮುನ್ನುಡಿಯಲ್ಲಿ ನಾನು ಹೇಳಿದ ಮಾತು ಇಂದೂ ಹೇಳಬಹುದು ; ಜಾತಿ ಅದೇ. ಆದರೆ ಒಗರು-ಪೊಗರು ಕಣ_ಕಣದಲ್ಲಿ ಪಿಂಡಗೊಂಡಿದೆ (ಕಂಕಬು. IV. ಹಾಬ್ಬ ಜೂಕು): ನಿರ್ದುಷ್ಟಸತ್ತ್ವವು ನವನೀತದಂತೆ ಪಿಂಡಗೊಂಡ ಮೂರ್ತಿಯಾಗಿ ರಾಜಾಕರ 'ತಾನೇ ಈಶ್ವರ' ನೆಂಬ ಅಹಂಭಾವಕ್ಕೆ ಮದ್ದಾಗುವವರಿಗೆ ಮಲೆನಾಡಿನ ಕತೆಯೇನು ? (ಕಂತಕಂ. ೬ ಮುಖ್ಯಾತಿ). [ಪಿಂಡ + ಕೊಳ್ಳು$_1$ (< ಕೊಳ್$_1$)]

**ಪಿಂಡಚ್ಚನೆ** (ನಾ). (ಅರ್ಚನಾರೂಪವಾಗಿ ಮಾಡುವ) ಸಮೂಹ ನೃತ್ಯ ; ಮೇಳನರ್ತನ : ಪಂಡಿತವನೇಜವನಮಾರ್ತಂಡಂಗಾಲಂಬಿಹಾರ ಸುಮನೋಮಾಲಂ ಪೆಂಡಿರ ಕುಚಕೋಕಚಯಂ ಪಿಂಡಚ್ಚನೆಯಾಡುವಂತೆ ನರ್ತಿಸಿತಾಗಳ್ (೮೦ಡಾಕ. ೨೨-೦೮). 'ಗೊಂದಳವೆಕ್ಕಣ' ಪರಾ. [ಪಿಂಡು$_3$ + ಅಚ್ಚನೆ$_1$ (< ಅರ್ಚನೆ)]

**ಪಿಂಡಚ್ಛೇದ** (ನಾ). ಪಿತೃಗಳಿಗೆ ಪಿಂಡಪ್ರದಾನ ಮಾಡುವುದಕ್ಕೆ ಯಾರೂ ಇಲ್ಲದಂತಾಗುವುದು.–ಪಿಂಡ ಹಾಕುವುದು ನಿಂತುಹೋಗುವಿಕೆ : ಮಗಳನೀವೆನಪ್ಪೊಡೆ ಕೊಡಗೂಸೆಂಬುದು ಪೆಱರೊಡವೆ ಮಗನನೀವೆನಪ್ಪೊಡೆ ಸಂತತಿಚ್ಛೇದಮುಂ ಪಿಂಡಚ್ಛೇದಮುಮುಕ್ಕುಮದಱಿಂದೆನ್ನನೆ ಕುಡಲ್ವೇಟ್ಟುಂ (ಶುಕಶಾ. ೩-೨೫ ವ). [ಪಿಂಡ + ಛೇದ]

**ಪಿಂಡಜ** (ನಾ). ಭ್ರೂಣದಿಂದ ಹುಟ್ಟಿ ಬರುವ ಮನುಷ್ಯ, ಪಶು ಮೊದಲಾದುವು : ಆಕಾಶ ಒಂದಂಡಜ ಪೃಥ್ವಿ ಒಂದು ಪಿಂಡಜ ಎರಡಱ ಮಧ್ಯದಲ್ಲಿ ಪಕ್ಷಿಮೃಗಂಗಳನಿಕ್ಕಿತ್ತ ಕಂಡೆ (ಅಕತಂ. ೦೬೦-೬೬೮); ಅಂಡಜ ಇಪ್ಪತ್ತೊಂದು ಲಕ್ಷ ಪಿಂಡಜ ಇಪ್ಪತ್ತೊಂದು ಲಕ್ಷ . . . ಇಂತು ಎಂಬತ್ತು ನಾಲ್ಕು ಲಕ್ಷ ಜೀವರಾಶಿಗಳೊಳಗೆ (ಅಜಿಂತೇ. ೬-೭). [ಸಂ.]

**ಪಿಂಡಪಾತ** (ನಾ). ೧. ಪಿಂಡವನ್ನು ಕೊಡುವುದು. ೨. "ಭಿಕ್ಷಾಪಾತ್ರದಲ್ಲಿ ದೊರೆತ ಅನ್ನ" (ಕೃಶಾಜ. ಟಿಪ್ಪ. ೯೩) : ಅವ ಪಿಂಡವನ್ನುಂಡವನೆ ಸುಗತ ನಿರುಪಧಿಶೇಷ ನಿರ್ವಾಣಾವಡೆದಪನೊ. ಅರಿಯಿರೆ ಆ ಪಿಂಡಪಾತದ್ವಯಂ ಪಿಂಡಪಾತಾಂತರದಿನೆನಿತೊ ಆಯುಷ್ಕರಂ. ಯಶಸ್ಕರತರಂ . . . ಮಹಾಫಲತರಂ ! (ಕೃಶಾಜ. ೬೩-೩೩೪). [ಸಂ.]

**ಪಿಂಡಪಾದ**(ನಾ). ದಪ್ಪವಾದ ಕಾಲುಗಳನ್ನುಳ್ಳದು: ಆನೆ. [ಸಂ.]

**ಪಿಂಡಪ್ರದಾನ** (ನಾ). ಶ್ರಾದ್ಧದಲ್ಲಿ ಪಿತೃಗಳಿಗೆ ಪಿಂಡವನ್ನು ಅರ್ಪಿಸುವುದು : "ನಿವಾಪಃ—೧ ಪಿತೃದಾನಂ—ಪಿತೃ ಪಿತೃತ್ವವನ್ನು ಹೊಂದಿದವರು, ತೃಪ್ತಿಪಡುವುದಕ್ಕೋಸ್ಕರ ಮಾಡಲ್ಪಡುವ ದಾನಂ, ತಿಲೋದಕ ಪಿಂಡಪ್ರದಾನಗಳ ಹೆಸರು" (ಅಿಪ್ರಾಂತಿ. ೨೨೩); ಮುನಿನ ತಂಮಡಿಯಕ್ಕ ಮೋಚಲಮಹಾದೇವಿಯರು ಸ್ವರ್ಗಸ್ಥರಾದವರ ಪಿಂಡಪ್ರದಾನಸದಲು ನೀರ ದೇವಾಲ್ಯದಲು . . . ಧಾರೆ ಎರ [ದ] ೧೨ ಡು (ಶಾಸ೨. VII. ೦೬೬-೮; ೧೩೦೭): ಈ ಸಮನ ಕಳೇವರಮಂ ದಹಿಸಿ ಅಸ್ಥಿಯಂ ವಾರಣಾಸಿಯಲ್ಲಿ ಬಿಟ್ಟು ಗಯೆಯಲ್ಲಿ ಪಿಂಡಪ್ರದಾನಂ ಮಾಡಿ (ಕಪ್ಪಕಾ. ೬-೦೫೯ ವ).

[ಪಿಂಡ + ಪ್ರದಾನ]

**ಪಿಂಡಮರ್ದನ** (ನಾ). ಮುದ್ದೆಯಾಗುವಂತೆ ಬಡಿಯುವುದು.–ಜಜ್ಜುವುದು; ನಜ್ಜುಗುಜ್ಜು ಮಾಡುವುದು : ನಿನ್ನುಮಂ ಸೆಱೆಗೆಯ್ತ ಕೊಂಡು ಪಿಂಡಮರ್ದನಂ ಮಾಡದೆ ಬಿಡುವೆನೆ. ನೋಡೆಂದು ಪೊಂಗಱಿಯ ಕೂರಂಬುಗಳನಾರ್ದೆಚ್ಚಂ (ರಾಮಾಕ್ಕ. ೦೫೬-೨೯). [ಪಿಂಡ + ಮರ್ದನ

**ಪಿಂಡಮೂಲ** (ನಾ). ಕೆಂಪುಮೂಲಂಗಿ ; ಕ್ಯಾರಟ್ಟು : "ಪಿಂಡೀತಕಂ—ಪಿಂಡಮೂಲ" (೬ಕಂ. ೯೭). [ಸಂ.]

**ಪಿಂಡರಂಗ** (ನಾ). ವಜ್ರದ ಹೊರಮೈ ಅಥವಾ ಹೊರಭಾಗದ ಕಾಂತಿ : ಲಾಲಿಸ್ಯ ಬಾಹಿರದಿ ಪ್ರಜ್ವಲಿಪ ಪ್ರಭೆಯರಲು ಲೀಲೆಯಿಂ ತಿಳಿಯದನು ಪಿಂಡರಂಗವದೆಂದು ಬಾಲಾರ್ಕನಿದಿರಿನೊಳು ಪಿಡಿಯೆ ರತ್ನದ ಮಧ್ಯೆ ಛಾಯೆ ತಾ ತೋರುತಿರಲದು ಛಾಯರಂಗವದೆಂದು (ರತ್ನಶಾ. ೧೧-೧೩).

[ಪಿಂಡ + ರಂಗ]

**ಪಿಂಡರಿಕೆ** (ನಾ). ಮೊಳಕಾಲಿನ ಕೆಳಭಾಗ ; ಮೀನಖಂಡ : ಪ್ರತಿ ಹುಂಕಾರಕ್ಕೆ_ಪ್ರತಿಕ್ರಂದನದ ಸೆಳೆತಕ್ಕೆ ನಡುಗುವ ಕಾಲ ಪಿಂಡರಿಕೆಗಳು ಮೊದಲು ಅಧೀರವಾಗಿ ಬರುತ್ತ ನಿರ್ಧಾರವಾಗಿ ನಡೆಯುತ್ತಿದ್ದವು (ಚಕ್ರ. ೩೯೩): ಪಿಂಡರಿಕೆಗಳಿಗೆ ಬಿದ್ದ ಬಾರುಕೋಲ ಹೊಡೆತ ಕಾಲುಗಳನ್ನು ತ್ವರಿತವಾಗಿ ಓಡಿಸುತ್ತಿದ್ದವು (ಶಾಂ. ೬೪).

[ ←ಹಿಂ. ಪಿಂಡರೀ, ಪಿಂಡಲೀ ; ಮರಾ. ಪಿಂಡರೀ, ಪಿಂಢರೀ]

**ಪಿಂಡಲು**, ಪಿಂಡಿಲು, ಪಿಂಡಲು, ಪಿಂಡಿಲು (ನಾ). ೧. ಮೊತ್ತ; ರಾಶಿ : ತೊರೆದುಗುವ ತೊರೆಮೊಲೆಗಳನುಂಡು ಕಱು ಪಿಂಗೆ ಹಾಲ ಧಾರೆಗಳೊಟ್ಟು ಸೋರೆಯ ಪಿಂಡಲು ಪೊಂಗೆ (ಅಕಂತಿ. ೯-೦೭ ಜಿಕ).

**ಪಿಂಡಿಲು**: ೨. ಪೊದರು; ಮೆಳೆ: ಸಿಡಿಲಿನ ಕುಡಿನಾಲಿಗೆಯೊಲು ಪಿಪಿರುವ

ಬಿಡುಗೆ ಬರಲು ಕೈಕೊಂಡು . . . ಪೊದೆದನಾ ಶಂಭುಕನಬಗೆರ್ದ ಬಿದಿರ ಪಿಂಡಿಲನು (ಅಂಜನ. ೦೩–೩೩). ಹಿಂಡಲು : ೨. ಬಿದಿರಿನ ಹಿಂಡಲಿನಲ್ಲಿ ಅಡಗಿ ಕುಳಿತರೆ, ಯಾರಿಗೆ ತಿಳಿದೀತು ? ಹಿಂಡಲಲ್ಲಿ ಹುಲಿಯ ಹೆದರಿಕೆಗೆ ಗಂಟೆ ಸಹ ಬರಲಾರದು (ಕೃಷ್ಣಕೊ. ೩೦) ; ಕೊಳದ ಮಾಡಿಗೆ ಕೇದಗೆಯ ಹಿಂಡಲು ಇಲ್ಲವೇನಮ್ಮ. ಆ ದಾರಿಯಲ್ಲಿ ನಡೆಯುತ್ತಾ ನೋಡಿ ಎಂದಳು (ಕದ್ಭಕ. ೧೮); ಗಡಿಬೇಲಿಯ ಮುಂದುಗಡ ಹಿಂಡಲಿನಲ್ಲಿ ಕಣ್ಮರೆಯಾಗಿದ್ದ ಕಾಲುದಾರಿಯ ಸಮೆದ ನುಣ್ಣನ ಬೂದುಬಣ್ಣಾದ ರೇಖೆ (ಮಲೆಮ. ೪೩). ಹಿಂಡಿಲು : ೧. ತನ್ನ ಮದುವೆಯ ಕಂಡಿಗೆ ಹಿಂಡಿಲನ್ನು ಕಡಿದು ನನ್ನ ಮೇಲೆ ತಳ್ಳುತ್ತಿದ್ದಾನಲ್ಲಾ ಎಂಬ ಸಿಡುಕೂ ಅವರ ಸಿಟ್ಟಿನ ನುಡಿಗಳಿಗೆ ಕಾರಣವಾಗಿತ್ತು (ಮಲೆಮ. ೩೬೮). ೨. ಬಿದಿರ ಹಿಂಡಿಲ ಮುಳ್ಳು ಗುಜುಳು ನಿಟ್ಟಿಣದೊಳಗ್ಗದ ಕಾಲಗತ್ತಲೆಯೊಳಂ ಪೊಗಬೇಕಲಾ. . .ವಾಪಿಗಳು (ಶೀಕೃಷ್ಣ. ೯–೦೯–೦೩) ; ಬಿದಿರ ಹಿಂಡಿಲುಗಳಾವರಿಸಿ ಬೆಳೆದಿಹ ಬಿಂಡಿಲುಗಳಿಕೊತ್ತೊತ್ತಿಲುಬುಬಿದ ತಂಡ ತಂಡದ ಬಳ್ಳಿ ಗಿಡು ಮಳೆ ಮೆಚೆದುದೊಗ್ಗಿನಲಿ (ಕೃಷ್ಣಾಕ. ೯–೦೦); ಚಿತ್ರದ ಹಿಂಡಿಲು, ವಾಟೆಯ ಹಿಂಡಿಲು, ಬಿದಿರ ಹಿಂಡಿಲು, ಗುರಗಿ ಹಳು ಎಲ್ಲ ಕಿಕ್ಕಿರಿದು–ಬೆಳೆದಿದ್ದು, ಯಾವಾಗಲೂ ಸರಲು ನೀರು ಹರಿಯುತ್ತಿದ್ದ ತಾಣ (ಮಲೆಮ. ೬೮). [ ಪಿಂಡು₂ + –ಅಲು (<–ಅಲ್₂) ]

**ಪಿಂಡಸ್ಥ** (ನಾ). [ಜೈನ] ಧ್ಯಾನದ ಪದಸ್ಥ, ಪಿಂಡಸ್ಥ, ರೂಪಸ್ಥ ಮತ್ತು ರೂಪಾತೀತಗಳೆಂಬ ನಾಲ್ಕುವಿಧಗಳಲ್ಲಿ ಒಂದು ; ಆತ್ಮ ಚಿಂತನೆಯಿಂದ ಸಂಸಾರಬಂಧನವನ್ನು ನಷ್ಟಗೊಳಿಸುವುದು : ಪದಸ್ಥಂ ಪಿಂಡಸ್ಥಂ ರೂಪಸ್ಥಂ ರೂಪಾತೀತಂ ಎಂದು ಧ್ಯಾನಂ ಚತುರ್ವಿಧ ಮಕ್ಕುಂ (ಚಾರಿ. ೩೭೩). [ ಸಂ. ]

**ಪಿಂಡಳಿಗೆ** (ನಾ). ಒಂದು ಬಗೆಯ ತೆರಿಗೆ.—ಸಂಂಶ : ಪ್ರತಿವರುಷವು ಪಿಂಡಳಿಗೆಯಾಗಿ ತಿಬುವ ಗ ೧೮ (ಬೊಂಕಣ. ೦೯೩೩, ಹಾಸೀಂ. ೮೨—೮; 1191). [ ? ]

**ಪಿಂಡಟ್** (ಕ್ರಿ). ಗುಂಪು ಚೆದರಿ ಹೋಗು.—ಚೆಲ್ಲಾಪಿಲ್ಲಿಯಾಗು ; ಹಿಂಡೊಡೆ : ದಿವಿಜಕುಜಂಗಳಾರವೆಗಳಾದುವು ಸಿದ್ಧರಸಂ ತಟಾಕಮಾದುವು ಸುರಧೇನು ಪಿಂಡಟಿಯುದೊಂದೆಡೆಯೊಳ್ ನೆರೆದಿರ್ದುವು (ಹಂಪಾಕಾ.೩–೮೦೯). [ ಪಿಂಡು₃ + ಅಟು₁ ]

**ಪಿಂಡಾಂಡ** (ನಾ). ದೇಹ; ಶರೀರ : ಪಿಂಡಾಂಡಮೆಂದುದು ಸ್ಥೂಲಕಾರಣ ಸೂಕ್ಷ್ಮ ತನುವಿನಲಿ (ಹಂಪಾ. ೯೬): ನಿಃಕಲ ಪರಶಿವನಿಗೆ ಮುನ್ನಿನಂತೆ ಜಗತ್ ಸೃಷ್ಟಿ ಮಾಡುವ ಲೀಲೆದೋರಲು ಆ ವೃಷಭೇಂದ್ರನಿಗೆ ನಿನ್ನ ಸದ್ವರ್ಮ ದಿಂದ ಪಿಂಡಾಂಡಗಳ ನಿರ್ಮಿಸು ಎಂದು ಪೇಳಲು (ಕೃಕಶು. 1, ೬೨): ಎಂದು ಅಷ್ಟತನುಗಳು ನಿರ್ಮಿತವಾಗಿ ಪಿಂಡಾಂಡವಾದುವು ಅಂದು ಇಂದು ಪರಿಯಂ ತರ ಬಂದೆನಯ್ಯ ಬಹುಜನ್ಮಂಗಳಲ್ಲಿ (ಅಣಂಡೀ. ೬–೩). [ಪಿಂಡ + ಅಂಡ₂]

**ಪಿಂಡಾಕ್ಷರ** (ನಾ). ಸಂಯುಕ್ತ ವ್ಯಂಜನಾಕ್ಷರ : ಅಳಿದ ಪಿಂಡಾಕ್ಷರಂಗಳು ಆಕರ್ಷಣಕರ್ಮದೊಳಂ ಅಹುದು ಐಂಕಾರದಿಂದಂ ಸಾರಸ್ವತಸಿದ್ಧಿಯಕ್ಕುಂ (ಕೃತಿಪ್ರ. ೦೦–೦೩). [ ಪಿಂಡ + ಅಕ್ಷರ ]

**ಪಿಂಡಾದಾನ** (ನಾ). ಆಹಾರವಸ್ತು, ಪಡಿ ಅಥವಾ ಕೂಲಿಯನ್ನು ಕೊಡುವುದು : ೫೦ ಗದ್ಯಾಣ ಪೊಂನಂ ಪಿಂಡಾದಾನದಿಂದಂ ಧರ್ಮ್ಮವತ್ತ ಳೆಯಿಂ ಪಿಡಿಯುವಂತಾಗಿ ಧಾರಾಪೂರ್ವಕಂ ಮಾಡಿ . . . ಕೊಟ್ಟರ್ (ಶಾಕಶ. XI–ii, ೦೫೯–೬೩; 1104); ಸರ್ವ್ವಬಾಧಾಪರಿಹಾರವಾಗಿ ಪಿಂಡಾದಾನವಾಗಿ ಕೊಟ್ಟರು (ಪ್ಪಅಂ. ೦೯೩೭, ೪೦–೩೫; 1226): ನಿಯತಿ ಪಿಂಡಾದಾನ [ಕ್ರ]ಮದಿಂ ಸ್ಥಳವೃತ್ತಿ ಕ್ಷೇತ್ರನಿಳಯಂಗಳಂ . . . ಸರ್ವ್ವಬಾಧೆ ಪರಿ ಹಾರವೆನಿಃ . . . [ವಿಳ]ಸಜ್ಜಳಧಾರಾಪೂರ್ವ್ವಕಂ ಪುನರ್ದತ್ತಿ ಮಾಡಿ (ಶಾಕಶ. XX, ೨೦೫–೪೯; 1247): ಕಟ್ಟುಗುತ್ತಗೆ ಪಿಂಡಾದಾನಯು ಪಟ್ಟಣಕ್ಕೆ ಒಡಂಬಟ್ಟು ಕೊಟ್ಟರು (ಎಕ. XIV, ಮುಹ. ೦೯೨–೨೨ ; ಸು. 1281). [ಪಿಂಡ+ಆದಾನ]

**ಪಿಂಡಾನೆ, ಹಿಂಡಾನೆ** (ನಾ). ಹಿಂಡಿಗೆ ಸೇರಿದ ಆನೆ : ಕಾಳೆಯಿಲ್ಲದೆ ಬಂದು ಪಿಂಡಾನೆಗಳೊಂದುಗೂಡಿ ಶಿಕ್ಷೋಪಹರಣಂಬೆರಸು . . . ವಿಹ ಗಜಂಗಳಂ ಪಣ್ಣಿ ಕೈಗೈದು ಪೂರ್ವಾಸವಮನವಷ್ಟಂಭಿಸಿ ಸಂಧ್ಯಮೊ ಎಗೆ ನೆರಪಿದಾಗಳ್ (ಚಾಚಿ. ೬–೦೦ ತ). ಹಿಂಡಾನೆ : ಗಜಘಟಾವ್ಯತಿ ಮಾನದಲಿ ಕೋದಂಡಗಳು ಹಿಂಡಾನೆಗಳನೇಕಂಟನೊದೆದೆದೋಡಿದವು (ಕುಭಾ.ಕ. ೩–೦೩). [ಪಿಂಡು₂+ಆನೆ₁]

**ಪಿಂಡಾಯು** (ನಾ). [ಜ್ಯೋತಿ] ಸೂರ್ಯಾದಿ ಗ್ರಹಗಳ ಬಲಾಬಲಗಳ ಮೇರೆಗೆ ನಿರ್ಣಯಿಸಿ ಲೆಕ್ಕ ಹಾಕುವ ಆಯುಸ್ಸಿನ ಪ್ರಮಾಣ.—ಪರಿಮಿತಿ : ಇರೆ ನೀಚದೊಳರ್ಧಮನಪಹರಿಸುಗುಮೂ ನೀಚರಾಶಿಯಿಂದಂ ಪೂರ್ವಾಪರದೆಡೆನುಪಾತದಿಂ ಪರಿಹರಿಸುಗುವುಖಿಳ ಗ್ರಹಾ[ಯು] ಪಿಂಡಾಯುವಿನೊಳ್ (ಜಾತಿ. ೯–೦೨). [ಪಿಂಡ+ಆಯು₂]

**ಪಿಂಡಾಯುಷ್ಯ** (ನಾ). = ಪಿಂಡಾಯು : ಧರಣೀಜಂ ಪದಿನೈದು ಭಮರ್ ರವಿ ಪತ್ತೊಂಬತ್ತು ಶಶಾಂಕಿ ಪನ್ನೆರಡಿಪ್ಪತ್ತು ದಿನಾಧಿನಾಥಸುತಂ. . . ದೈತ್ಯಗುರುವಿಪ್ಪತ್ತೊಂದುಸಂವತ್ಸರಂ ಪರಮೋಚ್ಚಾಂಶದೊಳೊಂದಿ ನಿಂದೊಡದು ಪಿಂಡಾಯುಷ್ಯಮಕ್ಕುಂ ಧ್ರುವಂ(ಜಾತಿ. ೯–೦೦). [ಪಿಂಡ +ಆಯುಷ್ಯ]

**ಪಿಂಡಾರಿ, ಪೆಂಡಾರಿ** (ನಾ). ಹಾದಿ ತಪ್ಪಿಯುವಂಥ ಕಳ್ಳರ ಗುಂಪು.—ಕುಡುಗರ ಸಮೂಹ : ಇಂಡಿಯಾದೇಶದ ಅಭಿವೃದ್ಧಿಯನ್ನು ಸಾಧಿಸಲು ಪಿಂಡಾರಿಗಳನ್ನು ಬಿಡಬೇಕೆಂದು ನಿನ್ನ ಹಂಚಿಕೆಯೋನು? (ಗಾಂಚಿ. ೦೫೯). ಪೆಂಡಾರಿ : ಪೆಂಡಾರಿಯರು ಬರುವಾಗ ಹೆಂಡಿರ ಗೊಡವೆಯೇನು ? (ಗಾದೆ). [←ಹಿಂ. ಪಿಂಡಾರಾ, ಪಿಂಡಾರೀ; ಮರಾ. ಪೆಂಢಾರಾ, ಪೆಂಢಾರೀ./ ತಮಿ. ಪಿಣ್ಡಾರಿ, ಪೆಣ್ಡಾರಿ; ತೆಲು. ಪಿಂಡಾರಿ]

**ಪಿಂಡಾಲು** (ನಾ). ಒಂದು ಸಸ್ಯ ಬಗೆಯ ಮತ್ತು ಅದರ ಗೆಡ್ಡೆ : "ಕಂದಗ್ರಂಥಿ—ಪಿಂಡಾಲು" (ಅಭಿ. ೨೫); "ರೋಮಾಲುಃ—ಪಿಂಡಾಲು" (ಅಭಿ. ೦೯೦). [ಸಂ.]

**ಪಿಂಡಿ₁, ಹಿಂಡಿ₁** (ನಾ). ೧. ಎಣ್ಣೆಯ ಕಾಳುಗಳಿಂದ ರಸ ತೆಗೆದ ಮೇಲೆ ಉಳಿಯುವ ಶೇಷ : ಬೂದಿಯಾದ ಪುಳ್ಳಿಯಂತೆ ಪಿಂಡಿಯಾದ ಎಳ್ಳಿನಂತೆ ಬಟಿಬಂ ಪೊಕ್ಕೆ ಕೊಟ್ಟಂತೆ (ಕರ್ಣಾಮೃ. ೯–೩೬); ಪಿಂಡಿಯಿಂದೆಣ್ಣೆಯ ಪಾಲ್ ಪೆರ್ಚುವಂತೆ ನೊಳೆವಾಲಿಂ ಪುಕ್ಕೆಳ್ ಪೆರ್ಚುವಂತೆ (ಕರ್ಣಾಮೃ. ೦೯–೦೦೯). ಹಿಂಡಿ₁ : ೧. "ತೈಲಕಂ ಪಿಂಡಿ" (ಮಂಗರಾ.೦೨೦–೮); ಹಿಂಡಿಯೊ ವಂಬಿ ಎಣ್ಣೆಯನುಗುವ ತಿಳ್ಳಿಗನುಮಂ (ಕರ್ಣಾಮೃ. ೬–೩೦); ಚಂಡಿತನವೆಂಬ ಹಿಂಡಿ ಇಡಬೇಕು ದಿಂದತನವೆಂಬ ಪೆಂಡೆ ಪೋವು . . . ಪಾಂಡುರಂಗ ಗಂಡಿ ಒಳಗೆ ಹಿಂಡಿಕೋಬೇಕು (ಪುರಂದ. ೨–೩೫–೨); ಮಿಂಡೆಯ ಗಂಡ ತಾ ದಂಡಿಗೆ ಹೋಗಿಹರೆ ಹಿಂಡಿಯ ಹೆಡಿಗೆಗೆ ಕೋಣನ ತಂದು ಕಣಾಗಂಡಿ ಹೊಡೆದಂತೆ (ಸರ್ವಜ್ಞ. ೦೯೬೫); ಹಿಂಡಿಯನ್ನೂ ಅಡಿನ ಹಾಲನ್ನೂ ಅಂಕಿಚಿಪ್ಪೆ ಬೀಜಗಳೊಡನೆ ಅರೆದು (ಶಾಗಂ. ೪೩೯–೮); ಸಂತೆಗೆ ಹೋದವ ಭೀಮಣ್ಣ ಹಿಂಡಿಯ ಕೊಂಡನು ಹತ್ತು ಮಣ (ಕಕಲಿ. ೩–೭೬). ೨. ನಂಜಿಕೊಳ್ಳಲು ಮಾಡುವ ಒಂದು ಬಗೆಯ ಖಾರವಾದ ವ್ಯಂಜನಪದಾರ್ಥ; "ಚಟ್ನಿ, ಖಾರ" (ಜಾನಪೂ. ೩೭) ; ಒಟ್ಟಿತೆನಿಸಿದ ತೈಲ ಕುಂಭಕೋಟಿಗಳ ತಂದರು ಹಿಂಡಿ ಕಟದಿಗಾಗಿ (ಸಿದ್ಧರಾ. ೮–೩೦); ಹುಗ್ಗಿ ಚಿತ್ರಾದಿಯಹಿಯವ್ವ ಸೀವಗೆ ಹಿಂಡಿ ಗುಗ್ಗುರಿ . . . ದೋಸೆಯು ಸಿಟ್ಟುಲಿಗ್ಗೆಯಹುಳಿಯೊಪ್ಪಿತಲ್ಲಿ (ಶಕಕ. ೨೦–೦೨೬); ಆ ಹುಡುಗಿ ಒಳಗಿನಿಂದ ರೊಟ್ಟಿ, ದೀಳೆ, ಹಿಂಡಿ, ಎರಡು ಉಳ್ಳಾಗಡ್ಡಿ ತೆಗೆದುಕೊಂಡು ಬಂದಿತು (ಕಳಕರು. ೨೦). ೩. ಒಂದು ಬಗೆಯ ಸಿಹಿಯಾದ ಖಾದ್ಯ : ಕಳಕಳನೆ ಮೊಲೆವಾಲನರ್ಥಿಸಿ ಅಳುತಮಾಗೆ

ಬಾಲಕನ ಕೈಯಲಿ ಮೆಲುವ ಹಿಂಡಿಯ ಕರಣೆಯಂ ಕೊಟ್ಟಂತು ತಾಯ್ವನ್ನ ಮೊಲೆಯನುಣೆ ಮಜಬಿಟ್ಟು ಮಲ್ಲನ ತೊಲಗುವಂದದಿ (ಅಕ್ಷ. ೨೯-೬೮).

**ಹಿಂಡಿಯ ಕಚ್ಚರಿ** = ಒಂದು ಬಗೆಯ ಸಿಹಿಯಾದ ಖಾದ್ಯ : ಅದಕ್ಕೆ ಬಾಗಿದ ಕೂಳು ಸೇವಗೆಯು ಪಾಯಸ ಪುಳ್ಕಡಲೆಯ ಹುಗ್ಗಿ ಹಿಂಡಿಯ ಕಚ್ಚರಿ ಅಲಸಂದೆಯ ಗುಗ್ಗರಿ ಜೇನುತುಪ್ಪ . . . ಮಂತ್ರ ಸಮನ್ವಿತವಾಗಿ . . . ನಿವಾಳಿಸಿ (ಶಾಂತ. ೧೨೯-೩); ಸೂಸಲುಂಡಿಗೆ ಹಿಂಡಿಯ ಕಚ್ಚರಿ ಜೇನತುಪ್ಪ ಬೆಲ್ಲ ಕಬ್ಬಿನ ಹಾಲು . . . ಇವಂ ಮಂತ್ರ ಸಮನ್ವಿತವಾಗಿ ಶಿಶುವಿಗೆ . . . ನಿವಾಳಿಸಿ (ಶಾಂತ. ೦೩೦-೩೦).

[< ಓಂಡು₁ / ತಮಿ. ಮಲ. ಪಿಣ್ಣಿ; ತುಳು. ಓಂಡಿ, ಪುಂಡಿ, ಹಿಂಡಿ; ತೆಲು. ಓಂಡಿ]

**ಓಂಡಿ₂** 'ಪುಂಡಿ' ನೋ.

**ಓಂಡಿ₃** (ನಾ). ೧. ಮುದ್ದೆ ; ಉಂಡೆ : ಮಂ(ಮುಂ)ಡುಗೆಯ ದಲಪುಂ ತಂದರೆದು ತೊಳೆದು ಮಣ್ಣಿನ ಬಾಯೊಳ್ ನಿಲೆ ಓಂಡಿಯ ನಿಕ್ಕಲೊಡಂ ತೊಲಗೆ ವಿಷಂ ಸುಖದಿನಿರ್ವನಾ ದಷ್ಟನವಂ (ಅಮಚ. ೧೬-೧೦೦). ೨. ಗುಂಪು; ಸಮೂಹ : ಗುತ್ತಿ ನೋಡುತ್ತಾನೆ, ಇಂಬಳ ಗಳ ಓಂಡಿ! (ಮರಿಚ. ೧೮). ೩. ಕಟ್ಟು ; ಹೊರೆ : ಹುಲ್ಲ ಹೊರೆಯ ಮಾರುವ ಭಂಡಿಗಳಲಿ ಕಲ್ಲು ತರುವ ಸಾದೆಯ ಓಂಡಿಯ ಪುರದಲ್ಲಿಯೇ ತಿರುಗಿಪ (ಕಕ್ಕ.ಸ. IV. ೦೯-೩); ಅವನ ವಿನಾಸೆಯ ಕೂದಲು . . . ಹುಲ್ಲಿನ ಓಂಡಿ ಇಟ್ಟಾಗ ನೇತಾಡುವ ಹುಲ್ಲಿನಂತೆ ಇದ್ದವು (ಮಹಾಕ್ಯಾ. ೧೯); ಕಮಲಪ್ಪನವರ ಮಜಮಾನರು ವೀಳೆಯದೆಲೆ ಸಾಹುಕಾರರು. ಓಂಡಿ ಗಳಲ್ಲಿ ಸೊಗಸಾಗಿರುವುದನ್ನು ಆರಿಸಿ ತಂದು ಹೆಂಡತಿಗೆ ಕೊಡುತ್ತಾರೆ (ಹಾಯ್. ೩೦). [ಸಾ.]

**ಓಂಡಿಕ** (ನಾ). ಊತ; ಬಾವು : "ಕರ್ಮವಲಯೆಯಂದೆನಲು ಕಾವಾಲೆ ಓಂಡಿ [ಪಾಠಾಂ. ಪಾಂಡು]ಕಂ" (ಮಂಗರಾ. ೦೦೯-೪). [ಸಂ. ಓಂಡಿಕಾ]

**ಓಂಡಿಕಾಯಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ : ಓಂಡಿಕಾಯಿ, ರಾಮಗೋಟು (ವೃಕ್ಷಿನಿ. ೫೩-೦೦೦೪).

[ಓಂಡಿ₂ (< ಪುಂಡಿ) + ಕಾಯಿ₁ (< ಕಾಯ್₁)]

**ಓಂಡಿಕೆ** (ನಾ). ೧. ಊತ : ಬಾವು. ೨. ಕಾಲಿನ ಮೀನಖಂಡ ; ಕಣಕಾಲು : ಪ್ರೋದ್ವೃತ್ತಓಂಡಿಕಾಃ . . . ಗಂಟುಕಟ್ಟಿದ ಮಣಿ ಕಾಲುಳ್ಳವರು (ಕೃಕೃಸಾ. I. ೧೯). ೩. ಚಕ್ರದ ನಾಭಿ; ಗುಂಬ : "ನಾಭಿ ಓಂಡಿಕೆಯೆನಲು ಕೂಬರದುಂಬಕ್ಕು [ಪಾಠಾಂ. ಓಂಡಕ್ಕೆಯ್ಯೆನಲು ಕೂಬರದುಂಬಕ್ಕು]" (ಮಂಗರಾ. ೬೯-೩೪). ೪. ಪೀಠ ; ಆಸನ. ೫. (ದೇವರ ಪ್ರತಿಮೆ, ಲಿಂಗ ಮೊದಲಾದುವುಗಳ) ಆಧಾರಪೀಠ ; ಗದ್ದುಗೆ : ಇಷ್ಟಲಿಂಗವು ಅರ್ಥಾತ್ ಒಂದು ಭೌತಿಕ ಲಿಂಗವು. ಅದರ ಪೀಠ, ಓಂಡಿಕೆ ಹಾಗು ಗೋಮುಖಿಗಳು ಬಿಂದು-ನಾದ-ಕಲೆಗಳ ಪ್ರತಿನಿಧಿ ಗಳು (ಶರಶ. ೧೯೪); ಟಿಬೇಟದಲ್ಲಿ ಹಿಮಾಲಯದಂಥ ಶೈಲಶ್ರೇಣಿ ಯೊಂದು ಹಬ್ಬಿದೆ . . . ಇದರ ಆಕಾರವು ಮಹಾದೇವರ ಓಂಡಿಕೆಯಂತಿದೆ (ಕೈಲಾಸ. ೩೨); ನಕ್ಷತ್ರಾಕಾರದ ತಲವಿನ್ಯಾಸದ ಮೇಲೆ ಚತುರಸ್ರಾಕಾರ ವಾಗಿ ಗರ್ಭಗುಡಿ ಇರುತ್ತದೆ. ಇದರ ಮಧ್ಯದಲ್ಲಿ ಓಂಡಿಕೆಯನ್ನಿಟ್ಟು . . . ಮೂಲಬೇರವನ್ನು ಸ್ಥಾಪಿಸಿರುವರು (ಹೊಯ್ಸಳ. ೧೯). [ಸಂ. ಓಂಡಿಕಾ]

**ಓಂಡಿಗೆ, ಹಿಂಡಿಕೆ, ಹಿಂಡಿಗೆ** (ನಾ). ೧. (ದೇವರ ಪ್ರತಿಮೆ, ಲಿಂಗ ಮೊದಲಾದುವುಗಳ) ಆಧಾರಪೀಠ ; ಗದ್ದುಗೆ : ಜಲವೆ ಪದಶಿಲೆ ಪೃಥ್ವಿಯೆ ಓಂಡಿಗೆ ಆಕಾಶವೆ ಲಿಂಗ (ಅಪಕಂ. ೦೫೫-೦೦೦); ದೇವ ಸಜ್ಜೆ ಯನು ಉಪ್ಪರಿಸಿಮೆಸೆ . . . ಬಸವ ಭಾವಂ ಬಲಿದು ಮುನ್ನವೇ ಸಜ್ಜೆಯೊಳು ಎಸೆವ ಲಿಂಗಂಗಳಾಗುತ್ತವಿರೆ ಸಜ್ಜೆಯೊಳು ತೊಟ್ಟು ಓಂಡಿಗೆ [ಪಾಠಾಂ. ಓಡಿಕೆ] ಯಾಗೆ ಫಲವೆ ಲಿಂಗವಪುದಾಗೆ (ಅಪಕ. ೯-೫೭) ; ಕಕಾರಕ್ಕೆ ಗಕಾರಂ . . . ಓಂಡಿಕಾ-ಓಂಡಿಗೆ (ಷುರ. ೨೫೫ ವೃತ್ತಿ). ೨. ಗುಂಪು; ರಾಶಿ ; ಸಮೂಹ : "ಓಂಡಿಗೆ—ಓಂಡಿಕಾ—ಉರುಳೆ, ಗುಂಪು" (ಕರ್ಣಕೋ. ೩೭); ಮೇರುವಿನೊಳಟ್ಟೊತ್ತಿದ ಹೊಸ ಪೊನ್ನ ಓಂಡಿಗೆ ಯೊಡನೆ . . . ನವರತ್ನವೃಷ್ಟಿಯಂ ಶಿವಂ ಕಜೆದನೆಂಬಂತೆ (ಜಗ. ೦೩-೬೦). ೩. ಕಟ್ಟು; ಪೆಂಡಿ : ಪಸಿಯರಿಸಿನದ ಪಿಡಿಯೆಲೆಯ ಓಂಡಿಗೆಯಿಂ ಕರ್ಪೂರದ ಕಟ್ಟುಗಳಿಂ ಸುರುಗೊಂಡ ಕರ್ಬಿನ ತಟ್ಟೆಗಳಿಂ . . . ತಿರುಳೆಲೆಯ ತೆರೆಸುತ್ತಿನೊಳಮೆಸೆವ ಪಸುರ್ವಂದರೊಳಗೆ (೧೬ರಾಜ. ೦೦-೩೫). **ಹಿಂಡಿಕೆ** : ೩. ತಲೆಯ ಮೇಲೆ ಹಂಡೆ, ಹೆಗಲ ಮೇಲೆ ಒಗೆದ ಬಟ್ಟೆಗಳ ಹಿಂಡಿಕೆ (ಸ್ತ್ರೀ. ೬೩). **ಹಿಂಡಿಗೆ** : ೨. ಮಜುಗೊಂಡ ಕುತ್ತಮಾಡೆಗೆ ಪದುಳಮಿರ್ಪ ತೋಟಿಯ ತೋಳ್ವಲನ ನರದ ಹಿಂಡಿಗೆಯ ಬಲ್ಪಿಂ ತೊಂದು ಬಲ್ಪಂ ಮೈವೆರ್ಚಿ . . . ಪೋಪೋಪ ಕುದುರೆಗೆ (ಅಶ್ವಶಾ. ೦೪೯-೨೬)

**ಹಿಂಡಿಗೆ ಬಿಗಿ** = ಒಟ್ಟಾಗಿ ಸೇರಿಸು ; ಒಂದುಗೂಡಿಸು : ಹೊಡಿ ದೆಲು ಮರಮುಟ್ಟು ಮಾಂಸದ ಗೋಡೆ ಚರ್ಮದ ಹೊದಿಕೆ ನರದಿಂ ಕೂಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮನಿರುತಿರಲು (ಹರಿಕ. ೯೫).

[< ಸಂ. ಓಂಡಿಕಾ]

**ಓಂಡಿತ** (ಗು). ೧. ಮುದ್ದೆಯಾಗಿ ಮಾಡಿದ; ಉಂಡೆಯಾಗಿ ಮಾಡಿದ. ೨. ಗುಂಪುಗೂಡಿದ ; ಒಟ್ಟಾಗಿ ಸೇರಿದ. [ಸಂ.]

**ಓಂಡಿತಕ** (ನಾ). ಒಂದು ಬಗೆಯ ಸಸ್ಯ; ಓಂಡೀತಕ : ಓಂಡಿತಕ ಮಂಗಾರವಲ್ಲರಿ ಪುಂಡ್ರ ಬಿಲ್ವಾಢ ವೀರಣಾಳಿಯ ಖುಡದರಾಶ್ವಕುಷ್ಠ ಬರ್ಹದ ವೃಕ್ಷ ಗಂಧಚಯ . . . ಎಸೆದುವಾ ವನದಿ ? (ಕೋಗಿಲು. ೯-೪೦)

[< ಸಂ. ಓಂಡೀತಕ]

**ಓಂಡಿಲು** 'ಓಂಡಲು' ನೋ.

**ಓಂಡಿವಳ** 'ಬಿಂಡಿವಾಳ' ನೋ.

**ಓಂಡಿವಾಳ** 'ಬಿಂಡಿವಾಳ' ನೋ.

**ಓಂಡಿಶೂರ** (ನಾ). ಮನೆಯಲ್ಲಿ ಮಾತ್ರ ಶೌರ್ಯ ತೋರಿಸುವವನು; ಜಂಭ ಕೊಚ್ಚುವುದರಲ್ಲಿ ಶೂರನಾದವನು : "ಚೀಣ್ ಗೃಹದೊಳು ಗರ್ಜಿಪಂ ಓಂಡಿಶೂರನಕ್ಕು" (ಮಂಗರಾ. ೩೦-೦೫). [< ಸಂ. ಓಂಡೀಶೂರ]

**ಓಂಡಿಸು** (ಕ್ರಿ). ಕುಗ್ಗಿಸು ; ದುರ್ಬಲಗೊಳಿಸು : ಪರ ನಿಜಶಕ್ತಿಯಂ ಪಿಟ್ಟದು ಓಂಡಿಸದನ್ನೆಗಂ . . . ನೆನೆವುದಿಂದ್ರನರೇಂದ್ರಫಣೀಂದ್ರವಂದ್ಯನಂ (ಸಮಚ. ೦-೦೦೫). [ಓಂಡು₁ + -ಇಸು₁]

**ಓಂಡಿಸೊಪ್ಪು, ಓಂಡೀಸೊಪ್ಪು, ಹಿಂಡಿಸೊಪ್ಪು** (ನಾ). ಒಂದು ಬಗೆಯ ಸೊಪ್ಪು : (೬). **ಓಂಡೀಸೊಪ್ಪು** : ಮಣತುತ್ತಿಗಿಡ, ಓಂಡೀಸೊಪ್ಪು (ವೃಕ್ಷಿನಿ. ೯೬-೬೨). **ಹಿಂಡಿಸೊಪ್ಪು** : ನೆಗ್ಗಿಲ ಬೇರು, ಹಿಂಡಿಸೊಪ್ಪಿನ ಬೇರು ಸಹ ೧ ಪಡಿ ನೀರಲ್ಲಿ ಹಾಕಿ . . . ಶರ್ಕರೆಮೇಹ ತೆಗೆದುಕೊಳ್ಳಲು ಮೂತ್ರಕಟ್ಟು ಬಿಡುವುದು (ಸಕವೈ. ೩೬೪).

[ಓಂಡಿ₂ (< ಪುಂಡಿ) + ಸೊಪ್ಪು₁]

**ಓಂಡೀತಕ** (ನಾ). ಒಂದು ಬಗೆಯ ಸಸ್ಯ : "ಬೋನಗಾರೇ-ಓಂಡೀತಕ, ಮರುಪಕ, ಶ್ವಸನ, ಕರಹಾಟಕ, ಶಲ್ಯ, ಮದನ" (ಪಾಹಿಂ. ೬); "ಓಂಡೀತಕಃ, ಮರುಪಕಃ . . . ಮದನಃ—ಈ ೭ ಮಂಗಾರಗಿಡದ, ಬೋನಗಾರೆಮರದ ಹೆಸರುಗಳು" (ಸಿದ್ಧಾಂತ. ೦೩೪). [ಸಂ.]

**ಓಂಡೀಶೂರ** (ನಾ). ೧. ಮನೆಯಲ್ಲಿ ಮಾತ್ರ, ಶೌರ್ಯ ತೋರು ವವನು,-ಜಂಬ ಕೊಚ್ಚುವುದರಲ್ಲಿ ಶೂರನಾದವನು: "ಗೇಹೇನರ್ದೀ, ಗೃಹೇಶೂರಃ, ಓಂಡೀಶೂರಃ—ಈ ೩ ಗೃಹಗರ್ಜನೆಗೆಯ್ವವಂ" (ಕರ್ಣಾಟ. ೬೯-೨೦೨). ೨. ಊಟದ ವಿಷಯದಲ್ಲಿ ಮಾತ್ರ ಶೌರ್ಯವುಳ್ಳವನು. [ಸಂ.]

**ಓಂಡೀಸೊಪ್ಪು** 'ಓಂಡಿಸೊಪ್ಪು' ನೋ.

**ಪಿಂಡು$_1$, ಹಿಂಡು$_1$** (ಕ್ರಿ). ೧. ರಸ ಒಸರುವಂತೆ ಗಟ್ಟಿಯಾಗಿ ಹಿಸುಕು,–ಅದುಮು; ನೀರು ಹೊರಬರುವಂತೆ ನುಲಿ: ಪಿಂಡುವ ಪಿಂಬೆಯು ಪೆಣ್ ವಿಧುಮಂಡಲಮೊಳಕೊನ್ನಮೊಟ್ಟಿವ ಸೀಯೂನಲೆನಿಕರಂ (ಶಬರ. ೩-೨೩); ತೆಂಗಾಯು ಬಲುಹಿಂದ ಭಿನ್ನಿಸಿಳನೀರ ಸೇವಿಸಬೇಕು ರಸದಾಳಿ ಕೆತ್ತಬೇಕು ಒಲಿದು ಪಿಂಡಲಿಬೇಕು ಮಾವಣ್ಣು ಬಾಳೆವಣ್ಣಲಿಯು ಬೇಕೊಡೆಯದೆ ಕೆತ್ತದೆ ಪಿಂಡದೇ ಸುಲಿಯದೇ ದ್ರಾಕ್ಷಫಳವನ್ನು ಸವಿದಂತಾಯ್ತು (ಕಶಪೋ. ೨೬-೩). ೨. ನುಲಿಚು: ತಿರುಚು: ವಿಭು ಸಾಯೆ ಪೊಯ್ದು ಕಿವಿಯಂ ಪಿಂಡಿ ದೂಡಲೊಡರ್ಚೆ ಬಂದನೇ (ಸುಕುಮಾ. ೨-೬೬). ೩. ಸುರಿ; ಎರೆ; ಹೊಯ್ಯು: ಕಲ್ಲಲ್ಲಿ ನಾರೆತ್ತುವರ್ ಮರುಳಂ ಪೋ ಪುರುಳಾಗಿಪರ್ ಕಿವಿಗಳೊಳ್ ಪೀಯೂಷಮಂ ಪಿಂಡಲುವರ್ಗರಿಯೊಳ್ ಸಂದ ಕವಿಪ್ರವೇಕರೆ ಪಲಂ ಬಲ್ಲರ್ ಪೆಱರ್ ಬಲ್ಲರೇ (ರೀಶಾತ. ೧-೧೩); ಆ ಕಾಂತಾಕಚಶ್ರೇಣಿಗೊಯ್ಯನೆ ಮುಂದಿಕ್ಕಿದ ಚಂದನಾಂಬುವನಲಂಪಿಂಬೆತ್ತು ತಾಂ ಪಿಂಡಿದಳ್ (ಜಗ್ಗಿಲ. ೯-೨೦); ಪರಿಪರಿಯ ಸಿಂಗಾರಗಲಿ ನೋಳ್ಪರ ಬಗೆಯನಿಕರ್ಷಗೊಳುಪ ಕೀಳ್ವರ ಕಿವಿಗೆ ವಾಕ್ಸುಧೆಯ ಪಿಂಡುತ ಬಂದರರವನೆಗೆ (ಶಾಕ್ಕಶಾ. ೩೨-೧೮). ೪. (ಆಲಂ) ನಿರ್ಬಲಗೊಳಿಸು; ನಿಸ್ಸತ್ವಗೊಳಿಸು: ಈ ತೆಱದಿಂದು ನಿನ್ನಂ ಘಾಸಿಸಿ ಬಡದಲೆದು ಪಿಟ್ಟಿದು ಪಿಂಡಿದ ದುಃಖವ್ರಾತವಿದು ಮಗಳೆ (ಅದಿಪು. ೩-೪೭). **ಹಿಂಡು$_1$**: ೧. "ಹಿಂಡು–ನಿಷ್ಪೀಡನೇ, ಗೋಸಮೂಹೇ ಚ" (ಶಮದ): ಮಳಲೊಳ್ ತೈಲಂಗಳು ಹಿಂಡಲಕ್ಕದವೀಸಿಂಗವ ಕಿದ್ದಲಕ್ಕು ಕಱಿಯಲ್ ಬಕ್ಕುಗ್ರದ ವ್ಯಾಘ್ರವಂ ಕಡುಮೂರ್ಖಂ ಹಿತ ಕೇಳ್ವನೇ (ಸೋಮೇಶ. ೯೭); ಮೇಘಂ ಹಿಂಡಿ ಹರಹಿದಂತಿವೆ ನಭದೊಳ್ (ಗಿರಿ. ೯-೬೨); ಹೊಸ ನಿಂಬೆಹಣ್ಣು ಹುಳಿಯಂ ಹಿಂಡಿಯರಿಸಿನವ ಬೆರಸಿ . . . ಬೋನದೊಳಿಕ್ಕಿ ಬಣ್ಣಿಸಿಯದಂ ಕಲಸಿ ಬೀಳಯಪ್ಪನಿಕ್ಕಲದು ಸಾಸುವೆಯ ಕಟ್ಟೋಗರ (ಸೂಶಾ. ೩-೨೦); ಸ್ಪಂಜಿನ ತೆರದೊಳು ದೊಡ್ಡವರಿರುವರು . . . ತಮ್ಮೊಳಗಿರುವುದನೀಯರು ಹಿಡಿದೊತ್ತಿ ಹಿಂಡಿದ ಹೊರತು (ಅಂಶಾತ. ೦೯೯-೮೯). ೨. ಕೆಲವರು . . . ಅವನ ಜುಟ್ಟನ್ನೆಳೆಯುತ್ತಲೂ, ಮತ್ತೆ ಕೆಲವರು ಕಿವಿಯನ್ನು ಹಿಂಡುತ್ತಲೂ ಹಿಂಸೆ ಮಾಡುತ್ತಿದ್ದರು (ರಾಜಶ. ೨೦). ೩. ಬೆಂಡಿನಂದದ ಲಘುಕಿನ್ನರಿಯೊಳು ಸ್ವರಮಂಡಲದೊಳು ಶ್ರುತಿಗೂಡಿ ಗಂಡುಗೋಗಿಲೆಯಂತೆ ಹೆಣ್ದುಂಬಿಯಂತಾಗ ಹಿಂಡಿದರಾತ್ಮಸಾರವನು (ಹರಿ. ೦೯-೧೩೬). ೪. ಪಾಂಡುತನಯರ ನಂದನರು ತಾವ್ವೈವರೀತನ ಹಿಂದುಳುಹಿ ಹಿಂಡಿದರು ಹೇರಾಳದ ಚತುರ್ಬಲವ (ಕುವ್ಯಾ. ೩-೦೬); ಕೊಳನ ಹೊಕ್ಕಿಭದಂತೆ . . ಬಲವನರಿಭಟ ಸುಳಿದು ತುಳಿದನು ಹಳಿದು ಹಿಂಡಿದನು (ಕೌಶಿಕಾ. ೩೬-೦೬); ವಿರಕ್ತರ ಮನದ ಶಾಂತರಸದೊಟ್ಟಿಲಿಯನು ಹಿಂಡಿ ಕೆಡಿಸುವ . . . ಮಾಂಡಿಕೆಯ ರೂಪುಯೌವನವಿಲಾಸವನು ಬಣ್ಣಪರಾರು (ಸಪ್ತಶಾ. ೯-೦೦) ೫. (ಹಾಲನ್ನು) ಕರೆ: ನಿತ್ಯವೂ ಸ್ವಲ್ಪ ಸ್ವಲ್ಪ ಹಿಂಡಿಕೊಂಡು ಕುಡಿಯುತ್ತಾರೆ (ಅಂಶಕ. ೦೩); ಹಾಲನ್ನು ಹಿಂಡುವ ಅಥವಾ ಸರಬರಾಯಿ ಮಾಡುವ ಹೊಲಸು ವಿಧಾನಗಳಿಂದಾಗಿ ಹಾಲಿನೊಡನೆ ರೋಗಾಣುಗಳು . . . ಹೆಚ್ಚಾಗಿರುತ್ತದೆ (ಅಕುಶ. ೮೩): ಹಿತ್ತಲಿನಲ್ಲಿ, ಹಿಂಡುವ ಹೊತ್ತು ವಿನಾ . . . ಆಕಳ ಕರು ಒಂದೇ ಸಮನೆ ಒದರ ಹತ್ತಿತ್ತು (ಗಂಗಾಶಾ. ೨೦). ೬. (ಹಾಲನ್ನು) ಕೊಡು: ಅದು ಹಾಲು ಹಿಂಡುತ್ತದೆ (ಮುಂಬಯಿ. ೪-೨೪); ಅವರಿಗೆ ಆಗ ಉಳಿದ ಉದುಗರೆಗಳೆಂದರೆ . . . ಎರಡು ಹಿಂಡುವ ಆಕಳು (ಹಪ್ಪಿಶ. ೨೬). ೭. ಒತ್ತು; ನೋವು ಮಾಡು: ತರುಕರ ದಿಂಡುಗುಂಡಿಗೆಯ ಹಿಂಡಿದ ನಿನ್ನಯ ಬಾಹುದಂಡವಂ ಪೊಗಳ್ವೆನೆ? (ಗಿರಿಜಾ. ೩೨-೯); ಎಲ್ಲಿಂದಲೋ ಒಳಸೇರಿದ ಕಸವಿಸಿಯು ಅವನ ಹೃದಯವನ್ನು ಹಿಂಡತೊಡಗುವುದು (ಕಲ್ಪಹೊ. ೫೫): ತನ್ನ ಗೆಳೆಯರೆಲ್ಲರೂ ದಸ್ತಗಿರಿಯಾದ ಸುದ್ದಿ ಆಜಯನ ಹೃದಯವನ್ನು ಹಿಂಡುತ್ತಲಿತ್ತು (ಅಶ್ಯಾಕರ. ೧೬೫). ೮. ಕಾಡು; ಪೀಡಿಸು; ಹಿಂಸಿಸು; ನುಗ್ಗುಮಾಡು: ಉಂಡೆಪ್ಪ ಸಮಚಿತ್ರದಲಿ ನೀವ್ ಕೊಂಡಿರ್ಪ ಘಾಯಗಳನೆಡೆಯಲಿ ಹಿಂಡುವಿರಲ್ಲೆ ನಾವು ಸಹಿತೀ ಊರ ಹಾರುವರ (ಕುವ್ಯಾ. ೧೦-೩೩); ವ್ಯಸನಕ್ಕೆ ಪ್ರೌಢ ನೊಳೆಱಗದಿರೆಂದು ರಕ್ಕಸಿಮುಂದೆ ಮಗಳ ಹಿಂಡಿದಳು (ಮೋಹತ. ೦೮-೬೩). ೯. ಹೀರು: ಜೇನುಹುಳು . . . ನಾಲಗೆಯ ಮೇಲಿನ ಮುಕರಂದ ಶೀರ್ಷಕಗಳಿಂದ ಹಿಂಡಿ ಜಿಹ್ವೆಯ ಬುಡದಲ್ಲಿ ಒಂದು ಸಣ್ಣ ಕುಳಿಯೊಳಗೆ ಸಂಗ್ರಹಿಸುತ್ತದೆ (ಜೀವಿತ. ೯೦). ೧೦. ಇಲ್ಲವಾಗಿಸು; ಮುಗಿಸು; ನಾಶಪಡಿಸು; ಧ್ವಂಸ ಮಾಡು: ಕೊಂಡು ತಾಸುರಲಿಂಗವಾದಸುಬಂಡತೇಜೋಮಾಯಸು ಸಿಮಿಷಕೆ ಹಿಂಡಿದನು ಹದಿನಾಲ್ಕು ಲೋಕಪಸುರುಹಿ ಘೋಳಿಡಿಸೆ (ಸಂಕಶ. ೬-೫); ಇವನು ಗತ ಚಿಕ್ಕಂದು ಮೊಲೆಗೊಟ್ಟವಳ ಹಿಂಡಿದ ಗಂಡಬಂಡಿಯ ಜವಳಿಗಾಲಲಿ ಮುರಿದನ್ನೆ ಮಾಮಾ ಸಮರ್ಥನಲೆ (ಕುವ್ಯಾಸ. ೧೦-೦೩).

**ಪಿಂಡಿ ಪಿಟ್** = ೧. ಚೆನ್ನಾಗಿ ಹಿಂಡು. ೨. ಅತಿಯಾಗಿ ಹಿಂಸಿಸು: ಒಲ್ಲಣಿಗೆಯಂ ಪಿಟ್ಟವಂತೆ ಪಿಂಡಿ ಪಿಟ್ಟುವ ಪಗೆಗೆ . . . ಈ ಪದದೊಳ್ ಕಡಿದೊಟ್ಟದಾಗಳ್ ಗೆಲಲಾಱೆ (ಶಂಶಶಾ. ೧೨-೨೦೬ ವ); ಶತ್ರುಬಲಿಯೆಂಬಸುರ ಮಹೀಪತಿ ಸುರರಂ ಪಿಂಡಿ ಪಿಟ್ಟಿ[ಪಾಠ. ಹಿಂಡಿ ಹಿಟ್ಟಿ]ದು ತನ್ನಯ ಪದವಂ ಸುತ್ರನೆನಿಪ ಸಹಸ್ರಬಲಕ್ಷಿತಿಪತಿಗಿತ್ತೊಂದು ಗಿರಿಯೊಳ್ವರ್ಗಂ ತಪದಿ (ಧರ್ಮಶ. ೪-೦೬). **ಹಿಂಡಿ ಹಿಪ್ಪುಲಿ ಮಾಡು** = ಕುಗ್ಗುವಂತೆ ಮಾಡು: ಕುಗ್ಗಿಸು; ನಿಸ್ಸತ್ವಗೊಳಿಸು: ಅವನ ಹೃದಯವನ್ನು ಕಟುಕರು ಕರುಣೆಯಿಲ್ಲದೆ ಹಿಂಡಿ ಹಿಪ್ಪುಲಿ ಮಾಡಿದಂತಾಗಿದ್ದಿತು (ಚಂದ್ರಹಾ. ೮). **ಹಿಂಡಿ ಹಿಪ್ಪೆ ಮಾಡು** = ಹಿಂಡಿ ಹಿಪ್ಪುಲಿ ಮಾಡು: ರಾಜನೂ ರಾಜಪ್ರತಿನಿಧಿಗಳೂ ಅದಾವಾಗ . . . ಪ್ರಜೆಗಳನ್ನು ಹಿಂಡಿ ಹಿಪ್ಪೆ ಮಾಡಲು ಯತ್ನಿಸುವರೋ ಆಗ ರಾಜ್ಯಕ್ರಾಂತಿಯ ಕಾಲವು ಸಮೀಪಿಸಿತೆಂದು ತಿಳಿಯತಕ್ಕದ್ದು! (ಬಚಾ. ೨೩).
[ದೇ. ॥ ತುಳು. ಪಿಂಟು, ಪುಂಟು; ಕೊಡ. ಪುಂಡ್; ತೆಲು. ಪಿಂಡು; ಕೋಲಾ. ನಾಯ್ಕ. ಪಿಂಡ್]

**ಪಿಂಡು$_2$, ಹಿಂಡು$_2$, ಪಿಂಡೆ** (ನಾ). ೧. ಗುಂಪು; ಸಮೂಹ; ರಾಶಿ: "ಬಂಬಲ್ . . . ಪಿಂಡು[ಶಾಶಾಂ. ೩] ತೆರಳ್ಕೆ . . . ಈ ೪೦ ಸಮೂಹಂ" (ಶಶಸಾ. ೫೬-೨೨೨); ಗೋಮಂಡಲದಂತಿರ್ದ ಕಡವಿನ ಕಾಡೆಮ್ಮೆಯ ಪಿಂಡುಗಳಿಂದು . . . ಅತಿಭಯಂಕರಾಕಾರಮಪ್ಪ ದೈತ್ಯವನ್ಕೆ ಬಂದು (ಶಂಕಶಾ. ೬-೨೯ ವ); ಪಂಚಾಗ್ನಿತಾಪತಪ್ತಮಾನಸರಪ್ಪ ತಪೋಧನಜನಕ್ಕೆ ತಪನತಾಪಮನಾಗಲೀಯದೆ ತಳಿರ್ದುಱುಗಲು ಪೊತ್ತು ನಭದೊಳ್ ನಲಿದಾಡುವ ಸೋಗೆನವಿಲ್ಗಳ ಪಿಂಡುಗಳುಮಂ (ಶಂಕಶಂ. ೦೧೮-೧೧); ಜವದಿಂ ಪಾಪದ ಪಿಂಡಿನಂತಳಿಕುಳಂ ಬಿಟ್ಟೋಡೆ (ಅರ್ಥಹ. ೦-೮); ನೆಗೆದು ನಿಂದಂಚೆಯ ಪಿಂಡೆಂಬಂತಿರೆ ಬೆಳ್ಳುಗಿಲದಱಿಂ ಬೀಳ್ವತುಷಾರಮದಱ ಗಱಿವನಿಯೆನಿಕುಂ (ರಾಜಶೇ. ೬-೬). ೨. ಶ್ರಾದ್ಧದ ದಿನಗಳಲ್ಲಿ ಪಿತೃಗಳಿಗೆ ಅರ್ಪಿಸುವ ಅನ್ನದ ಮುದ್ದೆ: 'ಪಿಂಡುಗೊಟ್ಟ್' ಪರಾ. **ಹಿಂಡು$_2$**: ೧. ಸುತ್ತಲುಂ ಗಿಳಿಗಳ ಹಿಂಡುಗಳ್ ನೆರೆದು ಕೂಡಿಮುಮಲ್ಲಿ ಸಹಸ್ರಮುಂ ನಿರಾಕುಳಮನುರಾಗದಿಂ . . . ಇರ್ಪುವು (ಶಾದಂಕು. ೧೨೬); ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ ನೆನವೆನಯ್ಯ (ಮಹಾದೇ. ೨. ೧೩೮-೩೦೩); ಕುಱಿಯ ಹಿಂಡಿನ ತೋಳನ್ತೆ ನಿನ್ನಾನೆ (ಕುವ್ಯಾದ್ರೋ. ೩-೨೬); ಹಾಲುಬತ್ತಿಕೆ ಕವಿವರಗಿಳಿಗಳ ಹಿಂಡ ಮೇಲಕಟ್ಟಿ ಸುಪ ನಾರಿಯರ ಮೇಳಲಳವೆ (ಅಂಶಶಂ. ೫-೬೪); ಘೂತನಾಡುವುದನ್ನೇ ಮರೆತು ಕಿಡಿಕಿಯ ಹೊರಗೆ ಒತ್ತಾಗಿ ಬೆಳೆದ ಬಾಳೆಯ ಹಿಂಡುಗಳಲ್ಲಿ ದೃಷ್ಟಿ ನೆಟ್ಟು ಕೂತ (ಮೂರುದಾ. ೦೪೮). ೪. (ದನದ) ಮಂದೆ; (ಗೋ)

ಸಮೂಹ : "ತಾಯು ವುಂದೆಯೊಳು ನಿಸ್ಪ್ಯೇದನದೊಳು ಹಿಂಡೆಂದೆನಿಕು" (ಕ್ಕ್ರಸು. ೯೭) : ಹೊಲಬುಗೆಟ್ಟ ಶಿಶು ತನ್ನ ತಾಯ ಬಯಸುವಂತೆ ಬಳಿದಪ್ಪಿದ ಪಶು ತನ್ನ ಹಿಂಡನರಸುವಂತೆ ಬಯಸುತಿರ್ದೆನಯ್ಯ ನಿಮ್ಮ ಶರಣರ ಬರವನು (ಬಸವ. ೩೬೩) : ಹಿಂಡ ಬಿಟ್ಟೆಂದೆದು ಹಿಂದಿನಿಂ ಬಹುವಲ್ಲ ಕಂಡವರ ಹೊಲಕೀಳವ ತೊಂಡುದನವಲ್ತು (ಗಾಂಅಕ. ೮೦–೧೩೩). ಹಿಂಡೆ : ೨. "ಹಿಂಡೆ — ಪಿಂಡ=ಪಿಂಡವ ಮುದ್ದೆ" (ಶಬ್ದಕೋ. ೪೪); ಬಯಕೆಗೆ ಪಶುವಂ ಕೊಲ್ವವರಯಸಕ್ಕಂಜುವರೆ ಕೊಂದು ಕೊಳ್ವಾತಂ ಹಿಂಡೆಯು ಕೊಟ್ಟೆಗೆ ಹೇಸುವನೆ (ಸಪುಕ. ೧೪–೧೩೩) ; ಅಳಿದ ಕಲ್ಲಿಗೆ ಹೆಂಟೆ ಹಿಂಡೆಯು ಕೊಳನಿಟ್ಟು ಉಂಬವರಿಲ್ಲದೆ ಅಳುತ್ತಿದ್ದಿತ್ತು (ಮಮುಗು. ೪. ೨೪೪–೦೩) : ಎನ್ನ ಮಕ್ಕಳು ಕೊಂದು ಹಿಂಡೆಯು ಕೊಳನುಂಬರು ಹೇಸುವವರಲ್ಲ (ಸಂಶಕ. ೨೦–೭೮).

ಹಿಂಡುಹಿಂಡು (ದ್ವಿರುಕ್ತಿ): ಇಂದು ಮಾಡಿಸುವೆಂ ಮಹೋತ್ಸವದಿಂದೆ ಸಾವಿರ ಹೊಂಗಳಿಗೆ ಬಲಿತಂದು ಕುಜೀಗಳ ಹಿಂಡುಹಿಂಡಿನ ಧಂದದಲಿ ನೆರಹಿ (ಜಸಕ್ತಿ. ೨೮–೨೨) ; ಹಿಂಡುಹಿಂಡಿನರೇನೆಯ ಮೇಲೇಜು ಮುಂಕೊಂಡುಬುಬುವ ರಿಪುಬಲವ ಮಿಂಡಿ ಸಿರಗಳ ಮರುಳ್ಗಳ ಕೊರಳಗೆ ದಂಡೆಯು ಹಾಕಿದರಾಗ (ಕಂಶಕ. ೦೪–೩೦) : ತಂಡುತಂಡು ದೊರೆಗಳು ಕೂಡಿ ಹಿಂಡುಹಿಂಡು ಸೈನ್ಯ ಕೂಡಿಸಿದರು (ಗಾಕ). ಪಿಂಡಾಗು=ಗುಂಪಾಗು; ಗುಂಪುಗೂಡು: ಕಟ್ಟಾನೆ ಬೀದಿಯೊಳಟ್ಟಿಕೊಂಡು ಪೋಗಿ ನಟ್ಟಾರಣ್ಯಮಂ ಪೊಗುವುದುಮಂ ಪರಿಜನಂಗಳೆಲ್ಲಂ ವಿಸ್ಮಯಂಬಟ್ಟು ಪಿಂಡಾ[ಪಾಂ. ದಾ]ಗಿವ್ವುದುಂ (ಛಕ್ಕಾಸ್ರ. ೨–೩೪ ವ). ಹಿಂಡಾನುಹಿಂಡು=ಭಾರಿ ಸಮೂಹ,— ಗುಂಪು : ಹಿಂಡಾನುಹಿಂಡು ಬೌದ್ಧಭಿಕ್ಷುಗಳಲ್ಲಿ ಮಹಾತ್ಮರಾದ ಭಿಕ್ಷುಗಳು ಎಲ್ಲಿ ಅಡಗಿರುವರೋ ಯಾರಿಗೆ ಗೊತ್ತು (ಶರ್ಮಕ. ೦೫೩).

[< ಸಂ. ಪಿಂಡ]

**ಪಿಂಡುಗಂಕಣ**, ಹಿಂಡುಗಂಕಣ (ನಾ). ೧. ಒಂದು ಬಗೆಯ ಬಳೆ,— ಕಂಕಣ : ಮಾಣಿಕದ ಮುತ್ತಿನ ಪಿಂಡುಗಂಕಣಮಂ ಕೊಟ್ಟ ಕೈಯಿಂದಂ ಪೊನ್ನ ಸಟ್ಟುಗಮಂ ಕೀವಿ ಭೈಕ್ಷಮಂ ಪಿಡಿಯೆಂದು ನೀಡದ ಕೈಯನಿತನೆ ಕಂಡು (ವಡ್ಡಾರಾ. ೯೪–೭) ; ಬಾಣಸಿಗೆಯರ್ ಪಿಂಡುಗಂಕಣಂಗಳಂ ನೂಂಕಿ ನೂಲ ತೋಂಗಲನೆತ್ತಿ . . . ಮುಕ್ಕಿಯೊಳುಣ್ಣ ಪರಿಜನ ಕೈಲ್ಲಂ ಬಡ್ಡಿಸಿದಾಗಳ್ (ಸುಕುಮಾ. ೧೦–೨೪ ವ); ತನ್ನ ನಿದ್ರೆಯೊಡನೆ ಕಟ್ಟಲೆ ಮರೆಯುತ್ತುಂ ಕಣ್ಮಲರೊಡನ ಕಮಲದಳವಲರೆ ತನ್ನ ಪಿಂಡುಗಂಕಣದೊಡನೆ ಕೊಳರ್ವಕ್ಕಿಗಳುಲಿಯೆ . . . ಸೆಜ್ಜೆಯಿನುಡುಗದಿನೆರ್ದು ಶೃಂಗಾರಗೇಹದೊಳ್ ಶೃಂಗಾರಂಗೆಯ್ಯುತ್ತುಮಿರ್ದಳ್ (ಅರ್ಜುನ. ೨–೦೪ ವ); ನಲ್ಮೊಡವುಗೆಳೊಳ್ ಏಕ್ಕಸರಂ ಶ್ರುತಕೀರ್ತಿಗೆ ದುಕ್ಕಂಡದ ಪಿಂಡುಗಂಕಣಂ ಮಹಾಳಿಗಾ ಜಕ್ಕಸರಂ ನಿನ್ನರಸಿಗೆ (ರಾಜಾಕ್ಕ. ೫೪–೦೭). ೨. ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ: ಸಿರಿಸದ ಬಾಸಿಗವಂ ಮಾಂಕರಿಸುವ ನಳಿತೋಳ ಪಿಂಡುಗಂಕಣದ ಸರಂ ಮೊರೆವಳಿಗಳ ಸರವಂ ಚಪ್ಪರಿಸುವಿವಂ ಚೆನ್ನೆ ಪೊನ್ನೆಯರಲಂ ಕೊಯ್ದಾಳ್ (ಆದಿಪು. ೦೦–೪೪ ಅನಕಕ್ಕ) ; ವಿನ್ನಂತಃಪುರದ ಕಾಂತಾಜನದ ಕದಂಪಿನೊಳ್ ಮೃಗಮದಪತ್ರಲೇಖೆಯಂ ಬರೆಯಲುಂ ಬಾಹುಲತೆಯೊಳ್ ಪಿಂಡುಗಂಕಣಮನೇಱಿಸಲುಂ (ಶಂಬಾಪು. ೦೪–೨೦೦ ವ). ಹಿಂಡುಗಂಕಣ : ೧. "ಗುಬ್ಬಿಗಂಕಣ ಹಿಂಡುಗಂಕಣಮುಮೆಂದು ಮಣಿಗಂಕಣಂ ಹಸ್ತಗಂಕಣವು" (ಶಬ್ದಶ್ಮ. ೯೭).

[ಪಿಂಡು₂ + ಕಂಕಣ]

**ಪಿಂಡುಗಜ್ಜೂರ** (ನಾ). = ಪಿಂಡುಖರ್ಜೂರ : ಬಿತ್ತರಂಬಡೆದ ಪನೀರೆಳನೀರ್ ಪಿಂಡುಗಜ್ಜೂರ ದ್ರಾಕ್ಷಿ ರಸವಾಳೆ ದಾಳಿಂಬ ಪಲಸುಮ್ಮಾವರನೇಱಿರ್ ಮೊದಲಾದ ಫಳಕುಲಂಗಳಿಂ (ಶಾಂತ್ಯ. ೦–೩೭ ವ).

[ಪಿಂಡು₂ + ಕಜ್ಜೂರ (< ಕರ್ಜೂರ)]

**ಪಿಂಡುಗೂಡು**, ಹಿಂಡುಗೂಡು (ಕ್ರಿ). ಒಟ್ಟುಗೂಡು ; ಒಟ್ಟಾಗಿ ಸೇರು ; ಗುಂಪಾಗು : ನಿಜದಿಂದಂ ಪಿಂಡುಗೂಡಿರ್ದರೆ ತೃಣಗಣಮುಂ ಮೇಯದು ಸತ್ಪಾನವಂ ಪೀರ್ದಜಪೋತಂ ಲೀಲೆಯಿಂದಂ ನಲಿವಪುರಾ (ಶರ್ಮಕ. ೧೦–೦೪). ಹಿಂಡುಗೂಡು : ಕಂಡಕಂಡವರ ಮನೆಯಲ್ಲಿ ಕೊಂಡಾಡಬೇಕೆಂದು ಹಿಂಡುಗೂಡಿ ಕೂಳನಿಕ್ಕುವ ಭಂಡರಿಗೆಲ್ಲಿಯದೋ ಭಕ್ತಿ (ಮೋಕ್ಷಮಾ. ೧೬–೫೯) : ಆಗಾಗ್ಗೆ ಹಿಂಡುಗೂಡುತ್ತಿದ್ದ ಮೋಡಗಳಲ್ಲಿ ಸೂರ್ಯ ಮರೆಯಾಗುತ್ತಿದ್ದನು (ಭತರು. ೨೬೬). [ಪಿಂಡು₂ + ಕೂಡು₁]

**ಪಿಂಡುಗೂಳ್**, ಹಿಂಡೆಕೂಳು, ಹಿಂಡಗೂಳು (ನಾ). ೧. ಮುದ್ದೆಯಾದ ಅನ್ನ : ಮಾಯದ ಮೆಯ್ಯೊಳ್ ಶ್ರೀಖಂಡಮಂ ಪೂಸುವೆನೆಂಬ ಪಿಂಡುಗೂಳೊಳಗಗುಟನುಣ್ಬೆನೆಂಬ (ಶರ್ಮಕ. ೧೨–೨೪). ಹಿಂಡೆಕೂಳು : ೨. ಶ್ರಾದ್ಧದ ದಿನಗಳಲ್ಲಿ ಪಿತೃಗಳಿಗೆ ಇರಿಸಲಾಗುವ ಅನ್ನದ ಮುದ್ದೆ : "ಹಿಂಡೆಕೂಳು=ಪಿಂಡಾನ್ನ, ಶ್ರಾದ್ಧದ ಊಟ, ಹೀನವಾದ ಊಟ" (ಕಮಾಕಂ. ೬೪೪) ; ಹಿಂಡೆಕೂಳು ಮುಂಡೆಗೆ ಆದೀತೇ ? (ಗಾದೆ). ಹಿಂಡೆಗೂಳು : ೨. ಹಿಂಡೆಗೂಳಾ ಗುಂಡೀದಂಡೇಲುಂಡೂ ಕೈಯ್ಯಾ ಜೋಡಿಸೂವೆ (ಜ್ಞಾಸೂ. ೨–೪೪). [ಪಿಂಡು₂ + ಕೂಟ್₁]

**ಪಿಂಡುಗೊಳ್**, ಹಿಂಡುಗೊಳ್ (ಕ್ರಿ). ಒಟ್ಟುಗೂಡು ; ಗುಂಪಾಗು : ಮೇಳದ ಕೆಳದಿಯರ್ ಪಿಂಡುಗೊಂಡು ತದ್ಯೋಗ್ಯ . . . ಮಂಗಳೋಪಕರಣಂಗಳಂ ಪಿಡಿದು ಸ್ಯಂದನದ ಸುತ್ತಲುಂ ಮುಂದ್ವಸಿ ವಡೆಯ (ಜಾರತ್ನ. ೧೦–೭೩ ವ) ; ಪಿಂಡುಗೊಂಡು ಜೊಂದೇಳ್ದ ಕಾಳ್ಪಿದುಳ ಕೋಳ್ಗೆ ಸಬಾಂದರದೆಡೆಬಿದ ಕಣ್ಗಳಿಂ ... ಮಾಸಿ ಮಸರಿಸಿದಂತೆ ಬಳ್ಳ ಪರ್ವಣಂಗಳಿಂದತಿ ಭಯಾವಹವಾದ ಬಟ್ಟೆಯಂ ನಿಟ್ಟಿಸುತ್ತಿರೆ (ರಾಜಶೇ. ೫–೦೨೦ ವ). ಹಿಂಡುಗೊಳ್ : ಎನಿತು ಸುರರಾಗರೆನಿತಸುರರಾಗರು ನೆನೆಯೆ ಎನಿತು ದೇವರ ದೊಡ್ಡ ಹಿಂಡುಗೊಳ್ಳದು ನೆನೆಯೆ (ಕುಶ್ರಕ. ರೇ. ೨೦೩–೦೪).

[ಪಿಂಡು₂ + ಕೊಳ್₁]

**ಪಿಂಡುವಾತು**, ಹಿಂಡುಮಾತು (ನಾ). ಹೆಚ್ಚು ಮಾತು ; ಬಹಳವಾದ ಮಾತು : ಕೊಂಡಾಡುವಾಗಾನು ಭಟ್ಟನಲ್ಲೊಳ್ಳಿತ ಕಂಡು ಸೋಲದ ಸುಖಿ ಯಾರು ಪಿಂಡುವಾತಿನ ಜೋಲಿಯೇನು ನೀನೊಬ್ಬನೆ ಮುಂಡೆ ದೂಗಿಸಿದೆ ಮೂಜಗವ (ಕಕಕ. ೬೦–೭೮). ಹಿಂಡುಮಾತು : ಕಂಡಕಂಡದ್ದೆಲ್ಲ ಕಮಲನಾಭನ ಮೂರ್ತಿ . . . ತಂಡತಂಡದ ವಾರ್ತೆ ವಾರಿಜಾಕ್ಷನ ಕೀರ್ತಿ ಹಿಂಡುಮಾತುಗಳೆಲ್ಲ ಹರಿಯ ನಾಮ (ಪುರಕ್ಕ. ೨೫–೦).

[ಪಿಂಡು₂ + ಮಾತು₁]

**ಪಿಂಡೋತ್ಪತ್ತಿ** (ನಾ). ಭ್ರೂಣದ ಉತ್ಪತ್ತಿ,— ಹುಟ್ಟು : ಪಿಂಡೋತ್ಪತ್ತಿ (ಪಶೀಕ. ೨೫೫). [ಪಿಂಡ + ಉತ್ಪತ್ತಿ]

**ಪಿಂತಟ್ಟು**, ಹಿಂದಟ್ಟು (ಕ್ರಿ). ೧. ಹಿಂದಕ್ಕೆ ಕಳುಹಿಸು ; ಹಿಂದೆ ಹೋಗುವಂತೆ ಮಾಡು : ಇದು ಸಿದ್ಧಂ ಬದ್ಧಮೆಂದು ಪೊಣ್ದಿ ನುಡಿದು ಬಂದ ನಿಯೋಗಿಯಂ ಪಿಂತಟ್ಟಲೊಡಂ (ರಾಜಾಕ್ಕ. ೦೯೩–೦೪). ಹಿಂದಟ್ಟು : ೧. ಬೆಟ್ಟ ಬರುತಿದೆ ಮುಂದೆ ಹೋಯಿತ್ ಹೋಯಿತ್ ಮೆಟ್ಟು ಹಿಂದಟ್ಟಿದಲು ವೃಕವ ಹೊಟ್ಟುಗಳ ಹೋಯ್ತನುತ ರಣದೊಳಗಟ್ಟಿಯಾಡಿದರು (ಕೌರಾ. ೩೨–೨೨). ೨. ದಾಟಿ ಮುಂದೆ ಹೋಗು ; ಹಿಂದೆ ಹಾಕು : ಅಕ್ಕಪಕ್ಕದ ಮರಗಿಡಗಳನ್ನು ಹಿಂದಟ್ಟುತ್ತಾ ರೈಲು ಮುಂದಕ್ಕೋಡುತ್ತಿತ್ತು (ಮಾ).

[ಪಿಂತೆ₂ + ಅಟ್ಟು₂]

**ಪಿಂತಡಿ**, ಪಿಂದಡಿ (ನಾ). ಹಿಂದಕ್ಕೆ ಇಡುವ ಹೆಜ್ಜೆ : 'ಪಿಂತಡಿಯಿಡು' ನರಾ. ಪಿಂದಡಿ : 'ಪಿಂದಡಿಯಿಡು' ನರಾ. [ಪಿಂತು + ಅಡಿ₁]

**ಪಿಂತಡಿಯಿಡು**, ಪಿಂದಡಿಯಿಡು (ಕ್ರಿ). ಹಿಂದೆ ಸರಿ ; ಹಿಮ್ಮೆಟ್ಟು : ನ[ಮ]ಗಾಪಿರಂಗದೊಳು ಪಾರ್ಥಿವವಾಗಿ ಪುಂಸಕದಿಯ ಪಿಂತಡಿಯಿಟ್ಟಿಡೆ ನಂಮ ಪೂರ್ವ್ವದಾ ಪುರುಷರು ನಾಕಮಾರ್ಗಕದ್ದೋಗಗೆಯ್ಯುವರು

ಹಿತ್ತಲಿಗೆ ಕರೆದುಕೊಂಡು ಹೋದಳು (ಗಂಗಾಶಾ. ೨೨) : ನಮ್ಮದೇ ಆದ ಮನೆಯಿದೆ, ಹಿತ್ತಲಿದೆ, ತೋಟವಿದೆ (ಮೂರುದಾ. ೧೨೩) ; ಧರ್ಮಕ್ಕೆ ದಟ್ಟಿ ಕೊಟ್ಟರೆ ಹಿತ್ತಲಿಗೆ ಹೋಗಿ ಮೆಳೆ ಹಾಕಿದ (ಗಾದೆ) ; ಹಿತ್ತಲ ಗಿಡ ಮದ್ದಲ್ಲ, ಮನೆಹೆಂಡತಿ ಮುದ್ದಲ್ಲ (ಗಾದೆ). ಹಿತ್ತಿಲ್ : ೧. ಬಡಗಣ ಕೊಪ್ಪಲ ಹಿತ್ತಿಲಲು ... ಹಿರಣ್ಯಪೂರ್ವಕವಾಗಾಧಿಸಿ ಸರ್ವನಮಸ್ಯವಾಗಿರೆ ಪಡೆದು ಬಿಟ್ಟರ್ (ಶಾಇ. V, ೯೩೦-೩೩ ; 1162). ೨. "ಹಿತ್ತಿಲಲ್ಲಿಯುಂ ನಿಮ್ಮುಟಮೆಂಬುದು" (ಹಾಯು. ೧೩೩-೩೦) ; ಪತ್ತಿದ ಗಂಡರ ಚಿತ್ತವ ಕಿಡಲೀಯದಿತ್ತುದೇ ಕೋಟಿ ಶನಗೆಂಬ ಸೂಳೆಯ ಹಿತ್ತಿಲಲ್ಲಿರದೆ ಸುರಭೂಜ (ಅಲಾಶ. ೨-೩೯). ಹಿತ್ತಿಲು : ೨. ನಿನಗೆ ಕರವೆತ್ತಿ ಪೊಡೆವಡುವ ಭಕ್ತ ಮನೆಯ ಹಿತ್ತಿಲ ಬೇಲಿಯಾಗಿಪ್ಪನೈ ರಾಮನಾಥಾ (ದೇಮಾಶ. ೨೯-೯೯) ಹಿತ್ತಿಲೊಳ್ಸಂಜೀವನೌಷಧಿ ಬೆಳೆದು ರಂಜಿಸುತ್ತಿರಲು (ಪ್ರಿಂರಪು. ೦೩-೬೭) ; ಮನೆಯೊಳ್ ಸುರಧೇನು ಕಟ್ಟಿಯುತಿರ್ಪುದು...ದಿವಿಜಾನೋಕಹಮೋವದೆ ಕುಡುವುದು ಬೇಡಿದುದಂ ಹಿತ್ತಿಲೊಳು (ಪಾಲು. ೦೨-೩೬) ; ಹಿತ್ತಿಲಲಿ ಮರ ಹಾರುವನು ಅಳಲಿನಂತೆ (ಕಂಪು. ೧೦-೯).

ಹಿತ್ತಿಲ ವನ, ಹಿತ್ತಿಲ ಬನ, ಹಿತ್ತಿಲ ವನ = ಮನೆಯ ಹಿಂಭಾಗದಲ್ಲಿರುವ ತೋಟ ; ಕೈದೋಟ : ಶ್ರೀವೀರಜಿನೇಂದ್ರಸಮವಸರಣಂ ಬಂದೀ ಆವಾಸದ ಹಿತ್ತಿಲ ವನದೋಪರಿಯೊಳ್ ನೆಲಸಿತ್ತಖಿಲಸುರಗಣಸಹಿತಂ (ಶಪ್ತಾ. ಸು. ೩೦ ಪ್ರಯೋ) ; ಕೃಷ್ಣನವನ ಕರೆಕೊಂಡು ಹಿತ್ತಿಲ ಬನಕಯ್ದೆ ತೊಂಡುಗೆಡೆವ ಗಿಳಿಯಿಲ್ಲದ ಆವಲಿ ಮಂಡಿಸಿದನು ರಾಯಕುವರ (ಹರಿಕ. ೩-೩) ; ಆ ತರಳಾಕ್ಷಿ ಹಿತ್ತಿ[ಪಾಠಾಂ. ತ್ತ]ಲ ವನಕವಳನಂದು ತುರದಿಂದೆಯ್ದಿಸಿದಳು (ಕುಮಾರಾಂ. ೩೩-೬೭). ಹಿತ್ತಲ ಕಾಯಿ = ಮನೆಯ ಹಿಂಭಾಗವನ್ನು ಕಾಯುವವನು : ಎಂದಿನಂತೆ ಅವನಿಗೆ 'ಹಿತ್ತಲ ಕಾಯಿ' ಪದವಿ ಕಾದಿರುತ್ತಿತ್ತು (ಡಾಶಾಂ. ೨೬). ಹಿತ್ತಲ ಬಾಗಿಲ್ = ಮನೆಯ ಹಿಂಭಾಗಕ್ಕೆ ಇರುವ ಬಾಗಿಲು; ಹಿತ್ತಲಿಗೆ ಇರುವ ಬಾಗಿಲು ; ಹಿಂಬಾಗಿಲು : ತನ್ನರಮನೆಯ ಹಿತ್ತ[ಪಾಠಾಂ. ತ್ತಿ]ಲ ಬಾಗಿಲಲಿ ಲಿಂಗಪ್ರಸಾದವನು ಜನನಿ ತಂದವನಿಯಲಿ ಸುರಿಯಲು (ಚಪು. ೬೦-೨೦). ಹಿತ್ತಲ ಮನೆ = ಮನೆಯ ಹಿಂಭಾಗದ ಅಂಗಳದಲ್ಲಿ ಕಟ್ಟಿರುವ ಮನೆ : ಸಿಲುಕಿದಲ್ಲಿ ನೀರೆನುತ ಕೋಮಳೆ ತವಕದಿಂ ತನ್ನ ಕೈಗೊಟ್ಟಳಲುತಂ ಹಿತ್ತ[ಪಾಠಾಂ. ತ್ತಿ]ಲ ಮನೆಗೆಪೊಡಗೊಂಡು ಕಾನೆಯ್ದೆ (ಶಿಸಪು. ೯೨-೩೦) ; ಅಂಗಳದಿಂದ ಹಿತ್ತಲ ಮನೆಯವರೆಗೂ ಗಡಿಬಿಡಿ ಆರಂಭವಾಗಿಬಿಟ್ಟಿತ್ತು (ವೃಶಿ. ೯) ; ತಾಯಿಯೂ ಮಗಳೂ ಆಗ ಕರೆದ ಎರಡು ದೊಡ್ಡ ಮಡಿಕೆ ಹಾಲನ್ನು ಹೊತ್ತುಕೊಂಡು ಹಿತ್ತಲ ಮನೆಗೆ ಹೋಗುತ್ತಾರೆ (ಕುಶಿವಾ. ೨೬). ಹಿತ್ತಲು ಗುಡಿಸು = ನಿಂದಿಸು ; ದೂಷಿಸು : ನಿಮ್ಮ ನಿಮ್ಮ ಭಾವನ ಜಗಳದಲ್ಲಿ ನೀವು ನಮ್ಮ ತಂದೆ ತಾಯಿಯ ಹೆಸರು ಹಿಡಿದು ಹಿತ್ತಲು ಗುಡಿಸಬೇಡಿ (ಕಳಿದ. ೨೦೩). ಹಿತ್ತಿಲು ಮನೆಯ ಊಳಿಗ = ಹಿತ್ತಲ ಮನೆಯನ್ನು ಕಾಯುವ ಕೆಲಸ : ಅರಮನೆಯಲ್ಲಿ ಷಣ್ಮುಖದೊಳು ನಿತ್ಯಕಟ್ಟಳೆಯಲ್ಲಿ ನಡೆಯುವ ಊಳಿಗಗಳು . . . ರಜದ ಊಳಿಗ, ಹಿತ್ತಿಲು ಮನೆಯ ಊಳಿಗ (ಮುಕಾಪಂ. I. ೪೩).

[ಹಿಂತು + – ಇಲ್ . / ತುಳು. ಪಿತ್ರಿಲ್, ಬಿತ್ರಿಲ್]

**ಹಿಂತು**, ಹಿಂದು, ಹಿಂದ್ಮು (ನಾ). ೧. ಹಿಂಭಾಗ ; ಹಿಂಬದಿ : "ಬೆಂಗಡೆಗೆ ಹಿಂತೆನಿಕ್ಕುಂ" (ಶಶಿ. ೬೩) ; ಕಟ್ಟಿನುರಿಯುಂ ಪೊಗೆಯುಂ ದುಷ್ಟಾಪ್ಯದ ಮುಂತುಂ ಹಿಂತುಂ ಬೆಟ್ಟಮನೇಱುವುದುಮಿೞಿವುದುಂ (ಹರಿಪು. ೯-೦೩೨) ; ತುಕಾರಕ್ಕೆ – ಮುಂದು, ಮುಂತು ; ಹಿಂದು, ಹಿಂತು (ಶಮದ. ೦೨೦ ಪ್ರಯೋ). ೨. ಹಿಂಜರಿಯುವಿಕೆ: ವೀರದಿನೊಡ್ಡಿಪ್ಪ ಸಾಮಂತ ಜಗದಾಳ ಮಲೆಯ ತೊತ್ತಳೆದುಳಿವ ಯತ್ತಿದ ಮೊನೆಗೆ ಮುನ್ನು ಕಡಿಕಾಳೆಗಕ್ಕೆ ಹಿನ್ನು (ಎಕ. XII, ಶಿಕಟೂ. ೧೦೯-೨೪ ; 1130). ಹಿಂದು : ೧. ಎಡಗಲಱಿಯದೆ ಜಿನ್ನುಕಮ್ಮುಗುಟ್ಟಿಂ ಬರಲಣಮಱಿಯದೆ ತಪ್ಪಿಂ ಹಿನ್ನಿಂ ತೆಱನನಱಿಯದೆ . . . ಪೊಯಿಸಿದನು (ಎಕ. II. ೦೩೩-೦೩೮ ; ೯೮೨) ಒಂದಱ ಹಿಂದೊಂದಡಸಿ ಗುಡುಗುಡನೆ ಸುರಿವಾನಂದಜಲಬಿಂದುಗಳಿನಂ ಸಿರತಿರಯಹರ್ಷವಂ ಪ್ರಕಟಿಸುತ್ತಿರಲ್ (ಶಾಂಪು. ೮೬೩) ; ಪಾರ್ದು ಸರುವಂ ಕಟ್ಟಿಂಬ ಮುಟ್ಟಿಂಬ ಹಿಂ[ಪಾಠಾಂ. ಬಿ]ವದನೆಂಟೊತ್ತರಿಸೆಂಬ್ನ . . . ಪುಳಿಂದವ್ರಂದನಿದಂ ಪೊಣ್ಮೆತ್ತು ಕಾಂತಾರದೊಳ್ (೧೦೪. ೧-೬೨). ಹಿಂದು : ೧. ಜೆಡೆ ಗಂಗೆಯ ಸ್ಥಾನ ನೊಸಲು ಚಂದ್ರನ ಸ್ಥಾನ ಹಿಂದು ಸೂರ್ಯನ ಸ್ಥಾನ (ಶಿಶ. ೯೯೪) ; ಹಿಂದೆ ಬಿಟ್ಟೊಂದೆಂದು ಹಿಂದಿನಿಂ ಬಹುಮಲ್ಲ ಕಂಡವರ ಹೊಲಕಳೆವ ತೊಂಡುಮನಪಾಲ್ಕು (ಕಾಂಪಾ. ೫೦-೦೫೨). ೨. ಕಡ್ಲೆಗೆ ಮುಂದು ಕಡಿವಾಣಕ್ಕೆ ಹಿಂದು (ಗಾದೆ). ೩. ಕೊನೆಯದು ; ಅಂತ್ಯ : ನೀರ ಕ್ಷೀರದಂತೆ ನೀನಿಪ್ಪೆಯಾಗಿ ಆವುದು ಮುಂದು ಆವುದು ಹಿಂದು ಎಂದಱಿಯೆನು (ಮಹಾದೇ. ೩. ೦೩-೧೦) ; ಮುಂದನಱಿಯದ ಗುರುವು ಹಿಂದನಱಿಯದ ಶಿಷ್ಯ (ಸರ್ವಜ್ಞ. ೯೯). ೪. ಹಿಂದೆ ನಡೆದುದು : ಹಿಂದ ನೆನೆಯಾ ಖೂಳ . . . ಎನುತ ಹೆಟಯಿಂಬಿಂದ ಕಡಿದಿಳುಹಿದನು ಪಾಂಚಾಲಾಧಿಪನ ಶಿರವ (ಕುಮ್ವ್ಯಾ. ೦೭-೩೯).

**ಹಿಂತಣ್**, ಹಿಂದಣ್ = ಹಿಂಭಾಗ ; ಹಿಂಬದಿ :- ಅಕ್ಕುಳಿಸಿತೆಂದುಂ . . . ಹಿಂತಣ್ಗೆ ಪಂದುದೆಂದುಂ . . . ಪಾರಿಗೆಯ್ದೆಂದುಂ — ಈ ೧೩ ಅವಸರಣಕ್ಕೆ ಪೆಸರ್ (ಕಪಾ. ೬೨-೬೯೯); ಒಳಸೋರ್ದುದು . . . ಮೆಯ್ದಿಗೆ ದುದು ಘಟಾಲೆನೆ ಹಿಂತಣ್ಗೆಮಂದುದುಂ ಜಗುಟಿದುದುಂ (ಕಶಿಕ. ೨೩೨); ಬೆಱಗಡರಿ ಮುಖದಿರುಹಿ ಹಿಂದಣೆನೆಱಿದ ಕರ್ಣನ ನೋಡಿ ಮುಖದಲಿ ಕಿಱುನಗೆಯ ಕೇವಣಿಸಿ (ಕುಮ್ವ್ಯಾ. ೬-೩೩) : ಕರ್ಣ ಹಿಂದಣೆಲೆಟ್ಟಿ ಕೂರಂಬಿನೊಳ್ದ್ದನುವ ಖಂಡಿಸಿದನು (ಕುರಂಗ. ೩೨-೩೦). ಹಿಂತಣ, ಹಿಂತಳ, ಹಿಂದಣ, ಹಿಂದಣ, ಹಿಂದಳ = ೧. ಹಿಂಭಾಗಕ್ಕೆ ಇರುವ ; ಹಿಂಬದಿಯ : ತನ್ನರಸಿ ಚಿಕ್ಕದೆವ್ವೆಗೆ ಬಡಗನ್ನಿಕಱಿಯ ಬಡಗಣ ಬದಿಯ ಹಿನ್ನಣಕಟಿ ಯಮಿಟ್ಟು (ಎಕ. VII, ಶಿಕಸೂ. ೯೬-೨೨ ; ಸು. ೨೧೬); ಇಕ್ಕೆಲದ ಮುಂದ್ದಣ ಹಿನ್ನಣಮಣ್ಣಾಳಕ್ಕೆ ಭೀಷಣಮತಿರೌದ್ರಮಾದುಗ್ರತಮಗುಮಿರ್ವೆನ ತೇಜದಳುರ್ಕೆ ಧಳ್ಳನೆ (ಶಾಇ. XI-I, ೩೨-೯ , 1007) ; ಹಿಂದಣೊಡ್ನನು ರಘಾಡಿಸಿದವೀ ಕ್ಷೇಮಧೂರ್ತಿನೃಪಾಲನಾನೆಗಳು (ಕುಮ್ವ್ಯಾ. ೨-೦೨) ; ನೀಂದನ್ನೆ ಬಳೀಕಿತನಾ ಹೆಬ್ಬಂದಿಯಿದಿರಲಿ ಮಲ್ಲಮಲ್ಲನೆ ಹಿಂದಣಡಿಗಳಲಂಡುಗೊಂಡುದು ಶಂಭುಕಾಸುರನ (ಹಿಂಕಾ. ೩-೩-೨೦). ೨. ಹಿಂದಿನ ; ಮೊದಲಿನ : ಹಿಂತಣ ಭವದೊಳಾನೆಸಗಿದ ಪಾತಕಸಂತತಿಯೊರ್ಮೊದಲೊಳಗೆ ಭ್ರಾಂತಿ ಪಡೆದು ಕಡಲೆಂದೆಱಗುವೆ (ಅಂಪತ. ೦-೯) ; ಖಚರೇಶನ ಹಿಂತಣ ಪುಣ್ಯದ ಫಲದಿಂ . . . ವಿಮಲಚಾರಣರೆಯ್ದಿರಲು (ಶಾಂಪತ. ೨-೯೩) ; ಹಿಂತಣ ಕಾಲದಲ್ಲಿ ಭೂಮಿಯಂ ಪರಿಪಾಲನೆಗೆಯ್ದ ಭೂಪೋತ್ತಮರ ಮಹಾತ್ಮ್ಯಮಂ ಚೆನ್ನಾಗಿ ಕಿವಿಗೊಳಿಸು (ಶಾರಶಾಂ. ೦೯೯) ; ನೂಂಕುವುದೊಮ್ಮೆಮ್ಮೆ ನರಕಕ್ಕೆ . . . ಒಮ್ಮೆ ಮಾನುಷಕೆ ಹಿಂತಳ ಪಾಪವಂಕದ ತೀವ್ರವದೆಂತೊ (ಪಾರಿಶ. ೩-೩೦); ಹಿಂದಣ ಜನ್ಮವ ತೊಡೆದು ಮುಂದಣ ಪಥವ ತೋಱಿದನೆನ್ನ ತಂದೆ (ಮುಕಾಕೀ. ಬ. ೨೪-೯೯) ; ಆ ಜಾಗ, ಹಿಂದಣ ವರ್ಷ ಕುಮಾರಿ ಬೆಳೆದ ತಾವಿನಿಂದ ಮೈಲು ದೂರದ ಇನ್ನೊಂದು ಬೆಟ್ಟದಲ್ಲಿದೆ (ಕಾಶಿಕೂ. ೧೦). ೩. ಮೊದಲು ; ಪೂರ್ವ : ಅಲ್ಲಿಗೆ ಮತ್ತೊಂದು ಕಡೆಯಿಂದ ಇನ್ನೂ ಹಿಂದಣದಲ್ಲಿ ಬಂದವರು (ಯುಪ್ಮಾ. ೨): ಹಿಂದಳ ಸುಖ ಮುಂದಳ ದುಃಖಂಗಳು ಮುಂದಳ ಸುಖ ಹಿಂದಳ ದುಃಖಂಗಳು ಇವ ತಾ ಸಂಧಿಸಿ ಅನುಭವಿಸಿದಲ್ಲಿ (ಪಾತೊಮ್ಮ. ೯. ೩೩೬-೨೦). - ಹಿಂತಣಾ — ೧. ಹಿಂಭಾಗದಲ್ಲಿರುವವನು; ಹಿಂದಿನವನು : (೬). ೨. ಪೂರ್ವ ಕಾಲದವನು : ಅಕಾರಕ್ಕೆ . . . ಹಿಂತಣಂ, ಅತ್ತಣಂ, ಇತ್ತಣಂ (ಶಮದ. ೨೦೦ ಪ್ರಯೋ). ಹಿಂತಣರ್ = ಹಿಂದಿನವರು; ಪೂರ್ವ

ದವರು : ಪಿಂತಣರ ಕಬ್ಬಗಳ್ ಸೇವ್ಯಮಾವೆ ವನ್ನ್ಯಂ (ಸಂಶಹ. ೩-೦). **ಪಿಂತಾಗು**, **ಹಿಂತಾಗು**, **ಹಿಂದಾಗು**=೧. ಹಿಂದೆ ನಡೆದಿರು,— ಘಟಿಸಿರು : ಪಿಂತಾದ ದುಸ್ಸಹಾವಸ್ಥಾಂತರ ಸಂತತಿಯನಾಗಮನುಭವಿಸುತ ಮಿರ್ವಂತಿರ್ದಳ್ ಚೈತನ್ಯಮನಂತಾಗಳ್ ಹರಿಯಿಸುತ್ತು ಮೂರ್ಛಾವೇಗು (ಕಾದಂಪೂ. ೯೨೬). ೨. ಹಿಂದೆ ಉಳಿ : ಹಿಂದೆ ಬೀಳು : ಅದು ಪಿಂತಾಗಿರೆ ಮತ್ತಮೊಂದು ಶರಮಯ್ಯುತ್ತಂತದಂ ಪಿಂದಾಗಿಯೊದ ಪುತ್ರ್ಯಂ ಪಡತೊಂದು ಮಾರ್ಗಣಮುಳ್ಳಂ ಪಾಯ್ವುದು (ಪಂಪ. ೬-೯೦) ; ಲಿಂಗ ಮುಂತಾಗಿ ಮನ ಹಿಂತಾಗಿ ಅಂಗಭಾವವಳಿದು ಅರ್ಪಿಸಿಕೊಳಬಲ್ಲ ಪ್ರಸಾದಿಯು ಪರಮಾಪರಿಣಾಮಮವೆ ಪ್ರಸಾದ (ಅದಶ. ೨೬-೩೩); ಪಡುರಥರುರವಣಿಯುಂ ಹಿಂದಾಯ್ತು ರಾಯರ ಗುರುವ ಕಂಡವರಿಲ್ಲೆನುತ ಕುರುರಾಯ ಚಿಂತಿಸಿದ (ಕುಮ್ಯಾಭಾ. ೬-೩೬). **ಪಿಂದುಮುಂದು**, **ಹಿಂದುಮುಂದು**=೧. ಹಿಂದಿನ ಭಾಗ ಮತ್ತು ಮುಂದಿನ ಭಾಗ : ಹಿಂದುಮುಂದು [ ಹಾಕಂ. ಪಿಂತುಮುಂತು ]ಮನೆಡ ಬಲನುಮಂ ಬೆರ್ಚಿದಂತೆ ನೋಟ್ಟುಮಪ್ಪೊಡಾಗಳ್ ನಿಮಗೆ ತಪ್ಪಲ್ಕೆಗೆದು ಬಂದನೆಂದಖಿಯಿಮೊಂದು ಪೇಟ್ಟುದುಂ (ಶಂಕಶಂ. ೦೪೨-೩); ಹಿಂದುಮುಂದ ಮಗಡಿಸಿದಾ ಮಾದ್ರೇಯ ರವಿಸುತರೊಡಲೊಳಂಬನು ಹೂಳಿದನು (ಕುಮ್ಯಾಭಾ. ೬-೦೬). ೨. ಅಗುಹೋಗು : ಶಿವಶಿವ ಹಿಂದುಮುಂದೆಣಿ ಸದೆ ಇನಿತುಬ್ಬುವರೆ (ತಂಪು. ೯೭-೨೬); ಮನೆಗೆಲಸಮುಂ ಮಾಣ್ದು ಮೇಣ್ ಮಾಳ್ಪಳವಳು ಕೊನೆಮುಳ್ಗಂತಾಗೆ ಹಿಂದುಮುಂದುಗಳಲ್ಲ ಕೊನೆದು ಬಾಡಿದ ನಿರತೆಯುಂ ಮಾಲಿಸುವಳು (ಕಾಜಂ. ೦೦೬-೨೬೩). ೩. ಹಿಂಭಾಗವು ಮುಂಭಾಗಕ್ಕೂ ಮುಂಭಾಗವು ಹಿಂಭಾಗಕ್ಕೂ ಬದಲಾದ ಸ್ಥಿತಿ : ಏರುಪೇರು ; ಹೆಚ್ಚು ಕಡಮೆ ; ವಿಪರೀತ : ಬಂದ ಶರಣರ ನಿಲವನರಿದು ಸಂದು ಸಂಶಯವಳಿದು ನಂಬದಿದ್ದರೆ ಹಿಂದು ಮುಂದಾಗಿ ಹೋಹನು ಕಾಣಾ, ನಮ್ಮ ಗೊಹೇಶ್ವರಲಿಂಗವೆ (ಅರಶಂ. ೨೦೬-೯೭೬); **ಹಿಂದಕ ಮುಂದಕ ಮಾಡಿಕೊಳ್ಳು** = ವಾಂತಿ ಹಾಗೂ ಭೇದಿಯನ್ನು ಮಾಡಿಕೊಳ್ಳು : ಈ ಕಾಳಿನ ಹಿಟ್ಟಲೇ ಮಾಡಿದ ರೊಟ್ಟಿತಿಂಣಾಕು ತಿಂದು ಮಕ್ಕ್ಳಾ ಹಿಂದಕ ಮುಂದಕ ಮಾಡಿಕೊಂಡ ನೆಲಪಟ್ಟಿ ಬಿದ್ದಾವರಿ (ಗ್ರಾಕೂಡು. ೦೯೬). **ಹಿಂದಲಿನವರು**=ಹಿಂದಿನ ಕಾಲದವರು ; ಪೂರ್ವಕಾಲದವರು : ಹಿಂದಲಿನವರು ಮಾಡಿರುವ ಕವನಗಳು ಮುಗಿದು ಹೋದರೆ ತಾವೇ ಹೊಸಹೊಸದಾಗಿ ಅಲ್ಲೇ ಕವನಗಳನ್ನು ಗತ್ತಿಗೆ ಸರಿಯಾಗಿ ಹೆಣೆಯುತ್ತಿದ್ದರು (ಜುಜ್ಜಿಕ. ೨೨). **ಹಿಂದಲು**=೧. ಹಿಂಭಾಗ ; ಹಿಂಬದಿ : ತಂದೆ ಹೊಡೆಯುವರೆಂದು ಹೆದರಿ ಮನೆಯ ಹಿಂದಲೀದ ಒಳಗೆ ಬಂದು ರೂಮು ಸೇರಿದ್ದನು (ಶೂಶೂ). ೨. ಬಳಿಕ ; ತರುವಾಯ : ವೃದ್ಧನು ಆ ಸಮಾಚಾರವನ್ನು ಅವನ ಊರಿಂದ ಬಂದಿದ್ದ ಪ್ರಯಾಣಿಕರಿಂದ ಹಿಂದಲಿಂದ ತಿಳಿದುಕೊಂಡಿದ್ದನು (ಕಾಕಂ. ೨). **ಹಿಂದಲೇಟು ಹೊಡೆ**=ಹಿಂಜರಿ ; ಹಿಮ್ಮೆಟ್ಟು : ಮಂಜಯ್ಯನ ಕರೆಗೆಹಿಂದಲೇಟು ಹೊಡೆಯುವುದರಿಂದ ತನ್ನ ಹೇಡಿತನ ಸ್ಥಾಪಿತವಾಗುವುದೆಂದು ಹೆದರಿದ (ಕುಶಂ. ೨೦೪). **ಹಿಂದುಮುಂದುಗಾಣು**=ದಿಕ್ಕುಕೋಚು ; ದಾರಿಗಾಣು: ಸಮುದ್ರಯಾನದಲ್ಲಿ ದಾರಿ ತಪ್ಪಿ ಹಿಂದುಮುಂದುಗಾ ಣದೆ ಪೇಚಾಡುವ ನಾವಿಕರಿಗೆ ಇದೇ ದೈವ (ಕೃಃಚಿಕ. ೨೬) ; **ಹಿಂದುಮುಂದು ನೋಡು**, **ಹಿಂದುಮುಂದೆ ನೋಡು**=೧. "ಅನಿಶ್ಚಯದಿಂದಿರು : ಅರೆಮನಸ್ಸಾಗಿರು; ಶಂಕಿಸು ; ಹಿಂಜರಿ ; ಹಿಂದುಮುಂದು ನೋಡು" (Hesitate. ೩೦೪೬). ೨. ಎಚ್ಚರಿಕೆಯಿಂದಿರು : ಜಾಗರೂಕನಾಗಿರು : (೪). [<ಪಿನ್]

**ಪಿಂತೆ₁** (ನಾ). ೧. ಹಿಂದುಗಡೆ : ಹಿಂಬದಿ : ಹಿಂಭಾಗ : "ಪೆಱತು ಪಿಂಗಡ ಪೆಡಂಮೆಟ್ಟುಬಿ ಪೆಱಗುಂ ಪಿಂತೆ ಪಿಂತಿಲೆನೆ ಹಿಂದೆನಿಕುಂ" (ಶಬಿಂ. ೦೯೩). [ <ಪಿಂತು ]

**ಪಿಂತೆ₂**, **ಪಿಂದೆ**, **ಹಿಂತೆ**, **ಹಿಂದೆ** (ಅ). ೧. ಹಿಂಬದಿಯಲ್ಲಿ: ಹಿಂಭಾಗದಲ್ಲಿ ; ಹಿಂದುಗಡೆಯಲ್ಲಿ : ಸಿಂಧುರದ ಹಾರದ ಮಾಲೆತೆ ಕಾಂತಿ ತಳ್ತು ಪಜ್ಜಳಿಸುವ ಕಂಧರಮಂ ತಳೆದು ಪಿಂತೆಸೆದಿರ್ದುದು ಗೊಡ್ಡೆ ಸಿಂಧುರರ (ಕಾದಂಪೂ. ೬೯೩); ಇವರ್ಗೆ ತಕ್ಕುದೂ ಮಾಬ್ಬೆಂದಾಗಳ್ ಪೋಗಿ ಚಿಂತಾಸಿದ್ಧಿವಿನಾಯಕನ ಪಿಂತೆ ಕುಳ್ಳಿರ್ದುದಂ (ಮುಕಂ. ೩೬೨-೦೦); ಇಂತು ನೆರೆದುದು ಜಾತರಂಗುಲ ಬಲಿದೆಶ್ಯ ಪಿಂತೆ ಪಚಿಪಿತಚಿ ಸೂತಂ ಬರುತ ಭವನಕ್ಕೆ (ಅಜಿ. ಶಿ. ೩೯-೩). ೨. ಮೊದಲಲ್ಲಿ ; ಪೂರ್ವದಲ್ಲಿ ; ಮುಂಚೆ : ಪಿಂತೆ ಕಿಲಕಾಲದೊಳೊಂದುದಿವಸಂ ನಂದಿ ಭೃಂಗಿ . . . ಗಿರಿಜಾತೆಸಹಿತ ಕ್ರಮದೊಳು ಓಲಗಂಗೊಟ್ಟಿರೆ ಸಮಯದೊಳ್ (ಶೂಶ. ೩-೩); ರಾಘವಂ ಪಿಂತೆ ರಾವಣನು ವಧಿಸಿ ವಾಜಿಮೇಧದೊಳ್ಪರ್ವರಂ ತಣಿಪಿದಂ (ಕೃಜಾ. ೨-೨೮); ಬಲಿಯು ದಾನವ ಗೈದ ಚರಿತೆಯನು ಪಿಂತೆ ಕಲಿಯಲಿಲ್ಲವೆ ನೀವು ? (ಉತ್ತ. ೩೬-೯). ೩. ಪರೋಕ್ಷದಲ್ಲಿ : ಪಿಂತೊರ್ವರು ಬಾಣನಾಸ್ಥಾನದೆ ಬುದ್ಧಿವಂತ ರಿಲ್ಲೆಂದಾಡುವರು ಮುಂತಣ ರಾಜಕಾರ್ಯಮನರಿವೆ ಧೂರ್ತರಂತೆ ಕೇಳೆಂದು ಕೈಮುಗಿದ (ಕೋಶಕ. ೩೬-೩೬). **ಪಿಂದೆ** : ೧. ಅಯ್ಯೋ ಚಂದ್ರನೆ ನಾಂ ಕಪಿಂಜಲಕ ನೀನೀ ಪುಂಡರೀಕಾರ್ಥಮಿಷಾ ಹೆಱದಿಂ ಪಿಂದೆ ಯದೇಕೆ ಬಂದೆ ಗಡ (ಕಾದಂಉ. ೬೦೯); ಪುಟಾಲ ತಣ್ಣಂ ಸಾರುತುಂ ಪಿಂದೆ ನಿಂದಳಿವೃಂದಂ ಬರೆ ಪಾರುತುಂ (ಪ್ರಶ್ನಕ. ೨-೩೯). ೨. ತಪ್ಪನೆಸಗಿದ ಪಿಂದೆ ಜಡಭರತನಾಗಿ (ಕ್ರೀಜಾತು. ೩-೦೯); ಕಾಳೆಗಕ್ಕೆ ಬೆದರಿ ತನ್ನಡಿ ಶರಣ್ಕೊಕ್ಕರೊ ಕಾಂ ಪಿಂದೆ ಕಂಡಂತೆ ಕಂಡುದಾಸೀನದಿಂ ವರ್ತಿಸೆ (ಜಶ್ರ್ಯಂಗ. ೭೩-೨೦೯೬). ೩. ಗುರುವಂ ಮುಂದೆ ಪೊಗಟ್ಟುದು ಮಿತ್ರರೇ ಬಂಧುಗಳಂ ಪಿಂದೆ ಪೊಗಟ್ಟುದು (ಶಂಕಶಂ. ೩೩-೦೬). **ಹಿಂತೆ** : ೧. "ಪಿಂತೆ=ಹಿಂತೆ [ ಹಾಕಂ. ದೆ ]" (ಕಸುದ. ೨೯೦ ೩೪೯). ೪. ಅನಂತರ ; ತರುವಾಯ ; ಆಮೇಲೆ : ಅಂತವ್ಪನಂತಕೋಟಿಗಣಂಗಳೆಲ್ಲರಂ ಮುಂತೆ ಸೃಷ್ಟಿಸಿದರು ಮನಂತದೇವತೆಗಳಂ ಹಿಂತೆಯುಂ (ಚಿಕ್ಕಶಿ. ೮-೨೦-೩೩). **ಹಿಂದೆ** : ೧. ಮರ್ಮವನರಿತು ಮಾಡದ ಭಕ್ತಿ ಸೊಣಗನ ಹಿಂದೆ ಸೊಣಗ ಹರಿದಂತಾಯಿತ್ತಯ್ಯ (ಅದಶ. ೦೦-೦೯); ಯಾವಗಹುದಿದು ಹಿಂದೆ ಬಂದೆಸುವೀ ವಿಗಡತನ ನಿನಗೆ ಪೇಟಿವುದು ಕರ್ಣ (ಕುಮ್ಯಾಭಾ. ೬-೩೪); ದಕ್ಷಿಣಕೆ ನಡೆದುದು ವಾಜಿ ಚಂಪಕಾಪುರಕಂದು ಹಿಂದೆ ಬಹ ಪಡೆ ಸಹಿತ ಪಹಿಲದಿಂದೆ (ಕೃಜಾ. ೦೦-೩೩). ೨. ಇನ್ನು ಪಾನೆತ್ತ ಮಗನಂ ಹಡೆವುದೆತ್ತಲು . . . ಲೋಕಂ ನಗುವ ಮಾತನಾಡಿದಿರಿ ಹುಟ್ಟುವಡೆ ಹುಟ್ಟನೆ ಹಿಂದೆ ಹೇಳೆಂದಳು (ಸಿದ್ಧರಾ. ೦-೯೦); ಹಿಂದೆ ಪರಸತಿಗಾಗಿ ಹಿಡಿವಡೆದುದು ಧಂಗಿಸುವಲ್ಲಿ ದೃಗು ಜಲಬಿಂದುಮೊಂದುಂ ಹೊಱಮಡದು . . . ಇಂದದೇನು ನಿಮಿತ್ತ ಸಲಿಲಂ ನಿನ್ನ ನಯನದಲಿ(ಜತ್ತ. ೦೯-೩೩); ಎಲವೊ ಕೌರವ ಹಿಂದೆ ಪಂಚಿಸಿ ಕಳವಿನಲಿ ಜೂಜಾಡಿ ರಾಜ್ಯವ ಗೆಲಿದ ಗರ್ವವನಾಗಳು (ಕುಮ್ಯಾಭಾ. ೦೦-೯೯). ೩. ಹಿಂದೆ ಗಳಹುವನಿವನು ಬಾಯಿಗೆ ಬಂದ ಪರಿಯಲಿ (ಕುಮ್ಯಾಭಾ. ೦.೦೦); ಹಿಂದೆ ಬಯ್ಯಬಾರದು, ಮುಂದೆ ಹೊಗಳಬಾರದು (ಗಾದೆ). ೪. ಹೊಸ್ತದೇವರು ಬೆಸಸಲು ಕಾದಿ ಸುರಲೋಕವಪ್ರಾಪ್ತನಾದ ಹಿಂದ್ನಾದನ್ನ ಹವರಂ ಲೇಸಾಗಿ ನಡಹುವರು (ಕೃಆಂ. ೦೯೩೨, ೩೦-೯; ಹು. ೧೧೭೬); ಪಾರ್ಷ್ಣಿಗ್ರಾಹ–ತಾನು ಹಗೆಯು ಮೇಲೆ ಎತ್ತಿ ಹೋಹಲ್ಲಿ ಹಿಂದೆ ರಾಜ್ಯವಂ ಉಪದ್ರವ ಮಾಡುವವನು (ಕಾಶಂ. ೪) ; ಆ ಬಾಳೇಎಲೆಗಳ ನಡುವೆ ಗಿಡದೊಳಗಿಂದ ಒಂದರ ಹಿಂದೆ ಒಂದು ಹೊಸ ಸುಳಿ ಏಳುತ್ತವೆ (ಮುಂಜಿಯ.೨-೩೬).

**ಹಿಂದೆ ಕಳುಹು** = ಹಿಂದಕ್ಕೆ ಕಳುಹಿಸು : ವಾಪಸು ಕಳುಹಿಸು : ಬರೆದು ಕೊಡುವೆನು ಸ್ಥಿರ ಚರಾಸ್ತಿಯು ಉಂಬಳಿ ಎಂದುಸುರಿ ಮನತಂದು ಬಿರುಮುನ ಕಂದನಹ ಕಡೆಕಂಜಿಯಿ ಒಂದವಮಳು

ಹಿದ ಹಿಂದೆ ಕಳುಹಿದ ಇಂದುನಾಥಾಧೀಶನು (ಉತ್ತ. ೨೦-೯೨). **ಹಿಂದೆ ಬೀಳು**=೧. ಹಿಂದೆ ಉಳಿ,—ಆಗು : ಜಗದ ಜೀವನರಥವು ಮುಂದಿರೆ ಹಿಂದೆ ಬೀಳದು ಭಾರತ (ಕಂಸು. ೩೨-೦೩). ೨. ಹಿಂಬಾಲಿಸು ; ಅನುಸರಿಸು : ಈ ನರಸ ಬಹಳ ದಿನದಿಂದಲೂ ಆಕೆಯ ಹಿಂದೆ ಬಿದ್ದಿರುವುದು ನನಗೆ ಗೊತ್ತಿದ್ದರೂ ವಿಷಯ ಹೀಗೆ ವಿಕೋಪಕ್ಕೆ ಹೋಗುತ್ತದೆ ಎಂದು ಭಾವಿಸಿರಲಿಲ್ಲ (ಈಶಹಂ. ೯೬). ೩. ಕೆಳಮಟ್ಟದಲ್ಲಿರು; ಇರು : ಓದಿನಲ್ಲಿ ಈ ಹುಡುಗ ಬಹಳ ಹಿಂದೆ ಬಿದ್ದಿದ್ದಾನೆ (ಊ). **ಹಿಂದೆ ಮುಂದೆ**=೧. ಹಿಂಭಾಗಕ್ಕೆ ಮತ್ತು ಮುಂಭಾಗಕ್ಕೆ : ಹಿಂದೆ ಮುಂದೆ ಮರಳಿ ಮರಳಿ ಬೆಗಡೊಂದಿ ನಡೆವುತ ಗಾಳಿಯುದು . . . ಪಾಳಿಯು ಎಡೆಗೆ ನಮಸಾರ್ದು (ಚಿತ್ರ. ೨೬-೩೦). ೨. ಆಗುಹೋಗುಗಳನ್ನು ಕುರಿತು: ಈ ಜನ . . . ಅಧಿಕಾರಿಗಳಾಗದಿದ್ದ ಪಕ್ಷಕ್ಕೆ ಇಷ್ಟೊಂದು ದಗೆಯಲ್ಲಿ ದೊಡ್ಡ ಗುಂಪನ್ನು ಹೊರಗಟ್ಟುವುದಕ್ಕೆ ಮುಂಚೆ ಇಪ್ಪತ್ತು ಸಾರಿಯಾದರೂ ಹಿಂದೆ ಮುಂದೆ ಯೋಚಿಸುತ್ತಿದ್ದರು (ಕೃಪಶು. ೯೬೩). **ಹಿಂದೆಮುಂದೆ ನೋಡು**=ಹಿಂದೆಗೆ ; ಹಿಂಜರಿ ; ಅನುಮಾನಿಸು : ಅವರೂ ಉಳ್ಳವರಲ್ಲ. ಅದರಲ್ಲೂ ಹರೆಯದ ಅವಿವಾಹಿತ ಅಬಲೆಯೊಬ್ಬಳನ್ನು ಸಲಹಲು ಹಿಂದೆ ಮುಂದೆ ನೋಡಿದರು (ಕೂಟುಕಾ. ೩೬) ; ನಮ್ಮನ್ನು ಆಜ್ಞಾಪಿಸಲು ಪ್ರಭುಗಳು ಹಿಂದೆ ಮುಂದೆ ನೋಡಬಾರದು (ಮಲೆಗ. ೦೫೦). **ಹಿಂದೆ ಹತ್ತು**=ಹಿಂದೆ ಬರು ; ಹಿಂಬಾಲಿಸು; ಬೆನ್ನಟ್ಟು : ಕುಚೀಯುರವಣಿಸಿ . . . ಅಜಿಚುತಭವನ ಭವನವಂ ಪುಗಲುಜಿದ ಎಂಡನು ಹಿಂದೆ ಹತ್ತಲು ವಜುಗುಷ್ಠಾಗಳು ಕಿನ್ನರಯ್ಯಂ ಕರುಣದಲಿ ನೋಡಿ (ಚಿತ್ರ. ೨೮-೦೦) ; ಕರೂಷದ ಕೊಬ್ಬಿನವದಿರು ಹಿಂದೆ ಹತ್ತಿದರೆ ಮರಳಬಲ್ಲನೆ ಭೀಮನು (ಕುಮ್ಮಾ. ೩-೨); ತಂದೆಯನು ಕೊಂದವಗೆ ಮೋಹಿಸಿ ಹಿಂದೆ ಹತ್ತಿದಳೆಂದು ಹೆಣ್ಣು ಕೊಡೆಂದು ನಮ್ಮಯ ತಂಗಿಯಿಂದಟ್ಟುವುದುಚಿತವಹುದು (ಶಾಕ್ಯಶಾ. ೩೦-೦೦). **ಹಿಂದೆ ಹಾಕು**=ಹಿಂದೆ ಉಳಿಯುವಂತೆ ಮಾಡು ; ದಾಟು ; ಕ್ರಮಿಸು: ಕಾಡುಮೇಡುಗಳನ್ನು ಹಿಂದೆ ಹಾಕಿ ತೋಡುಗಳನ್ನೂ ಪಾಲಗಳನ್ನೂ ದಾಟಿದರು (ಶಾಓಪ. ೦೩ ಕಥಾಸರ). **ಹಿಂದೆ ಹೋಗು**=೧. ಹಿಂದಕ್ಕೆ ಹೋಗು ; ಮರಳು : ಬೋಳನು ದಾರಿ ತಪ್ಪಿ ನಡೆದಿದ್ದನು . . . ಹಿಂದೆ ಹೋಗುವುದೇಕೆ ? ಈ ದಾರಿಯನ್ನೂ ಬಲ್ಲೆನಲ್ಲವೆ! ಎಂದು ಒಂದು ಪಾಲದೆಡೆಗೆ ಬಂದನು (ಶಾಓಪ. ೦೦ ಕಥಾಸರ). ೨. ಹಿಂಬಾಲಿಸು ; ಅನುಸರಿಸು : ಅಂದು ಮೃಗಟ್ಟವನಿಸುರನಿರುಳೊಂದು ಪಶುವಿನ ಹಿಂದೆ ಹೋಗುತ (ಚಿತ್ರ. ೩೬-೩೨). **ಹಿಂದೇಟು ಹಾಕು**=ಹಿಂಜರಿ; ಅನುಮಾನಿಸು: ಅಷ್ಟೊಂದು ಬಂಡವಾಳವನ್ನು ತಾನೊಬ್ಬನೇ ಸುರಿದು ಸಾಹಸ ಮಾಡಲು ಸ್ವಲ್ಪ ಹಿಂದೇಟು ಹಾಕುತ್ತಿದ್ದನು (ಶಿಶಿಲ. ೩೬). **ಹಿಂದೇಟು ಹೊಡೆ**=ಹಿಂದೇಟು ಹಾಕು : ನಾನು ಕೊಂಚವಾದರೂ ಹಿಂದೇಟು ಹೊಡೆಯದೆ ಎಲ್ಲ ಕಾರ್ಯವನ್ನೂ ಮಾಡುತ್ತಿದ್ದೆ (ಅಂಶಾ. ೬೯). [ <ಪಿಂತೆ$_1$ ]

**ಪಿಂತೆಗೆ** ' ಪಿಂದೆಗೆ ' ನೋ.

**ಪಿಂತೊಲೆ** (ನಾ). ಒಲೆಯ ಹಿಂಭಾಗ : ಅಂಗಯರ್ . . . ಮುಂದೊಲೆ, ಪಿಂತೊಲೆ (ಚುಡ. ೦೩೩ ಕೃನೋ). [ ಪಿಂತು+ಒಲೆ$_2$ ]

**ಪಿಂದಡಿ** ' ಪಿಂತಡಿ ' ನೋ.

**ಪಿಂದಡಿಯಿಡು** ' ಪಿಂತಡಿಯಿಡು ' ನೋ.

**ಪಿಂದಯ್ದು**, **ಪಿಂದೈದು** (ಕ್ರಿ). ಹಿಂದೆ ಹೋಗು ; ಹಿಂಬಾಲಿಸು : ಬಟಾಸರ್_ಪಿಂದಯ್ದು ಪೋಪುದು (ಕಶಪ. ೪. I. ೫೩). **ಪಿಂದೈದು** : ಊರುವೇಗದೊಳುದ್ಧು ಮುಂದೈದಲಾ ಗಿರಿಯ ಸಾರವತ್ತಾದ ವೃಕ್ಷಗಳೆಲ್ಲಾ ಪಿಂದೈದುತೋರಂತೆ ನಿಜಬಂಧುಗಳನು ಬೀಳ್ಕೊಡುವಂತೆ ಮೌಹೂರ್ತ ಮಮನುಸರಿಸಲು (ಶೀಶಾಕಾ. ೩-೦-೨೦).

[ ಪಿಂದು (<ಪಿಂತು) + ಅಯ್ಯು$_2$ (<ಎಯ್ದು) ]

**ಪಿಂದಲೆ**, **ಹಿಂತಲೆ**, **ಹಿಂದಲೆ** (ನಾ). ೧. ತಲೆಯ ಹಿಂಭಾಗ : ಹೆಡತಲೆ : ರಾಹುವದನ ಶಶಿಬಿಂಬದ ಪಿಂದಲೆಯೊಳಿನ ತೋರಪುತ್ತಿನ ತಲೆದುಡುಗೆಯನೆಸೆದುದಲರ ಸೋರ್ಮುಡಿ ಸತಿಯಾ (ಕೃಕೃಪು. ೩-೩೬) : ತಲೆಯ ಹಿಂದು. **ಪಿಂದಲೆ** (ಕಶಾ.ಪು. ೩೯೯ ಕೃಯೋ). **ಹಿಂತಲೆ** : ೧. ಯಶೋದೆಯ ಹಿಂತಲೆಗೆ ಬಲವಾದ ಏಟು ಬಿತ್ತು (ಪಾತ್ರಂ. ೨೬೩). **ಹಿಂದಲೆ** : ೧. ಹಿಂದಲೆಯನ್ನು ಸರಿಯಾಗಿ ಬಾಚಿಕೊಂಡಿಲ್ಲ (ಊ). ೨. ಹಿಂಭಾಗದಲ್ಲಿರುವಂತಹುದು : ಹಿಂಬದಿಯಲ್ಲಿರುವುದು : ಬಲಗಡೆಗಿದ್ದ ಹಿಂದಲೆ ಹಟ್ಟಿಯ ಬಾಗಿಲಿಂದ ಬಂಡಿಗಾರರ ಗುಟುರುಗೊರಕೆ ತೂರಿ ಬರುತ್ತಿತು (ಕೃಪಶು. ೩೯೯). ' ಮುಂದಲೆ ' ಪರಾ.

[ ಪಿಂ (<ಪಿನ್) + ತಲೆ$_1$ ]

**ಪಿಂದಳೆ** (ಕ್ರಿ). ಅನುಸರಿಸು ; ಹಿಂಬಾಲಿಸು : ತಂದೆಯ ಕೆಳೆಯನ ಕಂದಂ ಪಿಂದಳೆದೆಡೆವಿಡದೆ ದೂಳಿಯಾಟಂ ಮೊದಲೆನ್ನಿಂದಮು ಏಟ್ಟಿಗೆ ವಂದಪ ನೆಂದಿಪನಂ ಪೆಂಪುವಡಿಕುಮಾಪ್ರತಿಮಾಂಕಂ (ಶಕಂ. ೩-೯೬).

[ ಪಿಂ (<ಪಿನ್) + ತಳೆ$_1$ ]

**ಪಿಂದಿಕ್ಕು** ' ಪಿಂತಿಕ್ಕು ' ನೋ.

**ಪಿಂದಿರಿಸು** ' ಪಿಂತಿರಿಸು ' ನೋ.

**ಪಿಂದಿರುಗು**, **ಪಿಂತಿರುಗು**, **ಹಿಂತಿರುಗು**, **ಹಿಂದಿರುಗು** (ಕ್ರಿ). ೧. ಹಿಂದಕ್ಕೆ ತಿರುಗು ; ಹಿಮ್ಮುಖವಾಗು : (೯). ೨. ಹಿಂದಕ್ಕೆ ತೆರಳು ; ವಾಪಸ್ಸಾಗು ; ಮರಳು : ಮುಖ್ಯ ಪಿಂದಿರುಗಿ ಪೋಗಿ ಸಲಹಿಕೊ ಶರೀರವಂ (ಕಂಸಾರ. ೩-೩-೦೦). ೩. ಹಿಂದೆಗೆ ; ಹಿಂಜರಿ : " ವಜೆತೆಗೆದುದಕೆ ಪಿಂದಿರುಗಿತೆಂದಕ್ಕ " (ಕಶ್ಯ. ೭೦). **ಪಿಂತಿರುಗು** : ೧. ಪಿಂತಿರುಗಿ ನೋಡಲೊ ವಿಶಾಲಾಕ್ಷ ಮೋಹರಸವಂ ತುಳ್ಕಿ ನುಡಿಸೊ ಸವಿನುಡಿಜಾಣ (ಶಂಕ್ರ. ೦೯-೬೭). ೨. ರೋಷದುಃಖದ್ವಂದ್ವದಲಿ ಬೆಂದು ಮಣಿಪುರಕೆ ಪಿಂತಿರುಗಿ ಬಂದಳತಿಭೀಷಣಮುನಃಸ್ಥಿತಿಯಲಿ ! (ಶಕ್ಸಾಂಗ. ೬೯-೦೬೬). **ಹಿಂತಿರುಗು** : ೨. ಇನ್ನು ಮೇಲೆ ನನಗೂ ನನ್ನ ದೊಡ್ಡಗೂ ಗತಿ ಯಾರು! ಎಂದು ಅಳುತಾ ತನ್ನ ಊರಿಗೆ ಹಿಂತಿರುಗಿದನು (ಶಿಶಿಕಂ. VII. ೪). **ಹಿಂದಿರುಗು** : ೧. ಗಣಪತಿ ಹಿಂದಿರುಗಿ ನೋಡಲಾಗಿ (ಮುಂಬಯಿ. ೪-೬೯). ೨. ಅರ್ಜುನಂ ನೋಡುತಿರಲಾ ಭಾಮೆ ಬಂದವೋಲೆ ಹಿಂದಿರುಗಿ ನಿಬಿಡಕಾಂತಾರದಲಿ ತರುಗುಲ್ಮವರ್ಗಗರ್ಭಂಬೊಕ್ಕು . . . ಮರೆಯಾದಳಿರದೆ (ಶಕ್ಸಾಂಗ. ೩೯-೧೦೯) ; ಜಯಸೇನನು ತಡಮಾಡದೆ ಬೇಕಾದಷ್ಟು ಹೊಂಗೂದಲನ್ನು ಖಡ್ಗದಿಂದ ಕತ್ತರಿಸಿ ತೆಗೆದುಕೊಂಡು ಹಿಂದಿರುಗಿದನು (ಕುಚಿ. ೯೬). [ ಪಿಂ (<ಪಿನ್) + ತಿರುಗು$_1$ ]

**ಪಿಂದು** ' ಪಿಂತು ' ನೋ.

**ಪಿಂದುಗಡೆ**, **ಹಿಂದುಗಡೆ$_1$** (ನಾ). ಹಿಂಭಾಗದ ಸ್ಥಳ ; ಹಿಂದಿನ ಭಾಗ : ಪೆಣ್ಣೆ=ಅತ್ತದ ಪಿಂದುಗಡೆಯಲ್ಲಿ, ಇತ್ತಂ=ಇಕಾರಂ ಹುಟ್ಟುವುದು (ಕಚುದ. ೦೬೮ ಹಿಳ). **ಹಿಂದುಗಡೆ$_1$** : ಪಿಂತೆ=ಹಿಂದುಗಡೆಯಲ್ಲಿ (ಕಚುದ. ೯೨ ಟೀಳ) : ತರಕಾರಿ ಬೆಳೆಯಲು . . . ಸ್ಥಳ ಮನೆಯ ಹಿಂದುಗಡೆ ಆದರೆ ಒಳ್ಳೆಯದು (ಅಕುಶ. ೦೩೬) ; ನಿಮ್ಮನ್ನೆಲ್ಲಾ ನೋಡಿಕೊಂಡು ಹಿಂದುಗಡೆ ಬರುತ್ತೇನೆಂದು ಬೆಕ್ಕು ಹಿಂದೆ ಹೋಗುತಾ, ತಾನೇ ಹಿಂದೆ ನಿಂತ ಒಂದು ಇಲಿಯನ್ನು ಬಕ್ಕನೆ ಬಾಯಿಗೆ ಹಾಕಿಕೊಳ್ಳುತಾ ಬಂತು (ಶಿಶಿಕಂ. IV. ೫೬).

[ ಪಿಂದು (<ಪಿಂತು) + ಕಡೆ$_1$ ]

**ಪಿಂದುಗಳೆ**, **ಹಿಂದುಗಳೆ** (ಕ್ರಿ). ೧. ಹಿಂಜರಿ; ಹಿಂದೆಗೆ; ಹಿಮ್ಮೆಟ್ಟು. ೨. ತಿರಸ್ಕರಿಸು; ಜರೆ ; ಹೀಯಾಳಿಸು : ಕಂದರ್ಪನಂ ಪಿಂದುಗಳೆವೆದವಂ ತಳೆದು ನಿಂದ ರಾಜಪುತ್ರರಿಂದೆ (ರಾಜಶೇ. ೩-೦೯ ಶ). **ಹಿಂದುಗಳೆ**: ೧. ನೊಂದವರು ನಿಲಿ ಸ್ವಾಮಿಕಾರ್ಯಕೆ ಹಿಂದುಗಳೆದರು ಮರಳಿ (ಕುಮ್ಮಾ. ೬-೨೯) : ಈಗಳಾನಂತು ರಣಕೆ ಹಿಂದುಗಳೆದವೆನು (ಕೃಪಶಾ. ೨೩-೦೦).

೨. ಕೋವಿದರು ಪೇಳ್ದೆನಲವರ ನುಡಿಯನು ಹಿಂದುಗಳೆಯಲಮ್ಮದೀ ರಾಮನಾಥನ ಸಂದ ಕಥೆಯನು ಸುರಿದೆನು (ರಾಮನಾಥ. ೧-೩೩) : ಬುದ್ಧಿಯನು ಹೇಳಿದರೆ . . . ಹಿಂದುಗಳೆಯದಿರು ಮಗನೆ (ಹಂಸ. ೧-೬೯): ಹಿಂದುಗಳೆಯದಿರೆನ್ನ ಮಾತನು (ಕೃಷ್ಣ. ೨೬-೩೦). ೩. ಅತಿಕ್ರಮಿಸಂ; ಮೀರು: ತರಣಿಯ ಕೇರ ತೇಜಿಯ ಹಿಂದುಗಳೆವ ಸಾಸಿರಘೋಟಕಾನ್ವಿತರಥವ ಭರವಸದಿಂದೇಱ ತೆರಳಿದ ಶೋಣಿತಪುರಪತಿ ವಾದ್ಯಘೋಷದಲಿ (ಚೋಳಕ. ೪೦-೩). ೪. ಮುಗಿದು ಹೋಗು : ತೀರು: ತನಗಿಂದು ಮೂವತ್ತಾಱುವತ್ಸರ ಹಿಂದುಗಳೆದವು (ಕಂಹಕ. ೩-೨೨). ೫. (ಸಮಯವನ್ನು) ದಾಟು; ಕ್ರಮಿಸು: ಒಂದೊಂದುದಿನವನೊಂದೊಂದುವರುಷವಾಗಿ ಹಿಂದುಗಳೆದು ರಾಯ ತನ್ನ ಇಂದುಮುಖಿಯ ನೋಡುವ ಕಡುಕಾತುರದಿಂದ ದುರ್ಗಕೆ ತೆರಳಿದನು (ರಾಮನಾಥ. ೩೪-೩) ; ಹಿಂದುಗಳೆದಳು ಬಾಲ್ಯವನು ಪಿತೃಮಂದಿರದಲಿರಲು ಯವ್ವನ ಕಂಡೆಬದುದು (ಶಿವಾಗ. ೪-೩-೦೦). [ ಪಿಂದು (<ಪಿಂತು)+ಕಳೆ$_1$ ]

**ಪಿಂದುಗೆಯ್** (ಕ್ರಿ). ಹಿಂದೆ ಉಳಿಯುವಂತೆ ಮಾಡು ; ಹಿಂದೆ ಹಾಕು : ಬಳನಂ ರಾಜೋಚಿತಸುಖದೊಳೆಲ್ಲಿಯುಂ ಪಿಂದುಗೆಯ್ಯಲಱಿಯದನೆಯು ದೇಂ ಗಳ ಪರಲೋಕದ ಸುಖಮಂ ಗ್ಗಳಮೋಂ ಬಲುಪಿಂದೆ ಪಿಂದುಗೆಯ್ವುದು ಗುಣಮೋ (ಧರ್ಮ. ೪-೬೩); ಅದು ಪಿಂತಾಗಿರೆ ಮತ್ತಮೊಂದು ಶರಮುಯ್ದುತ್ತಂತದಂ ಪಿಂದುಗೆಯ್ದುದಱಾತ್ತಂ ಪೆಱತೊಂದು ಮಾರ್ಗಣ ಮಳುಂಬಂ ಪಾಯ್ದುದು (ಕಜಿಂ. ೪-೪೦). [ಪಿಂದು (<ಪಿಂತು) + ಕೆಯ್$_1$]

**ಪಿಂದುಗೊಳ್**, ಹಿಂದುಗೊಳ್ (ಕ್ರಿ). ಹಿಂಬಾಲಿಸು; ಅನುಸರಿಸು: ಎಯ್ದಿದತ್ತು ತತ್ತರುಣಿಯ ಪಿಂದುಗೊಂಡಖಿಳಬಂಧುಜನಂ ಪಿತೃಮಾತೃ ಸೋದರರ್ (ದಳಿತ. ೬-೦೦) ; ಕಾಮರ್ಗಿಲ್ಗೆ ಕರ್ಬುವಿಲ್ಲಂ ಕೈವೀಸಿ ಕರೆದು ಕಳುಪಲೊಡನೆ ತಾನುಂ ಸಂಗಡಮಾಗಿ ಪೋಗಿ ಪೊತ್ತೆತ್ತುವ ಗಂಧವಹನ ಪಿಂದುಗೊಂಡು ಮಂಡಳಿಸಿ ಮಱಿಮುಗಿಲಂತೆ ಪಾರ್ವ ಮದಮಧುಕರ ಪ್ರಕರದಿಂ (ರಾಜಶೇ. ೦-೦೩೩ ವ). **ಹಿಂದುಗೊಳ್**: ಹಿಂದುಗೊಂಡೇ ಬಪ್ಪೆನೆನ್ನ ಸುಕೃತದ ಸುಧೆಯೆ (ಜಾರ. ೩-೩೨) : ಬಂದುದೀ ಮೃಗಪೋತ ಭೀತಿಯ ಮಂದಗತಿಯಲಿ ಮೃಗಸುನೇತ್ರಿಯ ಹಿಂದುಗೊಂಡು[ಪಾಠಾಂ. ಹಿಂದಣೊದ] (ಚೋರಾ. ೩-೮-೨೮) ; ಒಡೆಯನ ಲಲಿತಮೂರ್ತಿಯನಗಲಲಾಱದೆ ಹಿಂದುಗೊಂಡಳುತ ಕೊಳಲಿ ಬರುತ (ಶಿವಾಗ. ೩-೨-೩೦); ಗೀರ್ವಾಣಪತಿನಂದನ ಬಹಳದೇಶವನಪರ್ವತನದೀನದಂಗಳನುತ್ತರಿಸಿ ಕಾದುರೆಗಳ ಹಿಂದುಗೊಂಡು ಬರಲು (ಕೃಷ್ಣ. ೨೬-೩).

[ ಪಿಂದು (<ಪಿಂತು)+ಕೊಳ್$_1$ ]

**ಪಿಂದುಳ್**, ಹಿಂದುಳಿ (ಕ್ರಿ). ಹಿಂದೆ ಉಳಿ,—ನಿಲ್ಲು; ಹಿಂದಾಗು: ಮುಂದಾಗಿ ದಿನಪನುದಯಾನಂದದೊಳಸ್ತಮಯಸಮಯದೊಳ್ ಸಂಜೆ ಕರಂ ಪಿಂದುಳ್ದುದಂತೆ ಕೆಱಿರೊಡಮಂವಾದುದಯದೊಳೆ ಸಾರ್ವರೆಡೆಱೊಳಗಲ್ವರ್ (ಕಾವ್ಯಸಾ. ೬೯೯ ಚಂದ್ರಕ): ಬಗೆವರ ಬಗೆ ಪಿಂದುಳ್ಯೆ . . . ಮುಗಿಲ ಪೊಱೆಯಿಂ ಸುರಿವ ಮುತ್ತುಗಳಂ ಕಾರ ಮುಂಬನಿಯ ತಂದಲೆಂದು ಬಂದು ನುಂಗಲಂಗೈಸುವ ಚಾದಗೆಯ ಮಱಿಗಳುಮಂ (ಕಬ್ಬಿಗ. ೨೩೪). **ಹಿಂದುಳಿ**: ಸಕಲೇಂದ್ರಿಯಾಗಳುಬ್ಬಟೆ ಬಲಿದ ವಿವರುಪಚಾರದಲಿ ಹಿಂದುಳಿದುದುಗ್ರತಪಃಪ್ರಭಾವದ ಬೆಳಗು ನಿಮಿಷದಲಿ (ಚೋರಾ. ೦-೩-೩೩) ; ನಾವು ನಾಳೆ ಹಿಂದುಳಿಯಬಾರದು ಕದನಕನುವಾಗಿರಲಿ ಪಾಯದಳವೆಂದು ನುಡಿದಂ(ಕೃಷ್ಣ. ೦೬-೩೦) : ಸಭೆಯೊಳು ಮೇಲಿದ್ದು ಕಣಿವನು ಬಹುಭಾಷಿ ಹಿಂದುಳಿವನು ಮಿತಭಾಷಿ (೨೦೩೩೪. ೨೦೩-೬೩).

**ಹಿಂದುಳಿದ ಪಂಗಡ**—ಪ್ರಗತಿಗೆ ಸಹಾಯಹೊಂದದಿರುವ ಗುಂಪು : ಮಿಡಲ್‌ಸ್ಕೂಲಿನಲ್ಲ ಸ್ಕಾಲರ್‌ಶಿಪ್ಪುಗಳ ಹಂಚಿಕೆ ಹಿಂದುಳಿದ ಪಂಗಡಗಳಿಗೆ ಇವೆಯಲ್ಲ (ಕಂಗಳ. ೧೦೪). **ಹಿಂದುಳಿದ ಪ್ರದೇಶ**—ಪ್ರಗತಿಯಾಗದಿರುವ ಪ್ರಾಂತ,—ಸ್ಥಳ ; ಕೆಳಮಟ್ಟದ ಅಥವಾ ಹೀನಸ್ಥಿತಿಯಲ್ಲಿರುವ ಪ್ರದೇಶ : ಹಿಂದುಳಿದ ಪ್ರದೇಶಗಳಲ್ಲಿ ಅಡುಗೆಮನೆಯ ಹೊಗೆಯು ಒಂದು ಜಾಗತಿಕ ಸಮಸ್ಯೆಯಾಗಿರುವುದರಿಂದ .. . . "ರಾಜೂಚೂಲಾ" ಅನೇಕ ದೇಶಗಳಲ್ಲಿ ಜನಪ್ರಿಯವಾಗುತ್ತಿದೆ (ಅಭಿ. ೨೨).

[ಪಿಂದೆ (<ಪಿಂತೆ$_1$)+ಉಳ್$_1$]

**ಪಿಂದೆ** 'ಪಿಂತೆ$_1$' ನೋ.

**ಪಿಂದೆಗೆ**, ಪಿಂತೆಗೆ, ಹಿಂದೆಗೆ (ಕ್ರಿ). ೧. ಹಿಂದಕ್ಕೆ ಸರಿ; ಹಿಂಜರಿ; ಹಿಮ್ಮೆಟ್ಟು : ಪೊಗುವ ಕೊಡಂಕುಮೆತ್ತುವ ಬದಿರ್ಚುವದಿರ್ಚುವ ಪಾಯ್ವ ಪೊಯ್ವ ಪಿಂದೆಗೆವ ಮರಲ್ವ ಮೇಲ್ವರಿವ . . . ಬಿನ್ನಣಮೊಪ್ಪೆ ಪಗಲ್ತು ಕಾದಿದರ್ (ಕಜಿಂ. ೪-೬೪) ; ರಾಯನ ನುಡಿಗಾನು ವಿನಯಗೂಡಿ ಪಿಂದೆಗೆದಿರೆ ಪಟ್ಟದರಸಿ . . . ಕಟ್ಟಾಣಿ ಪೆಣ್ಮಣಿಯ ಬಾರೆಂದು ಮಱುದಕೆ ಬರಿಸಿದಳು (ಹರಿ. ೧-೨೬). **ಪಿಂತೆಗೆ**: ೧. ಯುಕ್ತಾಯುಕ್ತವಿವೇಕಕ್ಕೆ ಪಿಂತೆಗೆದು ಉನ್ಮತ್ತನಂತಚ್ಚಬೆಳ್ದಿಂಗಳೊಳೊಯ್ಯನೊಯ್ಯನೆ ಬರುತಿರ್ದನನಂ ದೂರದೊಳ್ ಕಂಡು (ಕಾದಂಬ. ೩೬೩) : ಅತಿಭೀತಿಯಿಂದನಾಗಟ್ಟು ಪಿಂತೆಗೆಯದೆ ಮಿತಿಮಿಱಿ ಮೇಲುವರಿಯದೆ . . . ಪತಿಸೇವೆಗೈದು ಬಾಳುವುದು (ಹರಿ. ೩-೩೦). ೨. ಹಿಂದಕ್ಕೆ ತೆಗೆದುಕೊಳ್ಳು: ಆ ಕ್ರೋಡನುರುತರಕ್ರೋಧವಿಹ್ವಲನಾಗಿ ಮುಂಗಾಲ್ಗಳಂ ಪಿಂತೆ[ಪಾಠಾಂ.ದೆ]ಗೆಯದಿರ್ದ್ದಿ (ಚುಹಾ. ೭-೨೮). **ಹಿಂದೆಗೆ**: ೧. ಶ್ರೀಮಂತರಾದ ಪಾಂಡವರು . . . ಹಿಂದೆಗೆಯದೇ ಯುದ್ಧವನ್ನು ಮಾಡುವರು (ಕೃಷ್ಣ. ೧೦೪): ಚೋಳರಾಜಾಧಿರಾಜನು ಯುದ್ಧದಲ್ಲಿ ಗಾಯಗೊಂಡು ಹಿಂದೆಗೆದನು (ಮೋಳಂ. ೩೦): ಹಾದಿಯಲಿ ಹಳ್ಳವಿದೆ ಮುಳ್ಳಿದೆ ಕೊಳ್ಳವಿದೆ ಎಂದಳುಕಿ ಹಿಂದೆಗೆಯದಿರು (ಶಾಂತಿ. ೪೬-೧೩): ವಿಜಯ ದುರ್ದೈವದ ದಂಡು ಹಿಂದೆಗೆಯಿತು (೨೦೩೩. ೩೨-೪೬). [ಪಿಂ (<ಪಿನ್)+ತೆಗೆ$_1$]

**ಪಿಂದೆಸೆ**, ಹಿಂದೆಸೆ (ನಾ). ಹಿಂದಿನ ಭಾಗ; ಹಿಂಭಾಗ : ಮುಗ್ಗುರಿಸಿ ನಿಲ್ಲುತಂ ಪಿಂದೆಸೆಗೆ ನೋಡುತುಂ . . . ಮುಂಬರಿದನೆಂತಾನುಮೆದೆಯ ಚಾಂಚಲ್ಯಮಂ ನಿಗ್ರಹಿಸಿ ಮೃಗ್ರಪನದಿಂ (ಅಕ್ರಾಂಗ. ೩೧-೦೩೦೫) ; ಮುಂದಕೆ ಪೋಪುದು ತನುವಿದು ಪಿಂದೆಸೆಗೋಡುವುದು ಬಳಿಕಗೈದದ ಮನವೇನೆಂದಪೆನೊ (ಶಾಕುಂತ. ೧೮-೩೪). **ಹಿಂದೆಸೆ** : ಪೂರ್ವಾದಿಯ ಇಷ್ಟದಲ್ಲಿ ಮಾಧ್ಯಭಾವ ಆತ್ಮನಲ್ಲಿ ಉತ್ತರ ತಾತ್ಪತಾದಿಯಲ್ಲಿ ಮೆಟ್ಟಿ ನೋಡಲಾಗಿ ಹಿಂದೆಸೆಯಲ್ಲಿ ಕಂಡೆ (ಕೋಳವಚ. ೧೪೪-೩೬೬); ತತ್ಸರಸಿಜಾನನೆ ಪಲ್ಲಭನ ಹಿಂದೆಸೆಯೊಳಿರುತಿರಲು (ಅಸಪು. ೪೨-೩೬).

[ಪಿಂ (<ಪಿನ್)+ದೆಸೆ$_1$]

**ಪಿಂದೈದು** 'ಪಿಂದಯ್ದು' ನೋ.

**ಪಿಂದೊಡೆ**, ಹಿಂತೊಡೆ (ನಾ). ತೊಡೆಯ ಹಿಂಭಾಗ, —ಹಿಂಬದಿ : ಮೋದೆ ಸಿತಾಸಿಯಿಂ ಪಱಿಯೆ ಕೈ ಕೆಲವಂದು ಮಹಾವರಾಹನಂತಾದುವು ಕೂಡೆ ಕಾಕ್ಕುಱಿಸೆ ಪಿಂದೊಡೆಗಳ್ ಕೆಲವೇಕದಂತನಂತಾದುವು (ಸಂಕ್ರಷ್ಣ. ೧೦-೬೭). **ಹಿಂತೊಡೆ**: "ತೊಡೆಯ ಹಿಂಭಾಗ; ಹಿಂತೊಡೆ: ಹಿಂತೊಡೆ ಮತ್ತು ಪಿರ್ರೆ" (Ham. ೨೦೪೬). [ಪಿಂ (<ಪಿನ್)+ತೊಡೆ$_1$]

**ಪಿಂಪಿಣಿ** (ನಾ). ಹಿಂಭಾಗದಲ್ಲಿರುವ ಜಡೆ : ಮುಗುದೆಯವಿಂದುವದನೆ ಪಿಂಪಿಣಿಯಿಂದೊಗೆದಿಳಿದಾ ಮುತ್ತಿನ ಬಟ್ಟೊಪ್ಪಿತ್ತಗಲದೆ ಪಿಂತಣ ದೆಸೆಯಿಂ ತಾಳಿದ ರಾಹುವಿನ ನಾಲಿಗೆಯಂತೆ (ಶ್ರೀಪಕಂ. ೬-೬೪).

[ಪಿಂ (<ಪಿನ್)+ಪಿಣ್$_1$. / ತೆಲು. ಪಿಂಪಿಣೀ=ನಾಲ್ಕು ಕಾಲಿನ ಜಡೆ]

**ಪಿಂಬಕ್ಕ** (ನಾ). ಹಿಂಬದಿ; ಹಿಂಭಾಗ: ಪೊಂಬಿಸದ ಬೆಸುಗೆಯ ಪಿಂಬಕ್ಕ [ಪಾಠಾಂ. ಪೆಂಪಿಂ ಚಬುಕ]ದೊಳೆ ನಿಗುಂಬಿಸಿದ ಕರಿಯ ಬಿಳಿಯ ರಶ್ಮಿಗಳ್ಗರಿಯ ಪುಲ್ಲಿಯ ಕದಳಿಕೆಯ ಕಡುಪಿನಿಂ (ಅಜಿತ. ೧೪-೬ ವ).

[ಪಿಂ (<ಪಿನ್)+ಪಕ್ಕ$_1$]

**ಪಿಂಬಗಲ್**, ಪಿಂಬಗಲು, ಹಿಂಬಗಲು (ನಾ). ಹಗಲಿನ ಕಡೆಯ ಭಾಗ ; ಸಂಜೆ : ಬಳೆದ ವಿಮೋಹದಿಂ . . . ಕರಣಂ ಪಿರಿದಾಗಿ ಪಿಂಬಗಲ್ ಕಳೆ ವಿನವಿರ್ದನಾ ಪರಮಯೋಗಿಗಮಂತಾಟು ಮೋಹವಾಗದೇ (ಸುಕುಮಾ. ೪-೬೩) ; ಜಾಂಬವನಂ ಪಿಂಬಗಲಾದಿತ್ಯನಂತೆ ತೇಜಂಗಿಡಿಸಿ (ರಮಾಕು. ೬-೯೩) ; ಮುಂಬಗಲ್ ಪಿಂಬಗಲ್ ಸುಳಿಸುಳಿವ ತಂಬೆಲರ್ ಚೆಂಬಾನೆ ಕಾಂಬಡುವ ಬೆಟ್ಟಗಳ ಸಾಲು (ಜಿಯಾ. ೫೩-೧೨). **ಪಿಂಬಗಲು** : '' ಪಿಂಬಗಲಿನಲ್ ಸಾಯಾಹ್ನೇಭಿಧಾನವು '' (ಕಶ. ೬೩). **ಹಿಂಬಗಲು** : ಉದಯಾದಿ ಸಾಧನೆ ಹಿಂಬಗಲೋದು ನಕ್ತದೊಳೋದಿದೋದಿನ ಚಿಂತೆ ವ್ಯಾದುವ್ಯಾದುವಾಗಿ ನಡೆವುದು (ಶಕಶ. ೨೬-೪೧) ; ನಾಳೆ ಹಿಂಬಗಲವರೆಗೆ ಹರಿಬಕ್ಕೆ ನನ್ನತ್ತ ಉಸಿರೆತ್ತುವುದಿಲ್ಲವೆಂದು ನೀವು ಪ್ರತಿಜ್ಞೆ ಮಾಡಿ ಕೊಟ್ಟರೆ ಮಾತ್ರ ಈಗ ನನ್ನ ಮರುನುಡಿಯುಂಟು (ಕುಂಕೃಶ. ೩೮-೩). ' ಮುಂಬಗಲ್ ' ಪರಾ. [ಪಿಂ (< ಪಿನ್) + ಪಗಲ್]

**ಪಿಂಬಗಲು** ' ಪಿಂಬಗಲ್ ' ನೋ.

**ಪಿಂಬಡು**$_1$ (ಕ್ರಿ). ಹಿಂದೆ ಹೋಗು ; ಹಿಂಬಾಲಿಸು ; ಅನುಸರಿಸು : ತನ್ನಿಚ್ಚೆಯಿಂ ಮುಂತೆಮುಂತೆ ಪೋಪೋಪ ಕುದುರೆಗೆ ತಿಂಗಳೆಂಟಾಗಲೊಡಂ ಅಂಗವಂಗಾದಿ ದೇಶಂಗಳ್ ಕಂಗೆಟ್ಟು ಕಪ್ಪಂಗೊಟ್ಟು ಪಿಂಬಟ್ಟೋಲ ಯಿಸುತ್ತೆ ಬರುತವಿರ್ಪುದುಂ (ಜಗಮೋ. ೧೩೪-೧).

[ಪಿಂ (< ಪಿನ್) + ಪಡು$_1$]

**ಪಿಂಬಡು**$_2$ (ನಾ). ಅನಂತರ ; ತರುವಾಯ : ಎನ್ನ ಪಿಂಬಡಿನೊಳ್ [ನಣ್ಪೆ]ನಯ್ಯ ನಿಮಗಂ ಮಗನಲ್ಲನೆ ಧರ್ಮನಂದನಂ (ಪಂಪಭಾ. ೦೩-೦೮); ಕಾಸನರ ಧೀಮಂ . . . ತಳ್ತಿಱಿದು ಸುರಲೋಕಕ್ಕೆ ಸಂನ್ದನಾತನ ಪಿಂಬಡಿನೊಳಾತನ ಮಗಂ ಕಚ್ಚವರ ಕರವಣ್ಣ ಕಲ್ಲ ನಿಱಿದಮ್ಮಂಗಳ (ಎಕ. VIII (೩), ಸೊರಬ. ೩೬೩-೩ ; 981) : ಬರಲವರ್ ಪಿಂಬಡಿಂ ಮುನ್ನಮುನ್ನೆದುವೆನ್ (ಶ್ರೀಣಾಪು. ೦೨೬-೨೯). [< ಪಿಂಬಡು$_1$]

**ಪಿಂಬರೆಯ** (ನಾ). ಕಳೆದು ಹೋದ ತಾರುಣ್ಯ ; ಹಿಂದಕ್ಕೆ ಸರಿದ ಯೌವನ,-ಪ್ರಾಯ : ತರುವಲಿ ಬೇಡ ಪಿಂಬರೆಯದಂಗನೆಯಾದೊಡೆ ಬೇಡ ಜವ್ವನಂ ಗರಗರನಪ್ಪ ಸೊಂಪುತನವುಳ್ಳವಳಾದೊಡೆ ಬಂದು ಮುಂದೆ ಸಂಚರಿಸುಗೆ (ಸೂಕ್ತಿಸು. ೮-೪೦೬).

[ಪಿಂ (< ಪಿನ್) + ಪರೆಯ$_2$ (< ಪರಯ)]

**ಪಿಂಬವಣೆ** (ನಾ). ಹಿಂದೆ ಅನುಭವಿಸಿದ ಕಷ್ಟ,-ಬವಣೆ : ಶಂಬರ ಶರನಿಧಿಯೊಳು ತನ್ನ ಕೆಡಹಿದ ಪಿಂಬವಣೆಯನು ತೋಱುವರೇ ಚೆಂಬಣ್ಣ ಗಂಧೋದಕದಲ್ಲಿ ಸ್ಮರ ತನ್ನ ಕುಂಭಕುಚೆಯನು ನೂಂಕಿದನು (ಸೋಹಕ. ೧೪-೬೬). [ಪಿಂ (< ಪಿನ್) + ಬವಣೆ]

**ಪಿಂಬಳಿ**, ಹಿಂಬಳಿ$_1$, ಹಿಂಬೞಿ (ನಾ). ೧. ಹಿಂದಿನ ಸ್ಥಳ ; ಹಿಂಬದಿ ; ಹಿಂಭಾಗ : ಅರಲಂಬುಗಳಿನಾದಮಿಡಿದ ಬತ್ತಳಿಕೆ ಭುಜಶಿರದ ಪಿಂಬಳಿ ಯಲ್ಲಿ ಕಣ್ಗೊಳಿಸಲು . . . ಸುಮುದ ರಾಜನ ಮೇಲೆ ದಾಳಿಟ್ಟನು (ಕೀಹರಾ. ೬-೨೬). **ಹಿಂಬಳಿ**$_1$ : ೧. ಕಱು ಹಾಯು ಹಿಂಬಳಿಯನಱಿಮಂಕಿರಱಿದು ಸೌಂದರಗಣಾಧೀಶ್ವರಂ ಬೆಂಬಿಡಿದು ಬಂದು (ಸೌಂದಪು. ೧೦-೦೨). **ಹಿಂಬೞಿ** : ೨. ಪರೋಕ್ಷ : ಪರೋಕ್ಷೇ = ಹಿಂಬೞಿಯೊಳ್ (ಅಕಿಪಾ. ೬೦-೪). [ಪಿಂ (< ಪಿನ್) + ಬಳಿ$_3$ (< ಬೞಿ$_3$)]

**ಪಿಂಬೞಿಗೇಸ** (ನಾ). ಹಿಂಭಾಗದ ಹರುಕು ಹರುಕಾದ ಕೂದಲು : ಕೋಱಿವಲ್ ಬತ್ತಿದ ಕಾಲ್ ಪಿಂಬ[ಪಾಠಾಂ. ಸಿಂಪಿ]ೞಿಗೇಸಂ ನೆಕ್ಕಿ ಕದಪು ಪೊಕ್ಕಿರ್ದ ಬಸಿಱ್ ಕೆಱೆದ ಮುಖಕುಹರವರ್ಬಿಸೆ ಪಿಱಿಕಿನಿಗಳ ಬಳಗ ಮೆಯ್ದೊ ತಂದುದು ಮುನಿಯಂ (ಶಬ್ದಸ. ೪೩೦).

[ಪಿಂ (< ಪಿನ್) + ಪೞಿ$_1$ + ಕೇಸ$_2$]

▲**ಪಿಂದಾಲಿಯು** ' ಹಿಂದಾಲಿಸು ' ನೋ.

**ಪಿಂಬೂಣಿಸು** (ಕ್ರಿ). ಹಿಂದಿನಿಂದ ಬಾಣ ಬಿಡು : ಎಣನ ಮುನಿನಾಥ ಕಾಣುತ ಬಂದು ಪೆಂ{ಪಿಂ}ಬೂಣಿಸಿ ನಿಂದ ಪೇಟಕನ ಕಾಣುತ (ಕೃಚಾ. ೩-೦೪೪). [ಪಿಂ (< ಪಿನ್) + ಪೂಣಿಸು]

**ಪಿಂಬೆಡೆ**, ಹಿಂಬೆದೆ (ನಾ). ಬಿತ್ತನೆ ಮಾಡಬೇಕಾದ ತರುವಾಯದ ಕಾಲ ; ಬಿತ್ತನೆ ವೇಳೆ ಮೀರಿದ ಕಾಲ : ಪಿಂಬೆಡೆ, ಪಿಂಬೊೞ್ತು (ಚಮಕ. ೦೬೬ ಕೃಷೋ). **ಹಿಂಬೆದೆ** : ಹಿಂಬೆದೆಯೊಳಗೆ ಬಿತ್ತಿದ್ದರಿಂದ ಸರಿಯಾದ ಬೆಳೆಯಾಗಲಿಲ್ಲ (ಜಾಪ). [ಪಿಂ (< ಪಿನ್) + ಬೆದೆ]

**ಪಿಂಬೊೞ್ತು**, ಹಿಂಬೊತ್ತು (ನಾ). ೧. ಮುಳುಗುತ್ತಿರುವ ಸೂರ್ಯ ; ಸಂಜೆಯ ಸೂರ್ಯ : " ಪಿಂಬೊೞ್ತಿಂದು ಪಡುನೇಸಱ್ " (ಕಕಾ. ೫೬-೨೫೩) ; ಅಂಗಯನ್, ಅಂಗಾಲ್ . . . ಪಿಂದೆದೆ, ಪಿಂಬೊೞ್ತು (ಚಮಕ. ೦೬೬ ಕೃಷೋ). ೨. ಹಿಂದಿನ ಕಾಲ ; ಪೂರ್ವ ಕಾಲ : ಕುರುರಾಯಂ ಬಹುವಿತ್ತಮಂ ಕುಡುವನಾ ಕರ್ಣಂಗೆ ಮತ್ತಾ ಸಹೋದರರ್ಗೆ ಪಾಂಡವರ್ಗೇನುಮಂ ಕುಡನದೇಂ ಪಿಂಬೊೞ್ತನೊಳ್ಕರ್ಣನುರ್ವರದಾರಿದ್ರನೆನಲ್ಕೆ ಸಂದಂ (ಕಾವ್ಯಸ. ೪೮). **ಹಿಂಬೊತ್ತು** : ೩. ಸಂಜೆ ; ಸಾಯಂಕಾಲ : ಉಪ್ಪರಿಗೆಯನೇಱ ಹಿಂದೊತ್ತಿಗಾನಂದದಿಂದಡ್ಡಯ ನೋಳ್ಪ . . . ವಿಳೆರಂದೆದ್ದನಬಲೆಯರ್ವೆರಸಿ (ಕಕಶ. ೨೩-೮೩).

[ಪಿಂ (< ಪಿನ್) + ಪೊೞ್ತು]

**ಪಿಕ್‌ನಿಕ್** ' ಪಿಕನಿಕ್ಕು ' ನೋ.

**ಪಿಕ್‌ಪಾಕೆಟ್ಟು** (ನಾ). ಜೇಬಿನಲ್ಲಿರುವ ಹಣ ಅಥವಾ ಹಣದ ಪಾಕೆಟ್ಟನ್ನು ಅಪಹರಿಸುವಿಕೆ ; ಜೇಬುಗಳ್ಳತನ : ಬಸ್ಸಿನಲ್ಲಿ ಬರುವಾಗ ಅಂಗಿಯ ಒಳಜೇಬನ್ನೇ ಕತ್ತರಿಸಿ ಪಿಕ್‌ಪಾಕೆಟ್ಟು ಮಾಡಿದ್ದರು (ಜಾಪ).

[← ಇಂ. Pick Pocket]

**ಪಿಕ** (ನಾ). ಕೋಗಿಲೆ ; ಕಳಕಂಠ : '' ಅನ್ಯಭೃತಃ, ಪರಭೃತ್ಸ, ಕಳಕಂಠಃ, ಕೋಕಿಲಃ, ಪಿಕಃ — ಈ ೫ ಕೋಗಿಲೆ '' (ಕರ್ಣಾಟ. ೪೦-೯೯) : ತನಿಮಾಲನುಂಡು ಬಳೆವರಗಿಳಿಗಳಿಂ ಕೊನರಂ ಕರ್ದುಕಿ ಕೂಗುವ ಪಿಕದ ಸೊರ್ಕಿನಿಂ (ಶಬರ. ೮೬. ೨-೦೨) ; ಪಿಕ ಶುಕ ಕೋಕ ಸಾರಸ . . . ಕುರಗೀಪ್ಸವಪ್ರಕರದಿಂದೆ ವಿರಾಜಿಕುಮಾನ್ನತಂ ವನಂ (ಕಮ್ಮಕ. ೪-೬೨); ಶುಕ ಪಿಕ ವಿಹಂಗ ಗೀತಾಂಜಲಿಯನರ್ಪಿಸುತೆ . . . ಪ್ರಕೃತಿದೇವಿಯು ತಾನು ರತಿಯ ರೂಪದಿ ನಿನ್ನ ಪೂಜಿಸುವಳನುದಿನಂ ! (ಕಲ್ಯಾಂಗ. ೫೬-೪೪೦).

[ಸಂ.]

**ಪಿಕನಿಕ್ಕು**, ಪಿಕ್‌ನಿಕ್ (ನಾ). ವನಭೋಜನ ; ಬಯಲೂಟ : ಮಕ್ಕಳು ಸ್ಕೂಲಿನಿಂದ ಪಿಕನಿಕ್ಕಿಗೆ ಹೋಗಿದ್ದಾರೆ (ಜಾಪ). **ಪಿಕ್‌ನಿಕ್** : ಬಹುದಿನಗಳ ಹಿಂದೆ ನಾವೆಲ್ಲ ಪಿಕ್‌ನಿಕ್ ಹೋಗಿದ್ದಾಗ . . . ಗೋವಿಂದ ತನ್ನ ಫೋಟೊ ತೆಗೆದಿದ್ದುದು ಅವಳ ಜ್ಞಾಪಕಕ್ಕೆ ಬಂತು (ಎಕಾ. ೪೩).

[ ← ಇಂ. Picnic ]

**ಪಿಕನಿಸ್ವನೆ** (ನಾ). ಕೋಗಿಲೆಯಂಥ ಇಂಪಾದ ಸ್ವರವನ್ನುಳ್ಳವಳು : ಪಿಕನಿಸ್ವನೆ ವಧು ತಳ್ತಿಡದ ಕಲದೋರೆ . . . ನೃಪನೊಂದೆ ಕೊಂಬು ಕೆಯ್ಯಿಂದ ಚೂತಶಾಖೆವೊಲಿರ್ದಂ (ಶರಪು. ೬-೦೮). [ ಸಂ. ಪಿಕವಿಸ್ವನಾ ]

**ಪಿಕಲಾಟ** ' ಪೀಕಲಾಟ ' ನೋ.

**ಪಿಕಲಾರಿ**, ಪಿಕಳಾರ, ಪಿಕಳಾರಿ (ನಾ). ಒಂದು ಬಗೆಯ ಹಕ್ಕಿ : (ಆ). **ಪಿಕಳಾರ** : ಕಾವಳ್ಕಿ ಕಾಜಾಣ ಪಿಕಳಾರ ಗಿಳಿ ಚೋರೆ ಕೋಗಿಲೆಗಳುಲಿಹಕ್ಕಿ ನಲಿಯುತಂ (ಕಲ್ಯಾಂಗ. ೪೨-೦೦೩೮) ; ಕೋಗಿಲೆ ಕಾಜಾಣ ಪಿಕಳಾರ ಕಾವಳ್ಕಿಗಳ ದನಿಗಡಲಿನ ನಡುವೆ ದೀವಿಯವೊಲಿಹುದೀ ನಮ್ಮ ಹೊಸ ಹಳ್ಳಿ (ಸಂಕ್ರಾಂತಿ. ೦೬೦-೪೦). **ಪಿಕಳಾರಿ** : ಇತರ ಕವನಗಳಲ್ಲಿ ಆಗಾಗ ಜೇನೆ, ಕಾಜಾಣ, ಗಿಳಿ, ಕಾವಳ್ಕಿ, ಪಿಕಳಾರಿ, ಕೋಗಿಲೆ, ಮಲೆವಕ್ಕಿಗಳ ಉಲ್ಲೇಖ ಬರುತ್ತಿದೆ (ಶಾಕಮ. ೯೩). [ < ಪಿಕಳ ? ]

**ಪಿಕಳ, ಪಿಕ್ಕಳ** (ನಾ). ಒಂದು ಬಗೆಯ ಹಕ್ಕಿ : ಗರುಡಂ . . . ಪಿಕಳಂ ಬಕಂ ಶಿಖಿ ಶುಕಂ ದಾನಾಡಿ ಪರ್ಬಕ್ಕಿ ಹೆಂಗುರು ಕಾಕಂ ಚಿಲುಕಊಲಿ ರತ್ನ ಖಗಮಿಕರ್ಕಳಂ ತದ್ವನಷಾಘದೊಳ್ (ರಾಶಕೇ. ೩-೩೯); " ಕಾಗೆ " (ರಾಶಕೇ. ೬೦೯), ಗರುಡಂ ಗೀಜಗನಂಚೆ ಸೋರೆ ಪಿಕಳಂ [ಪಾಠಾಂ. ಳಕಂ] ಕಾಕಂ ಬಕಂ . . . ಚಿಲುಕಊಲಿ ಚಾತಕಮುಖಿಕರ್ಕಳಂ ತತ್ಪುರುಷಪ್ರಾಂತದೊಳ್ (ಪುರಕಂ. ೯-೯೬). **ಪಿಕ್ಕಳ** : ಪಿಕ್ಕಳದ್ವಿತಯು ಲಾವುಗೆ ತೋರ ಗಿರುಡೆಯುಂ ಕುಕ್ಕುಟ ತಗಟು ಕೋಣಗಳ ಸೊಕ್ಕಾನೆಗಳ ಕಾದಿಸುತಿರ್ದ ದೊರೆಗಳ ಮಕ್ಕಳ ಕೂಡೆ ಬೀದಿಯುಲಿ (ಕೋಹಕ. ೧೭-೪೨); ಶುಕ ಪಿಕ ಕೇಕಿ ಕಾರಂಡ ಕಂಬೂತ ಕಾಗೆ . . . ಕಾಡ್ಕೋಳಿ ಪಿಕ್ಕಳಂ ಕಬ್ಬಕ್ಕಿಗಳ್ ಮೊದಲಾದವು (ಕಹುಕ್ಕಿ. ೨-೦-೦೬). [←ತೆಲು. ಪಿಕಿಲಿ, ಪಿಕ್ಕಿಲಿ]

**ಪಿಕಳಾರ** ' ಪಿಕಲಾರಿ ' ನೋ.

**ಪಿಕಳಾರಿ** ' ಪಿಕಲಾರಿ ' ನೋ.

**ಪಿಕಾಸಿ, ಪಿಕ್ಕಾಸ್, ಪಿಕ್ಕಾಸು** (ನಾ). ಒಂದು ಕಡೆಯಲ್ಲಿ ಚೂಚೂಪಾದ, ಮತ್ತೊಂದು ಕಡೆಯಲ್ಲಿ ಕೆದಕುವ ಮೊನೆಗಳಿಂದ ಕೂಡಿದ, ನೆಲವನ್ನು ಅಗೆಯುವ ಒಂದು ಬಗೆಯ ಸಾಧನ : ಆ ಬಳಿಕ ಮುಹಮ್ಮದನು ಪಿಕಾಸಿಯನ್ನು ಹಿಡಿದು ಕಲ್ಲನ್ನೊಡೆಯಲು ಪ್ರಯತ್ನಿಸಿದನು (ಕೃಗಂಬ. ೬೯); ಒಂದು ಪಿಕಾಸಿ, ಗುದ್ದಲಿ ತರಿಸಿರಿ ಎಂದನು (ಶಾಬೀಮು. ೨೯), ಹಾರೆ, ಗುದ್ದಲಿ, ಪಿಕಾಸಿ . . . ರೈತನ ಸಾಧನಗಳೂ ಹೌದು (ಕಂಕೋ. I. ೬೯೯). **ಪಿಕ್ಕಾಸ್** : ಅವರು ಹಾರೆ ಪಿಕ್ಕಾಸ್ ಹಿಡಿದು ಹೊರಟಾಗ ಬೀಜಗಳ ಗಂಟನ್ನಿಟ್ಟು ಬುಟ್ಟಿಯನ್ನು ಮೋಹನ ಹೊತ್ತು ತರುತ್ತಾನೆ (ಚಾಳಿ. ೬೮). **ಪಿಕ್ಕಾಸು** : ತೋಟದ ಮಣ್ಣನ್ನು ಆಳವಾಗಿ ಉಳುವ ನೇಗಿಲುಗಳಿಂದಾಗಲಿ, ಪಿಕ್ಕಾಸುಗಳಿಂದಾಗಲಿ . . . ಉತ್ತು ನೆಲದಲ್ಲಿ ಗೊಬ್ಬರವನ್ನು ಬೆರೆಯಿಸಬೇಕು (ಶಾಂಕ್ರ. I. ೨೯೬); ತೋಟದಲ್ಲಿ ಕೆಲಸ ಮಾಡುವ ಹಾರೆ ಪಿಕ್ಕಾಸು ಇತ್ಯಾದಿ ಸಾಮಗ್ರಿಗಳ ಕಳವು ಹೆಚ್ಚಾಗತೊಡಗಿತು (ರಕ್ತರೂ. ೬೯). [ ←ಇಂ. Pickaxe ]

**ಪಿಕಾಳಿ** (ನಾ). ಕೋಗಿಲೆಗಳ ಗುಂಪು,–ಸಮೂಹ : ಇದು ಬನಮಿದು ನೃಪಗೃಹಮೆಂಬುದು . . . ಷಟ್ಪದ ಶುಕ ಪಿಕಾಳಿಗೆನೆ ನೃಪಸದನಂ ಸೊಗಯಿಪುದು (ಜಗಪಿ. ೨-೩೬); ತಮಾಳವನಂ ಜಳಬುದ್ಬುದಪ್ರಘೋಷಮನೊಳಕೊಂಡು ಕಲ್ಪಲಿಸೆ ಕಂಡು ಘನಾಗಮಮಾದುದೆಂದು ಸಂಭ್ರಮಿಸಿ ಪಿಕಾಳಿ ಮೂಗುವಡೆ (ಕೃಷ್ಣಕ್ಕಿ. ೬-೦೯). [ ಪಿಕ+ಆಳಿ (=ಆಲಿ) ]

**ಪಿಕಿ** (ನಾ). ಜೋಗಿಗಳ ಹತ್ತಿರವಿರುವ ಒಂದು ಬಗೆಯ ಕೊಂಬಿನ ವಾದ್ಯ ( ? ) : ಕೊರಲ ಶಂಕಿನ ಸರವೆರಲೆಗೊಂಬಿನ ಪಿಕಿ [ಪಾಠಾಂ. ಕಿ] ಸೋರೆಯೋಡು ಕೆಲದಜವಾಗಿ ಕರದ ತ್ರಿಶೂಲದ ಕಿಬುಜಡೆವೆತ್ತ ಜೋಗಿಗಳರಲೊಪ್ಪಿತು ರುದ್ರಭೂಮಿ (ಶ್ರೀಶಾಂ. ೬-೦೯). [ ? ]

**ಪಿಕೀರು** ' ಫಕೀರು ' ನೋ.

**ಪಿಕೆಟ್** (ನಾ). ಕಾವಲಿಗಿರುವ ಸಣ್ಣ ಸೈನ್ಯ : ಕಾವಲುದಳ : "ಕಾವಲುಪಡೆ, ಗಸ್ತುಪಡೆ ; ತಡೆಕಾವಲುಗಾರರು. ಪಿಕೆಟ್ " (Picket. ಶಬ್ದ್ರಿ. ೬೨).

**ಪಿಕೆಟ್ ಮಾಡು**=ಕಾವಲಿರುವಂತೆ ಮಾಡು : "ಕಾವಲುಹಾಕು. ಪಿಕೆಟ್ ಮಾಡು " (Picket. ಶಬ್ದ್ರಿ. ೬೨). [ ←ಇಂ. Picket ]

**ಪಿಕೆಟಿಂಗ್** (ನಾ). ಒಳಗೆ ಹೋಗದಂತೆ ಅಥವಾ ಹೊರಗೆ ಬರದಂತೆ ತಡೆಯುವುದು : ಅಂದಿನಿಂದಲೇ ಕರನಿರಾಕರಣೆ, ಉಪ್ಪಿನ ಸತ್ಯಾಗ್ರಹ, ಪಿಕೆಟಿಂಗ್‌ಗಳು . . . ಆರಂಭವಾಗಬೇಕೆಂದು ಗಾಂಧೀಜಿ ತಿಳಿಸಿದರು (ಆತ್ಮಕ. ೦೩೬); ಮದ್ಯನಿಷೇಧದ ಪಿಕೆಟಿಂಗ್ ನಡೆಸುವಾಗಲೂ ಸಭೆ ಮೆರವಣಿಗೆಗಳನ್ನು ಮಾಡುವಾಗಲೂ ಆತಂಕಗಳನ್ನು ತಂದೊಡ್ಡತೊಡಗಿದರು (ಕುರುಕ್ಷಾ. ೦೩೨). [ ←ಇಂ. Picketting ]

**ಪಿಕ್ಕ** ' ಪಿಕ್ಕಾ ' ನೋ.

**ಪಿಕ್ಕಮಾತು** (ನಾ). ಹುರುಳಿಲ್ಲದ ಮಾತು,–ನುಡಿ : ಹಿರಿಯರಾಗಲಿ ಕಿರಿಯರಾಗಲಿ ಯಜಮಾನನೊಡನೆ . . . ಪಿಕ್ಕಮಾತುಗಳನ್ನು ಸರ್ವಥಾ ಆಡಬಾರದು, ವಾದಿಸಬಾರದು (ಕುಟುಂಬ. ೩೯).

[ಪಿಕ್ಕ (< ಪಿಕ್ಕಾ) + ಮಾತು$_1$]

**ಪಿಕ್ಕಳ** ' ಪಿಕಳ ' ನೋ.

**ಪಿಕ್ಕಳಿ** (ನಾ). (?) : ಕಟ್ಟುಗಳ ಮಣಿ ಸಮ್ಮದಕ್ಕಡದ ಪೊಸತೀಲಿಯುಟ್ಟಿಗೆಯ ಪಿಕ್ಕಳಿಯ ಪೂಮುಡಿಯ ಜವ್ವನದ ದಿಟ್ಟವೇಡಿತಿಯರಾಣ್ಮರ ಪಿಂದೆ ನಡೆದರಟ್ಟಟ್ಟಿ ಮಿಗಗಳ ಕೆಡಪುತ (ಶುಕೀಕ್ಕಿ. ೩೨-೨೯). [?]

**ಪಿಕ್ಕಾ, ಪಿಕ್ಕ** (ಗು). ೧. ಕಾಂತಿಹೀನವಾದ ; ದುರ್ಬಲವಾದ; ಅಶಕ್ತವಾದ : (೬). ೨. ಹುರುಳಿಲ್ಲದ ; ನಿಸ್ಸತ್ವವಾದ : (೬). **ಪಿಕ್ಕ** : ೨. ' ಪಿಕ್ಕಮಾತು ' ಪರಾ. [ ←ಮರಾ. ಫಿಕ್ಕಾ ]

**ಪಿಕ್ಕಾಸ್** ' ಪಿಕಾಸಿ ' ನೋ.

**ಪಿಕ್ಕಾಸು** ' ಪಿಕಾಸಿ ' ನೋ.

**ಪಿಕ್ಕು, ಪಿಕರ್, ಹಿಕ್ಕು$_1$, ಹೆಕ್ಕು$_1$** (ಕ್ರಿ). ೧. ಬೇರ್ಪಡಿಸು; ಪ್ರತ್ಯೇಕಿಸು; ಬಿಡಿಸು; ವಿಭಾಗ ಮಾಡು : "ಪಿಕ್ಕು—ವಿವರಣೇ (ಬಿಡಿಸು)" (ಕುರಾ); ಪುದಿದೊದವಿದ ಜನ್ಮಾಂತರಸ್ನೇಹಮೊಂದೇ ನುಡಿಯಲ್ ಪಿಕ್ಕಲ್ಕೆದೊಂದಲ್ತೆ [ಪಾಠಾಂ. ವೈಕಲ್ಪದಂತಲ್ತೆ]ನಲಿಡೆ ಪೆರ್ಗಿನ್ನಿಲ್ಲ (ಅಂಕ್ಕಿ. ೯-೨೬); ಮಿದುಳ ಕೋಟ್ಟೆಗೆಸಟೆಯೊಳ್ಪೊಕ್ಕು ಕರುಳ ಮೆದೆಯಂ ಪಿಕ್ಕಿ ಪರಸಿ ಪೋಡಿಯುಂ (ಗದಾಯು. ೬-೨೮ ಪ); ಈಟ್ಟುಂ ಪೆಟ್ಟಿಯ ಪೊತ್ತಮಂ ಕಳೆ ಕಸು ನೂಂಕುತ್ತೆಯಗುತ್ತೆ ಮೇಣ್ ನೋಟ್ಟು ಬೀಜವನೆತ್ತಿ ಪಿಕ್ಕಿ ಕಳೆದುಂ ನೂಲಲ್ಕೆ ಯಂತ್ರಗಳುಂ . . . ಮೈಸೂರಿನಲ್ಲೊಪ್ಪುಗುಂ (ಮೈಕೂಟು. ೬-೩೬). ೨. (ಕೂದಲನ್ನು) ಸಿಕ್ಕು ಬಿಡಿಸು; ಬಾಚು : ತಲೆಯನಿರುಳ್ಪಿಕ್ಕಿದೊಡೆತ್ತಲಾನುಮೊಂದಲ್ಲಿ ಭಾಗ್ಯಮುಳ್ಳು ರೋಮಂ ತಲೆಯಿಂದುದಿದೊಡೆ ಬಟೆಯಂ ನಿಲಲರಿಯದು ಭಾಗ್ಯಮೆಂಬರಜಿವಿಲ್ಲದವರ್ (ಕಹುಕ. ಅಹುಂಕ. I. ೩೯೩–೯೩) ; ತದ್ರಮಣಿಯ ಕಚಮಂ ಪಿಕ್ಕಿದಳಮಳಿನನಖನಿಕರದಿಂ ವಧೂಮಣಿಯೊರ್ವಳ್ (ಅರ್ಕ್ಕಚ.೬-೨೩) ; ಸೋಮರ್ಪಡಿಯನಾಗಳ್ ಪಿಕ್ಕಿ ಪೂದೊಡಂಬೆಯಂ ಮುಡಿಯಿಸುಪರಾರ್ (ರಾಜಾಕ್ಕ. ೬೬-೨೨). ೩. ಕಿತ್ತು ಹೊರಕ್ಕೆ ತೆಗೆ ; ಕೀಳು ; ಸೆಳೆ : ಪೆಣದೆರೆಗೆ ಅಲೆತರ್ಪ ರಣಮದ್ದರ್ ಕರೆಯದೆಯೆ ಬರ್ಪತಿಥಿ . . . ಮಿಷಕಂಗಪ್ರತ್ಯಂಗಗಳ ಪಿರಿಯ ಅವಶೇಷಂಗಳನೆ ಪಿಕ್ಕಿ ಪಡಿದಿಕ್ಕುವುದು (ಅದ್ಭುತ್ರ. ೩೯-೦೦೬); ಎಲ್ಲಮುಮವು ಪೊಲೆಗಲಸಿಯಿರ್ದತ್ತು. . .ಮಗನ ಪೆಣದಿನ್ ಪದರ್ಗಗಳ್ ನಾಯ್ಗಳುಮವು ಪಿಕ್ಕಿದರೆಯಿನ್ (ಅಂಕಗೊ. ೯೩-೯೩೯). ೪. ತೆರೆದು ನೋಡು ; ಬಿಡಿಸಿ ನೋಡು ; ಬಗೆದು ನೋಡು : ಮುನ್ನೇಮಿದ ಕೋಡಂ ನೋಡಿ ಹಲ್ಲಂ ಕಿರಿದಗಿದುರವಂ ಪಿಕ್ಕಿ ಪೇನಿಂದೆ ತಿನ್ನುರ್ವಿದ ಮೆಯ್ಯಂ ಕಯ್ಯೊಳೆತ್ತಂ ತುಚ್ಛಿಸಿ . . . ಕುಳ್ಳಿರ್ದುದು ಕೋಡು (ಸುಕ್ತಿಸು. ೩-೦೯೩). ೫. (ಭೇದವನ್ನು) ಎದ್ದು ಕಾಣುವಂತೆ ಮಾಡು ; ಎತ್ತಿ ತೋರಿಸು : ಕೆದಕು : ಬೆದಕು : ಕುಲಮೆಂಬುದುಂಟೆ ಬೀರಮೆ ಕುಲಮಲ್ಲದೆ ಕುಲಮಂ ನಿಂತ್ರು ಪಿಕ್ಕದಿರಿಂ (ಹಂಪಚಾ. ೨-೬೩) ; ಇಂದಿನವರಂದಿನವರ್ ಕೆಲರೆಂದು ಪಿಕ್ಕು [ಪಾಠಾಂ. ಕರ್]ಮೀ ದಂದುಗದಿಂದಮೇ ಸಮಗನಿಂದ್ಯಕವೀಂದ್ರರ ಮಂದ್ಯರಾಪಗಂ (ಶಬ್ದಾವಾ. ೧-೪೨). ೬. ದೂರವಾಗು ; ಪ್ರತ್ಯೇಕವಾಗು : ಅಸ್ತ್ರೌಘವಾತನ ಮೆಯ್ಯಂ ಕಿಡಿ ಸೂಸೆ ತಾಗಿ ಸಿಡಿದುಂ ಪಿಮ್ಮೆಟ್ಟಿಯುಂ ಪಿಕ್ಕಿ ಪಿಂತನೆ ಬಂದು ಕಿಬ್ಬಾಯ್ಗೆ ಪೊರ್ದಿಯುಂ ಪಿಂಗುವರ್ಪದತ್ತು (ಜಗಪಿ. ೯-೩೮). ೭. ಸೂಸು (?) : ಆದಂ ಗೀತದ ಬಣ್ಣಂ ನಾದದೊಳಕ್ಕರಮುಮೆಯ್ದೆ ಶಬ್ದದೊಳಡಿಯಲ್ಕಾದವುದೆನೆ ಬಾಜಿಸುವರ್ ವಾದಕರುಂ ಪಿಕ್ಕಿ ಗೀತಸಮಮುಮಾದಿಂಪಂ (ಅಂಕ್ರಕ್ಕಿ.

**ಪಿನ್ನೋ** (ಕ್ರಿ). ಹಿಂದೆ ಆದುದಕ್ಕಾಗಿ ವ್ಯಥೆಯನ್ನು ಹೊಂದು: ಪಶ್ಚಾತ್ತಾಪ ಪಡು: ಎಂತು ನೀನ್ ಪಿನ್‌ನೋಯದೆಯುಂ ಪೋಪೆ? (ಅಂಕಿಗೂ. ೧೧-೨೦೨). [ಪಿನ್ + ನೋ]

**ಪಿನ್ನೋಡು** (ಕ್ರಿ). ಹಿಂದಕ್ಕೆ ಹೊರಳಿ ನೋಡು; ಹಿಂದಿರುಗಿ ನೋಡು: ಎನಗೆ ಅಂಜಿಕೆಯೆಂಬುದಿಲ್ಲ. ಅದಱಿಂದೆ ನೀನ್ ಬಂದ ದಾರಿಯೊಳೆ ಪಿನ್ನೋಡದೋಡು! (ಅದ್ಭುತ್ರ. ೩೦-೧೧೧೮). [ಪಿನ್ + ನೋಡು]

**ಪಿಪಾಸ** (ನಾ). ನೀರಡಿಕೆ; ಬಾಯಾರಿಕೆ; ದಾಹ: "ನೀರಡಿಕೆ ತರ್ಷಂ ಪಿಪಾಸವೆನಿಸಿಕ್ಕುಂ" (ಚುಂಗರಾ. ೬೦-೦೯); ಸತ್ಯಗುಪ್ತನು ಆ ಜಲವನ್ನು ಹಿಂಗಿ ಪಿಪಾಸವನ್ನು ಸ್ವಲ್ಪ ಶಮನ ಮಾಡಿಕೊಂಡು ಸುತ್ತಲೂ ನೋಡುತಾ ಕೂತುಕೊಂಡನು (ಪೀಠಿಕಾ. ೩). [ಸಂ. ಪಿಪಾಸಾ]

**ಪಿಪಾಸಿತ** (ಗು). ೧. ಬಾಯಾರಿದ; ನೀರಡಿಸಿದ. (ನಾ). ೨. ಬಾಯಾರಿದವನು: ನೀರಡಿಸಿದವನು: "ತೃಷಿತಃ, ತರ್ಷಿತಃ, ಪಿಪಾ(ಸುಃ), ಪಿಪಾಸಿತಃ — ಈ ೪ ನೀರಡಿಸಿದಾತಂ" (ಹಲಾಯು. ೩೯-೨೦೭). [ಸಂ.]

**ಪಿಪಾಸು** (ಗು). ೧. = ಪಿಪಾಸಿತ ೧. (ನಾ). ೨. = ಪಿಪಾಸಿತ ೨: "ತೃಷಿತಃ, ತರ್ಷಿತಃ, ಪಿಪಾ(ಸುಃ), ಪಿಪಾಸಿತಃ — ಈ ೪ ನೀರಡಿಸಿದಾತಂ" (ಹಲಾಯು. ೩೯-೨೦೭). [ಸಂ.]

**ಪಿಪಾಸೆ** (ನಾ). ೧. ನೀರಡಿಕೆ; ಬಾಯಾರಿಕೆ; ತೃಷೆ: "ಉದನ್ಯಾ, ತರ್ಷಃ . . . ಪಿಪಾಸಾ — ಈ ೫ ನೀರಟ್ಕೆ" (ಹಲಾಯು. ೬೦-೨೦೯); ಅಂತಳವಿಗಬ್ಬಿದ ಪಿಪಾಸೆಯುಂ ಪಸಿವುಮಸವುಯಂಬಡೆದು . . . ನಿರ್ನೆಲನಱಸಿ . . . ನಡೆವಾಗಳ್ (ಲೀಲಾವ. ೬-೯೨ ವ). ೨. (ಅಲಂ) ತಿಳಿದುಕೊಳ್ಳಬೇಕೆಂಬ ಇಚ್ಛೆ, — ಬಯಕೆ: ಅಂತೆಯೆ ಮುಂದೆ ಅದು ಶಾಶ್ವತವಾದ ಆನಂದದ ಬಗೆಗೆ ಪಿಪಾಸೆಯನ್ನು ಹುಟ್ಟಿಸುತ್ತದೆ (ಋಹಾತೋ. ೦೬೩). [ಸಂ. ಪಿಪಾಸಾ]

**ಪಿಪಿಲೆ, ಪಿಪ್ಪಿಲ** (ನಾ). ಇರುವೆ; ಪಿಪೀಲಿಕೆ: ತರುಗಿರಿಯನೆಲ್ಲ ತಱಿಗೆಱೆಯುತೆ ಹಾಱಿಸುವ ಪುರುಕತರದ ಪ್ರಳಯಮಾರುತನೊಳಂ ಪಿಪಿಲೆಗಳು ಹರುಷದಿಂದಿದಿರೊಡ್ಡಿ ನಿಲ್ವ ಸತ್ವವದುಂಟೆ (ಪ್ರಭು. ೬-೦೨). ಪಿಪ್ಪಿಲ: ಉನ್ನತದ ಪಿಪ್ಪ [ಪಾಠಾಂ. ಪ್ಪ]ಲ ಪ್ರಸಾದದಗುಳು ಕಚ್ಚಿ ಬರೆ ಕಾಣುತದಕೆ ಬಸವಂ ಮನ್ನಣೆಯೊಳುಂ ಸಕ್ಕರೆಯ ತಳಿಯೆ (ಪ್ರಭು. ೭-೩೯).
[< ಸಂ. ಪಿಪೀಲ]

**ಪಿಪೀಲಕ** (ನಾ). ೧. ದೊಡ್ಡ ಕಪ್ಪು ಇರುವೆ; ಗೊದ್ದ. ೨. (ಅಲಂ) ಅಲ್ಪವ್ಯಕ್ತಿ; ಕ್ಷುದ್ರಜೀವಿ: ಈ ಸುಶರ್ಮಕ ಶಕುನಿ ಸಲೆ ದುರ್ವಾಸನಾದಿ ಪಿಪೀಲಕರು ತಮಗೇಸು ಬಲುಹುಂಟೈಸನೊದಗಲಿ ಎಂದರವರು (ಕುಮಾ.ಭ. ೦೩-೦೩). [ಸಂ.]

**ಪಿಪೀಲಿಕ** (ನಾ). ೧. (ಹೆಣ್ಣು) ಇರುವೆ: "ಪಿಪೀಲಿಕಂ ಕ್ಷುದ್ರಮೆಂದೆ ನಲ್ಕಿಱುಹೆಯಕ್ಕುಂ" (ಚುಂಗರಾ. ೯೯-೦೩); ಅಲ್ಲಿಗೆ ಮರ್ಕಟನಂತಾಗದೆ ಇಲ್ಲಿಗೆ ವಿಹಂಗನಂತಾಗದೆ ಈಚೆಯಾಲ್ಲಿಗೆ ಪಿಪೀಲಿಕನಂತಾಗದೆ (ಶೂನ್ಯಸಂ. ೧೧೧-೯೩೮); ಬೆಲ್ಲದ ರಸವಂ ದಾರವಂ ಪೂಸಿ ಪವಳದ ಛಿದ್ರ ಮೊದಲೊಳಿಟ್ಟು ಇಱುಂಪೆಗಳೊಳ್ ಠಾವಿನೊಳಿರಿಸಲ್ ಪಿಪೀಲಿಕಂಗಳು ದಾರವಂ ಪೆಱಗಣ ಛಿದ್ರಕ್ಕೆ ತೆಗೆತಪ್ಪುದುಂ (ಧರ್ಮಾಮೃ. ೩-೨೦ ವ); ಆ ಲಿಂಗದ ಮೇಲೊಂದು ಪಿಪೀಲಿ ನಿರೆ ಕಂಡು ಬೆದಱಿ . . . ಶೂಲಿ ಕರಂ ನೊಂದನೆಂದು ಬಳಲುತ್ತಿರ್ದಂ (ಪ್ರಭು. ೦೬-೭). ೨. (ಇರುವೆಗಳು ಸಂಗ್ರಹಿಸುವುವೆಂದು ಭಾವಿಸಲಾದ) ಒಂದು ಬಗೆಯ ಚಿನ್ನ. [ಸಂ.]

**ಪಿಪೀಲಿಕಾನ್ಯಾಯ** (ನಾ). ಇರುವೆಯಂತೆ ಸಾವಧಾನವಾಗಿ, ನಿರಂತರವಾಗಿ ಕೆಲಸವನ್ನು ಪೂರೈಸುವಿಕೆ: ಎನಿತೂ ಸೋಜಿಗದ ಬಿಲ್ಗಾರಿಕೆಯ ಕೆಯ್ತಗಳ ಕಂಡಗೆ ಪಿಪೀಲಿಕಾನ್ಯಾಯದಿಂ ತಾನುಮಾಂತೆಸಗಬೇಕೆಂಬ ಸ್ಫೂರ್ತಿಯಾದರೆ ತಪ್ಪೊ ಆಚ್ಚರಿಯೊ ಏನಂತೆ? (ಚಿತ್ರಕ. ೦೭-೧೧). [ಸಂ.]

**ಪಿಪೀಲಿಕಾಸ್ತ್ರ** (ನಾ). ಇರುವೆಗಳನ್ನು ಉತ್ಪತ್ತಿ ಮಾಡುವ ಒಂದು ಬಗೆಯ ಅಸ್ತ್ರ: ಕೊಟ್ಟು ತೆಗೆದೆಚ್ಚಂ ಪಿಪೀಲಿಕಾಸ್ತ್ರವನೊಡನೆ ಟೆಟ್ಟಯಿಱುವೆ ಮುತ್ತಿದುವು ಘಾಸೆಗಳು (ಕೃಷ್ಣಾ. ೨೯-೩೯). [ಸಂ.]

**ಪಿಪೀಲಿಕೆ** (ನಾ). ಇರುವೆ: ಕ್ರಿಮಿಪಿಪೀಲಿಕಾಭ್ರಮರಮನುಷ್ಯಾದಿ ವಿಭೇದಮಾಗಿ ದ್ವೀಂದ್ರಿಯಾದಿ ತ್ರಸಂಗಳ್ (ಸುಕುಮಾ. ೮-೬ ವ); ಯುಮಂದಂಡಮದೇಂ ಮಾಣ್ಬುದೆ ಪಿಪೀಲಿಕಾಪಥವಿಧಿಯುಂ (ಜಗ. ೨-೩೯); ಧಾರುಣಿಯೊಳು ಪಿಪೀಲಿಕೆಯು ವಿಸ್ತಾರದಲಿ ಮಾಡಿದ ಮನೆಯ ಕಾಳೋರಗನು ಹೊಗುವಂತೆ ರಿಪುಕುಂತೀಕುಮಾರರು ವೈರದಲಿ ಸಪ್ತಾಂಗವನು ಕೈಸೂಱೆಗೊಂಬರು (ಕುಮಾ.ಭ. ೮-೦೯). [ಸಂ. ಪಿಪೀಲಿಕಾ]

**ಪಿಪ್ಪರಗೆ** (ನಾ). ಒಂದು ಊರಿನ ಹೆಸರು; p ಬಿಜಾಪುರಜಿಲ್ಲೆಯ ಈಗಿನ ಹೂವಿನ ಹಿಪ್ಪರಗೆ: ಬಾಸುರಿಕೋಡು ಇಂಗಳಿಸರ ಬಾಗೆವಾಡಿ ಸಾಮಳವಾಡಿಗೆ ಒತ್ತುವೊಡಿಗೆ ಮಧ್ಯವತ್ತಿ [ರ್] ಪಿಪ್ಪರಗೆ ನಾಮಗ್ರಮೋ: (ಕ್ವಿಇ. XI-i. ೮-೨೦: ೩೬೭); [ಪೊ]ಲದ ಸಾಳವಾಡಿಗೆಯ x x ಯುಂ ಪಡುವ ಪಿಪ್ಪರ[ಗೆ]ಯ ಸೀಮೆಯುಂ ಕೆಂಕ ಸರ್ವ್ವ[ನಮ]ಸ್ಯಂ ಬಿಟ್ಟ ಎರಿಯ ನೆಲ ಮತ್ತರ್ ೫೫ (ಕ್ವಿಇ. XI-i, ೯೮-೨೭; ಸಂ: 1062). [?]

**ಪಿಪ್ಪಲ, ಪಿಪ್ಪಳ** (ನಾ). ೧. ಒಂದು ಬಗೆಯ ಮರ; ಅರಳಿ; ಅಶ್ವತ್ಥ: "ಶ್ರೀವೃಕ್ಷಃ, ಪಿಪ್ಪಲಃ, ಅಶ್ವತ್ಥಃ, ಬೋಧಿಃ — ಈ ೪ ಅರಳಿ" (ಹಲಾಯು. ೩೩-೯೩); "ಪಿಪ್ಪಲಂ ಬೋಧಿಯಶ್ವತ್ಥಮೆನಲರಳಿಯಕ್ಕುಂ" (ಚುಂಗರಾ. ೩೯-೧೧); ಉರುಪಯೋಧರಬಿಲ್ವವನು ಹೊಯ್ದೊರಸಿ ಕದಳಿಯ ನುಣ್ದೊಡೆಯನಿಟ್ಟೊರಸಿ ರಮಿಸಿತು ವನಸಿರಿಯ ಪಿಪ್ಪಲದಳಂಗವಲಿ (ಕುಮಾ.ಭ. ೨೦-೩೦); ಡಾಲಿ ಜೇನೊಡವಿಪ್ಪ ಪಿಪ್ಪಲ ಮಾಲೆಯುವ ನೋಡಬಲೆ (ಕೂಟಾ. ೩-೦-೨೮); ಖದಿರು ಬಿಲ್ವ ತಮಾಲ ತಾಡಸಿ ಬಿದಿರು ಬೆತ್ತ ಪಲಾಶ ಪಿಪ್ಪಲ ಮಧುಕ ಹೊನ್ನ ಕದಂಬ ಗುಗ್ಗುಳ ನಾಗ ಪುನ್ನಾಗ (ಜಾತ್ರ. ೧೧-೯). ೨. ನೀರು; ಜಲ. ೩. ಜವುಗಿನ ನೆಲ, — ಭೂಮಿ. ೪. ಮೈಲಿಗೆ. ೫. ಯತಿ; ಸಂನ್ಯಾಸಿ: "ಕಾಡಭೇದಂ ಶ್ಲಕ್ಷ್ಣ ಯೋಗೀಶ್ವರ ಜಲ ಮಲಿನಂ ಪಿಪ್ಪಲಾಖ್ಯಾನಂ" (ನಾನಾ. ೩೩). ಪಿಪ್ಪಳ: ೧. ನನೆಪೊತ್ತಿತ್ತದಿಗರ್ಿಂತೆ ಪಲ್ಲವಿಸಿದತ್ತುದ್ಯತ್ತವಾಳಂ ಕರಂ ಕೊನರೇಱತ್ತುರು ಪಿಪ್ಪಳಂ . . . ಘನತಾರಾಕಾರಭಾರಮಂ ಭಾರವಕಂ ಪೆತ್ತತ್ತು ನೊಗ್ಗುಪ್ಪದಿಂ (ಜಾರ್ಟ. ೦೯-೨೮); ಸಾಳ ರಸಾಳ ತಾಳ ತಿಲಕಾಮಳ ಪಿಪ್ಪಳ[ಪಾಠಾಂ. ಲ] . . . ತರುಸಂತತಿಯಿಂ ವನಬ್ಬಂದವೊಪ್ಪುಗುಂ (ಹರಿವಂ. ೧-೩೩). ೬. ಒಂದು ಊರಿನ ಹೆಸರು: ಪಿಪ್ಪಳಗ್ರಾಮನಾಮಾಗ್ರಹಾರಮುತ್ಪನ್ನ: (ಎಪಿ.ಕ. ೦೯೨೧, ೧೧-೧೯೩, ೨೩೭). [ಸಂ.]

**ಪಿಪ್ಪಲಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಬೇರು; ಹಿಪ್ಪಲಿ; ಬಾಲಮೆಣಸು: "ಕೃಷ್ಣಾ, ಉಪಕುಲ್ಯಾ, ವೈದೇಹೀ, ಮಾಗಧೀ, ಪಿಪ್ಪಲೀ, ಕಣಾ — ಈ ೬ ಪಿಪ್ಪಲಿ" (ಹಲಾಯು. ೧೧೨-೯೬೦); ಚಕೋರಪಂಜರಂಗಳೊಳ್ ಪಿಪ್ಪ[ಪಾಠಾಂ. ಪ್ಪಿ]ಲೀತಂಡುಲಂಗಳ ಬಱಕಂ ಸೂಸಲುಂ (ಕಾದಂಬ. ೧೧೧೬); ಪಿಪ್ಪಲಿ ಚಲ್ಲಗಾಯ್ಗಳ್ ಮೆಣಸು ಮಾಗುಳಿಮೇವೊರ್ಗಳಿವುಲ್ಲದೇಲಿ . . . ಅರಸಾಮಫಲಂಗಳಾದಿಯಾದು ಪ್ಪನ ಕಾಯ್ಗಳಂ ಮಂಗಸಂಗಿಪ್ಪವಸಿಕ್ಕಿದನಬ್ಬಪಕ್ರದೊಳ್ (ಲೀಲಾವ. ೩-೩೩); ಜ್ವರವೇಱುದು ವಾಣ್ಗಂ ಪಿಪ್ಪಲಿಗೂಡಿದ ಪಾಲ್ ಕಾದಾಱೆ ಕೊಡಿಗೆ ಶರ್ಕರೆಯಿಂದಂ (ಕಲ್ಯಾ.ಕಾ. ೩-೯೨). [ಸಂ].

**ಪಿಪ್ಪಲಿಗ** (ನಾ). ಪಿಪ್ಪಲಿಯನ್ನು ಮಾರುವವನು; ಬಾಲಮೆಣಸಿನ ವ್ಯಾಪಾರಿ: ತಂಬುಳಿಮಂ ಕೊಳ್ವಂ ಮಾಱುವಂ ಪೇಱ್, ತಂಬುಲಿಗಂ. ಏವಂ ದವಸಿಗಂ, ಗಂದಿಗಂ, ಮೆಣಸಿಗಂ, ಪಿಪ್ಪಲಿಗಂ (ಕಲ್ಯಾ.ಕಾ. ೯೦೯ ಪ್ರಯೋ). [ಪಿಪ್ಪಲಿ + -ಗ]

**ಪಿಪ್ಪಲಿಗಾಯಿ** (ನಾ). ಹಿಪ್ಪಲಿಕಾಯಿ : ಸುಂಟೆ ಕಣಗಿಲೆ ಪಿಪ್ಪಲ[ಲಿ]ಗಾಯ ಕೊಯ್ದರು ನಂಬೆಯ ಕಳಸಣ್ಣಳೊಡನೆ (ಮೋಹತ. ೯-೬೦). [ ಪಿಪ್ಪಲಿ + ಕಾಯಿ ( ಕ ಽಯ್ )]

**ಪಿಪ್ಪಲೀಪತ್ರ** (ನಾ). ಅರಳಿಯ ಎಲೆ.–ಪತ್ರ : ಪಿಪ್ಪಲದಳ : ಅಯಃಪಿಪ್ಪಲೀಪತ್ರಪಟಲಾಂಚಿತಮುದ್ಯತ್ಪಾದಪೀಠಾನ್ವಿತಮತಿಧವಳ ಪ್ರಚ್ಛದಾಚ್ಛಾದಿತಂ ವಿ[ಸ್ತೃತಮಾದುತ್ತುಂಗಗರ್ಭೋಚಿತಶಯನ]ದೊಳಾ ಕಾಂತೆ ಬೆಸ್ಗೊತ್ತುಮಾದಳ್ (ಕಾರಂಕೃ. ೩೯೯). [ಸಂ.]

**ಪಿಪ್ಪರೆ** (ನಾ). = ಪಿಪ್ಪಲ ೧ : ಪಿಪ್ಪರೆ ಅರಳಿಮೇರು ಫಲಾಸೇನ ಮತ್ತಗಮೇರು (ಕೃತಿಕಾ. ೬-೬). [ ಸಂ. ಪಿಪ್ಪಲ ]

**ಪಿಪ್ಪಳ** ' ಪಿಪ್ಪಲ ' ನೋ.

**ಪಿಪ್ಪಿಲ** ' ಪಿಪಿಲೆ ' ನೋ.

**ಪಿಪ್ರು** (ನಾ). ಮಚ್ಚೆ ; ಗುರುತು : " ಜಟುಲಃ . . . ಪಿಪ್ರುಃ, ತಿಲಕಃ, ತಿಲಕಾಲಃ — ಇ ತಿಲಕಾಕಾರಗಳಾದ ಬಿಳಿಮಚ್ಚೆಗಳ ಪೆಸರುಗಳು, ಸಂಗಾತೀಮಚ್ಚೆ, ಹುಟ್ಟುಮಚ್ಚೆ "(ಸಿದ್ಧಾಂತಿ. ೦೬೭). [ಸಂ.]

**ಪಿಮ್ಮಡ, ಪಿಮ್ಮಡಿ, ಹಿಂಬಡ, ಹಿಮ್ಮಡ, ಹಿಮ್ಮಡಿ, ಹಿಮ್ಮಡು** (ನಾ). ೧. ಅಡಿಯ ಹಿಂಭಾಗ ; ಪಾದದ ಹಿಂಬದಿ : ಧತಿ ಕೆಡದೆ ಮನದ ಬಲ್ಪುಡುಗದೇ ಪಿಮ್ಮಡದೊಳತಿಧೈರ್ಯದಿಂ ನಡೆದು ಪೋಪಂ (ಅರಾಶ. ೨-೯-೫೬): ಪಿಮ್ಮಡದಿಂದೆ ಕೆಲವು ದೂರಂ ನಡೆದು ತುದಿಗಾಲೊಳನಿತು ದೂರಂ ಬರುತೆ ಕಾಲೋರೆಯಿಂದಡಿಯಿಡುತೆ ನಡೆವುತಿರೆ (ಶಾಸೋತ್ರ. ೭-೫೬): ಚಂದದ ಪಿಮ್ಮಡ ಸೊಬಗಿಂತ ಬೆರಳುಗಳಿಂದೆಸವುವ ಪಜ್ಜೆಯವನ (ನಾಗಕು. ೨೫-೪೫). **ಪಿಮ್ಮಡಿ :** ೧. ತಲೆಕೆಳಗಾಗಿ ಬಿಟ್ಟದಲಗೊಡಿ‌ಯನರ್ಚಿ ಬೀಟ್ ಪಿಮ್ಮಡಿಯುಂ ಪಱಿಯೆ ಪೆಱಗಂ ನೋಡುತಂ ಪುವ ಪೆರ್ಬುಲಿಟುವಂ . . . ಕಂಡು (ಲೀಲಾಶ. ೫-೦೧೯ ಪ). **ಹಿಂಬಡ :** ೧. ಮೊದಲು ನಾವು ಸ್ಥಿರಾಸನದಲ್ಲಿ ಕೂಡಲು ಪ್ರಾರಂಭಿಸಬೇಕೆಂದು ಹೇಳಲಾಗಿದೆ . . . ಇದರಲ್ಲಿ ಎರಡು ರೀತಿಗಳಿರುವುವು : ನಾವು ಬೇಕಾದರೆ ಎಡದ ಹಿಂಬಡವನ್ನು ಒತ್ತಬಹುದು ಇಲ್ಲವೇ ಬಲದ ಹಿಂಬಡವನ್ನು ಒತ್ತಬಹುದು (ಕರಶ. ೯೪) ಅಂಗುಷ್ಠ ಎಂಬುದಕ ಮುಂದ ಪಾದವ ಬರಿ ಹಿಂಬಡಕ ಕಾಲು ಭೇದಾದ ನಡ ಧಡ . . . ಹತ್ತು ಶಿರಗಳ ಬರೆದಾಳು ಮುಂದೆರಡು ಪಾವ ಬರೆವಳು (ಕಹಾಶ. ೨೬೦). **ಹಿಮ್ಮಡ :** ೧. ತವೆ ಹಿಮ್ಮಡಂಗಳು ಮಿಗುತ ಘನವೇಣಿಲತೆ (ಕಂಠ. ೬-೯೩); ಅಣಿಯರವೆತ್ತ ಹಿಮ್ಮಡದ ಎಣೆತೊಣೆಯಿಲ್ಲದಡಿಯ ರಂಗಾಯೊಂಬ [ರ]ಮಣಿ ಪ್ಯದೋರ್ವಳಿನ್ನೆಂದೊ (ಕಕಾಂ. ೨೨-೧೧); ಸೀಲ ಆದಿನನು ತನ್ನ ಹಿಮ್ಮಡದಿಂದ ಸಾವಕಾಶವಾಗಿ ಎದುರಿಗೆ ತಿವಿದನು (ಶಂಗಾಹ. ೨). ೨. ಚಪ್ಪಲಿಯ ಹಿಂಭಾಗದ ಅಟ್ಟೆ : ಆ ಚಪ್ಪಲಿಗಳು ಕೊಂಚ ಅವನತಿಯನ್ನು ಹೊಂದಿದ್ದುದರಿಂದ, ಮತ್ತೆ ಅವಕ್ಕೆ ಹಿಮ್ಮಡ ಬಿಟ್ಟಿಸಿ ಹೊಳವು ಕೊಡಿಸಿದ್ದ (ಕುಂಗಾಕ. ೦೦); ಒಕ್ಕಲಿಗನು ಬಾಗಿಲಲ್ಲಿ ಎತ್ತರವಾದ ಹಿಮ್ಮಡದ ತನ್ನ ಮೆಟ್ಟುಗಳನ್ನು ಬಿಟ್ಟು ಒಳಕ್ಕೆ ಹೋದನು (ಕಥ್ರ. ೦). **ಹಿಮ್ಮಡಿ :** ೧. ಅಟ್ಟ ಹರಿದು ಹರಿಯ ಹಿಮ್ಮಡಿಯ ಹಿಡಿದು ಕೊಂಡು ಬಿಟ್ಟನು ಬಿಟ್ಟಿಯಾಳಿದೆ ರುಪ್ರನೇಬವನ (ಸಕಪ. II. ೨೯೬–೨೬); ವೇಣೀವಲ್ಲರಿ ತುಡುಕೆ ಹಿಮ್ಮಡಿಯ (ಕಂಸಪ. ೯-೬೬); ಹಿಮ್ಮಡಿಗಳಲ್ಲಿರುವ ಸುಳಿಗಳೆರಡು ಸ್ವಾಮಿಗೆ ನಾಶಕರಗಳಾಗುವುವು (ಸೌಗಂಧಿ. ೬೦೭-೨೦). ೨. ರಬ್ಬರಿನ ಹಿಮ್ಮಡಿಯುಳ್ಳ ಮೆಟ್ಟು . . . ಪಾದರಕ್ಷೆಗೆ ಬೇಕಾಗುವ ಹಾಳೆ, ಹಿಮ್ಮಡಿ, ಬಾರು–ಎಲ್ಲವನ್ನೂ ರಬ್ಬರಿನಿಂದ ಮಾಡಲು ಬರುತ್ತದೆ (ರಾಂಶ್ರ. I. ೫೯): ಕೂಲಿಂಗ್ ಗ್ಲಾಸ್, ಹಿಮ್ಮಡಿ ಎತ್ತಿದ ಎಕ್ಕಡ . . . ಇನಾಕಹಾಕುತ್ತವೆ (ಕವ್ಯಾಕು. ೬೦೫). **ಹಿಮ್ಮಡು :** ೧. ಎಪಾದಿಕೆ–ಕಾಲ ಹಿಮ್ಮಡು ಒಡೆಯುವ ರೋಗ (ಗಂಗಾಕು. ೨೯೧). [ಪಿ (<ಪಿನ್) + ಮಡ್ಡು]

**ಪಿಮ್ಮಡಿ** ' ಪಿಮ್ಮಡ ' ನೋ.

**ಪಿಮ್ಮೆಟ್ಟು, ಹಿಮ್ಮೆಟ್ಟು** (ಕ್ರಿ). (ಹೆದರಿ) ಹಿಂದಕ್ಕೆ ಸರಿ ; ಹಿಂಜರಿ : ವಸುಧಾಚಕ್ರಂ ಪದಾಕ್ರಾಂತಿಯಿನದಿರೆ ಭುಜಾಕ್ರಾಂತಿಯಿಂ ದಿಗ್ಗಜಂಗಳ್ ದೆಸೆಯಿಂ ಪಿಮ್ಮೆಟ್ಟೆ (ಜಗಪ. ೯-೬೩); ತೇರೊಳ್ ಪೂಡಿದ ತೇಜಿಗಳ್ ಸರಲ ಕೋರ್ಬುಂಗಳ್ಗೆ ಪಿಮ್ಮೆಟ್ಟೆ (ಕಬ್ಬಿಗ. ೨೬೩); ಇಟ್ಟಡಿಯ ನೆಟ್ಟನಿನಿಸಂ ಪಿಮ್ಮೆಟ್ಟೆ ದಟವಟ್ಟಡರೆಯಟ್ಟಳಿವರಂ ಕೈಗೊಟ್ಟು ಪುಯಲಿಟ್ಟರ್ (ಜಸಪ. ೨-೯೩). **ಹಿಮ್ಮೆಟ್ಟು :** " ಹಿಮ್ಮೆಟ್ಟಿತಕ್ಕೆ ಪಡಮೆಟ್ಟಿತೆಂದಕ್ಕ " (ಕಬ್ಬಿ. ೬೯); ಇಂತಿಱಿದು ಕೈವಿಟ್ಟು ಪಾತಕಂ ಹಿಮ್ಮೆಟ್ಟೆ ಮುಂತೆ ಹೂವಾಳೆನೆರಸಿ ಶಂಕರಂ ನಿಜ ಪುಟ್ಟಿ(ಶಕಾರ. ಲೀ. ೧೨೩-೧೫); ದುರ್ಬಲನೊಡನೆ ಭಂಗವಾಗ್ಯೆ ತನ್ನನು ಸುಗಲೆನುತ ಹಿಮ್ಮೆಟ್ಟ ಮುಮ್ಮಲಮಾಱುಗಿದನು ಭೀಮ (ಕುಜ್ಞಾಅ. ೫೦–೨೦); ಹಣ ದಾಯ ಬಡಿಯಾತು ಸೋತು ಹಿಮ್ಮೆಟ್ಟಿತು ಗುಣವು (ಕಂಹಾಕ. ೨೦೩-೨). [ ಪಿ (<ಪಿನ್) + ಮೆಟ್ಟು ]

**ಪಿಮ್ಮಯ್, ಹಿಮ್ಮಯ್** (ನಾ). ೧. ದೇಹದ ಹಿಂಭಾಗ. ೨. ಹಿಂದಿನ ಜನ್ಮ ; ಪೂರ್ವಜನ್ಮ : ವಿಷ್ಣುದೂತರಾ ತುಂಬುರನಂ ಕೆಯ್ದುಡಿದು ಕರೆದುಯ್ಯೆ, ಪಿಮ್ಮಯ್ಯೊಳೀಂ ನೋಂತನೋ ! ಎನುತೆ ಬಲ್ಮಗೆಯೊಳ್ ಪಂಬಲಿಸಿ (ಅಭ್ಯಕ. ೨೦-೦೧). **ಹಿಮ್ಮಯ್ :** ೧. ಹಿಮ್ಮಯ್ಯ ಮುಮ್ಮಯ್ಯ ಶೋಧಿಪೆಯಲ್ತೆ ನೀನೊಮ್ಮೆ ಪ್ಯದೋಱೆಂಬರು (ಕರಶ. ೯೨-೦೭೮). [ ಪಿಂ (<ಪಿನ್) + ಮೆಯ್ ]

**ಪಿಮ್ಮೊನೆದೋಱು** (ಕ್ರಿ). ಹಿಂಭಾಗದಲ್ಲಿ ಮೊನೆದೋರು ; ಹಿಂದುಗಡೆಯಲ್ಲಿ ತುದಿ ಕಾಣಿಸು : ಬಿಮ್ಮನೆ ಬಿಗುಪೇಱೆ ಎಱೆ ಪೊಣ್ಮುವ ಮೊಲೆಗಳ್ ಪಿಮ್ಮೊನೆದೋರ್ಪನೆಗಂ ಮನದುಮ್ಮಹದಿಂ ಬಿಗಿದು ಬಿಗಿದು ಬೆಂಡೇಱುವೆನೋ (ಕಕಪ. ೬-೨೦೯). [ ಪಿ (<ಪಿನ್) + ಮೊನೆದೋಱು ]

**ಪಿಮ್ಮೋರೆ** (ನಾ). ೧. ಹಿಂದಕ್ಕೆ ತಿರುಗಿದ ಮುಖ. ೨. ಹಿಂದಕ್ಕೆ ಮುಖ ಮಾಡಿದವನು.

**ಪಿಮ್ಮೋರೆಯರ್** = ಹಿಂಜರಿಯುವವರು : ಪಿಮ್ಮೋರೆಯರ್ ಸ್ವಾರ್ಥದಲ್ಲಿಯುತ್ಕಾಸಕ್ತರನರ್ಥದೊಳ್ ಭಯದೊಳ್ ತಲ್ಲಣಿಸರ್ (ಸೌಕಂದ. ೦೯–೯೦). [ಪಿ (<ಪಿನ್) + ಮೋರೆ (<ಮೋಱೆ) ]

**ಪಿಯಣ** (ನಾ). ಒಬ್ಬಾತನ ಹೆಸರು : ಪಿಯಣನಾಳುತ್ತಿರೆ ತೈಲಪದೇವಂ ರಾಜ್ಯಂಗೆಯೆ . . . ಬನೂರಮ್ಮ ಮಾಡಿಸಿದ ಕಮ್ಮ (ಎಕ. VIII. ಸೊರಬ. ೫೨೯-೮ : 986). [?]

**ಪಿಯಾನೊ** (ನಾ). ಹಾರ್ಮೋನಿಯಂನಂತೆ ನುಡಿಸುವ ಒಂದು ಬಗೆಯ ವಾದ್ಯ : P " ಹಲಗೆಯ ಮೇಲೆ ಅಳವಡಿಸಿರುವ ಕೀಲಿಕೈಗಳನ್ನು ಒತ್ತುವುದರಿಂದ ಆಯಾ ಸನ್ನೆಗಳು ಮೀಟಲ್ಪಟ್ಟು ಅವಕ್ಕೆ ಹೊಂದಿಸಿರುವ ಸುತ್ತಿಗೆಗಳು ತಂತಿಗಳನ್ನು ಬಡಿದು ನಾದವುಂಟುಮಾಡುವ. (ಮತ್ತು ತಂತಿಗಳ ಸ್ಪಂದನವನ್ನು ನಿಲ್ಲಿಸಲು ತಕ್ಕ ತಡೆಗಳನ್ನು ಅಳವಡಿಸಿರುವ) ಮತ್ತು ಸಾ., ಧ್ವನಿಗುಂಫನವನ್ನು ತಕ್ಕಂತೆ ಅನುಗೊಳಿಸಲು ಕಾಲೊತ್ತುಗಳಿರುವ. ಒಂದು ವಾದ್ಯ" (Piano. ೩೦೯೭) : ಮಧ್ಯವಯಸ್ಸಿನ ತೋರವಾದ ಹೆಂಗಸು ಮಿರುಗುವ ಬಿಗಿಯಾದ ಬಟ್ಟೆಯನ್ನು ತೊಟ್ಟು ಪಿಯಾನೊ ಬಾರಿಸುತ್ತಿದ್ದಳು (ಹೂಬಕ್ಕಿ. ೨೯೦); ಶೃತಿತಪ್ಪಿದ ಪಿಯಾನೊ, ಗೋಡೆಯನ್ನಲಂಕರಿಸಿದ್ದ ಹಡಗಿನ ಹಳದಿ ತಿರುಗಿದ ಚಿತ್ರಗಳು ಎಲ್ಲವರ ಬಗೆಗೂ ಒಂದು ಅಭಿಮಾನ ಮನೆ ಮಾಡಿತ್ತು (ಅಳಿ. ೬೯) ; ಭಾರತದ ವಾದ್ಯದ ಅನುಕರಣ ಮಾಡಿರುವ ಈಗಿನ ಪರದೇಶವಾದ್ಯವಾದ ಪಿಯಾನೋ (ಸಂಗೀತ. ೦೨೦). [ ←ಇಂ. Piano ]

**ಪಿಯಾಲ** (ನಾ). ಒಂದು ಬಗೆಯ ಸಸ್ಯ ; ಪ್ರಿಯಾಲ : " ಮೊಱಿಲೆ–ರಾಜಾದನಂ, ಪಿಯಾಲಃ, ಸನ್ನಕದ್ರುಃ, ಧನುಃಪಟಃ " (ಶಾಶಾ. ೯). ಪ್ರಿಯಾಲ ' ಪರಾ. [ ಸಂ. ]

**ಪಿರಂಗಿ** 'ಫಿರಂಗಿ' ನೋ.

**ಪಿರಂಗಿಗೆಲಸ** (ನಾ). ಪಾಶ್ಚಿಮಾತ್ಯರ ಕೌಶಲ,—ಕುಶಲಕೆಲಸ: ಕುರುಮಾಡದ ಮೊತ್ತಮೊದಲ ನೆಲೆಯೋಜಾಲ್ಲಿ ರಂಗುವಡೆದ ಪಿರಂಗಿಗೆಲಸದ ಕಾಲಾಂತರದೊಳಮರಿಸಿದ ಸವಡಿಗನ್ನಡಿಗ್ರೊಟಿಯಿಯೆಡೆಯುಂ ಪೋಲ್ದಿ (ಕಳಿ. ೬-೧೯೯ ಕ). [ ಪಿರಂಗಿ (<ಫಿರಂಗಿ)+ಕೆಲಸ ]

**ಪಿರಕಣೆ, ಪಿರುಕಣೆ** (ನಾ). ಒತ್ತಾಯವನ್ನು ನಿರೀಕ್ಷಿಸಿ ಆಡುವ ಮಾತು; ಬಲವಂತದ ನಿರೀಕ್ಷೆಯಿಂದ ಕೂಡಿದ ನಡವಳಿಕೆ: ಈ ಹೆಂಗಸರ ಬಲವಂತದ ಮಾತುಗಳೂ ಪಿರಕಣೆಗಳೂ ರಾಮಯ್ಯನವರ ಕಿವಿಗೆ ಬಿತ್ತು (ಅರಿದು. ೦೦೩). ಪಿರುಕಣೆ: ಏನೂ ಬರದೆ ನಾಟಕದಲ್ಲಿ ಪಾರ್ಟ್ ಮಾಡೋದಕ್ಕೆ ಹೊರಟಿದ್ದೀಯಾ—ಹಾಡು. ಇರಲಿ ಈ ಪಿರುಕಣೆ (ಕದಿಲಾ. ೨೪). [ ? ]

**ಪಿರಚಲು** (ನಾ). (ಮೇಲೆ ಮೇಲೆ ಬರುವ ರೋಗದಿಂದ ಉಂಟಾದ) ತೊಂದರೆ; ಕಾಟ; ಹಿಂಸೆ: ಮಧ್ಯ ಮಧ್ಯ ಕಾಹಿಲೆ ಬೇರೆ ಬೀಳುತ್ತಿದ್ದರು. ಕಾಹಿಲೆಯ 'ಪಿರಚಲು' ಬೇರೆ ಗಂಟುಬಿತ್ತು (ಹಾಯುಕ. ೦೬); ನನಗೆ ಕೆಟ್ಟ ಪಿರಚಲು ಬಂದು ಬಿಟ್ಟಿದೆ (ಗೃಹಂ. ೨೬೩). [ ? ]

**ಪಿರದು** (ನಾ) ಪಿರ್ರೆ; ನಿತಂಬ: ಅವನ ಸ್ತ್ರೀಯು ಕೃಶವಾದ ನಡುವುಳ್ಳವಳು. ದೊಡ್ಡದಾದ ಪಿರದುಗಳುಳ್ಳವಳು (ಬುಳಸ. ೬).
[ ದೇ. ‖ ತೆಲು. ಪಿರುದು, ಪಿಱುದು ]

**ಪಿರಮಿಡ್ಡು** (ನಾ). "(ಮು. ಪುರಾತನ ಈಜಿಪ್ಟಿನಲ್ಲಿ) ಬಹುಭುಜಾಕೃತಿಯ ಅಥವಾ (ಸಾ.) ಚೌಕನೆಯ ತಳಹದಿಯ ಮೇಲೆ ಪಕ್ಕಗೋಡೆಗಳು ಇಳಿಜಾರಾಗಿರುವಂತೆಯೂ ಮೇಲಕ್ಕೆ ಹೋಗುತ್ತ ಹೋಗುತ್ತ ಕೊನೆಗೆ ಸೂಚ್ಯಗ್ರವಾಗಿ ಮುಗಿಯುವಂತೆಯೂ ಕಲ್ಲು ಮೊ.ಗಳಿಂದ ರಾಜರ ಸಮಾಧಿಗಳಾಗಿ ಕಟ್ಟಿದ ಸ್ಮಾರಕ ಕಟ್ಟಡ: ಗೋಪುರಾಕೃತಿಯ ಕಟ್ಟಡ" (Pyramid ಇಂಕಿ); P ಇದು ಪ್ರಪಂಚದ ಏಳು ಅದ್ಭುತಗಳಲ್ಲಿ ಒಂದು ಎಂದು ಪರಿಗಣಿತವಾಗಿದೆ: ಸುಮಾರು ಕ್ರಿ.ಪೂ. ೨೯೦೦ರಲ್ಲಿ ಜಗದ್ವಿಖ್ಯಾತವಾದ ಈಜಿಪ್ಟಿನ ಪಿರಮಿಡ್ಡುಗಳಲ್ಲಿ ಒಂದಾದ ಗಿಸೆಯ ಪಿರಮಿಡ್ಡು . . . ಕಟ್ಟಲ್ಪಟ್ಟಿತು (ಕಕಿಕ. ೨); ದ್ರಾವಿಡನಮೂನೆಯ ಶಿಖರವು ಅಡ್ಡಡ್ಡವಾದ ಹಂತಗಳಿಂದ ಕೂಡಿ, ಪಿರಮಿಡ್ಡಿನ ಆಕಾರವನ್ನು ಹೊಂದಿದೆ (ಹಾಕಿದ. ೯೯೨).
[ ← ಇಂ. Pyramid ]

**ಪಿರಿ$_1$, ಹಿರಿ$_1$** (ಕ್ರಿ). ೧. ತರಿ; ಕೀಳು; ತರಚು: ಪಿರಿದ [ಪಾಠಾಂ. ತಱಿದು, ಬಿರಿತ, ಬಿರಿದ] ತುಪ್ಪುಳಿನ ಕೊರಳ ಏಡುಕಿನ . . . ಪತಿಯು ಸುತ್ತಲು ತಿರುಗಿ ಚೀಱುವ ವಿಹಗಸತಿಯನು ಕಂಡನಾ ಮುನಿಪ (ಕೊಕಾ. ೦-೨-೦೯). ೨. ಹೊರಕ್ಕೆ ಎಳೆ; ಸೆಳೆ; ಕಿತ್ತು ತೆಗೆ: ಸೂರಾಂಬಿಕೆಯ ಮನೆಯ ಕೇರಂ ಕೆಡಪಿ . . . ತೊನೆದು ಸೂರಂ ಸೇರಿ ಪಿರಿಯುತ್ತುಮಂತ್ಯಜನನನುನಯದೆ ಪಿಡಿದು ಪೆಡಗುಡಿಗಟ್ಟಿ ತನ್ನಿಮೆಂದೆನಸುಮಿರದಿಂತು ನುಡಿಯುತ್ತಿರ್ಪ ವೇಳೆಯೊಳ್ (ಅಪು. ೦-೬-೨೩); ಒಱೆಯಿಂದ ಮಿರ್ಪಯ ಖಡ್ಗಮನ್ ಪಿರಿದು (ಅಕೃಕ್ಕಾ. ೨-೪೬). ೩. ಹಾಳಾಗು; ನಾಶವಾಗು; ಇಲ್ಲವಾಗು: ಸುರಚಾಪಂದೋಲೆ ವಿದ್ಯುಲ್ಲತೆಗಳ ತೆಱದೋಲ್ ಮಂಜುವೋಲ್ಮಿಂಚಿನೋಲ್ ಬೇಗಂ ಪಿರಿಗುಂ ಶ್ರೀರೂಪಲೀಲಾಧನವಿಭವಮಹಾರಾಶಿಗಳ್ನಿಲ್ಲವಾಗ್ಗ್ರಂ (ಎಳೆ. II. ೮೬-೦; ಸು. ೭೦೧); ತಾಂ ಬಱಿದೆಂತು ಬಂದನೀ ಬಿಸಿಲೊಳಿದೇಕೆ ಮೆಯ್ಯರಿಸಿನಂ ಪಿರಿದಕ್ಕಟ ತಳ್ತ ಬಾಸುಟುಂ ಮಸಿಯುಮೆ ನೋಂದನೆಂದು ನುಡಿದಳ್ ತಡೆದೊಯ್ಯನೆ ಬಂದ ನಲ್ಲನಂ (ಲೀಲಾವ. ೨-೩೭); ಆ ಸುಖಾನುಭಾಸವಾಂ ಪಿರಿಗುಂ (ಮೂಱುಕಾ. ೦೪೭-೦೨೩೯). ಹಿರಿ$_1$: ೨. ಉರುಗದೆಯಿಂದ ಕೌರವನ ತೊಡೆಗಳನು ಮುಱಿದ ದುರುಳ ದುಶ್ಶಾಸನನ ಕರುಳುಗಳ ನೀ ಹಿರಿದೆ (ಪಾಂಡ. ೩೦-೨); ಹಿಂದ ಕತ್ತಿಯೊಡನೆ ಅರಸನೂ ಪ್ರಚ್ಛನ್ನವಾಗಿ ಅವಳ "ಬೆನ್ನೊಳೆ ಪೋದಂ ದೋಷದ ಬೆನ್ನೊಳೆ ಸಂಧಿಸುವ ದಂಡದಂತೆ" (ಗಾಕೃಕ. ೬೦); ತಗ್ಗಿನ ಸಲುವಾಗಿ ನೀರಿನ ಕುದಿಯನು ತಣ್ಣೀರು ಸುರಿಯುವ ಬದಲು ಒಲೆಯೊಳಗಣುರಿಯುವ ಸೌದೆಯೊಳೆರಡನು ಬೇಗನೆ ಹಿರಿವುದೆ ಮೇಲು (ಅಂಗಾಪ. ೨೦೪-೩೩). ೪. ಕತ್ತರಿಸು; ತುಂಡುಮಾಡು: ಬಾಳೆಯ ಹೊಡೆಯು ಹಿರಿದು ಹಸನಾಗಿ ಪಾಕಂ ಮಾಡಿಯದಱಡಕೆದಾಳಲವೆಸರ ಕರೆವುದು (ಸೂಪಶಾ. ೩-೨೨). ೫. ಒಡೆ; ಬಿರಿ; ಸೀಳು: ಎರಡು ಮೋಟಕರಂಗಳಿಂ . . . ಹೊಡೆವುತ್ತ ಬಡಿವುತ್ತ ಮರಳಿ ಮತ್ತೆಯು ಕುಟ್ಟುತಿರೆ ತಲೆ ಹಿರಿದು ಬುಗುಟಿಗಳೆದ್ದೊಡೆದು ನೆತ್ತರು ಬಿಡದೆ ಜೋರನೆ ಸುರಿಯೆ (ಅಸೆ. ೪೯-೨೯). ೬. ಲೂಟಿಮಾಡು; ಕಿತ್ತುಕೊಳ್ಳು: ಎನ್ನ ಸತಿಯು ಎನ್ನ ಸುತರು ಎನ್ನ ಬಂಧು ಬಳಗವು ಇನ್ನು ಸಾಕಿ ಸಲಹು ಎಂದು ಎನ್ನ ಹಿ [ಪಾಠಾಂ. ಹ]ರಿದು ತಿಂಬರು (ಪುರಂದ. ೦-೦೪೬-೪); ನಿಂತರೆ ಕುಳಿತರೆ ದುಡ್ಡು ಹಿರಿಯ್ತಾರೆ (ಗೃಹಂ. ೦೬೯); ಬಂದ ಮನೆಯಲ್ಲಿ ಹಿರಿದದ್ದೇ ಲಾಭ (ಗಾದೆ). ೭. (ಸಂತೆ, ಜಾತ್ರೆ ಮುಂತಾದುವು) ಚೆದರು; ಮುಕ್ತಾಯವಾಗು: ಜಾತ್ರೆಯು ಹಿರಿದ ಮೇಲೆ, ಚೋಮನ ಮನೆಯವರು ಕುಕ್ಕರಳ್ಳಿಗೆ ಬಂದು, ನಾಲ್ಕು ದಿನ ಇದ್ದು ಹೋದರು (ಚೋಮನ. ೪೯೨); ಕೊಳ್ಳಿರಿ ಕೊಡದನು ಕೊಂಡನೆಲ್ಲ ಹಿರಿವುದೆಂದೀ ಸಂತೆ ಬಲ್ಲರಾರು ನೆರಸಿದನಲ್ಲದೆ? (ಗೀತಾಂ. ೫೯-೪).

ಪಿರಿದಿಡು, ಹಿರಿದಿಡು—ಬೇರೆ ಮಾಡಿ ಇಡು; ಕಿತ್ತಿಡು; ಪ್ರತ್ಯೇಕಿಸು: ದೆಳಕಲ್ಲ ತಳಕಲ್ಲ ಕಳೆಯಲ್ಲ ಕಲೆಯಲ್ಲ—ನಷ್ಟವಹುದಱಯಲ್ಲಿ ಪ್ರಕೃತಿಯಿಂ ಪುರುಷನಿವ ತನ್ನ ತಾಂ ಪಿರಿದಿಡುವ ಶ್ರೀಮಾರ್ಗ ತಂತ್ರದಲ್ಲಿ (ಶುಂದ. ೨೬-೦೦); ನಿನ್ನ ದುರಹಂಕಾರವನ್ನೆಲ್ಲ ಅಡಗಿಸಿ ಅಡವೀಪಾಲು ಮಾಡ್ದೇ ಇದ್ರೆ ನನ್ನ ನಾಲಿಗೆ ಹಿರಿದಿಟ್ಟುಬಿಡ್ತೀನಿ (ಅಶಂ. ೦೬೨).
[ದೇ. ‖ ತಮಿ. ಮಲ. ಪಿರಿ]

**ಪಿರಿ$_2$** 'ಪಿಱಿ' ನೋ.

**ಪಿರಿ$_3$** (ನಾ) ನವಿಲುಗರಿ; ಪೀಲಿ: ಆತು ಬರ್ವಂತೆಪುರಕಾಂತೆಯರ ನಡುವೆ ಪಿರಿ [ಪಾಠಾಂ. ಪೀಲಿದಟ್ಟಿ]ಯ ತುಱುಂಗಲೊಳುದ್ಯಾನಮಂಡಂ ದೆಱಸು ವನದೇವತೆಯೆ ಬರ್ಪಂತೆ . . . ಬಾದಳ್ (ಶರಣ. ೫-೯೯ ಕ); ಪೆಣ್ಗಳ ರಣದೊಳ್ನನ್ನಯ ಕಣ್ಗಳುಮನೊಂದುನಿಮಿಷಮಾತ್ರದೆ ಪಿರಿಯೂ ಕಣ್ಗೆನಿಸಿ ತೋಱದೊಡೆ ಮುಕ್ಕಣ್ಣಂ ನಾನಲ್ತು (ಶಿವ. ೦೦-೪೬).
[ದೇ. ‖ ತೆಲು. ಪಿರಿ]

**ಪಿರಿ$_4$, ಪೆರ್, ಪೆರು$_2$, ಪೇರ್$_1$, ಹಿರಿ$_2$, ಹೆರ್, ಹೇರ್$_1$** (ಸಪೂರೂ). 'ಪಿರಿದು' ಎಂಬುದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ: 'ಪಿರಿತನ', 'ಪಿರಿಯಕ್ಕರ' ಪರಾ. ಪೆರ್: 'ಪೆರ್ಗರಡಿ' 'ಪೆರ್ಗಿಚ್ಚು' ಪರಾ. ಪೆರು$_2$: 'ಪೆರುಂದಟ್ಟಾರ' ಪರಾ. ಪೇರ್$_1$: 'ಪೇರಡವಿ', 'ಪೇರಡಿ' ಪರಾ. ಹಿರಿ$_2$: 'ಹಿರಿಗನಸು', 'ಹಿರಿಗೆಯ್ಮೆ' ಪರಾ. ಹೆರ್: 'ಹೆರ್ಗಂಬ' ಪರಾ. ಹೇರ್$_1$: 'ಹೇರಂಬು', 'ಹೇರಿಟ್ಟಿ' ಪರಾ. [<ಪಿರಿದು$_1$]

**ಪಿರಿಕಿ$_1$, ಬಿರಿಕಿ** (ನಾ). ೧. ತಿರುಗಣೆ; ಮುರಸುತ್ತು: ಬಾಗಿಲುಗಳಿಗೆ ಇನ್ನೂ ಪಿರಿಕಿ ಹಾಕಿಲ್ಲ (ಆಡು). ಬಿರಿಕಿ: ೨. ನೂಲು ತೆಗೆಯುವ ಸಾಧನ; ತಕಲಿ: ಸಣ್ಣಲಗಳಂ ತೆಗೆದು ಸುತ್ತುತ್ತೆ ಬಿರಿಕಿಯುಂ ತಿಣ್ಣನೇ ತಿರುಹುತಿರೆ (ದುಶಿ. ೬-೦೨).
[ದೇ. ‖ ತುಳು. ಪಿರಿಕಿ, ಪಿರ್ಕಿ—ತಿರುಚುಮೊಳೆ, ತಿರುಗುಮೊಳೆ]

**ಪಿರಿಕಿ$_2$, ಪಿರ್ಕಿ** (ನಾ). ೧. ಭಯ; ದಿಗಿಲು: 'ಪಿರಿಕಿತನ' ಪರಾ. ೨. ಭಯಪಡುವವನು; ಅಂಜುವ ಸ್ವಭಾವದವನು; ಪುಕ್ಕಲ: "ತ್ರಸ್ನುಃ, ಭೀರುಃ, ಭೀರುಕಃ, ಭೀಲುಕಃ— ೪ ಹೆದರುವವನ ಹೆಸರು.

ಭಯಪಡುವ ಪಿರಿಕಿ" (ಓಬ್ರಂಕ. ೪೭೯) ; ಪಿರಿಕಿ. ಪುರುಕ: ತಮಿಳಿನಲ್ಲಿ ಉ ಬಹುವೇಳೆ ಇ ಆಗಿ ಉಚ್ಚಾರವಾಗುತ್ತವೆ. ಪುಲಿ ಪಿಲಿ; ಇದರಂತೆ ಪುರುಕ ಪಿರಿಕಿ ಆಗಿದೆ. ಅರ್ಥ ಪುಕ್ಕಲುಮನುಷ್ಯ (ಜನ್ನಕು. ೧೦೭). ಪಿರ್ಕಿ: ೩. ಹುಚ್ಚು; ಮರುಳು: ಅವರಿಗೆ ಪಿರ್ಕಿಯೆಂದು (ಹುಚ್ಚೆಂದು) ನನಗೂ ಪಿರ್ಕಿಯೇ ? (ಗಂಗಾಜ. ೦೭೩). ೪. ಹುಚ್ಚ ; ಮರುಳ: ಆತ ಏನಾದರೂ ಪಿರ್ಕಿಯ ಹಾಗೆ ಮಾತಾಡಲಿಕ್ಕೆ ಹತ್ತಿದನೆಂದರೆ ಕೂಡಲೇ . . . ಕುಂಕುಮವನ್ನು ಸ್ವಲ್ಪ ಅವನ ಮೇಲೆ ಹಾರಿಸಿಬಿಡಿ (ಶೃಖಾಂಕ. ೨೬); ಸಾಣೆಕಲ್‌ನಂತಹ ಮಿತ್ರರೇ "ಅದೊಂದು ಪಿರ್ಕಿ ಅಲ್ಲವೇ" ಎಂದು ಅನ್ನುವುದೂ ಉಂಟು (ಶಿರಾಆ. ೨೭).

[ ದೇ. ೩ ತಮಿ. ಪಿಱಕ್ಕು ; ತೆಲು. ಪಿರಿಕಿ, ಪಿಱಿಕಿ ]

**ಪಿರಿಕಿತನ** (ನಾ). ಭಯ ; ಅಂಜಿಕೆ: ಇಷ್ಟಾದ ಮೇಲೂ ನಮ್ಮ ಕಷ್ಟ ನಿವಾರಣೆಯಾಗಲಿಲ್ಲ ; ನಮ್ಮ ಪಿರಿಕಿತನ ದೂರವಾಗಲಿಲ್ಲ (ಜಂಜೂಕ್ರ. ೩).

[ಪಿರಿಕಿ$_2$+ —ತನ]

**ಪಿರಿಕಿಸ್ವಭಾವ** (ನಾ). ಅಂಜುವ ಸ್ವಭಾವ ; ಪುಕ್ಕಲುತನ : "ಪಿರಿಕಿ ಸ್ವಭಾವದ ; ದಿಗಿಲು ಬೀಳುವ ; ರೇಗುವ" (Jumpy. ೩೯೪೦).

[ ಪಿರಿಕಿ$_2$+ಸ್ವಭಾವ ]

**ಪಿರಿಕೆಱೆ** (ನಾ). ಒಂದು ಊರಿನ ಹೆಸರು : ಅವಿನೀತಮಹಾಧಿರಾಜೇನ ದತ್ತೇನ ಪಡಿಯೋಟಱೊಳು ಊರೂರೊಳ್ಪನ್ನಿರ್ಕ್ಕಣ್ಡುಗಱ್ಗೆಯ್ದು ಅಪ್ಪಲಿಮಣ್ಣುಂ ತಳವನಪುರದೊಳ್ಪಳಮಿತ್ತಿಯ ಮಣ್ಪೂಗರಿಗೆಟಿಯೊಳ್ಪ ನ್ನಿರ್ಕಣ್ಡುಗಂ ಪಿರಿಕೆಱೆಯೊಳಂ ರಾಜಮಾನಂ . . . ದತ್ತಂ (ಎಇ. I, ೧-೨೧ ; ೪೬೬). [ ಪಿರಿ$_4$(<ಪಿರಿದು$_1$)+ಕೆಱೆ ]

**ಪಿರಿಚು, ಪಿರುಚು, ಪಿಱಿಚು, ಪಿಱುಚು** (ಕ್ರಿ). ೧. ಬೇರೆ ಮಾಡು ; ಪ್ರತ್ಯೇಕಿಸು : ಪೊಱಗೆನನಾದೊಡಂ ಕುಱಿತು ತದ್ರೂಪಮಂ ಪಿರಿಚುತದ ಱ್ಯಭಾತಿಗಳನಾತ್ಮನೆಂದಱಿಯಲೊಂದನೆಯ ಸವಿಕಲ್ಪ (ಅಪುಜಾ. ೬-೪-೧೧); ಬಱಿದೆ ಹೋಗದಿರು ಬಾ ಬಾರೆಂದು ಕರೆದೊಂದು ಮಿಱುಗುವ ಪದಕವ ಕೊಟ್ಟು ಪಿರಿಚಿ ಮಾತ್ರವಳೊಡನಿದ್ದರ ಮನ್ನಿಸಿ ನೆಱೆಜಾಣ ಬೀಳ್ಕೊಟ್ಟನೊಡನೆ (ಕಕಕ. ೩೯-೬೬). ೨. ಬೇರೆಯಾಗು ; ಅಗಲು ; ಬಿಟ್ಟುಹೋಗು : ಮಱುಸಿದೆ ತಾಯಿತಂದೆಯ ನಿಜದೇಶವ ತೊಱೆದೆ ಸಕಲಸುಖಗಳಿಂದ ನೆಱೆ ನಿನ್ನ ನಲ್ಗುಣಗಳ ಮೆಚ್ಚಿದೆನಿನ್ನು ಪಿರಿಚಿ ಸೈರಿಪೆ ನೆಂತೊ (ಸೊಬಸೊ. ೯-೬೨): ನೆಱೆಯದಿರಕ್ಕ ಬೇಗದಿ ನೆಱೆದಾಗೆಮ್ಮ ಪಿರಿಚಿ ಹೋಹಿರಿ (ಕಕಕ. ೯೩-೯೩). P ಮೇಲಿನ ಎಲ್ಲ ಪ್ರಯೋಗಗಳಲ್ಲಿ ಶಕಟರೇಫದ ಪ್ರಾಸವಿರುವುದು ವಿಮರ್ಶಾರ್ಹವಾಗಿದೆ. ಪಿರುಚು : ೧. ಪೊರಗಣ ಘಟಾದಿ ವಿಷಯದ ನಾಮರೂಪಗಳ ಪಿರುಚುತುಳಿದಸ್ತಿಭಾತಿ ಪ್ರಿಯಗಳ ಸ್ಮರಿಸುವುದೆ . . . ಸವಿಕಲ್ಪಕಸಮಾಧಿಯಹುದು (ಕೈಕಶ. ೩-೬೬-೧). Δ ಪಿಱಿಚು : ೧. ಕಟುಗೊಡಗೆಯನೂ ಪಿಱಿಚಿ (ಕೌಆ. ೧೯೩೪. ಪೂಗಪುರು. ೦೫೬-೧೧ ; ೧೪೧೯). Δ ಪಿಱುಚು : ೧. ಅರಸಣ್ಣ ಹೆಗ್ಗಡೆ ತಾನು ಕೆಱುವ ಭಂಡಾರಸ್ಥಳದ ನೆಲುವಾಗಿಲಿಗೆ ಒಕ್ಕಲನು ವಿಂಗಡಿಸಿ ಕೊಂಡು ಧರ್ಮಸ್ಥಳವಾದ ತುಂಬುರವಳ್ಳಿಗೆ ಒಕ್ಕಲ ಪಿಱುಚಿ ಕೊಟ್ಟು (ಪ್ರಕಆ. ೧೯೩೨, ೪೨-೩೧; ೧೪೧೮); ಪಟ್ಟದ ಗ್ರಾಮಕ್ಕೆ ಬಾರಕೂರ ರಾಜ್ಯ ದೊಳಗೆ ಯಿಂನೂಱ ಅಯಿವತ್ತು ವರಹನ ಹುಟ್ಟುವಳಿಯ ಗ್ರಾಮವನೂ ಪಿಱುಚಿ ಕೊಡ ಹೇಳಿ (ಪ್ರಕಆ. ೧೯೩೪, ೩೦-೬ ; ೧೪೫೧). [ಪಿರಿ$_1$+ —ಚು$_1$]

**ಪಿರಿತನ, ಹಿರಿತನ** (ನಾ). ೧. ಹಿರಿಮೆ; ಮೇಲ್ಮೆ; ಶ್ರೇಷ್ಠತೆ : ವಯಸ್ಸಿ ಗೇಂ ಪಿರಿತನಮೆ ? ನಿನ್ನ ಪರ್ಮೆಗೆ ವಂದಿ ನಿನ್ನಾತ್ಮದೋಜೆ ; ಮೇಣ್ ನಿನ್ನ ತೇಜಕ್ಕೆ ಸಾಕ್ಷಿ ನಿನ್ನಕ್ಷಿ ಕಮಲಾಕ್ಷ ! (ಶ್ರೀರಾಕಾ. ೦೭೩-೨೮೯). ಹಿರಿತನ : ೧. ಅಪಕಾರಿಗುಪಕಾರವೆಸಗುವುದಾದರೆ ಅದರೊಳು ಹಿರಿತನವುಂಟು (ಜಂಜಾ. ೨೨-೯೯); ಹಿರಿತನಕ್ಕೊ ಕಿರಿತನವೇ ಮಿಗಿಲು ಇದರೊಳಿಲ್ಲ ದಿಟ್ಟತ್ವದ ದಿಗಿಲು (ಗಜೀಕ. ೨-೨೭). ೨. ಒಡೆತನ ; ಯಜಮಾನಿಕೆ : ಹಿರಿತನಕ್ಕೋಗುತ್ತಿ ಗರುವಿಕೆ ಮಾಡುತ್ತಿ ನೆರೆಹೊರೆಯರ ಕೂಡ ಬಡಿ ದಾಡುತ್ತಿ (ಪುರಂದ. ೪-೦೩-೩); ತೊತ್ತಿಗೇತಕೆ ಮನೆಯ ಹಿರಿತನ (ಕ್ರಾಕಾಂ. ೦-೩೦). ೩. ಪ್ರಾಚೀನತೆ : ಈ ಕಾವು ಶಬ್ದದ ಹಿರಿತನವು (ಪ್ರಾಚೀ ನತೆಯು) ಕಾವೂರು, ಕಾವಾಡಿ . . . ಇತ್ಯಾದಿ ಊರ ಹೆಸರುಗಳ ಮೂಲಕವೂ, ಕಾವಕ್ಕ, ಕಾವಮ್ಮ, ಕಾವು ಎಂಬ ಹೆಂಗಸರಲ್ಲಿ ಬರುವ ಹೆಸರುಗಳ ಮೂಲಕವೂ ಉಳಿದು ಬಂದಿದೆ (ಕುಳುಹಾ. ೨೯೯).

[ಪಿರಿ$_4$ (<ಪಿರಿದು$_1$) + —ತನ]

**ಪಿರಿತಿನಿ** ' ಪಿಱಿತಿನಿ ' ನೋ.

**ಪಿರಿತಿನಿಸು** (ನಾ). ಮಾಂಸಾಹಾರ : ನರಿಗೇನು ಪಿರಿತಿನಿಸೊ ಕಾಯುಣಿಸೂ ಬೇಕೆರಡು (ಕಾಂಜಿ. ೩೩-೯೦). [ಪಿರಿ$_2$ (<ಪಿಱ್)+ತಿನಿಸು$_2$]

**ಪಿರಿದೀ** (ಕ್ರಿ). ಹೇರಳವಾಗಿ ಕೊಡು ; ಹೆಚ್ಚಾಗಿ ಕೊಡು ; ಅಧಿಕವಾಗಿ ನೀಡು : ಅವಂದಿರ್ಗೆ ಪಿರಿದಿತ್ತು ಕಳಿಪುತೆ (ಜಂಪು. ೦೨-೦೯೩೩) ; ಧನಮಂ ಪಿರಿದಿತ್ತುಪನೆಂಬ ಮಾಳ್ಕೆಯಂ ಮನದೊಳವರ್ಚಿ (ಶಾಂಪು. ೦೦-೦೬೩). [ ಪಿರಿದು$_2$ (<ಪಿರಿದುಂ)+ಈ$_2$ ]

**ಪಿರಿದು$_1$, ಹಿರಿದು$_1$** (ನಾ). ೧. ದೊಡ್ಡದು ; ಗಾತ್ರವಾದುದು ; ಘನ ವಾದುದು : ಎಣ್ಬರಿಂದಂ ತಳರ್ಚಲಾಱದಂತಪ್ಪ ಪಿರಿದೊಂದು ಸಿಲೆಯಂ ತಂದು ತಲೆಯಿಕ್ಕಿಟ್ಟು ಪಟ್ಟಿರ್ದದಂ . . . ಕಂಡು (ಆಪ್ರಕಾ. ೬೩-೨೭) ; ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತಭಾರತ ಮನಪೂರ್ವಮಾಗೆ ಸಲೆ ಪೇಟ್ದ [ಕವೀಶ್ವರರಿ]ಲ್ಲ (ಪಂಭಾ. ೧-೧೧); ಪಿರಿದೊಂದು ವಸ್ತು ದೊರೆಕೊಂಡುದು ದುರ್ಪುರೆ ಬರ್ದೆನೆಂದು ರಕ್ಕಸ ನದಿರೆರ್ದು ಕೊಲ್ವ ಪದದೊಳ್ (ಸುಕುಸು. ೬-೦೬). ೨. ಮಿಗಿಲಾದುದು ; ಹೆಚ್ಚಾದುದು ; ಅತಿಶಯಂಮಾದುದು : ಇಂತಪ್ಪ ಕ್ಷತ್ರಿಯಪುತ್ರಾದಿ ಗಳೆಲ್ಲಮೆನಗೆಱಗಿ ಪೊಡಮಟ್ಟು ಕಿಂಕರಾರ್ಣಂಗೆಯ್ದಪ್ಪರುಣ್ಬುದರ್ಕೀಮಿ ಗಳ್ ಸಂಕಟಮಿಶ ತಪದ ಫಲಮಿನ್ನುಂ ಮುಂದೆ ಪಿರಿದುಂಟೆಂದು ಬಗೆ ದಿಂದುಪವಾಸಂಗೆಯ್ದಪ (ಆಪ್ರಕಾ. ೮೨-೦೭), ಮುಳಿಸೆಂಬುದೆನಗೆ ಕೌರವರೊಳೆ ಪಿರಿದು (ಕೃಕಪಾ. ೪-೩೨) ; ಪಿರಿದಪ್ಪ ಸಂತಸಮನೆಯ್ದೆ ಬಸಂತಂ . . . ನಿಸ್ಸಾಳಮಂ ಸೂಟ್ಸಿಸಮೇಟಲ್ (ಅ್ರಕಾ. ೩೩೦); ಬೆಟ್ಟಗಳ ಕಪಿನಿಕರ ತಂದೊಡೆ ಕಟ್ಟಿದನು ನಳ ರಾಮ ಶರಧಿಯ ಕಟ್ಟಿದುದು ಪಿರಿದಲ್ಲ (ಸಂಕಕ. ೨೦-೩೩). ೩. ಶ್ರೇಷ್ಠವಾದುದು ; ಮೇಲಾದುದು : ಕತೆ ಕಿಱಿದಾದೊಡಂ ಕತೆಯ ನಾಯಕನುನ್ನತವಂಶವೀರ್ಯವಿಕ್ರಮ ಮಹಿಮಾಪ್ರಪಂಚಿತಗುಣಂ ಪಿರಿದು (ಕಕ್ಕಕ. ೦-೪೩). (ಗು). ೪. ಹೆಚ್ಚಾದ ; ಅಧಿಕವಾದ ; ಬಹಳವಾದ . ಕುದಿಸುತಿದತ್ಮಣಂ ಕುದುರೆ ನ್ಮಾಱಱೊಳು ಬಲದಾನೆ ಪತ್ತು ತಾಗಿದುವೆನೆ ದೋಷಮಾ ಪಿರಿದುಸಂಪ್ಮಿಯೊಳೀಕಬಹುತ್ಸಸಂಗದಿಂ (ಕಶಾ. ೦-೨೨೦): ಪಿರಿದು ಮಾತೇಕೆ ಸಿಲುಕಿದೆವೆಮಗೊಡೆಯರಿಲ್ಲ (ಕಕುಕ. ಆ. ೦೬-೦೦); ಪಿರಿದು ಭಂಗವನಾಂತೆನೆನುತಬ್ಧಿ ತಗ್ಗಿ ತಾಂ ಹೆಚ್ಚುಕುಂದಿನೊಳೆಸೆದುದು (ಕಣ. ೨-೩). ೫. ಶ್ರೇಷ್ಠವಾದ ; ಮೇಲಾದ : ಪಿರಿದ್ಕೆರಾವತವನು ಪೂರ್ಣ ಚಂದ್ರನ . . . ಕಂಡು ನೆಱೆ ಕಣ್ದೆಱೆದಳು (ಕಂಕಪ. ೯-೩೨). ೬. ಅತಿಶಯ ವಾದ; ಮಿಗಿಲಾದ; ವಿಶೇಷವಾದ : ಕಿಱಿದಱೊಳೆ ಪಿರಿದುಮರ್ಥ ಮನಱಿಪಲ್ ನೆಱೆವಾತನಾತನಿಂದಂ ನಿಪುಣಂ (ಕಶಾ. ೦-೦೩) ; ನೀಲ ನಿಷಧಮುಮನೆಯ್ದುವ ನೀಲದ ಗಜದಂತಗಿರಿಗಳಾಳ್ದುವು ಪಿರಿದುಂ ಲೀಲೆಯಂ (ಆದಿಪು. ೨-೨೯); ತಪದ ಪಿರಿದುಟ್ಟುಯಿಂದಿದಸವರಿರ್ವರುಮು ಱಿಯೆ ನೆಱೆಯೆ ಪೇಟುಸಿ (ಕಾಂತಿಪು. ೦-೩೩). ಹಿರಿದು$_2$ : ೧. "ವಕ್ಷ— ಸ್ಥಾಲ್ಕೇ. ಹಿರಿದರೊಳಂ. ಕಿರಿದರೊಳಂ" (ಶಾಕ್ಕ. ೨೦); ಅಲ್ಪವೊ ಭೂಮವೊ ಹಿರಿದೋ ಕಿರಿದೋ . . . ರಸಪ್ರಯೋಜನ ಭುವನಂ

ಕವನಂ : ಭಗವಂತನ ಕವಿ, ಸಹೃದಯನಾಂ! (ಅಜಿಶ. ೬೦-೦) ೨. ಹಿರಿದಪ್ಪ ಕ್ಲೇಶಂ ಸಿಂಹಕ್ಕಂ ವೃಷಭಕ್ಕಂ ಕಾಂತಾರದೊಳಾಗಿರಲ್ (ಪಂತಕಂ. ೨೦.೦೦); ಹಾನಿ ಹಿರಿದುಂಟಜೀವನಂಗುಸ್ಪಂದಶಕುನದಲಿ (ಸಂಕಶ. ೦೬-೦೯); ಪರಿಕಿಸಲು ಕೋಡಗದ ಮಾಂಸವು ನರಪತಿಗಳಿಗೆ ಯೋಗ್ಯವೇ ಹೇಳರಸ ಹಿರಿದಹ ಹೇಸಿಕೆಯ ಕೈಕೊಂಡೆ (ಹೊಕಣ. ೪-೪-೩೬). ೪. ಹಿರಿದು ದುಃಖವಹ ಧನದಿಂ ಕಪಟಿಯಾದ ಮಿತ್ರನಿಂದೇಂ ಪ್ರಯೋಜನಂ (ಪಂತಕಂ. ೦೦೦-೦೩); ಲಸತ್ಕೃತಿಯುದಸಾಂ ಪುಣ್ಯನಿಮಿತ್ತಂ ಹಿರಿದುಂ ಹರಿಸದೊಳುಸಿರಿದೆನು (ಅಜಿಪು. ೦-೨೬). ೫. ಪಂಚಭೂತಮಯವಾದ ಬ್ರಹ್ಮಾಂಡ ಶರಣ ಸಂಗದಲ್ಲಿ ಪಂಚಬ್ರಹ್ಮಮಯವಾಯಿತ್ತಾಗಿ ಇಷ್ಟಖಂಡಿತವಾಗಿ ಸೌರಾಷ್ಟ್ರ ಸೋಮೇಶ್ವರನ ಶರಣರಿಗೆ ಹಿರಿದೊಂದು ಘನವಿಲ್ಲ (ಅರಶ. ೪೩-೦೦೦). 'ಕಿಱಿದು' ಪರಾ.

**ಹಿರಿಹಿರಿದು, ಹಿರಿಹಿರಿದು** (ದ್ವಿರುಕ್ತಿ) : ಹಿರಿಹಿರಿದಾಗಿ ಗಡಣಿಸಿ ದೆಸಾತ . . . ಒಳಗಿಹ ಕೊಪ್ಪರಿಗೆಗಳನನಿತುವುಂ ತರಹೇಳು ಬೇಗ ದೋಳಿನಾತ (ಅಸಪು. ೩೯-೦೩): ಗುಹೇಶ್ವರಲಿಂಗವ ಕಿಱುಕಿಱಿದಾಗಿ ನೆನೆದರೆ ಹಿರಿಹಿರಿದಾಗಿ ಕಾಡುವದು ನೋಡಾ ಮಱಹು (ಹೊಶ್ಯಸಂ. ೦೩೩-೪). **ಹಿರಿದಾಗು, ಹಿರಿದಾಗು**=ಹೆಚ್ಚಾಗು; ವೃದ್ಧಿಯಾಗು; ಬೆಳೆ : ರಾಗು ಹಿರಿದಾಯ್ತು ವಸಂತಾಗಮದೊಳ್ (ಪುಲ್ಪಶ. ೩-೬); ಒರ್ವ ಬಾಲೆ ಮುಗ್ಧೆ ಹರೆಯಂ ಕಿಱಿದು ಯೌವನಂ ಹಿರಿದಾಗಿ ಮುಖವೆಲ್ಲಂ ಕಣ್ಣಾ . . . ನೋಟವೆಲ್ಲಂ ಬೇಟವೆನಿಸಿ (ಪಂಕಶ. ೪-೩೬); ಎನಿತನಿತು ಭೂಮಿ ಕ್ರಮದಿಂ ಮಾಱು ಕಿಱಿದಾಗೆ ಅನಿತನಿತು ತನ್ನಯ ಮನಂ ಹೆಚ್ಚಿ ಹಿರಿದಾಗೆ (ಅಳಿಶ. ಕಿ. ೩೦-೨); ಇತ್ತ ದಿನ ಹಿರಿದಾದವೀಗಳು ಹೊತ್ತ ಕಾರ್ಯದ ಹೊಱಗೆ ಯಾವುದೊ ಹದನ ಹರಿ ಬಲ್ಲ (ಸಂಕಶ. ೩-೬೩). **ಹಿರಿದು ಮಾಡು** = ಹೆಚ್ಚು ಮಾಡು ; ವಿಸ್ತರಿಸು; ದೊಡ್ಡದಂ ಮಾಡು : ಮಹಾದ್ಭುತಭಯರೌದ್ರ ಭಯಾನಕವೀರರಸಂಗಳನೆ ಕಪಟಕ್ರಿಯೆಯಿಂ ಹಿರಿದು ಮಾಡಿ ಪೇಟ್ವುದುಂ (ಪಂತಕಂ. ೪೬-೦೯). **ಹಿರಿಯ, ಹಿರಿಯ**—೧. (ವಯಸ್ಸು, ಪ್ರಭಾವ, ವಂಶ, ಗುಣ ಮೊದಲಾದಂವುಗಳಲ್ಲಿ) **ದೊಡ್ಡವನು; ಶ್ರೇಷ್ಠ** : ಏಂ ಹಿರಿಯನೋ ಖಗೇಂದ್ರಾಧೀಶಂ (ಶಾಂತಿಪು. ೩-೬೩); ಶೂಲಿಗೋಳು ಕಿಱಿಯಂ ಮನದೊಳು ಹಿರಿಯಂ (ಕಿರುಪಾ. ಕಿ. ೨೦೩-೦೩); ಧರ್ಮಶಾಸ್ತ್ರದೊಳು ಭೇದಿಸಿ ಹಿರಿಯರು ಪೇಳಿದುದನ ಕೃತಿಗೈದಾನು ಕವಿಗೋಳಿಸಿದೆನು (ಹಂಪಿ. ೦-೩೦); ಮನಸು ಹೇಸದೆ ಕೂಡಿಕೊಂಡಿಪ್ಪನುವ ನೋಡಾ ಹರಹರಾ ತನಗನುಮತವೆಯಿದು ತಾವು ಸರ್ಬಕೆ ಹಿರಿಯ ರಾಗಿರ್ದು (ಅಸಪು. ೩೬-೬) ; ಅರಸನಾಗಲಿ ಧನಿಕನಾಗಲಿ ಹಿರಿಯನಾಗಲಿ ಬಡವನಾಗಲಿ ಮರಣ ಜನಿಸಿದ ಬಳಿಕ ತಪ್ಪದು (ಕುಶ್ಯಾಕ್ರೋ. ೬-೨೪); ವಿಜಯದಾಸರು ಮನೆಯ ಹಿರಿಯರಿದ್ದಂತೆ ಊರಿನ ಹಿರಿಯರೂ ಆಗಿದ್ದರು (ಶಂಕು. ೦). ೨. ಮೊದಲನೆಯ ಮಗ; ಜ್ಯೇಷ್ಠಪುತ್ರ : ಹಿರಿಯನಲಿ ಜನಕಂಗೆ ಮೋಹವು ಕಿಱಿಯನಲಿ ಕಡುಮೋಹ ಜನನಿಗೆ (ಸಂಕಶ. ೫೦. ೦-೩೪). ೩. ಪತಿ; ಯಜಮಾನ : "ಹಿರಿಯ . . . ಹಿರಿಯ" ಅವಳ ಪಾಲಿಗೆ ಆ ಅಕ್ಷರಗಳನ್ನು ಉಚ್ಚರಿಸಬೇಕಾದರೆ ಏಕೋ ತೊದಲಿದ ಹಾಗೆನ್ನಿಸಿತು (ಗಂಗಾಗ. ೦೩೦); ನಮ್ಮ ಹಿರಿಯ ಮೊದಲಿನ ಗುಣಾ ಬಿಟ್ಟು ಸಂಭಾಯಿತ ಆಗಿದ್ದ. ಈಗ ಗೌಡರು ಬರಾಣಾ ಮತ್ತ ಕುಡಿಯೂದು, ನನ್ನ ಹೊಡಿಯೂದು, ನಡಿಸ್ಯಾನ (ಗ್ರಾಮುದು. ೩೩೦). ೪. ಬ್ರಾಹ್ಮಣ ; ದ್ವಿಜ : "ದಿವ್ಯಿದರುಮನಲ್ ಸೈದರೆನೆ ಗನಹರೆನೆ ಪೇರಿದರ್ ಪಾರ್ವರನೆ ಹಿರಿಯರೆನೆ ದ್ವಿಜರ ನಾಮಂ" (ಅಭಿಮಂ. ೩೬). **ಹಿರಿಯ ಕೋಲ್, ಹಿರಿಯ ಕೋಲ್** — ೧. ದೊಡ್ಡ ಕೋಲು ; **ಬಲವಾದ ದೊಣ್ಣೆ**. ೨. ಭೂಮಿಯನ್ನು ಅಳೆಯಲು ಉಪಯೋಗಿಸುವ ಒಂದು ಬಗೆಯ ಅಳತೆಗೋಲು : ಸುಗನ್ಧವರ್ತಿ

ಸೀಮೆಯಿನ್ದ ಪಡುವಲು ಹಿರಿಯ ಕೋಲಲು ಮತ್ತರು ೬ (ಶಾಇಇ. XX. ೦೩-೪ : 876) ; ಸರ್ವ್ವನಮಸ್ಯ ಸರ್ವ್ವಬಾಧಾಪರಿಹಾರವಾಗಿ ಬಿಟ್ಟ ಕೆಯ ಹಿರಿಯ ಕೋಲ ಮತ್ತರೇಳು (ಕಇ. II. ೨೪-೩೨; 1167). **ಹಿರಿಯ ಪಾಲಾಳ್** — **ದೊಡ್ಡವಂಶಕ್ಕೆ ಸೇರಿದ ವ್ಯಕ್ತಿ; ಉತ್ತಮಕುಲಕ್ಕೆ ಸೇರಿದವನು** : ನೀನ್ ಕಂಡಮಯ್ ! ಹಿರಿಯ ಪಾಲ್ ಆಳ್ಗಳ್ ಕೀೞ್ವಟ್ಟಯ ಕೊಳ್ಗಿಯನ್ ತಾಮೆಂದುಮಾಟ್ಯರ್, ಹಿರಿದಟ್ಟುವರೆಂದು (ಅಜಿಗೂ. ೦೩-೨೪೦). **ಹಿರಿಯ ಮಗ, ಹಿರಿಯ ಮಗ, ಹಿರೀಮಗ, ಹಿರೇಮಗ**— **ದೊಡ್ಡ ಮಗ; ಮೊದಲನೆಯ ಮಗ; ಜ್ಯೇಷ್ಠಪುತ್ರ** : ಹರಿಶ್ಚಂದ್ರನೆಂಬ ತನ್ನ ಹಿರಿಯ ಮಗನಂ ಕರೆದು ... ಪೇಟ್ವೊಡೆ (ಅಂಕ್ರ. ೨-೦೪ ಪ); ಅರಸನ ಹಿರಿಯ ಮಗನನೀಗಳೆ ಪೋಗಿ ಕೊಂದಪೆಂ (ಪಂತಕಂ. ೦೦೩-೩); ಧುರವಿಶಾರದನಹ ವಿರಾಟನ ಹಿರಿಯ ಮಗ ನೀನೆಂದು ಗೋಕುಲಹರಣದಲಿ ಕಲಿಯಾಗಿ ಕಾದಿದೆಯೆನುತ ತೆಗೆದೆಚ್ಚ (ಕುಮ್ಯಾಭಿ. ೩-೨೩); ನೃಪೋತ್ತಮನ ಹಿರಿಯ ಮಗ ತಾನೀಗ ತನ್ನಂತರದಲಿ ಭರತಂಗೆ ಸೇರಿತು ಧರಣಿ (ಹೊಕಣ. ೪-೨-೨) ; ಅವರ ಹಿರೀಮಗ ದೊಡ್ಡ ಕೆಲಸದಲ್ಲಿದ್ದಾನೆ (ಕಂಪ); ಹಿರೇಮಗ ಮಹಮದಶಾಬಾಸಾಹೇಬರು . . . ಈ ವರ್ತಮಾನವೆಲ್ಲ ಹೇಳಿದರು (ಕೃಕಕ. ೨೯). **ಹಿರಿಯವು** (ಬಹುವ) — (ವಯಸ್ಸು, ಆಕಾರ, ಗಾತ್ರ, ನೀಳತೆ ಮೊದಲಾದುವುಗಳಲ್ಲಿ) **ದೊಡ್ಡದಾದಂವು** : ನಿಡಿಯಲರ್ಗಣ್ಗಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾಱದೆ ತಡೆಯ ಪಗಲ್ ಹಿರಿಯವಪ್ಪವಾ ಪುರವರದೊಳ್ (ಕಾವ್ಯಾ. ೦೩೬ ಟಿಪ್ಪ); ವಾಯುಭೂತಿಯುಂ . . . ವಿದ್ಯಾಧರ ಬಂಗಿಗರ ಮನೆಯೊಳ್ ವೆಣ್ಣಾತ್ರಿಯಾಗಿ ಪುಟ್ಟಿ ಹಿರಿಯವಪ್ಪ ಪೊಱಗಳಂ ಪೊತ್ತು ಪೋಗಿ (ವಡ್ಡಾರಾ. ೯-೦). **ಹಿರಿಯಾಕೆ, ಹಿರಿಯಾಕೆ**=**ದೊಡ್ಡವಳು; ಜ್ಯೇಷ್ಠಳಂ** : ಎಲ್ಲರಿಂ ಹಿರಿಯಾಕೆ ನಿನ್ನನಲ್ಲದೆ ಪೆಱರನೊಲ್ಲೆನೆಂದಿರ್ದೊಡೆ ಮತ್ತಿನಿರ್ವರುಮಂ ಮದುವೆಯಂ ಮಾಡಿ (ಪಂತಶಾ. ೦-೬೪ ಪ); ಆಕೆಯೋ ಆ ಮನೆಗೆಲ್ಲಾ ಹಿರಿಯಾಕೆ (ಕಂಪ). **ಹಿರಿಯಾತ** = **ದೊಡ್ಡವನು ; ಜ್ಯೇಷ್ಠ** : ಹಿರಿಯಾತಂ ಸ್ವಭಾವದಿಂ ಋಜುಮಾರ್ಗವೃತ್ತಿಯಂ ತಳೆದು ವಿನಯ ವಿಭೂಷಣನಾದಂ (ಸುಕುಮಚ. ೨-೩೬ ಪ). **ಹಿರಿಯೊಟ್ಟಿ, ಹಿರಿಯೊಟ್ಟಿ, ಹಿರಿಯೊಟ್ಟೆ** — **ದೊಡ್ಡ ಮಂಳಿಗೆ ಹೊದರು,—ಬೇಲಿ(?)** : ಪೆರ್ಬೞ ದೊಳಗಣ ಬಾದುಪೊಲದಿನ್ದ ಹಿರಿಯೊಟ್ಟಿಯ ಕೈವರದೊಳ್ ಒನ್ದು ಮಾನ್ಯಂ (ಎಕ. X (೩), ಕಶ್ಯಾ. ೦೦೬-೬೭ ; 850) ; ಪೆರ್ಬಳದೊಳಗಣ ಭಾದಪೊಲದಿಂದೆ ಹಿರಿಯೊಟಿಯ ಕೈವರದೊಳೊಂದು ಮಾನ್ಯಮ್ (ಕ್ಯಾಅ. ೦೪೦೪, ೦೩-೬೭ ; 806) ; ಅಲ್ಲಿಂ ತೆಂಕ ಹಿರಿಯೊಟ್ಟೆಯಿಂ ಪೋಗಲು ಬಂಬಿಸೆಟ್ಟಿಯ ಕೆಱೆಯ ಕೋಡಿಯ ಕೀಳ್ಬಯಲು . . . ಅಲ್ಲಿಂ ಹಡವಲು ಹಿರಿಯೊಟ್ಟಿಯ ಸೆಳ್ಳವೊಱಡಿಯ ಹಡುವಣ ಬಳ್ಳಿಯ ಕೆಱೆಯ ತೆಂಕಣ ಕೋಡಿಯ ಬಳರಿಯ ಬನ (ಎಕ. II. ೬೪೩-೬೦; ಶು. 1169). **ಹೆರ್ಗಾಪಂ**— **ಅತಿಶಯವಾಗಿ ಕಾಪಾಡುವವನು** ; ವಿಷ್ಣು : ಸೃಷ್ಟಿಸುವ ಸಮರ್ಥ ಪೆರ್ಗಾಪನೈಶ್ವರ್ಯಕರ್ತಳೀತನ ರಾಣಿ ನಿಖಿಳಮೈಭೋಗವು ವ್ಯರ್ಥ ದ್ವಾರಕಿ ದೊಡ್ಡಿತಹುದೆ (ಪೋತಕ. ೨೪-೨೬). **ಹಿರಿದಾಗಿ** = **ಹೆಚ್ಚಾಗಿ ; ಬಹಳವಾಗಿ** : ಹೆಮ್ಮೆಯಲಿ ಹಿರಿದಾಗಿ ಕೆಡುವರು (ಸಂಕಶ. ೩-೦೨) ; ವಿಪುರಿಳಿಯನು ಮಂದಮತಿ ಕೈಕೊಂಡು ಕವರಿದನವರ ಹಿರಿದಾಗಿ (ಸಂಕಶ. ೨೬-೩೬). **ಹಿರಿದು ಕಿಱಿದು** = **ಮೇಲು ಕೀಳು** : ಕಿಱಿಯರಾದಡೇನು ಹಿರಿಯರಾದಡೇನು ಅಱಿವಿಂಗೆ ಹಿರಿದು ಕಿಱಿದುಂಟೆ (ಹೊಶ್ಯಸಂ. ೦೬೦-೬೭). **ಹಿರಿಯ ಗಡಿಂಬ** = **ಭೂಮಿಯನ್ನು ಒಂದು ಅಳತೆ** : [ಹಿ]ರಿಯ ಗಡಿಂಬದ ಕೋಲಳೊಳ್ ಬಿಟ್ಟ ಮತ್ತ ೬೦ (ಶಾಇಇ. XX. ೩೪-೪೦; 1064) **ಹಿರಿಯ ಗಳೆ** — ೧. ದೊಡ್ಡ ಕೋಲು. ೨. = ಹಿರಿಯ ಕೋಲ್ ೨ : ಹಿರಿಯ ಗಳೆಯಲು ಗದ್ದೆ ಕಮ್ಮ (ಎಇ. ೦೪೪೬.

ಶಾಸಗಲ್. ೨೨೯-೨೪; ೪). ಹಿರಿಯಾತನ, ಹಿರೇತನ = ೧. ದೊಡ್ಡತನ ; ಘನತೆ: ಹೆಚ್ಚುಗಾರಿಕೆ : ನಿಮ್ಮಾ ಹಿರಿಯಾತನಕೆ ಪದಿಯಾಂಟೆ (ಹರಿಶ. ಕೀ. ೮೪-೨) ; ತಿರುಗಿ ನೋಡಿದಡೀಗ ಸಿನ್ನಯ ಹಿರಿಯಾತನವಳಿವುದೆ (ಶಶಿ. ೩೬-೨೨); ಹಿರಿಯಾತನದಲಿ ನೋಡೆ ಸರಸಿಜೋದ್ಭವನಯ್ಯ ಗುರುವುತನದಲಿ ನೋಡೆ ಜಗದಾದಿಗುರುವು (ಕೃಕಂಠ. ೨-೦೬೪-೦). ೨. ದೊಡ್ಡಸ್ತಿಕೆ ; ಅಹಂಕಾರ : ಈ ಕಾಂಗ್ರೆಸ ಚಂಡಾಲರು ಹಿರೇತನ ಮಾಡಿ ಯಾರಿಗೂ ಬಿರುದುಗಳು ಇರಬಾರದು ಅಂದ್ರು (ಹಜ್ಯೋತ. ೨೬). ಹಿರಿಯ ಮಗಳು, ಹಿರೀ ಮಗಳು = ದೊಡ್ಡ ಮಗಳು ; ಜ್ಯೇಷ್ಠಪುತ್ರಿ: ಅವರ ಹಿರಿಯ ಮಗಳು ಊರಿಗೆ ಬಂದಿದ್ದಾಳೆ (ರೂಢಿ) ; ನಾಳೆ ಅವರ ಹಿರೀಮಗಳ ಮದುವೆ (ರೂಢಿ). ಹಿರಿಯ ಮಾಣಿ, ಹಿರಿಯ ಮಣಿ, ಹಿರೇ ಮಣಿ = "ಪಾಠಶಾಲೆಯಲ್ಲಿ ತರಗತಿಯ ಶಿಸ್ತು ನೋಡಿಕೊಳ್ಳುವ ಹಿರಿಯ ವಿದ್ಯಾರ್ಥಿ: ಹಿರೇಮಣಿ (ಹಿರಿಯ ಮಾಣಿ)" (Monitor. ಇಂಕಿಂ): (ಪಾಠಶಾಲೆಯ) ಹಿರಿಯ ಮಾಣಿ (Captain. ಇಂಕಿಂ) ; ಎರಡು ಮೂರು ವರುಷಗಳ ಕಾಲದಲ್ಲಿಯೇ ಈ ಹುಡುಗನು . . . ಪಾಠಶಾಲೆಯಲ್ಲಿ 'ಹಿರೇಮಾಣಿ'ಯಾದವನು (ಗುಣಶಾ. ೬). ಹಿರಿಯ ಸೊಳಸ = ಒಂದು ಅಳತೆಯ ಪ್ರಮಾಣ : ಮೂಲೆವತ್ತುಂ ಹೇಜಿಂಗೆ ಹಿರಿಯ ಸೊಳಸ-೨ . . . ಮೊಳಸು ಹೇಜಿಂಗೆ ಹಿರಿಯ ಸೊಳಸ ೨ ಜೀರಗೆ ಹೇಜಿಂಗೆ ಹಿರಿಯ ಸೊಳಸ ೨ (ಶಾಇ. IX–1, ೧೬೨-೩೦; 1106). ಹಿರೆ ಹದ್ದರಿ = ದೊಡ್ಡ ಎದುರಾಳಿ,–ಪ್ರತಿಸ್ಪರ್ಧಿ: ಹಿರಿಯುದ್ದರಿ: ರಾಮನೂ ಶೀನನೂ ಹಿರೆ ಹುದ್ದರಿಜಾಗಿ ತಿಳ್ಳಿಯಾಟವನ್ನು ಹೂಡಿರುವರು (ಶಿಲಾಶ. ೯೬). ಹಿರೇ ರೋಗ = ೧. ದನಗಳಿಗೆ ಬರುವ ಒಂದು ಬಗೆಯ ಸಾಂಕ್ರಾಮಿಕ ಕರುಳುಬೇನೆ : (೪). ೨. ಒಂದು ಬಗೆಯ ಕಂಪ್ಪರೋಗ : (೪).

[ದೇ.1 ತಮಿ. ಪೆರಿತು; ಮಲ. ಪೆರು ; ತುಳು. ಪೆರಿ ; ತೆಲು. ಪೇರು]

**ಪಿರಿದು₂** 'ಪಿರಿದುಂ' ನೋ.

**ಪಿರಿದುಂ, ಪಿರಿದು₃, ಹಿರಿದು₃** (ಅ). ೧. ಹೆಚ್ಚಾಗಿ ; ಅಧಿಕವಾಗಿ; ಬಹಳವಾಗಿ : ಕರಂ ಪಿರಿದುಂ ಗಲಪುತ್ರವಿಪರ್ಣಳಂ ಸಾರಿಕೆಯುಬರಲ್ಲದಭಿಸಾರಿಕೆಯೆಂಬರೆ ಬುದ್ಧಿಯುಳ್ಳವರ್ (ಶಂಕರಾ. ೪-೫೩); ಘನತೆ:ದೋಗರ್ಭದುರ್ಬಿಂಡಮುದೆ ಪಿರಿದುಂ ತನ್ನ ಪಾದಂಗಳಿಂ ಸನ್ಮಾನಿಸ್ಯಂದಾಗಣ್ಯಪುಣ್ಯಾಪಾಳತನುತತಿಯಿಂ ಮುಟ್ಟಿಯುಂ (ಶಾಸುಶಾ. ೦-೪೦) ; ಇದೆ ಮೊದಲೀದ ಗಗನದ ನಡುವೆ ಪಿರಿದುಂ ಬಳಸಿದಾ ವಾಯುತ್ರಿತಯದೊಳ್ (ಶಾಕ್ಯಶಾ. ೦-೩೦). **ಪಿರಿದು₂** : ೧. ಅನುಸಿತಾರಾದೊಡಂ ಪಲ್ಗಿಪ್ಪುದು ಪಿ[ಶಾಕಾಂ.ಬ]ರಿದು ಬಾಯಿಂದ ದ್ವಿಸ್ವಾಕ್ಷರಂ ಸಂಭವಿಸುತ್ತಿನ್ನಾಳ್ದ ಸಂದೇಶಮನೆ ಕರುಣಿಸಂಗಲ್ಲಿ (ಕಶ್ಯಾ. ೨೦) ; ಪಿರಿಯಂ ಅಃ ಪಿರಿದೀವನಿತ್ತುದು ನೆನವನೆ ಚೀ ಅದು ಗನೆಯಂ (ಕಸುದ. ೦೨೨ ಕೃಹೂ) ; ಸರಳ ಹತಿಯಲಿ ನಕುಲ ಸಾತ್ಯಕಿ ಬಿರುದ ಸಹದೇವಾದಿ ವೀರರು ಪಿರಿದು ನೊಂದರು (ಶುಪ್ಪಾ. ೦೩–೪೨). ೨. ಅತಿಶಯವಾಗಿ ; ವಿಶೇಷವಾಗಿ ; ವಿಂಗಿಲಾಗಿ : ಅಂತು ಪಿರಿದೊಲಗೆಗೊಟ್ಟರ್ವನ್ನಗಂ (ಶುಶಾ. ೯–೨೯ ಶ). **ಹಿರಿದು₂** : ೧. ಅಳು ಹಿರಿದಿದ್ದೇನು ಫಲ ಹೀಹಾಳಿದ್ದೈವಕೆ ಬೇಜಿ ಪರಿಯ ವಿತ್ರಾಳವಿಲ್ಲ ವಿಪಕ್ಷದೊಳು (ಶುಪ್ಪಾ. ೦೩-೬); ನೊಂದಿರಿ ಪಿರಿದು ನಿಷದಜಿಂವ (ಕೋಕಾ. ೦-೯-೬೩). [<ಪಿರಿದು₁]

**ಪಿರಿಪಿರಿ** (ನಾ). ಒಂದು ಅನುಕರಣಶಬ್ದ : ಅವರು ಯಾವಾಗಲೂ ಪಿರಿಪಿರಿ ಎನ್ನುತ್ತಾರೆ (ಶ್ಯಾಗಜು. ೦೬೬): ನೀವು ಇತ್ತೀಚೆಗಾಗಿ ಎಂತದೋ ಪಿರಿಪಿರಿ ಮಾತಾಡುತ್ತೀರಪ್ಪ (ಹೂಪ್ಪಿ. ೬೬). 'ಕಿಜಿಕಿಜಿ' ಪರಾ.

**ಪಿರಿಪಿರಿ ತಿರುಗು** = ಸುಮ್ಮನೆ ತಿರುಗಾಡು ; ಅತ್ತಿಂದಿತ್ತ ಅಲೆ : ದಿನದ ಇಪ್ಪತ್ನಾಲ್ಕು ತಾಸು ಪಿರಿಪಿರಿ ತಿರುಗಿ ದೇಶವುದ್ಧಾರಕ್ಕೆ ದೇಹವನು ತೇಯ ಬಲ್ಲ (ಕಂಪು. ೨೯-೨೩) , ಯಾವುದರ ಸಂಧಾನದಲ್ಲಿ ಎಷ್ಟೋ ವರ್ಷ ಅವಿಶ್ರಾಂತವಾಗಿ ಪಿರಿಪಿರಿ ತಿರುಗಿದ್ದೆನೋ ಅದರ ಸುಳಿವು ಈಗ ಹತ್ತುತ್ತಿದೆ (ಇಕ್ಕ್ಯ. ೩೪೬). **ಪಿರಿಪಿರಿ ಮಾಡು** = ತೊಂದರೆ ಕೊಡು ; ಪೀಡಿಸು ; ಕಿರಿಕಿರಿ ಮಾಡು : ಯಾವಾಗಲೂ ಏನೋ ಪಿರಿಪಿರಿ ಮಾಡುತ್ತ ಕಾಡುತ್ತಾಳೆ (ಹಳ್ಳಿಶಾ. ೦೦೬) ; ಬಸ್ಸಿನಲ್ಲಿ ಹೋಗೋಣ ಎಂದರೆ ಕಂಡಕ್ಟರ್ರು ಮಾನು ಬಸ್ಸಿನಲ್ಲಿಡಲು ಪಿರಿಪಿರಿ ಮಾಡೋದು ಬೇರೆ (ಹೂಪ್ಪಿ. ೫೩) ; ನೆಂಟಸ್ತಿಕೆ ವಿಷಯ ಇನ್ನು ಪಿರಿಪಿರಿ ಮಾಡಬೇಡ (ಶಿಲಾ. ೯೩).

**ಪಿರಿಯಕ್ಕರ** (ನಾ). [ಛಂದ] ದೇಸಿಛಂದಸ್ಸಿನ ಅಕ್ಷರವೃತ್ತದ ಐದು ಪ್ರಕಾರಗಳಲ್ಲಿ ಒಂದು ; ಪ್ರತಿಪಾದದಲ್ಲಿಯೂ ಮೊದಲು ಒಂದು ಬ್ರಹ್ಮಗಣ, ನಂತರ ಐದು ವಿಷ್ಣುಗಣ, ಕೊನೆಯಲ್ಲಿ ಒಂದು ರುದ್ರಗಣ–ಹೀಗೆ ಒಟ್ಟು ಏಳು ಗಣಗಳಿಂದ ಕೂಡಿದ, ನಾಲ್ಕು ಪಾದಗಳನ್ನುಳ್ಳ ವೃತ್ತ : ಮೊದಲೊಳಜಗಣಂ ಕುಂದದೆ ಬಳಿಕ್ಕತ್ತುವುಮುದ್ದುಗಣಂಗಳೆ ವಿಷ್ಣುವೆಕ್ಕೆಯಿಂ ತುದಿಯೊಳೆಜ ಠಾಣದೊಳ್ಳಿಯಂ ಕಂದರ್ಪರಿಪುಗಣಂ ನೆಲೆನೆಲಸಿ ನಿಲೆ . . . ಪಿರಿಯಕ್ಕರಂ (ಛಂದೋಂಬು. ೩–೨೪೨) ; ನಾಗವರ್ಮನು ೫ ಅಕ್ಕರಗಳನ್ನು ಹೇಳಿರುವನು :– ಪಿರಿಯಕ್ಕರ, ದೊರೆಯಕ್ಕರ, ನಡುವಣಕ್ಕರ, ಎಡೆಯಕ್ಕರ, ಕಿಜಿಯಕ್ಕರ (ಕೃಶಾ. ೦೨೩) 'ಕಿಜಿಯಕ್ಕರ' ಪರಾ. [ಪಿರಿ₄ (< ಪಿರಿದು₁) + ಅಕ್ಕರ₂]

**ಪಿರಿಯಣ್ಣ, ಹಿರಿಯಣ್ಣ** (ನಾ). ೧. ಹಿರಿಯ ಸಹೋದರ ; ದೊಡ್ಡ ಅಣ್ಣ : ಪಿರಿಯಣ್ಣಂಗೆಖಿಗುವುದೇಂ ಪರಿಭವವೇ (ಅಜಿತ. ೦೪-೬೩) ; ಪಿರಿಯಣ್ಣನ ನನ್ನಿಯನಾದರದಿಂ ಕಾಯಲ್ಕೆ ಪೆಜರ್ಗೆ ಬಾಣಸುಗೆಯ್ದಂ (ಗರಾಧು. ೬-೩೯) : ಧರಣೀಶಾ ಕೇಳ್ಮುನ್ನಿನ ಭವದೊಳ್ ಪಿರಿಯಣ್ಣಂ ನಾಂ ನಿನಗೆ (ಶಯುಶಾ. ೩-೬೯). **ಹಿರಿಯಣ್ಣ** : ೧. ಅವನು ಹಿರಿಯಣ್ಣನ ಮಾತಿಗೆ ಎಂದೂ ಎದುರಾಡಿದವನಲ್ಲ (ರೂಢಿ). ೨. ಒಂದು ಕ್ಷುದ್ರದೇವತೆಯ ಹೆಸರು : ಎಲ್ಲಾಯಿ ಯಕನಾತಿ ಬನದ ಶಂಕರಿ ಮಲ್ಲಗ ಜಟ್ಟಿಂಗ . . . ಕಲ್ಲವ ಚವಡಿಕ ಮಾರಿ ಮಸಣೆ ಜಕ್ಕ ಸಲ್ಲದ ಹಿರಿಯಣ್ಣಗುರುವ ಜಲದೇವಿ (ಶಿಶಾಸು. ೩೯-೨). [ಪಿರಿ₄ (< ಪಿರಿದು₁) + ಅಣ್ಣ₁]

**ಪಿರಿಯಪಸುಂಡಿ** (ನಾ). ಒಂದು ಊರಿನ ಹೆಸರು : ವಿಜಯಾಬ್ಬರಸಿ ತನ್ನ ಮಗಂ ಶಾನ್ತಿವರ್ಮ್ಮರಸು ಮಾಡಿಸಿ[ದ] ಪಿರಿಯ ಬಸದಿಗೆ ತನ್ನ ಸೀವಟಂ ಪಿರಿಯ ಪಸುಂಡ್ಡಿಗೆ ಪೋದ ಬಟ್ಟೆಯಿಂ ತೆಂಕ ಕಾಡಿಯೂರ ಪೊಲ[ದ] × × × ನೂಱುಮತ್ತರು ಮ[ತ್ತ]ರ್ಕ್ಕ್ಯಯ್ಯಂ ನಮಸ್ಯವಾಗಿ ಬಿಟ್ಟರ್ (ಶಾಇ. XX. ೦೯-೪೦ , ೯೮೦). [< ಪಿರಿದು₁ + ಪಸುಂಡಿ]

**ಪಿರಿಯಬಾಣಗೆಜ಼್** (ನಾ). ಒಂದು ಊರಿನ ಹೆಸರು : ಪಿರಿಯ ಬಾಣಗೆಜ಼್ ಪುನ್ನುತ್ತರಾಯಣಸಂಕ್ರಾನ್ತಿಯೊಳ್ಕಲ್ಯಾಣಭಟಾರರ ಶಿಷ್ಯರ್ ಚಿಲ್ಲಾಕಭಟಾರರ ಕಾಲು ಕರ್ಚಿ ಕೊಟ್ಟ ಮರ್ಯಾದೆಯೊಳಗೆ (ಎಕ. XII. ಶಿರಾ. ೨೯–೩೬ ; ೯೪೩). [< ಪಿರಿದು₁ + ಬಾಣಗೆಜ಼್ ?]

**ಪಿರಿಯಬಿದಿರೂರ್** (ನಾ). ಒಂದು ಊರಿನ ಹೆಸರು : ಬೀರನೊಳಂಬ ನೊಟ್ಟಿ ಕಿಪ್ಪನಾಡ ಪಿರಿಯಬಿದಿರೂರ ಕಲ್ನಡುಗೊಟ್ಟು (ಎಕ. X. ಗೌರಿಬಿ. ೪-೨೨ ; ಸು. ೯೨೦). [< ಪಿರಿದು₁ + ಬಿದಿರೂರ್]

**ಪಿರಿಯಬ್ಬೆ** (ನಾ). ದೊಡ್ಡ ತಾಯಿ ; ದೊಡ್ಡಮ್ಮ : ಆತನ ಪೂರ್ವಭವದ ಪಿರಿಯಬ್ಬೆ ದೇವಶ್ರೀಯೆಂಬಳ್ ಯಕ್ಷಿಯಾಗಿರ್ದಾಕೆ ಬಂದು (ಶಾಂತಿಪು. ೬೪). 'ಕಿಜಿಯಬ್ಬೆ' ಪರಾ. [ಪಿರಿ₄ (< ಪಿರಿದು₁) + ಅಬ್ಬೆ₁]

**ಪಿರಿಯಮಾಗುಂತೆ** (ನಾ). ಒಂದು ಊರಿನ ಹೆಸರು ; ಶಿವಮೊಗ್ಗ ಜಿಲ್ಲೆಯ ಸೊರಬತಾಲ್ಲೂಕಿನ ಈಗಿನ ಹಿರೇಮಾಗಡಿ : ಅಯ್ಯಣ ಪುತ್ರ ನಾಗರಪಣ್ಣ ಎಪ್ಪತ್ತು ಅಳುತಿಪ್ಪ ಪಿರಿಯಮಾಗುಣ್ಡೆಯ ಪೊಲಗ ಊರ್ಗ್ಗಮುಣ್ಡಗೆಯ್ಯುತ್ತಿರೆ (ಎಕ. VIII. ಸೊರಬ. ೪೦೩–೦೫ ; ೯೮೦). [< ಪಿರಿದು₁ + ಮಾಗುಂಡೆ (< ಮಾಗುಂಡಿ)]

**ಪಿರಿಯಮಾಂಗುಳಿ** (ನಾ). ಒಂದು ಊರಿನ ಹೆಸರು ; ᵖ ಈಗಿನ ಚಿಕ್ಕಮಗಳೂರು ಜಿಲ್ಲೆಯ ಹಿರೇಮಗಳೂರು : ಪಿರಿಯಮಾಂಗುಳಿಯ [ಕೊ] ಮರಯ್ಯನಾ [೦] (ಎಕ VIII. ತೀ-೧೩ ; ಸು. 1000) 'ಕಿರಿಯ ಮಾಂಗುಳಿ' ಪರಾ. [ < ಪಿರಿದು$_1$ + ಮಾಂಗುಳಿ$_1$ ]

**ಪಿರಿಯಮೆಟಪಿ** (ನಾ). ಒಂದು ಊರಿನ ಹೆಸರು : ಶ್ರೀಮಾತ್ ಪೆರ್ಮಾ(ನ)ಡ್ಡಿಧಿರಾಜರ್ ಪಿರಿಯಮೆಟಪಿಯ ಬಾಳಕೋಣಿಭಟರ್ಗ್ಗೆ ಕೊಟ್ಟ ಸ್ಥಿತಿ ಎನ್ನೆನ್ನೊಡೆ (ಕ್ಲಾಶಾ. IX-1. ೩೨-೭ ; ಸು. 10೫ನೆಯ ೩೩). [ < ಪಿರಿದು$_1$ + ಮೆಟಪಿ$_1$ ]

**ಪಿರಿಯಯ್ಯ, ಹಿರಿಯಯ್ಯ** (ನಾ). ೧. ದೊಡ್ಡಪ್ಪ : ನಮ್ಮ ಪಿರಿಯಯ್ಯ ಕಳೆದ ನಮ್ಮಯ್ಯನ ವಸುಧೆಯನು ಸೆಳೆದುಕೊಂಡನು ತನ್ನ ವಿದ್ಯಾಬಲದಿನಾತಂಗಳುಕಿ ಮತ್ಪಿತನೀ ಪುರದೆಡೆಗಿಹನು (ಶಾಕೃಚ. ೧೬-೨೭) ; ಭೀಮಂ ನಿನಗೆ ಪಿರಿಯಯ್ಯನಹನೆ (ಅಕುಚ. ೦೯-೦೭). ೨. ಒಬ್ಬಾತನ ಹೆಸರು : ಮಬ್ಬುಕಿಡಿಯ ತೆಂಕಣ ಕಡೆಯಿಂ ಪಿರಿಯಯ್ಯ ಪುಣಸೆವರಂ ನಟ್ಟ ಒಳಗಲ್ಲಿನ್ತಂ ಪಡುವಣ ತವರಿಂದೊಳಗೆ ಆಯ್ದು ಕೊಳಗ ಬಿದೆ ಪೂಜೊಲನುಮಿದು ಚನ್ದ್ರಾರ್ಕತಾರಂಬರಂ ಸಲ್ವುದು (ಎಕ. IV. ಹನ್ಕ. ೦೬-೦೯ ; 1021) ; ಶ್ರೀಮಾತ್ಕಂಚಲಮಹಾದೇವಿಯರು ಶ್ರೀಮತ್ಪಿರಿಯಯ್ಯಂಗಳ್ ಮೊದಲಾಗಿ ಸಮಸ್ತಪ್ರಧಾನರುಂ . . . ಪುನರ್ದತ್ತಿ ಮಾಡಿ (ಸೌಇಇ. XX. ೪೬-೬೯ : 1072). ಹಿರಿಯಯ್ಯ : ೧. ಕೆಲಬರೊಡಹುಟ್ಟಿದರು ಗುರುಗಳು ಕೆಲರು ಕೆಲಬರು ಮಾವ ಮೈದುನ ನಳಿಯ ಮಗ ಹಿರಿಯಯ್ಯ ಮುತ್ತಯ್ಯ ಮೊಮ್ಮನೆನಿಸುವರು (ಕುಮಾಭಾ. ೩-೨೭) ; ತಾತ ಕೇಳ್ ಪಾರ್ಥ ನಿನಗೆ ಹಿರಿಯಯ್ಯನಹನೀತ ಕಣಾ ಧರ್ಮರಾಜನೀ ನೃಪನ ಜಾವಾತನಾಗಿರ್ದಪ (ಕೃಪಾಚ. ೨೭-೦೦). [ ಪಿರ್$_4$ ( <ಪಿರಿದು$_1$ ) + ಅಯ್ಯ$_{11}$ ]

**ಪಿರಿಯರ** (ನಾ). ದೇವಸ್ಥಾನ ಮಂಂತಾದ ಪವಿತ್ರಸ್ಥಳಗಳಲ್ಲಿಯ ಹಿರಿಯ ಅಧಿಕಾರಿ,—ಧರ್ಮಾಧಿಕಾರಿ : ಪುರದ ಪೆರ್ಗ್ಗಡೆಗೆ ಮತ್ತ ರಾಜು ಪಿರಿಯರಂಗೆ ಮತ್ತರಾಜು (ಎಕ. XIII. ೦೬೨-೪೬ : 1056).

**ಪಿರಿಯರವಾಳಸೂಳೆ** — ಧರ್ಮಾಧಿಕಾರಿಗಳ ಪಾಲನೆಯಲ್ಲಿರುವ, ದೇವರ ಹೆಸರಿನಲ್ಲಿ ಬಿಟ್ಟ ವೇಶ್ಯೆ,—ಸೂಳೆ : ದೇವರ ಭೋಗಕ್ಕೆ ನಡೆವ ಪಿರಿಯರಮಾಳ ಸೂಳೆಗೆ ಮತ್ತರ್ನಿರ್ವ್ವರ್ತತ್ತು (ಎಕ. XV. ೪೯-೪೪ ; 1060). [ಪಿರ್$_4$ (< ಪಿರಿದು$_1$) + ಅರ$_8$ (< ಅಱ$_8$)]

**ಪಿರಿಯರವಣ** (ನಾ). ಒಂದು ಬಗೆಯ ತೆರಿಗೆ ; ಹಿರಿಯ ಧರ್ಮಾಧಿಕಾರಿಗಳಿಗೆ ಕೊಡುವ ತೆರಿಗೆ (?) : ಅಲ್ಲಿ ಮನ್ನೆಯ ನಿಬನ್ಧದ ಕಿಱುದೆಱೆಗಳಮಾವುವೆನ್ದಡೆ ಮನೆವಣಂ ಪಿರಿಯರವಣಂ ಧನಬಳಂ . . . ಇನ್ನೀ ಗಡಿಪ ತೆಱೆಗಳ್ಮಂ . . . ಸರ್ವ್ವಬಾಧಾಪರಿಹಾರವಾಗೆ ಬಿಟ್ಟು ನಡೆಯಿಸಿದ (ಸೌಇಇ. XX. ೪೭-೩೬, 1076). [ ಪಿರಿಯರ + ವಣ$_3$ ]

**ಪಿರಿಯರಸಿ, ಹಿರಿಯರಸಿ** (ನಾ). ದೊಡ್ಡ ರಾಣಿ : ಪಟ್ಟದ ರಾಣಿ ; ಅಗ್ರಮಹಿಷಿ : ಪಿರಿಯರಸಿಯ ಪಟವೇಟದ ಪರಿವಿಡಿ ಮಗುಟ್ಟಿಂ ಕೊನೆರ್ತುದು (ಶಾಂತಿಪು. ೭-೩೨) ; ಪಡಿಯಱ ದೊರೆಯನ್ನ ಪಿರಿಯರಸಿ ಪಾಂಬಬ್ಬೆ ತರೆವಱೆದು ಮೂಱವತ್ತು ವರಿಸಂ ತಪಂಗೆಯ್ದುಂ ನೋನ್ತುಷ್ಟಿಯಮಾಭಿನಮೇಱೆದರ್ (ಎಕ. VI. ಕಡೂಕು. ೧-೦೯ : 971) ; ಮದನಂ ಪಿರಿಯರಸಿಯ ಪೆರ್ಗಡೆಗಳ ಬರವಿನ ಕಾರಣಮನಱಿದು (ಶಾಂತಿಪು. ೯-೩೬). ಹಿರಿಯರಸಿ : ಅಕ್ಕತಂಗಿಯರ್ಪ್ಪವರು ಒಬ್ಬನ ಅರಸಿಯರು ಕಿಱಿಯಕ್ಕನ ಕಿಱಿದುವರೆ ಹಿರಿಯರಸಿ ಕುಂಟಣಿ ಪಿರಿಯರಸಿಯ ಕೂಡುಪಿರೆ ಕಿಱಿಯರಸಿ ಕುಂಟಣಿ (ಕೂಸ್ವಸಂ. ೨೨೨—೩೬) ; ಸೇರಿದವು ಪೂರ್ಣಾಂಶ ಭೋಗಗಳು ಹಿರಿಯರಸಿ ಕಿಱಿಯರಸಿಯರಿಬ್ಬರಿಗೆ (ಶಿಕಶಾಂ. ೦-೭-೩೬). 'ಕಿಱಿಯರಸಿ' ಪರಾ. [ ಪಿರ್$_4$ (< ಪಿರಿದು$_1$) + ಅರಸಿ ]

**ಪಿರಿಯರಾಜಾನ್ನ** (ನಾ). ಒಂದು ಬಗೆಯ ಬತ್ತ : ಪಿರಿಯರಾಜಾನ್ನ ಜೀರಿಗೆರಾಜಾನ್ನವು ಪುರಾತರ ಸೊಗಸು ರಾಜಾನ್ನ ಪರಿಶೋಭಿಸುವ ಕಸ್ತೂರಿ ರಾಜಾನ್ನದ ಪರಶಾಲಿಯ ಗದ್ದೆಯಹುವು (ಕಾಂಕಾ. ೩-೬೬). [<ಪಿರಿದು$_1$+ರಾಜಾನ್ನ]

**ಪಿರಿಯಹೊಟ್ಟ** (ನಾ). ಒಂದು ಊರಿನ ಹೆಸರು; ᵖ ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನ ಈಗಿನ ದೊಡ್ಡಹೊಮ್ಮ : ಎಡೆನಾಡ ಪಿರಿಯ ಹೊಟ್ಟದ ಪನ್ನಿರ್ಬ್ಬರುಂ . . . ಕಂಚಿಭಟರ್ಗೆ . . . ಕಾಲಂ ಕರ್ಚ್ಚಿ ಧಾರೆಯೆಱೆದು ಕೊಟ್ಟರ್ (ಎಕ. III. ನಂಜಕ. ೦೯೩-೩, 977). [ < ಪಿರಿದು$_1$+ಹೊಟ್ಟ$_{10}$ (< ಪೊಟ್ಟ) ]

**ಪಿರಿಯಾದಿ** 'ಫಿರ್ಯಾದು' ನೋ.

**ಪಿರಿಯಾಯ್ಚ** (ನಾ). ಒಬ್ಬಾತನ ಹೆಸರು ; ನಯಮುಂ ಮೆಱೆವಂ ತತ್ಸುತಸಯನಾಯ [೦] ಪರನೆನಿಸಿ ನೆಗಟ್ದ ಪಿರಿಯಾಯ್ಚನನಾಶ್ರಯಣೀಯ ನಾದನಾ ಕ್ಷತ್ರಿಯಾದಿಗಂ ಸಕಳ ಸಮಯಿ[ಗಂ ಬು] ಧಜನಕಂ (ಸೌಇಇ. XI-1. ೪೩-೦೦; 980). [ಪಿರ್$_4$ (<ಪಿರಿದು$_1$) + ಆಯ್ಚ$_{10}$ (ᵖ ← ಸಂ. ಆದಿತ್ಯ)]

**ಪಿರಿಯಿಂಡಿ** (ನಾ). ಒಂದು ಊರಿನ ಹೆಸರು; ᵖ ಈಗಿನ ಬಿಜಾಪುರ ಜಿಲ್ಲೆಯ ಇಂಡಿ : ಅಲಂಪೂರ ಬಟ್ಟೆಯಿಂ ಪಡುವ ಕಿಱಿಯಿಣ್ಡಿಯ ಬಟ್ಟೆಯಿಂ ಪಿರಿಯಿಣ್ಡಿಯ ಸೀಮೆಯಿಂ ಮೂಡಲನ್ತೆರಡುಂ ಬಟ್ಟೆಯಿಂ ದೊಳಗೆ . . . ಧಾರಾಪೂರ್ವ್ವಕಂ ಮಾಡಿ ಬಿಟ್ಟ ನೆಲಂ (ಸೌಇಇ. XX. ೨೦-೬೦ : 1010). [ ಪಿರ್$_4$ (< ಪಿರಿದು$_1$) + ಇಂಡಿ$_0$ ]

**ಪಿರಿಯಾಚಲ್, ಹಿರಿಯಾಚಲು, ಹಿರೀಚಲು** (ನಾ). ಒಂದು ಬಗೆಯ ಈಚಲುಮರ; ದೊಡ್ಡ ಈಚಲು : ಪಿರಿಯಾಚಲ ವಣ್ಣಂ ಸರಿಕನ ಬಿತ್ತಮರ್ದಮಳ್ಳಿ ಮೂಲಂಗಿಯ ಬೇರಿರಿಸಿನ ಮಡುವಾಗಲ್ ಎಷಹರ ಮಾಕ್ಕಂ (ಖಚುರ. ೩-೦೦೬). ಹಿರಿಯಾಚಲು : "ಇಂದ್ರಾಸಂ—ಹಿರಿಯಾಚಲು" (ಓಕಂ. ೦೩). ಹಿರೀಚಲು : "ಅಶೋಕಃ—ಅರಳಿ, ಅಶೋಕೆ, ಹಿರೀಚಲು" (ಓಕಂ. ೩). 'ಕಿಱೀಚಲ್' ಪರಾ. [ಪಿರ್$_4$ (< ಪಿರಿದು$_1$) + ಈಚಲ್ (< ಈಂಚಲ್)]

**ಪಿರಿಯುಬ್ಬಣ, ಹಿರಿಯುಬ್ಬಣ** (ನಾ). ಒಂದು ಬಗೆಯ ದೊಡ್ಡ ಮೊನಚಾದ ಆಯುಧ (?) : ಪಿರಿಯ [ಯು]ಬ್ಬಣ ಕಠಾರಿಯಿಂ ಕಿವಿದಾಡಿ ಗದೆಗಳಿಂದ ಧುರದೊಳ್ಬರು ಹೆಣಗಿ ಬಹುಲಾಗುವೇಗದಿಂ . . . ಕಾದಿದರು ಖಾತಿಯಿಂದುಭಯಭಟರು (ಕುಹಂಗ. ೬೩-೨೯). ಹಿರಿಯುಬ್ಬಣ : ಹಿರಿಯುಬ್ಬಣದ ಸಬಳದ ಶೂಲ ಸುರಗಿಯ ಕಣೆಯ ಹೊಱೆ ಚಾಚಿದವು ಕಟಕಾಚಾರ್ಯನಿದಿರಿನಲಿ (ಕುಮಾದ್ರೋ. ೦೫-೦೯); ಹಿರಿಯುಬ್ಬಣದ ಜಡಿವುತ ಕುದುರೆಯ ಮೇಲೆ ಹರುಷದಿಂ ಬಹನಾರಿವನು (ಕುಶಾಶಾಂ. ೨೦-೯೦) ; ಹಿರಿಯುಬ್ಬಣವ ಜಳಪಿಸಿ ವಿಸಾಸೆಯ ಮೇಲೆ ದೆರೆಳಡುತತಳುಳಪೌರುಷದ ಬಿರುದಿನಗ್ಗಳಿಕೆಗಳನು ಪೊಗಳಿಸಿಕೊಳ್ಳ ದೊರೆ ಯಾವನುಸಿರು (ಕಿಂಪಂ. ೦೩-೩೦). [ಪಿರ್$_4$ (< ಪಿರಿದು$_1$) + ಉಬ್ಬಣ$_1$]

**ಪಿರಿಸಂದಿ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಅಣಾವಶ × × × ಯಾಲೋಕನೆಮ್ಬುದು ಎಬ್ಬತ್ತೈದು ಪೆಸ್ಸಿಯಂ ಕೊನ್ದತ್ತು ಇದಾವೆರಸಿ ಯಾ ನಾಯಕಥಳಗನೆಮ್ಬುದು ಪಿರಿಸನ್ದಿ ವಗ ಯಿಪ್ಪತ್ತಱು ಪನ್ದಿಯಂ ಕೊನ್ದನ್(ಎಕ. X. ಮುಳಬಾ. ೯೩-೨; ಸು. 975). [ಪಿರ್$_4$(<ಪಿರಿದು$_1$)+ಸಂದಿ?]

**ಪಿರುಕಣೆ** 'ಪಿರಕಣೆ' ನೋ.

**ಪಿರುಚು** 'ಪಿರಿಚು' ನೋ.

**ಪಿರ್ಕಿ** 'ಪಿರಿಕ್ಕಿ$_2$' ನೋ.

Δ **ಪಿರ್ಕು** 'ಪಿಕ್ಕು' ನೋ.

**ಪಿರ್ಗು$_1$** 'ಪಿಳ್ಗು' ನೋ.

**ಪಿರ್ಗು೧**, ಹಿಗ್ಗು೧, ಹಿರ್ಗು, ಹಿಳ್ಗು೧ (ನಾ). ಸಂತೋಷ ; ಆನಂದ : ಇಂತಪ್ಪ ಪಿರ್ಗಿಂದಮೋ ಪೆರ್ಚುಗೆನ್ನೆಲ್ಲ ಪಗೆಗಳುಂ ಮೇಣ್ ನೀನುಮವರ ರೊಳಗೆ ಒರ್ವನ್! (ಅದ್ಭಕ್ಕ. ೩೦-೧೧೨). ಹಿಗ್ಗು೧ : ಹಿಗ್ಗು ಬಡವಗೆ ಹೊಲ್ಲ ಸಿಗ್ಗು ಸೂಳೆಗೆ ಹೊಲ್ಲ ನುಗ್ಗಿಯು ಹೂಗೆ ವಾಳೆ ಹೊಲ್ಲ (ಸರ್ವಜ್ಞ. ೮೨೪); ಆನಂದ ಅಲೆಯಾದಾಗ ಹಿಗ್ಗಾಗಿಯೂ ಘನೀಭೂತವಾದಾಗ ಸೌಂದರ್ಯವಾಗಿಯೂ ಪರಿಣಮಿಸುತ್ತದೆ (ಶ್ರೀಂದಶ. ೧೬); ನಿಸರ್ಗವನ್ನುಂಡ ಅವನ ಸರಳ ಹೃದಯವು ಅದನ್ನು ಬಣ್ಣಿಸುವುದರಲ್ಲಿ ಹಿಗ್ಗಿನ ಬುಗ್ಗೆಯಾಗಿದೆ (ಕಕ್ಕೂ. ೨೦೦). ಹಿರ್ಗು : ತನುಜಾತರೊರ್ಗಿಸುತ ವೈವಾಹ ಒರ್ಗಿನನುಸರ್ಗಿ ಸಂಪರ್ಗಳಿಂದ್ಯೆದಿ ಬರುತ (ಅಕಚು. ೩೨-೯). ಹಿಳ್ಗು೧ : "ಹರ್ಷಃ . . . ಹೃಷ್ಟಂ, ಹೃಷ್ಟಿಃ — ಈ ೭ ಹಿಳ್ಗು" (ಅಭಿ. ೦೯೩). [<ಪಿಳ್ಗು]

**ಪಿರ್ರೆ** (ನಾ). ಅಂಡು ; ಕುಂಡಿ ; ನಿತಂಬ : ಕಟಿ: "ಕಟೀ, ಶ್ರೋಣಿಃ, ಶ್ರೋಣೀ, ಕಕುದ್ಮತೀ—ಅಂಡುಗಳ ಹೆಸರುಗಳು, ಪಿರ್ರೆಗಳು" (ಸಿಕ್ಕಾ೦ಶ. ೮೯೦). [ ದೇ. ॥ ತೆಲು. ಪಿಱ್ಱ ; ಕೋಲಾ. ನಾಯ್ಕಿ. ಪಿರ್ರ ]

**ಪಿಲ** (ನಾ). ಹಲಸಿನ ಮರ : ಪಿಲ (ಹಲಸು) ಪಿಜ (ಹಬ್ಬಲಸು) . . . ಇತ್ಯಾದಿಗಳನ್ನು ಸಂಕೇತವಾಗಿರಿಸಿಕೊಂಡವರೆಂಬ ಅರ್ಥದಿಂದಲೋ . . . ಅಥವಾ ಅವುಗಳನ್ನು ವಿಶೇಷವಾಗಿ ಪೋಷಿಸುತ್ತಿದ್ದವೆಂಬರ್ಥದಿಂದಲೋ ಬಂದ ಕುಲನಾಮಗಳು. ಪಿಲತ್ತಾಯ, ಪಿಜತ್ತಾಯ (ಕುಸಂಶಾ. ೦೩೩).
[ ದೇ. ॥ ಮಲ. ಪಿಲಾವು ; ತುಳು. ಪಿಲ, ಪೆಲ ]

**ಪಿಲಿಕಂದೋಡಿ** (ನಾ). ಒಂದು ಬಗೆಯ ಮಂಡಲದ ಹಾವು ; ದೊಡ್ಡ ಜಾತಿಯ ಕನ್ನಡಿ ಹಾವು : ನಾಗರ ಹಾವಲ್ಲ. ಚಿಟ್ಟೆಹುಲಿಯಂತೆ ಅದರ ಮೈಮೇಲೆ ಪಟ್ಟೆಮುದ್ರೆ . . , ಅಯ್ಯೊ ಇದು ಪಿಲಿಕಂದೋಡಿ (ಚಾಣ. ೩೦). [ ದೇ. ॥ ತುಳು. ಪಿಲಿಕಂದೊಡಿ ]

**ಪಿಲಿಚಾಮುಂಡಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಈತನ ಮನೆಯೊಳಗೆ ಕೆಂಪುವರ್ಣದ ಪಿಲಿಚಾಮುಂಡಿ ಬಂದು ಗಡಬಡಗುಟ್ಟುತ್ತಾ ಹೋಗುತ್ತದೆ (ಚಾಸ್ಕಮು. ೨೪).
[ ಪಿಲಿ?(ಪ ← ತುಳು. ಪಿಲಿ=ಹುಲಿ) + ಚಾಮುಂಡಿ ]

**ಪಿಲು** (ನಾ). ೧. ಒಂದು ಬಗೆಯ ಮರ ; ಉಗುನಿ ; ಪೀಲು : "ಪಿಲು ಸಹಸ್ರಾಂಶುವೆನಲಾಗಿನಿ" (ಶಂಗಶಾ. ೯೬-೯೯). ೨. ಹುಲ್ಲು ; ತೃಣ. ೩. ಕಲ್ಲು ; ಶಿಲೆ : "ಕುಡಾತೀ ತೃಣಂ ಅಶ್ಮಂಗಳ್ ಪಿಲುವಕ್ಕುಂ" (ಜಾಹಶ. ೦೩೩). 'ಪೀಲು೧' ಪರಾ. [ ಸಂ. ]

**ಪಿಲ್ಲ** (ನಾ). ರೋಗದಿಂದ ನೀರು ಸುರಿಯುವ ಕಣ್ಣನವನು ; ಸೋರುಗಣ್ಣನವನಂ : "ಪಿಲ್ಲಃ, ಚಿಲ್ಲಃ, ಚುಲ್ಲಃ — ಈ ೩ ಅಱುಗಣ್ಣನವಂ" (ಶಬಾಮ. ೯೯-೯೩೩). [ ಸಂ. ]

**ಪಿಲ್ಲಕೆ** (ನಾ). ಹೆಣ್ಣಾನೆ; ಪಿಡಿ. [ ಸಂ. ಪಿಲ್ಲಕಾ ]

**ಪಿಲ್ಲಣೆ** (ನಾ). ಒಂದು ಬಗೆಯ ಆಯುಧ ; ಪರಿಘ : ನನೆಯಂಬನೆಂಬ ಮಲ್ಲನ ಕನಕದ ಪಿಲ್ಲಣೆಗಳುಪಮೆಗೀವಯಿಸಿದುವೆಂದೆನಿಸಿ ನಸುವಾಗಿ ಜಂಪು ಗಳನಸುಂ ಒಪ್ಪೊಗೆವುವು (ಶಾಂತೀಶ್ವ. ೦೪-೦೫೯); ಮಲ್ಲರ ಸದನದ ಕೈಗಳ ಪಿಲ್ಲಣೆಗಳ ಕಾಯಬಲದ ಕಳನಂ ಪುಗುತಪ್ಪಲ್ಲಿಯಭಿನಯದಗುರ್ವುಗಳೆಲ್ಲರ ಬಗೆಗೀಯ ಬಹಳ ನಯಮಂ ಭಯಮಂ (ಕುಮಾಶ. ೬-೬೩). [ ? ]

**ಪಿಲ್ಲಣಿಗೆ** (ನಾ). =ಪಿಲ್ಲಣೆ : "ಪರಿಘಮೆನೆ ಪಿಲ್ಲಣಿಗೆ" (ಶಂಗಶಾ. ೩೩-೪೭); ಸೊಕ್ಕಿನೆಯ ಕೆಯ್ಯ ಕರಿಯ ಪಿಲ್ಲಣಿಗೆಯುಂಮಗುರ್ವುಮದ್ಭುತವಾಗೆ (ಅರಿಶ. ೯-೬೬ ಪ); ಪಿಲ್ಲಣಿಗೆ ಹರಿಗೆ ಚಕ್ರಂ ಭಲ್ಲೆಯಮುಸಿತಾದ್ರಿಮುದ್ಗರಂ ಕ್ಷುರಿಕೆಗಳೆಂಬಿಲ್ಲಾ ಶಸ್ತ್ರಮನಾಂತತಿಭುಲ್ಲವದಿಂ ವೀರರದಟನಿಂ ಪರಿಯಿಟ್ಟರ್ (ತ್ರಿಶು. ೬-೬). [ಪಿಲ್ಲಣ+—ಗೆ]

**ಪಿಲ್ಲಿ೧**, ಪಿಲ್ಲ(ನಾ). (ಹೆಂಗಸರು) ಕಾಲಿನ ಬೆರಳಿಗೆ ತೊಡುವ (ಉಂಗುರದಂತಹ) ಒಂದು ಆಭರಣ : ಮುತ್ತಿನ ದಂಡೆ . . . ಮುತ್ತಿನುಂಗುರಂ ಮುತ್ತಿನ ಪಿಲ್ಲಿಯೆಂಬ ಸದಲಂಕರಣಂಗಳನೆಯ್ದೆ ತೊಟ್ಟು ತಾಂ ಮುತ್ತಿನ ಬೊಂಬೆಯೆಂಬ ಬಗೆಯಂ ನೆಱೆ ಪುಟ್ಟಿಸುತಿರ್ದಳಾಕ್ಷಣಂ (ಜಾಶಶ. ೬-೦೦೩); ವರ ಹಸ್ತಕಡಗ ಮುಂಟಿಗೆ ಪಿಲ್ಲಿ ಕಾಲುಂಗುರಗಳಿಂ ಕುವರಿಯೊಪ್ಪಿದಳು (ಕಂಶ್ರಕಾಂ. ೯-೦೨); ಪಿಲ್ಲಿ ಕಾಲಿನೋಳ್ ಚೆಲ್ಲಿದ ನೆರಿಗ್ಯೋಳ್ ಕಲ್ಲೇಲಿ ಕಾಲ ಕೋಳೆಯೋಳ್ ಲಕ್ಷ್ಮವ್ವ ಪಿಲ್ಲಿ ಹೋರೆದವ್ವ ದುಸಿಲಿಗೆ (ಜಾಹಚ. ೨೩). ಪಿಲ್ಲಿ : ಅಳವಡಿಸಿ ತೋಳ ಬಾಪುರಿ ಬಂದಿ ಭುಜಕೀರ್ತಿಗಳನು . . . ಕಾಂಚಿದಾಮ ರುಳಿಯಾಯಂದಿಗೆ ಪಿಲ್ಲೆ ಮೆಂಟಿಕೆಗಳು (ಜಾಶೋ. ೦೦-೨೫); ಕಾಲು ಕಡಗ ಪಿಲ್ಲೆ ಕಿವಿಯಾಗ್ಯಿತ್ತಾಳೆ ವಾಲಿ. . . ಜಾಣೆ ನೀ ಯಾ ನಾಡದ ಕೊರವೇ (ಜಾಲ್ಗಿ. ೦೬); "ವಜ್ರರ ಹಚ್ಚಿದ ವಾಲೆ ಗೆಜ್ಜೆ ಹಚ್ಚಿದ ಪಿಲ್ಲೆ ಹೆಜ್ಜೆ ಹೆಜ್ಜೆಗೆ ನಗಿಸುವ ರಾಯರೊಡನೆ ವಾದಿದ ದುಳು" ನಿತ್ಯಾನಿತ್ಯ ಜ್ಞಾಪಕ ಬಂದು ವಿಧವೆಗೆ ಜೀವನದಲ್ಲಿ ಬೇಸರಿಕೆಯನ್ನು ಹುಟ್ಟಿಸುವುದು (ಜಾಶಾ. ೩೯).: 'ಕಿಱುಪಿಲ್ಲಿ' ಪರಾ.
[ದೇ.॥ ತಮಿ. ಪಿಲ್ಲಾಣಿ ಬಿಲ; ಮಲ. ಪೀಲಿ; ತುಳು. ಪಿಲ್ಲಿ, ಪಿಲ್ಲೆ ತೆಲು. ಪಿಲ್ಲಾಡಿ, ಪಿಲ್ಲಾಣಿ]

**ಪಿಲ್ಲಿ೨** (ನಾ). ಬೆಕ್ಕು : ಮಾನವ ಮುಱಿದು ರಣದಲ್ಲಿ ಪಿಲ್ಲಿಸನ್ನಿಭನಾವನ ಮಾಳ್ಪನು (ಪಶಶ. ೯-೩೩). [ದೇ.॥ ತಮಿ. ತೆಲು. ಕೋಲಾ. ನಾಯ್ಕಿ. ಪಿಲ್ಲಿ; ಪರ್ಜಿ. ಬಿಲೆಯ್./ಹಿಂ. ಬಿಲ್ಲಾ, ಬಿಲ್ಲೀ./ಸಂ. ಬಿಡಾಲ]

**ಪಿಲ್ಲಿಹೆಸರ**, ಪಿಲ್ಲಿಹೆಸರು (ನಾ). ಒಂದು ಬಗೆಯ ಸಸ್ಯ ; ಕಾಡುಹೆಸರು ; ಮುದ್ಗಪರ್ಣಿ : ನರಿಹೆಸರು. ಪಿಲ್ಲಿಪೆಸರ (ಪ್ರ೩ಿ ೬೦-೦೩೩). ಪಿಲ್ಲಿಹೆಸರು: "ನರಿಹೆಸರು, ಪಿಲ್ಲಿಹೆಸರು, ವನಮುದ್ಗ" (ಪ್ರಾ. ೦೦೯).
[ ←ತೆಲು. ಪಿಲ್ಲಿಪೆಸರ ]

**ಪಿಲ್ಲಿಯುಂಗುರ** (ನಾ). =ಪಿಲ್ಲಿ೧ : ಪಿಲ್ಲಿಯುಂಗುರವು ಚಕ್ಕೆಸೆಯ ಸಲ್ಲಲಿತಾಂಗಿಯ ಕೆಂಬಚ್ಚೆ ಮೆಱೆದುವು ಚೆಲ್ಲುವಂತನುರಾಗರಸವ (ಅಶ. ೧೦-೬೨).
[ ಪಿಲ್ಲಿ೧+ಉಂಗುರ ]

**ಪಿಲ್ಲಿಹೆಸರು** 'ಪಿಲ್ಲಿಪೆಸರ' ನೋ.

**ಪಿಲ್ಲೆ** 'ಪಿಲ್ಲಿ೧' ನೋ.

**ಪಿಶಂಗ** (ಗು). ೧. ಕೆಂಪು ವಿಂಶ್ರಿತವಾದ ಕಂದುಬಣ್ಣದ : ಭಾಸ್ಕರ ತನೂಜೆಯನುಭಯತಟನಿಕಟ ಕುಸುಮನಿವಹ ತತ್ಪರಾಗಪಟಳಪಿಶಂಗತರತ್ತ ರಂಗಸರೋಜೆಯಂ ಮೆಚ್ಚಿ (ಶಂಶಕ. ೩-೩೮ ಪ). ೨. ನಸುಕೆಂಪಾದ : ಹರಿನೀಲಾಚಲದಿಂ . . . ಪಿಶಂಗಕಮಳಶ್ರೀಲೀಲೆಯಿಂ ಪಂಚರತ್ನರುಚಿ ವ್ಯಾಪ್ತಿ ನಿರಂತರಂ ನೆಗೞ್ದನು (ಅಶ. ೦೦-೨೨). 'ಪಿಶಂಗತಲ' ಪರಾ. (ನಾ). ೩. ಕಂದುಬಣ್ಣ ; ಕಪಿಲವರ್ಣ : "ಪಿಂಗಃ, ಪಿಶಂಗಃ—ಈ ೨ ಕಪಿಲವರ್ಣಂ" (ಶಬಾಮ. ೦೨೦-೩೦); "ಪಿಂಗಳಂ ಕದ್ರು ಕಡಾರ ಚಂಡಸೀಮ ನಸುಗೆಂಪು ಪಿಂಗಂ ಪಿಶಂಗಂ ಕಪಿಲ ಶ್ಯಾಮವೆನೆ ಹಸುರುಗೆಂಪದು" (ಶಂಗಶಾ. ೦೩೦-೩೦). ೪. ಕೆಂಪು ಬೆರೆತ ಹಳದಿಯ ಬಣ್ಣ ; ಹೊಂಬಣ್ಣ : ನೀರಾಜನದೀಪಕಳಿಕಾಶ್ರೇಣಿತೋಕಾಂಶುದಾರಾತಪ ಪ್ರಸರಪಿಶಂಗಮುಂ . . . ಎನಿಸಿ ಗೋವರ್ಧನನಗಂ ಸೊಗಯಿಸೆ (ಜಗಿಶ. ೯-೬೨ ಪ) ; ಒಂದೆಡೆಯಲ್ಲಿ ಮಜ್ಜದಿಥವಾನದ ಕೊಟ್ಟದಿನೆಯ್ದೆ ಕೃಷ್ಣಮಾಯ್ತೊಂದೆಡೆಯಲ್ಲಿ ವಾರಿಜರಜೋವ್ರಜದಿಂದೆ ಪಿಶಂಗಮಾಯ್ತು . . . ಜಾತಿಕಾವಳಿಯಮೊಪ್ಪ ಮನೋಹರಮಾದುದೆತ್ತಲುಂ (ಜಾಶಶ. ೦-೦೦೬) ; ಇಂದುಬಿಂಬಂ ಸಾಲಾಗಿಯರುಣಂ ಪಿಶಂಗಮಪಾಸಿತರುಚಿಗಳೋಳ್ಪಿಸಿ ಪೂರ್ವಾದ್ರಿಯಂಬ ದೇವಗೃಹದ ಮೇಲಿಟ್ಟ ಮಣಿಗಳಸ ಪೊಂಗಳಸ ರಜತಕಳಶಂಗಳೆನೆ ಚೆಲ್ವಾದುದು (ಕಂಶ. ೯-೦೯). [ಸಂ.]

**ಪಿಶಂಗತಲ** (ನಾ). ನಸುಕೆಂಪುಬಣ್ಣದ ಅಂಗಾಲು : ಬಾಲಕನ ಪಿಶಂಗತಲಂ ಬಾಲಕನ ಸ್ಖಲಿತಚಲನವಿನ್ಯಾಸದ ಲೀಲಾಲಸಮಂ ಕಾಣದ ದುರ್ಲೀಲವೆನಿಪ್ಪೊಂದು ಜೀವನಂ ಜೀವನಮೇ (ಮುಳ್ಳ. ೬-೦೦೬). [ಸಂ.]

**ಪಿಶಂಗತೆ** (ನಾ). = ಪಿಶಂಗ ೪ : ತುಂಗತೆಯಿಂ ಕನಕಾಂಶು ಪಿಶಂಗತೆಯಿಂದಱಿಯಲಾದುದಿಲ್ಲಖಿಳ ಮರುತ್ತುಂಗವನ ನೆಗೆದ ಭುಜಶಿಖರಂಗಳುಮಂ ಮೇರುಶಿಖರಿಶಿಖರಂಗಳುಮಂ (ಅಜಿ. ೪-೪೪). [ಸಂ. ಪಿಶಂಗತಾ]

**ಪಿಶಂಗಾಶ್ಮ** (ನಾ). ಒಂದು ಬಗೆಯ ರತ್ನ ; ಗೋಮೇದಕ : "ಬಂಧುರ ಪಿಶಂಗಾಶ್ಮವೆನೆ ಗೋಮೇಧಿಕಂ" (ಜಂಗಣಾ. ೩೦-೬). [ಸಂ. ಪಿಶಂಗಾಶ್ಮನ್]

**ಪಿಶಂಗಿತ** (ಗು). ಹೊಂಬಣ್ಣದಿಂದ ಕೂಡಿದ : ಕುಸುಮಕೇಸಲಯಮರಾಗ ಪಿಶಂಗಿತರಂಗತ್ತರಂಗವಾದಂತೆ (ಅಜಿ. ೬-೦೦೦ ಪ); ಸ್ವಸ್ತಿ ಸಮಸ್ತಮಂಡಳಿಕಮಸ್ತಕಪುಷ್ಪರಜಃಪಿಶಂಗಿತಾಂಘ್ರಿಸ್ತಬಕದ್ವಯಂ (ಶಾಂತಿ. ೦೦-೬೪) ; ದಳಿತಾಂಭೋಜರಜಃಪಿಶಂಗಿತಲಸದ್ಗಂಧಾದಿ ತೀರ್ಥೋದಕಂ (ಸಂಕ್ರ. ೦೨-೦೦೬). [ಸಂ.]

**ಪಿಶನಾರಿ** 'ಪಿಸನಾರಿ' ನೋ.

**ಪಿಶವಿ** 'ಪಿಸಿವಿ' ನೋ.

**ಪಿಶಾಚ** (ನಾ). ೧. (ಸ್ವಂತವಾದ ಭೌತಿಕಶರೀರವಿಲ್ಲದೆ, ಇತರ ಭೌತಿಕ ಶರೀರಗಳ ಮೂಲಕ ತನ್ನ ಪ್ರಭಾವವನ್ನು ವ್ಯಕ್ತಪಡಿಸುವುದೆಂದು ನಂಬಲಾದ) ಒಂದು ಬಗೆಯ ಅಮಾನುಷಶಕ್ತಿ ; ದೆವ್ವ ; ಭೂತ : ಪಿಶಾಚವೇಷಮಂ ಕೈಕೊಂಡರಮನೆಯಂಗಣದೊಳಿರ್ದು (ಶಬ್ದಾ. ೪೯-೨೬); ನಿಜಜೀವಂ ಪರಲೋಕದೊಳ್ ನಿಜಮಹಾಮಾಂಸಂ ಪಿಶಾಚಾಸ್ಯದೊಳ್ . . . ನಿಜಕಾಯಂ ಕುರುಭೂಮಿಯೊಳ್ ನೆಲಸೆ (ಗದಾಯು. ೩-೩); ಆರ್ವರ್ ಪಿಶಾಚರಬ್ಬರಿಪ ಜಟ್ಟಿಗರುಬ್ಬುವ ಚಂಡಿ ರಕ್ತಮಂ ಪೀರ್ವರ್ ಕರಾಳಿ (ಶ್ರೀಪು. ೨೯-೪೬೬) : ಪಿಶಾಚ ದಿಟ್ಟರೂ ನಿಶಾಚರ ಬಡ (ಗಾದೆ). ೨. (ಶ್ಮಶಾನವಾಸಿಗಳಾದ) ಈಶ್ವರನ ಭೂತಗಣ : ವಿಯನ್ನದಿಯೊಳ್ ಮುಟುಂಗೆ ಮುಂದಲೆ ಜಡೆಗಟ್ಟಿ . . . ವಾಮತನು ಪೆಣ್ಗಡೆಯಾಗಿ ಪಿಶಾಚಸಂಗಮುಗ್ಗಳಿಸಿರೆ ಪುಟ್ಟುಪೊಂದಿಗೆಡೆಯಲ್ಲದೆ ತೋರ್ಪರಿದಲ್ತೆ ವಿಸ್ಮಯಂ (ಅಕಳ. ೯-೬). ೩. ದೇವಯೋನಿಗಳಲ್ಲಿ ಒಂದು ವರ್ಗ : "ಕಿನ್ನರರು ಗಂಧರ್ವರಪ್ಸರರು . . . ಪಿಶಾಚರು . . . ಭೂತನಾಮಿಗಳು ದೇವಯೋನಿಗಳೆನಿಕ್ಕುಂ" (ಜಂಗಣಾ. ೦೬-೦೬); ಹರಿ ನುಡಿದನಂದು ಪಿಶಾಚ ಗಾತ್ರರವ (ಕಿರಾಗ. ೦೦-೬೦-೨೬); ತಮೋಯೋಗ್ಯರಲ್ಲಿ ದೈತ್ಯ, ರಾಕ್ಷಸ, ಪಿಶಾಚ, ಮನುಷ್ಯಾಧಮ ಎಂದು ನಾಲ್ಕು ಪ್ರಕಾರಗಳು (ಹಿಂದಸಾ. ೨೬೬). ೪. ಒಂದು ಜನಾಂಗದ ಹೆಸರು : ಆರ್ಯರು ವಾಯುವ್ಯಪ್ರಾಂತದಲ್ಲಿ ಪಿಶಾಚರೆಂಬ ಜನರೊಡನೆ ಕಾದಾಡಬೇಕಾಯಿತು (ಶಾಶ್ರ. ೩೩). [ಸಂ.]

**ಪಿಶಾಚಕೋಶಾತಕಿ** (ನಾ). ಒಂದು ಬಗೆಯ ಸಸ್ಯ ; ಕಹಿಹೀರೆ : "ಪಿಶಾಚಕೋಶಾತಕೀ-ಕಹಿಹೀರೆ" (ಓಷ. ೯೬). [ಸಂ. ಪಿಶಾಚಕೋಶಾತಕೀ]

**ಪಿಶಾಚಗ್ರಹ** (ನಾ). ದೆವ್ವದ ತೊಂದರೆ ; ಭೂತದ ಕಾಟ: ಪ್ರಲಾಪ ಉಂಟಾಗಿಹಣ, ನಿಷ್ಠುರಭಾಷೆಯನಾಡುವಣ, ಭಯಂಕರವಾಗಿಹಣ . . . ಮಲಿನವಾಗಿಹಣ, ಜಿತೇಂದ್ರಿಯನಾಗಿಹಣ, ಹೀಗಿದ್ದರೆ ಪಿಶಾಚಗ್ರಹವೆಂದಱಿವುದು (ವೈದ್ಯಸಾ. II. ೬೬). 'ದೇವಗ್ರಹ' ಪರಾ.

[ ಸಂ. ]

**ಪಿಶಾಚಪ್ರಾಪ್ತ** (ನಾ). ಪಿಶಾಚಿ ಹಿಡಿದವನು ; ದೆವ್ವ ಮೆಟ್ಟಿಕೊಂಡವನು : ಗುರು ಲಗ್ನಸ್ಥಿತನಾಗೆ . . . ಮೇಣ್ ತ್ರಿಕೋಣಗೃಹದೊಳ್ ಪಾಪಗ್ರಹಂಗಳ್ ಸುಧಾಕರನಾ ಕರ್ಕಿ ವಿಲಗ್ನದೊಳ್ ನಿಲೆ ಪಿಶಾಚಪ್ರಾಪ್ತನಕ್ಕುಂ ನರಂ (ಜಾತಕ. ೨೧-೦೬). [ಸಂ.]

**ಪಿಶಾಚಬಾಧೆ** (ನಾ). = ಪಿಶಾಚಗ್ರಹ : ಜನನಕಾಲದಲ್ಲಿ ಗುರು ಲಗ್ನದಲ್ಲೂ ಏಳನೆಯ ಸ್ಥಾನದಲ್ಲಿ ಅಂಗಾರಕನೂ ಇದ್ದರೆ . . . ಜಾತಕನಿಗೆ ಪಿಶಾಚಬಾಧೆ ಇರುತ್ತದೆ (ಜಾತಕ. ೨೦-೦೬ ಟೀಕು). [ ಸಂ. ಪಿಶಾಚಬಾಧ ]

**ಪಿಶಾಚಲಿಪಿ** (ನಾ). ಒಂದು ಬಗೆಯ ಲಿಪಿ : ಜಲಲಿಪಿ ಪಿಶಾಚಲಿಪಿ . . . ಈ ಅಗಣಿತಲಿಪಿಗಳ ನೋಡಲಱಿಯದ ಬಿಜ್ಜಳರಾಯನ ಸಭೆಯೊಳು ಕಳಕಳ ಗೊಳುತಿದ್ದರು ವಿದ್ವಾಂಸರುಗಳೆಲ್ಲ (ಚಾಸ್ಯಕ. ೬೬-೪). [ ಸಂ. ]

**ಪಿಶಾಚಶೈಲ** (ನಾ). ಶೈಲೇಂದ್ರ, ದ್ವಿಶಿಖರ, ಮಹಾಶೈಲ, ಗಜಶೈಲ, ಪಿನಾಕಶೈಲ, ಪಿಶಾಚಶೈಲ, ಪಂಚಶೈಲ, ಕೈಲಾಸ, ವಾಸೋತ್ತರ ಮತ್ತು ಹಿಮಾದ್ರಿ ಎಂಬ ಹತ್ತು ಕುಲಪರ್ವತಗಳಲ್ಲಿ ಒಂದು ; ೯ ಕುಲಪರ್ವತಗಳ ಸಂಖ್ಯೆ ಮತ್ತು ಹೆಸರುಗಳ ಬಗ್ಗೆ ಪ್ರಾಚೀನಕವಿಗಳಲ್ಲಿ ಭಿನ್ನಾಭಿಪ್ರಾಯಗಳಿವೆ : ಶೈಲೇಂದ್ರ . . . ಪಿಶಾಚಶೈಲ . . . ಹಿಮಾದ್ರಿಗಳೆಂಬ ದಶಕುಲಪರ್ವತಂಗಳೇ ಪೂರ್ವೋಕ್ತ ಗಂಧಮಾದನವೆಂಬ ಕೀಲಕಪರ್ವತಕ್ಕೆ ತೆಂಕಣದಿಕ್ಕಿನಲ್ಲಿಹವು (ಚಿತೀ. ೨೦೩).

[ ಸಂ. ]

**ಪಿಶಾಚಸತ್ತ್ವ** (ನಾ). [ ಕಾಮಶಾ ] (ಸ್ತ್ರೀಯರ) ಹನ್ನೆರಡು ಬಗೆಯ ಸ್ವಭಾವಗಳಲ್ಲಿ ಒಂದು ; ತಮೋಗುಣಪ್ರಧಾನವಾದ ಸ್ವಭಾವ : ಅಸಿಯ ನಡುವಿನ ಮಿಸುಗುವೆಸಳ್ಗಣ್ಣ ಪಿರಿದುಂಬ ಬಿಸುಮೆಯ್ಯ ಮದ್ಯಮಾಂಸ ಪ್ರೀತಿಯ ಪುಸಿಗೇಳ್ಪರೊಳ್ ತೊಳಲ್ವ ಸುನಿರದೆ ಲಜ್ಜೆಯಂ ಬದಿಸುವಳಿ ಪಿಶಾಚಸತ್ತ್ವದವಳ್ (ಕಾಮ. ೩-೩೪); ದೇವಸತ್ತ್ವ ಯಕ್ಷಸತ್ತ್ವ . . . ಪಿಶಾಚಸತ್ತ್ವ ರಾಕ್ಷಸಸತ್ತ್ವ ಕಿನ್ನರಸತ್ತ್ವ ಖಚರಸತ್ತ್ವವೆಂಬ ದ್ವಾದಶಸತ್ತ್ವಸತಿಯರಿಂ (ಚಿತೀ. ೦೬೩). 'ದ್ವಾದಶಸತ್ತ್ವ' ಪರಾ. [ ಸಂ. ]

**ಪಿಶಾಚಸ್ತ್ರೀ** (ನಾ). ೧. ಹೆಣ್ಣು ಪಿಶಾಚಿ. ೨. [ಕಾಮಶಾ] ಸ್ತ್ರೀಯರಲ್ಲಿ ಒಂದು ಬಗೆ ; ತಮೋಗುಣಪ್ರಧಾನವಾದ ಸ್ವಭಾವವುಳ್ಳವಳು : ಲಜ್ಜೆಗೆಟ್ಟವಳು ಹಿರಿದನುಂಬುವಳು ದೇಹವುಂ ಬಿಸುಪಾದವಳು ಮದ್ಯಮಾಂಸವನುಂಬಳು ಇವಳು ಪಿಶಾಚಸ್ತ್ರೀ (ಕಾಮಶಾ. ೨೦೬). [ ಸಂ. ]

**ಪಿಶಾಚಿ**$_1$ (ನಾ). ಹೆಣ್ಣು ದೆವ್ವ : "ಪಿಶಾಚೀ, ಪಿಶಾಚಿಕಾ, ಈ ೨ ಹೆಣ್ದೆವ್ವ" (ಅಕಳ. ೨೦೪); ರಕ್ಕಸಿಯರಾಶಾಪಿಶಾಚಿಯರಿಬ್ಬಗಾತಿಯರು (ಅಜಿ. ೪೦-೩೨).

[ ಸಂ. ಪಿಶಾಚೀ ]

**ಪಿಶಾಚಿ**$_2$ (ನಾ). = ಪಿಶಾಚ ೧ : ಆರ್ವರ್ ಪಿಶಾಚಿಯರ್ಕಳನಸುಂಗೊಳೆ ಬೇವ ಪೆಣಕ್ಕೆ ಕೋಪದಿಂ ಪೋರ್ವರ್ ಮರುಳ್ಗಳಂ . . . ಈಕ್ಷಿಸಿದಂ ಪ್ರತಿರೂಪಶೂದ್ರಕಂ (ಅಕ್ಕಸಾ. ೩೪೪): ಬೆನ್ನು ಬಿಡದ ಪಿಶಾಚಿ ಹೊನ್ನು ಕೊಟ್ಟರೆ ನಿಂತೀತೇ? (ಗಾದೆ). [ಸಂ.]

**ಪಿಶಾಚಿಕೆ**$_1$ (ನಾ). (ಅಲಂ) ದುಷ್ಟತನ ; ಕ್ರೌರ್ಯ : ನಾವನಾರ್ಯರು ಮೆಸಗದೇ ಪಿಶಾಚಿಕೆಯನಕಟೆಸಗಿದರೆ? (ಹರಿಕ. ೬೩-೦೪).

[ಪಿಶಾಚ + – ಇಕೆ]

**ಪಿಶಾಚಿಕೆ**$_2$ (ನಾ). ೧. ಹೆಣ್ಣುದೆವ್ವ : "ಪಿಶಾಚೀ, ಪಿಶಾಚಿಕಾ, ಈ ೨ ಹೆಣ್ದೆವ್ವ" (ಅಕಳ. ೨೦೪). ೨. ಒಂದು ಬಗೆಯ ಸಸ್ಯ ; ಕಾಸರಿಕೆ : "ಪಿಶಾಚಿಕಾ—ಕಾಸರಿಕೆ, ನಸುಗನ್ನಿ, ಮರಳಿ" (ಓಷ. ೪೮).

[ಸಂ. ಪಿಶಾಚಿಕಾ]

**ಪಿಶಿತ** (ನಾ). ೧. ಮಾಂಸ ; ಬಾಡು ; ಅಡಗು : "ಪಲಲಂ, ಜಾಂಗಲಂ . . . ಪಿಶಿತಂ, ಆಮಿಷಂ, ಕ್ರವ್ಯಂ, ತರಸಂ, ಈ ೮ ಮಾಂಸಂ" (ಅಭಿಧಾ. ೦೦೪—೯) ; ಆತನುಂ ನಾಲಗೆಯಿಂದಂ ಪಿಶಿತದ ಖಂಡಮಂ ಬಾಯೊಳಿಡೆ (ಶಬ್ದಾ. ೨೦-೬) ; ಸೀಳ್ದೊಟ್ಟಂ ವೈರಿಯನೊಡ್ಡಿ ತತ್ಪಿಶಿತದಿಂದಾತಂಗೆ ನೀಂ ಕೂರ್ಪೊಡೇಗೆಟ್ಟತ್ತಿನ್ನಡೆ ಮಾಡು ತದ್ದ್ವಿಜಗಣಕ್ಕಾಹಾರಮಂ ಭೂಪತೀ (ಕುಂತಕಾ. ೦೩-೬೦) ; ಧಾರದೆಡೆ . . . ಕರುಳ್ಗಳೆ ಕೋರಣಂ ಪಿಶಿತದೊಬ್ಬುಳಿಗಳ್ ನೆರಪಿರ್ದ ಬುತ್ತಿ ನೆತ್ತರೆ ಜಳಮಾಗಲಂತು . . . ಉಣುತಿರ್ದುವು ಭೂತಸಂಕುಳಂ (ಶ್ರೀಪು. ೨೪-೬೬೪). ೨. ಮಾಂಸದ ಅಡುಗೆ ; ಪಾಕ : ನಡುವಿರುಳ್ಪೋಗಿ ಪಣಿಜರನೊಟ್ಟಯಿಸಿ ಮಂಚಿಸಿ ಕುಱಿದಂದೆನೆಂದನೊರ್ವಂ ಪಿಡಿದು ತಂದಿತ್ತ ಕುಱಿಯಾನಾನುಱಿ ಕೊಂದು ಪಿಶಿತಮಂ ಮಾಡಿದೆನೆಂದ ನೊರ್ವಂ (ಸುಕುಮಾ. ೬—೦೩).

[ಸಂ.]

**ಪಿಶಿತಖಂಡ** (ನಾ). ಮಾಂಸದ ಚೂರು : ಬಸುನೆತ್ತರುಮಂ ಕಂಡ ದಿಂಡೆಯುಮಂ ಕಂಡು ಕ್ಷುಧಾರ್ತನಪ್ಪದೊಂದು ಮೃಗಧೂರ್ತಂ ಪಿಶಿತ ಖಂಡಕ್ಕೆ ಸಾರ್ದು (ಪಂಚತಂ. ೬೨-೦೬). [ಸಂ.]

**ಪಿಶಿತಭೋಜನ** (ನಾ). ಮಾಂಸದ ಊಟ : ಪಿಶಿತಭೋಜನದಲ್ಲಿಗೆ ನಿಲ್ಲ ದೆಕ್ಕೆಯಿಂ ಸಾರ್ವ ನಿಶಾಚರೀಜನಮಂ . . . ಈಕ್ಷಿಸಿದಂ ಪ್ರತಿರೂಪ ಕೂರ್ದ್ಯಕಂ (ಕಾವ್ಯಸಾ. ೩೩೯). [ಸಂ.]

**ಪಿಶಿತಾಶ** (ನಾ). ೧. ಮಾಂಸವನ್ನು ಭಕ್ಷಿಸುವವನು ; ಮಾಂಸಭಕ್ಷಕ : ಕಡುಭಕ್ತಿಯಿಂ ಪಿಶಿತಾಶರಪ್ಪರಸುಗಳ್ ಮರ್ತ್ಯಕ್ಕೆಲರ್ಮಾಂಸದಿಂದೊಡ ಗೂಡಿರ್ದ ನಿವೇದ್ಯಮಂ . . . ಕುಡರೇ (ಕಸಾರ. ೨೯೩). ೨. ರಾಕ್ಷಸ ; ನಿಶಾಚರ : ಯಮಪಾಶದಿಂ ಪಾಪಕರ್ಮಂ ಮೊದಲ ಬಿಗಿದ ಪಿಶಿತಾಶರಂ ಕೇಡಿಪ್ಪ ರಾವಣನ್ . . . ಸಂಹರಿಸಿ ಧರ್ಮಲಾಭಕೆ ಯಶೋದೀಪ್ತಿಯಂ ಮೆರೆವನಯ್ (ಶ್ರೀರಾಮಪಾ. ೨೯-೨೦): ಕೀಸಿದಾ ಕೂರಂಬುಗಳಿಗೊಂದಿನಿತ ಘಾಸಿಯಾಗುತ್ತೆ ಪಿಶಿತಾಶನುದಿದ್ದನ್ (ಶ್ರೀರಾಮಪಾ. ೦೯೦-೦೩೦). [ಸಂ.]

**ಪಿಶಿತಾಶನ** (ನಾ). ೧. ಮಾಂಸವನ್ನು ತಿನ್ನುವುದು. ೨. ಪಿಶಾಚ. ೩. ರಾಕ್ಷಸ : ಪಿಶಿತಾಶನನು ಕಂಗಳ ಮುಚ್ಚಿ . . . ವಿವರಿಸಿದ (ತೊರಗ. ೦೦-೬೦-೨೮). [ಸಂ.]

**ಪಿಶಿತಾಶಿ** (ನಾ). ೧. = ಪಿಶಿತಾಶ ೧ : ವಸುಧಾಜನಂಗಳೆಲ್ಲಂ ಮಸಣ ಮದೆಂದೊಡೆ ಭಯಸ್ಥರಪ್ಪರದೇಂ ಪೇಟ್ ಪಿಶಿತಾಶಿಯು ತನುವಂತದ ಮಸಣಂ ಮಸಣಕ್ಕೆ ಬೇಜಿ ಕೋಡೆರಡೊಳವೇ (ಕಸಾರ. ೨೯೭). ೨. ರಾಕ್ಷಸ. ೩. ನೈಋತ್ಯದಿಕ್ಕಿನ ಅಧಿಪತಿ ; ನಿರುತಿ : ಇಂದ್ರನ ಮುಂದುಗೆಡಿಸಿ . . . ಪಂದೆಯೆನಿಸಿ ಯಮನನು ಪಿಶಿತಾಶಿಯು ತಂದನು ಹಿಡಿಯಲಾಗಿ (ಶ್ರೀಕೃಷ್ಣಾ. ೬೬೩). ೨. ೩ : ಎನಗೆ ವಿಜಾತಿ ಕೌಶಿಕನುಮಾ ತೃಣಕಾಷ್ಠಸಮೂಹಭೋಜಿಯಾಯನಲನನಾರತಂ ಕೊಲುವ ನಿರ್ಘ್ನಾ (ನಃ) ಪಿಶಿತಾಶಿ ದೈತ್ಯನೀ ವನಧಿಯೊಳಿರ್ಪ ಜಂಬುಕನುಮಾ ಸಲೆ ಚಂಚಳನಪ್ಪ ವಾಯುವೀ ಧನಪತಿಯಪ್ಪ ತದ್ದನದನೀ ಬಡಭೌತಿಕನುಂ ಸಮಾನರೇ (ಕೇಬಿಚ. ೨-೦೦೯). [ಸಂ. ಪಿಶಿತಾಶಿನ್]

**ಪಿಶಿತಾಹಾರ** (ನಾ). = ಪಿಶಿತಭೋಜನ: ಮೃದುಪಿಶಿತಾಹಾರಮಂ ಪಡೆಮಂ ಮೆಚ್ಚಿ ಕರುಣಿಸಿ ತಿನಲೊಲ್ಲದೆ ಕಾದು ಕಟಿಪಿದ ರಕ್ಕಸಂಗೆ ವಿಕ್ಕಮರುಳ್ಕೊಡ ಪೇಟ್ಮೆಂದಂ (ಸುಕುಮಾ. ೬-೨೬ ವ). [ಸಂ.]

**ಪಿಶಿತೆ** (ನಾ). ಒಂದು ಬಗೆಯ ಔಷಧೀದ್ರವ್ಯ ; ಜಟಾಮಾಂಸಿ : "ಜಟಾಮಾಂಸಿ ಪಿಶಿತೆಯೆನಿಕ್ಕು" (ಮಂಗರಾ. ೯೩-೯೦). [ಸಂ. ಪಿಶಿತಾ]

**ಪಿಶುನ** (ನಾ). ೧. ತಿಳಿಯುವಂತೆ ಮಾಡುವುದು ; ಸೂಚಿಸುವಿಕೆ ; ಸ್ಪಷ್ಟಗೊಳಿಸುವುದು. ೨. ಸೂಚನೆ ; ಚಿಹ್ನೆ : 'ಸಂಗರಪಿಶುನ' ಪರಾ. ೩. ಚಾಡಿ ಹೇಳುವಿಕೆ ; ದೂರುವಿಕೆ : ಇದು ಅತಿಶಯೋಕ್ತಿ ಎಂದು ಕೆಲವು ಪಿಶುನಪ್ರವೀಣರು ಹೇಳಿ ಹಾಸ್ಯ ಮಾಡಿದಾಗ್ಯೂ . . . ಚಿಂತೆ ಇಲ್ಲ (ಶಬಸುಗು. ೩೭). ೪. ಚಾಡಿ ಹೇಳುವವನು; ಚಾಡಿಕೋರ : "ಕರ್ಣೇಜಪಃ, ಸೂಚಕಃ, ಪಿಶುನಃ – ೩ ಚಾಡೀ ಹೇಳುವವನು, ಕ್ಷುದ್ರಗಾರ" (ಸಿದ್ಧಾಂತಿ. ೩೯೬); ನಿಶ್ಚಿತಮಿದೆನಗೆ ಸಕಲವಚಶ್ಚತುರ ಜಡೋಪದೇಶದಿಂ ಪಿಶುನವಚೋವೃಶ್ಚಿಕವಿಷಹರಮುಖವಿಪಶ್ಚಿನ್ಮಣಿಮಂತ್ರ ಮೆಂಬುದಿನ್ನುಂ ಮುನ್ನುಂ (ಅಂಲಾಪ.೦-೦೯); ಕೊಂಡೆಯುಮಂ ಕೇಳಲ್ ಮನಂದರಲ್ ಪಿಶುನರ್ ಪೊರ್ದಿಯುಂತೆಂದರ್ (ರಕಚ. ೯-೬೩ ವ). ೫. ನೀಚ ; ದುಷ್ಟ ; ಕ್ರೂರಿ : "ಪಿಶುನಃ—೧ ದುರ್ಜನ, ಚಾಡೀ ಕೋರ" (ಸಿದ್ಧಾಂತಿ. ೧೦೯); ಸತ್ಯಂ ಪಿಶುನಂ ಪೆರ್ಜಗಾಪತ್ಯಂ ಮಾಡ ದಿರನೆಂದು ಮಜುಗಿದವುದು ಮಚ್ಚಿತ್ತಂ (ಅಂಲಾಪ. ೦-೩೬); ನಿಷ್ಠುರಿಗಳಿಗೆ ಪಿಶುನ[ಕಾಣಂ.ಣ]ರಿಗಯೋಗ್ಯರಿಗಿದನು ಪೇಳದಲೆ . . . ಪರಮ ಭಗವದ್ಭಾಸರಿಗೆ ತಿಳಿಸುವುದು ಈ ರಹಸ್ಯ (ಹಕಾರ. ೦೩-೩೨) ; ತಂದೆ-ತಾಯಿ, ಬಂಧು, ಗುರು ಇವರನ್ನು ದ್ವೇಷಿಸುವವರೂ ಆದ ಪಿಶುನರು ಶೋಚನೀಯರಾಗಿರುವರು (ಕುಳಚ್ಛಿ. ೧೩೨). ೬. ಕುಂಕುಮಕೇಸರಿ ; ಕೇಶರ : "ಪಿಶುನ–ಕುಂಕುಮ, ಕೊಂಡೆಯನು" (ಬಿತಂ. ೯೬). [ಸಂ.]

**ಪಿಶುನತ್ವ** (ನಾ). ಚಾಡಿ ಹೇಳುವುದು; ದೂರು ಹೇಳುವಿಕೆ. [ಸಂ.]

**ಪಿಶುನೆ** (ನಾ). ಒಂದು ಬಗೆಯ ಸಸ್ಯ ; ಸಂಕೇಶೇರು : "ಮರುನ್ಮಾಲಾ . . . ಪಿಶುನಾ, ಸ್ಪೃಕ್ಕಾ . . . ಕೋಟವರ್ಷಾ, ಲಂಕೋಯಿಕಾ . . . ೧೦ ಸ್ಪೃಕ್ಕೆಯೆಂಬ ಗ್ರಂಥದ್ರವ್ಯ, ಸಂಕೇಶೇರು" (ಸಿದ್ಧಾಂತಿ. ೦೯೩). [ಸಂ. ಪಿಶುನಾ]

**ಪಿಷ್ಟ** (ನಾ). ೧. (ಧಾನ್ಯ ಮೊದಲಾದುವುಗಳ) ಹಿಟ್ಟು ; ಪುಡಿ : "ಪಿಷ್ಟದು ಪಿಷ್ಟಂ ಚೂರ್ಣತು" (ಶಬ್ದಸಾರ. ೬೩-೨೦) ; ಅಂತು ಧರ್ಮತೀರ್ಥಪ್ರವರ್ಧ ನಂಗೆ ಸುಗಂಧಶುಷ್ಕಚೂರ್ಣ ಪಿಷ್ಟದಿನುದ್ವರ್ತನವಿಧಿಯಂ ನಿರ್ವರ್ತಿಸಿ (ಆದಿಪು. ೯-೬೬ ವ) ; ಪಿಷ್ಟ – ಹಿಟ್ಟು (ಕಬಿಚ. ೨೬೬ ಕ್ರಿಯೋ). ೨. ಅಕ್ಕಿ, ಗೋಧಿ, ರಾಗಿ ಮೊದಲಾದ ಧಾನ್ಯಗಳ ಹಿಟ್ಟಿನಿಂದ ತಯಾರಿಸಿದ ಆಹಾರಪದಾರ್ಥ. ೩. ಒಂದು ಬಗೆಯ ಲೋಹ ; ಸೀಸ. ೪. ರಾಸಾಯನಿಕವಾಗಿ 'ಕಾರ್ಬೋಹೈಡ್ರೇಟ್' ಎಂದು ನಿರ್ದೇಶಿ ಸುವ ವಸ್ತು,–ಅಂಶ: ಧಾನ್ಯಗಳು ಮತ್ತು ಆಲೂಗಡ್ಡೆ, ಮರಗೆಣಸು, ಗೆಣಸು ಮೊದಲಾದ ಗಡ್ಡೆಗೆಣಸುಗಳಲ್ಲಿ ಬಹಳ ಪ್ರಮಾಣದಲ್ಲಿ ಪಿಷ್ಟವಿದೆ (ಆಹಾರ. ೫೬). [ಸಂ.]

**ಪಿಷ್ಟಕುಟ್ಟ** (ನಾ). [ನಾಟ್ಯ] ಭ್ರಮರ, ಆಸ್ಕಂದಿತ, ಆವರ್ತ, ಶಕಟಾಸ್ಯ, ಅಡ್ಡಿತ, ಸಮೋಸರಿತ, ಅಧ್ಯರ್ಧಿಕ, ವಿಲಕ್ಷಾಕ್ರೀಡಿತ, ಪಿಷ್ಟಕುಟ್ಟ ಮತ್ತು ಚಾಷಗತಿ ಎಂಬ ಹತ್ತುಬಗೆಯ ಭೌಮ ಮಂಡಲಗಳಲ್ಲಿ ಒಂದು ; ೨ ಸೂಚಿ, ಅಪಕ್ರಾಂತ, ಭುಜಂಗತ್ರಾಸಿತ ಗಳೆಂಬ ಚಾರಿಗಳನ್ನು ಕ್ರಮವಾಗಿ ಮಾಡಿ, ಮಂಡಲಾಕಾರವಾಗಿ ಸಂತ್ತುವುದು : ಬಲ[ಪದ]ದೊಳ್ ಸೂಚಿಯನೆಡಗಲದೊಳಪಕ್ರಾಂತ ಚಾರಿಯಂ ಬಲನೆಡದೊಳ್ ಸಲೆ ಭುಜಗತ್ರಾಸಿತಮಂ ವಿಲಸಿತದಿಂದೆಸೆವ ಮಂಡಲಭ್ರಾಂತಿಯುಮಂ ಕವೆಯೊಳ್ ಸಮೆಯುಲ್ ಕೇಳಿದು ಬಿಡದೆಸೆವೀ ಪಿಷ್ಟಕುಟ್ಟಮಂಡಲಮನೀಕಂ (ಅಭಿನಕ. ೬-೬೦). [ಸಂ.]

**ಪಿಷ್ಟಚರ್ಚೆ** (ನಾ). ಹಿಟ್ಟಿನ ರಂಗವಲ್ಲಿ,–ರಂಗೋಲೆ : ಮುನಿಸುಮಾರಿ ಯರಿಕ್ಕಿದ ಪಿಷ್ಟಚರ್ಚೆಯಿಂ . . . ಎಸೆದು ತೋಜಿದುದಾಗಳತೋರಭೂರುಹಂ (ಶಾಂತೀಶ್ವ. ೨೨೬). [ಸಂ. ಪಿಷ್ಟಚರ್ಚಾ]

**ಪಿಷ್ಟಪಚನ** (ನಾ). (ಧಾನ್ಯದ) ಹಿಟ್ಟನ್ನು ಬೇಯಿಸಲು ಉಪಯೋಗಿ ಸುವ ಪಾತ್ರೆ : "ಋಂಜೀಷಂ, ಪಿಷ್ಟಪಚನಂ–೨ ಬಾಣಲಿ, ಗಾದಿಗೇ ಮುಚ್ಚಳ, ಕಡುಬುಮುಚ್ಚಳ, ಹಿಟ್ಟು ತೊಳಸುವ ಬಾನಿ". (ಸಿದ್ಧಾಂತಿ. ೨೮೩) [ಸಂ.]

**ಪಿಷ್ಟಪದಾರ್ಥ** (ನಾ). 'ಕಾರ್ಬೋಹೈಡ್ರೇಟ್'ನ ಅಂಶವು ಹೆಚ್ಚಾಗಿರುವ ಪದಾರ್ಥ : ಜೀರ್ಣಶಕ್ತಿ ಕಡಿಮೆಯಾಗಿರುವವರಿಗೆ ಪಿಷ್ಟ ಪದಾರ್ಥಗಳು ಅನಾರೋಗ್ಯಕಾರಿ (ಪಕಶ. ೬೦). [ಸಂ.]

**ಪಿಷ್ಟಪೇಷಣ** (ನಾ). ೧. ಹಿಟ್ಟನ್ನು ಪುನಃ ಪುಡಿ ಮಾಡುವುದು. ೨. (ಆಲಂ) ಮಾಡಿದುದನ್ನೇ ಮಾಡುವಿಕೆ : ಉಪಯೋಗವಿಲ್ಲದ ಕೆಲಸಮಾಡುವುದು ; ವ್ಯರ್ಥವಾದ ಪುನರಾವೃತ್ತಿ : ನಿಜ್ಜಮಿಮಾ ಪಿಷ್ಟ ಪೇಷಣಮಿಮಾ ಚರ್ವಿತಚರ್ವಣಂ ಸುವಿಮದೇ ನಿನ್ನಂ ಮರುಳ್ ಮಾಡಿತೋ (ಅರಪು. ೩-೬೯) ; ಉಣಿಸಿಂ ತಜುಬಲದಿಂ ಭೂಷಣ ಗಣಕಿಂಗಾನ ವಸ್ತ್ರ ಮಾಲ್ಯಾದಿಗಳಿಂ ತಣಿಯೆನಣಂ ಚರ್ವಿತಚರ್ವಣಮಾ ಪಿಷ್ಟಪೇಷಣಕ್ಕಂ ಮಾಣಿಧು (ಸಮಚ. ೬-೬೦); ಇವನ ಕವನಗಳಲ್ಲಿ ಪಿಷ್ಟಪೇಷಣವಿರಲಿಲ್ಲ (ಜಾರ್ಬಿಪಾ. ೦೦೩); ದೇವಸುತರಿಗೆ ನರರ ಬಾಂಧವ್ಯವೆಂತಹುದು ? ಪಿಷ್ಟಪೇಷಣವೇಕೆ ? (ಭಾಕನಾ. ೯೯). 'ಚರ್ವಿತ ಚರ್ವಣ' 'ತವಡುಕುಟ್ಟು' ಪರಾ. [ಸಂ.]

**ಪಿಷ್ಟಾತ** (ನಾ). (ಆಭರಣ, ವಸ್ತ್ರ ಮೊದಲಾದುವುಗಳನ್ನು ಸುವಾಸನೆಯಿಂದ ಕೂಡಿರುವಂತೆ ಮಾಡಲು ಬಳಸುವ) ಸುಗಂಧಯುಕ್ತವಾದ ಪುಡಿ; ಬುಕ್ಕಿಹಿಟ್ಟು: "ಪಿಷ್ಟಾತಃ. ಪಟವಾಸಕಃ — ೨ ಬಟ್ಟೆಗಳಿಗೆ ಹಾಕುವ ಗಂಧದ್ರವ್ಯದ ಹೆಸರು" (ಅಭಿ.ಕೋ. ೨೦೦). 'ಪಟವಾಸ' ಪರ್ಯಾ. [ಸಂ].

**ಪಿಷ್ಟಾತಕ** (ನಾ). = ಪಿಷ್ಟಾತ: ಜಗತ್ಪ್ರಕಾಶಯಸಿವಾಸಿನೀಪ್ರಮದ ಮುಷ್ಟಿಪಿಷ್ಟಾತಕಂ ವಿಶಾಲತರತುಂಗಸೌಧತಳಸಂಗಿಪೌರಾಂಗನಾವಶೀಕರಣ ಚೂರ್ಣಮಾದುದು ಬಳಿಕ್ಕಧೂಳೀಚಯಂ (ಅಜಿತ. ೧೦-೦೪): ಕೆದಱಿದ ಪಿಷ್ಟಾತಕದಿಂದೊದವಿದ ಪಟವಾಸಚೂರ್ಣದಿಂ . . . ಪದೆಪಂ ಪುಟ್ಟಿಸಿದುದಿಟ್ಟಳಂ ನೃಪಸದನಂ (ಕಾಂಕಾಪು. ೪-೨೬); ಪಂಜರಿತಪಿಷ್ಟಾತಕಂ ದೆಸೆದೆಸೆಗೆ ಪಸರಿಸೆಯುಂ (ಚಂದ್ರಪ್ರ. ೦೨-೩೩ ವ). [ಸಂ.]

**ಪಿಷ್ಟಾತಕಕೇಳಿ** (ನಾ). (ಉತ್ಸವಸಂದರ್ಭಗಳಲ್ಲಿ) ಸುವಾಸನೆಯ ಪುಡಿಯನ್ನು ಪರಸ್ಪರ ಎರಚುವಿಕೆ: ದಿವಿಜೇಂದ್ರವೃಂದಂಬೆರಸಿಂದ್ರ ಪೊಸಗೆ ಮಾಡುತ್ತೊಂಡು ಪಿಷ್ಟಾತಕಕೇಳೀವಿಧಾನಾನಂತರಂ (ಶಾಂತಿಪು. ೧೦-೬೪ ವ). [ಸಂ. ಪಿಷ್ಟಾತಕಕೇಳಿ]

**ಪಿಷ್ಟಾತಕಚೂರ್ಣ** (ನಾ). = ಪಿಷ್ಟಾತ: ದಿಕ್ಪಾಲಕರ ಕೆದಱುವ ಪಿಷ್ಟಾತಕ ಚೂರ್ಣಮೆನಿಸುವ ರಜಃಪುಂಜಮುಮಂ . . . ನೋಡುತ್ತುಂ ನಡೆಯ (ಅಜಿತ. ೦೩-೪೪ ವ); ಕಾಮಸಾಮ್ರಾಜ್ಯದೊಸಗೆಯೊಳ್ ಪಸರಿಸಿದ ಪಿಷ್ಟಾತಕ ಚೂರ್ಣದಂತೆ ಮಂದಮಾದ ಪೊಂದಾವರೆಯ ರಜದೊಳಂ (ಸುಕುಮಾ. ೨-೩೨ ವ); ಕೆದಱಿದ ಪಿಷ್ಟಾತಕಚೂರ್ಣದೊಳ ಪಟವಾಸಚೂರ್ಣದೊಳಮಷ್ಟದಿಶಾವದನಮುಮಮಾ ನಭಮುಂ ಪಡೆದುದು ನಾನಾವರ್ಣ ರುಚಿರರಚನಾಚ್ಛವಿಯಂ (ಧರ್ಮಾಮೃ. ೪-೩೨). [ಸಂ.]

**ಪಿಷ್ಟ** (ನಾ). ಪುಡಿ; ಹುಡಿ; ಚೂರ್ಣ: ಕ್ರಿಮಿ ಮೇಣ್ ಭಸ್ಮಂ ಮೇಣ್ಪಿಷ್ಟ ಮೇಣ್ ಶರೀರಕ್ಕೆ ನಿಟ್ಟೆಯಾ ದೊರೆಯಿದಱೊಳ್ ಕಮನೀಯ ಮೊಂದುಮಿಲ್ಲ (ಅಜಿತ. ೨-೩೩). [ಸಂ.]

**ಪಿಷ್ಟೋದಕ** (ನಾ). ಹಿಟ್ಟಿನೊಡನೆ ಬೆರಸಿದ ನೀರು: ಪಿಷ್ಟೋದಕ ಗುಡಧಾತಕೀಸಂಯೋಗದಿಂದಮೆಂತು ಮದವಿಕಾರಮೆಸೆದಪ್ಪುದು (ಅಜಿತ. ೨-೯ ವ); ಪಿಷ್ಟೋದಕಗುಡಧಾತಕ್ಯಾದಿಯತ್ನದಿಂ ಮದಶಕ್ತಿ ಪುಟ್ಟುವಂತೆ (ಶಾಂತಿಪು. ೮-೦೨೪ವ). [ಸಂ.]

**ಪಿಸನಾರಿ, ಪಿಶನಾರಿ** (ನಾ). ಜಿಪುಣ; ಲೋಭಿ: ಎಂಥಾ ಪಿಸನಾರೀನಪ್ಪಾ ಇವನು ಅಂತ ಅಂದುಕೊಳ್ತಾರೆ (ಕಪ್ಪು. ೨೦). ಪಿಶನಾರಿ: ಜುಗ್ಗ, ಜಿಪುಣ; ಪಿಶನಾರಿ (skinflint. ೩೦೪೩); ಇತರರೆಲ್ಲರೂ ಪಿಶನಾರಿಗಳೆಂದು ಹೇಳಬೇಕಾಗಿ ಬರುತ್ತದೆ (ಶಾಕಿಪೀ. ೭೬). 'ಪೀನಾರಿ₂' ಪರ್ಯಾ.
[ದೇ. ॥ ತಮಿ. ಪಿಚಿಣಾಱಿ, ಪಿಚಿಣೇಱಿ, ಪಿಚುಣಾಱಿ; ತೆಲು. ಪಿಸಿನಾರಿ]

**ಪಿಸರು₁, ಪಿಸುರು₁** (ನಾ). ೧. ದೇಹದ ಕೊಳೆ, — ಕಶ್ಮಲ: "ಶರೀರದ ಹೊಲಸು" (ಶಾಕಕೋ. ೦೬). ೨. ಕಣ್ಣು, ಮೂಗುಗಳ ಕೊಳೆ, — ಮಲ; ಗೀಜು: (ಶಿ). 'ಪಿಚ್ಚು₁' ಪರ್ಯಾ. ಪಿಸುರು₁: ೧. ಹಸನವಿಲ್ಲ ಹರೆಯುವ ಪಿಾರಿದ ಪಿಸುರು ಪಿಚ್ಚುಗಣ್ಣಿನ ಮುದಕಿ (ಕೋಳಿ ೩೩-೦೬). ೨. ಸಾಮಾನ್ಯಜನರು ಮಕ್ಕಳು ಹುಟ್ಟಿದ ಕೆಲವು ದಿನಗಳಲ್ಲಿ ಕಣ್ಣಿನಲ್ಲಿ ಪಿಸುರು ಮತ್ತು ಕೆಂಪು ಕಂಡರೂ ಕೂಡಾ . . . ಕಣ್ಕಪ್ಪು ನೇತ್ರಾಂಜನಗಳನ್ನು ಕಣ್ಣಿಗೆ ಹಚ್ಚಿ ಕಣ್ಣು ಪೂರ್ತಿ ಇಂಗಿ ಹೋದ ಮೇಲೆ ವೈದ್ಯರಲ್ಲಿಗೆ ಚಿಕಿತ್ಸೆಗೆ ಕರೆದುಕೊಂಡು ಬಂದಿರುವ ಪ್ರಸಂಗಗಳು ಎಷ್ಟೋ ಉಂಟು (ಶಿಶುವೈದ್ಯ. ೦೩). 'ಕಿಸುರ್₂' ಪರ್ಯಾ.
[ದೇ. ॥ ತೆಲು. ಪಿಸರು]

**ಪಿಸರು₂, ಪಿಸುರು₂** (ನಾ). ೧. ಆವೇಶ; ಉನ್ಮತ್ತತೆ: (ಶಿ). ೨. ಸೊಕ್ಕು: "ಪಿಸರು — ಪಾರ್ಖ ಸೊಕ್ಕು; ಉಪದ್ವ್ಯಾಪಿತನ; ತುಂಟತನ" (ಶಾಕಕೋ. ೦೬). ೩. ಹಟಮಾರಿತನ; ಮೊಂಡುತನ: (ಶಿ). ಪಿಸುರು₂: ೨. ಪಿಸುರು ಇದ್ದವರ ಹತ್ತಿರ ಉಸುರಬಾರದು (ಗಾದೆ).

**ಪಿಸರು ತೆಗೆ** = (ಆಲಂ) ನಿಂದಿಸು; ತೆಗಳು; ಬಯ್ಯು: ಪಿಸರು ತೆಗೆದರೂ ಪಿಶಾಚ ಬಿಡುವುದಿಲ್ಲ (ಗಾದೆ).
[?. / ತುಳು. ಪಿಸ್ರ್, ಪಿಸುರ್]

**ಪಿಸರುಗಣ್ಣು** (ನಾ). ಹೆಚ್ಚು ಪಿಸರು ಬರುವ ಕಣ್ಣಿನ ಒಂದು ಬಗೆಯ ರೋಗ: ಅವನು ಪಿಸರುಗಣ್ಣಿನ ಬಾಧೆಯಿಂದ ನೇತ್ರವೈದ್ಯರಲ್ಲಿಗೆ ಹೋಗಿದ್ದಾನೆ (ಜನ). 'ಪಿಳಚಲುಕಣ್ಣು' ಪರ್ಯಾ.
[ಪಿಸರು₁ + ಕಣ್ಣು ( < ಕಣ್ )]

**ಪಿಸಾಂಟ, ಪಿಸಾಂಟು, ಪಿಸಾಡಿ, ಪಿಸಾಳಿ** (ನಾ). (ಉಕ) ತಲೆ ಕೆಟ್ಟ ವ್ಯಕ್ತಿ; ಹುಚ್ಚ: ಯಾರೋ ಹುಡುಗಿ ಹೆಚ್ಚಾದ ಅಪ್ಪನೊಬ್ಬ ಈ ಪಿಸಾಂಟನ ಕೊರಳಿಗೆ ತನ್ನ ಮಗಳನ್ನು ಕಟ್ಟುವ ಧೈರ್ಯ ಮಾಡಿದ (ಶೂದ್ರತಪ. ೦೩೨). ಪಿಸಾಂಟು: ಬಸ್ಸೇ ತಪ್ಪಿದು ಅಂತ ತಿಳ್ಕೊಂಡಿದ್ದೊ ಪಿಸಾಂಟುಗಳು (ಹೊಸಕ. ೩೩). ಪಿಸಾಡಿ: ಈ ಪಿಸಾಡಿನ್ನ ಯಾರು ಕೇಳತಾರ್ರೀ? (ಹುಕೋ. ೩೭). ಪಿಸಾಳಿ: ಈ ದಾಂಡಿಗ ಜವಾನ ಪಿಸಾಳಿಗಳ ಕಯ್ಯಲ್ಲಿ ಸಿಕ್ಕು ನಾನು ಒದ್ದಾಡಲಾರೆನಪ್ಪಾ (ಅಂಕಣ. ೦೨೪).
[← ತುಳು. ಪಿಸಂಟೆ. ಪಿಸಿಂಟೆ = ಮಂಗೋಟಿ. / ಮರಾ. ಪಿಸಾಟ್ = ಹುಚ್ಚು]

**ಪಿಸಾಂಟು** 'ಪಿಸಾಂಟ' ನೋ.

**ಪಿಸಾಡಿ** 'ಪಿಸಾಂಟ' ನೋ.

**ಪಿಸಾಳಿ** 'ಪಿಸಾಂಟ' ನೋ.

**ಪಿಸಿ₁, ಹಿಸಿ** (ಕ್ರಿ). ೧. ಸಿಗಿ; ಕಿತ್ತು ತೆಗೆ; ಹರಿದು ಹಾಕು: "ಹರಿ, ಪರಿ, ಒಡೆ, ಪಿಸಿ [ಹಿಸಿ]" (ಶಬ್ದಮ. ೪೦). ೨. (ಬಟ್ಟೆ, ಮುಂತಾದುವು) ಹಿಂಜು; ಹರಿದುಹೋಗು; ಕಿತ್ತುಹೋಗು: ಒಪಲು ಉಡಿಗೆಗಳಂತೆ ಮಾಸಿ ಪಿಸಿವುದು (ಉಪ್ಪಾಕ. ೩೩-೪). 'ಪಿಸುಂಕು' ಪರ್ಯಾ. ಹಿಸಿ: ೧. ಶಿಶುವ ಸಲಹಿದು ಸುರವಿರೋಧಿಯ ಬಸುಱ ಬಗಿದೆಳೆಗರುಳ ನುಗುರಲಿ ಹಿಸಿ [ಪಾಠಾಂ. ನಸಿ, ಸಸಿ]ದು ಕೊರಳಲಿ ಹಾಯ್ಕಿದನು ನರಹರಿಯ ರೂಪಿನಲಿ (ಕೊರವ. ೬-೨-೩೦); ಅವರ ಬಾಯಿಂದ ಆ ಮಾತು ಬರುವ ಮುಂಚೆ ಅವರ ಕಟವಾಯ್ಗಳನ್ನು ಹಿಸಿದಲ್ಲದೆ ನನಗೆ ನಿದ್ರೆ ಬಾರದು (ಅಗ್ರಹ. ೩೦); ಮಿತ್ತು . . . ಶಿಶುವನು ಕಿತ್ತು ಹಿಸಿದು ತಿಂಬುವ ಕಂಡು (ಶಾಂತಕ. ೨೪-೦೩). ೨. "ಹಿಂಜು, ಹಿಕ್ಕು, ಬಾಚು, ಹಿಸಿ [ಪಿಸಿ]" (ಶಬ್ದಮ. ೪೨): ಕಾಪ್ಪಸ ಹಿಸಿವಂತೆ ಮೈಯುಬ್ಬಿ ಕ್ಕೆ ಮಾಗಿದೊಪ್ಪದಿ ಸಾಗಿದರವರು (ಕಕಕ. ೩೪-೦೦೦); ಸುಲಭವಾಗಿ ಹಿಸಿಯುವ ದಾರಗಳಿಂದ ಮಾಡಿದ ಬಟ್ಟೆ ಬಾಳಿಕೆ ಬರುವುದಿಲ್ಲ (ಗೃಹಕ. ೬೪). ೩. (ಹಣ್ಣು ಮುಂತಾದುವು) ಸೀಳಿಕೊಳ್ಳು; ಬಿರಿ; ಒಡೆ: ಅಸಿದಾದ ಬವನೆಯೊಳಿಪದದ ಕಾಯ್ಗಳನು ನಾಲ್ಕೆಸಳಾಗಿ ಕುಯಿದು ತುಪ್ಪದೊಳಗುಕ್ಕರಿಸಿಯುವ ಹಿಸಿಯದಂದದಿ ಹಿಕ್ಕಿ (ಸೂಪಶಾ. ೪-೪); ಮೆಱೆವ ಪೊಂಗೊಡಮೊಲೆಯನವನ ವಕ್ಷಃಸ್ಥಳದೊಳೆಟ್ಟೊತ್ತಿದೊಡೆ ಹಿಸಿದೊಳಗಣ ತನಿಸಂಧಿಯೊಸರ್ದು ತೊಟ್ಟಿಡುವ ಬಿಂದುಗಳ ಸಾಲಿದೆನಲು ಕಡಿಕೆ ಪಱಿದು ಗುವ ಹಾರದ ಮುತ್ತುಗಳ ಮಣಿಗಳೆಡೆವಿಡದೆ ಸೂಸುತಿರೆ (ಕೃಷ್ಣಕಥಾ. ೦೦-೦೬); ಕಾಲೊಂದನಾ ದಾರಿಗಿನ್ನೊಂದನೀ ದಾರಿಗೆಂದೇ ಕಾಲದೊಳೂರಿ ನಡೆಯುವುದಾದರೆ ಎರಡಡಿ ಹೋದೀರಿ ಸೊಂಟವು ಹಿಸಿದು ಬಿದ್ದೀರಿ (ಶಂಕಾಶ. ೨೩೬-೬೪). ೪. ಬಿರಿಯುವಂತೆ ಮಾಡು; ಎರಡಾಗಿ ಸೀಳು: ಹಿರಿದಾಗಿಯುವ ಹಿಸಿದು ನಾರುವದನಂ ಮಾಡಿ ಅರಗಿನಂವದೊಳು ಸರಿಗೆಯ ಮಾಡಿಕೊಂಡು ಕತ್ತರಿಸುವುದು (ಸೂಪಶಾ. ೦-೪೦): ತುಂಬಿದಕ್ಕರಿನೆದೆಯ ಹಿಸಿಯುತೆ ಹಿಂಡಿ ಬಾಳಸು ಬಸಿವರು (ದ್ರೌಪದಿ. ೩೬-೦೬); ಹಲಸಿನ ಹಣ್ಣಿನ ತೆರನಿರೆ ನಿನ್ನನು ಹಿಸಿವರು ಬಂಧುಬಾಂಧವರು (ಶಂಕಾಶ. ೨೨೪-೩೩).

೫. ಅಮುಕು ; ಒತ್ತು ; ಹಿಂಡು : ಕಕ್ಕಸದಿಂದ ಕಡಿವ ಚಿವುಟುವವನು ಗುರಿಕ್ಕುವ ಹಿಸಿವ ಹಿಟ್ಟುವವನು ಚಿಕ್ಕವರುಗಳನೆಲ್ಲರನು (ಶೀಟಿಸಂ. ೦೩-೦೦೯).

ಪಿಸಿಪಿಸಿ (ದ್ವಿರುಕ್ತಿ) : ಆಶಯೆಂಬ ಪಾಪಿಯು ಕೂಸು ಹಿಸಿಹಿಸಿದು ತಿನುತ್ತಿರ್ಪುದು (ಅಕಿಕಂ. ೨೩೬-೦೦೬೬). ಹಿಸಿದು ಬೀಳು = ಬರಿದು ಬೀಳ್; ಒಡೆದಂ ಬೀಳಂ : ಮಳೆಯುಂ ಮುಂಗಿಲೇ ಹಿಸಿದು ಬೀಳುವಂತೆ ಸುರಿಯುತ್ತಿತ್ತು (ಮಕಿಕಿಮ. ೬೬೯). ಹಿಸಿದು ಹೋಗು = ಸೀಳಿಹೋಗಂ : ಬಿರಿ : ಅವರನ್ನು ನೋಡುವುದಕ್ಕೆ ಜನವು ಊರೇ ಹಿಸಿದು ಹೋಗುವಂತೆ ಕಿಕ್ಕಿರಿದು ಬಿಟ್ಟಿತು (ಕಕಥಾ. ೬೬).

ಪಿಸಿ₂ (ನಾ). ಒಂದು ಬಗೆಯ ಔಷಧದ್ರವ್ಯ; ಜಟಾಮಾಂಸಿ: "ಪಿಸಿ:— ಜಟಾಮಾಂಸಿ" (೬೩೦. ೯೭) [< ಸಂ. ಪಿಶೀ]

ಪಿಸಿ₃ (ನಾ). ತಲೆ ಕೆಟ್ಟವನಂ; ಹುಚ್ಚ : ಹಾಗೇಕೆ ತಲೆ ಕೆಟ್ಟವರಂತೆ ಮಾಡಿದರೂ ಏನೋ. ಮಹಾ ಪಿಸಿ ಇರಬೇಕು ಈ ಪೋಲೀಸ ಅಧಿಕಾರಿ (ಕೃಶಿ. ೯೯೨). [← ಮರಾ. ಪಿಸಾ = ತಲೆ ಕೆಟ್ಟಿರುವ]

ಪಿಸಿತ₁, ಪಿಚ್ಚ₁ (ನಾ). ಮಾಂಸ ; ಅಡಗಂ ; ಪಿಶಿತ : ಗಗನಗದಲ್ಲಿ ತಿರುಗುವ ಖಗರಾಜಂ ಕಂಡು ಪಿಸಿತಮೆಂದದ ಮಾನದೊಳ್ ಬಗೆದೆತ್ತಿ ಕೊಂಡು ಪೋಪುದು ಮೃಗಶಾಬೇಕ್ಷಣೆಯ ಪಾದಾಂಬುಜರಣದ ಮೆಟ್ಟಂ (ಕ್ಷ್ಯಾಸ್ರ. ೬-೬೯), ಪಿಸಿತದ ಮಧುರವೆಂತಹುದೊ (ಕಕುಶಿ. ೪-೦೨.೪೦).

ಪಿಚ್ಚ₂ : "ಪಿಚ್ಚ — (ಪಿಸಿತ) — ಪಿಶಿತ = ಮಾಂಸ" (ಕಸೃಕೋ. ೨೬). 'ಪಿಚ್ಚವುಣಿಗ' ಪರಾ. [< ಸಂ. ಪಿಶಿತ]

ಪಿಸಿತ₂ (ನಾ). ಕೆಟ್ಟ ನಡತೆ (?) : ಹುಸಿ ಕೊಲೆ ಕಳವು ಪಾರದಾರ ಇಂತೀ ಪಿಸಿತವ ಹಜಾಯೊ ನಿಃಕಳಂಕ ಮಲ್ಲಿಕಾರ್ಜುನಾ (ಮೋಳಿಕಿಶ. ೬೩-೨೬೩). [ ? ]

ಪಿಸಿತಾಂಗ (ನಾ). ಮಾಂಸಮಯವಾದ ದೇಹ ; ಭೌತಿಕಶರೀರ : ಜ್ಞಾನಾಗ್ನಿ[ಗ್ನಿ]ಯೊಳ್ದಹನವಾದ ಪಿಸಿತಾಂಗ ಪಿಂಗ ಪಮಾನಿತ ಸುಮಂತ್ರವಾಗೆ ಗುರುಕರುಣದಿ (ಚಕೋಕ್ಕ. ೬-೬೩). [ಪಿಸಿತ₁ + ಅಂಗ₂]

ಪಿಸಿಪಿಸಿ (ನಾ). ಒಂದು ಅನುಕರಣಶಬ್ದ : ಉಲಿಯೆ ಡೊಂಬನು, ಕೆಲರ ಪಿಸಿಪಿಸಿ, ಕೆಲರ ಗುಜುಗುಜು, ಕೆಲವರಾ ಗಲಭೆ ಕಳಕಳ ಆಟದಾ ಕಳದಲಿ ವಿಶಾಲಕೆ ತುಂಬಿತು (ಕಂತ್ರ. ೩೯-೨೬); ಗುಜುಗುಜು ಮಾತಾಡಿ ಪಿಸಿಪಿಸಿ ನಗುವೂತ ಸರಗ ತಮ್ಮುಸಕ ಎಳೆದಾರ (ಕಕ್ಕಜಾ. ೩೬೨).

ಪಿಸಿಪಿಸಿ ಮಾತಾಡು = ತುಂಬ ಮೆಲ್ಲಗೆ ಮಾತಾಡು ; ಪಿಸುಗುಟ್ಟು: (೯). ಪಿಸಿಪಿಸಿಮಾತು, ಪಿಸಿಪಿಸಿಮಾತು = ತುಂಬ ಮೆಲ್ಲಗೆ ಆಡುವ ಮಾತು ; ಪಿಸುಮಾತು : ಅಯ್ಯಾ ನಿನ್ನ ಬಿನ್ನಣದ ಪಿಸಿಪಿಸಿಮಾತಂತಿರ್ಕೆ (ಕಕಿಂ. ೬-೦೩೯ ೮); ಕಿಸಿಕಿಸಿನಗು, ಪಿಸಿಪಿಸಿಮಾತು . . . ಅವಳ ಜೀವನಕ್ಕೆ ಬಿಟುಕುಮುಳ್ಳಾಗಿದ್ದವು (ದೀಪಶ. II, ೦೯೦).

ಪಿಸಿವಿ, ಪಿಶವಿ (ನಾ). (ಉಕ) ಕೈಚೀಲ : ಪಿಸಿವಿಯಲ್ಲಿ ಅಕ್ಕಿ ತಂದೆ (ಉಂ೮). ಪಿಶವಿ : ಪಿಶವಿಯೊಳಗಿನ ಪುಸ್ತಗಳನ್ನೂ ಪಾಟಿಯನ್ನೂ ಹೊರತೆಗೆದು ಚಾಪೆಯ ಮೇಲೆ ಹರವಿ . . . ನೋಡತೊಡಗಿದ (೩೬೩. ೯೩). [← ಮರಾ. ಪಿಸವೀ, ಪಿಶವೀ]

ಪಿಸು (ನಾ). ಒಂದು ಅನುಕರಣ ಶಬ್ದ : 'ಪಿಸುಗುಟ್ಟು' ಪರಾ.

ಪಿಸುಂಕು, ಪಿಸುಕು, ಪಿಸುಗು, ಹಿಚಕು, ಹಿಚಿಕು, ಹಿಚಿಗು, ಹಿಚುಕು, ಹಿಜಿಗು, ಹಿಸಕು, ಹಿಸಿಕಂ, ಹಿಸುಕು₁, ಹಿಸುಗು (ಕ್ರಿ). ೧. ನೀವು ; ತೀಡು ; ಮರ್ದಿಸಂ : ರುಂಬತೀತಿ ಪಿಸುಂಕಿದಪುದೆಂಬುದು (ಶಾಕ್ಕ. ೩೦). ೨. ಅಲಕ್ಷ್ಯ ಮಾಡು ; ಅನಾದರದಿಂದ ಕಾಣು ; ಅವಮಾನಿಸಂ ; ತಿರಸ್ಕರಿಸು : "ಪಿಸುಕು, ಪಿಸುಂಕು— ಅವಜ್ಞಾ ಶಿಶಯೇ (ಅಪಮಾನ ಮಾಡು)" (ಕಶಿರಾ); ಪಿಸುಂಕಿ ಕಳೆದಟ್ಟ ಚೈತ್ರಮಾತುರಾಜನಂ ಭೂತಳಂ ಬಸಬಡೆ ನಿದಾಘ ಭೂರಮಣನೇಳ್ಗೆಯಂ ತಾಳ್ದಿದಂ (ಕಂಕ್ರಶ೩. ೬-೦೦೬). 'ಪಿಸಿ₁' ಪರಾ. ಪಿಸುಕು : ೨. ಮೇಲಿನ 'ಪಿಸುಂಕು' ಉಲ್ಲೇಖದ 'ಶಮಧಾ' ಪ್ರಯೋಗವನ್ನು ನೋಡಿ. ೩. (ಹಣ್ಣನಂತೆ) ಕಿವುಚು ; ಹಿಂಡು : (೯). ೪. ಅದುಮು ; ಒತ್ತು : (೯). ೫. ಹರಿದು ಹಾಕು : (೯). ಪಿಸುಗು : ೧. ತಳಿರ್ಹಾಸಿಗೆ ಮಾಡಿ ಮಲಗಿಸಿ ಬಳಿಕದಿ ನೀ ಮಾದ ಪಿಸುಗೆ ನಿದ್ರೆಯು ಗೈಮೆ (ಕಪುಕ. ೩೪). ಹಿಚಕು : ೩. "ಪಿಚಕು—ಹಿಂಡು" (ಶಾಕಕೋ. ೩೬) ; ಹಿಡಿದ ವಿಷಯವನ್ನು ಅವರು ಹೇಗೋ ಎತ್ತಿಕ್ಕೊ ಹಾರಿಸಬಲ್ಲರು, ಎಲ್ಲೆಲ್ಲೋ ಹಿಚಕಬಲ್ಲರು (ಗಾಳಿಶ. vii, ಪಾಕ್ಕಗಿಡ ಮೂಕು). ಹಿಚಿಕು : ೩. ಸ್ವಲ್ಪ ಅವಳ ಮುಖ್ಯದಲ್ಲಿ ತಕ್ಕೊಂಡು ಕಿವಿಯ ಹತ್ತಿರ ವೈದು ಹಿಚಿಕಿ ನೋಡಬೇಕು (ಮುಂಖಿನ್ಯಾ. ೯೦). ೪. ಕರಡಿಗಳು ಅವರ ಕುತ್ತಿಗೆ ಹಿಚಿಕಿ (ಮುಂಖಿಯ. ೪. ೬-೦೦೯). ಹಿಚಿಗು : ೪. ಮುಂದ ಅವರು ಕುತಗೀ ಹಿಚಿಗಿ-ಪತಗೀ ಹಿಚಿಗಿ ಮಾಡಬಾರದೂ ಅಂತ ನಿಮ್ಮ ಮನಸಿನಾಗ ಇದ್ರ, ಈಗ ಆ ಹುಡಿಗೀ ಕಡಿಯಿಂದ . . . ಜವಾಬು ತಗೊಂಡು ಬಿಡೋಣ (ಗಂಗಾಶಾ. ೦೩೨). ಹಿಚುಕು : ೪. ಹಿರಿಯಾರ ಕಿಜಾಯಂಗೆ ಪಟ್ಟವೆ ಕೊಜೆವರ್ಲಟಾ ಹಿಚುಕಿ ಕೊರಳನು . . . ಎಂದು ಭರತನು ಹಿರಿದು ಹಲುಬಿದನು (ಳೌತಾ. ೪-೦೯) ; ಆ ವ್ಯಕ್ತಿ, ಆಗ ನನ್ನ ಕುತ್ತಿಗೆ ಮನಸ್ಸು ಹಿಚುಕಬಹುದೆನಿಸಿತು (ಕಿಂಮಬಿ. ೦೦೬); ರಾಮಣ್ಣನ ಕೈಯನ್ನು ಹಿಚುಕಿ ಕೇಳಿದಳು (ಕನಕ. ೬೨). ಹಿಜಿಗು : ೪. ಕುತ್ತಿಗೆಯನ್ನು ಹಿಜಿಗಿ ಪ್ರಾಣ ತೆಗೆಯುತ್ತೇನೆ (ರಂಕ್. ೯೦೬). ಹಿಸಕು : ೩. "ಪಿಸಕು-ಹಿಚಕು, ಹಿಂಡು" (ಶಾಕಕೋ. ೩೬). ಹಿಸಿಕು : ೪. ಹೆದರದೆ ಕೊಟ್ಟಿಹ ಹಣವನು ಕೇಳ ಬಂದ ಭಕ್ತನ ಕೊರಳು ಹಿಸಿಕಿ ಯಮುನೆಯ ಹಿಂದೆ ಸಮಾಧಿಯ ತೆಗೆದು (ಕೊಳ್ಳಕಶ. ೦೨೦-೦). ೬. ಪರಿಶೀಲಿಸಿ ನೋಡು ; ಪರೀಕ್ಷಿಸು : ಭೂಮಿಪಾಲೋತ್ತಂಸರೊಳಗೆ ಹಿಂದಂ ಹಿಸಿಕಿ ನೋಳ್ಪರೇ ಬಲ್ಲವರ್ಧರಣಿಪಾಲ (ಕಮ್ಮಿಳ. ೯-೦೬). ಹಿಸುಕು₁ : ೩. ಬೆರಳು ತಾಳ ಹಣ್ಣ ಹಿಸುಕಿದಡೆ[ಪಾಠಾಂ. ಹಿಸಿದಡೆ, ಹಿಸಿಕಿದಡೆ]ಮೆಲಲುಂಟೆ (ಕುಹಾರೇ. ೪. ೦೨-೨೮) ; ಅಸಮಾಸ್ತ್ರ ನಾಣ್ಣೆ ಜನನ ಮುಂದೆ ಸಿಹಿಪಿಲ್ಲ ಹಿಸುಕಿ ಬೀಸಾಡಿ ಸಾರ್ವಂತೆ ರಸದಾಳಿಗಬ್ಬಿನ ರಸದೊಳಾ ನೃಪತಿ ವಿಹಾಯಿಸುವಂದ ಮೆಜಿ ದುದಾ ಜನನ (ಕಶ. ೦೬-೬೬) ; ಕಂದಯ್ಯ ಹಣ್ಣನ್ನು ಒಡೆದು ತಿರುಳನ್ನು ಹಿಸುಕಿ ತೋರಿಸಿದರು (ಕುಹೂ. ೩೪). ೪. ಎನಿತೋ ಕೋಗಿಲೆಗಳ ನುಣ್ಕೊರಳನು ಹಿಸುಕಲು ತಳುಹದ ಕಲಿಘಟನಿವನು ! (ಕಂಟಾ. ೯೨-೩) ; ದೈತ್ಯಬಾಹು ಮುಂಗ್ಡತೆಯನು ಹಿಸುಕಲು ಚಾಚಿತು ಹಲಬಾರಿ (ಕಂಡು. ೩೯-೦೩); ರಾಣಿ ಸಂಗಮಿಯ ಕೈ ಹಿಡಿದು ಹಿಸುಕಿ, ಕೃಪಾಕಟಾಕ್ಷವನ್ನು ಬೀರಿದಳು (ಕಕಾ. II, ೯೬೬). ಹಿಸುಗು : ೪. ಯಾರನ್ನು ಕಂಡರೆ ಕತ್ತು ಹಿಸುಗಬೇಕೆನಿಸುತ್ತದೆ ನಿಮಗೆ ? (ಪುಕ್ಕುಹು. ೬೬). 'ಹಿದುಕು' ಪರಾ.

[ ದೇ. ‖ ತಮಿ. ಪಿಚಕ್ಕು ; ತುಳು. ಪಿಸ್ಸು ; ತೆಲು. ಪಿಸುಕು ; ಗಡಬ. ಪಿಸ್ಕೊಲ್ಪೆ ; ಗೊಂಡಿ. ಪಿಸ್ಕಾನಾ ; ಕುರುಖ್. ಪಿಚ್ಕಾನಾ ]

ಪಿಸುಕ (ನಾ). ಒಂದು ಬಗೆಯ ಕೀಟ : ತುಂಬಿ ಪತಂಗ . . . ಪಿಸುಕ ವಿಳಂಬಿ . . . ಕೊಟ್ಟಾರಿಗಂ ಯೆಡೆವುಬುಯೆಂದಿತ್ಕೀಪವಾದಿಗಳೊಳು ಸ್ಪರ್ಶರಸಗಂಧರೂಪಶಬ್ದಂಗಳೆಂಬೀಯಯ್ದುಮನಜಾಪ (ಕಪಾಶ. ೯೯).

[ < ಪ್ರಾ. ಪಿಸುಅ / ಸಂ. ಪಿಶುಕ ]

ಪಿಸುಕು 'ಪಿಸುಂಕು' ನೋ.

ಪಿಸುಗು 'ಪಿಸುಂಕು' ನೋ.

ಪಿಸುಗುಟ್ಟು (ಕ್ರಿ). (ಕಿವಿಯಲ್ಲಿ) ಮೆಲ್ಲಗೆ ಹೇಳು : ಪಿಸಂದನಿಯಲ್ಲಿ ಗುಟ್ಟಾಗಿ ಹೇಳು, ಪಿಸುಮಾತನ್ನಾಡು: "ಪಿಸುಕು-ಅಂತರ್ಗತಸ್ವನೇ (ಪಿಸುಗುಟ್ಟು), ಕಾಂತೌ ಚ (ಪ್ರಕಾಶಿಸು)" (ಕಶಿರಾ) ; ಆ ಎಲೆಗಳು

ಗಾಳಿಯು ಕಿವಿಯಲ್ಲಿ ಹೀಗೆ ಪಿಸುಗುಟ್ಟಿದಂತಂತೆ (ಶಾಕುಶಾ. ೩೫); ಪಿಸುಗುಟ್ಟಿದರೂ ಕೇಳುವಷ್ಟು ಹತ್ತಿರ ಇದ್ದರು (ಶ್ರಾವಣಸ್ತೀ. ೨೦); ಅರ್ಚಕನ ಅನಾಚಾರ ಕುರಿತು ಹೊಸೂರಿನ ಜನರು ಪಿಸುಗುಟ್ಟುತ್ತಿದ್ದರು (ಹೊಸೂಹ. ೨೩). 'ಗೊಣಗುಟ್ಟು' ಪರಾ. [ಪಿಸು+ಕುಟ್ಟು₁]

**ಪಿಸುಗುಡು** (ಕ್ರಿ). = ಪಿಸುಗುಟ್ಟು : 'ಅದು ಸರಿಯಲ್ಲ' ವೆಂದು ಅವನ ಸಮಸ್ತಚೇತನವೂ ಪಿಸುಗುಡುತ್ತಿತ್ತು (ಶೂಪರು. ೩೬೪); ಇನ್ನೊಬ್ಬರ ಕಿವಿಯಲ್ಲಿ ಗುಟ್ಟಾಗಿ ಪಿಸುಗುಡುವಾಗ ... ಹಠಾತ್ತಾಗಿ ಆಸ್ಫೋಟವಾಗುವ ಸೀನಿನಿಂದ ಏನು ಅವಾಂತರವಾದೀತು (ದೀಕಶ್ಮ. ೦೨). 'ಗೊಣಗುಡು' ಪರಾ. [ಪಿಸು+ಕುಡು₁ (< ಕೊಡು₁)]

**ಪಿಸುಣ್**, ಪಿಸುಣ್ಣ₁, ಪಿಸುಣು, ಹಿಸುಣ್ಣ₁, ಹಿಸುಣು (ನಾ). ಚಾಡಿ; ಚಾಡಿಯ ಮಾತು; ಕುತ್ಸಿತ : "ಪಿಸುಣಂದು ಕುತ್ಸಿತಂ"(ಕಶಬ್ದ. ೬೨-೬೭೬); ಆಳ್ವೆಸಗನಿಯ ನುಡಿದನೆಂಬೀ ಪಿಸುಣನನಂ ಕೇಳ್ದನಿಲ್ಲ ಬೀಡಿನೊಳವನಾ (ಕಂಕಕಾ. ೬-೧೨); ಪುಸಿಗೆ ಪಿಸುಣ್ಗೆ ಪೋರಟಿಗೆ ಮಾಯೆಗೆ ಹಿಂಸೆಗೆ . . . ಬಸನಡಿದೀಟ್ಟ ಕಾಟ್ಟಿಸನದಟ್ಟುಳಿಗಂ ಪುಗದಂತಿರೆಲ್ಲರಂ ಪೊಸಯಿಸಿ ಕಾರ್ತವೀರ್ಯನೆಸಕಂಬಡೆದಂ ದೊಡದೇವಭೂವರಂ (ಚಕಚ. ೩-೦೩); ಸವತಿಯೊಂದು ಪಿಸುಣ್ಗೆ ಎಟ್ಟಯಂ ಮಾಱುವೋದನೆಂಬೊಂದುಬ್ಬೆಗದಿಂ ಕೊರಗಿದಳೆನೆ ಪದ್ಮಿನಿ ನಾಡೆ ಬಾಡೆ (ಕಾವಕಾಕ್ಕ. ೨೨-೯). ಪಿಸುಣ್ಣ₁ : ಪಿಸುಣಂ ಪರಾಭವಂ ಕಲಹವುಂ ಕಪಟಮುಲಿಜಸಮತಿಕ್ರೂರಮನ್ಯಾಯ ಮಿವು ಪರ್ಚಿ ತದ್ವಸುಮತೀವನಿತೆ ತಾಳದೆ ಕಂಪಿಸುತ್ತಿರ್ಪಳು (ಕಂಕ್ಕ. -೦೦). ಪಿಸುಣು : ಪಿಸುಣಂಗೆ ಮುಳಿವಂ ಮಾದ್ಯವಿದ್ಯಾಧರಂ . . . ಸಿಂಗನ ಗರುಡ ನಾ[ಮಾ]ದಿ ಸಮಸ್ತಪ್ರಶಸ್ತಿಸಹಿತಂ (ಎಕ. XIX. ೦೬೯-೦೨; ೨೦೬೦); ವಿಕಾಳಿಸಿತೆ ಕೌರವನ ಬುದ್ಧಿ ವಿಟಾಳಸಂಗತಿಯಾಯ್ತಲಾ ಪಿಸುಣಾರ ಕರೆಳಿಚದು (ಕುಮ್ಯಾಸ. ೦೨-೯೬); ಕಲಹಿಸದಿರಾರೊಡನೆ ಪಿಸುಣನುಳಿ ಪರಧನಕ್ಕಳುಪದಿರು ಶಮವಸಗು (ಕೃಕಚ. ೩-೨-೩). ಹಿಸುಣ : ಕಂಗಳು ಹಿಸುಣವ ಹೇಳಿಹವೆಂದು ನೋಡಲಮ್ಮೆನವ್ವಾ (ಸಪಚ. ೬೦-೩೬೦); ಹಿಸುಣವನು ಹೇಳುವ ಕೇಳುವರಿಗಿನ್ನಾವುದೈ ಪ್ರಾಯಶ್ಚಿತ್ತವಿಧಿಯೆಂದ (ಸಂಕಚ. ೦೩-೬೦). ಹಿಸುಣು: ಹಿಸುಣು ಧರ್ಮದ್ರೋಹ ರುಜೆ ಕೈಮಸಕ ಪಳಿಪನ್ಯಾಯವೆಂಬಿವರೆಸಕ ಹೊದ್ದದಯೋಧಿಪನ ಧರಣೀತಳಾಗ್ರದಲಿ (ಕೊಕಠಾ. ೦-೩-೨೬). [< ಸಂ. ಪಿಶುನ]

**ಪಿಸುಣ್ಣ₁** 'ಪಿಸುಣ್' ನೋ.

**ಪಿಸುಣ್ಣ₂**, ಹಿಸುಣ್ಣ₂ (ನಾ). ೧. ಚಾಡಿ ಹೇಳುವವನು; ಚಾಡಿಕೋರ: "ಪಿಸುಣನೆನಲ್ ಪೈಶೂನ್ಯಂ" (ಕಶಬ್ದ. ೨೦೬); ಪಿಸುಣರ ಪುಸಿಪೊ ಕುಠಿ(ಟ)ಲಂ ಪೊ × × ಪ ಈಡುದೆ ಈಱ್(ಇಱ್)ಮು[ದೆ] ನನ್ನಿ ನುಡಿಯುದೆ ನಣ್ಣ(ನ್ನಿ)ದೇವಂಗಟ್ಟುಮುಯ್ಯುವ್ಪಡೆದೊಂಗರ ಅಲೆದೊಂ ಪೂಡಲಿ ಪೊಂ (ಎಕ. XXIV. ೦೯೩-೦೨; ಸು. ೮೮೬); ದೈವ ಗುರು ದ್ವಿಜರ ಚರಣಸೇವೆಯಲಾರ್ತಿತೆಯು ಪಿಸುಣರ ನುಡಿಗಳಲಿ ಮೂರ್ಖತೆಯು ನೀ ವಿರಚಿಪೆಯೊ ಬೇಸಱುವೆಯೋ (ಕುಮ್ಯಾಸ. ೦-೩೬); ಪುದಿಪೊದು ತೇಲ್ಗೆ ವಿಷಂ ತುದಿವಾಲದೊಳ್ಕದೆ ಫಣಿಗೆ ತುದಿದಾಡೆಗಳೊಳ್ ತುದಿನಾಲಗೆಯೊಳ್ಪಿಸುಣಂಗಿದು ಸರಿಯವು ಸೋಂಕೆ ಕೊಲ್ವುವಿದು ಸೋಂಕದೊಡಂ (ಚಕಚ. ೦-೩೮); ಪಿಸುಣನ ಹತ್ತಿರ ಉಸುರಭಾರದು (ಗಾದೆ). ೨. ನೀಚ; ದುಷ್ಟ : "ದುರ್ಜನಃ, ಪಿಶುನಃ, ಕ್ಷುದ್ರಃ, ನೀಚಃ, ಕರ್ಣೇಜಪಃ, ಖಳಃ—ಈ ೬ ಪಿಸುಣನು" (ಹಲಾಯು. ೩೬-೦೯೦); ಪಿಸುಣನೆ ಪಾತಕ ಪರಸತಿಯರಿಗೆ ಮೋಹಿಸುವನಧಮ ದುರ್ನುಡಿಯ ಉಸುರುವನೇ ಕ್ರೂರ ಚಾರಿತ್ರಭ್ರಷ್ಟನೆ ವಸುಧೆಗೆ ಪಾಪಿಯೆನಿಸುವ (ಜೀವಂಸಾಂ. ೬-೩೩); ಬಂಚೆ ಪ್ರಸವದ ನೋಪಱುವಳೆ ಪಿಸುಣಂ ಸಿರಿಗೆಳಂ ಜಸದೊಳಿಪ್ಪವನ ಸೈರಿಪನೆ (ಕುಕ್ಕಾಂಗ. ೦-೦೩); ಪಿಸುಣನ ದ್ರವ್ಯ ಲೋಭಿ ಬಯಸಿದ ಹಾಗೆ (ಗಾದೆ).

೩. ಶಕುನವನ್ನು ಸೂಚಿಸುವುದೆನ್ನಲಾದ ಒಂದು ಬಗೆಯ ಹಕ್ಕಿ ; ಹಂಗನ ಹಕ್ಕಿ : ಗೊರವ ಗಿಳಿ ಜಾಗರಿಗ ಹರಡೆ ಹಸುಬು ಪಿ[ಶಾಚ ಹಿ]ಸುಣ ಹೆಬ್ಬಕ್ಕಿ ಗಿಡುಗ . . . ಹಕ್ಕಿಗಳ ಮಳೆ ಕಱಿದುದದವಿಯೊಳಗೆ (ಕೋಕುಶ. ೩-೯). ಹಿಸುಣ್ಣ : ೧. "ಪಿಸುಣ—ಪಿಶುನ—ಪಿಸುಣ" (ಕನ್ನಕೋ. ೯೯); ಸಸಿನವೇ ನಿನ್ನಱುತಖಳರಿಗೆ ಹಿಸುಣರಿಗೆ ವಂಚಕರಿಗಜ್ಞರಿಗುಸುರಿಯಲೆ ನಿನ್ನಂತರಂಗವನೆಂದನಾ ಮುನಿಪ (ಕುಮ್ಯಾಸ. ೬೦೨. ೦-೩೪); ಹಿಸುಣರ ಜಾಳಿಗರ ಚದುರೋಕ್ತಿ ಸಮಗೇಕೆಂದೆಳವರೊಡನೆ (ಕೊಕಠಾ. ೨-೦-೨೬). ೨. ಚೋರನನು ಕಂಟಕನ ಹಿಸುಣನ ಜಾರನನು ಮೂಢನನು ಸಮಯ ವಿಕಾರಭೇದಿಯನಿಂತಜೀವರನು ಕಂಡು ಮನ್ನಿಸದೆ ದೂರದಲಿ ವರ್ಜಿಸುವುದು (ಕುಮ್ಯಾಶಾ. ೯-೯೬). ೩. ಮೇಲಿನ 'ಸೋಮಚಕ. ೩-೯' ರ ಪ್ರಯೋಗದ ಪಾಠಾಂತರವನ್ನು ನೋಡಿ.

[ಪಿಸುಣ್ + — ಅ₁]

**ಪಿಸುಣತನ** (ನಾ). ಚಾಡಿಕೋರತನ; ಪಿಶುನತ್ವ : ನಿಜಬಂಧುಗಳು ಅಳಿಯೆ, ಪಿಸುಣತನ ಅಡಗಿತೇ ? (ಕಂಪ್ಕ. ೩೦); ಸಂಗೀತದಲ್ಲಿ ಓಡದಿದ್ದ ಅವರ ಬುದ್ಧಿ ಪಿಸುಣತನದಲ್ಲಿ ಚುರುಕಾಯಿತು (ಕೂಕಚ. ೦೩೪).

[ಪಿಸುಣ₁ (<ಪಿಸುಣ್) + — ತನ]

**ಪಿಸುಣತೆ**, ಹಿಸುಣತೆ (ನಾ). (ಒಬ್ಬರ ಬಗ್ಗೆ) ಆಡಿಕೊಳ್ಳುವುದು,—ದೂರುವುದು; ಚಾಡಿ ಹೇಳುವುದು : ಇಳೆಯೊಳು . . . ಸಂಚಲಚಿತ್ತಪಂಥತ್ವ ಮುಳಿಸು ಹೊಲೆ ವ್ಯಸೆ ರೌದ್ರವವು ದುರ್ಬಲವೆ ಜೀವನ್ಮೃತವು ಪಿಸುಣತೆ ಕೊಲೆಯದೆಲೆ ಸುಕುಮಾರ ಕೇಳೆಂದಱುಹಿದನು ಮುನಿಪ (ಜೀವಂಕ. ೩-೬೦); ರಾಮಂಗೆ ಪಟ್ಟಗಟ್ಟುವ ಪ್ರೀಮದೆ ದಶರಥನ್ನಪಾಲನನುಪಮಾಡಿಸುತಿರಲಾ ಮಂಥರೆ ಪಿಸುಣತೆಯಿಂ ಕಾಮಿನಿ ಕೈಕಯಿಗೆ ಪೇಳಲಾಕ್ಷಣದೊಳಗೆ (ದಚಾಚ. ೬-೦೯೯). ಹಿಸುಣತೆ : ಹಿಸುಣತೆಯ ಹಿಂಗಿಸಿ ಮನಸ್ಸಿನ ಮಸಕವನು ಮಾಣಿಸಿ ವಿಕಾರದ ವಿಷಯ ವಿಧಿಗಳನುಱಿ ವಿಸರ್ಜಿಸಿ . . . ಸಸಿನೆ ಸತ್ವದಿ ನಡೆಪಗಲ್ಲದೆ ಹುಸಿಯ ನುಡಿವಗೆ ಭಕ್ತಿಯಹುದೇ (ಶ್ರೀಕುಂ. ೧೩-೯೦).

[ಪಿಸುಣ₁ (<ಪಿಸುಣ್) +—ತೈ./ ಸಂ. ಪಿಶುನತಾ]

**ಪಿಸುಣತ್ವ** (ನಾ). = ಪಿಸುಣತನ : ವಿಷಮವಿಶ್ವಾಮಿತ್ರಮುನಿ ಮುನಿದು ತಪ್ಪ ಸಾಧಿಸಿದಪ್ಪನೞಿದಿರೇದಱಾಪಬೇಕಱಾಹಿದಡೆ ಪಿಸುಣತ್ವ ಪಱಾಪದಿರ್ದಡೆ ನೃಪನ ಕೇಡ ನಾನೋತುಪೇಕ್ಷಿಸಿದಾತನು . . . ಇದ ಪೇಳದಂತೆ ಪೇಳ್ದಪೆನೆಂದು ನೆನೆದನಾ ಮುನಿನಾಥನು (ಹಕಚ. ೩-೬೨).

[< ಸಂ. ಪಿಶುನತ್ವ]

**ಪಿಸುಣಾಡು**, ಹಿಸುಣಾಡು (ಕ್ರಿ). ಚಾಡಿ ಹೇಳು ; ದೂರು ಹೇಳು ; ದೂರು : ಮೂಡಿದ ಮೊಡವಿ ಮುಗುಳ್ಗೊಗವಿಱಿಱ್ ಪುಷ್ಪಂಜರೀಸ್ತನಂ ತೋಳ್ಕೊದಲೊಳ್ ತೀಡುವ ನಱಾಗಂಪೇಂ ಪಿಸುಣಾಡಿದುದೋ ಸಗಿಗೆ ಪುಷ್ಪಸಮಯೋದಯಮಂ (ಕೃಕ್ಕ. ೩-೦೦೩); ಅದೞೊಳ್ಕದ್ದಾಧರ ಮಿಥುನಂ ಕೂಡಿದುವನವನಿಸನೊಳ್ಪಿಸುಣಾಡಿ ಪೋಲ್ . . . ಆ ನವ ... ಅಧಿಕ ಪದೆದೆಱುಗುವ ಪೊಸಪೞಿಮೆಗಳ ಪಸುಳೆಯಿಂಚರವೊಪ್ಪಿದುವು (ಚಯಶ್ಚ. ೯-೯); ನಿನ್ನ ಹಿಂಗಡೆಯೊಳು ಪಿಸುಣಾಡುಪರ್ಪನು ಓಡಿದೀಯ ತಡೆದೀಯ ನೀನು (೨೦ಚಾಕ. ೬೬-೬೨). ಹಿಸುಣಾಡು : ದುಡಿದು ಹಣ್ಣಾದ ದೇಹ ಮನದ ಬೇಸರದ ಭಾವನೆಯನ್ನು ಹಿಸುಣಾಡುವಂತಿವೆ (ಮೋಕರು. ೯೬ ಕೃಶ್ಯಾಶಪ).

[ಪಿಸುಣ್ + ಆಡು₁]

**ಪಿಸುಣಾಡುಹ** (ನಾ). ಚಾಡಿ ಹೇಳುವುದು; ಬೇರೆಯವರ ಬಗ್ಗೆ ದೂರುವುದು ; ದೂರು ಹೇಳುವುದು : "ಪಿಶುನಭಾವಃ—ಪಿಸುಣಾಡುಹಂ. ಕೊಡೆಯು" (ಅಚಶಾ. ೨೬-೦೬).

[ಪಿಸುಣಾಡು + — ಹ₂ (< — ಪ₂)]

**ಪಿಸುಣ** (ನಾ). ೧. ಕೆಟ್ಟ ವ್ಯಕ್ತಿ ; ನೀಚ ; ದುಷ್ಟ : ಬೇಡಿದರೆ ಬೇಡುವದು ಮಾಡುವ ಧರ್ಮಿಯನು ಮೂರ್ಖಮೂರ್ಖರನು ಪಿಸುಣರುಗಳ ಕೋಡಿಸಿ ಬೇಡಬೇಡೆಂದ (ಸರ್ವಜ್ಞ. ೬೦೩). (ಗು). ೨. ಕೆಟ್ಟದಾದ ; ನೀಚವಾದ ; ದುಷ್ಟ : ಹಸಿದವರನು ಕೂಡಿ ಪುರುಷ ಮನೆಗೆ ಬಂದು ಅಸಿಯಳ ಕೇಳಲಾಕ್ಷಣದಿ ಗುಸುಗುಟ್ಟಿ ಕೊನರುವ ಪಿಸುಣಮನದ ಹೆಣ್ಣು ಕಸವೆಂದು ಸೀಯಿ ನಾನವಳ (ಕಪೋತ.೦೯-೬೩). [ಪಿಸುಣ್ + –ಅ₃]

**ಪಿಸುಣಿಗ, ಹಿಸುಣಿಗ** (ನಾ). ಚಾಡಿಮಾತನ್ನು ಹೇಳುವವನು ; ಚಾಡಿಕೋರ : ಶ್ವಾನಬಾಲವು ಡೊಂಕು ಹೀನಮನವದು ಡೊಂಕು ಕಾನನದಿ ಹರಿವ ಹೊಳೆ ಡೊಂಕು ಪಿಸುಣಿಗನು ತಾನೆ ಡೊಂಕೆಂದ (ಸರ್ವಜ್ಞ. ೦೯೬೩); ಯಾವಾನನಂಥ ಪಿಸುಣಿಗರ ಒಂದು ಪರಿವಾರವೆ ದರ್ಬಾರಿನ ಸುತ್ತಲೂ ಅದರ ಬಿಗುಹನ್ನು ಶಿಥಿಲಮಾಡಲು ಸುಳಿದಾಡುತ್ತಿದೆ (ಕೋಟೆ. ೩೩). ಹಿಸುಣಿಗ : ಮಿತ್ರರಿಗೆರಡು ಬಗೆದವನ ಹಿಸುಣಿಗನ ಕೃಪಣನ ವೃಥಾ ಕೋಪಿಸುವವನ ದುರ್ಗತಿಗಳಾಗಲಿ ಶಶಿಮುಖಿಯೆ ನಾ ಮರಳಿ ನಿನಗಳುಪಿದ್ದರೆ (ಕೃಷ್ಣಂ. ೦೦-೭೩). [ ಪಿಸುಣ್ + –ಇಗ ]

**ಪಿಸುಣಿಸು** (ಕ್ರಿ). ಚಾಡಿ ಹೇಳು ; ದೂರು ಹೇಳು ; ದೂರು : ಇಂದಿವನ ಮೇಲೆ ಪಿಸುಣಿಸಿದಪರ್ ಬಲ್ಬನ್ನವಂ ದಿಟಂ ತಾಳ್ದರಲ್ಲದೆಯಿಾ ಮಹಿಪನಿನಿಸು ಕುಂದನಾಂಪನೆಯೆಂಬರ್ . . . ಕೆಲಂಬರಲ್ಲಿ (ಕವ್ಯಕಾ. ೬-೩೨). [ಪಿಸುಣ್ + — ಇಸು₂ ]

**ಪಿಸುಣು** ‘ಪಿಸುಣ್’ ನೋ.

**ಪಿಸುಣೆ** (ನಾ). ಚಾಡಿ ಹೇಳುವವಳು ; ಚಾಡಿಕೋರಿ : ಪಿಸುಣೆ ದುರಾತ್ಮೆ ದುಶ್ಚರಿತೆ ದುರ್ಭಗೆ ದುರ್ಮತಿ ದುಷ್ಟೆ . . . ದುರಾತ್ಮೆಯುಪ್ಪ ವಧು ಸಜ್ಜನಮೇ (ಜಗನ್ನಾ. ೬-೬). [ ಪಿಸುಣ್ + – ಎ₂]

**ಪಿಸುಣ್ಗೆಡೆ** (ಕ್ರಿ). (ಬೇರೆಯವರ ಮೇಲೆ) ಅಪವಾದವನ್ನು ಹೊರಿಸು ; ನಿಂದಿಸು ; ದೂರು : ಅನುನಯಾಭಿವಾದನಸಮನ್ವಿತಂ ಮಧುಕೈಟಭಂ ಕಳಿಪೆ ನಾರದ ನಾರದಂ ನುಡಿದರೆಂಬಂತೆ ಪಿಸುಣ್ಗೆಡೆದು ಸನ್ಮಾರ್ಗಾನುವರ್ತಿಯಾಗಿ (ಅಜಿತ. ೦೩-೨೨ ವ) ; ಬಿಜ್ಜಳಂ ಸಭಾಸದರೊಡನೆ ಕಂಡು ಕೌತುಕಂಗೊಂಡು ಪಿಸುಣ್ಗೆಡೆ[ಪಾಠಾಂ. ಣ್ಗೆ]ದ ಖಳರಂ ತರ್ಜನಂಗೈದು ಸತ್ಪುರದೊಳಿನ್ನಾವನಾದೊಡಮಿಂತು ಬಸವನಂ ಕೂರ್ತು ಪಿಸುಣ್ಗೆಡೆಯೆ ಜಿಹ್ವಾಚ್ಛೇದನಂಗೈವೆನೆಂದು ಘೂಣ್ಪು ನುಡಿದು (ಬ ಪು ೬-೦೬ ವ). [ ಪಿಸುಣ್ + ಕಡೆ₂ ]

**ಪಿಸುಣ್ಪೇಳ್** (ಕ್ರಿ). ಚಾಡಿಯನ್ನು ಹೇಳು,–ನುಡಿ ; ದೂರು : ಧರ್ಮಿಗಂ ಕೊಲೆಯೇ ಮಂತ್ರಿಗಮಿಚ್ಛೆಕಾಱತನಮೇ ತಕ್ಕೆ ಪಿಸುಣ್ಪೇಳ್ದನೇ ಚಲಮಂ ಗಂಡುಮನಪ್ಪುಕೆಯ್ವನಗಮಾ ಕೌಂತೇಯರೊಳ್ ಸಂಧಿಯೇ (ಗದಾಯು. ೩-೯೬) ; ಈತನನುದಾಸೀನಂ ಮಾಡಿ ಕಳಿಪಿದನ ಪ್ರೌಢೇನಾನುಮಂ ಪುಸಿದು ಪಿಸುಣ್ಪೇಳ್ದಪನು (ಕಂಕಿಶ. ೩೦-೦೯) ; ಕೆಳದಿಯ ನಡುಂಗಿ ಕಾದಲ್ ಮುಟಲಿಕೆ ಮತ್ತೆ ಮಾರ್ಗಳೆಂ ಪಿಸುಣ್ಪೇಳ್ವವೊ ಕೋಪಾಳೆಯಿರ್ದೆಡೆಯು ತತ್ಪರಿಪಾಳಿಕ್ಕೆ ಮೇಗೆಳಸಿ ಸುಟೀವ ಮಧುಕರ ನಿಕರಂ (ಸಂಕ್ರಪು. ೬-೦೯೦). [ ಪಿಸುಣ್ + ಪೇಳ್ ]

**ಪಿಸುದನಿ** (ನಾ). ತಗ್ಗಿದ ಧ್ವನಿ,—ಸ್ವರ : ಪಿಸುದನಿಯಲ್ಲಿ ಆಡಿದ ಮಾತುಗಳನ್ನೂ ಇವರು ಕೇಳಬಲ್ಲರು (ಅಕ್ರೂ. ೯೯) ; ಆದಾಗ ತಂದೆಯವರು ಪಿಸುದನಿಯಲ್ಲಿ ಅಮ್ಮನ ಹತ್ತಿರ ಮಾತನಾಡುತ್ತಿದ್ದರು (ಅಪೋಲೊ. ೩). [ ಪಿಸು + ದನಿ₁ ]

**ಪಿಸುನುಡಿ₁** (ಕ್ರಿ). (ಕಿವಿಯಲ್ಲಿ) ಮೆಲ್ಲಗೆ ಹೇಳು ; ತಗ್ಗಿದ ಧ್ವನಿಯಲ್ಲಿ ಮಾತನಾಡು : ತಾಯಿಯಳಲುತಿರೆ ಮುಂದೆ ತಂಗಾಳಿಯೆನೆ ಬಂದು ಕಾಯುವಳ್ ಪಿಸುನುಡಿದು ಕಾಲೂರ ಚೆಲುವೆ (ಕಾಡಿನ. ೦೬೬-೨೨). [ ಪಿಸು + ನುಡಿ₁ ]

**ಪಿಸುನುಡಿ₂** (ನಾ). ಕಿವಿಮಾತು; ಗುಟ್ಟು : ನಡೆದಿವೆ ಹೆಣಗಾಡಿನ ಕಾಲುಗಳು . . . ಪಿಸುನುಡಿಗಳ ಮಾರ್ದನಿಗಳ ಕಿರುಗೋಣೆಗಳಿಂದ ಕಾಣದ ಗಡಿಗಾಡುಗಳಿಂದ (ದ್ಯಾ ಪೃಥ್ವಿ. ೦-೦೦); ಹೊರಗಡೆಗೊಯ್ಯೊಡೆ ವೃತ್ತ ವ್ಯಕ್ತಿಕೆಯ ಗೋಡೆ ಒಳಗುಸುರಿದ ಪಿಸುನುಡಿಯು ಇಲ್ಲಿ ನೀ ಪ್ರಾರ್ಥಿಸಿ ಮೆಲ್ಲನೆ ಬೇಳ್ಕೊಡೆ ಕೇಳಿಸಿಕೊಳನೆ ಆ ಒಡೆಯ (ರಂಗಾಶ. ೦೩೦-೯೯). [ಪಿಸು+ನುಡಿ₂]

**ಪಿಸುಮಾತು** ‘ಪಿಸುವಾತು’ ನೋ.

**ಪಿಸುರು₁** ‘ಪಿಸರು₁’ ನೋ.

**ಪಿಸುರು₂** ‘ಪಿಸರು₂’ ನೋ.

**ಪಿಸುವಾತು, ಪಿಸುಮಾತು** (ನಾ). ಕಿವಿಮಾತು; ಪಿಸುನುಡಿ : ಮುಂಜಾವದುದಯಾವಲಿ ಕಪ್ಪುಲರ ಪಿಸುವಾತು ಭೃಂಗಜೀವನವನೆಳ್ಚರಿಸುವಂತೆ . . . ಬಾ ಎನ್ನ ಬಯಲಾಗುಡಿಗೆ ! (ಕರಿಣ. ೯೬-೦). ಪಿಸುಮಾತು : ಪಿಸುಮಾತೊಲು ದೆಸೆದೆಸೆಯೊಳು ಹಬ್ಬಿದೆ ಎಲೆಯ ದನಿ (ಜೋಂಕಿ. ೯೨-೦೯); ಕಂಪಿತಸ್ವರದಿಂದ ಮೆಲ್ಲನೆ ಪಿಸುಮಾತಿನಲ್ಲಿ “ಶಿವ” ಎಂದೆ (ಪಾಪಾಪಿ. ೦೦೬); ಅವನು . . . ಆಗಾಗ್ಗೆ ಪಿಸುಮಾತಿನಲ್ಲಿ ಏನಾದರೂ ಹೇಳುತ್ತಿದ್ದನ (ಜುರಿಶಾ. ೦೦೬); ಕಾಡಿದವನು ಬಲ್ಲನೆ ಪಿಸುಮಾತ ? (ಗಾಥೆ). [ಪಿಸು+ಮಾತು₁]

**ಪಿಸುಳ್** (ಕ್ರಿ). ೧. ಸಿಗಿ; ಸೀಳಿ ಹಾಕು: ಕಿತ್ತು ತೆಗೆ: ನಲಕ್ಕೆ ಬಾಳನಲ್ಲಾದೆ ನೆಗಪ್ಪಿಕೊಂಡು ತೊಡೆಗಾ ನರಸಿಂಹನವೊಲ್ ಕಂಭದಿಂ ಮೂಡಿದ ಕಾಳರಕ್ಕಸನನಿಕ್ಕುವವೋಲ್ ನಖದಿಂ ಕರುಳ್ಗಳಂ ತೋಡಿ ಪಿಸುಟ್ಟು ಸೀಳ್ದು ಬಿಸುಟಂ ಕಲಿಕಂಸನನಬ್ಜಲೋಚನಂ (ಅರ್ಜವೇ. ೬-೦೦೬). ೨. ಹಿಸಿದು ಹೋಗು; ಹಿಂಜಿ ಹೋಗು; ಹರಿದು ಹೋಗು : ಪೆರ್ಬುಲಿ ಬಾಯೆ ಕಂಠಗತ ಜೀವಿತರಾದವರೆಕ್ಕಲಂ ಕನಲ್ದುರ್ಬಿ ಪಿಸುಟ್ಟ ದೊಂಡೆಗರಾಳಂ ತಳೆದಿರ್ದಪರ್ . . . ಬರ್ದಪರೊಪ್ಪಿದರ್ (ದಕಳು ೩-೯೦). ೩. ಸೀಳಿ ಹೋಗು ; ಬಿರಿದು ಹೋಗು; ಒಡೆ : ಚುರ್ಚಿ ಮಾರ್ನುಡಿಯದೆ ಗಾಣದೊಳ್ ಪಿಟ್ ಪಿಸುಟ್ಟಿರೆ [ಪೋ]ಟಿಸು ಬಿಡಿವಾಳದೊಳ್ (ಸುಕುಮಾ. ೬-೩೨); ಪರ್ಬಿದ ದುಸ್ತಮಸ್ತಮೋನ್ಮದಕರಿಯೂಥಮಂ ಪೆಳಱಿ ಪೋಱಿ ಪಿಸುಟ್ಟ ತದುತ್ತಮಾಂಗದಿಂ ಕೆದಱಿದ ಮೌಕ್ತಿಕಾವಳಿಪೊಲಾದುವು ಮೂಡಣ ತಾರಕಾಳಿಗಳ್ (ಕಾವ್ಯಾವ. ೯೦೨); ನೃಪಂ . . . ಆ ನೆತ್ತರ ಮಾಣೆಯಿಂದಿಱಿದೊಡೆ ನೆತ್ತಿ ಪಿಸುಟ್ಟಿತ್ತು ಸತ್ತುಪಂತಾಯೆರಡುಂ (ಯಶೋಧ. ೩-೯೩).

**ಪಿಸ್ತಾ, ಪಿಸ್ತೆ** (ನಾ). ಒಂದು ಬಗೆಯ ಮರ ಮತ್ತು ಬಾದಾಮಿಯಂತಹ ಅದರ ಬೀಜ; ೯ ಕೆಲವು ಸಿಹಿತಿಂಡಿಗಳನ್ನು ತಯಾರಿಸುವಾಗ ಈ ಬೀಜವನ್ನು ಬಳಸುತ್ತಾರೆ : ಇಷ್ಟರಲ್ಲೇ ಅವನು ಪ್ರತಿದಿನವೂ ಬಂದು ಪಿಸ್ತಾ, ಬಾದಾಮು ಲಂಚ ಕೊಟ್ಟು ಕೊಟ್ಟು ಮಿನಿಯ ಪುಟ್ಟಹೃದಯವನ್ನು ಅದೆಷ್ಟೋ ಆಕ್ರಮಿಸಿಕೊಂಡು ಬಿಟ್ಟಿದ್ದಾನೆ (ಇಕ್ಕೇ. ೩೯); ೨೦ ಸೂಡಿ ಳ೨ ಬೇತಾಳವಾಣದ ಜೀನಸಗಳು . . . ೮ ಪಿಸ್ತಾ (ಕುಂಜಕಾ. ೦೨೩). ಪಿಸ್ತೆ : ಈ ಹಡಗಗಳಲ್ಲಿ ಅರಬಸ್ತಾನದಿಂದ ಉತ್ಪತ್ತಿ ಖಜೂರ, ದಾಳಿಂಬ, ಬದಾಮು, ರಾಳ, ಮಿಠಾಯಿ, ಮನೂಕ, ಪಿಸ್ತೆ ಮುಂತಾದ ಸರಕುಗಳು ಬರುತ್ತವೆ (ಕಳಾಗ. ೩೦೬); ಗೋಡಂಬಿ, ಮನೂಕ, ಮುಂಬೈಯ ಪಿಸ್ತೆ, ಹಾಗು ಹತ್ತೆಂಟು ಹಣ್ಣುಗಳ ಶೀಕರಣೆಯನ್ನು ತಿನ್ನುವಾಗ ವಸಂತರಾಯನ ಆದರ ವಿನಯಗಳು ಉಕ್ಕೇರಿದವು (ಗಂಪೂಡಿ. ೨೦೩). [ ←ಪಾರ. ಹಿಂ. ಮರಾ. ಪಿಸ್ತಾ]

**ಪಿಸ್ತೂಲು** (ನಾ). ಸಣ್ಣ ತುಪಾಕಿ,–ಬಂದೂಕು : ಜನರಲ್ ಮೊಂಡೂಸ್‌ಸಾಹೇಬ್‌ಬಹಾದ್ದೂರವರು ಒಡಂಬಡದೆ ತಮ್ಮ ಕೈಯಿಂದ ಪಿಸ್ತೂಲಿನ ಗುಂಡಿನಿಂದ ತಮ್ಮ ಮೈಗೆ ತಾವೇ ಹೊಡೆದು ಜಖಮಿ ಮಾಡಿಕೊಂಡು (ಬಾಹೇಂದ್ರ. ೮೩); ಪಿಸ್ತೂಲನ್ನು ದೊರಕಿಸ

ಬೇಕಾದರೆ ಸಾಕುಸಾಕಾಗಿ ಹೋಯಿತು(ಅಮಗಾ. ೩೦). [←ಇಂ. Pistol]

**ಪಿಸ್ತೆ** 'ಪಿಸ್ತಾ' ನೋ.

**ಪಿಹಿತ** (ಗು). ೧. ಮುಚ್ಚಿದ ; ಮರೆ ಮಾಡಿದ : ಅನೇಕಸೇವಕ ಕ್ಷತ್ರಿಯಾತಪತ್ರಮಂಡಲಪಿಹಿತದಿನಕರನುಮುಚ್ಛಲಿತ ಬಹಲಧೂಳೀಪಟಲ ಪಿಹಿತರಿಪುನೃಪತಿನಗರನುಂ . . . ಆಗಿ ನಡೆಯೆ(ಆಂಪು. ೦೨-೧೦ ವ); ನಿರ್ದಯ ಪ್ಲೊಂಗು ಬೇಗಮೆಂಬಂತೆಯುಮೆನ್ನನಶ್ರುಪಿಹಿತಾಕುಲದೃಷ್ಟಿಗಳಿಂದೆ ನೋಡಿ ದಳ್ (ಶಾಂತಿಪು. ೩೬೬) ; ಕಾಂಚಾಕೀರ್ಣಾಪಿಪ್ಪಾತಕಪಿಹಿತಲತಾಂತಂಗಳೊಳ್ ಪಾಯ್ವುದು ಮೆಯ್ ಶಂಕಿಸೆ (ಅಂಪಾ ೦೯-೨೦). (ನಾ). ೨. ಮುಚ್ಚುವಿಕೆ; ಮರೆಮಾಡುವಿಕೆ : "ಅಪವಾರಿತಂ ಸಂಸ್ಕೃತಂ ಸಂದಿತಂ ಪಿಹಿತಮನಲ ಮುಚ್ಚಲ್ಕೆ ನಾಮಂ" (ಶಬ್ದಗಾ. ೦೩೦-೦೯). ೩. ಮುಚ್ಚಿರುವಂತಹುದು; ಮುಚ್ಚಿದುದಂ : "ಅಪವಾರಿತಂ, ಪಿಹಿತಂ, ಸಂವಿತಂ, ಸಂಸ್ಕೃತಂ, ಸ್ಥಗಿತಂ-- ಈ ೫ ಮುಚ್ಚಿದುದು" (ಕರಾಪು. ೦೨೨-೩೬). [ಸಂ.]

**ಪಿಳಕಾರಿ** (ನಾ). ಒಂದು ಬಗೆಯ ಹೂವಿನ ಗಿಡ; ಕಣಗಿಲೆ : "ಪಿಳಕಾರಿ-ಗಣಜಲು" (ಬಸಂ. ೯೬). [?]

**ಪಿಳಕಿಸು**, ಪಿಳಿಕಿಸು, ಪಿಳುಕಿಸು (ಕ್ರಿ). (ರೆಪ್ಪೆಯನ್ನು ಒಂದೇ ಸಮನೆ) ಬಡಿ ; ಮಿಟುಕಿಸು : ಪಡಕ್ಕಾಯರೂ ಕಣ್ಣು ಪಿಳಕಿಸಿ ಕೊಂಡು . . . ಕುಳಿತಿದ್ದರು (ಗಂಗಾವ. ೨೩) : ಎಚ್ಚರ, ಕಣ್ಣು ಪಿಳಕಿಸ ಬಾರದು; ಉಗುಳು ನುಂಗಬಾರದು; ಇಲ್ಲವಾದರೆ ಸತ್ತಿಯೇ ಮದು ತಿಳಿ! (ಕುಂಹಿಂ. ೨೬). ಪಿಳಿಕಿಸು : ಗೋವರ್ಧನನಿಗೆ ತಾನಾವುದೋ ಗೂಡನ್ನು ಸೇರಿದ ಅರಿವಾಗಿ ಕಣ್ಣು ಪಿಳಿಕಿಸಲು (ಮುಂಗಡು. ೦೦೬). ಪಿಳುಕಿಸು : ಚಾರು ತುಂಬ ಸಿಡಿಮಿಡಿಗೊಂಡು ಮಂಚದ ಮೇಲೆ ಕುಳಿತು ಕಣ್ಣು ಪಳಪಳ ಪಿಳುಕಿಸಿ . . . ದುರುದುರು ನೋಡಹತ್ತಿದಳು (ಇತ್ಯಿಕ. ೨೬೬); ಪಿಳುಕಿಸದ ಸಿರಿಗಣ್ಣು ಸುತ್ತು ಚಿನ್ನದ ರೇಖೆ ಬೆಳ್ಳಿ ಮಿರುಗಿನ ಮೈಯ ಕಾಂತಿ ನಿನಗೆ (ಪಶ್ಚಿ. ೦೦-೯) 'ಪಿಳಿಪಿಳಿ' ಪರಾ. [ ಪಿಳಕ್ಕು + —ಇಸು ]

**ಪಿಳಗು** 'ಪಿಳ್ಗು' ನೋ.

**ಪಿಳಚಲು** (ನಾ). ಕಣ್ಣು (ಪಿಸರಿನಿಂದ ಕೂಡಿ) ಗುಳಿ ಬಿದ್ದಿರುವುದು ; ಕಾಂತಿಹೀನವಾದುದು : ಅವನ ಕಣ್ಣು ಯಾವಾಗಲೂ ಪಿಳಚಲು (ರೂಢಿ). 'ಪಿಳಚಲುಕಣ್ಣು' ಪರಾ. [ ಪಿಳಚು + —ಅಲು(< —ಅಲ್) ]

**ಪಿಳಚಲುಕಣ್ಣು** (ನಾ). (ಪಿಸರಿನಿಂದ ಕೂಡಿ) ಗುಳಿ ಬಿದ್ದ ಕಣ್ಣು ; ಕಾಂತಿಹೀನವಾದ ಕಣ್ಣು : ಹಣೆಯಲ್ಲಿ ಎದ್ದು ಕಾಣುವ ಗಂಧಾಕ್ಷತೆ ಪಿಳಚಲುಕಣ್ಣಿಗೆ ಕನ್ನಡಕ . . . ಇವುಗಳಿಂದ ಅಲಂಕೃತರಾದ ಸೀತಾ ರಾಮಯ್ಯ (ಕೋಟಿಸಂಗ. ೩). 'ಪಿಸರುಗಣ್ಣು' ಪರಾ.

[ ಪಿಳಚಲು + ಕಣ್ಣು (< ಕಣ್). / ತಮಿ. ಪಿಳಿಚ್ಚೈಕ್ಕಣ್ ]

**ಪಿಳಚು** (ನಾ). ಕಣ್ಣು (ಪಿಸರಿನಿಂದ ಕೂಡಿ) ಆಕರ್ಷಣೆಯ ಶಕ್ತಿಯನ್ನು ಕಳೆದುಕೊಂಡಿರುವುದು;-ಕಾಂತಿಹೀನವಾದುದು : ಕಣ್ಣೇನೋ ಪಿಳಚು ದಿಟ, ಹಣ ಪಿಳಚೆ? (ಪಕ್ಷಿಕ. ೩). [ದೇ.॥ ತಮಿ. ಪಿಳಿಚ್ಚೈ]

**ಪಿಳಪಿಳನೆ** 'ಪಿಳ್ಪಿಳನೆ' ನೋ.

**ಪಿಳಿ**₁ 'ಪಿಟಿ' ನೋ.

**ಪಿಳಿ**₂, ಹಿಳಿ₂ (ಕ್ರಿ). ಒಡೆ : ಸೀಳಂ ; ಬಿರಿ : ಒಡೆಯುಲಜಾಂಡಂ ಕುಲಗಿರಿ ಕಿಡೆಯಲ್ ಪಿಳಿಯಲ್ಕೆ ಧಾತ್ರಿ ದಿಗಿಜರ್ನಡುಗಲ್ಕೆ . . . ಸಿಂಹನಾದಂಗೆಯ್ದಂ (ಗದಾಯು. ೬-೦೬). ಹಿಳಿ₂ : ಇಳೆ ಹಿಳಿಯಲು ಜಪ ಜರಿಯಲು . . . ಹರಿ ಬೊಬ್ಬಿರಿದು ಕಂಬನಿದುಂಬಿದರೆನೆಯಪಜಯ ಗಜಬಜವು (ಕೀಲಿಕ. ೨ ೪೯) ; ಪರ್ವತ ಹಿಳಿಯೆ ಹೆಚ್ಚಿದ ಪಟಹ ಪಣಹ ಮೃದಂಗ ಡಿಂಡಿಮಾದ ಉಲಿಯ . . . ಗೊಂದಳವ ಕಳಗರ್ಚಾಯ್ತು ಕೌರವಸೈನ್ಯಶರಧಿಯಲಿ (ಕುಮಾವ್ಯಾ. ೯-೨೬). 'ಪಿಳ್ಗು' ಪರಾ.

[ದೇ.॥ ತಮಿ. ಪಿಳ್. ಪಿಳ; ಮಲ. ಪಿಳ]

**ಪಿಳಿಕಿಸು** 'ಪಿಳಕಿಸು' ನೋ.

**ಪಿಳಿಕು** 'ಪಿಳ್ಕು' ನೋ.

**ಪಿಳಿಗು** 'ಪಿಳ್ಗು' ನೋ.

**ಪಿಳಿಪಿಳಿ** (ನಾ). ಒಂದು ಅನುಕರಣ ಶಬ್ದ : ಅವನು ಪಿಳಿಪಿಳಿ ನನ್ನನ್ನೇ ನೋಡುತ್ತಿದ್ದ (ರೀತಿಕ. ೮೬).

ಪಿಳಿಪಿಳಿ ಕಣ್ಣು ಬಿಡು = (ಆಶ್ಚರ್ಯ ಅಥವಾ ಅಸಹಾಯಕತೆ ಗಳಿಂದ) ಕಣ್ಣನ್ನು ಪಿಳಕಿಸು ; ಒಂದೇ ಸಮನೆ ನೋಡು : ಬಂದಣ್ಣ ಪಿಳಿಪಿಳಿ ಕಣ್ಣು ಬಿಟ್ಟರು (ಕೃತಿ. ೯೩೦) ; ನಾನೊಬ್ಬನೇ ಪಿಳಿಪಿಳಿ ಕಣ್ಣು ಬಿಡಬೇಕಾಗಿದೆ! (ಜಾಲಿಹು. ೬೬). 'ಪಿಳ್ಪಿಳನೆ' ಪರಾ.

**ಪಿಳಿಲ್** 'ಪಿಟಿಲ್' ನೋ.

**ಪಿಳಿಲು**₁ 'ಪಿಣಿಲ್' ನೋ.

**ಪಿಳಿಲು**₂ (ನಾ). ಕುತರ (?): ಇಂದುವದನೆಯರು ದೂರದೊಳ್ಗಲ್ಲಮನ ಮಹಾಸೌಂದರ್ಯವೆತ್ತ ಶ್ರೀಪಾದಪದ್ಮಗಳಾನಂದದಿಂ ಕಂಡು ವಿಮಳೆಗೆ ಮಾಯೆಗಂ ಪೇಳೆ ಜೀವದೊಳು ಪಿಳಿಲನಾಂತು (ಪ್ರಭುಲಿಂ. ೩-೦೯೩). [ ? ]

**ಪಿಳುಕಿಸು** 'ಪಿಳಕಿಸು' ನೋ.

**ಪಿಳುಕು**₁ 'ಪಿಳ್ಕು' ನೋ.

**ಪಿಳುಕು**₂ (ನಾ). ಮರಿ ; ಶಾಬ ; ಪೋತ : ಬೇಡಂ ಪಿಳುಕೊತ್ತಿನ ತಾಯೊಡಲ್ ಬಿಟ್ಟಲ್ಲಿ ಪಿಡಿದನಂತಾ ಪಿಳುಕಂ ಬೇಡಿತಿಗೆ ಸಲಹಲಿತ್ತೊಡೆ ಗೂಡಿನೊಳದು ಬಳೆದು ತಳೆದುದಂಗಚ್ಛವಿಯಂ (ಯಶೋಚ. ೩-೩೬). 'ಪಿಳು ಗಾಡಿಸು', 'ಪಿಳ್ಳೆ' ಪರಾ. [<ಪ್ರಾ. ಪೀಲುಅ./ಸಂ. ಪೀಲುಕ]

**ಪಿಳುಕು**₃ (ನಾ). (ಸಸ್ಯದ) ಅಡಿಭಾಗ ; ಬುಡದ ಭಾಗ ; ಕೂಳೆ (?) : ಮತ್ತಮಾಂಸವಮದುಬಾಟೆಯ ಪಟಹದ ಪಿಳುಕುಬಾಟೆಯ ಕೋಳಂಬೆಯ ಕೂಕಂಬದ ಕೋಡಂಬೆಯ ಮುಡಿಗೆಯ ತಾಣಂಗಳೊಳ್ ಮೇದು ಮೆಯ್ಯೆರ್ಚಿ ಸೊವಡಿಂಗೆ ಸೋಲ್ತು ಕೊಡದೆ ಕಮಲ್ದು ಮೇವಂ ತಣಿವು ಕೊಟ್ಟ[ಣ]ಕಿಟ್ಟಾಡುವ ಮೃಗಂಗಳೊಳ್ (ಆದಿಪು. ೦೦-೩೯ ವ). [?]

**ಪಿಳುಗಾಡಿಸು**, ಹಿಳುಗಾಡಿಸು (ಕ್ರಿ). ಮರಿಯನ್ನು ಆಡಿಸು,-ಮಂದ್ದಾಡಂ : ಅಳಿಗಳ ರತ್ನಕದಂಬದ ಬೆಳಗಿಂ ಬಹುವರ್ಣಜಲಮನಾಂತ ಕಟಾಹಂಗಳ ನಡುವೆ ಪೆತ್ತ ಮಾಜಾಯುಂ ಪಿಳುಗಾಡಿಸು[ಪಾಠಾಂ. ಬಳುಕಾಡಿಸು] ವಂತೆ ಸರಸಿ ಪಡೆದುದು ಪವಮಂ (ಆದಿಪು. ೬-೨೩ ; ಶಬ್ದಸಾ. ೦೨-೩ ನೋ); ಪಾಡಿ ನಲಿವಾಟಿಸಿ ತೋಟಿಸಿ ಸೋಂಕಿ ನೂಂಕಿ ಕೌಮುದಿಯೊಳದೇಂ ಚಕೋರಿ ಪಿ[ಪಾಠಾಂ. ಹಿ]ಳುಗಾಡಿಸಿದತ್ತೊ ನಿಜಾಂಗೃಸಾಬಮಂ (ಆದಿಪು. ೬-೬೦ ; ಶಬ್ದಸಾ. ೯-೨೯೬ ನೋ). ಹಿಳುಗಾಡಿಸು : ಮೇಲಿನ 'ಆನಂಪು. ೬-೨೧'ರ ಪ್ರಯೋಗದ ಪಾಠಾಂತರವನ್ನು ನೋಡಿ.

[ <ಪಿಳುಕು₂+ಆಡಿಸು]

**ಪಿಳ್ಕು**, ಪಿಳಿಕು, ಪಿಳುಕು₁, ಹಿಳಕು, ಹಿಳಿಕು, ಹಿಳುಕು₁, ಹಿಳ್ಕು (ನಾ). ೧. ಗರಿಗಳಿಂದ ಕೂಡಿದ ಬಾಣದ ಭಾಗ : ಪುಂಖ : "ಪಿಳ್ಕೆಂದು ಸಾಯಕಪುಂಖಂ" (ಕಕಾ. ೩೨-೦೦೩) ; ವಿಕ್ರಮವಾಸಾದಿತ ವಿಶ್ವಲೋಕ ವಿಜಯಂ ಕುಲಿಶಾಸ್ತ್ರದ ಪಿಳ್ಕುನಾರಿಯೊಳ್ ಕೋದು ಕರ್ಬುವನೆಯ್ದ ಧನುಮಂ ತೆಗೆವರ್ವಿಸಿದು ಜನಾರ್ದನಂ (ಶಾಂತಿಪುರಾ. ೦೯-೦೬೩) ; ಶರಮಂ ತೂಣೀರದಿಂದುರ್ಚಿ ತೊಟ್ಟನೆ ಪಿಳ್ಕಂ ತಿರುವಾಯ್ಗೆ ದಂಡು ತೆಗೆದಾ ಕರ್ಣಾಂತಮಂ ತಾಗೆ ಕೋಲಿನ ಪಿಂತಂ ನೆಜ ಕೋಲ್ಗಳಟ್ಟುವಿನಮೆಚ್ಚಂ (ಮಹಾಭಾ. ೦೨-೦೦೯) ; ಪಿಳ್ಕು ಪೆಜಗಾಗಿ ಬರ್ಪ ಶರಮಂ ತನ್ನೊಂದಂಬಿನಿಂ ಮುಂಜಿದು (ಧರ್ಮಾಮೃ. ೦೯೩-೦೬). ೨. ಬಿಲ್ಲಿನ ಸಂಧಿ : ಕೊಪ್ಪು ;ಗೊಲೆ : "ಕೊಪ್ಪು ಪಿಳ್ಕಿನ ಕೋಟಿಯು" (ಕಬ್ಬಿಸಂ. ೯೯). ೩. ಬಾಣ ; ಅಂಬು ; ಸರಳು : ಕಾವಲರಂ ಪಳಂಚಲಿದ ಪುಚಶರಕ್ಕಮದಜಿಂಕರಂ (ಪುಣಂ) ಬಾದುದು . . . ಪೂದೊಡಂಬೆ ಪಿಳ್ಕಾದುದು (ಪುಷ್ಪದ. ೬-೯೦). ಪಿಳಿಕು :

(ಆದಿಪು. ೫೦-೧೧೧). **ಪಿಳಗು** : ೧. ಒಡೆದುದೊ ಪದ್ಮಜಾಂಡಮವನೀ ವಳಯಂ ಪಿಳ [ಪಾಠಾಂ.೪]ಗಿತ್ತೊ ಮೇರು ಮೇಣ್ ಕಿಡೆದುದೊ ಪಾರ್ಥಿಯಾರ್ಕಿದಾದುದೊ (ಚಂದ್ರಪ್ರ. ೬-೩೦). **ಪಿಳಿಗು** : ೧. ಗೋತ್ರನಗಂ ಪಿಳಿಗಿತ್ತೊ ಸಾಗರಂ ತಳೆದರ್ದುದೊ ಮೇರೆಯಿಂದಂ. . .ಎನಲ್ ವಿಘೂರ್ಣಿಸಿದುದಿರ್ಬಲದೊಳ್ ಸಮರಾನಕಸ್ವನಂ (ಚಂದ್ರಪ್ರಾ. ೧೩-೩೫); ಕುಳಿಕನ್ ಕುಗ್ಗಿದ ನಾಸಿಕಂ . . .ಪಿಳಿಗಿರ್ದಂ ಭ್ರುತಲುಂ ಕೊರಂಟಾದಲೆ ಕೊಕ್ಕ್ರೋಡಿರ್ದ ಗೋಣನ್ನನೊಳ್ ಕಟೀಯಿಂಲ್ ಪಾಪಮನರ್ಚಿಸಿರ್ದಬಲೆಯಕ್ಕ್ಯಂ ಮಿಕ್ಕಳೀನಕ್ಕ್ಯಮೇ(ಸುಕುಮಾ. ೩-೧೩೪). **ಹಿಗ್ಗು₁** : ೧. ತಗ್ಗಿದುದು ದಿಗ್ದಂತಿ ಭೋಗಿರಾಜನ ಕೊರಲ್ಕುಗ್ಗಿದುದು ಧರಣಿತಲಮಿಟ್ಟಾಗವಾಗಿ ಸಲೆ ಹಿಗ್ಗಿದುದು ಪೋಗೆನಲ್ತೊಯ್ದನುರಗದೆಯಿಂದ ಪರಸೈನ್ಯಮಂ ಭೀಮಂ (ಕೃಪಾಕಾ. ೬-೯೬). ೨. ಬಾಗುತೆ ಬಲಿಯುತೆ ಪೊಳೆದಿನಿದಾಗುತೆ ದಳವೇಱುತಿಡಿದಿಡಿದು ಹಿಗ್ಗುತೆ ಪಣ್ಣಾಗುತೆ ಕಾಯ್ಗಳ್ ಪೂಜಮಡೆ ಬೀಗುತ್ತುಂ ಬೆಳೆದುವಲ್ಲಿ ಕದಳೀಷಂಡಂ (ಗಿರಿಕ. ೩-೩೦); ಕೊರಳ ಸರ ಹಿಗ್ಗಿದವು ಕಂಬನಿದುಱುಗಿದವು . . . ಅಕಸ್ಮಿಕದ ಭಯವಾಯ್ತು ಪಾರ್ಥಂಗೆ (ಕುಮಾ.ರಾ. ೯-೬); ಹೃದಯ ಹಿಗ್ಗಿಕೊಂಡು, ರೋಗ ಪ್ರಬಲವಾದರೆ ಹೃತ್ಕ್ರಿಯೆ ನಿಂತು ಹೋಗುತ್ತದೆ (ಗೃಹಕ. ೩೯). ೩. ಅಯ್ಯ ನೀ ನೋಡಿದರೆ ನೋಡು ನೋಡದಿದ್ದರೆ ಮಾಣು ನಾ ನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾಱೆನಯ್ಯ (ಬಸವಾದಿ. ೮.೩೯-೮೩); ಭೀಮಸೇನನ ವಿಕಟಸಿಂಹಧ್ವನಿಯನಾಲಿಸಿ ಹಿಗ್ಗಿದನು ಪಾರ್ಥ (ಕುಮಾ.ರಾ. ೧೩-೧೮); ಹಿಗ್ಗುವೆ ಯಾಕೋ ಈ ದೇಹಕ್ಕೆ ಹಿಗ್ಗುವೆ ಯಾಕೋ . . . ಅಗ್ನಿಯೊಳಗೆ ಬಿದ್ದು ದಗ್ಧವಾಗುವ ದೇಹಕ್ಕೆ (ಪುರಂದ. ೧-೧೨೨ ಪುಟ). **ಹಿಳಗು** : ೧. ಬಲಿತ ತೆಂಗಿನಕಾಯಿ ಬಿಸಿಲಿನ ಝಳಕ್ಕೆ ಹಿಳಗಿದೆ (ಆಡು). **ಹಿಳ್ಗು₁** : ೩. ಹೃಷ್ಯತಿ=ಹಿಳ್ಗಿದಪಂ; ಹೃಷ್ಟಃ, ಹೃಷ್ಟವಾನ್, ಹರ್ಷಕಃ , ಹರ್ಷಾಪ್ಪಿ, ಹರ್ಷನ್—ಈ ೫ ಹಿಳ್ಗಿದಂ (ಶಾಕಲ್ಯ. ೧೯೫).

**ಹಿಗ್ಗಿ ನುಗ್ಗೆಕಾಯಿಯಾಗು** = (ಅಲಂ) ಅತಿಶಯವಾಗಿ ಆನಂದಿಸು ; ಆನಂದದಿಂದ ಉಬ್ಬು : ಸಣ್ಣದುರುಗಪ್ಪನು ಹಿಗ್ಗಿ ನುಗ್ಗೆಕಾಯಿಯಾದ (ಶಂಕಪ್ಪ. ೧೧೮). **ಹಿಗ್ಗಿ ಹತ್ತಾಗು** = ಹಿಗ್ಗಿ ನುಗ್ಗೆಕಾಯಿಯಾಗು : ಈ ಇಬ್ಬರು ಸ್ನೇಹಜೀವಿಗಳ ನಡುವಿನ ಅದೇ ಆ ಹಳೆಯ ನಗೆಯಾಟ ನಡೆದಾಗ ನನ್ನ ಹೃದಯ ಹಿಗ್ಗಿ ಹತ್ತಾಗುತ್ತದೆ (೨ಕ್ಕೆಳ. ೩೬); ಭೂಪತಿಯು ಹಿಗ್ಗಿ ಹತ್ತಾಗಿ, ತನ್ನ ಉತ್ತರೀಯದ ಮುಸುಕಿನಿಂದ ತನ್ನ ಸ್ವಂತರಚನೆಯ ಪುಸ್ತಕ ಹೊರದೆಗೆದು ... ಎಂದನು (೨ಕ್ಕೆಳ. ೨೮೮). **ಹಿಗ್ಗಿ ಹೀರೇಕಾಯಾಗು**, **ಹಿಗ್ಗಿ ಹೀರೇಕಾಯಿ ಆಗು**, **ಹಿಗ್ಗಿ ಹೀರೇಕಾಯಿಯಾಗು** = ಹಿಗ್ಗಿ ನುಗ್ಗೆಕಾಯಿಯಾಗು : ಪೋರ್ಚುಗೀಸ್ ರಾಜ ತನಗೆ ಬಂದ ವರದಿಗಳಿಂದ ಹಿಗ್ಗಿ ಹೀರೇಕಾಯಿಯಾದ(ಕ.ಚಾ.೩.II, ೨೦೦); ನೆಕ್ಲದೋವನ ಎದೆ ಹಿಗ್ಗಿ ಹೀರೇಕಾಯಿ ಆಯಿತು (ಪುಟಾ. ೩೦೦); ಕಾವಾಕ್ಷಮ್ಮನ ಮುಖ 'ಹಿಗ್ಗಿ ಹೀರೇಕಾಯಿ' ಯಾಯಿತು (ಶಂಕರ. ೩೮). **ಹಿಗ್ಗಿ ಹೆಬ್ಬಾಗಿಲಾಗು** = (ಅಲಂ) ಅತಿಶಯವಾಗಿ ಆನಂದಿಸು ; ಆನಂದದಿಂದ ಉಬ್ಬು : ದ್ಯಾವೇಗೌಡರು ಚಿನ್ನಪ್ಪಗೌಡರ ಮಾತನ್ನು ನಂಬಿ ಹಿಗ್ಗಿ ಹೆಬ್ಬಾಗಿಲಾಗಿದ್ದರು (ಶಂಕರ. ೫೯).

[ < ಪಿಳ್₂ ]

**ಪಿಳ್ಗೋಟೆ** (ನಾ). ಸಣ್ಣ ಕೋಟೆ ; ಕಿರಿದಾದ ದುರ್ಗ : ರಕ್ಕಸರೊಳ ಪೊಗದಂತೆ ಪಿಳ್ಗೋಟೆಗೆ ಉಕ್ಕಿನ ತೆನೆ ಪೆಟಲಂಬು ಸಿಕ್ಕಿನ ಕತ್ತರಿ ದೆಸೆಗೆ ಹುಸಿಯು ಶೂಲ ಸೊಕ್ಕಿದರಿಯು ಗೆಲ್ವ ತೆರದಿ (ತ್ರಿಂಶಕಾ. ೫-೩೯).

[ < ಪಿಳ್ + ಕೋಟೆ₁ ( < ಕೋಂಟೆ ) ]

**ಪಿಳ್ಳುಟ್ಟು**, **ಪಿಳ್ಳಂಜುಟ್ಟು**, **ಪಿಳ್ಳೆಜುಟ್ಟು** (ನಾ). (ಗಂಡಸರು) ತಲೆಯ ಹಿಂದೆ ಮೇಲ್ಭಾಗದಲ್ಲಿ ಬಿಡುವ ಸಣ್ಣ ಜುಟ್ಟು : ಅವರ ಪಿಳ್ಳುಟ್ಟು ಗಾಳಿಗೆ ಹಾರಾಡುತ್ತಿದೆ (ಆಡು). **ಪಿಳ್ಳಂಜುಟ್ಟು** : ವಿಶಾಲವಾದ ಹಣೆ, ಮುಖದ ಅಂದವಾದ ನಿಲುವಿಗೆ ಒಪ್ಪುತ್ತಿದ್ದ ಪಿಳ್ಳಂಜುಟ್ಟು (ಆಕಾಶ. ೧೨೮). **ಪಿಳ್ಳೆಜುಟ್ಟು** : ತಬಲಾ ಬಾರಿಸುವವನ ಪಿಳ್ಳೆಜುಟ್ಟು ಹೇಗೆ ಹಾರಾಡುತ್ತಿದೆ ಎಂಬುದನ್ನು ನೋಡಲು ಬಂದಿದ್ದಾರೆ (ಸಾಹಿತ್ಯ. ೧೩೬); ವಜ್ರಮುಕ್ಕುಗಳ ಮೊನೆಯಿಂದ ಪಿಳ್ಳೆಜುಟ್ಟುಗಳು ಕುಣಿದಾಡುವ ಬೋಳುತಲೆಗಳ ಮೇಲೆ ಹೊಡೆದು (ಕಥಾಸಂ. IV. ೨).

[< ಪಿಳ್ಳೆ + ಜುಟ್ಟು]

**ಪಿಳ್ಳಿಳನೆ**, **ಪಿಳಪಿಳನೆ** (ಅ). (ಆಶ್ಚರ್ಯ ಅಥವಾ ಅಸಹಾಯಕತೆಗಳಿಂದ) ಕಣ್ಣನ್ನು ಪಿಳುಕಿಸುತ್ತ ; ಒಂದೇ ಸಮನೆ ರೆಪ್ಪೆಯನ್ನು ಬಡಿಯುತ್ತ : ಜನರು ಪಿಳ್ಳಿಳನೆ ನೋಡುತ್ತಿರುವರು (ಕುಂಗಿಳ. ೧೩೬). **ಪಿಳಪಿಳನೆ** : ಕ್ಷಣಕಾಲ ಆಕೆ ಪಿಳಪಿಳನೆ ನನ್ನನ್ನೇ ನೋಡುತ್ತಿದ್ದುಬಿಟ್ಟಳು (ಶಕಾ. ೦೯೬). [< ಪಿಳಿಪಿಳಿ + – ಅನ್₁]

**ಪಿಳ್ಳಂಗೋವಿ** (ನಾ). ಒಂದು ಬಗೆಯ ಚಿಕ್ಕ ಊದುವ ವಾದ್ಯ ; ಕೊಳಲು : ಪಿಳ್ಳಂಗೋವಿಯ ಚೆಲ್ವ ಕೃಷ್ಣನ ಎಲ್ಲಿ ನೋಡಿದಿರಿ (ಪುರಂದ. ೧-೧೩೬ ಪುಟ) ; ಗೊಲ್ಲನ ಪಿಳ್ಳಂಗೋವಿಯಿಂದ ಆರಂಭವಾದ ಪುಟ್ಟಪ್ಪನವರ ಕವಿತಾವಿಲಾಸ . . . 'ಸೋವಿಯಟ್ ರಶಿಯಾ'ದ ವರೆಗೂ ಕೈ ಚಾಚಿದೆ (ಸಾಹಿತ್ಯ. ೯೬) ; ಕೊಳಲಿಗೆ ಪಿಳ್ಳಂಗೋವಿಯೆಂದೂ ಹೆಸರು (ಸಂಗೀತ. ೦೦೬).

[< ಪಿಳ್ಳೆ+ಕೋವಿ₁. / ತಮಿ. ಪಿಳ್ಳಾಂಕುಟಲ್; ತೆಲು. ಪಿಲ್ಲಂಗ್ರೋವಿ. ಪಿಲ್ಲಗ್ರೋವಿ, ಪಿಲ್ಲನಗ್ರೋವಿ]

**ಪಿಳ್ಳಂಜುಟ್ಟು** 'ಪಿಳ್ಳುಟ್ಟು' ನೋ.

**ಪಿಳ್ಳಗುಸೆ** (ನಾ). ಕೋಟೆಯ ದೊಡ್ಡ ಬಾಗಿಲಿನಲ್ಲಿರುವ ಚಿಕ್ಕ ಬಾಗಿಲು : ಸಮಸ್ತಕಾರ್ಯಕುಶಲರಿಂ ಕೋಟೆ . . . ಪಿಳ್ಳಗುಸೆ ದಿಡ್ಡಿ ಪೊಳೆಗದಂಗಳ್ ನಿರ್ಮಿತವಾಗಲು (ಹಾಲಾಸ್ಯ. ೦-೪-೩೫ ಪ). [ಪಿಳ್ಳೆ + ಅಗುಸೆ]

**ಪಿಳ್ಳಯ್ಯ** (ನಾ). ಒಬ್ಬಾತನ ಹೆಸರು : ಬೂವಾಡಿಯ ತಳಾರು ವಿಣ್ಣಪೋದಿಯ ಪಿಳ್ಳಯ್ಯ (ಎಪಿ. X. ಗೌರಿಬಿ. ೬೩-೪ ; ಸು. ೯೦೦).

[ಪಿಳ್ಳೆ + ಅಯ್ಯ₁ (< ಅಯ್ಯ₄₁) ]

**ಪಿಳ್ಳಾರಿ** (ನಾ). ೧. ಚಿಕ್ಕದು ; ಸಣ್ಣದು. ೨. ಗಣೇಶ ; ಬೆನಕ: 'ಪಿಳ್ಳಾರಿಗೀತ' ಪರಾ.

**ಪಿಳ್ಳಾರಿ ಜುಟ್ಟು** = ಪಿಳ್ಳುಟ್ಟು : ಅವನ ಪಿಳ್ಳಾರಿ ಜುಟ್ಟನ್ನು ನೋಡಿ ಮಕ್ಕಳು ಗೇಲಿ ಮಾಡಿದರು (ಆಡು).

[< ಪಿಳ್ಳೆ./ ತಮಿ. ಪಿಳ್ಳೈಯಾರ್; ಮಲ. ಪಿಳ್ಳಯಾರ್; ತುಳು. ಪಿಳ್ಳಾರಿ; ತೆಲು. ಪಿಳ್ಳಾರಿ]

**ಪಿಳ್ಳಾರಿಗೀತ** (ನಾ). ಕರ್ನಾಟಕಸಂಗೀತದಲ್ಲಿ ಪುರಂದರದಾಸರು ರಚಿಸಿದ (ಗಣಪತಿಯನ್ನು ಕುರಿತ) ಚಿಕ್ಕ ಗೀತೆ : ಪುರಂದರದಾಸರು ಸಂಗೀತಾಭ್ಯಾಸಕ್ರಮ ವ್ಯವಸ್ಥೆಗೊಳಿಸಿ, 'ಪಿಳ್ಳಾರಿಗೀತಗಳು' ಎಂಬ ಅಭಿಧಾನದಿಂದ ಕೆಲವಾರು ಗೀತಗಳನ್ನು ಕನ್ನಡದಲ್ಲಿ ರಚಿಸಿದ್ದಾರೆ (ಸಂಗೀತ. ೬೦); ಕರ್ನಾಟಕಸಂಗೀತಸಂಪ್ರದಾಯಕ್ಕೆ ಪಿಳ್ಳಾರಿಗೀತೆಗಳನ್ನು ಮಾತ್ರವಲ್ಲ ಪುರಂದರದಾಸನು ಸಾವಿರಾರು ರಸಾನುಗುಣವಾದ ತಾಳಭೇದವುಳ್ಳ ಪ್ರಬಂಧಗಳನ್ನು ಒದಗಿಸಿಕೊಟ್ಟನು (ಕನಾಕ. ೨೯೮). [ಪಿಳ್ಳಾರಿ + ಗೀತ]

**ಪಿಳ್ಳಾರಿಗೀತೆ** (ನಾ). = ಪಿಳ್ಳಾರಿಗೀತ : ಕರ್ನಾಟಕಸಂಗೀತ ಒಂದು ವೈಶಿಷ್ಟ್ಯಪೂರ್ಣವಾದ ರೂಪ. ಇದರಲ್ಲಿ ಪ್ರಮುಖವಾಗಿ ಕೀರ್ತನೆಗಳು, ಉಗಾಭೋಗ, ಸುಳಾದಿ, ಪಿಳ್ಳಾರಿಗೀತೆಗಳು ಎಂದು ನಾಲ್ಕು ರೂಪಗಳು ಕಾಣಿಸುತ್ತವೆ (ಹರಿದಾಸ. ೦೦೪) ; ದಾಸರ ಗೀತೆಗಳಲ್ಲಿ ಪಿಳ್ಳಾರಿಗೀತೆ ಮೊದಲಾದ ಕೆಲವು ಗೀತೆಗಳು ಮಾತ್ರವಲ್ಲದೆ ತಾನವರ್ಣಗಳಾಗಲೀ ದಾಸರ ತಿಲ್ಲಾನಗಳಾಗಲೀ ಈಗ ಉಪಲಬ್ಧವಿಲ್ಲ (ಳೆಂ. ೨೩೦). [ ಪಿಳ್ಳಾರಿ + ಗೀತೆ ]

**ಪಿಳ್ಳೆಮಯ್ಯ** (ನಾ). ಒಬ್ಬಾತನ ಹೆಸರು : ಆ ವಿಭುಗಾತ್ಮಜಂ ನೆಱೆಯ ಷಟ್ಟದ ಪುಟ್ಟಿದ ಪಿಳ್ಳೆಮಯ್ಯಂ (ಎಪಿ. XI. ಚಿತ್ರದು. ೬೪-೩; ೧೨೮).

[ < ಪಿಳ್ಳೆ + ಅಮ (< ಅಮ್ಮ₁) + ಅಯ್ಯ₁ ]

**ಪಿಳ್ಳು** 'ಪಿಳ್ಳೆ' ನೋ.

**ಪಿಳ್ಳುಜುಟ್ಟು** 'ಪಿಳ್ಳುಟ್ಟು' ನೋ.

**ಪಿಳ್ಳೆ, ಪಿಳ್ಳ್ಳು, ಹಿಳ್ಳು, ಹಿಳ್ಳಿ₁** (ನಾ). ೧. ಚಿಕ್ಕದಾಗಿರುವಂತಹಂದು; ಸಣ್ಣದು: (೬). ೨. (ಯಾವುದಾದರೂ ಪ್ರಾಣಿಯ) ಮರಿ; ಶಾಬ; ಪೋತ: ಕರಮೇಟ್ಟಿಗೆಯುಳ್ಳ ಪಿಳ್ಳೆಗಳೆರಡುಮನೋಲಗಿಸುವಂ ನೃಪಂಗಲ್ಲಿಯ ಮಾದರಸಿತ್ತ ಚಂಡಕರ್ಮಂಗರಸನವಂಗೆ ನೋಡಿಸಲಹು ನೀನೆಂದಿತ್ತಂ (ಪುಶೋಚ. ೬-೬೬); ನೀಡುಂ ನೀಡದ ಪಕ್ಕಿಯು ಮೊನ್ನಂ ಬಂಜೆಯೆನುತೀಡಿಪಂತಿರೆನ್ನಿದಿರೊಳ್ ಪಿಳ್ಳೆಯಂ ಮುದ್ದುಗೆಯ್ಯಂ (ಶಾಂತೀಪು. ೧೪-೬); ಕಳ್ಳನಿಗೆ ಒಂದು ಪಿಳ್ಳೆ ಸೆವ (ಗಾದೆ). ೩. ಕೂಸು; ಮಗಂ; ಶಿಶು: ಜವನೊಳ್ ಸೆಣಸಿಲ್ಲದೆ ಪೋಗಿ ತಾಗಿ ತಂದಂ ಗಡ ವಿಕ್ರಮಾರ್ಜುನನೆ ಪಾರ್ವರ ಪಿಳ್ಳೆಯು ಪೋದ ಜೀವವಮಂ (ಪಂಪಭಾ. ೬-೨); ಪರಿದಿಜಿದಂತಕನೊಳ್ ಪಾರ್ವರ ಪಿಳ್ಳೆಯ ಪೋದ ಜೀವವಮಂ ತಂದಂ (ಗದಾಯು. ೨-೪೩); ನೀವು ಬೇಕಿದ್ದರೆ ಹೋಗಿ ಬನ್ನಿ . . . ಈ ಪಿಳ್ಳೆಗಳನ್ನು ಕಟ್ಟಿಕೊಂಡು ನಾನು ಎಲ್ಲಿಗೂ ಹೊರಡುವುದಿಲ್ಲ(ಪೀಠಕಹ ೨೫೩). ೪. ಗಣಪತಿ; ವಿನಾಯಕ: ಇಂದುವರಾಳಿಯ ಹಿರಿಯ ಪುತ್ರನಾ ವಿಘ್ನೇಶ್ವರಂ ಗಜಾನನ ಸದ್ಗುಣಿ ಸೌಂದರ್ಯನಿಧಿಯಾತನಂ ಭಜಿಸಿ ಸುತನನಾನಂದದಿಂ ಪಡೆಯವೇಳ್ಕೆನುತ ದಂಪತಿಗಳುಚಿತ ಬಂದರಶಿವೈಭವದೆ ಬಂದು ವಿಪ್ರರು ಸಹಿತಲಾ ಪಿಳ್ಳೆಯರ ಭವನಕೆ (ಶೀಕೃಶಿ. ೬-೦೫-೬). ೫. ಭೈರವ: (೬). ೬. ತೋಟಗಳಲ್ಲಿ ನೀರು ಹರಿಯಲು ಅನುಕೂಲವಾಗುವಂತೆ ತೋಡಿರುವ ಸಣ್ಣ ನಾಲೆ: ಪಿಳ್ಳೆ ದಾಟುವಾಗ ಜೋಪಾನ, ತುಂಬ ಜಾರುತ್ತದೆ (ಕೊತಿ). **ಪಿಳ್ಳು**: ೨. ಬಲೆಯಿಂ ತಪ್ಪಿದ ಮೊಲದಂತೆಯುಂ ಬಾಲಂ ಪಱಿದ ಪಿಳ್ಳನಂತೆಯುಂ . . . ಪಿಂದಿರುಗಿ ನೋಡದೆ ಓಡಿ ತನ್ನ ಬೀಡಂ ಸಾರ್ದಂ (ಪಶಕಂ. ೬೯-೬). (ಗು). ೭. ಚಿಕ್ಕದಾದ; ಸಣ್ಣ: 'ಪಿಳ್ಳುಜುಟ್ಟು' ಪರಾ. ಹಿಳ್ಳು: ೨. ಹದ್ದಿನ ಬರವ ಕಾಣುತ ಕೋಳಿಗಳ ಹಿಳ್ಳೆದ್ದೋಡುವಂತೆ[ಪಾಠಾಂ. ಕುಕ್ಕುಟಸರ್ವಯೆದ್ದೋಡುವಂತೆ] ಭೂಭುಜರು ಬಿದ್ದ ಬಂಗಾರವ ಬಿಟ್ಟು ತೆರಳಿದರು (ರಾಕುಪಿ ೬-೦೬೬) ೮. ಒಂದು ಬಗೆಯ ಆಟ; ಚಿಣ್ಣಿಕೋಲಾಟ: ಗೋಪನಂದನರನು ಕೂಡಿ ಹಿಡಿಗವಡಿಕೆ ಹಿಳ್ಳು ಲಗ್ಗೆ ಸಡುಗುಡು ಮೊದಲಾದ ಮಕ್ಕಳಾಟವ ಕಡುಸಡಗರದಿಂದಾಡುತಿಹನು (ಪೀಬಸಂ. ೦೫-೦೦೬) **ಹಿಳ್ಳಿ₁**: ೨. ಒಂದು ಹಸ್ತದೊಳು ಮುಷ್ಟಿಗನ ಹಿಡಿದು ಮತ್ತೊಂದು ಕೈಯೊಳು ಮೊತ್ತಮೊದಲು ಅಂದದಿ ಹಿಡಿದ ಕೇಸರಿಯ ಹಿಳ್ಳೆಯು ಹೊಡೆವಂದದಿ ಹೊಡೆದಿಡಲಾಗ (ಶೀಬಸಂ. ೦೬-೦೬೦); ಗುಹೆವುಗುವ ಸಿಂಗ . . . ಹಸಿದು ಬಾಯಂ ಬಿಡುವ ಹಿಳ್ಳೆಗಳ ಬಳಿಗೆ ಹಾಱುವ ಸಾಳುವ . . . ತದ್ವನಾಂತರದೊಳ್ ಸೊಗಯಿಸಿದುವು (ಸಮ್ಮಕೌ. ೦೦-೨೩).; ತಗರ ಪೊಯ್ದಾಟ ಹಿಳ್ಳೆಗಳೋಟ ಸಿಪಿಲಗಟ್ಟುಗಳ ಸರಸಾಟ ಜಾಣಾಂಕಿಗಳ ಕೋಳಿಗುಳಿಗೆ (ಅಕ್ಕಗಾ. ೨೬-೩). ೯. ಮಕ್ಕಳು ಆಟಕ್ಕೆ ಬಳಸುವ ಮರದ ಸಣ್ಣ ತುಂಡು; ಚಿಣ್ಣಿ: ನಿಮ್ಮ ಧನುರ್ವಿದ್ಯಾಕೌಶಲವು ಈ ಭಾವಿಯಲ್ಲಿ ಬಿದ್ದಿರುವ ಹಿಳ್ಳೆಯನ್ನೂ ಉಂಗುರವನ್ನೂ ಎತ್ತದೆ ಇರುವುದರಿಂದ ವ್ಯರ್ಥವಾಗಿ ತೋರುತ್ತಲಿದೆ (ಕೃಪಾಅ. ೨೪೬).

**ಪಿಳ್ಳನೆ** = ಚಿಕ್ಕದಾದ; ಪುಟ್ಟ; ಸಣ್ಣ: ಟೋಪಿ ಪೇಟವ ತೊರೆದು ಪಿಳ್ಳನೆ ಜುಟ್ಟು ತೋರುವ ಊರೊಳು (ಗತೀಕ. ೬೨-೬). **ಪಿಳ್ಳೆ ಹೆಸರಿಲ್ಲದಂತು** = ಹೆಸರು ಹೇಳಲುಂ ಒಂದು ಮಗುವೂ ಉಳಿಯದಂತೆ; ನಿರ್ವಂಶವಾಗುವಂತೆ: ಮುನ್ನಂ ಪರಶುರಾಮನೀ ಕೆಲದೊಳುಳ್ಳರಸುಮಕ್ಕಳೆಲ್ಲರುಮಂನಿರ್ವರ್ತ್ತಿಸೊಂದು ಸೂಟ್ಟುರೆಗಂ ಪಿಳ್ಳೆ ಪೆಸರಿಲ್ಲದಂತು ಕೊಂದು (ಗದಾಯು. ೬-೨೬ ವ). **ಪಿಳ್ಳೆ ಹೆಸರಿಲ್ಲಾಗು**=ಹೆಸರು ಹೇಳಲು ಒಂದು ಮಗುವೂ ಉಳಿಯದಾಗು; ನಿರ್ವಂಶವಾಗು: ಪಿಳ್ಳೆ ಪೆಸರಿಲ್ಲಾಯ್ತು ಕೌರವಕುಲಶ್ರೀ! (ಅಕ್ಕಿಪ್ರಾ. ೬೪-೬೩೩).
[ದೇ.॥ ತಮಿ. ಪಿಳ್ಳೈ; ಮಲ. ಪಿಳ್ಳ; ತುಳು. ಪಿಳ್ಳೆ; ತೆಲು. ಪಿಲ್ಲಾ. ನಾಯ್ಕಿ. ಪಿಲ್ಲ; ಗೊಂಡಿ. ಪಿಸಾ; ಕುರುಖ್. ಪೆಲ್ಲೋ; ಬ್ರಾಹುಈ. ಪಿಲ್ಲೋಟ; ಪರ್ಜಿ. ಪಿಲ್ಲಕ. ಪಿಲ್ಲಿಕ]

**ಪಿಳ್ಳೆಕಾಲು, ಹಿಳ್ಳೆಗಾಲ್, ಹಿಳ್ಳೆಗಾಲಂ** (ನಾ). ೧. ಮನೆಯ ಮೇಲ್ಚಾವಣಿಗೆ ಆಧಾರವಾಗಿ ಕೊಡುವ ತೊಲೆಯ ಮೇಲ್ಭಾಗದ ಸಣ್ಣ ಕಂಭ: ಈ ಭಾವಣಿಗೆ ನಾಲ್ಕು ಪಿಳ್ಳೆಕಾಲು ಕೊಡಬೇಕು (ಕೊತಿ). **ಹಿಳ್ಳೆಗಾಲ್**: ೨. ಸಣ್ಣಗಿರುವ ಕಾಲುಂ; ಬಡಕಲಾದ ಕಾಲು: 'ಹಿಳ್ಳೆಗಾಲ' ಪರಾ. ಹಿಳ್ಳೆಗಾಲು: ೨. ಟಕ್ಕಿದ ಬಡ ಪೊಣಿವಾಚ ಬಲ್ಸೆರ ಸುತ್ತಿ ಹತ್ತಿದ ಹಿಳ್ಳೆಗಾಲುಗಳ . . . ನಲ್ಮೆಮಾರಿನ ಭೂತವೆ ನಡೆತಪ್ಪಂತೆ ಮನೆಗೆ ಬರಲು (ಶೀಬಸಂ. ೬-೦೦೯).
[ಪಿಳ್ಳೆ+ಕಾಲು₁ (<ಕಾಲ್₁)]

**ಪಿಱಿ, ಪಿರಿ₂** (ನಾ). (ಹೆಣದ) ಬಾಡಂ; ಮಾಂಸ: ಪೊಯ್ದಾಡಿ ಮಡಿದ ಕಲಿಗಳ ಶರೀರಂಗಳಂ ಪೊಯ್ದೆಳೆದು ಪಿಱಿತಿಂಬ ಮರುಳ್ಗಳಂ . . . ಕಾಣುತೆ (ಕೃಪಿಚ. ೬-೩೬). **ಪಿರಿ₂**: 'ಪಿರಿತಿನಿ' ಪರಾ.

△ **ಪಿಱಿಚು** 'ಪಿರಿಚು' ನೋ.

**ಪಿಱಿತಿನಿ, ಪಿರಿತಿನಿ** (ನಾ). (ಹೆಣದ ಮಾಂಸವನ್ನು ತಿನ್ನುವ) ಮರುಳ್; ದೆವ್ವ: "ಪಿಱಿತಿನಿಯೆಂದು ಮರುಳ್" (ಕಕಾ. ೬೩-೬೬೦); ಪಸಿದ ಪುಲ್ಮರುಳ್ ಪಿಱಿತಿನಿಗಳ್ ಬೇಯುತ್ತುಮಿರ್ದ ಪೆಣನಂ ನಾಯುಗಿವಂತುಗಿದು ತಿಂದುಪೋರೆಂದೆಡೆಯೊಳ್ (ಶಾಶ್ವಾ. ೩೩೬ ಓರ್ತ್ರಿಕ); ಎಲೆ ಪಿಱಿತಿನಿ ಪೋ ಮುಟ್ಟದೆ ತೊಲಗು (ಪಂಪಭಾ. ೬-೯೩); ನೀಂ ಪಿಱಿತಿನಿಯಂ ಪಾಂಗಿನಿಂ ಎಲ್ಲಮಂ ತಿಂದು ಸಾವುದೆಂದು ಬೈದಂ (ಶಾಂತೀಪು. ೬೩-೬). **ಪಿರಿತಿನಿ**: "ಪಿರಿತಿನಿಯೆನಲ್ ಪಿಶಾಚಿಯ ನಾಮಮಕ್ಕು" (ಕಪ. ೬೬); ಪಿರಿತಿನಿ ಖಗಪಕ್ಷವೀಜಿತಂಗಳನಾಗಳ್ ಪರಚಂದನವಾರಿಗಳಿಂ ಸುರುಚಿರ ಸುರವೃಕ್ಷವಲ್ಕವೀಜಿತದೇಹರ್ . . . ಸುಂದರಿಯರ್ ಕೋರಿಸೆ ಬೆರಳಿಂದಂ ಕಂಡರ್ ಸ್ವದೇಹಮಂ ಕೊಳುಗುಳದೊಳ್ (ಕೃಪ್ರಾಕೋ. ೦೬೪); ಪಿರಿತಿನಿಯು ನಾಲಗೆಗೆಲ್ಲಿ ಕೊನೆಗಂಡ ಮಚ್ಚು (ಶಾಂಶಾಕ. ೦೬೩-೬೨೦).

**ಪಿಱಿತಿನಿಯಾಳ್ಮ, ಪಿರಿತಿನಿಯಾಣ್ಮ, ಪಿಱಿತಿನಿಯಾಣ್ಮ**=೧. ಮರುಳುಗಳ ಒಡೆಯಂ; ಶಿವ: "ಗನಹ ಮಾದೇವ ಕಣ್ಣಡಿಯ ಕಱಿಗೊರಲ ಪಿಱಿತಿನಿಯಾಳ್ಮ[ಪಾಠಾಂ. ಣ್ಮ]ದಪ್ಪಕವಗೆಯ . . . ಎಂದೆಂಬಿವೀಶ್ವರನ ನಾಮಮಂ" (ಕಪ್ರಮಂ. ೯); ಪಿರಿತಿನಿಯಾಣ್ಮನೆಂದರೆ ಚಂದ್ರಶೇಖರನಾದ ಚಂದ್ರನುಳ್ಳ ಈಶ್ವರನೆಂದು ಇರಬೇಕು (ಸಾಹಿಸಂ. ೦೯೨); "ಪಿಱಿತಿನಿಯಾಣ್ಮ . . . ಬೆಳ್ಪಡಿಯನೆನೆ ಶಿವಗೆ ಪೆಸರ್" (ಕಶ್ಮಿಕ್ಕೆ. ೩). ೨. ಗಣಪತಿ; ವಿನಾಯಕ: "ಪಿರಿತಿನಿಯಾಣ್ಮನೆಂದೆನಲದುಂ ಗಜಾನನಗೆ ಪೆಸರಕ್ಕು" (ಕಪ. ೬೩). **ಪಿಱಿತಿನಿಯೊಡೆಯ**=ಪಿಱಿತಿನಿಯಾಳ್ಮ ೧: ಕೊಱಿಗಳನಂತು ತಾಳ್ದಚ್ಯುತನಡಿಯ ನೀರ ಪಿಱಿತಿನಿಯೊಡೆಯನೇಪರಿಯೊಳು ಧರಿಸುವನೆ ತಾಂ (ಸಿಕ್ಕೀಶ. ೬-೬೩). [ಪಿಱಿ+-ತಿನ್ನಿ]

△ **ಪಿಱುಚು** 'ಪಿರಿಚು' ನೋ.

**ಪಿಟಿ, ಪಿಳಿ₁, ಹಿಳಿ₁, ಹಿಟಿ** (ಕ್ರಿ). ೧. ಹಿಸುಕಿ ರಸವನ್ನು ತೆಗೆ; ಹಿಂಡು: ಎಳ್ಳ ಗಾಣಂಗಳೊಳಿಟ್ಟಿಯ್ಯೂರ್ವರ್ ಋಷಿಯರ್ಕಳಂ ಪಿಟಿ [ಪಾಠಾಂ. ೦]ದು ಕೊಂದಂ (ವಡ್ಡಾರಾ. ೦೬೬-೬); ಒಲ್ಲಣಿಗೆಯಂ ಪಿಟಿವಂತೆ ಪಿಂಡಿ ಪಿಟಿದ ಪಗೆಗೆ ರಥಚಕ್ರಮಂ ನುಂಗುವುದುಂ (ಪಂಪಭಾ. ೦೨-೨೦೬ ವ); ಮಾಮಂರನೆಳದಳಿರ ರಸಮಂ ಪಿಟಿದು ಕಳಕಂಠನ ಕಂಠನಾಳಕ್ಕೆಱಿದುಬ್ಬಸಮಂ ಕಳೆದು (ಶಾಂತೀಪು. ೦೬-೦೫). **ಪಿಳಿ₁**: ೧. ಕಿವಿಯುಂಗಿದುಂ ಮೈರಂದಱಿದು ಗಾಣದೊಳ್ ಪಿಳಿದು (ಅಕ್ಕಿಶ. ೨-೯ ವ); ಬೆಳೆದ ಕವ್ಮಂಗಳವೆ ಪೊಲದಿಂ ಪಿಳಿದರೊಮ್ಮನೆ ರಸಮೊಗುವ ಕಡು ಬೆಳೆದ ಕಬ್ಬಿನ ಕೆಯಿಗಳಂ

ಸೂಗಯಿಸುವುದಾ ವಿಷಯ (ಕಾವ್ಯಾ. ೦-೩೬). ೨. ಕರೆ : ಸುರಿಸು; ವರ್ಷಿಸು : ಕೊಳದಂಬು ಬತ್ತೆ ಚುಯ್ಯೆಂದೊಳಗಣ ನೆಲನಾಳ ೧ರಿಕುವರಿಗು ಮೆನುತ್ತಂ ಜಳಜಸಖಂ ಜಳಕಿರಣಾವಳಿಯುಂ ಪಿಳಿದಂತೆವೋಲ್ ಮರೀಚಿಕೆ ಮೆರೆಗುಂ (೧೫೩೯. ೩-೪೮). ಹಿಳಿ೧. ೧. ಪರ್ಬ್ಯೋಗಳಿಂಬ ದವರ ಗಾನದಲ್ಲಿಕ್ಕಿ ಪಿಳಿಯನೆ (ಜಸಿ. ೩೬೬); ಬಿಸಿಲಂ ಹಿಳಿಯಲ್ ಬೆನ್ನೀರೊಸರ್ವಂತಿರ್ದುದು ಮರೀಚಿಕಾಜಲವೆತ್ತಂ (೧೦೫. ೯-೦೪): ಕಳಿದ ಹಲಸಿನ ಹಣ್ಣ ತೊಳೆಗಳಂ ಸಲೆ ಕಿವುಚಿ ಹಿಳಿದ ರಸದಲ್ಲಿ ಮತ್ತಾ ತೊಳೆಯ ಹಾಕ್ಕಿ ಪರಿವಾಳಿಸುವುದು (ಸೂಶಾಸ್ತ್ರ. ೩-೩೩). ೨. ಸಾಹಸ್ರಕೋಟಿಶುಭ್ರಾಂಶು ಗಳ ರುಚಿರಸವನಾ ಹರಂ ಹಿಳಿದು ತನ್ನಯ ಕಳೆಯಂ ಕೂಡಿ ಕಣ್ಗಾ ಹಿನಿಂ ಘಟ್ಟಿಗೊಳಿಸಿದ ಪುಣ್ಯಘಟಿಕೆಯೋ . . . ಎನಲ್ ಕೈಲಾಸಪರ್ವತಂ ರಾಮಣೀಯಕಮಾದುದು (ಶಿಬ. ೨-೦೦). ೩. (ಅಲಂ) ನಾಶಪಡಿಸು ; ಧ್ವಂಸಮಾಡು : ಹಾಳುಮಾಡು : ಧರಣಿಯನೊಕ್ಕಲಿಕ್ಕಿ ದಿಗಧೀಶರ ಗಂಟಲನೊತ್ತಿ ಮಟ್ಟಿ ಭೀಕರಘನೆಲೋಕವಂ ಹಿಳಿದು ನಾಕವನೋಡಿಸಿ . . . ನೆಗಳ್ದನಶ್ರುಮಂಕಾರಿ ಜಿತಾರಿ ತಾರಕಂ (೧೦೫. ೬-೩): ಎಲೆ ಶಕುತ್ತ್ಮಜ ಕೇಳು ಲೋಕವ ಹಿಳಿವಳಿಸಲೆಂದದಲಿ ಹಿಂದಣ ಬಲಿಯ ತಂಗಿ . . . ಕಡುಗಲಿಯ ಗೆಲಿದನು ಶಕ್ರನವಳನು (ಕೊಶಾ. ೦-೦೦-೦೦); ಈ ಪರಿಯ ಲವನಖಿಳಪರವನು ತಾ ಪಡೆದು ಸಂತಸದಿ ಸದ್ವೀರ್ಯೋಪಲಾಲಿತನಾಗಿ ಸಲಲಾವನಿಗಳನು ಹಿಳಿಯೆ (ಕೋಗಿಡು. ೯-೨೦). ೪. ನಾಶವಾಗು ; ಹಾಳಾಗು : ಮಳೆಗೆ ಹೆಚ್ಚಿದ ಧೂಳಿನಬ್ಬುರವಳಿವವೊಲು ವಿಜಯಾಸ್ತ್ರಹತ ಯಲಿ ಹಿಳಿದ ಕರಿನರತುರಗದೊಡಲರುಣಾಂಬುಧಾರೆಯಲಿ ಕಳಚಿತೀ ಕೆಂಧೂಳಿ (ಕುವ್ಯಾ. ೨೨-೩೮). ೫. ಹೋಗಲಾಡಿಸು; ನಿವಾರಿಸು: ತುಳಿದನು ಭವಂಗಳ ತೊಳೆದನು ತವಂಗಳಂ ಹಿಳಿದ ಸಂಶಯಗಳಂ ತಳೆದ ಮೋಕ್ಷಂಗಳಂ (ರಾಜಶೇ. ೦೨೬-೦೪). ೬. ಕೊಲ್ಲು ; ಸಂಹರಿಸು: ಮೊಲೆಯನುಂಬಂದೊಬ್ಬ ದನುಜೆಯ ಹಿಳಿದವೊದೆದವು ಶಕಟನನು (ಕುವ್ಯಾ. ೦-೩೬): ಅಳಿವೆನೋ ಹದಿನಾಲ್ಕುಲೋಕವ ಹಿಳಿವೆನೋ ಹರ ಯಜಭವಮುಖ್ಯರ . . . ಎನುತುರಂಗೊಳುಪ ಡುಗೋವದಲಿ ಕಿಡಿಕಿಡಿ ಯೋದನಸುರೇಂದ್ರ (ಕೊಶಾ. ೩-೭-೦೯). ೭. ಕುಗ್ಗು; ನಿಸ್ಸತ್ವಗೊಳ್ಳು: ಹಿಳಿದ ಛಲದ ವಿಡಾಯ ಧೈರ್ಯದ ತಳಿದ ಭೀತಿಗೆ ಕಾಲುವೊಳಿಯಾದಳಿ ಪನದ ಭೂಪಾಲನಿರವನು ಕಂಡನಾ ಪಾರ್ಥ (ಕುವ್ಯಾದ್ರೋ. ೦೬-೯).

ಹಿಟಿ: ೧. "ಹಿಟಿ—ನಿರ್ದ್ರವೀಕರಣೇ (ಹಿಂಡು), ದಲನಾರ್ಥೇ ('ಸೀಳು' ಎಂಬರ್ಥದಲ್ಲಿ) ತುಳಂ" (ಶಬ್ದ) : ತವಮಾಲವಾದವಪಲ್ಲವಮಂ ಹಿಟಿದೊಂದು ನಿರ್ಮಲೋಪಲತಲದಲ್ಲಿ ತದ್ರಸದಿನಾಗಳೆ ನೋಡಿ ನಿಜೋತ್ತರೀಯವಲ್ಕಲವಸನ್ನೇದೇಶವನೆ ಸೀಳ್ದದಟಿಳ್ ಬರೆದಂ (ಕಾದಂಪೂ. ೬೯೬); ಕೂವಸಿಗಳೆಂದೆತ್ತಿ ಕುತ್ತುವುದುಂ ಪಿರಿಯ ಗಾಣ ಕೆಳೀಕ್ಕಿ ಹಿಟಿವುದುಂ . . . ಉಕ್ಕಿನ ಬಡಿಗೆಗಳಿಂ ಪೊಡೆಯೆಂಡನಾಡು ವುದುಂ (೫೩೦೫ಕ. ೯-೦೦೦ ೫).

ಪಿಟಿದು ಪಿಂಡಿಸು = ಕುಗ್ಗಿಸು ; ದುರ್ಬಲಗೊಳಿಸು : ಜರೆ ನಿಜ ಶಕ್ತಿಯಿಂ ಪಿಟಿನು ಪಿಂ[ಕಾಶಾಂ. ಹಿಂ]ಡಿಸದನ್ನೆಗಮಾತ್ಮ ದೇಹದೊಳ್ನರೆ ತೆರೆದೋಱವನ್ನೆಗಂ . . . ಅರ್ಚಿಪುದರ್ಥಿಯಿಂ ಜಿನೇಶ್ವರನಂ (ಸಕುಶ. ೦-೦೦೫). ಪಿಟಿದು ಪಿಂಡು, ಹಿಳಿದು ಹಿಂಡು = ೧. ಅತಿಯಾಗಿ ಹಿಂಸಿಸಂ,— ನೋವುಂಟುಮಾಡು : ಈ ತೆಱದಿಂದಂ ನಿನ್ನಂ ಘಾತಿಸಿ ಬಿಡದಲೆದು ಪಿಟಿದು ಪಿಂಡಿದ ದುಃಖವ್ರಾತವಿದು ಮಗಳೆ ನಿನ್ನ ಪುರಾತನದುಷ್ಕರ್ಮವಿಟಪಿಕಟುಕಫಲಂಗಳ್ (ಅಂಕ. ೩-೪೮) : ಬಲವನರಿ ಭಟ ಸುಳಿದು ತುಳಿದನು ಹಿಳಿದು ಹಿಂಡಿದನು (೯೩೦ಶಾ. ೩೬-೦೭). ೨. ಬಲವಾಗಿ ಹಿಂಡು ; ಚೆನ್ನಾಗಿ ನುಲಿ; ಕಿರಿಚಿ ಹಿಂಡು: ಒಗೆದ ನಾದ ಮಡ್ಡುದವರ ಪಾಪ ಒಡಹೋಗಲೂಗದ ಏಳನಿಷ್ಠೆಯಿಂದ ಹಿಡಿ ಮುರಿಚಿ ಹಿಳಿದು ಹಿಂಡಿ ಮಾತ್ರ ಏಕನಭವನೆಯ ದಿಟದ ದುಃಲೊಳೊಣಗಿಸುತ್ತ ಮುಕ್ಕಿ (ಪ್ರಭು. ೫೯. ೨೩೩-೦೦) ; ತಳಿತ ತರೆಯೊಡೆದನೊಳು ಕೋಣೆಕಿಹುಗಳ ಕಾಸಿದರಳೆಯ ಕರುಳನು ಹಿಳಿದು ಹಿಂಡಿದರು (ಕುವ್ಯಾ. ೩-೩೬).

ಹಿಳಿದುಕೊಳ್—(ರಸವನ್ನು) ಹಿಂಡಿಕೊಳ್ಳು : ದೋಸೆವದದಿ ಸೂಗಯು ಸುವ ಸಕ್ಕರೆಗಳೆನೀರ ಕುಯಿದಿಳುಪಿ ತಣ್ಣನಾದ ತಾಣದೋಳಗಿರಿಸಿ ಮಾಱುದಿನ ಪೊಗಳ ಕಳೆದು ನಿಂಬೆಯ ಹಣ್ಣಿನಾ ಹೊಸ ಹುಳಿಯ ಹಿಳಿದುಕೊಂಬುದು (ಸೂಶಾ. ೨-೩೦). [ದೇ.೩ ತವಿ.ತುಲ. ಪಿಟ್]

ಪಿಟಿನೀರು (ನಾ). ಹಿಂಡಿದ ನೀರು : ಮಿಂದೊಲ್ಲಣೆಗೆಯ ಪಿಟ್ [ಕಾಶಾಂ. ಹಿಟ್] ನೀರಿಂದಂ ಕಾಲ್ಗಚ್ಚಿ ನೆಲದೊಳಿರ್ದಾ ಕೊಟ್ನೀರಿಂದಂ ಪಾರ್ವರ ಮಡಗಟಂದಂ ಪಿತ್ರತೆಷ್ಟುಯಕ್ಕುಮೆಂಬಪಾರ್ವರ್ (ಸಕುಶ. ೦೦-೦೩೬). [ಪಿಟ್ + ಏರ್, (<ಏರ್)]

ಪಿಟಿಯಿಸು, ಪಿಟಿಸು, ಹಿಳಿಸು (ಕ್ರಿ). ಹಿಂಡುವಂತೆ ಮಾಡು : ಹಿಂಡಿಸು : ಇಕ್ಷುಯಂತ್ರಂಗಳೊಳು ಕಡಿದು ಪಿಟಿಯಿಸಿಯು (ಪಂಪ. ೩೦೬). ಪಿಟಿಸು : ದಿನಂತರಸಂತ್ರಕಾತಾಕಾರಿಗಳಪ್ಪ ಇಕ್ಷುಯಂತ್ರದೊಳಿಕ್ಕಿ ಪಿಟಿಸುತ್ತಿರ್ಪ (ಅಂಕ. ೦೦-೦೦ ೫). ಹಿಳಿಸು : ಕೊಳಲಿನ ಸರಗಳು . . . ಹೃದಯದಲ್ಲಿ ನರ್ತಿಸುತ್ತಾ ಬಗೆಬಗೆಯ ರಸವನ್ನು ಹಿಳಿಸುತ್ತಿವೆ (ಕೊಂಶು. vi ಮುನ್ನು೩). [ಪಿಟಿ+—ಇಸು,]

ಪಿಟಿಲ್, ಪಿಳಿಲ್ (ಕ್ರಿ). ಕೈಯಿಂದ ಬಿಡು,—ಎಸೆ : "ಬ(ಪಿ)ಟಿಲ್— ಹಸ್ತೋನ್ಮುಕ್ತೌ" (ಶಮಂ. ಧು). ಪಿಳಿಲ್ : "ಪಿಳಿಲ್—ಹಸ್ತೋನ್ಮುಕ್ತೌ (ಕೈಯಿಂದ ಬಿಡು)" (ಶಬ್ದ) P ಇಲ್ಲಿ ಶಬ್ದರೂಪ ನಿರ್ಧಾರವಿಲ್ಲದು ದರಿಂದ ಎರಡು ರೂಪಗಳನ್ನೂ ಸೂಚಿಸಿದೆ. [?]

ಪಿಟಿಸು 'ಪಿಟಿಯಿಸು' ನೋ.

ಪಿಟ್ಕುಕುಜುಕ್ಕಿ 'ಪಿಟ್ಕುಕುಜುಕ್ಕಿ' ನೋ.

ಪಿಟ್ಕುಕುಜುಕ್ಕಿ, ಪಿಟ್ಕುಕುಜುಕ್ಕಿ (ನಾ). ಒಂದು ಸ್ಥಳದ ಹೆಸರು : ಅರಕೆಟಿಯ ಪಿಟ್ಕುಕುಜುಕ್ಕಿಯ . . . ಪೊಲ ಮೇರೆ (ಕ್ಷು೫೦. ೫೫೫. ೦೩-೩೬ ; ೬೦೦). ಪಿಟ್ಕುಕುಜುಕ್ಕಿ : ಸೀಯಮಂಗಲದ ಪೊಲ ಮೇರೆ ಇಸಾನದ ದೆಸೆ ನಡುಗಲ್ಲೆ ಅವ್ವುಲತಿಣ್ಣಿಯನ್ನೇಂಕಾಯ್ ಪೇರೊಟ್ಟಿಯ ಅರಕೆಟಿಯ ಪಿಟ್ಕುಕುಜುಕ್ಕಿಯ (ಎಕ. X(೩). ಕೋ. ೦೦೬-೩೬ ; ೩೬೦). 'ಪುಲಿಕುಜುಕಿ' ಪರಾ. [ಪಿಟ್ಕು, + ಕುಜುಕ್ಕಿ (<ಕುಜುಕಿ)]

Δ ಪಿಟ್ಟುವಿ 'ಪೃಥುವಿ' ನೋ.

ಪಿಟ್ಟುವಿರಾಜ್ಯಂಗೆಯ್ (ಕ್ರಿ). ಭೂಮಿಯನ್ನು ಆಳು ; ರಾಜ್ಯಭಾರ ಮಾಡು : ಸ್ವಸ್ತಿಶ್ರೀಚತ್ತವಾಕ್ಯಪೆರ್ಮ್ಮಾಡಿ ಪಿಟ್ಟುವಿರಾಜ್ಯಂಗೆಯ (ಎಕ. V (R), ಅರಕ. ೩೦೩ ; ಸು. ೫೫೩ ೫೫).

[ಪಿಟ್ಟುವಿ (<ಪೃಥುವಿ) + ರಾಜ್ಯಂಗೆಯ್]

ಪಿಟ್ಟುವಬ್ಬೆ (ನಾ). ಒಬ್ಬಾಕೆಯ ಹೆಸರು : ಕೋಸಿಗವಳ್ಳಿಯ ಕಣ್ಣಮ್ಮಂಗ ಪಿಟ್ಟುವಬ್ಬೆಗಂ ಪುಟ್ಟಿದ ಕನ್ನಯ್ಯನ್ (ಎಕ. VIII, ಸೊರಬ. ೯೯-೬ ; ೯೭೧). [ಪಿಟ್ಟುವಿ (<ಪೃಥುವಿ) + ಅಬ್ಬೆ,]

Δ ಪಿಟ್ಟುವಿ 'ಪೃಥುವಿ' ನೋ.

ಪಿಟ್ಟುವಿಗಂಗ (ನಾ). ಒಬ್ಬಾತನ ಹೆಸರು : ಸ್ವಸ್ತಿ ಅಸಗ ಗಂಗಯನ ಮಾಗಂ ಪಿಟ್ಟುವಿಗಙ್ಗಂ ಭಟ ಸ್ಥಿತಿ (ಎಕ.III(R), ಸೂಶ. ೨೦೩-೨; ೨೫೩ ೫೫).

[ಪಿಟ್ಟುವಿ (<ಪೃಥುವಿ) + ಗಂಗ]

ಪಿಟ್ಟುವಿಗಾವುಂಡ (ನಾ). ಒಬ್ಬಾತನ ಹೆಸರು : ಸಂಗವಾದ ಪೆಂಪರ್ಮನಡಿಗಾವುಣ್ಡರುಂ ರಣವಿಕ್ರಮಗಾವುಣ್ಡರುಂ . . . ಪಿಟ್ಟುವಿಗಾವುಣ್ಡರುಂ ಪೆರ್ಮ್ಮೆಯರ ಕೆಟರುಂ ತನನ್ತಾಕರುಂ ಕೊಳಲೆಲ್ಲೂರ ಸಾಲತ್ರರುಂ ವಾರದಿಗಂ ಎನೆವರ್ರುಂ ನರಸಾಕ್ಷಿ (ಎಕ. IV, ಎಹೆಕೋ. ೬೦-೩೦; ಸು. ೫೫೦). [ಪಿಟ್ಟುವಿ (<ಪೃಥುವಿ) + ಗಾವುಂಡ]

**ಪಿಟ್ಟುವಿಪತಿ** 'ಪೊಡವಿಪತಿ' ನೋ.

**ಪಿಟ್ಟುವೆಯ್ಯ** (ನಾ). ಒಬ್ಬಾತನ ಹೆಸರು : ಚೋಟರ ಪಿಟ್ಟುವೆಯ್ಯ ಪೆರ್ಮಾಳ್ಗಿಯ ತುಱುಗೋಳೊಳ್ ಸ್ವರ್ಗಸ್ಥನಾದಂದು (ಎಕ. XI. ಹೊಳ್ಕೆ. ೧೨-೬; 977). [ಪಿಟ್ಟುವಿ (<ಪೃಥುವಿ) + <ಅಯ್ಯ₁]

**ಪೀ** (ನಾ). ಹೇಲು; ಮಲ : (೩).
[ದೇ. II ತಮಿ. ಮಲ. ತುಳು. ನಾಯ್ಕಿ. ಪರ್ಜಿ. ಗದಬ. ಪೀ; ತೆಲು. ಪೀಯಿ, ಪೀಯ್ಯಿ; ಕೋಲಾ. ಪಿಯಾ]

**ಪೀಕಜಾಲಿ** (ನಾ). ಒಂದು ಬಗೆಯ ಜಾಲಿ: ಪೀಕದಾಲಿ, ಕಂಬಟಿಜಾಲಿ (ವೃಕ್ಷಶಿ. ೦-೧೨). [ಪೀಕ + ಜಾಲಿ₁]

**ಪೀಕದಾಣ** 'ಪೀಕದಾನಿ' ನೋ.

**ಪೀಕದಾನಿ, ಪೀಕದಾಣೆ, ಪೀಕುದಾನಿ** (ನಾ). ಉಗುಳುವ ಪಾತ್ರೆ; ಥೂಕದಾನಿ; ಪಡಿಗ: ಹಾಸಿಗೆಯ ಕಾಲುದೆಸೆಯಲ್ಲಿ ಬೆಳ್ಳಿಯ ವತದ್ಗ್ರಹ (ಪೀಕದಾನಿ) ಇಡಲ್ಪಟ್ಟಿತ್ತು (ದಾಶಾ. ೧೦); ರಾಜನ ಎಡಗೈಯಲ್ಲಿ ಚಿನ್ನದ ಪೀಕದಾನಿ ಇತ್ತು . . . ತಾಂಬೂಲವನ್ನು ರಾಜ ಅದರಲ್ಲಿ ಉಗಿಯುತ್ತಿದ್ದ (ಕೃಕಾ. II. ೨೦೨). ಪೀಕದಾಣೆ: ಪಚ್ಚರ—ದಾಣಿ, ಗುಲಾಬ—ದಾಣಿ, ಪೀಕ—ದಾಣಿ, ಅತ್ತರ—ದಾಣಿ, ತಬಲ್—ಜ—ದಾಣಿ ಈ ಮೊದಲಾದವುಗಳಲ್ಲಿ ಕಂಡುಬರುವ ಪ್ರತ್ಯಯಗಳೂ 'ಪಾರಸಿ' ಆಗಿವೆ (ಕಾಜಾಶ. ೦೬೬). ಪೀಕುದಾನಿ : ಮಗ್ಗುಲಲ್ಲಿರುವ ಪೀಕುದಾನಿಯೊಳಕ್ಕೆ ಉಗಿಯುತ್ತಾ (ಪೀಕಹು. ೦).
[← ಹಿಂ. ಪೀಕದಾನ್; ಮರಾ. ಪೀಕದಾನೀ, ಪೀಕದಾಣೀ]

**ಪೀಕಲಾಟ, ಪಿಕಲಾಟ** (ನಾ). ೧. ಪೇಚು ; ತೊಂದರೆ ; ಪೇಚಾಟ ; ಒದ್ದಾಟ : ಕಾಕತಾಳದಂತೆ ನಿನ್ನ ಮಾತು ತಾಂ ಲೋಕದಲ್ಲಿ ಸಿದ್ಧಮೋದು ಪೇಳೆಯ್ಯ ಪೀಕಲಾಟಮಯ್ದೆ ಬರ್ಕುಮಿಾಗಳೀ ಪೋಕು ನಿನ್ನವಲ್ತೆ ಸರ್ವಭೂಮಿಯೊಳ್ (ಹಾಲಾಶ್ವ. ೯-೦೩-೯೦): ಇವರಿಗೇನು ಬಂದಿತಪ್ಪ ಅಂತಹ ಪೀಕಲಾಟ! (ಮುಂಗಾರು ೬೩). ೨. ಜಗಳ : (೩). ಪಿಕಲಾಟ : ೧. ಹೊಟ್ಟೆಗಿಲ್ಲದಿದ್ದರೂ ನಿಮ್ಮ 'ಪಿಕಲಾಟ' ಇದ್ದೇ ಇದೆ (ಜಾಬ. ೧೦): ಇದು ನಾನು ಕಂಡ ಪಿಕಲಾಟ ! (ಕೈಲಾಕ. ೦೪).
ಪೀಕಲಾಟಕ್ಕಿಟ್ಟುಕೊಳ್ಳು=ತುಂಬ ಇಕ್ಕಟ್ಟಿನ ಪ್ರಸಂಗವಾಗು : ಅಧಿಕಾರಿಗಳಿಗೆ ಪೀಕಲಾಟಕ್ಕಿಟ್ಟುಕೊಂಡಿತು (ಅರ್ಕ. ೦೪): ತರಗತಿಯಲ್ಲಿ ಪ್ರಶ್ನೆ ಕೇಳಿದಾಗ ಪೀಕಲಾಟಕ್ಕಿಟ್ಟುಕೊಳ್ಳುತ್ತದೆ (ಕಾರಕು. ೯೬).
[<ಪೀಕು₁ / ತೆಲು. ಪೀಕಲಾಟ]

**ಪೀಕಿಸು** (ಕ್ರಿ) (ಹಣ ಮೊದಲಾದುವನ್ನು) ಬಲಾತ್ಕಾರದಿಂದ ಕೊಡುವಂತೆ ಮಾಡು,–ತೆರುವಂತೆ ಮಾಡು : ಈ ದಿವಸ ಸಿನಿಮಾಕ್ಕೆ ಅವನ ಕೈಯಿಂದಲೇ ದುಡ್ಡು ಪೀಕಿಸುತ್ತೇನೆ (ಬೂ). [ಪೀಕು₁+–ಇಸು₁]

**ಪೀಕು₁** (ಕ್ರಿ). ೧. ಹೊರಕೆ ಎಳೆ,–ಜಗ್ಗು : ಚತುಷ್ಪಾದಿಗಳನ್ನೆದೆ ಬಿಡಿಸಿಡಿಲ ಬಳಗದಂತಾರ್ದು ತಾಕಿದವು ಘುಡುಘುಡಿಸಿ ಪೀಕಿದವು ಕಟಕಿಕರತ (ಜೈಮಿ. ೨೦-೬೦). ೨. (ಕೂದಲು ಮೊದಲಾದುವನ್ನು) ಎಳೆಯುವುದರಿಂದ) ನೋವಾಗು,—ಅಳುಕು : ಕೂದಲಿನ ಸಿಕ್ಕು ಬಿಡಿಸುವಾಗ ಪೀಕುತ್ತದೆ (ಬೂ). ೩. ಆವರಿಸು ; ಆಕ್ರಮಿಸು : ಭುವರಲೋಕವ ತಾಕಿ ನಾಲ್ದೆಸೆ ಸುವರಲೋಕವ ಪೀಕಿ ಖತಿಯಿಂ ಕವರಿ ಮಹರ್ಲೋಕವನು ಧಟ್ಟಿಸಿ ಜನರ ಲೋಕವನು ಕವಿದು ತಪಲೋಕಕ್ಕೆ ನಿಲುಕಿತು ಕಪಕವಿಟಿ ನೆರೆ ಸತ್ಯಲೋಕಕೆ ಶಿವಮಹಾದೇವೆಂದು ಶೋಣಿತಬೀಜಸಂತಾನ (ಶಿಂಶಿಕ. ೧೨-೯೩). ೪. ಹೊರದೂಡು; ಬಹಿಷ್ಕರಿಸು : (೩). ೫. ಕಷ್ಟಪಡು; ಹೆಣಗು : ಸಾಕು ರಣಸುಖವೆಂದು ವಿಕ್ರಮದ ಲೋಕಪಾಲರು ಹರಿಭವಾದ್ಯರು ಪೀಕಿ ರಂಗದ ಕುರಿಗಳಾದರು ಎಳರ ತೋಟಿಯಲಿ (ಶಿಂಶಿಕ. ೧೨-೪೯). ೬. (ಹಣ ಮೊದಲಾದುವನ್ನು) ಬಲವಂತದೀವ ಕೊಡು,–ತೆರು : ಅವನು ಪಂದ್ಯದಲ್ಲಿ ಸೋತುದರಿಂದ ಹತ್ತುರೂಪಾಯಿಗಳನ್ನು ಪೀಕಬೇಕಾಯಿತು (ಬೂ). 'ಪೀಕಿಸು' ಪರಾ.
[ದೇ. II ತೆಲು. ಪೀಕು ; ನಾಯ್ಕಿ. ಪೀಕ್]

**ಪೀಕು₂** (ನಾ). ಬೆಳೆ ; ಪೈರು : ಮೊನ್ನೆ ರೈತರು ಪೀಕನ್ನು ಮನೆಗೆ ತಂದು ಹಚ್ಚಿದರು (ಅಶಿಹೂ. ೬೦) : ನನ್ನ ಮಗನಿಗೆ ಮಾತದ ಭೂಮಿಯಲ್ಲಿ ಬೆಳೆದ ಎಲ್ಲ ಪೀಕು ಸಲ್ಲತಕ್ಕದ್ದು (ಕುಶಿಕ. ೬೩).
[← ಹಿಂ. ಪೀಕಾ = ಚಿಗುರು ; ಮರಾ. ಪೀಕ್]

**ಪೀಕುದಾನಿ** 'ಪೀಕದಾನಿ' ನೋ.

**ಪೀಕೆ** (ನಾ). ಬಾಣದ ಗರಿ : ಇಱಿಬಿನೊಳು ಸಿಕ್ಕಿತಿದೆ ಬಲುಗಣಂ ನೋಡೆನುತ ಪೀಕೆಯಂ ಸನ್ನೆಗೆಯ್ದು . . . ಪರಿಚರರು ನುಡಿವುತಿರ್ದರ್ (ಚಂಸಾ. ೨೩-೦೬). [<ಪಿಳ್ಳ₁]

**ಪೀಚ** (ನಾ). (ಆಲಂ) ಸಣ್ಣ ಮನುಷ್ಯ ; ಅಲ್ಪನಾದವನು ; ಕ್ಷುದ್ರ : ಭೂಚರರ ಗೋಚರರಗೋಸಿಸದಸುರಾನ್ವಯದ ಪೀಚನಲ್ಲ (ಕಕಹು. ೬೫-೦). [ಪೀಚು₂ + – ಅ₂]

**ಪೀಚಕತ್ತಿ** (ನಾ). ಚಿಕ್ಕ ಕಠಾರಿ ; ಕಿರುಗತ್ತಿ : ನೀನು . . . ನಡುವಿಗೆ ದಟ್ಟಿಯನ್ನು ಬಿಗಿದು ಪೀಚಕತ್ತಿಯನ್ನು ಸಿಕ್ಕಿಸಿಕೊಂಡು ಬಾ ದೆ (ಕಕಪ. II. ೦೦೬೨) ; ದಟ್ಟಿಗೆ ಪೀಚಕತ್ತಿಯನ್ನು ಸಿಕ್ಕಿಸಿರಲಿಲ್ಲ (ಕುಶಿಕ. ೫).
[<ಪೀಚು₂ + ಕತ್ತಿ / ತಮಿ. ಪೀಚ್ಚಾಙ್ಕತ್ತಿ, ಪೀಚ್ಚಾಙ್ಕತ್ತಿ : ಮಲ. ಪೀಚ್ಚಾಙ್ಕತ್ತಿ]

**ಪೀಚಲು** (ನಾ). ಚೆನ್ನಾಗಿ ಬೆಳೆಯದಿರುವುದು ; ಬಡಕಲು : ಪೀಚಲಾದ ಸರಳವಾದ ಉಡುಪಿನ ಚಿಕ್ಕ ಮನುಷ್ಯನೊಬ್ಬನು . . . ಬಳಲಿದ ಕಣ್ಣುಗಳಿಂದ ನೋಡುತ್ತಿದ್ದಾನೆ (ಪಾಶಿಪಾ. ೦).
[ಪೀಚು₂ + – ಅಲು (< – ಅಲ್₂)]

**ಪೀಚಾಡಿ** 'ಪಿಚಾಡಿ' ನೋ.

**ಪೀಚಾಳು** (ನಾ). ಸರಿಯಾಗಿ ಬೆಳೆಯದ ವ್ಯಕ್ತಿ ; ಸಣಕಲು ಮೈಕಟ್ಟಿನವನು : ಪೀಚಾಳೊಬ್ಬ ತನ್ನ ಕವಲುತೋಳೆಯ ಅಂಗಿಯನ್ನು ಕಳಚಿ ಬಿಸಾಡಿ ಬಿಕ್ಕುತ್ತ ಬಂದು ಅವಳನ್ನು ಬಿಗಿದಪ್ಪಿಕೊಂಡನು (ಕೃಹು. ೩೦೫).
[ಪೀಚು₂ + ಆಳು₂ (< ಆಳ್₂)]

**ಪೀಚು₁** (ಕ್ರಿ). (ದ್ರವ ಪದಾರ್ಥಗಳನ್ನು) ಪಿಚಕಾರಿ, ಜೀಕಳಿ ಮೊದಲಾದುವುಗಳಿಂದ ಚಿಮ್ಮು,—ಚಿಮುಕಿ ಬಿಡು : 'ಪೀಚುಗೊಳವಿ' ಪರಾ. [ದೇ. II ತಮಿ. ಪೀಚ್ಚು, ಪೀಚ್ಚು ; ಮಲ. ಪೀಚ್ಚು]

**ಪೀಚು₂, ಪೀಚೆ, ಪೀಚು₂** (ನಾ). ೧. ಸಣ್ಣದಾಗಿರುವಿಕೆ : ಸರಿಯಾಗಿ ಬೆಳೆಯದಿರುವಿಕೆ : (೩). ೨. ಬಡಕಲು ; ಸಣಕಲು : ಅವರ ಮಗು ತುಂಬ ಪೀಚು (ಬೂ). ೩. ಶೀರ ಎಳೆಯ ಕಾಯಿ ; ಮಿಡಿ : "ಪೀಚಿನಲ್ಲಿರಕಮದು ಮಿಡಿಗೆ" (ಕಕ. ೬೬), ಚಿಗುರಿನ ಪೀಚು ಕಾಯ್ ಬಲಿತ ದೋರೆಗಳುಂ ಈಗಿವಣ್ಣಾಗಳುಂ ಸೊಗಯಿಸೆ (ಹಾಲಾಶ್ವ. ೬-೦-೯) (ಗ್ರಾ). ೪. ಸಣಕಲಾದ; ಬಡಕಲಾದ : ಮಗುವಿಗೆ ರಿಕೆಟ್ಸ್ ತರಹ ಆಗಿರುವಂತಿದೆ; ತುಂಬಾ ಪೀಚುಮಗು (ಶಿಂಕಿಪ. ೦೨); ಆ ಜನಾಂಗದ ಪೀಚು ಮನುಷ್ಯನೊಬ್ಬ . . . ತಮಗೆಲ್ಲ ನಿಷ್ಕಾರಣವಾಗಿ ಕಿರುಕುಳನೀಡುವಾಗ ತ್ರಿತ್ರೀಯ ಹೇಳತೊಡಗಿದನು (ಕುಶಕು. ೨೩೫). ಪೀಚೆ : ೨. "ಅದೇನೂ ಪೀಚಿಯಲ್ಲ; ಸರಿಯಾದ ಎತ್ತರವೇ" ಎಂದು ವರ್ತಕ ಉತ್ಸಾಹದಿಂದ ನೆಕ್ಕುದೋಪ್ ಕೆಮಿಯಲ್ಲುಸುರಿದನು (ಶ್ರವಕು. ೯೯). ೪. ಆ ಪೀಚೆ ಮನುಷ್ಯ ನಿರಾಶೆಯಿಂದ ಚೀರಿದನು (ಶ್ರವಕು. ೨೩೫). ಪೀಚು₂ : ೩. "ಎಳೆಗಾಯಿ ಮಿಡಿ ಹದಿರು ಪೀಚು" (ಕಬ್ಬಸಾ. ೨೩) ; ಬೀಜಕೆ ಬಿಡುವುದ ಪೀಚಿನೊಳಬಿಯೆಂಬುದೀ ಜಗದೊಳಗುಳ್ಳ ಗಾದೆ (ಶಶಿಕ. ೨೫-೯೬); ವೃಕ್ಷದ ಬುಡಕ್ಕೆ ನೀರನೆರೆದಲ್ಲಿ ಆ ಉದಕಸಾರವು ಎಲೆ, ಹೀಚು, ಕಾಯಿ ಹಣ್ಣುಗಳೊಳಗೆಲ್ಲ ವ್ಯಾಪಿಸಿಕೊಂಡಿರುವ

ಹಾಗೆ (ಸೋಂಕು. ೧೨೦-೯೬೯ ೫೪೫): ಹಣ್ಣಿನ ಗುಣವೆಲ್ಲ ಪೀಚಿನಲ್ಲಿ (ಕುಪ್ಪಾಟ. ೦೯). (ನಾ). ೫. ಸಣಕಲು ವ್ಯಕ್ತಿ; ನರಪೇತಲ: ನಿನ್ನ ತಪ್ಪು ಪೀಚೇನೂ ಅಲ್ಲ. ನೋಡುವುದಕ್ಕೆ ಇಪ್ಪತ್ತೈದು ವರ್ಷದ ಆಳು (ಪಾಂಚಾ. ೦೯೦). ೬. (ಆಲಂ) ಅನಂಭವವಿಲ್ಲದ ವ್ಯಕ್ತಿ: ಇದಕ್ಕೆಲ್ಲ ಕತೆ ಬರೆದ ಪೀಚುಗಳ ಅವರೋಧವಾದ ಅಪರಿಮಿತ ಅಜ್ಞಾನವೇ ಕಾರಣ (ಮಹೋದಂ. ೦೨೬). [ದೇ.॥ ತುಲ. ಪೀಚ್ಚು]

**ಪೀಚುಗದ್ದೆ** (ನಾ). ಸರಿಯಾಗಿ ಬೆಳೆಯದ ಗಡ್ಡೆ; ಕುರುಚಲುದಾಡಿ: (೪). [ಪೀಚು₂ + ಗಡ್ಡೆ₁]

**ಪೀಚುಗೊಳವಿ** (ನಾ). ಪಿಟಕಾರಿ; ಜೀಕಳಿ; ಜೀರ್ಕೊಳವೆ: (೪). [ಪೀಚು₁ + ಕೊಳವಿ (< ಕೊಟವಿ)]

**ಪೀಚಿ** 'ಪೀಚಂ₂' ನೋ.

**ಪೀಠ** (ನಾ). ೧. (ಕುಳಿತುಕೊಳ್ಳಲು ಮಾಡಿದ) ಮಣೆ; ಆಸನ: "ವಿಷ್ಟರಂ, ಪೀಠಂ, ಆಸನಂ—ಈ ೩ ಮಣೆ" (ಶಬ್ದಮಣಿ. ೩೨-೦೩೩), "ಆಸಂದಿ ವಿಷ್ಟರಂ ವೇತ್ರಾಸನಕಂ ಪೀಠಮಾಸನಂ ಪೆಸರಿಂ" (ಶಬ್ದ.ಕೋ. ೯೯-೨೩). ೨. ದೇವರ ಪ್ರತಿಮೆಯನ್ನು ಇಡುವ ವೇದಿಕೆ: ಎಸವ ಪೀಠವನೇರದು ರುದ್ರಾಣಿ ಬೆಚ್ಚರದೊಳೈತಂದು ಕಯ್ಯ ಬಾಳಂ ಪಿಡಿದು . . . ಎರಡು ವರವನಿತ್ತಪೆನೆಂದಳು (ಕೃಷ್ಣ. ೪೦-೬೮). ೩. ದೇವರ ಮುಂದೆ ನೈವೇದ್ಯ, ಬಲಿ ಮೊದಲಾದಂವುಗಳನ್ನು ಇಡುವ ವರ್ತುಲಾಕಾರದ ವೇದಿಕೆ: 'ಬಲಿಪೀಠ' ಪರಾ. ೪. ತಳಪಾಯ; ಬುನಾದಿ; ಅಡಿಪಾಯ. ೫. ಗುರುಗಳು, ಸ್ವಾಮಿಗಳು, ಅರಸರು ಮೊದಲಾದವರ ಗದ್ದುಗೆ,—ಅಧಿಕಾರಸ್ಥಾನ: ಪೀಠ ಮೂರ್ಧಗೆ ಹೊಲ್ಲ ಕೀಟ ನಿದ್ದೆಗೆ ಹೊಲ್ಲ (ಸರ್ವಜ್ಞ. ೯೩೦); ಪೀಠ ಸಿಕ್ಕಿದರೂ ಕಾಟಕತನ ಬಿಟ್ಟಾನೆಯೇ? (ಗಾದೆ). ೬. ವಿದ್ಯಾಕೇಂದ್ರ; ವಿದ್ಯಾಕ್ಷೇತ್ರ: ಮಯೂರಶರ್ಮನು ವ್ಯಾಸಂಗ ಮಾಡುತ್ತಿದ್ದುದು ಈ ಪೀಠದಲ್ಲಿಯೇ (ಕರ್ನಾಟ. ೩). 'ವಿದ್ಯಾಪೀಠ' ಪರಾ. ೭. ವಿಶೇಷ ಅಧ್ಯಯನಕ್ಕಾಗಿ ಗೊತ್ತುಮಾಡಿರುವ ಒಂದು ಅಧಿಕಾರ,—ಪ್ರಾಧ್ಯಾಪಕಸ್ಥಾನ: ಜೈನ ಶಾಸ್ತ್ರಾಭ್ಯಾಸಕ್ಕಾಗಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಒಂದು ಪೀಠವಿದೆ (ಕೂಡು). [ಸಂ.]

**ಪೀಠಕ** (ನಾ). ೧. ಆಸನ; ಮಣೆ. ೨. "ಸ್ಥಾನ" (ಅಭಿಧಾ. ೯೩೧): ಅಂತೆ ಜನನೀಜಠರಪೀಠಕ[ಪಾಠಾಂ. ಪಿಠರ]ಮನೆಯ್ದನೋರಂತಿದುಂ ಪರಮಾರ್ಥಮಕ್ಕುಂ (ಅಭಿಧಾ. ೯-೯-೭೦). ೩. [ನಾಟ್ಯ] ನೃತ್ಯದಲ್ಲಿಯ ಒಂದು ಭಂಗಿ: ಕಾಲುಗಳು ಪೀಠಕದಲ್ಲೇ ನಿಂತಿರಬೇಕು . . . ಅವು ನೇರಾಗ ಕೊಡದು (ಚಿತ್ರಸೂ. ೦೩೬). [ಸಂ.]

**ಪೀಠಮರ್ದ** (ನಾ). [ಕಾವ್ಯಮೀ] ಶೃಂಗಾರವಿಷಯಗಳಲ್ಲಿ ನಾಯಕನಿಗೆ ಸಹಾಯಕರಾಗಿ ಬರುವ ನಾಗರಕ, ವಿಟ, ವಿದೂಷಕ ಮತ್ತು ಪೀಠಮರ್ದ ಎಂಬ ನಾಲ್ವರಲ್ಲಿ ಒಬ್ಬ; ೫ ಕೋಪಗೊಂಡ ನಾಯಿಕೆಯನ್ನು ಸಂತೈಸುವುದರಲ್ಲಿ ನಿಪುಣನಾದವನು: ಒಡನೊಡನೆ ಪೊರೆದು ಕುಳ್ಳಿರ್ದೆಡೆಯೊಳ್ಗಂದೇಜಲಿಕ್ಕಿ ಕಾಲ ಪಿಡಿದೋಗಡಿಸದೆ ಮಿದಿಮಿದಿದಟ್ಟೈಯನೊಡರಿಸುತಿರ್ಪವನೆ ಪೀಠಮರ್ದನೆನಿಕ್ಕುಂ (ಶೃಂಗಾರ. ೯-೦೩); ಮಗುಳ್ದು ಸರಸೋಕ್ತಿಗಳ ವಿರಚಿಪಂ ನಾಗರಿಕನಂತೆ ಪೀಠಮರ್ದನ ಪಾಂಗಿನಿಂ (ಅಭಿಧಾ. ೯-೩-೩೬). [ಸಂ.]

**ಪೀಠಮರ್ದಕ** (ನಾ). = ಪೀಠಮರ್ದ: ತನ್ನಂ ಕಾಣಲೊಡಮಜ್ಜಿದು ನುಡಿಯಿಸಿ ಮೆಚ್ಚಿ ಮೇಳದ ನಾಗರಿಕವಿಟವಿದೂಷಕಪೀಠಮರ್ದಕರ್ಕಳ್ವೆರಸು . . . ಸೂಳೆಗೇರಿಯೊಳಗನೆ ಬರ್ಪುದುಂ (ಕುಸುಮ. ೯-೩೯ ವ); ದಿನಜನಪಾಲ್ಯಾಂಘ್ರಿಪಂ ನಾಗರಕವಿಟವಿದೂಷಕ ಪೀಠಮರ್ದಕರ್ಕಳ್ವೆರಸು . . . ಬರ್ಪೊಂ (ಪಾರ್ಶ್ವ. ೯-೩೨ ವ), ಪೀಠಮರ್ದಕ ವಿಟ ಚೇಟ ವಿದೂಷಕರೆಂದು ಮಿಂ ಪೇಟ್ಟವರಲ್ಲಿ ರಾಜನಿಂದಗಾಮ ಕೂಡಾದ ಗುಣವಂತಂ ಶಿಷ್ಯ ಸನ ಪೀಠಮನರ್ಪುತ್ತೊತ್ತಿ ಕುಳ್ಳಿರ್ಪುದರಿಂ ಪೀಠಮರ್ದಕಂ (ಚಿತ್ರ. ೩-೮೩ ವ). [ಸಂ.]

**ಪೀಠಮರ್ದನ** (ನಾ). = ಪೀಠಮರ್ದ: ಎಸವ ನಾಗರಿಕ ವಿಟ ವಿದೂಷಕ ಪೀಠಮರ್ದನ ನಟ ಗಮಕಿ ಗಾಯಕರು ಮಿಗೆ ಸಂಕಟಿಸಿ ಬೆಂಬಿದರು ಚಪ್ಪರದೊಳು (ಶಬರ. ೬-೩೬): ಮೂಡಲಿದು ವಿಟನಿಂಗೆ ಬಡಗಲದು ವಿದೂಷಕಗೆ ಪಡುವಲದು ನಾಗರಿಕಗಂ ತೆಂಕಲದು ಪೀಠಮರ್ದನಗೆ (ಸೌಂದ. ೦೬೩೦). [ಸಂ.]

**ಪೀಠವರ್ಧನ** (ನಾ). = ಪೀಠಮರ್ದ: ಪೀನಸ್ಥ ರಕ್ತಕರ್ದಮವ್ರಣವ ಸುಗಂಧಾಧಿಕಾರಮರ್ದನಕುಶಲಂ ತಾನಿಂಗಿತಜ್ಞನುಂ ವಿಜ್ಞಾನಿಯುಂ ಶಾಂತಿ ಪೀಠವರ್ಧನನೆನಿಕುಂ (ಸುಕು. ೦೦-೯೦), ಮನುಮಾರ್ಗಿ ಪರಹಿತಾಮಾ ಸತ್ಯವಾಣಿ . . . ಸಜ್ಜನನೆನಿಪ ಪೀಠವರ್ಧನನೊರ್ವ ಕೆಳೆಯಂ (ಅಜಿತ. ೯-೮): ವಿಟವಿದೂಷಕಪೀಠವರ್ಧನರೆಂದೆಂಬ ನಟನೆಯ ಪಾಗಲಿಕರಿಗೆ ಘಟಿಕ ಕಾವಿನು ಕಾವಲಿರಿಸಿದನೆಂಬಂತೆ ಕುಟಿಲಾಕ್ಷಿಯರ ಮೊತ್ತವೆಸೆಯ (ಅಕ್ಕ. ೩-೯೯). [< ಪೀಠಮರ್ದನ]

**ಪೀಠಾಧಿಪತಿ** (ನಾ). ಮಠದ ಅಧಿಕಾರವನ್ನು ವಹಿಸಿಕೊಂಡ ವ್ಯಕ್ತಿ; ಪೀಠಾಧಿಕಾರಿ; ಜಗದ್ಗುರು: ಮೊನ್ನೆ ಶಿವಗಂಗೆಯ ಪೀಠಾಧಿಪತಿಗಳ ಉಪನ್ಯಾಸವಿತ್ತು (ಕೂಡು). [ಸಂ.]

**ಪೀಠಿಕಾಪ್ರಕರಣ** (ನಾ). ಆರಂಭದ ಘಟನೆ: ಧರೆಗವತರಿಸುವ ಲಕ್ಷ್ಮೀವರನವತಾರಕ್ಕೆ ಪೀಠಿಕಾಪ್ರಕರಣದಂತಿರೆ ಬಂದುದುಂತಭೋಗೀಶ್ವರಿಪಾ ದೇವಕಿಯ ಗರ್ಭದೊಳ್ ಜನಿಯಿಸಿದಂ (ಜಗನ್. ೨-೬೦). [ಸಂ.]

**ಪೀಠಿಕಾಸಂಧಿ** (ನಾ). (ಕಾವ್ಯದಲ್ಲಿ) ಆರಂಭದ ಸಂಧಿ; ಮೊದಲನೆಯ ಸಂಧಿ: ಪ್ರಾಚೀನಕವಿಗಳೆಲ್ಲ ತಮ್ಮ ಕಾವ್ಯದ ಪೀಠಿಕಾಸಂಧಿಯಲ್ಲಿ ತಮ್ಮ ಇಷ್ಟದೇವತೆಗಳನ್ನು ಸ್ಮರಿಸಿದ್ದಾರೆ (ಕೂಡು). [ಸಂ.]

**ಪೀಠಿಕೆ** (ನಾ). ೧. ಆಸನ; ಪೀಠ: ಪ್ರತಿನಂದಿ . . . ಪೊಂದಾವರೆಯ ಪೂಗಳಂ ಪೀಠಿಕೆಯಂ ಸಮೆದು ಜಿನಪ್ರತಿಮೆಯನಲ್ಲಿ ನಿಲಿಸಿಯರ್ಚಿಸುತ್ತಿರ್ಪನ್ನೆಗಂ (ಕಂಠಾಭ. ೦೩-೬೩ ವ). ೨. ಶಿವಲಿಂಗದ ಪಾಣಿಪಟ್ಟಲು; ಪಾಣಿಪೀಠ; ಪಿಂಡಿಗೆ: ದೇಹವೇ ಪೀಠಿಕೆ [ಪಾಠಾಂ. ಪಿಂಡಿಗೆ, ಪೀಠಕ್ಕೆ, ಪೀಠಿಗೆ] ಜೀವವೇ ಲಿಂಗ (ಶಿವಶ. ೯೩-೦೯೩). ೩. ಯಾವುದಾದರೊಂದು ವಿಷಯದ ಸಮಗ್ರವಿವರದ ಸಂಗ್ರಹ,—ಸಮಸ್ತವಿವರದ ಸಾರ. ೪. ಮುನ್ನುಡಿ; ಉಪೋದ್ಘಾತ: ಈ ಗ್ರಂಥದ ಪೀಠಿಕೆಯನ್ನು ಬರೆದವರು ದೊಡ್ಡ ವಿದ್ವಾಂಸರು (ಕೂಡು).

**ಪೀಠಿಕೆ ಹಾಕು**—ಮುಂದಿನ ಕಾರ್ಯಕ್ಕೆ ಅನುಕೂಲವಾದ ಹಿನ್ನೆಲೆಯನ್ನು ರಚಿಸು; ಪೂರ್ವರಂಗವನ್ನು ನಿರ್ಮಿಸು: ಆ ಮನೆಯವನ್ನು ಅವರ ತಲೆಗೆ ಕಟ್ಟುವುದಕ್ಕೆ ಏಜಂಟ್ . . . ಪೀಠಿಕೆ ಹಾಕಿದ್ದನು (ಹೋರಾಟ. ೨೩); ಅವರೇ ಜವಾಬುದಾರಿ ಹೊತ್ತು, ಇವಳನ್ನು ಈ ಊರಿಗೆ ತಂದದ್ದಲ್ಲವೆ? ಎಂದು ಪೀಠಿಕೆ ಹಾಕಿ ಕತೆ ಹೇಳಿದ್ದ (ಮಹಾನಗ. ೬೯). [ಸಂ. ಪೀಠಿಕಾ]

**ಪೀಠೋಪಕರಣ** (ನಾ). ಮಣೆ, ಕುರ್ಚಿ, ಮೇಜು ಮೊದಲಾದ ವಸ್ತುಗಳು: (ಮನೆಯ, ಕಚೇರಿಯ,—ಕುರ್ಚಿ, ಮೇಜು, ಮೊ. ದ) ಪೀಠೋಪಕರಣ (Furniture. ೩೦೬೩); ಅನಂತರ ಜವಾಬಾನೆಗಳನ್ನೂ ಪೀಠೋಪಕರಣಗಳನ್ನೂ ಹೊರಗೆ ತರಲಾಯಿತು (ಪ್ರತಿಮ. ೨೩೦). [ಸಂ.]

**ಪೀಡ** (ನಾ). ಒಂದು ಬಗೆಯ ಮರ; ಸರಳವೃಕ್ಷ: "ಪೀತಂಪದಾರು ಅಂದಳ, ಸುರಹೊನ್ನೆ, ಜೀರಗೆ, ಪೀಡ, ಅತ್ತಿ" (ಲಿಂಗ. ೯೯). [ಸಂ. ಪೀಡಾ]

**ಪೀಡನ** (ನಾ). ೧. ಹಿಸುಕುವುದು ; ಹಿಂಡುವುದು ; ಒತ್ತುವುದು : ವೃಷಭಗೆ ಹರಣ ಹಿಂಡಿವುದದವನ ಬಾಹುಪೀಡನದಿ (ಶ್ರೀರಾಪ. ೬೮೬-೨೨೦). ೨. ನೋಯಿಸುವುದು ; ಹಿಂಸಿಸುವುದು ; ಕಾಡುವುದು : "ನಿಗ್ರಹಂ ಪೀಡನಂ" (ಚುಂಗರಾ. ೧೩೦-೧೭). ೩. ಹಿಡಿಯುವುದು : 'ಪಾಣಿಪೀಡನ' ಪರಾ. ೪. [ಕಾಮಶಾ] ಹನ್ನೆರಡು ಬಗೆಯ ಆಲಿಂಗನಗಳಲ್ಲಿ ಒಂದು : ಸಹಜಮೆಂಬ ತೆಱದಿ ನಡೆದು ಬರ್ಪಮನಿವ ಮಂದಿಯೆಡೆಯು ಮಹಿಳೆಯೊಡಲನೊಬ್ಬ ಸೋಂಕಿ ತಿಕ್ಕಗಾನಿಸಿ ಅಹ ಇದಾರೆನಲ್ಕೆ ಬಿಡುವ ಬಹುವಿದಗ್ಧಪುರುಷನಿಂದ ಮಹಿಗೆ ಕಾಣಿಸಿದುದು ಪೀಡನಂ (ಅಸಹ. ೬-೫); ವೃಷ್ಟರ ವಿವಿಧಕ ಧೃಷ್ಟಕ ಪೀಡನ ವೃಕ್ಷಾರೋಹಣ ಲತಾವೇಷ್ಟನ ತಿಲತಂಡು ಲಾಖ್ಯ ಕ್ಷೀರನೀರ ಊರೂಪಗೂಢ ಜಘನೋಪಗೂಢ ಸ್ತನಾಶ್ಲೇಷ ಲಲಾಟಕಮೆಂಬ ದ್ವಾದಶಾಲಿಂಗನಾಲಿಂಗಿಗಳಿಂ (ಪಕೀಳ. ೧೮೩); ಅಲ್ಲಿರ್ದ ಕಾಮಿನೀ ಸ್ತ್ರೀಪುರುಷರೋರೋರ್ವರನೊತ್ತಿಕೊಂಡು ಹೋಗಿ ಆ ಬಾಧೆಗೆ ಆಲಿಂಗನಂಗೈವುದಂ ಪೀಡನಮೆಂಬರು (ಕಾಮಶಾ. ೨೨೦). ೫. ದಂತಕ್ಷತದ ಭೇದಗಳಲ್ಲಿ ಒಂದಂ : ಎಡಗಲ್ಲದಲ್ಲಿ ಅಡಿಗಡಿಗೆ ದಂತಕ್ಷತಗೈವುದು ಪೀಡನ ಮೆಂಬುದು (ಕಾಮಶಾ. ೨೨೬). ೬. ಸುರತದ ಆಸನಗಳಲ್ಲಿ ಒಂದು : ಅವಳ್ಗೆ ದಣಿವಿಲ್ಲದೊಡೆ ಅವಳು ಮೇಲಪ್ಪುದು. ತಾಂ ಕೆಳಗಪ್ಪುದು. ಆ ಧೃಷ್ಟಾಧಿಪ ಮೆಲ್ಲನವುಕೆ ಪೀಡನಂ (ಕಾಮಶಾ. ೨೩೬). [ ಸಂ. ]

**ಪೀಡನಕ** (ನಾ). ೧. = ಪೀಡನ ೪ : ನೆರವಿಯೊಳ್ ಪೂರ್ದಿ ಪೆಣ್ಣಂ ಸರಸಾಟದಿ ಭಿತ್ತಿಗೌಂಕಿಯಹಹಮೆನುತ್ತಾದರದಿಂ ಬಿಗಿಬಿಗಿದಪ್ಪುತ್ತಿರಲದೆ ಪೀಡನಕಮೆಂದೆಸಿಪ್ಪಾಶ್ಲೇಷಂ (ಮಸ್ಮಿ. ೧೧-೬). ೨. = ಪೀಡನ ೫ : ಎಡದ ಗಲ್ಲಮಂನೊತ್ತಿ ಹಿಡಿಯೆ ಪೀಡನಕಮುದು (ಅಸಹ. ೬-೩೦). [ ಸಂ. ]

**ಪೀಡನೆ** (ನಾ). ಕಾಟ ; ಹಿಂಸೆ ; ಪೀಡೆ : ಯುರೋಪಿಯನರ ಪೀಡನೆಗೊಳಗಾಗಿರುವ ರಾಷ್ಟ್ರಗಳಲ್ಲಿ ತಮ್ಮ ಶಕ್ತಿಯ ವಿಚಾರದಲ್ಲಿ ಒಂದು ಬಗೆಯ ನವೀನವಿಶ್ವಾಸವು ಹುಟ್ಟುವುದು (ಜಗಸಂ. ೩೬). [ ಸಂ. ಪೀಡನ ]

**ಪೀಡಿ, ಪೀಢಿ** (ನಾ). ಪೀಳಿಗೆ ; ಪರಂಪರೆ ; ತಲೆಮಾರು : ನೀವು ಪೀಡಿದರಪೀಡಿಯಿಂದ ಈವೂರಲ್ಲಿದ್ದವರು (ಶತ್ರಶಾ. ೮೦). ಪೀಢಿ: ಹಳೆ ಹೆಂಗಸಿಗೆ ಈ ತರುಣಪೀಢಿಯ ನಡತೆ ತಿಳಿಯೂದಿಲ್ಲ (ಗಂಪೂಹು. ೨೦).

[ ← ಮರಾ. ಪಿಢೀ ]

**ಪೀಡಿತ** (ಗು). ೧. ನೋಯಿಸಲ್ಪಟ್ಟ; ಬಾಧೆಗೊಳಗಾದ ; ಹಿಂಸೆಗೆ ಗುರಿಯಾದ : ನಿಜವಕ್ತ್ರೋಜನಿಕ್ಷಿಪ್ತಕ್ಷ್ವೇಡಪೀಡಿತಲೋಕಘಾತಿನಿಯಪ್ಪ ಪೂತನಿಯುಮಂ . . . ಕರೆದು (ಜಗಸಂ. ೩-೨೨). (ನಾ). ೨. ಪೀಡೆಗೊಳಗಾದವನು ; ನೊಂದವನು : ವಿದ್ಯಾಗರ್ವಗ್ರಹಪೀಡಿತರ್ ಸ್ವಪರಬಾಧಾಹೇತುವಂ ದುಸ್ತರೋದ್ಯೋಗಕ್ಲೇಶಿತರಾಗಿ ಬಿತ್ತಿ ಬೆಳೆವಂತಕ್ಕುಂ ವಿಷೋದ್ಯಾನವಮಂ (ಕಂರಾಮಾ. ೦-೩೪) ; ಅವನುರುದೀಪ್ತಿಗೆ ಕೀರ್ತಿಗೆ ರವಿರಾಜರ್ ಕಂದಿ ಬರ್ಕಜುಂಬಿದ ದೆಸೆಯಿಂದವಧಿಯನೆಂದುಂ ಕಾಣದೆ ತವೆ ರಾಹುಗ್ರಹಣಗಾಢಪೀಡಿತರಾದರ್ (ಕಬ್ಬಿಕ. ೨-೫೩). ೩. ನೋಯಿಸಲ್ಪಟ್ಟುದು : "ತುನ್ನಂ, ಪೀಡಿತಂ—ಈ ೨ ನೋಯಿಸಲ್ಪಟ್ಟುದು" (ಕರಾಯು. ೦೨೬-೮೨); ಅತ್ಯಂತ ಪೀಡಿತವಾದ, ಅಶಾಂತವಾದ ಗುರುಚರಣರ ಹೃದಯದ ಮೇಲೆ ಗಿರೀಂದ್ರನ ಮಾತುಗಳು ಚೆನ್ನಾಗಿ ಮುದ್ರೆಯನ್ನು ಹಾಕುತ್ತಿದ್ದವು (ಹುಹೀ. ೩೫). ೪. ನೋವು; ಬಾಧೆ; ಹಿಂಸೆ : "ಪೀಡಿತಂ ತುನ್ನಮೆನೆ ನೋವಕ್ಕು" (ಚುಂಗರಾ. ೦೩೨-೨೬). ೫. [ಕಾಮಶಾ] ಚುಂಬನದ ಹನ್ನೆರಡು ಬಗೆಗಳಲ್ಲಿ ಒಂದಂ ; ಇದರ ಸಂಖ್ಯೆ ಮತ್ತು ಹೆಸರುಗಳಲ್ಲಿ ಭಿನ್ನಾಭಿಪ್ರಾಯಗಳಿವೆ : ಸ್ತ್ರೀಯೆರಡು ತುಟಿಯುಂ ತನ್ನೆರಡುತುಟಿಯಿಂದೊತ್ತಿ ಪೀರ್ವುದು ತೋರ್ವುದು ಬಲ್ಪಿಡಿವುದು ಚುಂಬಿಸುವುದು ಇದು ಪೀಡಿತಮೆಂಬ ಚುಂಬನ (ಕಾಮಶಾ. ೩೫೩). 'ಜಿಹ್ವಕ' ಪರಾ. ೬. ರತಿಬಂಧಗಳಲ್ಲಿ ಒಂದು : ಪೀನಸ್ತನದ್ವಯದೊಳಾನೆ ನಿನ್ನೆದೆಯನನುಮಾನವಿಲ್ಲದೆ ಶಿವಿವೆನೆಂದೊಱಗಿದ ಮಾನಿನಿಯ ತೊಡೆಯನವಧಾನದಿಂ ಮೆಟ್ಟಿ ನೆರವು ನಿಪುಣನಿಂದ ಪೀಡಿತಮುದಂ (ಅಸಹ. ೯-೩೬); ಮೆಲ್ಲನೆ ಮಲಗಿರ್ದವಳು ಪುರುಷಂ ತನ್ನೆಡಗಾಲಿಂ ಮೆಟ್ಟಿ ರಮಿಸೆ ಪೀಡಿತಮೆಂಬ ಕರಣಂ (ಕಾಮಶಾ. ೨೩೬). [ಸಂ.]

**ಪೀಡಿತಕ** (ನಾ). – ಪೀಡಿತ ೫ : ಸವಡಿದುಟವಿಡಿದು ನಲ್ಲಂ ತವಕದಿ ನಂಗುಷ್ಠ ತರ್ಜನಿಗಳಿಂ ಸೊಗಸುಣ್ಬುವಿನಂ ತೊಡರ್ದೊತ್ತೆಂಬರೆ ಸವಿಯೆಲ್ ಪೀಡಿತಕಚುಂಬನಂ ತಾನೆನಿಕುಂ (ಮಸ್ಮಿ. ೧೨-೧೧). [ಸಂ].

**ಪೀಡಿಸು** (ಕ್ರಿ). ೧. ನೋಯಿಸು; ಬಾಧೆಗೊಳಿಸು : ಅಪಥ್ಯದ ಲುಂಬವನ ವ್ಯಾಧಿಗಳ್ ಪೀಡಿಸುವುವು (ಹುಕಕಂ. ೦೬೮-೧೧); ಸರಸಿಜಾಕ್ಷನೆ ಸರಸ ನೀನಾದರೆ ದುರಿತಗಳೆನ್ನನು ಪೀಡಿಪುದುಂಟೆ (ಪುರಂದ. ೨-೬೦-೨); ಕಿಚ್ಚುಗಣ್ಣನ ತಪವಳಿವುದು ಪೂಗೋಲೊಳೆಚ್ಚು ಮನ್ಮಥ ಪೀಡಿಸಲು (ಸೋಹಕ. ೫-೦೯) ೨. ಕಾಡು; ಕಾಟ ಕೊಡು : ಮನುಷ್ಯರ ಹಿಡಿದು ಪೀಡಿಸಿ . . . ಈಡಾಡಿದ ಕೂಳಿಂಬಲಿಯನಾಯ್ದು ಕುಱುಕುವ ಹೇಸಿ ದೈವಂಗಳ ಬೇಡಿ ಬೇಡಿ ನಿರರ್ಥಕ ಕೆಡಬೇಡ ಎಲವೋ (ಬಸವ. ೫೫೬); ಪುರುಷಪರಮೇಶ್ವರನ ಕಾಲಂ ಹಿಡಿದು ಬಿಡದೆಲ್ಲರ್ಗೆ ಪಲವು ದೇಶಂಗಳಂ ಕೊಟ್ಟರಿ ನಮಗೆ ಕಿಱಿದು ನಾಡಂ ಕುಡಿವೆಂದು ಬೇಡಿ ಪೀಡಿಸುತ್ತಿರಲು (ಶುಕ್ಸಸ್ರ. ೧೧-೨೦೩) ; ಪುಟ್ಟಿಸಬೇಡೆಲೊ ದೇವ . . . ಪರರ ಪೀಡಿಸಿ ತಿಂಬ ಪಾಪಿಜೀವನವ (ಪುರಂದ. ೦-೦೬೮-೦). ೩. ಹಿಸುಕು ; ಹಿಂಡು ; ಒತ್ತು : ನೆಟ್ಟನೆ ಮೊಗ ನೋಡಿ ಮುದ್ದಿಪ ತರಳನ . . . ಬಾಯೊಳ್ ಬಾಯನಿಟ್ಟು ಗಲ್ಲವ ಪೀಡಿಪಳು (ಸೋಹಕ. ೧೧-೫೬); ಶೌಗೊಂಡೆನ ಪೀಡಿಸಬೇಡ ಕಡುಶೈತ್ಯವಕ್ಕೆಯೊಳಿರಿಸಿ (ಸೋಹಕ ೨೬-೫೯).

[ಪೀಡನ + —ಇಸು]

**ಪೀಡಿಸುಹ** (ನಾ). ಕಾಡುವಿಕೆ; ಪೀಡನೆ : "ಅಭಿಯೋಗಃ—ಪೀಡಿಸುಹಂ" (ಶೀಶಿಶಾ. ೦೬-೫೬). [ಪೀಡಿಸು + —ಹ (<—ವ)]

**ಪೀಡೆ** (ನಾ). ೧. ನೋವು; ಬಾಧೆ : "ಆಬಾಧಾ, ವೇದನಾ, ದುಃಖಂ, ಆರ್ತಿಃ, ಪೀಡಾ, ವ್ಯಥಾ—ಈ ೬ ದುಃಖಂ" (ಕರಾಯು. ೦೦೩-೪) ಜ್ಞಾನಮಯಂ ತೇಜೋನಿಧಿ ತಾನಿರ್ದುಂ ತಾಯ ಗರ್ಭದೊಳ್ ಪೀಡೆಯು, ನಂತೇನಂ ಮಾಡಿದನಿಲ್ಲ (ಆದಿಪು. ೬-೩೨); ಇಂದು ಹಿಂಗಿದುವೆಮ್ಮ ಪೀಡೆ [ಪಾಠಾಂ. ದೇಸೆ, ಸೇದೆ]ಗಳಿಂದು ಸಾರ್ದುವು ಸಯ್ಪು (ಕಾವ್ಯಪ. ೩೬೫). ೨. ಕಾಟ ; ತೊಂದರೆ : ಪುಣ್ಣನಂತೆ ನೋವಂ ಮಾಟ್ಪುದು ಗ್ರಹದಂತೆ ಪೀಡೆಯಂ ಮಾಟ್ಪುದು (ಧರ್ಮಾಮೃ. ೪-೦೬೫) ; ಸದಾಶಿವನಿಗೆ ಅಣ್ಣನ ಪೀಡೆಯೆ ಅಧಿಕ (ತ್ಯಾಗಬು. ೦೬೫) ; ಸದ್ಯಕ್ಕಂತೂ ಪೀಡೆ ತಪ್ಪಿತಲ್ಲ! (ಕಲ್ಪಹೂ. ೮೩). ೩. ಅರಿಷ್ಟ ; ಅನಿಷ್ಟ : ವೆಂಕಮ್ಮ . . . ಪೀಡೆ ತಪ್ಪಿತು ಎಂದು ಬಾಯಿ ಬಿಟ್ಟು ಹೇಳಿದ್ದರು. ಆದರೆ ಪೀಡೆ ಅಷ್ಟು ಸುಲಭವಾಗಿ ತೊಲಗಿರಲಿಲ್ಲ (ಕನ್ಯಸ. ೫೦); ತನ್ನ ತಂದೆ ತಾಯಿಗಳನ್ನು ಕಳೆದುಕೊಂಡ ಈ ಘೋರ ಅನಿಷ್ಟವಾಗಿಯೇ ಅವಳಿಗೆ ಕಾಣುತ್ತಿದ್ದ. ಅದರಿಂದ ಇದೊಂದು ಪೀಡೆ ಎಂದೇ ಅವಳ ಭಾವನೆ (ಹೂಸಕ್ಕಿ. ೨೬). ೪. ಕಾಡುವ ವ್ಯಕ್ತಿ ; ಗೋಳಂ ಹೊಯ್ದುಕೊಳ್ಳುವ ವ್ಯಕ್ತಿ : ಕೋಡಿಗಾಟಿಸಿ ಕಾಡಿ ಬೇಡುವ ಪೀಡೆ ವೇಶ್ಯಾಮಾತೆ ದಿಟ್ಟಿಸಿ ನೋಡಿ ಅಳಿಯನ ಕೂಡೆ ತಾನಿಂತೆಂದಳಣಕದಲಿ (ಭಗಪು. ೪೨-೬); ನಾವು ಇಂತಹ ಪೀಡೆಯನ್ನು ಎಂದೂ ನೋಡಲಿಲ್ಲ (ಮುಕಿಪಾ. ೫೮); ೫. ಪಿಶಾಚಿ : ಭೂತ. ೬. ಹಾಳು; ನಾಶ : ಧ್ವಂಸ. ೭. ಅಡ್ಡಿ : ತಡೆ. ೮. ಒಂದು ಬಗೆಯ ಮರ; ಸರಳದೇವದಾರು.

**ಪೀಡೆ ಕೊಡು** — ತೊಂದರೆಯನ್ನು ಕೊಡು ; ಬಾಧೆಯನ್ನುಂಟುಮಾಡು : ನೋಡಲಿಕ್ಕೆ ಬೈರಾಗಿಗಳ ಹಾಗೆಯೇ ಇದ್ದವರು . . . ಹಾಗೇತ ಜನರಿಗೆ ಪೀಡೆ ಕೊಟ್ಟವರಲ್ಲ (ಮೂಕಜ್ಜಿ. ೨೦೯). **ಪೀಡೆ ಮಾಡು**—

ಪೀಡಿಸಂ ; ತೊಂದರೆ ಕೊಡು : ಎರಡನೆಯವರಿಗಾದರೂ ನೀನು ಪೀಡೆ ಮಾಡಬಾರದು (ದುಂಬಿಯು. ೨-೪೪). [ಸಂ. ಪೀಡಾ]

**ಪೀಡೆಗೆಯ್** (ಕ್ರಿ). ತೊಂದರೆಗೊಳಿಸಂ ; ಬಾಧಿಸಂ ; ಪೀಡಿಸಂ : ಆಶ್ವಯುಜಕಾರ್ತಿಕದೊಳ್ ಪಿತ್ತಂ ಪೆರ್ಚುಗುಮಂತದು ಕುತ್ತಕ್ಕೆಡೆಯಾಗಿ ಪೀಡೆಗೆಯ್ಗುಂ ಹಯಮಂ (ಅಶ್ವಶಾ. ೬-೨೩). [ಪೀಡೆ + ಕೆಯ್$_1$]

**ಪೀಡೆಗೊಳ್** (ಕ್ರಿ). ತೊಂದರೆಯನ್ನು ಅನುಭವಿಸು ; ಬಾಧೆಪಡಂ : ಅಪ್ರಸ್ತುತವಾದ (ಅಚೇತನ) ಕಬ್ಬಿನ ಪರವಾಗಿ ಅರ್ಥವಾಡುವಾಗ 'ಪೀಡೆಗೊಂಡು' ಎಂಬ ಲಕ್ಷಾರ್ಥ ಸ್ಫುರಿಸುತ್ತದೆ (ಕೃಷ್ಣಾಕೋ. ೪೪ ಅಡಿ). [ಪೀಡೆ + ಕೊಳ್$_1$]

**ಪೀಧಿ** 'ಪೀಡಿ' ನೋ.

**ಪೀತ$_1$** (ನಾ). ೧. ಅರಿಸಿನದ ಬಣ್ಣ ; ಹಳದಿ : "ಪೀತಂ, ಹಾರಿದ್ರಂ— ಈ ೨ ಅರಿಸಿನದ ಬಣ್ಣಂ" (ಹಲಾಯು. ೦೨೦-೩೦); ಶುಕ್ಲ ರಕ್ತ ಪೀತ ಕೃಷ್ಣ ಎಂಬ ನಾಲ್ಕು ಬಣ್ಣಗಳಿಂದ ಜಾತಿವಿಭಾಗವೆಂದು ಮಹಾಭಾಷ್ಯದಿಂದ ತಿಳಿದುಬರುತ್ತದೆ (ಶೀಲಶಾ. ೦೩೬). ೨. ನವರತ್ನಗಳಲ್ಲಿ ಒಂದು ; ಗೋಮೇದಕ. ೩. ಗೋರೋಚನ. ೪. ಚಿನ್ನ ; ಬಂಗಾರ. ೫. ಒಂದು ಬಗೆಯ ಸಸ್ಯ ; ಹಳದಿಗೋರಂಟಿ : "ಪೀತಮಾ ಸಹಚರಿಯು ಕೆಂಪುಗೋರಟೆ" (ಕುಂಗಶಾ. ೩೬-೨೨). 'ಪೀತೆ' ಪರಿ. [ಸಂ. ಪೀತಾ]

**ಪೀತ$_2$** (ಗು). ಕುಡಿದ ; ಹೀರಿಕೊಂಡ : ಚಳಚ್ಛಾಮರವಾತಪೀತನಿಜಘರ್ಮಾಭಃಕಣಂ . . . ಇರ್ದನೆಂದು ಸುಖದಿಂ ವಿದ್ವಿಷ್ಟವಿದ್ರಾವಣಂ (ಶಂಕರಾ. ೩-೩೩). [ಸಂ.]

**ಪೀತಕ** (ಗು). ೧. ಅರಿಸಿನದ ಬಣ್ಣವುಳ್ಳ ; ಹಳದಿ ಬಣ್ಣದ. (ನಾ). ೨. ಜವೆಗೋಧಿ ; ಯವಧಾನ್ಯ : "ಯವಮದು ಪೀತಕಂ" (ಪದ್ಮಕೋ. ೪೪-೦೬). [ಸಂ.]

**ಪೀತಕಾಂತ** (ನಾ). ನವರತ್ನಗಳಲ್ಲಿ ಒಂದು ; ಪುಷ್ಯರಾಗ : "ಪೀತಕಾಂತಮೆನೆ ಪುಷ್ಯರಾಗಂ" (ಮಂಗರಾ. ೩೦-೩). [ಸಂ.]

**ಪೀತಗಂಧ** (ನಾ). ಹಳದಿಬಣ್ಣದ ಚಂದನ : "ಮಾಧವಪ್ರಿಯಂ— ಪೀತಗಂಧ" (ಕಿಶಂ. ೦೨೩). [ಸಂ.]

**ಪೀತದಾರು** (ನಾ). ಒಂದು ಬಗೆಯ ಮರ ; ದೇವದಾರು : "ಚಕ್ರವಾದವಃ . . . ಪೀತದಾರು, ದಾರು, ಪೂತಿಕಾಷ್ಠಂ — ೭ ದೇವದಾರುವೃಕ್ಷದ ಹೆಸರು" (ಸಿದ್ಧಾಂತಿ. ೦೨೪); ಪರ್ವತಗಳಲ್ಲಿ ಸಿಕ್ಕುವ ಪೈನ್ ಎಂಬ ಪೀತದಾರುವಿನಿಂದ ಸೊಗಸಾದ, ಮೃದುವಾದ ಮರ, ದಿಮ್ಮಿ, ರಾಳ (Resin) ಸಿಕ್ಕುತ್ತವೆ (ಕೂಂಶ. ೨೬೩). [ಸಂ.]

**ಪೀತದ್ರು** (ನಾ). ೧. ಒಂದು ಬಗೆಯ ಮರ ; ಸರಳವೃಕ್ಷ : "ಸರಳಂ ಪೀತದ್ರು ಪೂತಿಕಾಷ್ಠ ತರುವಕ್ಕುಂ" (ಪದ್ಮಕೋ. ೩೬-೨೦). ೨. ಒಂದು ಬಗೆಯ ಮರ ; ಹರಿದ್ರೆ : "ಪೀತದ್ರುಃ . . . ಪರ್ಜನೀ — ೭ ಮರದರಿಸಿನ . . . ಕಾಡುಅರಿಸಿನ" (ಸಿದ್ಧಾಂತಿ. ೦೩೫). [ಸಂ.]

**ಪೀತನ** (ನಾ). ೧. ಒಂದು ಬಗೆಯ ಮರ ಮತ್ತು ಅದರ ಕಾಯಿ ; ಅಮಟೆ : "ಪೀತನಃ, ಕಪೀತನಃ, ಆಮ್ರಾತಕಃ—೩ ಅಂಬಟೇಗಿಡದ ಹೆಸರು" (ಸಿದ್ಧಾಂತಿ. ೦೦೬). ೨. ಕುಂಕುಮಕೇಸರಿ ; ಕೇಶರ. [ಸಂ.]

**ಪೀತನಕ** (ನಾ). = ಪೀತನ ೧ : "ಆಮ್ರಾತಕ ಪೀತನಕಂ" (ಪದ್ಮಕೋ. ೩೩-೩). [ಸಂ.]

**ಪೀತಪುಷ್ಪ** (ನಾ). ಹಾಗಲ ಬಳ್ಳಿ : "ಹಾಗಲು ಪೀತಪುಷ್ಪ" (ಕುಂಗಶಾ. ೪೪-೪೪). [ಸಂ.]

**ಪೀತಫೇನ** (ನಾ). ಅರಿಟಾಳದ ಮರ ; ಅಂಟುವಾಳ : "ಅರಿಟಾಳ ಮದರಿಷ್ಟಕಂ ಪೀತಫೇನಮೆನಿಸಕ್ಕು" (ಮಂಗರಾ. ೪೨-೩೪). [ಸಂ.]

**ಪೀತಲ, ಪೀತಳ** (ನಾ). ೧. ಅರಿಸಿನದ ಬಣ್ಣ ; ಹಳದಿ : ಪೊಸಮಳೆಯಲ್ಲಿ ಮಿಂದ ಪ್ರಕೃತಿ . . . ಪೀತಲ ಪೀತಲತರವಾಗಿ ಶೋಭಾಯಮಾನವಾಗಿತ್ತು (ಕುಹಂ. ೪೬೬). ೨. ಒಂದು ಬಗೆಯ ಲೋಹ ; ಹಿತ್ತಾಳೆ. ಪೀತಳ : ೧. ಬರೆವುದಂತೆ ಕರ್ಣಿಕೆಯಂ ಪೀತಳಸಿತರಸದಿಂ (ಕಾಲಾಕ್ಷ. ೪-೦೭-೦೪). [ಸಂ.]

**ಪೀತವಸನ** (ನಾ). ೧. ಪೀತಾಂಬರ ; ಪಟ್ಟೆವಸ್ತ್ರ : ಉಟ್ಟು ಮಲ್ಲಿಗಚ್ಚೆಯ ಪೀತವಸನಮಂ, ತಿರುಗುತಿರೆ ಚಿತ್ರಾಂಗಿ, ಕಾನನದ ರಾಣಿ ತಾನೆಂಬವೊಲ್ (ಚಿತ್ರಾಂಗ. ೩-೩೪). ೨. ಪೀತಾಂಬರವನ್ನುಟ್ಟವನು; ಪೀತಾಂಬರಧಾರಿ: ಪೀತವಸನಂ . . . ಉಪೇಂದ್ರಂ ದುರ್ಜಯಂ ರಾಮಚಂದ್ರನ ಪಿಂದಂ ನಡೆತಂದನಾಯತಸಿತಾಂಭೋಜೇಕ್ಷಣಂ ಲಕ್ಷ್ಮಣಂ (ಕಂಠಾಷು. ೬-೭೬). [ಸಂ.]

**ಪೀತವಾಸ** (ನಾ). ೧. ಹಳದಿಯ ರೇಷ್ಮೆಬಟ್ಟೆ ; ಪೀತಾಂಬರ. ೨. ಪೀತಾಂಬರಧಾರಿ ; ವಿಷ್ಣು : "ವಿಷ್ಣುಃ . . . ಪೀತವಾಸಾಃ . . . ಗದಾಧರಃ — ಈ ೪೫ ನಾರಾಯಣನ ಹೆಸರು" (ಹಲಾಯು. ೩-೨೨); ಪೀತವಾಸಃ ಕೃಷ್ಣನಾಗಿ ಕಿರಾತನೆಚ್ಚ ನಿಶಾತಶರನಿರ್ಘಾತಪಾತದಿ ಮಡಿದನಲ್ಲಾ ಭೂತಳಾಗ್ರದೊಳು (ಬಸವಪು. ೫೪-೩೪); ಧೃತ ಕೌಸ್ತುಭೋದ್ಭಾಸನಂ ಪೀತವಾಸನಂ ನುತಸಮಸ್ತಾಭರಣನಂ ಪುಣ್ಯಚರಣನಂ ಕಲಿಸುಧನ್ವಂ ಕಂಡನು (ಕೃಷ್ಣಾಜು. ೦೩-೨೬). [ಸಂ. ಪೀತವಾಸಸ್]

**ಪೀತಸಾರ** (ನಾ). ೧. ಹೊನ್ನೆಮರ : "ಪೀತಸಾ(ಲ)ರಃ, ಅಸನಃ—ಈ ೨ ಹೊನ್ನೆ" (ಹಲಾಯು. ೩೩-೪೬). ೨. = ಪೀತಗಂಧ. ೩. ಗೋಮೇದಕ. [ಸಂ.]

**ಪೀತಸಾಲ** (ನಾ). = ಪೀತಸಾರ ೧ : "ಪೀತಸಾ(ಲ)ರಃ, ಅಸನಃ — ಈ ೨ ಹೊನ್ನೆ" (ಹಲಾಯು. ೩೩-೪೬). [ಸಂ.]

**ಪೀತಸಾಲಕ** (ನಾ). = ಪೀತಸಾರ ೧ : "ಪೀತಸಾಲಕಃ, ಸರ್ಜಕಃ . . . ಜೀವಕಃ—೭ ಹೊನ್ನೇಮರದ ಹೆಸರುಗಳು" (ಸಿದ್ಧಾಂತಿ. ೦೨೨). [ಸಂ.]

**ಪೀತಳ** 'ಪೀತಲ' ನೋ.

**ಪೀತಾಂಬರ** (ನಾ). ೧. ಹಳದಿಬಣ್ಣದ ಬಟ್ಟೆ. ೨. ಪಟ್ಟೆವಸ್ತ್ರ ; ರೇಷ್ಮೆಯ ಬಟ್ಟೆ : ನವನೀಲೋತ್ಪಲಸನ್ನಿಭಾಂಗರುಚಿಯಿಂ ಸನ್ಮಿಂಚಿ ರಾತೋದ್ಗಮಚ್ಛವಿಪೀತಾಂಬರಕಾಂತಿಯಿಂ . . . ಚಿಲ್ವಾದನಮೋದರಂ (ಜಗಂ. ೦-೪೪); ಕಂಸಾಂತಕಂ . . . ಜಗುಳ್ದ ಪೀತಾಂಬರವನು ಅಂಸದೊಳ್ ಸಾರ್ಚುತ್ತೆ ಪರೂಥಮನಿಳಿದು . . . ಐತಂದನು (ಕೃಷ್ಣಾಜು. ೦೪-೨೩). ೩. (ಬೆಲೆ ಬಾಳುವ) ರೇಷ್ಮೆಯ ಸೀರೆ : ಬಣ್ಣಬಣ್ಣದ ಪಟ್ಟುವಸ್ತ್ರ ಪೀತಾಂಬರಗಳೂ, ಕುದುರೆ ಒಂಟೆ ಆನೆಗಳ ಮೇಲೆ ಹೇರಿ ಹೇರಿ ಬಂದುವು (ಕಾಂತರಾ. ೦೦೦). ೪. (ಹಳದಿಯ) ಪಟ್ಟೆವಸ್ತ್ರವನ್ನು ಧರಿಸಿದವನು ; ವಿಷ್ಣು : "ಶ್ರೀವತ್ಸಂ . . . ಪೀತಾಂಬರಂ ಚಕ್ರಭೃದ್ವೇಷ್ಟಿವಿಂದಂ" (ಪದ್ಮಕೋ. ೪-೨೨) ; ಸ್ಫುರಿತೋದ್ಯತ್ಕನಕಪ್ರಭಾಪ್ರಸರದಿಂ ಪೀತಾಂಬರಂ ಪದ್ಮವಿಷ್ಟರದಿಂ ಪಂಕಜವಿಷ್ಟರಂ ನವವಿನೇಯವ್ರಾತಚೇತಸ್ತಮೋಹರನಾಗಿ ದುರ್ದಮಜಂ ಹರಂ ಭವಹರಂ (ಅಂತಪು. ೦೩-೩) ; ಮಧುರಾಪುರದ ಪೊಚಪೊಟಲೊಳ್ ಪೀತಾಂಬರನಿರ್ದಂ (ಜಗಂ. ೯-೨೬). ೫. [ಜೈನ] ವಾಸುದೇವ : ಪರಾಭವಿಸಿದಂ . . . ಸುರೇಂದ್ರಧನು ಮೂಡಿದಂಬರಮನಂದು ಪೀತಾಂಬರಂ (ಕಂಠಾಷು. ೩-೦೦೦). [ಸಂ.]

**ಪೀತಾಂಬರಧರ** (ನಾ). = ಪೀತಾಂಬರ ೪ : ಪೀತಾಂಬರಧರನಂ ಪುರುಹೂತಶಿಲೀಮುಖಿಕಾಯಮೆಳಗಿದುದು (ಜಗಂ. ೦೩-೯೦). [ಸಂ.]

**ಪೀತಾಂಬ್ರ** (ನಾ). = ಪೀತಾಂಬರ ೩ : ಪೀತಾಂಬ್ರ ೧೯೩, ತಟ್ಟು ಸೆಜುಗು ಲತೆ ಹೂಗಳು ಸಹಾ ತೂಂಕ ೧೧೯೭೪ ವಿವರ (ಶಾಸನ. IX-೩೧, ೫೬೬-೩ : 1682). [< ಪೀತಾಂಬರ ]

**ಪೀತಾಂಶುಕ** (ನಾ). ೧.=ಪೀತಾಂಬರ ೪. ೨. ಹೊಂಬಣ್ಣದ ಕಿರಣಗಳುಳ್ಳವನು; ಅಗ್ನಿ. ೧, ೨: ದಂತವಕ್ತ್ರಂ ನಿಸರ್ಗವೈರದಿಂದ ಸುರವೈರಿಯು ಪೆಸರ್ಗೆ ತನಗಸಹ್ಯಂಗಳಾಗೆ ಹರಿನಾಮಯುಕ್ತನೆಂದು ಶಕ್ರ ಕೊಪ್ಪ್ರಾವಿಸಿಯುಂ ಪೀತಾಂಶುಕನೆಂದು ಪಾಪಕನಂ ಮೂವೀದಿವಡಿಸಿಯುಂ . . . ಕಾಳಿಯಸರ್ಪದರ್ಪದಳನನದಿರದಿದಿರೊಳ್ ಕಂಡು (ಜಗಚ. ೯-೫೩ ವ).
[ಸಂ.]

**ಪೀತೆ** (ನಾ). ೧. ಅರಿಸಿನ: "ಪೀತಾಭಿಖ್ಯಂ ಹರಿದ್ರ" (ಕಸ್ತುಕೋ. ೩೬-೨೫). ೨. ಒಂದು ಬಗೆಯ ಗಿಡ; ಹಳದಿಗೋರಂಟೆ: "ಪೀತಾ, ಸಹಚರೀ—ಈ ೨ ಹೊಂಬಣ್ಣದ ಗೋರಂಟೆ" (ಹಲಾಯು. ೩೪-೫೨). [ಸಂ. ಪೀತಾ]

**ಪೀನ** (ಗು). ೧. ದಪ್ಪವಾದ; ಪುಷ್ಪವಾದ; ಸ್ಥೂಲವಾದ: ಉತ್ತುಂಗಪೀನನಿತಾಂಸಾರ್ಪಿತಲಂಬಹಾರನವನಾ ಪಾಂಡ್ಯ (ಶಂಕರಾ. ೩-೫೪); ಆ ನೃಪವೀರನುರಸ್ಥಳಕ್ಕೆ ಲಕ್ಷ್ಮೀವಧು ಪೀನಬಾಹುಯುಗಳಕ್ಕೆ ಜಯಾಂಗನೆ ತನ್ಮುಖಕ್ಕೆ ವಾಕ್‌ಶ್ರೀವಧುವಾಗಿ ರಂಜಿಸಿ ಮಹೋನ್ನತಿಯುಂ ಪಡೆವುದ್ಯ ಕೀರ್ತಿಲೀಲಾವತಿಯೆಂದು ಬಣ್ಣಿಪುದು ಲಚ್ಚಲದೇವಿಯುನೀ ಜಗಜ್ಜನ (ಎಕ. XIII, ೦೨೧-೨೩; 1066); ಈ ಸುದೃಢಪೀನಪಯೋಧರಂಗಳ್ಗೀ ತೆಱನ ಕಂಪನವೇತರ್ಕಾಯ್ತು? (ಅಚಪು. ೦೯-೩೦). ೨. ದೊಡ್ಡ; ಘನವಾದ; ಮಹತ್ತಾದ: ಶಿವದಾಸಿಯರು ವಳ್ಳಿಪದಂಗೆ ನೇಮಿಸಲು . . . ಕರೆದು ತಂದನು ಪೀನ[ಪಾಠಾಂ. ದಾನಿ]ಶಿವಶರಣವ್ರಜವನನುಮಾನಿಸದೆ ಗಂಗೆಯನು ಭಗಿರಥ ಕೊಂಡು ಬಂದಂತೆ (ಶಿಲೀಲಾ. ೬-೨೪). (ನಾ). ೩. ದೊಡ್ಡದು; ಸ್ಥೂಲವಾದುದು: "ಬಹುಳಃ, ಸ್ಥೂಳಃ, ಪೀನಃ, ಪೀವಾ, ಪೀವರಃ—ಈ ೫ ದೊಡ್ಡ(ದು)" (ಹಲಾಯು. ೫೬-೧೯೬); ಆ ನಗಚರಯುಗಮಲ್ಲಿಯುಮಾ ನಗದೊಳೆ ಇರ್ಲ್ಲೀರ್ದ ಸಲಿಲನಿಮಿತ್ತಂ ಪೀನಂಗಳ್ ಕಾದಲ್ ಸಲೆ ಕೀನಾಶನಿವಾಸಮೆಯ್ದಿ ಕೊಂದಾಕ್ಷಣದೊಳ್ (ಶೀಬಾಪು. ೩-೬೪). ೪. ದಪ್ಪವಾಗಿರುವವನು; ಸ್ಥೂಲಕಾಯ: "ಪೀವರನೆನಲ್ ಸ್ಥೂಲನೆನೆ ಬಹುಲನೆನೆ(ಪೀನನೆನೆ) ದೊಡ್ಡಿತಪ್ಪವನೆನಿಕ್ಕುಂ" (ಶಬ್ದಮ. ೩೯-೦೦).
[ಸಂ.]

**ಪೀನಂ** (ಅ). ಅಧಿಕವಾಗಿ; ವಿಶೇಷವಾಗಿ: ಹೆಚ್ಚಾಗಿ: ಪೀನಂ ಲಲಾಟಾಗ್ರದೊಳ್ ನೆಲೆಗೊಂಡೊಪ್ಪುವ ವೀರಪಟ್ಟಪಾದಯುಂಗೆಯ್ವೆಂದುಪಂ . . . ಗೆಲೆ ಪೋಲ್ತುತ್ತು ತಳಪ್ರಹಾರಿಯ ಶಿರಂ ಹೇಪಾದ್ರಿಯಾಕಾರಪಂ (ಕಾವ್ಯಸಾ. ೫೨೫ ಸೂಕ್ತ೪); ಅಲಸದೆ ಪೀನಂ ಪದೆಯದೆ ಪಾಂಗಱಿದು ದೋಷಪಮಂ ಪಿಂಗಿಸಿ ತಪ್ಪದೆ ಬಗೆದು ಪೇಟ್ವುದು (ಶಂಸಾ. ೧-೪೪); ಲಯಪಿಂ ಕರ್ಮತಮಸ್ತಮಕ್ಕೆ ಜಯಮಂ ಧರ್ಮಕ್ಕೆ ಪೀನಂ ಪರಾಜಯಮಂ ದೋಷಗಣಕ್ಕೆ ಲಕ್ಷ್ಮೀತೆಱದಿಂ ಮುಂ ಮಾಡಿ ಸರ್ವಾರ್ಥಸಿದ್ಧಿಯನೀಯಲ್ಕೆ . . . ಬಗೆದಂ ಸಂಸಾರಸಾರೋತ್ತಯಂ (ಅರಪು. ೬-೧೦೪), ಮಾನಸದ ಸಲ್ಮೆಯಾಗಂ ಮಾನಸರ್ಗಪವರ್ಗಸುಖಮನದಱೀವ ಗುಣಂ ಪೀನಂ ಪೆರ್ಚುಗುಮಮಲ ಗುಣಾನೀಕವಿಭೂಷರೊಳ್ ಸಮಾಗಮದಿಂದಂ (ಪೀಠಿಬು. II. ೩೦೪).
[<ಪೀನ]

**ಪೀನಕ್ಷು** (ನಾ). ೧. ಡೊಳ್ಳುಹೊಟ್ಟೆ. ೨. ದೊಡ್ಡಹೊಟ್ಟೆಯವನು; ಮಹೋದರ: ಪೀನಕ್ಷು . . . ಕಾನಿಂಗಿತಜ್ಞನುಂ ವಿಜ್ಞಾನಹಿತಂ ಶೌಚ . . . ಪೀಠವರ್ಧನನೆನಿಕುಂ (ಸುಕಶಿ. ೦೦-೪೦). [ಸಂ.]

**ಪೀನಸ** (ನಾ). ೧. ಶೀತಬಾಧೆ; ನೆಗಡಿ: "ಪೀನಸಮೆನೆ ನೆಗಡಿ ತಾಂ ಪ್ರತಿಶ್ಯಾಯಂ" (ಪಸ್ತುಕೋ. ೬೩-೫೫); ನಲ್ಲಲರ ಕಂಪು ಪೀನಸದಲ್ಲಿಂದಿದವಂಗೆ ಸೊಗಸದಿರೆ ಕೆಟ್ಟಪುದೇ (ಅಕ್ಕಟ. ೧-೦೬): ಗಂಧಕ, ಹುಲಿಯುಗುರು . . . ಅಜಮೂತ್ರದಲ್ಲಿ ಬೆರಸಿ ಅಟ್ಟು ನಸ್ಯಂಗೆಯ್ಯೆ ಪೀನಸ ಮಾಣ್ಗುಂ (ಅಶ್ವಶಾ. ೬೬); ಚಂಡಿಕೆಯು ಕೊಯ್ದುಡಾ ಶಿರಬೇನೆ ಬಿಡುವುದೆ ಪೀನಸದ ವ್ಯಾಧಿ ಮೂಗರಿದಡೂ ಬಿಡುವುದೆ (ಹರಿಪ. ೦೬-೨೮). ೨. ಮೂಗು ಕೊಳೆತು ಹೋಗುವ ಒಂದು ಬಗೆಯ ರೋಗ: ಹೂವುಗಳನ್ನು ಮೂಗಿಗೆ ತುಂಬಾ ಹತ್ತಿರದಲ್ಲಿಟ್ಟುಕೊಂಡು ಮೂಸಿ ನೋಡಿದರೆ ಪೀನಸ ಬರುತ್ತದೆಂದು ಹೇಳುತ್ತಾರೆ (ಜಾಪ್ರ). [ಸಂ.]

**ಪೀನಸರೋಗ** (ನಾ).=ಪೀನಸ ೨: ಪ್ರೀತಿಭೇದನಗಳು ಮಾತು ತಪ್ಪಿದವಗೆ ಪೀನಸರೋಗ (ಕವಕ. ೦೪೨-೨); ಪೀನಸರೋಗದವರು . . . ವಿಷದರೋಗದವರು ಇವರಿಷ್ಟೂ ವಮನಯೋಗ್ಯರೆಂದರಿವುದು (ಸಕವ್ಯ. ೨೫).
[ಸಂ.]

**ಪೀನಸಿ** (ನಾ). ೧. ನೆಗಡಿ ಬಂದವನು: ಗಂಧಕ ಪೀನಸಿಯು ಸಂಪದವ ನೊಂದಿಸಿ ರಸದ ಬಳಿಕೆಗೆ ಹವಳದಿಂದವೆ ಕಾಷ್ಠಜಿಹ್ವೆಯು ತೆರನನನುವಿಡಿದು (ಗಗಚಾ. ೦೬-೦೦). ೨. ಪೀನಸರೋಗದಿಂದ ಬಳಲುವವನು.
[ಸಂ. ಪೀನಸಿನ್]

**ಪೀನಾರಿ**₁, ಪೇನಾರಿ (ನಾ). ಒಂದು ಬಗೆಯ ಮರ: ಪೇನಾರಿಮರ, ಪೀನಾರಿ, ಪಾತಾಳಮರ, ಭೇತಾಳ, ತೊಕಡಕನ ಮರ, ಭೂತಾಳ (ವ್ಯಕೋ. ೬೨-೦೪೬೨). **ಪೇನಾರಿ**: ಪೇನಾರಿಮರ . . . ತೊಕಡಕನ ಮರ, ಭೂತಾಳ (ವ್ಯಕೋ. ೬೨-೦೪೬೨).
[ದೇ.॥ ತಮಿ. ಪೀನಾಱಿ; ಮಲ. ತುಳು. ಪೀನಾರಿ]

**ಪೀನಾರಿ**₂ (ನಾ). ಜಿಪುಣ; ಜೀನ; ಕೃಪಣ: ನನ್ನ ಭಾವ ಆಸೆಯ ಪೀನಾರಿಯಲ್ಲ. ಅವನು ಮಡಕೇರಿಯಲ್ಲಿ ದೊರೆಯುವ ಬಳ್ಳನ್ನೆಲ್ಲ ತಂದು ಗುಡಾಣಗಳಲ್ಲಿ ತುಂಬಿಸಿಟ್ಟಿದ್ದಾನೆ (ಹುಂಹಾ. ೨೨೫). 'ಪಿಸನಾರಿ' ಪಠಾ.
[←ತುಳು. ಪೀನಾರಿ]

**ಪೀನಾಶಿ, ಪಿನಾಶಿ, ಪಿನಾಸಿ** (ನಾ). ಮೂಗು ಕೊಳೆತು ಹೋಗುವ ಒಂದು ಬಗೆಯ ರೋಗ: ಪೂಜೆಗೈಯುವ ಪುಷ್ಪಗಳನು ಸೋಜಿಗದಿ ತಾ ಮೂಸಿ ನೋಡಿದ ಮೂಜಗದಿ ಪೀನಾಶಿವೊಂದುವನು (ಸಾಶಂಗ. ೨೦). **ಪಿನಾಶಿ**: ವಾಸನೆಯುಳ್ಳ ಹೂವುಗಳನ್ನು ಮೂಸಬೇಡ. ಪಿನಾಶಿ ಬರುತ್ತದೆ (ಜಾಪ್ರ). **ಪಿನಾಸಿ**: ಪೀನಸ ಎಂಬುದನ್ನೇ ಕೆಲವರು ಪಿನಾಸಿ ಎಂದು ಹೇಳುತ್ತಾರೆ (ಜಾಪ್ರ). [<ಪೀನಸ]

**ಪೀನಾಸಿ** (ನಾ). ೧. ದುರಾಸೆಯುಳ್ಳ ವ್ಯಕ್ತಿ: ಏನೇನ ತಂದರು ಸಾಲದೆ ಮಂಗಳೊಳು ಪೀನಾಸಿಯಿರಗೊಡಲೆಂದು ಆನೆಯ ಮುಂದಕೆ ಮುದಿಸೂಳೆಯ ನೆತ್ತಿ ತನಿಟ್ಟು ಸುಖದೊಳಗಿಹನು (ಬ್ರಹ್ಮಕ. ೦೪-೪೬). ೨. ಅತಿಯಾಗಿ ಕಾಡುವ ವ್ಯಕ್ತಿ: ಆ ಪೀನಾಸಿ ತನಗೆ ಬರಬೇಕಾದ ಹಣ ವಸೂಲು ಮಾಡುವುದರಲ್ಲಿ ತುಂಬಾ ಗಟ್ಟಿಗ (ಜಾಪ್ರ). 'ಪೀನಾರಿ₂' ಪಠಾ. [?]

**ಪೀನೋದರ** (ನಾ). ೧. ದೊಡ್ಡ ಹೊಟ್ಟೆ; ಡೊಳ್ಳುಹೊಟ್ಟೆ. ೨. ದೊಡ್ಡ ಹೊಟ್ಟೆಯುಳ್ಳವನು; ಡೊಳ್ಳುಹೊಟ್ಟೆಯವನು: ದ್ರುತಯಾನೋತ್ಕಂಪಿಪೀನೋದರನಪನಿಪನೊಡ್ಡೋಲಗಕ್ಕೈದೆ ವಂದು ಪ್ರತಿಹಾರಂ (ಕಂದ್ರಶ. ೨-೬೪); ಚಂಚತ್ಕುಂಡಲಮಂಡಿತಂ ಗಶಿಚಲಕ್ಷ್ಮೀ ನೋದರಂ ದೀರ್ಘದೇಹಂ . . . ಬಂದು ಪ್ರತೀಹಾರಕಂ (ಅಜಿತ. ೫-೨೩).
[ಸಂ.]

**ಪೀನೋಧ್ನಿ** (ನಾ). ದೊಡ್ಡ ಕೆಚ್ಚಲುಳ್ಳ ಹಸು,-ಆಕಳು: "ಪೀನೋಧ್ನೀ, ಪೀವರಸ್ತನೀ—ಈ ೨ ಹೆಗ್ಗೆಚ್ಚಲಾವು" (ಹಲಾಯು. ೪೫-೧೦೦).
[ಸಂ. ಪೀನೋಧ್ನೀ]

**ಪೀಪ, ಪೀಪಾಯಿ, ಪೀಪು, ಪೀಪೆ** (ನಾ). ಮದ್ಯ, ಎಣ್ಣೆ ಮೊದಲಾದ ದ್ರವಪದಾರ್ಥಗಳನ್ನು ತುಂಬಿಡಲು ಬಳಸುವ, ಮರ ಅಥವಾ ಲೋಹದಿಂದ ಮಾಡಿದ ದೊಡ್ಡ ಆಕಾರದ ಸಾಧನ; ಡ್ರಮ್ಮು: ಹೇಸರಗತ್ತೆಯ ಮೇಲೆ ಬಾಗಿಯ ಹೇರು ಸಾಸಿರ ಗಂಗಸಾರಗಳ ಸೂಸುವ ಸಾರಾಯಿಪ ಪೀಪಗಳ ಲೆಕ್ಕವೀಸೆಂದು ಪೇಳ್ವರಾರದನು (ಕಂಪಾ. ೦೦-೩೬); ಕೆಲಕೆಲವದರ ಬೆಲೆಯು ಸಹ ಪೀಪಗಳ ಮೇಲೆ ಇಲ್ಲವೆ ಪೆಟ್ಟಿಗೆಗಳ ಮೇಲೆ

ಇರುತ್ತದೆ (ಮುಂಂಬಯಿ. ೨೩೬). **ಪೀಪಾಯಿ** : ಒಂದು ದೊಡ್ಡ ಪೀಪಾಯಿಯೊಳಗೆ . . . ನೀರು . . . ತುಂಬುತ್ತಾರೆ (ಮುಂಂಬಯಿ. ೪-೩೩); ಒಂದೊಂದು ಅಲೆಯೂ ಇವಳನ್ನು ಪೀಪಾಯಿಯಂತೆ ಎತ್ತಿ ಹಾಕುತ್ತಿದ್ದಿತು (ಚಕಚಕಾ. ೩೯೪). **ಪೀಪು** : ನೀರು ತುಂಬಿದ್ದೊಂದು ಪೀಪಿನೊಳಗೆ ಇಳಿದು ಕೊಡ್ರಬಾಗಿ (ಮುಂಂಬಯಿ. ೩-೬೬). **ಪೀಪೆ** : ಭೋಜನಸಮಾರಂಭವು ಮುಗಿಯಿತು. ಬೆಲೆಯುಳ್ಳ ಸಾರಾಯಿಗಳ ಪೀಪೆಗಳು ಹಾರಿ ಹೋದವು (ಬೀಶಬ. ೩೬). [ ← ಹಿಂ. ಪೀಪಾ; ಮರಾ. ಪೀಪ. / ಪೋರ್ಚು. pipa ]

**ಪೀಪರಿ** (ನಾ). = ಪೀಪಿ ೧ : ನಿನ್ನೆ ಸಂಜೆ ನಿನ್ನ ಒಟಿ ಪೀಪರಿ ಸಮನಾಗಿ ಕೇಳಿಸುತ್ತು ನನಗೆ (ಸ್ವಕ್ಷಕೂ. ೦೪). [ < ಪೀಪಿ ]

**ಪೀಪಾಯಿ** 'ಪೀಪ' ನೋ.

**ಪೀಪಿ** (ನಾ). ೧. ಪೀ ಪೀ ಎಂದು ಶಬ್ದ ಹೊರಡಿಸುವ, ಸೀಟಿಯಂತೆ ಊದುವ ಒಂದು ಸಾಧನ : ನಾರಾಯಣಸ್ವಾಮಿ ಆ ಕೊಳಲನ್ನು ಕೈಯಲ್ಲಿ ತೆಗೆದುಕೊಂಡು ಪರೀಕ್ಷೆ ಮಾಡುತ್ತ "ಇದು ಏನು ? ಪೀಪಿ ಅಲ್ಲವೇ ?" ಎಂದು ಕೇಳಿದ (ಇಂಕು. ೦೦೪). ೨. ನಾಗಸ್ವರ, ಶಹನಾಯಿ ಮುಂತಾದ ಊದುವ ವಾದ್ಯಗಳ ತುದಿಯಲ್ಲಿ, ನಾದವನ್ನು ಹೊಮ್ಮಿಸಲು ಸಿಕ್ಕಿಸುವ ಎರಡು ಚಪ್ಪಟೆಯಾದ ಬಿದಿರಿನ ಪಟ್ಟಿಗಳು : ಈ ವಾದ್ಯ ಸುಮಾರು ಎರಡು ಅಡಿಗಳಿಂದ ಎರಡೂವರೆ ಅಡಿಗಳ ಉದ್ದವಿದ್ದು ...ಚೂಪು ಕೊನೆಯಲ್ಲಿ ಈ ವಾದ್ಯಕ್ಕೆ ಪೀಪಿ (reed) ಸೇರಿಸಿರುತ್ತದೆ (ಸಂಗೀಸಂ. ೦೦೬). ೩. ಬಾಳೆ ಎಲೆ, ತೆಂಗಿನ ಗರಿಗಳನ್ನು ಸುತ್ತಿ, ನಾದ ಹೊಮ್ಮುವಂತೆ ಮಾಡಿದ ಸಂರುಳಿ : ನಸ್ಯದ ಡಬ್ಬಿ, ಬಾಳೆಎಲೆ ಪೀಪಿ ಇವುಗಳಿಂದ . . . ಆಳುವ ಮಕ್ಕಳನ್ನು ಸಮಾಧಾನ ಪಡಿಸುವ ಕೆಲಸ ಇವರ ಮೇಲೆ ಬಿದ್ದಿರುತ್ತ (ಬಾಲಗೀ. ೦೩೬). ೪. (ಅಲಂ) ಗಂಟಲು : ಆ ಸಂಗೀತಗಾರನ ಪೀಪಿ ಕುಗ್ಗಿಹೋಗಿದೆ (ಆಡು). [ ← ತುಳು. ಪೀಪಿ./ಹಿಂ. ಪೀಪಿಯಾ ]

**ಪೀಪು** 'ಪೀಪ' ನೋ.

**ಪೀಪೆ** 'ಪೀಪ' ನೋ.

**ಪೀಯೂಷ** (ನಾ). ೧. ಅಮೃತ ; ಸುಧೆ : "ಅಮೃತಂ, ತ್ರಿದಶಾಹಾರಃ, ಸುಧಾ, ಪೀಯೂಷಂ—ಈ ೪ ಅಮರ್ದಿನ ಪೆಸರ್" (ಬಲಾಭು. ೨೨-೦೩೩); ಆ ತ್ರಿದಶೇಜಯುಮಹೀಭುಜಂ . . . ಮುಕ್ತ್ಯಂಗನಾಭುಜಪಾಶಕ್ಕೊಳಗಾಗಿ ಪೀರ್ದನೊಲವಿಂ ತಪ್ಪತ್ಕೃಪೀಯೂಷಮಂ (ಶಂಪೂ. ೦೦-೬೨); ಶಿವಕಥಾಪೀಯೂಷಮಂ ಕರ್ಣದಿಂ ಸವಿವೃತ್ತಂ . . . ಪಥೂವಲ್ಲಭರ್ದಿರ್ದರುತ್ತವಯುತರ್ (ಬಾಚಿ. ೪-೬); ಮಾಯಿಸಿದರವನಂ ದಿವ್ಯೋಧುನಿಯು ಪೀಯೂಷಶೀರ್ಥದಿಂ (ಶ್ರೀಬಮಾ. ೦೮-೪೫೦). ೨. ಹಾಲು ; ಕ್ಷೀರ : ಜಗಮೆಲ್ಲಂ ... ಪೀಯೂಷದೆ ತಣಿದುದೊ ಬೆಳ್ದಿಂಗಳೊಳ್ ಸಂದುದೋ ಸಂದೆಗಮೇನೆಂಬಂತದೇಂ ಪರ್ಬಿದುದೋ ನೃಪನಕೀರ್ತಿಸ್ಫೂರ್ತಿಕೀರ್ತಿಪ್ರತಾನಂ (ಕುಕ್ಕುಕು. ೪-೦೪); ಭೈರವಾಂಕ . . . ಪೀಯೂಷದಲ್ಲೇಶಗಳಿಷೇಕವೆಚಿದ (ಕೈಕರ. ೪-೬೬). ೩. ಕರು ಹಾಕಿದ ಏಳು ದಿವಸಗಳೊಳಗಿನ ಆಕಳ ಹಾಲು ; ಗಿಣ್ಣುಹಾಲು : "ಪೀಯೂಷಃ, ಅಭಿನವಂಪಯಃ— ಈದ ೭ ದಿನಗಳ ಒಳಗಾಗಿ ಹಸುವಿನ ಗಿಣ್ಣುಹಾಲು" (ಸಿಶ್ವಾಂ. ೨೯೦). [ ಸಂ. ]

**ಪೀಯೂಷಪಿಂಡ** (ನಾ). ಒಂದು ಬಗೆಯ ಭಕ್ಷ್ಯ ; ಹಾಲುಂಡೆ : "ಪೀಯೂಷಪಿಂಡ[ಹಾಲು.ಪಿಷ್ಟ]ಮೆನೆ ಹಾಲುಂಡೆಯೆನಿಸಿಕ್ಕು" (ಮಂಗರಾ. ೬೪-೨). [ ಸಂ. ]

**ಪೀಯೂಷಹಸ್ತ** (ನಾ). ಅಮೃತಕಿರಣ ; ಚಂದ್ರ : ಈ ದೈತ್ಯಶತ್ರು ಮಹೀಭೃನ್ಮುತ್ತರ್ಣಿಕಾಕುವಳಯಕ್ಕಾ ತನ್ನ ಪೀಯೂಷಹಸ್ತಮೆ ತಾನಾಶ್ರಯಮೆಂದೊಡೇವೊಗಟ್ಟುದೋ ಶ್ರೀವೀರಬಲ್ಲಾಳನಂ (ಶಾಸಮಂ. ೦೪೪-೪೪೬ ; 1188). [ಸಂ.]

**ಪೀರ್**, **ಪೀರಂ**$_1$, **ಹೀರ್**$^1$, **ಹೀರು**$_1$ (ಕ್ರಿ). ೧. ಹಾಲು, ನೀರು ಮೊದಲಾದ ದ್ರವಪದಾರ್ಥಗಳನ್ನು (ಬಾಯಿಯಿಂದ) ಸೇದಿಕೊಳ್ಳು,—ಎಳೆದುಕೊಳ್ಳು : ಪೀರೆ ತವದುಣ್ಣುವ ಸೌರಭವೆಂದು ಪೀರ್ದು ಪೀರ್ದಪಚಳದೇಂ ತೆಱಂದಿರಿದು ಪಾಯ್ದುವೊ ಕೇತಕಿಯೊಳ್ ಮದಾಳಿಗಳ್ (ಆದಿಪು. ೦೦-೦೦೬); ರಕ್ತವರ್ಣದಿಂ ಕೂಡಿದ ಕಣ್ಗಳಿಂ ಶುಕನಿಕಾಯದ ಜೀವದುನೆಯ್ದೆ ಪೀರ್ವವೊಲ್ . . . ನೊಡಿದನಾ ಜರತ್ಪಬರನಾಯಕಂ (ಕಾದಂಪೂ. ೦೬೬); ಹಜ್ಜೆಗಟ್ಟಲೆಯಂ ತವೆ ಪೀರುತುಂ . . . ಬಂದುದಯಾದ್ರಿಯರ್ಪ್ರನೇಱಿದಂ (ಶಾಸುಶಾ. ೦೪-೨೦). ೨. ಆಸ್ವಾದಿಸು; ಚಪ್ಪರಿಸು ಸವಿ : ಪಾಲ್ಗೊರೆದ ನುಣ್ಚರಲಂ ಮೊರೆಗಿತ್ತು ಪೀರ್ದು ಕಣ್ಣೆಱೆಯದ ಕಂದನೆಂದೆನಗೆ ಕಣ್ಣೆಱೆಯಪ್ಪನೊ ಮಂದಹಾಸಮಂ (ಆದಿಪು. ೦-೦೦೦) ; ಪಥಿಕನೊರ್ವ ತರುಣಿಯ ಲಾವಣ್ಯರಸಮನಕ್ಷಿಗಳಿಂದಂ ಬರೆ ಪೀರ್ದು ದಣಿದು ಚಟ್ಟಿಯ ಪರಿಶ್ರಮುವನ್ಯಥಯನಱಿಯದಿರ್ದಂ ಸುಖದೊಳ್ (ಗಿಂಶ. ೨-೨೩) ; ಪೊಸಗಂಪೇಱಿದ ಬಿಂಬಫಲವ ಗಿಳಿ ಮಸಗಿ ಸುತಸದಿ ಪೀರ್ವಂತೆ (ಕುಂಶ. ೦೦-೯೦). ೩. ಕುಡಿ ; ಈಂಟು : ಜಿಗುಟಿಯಂತೆ ನೆತ್ತರನೆ ಪೀರ್ವ ಡಾಕಿನಿಯುರಿಂ . . . ರಣದೇವತೆಯು ರಿಂದತಿಭಯಂಕರಾಕಾರಮಪ್ಪುದು (ಕಾವ್ಯಶಾ. ೩೨೪ ಕೂಕ್ರತ್ಸ); ಯುವರಾಜನ ನೆತ್ತರಂ ಕುರುಧ್ವಜನಿಯಿ ನೋಡೆ ಪೀರ್ದು (ಶಂಶಶಾ. ೬-೩೨) ; ಹಂಸನಂತು ಪಾಲುಂ ನೀರುಂಮೆರಸಿದಲ್ಲಿ ನೀರಿರೆ ಪಾಲನೆ ಪೀರ್ಗುಂ (ಕಾವ್ಯಂ. ೬). **ಪೀರು**$_1$ : ೧. ನೀರಧಿಯು ಪೀರುವವೊಲ್ಬಕತಪ್ಪ ವಾರುತಿಯ ನಿಟ್ಟಸುತ ನಕ್ರಕೂರ್ಮಂಗಳಿಲ್ಲ ತೋರಭಯದಿಂದೊಂದನೊಂದೊರಸಿ ವಿತಳವಂ ಸಾರುತಿರಲು (ವಂಶಾಂ. ೩-೦-೨೬). ೩. ಅಂಬುಹಾರಗಳನೊಂದೆ ಗುಟುಕಿನೊಳ್ಪೀರಬೇಕು (ಶತಾಪು. ೪-೦೩-೨೦). **ಹೀರ್**$^1$ : ೨. "ಹೀರ್ (ಪೀರ್)— ರಸಾಸ್ವಾದನೇ, (ಭೂಷಣೇ ಚ)" (ಶಮಣ). **ಹೀರು**$_1$ : ೧. ತನ್ನನುದರದೊಳು ಗರ್ಭೀಕರಿಸಿಕೊಂಡಿರ್ದ ಮುನ್ನೀರನಾ ವಡಬಶಿಖಿ ಹೀರುವಂದದಿಂ . . . ಸನ್ನುತಗುಣಾಭರಣಭೂಷಿತಂಗಾ ದುಷ್ಟಮಹಾಸಂ ಕೇಡನೆಣಿಸಿ (ಸಮ್ಯಕ್. ೦೦-೩೪) ; ಬಣ್ಣದ ಚಿಟ್ಟೆ ಪುಷ್ಪದಿಂ ಪುಷ್ಪಕ್ಕೆ ಹಾರಿ ಬಂದನು ಹೀರಿ ಕಂಗೊಳಿಸುತಿರೆ (ಚಿನ್ನಂಗ. ೪-೬೪) ; ಹತ್ತಿನಾರು ತಕ್ಕ ಮಟ್ಟಿಗೆ ಬೇಗ ನೀರನ್ನು ಹೀರುತ್ತದೆ . . . ಬಣ್ಣಗಳನ್ನು ಚೆನ್ನಾಗಿ ಹೀರುತ್ತದೆ (ಗೃಹಾ. ೬೨). ೨. ಕರದಿ ತಣಿದಾಡಿ ಹೋದುದಿಲ್ಲಿ ನೆರೆ ದಿಙಂಹೆಗಳ ಹೀರಲೊಡೆದ ಹುತ್ತವಿದೆ (ಕೋಮಬುಶ. ೨-೩). ೩. ಘೋರ ಪಾತಕಿ ದುಃಶಾಸನನ ರಕುತವ ಹೀರಿ ಮುಗದಿ ಮಾರುತಿ ವೈರಿಯು ಭಜಿಸಿದ (ಕೃಶಂದ. ೦-೨೦೬-೨); ಮೊಲೆಯುಂಬಂದದಲಿ ಕೆನ್ನೆತ್ತರನು ಹೀರಿ ಹೀರೆ ... ಬೆದಱಿ ಪೂತನಿ ಪೋಯ್ತ್ತುದೃಶ್ಯದಲಿ (ಹಾಕ್ಯಾ. ೨೦-೯೦); ಕಾಲಕೂಟವ; ವಿನ್ನ ತುಟಿಗೊತ್ತಿ ಕಾಲಂ, ಜುಣುಗದಲ ಹೀರದಂ (ಗೀಶಿಂ. ೩೨೨-೪೩).

ಹೀರಿ ಹಿಪ್ಪೆ ಮಾಡು, ಹೀರಿ ಹಿಪ್ಪೆಯು ಮಾಡು—ನಿಸ್ಸಾರಗೊಳಿಸು ; ಸತ್ತ್ವಹೀನವಾಗಿಸು : ಗೂಢಚಾರರು...ನಮ್ಮ ದೇಶದ ಸಾರವನ್ನು ಹೀರಿ ಹಿಪ್ಪೆ ಮಾಡುತ್ತಿರುವರು (ಪಿಚಾಶ. ೬೪) ; ಅರಿರಾಯರುಗಳೆಂಬ ನವಧಪಳೇಕ್ಷುದಂಡವನು ತವಕದೆ ಹೀರಿ ಹಿಪ್ಪೆಯು ಮಾಡಿ (ಕುಂಶಂ. ೨೨-೦೨); ಮಾಯೆಯೆಂಬ ರಕ್ಕಸಿ ಸಕಲಪ್ರಾಣಿಗಳ ಸಾರವ ಹೀರಿ ಹಿಪ್ಪೆಯ ಮಾಡಿ (ಅಬಂಧೀ. ೦೩-೨೦).

[ದೇ.॥ ತುಳು. ಹೀರು; ತೆಲು. ಪೀರುಚು, ಪೀರ್ಚು, ಪೀಲುಚು]

**ಪೀರಖಾನಿ** (ನಾ). ಪೂರ್ವಕಾಲದಲ್ಲಿ ಬಳಕೆಯಲ್ಲಿದ್ದ ಹದಿನಾರು ಬಗೆಯ ರೂಪಾಯಿಗಳಲ್ಲಿ ಒಂದು ಬಗೆ : ಸನ್ ೧೮೪೮ರ ವರೆಗೆ ಹದಿನಾರುಪ್ರಕಾರದ ರೂಪಾಯಿಗಳು ನಡಿಯುತ್ತಿದ್ದವು. ಅವು— ಔರಂಗಾಬಾದಿ...೧೫. ಗೋವಿಂದ ಬಕ್ಷಿ, ೧೬. ಪೀರಖಾನಿ (ಕಭಾಗ. ೨೯೦). [?]

**ಪೀರಿಯಡ್ದು** (ನಾ). ಶಾಲೆ, ಕಾಲೇಜುಗಳ ದೈನಂದಿನ ಪಾಠಕ್ರಮಕ್ಕಾಗಿ ವಿಭಾಗಿಸಿಕೊಂಡ (ಮುಕ್ಕಾಲುಗಂಟೆ, ಒಂದು ಗಂಟೆ ಮುಂತಾಗಿ ಅಧಿಕಾರ ವರ್ಗದವರು ತಮ್ಮ ತಮ್ಮ ಅನುಕೂಲತೆಯ ಮೇರೆಗೆ ನಿಗದಿಪಡಿಸಿಕೊಂಡ) ಪಾಠಕಾಲ : ಬುದ್ಧಪೂರ್ವಕಾಲದ ವಿವರವನ್ನು ೨–೩ ಪೀರಿಯಡ್ದುಗಳಲ್ಲಿ ಮುಗಿಸಿಬಿಡುವುದು ಘೋರವಾದ ದೋಷವೆನಿಸುತ್ತದೆ (ಆಚಿಕ್ತ. ೩). [ ←ಇಂ. period ]

**ಪೀರು**₁ 'ಪೀರ್' ನೋ.

**ಪೀರು**₂ 'ಪೀಱು₁' ನೋ.

**ಪೀರೆ, ಹೀರೆ**₁ (ನಾ). ಒಂದು ಬಗೆಯ ತರಕಾರಿಬಳ್ಳಿ ಹಾಗೂ ಅದರ ಕಾಯಿ : "ಪೀರೆ ಜಾಲಿನಿ" (ವಚ್ಚುಕೋ. ೩೬–೨೦) ; ನೆಲ್ಲಿಯ ಸಿಪ್ಪು...ಪೊಸಪೀರೆಯ ಬಿತ್ತಿನೊಳಾದ ಬೂದಿಯಂ ನಿಲ್ಲದೆ ಬಾವಿಯೊಳ್ ಕಲಸಲುಃಭ್ಯನ ಕೈವೆಯ ಕಾ(ಬಾ)ರನೂಜಿಲೊ(ದೊ)ಳ್ ಪೊಲ್ಲವಿವೇಬ ಬಾಪಿಗಳ ನೀರಮ್ಮತೋಪವುದುಂಗೆ (ಅಶ್ಚಿಟಿ. ೦೦–೩೩). 'ಕಾಟ್ಪೀರೆ', 'ಕೈವೆಪೀರೆ' ಪರಾ. **ಹೀರೆ**₁ : ಆ ರಾಜಗೃಹಾಂಗಣದೊಳ್ ಹೀರೆಯ ಹೂವಿಂದೆ ಸಮೆದ ಪೊಸಪೂವಲಿಯೊಳ್ ಕಾರಿಲ್ಲದೆಯುಂ ೯ಜಿದುವು ನೇರಾಣಿಯ ಹೊನ್ನ ಮಟಿ³ (ಅಕಂಕ್ಷ. ೯–೬೮) ; ಪೀರೆಯೆಃಳೆಗಾಯ ಕಾಯಿದಾಕ್ಷಣದಿ ತಂದದಟಿ ಧಾರೆಯಂ ಕೆತ್ತಿ ಸಂಬಳಿಸಿ (ಸೂಶಟಾ. ೩–೦) ; ಹೀರೆ ಸೌತೆ ಕೂಷ್ಮಾಂಡೆಳೆಗೂಗುರಿ...ಸಂಭಾರಂಬೊರದುಪ್ಪಿನಕಾಯಿಗಳಡೆ ಮಾಡಿಗಳು (ಮಾಜೀಕ್ತ. ೨೬–೬). [ದೇ.॥ ತಮಿ. ಪೀರ್ಕ್ಕೈ, ಪಿ.ರ್, ಪೀರ; ಮಲ. ಪೀರ, ಪೀರಮ್ನ್; ತುಳು. ಪೀರೆ ; ತೆಲು. ಪೀರ ; ಕೋಲಾ. ಬೀರಾ; ಪರ್ಜಿ. ಬೀರ]

**ಪೀರ್ಕರ್** (ಕ್ರಿ). ಹೀರಲ್ಪಡು ; ಬರಿದಾಗು : ಮದನಾಗ್ನಿಜ್ವಾಲೆಯಿಂ ಮಗ್ಗಿದುದೊ...ಸುಯ್ಯೆಲ್ಬಂದ ಭೃಂಗಾವಳಿಯನಿರದೆ ಪೀರ್ತಂದುದೋ ಪೇಟೂಮೆಂಬಂದದೆ ಲಜ್ಜಾಮಗ್ನೆಗೇನುಂ ಸಾಡಿ ಪೊಣಿಪಡದಾಯ್ತು (ಕಾದಂಟಾ. ೨೯೦). [ ಪೀರ್ + ತರ್ ]

**ಪೀಲಕ** (ನಾ). ಕರಿಯ ಬಣ್ಣದ ದೊಡ್ಡ ಇರುವೆ ; ಕಟ್ಟಿರುವೆ. [ಸಂ.]

**ಪೀಲಿ, ಹೀಲಿ** (ನಾ). ೧. ನವಿಲುಗರಿ : ಎಮೆಯಿಕ್ಕದೆ ನೋಟ್ಟ ೯ಣ್ಣ ೯ಣ್ ಪೀಲಿವೊಲಾಗೆ ಬಂದು ಪೆಱತೊಂದು ಮನಂಬುಗೆ ಪತ್ತಿ ಚಿತ್ತದೊಳ್ ಕೀಲಿಸೆ ಕಾವನಂಬು (ಶಂಕರಾ. ೯–೯೩); ಸೋಗೆಯ ಚೆಲ್ವು ೯ಣ್ಣೆಱೆದುದೋ ಪೇಟೆಂಬಿನಂ ಪೀಲಿಗಳ್ತರದಿಂ ೯ಣ್ಗೊಳಿಸಲ್ಕೆ ನರ್ತಿಸುಗು ಮುದ್ಯಾನಂಗಳೊಳ್ ಸೋಗೆಗಳ್ (ಕಾದಂಪೂ. ೨೪೩) ; ವನಲಕ್ಷ್ಮಿಗೆತ್ತಿದ ಪೀಲಿಯ ಸತ್ತಿಗೆಯೋ...ಎನೆ ಚೂತವೊಪ್ಪುಗುಂ (ಗಿರಿಶ. ೨–೪೪). ೨. ನವಿಲಿನ ಸೋಗೆ,— ತೋಕೆ : ನೀಲಮುತ್ತಿನ ಸರಿಪಳಿಯೊಳು ಕೇಕಿಗಳ್ ಪೀಲಿಯನೆತ್ತಿ ಸಂತಸದಿ ಲೀಲೆಯಿಂ ಕುಣಿದುವು (ಅಶಂಕ. ೬–೨೦); ನವಿಲ್ ನೀಳ್ದ ಪೀಲಿಯ ಚವರಿಯಿಂದಮದೊ ಗುಡಿಸುತಿದೆ (ಶ್ರೀರಾಮಾ. ೬೩–೦೬೬). ೩. ನವಿಲುಗರಿಯಲ್ಲಿರುವ ಕಣ್ಣಿನಂತಿರುವ ನಡುವಿನ ಭಾಗ ; ಚಂದ್ರಕ : (ಕ). **ಹೀಲಿ** : ೧. ಶಿವ ನಿಮ್ಮ ನೋಡದವನ ಕಣ್ಣು ಹೀಲಿಯ ಕಣ್ಣು (ಸವಚಕ. ೦೬೪–೬೯೩); ಬಿರುದಿನ ಕತ್ತರಿಯ ಹೀಲಿಗಳ ರಬ್ಬಲ್ಲರಿ ಮುಸುಕಿದವು ಗಜವ (ಕುಮಾರರಾ. ೬–೬); ಸುತ್ತಿ ಸುಳಿದು ತುಂದಿಗಳು ಮೇಲೆ ಹೀಲಿಯ ಸತ್ತಿಗೆಯಂತೆ ರಾಜಿಸಲು (ಶಠಕ. ೩–೯೯). ೨. ಹೀಲಿಯನಡ್ಡಗಟ್ಟಿ ಬಿಡದಾಡುವ ಪೆಣ್ಣವಿಲೆಂದು ಕೇಕಿ ಬಂದು ಬಲಿತೋಲ್ಗಸತ್ಕಟಿರಿಗೊಯ್ಯನೆ ಜೋಡಿಸೆ (ಅಭ್ಯ.ಟಿ. ೨–೯೮). [ದೇ.॥ ತಮಿ. ಮಲ. ತುಳು. ಕೊತ. ತೆಲು. ಪೀಲಿ]

**ಪೀಲಿಗಣ್** (ನಾ). ನವಿಲುಗರಿಯ ಮಧ್ಯದಲ್ಲಿರುವ ಕಪ್ಪುಬಿಂಬ : ಅಲರ್ದ ತಾವರೆಯ ತನಿವಂಡಿನ ಪನಿಗಳಂ ಪಸರಿಸುವ ಪೀಲಿಗಣ್ಗಳೊಳಂ . . ರಂಜಿಸುವುದು (ಕಾದಂಪೂ. ೦೦೬). [ ಪೀಲಿ+ಕಣ್ ]

**ಪೀಲಿಗರಗ, ಹೀಲಿಕರಗ** (ನಾ). ನವಿಲುಗರಿಗಳಿಂದ ಅಲಂಕರಿಸಿದ ಕುಂಭ; ಪರಿಜನಂಗಳ್ ತಳೆವ ಪೀಲಿಗರಗದಾಲಿಗುಡುವ ನೀರ ತೋರವನಿಯ ತಂದಲೊಂದುಗೆಯೊಳಮೆಂತಾನುಂ ಹಮ್ಮುದದಿನಗಲ್ದು (ಕಂದ್ರಶ. ೩–೦೯ ಮ). **ಹೀಲಿಕರಗ** : ಬಿಜ್ಜಯದ ಹೀಲಿಕರಗದ ಬೋನದ ಪರಿಯಾಣದ . . . ನೆಲನನುಗ್ರಹಿಪ ಮೇಲುಂ ನಿಯೋಗದನ್ಯಯಾಗತೆಯಾರುಂ (ಕಂದ್ರಶ. ೬–೬೩ ಮ). [ ಪೀಲಿ + ಕರಗ ]

**ಪೀಲಿಗೊಡೆ, ಹೀಲಿಗೊಡೆ** (ನಾ). ನವಿಲುಗರಿಗಳಿಂದ ಮಾಡಿದ ಕೊಡೆ,—ಛತ್ರಿ : ಕಂಪಿಂಗೆಳಸಿ ಮುಡಿಗೆ ಮುಸುಱುವ ಭೃಂಗಂಗಳ್ ನೆಗೆವ ಪೀಲಿಗೊಡೆಯಂತೆ ತೋರ್ಕುಂ (ಆಕಪು. ೨–೯೬). **ಹೀಲಿಗೊಡೆ** : ಮುಡಿಯ ಬಾಸಿಗಂಗಳೆಳೆದುಂಬಿಜಾಡೆ ಬೆಳ್ಗೊಡೆ ಮೇಲೆ ಮೆಱೆಯೆ ಭಾವಜನ ಅಡಕಟ್ಟಿ ಬೆಳಗೊಡೆ ಹೀಲಿಗೊಡೆಯ ನೆಳಲಡಿಯೊಳಿರ್ದ ನೊಯೆಸಲೆಸೆದ (ಅರಕ. ೩೦ . ೬೩) [ಪೀಲಿ+ಕೊಡೆ]

**ಪೀಲಿದಲೆ** (ನಾ). ನವಿಲಿನ ಸೋಗೆಯಾಕಾರದ ಮುಡಿ,—ಕೂದಲು : ಬಂಡುಣಿಗಳುಗುಳ್ದ ಪರಪೀಸಲಾಪದ ಪೀಲಿದಲೆಯ ಲಲನೆಯನೀಕ್ಷಿಸಿದನು (ಶ್ರಶಂ. ೯–೦೯). [ಪೀಲಿ+ತಲೆ₁]

**ಪೀಲಿದಳೆ** 'ಪೀಲಿದಟಿ³' ನೋ.

**ಪೀಲಿದಳೆವಿಡಿ** (ಕ್ರಿ). ನವಿಲುಗರಿಗಳ ಕೊಡೆಯನ್ನು ಹಿಡಿ : ಪೀಲಿದಳೆ ವಿಡಿನಂತೆ ಮೃಗಂಪಿಗಳಿಕುಳಂ ಮೇಲೆತ್ತಿ ಬರೆ...ಒಂದು ಲೀಲಾಬ್ಜಮಂ ಪಿಡಿದು ಬರ್ಪಕೊಪ್ಪಿರ್ದಳು (ಶಂಕ. ೦೯–೨೩).
[ ಪೀಲಿದಳೆ (<ಪೀಲಿದಟಿ³)+ಪಿಡಿ₁ ]

**ಪೀಲಿದಟಿ³, ಪೀಲಿವಳೆ, ಹೀಲಿದಳೆ** (ನಾ). ನವಿಲುಗರಿಗಳ ಕೊಡೆ ಪಿಂಛಾತಪತ್ರ : ಆ ಪುರದುಪವನದೊಳ್ . . . ವನದೇವತೆಗೆ ಪೀಲಿದಟಿ³ಯನೆತ್ತುವ ಸೋಗೆಸವಿಲ್ಗಳಿಲ್ಲ (ಕಂಠಾಮಾ. ೦–೦೦೬ ವ); ಮುಟ ದುಂಬಿಯ ಬಂಬಲ್ ಎತ್ತಿ ಪಿಡಿದ ಪೀಲಿದಟಿ³ಯಾಗೆ (ಕಾವ್ಯಕ. ೯೬). **ಪೀಲಿದಳೆ** : ನೆಗೆದು ಸುತ್ತಂ ಪರಿಮಳಿಸುವ ಗಂಧಂಗಳೊಳು ಮುಡಿಗೆಱಗುವೆಱಕುಳಂಗಳ ಪೀಲಿದಳೆಯೊಳಗೆ . . . ಮೆಱೆವುತಿರೆ (ಮಹೇರಾ. ೮೦. ೬೨–೦೯). **ಹೀಲಿದಳೆ** : ನೂತನೋದ್ಗತನರ್ತನಕ್ಕೆ ಮಾಯ್ವಾನುತುಂ ಗೊಡೆ ಹೀಲಿದಳೆಯಣುಗಗಳ ನಡುವೆ ಮೆಱೆವುತುಂ (ಶಂಬರ. ೩–೬೩) ಕಳೆತ ಬೆಳುಗೊಡೆಯ ತುಱುಗಿದ ಹೀಲಿದಳೆಯ ಮಂಡಳಿಸಿದಣುಗಗಳ ನೆಳಲೊಳು . . . ನಡೆವನಪ್ರತಿಮಾನಚೆಳತಸಿದ್ದನು (ಸಿದ್ಧರಾ. ೬–೨೦)
[ ಪೀಲಿ+ತಟಿ³ ]

**ಪೀಲಿದುಱುಬು** (ನಾ). = ಪೀಲಿದಲೆ : ನಿಡುಗಣ್ಗಳ ನಿಬಿಡಸ್ತನಗಳ ಪಿಡಿನಡುವಿನ ಪೀಲಿದುಱುಬಿನ ಕಡುಚೆಲ್ವುಪಡೆದ ಸೊಬಗುಗಾತಿ ಮೆಲ್ಲನೆ ನಡೆತಂದಳಾ ನೃಪವನೆಡೆಗೆ (ಶೀಬಸಂ. ೦೨–೩೦).
[ ಪೀಲಿ+ತುಱುಬು₂ (<ತುಱುಂಬು₂) ]

**ಪೀಲಿಬಿಜ್ಜಣಿಗೆ** 'ಪೀಲಿವಿಜ್ಜಣಿಗೆ' ನೋ.

**ಪೀಲಿವಿಜ್ಜಣಿಗೆ, ಪೀಲಿಬಿಜ್ಜಣಿಗೆ** (ನಾ). ನವಿಲುಗರಿಗಳಿಂದ ಮಾಡಿದ ಬೀಸಣಿಗೆ : ಪೀಲಿವಿಜ್ಜಣಿಗೆ ತಣ್ಪಿನ ನೀರ ಸೆಱೆಯಾವ ಪೊಂಗಳಂತಿಗೆಯಿರೆ ಸಜ್ಜಯೋವರಿಯಿದೋಱಿ ಮಾಡಿತು ಕಂತುಗೆಮುಟ್ಟಿಗೆ (ಕಂದ್ರಶ. ೯–೬೦). **ಪೀಲಿಬಿಜ್ಜಣಿಗೆ** : ಅನುನಯದಿಂ ವಾರವಿಲಾಸಿನಿಯರ್ ಮೆಲ್ಲಲರ ಪೀಲಿಬಿಜ್ಜಣಿಗೆಯನೊಯ್ಯನೆ ಬೀಸುತ್ತಿರೆ ನೃಪನಂದನನಿನಿಸಿನಿಸಂ ಬಬಲ್ಕೆಗಟಿ³ಯುತ್ತಿರ್ದಂ (ಕಾದಂಟಾ. ೯೩೩). [ ಪೀಲಿ + ಬಿಜ್ಜಣಿಗೆ ]

**ಪೀಲಿವೂಜಿ³** (ನಾ). ನವಿಲುಗರಿಗಳ ಹೊರೆ,–ಪೆಂಡಿ : ಕರಿದಂತಂಗಳ ನಾಂತು ಪೀಲಿವೂಜಿ³ಯಂ ತಟಕ್ಕಿಸಿ ಗಂಧೇಭಮುಕ್ತಾಫಳಭಾರಮಂ ತಳೆದು . . . ಬಂದರನೇಕರ್ ಬಟಿಸಂದು ಕಾದೊಡೆಯನಂ ಕಾಂತಾರದೊಳ್ ಲುಬ್ಧಕರ್ (ಕಾದಂಪೂ. ೦೬೯). [ ಪೀಲಿ + ಪೊಱೆ³ ]

**ಪೀಲು₁** (ನಾ). ೧. ಒಂದು ಬಗೆಯ ಮರ ; ಅಕ್ಷೋಟವೃಕ್ಷ: ಉಗುನಿ: "ಪೀಲುವೆನಲ್ ಗುಡಫಲಂ" (ಚನ್ನ ಕೋ. ೩೪.೮). ೨. ಹೂವು. ೩. ಬಾಣ. ೪. ಆನೆ: "ಪೀಲು ಪಿನದ್ವಿರದಾಂಕಂ" (ಚನ್ನ ಕೋ. ೦೩೦-೬೩): "ಪೀಲುಃ — ಪೊಡೀಗಿಡ, ಆನೆ, ಸರಳು, ಹುವ್ವು" (ಶಿಲ್ಪಾಂಶ. ೧೦೬). ೫. ಹುಳು; ಕ್ರಿಮಿ. ೬. ಕಣ; ಅಣು : ಸರೆವುನೆ ಎನುವುದು ಏತಕೊ ಒಡಲಿಗೆ ಕಾಂಬುದು ಅರವುನೆ ತುಣಾಕು ಅವು ಪೀಲುಪೀಲದಲಿ ಪೀಲುಪೀಲಿನಲಿ ರನ್ನದ ಕಣಕಣ ವಿಣಾಕುವದು (ಅಕಳು. ೦೧೩-೮). ೭. ಹುಲ್ಲು : "ಹುಲ್ಲಿನಲ್ಲಿ ಮರದಲಿ ಪೀಲು" (ಮಂಗಣಾ. ೦೧೩-೨೩). [ಸಂ.]

**ಪೀಲು₂** (ನಾ). [ಸಂಗೀತ] ಒಂದು ರಾಗದ ಹೆಸರು : ಬರಖತ್ಬುಲ್ಲಾ ಖಾನರು ಇವರ ಮನೆಯಲ್ಲಿ 'ಪೀಲು'ರಾಗವನ್ನು ನುಡಿಸಿದಾಗ (ಗಾಳಿ. ೨); ಅವನು ಪೀಲುರಾಗದಲ್ಲಿ ಕಟ್ಟಿದ ಪದವು ಹಳ್ಳಿಗಳಲ್ಲಿ ಎಷ್ಟೋ ದಿನ ಲೋಕಪ್ರಿಯವಾಗಿತ್ತು (ಗಂಧಾಮು. ೨೩೨). [←ಹಿಂ. ಮರಾ. ಪೀಲು]

**ಪೀಲುಕ** (ನಾ). ೧. ಒಂದು ಬಗೆಯ ಮರ : 'ಕಾಕಪೀಲುಕ' ನೋಡಿ. ೨. ಇರುವೆ. [ಸಂ.]

**ಪೀಲುಪರ್ಣಿ** (ನಾ). ೧. ಒಂದು ಬಗೆಯ ಸಸ್ಯ; ಹೆಗ್ಗುರುಟಿಕೆ : "ಮೂರ್ವಾ, ದೇವೀ . . . ಗೋಕರ್ಣೀ, ಪೀಲುಪರ್ಣೀ—೧೧ ಹೆಗ್ಗುರುಟಿಕೆಯ ಹೆಸರುಗಳು" (ಶಿಲ್ಪಾಂಶ. ೦೩೦). ೨. ತೊಂಡೆ ಗಿಡ: "ತುಂಡಿಕೇರೀ, ರಕ್ತಫಲಾ, ಬಿಂಬಿಕಾ, ಪೀಲುಪರ್ಣೀ—೪ ದೊಂಡೇಗಿಡದ ಹೆಸರು" (ಶಿಲ್ಪಾಂಶ. ೦೧೧). [ಸಂ. ಪೀಲುಪರ್ಣೀ]

**ಪೀವ** (ನಾ). ದೊಡ್ಡದು ; ಸ್ಥೂಲವಾದುದು : "ಬಹುಳಃ . . . ಪೀವಾ, ಪೀವರಃ—ಈ ೫ ದೊಡ್ಡ(ತು)" (ಕರಾಹುಂ. ೬-೦೩೬). [ಸಂ.]

**ಪೀವಡಿ, ಪೇವಡಿ** (ನಾ). ೧. ಅರಿಸಿನಬಣ್ಣದ ಮಣ್ಣು ; ಹಳದಿ ಮಣ್ಣು : ಘಟಕ, ಮುಷಿಯ ಮಣ್ಣು, ಕುಂಬಾರರ ಮಣ್ಣು, ಕಾವಿ, ಪೀವಡಿ ಮುಂತಾದ ವ್ಯತ್ರಿಕೆಗಳು ಈ ಧಾತುವಿನಿಂದ (aluminium) ಹುಟ್ಟುತ್ತವೆ (ಮುಂಶಾಂ. ೬-೦೩). ಪೆವಡಿ : ೨. ಹಳದಿಬಣ್ಣ : ರತಲಿನ ಮೇಲೆ ಕಿಮ್ಮತ್ತು ಲಗತಕ್ಕ ಜೀನಸಗಳು. ೧. ಅಗರ . . . ೫೧. ಹಿತ್ತಾಳೆ ತಂತಿ; ೫೨. ಪೆವಡಿಬಣ್ಣ (ಹಳದಿಬಣ್ಣ) (ಮುಂಶಾಂ. ೦೨೧). [←ಮರಾ. ಪಿವಡೀ, ಪೇವಡೀ]

**ಪೀವರ** (ಗು). ೧. ಕೊಬ್ಬಿದ ; ಸ್ಥೂಲವಾದ ; ತೋರವಾದ: ಅಕೆಗಳ ಪೀವರತುಂಗನಿತಂಬಬಿಂಬದೊಂದಗಲದ ವೃದ್ಧಿ ಪೆರ್ಚಿ ನೆಲೆವೆರ್ಚಿ ದುದೀ ಕೊಳಂ (ಶಾಂತಿ. ೮-೨೬). 'ಪೀವರಸ್ತನಿ' ನೋಡಿ. (ನಾ). ೨. ದೊಡ್ಡದು ; ಸ್ಥೂಲವಾದುದು : "ಬಹುಳಃ, ಸ್ಥೂಳಃ . . . ಪೀವರಃ —ಈ ೫ ದೊಡ್ಡ (ತು)" (ಕರಾಹುಂ. ೫೩-೦೩೬); ಅತಿನಿಬಿಡಂಗಳ್ ವೃತ್ತೋನ್ನತಂಗಳತಿಪೀವರಂಗಳತಿಕಠಿನಂಗಳ್ . . . ಅವಳ ಕುಚಂಗಳ್ (ಗಿರಾಹುಂ. ೬-೩೩). ೩. ಸ್ಥೂಲನಾದವನು ; ದಪ್ಪನಾದವನು : "ಪೀವರನೆನಲ್ ಸ್ಥೂಲನೆನೆ ಬಹುಲನೆನೆ (ಪೀನನೆನೆ) ದೊಡ್ಡಿತವ್ವವನೆನಿಕ್ಕುಂ" (ಮಂಗಣಾ. ೬೯-೦೦). [ಸಂ.]

**ಪೀವರಸ್ತನಿ** (ನಾ). ೧. ಪುಷ್ಪವಾದ ಮೊಲೆಗಳುಳ್ಳವಳು. ೨. ದೊಡ್ಡ ಕೆಚ್ಚಲುಳ್ಳ ಹಸು : "ಪೀನೋಧ್ನೀ, ಪೀವರಸ್ತನೀ—ಈ ೨ ಹೆಗ್ಗೆಚ್ಚಲಾವು" (ಕರಾಹುಂ. ೧೫-೦೦೬). [ಸಂ. ಪೀವರಸ್ತನೀ]

**ಪೀವರೋಧ್ನಿ** (ನಾ). = ಪೀವರಸ್ತನಿ ೨ : "ಪೀವರಸ್ತನಿ ಪೀವರೋಧ್ನಿ ಯೆನೆ ಹೆಗ್ಗೆಚ್ಚಲಾವು" (ಮಂಗಣಾ. ೫೪-೫). [ಸಂ. ಪೀವರೋಧ್ನೀ]

**ಪೀಳಿಗೆ** (ನಾ). ೧. ವಂಶ ; ಕುಲ : ರವಿಕುಲದ ಪೀಳಿಗೆಯೊಳೊಗೆದ ರಾಯರ್ಗೆ ಪಟ್ಟವ ಕಟ್ಟುವಂದಿದಿಲ್ಲವೊಡತನಸುತನ ಸಲ್ಲದು (ಕರ್ಣಾ. ೬-೦೦) ದೇವಕೀಸುತನೆನು ಬಂಡಿಯು ದೋಷಗುಲದಲಿ ಜನಿಸಿದನೆ ವೇಣಾ ವಿರಿಂಚಿಯದಾವ ಸಾರಥಿಕುಲದ ಪೀಳಿಗೆಯೊ (ಕುಮಾ. ೫-೩೯); ತೆಗೆಸಿದನು ಬಳಿಕಿನಕುಲದ ಪೀಳಿಗೆಯ ನೃಪರಾರ್ಜಿಸಿದ ನಾನಾಯುಗ ಯುಗಂಗಳ . . . ನಾಣೆಯುಂಗಳನಖಿಳವಸ್ತುಗಳ (ಕೋಣಾ ೦-೬-೯). ೨. ತಲೆಮಾರು : ತಲೆಯಿಂದ ತಲೆಗೆ, ಪೀಳಿಗೆಯಿಂದ ಪೀಳಿಗೆಗೆ . . . ಇಳಿಯುತಿದೆ ಯುಗದಿಂದ ಯುಗಕೆ ಮಾನವಧರ್ಮ ನಿಲಿದವ್ಯತಧಾರೆಯುದು (ಪಾಂಚಳಿ. ೧೦೬) ; ಹಿಂದಿನವರ ಆದರ್ಶಗಳು ಬರುವ ಪೀಳಿಗೆಗೆ ಮೇಲ್ಪಂಕ್ತಿಯಾಗುತ್ತವೆ (ಶ್ವೇತ. ೩೨೦). ೩. ವಂಶಕ್ಕೆ ಸೇರಿದವನು ; ವಂಶಜ : ನಿರೀಕ್ಷಿಸುತನಿಬರಿಂಗಿತವ ಮೇಲುಮೊಗದ ಗಭೀರಗತಿಯ ಭಟಾಳವನು ಕಂಡವರು ರಾಯರ ಪೀಳಿಗೆಗಳಹುದೆಂದು ನಿಶ್ಚೈಸಿದನು ಮನದೊಳಗೆ (ಕುಮಾ. ೦೬-೨೬). 'ಪೀಟಿಗೆ' ನೋಡಿ.

**ಪೀಳ್ಕುದುರೆ** (ನಾ). [ಸಂಗೀತ] ಪಿಟೀಲಿನ ಧ್ವನಿಪೆಟ್ಟಿಗೆಯ ಮಧ್ಯಭಾಗಕ್ಕಿಂತ ಸ್ವಲ್ಪ ಮೇಲುಗಡೆಯಲ್ಲಿ ತಂತಿಗಳು ಹಾದು ಹೋಗಲು ಅಂಬವಾಗಿ ಅಳವಡಿಸಿರುವ ಕುದುರೆಗೆ ಸಿಕ್ಕಿಸುವ ಒಂದು ಉಪಕುದುರೆ ; ಆ ನಾದವನ್ನು ಕಡಮೆ ಮಾಡುವುದಕ್ಕಾಗಿ ಈ ಉಪಕುದುರೆಯನ್ನು ಸಿಕ್ಕಿಸುತ್ತಾರೆ : ಅವರ ಸಾಧಕ ಅತಿ ಗೋಪ್ಯ ಪಿಟೀಲಿಗೆ ಪೀಳ್‌ಕುದುರೆಯನ್ನು ಸಿಕ್ಕಿಸಿ ಸಣ್ಣನಾದದಲ್ಲಿ ಅಭ್ಯಾಸಮಾಡುತ್ತಿದ್ದರು (ಪಾಳೆಗಾ. ೨೦). [ < ಪಿಳ್ಳೆ + ಕುದುರೆ ]

**ಪೀಱು₁, ಪೀರು₁** (ಕ್ರಿ). ಕೆದರು ; ಚೆದರು ; ಚೆಲ್ಲಾಪಿಲ್ಲಿಯಾಗು ; ಅಸ್ತವ್ಯಸ್ತವಾಗು : "ಪೀಱು—ವಿಕೀರ್ಣೇ" (ಶಮಧಾ. ೮) ; ತೊಡಂಕಿ ಪೀಱಿದ ಕುರುಳ್ಗಳೆ ಚಿತ್ರದೊಳಾದ ಬೇಸಟಂ ನುಡಿವವೊಲಾಗೆ ಬರ್ಪ ಕಮಳಾಯತನೆ:ಶ್ರಯನಿಂದುವಕ್ತ್ರೆಯಂ ಕಂಡು (ಶಂಕರಾ. ೦೩-೧೯) ; ಸಂಬುರ್ಗೊಂಡ ಗಣ್ಡಮುವಂ ವಿಾಸೆಯುಮನಗಲೆ ನೂಂಕಿ ಪೀಱಿದ ತಲೆಯೇಱಂತಿರ್ದ ಬಾಯೊಳಡ್ಡಗ್ಗಿಯನಿಡುವುದುಂ (ಅಲಾವ. ೬-೫೩ ವ). ಪೀರು₁ : ಕಪ್ಪುಕುರುಳುಗಳಿಂದ ತಲೆಯ ಪೀರಿದರು ಒಪ್ಪುವೊಲು ತಾರೆಗಳ ನಡುವೆ ತೋರುಹರು ರಾತ್ರಿಯೆಂಬವಳಾವ ಧಾತ್ರಿ ? (ಚಾಸಿಗ. ೩೩-೯) [ ದೇ.॥ ತಮಿ. ಪೀಱು = ಬಿರಿ, ಸೀಳು ; ಮಲ. ಪೀರು = ಹರಿ ]

**ಪೀಱು₂** (ನಾ). ೧. ಚೆದರುವಿಕೆ ; ಚೆಲ್ಲಾಪಿಲ್ಲಿಯಾಗುವಿಕೆ ; ಅಸ್ತವ್ಯಸ್ತವಾಗುವಿಕೆ : ಪಿಟ್ಟಾದ ಪೀಱಾದ ಸಿಂಧುರದಿಂ ತಟ್ಟಿದ ಮುಱ್ಗದನ್ನರಥದಿಂ ಕಣ್ಗಂ ಮನಕ್ಕಂ ಭಯಂಕರಮಪ್ಪಾಜಿಯೊಳಿಟ್ಟ ತಿಂಬಜವನೆಂಬಂತಿರ್ದನಬ್ಜೋದರಂ (ಕಂಶಕಾ. ೯-೦೩೪). ೨. ಇರಚಲು ; ಇರಿಸಲು : ಪಾಱುವ ವಿಮಾನದೊಂದಳ್ಪೇಱಂ ಪಱಿದುಗುವ ಮುಗಿಲ ನೀರ್ಗಳ ವಲವಂ ಪೀ[ ಪಾಠಾಂ. ಜೇ, ಬೀ ]ಱುಗಳೊಳಿಳಿಸಿ ಖಚರರನಾ ಱಿಸಿದುದು ಗಗನದೊಳ್ ವಿಯತ್ತ್ರಳಪವನಂ (ಅಂಕ್ರ. ೪-೬೩). [ < ಪೀಱು₁ ]

**ಪೀಟಿಗೆ** (ನಾ). ಸಿಂಹಾಸನ ; ಪೀಠ : "ಪೀಠಿಕೆಗೆ ಪೀಟಿಗೆಯೆನಿಕ್ಕುಂ" (ಶಬ್ದಮ. ೦೯) ; ನೀನುಳ್ಳೊಡುಂಟು ರಾಜ್ಯಂ . . . ನೀನುಳ್ಳೊಡುಂಟು ಪೀಟಿಗೆ ನೀನಿಲ್ಲದಿರೆಲ್ಲಮೊಳವೆ (ಗದಾಯು. ೫-೨೦) ; ಬೇಡಿದೊಡೀಯ ನಾಂತಡಿಱಿಯಂ ಮಱುವೊಕ್ಕೊಡೆ ಕಾಯನಂತವಂ ನಾಡರಸಾಗಿ ಪೀಟಿಗೆಯನೇಱಿದೊಡೇನವನಗ್ರಗಣ್ಯನೇ (ಸೂಕ್ತಿಸು. ೦೬-೨೩) ; ಪೀಠಿಕಾ—ಪೀಟಿಗೆ (ಕಶಬ್ದ. ೨೩೬ ಕ್ರಹೋ). 'ಪೀಳಿಗೆ' ನೋಡಿ. [ < ಸಂ. ಪೀಠಿಕಾ ]

**—ಪು₁, —ಹು₁** (ಪ್ರ). ಪ್ರೇರಣಾರ್ಥದಲ್ಲಿ ಧಾತುಗಳ ಮೇಲೆ ಹತ್ತುವ ಒಂದು ಪ್ರತ್ಯಯ : 'ಅಱಿಪು', 'ತಿಳಿಪು₁', 'ನಡಪು₁' ನೋಡಿ. — ಹು₁ : 'ಕಳಿಂಹು', 'ತಿಳುಹು₁' ನೋಡಿ.

**—ಪು₂, —ಹು₂** (ಪ್ರ). ಒಂದು ಭಾವನಾಮವಾಚಕಪ್ರತ್ಯಯ : 'ಒಳ್ಪು', 'ತೆಳ್ಪು', 'ನಣ್ಪು' ನೋಡಿ. —ಹು₂ : 'ತೆಗಹು', 'ತೊಡಹು₂' ನೋಡಿ.

**ಪುಂ** (ನಾ). ೧. ಗಂಡಸು ; ಪುರುಷ : ಪುಂ ಪೆಂಗಳಿಂದ (ಪುಂ ಪೆಣ್ಗಳಿಂದ) ಪುಟ್ಟಿದ ದೇಹವನು ತಿಳಿ . . . ಇಂಪಾಗಿದೆಯೆಂದು ಹಿಗ್ಗದಿರಲವು ಹೊಲೆಗಂಪು ನಾರುವುದು ತೊಳೆಯದೆ ಇರಲು (ಶಿವಾಕೈ. ೪-೧). ೨. ಗಂಡುಸಂತಾನವಿಲ್ಲದವರಿಗೆ ಪ್ರಾಪ್ತವಾಗುವುದೆಂದು ಹೇಳಲಾದ ಒಂದು ನರಕ. ೩. [ವ್ಯಾಕ] ಪುಲ್ಲಿಂಗ : ನೀನಱು ಕರ್ನಾಟಕದೊಳ್. ಪೀನಂ ಸ್ತ್ರೀ ಪುಂ ನಪುಂಸಕೋಭಯ ಪುಂಸ್ತ್ರೀ ಸ್ತ್ರೀನಪ್ಸುಮಸ್ತ್ರವಾಚ್ಯ ನ್ಯೂನಾರ್ಥ್ಯಯುಮೆಂದು ಲಿಂಗಮೊಂಬತ್ತು ತೆಱು (ಶವ್ದಾ. ೬೮).

[ಸಂ. ಪುಂಸ್]

**ಪುಂಕಿಸು** (ಕ್ರಿ). ಧ್ವನಿ ಮಾಡು ; ಸ್ವರವನ್ನು ಹೊರಡಿಸು : ಸುಷಿರವಾದ್ಯ ವಾದನವಿಶಾರದನಪ್ಪ ಕಿನ್ನರಂ ತನ್ನಯ ಸೊಳಹೆಯೆಂಬ ವಾಸಮಂ ಕೊಂಡು ಹಲ್ಲಣಿಯುಂ ಸುದ್ಧಮಾಗಿ ಪುಂಕಿಸಿ ಬಿಂಕಂಬಡೆಯೆ ಮುಹಚಾರೆಯುಮಂ ಮಾಡಿ ರೂಢಿವಡೆದ ಮಧ್ಯಮಾದಿಯೆಂಬಾದಿರಾಗಮಂ ರೂಹುಗೊಳಿಪುದುಂ (ಶಾಂತೀಶ್ವ. ೦೩-೩೩ ವ); ಪುಂಕಿಸಿದ ಮಾಂಸ [ ಮಾಂಶ ] ಕಾರನ ಪುಂಕೃತಿಯುಮಂ ಶ್ರುತಿಯುಮೆಂದು ಭೇದಿಸಲಿನ್ನಾರ್ಗಂ ಕರಮರಿದೆನೆ ಭಾರತಿಯಂ ಕಿಱು ಯುಳಿವಳ್ದಿರೆನಿಸಿ ಸಮಗಾಯಿನಿಯರ್ ತಾರಯ್ಸುವುದು (ಪ್ರಭಾಶೇ. ೪-೩೪).

[< ಪುಂಖಿಸು]

**ಪುಂಕೃತಿ** (ನಾ). ಸ್ವರ: ನಾದ: ಪುಂಕಿಸಿದ ಮಾಂಸ [ ಮಾಂಶ ] ಕಾರನ ಪುಂಕೃತಿಯುಮಂ ಶ್ರುತಿಯುಮೆಂದು ಭೇದಿಸಲಿನ್ನಾರ್ಗಂ ಕರಮರಿದೆನೆ ಭಾರತಿಯಂ ಕಿಱುಯುಳಿವಳ್ದಿರೆನಿಸಿ ಸಮಗಾಯಿನಿಯರ್ ತಾರಯ್ಸುವುದುಂ (ಪ್ರಭಾಶೇ. ೪-೩೪). 'ಹುಂಕೃತಿ' ಪರಾ. [ಪುಂ + ಕೃತಿ]

**ಪುಂಖ** (ನಾ). ೧. ಬಾಣದ ಹಿಂಭಾಗ ; ಹಿಳಕು : "ಬಾಣದ ಪಿಳಕದು ಪುಂಖಂ" (ವಸ್ತುಕೋ. ೬೩-೦೪); ವಿರಹಜ್ವರದಿಂ ಪುಳಕೋತ್ಕರಮೊಗೆದುವು ರೋಮಕೂಪಮನಿತನಿತಱೊಳು ಸ್ಮರನ ಸರಲ್ಗಳ್ ನಾಂಟಲ್ ಶರೀರಮಂ ಪತ್ತಿ ನಿಂದ ಪುಂಖಂಗಳವೋಲ್ (ಕಾದಂಪೂ. ೬೩೪); ಮಿಸುಪ ಕಲಧೌತ ಪುಂಖಪ್ರಸರಂ ಖದ್ಯೋತತತಿವೊಲಾದುದು ನಭದೊಳ್ (ಜಗಂ. ೦೨-೦೨). ೨. ಗಿಡುಗ. ೩. ಮಂಗಳಕಾರ್ಯ. ೪. [ಸಂಗೀತ] ನಾದ ; ಸ್ವರ : ಪುಂಖಶುದ್ಧಮೆನೆ ಭೋಂಕನೆ ಪುಂಖಿಸಿ ಮಧ್ಯಮಾದಿಯಂ ಚಾಳಿಸಿ . . . ಮೃದುಸ್ವರಂ ಪಾಳಿಯನೊಪ್ಪುವಂತೆಸೆಯೆ ಬಾಜಿಸಿದಳ್ ಸುವಿಲಾಸೆ ವೀಣೆಯಂ (ಸೂಕ್ತಿಸು. ೩-೦೪). [ಸಂ.]

**ಪುಂಖಾನುಪುಂಖ** (ನಾ). ಒಂದರ ಹಿಂದೆ ಒಂದರಂತೆ ಎಡೆಬಿಡದೆ ಬರುವ ಬಾಣಪರಂಪರೆ,—ಬಾಣಗಳ ಸಾಲು : ನೈಷ್ಕಿಕವೆಂಬ ಮಹಿಷ್ಮಿಯೊಳಂ ಪುಂಖಾನುಪುಂಖವೆಂಬ ಶರಸಂಧಾನದೊಳಮಯುವದೊಳ್ ತೆಗೆದೊಡೆ (ಶಂಕರಾ. ೨-೩೨ ವ); ಏನ ಹೇಳುವೆ ಭಟನ ಶರಸಂಧಾನವನು ಪುಂಖಾನುಪುಂಖವಿಧಾನವನು ಝೇಂಕಾರಶರಜಾಲಪ್ರಸಾರಣವ (ಕುಮ್ಯಾಕ. ೩-೪೬).

**ಪುಂಖಾನುಪುಂಖವಾಗಿ** = ಒಂದರ ಹಿಂದೆ ಒಂದರಂತೆ ; ಎಡೆಬಿಡದೆ ; ನಿರಂತರವಾಗಿ : ವಿಚಾರಗಳು ಪುಂಖಾನುಪುಂಖವಾಗಿ ಏಳುತ್ತಿದ್ದವು (ಕಾಶಿಗಾ. ೪೬); ಇದರ ಅರ್ಥವಿವರಣೆಗೆ ತೊಡಗಿದರೆ ಪುಂಖಾನುಪುಂಖವಾಗಿ ಜಿಜ್ಞಾಸೆಯೇಳುವುದು ಸಹಜ (ಕಾವ್ಯಕು. ೦೮).

[ಸಂ.]

**ಪುಂಖಾನುಪುಂಖಂ** (ಅ). ಒಂದರ ಹಿಂದೊಂದು ಎಡೆಬಿಡದೆ ಬಾಣಗಳು ಬರುವಂತೆ : ಬಟಿಯಂ ಮೆಯ್ಗೊಂಡು ಪುಂಖಾನುಪುಂಖಮಿಸುತ್ತಿರ್ಪೆಡೆಯೊಳ್ ತೆರಳ್ಚಿದುವಗುರ್ವಿಂ ಪರ್ವಿ ಬಂದಿರ್ದ ಮೇಘಮುಖಾಹೀಂದ್ರರ ಪೊಂತಮಂ ಜಯಕುಮಾರೋನ್ಮುಕ್ತಬಾಣಾಳಿಗಳ್ (ಅಜಿಪು. ೦೩ ೩೦); ಅಂತು ಪುಂಖಾನುಪುಂಖಮಿಸುವುದುಂ (ಶಂಕರಾಪು. ೦೪-೦೩೪ ವ).

[< ಪುಂಖಾನುಪುಂಖ]

**ಪುಂಖಾನುಪುಂಖಿತೆ** (ನಾ). ಎಡೆಬಿಡದಂತಿರುವ ಬಾಣಪ್ರಯೋಗ : ಏಕ್ಕಟಿಗ ಪುಂಖಾನುಪುಂಖಿತೆಯುಕ್ಕಿ ಹಾಕಿದನೈದಿದಂಬುಗಳಿಕ್ಕಡಿಗೆ ತುಂಡಾಗುತಿರ್ದವು ಪಾರ್ಥನೆಸುಗೆಯಲಿ (ಜಸಿಕಾ. ೪೩-೩೩).

[ಸಂ. ಪುಂಖಾನುಪುಂಖಿತಾ]

**ಪುಂಖಿ, ಪುಂಗ** (ನಾ). ಒಂದು ಬಗೆಯ ಮರ : "ಪುಂಡ್ರಃ—ತಿಲಕವೃಕ್ಷ. ಗೋಳಿಯ ಮರ, ಪುಂಖಿ, ಕೊಗ್ಗ" (ಒತರಂ. ೦೦೦). ಪುಂಗ : ಪುಂಗ— Pongamia glabra (ಹೊಂಗೆ) (ಶಾಸಗಿ.೯). 'ಹೊಂಗೆ₁' ಪರಾ.

[← ತಮಿ. ಪುಂಙ್ಕ]

**ಪುಂಖಿತೆ** (ನಾ). (ಬಾಣವನ್ನು ಬಿಡುವ) ಕೌಶಲ ; ಕೈಚಳಕ : ತೊಡುವ ಚಿತ್ಕಾರವನು ಬಾಣವ ಬಿಡುವ ಪುಂಖಿತೆಗಳನು ಕಣ್ಣಿವೆಯಿಡದೆ ನೋಡಿದರ ನಾರಸಭೆಯೊಳಗೆಲ್ಲ ಕಾಣದಲೆ (ಜಸಿಕಾ. ೪೩-೩೪).

[ಸಂ. ಪುಂಖಿತ = ಬಾಣದಂತೆ ಗರಿಗಳಿಂದ ಕೂಡಿದುದು]

**ಪುಂಖಿಸು** (ಕ್ರಿ). = ಪುಂಕಿಸು : ಕಳಿಪು ಮಯಣಮಂ ನುಣ್ಪಾಗೆ ತಿರ್ದಿ ಪುಂಖಿಸಿ ಹೊ[ಹೆ]ಲ್ಲಣಿಯು ಶುದ್ಧಮಾಗಿ ಮುಹಚಾಳಿಯುಮುಪಾಡಿ . . . ಸಮಯೋಚಿತರಾಗಮಂ ಸುವ್ಯಕ್ತಿವೆತ್ತು ನಿಡೆ ತೋರ್ಕೆಗೊಳಿಸುವುದುಂ (ಶಾಂತೀಶ್ವ. ೬-೯೩ ವ); ಪುಂಖಶುದ್ಧಮೆನೆ ಭೋಂಕನೆ ಪುಂಖಿಸಿ ಮಧ್ಯಮಾದಿಯುಂ ಚಾಳಿಸಿ . . . ಬಾಜಿಸಿದಳ್ ಸುವಿಲಾಸೆ ವೀಣೆಯುಂ (ಸೂಕ್ತಿಸು. ೩-೦೪). [ಪುಂಖ + — ಇಸು₃]

**ಪುಂಗ** 'ಪುಂಖಿ' ನೋ.

**ಪುಂಗವ** (ನಾ). ೧. ಗೂಳಿ ; ಹೋರಿ ; ವೃಷಭ : ವೃಷಾಂಕಪುಂಗವ ವಿಘಟ್ಟಿತೋತ್ತೀರಪುಂತದೊಂದವೆ (ಕಾದಂಪೂ. ೩೪೦); ಒರ್ಮೆಯೆ ಪುಟ್ಟಿವಂದುದು . . . ಪುಂಗವಂ (ಜಗಂ. ೩-೩೩). ೨. (ಸಮಾಸದ ಕೊನೆಯ ಅಂಗವಾದಾಗ) ಒಡೆಯ ; ನಾಯಕ : "ಸ್ವಕುಲಪ್ರಧಾನ ಗಜವಾಜಿ ಕುಂಜರಂ ವಿಭು ವೃಷಾಖ್ಯ ಪುಂಗವಮುಕ್ಯಂ" (ವಸ್ತುಕೋ. ೦೨೦-೦೮). 'ಮುನಿಪುಂಗವ' ಪರಾ. ೩. ನಂದಿವೃಕ್ಷ : "ಪುಂಗವಮೆನಲ್ ನಂದಿ" (ಮಂಗರಾ. ೩೩-೦೪). [ಸಂ.]

**ಪುಂಗವಧ್ವಜ** (ನಾ). ೧. ನಂದಿಯ ಚಿಹ್ನೆಯುಳ್ಳ ಬಾವುಟ : ಮುಂಗಡೆಯ ನಪನೆಲೆಯ ಗೋಪುರ ಪುಂಗವಧ್ವಜಗುಡಿಗಳಿಂದು ಲಂಗೊಳಿಪ ಶಿವಭವನಮಂ ನಲವಿಂದ ನೋಡಿದರು (ಶಂಕರಾ. ೨-೩೦). ೨. ನಂದಿಧ್ವಜವುಳ್ಳವನು ; ಶಿವ : ಪುರುಷಪುಂಗವಂ ಪುಂಗವಧ್ವಜು ಗಾತ್ರ್ಯಾರ್ವಣಂಗೆಯ್ದನಿಸಾಸುಂ ಪೂರ್ಣನಿಮಿಷಾಕ್ಷಿಯುಂ ನಿರೀಕ್ಷಿಸಿ (ಶಾಂತೀ. ೦೩-೩೪ ವ). [ಸಂ.]

**ಪುಂಗಳಿ** (ನಾ). ಒಂದು ಬಗೆಯ ಸಸ್ಯ (?) : "ಬೇಳ ಪುಂಗ [ಪಾಠಾಂ. ಡ]ಳಿ ತಿಳುವನಿಯನಿಕ್ಕಿ" (ಮಂಗರಾ. ೪೦-೩೦). [?]

**ಪುಂಗಿ** (ನಾ). ೧. (ಸಾಮಾನ್ಯವಾಗಿ ಹಾವಾಡಿಗರು ಊದುವ) ಸೋರೆಬುರುಡೆಯಿಂದ ಮಾಡಿದ ಒಂದು ಬಗೆಯ ವಾದ್ಯ : ವಿಷ್ಣೂನ ಪಾಠವನ್ನು ಕೇಳುತ್ತ ಶೀನು ಸ್ತಂಭಿತನಾಗಿ ಕುಳಿತ. ಹಾವಾಡಿಗ ನೋರ್ವ ಪುಂಗಿಯನ್ನೂದಿದಂತಿತ್ತು (ಪಶುಪ. ೪೦೦) ; ಪುಂಗಿ ನಾದಕ ನಾಗ ಹಿಂಗ ಹೆಡೆಯೆತ್ತಿದಂಗ (ಕಿನ್ನಕಾ. ೩೬). ೨. (ಅಲಂ) ಪ್ರಭಾವ ಬೀರಿ, ಮೋಹಗೊಳಿಸುವ ಯುಕ್ತಿ : ಮೊನ್ನೆ ಸಂಜೆಯಿಂದ ನಿಂತಿದೆ ಅವಳ ನಾಲಿಗೆಯ ಆಲೆದಾಟ, ಅವಳ ಮಾತಿನ ಪುಂಗಿ (ತ್ರಿವೇ. ೩೦). ೩. ಸೊನ್ನೆ ; ಶೂನ್ಯ : ಬೇಬೇಕಾದವರಿಗೆ ದುಂದು, ಮನೀಮಂದಿಗೆ ಮಾತ್ರ ಪುಂಗಿ (ಗಂಪಾಯ. ೪೬). [← ಮರಾ. ಪುಂಗೀ. / ಪ್ರಾ. ಪುಗ್ಗ]

**ಪುಂಗಿಸೊಗೆ** (ನಾ). ಒಂದು ಊರಿನ ಹೆಸರು : ಕುದುಗೂನಾಡೊಳ್ ಪೂರ್ವ್ವವಮಧ್ಯದೇಶೇ ಪುಂಗಿಸೊಗೆನಾಮಗ್ರಾಮಂ(ಮಃ) (ಎಂ. XVIII. ೩೩೬-೦೩ : ೫೫೦ಯ ೫೫). [?]

**ಪುಂಚ** (ನಾ). (ಕರಾ) ಹುತ್ತ ; ವಲ್ಮೀಕ : ಅಲ್ಲಲ್ಲಿ ದೊಡ್ಡ ದೊಡ್ಡ ಪುಂಚ (ಹುತ್ತ) ಗಳನ್ನು ನೋಡಿದರೆ ಅರಿಯದವರಿಗೆ ಮೈ ನಡುಗು ಹುಟ್ಟುವುದುಂಟು (ದಂಡಿನಾ. ೧೭) ; ತೆಂಕಲಲ್ಲಿ ಒಂದು ಪುಂಚವಿತ್ತಂತೆ (೬೩.ಶಾ. ೦೪೫). 'ಪುತ್ತ್ರು' ಪರಾ. [← ತುಳು. ಪುಂಚ]

**ಪುಂಚ್ಯೆ**, ಪುಂಜ್ಯ, ಪುಂಜ್ಯೆ, ಪುಣಜ, ಪುಣಜಿ, ಪುಣುಜಿ (ನಾ). ಒಣ ಭೂಮಿ ; ಖುಷ್ಕಿ ಜಮೀನು : ಚತುಃಸೀಮೆಗೆ ಸಲುವ ನಂಜೆ ಪುಂಚ್ಯೆ ವಾನ್‌ಪಯಿರು ಪುನ್‌ಪೈರು . . . ಮುಂತಾದ ಸಕಲಸುವರ್ಣಾದಾಯ ಸಕಲಭತ್ತಾದಾಯ . . . ಸೇರಿಸಿ (ಎ಼. XVII. ೦೦೫-೬೦; 1428). ☞ 'ಪುಂಚ್ಯೆ' ಎಂಬ ಪದಪ್ರಯೋಗವು ತಮಿಳುನಾಡಿನ ಸಾಮೀಪ್ಯದ ಪ್ರಭಾವದಿಂದ ಆಗಿರಬಹುದು. **ಪುಂಜ್ಯ**: ಎಲ್ಲ ನಂಜವಾ ? ಪುಂಜವಾ ? ಬೈಲುಗದ್ದೆ, ಬೆಟ್ಟುಗದ್ದೆ, ಕಾಡು, ಬೀಡು ಎಲ್ಲ ಕೂಡಿ ಆಷ್ಟಾಗುತ್ತದೆಯೊ ? (ಬಾಳಿಗ. ೦೫). **ಪುಂಜೆ**: ನಂಚ್ಯ (ಜ್ಯ) ಪುಂಜೆ (ಜ್ಯ) ಕಮುಕು ತೆಂಗ್ಗು ವೃಪ್ಪು . . . ನಿಧಿನಿಕ್ಷೇಪ ಜಲಪಾಷಾಣ ಅಕ್ಷೀಣಿ ಆಗಾಮಿ ಸಿದ್ಧಸಾಧ್ಯಂಗಳುಂ (ಎ಼. XVIII. ೦೯೨-೯೬ ; 1434): ಯಿಾ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ ವಾನ್‌ಪಯಿರು ಪುನ್‌ಪಯಿರು ವಾಸಿಲುವರಿ . . . ಹಲ ಉಪಾಧಿಗಳೂ ಸಹ ಸೇರ್ರಿ ಕೊಟ್ಟೆವು (ಶಾಇ಼. IX-ii. ೯೬೬-೭ ; 1470) ; ನಂಜೆ ಪುಂಜೆ ವಾನ್‌ಪಯಿರು ಪುನ್‌ಪಯಿರು . . . ಮೊದಲಾದ ಹಲ ಉಪಾಧಿಗಳು ಸಹ . . . ಅನುಭವಿಸಿಕೊಂಡು (ಶಾಇ಼. IX-ii. ೯೬೬-೮; 1472). **ಪುಣಜ**: ಪರಿಯ ಪುಂಗಿಯ ಪೇರೊಬ್ಬೆಯ ಮುರಿದು ಕಿಡಿವ ಗುಣ್ಡಿಯ ಬಬ್ಬುಗಿಲ ದ್ವಿಸನ್ನಿಯ ಪುಣಜ ಪರಳ ನ್ನಿಯ ನಾಡ . . . ಕೂಡಿತ್ತು (ಎ಼. III (R). ನಂಜನ. ೨೬೨-೨೯; 969). **ಪುಣಜಿ** : (೪). **ಪುಣುಜಿ** : (೪). 'ನಂಜೆ' ಪರಾ.

[ದೇ. ॥ ತಮಿ. ಪುಞ್ಚೈ, ಪುನ್‌ಚೆಯ್; ಮಲ. ಪುಞ್ಚ ; ತುಳು. ಪುಂಜೊ ]

**ಪುಂಜ**₁ 'ಪುಂಚ್ಯೆ' ನೋ.

**ಪುಂಜ**₂, ಹುಂಜ₁ (ನಾ). ೧. ಗಂಡುಕೋಳಿ : ಸುಪಕ್ಷದಿಂದ ರಂಜಿಸುದು ಪುಂಜನಗ್ಗದ ಸುಮಸ್ತುವಿನಂತಿರೆ ತಟ್ಟು ಹೇಂಟೆಯೊಳ್ (ಹುತೋಟ. ೩-೭೯). ೨. (ಆಲಂ) ಸಮರ್ಥ ; ಗಟ್ಟಿಗ : ಆಗ, ಇವ ಪುಂಜ. ಇವನ ಮೇಲೆ ಬಿದ್ದರೆ ಸಣ್ಣಕಲ್ಲು ದೊಡ್ಡ ಕಲ್ಲ ಮೇಗೆ ಬಿದ್ದಂಗೆ (ಘಾಟೀಮು. ೬೦) ; ಅವ ಪುಂಜ, ಅವನ್ಗೇನು, ನನ್ನ ಬಯ್ದು ಹೊಡೆದ (ಘಾಟೀಮು. ೬೫). **ಹುಂಜ**₁ : ೧. ಅಂತು ಗೆಲ್ದು ತೊಂಡೆಚಿದ ಹುಂಜನಂ ಕೊಂಡು ಪೋಗಿ ಶ್ರೇಣಿಕನ ಮುಂದೆ ಅಭಯಕುಮಾರೋಪದೇಶದಿಂ ಬಿಟ್ಟು (ಶ್ರೀಭಾ.ಸ್ತ. ೩-೪೦ ವ) ; ಸಂಜೆಯೋಗದಶ್ವಗಳಶ್ರೀತ್ರ ಕೋಳಿಯ ಹುಂಜ ನಂದದಿ ವಾಜಿ ಹರಿಯೆ (ಶಶಿಕ. ೨೨-೨೦) ; ನಾನೊಂದು . . . . ಕುಮರೆ ಯನ್ನು ಕಂಡೆ. ಅದು . . . ಹುಂಜದಂತೆ ತಲೆಯೆತ್ತಿಕೊಂಡು ಹೇಗೆ ನಡೆಯುತ್ತಿತ್ತು ಅಂತೀರಿ ! (ಅಕ್ಕಸು. ೯೦).

[ದೇ. ॥ ತುಳು. ಪೂಂಜೆ ; ತೆಲು. ಪುಂಜು ; ಕೋತ. ಬೂಜ್ಕ್]

**ಪುಂಜ**₃ (ನಾ). ೧. ಗುಂಪು ; ರಾಶಿ ; ಸಮೂಹ : "ನಿಕರಃ . . . ಪುಂಜಃ . . . ಸ್ತೋಮಃ—ಈ ೩೯ ಸಮೂಹಂ" (ಹಲಾಯು. ೦೦೯-೦) : ತಳಿರ ಮುಗುಳ ವನಲತಾನಿಕುಂಜದಿಂ ಪ್ರಸೂನರಜದ ಪುಂಜದಿಂ (ಶಂಕರಾ. ೦-೫೮ ಗಳ) ; ಈ ಪುಣ್ಯದ ಪುಂಜವನೆನಗೆ ಕೊಟ್ಟೊಡೆ ನಿಮ್ಮ ಬಡತನಂ ತೀರ್ವುದೆನ್ನ ಮನೋರಥವಪ್ಪುದು (ಶಂಕರ. ೨-೬೯) ; ಭೂಪನಿತಿಯ ಪುಣ್ಯದ ಪುಂಜ ಮಾನುಷಭಾವವ ಪಡೆದುದೆಂಬಂತೆ . . . ಎಸೆದನು ಚಿಕ್ಕ ದೇವರಾಜನು ತೇಜದೊಳು (ಶಂಶಂ ೦-೦೦). ೨. ಮಗ್ಗದ ಹಾಸಿನಲ್ಲಿ ರುವ ರೇಷ್ಮೆಯ ಅಥವಾ ನೂಲಿನ ಲಡಿ, —ಎಪ್ಪತ್ತರಿಂದ ಎಂಬತ್ತು ಎಳೆಗಳ ಸಮೂಹ : 'ಪುಂಜಣಿಗ' ಪರಾ. [ಸಂ.]

**ಪುಂಜಗೊಳ್** (ಕ್ರಿ). ಒಟ್ಟಾಗು ; ಒಂದಾಗಿ ಸೇರು ; ಒಗ್ಗೂಡು : ಕಣ್ಗೆ ಮುತ್ತಿಟ್ಟುದಿಕ್ಕಲದಲ್ಲಿ ತಾಯಕ್ಕರೆಯ ಸಕ್ಕರೆಯ ಪುಂಜಗೊಂಡಂತೆ ಪೋಲ್ ಚಿತ್ರಮಯಧವಳಿಮಪುಳಿನರಾಶಿ (ಶ್ರೀರಾಮಾ. ೦೫೦-೨೦೯).

[ಪುಂಜ₃ + ಕೊಳ್₁]

**ಪುಂಜಣಿಗ** (ನಾ). ರೇಷ್ಮೆಯನ್ನು ಮಾರುವವನು ; ರೇಷ್ಮೆ ವ್ಯಾಪಾರಿ: ಪಿಂಜಾರ ಕರ್ಪಾಸ ಮಾರುವ ಪುಂಜಣಿಗ ರೇಶಿಮೆಯ ಮಾರುವ ರಂಜಿಸಿ ಜರತಾರ ಮಾಡುವ ಥಾಲು ಆಯುಧವ (ಶಂಶಿ. ೯-೦೩).

[ಪುಂಜ₃ − < ವಣಿಗ₁]

**ಪುಂಜಿ** (ನಾ). ಉಂಡೆ ; ಮುದ್ದೆ ; ಪಿಂಡ ; ಪದಂಗಾಸಿದ ಪೊನ್ನ ಪುಂಜಿಯ ಪೊಲಿರ್ದುದು ಕಣ್ಗೆ ಹಿಮಾಂಶುಮಂಡಲಂ (ಶಂಕರ. ೩-೯೧). [ಸಂ.]

**ಪುಂಜಿಕೆ** (ನಾ). ೧. ಒಟ್ಟಿಲು ; ರಾಶಿ : ದೆಸೆಗಳ್ ನಿಜಾಂಶುವಿಂ ರಂಜಿಸುತಿರೆ ಪುಂಜಿಸಿದ ಪೊನ್ನ ಪುಂಜಿಕೆಯಿಂದಂ ಕೊಸಗಿನ ಮರದಾಜಿಗಳಲಲ್ಲೆಸೆದಿತ್ತೆಸೆ ದಿರ್ಪುದಲ್ಲಿ ಬಜ್ಜರವಸರಂ (ಜಗ. ೯-೦೦೬). ೨. ಗೊಂಚಲು ; ಕುಚ್ಚು : ತ್ರಿದಶೇಂಗನೆ ಜನಜನನಿಗೆ ಪದೆಪಿಂ ತಾರಾವತಂಸಮಂ ಭೂಷಿಸೆ ತನ್ನದ ನೇಂದಾಮಂಡಲದ ಜೊನ್ನದ ಪುಂಜಿಕೆಯಂತಿರೆಸೆದುದವರಡಂ ಕಿಲದೊಳ್ (ಶಾಂತೀಶ್ವ. ೦೩-೨೦೬). [ಸಂ. ಪುಂಜಿಕಾ]

**ಪುಂಜಿಗೆ**, ಹುಂಜಿಕೆ (ನಾ). = ಪುಂಜಿಕೆ ೧ : ದಳ್ಳುರಿಯುಗ್ಗಡಂ ಪೊಗೆಯ ಕತ್ತಲೆ ಬೂದಿಯ ತೋರ್ಕೆವೆಟ್ಟು . . . ತಲೆಯ ಪುಂಜಿಗೆ ಕುಂದವು ತತ್ಪ್ರದೇಶದೊಳ್ (ರಾಜಶೇ. ೩೩೦ ಶಾಲ್ಯ); ಆಗ್ನೇಯಕ್ಕೆ ಕಲ್ಲ ಪುಂಜಿಗೆ ತೀಲಲು ಲಿಂಗವ ಕಲ್ಲು . . . ಪಡುವ ಜಾಲಗಟ್ಟದ ಕೆಙುವಿಂ ಶೀ (ಸು)ಮೆ (ಎ಼. XIII. ೦೬೨-೯೨ ; 1055). **ಹುಂಜಿಕೆ** : ಅಲ್ಲಿಂ ಮೂಡತ ಹೆರಹಿನ ಕೋಡಿಯ ಕಲ್ಲ ಹುಂಜಿಕೆಯ ಮೇಲ್ ನಟ್ಟ ಕಲ್ (ಎ಼. XIII. ೩೦-೯೯ : 1204). [ < ಸಂ. ಪುಂಜಿಕಾ ]

**ಪುಂಜಿಸು** (ಕ್ರಿ). ೧. ಒಗ್ಗೂಡಿಸು; ಒಟ್ಟು ; ರಾಶಿ ಹಾಕು : "ಪುಂಜಿಸು__ ರಾಶೌ" (ಕರ್ಣಾಟ): ನಿತ್ಯದಾನಕ್ಕೆಂದು ನಿಯೋಗಿಗಳ್ ತಂದು ಪುಂಜಿಸಿದ ಪಂಚರತ್ನದ ಪೊನ್ನ ರಾಶಿಗಳನರ್ಥಿಜನಕ್ಕೆ ಗೋಸನೆಮಾಡು ಬಿಡವೇಳ್ಡು (ಶಂಕರಾ. ೦೨-೫೨ ವ); ತರವೇಟ್ಟು ಮಾರ್ಗಭಂಡಾರದ ಪುಡಿಕೆಗಳಂ ಪುಂಜಿಸವೇಟ್ಟು ಸುವರ್ಣೋತ್ಕರಮಂ (ಶಾಬ್ದಾ.ಪ. ೨೯೯) ; ಬೆಳಿಯ ಮುಗಿಲ್ಗಳ್ ಪಟ್ಟಿಯ ತೊಳೆಯಂ ಪುಂಜಿಸಿದ ಮಾಟಕ್ಕಿಯಿಂದಾಂಬರ ದೊಳ್ ತೊಳತೊಳಗುವ ಮಿಂಚಿಂದದಿಳೆಯೊಳ್ ಜಲಪ್ರಳಯ ಮುಟ್ಟಿನಂ ಮಾಟೆ ಕೊಳ್ವಂ (ಅಭ್ಯಪು. ೯-೦೫). ೨. ಒಟ್ಟುಗೂಡಿಸು ; ಸಂಗ್ರಹಿಸು : ಅತ್ಯುತ್ಕಟದಿಂದ ಮಾತ್ಯಾಭೋಗಂಗಳನನುಭವಿಸಲ್ ನೋಂತರಿಂ ತೀಗಳಿಂತುಂತವರಂತೇಂ ಪುಣ್ಯಮಂ ಪುಂಜಿಸಿದರೊ ಪಿರಿದುಂ ಶ್ರೀಮಾತೀ ವಜ್ರಜಂಘರ್ (ಆದಿಪು. ೯-೩೦). ೩. ಒತ್ತು ತುಂಬು ; ತುರುಂಕು ; ಗಿಡಿ : ಮಸಿಯಂ ಪುಂಜಿಸಿದಂತುಟಪ್ಪ ತನು ನೀಲಾಂಭೋಧರಂ ದಾಡೆಗಳ್ ಪೊಸಮಿಂಚುಗ್ರವಿಲೋಚನಂ ದಿವಿಜಗೋಪಂ ಕಾರೊ ಮೇಣ್ ಕಾಳರಕ್ಕಸನೋ ಪೇಟಿನೆ ಬಂದು ತಾಗೆ ಗದೆಯಂ ಕೊಂಡೆದ್ದು ಭೀಮಂ . . . ಪೊಯ್ದನಿಳೆಯೊಳ್ ಕಿವ್ಮೀರನಂ (ಪಂಪಭಾ. ೭-೨೫); ಕಂಜಭವಂ ಕರಂ ಕಮಲವೈರಿಗೆ ಕಾಯ್ದು ತದೀಯತೇಜಮಂ ಭಂಜಿಸ ಲೆಂದು ಕತ್ತಲೆಯನಂಜನದಿಂ ವಿದಿದಿಯ್ದು ಲೋಕದೊಳ್ ಪುಂಜಿಸಿದಂ ತಿರರ್ದಿಸುವ ದುಸ್ಸಮದೊಳ್ ಪೊಲಗೆಟ್ಟು ನಿಂದ ದಿಕ್ಕುಂಜರದಂತ್ಯದಂತೆ ಬಳೆನುಂ ವಸುದೇವನುಮಿರ್ದರ್ (ನೇಮಿಪು. ೩-೭೦); ಕಂಜಗರ್ಭನು ತಮೋಗುಣವನೀ ಲೋಕದೊಳು ಪುಂಜಿಸಿದನೋ ತಥ್ಯಮೆನಲಂಧಕಾರದಿ ಬ್ರಹ್ಮಾಂಡಲೋಕವೆಸೆದಿ (ಶಾಂಕರ. ೦೭-೩೭). [ ಪುಂಜ₃ + —ಇಸು₁ ]

**ಪುಂಜೀಕರಣ** (ನಾ). ಒಟ್ಟುವಿಕೆ; ಒಗ್ಗೂಡಿಸುವಿಕೆ ; ರಾಶಿ ಮಾಡುವಿಕೆ: 'ಪುಂಜೀಕರಿಸು' ಪರಾ. [ಸಂ.]

**ಪುಂಜೀಕರಿಸು** (ಕ್ರಿ). ಒಗ್ಗೂಡಿಸು; ಶೇಖರಿಸು: ಅಲ್ಲೊಂದು ಇಲ್ಲೊಂದು ಕಡೆ ನೋಡಿ ಮೆಚ್ಚಿ, ಶ್ಲಾಘಿಸಿದ ಅಂಶಗಳನ್ನೆಲ್ಲಾ ಪುಂಜೀಕರಿಸಿ ನಿರ್ಮಿಸಿದ ಸುಖನೀಕೇತನ ಅದು (ಕಂಟಹ. ೦೪).
[ ಪುಂಜೀಕರಣ + – ಇಸು₁ ]

**ಪುಂಚ್ಳಿ** 'ಪುಂಚ್ಳಿ' ನೋ.

**ಪುಂಚ್ಳಿ** (ನಾ). ಒಂದು ಬಗೆಯ ಮರ: ಪುಂಚ (ಪೂಯಿ)–ಇವ್ವತ್ತು ಘೂಟಗಿಂತ ಯೆತ್ತರವಾಗುವದಿಲ್ಲ . . . ಕಟ್ಟಿಗೆಸಾವಮಾನುಗಳನ್ನು ಮಣಾವು ಮಾಡುವುದಕ್ಕೋಸ್ಕರ ಇದರ ಎಲೆಗಳಿಂದ ತಿಕ್ಕುವರು (ಕಹಾಗೆ. ೧೪). [ ? ]

**ಪುಂಡ** (ನಾ). ೧. ತುಂಟ; ದುಷ್ಟ: ವೇದವೆಂಬುದು ಓದಿನ ಮಾತು ಶಾಸ್ತ್ರವೆಂಬುದು ಸಂತೆಯ ಸುದ್ದಿ ಪುರಾಣವೆಂಬುದು ಪುಂಡರ ಗೋಷ್ಠಿ (ಅವಚ. ೦೦೭-೧೬೫); ಇವನ ಹಿಡಕೊಂಡು ಹೋಗೆಲೊ ಜೋಗಿ ಇವ ನಮ್ಮ ಮಾತ ಕೇಳದೆ ಪುಂಡನಾದ (ಶ್ರೀಂಕ. ೩-೦೯ ಅಮುಕ್ಷಣಂ); ಅವನ ಗೆಳೆಯರೆಲ್ಲಾ ಮನೆಮಾರಿನ ಯೋಚನೆ ಬಿಟ್ಟ ಹಳ್ಳಿಯ ಪುಂಡರು (ಕ್ಯಾಗಮ. ೨೯). ೨. ನೀತಿಗೆಟ್ಟವನು; ನಿಯಮಬಾಹಿರ: (ಕ). (ಗು). ೩. ತುಂಟತನದ; ಪೋಕರಿಸ್ವಭಾವದ: ಛೀಮಪ್ಪ ತೋಟದ ಕಬಡಾ ತಗೊಳ್ಳುವ ಬಗ್ಗೆ ಪುಂಡ ಜನರನ್ನು ಕೂಡಿಸ ತೊಡಗಿದನು (ಮಚಕ. ೮); ದಾರಿಯಲ್ಲಿ ಪುಂಡಜನರ ಹಾವಳಿ (ಜಕಮಂಕ. ೨೮೫).
[ ದೇ.₃ ತುಳು. ಪುಂಡೆ; ಕೊಡ. ಪುಂಡ. / ಮರಾ. ಪುಂಡ ]

**ಪುಂಡಗಂಡಾಯ** 'ಪುಂಡಂಗಂಡಾಯ' ನೋ.

**ಪುಂಡಗಾತಿ** (ನಾ). ಹಾದರಗಿತ್ತಿ; ಜಾರೆ: (ಕ). [ಪುಂಡ + – ಗಾತಿ₁]

**ಪುಂಡಗಾರ** 'ಪುಂಡುಗಾರ' ನೋ.

**ಪುಂಡಗಾರ್ತಿ** (ನಾ). = ಪುಂಡಗಾತಿ: (ಕ).
[ಪುಂಡಗಾರ (<ಪುಂಡುಗಾರ) + – ತಿ₁ (< – ಇತ್ತಿ)]

**ಪುಂಡತನ** 'ಪುಂಡುತನ' ನೋ.

**ಪುಂಡರೀಕ** (ನಾ). ೧. ಬಿಳಿಯ ತಾವರೆ; ಬಿಳಿಯ ಬಣ್ಣದ ಕಮಲ: "ಪುಂಡರೀಕಮೆನಿಕುಂ ಸಿತಾಂಬುಜಂ" (ಶಮ್ರಕೋ. ೩೮-೨೦). ೨. ಬಿಳಿಯ ಕೊಡೆ; ಬೆಳ್ಗೊಡೆ: ಕನತ್ಕನಕದಂಡಮಂಡಿತಪುಂಡರೀಕನಿಕರವಾವರಿಸಿ ತರ್ಕರ್ದತ್ತಲುಂ (ಶಬಂಕ್ಕ. ೬-೦೦೫ ವ). ೩. ಹುಲಿ; ವ್ಯಾಘ್ರ: "ವ್ಯಾಘ್ರಃ, ದ್ವೀಪೀ, ಪುಂಡರೀಕಃ . . . ವ್ಯಾಗಾರಿಃ–ಈ ೭ ಹುಲಿ" (ಕಹಾಹು. ೩೯-೬೩); ಲಂಬಾಯ ಪುಂಡರೀಕಂಗಳಗಂ ತಳ್ಮದಿರುತಿರ್ಪ ದೀವಸ ವಿಂಕ್ಕ ಮೃಗಂಗಳಲಿ ಭಯಮದಿನಿತಿಲ್ಲವನೋಳ್ (ಶಕ್ಕಕಾ. ೩-೯೩). ೪. ೩: ರಿಪುನಗರಂ ಕರಂ ವಿಜನವಾಗಿಯುಮಜರ್ಜನರಾಜರಾಜಿತಂ . . . ಚಪಳಭುಜಂಗಭಿಃಮನಕುಳಾಶ್ರಯಮುದ್ಗತಪುಂಡರೀಕವಿನ್ಯಾಪಮೆಗೆ ಚಿತ್ರಮಾಯ್ತನಿಪುದೀ ವಿಘ ಕಾವಣದಂಡನಾಥನ (ಎಕ. XI, ದಾವಹ. ೯೯-೬೮; ಕಾ. 1180). ೪. ಹಣೆಯ ಮೇಲೆ ಇಟ್ಟುಕೊಳ್ಳುವ ಮಣ್ಣಿನ ಗುರುತು; ಪುಂಡ್ರ. ೫. ಕಪ್ಪೆ. ೬. ಕಲ್ಪವೃಕ್ಷ: ೧, ೨, ೩, ೬: ಹರಿಸಂದೋಹವಿರಾಜಿತಂ ವಿವಿಧಪದ್ಮಾಲಂಕೃತಂ ಹಂಸಸಂಚರಣ ಪ್ರಉಡ ಉದಾತ್ತವಿಕ್ರಮಗುಣೋದ್ಯತ್ಪುಂಡರೀಕಾಂಕ(ಂ) ಸೌಂದರವಾಗಿರ್ಪ್ಪದ ಜಂದೆ ಪದ್ಮವನವಂದು ಧಾವಿಸಲ್ ವಿಷ್ಣುಭೂವರರಿರ್ಪ್ಪ ಪುರವುಂ ಸುರೇಂದ್ರಪುರವುಂ ವಿದ್ವಿಟ್ಟುರಾನೀಕವುಂ(ಎಕ. V, ಅರಸೀ.೪೯-೬; 1186). ೭. ಆಗ್ನೇಯ ದಿಕ್ಕಿನ ದಿಗ್ಗಜ: "ಐರಾವತಃ, ಪುಂಡರೀಕಃ ವಾಮನಃ ಕುಮುದಃ ಸಾರ್ವಭೌಮಃ . . . ಸುಪ್ರತೀಕಃ–ಈ ೮ ಮೂಲೆಗಳ ಕ್ರಮದಿನಿರ್ಪ ದೆಸೆಯಾನೆಗಳ್" (ಕಹಾಹು. ೦೪-೦೦೯); ಬೆದಱದುದಭ್ರಮೂರವಣ ನೊಟ್ಟಜೆಟ್ಟುದು ಪುಂಡರೀಕಮಟ್ಟುದು ಕುಮುದಂ . . . ಅದಿರ್ದುದು ಸುಪ್ರತೀಕವಿರದಾಲಿಸಿ ತತ್ಪಟಹಪ್ರಣಾದಮಂ (ಕ್ರಿಕೃಶ. ೩-೯); ಇಂದ್ರಾದಿ ದಿಕ್ಕೊಂಟಿಯಲ್ಲಿ ಕ್ರಮದಿಂದೈರಾವತ ಪುಂಡರೀಕ . . . ಸುಪ್ರತೀಕ ಮೊಂದೆಂಟು ದಿಗ್ಗಜಗಳಾದೊಡೆ . . . ಭೂಮಿಯಂ ವಹಿಸಿರ್ಪವು (ಶಶೀಕ. ೦೯೯). ೩, ೭: ಆ ವನಂ . . . ದಾನಧಾರೆಯಂತೆ ಪುಂಡರೀಕಗಂಡಚ ಮಂಡಿತಮುಮಂ . . . ಎನಿಸಿರ್ದುದು (ಶಾಚಚ. ೩-೬೯ ವ). ೮. ಬಾವುಟ; ಧ್ವಜ. ೯. ಬ್ರಹ್ಮ. ೧೦. ಕಂದುರೆಯ ಕೆನೆತ; ಹೇಷಾರವ. ೧೧. ಒಂದು ಬಗೆಯ ಸಸ್ಯ. ೧೨. ಹುತ್ತ; ವಲ್ಮೀಕ: "ದಿಗ್ಗಜದೊಳು ಮುನೀಂದ್ರನೊಳು ಪುಲಿಯೊಳು ಸಿತಾಬ್ಜದೊಳು ಛತ್ರದೊಳು ಭೇಕದೊಳು ಸರೆ ಪುಂಡರೀಕಮಕ್ಕು" (ಶುಂಗಸಾ. ೦೯೮-೯೦); "ಹುತ್ತ ಹುಲಿ ಕಪ್ಪೆ ಕಮಲಂ ಸತ್ತಿಗೆ ಮುನಿ ವಿಷ್ಣು ಬ್ರಹ್ಮ ಸುರಕುಜ ಸುರವಂ ಉತ್ತಮ ಕರಿ ಧ್ವಜ ಕಬ್ಬು ತತ್ಕೇಚಿಹ್ನನಿ ಪುಂಡರೀಕ ಪ್ರಪಂಚಂ" (ಶಾಶಳಂ. ೬).
[ಸಂ.]

**ಪುಂಡರೀಕೋದ್ಭವ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ: ಪುಂಡರೀಕೋದ್ಭವನ ಶಿರವನು ಕಡಿದು ತುಂಡಿಸಿದ ಖಂಡಪರಶುವು ರುದ್ರ ಭೂಮಿಯೊಳೆಂದಲೆದು ತಿರುಗುವವನು (ಹಕಶ. ೬೨). [ಸಂ.]

**ಪುಂಡರ್ಯ** (ನಾ). ಒಂದು ಬಗೆಯ ಸಸ್ಯ ಮತ್ತು ಕಣ್ಣಿನ ರೋಗಗಳಿಗೆ ಔಷಧಿಯಾಗಿ ಬಳಸುವ ಅದರ ಗಡ್ಡೆ: "ಪೌಂಡರೀಕಂ, ಪುಂಡರ್ಯಂ– ೨ ಪುಂಡರೀಕವೆಂಬುವ ಗಂಧದ್ರವ್ಯದ ಹೆಸರುಗಳು" (ಸಿದ್ಯಾಂತಿ. ೦೯೦). [ಸಂ.]

**ಪುಂಡಾಟ** (ನಾ). ಪುಂಡುತನ; ತುಂಟತನ: ಇವನು ಅರಮನೆಯೊಳಗಳಿಗೆ ಯಿರದ ಸ್ತ್ರೀಚೇಟಿಯೊಳು ಮೆರೆವುಚಿತ ಪುಂಡಾಟಗಳನು (ಕಂದ್ಯಾಕ. ೩೦); ಇನ್ನು ಪುಂಡಾಟ ಮಾಡಕೂಡದು (ಕಮಿಳ. ೦೬೯).
[ ಪುಂಡು₁ + ಆಟ ]

**ಪುಂಡಾಟಿಕೆ** (ನಾ). ೧. = ಪುಂಡಾಟ: ಅವಳ ಚಿಕ್ಕಂದಿನ ಪುಂಡಾಟಿಕೆ ನೆನೆದರೆ ಬಾಳಿನಲ್ಲಿ ತುಂಬ ಆಸ್ಥೆ ಇರದೇಕಾದವಳು (ಖಮೂಳಂಜಾ. ೦೨೦); ಇವನ ಪುಂಡಾಟಿಕೆಗೆ ಹೆದರಿಕೊಂಡರೆ ಈ ಊರಲ್ಲಿ ಬದುಕುವುದೇ ಕಷ್ಟ (ದೀಚಹಿ. ೦೨೨). ೨. ಬಂಡಾಯ; ದಂಗೆ: ಒತ್ತೂರಿ ಪುಂಡಾಟಿಕೆಗಳು ತಲೆಯೆತ್ತುವ ಲಕ್ಷಣಗಳು ಕಾಣಬರುತ್ತಿದೆ (ಕೂರೀಚಾ. ೦೯೫).
[ಪುಂಡಾಟ + – ಇಕೆ]

**ಪುಂಡಿ**, ಪಂಡಿ₁, ಪೂಂಡಿ, ಹಿಂಡಿ₁ (ನಾ). ೧. ಸಾಮಾನ್ಯವಾಗಿ ಹೊಲಗಳಲ್ಲಿ ಬೆಳೆದುಕೊಳ್ಳುವ ಸೆಣಬಿನಂತಹ ಒಂದು ಸಸ್ಯ; ಇದರ ಸೊಪ್ಪನ್ನು ತರಕಾರಿಯಾಗಿಯೂ ಇದರ ಕಾಂಡವನ್ನು ನಾರಿಗಾಗಿಯೂ ಬಳಸಲಾಗುತ್ತದೆ: ಲೋಲತರ ಶಿರುಕಸಾಲೆಯು ಪುಂಡಿ ತುಂಬಿ ಬಸಳೆಯು ಭಂಗಿಸೊಪ್ಪುಗಳನು . . . ಬಿಟ್ಟನಂ ಗುರುವರಂ (ಮಚಾರಿ. ೦೦-೩೫); ಪುಂಡಿ ಬೆಳೆದ ಭೂಮಿಯಲ್ಲಿ ಗೋದಿಯು ಎಂದಿಗೂ ಬೆಳೆಯಲಿಕ್ಕಿಲ್ಲ (ಮುಂಂಹಹು. ೬-೨೬೦); ಕಿವಿಯ ಹತ್ತಿರ ಏನೋ ನಾಲ್ಕಾರು ಕೂದಲು ಪುಂಡಿಯ ನಾರಿನಂತೆ ಸುರುಳಿ ಸುತ್ತಿವೆ (ಕಂಡಹಿ. ೦೦೦). ೨. ಒಂದು ಬಗೆಯ ಸಸ್ಯ: (ಕ). ೩. ಒಂದು ಬಗೆಯ ಮರ: "ಪೀಲುಃ–ಪುಂಡೀಗಿಡ" (ಸಿದ್ಯಾಂತಿ. ೧೦೬). ಪಂಡಿ₁: ೨. (ಕೃಶಿನ. ೧೦-೬೦೯). 'ಪಂಡಿಸೊಪ್ಪು' ಪರಾ. ಪೂಂಡಿ: ೨. ಅಮಟೆ, ಪುಂಡಿ (ಕೃಶಿನ. ೬೦-೦೯೬೬); ಸೊಪ್ಪುಗಳು: ಅಗಸೆ . . . ಕೊತ್ತಂಬರಿ, ಪುಂಡಿ (ಪುಂಡ ರೀಕ), ಕೆಂಪು, ನುಗ್ಗೆ, ತಂಬೆ (ಕಮ್ಮಕು. ೨೩೬). ಹಿಂಡಿ₁: ೧. 'ದೊಡ್ಡ ಹಿಂಡಿಗಿಡ', 'ಹಿಂಡಿಸೊಪ್ಪು' ಪರಾ.

ಹಿಂಡಿಯ ಸೊಪ್ಪು = ಪುಂಡಿಸೊಪ್ಪಿನಿಂದ ತಯಾರಿಸುವ ಒಂದು ಬಗೆಯ ವ್ಯಂಜನಪದಾರ್ಥ: ಹಾಲು ಮೊಸರು ತುಪ್ಪ ಉದ್ದಿನ ಕಡುಬು ಹಿಂಡಿಯ ಸೊಪ್ಪು . . . ಇವಂ ಮಂತ್ರಸಹಿತಂ ಶಿಶುವಿಂಗೆ ಮೂಜಿಸೂಳು ನಿವಾಳಿಸಿ (ಚಾಂಶ. ೦೪೫-೯); ಅಪ್ಪ ಕೊಳ್ಳಿಲಪೂ

ಆಗ್ರಜ ಕೊಳ್ಳೊ ಹಿಂಡಿಯ ಸೊಪ್ಪು ಕೋ ಸುಲಿವಣ್ಣಗಿವೆ ಕೋ (ಹೋಚಕ. ೦೮-೬೬).

**ಪುಂಡಿನಾರು** (ನಾ). ಪುಂಡಿಗಿಡದ ಕಾಂಡದಿಂದ ತೆಗೆದ ನಾರು : ನಾಡಿ ಯೆಂದರೆ ಪುಂಡಿನಾರಿನಂತಿಪ್ಪುದು (ಅಭಿನ್ನೋಕ್ತ. ೩-೨೬-೦೬); ಕೂಡಲೆ ಪುಂಡಿನಾರಿನಂಥ ತಲೆ ರಂತ್ರಸೇವಳ ಹಿಂದೆ ಇಣುಕಿತು (ಕೃಚಕು. ೩೩೬). [ ಪುಂಡಿ + ನಾರು₁ (<ನಾರ್) ]

**ಪುಂಡು₁** (ನಾ). ೧. ಪುಂಡತನ ; ತುಂಟಾಟ : ಚಿಕ್ಕನಾದವರಿ ಪೋಗಿ ಮನೆಮನೆ ಹೊಕ್ಕು ಲೂಟಿಯು ಗೈವ ಸಮಯದಿ ತಕ್ಕ ಮಾಡದೆ ನೀವು ಪುಂಡಿಗೆಯುಕ್ಕಿದಿರಿ ವಥವ (ಕೀಚ್ರಾಪ. ೬) : ಈ ಊರಲ್ಲಿ ಈ ದೊಡ್ಡ ಮನುಷ್ಯರ ಪುಂಡು ಅಡಗಬೇಕು (ಜುಕೀ. ೦೬೩). ೨. ಬಂಡಾಯ; ದಂಗೆ : ಅದೇ ಸಮಯದಲ್ಲಿ ಕೊಡಗರು ಯಾವತ್ತೂ ಪುಂಡುವಿದ್ದು . . . ಸೀಮೆಯನ್ನು ಕಟ್ಟಿಕೊಂಡು ಇರುತಿರುವಲ್ಲಿ (ಚಾಕೀಂಠ್ರ. ೨೬); ಕೂಡಲೇ ರಾಯನು ಸೈನ್ಯವನ್ನು ಕಳುಹಿಸಿ ಅವನ ಪುಂಡನ್ನಡಗಿಸಿದನು (ಕೃಕಿಚ. ೦೬). (ಗ್ರಾ). ೩. ಪುಂಡಾಟಿಕೆಯುಳ್ಳ ; ಗೂಂಡಾಗಿರಿಯ ಸ್ವಭಾವದ : ಇಂಥ ಪುಂಡು ಉಪಾಧ್ಯಾಯರನ್ನು ಹತೋಟಿಗೆ ತಂದುಕೊಳ್ಳುವುದು ಹೇಗೆ ? (ಕೆಂಗಿಕ. ೩೬). [ಪುಂಡ+ – ಉ₁]

**ಪುಂಡು₂** 'ಪುಣ್' ನೋ.

**ಪುಂಡುಗಂದಾಯ**, ಪುಂಡಗಂದಾಯ (ನಾ). ತುಂಟಾಟದಿಂದ ಶಾಂತಿಗೆ ಭಂಗ ತಂದವರ ಊರಿನ ಮೇಲೆ ಸರಕಾರದವರು ಹೇರುವ ಒತ್ತಾಯದ ತೆರಿಗೆ : ಪುಂಡುಗಂದಾಯ ಹೊರಿಸಿ ಕಾಂಗ್ರೆಸ್ಸಿನ ಸಂಪರ್ಕವಿರುವವರನ್ನು ಸಹ ಗತಿಹೀನರಾಗುವಂತೆ ಮಾಡಿಸದಿರಲಾರೆ (ಕಕುಳಾ. ೦೨೨). **ಪುಂಡಗಂದಾಯ** : ೩೫೦೦೦ ರೂಪಾಯಿ ಪುಂಡ ಗಂದಾಯ (ಪ್ಯೂನಿಟಿವ್ ಟ್ಯಾಕ್ಸ್) ಅವರಿಂದ ವಸೂಲ ಮಾಡಲಾಯಿತು (ಕಕಿಜ. ೨೪೦). [ಪುಂಡು₁+ ಕಂದಾಯ]

**ಪುಂಡುಗರಡಿ**, ಹುಂಡಗರಡಿ (ನಾ). ೧. ತುಂಟ ಕರಡಿ; ದುಷ್ಟಸ್ವಭಾವದ ಕರಡಿ : ವೈದೋಜುಪ್ಪವು ಪುಂಡುಗರಡಿ ಶೈಲಾಂತರದೊಳ್ (ಹೊತ್ತುಸು. ೩-೦೫೦). **ಹುಂಡಗರಡಿ** : ೨. ಸ್ವೇಚ್ಛೆಯಾದ ಕರಡಿ : ನೀಲತನುಗಳ ಪುಂಡಗರಡಿಗಳೊಲಗಿಸಿ ಬರೆ ರಾಘವೇಶ್ವರನೋಲಗಕೆ ಜುಂಬವರು ಬಂದರು (ಚಾಕೃಚಾ. ೨೬-೩೩). [ಪುಂಡು₁+ಕರಡಿ₁]

**ಪುಂಡುಗಾರ** 'ಪುಂಡುಗಾಜಿ' ನೋ.

**ಪುಂಡುಗಾಜಿ**, ಪುಂಡಗಾರ, ಪುಂಡುಗಾರ (ನಾ). ತುಂಟ; ದುಷ್ಟ : ಪುಂಡುಗಾಜಿರು ನಮಗಲ್ಲಿಂದು ಸಗ್ಗದ ಪುಂಡರೀಕಾಯತಾಕ್ಷಿಯರ ವಂಡೆಯನಿಸಿ ಕೊಟ್ಟನು ರಣದೊಳು ಕಡಿಖಂಡವಡೆದು ಬಂದವರಿಗೆ (ಕಜಾಹಾ. ೦೨-೧೬). **ಪುಂಡಗಾರ** : (ಕ). **ಪುಂಡುಗಾರ** : ಪುಂಡುಗಾರನಾದ ಜಯಂತನಂ ಕೂಡಿ ನಳಕೂಬರನು ದೇವವೇಶಿಯರೊಡನೆ ಮನಸ್ಸು ಬಂದಂತೆ ಯೆಲ್ಲಿಗೊ ಪೊರಟುಪೋದರು (ಹೌಗಂ೦. ೩೬೨-೨೦); ಪುಂಡು ಗಾರನವ ಭಂಡನ ಸುದ್ದಿಯ ಬಿಡುಬಿಡು ಪ್ರಿಯತಮ (ಹಕಿಜ. ೧,೪೦೬). [ಪುಂಡು₁ + – ಕಾಜಿ]

**ಪುಂಡುತನ**, ಪುಂಡತನ (ನಾ). ತುಂಟತನ ; ಗೂಂಡಾಗಿರಿ : ಪರಸತಿಯ ಬೇಟಿಯ ಪುಂಡು[ಚಾಕೀ. ದ್ರುತನದಲಿ ಹೇಡಿರನು ಬಿಟ್ಟಿರ್ಪ ಪೋಟರಿಗೆ . . . ಹೇಳದಿರು ಪುಜಿಡೀ ಅನುಭವಾಮೃತವ (ಅಭಿಕತ. ೨-೨); ಹೆಂಡತಿಗೆ ನೀನಳುಪಿ ಅಳುಪದ ಪುಂಡುತನವನು ತೋಜಿದೈ (ಕೃಚಾಕ್ರ. ೨-೨-೬); ಪಾಲೀಕನನ್ನು . . . ಪುಂಡುತನ ಮಾಡುವುದರಿಂದ ರೊಟ್ಟಿ ಗಿಟ್ಟಿಸಿದ್ದರು (ಅಭುಕ್ಕ. ೪೩). **ಪುಂಡತನ** : ಚಂಡಿತನವೆಂಬ ಓಂದಿ ಇಡಬೇಕು . . . ಪುಂಡತನವೆಂಬೊ ಓಂದಿ ರುಬ್ಬಿಡಬೇಕು (ಕುಕೆಂರ. ೨-೩೩-೨); ಪುಂಡತನವನ್ಮೊಡನೆ ಮಾಡ್ಡವ ಫಲವನುಣಲಿ (ಕುಕೆಂಗ. ೩-೪೬); ಇದು ಸಾಹುಕಾರ ಮಾಡಿಸುವ ಪುಂಡತನವೆಂದು ರಾಜಮ್ಮನಿಗೆ ತಿಳಿಯುವುದು ತಡವಾಗಲಿಲ್ಲ (ಅಚಕುಳಾ. ೨೦೬); ಪುಂಡತನ ಮಾಡಿದವ ಭಂಡತನ ಬಿಟ್ಟಾನೇ ? (ಗಾದೆ). [ಪುಂಡು₁+ – ತನ]

**ಪುಂಡುಪೋಕರಿ** (ನಾ). ನೀತಿನಿಯಮಗಳಿಲ್ಲದವನು : ಪುಂಡುಪೋಕರಿ ಗುಂಟು ಹೆಂಡತಿಮಕ್ಕಳಿಗಿಲ್ಲೀ ಕಾಲ (ಕೃಕೆಂಕ. ೦-೦೨೦-೦); ನೀನು ಮಾತ್ರ ಪುಂಡುಪೋಕರಿಯಾಗಿ ಸೋವರಿಯೊಬ್ಬಳನ್ನು ಭರಿಸಲು ಮುಂದಾಗುವೇಕೆ ? (ಕಂಗಕೋ. ೦೦೬). [ಪುಂಡು₁+ ಪೋಕರಿ]

**ಪುಂಡೆ** (ನಾ). ಪುಂಡಾಟವಾಡುವ ಹೆಣ್ಣು : ಹೆಂಡತಿಯಿಲ್ಲದ ಪುಂಡ ಬಂದು ಅವನಂಗವ ಹೊಯ್ಯಲಾಗಿ ಕಂಡರು ಗಸ್ತಿಮದ ಪುಂಡೆ[ಜಾಕ. ೮] ಯಾರೆಲ್ಲರೂ ಕೂಡಿ (ಜಸುಗಂ. ೪. ೨೩೬-೨೯). [ಪುಂಡ+ – ಎ₂]

**ಪುಂಡೇಳ್** (ಕ್ರಿ). ದಂಗೆಯೇಳು ; ಬಂಡಾಯ ಹೂಡು : ಮೂಡದಿಕ್ಕಿನೊಳ್ ಶಬರರುಂ ಮತ್ತಂ ಕಿಲಂಬರ್ ತಂಡುಮನ್ನೆಯರುಮೊಂದಾಗಿ ಪುಂಡೆದ್ದು ದಾಳಿವರಿದಾರವುಂ ಬಗೆಯದೆ ರಾಜ್ಯಮಂ ಬಾಧಿಸುತ್ತು ಮಿರಲ್ (ಕಕನ್ನ. ೦-೬೨). [ಪುಂಡು₁+ಏಳ್₁ (<ಎಟುರ್₁)]

**ಪುಂಡ್ರ** (ನಾ). ೧. ಬಿಳಿಯಪಟ್ಟೆಗಳುಳ್ಳ ಒಂದು ಬಗೆಯ ಕೆಂಪುಬಣ್ಣದ ಕಬ್ಬು : 'ಪುಂಡ್ರೇಕ್ಷು' ಪರಾ. ೨. ಹಣೆಗೆ ಇಟ್ಟುಕೊಳ್ಳುವ ಗಂಧ, ವಿಭೂತಿ, ತಿಲಕ ಮೊದಲಾದ ಲಾಂಛನ : "ತಿಳಕಂ, ತಮಾಳಪತ್ರಂ, ಚಿತ್ರಕಂ, ವಿಶೇಷಕಂ ,ಪುಂಡ್ರಂ, ಲಲಾಟಿಕಾ—ಈ ೬ ಬೊಟ್ಟು" (ಹಜಾಹು ೬೯-೬೬೭); ನೊಸಲಲಿ ಅಕ್ಷ ಪುಂಡ್ರವ ಪಟ್ಟಿಕೊಂಡವ ಹೊಲೆಯ (ಕಸೂಸು. ೬೦-೩) : ಮುಖದೊಳ್ ಪುಂಡ್ರಮನಿಟ್ಟು (ಹೌಗಂ೦. ೦೬೯-೦೬). ೩. (ಕಪ್ಪು ಕಂದು ಮೊದಲಾದ ಬಣ್ಣದ) ಕುದುರೆಯ ಮೈ ಮೇಲಿರುವ ಬಿಳಿಯ ಪಟ್ಟೆ : ಕಟಿ ಶಂಖವರ್ಣಮಸ್ತಕಲಲಾಟತಟೀ ಪುಟದೊಳ್ ಶಶಾಂಕದ್ಯುತಿಯಂ ಘಟಯಿಸಿದ ಪುಂಡ್ರಮೊಳ್ಪಂ ಘಟಯಿಸುಗುಂ (ಅಕ್ಕಶಾ. ೬-೬). ೪. ಒಂದು ದೇಶದ ಹೆಸರು ; ೲ ಇದು ಈಗಿನ ಬಂಗಾಳ, ಬಿಹಾರ ಪ್ರದೇಶ. ೫. ಚಿತ್ರ : "ಜನಪದದೊಳುಂ ತಿಲದೊಳಂ ಚಿತ್ರದೊಳಂ ಪುಂಡ್ರಮಕ್ಕು" (ಜುಂಗಶಾ. ೦೩೨-೩೬). ೬. ಹುಳು. ೭. ತಾವರೆ. ೮. ಬಿಳಿಯ ಕಮಲ : 'ಪುಂಡ್ರಾಂಬುಜ' ಪರಾ. ೯. ಹೊಳೆ ; ನದಿ : (ಕ). ೧೦. ಒಡವೆ : (ಕ). [ಸಂ.]

**ಪುಂಡ್ರಕ** (ನಾ). ೧. ಕೆಂಪು ಕಬ್ಬು. ೨. ಹಣೆಯ ಮೇಲಿಟ್ಟುಕೊಳ್ಳುವ ತಿಲಕ ಮೊದಲಾದುವು. ೩. ಪುಂಡ್ರವೆಂಬ ದೇಶ ಹಾಗೂ ಅಲ್ಲಿಯ ಜನ. ೪. ಒಂದು ಬಗೆಯ ಬಳ್ಳಿ : "ಅತಿಮುಕ್ತಃ ಪುಂಡ್ರಕಃ ವಾಸಂತೀ. ಮಾಧವೀ, ಲತಾ—ಇ ಕಾಡುಯಿರುವಂತಿಗೆ ಹೆಸರುಗಳು" (ಸಿದ್ಧಾಂತಿ. ೦೨೬): ಶವಕ್ಷೀರ, ಪುಂಡ್ರಕ, ಪದ್ಮಕ . . . ಇವಂ ಚೂರ್ಣವಂ ಮಾಡಿ ಹಾಕಿ ಹದನಲ್ಲಿಳುಹಿಕೊಂಡು ಆ ತುಪ್ಪವಂ ಪ್ರತಿ ದಿನವೂ ಸೇವಿಸೆ ಕ್ಷಯವ್ಯಾಧಿ . . . ಗುಣಮಕ್ಕುಂ (ಕಕಕ್ಕ. ೨೪೦). ೫. – ಪುಂಡ್ರ ೩ : ಅನನಮಲ್ಲದೆ ಧವಳಸ್ಥಾನಂ ತಾನಾದೊಡಕ್ಕುಮಾವ ಕಂಠತಟಿಯಂ ಸ್ಥಿನದೊಳಂಗದೆ ವಿರ(ಮ)ಳಸ್ಥಾನಂ ಪುಟ್ಟಿದೊಡೆ ಲಲಿತ ಪುಂಡ್ರಕ ನಾಮಂ (ಅಕ್ಕಶಾ. ೬-೬). [ಸಂ.]

**ಪುಂಡ್ರಲಕ್ಷ್ಮ** (ನಾ). ಕುದುರೆಯ ಮೈಮೇಲೆ ಇರುವ ಬಿಳಿಯಂ ಪಟ್ಟೆಯ ಚಿಹ್ನೆ : ಚಾಪಂ ಶ್ರೀವೃಕ್ಷಂ ಸ್ರುವೆಯುಮಂ ಸ್ವಸ್ತಿಕಮುಮಗ್ರುವಜ್ರ ಮುಮೊಂದಿ ರೂಪಕದ ಪುಂಡ್ರುಲಕ್ಷ್ಮನಿರೂಪಕಮಾ ವಾಜಿ (ಅಕ್ಕಶಾ. ೬-೩). [ಸಂ. ಪುಂಡ್ರಲಕ್ಷ್ಮನ್]

**ಪುಂಡ್ರಾಂಬುಜ** (ನಾ). ಬಿಳಿಯ ತಾವರೆ : ಶರನ್ನೀರದಸ್ತೋಮಂ ಪೋಬರುಶಿರ್ಮುದೀಗಳೆನಿಲುವನ್ನಾನಸಸ್ಥನದಿಂ ತಾವೆಟ್ಟಂದು ಮರಾಳ ಜಾಲಮೆನಸುಂ ಪೂರ್ದಿತ್ತು ಪುಂಡ್ರಾಂಬುಜೋದ್ದಾಮಶ್ರೀ ಯ ವಿಳಾಸಮಂ ದ್ವಿಗುಣಿಸುತ್ತಬ್ಜಾಕರಶ್ರೇಣಿಯೊಳ್ (ಕಜಕುಜು. ೬-೪೪). [ಸಂ.]

**ಪುಂಡ್ರಿಕೆ** (ನಾ). = ಪುಂಡಿ ೧ : ಹೊಲದ ಪುಂಡ್ರಿಕೆ, ಪುಂಡ್ರಿಕೆ, ಗೋಗು, ಪುಂಡಿ (ವ್ಯ.ಶಿ. ೯೪-೬೫೦). [<ಸಂ. ಪುಂಡ್ರಕ?]

**ಪುಂಡ್ರೇಕ್ಷು** (ನಾ). = ಪುಂಡ್ರ ೧ : ಉಗುವಳನೀರಿಂದಂ ಕದಳಿಗಳಾ ಕದಳಿಗಳ ವಣ್ಣಾ ರಸದಿಂ ಪುಂಡ್ರೇಕ್ಷುಗಳ್ . . . ಬಳಿಗಂ (ಗಿಂ೯. ೨-೦೯.) [ಸಂ.]

**ಪುಂಡ್ರೇಕ್ಷುಚಾಪ** (ನಾ). ಮನ್ಮಥ ; ಕಾಮ : ಪುಂಡ್ರೇಕ್ಷುಚಾಪನ ಮದರ್ಪಪ್ಪು . . . ಮುಂಗುರುಳ್ಗಿದ್ದು (ನವರಾ. ೫-೨೩). [ಸಂ.]

**ಪುಂಡ್ರೇಕ್ಷುದಂಡ** (ನಾ). ಪಟ್ಟೆಕಬ್ಬಿನ ಜಲ್ಲೆ : ಪುಂಡ್ರೇಕ್ಷು[ಕಾಂ. ರಸದಿಕ್ಷು]ದುಡದಿ ವಣ್ಣನಜಸುವರೆ (ಶಂಕರ. ೦೩-೫) ; ಸೋಗೆವೆರಸಿದ ಪುಂಡ್ರೇಕ್ಷುದಂಡಗಳನವರ್ಚಿ ಬಾಳವೇರ್ಗಳಿಂ ಬಿಗಿದು . . . ಅಳವಡಿಸಿದ ಸಂರಯಿಯರಲ ಪರಾಗದ ಪೊಂಜಗಲಿಯ ಮೇಲಣಸುಗೆದಳಿರಲರ್ವಾಸಿ ನೊಳರಸಿವರಸಿ ಕುಳ್ಳಿರ್ದು (ಡಾಕೇ. ೦೦-೬೦ ಪ). [ಸಂ.]

**ಪುಂನಪುಂಸಕಲಿಂಗ** (ನಾ). [ವ್ಯಾಕ] ಪುಲ್ಲಿಂಗ ಹಾಗೂ ನಪುಂಸಕ ಲಿಂಗ : ಪುಂನಪುಂಸಕಲಿಂಗಕ್ಕೆ—ರವಿ ಮೂಡಿದಂ, ರವಿ ಮೂಡಿದುದು (ಶಮದ. ೬೬ ಕ್ರಿಯೋ). [ಸಂ.]

**ಪುಂನಪ್ಪು** (ನಾ). = ಪುಂನಪುಂಸಕಲಿಂಗ : ಪುದಿಗುವುದಂತಕ ಪುಲ್ಲಿಂಗದ ಪೋಲ್ ಕಿಜದೆಡೆಗಳ್ಗಳ್ಲಿಯುಲ್ಲಂ ಸ್ತ್ರೀಲಿಂಗದೊಳಂ ಪುಂನಪ್ಪಿನೊಳಂ ಪುದಿಗುಂ ಕಿಳ (ಶಮದ. ೦೨೦ ಪ). [ಪುಂ+ನಪ್ಪು]

**ಪುಂಬುಟ್ಟ** 'ಪೊಂಬುಟ್ಟ' ನೋ.

**ಪುಂಭಾವ** (ನಾ). ೧. ತಾನು ಪುರುಷನಾಗಿರಬೇಕಾಗಿತ್ತು ಎಂಬ ಭಾವನೆ; ಗಂಡಸಿನ ಮನೋವೃತ್ತಿ : ನಾಂದವರೆ ಪತ್ರಿದಂಬರದಿಂ ದೆಸೆವರಸಿಯು ನಿತಂಬಬಿಂಬಮನಬಳಾವೃಂದಮದೀಕ್ಷಿಸಿ ಹೃದಯು ದೊಳಂದೇಂ ಪುಂಭಾವಮಂ ಪುದುಂಗೊಳಿಸಿದುದೋ (ಶಂದ್ರಕೃ. ೬-೦೩೧). ೨. [ಕಾಮಶಾ] ಪುರುಷಾಯತವೆಂಬ ಸುರತಬಂಧ : ಒರ್ವ ಗುರು ಕುಚೆ ವೃದ್ಧವಿಪ್ರನೊಳ್ ಪುಂಭಾವದಿ ಸುರತದೊಳಿರೆ (ಜ್ಞಾ.ಕಕ. ೩೬-೯೬). [ಸಂ.]

**ಪುಂವೇದ** (ನಾ). [ಜೈನ] ಗಂಡಂಜೀವಕ್ಕೆ ಹೆಣ್ಣಿನ ಮೋಹವುಂಟು ಮಾಡುವ ಕರ್ಮ; ಚಾರಿತ್ರಮೋಹನೀಯದ ಭೇದವಾದ ವೇದನೋಕಷಾಯದ ಉದಯದಿಂದ ಕಾಮಭಾವ ಹುಟ್ಟುತ್ತದೆ. ಪುಂವೇದ ಅಥವಾ ಪುರುಷವೇದದ ಉದಯದಿಂದ ಸ್ತ್ರೀಯು ಬಯಕೆಯೂ ಸ್ತ್ರೀವೇದದ ಉದಯದಿಂದ ಪುರುಷನ ಬಯಕೆಯೂ ಉಂಟಾಗುತ್ತದೆ : ಕಿಜಕಿಜದು ಬೇಗದಿಂ ಕ್ರಮಾಕ್ರಮದೊಳೆ ನಪುಂಸಕ ವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ . . . ಘಾತಿಸಿ (ಅಂಕೃ. ೦೦-೦೯ ವ) ; ಸಮನಂತರದೊಳ್ ಪುಂವೇದಪೂರ್ವಸತ್ಕರ್ಮಪರಂ ಪರಮೋಜಿಸಿ ಕಿಡಿಸಿದಂ ಹಾಸ್ಯರತ್ಯರತಿಶೋಕಭಯಜುಗುಪ್ಸೆಗಳಾಜಿ (ಶಂದ್ರಕೃ. ೦೯-೬೦). [ಸಂ.]

**ಪುಂಶಿಲೆ** (ನಾ). [ಶಿಲ್ಪಶಾ] ವಿಗ್ರಹನಿರ್ಮಾಣಕ್ಕಾಗಿ ಆಯ್ದುಕೊಳ್ಳುವ ಕಲ್ಲುಗಳಲ್ಲಿ ಒಂದು ಪ್ರಕಾರ ; ಗಟ್ಟಿಕಲ್ಲು : ಶಿಲೆಯಲ್ಲಿ ಪುಂಶಿಲೆ, ಸ್ತ್ರೀಶಿಲೆ, ನಪುಂಸಕಶಿಲೆಯೆಂದು ಮೂರುವಿಧ; ಕಂಚಿನ ತಾಳದ ನಾದ ದಂತೆ ಧ್ವನಿ ಕೊಡುವ ಶಿಲೆಯು 'ಪುಂಶಿಲೆ'ಯೆಂದೂ, ಘಂಟಾನಾದದಂತೆ ಧ್ವನಿತವಾಗುವ ಶಿಲೆಯು 'ಸ್ತ್ರೀಶಿಲೆ'ಯೆಂದೂ, ತಾಳವಿಹೀನವಾದ ಶಿಲೆಯು 'ನಪುಂಸಕಶಿಲೆ' ಯೆಂದೂ ಉಕ್ತಿಯಿದೆ. ಪುರುಷದೇವತಾವಿಗ್ರಹಗಳನ್ನು ಪುಂಶಿಲೆಯಿಂದಲೂ ಸ್ತ್ರೀದೇವತಾವಿಗ್ರಹಗಳನ್ನು ಸ್ತ್ರೀಶಿಲೆಯಿಂದಲೂ ಆಧಾರಪೀಠಾದಿಗಳನ್ನು ನಪುಂಸಕಶಿಲೆಯಿಂದಲೂ ಮಾಡಬೇಕೆಂದು ವಿಧಿಸಿದೆ (ಶಾರದ. ೬೬). [ಸಂ. ಪುಂಶಿಲಾ]

**ಪುಂಶ್ಚಲಿ**, **ಪುಂಶ್ಚಳಿ** (ನಾ). ಹಾದರಗಿತ್ತಿ ; ಜಾರೆ : "ಪುಂಶ್ಚಲಿ ಕುಲಟೆಯಸತಿ ಕುಲಪಾಂಸುಳೆ ಬಂಧಕಿ ಜಾರೆ ಪಾಣ್ಬೆಯಿತ್ವರಿಕೆಯುವಳ್" (ಪಸ್ತುಕೋ. ೩೨-೪); ಉಡಿಯಂ ಸಡಿಲಿಸಿಯುಡುವಡೆ ನಡೆ ನೋಟ್ಪಡೆ ತನ್ನ ಕಿವಿಯುಮಂ ತಲೆಯುಮನಂತಡಿಗಡಿಗೆ ತುಜುಸಿಕೊಳ್ವಡೆ ಪಡಿಮಾತೇಂ ನಿರ್ವಿಚಾರ ಪುಂಶ್ಚಲಿಯಕ್ಕುಂ (ಜಾತಕ. ೬-೬೦); ಭಾವಕಸುಖ ಸೋಲ್ತು ಕಣ್ಣಾಜುದು ಪುಂಶ್ಚಲಿಯಂ ಜಡಿದಳ್ ರಹಸ್ಯದೊಳ್ (ಚಿಕ್ಕೃ. ೫-೩೯). **ಪುಂಶ್ಚಳಿ** : "ಪಾಂಸುಳಾ, ಬಂಧಕೀ, ಸ್ವೈರಿಣೀ, ಅಸತೀ, ಪುಂಶ್ಚಳೀ... ಅಭಿಸಾರಿಕಾ—ಈ ೧೦ ಹಾದರಗಿತ್ತಿ" (ಹಲಾಯು. ೬೦-೬೪೨) ; ಪುಂಶ್ಚಳಿ ಯಂತೆ ನೀನೆಲ್ಲಿಗೆ ಪೋಗಿ ಬರ್ಪೆ (ಶಾಕುಂತ. ೬೦೬) ; ಪುಂಶ್ಚಳೀಯರ್ ಬಂದುವಕಾಂತಸೂಚಿತನಿಶಾಂತಾಂತಂಗಳಂ ಪೊದ್ದಿದರ್ (ಡಾಕೇ. ೦೦-೫೪). [ಸಂ. ಪುಂಶ್ಚಲೀ]

**ಪುಂಶ್ಚಳಿ** 'ಪುಂಶ್ಚಲಿ' ನೋ.

**ಪುಂಶ್ಯಾಂಕ** (ನಾ). ಲಿಂಗರೂಪಿಯಾದವನು : ಪುಂಶ್ಯಾಂಕ ಸದ್ಭಕ್ತ ವಾತ್ಸಲ್ಯ ಭೂಷ ಜನರಿಚ್ಛಾಸಫಲದಾಯಿ ಸಚ್ಚಿದಾನಂದರೂಪ . . . ಪೊರೆಗೆ (ಗುಕುಜಾ. ೦-೩). [ಸಂ.]

**ಪುಂಸ** (ನಾ). ೧. ಗಂಡಸು ; ಪುರುಷ : ಹಿಂಸಾನಂದ ಅಸ್ತೇಯಾನಂದ ವ್ಯಾಪೆ ಮತ್ತೆ ವಿಷಯಸಂರಕ್ಷಣಾನಂದ ಸಂಶಯವಿಲ್ಲದೆ ನಾಲ್ಕು ರೌದ್ರ ಧ್ಯಾನ ಪುಂಸರೆಯ್ದುವರು ನರಕಕೆ (ಧ್ಯಾಜಾ. ೬-೬೪) ; ಆಶೆಯನು ನಿಜದಾಸಗ್ಯೆದಿಹ ಪುಂಸರೆಲ್ಲರು ದಾಸರೆನಿಸುವರು (ಜಗನ್ನಾ. ೩೬). ೨. ಗಂಡಸುತನ ; ಪುರುಷತ್ವ ; ಪುಂಸ್ತ್ವ : ಆ ಹೆಣ್ಣುಜನ್ಮದೊಳು ಪಡೆದತಿಶಯವಾಕೆ ಪುಂಸವ ಪಡೆದುದಾಗಿರೆ ನಿಮ್ಮ ಸುತರವರಡಿಯ ಕಾಯ್ವರು (ಕರಾಜಾ. ೦೩೫-೬೬). [ಸಂ. ಪುಂಸ್]

**ಪುಂಸತ್ವ** (ನಾ). ಪುರುಷತ್ವ ; ಗಂಡುತನ : ಅವುಗಳು ತಂತಮ್ಮ ಕೆಲಸ ವನ್ನು ಮಾಡದೆ ಹೋದರೆ . . . ಪುಂಸತ್ವ ಇಲ್ಲದಾಗುವುದು (ಪ್ರಾಂಶ. I, ೪೬೨). [<ಸಂ. ಪುಂಸ್ತ್ವ]

**ಪುಂಸವನ** (ನಾ). ೧. ಷೋಡಶಸಂಸ್ಕಾರಗಳಲ್ಲಿ ಒಂದು ; ಗರ್ಭಿಣಿ ಯಾದವಳಿಗೆ ಗಂಡುಮಗು ಆಗಲೆಂದು ಮಾಡುವ ಒಂದು ಶುಭ ಸಂಸ್ಕಾರ ; ಸೀಮಂತ : ಅವನೀಶ್ವರನಾಗಳ್ ಪುಂಸವನಂ ಮೊದ ಲಾದ ಸಕಲಮಾಂಗಲ್ಯಮಹೋತ್ಸವಮಂ ಮೆಜೆದಂ (ಶಂಗಾಜಾ. ೩-೦೦೩); ಇನಕುಲಾಧೀಶ್ವರಂ . . . ಪುಂಸವನಸೀಮಂತಮಂ ತಾಂ ಚಾರುಲೋಚನೆಗೆ ವಿಸ್ತರಿಸಿದಂ (ಕ್ಷೀಜೈಶಾ. ೦೯-೩೬) ; "ಪುಂಸವನ" ವೆಂದರೆ ಗಂಡು ಮಗುವು ಆಗಬೇಕೆಂದು ಮಾಡುವ ಸಂಸ್ಕಾರವು (ಅಭೀಕ. ೧೨೨). ೨. ಗಂಡಸಿನ ಸ್ನಾನ. ೧. ೨. ಸುವಿದಿತಮಿನಿತುದಿನಂ ಸ್ತ್ರೀಸವನಂ ನಿನಗೆಂದು ಕಾಂತೆ ಪುಂಸವನಂ ಮಾಡುವುದೆಂದರ್ಥಾಂತರದಿಂದ ಮನೀಶಂ ಸರಸಮಾಡಿ ಕಾಡುಗುಮೆಂದೋ (ಚಿಕ್ಕೃ. ೩-೮೬). [ಸಂ.]

**ಪುಂಸ್ಕೋಕಿಲ**, **ಪುಂಸ್ಕೋಕಿಳ** (ನಾ). ಗಂಡುಕೋಗಿಲೆ. ಉನ್ಮದ ಮಧುಕರಝಂಕಾರಮಂ ಕೌಮುದೀಸಂಪದಮಂ ಪುಂಸ್ಕೋಕಿಲಾಲಾಪ ಮನಲೆವೆಲರಂ ಚಾರ್ತಗೆಯ್ಕುಂ ಮನೋಜಂ (ಜಲ್ಹಕೃ. ೩-೨೯); ತಿಳಿವಲ್ ವಾಸಂತಿಯಂ ಸಂದಿಸಿ ಪುಗಲೆನೆ ಪುಂಸ್ಕೋಕಿಲಂ . . . ತಿಳಿಪಿದಂ ಪ್ರೇಮ ಕಾಂತಂ ವಸಂತಂ (ಅಜಕೃ. ೬-೬೪). **ಪುಂಸ್ಕೋಕಿಳ** : ಮಧುಕರ ನಿಕ ರಮುಂ ಪುಂಸ್ಕೋಕಿಳಕಳಾವಮುಂ ರಾಜಕೀರಕದಂಬಕಮುಂ ಮುಂದೆ ನಡೆಯಜುದೋಲಗಿಸುತ್ತುಂ ಬರೆ (ಕಾಂಕೃ. ೬-೦೨೮ ವ). [ಸಂ.]

**ಪುಂಸ್ಕೋಕಿಳ** 'ಪುಂಸ್ಕೋಕಿಲ' ನೋ.

**ಪುಂಸ್ತ್ರೀಲಿಂಗ** (ನಾ). [ವ್ಯಾಕ] ಪುಲ್ಲಿಂಗ ಹಾಗೂ ಸ್ತ್ರೀಲಿಂಗ : ಪುಂಸ್ತ್ರೀ ಲಿಂಗಕ್ಕೆ—ಇವರ್ ಪುರುಷರ್, ಇವರ್ ಸ್ತ್ರೀಯರ್ (ಶಮದ. ೬೬ ಕ್ರಿಯೋ). [ಸಂ.]

**ಪುಂಸ್ತ್ವ** (ನಾ). ೧. ಪುರುಷತ್ವ ; ಗಂಡುತನ. ೨. ವೀರ್ಯ; ರೇತಸ್ಸು. ೩. [ವ್ಯಾಕ] ಪುಲ್ಲಿಂಗ. [ಸಂ.]

**ಪುಕಪುಕ** (ನಾ). ಹೆದರಿಕೆಯಿಂದ ಎದೆ ಬಡಿದುಕೊಳ್ಳುವುದನ್ನು ಸೂಚಿಸುವ ಒಂದು ಅನುಕರಣಪದ : ಧೈರ್ಯ ಮಾಡಿ ಹೊರಟಿದ್ದೇನೋ ಸರಿ ; ಆದರೆ ಒಳಗೆ ಪುಕಪುಕ ಎನ್ನುತ್ತಲೇ ಇದೆ (ಕೂಃ).

**ಪುಕಸಟ್ಟೆ** 'ಪುಕ್ಕಟೆ' ನೋ.

**ಪುಕಸಾಟೆ** 'ಪುಕ್ಕಟೆ' ನೋ.

**ಪುಕಳಿ** 'ಪುಕುಳಿ' ನೋ.

**ಪುಕಾರಿಸು** (ಕ್ರಿ). ೧. ಕೂಗು ; **ಚೀರು** ; ಕಿರಿಚು : ಆ ಪದಕವಂ . . . ಪ್ರೀತಿಯಿಂ ಧರಿಸಲದು ಸವಾಹಕ್ಕತಿಯಾಗಿ ಪುತ್ರರಂಗೈಯಿಲದು ಬಿಸುಟೋಡಿ ಪುಕಾರಿಸಲ್ ಅರಸನರಿದು ಬೆರಗಾಗಿ (ರಮೇಶ್ವಾ. ೨೨೨-೦೯). ೨. ಸಾರು ; ಕೂಗಿ ಹೇಳು : ದುಡ್ಡಿನ ಚೀಲ ಹೊತ್ತುಕೊಂಡು ಸಾಲ ಬೇಕೆ ಎಂದು ಸವಾಲು ಪುಕಾರಿಸುತ್ತ ತಿರುಗುತ್ತಿದ್ದರೆ ? (ಆಠಹ. I, ೦೦). [ಪುಕಾರು + — ಇಸು]

**ಪುಕಾರು, ಪುಕಾರೆ** (ನಾ). ೧. ಗದ್ದಲ ; ಗಲಾಟೆ : ಕಿಲ್ಲೆದಾರರೂ ಕೊತ್ವಾಲರೂ ನಾಳೆ ಬರುವ ಬಳ್ಳಾರಿ ಲಷ್ಕರ ಸರಬರಾಯಿಯೂ ತುಸ ಪುಕಾರಿಲ್ಲದಂತೆಸಗ ಪೇಳು (ಆಕಾರ. ೩೧–೩೯). ೨. ಆಕ್ಷೇಪಣೆ ; ತಕರಾರು ; ದೂರು : ಅವರ ಗೈರ್‌ಹಾಜರಿ ಕಾಲದಲ್ಲಿ ಪುಕಾರಿಲ್ಲದೆ ಕೆಲಸ ನಡೆಯಲು ತಮ್ಮ ಬಂಧುಮಿತ್ರರನ್ನು ತಮ್ಮ ಜವಾಬ್ದಾರಿಯ ಮೇಲೆ ನೇಮಿಸಬೇಕು (ಗ್ರಾಮಾಕೋ. ೬) ; ನಾಳೆಯ ದಿನ ಇಲ್ಲದ ಪುಕಾರುಗಳಿಗೆ ಅವಕಾಶವಾಗುತ್ತೆ (ಮಕೇ. ೦೦) ; ಪ್ರತಿದಿನವೂ ಇವನ ಮೇಲೆ ಒಂದಲ್ಲ ಒಂದು ಪುಕಾರು ಇದ್ದೇ ಇರುತ್ತದೆ (ಕಳಕಾ. ೬೯). ೩. ಅಪವಾದ ; **ಆಡಿಕೆ** : ಇನ್ನೂ ಏನೋ ಇರಬೇಕು, ಇಲ್ಲದಿದ್ದರೆ ಇಷ್ಟು ಪುಕಾರು ಹೇಗೆ ಹುಟ್ಟೀತು ? (ಅನಾಕ. ೩೯) : ಪುಕಾರು ಇಲ್ಲದಂತೆ ನೋಡಿಕೊಳ್ಳಿ (ಸಾತ್ರಿ. ೩೬). **ಪುಕಾರೆ** : ೧. ಕಳ್ಳರು ಬಂದಂತೆ ಏನಾದರೂ ಪುಕಾರೇ ಯುಂಟಾದ ಕೂಡ್ಲೆ . . . ತಾಕೀದ್ ಮಾಡುವದು ಸಹ ಪೋಲೀಸ್ ಪಟೇಲನ ಕಾರ್ಯವಾಗಿರತಕ್ಕದ್ದು (ಗ್ರಾಮಾಕೋ. ೪ ಖಿಅ೯). ೩. ನೀವೇ ಅವರಾಗಿ ಇದ್ದಿದ್ದರೆ ಈ ಏಲು ದೇಶದಲ್ಲೆಲ್ಲ ಪುಕಾರೆ ಎಬ್ಬಿಸುತ್ತಿತ್ತಲ್ಲ ! (ಆಶ್ವಾರು. ೦೯೭).

**ಪುಕಾರಾಗು, ಪುಕಾರು ಆಗು**=ಗಲಾಟೆಯಾಗು : ವಿಷಯವು ಬಯಲಾಗಿ ಎಲ್ಲರ ಕಿವಿಗೂ ಬೀಳು : ಈರ ಒಂದು ದಿನ. . . ಹೆಂಡತಿಯನ್ನು ಚೆನ್ನಾಗಿ ಬಡಿದ. ಅದು ಊರೆಲ್ಲೆಲ್ಲಾ ಪುಕಾರಾಯಿತು (ಅವಾ. ೬೯) ; ಕಳಲೆಯ ನಂಜರಾಜನು ಮಾತ್ರ ಕೊಂಚವೂ ಪುಕಾರಾಗದಂತೆ ಹತ್ತುಸಹಸ್ರ ಸೈನ್ಯವನ್ನು ಸಿದ್ಧಗೊಳಿಸಿಟ್ಟನು (ಶ್ರೀಣಾರು. ೦೦೬) ; ಪುಕಾರು ಆಗದೆ ಇದ್ದ ಹಾಂಗೆ ಅವನ್ನ ಸುಟ್ಟ ಹಾಕಿ ಬಿಟ್ರಂತೆ ಕಾಡಿನಾಗೆ (ಮಕವು. ೩೦೩).

**ಪುಕಾರು ಮಾಡು** = ಗಲಾಟೆ ಮಾಡು ; ಕೂಗೆಬ್ಬಿಸು : ಗರಡಿಮನೆ ಹೊರಸೂರಿನಲ್ಲಿ ಬೆಂಕಿ ಉರಿ ಎದ್ದದ್ದು ಕಂಡು, ಪುಕಾರು ಮಾಡಿದ್ದರಿಂದ, ಬೆಂಕಿ ಹಾಕಿದವನು ಕಾಡೊಳಗೆ ಓಡಿಹೋದ (ರಾಕೇಂದ್ರ. ೨೬೩) ; ಉಣಲಿಕ್ಕೆಂದು ಕಾಡಿದೊಡೆ ಶಂಕೆಯಿಂದಿವರು ರಾಕ್ಷಸರುದಿಸಿದರೆಂದು ಪೋಡಿ ಪೋಗಿ ಪುಕಾರು ಮಾಡುವುದು ಜನರೆಲ್ಲಾ ನೆರೆದು ವಿಚಾರಿಸಿ (ರಮೇಶ್ವಾ. ೬-೦೩೬) : ಮಾವನೂ ನೀನೂ ಸೇರಿಕೊಂಡು ಏನೇನೊ ಪುಕಾರು ಮಾಡ್ತಿದ್ದೀರಂತೆ ? (ಮಕವು. ೩೩೦). [← ಹಿಂ. ಮರಾ. ಪುಕಾರ್]

**ಪುಕಾರೆ** 'ಪುಕಾರು' ನೋ.

**ಪುಕುಳಿ, ಪುಕಳಿ** (ನಾ). ೧. ಸ್ತ್ರೀಯ ಜನನೇಂದ್ರಿಯ ; ಯೋನಿ : (೬). ೨. ಮಲದ್ವಾರ : (೬). **ಪುಕಳಿ** : (೬). 'ಪೂಕು'. 'ಮುಕುಳಿ' ಪರಾ. [ದೇ. ॥ ತುಳು. ಪುಕುಳಿ]

**ಪುಕ್ಕ₁** (ನಾ). ೧. ಹೇಡಿ ; ಅಂಜುಬುರುಕ : ಪಕ್ಕನೆ ನಕ್ಕರದಂ ಕಂಡಕ್ಕಜ ಪಿಂಗೆ ಗೊಳ್ಳನೆಲ್ಲರುಂ ಕೈಪೊಯ್ದುಂ ಪುಕ್ಕಮಹ ಜೈನಪತ್ರಿಕೆದಕ್ಕಂ ನೀಡಿದುದು ನಗ್ನಕುಬ್ಜಕಂ ಚಿತ್ರಂ (ಹಾಠಾಶ್ವ. ೪-೦೩-೬೦) ; ನಾನು ಅವರ ಜೊತೆಗೆ ಹೋಗುತ್ತೇನೆ. ಅವರೇನೂ ನಿಮ್ಮಂತೆ ಪುಕ್ಕರಲ್ಲ (ಕೇಶ್ರಕ. ೦೦೪) ; ಅಷ್ಟು ಪುಕ್ಕನಾಗಿದ್ದರೆ ಉಮೇದಿನಿಂದ ಹೊರಟದ್ದು ಯಾಕ ನೀನು ? (ಮುಃಕಕ್ಕ. ೬೦). (ಗ್ರಾಂ). ೨. ಅಂಜುವ ; ಹೆದರುವ : ಈ ಜನಸ್ಥಾನವು ನಮ್ಮಂಥ ಪುಕ್ಕಜನರಾದರೂ ನಿರ್ಭೀತಿಯಿಂದ ಸಂಚಾರ ಮಾಡಲಿಕ್ಕೆ ಯೋಗ್ಯವಾಗಿರುತ್ತದೆ (ಉಠಾಃ. ೩೦) ; ನಿನ್ನ ಜಾತಿಯೇ ಪುಕ್ಕಜಾತಿ (ಜಾಡಳ. ೦೦೦). [ಪುಕ್ಕ₁ + — ಅ]

**ಪುಕ್ಕ₂** 'ಪುಚ್ಛ₂' ನೋ.

**ಪುಕ್ಕಟೆ, ಪುಕಸಟ್ಟೆ, ಪುಕಸಾಟೆ, ಪುಕ್ಕಟ್ಟೆ, ಪುಕ್ಕಸಾಟೆ, ಪುಗಸಟ್ಟೆ, ಪುಗಸಾಟೆ, ಪುಕ್ಕಟೆ** (ಅ). ೧. ಬಿಟ್ಟಿಯಾಗಿ; ಉಚಿತವಾಗಿ; ಧರ್ಮಾರ್ಥವಾಗಿ : ಇಕ್ಕದೆಡೆಯದೆ ಬಿತ್ತಿ ಬೆಳೆಯದೆ ಪುಕ್ಕಟೆಯ ಸ್ವರ್ಗಾದಿ ಭೋಗವು ಸಿಕ್ಕಲರಿವುದೆ (ಕುಜ್ಞಾಉ. ೪-೯೬) ; ಪಕ್ಕಕೋದುಪವಾಸ ಪುಕ್ಕಟೆ ಶ್ರೀತೊಲಸಿ ಸಿಕ್ಕಿಸಿಕ್ಕಿದಲಿ ಹರಿನಾಮ ಭವಭವದಿ ಸಿಕ್ಕಿ ಸಾಯುವದು (ಸರ್ವಜ್ಞ. ೧೦೪) ; ನಾನು ಔಷಧಿಗೆ ಬಂದೆ . . . ನೀವೂ ಪುಕ್ಕಟೆ ಕೊಡಬೇಕಾಗಿಲ್ಲ (ಕುಸುಸಂ. ೬೦). ೨. ವ್ಯರ್ಥವಾಗಿ ; ಸುಮ್ಮಸುಮ್ಮನೆ ; ನಿಷ್ಪ್ರಯೋಜಕವಾಗಿ : ನೀವು—ನಿಮ್ಮ ಮಗ, ಮನಸಿನಿಂದ ಪ್ರೇಮದಿಂದ ಕಲಿಸುತ್ತೀರಿ. ಇತರರು ಏಕೆ ಪುಕ್ಕಟೆ ತಲೆಯೊಡಕೊಳ್ಳಬೇಕು (ಕ್ರೀಮೂಕ್ರ. ೨೧೬) ; ಇಲ್ಲಿಗೆ ಬಂದು ನಾನು ಪುಕ್ಕಟೆ ಮೆಯ್ಯುತ್ತಿರಲಿಲ್ಲ (ಆಠಹ. II, ೨೬). **ಪುಕಸಟ್ಟೆ** : ೧. ಪಂಚಾಯ್ತಿಮೆಂಬರುಗಳಿಗೆಲ್ಲ ಪುಕಸಟ್ಟೆ ಕ್ಷೌರ ಮಾಡುತ್ತೇನೆ (ಕಂಗಳ. ೬೩). **ಪುಕಸಾಟೆ** : (೬). **ಪುಕ್ಕಟ್ಟೆ** : ೧. ಸ್ವಾಮಿ, ಇವರು ಪುಕ್ಕಟ್ಟೆ ಕೆಲಸ ಮಾಡುತ್ತಿದ್ದಾರೆ (ಕೂಕಾಶ. ೦೬೦) ; ಸಿಪಾಯಿಗಳಾದವರಿಗೆ ಪುಕ್ಕಟ್ಟೆ ಪ್ರಯಾಣದ ಸೌಕರ್ಯವಲ್ಲದೆ ಮತ್ತಾವ ಸೌಕರ್ಯವನ್ನೂ ಒದಗಿಸುವುದಿಲ್ಲ (ಕ್ರಪ್ರಾ೩. II, ೪೪೦). **ಪುಕ್ಕಸಾಟೆ** : ೧. ಅದೇನು ಪುಕ್ಕಸಾಟೆ ಬಂದು ಬಿಡುತ್ತೇನು ? (ಕೂಃ). **ಪುಗಸಟ್ಟೆ** : ೧. ರಾಜಶ್ರೀಮಿಲ್ಲಿನ ಷೇರುಗಳನ್ನು ಪುಗಸಟ್ಟೆ ಕೊಟ್ಟರೂ ಕೊಳ್ಳುವವರಿರಲಿಲ್ಲ (ಕಾಟಕ. ೨) ; ಸುಮ್ಮನೆ ಪುಗುಸಟ್ಟೆ ಅನ್ನ ಹಾಕುತಾ ಇರಲಿಲ್ಲ (ಜಾಹೀರ. ೬೩). **ಪುಗಸಾಟೆ** : ೧. ಇನ್ನೊಂದು ಸಾರಿ ಹುಟ್ಟಿ ಬರಬೇಕು ಪುಗಸಾಟೆ (ದುಂಡಿಕ. ೧೦೩). **ಪುಕ್ಕಟೆ** : ೨. ಪುಕ್ಕಟೆ ಕಳೆದ ಕಾಲೇಜದಲ್ಲಿ ಸಮಯವನ್ನು (ಸ್ವಕ್ಷಕ. ೦೦೯) ; ಬಂಜೆಯಾಗಿ ಬಂದ ಗಿರಿಜಾ ಸಪ್ಪ ಅಪತ್ಕದ ಪುಕ್ಕಟೆ ಅಭಿಧಾನದಿಂದ ಖುಷಿಯಾಗುತ್ತಿದ್ದಳು (ಆಠಹ. II, ೪೪೬).

**ಪುಕ್ಕಟೆ ಬಸವ** = (ಆಲಂ) ಬಿಟ್ಟಿಯಾಗಿ ಕೆಲಸ ಮಾಡುವ ವ್ಯಕ್ತಿ : ಬಿಟ್ಟಿ ಕೆಲಸವನ್ನು ಮಾಡಿಸಿಕೊಳ್ಳುವವರು ಈ 'ಪುಕ್ಕಟೆಬಸವ ' ನಿಗಾಗಿ ಅಲೆದಲೆದು ಹುಡುಕಬೇಕಾಗಿರಲಿಲ್ಲ (ಕಳಕು. ೩).

[ ← ಮರಾ. ಪುಕಟ್, ಪುಕಾಸಾಠೀ. /ತುಳು. ಪೊಕ್ಕಡೆ ]

**ಪುಕ್ಕಟ್ಟೆ** 'ಪುಕ್ಕಟೆ' ನೋ.

**ಪುಕ್ಕತನ** (ನಾ). ಅಂಜುಗುಳಿತನ ; ಪುಕ್ಕಲು : ಅತಿಸೂಕ್ಷ್ಮತನವು ಪುಕ್ಕತನಕ್ಕೆಳೆಸುತ್ತದಲ್ಲವೆ ? (ಗಾಳಗು. ೬೩) ; ಮೊದಲಿನ ಪುಕ್ಕತನ ಈಗ ಅವನಲ್ಲಿ ಉಳಿದಿರಲಿಲ್ಲ (ಮಕಕ. ೦೩೪). [ಪುಕ್ಕ₁ + — ತನ]

**ಪುಕ್ಕಲ** (ನಾ). ಹೇಡಿ ; ಪುಕ್ಕ : ಮೊದಲು ಧೈರ್ಯದಿಂದಿದ್ದ ಕೆಲವರು ಈ ಗೋಸಾಟವನ್ನು ಕೇಳಿ ಪುಕ್ಕಲರಾಗುತ್ತಿದ್ದರು (ರಾಹಃ. ೦೬೬).

[ಪುಕ್ಕಲು + —ಅ]

**ಪುಕ್ಕಲತನ** 'ಪುಕ್ಕಲುತನ' ನೋ.

**ಪುಕ್ಕಲಿ** (ನಾ). ಹೆದರುವ ಸ್ವಭಾವದವಳು; ಅಂಜುಬುರುಕಿ : ಅಯ್ಯೋ ಪುಕ್ಕಲಿ, ಕಸ್ನಿಗೆ ಅಂಜಿನ ಹಚ್ಚಿಕೊಂಡು ಅಡಿಗೆಮನೇಲಿ ಬಿದ್ದಿರೋಕೆ ಸರಿ ನೀನು (ಕಂಕಳ. ೦೯೯). [ಪುಕ್ಕಲು + — ಇ]

**ಪುಕ್ಕಲು** (ನಾ). ೧. ಅಂಜಿಕೆ ; ಭಯ ; ಭೀತಿ : ಭರಮ್ಮೆಹೆಗ್ಗಡೆಯವರು ಶ್ರೀಮಂತರಾಗಿದ್ದರೂ ಸರಕಾರ, ಪೋಲೀಸು ಎಂದರೆ ಅವರಿಗೆ ತುಂಬ ಪುಕ್ಕಲು (ಮಲೆಮ. ೩೩೮). (ಗು). ೨. ಅಂಜಿಕೆಯುಳ್ಳ ; ಹೆದರುವ : ಅಪರಾಧಿಗಳು ಯಾವಾಗಲೂ ಪುಕ್ಕಲು ಸ್ವಭಾವದವರು (ಕನ್ನಕೀ. ೦೮೯); ಈ ಪುಕ್ಕಲುಮಾತುಗಳು ನಿನಗೆ ಸಲ್ಲವು (ಕಾಂತಕ. ೨೩); ಮೊದಲೇ ಅವಳದ್ದು ಪುಕ್ಕಲು ಜೀವ. ಅದೂ ಆ ಹೊತ್ತಿನಲ್ಲಿ ಬಂದರೆ ಹೆದರುವುದು ಸ್ವಾಭಾವಿಕ (ದೀಕಹ. ೨೧೩).
[ಪುಕ್ಕು₁ + – ಅಲು (< – ಅಲ್₂). / ತುಳು. ಪುಕ್ಕಲೆ; ಕೊಡ. ಪುಕ್ಕೀಲೇ]

**ಪುಕ್ಕಲುತನ, ಪುಕ್ಕಲತನ** (ನಾ). = ಪುಕ್ಕತನ : ಛೆ! ಎಲ್ಲಾ ಪುಕ್ಕಲುತನ (ಮುಜಮ. ೧೯೭); ವಾರ್ತಾಪತ್ರಿಕೆಗಳ ಪುಕ್ಕಲುತನವನ್ನೂ ಮುಂದಾಳುಗಳ ಡೋಲಾಯಮಾನವಾದ ನೀತಿಯನ್ನೂ ಕಂಡು, ಸ್ವತಂತ್ರವಾದ ಮತ್ತು ಧೈರ್ಯದಿಂದ ಕೂಡಿದ ಪತ್ರಿಕೆಯ ಅಗತ್ಯದ ವಿಷಯದಲ್ಲಿ ಅವನಿಗೆ ಸಂಶಯ ಉಳಿಯಲಿಲ್ಲ (ದಾದಾಸ. ೩೦). **ಪುಕ್ಕಲತನ** : ಅವಳ ಪುಕ್ಕಲತನಕ್ಕೆ ಚಪ್ಪಾಳೆ ತಟ್ಟಿ ನಗಬೇಕು! (ಮರುವ. ೦೦೨); ಅವಳ ತೌರುಮನೆ ಯವರೂ ಕೂಡ ಅವಳ ಈ ಅತಿಯಾದ ಪುಕ್ಕಲತನಕ್ಕೆ ಹಾಸ್ಯ ಮಾಡಿದ್ದುಂಟು (ಕಾಗೆ. ೦೦೦).　[ಪುಕ್ಕಲು + – ತನ]

**ಪುಕ್ಕಸಾಟೆ** 'ಪುಕ್ಕಟೆ' ನೋ.

**ಪುಕ್ಕಿ** (ನಾ). = ಪುಕ್ಕಲಿ : ಕುಮುದಿನಿಯು ಎಷ್ಟಾದರೂ ಹೆಂಗಸು, ಆಕೆಯು ಪ್ರಸಂಗವಿಶೇಷದಲ್ಲಿ ಪುಕ್ಕಿಯಾದಳೆಂದೂ ಅನ್ನಬಹುದು (ಕುಮುಂ. ೧೭೧)
[ ಪುಕ್ಕ₁ + – ಇ₂ ]

**ಪುಕ್ಕು₁** (ನಾ). ಅಂಜಿಕೆ ; ಹೆದರಿಕೆ ; ಭಯ : "ಭೀರುತ್ವದೊಳ್ ಯೋನಿಯೊಳ್ ಪುಕ್ಕು" (ಕಾವ್ಯಕುಂ. ೭೯); ಇನ್ನು ಕಾನೊಬ್ಬಳೇ ಹೋಗಬೇಕು. ಕಮ್ಮಣ್ಣಿ ಕಳಿಯುವವರೆಗೆ ಮಾತ್ರ ಸ್ವಲ್ಪ ಪುಕ್ಕು (ಹೂಸಕ್ಕ. ೯೯); ಜನ ರಕ್ತರೇದನಿಸಿದರೂ ಅವರಲ್ಲಿ ಬೇಗನೆ ಪುಕ್ಕು, ಹೇಡಿತನಗಳು ಮೆಲ್ಲನೆ ಸೇರಿಕೊಳ್ಳುವುವು (ಮುಳ್ಳಕ್ಕ. ೩೧).

**ಪುಕ್ಕಾಗು** = ಹೆದರು ; ಅಂಜು : ಬ್ರಾಹ್ಮಣರೆಲ್ಲ ಅದಕ್ಕೆ ಪುಕ್ಕಾಗಿ . . . ನಾರಣಪ್ಪನ ಮನೆಯಿಂದ ಬಂದು ನಿಂತು ತೆರೆದ ಹೆಬ್ಬಾಗಿಲನ್ನು ನೋಡಿ ಭಯಗ್ರಸ್ತರಾದರು (ಸಂಸ್ಕಾರ. ೫೩).
[ ದೇ.॥ ತುಳು. ಪುಕ್ಕು, ಪುಕ್ಕ್; ಪರ್ಜಿ. ಪುರ್ಕ್ ]

**ಪುಕ್ಕು₂** 'ಪೂಕು' ನೋ.

**ಪುಕ್ಕೊಳ್ಳಿ** (ನಾ). ಒಂದು ಬಗೆಯ ಭೂಮಿ : ಸ್ವಸ್ತಿಶ್ರೀಪಾನಿತಾಲಮರ ಆಬ್ಬರಾನಾರದಿಗೆ ಕಕ್ಕಿಪಳ್ಳಿಯೋನ್ ಪುಕ್ಕೊಳ್ಳಿ ಕೊಟ್ಟು ಸರ್ವ್ವಪರಿಹಾರಮ್ ಕೊಟ್ಟರ್ (ಎಕ. ೪I, ಮೂಡಿಗೆ. ೨೬–೪, ಸು. ೪೫೦ ?).　[?]

**ಪುಗಡಿ** 'ಪುಗಡಿ' ನೋ.

**ಪುಗರಿ** (ನಾ). (?) : ಈಶಾನಂಗೆ ಸೀಮೆ ನೆಡುಮೊಜಡಿಯಾ ಪುಣಸೆ ಪುಗರಿಯಾ ಎಡೆಯೆ ಬೆಟ್ಟಸ್ಸ ಪಳ್ಳಮೆ (ಎಕ. IX (೩), ಕಂಗಳೂ. ೧೫೦–೯೯; ೩೨೫).　[ ? ]

**ಪುಗಲ್** 'ಪುಗಿಲ್₂' ನೋ.

**ಪುಗಸಟ್ಟೆ** 'ಪುಕ್ಕಟೆ' ನೋ.

**ಪುಗಸಾಟೆ** 'ಪುಕ್ಕಟೆ' ನೋ.

**ಪುಗಿಯಿಸು** 'ಪೊಗಿಸು' ನೋ.

**ಪುಗಿಲ್₁, ಪುಗಿಲು₁, ಹುಗಲು, ಹುಗಿಲು, ಹುಗುಲು, ಹೊಗುಳು** (ನಾ). ೧. ಪ್ರವೇಶ : ರಾಜಪುರಂಪರ್ಗೆ ಪುಗಿಲಿಲ್ಲ (ಕಾಶಿ. X, ೧೬೬-೩ : ೭೨ರ ೩೩) : ರಸಭಾವಾಭಿನಯಂಗಳ್ ಪೊಸಪೆ ಪುಗಲ್ ಪೊಸಪೆ ಚಟ್ಟಗಳ್ ಪೊಸವೆ. . . ಎನೆ ಪೊಸಯಿಸಿದಳಾಕೆ ನಾಟ್ಯಾಂಗಮಂ (ಆಂಪು. ೯-೨೩); ರಸ ಭಾವದ ಕಟ್ಟಿಂದಮೆನೆ ಪೊಸದೆಸಮ[ಂ]ಪೊಕ್ಕ ಪುಗಿಲಿದನೆ ಚಿತ್ರಮಮಂ ಪೊಸಯಿಸಿ ನರ್ತಿಸಿದಳ್ (ವರ್ಧಮಾ. ೧೦-೯೯) ; ಪುದಿದ ನೆತ್ತರ ಕೆಂಪಾಗಸದೊಳ್ ತೋಱುವುದಿನ್ನುಂ ಕಿಸುಸಂಜೆಯು ನೆಪದೆ ದಿನದ ರಾತ್ರಿಯ ಪುಗಿಲೊಳ್ (ಕಾದಂ. ೬-೯೯). ೨. ಬಾಗಿಲು ; ಪ್ರವೇಶದ್ವಾರ : ಆ ವ್ಯೂಹದ್ವಾರದೊಳ್ ಗುಹೆಯ ಪುಗಿಲೊಳ್ ಮಹೋಗ್ರಜರತ್ಸಿಂಹಮಿರ್ಪಂತಿರ್ದ ಭಾರದ್ವಾಜನಾಜಿವೀರನಭಿಮನ್ಯುಕುಮಾರನನೆಬ್ಬಿರಪುಗಂಡಾಗಳ್ (ಪಂ ಭಾ ಕ. ೧೨-೩೯ ವ). ೩. ಆರಂಭ ; ಉಪಕ್ರಮ ; ಪ್ರಾರಂಭ : ಯಾತ್ರಿಗವನೀತಲಪತಿಯು ಪೊರಿಸಿತು ಪುಗಿಲೊಳ್ ಶರದಂ (ಶಾಂತಿಪು. ೧೧-೦೯೦); ಪೋದುದು ಸುಣ್ಣನೆ ಮಳೆಗಾಲಂ ತೆರದದ ಪುಗಿಲೋಳ್ (ಕವಿರಾ. ೨೯೨ ಪ್ರಯೋ); ಹೇಮಳಂಬಿಸಂವತ್ಸರ(ದೊಳ್)ದಾ ಪುಗಿಲೊಳ್ ಮಟಿ ಕೊಳ್ಗಂ (ಅಭಿಮ. ೬–೦೯). ೪. ಮುಂಭಾಗ ; ಮುಂದೆಸೆ : ಪುಗಿಲ ಪುಲ್ಲೆಯ ಮೊದಲಂರಮುಮಂ ಪೆಱಗಣ ಪುಲ್ಲೆಯ ನಡುವುಮನಿಬ್ಬರ್ಕಳ್ ಮಾಱಬಮಂ ಮಾಱಕೊಳೆರಡುಮನೆರಡಱೊಳೊಂದುಮನೆಚ್ಚು ಬಲ್ಲ ಬಲ್ಮೆಯಂ ಮೆಱೆದು (ಪಂಪಭಾ. ೩–೪೭ ವ). ೫. ಸಂದರ್ಭ ; ಸಮಯ ; ಹೊತ್ತು : ನಡುವಗಲ ಪುಗಿಲ ಬಿಸಿಲೊಳ್ ಬಿಡೆ ನಾಲಗೆಗಿಟ್ಟು ತೇಂಕಿ ತನ್ನಯ ನೆಟಲು ಕಡುಗಪ್ಪಲೆಂದು ಪೊರಳಲ್ಕೊಡರಿಸಿ ಮೆಯ್ಯಿಕ್ಕಲಿರ್ದ ವನ್ಮಲಲಾಯಂ (ಪುಷ್ಪದ. ೬-೭೭) ; ಇಂದಿರೆ ಪದ್ಮಮಂದಿರದೊಳಿರ್ದು ಮಹಾಪುಣ್ಯಪುಕೋಪದಿಂದೊಂದಿರುಳಿಕ್ಕೆ ಮುಚ್ಚಳವನಾ ಪುಗಿಲೊಳ್ ತೆಱವಾಗೆ ಸೂಟಿಗೆ ಕೃಷ್ಣಂ ದಯೆಯಿಂದ ಬಂದು ಬಿಗಿಯಪ್ಪೆ ಧರಾಂಗನೆಯುಂ ತದಂಗಕಾಷ್ಠರ್ಗಂ ದಿಟದಿಂ ಕವಲ್ತುದೆನೆ ಪರ್ವಿದುದುರ್ವಿಯ ಚಿತ್ರಮಂ ತಮಂ (ದಕಳು. ೩–೩೯). ೬. ಖಡ್ಗಯುದ್ಧದ ಒಂದು ವರಸೆ : ರೂಪುಗೊಂಡುದೆನೆ ಚಾರಿ ಪುಗಿಲ್ ನೆಲೆ ನೋರ್ಪು ದಂಡೆ ಸೂಟು ನಿಱುಸು ನಿಘಾತವಾಂಕೆ ಬಗೆ ಬಗ್ಗಣೆ ವಂಚನೆ ಬಂಧಮೆಂಬಿವಂ ಮೆಱೆ ಪೋಪಜರ್ಕಳೆಂ ಕಲಿಸುತಿರ್ಪರೊ ಚಟ್ಟರನಟ್ಟಿವಟ್ಟರಂ (ಪುಷ್ಪದ. ೨-೬೦).

**ಪುಗಿಲು₁** : ೨. ಮತ್ತೊಂದಿನಂ ಪುಗಿಲಿನೊಳೆ ಕುಳಿತು ಧ್ಯಾನಾರೂಢನಾಗಿ . . . ಪ್ರಾಣ ನಿರ್ಗಮಿಸಲಾಯಿತು (ಶ್ರಕುಪು. ೭-೦೬೪). ೭. ಆಶ್ರಯ ; ನೆಲೆ : ಮಾರಣಾಸಿಗೆಯು ಎಗಿಲಾದ ಪಂಪಾಪುರಂ ಮಾರಾರಿ ಗೆಂತು ಪುಗಿಲಾದ ಪಂಪಾಪುರು (ಹರಿ. ೩೨೦–೯). ೮. ಕಾಂತಿ ; ಶೋಭೆ : ನೈದಿಲ ಸುಮಾಲಂಕೃತದಿ ಪುಗಿಲಿಂದೆ ಚಿತ್ರವರ್ಣದ ವಿಷ್ಣುರಾಗ್ರಹದೊಳಗಿಹು (ಶ್ರಕುಪು. ೦–೯೦). 'ಪುಗಿಲುಮೆಱು' ಪರು. **ಹುಗಲು** : ೯. ರಂಧ್ರ ; ತೂತು ; ಕಂಡಿ : ಹಸಿಯ ಜಾಲಿಯ ಕಟ್ಟಿಗೆಗಳನ್ನಾಗಲಿ ಬಸರಿಯ ಕಟ್ಟಿಗೆಗಳನ್ನಾಗಲಿ ತಂದು ಅವುಗಳಿಗೆ ಹುಗಲನ್ನು ಹೊಡೆದು (ಕೃಷಿಶ್ರ. ೯೦).

**ಹುಗಿಲು** : ೭. ನಿಗಳದೊಳು ಸಿಕ್ಕಿದಗೆ ಕೊಳನ ಹುಗಿಲಿನೊಳು ಪೊಕ್ಕವಗೆ (ಸೃಷ್ಟಿಕಾ. ೩–೯); ಭಾಗವತಾಭಿಮಾನದ ಹುಗಿಲು ಪರಮಾನಂದರಸ ವಿಶ್ರಮದ ತನಿಮುಗಿಲು . . . ತಾನೆನಲೆಸಪ ವೈಕುಂಠವನು ನೆಱೆ ಕಂಡ (ಜೈಭಾಗ. ೧೦–೩೩–೦೬). ೯. ಹೊಗಿಸಿದರು ಕಾಡೆಮ್ಮೆ . . . ದೊಡ್ಡೆಗಳ ವಿಗಡರಕ್ಕಸ ಭಟನ ಮೂಗಿನ ಹುಗಿಲಿನಲಿ (ಕೋರಾಮ. ೬–೨೬–೩೩) ; ಕಾವ್ಯಾರ್ಥಮೆಂಬೆರಡು ನೊಗನ ಹುಗಿಲಾದವ್ವ (ಜೀಕೃಕ. ೨-೦೦–೦೦). ೧೦. ಸೀಳಿರುವ ಸ್ಥಿತಿ ; ಬಿರುಕು ; ಹೋಳು : 'ಹುಗಿಲುಗಳೆ' ಪರು. **ಹುಗುಲು** : ೯. ಹಸಿಯ ಬಸರೀಕಟ್ಟಿಗೆಗಳಿಗೆ ದೊಡ್ಡ ಹುಗುಲು ಹೊಡೆದು ಹಾಗು ಹಿಂದೆ ಮುಂದೆ ಗೂಟಗಳನ್ನು ಹೊಡೆದು (ಕೃಷಿಶ್ರ. ೦೦೬) ; [ಹಲಗೆ, ಮೊಗಳ . . . ಬೆಣೆ, ಮೊನ್ನು ತೂರಿಸುವುದಕ್ಕಾಗಿ ಒಂದು ಚೌಕಟ್ಟಿನಲ್ಲಿ ಮಾಡಿರುವ] ವೆಜ್ಜ, ಉಗಿಲು, ಹುಗುಲು (Mortise. ೨೦೫೦). **ಹೊಗುಳು** : ೯. ತೋಡಿಗೆ ಹಾಕಿದ ಕಟ್ಟೆಯಲ್ಲಿ ಹೊಗುಳು ತಲೆದೋರಿದಾಗ, ಚಿಮ್ಮಿ ಹಾರುವ ಅವಿರತಜಲಧಾರೆಯಂತೆ, ದುರುಳರ ಸಮೂಹ ನೆಲ್ಲಕ್ಕಿ ಬಾಡೆಯೊಳಗೆ ನುಗ್ಗಿತು (ಹುಂಚಾ. ೫೦).
[ಪುಗು (< ಪೊಗು) + ಇಲ್₃. / ತಮಿ. ಪುಕ್ಕಿಲ್, ಪುಕಲ್]

**ಪುಗಿಲ್₂, ಪುಗಲ್** (ನಾ). ೧. ಧ್ವನಿ ; ಸದ್ದು : 'ಪುಗಿಲ್ಗರೆ' ಪರಾ. ೨. ಕೋಗಿಲೆಯ ಧ್ವನಿ : "ಕುಕಿಲ್ವುದೇದಂ ಪುಗಿಲ್ ಪುಗಿಲೆಂದುಂ ಕೋಕಿಲಾಲಾಪಂ" (ಕಬಾ. ೨೨-೨೦೬) ; ತದಾಶ್ರಮದ ತರುಗಳ ಮೇಗಿರ್ದು ಪುಗಿಲ್ ಪುಗಿಲೆಂದಿತ್ತ ಬನ್ನಿಮೆಂದು ಪೊಂಬಣ್ಣದ ಕೋಗಿಲೆಗಳುವಂ . . . ನೋಡಿ (ಶಂಕಚ. ೧-೧೦೩ ಪ) ; ಪುಗಿಲ್ ಪುಗಿಲೆಂಬ ಪಿಕಸ್ವನಂಗಳಂ ಮನಸಿಜನೊಲ್ದು ಕೇಳ್ದು (ಶಾಂತೀ. ೯-೭೪). **ಪುಗಲ್**: ೨. ಪೋ ಪು[ಗ]ಳ[ಪಾಠಾಂ. ಗಿ]ಲ್ ಪು[ಗ]ಲೆನುತಿರ್ಪ ಪಕ್ಕಿ ಮಾನವಂ ಕವರುತ್ತಿರೆ (ಶಂಕಚ. ೩-೩೨) ; ಭೋರ್ಗರೆದೆತ್ತಂ ಪುಗಲೆಂಬ ಕೋಕಿಲೆ . . . ಸುಸ್ವರದಿಂದೋದುವ ಕೀರವಾರ ಬಗೆಗಾ ಸವ್ಯಾಮೋಹವಂ ಮಾಡವೇ (ಸುಕುಮಾ. ೦-೭೩); ಬನದಲ್ಲಿ ಪುಗಲ್ ಪುಗಲೆಂಬ ಗಂಡುಗೋಗಿಲೆ (ಕವಿಕ. ೨೪೯ ಕ್ರಪೋ). [ದೇ.॥ ತಮಿ. ಪುಕಲ್ ; ಮಲ. ಪುಕಲು = ಹೇಳು]

**ಪುಗಿಲ ?** (ನಾ). (?) : ಪುಗಿಲಂ ಕ್ರೀಡನಶೀಲನಕ್ಕರಿಗನಾದಂ ಪಲ್ಲವ ಗ್ರಾಹಿ ಮಾಸುಗಿ ನವ್ಯಾದುದಾಗಲಾಂ ನವೋಯಲುಂ ಮೆಯ್ದುಕೋರ್ವೋ ಕಾರವೆಂಬಿ ಗಡಾ (ಕಾವ್ಯಾ.ಕ. ೦೪೯). [ ? ]

**ಪುಗಿಲು₁** 'ಪುಗಿಲ್₁' ನೋ.

**ಪುಗಿಲು₂** (ನಾ). (?) : ಪೆಸನಿರಕ್ಕಂ ಪುಗಿಲುಮುದಜ ಪವಣಂ (ಶಾ. ೦೪೪೭, ಶಾಸಗಲ್. ೨೨೯-೨೦ ; ೯). [ ? ]

**ಪುಗಿಲುವೆಱು** (ಕ್ರಿ). ಶೋಭಿಸು ; ಹೆಸರಾಗು ; ಪ್ರಸಿದ್ಧವಾಗು : ಅಗುಳತಿರೆ ಕಾವಾಟದವರುಮವರೊತ್ತಿನೊಳು ಪುಗಿಲುವೆತ್ತಿತುಮಂತ್ರ ವಾದಿಗಳು ಮಂತ್ರಿಸಲುವಗಿದವರಿಗೆಯು ಮಹಾಭೂತ ಪೊಯ್ಮಲು (ಕೃ.ಚು. ೬-೨೫). [ಪುಗಿಲು₁ (< ಪುಗಿಲ್₁) + ಪೆಱು₁]

**ಪುಗಿಲ್ಗರೆ** (ಕ್ರಿ). ಧ್ವನಿ ಮಾಡು; ಸದ್ದು ಮಾಡು : ಮಯ್ಯ ಮಸಿ ಕೊರಲ ಬಕ್ಕಿ ಪೊಯ್ಯ ಪುಗಿಲ್ಗರೆವ[ಪಾಠಾಂ. ಕನಲ್ಗರೆವ, ಘಲಿಲ್ಗರೆವ]ಕಯ್ಯ ರಂಕರಿಕ ಕರಂ ರಯ್ಯಂ (ಕಾವ್ಯಾ.ಕ. ೩೦೯). [ಪುಗಿಲ್₂ + ಕರೆ₁]

**ಪುಗಿಲ್ಬಟ್ಟೆ** (ನಾ). ಪ್ರವೇಶದ್ವಾರ ; ಕಂಡಿ : ಬಲಸಗ್ಗಂ ಗವಸಂದಿ ದೋಣಿ ಪರಿಚಾರೇರುಂ ಪುಗಿಲ್ಬಟ್ಟೆ ಮೇಖಳೆ ಶಾಳ್ವಾಸಜ್ ಗಂಡಶ್ಶಿಲವುಡಕಿಲ್ಮಾಟಂ ಕರಲ್ಮಟ್ಟು . . . ಅಜಸ್ರಂ ರಯ್ಯಮಪಾ ಬೆಟ್ಟದೊಳ್ (ಸೂಕ್ತಿಸು. ೬-೨). [ಪುಗಿಲ್₁ + ಬಟ್ಟೆ₁]

**ಪುಗಿಲ್ವಿಡು** (ಕ್ರಿ). ಎಡೆ ಬಿಡು ; ಅವಕಾಶ ಕೊಡು : ಸಿಡಿಲ್ಪನಿಪೊಯ್ಲನಿಂ ಪುಗಿ[ಪಾಠಾಂ. ಪೊಯ್ಲನಿಂಪುನಿ]ಲ್ವಿಡದೊಡೆದತ್ತು ತಟ್ಟ ಘನಮಂಡಲ ಮಂದೆನೆ ವಾರಿಧಾರೆಗಳ್ . . . ಸುರಿಯುತ್ತುಮಿರ್ದುದು (ಕಜಕುಶ. ೬-೨೭). [ಪುಗಿಲ್₁ + ಬಿಡು₁]

**ಪುಗಿಸು** 'ಪೊಗಿಸು' ನೋ.

**ಪುಗು** 'ಪೊಗು' ನೋ.

**ಪುಗುಡಿ** 'ಪುಗಡಿ' ನೋ.

**ಪುಗುತರ್** 'ಪೊಗುತರ್' ನೋ.

**ಪುಗುತೆ** 'ಪೊಗುತೆ' ನೋ.

**ಪುಗುದೆಸೆ, ಹೊಗದೆಸೆ** (ನಾ). ಹೋಗಬೇಕಾದ ದಿಕ್ಕು ; ಪಾರಾಗುವ ಹಾದಿ : ಮುಱಿದುದೆಮ್ಮಯ ಸೇನೆ ಸಮರದೊಳ್ ಪೊಕ್ಕು ಮೈಗುಱಿಹ ಕಾಣಿಸಿಕೊಂಬರಂ ಕಾಣೆವಗ್ನಿಜನ ಬಱಿದ ಕರೆತಂದೆಪಕಟಕಟ ಪುಗುದೆಸೆ ಯಾವುದೆಮಗೆ (ಕುಪು. ೪೭-೯). **ಹೊಗದೆಸೆ**: ಜಗವೆಲ್ಲವನೂರ ಮಾಡಿ ಊರೆಲ್ಲವ ಮನೆಯ ಮಾಡಿ ಹೊ[ಪಾಠಾಂ. ಹೋ]ಗದೆಸೆಯಿಲ್ಲದ ಸುಳುಹು ನೋಡಾ (ಅಕವ. ೨೪೯-೧೩೦೦) ; ಹೊಗದೆಸೆಯನು ಕಾಣದಬ್ಬುಲ್ಲಿಖಾನ ಬಹುಬಗೆಯಲಿ ಕಂಗೆಟ್ಟಾಗ ಮಿಗ ಹುಲಿಯಾರ ಬಳಿಯ ಬಿಟ್ಟು ಪಾಳೆಯ ದೆಗೆದೋಡಿದನು (ಕಂಠೀ. ೦೭-೩೭). [ಪುಗು (< ಪೊಗು) + ದೆಸೆ₂]

**ಪುಗುಳ್₁** (ಕ್ರಿ). ಗುಳ್ಳೆಯೇಳು ; ಬೊಕ್ಕೆಯಾಗು : ಒಲೊರ್ವೆ ಕರ್ಪುರ್ದ ಕಪ್ಪುರದ ಪಟ್ಟಮನವರ್ಚೆ ಮನ್ಮಥಜ್ವಲನಪಾತದಿಂ ಮೆಯ್ ಎಗೆ ಪುಗುಳ್ವುದೆಂಬ ಸಂಕೆಯಂ ಕಳೆದಿಯರ್ಗೆ ಬಳಯಿಸುವಳ್ (ಶಠಕ. ೯-೩೬ ಪ) ; ಮುಳಿದುಱುದೋವರಳ್ಪಿರ್ದೆ ಪುಗುಳ್ವುರಿವಂತೆ ಮುಗುಳ್ವ್ವ ಸಂದ ನಾಣೊಳಗು ಸಡಿಲ್ವಿನಂ ಪೊರೆ ಸಡಿಲ್ದು ಕದಂಪು ಬೆಳರ್ತು ಬಾಡಿ ಪೊಟ್ಟಳಿಸಿ ಬೆಳರ್ತು ಮುದ್ರಿಸಿದ ಬಾಯ್ಗಳಲರ್ವಿರಿವಂತು ಕಂಪು ಕೈಕೊಳೆ ಬಿರಿದತ್ತು ತುಂಬಿ ನೆರೆವಲ್ಲಿಗೆ ಮಲ್ಲಿಗೆ ಸಾತೆಯಂತೆವೊಲ್ (ಅಕಂಪು. ೬-೯೯). [ದೇ.॥ ತಮಿ. ಮಲ. ಪೊಕ್ಕುಳ್]

**ಪುಗುಳ್₂, ಪುಗುಳು, ಪೊಕ್ಕೆ, ಹುಗುಳು** (ನಾ). ಉಷ್ಣತೆಯಿಂದ ಅಥವಾ ಘರ್ಷಣೆಯಿಂದ ಮೈಮೇಲೆ ಹಾಗೂ ಬಾಯಲ್ಲಿ ಏಳುವ ಗುಳ್ಳೆ,—ಬೊಕ್ಕೆ : . ಒರಿದಪ್ಪ ನಂಜುಪುಗುಳರ್ಬಿದಮಂಗಸಿತಾಹಿದಂಶ ಮಾದುದು ದಿಟಂ (ಚಾರುಪು. ೫೫೬) ; ನಡೆದಡಿಗಳ್ ಪುಗುಳ್ಗೆದುವುಗ್ಗಡ ಮಾಯ್ದು ನಿದಾಘಂ (ಜೀಪಾಕ. ೧-೯೬) ; ತಂಬುಲದ ಚೂರ್ಣದಧಿಕತೆಯಿಂ ಬಾಯ್ ನೆಱ ಬೇದು ಪುಗುಳ್ಗಳಾದೊಡೆ . . . ತೈಲವೊಂದಱಿಂದಂ ಕಿಡುಗುಂ (ಜಕುಕ. ೨-೧೭೭). **ಪುಗುಳು** : ಶವನನ ಮೆಯ್ಯೊಳ್ ಪುಗುಳುಗಳು ಪವಿನಿಸೆ ಪಾವಕನ ತನುವಿನೊಳ್ ಮಹಾಸ್ಫೋಟಕವಾತವದ ಕಡುಪಿಂದೆ ನೆಗೆತಂದವುವೆನೆ ಬೇಸಗೆಯ ಬಿಸಿಲನದನೇನೆಂಬಂ (ಗಿರಿಶ. ೯-೨೩) ; ಅಂಬುಜಾಕ್ಷಿಯರುಗಳಧರಚುಂಬನಕ್ಕೆ ಎನ್ನ ಜಿಹ್ವೆ ಹಂಬಲಿಸದ ಹಾಗೆ ಸೀಳಿ ಪುಗುಳವೇಳಲ್ಕೆ (ಸುಜಾತ. ೧೦-೯). **ಪೊಕ್ಕೆ** : ಗುಳಿ ಸೇರಿದ್ದ ಕಣ್ಣಿಗಳೂ ಉಬ್ಬಿದ್ದುವು—ಕೆಂಡ ಬಿದ್ದು ಬಂದ ಪೊಕ್ಕದಂತೆ (ದಾಶಿಗಿ. ೦೦೩). **ಹುಗುಳು**: "ವಿಸ್ಫೋಟಃ. ಪಿಟಕಃ,—ಈ ೨ ಹುಗುಳು" (ಹಾಕಾ. ೦೨೦) : ಕಿಟ್ಟಿಗೆ ಮೈಯ ಹುಗುಳುಮುಟ್ಟಿತ್ತು ಉದಕಕ್ಕೆ ಥಳಿಯಾಗಿ ಸ್ಫಟಿಕಗಿರಿಯಲ್ಲಿ ಹಣ್ಣು ಹುಟ್ಟಿತ್ತು (ಅಕವ. ೦೬೯-೮೦೩) : ಕರ್ಪೂರದ ಮಣಿಗಳನನುಕರಿಪ ಹುಗುಳು ಗಳು ಮೊಳೆಯ (ಶಕಿಶೃ. ೦೩-೨೦) ; ತೀಂಟೆಯಿಂತಪ್ಪ ತಱಿಯ ಹುಗುಳು ಗಳೊಡೆಯ (ಶಕಿಶೃ. ೯-೨೫-೭). [< ಪುಗುಳ್₁ /ತಮಿ. ಪೊಕ್ಕುಳ್ ; ಮಲ. ಪೊಕ್ಕುಳ್, ಪೊಕ್ಕಿಳ್ : ಕೊಡ. ಪೊಕ್ಕಳ್ ; ಕೋತ. ಪೊಗ್]

**ಪುಗುಳು** 'ಪುಗುಳ್₂' ನೋ.

**ಪುಗುಳೇಳ್** 'ಪುಗುಳೇೞ್' ನೋ.

**ಪುಗುಳೇೞ್, ಪುಗುಳೇಳ್, ಹುಗುಳೇಳು** (ಕ್ರಿ). = ಪುಗುಳ್₁: ತದ್ವಿಷಾ ಗ್ನಿಯ ಕಿಡಿಯಿಂದೊಡನೆಯ ಗೋಪರ್ ತಂತಮ್ಮೊಡಲೊಳ್ ಪುಗುಳೇೞ್ ಪೋಗಿ ಪುಯ್ಯಲ್ವುದುಂ (ಜಗಾ. ೬-೮೬). **ಪುಗುಳೇಳ್** : ನೆಗೆದ ತಂಂತು ವರ್ಣಿಗಳಿ ಮುಗಿಲ ಮೆಯ್ ಪುಗುಳೇಳೆ ಪುಷ್ಕರದಿಂ ಪೂತ್ಕರಿಸುವ . . . ಕಟ್ಟಣಕದ ದುಪ್ಪಗಜಮಂ (ಗಿರಿಶ. ೨-೦೦೩ ಪ). **ಹುಗುಳೇಳು** : ಇನ್ನಬರ ಹುಗುಳೆದ್ದು ನೋವೆತ್ತಿರ್ಪುದೊ ತಳಂ (ಶಪಾ. ಕೀ. ೩೦೦-೯); ಶಿವಶಿವೇಗುವ ನಿನ್ನ ಹುಗುಳೇಳುವವಲಾ ಶಿವನಾಗವೆನುತಂ ಶಿವನ ತನುವಂ ನೋಡಿ ತೂತೂ ಎಂದು ತೂಪಿಱದ (ಶಕಿಶೃ. ೦೩-೨೦). [ಪುಗುಳ್₂ + ಏೞ್₁]

**ಪುಗುಳೊಡೆ** (ಕ್ರಿ). = ಪುಗುಳ್₁ : ಕಠಿನಭೂಮಿಯೊಳ್ ನಡೆದೊಡೆ ಕಿಱುಗಲ್ಗಳುಂ ಪೆಟ್ಟಿಗಳುಮಗುಬ್ಬು ಪುಗುಳೊಡೆದು (ಚಿಕ್ಕಾ.ಶಾ. ೨೯-೦೦). [ಪುಗುಳ್₂ + ಒಡೆ₁]

**ಪುಗುಳ್ಗತ್ತ** (ನಾ). ಮೈಮೇಲೆ ಬೊಕ್ಕೆಯಾಗುವ ಒಂದು ಬಗೆಯ ರೋಗ : ಗುರು ಮಂದ ಶುಕ್ರರೊ(ನೊ)ಡನಿರೆ ಸುರನದಿ ಹೈ(ಹಿ) ಮಾದ್ರಿಯೆಡೆಯ ನಾಡೊಳಗೆಲ್ಲಂ ಒರಿದು ಭಯಪಾಕ್ಕುಮಲ್ಲಿಯ ನರರ್ಗಂ ಪುಬುಗು(ಪುಗುಳ್ಗ)ತ್ತಮಕ್ಕುಮಿದು ಪರಮಾರ್ಥಂ (ಅಶ್ವಿಶು. ೬-೩೩). [ಪುಗುಳ್₂ + ಕತ್ತ]

**ಪುಗ್ಗಾಯಿಲ, ಪುಗ್ಗಾಯ್ಲ** (ನಾ). ಸೊಕ್ಕಿದವನು ; ಅಪಂಕಾರಿ ; ಗರ್ವಿಷ್ಠ : ಮಸ್ನೆಯರ್ಕುಱುಂಬರ್ ಪುಗ್ಗಾಯಿಲರೆನಿಸುವ[ರ]ಸುವಾಕ್ಕಳ್

ಪಲರುಂ ಬಾದಿರ್ಪರಾ ನೃಪಾಸ್ಥಾನಕೆಯೊಳ್ (ಶಬ್ದಮ. ೩-೩೨), ಅಯಿಲ ಪ್ರತ್ಯಯಕ್ಕೆ—ಗೋಟಬಾಯಿಲು, ಪುಗ್ಗಾಯಿಲು (ಶಬ್ದಮ. ೨೦೫ ವೃತ್ತಿ); ಹಾಯುಂ ನಾಗನಿಂ ಕೊಲಿಸದೆ . . . ಬಾಯಿಲ್ ಸೈವರ ಪೊಸ ಪುಗ್ಗಾಯಿಲನಂ ಕೊಂದು ಕೂಗಿಸದೆ ಬಿದಿ ಸತತಂ (ಕಳಸಂ. ೬೧೨). ಪುಗ್ಗಾಯ್ಲ : "ಪುಗ್ಗಾಯ್ಲಂ—ಗರ್ವಿತಂ" (ಶಬ್ದಮ. ಹು. ೨), "ಗರ್ವಿತನಲ್ಲಿ ಪುಗ್ಗಾಯ್ಲ ನೆಂದೆನ್ಯಂ" (ಕರ್ನಾ. ೬೬). [ ಪುಗ್ಗು₂ + ಆಯಿಲು₂ ]

**ಪುಗ್ಗಾಯಿಲತನ** (ನಾ). ಸೊಕ್ಕು ; ಗರ್ವ ; ಉದ್ಧಟತನ : ಇನಿತೇಕೇ ಪುಗ್ಗಾಯಿಲತನಮಿದಜಿಂದಸ್ಮದಾಜ್ಞೆಯಂ ಮಿಾಱಿದೆ ನೀಂ (ಶಕ್ತ್ಯು. ೩-೦-೦೩೩). [ ಪುಗ್ಗಾಯಿಲ + – ತನ ]

**ಪುಗ್ಗಾಯ್ಲ** 'ಪುಗ್ಗಾಯಿಲ' ನೋ.

**ಪುಗ್ಗಿ** 'ಪುಟ್ಗಿ' ನೋ.

**ಪುಗ್ಗಿಡು** ? (ಕ್ರಿ). (?) : ಪುಡುಕುನೀರೊಳರ್ದೆಯುಂ ಪುಟಪಾಕ ಸುಡೆಯುಂ ಮತ್ತು ಪುಗ್ಗಿಡೆಯೊಯುಂ ಬಾಳಿತ್ತಿ ಸೀಳೆಯುಂ ಗುಗ್ಗುಳಂ ಬೊತ್ತಿಸೆಯುಂ (ಲೀಲಾ. ೧೦-೧೪ ವ). [ ? ]

**ಪುಗ್ಗು₁** 'ಪುಟ್ಗು' ನೋ.

**ಪುಗ್ಗು₂, ಹುಗ್ಗು₂** (ನಾ). ಸೊಕ್ಕು ; ಗರ್ವ ; ಅಹಂಕಾರ : "ಉಕ್ಕೆವಂ, ಬೀಱಂ, ಪುಗ್ಗು, ಪಂತ, ಹಪ್ಪು, ಗಬ್ಬು, ಅಪಟು — ಈ ೭ ಗರ್ವಂ" (ಶಬ್ದಮ. ೩೬-೨೩೦) ; "ಹಪ್ಪುದಟು . . . ಪುಗ್ಗುಪಾಂಕ್ಯಪಮೆನ್ನಲ್ ಗವ್ವನೆ ಗರ್ವಮವಕ್ಕುಂ" (ಕರ್ನಾ. ೧೧೩) ; ಅಗ್ಗದ ಪುಗ್ಗಿನ ಚಂಪೇನನಜಿಸಿ ನಾಜಿಸಾಂತು . . . ಬಲ್ಗೊಟ್ಗಳಂ ತಿಱುವಾಯ್ತು ಸಂಧಿಸುತೆಚ್ಚು (ಗಾವಹ್ಯ. ೧೧೩-೦೦). 'ಪುಗ್ಗಾಯಿಲ' ಪರಾ. ಹುಗ್ಗು₂ : 'ಹುಗ್ಗಿಗ' ಪರಾ. [ ದೇ. ಪ ತಮಿ. ಪೊಲ್ಲು ]

**ಪುಗ್ಗೆ** (ನಾ). ೧. (ಉಕ) ಕಡಲೆಹಿಟ್ಟಿಗೆ ಉಪ್ಪು, ಕಾರ ಮೊದಲಾದುವನ್ನು ಬೆರೆಸಿ ದುಂಡಗೆ ಉಬ್ಬುವಂತೆ ಎಣ್ಣೆಯಲ್ಲಿ ಕರಿದು ಮಾಡುವ ಒಂದು ಬಗೆಯ ಖಾದ್ಯ ; ಬುರುಬುರಿ : ಹಸಿವಾಗಿದೆಯೆಂದು ಪುಗ್ಗೆ ಕೊಳ್ಳಲು ಗಾಗೆ ಕಳಗಿಂದು ಹೋಗಿದ್ದಾಳೆ (ಗಂಗಾಗ. ೦೦೯); ನಾಲ್ಕಾಣೆಯ ಪುಗ್ಗೆ ತಿಂದು ಮುಗಿಸುವಷ್ಟರಲ್ಲಿ ಶಾಲೆ ಬಿಟ್ಟಿತು (ಗಾಳಿ. ೧೬೬). ೨. ಗಾಳಿ ತುಂಬಿ ಉಬ್ಬಿಸಿದ ರಬ್ಬರುಚೀಲ ; ಬಲೂನು : ಒಂದೇ ಒಂದಾದರೂ ಅಂತಹ ರಬ್ಬರ್ ಚೆಂಡೋ ಪ್ಲಾಸ್ಟಿಕ್ ಹಕ್ಕಿಯೋ, ಬಣ್ಣದ ಪುಗ್ಗೆಯೋ ತನಗೆ ದೊರೆಯಬಾರದೆ (ಮುಂಗಾರು. ೨೬). ೩. (ಆಲಂ) ಉಬ್ಬು ; ಉತ್ಸಾಹ : ಪುಗ್ಗೆಯನ್ನಿತ್ತರದೆಗೆ ಲಗ್ಗೆಯನು ಹಾಕಿದೆನು ; ಸಗ್ಗದಲ್ಲಿಹ ನೀನು ಬಗ್ಗಲಿಲ್ಲ ! (ಕಂಬ. ೩೩). [ ← ಮರಾ. ಫುಗಾ ]

**ಪುಚ್ಚ₁, ಹುಚ್ಚ₁** (ನಾ). ೧. ಬುದ್ಧಿಭ್ರಮಣೆಯಾದವನು ; ಉನ್ಮಾದರೋಗಿ : ಒರೊರ್ಮೆ ಪುಚ್ಚನಂತಚ್ಚರಿಯೊಳಾಡುಪನದೊರೊರ್ಮೆ ಪಾತ್ರಸಂತೊತ್ತರಿಸಿ ಮೇಲ್ವರಿಸನು (ಕಾಲ್ಯಾಣ. ೭ ೩೬). ಹುಚ್ಚ₁ : ೧. "ಪ್ರಿಯೀರಃ = ಹುಚ್ಚಂ" (ಕರ್ನಾ. ೦೩). ೨. ತಿಳಿಗೇಡಿ ; ಮರುಳ ; ದಡ್ಡ : ಹೆಚ್ಚಿನ ಸತಿಯುತ ಕಚ್ಚಿಯ ಬಿಚ್ಚುನ ಹುಚ್ಚನೇನ (ಪುರಂದ. ೨-೩೩-೦) ; ಹುಚ್ಚರಿತ ಚಂದನವಿರೆ ಬದಿರ ಸಾರುವರೆ (ಪ್ರಭು. ೬.೦೧) ; ಹೀಗೆ ಹುಚ್ಚನಂತೆ ತಿರುಗಾಡುವುದು ತರವಲ್ಲ (ಮುಂಗಾರು. ೩-೦೨೫). ೩. ಮರುಳುಗೊಂಡವನು ; ಮೋಹಿತನಾದವನು : ವಿವೇಕಾನಂದರು . . . ಸಂಬೋಧಿಸಿದ ರೀತಿ ಅಮೇರಿಕೆಯ ಜನರನ್ನು ಹುಚ್ಚರನ್ನಾಗಿ ಮಾಡಿತು (ಕರ್ನಾಟಕ. ೯೯). (ಗು). ೪. ಅರಿವಿಲ್ಲದ ; ಬುದ್ಧಿಗೇಡಿಯಾದ : ಅಪ್ಪ ಸತ್ತ ಆರುತಿಂಗಳಿಗೆ ಹುಚ್ಚುಮಾವ ಬಂದು ಕೊರಳು ಕಟ್ಟಿಕೊಂಡು ಅತ್ತ (ಗಾಳಿ). [ ಪುಚ್ಚು₁ (<ಪುರ್ಚು) + – ಅ₇ ]

**ಪುಚ್ಚ₂, ಪುಕ್ಕ₂, ಪುಚ್ಚು₂** (ನಾ). ೧. ಹಕ್ಕಿಯ ಗರಿ : ತುಪ್ಪುಳು : ಹಾರುಹಕ್ಕಿಯ ಪುಚ್ಚವಣಿಸಲಳಿಸಿ ಬೆಡಗಿ ! (ಅಹ್ಮಾಲಿ. ೦೨-೩) ; ಸೀಗೆ ಹಣ್ಣುಮೆಗಾ ಪುಸುರಿಯು ಹಸುರುಪುಚ್ಚವ ತೆರೆಯಿತು (ಕಂಬು. ೦೨-೦೪); ಅಂದಲೊಬ್ಬಳ ಮೈ ತುಂಬ ಪುಚ್ಚ ಹತ್ತಿದ್ದನ್ನು ಕಂಡೆ (ಕೃಷಿ. ೨೩೬). ೨. (ಪಕ್ಷಿಗಳ) ಬಾಲದ ತುದಿ : "ಪುಚ್ಛ (ಸ) – ಪುಚ್ಚ = ಬಾಲ" (ಕನ್ನಡ. ೨೬); ಹೀಗಡೆ ಬಣ್ಣದ ಪುಚ್ಚದ ಹಚ್ಚು (ಶಕ್ತಿ. ೦, ೯೩). ಪುಕ್ಕ₂ : ೧. ದೈವಕೃಪೆಯಿಂದ ಆ ಮಹಾಪರ್ವತವು ಈಗ ತನ್ನ ಪುಕ್ಕ ಹಕ್ಕಿಯ ಪುಕ್ಕದಷ್ಟು ಹಗುರವೂ ಮೃದುವೂ ಆಯಿತಲ್ಲವೆ! (ಶಂಕರ. ೯೯) : ಭವಿತವ್ಯತೆಯನುಂತೆ ಓಡಿ ತಪ್ಪಿಸಿಕೊಳ್ಳಲರಿದು ಹಕ್ಕಿಯ ಪುಕ್ಕಕೆ ಹತ್ತಿದ ಉರಿಯಂತೆ ಅದು ನಿನ್ನ ಬೆನ್ನಟ್ಟಿ ಬಹುದು (ಶಂಕರ. ೦೦೬-೦೬). ೨. ಒಂದು ಆಶ್ಚರ್ಯಕರವಾದ-ಪಕ್ಷಿಯಿಂದ: ಇದು ಕಾಡುಪಾರಿವಾಳದಂತಿದೆ . . . ಪುಕ್ಕ ಉದ್ದವಾಗಿರುತ್ತದೆ (ಪ್ರಾಣಿ. II. ೦೩೨); ನವಿಲು ಆಡಿದರೆ ಕೆಂಬೋತ ಪುಕ್ಕ ತೆರೆಕೊಂಡಿತು (ಗಾದೆ). ಪುಚ್ಚು₂.

ಪುಚ್ಚ ಎಣಿಸು = ಸಂಪೂರ್ಣವಾಗಿ ತಿಳಿ : ನಿನ್ನ ಪುಚ್ಚು ಎಣಿಸೊದು . . . ಶಕ್ಯ ಆಗತಿತ್ತೇನು ? (ಅಜ್ಜ. II, ೬೦೩). ಪುಚ್ಚ ಬಲಿ, ಪುಚ್ಚುಬಲಿ = ೧. ಹಕ್ಕಿಯ ಗರಿಯುಂ ಬೆಳೆ : ಇನ್ನೂ ಪುಚ್ಚ ಬಲಿಯದ ಆ ಗುಬ್ಬಚ್ಚಿ ಹಾರಲಾಗದೆ ಒದ್ದಾಡುತ್ತಿದೆ (ಗಾದೆ); ಅದಕ್ಕೆ ಇನ್ನೂ ಪುಚ್ಚು ಬಲಿತಿಲ್ಲ (ಮುಂಗಾರು. ೩-೩೦೦). ೨. (ಆಲಂ) ಸಾಮರ್ಥ್ಯ ಹೆಚ್ಚಾಗು ; ಶಕ್ತಿ ವರ್ಧಿಸು : ಅವನಿಗೆ ಮುಗಿಲು ಮುರೇ ಗೇಣು ಉಳಿದಂತೆ ಭಾಸವಾಯಿತು. ಅವನ ಪುಚ್ಚ ಬಲಿತಿತ್ತು (ಸ್ವಾತಂ. ೩೩೦). [ ಸಂ. < ಪುಚ್ಛ ]

**ಪುಚ್ಚಣೆ** 'ಪುಚ್ಚಟಿ₂' ನೋ.

**ಪುಚ್ಚವಣ, ಪಚ್ಚವಣ, ಪುಚ್ಚವಣೆ** (ನಾ). ೧. ಪರೀಕ್ಷಿಸುವಿಕೆ ; ಪರೀಕ್ಷೆ : "ಪುಚ್ಚವಣಂ = ಪರೀಕ್ಷೆ : ಅಣ್ಮು" (ಶಬ್ದಮ. ಹು. ೨): ಪು[ಶಾಕಂ. ಪ]ಚ್ಚವಣಂ ನೋಡುವೆನೆನ್ನಿಚ್ಛೆಯೊಳ್ ಮುನಿಯ ಪರದ ಮಹಿಮೆಯುಂ (ಸಂಕರ. ೧-೯೦); ಆಗಳ್ ಪುಚ್ಚವಣವಾಗೆ ನೆರದ ಪಡಿಯ ಜತಿಯರ್—ಇವಂಗಿನ್ನೆವರಂ ಸ್ವರಜ್ಞಾನಮೇ ಪುಟ್ಟಿತಿಲ್ಲವೆಂದು ತಳ್ವಿದರ್ (ಅದ್ಭುತ. ೨೬-೨೫) ; ದೈವಮ ನೋಡೆ ಪುಚ್ಚವಣಮುಂ ಗೆಯ್ವನ್ನಮಾ ಕಾಣರೇ (ಪ್ರಸನ್ನ. ೯-೩೬). ೨. ಪೌರುಷ ; ಶಕ್ತಿ ; ಸಾಮರ್ಥ್ಯ : "ಪುಚ್ಚವಣ = ಪರೀಕ್ಷೆ ; ಅಣ್ಮು" (ಶಬ್ದಮ. ಹು. ೨): "ಪುಚ್ಚವಣ—ಪುಂಸ್ತ್ವ = ಪೌರುಷ" (ಕನ್ನಡ. ೨೬). ಪುಚ್ಚವಣ : ೧. "ಪುಚ್ಚವಣ (ಪಚ್ಚವಣ)—ಪರೀಕ್ಷಣ" (ಕನ್ನಡ. ೨೬). ೨. "ಪೌರುಷಂ ಪುಚ್ಚವಣಂ" (ಕರ್ನಾ. ೩೩) ; ಒರಿವವಂ ಪಚ್ಚವಣಮಂ ನೋಡಲಾ ಸಿದ್ಧಂ . . . ಪರಿತುಷ್ಟನಾಗುತ್ತೆ (ಅನಂತ. ೨-೧೩-೨೦). ಪುಚ್ಚವಣೆ : ೧. "ಪುಚ್ಚವಣೆಯ ಪರೀಕ್ಷೆಯುಂ" (ಶಬ್ದ. ೦೯೨). [ < ಪ್ರಾ. ಪುಚ್ಛಣ./ಸಂ. ಪೃಚ್ಛನ ]

**ಪುಚ್ಚವಣಿಸು** (ಕ್ರಿ). ಪರೀಕ್ಷಿಸು : ತಚ್ಛ್ರಲದಲಘುತರಮಹಿಮೆಯಂ ಪುಚ್ಚವಣಿಸಲ್ ಶಕ್ಯಮೋ ಸೂರಸಚಿವಾಗ್ರಣಿ (ಶಾಕುಂ. ೩-೯೨). [ಪುಚ್ಚವಣ + –ಇಸು₃]

**ಪುಚ್ಚವಣೆ** 'ಪುಚ್ಚವಣ' ನೋ.

**ಪುಚ್ಚಳಿ₁** 'ಪುಚ್ಚಟಿ₁' ನೋ.

**ಪುಚ್ಚಳಿ₂** 'ಪುಚ್ಚಟಿ₂' ನೋ.

**ಪುಚ್ಚಳಿಸು** 'ಪುಚ್ಚಟಿಸು' ನೋ.

**ಪುಚ್ಚಟಿ₁, ಪುಚ್ಚಳಿ₁** (ಕ್ರಿ). ೧. ಹಾಳಾಗು ; ಕೆಡು ; ಭಂಗವಾಗು : ಶರದದ ಬಿಸಿಲಳುರೆ ಪೊಣ್ಮಿದ ಘರ್ಮಬಿಂದುಗಳಿಂ ನಾಂದು ಪುಚ್ಚಟಿದರೆ ಪೊರೆನಾದ ಕುಂಕುಮಪತ್ರಭಂಗದ ಕೊರಗಿದ ನಗೆಮೊಗಂಗಳುಂ . . . ಅಡಿಗಡಿಗೆ ತಡವತಪ್ಪ ನಡೆಗಳುಂ ಬೆರಸು (ಅಂಪು. ೦೦-೬೮೮) ; ಕಟ್ ಪೂವಾಗಲೊಡಂ ಪುಚ್ಚಟಿದೊರ್ಮೆಯೆ ಪಾಱಿ ಪೋಪ ಕಂಪಿನ ತೆಱದಿಂ ಟಕಟಕಟಮಾದೊಡಲಿಂ ಪಾಱಗುಬ್ಬಿಯದೆ ಪಱಿವಟ್ಟು ಪೋದುದಸು

ಮಾನಿಪತಿ[ಯಾ] (ಶಬರಶಂ. ೦೦-೩೯) ; ಕಾತ್ರವಿಲ್ಲದೆ ಬೇನೆಯಿಲ್ಲದೊಂದು ದಿನ್ನ ನಿಸರ್ಗಾಗುವುಪ್ಪು ತೆತ್ರವಿದರ್ಗಡೆಯುಂ ಪುಚ್ಚಟಿದು ಬಿರ್ದಿರ್ದಂತೆ ಗೆಯ್ದು ಕವಿಗಳಪ್ಪುದು . . . ಒಂದು ತಿಂಗಳಾಯು (ಕಾಕ. ೬೩೩). ೨. ಪ್ರತಿಜ್ಞೆ ಮೊದಲಾದುವನ್ನು ಮುರಿ,–ಕೆಡಿಸು,–ಭಂಗಿಸು: ಪೊಲ್ಲಮ ಪೂಣ್ದು ಪುಚ್ಚಟಿಯದುರ್ಕಿದ ಕೌರವರು ಪೊರಳ್ದು ಕೊಂದು . . . ವಿಲ್ಲವು ನೆಟ್ಟಿದೆ (ಕಂಕಾ. ೦೨-೦೬೦); ಶೀಲವತಿ ಸೀತೆ ಪೂಣ್ದುದನೆಂತು ಪುಚ್ಚಟಿವರ್ (ಕಂರಾಮ. ೦೬-೬೩). ಪುಚ್ಚಳಿ₁ : ೨. ಪುರಲಕ್ಷ್ಮಿ ಚಾಂಪರನೊಲ್ದು ಮಾಳ್ಕೆಯುಂ ಭಾಸೆಯನಿತ್ತು ಪುಚ್ಚಳಿವರಲ್ಲದ ಭಾಸೆಮಾನದ್ವರಿಪ್ಪರೇ (ಎ೯. ೯. ಪೀಂ.೨೮೨. ೦೦೨-೦೦೯; 1220).
[ಪುಚ್ಚು₁? (P ← ತೆಲು. ಪುಚ್ಚು = ಕೊಳೆತುಹೋಗು) + ಅಟಿ₁]

**ಪುಚ್ಚಟಿ₂.** ಪುಚ್ಚಣೆ, ಪುಚ್ಚಳಿ₂ (ನಾ). ಕೇಡು; ಹಾನಿ; ನಾಶ : "ಪುಚ್ಚಟಿಯೊಂದ ಕೆಡು" (ಶಬ್ದಮ. ೬೩-೯೯೯); ಎರೆಲೆ ಸಮ್ಯಗ್ಗುಂದಿದ ಪುಚ್ಚಟಿಯ ಬಾಳ್ವಿಕೆಯೆ! (ಧರ್ಮಾಮೃ. ೦೦೨-೦೩); ಅಬಲು ಪಡಿಗೆ ದೊರೆಕೊಳ್ವಪಟಿಗೆಯ್ವುದಾನೆಸಗರೆನಿಸವೆದಣೆಯೊಡೆ ಕೇಳಲು ನಿನಗೊದವಿಪ ಪುಚ್ಚಟಿಯನೊತರ್ಚಿಪೈ ನೆನೆಗುಂದಾಗಳಿ ಧರ್ಮಂ (ಶೀಲಶಾಂ. II. ೦೬೯). ಪುಚ್ಚಣೆ : ಸಚ್ಚಣಗರ ನಟಣೆಗೆ ವೆಂಬಿಯೊಡೆ ಪುಚ್ಚಣೆಯುಹು ಮನೋತೋರ್ಗಳ್ ನುಗ್ಗೆಯುಸಿರಿದಳು ವಿದಗ್ಧೆ (ಧರ್ಮಾ. ೦೯-೩೦). ಪುಚ್ಚಳಿ₂ : ಇತ್ಸ್ರಿಗಳನಾಗಿದೊಡೀಗಳ್ ಪುಚ್ಚಳಿ ನಿನಗಪ್ಪುದು (ಆದಿಪು. ೬-೬೩); ಭೂಪಾಲ . . . ಪುಚ್ಚಳಿಗಳಪ್ಪ ತೊಳಗೆ ಪುವಿದಿಂದಿರ್ದಪು (ಶೀಲಶಾ. ೯-೨೨); ಅಂತು ಸದನಿರ್ದ ಪುಚ್ಚಳಿ ಲೆಯಿಲ್ಲದರು . . . ಸಮಾಧಾನಸ್ಥಿತಿಯೋಳ್ಪಿರ್ (ಪುರಾಣ. ೬-೩೬). [<ಪುಚ್ಚಟಿ₁]

**ಪುಚ್ಚಟಿಸು,** ಪುಚ್ಚಳಿಸು (ಕ್ರಿ). ೧. ಹಾಳಾಗು; ನಾಶವಾಗು : "ಪುಚ್ಚಟಿಸು — ಲಯಿ (ಕರಗಿ ಹೋಗು, ನಾಶವಾಗು)" (ಶಮಣಿ). ಪುಚ್ಚಳಿಸು : ೧. ಆತ್ಮ ಸಲೆ ಸೂಕ್ಷ್ಮತನದು ತಳೆದು ಶುಭಾಶುಭ ಕರ್ಮಗಳ ಫಲವನುಣುತೆ ತತ್ಸೂಕ್ಷ್ಮಗಳಯ್ದೆ ಪುಚ್ಚಳಿಸೆ ಮೋಕ್ಷದ ನೆಮ್ಮ[ಮ್ಮ]ತಿರ್ಪನು (ಧರ್ಮಾಮೃ. ೯-೬೩). ಕಬ್ಬಿಗರ ಕೊರಗಿರ ಪುಚ್ಚಳಿಸೆ ಭಾವಿಕಾಂಶಮೇ ಬರಿದಪ್ಪು (ಕಪಶ. ೬-೦೦). ೨. ನಾಶಗೊಳಿಸು; ಧ್ವಂಸಮಾಡು; ಭಂಗಿಸು : ಅಮಿತಾಭಾವಮುಂ ಪುಚ್ಚಳಿಪುದು ಸರ್ಗಕ್ಕೆ ತಾ ಸಲೆ ಕಾರಣವೆನಿಸಿ . . . ಒಪ್ಪುರ್ವುದು ತಿಳಿ ವಿಭೂತಿಯು ಪಾಪವು (ಧರ್ಮಾಮೃ. ೦೩-೦೦೦); ಹಸಿವೆಗೆ ನಾದ ಹುಲಿ ಪುಚ್ಚಳಿಸಿತು (ಧರ್ಮಾಮೃ. ೬೯-೦೯೬). [ಪುಚ್ಚಟಿ₁+–ಇಸು₁]

**ಪುಚ್ಚೆ,** ಪುಚ್ಚೆ, ಹುಚ್ಚೆ₂ (ನಾ). ೧. ಯೋನಿ : (೬). ೨. ಕುಂಡೆ : (೬). ೩. ಗೋಲಿಯಾಟದಲ್ಲಿ ಗೋಲಿಯನ್ನು ತಳ್ಳುವ ಕುಳಿ ; ಬದ್ದು. ೪. ಚಿಣ್ಣಿಕೋಲಾಟದಲ್ಲಿ ಚಿಣ್ಣಿಯನ್ನು ಇಟ್ಟು ಚಿಮ್ಮುವುದಕ್ಕಾಗಿ ನೆಲದಲ್ಲಿ ಮಾಡಿದ ಕುಳಿ. ಪುಚ್ಚೆ : (೬). ಹುಚ್ಚೆ₂ : ೫. ಪಶುಗಳ ಯೋನಿ. [ದೇ.? ತಮಿ. ಪೊಚ್ಚು; ತುಳು. ಪೂಚ್ಚೆ, ಪೂಚ್ಚೆ; ಕೊಡ. ಪೂಚ್; ಬ್ರಾಹುಈ. ಪೂಸ್]

**ಪುಚ್ಚು₁** 'ಪುರ್ಚು' ನೋ.

**ಪುಚ್ಚು₂** 'ಪುಚ್ಚೆ'₂ ನೋ.

**ಪುಚ್ಚುಂಗೊಳಿಸು,** ಪುಚ್ಚುಗೊಳಿಸು, ಹುಚ್ಚುಗೊಳಿಸು (ಕ್ರಿ). ಬುದ್ಧಿ ಭ್ರಮಣೆಯಾಗುವಂತೆ ಮಾಡು : ನಚ್ಚಿನ ಮಂತ್ರೀಶ್ವರನ ಪುಚ್ಚುಂಗೊಳಿಸುತಿದಿರಾ ಮತಂ (ಶೀಲಶಾಂ. ೬-೬೩). ಪುಚ್ಚುಗೊಳಿಸು : ಅವಯ ಪೊಸತಿಸುತ್ತು ಹಾಡುನಿಲಿದ್ದಿತ್ತು ಜದೆಗಟ್ಟಿ ಭಸ್ಮದ ತೊಡಿಸಿತ್ತು ಎದೆ ಪುಚ್ಚುಗೊಳಿಸಿತ್ತು (ಶತಕ. I. ೨೩೯-೦೬). ಹುಚ್ಚುಗೊಳಿಸು : ಹಿಡಿದೊತ್ತಿ ಕೇಶದ ಕೀಳಿಸಿತ್ತು ಹುಡಿ ಹುಚ್ಚುಗೊಳಿಸಿತ್ತು (ಶತಕ. I. ೨೩೯-೦೬). [ಪುಚ್ಚು₁ (< ಪುರ್ಚು)+ಕೊಳ್₁+–ಇಸು₁]

**ಪುಚ್ಚುಗುನ್ನಿ,** ಹುಚ್ಚುಕುನ್ನಿ (ನಾ). (ಆಲಂ) ತಿಳಿಗೇಡಿ; ಅವಿವೇಕಿ : ಪೊಗಳುವ ನಣ್ಣು ಮೊಬನ . . . ಪದಲಂಕಾರಾದಿಗೆ ಸಲ್ವ ಚಲ್ವ ಕಾವ್ಯದ ಬಗೆಯಜಾಯದ ಪುಚ್ಚುಗುನ್ನಿ ಕೂಗಿದೊಡಳ್ಕೇಂ (ಹಮ್ಮಿ.ಕ. ೦-೦೯). ಹುಚ್ಚುಕುನ್ನಿ : ಆ ಹುಚ್ಚುಕುನ್ನಿ ಮಾತು ಅಂದರೆ ಯಾರಿಗೆ ತಾನೆ ಲಕ್ಷ್ಯವಿರುತ್ತೆ? (ಜಾನ). [ಪುಚ್ಚು₁ (< ಪುರ್ಚು)+ಕುನ್ನಿ₁]

**ಪುಚ್ಚುಗೊಳ್** 'ಪುರ್ಚುಗೊಳ್' ನೋ.

**ಪುಚ್ಚುಗೊಳಿಸು** 'ಪುಚ್ಚುಂಗೊಳಿಸು' ನೋ.

**ಪುಚ್ಚುತನ,** ಹುಚ್ಚುತನ (ನಾ). ದಡ್ಡತನ; ಅವಿವೇಕ : ಇಚ್ಛೆಯಿಂ ಬಾಯ್ಗೆ ಬಂದಂತೆ ಗಳಪುವುದು ತಾಂ ಪುಚ್ಚ[ಚ್ಚು]ತನ (ಮುಕುಂದ. ೦೯-೬೯). ಹುಚ್ಚುತನ : ನಿನ್ನ ಹುಚ್ಚುತನದಿಂದ ನೀನು ಹಾಳಾಗಬೇಡ (ಶ್ರೀಚಿ. ೦೫೬); ಅವನು...ತನ್ನ ಹುಚ್ಚುತನವನ್ನು ಆಲೋಚಿಸಿ ಕಣ್ಣೀರು ಸುರಿಸಲಾರಂಭಿಸಿದನು (ಬಾಳ್ವೆ. ೨೮). [ಪುಚ್ಚು₁(<ಪುರ್ಚು)+–ತನ]

**ಪುಚ್ಚೆ** 'ಪುಚ್ಚೆ' ನೋ.

**ಪುಚ್ಛ** (ನಾ). ೧. ಬಾಲ : ಲಾಂಗೂಲ : "ಪುಚ್ಛಃ...ವಾಲಧಿಃ — ೫ ಕುದುರೆ ಮೊದಲಾದ ಜಂತುಗಳ ಬಾಲದ ಹೆಸರುಗಳು" (ಸಿದ್ಧಾಂತ ೨೩೦). ೨. ಪಕ್ಷಿಗಳ ಪುಕ್ಕ. ೩. ಹಿಂಭಾಗ. ೪. ತುದಿ ; ಕೊನೆ. ೫. ಅನುಬಂಧ : (Appendage. ಶಾಂಡ ೩). [ಸಂ]

**ಪುಚ್ಛದಂಡ** (ನಾ). ಬಾಲ : ಜಘನದಿಂದ ಕೆಳಗು ಬಗೆ ಬಾಲು ಪುಚ್ಛದಂಡ ಮೆಂಬೀ ಮೆಸರಿಂ (ಅಶ್ವಶಾ. ೯-೯೩). [ಸಂ.]

**ಪುಟ₁** (ನಾ). ಪುಟಿಗೆ ; ನೆಗೆತ ; ಪುಟಿದೇಳುವಿಕೆ : ಕುರುಕುಮಾರಾಗ್ರಣಿ ಪೊಯ್ದ ಪೊಯ್ಲ್ಗೆ ಕೆಡೆದು ಭೀಮಂ ರಣೋರ್ವಿತಳಂ ಬರಿಯಲ್ ಪಾಜಿದನಂತರಕ್ಕೆ ಪು[ಶಬ್ದ. ಪು]ಟಮು ದುರ್ಯೋಧನಾ (ಶುಕಾಚ. ೦೩-೨೯); ಪುಟದ ಕಂತುಕದಂತೆ ಪುಟಾ ಬಟಕಟನಲೌಕಿತು (ಉತ್ತ್ರಾ. ೬೦೨. ೦೯-೬೭). 'ಪುಟಂನೆಗೆ' ಪರಾ. [<ಪುಟಿ₁]

**ಪುಟ₂** (ನಾ). ಬರೆಯುವ ಅಥವಾ ಅಚ್ಚಿನ ಹಾಳೆಯ ಒಂದು ಮಗ್ಗುಲು,–ಪಕ್ಕ : ಗೀತೆಯ ಪುಟಗಳನ್ನು ಪುನಃ ಪುನಃ ತಿರುವಿದಾಗ ಮುಖ್ಯಸಂದೇಶ 'ಕರ್ಮಯೋಗ' ಎಂಬುದು ಸ್ಫುಟವಾಗುತ್ತದೆ (ಮಹಾಗ. ೦೦೩); ಪುಟದಡಿಯ ಟಿಪ್ಪಣಿಗಳಲ್ಲಿ ಸಹ ಇವರು ಉಲ್ಲೇಖಿಸಿದ್ದಾರೆ (ಚಾರಿತ್ರ. ೩೬೬). [<ಪ್ರಾ. ಪುಟ./ಸಂ. ಪೃಷ್ಠ./ತಮಿ. ಪುಟ, ಪುಟ್ಟೆ; ಮಲ. ಪುಟ; ತುಳು. ಪುಡ; ತೆಲು. ಪಡ]

**ಪುಟ₃** (ನಾ). ೧. ಮಡಿಕೆ ; ಪದರ. ೨. ತಗ್ಗಾದುದು ; ಹಳ್ಳ. ೩. ಎಲೆಯಿಂದ ಮಾಡಿದ ಬಟ್ಟಲು ; ದೊನ್ನೆ : ನಳಿನದಳಪುಟದೆ ನೀರಂ ಸಳಿನಿಗಳವು ರೂಪುಗೊಂಡು ಸುರಿದವು (ಶಾಕುಂ. ೬೬). ೪. ಎಲೆಯಿಂದ ಮಾಡಿದ ಪೊಟ್ಟಣ. ೫. ಆಳವಿಲ್ಲದ ಬಟ್ಟಲಿನಂತಹ ಪಾತ್ರೆ. ೬. ಕೈಗಳಂತೆ ಜೋಡಿಸಿ ಮಾಡಿದ ರಚನೆ : 'ಕರಪುಟ' ಪರಾ. ೭. ಮುಚ್ಚಳ ; ಪಿಧಾನ : 'ಕವಾಟಪುಟ' ಪರಾ. ೮. ಗುಪ್ತಾಂಗವನ್ನು ಮುಚ್ಚುವ ಬಟ್ಟೆ ; ಕಟಿವಸ್ತ್ರ ; ಕೌಪೀನ : 'ಪುಟಗೋಸಿ' ಪರಾ. ೯. ಕಣ್ಣಿವೆ. ೧೦. ಸಸ್ಯಗಳ ಹೊಟ್ಟೆ. ೧೧. ಕರಂಡಕ; ಭರಣಿ; ಸಂಪುಟ. ೧೨. ಕುದುರೆಯ ಗೊರಸು; ಕೊಳಗು : 'ಖುರಪುಟ' ಪರಾ. ೧೩. ಜಾಜಿಕಾಯಿ. ೧೪. ಮೂಗಿನ ಹೊರಳೆ,–ಹೊಳ್ಳೆ : 'ನಾಸಾಪುಟ' ಪರಾ. ೧೫. ಲೋಹಗಳನ್ನು ಕರಗಿಸಲು ಬಳಸುವ ಪಾತ್ರೆ ; ಮೂಸೆ : ಪುಟಂಗಳೊ[ಶಬ್ದ. ಮುಟ್ಟಿಗೆಯೊ]ಳ್ಪುಟ್ಟುತೆಗೆವುದುಂ (ಶಬ್ದಾ.ಶಾ. ೯೬-೨೭). ೧೬. ಔಷಧಿಗಳ ಸಿದ್ಧತೆಯಲ್ಲಿ ಒಂದು ಸಲ ಕುದಿಸುವುದು,–ಭಟ್ಟಿಯಿಳಿಸುವುದು : ಮಾತುಳಂಗಮು ನೆಚ್ಚಿ ಮುಗುಟ್ಟೆ ಪುಟದಿಂ ಮಂದಾನಿಲನಿಂದ ಸುಟ್ಟು ಮುಖದೊಳ್ ತಳೆದೊಡೆ ಮುಖವಾಸಮಿಂತಿದತಿಶಯಮಕ್ಕುಂ

(ಶೋಕೋಶ. ೬-೮). ೧೭. ಗೋಡೆ ಕಟ್ಟುವಾಗ ಒಂದು ಸಲಕ್ಕೆ ಹಾಕುವ ಮಣ್ಣಿನ ಸ್ತರ: (?). ೧೮. ಚಿನ್ನವನ್ನು ಬೆಂಕಿಯಲ್ಲಿಟ್ಟು ಶುದ್ಧಗೊಳಿಸಿ ಹೊಳಪುಕೊಡುವಿಕೆ ಮತ್ತು ಅದರಿಂದುಂಟಾಗುವ ಹೊಳಪು: "ಪುಟಂ=ಬಣ್ಣಂ" (ಶಬ್ದ. ೨೬೯); ದೇಹವು ಮಿಸುನಿಯಂದದಿ ಪುಟವನಿಟ್ಟುದು (ಶಾಂತಾ. ೨೨-೬೯); ತೋಱಿದನು ತಾ ಬಳಿಕವಗೆ ಹದಿನಾಱುಬಣ್ಣದ ಪುಟದ ಚಿನ್ನಕೆ ನೂಱುಮಡಿಯನೆ ಹೊಳೆಹೊಳೆವ ಹೊಮ್ಮುಱಿಯ ರೂಪಕವ (ಕೊರಟಾ. ೩-೮-೦೯); ಕಿಟ್ಟಗಟ್ಟಿದ ಕಬ್ಬಿಣಕ್ಕೆ ಪುಟವ ಹಾಕಿಸೊ ಉತ್ಕೃಷ್ಟ ಬಂಗಾರದೊಳು ಎನ್ನ ಸೇರಿಸೊ (ಪ್ರಕೀಂತ. ೨-೨೩-೩). ೧೯. [ನಾಟ್ಯ] ಕಾಲಿನ ಒಂದು ಭಂಗಿ: "ಪುಟವದೊತ್ತಿ ತೋಱುವ ಹಜ್ಜೆಯೆನಿಕ್ಕು" (ಸಂಗೀತಾ. ೨೨-೯). ೨೦. [ಛಂದ] ಪ್ರತಿಯೊಂದು ಚರಣದಲ್ಲಿ ಹನ್ನೆರಡು ಅಕ್ಷರಗಳಿರುವ ಸಮಪಾದವೃತ್ತಗಳಲ್ಲಿ ಒಂದು: ನನಮಯ ಗಣವಿಂತೀ ನಾಲ್ಕುಮೆತ್ತಂ ಜನಿಯಿಸೆ ಯತಿ ಸಪ್ತಸ್ಥಾನದಿಂದಂ...ಈ ಮಾಂಗಿನೊಳ್ ಕಾವಿನಿಬಗೆ ಪು[ಶಾಖಾಂ. ಘ್]ಟಂ (ಛಂದೋಂಬು. ೨-೦೩೬). ೨೧. (?): ಶ್ರೀರತೀಶ್ವರನಶೋಕೆಯ ತಳಿರ ಸರಲ್ಗಳೆಗೆವೋರಂತೆ ಮಿರುಗುವ ಸಿಮುಗಮಂ ತೊಡಿವಂತೆ ತಾರಾಳಿಯ ಮೊಗ್ಗೆ ಕಂಚುಕಿಯವ ತೊಡಿಸಿ ಪುಟವಂ ಬಿಗಿದು ಬಂಧಿಸಿದರು (ಶಬಶೋ. ೨೩-೩೨).

**ಪುಟ ಇಳಿಸು**=ಭಟ್ಟಿ ಇಳಿಸು: ಅಷ್ಟಮಿಯ ರಾತ್ರಿ ಇಬ್ಬರು ಕುಳಿತು ಏನೋ ಪುಟ ಇಳಿಸುತ್ತಿದ್ದರು. ಮಡಕೆಯೊಂದಕ್ಕೆ ಮುಚ್ಚಳ ಹಾಕಿ . . . ಬೆಂಕಿಯ ಗುಳಿಯಲ್ಲಿ ಪುಟಕ್ಕೆ ಇಟ್ಟಿದ್ದರು (ಶಶೀಶ. ೦೨೯). **ಪುಟಕ್ಕೆ ಹಾಕು**= ೧. ಚಿನ್ನ ಮೊದಲಾದುವನ್ನು ಬೆಂಕಿಯಲ್ಲಿಟ್ಟು ಹೊಳಪು ಕೊಡು: ಅವಳ ಸೌಂದರ್ಯವು ಪುಟಕ್ಕೆ ಹಾಕಿದ ಚಿನ್ನದಂತೆ ಹೆಚ್ಚಿತು (ಮುಂಶಾ. ೬೯); ಬಂಗಾರ ಬೆಳ್ಳಿ ಮೊದಲಾದ ಪಂಚಲೋಹಗಳು ಪುಟಕ್ಕೆ ಹಾಕಿ ತೆಗೆಯದಿದ್ದರೆ ಅವುಗಳಿಗೆ ಕಾಂತಿ ಬರುತ್ತದೆಯೆ? (ಪ್ರಕಾಶ. ೩). ೨. ಮೂಸೆಯಲ್ಲಿಟ್ಟು ಸುಡು: ಒಬ್ಬಣದ ಕಿಟ್ಟ ತಂದು ಪುಟಕ್ಕೆ ಹಾಕಿ ಲೋಹಭಸ್ಮ ಮಾಡುವರು (ಮುಂಬಯಿ. ೯-೦೯೩). **ಪುಟ ಮಾಡು** = ಹೊತ್ತಿದ ಬೆಂಕಿಯನ್ನು ಉಜ್ವಲಗೊಳಿಸು: ಜಾಂಬವಾದಿಗಳ್ ಕುಂಡಮುನಗುಟ್ಟಿ ಕಾಳಾಗರುಚಂದನಾದಿಯಿಂಧನಂಗಳಂ ಒಟ್ಟಿಯಗ್ನಿಯಂ ಪುಟ ಮಾಡಿ (ಪುಣ್ಯಾಸ್ತ್ರ. ೬-೨೯ ಪ); ಅವರು . . . ಸಡಗರದಿ ಪಂಜುಗಳ ಪುಟ ಮಾಡುತ (ಪ್ರಕುಷ. ೯-೨೦೨). [ಸಂ.]

**ಪುಟಂನೆಗೆ, ಪುಟನೆಗೆ** (ಕ್ರಿ). ಪುಟಚೆಂಡಿನಂತೆ ನೆಗೆ; ಟಣ್ಣನೆ ಹಾರು: ತನ್ನ ಮುಂ ನೆರಪಿದ ಪಾಪವೆ ಕೋಪದಿಂ ಪೊಡೆಸೆಂದುಪೊಡೆಯುತಿರ್ದ್ದೆಂಬಂತೆ ಪೊಡರದೆ ಪುಟಂನೆಗೆದು ಮಗುಟ್ ಮಗುಟ್ ಶಿಲೆಯ ಮೇಲೆ ನುಚ್ಚುನೂಱಾಗಿ ಬಿಟ್ಟಂ (ಶಾಕ್ಯಶ್ರೀ. ೬-೯೯ ಪ); ಒದೆದಿಳೆಯಂ ಪುಟಂನೆಗೆದು . . . ಅಪ್ಪಳಿಪ ಬಗ್ಗದ ಗಂಡಿಕೆಗಂಡು ನೆತ್ತಿಯಗ್ರದೆ ಮೊನೆಯುರ್ಚೆ ಕಿಯಪ್ಪರಿಗೆಯಿಂದಿರದಿಕ್ಕಿದನಾ ವನೇಚರಂ (ಕಲಶಂ. ೩-೩೯). **ಪುಟನೆಗೆ**: ಮಠದೊಳಗಣ ಬೆಕ್ಕು ಇಲಿಯ ಕಂಡು ಪುಟನೆಗೆದಂತಾಯಿತ್ತು (ಕೇದಾಶ. ೨೦-೩೯); ಪುಟನೆಗೆದೆದ್ದು ವಳೆಯುವ ಕೊಡಹಿ ನಿಂದವು ವೇದವಾಜಿಗಳು (ಕುಮ್ಯಾಶ. ೬-೨೨); ನೆಲಕತ್ತಿ ಹೊಡೆದರು ಮೇಲಕೆ ಪುಟನೆಗೆದೇಳುವ ಕಂದುಕದಂತೆ (ಶಂಕಾಶ. ೨೨೦-೯೩). [ಪುಟ$_1$+ನೆಗ್$_1$]

**ಪುಟಕ** (ನಾ). ೧. ಮಡಿಕೆ; ಪದರ. ೨. ಹಳ್ಳವಾಗಿರುವಂಥದು. ೩. ದೊನ್ನೆ. ೪. ಎಲೆಯ ಪೊಟ್ಟಣ. ೫. ಕರಂಡ; ಸಂಪುಟ. ೬. ತಾವರೆ; ಕಮಲ. ೭. ಜಾಜಿಕಾಯಿ. [ಸಂ.]

**ಪುಟಕೊಡು** 'ಪುಟಗೊಡು' ನೋ.

**ಪುಟಕೋಸಿ** 'ಪುಟಗೋಸಿ' ನೋ.

**ಪುಟಕ್ಕನೆ** (ಅ). ತಟ್ಟನೆ; ಕೂಡಲೆ: ಮಲ್ಲಿ ಬೆಂಕಿಪೆಟ್ಟಿಗೆ ಹೊರಗೆ ಒಗೆದು ಮತ್ತೆ ಪುಟಕ್ಕನೆ ಒಳಗೆ ಹೋದಳು (ಶೇಷಂ. ೨೩). [ಪುಟಕ್$_0$ + — ಅನೆ$_1$]

**ಪುಟಗೈ** (ಕ್ರಿ). ಬೆಂಕಿಯನ್ನು ಉಜ್ವಲಗೊಳಿಸು,—ಪ್ರಕಾಶಮಯವಾಗುವಂತೆ ಮಾಡು: ದೀವಗಳನತಿಪುಟಗೈದು ನರವರಕುಮಾರಕರ ಚಿತ್ರಪನುಪೋದೊಂದ ತರುಣಿ ಕೋರಲು ನೋಡಿ ನೋಡಿ ಬೇಸತ್ತುಂ (ಶಶಶೋ. ೨೩-೩೯). [ಪುಟ$_3$ + ಗೈ (<ಕೆಯ್$_1$)]

**ಪುಟಗೊಡು, ಪುಟಕೊಡು** (ಕ್ರಿ). ೧. (ಅಲಂ) ಬೆಂಬಲವಾಗು; ಪುಷ್ಟಿಕೊಡು: ಅವಳು ತನ್ನ ಮನೆಗಿಂತ ಹೊರಗಿನವಳಲ್ಲ ಎಂಬ ಭಾವನೆಗೆ ಇದು ಮತ್ತಷ್ಟು ಪುಟಗೊಟ್ಟಿತು (ತ್ಯಾಗಮ. ೦೩೬); ವಾರ್ತಾಸಂಗ್ರಹದ ಪುಟವು ಮಾತ್ರ ಅವನಿಗೆ ಪುಟಗೊಡುತ್ತಿತ್ತು (ಕೊಶಾ. ೬೯), ರಾಯರ ಈ ದೊಡ್ಡ ನಡತೆಗೆ ಅವರ ಮನೆಯುವರಲ್ಲ ಪುಟಗೊಟ್ಟು . . . ಕೂಡಿಕೊಳ್ಳುತ್ತಿದ್ದರು (ಶಂಶಕು. ೦೨೦). **ಪುಟಕೊಡು**: ೧. ಭಾವ ಕೃಷ್ಣರಾಯ ಈ ಯೋಚನೆಗೆ ಪುಟಕೊಟ್ಟ, ಅರ್ಧಾಂಗಿ ತಿದಿಯೂದಿದಳು (ಕುರುಳ. ೦೩೨), ಅವರು ಅವನಿಗೆ ಕಲಿಸುತ್ತಿದ್ದ ರೀತಿಯೂ ಅವನ ಉತ್ಸಾಹಕ್ಕೆ ಪುಟಕೊಡುವಂತಿತ್ತು (ಕಹಂಶ. ೦೦೬). ೨. **ಲೋಹಗಳನ್ನು ಬೆಂಕಿಯಲ್ಲಿಟ್ಟು ಶುದ್ಧಗೊಳಿಸಿ ಹೊಳಪು ಕೊಡು**: **ಹರಾತ್ರಮಶಾಲಿ**ಗಳಿಗೆ ಯುದ್ಧವು ಸಂಭವಿಸಿದರೆ ಅಗ್ನಿಯಲ್ಲಿ ಚಿನ್ನಕ್ಕೆ **ಪುಟಕೊಟ್ಟಂತಾಗುತ್ತದೆ** (ತ್ರಿರಾಮ. ೩೦೯). ೩. (ಬೆಂಕಿಯನ್ನು) **ಪಟುಮಾಡು; ಉತ್ತೇಜಿಸು**: ಫಕೀರಪ್ಪನು ಇಸ್ತ್ರಿಯ ಬೆಂಕಿಗೆ ಗಾಳಿ ಹಾಕಿ ಪುಟ ಕೊಡುತ್ತಿದ್ದನು (ರಾಶಕು. ೨೨). [ಪುಟ$_3$ + ಕೊಡು$_1$]

**ಪುಟಗೊಳಿಸು** (ಕ್ರಿ). ೧. ಬೆಂಕಿಯನ್ನು ಹೊತ್ತಿಸು; **ಪಟುಮಾಡು**: ಬರುಹಿಯಿಧ್ಮಸ್ರುವಗಳಿಂ ಸತ್ಕರಿಸಿ ವಿಧಿಪೂರ್ವಕದಿ ಮಖಬುಧುರ ತರೇಂಧನದಿಂದ ಪುಟ [ಪಾಠಾಂ. ಪಟು] ಗೊಳಿಸಿದರು ಹುತವಹನ (ಕೊರಟಾ. ೦-೬-೯೩); ಅವನು ಆ ಒಲೆಯನ್ನು ಪುಟಗೊಳಿಸುತ್ತಿದ್ದನು (ಪುಶು. ೩೨೦). ೨. (ಅಲಂ) ಏರಿಸು; ವೃದ್ಧಿಗೊಳಿಸು: ಸ್ಥಳಮಹಿಮೆಗೆ ಸಂಬಂಧಿಸಿದ ದೇಶಪ್ರೇಮವನ್ನು ಪುಟಗೊಳಿಸಿ ಪರಿಪೋಷಿಸುವ ಹಲವು ಯಕ್ಷಗಾನಗಳನ್ನು ಈ ಪಂಗಡಕ್ಕೆ ಸೇರಿಸಬಹುದು (ಯಕ್ಷಗಾ. ೦೯); ಆ ಆವರಣ ಅವನ ಮನಸ್ಸಿನ ವೇದನೆಯನ್ನು ಪುಟಗೊಳಿಸಿತು (ಕೂಶಕ. ೬೦). [ಪುಟ$_3$ + ಕೊಳ್$_1$ + — ಇಸು$_3$]

**ಪುಟಗೋಸಿ, ಪುಟಕೋಸಿ** (ನಾ). ೧. ಲಂಗೋಟಿ; **ಕೌಪೀನ**: ಪುಟಗೋಸಿಗಿಂತ ದರಿದ್ರವಿಲ್ಲ, ಮರಣಕ್ಕಿಂತ ಶಿಕ್ಷೆ ಇಲ್ಲ (ಗಾದೆ). (ಗೆಂ). ೨. ಚಿಕ್ಕವಯಸ್ಸಿನ: ಹತ್ತುವರುಷದ ಪುಟಗೋಸಿ ಬ್ರಹ್ಮಚಾರಿ ದೇಶೀಲು ಶ್ರೀವೈಷ್ಣವರಿಗೆಲ್ಲರಿಗೂ ತೀರ್ಥಪ್ರಸಾದ ವಿನಿಯೋಗವಾದ ಮೇಲೆ ಬಾಕಿಯುವರ ಮಾತು (ಕಂಶ. ೩೯೦). ೩. (ಅಲಂ) ಕೆಲಸಕ್ಕೆ ಬಾರದ; ಬೆಲೆಯಿಲ್ಲದ; ಕ್ಷುದ್ರವಾದ: ಈ ಪುಟಗೋಸಿ ವಿಷಯಕ್ಕೆ ಯಾಕೆ ತಲೆ ಕೆಡಿಸಿಕೊಳ್ಳುತ್ತಿದ್ದಿ? (ಕೂಶ). **ಪುಟಕೋಸಿ**: ೧. ಪುಟಕೋಸಿಗೂ ಗತಿಯಿಲ್ಲದವನು ಮಹಾಮಹಾ ಮಾತನಾಡುತ್ತಾನೆ (ಕೂಶ). [ಪುಟ$_3$+ಗೋಸಿ (< ಗೋಚಿ)./ತೆಲು. ಪುಟ್ಟಗೊಂಚಿ]

**ಪುಟದೋಷ** (ನಾ). ರತ್ನದ ಒಂದು ದೋಷ, —ಅವಗುಣ: ಕರ್ಕರಂ ಕೋಮಲಂ ಮಂದದೀಪ್ತಿ ಹೊಗೆಯಂ ನಕ್ಕಲಿನ ಬಣ್ಣಮದು ಮೂರು ರತ್ನಂಗಳೊಳು ಪೊಕ್ಕು ಮಿಶ್ರಿತಮಾಗಿ ದೋಷಮಮ್ಮೆಸಗಿತಾ ಮೂರರೊಳ್ ಬೇರೆ ಬೇರೆ ಅಕ್ಕರಿಂ ಧರಿಸಿದವರಿಗೆ ಫಲಮ ಪೇಳುವೆಂ ಕರ್ಕರಕೆ ಭಸ್ಮವೆಂದೊಡದು ಹುಟ್ಟಿದುದೆಂದು ಅಕ್ಕಜದ ಮೊರಬು ಬಾಳಿಯಾಣ ಸಸುನಗಳೆಂದು ಪುಟದೋಷವೆಂದಿರ್ಪುದು (ರತ್ನಶಾ. ೯-೩). [ಸಂ.]

**ಪುಟದೋಱು** (ಕ್ರಿ). (ಅಲಂ) ವ್ಯಕ್ತವಾಗು; ಪ್ರಕಟಗೊಳ್ಳು: ಸುಗುಣಿ ನಿನ್ನಯ ಕಂಬಲ್ಲ ಕೆಂಡ ಮುಗುಳ್ನಗೆಯಿಂದವೆ ಪರಿಪರಿವಳ **ಪುಟದೋಱಿ**

ವಿಂಗೆ ಉರದೊಳು ಉರ ಒತ್ತಿಕೋ ಬಾ ಬಾ (ಕಹರೀ. ೦೬೯-೬೩೬).

[ ಪುಟ್ಟು + ತೋಱು ]

**ಪುಟನೆಗೆ** 'ಪುಟಂನೆಗೆ' ನೋ.

**ಪುಟಪಡು** (ಕ್ರಿ). ಪುಟಕ್ಕೆ ಬೀಳು ; ಪುಟಕ್ಕೆ ಹಾಕಲ್ಪಡು : ಚಳಿಕ ಚಳಿವಾಗೆ ಬಾಱಂ ಸೆಳೆವೆಳೆವ ಪಟ್ಟಸಂಡಿ ಪುಟಪಟ್ಟರೆ ಕಿಚ್ಚುಳುರ್ದಟಾಲೋಹದ ಪೊಲ್ ಕಂಕಳಕೋಹಂ ಕರಗಿ ಕೊರಗಿದಂ ಚಾಣೂರಂ (ಅರ್ಜಕ೯. ೫-೧೦೬).

[ ಪುಟ್ಟು + ಪಡು ]

**ಪುಟಪಾಕ** (ನಾ). ೧. ಬೇರೆ ಬೇರೆ ಔಷಧದ್ರವ್ಯಗಳನ್ನು ಎಲೆಗಳಿಂದ ಸುತ್ತಿ, ಮಣ್ಣು ಮೆತ್ತಿ ಬೆಂಕಿಯಲ್ಲಿ ಇಟ್ಟು ಬೇಯಿಸುವ ಒಂದು ಕ್ರಮ,-ವಿಧಾನ : ಪಸಿಯ ಕೊವಲ ತಿದಿಯೊಳ್ ಪುದಿದು ಪುಟಪಾಕಂ ಸುಡುವವರುಂ (ಅಜಿತ. ೫-೬೩ ವ) ; ಕೆಂಗಲಿಸುವ ಕೆಂಡದೊಳ್ ಪೊಱ್ದು ಪುಟಪಾಕಂ ಸುಡೆಯುಂ (ಜಗನ್ನಾ. ೫ ೬೪ ವ); ಕಾಯ್ದೆಣ್ಣೆಯೊಳದ್ದುವರು ಲೋಹರಸದೊಳು ತೊಯ್ಯಿಕ್ಕಿ ಪುಟಪಾಕದಿಂದೆ ಒಯ್ಯು ತಾಳಿವರು ಕಾವಲಿಯೊಳು (ಕರ್ಣಕ. ೬-೯೬). ೨. (ಅಲಂ) ಒಳಗೊಳಗೇ ಬೇಯುವುದು : ಕಣ್ಣಾಯಿತು ಕರುಳಿನಲ್ಲಿ ಎಂತಹ ಪುಟಪಾಕ ನಡೆದಿತ್ತೆಂಬುದನ್ನು ಹೆಣ್ಣು ಹಡೆದವರೆಲ್ಲರೂ ಬಲ್ಲರು (ಗಾಳಿಕ.೦೩೬). [ಸಂ.]

**ಪುಟಪಾಕಂಗೈ** (ಕ್ರಿ). ಪುಟಪಾಕ ಮಾಡು : ತಾಳೀಸಪತ್ರ, ಮೆಣಸು . . . ಸಮಸಕ್ಕರೆವೆರಸಿ ಪುಟಪಾಕಂಗೈದು (ಕಳ್ಯ. ೨೬೪).

[ಪುಟಪಾಕ+ಗೈ (<ಕಯ್$_1$)]

**ಪುಟಪಾಕವಾಗು** (ಕ್ರಿ). (ಅಲಂ) ಬೇಯು ; ಶುದ್ಧಗೊಳ್ಳು : ಹೊಸ ಹೊಸಬನಾಗುವನನುಕ್ಷಣಂ ಮಾನವನು ವಸುಧೆಯಾ ಮೂಸೆಯಲಿ ಪುಟಪಾಕವಾಂತು ರಸವರೂರ್ತಿಯಾಗುವನು ಜಗದಾತ್ಮವಾತಿ ಬೆಳೆಯೆ (ಜುಂಟಸ. ೬೦೯). [ಪುಟಪಾಕ+ಆಗು (<ಆಗ್$_1$)]

**ಪುಟಪುಟ** (ನಾ). ಒಂದು ಅನುಕರಣ ಪದ : ಪುಟಪುಟನೆ' ಪರಾ.

**ಪುಟಪುಟನೆ** (ಅ). ಪುಟಪುಟ ಎಂದು : ರತ್ನದ ರಸದಾ ಕಾರಂಜೀಯೂ ಪುಟಪುಟನೆ ಪುಟಿದು (ಗಂ. ೦-೯). [ಪುಟಪುಟ+—ಅನೆ$_1$]

**ಪುಟಪುಟಿಸು** 'ಪುಟಂಪುಟಿಸು' ನೋ.

**ಪುಟಬಾಳೆ** 'ಪುಟ್ಟಬಾಳೆ' ನೋ.

**ಪುಟಬೀಜ** (ನಾ). ಒಂದು ಬಗೆಯ ಸಸ್ಯ : "ಪುಟಬೀಜಂ—ಹರಳು ವೀರೆ" (೬ಕಥ. ೦೦೦). [?]

**ಪುಟಭೇದ** (ನಾ). ೧. ನದಿ ಮೊದಲಾದ ಜಲಾಶಯಗಳಲ್ಲಿರುವ ತಿರುವು,—ಸುಳಿ,—ಚಕ್ರ : "ಚಕ್ರಾದಿ. ಪುಟಭೇದಃ—ಈ ೨ ತೋಯಿಯ ಸುಳಿವು" (ಕಹಾಯು. ೦೦೦-೯೯). ೨. ನಗರ; ಪಟ್ಟಣ. ೩. ಒಂದು ಬಗೆಯ ವಾದ್ಯ. [ಸಂ.]

**ಪುಟಭೇದನ** (ನಾ). =ಪುಟಭೇದ ೨ : "ಪತ್ತನಂ ಪುಟಭೇದನಂ . . . ಪುರೀ—ಈ ೧೧ ಪಟ್ಟಣಂ" (ಕಹಾಯು. ೯೬-೦೬೦), ತನ್ನ ಪುಟಭೇದನಕೆ ಪೋದನು ಮೇಘಸಂಧಿಧರಾಧಿನಾಯಕನು (ತಿಮ್ಮಕ. ೬-೦೦). [ಸಂ.]

**ಪುಟವಿಕ್ಕು**, ಪುಟವಿಕ್ಕು (ಕ್ರಿ). ಪುಟಕ್ಕೆ ಹಾಕು; ಹೊಳಪುಗೊಡು : ಪುಟವಿಕ್ಕಿ ವಿಂಚುಗುವ ಕಡೆಯಾಣೆಯ ಮಿಸುನಿಯುಂ ಸಮದು ಥಳಥಳಿಸಿ ಪೊಳೆವ ನೆಲೆಮಾಡದ ಮೇಲೆ . . ಒಡ್ಡೋಲಗಂಗೊಟ್ಟು ಲೀಲೆಯಿಂದಿರ್ಪುದುಂ (ಜಾವಕ. ೦೦-೦ ವ). ಪುಟವಿಕ್ಕು : ಒರೆಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯ (ಬಸವ. ೨೫೦). [ಪುಟ್ಟು+ಇಕ್ಕು]

**ಪುಟವಿಂಗು** (ಕ್ರಿ). (ಅಲಂ) ಅಧಿಕವಾಗು; ಹೆಚ್ಚಾಗು; ಅತಿಶಯಿಸು : ಬೆಳಗಾಗಿ ಪುಟವಿಂಗೆ ಡೆಂಡೆಲಿಸಿ ತೊದಲಿಸುತ ಭಕ್ತಿಕರಂತ ಪೂಗಳದ ಪಾಡಿದಂ ಶ್ರೀ ಜಡೆಯ ಶಂಕರನ (ಘಂಟಾ. ೫-೪). [ಪುಟ್ಟು+ಏಗು]

**ಪುಟಬಾಳೆ** 'ಪುಟ್ಟಬಾಳೆ' ನೋ.

**ಪುಟವಿಕ್ಕು** 'ಪುಟವಿಂಕ್ಕು' ನೋ.

**ಪುಟವಿಡು** (ಕ್ರಿ). ೧. = ಪುಟವಿಕ್ಕು : ಪುಟವಿಟ್ಟಳೆಪಟ್ಟ ಮಿಸುನಿ ಪೋಲ್ ಮಂಗಳನಿರ್ಮಳರುಚಿರರೂಪ ಕಣ್ಗೆಸೆದಿರ್ದಳ್ (ಗಿರಿಕ. ೩-೩೪); ನೆನೆದ ಮಾತವನು ತನ್ನ ತಂದೆಯ ಮನದ ಮಚ್ಚದೊಳೂರದು ಕರ್ಣನ ನೆನಹಿನಲಿ ಪುಟವಿಟ್ಟು ಶಕುನಿಯ ನೀತಿಯಲಿ ನಿಗುಚಿ . . . ಪ್ಪೈದುನನ ನುಡಿಯಲಿ ಬಣ್ಣವಿಟ್ಟನು (ಕುಮ್ಮಾ.ಉ. ೨-೨೨); ನಡೆ ಪುಟವಿಟ್ಟ ಮಿಸುನಿಯ ಗುಬ್ಬಿಗಳ ಲಟ್ಟದ ಹೊಕ್ಕುಳ ಗಟಿಯು ತೊಳಗಟ್ಟಿನೆಸು ತಳ್ಳೆದಿದುವು (ಕಂಕರ. ೨೬-೯೪); ಕಾಳಿದಾಸನು ಜೀವಕಳೆ ತುಂಬಿ ನಿರ್ಮಿಸಿದ ಶಕುಂತಲೆ ಪುಟವಿಟ್ಟ ಸ್ವರ್ಣಪ್ರತಿಮೆ(ಶಾಕದ. ೯೬).೨.(ಅಲಂ)ಉತ್ತೇಜನಗೊಳಿಸು; ಪ್ರೋತ್ಸಾಹಿಸು : ರಾಮಚಂದ್ರಗೆ ವನಿತೆಯನು ಕೊಡದೆಲೆ ಮನದಲಿ ಖತಿಯ ಪುಟವಿಟ್ಟು ದಿನದಿನಂಪ್ರತಿ ವೈರಭಾವವನೆನಗೆ ಹುಟ್ಟಿಸಿ ಸಂಹರಿಸುವನು (ಕಾಶಿಹ. ೨೬-೦೬); ನಾರಾಯಣನವಾಸ್ತ್ರರ ರೊಡನೆ ವ್ಯತಿರಿಕ್ತವಾಗಿ ಕೂಡಿಕೊಂಡು ನಕ್ಕು, ಸಡಗರದಿಂದ ಮಾತನಾಡುವುದು ದಿನದಿಂದ ದಿನಕ್ಕೆ ಪುಟವಿಟ್ಟಂತಾಯ್ತು (ಕಾಕಲ. ೬೬).

[ಪುಟ್ಟು + ಇಡು$_1$]

**ಪುಟವಿಳಿ** (ಕ್ರಿ). ಬೆಂಕಿಯಿಂದ ಕಾಂತಿ ಪಡೆದು ಹೊರಬರು: ಬಿನ್ನಣದಿ ಪುಟವಿಳಿದ ಸೊನ್ನೆಯ ತಿರಸ್ಕರಿವ ಚೆನ್ನೆಯರ್ . . . ನಡೆತಂದರು (ಕಂಜಾ. ೬-೬). [ಪುಟ್ಟು + ಇಳಿ$_1$ (<ಇಟ್$_1$)]

**ಪುಟವೇರಿಸು** (ಕ್ರಿ). ೧. ಬೆಂಕಿಯಲ್ಲಿ ಹಾಕು ; ಸುಡು ; ದಹಿಸು : ಅವರನ್ನು ಹಿಡಿದು ಪುಟವೇರಿಸೋಣ ! (ಚಿಕ ೩೬-೨೨). ೨. (ಅಲಂ) ಉತ್ಸಾಹಗೊಳಿಸು ; ಚೇತರಿಸು : ಸಾವಿ ನೀವೀಗಲು ಪರೀಕ್ಷಿತನ ಮಾನವ ಕಲಿಯೇರಿಸಿಯೆ ನೀತಿವಚನಂಗಳಿಂದಲವನ ಪುಟವೇರಿಸಿಯೆ ದುಗುಡವಂ ಬಿಡಿಸಿ(ಕುರಂಗ. ೯೬-೨೨). [ಪುಟ್ಟು + ಏರಿಸು (<ಏಱಿಸು)]

**ಪುಟವೇಳ್$_1$**, ಪುಟವೇಳು (ಕ್ರಿ). ಪುಟಿದು ಏಳು ; ಮೇಲಕ್ಕೆ ಹಾರು : ಪುಟಶತಘ್ನಿಗಳ ಗುಂಡುಗಳುಚ್ ಮೇಲಕ್ಕೆ ಪುಟವೆದ್ದು ನಡೆದುವು (ಕಾಶಿಹ. ೦೨-೦೦). ಪುಟವೇಳು : ಚೆಂಡು ತೂತಾಗಿರುವುದರಿಂದ ಪುಟವೇಳುತ್ತಿಲ್ಲ (ಜೂಂ). [ಪುಟ್ಟು + ಎಳ್$_1$ (<ಎಟ್$_1$)]

**ಪುಟವೇಳ್$_2$** 'ಪುಟವೇಟ್' ನೋ.

**ಪುಟವೇಳು** 'ಪುಟವೇಳ್$_1$' ನೋ.

**ಪುಟವೇಱು** (ಕ್ರಿ) ೧. (ಅಲಂ) ಕಾಂತಿಯನ್ನು ಹೊಂದು ; ಶೋಭೆಯನ್ನು ಪಡೆ : ಇನಿಸಿನಿಸಾ ಗರ್ಭಂ ಪ್ರತಿದಿನಮೊಯ್ಯನೆ ಬಳೆಯೆ ಸಯದೆ ಪುಟವೇಱಿ ನಿತಂಬಿನಿ ಕಾರೊಳೆಸೆವ ಕಾದಂಬಿನಿಯಂದದೆ ಮಂದಮಂದ ಗಮನದೆ ನಡೆದಳ್ (ಕಾದಂಪೂ. ೬೬೦). ೨. ಹೆಚ್ಚಾಗು ; ವೃದ್ಧಿಯಾಗು : ಪುಳಕಂ ಪುಟವೇಱಿ ಭೋಂಕನೆದ್ದನ್ನತಾಸನವೇಱಿ (ಶಬರ. ೦೦-೫). [ಪುಟ್ಟು + ಏಱು (<ಏಟ್$_1$)]

**ಪುಟವೇಟ್**, ಪುಟವೇಳ್$_2$ (ಕ್ರಿ). (ಅಲಂ) ಉಬ್ಬು; ಉತ್ಸಾಹ ಪಡು: ಪೆರ್ಚುವನವ್ವಂ ನಲಿವಂ . . . ಪುಟವೇಟ್ಟನತಿಪ್ರಮೋದವಾಂತರ್ಚಿಪನುದ್ಘಟ್ಟಿಪಂ (ಅದ್ಭುತ. ೦೧-೨). ಪುಟವೇಳ್$_2$ : ಗಿರಿರಾಜನೊಡಂ ಬಟ್ಟಾವರದೀಂದಂ ಪುಳಕಿಸುತ್ತೆ ಪುಟವೇಳುತ್ತುಂ ಪರಿಚಾರಪಟುಗಳೆನಿಸುವ ತರುಣಿಯರಂ ಕೂಡಿ ಕೊಟ್ಟು ಸಂತಸದಿಂದಂ (ಗಿರಿಕ. ೩-೯); ಪೂಜೆಯಂ ಮಾಡಿ ಪುಟವೆದ್ದಾಡುವರ್ ಕೆಲರ್ (ಅಶರ. ೬-೯೬). [ಪುಟ್ಟು+ಏಟ್$_1$]

**ಪುಟಸಂಸ್ಕಾರ** (ನಾ). ಲೋಹಾದಿಗಳನ್ನು ಬೆಂಕಿಯಲ್ಲಿಟ್ಟು ಕಾಯಿಸಿ ಶುದ್ಧಗೊಳಿಸುವಿಕೆ ; ಪುಟಕ್ಕೆ ಹಾಕುವಿಕೆ : ನಿನಗಿಳಿದ ಜಗವ ಮುಟ್ಟಿದ ಸೇತು ಸಂಸಾರ ಮನಕೆ ಪುಟಸಂಸ್ಕಾರ (ಜುಂಟಸ. ೬೦೦).[ಸಂ.]

**ಪುಟಸನ್ನೆಗೈ** (ಕ್ರಿ). ಕೈಯಿಂದ ಚಪ್ಪರಿಸಿ ಸನ್ನೆ ಮಾಡು : ವಾಯುವೇಗದ ತುರಂಗಗಳನಡರ್ದು ಸಲೆ ಪೈಸರದಿಂದ ಪುಟಸನ್ನೆಗೈದೊಲವಿ

ನಿಂದಾಯೆನುತೆ ಕಂದವಂ ತಟ್ಟುತ್ತೆ (ಕೋಲಾಟ. ೧೨-೬).
[ಪುಟ್ಟ + ಸನ್ನೆಗ್ಗೆ (< ಸನ್ನೆಗೆಯ್)]

**ಪುಟಾಣ್ಣಿ** 'ಪುಟ್ಟಾಣಿ' ನೋ.

**ಪುಟಾಣ್ಣಿ** 'ಪುಟಾಣಿ' ನೋ.

**ಪುಟಿ** (ಕ್ರಿ). ಮೇಲಕ್ಕೆ ಚಿಮ್ಮು; ನೆಗೆ; ಹಾರು: ಕುಂದ ಮಂದರ ೞಳದು . . . ಗಂಧಮಾದನಗಿರಿಗೆ ಹಿಂಗದೆ ಪುಟಿದು ವಾರಿನಿಧಿಯು ನೆರೆದ ಗಂಗೆಗಾರುತಿಯು ಬೆಳಗಿರೇ (ಶಕೀ. ೧೭-೬); ಹಾಸ್ಯ ಅಂದರೆ ಬುಗ್ಗೆಯಾಗಿ ಪುಟಿಯುತ್ತದೆ (ಆಹೋ. ೦೫೭); ನೀರಿನ ಕಾರಂಜಿ ಪುಟಿಯುವುದನ್ನು ಈಕ್ಷಿಸುತ್ತ ರೇಣು ಕೇಳಿದಳು (ಹಮಂಕ. ೨೧೬).

**ಪುಟಿಪುಟಿ** (ದ್ವಿರುಕ್ತಿ): ಭರದೆ ವಾರಿಧಿಯಲ್ಲಿ ಹಾರಲು ಶಿರದ ಛಿದ್ರ ದ್ವಾರದಿಂದೆತ್ತರದೆ ನೀರ್ಪುಟಿಪುಟಿದು ಕಣ್ಣಿಗೆ ಚಂದಗಾಣುವದು (ರಕಿಪಂ. ೦೧೦-೧೧).

**ಪುಟಿ₂** (ನಾ). ಚಕ್ರದ ಅರೆಕಾಲು: ಜನಪದಸಾಹಿತ್ಯವೆನ್ನುವುದು ಜಾನಪದಚಕ್ರದ ಒಂದು ಪುಟಿ . . . ಹಲವು ಪುಟಿಗಳು ಕೂಡಿ ತಾನೆ ಒಂದು ರಥದ ಚಕ್ರ? (ಜುರ್ಗ. ೨೨). [?]

**ಪುಟಿಕೆ** (ನಾ). ೧. ಕರಂಡ; ಭರಣಿ; ಡಬ್ಬಿ: ಮದನನ ಸುಗಂಧಭಂಡಾರದ ಪುಟಿಕೆಗಳೆನಿಸಿ ಕಂಪು ಮಗಮಗಿಪಲರ್ವಟ್ಟಿದ ಪಡಲಿಗೆಗಳನೊಟ್ಟೈಸಿದನ ವನಚ್ಯುತನ ಮುಂದೆ ಮಾಲಾಕಾರಂ (ಜಗಂ. ೬-೧೭): ತರವೇಲ್ಪಾಣಿಕ್ಯ ಭಂಡಾರದ ಪುಟಿಕಗಳುಂ (ಕಮುದ. ೨೬೯ ಕೃಯೋ). ೨. ದೊನ್ನೆ: ಎಲೆಯ ಬಟ್ಟಲು: ಪೂವಿಗೆ ಪು[ಶಾಶಾಂ. ಘ]ಟಿಕೆಯು ಮಾಳ್ಪೆನೆಂದಾಗ ಜಯಾ ವತಿಯಚಿಹರುಷದೊಳು ಆ ವನರುಹದೊಂದೆಲೆಗೊಯ್ಯೆ ಬೆಳ್ಳೊಡೆಯಾ ವಸುಧಾಪತಿಗಾಯ್ತು (ಶ್ರೀಶಾಂ. ೧೨-೪೮). 'ಪತ್ರಪುಟಿಕೆ' ಪರಾ. ೩. ಜಾಡಿಯಿ; ಜಾಯಿಕಾಯಿ: ಎಕ್ಕಿಹಾಲಿನಲ್ಲಿ ಚತುಷ್ಕಠಃ ಟಂಕಣ ವನ್ನಾಗಲೀ ಪುಟಿಕೆಯನ್ನಾಗಲೀ ಹಾಕಿ ಮರ್ದಿಸಿ ಗಜಪುಟವನ್ನು ೨೦ ಕೊಟ್ಟರೆ ಭಸ್ಮವಹುದು (ಅಶ್ವಶಾ. ೨೨). ೪. ಏಲಕ್ಕಿ. [ಸಂ. ಪುಟಿಕಾ]

**ಪುಟಿಗಾಲು** (ನಾ). ನೆಗೆಯುವ ಕಾಲು; ಪುಟಿದೇಳುವ ಕಾಲು: ನಿನ್ನ ಪುಟಿಗಾಲಿನಲಿ ಹರ್ಷ ದುಃಖದ ಮುತ್ತು (ಪಂಕು. ೮೧-೩).
[ಪುಟಿ₁ + ಕಾಲು₁ (<ಕಾಲ್₁)]

**ಪುಟಿಗೆ** (ನಾ). ೧. ಪುಟಿಯುವಿಕೆ; ನೆಗೆತ. ೨. ಮಿಡಾಟ; ಜೀಕು: ಕಮಲಾಬಾಯಿಯರ ಕೈಗೆ ಪುಟಿಗೆ ಕೊಟ್ಟು ಉಳಿಯು ಸುಶೀಲೆಯೆಡೆಗೆ ಸಾಗರವರಿದಳು (ಸಪುಜ. ೬೨೪). 'ಮುಂಗಾಲ್ಪುಟಿಗೆ' ಪರಾ.
[ಪುಟಿ₁ + – ಗೆ]

**ಪುಟಿತ** (ಗು). ೧. ಹೆಣೆದ; ಜೋಡಿಸಿದ. ೨. ಮಡಿಚಿದ. ೩. ಹೊಲಿದ; ಕೂಡಿಸಿ ಕಟ್ಟಿದ. ೪. ಉಜ್ಜಿ ಪುಡಿ ಮಾಡಿದ; ಹುಡಿಗೊಳಿಸಿದ. ೫. ಸಂಕುಚಿತವಾದ; ಸಂಕೋಚಗೊಳಿಸಿದ. ೬. ಪ್ರಕಟಿಸಿದ; ವ್ಯಕ್ತಪಡಿಸಿದ. ೭. ಹೇಳಿದ; ನುಡಿದ. [ಸಂ.]

**ಪುಟಿಯಿಸು, ಪುಟಿಸು** (ಕ್ರಿ). ಚಿಮ್ಮಿಸು; ನೆಗೆಸು: ನಾಲ್ವತ್ತು ಗೆಳೆಯರ ಕೈ ಉಬ್ಬಿಸಿದವನ ತಲೆಯಿಂದ ನೆತ್ತರು ಪುಟಿಯಿಸದಿದ್ದರೆ ನಾನು ಜಾತಿವಂತ ಅಂಬಿಗನಲ್ಲ (ರಂಗಯೋ. ೧೨). **ಪುಟಿಸು**: ನಮ್ಮ ಹಳ್ಳಿಗರು ಆಗಾಗ ಹಾಸ್ಯದ ಬುಗ್ಗೆಯಾಗಿ ಚಿಡಗುಗಳನ್ನೊಳಗೊಂಡ ಹಾಡುಗಳ ಕಾರಂಜಿಯನ್ನು . . . ರಸಕವಿಗಳಾಗಿ ಪುಟಿಸಿದ್ದಾರೆ (ಅಕ್ಷಶಾ. ೪೪) [ಪುಟಿ₁ + – ಇಸು₂]

**ಪುಟಿಸು** 'ಪುಟಿಯಿಸು' ನೋ.

**ಪುಟೀಪು** (ನಾ). ಗೋಡೆ ಅಥವಾ ಹಲಗೆಯ ಮೇಲೆ (ಚಿತ್ರ, ಸುಳುಹಂ ಮೊದಲಾದಂವುಗಳ ರಚನೆಗಾಗಿ) ಸುತ್ತಣ ಮಟ್ಟಕ್ಕಿಂತ ಉಬ್ಬಾಗಿ ಅಥವಾ ತಗ್ಗಾಗಿ ಮಾಡಿದ ವಿಭಾಗ,—ಅಂಕಣ: ಇದನ್ನು ಮಹಡಿಯ ಮೆಟ್ಟಿಲುಗಳ ಪುಟೀಪುಗಳು (Panels) ಮತ್ತು ತೆಳುಗೋಡೆ ಗಳಲ್ಲಿಯೂ ಉಪಯೋಗಿಸುತ್ತಾರೆ (ಶಿಲ್ಪಶಾ. ೩೨೪); ಎರಡು ಪಟ್ಟಿಕೆ ಅಥವಾ ಪುಟೀಪುಗಳಲ್ಲಿ (Panels) ನಟರಾಜನ ನಾಟ್ಯಭಂಗಿಗಳು ಶಿಲ್ಪಿತ ವಾಗಿವೆ (ಹೊಳಂ. ೯೬). [?]

**ಪುಟು** (ನಾ). ಒಂದು ಅನುಕರಣಪದ: 'ಪುಟುಗುಟ್ಟು' ಪರಾ.

**ಪುಟುಗುಟ್ಟು** (ಕ್ರಿ). ಪುಟುಪುಟು ಎಂದು ಬಡಿದುಕೊಳ್ಳು: ಪುಟು ಗುಟ್ಟುತ್ತಿರಲಿದೆ ತುಟಿ ಕಚ್ಚಿ ಹಿಡಿದಿದ್ದ ನನ್ನಲ್ಲೇ ನಾನಿಲ್ಲ ಎಂಬಂತಿರೆ (ಸಣಗ. ೨೯-೫೭೫). [ಪುಟು+ಕುಟ್ಟು₁]

**ಪುಟುಪುಟಿಸು, ಪುಟಪುಟಿಸು** (ಕ್ರಿ). ವಟಗುಡು; ಗೊಣಗು: ಮುರ್ತಿ ಮೆಲ್ಲಗೆ ನೆಲಕ್ಕೆ ಹಣೆ ಹಚ್ಚಿ ನಮಸ್ಕಾರ ಮಾಡಿ ಮನಸ್ಸಿನಲ್ಲಿಯೇ ಪುಟು ಪುಟಿಸಿದ (ಏರೋರಿ. ೨೦); ಭೀಮಪ್ಪ . . . ಬಾಯುಲ್ಲಿಯೇ ಏನೇನೋ ಪುಟುಪುಟಿಸಿದ (ಮಣ್ಣು. ಹ. ೧). **ಪುಟಪುಟಿಸು**: ಬಾಯಲ್ಲೇ ಏನೋ ಪುಟ ಪುಟಿಸುತ್ತ ಅಂಗಡಿಯತ್ತ ನಡೆದೇ ಬಿಟ್ಟರು (ಜುಯಿಶಾ. ೨೨೦).
[< ಪುಟು+ – ಇಸು₂]

**ಪುಟುವು** (ನಾ). (ಆಲಂ) ಪ್ರೋತ್ಸಾಹ; ಬೆಂಬಲ: ಅವನ ಮದುವೆ ಮಾಡ ಬೇಕೆಂದು ರಾಯರ ಹಂಬಲ; ಆಚಾರ್ಯರ ಪುಟುವು (ಕ್ರೀಡಂಜ. ೦೪); ಅವರೇ ಶ್ಯಾಮರಾಯನಿಗೆ ಪುಟುವು ಕೊಡುತ್ತಿದ್ದ ವಾರ್ತೆ ಗೌಡರಿಗೂ ಹತ್ತಿತ್ತು (ಬೀಹಹ. II. ೦೦೦). [< ಪುಟ₃ + – ವು]

**ಪುಟೆಗಳ್ಳ** (ನಾ). ಒಬ್ಬಾತನ ಹೆಸರು: ಅಯ್ಯಣಯ್ಯನ ಮಗಂ ಪುಟೆ ಗಳ್ಳನ್ನಾಗೆದೊಡೆ (ಶಾಇಶ. IX-1. ೬೩-೧೦; ೯೪೭). [?]

**ಪುಟ್ಟ₁** (ನಾ). ೧. ಚಿಕ್ಕವನು; ಸಣ್ಣವನು: ಹೊಟ್ಟೆಯ ಕರುಳ ಹಾರವ ಮಾಡಿ ಪುಟ್ಟಗೆ ವರವ ಕೊಟ್ಟಾನಾಗ (ಕಪಳ. ೭೭-೪); ರತಿಯು ಪರಿಪಾಲಿ ಸುವ ಪುಟ್ಟನನ್ನು ಕರೆತರ್ಪುದು (ಕರಹೋ. ೦೨-೩೦); ಹೋದ ಪುಟ್ಟ ಬಂದ ಪುಟ್ಟ, ಪುಟ್ಟನ ಹೆಜ್ಜೆ ಕಂಡೋರಿಲ್ಲ (ಗಾದೆ). ೨. ಮಕ್ಕಳನ್ನು ಪ್ರೀತಿ ಯಿಂದ ಕರೆಯುವಾಗ ಬಳಸುವ ಒಂದು ಪದ: ಊಟ ಮಾಡು ಬಾ ಪುಟ್ಟ (ಜಂಂ). (ಗು). ೩. ಚಿಕ್ಕ; ಸಣ್ಣ: ತರಳನ ಪುಟ್ಟ ಪಾದ ದೋರ್ದ ತಾವರೆಯರಲನು ನೊಸಲಿಗೊತ್ತುವಳು (ಕೋಹಕ. ೦೭-೬೪); ಅರ್ಭಕನ ಕಣ್ಣೆ ಪುಟ್ಟ ಸಾಲಗ್ರಾಮದೊಂದು ರಮಣೀಯ ಶಿಲೆ ಕಟ್ಟಿಸಿಕ ದಿಂದೆ ಕಾಣಿಸಲದಂ ತಾನೆತ್ತಿಕೊಂಡು . . . ಬೈಚಿಟ್ಟುಕೊಂಬಂ ಬಾಯೊ ಳನವರತಂ (ಕೃಮಿಜಾ. ೨೪-೨೩); ನಂಜಮ್ಮ . . . ಮಗುವಿನ ಕೈಕಾಲು ಗಳಿಗೆ ಪುಟ್ಟ ಹೊನ್ನ ಬಳೆಗಳನ್ನು ತೊಡಿಸಿದಳು (ಚಾಕುಕ್ಕ. ೪೦).

**ಪುಟ್ಟದು**—ಚಿಕ್ಕದು; ಸಣ್ಣದು: ಮಕ್ಕಳ ಕೈ ಪುಟ್ಟದು. ಅದರ ಗ್ರಹಣ ಶಕ್ತಿ ಅದಕ್ಕೆ ತಕ್ಕಂತೆ ಅಲ್ಪ (ಶಿಲಾಶ್ಯ. ೦೭೩); ಬಲ್ಲಿನಂತೆ ಬಾಗಿದ್ದ ತುಟಿ; ಪುಟ್ಟದಾದ ಬಾಯಿ (ಈಕತು. ೨).

[ದೇ.II ತುಳು. ಪುಟ್ಟ; ತೆಲು. ಪುಟ್ಟ, ಪೊಟಿ./ಸಂ. ಪುಟ್ಟ್ = ಚಿಕ್ಕದಾಗು]

**ಪುಟ್ಟ₂** (ಗು). ೧. ಪೋಷಿತ; ಪುಷ್ಟ: "ಪುಟ್ಟ – ಪುಷ್ಟ = ಪುಷ್ಟಿ ಯಾದ" (ಶಬ್ದಕೋ. ೨೬). (ನಾ). ೨. ಪೋಷಣೆ ಹೊಂದಿದುದು: 'ಪರಪುಟ್ಟ' ಹೋ. [< ಸಂ. ಪುಷ್ಟ./ಪ್ರಾ. ಪುಟ್ಟ]

**ಪುಟ್ಟಂಪುರಳೆ** (ನಾ). ಒಂದು ಬಗೆಯ ತರಕಾರಿ ಸಸ್ಯ; ಪುಳ್ಳಂಪುರಚಿ: ಉಪ್ಪು, ಉಪ್ಪಿನ ಸೊಪ್ಪು, ಪುಟ್ಟಂಪುರಳೆ, ಪುಳ್ಳಂಪುರಚಿಸೊಪ್ಪು, ಹುಳಿಚಿಕ್ಕ (ದ್ರವ್ಯಶಿಗ. ೫೯-೦೮೭೬). [?]

**ಪುಟ್ಟಗಾವುಂಡ** (ನಾ). ಒಬ್ಬಾತನ ಹೆಸರು: ತೊಟ್ಟಲ ಪುಟ್ಟಗಾವುಣ್ಣನುಂ ಎಚಿಯಣ್ಣ ಪೆರ್ಮ್ಮಾಡಿ ಕಟಿಯ ಕಟ್ಟಿ ಕಲ್ಲ ತುಂಬನಿಕಿಸಿದ (ಎಇಂ. ೦೯೩೨, ೧೧-೪; ಸು. ೯೩ದು ಕಕ). [ಪುಟ್ಟ₁ + ಗಾವುಂಡ (< ಗಾವುಂಡ)]

**ಪುಟ್ಟಗೆ** 'ಪುಟ್ಟಿಗೆ₂' ನೋ.

**ಪುಟ್ಟಜ, ಹುಟ್ಟಜೆ** (ನಾ). ಹುಟ್ಟಿದ ಸ್ಥಳ; ತವರುಮನೆ; ಜನ್ಮಸ್ಥಾನ: ಮದನನ ಕೈದುವೆಲ್ಲಿದು . . . ಚದುರ ಪುಟ್ಟದನೆ [ಟ್ಟಜವೆ] ಲ್ಲಿದಂ (ಅರಿತ್ರ. ೩-೦೫); ಸಿರಿಯ ತವರ್ಮನೆ ಹವಳದ ಹರವರಿ ಮೌಕ್ತಿಕದ ಪುಟ್ಟಜಂ ಶಶಿಯಯ್ಯಂ ಹರಿಯಪ್ಪ ಸೆಜ್ಜೆವನೆ . . . ಎನಿಪಂಭೋನಿಧಿ ಸುತ್ತುವೊಪ್ಪೆ(ಪ್ಪ)ತ್ತಿರೆ ಜಂಬೂದ್ವೀಪವೊಪ್ಪಿಪ್ಪುದು (ಕ೩. I. ೨೫-೯; 1180): ಜಗತೀಕಾಂತನ ಮಾದೇವಿ ಲಕ್ಷ್ಮಣಾದೇವಿ . . . ಚದುರ ಪುಟ್ಟಜ [ಪುಟ್ಟಜ]ವೆನಿಪಳ್ (ಚಂದ್ರಪು. ೦೦-೯೦). **ಹುಟ್ಟಜೆ**: ಸಿರಿಯ ತವರ್ಮನೆ ಹವಳದ ಹರವರಿ ಮುತ್ತುಗಳ ಹುಟ್ಟಜೆ ಚಂದ್ರನ ತಾಯಿ ಹರಿಯ್ಸರ್ಪ ಸೆಜ್ಜೆ[ನೆ] ರತ್ನರಾಶಿಯುವರ್ದಿನ ನಿಧಾನಂ . . . ಎನೆ ಚೆಲ್ವಿಂ ಜಳರಾಶಿ ಸುತ್ತುವಿರೆ ಜಂಬೂದ್ವೀಪವೊಪ್ಪಿಪ್ಪುದು (ಶಾ೩೪. XV, ೨೪೦-೫; 1174).

**ಪುಟ್ಟಣೆ** 'ಪುರಾಣಿ' ನೋ.

**ಪುಟ್ಟಬಾಳೆ, ಪುಟಬಾಳೆ, ಪುಟವಾಳೆ** (ನಾ). ಸಣ್ಣಗಾತ್ರದ ಹಣ್ಣುಗಳನ್ನು ಬಿಡುವ ಒಂದು ಜಾತಿಯ ಬಾಳೆ: ಬಾಳೆಯಲ್ಲಿ ಅನೇಕ ಜಾತಿಗಳಿವೆ—ರಸಬಾಳೆ, ಚಂದ್ರಬಾಳೆ, ರಾಜಬಾಳೆ, ಪುಟ್ಟಬಾಳೆ, ಏಲಕ್ಕಿಬಾಳೆ, ಮಧುರಂಗಬಾಳೆ, ಸೇಲಂಬಾಳೆ ಇವೇ ಮೊದಲಾದವು (ಕೃಷು. ೫೭); ಹಟ್ಟಿ ಕಲ್ಸಳ್ಳಿಗೆ ಬಟ್ಟುಗಂಧವನಿಟ್ಟು ಪುಟ್ಟಬಾಳೆ ಹಣ್ಣ ಸುಲಿದಿಟ್ಟು (ಕಾಪರ. ೧೨೪). **ಪುಟಬಾಳೆ**: ಹಟ್ಟಿ ಕಲ್ಲಿಗೆ ಪುಟ್ಟು ಗಂಧಾವಸಿಕ್ಕಿ ಪುಟಬಾಳೀ ಹಣ್ಣಾ ಸುಲಿದಿಕ್ಕಿ ಒಳಗೀರೋ ಸಿಸ್ವ ಬಂದಕ್ಕ ತೊಳೆಸಾರೊ (ಹುಟ್ಟಿಹ ೫೦). **ಪುಟವಾಳೆ**: ರಸವಾಳೆ ಪುಟವಾಳೆ ರಾಜವಾಳೆ ಸಕ್ಕರೆಯಮೆವಾದೇವಾಳೆ ಬಪ್ಪಾಳೆ ಹಸುರುಗುಂದದ ಪಚ್ಚನಾಡವು ಮಧುರಂಗ ಪಸರಿಸಿ ಮೊಆ³ಮರ್ಪಿಯುಲಿ (೪೦೫೭. ೫.೦೭).

[ಪುಟ್ಟ₁ + ಬಾಳೆ₁ (< ಬಾೞೆ³). / ತಮಿ. ಪುಟ್ಟುವಾೞೈ]

**ಪುಟ್ಟವಳ** (ನಾ). ಹುಟ್ಟುವಳ; ಆದಾಯಂ; ಉತ್ಪನ್ನ: ಧಾರಾಪೂರ್ವಕಮ್ಮಾಡಿಕೊಟ್ಟು ಕೊಣ್ಡು ಪೋಗದ್ಮಣ ನೂಱ ಮೂಱು ಇಂತಿ ಪುಟ್ಟವಳದಲು ನಿಚ್ಚಂ ನಾಲ್ವರ್ಗೆ ಸತ್ರಮಂ ನಡೆಸಂತಾಗಿ ಬಿಟ್ಟುಕೊಟ್ಟನು (ಶಾ೩೩. IX-1, ೦೯-೨೦; 1035): ಮೂಲಗಾಱ ಬರ್ಮಯ್ಯನೊನ್ದು ಪಸದನದ ಪುಟ್ಟವಳಮಂ ಬಿಟ್ಟ (ಎ೩. XVI, ೩೩೧-೨೫: 1077).

[ ?·/ ಪುಟ್ಟು₁ + < ಪಣ₃ ]

**ಪುಟ್ಟಱಿವು, ಹುಟ್ಟರಿವು** (ನಾ). ಹುಟ್ಟಿನಿಂದ ಬಂದ ತಿಳಿವಳಿಕೆ; ನೈಸರ್ಗಿಕವಾದ ಬುದ್ಧಿ: ಕೇಡಡಸೆ ಪುಟ್ಟಱಿವುಮುಱಿಯುದೆಯೆ ನೆಲೆ ತಪ್ಪಿ ಪೋಕುಮಣ್ (ಅಂತಿಗೊ. ೨೬-೫೪೦). **ಹುಟ್ಟರಿವು**: ಪ್ರ್ಲ ದೇಶಬಂಧುಗಳ ಹೃದಯದಲ್ಲಿ ಹುಟ್ಟರಿವಾಗಿ ಬಂದು, ಅವರ ಜೀವನಕ್ರಮವನ್ನೇ ವ್ಯಾಪಿಸಿ ನಿಯಂತ್ರಿಸುವ ನಂಬಿಕೆಗಳು—ದೇವರು . . . ಪರಲೋಕ ಇವುಗಳೆಂದು ಒಟ್ಟಿನಲ್ಲಿ ಹೇಳಬಹುದು (ಭಾರತ. ೯); ಹಾವುಗಳು ಸ್ವಪ್ರದೇಶಪ್ರೇಮಿಗಳು. ಆಗಂತುಕರನ್ನು ಶತ್ರುಗಳೆಂದೇ ಭಾವಿಸುವ ಹುಟ್ಟರಿವು ಇವುಗಳ ಸಹಜಸ್ವಭಾವ (ಹಸುತೂ. ೬೬).

[ ಪುಟ್ಟು₂ + ಅಱಿವು ]

**ಪುಟ್ಟಾಣಿ, ಪುಟಾಣಿ₁** (ನಾ). ೧. ಚಿಕ್ಕವನು; ಸಣ್ಣವನು: ಪುಟ್ಟಾಣಿ, ನಿನ್ನ ಹೆಸರೇನು ? (ಒಡ). (ಗ್ರಾ). ೨. ಎಳೆಯ; ಚಿಕ್ಕವಯಸ್ಸಿನ: ಅಳಿಯನನ್ನೇ ಮನೆಯಲ್ಲಿ ನಿಲ್ಲಿಸಿಕೊಳ್ಳುವೆ, ಈ ಪುಟ್ಟಾಣಿ ಮಗಳನ್ನು ಕಳಿಸುವುದಿಲ್ಲ (ಕೃಷು. ೫೮); ನೀನಿನ್ನೂ ಸಣ್ಣವನು. ನಿನ್ನ ಪುಟ್ಟಾಣಿ ಕೈಲಿ ಇಂಥಾ ಕೆಲಸ ಆಗುಲ್ಲ (ಪುಟ್ಟಕ. ೨೦). **ಪುಟಾಣಿ₁**: ೧. ಗಿಡ್ಡ ಪುಟಾಣಿ ಮಜ್ಜಿಗೆ ದೋಣಿ (ಗಾದೆ). [ < ಪುಟ್ಟ₁ ]

**ಪುಟ್ಟಾರಿ** (ನಾ). ಚಿಕ್ಕ ಮಗು: ಪುಟ್ಟಾರಿಗೆ ಎಳೆದುಕೊಂಡು ಆಡುವುದಕ್ಕೆ ಅವನ ತಂದೆ ಒಂದು ಕೈಬಂಡಿಯನ್ನು ತಂದುಕೊಟ್ಟಿದ್ದರು (೪೦೯೬. ೦೯೬). 'ಚಿನ್ನಾರಿ' ನೋ. [ < ಪುಟ್ಟ₁ ]

**ಪುಟ್ಟಿ₁, ಬುಟ್ಟಿ** (ನಾ). ೧. ತೆಂಗು, ತಾಳೆಗಳ ಗರಿ ಅಥವಾ ಬಿದಿರಿನಿಂದ ಹೆಣೆದು ಮಾಡಿದ ಗೂಡೆ, ಮಂಕರಿ ಮುಂತಾದುವು. ಅನೇಕ ಸುರಭಿಕುಸುಮಂಗಳಂ ಸಜ್ಜುಗವಾಪ್ಪುದು ಪುಟ್ಟಿಯೊಳ್ ತೀವಿಕೊಂಡು (ಹಂಕಕಾ. ೦೦೬-೬); ನೆತ್ತರ ಮಡು ನಾಡಿಗಳ ಸುತ್ತುವಳಿ ನರವಿನ ನೆಣದಂತ್ರ ಮಾಂಸದ ಪುಟ್ಟಿಯು ತೆಪ್ಪ . . . ಮೋಹದ ಬಲೆ ತೋಱ ಕೆಡುವ ತನುವಿದು (ಕಕಸ. ೯೫-೬೨); ಹೊಟ್ಟೆಂದದಸ ಪುಟ್ಟಿಸಿಂಗನ ಮುಂಟ್ಟುವಿನ ಕೊರಳಾಣೆ ಪುಟ್ಟಿಯ ಮೇಲಾಣೆ ಲಟ್ಟಿದ ತಾಯಿತದಾಣೆ (ತ್ರಿಕೃಶಾ. ೬೫): ಪುಟ್ಟಿ ಕಿರಿದೇನು ಹೆಡಗಿ ಹೆಚ್ಚೇನು ? (ಗಾದೆ). **ಬುಟ್ಟಿ**: ೧. ಈಕೆಯ ತಲೆ ನೋಡು ಹೇಗೆ ಬುಟ್ಟಿ ಆಗಿದೆ! (ಪಟಾಟ. ೦.೦೩); ಅನ್ನದ ರಾಶಿಗಾಗಿ ದೊಡ್ಡ ಬುಟ್ಟಿ ಬಾಯಿ ತೆರೆದು ನಿಂತಿತ್ತು (ಹುಣಿ. ೫); ಕೆಲವರು ಹೆಂಗಸರು ತಲೆಯ ಮೇಲೆ ಬುಟ್ಟಿಗಳನ್ನು ಹೊತ್ತುಕೊಂಡು ಬರುತ್ತಿದ್ದರು (ರಂಗಕ. ೨೭). ೨. ಬಿದಿರಿನ ಬುಟ್ಟಿಯಾಕಾರದ ನಾವೆ: ಬುಟ್ಟಿಯು ದೊಡ್ಡ ಸೆಳವಿನ ಸುಳಿಯನ್ನು ದಾಟಿ ಆಚೆಯ ದಡೆಯ ಸಮೀಪಕ್ಕೆ ಬಂದಿತ್ತು (ರಾಮಕ. ೧೦೨).

ಬುಟ್ಟಿಗೆ ಹಾಕಿಕೊಳ್ಳು = (ಆಲಂ) ಉಪಾಯವಾಗಿ ಸ್ವಾಧೀನಪಡಿಸಿಕೊಳ್ಳು; ಯುಕ್ತಿಯಿಂದ ವಶಪಡಿಸಿಕೊಳ್ಳು: ಅವನು ವ್ಯವಹಾರಕುಶಲ . . . ಹೇಗೋ ಅವಳನ್ನು ತನ್ನ ಬುಟ್ಟಿಗೆ ಹಾಕಿಕೊಂಡನು (ಪುಪರು. ೯); ಭಿಲ್ಲಪ್ಪನ ಬೇಳೆ ನ್ಯಾಯಾಧೀಶರ ಬಳಿ ಬೇಯುವ ಹಾಗಿದ್ದರೆ ಅವರನ್ನು ತನ್ನ ಬುಟ್ಟಿಗೆ ಹಾಕಿಕೊಳ್ಳುತ್ತಿದ್ದನು (ಹಂಪಹ. ೨೦೯).

[ ದೇ. ॥ ತಮಿ. ಪುಟ್ಟಿಲ್; ತುಳು. ಪುಟ್ಟಿ. ಬುಟ್ಟಿ; ತೆಲು. ಪುಟಿ, ಪುಟ್ಟಿ, ಬುಟ್ಟ, ಬುಟ್ಟಿ; ಕೊಲಾ. ಪುಟ ]

**ಪುಟ್ಟಿ₂** (ನಾ). ೧. ಚಿಕ್ಕವಳು; ಚಿಕ್ಕವಯಸ್ಸಿನವಳು. ೨. ಹೆಣ್ಣುಮಗು: ಗಂಡುಮಕ್ಕಳಿಗೆ "ಪುಟಾಣಿ", ಹೆಣ್ಣುಮಕ್ಕಳಿಗೆ "ಪುಟ್ಟಿ" ಯೆಂದೆನ್ನುವರು (೪೫ಂಗ. ೬೫). [ಪುಟ್ಟ₁ + -ಇ₂]

**ಪುಟ್ಟಿ₃** (ನಾ). ಒಂದು ಅಳತೆಯ ಪ್ರಮಾಣ: ಬಸಗೆ ಉತ್ಸಾಹಂಗಳ್ಗೆ ಪನ್ನೆರ್ಕ್ಕಲೊನ್ದು ಪುಟ್ಟಿಗೆ (ಎ೩. XIV, ೨೯೧ ೦೬; 795): ಸಜ್ಜುಗಕ್ಕೆ [ಪು]ಟ್ಟಿಗೆ ಒನ್ದರೆ ಮಳವೆಗೆ ಮೂಱ ಪದಿನಾಱುಮಂ (ಎ೩. IX, ೨೨-೬; ಸು. 800). [ದೇ.॥ ತಮಿ. ತೆಲು. ಪುಟ್ಟಿ]

**ಪುಟ್ಟಿ₄, ಪುಟ್ಟು₄, ಹುಟ್ಟಿ, ಹುಟ್ಟು₄** (ನಾ). ೧. (ವಿಶೇಷವಾಗಿ) ಜೇನಿನ ಗೂಡು: ಪೊಮ್ಮ ಪೊಯ್ಗಳಿಂ ನೆಗೆವ ಮಾಗಿಲ್ಗಳಟ್ಟೆಡೆಗಳೊಳ್ ತಲೆಗಳ್ ತೊಡರ್ದಿರ್ದ ಜೇನ ಪುಟ್ಟಿಗಳನೆ ಪೋಲ್ತುವು (ಹಂಪಶಾ. ೧೦.೬೦); ಮಂದಲೆಗಳೆ ಜೇನ ಪುಟ್ಟಿಯೆನೆ ಕೊರ್ವಿದ ಕೊಂಬುಗಳಲ್ಲಿ ಪಕ್ಕಿವೋಲ್ ಚಲಿಮಿಂಚಿಯೆಂದುಮರ್ದ ಕೋಲೆಗಳ್ಗಣಪಾಲಯಮಾಲದೊಳ್ ಯೊಳ್ (ಅರ್ಜ. ೫-೩೭); ತಲೆ ಕಟಗಾಗಿ(ರ್ದ) ಪೆರ್ದೇನ ಪುಟ್ಟಿಗಳಂತಿರ್ದ ಪುಟ್ಟಿ(ಅಟ್ಟು)ಗಳೊಳ್ ಪುಟ್ಟಿ (ಶಬ್ದ. ೯೯-೦೦). **ಪುಟ್ಟು₄**: ೧. ಕಲ್ಲ ಪೊಗಱಯೊಳಿಟ್ಟ ಕಾಮರ್ಗಿಲ ಪೊಟ್ಟಗಳ್ ತಾವೆನಿಸಿ ಪರ್ಬಿದವು ಪೆರ್ದೇನ ಪುಟ್ಟುಗಳ್ (ಅಹಂತ್ರ. ೯-೨೭). **ಹುಟ್ಟಿ**: ೧. ಬಡಬಂಜ ಹುಟ್ಟಿಯ ಕಿಣಕಿವಂತೆಯುಂ (ಎ೯. VIII, ತೊರಿ. ೧೩೫-೬; 1156); ಪುಷ್ಪಫಲಂಗಳ ನಾಯ್ದುಕೊಂಡು . . . ಜೇನ ಹುಟ್ಟಿ [ಪಾಠಾಂ. ಟ್ಟು]ಗಳಸ್ಸಿಟ್ಟಿಟ್ಟಲಸದೆ. ಕಲಸಿ ತಣಿವಿನಂ ತಿಂದು ತೇಗಿ (ಗಿರಿ. ೧.೧೨೮ ೫). ೨. ಗೂಡು: ವಿಷದ ಹುಟ್ಟಿಯೊಳೆಱಗಿ ನೊಣ ಜೀವಿಸುವುದೆ (ಕುಮಾರಪ್ರ. ೬.೯೦). **ಹುಟ್ಟು₄**: ೧. ಜೇನ ಹುಟ್ಟಿನ ಹುಳುವ ಬಡಿದ ಸುಮನ್ಮಥನ ಕಾನೀನ ಬಾಣೆಯ ನೀನೆ ಗೀನೆಯ ಸಪಱಲಾಯಿತ ಶೌರ್ಯಸಿರಿ ನಿನಗೆ (ಕುಮಾರ. ೯-೫೯); ಕೆಟ್ಟಿ ಮೈ ಹೆಂಗಸನು ಬಟ್ಟೆಯಲಿ ತಾಱಚಿಯನು ಅಟ್ಟಟ್ಟಿ ಕಡಿದ ಕವಚನ ಹುಟ್ಟನ್ನು ಮುಟ್ಟಬೇಡ (ಹರಿಶ್ಚ. ೮೫೫೦); ಅ . . . ಟೊಂಗೆಯನ್ನು ಕಡಿಯುವಾಗ ತಪ್ಪಿ ನನ್ನ ಕಾಲಿಗೆ ಹುಟ್ಟುಗೊಳ್ಳು ತಾಕಿತು (ಹುಲಿಯಿದ್ದಾ ೦-೦೫).

**ಪುಟ್ಟಿ₆** (ನಾ). ಬಟ್ಟೆ; ವಸ್ತ್ರ : ಅಲ್ಲಿ ಮಹೇಶ್ವರಾಲಯದಂತೆ ಗೊರವು ... ಭೂಮಿ ಪರ್ವದಂತೆ ಸೀಗೆ ಪುಟ್ಟಿಯನಳಿವನಂತೆ ಮೊಳಗೆ ಕುರುಕಲ್ಕಿಕ್ಕುವ ವಯಣದಂತಿರ್ದುದು (ಅಂಕಂ. ೨-೩೬ ವ); ಮೂಲಾಶ್ಪಾರಭ್ಯ-ಧ್ವಜದ ಮೂಲಂ ಮೊದಲುಗೊಂಡು ತತ್‌ಪಾರ್ಶ್ವ—ಆ ಶಿವೆಯಿಕ್ಕಿಲದೊಳು ಕ್ರಮಹೀನಃ-ಕ್ರಮದಿಂ ಕುಂದುತ್ತುಂ ಬಂದು ಅಗ್ರಪೌಷ್ಟಿಕಾತ್‌-ಕಡೆಯ ಪುಟ್ಟಿಯತ್ತಣಿಂದ (ಕ್ರಿಕಟಿ. ೭೫-೭೯). [<ಪುಟ್ಟಿಗ್ಗೆ]

**ಪುಟ್ಟಿಕೆ** 'ಪುಡಿಕೆ' ನೋ.

**ಪುಟ್ಟಿಗ್ಗೆ₁** 'ಪುಡಿಕೆ' ನೋ.

**ಪುಟ್ಟಿಗ್ಗೆ₂**, ಪುಟ್ಟಗೆ, ಹುಟ್ಟಗೆ, ಹುಟ್ಟಿಗೆ, ಹುಟ್ಟುಗೆ (ನಾ). ೧. ಬಟ್ಟೆ; ಉಡುವ ವಸ್ತ್ರ : ವಿದ್ಯುಚ್ಚೋರಂ . . . ಸ್ವಾಭಾವಿಕಮಪ್ಪ ಮುನ್ನಿನ ರೂಪು ಕೈಕೊಂಡು ಪುಟ್ಟಿಗೆಯನುಟ್ಟು ಮೆಯ್ಯುಂ ಪೂಸಿ ಪೂವಂ ಮುಡಿದು (ವಡ್ಡಾರಾ. ೧೨೩-೧); ಇಂತುಟಪ್ಪ ಮೆಯ್ಯಣ್ಣಕ್ಕಿಂತೀ ಪೂವಿನೊಳೀ ತುಡುಗೆ ಯೊಳೀ ಪುಟ್ಟಿಗೆಯೊಳ್ ಬೆಡಂಗುವಡೆದೆಸದಿರ್ಕುಂ (ಶಂಶಕಾ. ೩-೪೫)। ಪುಟ್ಟಿಗೆಯುಮಂ ಪೂವುಮಂ ತಳಿಗೆಯೊಳಿಟ್ಟುಕೊಂಡು ಪೋಪುದು ಕಂಡು (ಶಬಕಂ. ೨೨೩-೧೬). ಪುಟ್ಟಗೆ : ೧. ಆದರದಿಂದಂ ಭೂಮಿ ಪೊ ಪುಟ್ಟಗೆ ವಸು ಧನಮಂ ನೀಡುತೇ . . . ಧರೆಯಲ್ಲಂ ಮೆಚ್ಚಿ ನಿಚ್ಚಂ ಪೊಗಳೆ ನೆಗಟಾತಂ ದೇವಲೋಕಕ್ಕೆ ಪೋದಳ್ (ಎಕ. IV, ಕಗ್ಗ.ಕ. ೧೮-೨೬ ; 1067). ಹುಟ್ಟಗೆ : ೧. ಈಕೆ ಹುಟ್ಟುಗಟ್ಟಿ ಹುಟ್ಟಗೆಯಂತೆ ಹಡಣ (ಅಂಶಕ. ೨-೧೦೬ ವ). ಹುಟ್ಟಿಗೆ : ೧. "ಹುಟ್ಟಿಗೆ, ದುಗುಲಂ, ಪಟ್ಟಣಿಗೆ, ಉಳ್ಳುಡಿಗೆ—ಈ ೪ ವಸನಕ್ಕೆ ಪೆಸರ್" (ಕಶಶ ೩೩-೩೬೨); ನಿನ್ನಯ ನಲ್ಲೆ ದಲಿಂದು ತಂದ ಹುಟ್ಟಿಗೆಯಬಿಡೇಬ್ಳೊಂಗಬಾದು ಸೀರೆಯು ಬಾವಿಯೊ ಬಂದ ದಾವೆಯೋ (ಅಂಶಕ. ೨-೦೦೦) ; ಹುಟ್ಟಿಗೆಯ ನಿದ್ದಂತೆ ಕೊಡು ಕೊಡು ಹುಟ್ಟಿಗೆಯನಯ್ಯಂಗೆ ಕೊಟ್ಟೊಡೆ ಹುಟ್ಟಿ ವಿನ್ನಾವು (ಚಹ್ಯ. ೧೧-೩೩). ೨. ದೇವತೆಯ ಹರಕೆಗಾಗಿ ಉಡುಗೆಯಂತೆ ಧರಿಸುವ ಬೇವಿನ ಸೊಪ್ಪು : ದೇವತೆಗೆ ಹರಕೆ ಹೊತ್ತವರು, ಮುಖ್ಯವಾಗಿ ಹೆಂಗಸರು, ಗುಂಧದ ಇಲ್ಲವೆ ಬೇವಿನ ಹುಟ್ಟಿಗೆಯ ಉಟ್ಟು ಕೊಂಡು ದರ್ಶನಕ್ಕೆ ಹೋಗುತ್ತಾರೆ (ಕಶಾಗ. ೫೦೩) ; ಪೂಜೆಯ ಕಾಲಕ್ಕೆ ಹುಟ್ಟಿಗೆ ಕಟ್ಟಿಕೊಳ್ಳುವ ವಾಡಿಕೆ ಅನೇಕ ಮನೆತನಗಳಲ್ಲಿವೆ (ಕಶಾಟ. ೯೯). ೩. ಬೇವಿನ ಸೊಪ್ಪಿನ ಉಡುಗೆಯನ್ನು ಧರಿಸುವ ಹಬ್ಬ : ಮನೆಯಲ್ಲಿ ಹುಟ್ಟಿಗೆ ಮಾಡುವುದರಿಂದ ತಮ್ಮೆಲ್ಲರನ್ನು ಕರೆದುಕೊಂಡು ಬರಬೇಕೆಂದು ಹಿರಿಯರು ಕಳಿಸಿಕೊಟ್ಟಿರುವರು (ಗ್ರಾಮಕಂ. ೩೬). ಹುಟ್ಟುಗೆ : ೧. "ಹುಟ್ಟುಗೆ ವಸ್ತ್ರದೊಳ್" (ಕಶಾಂಕ. ೨೯) ; "ಹುಟ್ಟುಗೆಯೆನೆ ಸೀರೆ" (ಅಕಾ. ೬೯).

[ < ಸಂ.ಪುಟ್ಟಿಕಾ, ಪುಟ್ಟಿಕ./ತವಿ. ಪುಟ್ಟಕ ]

**ಪುಟ್ಟಿಗ್ಗೆ₃** (ನಾ). ಆದಾಯ ; ಉತ್ಪನ್ನ (?) : ಎರಡು ಗದ್ಯಾಣ ಪೊನ್ನು ಇರ್ಪತ್ತಗುಣ್ಣಗು ಭತ್ತಮುಂ ಇಕ್ಕೋಂಡಿ ಕಬಿಗೋಡು ಪುಟ್ಟಿಗೆಯುಂ ತಸ್ಮ ಸೀವಾನ್ನರಂ (ಎಕ. XVI. ಗುಬ್ಬಿ. ೭೮-೯೯ : 733).

[<ಪುಟ್ಟು₁ , + — ಗೆ]

**ಪುಟ್ಟಿಗೋಲ್** (ನಾ). ಸಣ್ಣಕೋಲು,—ದಂಡ : ಮಣಿಯದೆ ನಮಃ ಶಿವಾ ಎಂಬುದೆಂದೆನುತಲೆಚ್ಚಱಿಸಿ ಭಸಿತದ ಪುಟ್ಟಿಗೋಲ ಲಿಂದಡಿಗಡಿಗೆ ಶಿವಿವರ್ಗರು ಚೋಳನ (ಬಾಶಶಂ. ೬-೬) ; ವಿಸುನಿವೆಸದ ಪುಟ್ಟ ಗೋಲ್ಗಳಂ ಪಿಡಿದು ಜಡಿದೊಟ್ಟಜಿಯುಂದಿಟ್ಟಣಿಸಿ (ಬಾಶಕ. ೦೩-೩೩ ವ).

[ಪುಟ್ಟ₀ (ಪ ←ತೆಲು. ಪೊಟ್ಟಿ = ಸಣ್ಣದು) + ಕೋಲ್₁]

**ಪುಟ್ಟಿಸು**, ಹುಟ್ಟಿಸು (ಕ್ರಿ). ೧. ಹುಟ್ಟುವಂತೆ ಮಾಡು; ಸೃಷ್ಟಿಸು ; ಜನ್ಮ ಕೊಡು : ನಿನ್ನಂ ಪುಟ್ಟಿಸಿದ ಬಿದಿ ನೆಗಟ್ಟಿಯ ಚೆಲ್ವಿಗನೊಳ್ ನೆರವುಗೀಗಳರಿಕೆಃಸರಿಯೊಳ್ (ಶಂಶಕಾ. ೩-೯೮) ; ನಿನ್ನನಿಂತು ಮಗುಟ್ಟುಂ ಮಗುಟ್ಟುಂ ಕೊಲವೇಟ್ಟುದೆಂದು ಪೇಟಿನ್ನನಿದಿಂತು ಪುಟ್ಟಿಸಿದನೇ ವಿಧಿ ರಕ್ಕಸಿಯುಂ (ಶಾದಂಶ. ೬೨೦) ; ಬಸನದ ಬಸದಿಂದ ಪುಟ್ಟಿಸಿದಂ ಜನಕನೆ ...ಅಱನಂ ತಿಳಿವುವಾ ಮಹಾತ್ಮಂ ಜನಕಂ (ಕಶಚ. ೮-೯೨). ೨. ಉಂಟು ಮಾಡು ; ಬರಿಸು ; ಒದಗಿಸು : ಉಪಚಾರದ ನುಡಿ ಸಂದೇಹ ಬುದ್ಧಿಯಂ ಪುಟ್ಟಿಸದೇ (ಶಾದಂಶ. ೧೩೬), ಎನಿತು ಕೃತ್ಯಯು ಲ್ಕೊಡವಹೌಷಧಂ ತಱುಂಟುದಲೆಯೊಳ್ ರೋಮಮುಂ ಪುಟ್ಟಿಸಲಾಱದು (ಕರ್ಣಾಕ್ಟು. ೬-೩೩) ; ಬಾಧಗ್ಗೌನ್ತ್ಸವವಂ ಪುಟ್ಟಿಸಿದಂ (ಎಕ. VII. ಶಿಕಶಿ. ೪-೧೦ ; 1122) ; ಪರಿತಾಪವ ಪುಟ್ಟಿಸಿ ಪೋಗಬಂದೆಯ (ಕೋಶಕ. ೯-೬೨). ೩. ರಚಿಸು ; ನಿರ್ಮಿಸು: ಚೌಪಳಿಗಳ್ ವಲವಂ ಸಮೆದಲ್ಲಿ ರತ್ನದಿಂ ಬೆರಸಿದ ಬಣ್ಣದೊಳ್ ಮಾಱೆಯ ಕಟ್ಟಿಸಿ ಪುಟ್ಟಿಸಿ ರಂಗ ಭೂಮಿಯುಂ (ಶಂಶಕಾ. ೩-೯೦). ಹುಟ್ಟಿಸು : ೧. ಏಕೆ ಹುಟ್ಟಿಸಿದೆ ಇಹಲೋಕದುಃಖಿಯ ಪರಲೋಕದೂರನ ಏಕೆ ಹುಟ್ಟಿಸಿದೆ (ಬಶಶ. ೬೦); ದೇವ ಇಂತಹ ಬಸುಱೊಳೆನ್ನುವನು ನೀವು ಹುಟ್ಟಿಸಲಹುದೆ (ಚಹ್ಯ. ೩೦-೬೦). ಆ ಮಹಾಮೃತ್ಯುವನು ಹುಟ್ಟಿಸಿದಾ ಮಹಾದೇವಾದಿದೇವರು ಕಾಮಿನಿಯ ಕಳುಹಲ್ಕೆ ಚಾರದೆನುತ್ತ ಬೋಧಿಸಲು (ಶಂಶಾಕ್ರಾ. ೬-೩೬); ಹುಟ್ಟಿಸಿದ ದೇವ ತಾ ಹೊಣೆಗಾಱನಾಗಿರಲು ಗಟ್ಟಾಗಿ ರಕ್ಷಿಪನು ಇದಕ್ಕೆ ಸಂಶಯವಿಲ್ಲ (ಕಶಕ.೬೧-೦); ಹುಟ್ಟಿಸಿದ ದೇವರು ಹುಲ್ಲು ಮೇಯಿಸುವನೇ? (ಗಾದೆ). ೨. ನಾಸಿಕೇಂದ್ರಿಯ ನಿನ್ನ ತನುಗಂಧಕೆಳಸಿ ಮೇಲ್ಲೂಸಿದ ಪುಣುಗು ಕಸ್ತೂರಿಯ ವಾಸನೆವಿಡಿಯದು ನೀನಗಲದೆ ಸಂತೋಷವ ನೆಱೆ ಹುಟ್ಟಿಸದಿಕೆ (ಶಂಶಂ. ೯-೦೬೨) ; ಆ ಕಲ್ಲುಗಳು ನನಗೆ ಒಂದು ತೆರನಾದ... ಅಸಹ್ಯವನ್ನು ಹುಟ್ಟಿಸಿದುವು (ಕಂಗಾಳ್. ೪೦).

ಪುಟ್ಟಿಸಿದರ್ = ಹೆತ್ತವರು ; ಜನ್ಮವಿತ್ತವರು: ಪುಟ್ಟಿಸಿದರ್ ತಾವೆಂದು ಬಗೆದು ಮುದ್ದಾಡುವ ತಾಯ್ಗಂದೆಗಳ ಮೊಗಮಂ ನೋಡಿ ನಗುಮಗಳೆ ಮಾಂಗುಳ್ಳಗೆ ನಗುತ್ತುಂ (ಶಂಶಕ. ೨-೦). ಹುಟ್ಟಿಸಿಕೊಳ್ಳು = ೧. ನಿರ್ಮಿಸಿ ಕೊಳ್ಳು; ಹುಟ್ಟುವಂತೆ ಮಾಡಿಕೊಳ್ಳು : ಉತ್ಪತ್ತಿಕಾರಣದ ಒಡೆಯ ನಾದಡೆ ಶಿರಸುಮಂ ತಾನೊಡನೆ ಹುಟ್ಟಿಸಿಕೊಳ್ಳನೇ (ಚಹ್ಯ. ೩೦-೬). ೨. ಇಲ್ಲದುದನ್ನು ಸೃಷ್ಟಿಸು ; ಕಲ್ಪಿಸು ; ಬನಾವಟಿ ಮಾಡು : ಅವನು ಹೇಳುವುದನ್ನು ನಂಬುವಿರಾ ? ಎಲ್ಲ ಹುಟ್ಟಿಸಿಕೊಂಡು ಹೇಳು ತ್ತಾನೆ (ಕೂಶ).

[ಪುಟ್ಟು₁ + — ಇಸು₂]

**ಪುಟ್ಟಿಹಣ್ಣು** (ನಾ). ಸವುತೆ ಜಾತಿಗೆ ಸೇರಿದ ಒಂದು ಬಗೆಯ ಹಣ್ಣು ; ಕೆಕ್ಕರ ಹಣ್ಣು ; ಕೆಕ್ಕರಿಕೆ : (೪). [ಪುಟ್ಟಿ₀+ಹಣ್ಣು₂ (<ಪಣ್₃)]

**ಪುಟ್ಟು₁**, ಹುಟ್ಟು₁ (ಕ್ರಿ). ೧. ಜನ್ಮ ತಾಳು ; ಜನಿಸು ; ಜನ್ಮಿಸು : "ಪುಟ್ಟು—ಉತ್ಪತ್ತೌ, ದಾರುಹಸ್ತೇ (ಚ ದೋಣಿ ನಡೆಯಿಸುವ ಮರಗೈ)" (ಶಮಂ); ಇದೊಣ್ ಕಡಿಸಿದೊಣ್ ಪೆಷ್ಮಮಹಾಪಾತಕನಕ್ಕು ತೆನೊಕ್ಕಲು ಳ್ ಪೊಕ್ಕಿ ಮಕ್ಕಳ್ಪುಟ್ಟದೆ ಕಿಡುಗ (ಎಕ. III, ಮೈ.ಸಂ.ಹು.೩೩-೨೦; ಸು.740); ನೆಟ್ಟನೆ ತಾಂ ಸವಿಯೊಳೊಂದಿರೆ ಭೋಜನವಮಾನಟ್ಟು ಬಡಿಸು ನಾಮಱಿಯ ದೆನಸುಂ ಸವಿಯುಂ ಪುಟ್ಟದಾರುಮಱಿಯದದಱ ಪೆಸರ್ಗೆಳುಟ್ಟುದಂ ಪೇಱ ಕೇಳ್ದೆನಂದಱಿಯೆಂ (ಕಶಾ. ೨-೦೯೭); ಚಃ ಸತ್ತರೇಂ ಪುಟ್ಟರೆ ಪೊಱಮಡು ನಿಂ ಕೈದುಗೊಳ್ (ಗದಾಯು.೬-೦೩). ೨. ಬೆಳೆ ; ಮೂಡು : ಚರಿಪಾರಣ್ಯದ ಪಕ್ಷಿಗೊಂದು ತೆರು ಗೊಡ್ಡಾಗರ್ ಫಲಂ ತೀವಿದಾ ಮರಗಳ್ ಪುಟ್ಟವೆ (ಸೋಟೋಕ. ೨೬). ೩. ಉಂಟಾಗು; ಒದಗು; ಉತ್ಪನ್ನವಾಗು: ಶಂಕೆ ಪುಟ್ಟದುದೀಗಳ್ (ಶಾದಂಪೂ. ೯೬೦); ಎರಡು ಪದಂಗಳ ನಡುವೆ ಬೇಱೊಂದು ದುಷ್ಪತೀತಿ ಪುಟ್ಟುವೊಡೆ ಸಂಧಿಯಂ ಮಾಡಲಾಗದು (ಶಬ್ದಮ. ೬೨-ವೃತ್ತಿ); ನಿಟ್ಟಿಸಲು...ಪುಟ್ಟಿತು ಗದ್ದದ ಮೆಯ್‌ ಝುಮ್ಮು ಝುಮ್ಮೆಂದು ತಟ್ಟಿತು ಮನೆ ಮೂರ್ಛೆ ರತಿಗೆ (ಶೋಶಕ. ೦೦-೯೨). ಹುಟ್ಟು₁ : ೧. ಹೆಂಡಿರೊಳ್ ಮನೆಗೊರ್ವ್ವರುದಾರೆಯರಣ್ಣ ಹುಟ್ಟರೇ (ಎಕ. VII. ಶಿಕಶಿ.

ಅವಳೊಬ್ಬಳು ಹುಟ್ಟುಕುರುಡಿ (ರೂಢಿ). [ಪುಟ್ಟು₂+ಕುರುಡಿ]

**ಪುಟ್ಟುಗಣೆ** (ನಾ). ಮೂಲನೆಲೆ,-ಸ್ಥಾನ: ಕನ್ನಡದ ಪುಟ್ಟುಗಣೆ [ಪಾಠಾಂ. ಪುಟ್ಟುಗುಣೆ, ಪುಟ್ಟುಗುಣೆ] . . . ಎನ್ನದೀ ಕೃತಿಯುನಿಖವನ್ನರನೆ ಬದಿ ಮುನ್ನ ಬೆನ್ನೋರ್ದರಲೆಯದಿರನು (ಜಪಚ. ೦-೨೩). [ಪುಟ್ಟು₂+ಕಣ್ಮೆ]

**ಪುಟ್ಟುಗುರುಡ** 'ಪುಟ್ಟಂಗುರುಡ' ನೋ.

**ಪುಟ್ಟುಗೆ** (ನಾ). ಹುಟ್ಟುವಿಕೆ ; ಜನನ : ದೋಷಸಂಭವಃ—ದೋಷದ ಪುಟ್ಟುಗೆ (ಶೇಶಿವಾ. ೯-೦೦೭) ; ಸ್ಮರಪರಿತಾಪದಿಂ ನೆಜಿ ಮರುಳ್ಗಸದಿಂದವ ತಾತನನ್ನೊಳಂ ಬೆರಸದನಿ: ವಧೂಭವದ ಪುಟ್ಟುಗೆ ಪೂರ್ಲ್ಲನುಕಿಲ್ಲಿ ರಾಗದೊಳ್ ನಿರುಪಮನಪ್ಪ ಮಂಗವಿಭುವಾದಟೊ ಭಾರತಿ (ಜಮುದ. ೦೩-೨).

[ಪುಟ್ಟು₁ + -ಗೆ]

**ಪುಟ್ಟುವೆಟ್ಟು** (ನಾ). ಸೂರ್ಯನು ಮೂಡುವ ಪರ್ವತ ; ಉದಯಾದ್ರಿ : ಕಟ್ಟನಿಮಿಳ ಮುದ್ದುಸುರಿಂತಂತೆಲರ್ವಟ್ಟೆಯನೆಯ್ದಲ್ ಪುಟ್ಟುವಟ್ಟನಡರ್ವಿನಿಗದಿರಂತಂತೆ . . . ಈ ಕೃತಿ ಚತುರರ ಬಗೆಗೋಗೂಗು ಎಂಗೆಯುಃ (ಉದ್ಭಟೇ. ೦-೨೬). [ಪುಟ್ಟು₁+ಬೆಟ್ಟು₂ (<ಬೆಟ್ಟ)]

**ಪುಟ್ಟುಹ**, ಪುಟ್ಟುಹ (ನಾ). ಜನನ; ಜನ್ಮ: (ಸಾಶಕಾ. ೬). **ಹುಟ್ಟುಹ** : ಮಾರಳಿಸುರಳಿ ಹುಟ್ಟುಹ (ಶಾಸಾಕ. ೬. ೦೦೯ ಟೀಕು).

[ಪುಟ್ಟು₁ + -ಹ₂ (< -ವ₂)]

**ಪುಠಾಣಿ**, ಪುಟಾಣ್ಯಿ, ಪುಟ್ಟಣಿ (ನಾ). ೧. ನೀರಿನಲ್ಲಿ ನೆನೆಸಿ ಹುರಿದ ಕಡಲೆ; ಹುರಿಗಡಲೆ: ಹುಳೀಕಡ್ಲಿ ಫಕ್ತ ಪುಠಾಣಿ ಮಾಡುವದರ ಸಲುವಾಗಿ ಜಾತ್ರಿ ಹಂಗಾಮಿನಲ್ಲಿ ಸ್ವಲ್ಪ ಖರ್ಚು ಆಗುತ್ತಿರುತ್ತದೆ (ಮುಂಂವ್ಯಾ. ೨೮೩) ; ಕೊನೆಗೆ ಮಂತಕ್ಕಿ ಪುಠಾಣಿಗಳಿಂದ ಮಧ್ಯಾಹ್ನ ನೀಗಿಸುತ್ತಾ ಟಪ್ಪಕಡೆಗೆ ಅಖಂಡನಿರಾಹಾರವ್ರತವೇ . . . ಘಟಿಸಹತ್ತಿತ್ತು (ಮೋಹೀಕಲ. ೩). **ಪುಟಾಣ್ಯಿ** : ೧. ತೆಂಗಿನಕಾಯಿ ಚಟ್ನಿ ಮಾಡುವಾಗ ಸ್ವಲ್ಪ ಪುಟಾಣಿಯನ್ನು ಹಾಕಿದರೆ ಚೆನ್ನಾಗಿರುತ್ತದೆ (ರೂಢಿ). ೨. ಬಟ್ಟೆಯ ಮೇಲೆ ಕಡಲೆಯಾಕಾರದಲ್ಲಿ ನೇಯ್ದಿರುವ ನೇಯ್ಗೆ : ಅವಳು ಪುಟಾಣಿ ಸೀರೆ ಉಟ್ಟಿದ್ದಾಳೆ (ರೂಢಿ). **ಪುಟ್ಟಣಿ**: ೨. ಬಟ್ಟಕುಚೆಯೊರ್ವ ಸತಿ ಪುಟ್ಟಣಿಯ ರವಿಕೆಯನು ತೊಟ್ಟು ಕಾಲಿನೊಳವಳು ಪಟ್ಟೆಸೀರೆಯನು ಪೊದೆದು ಬೆನ್ನೊಳು ನೃಪನ ಮುವವ ನೋಡುವ ಭರದಿ ಪದಗಿ ಮಾರ್ಗದಿ ಬರಲು (ಹಮಂಕ. ೨೪೩).

**ಪುಠಾಣಿ ತಿಂದು ಬಿಡು** = (ಆಲಂ) ಆಸೆಯನ್ನು ಬಿಡು : ಊರು ಬಿಟ್ಟು ಹೋದ ಉಡಾಳ ತಮ್ಮನು ತಮ್ಮ ಪಾಲಿಗೆ ಸತ್ತನೆಂದು ಅವರಿಬ್ಬರೂ ದಂಪತಿಗಳು ಪುಠಾಣಿ ತಿಂದು ಬಿಟ್ಟಿದ್ದರು (ಬಟ್ಟಿಹೊ. ೪೩).

[←ಮರಾ. ಫುಟಾಣಾ]

**ಪುಡಪುಡ** (ನಾ). ಸುಡುವುದನ್ನು ಸೂಚಿಸುವ ಒಂದು ಅನುಕರಣಪದ: 'ಪುಡಪುಡನೆ' ಪರಾ.

**ಪುಡಪುಡನೆ** (ಅ). ಪುಡಪುಡ ಎಂದು : ಸಂಗತಧೂಮಾವಳಿಯುನಿಭಂಗಳೆ ಗೆತ್ತೊಳಜಿ ಪಾಮ್ಮು ಪೊಗೆ ಪುಗೆ ಕಣ್ಣಿಂ ಸಿಂಗಂಗಳಳುರೆ ಗರ್ಜಿಸಿ ಲಂಗಿಸಿ ಪುಡಪುಡನೆ ಪುಟ್ಟಿಗ ಸತ್ತುವು ಪಲವುಂ (ಶಂಶಕಾ. ೩-೯೨).

[ಪುಡಪುಡ + -ಅನೆ₁]

**ಪುಡವಿ** 'ಪೃಥುವಿ' ನೋ.

**ಪುಡವಿಪ** 'ಪೊಡವಿಪ' ನೋ.

**ಪುಡಾರಿ** 'ಪುಢಾರಿ' ನೋ.

**ಪುಡಿ**, ಹುಡಿ (ನಾ). ೧. ಹಿಟ್ಟು ; ಚೂರ್ಣ : ಬದ್ದವಣದ ಪುಡಿವೊರ್ ಪೆನ್ನೊಳ್ ಬಿತದಲಗೆ ಕುಸುಮಕುಳರಜಂ (ಆದಿಪು. ೭-೭೩) ; ಪುಡಿಯು ಕತ್ತುರಿ ಕುಂಕುಮಂಕಪ್ಪುರವುಡಿ ಬಿಡುಮುತ್ತು ಪಾಣೀದೊಡನೆ ಒಡಿಪೊನ್ನ ಸ್ರಜೀಯು ಬಿಟ್ಟುರಿಕ್ಕಲಮಂಗಡಿಗರತಿಃಪವೋಪವಲಿ (ಪೋಶಕ. ೪೨-೨೮); ಡಿ.ಡಿ.ಟಿ. ಡಬ್ಬಿಯಿಂದ ಪುಡಿಯನ್ನು ಸುತ್ತಲೂ ಚಿಮುಕಿಸಿ . . . ಮೈ ಯನ್ನು ಚಾಚಿದೆನು (ಶಂಟಿಬು. ೯೫). ೨. ರವೆಯಂತೆ ತರಿತರಿಯಾದ ಹಿಟ್ಟು ; ತರಿ: ಕುಡಿಬಿದಿರ ಕುಡಿಯ ಮಾವಿನ ಎಡಿಯ ಮಾಡುಡಿನ ಮೆಣಸುಗಡಲೆಯ ಪುಡಿ[ಪಾಠಾಂ.ಳಿ]ಯೊಳಡಸಿದಲ್ಲವಲ್ಲಣಿಗೆಯ ಚಕ್ಕಣಂಗಳಂ ಸವಿಸವಿದು (ಶಂಶಕಾ. ೪-೬೭೪); ಕುಂಕುಮದ ಕತ್ತುರಿಯ ಪುಡಿಯಂ ಕನಕದ ಪುಡಿಯನಾಗ ಪಿಷ್ಟಾತಕಮಂ ಬಿಂಕದೆ ಕೆದಱುತಂ ನಡೆವಂ ಕಮರಂ (ಶಾಶ್ಯಕೃ. ೩-೩೦); ಘಟ್ಟಮೆಣಸುಳ್ಳಿ ಮೊದಲಾದ ಸಂಭಾರಗಳನಟ್ಟು ತಾಳಿಸಿದ ಪುಡಿಗಳನದ[ಜ್ಯೊ]ಳು ತುಂಬಲಿಟ್ಟು (ಸೂಶಕಾ. ೯-೧೯). ೩. ಸಣ್ಣ ಮರಳಿನಂತೆ (ಉದುರಾಗಿರುವ) ಮಣ್ಣು : ಏಗೆಯ್ದುಂ ಪರಿದ ಪುಡಿಯೆಲ್ಲಮಂ ನೀರ್ ನೆರೆದು ಕಸವರ್ಮಾಡದನ್ನೆಗಂ ನೆಲಸುಗುಮೇ (ಕಬಿಕಾ. ೩-೧೫೦); ಆ ಬಾರಿ ಕಾಯ್ದ ಪುಡಿಯೊಳಗೆ ಬಿಸುಟ್ಟೆಳವಾಟೆಯಂತೆ . . . ಬೇಟದೊಳ್ ಮಮ್ಮಲಮಜುಗುತ್ತಿರ್ದಳ್ (ಶಂಶಕಾ. ೩-೧೦೨); ದ್ರುಪದಾತ್ಮಜಾತನೋಪದೆ ಪುಡಿಯೊಳ್ ಪೊರಳ್ಚಿ ತಲೆಯಂ ತೆಗೆವಲ್ಲಿ ಪಿನಾಕವೆತ್ತವೋದುದೊ (ಗದಾಯು. ೯-೩೦); ಪುಡಿಯೊಳಗೆ ಪುಡಿಯ ಪುಡಿಯಾದನ್ ನಾಣ ಸುಡಿಯಾದನ್ (ಅಕ್ಕೃಕಾ. ೧೭-೩೬೭). ೪. ನಸ್ಯ : ಬೀಡಿ ಕಟ್ಟುವವನೂ ಪುಡಿ (ನಸ್ಯ) ಸೇದುವವನು (ಶೂವಾದ. ೧೦೭). ೫. ಹೊಗೆಸೊಪ್ಪು : ಪುಡಿ ಕುಟ್ಟುವವನೂ ಬೀಡಿ ಬೇಡುವನು (ಶೂವಾದ. ೧೦೭). **ಹುಡಿ** : ೧. ಕರಿಬೇವು ಬಡಗಸಂಡಗೆಯುಂಗು ಕಡಲೆವಿಟ್ಟರಿಸಿನದ ಹುಡಿ . . . ಮೆಂತೆಯುದ ಚೂರ್ಣ ಹಪ್ಪಳಂ ಸಂಭಾರವಸ್ತುವಹವು (ಸೂಶಕಾ. ೯-೦). ೩. ಎನ್ನಿಂದಲೆ ಆಯಿತ್ತು ಎನ್ನಿಂದಲೆ ಹೋಯಿತ್ತು ಎಂಬವನ ಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಣ್ಬನೆ (ಬಸವ. ೨೨೩); ಇಟ್ಟೊರಸಿ ಹುಡಿಯಲಿ ಹೂಳಿದನು ಕಿವ್ಮಿರದಾನವನ .(ಕುವ್ಯಾಅ. ೧-೪೯); ಹುಡಿಯಲ್ಲಿ ಕಮಲ ಬೆಳೆದಂದು ಹುಣ್ಣಿನ ನುಡಿಯ ನಂಬುವದು (ಸರ್ವಜ್ಞ ೦೭೭೦) ೪. "ಹುಡಿ . . . ನಸ್ಯ, ನಾಸೀಪುಡಿ" (ಸಿಂಕೋ. ೩೩೦) ; ಕುರುವಳಿಯ ಜನ ನಶ್ಯವನ್ನು ಹುಡಿ ಎಂದು ಹೇಳುತ್ತಾರೆ (ರೂಢಿ).

**ಪುಡಿಪುಡಿ, ಪುಡಿಪುಡಿ, ಹುಡಿಹುಡಿ** (ದ್ವಿರುಕ್ತಿ) : ಅಂಕಾತಂ . . . ನಡೆವ ತರ್ಕನಡೆಯೊಳ್ ಪುಡಿಪುಡಿಯಾದುವು ಶಿಲೆಗಳೊಡೆವು (ಶಂಶಕಾ. ೨-೩) ; ಕೆಡೆವ ಭಟಬ್ರ್ಯಟಾಂತ್ರವೃತ್ತದಿಂದಮುರುಳ್ವ ಹಯಮುಂ ಹಯಾಳಿಯಿಂ ಪುಡಿಪುಡಿಯಾಗೆ ಮೆಟ್ಟುವ ಗಜಂ( ಎಕ. VIII, ಸೊರಬ. ೦೪೪-೯ ; 1033) ; ಬಸ್ಸಿನ ನುಗ್ಗಾಟದಲ್ಲಿ ಬಳೆಗಳೆಲ್ಲಾ ಪುಡಿಪುಡಿಯಾದುವು (ರೂಢಿ) ; ಕಾಯವನುರುಹಿ ಹುಡಿಹುಡಿ ಮಾಡಿ ಬಿಱು ಗಾಳಿಯುಲಿ ಚಲ್ಲು (ಶಕ್ತಿ. ೪೩-೩೧) ; ರಥಕುಳವೆಲ್ಲ ಹುಡಿಹುಡಿ ಪಾಯದಳ ನಿರ್ನಾಮವಾಯ್ತು (ಕುವ್ಯಾಉ. ೭-೨). **ಪುಡಿ ಮಾಡು, ಹುಡಿ ಮಾಡು** = ೧. ಹಿಟ್ಟಾಗುವಂತೆ ನುರಿಸು : ಪುಡಿ ಮಾಡಿದ ಉಪ್ಪು ಪ್ಯಾಕೆಟ್ಟುಗಳಲ್ಲಿ ದೊರೆಯುತ್ತದೆ (ರೂಢಿ). ೨. ಧ್ವಂಸಮಾಡು : ಪುಷ್ಪಶರನಂ ಹುಡಿ ಮಾಡಿದ ವಿರೂಪಾಕ್ಷ (ಶುಂಶಿಗ. ೬) ; ಹುಡಿ ಮಾಡಿದನು ರಥವ (ಕುವ್ಯಾಉ. ೬-೯೬). **ಪುಡಿಯಾಗು, ಹುಡಿಯಾಗು** = ನಂರಿದು ಹಿಟ್ಟಾಗು : ಒತ್ತಿ ಮೆಟ್ಟೆ ಪುಡಿಯಾಗಿರ ತಿನ್ನದೆ ಪೋಗಲೀವರೇ (ರಶರ್ವ. ೭-೧೩೪) ; ಮುನಿಗಳ ಧೈರ್ಯಭೂಮಿ ರಜಮಪ್ಪನೆಗಂ ಮನುಚೇತನಾದ್ರಿ ಭೋಂಕನೆ ಪುಡಿಯಪ್ಪನಂ . . . ರತೀಶನ ಚತುರಂಗಸೇನೆ ನಡೆದತ್ತು (ಗಿರಿಕ. ೮-೭) ; ಪಡೆಯ ಕಾಲ್ತುಳಿದಾಗ ಗಿಡು ಬಳ್ಳಿ ಪೆಮ್ಮರ ಪುಡಿಯಾಗೆ . . . ಚೆನ್ನಪಟ್ಟಣದ ಮುಂಗಡೆ ಬೀಡಿಳಿವನು (ಕಂಶಂ. ೧೨-೬) ; ಹುಡಿಯಾಗಲುರ್ವಿ ಪರ್ವತ ಸಪ್ತಶರಧಿಗಳಡಿಮುಳಲಾಗೆ . . . ಮಹೇಶ್ವರ ಒಡಿದನು ಪರಶ್ರಿಶೂಲವ (ಸೋಶಕ. ೩೯-೩೬). **ಪುಡಿಯಾಳು** = ಕೆಲಸಕ್ಕೆ ಬಾರದವನು ; ಅಪ್ರಯೋಜಕ : ಅವನೊಬ್ಬ ಪುಡಿಯಾಳು (ರೂಢಿ). **ಹುಡಿಯ ಮುಕ್ಕು** = ೧. ಮಣ್ಣು ತಿನ್ನು. ೨. (ಆಲಂ) ಹಾಳಾಗು ;

ಕಂಸನು ಪುಡಿಯು ಮುಕ್ಕುವನೆಂಬ ತೆರದಿ ಮತದ ದೇವಕಿ ಬಯಸಿ ಮಸ್ತ್ರೀಬಳು (ಕಾಶ್ಮಶಾ. ೨೧-೬). ಪುಡಿ ಹಾರಿಸು ೧. ಧೂಳೆಬ್ಬಿಸು. ೨. (ಅಲಂ) ಧನವ್ಯಯ ಮಾಡಿ ಆಡಂಬರದಿಂದ ಕಾರ್ಯವನ್ನು ನಡೆಸು : ಗಮ್ಮತ್ತಿನಲ್ಲಿ ಮದುವೆ ಪುಡಿ ಹಾರಿಸಿ, ನಮ್ಮ ಬಿಡಾರದಿಂದ ನಡಹುಳುವೂ ಬರಲಾರದು (ಹೊಸಕ್ಷೆ. ೬೮). ೩. ವ್ಯಥಾಖರ್ಚು ಮಾಡು ; ಧಂದುವೆಚ್ಚ ಮಾಡು : ಆಚ್ಯುತನ ಕೈಯಲ್ಲಿ ಬಹಳ ದನ್ಮಡಿಗಳು ಕಾಣದಾಗುತ್ತಿರಲಿಲ್ಲ . . . ನಾಗರಾಜನಂತೆ ಬೀಡಾ ಸಿಗರೇಟುಗಳನ್ನು ಪುಡಿ ಹಾರಿಸಬೇಕೆಂಬ ಹಂಬಲವಿರಲಿಲ್ಲ (ಮುಗಿಯು. ೩).

[ ದೇ. ಶ ತಮಿ. ಮಲ. ಪೊಟಿ ; ತುಳು. ಕೊಡ. ತೆಲು. ಪೊಡಿ ]

**ಪುಡಿಕಾಸು** ' ಪುಡಿಗಾಸು ' ನೋ.

**ಪುಡಿಕೆ**, ಪುಟ್ಟಿಕೆ, ಪುಟ್ಟಿಗೆ₁, ಪುಡುಕೆ, ಬುಡಿಗೆ, ಬುಡುಕೆ, ಪುಡುಕೆ (ನಾ). ೧. ಕರಂಡ ; ಭರಣಿ ; ಡಬ್ಬಿ : ತಲೆದೆಸೆಯೊಳಿರಿಸಿರ್ದ ಪುಡಿಕೆಯಂ ತೆರೆದು ಹಾರವಂ ಕೊಂಡರಮನೆಯಿಂ ಪೊಱಮಟ್ಟು ಪೋಗಿ (ವಡ್ಡಾರಾ. ೧೨೩-೧೧) ; ಆ ಕಳ್ಳರ್ . . . ಪೊನ್ನ ಪುಡಿಕೆಯುಮನುಸಾಳೆಯುಮಂ ಬಚ್ಚವುಮುಮಂ ಅಲ್ಲಿ ಪಟ್ಟಿರ್ದ ಭಟ್ಟನ ಮುಂದೆ ತಂದಿಕ್ಕಿ (ಶುಕಶಂ. ೨೬೨ ೬) ; ತರವೇಟ್ಟುಮಾಣಿಕ್ಯಭಂಡಾರದ ಪುಡಿಕೆಗಳಂ (ಶಾವ್ಯಾವ. ೨೬೪). ೨. ಪೊಟ್ಟಣ : ಪುಷ್ಪದಾಭರಣದ ಪುಡಿಕೆಯೊಳಗೆ ತಂದು ಒಪ್ಪಿಸಿದರು ಜನಗವರು (ಅನಂತ. ೪-೬೩) ; ರಾಜೇಶ . . . ಪುಡಿಕೆಯನ್ನು ಬಿಚ್ಚಿ ಅವಳೆಡೆಗೆ ಒಡಿದ (ಸ್ವಪ್ನದ. ೦೪೪) ; ಖಾವರನು ಕೈಚೀಲದಲ್ಲಿ ಫೇಡೇದ ಪುಡಿಕೆಗಳನ್ನು ತಂದಿಟ್ಟನು (ಮುಕ್ತ್ಯರ. ೧೬೬). ೩. ಕಂತೆ ; ಸಿವುಡು; ಪಿಂಡಿ : ಪರತಪಮಂ ಕಸವೆಂದಾ ಪುರಾಣಮಂ ಪುಸಿಯ ಪುಡಿಕೆಯೆಂದಂ ದವರಾಪ್ತರೆ ಠಕ್ಕರೆಂದು ಬಗೆವನೆ ನಿರುತಂ ದರ್ಶನಿಕನಪ್ಪನಲ್ಲದನಲ್ಲಂ (ಸಮಿಅ. ೪-೦೨೮) ; ೨೫೦ ಸೂಜಿಗಳಿಗೊಂದರಂತೆ ಪುಡಿಕೆಗಳನ್ನು ಕಟ್ಟುವನು (ಮುಂಬಯು. ೦-೦೫೩) ; ಅವನ ಪೆಟ್ಟಿಗೆಯಲ್ಲಿ ಎರಡು ಪುಡಿಕೆ ಪತ್ರಗಳಿದ್ದವು (ಇಶ್ವ. ೩೦೭). **ಪುಟ್ಟಿಕೆ** : ೧. ಹೊಸ ಪುಟ್ಟಿಕೆಯಲ್ಲಿ ಒಂದು ಪಡೆ ಮಾತ್ರ ಪಿಂಗಿಸಿ ಪಾಂಚೆಟ್ಟಿಟ್ಟು (ಕಥಾಮಂ. IV, ೧೩). **ಪುಟ್ಟಿಗೆ₁** : ೧. ' ಪೂಪುಟ್ಟಿಗೆ ' ಪರಾ. ೪. ದೊನ್ನೆ ; ಎಲೆವಟ್ಟಲು : ' ಪತ್ರಪುಟ್ಟಿಗೆ ' ಪರಾ. **ಪುಡುಕೆ** : ೧. ದೇಹಮುಂ ಧಾತುಗಳ ಪುಡುಕೆ ವಿದ್ಯುಲ್ಲತಾಸಂಚಳಂ ಜೀವನಂ (ವಃಭೃ. ೪-೬೬) : ಮರಕತದ ಪುಡುಕೆಯುಲನರ್ಘ್ಯದ ಸಿರಿರತ್ನಂಗಳ ಕಿಪಿ (ಕಾಶ್ಮಶಾ. ೩೧-೦೪). ೩. ಅವನ ಜೇಬಿನಲ್ಲಿ ಯಾವಾಗಲೂ ನೋಟಿನ ಪುಡುಕೆಗಳಿರುತ್ತಿದ್ದವು (ಕಳ್ಳರ್ಯ. ೬೩). ೫. ಪೆಟ್ಟಿಗೆ ; ಸಂದೂಕ : ಭಂಡಾರದ ಮನೆಯೊಳ್ ಕನ್ನಮಿಕ್ಕಿಸಿ ಭಂಡಾರದ ಪುಡುಕೆಗಳಂ ಪೋಟ್ಟು [ದ್ರ]ವ್ಯಮುಮಂ ಪೊನ್ನುಮಂ ತುಡುಗೆಗಳುಮಂ . . . ಕೊಂಡು ಪೋಗಿ (ವಡ್ಡಾರಾ. ೧೬೬-೪) ; ಪುಡುಕೆಯು ಪೊಂಗಳಾರೊಡನೆ ಭೂತಳಮಾರೊಡನೆ . . . ವಿಭೂತಿಯಾರೊಡನೆ ಪೋದುವು (ಅಶಪ್ರ. ೨-೧೦೩). ೬. ಬುಟ್ಟಿ ; ಹೇಳಿಗೆ : ಉಡಿಯುದ ಪಾಟ್ಟನೆಯಿಲ್ಲಂ ಪಿಡಿದುರ್ಚುವ ಕೆಱದಿನುರ್ಚಿ ರಿಪುಗಜರದವಂ ಸಿಡಿಲಡಸಿ ಪೊತೆದ ಜಂತ್ರದ ಪುಡುಕೆವೊಲಿರೆ ಪೊಡೆವೆನಹಿತರಥಸಂಕುಳಮಂ (ಪರ್ವಕ. ೭-೩೦). **ಬುಡಿಗೆ** : ೭. ಕುಡಿಕೆ ; ಮಡಿಕೆಗಳನ್ನೆಲ್ಲಾ ಮಾರಿಕೊಂಡು ಬುಡಿಗೆ ತುಂಬಿಸಬೇಕೆಂದು ಎಣಿಸಿಕೊಂಡೆಯೋ (ಕಥಾಮಂ. IV, 22). **ಬುಡುಕೆ**. **ಹುಡುಕೆ** : ೮. ನೆಲೆ ; ಆಶ್ರಯ : ಹಲವು ಹಡಿಕೆಯ ಪುಡುಕೆ ಕೇಳಿದು ಹೊಲಸಿನಾಲಯ (ಕಂಶ. III, ೨೪೪ ಸಂಜ್ಞಾನಶಂಕಾಮಿತ).

· **ಪುಡುಕೆಯ** ಮೊಲ, ಬುಡುಕೆಯ ಮೊಲ=ಆಶ್ರಿತ್ತ ಹೋಗಲಾಗದೆ ಬುಟ್ಟಿಯಲ್ಲೇ ತೊಳಲುತ್ತಿರುವ ಮೊಲ : ಪುಡು[ತಾಶಂ. ಡಿ]ಕೆಯ ಮೊಲನಂತೆ ಕುಂಬುತಿರ್ಪರ್ಪಗೆವರ್ (ಕಾವ್ಯಂಕು. ೪) ; ನಿನ್ನ ಕೂರಸಿಯೆಂಬೀ ಪಡೆಮಾತುಗೇಳ್ದು ಗೋಸುಗ ಪುಡುಕೆಯ ಮೊಲದಂತೆ . . . ಇರ್ಪರ್ ಮಾಕಿಪರ್ (ಎಕ. VIII, ಸಾಗರ. ೧೦೪-೨೪ 1042) ; ತೊಡರಲ್ಕಣ್ಣಾದೆ ಕಿಮ್ಮನೆ ಬುಡುಕೆಯ ಮೊಲದಂತೆ [ ಮೊಲವಂತೆ ] ಕುಂಬುತಿರ್ಪರನೇಕಂಬೊತೆತಾಗಿ ಮಾಟ್ಟಿರಪ್ಪರುಮೊಡನೆನ್ನಯ್ಯಂ ಬೆರಸ್ಗೆ ನೆರೆದೊಡೆ ಸಾಲ್ಗುಂ (ಬುಹಂ. ೦೦-೨೧). [ <ಸಂ. ಪುಟಕಾ./ತೆಲು. ಬುಡಿಗ, ಬುಡಿಗೆ ]

**ಪುಡಿಖರ್ಚು** (ನಾ). ಚಿಲ್ಲರೆವೆಚ್ಚ ; ಚಿಕ್ಕಪುಟ್ಟ ಮೇಲುಖರ್ಚು : ಪುಡಿಖರ್ಚಿಗಾಗಿ ಇಪ್ಪತ್ತು ರೂಪಾಯಿಗಳನ್ನೂ ಹತ್ತಿರವಿಟ್ಟುಕೊಂಡನು (ಮುಬಿಮೂ. ೪೮). [ ಪುಡಿ + ಖರ್ಚು (<ಕರ್ಚು₄)]

**ಪುಡಿಗತ್ತುರಿ** (ನಾ). ಕಸ್ತೂರಿಯ ಹುಡಿ ; ಕಸ್ತೂರೀಚೂರ್ಣ : ಪುಡಿಗತ್ತುರಿಯಂ ತಲೆಯೊಳ್ ತೀವೆ ಪೊಯ್ದು... ನೆಱಿಯ ಕೆಯ್ಗೆಯ್ದು ಬಂದು (ಶಂಕರಾ. ೧೩-೦೦೮೪) ; ಕಚಾವಳಿಗಳಂ ಬಗಿಬಗಿದು ಪುಡಿಗತ್ತುರಿಯ ನೆಟ್ಟಿ ತಳಿದು . . . ಬಲ್ಮಡಿಯಂಬಂ ನಿವಿರ್ಚಿ (ಶದ್ಯರ. ೩-೪೪).

[ ಪುಡಿ + ಕತ್ತುರಿ ]

**ಪುಡಿಗಪ್ಪುರ**, ಪುಡಿಗರ್ಪೂರ (ನಾ). ಕರ್ಪೂರದ ಹುಡಿ,–ಚೂರ್ಣ : ಒಸೆ ವೀಡಿನ ತಾಳಕ್ಕಿ ಕುಣುಕಿದ ಪುಡಿಗಪ್ಪುರದ ಕೈರದಂಬುಲವನ್ನು...ಆ ನಿನ್ನ ಚೋಡಬೀಮ್ಗೆ ಮೆಲ್ಲಮೆಲ್ಲಗೆ ಊಡಿ (ಮುಕ್ತ್ಯರ. ೬೧–೧೩). **ಪುಡಿಗರ್ಪೂರ** : ಪುಡಿಗರ್ಪೂರಂಬೊರೆದ ಚೆಂದುಟಿಯು ಕುಂಕುಮಂದೊಡೆದ ಪೆರ್ಮೊಲೆಯು . . . ಎಲಾಸಿನಿಯರೇಳ್ತಂದರು (ಸೌಂದಕ. ೬-೪೧).

[ ಪುಡಿ + ಕಪ್ಪುರ ]

**ಪುಡಿಗರ್ಪೂರ** ' ಪುಡಿಗಪ್ಪುರ ' ನೋ.

**ಪುಡಿಗಾಸು**, ಪುಡಿಕಾಸು (ನಾ). ಚಿಲ್ಲರೆ ನಾಣ್ಯ : ತನ್ನ ಹತ್ತಿರ ಪುಡಿಗಾಸೂ ಇಲ್ಲವಲ್ಲಾ (ಸ್ವಾಮಿಸ್ಕೀ. ೬೮) ; ಕಷ್ಟಪಟ್ಟು ಸಂಪಾದಿಸಿದ್ದ ಪುಡಿಗಾಸನ್ನು ಖರ್ಚುಮಾಡಿಯಾಗಿತ್ತು (ಮಾಗೀತ. ೨). **ಪುಡಿಕಾಸು** : ನಾಲ್ಕಾರು ತಿಂಗಳು ಕೈಯಲ್ಲಿ ಪುಡಿಕಾಸು ಓಡಾಡಿದಾಕ್ಷಣ 'ನಾನು ಪ್ರಬುದ್ಧೆ' ... ಎಂದು ನೀನು ಭಾವಿಸಿದೆಯೇನು ? (ಶಾಶ್ವ. ೩೦೦) ; ಆದರೆ ಎಲ್ಲ ಯತ್ನಗಳೂ ಪರಿಚಯವಿದ್ದವರಿಂದೆಲ್ಲಾ ಪುಡಿಕಾಸು ಸಾಲ ಪಡೆಯುವುದರಲ್ಲೇ ಮುಕ್ತಾಯವಾಗುತ್ತಿದ್ದುವು (ರಂಗವ. ೩೭).

[ ಪುಡಿ + ಕಾಸು₂ ]

**ಪುಡಿಗಿರಾಕಿ** (ನಾ). ಚಿಲ್ಲರೆ ಗಿರಾಕಿ; ಚಿಲ್ಲರೆಗ್ರಾಹಕ : ಈ ಅಂಗಡಿಕಾರನು ತನ್ನ ಸರಕುಗಳನ್ನು ದೊರಕಿಸುವುದು—ಇಡಿಯ ದರದ ಅಂಗಡಿಗಳಿಂದ ; ಆದರೆ ಅವುಗಳನ್ನು ಪೂರೈಸುವುದು ಪುಡಿಗಿರಾಕಿಗಳಿಗೆ (ಕಶ್ಯಬ. ೨೨).

[ ಪುಡಿ + ಗಿರಾಕಿ ]

**ಪುಡಿಗುಟ್ಟಿಸು** (ಕ್ರಿ). ಹಿಟ್ಟುಹಿಟ್ಟಾಗುವಂತೆ ಹೊಡೆಯಿಸು,— ಅರೆಯಿಸು : ಕಡಿದು ಕಿಱಿಕಿಱಿದನೆಲುವಂ ಪುಡಿಗುಟ್ಟಿಸಿ ಕೊವಲಸುಗಿದು ಕರುಳ ತೊಡಂಕಂ ಬಿಡಿಸಿ ನಡೆನೋಟಿಪ್ಪಿಂ (ಮುಕೋಶ. ೪-೧೪).

[ ಪುಡಿಗುಟ್ಟು + –ಇಸು₃ ]

**ಪುಡಿಗುಟ್ಟು**, ಹುಡಿಗುಟ್ಟು (ಕ್ರಿ). ೧. ಕುಟ್ಟಿ ಪುಡಿಮಾಡು : ಆ ಚಿತ್ರರಥನಂದನೆಯ ಮದನಾನಲಂ . . . ಎಡವಱಿಯದೆ ಪುಡಿಗುಟ್ಟಿದ ಮುತ್ತಿನ ಮಳಲ್ಗೆ ದಱಿದ ಮಣಿಕುಟ್ಟಿಮದೊಳಂ ಮಾಣದೆ (ಕಾದಂಬ. ೩೨೬) ; ಕಾಳಂ ಜಜ್ಜುತೆ. . . ಪುಡಿಗುಟ್ಟಿ ಕಾಸಿ ಪಿಱಿದಂ ಶ್ರೀಖಂಡಖಂಡಂಗಳಂ ನೋಳುಂ ತೈಲವನೀವ ಜಂತ್ರಗಡಣಂ ಲೆಕ್ಕಕ್ಕೆ ಲಕ್ಕಂಗಳೇ (ವ್ಯಸಂಮ. ೩-೩೬). ೨. ನಾಶಗೊಳಿಸು ; ಧ್ವಂಸಮಾಡು : ಅನನ್ತಪಾಳು . . . ಅಱಿಯಟ್ಟಿ ಕಟ್ಟಿದಿರೊಳೆಯ್ದಿದ ಕಂಟಕದನ್ತ × × ತಾವಿಮ್ಮಡಿ[ಜಾ]ಳೆಯೆಲ್ಲಮಂ ನಿಜಭುಜಾಗ್ರಾಳದಿ ಪುಡಿಗುಟ್ಟಿ ತೂಱಿದ (ಕಶ. V, ೦೪-೦೦; 1099) ; ಕೃಷ್ಣನು ತಾನಾಗಿ ಬಂದು ಬಾಣನ ಕೋಟೆಯನ್ನು ಪುಡಿಗುಟ್ಟುವನೆಂದು ತಿಳಿಸು! (ಗುರುಚ. ೦೦೩). **ಹುಡಿಗುಟ್ಟು** : ೧. ಮಾರನ ಗರ್ವವೆಂಬ ವರಪರ್ವತಮಂ ಹು[ಡಿಗು. ಪು]ಡಿಗುಟ್ಟಿ ರಾಜಿತಾಚಾರವಿಶೇಷಮೆಂಬ ಕುಲಿಶಾಯುಧದಿಂದೆಶವಃಪ್ರಭಾವಮಂ ಧಾರಿಣಿಯೊಳ್ ಕರಂ ತಳೆದನುತ್ತಮ

ಭೂರಿಗುಣಾಶೋಭಿತಂ (ಶಾರತ. ೧-೩೦) ; ನಿಜಗದೆಯಿಂದಾತನ ರಥವ ಪುಡಿಗುಟ್ಟಿದನು (ಕುಮಾ.ರಾ. ೧೨-೧೮). ೨. ಧರೆಯು ಬೇಸರಿಸೀದು ದೋಷವಮಂ ಹುಡಿಗುಟ್ಟಲೆಂದು ಪುಟ್ಟಿದ ನಿನ್ನ ನಾನಿಲ್ಲಿ ಮಡಗುವೆನೆ ಮಗನೆ (ಸಿದ್ಧರಾ. ೩-೧೬) ; ಹುಟ್ಟಿದ ದಿನವೇಳಲೆಂಬೊಳಗೆ ಷಣ್ಮುಖ ಹುಡಿಗುಟ್ಟಿದು ತಾರಕಾಸುರನ ನೆಟ್ಟನೆ ಮುಜುದು ನಿರ್ಜರರಿಗೆ ಪಟ್ಟವ ಕಟ್ಟಿದ ಕತೆಯ ಕೇಳ್ದಜಿಯಾ (ಪ್ರಭುಲಿ. ೧೨-೧೬). [ಪುಡಿ + ಕುಟ್ಟು₁]

**ಪುಡಿಗೂಡಿಸು**, ಹುಡಿಗೂಡಿಸು (ಕ್ರಿ). ನಾಶಗೊಳಿಸು ; ಧ್ವಂಸ ಮಾಡು : ಆ ಗುಡ್ಡವನ್ನು ತಮ್ಮ ಸ್ವಾಧೀನ ಮಾಡಿಕೊಂಡರೆ ಮೈಸೂರು ಸೇನೆಯನ್ನು ಪುಡಿಗೂಡಿಸುವುದು ಸುಲಭ (ಶರೀಚ. ೦೬೦). **ಹುಡಿಗೂಡಿಸು** : ಕೈಯಲ್ಲಿ ಕಾಸಿದ್ದರೆ ಹುಡುಗರು ಕೋತಿಯಂತೆ ಕಟ್ಟಾಣಿಯನ್ನೂ ಹುಡಿಗೂಡಿಸುವರು (ಪಾಕುಪ. ೨೦) ; ತನ್ನ ಬಾಳು ಹುಡಿಗೂಡಿಸಲು ಅವಳನ್ನು ಪ್ರೇರೇಪಿಸಿದ್ದು ಇಂದಿನ ಸಮಾಜವಲ್ಲವೆ? (ಕಸ್ತೂ. ೦೭). [ಪುಡಿ + ಕೂಡಿಸು]

**ಪುಡಿಗೆಯ್**, ಪುಡಿಗೈ, ಹುಡಿಗೆಯ್, ಹುಡಿಗೈ (ಕ್ರಿ). ೧. = ಪುಡಿಗುಟ್ಟು ೧: ಕಲ್ಪವೃಕ್ಷಮಂ ಕಡಿದರೇ . . . ಮಾಣಿಕವನು ಪುಡಿಗೆಯ್ವರೇ (ಶಬ್ದ. ೩೫-೩೪). **ಪುಡಿಗೈ** : ೨. = ಪುಡಿಗುಟ್ಟು ೨ : ವೀರಲಕ್ಷ್ಮಣನಿಸುವ ಕೂರಂಬನೆಲ್ಲವಮಂ . . . ಧೀರನಹ ಸೀತಾಕುಮಾರಕಂ ಸಾಯಕದ ಸಾರದಿಂ ಪುಡಿಗೈದನು (ಕೃಪಾಶಾ. ೨೦-೫೯) ; ಗರುವ ತರುವರಕುಲಂ ಮೂಲವಮಂ ಕಿರಿಪಿ ಪಿಂಟಿದವೋಲ್ ನೆಲಕ್ಕುರುಳಿದವು, ಪೊದರ್ ಗಿಡುಗಳಂ ಪುಡಿಗೈದು (ಶತ್ರುಂಗ. ೪೮-೦೬೧). **ಹುಡಿಗೆಯ್** : ೨. ಹೆಚ್ಚಿನ ಮಾರುಳಾಟದ ಪುಜಿಪಿಂ ಲೋಕಂಗಳನು ಹುಡಿಗೆಯ್ಯುತ್ತಿಹ ನರಸಿಂಹನ ಹಣೆಯಾ ಲಿಪಿ ತೊಡೆದಾ ವೀರೇಶನ ಲೀಲಾಕಥನವ ಪದವಿಡುವೆನು (ಶಿರೇಶ. ೧-೭). **ಹುಡಿಗೈ** : ೨. ಐರಾಗಿಯ ಜರ್ಜನಸೆದೆಯ ಕೋಂಟೆಯಂ ಹುಡಿಗೈದ ಶೃಂಗಾರವೈತರಲಿ (ಶತ್ರುಂಗ. ೨೯-೭೯೩). [ಪುಡಿ + ಕೆಯ್₁]

**ಪುಡಿಗೈ** 'ಪುಡಿಗೆಯ್' ನೋ.

**ಪುಡಿಚಂಡಿಕೆ** (ನಾ). ಕುರುಚಲುಕೂದಲು ; ಚಿಕ್ಕ ಚಂಡಿಕೆ : ಅವನ ಪುಡಿಚಂಡಿಕೆಗಳು ತಲೆಯ ಮೇಲೆ ಹೋತಿನ ಗಡ್ಡದಂತೆ ಹಾರಾಡುತ್ತಿದ್ದವು (ಸಮಃಶ. ೩೬೯). [ಪುಡಿ + ಚಂಡಿಕೆ₁ (< ಚೆಂಡಿಕೆ)]

**ಪುಡಿಚಟ್ನಿ** (ನಾ). ಕಡಲೆಬೇಳೆ, ಉದ್ದಿನ ಬೇಳೆ, ಮೆಣಸಿನಕಾಯಿ ಮೊದಲಾದುವನ್ನು ಹುರಿದು, ಕುಟ್ಟಿ, ವ್ಯಂಜನವಾಗಿ ಉಪಯೋಗಿಸುವ ಪುಡಿ : 'ಚಟ್ನಿಪುಡಿ' ಪರಾ. [ಪುಡಿ + ಚಟ್ನಿ (< ಚಟ್ಟಣಿ)]

**ಪುಡಿದುಡ್ಡು** (ನಾ). = ಪುಡಿಗಾಸು : ಗೋಲಕದ ಪುಡಿದುಡ್ಡು ಇದೆಲ್ಲಾ ಸೂರಯ್ಯನಿಗೆ ದೊರೆಯುತ್ತಿತ್ತು (ಶೀತಿಕಂ. II. ೨೪); ಕೆಲವರು ತಮ್ಮಲ್ಲಿದ್ದ ಪುಡಿದುಡ್ಡುಗಳಿಗೆ ಎಣ್ಣೆಯನ್ನು ಕೊಂಡು ತಂದರು (ರಾಟಶ. ೨೨). [ಪುಡಿ + ದುಡ್ಡು₁]

**ಪುಡಿಯಾಟ**, ಹುಡಿಯಾಟ (ನಾ). ೧. ಧೂಳೆಬ್ಬಿಸುವ ಆಟ ; ಧೂಳಾಟ : ಪುಡಿಯಾಟವನಾಡಿ ಚರಾಚರಂಗಳಂ ಕರಿಮುರಿಯುಪ್ಪಿನಂ ಹುರಿವ ಹಂಚುವೊಲಿರ್ದೆಳೆಯೊಳ್ ಕೃತಾಂತನಚ್ಚುರಿಗಣೆಯಂತೆ ಬಂದುದು ಲಯಾನಿಳಕಲ್ಪನಿದಾಘಪಾನಿಳಂ (?) (ಅರೀಶಿ. ೪-೬೪). **ಹುಡಿಯಾಟ** : ೨. ಧೂಳಿನಲ್ಲಿ ಆಡುವ ಆಟ ; ಮಣ್ಣಾಟ : ಮೊಲೆಹಾಲು ಕುಡಿದು ದಿನವೇಸು ತಂಗಿಪ್ಪ ಹುಡಿಯಾಟವಾಡಿ ದಿನವೇಸ (ಕುಮಾರರಾ. ೪೦-೮). [ಪುಡಿ + ಆಟ]

**ಪುಡಿಯಾಡು** (ಕ್ರಿ). ಧೂಳಿನಲ್ಲಿ ಆಡು ; ಮಣ್ಣಾಟವಾಡು : ಪುಡಿಯಾಡುವ ತೊದಲೊದವೆ ನುಡಿವ ನಗಿಸುವ ಬಾಲಕ್ರೀಡೆ ಮುರಾರಿಯ ಬಾಲಕ್ರೀಡೆಯನನುಕರಿಪುದಾದುದರಿಕೇಸರಿಯಾ (ಶಂಕಶಾ. ೨-೭). [ಪುಡಿ + ಆಡು₁]

**ಪುಡಿಯಿಡು** (ಕ್ರಿ). ಹೊಟ್ಟು ಹಾರು; ಹುರುಪು ಏಳು : ಪುಡಿಯಿಡುತ್ತುಂ ವರಾಂಗಂ ಸುರುಳ್ಕಿಕ್ಕುಂ . . . ಮುಖಂ ಕಂದಿ ಕುಂದಿಕ್ಕುಂ (ಶಬ್ದ. ೧೧-೩). [ಪುಡಿ + ಇಡು₁]

**ಪುಡಿಯೇಳು**, ಹುಡಿಯೇಳು (ಕ್ರಿ). ೧. ನಾಶವಾಗು ; ಧ್ವಂಸಗೊಳ್ಳು : ತಲೆ ಸೀಳಾಗಿ ಮಿಡಿಸಿ ಸೀಗಾಡಿ ದೊಣೆಯಂಬು ಪುಡಿಯೆದ್ದು ದಿಂಡುರುಳಿತಾ ಮಾನರಾಜಿ (ಕುಶಲ. ೦೪-೭೪). **ಹುಡಿಯೇಳು** : ೨. ಪುಡಿಯಾಗು : ನಿಡುಗಲ್ಲು ನಿಶಿತ ಹಾಸುಗಲ್ಲು ಚೌಕದ ಬಡಗಲ್ಲು ಬಟ್ಟುಗಲ್ಲು ಬೀಳೆ ತುಡುಕಿದ ವಜ್ರಮಾರ್ಗಣದಿಂದೆ ಶ್ರೀಕೃಷ್ಣ ಹುಡಿಯೇಳಲೆಚ್ಚು ಹಾಯಿಸಿದ (ಮೋಹಶ. ೨೦-೭೩). [ಪುಡಿ + ಏಳು₁ (< ಏಟು₁)]

**ಪುಡಿವಡು** (ಕ್ರಿ). = ಪುಡಿಯೇಳು ೨ : ಕರ್ಪುರದ ಬಿಡುವೀಳಿಯ ದಂಬುಲ ವಿರಹಾಗ್ನಿಗೆ ಪುಡಿವಟ್ಟುದೇನ ಬಣ್ಣಿಸುವೆ (ಕಂಶಕ. ೪-೧೭೨). [ಪುಡಿ + ಪಡು₁]

**ಪುಡಿವಡೆ** (ಕ್ರಿ). ೧. = ಪುಡಿಯೇಳು ೧: ಅವನ ಮಾಯೆಯಂ ತಡೆವರಿಲ್ಲಾ ಬಲಂ ಪುಡಿವಡೆದುದು (ಕೃಪಾಶಾ. ೪-೨೩). ೨. = ಪುಡಿಯೇಳು ೨ : ವ್ಯಂಗಳಂ ಸೋಂಕಿ ಪುಡಿವಡೆದ ಕುಂಕುಮಸುಗಂಧಾನುಲೇಪನದ ಚೂರ್ಣಂಗಳೋ . . . ಎಂಬಿನಂ . . . ಕೆಂಧೂಳಿ ಮಸಗಿತಾಗ (ಕೃಪಾಶಾ. ೦೨-೭). [ಪುಡಿ + ಪಡೆ₁]

**ಪುಡಿಹಿಟ್ಟು** (ನಾ). ನುಣ್ಣಗಿರುವ ಹಿಟ್ಟು : ಪಸಿವಾಗೆ ಮುನ್ನಿನ ತೆಜದೊಳವುಕಾನ್ನವನು ಬೇಡಿ ಕುಡಲಾ ವನಿತೆ ಪುಡಿಹಿಟ್ಟಿನೊಳು ಮಿದುನಿಗೆ ಸೀರ್ವೆರಸಿ ಪಾಲಿದೆಯೆನುತ್ತಿತ್ತಳು (ಶೌಂಧಕ. ೪-೩೮). [ಪುಡಿ + ಹಿಟ್ಟು]

**ಪುಡಿವಿಡು** (ಕ್ರಿ). ೧. = ಪುಡಿಯೇಳು ೧ : ಕದಡಿ ಪದಾತಿಘಟ್ಟನದ ಕೋಟಕ್ಕೆ ಸಿಜಾಗಿ ತುರಂಗಮಾಂಘ್ರಿಪಾತದ ಪುಡಿವಿಟ್ಟು ಕಟ್ಟಿ ರಥಘಾತದ ತೀವಿ ಬಟ್ಟೆ ದಂತಿದಾನದ ಕರಿದಾದುದಿಂತು ಯಮುನಾನದಿ ಕಮ್ಮನೆ ದೇಹಗಾಯ್ತು ಕರ್ಪಿದಟ್ಟೊಳ್ (ಶಗಿ. ೦೬-೬೦). ೨. ನಿರ್ದ್ರವವಾಗು ; ಒಣಗು : ಕಡುಮಿಸಿಲೊಳಿರ್ದು ತಾಳಗೆ ಪುಡಿವಿಡೆ ಮುಖಮೊಣಗೆ . . . ತುರಗಕೆ ತಾಳುರೋಗಂ ತೋರ್ಕುಂ (ಅಶ್ವಶಾ. ೦೪-೦). [ಪುಡಿ + ಬಿಡು₁]

**ಪುಡಿಸಕ್ಕರೆ** (ನಾ). ಹಿಟ್ಟಿನಂತೆ ನಯವಾದ ಸಕ್ಕರೆ : (ಕ). [ಪುಡಿ + ಸಕ್ಕರೆ]

**ಪುಡಿಹಣ** (ನಾ). = ಪುಡಿಗಾಸು : ಅವನು ಕೇಳಿದ ಪುಡಿಹಣಕ್ಕೆ ಅವಳೆಂದೂ ಅಡ್ಡಿಯಾಡಿರಲಿಲ್ಲ (ಸಿರಿಂ. ೩೪). [ಪುಡಿ + ಹಣ (< ಪಣವು₁)]

**ಪುಡುಂಕು**, ಪುಡುಕು, ಹುಡುಕು (ಕ್ರಿ). ೧. ಕೈಯಿಂದ ತಡಕಾಡು ; ತಡವರಿಸು : "ಪುಡುಕು, ಪುಡುಂಕು—ಕರಾನ್ವೇಷಣೇ" (ಶಮ). ೨. ಅರಸು : ಶೋಧಿಸು : "ಪುಡುಂಕೆನಲ್ಪುಡುಕುವುದಕಪ್ಪುದು" (ಶಶ. ೬೬); ಟಕ್ಕಸವೇದನೋರ್ವನುಜ ಬೇಂಟೆಯನಾಡಲೊಡಂ ಪುಡುಂಕಿ ಬರ್ಪಕ್ಕಿಗಳಂದು ಸಿಲ್ಕಿದುವು (ಹರ್ಷ. ೪-೬೨) ; ಭೂಮಿಯೊಳುಂಟಾದ ಪಾರ್ಥಿವರೆಲ್ಲರಂ ಮೂಜಿಳ್ಸೇಳೆ ಪುಡುಕಿ ಪುಡುಂಕಿ ಸಂಹಾರಂಗೆಯ್ದನೋ ಆ ಬಗೆಯ ಕ್ರೋಧಾತ್ಮಂಗೆ ಸಾಷ್ಟಾಂಗವಾಗಿ ನಮಸ್ಕಾರಂಗೆಯ್ದನು (ಭಾರತಂ. ೩೨೪-೪೬). **ಪುಡುಕು** : ೨. "ಪುಡುಕೆಂದು ಅಜಸುವುದು" (ಶಶಾ. ೬೬-೩೫೬); ತಡವಡಿಸಿ ಪುಡುಕಿ ಪಂಜಿನ ನಡುಬೀದಿಯೊಳಿರ್ದು ಮಾಜುಗುತಿರೆ ಕಂಡು (ಸುಕುಮಾ. ೪-೩೮) ; ಮತ್ತೂಮ್ಮೆ ಕೊಳಲಿ ನೋಡುವೆನೆನುತ ಪುಡುಕಲುಜ್ಜುಗಗೊಂಡನು (ವಂಕಾಪ. ೩-೩-೦೬) ; ಪಾಡದಿ ಬಂದೆ ನಿನ್ನಂ ಪುಡುಕಿವರೆ ತೊಡಕಿ ಬಿಲ ಸ್ವಾರ್ಧ ಸಂದೆಸಂಬಡೆ ಸಾಂ ಪುತ್ರಿಮಂದಿರಕ್ಕೈದಿ . . . ಬಂದು (ಕ್ರಿಯಾಸು. ೩-೫೭). **ಹುಡುಕು₁**: ೧. ತಾನೊಡನೆ ಕರಯುಗದಿಂದೆ ಹುಡುಕುತ ಲಿಂಗಮೂರ್ತಿಯನಜಾತವೆ ಮುನ್ನ

(ಅಜಪು. ೫೦-೬೮). ೨. "ಮೃಗಯಾತೀ = ಹುಡುಕಿದವುದು" (ಗಾಳಿ. ೨೬೬): ಇರುವೆಗಳು ಯಾವಾಗಲೂ ಆಹಾರ ಹುಡುಕುತ್ತಿರುತ್ತವೆ(ಮುಂಜಿಯ. ೨-೮); ಅಜ್ಜರಿಯು ಬಚ್ಚಿಟ್ಟ ಹುಡುಕಿ ಹಚ್ಚಿದೆ ಬಾಳ ನೀಳವಯಣದ ಹಾದಿ (ಹಾಡು. ೫೬-೮).

[ದೇ.೧ ತೆಲು. ಪುದುಕು,' ಪೂಾಕು ; ಕೋಲಾ. ಪುದ್‌್ = ಮುಟ್ಟು ; ಪಾಯ್ಯ. ಪುಕ್‌್ = ಮುಟ್ಟು]

**ಪುದುಂಕುನೀರ್** 'ಪುದುಕುನೀರ್' ನೋ.

**ಪುದುಕು** 'ಪುದುಂಕಂ' ನೋ.

**ಪುದುಕುನೀರ್, ಪುದುಂಕುನೀರ್, ಹುಡುಂಕುನೀರ್** (ನಾ). ಕುದಿಯುವ ನೀರು; ಸುಡುನೀರು: 'ಪುದುಕುನೀರಟ್ಟು' ಪರಾ. **ಪುದುಂಕುನೀರ್**: ಒಡೆದು ಕಲಂಕಿ ಪಾಯ್ವ ಪದದೊಳ್ ಪದವೆತ್ತು ಪುದುಂಕುನೀರನರ್ದಿ ದಳಾಚಿ ಪೋದಿ ಮುಂದಲೆಗೆ ಪಾಯ್ವು ಪೊರಳ್ಚಿದಳ್ (ಲೀಲಾವ. ೦೪-೨೨). **ಹುಡುಕುನೀರ್** : ಅಡವಿಯ ಹೊಗಿಸಿತ್ತು ಹುಡುಕುನೀರಲ್ಲದ್ದಿತ್ತು ... ಊರೊಳಗೆಲ್ಲ ಈ ಬೆಡಗಿನ ಮಾಯೆಯ ಬಡಿಹೋರಿಸವುಯಿಗಳ ನುಡಿಗೆ ನಾಚುವೆನು (ಬಸವ. I. ೨೩೮-೦೬) ; ಮೂಡೆಗಟ್ಟಿಂ ಕಟ್ಟಿ ಹುಡುಕು ನೀರೊಳ್ ಮೆಟ್ಟಿ ಕಾಡುತಿಹ ಪಾಪರರ ಕೈವಿಡಿತೆಗೊಳಗಾಗಿ ... ಪುಲ್ಗಚ್ಚಿ ಕಂಟಕಂಬಡೆದೆವು (ಶಾಬಕಂ. ೨-೮) ; ನಮ್ಮ ನಿಮ್ಮಿಂದಖಿಳಶುಭಪ್ರಯೋಜನ ವಿರಲು ನಿಮ್ಮುವಂ ಸೀಳಿ ಪೋಳ್ಗ್ಯದು ಕುದಿಸುತ್ತಿಹರು ತಮ್ಮ ಮೂಗರಿದು ಮುಡಿಗಟ್ಟುತ್ತ ಹುಡುಕುನೀರೊಳಗದ್ದಿ ಬಳಲಿಸುತಿರೆ ಹೆಮ್ಮೆಯುಳಿದೀ ಲೋಕದೊಳಗಿಹುದೆ ಕಷ್ಟವೆಂದುಂ ಮುಳಿದು ಸ್ವರ್ಗಕೆ ಪರಿದು ಪೋಗುವ ತೆರದಿ ನೆಮ್ಮಿ ಗಗನವ ತುಡುಕಿ ಪುನ್ನಾಗ ನಾಗವಳ್ಳಿಯು ಪೊಲಂ ಕಂಗೆಸೆದುವು (ಶಬಮೋ. ೪-೩೧). P "ಪಂಪನ ಪದ್ಯದಲ್ಲಿರುವ 'ಪುಡಪುಡನೆ' ಎಂಬ ಶಬ್ದ ಪುಡು ಎಂಬ ಮೂಲಧಾತುವಿದ್ದಿರ ಬೇಕೆಂಬುದನ್ನು ವಿಶದಗೊಳಿಸುತ್ತದೆ. ಇದರಿಂದಲೇ 'ಪುಡುಂಕು' ಎಂಬ ಧಾತು ಬಂದು ಕುದಿ, ಬೇಯು ಎಂಬರ್ಥವನ್ನು ಪಡೆದಿರ ಬೇಕೆಂದು ಅರಿವಾಗುತ್ತದೆ. ಪುಡುಕುನೀರ್ ಎಂದರೆ ಕುದಿನೀರು, ಬಿಸಿನೀರು, ಸುಡುನೀರು ಎಂದರ್ಥ" (ಕಶ್ಬಿ. ೦೬).

[< ಪುಟ್ಟು + ನೀರ್]

**ಪುದುಕುನೀರರ್ದು** 'ಪುದುಕುನೀರಟ್ಟು' ನೋ.

**ಪುದುಕುನೀರಟ್ಟು, ಪುಡುಕುನೀರರ್ದು, ಹುಡುಂಕುನೀರದ್ದು** (ಕ್ರಿ). ಕುದಿಯುವ ನೀರಿನಲ್ಲಿ ಮುಳುಗಿಸು; ಬಿಸಿನೀರಿನಲ್ಲಿ ಅದ್ದು: ಸಮುದ್ರದೊಳ್ ಮಹಾಪಾತಾಳದ ಪೊದಲೊಳಿಕ್ಕಿ ಪುಡುಕುನೀರಟ್ಟು [ಪಾಠಾಂ. ದುರ್ದು] ತ್ತಂ ಪಿರಿದುಂ ಬೇಗಂ ದುಃಖಮನೆಯ್ದಿಸಿ ಕಾಡಿ ಕೊಲೆ (ಶಬ್ಧಾರಾ. ೦೪೩.೦೨) ; ಮುಳಿಸಿಗೆ ಪಾಳವೇಶನ ಒಳಮೆಲ್ಲಮನುಯ್ದು ಪುದುಕುನೀರಟ್ಟುವೆಂ (ಧರ್ಮಾಮೃ. ೪-೨೯೩). **ಪುದುಕುನೀರರ್ದು**: ಪುದುಕುನೀರರ್ದೆ [ಪಾಠಾಂ. ನೀರೊಳರ್ದೆ] ಯುಂ ಪುಟಪಾಕಂ ಸುಡೆಯುಂ (ಅಜಪು. ೦೦-೦೦ ವ): ಕಡುನೀರ್ಚಿ ಜಂತ್ರದಂಚಿಯುನಡಿಗಡಿಗಾ ನೀರೊಳರ್ದಿದರ್ ನಡವೆಡೆಯೊಳ್ ಗಡ ನಾಣ್ಚದೆ ಪುರುಡಿಪುದೆನ್ನೊಡನೆಂದುಯ್ಯಲ್ಲಿ ಪುಡುಕು ನೀರರ್ದುವಪೊಲ್ (ಮಲ್ಲಿಪು. ೬-೧೧೧) ; ಕೇಸರಿಗಳಂ ಪಿಡಿದು ಪುದುಕು [ಪಾಠಾಂ. ಡಿತೆ]ನೀರರ್ದು[ಪಾಠಾಂ. ನೀರೊಳಟ್ಟು]ವಂತೆ . . . ಸುಟ್ ಗೊಂಡದುರ್ಗದ ಸುಟಿಗಳೊಳಂ (ಲೀಲಾವ. ೮-೪೮ ವ). **ಹುಡುಕುನೀರದ್ದು**: ಶಿವನಂ ನೆನೆಯುತಿಡೆಯೊಳನ್ನ್ಯಯುಮಂ ಮಾಡಿ ಮತ್ತಂ ನೆನೆಯುತಿರ್ದೊಡಾ ಶಿವನ ನಾಮಂ ಹುಡುಕುನೀರದ್ದಿದಹುದೇ (ಸಿದ್ಧರಾ. ೮ ೧೮) : ಸುಡುವೆ ಲಂಕೆಯು ಸತಿತ್ರಪಲ್ಲರ ಹುಡುಕುನೀರದ್ದುವೆನು (ತೊರವೆ. ೪ ೬೦): ಗಂಗೆಯ ನಡುಗಡಲಲೀಕ್ಷಣದೆ ಖಳರನು ಹುಡುಕುನೀರದ್ದುವೆನು ಕೌರವ ರುನ್ನಗಳನು (ಕರ್ಣಾಗ. ೧೦-೬೬-೩೭). [ಪುದುಕುನೀರ್ + ಅಟ್ಟು]

**ಪುದುಕೆ** 'ಪುಡಿಕೆ' ನೋ.

**ಪುದುಕೆಗಟ್ಟಿಸು** (ಕ್ರಿ). (ಆಲಂ) ಗಂಟು ಕಟ್ಟಿಕೊಂಡು ಓಡಿ ಹೋಗು ವಂತೆ ಮಾಡು ; ಎತ್ತಂಗಡಿ ಮಾಡಿಸು : ಮಾಳವಮೇಳುವುಂ ಪುಡುಕೆಗಟ್ಟಿಸಿದತ್ತುಲಿಯುಟ್ಟಿ ಚೇರನುಂ ಚೋಳನುಮಂ ಸಮುದ್ರ ದೊಳಗದ್ದಿರ್ದಾದು . . . ಕೇಜದುಬ್ಬೆ (ಎಕ. VII. ಶಿಕಾ. ೦೨೩-೦೬ ; 1019). [ಪುದುಕೆ (< ಪುಡಿಕೆ) + ಕಟ್ಟಿಸು]

Δ **ಪುದುಗ** 'ಹುಡುಗ' ನೋ.

**ಪುದುತಕೇಶ, ಪುದ್ತ್ರಕೇಶ** (ನಾ). ಪೋರ್ಚುಗಲ್ಲು ದೇಶದವನು : ತಾವ ಪರಾಯ ತಾಲ್ಲೂಕು ಪುದುತಕೇಶನ ಆಶ್ರಯದಲ್ಲಿ ಇದ್ದೀರಿ(ರಾಜೇಂದ್ರ. ೨೦೦). **ಪುದ್ತ್ರಕೇಶ** : ಗೋವೆ ಪುದ್ತ್ರಕೇಶ ಖಾವಂದ ಗವರ್ನರ ಹೆಸರಿಗೆ ಒಂದು ತಾಕೀತಿ ಆದರೆ ಆ ಅರಸುಗಳು ಇಲ್ಲಿಗೆ ಬಂದು ತಲಪ್ಯಾರು (ರಾಜೇಂದ್ರ. ೨೦೬). 'ಪೋರ್ಚುಗೀಸ್' ಪರಾ.

[←ಇಂ. Portuguese /ತೆಲು. ಬುಡುತಕೀಚು]

**ಪುಡುಪುಡನೆ** (ಅ). ಪುಡುಪುಡು ಎಂದು : ಸಿಂಧುನಂದನನ ಕೋಪಶಿಖಿ ಶಿಖಾಜ್ವಾಲಾಪಂಗಳೊಳ್ ಪುಡುಪುಡನಟ್ಟಿ ಸಾಯಲೆಂದು ಪಾಯ್ವ ಪತಂಗಂಗಳಂತೆ ಸೋಮಕ ಶ್ರೀಜಯಪ್ರಮುಖನಾಯಕರೊಂದಕ್ಷೋಹಿಣೀ ಬಲಂಬೆರಸು ಭರಂಗೆಯ್ದಾಂತೊಡೆ (ಪಂಪಭಾ. ೧೦-೩೯ ವ); ಎನ್ನ ಮಕ್ಕಳು ಮಾನುಂ ದುಃಖಾಗ್ನಿಯೊಳ್ ಪುಡುಪುಡನೆ ಪುರ್ಗಿ ನವೆವ ಪಾಪದ ಫಲಮಂ ನೀನವೋಘಮುಣ್ಬೆ (ಸುಕುಮಾ. ೫.೭ ವ). [ಪುಡುಪುಡು + —ಅನ್ನೆ]

**ಪುಡುಪುಡು** (ನಾ). ಒಂದು ಅನುಕರಣಪದ : ನಡನಡನಡುಗಿ ಮಿಡು ಮಿಡುಮಿಡುಕಿ ಪುಡುಪುಡು ಪುಗ್ಗಿ . . . ಪುಯ್ಯಲಿಡುತ್ತುಂ (ಅಜಪು. ೦೦-೦೦ ವ).

**ಪುಡೆ** (ಅ). ಸ್ಪಷ್ಟವಾಗಿ ; ನಿಶ್ಚಿತವಾಗಿ : ಚಂಡಿಮಯ್ಯಂಗೆ ಶ್ರೀವನಿತೆಗೆ ತಾನಾಗಿ ಶ್ರೀವಿಶಾಲನೆ ಪುಟ್ಟುವಂತೆ ಪುಡೆ ಪುಟ್ಟಿದಂ ಚಾವ[ಂ]ಡ (ಕಇಅ. ೦೦-೪-೪೭ ; ಸು. 1093).

[<ಪ್ರಾ. ಪುಡ./ಸಂ. ಸ್ಫುಟ./ತಮಿ. ಪುಟ್ಟೈ = ವ್ಯಕ್ತವಾಗು]

**ಪುಡೆಯ** 'ಪುಡೆಹ' ನೋ.

**ಪುಡೆಹ, ಪುಡೆಯ** (ನಾ). ಹಲಸು, ಕುಂಬಳ, ನೆಲ್ಲಿಕಾಯಿ ಮೊದಲಾದುವುಗಳಿಂದ ತಯಾರಿಸುವ ಒಂದು ಬಗೆಯ ಮೇಲೋಗರ : ಕಡುಮೆತ್ತನುಕ್ಕರಿಸಿಕೊಂಡ ಹಲಸಿನ ಕಾಯ ಕಡಲೆ ಯುಂದದೊಳು ಕತ್ತರಿಸಿಯುಪ್ಪಿಂಗು ಹುಳಿಯೊಡನೆ ತುಪ್ಪವನೆಚಿದು ತಾಳಿಸಿಯುಪರಿಯಂತೆ ಕತ್ತರಿಸಿ ಬಲಿದ ಹಾಲ ಬಡಗಸುಂಡಗೆಯುಳ್ಳ ತೆಂಗಾಯಿ ಶುಂಠಿಗಳ ಹುಡಿಯುಮೆಲ್ಲಪನು ತುಪ್ಪದಿ ಹುರಿದು ಹದಮೊಣಸು ಜಂಡಿದ ಮೊಸರು ಕಲಸಿ ತುಪ್ಪದೊಳಗಟ್ಟುವೊಗ್ಗರಿಸಿ ಪುಡೆಹ[ಪಾಠಾ. ಡಿಯ]ವ ಮಾಳ್ಪುದು (ಸೂಶಾ. ೫-೪೨). **ಪುಡೆಯ** : ನೆಜ ಸಣ್ಣನಾಗಿ ಕುಂಬಳಕಾಯಸುತ್ತರಿಸಿ . . . ಸಂಭಾರವುಂ ತಳಿದುವೊಗ್ಗರಿಸಿ ಪುಡೆಯವ ಮಾಳ್ಪುದು (ಸೂಶಾ. ೫-೨೮) ; ಎಳೆಯ ಹಲಸಿನ ಕಾಯ ಸಿಪ್ಪೆಯುಂ ತೆಗೆದು ಸುಬಳಿಸಿ . . . ಬೇಯಿಸಿಕೊಂಡು ಬಳಿಕ ತಾಳಿಲ ಕೂಣಬು ಪುಡೆಯಂ ಮಾಂತಾದ ಮೇಲೋಗರವನು ಮಾಳ್ಪುದು (ಸೂಶಾ. ೫-೩೬).

[ ? ]

**ಪುದ್ತ್ರಕೇಶ** 'ಪುದುತಕೇಶ' ನೋ.

**ಪುಧಾಕಾರ** (ನಾ). ಮುಂದಾಳುತನ ; ನೇತೃತ್ವ : ಈ ಎಲ್ಲ ಮಾತುಕತೆ ಗಳಲ್ಲಿ ತುಂಗಕ್ಕನದೇ ಪುಧಾಕಾರಪಿತ್ತು (ಶುರುರಾ. ೧೯೦) ; ನಾಲ್ವತ್ತು ವರ್ಷ ವಯಸ್ಸಾಗುವವರೆಗೆ ಹೋರಾಡುಣ್ಣವೆಯ ಚಟುವಟಿಕೆಗಳಲ್ಲಿ ಅವನ ಪುಧಾಕಾರವಿರುತ್ತಿತ್ತು (ಗಂಮೂಡು. ೫೪).

[←ಮರಾ. ಪುಧಾಕಾರ]

**ಪುಢಾರಿ** ಪುಡಾರಿ (ನಾ). ಮುಂದಾಳು ; ನೇತಾರ ; ಮುಖಂಡ : ಹಳ್ಳಿಯ ಪುಢಾರಿಗಳು—ಹಿರಿಯರು—ಹುಂಬರು ಎಲ್ಲಾ ಸೇರಿದ ಬ್ರಹ್ಮ ಸಭೆ ಅದು (ಕಂಠಪು. ೬೪) ; 'ಬರಾಕು'ಗಳ 'ಪುಢಾರಿ'ಗಳಲ್ಲಿ ಒಬ್ಬೊಬ್ಬ ರಾಗಿ ಮುಂದೆ ಬಂದು ಜಿಗಿಜಿಗಿದು ಭಾಷಣ ಮಾಡಿದುದಾಯಿತು (ಅಗಸ್ಟ್. ೩೪). **ಪುಡಾರಿ** : ದೇಶದ ಮುಖಂಡರೂ ಅವನಿಗೆ ಗೊತ್ತು ; ನಾಡಿನ ಪುಡಾರಿಗಳೂ ಅವನಿಗೆ ಗೊತ್ತು (ಅಕಾ. ೨೯) ; ಹೋಹಾಗ ಬರಂ ವಂತೆ ಬರುವಾಗ ಹೋಹಂತೆ ಕೋರ್ವರೀ ಮಾರು ನೋಡಿ ಒಬ್ಬ ಪುಡಾರಿ ಮತ್ತೊಬ್ಬಳು ವಯ್ಯಾರಿ ಮತ್ತಿನದಿನ್ನೊಂದು ಎಡಿ (ಶಂಕಾಶ. ೦೬೬-೦೩). [ ← ಮರಾ. ಪುಢಾರೀ, ಪುಢಾಕಾರೀ ]

**ಪುಢಾರಿಕೆ** (ನಾ). ಮುಂದಾಳುತನ ; ಮುಖಂಡತ್ವ : ಅವನಿಗೆ ಜನತೆ ಯಲ್ಲಿ ಗಣ್ಯವಾದ ಸ್ಥಾನ ದೊರಕಿತ್ತು ; ದೇಶದಲ್ಲಿ ಪುಢಾರಿಕೆ ಬಂದಿತು (ಸ್ವಯಂವ. ೧೧). [ಪುಢಾರಿ + —ಇಕೆ]

**ಪುಢಾರಿತನ** (ನಾ). = ಪುಢಾರಿಕೆ : ಮಧ್ಯಮರು ಪುಢಾರಿತನದ ಯಜ್ಞ ದಲ್ಲಿ ಯಾರನ್ನೋ ದೂಗಿಸಿ . . . ಅವರು ಮೈಮರೆಸಿ ಕೊಳ್ಳುವುದು . . . ವಾಡಿಕೆಯದೇ ಆಗಿದೆ (ಕಂಚಿಪಂ. ೬ ಮುನ್ನುಡಿ). [ಪುಢಾರಿ+—ತನ]

**ಪುಣ್**. ಪುಂಡು, ಪುಣ್ಣು, ಹುಣ್, ಹುಣ್ಣು (ನಾ). ೧. ವ್ರಣ : "ಅರುಃ, ವ್ರಣಃ —ಈ ೨ ಪುಣ್ (ಹುಣ್ಣು)" (ಹಲಾಯು. ೦೦೪-೩); ಒಳ್ಪನುರಿವ ಪುಣ್ಗಳೊಳ್ ಕ್ಷಾರವಾರಿಗಳನೆಱೆದೊರಸಿ ಕರ್ಚುವರಂ (ಅಂತಿ. ೩-೩೩ ವ): ಪುಣ್ಗಳೊಳ್ ನೊಣಂ ಪುಪ್ಪದೊಳ್ ಪ್ರಣಯಂ ಮಾಡುವುದು ತುಂಬಿ (ಸೂಕ್ತಿಸು. ೧-೬೩) ; ಮನದೊಳ್ ದಯವಿಲ್ಲದವನ ಕಣ್ಣೇಂ ಪುಣ್ಣೇಂ (ಕಬಿರ. ೬೯ ಪ್ರಯೋ). ೨. ಗಾಯಂ ; ಏರು ; ಕ್ಷತ : ತಾಗದೆ ಪಲ್ಗಳ ತುದಿ ಪು[ಪಾಠಾಂ.ಹು]ಣ್ಣಾಗದೆ ನಡುಕಂದದೊಳಗು ನೋಯದ ಸವಿಗಿಂಬಾಗಿ ರತಿರಾಗದುರುಳಿವೊಲಾಗೆ ಕರಂ ಬೀಗ ಬಾಯ್ಗಳಂ ಚುಂಬಿಸಿದರ್ (ಅನಂ.ಪು. ೬೬೬ ಪೂರ್ವ್ವಕ); ಚತುರ್ಬಲಂಗಳ ಮೆಯ್ಗಳೊಳ್ ಬಗಿದಸುಂಗೊಳೆ ಸುಯ್ದು ಕೆತ್ತುವ ಪುಣ್ಣ ಬಾಯ್ಗಳೆ ಬೀರವಂ ಪೊಗಟ್ಟ ಬಾಯ್ಗಳೆನಿಪ್ಪುವು (ಕಾವ್ಯಾವ. ೩೩). **ಪುಂಡು** : ಕಿ. (ಅಲಂ) ವ್ಯರ್ಥ ; ವಿಫಲ : ಪದುಳಿದನಲ್ಲದನಂ ಕಲಿಸಿದೊಡಂ ತಿಳಿಪಿದೊಡಮೇಂ ನಿಲ್ಲಕ್ಕುಮೆ ಗುಮ ಚಿತ್ರದೊಳಾಪ್ತನ ವಚನಮದು ಪುಸಿದೊಡಂ ಪುಂಡಾಗಲಂತು ಮಾಱಿಯಾದ ತೆಱದಿಂ (ಕಬಜ. ೦೦—೦೩೪). **ಪುಣ್ಣು** : ೧. ಪುಣ್ಣಿನಂತೆ ನೋವಂ ಮಾಡುವುದು (ಕರ್ಣಾಮೃ. ೪-೦೬೩). ೨. ಕಾಸಿದೆಣ್ಣೆಯ ಪೊಯಿಲ್ಗೆ ಪಟುಭಟರ ಮೈದೊಗಲ್ ಕೀಸಿದುದು ಮಳಲ ಮಳೆಯಿಂದೆ ಪುಣ್ಣಾದುವು (ಶಂತಿ. ೪೨-೫೪). **ಹುಣ್** : ೧. "ವ್ರಣಂ—ಹುಣ್" (ಅಕಶ್ಯ. ೨೧೧). ೨. ಸುಱಿದು ಕಿತ್ತುವ ಹುಣ್ಬೆರಸಾಡುವಬ್ಬೆಯಿಂ ಚರಮೊಸೆಯಲ್ಕೆ (ಎ೩. XVIII, ೨೨೫-೩೩;1162). **ಹುಣ್ಣು** : ೧. "ವ್ರಣಃ, ಈರ್ಮಂ, ಅರುಃ—ಈ ೩ ಹುಣ್ಣು" (ಹಾಪಾ. ೩೩೦); ಅಂಬುಳುವಾದಡೆ ಹಣ್ಣುಖಿನೆಂಬರು ಸೀವಳಿಗೆಯಾಗೆ ಸಲೆ ಮಾರಿಯ ಹುಣ್ಣೆಂಬರು ತುಱುಯಾದಡೆ ಘಣಿಯೆಂಬರ್ ಮತಿಹೀನಜನರದೇನಂ ಮಾಡರ್ (ಕಮುಕ. ೪-೨೬); ಬೆಂದ ಹುಣ್ಣಾ ಕಂಬಿಯಲ್ಲಿ ಕೀಸುವರೆ (ಬಸವ. ೩೧೬); ಬೆಂದ ಹುಣ್ಣಾಲಿ ಸಾಸಿವೆಯು ಬಳಿಯದಿರು ಸಂಜಯ (ಕುಮಾರವ್ಯಾ. ೦-೮); ಅಂಗೈ ಹುಣ್ಣಿಗೆ ಕನ್ನಡಿ ಯಾಕೆ ? (ಗಾದೆ).

[ದೇ.೩ ತಮಿ. ಮಲ. ಕೋತ. ಪುಣ್ ; ತುಳು. ಪುಡಿ ; ಕೊಡ. ಪುಣ್ಣ್. ಪುಣ್ಣೀ ; ತೆಲು. ಪುಂಡು ; ಕೋಲಾ. ನಾಯ್ಕಿ. ಪುನ್ ; ಮಾಲ್ತೊ. ಪುನು]

**ಪುಣಂಬು** 'ಪುಳುಂಬು' ನೋ.

**ಪುಣಗು** 'ಪುಣುಗು' ನೋ.

**ಪುಣಜ** 'ಪುಂಚೈ' ನೋ.

**ಪುಣಜಿ** 'ಪುಂಚೈ' ನೋ.

**ಪುಣಪುಣನೆ** (ಅ). ಪುಣಪುಣ ಎಂದು : ಅಳಲು ಪುಣಪುಣನೆ ಮರ ಹತ್ತಿ ದಾಮಿ ಮತ್ತು ಖರ್ಜೂರಗಳನ್ನೆಲ್ಲ ಪಟಪಟ ಉದುರಿಸಿತು (ಪುಸ್ತಿಕ. ೨೪).

[ ಪುಣಪುಣ + —ಅನೆ ]

**ಪುಣಸುಗ** (ನಾ). ಒಬ್ಬಾತನ ಹೆಸರು : ಅವಚವಾಡಿಯ ಪೆರ್ಮ್ಮಾಡಿ ಗಾವುಣ್ಡನ ಲಕೊಳಾದಿತ್ಯನ ಮೆಳೆಯ ಪುಣಸುಗ ಸತ್ತಂ (ಎಕ. IV. ಹಾಸುಹಾ. ೧೬೪-೦೦; ೫೯೩). [ ? ]

**ಪುಣಸೆ** 'ಪುಳಿಸೆ' ನೋ.

**ಪುಣೆ**. ಹುಣೆ (ನಾ). (ಕರಾ) ಹೊಲಗದ್ದೆಗಳ ಬದು; ಒಡ್ಡು; ಏರಿ : ಜಾರಪ್ಪ, ಆ ದೃಶ್ಯವನ್ನು ನೋಡಲಾರದೆ ಗದ್ದೆಯ ಪುಣೆಯ ಮೇಲೆ ಕುಸಿದು ಬಿದ್ದನು (ಕಾನೂ. ೬೪) ; ಮೇಲಾಳುಗಳು ಒಬ್ಬೊಬ್ಬರಾಗಿ ಬಂದು ಗದ್ದೆಯ ಪುಣೆಯಲ್ಲಿ ನಿಂತರು (ಮಲೆಗಾ. ೨೪). **ಹುಣೆ** : ನೀನು ಗಳಿಸುವುದು ಎಲ್ಲಿಂದ ? ಬಂದರಿನಲ್ಲಿ ಹೂರೆ ಹೊತ್ತೋ ? ಗದ್ದೆಯ ಹುಣೆ (ಏರಿ) ಕಡಿದೋ ? (ಚೋಮ. ೩೬) ; ಕೆಲವರು ಗದ್ದೆಯ ಹುಣೆಯಲ್ಲಿ, ಕೆಸರಲ್ಲಿ ಹೊರಳಾಡುತ್ತಲಿರುವರು (ಚಗುಬ. ೭). [ ← ತುಳು. ಪುಣೆ ]

**ಪುಣೆಚು** 'ಪುಳಿಂಚು' ನೋ.

**ಪುಣೆಚೇಟು** 'ಪುಳಿಚೇಟು' ನೋ.

**ಪುಣೆಜ** (ನಾ). ಒಂದು ಬಗೆಯ ಕೀಟ : 'ಪಟ್ಟಪುಣೆಜ' ಪರಾಃ [ ದೇ. ೩ ತೆಲು. ಪುಣುಜು. ಪುಣುದು ]

**ಪುಣೆಜೆ** 'ಪುಳಿಂಚೆ' ನೋ.

**ಪುಣೆಲ್** 'ಪುಟಾಲ್$_3$' ನೋ.

**ಪುಣೆವುಲ್** (ನಾ). ಒಂದು ಬಗೆಯ ಪಕ್ಷಿ : ಪರ್ದುಮರವಂ ಮರ ಕುಟಗಂ ಪುಟಿಲೆ ಬುಱುಗಿ ಹಸುಬಂ ಪುಣೆವುಲ್ (ಸೂಕ್ತಿಸು. ೩-೧೪೬). [?]

**ಪುಣೆಸೂರ್** (ನಾ). ಒಂದು ಊರಿನ ಹೆಸರು : ಪುಣಸೂರ್ಪೊಲನೆಲ್ಲು ವಾಣ್ಡಿಯುಮಳಿವದು ಸರ್ವಪರಿಹಾರ (ಮೈಶಂ; ೦೪೩೦. ೩೬-೭; ೩೫೪ ಈ).

[ ಪುಣಸೆ (< ಪುಳಿಸೆ ) + ಊರ್ ]

**ಪುಣೆಸೆ** 'ಪುಳಿಸೆ' ನೋ.

**ಪುಣೆಸೆಯಮ್ಮ** (ನಾ). ಒಬ್ಬಾತನ ಹೆಸರು : ಸತ್ತಿವಂಗಲದ ಸಾಮಿಯ ಸಮ್ಮನ್ದಂ ಮಾಡಯ್ಯನುಂ ಪುಣಸೆಯಮ್ಮನುವಿಟ್ಟು ತಮ್ಮಲೋವಾದಿ ಗೊಟ್ಟರ್ (ಎಕ. IX. ಹೊಸಕೋ. ೦೦೦-೭;೨೯೭).

[ ಪುಣಸೆ (<ಪುಳಿಸೆ) + ಅಮ್ಮ$_1$ ]

**ಪುಣಸೆವಣ್**, ಹುಣಸೆಹಣ್ಣು, ಹುಣಸೆವಣ್ಣು, ಹುಣಸೆಹಣ್ಣು (ನಾ). ೧. ಹುಣಸೆಮರದ ಹಣ್ಣು ; ತಿಂತ್ರಿಣೀಫಲ ; ೩ ಅಡುಗೆಯಲ್ಲಿ ಇದನ್ನು ವಿಶೇಷವಾಗಿ ಬಳಸುತ್ತಾರೆ : ಬೇನ್ನುಪುಣಸೆವಣ್ಣೊಸನಾರ್ . . . ಪೀಲಿ ಯಂಬವಂ ತುಂಬಿದ ಕಂಬಿಯುಂ ತಳೆದದೇಂ ತಳರ್ದತ್ತೊ ಪುಳಿಂದಸಂಕುಳಂ (ಅಜಿತ. ೩-೦೧೪). **ಹುಣಸೆಹಣ್ಣು** : ೧.ಈಗ ಹುಣಸೆಹಣ್ಣು ತುಟ್ಟಿಯಾಗಿದೆ (ಜನ). **ಹುಣಸೆವಣ್ಣು** : ೧. ಒಂದು ಮಾನಿನೆಣ್ಣೆಯೊಳು ಹುಣಸೆವಣ್ಣಿನ ಹುಳಿಯನೊಂದಿಸಿಯದನುವೊರೆಯೊಳಿಂಗುಸಹಿತಂ ಕಾಸಿ (ಸೂಪಶಾ. ೩-೦೮). **ಹುಣಸೆಹಣ್ಣು**: ೧. ಹೋಳಿಯಲ್ಲಿ ಹುಣಸೆಹಣ್ಣು ತೊಳೆದ ಹಾಗೆ (ಗಾದೆ). ೨. (ಅಲಂ) ಗರ್ವ ; ಸೊಕ್ಕು : ಅವನ ತಲೆಯಲ್ಲಿ ತುಂಬಿದ್ದ ಹುಣಸೆ ಹಣ್ಣು ಸ್ವಲ್ಪವೇ ? (ಸ್ವಕೃಹೂ. ೧೬೪). [ಪುಣಸೆ (<ಪುಳಿಸೆ) + ಪಣ್$_2$]

**ಪುಣುಂಬು** 'ಪುಳುಂಬು' ನೋ.

**ಪುಣುಗು**, ಪುಣಗು, ಪುನಗು, ಪುನುಗಂ, ಪುಳಗಂ, ಪುಳುಗು (ನಾ). ಒಂದು ಬಗೆಯ ಕಾಡುಬೆಕ್ಕಿನ ಗುಂದಗ್ರಂಥಿಯಿಂದ ಪಡೆಯುವ ಸಂಗಂಧದ್ರವ್ಯ ; ಜವಾದಿ : "ಪುಣುಗು ಮಾರ್ಜಾಲಿಯೆನೆ ಜವಾದಿಯೆನಿಕ್ಕು" (ಮುಂಗಡ. ೪೪-೨೨); ಪುರದೊಳಗೆ ಉಳ್ಳ ಪುಣುಗೆಲ್ಲವಂ

ಶರಿಸುತಂ ಪುರಹರಗೆ ಸಹಸ್ರಾಭಿಷೇಕಮಂ ಮಾಡುತಂ (ಶಿವಕಾ. ೨೫೬-೦೦): ಕರ್ಪೂರ ಕಸ್ತೂರಿ ಜೀರ್ಣ ಜವಾಜಿ ಪುಣಾಗು ಬಹುತೈಲ ಸೋಜಿಗವಡೆದ ಸುಗಂಧದಂಗಡಿಗಳು [ಗಂಜಿಸುತಿರ್ದುವೆಕ್ಕೆಲದಿ] (ಮೋಹತ. ೩-೦೮). **ಪುಣಾಗು** : ನಾಸಿಕೇಂದ್ರಿಯ ನಿನ್ನ ತನುಗಂಧಕೆಳಸಿ ಮೇಲೆ ಸೂಸಿದ ಪುಣಾಗು ಕಸ್ತುರಿಯ ವಾಸವಿಡಿಯದು (ಶಂಪರಿ. ೯-೦೮೨); ಮೆಯ್ಯ ಮೇಲೆಯ ಲಿಯ ಆಕಾರದ್ದು ಗಂಟುಗಳು ಯೋಳುವವು. ಮೈಯಲ್ಲಿ ಪುಣಾಗಿನ ಗಂಧವು ಮುಟಾಗಿಯಿತುವು (ಬಕಾ. ೨೦ ೨). **ಪುನಗು** : ಪುನುತಕಸ್ತೂರಿ ಸಾದಿಸಂಪ ತಿದ್ದಿದ ಪಟ್ಟೆ ಪುನುಗಿನಗ್ಗಣಿ ಚಳಿಗಳಂ ಮಿನುಗುತಿಹ . . . ರಂಗವಲ್ಲಿಯಿಂ (ಕನಮೋ. ೮೭ ೫೯); ಪುನುಗಿದ್ದರೆ ಎತ್ತಲಾದಾದರೂ ಹಚ್ಚಿಕೊಳ್ಳಬಹುದು (ಹುಚ್ಚಹ. ೦೯೨). **ಪುನುಗು** : ಕಸ್ತೂರಿ, ಪುನುಗು . . . ಪನ್ನೀರು ಮುಂತಾದ ಸಹಜ ಸುಗಂಧದ್ರವ್ಯಗಳಲ್ಲಿ ಮುಳುಗಿ ತೇಲಿದವರು ಆ ಕಾಲದವರು (ಸಾಹಿಶ. ೩೭); ಹಚ್ಚಿಕೊಳ್ಳಿ ಪರಿಮಳಗಳಂ ಗಂಧ ಅತ್ತರು ಪುನುಗು ಕಸ್ತೂರಿ ಇತ್ಯಾದಿ ತರತರದ ಭೋಗವಮಂ ! (ಕೊಳಲು. ೧೮ ೨). **ಪುಳಗು** : 'ಪುಳಗುಕಾಪು' ಪರಾ. **ಪುಳುಗು** : 'ಪುಳುಗುಗಾಪು' ಪರಾ.

**ಪುಣಾಗಿನ ಚಟ್ಟು, ಪುಣುಗಿನ ಚಟ್ಟು** ಪುಣುಗಿನ ಲೇಪನದ್ರವ್ಯ : ಪುಣುಗಿನ ಚಟ್ಟಿನ ಗುಣ . . . ತ್ರಿವಿಧ ವಿಷರೋಗಗಳೇ ಮೊದಲಾದವು ಗಳನ್ನು ಹೋಗಲಾಡಿಸುವುದರಲ್ಲಿ ಬಹಳ ಪರಿಶ್ರಮವುಳ್ಳದ್ದು ಪುಣುಗು (ಸಕಪ್ಪ ೯೦) ; ಕಸ್ತೂರಿಯೇಣ ಪುಣುಗಿನ ಚಟ್ಟು ಹುಣಗೋರೋಚನ ಕೃಷ್ಣಾಜಿನ ಪುಲಿಚರ್ಮ ನರಿಗೊಂಬುಗಳನಿತ್ತರೊಲಿದು (ಮೋಹತ. ೧೯ ೭೫). **ಪುಣುಗಿನ ಚೆಕ್ಕು**=ಪುಣುಗನ್ನು ಒದಗಿಸುವ ಒಂದು ಬಗೆಯ ಬೆಕ್ಕು : ಕಸ್ತೂರಿಬೆಕ್ಕು : "ಗಂಧಮಾರ್ಜಾಲಃ—ಕಸ್ತೂರಿಬೆಕ್ಕು, ಪುಣುಗಿನ ಬೆಕ್ಕು" (೬೩೦. ೯೬).

[ ದೇ.॥ ತಮಿ. ಪುನುಕು, ಪುಟುಕು : ಮಲ. ಪುಟುಕು, ಪುಟು : ತುಳು. ಪುಣುಂಗು, ಪುಣುಗು, ಪುನುಗು : ತೆಲು. ಪುನುಂಗು ]

**ಪುಣುಗುಕಾಪು, ಪುಳಗುಕಾಪು, ಪುಳುಗುಗಾಪು** (ನಾ). (ದೇವರಿಗೆ ಮಾಡುವ) ಪುಣುಗಿನ ಲೇಪನ : ತಿರುನಕ್ಷತ್ರ ೧ಳಕ್ಕೆ ಸಲ್ಲುವದು ಗ ೬೦ ಶ್ರೀ ಏಕಾದಶಿಯ ಪುಣುಗುಕಾಪು ವರುಷವೊಂದಕೆ ೧೨೭ (ಎಕ. XIV. ಶ್ರೀರಂಗ. ೨೫೭-೬: 1564). **ಪುಳಗುಕಾಪು** : ಶ್ರೀಕಾಳಹಸ್ತ್ಯಯಾಶ್ವರದೇವರಿಗೆ ಪುಳಗುಕಾಪುಗೂ . . . ಸಮರ್ಪಿಸ್ತ (ತೌಇಇ. IX-ii. ೫೫೦-೩; 1562). **ಪುಳುಗುಗಾಪು** : ಪುಳುಗುಗಾಪಿಗೆ ತಿಂಗಳುತಿಂಗಳಿಗೆ ಮೃಗಶಿರಾನಕ್ಷತ್ರದಲ್ಲಿ ಅಭಿಷೇಕಕ್ಕೆ ಬೇನುತುಪ್ಪ ಪಡಿ ॥ (ತೌಇಇ. IX-ii. ೫೫೦-೩; 1562).

[ ಪುಣುಗು + ಕಾಪು ]

**ಪುಣುಜಿ** 'ಪುಂಚೈ' ನೋ.

**ಪುಣುಬು** 'ಪುಳುಂಬು' ನೋ.

**ಪುಣುಶೆಪಡಿ** (ನಾ). ಒಂದು ಸ್ಥಳದ ಹೆಸರು : ಅನ್ತೆ ಬನ್ನು ಕೊಟ್ಟರಿ ವಳ್ಳದ ಅಲಿಕಿಜುಕೆಯಿ . . . ಕಗ್ಗರೆಲೊಬ್ಬಿಯಿ ಪುಣುಶೆಪಡಿಯಿ ಭೊರಪಡಿಯಿ ಬಳಿಪುಣುಶೆಡಿ . . . ಕಾಡಿತ್ತು (ಎಕ. XVI, ತಿಕಟೂ. ೦೯೦-೭೨: 900). [?]

**ಪುಣುಸಿ** 'ಪುಳಸೆ' ನೋ.

**ಪುಣುಸೆ** 'ಪುಳಿಸೆ' ನೋ.

**ಪುಣುಸೆಪಟ್ಟಿ** (ನಾ). ಒಂದು ಊರಿನ ಹೆಸರು : ಪುಣುಸೆಪಟ್ಟಿಸಹಿತಂ ಪಲ್ಲವತಟಾಕಮಿತಿ ಗ್ರಾಮಸ್ಯ ನಾಮಧೇಯಂ ಕೃತ್ವಾ . . . ಉದಕ ಪೂರ್ವ್ವನ್ದತ್ತಃ (ಎಕ. III, ಮುಂಡ್ಯ. ೦೦೩-೩೬: 713).

[ಪುಣುಸೆ (<ಪುಳಿಸೆ) + ಪಟ್ಟಿ₁]

**ಪುಣ್ಣಲೆ** (ನಾ). ಗಾಯದ ಗುರುತು : ಬಿರುದಿನ ಬೀರದ ಪೆಸರ್ಕ್ಕರಮಂ ಪರಸ್ಪರ ಮೆಯ್ಯ ಪುಣ್ಣಲೆಗಳ್ ಪೋಲ್ತಿರೆ ತೋಳ್ವಲಕ್ಕೆ ಪಡೆದಂ ನರಶಾಸನಮಂ ನರೇಂದ್ರಚೂಡಾರತ್ನಂ (ಮಲ್ಲಿಪು. ೩-೦೯) : ಕವಿಲ ಬಿಸಿಲ್ಗಳೇಂ ಮಂಜಿಸಲಾತರ್ಗೆವೊ ತೀವ್ರಶರಾಭಿಘಾತದಿಂದವನಿಯ ಬೇದ ಪುಣ್ಣಲೆಗಳೊಯ್ಯನೆ ಕೆಂಗಲೆಗಟ್ಟಿದಂದಮಂ (ಅಕಂಪು. ೬-೩೦).

[ ಪುಣ್ + ಕಲೆ₂ ]

**ಪುಣ್ಣು** (ಕ್ರಿ). ಗಾಯಗೊಳಿಸು : ಜಾಣ್ಮೆಯುರನೊಡವಿಸುತ್ತಿರೆ ನಾಣ್ಮ ಲಮಂ ಪಡೆಯಿ ನೆಗಟ್ಟ ಗಂಡರನೆ ಕರಂ ಪುಣ್ಣುವುವುಟಾದವರಂ ಕಡೆ ಗಣ್ಣುವುವು (ಶಂಪರಿ. ೧೧-೯೩). [ ಪುಣ್ + -ಉ₁ ]

**ಪುಣ್ಣಮಿ** 'ಪುಣ್ಣಮೆ' ನೋ.

**ಪುಣ್ಣಮಿವೆಳಗು** 'ಪುಣ್ಣಮೆವೆಳಗು' ನೋ.

**ಪುಣ್ಣಮೆ, ಪುಣ್ಣಮಿ, ಪುಣ್ಣವೆ, ಪುಣ್ಣೆಮೆ, ಪುಣ್ಣೆವೆ, ಪುಣ್ಣುಮೆ,** ಪುಣ್ಣುವೆ, ಪುಣ್ಯಮೆ, ಪುನ್ನಮಿ, ಪೂರ್ಣಮಿ, ಹುಣೆಮೆ, ಹುಣಿವೆ, ಹುಣುಮೆ, ಹುಣ್ಣಮಿ, ಹುಣ್ಣಮೆ, ಹುಣ್ಣವೆ, ಹುಣ್ಣೆಮೆ, ಹುಣ್ಣೆವೆ, ಹುಣ್ಣುಮೆ, ಹುಣ್ಣುವೆ, ಹೂಣ್ಣವೆ (ನಾ). **ಪೂರ್ಣ** ಚಂದ್ರನು ಉದಯವಾಗುವ ದಿವಸ : ಪೌರ್ಣಮಿ : ಪ್ರಥಮ ವಿಜಯಸಮ್ವತ್ಸರದ ಕಾರ್ತ್ತಿಗೆ ಪುಣ್ಣಮೆ ಅನ್ದು (ಎಕ. III, ತಿರುಮು. ೦-೯ ; 726), ಕಾರ್ತಿಕದ ಪುಣ್ಣಮೆಯ ಮೃಗಶಿರನಕ್ಷತ್ರಮುಂ ಸೌಮ್ಯಯೋಗ ಮುಮಾಗೆ (ಜಾಪುಂಪು. ೯೮) ; ಪುಣ್ಣಮೆಯಾದುದು ಮುಖಚಂದ್ರ ಮುಂತಿಲ (ಮೋಹತ. ೦೩-೨೩). **ಪುಣ್ಣಮಿ** : ಸುರುಮಾರಸ್ವಾಮಿಯುಂ . . . ಕಾರ್ತಿಕಮಾಸದ ಪುಣ್ಣಮಿಯಂದು ಸುಖದಿಂದ ಬಂದಿರ್ದ (ಪದ್ಮಾರಾ. ೨೮-೭) ; ಹೆಮ್ಮಾರ್ಗ್ಗಿಯ ಪುಣ್ಣಮಿ ಸೋಮ ವಾರದಮ್ಹಿನ ಶುಭಲಗ್ನದೊಳ್ (ಇಕ. X, ೨೬೨-೩೯ : 1108) ; ಪಾಡಿವದೆಳೆವೆಳಗು ಪುಣ್ಣಮಿವರೆಗು ರೂಡಿಸಿ . . . ಬಳೆದು ಕಾಮಲಯಾಂತ್ಯಾ ನಂದಮಸೀಮಂದದೊಳು ನಾಡಜೀಯನ ಸುಕುಮಾರಂ . . . ವಿರಾಜಿಸಿದಂ (ಬಯುಕಾ. ೨.೬೩). **ಪುಣ್ಣವೆ** : ರಮಣಿಯ ಮುಖಕ್ಕೆ ಮಣಿಮುಕುರ ಮನೊಪ್ಪಿರೆ ತೋರ್ಪ ದಿವಿಜವಧುಸಮ್ಮುಖಮಂ ಹಿಮಕಿರಣಂಗು ರವಿಗಂ ಸಮನಿಪ ಪುಣ್ಣವೆಯ ಸಂಜೆವೆನ್ನಾಂ ಪೋಲ್ತಳ್ (ಚಂದ್ರಪ್ರ. ೧೦-೦೩೪) : ಸಸಿಯುಂ ಪುಣ್ಣವೆ ಪೊಂಗುವ ಪೊಸನೇಸಜನಾಂತು ಮೂಡದೆಸೆ ಮಸಗುವ ಪೋಲ್ ಬಸಿರ್ವೊರ್ಕ್ಕ್ಯ ಬಣ್ಣವೆಣ್ಣು ಬಿಸಜಾಕ್ಷಿನಿಸಮೃತಮಾಂಬೆ ಪೆಂಪಿಡಿ ದೆಸೆದಳ್ (ಶಕಲ. ೯-೫). **ಪುಣ್ಣೆಮೆ** : ಕೈಲಾಸಕ್ಕೆ ವಂದು ಸಿದ್ಧಶಿಖರತಳ ದೊಳು ಪೌಷ್ಯಮಾಸದ ಪುಣ್ಣೆಮೆ [ಪಾಠಾಂ. ಣ್ಣಮಿ]ಯೊಳು ಅಪಗತವಿಹರಣ ನಾಗಿರ್ದು (ಜಾಪುಂಪು. ೬೩) ; ಪುಣ್ಣೆಮೆಯಮುಂತಿರೆ ಶಶಿಮುಖಿ ನಡೆತಂದ ಳೊರ್ವಳ್ (ಧರ್ಮಾಮೃ. ೬-೦೯೧). **ಪುಣ್ಣೆವೆ** : ಅಶ್ವಯುಜದ ಪುಣ್ಣೆವೆ ಸೋಮಗ್ರಹಣದಂದು (ಎಇ. XVI. ೭೦-೯ ; 1074) : ದಿನದಿನದೊಳ್ ಚರ್ಚಿತಹ ಜನಪ ಶ್ರೀಕೃಷ್ಣವಿಭುವ ಜಸಮಂನದಂ ಕಂಡನುಸರಿಸದ ಚಿಂತ ಯೊಳೇ ಮಿನುಗುವ ಪುಣ್ಣೆವೆಯ ಬಿದು ಕೃಶತ್ವಮಾನಾಂಪಂ (ಜಕಪ. ೩೦-೫೬). **ಪುಣ್ಣುಮೆ** : ಕಾರ್ತಿಕದ ಪುಣ್ಣುಮೆ[ಪಾಠಾಂ. ಣ್ಣಮಿ]ಯೊಳಾ ನಂದಪದದ ಪಕ್ಕೆ ಮರ್ತಿಸುವ ಕೌಮುದೀಪರ್ವ ಬರಲು (ಸಮ್ಯಕ್ತ್ವ. ೦-೩೨). **ಪುಣ್ಣುವೆ** : ಪುಣ್ಣುವೆಯ ಸಂಪೂರ್ಣ ಜ್ಯೋತ್ಸ್ನೆ ಚಲಿಸುದಿಸಿ ಸಂಪನ್ನತೆಯೊಳು ಕ್ಷೀರವರಧಿ ಪರ್ದೆರ ಪುಟ್ಟಿ ಸಂತೋಷಿಸುವೊಲು (ಸಕಮೋ. ೦.೩). **ಪುಣ್ಯಮೆ** : ಪೌಷ್ಯ ಸುದ್ಧ ಪುಣ್ಯಮೆ ಸೋಮವಾರ ಸೋಮಗ್ರಹಣ ಸಂಕ್ರಾಂತಿ ನಿಮಿತ್ಯವಂದು (ಕಇಇ. ೩೩-೯೬-೦೯ : 1087). **ಪುನ್ನಮಿ** : ಪುಷ್ಯಶುದ್ಧ ಪುನ್ನಮಿ ಸೋಮವಾರ ಪುತ್ರರಾಯಣಸಂಕ್ರಮಣದಂದು (ಶಾಸಇ.೩೩-೩೦;೯). **ಪೂರ್ಣಮಿ** : ವೈಶಾಖಪೂರ್ಣಮಿಗೆ ಮಸಿಸಿ ಮೇಳೊದಿಗ್ಗದೆ ವೈಶಾಖ ಪೂರ್ಣಮಿಯೊಳರಾಳು ಪರಿನಿರ್ವಾಣ ಹೊಂದುವನ್ನಾತನನ್ನಿರುಳಿದ್ದು ಕೊನೆಗೊಮ್ಮೆ ಕಣ್ತೆರೆವೆ ಕಾಂಬೆನೆಂದು (ಶ್ರೀರಾಇ. ೭೯-೯೨೩). **ಹುಣೆಮೆ** : (೪).

**ಹುಣವೆ :** "ರಾಕಾ = ಹುಣವೆ" (ಶಬ್ದ. ೨೬೮). **ಹುಣುವೆ :** ವಾಗನೆ ಕೇಳ್ ಚೈತ್ರಮಾಸದ ಹುಣುವೆಗೆಲ್ಲರನ್ನೊಡಗೊಂಡು ಬಹುದು ಗಜಪುರಿಗೆ (ಕುರಂಗ. ೯೨-೯೩). **ಹುಣ್ಣಮಿ :** ಪೊಳೆವ ಪೊಂಗುಟಿಗಳಿಂ ದೊಪ್ಪುವಾನೆ ಬಂಗೊಳಿಸುತಿರ್ದುದು ಹುಣ್ಣಮಿಯ ಮುಳುಗುವ ನೇಸಱಿಂ ಮೂಡುವ ತಿಂಗಳಿಂ ಚೆಲುವನಾಂತಾಗಸದಂತೆ (ಶಾಂತೀಶ. ೨೦-೪೪). **ಹುಣ್ಣಮೆ :** ಗಗನದೊಳಗೆ ಹುಣ್ಣಮೆ ಹೋದ ಮಱುದಿನ ಪಗಲೆಸೆದಿರ ಲಾತನೊಡಲ ವ್ಯಾಗನ್ನೊಲಗಾದು ಮೊಗ್ಗಿಸುವೊಂದಂದದಿ ಮೊಗವೆತ್ತಿ ಗಳಪುತಯ್ತುವಾವು (ಸೋಮಶೇ. ೧೯-೦೩) ; ಹುಣ್ಣಮೆ[ಪಾಠಾಂ. ಮೆ]ಯ ಶಶಿಯಂತೆ ಚೆಲುಚೆಲುವೆಣ್ಣುಗಳು ಸಹ ಬಂದನೆಂದೀಕ್ಷಿಸಿತು ಪುರಜನವು (ಪಾರ್ಶ್ವ. ೦೮-೯೬). **ಹುಣ್ಣವೆ :** ಹು[ಪಾಠಾಂ. ಪು]ಣ್ಣವೆಯಲ್ಲಿ ಚಂದ್ರ ಮುಮಿಬರ್ ನೆರೆವಮಾಡದ ಚೂಳಿಕಾಗ್ರದೊಳ್ ತಣ್ಣೆಲರಾಸೆಯಿಂದಿರೆ ನಿಶೀಥಿನಿಯೊಳ್ ಖಳರಾಹು ಬಂದು . . . ತನ್ನ ಮೇಂದುಗಳನೀಕ್ಷಿಸಿ ಶೋಕಿಯಿಸೆಯ್ದಿದಂ ಕ್ಷಣಂ (ಪಾರ್ಶ್ವ. ೮-೩೪); ಮುನ್ನ ಸುರತತ್ರೀಸವೃಂದವು ಹುಣ್ಣವೆಯ ಪ್ರತಿಮಾಸಪೂಜೆಗೆ ಭಿನ್ನವಿಲ್ಲದೆ ಲೋಕ ಹೋಗಲು ದೈತ್ಯ ನೊಬ್ಬವನು ಬೆನ್ನ ಬಂದಪನು (ಸಂಕಷ. ೧೩-೪೪); ಸವೆಯದ ಕರ್ಗತ್ತಲೆಯ ತುಂಬಿದಳು ಹುಣ್ಣವೆಯ ಬೆಳ್ದಿಂಗಳ ಕಿಡಿಸಿ (ಸೋಮಶೇ. ೨೯-೮). **ಹುಣ್ಣೆಮೆ :** ಎಸೆದಿರೆ ನಂದೀಶ್ವರವುಂ ಬಸಂತದೊಳ್ ಮಾಡಿ ಬಟಿಕ ಹುಣ್ಣೆಮೆ[ಪಾಠಾಂ. ಪುಣ್ಣಮಿ, ಪೌರ್ಣಮಿ]ಯೊಳ್ ದೇವಸಪೂಜ ಮೋಕರಳಿಯನಾಡೆ ಸಿಂಪಿಣಿಯದೊಂದು ಮಾಡುವರ್ ತದ್ದಿನದೊಳ್ (ಸಬುಕ. ೨-೪೩); ನುಣ್ಮತ್ರಿನಕ್ಷತೆಯ ತಿಲಕ ಹುಣ್ಣೆಮೆಯ ಸಂಧ್ಯಾಲಕ್ಷ್ಮಿ ಚಂದ್ರ ಮಂಡಲ ಸೂರ್ಯಮಂಡಲವನು ತಳೆದಂತೆ (ಸೌಂದರ್ಯ. ೬-೨೩). **ಹುಣ್ಣೆವೆ :** ಚೈತ್ರಶುದ್ಧಹುಣ್ಣೆವೆ ಹನುಮಂತದೇವರ ಜನ್ಮದಿವಸ (ಪಾತ್ರ. ೬೬). **ಹುಣ್ಣುಮೆ :** "ಪೂರ್ಣಿಮಾ–ಹುಣ್ಣುಮೆ" (ಶಬ್ದ. ೫೩); ಸೂರ್ಯನು ತನ್ನ ಸುಷುಮ್ನೆಯೆಂಬ ಕಿರಣಸೂತ್ರದಿಂದಾ ಚಂದ್ರನು ಶುಕ್ಲ ಪಕ್ಷದ ಪಾಡ್ಯಂ ಮೊದಲು ಹುಣ್ಣುಮೆಯ ಪರ್ಯಂತರಂ ದಿನದಿನಕ್ಕೆ ವರ್ಧಿಸುತ್ತಿರ್ಪಂ (ಚಿಕ್ಕ. ೨೧೯): ಕಾಮನ ಹುಣ್ಣುಮೆಗೆ ಕಲಕುನೀರು (ಗಾದೆ). **ಹುಣ್ಣುವೆ :** ಹುಬ್ಬಿತೆ ಹೇಹಳಬನೆ ಹೊಳೆವ ಹುಣ್ಣುವೆ [ಪಾಠಾಂ. ಣ್ಣೆಮೆ]ಯ ತಿಂಗಳ ಬೆಳಗಿನೊಳ್ ... ನಡೆತಂದರಾ ಮಹೀವಲ್ಲಭ ನುಮಾ ಸಚಿವನು (ಸಮ್ಯಕ್. ೨-೧೦೨) ; ಹುಣ್ಣುವೆ ಅಮಾವಾಸಿಯಲ್ಲಿ ಯೆರಡಷ್ಟಮಿಗಳಲ್ಲಿ ಪಾಡ್ಯದಲ್ಲಿ ಸಾಧನೆಯು ... ಮಾಡಲು ತಕ್ಕಂಥಾದ್ದಲ್ಲ (ಬಸ್ವ. ೩-೬೦). **ಹೂಣ್ಣವೆ :** ರಕ್ತತಕ್ಷಿಸಂವಛರದ ಪ್ರಥಮ ಪಡ ಶ್ರಾವಣದ ಹೂಣ್ಣವೆ ಸೋಮಗ್ರಹಣ ದ × ಹರಿಹರದೇವರ × × × ವಲು (ಶಾಸನ. IX–i, ೨೬೯-೩ ; 1144).

ಹುಣ್ಣಮೆಯಾಳ್ದ = ಪೌರ್ಣಮೆಯ ಅಧಿಪತಿ ; ಚಂದ್ರ : ಹುಣ್ಣಮೆ ಯಾಳ್ದ ತನ್ನೆಸಕವನವರೆಸಳ್ಗಣ್ಣೊಳು ಸಾರ್ಚಿದಂತಿಹುದು (ಸೋಮಶೇ. ೦೯ ೬೨). [< ಸಂ. ಪೂರ್ಣಮಾ, ಪೂರ್ಣಿಮಾ]

**ಪುಣ್ಣಮೆವೆಱ್**³. ಪುಣ್ಣಮಿವೆಱ್³ (ನಾ). ಹುಣ್ಣಿಮೆಯ ಚಂದ್ರ : ಪೂರ್ಣಚಂದ್ರ : ತಳತ್ತಳಿಸುವ ಪುಣ್ಣಮೆವೆಱ್³ಮೊಗದ ಮಿಸುಪ ಚೆನ್ನೇಸಱಿಮಿರ ಕಂದನಾದಾಮರೆಮೊಗದ . . . ಕಡುಮುಗುದೆಯರಾ ಶುಕಬಚನ ಸುಶ್ರೋಣಿಯೊಡನೊಲ್ದಿಯ್ದಿದರು (ಜಿನಮು. ೩-೪೩). **ಪುಣ್ಣಮಿವೆಱ್**³: ಒಣ್ಣಗಗಾಲ ಪುಣ್ಣಮಿವೆಱ್³ಮೊಗದಳೆವೆಣ್ಣುಗಳಿಪ್ಪಂದ ದೊಪನೆ (ಚಂದ್ರಪ್ರಭ. ೧೨-೦೯೦). [ಪುಣ್ಣಮೆ + ವೆಱ್³]

**ಪುಣ್ಣವೆ** 'ಪುಣ್ಣಮೆ' ನೋ.

**ಪುಣವೆ** 'ಪುಣ್ಣಮೆ' ನೋ.

**ಪುಣ್ಣೆವೆ** 'ಪುಣ್ಣಮೆ' ನೋ.

**ಪುಣ್ಣು** 'ಪುಣ್' ನೋ.

**ಪುಣ್ಣುಮೆ** 'ಪುಣ್ಣಮೆ' ನೋ.

**ಪುಣ್ಣುವೆ** 'ಪುಣ್ಣಮೆ' ನೋ.

**ಪುಣ್ಪಡಿಸು** (ಕ್ರಿ). ಗಾಯಗೊಳಿಸು : ಬಿಡಗೀಮ ಬಲ್ಪಿನಿಂ ಖುಕ್ಷದನಂ ಸೆಱೆವಿಡಿಯ ಕಂಡು ಕಾಯ್ದೆಱಗಿದ ಸೂರ್ಯಜನಂ ಪುಣ್ಪಡಿಸಿದಂ (ಕುಮಾರ. ೦೦-೦೬೦). [ಪುಣ್ಪಡು + –ಇಸು₃]

**ಪುಣ್ಪಡು** (ಕ್ರಿ). ಗಾಯಗೊಳ್ಳು : × ಮಟ್ಟ ಪಕ್ಕದೊಡ್ಡು ಪುಣ್ಪಡುವಿನೆ ವಿಟ್ಟು ಸನ್ನು ಸವಕಟ್ಟಱದಲ್ಲಿಗೆ ನೂಂಕಿ ಬೀರಮುಚ್ಚಟಿರ್ಪಿನವೂಮೆ ತಳ್ತಱದು ಗೆಲ್ದವರಾತಿಯನೆನ್ನು ಪೊಚ್ಚಱ ನುಡಿವಟಿಗಣ್ದರಂ ನಗುವ ದೊಟ್ಟಜಿ ಮಾವನ ಗನ್ಧಹಸ್ತಿಯುಂ (ಎಶ. II. ೦೩೪-೪೯ ; ಶು. 982); ಕಿಱದು ಸಮಯದಿನಾ ವಿರಾಟನ ಬಲಂ ಪುಣ್ಪಟ್ಟು ಚೆಲಂಗೆಟ್ಟು ತೊಲಗುವುದುಂ (ಕರ್ಣಾಟ. ೦೦-೦೯೬ ವ) ; ಸುಣ್ಪಣೆ ಮೆಲ್ಲಗದವು ಮರಲ್ಗಣ್ ಬಾಯ್ದೆಱ ತುಂಬುಗಂದವಿಂಬಿಡಿದೆರ್ದೆಗಳ್ ಪುಣ್ಪಡುವಿನೆಗಂ ಬಿಗಿದು (ಅಶ್ವ. ೬-೨೦೩). [ಪುಣ್ + ಪಡು₁]

**ಪುಣ್ಪಡೆ** (ಕ್ರಿ). = ಪುಣ್ಪಡು: ಪೂತಲವಕ್ಕೆ ಪೌರವನಭೂರುಹಂ . . . ಸಂಧ್ಯಾತಪನಂಗೆ ತೋರಣಾಕನನ್ನುಕಂದ ದೊರೆಯಾಗಿ ತೋಱದತ್ತಾತ ನೊಳಾಂತು ಪುಣ್ಪಡೆದ ಖೇಚರಸೇನೆಯ ರಕ್ತಸೇಕದಿಂ (ಚಂದ್ರಪ್ರಭ. ೬-೪೬). [ಪುಣ್ + ಪಡೆ₁]

**ಪುಣ್ಪು** 'ಪುಳುಂಬು' ನೋ.

**ಪುಣ್ಪೆಱು** (ಕ್ರಿ). = ಪುಣ್ಪಡು : ಇಸೆ ಲಕ್ಷ್ಮಣಂ ವಿಯಚ್ಚರಸೈನ್ಯಂ ಸತ್ತುದು ಪುಣ್ಪೆತ್ತುದು ಬೆನ್ನಿತ್ತುದು (ಕುಮಾರ. ೯-೩೪). [ಪುಣ್ + ಪೆಱು₁]

**ಪುಣ್ಪೊಲಸು** (ನಾ). ಹುಣ್ಣಿನ ಕೊಳೆ,–ಹೊಲಸು : ಎಱಗುತ್ತುಮಿರ್ಪ ನೊಣಮುಣ್ಮುವ ಪುಣ್ಪೊಲಸಿಂಬಿಮೆಯ್ದೆ ಕುಕ್ಕರಿಕಿಯನೀಯೆ (ಚಂದ್ರಪ್ರಭ. ೦೦-೦೦೪). [ಪುಣ್ + ಪೊಲಸು]

**ಪುಣ್ಮವೆಣ** (ನಾ). (?) : ಸಾಹಸಭೀಮ . . . ನಿಜಭುಜಾಗ್ರಗದಾಮಘ ಪ್ರಹಾರದಿಂ ಪಱಪಱಯಾಗಿ ಪುಣ್ಮ[ಪಾಠಾಂ. ಣ್ಣು]ವೆಣನಾಗಿ ಮರುಳ್ಗಣೆ ಸಾಗಿ ಯುದ್ಧದೊಳ್ ಕುಱದಱಯಾಗಿ ಬಿಟ್ಟರಿಬಲಂಗಳೆ ವೇಱವೆ ನಿನ್ನ ಬೀರಮಂ (ಗದಾಯು. ೨-೩). P ಇಲ್ಲಿ ಪಾಠಕ್ಲೇಶವಿದೆ. 'ಪುಣ್ಣುವೆಣ' ಎಂಬುದು ಹೆಚ್ಚು ಸ್ವೀಕಾರಾರ್ಹವಾದ ಪಾಠವೆನ್ನಬಹುದು. [ ? ]

**ಪುಣ್ಯ** (ಗು). ೧. ಚೆಲುವಾದ ; ಸುಂದರವಾದ ; ಮೋಹಕವಾದ : ವಿಕಳಾಲಂಕೃತ ಚಕ್ರಧರತೀರ್ಥಕರಕುಸುಮಶರಾಗ್ರಗಣ್ಯಪುಣ್ಯತನುವಪ್ಪ ಶಾಂತೀಶ್ವರಂ . . . ದ್ವಾದಶಗಣವಿನೇಯಜನಂಗಳಂ ನರನಾಕನಾಗಲೋಕ ಗಮನಕ್ಕೆ ಪರಸಿ ವಿಸರ್ಜಿಸಿ (ಶಾಂತೀಶ. ೧೨-೨೯ ವ). ೨. ಒಳ್ಳೆಯ ; ಶ್ರೇಷ್ಠವಾದ ; ಉತ್ಕೃಷ್ಟವಾದ : ಆಸೆಗೆ ಹುಟ್ಟಿದ ಪ್ರಾಣಿ ಆಸೆಯನೆ ಕಲಿತು ಪುಣ್ಯಪದವಿಯ ಬಯಸಿದರೆ ಭವಪಾಲೆಯ ಭರವು ತಪ್ಪದು (ಬಸವ. ೦೨೮) : ಅರ್ಜುನನ ಮುಖವನ್ನು ಇಂದ್ರನು ಪ್ರೇಮದಿಂದ ತನ್ನ ಪುಣ್ಯಗಂಧವುಳ್ಳ ಕೈಯಿಂದ ತಡವುತ್ತ . . . ಇದ್ದನು (ಶಕುಂ. ೦೨೬). ೩. ಪವಿತ್ರವಾದ ; ಪಾವನವಾದ ; ಶುದ್ಧವಾದ : ನಿಸ್ಪೃಹತೆಯಮಾ ಮಹೀಪತಿಗೆ ತಂದುದು ಭವ್ಯತೆ ಪುಣ್ಯಜೀವವಂ ಸಾಹಜಸುಖಾಸ್ಪದಂ ಬರೆಗಮುಯ್ಯನಮಾಸ್ಟೆ ತೊಡಂಕಲೀಗಮೋ (ಅರ್ಕ. ೬-೨೩) : ಬಸವನ ಪುಣ್ಯಕೀರ್ತಿಲತೆ ಬೇರ್ವರಿಯುತ್ತುರಗೇಂದ್ರಲೋಕದೊಳ್ ದೆಸೆಗಳನಗ್ಗಳಂ ಮಸಸಿ ಪರ್ಮದುದಾಗಳೆ ಮರ್ತ್ಯಲೋಕದೊಳ್ (ಬಸವ. ೧೨ ಸೂಕ್ತಿ). ೪. ಧರ್ಮಿಷ್ಠವಾದ; ಸದ್ಗುಣಯುಕ್ತವಾದ. ೫. ಮಂಗಳಕರವಾದ; ಶುಭಕರವಾದ. ೬. ಸಂತೋಷದಾಯಕವಾದ. (ನಾ). ೭. ಸದಾಚಾರ, ಪರೋಪಕಾರ ಮೊದಲಾದುವುಗಳಿಂದ ಆತ್ಮನಿಗೆ ದೊರೆಯುವ ಫಲ ; ಸುಕೃತ ; ಸುಕೃತ : "ಧರ್ಮಃ, ಪುಣ್ಯಂ, ವೃಷಃ, ಶ್ರೇಯಃ

ಸುಕೃತಂ—ಈ ೫ ಪುಣ್ಯದ ಪೆಸರ್" (ಹಲಾಯು. ೨೦–೦೨೫) : ಸಮಕೊಂಡ ಪುಣ್ಯಮುಂ ಪಾಪಮುಮಿಲ್ಲದೊಡಾಳ್ದನಾಳ್ ಸರೋಗನರೋಗಂ . . . ಎಂಬೀ ಲೋಕಯಾತ್ರೆ ಕಿಡದೆ ಮಹಾತ್ಮಾ (ಶಾಂತಿಪು. ೯–೦೯೦) ; ನೀನೊಲಿಯುತ್ತೇ ಪುಣ್ಯ ನೀನೊಲ್ಲದುದೇ ಪಾಪ ಕಂಡಯ್ಯಾ (ಬಸವ. ೫೦೬) ; ಒರ್ವನ ಪುಣ್ಯದ ಫಲವಂ ಪಲರನುಭವಿಸುವರ್ (ಪಾರ್ಶ್ವಪು. ೧೫–೯೯). ೮. ಪವಿತ್ರವಾದುದಂ ; ಪಾವನಮಾದುದಂ: "ಶುಚಿ, ಮೇಧ್ಯಂ, ಪವಿತ್ರಂ, ಪುಣ್ಯಂ, ಪಾವನಂ—ಈ ೫ ಶುದ್ಧಮಪ್ಪ ವಸ್ತು" (ಹಲಾಯು. ೨೨-೧೬೨) ; ಪುಣ್ಯವಹುದೆಪ್ಪು ಧರೆ ವಲ್ಲಭನ ಪದಧೂಳಿಯಿಂ (ಕಪ್ರಾಂಗ. ೩೦-೦೬೯೨). ೯. ಒಳ್ಳೆಯ ಕರ್ಮದ ಫಲವಾಗಿ ಬರುವ ಸುಖ ; ಭಾಗ್ಯ : ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ (ಜಗನ್ನಾ. ೯–೦೦) ; ಆಂದಿನಾನಂದದೊಂದೊದವಿಗೆಂದಿವ ಪುಣ್ಯಕಂದಿನೆಸಕಕ್ಕಂತಾಪಳುಂ ನೋಂತಳೇ (ಕೃಷ್ಣಾಪು. ೦೦-೬೧) ; ಒಳ್ಳೆಯ ಕಾರ್ಯ ಮತ್ತು ಅದರ ಫಲವಾದ ಸುಖ— ಇವುಗಳ ಸಂಕೀರ್ಣಸಂಬಂಧಕ್ಕೆ ಪುಣ್ಯವೆಂದೂ . . . ಹೆಸರು (ಶಿಕಲು. ೨೩೬). ೧೦. ಧರ್ಮ : ದಾನ : ಪುಣ್ಯಕ್ಕೆ ಸೀರೆ ಉಡಿಸಿದರೆ ಹನ್ನೆರಡು ಮೊಳ ಅಂದಳು (ಗಾದೆ). ೧೧. ಭಾಗ್ಯವಂತ ; ಅದೃಷ್ಟಶಾಲಿ : ಪಾಡುವರು ಕೆಲರಲ್ಲಿ ಹರಿಯನು ನೋಡುವರು ನಿಜದೃಷ್ಟಿ ದಣಿಯಲು ಆಡುವರು ತವಿಮ್ಮಂದ ಪುಣ್ಯರದಾರು ಲೋಕದಲಿ (ಕೌಶಿಕಾ. ೯೯-೦೩). ೧೨. ಸಜ್ಜನ ; ಪುಣ್ಯಪುರುಷ : ಶರಣೆಯರ ಬಾಯಿಗೆಂಪಂ ಸವಿಮಾಳ್ಪರ್ ಕವಿಗಳಾಗೆ ಪುಣ್ಯರನುತ್ತಂ ಪರಿಹಾಸ್ಯ ಮಾಳ್ಪ ವಿಕಸಿತಸರಸಪ್ರಸವಂಗಳಿಂದೆ ಬಂದುಗೆಯಸೆಗುಂ (ಮಲ್ಲಿನಾ. ೬–೪೯೯). ೧೩. ಶುಚಿ ; ನೈರ್ಮಲ್ಯ. ೧೪. ಶುಭ ; ಮಂಗಳ. ೧೫. ಚೆಲುವು ; ಸೌಂದರ್ಯ. ೧೬. ಪ್ರಖ್ಯಾತಿ ; ಪ್ರಸಿದ್ಧಿ. ೧೭. ಮನೆ ; ಆವಾಸ. ೧೮. [ಜೈನ] ನವಪದಾರ್ಥಗಳಲ್ಲಿ ಒಂದು : ಜೀವಾಜೀವಪುಣ್ಯಪಾಪಾಸ್ರವಸಂವರನಿರ್ಜರಬಂಧಮೋಕ್ಷಮೆಂದಿಂತು ನವಪದಾರ್ಥಂಗಳುಂ (ಧರ್ಮಾಮೃ. ೬-೦೯) ; "ಅಕಳಂಕ ಯುದ್ಧದೊಳು ಸೌಮ್ಯದೊಳು ಧರ್ಮದೊಳು ಸುಕೃತದೊಳು ಪುಣ್ಯಮಕ್ಕುಂ" (ಮಂಗರಾ. ೦೫೨-೩೩) : "ಧರ್ಮ ಸುಕೃತಂ ಪ್ರಖ್ಯಾತ ನೈರ್ಮಲ್ಯ ಚೆಲ್ವಾವಾಸಂಗಳು ಪುಣ್ಯಮಕ್ಕು" (ನಾನಾರ. ೬೯).

**ಪುಣ್ಯ ಕಟ್ಟಿಕೊಳ್ಳು** = ಉಪಕಾರ ಮಾಡಿ ಪುಣ್ಯವನ್ನು ಗಳಿಸಿಕೊಳ್ಳು : ವಿದ್ಯಾಭ್ಯಾಸಕ್ಕೆ . . . ಪ್ರತಿವರ್ಷವೂ ಎರಡುಸಾವಿರರೂಪಾಯಿಗಳನ್ನು ಕೊಡಲು ಕೋರ್ಟಿನವರು ಒಪ್ಪುವಂತೆ ಮಾಡಿ ಆ ಲಾಯರ್ ಪುಣ್ಯ ಕಟ್ಟಿಕೊಂಡರು (ದೂರದ. ೪೩). [ಸಂ.]

**ಪುಣ್ಯಂಗೆಯ್**, **ಪುಣ್ಯಂಗೈ** (ಕ್ರಿ). ಸತ್ಕಾರ್ಯವನ್ನು ಮಾಡು : ಪುಣ್ಯ ಬರುವ ಕೆಲಸವನ್ನು ಮಾಡು : ಎನಿತು ಪುಣ್ಯಂಗೆಯ್ದುವೋ ಮಜ್ಜನನಸಾಫಲ್ಯತ್ವಮಾಯ್ತು (ಅಜಿತಪು. ೫–೫೦). **ಪುಣ್ಯಂಗೈ** : ಸುಂದರಿಯೆ. ಪೇಳಾವ ಪುಣ್ಯಂಗೈದುದಾ ಬಯಕೆ (ಕಪ್ರಾಂಗ. ೩೬–೯೭೬). [ಪುಣ್ಯ+ಕೆಯ್[1]]

**ಪುಣ್ಯಂಗೈ** 'ಪುಣ್ಯಂಗೆಯ್' ನೋ.

**ಪುಣ್ಯಂಗೊಳ್** (ಕ್ರಿ). ಸುಕೃತವನ್ನು ಹೊಂದು.—ಪಡೆ : ಅಹ, ಧೃಷ್ಟದ್ಯುಮ್ನ. ಗುರುವನಿಂತಲ್ತೆ ಕೊಂದು ಪುಣ್ಯಂಗೊಂಡೆ ! (ಅಕ್ಷಕಾ. ೩-೫೦). [ಪುಣ್ಯ+ಕೊಳ್[1]]

**ಪುಣ್ಯಕರ್ಮ** (ನಾ). ಶ್ರೇಯಸ್ಸನ್ನುಂಟುಮಾಡುವ ಕೆಲಸ : ಸಂಕೃತ : ಮುಂ ಪುಣ್ಯಕರ್ಮದುಂನತಾಗಿರೆ ಮಾಪದೀಗಳಬಲಿಂ ಪೇಬಿಂತಬುತ್ತಿ ರ್ಮಳಶ್ಯುಮೆ (ಕಾರುಪೂ. ೩೯೭) ; ಸಚಿಂತೆಯೆಂದೂ ಸವಿಶೇಷಚಿಂತೆಯೆಂದೂ . . . ಭಕ್ತಿಜ್ಞಾನವೈರಾಗ್ಯಚಿಂತೆಯೆಂದೂ — ಇವು ಮನಸ್ಸಿನಿಂದ ಮಾಡಲ್ಪಟ್ಟಂಥ ಪುಣ್ಯಕರ್ಮವೆನಿಸುವುದು (ವೀಣಾರ. ೨೦). [ಸಂ. ಪುಣ್ಯಕರ್ಮನ್]

**ಪುಣ್ಯಕಾರಿ** (ನಾ). ಒಳ್ಳೆಯ ಕಾರ್ಯ ಮಾಡುವವನು : ಅಶ್ವಧಾರಣೆಯೊಳವ ಪುಣ್ಯಕಾರಿ (ಕಂಠೀ. ೩೦–೩) ; ಪುಣ್ಯಕೋಟಿಯು ನಲಿದು ಕರುವಿಗೆ ಪುಣ್ಯಕಾರಿ ಎನುತ ಬೇಗದಿ ಚೆನ್ನಗೌಡನ ಕಂಡು ಕಾಮ ಉನ್ನತಾದಿಂದೆಂದಿತು (ಗೋಹಾಡು. ೦೦೮). [ಸಂ. ಪುಣ್ಯಕಾರಿನ್]

**ಪುಣ್ಯಕಾಲ** (ನಾ). ಪವಿತ್ರವಾದ ಸಮಯಂ : ಪುಣ್ಯಕಾರ್ಯಕ್ಕೆ ಪ್ರಶಸ್ತವಾದ ಕಾಲ : 'ದಕ್ಷಿಣಾಯನಪುಣ್ಯಕಾಲ' ಪರಾ. [ಸಂ.]

**ಪುಣ್ಯಕ್ಷಯ** (ನಾ). ಗಳಿಸಿದ ಪುಣ್ಯ ತೀರಿಹೋಗುವಿಕೆ: ಪುಣ್ಯಕ್ಷಯದೊಳ್ ತನ್ನ ವಿದ್ಯೆಗಳುಂ ತನಗೆ ಬೆಸಕೆಯ್ಯದಿರೆ (ಅಜಿತ. ೨–೦೪ ವ). [ಸಂ.]

**ಪುಣ್ಯಕ್ಷೇತ್ರ** (ನಾ). ಪವಿತ್ರಸ್ಥಳ : ಪಾವನವಾದ ಯಾತ್ರಾಸ್ಥಳ : ಇದು ಪುಣ್ಯಕ್ಷೇತ್ರಮಿಾ ಇರ್ದುದೆ ದುರಿತಹರಕ್ಷೇತ್ರಮಿಾ ಮೆಯ್ಯೊಳ್ ತೋರ್ಪುದೆ ಸಿದ್ಧಕ್ಷೇತ್ರಂ (ಸುಕುಮಾ. ೪–೯೬). [ಸಂ.]

**ಪುಣ್ಯಚರಿತೆ** (ನಾ). ೧. ಪಾವನಗೊಳಿಸುವ ಕಥೆ: ಪುಣ್ಯಕಥೆ : ಮೇದಿನಿಯೊಳೀ ಪುಣ್ಯಚರಿತೆಯನಾದರಿಸಿ ಬರೆದೋದಿ ಕೇಳುವ ಸಾಧುಸಜ್ಜನರಾದವರಿಗಹುದಖಿಳಕೈವಲ್ಯ (ಜಳೆ. ೯-೬೨). ೨. ಉತ್ತಮವಾದ ನಡವಳಿಕೆಯುಳ್ಳವಳು; ಶುದ್ಧವಾದ ಜೀವನವನ್ನು ನಡೆಸುವವಳು: ಆ ಪುಣ್ಯಚರಿತೆಯು ಭುವನಮಾತೆಯುನುಪಚರಿಸಿಕೊಂಡಿರ್ದನೊಲವಿನಲಿ (ಕೋಟಿಶಾ. ೦-೩-೬). [ಪುಣ್ಯ + ಚರಿತೆ]

**ಪುಣ್ಯಜನ** (ನಾ). ೧. ಒಳ್ಳೆಯ ಮನುಷ್ಯ ; ಸಜ್ಜನ. ೨. ಕುಬೇರನ ಸೇವಕ ; ಯಕ್ಷ : 'ಪುಣ್ಯಜನೇಶ್ವರ' ಪರಾ. ೩. ನೈಋತಿ : "ರಾಕ್ಷಸಃ, ಕೋಣಪಃ . . . ಪುಣ್ಯಜನಃ, ನೈರ್ಋತಃ, ಯಾತು, ರಕ್ಷಃ—೧೫ ನೈಋತಿ ಹೆಸರುಗಳು" (ನಿಘಂಟು. ೬೯). ೪. ರಾಕ್ಷಸ : "ರಕ್ಕಸರಲ್ಲಿಯುಂ ಪುಣ್ಯಜನಮೆಂಬುದು" (ಹಲಾಯು. ೦೩೦-೯). [ಸಂ.]

**ಪುಣ್ಯಜನೇಶ್ವರ** (ನಾ). ಯಕ್ಷರಾಜನಾದ ಕುಬೇರ : "ಐಳಬಿಲಃ . . . ಪುಣ್ಯಜನೇಶ್ವರಃ—ಈ ೧೭ ಕುಬೇರನ ಪೆಸರ್" (ಹಲಾಯು. ೦೪-೭೯): ಶಿವಾನುಬಂಧಸಯುಕ್ತನಾಗಿಯುಂ ದಶಾನನಾಸ್ತಂಗತಪ್ರಾಭವನಲ್ಲದ ಪುಣ್ಯಜನೇಶ್ವರನುಮನಿಸಿ ದೇವತಾಸ್ವರೂಪನಾದಂ (ಕೃಷ್ಣಾಪು. ೩-೨೦ ವ). [ಸಂ.]

**ಪುಣ್ಯಜಲ** (ನಾ). ಪವಿತ್ರವಾದ ನೀರು ; ತೀರ್ಥ : ಉದ್ದಾಮಮುನಿಜನರಚಿತ ಮಂತ್ರಸ್ತೋಮಪುಷ್ಕಲಪೂತಪುಣ್ಯಜಲಾಭಿಷೇಚನದ ಶ್ರೀಮುಡಿಗೆ ಕೈಯಿಕ್ಕಿದನು (ಕುಮಾವ್ಯಾಸ. ೦೪-೬೬). [ಸಂ.]

**ಪುಣ್ಯತಿಥಿ** (ನಾ). ಶ್ರಾದ್ಧದ ದಿನ : ಹಿರಿಯರ ಪುಣ್ಯತಿಥಿಯಂದು ಮಕ್ಕಳಿಗೆ ಸಿಹಿಯನ್ನು ಹಂಚಿದರು (ರೂಢಿ). [ಸಂ.]

**ಪುಣ್ಯದಿನ** (ನಾ). ೧. ಶುಭದಿವಸ : ಮಂಗಳಕರವಾದ ದಿವಸ : ಅಕ್ಷಯತೃತೀಯೆಯೆಂದಖಿಳಕ್ಷಿತಿಗಂ ಸೆಗಟ್ಟುದಲ್ತೆ ತತ್ಪುಣ್ಯದಿನಂ (ಅಜಿತ. ೦೦-೩); ಪುಶ್ಯವಮಾಸೆ ಸೂರ್ಯ್ಯಗ್ರಹಣ ಸಂಕ್ರಾಂತಿ ವ್ಯತೀಪಾತಗಳೆಂಬ ಸಕಳ ಪುಣ್ಯದಿನಂ ದೊರೆಕೊಣ್ಡಂದು (ಎಕ. XII. ಗುಬ್ಬಿ. ೦೦–೯೩ ; 1326). ೨. ಆಚಾರ್ಯಪುರುಷನು ಅವಸಾನ ಹೊಂದಿದ ದಿನದ ನೆನಪಿಗಾಗಿ ಮತೀಯ ಆಚರಣೆಯನ್ನು ಮಾಡುವ ದಿನ : ಇಂದು ಟೀಕಾಚಾರ್ಯರ ಪುಣ್ಯದಿನ (ರೂಢಿ). [ಸಂ.]

**ಪುಣ್ಯದೇವತೆ** (ನಾ). ಪುಣ್ಯದ ಅಧಿದೇವತೆ : ಇರೆ ಹರಿಯು ಪುಣ್ಯದೇವತೆಯಿರಲೆಡೆಯುಂ ಪೇಟ್ದು ತಾನೆ ಮಾಡುಗುಮೆನೆ ತನ್ನಿರವದ್ಯನ ಸೂಕ್ತಿಯನಾದರದಿಂದಾಂತರ್ ಮಹತ್ತರರ್ ಭೂಕಾಂತರ್ (ಶಾಂತಿಪು. ೭–೨೪). [ಸಂ. ಪುಣ್ಯದೇವತಾ]

**ಪುಣ್ಯನದಿ** (ನಾ). ಪವಿತ್ರವಾದ ಹೊಳೆ : ಪಾವನವಾದ ನದಿ : ಪುಣ್ಯನದೀನದನಗ[ರಾ]ರಣ್ಯವಿಭೂಷಣೆಯನೊಲ್ದು ನೋಡುತ್ತುಮಿಳಾಪುಣ್ಯಸ್ತ್ರೀಯುಂ ಸಂಚಿತಪುಣ್ಯರ್ ಪಾಂಚಾಲದೇಶಮಂ ಪುಗುತಂದರ್ (ಶಂಕರಾ. ೩-೩೩). [ಸಂ. ಪುಣ್ಯನದೀ]

**ಪುಣ್ಯಪದಾರ್ಥ** (ನಾ). [ಜೈನ] ನವಪದಾರ್ಥಗಳಲ್ಲಿ ಒಂದು : ಜೀವಪದಾರ್ಥಮಜೀವಪದಾರ್ಥಂ . . . ಪುಣ್ಯಪದಾರ್ಥಂ ಪಾಪಪದಾರ್ಥಮೆಂಬ ನವಪದಾರ್ಥಮುಮಂ . . . ಕೈಕೊಂಡು (ಸುಕುಮಾ. ೩-೩೯ ವ). [ಸಂ.]

**ಪುಣ್ಯಪಾಠಕ** (ನಾ). ಶುಭವನ್ನು ಕೋರುವವನು : ಮಂಗಳಪಾಠಕ ; ಸ್ತೋತ್ರಪಾಠಕ ; ವಂದಿ : ಕುಬ್ಜವಾಮನಬಧಿರಮೂಕಕಿರಾತೋನ್ಮತ್ತಜಡಜನಂಗಳುಮಂ ಗಾಯಕವಾದಕನರ್ತಕಕಥಕಪುಣ್ಯಪಾಠಕವೈತಾಳಿಕನಿಕರಮುಮಂ ಕೊಟ್ಟು (ಆದಿಪು. ೯-೩೪ ವ) ; ಭಜಿಯಿಸುವ ಪುಣ್ಯಪಾಠಕರ ವರಕೆಗಳೊಳಗೆ . . . ಬರುತಿರ್ದನಪ್ರತಿಮಸುಕುಮಾರಶೇಖರಂ (ಶಂಕರ. ೩-೯೦). [ಸಂ.]

**ಪುಣ್ಯಪ್ರವರ** (ನಾ). ೧. ಮಹಾಪುಣ್ಯಶಾಲಿ : ಶಿವನ ಕರುಣಾಲಾಭ ಪುಣ್ಯಪ್ರವರಪಾರ್ಥನ ಮುನ್ನಿನಂದದಲವನಿಗಳುಹಿದ ನಿಖಿಳದಿವ್ಯಾಯುಧದ ವೇದಿಕೆಗೆ (ಕುಮಾ.ವ್ಯಾ. ೯-೬). ೨. ಅತ್ಯಂತ ಪವಿತ್ರನಾದವನು : ಪಾಂಡವರಿಗಾವುದು ಕೊರತೆ ಪುಣ್ಯಪ್ರವರ ಗದುಗಿನ ವೀರನಾರಾಯಣನ ಕರುಣದಲಿ (ಕುಮಾ.ಗ. ४-೬೦). [ಸಂ.]

**ಪುಣ್ಯಫಲ** (ನಾ). ಒಳ್ಳೆಯ ಕಾರ್ಯಾಚರಣೆಯಿಂದ ಬರುವ ಫಲ : ಶರನಿಧಿಯ ವಡಬಾನಳನ ದಳ್ಳುರಿಯ ಪರ್ವಿಪ ತಿವಿವ ತುಂಬಿಗೆ ಮರಳುದಲೆಯುಂಟಾದಡದು ಭವಭವದ ಪುಣ್ಯಫಲ (ಕುಮಾ.ವ್ಯಾ. ೯-೬೬), ಅನ್ನಪಾನವ ನೀಡಿ ವಿಪ್ರರಿಂಗೊಲಿದುತಿಪ್ಪಾಪೂರ್ವಗಳ ಮುಗಿಸಿ ಹೋಡಿಯಲ್ಲದ ಪುಣ್ಯಫಲ ಕೈಗೂಡೆ (ಅಮೃ.ಕ. ೨-೦೦೦). [ಸಂ.]

**ಪುಣ್ಯಭೂಮಿ** (ನಾ). ಪವಿತ್ರವಾದ ಭೂಮಿ ; ಆರ್ಯಾವರ್ತ : "ಆರ್ಯಾವರ್ತಃ = ಪುಣ್ಯಭೂಮಿ" (ಶಾಕಟ. ೦೬೭) ; "ಆರ್ಯಾವರ್ತಃ, ಪುಣ್ಯಭೂಮಿಃ_೨ . . . ವಿಂಧ್ಯಪರ್ವತಕ್ಕೂ ಹಿಮಗಿರಿಗೂ ಮೂಡಲು ಪಡುವಲು ಕಡಲುಗಳಿಗೂ ನಡುವೆಯಿರುವ ಭೂಮಿ" (ಬಿಲ್ಹಂಕಿ. ೯೯). [ಸಂ.]

**ಪುಣ್ಯಮೆ** 'ಪುಣ್ಣಮೆ' ನೋ.

**ಪುಣ್ಯಯಜ್ಞ** (ನಾ). [ಜೈನ] ದೀಕ್ಷೆಗೊಂಡವನು ಮಾಡುವ ಚತುರ್ದಶಪೂರ್ವಗಳ ಪಠಣ ಹಾಗೂ ಶ್ರವಣ : ದೀಕ್ಷಾನ್ವಯಕ್ರಿಯೆಗಳಲ್ಲಿ ಆರನೆಯದು : ಅವತಾರವೃತ್ತಿಲಾಭ ಸ್ಥಾನಲಾಭಗಣಗ್ರಹಣಪೂಜಾರಾಧ್ಯ ಪುಣ್ಯಯಜ್ಞದೃಢಚರ್ಯೋಪಯೋಗಿತ್ವಮೆಂಬೆಂಟುಂಬೆರಸು . . . ನಾಲ್ವತ್ತೆಂಟು ದೀಕ್ಷಾನ್ವಯಕ್ರಿಯೆಗಳುಮಂ (ಆದಿಪು. ೦೫-೦೬ ವ) ; ಪುಪೋಷವಾಸಪೂರ್ವಕಂ ಬ್ರಹ್ಮಚಾರಿಯಾಗಿ ಪೂರ್ವಂಗಳಂ ಕೇಳ್ವುದು ಪುಣ್ಯಯಜ್ಞ ಕ್ರಿಯೆ (ಚಾವುಂಪು. ೨೨೩). [ಸಂ.]

**ಪುಣ್ಯಲೋಕ** (ನಾ). ಪುಣ್ಯವಂತನು ಸೇರುವ ಲೋಕ ; ದೇವಲೋಕ : ಸ್ವರ್ಗ : ಭಕ್ತಿಬಲಮೇ ಪುಣ್ಯಲೋಕವ್ಯಕ್ತಿಯಂ ತೋರುವದು (ಗಗನಾ. ೧೦-೦೬). [ಸಂ.]

**ಪುಣ್ಯವಂತ** (ನಾ). ಪುಣ್ಯಸಂಪಾದನೆ ಮಾಡಿದವನು ; ಪುಣ್ಯಶಾಲಿ : ಭರತಂ ಶ್ರೇಯಾಂಸನಂ ನೀನೆ ಪುಣ್ಯವಂತನೆಯೆಂದು ಪೊಗಳ್ದು ಪೂಜಿಸಿ ಪೋದಂ (ಚಾವುಂಪು. ೪೦) ; ನಯವಿದರೆಲ್ಲವುಲ್ಲಿಯೆ ಕಳಾನ್ವಿತರಲ್ಲಿಯೆ ಪುಣ್ಯವಂತರಲ್ಲಿಯೆ . . . ಎಂಬಿನೆಗಮಾ ಮಹಿ ಪೋಲ್ವುದು ಭೋಗಭೂಮಿಯಂ (ಪುಷ್ಪ.ಪು. ೯-೦೬). ೨. ಅದೃಷ್ಟಶಾಲಿ ; ಭಾಗ್ಯವಂತ : ಸಂಪ್ಪೆಯಿ : ಅವರು ಗತಿ ಇಲ್ಲದ ಜನ. ತಾವು ಪುಣ್ಯವಂತರು (ಸಣ್ಣಕ. ೧, ೯೩) ; ಈಗಿನ ಕಾಲದಲ್ಲಿ ಹೆಣ್ಣು ಹೆತ್ತೋರೇ ಪುಣ್ಯವಂತರು (ಕಂಕಣ. ೬). [ಸಂ. ಪುಣ್ಯವತ್]

**ಪುಣ್ಯವಂತೆ** (ನಾ). ೧. ಸಜ್ಜನೆ; ಒಳ್ಳೆಯ ನಡತೆಯುಳ್ಳವಳು. ೨. ಅದೃಷ್ಟವಂತೆ ; ಭಾಗ್ಯವಂತೆ : ಒಂದು ವಿಷಯದಲ್ಲಿ ನನಗಿಂತಲೂ ನೀನು ಪುಣ್ಯವಂತೆ (ಅಭ್ಯು. ೪೦). [ಪುಣ್ಯವಂತ + –ಎ]

**ಪುಣ್ಯವತಿ** (ನಾ). = ಪುಣ್ಯವಂತೆ ೧ : ಆ ಪುಣ್ಯವತಿಯರಿರ್ವರುಮಾ ಪರಮೇಶ್ವರನ ಮನಮನಿರ್ಕುಳಿಗೊಳೆ ಮತ್ತಾ ಪೀನವಕ್ಷಸ್ಕಂಧನುಮಾ ಪದ್ಮಾಸ್ಯೆಯರ ಮನಮನಿರ್ಕುಳಿಗೊಂಡಂ (ಆದಿಪು. ೯-೨೫); ಪುಣ್ಯವತಿ ನೃಪೇಂದ್ರಕಾಂತೆ ನವಕಲ್ಪಲತಾಕೃತಿಯಿಂದಮೊಪ್ಪಿದಳ್ (ಶಾಂತಿಪು. ೯-೨೦೦). [ಸಂ. ಪುಣ್ಯವತೀ]

**ಪುಣ್ಯವಾಸರ** (ನಾ). = ಪುಣ್ಯದಿನ ೧ : ತತ್ಪೂಜಕರಣಪುಣ್ಯವಾಸರಂಗಳೊಳುಪವಾಸನಿರತಂ . . . ಅಭಿಷೇಕಂಗೆಯ್ದು (ಆದಿಪು. ೧೬-೦ ವ) ; ಒಂದು ಪುಣ್ಯವಾಸರಪ್ರಥಮಪ್ರಹರದೊಳ್ . . . ತಾನಿರ್ದನಾಸ್ಥಾನಿಯೊಳವಳ ಸರಃಕಲ್ಪದೊಳ್ ರಾಜಹಂಸಂ (ಶಂಕರಕೃ. ೨-೭೨). [ಸಂ.]

**ಪುಣ್ಯಶ್ಲೋಕ** (ನಾ). ೧. ಯಾರ ಸ್ತುತಿಯಿಂದ ಪುಣ್ಯ ಬರುವುದೋ ಅಂತಹವನು ; ಸತ್ಕೃತಿಗಳಿಂದ ಪ್ರಸಿದ್ಧನಾದವನು : ಪರಮಪುಣ್ಯಶ್ಲೋಕ ಜಯ ಜಗಭರಿತ ನಿರ್ಮಳರೂಪ ಜಯ ಜಯ ಕರುಣಿ ರಕ್ಷಿಸು (ಕುಮಾ.ಅ. ೨೩-೩೩). ೨. ಹರಿಶ್ಚಂದ್ರ, ನಳ, ಪುರುಕುತ್ಸ, ಪುರೂರವ, ಸಗರ ಮತ್ತು ಕಾರ್ತವೀರ್ಯ ಎಂಬ ಆರು ಜನ ಚಕ್ರವರ್ತಿಗಳಲ್ಲಿ ಪ್ರತಿಯೊಬ್ಬನಿಗೂ ಇರುವ ಹೆಸರು : "ವಿವರಿಸೆ ಹರಿಶ್ಚಂದ್ರ ನಳ . . . ಕಾರ್ತವೀರ್ಯರೆನಿಪ್ಪರಜುವರತ್ಯವಿರಳದ ಚಕ್ರವರ್ತಿಗಳಕ್ಕವರ್ಗೆ ಪುಣ್ಯಶ್ಲೋಕರೆಂಬ ನಾಮಮಂ" (ಮಂಗರಾ. ೬೯-೨) ; ಸೋಕಿತೇ ಇಡುನಿಂದೆ ಪುಣ್ಯಶ್ಲೋಕನಿ[ಶಾಂತಂ ೧]ಗೆ (ಕೊರಡಾ. ೩-೨-೦೬). ☞ 'ಪುಣ್ಯಶ್ಲೋಕ' ಎಂದು ಧರ್ಮರಾಜನಿಗೂ ಜನಾರ್ದನನಿಗೂ ಹೇಳುತ್ತಾರೆ. [ಸಂ.]

**ಪುಣ್ಯಶ್ಲೋಕೆ** (ನಾ). ಪವಿತ್ರವಾದ ನಡವಳಿಕೆಯಿಂದ ಖ್ಯಾತಳಾದವಳು ; ಸದಾಚಾರಸಂಪನ್ನೆ : ಬಲ್ಲಂ ಬಲ್ಲನವಳಯೋನಿಜೆಯೆಂಬುದಂ ಪಾವನೆಯೆಂಬುದಂ ಪುಣ್ಯಶ್ಲೋಕೆಯೆಂಬುದಂ (ರಾಮಾಶ್ವ. ೨೫-೨೬). ☞ ಇದು ಸೀತೆ ಹಾಗೂ ದ್ರೌಪದಿ – ಈ ಇಬ್ಬರಿಗೂ ಅನ್ವಯಿಸುತ್ತದೆ. [ಸಂ. ಪುಣ್ಯಶ್ಲೋಕಾ]

**ಪುಣ್ಯಸ್ತ್ರೀ** (ನಾ). ಮಡದಿ ; ಹೆಂಡತಿ : ಖತಿಯ ಹಿಡಿದವ ಬಳಿಕಲಾ ರಘುಪತಿಯು ಪುಣ್ಯಸ್ತ್ರೀಯ ಕೊಲುವಾಯತದಲ್ಲಿದಿನನವನು ಬನವನು ಜನಕನಂದನೆಯ (ತೊರವೆ. ೬-೯೩-೨೯); ಮೋಳಿಗೆಮಾರಯ್ಯಗಳ ಪುಣ್ಯಸ್ತ್ರೀವಚನ (ಶರಣ. ೦೯೪). [ಸಂ.]

**ಪುಣ್ಯಾಂಗನೆ** (ನಾ). ಸಚ್ಚರಿತೆ ; ಸಜ್ಜನೆ : ಮುಪ್ಪುರ ಪಡಿಬರಿಸಿ ಪೋರಿದುದು ಪುರದೊಳಗಿರ್ಪ ಪುಣ್ಯಾಂಗನೆಯರ ಸಚ್ಚರಿತದ ಸಲಿಗೆಯಿಂದೆನೆ (ಹರಿಶ. ೨-೪೪). [ಸಂ. ಪುಣ್ಯಾಂಗನಾ]

**ಪುಣ್ಯಾತಗಿತ್ತಿ, ಪುಣ್ಯಾತ್ಗಿತ್ತಿ** (ನಾ). = ಪುಣ್ಯಾಂಗನೆ: ನಮ್ಮ ಗೆಣೆಕಾತಿ ಹೊನ್ನೂರ ಬಣಜಿಗಿತಿ ಪುಣ್ಯಾತಗಿತ್ತಿ ಪುರುಷರ ತೊಡೆ ಮ್ಯಾಲೆ ನವ ಹಂಬಲವ ಮರತಳೆ (ಶಾಸದ. ೭೯); ಪುಣ್ಯಾತಗಿತ್ತಿ ಎರಡು ಹಜ್ಜೆ ಒಂದು ಕಡೆ ಇಟ್ಟು ನಿಂತಿದ್ದರೆ ತಾನೇ ಕೇಳುವುದು (ಬೂತಕ. ೩೩೬). ಪುಣ್ಯಾತ್ಗಿತ್ತಿ : ನನಗೆ ಬಂದ ತೊಂದರೆಯೆಲ್ಲಾ ಆ ಪುಣ್ಯಾತ್ಗಿತ್ತಿಯಿಂದ ಪರಿಹಾರವಾಯಿತು (ರೂಢಿ). [<ಪುಣ್ಯಾತ್ಮ + –ಗಿತ್ತಿ]

**ಪುಣ್ಯಾತ್ಗಿತ್ತಿ** 'ಪುಣ್ಯಾತಗಿತ್ತಿ' ನೋ.

**ಪುಣ್ಯಾತ್ಮ** (ನಾ). = ಪುಣ್ಯವಂತ : ಆ ಪುಣ್ಯಾತ್ಮನನ್ನು ತಂಪುಹೊತ್ತಿನಲ್ಲಿ ನೆನೆಯಬೇಕು (ರೂಢಿ). [ಸಂ. ಪುಣ್ಯಾತ್ಮನ್]

**ಪುಣ್ಯಾರ್ಥ** (ನಾ). ಪುಣ್ಯವನ್ನು ಗಳಿಸಬೇಕೆಂಬ ಗುರಿ, – ಉದ್ದೇಶ : ಎಳಸಿ ಪುಣ್ಯಾರ್ಥದಿಂ ವಂದನೆ ನಿಮಿತ್ತ ಗುರುನಿಳಯಕ್ಕೆ ಶಿಷ್ಯನೆಯ್ದುವುದಕೆ ಸಾಹಸದ ಬಲವೇಕೆ ತಂದೆ (ಶಕಠಾ. ೬-೬). [ಸಂ.]

**ಪುಣ್ಯಾಸ್ರವ** (ನಾ). ೧. ನಾಗರಾಜಕವಿಯು ರಚಿಸಿದ ಒಂದು ಕನ್ನಡ ಕಾವ್ಯದ ಹೆಸರು : ವಿನಯನಿಧಿ ನಾಗರಾಜಂಗನುಪಮಗುಣನಿಧಿಯನಂತ

ವೀರ್ಯಪ್ರಭೃತಿಪಂ ಮನವೊಲಿದು ವೇಟ್ಪ ತೆಱದಿಂ ಜನಹಿತಮಂ ವೇಟ್ಪಿ ನೊಲಿದು ಪುಣ್ಯಾಸ್ರವಮಂ (ಧರ್ಮಾಮೃ. ೦-೩೪). ೨. [ಜೈನ] ಪುಣ್ಯವು ಜೀವನಲ್ಲಿ ಕೂಡಿಕೊಳ್ಳುವಿಕೆ : ಪುಣ್ಯಸಂಪಾದನೆ: ಆಸ್ರವಮೆರಡು ತೆಱಂ ಪುಣ್ಯಾಸ್ರವವೊಂದದಱ ವೈಪರೀತ್ಯಭವಂ ಪಾಪಾಸ್ರವಂ (ಶಾಂತಿಪು. ೦೨-೪); ಜಿನಸ್ತವಂಗಳೊಳಗೊಂಡಂ . . . ಒಱಲ್ದು ಚಿಂತಿಸಿದವಂಗಂ ಸಾರ್ವ ಪುಣ್ಯಾಸ್ರವಂ ಪವಣಿಲ್ಲ (ಸುಕುಮಾ. ೦-೫೪). [ಸಂ.]

**ಪುಣ್ಯಾಹ** (ನಾ). ೧.=ಪುಣ್ಯದಿನ : ಮಾಘಶುದ್ಧದಶಮಿಪುಣ್ಯಾಹಯುಕ್ತಂ ಪ್ರಜಾಪತಿಯೋಗಂ ಬೆರೆದಂದು ರೋಹಿಣಿಯೊಳ್ . . . ಆದುದಂದಜಿತ ತೀರ್ಥೇಶಾಬ್ಜವಿತ್ರೋದಯಂ (ಅಜಿಪು. ೩-೨೨). ೨.=ಪುಣ್ಯಾಹವಾಚನ : ಗಣಕಗಣ ಪುನಃಪುನರುಚ್ಚರಿತ ಪುಣ್ಯಾಹಪ್ರಶಸ್ತರವದೊಡನೆ . . . ಪುಣ್ಯಾಂಗನಾಜನದಾಶೀರ್ವಾದನಾದವೊದವೆಯುಂ (ಶಂಖಾಪು. ೫-೦೨೬ವ); ಚೈತ್ರಸಿತಪಂಚಮಿಯಲುತ್ತರಪೂರ್ವವೇದಿಯ ವಿಮಲಪುಣ್ಯಾಹದ ಮಹಾವಾಚನೆಯ ವಿಸ್ತರಿಸಿ (ಕೂಚಿಕಾ. ೦-೬-೧೦). [ಸಂ.]

**ಪುಣ್ಯಾಹವಾಚನ** (ನಾ). ಮದುವೆ ಮೊದಲಾದ ಮಂಗಳಕಾರ್ಯಗಳ ಆರಂಭದಲ್ಲಿ ಮಾಡುವ ಒಂದು ಶುಭಕರವಾದ ಧಾರ್ಮಿಕವಿಧಿ; ಸ್ವಸ್ತಿವಾಚನ : ಪುಣ್ಯಾಹವಾಚನಕ್ಕೆ ಕುಳಿತ ಮನೆಯ ಯಜಮಾನನಂತೆ ಅವನು 'ಮಮ' ಎನ್ನುವುದನ್ನು ಅಷ್ಟೇ ರೂಢಿಸಿಕೊಂಡಿದ್ದ (ಎಂಜಿಪ. I. ೯೩). [ಸಂ.]

**ಪುಣ್ಸೆ** 'ಪುಳಿಸೆ' ನೋ.

**ಪುತಪುತನೆ** (ಅ). ಒಂದು ಅನುಕರಣಾವ್ಯಯ : ಭೀಮಸೇನನು . . . ಮರವನ್ನು ಒದ್ದು ಅಲ್ಲಾಡಿಸುವನು ; ಹಣ್ಣುಗಳು ಪುತಪುತನೆ ಉದುರುವುವು (ಕಕಥಾ. ೦೬). [ಪುತಪುತ₀+—ಅನೆ₁]

**ಪುತಲಿ** 'ಪುತ್ಥಳಿ' ನೋ.

**ಪುತಳಿ** 'ಪುತ್ಥಳಿ' ನೋ.

**ಪುತುಗು** (ಕ್ರಿ). ಚಡಪಡಿಸು ; ಕಳವಳಿಸು : ಮನದಲಿದ್ದಾಶೆಯಲಿ ಬಾಡಿದ ವದನಕಮಲದಲಿ ಮನದೊಳಗೆ ಪುತುಗುತ್ತ ನಿಲ್ಲದೆ ಮನಕತದಿ ಬಾಗಿಲಿಗೆ ಬರುತಾ ವನಿತೆ ಬಳಲಿದಳು (ಕಿಶಾಗ. ೦೦-೦೩-೨). [ ? ]

**ಪುತ್ತ** 'ಪುತ್ತು₁' ನೋ.

**ಪುತ್ತರಿ**, ಹುತ್ತರಿ (ನಾ). ೧. ಹೊಸ ಅಕ್ಕಿ : ಹುತ್ತರಿ ಅಥವಾ ಪುತ್ತರಿ ಎಂದರೆ ಹೊಸ ಅಕ್ಕಿ ಎಂದು ಅರ್ಥ (ಕಕಪು. ೪-೬೩). ೨. ಕೊಡಗರು ಹೊಸ ಅಕ್ಕಿಯನ್ನು ಮನೆಗೆ ತರುವಾಗ ಆಚರಿಸುವ ಹಬ್ಬ ; ಸುಗ್ಗಿ : ಪುತ್ತರಿಯ ದಿನ ಮುಂಜಾನೆಯೇ ಗ್ರಾಮದೇವಾಲಯದ ಅರ್ಚಕ ಮನೆಯೊಳಗೆ ತೀರ್ಥಜಲವನ್ನು ಪ್ರೋಕ್ಷಿಸಿ ಶುದ್ಧಿಗೊಳಿಸಿ ಹೋಗಿದ್ದ (ಹುಂಕಾ. ೦೬೩). **ಹುತ್ತರಿ** : ೧. ಹುತ್ತರಿ . . . ಎಂದರೆ ಹೊಸ ಅಕ್ಕಿ (ಕಕಪು. ೪-೬೩). ೨. ಹುತ್ತರಿ ಹತ್ತಿರ ಬಂದಂತೆ ಮನೆಯಲ್ಲಿ ತಿಂಗಳುಗಟ್ಟಲೆ ಅಕ್ಕಿಯ ದರ್ಶನವಾಗುತ್ತಿರಲಿಲ್ಲ (ಮುಸಕೊ. ೦೬) ; ಹುತ್ತರಿಹಬ್ಬವು ಕೊಡಗರ ಸುಗ್ಗಿಯ ಹಬ್ಬ (ಕಕಪು. ೪-೬೩).

[ದೇ.॥ ಮಲ. ಪುತ್ತರಿ ; ಕೊಡ. ಪುತ್ತರಿ, ಪುತ್ತೇರಿ]

**ಪುತ್ತಲಿ**, ಪುತ್ತಳಿ (ನಾ). ೧. ಬೊಂಬೆ : ವಿಗ್ರಹ : ಮೂರ್ತಿ : ನವಕುಮಾರನು ಯಂತ್ರದ ಪುತ್ತಲಿಯಂತೆ ಅವಳ ಸಂಗಡ ನಡೆದನು (ಕಪಾಕಮ. ೨೦). **ಪುತ್ತಳಿ** : ೧. "ಪುತ್ತಳಿಯೆನೆ ಪುತ್ರಿಕೆ" (ಕಂಕಂ. ೦೯೩) ; ಹೊಗೆ ಹತ್ತಿದ ಪುತ್ತಳಿಯಂತೆ ಬಂದನುದ್ಯಾನವನವೊಪ್ಪದಿಂ ಕಳೆದು ರಾಜಕುಮಾರನವಾರಚಿಂತೆಯಿಂ (ಶಂಚರಿ. ೬ ಸೂಕಚ); ಪುತ್ತಳಿಯನೊಯ್ವಂತೆ ಯಾನದಿಯೆತ್ತಿ ತಂದರು ಖಳರು ಮಾಣದಲಿಸುತ್ತ ತೋಱದರಿರುಳು ರಣಗೌರವವನವನಿಜೆಗೆ (ಕೌತಿಪಾ. ೨೬-೦) ; ಹುಡುಗಿ ಬೆಳೆದಳು ; ಯೌವನ ಬಂದು ಬಂಗಾರದ ಪುತ್ತಳಿಯಂತೆ ಶೋಭಿಸುವ ಹಾಗಾದಳು (ಕಕಳಾ. ೦೬೬).

೨. ಬಂಗಾರ : ಚಿನ್ನ : ಪರುಷದ ಪುತ್ತಳಿಯು ಇರವಿನಂತೆ . . . ಅನಲನ ನುಂಗಿದ ಶಿಲೆಯಂತೆ ಅರುಣನ ಕಿರಣವ ಕೊಂಡ ದ್ರವ್ಯದಂತೆ ಇನ್ನೇನುಪಮಿಸುವೆ (ಮೋಳಿಮಾ. ೬-೨೨).

[ಸಂ. ಪುತ್ತಲೀ./ ತುಳು. ಪುತ್ತೊಳಿ ; ತೆಲು. ಪುತ್ತಳಿ, ಪುತ್ತಡಿ]

**ಪುತ್ತಲಿಕೆ** (ನಾ). ಬೊಂಬೆ : ಪುತ್ಥಳಿ. [ಸಂ. ಪುತ್ತಲಿಕಾ]

**ಪುತ್ತಲಿಗೊಂಬೆ**, ಪುತ್ತಳಿಗೊಂಬೆ (ನಾ). ಲೋಹ, ಮರ ಮೊದಲಾದುವುಗಳಿಂದ ಮಾಡಿದ ಗೊಂಬೆ : ನಮ್ಮೂರಿಗೆ ಹಣ್ಣು ವೇಷದವರು, ಪುತ್ತಲೀಗೊಂಬೆ ಆಟದವರು, ಚಕ್ಕಳಗೊಂಬೇ ಆಟದವರು ಮುಂತಾದವರು ಬರುತ್ತಿದ್ದರು (ಹುಳ್ಳಿಕ. ೯೧). **ಪುತ್ತಳಿಗೊಂಬೆ** : (ಕ). 'ಪುತ್ಥಳಿಬೊಂಬೆ' ಪರಾ. [ಪುತ್ತಲಿ+ಗೊಂಬೆ₁]

**ಪುತ್ತವುಗು** 'ಪುತ್ತುವೊಗು' ನೋ.

**ಪುತ್ತಳಿ** 'ಪುತ್ತಲಿ' ನೋ.

**ಪುತ್ತಳಿಗೆ** 'ಪುತ್ಥಳಿಕೆ' ನೋ.

**ಪುತ್ತಳಿಗೆಲಸ** (ನಾ). ಬೊಂಬೆಯಾಕಾರದ ಸುಳಿವುಗಳನ್ನು ಕಂಡರಿಸುವಿಕೆ: ಪುತ್ತಳಿಗೆಲಸದ ಬಾಗಿಲು ಕಾಂಚನಭಿತ್ತಿ ಮಣಿಕದ ಕಂಬಗಳು (ಕರಕ. ೪೬-೫೬).

[ಪುತ್ತಳಿ (=ಪುತ್ತಲಿ) + ಕೆಲಸ]

**ಪುತ್ತಳಿಗೊಂಬೆ** 'ಪುತ್ತಲಿಗೊಂಬೆ' ನೋ.

**ಪುತ್ತಳಿಬಣ್ಣ** (ನಾ). ಚಿನ್ನದ ವರ್ಣ : ಹೊಂಬಣ್ಣ : ಪುತ್ತಳಿಬಣ್ಣದ ಚಿತ್ರಶಾಲಿಯನುಟ್ಟು ಹಸ್ತಕಂಕಣ ನಲಿವುತ ಮದುವಳಿಗೆ ಮುತ್ತಿನಾರುತಿ ಬೆಳಗಿರೆ (ಜೋಳಿಗ. ೦೩). [ಪುತ್ತಳಿ (=ಪುತ್ತಲಿ) + ಬಣ್ಣ]

**ಪುತ್ತಳಿಬೊಂಬೆ** (ನಾ). ಚಿನ್ನದ ವಿಗ್ರಹ : ಕೌಶಿಕಾದೇವೀ ಪುತ್ತಳಿಬೊಂಬೆ ಯಂದದಿ ತೊಳಗಿದಳು ತಾನತ್ಯಂತಲಾವಣ್ಯದಿಂದ (ಕೇಶಿಚರಿತ್ರ. ೪೬).

[ಪುತ್ತಳಿ (=ಪುತ್ತಲಿ) + ಬೊಂಬೆ]

Δ **ಪುತ್ತಟಿ** 'ಪುತ್ಥಳಿ' ನೋ.

Δ **ಪುತ್ತಟಿಗೆ** 'ಪುತ್ಥಳಿಕೆ' ನೋ.

**ಪುತ್ತಾರು** (ನಾ). ಗೌರವಸೂಚಕವಾದ ಒಂದು ವಸ್ತು : ಸಾಧಾರಣ ಬಿರುದುಗಳು . . . ಪಂಚದೀವಟಿಗೆ, ಪೆಂಡ್ಯ, ಪಾದುಕೆ, ಪುತ್ತಾರು, ಅಂಬಾರಿಕುಳ, ಹಡಪ (ಗುರುದ. ೦೦). [ ? ]

**ಪುತ್ತಿಕೆ** (ನಾ). ೧. ಒಂದು ಬಗೆಯ ದುಂಬಿ : "ಪತಂಗಿಕಾ, ಪುತ್ತಿಕಾ-೨ ಹೆಣ್ಣುಪತಂಗದ ಹುಳುವಿಗೂ, ಈಚಲುಹುಳಕ್ಕೂ, ದೊಡ್ಡ ಜೇನು ನೊಣಕ್ಕೂ ಹೆಸರು" (ಸಿದ್ಧಾಂತಿ. ೦೬೦). ೨. ಬಿಳೀಇರುವೆ ; ಗೆದ್ದಲು ; ಒರಲೆ. ೩.=ಪುತ್ತಿಗೆ. [ಸಂ. ಪುತ್ತಿಕಾ]

**ಪುತ್ತಿಗೆ** (ನಾ). ಬೊಂಬೆ ; ವಿಗ್ರಹ : "ಪುತ್ತಿಗೆನೆ ಪುತ್ರಿಕೆಯು" (ಕರ್ಣಾಕ. ೩೮); ಪುತ್ರಿಕಾ—ಪುತ್ತಿಗೆ (ಕಮುದ. ೨೬೦ ಕೃಯೋ). [< ಸಂ. ಪುತ್ರಿಕಾ]

**ಪುತ್ತಿಡು**, ಹುತ್ತಿಡು (ಕ್ರಿ). ಹುತ್ತವನ್ನು ಕಟ್ಟು : ಮೆಯ್ಯ ಮೇಗ್ ಕೊರಲ್ಗೆ ಪುತ್ತಿಡೆ ಪರ್ಬಿದ ಬಳ್ಳಿ ಸುತ್ತಲುಂ ಸೊಗಯಿಸೆ . . . ಜಾನಿಸುತ್ತಲದೆ ನಿಂದನೊರ್ವ ಸವಣಂ (ಆಕ್ಕಾಕಾ. ೨೨೬); ಒಱಲೆ ತಗುಳ್ದು ಪುತ್ತಿಡುವುದಯ್ದೆ . . . ಮುನೀಂದ್ರನ ನಿಶ್ಚಲಾಂಗದೊಳ್ (ಚಿಕ. ೨-೦೨೨). **ಹುತ್ತಿಡು** : ಗುಡುಗು ಬಿಡದಲೆ ಮೊಳಗೆ ಹುತ್ತಿಡಲೊಱಲೆ ಮಾಳದ ಬೆಕ್ಕು ಪೊಱಲುತಿರೆ (ಕೌತಿಪಾ. ೦೪-೩). [ಪುತ್ತು₁+ಇಡು₁]

**ಪುತ್ತು₁**, ಪುತ್ತ, ಹುತ್ತ, ಹುತ್ತು (ನಾ). ೧. ಗೆದ್ದಲುಗಳು ಕಟ್ಟುವ ಮಣ್ಣಿನ ಗೂಡು ; ಹಾವು ವಾಸಿಸುವ ಗೂಡು : ಕೊಲ್ಲಿಂ ಬಿಸುಡಾಯುಧವಂ ಪುಲ್ಲಂ ಕರ್ಚೀಱು ಪುತ್ತಂ (ಕಜಿಪು. ೩-೨೦೦) ; ಮಡಗಿಡಲೆಂದು ಪುತ್ತಿನೊಳಗೊಯ್ಯನೆ ಕುತ್ತಿದ ಕಯ್ಯನಾಗಳಾಗಳೆ . . . ಮಹೋರಗನೆಯ್ದೆ ಪಲ್ಗಳಿಂದೊಡೆ ಕಿಡಿಮೀಟ್ ನೆತ್ತರೊಱದುರ್ಗೆ ಕೊಂಡುದು ತತ್ಪ್ರಮುಖಯಂ (ಅಜಿಪು. ೨-೬೦) ; ಬೆರಲುಂ ಕರ್ಚುವ ಪುತ್ತಂ

**ಪೊಂಗುಪ್ಪೆ** (ನಾ). ಚಿನ್ನದ ಜಾಡಿ ; ಬಂಗಾರದ ಹೂಜಿ : ಪರಿಮಳಿಪ ಸೀತಳೋದಕವ ಪೊಂಗುಪ್ಪೆಯೊಳು ತುಂಬಿಡುತ್ತ (ಶಶಕೋ. ೦೯-೦೬).
[ಪೊಂ (< ಪೊನ್) + ಕುಪ್ಪೆ₁ (< ಕುಪ್ಪಿ₁)]

**ಪೊಂಗುಬ್ಬಿ** (ನಾ). ಚಿನ್ನದ ಗುಬ್ಬಚ್ಚಿ,–ಗುಮ್ಮಟ : ಅಂಗದೊಳ ಗಮರ್ದ ಬಣ್ಣಬಗೆಗಳ ಬೆಳ್ಪೊಂಗುಬ್ಬವರಿಗೆಯಂ ತೊಡೆ ಚಾಟು ಗೊಳುತೆ (ಶಂಕ. ೯೯-೩೦). [ಪೊಂ (< ಪೊನ್) + ಗುಬ್ಬಿ₁]

**ಪೊಂಗುರು**, ಪಿಂಗುರು, ಪೆಂಗುರು, ಹೆಂಗುರು, ಹೊಂಗರಿ₂, ಹೊಂಗುರು (ನಾ). ಕೊಕ್ಕರೆಜಾತಿಗೆ ಸೇರಿದ ಒಂದು ಬಗೆಯ ಪಕ್ಷಿ : ಕೋಗಿಲೆ ಚಾದಗೆ ಪೋದಗೆ . . . ಕಾಗೆ ಪೊಣಾರ್ವಕ್ಕಿ ಪೊಂಗುರು ಗೂಗೆ ಮುಖಂದಂ ಬಲಾಕಿ ಲಾವುಗೆ ಸೇನಂ (ಕಾವ್ಯಾ. ೦೦೯೯ ಕೂರ್ಮ). **ಪಿಂಗುರು** : ಪೊಣಾರ್ವಕ್ಕಿ ಪಿಂಗುರು[ಪಾಠಾಂ. ೧] ಗೂಗೆ ಮುಖಂದ ಬಳಾಹಕ (ಸೂಕ್ತಿಸು. ೩-೦೯೯). **ಪೆಂಗುರು** : ಗಿಳಿ ಪುರುಳಿ ಪೆಂಗುರು[ಪಾಠಾಂ. ಪಿಂಗುರಿ] ಕೀರಂಡವಾಂಡೆ ಮೊದಲಾಗೊಡೆಯ ಗಗನಚರಂ ಪಂಚೇಂದ್ರಿಯಂ ಗಳುಮಾಗಿ (ಶಬ್ದಾಶಾ. ೯೬-೯). **ಹೆಂಗುರು** : ಬಾಸಾಡಿ ಪೆರ್ವಕ್ಕಿ ಹೆಂ[ಪಾಠಾಂ. ಹಿಂ]ಗುರು ಕಾಕಂ . . . ಇಕರ್ಗಾ ತದ್ವನಾಗೌಧದೊಳ್ (ಶಾಂತಿ. ೩-೭೯); ಕಾಕಂ ಬಕಂ ಕೊಂಚೆ ಹೆಂಗುರು . . . ಚಾತಕಮವಿರ್ಗಂ ತತ್ತರು ವ್ರಾತದೊಳ್ (ಚಂದ್ರಪ್ರ. ೯-೯೬); ಪಾರಾವತಂ ಹೆಂಗುರು ಟೀವಂ ಟಿಟ್ಟಿಭಂ . . . ತದ್ವನಾಂತಸ್ಥ ಮಿರ್ಗಂ (ಶಂಕ. ೩-೩೩). **ಹೊಂಗರಿ₂** : ಹೊಂಗರಿ ಚರಣಾಯುಧಂ ಗಿಡುಗ ಗೀಜಗನಾ ಗಿಳಿ ಕಾಡ ಗುಬ್ಬಿಗಳ್ ಬರುತಿರೆ (ಶಬ್ದಾಶಾ. ೬-೨೦೩). **ಹೊಂಗುರು** : ಹೊಂ[ಪಾಠಾಂ. ಹೆಂ]ಗುರು ಚರಣಾ ಯುಧಂ ಶಕುನಿ . . . ತಿತ್ತಿರಿ ಗಿಡುಗಂಗಳೆಂಬ ಖಗವೃಂದದಿನಲ್ಲಿಯರಣ್ಯ ಮೊಪ್ಪುಗುಂ (ಗಿರಿಜಾ. ೦-೭೯ ; ಕುಲ್ಗಾ. ೩-೦೯೦ ನೋ) : ಹರಡೆ ಹಸುಬ . . . ಹೊಂಗುರುವಕ್ಕಿಯಿಸೆದವಂದಲ್ಲಿ (ಶ್ರೀಪಾ. ೬-೦೬).
[<ಪ್ರಾ. ಪೋಕ್ಖರ./ಸಂ. ಪುಷ್ಕರ./ತೆಲು. ಪೆಗ್ಗುರು, ಬೆಗ್ಗುರು]

**ಪೊಂಗುರುಜು** (ನಾ). ಬಂಗಾರದ ಮಂಟಪ : ಕೇರಿಕೇರಿಯಲಿ ಪನ್ನೀರ ಚಳಯ ರನ್ನದ್ದೋರಣ ಪೊಂಗುರುಜುಗಳು ಮೇರೆಯಿಲ್ಲದ ಕಾಂತಿ ವಿಡಿದುವು (ಕಂಶಕ. ೨೩-೫೩). [ಪೊಂ (< ಪೊನ್) + ಕುರುಜು]

**ಪೊಂಗುಲ** (ನಾ). ೧. ಚಿನ್ನದ ಕೆಲಸ ಮಾಡುವವರ ಕುಲಕ್ಕೆ ಸೇರಿ ದವನು ; ಅಕ್ಕಸಾಲಿಗ : ಕಡೆಕೊಳಂದ ಮಣ್ಣಿಗಪ್ಪೊಂಗುಲಂ ಕೊಡ ಲಿಯುಂ ಬಲ್ಲಸಿಯು ಕಮ್ಮಾರಂ ಮುಟ್ಟುಗೆರೆಯಿಡೊಡೆಮೆಂ ಒದಲವೋಲೆಯಂ ಮುಚ್ಚುಳಂ (ಪ್ರಕಾ. ೦೯೩೯, ೩೬-೨೨ ; ಸು. 11ನಯ ೬). ೨. ಒಬ್ಬಾತನ ಹೆಸರು : ಸಾಕ್ಷಿ ಕೂಡಲೂರ್ ಪೊಂಬ್ಗುಲರು ಎಳ್ಳಡಿಯರು ಬದಿರಿಯರುಮ್ (ಪ್ರಕಾ. ೦೯೦೬, ೦೩-೯ ; 726). [ಪೊಂ (< ಪೊನ್) + ಕುಲ]

**ಪೊಂಗುಲ್ಲಟ್ಟಿ** (ನಾ). ಒಂದು ಪ್ರದೇಶದ ಹೆಸರು (?) : ತನ್ನಣ ಕೊನೆದು ಪೊನ್ನುಲ್ಲಟ್ಟಿಯು ತೆನ್ನೊಳ್ಳೆ ತನ್ನಣಸೀಮೆ (ಪ್ರಕಾ. ೦೯೨೬, ೦೨೨-೩೦ ; 808 ?). [ ? ]

**ಪೊಂಗುಳ** (ನಾ). ಚಿನ್ನದ ಕುಳ,–ಗುಳ : ಪೊಂಗುಳಂಗಳಂ ಕಬ್ಬಿಣದ ಗುಳಮೆಂದು ಕೈಯಲೀಯೆ (ಶಕುಂ. ೬-೩-೨).
[ ಪೊಂ (< ಪೊನ್) + ಕುಳ₁ (< ಕುಟು) ]

**ಪೊಂಗುಳಿಗೆ** (ನಾ). ಚಿನ್ನದ ಗುಳಿಗೆ : ಪೊಂಗುಳಿಗೆಗಳ ಪರಿಯೊಳಂಗು ಷ್ಪಂಗಳೊಪ್ಪುಗು ನಿಮಿರ್ದ ಕೋಮಳದಂಗುಳಂಗಳು ಮೆಚಿಪವೊಡುಗನ ದೊಲು ಪದನಪಾಳಿ (ಶಕುಂ. ೯-೦೬). [ ಪೊಂ (< ಪೊನ್) + ಗುಳಿಗೆ₁]

**ಪೊಂಗುಱುವ** (ನಾ). ಚಿನ್ನದ ದ್ವೀಪ : ಪಾಲ್ಗಡಲೊಳಗಣ ಪೊಂಗು ಱುವಂ ಗಡಮೆನಿಸಿದುದಮರನಗಮಿದೇನಚ್ಚರಿಯೋ (ಶರಶಜಾ. ೦೨-೩೩).
[ ಪೊಂ (< ಪೊನ್) + ಕುಱುವ₁ ]

**ಪೊಂಗೆಜ್ಜೆ**, ಹೊಂಗೆಜ್ಜೆ (ನಾ). ಚಿನ್ನದ ಗೆಜ್ಜೆ : ಮಧುಪಾನದಿಂ ಸೊಕ್ಕಿದ ಮುತ್ತುಂಚಿಯ ಧ್ವನಿಗಳಂತೆ ಜರ್ಝರವಾದ ಪೊಂಗೆಜ್ಜೆಗಳ ಪೆಲ್ಲುಲಿ ಯೊಳಂ (ಕಾಶಂಕು. ೬೬) ; ಪೊಂಗೆಜ್ಜೆಯುಲಿಪ ನೆಲಸುಗ್ಗಡಿಸುತ್ತಂದಸೆಯು . . . ನಡೆತರುತಿರ್ದಳ್ (ಗಿರಿ. ೩-೦೬೬) ; ಪೆಂಜಯಲೊಡ್ಡಾಣದ ಪೊಂಗೆಜ್ಜೆಗಳ ದನಿ . . . ಪಾಡುತ ಪಿರಿದು ಸಂಭ್ರಮದ ಬೀಜದರು (ಕಂಶಕ. ೨೦-೦೦೦). **ಹೊಂಗೆಜ್ಜೆ** : ಹೊಂಗೆಜ್ಜೆಗಳ ಮುಖಾರದ ಘಂಟೆಗಳ . . . ಮದ್ರುಮಾಯುಧಾರೆಗಳಸೆದುದು ಭದ್ರಮಂಟಪ (ಉಚ್ಛಾ. ೦೨-೦೨) ; ಪುಷ್ಪಪಾದಗಳ ಹೊಂಗೆಜ್ಜೆಗಳ್ ಘಲಿರೆನೆ ದಟ್ಟಡಿಯಿಡತೊಡಗಿದನು (ಕೋಶಕ. ೦೬-೬೨) ; ಸುಗತಿಗುಲಿವ ಹೊಂಗೆಜ್ಜೆಗಳ ರಭಸದಿಂದೆಸೆವ ನಿರ್ಮಲ ವಾಜಿಯುಂ ಸುವೇಗಂ ತುಡು ನಿಲಿಸಿದಂ (ಕೃಪಾ. ೩-೦೦).
[ ಪೊಂ (< ಪೊನ್) + ಗೆಜ್ಜೆ₁ ]

**ಪೊಂಗೆಲಸ**, ಹೊಂಗೆಲಸ (ನಾ). ಚಿನ್ನದ ರೇಖಿನ ಕೆಲಸ : ಪೊಸ ಪೊಂಗೆಲಸದ ಯೂಪಸ್ತಂಭಗಳ ಭಂಗಿಯನನುಕರಿಸಿದುವುಳ್ಳೊಡೆಯಾ ಕದಲ ದಳಾಂಬಿಕೆಗೆ (ಜಯಲಾ. ೩-೩೦). **ಹೊಂಗೆಲಸ** : ತೀವಿದವು ಹೊಂಗೆಲಸ ಗತಿಯಲಿ ಲೋವೆಗಳು (ಉಪ್ಪಾ. ೦೨-೯) ; ಹೊಂಗೆಲಸದ ಪೊಚ್ಚಪದುಮ ವಿಟ್ಟರದೊಳು ಮಂಗಲಮಜ್ಜನಗೆಯ್ದು (ಶೋಭಕ. ೨೦-೩).
[ ಪೊಂ (< ಪೊನ್) + ಕೆಲಸ ]

**ಪೊಂಗೇದಗೆ**, ಹೊಂಗೇದಗೆ (ನಾ). ಒಂದು ಬಗೆಯ ಕೇದಗೆ ; ಹೊಂಬಣ್ಣದ ತಾಳೆಹೂವು : ಮಗಮಗಿಪ ಜಾದಿ ಪೊಂಗೇದಗೆ ಮಲ್ಲಿಗೆ ಯಂಬ ಪಲವು ಪೂಮಾಲೆಗಳಂ ಬಗೆಯಱದೋಲಗಿಪುದು ಮಾಲೆಗಾಱನಂ ಪೋಲ್ಪುದಗ್ರಮಾಲ್ಯಮಹೀಜಂ (ಅಂಭ. ೩-೫೬). ಸೋಮರ್ಗಡಿಯಿಂ ಸೂಸಿದ ಪೊಂಗೇದಗೆಯ ಕುತ್ತುಂಗಱ್ (ಕಂಶಕ. ೨-೦೩ ಶ) ; ವನವ ನಱೆ ಬಳಸಿ ಕಂಗೊಳಿಪ ಪೊಂಗೇದಗೆಗಳೊಪ್ಪಿದುವು (ಶಂಕ. ೯೩-೦೬). **ಹೊಂಗೇದಗೆ** : ಕುರವಕದ ವಕುಳದೆಳೆಗೌಂಗಿನ ಹೊಂಗೇದಗೆಯ ಬಳಸಿ ನೊಳಂ . . . ಲತಾಮಂಟಪಗಳ್ ಮನಗೊಳಿಪುವು (ಕಾದಂಕು. ೯೭) ; ಈಟಿ ಹೊಂಗೇದಗೆಯ ಕಂಚಿಯ . . . ಕಿತ್ತೊರಸಿ ಹುಡಿಹುಡಿ ಮಾಡಿದನು (ಕೌಶಿಕಾ. ೦೦-೨೦) ; ಹೊಂಗೇದಗೆಯೆಸಳಂ ಮಸಿಸಿ (ಜಯಲಾ. ೨-೦೯).
[ಪೊಂ (< ಪೊನ್) + ಕೇದಗೆ]

**ಪೊಂಗೊಡ**, ಹೊಂಗೊಡ (ನಾ). ಚಿನ್ನದ ಕೊಡ ; ಸ್ವರ್ಣಕುಂಭ : ಪೊಂಗೊಡಂ ತಮಾಳಪಲ್ಲವದೊಳೆ ಮುಚ್ಚಿವಂದದೊಳೆ ಚೂಚುಕ ಮಣಂತುದು ಕರ್ಪನಾಳೀಯಾ(ಕಂಶಕ. ೦-೦೨೩) ; ಬೆಳೆಯ ಸಾಸವೆ ಪೊಂಗೊಡ ನಷ್ಟಶೋಭೆ ಕನ್ನಡಿ . . . ಎಲ್ಲಡೆಗಳೊಳಗ್ಗಿಗಳ್ಗಿಗಧಿಕಂ ಪಡೆದತ್ತು ಜನಾನು ರಾಗಮಂ (ಕಾವ್ಯಾಶ. ೬೩೨) ; ಕೀಲಾಲಮನಱೆ ಸಾಸಿರಸೂಳ್ಪೊಂಗೊಡನಿಂ ತಂದು . . . ಅಭಿಷೇಕಂಗೆಯ್ದಂ (ಉದ್ಯೋ. ೩-೯೩). **ಹೊಂಗೊಡ** : ತೊಳೆದ ಹೊಂಗೊಡದೊಳಗ್ಗಣೆಗಳಂ ತುಂಬಿ ತಂದಿಳುಹಿದರು ಕಾಮಿನಿಯರು (ಜಕಾ. ೩-೫೭) ; ಹೊಂಗೊಡನ ಹಿಡಿದೈತರಲಿ ನಾರಿಯರು (ಉಪ್ಪಾಕ್ರೀ. ೦-೩೬) ; ಮಜ್ಜನಕುಪ್ಪಜಲ ಹೊಂಗೊಡದಲಿಳುಹಿದವು (ಕೋಶಕ. ೩-೩-೩೯). [ಪೊಂ (< ಪೊನ್) + ಕೊಡ₂]

**ಪೊಂಗೊಡೆ** (ನಾ). ಚಿನ್ನದ ಛತ್ರಿ ; ಬಂಗಾರದ ಸತ್ತಿಗೆ : ಶಕ್ರಗೆತ್ತಿದ ಮಣಿಕಗೊಡೆ ಪೊಂಗೊಡೆ ಬೆಳ್ಗೊಡೆಯೆನಿಸಿದುದು ಶಶಿಬಿಂಬಂ (ಜಗಂ. ೦೩-೦೦೬) ; ಚೈತ್ರನೆತ್ತಿದ ಪಲವುಂ ಪೊಂಗೊಡೆಗಳೆನಿಸಿ ಪೂತು ಮನಂಗೊಳಿಸಿದುವೆಸೆವ ಕರ್ಣಿಕಾರಕುಜಂಗಳ್ (ಶುಸುಶಾ. ೩-೯೦).
[ಪೊಂ (< ಪೊನ್) + ಕೊಡೆ₂]

**ಪೊಂಗೊಳಗು** (ನಾ). ಪಶುಗಳ ಗೊರಸಿಗೆ ತೊಡಿಸುವ ಚಿನ್ನದ ಆಭರಣ : ಪೊಂಗೋಡು ಪೊಂಗೊಳಗು ಪೊಂಗೆಜ್ಜೆ ಘಂಟೆಗಳು ಪೊಂಗಲಶ ಪೊನ್ನ ಬಾಸಿಗ ತಂದು ವೃಷಭನಂ ಸಿಂಗರಿಸಿ (ಸಿಂಗಿರಾ. ೩-೦೩).
[ಪೊಂ (< ಪೊನ್) + ಕೊಳಗು]

ಬೆಲೆವೆಣ್ಣಳಿಸೆದರ್ (ಳಿರಾಶಾಂ. ೨೬-೪೬). 'ಪುತ್ತುರಿ' ಪರಾ. [ ? ]

**ಪುತ್ತೂರ್** (ನಾ). ಒಂದು ಊರಿನ ಹೆಸರು: ಪುತ್ತೂರಾ ಜೆಟ್ಟಿಮು ಗೊಳಾತ್ತಿಟ್ಟು ಪುತ್ತೂರತ್ತಾಣೆಗೆ ಅಯ್ದೂವುಟ್ಟ ಕಟನಿಯುಂ ಅಯ್ದೂವುಟ್ಟ ತೊಟ್ಟಪ್ಪಟ್ಟುಂ ಕೊಟ್ಟರ್ (ಎಕ್. X. ಕೋಲಾರ. ೨೨೯-೩; ಕ್ರಿ. 750): ಪುತ್ತೂರುಡೆ ಶಿವವಾರವ್ಮಂ . . . ಬಾಳೆ ತೊಟ್ಟಪಟ್ಟು ಬ್ರಹ್ಮದೇಯಂ ಕೊಟ್ಟೊದು (ಎಕ್. X. ಕೋಲಾರ. ೨೩೦-೨; ಕ್ರಿ. ೮೦೦ ?). 'ಹುತ್ತೂರು' ಪರಾ. [ ? + ಊರ್ ]

**ಪುತ್ತೇಱು** (ಕ್ರಿ). (ಯುದ್ಧದಲ್ಲಿ ಸೋತು) ಶರಣಾಗುವುದನ್ನು ಸೂಚಿಸುವುದಕ್ಕಾಗಿ ಹುತ್ತದ ಮೇಲೆ ನಿಲ್ಲು: ಪುತ್ತೇಱಿದನಂ ಕೈದುವನಿತ್ತನನೇರ್ವೆತ್ತನಂ ರಣಾಂಗಣದೊಳ್ ಬೆನ್ನಿತ್ತನನಿಱಿಯಾರ ವೋಘಂ ವುತ್ತೆನಿಸದೆ ತುಟಿಲ ಸಂದ ಜನವುಂ ಜಗದೊಳ್ (ಕಂಕಾ. ೨೪೪-೦೩). [ಪುತ್ತು₁ + ಏಱು₁ (<ಏಱ್₁)]

**ಪುತ್ಥಳಿ**, ಪುತಲಿ, ಪುತಳಿ, ಪುತ್ತಟಿ (ನಾ). ೧. ಬೊಂಬೆ; ವಿಗ್ರಹ; ಮೂರ್ತಿ: ಅರಗಿನ ಪುತ್ಥ[ಕಾಕಾಂ. ತ್ತ]ಳಿಯಾನುರಿಯು ನಾಲಗೆ ಹೊಯಿದು ಮಾತಾಡುವ ಸರಸ ಬೇಡ (ಶಸವ. ೬೬೦ ೮); ಅಱುವು ಮಾಯಣಾಮಾಯದ ಭಕ್ತಿಯೊಳಿಱಿಗಿಸಿದ ಪುತ್ಥಳಿಯವೊಲು ಕಡುಬೆಱಗ ಕೇಣೆಯು ಕೊಂಡು ಮೌನದೊಳಿದ್ದನಾ ವಿದುರ (ಕುವ್ಯಾಉ. ೬-೦೩); ವಾರಿಕಲ್ಲು ಪುತ್ಥಳಿ ಅಪ್ಪುವನೊಡಗೂಡಿದಂತೆ ಮಾಡಿತ್ತನ್ನ . . . ನಿಮ್ಮ ವಚನೋಪದೇಶ (ಅಪಂಲೀ. ೨೦-೧೧). **ಪುತಲಿ**: ೨. ಹಳೆಯ ಕಾಲದ ಒಂದು ಚಿನ್ನದ ನಾಣ್ಯ; ವರಹ: ಇನ್ನೂ ಇತರ ಬಂಗಾರದ ನಾಣ್ಯಗಳು ವಿಶೇಷವಾಗಿದ್ದುವು. ಯಾವುವೆಂದರೆ—೨ ಗಬರು . . . ೧ ಪುತಲಿ (ಶಕ್ರಶಾ. ೧೦೪). **ಪುತಳಿ**: ೧. ನೂಲಿನ ಸಂಬರ ೪೦. ಬಿಳೇದು . . . ಗೌಳಿಗಿತ್ತಿ ಥಾಪ. ಪುತಳಿಥಾಪ. ಚಕ್ರಥಾಪ (ಮುಂಶವ್ಯಾ. ೦೦೦). ೨. ನಾನು ನಿನಗೆ ಎರಡು ಪುತಳಿಗಳನ್ನು ಕೊಡುತ್ತೇನೆ . . . ವೆಚ್ಚ ಮಾಡಿಕೋ (ಮುಂಶಯು. ೩-೨೬೦). ೩. ಚಿನ್ನದ ನಾಣ್ಯಗಳಿಂದ ಮಾಡಿದ ಸರ: ಬಂಗಾರ ಬಂಗಾರ ಅನಲಿಕ್ಕೇನಂ ? ನಾಲ್ಕು ತೊಲೆ ಪುತಳಿ ಅವ. ಆರ ತೊಲೆ ಪಾಟಲಿ ಅವ (ಅಟೋಳ. ೧೧೪). Δ **ಪುತ್ತಟಿ**: ೧. "ಪುತ್ತಳಿಗೆಯೆಂದು ಪುತ್ತಟಿ" (ಕಶಾ. ೬೬-೪೬೮); ಸಿರಿಕಂಡದ ಕೋಟೆಕ್ಕಿಸಱಿಂ ಪುದಿದು ಜಂತದಿಂ ಕಡೆದು ಕಂಡರಿಸಿದ ಪುತ್ತಟಿಯಂತಿರ್ದಳ್ (ಕಬ್ಬಿಗಾ. ೩೧೩); ಲೆಪ್ಪದ ಬೋಂಬೆಯುಸೆರಕಂಬೊಯ್ದೊಪ್ಪಂಬೂಸಿದ ಪುತ್ತಟಿಯಂ ಬೇಱಾಗಿ ತೋಱುಗುಪುಲ್ತೆ (ರಾಮಾಶ್ವ. ೦೧-೨೦).

ಪುತ್ಥಳಿ ಬೊಂಬೆ=ಸುಂದರವಾದ ವಿಗ್ರಹ: ಸಾಧುಸಜ್ಜನರ ಚಿತ್ತದಿ ಹೊಳೆವ ಪುತ್ಥಳಿಬೊಂಬೆ (ಪುರಂದ. ೧-೨೦೧-೩). ಪುತ್ಥಳಿಯು ಸರ=ಚಿನ್ನದ ನಾಣ್ಯಗಳಿಂದ ಮಾಡಿದ ಸರ: ಅದರಲ್ಲಿನ ವಸ್ತು ಒಡವೆಗಳು . . . ಬಂಗಾರದ ಕೈಬಳೆ, ಪುತ್ಥಳಿಯ ಸರ, ಗುಂಡಿನ ಟಿಕ್ಕಿ. ತೋಳಬಂದಿ. ಚಿಂತಾಕು (ಮುದ್ದು.ಹ. ೨೦). [<ಸಂ. ಪುತ್ತಲೀ]

**ಪುತ್ಥಳಿಕೆ**, ಪುತ್ತಳಿಗೆ. ಪುತ್ತಟಿಗೆ (ನಾ). = ಪುತ್ತಲಿಕೆ: ತಳತಳಿಸಿ ತೊಳಗುವ ಪಳುಕಿನ ಪುತ್ಥಳಿಕೆಯಂತೆ ಕರಮೆಸೆದಿರ್ದಳ್ (ಕಾದಂಪೂ. ೬೬೬). **ಪುತ್ತಳಿಗೆ**: "ಪುತ್ತಳಿಗೆಯೆಂದು ಪುತ್ತಟಿ" (ಕಶಸಾ. ೬೬-೪೬೬); ದೂಳಿಗೊಂಡ ಪುತ್ತಳಿಗೆ ಮಂಜುಗೊಂಡಬ್ಜನಿ ಕಾರ್ಮುಗಿಲೊಳಕೊಂಡಳವೆಱಿಯೆನೆ ಮೃಗಲೋಚನೆ ಸೀತೆ ನಾಡೆ ಪಾಡಟಿದಿರ್ದಳ್ (ಕಂರಾಮಾ. ೧೧-೬೩): ಕತ್ತುರಿಯ ಬೊಟ್ಟಿ ಪೋಣಿದು ಪುತ್ತಳಿಗೆಯೊ ನೀಳವಣಿಯ ತೋಳ್ಗವ್ಪುದೊಳೇಂ ತೆತ್ತಿಸಿದುದೆನಿಸಿ ಧರೆಯಂ ಪೊತ್ತುದು ಭುಜವಜ್ರಕೋಟಿ ಸಿರಿವಲ್ಲಭನಾ (ಎಕ್. VIII. ನಗರ. ೩೬-೯೬: 1147 ; ಶಾಶಮುಂ. ೩೦೦ ನೋ). Δ **ಪುತ್ತಟಿಗೆ**: "ಪಾಂಚಾಲಿಕಾ. ಪುತ್ರಿಕಾ—ಈ ೨ ಪುತ್ತಟಿಗೆ" (ಹರಾಯು. ೬೦-೩೩೯). [<ಸಂ. ಪುತ್ತಲಿಕಾ]

**ಪುತ್ರ** (ನಾ). ೧. ಮಗ; ಕುಮಾರ: "ನಂದನ ತನುಜನ್ಮ ತೋಕ ಸುತ ಪುತ್ರ ತನೂಭವ ಸೂನುನಾಮಕಂ ತನಯಂ" (ಷಟ್ಕೋ. ೩೪-೦೬): ಇಳಾಪ್ರಭುವೊಗೆದನುದಿತ ಕಾಯಪ್ರಭೆಯೊಗೆದಿರೆ ದಳಿತಶತ್ರುಗೋತ್ರಂ ಪುತ್ರಂ (ಕಂಶಾ.೦-೦೨೬); ಪುತ್ರಕಳತ್ರ ಪಂಗ್ರಹಗಾತ್ರಧನೈಶ್ವರ್ಯವೆಂಬಿವಾರ್ಗವುನಿತ್ಯಂ (ಶಕ್ರ. ೦೩-೨೬). ೨. (ಪ್ರಾಣಿಗಳ) ಮರಿ; ಪೋತ. ೩. ಚಿಕ್ಕವರನ್ನು ಪ್ರೀತಿಯಿಂದ ಸಂಬೋಧಿಸುವಾಗ ಬಳಸುವ ಶಬ್ದ. ೪. (ಸಮಾಸದ ಕೊನೆಯಲ್ಲಿದ್ದಾಗ) ಚಿಕ್ಕದು, ಸಣ್ಣದು ಎಂಬರ್ಥದಲ್ಲಿ ಬರುವ ಶಬ್ದ. ೫. [ಜ್ಯೋತಿ] ಜನ್ಮಕುಂಡಲಿಯಲ್ಲಿ ಐದನೆಯ ಸ್ಥಾನ: 'ಪುತ್ರಮಂದಿರ' ಪರಾ. [ಸಂ.]

**ಪುತ್ರಂಜಿ** 'ಪುತ್ರಂಜೀವಿ' ನೋ.

**ಪುತ್ರಂಜೀವ** (ನಾ). ಒಂದು ಬಗೆಯ ಸಸ್ಯ; P ಇದರ ಹೂವು ಅಥವಾ ಬೀಜಗಳಿಂದ ಮಾಡಿದ ಹಾರವನ್ನು ಧರಿಸುವುದರಿಂದ ಮಕ್ಕಳು ಆರೋಗ್ಯವಂತರಾಗಿ ಬದುಕುವರೆಂಬ ಭಾವನೆ ಇದೆ: ಪುತ್ರನಿಗೆ ಜೀವದಾನ ಮಾಡುವ ಗುಣ ಇದರ ಬೀಜಗಳಿಗಿವೆಯೆಂಬ ನಂಬಿಕೆ ಅವರಲ್ಲಿ ಊರಿತ್ತು. ಆದ್ದರಿಂದ ಮರಕ್ಕೆ ಪುತ್ರಂಜೀವ ಎಂದು ನಾಮಕರಣ ಮಾಡಿದರು (ಹಸುಹೂ. ೩೦). [ಸಂ.]

**ಪುತ್ರಂಜೀವಿ**. ಪುತ್ರಂಜಿ. ಪುತ್ರಜೀವಿ (ನಾ). = ಪುತ್ರಂಜೀವ: "ಪುತ್ರಂಜೀವಿ, ಮೆಣಸಿನ ಕಾಳೆ" (ಸಸ್ಯ. ೦೦೦); (ವೃಶಾ. ೬೩-೦೩೩). **ಪುತ್ರಂಜಿ**: ಪುತ್ರಂಜಿ—ಮಧ್ಯಮ ಆಕಾರದ್ದು...ಇದರ ಕಾಯಿಗಳನ್ನು ಹುಡುಗರ ಕೊರಳಲ್ಲಿ ಕಟ್ಟಿದರೆ ಬೇನೆ ಬರುವುದಿಲ್ಲವಂತೆ. ಅದರಿಂದ "ಪುತ್ರಜೀವಿ" ಎಂಬ ಹೆಸರು ಬಂದಿದೆ (ಕಾಗ. ೪೩). **ಪುತ್ರಜೀವಿ**: "ಪುತ್ರಜೀವಕಂ—ಪುತ್ರಜೀವಿ" (೬ಶಧಿ. ೦೦೦); ಪುತ್ರಜೀವಿಯು ಮಣೆಯಂ ಸೀಗೆಕಾಯ ರಸದಲ್ಲಿ ಅರೆದು ಅಲ್ಪ ಕಾಸಿ ಕುಡಿಯಿಸಲು ಗುರುಗಂಜಿಯ ವಿಷ ಮಾಣ್ಗುಂ (ಶವ್ಯ. ೬೦): ಪುತ್ರಜೀವಿ ಬೀಜದ ತಿರುಳು ತಣ್ಣೀರಿನಲ್ಲಿ ಅರೆದು ನಸ್ಯ. ಅಂಜನ. ಪಾನ. ಲೇಪನಗಳಂ ಮಾಡಿಸಲು ಸಕಲವಿಷ ದೋಷಂಗಳು ಪರಿಹರವಹವು (ವೈದ್ಯಶಾ. II. ೦೬೬). [<ಸಂ. ಪುತ್ರಂಜೀವ]

**ಪುತ್ರಂಬಡೆ** (ಕ್ರಿ). ಮಗನನ್ನು ಪಡೆ; ಪುತ್ರನನ್ನು ಹೊಂದು: ಪುತ್ರಂಬಡೆದೆನೆ ಪರಮಪವಿತ್ರೀಕೃತಭವಸುಖಾಮೃತಕ್ಕಾನೀಗಳ್ ಪಾತ್ರಂಬಡೆದಂ (ಸುಕುಮಾ. ೧೦-೨೪). [ಪುತ್ರ + ಪಡೆ₁]

**ಪುತ್ರಕ** (ನಾ). ಮಗ: ಕೌರವರು ತಾಮಸರು ಸುತರಲ್ಲವವರೆನಗೆ... ಅತಿಪ್ರೇಮದಿಂ ಪುತ್ರಕನು ನೀನೆನಗೆ (ಶಿಮ್ನಸ್ತ್ರೀ. ೨-೪೪). [ಸಂ.]

**ಪುತ್ರಕಾಮೇಷ್ಟಿ** (ನಾ). ಮಗನನ್ನು ಪಡೆಯಬೇಕೆಂಬ ಉದ್ದೇಶದಿಂದ ಮಾಡುವ ಯಜ್ಞ: ಸಂತತಿಯ ಸೌಭಾಗ್ಯಸಿರಿಯ ನಿಕಾಂತಕಿದೆಲಾ ನಿನಗೆ ಸಪ್ತಸುತಂತು ನಿರುಪಮ ಪುತ್ರಕಾಮೇಷ್ಟಿ ಪ್ರಸಿದ್ಧಕದ (ಕುಮಾ. ೧-೪-೦೦); ಅಯೋಧ್ಯಾಪುರದೊಳವತರಿಸಿದಂ ಮಹಾವಿಷ್ಣು ಸುತರೂಪದಿಂ ರಾಮಾಭಿಧಾನದೊಳ್ ಪುತ್ರಕಾಮೇಷ್ಟಿಯಿಂ ದಶರಥಂಗೆ (ಕೃಚಾ. ೦೪-೦); ಗುರುವಸಿಷ್ಠಂ ಪುತ್ರಕಾಮೇಷ್ಟಿಯಂ ಪೇಳ್ದು...ಯಜ್ಞಶಾಲೆಗೆ ನಡೆದನಲ್ಲಿಂದ (ತ್ರೀರಾಮಾ. ೪-೨೩೪). [ಸಂ.]

**ಪುತ್ರಕಾಮ್ಯ** (ನಾ). ಮಗನನ್ನು ಪಡೆಯಬೇಕೆಂಬ ಅಪೇಕ್ಷೆ,—ಆಸೆ: ನಿನ್ನನುಗ್ರಹವಾದುದಾದರೆ ತದ್ವಿಧಾನದಲಾದರಿಸುವೆನು ಪುತ್ರಕಾಮ್ಯವನು (ಕುವ್ಯಾಆ. ೪-೩೪). [ಸಂ. ಪುತ್ರಕಾಮ್ಯಾ]

**ಪುತ್ರಘಾತಿನಿ** (ನಾ). ಮಗನನ್ನು ಕೊಲ್ಲುವವಳು; ಶಿಶುಹತ್ಯೆ ಮಾಡುವವಳು: ತಡೆ, ಪುತ್ರಘಾತಿನಿ! ಅದನ್ನು ಕೊಲ್ಲಬೇಡ! (ಹರಾ. ೨). [ಸಂ. ಪುತ್ರಘಾತಿನೀ]

**ಪುತ್ರಜೀವಿ** 'ಪುತ್ರಂಜೀವಿ' ನೋ.

**ಪುತ್ರದಾತ್ರಿ** (ನಾ). (ಬಂಜೆತನವನ್ನು ನಿವಾರಿಸುವುದೆಂದು ನಂಬಲಾದ) ಒಂದು ಬಗೆಯ ಔಷಧೀ ಸಸ್ಯ ; ಶ್ವೇತಪುಷ್ಪಿಕೆ : "ವಾತಾರಿಃ—ಗಂಟು ಭಾರಂಗಿ, ಸೂರಣ, ಬಿಳಿಯಹಾಡಲ, ಪುತ್ರಧಾ[ದಾ]ತ್ರೀ" (ಓಷಧ. ೦೫೦); "ವೇಶೀಜಾತ-ಪುತ್ರಧಾ[ದಾ]ತ್ರಿ" (ಓಷಧ. ೦೫೭). [ಸಂ. ಪುತ್ರದಾತ್ರೀ]

**ಪುತ್ರದೆ** (ನಾ). ಒಂದು ಬಗೆಯ ಔಷಧೀಸಸ್ಯ; ವಂಧ್ಯಾಕರ್ಕೋಟಕಿ : "ದೃಷ್ಟಿಪ್ರಭಾ—ಪುತ್ರದೆ" (ಓಷಧ. ೬೯). [ಸಂ. ಪುತ್ರದಾ]

**ಪುತ್ರದೋಹದ** (ನಾ). ಗಂಡುಮಗುವನ್ನು ಪಡೆಯಬೇಕೆಂಬ ಬಯಕೆ ; ಗಂಡುಮಗುವು ಹುಟ್ಟಬೇಕೆಂದು ಉಂಟಾಗುವ ಹಂಬಲ : ಹರಿಹರದೇವಿಗೆ ಪುತ್ರದೋಹದ [ಪಾಠಾಂ. ಮೋಹವು]ಬಂದು ಭರದಿಂದ ಪುಟ್ಟಿತೆದೆಯೊಳು (ಕುಮಾರಾಂ. ೭ ಸಂಧಿ). [ಸಂ.]

**ಪುತ್ರದೋಹಳ** (ನಾ). =ಪುತ್ರದೋಹದ : ತಮ್ಮ ಮೆಯ್ಯಾಣ್ಮವಿನ ವಿರ್ಬರುಂ ನಮೆದರೇನವರ್ಗಾದುದೊ ಪುತ್ರದೋಹಳಂ (ಶಂಕರಾ. ೦-೦೩೫); ತಾನುಂ ಪುತ್ರದೋಹಳಕಾತ್ರೂಹಳೆಯುವಾಗೆ (ಮಲ್ಲಿಕಾ. ೩-೦೦೫). [ಸಂ. ಪುತ್ರದೋಹಲ]

**ಪುತ್ರದೌಹೃದ** (ನಾ). = ಪುತ್ರದೋಹದ : ಇವು ಮೊದಲಾಗೆ ಪಲವುಂ ಪುತ್ರದೌಹೃದಂಗಳಂ ಪೆಂಬಲಿಸುತ್ತುಮಿರ್ದಳ್ (ಪುಷ್ಪ. ೩-೯೯ ವ). [ಸಂ.]

**ಪುತ್ರಮಂದಿರ** (ನಾ). [ಜ್ಯೋತಿ] ಜನನಕುಂಡಲಿಯಲ್ಲಿ ಐದನೆಯ ಸ್ಥಾನ ; ಜಾತಕನಿಗೆ ಪುತ್ರಪ್ರಾಪ್ತಿಯನ್ನು ಸೂಚಿಸುತ್ತದೆಂದು ನಂಬಲಾದ ಸ್ಥಾನ : ಮೇಣ್ ಬರೆ ತದ್ದ್ವಿತೀಯಮೆನಿಪಾ ದ್ರೇಕ್ಕಾಣಮಾ ಪುತ್ರಮಂದಿರದೊಳ್ ಮೇಣ್ ಬರೆ ತತ್ತೃತೀಯಮೆನಿಪಾ ದ್ರೇಕ್ಕಾಣಮಾ ಧರ್ಮಮಂದಿರದೊಳ್ ವಾಕ್ಪತಿಯಿರ್ದನೆಂದಱಿಗೆ (ಜಾತಕ. ೨೯-೨). [ಸಂ.]

**ಪುತ್ರವಂತ** (ನಾ). ಗಂಡುಸಂತತಿಯುಳ್ಳವನು. [ಸಂ. ಪುತ್ರವತ್]

**ಪುತ್ರವತಿ** (ನಾ). ಮಗನನ್ನು ಪಡೆದವಳು : ಪುತ್ರವತಿಯಹುದು ಜನ್ಮಾಂತರದ ಪುಣ್ಯಮೈಸಲೆ ಪೆಣ್ಗೆ (ಕೈಮಿಕಾ. ೦೬-೦೯): ಪುತ್ರವತಿಯಾದ ಶಕುಂತಳೆಯನ್ನು . . . ದುಷ್ಯಂತನು ಪರಿಗ್ರಹಿಸಿದನು (ಶಾಕುಂತ. ೦೦೫-೧೨). [ಸಂ. ಪುತ್ರವತೀ]

**ಪುತ್ರವಧು** (ನಾ). ಮಗನ ಹೆಂಡತಿ : ಸೊಸೆ : " ಸ್ನುಷಾ, ಜನೀ, ಪುತ್ರವಧೂಃ, ವಧೂಃ—ಈ ೪ ಸೊಸೆ " (ಹಲಾಯು. ೬೩-೩೫೦). [ಸಂ. ಪುತ್ರವಧೂ]

**ಪುತ್ರವಾತ್ಸಲ್ಯ** (ನಾ). (ಹಿರಿಯರಿಗೆ) ಮಕ್ಕಳ ಮೇಲಿರುವ ಪ್ರೇಮ,– ಅಕ್ಕರೆ : ಎಲೈ ಮಿತ್ರನೆ, ಮಹಾತ್ಮಶ್ರೀಯುಪರಿಗೆ ನಿನ್ನಲ್ಲಿ ಪುತ್ರವಾತ್ಸಲ್ಯವಿರುವುದು (ಶಾಕುಂತ. ೨೯-೧೫); ಮುಪ್ಪಿನ ತಂದೆಯು . . . ಪುತ್ರವಾತ್ಸಲ್ಯದಿಂದ ಆ ದುಃಖವನ್ನು ಮರೆತು ನನ್ನನ್ನು ಸಾಕಿಕೊಂಡಿರಲಾಗಿ (ಚಕಳಾ. ೩). [ಸಂ.]

**ಪುತ್ರವಿಹೀನ** (ನಾ). ಮಗನಿಲ್ಲದವನು ; ಗಂಡುಸಂತಾನವಿಲ್ಲದವನು : ಕುಂಬಿನಿಯೊಳೆಮ್ಮ ಕುಲದೆ ತಿಲಾಂಬುವ ಮುಂದಕಟ ಕುಡುವನಾವನೆ ನುತ್ತುಂ ನಾಂ ಬಿಡೆ ಪುತ್ರವಿಹೀನಂ ಕಂಬನಿದೊಳೆದುಳಿದ ಜಲವ ಪಿತೃಗಳ್ ಪೀರ್ವರ್ (ಶಾಕುಂತ. ೯೮-೧೫೭). [ಸಂ.]

**ಪುತ್ರಸಂತತಿ** (ನಾ). ಗಂಡುಸಂತಾನ : ಗಂಡುಮಕ್ಕಳ ಜನನ : ಗಾಂಧಾರಿ ಗಾದುದು ಪುತ್ರಸಂತತಿ (ಕುಮ್ಮಾರ. ೮-೩೦). [ಸಂ.]

**ಪುತ್ರಸಂತಾನ** (ನಾ). ಪುತ್ರಸಂತತಿ : ಗುರು ವಸಿಷ್ಠಂ . . . ಪುತ್ರಸಂತಾನವಹುದೆಂದು ನಂಬಿಗೆಗೊಟ್ಟು ಸಂತೈಸಿ ಯಜ್ಞಶಾಲೆಗೆ ನಡೆವನಲ್ಲಿಂದ (ಶ್ರೀರಾಮಾ. ೯-೨೪೫) ; ಸ್ಕಂದವರ್ಮನಿಗೆ ಪುತ್ರಸಂತಾನವಿದ್ದಿಲ್ಲ (ಕದಾಂಬ. ೧೪೦). [ಸಂ.]

**ಪುತ್ರಸ್ವೀಕಾರ** (ನಾ). ಬೇರೆಯವರ ಮಗನನ್ನು ತನ್ನ ಮಗನೆಂದು ಸ್ವೀಕರಿಸುವುದು,–ದತ್ತು ತೆಗೆದುಕೊಳ್ಳುವುದು : ನಾಲ್ವಡಿ ಕೃಷ್ಣರಾಜ ಒಡೆಯರು ಜಯಚಾಮರಾಜರನ್ನು ಪುತ್ರಸ್ವೀಕಾರ ಮಾಡಿಕೊಂಡು ಯುವರಾಜನನ್ನಾಗಿ ಮಾಡಿದರು (ಜೀಶ). [ಸಂ.]

**ಪುತ್ರಾಂತರಾಯ** (ನಾ). ಮಕ್ಕಳಾಗುವುದಕ್ಕೆ ಇರುವ ವಿಘ್ನ : ಈ ಪುತ್ರಾಂತರಾಯಂ ಪುರಾತನ ದುಷ್ಕರ್ಮವಿಪಾಕಮೋ ಬೆಸಸಿಂ (ಸುಕುಮಾ. ೯-೦೦೯). [ಸಂ.]

**ಪುತ್ರಿ₁** (ನಾ). ಮಗನನ್ನುಳ್ಳವನು ; ಪುತ್ರವಂತ : ಸುವಿನೀತರ್ಕವಿತಾಪ್ರವೀಣರಭಿರೂಪರ್ಸರ್ವಶಾಸ್ತ್ರಜ್ಞರಿಂತಿವರಿಂದೈಸೆ ಜಗಕ್ಕೆ ಸೌಮ್ಯ ನರಸಿಂಹಾರ್ಯೋತ್ತಮರ್ ಪುತ್ರಿಗಳ್ (ಚಿಕ್ಕಗೋ. ೫-೯). [ಸಂ. ಪುತ್ರಿನ್]

**ಪುತ್ರಿ₂** (ನಾ). ೧. ಮಗಳು ; ಕುವರಿ : " ದುಹಿತೃ ನಂದನೆ ಪುತ್ರಿ ತನೂಜೆ ಸೂತಿ ತಾನೆನಿಕ್ಕುಂ " (ಚಟ್ಟಕೋ. ೫೮-೦೭); ವರಪುತ್ರೀಸ್ಥಿರಭಾವಕಾಮ್ಯವಿಲಸತ್ಸನ್ಮಾನ್ಯೆಯುಂ ಯಾನೆಯುಂ . . . ಗಿರಿರಾಜಂ ಕಳಿಪುತ್ತುಮಿರ್ದನತಿಯೋಗಧ್ಯಾನೆಯುಂ ಮೇನೆಯುಂ (ಗಿರಿಜಾ. ೩-೦೦). ೨. (ಸಮಾಸದ ಕೊನೆಯಲ್ಲಿ ಬಂದಾಗ) ಚಿಕ್ಕದು ಎಂಬರ್ಥದ ಶಬ್ದ : ' ಅಸಿಪುತ್ರಿ ' ಪರಾ. [ಸಂ. ಪುತ್ರೀ]

**ಪುತ್ರಿಕೆ** (ನಾ). ೧. ಪುತ್ರಿ; ಮಗಳು : ದುರ್ವಿನೀತನ ತಾಯಿಯಾದ ಜ್ಯೇಷ್ಠಾದೇವಿಯು ಪುನ್ನಾಡ ಸ್ಕಂದವರ್ಮನ ' ಪುತ್ರಿಕೆ' (ಕದಾಂಬ. ೦೪೦). ೨. ಬೊಂಬೆ ; ವಿಗ್ರಹ : "ಪಾಂಚಾಲಿಕಾ, ಪುತ್ರಿಕಾ – ಈ ೨ ಪುತ್ತಳಿಗೆ" (ಹಲಾಯು. ೮೧-೩೩೯); ಮೆಲ್ಲನೆ ನಡೆತರ್ಪ ನೀಲಮಣಿಪುತ್ರಿಕೆಯಂದದಿನಾದ ಮೊಪ್ಪಿದಳ್ (ಕಾದಂಬ. ೩೬): ನೀಂ ಪರವೆಣ್ಗಳನಪ್ಪುವುದನೆ ಬಯಸುತಿರ್ಪೆಯಪ್ಪೆಂದು ಕರಂ ಚಿಪ್ಪುರಿಸಿ ನಾರಕರ್ ತಂದಪ್ಪಿಸುವರ್ ಕಾಯ್ದ ಲೋಹಮಯಪುತ್ರಿಕೆಯುಂ (ಸುಕುಮಾ. ೦೦-೯೭); ಪೊಳೆವ ಮುತ್ತಿನ ಬೊಂಬೆಯೋ ತಿಂಗಳ ತಿರುಳ ಪುತ್ರಿಕೆಯೊ ಕಪ್ಪುರವಳುಕಿನಲಿ ಬಿದಿ ಕಡೆದು ತಿದ್ದಿದ ಸಾಲಭಂಜಿಕೆಯೋ (ಶಾಕ್ಯಕಾ. ೩೨-೯೫). ೩. ನಕಲು : ಪ್ರತಿರೂಪ; ಪಡಿಯಚ್ಚು : ಇದು ಕೂಡ ಮುಪನ ಮಾತೃಕೆಗೆ ಪುತ್ರಿಕೆಯಂತಿದೆ (ಸಾಹಿಸಂ. ೬೭) ; ನಮ್ಮ ಛಂದಸ್ಸು . . . ಆ ಲಲಿತರಗಳೆಯದೇ ನೆಟ್ಟನೆಯ ಪುತ್ರಿಕೆಯಲ್ಲದೆ ಸರ್ವಥಾ ಆಂಗ್ಲ ಸರಳರಗಳೆಯ ಅನುಕರಣೆಯಲ್ಲ (ಗೊಲ್ಗೊಥಾ. ೪೫ ಮುನ್ನುಡಿ). ೪. (ಸಮಾಸದ ಕೊನೆಯಲ್ಲಿ ಬಂದಾಗ) ಚಿಕ್ಕದು ಎಂಬರ್ಥದ ಶಬ್ದ. [ಸಂ. ಪುತ್ರಿಕಾ]

**ಪುತ್ರೀಧರ್ಮ** (ನಾ). ಮಗಳು ಪಾಲಿಸಬೇಕಾದ ಧರ್ಮಾಚರಣೆ : ತಂದೆಯನ್ನು ಪ್ರೀತಿಸುವುದು ಪುತ್ರೀಧರ್ಮ (ಕಲಿಕ. ೪೦). [ಸಂ.]

**ಪುತ್ರೇಷಣ** (ನಾ). ಮಗನಾಗಬೇಕೆಂಬ ಹಂಬಲ : ಪುತ್ರೇಷಣ ವಿತ್ತೇಷಣ ದಾರೇಷಣಂಗಳೆಂಬ ಈಷಣತ್ರಯವನುಳಿದು (ಅದವ. ವಚ. ೯೦-೦೫೦) : ದಾರೇಷಣ, ಪುತ್ರೇಷಣ, ವಿತ್ತೇಷಣವೆಂಬ ಈಷಣತ್ರಯದಲ್ಲಿ ಆತ್ಮ, ಅಂತರಾತ್ಮ, ಪರಮಾತ್ಮನೆಂಬ ರೂಪತ್ರಯಗಳಿಂದ ವಾಸ ಮಾಡುವನು (ಹಮಾರ. ೨೮-೧೦ ತಾತ್ಪರ್ಯ). ' ಈಷಣತ್ರಯ' ಪರಾ. [ಪುತ್ರ + ಈಷಣ₁]

**ಪುತ್ರೇಷ್ಟತೆ** (ನಾ). ಪುತ್ರಲಾಭದ ಅಪೇಕ್ಷೆ : ಸಾವಧಾನದಲಿ ದುಃಖಾಸ್ರುವಂ ತೊಡೆದು ಪುತ್ರೇಷ್ಟತೆಯ ಭಾವವರಿದುಯೆಂತೆಂದನು (ನವವೀ. ೦೧-೦೨). [ಸಂ. ಪುತ್ರೇಷ್ಟತಾ]

**ಪುತ್ರೋತ್ಸವ** (ನಾ). ೧. ಮಗನು ಹುಟ್ಟಿದ ಸಂತೋಷದಿಂದ ಆಚರಿಸುವ ಉತ್ಸವ : ರಂಗರಸರ ಮನೆಯ ಪುತ್ರೋತ್ಸವದಲಿ ಕಲುರೆಟಿಯ ಮಹಾಜನಂಗಳು ಕೂತ್ರ್ಮ ಅನಂತತೀರ್ಥದೇವರಿಗೆ ಕೊಟ್ಟ . . . ತೋಟ ೧ (ಎಪಿಇಂ. XX, ೨೦೬-೩; 1250); ಪುತ್ರೋತ್ಸವಂ ಮಾಡಿ ಕೆಲವು ದಿನವಿರೆ . . . ಧರಿತ್ರೀಶ್ವರನ ರಾಜ್ಯಮಂ

ಕೆಗೆದುಕೊಂಡಟಿತರಾಳ್ದರು (ಶ್ರೀಪುರಾ. ೨೬-೦೩). ೨. ಮಗನ ಜನನ : ಗಂಡುಮಗುವಿನ ಜನನ : ಪುತ್ರೋತ್ಸವಂ ಸೂತ್ಸವಂ ಕೆಳೆಯೋ ಸರ್ವರೊಳುತ್ರವಂ (ಸೋಮೇಶ. ೦೯); ಹರಿದು ಪುತ್ರೋತ್ಸವದ ಸುದ್ದಿ ಗಜಪುರದೊಳುಬ್ಬರವಾಯ್ತು ಪಾಂಡುವಿನರಸಿಯಲಿ ಸಂತಾನ ಜನಿಸಿದು ದೆಂದು ಜನಜನಿತ (ಕುವ್ಯಾ.ಆ.೯-೯೦); ಪಂತಿಗೆ ಪುತ್ರೋತ್ಸವವಾಗಲು ಮೊದಮೊದಲು ಅವನ ಮನಸ್ಸಿನೊಳಗೆ ತುಸು ಈರ್ಷೆಯು ವೇದನೆ ಹುಟ್ಟುತ್ತು (ಇಕ್ಷ್ವಾ. ೯೧೭). [ಸಂ.]

**ಪುದಳ್ನಾಡು** (ನಾ). ಒಂದು ಸ್ಥಳದ ಹೆಸರು : ಪುದಳ್ನಾಡ ರಾಷ್ಟ್ರೀ ಕೋಣನೂರ್ನ್ನಾಮ ಗ್ರಾಮ (ಎಕ. ೧೯೧೬, ೧೨-೩೦ : ೧ನೆಯ ಶತ). [ ಪುದಳ್₁ + ನಾಡು ]

**ಪುದಾರು** (ನಾ). ಒಂದು ಬಗೆಯ ಭೂಮಿ : ಕಾಪ್ಪಿಸಿಯಾ ಸಾಸಿಸ್ತ್ವರ ಮಾಗತಿನ್ ಕೋಸಿಗರಾ ಜಯಮಲ್ಲ ಪಮ್ಮೋನ್ ಗೋಸಾಸಿ ಪುದಾರುಂ ಬೆದೆಮತ್ರಲುಂ ಪದಲ್ಪಾಣಮಾವಟ್ ಕೊಟ್ಟೋನ್ (ಎಕ. VIII. ಸೊರಬ. ೯೦-೩ ; ಸು. ೪೭೦). [ ? ]

**ಪುದಿ₁**. ಹುದಿ₁ (ಕ್ರಿ). ೧. ಒಳಸೇರು ; ಒಳಗೊಂಡಿರು : ಪುದಿದ ತಾವರೆವಳ್ಳಿಯ ತಟಿಸ್ಸಿಂ ಪಸುವರ್ಣಗೆ ನಿರಂತರಂ ಸೊಗಯಿಸಿರ್ಪುವು ಪೆರ್ಗಟಿಗಳ್ ನಿರಂತರಂ (ಪದ್ಮಚ. 11, ೮೯). ೨. ಅಂಟಿಕೊಳ್ಳು ; ಹತ್ತು : ಮೊಲೆಯುಂಬ ಕುಮಾರನ ಕಣ್ಣ ಕಜ್ಜಳಂ ಪುದಿಯುದುರೋಜ ಮೇಕೆ (ಅನಂತ. ೧೨-೯೯). ೩. ತಾಕು ; ತಗಲು : ದಿಗುವಸನರಡಿಗಳ್ ನೆಲನಮೊ[ನೊ]ಯ್ಯಗೆ ಪುದಿವುತಿರೆ ಚಂದ್ರಗತಿಯಿಂ ಸಂಗುಣಭೂಷಣ ಕುಕ್ಕುಟಾಸನ ದೇವನೇಳ್ತಂದ (ಶಾಳಿಭ. ೩-೪). ೪. ಕೂಡಿಕೊಂಡಿರು; ಬೆರೆತುಕೊಂಡಿರು ; ಸೇರಿರು : ಕ್ರಿಯಾಕಾರಕದೊಳ್ ಪುದಿದರ್ಥವ್ಯಕ್ತಿಯ ನೀವುದು ಗದ್ಯಮನೇಕರೂಪಭೇದವಿವಿಕ್ತಂ (ಕಾವಾ. ೦-೨೩) ; ಮಲೆವ ಪೊಸಗಂಪಿನೊಳ್ ಪುದಿದಲೆವೆಲರಾಟಿಪುದು ಖಚರದಂಪತಿಶತಮಂ (ಅಂತ. ೦-೬೮) ; ಪೆರ್ಬುಸಿಯೊಳ್ ಪುದಿದಿರ್ದಧರ್ಮನಂದನನನೆ ಧರ್ಮ ನಂದನನೆನಲ್ದೊರೆ (ಗದಾಯು. ೩-೩೨) ; ಅನೇಕಾಕ್ಷರದೊಳ್ ಪುದಿಯೆ ಲಘೂಪದೆ ಕೆಲಕೆಲವೊದವಿರ್ಕುಂ . . . ಶಿಥಿಲತೆಯಂ (ಶಮದ. ೯೩). ೫. ಆಗು ; ಒದಗು ; ಉದ್ಭವಿಸು : ಪುದಿದ ಪುಳಕಂಗಳಡ್ಡೈಸದಿರವೆನುತ್ತುಂಜಿದಂತೆ . . . ಕಾಂತೆ ಹೃದಯದಿಂದಪ್ಪಿದಳುತ್ಸುಕೆಯಾಗಿ (ಕಾದಂಬ. ೬೭) ; ತ್ರದಿಯೊಳ್ ದೀರ್ಘಾದೇಶಂ ಪೊದಟ್ದು ಷಷ್ಠೀವಿಭಕ್ತಿ ಗರೆಬರ ಮತದಿಂ ಪುದಿದಿರ್ಕುಂ (ಕಾವ್ಯಾವ. ೦೩೭) ; ಪುದಿದ ರೋಮಾಂಚ ದದ್ಭುತದ ಸೊಗಸಿನ ಮೋಹನದ . . . ನವರಸವನುಟಿ ಸವಿದು ಸೊಕ್ಕಿ ಮಟಿದರನ್ಯೋನ್ಯಭಾವವನವರ್ಗಳು (ಕ್ರಿಪುರಾ. ೦೦-೨೩). ೬. ಹೊದಿಸು: ಆಚ್ಛಾದಿಸು : "ಪುದ-ಆಚ್ಛಾದನೇ, ದ್ವಾರ್ಶ್ವೇ ಚ" (ಶಮಾಣ) ; ಕರಡಿಯ ತೊವಲೊಳ್ ಪುದಿದ ಕಬ್ಬೊನ್ನ ರಥಮುಂ (ಶಂಕಭಾ. ೦೨-೭ ವ) ; ಲಲಿತಚಂಪಕದಳಕೆ ಬೆಳುದಿಂಗಳ ತಗಡ ಪುದಿದಂತೆ (ಶೀತಂತ. ೮-೩). ೭. ವ್ಯಾಪಿಸು ; ಆವರಿಸು : ನಿಜಕೀರ್ತಿ ಲೋಕಮಂ ಪುದಿದಿರೆ ಪೊಕ್ಕನಂದು ನಿಜಮಂದಿರಮಂ ಪರಸೈನ್ಯಭೈರವಂ (ಶಂಕಶಾ. ೩-೦೦೩) ; ಗದೆ ಗದೆಯಂ ಘಟ್ಟಿಸೆ ಪುಟ್ಟಿದ ಕೆಂಡದ ಕಿಡಿಯ ಕುಂಡಮೇಟಂದೆಸೆಯಂ ಪುದಿಯೆ (ಗದಾಯು. ೮-೦೩) ; ಉತ್ಕಟಕೋಪಹೂಂಕೃತಂ ವನಜ ಭವಾಂಡಮಂ ಪುದಿಯೆ (ಜಗಪ. ೦೩-೩). ೮. ಆವೃತವಾಗು ; ವ್ಯಾಪ್ತ ವಾಗು : ನಟ್ಟ ಕೂರ್ಗಣೆಯ ಬಿಣ್ಪೊಟಿಯಿಂದೆ ಬಟಿಲ್ದನುರ್ವಿ ಪೆರ್ವಿದಿರ ಸಿಡಿಂಬಿನೊಳ್ ಪುದಿದದೊಂದು ಕುಳಾಚಳದಂತೆ ಸಿಂಧುಜಂ (ಶಂಕಭಾ. ೦೦-೪೩); ಸ್ಮರರಿಪುಲಲಾಟನೇತ್ರಸ್ಫುರದುರುಹುತವಹನಿನೆಯ್ದೆ ಬೇವುತ್ತಿರ್ದಾ ಸ್ಮರನ ಪೊಗೆಯಿಂದೆ ಪುದಿದಿರ್ದ ರತಿಯವೊಲ್ಕಾಂತೆ . . . ಎಸೆದಿರ್ದಳ್ (ಕಾದಂಬ. ೯೩) ; ಕಾಮಿನಿ ತನ್ನ ತುಂಗಕುಚ ತಟದ ಕಸ್ತೂರಿಯೊಳ್ ಪುದಿದ ಪ್ರಿಯನಂಗಮಂ ಕಂಡಿದೇತಕೆ ಕೃಷ್ಣರೂಪಾದೆ ನೀನೆಂದು ಬೆಸಗೊಳಲ್ಕೆ (ಶ್ರೀಪುರಾ. ೨೬-೨೦). ೯. ಮುದುಗಿಸು ; ಮುಚ್ಚು : ತನ್ನ ಪಟಿದು ಬಿಸುಟ ಸಹಸ್ರಕುಂತಳಂಗಳಂ ತನ್ನ ತಳದೊಳ್ ತೆಮಳ್ದು ಕೊಂಡು ತುಂಬಿಯ ಬಂಬಲ್ಗಳಂ ಕೆಂದಾವರೆಯರಲ್ಗಳೊಳ್ ಪುದಿದು ಯ್ವಂತುಯ್ದು (ಆದಿಪು. ೨-೩೯ ವ) : ಇಂದ್ರಿಯಕ್ಷರಣೆಯಾದೊಡವನೊಂದು ಕದಳೀಪತ್ರದೊಳ್ ಪುದಿದು . . . ಓವಳಲ್ಲಿಗಟ್ಟಿದೊವೆ (ಶಂಕಶಾ. ೧-೬೮ ವ). ೧೦. ಅವಿತುಕೊಳ್ಳು : ಅಡಗು : ಬಚ್ಚಿಟ್ಟುಕೊಳ್ಳು : ರಸಾತಳಂಬರಂ ಬೆದಕಿಯುಮೆಂತುಮಪ್ಪಳಿಸಿ ಕೊಂದಪೆನೇಟ್ಟು[ಪಾಠಾಂ. ಟ್ಟು] ದಿದೇಂ ಸುಯೋಧನಾ (ಶಂಕಶಾ. ೧೩-೬೦) ; ಕರುಪಿಟ್ಟರೆ ತಾ ಟಟಪಲ್ಲ ತನ್ನೊಳ್ಪುದಿದರೆ ಅದು ನಿಜವಲ್ಲ ಪುನರಪಿಯೊಳಂತಿರೆ ಅದು ಸಹಜವಲ್ಲ (ಸರ್ವಜ್ಞ. ೭೯-೪೩೯): ಚೇದ್ರವನನೆಯುರಂತರಂಗದೊಳ್ ಪುದಿದ ಕೆಚ್ಚಂ ನ್ರವಿಸುವಂತೆ ರಂಜಿಸಿ ರಮಿಸುತಿಹ ಪುರುಷರಾ ಪುರದೊಳೆಸೆದಿರ್ದರು (ಶ್ರೀಪುರಾ. ೨೬ ೦೭). ೧೧. ಹೊಂದು : ತಾಳು : ಪಡೆ : ಮಂದಿರಾ ರಸದಿಂದಂ ಬಾರ್ಚಿವರೋ ಪೇಟಿಸಿಸಿ ಪೊಳೆವ ತಲೆದುಡಿಗೆಯಾ ರನ್ನದಿನ್ಸ್ರಸರ್ವ ರಾಗರಚಿಯಃ ಪುದಿದೆಸೆದುದು ಕೇಶಪಾಶಮಾ ಕಾಮಿನಿಯಾ (ಕಾವಂಲು. ೨೦). ೧೨. ತುಂಬು; ಇಡುಗು : ನೆಟಿವಟ್ಟ ಭಕ್ತಿ ದಯೆ ಪುದಿದಜೀವೌದಾರ್ಯಂ ಕ್ಷಮಾಗುಣಂ ಶಕ್ತಿಯುಮೆಂಬಟಿಕೆಯ ಗುಣ ಮೋಟಜಿಳಂ ನೆಟಿದಿತ್ತರ್ ಮುನಿಯುಗಕ್ಕೆ ದಾನಮನವರ್ಗಳ್ (ಆದಿಪು. ೯-೯೭): ಪುದಿದಟ್ಟಿಯಿಂದೆ ಪೊಡೆಮಾಡುವುದು ದಯೆಗೆಯ್ ಮಹಾಪ್ರಸಾದಮೆಂಬುದು (ಸುಕುಮಾ. ೧೦-೩); ಮದನಯಶಃಪಟಹಧ್ವನಿ ಪುದಿಯೆ ವಿಯಚ್ಚರನ ಕರ್ಣಮಂ ಹೃದಯಕ್ಕೆಯ್ದದುದಿಲ್ಲ ದಿವ್ಯವಚನಂ (ಶಂಕಾಮಾ. ೯-೯೪); ಅಂಗಲತೆಯೊಳ್ ಪುದಿದ ಸಕಲಪರಿಮಳಕೆಡಗುವಳಿಮಾಲೆ ಮೇಲೆ ಮಂಡಳಿಸಿ ನಿಲೆ (ನೇಮಿ. ೬-೪). ೧೩. ಹೆಚ್ಚಾಗು; ಅಧಿಕವಾಗು; ಅತಿಶಯವಾಗು: ಆ ಕಂಪುಂ ಮನಸ್ತಾಪಮುಂ ಪುದಿದೆತ್ತಂ ಬರೆ ಸುಯ್ ಪೊದಟ್ದು ಬಿಸಿದುಂ ಕಮ್ಮಿತ್ತುಮಾಯ್ತೋಪಳಾ (ಕಾವ್ಯಸಾ. ೩೬೦ ಕೂದ್ರಕ); ಪುದಿದವ್ವಳಿಪನ್ನ ಕಾಯ್ದು ಪೋಪಿನಮಿರದೀಗಳೀಂಟುವೆನೊ ದಾಂಟುವೆನೋ ಲವಣಾಂಬುರಾಶಿಯುಂ (ಅಜಿತ. ೧೨-೬೦); ಪುದಿದ ಸುತಮೋಹದಿಂದೆ . . . ಅಟಿಯದೆ ದುಷ್ಕಕಷ್ಟರೊಡನಾಡಿಸಿದೆಂ (ಧರ್ಮಾಮೃ. ೨-೮೦). ೧೪. ತುಂಬಿಸು ; ತುಂಬಿಕೊಳ್ಳುವಂತೆ ಮಾಡು : ಅಖಂಡಲಸುತನೆಯ್ದೆ ನಭೋಮಂಡಲಮಂ ಪುದಿದನೆಯ್ದ ಶರಪಂಜರದಿಂ (ಜಗಪ. ೦೩-೩); ಸುಕಂಠೆ ಪಾಡಿ ಪುದಿದಳ್ ಮುದಮಂ ನರನಾಥಚಿತ್ತದೊಳ್ (ಕುಸುಮಾ. ೧-೩೭). ೧೫. ಹೊದೆ ; ತೊಡು : ಅಸ್ಥಿ ಚರ್ಮವ ಪುದಿದ ಮಟಿಯ ಹರಿಗೆಯೊಳು ಅಸುಭಟನೆಂಬ ಬಂಟ (ಸುಂಕಬಂ. ೪. ೬೬೬-೬೭). ೧೬. ಒದಗಿಸು ; ಪೂರೈಸು : ಕಿನ್ನರ ಪನ್ನಗ ಖೇಚರಾಮರಪ್ರಮದೆಯರೀಕ್ಷಣಾಳಿನಿಕರಕ್ಕೆ [ಸವೀನಸುಮ]ಪ್ರತಾನದಿಂ ಪ್ರಮದಮನಾವಗಂ ಪುದಿಪ ಪಾವನವೃಕ್ಷಸಮಾವೃತೋಲ್ಲಸತ್ಪ್ರಮದವನಂಗಳೋಳಿ ಪೊಳೆದೊಪ್ಪುವುದಲ್ಲಿಯ ಚೈತ್ಯಧಾತ್ರಿಯೊಳ್ (ಶಾಂತೀಶ. ೦೭-೩೭). ೧೭. ಮಾಡು ; ಕೆತ್ತನೆಯಾಗು : ಸಿರಿಗಾವುಣ್ಣನ ಎಟ್ರ್ರು ಪುದಿ[ ದಿ ? ]ದುದು (ಇಕ. XII. ೨೦೯-೨೩ ; 814). ಹುದಿ₁ : ೧. ಸಂಬುದ್ಧಿಯು ರಸವು ಪಾಜಿತ್ರು ಹುದಿದ ರಾಗದ್ವೇಷವಹ್ನಿಯಲಿ (ಕುವ್ಯಾ.ಸ. ೧೩-೪೪) ೮. ಕೆದಜುಗೇಶದ ಕಾಂತೆ ಹುದಿದಳು ಹರುಷಪುಳಕದಲಿ (ಕುವ್ಯಾ.ಸ. ೦೩-೩೨). ೧೦. ಹಿಮಗಿರಿಯ ಕುಕ್ಷಿಯಲಿ ಹು[ಪಾಠಾಂ. ಪು]ದಿದ ನಾನಾದ್ರೋಣಿಗಳ ಮಧ್ಯದ ಕಿರಾತಪುಳಿಂದನಿಚಯವ ಸದೆದು ಹತ್ತಿದನಗ್ರಶಿಖರಕೆ ಪಾರ್ವತೀ ಪಿತನ (ಕುವ್ಯಾ.ಆ. ೩-೨೯) ; ಈ ಪರಮಕರಪೆ ಮುನಿಹೃದಯಾವರಣದೆ ಹುದಿದು ನಿಂದು . . . ನಲಿಯಿಕುಮೆಮ್ಮಿ (ವೃತ್ತಂ. ೮). ೧೩. ಹುದಿದ ಮಟುಭೂಮಿಯಲಿ ಮಾಸ್ಯನು ಖದಿರನಲ್ಲಿಗೆ ಗೂಗೆ ಕೋಗಿಲೆ (ಕುವ್ಯಾ.ಸ.

೦೦-೩೯)· ೧೪. ಕೇಳಿ. ಎದೆಯಲಿ ಹದಿಯುರಿ–ಹೊಸ ಆಳ ಬಾಳಲಿ ಹುದಿಯುರಿ (ಹೊಂಗಳು. ೨-೦೨)· ೧೫. ರಾಯನ ಹುದಿದ ಕವಚವ ಭೇದಿಸಿದವೊಳಬದ್ದವಂಬುಗಳು (ಶುವ್ಯಾ.೪. ೦೦-೩೪)· ೧೬. ಕೆಚ್ಚು; ಮೆಟ್ಟು; ಕೂರಿಸು : ಈ ಉಂಗುರಕ್ಕೆ ಅನೇಕ ವಜ್ರಗಳನ್ನು ಹುದಿದಿದ್ದಾರೆ (ಶಂಶ)· 'ಪುದುಗು₁', 'ಪೊದೆ₁' ಪರಾ.

[ದೇ. ೫ ತಮಿ. ಪುತೈ; ಮಲ. ಪುದಯು]

**ಪುದಿ₂**, ಹುದಿ₂, ಹೊದಿ₂ (ನಾ)· ೧. ಬಾಗಿಲಿನ ಪಕ್ಕ; ದ್ವಾರಪಾರ್ಶ್ವ: "ಪುದಿ-ಆಚ್ಛಾದನೇ, ದ್ವಾರಪಾರ್ಶ್ವೇಚ" (ಶಮಣ); ಮಂದಿರೊಳು ಮಣಿವಾಡದೊಳು ಪೊಂಬಾಗಿಲ ಪು[ಶಾಕಾಂ. ತು]ದಿಯೊಳು ಪಟ್ಟಶಾಲೆಯೊಳು ಮದನನ ಪೆಂಡ ವಾಸವೆನಲಾ ಪುರಸುದತಿಯರವನ ನೋಡಿದರು (ಶ್ರೀಶಾಂ. ೦೩-೩೯); ಮರಳಿ ಗೂಡಂ ಸಾರ್ದು ತಿರುಗಿ ಪುದಿಯಲ್ಲಿ ನಿಂದು ಮತ್ತೆ ನೋಡುವುದೊಮ್ಮೆ (ಶಂಪು. ೯೭-೬); ಆತಪತ್ರವನ್ನು ದೇಹಳಿಯ ಹೊರಗೆ ಕೊಡಕೊಡಹಿ, ಪುದಿಗೆ ಒರಗಿಸಿ ನಿಲಿಸಿ (ಮಂತ್ರ.ಶ. ೪೦-೩)· **ಹುದಿ₂** : ೧. ಸುಗ್ಗವ್ವೆ ಮಗನ ಬರವಂ ಪಾರ್ದು ಹೊಜಿಗೆ ಬಾಗಿಲ ಹುದಿಯುನು ಹತ್ತಿ ನಿಂದಿರ್ದು . . . ಮಱುಗುತ್ತಮಿರಲು (ಸಿಕ್ಕಣ. ೨-೯೩); ಬಾಗಿಲ ಹುದಿ[ದಿ]ಯಲ್ಲಿ ಭಂಗಿ ವಡೆದಂಗನೆ ನಿಂದು . . . ಒಪ್ಪಿದಳ್ (ಶಾಂತೀಶ್ವ. ೦೦-೩೯)· ೨. ನೆಲೆ; ಆಶ್ರಯಂ; ಬೀಡು: ಹುರುಡಿನ ಹುತ್ತು ಹುಸಿಯ ಹುದಿ ಗದುಕಿ [ಶಾಕಾಂ. ೧]ನ ಗರುಡಿ ಗನ್ನದ ಗಡಿ . . . ಎನೆ ಕಣ್ಗಲ್ಲಿ ಕರಮೆಸೆದುದು ಸೂಳೆಗೇರಿ (ಶುಣಸಾಂ. ೯-೧೦೨)· ೩. (ಮಣ್ಣಿನ) ದಂಡೆ; ಕಟ್ಟೆ; ದಿಂಡು: ಮೆಣಸಿನ ಗಿಡಕ್ಕೆ ಹುದಿ ಏರಿಸುವುದಕ್ಕೆ ಹೋದವಳು . . . ಅಗಸೇ ಬಾಗಲಾಗೆ ಹಾದು ಬರಬೇಕೋ? (ಶಬಮು. ೨೫)· **ಹೊದಿ₂** : ೪. ಪಕ್ಕ; ಪಾರ್ಶ್ವ: ಭೋಗದೇವರಿಗೆ ಆ ತಿರುವಿಡಯಾತದೆ ಮೂಡಣ ಹೊದಿಯಲು ಗದ್ದೆ ಕಂ ೯೦೦ . . . ಸಲುಉದು (ಎಕ. XIV. ಎಳಂದೂ. ೧೬೦-೬ ; ಶು. 1376)· [< ಪುದಿ₁ /ತಮಿ. ಪುದವು, ಪುದ = ಬಾಗಿಲು]

**ಪುದಿನ** 'ಪುದೀನ' ನೋ.

**ಪುದಿಯಣ್ಣ** (ನಾ)· ಒಬ್ಬಾತನ ಹೆಸರು : ಮಾಚರಸರ ಮಗಂ ಪುದಿಯಣ್ಣ ಗಂಗೇಶ್ವರಕ್ಕೆ ಬಿಟ್ಟ ದೇವಭೋಗದ ಗಟ್ಡಿ ಮೂಗಣ್ದುಗಂ (ಎಕ. X. ಶ್ರೀನಿವಾ. ೦೭-೦೩ ; ಶು. 1015)· [ಪುದಿ₂ + ಅಣ್ಣ₁]

**ಪುದಿವಟು** 'ಪುದಿವಟ್ಟು' ನೋ.

**ಪುದಿವಟ್ಟು**, ಪುದಿವಟು, ಪುದಿವೆಟು, ಪುದಿವೊಟ್ಟು, ಪುದುವಟ್ಟು (ನಾ)· ದೇವಾಲಯ, ಕೆರೆ, ಕಟ್ಟೆ ಮೊದಲಾದುವುಗಳ ಜೀರ್ಣೋದ್ಧಾರ ಇತ್ಯಾದಿ ಸಾರ್ವಜನಿಕಕಾರ್ಯಗಳಿಗಾಗಿ, ಉದಾರಿಗಳಿಂದ ದತ್ತಿಯಾಗಿ ಬಂದ (ಬಡ್ಡಿಯ ಉತ್ಪನ್ನವನ್ನು ಉಪಯೋಗಿಸಿ ಕೊಳ್ಳಬಹುದಾದ) ಕೂಡಿಟ್ಟ ನಿಧಿ, – ಸಂಪತ್ತು, – ಠೇವಣಾತಿ : ಸಂಜಪ್ಪಯ್ಯನ ಪುತ್ರನಾದ ಕಪ್ಪಯ್ಯನು ಬರಕೊಟ್ಟ ಪುದಿವಟ್ಟಿನ ಬನ್ನವತ್ತಳೆ (ಎಕ. V. ಶೇಲೂರು. ೨೯-೯ ; 1717); ನಂಜುಂಡೇಶ್ವರನಿಗೆ ಮುತ್ಕಾಲಸಟ್ಟಿಯ ಹೆಸರಿನಲ್ಲಿ ಒಂದು ಸೇವೆ ನಡೆಯುವಂತೆ . . . ಮುನ್ನೂರುವರಹಗಳನ್ನು ಅದಕ್ಕೆ ಪುದಿವಟ್ಟಾಗಿಡುತ್ತೇನೆ (ಶೀತಿಹಂ. XI. ೧೬)· **ಪುದಿವಟು** : ಮುದ್ದರಾಜಯ್ಯನವರು ಕೊಟ್ಟ ಪುದಿವಟು ಕಂ ಗ ೩೦ ಮುವ್ವತ್ತುವರಹಾ (ಎಕ. IV. ಎಳಂದೂ. ೦೭-೦೯ ; 1667)· **ಪುದಿವೆಟು** : ವಿಠಲದೇವರ ಅಮೃತಪಡಿ ಪುದಿವೆಟು ನೈವೇದ್ಯಕೆ (ಕೌಇಇ. IX–II. ೬೩೩-೧; 1554)· **ಪುದಿವೊಟ್ಟು** : ಲಕ್ಷ್ಮೀನರಸಿಂಹಸ್ವಾಮಿಯವರ ಶ್ರೀಭಂಡಾರಕೆ ಧಾರಾದತ್ತವಾಗಿ ಸಮರ್ಪಣೆ ಮಾಡಿದ ಪುದಿವೊಟ್ಟಿನ ದ್ರವ್ಯದಲಿ ದೇವಸ್ಥಾನಕೆ ಕ್ರಯಲಬ್ಧವಾಗಿ ತೆಗೆದು ಕೊಂಡ ವೃತ್ತಿಗಳ ವಿವರಕೆ ಬರಸಿದ ಶಾಸನ (ಎಕ. XII. ತುಮಕೂ. ೯೬-೯೮ ; 1719)· **ಪುದುವಟ್ಟು** : ಪುಟ್ಟದೇವರಾಜೈಅರಸಿನವರು ೧೦೦ ವರಹ ಹಾಕಿರುವ ಪುದುವಟ್ಟಿನ ಸೇವೆಗೆ ಭದ್ರಂ ಭೂಯಾದ್ (ಎಕ. II. ೨೨೩-೨೮ ; 1827); ಸಾವಿರರೂಪಾಯಿ ಪುದುವಟ್ಟು ನಮ್ಮಪ್ಪನ ಹೆಸರಿನಲ್ಲಿ ಮಂಜುನಾಥನಿಗೆ ಕೊಟ್ಟುಬಿಡೋದು (ಒಡಮು. ೯೨); ಒಂದು ದೇವಸ್ಥಾನವನ್ನೂ ಒಂದು ಸತ್ರವನ್ನೂ ಕಟ್ಟಿಸಿ ಅವಕ್ಕೂ ತಕ್ಕಷ್ಟು ವರಮಾನ ದೊರೆಯುವಂತೆ ಪುದುವಟ್ಟು ಹಾಕಿ ಸಮಿತಿಗಳನ್ನೇರ್ಪಡಿಸಿದನು (ಗುಣಾ. ೮೩)· 'ಪುದಿವೆಟ್ಟು' ಪರಾ. [ಪುದಿ₁ + ಪಟ್ಟು₄]

**ಪುದಿವು** (ನಾ)· ೧. ಹೊಂದಿಕೆ; ಕೂಡಿಕೆ; ಸೇರುವಿಕೆ: ಕವಿಚೆ ನವರತ್ನದೀಧಿತಿನಿವಹಾರುಣಧವಳಕಿರಣಮಪರಾಜಿತನುತ್ತವಳನಿಸೆ ದೂರ ಪಾತೇಷುವೇಧದೊಳ್ ಪುಣ್ಣ ಸರಲ ಪುದಿವಂ ಪೋಲ್ಪುಂ (ಶಾಂತಿ. ೩-೦೦೦)· ೨. ಗುಂಪು; ಸಮೂಹ: ಮಾಕಂದನಂದನದ ಬಳಿಸಿನೊಳಮಶೋಕವನದ ಪುದಿವಿನೊಳಂ ನಾಗಚಂಪಕವನದ ಸುತ್ತಿನೊಳಮತಿ ರಮಣೀಯಮಾಗಿ (ಶಂಸಾಪೂ. ೪-೦೨೪ ವ); ಸಂಜನಿತಮುದರಲ್ಲಿ ಸುತ್ತಿದ ಘನಸಾರದ ಪುದಿವನಡರ್ದ ಲತೆಗಳ ಮನೆಯೊಳ್ ಪೊಕ್ಕಿರೆ (ಶೇಬಂಪು. ೫-೩೦); ಪಂದಳಿರ ತೋರಣಂ ತಳ್ಡೊಂದಿದ ಕಂಗುಡಿಯ ಪುದಿವು ಮುತ್ತಿನ ಕಡೆ ಚೆಲ್ವಿಂದೆಸೆವ ಮಂಗಳಾನಕದೊಂದು ರವಂ ಬಗೆಗೆವಂದು ದಂದರಮನೆಯೊಳ್ (ಕಾವ್ಯಾ.ಶ. ೨೩೯)· ೩. ಮುಚ್ಚುವಿಕೆ; ಹೊದಿಸುವಿಕೆ; ಆಚ್ಛಾದನೆ: ಉದಿರ್ದ ಘನಸಾರನಿಚಯದ ಪುದಿವುಮನಲ್ಲೊಕ್ಕ ಮಲ್ಲಿಕಾಕುಟ್ಮಳದೊಂದೊದವುಮನುದಾತ್ತವ್ಯಗಮದದುದಿತ ಸುಸೌರಭದ ಭಾರವಮಂ ತಳೆದುದುಮಂ ಕಂಡು (ಶೇಬಂಪು. ೪-೨೯)· ೪. ಸಂಶ್ಲೇಷ ಕೊಳ್ಳುವಿಕೆ; ಹೆಣೆದುಕೊಳ್ಳುವಿಕೆ: ಚದುರ ನಲ್ಲರ ಬಂಧ ಘನೆಗಳ ಪುದಿವು (ಶಾಸ್ತ್ರಸಾ. ೨೨-೬೦)· [ಪುದಿ₁ + – ವು]

**ಪುದಿವೆಟು** 'ಪುದಿವಟ್ಟು' ನೋ.

**ಪುದಿವೊಟ್ಟು** 'ಪುದಿವಟ್ಟು' ನೋ.

**ಪುದೀನ**, ಪುದಿನ (ನಾ)· ಔಷಧಿ, ಅಡುಗೆ ಮುಂತಾದುವಕ್ಕೆ ಬಳಸುವ, ವಾಸನೆಯುಳ್ಳ ಒಂದು ಬಗೆಯ ಸಸ್ಯ: ಪುದೀನ, ಚಟ್ನಸೊಪ್ಪು (ಮೃಶಿಗ. ೩೩-೦೦೩೦)· **ಪುದಿನ** : (೬).

[← ಪಾರ. ಪೂದಿನ; ಹಿಂ. ಪುದೀನಾ, ಪೂದನಾ, ಪೋದೀನಾ; ಮರಾ. ಪುದಿನಾ, ಪುದಾನಾ, ಪುದಾಣಾ]

**ಪುದು** 'ಪುದುವು' ನೋ.

Δ **ಪುದುಂಗಿಸು** 'ಪುದುಗಿಸಂ' ನೋ.

Δ **ಪುದುಂಗು** 'ಪುದುಗಂ₁' ನೋ.

**ಪುದುಂಗುಳಿಸು** 'ಪುದುಂಗೊಳಿಸು' ನೋ.

**ಪುದುಂಗೊಳ್**, ಪುದುಗೊಳ್ (ಕ್ರಿ)· ಹೊಂದಿಕೊಳ್ಳು; ಕೂಡಿಕೊಳ್ಳು; ಬೆರೆತುಕೊಳ್ಳು: ಪಟಗನ್ನಡಂ ಪುದುಂಗೊಳೆ ಕೊಟೆ ಸಕ್ಕದಮಂ ತಗುಳ್ಚಿ ಜಾಣ್ಕೆಡೆ ಮುತ್ತಂ ಮೆಟಸಂ ಕೋದಂತಿರೆ ಪೇಟ್ವ ಟಿಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ (ಕಾವ್ಯಾ.ಶ. ೩೩); ಯಮುನಾ ಪ್ಲವಮಂ ಗಂಗೆಯ ವಿಮಲಪ್ಲವಮೊಂದಿದಂತೆ ಸಭೆಯಂ ಪುದಿದಂಗ ಮರೀಚಿಯನುಜ್ವಲದಂತಮರೀಚಿ ಪುದುಂಗೊಳಲ್ಕೆ ಕೃಷ್ಣಂ ನುಡಿದಂ (ಜಗಪ. ೦೩-೫೭); ಬಗೆಯೆಂತಂತು ಪಾಡು ಪಾಡೆಂತೆಂತು ಹಾವಂ ಹಾವ ಮೆಂತಂತು ಭಾವಂ ಪುದುಂಗೊಳೆ . . . ಆಡುವ ನಟ್ಟುವಿಗರ ಕೂಟದಿಂ (ರಾಮಾಕೃ. ೨೩-೦೬)· **ಪುದುಗೊಳ್** : ಕೊಲಿಸುವ ಕೊಲ್ವ ಶಾಕ್ತ್ಯವರ ಮಾಗಿಸುವಾಗುವ ಕಳ್ವ ಕಳ್ವರೊಳ್ ಸಲೆ ಪುದುಗೊಳ್ವ ಪಾದರಮನಾಡಿಸು ವಾಡುವ ಕಾಂಕ್ಷೆಯೊಳ್ ಮನಂ ಸಲಿಸುವ ಸ್ವಲ್ಪಪಾಪವರನಂ ಶಠನುಂ ಖಳನುಂ ಕೃತಘ್ನನುಂ ಕಲುಷಿಯುಮುಟ್ಟುಮುಗ್ರನರಕಾಬ್ಧಿಗಭೀರಮನೆ ಯ್ದುವನ್ನೆಗಂ (ಸುಕುಮಾ. ೫-೪೪)· [ಪುದು (<ಪುದುವು) + ಕೊಳ್₁]

**ಪುದುಂಗೊಳಿಸು**, ಪುದುಂಗುಳಿಸು, ಪುದುಗೊಳಿಸು (ಕ್ರಿ)· ೧. ಕೂಡಿಸು; ಸೇರಿಸು; ಹೊಂದಿಸು: ಪಂಚರತ್ನಂಗಳುಮಂ ಪುದುಂ

ಗೋಳಿಸಿ ಪೊಂಗಳಸಂಗಳೊಳಿರ್ದ ಪುಣ್ಯತೋಯಂಗಳೊಳ್ಪುಜಂ ವಿಸಿಸಿ ಕಟ್ಟಿವನಾ ವಿಘು ವೀರಪಟ್ಟವಂ (ಶಂಶಚ. ೧೧-೨೫); ಅಜನಂ ಪಾಳಿಯುಮಂ ಪುದುಂಗೊಳಿಸಿಕೊಂಡೀ ಭೂಮಿಯುಂ ಭೂಮಿಪರ್ ನೆಜ್ಪುಯುಳ್ಗೊಂದುವಿಳಾತಳಂ ಬೆಳಿಯಾಕಿರ್ಕೆ (ಸಂಶೋಂಬು. ೬-೨೬೮). ೨. ಬೆರೆತುಹೋಗು ; ಕೂಡಿಕೊಳ್ಳು ; ಒಂದಾಗು : ಮಲಯ ಸಮೀರಣೇರಣಚಲತ್ತರುಶಾಖೆಗಳೊರ್ವೆಗೊರ್ವೆ ನೀರೊಳಗೆ ಬಜಲ್ದು ಹೇಮಸರಸೀಜರಜಾರುಣವಾರಿಯಂ ಪುದುಂಗೊಳಿಸಿ . . . ತಣ್ಪು ವೆಸಕೆಯ್ವುವು ತೀರವನಾಂತರಾಳದೊಳ್ (ಆಪು. ೧೧-೬೯); ಕನ್ನಡಿಯ ಕಲಶದ ಬಣ್ಣಪುರದಾರತಿಗಳೆಡೆಗೆಡೆಗಿಡಿಸಿದ ಪಂಚರತ್ನದ ಕದಿರ ಪೊದಜ಼ೊಳ್ ಪುದುಂಗೊಳಿಸಿ ನೆಗೆವ ಜಾಗದ ಪಡಲಿಗೆಗಳ ಅಗೆಯ ತುಜುಗಲಿಂ (ಅಶಂಪು. ೬-೪೦ ವ). ೩. ಒತ್ತಾಗು ; ದಟ್ಟವಾಗು : ಅಳವಿಗಜೀಯ ಬಳೆದು ಪುದುಂಗೊಳಿಸಿದ ಬದಿರ ಸಿಡುಂಬನೆಡೆಗೊಳೆ ಕಡಿವ ಪೋಡುಂಗಾಜನಂತೆ (ಶಂಶಚ. ೮೬-೧೬೬ ವ); ಬೀಳಯಲರ್ಗಣ್ಣಳ್ ಬೆಳ್ಪಂ ಉಲನಾಜನವಧರ ಮಣಿಗೆ ಕೊಟ್ಟದಜ ಪುದುಂಗೊಳಿಸಿದ ಕೆಂಪಂ ನೀರ್ಪೋಕುಳಿಯೊಳ್ ಮಾಜಾಡಿ ಕೊಂಡ ತೆಜದಿಂ ತೋರ್ಕುಂ (ಕಾವ್ಯಾ.ಶ. ೬೦೬). ೪. ಮುಸುಕು; ಮುಚ್ಚು ; ಆವರಿಸು : ವಜ್ರದಂತನ ವಜ್ರದಂತೆ ಪೊಳೆವ ದಂತ ಪಂಕ್ತಿಗಳ ಕಾಂತಿಯವಾ ಕಾಂತೆಯಂ ಪುದಿದು ಪುದುಂಗೊಳಿಸಿ ವಜ್ರದಂತನೆಂಬ ಪೆಸರಂ ನನ್ನಿ ಮಾಡಿ (ಆಪು. ೩-೯೯ ವ). ೫. ತುಂಬು : ಬಜಲ್ದುಡಿಯಂ ಸಡಿಲಿಸಿ ವನಮಂ ತನಿಗಂಪಿನಿಂ ಪುದುಂಗೊಳಿಸುತುಂ (ಶಾಂತೀಶ್ವ. ೦೫-೧೦೦ ವ). ೬. ಆಶ್ರಯ ಕೊಡು : ನಾಗಪಾಶಮನಶ್ರುಮದೊಳ್ ವಜಿದು ಬಲದ ಕೆಯ್ಯೊಳ್ ನಿಜಪ್ರಾಣವಲ್ಲಭೆಯುರಂ ಪುದುಂಗೊಳಿಸಿ (ಶಾಂತಿಪು. ೬-೩೦ ವ); ಉಲಿವ ತಳಿರೆಲೆಯ ದನಿಗೆ ಬೆರ್ಚುವ ಶಿಶುವನಾತ್ಮಪಕ್ಷಪುಟದೊಳ್ ಪುದುಂಗೊಳಿಸಿಯುಂ (ಮಲ್ಲಿಪು. ೩-೭೬೮). ೭. ಉಂಟುಮಾಡು ; ಹುಟ್ಟಿಸು : ಮುರುಳ್ಗಳಟಮಂ ಪಳಪಳನೆಮೊಯ್ಕದೆ ನೋಡಿ ಮುಗುಳ್ನಗೆ ನಗುವ ವೀರಭಟರ ಪಂದಲೆಗಳುಂ . . . ರೌದ್ರರಸಂಗಳಂ ಪುದುಂಗೊಳಿಸೆ (ಶಂಶಚ. ೧-೧೧೬ ವ) ; ರೂಪು ನೋಟಕರ ಕಣ್ಗಮೃತಾಂಜನಪುಂಜಮು ಪುದುಂಗೊಳಿಸೆ ನೃಪೇಂದ್ರನೋಲಗದೋಳಿರ್ದುದು ವಾರವಿಲಾಸಿನೀಜನಂ (ಅಶಂಪು. ೨-೨೦). ೮. ಪಡೆ ; ಹೊಂದು ; ತಾಳು : ತೊಂಬತ್ತೊಂಬೈ ಸಾಸಿರ ಯೋಜನಮಂ ನೆಗೆದೀ ಸುರಗಿರಿ ಪೆಂಪನೇಂ ಪುದುಂಗೊಳಿಸಿದುದೊ (ಆಪು. ೭-೬೪) ; ಆರೋಗ್ಯಂ ಮಾಜ್ಪಮೃತಾಹಾರಮನಂಬಿಕೆಗೆ ಬೋನಮೆತ್ತುವ ದಿವಿಜಸ್ತ್ರೀರುಚಿರಭೋಜನಾಂಗಲತಾರವಣೀಯತೆಯನೇಂ ಪುದುಂಗೊಳಿಸಿದಳೋ (ಶಾಂತಿಪು. ೯-೦೯೯) ; ನಾಂದವರೆ ಪತ್ರಿದಂಬರದಿಂದೆಸೆ ವರಸಿಯ ನಿತಂಬಬಿಂಬಮನಬಲಾವೃಂದಮಧಿಕ್ಷಿಸಿ ಹೃದಯದೊಳಂದೇಂ ಪುಂಭಾವಮಂ ಪುದುಂಗೊಳಿಸಿದುದೋ (ಶಂತ್ರಪು.೭-೧೩೦). **ಪುದುಂಗುಳಿಸು**: ೮. ತನು ರುಜೆಯಂ ಪುದುಂಗುಳಿಸೆ ಸಂಸ್ಕೃತಿಭೋಗಮಸಾರಮೆಂದು ನಿಚ್ಚಿನಿಸಿ (ಎಕ. VII. ಶಿಕಾ. ೫೦೯-೨೨: ೨೧೮). **ಪುದುಗೊಳಿಸು** : ೧. ಕರಸ್ಥಳದಲ್ಲಿಪ್ಪ ಇಷ್ಟಲಿಂಗಲಕ್ಷಣವೆಂಬ ಕುಮಾರಮೂರ್ತಿಯಲ್ಲಿ ಪುದುಗೊಳಿಸಿ ಆ ಚಿತ್ಕಲಾ ಲಿಂಗವನ್ನು ಕೊಟ್ಟು ಸಂಬಂಧವ ಮಾಡಿತ್ತು (ಚಕಚ. II. ೩೬) ; ಪುದುಂಗೊಳಿಸಿದಂ, ಪುದುಗೊಳಿಸಿದಂ (ಶಮದ. ೦೬೭ ಕ್ರಿಯೋ).

[ ಪುದುಂಗೊಳ್ + —ಇಸು$_3$ ]

**ಪುದುಕುಜ್** (ಕ್ರಿ). ಕೂಡಿ ಯೋಚಿಸು ; ಜೊತೆಯಾಗಿ ವಿಚಾರ ಮಾಡು : ನಾಮಿರ್ವರ್ ಪುದುವಾಟಿವ್ ನಾಮಿರ್ವರ್ ಪುದುಕುಜಿಯೆವ್ (ಅಂತಿಸೊ. ೦೮-೩೬೪). [ ಪುದು (<ಪುದುವು) + ಕುಜು$_1$ ]

**ಪುದುಗಳ್ಳ** (ನಾ). ಜೊತೆಯ ಕಳ್ಳ : ಪನಿತೆಯ ಮೋಹದಿಂ ಸುತರ ಮೋಹದಿನಿಪ್ಪರೊಳಾವ ಮೋಹದಿಂ ಧನಮನುಪಾರ್ಜಿಸಲ್ಪುಜುಗುವಂ ಕಳವಿಂ ಧನಲಾಭಮಾದೊಡಾ ಪನಿತೆಯುಮಿಷ್ಪರುಂ ಸುತರುಮುಣ್ಬೆಡೆಯೊಳ್ ಪುದುಗಳ್ಳನೆಂದು ಘೋಂಕನೆ ಕದಿದಿಕ್ಕಿ ಪೆರ್ದಸೆಯೊಳಲ್ಲಿರ್ವ[ಪ...]ಪರ್ಪುದು ವಾಗಳಾ [ಲಾ]ವರೇ (ಧರ್ಮಾಮೃ. ೬-೦೩೬).

[ ಪುದು (<ಪುದುವು) + ಕಳ್ಳ$_1$ ]

**ಪುದುಗಿಸು**, ಪುದುಂಗಿಸು, ಹುದುಗಿಸು (ಕ್ರಿ). ೧. ಬೆರಸು : ಕೂಡಿಸು ; ಸೇರಿಸು : ಅವಕೆ ಸಕ್ಕರೆಯುಕ್ಕ ಜಾಲಕ್ಕಿಹುಡಿಯುಮಂ ಪುದುಗಿಸುವುದು (ಸೂದಶಾ. ೩-೩೭). ೨. ಮುಚ್ಚು ; ಅಡಗಿಸು : ಮರೆಮಾಡು : ತೊಟ್ಟಿಲೆಳವಕ್ಕಳನೌಂಕಿ ಜಿಪುಂಟಿ ಪತ್ತಸಮಂ ಪುದುಗಿಸಿ ತಾಯೊಳಾ ತೊರೆದ ಬೀಳ್ಕೊಳೆಯುಂ ಸವಿಮಾರ್ಬಿ ಕೊರ್ಬುಗುಂ (ಶಕಶ. ೩-೨೩); ಒಂದು ಚಿಟಕೆ ನೀಡದೊಳಿರ್ದುಂ ಕಿಜುಮಂಜಿಯುಂ ಕಟುಂಕಿತ್ತೆ ಜಿಂಕೆಯೊಳ್ ಪುದುಗಿಸಿಯುಂ (ರಾಜಶೇಕ್ಕ. ೦೮-೨). Δ **ಪುದುಂಗಿಸು** : ೩. ಇರಿಸು : ಇಪಂ . . . ಭಕ್ತಿಯುಂ ಪುರುಷೋತ್ತಮನೊಳ್ ಪುದುಂಗಿಸಿ ಪದುಳದೊಳಿರ್ಪಂ (ಶಕಶ. ೩-೧೧). **ಹುದುಗಿಸು** : ೨. ಪದುಮಕುಟ್ಮಲ ದೊಳಗೊಂದಳಿ ಲೆಕ್ಕವ ಹುದುಗಿಸಿ ಬರೆದವನಾರೊ ಚತುರೆ ನೀ ಪೇಳು (ಕಂಶಶ. ೬-೧೩೨); ಬೂದಿಯೊಳು ಹುಮುಗಿಸುತ ವೇದಿಸುತ ಮಜ್ಜಿ ಮಾಡಿ ಕಾದಿರ್ದ ಚಿನ್ನದೊಳು ಬೆರಸಿ ಒರೆ ಹಚ್ಚೆ ಊರುತರೆ ಟಿಂಕೆವ (ಸರ್ವಜ್ಞ. ೦೯೦೪) ; ಒಲೆಯ ಬದಿಯಲಿ ತಲೆಯ ಹುದುಗಿಸಿ ಮಲಗಿಕೊಂಡಿಹ ಬೆಕ್ಕಿಗೆ ಕನಸಿನಲ್ಲಿಯು ಇಲಿಯು ಬಾರದು (ಶೀಪು. ೧೩-೦). ೪. ಕುಂದಣಿಸು ; ಕೆಚ್ಚು ; ಕೀಲಿಸು : ಗದಗಿಪ ನವರತ್ನನಿಚಯವ ಹುದುಗಿಸಿದ ಸೌವರ್ಣ ಕಲಶದಿ ಮುದನನಾ ನೆರೆಯೆನಿಸಿ ಮೆಜಿದುದು ಪರಪರೂಥವದು (ವಶಶ. ೯-೦೯).

[ ಪುದುಗು$_1$ + —ಇಸು$_3$ ]

**ಪುದುಗು$_1$**, ಪುದುಂಗಂ, ಹುದುಂಗು, ಹುದುಗು$_1$ (ಕ್ರಿ). ೧. ಸೇರಂ : ಕೂಡು : ಒಳಗೆ ಪುದುಗಿರ್ದ ಪಂಮುಳದೊಳೊಪ್ಪುವ ಲತಾಂತಕುಟ್ಮಲ ದಂತೆ ಪರಗರ್ಭಲಾಂಛನದ ಕಾಂತಿಯಂ ತಳೆವುದು (ತ್ರಿಚಾಶಾ. ೦೮-೦೯) ; ಸವಿರಸ ಪುದುಗಿದ ಕಡುಫಲ ಸಹ ಪಲಸಿಹಾವು (ಕಂಶಶ. ೩-೬೩). ೨. ಅಡಗು : ಮರೆಯಾಗು : ಕುತುಬಳಾಂಭೋರಾಶಿಯೊಳ್ ಸೈಂಧವಂ ಪುದುಗಲ್ ಬಾಡ್ದನೆ (ಸೋಮೇಶ. ೩೭); ಎತ್ತ ಬಲ್ಲರ್ ಸುಜನರೆಲೆ ಪಾರ್ಥ ಕಪಟಿಗಳ ಚಿತ್ತದೊಳ್ ಪುದುಗಿರ್ದ ಮಾಟವಂ (ಕೃಚಾಶಾ. ೨೯-೩೭); ಬೆದಜಿಯಾ ಮಾಧವಿ ಕುಶಲಪತಿಯುರ್ ಪೊನ್ನಂ ಕೊಂಡೋಡಿ ಕಡಗೋಣೆಯೊಳ್ ಪುದುಗಿದರ್ (ಶಕಶ. ೬-೨೬೨ ವ). ೩. ತುಂಬಿಕೊಂಡಿರು; ಹೆಚ್ಚಾಗಿ ಸೇರಿರು : ಪವಕಚವರಿಯಂತ ಟಟ್ಟಾಣಿಮುತ್ತುಗಳ್ ಪುದುಗಿದಾಭರಣ ಗಳಟ್ಟು ವಿಧುಮುಖಿಯೊರ್ವಳೊಪ್ಪಿದಳಾಗ ಬೆಳುದಿಂಗಳಧಿದೇವತೆ ಯುಂದದಲಿ (ಕಂಶಶ. ೬-೦೦೦). ೪. ಉಂಟಾಗು ; ಒದಗು ; ಹುಟ್ಟು : ಇದು ಗಿರಿದೇರನ ದಾಳಿಯ ಭೀತಿಗೆ ಪುದುಗಿದ ನಡುಕವೊ (ತಯಶಾ. ೯-೦೯). ೫. ಒಳಸೇರಿಸು ; ತುಂಬಿಸು ; ಕೂಡಿಸಿ ಇಡು : ರಕ್ತಾರ್ದ್ರಮೌಕ್ತಿ ಕ್ಯರಮಂ ಪೆತ್ತಿಯುದ್ದು ಪೂಣ್ಣೆಸ್ತ್ರಿಯೊಳ್ ಪು[ಶಾಶಾಂ. ಹು]ದಾಗಿ . . . ದುಃಖೋದ್ರೇಕದಿಂದಂ ಬಿಸಿ ಪರಪಸೆ ಬೀಸಿತ್ತು ಕರ್ಣಾಗ್ರದಿಂದಂ (ಶಾಶ ೨೦); ತಲೆಯೊಳು ಬಿಲ್ವದಳಗಳಂ ಪುದುಗಿ ಬಾಯಲ್ಲಿಯುದಕವನು ಮುಕ್ಕುಳಿಸಿ ಕೊಂಡೆಯ್ದುಂದು (ಹಾಶೋಕು. ೯-೪೦). ೬. ಅಡಗಿಸು ; ಮುಚ್ಚು ; ಮರೆಮಾಡು : ಒಡಿವಿಗವಕ್ಕಿಯ ತುಂಡುತುಂಡುಗಳನು ಸಡಿಲದೆ ಸೂಪ್ಪಿನೊಳ್ ಪುದುಗಿ ಪಡಿಗಿಕ್ಕಿ ಹೊತ್ತುವರನಿತಿನಿತೆಂಬುದ ಪಡಿ ಗಾಣ್ಬೊಡೆ ಶಕ್ಯಮಲ್ಲ (ಸೋಶಕ. ೦೯-೬೩); ವಾಯುಸಪ್ರತತಿ ಗಜಿಗಳು ಪೊದಿಸಿ ಮಗ್ಗುಲೊಳಿಟ್ಟು ಕೋಗಿಲೆಯ ಮಜಿಗಳು ಮೈಯೊಳ್ ಪುದುಗಿಕೊಂಡು ಮಜುಕದಿಂದ್ಯೆದೆ ಪಾಲಿಸುತಿರ್ದುವು (ಕೃಚಾಶಾ. ೨೬-೪). Δ **ಪುದುಂಗು** : ೧. ನೀನವನ ಗಂಟಲೊಳು ಸಿಕ್ಕಿ ಕೀಲಿಸಿಯುಗುಳಲ್ ಶ್ಲೇಷ್ಮದೊಳ್ ಪುದುಂಗಿ ನಾನಾನಿರೋಧದಿಂ ಪೊರಳುತಿರೆ (ಅಕ್ಕಪು. ೩ ೬-೩); ಪೊರದರ್ ಕೊಂಗಣಿವರ್ವರಿರಾ ಬಟಕ ಬಲ್ಲಾಳರ್ ಕುಂಬಿಂಬರ್ ತೆಲುಂಗರು

ಪಾಂಡಿಂಗವರೊಳ್ ಪುದುಂಗದಿರವಿಂಬುತಿರ್ದು ಸಾದರದಿಂ ಕನ್ನಡರಾಯು ರಾಕ್ಷಿನೆಗಯಿಸಿ ಕರ್ಣಾಟದೇಶದ ಕರಂ ಹರಿಸಂಬೆತ್ತುದು (ಅಪ್ರತಿ. ೯೯ ೨೨). ೨. ಇದಕಿನ್ನುಪಾಯವಾವುದು ನಮ್ಮ ಯಂತ್ರಮಂತ್ರದ ಬಲ್ಪು ಮೆಲ್ಪಾಯ್ತು ತಂತ್ರವೆಲ್ಲಂ ಪುದುಂಗಿದುದು (ಶ್ರೀಪ. ೦೨-೮೫); ಮಯಣ ದೊಳ್ ಪುದುಂಗಿದ ಚಿನ್ನದೊರೆವುದಿಯಂತೆ ರೂಪಬೀದಿರ್ದ ಬದ್ಧಾತ್ಮ ವರ್ಗದ ದುರ್ಗತಿಯುಂ ಕಳೆದುದೆಂದು . . . ಎಳಸಿ (ಶ್ರೀ೦. ೦-೬೦). ಹುದುಂಗು : ೨. ಪುಲ್ಲೆಯು ಓಡನೋಂದು ಪುಲಿ ಗಂಟಜಿಗೊಟೊಯ್ವುನೆ ಕಂಡು ಪಜ್ಜೆಯುಂ ಮೆಲ್ಲನೆ ಮೆಟ್ಟಿ ಪುಲ್ಲೊಳ್ ಹುದುಂಗಿ ಹುದುಂಗಿ . . . ಕೊರಲ್ಗೆ ಪಾಯ್ದು . . . ಎಟಿದಿಕ್ಕಿದುದಿಕ್ಕಿದಾಣದೊಳ್ (ಚಕ್ರ೦. ೨-೧೮೩).

ಹುದುಗು₁ : ೧. ತಂಪಿನಗ್ಗಳಿಕೆಯು ವಿಘಾತಿಯು ರ್‍ಯೂಂಕಿನಲಿ ಹುದುಗಿದ ವಹ್ನಿಕನ ಕಂಡನಾ ಪಾರ್ಥ (ಕುಮ್ಮಾ.ಕ. ೨೬-೩). ೨. ಬ್ರಹ್ಮನ ಕರಕಮಂಡಲದೊಳಗೆ ಹುದುಗಲಿ ರವಿಯು ಮಚಿಹೋಗಲಿ . . . ಕೊಲಿಬಂದನು ವೈರಿ ಸ್ಯಂಧವನ (ಕುಮ್ಮಾ.ದ್ರೋ. ೮-೫೩) ; ಹಗಂಡ ಕರಿಯಂತೆ ಹುದುಗುತಿರಲು (ಕೃಕುಪ್. ೩-೬೨) ; ಹೃದಯದಲ್ಲಿ ಹುದುಗಿದ್ದ ಗರ್ವ ತಲೆಯೆತ್ತಿ ನಿಂತಿತು (ಚಾಚಕ. ೬೨). ೩. ಕದಡಿತನ್ನಯ ಹೃದಯ ಹೃದಯದ ಹುದುಗಿತವು (ಕೃಕಾಮ. ೨ ೫-೧೩) ; ಕದನರ್ಕಶಕರಿತುರಂಗವಾಹರೊಡನೆ ಹುದುಗಿ ಬರೆ ನೆಲನೀದ ತೆಐದಿ (ಸಪ್ಪುಕ. ೮ ೨೫). ೫. ಕಂಭಗಳ ಹುದುಗಿಕ್ಕಿದ ಕಿಚ್ಚು ಆ ಕಂಭಗಳಗೆ ಒಳಗೆ ಮುಟ್ಟಿದತೂ ಹೊಐಗೆ ಮುಟ್ಟಿದಡೂ ಪ್ರಾಕಪ್ರದುಡ್ಡ ತಪ್ಪದು (ನಿಜಕ. ೨೬೬-೨೮) ; ಹುತವಹ ನೆಡೆಯೊಳು ಹುದುಗಿರ್ದ ಚಿನ್ನಕ್ಕೆ ಹಿತವಾಗಿ ಬಣ್ಣ ಬಂದಂತೆ ಚಿತಭಸ್ಮಲಿಪ್ತ ದೇಹವಿರ್ದುದು ಪೂರಿತ ಹೇಮಕುಂಡಲದಂತೆ (ಮೋಹಕ. ೮-೨೦) ; ಕಂಜಜಪು ದಿವ್ಯಸೌರಭ್ಯವನವರಂಜಯೊಳಗೆ ವಿಗೆ ಹುದುಗಿ ಕಂಜಜ ಕೃಗೈದ ಜೀವವುತ್ರಾಳಿಯೊಲು ರಂಜಿಸಿವರು ಕೋವಲೆಯುದು (ಕಂಕಠ. ೨೯-೬). ೬. "ಹುದುಗು — ಗೋಪನೇ (ಮುಚ್ಚು)" (ಕಟುರಾ) ; ವೃಥ್ವಿಗೆ ಅಪ್ಪುವಿನ ಅಧಿಕವ ಮಾಡಿದರು ಅಗ್ನಿಯು ಹುದುಗಿದರು ವಾಯುವ ಬೀಚಿದರು ಆಕಾಶದಲ್ಲಿ (ಲಂಗಪ. ಕ. ೬೮-೫೯). ೭. ತಡೆದು ನಿಲ್ಲಿಸು ; ಸ್ತಂಭಿಸು: ಪ್ರಾಣಾಪಾನವಾಯುವ ಹುದುಗುವಸು . . . ಅವನಿಗದರಿಂದ (ಕರಕ. ೬೩-೬೩).

ಹುದುಂಗಿಕೊಳ್, ಹುದುಗಿಕೊಳ್ = ೧. ಅವಿತುಕೊಳ್ಳು; ಮರೆ ಯಾಗು : ಅಂತು ಪಾರಸಿಗಂ ಪೇಬ್ದುಪಾಯದಿಂ ಪೊಕ್ಕು ಹುದುಂಗಿ ಕೊಂಡಿರ್ಪುದುಂ (ಶುಕಾಸ. ೯-೧೩೯ ಕ); ಸೀನೆಲ್ಲಿ ಹುದುಗಿಕೊಳ್ಳೆ (ಕೇಶರಾ. ೨೦-೨೮) ; ನನಗೆ ಭೂಮಿಯೊಳಗೆ ಹುದುಗಿಕೊಂಡುಬಿಡುವಷ್ಟು ನಾಚಿಕೆ ಯಾಯಿತು (ಶಾರ್ವರಾ. ೦೬೯). ೨. ಸೇರಿಕೊಳ್ಳು ; ಕೂಡಿಕೊಳ್ಳು : ಈ ವಿಶಾಲವಾದ ಪ್ರೇಮಭಾವನೆಯಲ್ಲಿಯೇ ದಯೆ, ಮಮತೆ, ಸಹನೆ, ಸಹಾನುಭೂತಿ, ಸಮತೆ, ಸಹಿಷ್ಣುತೆ—ಇವೆಲ್ಲ ಹುದುಗಿಕೊಂಡಿವೆ (ಕರ್ಮ. ೬). ಹುದುಗಿರಿಸು = ಅಡಗಿಸಿಕೊಳ್ಳು ; ತಾಳಿಕೊಳ್ಳು ; ಸಹಿಸು : ಮುಖ್ಯಾಯಿ ಹುದುಗಲಾರದ ವಿರಹದುಃಖವನ್ನು ಹುದುಗಿರಿಸುತ್ತ ಗಂಡನ ಮನೆಗೆ ಹೊರಟುಹೋದಳು (ಕಡಾಕ. ೦೯೩). ಹುದುಗಿ ಕೊಳ್ಳು = ಹುದುಗಿರಿಸು : ಶಾಂಭವು ಎದೆಗೆ ಮುಖವನ್ನಿಟ್ಟು ತನ್ನ ದುಃಖವನ್ನು ಹುದುಗಿಸಿಕೊಂಡಳು (ಕಜಮಾ. ೨೨೦). [ ದೇ. ಶ ತಮಿ. ಪೊತುಕ್ಕು ; ಮಲ. ಪೊದಿಯು, ಪೊದಿಕ್ಕ ; ತೆಲು. ಪೊದುಗು, ಪೊದುವು]

ಪುದುಗು₂, ಹುದುಗು₂ (ನಾ). ೧. ಅಧಿಕವಾದುದು ; ಹೆಚ್ಚಾದುದು : ಸೂಳೆಮಾರ್ಗಿ ಬೋಜನಂ ಪೊಸ್ಸಂ ಸೊಗಯಿಸಿ ಬರ್ಣಂ ಅದಬಿಕೊಳ್ ಸೊಗಯಿಪರ್ಗಂ ಪುದುಗಾದುದಜೀಂದರ್ದರ್ಪಿರಿಂ ಪೂಣ್ಣಪರ್ (ಅಕ೭. ೬-೧೩೫ ಕ್ರಿ.ಕ ಕಂಕರದ ಶಕ). ಹುದುಗು₂ : ೨. ಹೊಂದಿಕೆ; ಜೋಡಿ; ಸಾಮರಸ್ಯ : ಇವರೆಲ್ಲರು ಹುದುಗಿದ ಗಂಡಂದಿರು ಭೀಮಗೆ ಹೇಳಿ ಕಂಡುದ ಕಾಬೆನು (ಕೃಕಸೋ. I. ೦೦೩). ೩. ಕೂಟ ; ಸಂಬಂಧ ; ಸ್ನೇಹ : ಪದವನಜಾಯದ ವಾಚಕ ಘಾತಕನ ಇರವು . . . ಈ ಅಜಾವಿನ ಒಳಗನಜಾಯದ ಪೂಜೆನ ಹುದುಗಿಂಗೆ ಬಾದು ಸುರಿಗಾಯ ಸುರಿವವಸ ವಿಧಿಯಂತೆ (ಕುಕಗುಂ. ಕ. ೨೬೩-೬೩); ಕುಜನರ ಹುದುಗು ವಜಾಳ್ಳದಜಾಂತ ಭಾವಿಪವದು ಮಹಾಸಜ್ಜನವಿರೋಧವದೆಲ್ಸಿತು (ಚಕ್ರ. ೩೨-೬೩). ೪. ಬಯಕೆ ; ಆಸೆ : ಬಂದ ಬಂದವರೆಲ್ಲರೂ ಅವಳ ಕಂಡು ಮನಸೋತು ಗಂಡನ ಕೊಂದು ಅವಳ ಕೊಂಡುಹೋಹಾಗ ಹುದುಗು ಹಿಂಗದೆ ಇವರೆಲ್ಲರೂ ಕೋದಾಡಿ ಸತ್ತರು (ಪ್ರಭುಗುಂ. ಕ. ೨೯೪-೦೨). ೫. ಇಡ್ಡಲಿ, ದೋಸೆ ಇತ್ಯಾದಿಗಳು ಮೃದುವಾಗಲು ಹುಳಿ ಬರುವಂತೆ ಬಳಸುವ (ನೀರಿನಲ್ಲಿ ನೆನೆಸಿದ) ಉದ್ದು, ಮೆಂತ್ಯ ಮುಂತಾದ ಪದಾರ್ಥ ಗಳನ್ನು ರುಬ್ಬಿದಾಗ ಉಕ್ಕುವ ವಸ್ತು ; ಸರಿ. 'ಒದಗು₂' ವರಾ.

ಹುದುಗು ಬರು = ಇಡ್ಡಲಿ, ದೋಸೆ ಇತ್ಯಾದಿಗಳನ್ನು ತಯಾರಿಸು ವಾಗ ಉದ್ದು, ಮೆಂತ್ಯ ಮುಂತಾದ ಪದಾರ್ಥಗಳನ್ನು ಸೇರಿಸಿ ರುಬ್ಬಿದಾಗ, ಹಿಟ್ಟು ಹುಳಿ ಬರು,—ಉಕ್ಕಿ ಬರು: ಹದವಾಗಿ ಹುದುಗು ಬಂದರೆ ಇಡ್ಲಿ, ದೋಸೆ ಮೃದುವಾಗಿರುತ್ತದೆ (ಜಾ೩). ಹುದುಗು ಹಾಕು = ಇಡ್ಡಲಿ, ದೋಸೆ ಇತ್ಯಾದಿಯನ್ನು ತಯಾರಿಸುವಾಗ ಹಿಟ್ಟು ಹುಳಿ ಬರಲು ಉದ್ದು, ಮೆಂತ್ಯ ಮುಂತಾದ ಪದಾರ್ಥ ಗಳನ್ನು ಸೇರಿಸು,—ಹಾಕು : ಹುದುಗು ಹಾಕುವಾಗ ಹೆಚ್ಚು ಕಡಿಮೆ ಯಾದರ ಕಾವಲಿಯಿಂದ ದೋಸೆ ಏಳುವುದೇ ಇಲ್ಲ (ಜಾ೩). [<ಪುದುವು]

ಪುದುಗುಡು (ಕ್ರಿ). ಪಾಲು ಕೊಡು ; ಭಾಗವನ್ನು ಕೊಡು : ಪುದುಗುಡ ದಾರ್ಗ್ಗವೀ ಧರೆಯನೊರ್ವ್ವನೆ ದೋರ್ವ್ವಲದಿಂದೆ ಪಾಳಿಪೊಂದ ದಟನಳರ್ಕ್ಕೆಯಿಂ . . . ಪುರೂರವನೆಂಬುದು ರಾಮಚಂದ್ರನೆಂಬುದು- ವೆಜಕೊಂದನೆಂಬುದೆ ನೆಗರ್ತ್ತೆಯ ವಿಕ್ರಮಚಕ್ರವರ್ತ್ತಿಯು (ಕೊಲ್ಲಾಪು. ೬-೮ ; 1128). [ಪುದು (<ಪುದುವು) + ಕುಡು₁(<ಕೊಡು₁)]

ಪುದುಗೂಡು (ಕ್ರಿ). ಜೊತೆಗೂಡು ; ಒಂದರೊಡನೊಂದು ಹೊಂದಿ ಕೊಳ್ಳು : ಮೃದುನುಡಿಗಳ ರಾಜಕೀರ ಕೋಕಿಲಸ್ವರ ಪುದುಗೂಡಿದಂತೆ ಗಾನೆಯರ ಮಧುರಾಳಾಪಗೀತವ ಕೇಳ್ದು ಖಳರಾದು ಚತುರ ಮೆಯ್ಮರೆದಿರ್ದ್ದನೊಲಿದು (ಮೋಹಕ. ೨೨-೬೬).

[ಪುದು (<ಪುದುವು) + ಕೂಡು₁]

ಪುದುಗೊಳ್ 'ಪುದುಂಗೊಳ್' ನೋ.

ಪುದುಗೊಳಿಸು 'ಪುದುಂಗೊಳಿಸು' ನೋ.

ಪುದುಮನೆ, ಹುದುಮನೆ (ನಾ). ಬಚ್ಚಿಟ್ಟುಕೊಳ್ಳುವ ಜಾಗ ; ಮರೆ ಯಾಗುವ ಸ್ಥಳ : ಬಸಿ ಮರಳ್ದೆ ಗುರುಳಿ ನೀ ಪುದುಮನೆಯ ಹಾವನು ಹದ್ದು ಹಿಡಿವರೆ ಮಸಕತವ ಮಾಡುವರೆ (ಕುಮ್ಮಾ.೦. ೨೦-೩೩). ಹುದುಮನೆ : ಬಗೆಯ ಮಾಡಿ ಮಸಿಂಸಿತು ವಿರಕೆ [ ಶಾಕಾಂ. ಚಿತ್ರಕೆ, ಚಿರಕೆಯ ] ದೆಗಡು ಹುದುಮನೆಯಾಯ್ತು (ಕುಮ್ಮಾ.ಗ. ೨-೦೩). [<ಪುದುಗು₁ + ಮನೆ]

ಪುದುಮಾಡ (ನಾ). ಜೊತೆಜೊತೆಯಾಗಿರುವ ಮಹಡಿಯ ಮನೆ ; ಸಾಲುಪ್ಪರಿಗೆ : ಇಲ್ಲಿ ದಿಕ್ಪತಿಗಳೆಲ್ಲಂ ಬಾದು . . . ಆಡುವ ಪಾಡು ವಗ್ಗಳಿಕೆಯೊಳ್ ಚೂಡಾಮಣೀಜ್ಯೋತ್ಸ್ನೆಯೊಳ್ ಪುದುಮಾಡುಗಳ ಮೇಲೆ ಚುಂಚುಲೋವೆಯೊಳ್ ವಿದ್ಯುಲ್ಲತಾಲಾಸ್ಯಮಂ (ಅಜಂ. ೦೦-೨೯).

[ಪುದು (<ಪುದುವು) + ಮಾಡ₁]

ಪುದುವಟ್ಟು 'ಪುದಿವಟ್ಟು' ನೋ.

ಪುದುವಯಕೆ (ನಾ). ಒಳಗಿನ ಆಸೆ : ಅಂತರಂಗದ ಅಪೇಕ್ಷೆ ; ಮನಕೆ ಪುದುವಯಕೆ ಪುದುಂಗೊಳೆ ಸೀತೆ ಬಸಿಜಾಯಾದಳ್ (ರಾಕಥ. ೨೨-೦೦).

[<ಪುದುಗು₁ + ಬಯಕೆ]

ಪುದುವರ್ (ಕ್ರಿ). ಹೊಂದು; ಕೂಡು : ಮನಕಂಟಿತ್ತ ಮತಿಪ್ರಕಾಶ

ಮಸಲಂಪಿಂದಿತ್ತು ಮಾತ್ರಾವ ದುರ್ವ್ಯಸನಂಗಳ್ ಪುಗದಂತೆ ಪೂಣ್ದು ಪುದುವಂದೇಕಾಂಗದಿಂ ತಾನೆ ವ್ಯಸನದೊಳ್ ನಿಂದು ಜಿತಾರಿಪಕ್ಷನದಜಂ ಮುಕ್ತೋತ್ಸವಂ ಕೂರ್ತು ರಕ್ಷಿಸುಗೆ (ಧರ್ಮಾ. ೦-೯); ಪುದುವಂದುದೆಂದು ನೆಲೆವೆತ್ತಿರೆ ಭಾವರಸಂ ರಸಕ್ಷ್ಣಿಯೊಳ್ ಪ್ರದುಪದವಿಟ್ಟಳಕ್ಕುಮೆನೆ ಭಾರತಿ ಬಂದು ಕಳಾಪಿಳಾಸನಾ (ಧರ್ಮಾ. ೦ ೬೨).

[ಪುದು (<ಪುದುವು) + ಪರ್]

**ಪುದುವಾಳ್$_1$** 'ಪುದುವಾಳ್' ನೋ.

**ಪುದುವಾಳ್$_2$.** ಪುದುವಾಳಂ (ನಾ). ಕೂಡಿಕೊಂಡು ಬಾಳುವಿಕೆ; ಹೊಂದಿಕೊಂಡು ಬದುಕುವಿಕೆ: ಭಪವೇಕಾನೇಕಸತ್ತ್ವಾದಿಗುಣದ ಪುದುವಾಳೇಕದಾನೇಕ ಕಾಪೋತ್ಸವವೇಕಾನೇಕ (ಕಬ್ಬಿ. ೫೬); ಪುದುವಾಳ್ಗಾಣದವರ್ಗೆ ತುಂಬಿಸಿಲನಿವ ಬಾಲವೆಣ್ಗಳ್ ಗರ್ವದಿಂ ತಳರ್ದರು (ಅಭ್ಯರೀ. ೩-೨೦). **ಪುದುವಾಳು:** ತರುಚರರ ಪುದುವಾಳು ಲೇಸೇ (ಶಾಂತಿ. ೧೯-೬೨): ಆ ಖಳನ ಕೊರಲ ಕೊಯ್ಸುದೊಡೆ ಹೇಳಲೇನವನೊಳಗೆನಗೆ ಬಳಿಕ ಪುದುವಾಳೆ (ಕುಮಾರ. ೩೩ ೬೮).

[ಪುದು (< ಪುದುವು) + ಬಾಳ್$_2$ (< ಬಾಳ್$_2$)]

**ಪುದುವಾಳು** 'ಪುದುವಾಳ್$_2$' ನೋ.

**ಪುದುವಾಳ್ಕೆ** 'ಪುದುವಾಳ್ಕೆ' ನೋ.

**ಪುದುವಾಳ್ತನ** (ನಾ). = ಪುದುವಾಳ್$_2$: ಪುದುವಾಳ್ತನಂ ಗಡ ಸಖಿರ್ಗಂತಾದೊಡಂ ಮಿತ್ರರೊಳ್ (ರಾಜಶೇ. ೧೩-೨೭).

[ಪುದುವಾಳ್$_2$ + — ತನ]

**ಪುದುವಾಳ್,** ಪುದುವಾಳ್$_1$, ಹುದುವಾಳ್ (ಕ್ರಿ). ೧. ಕೂಡಿ ಬಾಳು: ಸಹಜೀವನ ನಡೆಸು: ಆ ಪಣ್ಣಾಮಹಾಪಾತಕನ ಊರೊ[ಂ] ಕಳೆವುದು ಊರಾತನೆಂದಾತಂ ಪುದುವಾಳ ಸಲ್ಲಂ (ಶಾಸ. IX - i, ೨೪-೩೯; ೪೩೬); ಉಡಿಸಿಯುಮುಡಿಸಿಯುಮಟ್ಟಿಯನೆಡೆಯುಡುಗದೆ ಸಲಿಸಿ ಪಲವುಕಾಲಂ ಪುದುವಾಳ್ದಡಲಾತ್ಮನೊಡನೆ ಪೋಗದೆ ಕಡೆಗಣಿಸುವುದೆಂದೊಡುಳಿದರಂ ನಂಬುವುದೇ (ಅದಿಪು. ೩-೬೦); ಸಾದಿಸುವೆಂ ಫಲ್ಗುಣನಂ ಸಾದಿಸುವೆಂ ಪವನಸುತನ ಬಸಿಱಂ ಪಾ ಕರ್ಣಾ ಮಾಶ್ವಾಸನ ತೆಗೆವೆಂ ನಿರ್ದೋಷಿಗಳಿಕ್ಕ ಯಮಜನೊಳ್ ಪುದುವಾಳ್ಗೆಂ (ಗದಾಯು. ೪-೧೦); ರಾವಣನೊಳ್ ಪುದುವಾಳ್ದು ದೋಷಹರನಕ್ಕೆ ವಿಭೀಷಣನಮರನದಿಯೊಳಘಮರ್ಷಣವಿರ್ದಪೊಲಿರ್ದನಧಿಪನಂಗ ಪ್ರಥೆಯಿಂ (ಶಂಪುರಾ. ೦೨-೬೪). ೨. ದಾಂಪತ್ಯ ನಡೆಸು; ಸಂಸಾರ ಮಾಡು: ಪಿರಿಯರಸಿಯು ಪಟವೇಟದ ಪರಿವಿಡಿ ಮಗುಳ್ದುಂ ಕೊನೆತರ್ದಾ ಸತಿಯೊಡನಿಂ ನರಪತಿ ನಿನ್ನಂಗಾಲೊಳ್ ನರೆ ಒರ್ಬನಮಾತ್ರರೋತ್ತರಂ ಪುದುವಾಳಾ (ಶಾಂತಿಪು. ೯-೩೨); ಪುದುವಾಳ್ವಿನಕ್ಕೆ ಮಾಕ್ತ್ಯಂಗನೆಯೊಳ್ (ಅಜಿಪು. ೨-೬೩); ಅತಂಗೆ ಪರಸೆಯೆಂಬಳ್ ಪಾತಕಿ ಕುಲವನಿತೆ ಬೆಂನಿಸಿ ಕೆಯ್ಯನೆಂಬ ಮಹಾಪಾತಕನೊಳ್ ಪುದುವಾಳ್ದಳ್ (ಶಂಪುರಾ. ೬ ೩೩); ನಾಲ್ವರೊಳ್ ಮಱುವಾಳ್ದು ಕೊಂತಿ ಪಾಂಡುರಾಜಂಗೆ ಕುಲಸ್ತ್ರೀಯೆಂದು ಮನ್ನಿಸಿಕೊಂಬುದೆತ್ತ . . . ದ್ರೌಪದಿ ಪಾಂಡವರಯ್ವರೊಳ್ ಪುದುವಾಳ್ದಳೆಂಬುದೆತ್ತ (ಹರಿವಂ. ೦-೨೯೪). **ಪುದುವಾಳ್$_1$:** ೧. ಚಿಃ ಸವತಿಯೊಳ್ಪುದುವಾಳ್ವುದು ಕಷ್ಟಂ (ಎಪಿ. XVI, ೬೦-೩೨ ; 1081); ಸದಮಲಪಪ್ಪ ಭೂಚರರೊಳು ಮುದದಿಂ ಪುದುವಾಳ್ವಿನು (ಶೀಲಸಂ. ೩-೩೭). ೨. ಒರ್ವಳೊಳ್ ಪುದುವಾಳಲಱಿಯದಕ್ಕೆತುಳಗೆಯ್ದೊರ್ವಳಂ ತರಲ್ (ಉದ್ಭಟ. ೯-೨); ದೇವ ನಿನ್ನೊಳು ಪುದುವಾಳ್ವು ಮೆಱೆವವರ್ಗಶಿಪುಣ್ಯ ಬೇಕು (ಶಬ್ದ. ೨೦:೧೧೩). **ಹುದುವಾಳ್:** ೧. ಅದು ಇದು ಎಂಬುದೆಲ್ಲ ಹದಪರಿತಿಲ್ಲಿ ಹುದುವಾಳ್ಗೆ ! (ಶಂಕು. ೬೦-೪).

[ಪುದು (< ಪುದುವು) + ಬಾಳ್$_1$]

**ಪುದುವಾಳ್ಕೆ,** ಪುದುವಾಳ್ಕೆ, ಹುದುವಾಳಿಕೆ, ಹುದುವಾಳಿಗೆ (ನಾ). ೧. = ಪುದುವಾಳ್$_2$: ಪುದುವಾಳ್ಕೆಗೊಡಂಬಡಲೊಲ್ಲದಿನ್ನುಮವ್ವಳ್ ಸುಮನೀಗಳಾತನನೆ ನೀಂ ಬೆಸಗೊಳ್ ಪುಸಿಯಂ ಸುಯೋಧನಂ (ಪಂಪಭಾ. ೦೩-೮೯); ನಾಂ ಗಡ ಮಧ್ಯಸ್ಥಂ ನುಡಿವಂ ಗಡ ಪುದುವಾಳ್ಕೆಯೆನಗಮ ಪರ್ಗಂ ಸಂಧಾನಂ ಗಡ (ಗದಾಯು. ೬-೪೯). ೨. ದಾಂಪತ್ಯಜೀವನ; ಗಂಡ ಹೆಂಡಿರಾಗಿ ಬಾಳುವಿಕೆ: ಅವಳೆನ್ನಂ ಪರಿಗ್ರಹಿಸಿ ಧನಮಿತ್ರನನುದಾಸೀನಂಗೆಯ್ದುದಱಿನಾನವಳೊಳ್ ಪ್ರೀತಿಯಿಂ ಪುದುವಾಳ್ಕೆಯಿಂದಿರಲ್ (ವಡ್ಡಾ. ೯ ೯೩ ಪ). **ಪುದುವಾಳ್ಕೆ:** ೧. ಬನ್ನಿಮೆನ್ನೊಡನೀಗ ಬೇರೊಂದು ಪುದುವಾಳ್ಕೆಗೆ (ಕಾಯಕ. ೩೬-೯೯). **ಹುದುವಾಳಿಕೆ:** ೧. ಹೀಗೆ ಹುದುವಾಳಿಕೆಯಲ್ಲಿದ್ದ ಮಾಚಯ್ಯನಿಗೆ ಅಂತರಂಗದಲ್ಲಿ ಅವುದೋ ಅತೃಪ್ತಿ (ಕರಿಶ. ೪೦೩). **ಹುದುವಾಳಿಗೆ:** ೧. ಮಸವೇ ಸರ್ಪತನುವೇ ಹೇಳಿಗೆ ಹಾವಿನೊಡತಣ ಹುದುವಾಳಿಗೆ (ಚಕಿಶ. ೧೬೦). [ಪುದುವಾಳ್ + — ಕೆ]

**ಪುದುವಿರ್** (ಕ್ರಿ). = ಪುದುವಾಳ್ ೨: ಆಕೆ ಗಾಳಿಯೊಳ್ ಪುದುವಿರ್ದಳೆಂಬುದೆತ್ತ ಗಾಳಿಗಪಾಕೆಗಂ ಭೀಮಂ ಪುಟ್ಟಿದನೆಂಬುದೆತ್ತ (ಹರಿವಂ. ೧-೨೯ ಪ).

[ಪುದು (<ಪುದುವು) + ಇರ್$_1$]

**ಪುದುವೀ** (ಕ್ರಿ). ಹಂಚಿಕೊಡು; ಪಾಲು ಮಾಡಿಕೊಡು: ಧರೆಯುಂ . . . ಕೈತವದಿಂದ್ಯವರ ಕೆಯ್ಯೊಳೆಟ್ಟಿದುಕೊಂಡುಂ ಕುರುರಾಜಂ ಮತ್ತಮವರ್ಗೆ ಪುದುವಿತ್ತಪನೇ [ಪಾಠಾಂ. ಪುದು ಮಾಡುವನೇ] (ಗದಾಯು. ೪ ೦೦).

[ಪುದು (<ಪುದುವು) + ಈ$_2$]

**ಪುದುವು,** ಪುದು, ಹುದು$_1$, ಹುದುವು$_1$ (ನಾ). ೧. ಗುಂಪು; ರಾಶಿ; ಸಮೂಹ: ಅರಮೆ ಅರಲ್ದ ಬಯಲ್ತಾವರೆಗಳ ಪುದುವುಗಳೊಳರಮೆ ಎಳದಳಿರ ಲತಾಂತರದೊಳುಱದುಱದು ಕಾಡುಗುಮಿರುಳಪ್ಪನಮುಹಿಸುವಿನಿಯಳಂ ಚಕ್ರಾಹ್ವಂ (ಕಾವ್ಯಾ. ೪೭). **ಪುದು:** ೧. ಜಳದೇವತೆಗೆತ್ತಿದ ಪಚ್ಚೆಯ ಪತ್ತಿಗೆಗಳ ಪುದುವೆನಿಪ್ಪುದು ವನಜವನದ ಕೊಡೆಮೇಲೆ ಪಲವು (ಅದಿಪು. ೦೦-೬೩); ಮುನಿಪತಿಯು ತೋರ್ಪ ಬರಿಯಲ್ವಿನ ಪುದುವಿಂ ಬೂದಿವಾಳಿತ್ತಿರ್ದರವಿಂ ಕಾವಮನ ಸುಟ್ಟ ಕಾಡಿದೆನೆ ಕರ್ಗನೆ ಕನಿತುಮ ಮಲದ ಪುಸಿಯ ಮಸಕದಿನಂಗಂ (ಅರ್ಥಶೇ. ೦-೮೩); ನನೆಗಳ ಪೊಸ ಪೂಗಳ ಕಾಯ್ಗಳ ಪುದುವಿಂದೆಸೆದುದಾ ವಿನೂತಂ ಚೂತಂ (ಶಾಂತೀಶ್ವ. ೦೦-೧೦೯). ೨. ಕೂಡುವಿಕೆ; ಸೇರುವೆ; ಹೊಂದಿಕೆ: ಉಱಿದ ಮಾವತ್ತಾಗಳೊಳಮ್ಪುದುವಿನೊಳೆ ಪತ್ತೊನ್ದಿಯನಿಕ್ಕ ಊರ್ಗ್ಗೆ ಅಳವಿಯನಿಕ್ಕಿ ಉಣ್ಬೊ (ಎಕ. III, ಟಿಂ. ೦೯-೮; 907): ಉದಯಿಸುಗುಂ ಶೂಲಂ ವಾತದಿಂ . . . ಆ ತ್ರಿದೋಷದ ಪುದುವಿಂದಾವಿಶ್ರಮಾಗಿ ತೋರ್ಕುಗುಂ ತಮ್ಮೊಳ್ (ಗೋವೈದ್ಯ. ೯-೩); ಮೆಯ್ನವಿರ ತುಱುಗಲೊಳ್ ತೊಡರ್ದೊಗೆದ ಬೆಮರ ಬಿಂದುಗಳ ಪುದುವಿಂ ಪನಿಪುಲ್ವೆರೆದ ಶಾದ್ವಲಸ್ಥಳಿಯನಿಳಿಕೆಯ್ವಳ್ (ಧರ್ಮಾ. ೯-೩೮ ಪ). ೩. ಸಹವಾಸ; ಸಂಬಂಧ; ನಂಟು: ಈ ದುರಾತ್ಮನೊಳ್ ಪುದುವೆನಗೇವುದೆಂದು ಬರುತಿರ್ದಪನಲ್ತೆ ಶರಣ್ಬುಗಲ್ . . . ಆ ವಿಭೀಷಣಂ (ಪುರಾಣ. ೦೨-೬೬); ಆ ದುರ್ಮಾವನಸ್ತ್ವಗ್ರೀವನಾ ಕೋಟಲೆಯ ಪುದುವದೇತರ್ಕೆ (ಶಾಂತೀಶ್ವ. ೨-೦೦೯): ಪಾವಿನ ಪುದುವೊಳ್ಳಿತು ಮಂದಕಳದಂತಾವಳನೊಳು ಕೂಟ ಪತಿಲೇಸು . . . ಕುಂಲಟೆಯೊಳೋವಿ ಬಾಳ್ವ ಬಲ್ಲಿದನಾರೊ (ಸೊಬಗಿ. ೦೯-೬೪); ಮೊದಲು ಸಿಕ್ಕಿದುದೆ ಸಾಕೆಮಗಧಿಕರೊಳೇಕೆ ಪುದು (ಕರಿಶ. ೪೩ ೩೫). ೪. ಒಂಟಿ ಒಡೆತನ ಅಥವಾ ಸಾಮೂಹಿಕ ಸ್ವಾಮಿತ್ವಕ್ಕೆ ಒಳಪಟ್ಟುದು,–ಅಳಪಟ್ಟುದು: ಪೊಲ್ಲಮೆಯುಂ ಗುಣಮುಂ ತಮಗಲ್ಲದೆ ಪುದುವಲ್ಲ ಮತ್ತೆ ತನಗುಂ ಪೆಱರ್ಗಂ (ಕಬ್ಬಿ. ೩-೦೬೯); ಇರ್ವರೊ ವಣಿಕ್ಪುತ್ರರ್ ಪುದುವಿನೊಳ್ ಪರದುವೋಗಿ ಪಿರಿದಪ್ಪ ಪೊನ್ನಂ ಪಡೆದು ಮಗುಳ್ದು ಬಂದು (ಶಂಕರ. ೦೬೦-೪); ಪುದುವೇಕನ್ಯರ್ಗ್ಗವಾನೊರ್ಬ್ಬನೆ

ತಳೆಯಲವಂ ಸಾರ್ವೆನಸ್ಪು . . . ಅಖಿಳಧರಾಭಾರವಮಂ ತನ್ನ ವಿಕ್ರಾನ್ತದ ಒಲ್ಪಿಂ ತನ್ನ ತೋಳೊಳ್ಪುದುವಿಸಿದಂ ವಿಕ್ರಮಾದಿತ್ಯದೇವಂ (ಎಕ. VII, ಶಿಕಾ. ೦೨೯-೮ ; 1077): ತೇಜಂ ಪುದುವಿಲ್ಲೆಸಿಸಿ ವಿರಾಜಿಪ ಪರರಾಜಮಂಡಲಂ ತನ್ನಿಂ ಸಿಸ್ತೇಜಂಬೆತ್ತಿರೆ ಬೆಳಗಿದನೀ ಜಗಮಂ ಭಾನುವೆಬಿಸಂ ಭಾಸುರಥಂ (ಕಂದಂಕಾ. ೨ ೬೩). ೫. = ಪುದಿವಟ್ಟು : ಮುದದಿಂದಯೂರ್ವಪ್ರ್ವದು ಮೊದಲರ್ತ್ಥ ಮನಿತ್ತಿಯೊಲ್ಪು ಸೋವೇಶಂಗೆ (ಶಾಸಿಪ. IX-೧, ೦೬೩ ೬೧ ; 1090). ೬. ಸಾಟಿ ; ಸಮ ; ಸದೃಶವಾದುದು : ಶಿಳಗೊಳದೊಳಗೆಡೆಯಾಡುವ ಕಳಹಂಸನ ಬೀಳಕೇಳಿ ಪುದುವೆನೆ ಮಧುಪಾಳಿಳನೇತ್ರಂ ಧವಳಾಂಗಂ ಪಕಿನ ಕಟ್ಟವುದ ಮೇಲೆ ದಟ್ಟಡಿಯಿಟ್ಟಂ (ಹಂಪಾಚಾ. ೩-೦೨೩) ; ಕರಿ ಕೊರೆಯೊಳ್ ಜವಂಗೆ ಪುದು ಕಾಯ್ಪುನೊಳಗ್ನಿಗೆ ದಾಟಿಗಂ ಸಹೋದರವಳವಿಂ ಸಿಡಿಲ್ಗೆ ವಾದರೊಳ್ ಕಿಳೆ ಕಾಳಿಗೆ (ಅರ್ಜುನ. ೬-೫೬) ; ವೀರತೆಯುಂ ಶೂರತೆಯುಂ ರುಚಿರೋದಾರತೆಯುಂ ಗುಣಗಂಭೀರತೆಯುಂ ಧೀರತೆಯುಂ ಪುದುವಿಲ್ಲೆನೆ ತನ್ನೊಳು ಕೌಸಲ್ಯೆಯ ತನಯಂ ರಾರಾಜಿಸಿ[ಸೆ] (ಕುಮುರಾ. ೯-೨೦). ೭. ಹೋದಿಕೊಳ್ಳುವ ವ್ಯಕ್ತಿ : ಎಸಗೆಯ್ಮಬೀಗೆ ನೋಡೀಗಳಳಾಲತಾಂಗಿ ಪುದುವಲ್ಲಳ್ (ಹಂಪಾಚಾ. ೯-೯೬). ೮. (ಸಂಖ, ರಾಜ್ಯ ಮುಂತಾದುವುಗಳ) ಪಾಲು ; ವಿಭಾಗ ; ಹಿಸ್ಸೆ : 'ಪುದುಗುಡು' ಪರಾ. ೯. ಪ್ರಭಾವ ; ವರ್ಚಸ್ಸು : ನಿನ್ನ ದಂಡನೀತಿಯ ಪುದುವೆ ಪಲಂ ದಂಡತತ್ತ್ವಮೆಂಬುದು ಬೆಚಿತ್ರೆ (ಅಂಕು. ೦೩ ೩೬). ಹುದು₁ : ೨. ಹುದು ನಡೆಮುದಿವರೊಡನೆ ನಮ್ಮಾಲಿ ಕದನವೇ ಕೈಗಟ್ಟುವುದು (ಶುಮ್ಮಾ. ೬-೩); ಜಾಳ ಬೆಲೆ ಹುದುವೆಂದು ಕಲಿತು, ಕಲೆತು (ಹೊಂಗಳು. ೫-೦೩). ೩. ಮಿಸಲು ಮುರಿಯದ ಒಲವಿಗೆ ಬಾಯ್ಬಿಡದೆ ಕಣ್ಣೊಡ್ಡಿ ಹುದುವಿನ ಸವಿ ಬೇಡಿದೆ (ಸಿವಾಗೀ. ೦೦-೦೦೯). ೪. ಕೌರವನೋಳವಾಗೀ ವಸುಧೆ ಹುದುವಲ್ಲ ನೆಲನೇಕಾಧಿಪತ್ಯವಲೆ (ಕುಮ್ಮಾ. ೩-೫೫). ೬. ಹೆಣ್ಣುಕ್ಕಳಬ್ಬರೆನ್ನಾದಿರಿನಲಿ . . . ಇಬ್ಬರೂ ಹುದುವಲ್ಲದಾಕಾರ (ಪಾರಕಿ. ೯-೨೦೨). ೮. ಎಲವೂ ಮಾರುತಿ ನಿಮ್ಮೊಳಗೆ ಕೋಮಳೆಯ ಹುದುವನು ಮೆಚ್ಚ ನಮ್ಮೊಳಗೆಳೆಯ ಹುದುವನು ಬಯಸಿದ್ಯೆ (ಕುಮ್ಮಾ. ೧೧. ೫-೦೨). ಹುದುವು₁ : ೨. ಧರೆ ಸಿರಿಗಳರ್ವರಂ ನರಗೆ ಹುದುವಾಗಲಲೆ ಹರಿ ನಿನ್ನ ಭಕ್ತರಕ್ಷಣೆಗೆ ಬಲವು ನೆರೆಯದಿರಲೆಂದತ್ರಿ ವರಸೂನು ಹರಿಗಿತ್ತಿವರದುಖಾಪವನೊರೆದ (ಶಾಸಂಕ. ೨ ೬೯). ೪. ಸಡುವಣ ಹುದುವಿನ ಹೊರದ ಮಣ್ಣು (ಶ್ವರಂ. ೯೪೩, ೩-೦೩ ; 1160): ಹೆಣ್ಣು ಹೊನ್ನು ಮಣ್ಣೆಂಬ ಜಗದ ಹುದುವಿನ ಒಡವೆಗೆ ಹೊಡೆದಾಡಲೇಕೆ (ಸೋಲಿಕಾ. ೦೬೬-೬೦೦) ; ಹುದುವಿನ ಗಂಡುತನವಿದನು ಶಶಿಪದನೆ ಸುಡು (ಕುಮ್ಮಾ. ೩-೯೩).

ಪುದು ಮಾಡು, ಹುದು ಮಾಡು = ಹೋದಿಸು ; ಕೂಡಿಸು : ಸಂಬಂಧ ಮಾಡು : ದಮ್ಮಯ್ಯ ಎಂದು ಪುದು ಮಾಡಬೇಕಾದ ನೆಂಟಸ್ತಿಕೆ ಸೆಟ್ಟರೇ (ರಾಜಶು. ೦೦೨) ; ಸದುಹೃದಯನ ತಂದುನಿನ್ನವಯುವದಲ್ಲಿ ಹುದು ಮಾಡಿದವನು (ಸೋಹಿಶ. ೨೨ ೩೬). ಪುದುವಾಗು = ೧. ಅತಿಶಯವಾಗು; ಹೇರಳವಾಗು : ಪುದುವಾದ ರಾಗಸಂಪದವು ಹೃದಯದೊಳೆಸೆಯೆ (ಅರುಣ. ೫೧-೨). ೨. ಸೇರು ; ಈಡಾಗು : ಮುದದಿ ತ್ರಿದಶದ್ವೇಷದಿಂದಿಳದಧೋಗತಿಗೆ ಪುದುವಾದರು (ಪಪನೋ. ೦೮-೭). ಹುದು ಹಾಕು = ಜೊತೆ ಮಾಡು ; ಕೂಡಿಸು : ಇದಕ್ಕೆ ಮತ್ತೆ ಬೇರೆ ಮಾತುಗಳನ್ನು ಹುದು ಹಾಕಬಹುದು (ಶಾಚಿಸಂ. ೦೨೯).

[ದೇ.೩ ತಮಿ. ಪೊತು ; ಮಲ. ತುಳು. ಪೊದು ; ತೆಲು. ಪೊತ್ತು]

**ಪುದುವುಗು** (ಕ್ರಿ). ಕೂಡಿಕೊಳ್ಳು ; ಹೊಂದಿಕೊಳ್ಳು : ಸಜ್ಜನಸುಭಾಷಿತದೊಳ್ ಪುದುವೊಕ್ಕು ಸೇಸೆಯಂ ಮನಮೊಸೆದಾಂತು . . . ವಿದೇಹಿಯುಂ ಜನಕನುಮೇಳ್ದರ್ ಮಣಿವಿತಾನವಿರಾಜಿತಮಂ ವಿಮಾನಮಂ (ಹಂಪಾಚಾ. ೬-೯೩) ; ನೆಳನವಿಕಸನದೊಳ್ ಸೂರ್ಯೋದಯಕೆ ಸಹಾಯತ್ವಮನಸೂದುವ ತಣ್ಣೆಲರುಮಲಸದೇಂ ಪುದುವುಗಿತೇ (೦೧ಶಾಕ. ೯-೫೫).

[ಪುದು (< ಪುದುವು) + ಪುಗು (< ಪೊಗು)]

**ಪುದುವೆನಿಸು** (ಕ್ರಿ). ಸಮಾನವೆಂದು ತೋರು; ಸದೃಶವಾಗಿ ಕಾಣು: ತಾರಾವಳಿಯಂ ತಳೆದ ನಭೋರಂಗದ ಭಂಗಿ ತನಗೆ ಪುದುವೆನಿಸಿದುದಂ ಪೇರುರದನದೇಂ ಮೆಚ್ಚಿದನೊ ಹಾರಮನೋಸರಿಸುವಂತೆ ನೃಪಸುತ ನೊರ್ವಂ (ಹಂಪಾಚಾ. ೩ ೩೩). [ಪುದು (<ಪುದುವು) + ಎನಿಸು]

**ಪುದುವೆಱು** (ಕ್ರಿ). ಸಮಾನವಾಗು ; ಸರಿಜೋಡಿಯಾಗು : ಪುದುವೆತ್ತ ಕೃಟಾಳಿಗಂ ಸಮನಿಸಿತ್ತಮ್ಮಿ ಗದಾಯುದ್ಧಮಂ ತ್ರಿದಶರ್ ನೋಡಲೆ ಕೌತುಕಂಬೆರಸಿ ಬಂದಿರ್ದರ್ (ಗದಾಯು. ೬-೬೩).

[ಪುದು (< ಪುದುವು) + ಪೆಱು₁]

**ಪುದುವೋಗು** (ಕ್ರಿ). ಹೋದಿಕೊಂಡು ಹೋಗು; ಜೊತೆಯಲ್ಲಿ ಬಾಳು: ಹೇರೂರ ಹೆಂಗೂಸು ಭವಿಗೆ ಸತಿಯಾಗಳೆ ಎಲೆ ವೈಜಕ್ಕವ್ವೆ ತಾಂ ಭವಿಗೆ ಪುದುವೋಗಳೇ ಎಲೆಲೆ ಮಂಗಳ್ಕರಸಿ ಪಾಂಡ್ಯನೊಳು ಕೂಡಳೇ (ಹುಡಿ೩.೩. ೩-೦೬೯). [ಪುದು (<ಪುದುವು) + ಪೋಗು₁ (<ಪೋ₁)]

**ಪುದ್ಗಲ, ಪುದ್ಗಳ** (ಗು). ೧. ಸುಂದರವಾದ ; ರಮಣೀಯವಾದ. (ನಾ). ೨. ಅಣುವಿನ ತೀರ ಚಿಕ್ಕಭಾಗ; ಪರಮಾಣು. ೩. ದೇಹ; ಜಡಸತ್ತ್ವ : ಭಿಕ್ಷುವು ತನ್ನ ಚಿತ್ತದಿಂದ ಇತರ ಸತ್ತ್ವಗಳ, ಪುದ್ಗಲಗಳ ಚಿತ್ತಗಳನ್ನು ಹೊಕ್ಕು ತಿಳಿಯುವವನು (ಬುತ್ತ೩. ೦೯೯). ೪. ಜೀವಾತ್ಮ; ಸಂಸಾರಿಯಾದ ಆತ್ಮ: "ಪುದ್ಗಲ–ಜೀವನು, ಪರಮಾಣುವು" (೧೦೨೦೩. ೯೩೦). ೫. [ಜೈನ] ಪರಮಾಣುಗಳ ಸಂಯೋಗದಿಂದ ಉಂಟಾದ ಹಾಗೂ ಸ್ಪರ್ಶ, ರಸ, ಗಂಧ ಮತ್ತು ವರ್ಣಗಳನ್ನು ಹೊಂದಿದ ಅಜೀವತತ್ತ್ವ : ಚೇತನಾರಹಿತಮಜೀವತತ್ತ್ವಂ ಅದು ಗತಿಸ್ಥಿತ್ಯವಗಾಹಶರೀರಾದಿವರ್ತನಾಹೇತು ಧರ್ಮಾಧರ್ಮಾಕಾಶಪುದ್ಗಲ ಕಾಲಭೇದದಿಂ ಪಂಚವಿಧಂ (ಅಂಕು. ೦೨-೬೬ ೫); ಅನಂತವರ್ಗಸ್ಥಾನ ಪೋದಲ್ಲಿ ಪುದ್ಗಲರಾಶಿ (ಎಂಬುದು) ಪುಟ್ಟುಗುಂ (ಕಾವ್ಯಾಂ. ೨೮೦); ಬಲು ಕೊಡದೊಳು ತುಂಬಿಮುದಕದಂದದೊಳು ಪುದ್ಗಲ ವಸ್ತುಲೋಕ ತುಂಬಿ ಹುದು (ಕರ೪. ೬೬ ೩೮); ಅಜೀವವು ಪುದ್ಗಲ . . . (ವಿಶ್ರಾಂತಿಯನ್ನುಂಟು ಮಾಡುವ ವಸ್ತು), ಆಕಾಶ ಮತ್ತು ಕಾಲ ಎಂದು ಐದು ವಿಧ (ಶಾಕತ್ತ. ೨೫೬). **ಪುದ್ಗಳ** : ೫. ನೆಲಸದ ಯೋನಿ ಮುಟ್ಟದೆಡೆ ಕಾಣದ ಕಾಲ ಮುತತ್ತ್ವದೊಳ್ ಮಾಸಂ ನಿಲಿಸದ ಭಾವಮಳ್ಕಿಸದ ಪುದ್ಗಳವಿಲ್ಲೆನೆ ಕರ್ಮ ಬಂಧದಿಂ . . . ತಿರಿತಪ್ಪುವು ಜೀವರಾಶಿಗಳ್ (ಸುಕುಮಾ. ೫-೬೨). [ಸಂ.]

**ಪುದ್ಗಲದ್ರವ್ಯ** (ನಾ). [ಜೈನ] ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲಗಳೆಂಬ ಆರು ಬಗೆಯ ದ್ರವ್ಯಗಳಲ್ಲಿ ಒಂದು : ಜೀವದ್ರವ್ಯ ಪುದ್ಗಲದ್ರವ್ಯ ಧರ್ಮದ್ರವ್ಯ ಅಧರ್ಮದ್ರವ್ಯ ಆಕಾಶದ್ರವ್ಯ ಕಾಲದ್ರವ್ಯಮೆಂಬ ಷಡ್ದ್ರವ್ಯಂಗಳ ಗುಣಪರ್ಯಾಯಮುಮಂ . . . ವ್ಯಾಖ್ಯಾನಂಗೆಯ್ಕುಲ್ (ಸುಕುಮಾ. ೩-೩೯ ೫); ಅಣುಗಳ ಪುಂಜವೇ ಪುದ್ಗಲ ದ್ರವ್ಯವು (ಹಿಂದಕಾ. ೬೨). 'ಷಡ್ದ್ರವ್ಯ' ಪರಾ. [ಸಂ.]

**ಪುದ್ಗಲಪುಂಜ** (ನಾ). [ಜೈನ] ಪುದ್ಗಲಪರಮಾಣುಗಳು ಸೇರಿ ಉಂಟಾದ ದ್ರವ್ಯ : ಪುದ್ಗಲ ಪರಮಾಣುಗಳು ಒಂದಕ್ಕೊಂದು ಸೇರಿದರೆ, ಪುದ್ಗಲಪುಂಜಗಳೆನಿಸುವುವು. ಇವುಗಳಿಗೆ ಪುದ್ಗಲಸ್ಕಂದಗಳೆಂದೂ ಕರೆಯುವರು (ಕೈಪಶ. ೯೨೦). [ಸಂ.]

**ಪುದ್ಗಲವಿಪಾಕಿ** (ನಾ). [ಜೈನ] ಮೂರು ಬಗೆಯ ನಾಮಕರ್ಮಗಳಲ್ಲಿ ಒಂದು ಪ್ರಕಾರ : ಜೀವವಿಪಾಕಿಯುಂ ಪುದ್ಗಲವಿಪಾಕಿಯುಂ ಕ್ಷೇತ್ರ ವಿಪಾಕಿಯುಮೆಂದಿಂತು ನಾಮಕರ್ಮಂ ತ್ರಿವಿಧಮಕ್ಕುಂ (ಗೂಮ್ಮಸಾ. ೨-೭).

[ಸಂ. ಪುದ್ಗಲವಿಪಾಕಿನ್ ?]

**ಪುದ್ಗಲಾಸ್ತಿಕಾಯ** (ನಾ). [ಜೈನ] ಜೀವ, ಪುದ್ಗಲ, ಧರ್ಮ, ಅಧರ್ಮ ಮತ್ತು ಆಕಾಶ ಎಂಬ ಐದು ಬಗೆಯ ಅಸ್ತಿಕಾಯಗಳಲ್ಲಿ ಒಂದು : ಜೀವಾಸ್ತಿಕಾಯಂ ಪುದ್ಗಲಾಸ್ತಿಕಾಯಂ ಧರ್ಮಾಸ್ತಿಕಾಯಂ ಅಧರ್ಮಾಸ್ತಿಕಾಯಂ ಆಕಾಶಾಸ್ತಿಕಾಯಮೆಂಬ ಪಂಚಾಸ್ತಿಕಾಯಮನಿಕಾಯ ಮುಮಂ . . . ವ್ಯಾಖ್ಯಾನಂಗೆಯ್ಯಲ್ (ಸುಕುಮಾ. ೩-೩೯೪). 'ಪಂಚಾಸ್ತಿಕಾಯ' ಪರಾ. [ಸಂ.]

**ಪುದ್ಗಳ** ' ಪುದ್ಗಲ ' ನೋ.

**ಪುನಃ** (ಅ). ಮತ್ತೆ ; ಮರಳಿ : ನೀನು ಪುನಃ ಇಲ್ಲಿಗೆ ಬಾರದು ಹೋಗು (ಕೂಶ).

**ಪುನಃಪುನಃ** (ದ್ವಿರುಕ್ತಿ) : ಗೀತೆಯ ಪುಟಗಳನ್ನು ಪುನಃಪುನಃ ತಿರುವಿದಾಗ ಮುಖ್ಯಸಂದೇಶ ' ಕರ್ಮಯೋಗ ' ಎಂಬುದು ಸ್ಫುಟವಾಗುತ್ತದೆ (ಧರ್ಮಸಾ. ೦೧೩). [ಸಂ. ಪುನರ್]

**ಪುನಃಶ್ರವಣ** (ನಾ). ಮತ್ತೆ ಕೇಳುವುದು ; ಇನ್ನೊಂದು ಸಾರಿ ಕೇಳುವುದು : ಹಿಂದೆ ಹೇಳಿದ ಎಷ್ಟೋ ಕತೆಗಳ ಪುನಃಶ್ರವಣವಾಯಿತು (ಮೂರುತಾ. ೦೯೦). [ಸಂ.]

**ಪುನಃಸಮಾಗಮ** (ನಾ). ಮರಳಿ ಕೂಡುವಿಕೆ ; ಪುನರ್ಮಿಲನ : ಹೇಮಕೂಟದ ದಿವ್ಯಾಶ್ರಮದಲ್ಲಿ ದಂಪತಿಗಳ ಪುನಃಸಮಾಗಮ (ಕಾವ್ಯಸ. ೩೦). [ಸಂ.]

**ಪುನಃಸ್ವಯಂವರ** (ನಾ). ಒಮ್ಮೆ ಸ್ವಯಂವರವಾಗಿ ಮದುವೆಯಾದವಳಿಗೆ ಮತ್ತೊಮ್ಮೆ ನಡೆಸುವ ಸ್ವಯಂವರ : ಸೃಜಿಸಿದನು ಸುದ್ದಿಯನು ನೃಪಭೂಭುಜರ ನಗರಂಗಳಲಿ ನಿಷಧನ ನಿಜಪನಿತೆಗೆ ಪುನಃಸ್ವಯಂವರವೆಂದು (ಕೊರಟಾ. ೩-೨-೧೭). [ಸಂ.]

**ಪುನಕಾಲ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಜಗನಜ × × ಬಟೆಯ ಪುನಕಾಲರ ಮಗಂ ಜೂನೀವನ ತಮ್ಮಂ ಚೋಟಿಪೆರ್ಮಾಡಿಯರ ಮಟಲಾರದ ಗಣ್ಣ × × ಸಾವಿತರದೇವ (ಎಇ. II. ೩೭೬-೨ : ಸಂ. 1015). [?]

**ಪುನಗು** 'ಪುಣುಗು' ನೋ.

**ಪುನರಪಿ₁** (ನಾ). ೧. ಮತ್ತೊಂದಾವರ್ತಿ ; ಇನ್ನೊಂದು ಸಲ,— ಬಾರಿ : ಬಟ್ಟೆಯ ಮೆಟ್ಟು ಹೋಗಿ ಪುನರಪಿಯಾಗಿ ತಿರಿಗಿದಲ್ಲಿ ಊರ ಬಾಗಿಲ ಬಟ್ಟೆಯೊಂದಬಿಲ್ಲಿಯೇ ಹೋಗಬೇಕು (ಮುದೇವ. ೨೮೭-೩೩); ಹಿತ್ತಲ ಸೊಪ್ಪಿಂಗೆ ನೀರ ಹೊಯಿದು ಮತ್ತೆ ಪುನರಪಿಯಾಗಿ ಕೊಯಿವವನಂತೆ ಭಕ್ತರಿಗೆ ಬೋಧಿಸಿ ಹೇಳಿ ಚಿತ್ರವೃತ್ತಿಯನಜಿದು ಬೇಡುವಂಗೆ ಇನ್ನೆತ್ತಣ ಮುಕ್ತಿ (ಶಿಂಶತ. ೪. ೩೯೯-೦೬). ೨. ಮತ್ತೆ ಮಾಡುವ ಪರಾಮರ್ಶೆ ; ಪುನರ್ವಿಮರ್ಶೆ : ಕುಜುಹಿನಿಂದ ಅಜಿದಿಹೆನೆಂದಡೆ ಆ ಅಜಿವು ಪುನರಪಿಗೊಳಗಾಯಿತ್ತು (ಬೋಳಬಸ. ೭೩-೨೮೭). [< ಪುನರಪಿ₂]

**ಪುನರಪಿ₂** (ಅ). ಮರಳಿ ; ಮತ್ತೆ ; ಪುನಃ : ಜನಮೇಜಯನು ಮುನ್ನಿತ್ತ ಅಗ್ರಹಾರವಿದಂ ಪುನರಪಿ ಸಮಗ್ರವಲ್ಲುದ್ಧರಿಸಿ (ಐಕಹಿ. ೫೬-೯೩); ಕರ್ಣನು ಭೀಮಸೇನನ ರಥವನಬಿಸುತ ಬಂದು ಪುನರಪಿ ಕಾಳಗವ ಓಡಿದ (ಕುಮಾರವ್ಯಾ. ೦೩-೯೧) ; ನಾನು ಪುನರಪಿ ಅಲ್ಲಿಗೆ ಹೋದರೆ ಫಲವೇನು? (ಮುಂಜಾನೆ. ೨೬). [ಸಂ.]

**ಪುನರಾಗಮನ** (ನಾ). ಮರಳಿ ಬರುವಿಕೆ : ಬೇಸಿಗೆ ಮಳೆಗಾಲ ದಂತಿರ್ಮಳಾ ಉಲನೆ ಸರಸ ಪುನರಾಗಮನದ ಶರತ್ಸುಸ್ಮಿತೆಗೆ ತಪಮಿರ್ದ ನೆಲಮಣ್ಣನಂತೆ (ಶ್ರೀರಾಮಾಯಣ. ೫೯-೦೬೦೬). [ಸಂ.]

**ಪುನರಾವರ್ತನೆ** (ನಾ). ಮತ್ತೊಂದು ಸಲ ಮಾಡುವುದು ಅಥವಾ ಆಗುವುದು : ಪಾಠದ ಪುನರಾವರ್ತನೆಯನ್ನು ಪ್ರಶ್ನೋತ್ತರಗಳ ಮೂಲಕವಾದರೂ ಮಾಡಿಸಬಹುದು (ಶಿಕ್ಷಣ. ೨೨೬). [ಸಂ. ಪುನರಾವರ್ತನ]

**ಪುನರಾವರ್ತಿಸು** (ಕ್ರಿ). ಮಾಡಿದುದನ್ನೇ ಮತ್ತೆ ಮಾಡು ಅಥವಾ ಆದುದೇ ಪುನಃ ಆಗು : ಆ ಅಂತಸ್ತುಗಳನ್ನೆಲ್ಲಾ ಇಂದಿನವರೂ ಪುನರಾವರ್ತಿಸುವುದು ವ್ಯರ್ಥ (ಶಿಕ್ಷಣ. ೦೨೩). [ಪುನರಾವರ್ತನೆ+—ಇಸು₃]

**ಪುನರಾವೃತ್ತಿ** (ನಾ). ಮತ್ತೊಂದು ಸಲ ಮೊದಲಿನಂತೆ ಆಗುವಿಕೆ ಅಥವಾ ಮಾಡುವಿಕೆ : ಸಾಗರದ ಸಂಪರಿಪೂರ್ಣಜಲದೊಳ್ಸೇರಿದ ನದಿಗಳಿಗಿನ್ನು ಪುನರಾವೃತ್ತಿದೋರದ ತೆರದಿ (ಗಗಕಾ. ೦೭-೩೭) ; ಇಂತಹವರ ಪುನರಾವೃತ್ತಿಯಾಗದಂತೆ ಎಚ್ಚರ ತೆಗೆದುಕೊಳ್ಳಿರಿ (ರಂಗರೋ. ೩೦). [ಸಂ.]

**ಪುನರುಕ್ತ** (ಗು). ೧. ಮತ್ತೆ ಹೇಳಿದ ; ಪುನಃ ನುಡಿದ. (ನಾ). ೨. ಇನ್ನೊಮ್ಮೆ ಹೇಳಿದುದು ; ಮತ್ತೆ ನುಡಿದುದು : ಮರನಲ್ಲದೆ ತಿಲಕಂ ಖೇಚರರ್ಗಂ ನೃಪನದಟ ಮೇಗೆ ಚಕ್ರಂ ಪುಟ್ಟಿರ್ದಿರೆ ಮೊದಲಿಗಣ್ಯ ಪುಣ್ಯಾಂತರಕ್ಕೆ ಪುನರುಕ್ತಮಾದುದೇಂ ವಿಸ್ಮಯಮೋ (ಶಾಂತಿಪು. ೨-೩೬) ; ಪೋಗೆ ಸಿರಿ ಬಂಧುಪಧೂತತಿ ವೃದ್ಧರಾಜ್ಯಮೆಂದೆಳಸದೆ ಕೂಡೆ ಬೇರ್ಪಡೆ ಬಟಿಕ್ಕೆ ವನಾನುಬಂಧಮೊಂದು ಮಾತು ಭೂತಳಭರಧಾರಣಕ್ಷಮಭುಜಾಬಳ ಪೇಟು ಪುನರುಕ್ತಮಲ್ಲವೇ (ಚಂದ್ರಪು. ೨-೩೦). ೩. = ಪುನರುಕ್ತಿ ೨ : ಪುನರುಕ್ತಂ ಸಂಧಿದೋಷಂ ಸ್ವರತತಿ ಪದಪೂರ್ಣೋಕ್ತಿದೋಷಂಗಳೆಂದೊಬಿ ನಿತಂ ದೋಷಂಗಳಂ ಬಿಟ್ಟು (ಶಬ್ದಮ. ೦೭-೩೯). [ಸಂ.]

**ಪುನರುಕ್ತಿ** (ನಾ). ೧. ಹೇಳಿದುದನ್ನೇ ಮತ್ತೆ ಹೇಳುವುದು. ೨. [ಕಾವ್ಯವಿ] ಒಂದು ವಾಕ್ಯದೋಷ; ಅನಗತ್ಯವಾದ ಶಬ್ದಾರ್ಥಗಳ ಪುನರುಚ್ಚರಣೆ : ಪುನರುಕ್ತಿ—ವಿಶೇಷ ಪ್ರಯೋಜನವೇನೂ ಇಲ್ಲದೆ ಒಂದೇ ಅರ್ಥವುಳ್ಳ ಒಂದೇ ಪದವನ್ನು ಅನೇಕ ಸಾರಿ ಉಪಯೋಗಿಸಿರುವುದು (ಕೈಪಿಡಿ. ೨೨೬). ೩. (ಅಲಂ) ಬೇರೆ ಮಾತು : ನಾಲಗೆಗೆ ಪುನರುಕ್ತಿಯಾಗೆ ಪುರಂಧ್ರಿ ನಗುವಳಿಲೆ ಮೊಲೆ ನಾವ್ ನುಡಿದೆಡಹೆಂಬುದು ಮೇಲುಮಾತಾಗಿಹುದು (ಕೊರಟಾ. ೩-೬-೯೦). [ಸಂ.]

**ಪುನರುಚ್ಚರಿಸು** (ಕ್ರಿ). ಹೇಳಿದುದನ್ನು ಹೇಳಿದಂತೆಯೇ ಮತ್ತೆ ಹೇಳು : ಪರದೇಶದವರೂ ಅವರ ಅಭಿಪ್ರಾಯವನ್ನು ಮಕ್ಕೀಕಾಮಕ್ಕಿ ಪುನರುಚ್ಚರಿಸುವ ನಮ್ಮ ದೇಶದವರೂ ಹೇಳುವ ಮಾತುಗಳನ್ನು ನಾವು ನಂಬಬೇಕಾಗಿಲ್ಲ (ದೇಶಕ್ಕ. ೯೨); ಒಲೆನಿನ್ ಸಂತೋಷದಿಂದ ಆ ಮಾತುಗಳನ್ನೆಲ್ಲಾ ತನ್ನಷ್ಟಕ್ಕೆ ತಾನು ಪುನರುಚ್ಚರಿಸಿಕೊಂಡನು (ಮರೆಪಾ. ೨೦೦).
[ ಸಂ. ಪುನರುಚ್ಚರಣ + — ಇಸು₃ ]

**ಪುನರುಜ್ಜೀವನ** (ನಾ). ಮತ್ತೆ ಏಳಿಗೆಯಾಗುವಂತೆ ಮಾಡುವಿಕೆ ; ಪುನರುದ್ಧಾರ : ಕೋರಿಯದಲ್ಲಿ ಲೋಕಮತಾನುಸಾರವಾಗಿ ಕೋರಿಯದ ರಾಜಮನೆತನದ ಪುನರುಜ್ಜೀವನಕ್ಕೊಪ್ಪಬೇಕಾಯಿತು (ಜಗಸಂ. ೩೦). [ ಸಂ. ]

**ಪುನರುಜ್ಜೀವಿತ** (ನಾ). ಪುನರುದ್ಧಾರ ಹೊಂದಿದುದು ; ಏಳಿಗೆಯನ್ನು ಪಡೆದುದು : ಆರ್ಯಸಂಸ್ಕೃತಿಯು ಪುನರುಜ್ಜೀವಿತವಾಗಿ . . . ಪುರುಷರತ್ನಗಳು ಎಲ್ಲಾ ವಿಧವಾದ ಕಾರ್ಯಗಳಲ್ಲೂ ಪ್ರವರ್ತಿಸತೊಡಗಿದರು (ರಾಕ್ಷೋದ. IV ಶ್ರೀಸ್ವಾಮಿ). [ ಸಂ. ]

**ಪುನರುಜ್ಜೀವಿಸು** (ಕ್ರಿ). ಮತ್ತೆ ಪ್ರಚಾರಕ್ಕೆ ತರು ; ಪುನಶ್ಚೇತನಗೊಳಿಸು : ಱ ಮತ್ತು ೞ ಕಾರಗಳನ್ನು ಪುನರುಜ್ಜೀವಿಸುವ ವಿನಮ್ರ ಪ್ರಯತ್ನಗಳು . . . ಪಾಂಡಿತ್ಯಪ್ರಿಯಮಂಡಿತಮಂಡಳಿಯಿಂದ ನಡೆದಿದೆ (ದ್ರಾಪಿಪಿ. ೩೩೭). [ ಪುನರುಜ್ಜೀವನ + — ಇಸು₃ ]

**ಪುನರುತ್ಥಾನ** (ನಾ). ಚೈತನ್ಯವನ್ನು ಹೊಂದುವಿಕೆ ; ಅಭಿವೃದ್ಧಿಗೆ ಬರುವಿಕೆ : ಧಾರ್ಮಿಕಕ್ಷೇತ್ರದಲ್ಲಿ ದಕ್ಷಿಣಹಿಂದುಸ್ಥಾನದಲ್ಲಿ ಹಿಂದೂಧರ್ಮದ ಪುನರುತ್ಥಾನವು ಜೋರಿನಿಂದ ನಡೆದಿತ್ತು (ಜಾಜಿ. ೦೩೯) ; ಹಿಂದೂಧರ್ಮವು ಪುನರುತ್ಥಾನವಾದ ಮೇಲೆ ಅಲ್ಲಿಗೆ ವೈದಿಕಮತವೂ ಹೋಗಿ, ಅಲ್ಲಿ ಹಿಂದೂರಾಜರು ರಾಜ್ಯ ಕಟ್ಟಿದರು (ಬಿಳಿಪ. ೨೯). [ ಸಂ. ]

**ಪುನರ್ಘಟನೆ** (ನಾ). ಮರಳಿ ವ್ಯವಸ್ಥೆ ಮಾಡುವಿಕೆ : ಹೊಸ ಸಾಧಾರಣ ಚುನಾವಣೆ ನಡೆದು ಪರಿಷತ್ತಿನ ಪುನರ್ಘಟನೆಯಾಗುವವರೆಗೆ ರಾಜ್ಯಪಾಲರು . . . ನಿರ್ದಿಷ್ಟವಾಗಿರುವ ಕಾರ್ಯಕ್ರಮವನ್ನು ಕೈಕೊಳ್ಳಬಹುದು (ಭಾರಾಸ. ೨೬೪); ಆರ್ಥಿಕ, ಸಾಮಾಜಿಕ ಹಾಗು ರಾಜಕೀಯ ಪುನರ್ಘಟನೆಯಾಗದೆ ಹೋದರೆ ನಮ್ಮ ಜೀವನಸಾಹಿತ್ಯಗಳ ವಿಕಾಸ ಬರಿ ಒಂದು ಮಧುರಸ್ವಪ್ನ. ಆದರೆ ಈ ಪುನರ್ಘಟನೆಯ ರೀತಿ ಯಾವುದು ? (ಶಕ್ತಿಕಾ. ೧೬).
[ ಸಂ. ಪುನರ್ಘಟನಾ ]

**ಪುನರ್ಜನ್ಮ** (ನಾ). ಮರುಹುಟ್ಟು ; ಮತ್ತೊಂದು ಜನ್ಮ : ಮುನಿ ದೀಶಂ ತವೆ ಸುಟ್ಟು ಮುಂ ಕರುಣದಿಂದಿತ್ತಂ ಪುನರ್ಜನ್ಮಮಂ ನಿನಗೆ (ಕಂಕಾ. ೪-೩೧) ; ನಿರ್ಜರೇಂದ್ರನ ಸೂನು . . . ವೈವಮಡಿದು ಬಿದ್ದನಿಳೆ ಯೊಳ್ ಪುನರ್ಜನ್ಮಮೆನೆ ಕೂಡೆ ಚೇತರಿಸಿ ನರಸೆಜ್ಜು ಕಡಿದನಾತನ ಧನು ವನು (ಕೃಪಿ:ಕಾ. ೨೩-೩೩) ; ಪುನರ್ಜನ್ಮ ಪಡೆಯಿತು ! ಹರಿದು ಹಂಚಿ ಹೋದ ನಾಡು ಮತ್ತೆ ಒಂದಾಯಿತು ! (ಶಿಶಿ. ೬೯-೦).
[ ಸಂ. ಪುನರ್ಜನ್ಮನ್ ]

**ಪುನರ್ಜಾತ** (ಗು). ೧. ಮರಳಿ ಹುಟ್ಟಿದ ; ಹೊಸಜನ್ಮವನ್ನು ಪಡೆದ. 'ಅಪುನರ್ಜಾತ' ಹೋ. (ನಾ). ೨. ಸಂಸ್ಕಾರದಿಂದ ಹೊಸ ಜೀವನವನ್ನು ಪಡೆದವನು : "ಪುನರ್ಜಾತಃ —ಶಿವದೀಕ್ಷೆ ಹೊಂದಿದ ವನು, ಗುರುಕೃಪೆ ಪಡೆದವನು" (ಕರಕಾ. ೨೪-೬) ; ಪೂರ್ವವಳಿದು ಪುನರ್ಜಾತರ ಮಾಡಿದೆವೆಂಬರಿ ಪೂರ್ವವಳಿದುದಕ್ಕೆ ಭವ ಹಿಂಗಬೇಕು (ಸೋಮಸೂ. ೩೯-೦೩೩) ; ನರ ಪಶು ಪ್ರಾಣಿಗಳಿಗೆ ಸುಜ್ಞಾನದೀಕ್ಷೆಯನಿತ್ತು ಪೂರ್ವಗುಣವಳಿದು ಪುನರ್ಜಾತರೆನಿಪ (ಪವಸೋ. ೦೪-೧೬). [ ಸಂ. ]

**ಪುನರ್ದತ್ತಿ** (ನಾ). ಮರಳಿ ಮಾಡುವ ದಾನ ; ಪುನಃ ಕೊಡುವ ದಾನ : ಆನೆಸೆಜ್ಜೆಯ ಬಸದಿಗೆ ತಾಂಬ್ರಶಾಸನಮರ್ಯ್ಯಾದೆಯಿಂದಾಳ್ದ ಗುಡಿಗೆಱೆಯ ಕಮ್ಮತಪಳಗಾಗಿಯುಱ ಪೊಲನುಳ್ಳನಿತುಮನಿನ್ನಿರಿಂ ಮೇರೆ ಯುಮ್ಮ ಧರ್ಮಮಾಗಿ ಪುನದ್ದತ್ತಿ ಮಾಡಿ ಶ್ರೀನನ್ದಿಪಣ್ಡಿತದೇವರ್ಗ್ಗೆ ಹಸ್ತೋದಕಂಗೆಯ್ದು ಕೊಟ್ಟೆವು (ಸೌಇಇ. XX. ೪೬-೪೦ ; 1072); ಪುನರ್ದತ್ತಿಯಾಗಿ ನಾಲ್ಕುಂ ಸುಂಕದೊಳವೆರಡೊಲ್ದೆಱ ಕೊಡವೀಸವ ಸಹಿತಮಾಗಿ ಬಿಟ್ಟ ಉಪ್ಪಿನ ಪೆ[ಂಟೆ] ಅಱುವತ್ತು (ಸೌಇಇ. XX. ೬೦-೨೪ ; 1088). [ ಸಂ. ]

**ಪುನರ್ದರ್ಶನ** (ನಾ). ಮತ್ತೆ ಕಾಣುವಿಕೆ : ಪುನಃ ಮಾಡುವ ಭೇಟಿ : ಪುನರ್ದರ್ಶನಮಕ್ಕೆಂದುಂ ಯಶಮಕ್ಕೆ ವಿಜಯಮಕ್ಕೆಂದೊಳ್ಪೆಕ್ಕೆಂದು . . . ಅಚ್ಯುತಕಲ್ಪಕಚ್ಯುತೇಂದ್ರಂ ಪೋದಂ (ಶಾಂತಿಪು. ೭-೧೦೬). [ ಸಂ. ]

**ಪುನರ್ಧಾರೆ** (ನಾ). ಮರಳಿ ಧಾರೆಯೆರೆದು ಕೊಡುವಿಕೆ ; ಪುನರ್ದತ್ತಿ : ಶ್ರೀಮೂಲಸ್ಥಾನಭೋಗೇಶ್ವರದೇವರಿಗೆ ಸರ್ವ್ವನಮಸ್ಯವಾಗಿ ಪುನರ್ಧಾರೆಯ ಮಾಡಿದರು (ಸೌಇಇ. XX. ೦೯೩-೮ ; 1215).
[ ಸಂ. ಪುನರ್ಧಾರಾ ]

**ಪುನರ್ನವ** (ಗು). ೧. ಮತ್ತೆ ಹೊಸತಾಗುವ. (ನಾ). ೨. ಮರಳಿ ಹೊಸತಾದುದು ; ಪುನಃ ಹುಟ್ಟಿ ಬೆಳೆದುದು : ಉಡಿದೀ ನಮ್ಮವರ ತೊಡರ್ಬಿಂದು ನೀಂ ಪುನರ್ನವಂ ಮಾಡಿನ್ನುಂ (ಶಾಂತಿಪು. ೭-೦೦೪). ೩. ಹೊಸ ಚೈತನ್ಯವನ್ನು ಪಡೆದವನು : ದಿನದಿನದ ಜಾಡ್ಯದಲ್ಲಿ ಮೊಸತೇನೊ ಒಂದು ಚೈತನ್ಯ ಚಿಗುರಿ ಪುನರ್ನವನಾಗಿ ಅವನು ಕೆಲಸಕ್ಕೆ ಮರಳಿದರೆ ಶ್ರೇಯಪಲ್ಲವೆ ? (ಗಾಳಿಕ. ೫೬). ೪. ಉಗುರು ; ನಖ : "ಕಾಮಾಂಕುಶಾಃ, ಕರರುಹಾಃ (ಪುನರ್ನವಾಃ) . . . ಸುಖರಾಃ—ಈ ೫ (೬?) ಉಗುರ್" (ಕರಾಯು. ೬೯-೩೫೭). [ ಸಂ. ]

**ಪುನರ್ನವಿ** (ನಾ). ಒಂದು ಬಗೆಯ ಸಸ್ಯ : ಬಿಳಿಯ ಗಣಜಿಲೆ ; ಕೊಮ್ಮೆಗಿಡ: "ಗಣಜಿಲೆ ಪುನರ್ನಪಿ ಶಿವಾಟಿಕೆಯೆನಿಕ್ಕು" (ಕುಂಗರಾ ೪೦-೩೦); ಕನಕವ ಕಾಯನೊಂದುದೆವಸಂ ಶಿಱಿದಟ್ಟುಱ ಸುಣ್ಣದೊಱಲೊಳ್ ದಿನವಿರಿಸಿಟ್ಟು ಕರ್ಚಿ ಗುರುಗುಂಜೆ ಪುನರ್ನವಿ ಪದ್ಮಪತ್ರಪೆಂಬಿನಿತುಮನಿಕ್ಕಿ ಸುಣ್ಣದೊಳವಂ ಪದಪಿಂ ತೆಗೆವುತ್ತೆ . . . ಅಡುಗಾವ ಪಾಡವಂ (ಲೋಕೋಪ. ೬-೩೦). [< ಸಂ. ಪುನರ್ನವಾ]

**ಪುನರ್ನವೆ** (ನಾ). = ಪುನರ್ನವಿ : "ಪುನರ್ನವಾ, ಶೋಥಘ್ನೀ—೨ ಕೊಮ್ಮೆಗಿಡ" (ಸಿದ್ಧಾಂತಿ. ೦೪೬). [ಸಂ. ಪುನರ್ನವಾ]

**ಪುನರ್ಧರಣ** (ನಾ). ಮರಳಿ ನೆಲೆಗೊಳಿಸುವಿಕೆ : ನವೀಕರಣ : ಜೀರ್ಣೋದ್ಧಾರ : ಪ್ರಳಯದಿಂ ಕೆಟ್ಟ ಸಮ್ಮನ್ದಿಯಂ ಪುನರ್ಬ್ಬರಣಂ ಮಾಡಿ (ಎಇ. XV, ೭೯-೦೬; 1060) ; ಪುಂಗೆಱೆಯೊಳ್ಪೆಮ್ಮಾಡಿಯ ಪುರವರವಳಿದಿಱ್ದುದಂ ಗಜಾರಿಧ್ಭಜನಾದರದಿನ್ದಮೆ ನೋಡಿ ಪುನರ್ಬ್ಬರಣಂ ಮಾಡಲ್ವೇಡಿ ಜಯಕೇಶಿನೃಪಂ . . . ಮಾಡಿದಂ ತತ್ಪುರಮಂ (ಸೌಇಇ. XX, ೪೭-೩೩ ; 1074); ರಾಯಮುರಾರಿ ಸೋವಿದೇವ . . . ಮಣೆಯೂರಂ ಪುನರ್ಬ್ಬರಣಂ ಮಾಡಿ ಮಾತ್ರಗೆಯ ನಡುವಣ ದಕ್ಷಿಣ ಮುಖ ಶ್ರೀಚೆಂನಕೇಶವರ್ಗೆ ಧಾರಾಪೂರ್ವ್ವಕಂ ಕೊಟ್ಟಂ (ಕೊಲ್ಹಾಶಾ.೯-೪೮ ; 1170). [ಸಂ.]

**ಪುನರ್ಭವ** (ನಾ). ೧. ಮರುಹುಟ್ಟು : ಪುನರ್ಜನ್ಮ : ಜಾನಿಸುತ ಪರಪದದಲ್ಲಿ ಕೂಡಿರ್ದನಾದೊಡೀ ರಸೆಯೊಳಾತಂಗಂ ಪುನರ್ಭವಮದಿಲ್ಲಂ (ಅಕ್ಕಿಸ. ೬೩-೭೨). ೨. ಉಗುರಂ ; ನಖ : "ಪುನರ್ಭವಃ, ಕರರುಹಃ, ನಖಃ, ನಖರಃ . . . ೪ ಉಗುರುಗಳ ಹೆಸರುಗಳು" (ಸಿದ್ಧಾಂತಿ. ೦೪೩). ೩. ಕೂದಲು.

**ಪುನರ್ಭವನಾಗು**=ಮರಳಿ ಹುಟ್ಟುಮವನಾಗು; ಸಾಯು : ದಿವಸಕರ ಚಂದ್ರಯುತ ಭಾರ್ಗವನಂ ಜನ್ಮಾವಸರದೊಳೀಕ್ಷಿಸುವಡೆ ದೇವವಿನೂತಂ ಪುಟ್ಟಿದ ಮಾನವನಿರದೆ ನವಾಬ್ದದಿಂ ಪುನರ್ಭವನಕ್ಕುಂ (ಜಾತಕ. ೬-೨೯).

**ಪುನರ್ಭವನೆನಿಸು**=ಪುನರ್ಭವನಾಗು : ನಿಲೆ ತದುಶಾಧೀಶ್ವರಂ ಷಷ್ಠಗೇಹ ದೊಳಾ ಲಗ್ನಭವಂ ಪುನರ್ಭವನೆನಿಕ್ಕುಂ ತತ್ಕ್ಷಮಾಹಾಹವಿಂ (ಜಾತಕ.೬-೩೭).
[ಸಂ.]

**ಪುನರ್ಭವಿಸು** (ಕ್ರಿ). ಮತ್ತೆ ಹುಟ್ಟಿ ಬರು : ನಿನ್ನ ಪತಿ . . . ದಹನ ವಾದಾ ನೀನು ಬಂದೆತಗಲಾವಿತ್ತ ಯಾಶೀರ್ವಚನವೇನು ಪುಸಿಯದು ಪುನರ್ಭವಿಸಿ ಬಂದವನು (ಕವಕೋ. ೭-೪೩). [ಪುನರ್ಭವ + — ಇಸು]

**ಪುನರ್ಭೂ** (ನಾ). ೧. ಮರಳಿ ಹುಟ್ಟಿ ಬಂದುದು ; ಪುನರ್ಜನ್ಮ ಹೊಂದಿದುದು. ೨. ಮರುಹುಟ್ಟು ; ಪುನರ್ಜನ್ಮ. ೩. ಮರು ಮದುವೆಯಾದವಳು ; ಎರಡನೆಯ ಸಲ ಮದುವೆಯಾದವಳು : "ಪುನರ್ಭೂಃ, ದಿಧಿಷೂಃ—ಈ ೨ ಮರುಮಾಟವಳ್" (ಕರಾಯು.೬೦-೩೩೦) ; ಪುನರ್ಭೂ ಎಂದರೆ ಮೊದಲು ಒಬ್ಬನನ್ನು ಮದುವೆಯಾಗಿ ಆಮೇಲೆ ಮತ್ತೊಬ್ಬನನ್ನು ಮದುವೆ ಮಾಡಿಕೊಂಡವಳು (ಅರ್ಥಶಾ. ೦೫೦). [ಸಂ.]

**ಪುನರ್ಮಿಲನ** (ನಾ). ಪುನಃ ಭೇಟಿಯಾಗುವಿಕೆ ; ಪುನಃಸಮಾಗಮ : ದುಷ್ಯಂತ . . . ತಮ್ಮ ಪುನರ್ಮಿಲನದ ಗುರುತಾಗಿ ಅದನ್ನು ತೊಡಿಸಲು ಬರುತ್ತಾನೆ (ಕರ್ಣಾಟಕಾ. ೬೩). [ಸಂ.]

**ಪುನರ್ರಚನೆ** (ನಾ). ಇದ್ದುದನ್ನು ನವೀಕರಿಸಿ ಪುನಃ ನಿರ್ಮಿಸುವಿಕೆ ; ಪುನರ್ನಿರ್ಮಾಣ : ಶಿಕ್ಷಣದ ಪುನರ್ರಚನೆಯಲ್ಲಿ ರಾಷ್ಟ್ರ ಈಗ ಎರಡು ಮುಖ್ಯ ಮುಂಬಾಗಗಳಲ್ಲಿ ಹೆಜ್ಜೆಯಿಡುತ್ತಿದೆ (ಶಿಕ್ಷಕ. VIII [illegible]).
[ ೦ 'ಪುನಾರಚನೆ' ಎಂಬುದು ಇದರ ಶುದ್ಧರೂಪ]

**ಪುನರ್ರಚಿಸು** (ಕ್ರಿ). ಮರಳಿ ನಿರ್ಮಿಸು ; ಪುನಃ ರಚಿಸು : ಪದಗಳ ಧ್ವನಿರೂಪವನ್ನು ಪುನರ್ರಚಿಸಲು ಈ ಎಲ್ಲ ದ್ರಾವಿಡಭಾಷೆಗಳ ರೂಪಗಳನ್ನು ತುಲನೆ ಮಾಡಿ ನೋಡಬೇಕು (ದ್ರಾಭಾಶಿ. ೦೦ ಟಿಪ್ಪಣಿ).

೦ ವ್ಯಾಕರಣದ ಪ್ರಕಾರ ಇದು ಅಸಾಧುರೂಪವಾದರೂ ಈಚೆಗೆ

ಇಂತಹ ಶಬ್ದಗಳು ಅಧಿಕವಾಗಿ ಪ್ರಯೋಗಗೊಳ್ಳುತ್ತಿವೆ. ಉದಾಹರಣೆಗೆ 'ಅಂತರ್ರಾಷ್ಟ್ರೀಯ' ಇತ್ಯಾದಿ. [ಪುನರ್ರಚನೆ + –ಇಸು₃]

**ಪುನರ್ವರಣ** (ನಾ). = ಪುನರ್ಭರಣ: ರುದ್ರಶಕ್ತಿಪಣ್ಡಿತರ್ಗೆ ಧಾರಾಪೂರ್ವಕಂ ಸರ್ವನಮಸ್ಯಂ ಪುನರ್ವರಣಮಪ್ಪುದಿ ಕೊಟ್ಟು ಪೂರ್ವವೃತ್ತಿಯ ಗದ್ದೆ ಮತ್ತರೆರಡು (ಕ್ಯಾಅ. ೧೯೨೯, ೬೩–೩೫ ; 1028).

[ಇದು 'ಪುನರ್ಭರಣ' ಎಂಬುದರ ಅಪಲಿಖಿತವಿರಬಹುದು]

**ಪುನರ್ವಸತಿ** (ನಾ). (ಪುನಶ್ಚೈತನ್ಯವನ್ನು ಪಡೆಯಲು ಒದಗಿಸುವ) ಮರುವಸತಿ: ಕಾಯಿಲೆಯಿಂದ ನರಳಿದ ರೋಗಿಗಳಿಗೆ ಪುನರ್ವಸತಿಯನ್ನು ಮಾಡಿಕೊಡಬೇಕು (೯೦೬೩೦. ೯೭). [ಸಂ.]

**ಪುನರ್ವಸು** (ನಾ). [ಜ್ಯೋತಿ] ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಏಳನೆಯದು ಮತ್ತು ಆ ರಾಶಿಯಲ್ಲಿ ಬರುವ ಮಳೆ: ಪುನರ್ವಸುಃ, ಅದಿತಿಃ, ಆದಿತ್ಯಂ, ಅಧಿದೈವತಂ ಈ ೪ ಪುನರ್ವಸು ನಕ್ಷತ್ರಕೆ ಪೆಸರು (ಶಾಸ್ತ್ರ. ೬೨–೪). [ಸಂ.]

**ಪುನರ್ವಿಮರ್ಶೆ** (ನಾ). ಮರಳಿ ಪರಾಮರ್ಶಿಸುವುದು: "ಪುನಃ ಪರಿಶೀಲನ, ಪುನರ್ವಿಮರ್ಶೆ" (Revision. ಕಪ್ರಿ. ೬೦). [ಸಂ. ಪುನರ್ವಿಮರ್ಶ]

**ಪುನರ್ವಿವಾಹ** (ನಾ). ಮರುಮದುವೆ: ಕೆಲವು ಸಂದರ್ಭಗಳಲ್ಲಿ ಪುನರ್ವಿವಾಹವು ಯುಕ್ತವೆಂದು ಹೇಳಲ್ಪಟ್ಟಿದೆ (ಭಾರತ. ೫೫). [ಸಂ.]

**ಪುನರ್ವ್ಯವಸ್ಥೆ** (ನಾ). ಮೊದಲಿದ್ದುದನ್ನು ಬದಲಿಸಿ ಮರಳಿ ಮಾಡಿದ ಏರ್ಪಾಟು: ಮುಂದಿನ ನಮ್ಮ ಶಾಲೆಗಳು ಪುನರ್ವ್ಯವಸ್ಥೆಯಾಗಬೇಕಾಗಿದೆ (೩ಸ್ವರ. ೧೬೨); ತನ್ನ ಬಾಹ್ಯಜೀವನವನ್ನೆಲ್ಲ ಪುನರ್ವ್ಯವಸ್ಥೆಗೊಳಿಸಬೇಕೆಂದು ನೆಕ್ಲುದೋವ್ ಉದ್ದೇಶಿಸಿದ್ದನು (ಪುನರು. ೧೯೯).

[ಸಂ. ಪುನರ್ವ್ಯವಸ್ಥಾ]

**ಪುನಶ್ಚರಣೆ** (ನಾ). ಮಂತ್ರವನ್ನು ಪುನಃಪುನಃ ಉಚ್ಚರಿಸುವಿಕೆ; ಜಪಿಸುವಿಕೆ: ಮಂತ್ರ ಕಲಿತರೇನು ಪುನಶ್ಚರಣೆ ಮಾಡದಲ್ಲದೆ ಸಿದ್ಧಿಸದು (೩ಅರಂ. ೧೯೩–೯೬೬); ವಸುರಜತಸ್ಫಟಿಕಮುಕ್ತಿಕಾಶಿಲಾಮಯಲಿಂಗಮುಮನಿಟ್ಟು ಪೂಜಿಸುತೆ ತೇಜಪುನಶ್ಚರಣೆಯಿಂ ಪರಿಶುದ್ಧಿಯೊಡೆದು (ಶಬರೋ. ೨–೩೬). [< ಸಂ. ಪುರಶ್ಚರಣ]

**ಪುನಶ್ಚೇತನ** (ನಾ). ಮರಳಿ ಚೈತನ್ಯವನ್ನು ಹೊಂದುವಿಕೆ: ಶ್ರೀಮತಿ ರುಕ್ಮಿಣಿದೇವಿ ಮುಂತಾದವರು ಕಲಾಸಂಪ್ರದಾಯಗಳನ್ನು ಪುನಶ್ಚೇತನಗೊಳಿಸಿ ಬೆಳೆಸಲು ಪ್ರಶಂಸನೀಯವಾದ ಸೇವೆಯನ್ನು ಸಲ್ಲಿಸಿದರು (ಶಾರದ. ೫೫೨). [ಸಂ.]

**ಪುನಶ್ಚೇತನಗೊಳ್ಳು** (ಕ್ರಿ). ಮರಳಿ ಚೈತನ್ಯವನ್ನು ಪಡೆ, –ಉತ್ಸಾಹವನ್ನು ಹೊಂದು: ಮಳೆಯಿಂದ ಪುನಶ್ಚೇತನಗೊಂಡ ತೋಟ ಹೊಲಗಳ ದೃಶ್ಯದಿಂದ ಅವನು ಆನಂದಪುಲಕಿತನಾದನು (ಕ್ರಿಶು. ೯೬೬).

[ಪುನಶ್ಚೇತನ + ಕೊಳ್ಳು₁ (< ಕೊಳ್₁)]

**ಪುನಸ್ಸ್ವಯಂವರ** (ನಾ). ≡ ಪುನಃಸ್ವಯಂವರ: ಎನಗೆಯನ್ನು ಪುನಸ್ಸ್ವಯಂವರ ಮನದೊಳುಂಟೇ ನೀವು ಬರಬೇಕೆನುತ ವಾರ್ತೆಯ ಕಳ್ಪಿಸಿದೆ (ಶಳಕ. ೯–೫೬). [ಸಂ.]

**ಪುನಹ** (ಅ). ಮತ್ತೆ; ಪುನಃ; ಮರಳಿ: ಮನಸ್ಸು ತೃಪ್ತಿಗೊಳ್ಳದೆ ಪುನಹ ಅದೇ ಪ್ರಶ್ನೆಯನ್ನು ಹಾಕುತ್ತಿತ್ತು (ಶಕಿದಾ. II, ೯೪೯). [< ಪುನಃ]

**ಪುನಾರಚನೆ** (ನಾ). ಮರಳಿ ರಚಿಸುವುದು; ಪುನರ್ನಿರ್ಮಾಣ: ಶರೀರದ ಬೆಳವಣಿಗೆ ಮತ್ತು ಪುನಾರಚನೆಗೆ ಅವಶ್ಯವಾದ ಕಚ್ಚಾಮಾಲನ್ನೊದಗಿಸುವುದು—ಮುಖ್ಯವಾಗಿ ಸಸಾರಜನಕಗಳು ಮತ್ತು ವಿವಿಧ ಜಾತಿಯ ಲವಣಗಳು—ಈ ಕೆಲಸವನ್ನು ಮಾಡುತ್ತವೆ (ಆಹಾರ. ೫೬).

[ಸಂ. ಪುನಾರಚನ]

**ಪುನಾಲಿ** (ನಾ). ಒಂದು ಬಗೆಯ ಔಷಧೀಸಸ್ಯ: ಚೀನಾಬೇರು, ಪುನಾಲಿ, ಹುದಿಬಳ್ಳಿ (ಕ್ಯಾಶಿ. ೫೯–೩೬೯). [?]

**ಪುನೀತ** (ಗು). ೧. ಪವಿತ್ರವಾದ; ಶುದ್ಧವಾದ: ಆತನಂ ನೋಡಿದೊಡೆ ಸಾಕು ಪುನೀತಭಕ್ತ ಗುಣತ್ವಪಹುದು (೩ಸಕ. ೬–೦೩); ಆ ಪ್ರೇಮವೆಂಬ ಪುನೀತವಸ್ತುವಿಗೆ ಪಕ್ಷಪಾತವಿಲ್ಲ, ತಾರತಮ್ಯವಿಲ್ಲ (ಕುಂಕು. ೦೯). (ನಾ). ೨. ಪರಿಶುದ್ಧವಾದುದು: ಪಾವನ: ಸದ್ಗುಣಚರಿತ್ರನಾಮಾಳಿಯಿಂ ಜಗಮುಂ ಪುನೀತಮಾಂ ಮಾಳ್ಪ ನಿನ್ನೋಳಗೆಯನವನೆತ್ತ ಬಲ್ಲಂ (ಕೃಷ್ಣಾ. ೦೯–೯೩). ೩. ಪರಿಶುದ್ಧನಾದವನು: ಉತ್ತಮಕುಲದೊಳೊಗೆದು ಪುನೀತನಾಗಿ . . . ದಾಳ್ದು (೩ಸಕ. ೩–೫೬); ಮಂದಬುದ್ಧಿಯವರೂ ಶಿಕ್ಷಣದಿಂದ ಪುನೀತರಾಗುವಂತಾಯಿತು (೩ಸ್ವರ. ೬೯೯). [ಸಂ.]

**ಪುನೀತೆ** (ನಾ). ಪರಿಶುದ್ಧಳಾದವಳು; ಪಾವನೆ: ಅತನುತ್ತಮಸತಿ ವಿಶೇಷಪುನೀತೆ ಮೊದಾಂಬಿಕೆ ಸವಿನಯಾನ್ವಿತೆ ಸತ್ಕುಲಜಾತೆ (೩ಸಕ. ೨–೯೭).

[ಸಂ. ಪುನೀತಾ]

**ಪುನುಗು** 'ಪುಣುಗು' ನೋ.

**ಪುನುವಲವಳ್ಳಿ** (ನಾ). ಒಂದು ಊರಿನ ಹೆಸರು: ಈ ಸೊರಬ ತಾಲ್ಲೂಕಿನ ಈಗಿನ ಹುನವಳ್ಳಿ: ಬಳಗಾಜಿರ ಕೋಕರಂ ಪುನುವಲವಳ್ಳಿಯಲ್ಲಿಟ್ಟು ಪುಯ್ಯಲಂ ಪರಿದು ಮಾರ್ಬಲಮಂ ತಳ್ತಿರಿದು ಸ್ವರ್ಗಾಲಯಕ್ಕೆ ಸನ್ದಂ (ಎಕ. VIII, ಸೊರಬ. ೫೪೦–೩ ; 979).

[ಪುನುವಲ್₀ + ಪಳ್ಳಿ₁]

**ಪುನೆ** (ನಾ). ಒಂದು ಬಗೆಯ ಸಸ್ಯ: ಸುರಗಿ, ಗರ್ದಂಡಿ, ಪುನ್ನಾಗ, ಪುನೆ (ಕ್ಯಾಶಿ. ೫೬–೦೦೯೩). [?]

**ಪುನ್ನಮಿ** 'ಪುಣ್ಣಮೆ' ನೋ.

**ಪುನ್ನಾಗ** (ನಾ). ೧. ಪುರುಷರಲ್ಲಿ ಶ್ರೇಷ್ಠನಾದವನು. ೨. ಗಂಡು ಆನೆ. ೩. ಬಿಳಿಯ ಆನೆ. ೪. ಪಟ್ಟದ ಆನೆ. ೫. ಕೋಣ. ೬. ಹಾವು. ೭. ಒಂದು ಬಗೆಯ ಮರ ಮತ್ತು ಅದರ ಹೂವು; ಸುರಹೊನ್ನೆ: "ಪುನ್ನಾಗಃ. ಸುರಪರ್ಣಕಾ—ಈ ೨ ಸುರಹೊನ್ನೆ" (ಹಲಾಯು. ೩೫–೫೫); ಅಪೂರ್ವಮಪ್ಪ ಪುನ್ನಾಗದ ಬಾಸಿಗಂ ಬಗೆದ ಬಣ್ಣದ ಪುಟ್ಟಿಗೆ ನಾಗಜಾಲವೊಂದಾಗಡೆ . . . ನಾಗಿಣಿ ನಾಗಬಂಧದೊಳೆ ತಳ್ತು ಗುಣಾರ್ಣವನಂ ಮರುಳ್ಚಿದಳ್ (ಶಂಖಾ. ೪–೦೭); ಮೇಳದು ಸ್ವರ್ಗಕೆ ಪರಿದು ಪೋಗುವ ತೆರದಿ ನೆಮ್ಮಿ ಗಗನವ ಹುಡುಕಿ ಪುನ್ನಾಗ ನಾಗವಳ್ಳಿಯ ಪೊಲಂ ಕಂಗೆಸೆದುವು (ಶಶವೊ. ೪–೩೦). ೧, ೩, ೭: ವಿಗುವ ದ್ವಿಜಪರಿವಾರ ತಮಗುಣಿತ ಪುನ್ನಾಗಸೇವ್ಯಮಾನಂ ವಂಶೋಪಗತಮೆನಿಸಿರ್ದ ಚಿತ್ರಂ ಸೊಗಯಿಸಿದುದು ರಾಜನಂತೆ ಲಕ್ಷ್ಮಿಯ ಪೆರ್ಚಿಂ (ಶಾರತ. ೦೦–೦೯೫). ೨, ೬, ೭: ಪುನ್ನಾಗವಿರಾಜಿತಮಿದು ಪನ್ನಗವಧುಮಂ ಕರೇಣುಮಂ . . . ನೆನೆಯಿಪುದಖಿಳಮೃಗಶರಣ್ಯಮಪಣ್ಯಂ (ಪುಶ್ಯ. ೫–೬೬); "ನರಶ್ರೇಷ್ಠಾವನೀಜಾತಭೇದ ಲಾಲಾಯಂ ಪೊ ಪಟ್ಟವರ್ಧನಗಜಂ ಪುನ್ನಾಗಮಕ್ಕುಂ" (ಶಾಜಾಲ. ೬೨). [ಸಂ.]

**ಪುನ್ನಾಗತೋಡಿ** (ನಾ). [ಸಂಗೀತ] ಒಂದು ರಾಗದ ಹೆಸರು: ರಾಗ ಪುನ್ನಾಗತೋಡಿ, ಆದಿತಾಳ (ಹಕುಕು. ೭೯). [ಸಂ. ಪುನ್ನಾಗತೋಡೀ]

**ಪುನ್ನಾಗವರಾಲಿ, ಪುನ್ನಾಗವರಾಳಿ** (ನಾ). [ಸಂಗೀತ] ಒಂದು ರಾಗದ ಹೆಸರು: ಪುನ್ನಾಗವರಾಲಿಯಾದರೋ (೨) ಷಡ್ಜಗ್ರಹಸಹಿತವಾದುದು, ಸರ್ವಕಾಲವೂ (ಗಾನಯೋಗ್ಯವಾದುದು) (ಸಕುಶ್ರ. ೦೩೩). **ಪುನ್ನಾಗವರಾಳಿ**: ಪುನ್ನಾಗವರಾಳಿ: ೮ನೇ ಮೇಳಕರ್ತ ಹನುಮತೋಡಿಯಲ್ಲಿ ಜನ್ಯ (ಸಂಗೀತಂ. ೦೩೨); ಇವರು ಪುನ್ನಾಗವರಾಳಿರಾಗವನ್ನು ನುಡಿಸಿ, ಹುತ್ತಗಳಲ್ಲಿ ಮಲಗಿದ್ದ ಹಾವುಗಳನ್ನು ಮೇಲಕ್ಕೆ ಸೆಳೆದು, ತಮ್ಮ ಮುಂದೆ ಹೆಡೆಯಾಡಿಸಿ ನರ್ತನ ಮಾಡುವಂತೆ ಮಾಡಿದ್ದಾರೆ (ಸಂಗೀತ. ೯೨).

[ಸಂ. ಪುನ್ನಾಗವರಾಲೀ]

**ಪುನ್ನಾಗವರಾಳಿ** 'ಪುನ್ನಾಗವರಾಲಿ' ನೋ.

**ಪುನ್ನಾಟ** (ನಾ). ಒಂದು ನಾಡಿನ ಹೆಸರು : ಶ್ರೀಮತ್ಕೊಙ್ಗಣಿ ಮಹಾಧಿರಾಜಸ್ಯಾವಿನೀತನಾಮ್ನ [ಃ] ಪುತ್ರೇಣ ಪುನ್ನಾಟರಾ[ಜ]ಸ್ಕನ್ದವರ್ಮ್ಮ ಪ್ರಿಯಪುತ್ರಿಕಾಜನ್ಮನಾ . . . ಸಮಸ್ತ ಪಾಣ್ನಾಟ ಪುನ್ನಾಟಾಧಿಪತೀನಾ (ಕೈಶಾಂ. ೦೪೧೦, ೦ ೫೯; 7ನೇ). [< ಪುನ್ನಾಡು]

**ಪುನ್ನಾಡಿ** (ನಾ). ದೇಹದಲ್ಲಿರುವ ಹನ್ನೆರಡು ನಾಡಿಗಳಲ್ಲಿ ಒಂದು : ೧. ಇಡಾನಾಡಿಯಲ್ಲಿ ಮಂದಾಕಿನೀ ... ೬. ಪುನ್ನಾಡಿನಾಡಿಯಲ್ಲಿ ಗಂಡಕಿ ... ೧೧. ವಾರುಣಿ-ಗೋದಾವರಿ, ೧೨. ಪೂಷಾ-ಪಯಸ್ವಿನೀ (ಹಠಾಕ. ೮-೦೯ ಟಿಪ್ಪಣಿ). [ ಸಂ. ]

**ಪುನ್ನಾಡು, ಪೂನಾಡು** (ನಾ). ಒಂದು ನಾಡಿನ ಹೆಸರು; ೧ ಕಾವೇರಿ ಮತ್ತು ಕಪಿನಿ ನದಿಗಳ ನಡುವೆ ಇರುವ, ನಂಜನಗೂಡು, ಹೆಗ್ಗಡದೇವನಕೋಟೆ ತಾಲ್ಲೂಕುಗಳ ಸುತ್ತಮುತ್ತಲಿರುವ ಜಾಗ : ಶ್ರೀಮತ್ಕೊಂಗಣಿ ಮಹಾಧಿರಾಜಸ್ಯ ಅವಿನೀತನಾಮ್ನಪುತ್ರಃ ಪುನ್ನಾಡರಾಜ ಸ್ಕನ್ದವರ್ಮ್ಮಪ್ರಿಯಪುತ್ರಿಕಾಜನ್ಮನಾ . . . ಬೆಮ್ಬುರೀಶ್ವರಸ್ಥಾನಮುದಕ ಪೂರ್ಬ್ಬಂ ದತ್ತ (ಇಇ. V. ೦೪೯-೫; 513); ಸ್ವಸ್ತಿಶ್ರೀ ಶಿವಮಾರ ಪೃಥುವೀ ರಾಜ್ಯಂಕೆಯೆ ಪುನ್ನಾಡಜುಸಾಸಿರಕ್ಕೆ ಎಜ಼ಿಮರ್ . . . ಸ್ತ್ರಿಜ಼ಿಯ ಮರಿಯಾದೆ ಕೊಟ್ಟರ್ (ಎಕ. III. ತಂಜಕ. ೨೬-೨; ಸು. 810); ಪುನ್ನಾಡರಸರಾ ಮಗನ್ದಿರ್ ಸೀಮರಸ × × × (ಎಕ. IX. ದೇವನ. ೯೦ ೨; ಸು. ೯೦೦ ?). **ಪೂನಾಡು :** ತಳವನನಗರ ಶ್ರೀವಿಜಯಜಿನಾಲಯಕ್ಕೆ ಪೂನಾಡು ಛಾಸಹಶ್ರ ಎಡೆನಾಡು ಸಪ್ತರಿ ಮಧ್ಯೆ ಬದನೆಗುಪ್ಪೆ ನಾಮ ಮಹಾಧಿರಾಜೇನ ದತ್ತೇನ ಪಡಿಯೋಲಜಿ಼ಳು (ಎಕ. I (R). ೦-೦೮; 466 ಕೃ.ಶ); ಬೂತರಸ ಯುವರಾಜ ಪಥದಮ್ ನಿನ್ದು ಕೊಜ್ಗಲ್ನಾಡು ಪೂನಾಡಮಸಾಳುತ್ತಿದ್ದು (ಎಕ. III. ತಂಜಕ. ೭೫-೬; 870). [ದೇ.೫ ತಮಿ. ಪುನನಾಟು; ಮಲ. ಪುನ್ನಾಡು]

**ಪುನ್ನಾಹ** (ನಾ). ಒಂದು ಬಗೆಯ ಕುದುರೆ: ಇಂದಿರಸಕ್ಕು ಮೂಷಕ ವ್ಯಾದಿಚ್ಛಾಯಾವಿರಾಜಿತಂ ಕರ್ಗಲ್ಬಣ್ಣದ ಕೇಸರಮಾ ನೊರೆಯಿಂದ ಮಾನಸುಕರಿಸಿ ತೋರ್ಪುದು ಪುನ್ನಾಹ (ಅಶ್ವಶಾ. ೨-೨೯). [?]

**ಪುನ್ನಿ** (ನಾ). ಒಬ್ಬಾತನ ಹೆಸರು : ಕೊಟಿಯಮ್ಮನ ಅಳಿಯಂ ಚಪ್ಪಮ್ಮನ ಮಗಂ ಪುನ್ನಿ ಗೋಸಾಸಿ ಕೆಜ಼ಿಯಂಮಾಡಿಸಿ ಕೊಸಲ್ಲಿಯ ಮಹಾಜನಕೆ ಗೋಸಾಸಮಿಟ್ಟು (ಎಕ. VIII. ಸಾಗರ. ೦೦೦-೭, ೯೫೦). [?]

**ಪುನ್ಪಯಿರು** (ನಾ). ಒಣಭೂಮಿ ಮತ್ತು ಅದರ ಮೇಲಿನ ಕಂದಾಯ; ಖುಷ್ಕಿಬೆಳೆ ಮತ್ತು ಅದರ ಮೇಲಿನ ಸುಂಕ : ಯಿಾ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ ವಾನ್‍ಪಯಿರು ಪುನ್‍ಪಯಿರು . . . ಉಂಟಾದ ಹಲ ಉಪಾಧಿಗಳೂ ಸಹ ಸೇರ್‍ಸಿ ಕೊಟ್ಟಿವು (ಕಾಇಇ. IX-ii. ೯೬೬-೭; 1470); ನಂಜೆ ಪುಂಜೆ ವಾನ್ ಪಯಿರು ಪುನ್‍ಪಯಿರು . . . ಮೊದಲಾದ ಹಲ ಉಪಾಧಿಗಳು ಸಹ (ಕಾಇಇ. IX-ii. ೯೬೬-೮; 1472). [← ತಮಿ. ಪುನ್ಪಯಿರ್]

**ಪುನ್ಪುಲ** 'ಪುನ್ಪೊಲ' ನೋ.

**ಪುನ್ಪೊಲ, ಪುನ್ಪುಲ** (ನಾ). ಒಣಭೂಮಿ; ನೀರಾವರಿಯಿಲ್ಲದೆ ಬೆಳೆಯುವ ಭೂಮಿ : ಕೊಟ್ಟೊದು ಬರಸೂರಾಯು ತೆಜ಼ಿಯುಂ ಪುನ್ಪೊಲಮು × × × (ಎಕ. X (ಶ). ಮುಳಬಾ. ೦೬೯-೪; ೯ಶಮ ೬೬). **ಪುನ್ಪುಲ :** ಕಿಜುವೆನ್ನಿಪ್ಪರ್ಕ್ಕವಮ್ಬುನ್ಪುಲಮೆಲ ಪತ್ತೊನ್ದಿವಿ × (ಎಕ. XIV. ತಿರುಮ. ೨೩೨-೫; ?). [← ತಮಿ. ಪುನ್ಪುಲ]

**ಪುಪ್ಪ, ಪುಪ್ಪು, ಪುಟ್ಟ** (ನಾ). ಹೂವು ; ಪುಷ್ಪ : 'ಪುಪ್ಪಸರ', 'ಪುಪ್ಪುಡಿ' ಪರಾ. **ಪುಪ್ಪ :** ಪುಪ್ಪಕ್ಕೆ ಕೊಟ್ಟ ಗದ್ಯಾಣ ೧ (ಎಕ. II. ೬-೨೭ ; 1076) ; ಶ್ರೀನಂದಾದೀಪಿಗೆಂ ಶ್ರೀಪದಪುಪ್ಪಕ್ಕಂ ನಂದನವನಕಂ . . . ಸಮಸ್ತವಸ್ತುಸುಂಕವನಾಚಂದ್ರಾರ್ಕತಾರಂಬರಂ ಸಧರ್ಮುಮು ಪ್ರತಿಪಾಲಿಸಿದವಂ (ಎಕ. XIV. ಶ್ರೀರಂಗ. ೨೩೩-೫; ಸು. 1177). **ಪುಟ್ಟ :** ಆ ದೇವರ ಪೂಜೆಯು ಪುಟ್ಟಕ್ಕೆಂದು . . . ಹೂದೋಟಂ ಮತ್ತರು ೧ (ಕಾಇಇ. XX. ೦೦೯-೨೬ ; 1148). [<ಪ್ರಾ. ಪುಪ್ಪ . / ಸಂ. ಪುಷ್ಪ]

**ಪುಪ್ಪಸರ** (ನಾ). ಹೂವಿನ ಬಾಣವನ್ನು ಹೊಂದಿದವನು ; ಮನ್ಮಥ : ಪುಪ್ಪಸರನ ರಾಣಿಗೆ ಮೆಯ್ಗೊಡವನುಪೂಪ್ಪಿಸಿ ತುತಿಯ ಮಾಡಿದರು (ವೀರೇಶಚ. ೦೬-೭೩). [ಪುಪ್ಪ+ಸರ್ತ]

**ಪುಪ್ಪುಟ** (ನಾ). ಬಾಯಲ್ಲಿ ಆಗುವ ಒಂದು ಬಗೆಯ ಹುಣ್ಣು : 'ತಾಲುಪುಪ್ಪುಟ', 'ದಂತಪುಪ್ಪುಟ' ಪರಾ. [<ಸಂ. ಪುಪ್ಪುಟ]

**ಪುಪ್ಪುಡಿ** (ನಾ). ಹೂವಿನ ಹುಡಿ ; ಪುಷ್ಪರಜ : ಕರಿಯ ಮಲ್ಲಿಗೆಯ ಪಾವನಕುಸುಮಪರಿಮಳವನುಂಡು ಶನ್ಮಕರಂದದೊಳ್ ಮಿಂದು ಪುಪ್ಪುಡಿಯೊಳು ಮನವೊಲ್ದು ಪೊರಳ್ದಂದಿನಿಂದ ಕಪ್ಪಾಗಿ . . . ಸಂಚರಿಪ ಷಟ್ಪದಿಗಳನುರಾಗಿಸುತ್ತಿರ್ದುವಾ ಪರಪವನಾಂತದೊಳ್ (ವಂದಿಜಶ. ೩-೩೯) ; ತೆಂಬೆಲರಿಂದಲ್ಲಾಡುವ ತಳಿರ್ತೆಳಮಾವಿನ ಪೂಗೊಂಚಲ ಪುಪ್ಪುಡಿಯ ಮೊತ್ತದಿಂ ತಟ್ಟ ಕಾಲ್ದಾರಿಗಳಿಂ . . . ಕಣ್ಗೊಳಿಕುಂ (ಯಶೋಗೀ. ೦೨-೦೨). [ < ಪುಪ್ಪ + ಪುಡಿ ]

**ಪುಪ್ಪುಸ** 'ಪುಪ್ಪುಸ' ನೋ.

**ಪುಪ್ಪುಸರೋಗ** (ನಾ). ಶ್ವಾಸಕೋಶದ ರೋಗ ; ಉಬ್ಬಸ : ಅವಕ್ಕೆ ಬರುವ ಸಾಮಾನ್ಯರೋಗಗಳಲ್ಲಿ . . . ಶ್ವಾಸಕಾಂಗಗಳಿಗೆ ಸಂಬಂಧಪಟ್ಟ ಕೆಮ್ಮು, ಪುಪ್ಪುಸರೋಗಗಳೂ ಮುಖ್ಯವಾದುವು (ಕಂಕೋ. I. ೭೨೯). [ ಪುಪ್ಪುಸ (< ಪುಪ್ಪುಸ) + ರೋಗ ]

**ಪುಪ್ಪುಸರೋಗಿ** (ನಾ). ಪುಪ್ಪುಸದ ರೋಗವುಳ್ಳ ವ್ಯಕ್ತಿ : ಪುಪ್ಪುಸ ರೋಗಿಗಳ ಉಗುಳಲ್ಲೂ ಎಲ್ಲರ ಕರುಳುಗಳಲ್ಲೂ ಈ ಅಣಬೆಗಳು ಸಾಮಾನ್ಯವಾಗಿ ಇದ್ದೇ ಇರುವುವು (ಕಂಕೋ. I. ೨೨೭). [ < ಸಂ. ಪುಪ್ಪುಸರೋಗಿನ್ ]

**ಪುಪ್ಪುಸ** (ನಾ). ೧. ಶ್ವಾಸಕೋಶ. ೨. ಕಮಲದ ಹೂವಿನ ಬೀಜಕೋಶ. [ ಸಂ. ]

**ಪುಬ್ಬ** ' ಪುಬ್ಬೆ ' ನೋ.

**ಪುಬ್ಬಾಮಿಗ** (ನಾ). ಒಬ್ಬಾತನ ಹೆಸರು : ತೆಂಗಿನಾವಳ್ಳಿಯ ಗುಡ್ಡನ ಪುಬ್ಬಾಮಿಗಂಗೆ ಮಾಳಿಂಗಿಗಾಮಿಗಿತ್ತಿಯಾಗೆ ಪುಟ್ಟಿದ ಶ್ರೀಮಾರಂ (ಎಕ. VII. ಶಿಕಾರಿ. ೩೬೩ ೯ : ಸು. ೬೩೦). [?]

**ಪುಬ್ಬು** 'ಪುರ್ವು' ನೋ.

**ಪುಬ್ಬೆ, ಉಬ್ಬೆ₃, ಪುಬ್ಬ, ಪುರ್ಬ, ಪೂರುವ, ಹುಬ್ಬೆ** (ನಾ). ೧. [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಹನ್ನೊಂದನೆಯದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : ಪೂರ್ವಫಲ್ಗುಣಿ : ಪೂರ್ವೆ-ಪುಬ್ಬೆ (ಕಸುಪ. ತು. ೩೮೯ ಶ್ರಯೋ) ; ಪುಬ್ಬೆ ೨ ಪುತ್ತರೆ ಮಂಚದ ಪಾವದ ಹಾಗೆ (ಚಾಸ್ಕರ. ೬೦-೯) ; ಪುಬ್ಬೆ ಮಳೆ ಉಬ್ಬುಬ್ಬಿ ಹುಯ್ದರೂ ಗುಬ್ಬಿ ಪುಕ್ಕ ನೆನೆಯದು (ಗಾದೆ). **ಉಬ್ಬೆ₃ :** ೧. ಉಬ್ಬೆಮಳೆ ಅಬ್ಬೇ ಹಾಲು (ಗಾದೆ). **ಪುಬ್ಬ :** ೧. ತ್ರಿಕೋಣದ ಕರ್ಣದ ಮೇಲಿನ ನಕ್ಷತ್ರ ಪುಬ್ಬ, ಕೆಳಗಿನದು ಉತ್ತರಾ (ನಕ್ಷತ್ರ. ೬೯). ೨. [ಜೈನ] ಒಂದು ದೊಡ್ಡ ಕಾಲಮಾನ ; ಎಪ್ಪತ್ತುಲಕ್ಷ ಐವತ್ತಾರುಸಾವಿರಕೋಟಿ ವರ್ಷಗಳ ಅವಧಿ : ತೊಳಗಮ ಪುಬ್ಬಕೋಟಿವರಿಸಂಬೈವರಂ ಪರಮಾಯು (ಆದಿಪು. ೧-೩೩) ; ನೀನುಮೊಂದು ಪುಬ್ಬಕೋಟಿಕಾಲಮಾರಸುಗೆಯ್ದು . . . ದೇವನಾಪ್ಪೆ (ಶಂಶಾಪು. ೬-೫೭ ವ) ; ಮೂವತ್ತಾಜುಲಕ್ಕಪುಬ್ಬಂ ರಾಜ್ಯಂಗೆಯ್ದು (ಶಾಂತಿಪು. ೦೭). **ಪುರ್ಬ :** ೧. ಸರಟಪುರದ ಅಯ್ವದಿಪ್ಪಾರ್ಗ್ಗ ×

ಯಶಸು ಪುರ್ವದಿನ್ನ ತಃಪ್ಪದೆ[ಅ[i]]ನುಟಃದೋನ್ (ಶಾಇಇ. XI-1, ೦೨-೦೩; ೩೩೭). ೨. ಮಹಾಬಲಖಚರೇಂದ್ರಂ . . . ಮಹಾಪತ್ರಾಬಲಕ್ಕೆಪುರ್ಬಂ [ಶಾಶಾಂ. ಬ್ಬಂ] ರಾಜ್ಯಂಗೆಯ್ಯೆ (ಆಪು. ೨-೨೩ ವ). **ಪೂರುವ :** ೩. ಹಿಂದಿನ ಕಾಲ ; ಪೂರ್ವಕಾಲ : ಆರು ನಿನ್ನಂದದಲಿ ತಪವನು ಪೂರುವದಲಾಚರಿಸಿದವರು (ಶಿಬಾಸ. ೬ ೨ ೩೮). **ಹುಬ್ಬೆ :** ೧. ಪೂರ್ವ—ಹುಬ್ಬೆ (ಕಮದ. ೨೬೦ ಕೃಷೆ:); ಅಪ್ಪುವದು ರಕ್ತಾಕ್ಷಿಯುಮದ ಹುಬ್ಬೆಯಲಿ ರವಿಯಿರಲಿಕಾತನ ಸರ್ಬಸೈನ್ಯದ ರಕ್ತದಿಂದವೆ ಹುಟ್ಟಿತಾ ನದಿಯು (ಸಂಕಪ. ೨೬-೩೪).

[<ಸಂ. ಪೂರ್ವ]

**ಪುಮಪತ್ಯ** (ನಾ). ಗಂಡುಮಗು. [ಸಂ.]

**ಪುಮಾಂಸ** (ನಾ). ಗಂಡಸು ; ಪುರುಷ : ಕುಶಲರಾ ಗತಿಗಿಂದ ಕಿಂಚಿತ್ಕುಶಲವಿಲ್ಲೆನಸಲ್ಕೆ ವಿಷಯಾಪಶರ ಸಂಗತಿಯೇಂದಿಗಾಗುವದೊ ಪುಮಾಂಸರಿಗೆ (ಚಶೇಶ. ೦೨-೦೦). [<ಸಂ. ಪುಮಾನ್]

**ಪುಮ್ಮೆ** (ನಾ). ಒಂದು ಬಗೆಯ ಆಟ : "ಚಿಟ್ಟುಮುರಿ ಪುಮ್ಮೆಯೊಳಕ್ಕುಂ" (ಕಬಿಕಾ. ೨೨೬). [?]

**ಪುಯ್**, ಪುಯ್ಯಿ (ನಾ). ಹುಸಿ ; ಮಾಯೆ : ವಸುಧೆಯ ಭಾರವಮನಿಳುಪದೆ ಸಿಸುತನದಿಂ ಪೊಯ್ಗಳೆವ ಪುಯ್ಯಂ ಕಂಡೆಟ್ಟಿಸಿ ಬಿಸರುಹನಾಭನೋಳಿಂತು ಸಿರ್ದರ್ ಬಿಡುಗಣ್ಣರುಚಿತಕಾರ್ಯೋದಯಮಂ (ಗಿಣಕಗೋ. ೬-೦೬). **ಪುಯ್ಯಿ :** 'ಪುಯಿನಡು' ಪರಾ. 'ಪುಸ್ಕಿ' ಹೋ.

[ದೇ.II ತಮಿ. ಮಲ. ಕೋತ. ಪೊಯ್]

**ಪುಯಲ್** 'ಪೊಯಲ್' ನೋ.

**ಪುಯಲ್ಲು** 'ಪುಯ್ಯಲ್ಲು' ನೋ.

**ಪುಯಲ್ದೋರು** (ಕ್ರಿ). ಕೂಗೆಬ್ಬಿಸು ; ಹುಯ್ಯಲಿಡು : ಬೊಬ್ಬಿಂದು ಬಹುರವದಿ ಪುಯಲ್ದೋರುತಿರಲತಿಕಠೋರಧ್ವಾನ ಕರ್ಣಯುಗದಲಿ ಪೊಕ್ಕು ಹೃದಯ ಕಂಡ ಕಡೆಗೆ ಪರಿದೋಡುತಿರೆ ಕುರ್ಬಾಳಿ ರಭಸದಿಂ ದೆ (ಪಪಮೋ. ೦೬.೨೦). [ಪುಯಲ್ (<ಪೊಯಲ್) + ತೋರು (<ತೋಱು)]

**ಪುಯ್ಯಿ** 'ಪೊಯ್' ನೋ.

**ಪುಯ್ಯಿ** 'ಪುಯ್' ನೋ.

**ಪುಯಿನಡು** (ನಾ). ಊಹೆ ಮಾಡಿಕೊಳ್ಳಬೇಕಾಗಿರುವಷ್ಟು ತೆಳ್ಳಗಿರುವ ನಡು : ಪುಸಿನಡುವಿನ ಪುಯಿನಡುವಿನ ಕಣ್ಗೆ ಕಾಣಿಸದ ನಡುವಿನ ಮೋಹಿಸುವ ಅಸಿಯ ನಡುವಿನಸುಂಗುರವಿಡಿನಡುವಿನ ಪೊಸಜವ್ವನೆಯರಿಯ್ದುದರು (ಕುರಾಶಾಂ. ೨೧-೯೩). [ಪುಯ್ಯಿ (<ಪುಯ್) + ನಡು]

**ಪುಯಿಲ್** 'ಪೊಯಿಲ್' ನೋ.

**ಪುಯಿಲಿಡು**, ಹುಯಿಲಿಡು (ಕ್ರಿ). ೧. ಗರ್ಜಿಸು ; ವೀರಾವೇಶದಿಂದ ಕೂಗು : ಇಟ್ಟಡಿಯ ನೆಟ್ಟಿನಿಸಂ ಪಿಮ್ಮೆಟ್ಟಿ ಪಟಪಟ್ಟಿಡರೆಯುಟ್ಟಿಳಿವರಂ ಕೈಗೊಟ್ಟು ಪುಯಿಲಿಟ್ಟರನೆ ದಿಟ್ಟತನಮೊತ್ತೋ (ಶಕಪು. ೨-೯೩). **ಹುಯಿಲಿಡು :** ೨. (ರಕ್ಷಣೆಗಾಗಿ) ಮೊರೆಯಿಡು : ಸೆರೆ ಬದ್ಧಿಹ ಕಾಲ ಹುಯಿಲಿಡುವುದೊ ಎನೆ ಜೀವನೆ ಜೀರುಂಡೆಮ ಮೇಳ ! (ಗಜೀಶ. ೨೮-೬).

[ಪುಯಿಲ್ (<ಪೊಯಿಲ್) + ಇಡು]

**ಪುಯಿಲ್ಲು** (ಕ್ರಿ). ೧. = ಪುಯಿಲಿಡು ೧ : ರಾಘವರಿಪರ್ವರಿಂದಿವರ್ ಸೇನಜದಾಂಧ್ರಪ್ರನಿಪಾಲಮಾಲಸೈನ್ಯಂ ಬಜಾವಪ್ಪಂತೆ ಪುಯಿಲ್ವಿ ಪೊಯ್ಯುಗೆಲ್ವರ್ (ಶಕಪು. ೨-೩೨). ೨. (ರಕ್ಷಣೆಗಾಗಿ) ಮೊರೆಯಿಡು : ಇದು ವಸಂತಕನ ದನಿಯಂತಿರ್ಪುದು . . . ಸಾಗಿಗುಂ ಮೋಸು ಬಂದುದರ್ಕೆ ಪುಯಿಲ್ಲುವನಾಗವೇಟ್ಟುದು (ಶಕಪು. ೬-೭೦ ವ).

[ಪುಯಿಲ್ (<ಪೊಯಿಲ್) + —ಚು]

**ಪುಯ್ಯಲ್** 'ಪೊಯಲ್' ನೋ.

**ಪುಯ್ಯಲಿಕ್ಕು**, ಪುಯ್ಯಿಲ್ಕು, ಹುಯ್ಯಲಿಕ್ಕು (ಕ್ರಿ). ೧. (ರಕ್ಷಣೆಗಾಗಿ) ಮೊರೆಯಿಡು ; ಗೋಳಿಡು : ನಾಗನಿಕರಮುಂ ಮರ್ತ್ಯನಿಕರಮುಂ ತರದಿಂ ದೇವನಿಕರಮುಂ ನಿಮ್ಮಾಳಿಗಮನೆ ಭರದಿಂ ಪುಯ್ಯಲಿಕ್ಕೆ ಕಳುಪಿದರೆನ್ನಂ (ಗಿಣಕ. ೬-೨೩) ; ಅಬುದಿಂಗಳು ಮೊದಲೀ ತಾಣದೊಳು ಬಂದು ಮಱೆಯದೆ ಪುಯ್ಯಲಿಕ್ಕುವೆನು (ನಾಗಕು. ೦೩-೯೨). **ಪುಯ್ಯಿಲ್ಕು :** ೧. ಕುಕ್ಕುಟೋರಗ ಕೊಂದುದೆಂದು ಸುತಾರೆಯು ಪುಯ್ಯಿಲ್ಕುವಂದದಿ ವೈತಾಳಿಯೊಳು ಅಕ್ಕಟ ಪ್ರಾಣಕಂಟಕವಾದುದೆಂಬಂತೆ ಠಕ್ಕ ಮಾಡಿರಿಸಿರಲಾಗ (ಶಾಂತೀಶ. ೦-೬೬). **ಹುಯ್ಯಲಿಕ್ಕು :** ೨. ಗದ್ದಲ ಮಾಡು ; ಹುಯ್ಯಲೆಬ್ಬಿಸು : ಕಳ್ಳಗೆ ಸುದ್ದು ಕೊಟ್ಟು ಒಡವೆ ಹುಯ್ಯಲಿಕ್ಕಿದ (ಗಾದೆ). [ಪುಯ್ಯಲ್ (<ಪೊಯಲ್) + ಇಕ್ಕು]

**ಪುಯ್ಯಲಿಗ** (ನಾ). ಮೊರೆಯಿಡುವವನು ; ಗೋಳಿಡುವವನು : ಧರ್ಮಜಂ ಮೆಚ್ಚಿ ನರನ ಕಜ್ಜಮನೆ ಕೆಯ್ಕೊಂಡು ಬೇಗಮದರ್ದು ತಂತಮ್ಮಾಯುಧಂಗಳಂ ಕೊಂಡು ನಡೆಗೊಂಡು ಪುಯ್ಯಲಿಗರೊಡನೆ ಪೊಱಮಟ್ಟು ವಿರಾಟನ ಪೆಱಗಂ ಬರೆ (ಪಂಪಭಾ. ೦೨-೯೨ ವ).

[ಪುಯ್ಯಲ್ (<ಪೊಯಲ್) + —ಇಗ]

**ಪುಯ್ಯಲಿಡು**, ಪುಯ್ಯಿಲ್ಡಂ, ಹುಯ್ಯಲಿಡು, ಹೊಯ್ಯಿಲ್ಡು (ಕ್ರಿ). ೧. = ಪುಯ್ಯಲಿಕ್ಕು ೧ : ಬ[ರ್ದಿ] ಮನೆಯ ಮೇಗೇಱಿ ಕಳ್ಳರೆಂದು ಪುಯ್ಯಲಿಟ್ಟಾಗಳನಿಬರುಂ ತ್ರಸ್ತಾಭಿಭೂತರಾಗಿ ಪಟ್ಟನೆ ಪಾಱಿಯೋಡಿ . . . ಪಗೆಸಾಜಿರ್ದರ್ (ವಡ್ಡಾರಾ. ೦೪-೨೫) ; ಸುಯೋಧನನ ಮಹಾದೇವಿ ಭಾನುಮತಿ ಬಾಯಬಿಡು ಪುಯ್ಯಲಿಡುತುಂ ಬಂದು ಧರ್ಮನಂದನನ ಕಾಲ ಮೇಲೆ ಕವಿದು ಪಟ್ಟು (ಪಂಪಭಾ. ೬-೩೩ ವ); ತನ್ನ ಮಗನಕಾರಣಂ ಕೊಯ್ದನೆಂದು . . . ಹಾಹಾಕ್ರಂದನರವದಿಂ ಪುಯ್ಯಲಿಡುವ ಕರುಣಾರವಮಂ ಶಳವಾಜಂ ಕೇಳ್ದು (ಶಬಕಶಂ. ೬೮ ೨೨). ೨. ಒದರು ; ಅರಚು ; ಕಿರಿಚು : ತೊಲತೊಲಗಿ ವಿರಹಿಗಳ್ಬೆಚ್ಚರದೊಳೆಂದೆತ್ತಲುಂ ಪುಯ್ಯಲಿಡುವಂತೆ ಕೂಗುತಿವೆ ಕೋಗಿಲೆಗಳು (ಕೃಬಶಾ. ೩-೨೪). **ಪುಯ್ಯಿಲ್ಡು :** ೧. ದುಷ್ಟಬುದ್ಧಿ ಮುನ್ನವೆ ಹಾಹಾ ಕೆಟ್ಟೆನೆಂದು ಬಾಯಂ ಬಸಿಱಂ ಪೊಯ್ದುಕೊಂಡು ಪುಯ್ಯಿಲ್ಟ್ಟು . . . ಕಾತರಿಸಿ ನುಡಿಯೆ (ಶಂಕಶಂ. ೦೬೨-೬). **ಹುಯ್ಯಲಿಡು:** ೧. ಕಟ್ಟಿನನ್ನೇವೆನೆನ್ನಣುಗನಡವಿಯೊಳು ಹೊಲಗಟ್ಟನೋ . . . ಬಟ್ಟೆಯೊಳು ಕಳ್ಳರಿಂ ಹಿಡಿವಡೆದನೋ ಹುಯ್ಯಲಿಟ್ಟಾರಿದಂ ಪೇಳ್ವನು (ಸಿದ್ಧರಾ. ೨-೯೩); ಹುಯ್ಯಲಿಟ್ಟಳುವೊಡೆ ಕೇಳು ವರಿಲ್ಲೆಂದು ಬಾಯ ಬಿಟ್ಟಿತು ಕಪೋತಕನು (ಕಶೋತ. ೦೨-೯೨) ; ಚಳಿಗಾಲ ಕೊಣಗಿ ಬರದಾದ ಗಿಡಗಂಟೆಯಲಿ ಹುಯ್ಯಲಿಟ್ಟಿತು ಗಾಳಿ ಈಸು ದಿವಸ (ಕಂಪಮ. ೯೬-೦೦). **ಹೊಯ್ಯಿಲ್ಡು :** ೧. ಹೊಯ್ಯಿಲ್ಟ್ಟ ಋಷಿಗಳ ಮಾತ ಕೇಳ್ದು ರಘುನಂದನನು ನಸುನಗುತ ಬೆದರದಿರಿ . . . ಎಂದೊಡಂಬಡಿಸಿ (ತೊರಾ. ೩). [ಪುಯ್ಯಲ್ (<ಪೊಯಲ್) + ಇಡು]

**ಪುಯ್ಯಲಿಸು** (ಕ್ರಿ). = ಪುಯ್ಯಲಿಕ್ಕು ೧ : ನೆಗಟ್ದಿನ್ನ ಗುಣಮಲಂಪ್ಯಂ ಜಗದೊಳದಂ ಕಿಡಿಸಿದಪ್ಪನೀ ನೃಪನೆಂದಟ್ಟಗದೊಳೆ ಪುಯ್ಯಲಿಪಂತೆ ಪೊಲೊಗೆದುದು ಚಲದನಿಲಹತಪಯೋನಿಧಿನಾದಂ (ಆದಿಪು. ೦೨-೬೬) ; ಲೋಕಕೋಟರಮಂ ತೀವಿದುದೆಂದು ಪುಯ್ಯಲಿಪವೋಲ್ ಮಹಾಲೋಕದೊಳ್ ಚಕ್ರಿಗೀ ಧುರದೊಳ್ ನೆಟ್ಟನೆ ಕೇಡು ತಪ್ಪದೆನುತುಂ ಗಂಭೀರ ಭೇರೀರವಂ (ನೇಮಿಪು. ೦೨-೯೯).

[ಪುಯ್ಯಲ್ (<ಪೊಯಲ್) + —ಇಸು]

**ಪುಯ್ಯಲ್ಲು**, ಪುಯಲ್ಲು (ಕ್ರಿ). = ಪುಯ್ಯಲಿಕ್ಕು ೧ : ಶ್ರೀವಿಜಯನ ಪೆಸರ್ಗೊಂಡು ಪುಯ್ಯಲ್ಲುವ ವನಿತಾಕ್ರಂದನಮಂ ಕೇಳ್ದು (ಶಾಪುಶಿ. ೩೬); ಎಮಗಿನ್ನಾರ್ ಶರಣೆಂದು ಮಾಂಡಲಿಕರುಂ . . . ವಿಲಾಸಿನಿಯರುಂ ಬಾಯ್ಬಿಟ್ಟು ಪುಯ್ಯಲ್ವೆ (ಶಂಶಪಷ. ೨-೯೭) ; ಗಿರಿಜೆಯು ಪದಯುಗ್ಗದೊಳ್ ರತಿ ಪೊರಳ್ದು ಪುಯ್ಯಲ್ವಿ ಪೇರ್ವಿಡಳಲೆರ್ವಡಿಸುತ್ತಿರೆ ಪಳಯ

ಕುತುಂ (ಗಿರಿ. ೯-೭೯). **ಪುಯಲ್ಚು** : "ಪುಯಲ್ಚು-ಆಕ್ರೋಶಧ್ವನೌ" (ಶಬ್ದ). [ಪುಯ್ಯಲ್ (< ಪೊಯಲ್) + –ಚು$_1$]

**ಪುಯ್ಯಲ್ವರಿ** (ಕ್ರಿ). ದಾಳಿಗೆ ನುಗ್ಗು ; ಕಾಳಗಕ್ಕೆ ನಡೆ : ಪೆರ್ವ್ವಯಲ ಕೊಬ್ಬಿನ ಪುಯ್ಯಲ್ವರಿದು ಬಯಲ್ಕಾಡಿನಾಳ್ಕಾದಿ ತುಱುವನಿಕ್ಕಿ . . . ಪೆರ್ಮ್ಮಾನಡಿಗಾವುಂಣ್ನನ ಮಗಂ ರಾಮನಲ್ಲಿ ಸತ್ತೊ ತೆ (ಎಕ. IV. ಹಗ್ಗ. ೦೦೪–೯; ಸು. ೬೧೦); ಸಱಕ್ಕನೂರ ಎರ್ವ್ವ ತುಱು ಪರಿದಪ್ಪ ಪುಯ್ಯಲ್ವರಿದು ಪಗರೆಯಲ್ಪಟ್ಟ ಕಾದಿ ತುಱುವಂ ಮಗುಳ್ಚಿ (ಎಕ. IX. ಹೊಸಕೋ. ೦೦-೦೦; 1041). [ಪುಯ್ಯಲ್ (<ಪೊಯಲ್) + ಪರಿ$_1$]

**ಪುಯ್ಯಲ್ವೋಗು** (ಕ್ರಿ). = ಪುಯ್ಯಲ್ವರಿ : ಗಂಗೆಸಟ್ಟಿ ಕಳಸ್ನಜ ಪನಟಿಯ ತುಱುಗೊಳೆಕೊಳ್ಳೊಂಡು ಪುಯ್ಯಲ್ವೋಗಿ ಅನ್ಯಾಱಿಡು ಸಗ್ಗವೇಱಿದವರ್ (ಎಕ. X. ಕೋಲಾರ. ೨೬೩-೩ ; ೯೯೯), ಪುಯ್ಯಲ್ಗೆ ಪೋದಂ — ಪುಯ್ಯಲ್ವೋದಂ [ ಪಾಠಾಂ. ಪುಯಲ್ಗೆ ಪೋದಂ—ಪುಯಲ್ವೋದಂ] (ಶಬ್ದ. ೦೬೨ ವೃತ್ತಿ). [ ಪುಯ್ಯಲ್ (<ಪೊಯಲ್) + ಪೋಗು$_1$ (<ಪೋ$_1$)]

**ಪುಯ್ಯನಿಸು** (ಕ್ರಿ). ಸುಳ್ಳೆನಿಸು ; ಹುಸಿಗೊಳಿಸು : ವ್ಯರ್ಥಗೊಳಿಸು : ಪೆತ್ತ ಗೆಲ್ಲವುಂ ಪೆಱಸಾರ್ಚಿದಂ ಪೊತ್ತ ಜಸವುಂ ಪು[ಪಾಠಾಂ. ಪೊ]ಯ್ಯನಿಸಿದಂ ಪಕ್ಕಿದೇಟ್ಗೆಯುಂ ಬಯಲ್ಗೆಯ್ದಂ (ಆದಿಪು. ೯೯ ೬).
[ಪುಯ್$_2$ + ಎನಿಸು$_1$]

**ಪುಯ್ಯೆಟಿಸು** (ಕ್ರಿ). ಗೋಳಾಡಿಸು ; ಗೋಳು ಹೊಯ್ದುಕೊಳ್ಳು : ಅನಿತಱೊಳವಳ ಬಾಜಿಪ ಕೈಗಳಂ ಪಿಡಿದು ನಿಲಿಸಿ ಈ ಪೊಗಾವ ಕಂಠಾಶ್ಲೇಷ ಪ್ರಣಯಿಯಯನೀ ತೆಱದೆ ಪೊಯ್ದು ಪುಯ್ಯೆಟಿಪರೇ ಎಂದನಿಬರಂ ನಗಿಸಿ ಕಾಳ್ಪುರಿಸಿ (ಆದಿಪು. ೬-೦೭೩). [<ಪುಯ್ಯಲ್ + ಎಟಿಸು]

**ಪುಯ್ಯೋಲಗ** (ನಾ). ಕಪಟದ ಓಲಗ : ಪೊಸಯಿಸಿ ಪುಯ್ಯೋಲಗವುಂ ಪೊಸಕಾದುರೆಯಾಪರ್ ಪೊಣರ್ಚಿ ಪಹಿಸೂರವರುಂ ವಸುಧಾರೆಯಪ್ಪ ರೆಂದೇ ಬಸವಟಿದಂ ಬೆರ್ಚಿ ಬೆದಱಿ ಬದಿರೂಪ್ಸವುಂ (ಅಪ್ರಸಿ. ೬೮–೩).
[ಪುಯ್$_2$ + ಓಲಗ$_1$]

**ಪುಯ್ಲಿಕ್ಕು** ' ಪುಯ್ಯಲಿಕ್ಕು ' ನೋ.

**ಪುಯ್ಲಿಡು** ' ಪುಯ್ಯಲಿಡು ' ನೋ.

**ಪುಯ್ವಗೆ** (ನಾ). ಕಪಟದ ಮನಸ್ಸು ; ಕುಟಿಲಬುದ್ಧಿ : ನಗೆವೊಗ ನುಡಿ ಸಿರಿವೊದೊಸಗುಗಳಂ ಮೋಸಗೊಳಿಪ ಗೋಪಾಲನ ಪುಯ್ವಗೆಯುಂ ಬಯಲೆನಿಸುತೆ ಪಡಿವೊಗದೊಳ್ ಮೂದಲೆಯು ಮುಂದುಗೆಯ್ದಳ್ ಮತ್ತಂ (ನೇಮಿನಾ. ೨೩-೯೩), ವ್ಯರ್ಥವಾಗಿ ವನವುಂ ದಹಿಸಿದವರುಂ ಪುಯ್ವಗೆಯಿಂದು ಬಜ್ಜೆಗಳು ಕಲ್ಪುವರುಂ (ಶಾಂತಿಪು. ೨೯೩-೩೯).
[ಪುಯ್$_2$ + ಬಗೆ$_2$]

**ಪುರ$_1$**, ಪುರ$_1$, ಪೂರ$_1$ (ನಾ). ಹೊನಲು ; ಪ್ರವಾಹ ; ನೆರೆ : " ಪುರ [ಪಾಠಾಂ. ಹೂರಂ]ಹೊನಲ್ " (ಶಬ್ದ. ೦೨), "ಪುರ ಹೊನಲ್" (ಶಬ್ದಮಂ. ೩೬) 'ಕಾಲ್ಪುರ' ಪರಾ. ಪುರ$_1$ : ದಿವಿಜಾವಳಿಯು ದುಂದುಭಿ ರವದಲುಬ್ಬಿದ ಸಾಧುವಾದಗಳ ಕಳಕಳದ ಕೊಲ್ಲಣೆಗೆಯಲಿ ಹೂವಳೆಯ ಪುರದ ಹೊನಲಿನಲಿ[ಪಾಠಾಂ. ಪೂವಳೆಯ ಪೂರದ ಹರಹಿನಲಿ]ಜನ ಮುಳುಗಿತು (ಕುಮಾ.ಭಾ. ೧೩-೬೦) ; ಉರಿಗಣ್ಣ ಜ್ವಾಲೆ ದಳ್ಳಿಸೆ ನಿಚ್ಚ ಪಚ್ಚದ ಪಂದಲೆ ತೋಂಗಲಾಡೆ ಸಿರದ ಹುರಂ ಸೀಱುಂಬುಳ್ಳಾಡೆ . . . ಮೂರುತಿಗೈಪೊಗಂ ಮುಮ್ಮೊಗನಾಗಿ ಜಡಿದಂ (ರಾಮಾಶ್ವ. ೦೩೨-೯).
ಹೂರ$_1$ : "ಹೂರಬೊಂದು ಹೊಸರ್" (ಶಬ್ದ. ೬೦-೨೯೯) ; ತಕ್ಕ ಸನ್ಮಾನವನು ಕೈಕೊಂಡೆಕ್ಕತುಳದಲಿ ಬಂದನವುರದ ಹೆಕ್ಕಳದ ಹೂವಳೆಯ ಹೊನಲಿನ ಹೂ[ಪಾಠಾಂ. ಪೂ]ರದಲಿ ಹನುಮ (ತೊರವೆ. ೩ ೯-೬) : ಪೊಸ ನೀರ ಹೂರದೊಳಗೆ ಮುಱಿಮೀಸ್ಸಗಳು ಮುಸಗಿ ಮುಂ ಪೊಳೆದಾಡುವಂತೆ ಮಿಸುಗುವ ವರಲಾವಣ್ಯಾಂಬುಧಿಯಲಿ ಒಗ್ಗೆಸೆದುವು ಪೊಳಪೇಱ ಪಗುತ

(ಶಾಸು. ೦೨–೬೯). [<ಸಂ. ಪೂರ]

**ಪುರ$_2$** (ನಾ). ೧. ಕೋಟೆ ; ದುರ್ಗ. ೨. ಪಟ್ಟಣ ; ನಗರ : " ಪತ್ತನ ನಿಗಮ ನಗರ ಪುಟಭೇದನ ನಗರೀ ಪೂಃ ಸಮಾಹ್ವಯಂ ಪುರಮುಕ್ತಂ " (ಕನ್ನಡಕೋ. ೯೬–೩) : ಪುಣ್ಯದ ದೀಡನಿಪುದು ಪುರಮಿದಂಬರೇಚರಪತಿಯಾ (ಶಾಂತಿಪು. ೩-೯) ; ಹರನ ಸಾಹಸಕಂಜದೆ ಪಲವಗಲು ಮುಪ್ಪುರ ಪಡಿಬರಿಯೋರಿದುದು ಪುರದೊಳಗಿರ್ಪ ಪುಣ್ಯಾಂಗನೆಯರ ಸಚ್ಚರಿತದ ಸಲಿಗೆಯಿಂದೆಸೆ (ಹರಿ. ೨–೯೯). ೩. ಮನೆ ; ಬೀಡು. ೪. ದೇಹ ; ಶರೀರ : " ತನುಃ . . . ಪುರಂ, ಪಿಂಡಂ . . . ಮೂರ್ತಿಃ—ಈ ೧೭ ಶರೀರಂ " (ಅಭಿಧಾ. ೯೯–೩೩೬). ೫. ಲಿಂಗಭೇದ : ಲಿಂಗ ವಿವರ : (ಅ). ೬. ಗುಗ್ಗುಳ : " ಪುರಾಖ್ಯಂ . . . ಫಲಂಕಷಃ—ಈ ೪ ಗುಗ್ಗುಳಂ " (ಅಭಿಧಾ. ೦೦೦-೯೬೬). ' ಪುರಮಂತ ' ಪರಾ. ೭. ನಾಗರಮುಸ್ತೆ : ಪೊ(ಪೂ)ರಕೆಯ ಬೂದಿಯುಂ . . . ಕೋಡಸಾಲೆಯಾತ್ರರಣ ಪುರಂಗಳಂಬನಿತುವಂ ತಿಲತೈಲದೊಳಟ್ಟು ಪೂಸುಗೆ (ಲೋಕೋಪ. ೯-೨೦೬). ೮. ತಾರಕಾಸುರನ ಮಕ್ಕಳಾದ ತಾರಕಾಕ್ಷ, ಕಮಲಾಕ್ಷ ಮತ್ತು ವಿದ್ಯುನ್ಮಾಲಿ ಎಂಬ ಮೂರು ಜನ ದೈತ್ಯರು ಕಟ್ಟಿಕೊಂಡ ಚಿನ್ನ, ಬೆಳ್ಳಿ ಮತ್ತು ಕಬ್ಬಿಣದ ಮೂರು ಪಟ್ಟಣಗಳು ; ತ್ರಿಪುರ : ' ಪುರವಿಜಯ ', ' ಪುರಹರ ' ಪರಾ. ೯. ದಾನವಾಗಿ ಕೊಟ್ಟ ಗ್ರಾಮ : ಅನ್ತರದು [ಪುರದ] ಸಾಸಿರ್ವ್ವರುಂ ಪುರಸ್ಸರರಾಗಿ ನಡೆದು (ಸೌಇಇ. XI-1. ೬೯–೦೯; 1028) ; ಆ ಚವಡಿಸಟ್ಟಿಯರ ನಿಯಾಮದಿಂ ನಾಗರಸರು ಪುರದಿಂ ಪಡುಪಲು . . . ಕೊಟ್ಟ ಸಾಸನ (ಎಇ. XXI. ೨-೬೭ : 1260). ೧೦. ಪಟ್ಟಣದಲ್ಲಿ ನಿರ್ಮಿಸಿದ ವಿಸ್ತರಣ, ಬಡಾವಣೆ ಎಂಬ ಅರ್ಥದಲ್ಲಿ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ. ೧೧. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ : " ಪುರ ವಹ್ನಿ ತ್ರಯ ಮೂಱು " (ಕುಂಗಣಿ. ೦೦೩–೪). ' ಪುರನಯನ ' ಪರಾ. [ಸಂ.]

**ಪುರಂ** (ಅ). ೧. ಮೊದಲು ; ಪೂರ್ವದಲ್ಲಿ : " ಆದಿಃ, ಅಗ್ರಂ, ಪು(ರಾ)ರಂ . . . ಪುರಃ — ಈ ೭ ಮುನ್ನಂ " (ಅಭಿಧಾ. ೦೦೭–೨೨) : "ಅಗ್ರಂ ಪುರಂ ಪ್ರಥಮಮಪೂದಿ ಪ್ರಾಕ್ ಪುರಮೆಂದನುಗ್ರಹಿಸೆ ಪೂರ್ವಕ್ಕೆ ಪೆಸರಕ್ಕು" (ಕುಂಗಣಿ. ೦೨೭–೪). ೨. ಪೂರ್ವ ದಿಕ್ಕಿನಲ್ಲಿ. [ಸಂ. ಪುರಃ]

**ಪುರಂತ$_1$** (ನಾ). ಪ್ರಾಚೀನ ಶಿವಶರಣ : ಇಂತು ಮಾನಿನದೊಳಹುದುಚಿತವ ಪುರಂತರೂಣೆನ್ನಾಣೆ (ಬಸವ. ೬೦-೩೯). ' ಪುರಾತ ' ಪರಾ. [<ಪುರಾತನ]

**ಪುರಂತ$_2$** (ನಾ). [ವೀಶೈ] ವರ್ತಮಾನ್ಯಗಳನ್ನು ಹೊಂದಿ ಒಂದು ಸ್ಥಾನದಲ್ಲಿ ನೆಲಸಿರುವ ಜಂಗಮ : ಆ ಪುರಂತರು ಒಡವ ಹೇಳೂತ ನಡೆದಾರ (ಲಿ.ಗೀ. ೩೬); ಪುರಂತರು ಪ್ರೀತಿಯಿಂದ ಹೇಳುವ ವಚನಗಳಿವು (ಶಿಶಿ. ೭೨೯). [<ಪುರವಂತ]

**ಪುರಂದರ** (ನಾ). ೧. ಶತ್ರುಗಳ ನಗರಗಳನ್ನು ನಾಶ ಮಾಡಿದವನು ; ಇಂದ್ರ : ಉಜ್ಜ್ವಳಪಾಚರತ್ನಭಾಸುರಸದನಂಗಳಿಂ ನೆಱೆದುದುಂ ಸಮೆದು ಪುರಮಂ ಪುರಂದರಂ (ಆದಿಪು. ೬-೯೯) ; ಕರಮೊಪ್ಪಿದುದಂದು ಪುರಂದರನೀಲಮೆ ಪುಕೋಮಸಾಕೆಯು ಕಟ್ಟಿದ ಕಂಠಾಭರಣಕ್ಕೆ ತಗುಳ್ಚಿದ ಪದ್ಮರಾಗನಾಯಕಮಿದೆಂದಿನಂ ರವಿಬಿಂಬಂ (ಶಾಂತಿಪು. ೯-೦೦೪) ; ಮಿಂದು ಶುಚಿಯಾಗಿ . . . ಪುರಂದರನ ನೆನೆದಳು ಮುನೀಂದ್ರನ ಮಂತ್ರಶಕ್ತಿಯಲಿ (ಕ.ಭಾ. ೪ ೩೯). ೨. ಶಿವ. [ಸಂ.]

**ಪುರಂದರಚಾಪ** (ನಾ). ಇಂದ್ರಚಾಪ ; ಕಾಮನ ಬಿಲ್ಲು : ಅಂಬರಮಹಾಂಬುಧಿಪಾರದಪಾರರತ್ನರಾಗ್ನಿಸರಮೊ ಭಾವಿಪಂದಿದು ವಿಯಚ್ಚ್ಯುತಕಂಠದ ವರ್ಣರಾಜಿಯೊಂದೆಸಕವೊ ತಾನಿದೆಂದೆನಿಸಿತಂದು ಪುರಂದರಚಾಪವಿಭ್ರಮಂ (ಪಂಪಭಾ. ೪-೩೦). [ಸಂ.]

**ಪುರಂದರಮಹ** (ನಾ). ಇಂದ್ರನ ಆರಾಧನೆಗಾಗಿ ಮಾಡುವ ಉತ್ಸವ;

ಇಂದ್ರಪೂಜೆ : ನಂದಾದಿಗೋಪರಿಂದು ಪುರಂದರಮಹಮೆಂದು ಹರ್ಷದಿಂ ಸಂಭ್ರಮಿಸಲ್ (ಜಗ. ೬-೭೩). [ಸಂ.]

**ಪುರಂದರವಂದ್ಯ** (ನಾ). ೧. ಇಂದ್ರನಿಂದ ವಂದನೆಯನ್ನು ಪಡೆಯತಕ್ಕವನು. ೨. ಗುರು; ಬೃಹಸ್ಪತಿ: ಪುರಂದರವಂದ್ಯಂ ಪದಿನೈದು ದೈತ್ಯಗುರುವಿಪ್ಪತ್ತೊಂದು ಸಂವತ್ಸರಂ ಪರಮೋಚ್ಚಾಂಶದೊಳೊಂದಿ ನಿಂದೊಡಮು ಕ್ರೀಡಾಯುಷ್ಯಮಕ್ಕುಂ ಧ್ರುವಂ (ಜಾತಕ. ೬-೦೨). [ಸಂ.]

**ಪುರಂದರಾರ್ಚಿತ** (ನಾ). ೧. ಇಂದ್ರನಿಂದ ಪೂಜೆಗೊಂಡವನು: ಅರವಿಂದನಾಭ ಪುರಂದರಾರ್ಚಿತ ನಂದನಂದ . . . ರಕ್ಷಿಸು ನಮ್ಮನನವರತ (ಜೈಮಿ. ೦೨). ೨. ಗುರು; ಬೃಹಸ್ಪತಿ: "ಪುರಂದರಾರ್ಚಿತ—ಗುರು" (ಚಾಕಿ. ೫೦. ೬೮೦). [ಸಂ.]

**ಪುರಂಧ್ರಿ** (ನಾ). ೧. (ಗಂಡನೂ ಮಕ್ಕಳೂ ಉಳ್ಳ) ಹಿರಿಯ ಮುತ್ತೈದೆ: ಪೂರ್ಣಕಳಶಕಳಮಾವೃತಕರಪಲ್ಲವೆಯರಪ್ಪ ಪುರಂಧ್ರಿಯರುಂ ಬದ್ಧವಣದ ಪರ್ಬಿಗಳುಂಬೆರಸಿದಿರ್ವಂದು ಪೊಬಲಂ ಪುಗಿಸೆ (ಶಂಕರಾ. ೩-೨೫); ಪುರಪುರಂಧ್ರಿಯರುಂ ಪುರೋಹಿತಪುರಸ್ಸರಂ ಧರಾಮರರುಂ ಪರಸಿ ಸೇಸೆಯನಿಕ್ಕೆ (ಪುಶ್ಯ. ೬-೩೦೮); ಪುರಂಧ್ರಿಯರು ಮಂಗಳಾರತಿಯನ್ನು ಮಾಡಕೊಡಗಿದರು (ಕುಳಕ. ೬೯). ೨. ಹೆಂಗಸು; ಸ್ತ್ರೀ: "ಭಾಮಿನಿ ನಿತಂಬಿನಿ . . . ಪುರಂಧ್ರಿ ವಧು ಯುವತಿಯಂಗನೆ . . . ಮಹಿಳೆಯ ಬಳಿ ರಾಮೆ ವರವರ್ಣನಿಯೆನಲ್ಕೆ ಹೆಂಗೂಸನಿಕ್ಕು" (ಚುಂಗಾ. ೬೯-೧); ಮಕರಕೇತನರಾಜ್ಯಾಧಿದೇವತೆಯರುಮಪ್ಪ ನಿಜಾಂತಃಪುರಪುರಂಧ್ರಿಯರ್ವೆರಸು ಪೋಗಿ ಜಲಕ್ರೀಡೆಯಾಡುತಿರ್ಪುದುಂ (ಶಂಕರ. ೧೨೯-೬); ನಿಜಾಂತಃಪುರಪುರಂಧ್ರಿಯರ ಅಗಣ್ಯಲಾವಣ್ಯರಸವಿಸರದೊಳು (ಪುದ್ದ. ೬-೯೩). ೩. ಹೆಂಡತಿ; ಪತ್ನಿ: "ಸಹಚರಿ ಭಾರ್ಯೆ . . . ಪುರಂಧ್ರಿ ಕಳತ್ರಂ ಗೃಹಿಣಿ ಗೃಹಂ ಸಜ್ಜನಕ್ಕೆ ಪೆಸರಿಂತಿನಿಸುಂ" (ಚನ್ನಕೋ. ೩೨-೩); ರಕ್ಷಿಸಿದ ಧನದಿಂ ಪುರಂಧ್ರಿಯ ರಕ್ಷಿಸುವುದು ಪುರಂಧ್ರಿಯಿಂದನೆ ರಕ್ಷಿಸುವುದಾತ್ಮನನು (ಕುವ್ಯಾಉ. ೩-೩೦); ನಮ್ಮಾಯ ಲೋಲಲೋಚನೆಗಾಡಿದುಕ್ತಿಯು ನಾಲಗೆಗೆ ಪುನರುಕ್ತಿಯಾಗೆ ಪುರಂಧ್ರಿ ನಗುವಳಲೆ (ಕೆಂರಾ. ೩-೬-೯೦). [ಸಂ. ಪುರಂಧ್ರೀ]

**ಪುರಃಪ್ರದರ್ಶಿತ** (ಗು). ಮುಂದಾಗಿ ತೋರಿಸಿದ; ಮುಂದೆ ಬಂದು ವಿವರಿಸಿದ: ವನಪಾಲಪುರಃಪ್ರದರ್ಶಿತಾನಂತತರುಲತಾಸಂದೋಹಸಂದರ್ಶನಾನಂದಕಂದಳಿತಹೃದಯಾರವಿಂದನುಂ . . . ಆಗಿ ನಡೆತರ್ಪಾಗಳ್ (ರಾಜಶೇ. ೦೦-೦೩ ಪ). [ಸಂ.]

**ಪುರಃಸರ** (ಗು). ೧. ಮುಂದಾಗಿ ನಡೆಯುವ-ಹೋಗುವ; ಮುಂಭಾಗದಲ್ಲಿ ಚರಿಸುವ. (ನಾ). ೨. ಮುಂದಾಗಿ ಬಂದು ತಿಳಿಸುವ ಆಳು; ವಾರ್ತಾಹರ; ಸಂದೇಶವಾಹಕ. ೩. ತಾನೇ ಮುಂದಾಗಿ ನಡೆದು ಇತರರಿಗೆ ಮಾರ್ಗದರ್ಶನ ಮಾಡುವವನು; ಮುಂದಾಳು; ಪರ್ಯಾಯ: 'ಪುರಸ್ಸರ' ಪರಾ. [ಸಂ.]

—ಪುರಕ '—ಪುರುಕ' ನೋ.

**ಪುರಕ್ಷಯ** (ನಾ). ತ್ರಿಪುರಗಳನ್ನು ನಾಶಮಾಡಿದವನು; ಶಿವ: ಇಕ್ಷುಕೋದಂಡಕ್ಷಯಾಯ ಪುರಕ್ಷಯಾಯ ಸಮುಕ್ಷಗತ ಪಾದ್ರಕ್ಷಣಾಯ ನಮೋ ನಮೋ ಗುರು ಸಂಗಮೇಶಾಯ (ಬಸವ. ೬೦-೯೬). [ಸಂ.]

**ಪುರಗಣ** (ನಾ). ದೇವಾಲಯದ ಸೇವಾವರ್ಗ ಮತ್ತು ಅವರಿಗಾಗಿ (ದೇವಾಲಯದ ಸುತ್ತಣ ಪೌಳಿಯ ಗೋಡೆಯ ಒಳಗೆ ಇರುವ ಬಯಲುಪ್ರದೇಶದಲ್ಲಿ) ನಿರ್ಮಿಸಿದ ವಸತಿಸ್ಥಾನ,-ಬಡಾವಣೆ; ಪುರವರ್ಗ (?): ಮಡಿತಯ್ಯ ಗೋಪರಸ ಬಿಟ್ಟ ಕಿಯ ಹುಳಿಯರ ಮತ್ತ ೧ ಮೊದಲೇರಿಯ ಆಲದ ಗದೆ ಕಂಬ ೫೦ ದೇವರ ಸುತಲು ಪುರಗಣಯಿಂತೀ ಬಿಟ್ಟ ಧರ್ಮ್ಮವ ಪ್ರತಿಪಾಳಿಸುವರು (ಕ್ಶಾಇ. IX-i. ೨೬೯-೯೯; 1154). [ಸಂ.]

**ಪುರಜನ** (ನಾ). ಪಟ್ಟಣದ ಜನ; ನಾಗರಿಕರ ವರ್ಗ: ಜನಪತಿಗೆ ಒಸಗೆಯುಂ ಪುರಜನಮುಮಂ ಬೀಳುಕ್ಕೊಳ್ವರ್ (ಶಂಕ. ೧-೯೬); ಪುರಜನಮಟ್ಟಿಯಿಂ ಮುಡಿವ ಕೊಡೆ ತುಱುಂಬುವ ಕಿಂಕಿರಾತಶೇಖರರಜದಿಂದಮಾದ ಪಟವಾಸದ ಧೂಳಿಯ ಪರ್ವಿನಿಂದವಾಭರಣದ ಮಣಿಕಿರಣಗಳ ಪೊದಟ್ಟರುಣಾಂಶುಗಳಿಂದಮುಂದು ಪಿಂಜರಿತಪಿಶಂಗಿತಾರುಣಿತದಿಙ್ಮುಖಮಾದುದು ತನ್ಮಹೋತ್ಸವಂ (ಅಂಕ. ೬-೦೦೯); ಪುರಜನಮುಮಂ ಪರಿಜನಮುಮಂ ನೆರೆದು ಮನಂಗೊಂಡು ಕೂರ್ತು ಕೀರ್ತಿಸೆ ಧರಣೀಶ್ವರರಯ್ಯೂರ್ವರ್ . . . ದೀಕ್ಷೆಯಂ ಕೈಕೊಂಡರ್ (ಸುಕುಮಾ. ೬-೩೪). [ಸಂ.]

**ಪುರಟ** (ನಾ). ಚಿನ್ನ; ಬಂಗಾರ: ಹರೆಯದ ಸುಮುಹೂರ್ತ ವೀಕ್ಷಗಜುಹಲ್ ಮಂಚಶರನಂಗಲಾವಣ್ಯಜಲಭಾಂಡದಲ್ಲಿಟ್ಟ ಪುರಟನಿರ್ಮಿತವಾದ ಗಳಿಗೆವಟ್ಟಲೊ ಪಯೋಧರಗಿರಿಗಳಂ ನೋಳ್ಪರ ಉರುದಿಟ್ಟಿಜಾರಿದು ಬೀಳುವ ಗುಳಿಯೊ . . . ಎನಲ್ ಕಣ್ಗೆವಂದುದು ನಿಮ್ನತರನಾಭಿ ಶ್ರೀಪಾರ್ವತೀದೇವಿಯಾ (ಶಂಕರಾ. ೬-೨೨). [ಸಂ.]

**ಪುರಟಪುರಾಣ** (ನಾ). ಸುಳ್ಳುಕಥೆ; ಹುಟ್ಟಿಸಿಕೊಂಡು ಹೇಳುವ ಕಥೆ: ಅವನಪ್ಪ ಸತ್ತದ್ದು, ಜವಾಬ್ದಾರಿ ಹೊರಿಸಿದ್ದು—ಈ ಪುರಟಪುರಾಣ ಎಲ್ಲ ಯಾರಿಗೆ ಬೇಕು? (ಮತಾಗ. ೧೩೬).

[ಪುರಟ್ಟ (ಶ←ತಮಿ. ಪುರಟ್ಟು=ಮೋಸ, ವಂಚನೆ) + ಪುರಾಣ]

**ಪುರಟವಸನ** (ನಾ). ಚಿನ್ನದ ಎಳೆಯುಳ್ಳ ಬಟ್ಟೆ; ಜರತಾರಿವಸ್ತ್ರ: ಪುರಟವಸನದ ಮಧ್ಯ ಹೊಳೆವ ನಾನಾಭರಣ ಕರಕಂಜ ಕಂಬುಕಂಠ ಸರಸಮುಖಚಂದ್ರಶೋಭನಮೂರ್ತಿ ಹಯವದನ (ವಾದಿ. ೪೯-೩). [ಸಂ.]

**ಪುರಡಿ** (ನಾ). ಒಂದು ಬಗೆಯ ಪಕ್ಷಿ: ಭೇರುಂಡ ಬೆಳುವ ಸಾಳುವ ಹದ್ದು . . . ಸೋಗೆನವಿಲು ಪುರಡಿ [ಪಾಠಾಂ. ಪೂರುಡಿ] ಗವುಡ ಕರ್ಕರ ಲಾವುಗೆ ಗುಬ್ಬಿ ಆರಣ್ಯದೊಳಗವರಾಟ (ಲಕ್ಷ್ಮೀ. ೦-೫೯). 'ಪುರುಳ್ಳಿ' ಪರಾ. [?]

**ಪುರತ್ರಯ** (ನಾ). =ಪುರ್₂ ೮: ತಿರುಗುವ ಪುರತ್ರಯಮನಹಿತಾಂತಕಟಕನು ಬೇಗೆಯಿಂ ಸುಡುವಂತೆ ಸುಟ್ಟನಲಾ (ಬಸವ. ೫೪ ೫೯). [ಸಂ.]

**ಪುರತ್ರಯದಾಹ** (ನಾ). ತ್ರಿಪುರಗಳನ್ನು ಸುಟ್ಟವನು; ಶಿವ: ಮದನಾಂತಕ ಪುರತ್ರಯದಾಹ ಹರಶಂಕರ ಮಹೇಶ ತ್ರಾಹಿ (ಕುವ್ಯಾ. ೬-೯೩). [ಸಂ.]

**ಪುರದರ್ಮ** (ನಾ). ಒಂದು ಬಗೆಯ ಸುಂಕ: ಪರಿಕಿಸದೀ ಧರ್ಮ್ಮದೊಳರಸರ ಕಾಣಿಕೆ ಕೊಳ್ಳಿಯರುವಣ ಕಿಱುಸುಂಕಂ ಪುರದ[ಧ]ರ್ಮ್ಮಂ ಬಣ್ಣಿಗೆಯುಂದರವೀಸಮುಳಿಪಿ ಕೊಣ್ಡಂ ಚಾಣ್ಡಾಳ (ಎಇ. XXVII. ೬೯-೫೯; 1114). [ಈ ಇದು 'ಪುರದ್ರಮ್ಮ' ಎಂಬುದರ ತಪ್ಪುರೂಪ]

**ಪುರದಾನಿಕೆ** (ನಾ). ಒಂದು ಬಗೆಯ ತೆರಿಗೆ: ಸ್ವರರೂಪಾ ಪೆರ್ಮ್ಮಾಡಿಯ ಪುರವರದೊಳ್ ನಡೆವ ಮನ್ನೆಯದ ಕಿಱುದೆಱೆಯುಂ ಪುರದಾನಿಕೆಯುಳ್ಳ ದೀವ ಪರಿಹಾರಂ ಬಿಟ್ಟು ಮಾಡಿದು ತತ್ಪುರಮಂ (ಕ್ಶಾಇ. XX. ೯೬-೩೪; 1074). [?]

**ಪುರದೇವತೆ** (ನಾ). ಊರಿನ ದೇವತೆ; ಗ್ರಾಮದೇವತೆ: ಪುರದೇವತೆಗಳ್ ಮುನಿಸಿಂ ಪರಿತಂದು ದುರಾತ್ಮನೆರಡುಕಣ್ಗಳುಮಂ ನಿಷ್ಠುರವಾಗಿ ಪೊಯ್ಯೆ ತೊಟ್ಟನೆ ಕುರುಡಾದಂ (ಧರ್ಮಾಮೃ. ೧೦-೦೬೩).

[ಸಂ. ಪುರದೇವತಾ]

**ಪುರದ್ರಮ್ಮ** (ನಾ). =ಪುರದರ್ಮ: ಆನೆಗೋಸನೆ ಸಲ್ವನ್ನೆಗಂ ಹಲವಣವು ಪುರದ್ರಮ್ಮಮುಮಂ ಕೊಳ್ಳ ಸಲ್ಲ[ದು] (ಕ್ಶಾಇ. ೯೬-೬.೦೫; ಸು. 1151).

[ಪುರ₁+ದ್ರಮ್ಮ]

**ಪುರದ್ವಾರ** (ನಾ). (ಪಟ್ಟಣದ) ಹೆಬ್ಬಾಗಿಲು; ಗೋಪುರ

"ಗೋಪುರಂ, ಪುರದ್ವಾರಂ—ಈ ೨ ಬಾಗಿಲುವಾಡಂ" (ಹರಿಾಯು. ೧೯-೦೩೩); ಅದಿ ವುಗಚಿ ಬಿದ್ದಳು ಪುರದ್ವಾರದ ಮಹಾಸೌಧ ಹುಡಿಗೆದಟಿ (ಕೋರಾ. ೩-೨-೦೦). [ ಸಂ. ]

**ಪುರಧ್ವಂಸಿ** (ನಾ). ತ್ರಿಪುರಗಳನ್ನು ನಾಶಮಾಡಿದವನು; ಶಿವ. [ಸಂ. ಪುರಧ್ವಂಸಿನ್]

**ಪುರನಯನ** (ನಾ). ಮೂರು ಕಣ್ಣುಗಳುಳ್ಳವನು; ಶಿವ: ಪುರನಯನ . . . ಪೊರೆವುದೀಕ್ಷಣವೆನ್ನ (ಶ್ರೀಕಾ. ೦-೩೦). [ ಸಂ. ]

**ಪುರಭೃತ್ತು** (ನಾ). ಪುರದ ಒಡೆಯ, – ದೊರೆ: ಪೇಚರಸ್ಸೈನ್ಯಂ ವಿಜಯಾರ್ಥಾಚಲತಟಧಾತುರೇಣಾರಕ್ತಂ ಪುರಭೃದ್ಯೋಚರಕೋಪಾಗ್ನಿ ಶಿಖಾರೋಚಿಃಪಟಳೋಪಲಿಪ್ತಮೆನಿಸಿದುದಾಗಳ್ (ಶಾಂತಿಪು. ೯-೬). [ಸಂ. ಪುರಭೃತ್]

**ಪುರಮಥನ** (ನಾ). ೧. ತ್ರಿಪುರಗಳನ್ನು ನಾಶ ಮಾಡಿದವನು; ಶಿವ: ಪುರಮಥನರೂಪದಿಂ ನೀಂ ಮರಳ್ಗೊಡನಾಡಿದ್ದೈ (ಶಗಾ. ೯-೧೦೯); ಪುರಮಥನನ ಪರಕೀಕೃಂಕಾರವಿಾ ಗಿರಿಸುತೆಯ ವದನದೊಳ್ ಮೊಳೆತುದು ಸಾದರದಿಂ ತಾನೆಂಬಂತಿರೆ ಕರಮೊಸೆದುದು ವಿಮಳಮೌಕ್ತಿಕಂ ನಾಸಿಕದೊಳ್ (ಗಿರಿ. ೩-೫೩). ೨. [ಛಂದ] 'ಗುರು' ಎಂಬುದರ ಸಂಕೇತ (—): ಸ್ವರದ ಪಡೆ ನೆರೆದಿರಲು . . . ಪದಾಂತಂ ಪುರಮಥನ ಶಿಖೆ ಬಟುಕ ನೆರೆದು ಯತಿ ದಶಮದೊಳ್ (ಛಂದೋಂಬು. ೩-೨೦೫). [ಸಂ.]

**ಪುರಮರ್ದನ** (ನಾ). = ಪುರಮಥನ ೧: ಪುರಮರ್ದನಾಗೇಂದ್ರನಂ ನಿಂದು ಬೆಳಗಾಗಿಸಿತ್ತಮಲ ಧರ್ಮಜನ ಕೀರ್ತಿ (ಕೃಷ್ಣರಾ. ೨-೦೨). [ಸಂ.]

**ಪುರರಿಪು** (ನಾ). ತ್ರಿಪುರಗಳ ವೈರಿ; ಶಿವ: ಪುರರಿಪು ಸಾಮವೇದಿಯ ಪೊಳಲ್ವೆರಸೊಯ್ಯನೆ ತನ್ನ ಲೋಕಕಟ್ಟರಿಯನೆ ಘಂಟಿಗೂಡಿ ವಿಸು ಪೋಪಿಲನಂ ರಜತಾಚಲಕ್ಕೆ ಬಿತ್ತರದೊಳ್ ಕೊಂಡುಪೋಗನೆ (ಶ್ರೀಕಾ. ೩೬-೦೨೫). [ಸಂ.]

**ಪುರಲಿ** 'ಪುಚಿಲೆ' ನೋ.

**ಪುರಲು** 'ಪುರುಳ್' ನೋ.

**ಪುರಲೆ, ಪುರುಳೆ** (ನಾ). ೧. ಒಣಗಿದ ಹುಲ್ಲು, ಸೌದೆಯ ಚಿಕ್ಕ ತುಂಡು ಮೊದಲಾದ ಉರುವಲು: ಗಿಡದಿಂದ ಅಡಿಗೆಗೆ ಬೇಕಾದ ಸೌದೆಯನ್ನೂ ಪುರಲೆಯನ್ನೂ ಆಯ್ದುಕೊಂಡು ಬರುವುದು (ಕೃಷಿರ್. ೧೬); ಅವಳು ನೀರಿನ ಒಲೆಗೆ ಪುರಲೆಯನ್ನು ಹಾಕುತ್ತಿದ್ದಳು (ಸಮ್ಮೂರ. ೩); ಮನೆಯ ಕಡೆ ತರಲೆ, ಹೊಲದ ಕಡೆ ಪುರಲೆ (ಗಾದೆ). ೨. (ಆಲಂ) ಒಣಮಾತು; ಜಳ್ಳುನುಡಿ: ಸಂಗೀತದಲ್ಲಿ ಓಡದಿದ್ದ ಅವರ ಬುದ್ಧಿ ಪಿಸುಣತನದಲ್ಲಿ ಚುರುಕಾಯಿತು. ಅವರು ದಿನಕ್ಕೊಂದು ಪುರಲೆ ಹಾರಿಸತೊಡಗಿದರು (ದೊಷು. ೦೩೯). **ಪುರುಳೆ**: ೧. ಪುರುಳೇ ಸೌದೆ ಇಲ್ಲದೆ ದೊಡ್ಡ ಸೌದೆ ಉರಿಯುತ್ತದೆಯೇ (ಹುಟ್ಟಿಹ. ೦೯೨). 'ಪುಳ್ಳಿ' ಪರಾ.

**ಪುರುಳೆ ಹಚ್ಚಿಡು** = (ಆಲಂ) ಮನಸ್ತಾಪವನ್ನು ಉಂಟುಮಾಡು; ಜಗಳ ಹಚ್ಚಿಸು: ಆ ಈಟಿಸ್‌ದೇವತೆಗೋ ಮೊದಲೇ ಅನ್ಯೋನ್ಯವಾಗಿದ್ದವರ ಮಧ್ಯ ಪುರುಳೆ ಹಚ್ಚಿಡುವ ಸ್ವಭಾವ (ಕಜ್ಜಾ. ೦೬೯).

**ಪುರವಂತ** (ನಾ). ೧. ಗುಗ್ಗುಳದ ಉತ್ಸವದ ಸಂದರ್ಭದಲ್ಲಿ ಮಾಡುವ ವೀರಭದ್ರನೃತ್ಯ: ಒಡ್ಡಿ ಚುಡುತ್ರೀಲಿ ಪುರವಂತನಾಡಸ್ತ ಐಸೀರಿಲೊಬ್ಬಂಟಾರಲ್ಲ (ಜುಜ್ಜಗಿ. ೫೬). ೨. ವೀರಭದ್ರನೃತ್ಯವನ್ನು ಮಾಡುವವನು; ಈ ಕುಣಿತದ ಮಧ್ಯೆ ಮಧ್ಯೆ ಒಡಪುಗಳನ್ನು ಹೇಳುವುದು ಈತನ ಸಂಪ್ರದಾಯ. ವಚನಗಳನ್ನೂ ಹಾಡುವುದುಂಟು: ಪುರವಂತರು ವೀರಭದ್ರನ ಅವತಾರವೆಂಬ ನಂಬಿಕೆಯಿದೆ (ಕಜಿ. ೦೦೨). [ ಪುರ + — ವಂತ]

**ಪುರವಂತಿಕೆ** (ನಾ). ಶಿವಭಕ್ತನಾದ ಪುರವಂತನಿಂದ ನಡೆಯುವ ಒಂದು ಬಗೆಯ ನಾಟ್ಯಕಲೆ: ಉತ್ತರಕರ್ನಾಟಕದಲ್ಲಿ ಪ್ರಚಲಿತವಿರುವ ಶೈವ ಪರಂಪರೆಯ ವಿಶಿಷ್ಟವಾದ ಧಾರ್ಮಿಕ ಕಲೆ 'ಪುರವಂತಿಕೆ' (ಕಜಿ. ೦೦೨). [ ಪುರವಂತ + — ಇಕೆ ]

**ಪುರವಟಿ** 'ಪುರವಣೆ' ನೋ.

**ಪುರವಣೆ, ಪುರವಟ್ಟಿ, ಪುರೋಣೆ, ಪೂರೋಟಿ** (ನಾ). ೧. (ಉಕ) ಪೂರೈಕೆ; ಸರಬರಾಜು: ಒದಗಿಸುವಿಕೆ: ಬೇಕಾದಾಗ ಹಣದ ಪುರವಣೆಯನ್ನು ತಮಗೆ ಮಾಡಬೇಕೆಂದು ಅವರು ಬರೆದಿರುವರು (ಶಿಧಿಶ್ಮ. ೩೬); ಅವನ ನಿತ್ಯಾವಳೀ ಮನೆಯ ಗಂಡುಮಗಾಕ್ಕೆ ಜೋಡಿ ಒಂಟಿ ಲೆಕ್ಕದಿಂದ ಯಜ್ಞೋಪವೀತದ ವಾರ್ಷಿಕ ಪುರವಣೆಯಾಗಬೇಕು (ಬೀಹಜ. II, ೯೯). ೨. ಸಮೃದ್ಧವಾಗಿರುವಿಕೆ; ವಿಪುಲವಾಗಿರುವಿಕೆ; ಸುಗ್ಗಿ: ನೀರು ಪುರವಣೆ ಆದ್ರ ಒಂದು ಮಾಗಿ ಎಲಿಬಳ್ಳಿ ಬೆಳೆಸೋಣ (ಶಾಂತಿ. ೬); ಕಮಲಜ್ಜಿಗೆ ಈಗ ಎಂಬತ್ನಾಲ್ಕು ವರುಷಗಳು. ಆಕೆಯು ನಿದ್ದೆಯ ಪುರವಣೆಯಲ್ಲಿ ಈಗ ಒಣಗಿದ್ದರೂ ನೆನಪಿನ ಶಕ್ತಿಯು ಮಾತ್ರ ಹಚ್ಚ ಹಸುರಾಗಿತ್ತು (ಕಷ್ಮಿ. ೩೬). **ಪುರವಟಿ**: ೧. ವಿದೇಶೀಬಟ್ಟೆಯನ್ನು ಸಂಪೂರ್ಣವಾಗಿ ಬಹಿಷ್ಕರಿಬೇಕಾದರೆ ಪ್ರತಿವರ್ಷ ೧,೫೦೦ ದಶಲಕ್ಷ ಯಾರ್ಡು ಬಟ್ಟೆಯ ಪುರವಟಿಯಾಗಬೇಕು (ಶಾದಿಶಾ. ೯೬). **ಪುರೋಣೆ**: ೧. ಲೋಕಲ್ ಫಂಡು . . . ಇವರ ಹಣದಿಂದ ಶಿಕ್ಷಣ, ಹೊಸಮಾರ್ಗಗಳು, ನೀರಿನ ಪುರೋಣೆ, ಕಾವಲಿಗಳು, ಧರ್ಮಶಾಲೆ, ವೈದ್ಯಶಾಲೆಗಳು ಮುಂತಾದ ಸಾರ್ವಜನಿಕಹಿತದ ಕೆಲಸಗಳಾಗುತ್ತಿರುತ್ತವೆ (ಕಹಾಗ. ೩೯೫). **ಪೂರೋಟಿ**: ೨. ಒಂದು ಬಾರಿ ನೀರು ಎಲ್ಲಾ ಕಡೆ ಪೂರೋಟಿ ಆಗಬೇಕಲ್ಲರಿ (ಶಾಂತಿ. ೦೩). [ ← ಮರಾ. ಪುರವಟಾ, ಪುರಪಠಾ ]

**ಪುರವಣಿ** (ನಾ). ಪೂರಕಪತ್ರ; ಅನುಬಂಧ; ಪರಿಶಿಷ್ಟ: ಅವಕ್ಕೆ ಎರಡು ನೂರು ಪುಟದ ಪುರವಣಿಯನ್ನು ಜೋಡಿಸಬೇಕಾಗಿದೆ (ಮಕಜು. ೯); ಹೊಸ ಉಲ್ಲೇಖಗಳ ಪುರವಣಿಗಳನ್ನು (Supplements) ಕಾಲಕಾಲಕ್ಕೆ ಮುದ್ರಿಸಿ ಸೂಚಿಯ ನವೀನತೆಯನ್ನು ಕಾಯ್ದುಕೊಳ್ಳಹತ್ತಿದವು (ಗ್ರಂಥಾಲ. ೯೨); ಪಾರ್ಸೀ ಪತ್ರಿಕೆಯಲ್ಲಿ ಒಂದು ಇಂಗ್ಲೀಷ್ ಪುರವಣಿ ಭಾಗವೂ ಇರುತ್ತಿತ್ತು (ಪತ್ರಿಕಾ. ೨೬). [ ← ಮರಾ. ಪುರವಣೀ ]

**ಪುರವರ** (ನಾ). ಶ್ರೇಷ್ಠವಾದ ಪಟ್ಟಣ, — ನಗರ: ನಿಡಿಯಲರ್ಗಣ್ಗಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾಗದೆ ತಡೆಯೆ ಪಗಲ್ ಪರಿಯವಪ್ಪಾ ಪುರವರದೊಳ್ (ಕಾವ್ಯಸಾ. ೦೬೯ ಕೂಪ್ರ); ಆ ಕೋಟಿಯೊಳಗೆ . . . ಏಕದ್ವಿತ್ರಿಚತುಶ್ಶಾಲಾಕೀರ್ಣಂ ಪುರವರಂ ಕರು ಸೊಗಯಿಸುಗುಂ (ಶಾಂತಿಪು. ೯-೦೯೬). [ ಸಂ. ]

**ಪುರವರ್ಗ** (ನಾ). ದೇವಾಲಯದ ಸೇವಾವರ್ಗ ಮತ್ತು ಅವರಿಗಾಗಿ ನಿರ್ಮಿಸಿದ ವಸತಿಸ್ಥಾನ, — ಬಡಾವಣೆ: ಮನ್ನೆಯದೊಳಗೆರಡು ಪೊನ್ನುಮಂ ದೇವರ ಪುರವರ್ಗ್ಗಫಳಿಯ ಭತ್ತಮುಮಂ . . . ಹನ್ನೆರ ಹಣಮುಮಂ ಬಿಟ್ಟರು (ಕಇ. IV, ೩೯-೨೬; 1111); ಜನನಿಗೆ ಚಂದಲೇಶ್ವರಮನೆತ್ತಿಸಿದಂ ಪುರವರ್ಗ್ಗಮಂ ಜಗಜ್ಜನನುತಮಾಗೆ ಕಾಮನೆಜ್ ವಟ್ಟಿನೆ ಮಾಡಿಸಿದಂ . . . ಕಾವಿನಿಯರನಾಯ್ದು ತಂದು ಪುರವರ್ಗ್ಗದ ಸೂಳೆಯರಾಗೆ ಮಾಡಿದಂ (ಎಇ. XIII, ೯೬-೬೩; 1112); ಗುಂಮ್ಮಂಣ್ನನ ಹೆಸರಲಿ ಪುರವರ್ಗ್ಗವಾಗಿ ಸಂಭುದೇವರ ಮುಂದೆ ಅಯ್ದುಮನೆಯಂ ಕೊಟ್ಟು (ಮ್ಯಆ. ೦೯೯೩, ೦೯-೦೦; 1318). [ ಸಂ. ]

**ಪುರವಾಸಿ** (ನಾ). ಪಟ್ಟಣದ ನಿವಾಸಿ; ಪಟ್ಟಣಿಗ; ನಗರವಾಸಿ: ಕರೆತಂದರ್ ಪುರವಾಸಿಗಳ್ ದೊರೆಯನುದ್ಯತ್ಸಾರಸೌರಂಭದಿಂ (ಹಾಕಾವ್ಯ. ೦-೩-೦೯). [ ಸಂ. ಪುರವಾಸಿನ್ ]

**ಪುರವಿಜಯ** (ನಾ). ತ್ರಿಪುರಗಳನ್ನು ಗೆದ್ದವನು; ಶಿವ: ಪುರವಿಜಯಂಗೆ ತನ್ನ ಸುತೆಯುಪ್ಪುಮೆಯಂ ನಲವಿಂದಮಿತ್ತು ಭೂಧರಪತಿ ಮಾವ

ನೆಂದೆನಿಸಿದಂದದಿನೆನ್ನಯ ಕನ್ನೆಯಂ . . . ನಿಮ್ಮಡಿಗೆ ಕೊಟ್ಟು ವಿವಾಹ ಮನೊಪ್ಪೆ ಮಾಳ್ಪೆಂ (ತ್ರಿಷ. ೩೩.೦೩೯). [ಸಂ.]

**ಪುರವೈರಿ** (ನಾ). ತ್ರಿಪುರಗಳ ಶತ್ರು ; ಶಿವ: ಪುರವೈರಿ ಪೆಳರ್ದು ನಿಜ ಮಂದಿರದ ಕವಾಟದೊಳ್ ತಳ್ತ ಬೀಯಗವಾನದಂ ಪರಿಹರಿಸಿ ತೆಗೆದು ಪೊಳಲನೆ ಸರಭಸವಾ ಜವಳಿಪಡಿಯನೇಂ ಬರ್ಚಿದನೊ (ಕೃಷ. ೦೬-೪೦). [ಸಂ. ಪುರವೈರಿನ್]

**ಪುರಶಾಸಕ** (ನಾ). ತ್ರಿಪುರಗಳನ್ನು ದಂಡಿಸಿದವನು ; ಶಿವ. [ಸಂ.]

**ಪುರಶ್ಚರಣ** (ನಾ). ದೇವರ ಹೆಸರನ್ನು ಅಥವಾ ಮಂತ್ರವನ್ನು ಜಪಿಸುವುದು : ಪುರಶ್ಚರಣಂಗೈಯದೆ ಸಂಖ್ಯಾನಿಯತವಾಗಿ ದೇಹಾಂತ ಪರ್ಯಂತ ಮಾಳ್ಪುದೇ ನಿತ್ಯಜಪವಹುದು ಕನಿಷ್ಠವೆನಿಸುವುದು ಪುರಶ್ಚರಣಂ ಮಾಡಿ ಬಿಡುವುದೇ ಪುರಶ್ಚರಣಜಪವದು ಮಧ್ಯಮವೆನಿಸುವುದು ಪುರಶ್ಚರಣಂಗೈದು ಮೇಲೆ ಸಂಖ್ಯಾನಿಯಮದಿಂ ಪ್ರಾಣಾವಧಿ ಮಾಳ್ಪುದೇ ಪುರಶ್ಚರಣ ಪೂರ್ವಕ ನಿತ್ಯಜಪವದುತ್ತಮವೆನಿಸುವುದು (ಶಿವೀಕ. ೯೭).

[ ಸಂ. ]

**ಪುರಶ್ಚರಣೆ** (ನಾ). ಮತ್ತೆ ಮತ್ತೆ ಜಪಿಸುವುದು,-ಹೇಳುವುದು : ನಿಶ್ಚಲಹೃದಯನಾಗಿ ವಿಷ್ಣುನಾಮಂಗಳ ಪುರಶ್ಚರಣೆಯಿಂದಮಂ ಸುಖ ದೋಳಿರಂಶಿರೆ (ಕೃಬರಾ. ೦೦.೩೯); ಅವನು ಆಕೆಯ ಕನ್ಯಾವಸ್ಥೆಯಲ್ಲಿ . . . ಸೂರ್ಯನ ಮಂತ್ರದ ಪುರಶ್ಚರಣೆಯ ಪ್ರಭಾವದಿಂದ ಹುಟ್ಟಿದವನು (ಶಿಗಟ್ಟು. ೨೦). [ಸಂ. ಪುರಶ್ಚರಣ]

**ಪುರಸತ್ತು**, ಪುರಸೊತ್ತು, ಪುರುಸತ್ತು, ಪುರುಸೊತ್ತು (ನಾ). ಬಿಡುವು ; ವಿರಾಮ : ವೀರರಾಜೇಂದ್ರಪೇಟೆ ಉಗ್ರಾಣಕ್ಕೆ ದಿವಾರಾತ್ರಿಯಲ್ಲೂ ಪುರಸತ್ತು ಇಲ್ಲದೆ, ಅಕ್ಕಿ ಹೊರುತ್ತಾರೆ (ರಾಕೇಂದ್ರ. ೦೩೬) ; ಪುರಸತ್ತಾದರೆ ಮಧ್ಯಾಹ್ನ ಅಕ್ಕನ ಮನೆಗೆ ಬರುತ್ತೇನೆ (ಕುರುರಾ. ೮೩೯); ಅವನಿಗೆ ಯೋಚನೆ ಮಾಡಲು ಆಗ ಪುರಸತ್ತಿರದು (ರಾಶ್ಯಾಂಗ. ೦೨೩). **ಪುರಸೊತ್ತು** : ವರ್ಷಕ್ಕೆ ಆರುತಿಂಗಳು ರೈತರಿಗೆ ಕೆಲಸ. ವಿಕ್ಕ ಸಮಯ ಪುರಸೊತ್ತಿನಿಂದಿರುತ್ತಾರೆ (ಗಂಗಾಳ. ೦೨) ; ರಸ್ತೆಯಲ್ಲೋ ಮಸ್ತು ಜನ, ಇಲ್ಲ ಪುರಸೊತ್ತು (ಕಃಚು. ೩೨-೦೨) ; ನಾವು ಪುರಸೊತ್ತೇ ಇಲ್ಲದೆ ಕೆಲಸ ಮಾಡುತ್ತಾ ಇದೀವಿ (ಪುಂಖಷಾ. ೧೧೩). **ಪುರುಸತ್ತು** : ಹೆಂಗಸರಿಗೂ ಪುರುಸತ್ತಿಲ್ಲ. ಗಂಡಸರಿಗೂ ವಿರಾಮವಿಲ್ಲ (ಹಃಬ್ಯಕ. ೬೦): ಚಹವನ್ನು ಕುಡಿದುಕೊಂಡು ಹೋಗುವುದಕ್ಕೂ ಬಾಳುವಿಗೆ ಪುರುಸತ್ತಿರಲಿಲ್ಲ (ಕಂಜುಬ. ೩೯); ಅವಳು ಚಲುವೆಯೋ ಅಲ್ಲವೇ ಎಂದು ನಿಂತು ನೋಡುವುದಕ್ಕೆ ಪುರುಸತ್ತಿಲ್ಲ (ರಾಮಾವ. ೦೦೨). **ಪುರುಸೊತ್ತು** : ನನಗೆ ಮಧ್ಯಾಹ್ನ ಹನ್ನೆರಡು ಗಂಟೆಯವರೆಗೆ ಪುರುಸೊತ್ತೇ ಇಲ್ಲ (ರಾರಠ. ೪) ; ನಿನ್ನ ಜೊತೆ ಮಾತಾಡೋಕೆ ಪುರುಸೊತ್ತಿಲ್ಲ (ಶಾಬಶ. ೩) : ಉಸಿರಾಡಿಕೊಳ್ಳಲಿಕ್ಕೆ ಸ್ವಲ್ಪ ಪುರುಸೊತ್ತು ಕೊಡು (ಕುಹಾಂ. ೪೩).

[←ಅರ. ಹಿಂ. ಪುರಸತ್, ಪುರ್ಸತ್; ಮರಾ. ಪುರಸತ್, ಪುರ್ಸತ್, ಪುರಸೊತ್, ಪುರ್ಸತೀ ]

**ಪುರಸಭೆ** (ನಾ). ಸ್ಥಳೀಯ ಅಧಿಕಾರವುಳ್ಳ, ಚುನಾಯಿತ ಸದಸ್ಯರನ್ನು ಹೊಂದಿದ ಪಟ್ಟಣದ ಸಂಸ್ಥೆ ; ನಗರಸಭೆ ; ಪೌರಸಭೆ : ಪುರಸಭೆ ಬಿಟ್ಟಿದ ನಾಯಿಗಾಡಿಯ ನೋಡಿ ಕುನಿ ಗಲ್ಲಿ ಬಿದ್ದೋಡುವಂತೆ ತನ್ನನ್ನು ಬೆನ್ನಟ್ಟಿ ಬಂದರೆಂದೇ ಹೋಡಿ ಅವಿತು ಕದ್ದೋಡುವನಲ್ತೆ (ಕಂಧ್ರ೭೬. ೦೩೯-೬೪). [ಸಂ. ಪುರಸಭಾ]

**ಪುರಸೊತ್ತು** ‘ಪುರಸತ್ತು’ ನೋ.

**ಪುರಸ್ಕರಿಸು** (ಕ್ರಿ). ೧. ಮನ್ನಿಸು ; ಗೌರವಿಸು ; ಆದರಿಸು : ಪಾಂಡು ಪುತ್ರರ ಸುಗುಣಗಳನ್ನು ಕಂಡು ಪ್ರಜೆಗಳು ಅವರನ್ನು ಅಖಂಡವಾಗಿ ಪ್ರೀತಿಸಿ ಪುರಸ್ಕರಿಸುತ್ತಿದ್ದರು (ಒಂಕರು. ೨); ನನ್ನನ್ನು ಪುರಸ್ಕರಿಸಲು ಸಾವಿರ ಜನರು ಮುಂದೆ ಬಂದಾರು (ರಂಗರೋ. ೦೦೨): ಆ ಬ್ರಾಹ್ಮಣ . . . ನಾವು ದೇವಸ್ಥಾನಕ್ಕೆ ಬರಬೇಕೆಂದೂ, ಸಕಲಮರ್ಯಾದೆಗಳೊಡನೆ ಪುರಸ್ಕರಿಸುವನೆಂದೂ ಹೇಳಿದನು (ಕಂಗಾಳ್ಯ. ೫೦೨). ೨. ಬೆಂಬಲಿಸು ; ಪ್ರೋತ್ಸಾಹಿಸು : ಈ ಪತ್ರಿಕೆಯು ಪುರಸ್ಕರಿಸುತ್ತಿದ್ದ ಐರ್ಲೆಂಡಿನ ಸ್ವಾತಂತ್ರ್ಯಚಳುವಳಿಯ ಬಗ್ಗೆ ಭಾರತದಲ್ಲಿಯ ಆಂಗ್ಲರಿಗೆ ಒಳ್ಳೇ ಅಭಿಪ್ರಾಯವಿರಲಿಲ್ಲ (ಪ್ರಭಾ. ೨೫).

[ಪುರಸ್ಕರಣ + -ಇಸು]

**ಪುರಸ್ಕರ್ತ** (ನಾ). ಬೆಂಬಲಿಸುವವನು ; ಸಮರ್ಥಿಸುವವನು ; ಅನುಯಾಯಿ : ಆಧುನಿಕಕಾಲದೊಳಗಿನ ಸಮತೆಯ ಪುರಸ್ಕರ್ತರೂ ತಿಳಿದೂ ತಿಳಿಯದೆಯೂ ಇದೇ ಶ್ರದ್ಧೆಯ ಸ್ವೀಕಾರವನ್ನು ಮಾಡುತ್ತಿರುವರು (ಶ್ರೀಂರ. ೦೦೪) : ಆರ್ಸ್‌ಫರ್ಡಿಗೆ ಬಂದ ತಿಂಗಳೆರಡು ತಿಂಗಳಲ್ಲಿಯೇ ನಿಯೋಗಿಯು ಒಂದು ವಿಶಿಷ್ಟ ಧೋರಣದ ಪುರಸ್ಕರ್ತನಾದ (ಗಚುಜ. ೩೬೯). [ < ಸಂ. ಪುರಸ್ಕರ್ತೃ ]

**ಪುರಸ್ಕಾರ** (ನಾ). ೧. ಗೌರವ ; ಸನ್ಮಾನ ; ಮರ್ಯಾದೆ : ಹಳ್ಳಿಗೆ ಒಳ್ಳೆಯ ಪುರಸ್ಕಾರ ದೊರೆತ ಹಾಗಾಯಿತು (ದೂಹಂ. ೩೩): ನಿಸರ್ಗ ವಿಜ್ಞಾನಕ್ಕೆ ಹೆಚ್ಚಿನ ಪುರಸ್ಕಾರ ದೊರೆಯಿತು (೩ಕ್ರ. ೨೯). ೨. ಸ್ವೀಕಾರ : ವ್ಯಕ್ತಿತ್ವದ ವರ್ಗೀಕರಣವಿಧಾನಯತ್ನ ಅಷ್ಟಾಗಿ ಪುರಸ್ಕಾರ ಪಡೆದಿಲ್ಲ (೩ಕ್ರದ. ೬೩೯). ೩. ಬಹುಮಾನ ; ಇನಾಮು : ರವಿಯ ಹಣವನ್ನು ಕಳವು ಮಾಡಿದ ವ್ಯಕ್ತಿಯೇ ಆ ಮಗುವಿನ ಕೊರಗನ್ನು ಕಂಡು ಮನ ಕರಗಿ ಬಾಲಕಿಗೆ ಪುರಸ್ಕಾರವಾಗಿ ಇವನ್ನು ಕಳುಹಿಸಿರಬಹುದೇ ? (ದೂಗು. ೦೩); ಮೋತಿಯು ಕಾಗದವನ್ನು ತಂದವನಿಗೆ ಸ್ವಲ್ಪ ಪುರಸ್ಕಾರ ಮಾಡಿ ಕಳುಹಿಸಿಕೊಟ್ಟು . . . ಕಾಗದವನ್ನೋದಿ ಹೇಳಿದಳು (ಕಹಾಳು. ೬೦).

[ಸಂ.]

**ಪುರಸ್ಕೃತ** (ಗು). ೧. ಮುಂದೆ ಇಟ್ಟ ; ಮುಂದು ಮಾಡಿದ. ೨. ಗೌರವವನ್ನು ಪಡೆದ : ಸನ್ಮಾನಿತ ; ಪೂಜಿತ. (ನಾ). ೩. ಶತ್ರುಗಳಿಂದ ಆಕ್ರಮಿಸಲ್ಪಟ್ಟವನು. ೨, ೩ : ನಾಡಿಗರೊಳೆಲ್ಲರುಂ . . . ಪುರಸ್ಕೃತರಭಿಪನ್ನರಲ್ತು (ರಾಜೂಕ. ೬-೨೩). [ಸಂ].

**ಪುರಸ್ಸರ** (ಗು). ೧. ಮುಂದೆ ಬರುವ ; ಅಗ್ರೇಸರವಾದ ; ಶ್ರೇಷ್ಠವಾದ : ವಿಜಯಾರಂಭಪುರಸ್ಸರವಿಜಯಗಜಂಗಳನೆ ಒಡ್ಡಿದು ಘೂರ್ಜರ ರಾಜಧ್ವಜಿನಿಯನಿಱಿದೋಡಿಸಿ (ಕಂಕಾ. ೦.೩೩). (ನಾ). ೨. ಸಹಿತವಾದುದು ; ಸಮೇತವಾದುದು : ವಿಶ್ರುತಶ್ರುತಕೀರ್ತ್ಯಾಚಾರ್ಯ ಪುರಸ್ಸರಮಪ್ಪಾಚಾರ್ಯಪರಂಪರೆಯ ಕುಡುಗೆ ಭದ್ರೋತ್ಸವಮಂ (ಅಂಕ. ೧-೧೨). ‘ಪುರಃಸರ’ ಪರಾ.

**ಪುರಸ್ಸರವಾಗಿ** = ಕೂಡಿಕೊಂಡು ; ಸಮೇತವಾಗಿ ; ಸಹಿತವಾಗಿ: ಬಾಚಿಮಯ್ಯನುಂ ಮಗ ಮಲ್ಲಿಯಣನುಂ ಪುರಸ್ಸರವಾಗಿ ಮಲ್ಲಿಕಾರ್ಜುನ ದೇವರ್ಗೆ . . . ಬಿಟ್ಟ ಗದ್ದೆ (ಶಾಶಾ. IX-I, ೨೯೦.೫೬; 1286ರ ಶಶ) ; ವಾತ್ಸಲ್ಯದಿಂದಲೂ ಅಧ್ಯವಸಾಯ ಪುರಸ್ಸರವಾಗಿಯೂ ಯುಧಿಷ್ಠಿರಾದಿ ಕುಮಾರರನ್ನು ಲಾಲಿಸಿ ಪಾಲಿಸಿದುದನ್ನೂ ನೆನೆನೆನೆದು ಅವನು ಕಣ್ಣೀರ ತುಂಬಿದನು (ಒಕ್ಕಕ. ೬೨). [ಸಂ.]

**ಪುರಸ್ಸರಂ** (ಅ). ಸಹಿತವಾಗಿ ; ಸಮೇತವಾಗಿ ; ಪೂರ್ವಕ : ಪರಸ್ಪರ ಕ್ಷೇಮಕುಶಲಭಾಷಾಪುರಸ್ಸರಂ ಅಮರ್ದಪ್ಪೆ (ಕಂರಾಚು. ೦೦-೩೫ ವ); ಸುಶ್ರುತನಂ ತಾಂಬೂಲದಾನಪುರಸ್ಸರಂ ವಿಸರ್ಜಿಸಿ (ಕುದ್ರಕ. ೩-೩೬ ವ). [< ಪುರಸ್ಸರ]

**ಪುರಸ್ಸರತೆ** (ನಾ). ಕೂಡಿಕೊಂಡಿರುವಿಕೆ: ಸಹಿತವಾಗಿರುವಿಕೆ : ಚತುರ್ವಿಧಾರಾಧನಾಪುರಸ್ಸರತೆಯಿಂ ಸಮಾಧಿವಿಧಿಗೇಂ ಮಸಂದಂದಳೋ (ಶುಳುಚು. ೯-೦೫). [ಸಂ. ಪುರಸ್ಸರತಾ]

**ಪುರಹರ** (ನಾ). ತ್ರಿಪುರಗಳನ್ನು ನಾಶ ಮಾಡಿದವನು: ಶಿವ : ಪುರಹರ

ಸೂಡೆ ಪುಂಸ್ ತ್ರಿಪುರಮಂ ಪಲಕಾಲಮುಂ ಪೊಃಟತ ಪ್ರತಾಪರಣ ದೋರ್ದರ್ಪಗಳುಪವಾಸದ ಪಾರಣೆ ವಾಯುಪುತ್ರನಿಂ ದೊರೆಕೊಳೆ ಲಂಕೆಯಂ ಶಿಖಿ ಶಿಖಾವಧಿಯುಬ್ಬಿಸಮುಂಡು ತೇಗುವಂತಿರೆ ಪೊಲಪೊಣ್ಮಿದತ್ತು ಧಗಿಲೆಂಬ ಧಗದ್ಧಗಿಲೆಂಬ ಸಿಸ್ವನಂ (ಕುರಾಪಾ. ೧೧-೧೪೬); ಪುರಹರನಿರ್ದಪಂ ಸಿರುಪಮಾನತಪೋಮಯನಾಗಿ (ಗಿಲೆ. ೬-೧೩). 'ತ್ರಿಪುರಹರ' ಪರಾ.

**ಪುರಹರನಯನಮಣಿ**=ರುದ್ರಾಕ್ಷಿ: ಸಿರಘಭಸಿತ ಪುರಹರನಯನಮಣಿ ವಿಸರಪತಂ . . . ಶರಣನೆಸೆದಂ (ಹಾಶಾಸ್ತ್ರ. ೦-೪-೬). [ಸಂ.]

**ಪುರಹರಸುತ** (ನಾ). ೧. ಶಿವನ ಮಗ; ಸ್ಕಂದ. ೨. ಸ್ಕಂದನ ಅವತಾರವೆನಿಸಿದ ತಿರುಜ್ಞಾನಸಂಬಂಧ ಎಂಬ ಪುರಾತನ ಶಿವಶರಣ: ಪುರಹರಸುತ ನೀನೆರೆದರ್ಗೆರದಿಪ್ಪವನೀವುದುಳ್ಳೊಡಿಂದೆನ ಗೊಲಪಿಂದೆರೆವುದನೀವುದು (ಪ್ರಭು. ೩೩-೧೩೬). [ಸಂ.]

**ಪುರಹರವಕ್ತ್ರ** (ನಾ). ೧. ಶಿವನ ಮುಖ. ೨. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ: ಪುರಹರವಕ್ತ್ರಂ ಪಂಚಂ . . . ಪುರವೈರಿಮುಖಂ ಗಳೈದಱ ನಾಮಂ (ಕ್ಷತಚೂ. ೯-೩). [ಸಂ.]

**ಪುರಳಿಮರ** (ನಾ). ಒಂದು ಬಗೆಯ ಸಸ್ಯ: ಪಾದರಿ, ಕಾಲದ್ರಿ, ಪುರಳಿ ಮರ, ಕಲಿಹುಟ್ಟು, ಕಲ್ಲುಉದಿ (ಮೈಶಿಗ. ೬೨-೧೪೬೬). [ಪುರಳಿ₀ + ಮರ₁]

**ಪುರಾಂಗನೆ** (ನಾ). ಪುರದಲ್ಲಿಯ ಹೆಂಗಸು; ಪುರಸ್ತ್ರೀ: ಓಲಗಶಾಲೆ ಪೂಗಿಡುಗಳೋಳಗೆ ನಾಟ್ಯಶಾಲೆ ಕುಸುಮಾಪಚಯಪ್ರಚಳತ್ಪುರಾಂಗನಾ ಲೋಲಕಟಾಕ್ಷಲಕ್ಷ್ಮಿಗನಲೊಪ್ಪುವಪಲ್ಲಿಯ ಪುಷ್ಪವಾಟಿಗಳ್ (ಕುಕೃಕು. ೦೨-೩೦). [ಸಂ. ಪುರಾಂಗನಾ]

**ಪುರಾಂತಕ** (ನಾ). = ಪುರಹರ: ಪುರಾಂತಕಧ್ಯಾನದಲಿ ವಿಮಲಸ್ವಾಂತ ನೇತ್ರಾಗ್ರದಲಿ ಭಜಿಸಿದನಿಂದುಶೇಖರನ (ಕುವ್ಯಾ. ೨೨-೯೩). [ಸಂ.]

**ಪುರಾಕೃತ** (ಗು). ೧. ಹಿಂದೆ ಮಾಡಿದ; ಪೂರ್ವಜನ್ಮಗಳಲ್ಲಿ ಮಾಡಿದ: ವಾಂಛೆಯಿಲ್ಲದ ಜೀವಿತಮುಂ ಮುನ್ನೆಂಬುದಿಲ್ಲದ ವಿಕ್ರಮಮುಂ ಒಗಡಿಸಿದನುಭವಮುಂ ಪಗೆಯುಂ ಪೊಗಳಿಸುವ ಧೈರ್ಯಮುಂ ಪುರಾಕೃತ ಸುಕೃತ ಫಲಂಗಳ್ (ಚಾಂಶಿಪು. ೪-೭೯ ವ); ತನ್ನನಿಂದ್ರನಾಗೆ ಬಗೆದು . . . ಪುರಾಕೃತ ಪುಣ್ಯದಿಂ ಸುಖಮನನುಭವಿಸುತ್ತಿರೆ (ಶಂರಾಮ. ೦೭-೦೩೪ ವ); ಹಗೆಯೊಳೆಮ್ಮವರೊಳಗೆ ಎದೆಗಿಚ್ಚುಗಳ ಮಿಲ್ಲಕುಠಾರರವಸಂಬುಗೆಯ ಬಳಸಿದರಮು ಪುರಾಕೃತಕರ್ಮದವಶೇಷ (ಕುವ್ಯಾ. ೬-೧೧). (ನಾ). ೨. ಪೂರ್ವ ಜನ್ಮದಲ್ಲಿ ಮಾಡಿದ ಕರ್ಮ: ಒಳ್ಳಿತ್ತು ಕೆಯ್ದೊರೆವಪ್ಪೊಲ್ಲದುಪದಱಿಂತೆ ಬಲ್ಲಿತ್ತು ಕಲಿಗೆ ವಿಪರೀತಾ ಪುರಾಕೃತಮಿಲ್ಲಿ ಸಂಧಿಕ್ಕುಂ (ಇಅ. X, ೬೦-೪; ಕು. ೭೦೦); ಪುರಾಕೃತ ತಪ್ಪದೇನಾದುದಾಗಲಿ (ಪಪಮೋ. ೩-೧೧); ಅನುಬಂಧ ಜೀವಜೀವಕೆ ಪುರಾಕೃತದಿಂದ (ಹಂಕಾಳ. ೮೬೬). [ಸಂ.]

**ಪುರಾಟಕ** (ನಾ). [ನಾಟ್ಯ] ಮೂವತ್ತೈದು ದೇಶೀಯಭೌಮಚಾರಿಗಳಲ್ಲಿ ಒಂದು; "ಕಾಲುಗಳನ್ನು ಮೇಲಕ್ಕೆತ್ತಿ ಒಂದನ್ನೊಂದು ತಟ್ಟುತ್ತಿರುವುದು" (ಅಸ್ಕರಂ. ೩೨೩ ಗದ್ಯಾನುವಾದ): ರಥಚಕ್ರ, ಪರಾವೃತ್ತತಲ . . . ಪುರಾಟಿಕ, ಅರ್ಧಪುರಾಟಕ . . . ಸಮುತ್ಸರಿತ; ಈ ಮೂವತ್ತೈದು ದೇಶೀಯಸಂಬಂಧದ ಭೌಮಚಾರಿಗಳು (ಅಸ್ಕರಂ. ೬-೦೭ ವ). [ಸಂ.]

**ಪುರಾಣ** (ಗು). ೧. ಹಳೆಯ ಕಾಲದ; ಪ್ರಾಚೀನಕಾಲಕ್ಕೆ ಸಂಬಂಧಿಸಿದ; ಪುರಾತನವಾದ: ದೊರೆಕೊಂಡಿರೆ ಸೊಗಯಿಸುಗುಂ ಪುರಾಣಕಾವ್ಯ ಪ್ರಯೋಗದೊಳ್ತತ್ಕಾಲದ ವಿರಸಂ ಕರಮವು ದೇಸಿಗೆ ಜರದ್ವಧೂವಿಷಯ ಸುರತರಸರಸಿಕತೆಪೊಲ್ (ಕಾಶಾ. ೦-೩೦); ನೆರೆದಿಸುತಿರೆ ತೋಲ್ವಲ್ಲಿಯ ನಿರದದು ಬಟ್ಟೊಡೆ ಪುರಾಣಕೂಪದೊಳ್ (ಹಂಕಹಾ. ೨-೩೦); ಕತೆಯೊಳಗಱಿಯದ ವಿಪರೀತತೆಯಿಂದಂ ಪೇಟ್ದ ಕೃತಿಗಳಿರ್ಕೆ ಪುರಾಣಸ್ಥಿತಿಯೊಳೆ ಕವಿರತ್ನನಿನನ್ವಿತಮಾದುದು ಸಗರಚಕ್ರವರ್ತಿಯ ಚರಿತಂ (ಅಜಿಪು. ೦೨-೨೬). ೨. ಉದ್ದವಾದ; ದೀರ್ಘವಾದ: "ಆದಿಕಥೆಯೊಳು ದೀರ್ಘದೊಳು ಜೀವದೊಳು ಪುರಾಣಾ" (ಮಂಗರಾ. ೦೩೦-೩೩). ೩. ಜರ್ಜರಿತವಾದ; ಜೀರ್ಣವಾದ. (ನಾ). ೪. ಹಳೆಯದು: ಪುರಾತನವಾದುದು: "ಜೀರ್ಣಂ, ಜರತ್, ಪುರಾಣಂ, ಪ್ರತ್ನಂ, ಪ್ರತನಂ, ಪುರಾತನಂ- ಈ ೬ ಪ(ಹ)ಳದು" (ಶಅಮು. ೦೦೬-೨೬); "ಜೀರ್ಣಮಾ ಜರತ್ಪ್ರತನಮಾರ್ಗವ ಮನವ್ಯಂ ಪುರಾಣಂ ಪುರಾತನಮೆನಲು ಹಳಿಕೆಂಗೆ ನಾಮಮಕ್ಕುಂ" (ಕಂಗರಾ. ೦೨೯-೦೩). ೫. ಪೂರ್ವಕಾಲದಲ್ಲಿ ನಡೆದು ಹೋದ ಕಥೆ; ಪ್ರಾಚೀನವಾದ ಚರಿತ್ರೆಯನ್ನು ಹೊಂದಿದ ಕಾವ್ಯಪ್ರಕಾರ: ಅಸಮ ಬಸವಪುರಾಣಮಂ ಪಸರಿಸುವವಂ ಪಾಪಂಗಳಂ ಪ್ರಹರಿಸುವಂ (ಬಸಪು. ೬೦-೭೯); ಇಂದಿನ ಬಾಳು ನಾಳೆಗೆ ಚರಿತ್ರೆ, ನಾಡಿದ್ದಿಗೆ ಪುರಾಣ (ಸಾಹಿತಿ. ೩೩). ೬. ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತ ಎಂಬ ಪಂಚಲಕ್ಷಣಗಳನ್ನು (ಅಥವಾ ಇನ್ನು ಕೆಲವರು ತಿಳಿಸುವಂತೆ ಸರ್ಗ, ವಿಸರ್ಗ, ವೃತ್ತಿ, ರಕ್ಷಾ, ಅಂತರ, ವಂಶ, ವಂಶಾನುಚರಿತ, ಸಂಸ್ಥೆ, ಹೇತು ಮತ್ತು ಅಪಾಶ್ರಯವೆಂಬ ದಶಲಕ್ಷಣಗಳನ್ನು) ಉಳ್ಳ ಪ್ರಸಿದ್ಧವಾದ, ವ್ಯಾಸಪ್ರಣೀತವೆಂದು ತಿಳಿಯಲಾದ ಹದಿನೆಂಟು ಮಹಾಪ್ರಬಂಧ: "ಜಗತ್ತಿನ ಉತ್ಪತ್ತಿಯನ್ನೂ ನಾಶವನ್ನೂ ವಂಶವನ್ನೂ ವಂಶಾನುಚರಿತವನ್ನೂ ಮನ್ವಂತರಗಳನ್ನೂ ಹೇಳುವ ಪ್ರಬಂಧವು ಪುರಾಣ ಎನಿಸುಗು" (ಶಾಕರಾ. ೯೪); ಪುರಾಣದ ಭಟ್ಟವೃತ್ತಿಗೆ ಸರ್ಬ್ಬನಮಸ್ಯವಾಗಿ ಪಡೆದ ರೇವದಾಸಭಟ್ಟರ ಕೆಯ್ಯಂ ಬಡಗ ಬಿಟ್ಟ ಪಿರಿಯ ಕೋಲ ಮತ್ತ[ರ] (ಶಾಸನ. XX. ೬೨-೧೧: 1111); ಶಾಸ್ತ್ರ ಪುರಾಣವ ಕೇಳಿದೊಡೇನು . . . ಭಕ್ತಿಯಿಲ್ಲದವರನೊಲ್ಲ ಕೂಡಲ ಸಂಗಮದೇವ (ಬಸವ. ೧೮೬); ಹಲವು ವೇದ ಪುರಾಣ ಶಾಸ್ತ್ರವ ತಿಳಿದು ನೀ ಮರುಳಾದೆ (ಕೌಶಿರಾ. ೩೭-೦೬). 'ಅಷ್ಟಾದಶ ಪುರಾಣ' ಪರಾ. ೭. (ಆಲಂ) ವೈಯಕ್ತಿಕವಾದ ದೀರ್ಘಕಥೆ: ನಿನ್ನ ಪುರಾಣ ಇರಲಿ. ಮೂರ್ತಿ. ಚಹಾ ಎಂದೋ ಆರಿಹೋಗಿದೆ. ಮೊದಲು ಕುಡಿದು ಮಾತನಾಡು (ಚಿರೋಟಿ. ೩); ಶ್ರೋತಾವೃಂದಕ್ಕೆ ಬಸವಂತಿಯ ಪುರಾಣವನ್ನು ಖಾಸಗೀ ಆಗಿ ನಡೆಸಿತ್ತು (ದೀಪಹ. II, ೦೯೮). ೮. ಹರಟೆ; ರಗಳೆ. ೯. [ಜೈನ] ಲೋಕಾಕಾರಕಥನ, ದೇಶನಿವೇಶವರ್ಣನ, ನಗರವರ್ಣನ, ರಾಜ್ಯವರ್ಣನ, ತೀರ್ಥಮಹಿಮೆ, ಚತುರ್ಗತಿಸ್ವರೂಪವಿವರಣೆ, ತಪೋದಾನವಿಧಾನ, ತಪಃಫಲವರ್ಣನೆ—ಎಂಬ ಎಂಟು ಅಂಗಗಳನ್ನು ಒಳಗೊಂಡ, ಅರ್ಹಂತನೇ ಮೊದಲಾದ ತ್ರಿಷಷ್ಟಿಶಲಾಕಾಪುರುಷರ ಕಥೆ: ಆ ಪುರಾಣಕ್ಕಂ ಲೋಕಾಕಾರಕಥನಮುಂ ದೇಶನಿವೇಶೋಪದೇಶಮುಂ ನಗರಸೂಪತ್ತ್ರಿವರ್ಣನಮುಂ ರಾಜ್ಯ ರಾಮಣೀಯಕಾಖ್ಯಾನಮುಂ ತೀರ್ಥಮಹಿಮಾಸಮರ್ಥನಮುಂ ಚತುರ್ಗತಿಸ್ವರೂಪ ನಿರೂಪಣಮುಂ ತಪೋದಾನವಿಧಾನವರ್ಣನಮುಂ ತತ್ಫಳಪ್ರಾಪ್ತಿಪ್ರಕಟನಮುಮೆಂದಿಂತಪಯವಂಗಳೆಂಟಕ್ಕುಂ (ಆದಿಪು. ೧-೪೨ ವ); ಸದ್ಧರ್ಮಕಥಾಥನನಿಬದ್ಧಗ್ರಂಥಂ ಪುರಾಣಮಿತಿಹಾಸಾಖ್ಯಂ (ಮುತ್ತೀಲೀ. ೨-೯). [ಸಂ.]

**ಪುರಾಣಕವಿ** (ನಾ). ೧. ಹಿಂದೆ ಆಗಿ ಹೋದ ಕವಿ; ಪೂರ್ವಕಾಲದ ಕವಿ: ಪುರಾಣಕವಿ ಪ್ರಭು ಪ್ರಯೋಗಾವಿಳ ಸದ್ಗುಣೋದಯಮನಾಯ್ದು ಪಱಿಂ ಸಮೆದೊಂದು ಕಾವ್ಯದಿಂ . . . ಮುದಮಂ ತನಗಾಗಿಪುದು ಕವೀಶ್ವರಂ (ಕವಿರಾ. ೨-೦೩೩); ಕವಿಗಳೊಳಾ ಪುರಾಣಕವಿಪುಂಗವರೊಳ್ಪಿದರಿಲ್ಲ (ಗರುಹು. ೧-೪೭). ೨. ಪುರಾಣವನ್ನು ರಚಿಸಿದ ಕವಿ: ವಾಕ್ಶ್ರೀಸುಭಗಂ ಪುರಾಣಕವಿಯುಂ ಧರೆಗಾಗಿರಯ್ಯಣ್ಣ ಪೊಣ್ಮುವಿ ದೇಸಿಗಳಂತೆ ಸಾಡೊವಜನಾದನೊ ಪೇಟ್ ಕವಿತಾಗುಣಾರ್ಣವಂ (ಹಂಕಶಾ. ೦೯-೬೨). [ಸಂ.]

**ಪುರಾಣಚೂಡಾಮಣಿ** (ನಾ). ಪುರಾಣಗಳಲ್ಲಿ ಅತ್ಯುತ್ತಮವಾದುದು; ಶ್ರೇಷ್ಠವಾದ ಪುರಾಣ: ಶಾಂತಿಜಿನಜನ್ಮಜಲಧಿಗೆ ಶಾಂತಿಪುರಾಣಮೆ

ಪುರಾರ್ಥರತ್ನಮಿದಂ ಪೇಳ್ವಿಂತು ಕವಿಚಕ್ರವರ್ತಿಯಿಂ ನೋಂತಂ ಪೆಸರಿಂ ಪುರಾಣಚೂಡಾಮಣಿಯುಂ (ಶಾಂತಿಪು. ೧-೧೩). [ಸಂ.]

**ಪುರಾಣಜ್ವರ** (ನಾ). ಬಹಳ ದಿನಗಳಿಂದ ಇರುವ ಜ್ವರ; ಹಳೆಯ ಜ್ವರ: ಏಳು ರಾತ್ರಿ ಪರ್ಯಂತರ ತರುಣಜ್ವರವೆನಿಸಿಕೊಂಬುದು. ಪತ್ತು ರಾತ್ರಿ ಪರ್ಯಂತರ ಮಧ್ಯಮಜ್ವರವೆನಿಸಿಕೊಂಬುದು. ಅದಱ ಮೇಲೆ ಪುರಾಣ[ಪಾಠಾಂ. ಹಳೇ]ಜ್ವರವೆನಿಸಿಕೊಂಬುದು (ವೈದ್ಯಸಾ. I. ೩೩); ಈ ಮಾತ್ರೆಗಳನ್ನು ಕೊಬ್ಬರಿರಸದಲ್ಲಿ ಕೊಡಲು ಜ್ವರಾತಿಸಾರ, ಪುರಾಣ ಜ್ವರಗಳು ಸಹ ನಿಲ್ಲುವುವು (ಸಕವೈ. ಶಂ. ೪೬೧). [ಸಂ.]

**ಪುರಾಣಪುರುಷ** (ನಾ). ೧. ಮುದುಕ; ವೃದ್ಧ: ಗಂಭೀರಸ್ವರದೊಳ್ ಭವ್ಯಾಕಾರದೊಳ್ ಮಿಕ್ಕಿತಂ ಕಾರಣಪುರುಷನಾಗಲೆವೇಳ್ಕುಮೆಂದು ನಿಶ್ಚಯಿಸಿ ಪುರಾಣಪುರುಷನೊರ್ವನಿಂತೆಂದು (ಶಂಶಪಾ. ೮-೩೬೪). ೨. ಆದಿಪುರುಷ; ವಿಷ್ಣು: ತಪನಕುಲಜಾತರ್ ಪುರಾಣಪುರುಷೋತ್ತಮನ ವಿಪುಲಸಂತತಿ ಯವರ್ (ಕೈ.ಬಿಸಾ. ೨೧-೨೪); ನಾರದನುಂ ಪರ್ವತನುಂ ಪುರಾಣಪುರುಷನು ಕಂಡೆಱಗುತ (ಅದ್ಭು.ತ. ೧೩.೪); ಶ್ರೀಕೃಷ್ಣನು ಪುರಾಣಪುರುಷನೂ ನಿಜ; ಐತಿಹಾಸಿಕವ್ಯಕ್ತಿಯೂ ನಿಜ (ಶಾರದ. ೧೦೪). ೩. ಶಿವ; ಈಶ್ವರ. [ಸಂ.]

**ಪುರಾಣಮಾರ್ಗ** (ನಾ). ಪ್ರಾಚೀನಕಾಲದಿಂದ ನಡೆದು ಬಂದ ರೀತಿ, ಸಂಪ್ರದಾಯ: ಉಚಿತಪುರಾಣಮಾರ್ಗವಪದ್ಧತಿಬಂಧುರಬಂಧವೆಂಬಿನಂ ರಚಿಯಿಸೆ . . . ಕಾಳಿದಾಸನುಮಂನೇಳಿಸಿತಿ ಕೃತಿ ನಾಗವರ್ಮನಾ (ಛಂದೋಂಬು. ೧-೭). [ಸಂ.]

**ಪುರಾಣವಾಕ್ಯ** (ನಾ). ೧. ಬಹುಕಾಲದಿಂದ ಬಂದಿರುವ ಮಾತು; ಗಾದೆ: ಶರೀರಮಾದ್ಯಂ ಖಲುಧರ್ಮಸಾಧನಂ ಎಂಬ ಪುರಾಣವಾಕ್ಯ ಮುಂಟು (ಶಂಶಪಾ. ೦೦೩-೧೩); ಕೇನಾಪ್ಯುಪಾಯೇನ ಫಳಂ ಹಿ ಸಾಧ್ಯಂ ತಾನೆಂಬುದುಂಟಲ್ತೆ ಪುರಾಣವಾಕ್ಯಂ (ಸುಕುಮಾ. ೩-೩೨). ೨. ಪುರಾಣ ದಲ್ಲಿರುವ ಮಾತು: ಬಿಸರುಹಾಕ್ಷನ ಹರನಿಜಾದನೆಂದುಸುರಲೊಲ್ಲನು ಸಹಜವಾದ ಪುರಾಣವಾಕ್ಯವನು (ಏಕಪು. ೩೭-೨೨). [ಸಂ.]

**ಪುರಾಣಶ್ರವಣ** (ನಾ). ಪುರಾಣವನ್ನು ಕೇಳುವಿಕೆ: ಮಠದಲ್ಲಿ ಶ್ರಾವಣಮಾಸದಲ್ಲಿ ಪುರಾಣಶ್ರವಣ ನಡೆಯುತ್ತದೆ (ಕೂಡಿ). [ಸಂ.]

**ಪುರಾಣಿ** (ನಾ). ಪುರಾಣ ಹೇಳುವವನು; ಪುರಾಣಿಕ: ಯಥಾರ್ಥವ ನೊರೆಯಲೊಲ್ಲನು ಪಕ್ಷಪಾತಿ ಪುರಾಣಿ [ಪಾಠಾಂ. ಣ]ಭಟ್ಟನಲಾ (ಏಕಪು. ೩೭-೨೮); ಪೇಳಿದ ಪರಮ ಪುರಾಣಿ ರಾಯಂಗೆ ಶರಣಾಳಿಯ ಮೆಲ್ಗತೆಗಳನು (ಸೋಕಪು. ೨-೬೬). [<ಪುರಾಣ]

**ಪುರಾಣಿಕ** (ನಾ). ೧. ಪುರಾಣಗಳನ್ನು ಚೆನ್ನಾಗಿ ಓದಿ ತಿಳಿದವನು. ೨. ಪುರಾಣಗಳನ್ನು ವಿವರಿಸಿ ಹೇಳುವವನು; ಪೌರಾಣಿಕ: ಅವನಿಪನ ನಗರಾಗ್ರದಲಿ ಪೊಂದಿವಸವೋದುತ ಸತ್ಕಮವ ಪೇಳುವ ಪುರಾಣಿಕ ನಂತೆ ಕೆಲಬರು ಕೇಳುತಿರಲಾಗಿ (ಏಕಪು. ೩೭-೩೦); ಇಂದ್ರಲೋಕವು ಪುರಾಣಿಕರ ವರ್ಣನೆಯಂತೆ ಇರುವುದಾದರೆ ಅದು ಎಂದೋ ಸಿಗುವುದು (ನಿತ್ಯಾಮು. ೪). [<ಸಂ. ಪೌರಾಣಿಕ]

**ಪುರಾತ** (ನಾ). = ಪುರಾತನ ೪: ಎಲ್ಲಾ ಪುರಾತರು ನೆರೆದು ಭಕ್ತಿಭಿಕ್ಷವನಿಕ್ಕಿದರೆ ಎನ್ನ ಪಾತ್ರೆ ತುಂಬಿತ್ತು (ಬಸವ. ೩೯೯); ಪುರಾತರೊಳಗೊಲವಿಂ ಮಿಳಿ ಚರನಾತ್ಮಭವರಂ ತಮ್ಮುಮಂ ಕೊಟ್ಟವರೊಳರು ಶತಕೋಟಿಕೋಟಿಗಳು (ಬಸಪು. ೨೨-೭೭). 'ಪುರಂತ್ರ' ಪಾಠ.

**ಪುರಾತಭಕ್ತರು** = ಪ್ರಾಚೀನ ಶರಣರು: ಮುನ್ನೆ ಪುರಾತಭಕ್ತರು ವರಂಬಡೆದೀ ಸ್ಥಳವೆಂದು ಕೀರ್ತಿಯಂ ಜನ್ನವಿಸಲ್ಕೆ (ಕೌಶಿಕ. XX. ೧೬೮-೦೭; 1192). [<ಸಂ. ಪುರಾತನ]

**ಪುರಾತನ** (ಗು). ೧. ಹಳೆಯ ಕಾಲದ; ಪ್ರಾಚೀನ; ಪೂರ್ವಕಾಲದ: ಉನ್ನಮೆ ಪುರಾತನ ಭವಸಂಬಂಧಮೇದಿನಿ (ಶಾಂತಿಪು. ೬-೦೨ ವ); ಬುಧರಿರ್ದ ನೋಟ್ಟುದು ಪುರಾತನ ನೂತನ ಕಾವ್ಯರೇಖೆಯಂ (ಗದಾಯು. ೧-೪೭); ನಮ್ಮ ಜನರಲ್ಲಿ ಬಹು ಪುರಾತನ ನಡತೆಗಳೆಷ್ಟೋ ಉಂಟು (ಕುಂಶತಾ. ೯-೧೮೩). (ನಾ). ೨. ಹಳೆಯದು; ಪೂರ್ವಕಾಲಕ್ಕೆ ಸಂಬಂಧಿಸಿದುದು; ಪ್ರಾಚೀನವಾದುದು: "ಜೀರ್ಣಂ, ಜರತ್, ಪುರಾಣಂ, ಪ್ರತ್ನಂ, ಪ್ರತನಂ, ಪುರಾತನಂ–ಈ ೬ ಪ(ಹ)ಳದು" (ಹಲಾತು. ೧೦೭೮-೨೩); "ಜೀರ್ಣಮಪಿ ಜರತ್ಪ್ರತನಮಸ್ವಮಮನ್ಯಂ ಪುರಾಣಂ ಪುರಾತನವೆನಲು ಹಬಿಕಿಂಗೆ ನಾಮಮಾಕ್ಕಂ" (ಶಂಗಸಾ. ೦೨೪-೦೩); ಪುರಾತನದ ಕಥೆ ಕಿರಾತ ಏನು ಬಲ್ಲ? (ಗಾದೆ). ೩. ಪೂರ್ವಕಾಲದವನು; ಹಿಂದಿನವನು; ಪೂರ್ವಿಕ: ರಸಪಕ್ಕಾವ್ಯವಿದರ್ ಪುರಾತನರೊಳಾದುದು ಪೂಣ್ಕೆಯಿಂ ಪೇಳ್ದು ಜೋಯಿಸೆಗಬ್ಬಂಗಳನೆಬ್ಬಿ ರಾಜಿಸಿದರಾರ್ (ಶಾಕಶಾ. ೨೪.೪೦); ಪೂರ್ವದ ಪುರಾತನರ ವಿಧಿಯ ವಿಸ್ತರಿಸುವೆವು ಕೇಳ್ವೆ (ಗಗಶಾ. ೮೬ ೪೩); ಈ ಕಥೆಗಳ ಮೂಲಕವಾಗಿ ಮಗು ಪುರಾತನರೊಡನೆ ಪ್ರೀತಿಯ ಸಂಬಂಧವನ್ನು ಬೆಳೆಸಿಕೊಳ್ಳುವನು (ಕಥೆ. ೩೭). ೪. [ವೀಶೈ] ಪೂರ್ವ ಕಾಲದಲ್ಲಿ ಆಗಿ ಹೋದ, 'ಅರುವತ್ತುಮೂವರು ಪುರಾತನ' ರೆಂದು ಪ್ರಸಿದ್ಧಿ ಪಡೆದ ಶಿವಭಕ್ತರ ಗಣಕ್ಕೆ ಸೇರಿದವನು; ಪ್ರಾಚೀನ ಶಿವಶರಣ: ಮೃಡನೇ ನಿಮ್ಮ ಪುರಾತನರ ಕಾಣುತ್ತ ಬಡಿಯದೆ ಇದಿರೆದ್ದು ಪೊಡಮಡದೆನಾಗಿ ಬಿಡದು ನಾಚಿಕೆ (ಅಪಶಾಂ. ೦೬೨-೬೩೪); ಬಂದಹರಯ್ಯಾ ಪುರಾತರೆನ್ನ ಮನೆಗೆ ಬಂದಹರಯ್ಯಾ ಶರಣರೆನ್ನ ಮನೆಗೆ (ಬಸವ. ೩೭೦); ಶಿವಭಕ್ತಿಪಂಥವು . . . ತಮಿಳುನಾಡಿನಲ್ಲಿ ೬೩ ಮಂದಿ ಪುರಾತನರಿಂದ ಪ್ರಾರಂಭವಾಗುತ್ತದೆ (ಶಾರದ. ೩೦೬). [ಸಂ.]

**ಪುರಾತನಜ್ವರ** (ನಾ). = ಪುರಾಣಜ್ವರ: ಅರಳೀಮರದ ಒಳನಾರನ್ನು ಕಷಾಯಮಾಡಿ ಕೊಡಲು ದಾಹಸಹಿತವಾದ ವಿಷಮಜ್ವರ, ಪುರಾತನಜ್ವರ, ಜ್ವರಾತಿಸಾರ ಸಹ ಶಮನವಹುದು (ಸಕವೈ. ೦೦೩). [ಸಂ.]

**ಪುರಾತನಪುರುಷ** (ನಾ). = ಪುರಾಣಪುರುಷ ೨: ಪುರಾತನಪುರುಷ ಪುಂಡರೀಕಾಕ್ಷನೆ ಪುರಂದರವಿಠಲನೆ ದಯಮಾಡೊ (ಪುರಂದ. ೨-೦೩೨-೩). [ಸಂ.]

**ಪುರಾತನಮತ** (ನಾ). ಪ್ರಾಚೀನರ ಅಭಿಪ್ರಾಯ, ಮಾರ್ಗ, ಸಂಪ್ರದಾಯ; ಆದಿಮಾರ್ಗ: ವ್ಯವಹಾರುಪುವೆರಡು ರೂಪಿಂದವಕ್ಕರಂ ಶ್ರಾವಣಂ ಸ್ವನೈಕಾಕಾರಂ ವಿವಿಧಾಕಾರಂ ಲಿಪಿಭೇದವೃತ್ತಿಯಿಂ ಚಾಕ್ಷುಷಂ ಪುರಾತನಮತದಿಂ (ಶಮದ. ೩). [ಸಂ.]

**ಪುರಾತವಳಿ** (ನಾ). ಪುರಾತನ ಶರಣರ ಪರಂಪರೆ: ಗುರುಲಿಂಗ ಜಂಗಮಕೆ ಪರೀಕ್ಷೆ ಉಂಟಾಗಿಯೆ ಆತ ಮಾಹೇಶ್ವರ ಪುರಾತವಳಿ ಎಂಬ ಪರಮಬಂಧುಗಳಾತನ ನೆನೆದು ಬದುಕುವರು (ಬಸವ. ೬೭೬). [ಪುರಾತ + ಒಳಿ (< ಬಳ್ಳಿ)]

**ಪುರಾಧೀಶ** (ನಾ). ಊರಿನ ಒಡೆಯ; ಪಟ್ಟಣಾಧಿಪತಿ: ತತ್ಪು ರಾಧೀಶಂ ದೃಢ(ಧೃತ)ಸೇನಂ ನಿಲಿಸಿ (ನಿಜಿಸಿ) ಭಕ್ತಿಪೂರ್ವಕದಿಂದ ಮಾಹಾರಂಗುಡೆ ಕೊಂಡು ಭಟ್ಟಾರಕನುಮಾತನಂ ಪರಸಿ ಬಿಜಯಂ ಗೆಯ್ವುದುಂ (ಶಾಂತಿಪು. ೯-೨೦ ವ). [ಸಂ.]

**ಪುರಾಭವ** (ನಾ). ಹಿಂದಿನ ಜನ್ಮ; ಪೂರ್ವಜನ್ಮ; ಜನ್ಮಾಂತರ: ಅಬೋಧಪೂರ್ವಕಂ ನೆನೆವಮನಂತು ಭಾವದೊಳ್ ನಟ್ಟ ಪುರಾಭವ ಸೌಹೃದಂಗಳಂ (ಶಾಕುಂತ. ೭೦-೧೦೨). [ಸಂ.]

**ಪುರಾರಿ** (ನಾ). ೧. ತಾರಕಾಕ್ಷ, ಕಮಲಾಕ್ಷ ಮತ್ತು ವಿದ್ಯುನ್ಮಾಲಿ ಯೆಂಬ ಮೂವರು ರಾಕ್ಷಸರ ಶತ್ರು; ತ್ರಿಪುರಾರಿ; ಶಿವ: ಸಿರಿವಿರಿಂಚಿ ಮರುತ್ಸ್ವರ್ಗ ಪುರಾರಿವಂದಿತ ಚರಣಸರಸಿಜ (ಪುರಂದ.ಶಾ. ೩-೨೦೬ ಅನುಕ್ರಮ). ೨. ವಿಷ್ಣು. ೩. [ಛಂದ] ನಡುವೆ ಗುರುವಿರುವ

ನಾಲ್ಕು ಮಾತ್ರೆಗಳ ಗಣ ; ಜಗಣ (u—u) : ಶಶಿಪುರವಿಷಯಾದ್ರಿಯೋರ್ದರ್ಕ ಪುರಾರಿಯೆಂಬ ಗಣಸಂಬ್ಬಮುಖೀ (ಛಂದೋಂಬು. ೪-೨೨೬). [ಸಂ.]

**ಪುರಾರ್ದನ** (ನಾ). ತ್ರಿಪುರಗಳನ್ನು ನಾಶಮಾಡಿದವನು ; ಶಿವ : ಕಾಲವೈರಿಪುರಾರ್ದನಾ . . . ಚಂದ್ರಶೇಖರ ಪಾಲಯ (ಹರಿಶ್ಚ. ೩-೪೭). [ಸಂ.]

**ಪುರಾವೃತ್ತ** (ನಾ). ೧. ಹಿಂದಿನ ನಡತೆ ; ಪೂರ್ವಪದ್ಧತಿ : (*). ೨. ಪೂರ್ವಕಾಲದಲ್ಲಿ ನಡೆದು ಹೋದ ಸಂಗತಿ ; ಪುರಾಣ : ಪರಮಾತ್ಮನೇ ವ್ಯಾಸರೂಪಿಯಾಗಿ ಅವತರಿಸಿ ಭಾರತ ಪುರಾಣಾದಿಗಳನ್ನು, ಬ್ರಹ್ಮಸೂತ್ರಗ್ರಂಥವನ್ನು ರಚಿಸಿದನೆಂದು ಪುರಾವೃತ್ತಗಳು ತಿಳಿಸುತ್ತವೆ (ಭಾರರ. ೨೬೪). [ಸಂ.]

**ಪುರಾವೆ** (ನಾ). ಪ್ರಮಾಣ ; ಆಧಾರ; ನ್ಯಾಯನಿರ್ಣಯಕ್ಕೆ ಸಹಾಯಕವಾದ ಸಾಕ್ಷಿ ಮೊದಲಾದ ಸಹಾಯಕಸಾಮಗ್ರಿ : ಸರಿಯಾಗಿ ಪುರಾವೆಯಾದರೆ . . . ದಂಡವನ್ನು ಮಾಡಲಿಕ್ಕೆ ಮಾಜಿಸ್ಟ್ರೇಟನಿಗೆ ಅಧಿಕಾರವಿರುತ್ತದೆ (ಕರ್ನಾಗಿ. ಶಂ. ೧೯); ಸಂಶಯವನ್ನು ಸಿದ್ಧಪಡಿಸಿ ಕೊಡುವ ಯಾವ ಪುರಾವೆಯೂ ಸಿಗಲಿಲ್ಲ (ರಂಗಕ. ೨೬೨); ಏನೂ ಪುರಾವೆ ಇಲ್ಲದೇ ಕುಂಗಳ ಅಷ್ಟು ಧೈರ್ಯದಿಂದ . . . ಮಾತನಾಡಬಹುದೆಂದು ನನಗಂತೂ ಅನಿಸುವುದಿಲ್ಲ (ಮೂಕಜ್ಜಿ. ೧೬೦). [←ಮರಾ. ಪುರಾವ್, ಪುರಾವಾ]

**ಪುರಿ$_1$**, ಹುರಿ$_1$ (ಕ್ರಿ). ೧. ಬಾಣಲೆ, ಓಡು ಅಥವಾ ಹಂಚಿನ ಮೇಲಾಗಲಿ, ಕಾಯಿಸಿದ ಮರಳಿನಲ್ಲಾಗಲಿ, ಕಾಳು, ಬೇಳೆ, ಬತ್ತ ಮೊದಲಾದುವನ್ನು ಕಾಯಿಸಿ ಹದಗೊಳಿಸು ; ಅರಳು ಮಾಡು : ನೆಲ್ಲಂ ಪುರಿದು ಮಾಡಿದೆ ಕಾಣದಂತಿರಿಸಂಗಡಿಯೊಳ್ (ಶಬ್ದಮ. ೨-೧೩೭); ಪುರಿದಂತಾದುವು ಪೂವಿನಂಬುಗಳವರ್ ನಿಸ್ಸಾರವಾದತ್ತು (ಪಂಪಭಾ. ೦-೦೩); ಎಳ್ಳಸರಂಗಳ ತೋರಮುತ್ತುಗಳ್ ಪುರಿದವೊಲಾದುವು (ಕಬ್ಬಿಗ. ೩೦೩). ೨. ಕಾಯಿಸು ; ತಪ್ತಗೊಳಿಸು : ಸರೋವರದ ಮಳಲ್ ಪುರಿಗಿಡಲೆಗೆ ಪುರಿದ ಮಳಲ್ಕಾಯ್ಪು ತೆಜದೆ ಕಾಯ್ದುತ್ತಿತ್ತಂ (ಗದಾಯು. ೭-೦೫) ; ಪುರಿದ ಮಣಲೊಳಂ ಪೂಣಿಸಿದ ಗಾಣದೊಳಂ ಬಿರ್ಚಿದ ಬೇರ್ಕೆಯೊಳಂ . . . ನೋಡಲರಿದೆನಿಸಿದ ಮಕರಮುಖದಾಡಾಯುಗ್ಗದಗ್ಗಳಿಕೆಯುಂ ಕಂಡು (ಅಜಿತ. ೦೦-೬೨ ಪ); ಸುಣ್ಣವನೊರಸಿ ಮಿಗೆ ಪು[ಪಾಠಾಂ. ಹು]ರಿದ ಬಿಸಿಯ ಮಳಲಂ ತರಿಸಿ ಬಾಯ್ತುಂಬಿಸಿದಪೆಂ (ಲೀಲಾ. ೦೦-೦೯). ೩. ಸೀದು ಹೋಗು ; ಕರಿಕಾಗು ; ಸುಟ್ಟುಹೋಗು : ಒಕ್ಕಲಿಂಗೊಟ್ಟಿತ್ತಿನ್ನಕ್ಕಳ್ಪಟ್ಟಿಲ್ಕಂ ಪುಟ್ಟಿದೊಂದು ಪುರಿಗ (ಎಕ. IV. ಹೆಗ್ಗಡ. ೬೭-೦೩ ; ಸು. 700). ೪. ಜಿಡ್ಡನ್ನು ಸವರಿ ತಾಳಿಸು,—ಬಾಡಿಸು : ತುಪ್ಪದೊಳ್ಪುರಿದಚ್ಚಗೆಪಪಾರಲ್ . . . ಅಟ್ಟು ತಂದು ಪಾಡಂಗಿದಕ್ಷಣ್ಣಮಾಂಸನಿಚಯವೊಪ್ಪಿದುದು (ಉದ್ಭಟ. ೩-೬೭). ೫. (ಹಪ್ಪಳ ಮೊದಲಾದುವುಗಳನ್ನು) ಕೆಂಡದ ಮೇಲಿಟ್ಟು ಸುಡು : (*). ೬. ಎಣ್ಣೆ ಅಥವಾ ತುಪ್ಪದಲ್ಲಿ ಕರಿ : 'ಪುರಿಗಡುಬು' ಪರಾ. ಹುರಿ$_1$: ೧. "ಹುರಿ-ನಿರ್ಭ್ರವಕರಣೇ" (ಕವಿಕಾ) : ಚರಾಚರಂಗಳಂ ಶರಿಪುರಿದುಟ್ಟನಂ ಹುರಿವ ಹಂಚು ವೊಲಿರ್ದಳಿಯೊಳ್ ಕೃತಾಂತನೆಚ್ಚುರಿಗಣೆಯಂತೆ ಬಂದುದು ಲಯಾನಿಳಕಲ್ಪನಿದಾಘದಾನಿಳಂ (ಅರ್ಜುನ. ೪-೬೪) ; ಹುರಿದು ಬಿತ್ತಿದ ಬೀಜ ಮೊಳೆವುದೆ (ಕರಕ. ೨-೩೩) ; ಉದ್ಯೋಗವಿಲ್ಲದ ತೊತ್ತು ಉದ್ದು ಹುರಿದು ತಿಂದಳು (ಗಾದೆ). ೨. ಕೆಲಬರು ಹುರಿದ ಮರಳನು ಮೇಲೆ ಚೆಲ್ಲಲು ಹರಹಿ ಸಾಸಿವೆ ರಸಗಳನುಪ್ಪು ಮೆಣಸುಗಳ ಹಿರಿಯ ಮೂಗಿನ ಹೋರು ತುಂಬಲು (ಕೌಶಿಕಾ. ೨೪-೩) ; ಹುರಿವ ಮಳಲಂ ಹುಯ್ದು ಹುಲ್ಲ ಕಿಚ್ಚಂ ಹಿಡಿದು ಹರಿವ ಹಾವಂ ಹಾಕಿ ಕಾಸಿದಂಬಲಿಯೆಂಚಿದು . . . ಹತ್ತುವಾಳ್ಗಳಂ ಧರೆಗುರುಳ್ದ ತೆಜದಿ ಕೊಂದಿಕ್ಕಿದರ್ (ಸಪ್ತಕ. ೬-೩೩); ಹುರಿವ ಮಳಲಿನ ಕಾಸುವಂಬಲಿಯು ಬಿಸಿಯೆಣ್ಣೆವರವಿಗಳ ಪುದಿದ ಪುತ್ರೊಂದೆಗಳ . . . ಮೊತ್ತಂಗಳಿಳ್ದೆರಿಯೊಳ್ ಪಸರಿಸಿದುವು (ಕಾವ್ಯ. ೪೨-೦೦). ೩. ಎಷ್ಟು ಭಾಗ್ಯದ ಬಿತ್ತು ಹುರಿದರೆ ಬರುದ ಭಟರಿದ್ದೇನ ಮಾಡುವರು (ಕುಮಾ. ೪-೨೦) ; ಹುರಿದುದು ಭವಬೀಜದುಷ್ಕರ್ಮದಂಕುರ ಹಡಿದುದು ಕಪಟದ ಬೇರು ಸುರಿದುದಾನಂದಾಶ್ರು (ಪ್ರಭುಲಿ. ೪೨-೩೧). ೪. ಉಳ್ಳಿ ಶುಂಠಿ ಕೇದಗೆಯ ಹೂ ಹುರಿದ ಕರಿಬೇವು ಮಾದಲದ ಸೊಪ್ಪಿಕ್ಕಿ (ಸೂಪಶಾ. ೩-೨೦). ೬. 'ಹುರಿಗಡುಬು' ಪರಾ. ೭. (ಆಲಂ) ನಾಶಪಡಿಸು ; ನಿವಾರಿಸು : ಕಂಗಳ ಕರುಳ ಕೊಯ್ದುವತ ಮನದ ತಿರುಳ ಹುರಿದವರ ಮಾತಿನ ಮೊದಲ ಬಲ್ಲವರನೆನಗೊಮ್ಮೆ ತೋಱಾ (ಅವಕಾ. ೦೨೦-೪೩೦). ೮. ನಾಶವಾಗು ; ಇಲ್ಲವಾಗು : ಹುರಿವ ಧೈರ್ಯದ ತಳ್ವಾಱುವ ತರಳಹೃದಯದ ದೇವರಿಂದ್ರನನಱಿಸಿ ಕಂಡರು (ಕುಮಾ. ೬-೦೩).

ಹುರಿದುಕೊಂಡು ತಿನ್ನು=(ಆಲಂ) ಪೀಡಿಸು ; ಗೋಳಾಡಿಸು ; ಹಿಂಸಿಸು ; ಗೋಳು ಹುಯ್ದುಕೊಳ್ಳು : ಮಲಮಗಳು ಇದ್ದಷ್ಟು ದಿನವೂ ಹುರಿದುಕೊಂಡು ತಿನ್ನುತ್ತಿದ್ದಳು (ರೂಢಿ). ಹುರಿದು ತಿನ್ನು=ಹುರಿದುಕೊಂಡು ತಿನ್ನು : ರಾಜೇಶ್ವರಮ್ಮನು ಪ್ರತಿದಿನವೂ ಮಾತು ಮಾತಿಗೂ ಸೊಸೆಯ ದೋಷಗಳನ್ನು ಎಣಿಸಿ ಹುರಿದು ತಿನ್ನುತ್ತಿದ್ದಳು (ಲಕ್ಷ್ಮೀಶ. ೪೩). ಸಮಾಜವನ್ನು ಆಕ್ರಮಿಸಿ ಹುರಿದು ತಿನ್ನುತ್ತಿದ್ದ ಸಹಸ್ರರಾವಣರ ಸಂಹಾರ ಮಾಡಬಲ್ಲ ರಾಮನೊಬ್ಬನನ್ನು ಸೃಷ್ಟಿಸಬೇಕೆಂದು ನಿರ್ಧರಿಸಿದ (ಭಾರರ. ೪೬೦). ಹುರಿದು ಮುಕ್ಕು = ಹುರಿದುಕೊಂಡು ತಿನ್ನು : ಹುರಿದು ಮುಕ್ಕುವಂತಹ ಹವೆಯು ವಿಸ್ಫೋಟಿಸುತ್ತಿದ್ದಿತು (ರುದ್ರಾಂಶಿ. ೩೯೪).

[ದೇ.॥ ತಮಿ. ಪೊರಿ ; ಮಲ. ಪೊರಿಯು ; ತುಳು. ಪೊರಿ, ಪೊರಿಪು, ಪೊರಿಯು]

**ಪುರಿ$_2$**, ಪೊರಿ (ನಾ). ೧. ಹಂಚಿನಲ್ಲಿ ಅಥವಾ ಮರಳಲ್ಲಿಟ್ಟು ಕಾಯಿಸುವಿಕೆ, -ಹುರಿಯುವಿಕೆ : (*). ೨. ಮಂಡಕ್ಕಿ; ಚುರುಮುರಿ : ನಿಮಗೆ ಹಾಲೂ, ಹಣ್ಣೂ, ಕಡಲೆಕಾಯಿ, ಪುರಿ_ಮೊದಲಾದುವನ್ನು ಕೊಡಿಸುತ್ತೇನೆ (ರಂಗಕ. ೪೭). ಪೊರಿ : ೨. ಎಳ್ಳ ಪೆಱಂಗೆ ಬ ೧॥ ಮಾಱುವ ಪೊರಿಗಳ್ಗೆ ಎ ೧ (ಕಇಆ. ೦೭೫-೦೯-೩೭; 1057).

[< ಪುರಿ$_1$./ ತಮಿ. ಮಲ. ತುಳು. ಕೊಡ. ಪೊರಿ]

**ಪುರಿ$_3$**, ಹುರಿ$_3$ (ನಾ). ೧. (ದಾರ ಅಥವಾ ಹಗ್ಗದಂತೆ) ಹೊಸೆಯುವಿಕೆ ; ನುಲಿಯುವಿಕೆ : 'ಮುಪ್ಪುರಿ'$_1$ ಪರಾ. ೨. ಹೊಸೆದು ಮಾಡಿದ ನೇಣು,-ಹಗ್ಗ,-ರಜ್ಜು : ಅಸಗೆಟ್ಟುವೊ ಪುರಿ ಹೆರೆಯಣ್ಣ ತೀದುದೊ ಅಸಮಾಶ್ವಗಳು ಬಾಂದೊಱಿದು ಕೆಸಱೊಳು ಬಿದ್ದೇಳಲಾಱದಾದುವೊ ಎಂದು ಬಿಸಜಾಕ್ಷಿ ರವಿಯ ನೋಡಿದಳು (ಪ್ರೋಹಕ. ೨೭-೬೯); ಹೊಸೆದ ಕಾಲ್ಗಣ್ಣವಲೆ ತಳ್ಳುವಲೆ ಪುರಿಯೊಕ್ಕಣ್ಣವಲೆ (ಸಾಳ್ವಭಾ. ೫-೧೮). ೩. ಕೆಚ್ಚು; ಬಲ; ಗಟ್ಟಿತನ : 'ಪುರಿಗಣೆ', 'ಪುರಿಯೇಱು' ಪರಾ. ೪. ಪ್ರೋತ್ಸಾಹ ; ಮೆಚ್ಚಿಕೆಯ ಕೊಂಡಾಟ : 'ಪುರಿಯಿಡು', 'ಪುರೆ$_1$' ಪರಾ. ಹುರಿ$_3$ : ೧. ಹರಿತಂದು ಬಂಡಿಯ ಶಿರದ ಹಲಗೆಯ ನಡರಿದನು ಬಲುಹುರಿಯ ಹಗ್ಗವ ಹಿಡಿದು ಜಡಿವನು ಹೂಡಿದೆತ್ತುಗಳ (ಕುಮಾ. ೦೦-೨೭); ಹಗ್ಗ ಸುಟ್ಟರೆ ಹುರಿ ಹೋದೀತೇ? (ಗಾದೆ). ೨. "ಹುರಿ -ನಿರ್ಭ್ರವಕರಣೇ, ರಜ್ಜುಭ್ರಮಣಕ್ರಿಯಾಯಾಂ" (ಶಬ್ದಾನು. ೫): ಕಾಳರಕ್ಕಸಿಯು ಮಗುವು ಚಂದ್ರ ಸೂರ್ಯರ ಜೂಟಳದ ಹುರಿಯೊಳಗೆ ತಿರುಗಿತ್ತು (ಅರಕ. ೦೫-೩೨); ಚಳಹುಂಗಳು ಹುರಿಯ ವಾಘೆಯುಸಳವಡಿಸಿ ಬಲನೆಡಕ ವಾಜಿಯ ಸುಳಿಸಿ ಸಾರಥಿತನವ ತೋಱುವನೆಂದು ಕಲಿ ಶಲ್ಯ (ಕುಮಾ. ೮-೨೩); ತೆಗೆದು ಡೊಂಬನು ಹುರಿಯ ಸುಂಬನು ಬಿಗಿದು ಬಟ್ಟಲನೇರಿಸಿ . . . ನೆಗೆದು ಕುಣಿವನು ಧಿಮಿಧಿಮಿ (ಕವಿಕು. ೩೮-೮). 'ಬೆನ್ನುಹುರಿ' ಪರಾ. ೩. ಹೂಣಿಗರು ಹುರಿ ಬಲಿದು ಹಾಣಾಹಾಣಿಯುಲಿ

ಹೊಯ್ದಾಡಿದರು (ಸಂಪ್ರ೦೯. ೮-೦೫); ಹೇವದ ಹುರಿ ಬಲಿದುದೀತಂಗೆ ಹರಿಬದ ಸೂಳೆಬಂಟಿಕೆಯ ಧಾರಕೆ ನಿಂದವು (ಕೊರಾ. ೪-೨-೨೫). ೫. ಹೊಸೆದು ಮಾಡಿದ ನಾರು, ಸೆಣಬು, ಹತ್ತಿ ಮೊದಲಾದುವುಗಳ ದಾರ : ಗುಂಡನು ಅದಕ್ಕೆ ಒಂದು ಹುರಿ ಕಟ್ಟಿ ಚೀಲವನ್ನು ಎಳೆಯುತ್ತ ಮನೆಗೆ ಹೋದನು (ಕಕಪ್ರ. ೩ ೪೫); ಹೂ ಮಾರಿದ ಊರಲ್ಲಿ ಹುರಿ ಮಾರಬಾರದು (ಗಾದೆ). ೬. (ಮೋಸದ) ಕಟ್ಟು : ಪಾಶ : ಬಲೆ : ನಿಮ್ಮರಸುಗಳು ಭೀಮಂಗೆ ಮಾಡಿದ ಹುರಿಯನಾ ಹರಿ ಹಚ್ಚಿದ ಪರಿಯನು ಪುತ್ತ್ರ ಕೇಳು (ಸಂಕಿಕ. ೦೬ ೫೪). ೭. (ಹಗ್ಗದ ಎಳೆಗಳಂತೆ ಒತ್ತಾಗಿ) ಸೇರಿದುದು : ಹೆಣೆದುಕೊಂಡುದು : ಹೊಚ್ಚಿದದ್ದು ಸಕಲರಾಣಾವ ಯೊಂದು ಹುರಿಯಾಗಿ[ಪಾಠಾಂ.ಗೂಡಿ] ಪುರಹರದೊಳೆತ್ತಿ ಹದಿಕೆಯನು ತದ್ವಿತ್ರದಿಂ ನರರೂಪನೊಂದನನುಗೆಯ್ದು ಮಣಿದೊಡಪಿಟ್ಟು ಬಳಿಕೊಂದು ರಥದ ಮೇಲೆ ಇರಿಸಿ (ಜಮ್ಮಿಕ. ೨ ೫೯); ನಿಸ್ಸಯ ಮನೋವಾಕ್ಕಾಯವೊಂದು ಹುರಿ ಯಾದಲ್ಲಿ (ಅಂಗಪ್ರ. ೫-೦೦); ಮದಿವಿ ಆಗದಿದ್ರ ಇಬ್ಬರೂ ಕೂಡಿ ಬೆಂಕೀ ವಳಗ ಹಾರಿಕೊಳ್ಳೋಣ ಅಂತ ಹೊಂಟಿದ್ದುವು ಅವೆರಡೂ. ಅಟು ಒಂದೇ ಹುರಿ ಜೀವನ (ಪಕಾ. I, ೩೨೨). ೮. ಬಿಗಿಪು : ಬಿಗುವು : ಅರ್ತ ಕದಂಪು ಒತ್ತಿದ ಕಾಲುಂ ಹುರಿಯುಬ್ಬಿದಟ್ಟವಿಳಿಯೊಸವ [ಯೆಸಕದ] ಸೆರೆಯುಂ (ಕಮುಕ. ೨೪೦ ಕ್ರ ಮೋ); ಎಸೆವ ದಾಡೆಯ ಹುರಿಯ ಹುಬ್ಬುಗಳ ಇರಿದ ಹೊಗರಿನ ಜವ್ವನದ . . . ರಕ್ಕಸರಾಯನೆಸೆದಿರ್ದ (ಕೊರಾ. ೩-೬ ೩). ೯. ಬಲ ವುಳ್ಳುದು : ಸತ್ತ್ವಶಾಲಿಯಾದುದು : ದೃಢವಾದುದು : ಸ್ನಾಯು ಗಳು ಹುರಿಯಾಗಿ, ಶರೀರವು ಅಂದವಾಗಿಯೂ, ಬಲಾಢ್ಯವಾಗಿಯೂ ಕಾಣುವುದು (ಕಸ್ಸ್ಪಾ. ೩೫). 'ಹುರಿಕಟ್ಟು' ಪರಾ. ೧೦. ಉತ್ಸಾಹ : ಹುರುಪು : 'ಹುರಿಗಟ್ಟು' ಪರಾ.

**ಹುರಿ ಮಾಡು**=ಹೊಸೆ : ನುಲಿ : ತೀಡು : ಕವ್ವಾಶಿಗಳ ಹುರಿ ಮಾಡಿ (ಶಾಗಂ೦. ೫೦-೦೪); ದೇಸಾಯಿಗೂ ಅಷ್ಟು ಗೊತ್ತಾಗದಿ ಎಂದು ಮೀಸೆಯನ್ನು ಹುರಿ ಮಾಡಿಕೊಂಡನು (ಗಂಪೂಯ. ೧೯೬). **ಹುರಿಯಾಗು** =ಉತ್ಸಾಹಗೊಳ್ಳು : ಹುರುಪುಗೊಳ್ಳು : ವಿಶ್ರಾಂತಿ ಪಡೆದು ಹುರಿ ಯಾಗುವಷ್ಟರಲ್ಲಿ ಜೂನಿಕೆಗಳು ಬಂದಿತ್ತು (ತ್ರಿಳಾಗ. ೧೬೦); ಬಿಸಿಬಿಸಿ ಟೀ ಬಾಡಿದ ನಂತರ ಅವರ ರಕ್ತ ಕಾವೇರಿ ಮೈ ಹುರಿಯಾಯಿತು (ಪ್ರಸು. ೫೩೦); ಪ್ರತಿಭಾ ಹುರಿಯಾದಳು (ಮಾಂತಿ. ೧೪).

[ದೇ.; ತವಿ. ಮಲ. ತುಳು. ತೆಲು. ಪುರಿ, ಒರಿ]

**ಪುರಿ$_{4}$** (ನಾ). ಪುರ : ಪಟ್ಟಣ : ನಗರ : "ಪತ್ತನಂ . . . ಪುರಂ, ಪುರೀ—ಈ ೧೧ ಪಟ್ಟಣಾ" (ಹಲಾಯು. ೪೬-೧೩೦); ಗುರುಕುಲಾದ್ಯರ ಪುರಿಗಳಿಂ ಘನಕಪೀಶರ ರಾಜಧಾನಿಗಳಿಂ . . . ದೇಶಂ ಸಮಗ್ರತಾತ್ಮಕ ಮೆನಿಸಿತು (ಶಾವಿಸಂ. ೨-೩). [ಸಂ.]

**ಪುರಿ$_{5}$** 'ಪೂರಿ' ನೋ.

**ಪುರಿಕರನಗರ** 'ಪುಲಿಕರನಗರ' ನೋ.

**ಪುರಿಗಡಲೆ**, ಹುರಿಗಡಲೆ (ನಾ). ನೀರಿನಲ್ಲಿ ನೆನೆಯಿಟ್ಟು, ಕಾದ ಮರಳಿನಲ್ಲಿ ಅರಳುವಂತೆ ಹುರಿದ ಕಡಲೆ : ಪುಟಾಣಿ : ಛೀಮಕೋಪಶಿಪಿ ಮುಟ್ಟಿ ಸರೋವರದ ಮಳಲ್ ಪುರಿಗಡಲೆಗೆ ಪುರಿದ ಮಳಲ್ಮಾಯ್ತು ತೆಜದ ಕಾಯ್ಪುತ್ತಿತ್ತು (ಗರಾಹ.೨. ೬-೦೮). **ಹುರಿಗಡಲೆ** : ಹುರಿಗಡಲೆ ಯುಂಡಾನುಂ ಕಡಲ್ಪಾಜದೊಡಿನ ಜೋಳದೊಳ್ಕರಬರುವರ್ತಾನುಂ . . . ಮೊಯಿವ್ ಬರ್ಕರ್ಕರ್ಕನ ನಿಬ್ಬರಂ ಬಿರಿದೊಳಜಾಗುಂ (ಶಾಂತಿಪು. ೬-೯೨); ಹುಚಿನ ಹುರಿಗಡಲೆಪೊಡೆದು ಪಾಟದುವು ಬೆಟ್ಟಂಗಳ್ (ಜಗು. ೦೬-೬೨); ಒದಿಯಲ್ಲದೇ ಮಂಡಕ್ಕಿ ಹುರಿಗಡಲೆಯ ರಾಶಿಗಳು ಇದ್ದವು (ಳಕಪ್ರ. ೩-೨೫). [ಪುರಿ$_{1}$+ಕಡಲೆ]

**ಪುರಿಗಡುಬು**, ಹುರಿಗಡುಬು (ನಾ). ತುಪ್ಪ ಅಥವಾ ಎಣ್ಣೆಯಲ್ಲಿ ಕರಿದ ಕಡುಬು : ಪುರಿಗಡುಬು ತಳಿಗ ಚಕ್ಕುಲಿ ಕರಂಜಿಗಾಯತಿರಸಂ ಚಿಗುಳಿ ಲಡ್ಡುಗೆ . . . ನೀಂ ಬಯಸೆ ಪೋಗಿ ತಂದಪೆನೀಗಳ್ (ಶೃಕಾ. ೯-೭೯); ಸಕ್ಕರೆ, ಜೇನು, ಬಾಳೆಹಣ್ಣು, ಪುರಿಗಡುಬು . . . ಶೀಕರಣೆ —ಏನು ಬೇಕು ಹೇಳು ತಂದೆ (ಜಜ. ೨೨). **ಹುರಿಗಡುಬು** : ಹಬ್ಬಕ್ಕೆ ಹುರಿಗಡುಬು ಮಾಡಬೇಕು (ಜೂ). 'ಕರಿಗಡುಬು' ಪರಾ.

[ಪುರಿ$_{1}$+ಕಡುಬು (< ಕಡುಂಬು)]

**ಪುರಿಗಣೆ** (ನಾ). ಅತಿಶಯವಾದ ಶಕ್ತಿಯಿಂದ ಕೂಡಿದ ಬಾಣ : ವಿಶೇಷ ಶಕ್ತಿಯಿಂದ ಕೂಡಿದ ಬಾಣ : ಪುರಿಗಣೆಯ ದೊಣೆಗೆ ಕಯ್ಯಂ ನೀಡದೆ ರೌದ್ರಶರವ ದೊಣೆಗೆ ಕಯ್ಯಂ ನೀಡಿದಾಗಳ್ (ಪಂಭಾ. ೦೨-೦೯೦ ಕ); ಪುರಿಗಣೆಯಪ್ಪ ಕಾರಣದಿನಂತದು ತಪ್ಪದೆನೆಂದು ನೊಂದು ಪರ್ಬ್ಬೊರೆದಹಿ ರೂಪದಿಂ ಮಗುಳ್ದು ಬಂದು (ಪಂಭಾ. ೦೨-೨೦೩); ಕೊಂತಿ ಬೇಡೆ ಬೆಚ್ಚದೆ ಕೊಟ್ಟಯೇ ಪು[ಪಾಠಾಂ. ಹು]ರಿಗಣೆಯುಂ (ಗದಾಯು. ೫-೨೩); "ಪುರಿಗಣೆಯಪ್ಪ=ದಿವ್ಯಾಸ್ತ್ರವಾಗಿರುವ (?)" (ಪಂಶಂ. ೫೦೨); "ಪುರಿಗಣೆ—ಸುಡುವ ಬಾಣ (?), ಒಂದು ಬಗೆಯ ದಿವ್ಯಾಸ್ತ್ರ" (ಗದಾಸಂ. ಟಿಪ್ಪಣಿ. ೦೯೩).

[ಪುರಿ$_{3}$ + ಕಣೆ$_{1}$]

**ಪುರಿಗೆಯ್**, ಹುರಿಗೈ (ಕ್ರಿ). ೧. ಹೊಸೆ : ತಿರುವು : ಹುರಿಮಾಡು : ಮೀಸೆಗಳಂ ಪುರಿಗೆಯ್ದು ಕಣ್ಗಳಿಂದೆ ಭುಗಿಲಿಡುತ್ತ ಸೂಸ ಕಿಡಿಗಳ್ . . . ಅಭಿಮುಖರಾಗಿ ನಿಂದರತಿಮುಷ್ಕರದಿಂದೆ ತುರುಷ್ಕರಲ್ಲದಾರ್ (ಶಕಂ. ೨-೦೦೬). **ಹುರಿಗೈ** : ೧. ಅವನಂ . . . ಬಾಚಿಯಂತೆ ಹುರಿಗೈದ ಕುಡಿಮೀಸೆಯ ತೇಜಃಪುಂಜಮುಖದ ಅಧಿಕಾರಿಯೊಬ್ಬನನ್ನು ನೋಡಿದನು (ಪ್ರಸು. ೩೦೨). ೨. ಉತ್ಸಾಹಗೊಳಿಸು ; ಹುರಿದುಂಬಿಸು : ಓಡುವ ಸುರಾಳಿಯುಂ ಕೂಡಿ ಹುರಿಗೈದನಂದು (ಕಾಪ್ರ. ೩೦-೨೮).

[ಪುರಿ$_{3}$ + ಕೆಯ್$_{1}$]

**ಪುರಿಗೆಜ**[3] 'ಪುಲಿಗೆಜ' ನೋ.

**ಪುರಿಗೊಳ್**, ಹುರಿಗೊಳ್, ಹುರಿಗೊಳ್ಳು (ಕ್ರಿ). ೧. (ಹುರಿಯಂತೆ ಹೊಸೆದು) ಕೂಡಿಸು : ಹೊಂದಿಸು : ಸೇರಿಸು : ಬಸವನು ಬಿರಿದು ಭಯುಮುಮನತಿಸುಭಕ್ತಿಯುಮಂ ಚಿತ್ತದೊಳು ಪುರಿಗೊಂಡು . . . ನವಿಂಸಿ (ಬಸಪು.೪-೩೬). ೨. ಕೂಡಿಕೊಳ್ಳು : ಹೊಂದಿಕೊಳ್ಳು ; ಸಮನ್ವಯವಾಗು : ಕೊರಲ ನುಣ್ಣನಿ ಬೀಣೆಯಿಂಚರಂ ಪುರಿಗೊಳೆ, ಮರ್ದಳೆಯ ತಾಳದ ಲಯಂ ಜತಿಗುಡೆ (ಅಮಾಲ್ಯ. ೨೩-೯). **ಹುರಿಗೊಳ್** : ೨. ಹೊರೆಯಿಲ್ಲದೆ ಮರುತೇಂದ್ರಿಯ ನಾಶಯ ಕರಣಂಗಳು ತಮ್ಮೊಳಗೆ ಪರಃಪುತ ಹುರಿಗೊಂಡೇಕತ್ವದ ಸಮರಸದಿಂದಿಹವಶ್ರಾಂತದೊಳು (ಯೋಗಾಂಬ. ೨-೦೬). ೩. ಉತ್ಸಾಹಗೊಳ್ಳು; ಹುರುಪನ್ನು ಪಡೆ : ಸದ್ವೀರರಸೆದ್ದು ಕೊಂದೆಸೆವ ಮೀಸೆಗಳಿಂ ಹುರಿಗೊಂಡ ಗಂಡಪೆಂಡಾರವು ನಾಳ್ದ ಸೀವಕುಳವುಂಡನನೊಳ್ಪಡಿಯಪ್ಪ ಗಂಡರಾರ್ (ಎಕ. XX. ೦೩-೨೪; 1167); ವಿಘಾತಿಯುಲಿದು ಹುರಿಗೊಂಡೊಡಗಿ ಹಾಣಾಹಾಣಿಯಲಿ ಹೊಯ್ದಾಡಿತುಭಯಬಲ (ಶುಭ್ರದ್ರೌ. ೨-೨೫). ೪. ಬಲವಾಗು ; ಶಕ್ತಿಗೂಡು : ಹುರಿಗೊಂಡುದಾತನ ಸತ್ತ್ವವಾತನ ದಂಡಿಯಲಿ ಬಹರಾರು (ಶುಭ್ರಗ. ೪-೬). **ಹುರಿಗೊಳ್ಳು** : ೨. ಜ್ಞಾನದೇವನ ಮನೆತನದಲ್ಲಿ ವಿಠ್ಠಲಭಕ್ತಿಯೂ ನಾಥದೀಕ್ಷೆಯೂ ಮೊದಲೇ ಹುರಿಗೊಂಡು ಬಂದಿದ್ದವು (ಪಂಜಾಬಿ. ೦೩). ೩. ಅವರೆಲ್ಲರೂ ಮತ್ತಷ್ಟು ಹುರಿಗೊಂಡರು (ಕೃಮುಹ. ೬೫).

[ಪುರಿ$_{3}$ + ಕೊಳ್$_{1}$]

**ಪುರಿಗೊಳಿಸು**, ಹುರಿಕೊಳಿಸು, ಹುರಿಗೊಳಿಸು (ಕ್ರಿ). ೧. ಗಟ್ಟಿಗೊಳಿಸು; ದೃಢಗೊಳಿಸು ; ಬಲಪಡಿಸು : ಭಿತ್ತಿಯಿಲ್ಲದೆ ಬರೆವಂತೆ ಚಿತ್ರವ ಬಗೆವೆತ್ತು ಪುಸಿಯ ಪುರಿಗೊಳಿಸಿ ಬಿತ್ತರಿಸಿದಳು ರಾಯನ ಮುಂದಾಕೆಯ ಪೆತ್ತ ಜನಾವನೆಂದಚಿಯ (ಕುಶಿಬಾಂ. ೩೪-೬೬). **ಹುರಿಕೊಳಿಸು** : ೨.

ಹುರಿದುಂಬು : ಉತ್ಸಾಹಿಸು : ಪಾತಳಿಯೊಂಭತ್ತಸೆಯು ಮಸು ತಾ ಹುರಿಕೊಳಿಸಿ ವರಯಾಜನ ಮೊದಲಾದುರುತರದ ಷಟ್ಕರ್ಮವೆಲ್ಲವ ಧರಣಿ ಸುರರಿಂದ ರೂಢಿ ಮಾಡಿದ (ಸಂಶಿಶ. ೪-೩೩) : ರಿಪುಂದವರು ಹತ್ತಿದರು ಹರಪರ್ವತವ ಹುರಿಕೊಳಿಸಿ [ಜಾಕಾಂ. ಹುರಿಕಟಿಸಿ, ಹುರಿಗೊಳಿಸಿ, ಸರಕಟಿಸಿ] (ಕೊಜಾಯಾ. ೪-೯-೨೬). **ಹುರಿಗೊಳಿಸು :** ೧. ಪರಿಪಿಡಿಗಳಿಂ ತನ್ನ ನೂಲಿಂ ಕೆರೆಯುವೊಲು ದೋಲ್ಕಟ್ಟಿನಂದದಿ ಪರಿವೃತ್ತೋನ್ನತವೃಕ್ಷಗುಲ್ಮಲತಾ ತೃಣಂಗಳಲಿ ಹುರಿಗೊಳಿಸಿ ಮೇಲಕೆ ಕಪೋತವನಿರೆ ರಚಿಸಿ ಕರುವಿಟ್ಟು . . . ಶಿಖರವು ನಿಲಿಸಿ (ಚಿಕ್ಕ. ೧೮-೩೬); ಲಲಾಟೇಕ್ಷಣಾಗ್ನಿಯು ಹುರಿ ಗೊಳಿಸಿ ಪಾಶುಪತಬಾಣವಂ ಬಿಡೆ . . . ಉರಿಪಿದುದು ತತ್ಪುರಂಗಳ ಪರಿಕರಂಗಳು (ಚಿಕ್ಕ. ೪೪-೪೬). ೨. ಹೊಸೆದು ಬಿಗಿಮಾಡು ; ಹುರಿ ಹಾಕು : ಕಣ್ಣಿದ್ದವರು ಮುತ್ತು ಹುಡುಕಿ, ಹುಸುಪಿದ್ದವರು ಹೊಸ ಎಳೆಯ ಹುರಿಗೊಳಿಸಿ, ನೋಡಿ ಗಾತ್ರ (ನಿಂಬಿಯಾ. ೨೩-೦೨). ೪. ಹೊಂದಿಸು; ಅಳವಡಿಸು : ಸಕಳವಂ ಹುರಿಗೊಳಿಸಿ ಲೀಲಾಸುಕರ ದಿಜ್ಞಾವಮಾತ್ರದಿಂದಂ ವಿಕೃತಿಗಳನೆಯ್ದಿಸುವ ಮಹಿತಮಹಾಮಹಿಮಾಸೀತ (ಚಿಕ್ಕ. ೩೦-೪೩) ; ಅಲ್ಲಮಪ್ರಭು ಲಿಂಗಸಂಗವನು ಹೃದಯದೊಳು ಹುರಿ ಗೊಳಿಸುವೊಡೆ ಬಳಿದಜ ಮಹಿಮೆಯನೇನ ಹೇಳುವೆ (ಶ್ರೀಶಂ. ೩-೨೦). ೫. ಹುರಿದುಂಬಿಸು ; ಉತ್ಸಾಹಗೊಳಿಸು : ಹುರುಪು ಕೊಡು : ಸಾತ್ಯಕಿಯು ಅವರನ್ನು ಹುರಿಗೊಳಿಸಲು ದ್ರುಪದಾಂಧ್ರಸಿಪಾಯಿಗಳಿಂದ ಬಲಗಳು ಒಮ್ಮಡಿಯಾಗಿ ಆ ಕರ್ಣನನ್ನು ಸುತ್ತಮುತ್ತಿಕೊಂಡಿರಲು (ಕೃವಾಳ. ೬೦); ಅರ್ಜುನನು ಕಿಮೀಡಿಯನ್ನು ಹುರಿಗೊಳಿಸುತ್ತ . . . ಎಂದನು (ಚಕಚಾ. ೨೬೩) ; ರಣರಂಗದಲ್ಲಿ ವೀರಾಗ್ರೇಸರರನ್ನುದ್ರೇಕಿಸಿ ಹುರಿಗೊಳಿಸುವುದು ಸಂಗೀತವೇ ಅಲ್ಲವೇ? (ಚಗಾ. ೬೨).

[ಪುರಿಗೊಳ್ + –ಇಸು₁]

**ಪುರಿನೇಣ್**, ಹುರಿನೇಣು (ನಾ). ಹೊಸೆದ ಹಗ್ಗ; ಹುರಿ ಮಾಡಿದ ಹಗ್ಗ: ನೆನೆಯ ಮತ್ತವನ ತಾಯ್–ಪೆಂಡತಿಯನ್!–ಇರ್ವೊಜ್ಜೆಯ ಪೆಸರನ್! – ಪುರಿನೇಣನುಸಿರ್ದ್ದಿರಿಚಿ ಪೊಳೆಗೆಯ್ದು ಬಾಟನೀಡಾಡಿದರ್ (ಅಂತಿಗೊ. ೩-೯೩). **ಹುರಿನೇಣು :** ತರಿಸಿ ಹುರಿನೇಣುಗಳನೀತನ ಕರಮೆರಡ ನೊಡೆಬಿಗಿದಡಪದಿರು ಕೆಲೆ ಮಾಡುವುದಾವುದು (ಕುವ್ಯಾಶಾ. ೯-೪೦).

[ಪುರಿ₃ + ನೇಣ್₁]

**ಪುರಿಯಿಡು** (ಕ್ರಿ). ಹುರಿದುಂಬಿಸು ; ಪ್ರೋತ್ಸಾಹಿಸು : (ಮೆಚ್ಚಿ) ಕೊಂಡಾಡು : ಭೃಂಗೀಶಮುಖ್ಯರುಂ ಪುರಿಯಿಟ್ಟು ಸತ್ಕೃಪಾಪಾಂಗದಿಂ ನಿಜಕುಮಾರನ ಗುಹನನೀಕ್ಷಿಸುತ್ತುಂಗಜಾರಾತಿ ಬೊಮ್ಮನ ನೋಡಲಿರ್ದ್ದು ಕರಕಮಲವಂ ಮುಗಿದು ನಿಂದ (ಶಾಶಂ. ೧ ೩೬); ನಾಟಕವ ಹರುಷದಿಂ ನೋಡಿ ಪುರಿಯಿಟ್ಟುಂಗುಚಿತ್ತವಂ ಕರುಣಿಸಿದನಂದಿನೊಡ್ಡೋಲಗದೊಳು ಶಿವಲಿ (ಸಂಬಸೂ. ೫-೪೩). 'ಪುರೆಯಿಡು' ಪರಾ. [ಪುರಿ₃ + ಇಡು₁]

**ಪುರಿಯೇಱು**, ಹುರಿಯೇರು, ಹುರಿಯೇಱು (ಕ್ರಿ). ೧. ಬಲವಾಗು ; ದೃಢವಾಗು ; ಗಟ್ಟಿಗೊಳ್ಳು : ನೆವಮಿಲ್ಲದಿರ್ಪ ಹರಿಕೃಪೆ ಪವಣಿಲ್ಲದೆ ಪಾಯ್ದು ಕವಿದು ಪರಿಹರಿಸುವರಾರ್ ಭುವನದ ಪುಣ್ಯದ ಪುಂಜಂ ಸವನಿಸಿ ಪುರಿಯೇಱಿ ಬಿರ್ದ ಸಡಿಲಿಸುವರದಾರ್ (ಚಿಶ. ೩-೧೦೫). **ಹುರಿಯೇರು :** ೧. ಅಂತಃಕಲಹವು ಹುರಿಯೇರುತ್ತಿತ್ತು (ಶಾಸೊೇಶ. ೩೨೮). ೨. ಹುರಿ ದುಂಬು : ಉತ್ಸಾಹಗೊಳ್ಳು : ಉಬ್ಬು : ಬೊಗರಿ ಚಂಡಾಟ ಗುರಿ ಸುದ್ದಿಗಿಲು ಚಿಣಿಘಣೀ ಚದುರಂಗ ಪಗಡೆಗಳ ವಿರಾಗೊಳಿಸಿ ಹುರಿಯೇರು ಹಾಡುತ್ತ ಗೆಲ್ದಮ ಮಂದಿರಕ್ಕೈತಪ್ಪನು (ಕರಚ. ೪-೯). **ಹುರಿಯೇಱು :** ೧. ಕೆರಳಿದರ ಕಾಳಹುದು ಭೀಮನ ದುರುಳತನವೀ ಕೌರವೇಂದ್ರನ ಹುರುಡು [ಜಾಕಾಂ. ಳು] ಹುರಿಯೇಱುವುದು ಮಾತಪಲ್ಲಿಂದನಂಧನೃಪ (ಉಪ್ಯೊ. ೦೬-೨೨). ೨. ತವತವಗೆ ಧುರತೋರಹತ್ತರು ತವಕಿಸುತ ಹುರಿಯೇಱಿದರು ಕೌರವರು ಕರ್ಣನ ಹರಿಬದಾಹವವೆಮಗೆ ತಮಗೆನುತ (ಕುವ್ಯಾಶ. ೧೯-೪೩); ಪರಿಕರಾಬ್ಧಿಸ್ವರೂಪಸುಖದಲಿ ಕರಗಿ ಮನ ಹುಂಕರಿಸಿ ಪುಳಕದ ಹರಹಿನಲಿ ಹುರಿಯೇಱಿ ಹೊಂಪುಳಿಯೋಗಿ ಬೆಱಗಾಗಿ . . . ಭಕ್ತಾಭರಣನಿದ್ದನು ಪರಮಭಕ್ತಿಯ ಪಾರವಶ್ಯದಲಿ (ಶಿತಾಗ. ೬-೯-೪೪).

[ಪುರಿ₃ + ಏಱು₁ (< ಏಱ್₁)]

**ಪುರಿಯೋಡು**, ಹುರಿಯೋಡು (ನಾ). ಹುರಿಯುವುದಕ್ಕಾಗಿ ಬಳಸುವ ಲೋಹದ ಅಥವಾ ಮಣ್ಣಿನ ಬಾಣಲೆ : "ಸಿರಿಪಂಕ್ತಿಗೆಯೊಂದೆನಲ್ಕೆ ಪುರಿಯೋಡಕ್ಕುಂ" (ಶಬ್ದಾಗ. ೩೨) : ಬಱಗೊಡನೆಣ್ಣೆ ಪಟ್ಟಿ ನುರಿ ನೇಣ್ ಬಡಿಕೋಲ್ ಬರೆಯುರ್ದಿಲಿಲ್ಲು ಸಾಪಱ ಪುರಿಯೋಡು ಸುಟ್ಟಡಗು . . . ಇದಿರೊಳ್ ಬರೆ ಕಾಣಲುಮಾಗದು (ಕೋಕೋಶ. ೧೨ ೦೦); ದೇವಂ ದಿಟದಿ ನಿರುತ್ತಪಿವನೆಂದು ಬಿಣ್ಣಸುಕಿರೆ ಗುಣಮಂ ಬಿಟ್ಟು ಕಟ್ಟು ಪುರಿ ಯೋಡಾದೈ (ರಮೊಗವ್ಯ. ೬ ೧೨೬). **ಹುರಿಯೋಡು :** "ಸಿರಿಮಂತಿಗೆಯೊಂದೆ [ನ]ಲ್ಕೆ ಹುರಿಯೋಡಕ್ಕು" (ರನ್ನಕಂ. ೨); ಮುಸಿಯೆಂಬುದು ಹುರಿ ಯೊಡಿಂಗೆ ಪಣೆಕಟ್ಟೆಂಬುದು ಪಟವಲೆಟ್ಟಿಂಗೆ (ಅಸಂತು ೨-೨೮ ವ); ಹುರಿ ಯೋಡಿನಂತಾದುದು ನೆಲನಾ ಗಿರಿವರನೊಳೇಳುವ ಕಿಚ್ಚಿನಿಂದ (ನೇಮಿಸ. ೦೧-೪೦).

[ಪುರಿ₁ + ಓಡು₂]

**ಪುರಿವರಲ್** (ನಾ). ಕಾದ ಕಲ್ಲು : ಸುಡುವ ಕಲ್ಲು : ನಾನಲುಮಂ ಬಾನಲುಮಂ ಸಡಿಂಬಮುಸಿಡಿಂಬಮುಂ ಪರಲುಮಂ ಪುರಿವರಲುಮಂ ಕಿಸು ಗಾಡುಮಂ ನೆಗ್ಗಿಲ್ಗಡುಮಂ . . . ಕಳೆದು ಪೋಗಿ (ಅಂಆವ. ೬ ೦೩ ವ).

[ಪುರಿ₁ + ಪರಲ್]

**ಪುರಿವಳಲ್**, ಹುರಿಮರಳು, ಹುರಿಮಳಲು (ನಾ). ಚೆನ್ನಾಗಿ ಕಾದ ಮರಳು ; ಸುಡುವ ಮರಳು : ಸಱುವಳೆಯಿಂ ಬಿಸಮುರಿಯಿಂ ಬಿತಮು ಗುಳ್ತುರಗಗಳಿಂ ಸೂಸುವ ಪುರಿವಳಲಿಂ ಮಸೆದಸಿಯಿಂ . . . ಆ ಬಿಂಬೋದರಿ ಮಸಗಿ ಕರಂ ದಾರುಣತರಮುಪ್ಪಸರ್ಗಂ ಮಾಡಿದಳು (ಕಚುಳಾ. ೦೬-೧೪). **ಹುರಿಮರಳು:** ಕರಿಯ ಮದ್ದಿನ ಪೊಟ್ಟಣ ಕಟ್ಟಿದುಂಬಿನ ಹೊಱ ಹುರಿಮರಳಿನ ರಾಶಿ ಅರೆದ ಸಾಸವೆಗೊಡ ಕಾದಡವಿಯ ಬಹು ಹರವಿಗಳೊಪ್ಪಿದುವಾಗ (ಕಂಶಶಿ. ೦೧-೦೯೩) **ಹುರಿಮಳಲು :** ಕಾಸು ವೆಣ್ಣೆ ಹುರಿಮಳಲು ಕವಣೆದಸಿ ಸಾಸಿರಮುಖವಾಗಿಹವು (ಕಂಶಶ. ೩ ೦೫).

[ಪುರಿ₁ + ಮಳಲ್₂ (< ಮಣಲ್)]

**ಪುರಿವಿಳಂಗಾಯಿ** (ನಾ). ೧. ತುಪ್ಪದಲ್ಲಿ ಕರಿದು ತಯಾರಿಸುವ ಒಂದು ಬಗೆಯ ಸಿಹಿ ಭಕ್ಷ್ಯ : ಹೆಸರುಬೇಳೆಯ ಹುರಿದು ಬೇಯಿಸಿಕೊಂಬುದು, ದೊಡ್ಡ ಸಜ್ಜಿಗೆಯ ಬೇಯಿಸಿಕೊಂಬುದು, ತೆಂಗಿನ ಕಾಯ ಹೆಸರ ತೋರ ದಲಿ ಕೊಯಿದು ಹಾಕಿ ಸಕ್ಕರೆಯ ಹಾಕಿ, ಮೆಣಸು ಏಲಕ್ಕಿ ಕರ್ಪೂರವ ತಳಿದು ಕಲಸುವುದು, ಅಡಕೆಯ ತೋರ ಉಂಡೆಯ ಮಾಡಿ, ಅಕ್ಕಿಯ ಬಟ್ಟ ಸಣ್ಣವಾಗಿ ಅರೆದು, ಗಟ್ಟಿಯಾಗಿ ಕಲಸಿ, ಈ ಉಂಡೆಗಳ ಆ ಹಿಟ್ಟಿ ನೊಳಗೆ ಅದ್ದಿ, ಕಾದ ತುಪ್ಪದಲ್ಲಿ ಹಾಕಿ ತೆಗೆವುದು. ಇದು ಪುರಿವಿಳಂಗಾಯಿ ಯೆನಿಸಿಕೊಂಬುದು (ಅಶ.ಸೂ. ೨೪). ೨. ಹೆಸರುಹಿಟ್ಟಿನಿಂದ ತಯಾ ರಿಸುವ ಒಂದು ಬಗೆಯ ಸಿಹಿಭಕ್ಷ್ಯ.–ಉಂಡೆ. 'ಪುಳ್ಳಂಗಾಯಿ ಉಂಡೆ' ಪರಾ. [ದೇ.॥ ತಮಿ. ಪೊರಿವಿಳಙ್ಙಾಯ್, ಪೊರಿವಿಳಾಙ್ಙಾಯ್; ತೆಲು. ಪೊರಿವಿಳಂಗಾಯಲು]

**ಪುರಿಸ** (ನಾ). ಅಮೇಧ್ಯ; ಮಲ : ಮುನಿರಾಮು ಕೇಳೆನ್ನ ತನು ಪೊಲಸು ಪುರಿಸವೇ ಪಿನಯದಿ ನೋಡೆಂದುರವ ಬಗೆದು ತೋಱಿ ಘನ ತನಿವಾಲು ಸೂಸೆ (ಶ್ರೀಶಂ. ೨-೪೦). [< ಸಂ. ಪುರೀಷ]

**ಪುರಿಸಂಡಗೆ**, ಹುರಿಸಂಡಗೆ (ನಾ). ಒಂದು ಬಗೆಯ ಸಂಡಗೆ : ಎಣ್ಣೆ ಯಲ್ಲಿ ಹುರಿಯುವ ಬತ್ತದ ಅರಳಿನ ಸಂಡಿಗೆ : ತೆಗೆ ತಿಲವನಾಪಾಸದ ಕೊಳವಿಗಳ . . . ಹಪ್ಪಳವ ಪುರಿ[ಜಾಕಾಂ. ಪಿರಿ]ಸಂಡ[ಜಾಕಾ. ಡಿ]

ಗೆಯು ಹೂರಿಗೆಯು (ಕೊಠಂ. ೩-೯-೬೦). **ಹುರಿಸಂಡಗೆ :** ನೂರೆಸಂಡಗೆ ಯನು ಹುರಿಸಂಡಗೆಯು ಬಾಳಕವನು ತಪ್ಪದೆಲ್ಲಾ ಸಾಧನವನು ಸಂವರಿಸಿ ತಂದೊಪ್ಪಿಸಿದಡೆ (ಸಿದ್ಧ.ಆ. ೬-೩೨). [ಪುರಿ₁ + ಸಂಡಗೆ]

**ಪುರೀತತ್ತು** (ನಾ). ಕರುಳು : "ಅಂತ್ರಂ, ಪುರೀತತ್‌—ಈ ೨ ಕರುಳ್" (ಶಬ್ದಾಧು. ೦೦೯-೦೪). [ಸಂ. ಪುರೀತತ್]

**ಪುರೀಷ** (ನಾ). ೧. ಹೇಲು ; ಮಲ : "ವರ್ಚಃ . . . ಪುರೀಷಂ, ಶಮಲು, ಮಲಂ—ಈ ೧೩ ವಿಷ್ಠೆ" (ಶಬ್ದಾಧು. ೧೦೩-೦೩) ; ಅರೆಯ ಮೂತ್ರ ಪುರೀಷಾಗಾರಂ ಸಂಪ್ರಾಪ್ತಸಪ್ತಧಾತುವಿಕೀರಂ ಚಾರುಗುಣವೂರಮತಿ ವಿಷದಾರು ಶರೀರಂ ದುರಂತದುಃಖಾಧಾರಂ (ಆತ್ಮ. ೨-೩೦). ೨. ಕೊಳೆ ; ಹೊಲಸು : ಸಿಂಬುಳು ಕೀವು ಕೆರಂಕಸ್ರಗಂಬು ಮಲಂ ಮೂತ್ರಮಾ ಪುರೀಷಂ ಜೀವಂ ಬೆಂಬಿಡದೀ ಪಂದೊವಲ ಪಸುಂಬೆಯೊಳೀಯೊಡಲೊಳಾವ ಸುಖಕಿರ್ದಪುದೋ (ಆತ್ಮ. ೬-೩೩) ; ಕೀವಿನ ರುಧಿರ ಪುರೀಷದ ಬಾವಿ ಯೊಳಾವಾಸವಾಗಿ ನೆಲಸಿಹ ನಾನಾಜೀವಿಗಳ ನೋವ ನೋಡುತ್ತಾ ವಿಭು ಸಾವಂದತಂದೆ ಮಬಗುತ್ತಿರ್ದಂ (ಕನ್ನ.ಶಾ. ೩-೦೬೦). [ಸಂ.]

**ಪುರು** (ಗು). ೧. ಹೇರಳವಾದ ; ವಿಪುಲವಾದ ; ಅಧಿಕವಾದ : ಪುರು ಪುಣ್ಯಂ ವಿಮಲೋರುಕೀರ್ತಿ . . . ನಾಕಿಗಂ (ಧರ್ಮಪ. ೦-೬೦) ; ಪರಮಾರ್ಥಂ ಪುರುಧರ್ಮದಾನಫಲದಿಂ ಸ್ವರ್ಗಾಪವರ್ಗಕ್ಕಮಿಾಶ್ವರನಪ್ಪಂ ವರಪಾತ್ರ ಸಂತತಿಗೆ ದಾನಂಗೆಯ್ವುದಾನಂದದಿಂ (ಜಾ:ಶೀಕ್ಷ. ೬-೦೦೮). ೨. ಮಹ ತ್ತಾದ : ವಿಶಾಲವಾದ : ಪ್ರತ್ಯಹಮೊಪ್ಪುಗುಂ . . . ಆದಿತ್ಯಪುರಂ ಪುರಂದರಪುರಪ್ರತಿಮಂ ಪುರುರತ್ನಗೋಪುರಂ (ಕಂದ್ರ.ಪು. ೬-೩). (ನಾ). ೩. ಹಿರಿದು ; ದೊಡ್ಡದು : "ಬೃಹತ್, ಉರು, ಗುರು, ವಿಸ್ತೀರ್ಣ, ಪುರು . . . ವರಿಷ್ಠಂ—ಈ ೧೨ ಹಿರಿದು" (ಶಬ್ದಾಧು. ೦೧೬-೦೯) : "ಬೃಹದುರು ಪುರು ಪೃಥುಳ ಪೃಥು ವಿಶಾಲವುಮಾ ಗುರು ಮಹದತಿ ಪ್ರೌಢಮೆನೆ ವಿಸ್ತೀರ್ಣಮೆಂದೆನಿಕು" (ಕುಂಗರಾ. ೧೨೦-೮). ೪. ಚಂದ್ರ ವಂಶದ ಒಬ್ಬ ಪ್ರಸಿದ್ಧನಾದ ಅರಸು ; ಯಯಾತಿಯ ಮಗ ; ಕೌರವ, ಪಾಂಡವರ ವಂಶದ ಮೂಲಪುರುಷ : ಸರಿಯೆ ಪೇಳ್ನಗಿದು ಭೂಪ ಓಹೋ ಪುರುವಂಶದೀಪ (ಜಾಶಂಕ. ೬೮ ೧೩೩). 'ಪುರು ಕುಲ' ಪರಾ. ೫. [ಜೈನ] ಮೊದಲನೆಯ ತೀರ್ಥಂಕರನಾದ ವೃಷಭನಾಥ; ಆದಿತೀರ್ಥಂಕರ : ಪುರುಪರಮೇಶ್ವರನೆನಿಗವತರಿಸಿದಂ (ಆದಿಪು. ೬-೩೬) ; ಪುರುವಂಶದ ಕುರುವಂಶದ ಹರಿವಂಶದ ನಾಥವಂಶದುಗ್ರಾನ್ವಯದುರ್ವರಿಯೊಡೆಯರಾದಿಪರಾಗಿರೆ ನರನಾಥಸುತರ್ಕಳೆನಿಬರಾನುಂ ಬಂದರ್ (ಕಂಠಾಭ. ೩-೩೬) ; ಪುರುವಂಶಾಭರಣಂ ತ್ರಿಪಿಷ್ಟನೃಪನಾ ವಿದ್ಯಾಧರೇಂದ್ರಂಗೆ ಸಾದರದಿಂ ತಾನಿದಿರ್ವಂದು (ಶಾಂತೀಶ್ವ. ೯-೨೦೩). [ಸಂ.]

**–ಪುರುಕ,–ಪುರಕ** (ಪ್ರ). ಭಾವನಾಮವಾಚಕವಾದ ಒಂದು ತದ್ಧಿತ ಪ್ರತ್ಯಯ : 'ಅಂಜುಪುರುಕ', 'ಅಳುಬುರುಕ' ಪರಾ.–**ಪುರಕ** : 'ಅಳುಬುರಕ', 'ಅಸಬುರಕ' ಪರಾ.

**–ಪುರುಕಿ** (ಪ್ರ). ಭಾವನಾಮವಾಚಿಯಾದ ಒಂದು ತದ್ಧಿತಪ್ರತ್ಯಯ : ಕುಳಿ ಪ್ರತ್ಯಯವು ಯಾವ ಅರ್ಥದಲ್ಲಿ ಬರುತ್ತದೆಯೋ ಅದೇ ಅರ್ಥದಲ್ಲಿ ಪುರುಕಿ ಪ್ರತ್ಯಯ ಬರುತ್ತದೆ (ಕೂಶ:ಗ. ೬೯). 'ಅಂಜುಪುರುಕಿ' ಪರಾ. [–ಪುರುಕ + – ಇ₂]

**ಪುರುಕುಲ** (ನಾ). ಪುರುಮಹಾರಾಜನ ವಂಶ : ಎಲೆ ಪುರುಕುಲೋತ್ಪನ್ನನೆ . . . ಇಂಥ ಕಠಿನೋಕ್ತಿಗಳಿಂದ ತಿರಸ್ಕರಿಸುವುದು ನಿನಗೆ ಯುಕ್ತವಲ್ಲವಲ್ಲಾ ? (ಶಾಕುಂತ. ೬೬-೦೩). [ಸಂ.]

**ಪುರುಚಲಿಗಿಡ** (ನಾ). ಒಂದು ಬಗೆಯ ಸಸ್ಯ : ಪೇನುಂಟುರುವಿನ ಗಿಡ, ಪುರುಚಲಿಗಿಡ, ಪುಲ್ಲಾರೆ (ಮೈಶಿಗಿ. ೩೩–೦೦೦೬). [ಪುರುಚಲಿ₂+ಗಿಡ (< ಗಿಡು)]

**ಪುರುಚಲು** (ನಾ). ಕೆದರಿದುದು : ಕೂದಲು ಪುರುಚಲು ಪುರುಚಲಾಗಿದೆ (ಜೂ೨). [ಪುರುಚು ? + – ಅಲು (< – ಅಲ್₃)]

**ಪುರುಜ** (ಗು). ಅಧಿಕವಾದ ; ಅನೇಕವಾದ. [ಸಂ.]

**ಪುರುಡಿ₁** (ನಾ). ಮತ್ಸರವುಳ್ಳವಳು ; ಅಸೂಯೆಪಡುವವಳು ; ಈರ್ಷ್ಯೆಯುಳ್ಳವಳು : ಅವನ ಸತಿ ಪುರುಡಿ ನೆವದಿಂ ಬವರಮನೆ ಪೊಣರ್ಚೆ ಮಾರಿದತ್ತಾಖ್ಯೆ ಮಹಾಹವಶೀಲೆ ತನ್ನ ಮನೆಯಿಂದವ ಪೊಜವಮಡಿಸಿದಳ್ ಕನಲ್ದು ಪದ್ಮಾವತಿಯಂ (ಪುಣ್ಯಾಸ್ರ. ೨-೯೩). [ಪುರುಡು₁ + – ಇ₃]

**ಪುರುಡಿ₂ ?** (ನಾ). (?): ಕರ ಚರಣವನು ಮಿಸುಕಲಮ್ಮದೆ ಗರುಡಿಯೋಜನು ಪು [ಶಾಗಾ. ಪ]ರುಡಿಯನು ಮರವಂತೆ ಸಿಂದಿರ್ದ (ಶಾಲ್ಯರಾ. ೩೦-೬೨). [ ? ]

**ಪುರುಡಿಗ, ಹುರುಡಿಗ** (ನಾ). ಹೊಟ್ಟೆಕಿಚ್ಚಿನವನು; ಈರ್ಷ್ಯೆಪಡು ವವನು : ಮತ್ಸರಬುದ್ಧಿಯವನು : ಆಗಮಾರ್ಥಮನೇನೆಂದಜ್ಞ ಯದರೊಳ್ ಪುರುಡಿಗರೊಳ್ ಬಜಾದಲೆಯೆಂದೆಳಸಿ ಕೇಳರಾಗದು ಪುರುಷಂ (ಧರ್ಮಾಮೃ. ೬-೨೦೩); ಪಾಜಿಪ ಪುರುಡಿಗನಂ ಪೂಣ್ದು ಬೇರ್ಕೆಯ್ದು ಲೋಭೋಜ್ವಳನಂ ಬಿಳ್ದೋಡಾಡಿ ಪೋಗಾಡುವ . . . ಚಾತುರ್ಯದ ಪೊಸ ಬಗೆಯೆನ್ನೊಳ್ ನಿಶಾಂತಂ ನಿಸರ್ಗಂ (ಪ್ರಶಂ. ೨೯-೨೮). **ಹುರುಡಿಗ :** "ಈರ್ಷ್ಯಾಳುಃ, ಕುಹಕಃ—ಈ ೨ ಹುರುಡಿಗಂ" (ಶಬ್ದಾಧು. ೬೬-೨೨೯) ; ಹುರುಡಿಗರನೇಕಾಂತದೊಳಗಾದರಿಸುವರು ಭೇದಕರ ಬುದ್ಧಿಗೆ ತೆಜು ಗೊಡುವರು . . . ಈ ಧರೆಯರಸುಗಳಿಗಿದು ಸಹಜ (ಕುವ್ಯಾಸ. ೦-೩೩). [ಪುರುಡು₁ + – ಇಗ]

**ಪುರುಡಿಸು, ಹುರುಡಿಸು** (ಕ್ರಿ). ೧. ಸ್ಪರ್ಧಿಸು; ಪೈಪೋಟಿ ನಡೆಸು : ಸ್ಥಿರನೇ ಮೇರುಗಿರೀಂದ್ರದೊಳ್ಪೆಣಸುವಂ ಗಂಭೀರನೇ ವಾರ್ಧಿಯೊಳ್ ಪುರುಡಿಪ್ಪಂ (ಎಕ. VII, ಶಿಕಾರಿ. ೦೦-೨೬ ; 1085 ?) ; ಉದಾರಗುಣದೊಳ್ ಪುರುಡಿಸುವಂ ಕಲ್ಪವೃಕ್ಷದೊಳ್ಪದ್ಮಣಿಜಂ (ಧರ್ಮಾಮೃ. ೦-೯೦); ಪರಿಚಂದನ ಪಾರಿಜಾತ ಮಂದಾರದ ತರುಚಯದಿಂ ಸಿದ್ಧರಸದ ಸರಸಿಗಳಿಂದಾ ಗಿರಿ ಗೀರ್ವಾಣರ ಪುರದೊಡನವು ಪುರುಡಿಪುದು (ಶಬರಶಂ. ೨-೦೯). ೨. ಹೊಟ್ಟೆಕಿಚ್ಚು ಪಡು ; ಮತ್ಸರಿಸು ; ಅಸೂಯೆ ಪಡು : ವಜ್ರದಾಡಂ ಕೇಳ್ದು ಮನದೊಳ್ ಮುಳಿದು ಪುರುಡಿಸಿ . . . ಬಾವಿಯ ಬಾಗಿಲೆಲ್ಲವಂ ನಿಶ್ಚಿದ್ರಮಾಗಿ ಮುಚ್ಚಿ ಕವಿದಿಕ್ಕಿ ಪೋದಂ (ವಡ್ಡಾರಾ. ೧೬೬-೨೩); ನರನಂದನನಂ ಕಂಡು ವಿಕ್ರಮಕ್ಕಂ ಕ್ರಮಕ್ಕಂ ಪುರುಡಿಸುವ ಸುಯೋಧನನ ಮಕ್ಕಳ್ . . . ಸೂರ್ವರುಮೊಂದಾಗಿ ಬಂದು ತಾಗಿದಾಗಳ್ (ಪಂಪಭಾ. ೦೦-೯೯ ವ); ಸವತಿಗೆ ಸವತಿ ಪುರುಡಿಪಳ್ (ಕವಿರಾ. ೧೬೦ ಪ್ರಯೋ); ಗುಣಕೆ ಪುರುಡಿಪರೊಳರೇ (ರಕಕ. ೦-೬). **ಹುರುಡಿಸು :** ೧. ಕೈಲಾಸವದಕೆ ಹುರುಡಿಸುತಲಿರ್ಪುದು ನೋಡ ಮೇಲೆನಿಪ ಮೇರು ಸೆಣಸುತ್ತಿರ್ಪುದಂ ನೋಡ (ತಿಮ್ಮಕ. ರಾ. ೩-೨೦); ಎಳೆಯ ಮಿಂಚಿನ ಕುಡಿಯ ಸೂಸುವ ನಳಿನದ್ಯಶಯುರು ಶಶಿಯು ಬಿಂಬವ ಹಳಿವ ಹುರುಡಿಸುವಬುಜವುಖಿಯರು ಕೋಪಮಲಾಂಗಿಯರು . . . ಕುರುರಾಜು ನೆಡವಂಕದಲಿ ಮೋಹಿದರು (ಕುವ್ಯಾಉ. ೬-೯೯); ಚಕ್ರವರ್ತಿಯ ಸೇವೆ ಯೆಂದು ಪುಷ್ಪ ಪುಷ್ಪವೂ ಹುರುಡಿಸುತ್ತಿದೆಯೋ ಎಂಬಂತೆ ಪಾರಿಜಾತ, ಜಾಜಿ . . . ಜಲಜಗಳು ತಮ್ಮ ತಮ್ಮ ಸುಗಂಧವನ್ನು ಸೂರೆಗೊಡುತ್ತಿವೆ (ಪಡೆದಾ. II, ೦೯೬೯). ೨. ಒಸೆದು ಕಮಲಿನಿ ನಗಲು ಮಿಗೆ ಹುರುಡಿಸುತ ಪೂರ್ವದಿಶಾನಿತಂಬಿನಿ ನಿಶಿತಕೋಪದ ಕಿಡಿಯನುಗುಳಿವಳೆನಲು ರವಿ ಮೆಱೆದ (ಕುಮಾರವ್ಯಾ. ೨-೦೩). [ಪುರುಡು₁ + — ಇಸು₁]

**ಪುರುಡು₁, ಹುರುಡು₁** (ನಾ). ೧. ಸ್ಪರ್ಧೆ ; ಪೈಪೋಟಿ; ಮೇಲಾಟ : ವೇಚರನುಂ ಕುಮಾರನಂ ಕಂಡು ಪುರುಡಿಂ ಮುಳಿಸು ಪೆರ್ಚೆ . . .

ಕೊಲ್ವೆನೆಂದು ಕಿಚ್ಚು ಪಾಳ್ವೆರಸು ಬಂದೆವಾಗಿ ಇರ್ದು (ವಡ್ಡಾರಾ. ೫೯-೨೬); ಪಿತಾಸುಂ ತೆಜದೊಳಳಿಪಿನ ಲಲ್ಲಿಯು ಚಿಲ್ಲದ ಪುರುಡಿನ ಮುಳಿಸಿನ ನೆಪದ ಪಡೆಪೂತುಗಳಂ ನುಡಿದುಂ ಕಾಲ್ತಿಡಿದುಮುಚುಳಿತಧೈರ್ಯನ ಮಾನಮುಂ ಚಳಿಯಿಸಲಾಜದೆ (ಶಂಕಕಾ. ೭-೧೧೨); ನಿನಗಂ ಮದನನಂಗಂ ರೂಪಿನ ಪುರುಡುಂಟು (ಅನಂತಪು. ೬-೩೭). ೨. ಹೊಟ್ಟೆಕಿಚ್ಚು; ಈರ್ಷ್ಯೆ; ಮತ್ಸರ: ಅತನ ಪ್ರಾಣೇಶ್ವರಿ ಪದ್ಮಪಾಣಿನಿ ಕಂಡು ಪುರುಡುಮುಬಲುಮೊಡವಳಿಯ ನಿಡಿತಾಸಿ ಧೇನುವಂ ಕಿಚ್ಚು ಬೆಸ್ಸಟ್ಟ ಮುಟ್ಟ ಬೆಜಗಿಲ್ಲದಾತನ ಬೆಸ್ನಂ ಪಸ್ನಿವರವಿಕ್ಕಿದು ಕಿರೆ ಪೊಯ್ಯೆ (ಶಾಂತಿಪು. ೪-೯೬ ವ); ಪುರುಡಿಂ ಭಾರತೀಶನಂ ಸೋಂಕಳ್ . . . ವಿನೀತನಂ ದೂರದಿಂ ನೋಡಿ ಪಾಸಕನಿವನೆಂದು ತೀವು ಪೋಗಳೀದಿರೆ ನಂಬದಿರ್ (ಶಾಂದೇಪು. ೩೯೯); ಉರ್ವಿಯೊಳ್ ಸಿಪಿಲಪುಣ್ಯಾಂಭೋಧಿಯುಪ್ಪಾತನಂ ಪುರುಡಿಂದಂ ಕೊಲಲೆಂದು ಕಾಯ್ವು ಸರಸುಂ ಗಾಂಪಂ ಪೆಜಿರ್ ಗಾಂಪರೇ (ರಾಜಶೇಖ. ೧೧-೨೦೩). ೩. ಹಟ : ಛಲ : ಏರಿದಾಗ ಕೊಡ ದಿಹುದು ನೆಲದ ಕುಪ್ಪಳೇಗೇನು ಮಾರುಳೊ ಕರೆಯದೆ ಕೊಡುವ ಪುರುಡೇಕೆ ಬಿಡದು ? (ಆರಂಭ. ೩೭-೯೦). ಹುರುಡು₁ : ೧. ಕಮಳಪ್ರಭೆಗಂ ತನಗಂ ಹುರುಡಿಂದವೋ ಪರಸ್ಪರಾನುರಾಗಮುಳವಿಗಟಿಯೆ (ಅರ್ಜುನ. ೩-೧೦೩ ವ); ಹುರುಡು ಜಾಣಮೆ ಚಳಬಳಿಕೆ ಚಪ್ಪರಣೆ ಪಂಚನೆ ನೇಹಪೇಬೀ ಪರಿಯ ಮಾಯಾಮಯದ ಮಹಿಳಾಜನ ವಿರಾಜಿಸಿತು (ತೊರೆವ. ೧-೫ ೩೨); ಒಂದೊಂದು ಸಲ ಹೆಣ್ಣಾಳುಗಳಿಗೂ ಗಂಡಾಳುಗಳಿಗೂ ಹುರುಡು ಬಂದು ಬಿಡುತ್ತಿತ್ತು (ಪಮ್ಮೂರಿ. ೦೧೨). ೨. ಹುಸಿಯಿಲ್ಲ ಹುರುಡಿಲ್ಲ . . . ಮತ್ಸರವಿಲ್ಲ ನೆರವಿಲ್ಲ ವಸುಧೆಯೊಳು ಸಿದ್ಧರಾಮಂಗೆಂಬ ಕೀರ್ತಿ ಪಸರಿಸಿತು ಮೂರಲೋಕದೊಳಗೆ (ಸಿದ್ಧರಾ. ೬-೨೫); ಹುರುಡೇಕೆ ಗುಣದೊಳಗೆ (ಶುಮ್ಯಾಶ. ೧-೨೫); ಹುರುಡು ಹುಟ್ಟದವೊಲು ಸಕಲಕಾಂತೆಯರೊಳು ಪಣೆವಿನಿಸಿರುತಿಹನಾಗಿ ಪುರುಷರೊಳುತ್ತಮನೀತನೆಂದಾತಗೆ ಪುರುಷೋತ್ತಮನೆಂಬ ನಾಮ (ಅರಕ. ೧೫-೦೭). ೩. ಗುರುಗಳಿಂದ ಉಪದೇಶಗಿರಿ ಪಡೆಯಬೇಕೆಂಬ ಹುರುಡು ಸಂಜೀವಯ್ಯನಿಗೆ ಹತ್ತಿತ್ತು (ಶಾಂತಿ. ೫೫). ೪. ಆಸೆ ; ಬಯಕೆ ; ಇಚ್ಛೆ : ಇಂತಪ್ಪ ಸಿರಿಯುನಾಂ ಪಡೆದೊಸೆದು ಸತ್ಪಾತ್ರಸಂತತಿಗೆ ದಾನಮಂ ಕೊಡುವೆನೆಂದೆಂಬ ಹುರುಡಂತರಂಗದೊಳು ಸಂಜನಿಯಿಸಲ್ (ಪಮ್ಮಾಶ. ೧೧-೭). ೫. ಲವಲವಿಕೆ : ಉತ್ಸಾಹ: ಎನ್ನನ್ನು ಮನ್ನಿಸುವ ದೊರೆಯಿಲ್ಲ ಹರಣವಲ್ಲಿ ಹುರುಡಿಲ್ಲ ಕರಣದಲ್ಲಿ ದೃಢವಿಲ್ಲ (ಶರಕ. ೨೯).

ಹುರುಡು ಮಾಡು = ೧. ಸ್ಪರ್ಧಿಸು ; ಪೈಪೋಟಿ ಮಾಡು : ಸ್ವಯಂವರಮಂದಿರದೊಳಗೆ . . . ಒಬ್ಬರೊಡನೆ ಒಬ್ಬರು ಹುರುಡು ಮಾಡುತ್ತಾ ಎಲ್ಲ ರಾಜರೂ ಕುಳಿತಿದ್ದರು (ಪಕ್ಷಾ. ೫೦) ; ಇಬ್ಬಣದವರೂ . . . ಹುರುಡು ಮಾಡುತ್ತಿರುವುದೂ ಈ ಕಾಲದ ವಿಶೇಷ ಲಕ್ಷಣ (ಜಿಪಿರ. V. ಶಿಕಾರ್ಜುನ ಸಾಪು). ೨. ಉತ್ಸಾಹಗೊಳಿಸು; ಹುರಿದುಂಬಿಸು : ಚುರುಕುಗೊಳಿಸು ; ಪ್ರಚೋದಿಸು : ಯುಧಿಷ್ಠಿರನು . . . ತನ್ನ ಸೈನಿಕರನ್ನು ಕರೆದು ಭೀಷ್ಮನನ್ನು ಸುತ್ತ ಮುತ್ತಿಕೊಂಡು ಸಂಹರಿಸುವುದಕ್ಕಾಗಿ ಹುರುಡು ಮಾಡಿದನು (ಕೃಷ್ಣರಾ. ೦೩೩).

[ದೇ. ॥ ಕೊತ. ಪುರ್ಡ್; ತೆಲು. ಪುರುಡು ]

ಪುರುಡು₂ (ನಾ). ೧. ಮಗುವಿನ ಜನನಸಂಬಂಧವಾದ ಮೈಲಿಗೆ ; ಹುಟ್ಟುಸೂತಕ; ಜಾತಾಶೌಚ; ವೃದ್ಧಿ : ದೇಯಿಮು . . . ಅವಳಿ ಜವಳಿ ಗಂಡುಮಕ್ಕಳನ್ನು ಹೆತ್ತಳು. ಪುರುಡಿನ ದಿವಸಗಳು ಕಳೆದ ನಂತರ ಮಕ್ಕಳಿಗೆ ನಾಮಕರಣವಾಯಿತು (ಕೋಟಿಚ. ೩). ೨. ಮರಣಕ್ಕೆ ಸಂಬಂಧಪಟ್ಟ ಮೈಲಿಗೆ; ಮೃತಾಶೌಚ ; ಸೂತಕ: ಹತ್ತುದಿವಸದವರೆಗೆ ಪುರುಡು. ಹತ್ತನೇ ದಿವಸ ಶುದ್ಧಕರ್ಮಾಂತರಗಳು (ಕೆಂಗಾಳ್ಯ. ೨೦೩); ಬಿಗಿದುಡೆಯ ಜಿತಳದಕೊ ಹುಟ್ಟು ಸಾವುಗಳಿಂದ ಆಗಳು ಪುರುಡಾಗಿ ನೆಲೆವೆಣ್ಣ ಮಾಪು (ಅಂಶಿರ. ೪೬ ೬೩).

[ದೇ. ॥ ತಮಿ. ಪುರುಟು ; ತೆಲು. ಪುರುಡು]

ಪುರುಡುಗೆಯ್ (ಕ್ರಿ). ಅಸೂಯೆಗೊಳ್ಳು ; ಮತ್ಸರಿಸು : ಪಂಚಿಸದೆ ಪುಸಿಯಮಳಾವದೆ ಸಂಚಳಸದೆ ಪುರುಡುಗೆಯ್ಯದಾರದೀರದೆ ೯ರಂ ಬೇಚಿಸ ದಳಲಿಸದುಮುಬಾಗಿಸುತಂ ಚದುರಂ ಸಜ್ಜನಂಗಳ (ಪುರಾತಿ. ೬-೧೨).

[ಪುರುಡು₁ + ಕೆಯ್₁]

ಪುರುಡುದೋಱು (ಕ್ರಿ). ಹೊಟ್ಟೆಯುರಿಯನ್ನು ವ್ಯಕ್ತಪಡಿಸು : ಮಾತ್ಸರ್ಯವನ್ನು ತೋರಿಸು : ಇಂತು ಪಲ್ಲಿಂದು ಗಜಜ಼್ ಗರ್ಜಿ ಪುರುಡುದೋಱ್ ಬಾಯ್ಬೆ ಬಂದಂತೆ ಗಳಪಿ ಮಾನಸಿಧಿಯಾದ ಮಲ್ಲಣನಂ ಮಲ್ಲಣಿಯ ಮಾತೆ ಮನೆಯಿಂ ಪೊಱಮಡಿಸಿ (ಕೃಷ್ಣಾ. ೨೯-೨೫ ವ).

[ಪುರುಡು₁ + ತೋಱು]

ಪುರುಡುಮಾತು (ನಾ). ಸ್ಪರ್ಧೆಯ ಮಾತು ; ಪೈಪೋಟಿಯ ನುಡಿ : ಸಾರ್ದಳಸುತ್ತುಂ ಪೋರ್ವ ಬಿಂಕಂ ಪದಯುಗದೊಳವಿಾ ವಿಶ್ವತಾಪಾದನೊಳ್ ಸಂಗಳಸಿಸ್ತೀ ವಿಶ್ವತೋಪಕ್ಕನೊಳೆ ಪುರುಡುಮಾತೆನ್ನದೋ ಮದ್ವಿಮೋಹಂ (ಶಬಶಂ. ೪-೧೩೦). [ಪುರುಡು₁ + ಮಾತು₁]

ಪುರುಪಕ್ಷ (ನಾ). ದೊಡ್ಡ ರೆಕ್ಕೆಯುಳ್ಳುದು: ನವಿಲು : " ಚನ್ಸಶ್ಯ ವಾಶಂ ಕಳಾಪಿ ಶಿಖಿ ಕೇಕಿ ಪುರುಪಕ್ಷಂ ಮಯೂರಂ ಶಿಖಂಡಿ ಹರಿಕಂಠ ಶಿಖಾಪಳಂ ಸವಿಲನಿಕ್ಕಂ" (ಶುಂಗರಾ. ೫೬-೨). [ಸಂ.]

ಪುರುಪಾತ್ರ (ನಾ). ಅಗಲವಾದ ಪಾತ್ರೆ : ಹರಿವಾಣ : " ಪುರುಪಾತ್ರ ಮನೆ ಪರಿಯಾಣಮಕ್ಕ " (ಶುಂಗರಾ. ೬೩-೨೫). [ಸಂ.]

ಪುರುಪೃಷ್ಠ (ನಾ). ಹಾವು ; ಸರ್ಪ : "ಭುಜಂಗಮಂ ಪುರುಪೃಷ್ಠನಪಿಚಕ್ರಿ . . . ಎನಲು ಸರ್ಪಂಗೆ ನಾಮಮು " (ಶುಂಗರಾ. ೦೦೪-೦). ' ದೀರ್ಘಪೃಷ್ಠ ' ಪರಾ. [ಸಂ.]

ಪುರುಲೆ₁ ' ಪುಜಲೆ ' ನೋ.

ಪುರುಲೆ₂ (ನಾ). ಒಂದು ಬಗೆಯ ಹುಲ್ಲು :' ಅಂಟುಪುರುಲೆ ' ಪರಾ. [?]

ಪುರುವಳ್ಳಿ, ಪುರುಳಿ₁, ಹುರುವಲ್ಲಿ, ಹುರುವಳ್ಳಿ, ಹುರುಳಿ (ನಾ). ಒಂದು ಬಗೆಯ ದ್ವಿದಳಧಾನ್ಯ ; ಕುಲತ್ಥ : ಜ್ವರದೇಟ್ಗಿಯೊಳ್ ಕವುಡೆಯ ರಸಮಕ್ಕ ಲೊಕ್ಕಿಯನರಿಷ್ಟಫಲಂಗಳನಕ್ಕ ಪಂದಿಗಡ್ಡೆಯ ಪುರುವಳ್ಳಿಯೂಷ ಜಳಮಕ್ಕುಪಯೋಗಿಸಿದಂದು ಮಟ್ಟುಗಂ (ಕೋಕಿಳಾಶ. ೯-೨೦೩); ಮೋಟ ಪುರುವಳ್ಳಿ ಎಲೆಯುತ್ಪಾಟಸಂಗುಂ ನಸ್ಯಕರ್ಮದೊಳ್ ವಿಷಮಂ (ಖಡರ. ೩-೮೯). ಪುರುಳಿ₁ : " ಶುಕ ಕುಳುತ್ಥಗಳೆಂಳಂ ಪುರುಳಿ " (ಕಶ್ಯಮಂ. ೦೦೪); ಪೆಸಱ್ ಕಡಲೆಯುಂದು್ ನೆಲ್ ಗೋದುಮೆ ಜವೆ ತಕ್ಕವರೆ ತೊಗರಿ ಪುರುಳಿ ಯುಮಿಕ್ಕಲಿಪಂ ಸವಿದು ಸವಿದು ನುಂಗಿದನಾಗಳ್ (ಶಾಣಸ್ಯ. ೦-೯-೨೦). ಹುರುವಲ್ಲಿ : .ಗೋಧಿ . . . ಉದ್ದು ತೊಗರಿ ಹುರುವಲ್ಲಿ ಮುಂತಾದ ಧಾನ್ಯಕ್ಕೆ (ಎಕ. V. ಬೇಲೂರು. ೬೩-೯೩; ೧೫೩೭). ಹುರುವಳ್ಳಿ :ಯವ-ಯವೆ. ಸರ್ಷಪ—ಸಾಸವೆ . . . ಕುಲತ್ಥ-ಹುರುವಳ್ಳಿ (ಕೃಷಿಶಾ. ೪-೨೬); ಬಿತ್ತುಗೆ ಹ(ಪ)ಸಱು ಹಸ್ತ(ದಿ)ದೆ ಮತ್ತಂ ಸಲೆ ಪೂರ್ವಷಾಢ(ದ)ಲಸಂದೆಗಳಂ ಸತ್ಯ ಮಸೂರಾಧೆಯೊಳೆ ತಾಂ ಬಿತ್ತುಗೆ ಹುರುವಳ್ಳಿಯುಗಸೆಗಶ್ವಿನಿಯಕ್ಕಂ (ಅಲ್ಪಕು. ೯-೪೭) : ಹುರುಳಿಯ ವಿಷಕ್ಕೆ_ಹುರುವಳ್ಳಿ[ಹಾಂಶಂ. ಹುರಿವಳಿ, ಹುರುಳಿ]ಯ ಸೊರ್ಕಿಂಗಂ ಹರೀತಕೀಯುಕ್ತಮೇಘನಾದಿಯುಮಂ ಮೋಣ್ ವರ ಹಿಂಗು ವಿಳಂಗಮನಿರದರೆದೀಂಟಲ್ ಪಾರೊಳುಮವಿಷಂ ತಾಂ ಧರೆಯೊಳ್ (ಚಪುತ. ೨-೦೭೦). ಹುರುಳಿ : ಕರಿಬೇವು ಬಡಗಸಂಡಗೆಯುಂಗು . . . ಹುರುಳಿ ಸಾಸುವೆ ಮೆಂತೆಯದ ಚೂರ್ಣ ಹಪ್ಪಳಂ ಸಂಭಾರವಸ್ತುವಹವು (ಸೂಪಶಾ. ೪-೦); ಹುರುಳಿ ಗುಗ್ಗುರಿ ಮುಕ್ಕಿ ಮೇಲೆ ಮಜ್ಜಿಗೆ ಕುಡಿದು ಓರಿಯ ತೆಬ್ಬುಲಿಯಂತೆ ನಿದ್ರಿಪ ಮೋಡಿ (ಭರತೇಶ. ೨-೩೬-೪) ; ಕುದುರೆಗೆ ಹುರಿದ ಹುರುಳಿ (ಗಾದೆ).

**ಪುರುಷ** (ನಾ). ೧. ನರ ; ಮನುಷ್ಯ ; ಮಾನವ : "ಮನುಷ್ಯಃ, ಮಾನುಷಃ . . . ಪುರುಷಃ, ಪೂರುಷಃ, ಎಟ್—ಈ ೧೨ ಮಾನಸರ್" (ಕರ್ಣಾಟು. ೫೩–೦೬೬); ಪುರುಷಂ ಧನಮೆನಗುಂಟೆಂದಿರಲಾಗದು ದ್ರವ್ಯಮುಳ್ಳೊಡಂ ದ್ರವ್ಯಮನಾರ್ಜಿಪುದು (ಚಿಕ್ಕದೇ. ೦–೯೩). ೨. ಮನುಷ್ಯಜಾತಿ; ಮಾನವಕುಲ. ೩. ಗಂಡಸು : " ಮಾನವಂ . . . ಪುರುಷನಾ ಪಂಚಜನನಮಾ ನೃ ಮನುಜಂ ಗಂಡುಗೂಸಕ್ಕು " (ಚುಂಗಾ. ೬೬–೦) ; ಪುರುಷನ ಮುಂದೆ ಮಾಯೆ ಸ್ತ್ರೀಯೆಂಬ ಅಭಿಮಾನವಾಗಿ ಕಾಡಿತ್ತು ನೋಡಾ (ಬಸವ. ೩. ೩೯–೦೯೭) ; ಪುರುಷರ್ ವಧುಗಳ್ಗೆ ವಧೂತ್ಕರಮಾ ಪುರುಷರ್ಗೆ ಸೋಲ್ವುದುಚಿತಮದು (೧೬೪. ೬–೨೩). ೪. ಗಂಡ; ಪತಿ: ಸಂಸ್ಕಾರಿಸಲೀ ಮಾತೆಯರ್ಗೆವರವರ ಪುರುಷರಂ ಕುಡವೇಳ್ಕುಂ (ಹಂಪಾ. ೦೯–೮); ಅರಸನ ಕಂಡು ತನ್ನ ಪುರುಷನ ಮಾಱಿದಡೆ ಮರನನೇಱ ಕೈ ಬಿಟ್ಟಂತಾದೆನಯ್ಯ (ಬಸ. ೯೨೩) ; ಅರಸಿನವನೆ ಎಂದು ಹೊಂದೊಡಿಗೆಯನೆ ತೊಟ್ಟು ದೇವಾಂಗವನ್ನುಟ್ಟು ಪುರುಷ ಬಾರಾ (ಜಕ್ಕಣ. ೩. ೦೯೦–೩೨೦); ಪುರುಷನುಳ್ಳವಳು ನಾ ಪುರುಷರು ಕೇಳ್ಕೈರು ಗುಱುತು ಕಂಡರೆ ಕೊಲೆಯ ಕೊಂದಾರು (ಪುರಂ. ೩–೩೯.೨). ೫. ಒಬ್ಬ ಮನುಷ್ಯನ ಎತ್ತರದಷ್ಟು ಪ್ರಮಾಣ ; ಸುಮಾರು ಆರು ಅಡಿ ; ಆಳುದ್ದ : ಕಂಟಕಕುಜವನದೊಳ್ ನಿಷ್ಕಂಟಕಕುಜಮಾಗೆ ಪೋಲ್ ವಿಕಂಟಕವನದೊಳ್ ಕಂಟಕಮಹೀಜಮಾದೇಂ ದಮುಂಟೊದಱ ಪಡುವಲಯ್ದು ಪುರುಷದೊಳುದಕಂ (ಲೋಕೋಪ. ೩–೦೬); ಅಕ್ಕಿಯ ಪಡುವಲ್ ಮೂಗಯ್ಯತ್ರಲ್ ನೀನಗುಬ್ಬಿಸಿರದೆ ಪುರುಷದೆ ಏರುಂ ಮಾತೊಂದು ಪುರುಷದೊಳ್ ಭುಜಗೋತ್ತಮನಂತಪ್ಪ ಕರಿಯ-ಕರ್ ಪಡುವ ಜಲಂ (ಅಭಿನ. ೦೦–೯) : ೧೪ "ಪುರುಷ"ಗಳ ಆಳತೆಯುಳ್ಳ ಹಗ್ಗದಿಂದ ೨೪ ಚದರ ಪುರುಷಗಳೂ (ಚಕ್ಕ್ರಿಕದ ಸಲಿ): ೨೪ ಪುರುಷಗಳ ಆಳತೆಯುಳ್ಳ ಹಗ್ಗದಿಂದ ೬೪ ಚದರ ಪುರುಷಗಳೂ ಉಂಟಾಗುತ್ತವೆ (ಗಣಿ. ೦೯೯). 'ಪುರುಷಪ್ರಮಾಣ' ನೋಡಿ. ೬. ಪರಾಕ್ರಮಿ; ಗಂಡುಗಲಿ: ಪುರುಷರ ಪುರುಷನಲ್ಲಾ ಭೀಮ ತನ್ನಯ ಪರಮಶಾಕ್ಯತೋದಯವಲಾ ನೀನೊಬ್ಬನು (ಕುಮಾ. ೩–೬೩). ೭. ಗಂಡುತನ ; ಪೌರುಷ ; ಪುರುಷಶಕ್ತಿ : ಪುರುಷಮುಂ ಸಮುಕಟ್ಟುವವಮಪ್ಪೊಡೆ ಪುಣ್ಯಮಯಲಣ್ಮುವರಿಲ್ಲ (ಹಂಪಾ. ೬–೩೭ ೩). ೮. ಆತ್ಮ; ಜೀವಾತ್ಮ: "ಅ ಪಸ್ತು ಸಂಸಾರಿ ಚೇತನಂ ಕ್ಷೇತ್ರಜ್ಞ ಪುರುಷನೆಂಬಾತ್ಮಸಕ್ಕುಂ" (ಚುಂಗಾ. ೯–೨೯); ಸೂಜಿಕಲ್ಲಿನ ಸಾನ್ನಿಧ್ಯದಲೇ ಸೂಜಿ ಚಲಿಸಿದಂತೆ ಪುರುಷನ ತೇಜದಿಂದಲಿ ಪ್ರಕೃತಿ ಚಲಿಸುತ್ತಿಹುದು (ಜ್ಞಾನಸಿಂ. ೨೬–೨೨). ೯. ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳಲ್ಲಿ ಪ್ರತಿಯೊಬ್ಬ: ಪುರುಷಮೂರ್ತಿವರೊಳೊರ್ಬನೆಂಬರ ಸುರಪ್ರಧ್ವಂಸಿಯೊರ್ಬರ್ಗದ್ಗುರುವೆಂಬರ್ಮಿಗೆ ತೇರನೆಸಪಂ(ಗಿರಿಜಾ. ೩–೯೩). ೧೦. ಪರಮಾತ್ಮ : ಅನಂತನಾದುದರಿಂದಲೂ ಪೂರ್ಣನಾದುದರಿಂದಲೂ ಪುರುಷನೆಂದು ಪರಮಾತ್ಮನಿಗೆ ಹೆಸರು (ಶ್ರೀಭಾ. ೬–೫ ಅರ್ಥ). 'ಪುರುಷಸೂಕ್ತ' ನೋಡಿ. ೧೧. ಸುರಗಿ ಮರ : ಪುನ್ನಾಗವೃಕ್ಷ : "ಪುನ್ನಾಗಃ, ಪುರುಷಃ, ತುಂಗಃ, ಕೇಸರಃ, ದೇವವಲ್ಲಭಃ—೫ ಸುರಗೀಮರ, ಸುರಹೊನ್ನೆ ಮರಕ್ಕೂ ಹೆಸರುಗಳು" (೬ಡ್ಕ.೬. ೦೦೬). ೧೨. ಗಂಡಸಿನ ಜನನಾಂಗ : 'ಪುರುಷವ್ಯಾಧಿ' ನೋಡಿ. ೧೩. [ಸಾಂಖ್ಯ] ಇಪ್ಪತ್ತೈದು ತತ್ತ್ವಗಳಲ್ಲಿ ಒಂದು : ಹೋದುತಿಹುದು ಪುರುಷತತ್ತ್ವದಿ ನಿಂದು ತೋರುತಲಿರ್ಪ ಭುವನವ . . . ಪಾಶುಪತರಾದಿಯಾರು (ಗಣಾ. ೬–೬೩) ; ಪಂಚವಿಂಶತಿತತ್ತ್ವಗಳು—೧ ಪ್ರಧಾನ, ೧ ಮಹತ್ತತ್ತ್ವ, ೧ ಅಹಂಕಾರತತ್ತ್ವ, ೫ ಭೂತತನ್ಮಾತ್ರಗಳು, ೫ ಮಹಾಭೂತಗಳು, ೧೧ ಇಂದ್ರಿಯಗಳು, ೧ ಪುರುಷ (ಅಭಿ.ಕ. ೩–೦೨೦ ಅರ್ಥ). ೧೪. [ವ್ಯಾಕ] ಪುರುಷವಾಚಕ ಲಿಂಗ ; ಪುಲ್ಲಿಂಗ: ಪುರುಷ ಪರಮಾದೊಡತ್ನಂ ದೊರೆಕೊಳ್ಗುಂ (ಶಬ್ದ. ೦೦೦). ೧೫. ಸರ್ವನಾಮಗಳಲ್ಲಿ ಒಂದು ಪ್ರಕಾರ ; ಪುರುಷವಾಚಕ ಸರ್ವನಾಮ : ಇದು ಉತ್ತಮ, ಮಧ್ಯಮ ಮತ್ತು ಪ್ರಥಮ ಎಂದು ಮೂರು ಬಗೆ. ನಾನು, ನಾವು—ಇವೆರಡು ಉತ್ತಮಪುರುಷ. ನೀನು, ನೀವು—ಇವೆರಡು ಮಧ್ಯಮಪುರುಷ. ಉಳಿದುವೆಲ್ಲ ಪ್ರಥಮಪುರುಷ : ಅವಱೊಳಗೆ ನಪುಂಸಕಲಿಂಗವಿಷಯಮಾದಲ್ಲಿ ಮೊದಲ ಪುರುಷಂಗುದುವೇಬುವೆ ದಲ್ ಸಮನಿಸುಗುಂ (ಶಾ.ವ್ಯಾ.ಕ. ೩೯೦) ; ಇಲ್ ತಾಂ ನೀನಾನೆಂಬರ್ಗಳೆಂಬಿಗಳ್ ಪ್ರಥಮ ಮಧ್ಯಮೋತ್ತಮ ಪುರುಷಂಗಳ್ (ಶಬ್ದ.೨೨೪). 'ಪುರುಷತ್ರಯ' ನೋಡಿ. [ಸಂ.]

**ಪುರುಷಕಾರ** (ನಾ). ೧. ಮನುಷ್ಯಪ್ರಯತ್ನ : ಪುರುಷನ ಸಾಹಸ : ಪುರುಷಕಾರದ ಪೆಂಪಂ ಬಿಂಬಿಸಿ ತರಿಸಿ ಮಹೀಶನನೆಂತಪ್ಪೊಡಂ (ಕುಮಾ. ೬–೩೪) ; ದೈವವಿಸೂತ್ರದಿಂ ಪುರುಷಕಾರಂ ಮಾಯದೇನಕ್ಕುಮೇ (ಜಗ. ೩–೦೯) ; ಪುರುಷಕಾರಮೆ ಬರಿಗೆ ಬಾಳಾಸಿರ್ (ಶ್ರೀರಾಮಾ. ೮೨–೦೦೪). ೨. ಪೌರುಷ ; ಪರಾಕ್ರಮ : ನಿಮ್ಮೊಳಗೆ ನೀಂ ಮಾಳಿಯಲ್ವೇಡ ನಿಮ್ಮ ಪುರುಷಕಾರವನೆ ಬಗೆದು ನೆಗಳ್ವುದು (ಕುಮಾ. ೦೨–೪೬ ೮); ಪುರುಷಾಕಾರವಿದಿಲ್ಲ ಹರಿ ನಿನ್ನೊಳ್ ಪುರುಷಕಾರವಂ ಕುಡಂ (ಗದಾಯು. ೬.೩೦) ; ಪುರುಷಕಾರದ ತಾಯ್ಗರು ಪಂಪಿನಾಗರಂ . . . ನೆಗಳ್ದ ಜಕ್ಕಣನೆಂದಡದಾರೊ ಪೋಲ್ವವರು (ಶಾ. IV, ೦೦-೩೫: 1121). [ಸಂ.]

**ಪುರುಷಗುಣ** (ನಾ). ಗಂಡುತನ ; ಗಂಡಸಿಗೆ ಯೋಗ್ಯವಾದ ಗುಣ ; ಪೌರುಷ : ಅಬಲೆಯರಳ್ಕಿರ್ದಗಳ್ ಪುರುಷಗುಣಮನಱದೆಱಗುಗುವೇ (ಅಜಿತ. ೦೨–೮೬) ; ಪುಟ್ಟಿದುದು ಪುಗನೂರೆಸಪುಟ್ಟಿದುದಪರಿಮಿತ ಪುರುಷಗುಣಗಣಮರ್ದಿಯೊಳ್ ಪುಟ್ಟಿದುದು ಜಿನಮತಂ ಗುಡಿಗಟ್ಟಿದುದಿಳೆ ಪುಟ್ಟಿ ನಾಗಮಯ್ಯನಜಯ್ಯಂ (ಶಾಂತಿ. ೦–೪೩) ; ಪುರುಷಗುಣಾಭರಣಂ ಕುಡಲಾರ್ಪ್ಪನಧಿಕವ × × × ಯೆನ್ನು ಪೊಗಳ್ದು ಧರೆ ಕಾಳಿಗನೆಸೆವನಾಪ್ತರ್ ನೊಳ್ಪ ಗುಣಮಂ (ಶಾಶ. XX, ೨೯–೦೯; 1034). [ಸಂ.]

**ಪುರುಷತನ** (ನಾ). ೧. ಗಂಡುತನ ; ಗಂಡಸುತನ ; ಪುರುಷತ್ವ : ಕೆಟ್ಟುದು ಪುರುಷತನವಿಂದ್ರಂಗಹಲ್ಯಾದೇವಿ ಶಿಲೆಯಾಗಿ ಧರಿಸಿದಳು ನಿಜತನುವನು (ಕೊರಟಾ. ೦–೦೨–೦೮). ೨. ಗಂಡಸಿನ ರೂಪ ; ಪುರುಷಾಕೃತಿ: ಹರನ ಹಣೆಗಣ್ಣಿನ ಮಹಾನಲನುರಿಯ ಹೊಯ್ಲಲಿ ಸಾಯಲಾಱದೆ ಪುರುಷತನವನು ಬಿಸುಟು ಮಂಡೋದರಿಯ ರೂಪತವ ಧರಿಸಿದನೊ ಕಂದರ್ಪನೆನೆ . . . ಮೆಱೆದಿರ್ದಳು ಕಾಂತೆ (ಕೊರಟಾ. ೫–೨–೬೩). ೩. ಮನುಷ್ಯತ್ವ : ಸಜ್ಜನಿಕೆ : ಪರಮಮಾಹೇಶ್ವರರು ನೀವೆಂದಾಂ ನಮಿಸೆ ಲೇಸಾಗಲೀ ಎಂದು ಹರಸಲೊಲ್ಲದೆ ಸುಮ್ಮನಿಹುದಿದು ಪುರುಷತನವೇ ಗುಣವೆ ಪೇಳ್ವೇ (ಚೆನ್ನ. ೯೬–೦೦). [ಪುರುಷ + — ತನ]

**ಪುರುಷತ್ರಯ** (ನಾ). ೧. ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳಂ : ದೇವ ಪುರುಷತ್ರಯಕಾರಪ್ರಧಾನ ಜಯ (ಜಗ. ೫–೦೦೩ ಕಗ೪). ೨. ಉತ್ತಮ, ಮಧ್ಯಮ ಮತ್ತು ಅಧಮ ಎಂಬ ಮೂರು ವರ್ಗಗಳ ಮನುಷ್ಯರು: ಕ್ಷಿತಿಯೊಳುತ್ತಮ ಮಧ್ಯಮಾಧಮಗತಿಯ ಪುರುಷತ್ರಯಪರಿಕಲ್ಪಿತಪನವರಾಯತವನಱವೆ ಭೂಪ (ಕುಮಾ.ಉ. ೩–೨೬). ೩. [ವ್ಯಾಕ] ಉತ್ತಮ, ಮಧ್ಯಮ ಮತ್ತು ಪ್ರಥಮ ಎಂಬ ಮೂರು ಬಗೆಯ ಪುರುಷವಾಚಕ ಸರ್ವನಾಮ : ಅವರಯುರನೆಪುಗಳಕ್ಕುಂ . . . ಆಖ್ಯಾತವರ್ಗದೊಳ್ ನೆಲಸಿ ನಿಂದ ಪುರುಷತ್ರಯಕಂ (ಶಬ್ದ. ೨೦೬). [ಸಂ.]

**ಪುರುಷತ್ವ** (ನಾ). ೧. ಗಂಡುತನ ; ಪುಂಭಾವ : ಭ್ರಮರಕೀಟನ್ಯಾಯ

ಥಾವದಿ ರಮಣಿಯೊಬ್ಬಳು ತನ್ನನಿಯುನು ಕ್ರಮದಿ ನೆನೆಯಲು ನೆನೆಯಲಾ ಪುರುಷತ್ವವಳವಟ್ಟು ಸಮರ್ದ ರತಿಕೇಳೀವಿನೋದದಿನವುದರ್ದಕ್ಕನ್ನಂತ ರಾಯತ್ತವುಪಹುದೊ ತನಗೆನುತ . . . ಇನಿಯನಂ ತಾ ನೆನೆಯಲುಂಜುತ ನೆನೆವುತಂಜುತಲಿನಿವಳಿದ್ದಳು (ಶಕ್ಷು. ೩೫-೨೫). ೨. ಶಕ್ತಿ ; ಪೌರುಷ : ಹಗಡೆಯ ಹತ್ತಿರ ಹೋರಾಡುವುದಕ್ಕೆ ನಿಂತ ಮೇಲೆ ಸಾವು ಗೆಲ್ಲಬೇಕು. ಇಲ್ಲವಾದರೆ ಪುರುಷತ್ವಕ್ಕೆ ಏನು ಬಂತು ಗೌರವ ? (ರ:ಶಹ. ೨೦೪).

[ಸಂ.]

**ಪುರುಷದೋಷ** (ನಾ). ಮನುಷ್ಯನಿಂದ ಆಗುವ ತಪ್ಪು ; ಮನುಷ್ಯನ ಕೈವಾಡದಿಂದ ಉಂಟಾಗುವ ದೋಷ : ವೇದವು ಅನಾದಿಕಾಲದಿಂದ ಏಕರೀತಿಯಾಗಿ ಇರುವುದರಿಂದ ಪುರುಷಸಂಬಂಧವಿಲ್ಲ, ಪುರುಷದೋಷವೂ ಇಲ್ಲ (ಹಂಜಾ. ೦೩೭). [ಸಂ.]

**ಪುರುಷದ್ವೇಷಿ** (ನಾ). ಗಂಡಸರನ್ನು ಕಂಡರಾಗದವಳು ; ಗಂಡಸರನ್ನು ದ್ವೇಷಿಸುವವಳು : ಬಾಲ್ಯದಲ್ಲಿ ನಡೆದ ಘಟನೆಗಳ ಪರಿಣಾಮವಾಗಿ ಅವಳು ಪುರುಷದ್ವೇಷಿಯಾಗಿಯೇ ಬೆಳೆದಳು (ರೂಂ). 'ಸ್ತ್ರೀದ್ವೇಷಿ' ಪರಾ. [ <ಸಂ. ಪುರುಷದ್ವೇಷಿನ್ ]

**ಪುರುಷದ್ವೇಷಿಣಿ** (ನಾ). = ಪುರುಷದ್ವೇಷಿ : ಸಂಧ್ಯಾನಗರಪುರಾಧಿಪತಿ ಸಿಂಹೋದರನೆಂಬೊನಾತನ ಮಗಳ್ ಓಡಿಜಿಬೆಂಬೆನಾಂ ಪುರುಷ ದ್ವೇಷಿಣಿಯೆಂ (ಬಿಹಂ ೦೦-೭ ವ). [ ಸಂ. ಪುರುಷದ್ವೇಷಿಣೀ ]

**ಪುರುಷಧರ್ಮ** (ನಾ). ೧. ಮನುಷ್ಯಧರ್ಮ : ಆಕೆಯ ಅಂತಸ್ತಿನ ಭವಿಷ್ಯವೆಲ್ಲ ನನ್ನ ಕೈಯೊಳಗಿರುವಾಗ್ಗೆ ನಾನೀಗ ಆಕೆಯನ್ನು ನಡುನೀರಲ್ಲಿ ಕೈಬಿಡುವುದೆ ? ಅದು ಪುರುಷಧರ್ಮವಲ್ಲ (ಪಶಕಾ. II, ೯೭೦). ೨. ಗಂಡನಾದವನು ಪಾಲಿಸಬೇಕಾದ ವ್ರತ ; ಪತಿಧರ್ಮ : ಪರಪರಿಗ್ರಹಿತೆಗಳಪಂ ತರೆ ಪುರುಷಂ ಪುರುಷಧರ್ಮಮಂಟಿಗ್ಗುಂ ಪಟಿಗುಂ ಧರೆ ದುರ್ಗತಿ ಸಮನಿಸುಗುಂ (ಹಂರಾಮ. ೯-೦೯೨). [ಸಂ.]

**ಪುರುಷನಾಡಿ** (ನಾ). ದೇಹದ ಬಲಭಾಗದಲ್ಲಿರುವ ನಾಡಿ : ಎಡಭಾಗದ ನಾಡಿಗಳು ಸ್ತ್ರೀನಾಡಿಗಳೆಂತಲೂ, ಬಲಭಾಗದ ನಾಡಿಗಳಿಗೆ ಪುರುಷನಾಡಿಗಳೆಂತಲೂ ಹೆಸರು (ಹಸಾರ. ೪-೩ ತಾತ್ಪರ್ಯ). [ಸಂ.]

**ಪುರುಷನಿಧಿ** (ನಾ). ಪರಾಕ್ರಮದ ನೆಲೆ : ಪೌರುಷದ ಆಕರ : ಪುರುಷನಿಧಿಯೆನಿಪನನ್ನಂ ಧರೆ ನಿಲ್ಲಿಸಲಿವಾ ಸ್ವಯಂಭುಸೋಮೇಶ್ವರದೇವರ ಮುಂನ್ದೆ ಭಕ್ತಿಯಿಂದಚ್ಛರಿಯಾಗಿರೆ ಸೂಳೆಕೇರಿಯುಂ ಮಾಡಿಸಿದ (ಶಾಶ. XX, ೭೪ ೨೭ ; 1112). [ಸಂ.]

**ಪುರುಷನಿರ್ವಾಣ** (ನಾ). ಗಂಡನ ಸಾವು ; ಪತಿಯ ಮರಣ : ಮುನ್ನಿನ ಪುರುಷವ್ರತಿಯುತು ಒಲಿಸಿದ ಆಹಾತವ ಪರಿಪರಿಯಲಿ ಬಣ್ಣಿಸಲು ಬಹುದಲ್ಲದೆ ಪುರುಷನಿರ್ವಾಣಾಕ್ಕರಿವಗ್ನಿಯು ಬಂದು ಹೊಕ್ಕು ತೋಱಲು ದಾರದು (ಶಕವ. ೬೭೯). [ಸಂ.]

**ಪುರುಷಪಕ್ಷಿಗ್ರಹ** (ನಾ). ಬಾಲಗ್ರಹದಲ್ಲಿಯ ನಾಲ್ಕು ಬಗೆಯ ಪಕ್ಷಿ ಗ್ರಹದೋಷಗಳಲ್ಲಿ ಒಂದು : ಕಣ್ಣುಗಳು ಗುಳಿ ಬೀಳುವವು. ಮೈ ತಾಜಾಪದು. ತಾಪ ಉಂಟಾಗಿಹದು. ಹಸುರಾಗಿ ಉಚ್ಚೆ ಪದು. ಬಾಯಾಜಿಕ ಉಂಟಾಗಿಹುದು. ನಾಲಿಗೆ ನೀಡಿಕೊಂಬುದು . . . ಇದು ಪುರುಷಪಕ್ಷಿಗ್ರಹಶಂಕೆ ಎಂದಱೆವುದು (ವೈಕ್ಯಸಾ. II, ೨೩). 'ಪಕ್ಷಿಗ್ರಹ' ಪರಾ.

[ಸಂ.]

**ಪುರುಷಪ್ರಮಾಣ** (ನಾ). ಒಂದಾಳು ಎತ್ತರದಷ್ಟು ಅಳತೆ ; ಸುಮಾರು ಆರುಅಡಿ: ಪುರುಷಪ್ರಮಾಣವೆಂತೆನೆ ಪುರುಷಂ ತನ್ನೆರಡು ಕೆಯ್ಯ ಮೇಲೆ ಕೈತ್ತಲ್ ಪುರುಷಪ್ರಮಾಣಮೆನಿಸುಗು (ವ್ಯವಹಾ. ಅಷ್ಟಾಂಗ. ೯) ; ಮಂದಿರದ ಮಧ್ಯದಲ್ಲಿ ಪುರುಷಪ್ರಮಾಣಕ್ಕಿಂತಲೂ ದೊಡ್ಡದಾದೊಂದು ಕರುಳ ಕಾಳಿಕಾಮೂರ್ತಿಯು ಪ್ರತಿಷ್ಠಿತವಾಗಿದ್ದಿತು (ಕಹಾಕಂ. ೩೦). [ಸಂ.]

**ಪುರುಷಪ್ರಯತ್ನ** (ನಾ). ಮನುಷ್ಯನ ಯತ್ನ.–ಸಾಹಸ ; ಪೌರುಷ : ಶತ್ರುಜಯಕ್ಕೆ ಪುರುಷಪ್ರಯತ್ನವೇ ಕಾರಣವಾಗಿರುವುದು (ಕೈವಾಸ. ೨೭); ಪುರುಷಪ್ರಯತ್ನಮಂ ಬರ್ದಕುಪಾಸೆಯ ಕೂಡೆ ನೀಗಿ, ಕೈಮುಗಿವೆನೊ ವ್ಯೋಮಕ್ಕೆ ದೇವರಂ ಬೇಡಿ (ಶ್ರೀರಾಮ. ೭೭-೬೨೩). [ಸಂ.]

**ಪುರುಷಬ್ರತ** (ನಾ). ೧. ಬ್ರಹ್ಮಚರ್ಯವ್ರತ : ರಾವಣನು ಕೊಂದು ಜಯಶ್ರೀವಧುವಂ ತಾಳ್ದಿ ಮುಯ್ಬನೊಳ್ ಮರಸೀತಾದೇವತೆಯಂ ತರ್ಪನ್ನೆಗಮೋವದೆ ಪುರುಷಬ್ರತೋಚಿತಂ ವಿರರಸಂ (ಕರಿರಾ. ೩-೦೯೦). ೨. ಪತಿವ್ರತೆಯ ಆಚಾರ ; ಪತಿವ್ರತಾಧರ್ಮ (?): ಆತನ ಸತಿ ದೇವಿಯಕ್ಕಂ ಪುರುಷಬ್ರತಮಂ ಕೈಕೊಂಡು ಮಂಡಲಿ ಸಾಸಿರದ ಎಡತೊಱೆನಾಡ ಉತ್ತರದ ಗ್ರಾಮವಲು ಸುರಲೋಕಪ್ರಾಪ್ತೆಯಾದಳ್ (ಎಕ. VII, ಶಿವಮೊ. ೩೨-೮ ; 1134 ?). 'ಪುರುಷವ್ರತಿ' ಪರಾ. [ <ಸಂ. ಪುರುಷವ್ರತ]

**ಪುರುಷಭಾಷೆ** (ನಾ). ಪೌರುಷದ ವಾಣಿ; ಪುರುಷಪ್ರಯತ್ನದ ಮಾತು: ಸತ್ಯದನ್ನವನೆ ಉಂಡು ಬಾಳಿ ಎನ್ನುವುದು ಪುರುಷಭಾಷೆ (ಸೂರ್ಯಕಾ. ೦೬-೦೫). [ಸಂ. ಪುರುಷಭಾಷಾ]

**ಪುರುಷಭಿಕ್ಷೆ** (ನಾ) ಗಂಡನನ್ನು ಉಳಿಸಿ ಕೊಡುವುದು ; ಪತಿಭಿಕ್ಷೆ : ಪುರುಷಕಾರದ ಪೆಂಪು ಚಿಂತಿಸಿ ತರಿಸಿ ಮಹೀಶನನೆಂತಪ್ಪೊಡಮೆನಗೆ ಪುರುಷಭಿಕ್ಷಮನಿಕ್ಕಿಂ (ಹಂಶಶಾ. ೭-೩೪); ವನದೇವಿಯರಿರಾ ನೆರೆದೆಲ್ಲರು ಮೆನಗೆ ಪುರುಷಭಿಕ್ಷಮನಿಕ್ಕಿಂ (ಕಾದಂಬೂ. ೯೨೫); ಮುಳಿಸಂ ಬಿಡಿಕ್ಕಿಯುಮಿಮಾ ಫಣಿಯಂ ಕೊಂದಿಕ್ಕದಿರಿಕ್ಕಮಗೆ ಪುರುಷಭಿಕ್ಷಮಂ (ಕನಪ. ೩-೦೦೦). [ಸಂ. ಪುರುಷಭಿಕ್ಷಾ]

**ಪುರುಷಭೈಕ್ಷ** (ನಾ). = ಪುರುಷಭಿಕ್ಷ : ಎನಗಬ್ಬಿಕೆಯಿಂ ಪುರುಷಭೈಕ್ಷಮನಿಕ್ಕು (ಅರ್ದನೇ. ೦-೯೦). [ಸಂ.]

**ಪುರುಷಭೈಕ್ಷೆ** (ನಾ). = ಪುರುಷಭಿಕ್ಷ: ಪ್ರಿಯಮಿತ್ರಯಕಳಂಕಚಾರಸಾರನಪ್ಪ ಮೇಘರಥನರೇಂದ್ರಂಗೆ . . . ನಿಮ್ಮಡಿಗಂ ಕೈಯನೊಡ್ಡಿ ಪುರುಷ ಭೈಕ್ಷೆಯೆಂ ಬೇಡಿ ದೀಕ್ಷೆಯುಮಂ ನಿಸರ್ಗಸ್ನೇಹಿತೆಯಾದ ಕಾರಣಮುಮನಿದ ನಱಿಯೆ ಬೆಸಸುವುದೆನೆ (ಶಾಂತಿಪು. ೯-೬೩ ವ). [ಸಂ. ಪುರುಷಭೈಕ್ಷ]

**ಪುರುಷಮಿಗ** (ನಾ). = ಪುರುಷಾಮೃಗ : ಕಳಕಳಿಸಿ ನಗುತೆ ಕುಕ್ಕಿಲಿಲೆಯೊಂದುಯಿರದೆ ಕೂಗುತ್ತಡವಿಶಬರಿಯರು ಪುರುಷ ಮಿಗವಾರೆಯಟ್ಟಿ ಸರಳ್ಗರೆವ ಮಾಳ್ಕೆಯಿಂ ತರುಣಿಯರು ತವಕದಿಂ ನೀರ್ಗರೆವುತೆ ಬರುತಿರಲು (ನವಮೋ. ೦೦-೬೨). [ <ಸಂ. ಪುರುಷಮೃಗ]

**ಪುರುಷಮೃಗ** (ನಾ). ೧. ಒಂದು ಬಗೆಯ ಜಿಂಕೆ. ೨. ಗಂಡು ಜಿಂಕೆ. ೩. = ಪುರುಷಾಮೃಗ : ಪುರುಷಮೃಗಂಗಳಲ್ಲಿವಿವರಪ್ಪೊಡೆ ದಿವ್ಯ ಮುನೀಂದ್ರರೆಚ್ಚೊಡರಿ ಶರವಿದು ತಾಗಲಣ್ಮದಿವರಂ (ಅರ್ಜನೇ. ೩-೬೮); ನರಿ ಶಶಕಂ ವೃಕಂ . . . ಸೈರಿಭಂ ಪುರುಷಮೃಗಂ ಗಜು ಶರಭ ಸಿಂಹದಿ ನೊಪ್ಪುವುದಲ್ಲಿ ಕಾನನಂ (ಮಲ್ಲಿಕಾ. ೩-೦೩೯); ಅಲ್ಲಿ ಕಸ್ತೂರಿಮೃಗ ಚಮರೀ ಮೃಗ ಪುರುಷಮೃಗ ಸುವರ್ಣಮೃಗ . . . ಸಿದ್ಧಿಮೃಗಾದಿ ದೇವಾರ್ಹ ರಾಜಾರ್ಹ ಶಾಸ್ತ್ರೀಯಸಾಧುಪವಿತ್ರಮೃಗಜಾತಿಗಳಂ (ಶಿವೇಕ. ೨೦೨).

[ಸಂ.]

**ಪುರುಷಮೇಧ** (ನಾ). ಮನುಷ್ಯನನ್ನು ಬಲಿ ಕೊಡುವ ಯಜ್ಞ ; ನರಬಲಿಯನ್ನು ಕೊಡುವ ಯಾಗ. [ಸಂ.]

**ಪುರುಷಯುಕ್ತ** (ನಾ). [ಕಾಮಶಾ] ಒಂದು ಬಗೆಯ ರತಿಬಂಧ; ಸ್ತ್ರೀಯು ಪುಂಭಾವದಿಂದ ರಮಿಸುವಿಕೆ ; ಪುರುಷಾಯಿತ : ನಿದ್ದೆಗೈವಳು ಕಾನು ಅವನ ನಿದ್ರೆಗೈಯುಲೀಸಳು. ಕಾಮನಂಗೈವಳು ರೇತಃಪತನವಂ ನಿಲ್ಲಿಸಲರಿಯದೆ ಕೋಪವಂ ಸೈರಿಸಲಾರದೆ ಅಂತರವಂ ಮಾಡಿದರ್ನಾದೊಡೆ ಅವನ ಮೇಲೆ ರಮಿಸುವಳು. ಇದು

ಪುರುಷಯುಕ್ತಂ (ಕಾವ್ಯಾ. ೩೩೮). [ಸಂ.]

**ಪುರುಷಯುಗಕರಣ** (ನಾ). [ಕಾಮಶಾ] ಒಂದು ಬಗೆಯ ರತಿಬಂಧ : ಓರ್ವಂ ಮೆಲ್ಲನೆ ಮಲಗಿರೆ ಆತನ ಮೇಲೇರಿ ರವಿಸುತ ನಿರ್ದಿರ್ದ ಮತ್ತೊರ್ವ ಪುರುಷನ ಲಿಂಗಮಂ ತನ್ನ ಬಾಯೊಳಗಿಕ್ಕಿ ಮುಖಸುರತಗೈಯುತ್ತಾಯಿರೆ ಪುರುಷಯುಗಕರಣಂ (ಕಾವ್ಯಾ. ೨೩೭). [ಸಂ.]

**ಪುರುಷರತುನ** (ನಾ). = ಪುರುಷರತ್ನ ೧ : ಪುರುಷರತುನಂ ಪುರಾತನ ಚರಿತಂ ಜನಚರಣಕಮಲಭೃಂಗಂ ಸತ್ಕಾಭರಣಂ ದಯಾಂಬುನಿಧಿ (ರಕರಾಜು. ೯-೨೬೯). [< ಸಂ. ಪುರುಷರತ್ನ]

**ಪುರುಷರತ್ನ** (ನಾ). ೧. ಶ್ರೇಷ್ಠನಾದ ಮನುಷ್ಯ ; ನರೋತ್ತಮ ; ಪುರುಷಾಗ್ರಣಿ : ಸ್ತ್ರೀರತ್ನವಿಗೀಗಳೀಕೆಯೆ ಧಾರಿಣಿಯೊಳ್ ಪುರುಷರತ್ನವಿನೆ ಸದ್ವಿಶಾಕಾರರ್ (ಅಂಕಿ. ೯-೨೯); ಪುರುಷರತ್ನಕ್ಕೆ ಸ್ತ್ರೀರತ್ನಮಲ್ಲದೆ ಸಾಮಾನ್ಯಮಣಿಯುಂ ಪಸುರ್ವಣಿಯುಂ ದೊರೆಯಲ್ಲಂ (ಶಾಂತಿಪು. ೯-೯೯ ಶ). ೨. ಒಂದು ಬಗೆಯ ಸಸ್ಯ : (ಕೃಷಿಗಿ. ೯೬-೯೦೬). [ಸಂ.]

**ಪುರುಷರಾಗ** (ನಾ). [ಸಂಗೀತ] ರಾಗಗಳಲ್ಲಿ ಒಂದು ವರ್ಗ ; ☞ ಭೂಪಾಲಿ, ಭೈರವಿ, ಶ್ರೀರಾಗ, ಫಲಮಂಜರಿ, ವಸಂತ, ಮಾಳವ, ಬಂಗಾಲ ಮತ್ತು ನಾಟ ಎಂಬುವು ಎಂಟು ಪುರುಷರಾಗಗಳು : ಸ್ತ್ರೀರಾಗಚತುರ್ವಿಂಶತಿಸೌರಾಷ್ಟ್ರಗಭೀರಪುರುಷರಾಗಂಗಳವಂ ಮಾರಿಜ ಮುಖಿಯರ್ ಪಾಡಿದರ್ (ಅಂಕ್ಯಾ. ೨-೯೩). [ಸಂ.]

**ಪುರುಷರಾಶಿ** (ನಾ). [ಜ್ಯೋತಿ] ಜ್ಯೋತಿಶ್ಶಾಸ್ತ್ರದಲ್ಲಿರುವ ಹನ್ನೆರಡು ರಾಶಿಗಳಲ್ಲಿ ಆರು ರಾಶಿಗಳ ಒಂದು ವಿಭಾಗ; ☞ ಜ್ಯೋತಿಶ್ಶಾಸ್ತ್ರದಲ್ಲಿ ಹನ್ನೆರಡುರಾಶಿಗಳನ್ನು ಪುರುಷರಾಶಿ ಮತ್ತು ಸ್ತ್ರೀರಾಶಿ ಎಂದು ಎರಡು ವಿಭಾಗ ಮಾಡುತ್ತಾರೆ. ಮೇಷ, ಮಿಥುನ, ಸಿಂಹ, ತುಲಾ, ಧನುಸ್ಸು, ಕುಂಭ ಈ ಆರೂ ಪುರುಷರಾಶಿಗಳು. ವೃಷಭ ಕರ್ಕಾಟಕ, ಕನ್ಯಾ, ವೃಶ್ಚಿಕ, ಮಕರ, ಮೀನ ಈ ಆರೂ ಸ್ತ್ರೀರಾಶಿಗಳು. ಜಾತಕನಿಗೆ ಪುರುಷರಾಶಿಗಳು ಕ್ರೂರವೆಂದೂ ಸ್ತ್ರೀರಾಶಿಗಳು ಸೌಮ್ಯವೆಂದೂ ನಂಬಲಾಗುತ್ತದೆ : ಹರಿ ಮಿಥುನ ತುಲಾಜ ಧನುರ್ಧರ ಘಟಮಿವು ಪುರುಷರಾಶಿಗಳ್ ಕ್ರೂರಂಗಳ್ (ಜಾತಕ. ೦-೨೨). [ಸಂ.]

**ಪುರುಷರೂಪು** (ನಾ). ಪುರುಷಾಕಾರ; ಪುರುಷಾಕೃತಿ : ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ (ಪಕರಾ. ೯.೦೦). [ಪುರುಷ + ರೂಪು]

**ಪುರುಷವಶ್ಯ** (ನಾ). ಗಂಡಸನ್ನು ವಶಮಾಡಿಕೊಳ್ಳುವುದು ; ಪುರುಷ ವಶೀಕರಣ : ವ್ಯತ್ರಕುಚಿ ಮುಟ್ಟಿವೆಯ [ಶಾಶಾಂ. ಲಿನ] ನೇತ್ರರಿಂ ಭಾವನೆಯಸಿತ್ತ ಗೋರೋಚನವನದ: ತೇದು ಚಿತ್ರಕ್ಕೆ ಬರ್ಪನಂ ಚಿತ್ರದೊಳ್ ನಿಲಿಸಿ ನೆನೆವುತ್ತಮಾ ತಿಲಕಮಿಡೆ ಪುರುಷವಶ್ಯಂ (ಶಿಸವ. ೦೩-೬೩); ಕಿಜು ನೆಲ್ಲಿಯ ಅರ್ಚನೆ ಮಾಡಿ ತಂದು ಚೂರ್ಣಿಸಿ . . . ಅದನ್ನು ಬೆಣ್ಣೆಯಲ್ಲಿ ಕಲಸಿ ತುಪ್ಪವ ಕಾಸಿ ಊಟದಲ್ಲಿ ಆ ತುಪ್ಪವನಿಕ್ಕಲು ಹೆಂಡತಿಯನೊಲ್ಲದ ಪುರುಷನೊಲಿವನು. ಪುರುಷವಶ್ಯ ತಪ್ಪದು (ಶಿವ್ಯಶಿ. ೨೦೦). [ಸಂ.]

**ಪುರುಷವಾಚಕ** (ನಾ). ೧. [ವ್ಯಾಕ] ಪುಲ್ಲಿಂಗಸೂಚಕವಾದ ಪದ : ಸಮುಚ್ಚಯದಿಂ ಅವತ್ಯ, ಕಳತ್ರ—ಎಂಬ ಶಬ್ದಂಗಳ್ ಸ್ತ್ರೀವಾಚಕಮಾಗಿಯುಂ, ಜನಶಬ್ದ ಲೋಕಶಬ್ದಂಗಳ್ ಪುರುಷವಾಚಕಂಗಳಾಗಿಯುಂ ನಪುಂಸಕಂ (ಶಬ್ದಾನು. ೦೩೩ ಕ್ರಯೋ). ೨. ಉತ್ತಮ, ಮಧ್ಯಮ ಮತ್ತು ಪ್ರಥಮ ಎಂಬ ಮೂರು ಸರ್ವನಾಮಗಳಿಗೆ ಅನುಕ್ರಮವಾಗಿ ಸೇರುವ ಆಖ್ಯಾತಪ್ರತ್ಯಯಗಳು : ಪುರುಷವಾಚಕಪ್ರತ್ಯಯಗಳು ವಚನವನ್ನೂ (ಪ್ರಥಮಪುರುಷದಲ್ಲಿ) ಲಿಂಗವನ್ನೂ ತಿಳಿಸುತ್ತವೆ (ಕ್ನಿಶಿ. ೯೩). ೩. ಉತ್ತಮ, ಮಧ್ಯಮ ಹಾಗೂ ಪ್ರಥಮಪುರುಷದ ಸರ್ವನಾಮ : ಈ ಮೂರು ಬಗೆಯ ಸರ್ವನಾಮಗಳನ್ನೂ ಒಟ್ಟಿಗೆ ಪುರುಷವಾಚಕಸರ್ವನಾಮಗಳೆಂದು ಕರೆಯುತ್ತಾರೆ (ಮಕ್ಕಪು. ೩೦). [ಸಂ.]

**ಪುರುಷವೇದ** (ನಾ). [ಜೈನ] ಮೋಹನೀಯಕರ್ಮದ ಇಪ್ಪತ್ತೆಂಟು ಪ್ರಕಾರಗಳಲ್ಲಿ ಒಂದು ; ಗಂಡಿಗೆ ಹೆಣ್ಣಿನ ಮೋಹವನ್ನುಂಟು ಮಾಡುವ ಕರ್ಮ : ಪುರುಷವೇದವುಂ ಸಂಜ್ವಳನಚತುಃಕ್ರೋಧಮಾನಮಾಯಾಲೋಭಂಗಳನೊರ್ವೆಯೆ ನಿರ್ಮೂಳಿಸಿ ತಳೆದನಜೇಯಂ ಜಯಾಂಗನಾಲಿಂಗನಮಂ (ಚಂಪ್ರಪು. ೦೯-೬೩); ಸ್ತ್ರೀವೇದಂ ಪುರುಷಾಭಿಲಾಷೆಯುಂ ಮಾಳ್ಪುದು ಪುರುಷವೇದಂ ಸ್ತ್ರೀಯಾಭಿಲಾಷೆಯುಂ ಮಾಳ್ಪುದು ನಪುಂಸಕವೇದಮುಭಯಾಭಿಲಾಷೆಯುಂ ಮಾಳ್ಪುದು (ಧರ್ಮಾ. ೧೨). [ಸಂ.]

**ಪುರುಷವ್ಯಾಧಿ** (ನಾ). ಗಂಡಸರಿಗೆ ತಗಲುವ ಗುಹ್ಯರೋಗ,—ಲೈಂಗಿಕ ರೋಗ : ಪುರುಷವ್ಯಾಧಿಗೆ . . . ರಸ, ಹೊನ್ನೇತೊಳ್ಳು, ತುತ್ತು, ಪಟಿಕ ಮೂಱು ವರಹ ತೂಕ, ಮುಸ್ತಕಿ ಐದು ವರಹ ತೂಕ, ಧೂಪದ ಹಳುಕು ಮೂಱು ವರಹ ತೂಕ . . . ಇಷ್ಟನ್ನೂ ಒಳ್ಳೆಎಣ್ಣೆಯಲ್ಲಿ ಮರ್ದಿಸಿ, ಅಲ್ಲ, ಬಿಸಿನೀರ ಬಿಟ್ಟು ಕೊಂಬುದು. ಇದು ಪುರುಷವ್ಯಾಧಿಗೆ ಸಿದ್ಧ ಪ್ರಯೋಗ (ಚಿಕ್ಕಿ. ೬೦). [ಸಂ.]

**ಪುರುಷವ್ರತ** (ನಾ). ೧. ಬ್ರಹ್ಮಚರ್ಯ : ಅಂಗಜೋತ್ಪತ್ತಿಸುಖಕ್ಕೆ ಸೋಲಲಟಾಗೆಂ ಪುರುಷವ್ರತಂ (ಶಂಕಬಾ. ೦ ೬೩); ಬಿಸುಡೆಂ ಮದೀಯ ಪುರುಷವ್ರತಮೊಂದುಮಂ (ಶಂಕಬಾ. ೦-೯೩). ೨. ಇಂದ್ರಿಯನಿಗ್ರಹ : ಪುರುಷವ್ರತಕ್ಕೆ ಭಂಗಂ ಪರವಧುವಂ ನೋಡಿದೆಂದುಮಳಿಪಿಂ ಪರಸುಂದರಿ ನೀನೆಂಬುದನೀ ಕಾತರತೆಯೆ ಪೇಟ್ದಪುದು ಪೋಗು ಪಾತಕಿ ಬೇಗಂ (ಅನಾಥ. ೦೯-೧೦೬). ೩. ಪಾತಿವ್ರತ್ಯ ; ಪತಿನಿಷ್ಠೆ : ಗಿರಿಜೆಯ ಪಾದಪದ್ಮವಿಗಳ ಜ್ಞಳದಿಂದಮ ಕೊರ್ಬಿ ನೀತಿ ವಿಸ್ತರಿಸಿರೆ ಸೋವುವೆತ್ತು ಪುರುಷವ್ರತದಿಂ ದಳಮೇಱ ಭಾಗ್ಯಮಂಜರಿಗಳನಾನ್ನು ರಂಜಿಸುವ ಶಾಂತಲದೇವಿಯ ರೂಪು ಕಲ್ಪವಲ್ಲರಿಯಡರ್ದತ್ತು ವಿಷ್ಣುನೃಪನಂಬ ಸಮುನ್ನತಕಲ್ಪವೃಕ್ಷಮಂ (ಎಕ. V. ಹಾಸನ. ೦೦೬-೩೦ : 1123). [ಸಂ.]

**ಪುರುಷವ್ರತಿ** (ನಾ). ಪತಿವ್ರತಾಧರ್ಮವನ್ನು ಪಾಲಿಸುವವಳು ; ಪತಿವ್ರತೆ : ಮುನ್ನಿನ ಪುರುಷವ್ರತಿಯರು ಒಲಿಸಿದ ಆಯತವ ಪರಿಪರಿಯಲಿ ಬಣ್ಣಿಸಲು ಒಹುದಲ್ಲದೆ ಪುರುಷನಿರ್ವಾಣಕ್ಕಗ್ನಿಯ ಬಂದು ಹೊಕ್ಕು ತೋಱಲು ಬಾರದು . . . ಇಂತೀ ಅರೆಬರುದಿನ ಬಂಟರು ಪುರುಷವ್ರತಿಯರು ಪುರಾತನರು ಬಱಿಯ ಮಾತನಾಡಿ ಹೊಱಗೆ ಮೆಱೆವರಲ್ಲ (ಬಸವ. ೬೭೬). [< ಪುರುಷವ್ರತ]

**ಪುರುಷಶೀಲೆ** (ನಾ). ಗಂಡಸಿನ ಸ್ವಭಾವವುಳ್ಳವಳು ; ಗಂಡುಬೀರಿ : ಜಲಜಸಖಸೂನು ಮಧ್ಯಮಬಲನೆನೆ ಬಲರಹಿತರೆನೆ ಸಿತೇಂದುಜಶಶಿಗಳ್ ಬಲಯುಕ್ತರನ್ಯರೆನೆ ವಿಷಮಲಗ್ನವೆನೆ ವನಿತೆ ಪುರುಷಶೀಲೆಯೆನಿಕ್ಕುಂ (ಜಾತಕ. ೨೨-೨೨). [ಸಂ. ಪುರುಷಶೀಲಾ]

**ಪುರುಷಸೂಕ್ತ** (ನಾ). ಪರಮಾತ್ಮನ ವಿರಾಟ್‌ಸ್ವರೂಪವನ್ನು ವಿವರಿಸುವ ಒಂದು ವೇದಭಾಗ : ಸಾಹಸ್ರಶೀರ್ಷಾ ಪುರುಷನೆಂದೇ ಪುರುಷಸೂಕ್ತಂ (ಗಗಹಾ. ೦೭-೨೦); 'ಪುರುಷಸೂಕ್ತ'ದಲ್ಲಿ ದೇವತಾಭಾವನೆ ಇನ್ನೊಂದು ರೂಪದಲ್ಲಿದೆ. ವಿಶ್ವವನ್ನೇ ಒಬ್ಬ ಪುರುಷನೆಂದು ಭಾವಿಸಿ, ಅವನನ್ನೇ ದೇವತೆಗಳು ಪಶುವನ್ನಾಗಿ ಮಾಡಿ ಒಂದು ಮಹಾಯಜ್ಞವನ್ನು ನಡೆಸಿದ್ದರಿಂದ ಈ ವಿಶ್ವವು ಸೃಷ್ಟಿಯಾಯಿತು ಎಂಬ ಒಂದು ಅದ್ಭುತಕಲ್ಪನೆ ಇದೆ (ಶಾಕರ. ೨೬). [ಸಂ.]

**ಪುರುಷಾಂಗ** (ನಾ). ಪೌರುಷ ; ಪುರುಷತನ : ಹೆಂಗುಸುಗಳಾವ್ ಬಲ್ಲೆವೇ ಪುರುಷಾಂಗ ನಿಮ್ಮದು ಪೌರುಷಾಂಗದ ತುಂಗಬಲರಿದೆ ನಿಮ್ಮ ಬಳಿಯಲಿ ಲಕ್ಕಸಂಖ್ಯೆಯಲಿ (ತೊರವೆ. ೯-೦೦-೨೬). [ಸಂ.]

**ಪುರುಷಾಂತರ** (ನಾ). ೧. ಇನ್ನೊಬ್ಬ ಗಂಡಸು ; ಪರಪುರುಷ : ಪುರುಷಾಂತರಕ್ಕೆಳಸಿ ಪುಷ್ಪಶರತಾಪದಿಂ ಕರಗಿ ಕಾತರಿಸಿ ಮೆಲ್ಲನೆ ದೂತಿಯೊರ್ಪಳಂ

ಕರೆದೊಡಂಬಡಿಸಿ . . . ಮದನಕೇಳಿಗೆ ಸಂದು ಮರಳಿ ಮಾನಿನಿಯರಂತಿರ ಬಲ್ಲರವರೆ ಜಾರೆಯರ್ (ಕೃಷ್ಣಕಾ. ೩-೩೯). ೨. (ಯೋಗ್ಯ ಮತ್ತು ಅಯೋಗ್ಯರಾದ) ಪುರುಷರ ನಡುವಣ ಭೇದ,—ತಾರತಮ್ಯ : ಅಗ್ಗಳದ ವಿವೇಕವಿಲ್ಲ ನಿನಗೆತ್ತಣಾವಾ ಪುರುಷಾಂತರಂಗಳಾ (ಗದಾಯು. ೯-೩); ಮರುಳೆ ಮದಾಂಧತೆಯೊಳುಲಿವೆ ಪುರುಷಾಂತರಮನರಿಯದೆಯ್ದಿದ ಧರಣಿಪನ ನೆರೆಯದಾಡಳ್ ತರುಣಿಯೆಂದೆನುತ್ತೆ ನಿನ್ನಂ ನಗರೇ ಸರಿಯ ಸೂಳೆಯರಲ್ಲರ್ (ಶಬೂಕ. ೩-೭೯). [ಸಂ.]

**ಪುರುಷಾಂತರಸಂಧಿ** (ನಾ). [ರಾಜನೀ] ಸಂಪ್ರದಾನ, ಕಪಾಲ, ಉಪಹಾಸನ, ಸಂತಾನ, ಸಂಗತ, ಉಪನ್ಯಾಸ, ಪ್ರತೀಕಾರ, ಸಂಯೋಗ, ಪುರುಷಾಂತರ, ಅದೃಷ್ಟಪುರುಷ, ಅದುಷ್ಟ, ಆತ್ಮಾಮಿಷ, ಉಪಗ್ರಹ, ಪರಿಕ್ರಮ, ಅರಿಪರದೂಷಣ ಮತ್ತು ಸ್ಕಂಧೋಪನಯ ಎಂಬ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು : ನಿನ್ನ ಸೇನಾನಾಯಕರಿಂದೆನ್ನ ಕಾರ್ಯಮಂ ಸಾಧಿಸಿದೊಡೆ ನುಡಿವ ಪಣಮಂ ಕುಡುವೆನೆಂಬುದು ಪುರುಷಾಂತರಸಂಧಿಯೆಂಬುದಕ್ಕುಂ ( ಪಂಚತಂ. ೨೨-೦೩). [ಸಂ.]

**ಪುರುಷಾಕಾರ** (ನಾ). ಗಂಡಸಿನ ರೂಪ; ಗಂಡುರೂಪು : ಪುರುಷಾಕಾರವಾದಿರ್ಪ್ಪ ಹರಿ ನಿನ್ನೊಳ್ ಪುರುಷಾಕಾರವಂ ಕಾಣೆಂ (ಗದಾಯು. ೭-೩೦); ನಿನ್ನ ಪುರುಷಾಕಾರಮುಂ ಮನೋಹರಾಕಾರಮುಮ ವಾರ್ಯವೀರ್ಯಮುಮಿನ್ನವರಂ ಶ್ರವಣಭೂಷಣಮಾಗಿರ್ದುವೀಗಳಿವುಗೆ ಪ್ರತ್ಯಕ್ಷಮಾದುವು ( ಪಂಚಾಖ್ಯಾ. ೦೨-೫೩ ವ) : ಪುರುಷಾಕಾರದೊಳ್ ಪುರುಷಕಾರದೊಳಾರುಂ ನೆಗಳ್ದೀಶ್ವರಾರ್ಯ್ಯನಂ ಪೋಲ್ವರೇ (ಎಕ. VII, ಶಿಕಾ. ೦೩೨-೪೫ ; 1104). [ಸಂ.]

**ಪುರುಷಾಕೃತಿ** (ನಾ). ೧. = ಪುರುಷಾಕಾರ: ತಮ್ಮ ದಿವ್ಯಾಯುಧಂಗಳನೆಲ್ಲಮಂ...ಶಮೀವೃಕ್ಷದ ಮೇಲೆ ಪುರುಷಾಕೃತಿಯಾಗಿ ನೇಲ್ವಿಟ್ಟು (ಪಂಪಭಾ. ೮-೫೨ ವ): ಪೊಂಪುಟಪೋಯ್ತು ದೀಪ್ತತಪಮೆಂಬಿನಮರ್ಕಕರಂಗಳತ್ತಮಿತ್ತುಂ ಪುದಿದುಷ್ಣರಶ್ಮಿ ಪುರುಷಾಕೃತಿಯಂತಿರೆ ನಿತ್ಯಯೋಗನಿಷ್ಠಂಪಂ (ಶಾಂತಿಕ. ೯-೦೦೬) ; ಪುರುಷಾಕೃತಿಯಿಂ ತಾನವತರಿಸಿದ ಶಶಿಯೆಂದು ಬಂದು ಬಳಸಿದ ತಾರಾಪರಿಕರಮೆನೆ ಕಣ್ಗೆಸೆದುದು ಪಿರಿದುಂ ಬಾಲಕನ ಮೌಕ್ತಿಕದ ಕಟಿಸೂತ್ರಂ (ಶಾಂತೀಶ್ವ. ೯-೯೬). ೨. ಗಂಡಸಿನಂತೆ ಆಕಾರವುಳ್ಳವಳು : ಪುರುಷಾಬೊಲೀಕೆ ಕರಂ ಪುರುಷಾಕೃತಿಯೆಂಬುದಿಂತು ನಾನಾಲಿಂಗಂ (ಕಬಿರಾ. ೩-೮೯). [ ಸಂ. ]

**ಪುರುಷಾಣು** (ನಾ). ವೀರ್ಯದ ಅಣು ; ಶುಕ್ಲಾಣು : ತಾಯಿ ಗರ್ಭ ಧರಿಸಿದಾಗ ತಾಯಿಯ ಗರ್ಭಕೋಶದಲ್ಲಿರುವ ತತ್ತಿಯು ತಂದೆಯಿಂದ ಬಂದು ಸೇರಿದ ಪುರುಷಾಣುವಿನೊಡನೆ ಸಂಯೋಗ ಹೊಂದುವುದು (ಗೃಹಶಾ. ೦೧೭) ; ಪುರುಷಾಣುವಿನ ಸಂಬಂಧವಿಲ್ಲದೆಯೆ...ಸಂತಾನೋತ್ಪತ್ತಿಯನ್ನು ಮಾಡುವುದು ಎಷ್ಟೋ ಕೀಟಗಳಲ್ಲಿ ಕಂಡುಬರುತ್ತದೆ (ಕೀಟಪ್ರ. ೭). [ಸಂ.]

**ಪುರುಷಾದ** (ನಾ). ಮನುಷ್ಯಭಕ್ಷಕ ; ನರಮಾಂಸಭಕ್ಷಕ. [ಸಂ.]

**ಪುರುಷಾದಕ** (ನಾ). =ಪುರುಷಾದ : ರಕ್ಕಸರನಿಬರೆಲ್ಲರುಂ ದೀರ್ಘದೇಹಿಗಳ್ ಪೆಕ್ಕಸದ ಕೋಟಿಗಳ್ ಮೇರೆ ಪುರುಷಾದಕರ್ (ಕೃಷ್ಣಕಾ. ೦೬-೨೨). [ಸಂ.]

**ಪುರುಷಾಧಮ** (ನಾ). ನೀಚಮನುಷ್ಯ; ಕೀಳಾದ ವ್ಯಕ್ತಿ : ನಿಮಗೆ ಪೌರುಷವಿಲ್ಲ ನಳನಾಕ್ರಮಿಸಿಕೊಂಡನು ಸತಿಯ ಪುರುಷಾಧಮರು ನಿಮಗಿನ್ನೇಕೆ ಕೊಡಿ ಪಟ್ಟುವೇಷವನು ನಮಗೆ ಕಮಲಮುಖಿಯನು ನಿಮಗೆ ಪಟ್ಟದ ರಮಣಿಯನು ಮಾಡುವೆನು (ನಳಚ. ೯-೦೨). [ಸಂ.]

**ಪುರುಷಾಮೃಗ** (ನಾ). ಅರ್ಧ ಮನುಷ್ಯನಂತೆಯೂ ಅರ್ಧ ಮೃಗದಂತೆಯೂ ದೇಹವಿರುವುದೆಂದು ನಂಬಲಾದ ಒಂದು ಬಗೆಯ (ಪೌರಾಣಿಕ) ಪ್ರಾಣಿ : ಎಂಜಲಿನ ಶುದ್ಧತೆಗೆ ಹೇಳಿದಕೆ ಬುದ್ಧಿಯನೆ ಶದ್ವನಮೂಲಿ ಪುರುಷಾಮೃಗವನಿಲ್ಲಿಗೆ ನಾಳೆ ಭೀಮನ ಕಳುಹಿ ತರಿಸಲು (ಕುವ್ಯಾಸ. ಸಭಾ. ೭-೬); ಇದಿರ ಮೃಗವೇನಾನುವವೆ ಕೆರಳಿದರೆ ಪುರುಷಾಮೃಗದ ಗಾವಳಿಗೆ (ಜೈಮಿ. ೬-೩೦-೪೪) ; ಮರಿವ ಪುರುಷಾಮೃಗಂಗಳಿಂ ನೆರೆದು ಪರಿವ ಕರಿಗಳಿಂ ... ಸರ್ವಪರ್ವತಸಾರ್ವಭೌಮನಖರ್ವಸಂಪದಮಿಂಗೆ ಮೆಚ್ಚಿಪುತಿರ್ದುದು (ರಾಜಶೇ. ೦-೦೩೫ ವ). [ <ಪುರುಷ+ಮೃಗ ]

**ಪುರುಷಾಮೃಕ** (ನಾ). =ಪುರುಷಾಮೃಗ : ಹಿರಿಯ ಆರತಿ ೮ ಪುರುಷಾಮೃಕದ ಆರತಿ ೩ ನಾಗಾರತಿ ೧ ಧೂಪಾರತಿ [೧] . . . ಅಂತು ಆರತಿ ೨೫ (ಸೌಇಇ. IV, ೨೭೩-೪೦; 1518).

[ < ತಮಿ. ಪುರುಷಾಮಿರುಕಮ್./ ಸಂ. ಪುರುಷಮೃಗ ]

**ಪುರುಷಾಯಿತ** (ನಾ). [ಕಾಮಶಾ] ಒಂದು ಬಗೆಯ ರತಿಬಂಧ ; ಸ್ತ್ರೀಯು ಪುರುಷನ ಸ್ಥಾನವನ್ನು ವಹಿಸಿ ನಡೆಸುವ ಸಂಭೋಗ ; ವಿಪರೀತರತಿ : ಪೊದಟ್ಟ ಕಬರೀಭರಂ ಪರೆದು ಪರ್ವೆ ತುಂಗಸ್ತನಂ ಕದಕ್ಕದಿಸೆ ಬಿನ್ನಾಲರ್ ಪೊಳೆಯೆ ಕಾಂತನು ಮೆಚ್ಚೆಸಲ್ ವಿದಗ್ಧೆ ಪುರುಷಾಯಿತಂ ತಗುಳೆ ನರ್ತಕೀಲೀಲೆಯಿಂದದೊಂದು ಪೊಸಗಾರ ಸೋಗೆ ಸವಿಲಾಸಮಂ ತೋಱಿಪಳ್ (ಅಜಿತ. ೦೨-೦೪); ಪೆರ್ಮೊಲೆಗಳ್ ಕದಕ್ಕದಿಸೆ ನರ್ತಿಸೆ ಕುಂಡಲಂ . . . ತನ್ವಿ ಪುರುಷಾಯಿತದೊಳ್ ಪ್ರಿಯನಂ ಮಗುಳ್ಚಿದಳ್ (ಸೂಕ್ತಿಸು. ೦೪-೩೦); ಪುರುಷಾಯಿತದೊಳಾದು ತೊಡಗುವರವರಿಗೆ ಜಘನಭಾರದ ಸೇದೆಯಾದುದು (ಗಾಹಾಸ. ೪೯-೯೬). [ ಸಂ. ]

**ಪುರುಷಾರ್ಥ** (ನಾ). ೧. ಮನುಷ್ಯನು ಸಾಧಿಸಬೇಕಾದ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಪರಮಧ್ಯೇಯ : ಪುರುಷಾರ್ಥನಿಧಿ ಪುರಂದರಪರಮಪ್ರಿಯಮಿತ್ರನೋರ್ವನುದಯಿಸಿದಂ . . . ಹಂಸಂ (ಆರಂಭ. ೭೦೦): ಸುರಧೇನುಸ್ತನಧಾರದಂತೆ ಪುರುಷಾರ್ಥಂ ಮೂರ್ತಿಗೊಂಡಂತೆ ನಾಲ್ವರುಮೊಂದಾಗಿರೆ ನಂದನರ್ ದಶರಥಂ . . . ಉತ್ಸಾಹಮುಂ ತಾಳ್ದಿದಂ (ಪಂಚಾಖ್ಯಾ. ೩-೦೪೫); ಸ್ನೇಹಪೂರ್ವಕದಿಂದ ಮನದೊಳಗಾಹಿಸಲು ಲಕ್ಷ್ಮೀಶನವಂಗೆ ಬೇಹ ಪುರುಷಾರ್ಥಂಗಳಾಹವೆಲ್ಲಿವ್ದರಲ್ಲಲ್ಲಿ (ಕುವ್ಯಾ.ಆ. ೩-೦೭೦). ೨. ಮೋಕ್ಷಮಾರ್ಗ : ಮುಕ್ತಿಪಥ : ಕಲಿಕಾಸ್ತೋತ್ರಂಸಿತ ಪದನಲಿನಂಗೆ ತನುಜರಾಗಿ ಪುರುಷಾರ್ಥಮನುಜ್ಜಳಿಸದೆ ಮಾಣ್ಬವೆ (ಅಜಿತ. ೦೪-೩೩); ರಾಜ್ಯಲೋಭವಶದಿಂ ಪುರುಷಾರ್ಥಮನೊಕ್ಕು ಪಾರ್ಥಿವಾಗ್ರಣಿಗಳನೇಕರುಂ ಜವನ ದಾಡೆಯೊಳಟ್ಟಿದರ್ (ಕೃಷ್ಣಕಾ. ೦೩-೭೪); ಬ್ರಹ್ಮದ ಅರಿವೇ ಪುರುಷಾರ್ಥವು (ಬ್ರಹ್ಮಸೂ. ೦೪). ೩. ಯೋಗ್ಯವಾದುದು; ಸಾರ್ಥಕವಾದುದು: ಮತ್ಸರಮಹೋರಗಕ್ಕಮಾಗ್ರಹಮಹಾಗ್ರಹಕ್ಕಂ ಕೋಪಮುದಾನೇಕಪಕ್ಕಂ ಪಕ್ಕಾಗೆ ತನ್ನನೊಪ್ಪಿಸುವುದು ಮತಿವಂತಂಗೆ ಪುರುಷಾರ್ಥಮಲ್ತು (ಶಾಂತಿಪು. ೩-೭೨ ವ); ಪುರುಷಾರ್ಥಮಲ್ತು ಪರನಿಂದೆಯುಮಾತ್ಮಗುಣ ಪ್ರಶಂಸೆಯುಂ (ಪಂಚಾಖ್ಯಾ. ೩-೨೪); ದಿವೌಕಸರ ಸಮ್ಮೇಳವೇ ಪುರುಷಾರ್ಥತನಗೆ (ಕುವ್ಯಾದ್ರೋ. ೭-೦೬). ೪. ಮನುಷ್ಯಪ್ರಯತ್ನ : ಪುರುಷಾರ್ಥಂ ತನಗುಳ್ಳ ಮಾನವನಮಂ ತಾನೆಂತುಮಿರ್ಕುಂ (ಶೀಲಾಕ. ೭-೦೩೭). ೫. ಸಂಪತ್ತು; ಧನ ; ಹಣ: ಖಳರ ಪುರುಷಾರ್ಥಮುಂ ಕಾಮಿಸುವ ಯಾಚಕಾವಳಿಯಂತೆ ಪೊಳಲೀದೆ ಪೊಱಮಟ್ಟು ಸರಸಿಯೊಳ್ ಮುಳುಗುತಿರ್ಪಾನೆಗಳ ದಾನಾಭಿಲಾಷೆಯಿಂ ಬಿಟ್ಟೆಳಕಾಳೆಂ ತೊಲಗಲು (ಕೃಷ್ಣಕಾ. ೩-೩೯). ೬. ಉಪಕಾರ; ಸಹಾಯ : ಇದ್ದಪರೆ ಮಾಱಿದು ಪುರುಷಾರ್ಥಮಂ ಮಾಡಿದರನುದ್ದಾಮಗುಣಮುಳ್ಳ ಜೀವಿಗಳ್ (ಕೃಷ್ಣಕಾ. ೩-೩೦). ೭. ವಿಶೇಷವಾದ ಫಲ ; ಹೆಚ್ಚಿನ ಪ್ರಯೋಜನ : ಗೋವಿಂದಭಟ್ಟನ ಅಪಲಕ್ಷಣತವ . . . ತಿಳಿದ ಬಗ್ಗೆ ಸಾಕ್ಷಿ ಸಾರುವುವರಲ್ಲಿ ಈಗ ಪುರುಷಾರ್ಥವೇ ಇರಲಿಲ್ಲ (ದೀಪಹ. II, ೭); ಪುಣ್ಯವಿಲ್ಲ. ಪುರುಷಾರ್ಥವಿಲ್ಲ (ಹುಹೂ. ೩೪೦). [ಸಂ.]

**ಪುರುಷಾರ್ಥಿ** (ನಾ). ೧. ಉತ್ತಮವಾದ ಧ್ಯೇಯಗಳಿಗಾಗಿ ಶ್ರಮಿಸುವವನು; ಸತ್ಪುರುಷ; ಸಜ್ಜನ : ದುರ್ಜನರು ಪುರುಷಾರ್ಥಿಗಳ ಹಾವಿಂಗ ನಿಲಿಸೇ ಅಪಾರವಾದತೆ ಬಿಟ್ಟುದೇ ಪಿಪಸ (ಶುಕ್ಲ. ೬ ೪); ಪೊಲಿಗೊಟ್ಟಿಳಸು ಗುಡಿದವಂ ಪುರುಷಾರ್ಥಿಯಾದವನೆ (ಶೈಶಿಶಾ. ೬-೩೩). ೨. ಬಲಶಾಲಿ ; ಸತ್ತ್ವಶಾಲಿ : ನೀವು ಪುರುಷಾರ್ಥಿಗಳೂ ಮತ್ತು ಸ್ವತಂತ್ರರೂ ಆಗಬೇಕೆಂದು ಇಚ್ಛಿಸುವಿರೇನು ? (ಭ್ರಹ್ಮಕ. ೮). [ಸಂ. ಪುರುಷಾರ್ಥಿನ್]

**ಪುರುಷೋತ್ತಮ** (ನಾ). ೧. ಮನುಷ್ಯರಲ್ಲಿ ಶ್ರೇಷ್ಠನಾದವನು ; ನರಶ್ರೇಷ್ಠ; ಮಹಾಪುರುಷ : ಆ ಪುರುಷೋತ್ತಮನು ತಿಳಿಪಿದಂ ಜನಸಂ ನೆನಸಾಗೆ ಬಗದಿಂ (ಶಾಂತಿಪು. ೯-೨೮೯) ; ಪುರುಷೋತ್ತಮನಾದರದಿಂ ಪರೋಪಕಾರಾರ್ಥಮಿತ್ತನಾತ್ಮೀಯಕಳೇಬರಮಂ ಸುತರಕ್ಷಾರ್ಥಂ ಶರೀರಮಂ ಜನಕ ನೀವುದಾವುದು ಚೋದ್ಯಂ (ಶಂತಶಂ. ೮೬೮. ೩). ೨. ವಿಷ್ಣು ; ನಾರಾಯಣ : "ವನಜಾಕ್ಷಂ ಪುರುಷೋತ್ತಮಂ ನಗಧರಂ . . . ವೈಕುಂಠನಬ್ಜೋದರಂ" (ಚನ್ನಕೋ. ೪-೨೦) ; ನೆಗಟ್ದಿಯ ಪುರುಷೋತ್ತಮನ ಪಿತಾಮಹಂಗೆ ಶೂರಂಗೆ ಮಗಳ್ . . . ಕುಂತಿ (ಶಂಶಶಾ. ೧-೮೮) ; ಆ ಮಹಾರ್ಣವಂ . . . ಪುರುಷೋತ್ತಮನಂತೆ ಶಂಖಚಕ್ರಾಂಕಿತಮುಂ (ಜಗಬ. ೦-೯೪ ವ) ; ಪುರುಷೋತ್ತಮಂಗೆ ಕಮಲಂ ಕಣ್ (ಸೋಮೇಶ. ೮೬). ೧, ೨ : ಅಚ್ಯುತ ನೇತ್ರನಾದಿಪುರುಷಂ ಪುರುಷೋತ್ತಮನಿ ಚಳುಕ್ಯನಾರಾಯಣದೇವನೀಗೆಮಗೆ ಮಂಗಳಕಾರಣಮುತ್ತಮಂಗಳಂ (ಗದಾಯು. ೦-೦). ೩. [ಜೈನ] ವಾಸುದೇವ ; ಲಕ್ಷ್ಮಣ : ಪುರುಷೋತ್ತಮನಿಸೆ ದಶಕಂಧರನಂ ಕೊರ್ಗಣೆಗಳುರ್ಚಲಾಜಿವೆ (ಕಂಠಾವತಾ. ೦೪-೦೩೪). [ಸಂ.]

**ಪುರುಸ** (ನಾ). ೧. ಮಾನವ ; ಮನುಷ್ಯ : ಇದೇಂ ಗುಣವಂತನಿದೇಂ ಪುರುಸರನ್ನನೋ ಗಡ ಪುನ್ನಂ (ಶಾಂತಿಪು. ೧-೩೯); ಇದು ಮೇರುವಿಗೆಣೆ ಪುರುಸರೆಲ್ಲ ಸಾಜಿಂದ ಕಾರಣ ಧಾರುಣಿಯೊಳಗಣ ಜಂಗಮದಾರಾಧನೆ ಇಂದಯಿ ಸಾಶೀ ಜಗಲ್ಲೆಂ (ಎಕ. XI. ದಾವಣ. ೮೭೦-೪; 1268). ೨. ಗಂಡ ; ಪತಿ : ಮಾದಮ್ಮ ಪುರುಸಾಗೆ ಹೇಳು ತರುತಾನೆ (ಹಕ್ಕಿಕ. ೧೦೩).
[ <ಪ್ರಾ. ಪುರುಸ./ಸಂ. ಪುರುಷ ]

**ಪುರುಸತ್ತು** 'ಪುರಸತ್ತು' ನೋ.

**ಪುರುಸೊತ್ತು** 'ಪುರಸತ್ತು' ನೋ.

**ಪುರುಹ** (ನಾ). ಅಧಿಕವಾದುದು ; ವಿಪುಲವಾದುದು : "ಪ್ರಭೂತಂ, ಪ್ರಚುರಂ . . . ಪುರುಹಂ, ಪುರು, ಭೂಯಿಷ್ಠಂ, ಸ್ಫಾರಂ, ಭೂಯಃ, ಭೂರಿ — ೧೨ ಅಧಿಕವಾದದ್ದರ ಹೆಸರುಗಳು, ಬಹಳವಾದ್ದು" (ಸಿದ್ಧಾಂತ. ೩೪೧). [ಸಂ.]

**ಪುರುಹೂತ** (ನಾ). ಅನೇಕರಿಂದ ವಿಶೇಷವಾಗಿ ಪ್ರಾರ್ಥಿಸಲ್ಪಟ್ಟವನು : ಇಂದ್ರ : "ಪುರುಹೂತಂ ಮಘವಂ ದಿವಸ್ಪತಿ . . . ವಾಸವಂ" (ಚನ್ನಕೋ. ೬-೩೩) ; ಉತ್ಪತ್ಸ್ಯಮಾನ ಭಾವಿತೀರ್ಥಂಕರಪುಣ್ಯದೂತಾಹೂತಂ ಪುರುಹೂತಂ ಬಂದು (ಆದಿಪು. ೬-೬೬ ವ); ಮರುದೇವಿಗೆ ಪುಟ್ಟಿದಪಂ ಪುರುದೇವಂ ಬಂದು ದಿವದಿನೆಂಬಪಧಿಯಿನಾ ಪುರುಹೂತನಜಿಂದಯೋಧ್ಯಾಪುರಮಂ ನಾಡಾಡಿಯಲ್ಲದಂತಿರೆ ಪಡೆದಂ (ಶಂಠಾಶಪು. ೦-೯೯). [ಸಂ.]

**ಪುರುಹೂತಗಣ** (ನಾ). [ಛಂದ] ಮೂರು ಅಂಶಗಳ ಗಣ ; ವಿಷ್ಣು ಗಣಕ್ಕೆ ಸಮಾನವಾದ ಗಣ ; P ತೆಲುಗಿನಲ್ಲಿ ಇದನ್ನು 'ಇಂದ್ರಗಣ' ವೆಂದು ಕರೆಯುತ್ತಾರೆ : ಪುರುಹೂತಗಣಗಳಾಱುಂ ಸರಸಿಜಸುಗಣಗಳೆರಡು ಸಂಧಿಸಿ ಬಕರ್ಣಂ ಚರಣಕ್ಕೆ ಸೀಸದಂತದೊಳೊಂದಗಿಂತಹ ಸರಳ ತನ್ನೊಳೊಪ್ಪುವ ತೆಱದಿಂ (?) (ಛಂದೋಂ. ೦೩೦). [ಸಂ.]

**ಪುರುಹೂತಜಾತ** (ನಾ). ೧. ಇಂದ್ರನ ಮಗ. ೨. ವಾಲಿ : ಸಂಭ್ರಮವಾರೆ ನೋಡಿದರ್ ಪುರುಹೂತಜಾತನಂ . . . ಇಳೆಗುರುಳ್ದ ಬಿಳ್ದಾತನಂ (ಶ್ರೀರಾಮಾ. ೩೦೨-೨೪೩). [ಸಂ.]

**ಪುರುಳ್**, ಪುರಲು, ಪುರುಳು, ಪೊರಳ್ಳು, ಪೊರುಳ್, ಪುರುಡ್ಡು, ಪುರುಳ್, ಪುರುಳು (ನಾ). ೧. ವಸ್ತು ; ಪದಾರ್ಥ : ನಾಣನೆಳ್ನಿತುಂ ಕಾದೆನೆ ಬೇಡಿದೊಂದು ಪುರುಳಂ [ಪಾಠಾಂ. ಬೇಡಿದೊಂದೊಡಮೆಯಂ] ಮಾರ್ಕೊಂಡೆನೇ . . . ಅನೆರೆದಟ್ಟಿಯುಂ ಬಗೆಯುವೇ ಗಂಡುಮನಂಗೊಂಡನೋ (ಆದಿಪು. ೦೨-೩೬) ; ಮನವಿಚ್ಛೆಪಟ್ಟ ಪುರುಳಂ ಬೇಡಿ ಪೊಟ್ಟಮಿಲ್ಲದ ರಾಗರಸದಿಂ ಬಳಿಕೊರ್ಗೇಡಿ . . . ಪೊಟ್ಟುಗಳೆವುದು ನೃಪನ ಪೆಂಡವಾಸಂ ಕೂಡಿ (ಪುಷ್ಪದ. ೨-೪೪); ಮುನಿಗಳೊಂದು ಜಪದ ತಪದ ಮಂತ್ರದ ಬಲ್ಮೆಯೇಂ ಕಿಱಿದೆ! ಬೇಡಿದ ಪುರುಳನುಱದಿಂ ತಂದೀಗುಂ (ರಾಜಶೇಕ. ೦೦೩-೨೯). ೨. ಸತ್ತ್ವ ; ಸಾರ ; ತಿರುಳು : ದೂರೆಯಲ್ಲದಂಗೆ ನುಡಿವುದು ಪುರುಳಿಲ್ಲದ ಮಾತನೆಮ್ಮೊಳಂ ನುಡಿವುದೆ (ಆದಿಪು. ೦೪-೮೦) ; ಮರುಳ ಮಾತಿನೊಳ್ಪುರುಳೇನೆಂದರಸಂ ಪೋಗೆಪೋಗೆ (ಗದಾಯು. ೪-೪೩ ವ); ಆನುಂ ನೋಟ್ಪಿಂ ಕತೆಯು ಪುರುಳೆಂತಿರ್ಕುಮೆಂದು (ರಾಜಶೇಕ. ೩-೨೮). ೩. ಕೆಚ್ಚು ; ಶಕ್ತಿ ; ಚೈತನ್ಯ : ಅದಟನ ಪುರುಳಂ ಪೊಣರ್ದರ್ಗಳಜೀವೆನುಗ್ರಾಹವದೊಳ್ (ಆದಿಪು. ೦೨-೯೯); ತೆರಳ್ದ ಮೊಗಂ ಕರ್ಗಿದ ಬಾಯ್ ಪುರುಳಿಲ್ಲದ ಮಿಳ್ಳಿಗಾಲ್ (ಧರ್ಮಾಮೃ. ೭-೨೩೪). ೪. ಬೆಲೆ ; ಮೌಲ್ಯ. ೨, ೪ : ಪುರುಳುಂ ಲಕ್ಕಣಮುಂ ಮೆಯ್ಸಿರಿಯುಂ ತಳ್ತಿಸಯೆ ಪೇಟ್ದ ಕಬ್ಬಮದೆಂತುಂ ಪುರುಳುಂ ಲಕ್ಕಣಮುಂ ಮೆಯ್ಸಿರಿಯುಂ ತಳ್ತಿಸೆವ ರನ್ನದುತೆರ್ದೆವುಗದೇ (ಕಬ್ಬಿಗ. ೬). ೫. ಧನ ; ದ್ರವ್ಯ ; ಹಣ : ಪರಧಗೆ ಸೋಲ್ತು ತಮ್ಮಯ ಪುರುಳೆಲ್ಲಮನಿತ್ತು ರಾಗದಿಂದಂ ದಪರೊಳ್ ನೆರೆದು (ಸಮಶ. ೩-೬೬) ; ಪುರುಳನಲ್ಲದೆ ಪುರುಷನನನುಭವಿಸಲ್ಲರೇ ಬೆಲೆವೆಣ್ಗಳ್ (ಶವಂಪು. ೮-೨೩) ; ಪುರುಳು ಪಡೆದೊಳ್ಗಿಯ್ಮೆಯೊಳಿರೆವರ್ಗಿತ್ತುಟ್ಟು ತೊಟ್ಟು ಪೆಂಡಿರ್ ಮಕ್ಕಳ್ವೆರಸು . . . ಪದುಳದೊಳಿರ್ಕುಂ (ಕಕಪ. ೩-೭೪೦). ೬. ಸಂಪತ್ತು ; ಐಶ್ವರ್ಯ : ನೆಲನಿಮ ನೆಲಸಂ ಪಾಲಿಸು ನೆಲದಿಂ ಪುರುಳಕ್ಕುಮಾರ್ ನೆಲಕ್ಕೆಜಗದಪರ್ (ಕಾವ್ಯಾವ. ೮೬) : ತಮ್ಮ ಪುರುಳೆಂಬರ್ ತಮ್ಮಕ್ಕಳನ್ (ಕಂಠೀರ. ೦-೭-೩). ೭. ಒಳಿತು ; ಲೇಸು : "ಪುರುಳೆನಲೊಳ್ಳಿತು" (ಶಾಡು. ೦೪) ; ಪುರುಳಿಲ್ಲದಂಗೆ ಜೈನಂ ದೊರೆಕೊಂಡುಂ ದುಶ್ಚರಿತ್ರಮಂ ಬಿಡದುದಱಿಂ ಚಿರಕಾಲಂ ನಿಲಲರಿಯದು ಪಂಕಿಸುವೊಡಱಂತೆ ನಾಯ್ಗೆ ನೆಯ್ಯಕ್ಕುಗುವೇ (ಸಮಶ. ೪-೩೯) ; ಸುಜನರ್ಬ್ಬವ್ಯರೆ ತನಗವರಜಸ್ರಮುತ್ತಂಸಮಪ್ಪ ಪುರುಳಿಂ ಬೊಪ್ಪಂ ಸುಜನೋತ್ತಂಸನೆನಿಪ್ಪಂ ಸುಜನಗ್ರ್ಗತ್ತಂಸಮೆಂಬ ಪುರುಳಿಂದೆನಿಸಂ (ಎಕ. II. ೨೩೪-೬೬ : ಸು. 1180). ೮. ಚೆಲುವು ; ಚಂದ : "ಪುರುಳೆನೆ ಚಂದ ಮಾತ್ಕು" (ಕಕರ. ೦೩೭). ೯. ಫಲ ; ಪ್ರಯೋಜನ : ತನಗೆ ಪೊಜೆ ತಾಡಗೆ ನವಲೇಪನಮ ಮಾಳಂ . . . ಇಂತಿನಿತಜೀವಮೊಂದಜೋರ್ ಪುರುಳುಂಟೇ (ಆದಿಪು. ೯-೩೩) ; ನಾಲಗೆಯುಂ ಪಲ್ಲುಂ ತಪ್ಪುವನ್ನೆಗಮೋದಿದೊಡಂ ಕಾತತ್ತ್ವದೊಳ್ ಪುರುಳುಂಟೆ (ಸುಕುಮಾ. ೩-೪೪) ; ಈ ಪುರುಳಿಲ್ಲದ ನಾಯೊಡಲಂ ಮರುಳೇ ಕರಮೊಲ್ದು ಕೂರ್ಪ ಮಾನಿಸರೊಳರೇ (ಧರ್ಮಾಮೃ. ೭-೧೪೨). ೧೦. ಬುದ್ಧಿವಂತಿಕೆ ; ಜ್ಞಾನ : ಪುರುಳಂ ಮರುಳಂ ಮಾಟ್ಪಂ ಶರಸಿಧಿಮಂ ಬೆಂಬೆ ಮಾಡುವಂ ಕೇಸರಿಯುಂ ನರಿ ಮಾಟ್ಪಂ . . . ಕುಸುಮಪತಾಕಂ (ಲೀಲಾವ. ೪-೨೩). ೧೧. ಜ್ಞಾನಿ ; ತಿಳಿವಳಿಕೆಯುಳ್ಳವನು : ಪುರುಳಾಗು, ಮರುಳಾಗು, ಕಲಿಯಾಗು, ಪೇಡಿಯಾಗಣ್ಣ, ನೀನೊರ್ವನಿರ್ದಪಪ್ (ಅಶ್ವಶಾ. ೨೦-೪೦೯). **ಪುರಲು** : ೧೨. ಶೋಭೆ ; ಕಾಂತಿ : ಎರಡು ತಿಂಗಳ ಹರೆಯ ಮಂಗಳ ಬರಲು—ತುಂಬಿತು ಪತ್ತಗೇ ಬರುಮಾನಗಳ ಸಿರಿಯು, ಕಂಗಳ ಪುರಲಿದೇ ಕಡೆಕಂಜಮು (ಕಂಶ. ೨೦-೩೪). **ಪುರುಳು** : ೧. ನಿನ್ನ ಪುರುಳಿಲ್ಲಪಸು ಬೀದಿಗಿಡು ಮಾಂಬಿಡು ನಿನ್ನ ಸಿರಿಯೊಲ್ಲವನು ಬಿಡಮಿಂಗೆರೆಪುದಿದು (ಕಗದ್ಯ. ೬೨). ೨. ನೀನುಪಜಾಪಿನ ತಿರುಳು ನಾನು

ಮಾಣಿಮೆಯು ಪುರುಳು (ಕೃಕುಪು. ೬-೧೯೨) ; ಎನ್ನ ಪ್ರಾಣದ ಪುರುಳನೆನ್ನ ಜೀವನರುಚಿಯುನೆನ್ನ ಗರಿಮೆಯು ತೆನೆಯು ಕಾಣುತಿಹೆ ಸುಖದ (ಶಿಶಿಗೀ. ೯೦-೩). ೮. ಪರಿಪರಿಯಾಗಿ ಸಿಂಗರಿಸಲೇಕಹುದೆಂದು ಪುರುಳಾಗಿ ಸಿಂಗರಿಸಿದರು (ಕುಕ. ೩೦-೯೯) ; ಪಪಣಿಗೆಯೊಪ್ಪೆ ಪುರುಳು ಪೊಗರೇಱಿಯುಂಗಪಿಸೆ ಯುಲಂಕಾರಗಳು ಕವಿದು ಪರಿಯೆ ರಸದೊಳ್ಗಂಪು [ಕ]ವ್ಯನೆ ಕವಿತೆಯೊಂದನು ಪೇಳಿಸಿಂದು (ಹಪಿ. ೦-೨೬). ೧೩. ಆಶಯ ; ಅಪೇಕ್ಷೆ ; ಉದ್ದೇಶ : ಒರ್ಬಗೆಯೊಳು, ಮಂಗಸ, ನನ್ನ, ಮನೆಯು, ಹರಸಿ ನುಡಿದಿರಿ. ನಿಮ್ಮ ಪುರುಳು ನಡೆಯಲಣ್ಣ. ಹರಕೆಯಿಂಡಲು ತೆರಳುವೆ (ಕಾಕು. ೦೦-೨೯೦). ೧೪. ಶಬ್ದದ ಅಭಿಪ್ರಾಯ ; ಅರ್ಥ : “ ಅನೇಕಾರ್ಥಾಃ — ಪಲವು ಪುರುಳುಳ್ಳವಾಗಿ ” (ಶಾಕ್ಕೆ. ೦) ; ಪುರುಳೊಂದೆಡೆ ಪದಮೊಂದೆಡೆ ಸಂಬಂಧದಿರವೊಂದೆಡೆಯೆನೆ ಕೃತಿಯು ವಿರಚಿಸಿ ಕುಕವಿಜನಗಳೇಕೆ ಮಾಳ್ಪರೊ ಶಿರಕೆ ಬೇನೆಯು ಸುಕವಿಗಳ (ಕುಶಾಸಾಂ. ೦-೬೨). **ಪೊರಳು₂** : ೬. ಅಲುಣಾವುಂ ಅಪುತ್ರಕ ಪೊರಳುವಾನ್ ವಿಟ್ಟಾರ್ (ಇಕ. XIX. ೦೯೯-೬; 680). **ಪೊರುಳ್** : ೫. ನೆಲ್ಲಿಗೆಱೆಯ ಕೆಱೆಗು ಕೊಟ್ಟ . . . ನಾಲ್ವತ್ತೆರಡು ಪೊರುಳುಂ ಬ್ರಾಹ್ಮಣರ್ಗ್ಗಂ ತಪಸಿಯರ್ಗ್ಗಂ ಕೊಟ್ಟ ಪೊರುಳು ಮೂಪತ್ತೇಳುಂ (ಎಕ. IX. ಹೊಸಕೋ. ೦೦-೦೯ ; 1023). **ಹುರುಡು₂** : ೨. ಇವಜಿಸಳು ಹೊಕ್ಕು ವಿಚಾರಿಸಿದೊಡೆ ಹುರುಡಿನಿತುಂಟೇ (ಕೃಕಕ. ೨-೬ ಕಲ್ಲಿ) ; ಈ ಗರುಡನ ಹುರುಡು ಗೊತ್ತಿಲ್ಲವೆಂದು ಕಾಣುತ್ತದೆ ಈ ಜನರಿಗೆ (ಜಪ್ಪ. ೩). **ಹುರುಳ್** : ೨. ನೀತಿಯೆಂಬುದು ನೀರ ಮೇಲೆ ತೇಲುವ ತಪ್ಪ ಮಾತ ಬಲ್ಲವರೆತ್ತ ತೆಗೆದಂತೆ ಬಹುದದು ಕೇಳಿದರೆ ಹುರುಳಾಗದು (ಸಮ್ಯಕಾ. ೯-೧೮). ೬. ಗಂಡುಳಿವ ಸಿತಗರೆಲ್ಲಂ ಪೆಂಡಿರವೊಲು ಕರುಳ ಬೆರಳ ಹುರುಳಂ ಕೊಟ್ಟುಂ ಕಿಡುಂ ನಡೆವರು ಸಿತಗರ ಗಂಡಂ ಶ್ರೀಮಾಚಿ ಜಡಿವನಸಿಯುನೆನುತ್ತಂ (ಎಕ. VII. ಶಿಕಾ. ೨೩೬-೭ ; 1174 ; ಶಾಸಪಂ. ೯೯೬ ನೋ.). ೭. ಸನ್ನಿಂವಂ ಸಕಳಜಗಂ ಸುಖದಿಂದಿರ್ಪೊಡೆ ಹರಣದೊಂದು ಹುರುಳಱಿಸುವರೇ (ಗಂಕ. ೬-೩೨) ; ತರುಣನನ್ನೊಳು ತರಳನನ್ನೊಳು ದುರುಳನನ್ನೊಳು ಮರುಳನನ್ನೊಳು ಹುರುಳದೇನುಂಟೈ ಪರೀಕ್ಷಿಸೆ (ಶಾಕುಕ. ೯-೧೦೬). **ಹುರುಳು** : ೧. ಧರಧುರದೊಳಭಿಮಾನಹಾನಿಯು ಹುರುಳಹುದು ಬಿಲುಹೋರಟೆಗೆ ನಿಲಲರಿದೆನುತ್ತಂ ಗಮಣೆಗುಂದಿತು ನೆರೆದ ನೃಪನಿಕರ (ಕುವ್ಯಾಆ. ೦೯-೦೬). ೨. ಗಱಿ ತೋಱಿ ಗಂಡರೆಂಬವರ ಕಾಣೆ ನಿಱಿ ಸೋಂಕಲು ಮಾನಿಯಿಲ್ಲ ನೋಡಯ್ಯಾ . . . ಹುಲ್ಲ ಕಿಚ್ಚು ಹೊಲೆಯನ ಮೇಳಾಪ ಅಲ್ಲಿ ಹುರೋಳಿಲ್ಲ (ಬಸವ. ೦೦೨) ; ಸತ್ಯದ ಹುರುಳನಱಿಯದೆ ಬಾಳುಗೆಡೆದರೆ ಕಾರ್ಯವೆಂತಹುದು (ಕುವ್ಯಾಕ. ೦೬-೦೬) ; ಆ ಮಹಾತ್ಮನ ಹುರುಳ ನಾನೆಂತಱಿವೆನೆನುತಲಿ ಬಸವ ಚಿಂತಿಸಿದ (ಕೃಕುಆ. ೨೦-೬). ೩. ಹುರುಳು ಬಲ್ಲೆವು ಸಾಕು ಹೋಗು (ಕೌಶಿಕ. ೨೦-೨೦) ; ದಿಗ್ವಿಜಯದ ಪರಾಕ್ರಮದ ಹುರುಳು ನಿನಗುಂಟೆಂಬುದದ ಕೆಲಕಿರಿಸು (ಕೊರಠ. ೦-೯-೩೦) ; ಪುರುಷರಲಿ ಹುರುಳಿಲ್ಲ ಸಲಹೆಂದೊರಲಲಕ್ಷ್ಯಮೆಂದು ಪಸ್ಕೃವ ಕರುಣಿಸಿದ (ಕೋಗಹು. ೦೩-೩೦). ೭. ತುದಿಗೊನೆಯು ಚೆಂದೊಗು ಖಜುರ್ಜರದಲಿ ಕಾಣೆನು ಹುರುಳ ನಾರಂಗದ ವಿರಾಮವನೇನನೆಂಬೆನು ನಿವಿಮಸಪಾತ್ರದಲಿ (ಕ.ವ್ಯಾಕ. ೦೯-೩೬) ; ಬಿಟ್ಟು ಹೇಳಲು ಹುರುಳ ಕಾಣೆನು ತುಚ್ಛಕನುವಿವನು (ಅಮ್ಯಕ. ೨-೯೯). ೮. ಧಿಗಿಲೆಂದುದು ಧರಾಧೀಶ್ವರನ ತೇದೆಯು ಹೃದಯುದಲಿ ಹುರುಳೇನು ಬಳಿಕುಳಿವವರ ಮೋಱಗಳ (ಕುವ್ಯಾಕ. ೦.೨). ೯. ಒಂದಿನ ಹಳೆಯ ಕತೆಯನ್ನು ಕೆದರುವುದರಲ್ಲಿ ಹುರುಳಿಲ್ಲ (ಹಾತುಕ. ೯೦). ೧೩. ಮರುಳಲಾ ಮಾಱುಮಾತು ಕಡುವೃದ್ಧರಿಗದೇಕೆಂಬಂತೆ ಚಿತ್ತದ ಹುರುಳ ಬಲ್ಲೆನು ಪಥಪ ಬಿಡು ಕೆಲಸಾರಿ ಸಾಕು (ಕುವ್ಯಾದ್ರೋ. ೦೭-೨೩). ೧೫. ನೆಲೆ ; ಬೀಡಂ ; ಆಶ್ರಯ : ಈ ಚರಾಚರ ನೆರೆದು ನಿಮ್ಮಯ ರೋಮಕೂಪದ ಹೊಱೆಯೊಳಗೆ ಹೊಳೆವಾಡುತಿಹುದೆಂಬಗ್ಗಳಿಕೆಗಳಿಗೆ ಹುರುಳಿನಿವ ಹೇರಾಳದಂಗದ ಸಿರಿಯ ತೋಱೈ ಕೃಷ್ಣ (ಕುವ್ಯಾಶಿ. ೩-೬೨). ೧೬. ಮರ್ಮ ; ರಹಸ್ಯ : ಶ್ರೀಕಂಠಶಾಸ್ತ್ರಿಗಳು ಸುಭಗೆಯೊಡನೆ ಅಧಿಕಪ್ರಾಸಂಗಿಕವಾಗಿ ವರ್ತಿಸಿದುದಕ್ಕಾಗಿ ತಮ್ಮ ಹುರುಳನ್ನು ಅವಳು ಬೈಲಿಗೆಲ್ಲಿ ಎಳೆಯುವಳೋ ಎಂಬ ಭಯದಿಂದ ರಾತ್ರಿಯಲ್ಲ ನಿದ್ರೆ ಮಾಡಿದ್ದಿಲ್ಲ (ಗಂಗಾಶಾ. ೯೯). ೧೭. ನಾಯಕ ; ಒಡೆಯ ; ಮುಂದಾಳು : ಎಲೆಲೆ ವಿಲಯಕೃತಾಂತನೋ ನಮ್ಮಳವು ಕೊಳ್ಳದು ಬೆಂಗೊಡಲಿ ಮುಂಕೊಳಿಸದಿರಿ ಮರುಳಾಗದಿರಿ ಹುರುಳಾಗಿ ಹೆಂಡಿರಿಗೆ (ಕುವ್ಯಾಶಿ. ೩-೦೦) ; ವ್ಯಾಸಸ್ಮೃತಿಗೆ ನಡೆಕೋಲಾದನೆ ಮರುಳ್ಗಳ ಹುರುಳೇ ಎಡರಾಳುವನೇ ಏ ಬಿನದಕೆ ನನ್ನೆಡೆಗೈತಂದೆ (ಗಹೇಕ. ೨-೯೬). ೧೮. ಸತ್ವಶಾಲಿಯಾದವನು (?) : ಧರೆಯೊಳು ಮೈಸೂರವರ ಕೂಡೆ ವೈರವ ಬೆರಸಿದವರು ಹುರುಳಹರೆ (ಕಂವಿ. ೩-೯೬).

[ದೇ.॥ ತಮಿ. ಮಲ. ಪೊರುಳ್ ; ತುಳು. ಪೊಲರ್ ; ತೆಲು. ಪುರಲು ; ಕೋತ. ಪೊರ್ಳ್]

**ಪುರುಳಿ₁** ‘ ಪುರುವಳ್ಳಿ ’ ನೋ.

**ಪುರುಳಿ₂** (ನಾ). ೧. ಹೆಣ್ಣು ಗಿಳಿ ; ಸಾರಿಕೆ : “ ಪುರುಳಿಯೆಂದುಂ ಸಾರಿಕೆಯೆಂದುಂ ಪೆಣ್ಗಿಳಿ ” (ಶಕಸಾ. ೩೩-೨೦೩) ; ಕಲ್ತೊಡನೋದುವುದಲ್ತೆ ಗಿಳಿಗಳುಂ ಪುರುಳಿಗಳುಂ (ಕವಿರಾ. ೦-೦೦) ; ತುಂಬಿ ಗಿಳಿ ಪುರುಳಿ ಕೋಗಿಲೆಯೆಂಬಿವುವೆರಸು ಖಿಲತರುಗಳಿಂದ್ರನ ಬೆಸದಿಂದಂ ಬಂದುವೆಂದೊಡುಪವನಮಂ ಬಣ್ಣಿಸಲೆನಗೆ ನಾಡೆಯುಂ ಕುಱಿಪಲ್ತೇ (ಆದಿಪು. ೬-೯೨) ; ಕೂರ್ತ ಧೂರ್ತ ಸುರಮಿಥುನಂಗಳ್ ನೆರೆದಳಸುಗಲಿಸೆ ಗಿಳಿಯುಂ ಪುರುಳಿಯುಂ ಮಾಳಸುವುವು ದೇವಭಾಷೆಗಳಳಸು (ಕಾವ್ಯಾವ. ೯೩೦). ೨. ಗಿಳಿ ; ಶುಕ : “ಕನ್ನಡವಕ್ಕಿ ಪುರುಳಿ ಪಂಡಿತವಕ್ಕಿಯೆನಲು ಗಿಳಿ ” (ಕನ್ನಕೈ. ೨೩) ; “ಕನ್ನಡವಕ್ಕಿ ಪುರುಳಿ ಪಂಡಿತವಕ್ಕಿ ಗಿಳಿಯಕ್ಕು” (ಕನ್ನಮಂ. ೨೯). ೩. ಗಿಳಿಯ ಮರಿ ; ಮರಿಗಿಳಿ ; “ ಗಿಳಿವಱಿ ” (ಕಕುಶಿ. ೬. I. ೨೦).

**ಪುರುಳಿ₃** (ನಾ). ಹಸು : ಪರವತ್ಸಂಗಳ ಬಟ್ಟೆಯುಂ ಪರಿಗೊಳುತುಂ ತೊಱೆದ ಗೊಂತಮಂ ಬಿಡುತುಂ ಹೂಂಕರಿಸುತ್ತುಂ ಪೋಪಗ್ಗದ ಪು[ಶಾಕಾಂ. ಮ] ರುಳಿಗಳಂ ವಿಂಗೆ ಮರಲ್ದು ನೋಡಿದನರಸಂ (ಅಂಶಾಪ. ೩-೯೦). [?]

**ಪುರುಳು** ‘ಪುರುಳ್’ ನೋ.

**ಪುರುಳುಗಾಣು** ‘ಪುರುಳ್ಗಾಣ್’ ನೋ.

**ಪುರುಳುಗೆಡಿಸು**, ಹುರುಳುಗೆಡಿಸು (ಕ್ರಿ). ೧. ಬಲಗುಂದಿಸು ; ನಿಸ್ತೇಜಗೊಳಿಸು ; ನಿಶ್ಶಕ್ತಗೊಳಿಸು ; ನಿಸ್ಸಾರವೆನ್ನುವಂತೆ ಮಾಡು : ವರುಣನ ಪುರುಳುಗೆಡಿಸಿ ವಾಯುವ್ಯನ ಮರುಳುಮಾಡುತ ಧನದನನು ದೂರಗೆಡಿಸಿದನು (ಕೃಕುಸಾಂ. ೬-೬೬). ೨. ಹೀಯಾಳಿಸು ; ಧಿಕ್ಕರಿಸು : ಪುರುಳಿಯ ಪುರುಳುಗೆಡಿಪ ನುಡಿ ಕವಳೀಸ್ತಂಭವನೇಳಿಸುವೂರುಗಳೊಪ್ಪಿದುವಾ ಸತಿಗೆ (ಜಯುಗಾ. ೨-೮). **ಹುರುಳುಗೆಡಿಸು** : ೧. ಬಾಹ್ಲಿಕ ದುರುಳ ಸೌಬಲ ಸೋಮದತ್ತರ ಹುರುಳುಗೆಡಿಸಿದನೊಬ್ಬ ಶಿಶು ಗೆಲಿದನು ಮಹಾರಥರ (ಕುವ್ಯಾದ್ರೋ. ೩-೨೬) ; ವಿವಿಧ ವಿಟರನು ಹುರುಳುಗೆಡಿಸುವ ನವಯವ್ವನಭರದ ವನಿತೆಯರೊಪ್ಪಿದರು (ಕೋರಾ. ೦.೩-೨೬) ; ಆ ಸುರಾಧಿಪನ ಹುರುಳುಗೆಡಿಸುವೆನು (ಉತ್ತರಾ. ೬-೯). ೨. ಹುರುಳುಗೆ[ಶಾಕಾಂ. ಗ]ಡಿಸು ವಿರಾಮವು ನುಡಿದೊಡೆ ಕರಗಿ ಕುಂತೀಮಕ್ಕಳೆಂದೊಡೆ ಹರಹಿಕೊಂಬರಿ (ಕುವ್ಯಾಶಾ. ೩-೧೮) ; ಹರಹುಗೆಟ್ಟುದು ತೇರು ಸಾರಥಿ ಹುರುಳುಗೆಡಿಸಿಯೆ ನುಡಿದ ನಂಬಿನ ಕೊಱತೆ ತಾ ಮುನ್ನಾಯ್ತು ದೈವದ್ರೋಹಿಗಳು ನಿಮಗೆ ಅರಿವಿಜಯವೆಲ್ಲಿಯದು (ಕುವ್ಯಾಕ. ೦-೦೩). ೩. ಮಾನಸೋಲಿಸು : ಹರಿ ಹರ ಬ್ರಹ್ಮಾದಿ ದೇವರು . . . ಸುಮನಸರೆಲ್ಲರನು ಬಿಡದೆ ಹುರುಳುಗೆಡಿಸುವೆ ಸಾಕು ನಳಭೂವರನ ಮಾತೇನಿನ್ನು (ನಳಚ. ೯-೯). ೪. ಪೊಲುಮಾಡು ; ಹಾಳುಮಾಡು : ವ್ಯರ್ಥಗೊಳಿಸು : ಆತನೆಚ್ಚದು ಪಾಶುಪತ್ರವದ

ನಾತುಕೊಂಬವರಾರು ಬಜಿದೆ ಘಟಾತಿಶಯವನು ಹುರುಳುಗೆಡಿಸುವಿರಿ (ಶ:ಪ್ಪ್ರಕೃ. ೦೩-೦೯). [ ಪುರುಳುಗೆಡು + — ಇಸು₁ ]

**ಪುರುಳುಗೆಡು**, ಪುರುಳುಗೆಡು (ಕ್ರಿ). ೧. ಶಕ್ತಿಗುಂದು; ನಿಃಸತ್ತ್ವವಾಗು; ಬಲಹೀನವಾಗು : 'ಪುರುಳುಗೆಡಿಸು' ಪರಾ. **ಹುರುಳುಗೆಡು**: ೧. ಅಭಿಮನ್ಯುವಿನ ಹೊಯ್ಲಲ್ಲಿ ಹುರುಳುಗೆಟ್ಟುದು ಹೆಸರ ನಾಯಕವಾಡಿ (ಉದ್ಯೋಗಕೃ. ೩-೩೩); ಮಹಾಮುನಿಯ ಪರಮಶಾಪದೊಳು ನೃಪನಲಿ ಹುರುಳುಗೆಟ್ಟುದು (೬ಜಾಗ. ೯-೩-೩). ೨. ಅವಹೇಳನವಾಗು; ಅವಮಾನವಾಗು : ದುರುಳತನದಿಂದಣ್ಣದೇವನ ಹುರುಳುಗೆಡೆ ನುಡಿದನು (ಉಪ್ಪ್ರ.ಶ. ೦೨-೩೦). [ ಪುರುಳು (< ಪುರುಳ್) + ಕೆಡು₁ ]

**ಪುರುಳುಗೊಳ್** 'ಪುರುಳ್ಕೊಳ್' ನೋ.

**ಪುರುಳುಗೊಳಿಸು** (ಕ್ರಿ). ಅರ್ಥಪೂರ್ಣವಾಗುವಂತೆ ಮಾಡು; ಸಾರವತ್ತಾಗಿ ಮಾಡು : ಅರಸಿಯರನಿಬರುಮಾದರದಿಂದೆನ್ನ ಸರಸಕಾವ್ಯವ ಸವಿವಂತೆ ಪರಮಪತಿವ್ರತೆಯರ ನಡತೆಯನಿಲ್ಲಿ ಪುರುಳುಗೊಳಿಸಿ ಪೊಗಳುವೆನು (ಜಂಬು. ೦-೯೭). [ ಪುರುಳುಗೊಳ್ (< ಪುರುಳ್ಕೊಳ್) + — ಇಸು₁ ]

**ಪುರುಳೆ** 'ಪುರಲೆ' ನೋ.

**ಪುರುಳ್ಗಾಣ್**, ಪುರುಳುಗಾಣು (ಕ್ರಿ). ೧. ಪ್ರಯೋಜನವನ್ನು ಕಾಣು; ಫಲವನ್ನು ಪಡೆ : ನಾಡಿಗರ ದಿನದಿನಂ ಬೇಳ್ಪೊಂದು ಹವ್ಯಮನುಂಡು ಸವಿಗೊಂಡ ಬೋಳಿಯರಕ್ತ್ರಾನುಮೊರ್ವನೀ ನಿಚ್ಚವಲಿಯಿಡೆಯಿಂ ಪುರುಳ್ಗಾಣದೆ ಪಟ್ಟವಿಟ್ಟು ಕಿರುಳಂ ಸಮಂತು ಪುರುಳಂ ತೋಳ್ಪ ಜೋಗವೆಣ್ಗಿ ಸಚುಗ್ಗೆಯಲೆಃಡಂ ಕಟುಂಬಿ ನಿರ್ನಿರಮಾವುದುಜ್ಜುಗಕ್ಕೆ ತಡೆವರ್ವರ್ (ರಾಜಪ್ತ. ೩೪-೩೦). **ಹುರುಳುಗಾಣು** : ೨. ಧನವನ್ನು ಕಾಣು; ಐಶ್ವರ್ಯವನ್ನು ಪಡೆ : ಪುಟ್ಟಿದಂದಿಂದ ಪುರುಳುಗಾಣದವರು ನೆಟ್ಟನೆ ನಿಧಿಯು ಕಂಡಂತೆ ಕಟ್ಟೆಜಕದೂರಿನಿಯನ ಕಾಣುತ ಮರವಟ್ಟು ಮೈಮಱೆತು ನಿಟ್ಟವಳು (ಕುಂ. ೭-೯೦). [ ಪುರುಳ್ + ಕಾಣ್ ]

**ಪುರುಳ್ಕೊಳ್**, ಪುರುಳುಗೊಳ್, ಹುರುಳುಗೊಳ್ಳು (ಕ್ರಿ). ೧. ಸತ್ತ್ವಯುತವಾಗು; ಹುರಿಯೇರು; ಕೆಚ್ಚುಗಟ್ಟು : ಮಹಾಸ್ವಾಮಿಯವರ ಸೊಮ್ಮಿನ ಸಮ್ಮಿನ ಬಿರುದು ಕುಬೇರನನ್ನೂ ಕಲ್ಪವೃಕ್ಷ ಕಾಮಧೇನು ಚಿನ್ತಾಮಣಿಗಳನ್ನೂ ನಾಚಿಸುತ್ತ ಪುರುಳ್ಕೊಂಡಿರುವುದು ವಿಶ್ವವಿದಿತವಾಗಿದೆ (ಚಿಕ್ಕ. ೧೨-೬). ೨. ಧನವನ್ನು ಪಡೆ; ಹಣವನ್ನು ಗಳಿಸು : ಪುಯಬನೆಸಗುವಲ್ಲಿಯುಂ ಪೊಡವಿಯುಂ ಪೊರೆವಲ್ಲಿಯುಂ ಪುರುಳ್ಕೊಂಬಲ್ಲಿಯುಂ ಪುಸಿವುಗದೆ ಧರ್ಮಮನಾರಯ್ದು ನಡೆವುದು (ಜಗಂ. ೩.೨.೦೦). **ಹುರುಳುಗೊಳ್** : ೧. 'ಪುರುಳುಗೊಳಿಸು' ಪರಾ. ೨. ಪುಟ್ಟಿದ ಮನೆಯೊಳು ಪೊರಿ ಪುರುಳುಗೊಂಬ ದಿಟ್ಟ ಗಂಡುಗಳಂತಿರಲಿ ಕೊಟ್ಟುದಜಿಂದ ತಣಿವ ಕುವರಿಗೆ ಮನಮುಟ್ಟಿ ಕೊಡುವುದು ಕೋವಿದರು (ಕುಂ. ೩-೦೦). **ಹುರುಳುಗೊಳ್ಳು**: ೧. ಹುರುಳುಗೊಂಡ ತಿರುಳಿಸಲ್ಲಿ ನನ್ನ ರುಚಿಯು ನೀನು ಕಂಡು ನಿನ್ನ ಸವಿಯ ನಾನು ಉಂಡು (ಅರಳು. ೯೯೩-೦೩). [ ಪುರುಳ್ + ಕೊಳ್₁ ]

**ಪುರುಳ್ತೊಡವು** (ನಾ). ಅರ್ಥಾಲಂಕಾರ : ಸೊಬಗುಪುರುಳ್ತೊಡವುಗಳಂ ಬೇಱೆನೆ ಬಣ್ಣಿಸಿದನವಱ ಭೇದಂಗಳುಮಂ (ಅಕ್ಷ್ರಿ. ೦-೦೭). [ ಪುರುಳ್ + ತೊಡವು ]

**ಪುರೆ₁** (ನಾ). ಭಲೆ, ಶಹಬ್ಬಾಸ್ ಎಂಬರ್ಥದ ಒಂದು ಹೊಗಳಿಕೆಯ ನುಡಿ,—ಮೆಚ್ಚುಗೆಯ ಮಾತು : "ಅರರೇ ಭಾಪುರೆ ಮಝು . . . ಧಿರುರೇ ಪುರೆಯೆನೆ ಕೊಂಡಾಟಂ" (ತತ್ತು. ೩೩); ಪುರೆ ಮಝು ದಾನವೆ ದಾತೃವೆ ಪಾತ್ರವೆ ಸರಿಯುಂಟೆ ನಿನಗೆ (ಶಶ. ೩-೦೦೦); ಹರ ಮೆಚ್ಚಿ ಹೋಹೊ ಭಾಪುರೆ ಪುರೆ ಪುರೆಯೆನೆ ಸುರಿವರ್ಪೂಮಳೆಯು ನಿರ್ಜರರು (ಕೈರಶಾ. I. ೨೩೯). 'ಪುರ್ಯಿ', 'ಪುರೆಯಿಡು' ಪರಾ. [ ದೇ.॥ ತಮಿ. ಪುರ್ಯೆ = ತಕ್ಕುದಾಗು, ಒಪ್ಪು ; ತೆಲು. ಪುರೆ, ಪುರೇ ]

**ಪುರೆ₂** (ನಾ). (ಕರಾ) ಛಾವಣಿ ; ಸೂರು : ಮಳೆಗಾಲ ಆರಂಭವಾಗಲು ಹಡಗಸಂಚಾರ ನಿಂತು ಹೋಯಿತು. ಮಂಜಿ ಪತ್ತೆಮಾರುಗಳನ್ನು ದಡಕ್ಕೆ ಎಳೆದು ಮಳೆಯಿಂದ ಒದ್ದೆಯಾಗದಂತೆ ಪುರೆ ಕಟ್ಟಿದರು (ತೋಣಿ. ೬). [ ← ತುಳು. ಪುರೆ, ಪೂರೆ ]

**ಪುರೆ₃** 'ಪೂರಿ' ನೋ.

**ಪುರೆ₄**, ಪುರೇ (ಅ). ಸಾಕು, ಇನ್ನು ಬೇಡ ಎಂಬರ್ಥದ ಮಾತು : ಶ್ರೀಕಂಠ ಹೋ ಪುರೆ ಸಾಕು ನಿಲ್ಲು ಎನುತ (ಕೈಶೀ. ೦-೨೬೩); ಪುರೆ ಸಾರು ನಿಲ್ಲು ಕುಳ್ಳಿರು ಕೊಲಗೆಂಮ ನಿರ್ಜರವೇತ್ರಧರರು ತಿದ್ದಿದರು (ಶಶ. ೩೯-೦೩). **ಪುರೇ** : ಹೋಹೋ ಪುರೇ ಪುರೇ ಸಾಕುಸಾಕೈ ನಿನ್ನ ಸಾಹಸದ ಭಕ್ತಿಗೆನ್ನಯ ಮನ ಮೆಚ್ಚಿತು (ಕಂಶ. ೦೯-೦೩). [ ← ಮರಾ. ಪುರೇ ]

**ಪುರೆಕಾಮ** (ನಾ). ಒಬ್ಬಾತನ ಹೆಸರು : ದಾಣಸಾಮಿ ಮಗನ್ ಪುರೆಕಾಮನ್ . . . . ಅಜಿದಿಯೊಳ್ಸತ್ತನ್ (ಎಕ. X, ಶಾಂತಿ. ೯೪-೭; ಸು. ೬೬೦೯). [ ? + ಕಾಮ ]

**ಪುರೆಯಿಡು** (ಕ್ರಿ). ಭಲೆಯೆನ್ನು ; ಕೊಂಡಾಡು : ನಿಮ್ಮ ದೊರೆಯೆಂತು ನಡೆವನುತವನೆ ಪುರೆಯಿಟ್ಟು ಪೊಗಳ್ವರಿ (ಶಶ. ೯೭-೯೦); ಕೆದಱ ಜಂತ್ರದ ಪುಷ್ಪವೃಷ್ಟಿಗಳಾಸವ ಸುದತಿರನ್ನಳು ಪುರೆಯಿಟ್ಟು ಮದನಮಂಜರಿಯಾತ್ತ ಕೈನೀಡ ಕೊಟ್ಟಳಾ ಚದುರೆ ಮಂದಾರಮಾಲೆಯನು (ಹಾಗಳು. ೨೨-೦೦೬). 'ಪುರಿಯಿಡು' ಪರಾ. [ ಪುರೆ₁ + ಇಡು₁ ]

**ಪುರೇ** 'ಪುರೆ₄' ನೋ.

**ಪುರೋಖ್ತು**, ಪುರೋಕ್ತು, ಪ್ರೋಕ್ತು (ನಾ). ಮಾರಾಟ : ಬಿಕರಿ ; ವಿಕ್ರಯ : ಅಮಾನೀ ದವಸ . . . ಜತನದಿಂದ ಇರಿಸಿ ಗಿರಾಕಿ ಬಂದ ಬಂದ ಪ್ರಕಾರ ಸರಕಾರಕ್ಕೆ ನಿರಖು ಜಾಸ್ತಿ ಕೂಡಿ ಬರುವ ಮೇರೆ ಪುರೋಖ್ತು ಮಾಡಬೇಕು (ಮಹಾಪಂ. II. ೭೩). **ಪುರೋಕ್ತು** : (೬). **ಪ್ರೋಕ್ತು** : (೬). [ ← ಪಾರ. ಹಿಂ. ಫರೋಖ್ತ್ ]

**ಪುರೋಖ್ತಾನಿ** (ನಾ). ಎರಡನೆಯ ಸಲ ಆಗುವ ಮಾರಾಟ,—ಬಿಕರಿ : ಪುರೋಖ್ತಾನಿ ಆದ ದವಸ ಹೋಗಲಾಗಿ ಬಾಕಿ ನಿಂತ . . . ದವಸಕ್ಕೆ . . . ಬಂದೋಬಸ್ತು ಮಾಡಬೇಕು (ಹ.ಹುಮ. II. ೭೩). [ ← ಪಾರ. ಫರೋಖ್ತಾನೀ ]

**ಪುರೋಗ** (ಗು). ೧. ಮುಂದಿರುವ ; ಅಗ್ರೇಸರ : ಮುಖ್ಯವಾದ. (ನಾ). ೨. ಮುಂದಾಳು; ನೇತಾರ; ಪ್ರಮುಖನಾದವನು : "ಅಗ್ರ್ಯಂ, ಪ್ರಧಾನಂ, ಪ್ರಮುಖಂ, ಪುರೋಗಂ, ಮುಖ್ಯಂ . . . ಅಗ್ರಣೀಃ — ಈ ೧೩ ಮುಖ್ಯಂ" (ಕರಾಮು. ೦೦೩.೩). [ ಸಂ. ]

**ಪುರೋಗಮ** (ನಾ). ಮುಂದಾಳು; ಮುಖಂಡ; ಪ್ರಮುಖ: "ಅಗ್ರೇಸರಂ ಪುರಸ್ಸರನಗ್ರಣೆ ಮುಖ್ಯಂ ಪುರೋಗಮಂ" (ಚನ್ನ್ರ್ರಕೋ. ೬೩.೯); ಮುಕುಂದಂ . . . ಮುಂದೆ ನಿಂದಿರ್ದ ನಂದಗೋಪ ಪುರೋಗಮಾರನನುರಾಗದಿಂ ನೋಡಿ (ಜಗಹ. ೪-೮೦ ಶ). [ಸಂ.]

**ಪುರೋಗಾಮಿ** (ನಾ). ೧. ಮುಂದೆ ಹೋಗುವವನು ; ಅಗ್ರಗಾಮಿ : ಕೈಲಾಸದಲ್ಲಿ ಕಮ್ಯುನಿಷ್ಟರನ್ನು ಕಂಡು ಪುರೋಗಾಮಿಗಳಂತೆಯೇ ಪ್ರತಿಗಾಮಿಗಳೂ ಹೌಹಾರಬಹುದು (ಕೈಲಾಶ. ೧ ಮುನ್ನುಡಿ). ೨. ಮುಖಂಡ; ಮುಂದಾಳು. ೩. ಮುಂಭಾಗದಲ್ಲಿ ನಡೆಯುವ ಸೇವಕ : "ಪುರೋಗಃ, ಅಗ್ರೇಸರಃ...ಪುರೋಗಮಃ, ಪುರೋಗಾಮಿ—೭ ಮುಂದುಗಡೆ ನಡೆಯುವ ಊಳಿಗದವನು" (ಸಿದ್ಧಾಂತಿ. ೨೩೯). ೪. ಮೊದಲು ಬಂದುದು ; ಪೂರ್ವಭಾವಿಯಾದುದು : ಡಾ॥ ವಿಟ್ನಿ ಅವರ ಪ್ರಕಾರವಂತೂ ಕ್ರಿಯಾ

ರೂಪಗಳೇ ಭಾಷೆಯ ಪುರೋಗಾಮಿಗಳು (ಶಾಶಾಶಾ. ೨೬೩).
[ ಸಂ. ಪುರೋಗಾಮಿನ್ ]

**ಪುರೋಟಿ** (ನಾ). ೧. (ಉಕ) (ಕಲಿಯಬೇಕಾದ ಮಗ್ಗಿ, ಕೋಷ್ಟಕ ಮೊದಲಾದುವುಗಳನ್ನು ಕಂಠಪಾಠ ಮಾಡುವ ಉದ್ದೇಶದಿಂದ ಬೆಳಗಿನಲ್ಲಿ ಹಾಗೂ ಸಾಯಂಕಾಲದಲ್ಲಿ) ಪುನಃ ಪುನಃ ಸಾಮೂಹಿಕ ವಾಗಿ ಹೇಳುವುದು; ಸಂತೆ ಹೇಳುವುದು; ಪುರಶ್ಚರಣ: ಎಲ್ಲ ವಿದ್ಯಾರ್ಥಿಗಳನ್ನು ಸಾಲಾಗಿ ನಿಲ್ಲಿಸಿ "ಪುರೋಟಿ" ಹೇಳಿಸುವಾಗ ನನಗೆಂಥಹ ಉಬ್ಬು! (ಗಾಶ. ೫೩). ೨. ನಡೆದು ಹೋದ (ದುಃಖದ) ಸಂಗತಿ ಯನ್ನು ಪುನಃ ಹೇಳುವುದು; ಪುನರಾವರ್ತನೆ: ಅಣ್ಣ ತಂದೆ ತಾಯಿಗೆ ತಾರು ಕೊಟ್ಟ. ಅವರೂ ಬಂದರು. ಹೈದ್ರಾಬಾದಿನ ಕತೆಯ ಪುರೋಟಿ ಯಾಯಿತು (ಬೀಕು. ೫೩); ಎಲ್ಲವನ್ನೂ ಮೊದಲಿನಿಂದ ನಾನು ಮತ್ತೆ ಪುರೋಟಿ ಹಾಕಿದೆ (ಬೀಕಸ. II. ೬೪೩).
[ ← ಮರಾ. ಪರಪಟಾ, ಪರವಾಚಾ, ಪರೋಟಾ ]

**ಪುರೋತಿ** 'ಪುರವತಿ' ನೋ.

**ಪುರೋಡಾಶ** (ನಾ). ೧. ಯಜ್ಞಯಾಗಾದಿ ಶ್ರೌತಕರ್ಮಗಳಲ್ಲಿ ದೇವತಾ ಪ್ರೀತ್ಯರ್ಥವಾಗಿ ಕೊಡುವ ಹವಿಸ್ಸು; ತುಪ್ಪದಲ್ಲಿ ಹುರಿದು ನೀರಲ್ಲಿ ನೆನಸಿದ ಹಿಟ್ಟು: ಆದರಿಸಿ ಪರಿಚಾರಕರು ಸಂಪಾದಿಸಿದ ಘೃತ ಚರು ಪುರೋಡಾಶಾದಿ ಸಂಭಾರೌಘವಸಾವಾಯಿತ್ತು ನಿಮಿಷದಲಿ (ಜೈಭಾ. ೬.೩೨); ಚರು ಪುರೋಡಾಶ ತಂಡುಲ ತಿಲ ವ್ರೀಹಿ ಘೃತದುರು ಹವಿರ್ಧಾನದಿಂದರುಣಲೋಚನನಾಗಿ . . . ಯಜ್ಞಶಾಲೆಯೊಳಧ್ವರದೀಕ್ಷೆ ಯಿಂದೆ ಕುಳ್ಳಿರ್ದೆಸೆವ ರಾಮನಂ ಕಂಡು ಬೆರಗಿಂತೆಂದರು (ಕೃಜಾಶಾ. ೨೦-೩೩). ೨. ಹೋಮ ಮಾಡಿ ಉಳಿದ ಹವಿಸ್ಸು; ಹುತಶೇಷ: ಅಂತು ಪುರೋಡಾಶಪವಿತ್ರೋದರನುಂ ಸೋಮಪಾನಚಾಯಿತೋದರನುಮಾಗಿ ಮೂವತ್ತೆರಡುದಿವಸದೊಳ್ ಕ್ರತುವಂ ನಿರ್ವರ್ತಿಸಿ (ಹಂಸಶಾ. ೩-೩೬ ಕ); ಪುರೋಡಾಶಭೋಜನಪವಿತ್ರೀಕೃತಗಾತ್ರನುಂ . . . ದೇವಶರ್ಮನೆಂಬ ಪಾರ್ವನಿರ್ಪಂ (ಶುಕಸ. ೦೬೪-೬). [ ಸಂ. ]

**ಪುರೋದ್ಯಾನ** (ನಾ). ನಗರದ ಉಪವನ; ನಗರೋದ್ಯಾನ: ಪಾಳೆಯಂ ಬಿಟ್ಟುದು ಪುರೋದ್ಯಾನವೀಥಿಗಳೊಳ್ (ಕೃಜಶಾ. ೦೬-೦೦); ಪುರೋದ್ಯಾನ ವೀಥಿಯೊಳ್ ಪಾಳೆಯಂ ಬಿಟ್ಟುದರ್ಜುನನ ಸೇನೆ! (ಜ್ಞಾಂಗ. ೬೨-೦೯೬೪).
[ ಸಂ. ]

**ಪುರೋಧ** (ನಾ). ಪುರೋಹಿತ: "ಸೌವಸ್ತಿಕಂ ಪುರೋಧಂ ಪುರೋಹಿತ ನಲ್ಕು" (ಮುಣಶಾ. ೬೯-೩). [ ಸಂ. ಪುರೋಧಸ್ ]

**ಪುರೋಧಸ** (ನಾ). ೧. ರಾಜಪುರೋಹಿತ. ೨. ಪುರೋಹಿತ: ಅಂತು ಬಿನ್ನಪಿಸಿದ ಪುರೋಧಸಪುರಸ್ಸರಂ . . . ರಾಜ್ಯಾಭಿಷವಣಮಂಡಪದೊಳ್ ಮಂಗಳವಿಧಾನಮನವ್ಯವಧಾನು ಮಾಡಿಮೆಂದು ಕಟುಪಿದಾಗಳ್ (ಅಸಂಪು. ೩-೯೨ ಕ); ಶರ್ಯಾತಿರಾಜಂ . . . ಜನ್ನಕ್ಕೆ ತನ್ನಳಿಯನನೆ ಪುರೋಧಸ ನಾಗೆ ಬರವೇಳ್ದು (ಶಾಸೂಕ್ತಿ. ೬೯-೨೩). [ಸಂ. ಪುರೋಧಸ್]

**ಪುರೋಪಕಂಠ** (ನಾ). ಪಟ್ಟಣದ ಹತ್ತಿರದ ಪ್ರದೇಶ: ದನುಜಪುರೋಪ ಕಂಠದ ಕೊಲವತಿಗಳ ತೀರದಲಿ ಬಿಡಿಸಿದನು ಪಾಳೆಯವ (ಕುವ್ಯಾ. ೦೨-೦೩); ರಾಜಶಿರೋಮಣಿಯು ಟಕಾಯ ಬಿಟ್ಟುದು ಬಳಿಕ . . . ಪುರೋಪಕಂಠದಲಿ (ಕೊಕರಾ. ೦-೬-೦೨). [ ಸಂ. ]

**ಪುರೋಭಾಗ** (ನಾ). ೧. ಮುಂಭಾಗ; ಮುಂದಣ ಪ್ರದೇಶ: ಅನಿಂದ್ಯರಾಜಭವನಪುರೋಭಾಗದೊಳಿರ್ದು ನಡೆದೆರೆದರ(ದ)ನರೆಸಿ ಲೋಭ ಕೃಸರಪಸರವಿಲ್ಲದಿರ್ದ ಒಟ್ಟರ ಪಸರಂಗಳುಮಂ . . . ತೋರುತ್ತುಂ ಬಂದು (ಶಾಂತಿಪು. ೩-೭೩ ಕ); ಭಗವದಿಂಮುಪಾಳಿಯು ಪುರೋಭಾಗ ದೊಳ್ ನಿಂದು ಪೊಡಮಟ್ಟು (ಗಿರಿಂಪು ೬೩); ಚಂದ್ರಾರ್ಕರಂ ಗೆಲೆ ವಂದಾ ಬರುತಿರ್ಪವರ್ ಭರತ ಶತ್ರುಘ್ನರ್ ಪುರೋಭಾಗದೊಳ್ (ಸಂರಾಮೂ. ೩-೦೦೦). ೨. ಮುಂಭಾಗದ ಸೈನ್ಯ; ಮುಂಚೂಣಿ: ಕಲಿಭೀಮನೆಡದಲಿ ಕಲಿಕಿದನು ಬಲವಂಕದಲಿ ಕೈವಳಿಸಿ ಕೊಂದನು ವರ ಪುರೋಭಾಗವ ವಿಭಾಡಿಸಿದ (ಕುವ್ಯಾ. ೧೩-೦೪). ೩. (ತನಗೆ) ಸಂಬಂಧ ವಿಲ್ಲದ ವಿಷಯದಲ್ಲಿ ಬಾಯಿ ಹಾಕುವಿಕೆ; ಅಧಿಕಪ್ರಸಂಗತನ. ೪. ಹೊಟ್ಟೆಕಿಚ್ಚು; ಮತ್ಸರ. [ಸಂ.]

**ಪುರೋಭಾಗಿ** (ಗು). ೧. ಅಧಿಕಪ್ರಸಂಗ ಮಾತುವ. ೨. ಕುಹಕ ಬುದ್ಧಿಯುಳ್ಳ; ರಂಧ್ರಾನ್ವೇಷಿಯಾದ; ಹುಳುಕುಗಳನ್ನು ಹುಡುಕುವ ಸ್ವಭಾವದ. (ನಾ). ೩. ಮತ್ಸರಬುದ್ಧಿಯುಳ್ಳ ವನು; ದೋಷೈಕದೃಷ್ಟಿಯುಳ್ಳವನು: ಛಿದ್ರಾನ್ವೇಷಿ: "ದೋಷಗ್ರಾಹಿ ಪುರೋಭಾಗಿ" (ಕಸ್ತುಕೋ. ೦೦೦-೦೬). ೪. ಎರಡುನಾಲಗೆಯುಳ್ಳವನು; ಸುಳ್ಳುಗಾರ: "ಎರಡು ನುಡಿವವ ಪುರೋ[ಶಾಪಾ. ಪರೋ]ಭಾಗಿ ದ್ವಿಜಿಹ್ವಕಂ" (ಮುಂಣಶಾ. ೬೬-೯). [ಸಂ. ಪುರೋಭಾಗಿನ್]

**ಪುರೋಭಿವೃದ್ಧಿ** (ನಾ). ಮುಂದಿನ ಏಳಿಗೆ; ಉತ್ತರೋತ್ತರ ಉನ್ನತಿ,— ಶ್ರೇಯಸ್ಸು: ಅವನು ಎಷ್ಟರ ಮಟ್ಟಿಗೆ ಪುರೋಭಿವೃದ್ಧಿ ಹೊಂದುವುದು ಸಾಧ್ಯವೋ ಅಷ್ಟು ಮಟ್ಟಿಗೆ ಪುರೋಭಿವೃದ್ಧಿ ಹೊಂದುವುದಕ್ಕಾಗುವುದಿಲ್ಲ (ಶ್ರೀಮೂ. ೦೩೯); ವ್ಯಕ್ತಿಯ ಪುರೋಭಿವೃದ್ಧಿ . . . ರಾಷ್ಟ್ರದ ಅಖಂಡ ಹಿತ (ಶಿಕ್ಷದ. ೨೬). [ಸಂ.]

**ಪುರೋಹಿತ** (ಗು). ೧. ಮುಂದೆ ಇರಿಸಿದ,-ಇಟ್ಟ. ೨. ನೇಮಕ ಮಾಡಿದ; ನಿಯಮಿಸಿದ. (ನಾ). ೩. ಕಾರ್ಯನಿರ್ವಹಣೆಗಾಗಿ ನಿಯಮಿತನಾದವನು. ೪. (ಒಂದು ಮನೆತನದ) ಎಲ್ಲ ಧಾರ್ಮಿಕ ವ್ರತಾದಿಗಳನ್ನು ತಾನೇ ಮುಂದಾಗಿ ನಿಂತು ಮಾಡಿಸುವವನು: "ಪ್ರಶಾಂತಿಕಾನುಷ್ಠಾನರತಂ ಕೃತಶಾಂತಿವಿಧಾನಂ ಸೌವಸ್ತಿಕಂ ಪುರೋಹಿತ ನಾತಂ" (ಪಮ್ಪುಕೋ. ೬೦-೩೯); ಪುರೋಹಿತು . . . ಅಟ್ಟುಲಿವೇಟ್ಟನವರ್ಗೆ ಶಾಸನಹಪರಂ (ಅರಿಪು. ೦೯-೩೦); ನಾಮಕರಣೋತ್ಸವಮಂ ಮಾಡಲೆಂದು ಗಾರ್ಗ್ಯನೆಂಬ ಪುರೋಹಿತಂ . . . ಪರಸಿ ಪೋಪುದುಂ (ಹಂಪ. ೩-೨೬ ಪ); ಪೂಜಿಯೊಳಗೆ ಪುರೋಹಿತರನವಗಡಿಸಿ ಧರ್ಮದ ಬಲದಿ ನಾಕಕೆ ನಡೆವ ರಾಯರ ಹೊಯಿದಿಳಿಯಲಿಕ್ಕುವರಧೋಗತಿಗೆ . . . ನಿರ್ಜರರು (ಕುವ್ಯಾಅ. ೯-೬೬). [ಸಂ.]

**ಪುರೋಹಿತಪ್ರಭುತ್ವ** (ನಾ). ಧರ್ಮಾಧಿಕಾರಿಗಳ ಅಧಿಕಾರ: "(ಧರ್ಮ ವಿಷಯಗಳಲ್ಲಿ) ಪುರೋಹಿತಪ್ರಭುತ್ವ" (Hierarchy. ೩೬೪). [ಸಂ.]

**ಪುರೋಹಿತರತ್ನ** (ನಾ). [ಜೈನ] ಚಕ್ರವರ್ತಿಗೆ ಒದಗುವ ಏಳು ಜೀವರತ್ನಗಳಲ್ಲಿ ಒಂದು; ಉತ್ತಮನಾದ ಪುರೋಹಿತ: ಶಾಂತಿಕಪೌಷ್ಟಿಕಕ್ರಿಯಾಕುಶಲನುಂ ಧರ್ಮಕಾರ್ಯಾದಿಕುಶಲನುಮಪ್ಪ ಬುದ್ಧಿಸಾಗರನೆಂಬ ಪುರೋಹಿತರತ್ನಮುಂ . . . ಮನೋಹರಮಪ್ಪ ಸ್ತ್ರೀರತ್ನಮುಮೆಂದಿಂತು ಜೀವಾಜೀವರತ್ನಂಗಳಂ . . . ಪೂಜಿಸಿ (ಅರಿಪು. ೦೦-೩ ಕ); ಚಕ್ರವರ್ತಿಯನೆಯ್ದಲೀಯದೆ ರಾಜ್ಯತಂತ್ರವೆಲ್ಲಮಂ ಸಂತಯ್ಸಿ ನಡೆಯಿಸುವ ಪುರೋಹಿತರತ್ನಮುಂ (ಜೀಕಸ. ೦೬-೨೩). [ಸಂ.]

**ಪುರ್ಗಿ** 'ಪುಟ್ಗಿ' ನೋ.

**ಪುರ್ಗು** 'ಪುಟ್ಗು' ನೋ.

**ಪುರ್ಚು**, ಪುಚ್ಚು, ಹುಚ್ಚು (ನಾ). ೧. ಮರುಳು; ಬುದ್ಧಿಭ್ರಂಶ; ಮತಿಭ್ರಮಣೆ: ಸಂಭವಿಸಲ್ ವಾರುಣಿಯಿಂದೆ ಪುರ್ಚು ದಿನಪಂ ತಾಂ ಬಿಳ್ದನಪ್ಪಾದ್ರಿಯೊಳ್ (ಚಂದ್ರಶ್ರೀ. ೮೦-೩); ಇಂತೆಪಾಗೆ ಪೆಕೊರ್ಗರಗು —ಆ ಪುರ್ಚು ಪಡಿದೊಡಂ (ಅಕ್ರಕ್ರಾ. ೦೦-೨೩೩). 'ಪುರ್ಚುಗೊಳ್' ಪರಾ. ೨. ಮರುಳಂ ಹಿಡಿದ ವ್ಯಕ್ತಿ; ಬುದ್ಧಿಭ್ರಂಶವಾದವನು: ಅಕಟಾ, ಮನವೇ, ನೀಂ ಪುರ್ಚನಾ! (ಹುಸೂಕ. ೦-೯ ಕೀಳು).

ಪುರ್ವ್ವಸಿ[ದ್ಧಾ]ಯ ಕಟಿದು[ಕೊ]ಣ್ಡರಪ್ಪಡೆ . . . ಲೋಕಕೆ ಸಲ್ಗ (ಶಾಶ. XI-1, ೩೩-೪; 933). [ <ಪೂರ್ವ + ಸಿದ್ಧಾಯ ]

**ಪುರ್ವಿಕ್ಕು**, ಪುರ್ಬಿಕ್ಕು, ಹುಬ್ಬಿಕ್ಕು (ಕ್ರಿ). ೧. ಹುಬ್ಬು ಹಾರಿಸು ; ಹುಬ್ಬಿನಿಂದ ಸನ್ನೆ ಮಾಡು : ತನ್ನೊಳೋತಿರ್ದವರ್ ಕಟಿದಂದಾಕ್ಷಣದೊಳ್ ಧರಾರಮಣ ಮಾತೊರ್ವರ್ಗೆ ಪುರ್ವಿಕ್ಕುವರ್ (ಶಂಖಪು. ೬-೭೯). ೨. ಹುಬ್ಬುಗಳನ್ನು ಎತ್ತರಿಸು ; ಹುಬ್ಬುಗಳ ಚಲನೆ ಮಾಡು ; ಹುಬ್ಬೇರಿಸು : ಬೆಟ್ಟುಪನೇಡಿಸುತುಂ ಪುರ್ವಿಕ್ಕುವೊಡಂ ಕಣ್ಮುಟಲೆದುಂತದಾಗಳೆ ಮಣ್ಣುಂ (ಲೋಕೋಪ. ೯-೩೫) : ಬೆರಲನಾಡಿಸುತ್ತುಂ ಪುರ್ವಿಕ್ಕುತ್ತುಂ ಸೊಕ್ಕಿದರಂತೆ ಮರಳ್ಗೊಂಡವರಂತೆ ದೆಸೆಯಂ ನೋಡುತ್ತುಂ (ಧರ್ಮಾಮೃ. ೫-೦೩೬). **ಪುರ್ಬಿಕ್ಕು** : ೨. ಪುರ್ಬಿಕ್ಕಿ ಪಲ್ಗಿರಿದು ಹುಟ್ಟಿಂದು ಕಿರಾತಕಾಂತೆಯರಂ ಪಿಂಗೆ ನಗಿಸುತಿರ್ಪ ಮರ್ಕಟ ಪ್ರಕರದಿಂ (ಗಿರಿ. ೦-೦೨೯ ವ); ಪುರ್ಬಿಕ್ಕಿ ಪಲ್ಗಳಂ ಕಿರಿದು . . . ಬಿಸಿಲ್ ಪರ್ಬಿರೆ ಕಾಯುತ್ತಿರ್ದುದು ಕೊರ್ಬಿದ ವೃಕ್ಷಾಗ್ರದಲ್ಲಿ ಮರ್ಕಟರಾಜಂ (ರಕಶು. ೨-೮೭); ಕೊಂಬನೇಱಿ ಪುರ್ಬಿಕ್ಕುವ ಮರ್ಕಟಂ ನಗದ ತಾಪಸರಂ ನಗಿಸಿತ್ತರಣ್ಯದೊಳ್ (ಅವ್ಯಚ. ೦೦೦೬). **ಹುಬ್ಬಿಕ್ಕು** : ೨. ನೆಗೆನೆಗೆದು ನಭಕುಪ್ಪರಿಸಿ ತಾರೆಗಳ ತಿಱಿದಂಭೋಜಮಿತ್ರನ ಮೊಗಂ ಹುಬ್ಬಿಕ್ಕುವವು (ಕೊರಡ. ೬-೬-೩೪). [ಪುರ್ವು+ಇಕ್ಕು]

**ಪುರ್ವು**, ಪುಬ್ಬು, ಪುರ್ಬು, ಹುಬ್ಬು, ಹುರ್ವು (ನಾ). ಎರಡೂ ಕಣ್ಣುಗಳ ಮೇಲ್ಭಾಗದಲ್ಲಿ ಹಣೆಗೆ ಹೊಂದಿದಂತೆ ಇರುವ ಕಿರಂಗೂದಲಿನ ಸಾಲು ; ಭ್ರೂ : "ಪುರ್ವಿನೆ ಭ್ರೂಲತಾಹ್ವಯಂ" (ಕಜಾಕ. ೫೭); ಕುಡುಪುಂ ಕಯ್ಯುಂ ಜತಿಯೊಳ್ ತಡತಡಪರೆ ವಾದಕಂಗೆ ಪುರ್ವಿಂ ಜತಿಯಂ ತೊಡರದೆ ನಡೆಯಿಸಿ ಪುರ್ವದೆ ಕುಡುವೆನೆ ನರ್ತಕಿಯ ಸಭೆಗೆ ವಾದಕಿಯಾದಳ್ (ಅಂಶು. ೯-೩೨) ; ಪುರ್ವಿನ ಗಂಟುಂ ಕಣ್ಣೊಳ್ ಪರ್ವಿದ ಕಿಸುಸೆರೆಗಳುಂ...ಕರಮಾರ್ವಿಸೆ ಮುನಿಸಿಂ ಕುಮಾರನಂದಿಂತೆಂದಂ (ಶಂಖಪು. ೬೦-೦೨); ಪುರ್ವಿನ ಕೊರ್ವು ಕರ್ವುವಿಲ್ಲಂ ಕೀಳ್ಮಾಡೆ (ಗಿರಿ. ೨-೦೦೩ ವ). **ಪುಬ್ಬು** : ಒಲವ ಕಣ್ಪುಬ್ಬು ಮೆಯ್ಮೆಚ್ಚಿ ಕೆತ್ತುತ್ತಿರ್ಪಿರೆ (ಕಜ್ಞರ. ದೇ. ೦೨೬-೦೪). **ಪುರ್ಬು** : "ಪುರ್ಬುವಲ್ಲಿ ತಾಂ ಭ್ರೂನಾಮಂ" (ಜಗ್ಗಕೋ. ೭೦-೦೮); ಜರೆಯಿಂದಂ ಪುರ್ಬು ಜೋಲಲ್ (ಕಾದಂಪೂ. ೦೭೩); ಕರ್ಬಿನ ಬಿಲ್ಲಂ ಗೆಲೆ ಪುರ್ಬು . . . ದೇಸೆ ಪೊಚ್ಚ ಪೊಸತಾಯ್ತು (ಗಜಾಯು. ೦-೬); ನೋಟದಲಿ ಮಾತಾಡಿ ಪುರ್ಬಿನ ಬೇಟದಲಿ ಬೆಳ್ಮಾಡಿ . . . ಬೇಟಕಾತಿಯರೊಪ್ಪಿದರು ನರನಾಥನಿದಿರಿನಲಿ (ಕೊರಡ. ೦-೩-೪೦). **ಹುಬ್ಬು** : ಬಿಟ್ಟ ಕಣ್ಣು ಬಿಗಿದ ಹುಬ್ಬು ಬ್ರಹ್ಮರಂಧ್ರದಲ್ಲಿ ಕಟ್ಟು ಗುಡಿಯ ಕೂಡಲಸಂಗಮದೇವ ಹಿಡಿವಡೆವ (ಬಸವ. ೬೦೪) ; ಕೆಂಪ ಕಾಱಿದವಾಲಿಗಳು . . . ಗಂಟಿಕ್ಕಿದನು ಹುಬ್ಬುಗಳ (ಕುಮ್ಮಾರಿ. ೫-೨೬) ; ನೋಟನಲಿ ಮದನಾಸ್ತ್ರವೆದೆಯಲಿ ನಾಟಿಪವು ವಿಟರುಗಳ ಹುಬ್ಬಿನ ಬೇಟದಲಿ ಬೆಂಡಾದರಗ್ಗದ ನಿರ್ಜಿತೇಂದ್ರಿಯರು (ಕೊರಡ. ೦-೦೪-೨೪). **ಹುರ್ವು** : ಹುರ್ವ್ವಿನ ಜರ್ವ್ವು ವಿಶಿಷ್ಟರ ಹುರ್ವ್ವಿದ ಬಡತನದ ಕೊರ್ವ್ವನುಡುಗಿಸು ಮದಱಿಂ ಹುರ್ವ್ವಿನವರೆಂಬ ನಾಮದಗುರ್ವ್ವಿನ ಗೋವರ್ದ್ಧನಂಗೆ ನಂದನನೆನಿಪ . . . ನಾಗದೇವಂ (ಎಇ. V, ೧೭ ೨೫ ; 1142).

**ಪುರ್ವು ಗಂಟಿಕ್ಕು, ಪುರ್ಬು ಗಂಟಿಕ್ಕು, ಹುಬ್ಬು ಗಂಟಿಕ್ಕು**=ಕೋಪದಿಂದ ಮುಖವನ್ನು ಸಿಂಡರಿಸು : "ಭ್ರುಕುಟಿಃ, ಭ್ರೂಕುಟಿಃ—ಈ ೨ ಹುಬ್ಬು (ಪುರ್ವು) ಗಂಟಿಕ್ಕುವುದು" (ಕಣಾದು. ೦೨೬-೯೪) ; ಬಳಿಕೊರ್ವಳಪರಾಧರಮಣನಂ ಕಂಡು ನೆಲೆದೊಲೆ ನಡುಗೆ ಪುರ್ಬು ಗಂಟಿಕ್ಕಿ . . . ಶಿಳಿವಲೆಂದೆಱಗಿದಿಸಿಮುನಸನೊದೆಯೆ (ಶಬಶು. ೦೦-೩೯) ; ಪೋರದೆ ಪುರ್ಬು ಗಂಟಿಕ್ಕದೆ ಮುಸಿಯದೆ ಸೇರಿ ಸೇವೆಯನೆಸಗುವುದು (ಹರಿಬ. ೦-೨೫) ; ಹುಬ್ಬು ಗಂಟಿಕ್ಕಿದ ಮುಖ ಪುನಃ ಅರಳಿಕೊಂಡಿತು (ಕೀಮೋಟ. ೦೦೦); ಪೋಡಂ ಮಾತ್ರೆ ಹುಬ್ಬು ಗಂಟಿಕ್ಕಿ ನುಡಿದರು (ದಶಿಟ್ಟ. ೦೭). **ಹುಬ್ಬಾಡು** = ಹುಬ್ಬನ್ನು ಅಲುಗಾಡಿಸು : ಆಡಿಂಗ ಆಕರ್ಲೀಟ ಕೋಡಗಕ್ಕೊಂದು ದಿನ ಕೋಡಗವು ಕೋಟ ಮಡಿದಲ್ಲಿ ಬಳ್ಳು ಹುಬ್ಬಾಡ ಹೊತ್ತಿಲ್ಲ (ಸರ್ವಜ್ಞ. ೨೩೬). **ಹುಬ್ಬು ಕುಣಿಸು**=ಹುಬ್ಬನ್ನು ಎತ್ತರಿಸು ; ಹುಬ್ಬು ಹಾರಿಸು. **ಹುಬ್ಬುಗಂಟು ಹಾಕು**=ಪುರ್ವುಗಂಟಿಕ್ಕು : ಆಗ ಅವನು ಹುಬ್ಬುಗಂಟುಹಾಕಿಕೊಂಡು ನನಗೆ ಬಹಳ ಕೆಲಸವದೆ . . . ಎಂದು ಓಡ ಹತ್ತಿದನು (ಮುದ್ರಾರಾ. ೪-೫೭); ಆ ರಾಕ್ಷಸನು . . . ಹುಬ್ಬು ಗಂಟುಹಾಕಿಕೊಂಡು ಅವುಡು ಕಚ್ಚಿ, ಇದು ಯಾರು ಎಂದು ಗರ್ಜಿಸಿದನು (ವಶಕಾ. ೪೭). **ಹುಬ್ಬುಗೈಹಚ್ಚು** = (ದೂರದ ವಸ್ತುವು ಚೆನ್ನಾಗಿ ಕಾಣದಾದಾಗ) ಹುಬ್ಬಿನ ಬಳಿ ಅಂಗೈಯನ್ನಿಟ್ಟು ನೆರಳು ಮಾಡು : ದೂರದಲಿ ಯಾರೋ ಮುಬ್ಬುಗತ್ತಲಲಿ ಹುಬ್ಬುಗೈಹಚ್ಚಿ ನೋಡುತಿದ್ದಾರೆ ಹೊರಳಿ ಹೊರಳಿ (ಶಂಖು. ೧೭-೩೦). **ಹುಬ್ಬು ಹಾಱಿಸು, ಹುಬ್ಬು ಹಾರಿಸು** = ಹುಬ್ಬನ್ನು ಕುಣಿಸು : ಮೋಱೆಯೊಲೆದು ನೋಡಿ ನೃಪಸುತರಿಗೆ ಹುಬ್ಬು ಹಾಱಿಸುವಳು ನಸುನಗುತ (ಭರತ. ೦೨-೬೦); ಚೆಲುವಾದ ಪೋರಿ ಎಂದೊಬ್ಬ ಹುಬ್ಬು ಹಾರಿಸಿದನು (ಕೃಪಕು. ೦೩೬)

[ದೇ. ॥ ತಮಿ. ಪುರುವಮ್, ಪುರಊರ ; ಮಲ. ಪುರಿಗ; ತುಳು. ಪುರುಬು, ಪುರ್ಬು. / ಸಂ. ಭ್ರೂ]

**ಪುಲ್**, ಪುಲು, ಪುಲ್ಲು, ಹುಲು, ಹುಲ್ಲು (ನಾ). ೧. ಗರುಕೆ; ತೃಣ; ℗ ಸಾಮಾನ್ಯವಾಗಿ ದನ, ಕರು ಮುಂತಾದುವುಗಳ ಆಹಾರ : ಬೆಳೆಯೊಳ್ ಪುಲ್ಗಳ್ ಪಲವಕ್ಕುಂ (ವಡ್ಡಾರಾ. ೮೭-೦೪); ಶತಬಿಂದುವಿನ ಮಕ್ಕಳಪ್ಪಯ್ವರು ಗಾಳಿಗೊಡ್ಡಿದ ಪುಲ್ಲ ಬಿಂದುಗಳಂತೆ ನಕುಲಂ ನೆಲಕ್ಕೆ ಸೋಘತಂ ಮಾಡಿದಂ (ಶಂಖಪು. ೧೩-೪೦ ವ); ಪಲ್ಲಂ ಸುಲಿವೊಡಂ ಕಿವಿ ಕೀಂಬೊಡೆ ತುಱಿಸುವೊಡು ಪುಲ್ಲಿಂದೆನಿತುಂ ಪ್ರಯೋಜನಮುಂಟು (ಶಂಖಶಂ. ೩೪-೦೪). ೨. (ಅಲಂ) ಬೆಲೆಯಿಲ್ಲದ ವಸ್ತು; ನಿಕೃಷ್ಟವಾದುದು; ಕ್ಷುದ್ರವಾದುದು ; ಅಲ್ಪವಾದುದು : ಅವನಂ ಪುಲ್ಲಂ ತಿಳಿದಂ . . . ಸ್ಮರಂ ಹರನಂ ಪುಲ್ಗೆ ಬಗೆದಂ (ಕಜ್ಞಾತು. ೨೧೯ ತ್ರಯೋ). **ಪುಲು** : ೧. ಕ್ಷೀರಶರಧಿಯೊಳಿಪ್ಪ ಹಂಸಂ ಕ್ಷಾರನೀರಂ ಸೇವಿಪುದೆ ಕಂಠೀರವಂ ಪುಲು[ಶಾಶಂ. ಲ್] ಮೇವುದೇ (ಬಸಶು. ೧೦-೦೦); ಸುತನ ಸಾವಂ ಲೋಗರಱಿಯದ ಗತಿಯೊಳು ಗೋದಣದೊಳಗದಂ ಹಾಯ್ಕಿ ಪು[ಶಾಶಂ.ಹು]ಲು ಮುಚ್ಚಿ (ಬಸಶು. ೩೪-೫೭). ೨. 'ಪುಲುಬೂತು' ಪರಾ. **ಪುಲ್ಲು** : ೧. ವ್ಯಳಕಟ್ಟಾಡರ ತಟ್ಗಿಯುರಾಳ ಆವುಕ್ಕ ಇಯೂರೆ ಪಣ ಪುಲ್ಲು (ಎಕ. IV, ಗುಂಡ್ಲುಪೇ. ೮೭-೪; ಸು. 750); ಪಶುಗಳು ಬೆಳೆದ ಹೊಲವತ್ತ ತೆಗೆಯಲು ಸರಸಿಗಳು ತುಂಬಿರ್ದ ಬೆಂಚೆಗಳ ಒತ್ತಿನಲಿ ನಿಲಿಸಿದಡೆ ಬಾಯ್ದೆಱೆಯಿತ್ತೆ ಪುಲ್ಲಿಗೆ ಮೋಱೆಯಂ ನೀಡಿತ್ತೆ ನೀರಿಂಗೆ (ಬಸಶು. ೬೦-೨೩). **ಹುಲು** : ೧. ಎಂದಿನಂತುದಯಕಾಲದೊಳೆದ್ದು ಹುಲು ಹುಳ್ಳಿಗೆಂದರಣ್ಯಕ್ಕೆ ನಡೆದು (ಹಕಶಾ. ೦೨-೭). ೨. ಘಾಸಿಯಾದನು ದೈತ್ಯ ಲಜ್ಜೆಯು ನೀಗಿ ಹುಲುವಾಗಿ . . . ನಾಚಿ ಲಂಕೆಯ ಹೊಕ್ಕ ರಾವಣನು (ಕೌಶಿರಾ. ೨೨-೫೫); ನಂಟತನ ಕೂಡಿ ಬರುವ ಹುಲು ಆಸೆ ನಿನಗಿನ್ನು ಬೇಡ (ಕುರುಕಾ. ೦೭). 'ಹುಲುಮನುಜ' ಪರಾ. **ಹುಲ್ಲು** : ೧. ಹುಲ್ಲ ಕಿಚ್ಚು ಹೊಲೆಯನ ಮೇಳಾಪ ಅಲ್ಲಿ ಹುರುಳಿಲ್ಲ (ಬಸವ. ೧೦೨); ಹಳೆಯಮ್ಮ ಗುಜವ ಸುಟ್ಟಂದಾಸರಕತ್ತಿ ನಡೆವ ಬೀಡ ನಡೆಯಲೀಯದೆ ಕಾದುತ್ತಿರಲು . . . ಹುತ್ತಮೇಱಿ ಹುಲ್ಲಂ ಕಚ್ಚಿದರ ಕೊಲಲೊಲ್ಲದೆ ಕಾಯ್ದು ಕಳಿಪಿ ಸತ್ತು ಸುರಲೋಕಪ್ರಾಪ್ತನಾದ (ಮೈಶಂ. ೦೯೩೦, ೬೭-೯; 1164); ಹೂವ ತರುವರ ಮನೆಗೆ ಹುಲ್ಲ ತರುವ ಅವ್ವೆ ಲಕುಮಿಾರಮಣ ಇಷಗಿಲ್ಲ ಗರುವ (ಪುರಂದ. ೦-೦೪೭ ಪಲ್ಲವಿ); ಹುಲ್ಲಾಗು ಬೆಟ್ಟದಡಿ. ಮನೆಗೆ ಮಲ್ಲಿಗೆಯಾಗು (ಮಂಕುತಿ. ೭೮೯): ಹುಟ್ಟಿಸಿದ ದೇವರು ಹುಲ್ಲು ಮೇಯಿಸಿಯಾನೆ ?

(ಗಾದೆ). ೨. ನಿಮ್ಮ ಮಂಡೆಗೆ ಹೂವ ತಹೆನಲ್ಲದೆ ಹುಲ್ಲ ತಾರೆನು (ಮಹಾರೇ. ೬. ೬೦-೧೯೬).

ಪುಲ್ಲಂ ಕರ್ಚು= (ಶರಣಾಗತಿಯನ್ನು ಸೂಚಿಸುವ ಸಲುವಾಗಿ) ಬಾಯಲ್ಲಿ ಹುಲ್ಲನ್ನು ಕಚ್ಚಿ ಹಿಡಿ : ಪುಲ್ಲಂ ಕರ್ಚಿಜು ಪುತ್ತನಡಿಗೆಜಗು (ಶಬರ. ೩-೦೯೯); ಕಲರ್ ಶರಣೆಂದು ಉದಾರನ ಕಾಲ್ಗೆಱಗಿ ಪುಲ್ಲಂ ಕರ್ಚಿ ಪೊಡೆವಟ್ಟರ್ (ವಡ್ಡಾರಾ. ೬೨-೦೩). ಪುಲ್ಲ ನೀರ್=ಹುಲ್ಲಿನಲ್ಲಿ ನಿಂತಿರುವ (ಮಂಜು, ಮಳೆಹನಿ ಮೊದಲಾದುವುಗಳ) ನೀರು : ಪನಿವ ಪುಲ್ಲ ನೀರ್ಗಳ್ವೆರಸಲರುದುರುತ್ತಮಿರ್ದುದವಂತಾ ಕ್ಷಣದೊಳ್ (ಕಾದಂಬ. ೦೧೭). 'ಪನಿನೀರ್' ಪರಾ. ಪುಲ್ಲ ಬೆಂಟೆ=ಹುಲ್ಲಿನ ಹಗ್ಗ : ಪುಲ್ಲ ಬೆಂ[ಟಾಕಾಂ. ಪುಲ್ಲ ಬೆರ, ಪೊಲ್ಲ ಬೆಂ]ಟೆಯುಂ ಪೊಸೆದು ಕಿಚ್ಚುಮೊಗ್ಗೆಯ ಕೊಡನುಂ ಬೆಂಟೆಯುಮಂ ಕೊಂಡು ಪೋಗಿ (ವಡ್ಡಾರಾ. ೦೫೩-೦೦). ಪುಲ್ಲ ಮುಱಿ=ಹುಲ್ಲಿನ ತುಂಡು ; ಗರುಕೆಯ ತುಂಡು : ಪುರಹರನಿಟ್ಟ ಪುಲ್ಲ ಮುಱಿಯಂ ಮುರವೈರಿ ವಿರಿಂಚಿಮುಖ್ಯನಿರ್ಜರರದನೆತ್ತಲಾಱದೆ ಪಲಂ ಧೃತಿಗುಂದಿದರ್ (ರಾಜಶೇ. ೦೩-೨೪).

[ದೇ. ೫ ತಮಿ. ಮಲ. ಕೋತ. ತೊದ. ಪುಲ್; ತುಳು. ಪುಲ್ಲು ;ಕೊಡ. ಪಿಲ್ಲ್; ತೆಲು. ಪುಲು, ಪುಲ್ಲು, ಪಿಲ್ಲು]

**ಪುಲ.** ಪುಳ$_2$ (ಗು). ೧. ದೊಡ್ಡ ; ಬೃಹತ್ತಾದ. (ನಾ). ೨. ಗಾತ್ರ ; ಆಕಾರ. ೩. ನವಿರೇಳುವಿಕೆ ; ಪುಳಕ. ಪುಳ್$_2$. ೩. ಕಸ್ತೂರಿಗೆ 'ತಾಯಿ' ಎಂಬ ಶಬ್ದ ಪುಳವನ್ನುಂಟುಮಾಡಿತು (ಶಂಕರಕ. ೦೨೬). [ಸಂ.]

**ಪುಲಕ.** ಪುಳಕ$_1$ (ನಾ). ೧. ಮೈನವಿರೇಳುವಿಕೆ : ರೋಮಾಂಚನ : ಪುಲಕಂ ಜಾನಕಿಗುತ್ಸವಂ ಜನಕರಾಜಂಗೆ . . . ಆಯ್ಲೇಱಿಸಿ ನೀವಿ ಚೇಪೊಡೆಯೆ ವಜ್ರಾವರ್ತಮುಂ ರಾಘವಂ (ಶಂರಾವಿಜ. ೩-೯೯) ; ತೃಣರಾಶಿ ಮೈದೋರೆ ಪಚ್ಚೆಯ ಪುಲಕದಂತೆ (ಚತ್ರಾಂಗ. ೬೦ ೦೬೬೩). ೨. (ಪ್ರಾಣಿಗಳ ಮೈಗೆ ಅಂಟಿಕೊಳ್ಳುವ) ಕ್ರಿಮಿ. ೩. ಅನ್ನದ ಉಂಡೆ. ೪. ಹಾರಕ ಮೊದಲಾದ ತೃಣಧಾನ್ಯ. ಪುಳಕ$_1$ : ೧. "ಪೊಂಪುಱಿಯನೆ ಪುಳಕಾಕ್ಕುಂ" (ಶಬಮ. ೯); ತಿಳಿಪಲದಿಗೆಱಗಿದ್ದೊಪನ ತಳಂಗಳಾ ತೀಟದಿಂ ಪದಂಗಳೊಳೊಗೆದಾ ಪುಳಕಚಯಂಗಳ್ ಕಳೆದುವು ಮುಳಿಸು ನಲ್ಲಳ್ಗೆ (ಶಬರ. ೩-೦೦); ಪುಳಕಂ ಪುದಿದಿರೆ ರಾಗಂ ಪೊಳೆಪು ತನುರುಚಿಗೆ ಮಾಡೆ . . . ಕಳಿಕೆಯೊಳಿ ತುಱುಗಿ ಫಳಿರೆಳೆ ತಳತಳಿಸಿದದೊಂದಶೋಕಲತೆಯನೆ ಪೋಲ್ತಳ್ (ಅಂಶ್ಚಿ. ೬-೨೯); ಮಾನ ಮಾನ ಬೆರಸಿದಲ್ಲಿ ತನು ಕರಗದಿದ್ದರೆ ಸೋಂಕಿನಲ್ಲಿ ಪುಳಕಂಗಳು ಹೊಱಹೊಮ್ಮದಿದ್ದರೆ . . . ಎನ್ನಲ್ಲಿವಿಲ್ಲವಾಗಿ ಆನು ಡಂಭಕ ಕಾಣಿರೇ (ಬಸವ. ೩೭೮). "ಅನ್ನದಗುಟಲ್ಲಿ ಧಾನ್ಯದಲಿ ಪುಳ[ಕಾ..., ಳು]ಕವೆಂದೆನಿಕ್ಕು" (ಮಂಗರಾ. ೦೯೩-೨೨). ೫. ಅಕ್ಕರೆ; ಕಕುಲಾತಿ: ಈವತ್ತು ಒಮ್ಮಿಂದೊಮ್ಮೆಲೆ ಆ ಚಂದ್ರಭಾಗಕ್ಕನ ಬಗ್ಗೆ ಇಷ್ಟೊಂದು ಪುಳಕವೇಕೆ ? (ಮಯೂರಾ. ೩೦); ಆ ಹುಡುಗಿಯ ಬಗ್ಗೆ ಇಷ್ಟೇಕೆ ಪುಳಕವೋ (ಮಯೂರ. ೦೧೩). ೬. ಒಂದು ಬಗೆಯ ರತ್ನ. "ಪುಳಕಮೆನಿಕ್ಕುಂ ರತುನೋಪಳಮುಂ . . . ಕೀಟಕಮುಂ" (ಪಡ್ತ್ರಕೋ. ೦೨೯-೬೮). [ಸಂ.]

**ಪುಲಕಂಗೂಡು** (ಕ್ರಿ). ನವಿರೇಳು ; ರೋಮಾಂಚಿತವಾಗು : ನಿಮಿರ್ದೆತ್ತಿದೊಂದು ಪುರ್ವಿಂ ಮೆರೆವಿಃ ಪದನುಂ ಪುಲಕಂಗೂಡಿದ ಇದಱ ಕನ್ನಡಿಪುದೆ ನ್ನೊಳಿಪಣಭರತಿಯುಂ (ಶಾಕುಂತ. ೩೯-೬೬). [ಪುಲಕ + ಕೂಡು$_1$]

**ಪುಲಕವೇರು** (ಕ್ರಿ). ೧. ರೋಮಾಂಚನ ಹೊಂದು. ೨. (ಆಲಂ) ಚಿಗುರು ; ಮೊಳಕೆಯೊಡೆ : ನನ್ನ ಶರೀರ, ಮನಸ್ಸು ವಸಂತದ ಮಲಯ ಪವನಕ್ಕೆ ಪುಲಕವೇರುವ ಬಕುಲವನದ ನವಪಲ್ಲವರಾಶಿಯು ಹಾಗೆ ಕಂಪಿಸಿ ಕಂಪಿಸಿ ತತ್ತರಿಸಿ ಹೋಯ್ತು (ಇಶ್ಸ್ವಕ. ೧೧೬).

[ಪುಲಕ + ಏರು$_1$ (< ಏಱ್$_1$)]

**ಪುಲಕಾಂಕುರ,** ಪುಳಕಾಂಕುರ (ನಾ). = ಪುಲಕ ೧: ಪುಲಕಾಂಕುರ ಮೊಗತರೆ ಕೋಮಲೆಯುಪ್ಪಿದ ಕಾಂತಕರಾಂಬಕಂ ಕಣ್ದೆಱೆದಾ ಕುಲಟೆಯೆ ತಳ್ಳಳೆಗೆತ್ತುಮ್ಮಳಿಸಿದನಿಂತಪ್ಪ ಪಾಪಭೀರುಗಳೊಳರೇ (೦೬೮ವ. ೦೧-೦೩೦). **ಪುಳಕಾಂಕುರ** : ಒದವೆ ಪುಳಕಾಂಕುರಂಗಳ್ . . . ಇದಿರೆದ್ದಳ್ ತರಳನಯನೆ ಸಂಭ್ರಮದಿಂದಂ (ಕಾದಂಬ. ೩೩); ಕೈಗನ್ನಡಿಯುವೊಲೆಲ್ಲರ ಕೈಗೊಪ್ಪುವ ಮಗನನೆತ್ತಿ ಪುಳಕಾಂಕುರಮಂ ಮೈಗಗ್ಗಳಿಸದ ಕಾಂತೆಯು ಕೈಗವುದೇಂ ಭೇದಮುಂಟೆ ಸೀರೆಯ ಕೈಗು (ಮಲ್ಲಿಪು. ೩-೧೦೩) ; ನೆಗೆದ ಪುಳಕಾಂಕುರದ ನೆಱೆ ಮುಗುಳ್ದೆಕ್ಕಿಯು ಮಿಡುಪದಂಗದಿಳಿದೇಱದೆ ನೆಟ್ಟಗೆ ನಿಂದ ಸುಯ್ಯ ಸುಳಿಯದ ಬಗೆಯ ಪೊಡರ್ಪಸಿದು ತಾಪಸಂ ತಪಮಿರ್ದಂ (ಶಬರಂ. ೨-೯೯). [ಸಂ.]

**ಪುಲಕಿತ,** ಪುಳಕಿತ (ಗು). ೧. ರೋಮಾಂಚನ ಹೊಂದಿದ ; ರೋಮಾಂಚಿತವಾದ : ದಶರಥಮಹೀನಾಥು ಸುತಮುಖನಿರೀಕ್ಷಣಾ ಭರದಿಂ ಪಾರಿಜಾತಂ ಕೋರಕಿತಮಾದಂತೆ ಪುಲಕಿತಶರೀರನಾಗಿ (ಶಂರಾವಿಜ. ೩-೦೦೬ವ). (ನಾ). ೨. ರೋಮಾಂಚನಗೊಂಡ ವ್ಯಕ್ತಿ : ಅಕ್ಕಿಮುಚ್ಚೆ ಪುಲಕಿತಳಾಗಿ ನುಡಿದಳು (ದಾಸಕಂ. ೦೬೬); ತುಂಗಕ್ಕ . . . ತುಸು ಸಮಯದ ಮೇಲೆ ಥಟ್ಟನೆ ಹೊಳೆದ ಒಂದು ಹೊಸ ವಿಚಾರದಿಂದ ಪುಲಕಿತಳಾದಂತೆ ತುಟಿ ಕಚ್ಚಿಕೊಂಡಳು (ಮಲೆಗಳ. ೩೦). **ಪುಳಕಿತ** : ೧. ಪುಳಕಿತಕಪೋಳಫಳಕಂ ವಿಳಸಿತಮದಿರಾರುಣೇಕ್ಷಣಂ ಸ್ಫುರಿತೋಷ್ಠಂ ಕೆಳದೀ ನಿನ್ನ ಮುಖಂ ತಳಮಳಗೊಳಿಸುಗುಮಿಂತು ನಿಭೃತಶೃಂಗಾರರಸಂ (ಶಬರ. ೩-೦೯೨); ಮುನಿಕಾಂತಾದರ್ಶನೋತ್ಕಂಠೆ ಪುಳಕಿತಸರ್ವಾಂಗಿ ಇಂತಾತಾತುರದೊಳಿರ್ದಳ್ (ರಾಮಾಶ್ವ. ೨೮-೪). ೩. ರೋಮಾಂಚಿತವಾದುದು: ಆಲಿಕಲ್ಲ ರೂಹಿನಂತೆ ಅರಗಿನ ಪುತ್ತಳಿಯಂತೆ ತನು ಪುಳಕಿತವಾದ ಬೆವರುಬಿಂದುಗಳಿಲ್ಲ . . . ಮನಪೂಲಿದು ನೆರೆವ ಭರವನೇನ ಹೇಳುವೆನಯ್ಯಾ (ಬಸವ. ೪೯೩) ; ಇಳೆಯೊಳ್ ಪಾರ್ವತಿಯುಮಯಿಸೆ . . . ಪುಳಕಿತಮಾಯ್ತೆಂದುಧರನ ವರವಾಮಾಂಗಂ (ಗಿಂಕ. ೩-೪೬). [ಸಂ.]

**ಪುಲಕಿತಗೊಳ್ಳು** (ಕ್ರಿ). ರೋಮಾಂಚನ ಹೊಂದು ; ಜುಮ್ಮೆನ್ನು : ಹದಿನಾರನೆಯ ಶತಮಾನದ ಉತ್ತರಾರ್ಧ ಮತ್ತು ಹದಿನೇಳನೆಯ ಶತಮಾನದ ಪೂರ್ವಾರ್ಧಗಳು ನೂತನ ಕಾವ್ಯಪ್ರವಾಹದಿಂದ ಪುಲಕಿತಗೊಂಡವು (ಶಾಮಗ. ೫೩). [ಪುಲಕಿತ + ಕೊಳ್ಳು$_1$ (<ಕೊಳ್$_1$)]

**ಪುಲಕಿಸು,** ಪುಳಕಿಸು (ಕ್ರಿ). ೧. ಪುಲಕಿತಗೊಳ್ಳು ; ರೋಮಾಂಚಿತವಾಗು : ಅಲ್ಲಿ ಕುಳಿತನು ದೊಲ್ಲನೆಯು ತನುವೆಲ್ಲ ಪುಲಕಿಸಲು (ಗಧಾ. ೨-೨೨). **ಪುಳಕಿಸು** : ೧. ಗಿರಿರಾಜನೊಡಂಬಟ್ಟುವರದಿಂದಂ ಪುಳಕಿಸುತ್ತೆ ಪುಟಮೇಳುತ್ತುಂ ಪರಿಚಾರಪಟುಗಳೆನಿಸುವ ತರುಣಿಮುತಂ ಕೂಡಿಕೊಟ್ಟು ಸಂತಸದಿಂದಂ (ಗಿಂಕ. ೩-೯). ೨. ಸಂತೋಷಪಡು ; ಉತ್ಸಾಹಿಸು : ಹರನ ಕೃಪೆಯಾಯಿತೆಂದೆನುತೆ ಪುಳಕಿಸುತಿರಲು (ಬಸಕ. ೦-೩೨); ಚೆಲುವಲರಿ ಪೋಪಂತೆ ಭಕ್ತರು ಪುಳಕಿಸುತ ಕೇಳಿಕೆಗಳಿಂ ತಾವೆಳಪಡಿಸುತಾಡುತ್ತ ಪಾಡುತ ಹೋಗುತಿರಲು(ಬಸಪು. ೩೭-೯೬) ; ಗಂಗಾತನುಜನಚಿತೋಕ್ತಿಗಳ ನೆನೆವಡಿಗಡಿಗೆ ಪುಳಕಿಸುತ ವಿನುತಮತಿ ನಡೆತರಲು (ಶುಭಾನು. ೨-೨೯).

[ಪುಲಕ + -ಇಸು$_3$]

**ಪುಲಕೇಶಿ** 'ಪುಲಿಕೇಶಿ' ನೋ.

**ಪುಲವಡು** (ನಾ). ಹುಲ್ಲುಗಾವಲು ; ಗೋಮಾಳ : ದೇವರ್ಗ್ಗೆ ಸಾಸಿರ ಬಳ್ಳಿಯ ತೋಂಟ ದೇವರ ಸುತ್ತಣ ಬೆದ್ದಲೆ ತೋಟಗಟ್ಟ ಪುಲವಡು ಕೆಂಗಾಡು (ಸೌಇಇ. IX-1. ೨೦೬-೨೩ ; 1122). 'ಪುಲ್ಪಡಿ' ಪರಾ.

[ ?. / ತುಳು. ಪುಲವಾಡೆ, ಪುಲಾಡಿ ]

**ಪುಲಾಕ** (ನಾ). ೧. ಜೊಳ್ಳಾದ ಕಾಳು. ೨. ಅನ್ನದ ಮುದ್ದೆ.— ಓಡ : "ಫಳದೆುರ್ವಿವ ತುವ ಧಾನ್ಯಾವಳಿ ಭಕ್ತಸಿಕ್ಥಕಮಿವೆ ಪುಲಾ

ಕೀಯ್ಮೆಗಳ್” (ವಸ್ತುಕೋ. ೦೨೯-೬೮). ೩. ಸಂಕ್ಷೇಪ; ಸಂಗ್ರಹಗೊಳಿಸಿ ದುದು. ೪. ಅಕ್ಕಿಯ ಗಂಜಿ. ೫. [ಜೈನ]ಐದು ಬಗೆಯ ಮುನಿವರ್ಗಗಳಲ್ಲಿ ಒಂದು; ❡ ಉತ್ತರಗುಣಭಾವನಾರಹಿತರೂ ವ್ರತಗಳಲ್ಲಿ ಪರಿಪೂರ್ಣತೆಯನ್ನು ಹೊಂದದೆ ಇರುವವರೂ ಆದ ಮುನಿಗಳು ಅಶುದ್ಧವಾದ ಪುಲಾಕ(=ಅನ್ನದ ಮುದ್ದೆ)ದಂತೆ ಇರುವುದರಿಂದ ಈ ಹೆಸರನ್ನು ಪಡೆದಿದ್ದಾರೆ: ಏತ್ಸಾನುಂ ಅಪರಿಪೂರ್ಣವ್ರತರುಂ ಉತ್ತರಗುಣಭಾವನಾರಹಿತರುಂ ಅಪ್ಪ ಪುಲಾಕರುಂ (ತತ್ತ್ವಸೂ. ೩೩೬); ಮುನಿಗಳಲ್ಲಿ ಪುಲಾಕ, ಬಕುಶ, ಕುಶೀಲ, ನಿರ್ಗ್ರಂಥ, ಸ್ನಾತಕ ಎಂದು ಐದು ಪ್ರಕಾರಗಳು (ಕೃಷಿ. ೯೯). [ ಸಂ. ]

**ಪುಲಾವು** 'ಪಲಾವ್' ನೋ.

**ಪುಲಿ**, ಹುಲಿ₁ (ನಾ). ೧. (ಅರಣ್ಯದಲ್ಲಿ ಬೇಟೆಯಾಡಿ ಜೀವಿಸುವ, ಮೈ ಮೇಲೆ ಕರಿಯ ಪಟ್ಟೆಗಳುಳ್ಳ ಹಳದಿಬಣ್ಣದ) ಒಂದು ಬಗೆಯ ಕ್ರೂರಮೃಗ ; ವ್ಯಾಘ್ರ : ಪುಲಿ ಪುಲಿ ಪರಿವರಿ ಪೋಪೊ ಗೆರೆ ಎಲೆ ಪೆಜಿಪುಗು (ಕವಿರಾ.೨-೨೬); ತಪ್ಪುಗವೃಸಾನು ಪುಲಿಯನ್ ಇಜಿದು × × × ಸತ್ತೊಪೆ (ಮೈ.ಐ. ೦೯೭೭. ೪೪ ಸ; 855); ಪೊಯ್ದು ಸಿಡಿಲ್ ತಿಂಬರೆವಾವು ಪಾಯ್ದು ಪುಲಿಯಿಂಬೀ ಬಾಧೆಯೊಳ್ ಮುಯ್ಯನೊಡ್ಡಿಸೆ (ಆದಿಪು. ೬-೪೯); ಈಂದ ಪುಲಿಯೂ ಪೋಲಿರ್ದಳ್ (ಕಮುತ. ೦೦೮ ಕೃಷೋ). ೨. ಒಬ್ಬಾತನ ಹೆಸರು: ಪೆರ್ಗಡೆಗೌತ ಶ್ರೀ ಪುಲಿ ಆಗಳಿ ಪನ್ನೆರಡುಮಾಳೆ ಪಾಳುಕೋಡ ಕೆಜಿಯು ಆಯ್ದೊನ್ದಿ ಕಾದು ಪತ್ತೊನ್ದಿ ಪ್ರಸಾದಂಗೆಯ್ದೊರ್ (ಮೈ.ಐ. ೦೯೨೬, ೦೦೦ ಸ; ೭ನೆಯ ೬೩). (ಗು). ೩. (ಅಲಂ) ದೊಡ್ಡದಾದ ; ದೊಡ್ಡ : 'ಪುಲಿವಲೆ' ಪರಾ. ಹುಲಿ₁ : ೧. “ವ್ಯಾಘ್ರಃ, ದ್ವೀಪೀ . . . ಮೃಗಾರಿಃ—ಈ ೭ ಹುಲಿ ” (ಕಹಾಥು. ೯೩-೬೩); ಹುಲಿಯ ಹಾಲು ಹುಲಿಗಲ್ಲದೆ ಹೊಲದ ಹುಲ್ಲಿಗೆ ಉಣಬಾರದು (ಬಸವ. ೩೩೩) ಹುಲಿಯು ಏಱಿದೊಡ್ಡಿದೊಡೆ ಪರುಸಂಬಲಿಕೆ ಸಂಬಟವೇನು (ಕುಮ್ಮಾ.೮. ೨೦-೩೦). ೪. ಒಂದು ಬಗೆಯ ಸಸ್ಯ : ಹುಲಿಯ ಬೀಜ, ಕರ್ಕಾಟಕ ಶೃಂಗಿ, ರಕ್ತಗಂಧಕ (ಪ್ರಸ್ತಪ. ೯೨).

**ಪುಲಿಯ ಬಾಲ**=ಒಂದು ಬಗೆಯ ಆಭರಣ : ಕುಜುಹಿನ ಪಟ ಕಿಜು ಘಂಟೆ ಪುಲಿಯ ಬಾಲ ಪೊಜೆದು ಗಡಮುರೆವ್ಯಂದು . . . ಇಜಿದಾಡಿದರು ರಣದೊಳಗೆ (ಕುಮಾರಾಂ. ೦೨-೬೩). **ಹುಲಿಕುರಿ ಆಟ**=ನಾಲ್ಕು ಕಲ್ಲುಗಳನ್ನು ಹುಲಿಗಳಾಗಿಯೂ ಹದಿನೆಂಟು (ಹುಣಸೆ) ಬೀಜಗಳನ್ನು ಕುರಿಗಳಾಗಿಯೂ ಇಟ್ಟುಕೊಂಡು ಆಡುವ ಒಂದು ಬಗೆಯ ಆಟ : ಹಳ್ಳಿಗರು ಚೌಕಾಬಾರ, ಹುಲಿಕುರಿ ಆಟ ಮೊದಲಾದ ಆಟಗಳನ್ನು ಆಡುತ್ತಾರೆ (ಜಾನ). **ಹುಲಿಮನೆಯಾಟ**=ಹುಲಿಕುರಿಯಾಟ : (ಆ). **ಹುಲಿಯ ಜಂಗುಳಿ, ಹುಲಿಯ ಜ್ವಗುಳಿ**=ಒಂದು ಬಿರುದು : ಸೊರಬದ ಹುಲಿಯ ಜಂಗುಳಿ ಬೀರಣನ ಮಗ (ಎಕ. VIII, ಸೊರಬ. ೯೬-೯; 1018 ?); ಭಾಸೆಗೆ ತಪ್ಪುವ ಲೆಂಕರ ಗಂಡ ಹುಲಿಯ ಜ್ವಗುಳಿಯ ಮೊತ್ತದ ಸೇನಾನಾಯಕಂ (ಎಕ. III, ಮಂತ್ಯ. ೯೩-೨೬; 1305 ?).

[ದ್ರಾ. ತಮಿ. ಪುಲಿ, ಪುಲ್ ; ಮಲ. ಕೊಡ. ತೆಲು. ಪುಲಿ ; ತುಳು. ಪಿಲಿ ; ಕೋತ. ಪುಜ್ ; ಕೋಲಾ. ನಾಯ್ಕಿ. ಪುಲ್ ; ಗೊಂಡಿ. ಪುರ್ಲೀ]

△ **ಪುಲಿಂಗಿಲ್** 'ಪುಲಿಗಿಲ್' ನೋ.

**ಪುಲಿಂದ**, ಪುಳಿಂದ (ನಾ). ೧. ಕಾಡಿನಲ್ಲಿ ವಾಸಿಸುವ ಒಂದು ಜನಾಂಗ; ಭಿಲ್ಲಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದವನು ; ಬೇಡ; ಶಬರ: 'ಪುಲಿಂದಿನಿ' ಪರಾ. **ಪುಳಿಂದ** : ೧. “ಕಿರಾತಃ, ಶಬರಃ, ನಿಷಾದಃ, ಪುಳಿಂದಃ, ನಾಹಳಃ, ಭಟಃ, ಪಾಮರಃ, ಮ್ಲೇಚ್ಛಃ—ಈ ೮ ಬೇಡರ್ ಮೊದಲಾಗುಳ್ಳಂತ್ಯಜಾತಿಗಳ್ ” (ಕಹಾಥು ೯೩-೧೯೩); ಅವರುಮವರ್ದೆಗೊಳ್ವುದಿದಾರುವನೆಂದೊಡೆ ಬಾಣಕೃತಿ ಪುಳಿಂದನ ಸಂಧಾನವನೆಯ್ದಿದತ್ತು ಮತ್ತಿನ ಕವಿಕುಳವರ್ದೆಗೊಳ್ವುದೆಂಬುದೊಂದಚ್ಚರಿಯೇ (ಕಾದಂಪೂ. ೪); ಆ ಮರದೊಳಿರ್ದ ಕಪೋತಶಿಖಾಮಣಿ ಕಂಡು ಕರುಣಾರಸಾರ್ದ್ರಹೃದಯನಾಗಿ . . . ಚಂಚೂಪುಟದಿನೊಂದು ಕೊಳ್ಳಿಯಂ ಕರ್ಚಿ ತಂದು ಪುಳಿಂದನ ಮುಂದಿಟ್ಟು (ಶಬತಸಂ. ೨೪೩-೧೭). ೨. ನಾವೆಯ ಒಂದು ಭಾಗ ; ನೌಕಾಶಿರ : “ಪುಳಿಂದಃ, ಮಂಗಃ—ಈ ೨ ನಾವೆಯ ಬಿಸುಜು ” (ಕಹಾಥು. ೦೦೦-೭೦); “ಹಡಗಿನಿದ್ದಸೆ ಪುಳಿಂದ[ಶಾಕಾಂ. ಪುಳಿಂಗಂ, ಪುಳಿನು] ಮಂಗಮಕ್ಕು ” (ಮಂಗರಾ.೦೨೦.೩). [ಸಂ.]

**ಪುಲಿಂದಿನಿ**, ಪುಳಿಂದಿನಿ (ನಾ). ೧. ಬೇಡರವಳು ; ಬೇಡಿತಿ ; ಶಬರಿ : ಉಳಿದು ಪುಲಿಂ[ಶಾಕಾಂ. ಳಿಂ]ದಿನೀವಿಪಿನವಿಭ್ರಮಮಂ ಸುರಕಾಮಿನೀಜನಂ ಬಳಸಿರೆ ತಾನುಮಂತೆ ನಗನಂದನೆ . . . ನೆಲಸಿರ್ದಳುದಾರಶೋಭೆಯಿಂ (ಕಾಕಾಂ. ೩-೦೩). **ಪುಳಿಂದಿನಿ** : ೧. ಗಂಡನಂ ತೊಲಗದೆ ಪಿಂದೆ ಬಿನ್ನಿಡದು ಬರ್ಪ ಪುಳಿಂದಿನಿಯೊರ್ವಳೊಪ್ಪಿದಳ್ (ಹರಿಪ. ೧೦-೧೦೩); ಅಚಲೇಂದ್ರ ಮೊಸದಿರ್ದುದು ಪುಳಿಂದೀನಿತನುಗಂಧಬಂಧುರದೊಳು (ಕೃಬಾಲ. ೦೦-೯). ೨. [ಸಂಗೀತ] ಒಂದು ರಾಗದ ಹೆಸರು : ಕೌಶಿಕ ವೇಳಾವಳಿ . . . ಪುಳಿಂದಿನಿ . . . ಎಂಬ ಮೂವತ್ತುನಾಲ್ಕು ರಾಗಂಗಳೇ ಭಾಷಾಂಗದಿಂದ ಪುಟ್ಟಿದುವು (ಸವೇಕ. ೨೩೯). [< ಸಂ. ಪುಲಿಂದೀ]

**ಪುಲಿಕಡ್ಡ** (ನಾ). ಒಬ್ಬಾತನ ಹೆಸರು : ಕಿತ್ತರಸಂ ಪಟಂಗೆಟ್ಟನ ಮಗ ಪುಲಿಕಡ್ಡಅರಸರ್ ಸಿಯಗೆಲ್ಲಕ್ಕಾಗಿ ಕೊಮಾರನ್ ಕಿಕ್ಕೋಳಕತ್ತುಒಗ ಬಳ್ಳಿಯುಳಿಜಿದು ವಿಟ್ಟೊಂ (ಎಕ. XVI, ತುಮಕೂ. ೯೦-೯; ಸು. 775). [ ? ]

**ಪುಲಿಕರನಗರ**, ಪುಲಿಕರನಗರ (ನಾ). ಒಂದು ಊರಿನ ಹೆಸರು ; ❡ ಧಾರವಾಡಜಿಲ್ಲೆಯ ಈಗಿನ ಲಕ್ಷ್ಮೇಶ್ವರ : ಪುಲಿಕರನಗರಸ್ಯ ಶಂಖತೀರ್ಥವಸತೇಃ (ಇಅ. VII, ೦೦೭-೦೯ ; ೭ನೆಯ ೬೩) ; ಪುಲಿಕರನಗರ ತ್ರಿಶತ್‌ಗ್ರಾಮಾಂತರ್ವರ್ತಿ ಹುಲ್ಲುಂಗೂರು ಮುಖ್ಯ ಬಹು ವಿಷಯಂ ಸಿಹಣಾರಾಯ್ದಾಲ್ಲಪಧ್ಯಾ (ಕಇ. IV, ೩೪-೨೪; 1245). **ಪುಲಿಕರನಗರ** : ಶ್ರೀ ಬಿಕ್ಕಿರಾಣಕೇನ ಪುಲಿಕರನಗರೇ . . . ಸಂಬೊಳಲ ನಾಮ ಗ್ರಾಮಂ ಸರ್ವ್ವಬಾಧಾಪರಿಹಾರಂ ದದೌ (ಸೌಇಇ. XX, ೩ ೨೬; 723); ಶ್ರೀಮಂತ್ ಪುಲಿಕರನಗರ ಪ್ರಖ್ಯಾತ ಶ್ರೀಶಂಖಜಿನೇಂದ್ರ ನಿತ್ಯನೈಮಿತ್ತಿಕ ಪೂಜಾನಿಮಿತ್ತಂ . . . ಕದ್ದುಮ್ಮಗ್ರಾಮಂ ದತ್ತವಾನ್ (ಸೌಇಇ. XX, ೬-೦೯; 730). 'ಪುಲಿಗೆಜೆ' ಪರಾ.

[❡ ಇದು 'ಪುಲಿಗೆಜೆ' ಎಂಬ ಶಬ್ದದ ಸಂಸ್ಕೃತೀಕರಣ]

**ಪುಲಿಕಲ್ಲದಿ** (ನಾ). ಒಬ್ಬಾತನ ಹೆಸರು : ಕೊಜ್ಜುಣಿಮುತ್ತರಸರ್ಕ್ಕೆ ಇಪ್ಪತ್ತಾಮಿಟಾನ ವರ್ಷದುಳ್ ಪುಲಿಕಲ್ಲದಿ ಅಪ್ಪದ ವಾರ್ಮ್ಮುಳ್ ಸೆಗಣ್ಣನೊಳ್ ಎಜಿದು ವಿಟ್ಟೊ (ಎಕ. X (8), ಕೋಲಾರ. ೬೮-೨; ಸು. 752). [ ? ]

**ಪುಲಿಕಲ್ಲು**, ಹುಲಿಕಲ್ಲು (ನಾ). ಎರಡು ಅಥವಾ ಮೂರು ಕಲ್ಲುಗಳನ್ನು ಹುಲಿಗಳಾಗಿಯೂ ಅವುಗಳಿಗಿಂತ ಚಿಕ್ಕವಾದ ಹನ್ನೆರಡು ಅಥವಾ ಹದಿನೈದು ಕಲ್ಲುಗಳನ್ನು ಕುರಿಗಳಾಗಿ ಅಥವಾ ಬೇಟೆಗಾರರಾಗಿಯೂ ಇಟ್ಟುಕೊಂಡು ಆಡುವ ಒಂದು ಬಗೆಯ ಆಟ; ಹುಲಿಘಟ್ಟದ ಆಟ ; ಹುಲಿಮನೆ ಆಟ : (ಆ). **ಹುಲಿಕಲ್ಲು** : ಹುಲಿಕಲ್ಲೋ, ಚೌಕಾ ಬಾರವೋ ಯಾವುದು ಆಡೋಣ? (ಜಾನ). [ ಪುಲಿ+ಕಲ್ಲು(<ಕಲ್₁) ]

**ಪುಲಿಕುಜುಕಿ**, ಪುಲಿಕುಜುಕ್ಕಿ (ನಾ). ಒಂದು ಊರಿನ ಹೆಸರು : ಕಾಳೆಗದುಳ್ ಗಾರವರಾಳ್ ಅಧಿರಾಜ ಮಗನ್ ಚಾತಗುದ್ದಿಯಾರುಮನ್ ಪುಲಿಕುಜುಕಿಯುತಾ ದುಗ್ಗಮಾರನ್ . . . ಅನ್ನಿಜಿದು ಸತ್ತರ್ (ಎಕ. X, ಶ್ರೀನಿ. ೯೦-೩ ; ಸು. ೯೦೦). **ಪುಲಿಕುಜುಕ್ಕಿ** : ಬಾಣರಸರಾ ದಣ್ಣು

ಪುಲಿಕಾಬುಕ್ಕಿಯಾಳ್ವೆ ಎರಡು ದಣ್ಡ ಕಟ್ಟಿ ಎಱೆಯಾತ್ತಿರೆ (ಎಕ. X, ಕೋಲಾರ. ೨೧೦-೭ ; ಸು. ೬೯೦ ?). [ ಪುಲಿ+ಕಾಬುಕ ]

**ಪುಲಿಕಾಬುಕ್ಕಿ** ‘ ಪುಲಿಕಾಬುಕ ’ ನೋ.

**ಪುಲಿಕೇಶಿ**, ಪುಲಕೇಶಿ, ಪುಲಿಕೇಶಿ, ಪೊಲಕೇಶಿ, ಪೊಲಿಕೇಶಿ, ಪೊಲಿಕೇಶಿ, ಪೊಲಿಕೇಸಿ (ನಾ). ಕನ್ನಡನಾಡನ್ನು ಆಳಿದ ಸುಪ್ರಸಿದ್ಧನಾದ ಒಬ್ಬ ಅರಸನ ಹೆಸರು; ☛ ಇದು ಇಬ್ಬರು ಅರಸುಗಳ ಹೆಸರು. ಬಾದಾಮಿ ಚಾಳುಕ್ಯವಂಶದ ದೊರೆಗಳಲ್ಲಿ ಒಬ್ಬನಾದ ಒಂದನೆಯ ಜಯಸಿಂಹನ ಮಗ ಒಂದನೆಯ ಪುಲಿಕೇಶಿ (ಕ್ರಿ. ಶ. ೫೫೦) ; ಈತನ ಮೊಮ್ಮಗ ಅಂದರೆ ಒಂದನೆಯ ಕೀರ್ತಿವರ್ಮನ ಮಗ ಎರಡನೆಯ ಪುಲಿಕೇಶಿ (ಕ್ರಿ. ಶ. ೬೦೯–೬೪೨) : ಪುಲಿಕೇಶಿವಲ್ಲಭಮಹಾರಾಜಸ್ಯ ಪುತ್ರಃ (ಎಇ. XXVII. ೩೯-೭ ; 552). **ಪುಲಕೇಶಿ** : ಶ್ರೀಪುಲಕೇಶಿವಲ್ಲಭಮಹಾರಾಜಸ್ಯ ಪ್ರಪೌತ್ರಃ (ಎಇ. XXVII. ೦೦೭-೬; 597); ಹಾರೀತಿಪುತ್ರವರೇಶ್ವರನುಂ . . . ದ್ವೀಪಾಂತರಪ್ರಕಟಪ್ರಭಾವನುಮೆನಿಸಿದ ಪುಲಕೇಶಿದೇವನಿಂ (ಗದಾಯು. ೨-೭ವ). **ಪುಲಿಕೇಶಿ**: ಶ್ರೀಮಾಂ ಸತ್ಯಾಶ್ರಯ ಪುಲಿಕೇಶಿವಲ್ಲಭಮಹಾರಾಜರಾಜ್ಯೇ ವರ್ತ್ತಮಾನೇ ಲಿಖಿತಮಿತಿ (ಎಇ. V, ೬-೩; ಸು. 650). **ಪೊಲಕೇಶಿ** : ಧರಾಚಕ್ರಮೆ ಮಚ್ಚಿ ಬಣ್ಣಿಸೆ ಜಸಂಬಡೆದಂ ಪೊಲಕೇಶಿವಲ್ಲಭಂ (ಶಾಸ್ತ್ರ ೯೬೬). **ಪೊಲಿಕೇಶಿ** : ಶ್ರೀಪೊಲಿಕೇಶಿವಲ್ಲಭ ಮಹಾರಾಜಸ್ಯ ಪ್ರಿಯಸೂನು (ಇಆ. VII. ೦೦೭ ೩೯ ; 10ನೆಯ ೭೮). **ಪೊಲೆಕೇಶಿ** : ತನೂಜಃ ಪೊಲೆಕೇಶಿ (ಎಇ. VI. ೫-೩; 634). **ಪೊಲೆಕೇಸಿ** : ಪೊಲೆಕೇಸಿಅರಸರ × × × (ಎಕ. VII. ಶಿಕಾ. ೦೦-೨; ಸು. 640 ?); ಪೊಲೆಕೇಸಿಯ ಮೇಲೆ ಪೋಗಿ ಪುಲಿಮಟ್ಟಿಯಲ್ ಕಾದಿ (ಶ್ರುಕಿ. ೦೯೨೬. ೩೦-೮೧ ; 1056). [ ? ]

**ಪುಲಿಕ್ಕಲಯ್ಯ** (ನಾ). ಒಬ್ಬಾತನ ಹೆಸರು : ಶ್ರೀಪುಲಿಕ್ಕಲಯ್ಯ (ಎಕ. II, ೯೭೯, ಸು. 1000). [ ?+ಅಯ್ಯ~61~ ]

**ಪುಲಿಗಾರ** (ನಾ). ಒಂದು ಸ್ಥಳದ ಹೆಸರು : ಪುಲ್ಪದಿಯೇ ಎಱಗಲ್ಲೇ ಪುಲಿಗಾರದ ಗೞ ಮೂರೊಡಲ್ (ಇಆ. XII. ೦೩-೨೦; 813). [?]

**ಪುಲಿಗಿಲ್**, ಪುಲಿಂಗಿಲ್, ಪುಲಿಗಿಲು, ಪುಲಿಗಿಲೆ, ಹುಲಗಲಿ, ಹುಲಗಿಲ್, ಹುಲಗಿಲು, ಹುಲಿಗಿಲ್, ಹುಲಿಗಿಲಿ, ಹುಲಿಗಿಲು, ಹುಲುಗಲ; ಹುಲುಗಿಲು (ನಾ). ಹೊಂಗೆಮರ; ತಮಾಲವೃಕ್ಷ: ಪುಲಿಗಿಲ ಕಿಲದೊಳ್ ಪನ್ನಗನಿಲಯಂ ಸಮನಿಸಿರೊಡದಲ ತೆಂಕಣದೆಸೆಯೊಳ್ ಜಲಪಾತ್ರಂ (ಲೋಕೋಪ. ೩-೨೨) ; ಸಮನಾಗಿರೆ ಪೂಸುಗೆ ಪುಲಿಗಿಲೆಣ್ಣೆಯಂ ಸುಣ್ಣಮುಮಂ (ಅಶ್ವಶಾ. ೦೩-೨೧). **Δಪುಲಿಂಗಿಲ್**: ಹೊನ್ನೆ ಚೆನ್ನೆ ಕಮಳಂ ಕಾರಾಚಮಾಚಿ ಪುಲಿಂಗಿಲೆರಂ ಗುಗ್ಗುಳವತ್ತಿ ಮತ್ತಿ ಮಧುಕಂ (ರಾಜಶೇ. ೩-೩೩). **ಪುಲಿಗಿಲು** : ನೆಗಟ್ಟ ಪುಲಿಗಿಲೆಯಶಾಸ್ತ್ರದೊಳೆ (ದಲ್ಲು) ಬಿಳಿಯ ಎಲ್ ಕೂಡೆ ವೃತ್ತಿವರ್ಗಗಳ್ (ಜಗೆಮೆ) ನಡುಪೊಷ್ಪರುಪಪ್ರಮಾಣದೊಳ್ ಪಡುವ ಬಾಸುಮಾದಂತೆ ಮಣ್ಣೆಕರ್ (ಅಶ್ವಪ. ೦೧-೦೩). **ಪುಲಿಗಿಲೆ** : ಪುಲಿಗಿಲೆ ಮಾವು ಬೇವು ಬೆಳಲಜುಟಿ ನಿಂಬೆ . . . ಎತ್ತಲುಂ ಕಲಸಿರೆ ಕಾಡು ಕತ್ತಲಿಸಿ ಕಾಗಳಸಪ್ಪಿದುದು (ಶಾಂತೀಶ್ವ. ೦ ೯-೯). **ಹುಲಗಲಿ** : ಹುಲಗಲಿ (ಕರಂಜ) –ಎತ್ತರವಾಗಿ ಬೆಳೆಯುತ್ತದೆ. ಕಟ್ಟಿಗೆ ಹಗುರು (೯ವಾಗ. ೩೦); ಮೈಸೂರು ಸೀಮೆಯಲ್ಲಿ ಹುಲಗಲಿಯ ಓಂಡಿಯನ್ನು ಹೊಲಗಳಿಗೆ ಹಾಕುತ್ತಾರೆ (ಮುಂಬಾಯು. ೬-೨೯೨). **ಹುಲಗಿಲ್** : ಕಂಚಿಮಾಲದ ಗಡಣಂ ಕೊಸಗಿದ ಬಸಿಱೆ ಹುಲಗಿಲ್ಗೊರವಿ . . . ಹೊನ್ನೆಯ ತರುಗಳ್ (ಹುರ್ಮ್ಯ. ೯-೩೮). **ಹುಲಗಿಲು** : ಹುಲಗಿಲ ಬೇರ್ ತಪಸದ ತಿಗುಡು ಲಕ್ಕಿ ಕಡಸಿಗೆಯ ಬೇರ್ ಮರುಂಗಾಳೆಯೊಳಗಗ್ಗಲಿಸಿರೆ . . . ಬಲವರ್ಧನಮಕ್ಕುಮೆಗ್ನಿದೀಪನಮಕ್ಕುಂ (ಕಲ್ಯಾಕಾ. ೯-೨೨) ; ತೊಟ್ಟುಬಿಟ್ಟ ತೊಟ್ಟಿಡುಸಿದ ಮೊಗ್ಗನು ಹೂ ಹಾಸಿ ಹುಲಗಿಲು ಗಾನನಿಮಗ್ನಧ್ಯಾನವ ಹೊಸ ದಾಸಿ (ಅರಣ್ಯ. ೧೩೨-೦೦). **ಹುಲಿಗಿಲ್**: ಹುಲಿಗಿಲ್ ಕಂಡಸು ನುಗ್ಗಿ . . . ಉತ್ತರಣೆಯಂ ಚೂರ್ಣಂಗಳಂ ಮಾಡಿ (ಖಮದ. ೧೩-೩೯): ಬರಿವದಣೆ ಲೊಕ್ಕಲೋಯಿ (ಹಿ) ಸರವಾಣಲೆ ಗುಳೂಚಿ ಪಿಪ್ಪಲಿ ಹುಲಿಗಿಲ್ ವಿಷನಾಗರ ಲಶುನಂ ಗಳೊಳಪ್ಪಂ ಬೆರಸುಗೆ ಪವಣಱಿಗೆ ಪಿಂಡಮಾರೋಗ್ಯಕರಂ (ಅಶ್ವಶಾ. ೭-೩೩). **ಹುಲಿಗಿಲಿ** : "ಚಿರಬಿಲ್ವ, ನಕ್ತಮಾಲಃ, ಕರಜಃ, ಕರಂಜಕಃ– ಳ ಹುಲಿಗಿಲಿಮರದ ಹೆಸರು" (ಸಿದ್ಧಂಶ. ೦೨೩) ; ಹೊಂಗೆ, ಕರಂಜ, ಹುಲಿಗಿಲಿ ಮರ (ಕ್ಯಶಿ. ೬೯-೦೨೯೯). **ಹುಲಿಗಿಲು** ; ಹುಲಿಗಿಲ ಸೊಪ್ಪು ಗುಗ್ಗುಳಯುಮಂ ಧೂಪವಿಕ್ಕುವುದು (ಖಂಡ. ೦೨೯-೦೨). **ಹುಲುಗಲ** : ಚಿಗುರಿತು ಈ ಹುಲುಗಲ (ತಿಂಪು. ೯-೦). **ಹುಲುಗಿಲು** : ‘ ಬಿಳಿ ಹುಲುಗಿಲು ’ ಪರಾ.

**ಪುಲಿಗಿಲು** ‘ಪುಲಿಗಿಲ್’ ನೋ.

**ಪುಲಿಗಿಲೆ** ‘ಪುಲಿಗಿಲ್’ ನೋ.

**ಪುಲಿಗೆಱೆ**, ಪುರಿಗೆಱೆ, ಪೊರಿಗೆಱೆ, ಹುಲಿಗೆಱೆ (ನಾ). ಒಂದು ಊರಿನ ಹೆಸರು ; ☛ ಧಾರವಾಡಜಿಲ್ಲೆಯ ಈಗಿನ ಲಕ್ಷ್ಮೇಶ್ವರ : ಗಙ್ಗಪೂರ್ ಪುಲಿಗೆಱೆ ಗಣ್ಡಪಗ್ರಾಮ(ಮಾ) ಇತಿ ಅಸ್ಯಭುಕ್ತಿ( ಕ್ತಿಃ ) (ಇಆ. VIII. ೨೯೩-೦೬ ; ೮೮೪) ; ಅದಱೊಳಗಂ ಕಿಸುವೊೞಲು ವಿದಿತ ಮಹಾಕೊಪಣನಗರದು ಪುಲಿ[ಪಾಠಾಂ. ರಿ]ಗೆಱೆಯಾ ಸದಭಿಸ್ತುತಮಪ್ಪೊಂಕುಂದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ (ಕವಿರಾ. ೦-೩೭); ಪುಲಿಗೆಱೆನಗರಾತ್ ಪೂರ್ವಸ್ಯಾಂ ದಿಶಿ (ಇಆ. VII. ೦೦೫-೨೫ ; 10ನೆಯ ೭೮). **ಪುರಿಗೆಱೆ** : ಪುರಿಗೆಱೆಯಾ ಮೂಲವಾಜ್ಜೀರಿಯಾ (ಎಇ. VI. ೦೩೩-೩; ಸು. 763) ; ಪುರಿಗೆಱೆಯಿಂ ಬನ್ದ ಪೊರೆಯಣ್ಣನ ಶಿಲಾಕರ್ಮ್ಮ (ಸೌಇಇ. XI–i. ೦೦.೨೩; ೮೦೬); ಶ್ರೀಮತ್ ಕುಂಕುಮಮಹಾದೇವಿ ಪುರಿಗೆಱೆಯಲು ಮಾಡಿಸಿದ (ಇಆ. VII. ೩೯-೨೦; ೯೯೯). **ಪೊರಿಗೆಱೆ** : ಪೊರಿಗೆಱೆಯಾ ಮಹಾಜನಕ್ಕಂ (ಎಇ. XIV. ೧೯೦-೨; 725). **ಹುಲಿಗೆಱೆ** : ಹುಲಿಗೆಱೆಯ ಸೋಮನಾಥದೇವರ ಕ್ಷೇತ್ರ(ಎಕ. VII. ಶಿಕಾ. ೩೨-೦೩೫; ಸು. 1060?). ‘ಪುಲಿಕರನಗರ’ ಪರಾ.

**ಪುಲಿಗೆಱೆಮೂನೂಱು**, **ಹುಲಿಗೆಱೆಮೂನೂಱು** – ಹುಲಿಗೆರೆಯೇ ಮುಖ್ಯವಾದ ಮುನ್ನೂರು ಹಳ್ಳಿಗಳ ನಾಡುಂ: ಪೆರ್ಮ್ಮಾಡಿ ಬೂತಾರ್ಯ್ಯಂ ಗಂಗವಾಡಿ ತೊಂಭತ್ತಱುಸಾಸಿರಂ ಬೆಳ್ವೊಲಮೂನೂಱುಮ (ನಾಳು) ಪುಲಿಗೆಱೆಮೂನೂಱುಮನಾಳುತ್ತಿರೆ (ಸೌಇಇ. XI–i. ೩೭-೫; 942); ಶ್ರೀಸೋಭನರಸರು ಹುಲಿಗೆಱೆಮೂನೂಱ ಬೆಳುವಲ ಮೂನೂಱುಂ ಹುಲಿಸಿನೆ ಪನ್ನಿಚ್ಛಾಸಿರಮುಮನಾಳುತ್ತಮಿರೆ (ಸೌಇಇ. XI–i. ೫೦.೦೨; 1050). [ಪುಲಿ + ಕೆಱೆ]

**ಪುಲಿಗೋಣ** (ನಾ). (ಹುಲಿಯಂತೆ) ಬಲಿಷ್ಠವಾದ ಕೋಣ : ಆಯೆಯದ ಪಾಪಂ ಪಗೆ ಮಿಗೆ ತಿಂದುದು ಮೇಪಂತಿರೆ ಪುಲ್ಲ ಸರವಿಯಂ ಪುಲಿ[ಪಾಠಾಂ. ಬಲ್]ಗೋಣಂ (ಮುಕೋಶ. ೩-೯೫). [ಪುಲಿ + ಕೋಣ~1~]

**ಪುಲಿಚರ್ಮ**, **ಹುಲಿಚರ್ಮ** (ನಾ). ಹುಲಿಯ ತೊಗಲು ; ವ್ಯಾಘ್ರ ಚರ್ಮ : ಕೆಂಜೆಡೆಯ ಚಂದ್ರಕಳೆಯರಸನೊಪ್ಪುತ್ತಿರಲು ರಂಜಿಸುವ ಪುಲಿಚರ್ಮದಭವನೊಪ್ಪುತ್ತಿರಲು (ಬಸಕೆ. ೧-೬); ಹರಿಣ ಗೋರೋಜನ ಕೃಷ್ಣಾಜಿನ ಪುಲಿಚರ್ಮ ನರಿಗೊಂಬುಗಳನೆತ್ತರೊಲಿದು (ಸೋಮಶ. ೧೯-೭೫). **ಹುಲಿಚರ್ಮ**: ದಕ್ಷಿಣದವರಲ್ಲಿ ಕಂಬಳಿಯ ಕೋರೆ, ನಿಲುವಂಗಿ, ಕೊರಳಲ್ಲಿ ಭಂಡಾರ ಇಡುವ ಹುಲಿಚರ್ಮದ ಚೀಲ . . . ಕೈಯಲ್ಲಿ ಡಮರುಗ, ತ್ರಿಶೂಲ – ಇವು ಮುಖ್ಯವಾದುವು (೯೭೯. ೩೮). [ಪುಲಿ+ಚರ್ಮ]

**ಪುಲಿದೊಗಲ್** ‘ಪುಲಿದೋಲ್’ ನೋ.

**ಪುಲಿದೊಗಲು** ‘ಪುಲಿದೋಲ್’ ನೋ.

**ಪುಲಿದೊಡೆಯ** (ನಾ). ವ್ಯಾಘ್ರಾಸುರನನ್ನು ನಾಶಮಾಡಿದವನು; ಶಿವ ·

ಕಣ್ಗೆ ತನ್ನಿದಿರ್ವರೆ ರಂಜಿಸಿತು (ಪುಣ್ಯಾಶ್ರ. ೩-೯). [ಪುಲಿ + ಮೊಗ]

**ಪುಲಿಯಣ್ಣ** (ನಾ). ಒಬ್ಬಾತನ ಹೆಸರು : ಶ್ರೀವುಳನ್ದೆಯಾರುಂ ಕಳ್ಳಿ ಕಾಳ್ಯಯುಂ ಪಾಣದರುಂ ಅಕ್ಕಶಾಲೆಯರುಂ ಪುಲಿಯಣ್ಣಂಗಳು ಎರೆಕಾಡನಳ ದೊರ್ (ಸೌಇಇ. IX–i, ೪೬-೧೫; ಸು. ೯೬ಯ ೪೪). [ಪುಲಿ + ಅಣ್ಣ$_1$]

**ಪುಲಿಯುಂಡಿಗೆ** (ನಾ). ಹುಲಿಯ ಚಿತ್ರವುಳ್ಳ ಮುದ್ರೆ : ಅವನಿನ್ದ್ಕೃಣ ತತ್ಕುಲದವನೀಶಗಾರ್ಗ್ಗಿಯು ಹೊಯ್ಸಳಾಖ್ಯಂ ವಾತ್ರಂತವರ್ಗೆ ಪುಲಿಯುಣ್ಡಿಗೆಯುಮಾದಿ(ರ)ವಿಜಾರ್ಚ್ಚಿತೆಯೆಸಿವ ಶಶಪುರಾಂಬಿಕೆಯೊಲವಿಂ (ಎಕ. XI, ಚಿತ್ರ ದು. ೬೯-೧೦; 1214 ?). [ಪುಲಿ+ಉಂಡಿಗೆ$_2$]

**ಪುಲಿಯುಗುರ್**, ಪುಲಿಯುಗುರು, ಹುಲಿಯುಗುರ್, ಹುಲಿಯುಗುರು (ನಾ). ೧. ಹುಲಿಯ ಪಂಜದ ಉಗುರು ; ವ್ಯಾಘ್ರನಖ : ಪುಲಿ ಯುಗುರೆಯ್ದೆ ನಾಟಲಾರದವಂ ಪಾಂಗದೆಯ್ದೆ ಪುಳಿಂದನೊತ್ತೆ ಗಂಟಲನದು ಪಾಯೆ (ಪುಣ್ಯಾ. ೩. ೩೧೯). ೨. (ಮಕ್ಕಳಿಗೆ ತೊಡಿಸುವ) ಹುಲಿಯ ಉಗುರಿನಿಂದ ಮಾಡಿದ ಅಥವಾ ಹುಲಿಯ ಉಗುರಿನ ಆಕಾರದ ಒಂದು ಆಭರಣ : ಅರಳೆಲೆ ಪೊಂಗುನೂಲ್ ಪುಲಿಯುಗುರ್ ಪಣೆಕಿಂಕಿಣಿ ಗೆಜ್ಜೆ . . . ವಾನಂಗೊಳೆ ಭುವನೈಕಮಂಡನನೊಳೇನೆಸೆ ದಿರ್ದುದೊ ಬಾಲಮಂಡನಂ (ಆದಿಪು. ೫-೬೨); ಅರಳೆಲೆ ಮುತ್ತಿನಾಯತ್ ಪುಲಿಯುಗುರ್ ನವರತ್ನದ ಕಂಕಣಂಗಳ್ . . . ಒಪ್ಪಿರೆ ಹಿತ್ತವಾತ್ರಗಳ್ಗೆ ಪತೆದರ್ ತನಯರ್ ನಯನೋತ್ಸವಂಗಳಂ (ಶಂಖಮಾ. ೩-೧೪೧); ಒಡವುಟ್ಟಿದ ಕೌಸ್ತುಭಮಿರ್ಪೆಡೆಗಂ ದಾಯಾದನಪ್ಪೆನೆನ್ನಗಮೊಂದಂದುದು ಪಕಿಲೆ ನೆಲೆಸಿತ್ತೆನೆ ಪೊಡೆಯುರಲನ ಕೊರಲ ಪುಲಿಯುಗುರ್ ಕರಮೆಸೆಗುಂ (ಜಗ. ೩. ೯೯). **ಪುಲಿಯುಗುರು** : ೨. ಬಾಲಶಶಾಂಕನಂದದ ಪುಲಿ ಯುಗುರನು ಧರಿಸ ಬಂದಿ ರಂಜಿಸಿತು (ಅಂಬಿ. ೯-೪೪). ಅರಳೆಲೆ ಪಾಗಾಯಪ್ಪುಲಿಯುಗುರೊಲಿಯುತ ಚರಣದಂದುಗೆ ಗೆಜ್ಜೆಗಳು ಕರದ ಕಂಕಣಗಳು ಫಲಿಫಲಿರೆನಲಾಡಿ ಬರುವಳು ತಂದೆಯ ಬಳಿಗೆ (ಕರ್ಣಾಕ. ೨೨೬). **ಹುಲಿಯುಗುರ್** : ೨. ಜಳೆದೋಳ ಭಾಗ್ಯನಿಧಿ ಹುಲಿಯುಗುರ ಸುಲಭಗಂ ಸಳಸಳಪ ಲಾವಣ್ಯದಿಂದೆಸೆವ ಬಣ್ಣಗಂ (ಶಸಕ. ೦-೦೫೦). **ಹುಲಿಯುಗುರು** : ೧. ನಮ್ಮ ದೇಶದ ಜನರು . . . ಹುಲಿಯುಗುರಿನ ಆಭರಣ ಮಾಡಿಸಿ ಮಕ್ಕಳ ಕೊರಳೊಳಗೆ ಹಾಕುತ್ತಾರೆ (ಪುಂಬಿವಿ. ೯-೩೬); ತನ್ನ ಮೈಯೆಲ್ಲ ಹುಲಿಯುಗುರುಗಳ ಗಾಯದಿಂದ ಕೆಂಪಾಗಿದೆ (ಕಾಶೀಉ. ೨೯೩). ೨. ಕರದಲ್ಲಿ ಕಂಕಣ ಬೆರಳಲ್ಲಿ ಉಂಗುರ ಕೊರಳಲ್ಲಿ ಹಾಕಿದ ಹುಲಿಯುಗುರವು ಅರಳೆಲೆ ಕನಕಕುಂಡಲ ಕಾಲಲಂದುಗೆ ಉರಗ ಶಯನ ಬಂದ ಕಾಣಿರೇನೆ (ಕೃಕಂದ. ೦-೦೯೦-೨); ಕತ್ತಿನಲ್ಲಿ ಅಡ್ಡಿಕೆ . . . ಹನುಮಾನ ತಾಳಿ, ಹುಲಿಯುಗುರು (ಮುಕ್ತಿ. ೯೦). ೩. ಸುಗಂಧವುಳ್ಳ ಒಂದು ಬಗೆಯ ಔಷಧೀ ಸಸ್ಯ : ಗಂಧಕ, ಹುಲಿಯುಗುರು, ಬಜೆ . . . ಜದಕ, ಎಣ್ಣೆ, ಅಜಮೂತ್ರದಲ್ಲಿ ಬೆರಸಿ ಅಟ್ಟು ನಸ್ಯಂಗೈಯೆ ಹೀನಸ ಮಾಣ್ಗುಂ (ಚಿಕಿ. ೬೮).

**ಪುಲಿಯುಗುರ ಪಟ್ಟು** = ಒಂದು ಬಗೆಯ ರೇಷ್ಮೆ ವಸ್ತ್ರ : ನೇತ್ರಾ ವಳಿಯು . . . ಗಜವಾಳ ಪುಲಿಯುಗುರ ಪಟ್ಟೆಂದ್ರರಾಗಂ ಲಲಿತವೀಣಾ ವಳಿಯು (ಚಿಕಸ. ೦೦-೨೫). [ಪುಲಿ + ಉಗುರ್]

**ಪುಲಿಯುಗುರು** ‘ ಪುಲಿಯುಗುರ್ ’ ನೋ.

**ಪುಲಿಯೂಟು** ‘ ಪುಲಿವೆಟ್ಟು ’ ನೋ.

**ಪುಲಿವಟ** ‘ ಪುಲಿವೆಟ್ಟು ’ ನೋ.

**ಪುಲಿವಟೆ** ‘ ಪುಲಿವೆಟ್ಟು ’ ನೋ.

**ಪುಲಿವಟ್ಟು** (ನಾ). ಒಂದು ಊರಿನ ಹೆಸರು : ಪುಗುನ್ದಪನ್ನೆರಡು ಪುಲಿವಟ್ಟಪನ್ನೆರಡುಂ ಕಲ್ವತ್ತಿಯೋಟುಂ ಸಾಸ್ತಳಿಗೆಸಾಯಿರಮುಮುಂ ದುಷ್ಟಾಟವಿಕನಿಪಾರ್ಗ್ಗಳಸಂವಸ್ಥಾಡಿ ಸುಖದಿಂ ರಾಜ್ಯಂಗೆಯ್ಯುತ್ತಿಟ್ಟು (ಎಕ. VIII, ಸೊರಬ ೪೬೬-೨೩ ; ೯೯೧). [ಪುಲಿ + ಪಟ್ಟ$_1$]

**ಪುಲಿವಟ್ಟೆ** ‘ಪುಲ್ಲಿಪಟ್ಟೆ’ ನೋ.

**ಪುಲಿವರೆ** (ಕ್ರಿ). (?) : ಮದಸಂ ಶ್ರೀಮಲ್ಲಿಭಟ್ಟಾರಕನ ವಿಮಳಬೋಧಾ ನಳಚ್ವಾಳೆಗಳ್ ಸೋಂಕದ ಮುನ್ನಂ ತತ್ತ್ವಪೋರಾಶಿಗೆ ಪುಲಿವರೆ[ಹಾಂ.ರ] ದತ್ತೆಂಬನಂ ಬೂದಿಯಾಗಿರ್ಪುದುಮಾಗಳ್ ಮೋದಿಕೊಂಡಳ್ ರತಿ ಮಾಡಿ ಮಾಡಿದಳ್ ಮೆಯ್ಯನೀಡಾಡಿದಳ್ (ಪುಣ್ಯಾ. ೦೯-೯೩). ‘ಹುಲಿವಿರಿ’ ನೋ. [ ? ]

**ಪುಲಿವಲೆ.** ಹುಲಿಬಲೆ (ನಾ). ಒಂದು ಬಗೆಯ ದೊಡ್ಡ ಬಲೆ : ಪುಲಿವಲೆ ಕೊಂಬು ಕಣ್ಣೆ ವಿಂಡಿಗಣ್ಣೆ ತೊವಲ್ವಲೆ ಸಿಕ್ಕು ದಕ್ಕು ಪೆರ್ವೊಲವಲೆ ಸಂದ ಹಾಸುವಲೆ ನೀರ್ವಲೆ ಮೋಲ್ವಲೆ . . . ಎಂಬಿನಿತಂ ಪೊಡೆಗಟ್ಟಿ ಕಾನನ ಸ್ಥಲದೊಳಗಲ್ದು ತೋಹುವಿಡಿದೊಡ್ಡಿದರೆಯ್ದೆ ಪುಳಿಂದನಾಯಕರ್ (ಚಕಳು. ೨-೦೦೫). **ಹುಲಿಬಲೆ** : ಅರಜೊಳಗಡಗಿಪ್ಪರೈವರು ಕಳ್ಳರು ಒಬ್ಬ ಸರಿಬರೆಯುವನೊಬ್ಬ ಹುಲಿಬಲೆಯವ (ಶಿಶ್ವಾಪ್ರಂ. ೦೦೯-೦೬). [ ಪುಲಿ + ಬಲೆ$_1$ ]

**ಪುಲಿವಾಲ್** (ನಾ). ಹುಲಿಯ ಹಾಲು : ಪುಲಿವಾಲುಂ ಕುಡಿವಲ್ಲದೆ ಕಲಿ ಯಾಗಂ ಪುತ್ರನ್ (ಎಕ. XI, ದಾವಣ. ೯೩-೨೬ ; 1164); ಪುಲಿವಾಲುಂ ನಲಿ ದುಣ್ಣ ಶಕ್ತಿ (ಎಕ. XIV. ೨೬೨-೨೯ ; 1178). [ ಪುಲಿ + ಪಾಲ್$_1$ ]

**ಪುಲಿವಾಲ** (ನಾ). ಹುಲಿಯ ಬಾಲ : ಪುದಿದು ತಳಿರುಡೆ ಸುರಗಿ ಪುಲಿ ವಾಲದಲಿ ವಿರಚಿಸಿದ ಹಪುರುಗಂಕಣ ಖಡೆಯ ಪೆಂಡೆಯದೊದವಿನಿಂ . . . ಬಲೆವಿಡಿದಿಹರು ಬಿಯದರು (ಶಾಕ್ವಣ. ೫-೬). [ ಪುಲಿ + ಬಾಲ ]

**ಪುಲಿವುತು** (ನಾ). ಒಂದು ಸ್ಥಳದ ಹೆಸರು : ಪೂರ್ವ್ವೋತ್ತರದಿಗ್ಭಾಗೇ ಸಿರಿಗಾಳಗ್ರಾಮಸೀಮ್ನಿ ಪುಲಿವುತು ತತ ಆಗತ್ಯ ಕಪ್ಪಸುರಿಗೊಳಂ ತತಃ ಪೆಬ್ಬಾರ್ತ್ತು (ಎಕ. XI, ದಾವಣ. ೬೬-೩೦ ; ೬೯೪). [ ? ]

**ಪುಲಿವೆಟ್ಟು**, ಪುಲಿಪಟು, ಪುಲಿಯೂಟು, ಪುಲಿವಟ, ಪುಲಿವಟೆ, ಪುಲಿ ವೇಟು, ಪುಲ್ಲಿವೆಟು, ಪುಲ್ಲಿವೇಟು (ನಾ). ದೇವಾಲಯ, ಕೆರೆ, ಕಟ್ಟೆ ಮುಂತಾದುವುಗಳ ಜೀರ್ಣೋದ್ಧಾರ ಇತ್ಯಾದಿ ಸಾರ್ವಜನಿಕ ಕಾರ್ಯಗಳಿಗಾಗಿ ಉದಾರಿಗಳಿಂದ ದತ್ತಿಯಾಗಿ ಬಂದು, (ಬಡ್ಡಿಯ ಉತ್ಪನ್ನವನ್ನು ಉಪಯೋಗಿಸಿಕೊಳ್ಳಬಹುದಾದ) ಕೊಡಿಟ್ಟ ನಿಧಿ.-ಸಂಪತ್ತು.-ಠೇವಣಾತಿ : ೧೦೦ಚುವರಹಂನು ಕೊಟ್ಟು ದೇವರ ಗುಡಿಯಲ್ಲೂ ಮಾಡಿಸಿದ ಪುಲಿವೆಟ್ಟು (ಸೌಇಇ. IX ii, ೫೬೬-೯ ; 1534). **ಪುಲಿಪಟು**: ಶ್ರೀವಿಠಲದೇವರ ಅಮೃತಪಡಿಗೆ ಪುಲಿಪಟು ನೈವೇದ್ಯಕೆ . . . ಧಾರಾಗ್ರುಹೀತವಾಗಿ ಬಂದ ತೆಕ್ಕಲಕೋಟೆಸೀಮೆಯೊಳಗಣ ನಿಟೂರಗ್ರಾಮ ೧ (ಸೌಇಇ. IX–ii, ೬೦೭-೨ ; 1543). **ಪುಲಿಯೂಟು** : ನಮ್ಮ ಧರ್ಮವಾಗಿ ಸ್ವಾಮಿಯ ಸನ್ನಿಧಿಯಲೂ ಪುಲಿಯೂಟಾಗಿ ನಡವ ಕಟ್ಟಳೆಯ ವಿವರ (ಎಕ. XIV, ಶ್ರೀರಂಗ. ೨೫೬-೭ ; 1544); ಶ್ರೀಚಲಪಿಳೆರಾಯರ ಸನ್ನಿಧಿಯಲಿ ನಡವ ಪುಲಿಯೂಟ ಕಟ್ಟಳೆಯ ವಿವರ (ಎಕ. XIV, ಶ್ರೀರಂಗ. ೨೬೦-೫ ; 1551). **ಪುಲಿವಟ** : ಪುಲಿವಟವಾಗಿ ಶ್ರೀವಿಠಲದೇವರ ಭಂಡಾರಕ್ಕೆ ಸಮರ್ಪಿಸ್ತಧು ಘಟಿವರಹಯಿಂನೂಱು (ಸೌಇಇ. IV, ೨೬೯-೦೫; 1530). **ಪುಲಿವಟೆ** : ಶ್ರೀವಿಠಲದೇವರ ಭಂಡಾರಕೆ ಪುಲಿವಟೆ ಆಗಿ ಸಮರ್ಪಿಸಿದ ರೊಕ್ಕ ವರಹ ಗ 100 ಱು (ಸೌಇಇ. IX–ii, ೫೬೬-೩ ; 1534). **ಪುಲಿವೇಟು** : ಶ್ರೀವಿಠಲದೇವರಿಗೆ . . . ಪುಲಿವೇಟುಗಳಿಗೆ ಸಮರ್ಪಿಸಿದ ಗದೆಯ ಬಳಿಯಲೂ ಸಮರ್ಪಿಸಿದ ಬೀಜವರಿ ಗದ್ದೆ (ಸೌಇಇ. IV, ೨೬೫-೫; 1561). **ಪುಲ್ಲಿವೆಟು** : ಯಿಾ ಪುಲ್ಲಿವೆಟು ನಯಿವೇದ್ಯವಾದ ಖಿಡಾಯ ಪ್ರಸಾದ ಪಲ್ಲ ನಯಿವೇದ್ಯ ಶ್ರೀವಿಠಲದೇವರ ಭಂಡಾರದವರಿಗೆ ಪ[ಕ್ಕೆ] ಪಾಲು (ಸೌಇಇ. IV, ೨೬೫ ೬ ; 1561). **ಪುಲ್ಲಿವೇಟು** : ಉದಗಿರಿ ತಿಂಮರಾಜಯ್ಯನವರು ಮಾಡಿಸಿದ ಪುಲ್ಲಿವೇಟು (ಸೌಇಇ. IV,

೨೭೩-೪: ೧೯೬೧). 'ಪುದಿವಟ್ಟು' ಪರಾ. [ದೇ.೩ ತಮಿ. ಪುಲಿವೀಟು, ಪುಲಿವೇಟು, ಪೂಲಿಯಾಟ್ಟು; ತೆಲು. ಪೂಲಿಪೆಟ್ಟು]

**ಪುಲಿವೇಟು** 'ಪುಲಿವಟ್ಟು' ನೋ.

**ಪುಲಿಸಮ್ಮ** (ನಾ). ಹುಲಿಯ ತೊಗಲು : ಪುಲಿಸಮ್ಮದುಡುಗೆಯು ತೆಗೆದ ನೊಸಲ ಕಣ್ ಬಸಿಸುತ ಶಿವಪೂಜೆಗೆಯ್ವ . . . ಹೊಜವಟ್ಟ ಕಲಿಗಳ ದೇವ ಕಾಳಗಕೆ (ಜೈಮಿ.ಶ. ೧೦-೯); ಜನನಿಯೊಳ್ಗೊಡೆ ಸರ್ವನಾಭರಣಂಗಳಂ ತಲೆಮಾಲೆಯುಂ ತನಯನಂ ತೊಡಲೀವಳೇ . . . ಕರಿಕೃತ್ತಿಯುಂ ಪುಲಿ ಸಮ್ಮಮುಂ ತನಗೆ ತಾಂ ಪೊದೆವಂತೆ ಮಾಪ್ಪಳೆ (ವ್ಯ.ಶಾ. ೯-೧೦೯).

[ಪುಲಿ+ಸಮ್ಮ₂ (<ಚಮ್ಮ)]

**ಪುಲಿಸು**, ಪುಲುಸು, ಹುಲಸು, ಹುಲಿಸು₁, ಹುಲುಸು (ನಾ). ೧. (ಪೈರಿನ) ಹೆಚ್ಚಳ; ಸಮೃದ್ಧಿ; ಸೊಂಪು : ಧರೆಯೊಳಿ ಸಸ್ಯಸಪ್ರತತಿ ದೊಂಬುರು ಬಲ್ಪಿಸಿಸಲೆಚವುಂ ನರೇಂದ್ರರ ಮನೆದೀವದಂತೆ ಧನರಾಸಿ ದುನಾ ಪುಲಿಸಿಂದಲೀಯದೇ (?) (ಮಲ್ಲಿ.ಶಾ. ೦ ೩೪); ಪಿರಿದಂಚಿಯೋಗಿ ಕಿದು ತಿರ್ಪುರುಗಡೆದುಸೊಲ್ದು ಪೊಕ್ಕೊಡದು ಫಲಮಕ್ಕುಂ ನಿರುತ ಪುಲಿಸಪ್ಪದು (ಶೃಂ. ೦೪-೬); ಫಳಿಕಂ ತ್ರಿವರ್ಗಮುಂ ಕೈಗೊಳಿಕಂ ತಪ್ಪಾರ್ಥಂಗಳಂ ಸಂಗತಿಯಿಂ ತಿವಲ್ಕೆಂದೀ ರೀತಿಯನಳವಂ ಕಡೆಗಣಿಸಿತಲ್ತೆ ಬೆಳಸುಂ ಪುಲಿಸಂ (ಅಜಿ. ೪-೭೯). ೨. ಒಕ್ಕದೆ ಇರುವ ತೆನೆ: ಪುಲಿಸಂ ಪೊತ್ತಾತನೆ ಕಳದಲಂ ಪಡುವುದು ಭತ್ತಪ್ಪಳತ ಯುಪ್ಪಿನಮಾತ್ರಂ ತೊಲಗಲು ಸಲ್ಲದು (ಕ.ಮು.ಶ. ಅನು೨೦೧, I. ೬೬೨-೯೩).

**ಪುಲುಸು** : ೧. ಅರಸಿಂದುಬ್ಬರುಬ್ಬುವರ್ ಪಬೆಯೆಂಬ ಪರುವಾನ ಪುಲುಸುಗುಂದಿದಂದು (ಕಾಜೀ. ೦-೨-೯). **ಹುಲಸು** : ೧. ಬೆಳಸು ಹುಲ ಸಾತ ಜಗದಾಗ (ಜನಿ. ೭೩; ಹುಯ್ವುವ ಹೊಳೆಗೊಂದು ಕಟ್ಟೆಯ ವಿರಚಿಸಿ ಕೊಂಡರೆ ಕೃಷಿಕರ್ವರ ಹುಲಸು (ಇಂಶಾಶ. ೦೭೮-೭೭). **ಹುಲಿಸು₁** : ೧. ಅಧರಕ್ಷತವಂ . . . ಚುಂಬನವಳಮಂಗಳಂ ಪ್ರತಿಸಲಚ್ಚಣದಿಂ ಪ್ರತಿ ಯುಟ್ಟು ನೋಡಿ ಕಾಮಿನಿ ಹುಲಿ[ಶಾಂ. ೮] ಸಾದ ಬೇಟವೆಳಸಂ ಕಡು ಸಂತಸದಂತಮೆಯ್ದಿದರ್ (ಚೋಕ್ಕ.ಸು. ೦೪-೯೯); ಕಾಲನ ಹೆಚ್ಚಳಸು ಹುಲಿ [ಶಾಂ. ಲು] ಸಾಯ್ತು (ಶಬ್ದಾ. ೯-೦೨); ಪಮರಿಯ ಹೆಚ್ಚಳಸು ಹುಲಿ ಸಾಗಿ ಹಸರಿಸಿದ ಕಣಸೆನಿಸಿ ಕಾಣಿಸಿತು ಸಮರಾಂಗಣವು (ಅಕ್ಷ.ರಾ. ೨೨-೦೩). **ಹುಲುಸು** : ೧. ಫಲಪುಷ್ಪಗಳ ಬೆಳಸು ಹುಲುಸಾದ್ದು (ರಾಲ.ಶ. ೨ ೦೯); ಭಾರತದಲ್ಲಿ ಅನುಭಾವವಿದ್ಯೆಯು ಬಲು ಹುಲುಸಾಗಿ ಬೆಳೆಯಿತು (ಕಕ್ಕ. ೩೩೪). ೨. ಒಕ್ಕಲಿಗನು ಕಣದ ಹುಲುಸನ್ನು ದನದ ಸೆಗಣಿಯ ೬ಂಡ ಹೊರಗೆ ಒಗೆಯಬಾರದು (ಕನ್ನ.ಶಾ. ೦೩೪).

[ದೇ.೩ ತಮಿ. ಪೊಲಿಚ್ಚಿ=ಲಾಭ; ಮಲ. ಪೊಲಸ = ಬಡ್ಡಿಯಾಗಿ ಕೊಡುವ ಧಾನ್ಯ; ತುಳು. ಪೊಲ್ಲುಸ=ಲಾಭ]

**ಪುಲಿಸುಡೆಳೆ** (ಕ್ರಿ). ಸಮೃದ್ಧಿಯನ್ನು ಹೊಂದು; ಹುಲುಸಾಗಿ ಬೆಳೆ ; ಸೊಂಪಾಗಿ ಬೆಳೆ : ಈಳ್ ಕೆದ್ದಗ್ ಪುಲಿಸುದಳೆದತ್ತಿಗೆಳಗ್ಗಂ ಪೊದಪ್ಪತ್ತಿಗಳ್ ಸರ್ವ ಸಫಲಮೆನಿಸಿತ್ತಿಗಳೆಯ್ದೆಲ್ಲ ಗೆಲ್ಲಂ (ಕಶಿ. ೩-೦೦೦).

[ಪುಲಿಸು+ತಳ್₁]

**ಪುಲು** 'ಪುಲ್' ನೋ.

**ಪುಲುಗರ್ಚು** 'ಪುಲ್ಗರ್ಚು' ನೋ.

**ಪುಲುಗುಡಿತೆ**, ಹುಲುಗುಡಿತೆ (ನಾ). ಒಂದು ಬಗೆಯ ಕೀಟ (?) : ಪಿಲಿಸನ್ನೇತ್ರಪುಟಂ ಕೊಂದಲ ನೇಣಿ ಮಾಂಸಲ ಮಾಂಥವಂ ಪೂರಿ ಪುದುಲೂಪಿಲವಂ ಮೇಣ್ ಬಾಸುಬ್ಬಲ್ ಪುಲುಗುಡಿತೆಯ ಮೆಯ್ಯೊಳೇ ಬಗೆಂ ತತ್‌ಕ್ಷಣದಿಂ (ಅಭಿ.ಶ. ೦೬-೯೨). **ಹುಲುಗುಡಿತೆ** : ಒಸೆದೀ ಮಾತ್ರದೊಳಂ ಮಂತ್ರಿಸಿಕೊಂಡಿತೆ ಭಸ್ಮವಂ ಶಿವಾಲಯದಾ ದೆಸೆಗಂ ಹುಲುಗುಡಿತೆಗಳುಂ ಎಸಗದೆ ಚಿತರ್ಕಳಾಗಿ ತೊಲಗುಗುಮಾದಜೀ

(ಜಮಿ.ಶ. ೦೬-೯೩). [?]

**ಪುಲುದೇಗುಲ** 'ಪುಲ್ದೇಗುಲ' ನೋ.

**ಪುಲುದೊಂಡೆ** 'ಪುಲ್ದೊಂಡೆ' ನೋ.

**ಪುಲುಬೂತು** (ನಾ). ಅಲ್ಪನಾದ ಯಾಚಕ : ಪಾವಿನಂತೆ ಗೀತಕ್ಕೆಚಿಗೆದೆ ಪುಲುಬೂತಿನಂತೆ ೧೦ಡರನೇನಾನುಮಂ ಬೇಡುತ್ತಿರದೆ (ರಜಶೇಖ. ೬-೯೯).

[ಪುಲು (<ಪುಲ್) + ಬೂತು₁]

**ಪುಲುಮನೆ** 'ಪುಲ್ಮನೆ' ನೋ.

**ಪುಲುಮೃಗ** 'ಪುಲ್ಮೃಗ' ನೋ.

**ಪುಲುವಟ್ಟೆ** 'ಪುಲ್ವಟ್ಟೆ' ನೋ.

**ಪುಲುವಿಲು**, ಹುಲಿವಿಲಿ, ಹುಲಿವಿಲು, ಹುಲುವಿಲು, ಹುಲುವಿಲೆ (ನಾ). ಒಂದು ಬಗೆಯ ಮರ : ಬೇಲವರುಟಾಳ ಪುಲುವಿಲುಯ ಸಂದಿ[ಶಾಂ. ಹಲಸಲವ ಕಿಱುಸಂದಿ] ಚಂದನ ಕಕ್ಕೆ ಬಿಕ್ಕೆ ತಱಿಯ . . . ನಾನಾಭೂಜದೊಗ್ಗಿನಿಂ ಕಾನನಂ ಕಣ್ಗೆಸೆದುದು (ಸೋಮುಶ. ೩-೨). **ಹುಲಿವಿಲಿ** : "ಚಿಂಕ್ರಸಂದರಣಃ_ಹುಲಿವಿಲಿ" (ಓಹಿ. ೩೬). **ಹುಲಿವಿಲು** : "ರಥಿಕ_ಹುಲಿ(ಗಿ)ವಿಲು" (ಓಹಿ. ೦೩೪). **ಹುಲುವಿಲು** : "ಅಶ್ವ ಗರ್ಭ_ಹುಲುವಿಲು, ಪಚ್ಚೆ" (ಓಹಿ. ೩). **ಹುಲುವಿಲೆ** : ಹುಲುವಿಲೆ ಮರ ಪ್ರಿಯಂಗು ದಾಳಿಂಬ ಮೊದಲಾದ ವೃಕ್ಷಂಗಳು (ಶಾಗಂ. ೯೨೩-೦೨).

'ಪುಲಿಗಿಲ್' ಪರಾ. [?]

**ಪುಲುವೀಡು** (ನಾ). ಹುಲ್ಲಿನ ಮನೆ ; ಹುಲ್ಲುಜೋಪಡಿ : ಪುಲುವೀಡೊಳ್ ಪಲವುಂ ಪಗಲ್ ಪರದನಿರ್ದಾದಾಯಮಂ ಪೆತ್ತು ಬಾಳ್ಕೆಲೆಯುಳ್ಳೊಂಡೆಡೆ ಗೈದಲಾ ನೆರೆಯುಮರ್ ನೋಲವಂತೆ (ಕಜ್ಜಿ.ಶ. ೦೩).

[ಪುಲು (<ಪುಲ್) + ಬಿ.ಡು₁]

**ಪುಲುಸು** 'ಪುಲಿಸು' ನೋ.

**ಪುಲುಸೋಗು** (ಕ್ರಿ). ಆಧಿಕ್ಯವು ಕುಂದು,–ಕಡಮೆಯಾಗು : ಒಡೆಯದ ಕಂತುವುಂದ್ರೆ ಪುಲುಸೋಗದ ರಾಗದ ರಾಶಿ ನಿರ್ಜರರ್ ಕಡೆಯದ ಪಾಲ್ಗಡಲ್ ಗಿರಿ ಕರ್ದಂಕದ ಪಣ್ಗೊನೆ . . . ಕಾದಿ ಕೋಳ್ವಡೆಯದ ದುರ್ಗದಂತೆಸೆಯುತಿರ್ಪಳು ಕನ್ನೆ ಕುಲಾಭಿಮಾನದಿಂ (ಮಲ್ಲಿಶಾ. ೬-೬೦).

[ಪುಲುಸು (<ಪುಲಿಸು) + <ಪೋಗು₁]

**ಪುಲೆಕೇಶಿ** 'ಪುಲಿಕೇಶಿ' ನೋ.

**ಪುಲ್ಕಸ** (ನಾ). ೧. ನಿಷಾದಜಾತಿಯವನಿಂದ ಶೂದ್ರಸ್ತ್ರೀಯಲ್ಲಿ ಹುಟ್ಟಿದವನು. ೨. ಮಾದಿಗ ; ಶ್ವಪಚ : "ಶ್ವಪಚಃ, ಪುಲ್ಕಸಃ, ಮಾತಂಗಃ, ಪ್ಲವಕಃ_ಈ ೪ ಮಾದಿಗಂ" (ಕರಾಟು. ೯೬-೪೪೪); ಪರದೇಪತೋಪಹಾರಕೃತಿಥಿತರ್ಪಣಕೆ ಪರವೃತ್ತದೇವರ್ಗೆ ಪ್ರಾಣಾಗ್ನಿ ಹೋತ್ರಕ್ಕೆ ಪಿರಿದು ಧರ್ಮಕ್ಕನರ್ಹಂ ಮತ್ತೆಯುಂ ಕೀಳಿರಲೆ ವಿಪ್ರ ಪುಲ್ಕಸರಿರ (ಅಜಿತ. ೦-೩ ೩೬); ಕ್ರೂರವಾದ ಕರ್ಮಗಳಿಂದ ರಜಕರಾಗಿ ಕುಂಭಕರಾಗಿ ಸಾವರ್ನಕರಾಗಿ ಕುಮಿದರಾಗಿ ಪುಲ್ಕಸರಾಗಿ ಕಿರಾತರಾಗಿ . . . ಪುಟ್ಟುವರು (ಜೀತರ. ೦೪). [ಸಂ].

**ಪುಲ್ಕೊಂಥಬೋಯ** (ನಾ). ಒಬ್ಬಾತನ ಹೆಸರು : ಪುಲ್ಕೊನ್ತ ಬೋಯಸ್ಯ ಕಾಶ್ಯ(ಶ್ಯ)ಪಗೋತ್ರ (ಇಶಿ. VII. ೦೬೬-೯೯; ೬೬೩).

[ಪುಲ್ಕೊಂಥ₂+ಬೋಯ]

**ಪುಲ್ಗಚ್ಚು** 'ಪುಲ್ಗರ್ಚು' ನೋ.

**ಪುಲ್ಗರ್ಚು**, ಪುಲುಗರ್ಚು, ಪುಲ್ಗಚ್ಚು, ಹುಲುಗಚ್ಚು (ಕ್ರಿ). ೧. ಹುಲ್ಲಂ ಕಡ್ಡಿಯನ್ನು ಬಾಯಲ್ಲಿ ಕಚ್ಚಿ ಹಿಡಿ : ಪುಲ್ಗರ್ಚಿದ ಪುಲ್ಲೆಯಂ ಕುಜದ ಕೂಬಂ ಸಾರ್ವ ಸತ್ಪಕ್ಷಿಸಂಕುಲಮುಂ ಕುಂದದೆ ಕೊಂದಫುಕ್ಕಿದೆ ಫಲಂ ಸೋಡೆಂಬಪೊರ್ ಬೇಡರಂ ಬಲಿಗೊಂಡತ್ತು...ಉಗ್ರಕಂಠೀರವಂ (ರಾಜಶೇ. ೩ ೦೨೨). ೨. (ಅಲಂ) ಹುಲ್ಲು ಕಚ್ಚಿ ಹಿಡಿಯುವುದರ ಮೂಲಕ

ಶರಣಾಗತಿಯನ್ನು ಸೂಚಿಸು,— ಸೋತೆನೆಂದು ತಿಳಿಸು : ಕರುಣಿಸಲಿ ಶಬರ ತುಡದಿರು ಸತಲಂ ನೀನೆಂದೆನುತ್ತೆ ಪುಲ್ಗರ್ಚಿದವೋಲ್ ಮರವಟ್ಟು ಸ್ಪಕ್ಷದೂರ್ವಾಂಕುರನಾಗಿರ್ದುದು ಭಯಾತ್ರಕರಣಂ ಹರಿಣಂ (ಕ.ಸುಖಾ. ೧೧–೯೨); ಪುಲ್ಗರ್ಚಿದರುಮಂ ಪುತ್ರನೇಜಿದರುಮಂ . . . ತಲೆಗಾದು ಮನ್ನಿಸಿ (ಕಳವಂ. ೯೦-೩). **ಪುಲುಗರ್ಚು :** ೨. ದೇಸಿಗನಪ್ಪನಂ ಭಯದಿನೋಡುವನಂ ಕರವಂಜಿದಾತನಂ . . . ಪುಲುಂಗರ್ಚಿದನಂ ಕೊಲಲಾಗದೆಂಬವಂ ವೇಸದೆ ಪೞಿವುಳ್ಳನಿನಿತುಳ್ಳ ಮೃಗಂಗಳನೆನುತು ಕೊಲ್ವನೋ (ಕಜಾಕ. ೨೯೦). **ಪುಲ್ಗಚ್ಚು :** ೨. ದೊರೆದೊರೆಗಳುಂ ಪಲಾಯನವುನ ನುಕರಿಸಿ ಕಡುಭೀತಿಯಿಂದೆ ಜಲದೊಳ್ ಮುಳುಂಗಿ ಪುಲ್ಗಚ್ಚಿ ವೈರ್ವರ ಪುತ್ರುಗಳನೇಱು ಕೈಗಳಂ ಮುಗಿದು . . . ಹಾಯ್ದರ್ ಕಂಡ ಕಡೆಗೆ (ಕಿಪು. ೬೨-೯೨). **ಹುಲುಗಚ್ಚು :** ೧. ಉಚ್ಚೀಸುತಪ್ಪೀಸುತಂ ಹು[ಪಾಠಾಂ. ಪು]ಲುಗಚ್ಚಿ ಹಾಯ್ಯುತ ಮೆಲುಕಿಱದು . . . ನೆಗೆವುತಂ ಗೂಱಿಸಾಡುತಂ ನೆಲನ (ಜಿಸಪು. ೬೨-೨೬). [ಪುಲ್ + ಕರ್ಚು$_1$]

**ಪುಲ್ಲಗರ್ಬು**, ಹುಲ್ಲುಗಬ್ಬು (ನಾ). ಒಂದು ಬಗೆಯ ಕಬ್ಬು : ತಮ್ಮಲ್ಲಿ ಪುಲ್ಲಗರ್ಬನಾವಗಮೊಂದಂ ಸವಿವಂತೆ ತಾವೆ ಜಗೆಲ್ಲಂ ದೇವರೆಂಬಂತೆ ತೀವುಗುವಮುತ್ತಾನಿತವಿಕ್ಷುಯಾತ್ರನಿನದಂ ದಿಕ್ಕುವಿನೀಕರ್ಣವಂ (ಪುಲ್ಲಪು. ೨.೪೯). **ಹುಲ್ಲುಗಬ್ಬು :** ಕಬ್ಬಿನ ಜಾತಿಗಳು—ರಸದಾಳಿ, ರಾಮಗಬ್ಬು . . . ಬೆತ್ತಗಬ್ಬು ಅಥವಾ ಹುಲ್ಲುಗಬ್ಬು ಎಂದು ಅನೇಕವುಂಟು (ಮುಂಬಯಿ. ೩-೨೦೦). [ಪುಲ್ + ಕರ್ಬು (<ಕರ್ಬು$_1$)]

**ಪುಲ್ಗಲಿ**, ಹುಲುಗಲಿ (ನಾ). ಕ್ಷುದ್ರನಾದ ಯೋಧ; ನಾಡಾಡಿ ಬಂಟ : ಕಜ್ಜಮಂ ಕಾಲಮಂ ಪಾರ್ವ ಕಜ್ಜಗಲಿಗಳುಮಂ ಮಾರ್ಗವಿಮಾಯದ ಬದಿರಿದ ಲೋಭಿಗಲಿಗಳುಮಂ ನೊಂದು ಪಲ್ಗಿರಿದೋಡುವ ಪುಲ್ಗಲಿಗಳುಮಂ ಮೋದಿ ಮೆಯ್ಗೊಳ್ ನಿಂದಿಱಿಪರಿಗಲಿಗಳುಮಂ . . . ನೋಡಿ (ಗದಾಯು. ೯-೬೪ ಪ). **ಹುಲುಗಲಿ :** ಇವನೆಂದರೆ . . . ಹೊರಗಣವರಿಗೂ ಅವೊಬ್ಬ ದಳವಾಯಿಯಲ್ಲಿದ್ದ ಭಯಗೌರವಗಳೂ ಇಲ್ಲ.— ಆ ತೂಕದ ಹುಲುಗಲಿಯನಿಸಿಕೊಂಡಿದ್ದಾನೆ (ಮುದ್ರಾಕ. ೬೬-೦೩). [ಪುಲ್+ಕಲಿ$_2$]

**ಪುಲ್ಗಸ** (ನಾ). ಹುಲ್ಲು ಮೊದಲಾದ ಕಳೆ : ಕೆಯ್ಗೆ ಮರಗಸಂ ಪುಲ್ಗಸ ಮೆಂಬೆರಡುಮಂ ಕಳೆದು ಪದದೊಳ್ ಬಿತ್ತಿದೊಡಂ ಮನದೊಳುಳ್ಳ ರಾಗದ್ವೇಷಮೆಂಬೆರಡುಮಂ ಕಳೆದು ಶುದ್ಧಚಾರಿತ್ರದೊಳೆ ಪತ್ತಿದೊಡಮಾತಂಗೆ ಬೆಳಸುಮಿತಾತಂಗೆ ಸುಗತಿಯುಮೆಂತಕ್ಕುಮೆಂಬುದುಂ ಬಗೆವುದು (ಅಪಜಸಂ. ೯೬-೦೪). [ಪುಲ್ + ಕಸ]

**ಪುಲ್ಗಾಡು** (ನಾ). ಹುಲ್ಲು ತುಂಬಿರುವ ಕಾಡು : ಕಂಡಿಯೊಳ್ ಕಡೆಕುತ್ತೆಲ್ಚಿಸು ನೇಲೆ ಪಾಯ್ದು ಪುಲಿಯಂ ಪುಲ್ಗಾಡೊ[ಪಾಠಾಂ. ನೊ]ಳ್ (ಸೂಕ್ತಿಸು. ೩-೦೦೩). [ಪುಲ್ + ಕಾಡು$_1$]

**ಪುಲ್ಗಿಚ್ಚು**, ಹುಲುಗಿಚ್ಚು (ನಾ). (ಹುಲ್ಲಿಗೆ ಬಿದ್ದ ಬೆಂಕಿಯಂತೆ) ಬೇಗನೆ ಆರಿ ಹೋಗುವ ಬೆಂಕಿ : ಸಿರಿಯಪ್ಪೊಡೆ ಪುಲ್ಗಿಚ್ಚಿನ ದೊರೆ ರಾಜ್ಯವಿಭೂತಿ ಮುಗಿಲ ನೆಟಲ ಸಮಾನಂ (ಧರ್ಮಾಮೃ. ೩-೦೫೯). **ಹುಲುಗಿಚ್ಚು :** ಹೊಲೆಯಗಿತ್ತಾ ಸಾಲ ಒಲೆಯ ಮೇಲಿನ ಹಾಲು ಲಲನೆಯರ ಒಲುಮೆ ಹುಲುಗಿಚ್ಚು ಇವು ನಾಲ್ಕು ನಿಲಲಿಲ್ಲವಯ್ಯ (ಸರ್ವಜ್ಞ. ೮೯೯೬). [ಪುಲ್ + ಕಿಚ್ಚು]

**ಪುಲ್ಗುಡಿ** (ನಾ). ಹುಲ್ಲಿನ ಗುಡಿಸಲು ; ಪರ್ಣಶಾಲೆ : "ತೃಣಕುಟಿ ಪುಲ್ಗುಡಿ" (ಪದ್ಮಕೋ. ೯೬-೯). [ಪುಲ್ + ಗುಡಿ$_2$]

**ಪುಲ್ಗುಡಿಸಲ್** 'ಪುಲ್ಗುಡಿಸಿಲ್' ನೋ.

**ಪುಲ್ಗುಡಿಸಿಲ್**, ಪುಲ್ಗುಡಿಸಲ್, ಪುಲ್ಗುಡಿಸಿಲು, ಹುಲುಗುಡಿಸಿಲು, ಹುಲ್ಲುಗುಡಿಸಲು (ನಾ). = ಪುಲ್ಗುಡಿ : ಪುಲ್ಗುಡಿಸಿಲಿನೊಳಿರ್ಪಂಗೆ ಪಣೆಮಾಡಮಾದಂತೆ ನಾಯಕತನಂಗೆಯ್ವಂಗೆ ಚಕ್ರವರ್ತಿತ್ವಮಾದಂತೆ (ರತ್ನಾಪ್ರ. ೦೦-೨೮೩); ಜಗಮಿರೇಟುವುದೊಂದು ಪುಲ್ಗುಡಿಸಲಂತಲ್ಲಿಡೆ ಕಲ್ಪಾಂತದೊಳ್ ನೆಗೆವೊಂದಗ್ನಿಯೊಳಿಂತಿದೊಂದೆಸಕವಿಲ್ಲೇಬನ್ನೆಗಂ . . . ಜ್ವಾಲೆಯುಂ ಪೊಗೆಯುಂ ತಳ್ಳೊಗವೀ ಶಿವಾಸ್ತ್ರಕರನೀ ದೋಷಸ್ಥಿತಂ ಪಾವಕಂ (ಜಗಾ. ೦೩-೬೭). **ಪುಲ್ಗುಡಿಸಲ್ :** ಕರುಮಮಾಡವಂ ಬಿಟ್ಟು ಪುಲ್ಗುಡಿಸಲನಾಶ್ರಯಿಸುವಂತೆ . . ಸದ್ದರ್ಮವಂ ಬಿಟ್ಟು ಮಿಥ್ಯಾತ್ವಪ್ರೀತನಾಗಿರ್ಪುದುಂ (ಧರ್ಮಾಮೃ. ೦೦-೦೬೨). **ಪುಲ್ಗುಡಿಸಿಲು :** ತಂದೆ ತಾಯಿಲ್ಲದ ಅನಾಥನ್, ಅಜ್ಜಿಯೊಡನಿಹನಂತೆ, ಆ ಪಾಳ್ಗುಡಿಯ ಬಳಿಯ ಪುಲ್ಗುಡಿಸಿಲಲ್ಲಿ (ಕಂದ್ರಸ. ೦೯-೨೪). **ಹುಲುಗುಡಿಸಿಲು :** ನೋಡಿರೆ ಹುಲುಗುಡಿಸಿಲಾತನ ರೂಢಿ ವಿಭವಗಳಡಕೆ ಕಾರಣವು ನಾಡೆ ಏನೆನಲೊಳಗಣಾ ಕಳೆಯಿದಕೆ ಕಾರಣವು (ಸ.ಕಕ. ೨೪-೬೩). **ಹುಲ್ಲುಗುಡಿಸಲು :** ಹುಲ್ಲುಗುಡಿಸಲು ಅಲ್ಲಲ್ಲಿ ಸೋರತೊಡಗಿ, ಮನುಷ್ಯರಲ್ಲಿ ಕೆಲವರು ಸ್ಥಳ ಬದಲಿಸಬೇಕಾಯಿತು (ಬಾಡಿಕು. ೦೯೯). [ಪುಲ್ + ಗುಡಿಸಿಲ್]

**ಪುಲ್ಗುಡಿಸಿಲು** 'ಪುಲ್ಗುಡಿಸಿಲ್' ನೋ.

**ಪುಲ್ಗೊನರ್** (ನಾ). ಹುಲ್ಲಿನ ಚಿಗುರು.—ಕುಡಿ : ಗಿಳಿಯೊಱಕೆಯ ಬಣ್ಣದ ಪುಲ್ಗೊನರ್ ಪೊದಟ್ಟುದು ಪೊಲದೊಳ್ (ಜಗಾ. ೯-೬). [ಪುಲ್ + ಕೊನರ್$_2$]

**ಪುಲ್ಚೇಡು** (ನಾ). ಒಂದು ಊರಿನ ಹೆಸರು : ಅದಱ ಪೊಲಮೇರೆ ಮುಡಣದೆಸೆ ಪೆರ್ವಲ್ಲಿನ್ತೆ ಪುಲ್ಚೇಡು ಉದಿಚೀಡು ಚೀರಳಚಿನ್ತ (ಎಕ. XII, ಸಿರಾ. ೩೮-೫೫ : 878). [ ? ]

**ಪುಲ್ದಂಡೆ** (ನಾ). ಒಂದು ಬಗೆಯ ಬೇಟೆಯ ಸಾಧನ ; ಹುಲ್ಲಿನ ಹಗ್ಗ : ಬಡಿಕೋಲ್ ಕಿರ್ಗಟ್ಟು ಪಾಸಂ ಶುನಕವಿತತಿ ಹೇರಿಟ್ಟಿ ಕೂರಂಬುಗಳ್ ಕೆಯ್ಪೊಡೆ ಬಲ್ ಪುಲ್ದಂಡೆ ಬೆಳ್ಳುವರ್ಗಟಮೆರೆಬಲೆಗಳ್ ಸಾಳುಮಂ ಕೋಳೆ ಗಾಳಂ ಗಿಡುಗಂ ಬಲ್ಪಿಂಡಿಯೊಳ್ ದೀಹವ ಪುಲಿ ನಿಶಿತಾಸ್ತ್ರಂಗಳುಗ್ರತ್ವಮಂ ಸಂಗಡಿಸುತ್ತಿರ್ದೊಪ್ಪೆ ವಿಂಧ್ಯಾಟವಿಗೆ ನಡೆದುದುದ್ಧತ ಕಿರಾತಪ್ರಜಾತಂ (ಗಿಳಿ. ೦-೬೯). [ಪುಲ್ + ದಂಡೆ$_1$]

**ಪುಲ್ದೇಗುಲ**, ಪುಲುದೇಗುಲ (ನಾ). ಹುಲ್ಲಿನ ಛಾವಣಿಯಿರುವ ದೇವಾಲಯ : ಅಗಲೊಂದು ಪುಲ್ದೇಗುಲಮನವರವಸರವಸರದಿಂ ರಚಿಯಿಸಿ ಬಳ್ಳಿಮನೊಂದಂ ತಂದವಾಱು ಖಿವಾಗಿ ನಟ್ಟು ಕಾಡಲಗೋಂಚಲ್ಗಲಿಂ ಪೂಜೆಗೆಯ್ದು ಲಿಂಗವಿದಾಯೆಡೆಲೋಳ್ನೆ ಪುಣ್ಯದಿನಿರ್ದುದೆಂದು ಶಿಟ್ಟಿಯುಂ . . . ಒಳಗಣ್ಗೆ ಪುಗಿಸಲೊಡನೆ (ವೃಕಠ. ೬–೯ ಪ). **ಪುಲುದೇಗುಲ :** ಶಿವಲಿಂಗದರ್ಶನನಿಯತಿ ತಪ್ಪಿದೊಡೆ ಜೀವವಂ ತಾಂ ತ್ಯಜಿಸುವಂ ಗಡ ಭಾವನೆಂದತಿಕುಟಿಲಚಿತ್ತದ ಗಾವಿಲರು ಪುಲುದೇಗುಲವನೊಂದಂ ರಚಿಸಿ (ಜಿಸಪು. ೯-೬). [ಪುಲ್ + ದೇಗುಲ]

**ಪುಲ್ದೊಂದೆ**, ಪುಲುದೊಂದೆ (ನಾ). ಹುಲ್ಲಿನ ಸಿವುಡಿನಿಂದ ಮಾಡಿದ ಪಂಜು,—ಸೂಟಿ : ಸುಡುವ ಮಳಲ ರಾಸಿ ಕಾಸುವಂಬಲಿಯೆಣ್ಣೆಗೊಡ ಸುಣ್ಣವರಲ ಕೊಪ್ಪರಿಗೆ . . . ಪುಲ್ದೊಂದೆ ಬಿಡದೆಸೆದವು ದುರ್ಗದೊಳಗೆ (ಶಬರಶಂ. ೯೨-೩೬); ಬಿಸಿಯೆಣ್ಣೆವರವಿಗಳ ಪುದಿದ ಪುಲ್ದೊಂದೆಗಳ ತರತರದೊಳಿರಿಸಿರ್ದ ಬಲ್ಗೋಲೆಯ ಡೆಂಕಣಿಯು . . . ಮೊತ್ತಂಗಳಾಳ್ವೇರಿಯೊಳ್ ಪಸರಿಸಿದುವು (ಕಂಪು. ೯೨-೦೦). **ಪುಲುದೊಂದೆ :** ತೊಲೆ ಪಂದಿ ಪೊಟ್ಟಟ್ಟಿ ಭಂಡಿ ಡೊಕಣಿ ಪಂದಿದಳೆ ಭೀಮಂಗದೆ ಬಿಡದುರಿವ ಪುಲುದೊಂದೆ ಪುದಿದ ಮಳಲುಂಗಳಿಂದೊಳಗಣ ಕಲಿಗಳುಕದೆ ಕಾದಿದರು (ಶಬರಶಂ. ೯೩-೬). [ಪುಲ್ + ದೊಂದೆ]

**ಪುಲ್ಪಡಿ**, ಪುಲ್ಪದಿ (ನಾ). ಹುಲ್ಲುಗಾವಲು : ಕೊರವಂಗಲ ಕೆಱೆ ಪಳ್ಳಿವರ್ ಪುಲ್‌ಪಡಿಯುಂ ಪಡುವಾಯೊಲ್ವೆ (ಶ್ರಾಪ. ೦೬೨೪. ೬೦-೦೦೦; 700); ಅನೆದಳೊಗೆಱೆ ಪುಲ್ಪಡಿಯೇ ಎಟಗಲ್ಲೇ ಪುಲಿಗಾವದ ಗೆಱೆ

ಮಾತೂಡಲ್ ತತಃ ಪೂರ್ವ್ವತಃ ನಿಡುವಿಳಂಕ್ಕೆ ×× ದವಿನ ಪುಲ್ಪಡಿಯೇ ಕಲ್ಪಗಾಱಿಗಲ್ಲೇ (ಇಆ. XII. ೦೭-೨೦; 813). **ಪುಲ್ಪದಿ :** ಮೂಡಾಯುಮ್ ದುವುಱಿಯ ಪೆರೊಬ್ಬಿ ತೆಙ್ಕಾಯುಮ್ ಕಂಬಳ್ಳಂ ಪಡುವಾಯುಮ್ ವಣಾೞಿಮುಂ ಪುಲ್ಪದಿಯುಂ (ಎಕ. IX. ಕಂಪಾಂ. ೬೦-೭೨; 802).
[ಪುಲ್ + ಪಡಿ$_0$ (ಪ್ರ ← ತಮಿ. ಪಟಿ=ಭೂಮಿ)]

**ಪುಲ್ಪದಿ** 'ಪುಲ್ಪಡಿ' ನೋ.

**ಪುಲ್ಪಾಸು** (ನಾ). ಹುಲ್ಲಿನ ಹಾಸುಗೆ; ದರ್ಭಶಯನ : ಭರತನಂ ಪುಲ್ಪಾಸಿನೊಳ್ ಬಿಟ್ಟು ಗುರುಪಾದಕೆರಗಿ ಮಂತ್ರಿಗೆ ಮೆಚ್ಚನುಚ್ಚರಿಸಿ (ಶರಾ. ೩೦೩). [ಪುಲ್ + ಪಾಸು$_1$]

**ಪುಲ್ಪೊದಱು, ಹುಲುವೊದಱು** (ನಾ). ಹುಲ್ಲಿನ ಪೊದೆ: ತರುತತಿ ಬಳ್ಳಿ ಪುಲ್ಪೊದಱು ಪಕ್ಕಿ ಮೃಗಂ ಫಣಿ ಜೇನ್ ಮೃಗಮ್ಮದಂ . . . ಕಿನ್ನರ ಮಿಥುನಂಗಳ್ ವಿಹರಿಪ ತಾಣದ ಶೈಲವರ್ಣನಂ (ಸೂಕ್ತಿಸು. ೩-೦). **ಹುಲುವೊದಱು :** ಹೊಲಮೇರೆಗಳೊಳುಬ್ಬರದ ಹುಲುವೊದಱು ಗಳೊಳಗಲಕೆ ಹರಿದು ಹೊರಟಗುಟ್ಟಿದನು ಹೊವ್ವಾಱಿಯ ಬೆನ್ನಿನಲಿ (ಕೊರಾ. ೩-೬-೫೭). [ಪುಲ್ + ಪೊದಱು (<ಪೊದಱ್)]

**ಪುಲ್ಪೊಱೆ** 'ಪುಲ್ವೊಱೆ' ನೋ.

**ಪುಲ್ಬಂಟ** (ನಾ). ಕ್ಷುದ್ರನಾದ ಯೋಧ; ತೀರ ಸಾಮಾನ್ಯನಾದ ಸೈನಿಕ : ಪುಲ್ಬಂಟನುಂ ನುಬಿ ಬಲ್ಬಂಟನುಂ ಬಡುವ ಪಗೆಗಾಱನುಮಂ . . . ತನ್ನಂ ಬಿಟ್ಟು ಬಸಿಉ ಕಾಮ್ವ ಪಿತ್ತಾಧಿಕನುಮಂ ಪೋಲ್ತೇ (ರವಾಣಿಮ್ಮ. ೬ ೫೨). [ಪುಲ್ + ಬಂಟ$_1$]

**ಪುಲ್ಬಗೆ** 'ಪುಲ್ವಗೆ' ನೋ.

**ಪುಲ್ಮನೆ** 'ಪುಲ್ವನೆ' ನೋ.

**ಪುಲ್ಮರುಳ್** (ನಾ). ಕ್ಷುದ್ರ ಪಿಶಾಚಿ; ಕ್ಷುಲ್ಲಕವಾದ ಭೂತ : ಸೀಯ ತಲೆ ಬೇಯ ಮೆಯ್ ಮೆಲ್ಲಾಯ ಕರಂ ಪಸಿದ ಪುಲ್ಮರುಳ್ ಪಱಿಸಿನಿಗಳ್ ಬೆಯುತ್ತುಮಿರ್ಪ ಪೆಣನಂ ನಾಯುಗಿವಂತುಗಿದು ತಿಂದುವು (ಕಕ್ಕಿಸಾ. ೫೪೭ ೩೨೩); ಆ ಮರುಳನೊ . . . ಸೀಂ ಮರುಳಿಯೊ ಪೇಟ ಪೇಟ ದೊಡೆ ಪೂಗದಿರೀಶ್ವರನಾಣೆಯೆಂಬುದು ಪುಲ್ಮರುಳಿನಿಸಾನುಮಂ ತೆಗೆದು ಕಾಡಿಮುದಲ್ಲಿ ಫಣೀಂದ್ರಕೀತುವು ( ಕಂಕರಾ. ೦೩-೫೫ ); ಮರುಳ್ಗಳ ಮೇಳವಲಿ ಪೆರ್ಮರುಳೊಂದಿರುತ್ತಿರಲ್ ಕಂಡು ಭಯಭಕ್ತಿಯಿಂ ಚರಣ ಕೆಱುಮುದೊಂದು ಪುಲ್ಮರುಳ್ ಶಿವನೆಂದು (ಕಂಕಿ. ೯೦-೨೬).
[ಪುಲ್ + ಮರುಳ್$_3$]

**ಪುಲ್ಮಾನಸ** 'ಪುಲ್ಮಾನಿಸ' ನೋ.

**ಪುಲ್ಮಾನಿಸಿಗ** (ನಾ). ಕ್ಷುದ್ರನಾದ ಮನುಷ್ಯ; ಹುಲುಮನುಜ : ರಾವಣನೆಂಬೊಂ ಪುಲ್ಮಾನಿಸಿಗನಪರಿಭವಬಲಂಬೆರಸು ಎಮ್ಮ ಮೇಲೆ ಬಂದಪ್ಪನೆಂದು ಕೇಳ್ದಂ (ಪಾಂಪಾ. ೪೦೦). [ಪುಲ್ + ಮಾನಸಿಗ]

**ಪುಲ್ಮಿಗ** (ನಾ). ೧. ಹುಲ್ಲು ತಿಂದು ಬದುಕುವ ಪ್ರಾಣಿ; ಕ್ಷುದ್ರವಾದ ಪ್ರಾಣಿ: ಮೋಪಿ ಪುಲ್ಮಿಗಮುಂ ಬೆಳ್ಮಿಗಮುಂ ಪರ್ಮಿಗಮುಂ ತಣಿಮಮೆಯ್ದು ಕಾಪಿನ ಪೊಲದೊಳ್ (ಆಕಂಪು. ೦೦-೩೯). ೨. ಜಿಂಕೆ ; ಹರಿಣ : ಮಹಾದಂತಿಗಳುಂ ಬೆಗಳ್ಗೊಳಿಪ ಸಿಂಹಕೆ ಲಕ್ಕಮೆ ಪುಲ್ಮಿಗಂ (ರಾಜಶೇ. ೫-೦೩೨). [ಪುಲ್ + ಮಿಗ ]

**ಪುಲ್ಮೃಗ, ಪುಲುಮೃಗ, ಹುಲುಮೃಗ** (ನಾ). ೧. = ಪುಲ್ಮಿಗ ೧ : ಪುಲ್ಮೃಗಮುಂ ಬೆಳ್ಮೃಗಮುಂ ಬಲ್ಮೃಗಮುಂ ಶಿಲೆಗುಹೆಯೊಳದೊಡಂ ಪಿಡಿದಪ್ಪಂ (ಸೂಕ್ತಿಸು ೩-೯೦). **ಪುಲುಮೃಗ :** ೧. ಪಲುಮೃಗ ಬೆಳ್ಮಿಗ ಪುಲುಮೃಗ ಬಂದವು ಸಲಿಪೀದ ಕಾಪಿನ ಪೊಲಕೆ (ಆಕಂಪು. ೦೭-೯). **ಹುಲುಮೃಗ :** ೨. = ಪುಲ್ಮಿಗ ೨ : ಹುಲುಮೃಗವ ಪಿಡಿವುದು ಗದಿ ಪೆರ್ಬುಲಿ ಹುದುಗುವೊಲು ದುರ್ಜನಂ ಮಿಗೆ ಹುದುಗಿಕೊಂಡಿಹ (ಕಂಕರಾ. ೦೭-೯೭).
[ಪುಲ್ + ಮೃಗ]

**ಪುಲ್ಲ** (ಗು). ೧. ಅರಳಿದ ; ವಿಕಸಿತವಾದ: (?). (ನಾ). ೨. ಹೂವು ; ಪುಷ್ಪ : ಕಾಳ್ಗಿರ್ದ ಬೆಳಗ ನೋಡುತ್ತಲಿಲ್ಲದಿದೆ ಮಾಗಿವ ಕೆಯ್ಗಳಂ ನೊಸಲಲಿಡುತ್ತಲ್ಲಿಯ ನಡುವುಂ ಬಾಟಿಯ ಪುಲ್ಲವವೊಲಿಟ್ಟಿಯ ದಿರ್ದೊಡಱಿಯಾಬಾದಿಂಗಳ್ (ಕಾರ. ೩೬೦); ಇಱೆಭಕ್ತನು ದಿವ್ಯನೆ ನಾರುಮಂ ಕೊಂದು ಬಱಿದಿರ್ದಪುದು ಕರಂಡದ ಪುಲ್ಲವಂ ಚೆಲ್ಲಿ ಕೊಱಚೇಡು ತಿರ್ದ ಗಡಮುಂ ದ್ರೋಹಿಯುಂ (ಅಂಗಪು. ೨೪-೨೪). 'ಪುಲ್ಲಂಬ' ಪರಾ. [ < ಸಂ. ಪುಲ್ಲ ]

**ಪುಲ್ಲಂಗ** (ನಾ). ಒಂದು ಬಗೆಯ ಔಷಧೀಸಸ್ಯ : ಕಳ್ಳಂಗಡಲೆ, ಬೋಳಂಗಡಲೆ, ನಾಗಮುತ್ತು, ಪುಲ್ಲಂಗ . . . ಮರದರಿಶಿನ ಇವುಗಳನ್ನು ಸಮಭಾಗವಾಗಿ ಕಷಾಯಮಿಕ್ಕಿ ಕೊಡಲು ಪಂಚಾಹೀತ್ವರ ಗುಣಮಕ್ಕುಂ (ಸಕಕ್ಕ. ೦೦೩). [?]

**ಪುಲ್ಲಂಪುರಚಿ** 'ಪುಳ್ಳಂಪುಣಸೆ' ನೋ.

**ಪುಲ್ಲಂಪುರುಚಿ** 'ಪುಳ್ಳಂಪುಣಸೆ' ನೋ.

**ಪುಲ್ಲಂಬ** (ನಾ). ಹೂವಿನ ಬಾಣಗಳುಳ್ಳವನು ; ಮನ್ಮಥ : ಮಲ್ಲಿಗೆ ಕಳಹಂಸ ತುಗೊಳವನಿಳಿವಂತೆ ಪುಲ್ಲಂಬನರಸಿಯೆಂತಂದೊಂದು ಮೆಟ್ಟಿಗೆ ಯೊಳಲ್ಲಿ ಮಾಡಿಸಿ (ಶತಕಾ. ೬-೩೭). [ಪುಲ್ಲ + ಅಂಬು$_1$ + -ಅ$_3$]

**ಪುಲ್ಲಗ** (ನಾ). ಒಂದು ಮನೆತನದ ಹೆಸರು : ಜ್ಯೇಷ್ಠದ ಪುಣ್ಣಮೆ ಆದಿತ್ಯವಾರದನ್ದು ವಿದಿಯ ಪುಲ್ಲಗರಣ್ಣಮಸೆಟ್ಟಿಯ ಮಗಂ ಪೆದ್ದಣ್ಣಂ ತಱುಗೊಳಳ್ ಕಾದಿ ಸತ್ತು ದೇವಲೋಕಕ್ಕೆ ಸನ್ದಂ (ಎಕ. VIII. ಸೊರಬ. ೩೮೬-೫ ; 1004). [?]

**ಪುಲ್ಲಡಕ** (ನಾ). ಹುಲ್ಲುಂ ಹೊರುವವವನು ; ಹುಲ್ಲುಹೊರೆ ತಂದು ಉಪಜೀವನ ಸಾಗಿಸುವವನು : ರಾಜಕುಮಾರರ ಕೆಳೆಯಂ ಬಿಟ್ಟು ಪುಲ್ಲಡಕರೊಳ್ ಕೆಳೆಗೊಳ್ವಂತೆ . . . ಸದ್ಧರ್ಮಮಂ ಬಿಟ್ಟು ಮಿಥ್ಯಾತ್ವ ಪ್ರೀತನಾಗಿರ್ಪುದುಂ (ರವಾಣಿಮ್ಮ. ೦೦-೦೬೨).
[ಪುಲ್ + ಅಡಕು$_1$ (<ಅಡುಕು) + -ಇ$_3$]

**ಪುಲ್ಲಡಿಗ** (ನಾ). (?) : ಪುಲ್ಲಡಿಗ[ಪಾಠಾಂ.ಗೆ] ರೇಚಯ್ಯ ಮಲ್ಲಣ ಮೊಲ್ಲೆಯರ ಬೊಮ್ಮಯ್ಯ ಮಲ್ಲಣ ತಲ್ಲಿಗೇಶನ ಮಸಣಹುಳ್ಳಿಯ ಮಾರತಂದೆಗಳು (ಪಾಶಂಕ. ೯-೭೯). [< ಪುಲ್ಲವಡಿಗ ?]

**ಪುಲ್ಲತ್ತಿ** (ನಾ). ಒಂದು ಊರಿನ ಹೆಸರು; ಪ್ರ ಬೆಳಗಾವಿಜಿಲ್ಲೆಯ ಈಗಿನ ಹುಲ್ಲತ್ತಿ : ಮುದುಗೆಱೆಯ ಪೂರ್ವ್ವಶ್ರಂಖ(ಗ)ದ ಪುಲ್ಲತ್ತಿಎ(ಯ) (ಇಆ. XIII, ೨೦೯-೪೮; 1068ರ ಕಕ ?). [?]

**ಪುಲ್ಲಪ್ಪ** (ನಾ). ಒಬ್ಬಾತನ ಹೆಸರು : ಶ್ರೀ ಪುಲ್ಲಪ್ಪನ್ ಶ್ರೀ (?)ಮಾ (?)ಣದೇವಃಕ(ಕ)ಟಿತಪ್ರತಿಮಾ (ಇಆ. X. ೦೬೬ ; ಸು. ೬೫ರ ಕಕ).
[ ? + ಅಪ್ಪ$_1$ ]

**ಪುಲ್ಲಮಂಗಲ** (ನಾ). ಒಂದು ಊರಿನ ಹೆಸರು : ××× ವರಸರು ××× ಕಡುಕಲ್ಲ ಪುಲ್ಲಮಂಗಲ ತೆಱಿದಾರ ಪುಣ್ಣಾಡನಾಳೆ (ಎಕ. IX. ದೇಹಳ. ೯೬ ೮; ಸು. ೯೦೦ ?). [ಪುಲ್ಲ + ಮಂಗಲ]

**ಪುಲ್ಲವಟುಕ** (ನಾ). ಹೂವನ್ನು ಮಾರುವ ಹುಡುಗ; ಹೂವಾಡಿಗ : ಸುರಪತಿಯಿಱಿಪಸರ್ಹತ್ಪರಮೇಶ್ವರಪಾದಸೇವೆ ಪಾಂಕಾ ಅಮರ್ದಾ ಪರಿದು ಗಡಿದೆನಿಸಿ ತಂದರ್ ಸುರವಟ್ಟುಕರ್ ಪುಲ್ಲವಟುಕರಂತಿರೆ ಪೂವಂ (ಆಪು. ೫-೭೭). [ಪುಲ್ಲ + ವಟುಕ]

**ಪುಲ್ಲವಡ** (ನಾ). ಹೂವು ಮಾರುವವನು; ಹೂವಾಡಿಗ : ಕಱಿಗೊರಲನ ಪುಲ್ಲವಡ[ಪಾಠಾಂ. ಪುಲ್ಲವಳ, ಪುವ್ವಾಳ]ರೊಳು ಮನಜನೆಂಬವನೊರ್ವನಾವು (ಸೂಂಕೋ. ೦೨-೨೦). [ಪುಲ್ಲ + —ಪಡ$_4$]

**ಪುಲ್ಲವಡಕಾಱ** (ನಾ). = ಪುಲ್ಲವಡ : "ಮಾಲೆರ್ವಡಿಗನೆಮಲ್ ಪುಲ್ಲವಡ

ಕಾಜ ಪೂವಳನೆಂದು ಪೂವಡಿಗನೆಂದೊಕ್ಕುಂ" (ಕಂಶ್ರ. ೩೯); ಇರಿಸಿದೆನ ವಳಡಿಯುರಿ ಜುಜಿಯು ಚೌಸರವನೆಂವನು ಪುಲ್ಲವಡಕಾ[ಪಾಠಾಂ. ವಡಿಗಾ, ಪೂವೆಲಾ, ಶರಕಾ]ಜ (ಸೊಂಸೋ. ೧೨-೬೨). [ಪುಲ್ಲವಡ + – ಕಾಜ]

**ಪುಲ್ಲವಡಿಗ** (ನಾ). =ಪುಲ್ಲವಡ : "ಪೂವಡಿಗ ಪುಲ್ಲವಡಿಗಂ" (ಶಬ್ದಂ. ೨೬೮); ಕಾಂಚವಡಿಗಂ, ಪುಲ್ಲವಡಿಗಂ (ಕಮುದ. ೦೯೮ ಪ್ರಯೋ); ಕುಸುಮಪುತದ ಪುಲ್ಲವಡಿಗಂ ಕುಸುಮದತ್ತನೆಂಬವಂ . . . ಮಂದಸಮಂ ಕೊಂಡು ಬಂದು ನಿಜವಧುವಪ್ಪ ಕುಸುಮಾವಳಿಗೆ ಕುಡುವುದುಂ (ಪುಣ್ಯಾಸ್ರ. ೨-೩೦ ವ).

[ಪುಲ್ಲ + – ವಡಿಗ]

**ಪುಲ್ಲವಡಿಗಿತಿ** (ನಾ). ಹೂವಾಡಗಿತ್ತಿ; ಮಾಲೆಗಾತಿ : ಪುಲ್ಲವಡಿಗಿತಿಯರ ಪಸರದಿನಂದಂಬಡೆದ ಸೂಳೆಗೇರಿಯು ಕೆಲದಲ್ಲಿ ಗರುವರ ಗೊಟ್ಟಗಾಜರ . . . ಆಗರವೆನೆ ಪೆಂಪುಸೊಂಪನೊಳಕೊಂಡೆಸೆದಿರ್ಪುವು ಸೂಳೆಗೇರಿಗಳ್ (ಅನ್ಯಾ. ೯೦). [ಪುಲ್ಲವಡಿಗ + – ಇತ್ತಿ$_1$ (< – ಇತ್ತಿ)]

**ಪುಲ್ಲವಡಿತಿ** (ನಾ). = ಪುಲ್ಲವಡಿಗಿತಿ : ಬಂದುನೆಯೊಳ್ ನಯನದ್ಯುತಿ ಬಂದುಗೆ ಮಲ್ಲಿಗೆಯು ಪೂಗಳೆಂದೀವರ್ ಕಂಪಂ ದಳವೇಱುಪರಳಿಗಂಪಂ ದಳವಡೆ ಪುಲ್ಲವಡಿತಿಯರ್ ಸೊಗಯಿಸುವರ್ (ಜಗ. ೨-೨೬).

[ಪುಲ್ಲವಡ + – ಇತ್ತಿ$_2$ (< – ಇತ್ತಿ)]

**ಪುಲ್ಲವಡುಗ** (ನಾ). =ಪುಲ್ಲವಡ : ಪುಲ್ಲವಡುಗರೊಕ್ಕಲುಂ ಕಲುಕುಟಿಗರೊಕ್ಕಲುಂ ಸರ್ವ್ವಮಾನ್ಯವಾಗಿ ಬಿಟ್ಟರು (ಸೌಇಇ. IX – I, ೦೦೮-೩೯; ಸು. 1067); ಕಂಬೆ ಸ್ವರದೇವರ ಪುಲ್ಲವಡುಗ ನಾಗಂಣಂಗೆ ಮತ್ತ ೩ [೪] (ಸೌಇಇ. IX – I, ೦೩೩-೦೯; ಸು. 1086).

[? ಇದು 'ಪುಲ್ಲವಡಿಗ' ಎಂಬುದರ ಅಪಲಿಖಿತವಿರಬಹುದು]

**ಪುಲ್ಲವಿಸು** (ಕ್ರಿ). ಉತ್ಸಾಹಗೊಳ್ಳು (?): ನಲ್ಲ ಶ್ರೀಚಿಕದೇವನಾಥ ನಿನಗೊಲಿದೆನ್ನ ಮೆಲ್ಲೆರ್ದೆಯು ಹರುಷವೇ ಮೇರೆ ಎಂದು ಸೊಲ್ಲುವವಳೊಡನೊಡನೆ ಪುಲ್ಲವಿಸಿ (ಚಕಸ. ೯೬). [ಪುಲ್ಲ + – ಇಸು$_3$]

**ಪುಲ್ಲಶರ** (ನಾ). ಪುಷ್ಪಬಾಣ; ಮನ್ಮಥ : ಪುಲ್ಲಶರನಂಜಿ ಕರ್ಬಿನ ಬಿಲ್ಲಂ ತಲೆಚಿಮರಿವೆರಸು ಬಿಸುಟಂತೆ ತಪೋವಲ್ಲಭನ ಕೆಲದ ವೇತ್ರಲತೋಲ್ಲಸಿತ ಕಳಾಪಗುಚ್ಛಮೆಸೆದುದು ತುಚ್ಛಂ (ಅಕಂಪು. ೩-೮೮). [<ಸಂ. ಪುಲ್ಲಶರ]

**ಪುಲ್ಲಶರಹರ** (ನಾ). ಮನ್ಮಥನನ್ನು ನಾಶ ಮಾಡಿದವನು; ಶಿವ : ಬಲ್ಲವರು . . . ಪುಲ್ಲಶರಹರಲಿಂಗವರ್ಚಿಪರು (ಶಪಕೋ. ೨-೩೯).

[< ಸಂ. ಪುಲ್ಲಶರಹರ]

**ಪುಲ್ಲಸೊಜ್ಜಿಗೆ** (ನಾ). ನೆನೆದು ಅರಳಿದ ರವೆ : ಬಿಸಿನೀರನೆಱೆದು ಕಿವಿಚಿದ ಪುಲ್ಲ[ಪಾಠಾಂ. ಫುಲ್ಲ, ಪುಟ್ಟ] ಸೊಜ್ಜಿಗೆಯು ರಸದೊಳಗೆ ಅರೆದಕ್ಕಿಯು ಸಮಂಗೂಡಿ (ಸೂಶಾ. ೦-೩೬). [ಪುಲ್ಲ + ಸೊಜ್ಜಿಗೆ (< ಸಜ್ಜಿಗೆ)]

**ಪುಲ್ಲಾಯಟ್** (ನಾ). ಒಂದು ಊರಿನ ಹೆಸರು (?) : ಪ್ರಾಚೀದೆಸೆ ಪನೆದ್ದುಗ್ಗೈಯಿನ್ಮೂಡಾಯತ್ ಕಡೆ ಆಗ್ನೇಯದೆಸೆ ಪುಲ್ಲಾಯಟ್ ದಕ್ಷಿಣದೆಸೆತಳ (?) ಅಣ್ಣಾಯ್ ನೈರುತ್ಯದೆಸೆ ನೆಲಮುಟ್ಟುಗೂರ್ (ಎಕ. X (೩). ಮುಳಬಾ. ೩೨೮-೩೦ ; ಸು. 660; ಪ್ರೈಅ. ೦೯೦೭, ೯-೩೦ ನೋ). [ ? ]

**ಪುಲ್ಲಿ** (ನಾ). ಒಂದು ಬಗೆಯ ಬಟ್ಟೆ : ಅಲ್ಲಲ್ಲಿ ಕಟ್ಟಿದ ಪುಲ್ಲಿಯ ಪಟ್ಟಿಗಳ ಮೇಲೆ ಮೇಘವಣ್ಣಿಗೆಯ ಚೌಕದ ವಿಳಾಸದ ಕಥಾಯಿಯ ಸುಚ್ಚವಿಯನೀವ ಪಚ್ಚೆಯು ಪಟ್ಟಿಗಳ . . . ಸಕಲಸೌಂದರ್ಯಮನೊಳಕೊಂಡ ಮೇಲ್ಕಟ್ಟಿನ ಚಿತ್ರಕವೆಳಗು ಮಂಟಪದೊಳಗಂ ಪೂಜಾಗಂ ತೆಕ್ಕನೆ ಶೀವೆ (ಗಿಂಕ. ೦೦-೨೮ ವ); ತೋರಮುತ್ತುಗಳ ಹಾರಮುರಸ್ಥಳದೊಳ್ ಪ್ರಕಾಶಮಂ ಪಸರಿಸೆ ಪಂಚವಣ್ಣಗೆಯು ಪುಲ್ಲಿಯು ಚಲ್ಲಣದಿಂ ಕಟೀತಟಂ ನಸುಸಗೆ (ಮುಶಾಶೀ. ೬-೬೦); ಪಳಿ ಪಟ್ಟೆ ಪುಲ್ಲಿ ಚೀನಾಂಬರ ದಸರಿ ಗಬ್ಬುಳಗಂದಿ ಮೇಘವಣ್ಣಗೆಯೂ ತಲೆಯು ಮೇಲೆಲ್ಲರ್ಗೆ ಕಟಿದರು ವಸ್ತ್ರದ ಪಳೆ ಶಾನೆ ಕಱಿದುದೆಂಬಂತೆ (ಶಕಪ. ೭೩-೦೦೩). [ ? ]

**ಪುಲ್ಲಿಊರ್** (ನಾ). ಒಂದು ಊರಿನ ಹೆಸರು : ಕೊರಿಕುನ್ದಭಾಗೇ ಪುಲ್ಲಿಊರನ್ನಾಮ ಗ್ರಾಮೇ ಮಹಾತಟಾಕಸ್ಯಾಧಸ್ತಾತ್ ಮೂಲಾಭ್ಯಾಶೇ ಶ್ರವಣಕೇದಾರಸಹಿತಂ ಸಪ್ತಕಣ್ಡುಕಾವಾಪಮಾತ್ರಂ ಕ್ಷೇತ್ರಂ . . . ಪಾನೀಯಪಾತಪುರಸ್ಸರನ್ದತ್ತಂ (ಪ್ರೈಅ. ೦೯೩೮, ೦-೨೩ ; ಸು. 570).

[ಪುಲ್ಲಿ$_0$ + ಊರ್]

**ಪುಲ್ಲಿಂಗ** (ನಾ). [ವ್ಯಾಕ] ಪುರುಷರನ್ನು ಸೂಚಿಸುವ ಲಿಂಗ; ಪುರುಷವಾಚಕಲಿಂಗ : ಪುರುಷರೆ ಪುಲ್ಲಿಂಗ ಸ್ತ್ರೀಯರೆ ತಾಂ ಸ್ತ್ರೀಲಿಂಗ ಮುಟ್ಟಿದುವೆಲ್ಲಂ ನಪ್ಪುಗಿರೆ ಸಲ್ಗುಂ ಕನ್ನಡದೊಳ್ (ಕಮುರ. ೯೦); ಗಂಡಸರನ್ನು ಹೇಳುವ ಪದಗಳಿಗೆ ಪುಲ್ಲಿಂಗವೆಂದೂ ಹೆಂಗಸರನ್ನು ಹೇಳುವ ಪದಗಳಿಗೆ ಸ್ತ್ರೀಲಿಂಗವೆಂದೂ ಹೆಸರು (ಮರ್ಕ್ಯಮ. ೩೦). [<ಸಂ. ಪುಂಲಿಂಗ]

**ಪುಲ್ಲಿಕೆ** 'ಪುಲ್ಲಿಗೆ$_2$' ನೋ.

**ಪುಲ್ಲಿಗೆ$_1$** (ನಾ). ೧. ಊಟದ ಎಲೆ : ರಸಂ ಬಂದೊಡೆ ತಂಬುಲಮಂ ಎಳ್ ಬಂದೊಡೆ ಕೊದಳಿಯುಂ ಬೆಳಸು ಬಂದೊಡೆ ನೆಲನಂ ಸಾಲಂ ಬಂದೊಡೆ ಒಟ್ಟೆಗುತ್ತನಂ ಕೂಟನುಂಡೊಡೆ ಪುಲ್ಲಿಗೆಯುಂ[ಪಾಠಾಂ. ಪತ್ತಳೆಯುಂ] ಬಿಡುವಂತೆ ತನ್ನ ಕಾರ್ಯಂ ತೀರ್ದ ಬೞಿಕ್ಕೆ ಕಡೆಯೊಳ್ ಶರೀರಮುಮಂ ಪರಿಗ್ರಹಮುಮಂ ತ್ರಿಶುದ್ಧಿಯಿಂ ಬಿಟ್ಟು ಪರಿಚ್ಛೇದಿಯಪ್ಪುದು (ಧರ್ಮಾಮೃ.೦೯-೦೩೯). ೨. ಎಲೆಯ ಹೊದಿಕೆ,–ಮುಸುಕು : ನಾರು ಸುತ್ತಿ ಮಾದಳದ ತಳಿರ ಪುಲ್ಲಿಗೆಗಳಂ ಹೊದ್ದಿಸಿ ನೆಲದೊಳಗೆ ಪುಟವಿಕ್ಕಿ ಬಿಸಿಯಂ ಮಾಳ್ಪುದು (ಸೂಶಾ. ೩-೯೭); ನೆಲದ ಸೆಖೆಯಿಂದ ಬೆಂದ ಕಾಯ ತೆಗೆದು ಪುದಿದೆಲೆಯ ಪುಲ್ಲಿಗೆಯುಮಂ ಬಿಸುಟು (ಸೂಶಾ. ೩-೯೮). [←ತೆಲು. ಪುಲ್ಲಿಯ, ಪುಲ್ಲೆಯ]

**ಪುಲ್ಲಿಗೆ$_2$, ಪುಲ್ಲಿಕೆ** (ನಾ). ಒಂದು ಬಗೆಯ ಸಿಹಿಭಕ್ಷ್ಯ; ಹೋಳಿಗೆ : "ಪುಲ್ಲಿಗೆ—ಪೋಲಿಕಾ = ಒಂದು ಭಕ್ಷ್ಯ" (ಕರ್ನಾಕೋ. ೨೭); ಪುಲ್ಲಿಗೆಯ ತತ್ಸವಿಯ ಮಂಡಿಗೆಯಲ್ಲಿ ನವಘೃತಸೂಪದುಶಕದಲ್ಲಿ ನೋಡಲಿ ನಮ್ಮನೆಂದುದು ಧೂರ್ತವಟುನಿಕರ (ಕುವ್ಯಾಕ. ೧೩-೭); ಮಲ್ಲಿಗೆಪುಂಪಳಂತೆ ಬೆಚ್ಚೊಗರ ಮೊಸರೊಳ್ಳೆಯ ಒಹಳುಪ್ಪುಗಾಯಿ ಫಲ್ಲಿಸಿ ಗಟ್ಟಿಯು ಕಟ್ಟಿವ ಒರಿಯರು ಪುಲ್ಲಿಗೆಗಳು ತರತರಿಸೆ ರಸರಸಾಯನವ ಚಪ್ಪರಿದು ನೀರ್ವಜ್ಜಿಗೆ ಹಸಗೆಬ್ಬುರಲಿಂಟಿದರು (ಮೋಹತ. ೩-೩೬). **ಪುಲ್ಲಿಕೆ** : ಕಾರವಣ್ಣದ ಒಟುವ ಕೀರವಣ್ಣದ ಕಟು ನೀರಜದ ಕೈತೊತವ ಹೂರಣದ ಪ[ಪು]ಲ್ಲಿಕೆಯನಾರೋಗಣೆಗೆ ನೀಡಲು (ಅಂಗಪು ೮-೯). 'ಪೋಳಿಗೆ$_1$' ಪರಾ.

[< ಸಂ. ಪೂಲಿಕಾ]

**ಪುಲ್ಲಿಗೆ$_3$** (ನಾ). = ಪುಲ್ಲಿ : ಎರಲ್ವಟ್ಟೆಗೆತ್ತಿ ಸುಟ್ಟಿಸಿದ ಕೆಯ್ಯ ಸುಯ್ಯಭರದೊಳ್ ಸುಱಿದು ಸೂಸುವ ಪುಷ್ಕರದ ತುಂತುಱಿಂ ತುಱುಗಿ ಸುತ್ತಿದ ಪಂಚಾಯುಧದ ಪುಲ್ಲಿಗೆಯು ತೊಂಗಲ ಸೆಱಗು ನಾಂದು ಒಣಲೇಱಿದ ಬಲ್ಪಿದ ವೇಣಿಯೊಳ್ಪಿಣೆದು . . . ಮೇಲೆ ಮೆಱೆಯೆಯಯುಂ (ಅಕಂಪು ೨-೨೯ವ). [< ಪುಲ್ಲಿ]

**ಪುಲ್ಲಿದೊಂಗಲ್** (ನಾ). ಒಂದು ಬಗೆಯ ಕೊಡೆ ; ಪುಲ್ಲಿಯೆಂಬ ಬಟ್ಟೆಯಿಂದ ಮಾಡಿದ ಛತ್ರಿ,—ಸತ್ತಿಗೆ : ಮತ್ತವರ್ಗವರ್ಗೆ ಒಡಿದ ಮೇಘಡಂಬರದ ಝಲ್ಲರಿಯ ಪ[ಪು]ಲ್ಲಿದೊಂಗಲ ಚೌಕಸತ್ತಿಗೆಯ ಕೊಡೆಯ ಗಡಣಂಗಳುಂ (ಚಂದ್ರಪು. ೭-೬೦ವ). [ಪುಲ್ಲಿ + ತೊಂಗಲ್]

**ಪುಲ್ಲಿಪಟ್ಟೆ, ಪುಲಿಪಟ್ಟೆ** (ನಾ). =ಪುಲ್ಲಿ : ಮಕರತೋರಣ ಓರಣಂಗೊಂಡ ಪಲ್ಲಲ್ಲಿ ಸುಕರಮೆನೆ ಪುಲ್ಲಿಪಟ್ಟೆಗಳ[ಶ.ಪಾಂ. ಪಲ್ಲಯಿಸಿ]ರ್ವಲ್ಲಲ್ಲಿ ಪೊಸ್ಮಂ ವಿವಾಹವೇದಿಕೆ ಸಮೆದುದಂತಲ್ಲಿ (ಪಾಶರ. ರೀ. ೦೭೯-೧೮); ಅಲ್ಲಲ್ಲಿ ಕಟ್ಟಿದ ಚಿತ್ರಪಟಗಳಿಂದ ಝಲ್ಲಿಗಳಿಂದ ರಾಜಿಸುವ ಪುಲ್ಲಿ[ಪಾಠಾಂ. ಲ್ಲಿ]ಪಟ್ಟೆಯ ನೆಱೆಯಿಂದಿಂದಲದ ತಳುವಿಲ್ಲದೆ ಸಿಂಗರಿಸಿದರು (ರಾಮಾಅ. ೮-೮೯); ಪುಲ್ಲಿಪಟ್ಟೆಯೊಳು ಸಂಧ್ಯಾರಾಗದೊಳು ಕಾಗಿನಲ್ಲಿ ದುರಂಗಿ ಪಟ್ಟೆಯೊಳು ಚಲ್ಲಣ . . . ಚಲ್ಲಣಂಜಿಯರಿಗೊಪ್ಪಿದುವು (ಛಶ. ೦೩-೯೯). **ಪುಲಿಪಟ್ಟೆ** : ಜಲಧರ

ಬಣ್ಣದ ವರದೇವಾಂಗದ ಪುಲಿವಟ್ಟ[ಟ್ಟ]ಯ ಪಠ್ಯಾವಳಿ ಮಂಜಿಷ್ಠೆಯು (ಕ್ಷ್ಮಾವಳಿ. ೬-೬೩). [ಪುಲ್ಲಿ + ಪಟ್ಟ]

**ಪುಲ್ಲಿವೆಟು** 'ಪುಲಿವೆಟ್ಟು' ನೋ.

**ಪುಲ್ಲಿವೇಟು** 'ಪುಲಿವೆಟ್ಟು' ನೋ.

**ಪುಲ್ಲು** 'ಪುಲ್' ನೋ.

**ಪುಲ್ಲುಂಗೂರ್** (ನಾ). ಒಂದು ಊರಿನ ಹೆಸರು ; ೲ ಇದು ಧಾರವಾಡ ಜಿಲ್ಲೆಯ ಈಗಿನ ಹುಲಗೂರು : ಮೂಡ ಬನ್ನಿಗಾವುಣ್ಣನ ಕೆಯಿ ತೆಂಕ ಪುಲ್ಲುಂಗೂರ ಬಟ್ಟೆ ಪಡುವ ಬಸದಿಯ ಕೆಯ್ಯು[ಂ] (ಇಅ. XVIII, ೩೯-೨೮ ; ೯೯೦). [? + ಊರ್]

**ಪುಲ್ಲುಣಿ** (ನಾ). ಒಂದು ಊರಿನ ಹೆಸರು : ಬ್ರಹ್ಮರಾಸಿಮಣ್ಣಂತರ್ಗ್ಗ . . . ಕೊಟ್ಟಂ ಪುಲ್ಲುಣಿಯ ಮರ್ಯಾದೆ ಸಿರಿಗೆಜೆ ಪೊಸವೂರು ಸವಣೂರು ಕಿಬುಗೇರಿ ಇವು ಪೂರ್ವ್ವಮರ್ಯ್ಯಾದೆ (ಎಕ. XI, ಚಾವಕ. ೧೦೯-೦೯ ; ೯೯೨). [?]

**ಪುಲ್ಲುರಿ** (ನಾ). ಹುಲ್ಲಿನ ಉರಿ,-ಜ್ವಾಲೆ : ಸಾಡೊಳಗೆ ಮಿಾಸದೆಜೆಯಂ ಬೇಡಿಸುವಂ ಬೀರರರಸಿಯರುಮೆಸಂ ಕೂಸಾಡಿಸಲೀಯಂ ಪು[ಹಾಕಂ. ಹು]ಲ್ಲುರಿಯಾಡಿಸುವಂ ತೇಜದುರಿಯಿನರವಿಾಸಿಗಳಂ (ಅರ್ಜ. ೬-೬೦). [ಪುಲ್ + ಉರಿ]

**ಪುಲ್ಲುಟ್ಟು** (ನಾ). ಒಂದು ಬಗೆಯ ತೆರಿಗೆ : ಪುಲ್ಲುಟ್ಟು ಬಾಲವಣವು ಮಾಯಿಬಿದೆಜೆಗಳುಮನ್ನಲದ ನೇಸಜ ಉಳ್ಳನೆಗ ಬಿಟ್ಟ ಇದು ಬಲ್ಲಹನ ದತ್ತಿ (ಸೌಇಇ. IX-i. ೩೯-೩ ; ೨೫೩ಬ ೩೫). [?]

**ಪುಲ್ಲೆ**1, ಹುಲ್ಲೆ (ನಾ). ಚಿಗರೆ ; ಜಿಂಕೆ ; ಎರಳೆ : ಒಡನೆ ನೆರೆದರಸು ಮಕ್ಕಳ ನಿಡುಗಣ್ಣಳ ಬಳಗಮೆಜೆಗೆ ತನ್ನಯ ಮೆಯ್ಯೊಳ್ ನಡೆ ಬಳಸಿ ಪಲರುಮಂಬುಂ ತುಡೆ ನಡುವಿರ್ದೊಂದು ಪುಲ್ಲೆಯಿರ್ಪಂತಿರ್ದಳ್ (ಶಾಂತಿಪು. ೩-೩೦); ಪುಲ್ಲೆಯ ನೋಟದಂತೆ ಸಂಚಲನಾಗದೆ (ರವರ್ಜಾವ್ಯ. ೦೦-೬೭); ಪುಲ್ಲಂ ಕಚ್ಚಿದ ನರಸಂ ಕೊಲ್ಲಂ ಭಟನಿವರ ಬಾಯೊಳುಂ ಬಸಿಜೆಗೊಳಗುಂ ಪುಲ್ಲೆ ಗಡ ಬಗೆವಡದಜಿಂ ಪುಲ್ಲೆಗಳೆನಿಸಿರ್ದುವಕ್ಕಟವನೇಕೆಚ್ಚ್ಯ (ಬಂಹು. ೦೦-೬). **ಹುಲ್ಲೆ** : ಹುಲಿಯ ಬೆನ್ನಿನಲ್ಲಿ ಒಂದು ಹುಲ್ಲೆ ಹೋಗಿ ಮೇದು ಬಂದನೆಂದರೆ ಇದ ಕಂಡು ಬೆಜಗಾದೆ (ಅವಹಂ. ೬-೨೬); ಹೊಲಬುದಪ್ಪಿದ ಹುಲ್ಲೆ ಬೇಡನ ಬಲೆಗೆ ಬಿದ್ದಂತಾದೆನ್ನೆ (ಉವ್ಯಾಸ. ೦೯-೦೨೨) ; ನಂದನನ ಕಾಣದೆ ಕಂಗೆಟ್ಟು ಹೊರಳ್ದಳು ಮುಮ್ಮೊನೆಬಾಣ ತಾಗಿದ ಹುಲ್ಲೆಯಂತೆ (ಮೋಹತ. ೪-೬೯).

ಪುಲ್ಲೆಯ ಬಯಲ್, ಹುಲ್ಲೆಯ ಬಯಲ್ = ಜಿಂಕೆಗಳು ಓಡಾಡುವ ಪ್ರದೇಶ : ಜಿಡ್ಡುಳಿಗೆ ೭೦ ಱ ಬಳಿಯ ರಾಜಧಾನಿ ಬಳ್ಳಿಗಾವೆಯ ಪುಲ್ಲೆಯ ಬಯಲೊಳ್ ಭೇರುಣ್ಡಗಳೆಯೊಳ್ ಕೊಟ್ಟ ಗಟ್ಟಿ (ಎಕ. VII, ಶಿಕಾ. ೦೨೦-೦೬; 1048) ; ಬಳ್ಳಿಗಾವೆಯ ತಳದ ಹುಲ್ಲೆಯ ಬಯಲೊಳ್ ಕಚ್ಚಿಯ ಗದ್ದೆಂಬದ ಗಳೆಯೊಳಗದು ಕೊಟ್ಟ ಗಟ್ಟಿ ಮತ್ತರೆರಡು (ಪ್ರಾಂಇ. ೦೯೨೯, ೬೩-೬ ; 1024). **ಪುಲ್ಲೆಯ ಮೊನೆ** = ಪುಲ್ಲೆಯ ಬಯಲ್ : ವಿದ್ಯಾಕ್ಷೇತ್ರಮಪ್ಪಮಣಿಯಗ್ರಗ್ರ ಪುಲ್ಲೆಯ ಮೊನೆಯಿಂ ಪಡುವಲ್ ಮತ್ತರ್ಪ್ಪದಿನಾಜು (ಸೌಇಇ. IX-i, ೦೦೬-೩೯ ; 1075). **ಹುಲ್ಲೆಯ ತೆವರ್** = ಪುಲ್ಲೆಯ ಬಯಲ್ : ಹುಲ್ಲೆಯ ತೆವರಲಬ್ಬೆಯನವರ ಕೆಯಿಂ ಮೂಡಲುಕೇರಿಯ ಎಜಕನವರ ಕೆಯಿಂ ತೆಂಕಲು . . . ಮತ್ತರು ೧೨ ಶ್ರೀವಮಾನ್ಯ (ಸೌಇಇ. IX-i, ೬೭೦-೩೯; 1258). [ದೇ.ಃ ತಮಿ. ಪುಲ್ವಾಯ್; ತೆಲು. ಪುಲ್ಲೆಮ್ರಗ]

**ಪುಲ್ಲೆ**2 (ನಾ). (?) : ಬೆಳ್ಳಿಬಸವನ ಆಭರಣದ ಲೆಕ್ಕಾ . . . ಪುಲ್ಲೆಕಡೆ ಸಾಮಮಾನು ೦೬ ಶಾಳೆಗಳು ೨ ಯಿದರ ಹಗ್ಗದ ವಟ್ಟ (ಎಕ. XIV, ಪಂತಿತ. ೨೮೯,೩ಜಿಯ ೪೦೦; ಸು. 1648). [?]

**ಪುಲ್ಲೆಗಣ್**, ಹುಲ್ಲೆಗಣ್, ಹುಲ್ಲೆಗಣ್ಣು (ನಾ). ೧. ಜಿಂಕೆಯ ಕಣ್ಣು. ೨. ಜಿಂಕೆಯ ಕಣ್ಣನಂತಿರುವ (ಚೆಲುವಾದ ಮತ್ತು ಚಂಚಲವಾದ) ಕಣ್ಣು : ಪು[ಹಾಕಂ. ಹು]ಲ್ಲೆಗಂಗಳ ಕೊಲ್ಲಿನೋಟದ ಮಲ್ಲಿಗೆಯ ಮೊಗ್ಗೆಗಳ ದಂತದ . . . ವಟಫಲಾಧರೆ ನಿಲ್ಲಲೆಸೆದಳು (ಶಾಗು. ೨-೦೩). **ಹುಲ್ಲೆಗಣ್** : ೨. ತವಕದಿ ಹುಲ್ಲೆಗಣ್ಣಾವಳೊರ್ವಳುದಕವನಲ್ಲಸದಿ ಚೆಲ್ಲಿದಳು (ಹಂಪಂಕ. ೦೬-೬೦); ಚೆಲ್ಲೆಗಣ್ಣಾವರರಳ್ಗಣ್ಣವರ್ ನಿಡಿಗಣ್ಣ ಹುಲ್ಲೆಗಣ್ಣವರ್ ... ತೋರಧಮ್ಮಿಲ್ಲೆಯರೆಯ್ದೆತೊಗ್ಗಿನಲಿ (ಲೋಹಕ. ೨೯-೧೨). **ಹುಲ್ಲೆಗಣ್ಣು** : ೨. ಹುಲ್ಲೆಗಣ್ಣುಗಳಿಂದ ನಸ್ಮೆನೋಟಗಳಿಂದ ಗೆಲ್ಲ ಕರುಣೆಗೆಳೀದ ಬೆಳೆವ ಮೂರುತಿಯ ನಿನ್ನ ಕರುಣೆಯಿನೆನ್ನ ತೋಳೆದು ಹೋಗ್ಗೆಯ (ಅಸೀಗೀ. ೪೭-೦೩).

ಪುಲ್ಲೆಗಣ್ಣಳ್ = ಜಿಂಕೆಯ ಕಣ್ಣಿನ ಹಾಗಿರುವ ಕಣ್ಣುಗಳುಳ್ಳವಳು; ಹರಿಣನೇತ್ರೆ : ಪುಲ್ಲೆಗಣ್ಣಳೆ ಕೇಳು (ಶಶಜೋ. ೦೦-೯೬). [ಪುಲ್ಲೆ1 + ಕಣ್]

**ಪುಲ್ಲೆಗೋಡು** (ನಾ). ೧. ಜಿಂಕೆಯ ಕೊಂಬು,—ಕೋಡು. ೨. ಜಿಂಕೆಯ ಕೊಂಬಿನಾಕಾರದ ಒಂದು ಬಗೆಯ ಆಭರಣ : ವನಸಿರಿ ಮುಂತ್ರಗಶಿಶುಗಂದನುನಯದಿಂ ಪುಲ್ಲೆಗೋಡು ಪುಲಿಯುಗುರ್ಗಳನೊಲ್ದು ನುರಾಗದಿಂದೆ ಕಟ್ಟಿದಳೆನೆ ನನೆ ಕಿಲಮೆಸೆಯುತ್ತಿರ್ಪುವಾ ಮುಂತ್ರಗದೊಳ್ (ಪುಣ್ಯಾಶ. ೩-೩೬೩). [ಪುಲ್ಲೆ1 + ಕೋಡು2]

**ಪುಲ್ಲೆಮಜಿ** 'ಪುಲ್ಲೆವಜಿ' ನೋ.

**ಪುಲ್ಲೆವರಿ** 'ಪುಲ್ಲೆವಜಿ' ನೋ.

**ಪುಲ್ಲೆವಜಿ**, ಪುಲ್ಲೆಮಜಿ, ಪುಲ್ಲೆವರಿ, ಹುಲ್ಲೆಮರಿ (ನಾ). ಜಿಂಕೆಯ ಮರಿ ; ಚಿಗರೆಯ ಮರಿ : ಅಸು ಪೋಪ ಪುಲ್ಲೆವಜಿಯಂ ಕೈಯಿಂದದಂ ಕೊಂಡು ಬೇಡನಗುರ್ವಿಂ ನಡೆಗೊಂಡಂ (ಕುಸುಮಪ. ೦೯-೩೩). **ಪುಲ್ಲೆಮಜಿ** : ಬವರಂಗೆಯ್ದು ಗಜಂಗಳ ನಿಪಹದ ನಿಗ್ಗವಮಂದುಡಿದು ಸೂಸಿರೆ ನೆಲದೊಳ್ ತವೆ ಪಸಿದ ಪುಲ್ಲೆಮಜಿಗಳ್ ತವಕದೆ ಬಿಸಮೆಂದು ತುಡುಕುಗುಂ ತದ್ವನದೊಳ್ (ರಾಜಶೇ. ೩-೬೦). **ಪುಲ್ಲೆವರಿ** : ಪುಲಿಯೊಡನೆ ಕಲಹವೇ ಪುಲ್ಲೆವರಿಗೆ (ಕೇಶರಾ. ೦೬-೩೩). **ಹುಲ್ಲೆಮರಿ** : ಅವನು ಹುಲ್ಲೆಮರಿಯನ್ನು ಅಟ್ಟಿಸಿಕೊಂಡು ಹೋಗಿ ದಟ್ಟವಾದ ಕಾಡಿನೊಳಗೆ ಸಿಕ್ಕಿಬಿದ್ದನು (ಕೂತ). [ಪುಲ್ಲೆ1 + ಮಜಿ]

**ಪುಲ್ಲೆವೆಚ್ಚು** (ನಾ). ಜಿಂಕೆಯಂತೆ ಗಾಬರಿಯಾಗುವಿಕೆ : 'ಪುಲ್ಲೆವೆಚ್ಚುವೆಚ್ಚು' ಪರಾ. [ಪುಲ್ಲೆ1 + ಬೆಚ್ಚು2 (< ಬೆರ್ಚು2)]

**ಪುಲ್ಲೆವೆಚ್ಚುವೆಚ್ಚು** (ಕ್ರಿ). ಜಿಂಕೆಯಂತೆ ಗಾಬರಿಯಾಗು : ಕದನದೊಳನ್ನು ನಿನ್ನ ತರವಾರಿಯ ಬಾರಿಗೆ ಮೆಯ್ಯನೊಡ್ಡಲಾಜದೆ ನಳಿದಿನ್ನುವನ್ನದನೆ ಜಾನಿಸಿ ಜಾನಿಸಿ ಗಂಗ ತನ್ನ ನಮ್ಬಿದ ಸುವತೀಕದಮ್ಬಗರ್ವೆ ಪೌವನೆ ಪೋಗಿರೆ ಪುಲ್ಲೆವೆಚ್ಚುವೆಚ್ಚಿದವಸಹರ್ನಿಶಂ ತಿಗುಳ ದಾಮುನರಣ್ಯಶರಣ್ಯ ವೃತ್ತಿಯಿಂ (ಎಕ. II, ೨೯೦-೨೯ ; ಸು. 1176). [ಪುಲ್ಲೆವೆಚ್ಚು + ಬೆಚ್ಚು1 (< ಬೆರ್ಚು1)]

**ಪುಲ್ಲೋರಿ** (ನಾ). ಹೋರಿ ಕರು : ಕೆಲವ ಕೇಸಿಗ ನಿಜಿವ ಹಂಡ ಹಾಜಿವ ಚಂಚ ಮಲೆವ ಪುಲ್ಲೋರಿ ಬೆಚ್ಚುವ ಬೆಳ್ಳ . . . ನಾನಾಪಾಡಿಯ ಕಬ್ಬಸಿಗಳೊಳಗಾದ ಪಲವುಪರಿಯತ್ತು ತೊಂಭತ್ತಾಱುಲಕ್ಷ ಮೇಳೈಸಿ ಪಿಡಿದುವು ಗೆಲ್ಲಕೆ (ಸಂಗಿರಾ. ೩೩-೭). [ಪುಲ್ + < ಪೋರಿ]

**ಪುಲ್ವಕಿ** 'ಪುಲ್ವಕ್ಕಿ' ನೋ.

**ಪುಲ್ವಕ್ಕಿ**, ಪುಲ್ವಕಿ (ನಾ). ಒಂದು ಪ್ರದೇಶದ ಹೆಸರು : ತಮ್ಮರ್ ಪರಿದು ಪುಲ್ವಕ್ಕಿಯಲ್ಲಿ ಕಾದಿ ತುಱುವವಂ ಮಗುಬ್ಬಿ (ಪ್ರಾಇಂ. ೦೯೨೯, ೯೯-೩ ; ೧). **ಪುಲ್ವಕಿ** : ದುಗ್ಗಮಾರೆಜಿಯಪ್ಪ ಕೊವಳಾಲನಾಡು ಮೂನೂಱುಂ . . . ಪುಲ್ವಕಿನಾಡುಸಾಸಿರಮು ಬೆಪೋದು ಸಾಸಿರವು

× × × ನಾಡಬುವತ್ತುಮಾನಾಳುತ್ತಿರೆ (ಎಕ. X. ಶ್ರೀನಿವಾ. ೩೭–೩; ಸು. 770).

[?]

**ಪುಲ್ಬಗೆ**, ಪುಲ್ಬಗೆ (ನಾ). ಹೀನವಾದ ವಿಚಾರ ; ಕೀಳಾದ ಯೋಚನೆ : ಅವರ ವಚನದ ಪುಲ್ಬಗೆಯುಂ ಪುಲ್ಲಮೆಯುಮನರಿಯದೆ ಸಮಸ್ತ ಬಳೋದ್ಯುಕ್ತನಾಗಿ . . . ಮದಗಜೇಂದ್ರಪುರಮನೆಯ್ದೆ ಬರೆ (ಪಂಪಭಾ. ೬–೬೯ ವ); ಮಾರಂ ವಿದ್ಯಾಪ್ರೀತನಪ್ಪುದರಿಂ ತನ್ನ ನುಡಿಯಂ ಕಡೆಗಣಿಸ ದೊಡಂಬಡಾಗುವೆಂಬ ಪುಲ್ಬಗೆಯಿಂನಾ ವಾಣಿಪ್ಪ್ರಯೀತೆಂದರ್ (ಶಬಸಾ. ೬–೦೯೬ ವ). **ಪುಲ್ಬಗೆ** : ಅವರ ಪುಲ್ಬಗೆಯುಮನ್ನೂ ಪುಲ್ಲಮೆಯುಮನ್ನೂ ಅರಿಯದೆ ಅವನು ಹಸ್ತಿನಾಪುರಕ್ಕೆ ಬರುವನು (ಕಪಾ. ೬೪). [ಪುಲ್ + ಬಗೆ$_1$]

**ಪುಲ್ವಟ್ಟೆ**, ಪುಲುವಟ್ಟೆ, ಹುಲುವಟ್ಟೆ (ನಾ). ೧. ಸಣ್ಣಹಾದಿ; ಕಿರುದಾರಿ; ಕಾಲುದಾರಿ : ನೆತ್ತರುಂ ಬಸಿವುತ್ತಿರ್ಪುದು ಪೋದವಿಕ್ಕೆ ಮಱಿಯಂ ಪುಲ್ಲ[ಲ್ವ]ಟ್ಟೆಯೊಳ್ ಪುಲ್ಲಿಗರ್ (ಕಾದಂಪೂ. ೦೩೬); ಕಿರಾತರಾಜಪಾ ಕನ್ನೆಯ ಪಾತಂಗಳು ಪಲತೆಱದಿಂದರ್ಚಿಸಿ. . .ಪುಲ್ವಟ್ಟೆಯುಂ ಪೇರಡವಿಯುಂ ಪೊಱಮಡು ಕಿಱಿದುಂ ದೂರಂ ಪೋಗಿ (ಕರ್ಮಾಮ್ಮ. ೩–೦೦೫); ನೆಟ್ಟನೆ ಸತ್ಪಥಂಬಿಡಿದು ಪೋಪ ನರಂ ಮತಿಗೆಟ್ಟು ಪಾಯ್ದು ಪುಲ್ವಟ್ಟೆಯನೆಯ್ದೆ ಪೋಗುತಿರೆ ಕಾನನದೊಳ್ (ಧರ್ಮಾಪ. ೦–೯೯). **ಪುಲುವಟ್ಟೆ** : ೧. ಒರ್ವ ವನಚರಂ ಮಹಾವನದೊಳ್. . .ಒಂದು ಮಹಾಹಿ ತೊಟ್ಟಗೆ ಬರೆ ಪುಲುವಟ್ಟೆಯೊಳ್ ಕೊಲಗಲಿಂದಿಲ್ಲದೆ ಬಿಲ್ಲಂ ಕೊಂಡು ವಿಷದೂಷಿತ ಮಪ್ಪಂಬು ಕೊಟ್ಟಿಸುವುದುಂ (ಶಾಂತಪು. ೩೦೦–೦೯). **ಹುಲುವಟ್ಟೆ** . ೧. ಹುಲುವಟ್ಟೆಯೊಳು ಬೆಳೆದ ಹೆಮ್ಮರನ ಮಲಗಿಸಿ ನಿಂದ ಹುಳ್ಳಿಹೊಱೆಯಂ ಕಂಡಳು (ಹರಿಶ್ಚ. ೭೨–೨೦); ಪಾಡಿಸಲು ಸ್ವರ್ಗಕ್ಕೆ ಪಂವ ಹುಲುವಟ್ಟೆಗಳಪರಿಮಿತಂ ವಿಷ್ಣುಭಯವೀವಪಸಿತುಂ (ಶಾಶಂಶ. ೩–೩). ೨. ಕ್ಷುದ್ರವಾದ ಹಾದಿ ; ಕೆಟ್ಟ ಮಾರ್ಗ: ಧರ್ಮಪಥ ಹುಲುವಟ್ಟೆಯೆನಿಸಿದ ಹಮ್ಮಿನಲಿ ಕೆಡಬೇಡ (ಕುಮ್ಮಾರಾ. ೯–೦೩). [ಪುಲ್ + ಬಟ್ಟೆ$_1$]

**ಪುಲ್ವಟ್ಟೆವಿಡಿ**(ಕ್ರಿ). ಕಿರುದಾರಿಯನ್ನು ಅನುಸರಿಸು; ಕಾಲುದಾರಿಯನ್ನು ಹಿಡಿ : ಆ ಮಹಾಟವೀಮಧ್ಯದೊಳೊಂದು ಪುಲ್ವಟ್ಟೆವಿಡಿದು ನಡೆಯೆ (ಚಂದ್ರಪ್ರ. ೩–೩೭ ವ); ಕಟ್ಟೊಲ್ಪೆಯೊಳಿವೆಯಲಾಗದೆ ನೀಡುಂ ನಿಟ್ಟಿಪ ನೀಱಿನ ಬಗ ದಾಸೆಯು ಪುಲ್ವಟ್ಟೆವಿಡಿದು ನಡೆಯುತ್ತಿರೆ (ಜಗಸಾ. ೯–೦೦); ಅವನಲ್ಲಿಂದ ಪುಲ್ವಟ್ಟೆವಿಡಿದು ನಿಲ್ಲದೆ ಪೋಗಿ ಕಂಡನು ಕಾನನಮಧ್ಯದಲ್ಲಿ ಮಹಾಸರೋವರವ (ಶಾಗಳು. ೦೦–೬೬). [ಪುಲ್ವಟ್ಟೆ + ಪಿಡಿ$_1$]

**ಪುಲ್ಮನೆ**, ಪುಲುಮನೆ, ಪುಲ್ಮನೆ, ಹುಲ್ಲುಮನೆ (ನಾ). ಹುಲ್ಲಿನ ಮನೆ; ಗುಡಿಸಲು ; ಪರ್ಣಕುಟಿ : ಕಲ್ಪಾಟಿ, ಪುಲ್ಮನೆ, ನೀರ್ವಾವು (ಶಾಶಾಖ. ೩೦ ಊಶಾ). **ಪುಲುಮನೆ** : ಚಂದನೆಯುಂ . . . ಶೃಂಖಳಾಬಂಧನೆಯುಂ ಮಾಡಿ ತಲೆವಾಗಿಲ ಕಿಲದ ಪುಲುಮನೆಯೊಳಿರಿಸಿ ಕೊಚ್ಚನಿಕ್ಕಿ ನಡಸುತ್ತು ಮಿರ್ದಳ್ (ಚರ್ಚಾ. ೦೩–೩೯ ವ). **ಪುಲ್ಮನೆ** : ಪುಲ್ಮನೆಯೊಳಿರ್ದಪಂ ಕಿರ್ಚಿನ ಪೆರ್ಚನಿಚ್ಚೈಸಿದೊಡಂ ಸಂಸಾರದೊಳಗಿರ್ದಾತಂ ಕಷಾಯಂಗಳ ಪೆರ್ಚನಿಚ್ಚೈಸುವೊಡಂ ಆಯುರ್ವರುಂ ಬೇವುದುಂ ನೋವುದುಂ ಏಂ ಪಿರಿದೆ: (ಕಾವಸಂ. ೦೯೩–೦೦). **ಹುಲ್ಲುಮನೆ** : ಕಳಸಾಪುರಿನ ಹುಲ್ಲುಮನೆಯ ಮುಂದುಗಡೆ . . . ಸೇರೆಗಾರರೂ ಹೂವಯ್ಯನೂ ಉದ್ವೇಗದಿಂದ ಮಾತಾಡುತ್ತಿದ್ದರು (ಕಾಸೂರು. ೯೦೦) ; ಸಿದ್ದಣ್ಣನ ಹುಲ್ಲುಮನೆ ಸ್ಮಶಾನದಂತಾಗಿತ್ತು (ಪುಕಶು. ೭೦). [ಪುಲ್ + ಮನೆ]

**ಪುಲ್ವರಿ** (ನಾ). ಒಂದು ಬಗೆಯ ತೆರಿಗೆ : (ದನಗಳನ್ನು) ಹುಲ್ಲು ಮೇಯಿಸಿದುದಕ್ಕಾಗಿ ಕೊಡುತ್ತಿದ್ದ ತೆರಿಗೆ : ಇಡತೊರ್ಕೆ ಪುಲ್ವರಿ ಮಾಂದ್ಯೆಕಂಥೆ(ಡೆ) (ಎಇ. XVIII. ೦೯೨–೩೦: 1434).

[ಪುಲ್ + ಪರಿ$_1$./ತಮಿ. ಪುಲ್ವರಿ, ಪುಲ್ಲರಿ ; ತೆಲು. ಪುಲ್ಲರಿ]

**ಪುಲ್ಮಾನಿಸ**, ಪುಲ್ಮಾನಸ, ಹುಲುಮಾನಿಸ (ನಾ). ಅಲ್ಪನಾದ ವ್ಯಕ್ತಿ ; ಕ್ಷುದ್ರಮನುಷ್ಯ : ಕೆಟ್ಟೊಡಲಿಂತು ಕರ್ಮಭೋಗಂಗೆಯ್ದು ಕಾತ್ರದಿಂ ಮಡಿವ ಪುಲ್ಮಾನಿಸರುಮಂ ಕ್ಷುದ್ರದೈವಮಂ ಪೊಗಳ್ದು ಮಯುನ್ನುಳ್ಳ ಮತಿಯಂ ಕೆಡಿಸಿಕೊಳ್ವಧಮಕವಿಗಳ ಮಾತವೇಕಿಲ್ಲಿ (ಶಬ್ದಸಾ. ೦–೯೭). **ಪುಲ್ಮಾನಸ** : ಇಕ್ಷ್ವಾಕುವಂಶತಿಳಕನಪ್ಪ ರಾಮನಂ ಪುಲ್ಮಾನಸನೆಂದೇಕೇಳಿಸಿ . . . ನಾಣ್ಚದಂತು ನುಡಿವೆ (ಕಾಪುಂಪು. ೩೦೨) ; ಕಲ್ಮಷರಹಿತಂಗೆ ತಿಕ್ಕರಾಜಂ ಗುಳಿದೀ ಪುಲ್ಮಾನಸರಂ ದೊರೆಯೆನೆ ಕಲ್ಮಷಾಣಕದನ್ನುಟೆಂದಡೆಂತಂತೆ ದಿಟಂ (ಎಕ. VII, ಶಿಕಾ. ೦೯–೩೬ ; 1161) ; ಪುಲ್ಮಾನಸನಾದ ಚಂಡಶಾಸನ ವೆಸರಂ ಚಾಂಡಾಲ ನೀರೊಳೀತರ್ದುಪರೇ (ಅಪಂಪು. ೦೧–೩೭). **ಹುಲುಮಾನಿಸ** : ಕಾಲಿಂಗಸದಳದ ಕಲ್ಪಾಂತರುದ್ರನ ವಿಷಮನಯನಜ್ವಾಲೆಗಳಂಕದ ವೀರಭಟರೊಡನೆ ಉಸುರಬಹುದೇ ಜೀಯ ಹುಲುಮಾನಿಸರ ಮೃದುರಣರಾಜಕಾರ್ಯವ (ಕೊರಾ. ೬–೨–೦೨).

[ ಪುಲ್ + ಮಾನಿಸ$_1$ (<ಮಾನುಸ) ]

**ಪುಲ್ವಿಡಿ**, ಹುಲುವಿಡಿ (ಕ್ರಿ). (ಆಲಂ) ಹುಲ್ಲನ್ನು ಕಚ್ಚಿ ಹಿಡಿಯುವುದರ ಮೂಲಕ ಶರಣಾಗತಿಯನ್ನು ಸೂಚಿಸು : ಪುಲ್ವಿಡಿಯೆ ಸಚಿವತನಯಂ ಕಾಲ್ವಿಡಿಯೆ ನಿಜೇಶಂ ... ಪಲಗೆವಿಡಿದಳ್ ಕಲ್ವಾನಸೆ (ಲೀಲಾವ. ೦೯–೨೬). **ಹುಲುವಿಡಿ** : ಬೊಮ್ಮನ ಮಡದಿಯ ನಾಸಿಕಪರೆಯಾಗಲಿ ವಿಕ್ಕರು ಹುಲುವಿಡಿಯಲಿ ದಿಗಧೀಶರು ಭಂಗಿತರಾಗಲಿ (ಶೀಕೀಶ. ೦–೩೦).

[ಪುಲ್ + ಪಿಡಿ$_1$]

**ಪುಲ್ಪೊಱೆ**, ಪುಲ್ಪೊಱೆ, ಹುಲ್ಲುಹೊರೆ (ನಾ). ಹುಲ್ಲಿನ ಕಂತೆ,–ಕಟ್ಟು : ಕಲ್ಪೊಱೆದು ಸದೆಸಟ್ಟು ಪುಲ್ಪೊಱೆಗಳಾಂತಪರ್ ನಿಲ್ಕಿದರ್ ಪುರದಗಳಂ (ಕಂಪು. ೯೨–೨೯) ; ಮಡಿದ ಪೆಣಗಳನೆಳೆದು ತುಂಬಿದರ್ ಪುಲ್ಪೊಱೆಗಳಂ ಕೊಱೆದುಗಳನೊಟ್ಟಿದರ್ ಕಲ್‌ಗುಂಡು ಮಣ್ಣಳಂ ಸುರಿದು ನೆಲಸರಿಮಾಡಿದರ್ (ಕಂಪು. ೯೨–೩೦). **ಪುಲ್ಪೊಱೆ** : ಪುಲ್ಪೊಱೆವೊತ್ತು ಶ್ರೀಪತೀಶನ ಪುರಕೆ ನಡೆಯುತಿರಲು (ಅರಾಶ. ೦–೯–೩). **ಹುಲ್ಲುಹೊರೆ** : ತೃಣ್ಯಾ, ತೃಣಾನಾಂ, ಸಂಹತೀ—ಹುಲ್ಲ ಮೆವೆ, ಹುಲ್ಲುರಾಶಿ, ಹುಲ್ಲುಹೊರೆ, ಹುಲ್ಲ ಮೆದೆ, ಹುಲ್ಲುಮೂಟೆ, ಹುಲ್ಲಡಕ (ಸಿದ್ಧಾಂಶಿ. ೦೩೨) ; ದೋಸೆ ತಿನ್ನುವ ಆಸೆಯಿಂದ ಬೇಗ ಹುಲ್ಲುಹೊರೆ ಹೊತ್ತುಕೊಂಡು ಸುಗ್ಗಿಗದ್ದೆಯಿಂದ ಮನೆಗೆ ಬಂದಿದ್ದಳು (ಕಥಾಸ. ೩೬). [ಪುಲ್ + ಪೊಱೆ$^3$]

**ಪುಲ್ಸರವಿ**, ಹುಲುಸರವಿ (ನಾ). ಹುಲ್ಲನ್ನು ಹೊಸೆದು ಮಾಡಿದ ಹಗ್ಗ : ಪಲವು ಪುಲ್ಸರವಿಗಳ್ ಕೂಡಿ ದೃಢಮಪ್ಪೊಂದು ಲಳಿತರಥಪಾಶಕ್ಕೆ ಪಾಸಟಿಯೆನಿಕ್ಕುಮೋ (ಅರಾಶ. ೩–೨–೯). **ಹುಲುಸರವಿ** : ನಿಮ್ಮ ನಂಬಿ ನಂಬದವನ ಬಾಳುವೆ ಹೊಲೆಯರ ನಾಯಿ ಹುಲುಸರವಿಯಿಂದ ಕರ ಕಷ್ಟ (ರೇರಾಪ. ೨೦–೩೬) ; ಹುಲುಸರವಿಗಳನೆಯ್ದೆ ಹೊಸೆಹೊಸೆದು (ಶಶಪು. ೦೬–೨೦). [ಪುಲ್ + ಸರವಿ$_1$]

**ಪುಲ್ಸಾರೆ** (ನಾ). ಒಂದು ಬಗೆಯ ಔಷಧೀಸಸ್ಯ : " ಬೆಟ್ಟದುರುಳಿ, . . . ಪುರುಚಲಿಗಿಡ, ಪುಲ್ಸಾರೆ " (ಸಸ್ಯಶಿ.೯೨); ಹೇನುತುರುವಿನ ಗಿಡ, ಪುರುಚಲಿಗಿಡ, ಪುಲ್ಸಾರೆ (ವೃಕ್ಷಶಿ. ೩೩–೦೦೦೬). [ ? ]

**ಪುವಗಾಮ** (ನಾ). ಒಂದು ಊರಿನ ಹೆಸರು : ಶ್ರೀಪುರುಷಮಹಾರಾಜ ಪ್ರಿತುವೀರಾಜ್ಯಂಕೆಯೆ . . . ಮುದುಗುನೂರ್ದರ ಸಿಙ್ಗಡಿಅರಸ ಪುವಗಾಮ ಮಾಳ್ದುವಿದ್ದರ್ (ಎಕ. VII (R), ಶುಕಶ. ೦೨೨–೬ ; ಸು. 740).

[ ? + ಗಾಮ ]

**ಪುಷ್ಪ** ' ಪೂ$_3$ ' ನೋ.

**ಪುಷ್ಕರ** (ನಾ). ೧. ನೀಲಿಬಣ್ಣದ ತಾವರೆ. ೨. ಪದ್ಮ ; ಕಮಲ : " ಸಹಸ್ರಪತ್ರಂ . . . ಪುಷ್ಕರಂ, ರಾಜೀವಂ, ಅರವಿಂದಂ, ಪದ್ಮಂ, ಪಂಕಜಂ —ಈ ೧೭ ತಾವರೆ " (ಹಲಾಯು. ೦೦೨–೩೬) ; ಮಾರಹರಂ ಪೂಜೆಗೆಯ್ದುವಸರದೊಳೊಂದು ಪುಷ್ಕರಮಿಲ್ಲದಿರೆ ನೋಡಿ ತನ್ನ ಬೆಳತಿಗೆಗಣ್ಣನಿರದೆ

ಕಿಳ್ತಭವನಂಳ್ಪುಗೆ ಪೂಜೆಗೆಯ್ದೊಡಗಿ (ಅಜಿತ. ೧-೩-೨೨). ೩. ಒಂದು ಬಗೆಯ ಮೂಲಿಕೆ; ಚಂಗಲಕೋಷ್ಟ: ಕೋಷ್ಟಂ ಪದ್ಮಕಂ ಕರ್ಪೂರ ಬಾಳದ ಬೇರು ಪುಷ್ಕರಂ ಭದ್ರಮುಸ್ತಯಿವಂ ಸರಿಗೊಂಡು . . . ಪೂಸಲು ಯೋನಿದೋಷ ಕೆಡುವುದು (ಕಲ್ಯಾಣ. ೨೭೩). ೪. ಆನೆಯ ಸೊಂಡಿಲಿನ ತುದಿ: "ಕರಾಗ್ರಂ, ಪುಷ್ಕರಂ—ಈ ೨ ತುದಿಗ್ಗೆ" (ಹಲಾ ತು. ೩೭-೩೩); ಕರಿಗಳ್ ಕೇಸರಿಗಳ್ಗೆ ಪುಷ್ಕರಧೃತಸ್ವಚ್ಛಾಂಬುವಂ ನೀಡೆ (ಅಂತ್ಯ. ೯-೯೭); ಕರಪುಷ್ಕರಂಗಳಿಂ ತಂದು ಪೂಗಿಡುಗಳ್ಗೆ ನೀರೆಱೆವ ವಜ್ಜಾಯಾನೆಗಳಿಂ (ಕಾಡಂಷ. ೨೨೦); ಜಲಕರಿನಿಕರಂ ಪುಷ್ಕರವಲರೆ ಕರಂ ನಿಮಿರ ಪೂತ್ಕರಿಸೆ ಸಿಡಿದ ಲಸಜ್ಜಲಕಣವನಮರಕುಮುಕ್ತಾಫಳಮೆಂದುಱ್ ಮುಗ್ಧಖಚರಿಯರ್ ಕೈಯಿಡು ವರ್ (ರಾಜಶೇ. ೧-೯೩). ೫. ಚರ್ಮವಾದ್ಯದ ಮುಖ. ೬. ಒಂದು ಬಗೆಯ ಚರ್ಮವಾದ್ಯ; ನಗಾರಿ: ನವಮೇಘಧ್ವನಿ ಪುಷ್ಕರಧ್ವನಿ ಲಸತ್ಪಾರಾಳಿ ಪುಷ್ಪೋಪಹಾರವಿಲಾಸಂ (ಅಂತ್ಯ. ೬-೭೨). ೭. ಡಮರುಗ: ನಯನತ್ರಯಾಂಚಿತಪುಷ್ಕರ ಪುಷ್ಕರಪುಷ್ಕರಾಂಕ (ರಾಜಶೇ. ೦೩-೩೨). ೮. ಪಾತ್ರೆ; ಭಾಂಡ. ೯. ಕೊಕ್ಕರೆ; ಸಾರಸಪಕ್ಷಿ: "ಪುಷ್ಕರಂ ಸಾರಸಂ" (ಶಬ್ದಮಣಿ. ೩೦-೬). ೧೦. ಬಾಣ; ಅಂಬು. ೧೧. ಕತ್ತಿ; ಖಡ್ಗ. ೧೨. ಕತ್ತಿಯ ಅಲಗು,–ಧಾರೆ. ೧೩. ಕತ್ತಿಯ ಒರೆ; ಖಡ್ಗದ ಕೋಶ. ೧೪. ಯುದ್ಧ; ಕದನ. ೧೫. ಗಗನ; ಆಕಾಶ: "ಸುರಸರಣಿ ವಿಷ್ಣುಪದಮಂಬರಂ ವಿಯತ್ ಖಂ ವಿಹಾಯಸಂ ಗಗನಂ ಪುಷ್ಕರಮಾಕಾಶಂ" (ಚನ್ದ್ರ.ಕೋ. ೦೦. ೩೭); ಮೊಱೆವ ದುಂದುಭಿರಭಸದಲಿ ಪುಷ್ಕರಕೆ ಪುಷ್ಪಕವಡರದುದು (ಕೂರಣ. ೬-೩೯-೦೦); ಖಣಿಖಟಿಲೆಂಬ ಶಬ್ದವತಿ ಪೂರಿಸೆ ಪುಷ್ಕರ ಭೂತಳಂಗಳಂ ಮಣಿವವು ಕೂಡೆ ದಿಗ್ಗಜ ಫಣೀಂದ್ರ ಮಹಾಕಮಠಂಗಳ್ (ಹರಿಶ್ಚಂ. ೩-೯೭). ೧೬. ನೀರು; ಜಲ. ೧೭. ಕೊಳ; ಸರೋವರ. ೧೮. ಒಂದು ಬಗೆಯ ಹಾವು,–ಸರ್ಪ. ೧೯. ಮದ; ಉನ್ಮಾದ. ೨, ೪, ೧೯: ಸಿರಿಗೆಡೆಯಾದ ಪುಷ್ಕರದೊಳೊಂದಿದ ದೀರ್ಘಸುವೃತ್ತಹಸ್ತದಿಂ . . . ಈ ನರಸಿಂಹಭೂಭುಜಂ ಪರಿಚಿತಭದ್ರಲಕ್ಷಣದಿನೊಪ್ಪುವ ಬಪ್ಪನ ಗನ್ಧವಾರಣಂ (ಎ.ಕ. v, ಚೆಂಗಡು. ೦೯೩-೩೦; 1161). ೨೦. ಕೇಪುಬಣ್ಣ: ಪಶ್ಚಿಮದಲ್ಲಿ ಕಂಡ ಪಚ್ಚೆಯ ಕಲ್ಲ ಉತ್ತರದಲ್ಲಿ ಕಂಡ ಪುಷ್ಕರದ ಕಲ್ಲ ಪೂರ್ವದಲ್ಲಿ ಕಂಡ ಬಿಳಿಯ ಕಲ್ಲ ಮೂಱೂ ಕೂಡ ಮಡಿಕೆಯ ಮೇಡೆಯ ಮೇಲಿರಿಸಲಾಗಿ ಕಂಡಿತ್ತು ಎಲ್ಲಿನ ಇರವು (ಶಿವತತ್ತ್ವ. ೦೫೦-೬೬೯). ೨೧. ಶಿವನ ಒಂದು ಹೆಸರು: ನಯನ ತ್ರಯಾಂಚಿತಪುಷ್ಕರಪುಷ್ಕರಪುಷ್ಕರಾಂಕ (ರಾಜಶೇ. ೦೩-೩೨). ೨೨. ಕೃಷ್ಣನ ಒಂದು ಹೆಸರು. ೨೩. ವರುಣನ ಮಗ. ೨೪. ನಳಮಹಾರಾಜನನ್ನು ದ್ಯೂತದಲ್ಲಿ ಸೋಲಿಸಿ ರಾಜ್ಯವನ್ನು ಕಿತ್ತುಕೊಂಡ ಅವನ ದಾಯಾದಿಯ ಹೆಸರು: ನಳನೃಪತಿಯು ದಾಯಾದಂ ಸಲೆ ಬಡವಟ್ಟ್ರನಲ್ಲಿ ಪುಷ್ಕರನೆಂಬಂ (ಕಳಸಂ. ೩೦೩). ೨೫. ಸೂರ್ಯ. ೨೬. ಗುಹೆ; ಗವಿ. ೨೭. ಭಾಗ; ವಿಭಾಗ. ೨೮. ಪವಿತ್ರ ಕ್ಷೇತ್ರಗಳಲ್ಲಿರುವ ನದಿ, ಸರೋವರ ಮುಂತಾದುವು; ಪುಣ್ಯತೀರ್ಥ. ೨೯. [ಜ್ಯೋತಿ] ಕೆಲವು ಗ್ರಹಗಳ ಕೂಟದಿಂದ ಉಂಟಾಗುವ ಅಶುಭಯೋಗ. ೩೦. [ಜೈನ] ಕಾಲೋದಧಿಯ ಆಚೆಗೆ ಇರುವ ಒಂದು ದ್ವೀಪ: ಕಾಳೋಪಕಜಲಧಿ ಬೆಡಗಾಗೆ ತದ್ಬಾಹ್ಯದೊಳ್ ಪುಷ್ಕರನಾಮದ್ವೀಪಮಿರ್ಕುಂ (ಧರ್ಮಾಮೃ. ೦-೯೦). ೩೧. [ಕಾವ್ಯಮೀ] ಚಿತ್ರಕಾವ್ಯದಲ್ಲಿ ಒಂದು ಬಗೆ; ಪುಷ್ಕರವೆಂಬ ವಾದ್ಯದ ಆಕಾರದಲ್ಲಿ ಬರೆಯುವ ಪದ್ಯ: ಶರಶೂಲಚಾಪ ಚಕ್ರಾಸಿ ರೂಪಂ . . . ಮುರಜಂ ಗೋಮೂತ್ರಿಕೆ ಪುಷ್ಕರಮರ್ಧಭ್ರಮಣ ಸರ್ವತೋಭದ್ರಂಗಳ್ (ಕಾವ್ಯಾವ. ೩೬೯). "ಅಸಿಯೊಳು ಸುತೀರ್ಥದೊಳು ವಾದ್ಯಘಟತಂಡದೊಳು ಜಸಜ ದೊಳು ಗಜಹಸ್ತದಗ್ರದೊಳು ಗಗನದೊಳು ಕುಶದೊಳೌಷಧದೊಳಾ

ಪುಷ್ಕರಾಖ್ಯಂ" (ಶಬ್ದಮಣಿ. ೦೯೬-೩೨); "ಕಮಲ ಸಖ ವಾದ್ಯ ಭಾಂಡಂ ಉಮೆಯರಸು ಸರ್ಪ ಮದಂ ಖಡ್ಗಂ ತೀರ್ಥೋತ್ತಮ ಭೇಷಜ ಕರಿಕರತುದಿ ಕ್ರಮದಿಂ ಪನ್ನೊಂದು ಪುಷ್ಕರಾಂಕಿತ ಶಬ್ದಂ" (ನಾನಾಳಂ. ೨೬). [ಸಂ.]

**ಪುಷ್ಕರಚಿಕುರ** (ನಾ). ಆಕಾಶವೇ ಕೂದಲಾಗುಳ್ಳವನು; ವ್ಯೋಮಕೇಶ; ಶಿವ: ಶರಣಾ ಪುಷ್ಕರಚಿಕುರ ಶಿವಭಕ್ತಿಮುಖಮುಕುರ (ಶಿವಂ. ೦೦-೦). [ಸಂ.]

**ಪುಷ್ಕರಜ** (ನಾ). ೧. ನೀರಿನಲ್ಲಿ ಹುಟ್ಟಿದುದು; ಕಮಲ. ೨. ಕಮಲದಲ್ಲಿ ಹುಟ್ಟಿದವನು; ಬ್ರಹ್ಮ. ೧, ೨: ಹರಿ ಹುಸು ರವಿ ಕೌಶಿಕಂ ಶಿಖಿ ಮಹೀಜಾತಂ ಶುಕಂ ಭೃಂಗ ಪುಷ್ಕರಜಂ ಚಕ್ರವಿನಾಯಕಂ . . . ರಂಜಿಸುತ್ತಿರ್ಪ ಶಂಕರನಾಸ್ಥಾನದ ಮಹಾಳ್ಕೆಯಿಂದೆ ಪರಿದೊಪ್ಪುತ್ತಿರ್ದುದಂತಾ ವನಂ (ಶ್ರೀಕೃ. ೨-೦೨೬). [ಸಂ.]

**ಪುಷ್ಕರಮಿತ್ರ** (ನಾ). ತಾವರೆಯ ಗೆಳೆಯ; ಸೂರ್ಯ: ಪುಷ್ಕರಮಿತ್ರನಂ ದುದಯಪರ್ವತಮಂ ಪರಿವೇಷ್ಟಿ ತಾರೆಗಳ್ ನಿಷ್ಕಳೆಯಾಗಿ ಪೋಗೆ ಪೊಗೆ ಸುತ್ತಿದ ಮುತ್ತಿನೊಲಿರ್ದುವಾಗಳಾ ಪುಷ್ಕರದೊಂದು ಪಾಂಡುರುಚಿಯಂ ತಳೆದಿರ್ದುದು ಮೂಡಣಾಗಸಂ (ಜಗನ್ನಾ. ೯-೩೨). [ಸಂ.]

**ಪುಷ್ಕರಮೂಲ** (ನಾ). ಒಂದು ಬಗೆಯ ಮೂಲಿಕೆ; ಚಂಗಲಕೋಷ್ಟ: "ಪುಷ್ಕರಂ, ಕಾಶ್ಮೀರಂ, ಪದ್ಮಪತ್ರಂ, ಈ ೩ ಪುಷ್ಕರಮೂಲ" (ನಾಶರ. ೦೦೦); ಶುಂಠಿ, ಪುಷ್ಕರಮೂಲ . . . ಇಷ್ಟನ್ನು ಕಷಾಯವ ಕಾಸಿ ಕುಡಿಸಲು ಕಾಸ, ಶ್ವಾಸ ... ಪರಿಹರವಹವು (ವೈದ್ಯಾಮೃ. II. ೬೦); ಶುಂಠಿ, ಪುಷ್ಕರಮೂಲ, ನೆಲಗುಳ್ಳ . . . ಕಷಾಯ ಕಾಯಿಸಿ ಜೇನುತುಪ್ಪಗೂಡಿ ಸೇವಿಸೆ ಶ್ಲೇಷ್ಮಜ್ವರ ಗುಣವಾಗುವುದು (ಸಕಲ್ಯ. ೮೮). [ಸಂ.]

**ಪುಷ್ಕರವಾಣಿ** (ನಾ). ಆಕಾಶದಿಂದ ಕೇಳಿ ಬರುವ ಮಾತು; ಆಕಾಶವಾಣಿ: ಪುಷ್ಕರವಾಣಿ ನುಡಿದುದೆಲೆ ಸುಸ್ಥಿರಭೂಪತಿ ಕೇಳೆನುತ್ತ (ಶಿವಾಸ್ತ್ಯ. ೦-೪-೯೩). [ಸಂ.]

**ಪುಷ್ಕರಾವರ್ತಕ** (ನಾ). ಅತಿಯಾಗಿ ಮಳೆಯನ್ನು ಸುರಿಸುವ ಮೇಘಗಳ ಒಂದು ಗುಂಪು: ಜಗಕೆ ಜಗತ್ಪ್ರಳಯಂಬರಮೊಗೆದೊಡೆ ಸಂವರ್ತ ಪುಷ್ಕರಾವರ್ತಕಮಲ್ಲಿಗಮೊಂದೆ ಮಾಟಕ್ಕೆಯಿಂ ನೆಟ್ಟಗೆ ಕಱೆಗುಂ ಜಲಧಿ ಜಲಧಿಯೊಳ್ ಕೂಡುಮಿನು (ಆದಿಪು. ೬-೦೦). 'ಪುಷ್ಕಳಾವರ್ತಕ' ಪರಾ. [ಸಂ.]

**ಪುಷ್ಕರಿ** (ನಾ). ಆನೆ; ಹಸ್ತಿ. [ಸಂ. ಪುಷ್ಕರಿನ್]

**ಪುಷ್ಕರಿಣಿ** (ನಾ). ೧. ಹೆಣ್ಣಾನೆ. ೨. (ತಾವರೆಯ) ಕೊಳ; ಕಲ್ಯಾಣಿ: "ಖಾತಾ, ಪುಷ್ಕರಿಣೀ—ಈ ೨ ಹೊಕ್ಕರಣೆ" (ಹಲಾಯು. ೦೦೦-೩೩); ಸಲಿಲತರ್ಪಕವನದಿಂ ದೀರ್ಘಿಕೆಯಿಂ ಪುಷ್ಕರಿಣಿಯಿಂ ಸರೋವರದಿಂ ಕೌತುಕವನವರ್ಕಂಡಕೌತುಕವಂಗಳಪುರವಂ (ಶಂಕರಸಂ. ೩-೩೪); ಅವಗಾಹಿತಪಥಿಕಜನಮನಕರುಣೆಗಳೆನಿಪ ಪುಷ್ಕರಿಣಿಗಳುಂ . . . ಅನೂನ ಶೋಭೆಯುಂ ಪಡೆಯ (ಧರ್ಮಾಮೃ. ೯-೨೨ ವ): ಗಂಗೆಯ ನೀರು ಹರಿದು ಒಂದು ನಮ್ಮ ತೋಟದ ಪುಷ್ಕರಿಣಿಯಲ್ಲಿ ಝರಿಯಂತೆ ಧುಮುಕುತ್ತಿತ್ತು (ಕಿಂಕರ. II. ೩). [ಸಂ. ಪುಷ್ಕರಿಣೀ]

**ಪುಷ್ಕಲ, ಪುಷ್ಕಳ** (ಗು). ೧. ಹೇರಳವಾದ; ಸಮೃದ್ಧವಾದ; ವಿಪುಲವಾದ: ಭೂಮಿಯಿಂದ ಪುಷ್ಕಲಬೆಳಸು ಬರಲು ಏನೇನನ್ನು ಮಾಡಬೇಕೋ ಎಲ್ಲವನ್ನೂ ಮಾಡಿದ ಹೊರತು ಅವನು ಏಳಿಗೆಗೆ ಬಾರನು (ಹಂಪ್ರ. ೦೫೩); ಶಿವಾಜಿಯು ಗೋಲ್ಕೊಂಡಕ್ಕೆ ದಂಡೆತ್ತಿ ಹೋಗಿ ಸುಲ್ತಾನನಿಂದ ಪುಷ್ಕಲಧನವನ್ನು ಕೈಗೆ ಹಾಕಿಕೊಂಡು ರಾಯಗಡಕ್ಕೆ ತಿರುಗಿದನು (ಚಕ್ರ. ೦೨೩). ೨. ಉತ್ತಮವಾದ; ಶ್ರೇಷ್ಠವಾದ. (ನಾ). ೩. ಹೇರಳವಾದುದು; ಸಮೃದ್ಧವಾದುದು. ೪. ಶ್ರೇಷ್ಠನಾದವನು: "ಶ್ರೇಯಾನ್, ಶ್ರೇಷ್ಠಃ, ಪುಷ್ಕಲಃ, ಸತ್ತಮಃ, ಅತಿಶೋಭನಃ—೫

ಬಹಳ ಶ್ರೇಷ್ಠನಾದವನ ಹೆಸರುಗಳು" (ಸಿದ್ಧಾಂತ. ೩೩೬). ೫. ಶಿವ; ಪರಮೇಶ್ವರ. ೬. ರಾಮನ ತಮ್ಮನಾದ ಭರತನ ಮಗನ ಹೆಸರು: ಪುಷ್ಕಲಂ, ಆಗಳೆ ತಂದೆತಾಯ್ವಿರಡಿಯಾಣತಿವಡೆದು ಕಿಱಿಯಯ್ಯನ ಬೆಂಬಲ ಕ್ಕೆಂದು ಸಾಜುಕಂಗಳನನ್ನಿತ್ತಿ ಪೋಪವಸರದೊಳ್ (ರಾಮಾಶ್ವ. ೪೬-೧೯).

**ಪುಷ್ಕಳ**: ೩. ರಾಯರು ... ನನ್ನ ಜತೆಯಲ್ಲಿಯೇ ಪುಷ್ಕಳವಾದ ಭೋಜನ ವನ್ನು ಮುಗಿಸಿದರು (ರಾಯಳ. ೪); ನಾನು ಅದನ್ನು ಪುಷ್ಕಳವಾಗಿ ತಿಂದೆ (ಗಂಕ್ತ. ೬). [ಸಂ.]

**ಪುಷ್ಕಲಾವರ್ತ**, ಪುಷ್ಕಳಾವರ್ತ (ನಾ). = ಪುಷ್ಕರಾವರ್ತಕ: ಅಮರ ಸವಿತ್ರಿಯು ತಂದ ಪಾಲ್ಗಳ್ತಲ ಪುಷ್ಕಲಾವರ್ತ ಬಲಾಹಕಾಂಬುದಂಗಳ್ ಕನಕಾಚಳಚೂಳಿಕೆಯೊಳ್ ಸುರಿವುತಿರ್ಪಂತಿಂದ್ರರುಂ ಭಗವದುಷ್ಕೀಷದೊಳ್ ಸುರಿಯೆ (ಶಾಂತಿಪು. ೧೦-೯೩ ವ). **ಪುಷ್ಕಳಾವರ್ತ**: ಪೌಲೋಮೀಪತಿ... ವಿಳಯಕಾಳಾಂಬುದದಂತೆ ಮೊಳಗುವಂಂ ಸಿಡಿಲ ಬಳಗವನೊಳಕೊಂಡ ದ್ರೋಣ ಮಹಾದ್ರೋಣ ಪುಷ್ಕಳಾವರ್ತ ಸುವರ್ತಕಂಗಳೆಂಬ ಮುಗಿಲ್ಗಳಂ ಬೆಸಸಿದಾಗಳ್ (ಕಂಜಾಹಾ. ೩-೯೩ ವ); ಅವರಿಸಿದವು ಪುಷ್ಕಳಾವರ್ತಾವಳಿಗಳೆನೆ ಬಹಳವಿಷಧೂಮಾವಳಿಯುರಿಲೇ ಧಾತುಗಟ್ಟುವುದು ಸಕಳಭುವನಜನ (ಕುಮಾ್ಯ.ಳ. ೨೫-೭). [ಸಂ.]

**ಪುಷ್ಕಳ** 'ಪುಷ್ಕಲ' ನೋ.

**ಪುಷ್ಕಳಂ** (ಅ). ಅಧಿಕವಾಗಿ; ಅತಿಶಯವಾಗಿ: ಅಲಘುಭುಜಪ್ರತಾಪಂ . . . ಪುಷ್ಕಳಂ ಪುಷ್ಕಳನಂ ನೋಯಿಸಿದಂ (ರಾಮಾಶ್ವ. ೦೯೩-೩). [<ಪುಷ್ಕಲ]

**ಪುಷ್ಕಳಭೋಜನ** (ನಾ). ಸಮೃದ್ಧವಾದ ಊಟ,—ಭೋಜನ: ಎಲ್ಲಾ ಇಂದಿರಮ್ಮನ ದಶಿಂದೀದ ನಮಗೆ ಪುಷ್ಕಳಭೋಜನವೆಂದುಕೊಂಡಿದ್ದಾರೆ (ಕೊತಿಲೆ. ೦೮೩). [ಸಂ. ಪುಷ್ಕಲಭೋಜನ]

**ಪುಷ್ಕಳಾವರ್ತ** 'ಪುಷ್ಕಲಾವರ್ತ' ನೋ.

**ಪುಷ್ಕಳಾವರ್ತಕ** (ನಾ). = ಪುಷ್ಕರಾವರ್ತಕ: ಭೂಧರವಿರೋಧಿ ಭೂಧರ ಧರಂಗೆ ಕ್ರುದ್ಧನಾಗಿ ಪುಷ್ಕಳಾವರ್ತಕನಿಕಾಯಮಂ ಕರೆದು (ಜಗ. ೯-೯೪ ವ). [ಸಂ. ಪುಷ್ಕಲಾವರ್ತಕ]

**ಪುಷ್ಟ** (ಗು). ೧. ಚೆನ್ನಾಗಿ ಬೆಳೆಸಿದ,—ಪೋಷಿಸಿದ. ೨. ಶಕ್ತಿ ಸಂಪನ್ನವಾದ. ೩. ವಿಪುಲವಾದ; ಹೇರಳವಾದ; ಅಧಿಕವಾದ. ೪. ಸಮೃದ್ಧವಾದ; ಶ್ರೀಮಂತ. ೫. ಶ್ರೇಷ್ಠವಾದ; ಉತ್ತಮ ವಾದ. (ನಾ). ೬. ಹೆಚ್ಚಳ; ಆಧಿಕ್ಯ: "ಬಹುಳಂ ಪ್ರಭೂತಂ ಪ್ರಭೂತಿ ಬಹು ಪುಷ್ಕಳಂ ಪುಷ್ಟಮೆನೆ ಪೆಚ್ಚುಮಕ್ಕುಂ" (ಕಂಗಾ. ೦೫೬. ೬). ೭. ಶಕ್ತಿವಂತ; ಸಮರ್ಥ: ಪ್ರಮುದಾಮಲ್ಲಭನಂತಸಮೃದ್ಧ ಸುಖಿ ಪುಷ್ಟಂ ತ್ಯಾಗಿ . . . ಉತ್ಕೃಷ್ಟೋದ್ಭವಂ (ಜಾಸ. ೦೭-೨). [ಸಂ.]

**ಪುಷ್ಟಿ** (ನಾ). ೧. ಬೆಳೆಸುವಿಕೆ; ಪೋಷಿಸುವಿಕೆ. ೨. ಆಧಾರ; ಊರೆ. ೩. ಚೆನ್ನಾಗಿ ಬೆಳೆದ ಸ್ಥಿತಿ; ಕೊಬ್ಬಿರುವಿಕೆ. ೪. ಬೆಳವಣಿಗೆ; ಏಳಿಗೆ; ಅಭಿವೃದ್ಧಿ: ವಚನಕಾರರಿಂದ ಕನ್ನಡಭಾಷೆಗೆ ಒದಗಿದ ಪುಷ್ಟಿ ಎಷ್ಟು ವಿಧವಾದುದು (ಒಲ್ಕ. ೦೫೭). ೫. ಒದಗಿಸುವಿಕೆ; ಪೂರೈಕೆ: ನಾಗರಿಕಮಾನವನ ರಸ್ತದ ರುಚಿಗೋ . . . ಆಹಾರದ ಪುಷ್ಟಿಗೋ ಮೋಹಿಸಿ ಅವನ ಜೊತೆಗೇ ತಾವೂ ಬಿಡಾರ ಹೂಡಿ ಕಾಡುವ ಅಲ್ಪಜಂತು ಗಳು ಅನೇಕ ಇವೆ (ಕುಲಿರು. ೯೨). ೬. ಪೂರ್ಣತೆ; ಪೂರ್ಣವಾಗಿ ವ್ಯಾಪ್ತವಾಗುವಿಕೆ: ಅನಂತಚತುಷ್ಟಯಪುಷ್ಟಿವರಪುಷ್ಟ[ನುಂ] . . . ಅಪ್ಪ ಶಾಂತೀಶ್ವರನಕಲಂಕಾಚಾರಸಾರಂ (ಶಾಂತಿಪು. ೦೨-೨೯ ವ). ೭. ಐಶ್ವರ್ಯ; ಸಂಪತ್ತು: ಸಮಸ್ತಭಾರತಕಥಾಸಂಬಂಧಮಂ ಬಾಜಿಸಲ್ . . . ಅಕ್ಕುಂ ಧೃತಿ ತುಷ್ಟಿ ಪುಷ್ಟಿ ವಿಭವಂ (ಕುಶಳಾ. ೦೯-೬೩). ೮. ಸಂಪತ್ತಿನ ಸುಖಪ್ರಾಪ್ತಿಗಾಗಿ ಆಚರಿಸುವ ಒಂದು ಬಗೆಯ ಧಾರ್ಮಿಕಕರ್ಮ: ಅಥರ್ವಣವೇದವು ಯಾಗಕ್ಕೆ ಉಪಯೋಗವಿಲ್ಲ. ಅದರಲ್ಲಿ ಶಾಂತಿ ಪುಷ್ಟಿ ಮೊದಲಾದ ಕರ್ಮಗಳ ವಿಧಿಯಿರುತ್ತದೆ (ಹಿಂದೂಹಾ. ೦೫೭); ದಿನವೂ ಒಂದಲ್ಲ ಒಂದು ಪ್ರಾಯ್ದ—ಶಾಂತಿ, ಪುಷ್ಟಿ, ಹೀಗೆ ಅವರಿಗೆ ಕಾದಿದ್ದದ್ದೇ (ಹೊಚ್ಚ. ೨೧). ೯. ಶಕ್ತಿ; ಸಾಮರ್ಥ್ಯ. ೧೦. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು: ಚಂದ್ರ ನಾದೊಡೆ ಅಮೃತಾ ಮಾನದಾ ಪೂಷಾ ತುಷ್ಟಿ ಪುಷ್ಟಿ ರತಿ ಧೃತಿಶಶಿನಿ ಚಂದ್ರಿಕಾ ಕಾಂತಿ ಜ್ಯೋತ್ಸ್ನಾ ಶ್ರೀ ಅಂಗದಾ ಪೂರ್ಣಾ ಪೂರ್ಣಾಮೃತಾ ಕಾಮದಾಯಿನಿಯೆಂಬ ಷೋಡಶಕಲೆಗಳಿಂ ಭರಿತನಾಗಿ ಧವಳವರ್ಣ ಶರೀರದಿಂ . . . ರಂಜಿಸುತ್ತಿರ್ಪಂ (ಎರೀಳ. ೨೬೬). [ಸಂ.]

**ಪುಷ್ಟಿಕರ** (ಗು). ೧. ಶಕ್ತಿದಾಯಕವಾದ; ಪೋಷಕವಾದ. (ನಾ). ೨. ಶಕ್ತಿದಾಯಕವಾದುದು: ನಮ್ಮದು ಮೊದಲೇ ಪುಷ್ಟಿಕರವಾದ ಆಹಾರಾಂಶಗಳೆಲ್ಲಾ ಇಲ್ಲದಿರುವ ಜನಾಂಗ (ಕರಕ. ೬೩). [ಸಂ.]

**ಪುಷ್ಟಿಕಾರಕ** (ಗು). ಶಕ್ತಿಯನ್ನೊದಗಿಸುವ; ಪೋಷಣೆಯನ್ನುಂಟು ಮಾಡುವ; ಸತ್ತ್ವಯುಕ್ತವಾದ: ಅವು ತಿಂಬುವವರಿಗೆ ಹಾಲು ತುಪ್ಪ ಮುಂತಾದ ಪುಷ್ಟಿಕಾರಕ ಪದಾರ್ಥಗಳು . . . ಇಲ್ಲದೆ ಹೋದರೆ . . . ದೈ ಒಣಗಿ ಹೋಗುವದು (ಕಮಂಅಜು. ೯-೪೦). [ಸಂ.]

**ಪುಷ್ಟಿಕಾರಿ** (ನಾ). = ಪುಷ್ಟಿಕರ ೨: ಆತ್ಮಗುಪ್ತಾ . . . ಮರ್ಕಟೀ— ನಸುಗುನ್ನಿಗಿಡ, ಕಪಿತುರಚೀಗಿಡವೆಂದು ಕೆಲವರನ್ನುವರು, ಇದರ ಬೀಜ ಪುಷ್ಟಿಕಾರಿ (ಸಿದ್ಧಾಂತ. ೦೫೨) [ಸಂ. ಪುಷ್ಟಿಕಾರಿನ್]

**ಪುಷ್ಟಿಕೊಡು** (ಕ್ರಿ). ೧. ಬೆಳೆಯಲು ಸಹಾಯ ಮಾಡು; ಬೆಳೆಸು. ೨. ಬೆಂಬಲಿಸು; ಸಮರ್ಥಿಸು; ಬಲಪಡಿಸು: ಆಂಗ್ಲರಾಜನೀತಿಜ್ಞರು ನಿರೂಪಿಸಿದ ವಿದ್ಯಾಭ್ಯಾಸವಿನ್ಯಾಸ ಇವೆರಡಕ್ಕೂ ಪುಷ್ಟಿ ಕೊಟ್ಟಿತು (ಹುಮ್ಮಾ.ಕ. ೦೦೯ ೬೬೪); ಆ ಶಂಕೆಗೆ ಪುಷ್ಟಿ ಕೊಡಲು ಯಶೋದೆಯ ವರ್ತನೆಯೂ ಬಹುಮಟ್ಟಿಗೆ ಕಾರಣವಾಯಿತು (ವಾತ್ಸಲ್ಯ. ೨೯೦). [ಪುಷ್ಟಿ+ಕೊಡು]

**ಪುಷ್ಟಿಗೊಳಿಸು** (ಕ್ರಿ). = ಪುಷ್ಟಿಕೊಡು ೨: ಕೆಂಪುದೇವಯ್ಯನು ರಾಜ ಮರ್ಯಾದೆಯೊಡನೆ ಅರಮನೆಗೆ ಹೋಗುತ್ತಿದ್ದುದೂ ಆ ವಾರ್ತೆಯನ್ನು ಪುಷ್ಟಿಗೊಳಿಸಿದುವು (ಚರಿತ. ೩೮). [ಪುಷ್ಟಿ+ಕೊಳ್[1]+—ಇಸು]

**ಪುಷ್ಟಿಮಾರ್ಗ** (ನಾ). ಪರಮಾತ್ಮನ ಅನುಗ್ರಹಸಂಪಾದನೆಯೇ ಮುಖ್ಯ ವೆಂದು ಪ್ರತಿಪಾದಿಸುವ ವೈಷ್ಣವಮತ; ವಲ್ಲಭಾಚಾರ್ಯರು ಸ್ಥಾಪಿಸಿದ ಮತ: ಈಶ್ವರಾನುಗ್ರಹ ಸಂಪಾದಿಸಬೇಕಾದರೆ ಜೀವಿ . . . ಸರ್ವಸ್ವವನ್ನೂ ಅವನಿಗೆ ಅರ್ಪಿಸಬೇಕು. ಆಗ ಅವನು ಜೀವಿಯ ವಶವಾಗುತ್ತಾನೆ. ಇದಕ್ಕೆ ಅನುಗ್ರಹ, ಪುಷ್ಟಿ, ಪೋಷಣ ಎಂದು ಹೆಸರು. ವಲ್ಲಭಾಚಾರ್ಯರ ಮತವನ್ನು ಶುದ್ಧಾದ್ವೈತವೆಂದೂ ಪುಷ್ಟಿಮಾರ್ಗವೆಂದೂ ಕರೆಯುತ್ತಾರೆ (ಧಾರಕ. ೨೯೯). [ಸಂ.]

**ಪುಷ್ಟೀಕರಿಸು** (ಕ್ರಿ). ಬಲಪಡಿಸು; ಬೆಂಬಲಿಸು; ಸಮರ್ಥಿಸು: ನಾನು ಅವರ ಅಭಿಪ್ರಾಯವನ್ನು ಪುಷ್ಟೀಕರಿಸಿದೆ (ಕಂಗಾಳ. ೩೯೬); ಕ್ಯಾಂಬೆಲ್‌ನು . . . ಸಸ್ಯಗಳ ಬಗ್ಗೆ ನಡೆಸಿದ ಸಂಶೋಧನೆಗಳಿಂದ, ತನ್ನ ಹೊಸ ತತ್ತ್ವ ಗಳನ್ನು ಪುಷ್ಟೀಕರಿಸಿದನು (ಸಸ್ಯಕ. ೩೩). [ಪುಷ್ಟೀಕರಣ+—ಇಸು]

**ಪುಷ್ಪ** (ನಾ). ೧. ಹೂವು; ಕುಸುಮ: "ಪ್ರಸವಂ ಪ್ರಸೂನಕಂ ಸುಮನಸಂ ಪುಷ್ಪಮೆನೆ ಕುಸುಮಮಕ್ಕುಂ" (ಕಂಗಾ. ೩೨-೩); ಲಳಿತವಿಚಿತ್ರಪತ್ರಫಲಪುಷ್ಪ ಯುತಾಟವಿ ಸೊರ್ಕಿದಾನೆಯಂ ಬೆಳೆವುದು (ಕಂಶಳಾ. ೦-೩೪); ಭೂಜಾಳಿ . . . ಪತ್ರಪುಷ್ಪಫಲಭಾರಾಕ್ರಾಂತಮಾಗಿರ್ದುವು (ಜಗ. ೩-೬೬); ಪರಿಪರಿಯ ಪುಷ್ಪಮಂ ಸಿರಿಮುಡಿಯೊಳಗೆ ಸೂಡಿ (ಸಂಶರ. ೩-೩೬). ೨. ಮುಟ್ಟು; ಋತುಸ್ರಾವ: ಪುಷ್ಪ ನಷ್ಟವಾದರೆ—ಎಕ್ಕಿಯ ಹಾಲು ಹನಿಸಿ ಬೆಲ್ಲವ ಬೆರಸಿ ಮದ್ದು ಮಧುರಾಹಾರವನುಣ್ಣೆ ೭ ದಿನಕ್ಕೆ ಮುಟ್ಟು ಗಾಂಬರು (ವೈದ್ಯಾ. ೬೦). ೩. ಒಂದು ಬಗೆಯ ಕಣ್ಣಿನ ರೋಗ. ೪. ಒಂದು ಬಗೆಯ ನೇತ್ರಾಂಜನ,–ಕಣ್ಣಿಗೆ ಲೇಪಿಸುವ ಕಾಡಿಗೆ:

"ಪುಷ್ಪಾಂಜನಂ—ಪುಷ್ಪ" (ಅಭಿ. ೦೦೦). 'ಕುಸುಮಾಂಜನ' ಪರಾ. ೫. ಕುದುರೆಯ ಮೈಮೇಲೆ ಇರುವ ಒಂದು ಬಗೆಯ ಚಿಹ್ನೆ: ತುರಗದ ಮೆಯ್ಯೊಳ್ ಪುಷ್ಪಂ ಕರಿದಾದಂದಶುಭಮಾವ ಬಣ್ಣದೊಳಂ ಪಾಂಡರಮಾದೊಡೆ ಶುಭಮದನಾದರಿಪುದು ಪರಿಹರಿಪುದಸಿತಪುಷ್ಪಾದಿಗಳಂ (ಅಶ್ವಶಾ. ೩-೦೨). ೬. ಒಂದು ಬಗೆಯ ನಾಣ್ಯ: ಪಂಚಪುಷ್ಪಾಣಿ ದೇಯಾನಿ ವಿವಾಹೇ ಸತಿ ತಜ್ಞನ್ಯೈಃ (ಎಪಿ. IV, ೬೦-೬೯; ೪೪೬). ೭. ಒಂದು ಬಗೆಯ ರತ್ನ; ಪುಷ್ಪರಾಗ.

**ಪುಷ್ಪದಂಬಿನ ಚೆಲುವ** = ೧. ಮನ್ಮಥ. ೨. ಮನ್ಮಥನಂತೆ ಸುಂದರನಾದವನು: ಕೇಶವ ಪುಷ್ಪದಂಬಿನ ಚೆಲುವ ಸರ್ವಜ್ಞನೆಸೆದಿರ್ದ (ಶಿಕಾಗ. ೦೦-೦೩-೩). [ಸಂ.]

**ಪುಷ್ಪಂಗತಿ** (ನಾ). ಔನ್ನತ್ಯ; ಊರ್ಧ್ವಮುಖತ್ವ: 'ಪುಷ್ಪಂಗತಿವೆಱು' ಪರಾ. [ಸಂ.]

**ಪುಷ್ಪಂಗತಿವೆಱು** (ಕ್ರಿ). ಉನ್ನತವಾಗಿರು; ಊರ್ಧ್ವಮುಖವಾಗಿರು: ಲಿಂಗದ ಭಕ್ತನಾಗಿ ಪೊಸಬೋನವಮನರ್ಪಿಸಿಯೊಕ್ಕುದುಂಡು ಪುಷ್ಪಂಗತಿವೆತ್ತು ಬಾಳ್ವುದರಿಂದಲ್ಲೆನುತಂ ಘನಭಕ್ತಿಭಾವದಿಂ . . . ಅಮರನೀತಿಗಳ್ ಚರಿಸುತಿರ್ಪರಾವಗಂ (ತ್ರಿಪು. ೯-೮). [ಪುಷ್ಪಂಗತಿ+ವೆಱು₁]

**ಪುಷ್ಪಕ** (ನಾ). ೧. ಹೂವು; ಕುಸುಮ: 'ಹೇಮಪುಷ್ಪಕ' ಪರಾ. ೨. ಒಂದು ಬಗೆಯ ಕಣ್ಣಿನ ರೋಗ. ೩. ಒಂದು ಬಗೆಯ ನೇತ್ರಾಂಜನ. ೪. ಹಿತ್ತಾಳೆ. ೫. ಮಣಿ; ರತ್ನ. ೬. ಬಿಸಿಲು. ೭. (ಕರಿಯಲು ಬಳಸುವ) ಬಾಣಲೆ. ೮. ಬಾಣಂತಿ. ೯. ಕೈಬಳೆ; ಕಂಕಣ. ೧೦. ಕುಬೇರನ ಬಳಿಯಲ್ಲಿದ್ದು, ಅವನಿಂದ ರಾವಣನಿಗೆ ವಶವಾಗಿದ್ದ ಸ್ವಯಂಚಾಲನಶಕ್ತಿಯುಳ್ಳ ವಿಮಾನ: "ಚೈತ್ರರಥಮೆಂಬುದು ಕುಬೇರನ ಬನಂ ಪುಷ್ಪಕಮೆಂಬುದಾತನ ವಿಮಾನಂ" (ಹರಿಹು. ೦೩-೮೩); ರಕ್ಕಸರಾಯ ಪುಷ್ಪಕವೇಱೆ ನಭದಲಿ ನೋಡಲೈತಂದ (ತೊರಾ. ೦೬-೦೪); ತರಿಸಿ ಧನಪನ ಪುಷ್ಪಕವ ಮುಂದಿರಿಸಿ ಬಿಜಯಂಗೈವುದೆಂದನು ನರಪತಿಗೆ ಕೈಮುಗಿದು ಲಂಕಾನಾಥನೊಲವಿನಲಿ (ಕೂಶರಾ. ೬-೩೪-೩). ೧೧. ಆಕಾಶದಲ್ಲಿ ಉಡ್ಡಾಣ ಮಾಡುವ ದೇವವಿಮಾನ: ಕಾಯವಿಲ್ಲದೆ ಪುಷ್ಪಕವ ಕಂಡ ನಮ್ಮ ಬಸವಯ್ಯನು (ಶಿಂಶತ.ಕ. ೦೯-೩೬); ಆ ಸಮಯದೊಳ್ಗಂಡ ಹೆಂಡತಿಗೆ ತನಯಂಗೆ ಭಾಸುರದ ಪುಷ್ಪಕಂಗಳ್ ಬಾದುವು (ಶಿಕ. ಶೀ. ೩೬-೨); ನೋಡುತಿರೆ ಪುಷ್ಪಕವೋದ್ದಾಮಂಬರಕೆ ಜನತೆಯುತ್ಕಂಠೆಯಲಿ! (ಶಿಶ್ರೀಂಗ. ೯೦-೨೯೮೦). ೧೨. ಹೂವುಗಳಿಂದ ಅಲಂಕರಿಸಿದ ರಥ; ಪುಷ್ಪರಥ: "ಅನೇಕವಿಧಕೇಳೀವಿಳಸನಹೇತು[ಪುಷ್ಪ]ಕಂ ಪುಷ್ಪರಥಂ" (ವಸ್ತುಕೋ. ೬೬-೨೬). ೧೩. ಕುಬೇರ. ೧೪. ಕುಲಪರ್ವತಗಳಲ್ಲಿ ಒಂದು: ಸುಗಂಧಿ ಶಿವ ತ್ರಿಶೃಂಗಿ ಪುಷ್ಪಕ ಸುಪಕ್ಷ ಕಂಕುಶೈಲ ವೈಡೂರ್ಯ ಕಟಿಲ ಭದ್ರ ಕುಮುದ ಮಧುಮಾನ್ ಅಂಜನ ಮಕುಟ ಪಾಂಡುರ ಸಹಸ್ರಶಿಖರಿ ಪಾರಿಜಾತಮೆಂಬ ಹದಿನಾಱು ಕುಲಾಚಲಂಗಳೀ ಪೂ ರ್ವಾ ಪ ರ ವಿ ಪು ಳ ವೆಂ ಬ ಕೀಲಕಪರ್ವತಕ್ಕೆ ಪಶ್ಚಿಮದಿಕ್ಕಿನಲ್ಲಿಹವು (ಶಿವೇಕ ೨೦೩). ೧೫. ಅರಮನೆಯ ಒಂದು ಭಾಗ: ಪರಿಮಳದ ಪೂರಾಯಮಾಸುವ ಹಿರಿಯ ಪುಷ್ಪಕದೊಳಗೆ ಹೊಕ್ಕನು ಧರಣಿಜಾತೆಯನಱಸುತಿರೆ ಹನುಮಂತ (ತೊರಾ. ೦೦-೪೦). "ಹಿತ್ತಾಳೆಯೊಳು ನಯನರೋಗದೊಳು ಬಾಣಲೆಯೊಳು ಕುಬೇರನೊಳು ರತ್ನದೊಳು ಕಂಕಣದೊಳು ಅಯನದ ವಿಮಾನದೊಳು ಪುಷ್ಪಕಮೆನಿಕ್ಕು" (ಕುಂಗಲಿ. ೧೩೨-೬೩); "ರೀತಿಕೆಯಕ್ಷಿರೋಗ ಧನದಂ ಮಣಿ ಸೂತಕಿ ಕಂಕಣಂ ವಿಮಾನಾತಪಯಂಬರೀಷಕುಸುಮಂಗಳು ಪುಷ್ಪಕಮಕ್ಕುಂ" (ನಾನಾರ. ೦೨೪). [ಸಂ.]

**ಪುಷ್ಪಕರಂಡ** (ನಾ). ೧. ಹೂವಿನ ಪಾತ್ರೆ; ಹೂವನ್ನಿಡುವ ಬುಟ್ಟಿ. ೨. ಅಲಂಕಾರಕ್ಕಾಗಿ ಮೇಜುಗಳ ಮೇಲೆ ಜೋಡಿಸಿ ಇಡುವ ಹೂದಾನಿ; ಪುಷ್ಪಪಾತ್ರೆ: ಪುಷ್ಪಕರಂಡದಲ್ಲಿ ಜೋಡಿಸಿಟ್ಟ ಗುಲಾಬಿಗಳಿಂದುಂಟಾಗುವ ಅನುಭವ ನಿಜಕ್ಕೂ ಬೇರೆಯಾಗಿರುತ್ತದೆ (ಶ್ರೀಕೃಕ್ರ. ೦೦). [ಸಂ.]

**ಪುಷ್ಪಕವಿಮಾನ** (ನಾ). ೧. ರಾವಣನ ವಶಕ್ಕೆ ಬಂದ ಕುಬೇರನ ವಿಮಾನ: ಪುಷ್ಪಕವಿಮಾನದ ರತ್ನವಿಚಿತ್ರಪುತ್ರಿಕಾಸಂಕುಲಮುಟ್ಟೊಡಬ್ಬುವು ಬೆಮತೊರ್ಡೆ ಕೂಡೆ ಬೆಮರ್ತುವು (ಕುಂಠಿಚಿ. ೯-೦೦೯); ರಾವಣನು ಅವನ ಪುಷ್ಪಕವಿಮಾನವನ್ನು ಅಪಹರಿಸಿದನು (ಕಕಥಾ. ೪೦೪). ೨. ಇಂದ್ರನ ವಿಮಾನ: ವ್ಯಾವರ್ಣಿಸಲ್ ಬಲ್ಲನೇ ಮಹಿಯೊಳ್ ಮಾನವನೊಂದೆ ನಾಲಗೆಯೊಳಂತಾ ಭೂಭುಜಾಗಾರಮಂ ಬಹುವಿಸ್ತಾರಮನಿಂದ್ರಪುಷ್ಪಕವಿಮಾನಾಕಾರಮಂ (ಬ್ರಾಹಿ. ೨-೩೬). [ಸಂ.]

**ಪುಷ್ಪಕಳಂಬ** (ನಾ). ೧. ಹೂವಿನ ಬಾಣ. ೨. ಹೂವಿನ ಬಾಣಗಳನ್ನುಳ್ಳವನು; ಮನ್ಮಥ: ಜೇವಣಶಾಲೆ ತುಂಬಿಗಳ ಪುಷ್ಪಕಳಂಬನ ಶಸ್ತ್ರಶಾಲೆ . . . ಮಧುಭೂಭುಜನೋಲಗಶಾಲೆ ಮಾಮರಂ (ರಾಜಶೇ. ೯-೩೩). [ಸಂ. ಪುಷ್ಪಕಲಂಬ]

**ಪುಷ್ಪಕಾಸೀಸ** (ನಾ). ೧. ಕಣ್ಣಿನ ದೋಷವನ್ನು ಪರಿಹರಿಸುವ ಒಂದು ಬಗೆಯ ಔಷಧದ್ರವ್ಯ,—ನೇತ್ರಾಂಜನ; ಹಳದಿಬಣ್ಣದ ಕಾಸೀಸ "ವಿಶದಂ—ಪುಷ್ಪಕಾಸೀಸ" (ಅಭಿ. ೦೩೩). ೨. ಒಂದು ಬಗೆಯ ಔಷಧೀಸಸ್ಯ: ಪುಷ್ಪಕಾಸೀಸ ಸಸ್ಯ . . . ಈ ಗಿಡವು ಜವುಗುಪ್ರದೇಶದಲ್ಲಿ ಬೆಳೆಯುತ್ತದೆ (ಸಸ್ಯಶಾ. ೪೬). [ಸಂ.]

**ಪುಷ್ಪಕೇತು** (ನಾ). ೧. = ಪುಷ್ಪಾಂಜನ: "ರೀತಿಪುಷ್ಪಂ, ಪುಷ್ಪಕೇತುಃ, ಪೌಷ್ಪಕಂ, ಕುಸುಮಾಂಜನಂ—೪ ಕುಸುಮಾಂಜನದ ಹೆಸರು" (ಸಿದ್ಧಾಂ. ೩೦೩). ೨. ಹಿತ್ತಾಳೆಯ ಭಸ್ಮ. ೩. ಕಾಮ; ಮನ್ಮಥ. [ಸಂ.]

**ಪುಷ್ಪಗಣೆಯ** (ನಾ). ಹೂವಿನ ಬಾಣಗಳನ್ನುಳ್ಳವನು; ಮನ್ಮಥ: ತ್ರಿಣಯನುರೆ ಹಣೆಗಿಚ್ಚಿನಿಂದ ಬೆಂದನಾ ಪುಷ್ಪಗಣೆಯಂಗೆ ಪೊಂದೆ ನಿಮಿಷಂ ದುಃಖ ಯಿಾ ರತಿವನಿತೆಯಳಿಗಾವರಿಸಿದತುಳದುಃಖಾನಲನು ಕೊಲ್ಲದೆ ಜೀವದೊಡನೆ (ಚಿಮೋ. ೬-೩೩). [ಪುಷ್ಪ + ಕಣೆ₁ + —ಅ₇]

**ಪುಷ್ಪಚಾಪ** (ನಾ). ೧. ಹೂವಿನ ಬಿಲ್ಲು: ಅತಿಮೃದುಪುಷ್ಪಚಾಪದಳನೀಗುಣಟುಂಕೃತಿರಾವಮಾಗಮಾವ್ಯಾವೃತಪರಿಪೂರ್ಣಕರ್ಣಯುಗನಂ ಸಲೆ ಕೇಳಿಸದು (ಚಂದ್ರಪು. ೦-೨೩). ೨. ಮನ್ಮಥ; ಕಾಮ: ಪೊಸತಂ ಸ್ತ್ರೀರಾಜ್ಯಮುಂ ಮೇಣ್ ಪಡೆದನೊ ದಿದಿ ಲಾವಣ್ಯಸಿಂಧುಪ್ರವಾಹಂ ಪೊಸತೀಗಳ್ ಬಂದು ಬೆಳ್ಪಂಗೆಡೆದುದೊ ಗಣಕಾಸ್ಯಸೃಷ್ಟಿಯಂ ಪುಷ್ಪಚಾಪಂ ಪೊಸತಂ ಮಾಡಿಟ್ಟನೋ (ಅದಿಪು. ೦-೮೨); ಅದೇಂ ಮಾಡಿದನೊ ವಿರಹಸಂತಾಪಮಂ ಪುಷ್ಪಚಾಪಂ (ಕಾದಂಪೂ. ೬೩೬). [ಸಂ.]

**ಪುಷ್ಪಣಂದಿ** (ನಾ). ಒಬ್ಬ ಜೈನಯತಿಯ ಹೆಸರು: ಶ್ರೀ ಪುಷ್ಪಣನ್ದಿ ನಿಸಿಧಿಗೆ (ಎಕ. II (R), ೯೩; ೬೩ಯು ೬೮). [ಪುಷ್ಪ + < ನಂದಿ]

**ಪುಷ್ಪದಂತ** (ನಾ). ೧. ಶಿವನ ಪರಿಚಾರಕರಲ್ಲಿ ಒಬ್ಬ. ೨. ಅಷ್ಟದಿಗ್ಗಜಗಳಲ್ಲಿ ಒಂದು; ವಾಯುವ್ಯದಿಕ್ಕಿನ ಆನೆ: "ಐರಾವತಃ . . . ಪುಷ್ಪದಂತಃ, ಸಾರ್ವಭೌಮಃ, ಸುಪ್ರತೀಕಃ—ಈ ೮ ಮೂಡಣಂ ಕ್ರಮದಿನಿರ್ದ ದೆಸೆಯಾನೆಗಳ್" (ಹರಿಹು. ೦೬-೦೦೪); ಬೆದಱಿದುದಭ್ರಮೂರಮಣಂ . . . ದಿವಿರ್ದುದು ಪುಷ್ಪದಂತಮುಕಿವಿಹ್ವಲಮಾದುದು ಸಾರ್ವಭೌಮಂದದಿರ್ದುದು ಸುಪ್ರತೀಕವಿರದಾಲಿಸಿ ತತ್ಪಟಹಪ್ರಣಾದಮಂ (ಕುಶ್ರಕು. ೩-೬). ೩. ಸೂರ್ಯ ಮತ್ತು ಚಂದ್ರರಿಬ್ಬರಿಗೂ ಒಟ್ಟಾಗಿ ಇರುವ ಹೆಸರು: "ಚಂದ್ರ ಸೂರ್ಯರ್ಕಳನೊಂದಾಗಿ ಪೇಟ್ವೊಡೆ ಪುಷ್ಪದಂತರೆಂಬುದು" (ಹರಿಹು. ೨೦-೦೨೦). ೪. [ಜೈನ] ವರ್ತಮಾನ ಕಾಲದ ಇಪ್ಪತ್ತನಾಲ್ಕು ತೀರ್ಥಂಕರರಲ್ಲಿ ಒಂಬತ್ತನೆಯವನು: ಅನಶ್ವರಸುಖಧಾಮಮನೆಮಗೀಗೆ ಪುಷ್ಪದಂತಜಿನೇಂದ್ರಂ (ಶಾಪುಂಕ.

೧೨೭); ವರಪುಷ್ಪದಂತಜಿನಪತಿ ಪರಮಶ್ರೀಮುಕ್ತಿಲಕ್ಷ್ಮಿಯಂ ಕೆಯ್ಕೊಂಡು (ಶಕ್ರಕೃ. ೧೪-೩೩). [ಸಂ.]

**ಪುಷ್ಪದರ್ಶನ** (ನಾ). ೧. ಹೂವನ್ನು ನೋಡುವಿಕೆ. ೨. ಮುಟ್ಟಾಗುವಿಕೆ; ರಜಸ್ವಲೆಯಾಗುವಿಕೆ: ಮಕ್ಕಳನೀಯದೆ ನೋಡೆ ನಾಡೆ ನೋಯಿಸಿದಪುದಿಕ್ಕುಪುಷ್ಪದವೊಲೆನ್ನಯ ನಿಷ್ಫಲಪುಷ್ಪದರ್ಶನಂ (ಶಂಕಪು. ೧-೧೦೬). ೧, ೨: ಪುಷ್ಪದರ್ಶನದಿಂ ಕೆಯ್ಮಾಸಿದನೆಂಬುದೀಕೆಗೆ ಪಾಟಿಯೆ ವಲಮೆಂದು ವಕ್ರೋಕ್ತಿಯಿಂ ನುಡಿದು (ಶಾಂತಿಪು. ೬-೬೨ ವ). [ಸಂ.]

**ಪುಷ್ಪದಾಮ** (ನಾ). ಹೂವಿನ ಸರ; ಹೂಮಾಲೆ: ರತ್ನಾಭರಣತೋರಣ ಘಂಟಾಜಾಲಮುಕ್ತಾಲಂಬನಪುಷ್ಪದಾಮಷ್ಟಮಂಗಲನವನಿಧಿಪ್ರಧಾನಂಗಳುಂ (ಅಜಿತಪು. ೧೧-೩೨ ವ); ಲಲನೆಯುರ್ಗಂಗರಾಗವದು ದುರ್ವಹಮುಂಶಕ ಭಾರವಂಗಸಂಚಲತೆಗೆ ಕಾರಣಂ ಕುಸುಮವವಾಲಿಕೆಯುಂ ಪೊಬೆ ಪುಷ್ಪದಾಮಮೇಖಲೆ ಸಡಗಡ್ಡಿ . . . ಎಂದೊಡಮೀಯಂ ಪೊಗಟಲ್ ಸುಕುಮಾರವೃತ್ತಿಯುಂ (ಉದಂಪು. ೧೧೧೩); ಧರಣಿಸುತ ನವಪುಷ್ಪದಾಮವ ಹರಿಯ ಕಂಠದಲಿಕ್ಕಿ ಮಂಗಳಮಹಿಮನೊಪ್ಪಿದನು (ಕೌಶಿಕ. ೨-೪೯). [ಸಂ. ಪುಷ್ಪದಾಮನ್]

**ಪುಷ್ಪಧನು** (ನಾ). (ಮನ್ಮಥನ) ಹೂವಿನ ಬಿಲ್ಲು: ರತಿಯೊರ್ತದಿಂದತನು ಪುಷ್ಪಧನುವಂ ಕೊಂಡು ಪತಿಯನಲ್ಲಡಿಸಿ ಮನದೊಳಗಿಸಲು ಪೊಗೊಂಡು (ಹರಿ. ಕೀ. ೬-೨೦). [ಸಂ. ಪುಷ್ಪಧನುಸ್]

**ಪುಷ್ಪಧನ್ವ** (ನಾ). = ಪುಷ್ಪಚಾಪ ೨: "ಪ್ರದ್ಯುಮ್ನಃ . . . ಪುಷ್ಪಧನ್ವಾ ಮನೋಭವಃ– ಈ ೨೮ ಕಾಮ(ದೇವ)ನ ಪೆಸರ್" (ಕರ್ಣಾಟಕು. ೬-೩೯); ಪುಷ್ಪಧನ್ವನ ಕೃತಪೂಜಾಪೂಜಮನೆ ಕಣ್ಗೆಸೆದಿರ್ದುದು ಚಂದ್ರಮಂಡಲಂ (ಸೂಕ್ತಿಸು. ೬-೨೫೦). [ಸಂ. ಪುಷ್ಪಧನ್ವನ್]

**ಪುಷ್ಪಪುಟ** (ನಾ). ೧. ಹೂವಿನ ಕೋಶ. ೨. [ನಾಟ್ಯ] ಹದಿಮೂರು ಬಗೆಯ ಸಂಯುತಹಸ್ತಗಳಲ್ಲಿ ಒಂದು; ಅರಳಿದ ಹೂವಿನಾಕಾರವಾಗುವಂತೆ ಎರಡಂ ಅಂಗೈಗಳನ್ನೂ ಜೋಡಿಸಿ ಹಿಡಿಯುವುದು: ಮಿಗೆ ಕೈಗಳಂ ಕುಚದಲ್ಲಿ ಪುಷ್ಪಪುಟದಂತಿರಿಸಿ (ಅಸ್ವರಂ. ೪-೪೩). ಪುಷ್ಪಪುಟಹಸ್ತದಿಂ ಪುಷ್ಪಾಂಜಲಿಯುಂ ಕಿದರ್ದುರ್ (ರಾಜಶೇ. ೩-೧೫೮). [ಸಂ.]

**ಪುಷ್ಪಫಲ** (ನಾ). ಬೇಲದ ಮರ; ಕಪಿತ್ಥವೃಕ್ಷ: "ಕಪಿತ್ಥಃ . . . ಪುಷ್ಪಫಲಃ, ದಂತಶಠಃ– ೭ ಬ್ಯಾಲದ ಮರಕ್ಕೆ ಪೆಸರುಗಳು" (ಚಿತ್ರಾಂಅ. ೦೦೬). [ಸಂ.]

**ಪುಷ್ಪಬಾಣ** (ನಾ). ೧. (ಮನ್ಮಥನ) ಹೂವಿನ ಬಾಣ: ಸುಗ್ಗಿ ಬರ್ಪುದನೀ ನಂದನಕಾನೆ ಮುಂದುದೆಗೆದಂ ಪುಷ್ಪೇಷುಗಂ ಪುಷ್ಪಬಾಣದ ಮುಂಗಾಣಿಕೆಗೊಟ್ಟಿಂ (ಜಗಂ. ೧೪-೬೩); ಮದನಂ ಪುಷ್ಪಬಾಣಂಗಳಂ ಹೂಡಿದ ಬಿಲ್ಲಂ ಪೊತ್ತು ಪಿಂದಂ ಬರೆ (ಗಂಣಿ. ೪-೯೭). ೨. ಹೂವಿನ ಬಾಣಗಳನ್ನುಳ್ಳವನಂ; ಮನ್ಮಥ; ಕಾಮ: ನಲ್ಲಂಬಿದಿಸೆ ಪುಷ್ಪಬಾಣನೆರ್ದೆಯುಂ (ಕಾವ್ಯಸಾ. ೩೩೦ ಶೂದ್ರಕ). [ಸಂ.]

**ಪುಷ್ಪಮಂಜರಿ** (ನಾ). ೧. ಹೂವುಗಳ ಗೊಂಚಲಂ; ಪುಷ್ಪಗುಚ್ಛ: ಪುಷ್ಪಮಂಜರಿಯುಂ ತನ್ನ ನಿರ್ಕರ್ಮಪೂರಕಮನತ್ಯಾಶ್ಚರ್ಯದಿಂ ನೋಡಿದಂ (ಉದಂಪು. ೬೭೦); ಅಮರಸ್ತ್ರೀನಿಚಯಂ ವಿಚಿತ್ರಲತೆಯಂ ಧಾತ್ರೀಭೂಜಂಗಳಂ ಚಮರೀಜಾವಳಿ ಪುಷ್ಪಮಂಜರಿಯಂ . . . ಪೋಲೆ ವಿಭ್ರಮದಿಂ ಬಂದನದೊಂದು ನಂದನವನಂ ಬರ್ಪಂತೆ ಸಂಕ್ರಂದನಂ (ಶಕ್ರಕೃ. ೧೪-೭೩); ಮಣಲ ಲಿಂಗದ ಮಸ್ತಕಾಗ್ರದ ಪುಷ್ಪಮಂಜರಿ ಮಾಣದಾಕ್ಷಣಮ ತಳ್ತಡರ್ದು ಕಿರಾತನ ಮಂಡೆಯುಲಿರೆ (ಹಂಪ. ೪-೦೦೬). ೨. ಒಂದು ಬಗೆಯಂ ಭತ್ತ,–ನೆಲ್ಲು: ಸೋಮಶಾಲಿಯುಂ ಬೆಳುವಳ್ಳಿಗೆ ಕಂಬುಖಿ ಹೇಮವರ್ಣದ ಕೊನೆವಾಳೆ ರಾಮಣೇಯಕವಾದ ಪುಷ್ಪಮಂಜರಿಯ ಸನಾಮದ ತೆನೆಗಳೊಪ್ಪಿಹುವು (ಕಂಪಿ. ೩-೬೯). [ಸಂ. ಪುಷ್ಪಮಂಜರೀ]

**ಪುಷ್ಪಮಂಟಪ** (ನಾ). ಹೂವುಗಳಿಂದ ಅಲಂಕರಿಸಿದ ಮಂಡಪ: ಆ ವನಂಗಳಲ್ಲಿ ಚಿತ್ರಶಾಲೆ ಚಂದ್ರಶಾಲೆ ಶಿಶಿರಶಾಲೆ ಸುರಭಿಶಾಲೆಗಳಲ್ಲಿ ಪುಷ್ಪ[ಶಾಲಂ. ಲತಾ]ಮಂಟಪ . . . ತರುವಾಟಗಳ ಶಣ್ಗೆಲಲ್ಗಳೊಳಗೆಯುಂ (ಶಶಿಕೆ. ೨೦೩); ಒಂದು ಪುಷ್ಪಮಂಟಪವನ್ನು ಕಟ್ಟಿ ಅದರಲ್ಲಿ ಭಗವಾನ್ ವಿಶ್ವಾಮಿತ್ರರನ್ನು ಕುಳ್ಳಿರಿಸಿ ನಾವೆಲ್ಲರೂ ಆ ರಥವನ್ನು ಎಳೆದುಕೊಂಡು ಹೋಗಬೇಕು (ಮುಹಾಹ. ೩೦೦). [< ಸಂ. ಪುಷ್ಪಮಂಡಪ]

**ಪುಷ್ಪಮಾರ್ಗಣ** (ನಾ). ೧. ಹೂವಿನ ಬಾಣ. ೨. ಹೂವಿನ ಬಾಣಗಳನ್ನುಳ್ಳವನಂ; ಮನ್ಮಥ: ಮಣಿಮನೆ ಕಾತ ಕಲ್ಪಲತೆ ಸಿಂಜಿನಿಯಂ ತೆಗೆದಿಟ್ಟ ಪುಷ್ಪಮಾರ್ಗಣನ ಧನುಃಶಲಾಕೆ . . . ಹಾನೆನಿಸುತ್ತೆ ಹಾಳ್ದ ಸನ್ನಣ ಚೀನಲಚ್ಚಮುತ್ತು ಕನಕಾಂಬರದಿಂ ಕಮಲಾಕ್ಷಿ ತೋಜಿದಳ್ (ಶಾಶೀ. ೦೦-೦೬). [ಸಂ.]

**ಪುಷ್ಪಮಾಲೆ** (ನಾ). ೧. ಹೂವಿನ ದಂಡೆ,–ಮಾಲೆ; ಹೂವಿನ ಹಾರ: ಹತ್ತಿರ ನಿಂತಿದ್ದ ಮಹಾಚಿಕಚ್ಚೆ ಮಗಳ ಕೈಗೆ ಪುಷ್ಪಮಾಲೆಯನ್ನು ತೆಗೆದು ಕೊಟ್ಟರು (ಶಾಂಕಲಾ. ೦೦೯). ೨. ಒಂದು ಬಗೆಯ ಭತ್ತ,–ನೆಲ್ಲು: ಕುಂದದ ಚಂದ್ರಲೇಖೆ ನಸುಗುಂದದೆ ರಂಜಿಪ ಪುಷ್ಪಮಾಲೆ ಕಂದೊಂದದ ಸೋಮಶಾಲೆ . . . ನಿರಂತರಮೊಪ್ಪುವ ಧರ್ಮಗುಪ್ತಿಯೆಂಬಂದದನೇಕ ನಾಮವೆಸೆಗುಂ ಮೃದುಬಂಧುರ ಗಂಧಶಾಲಿಗಳ್ (ಪಂಚಿಕಾ. ೪-೬೬). [ಸಂ. ಪುಷ್ಪಮಾಲಾ]

**ಪುಷ್ಪಮಾಸ** (ನಾ). ಗಿಡಬಳ್ಳಿಗಳು ಹೂವು ಬಿಡುವ ಸಮಯಂ; ವಸಂತಕಾಲ; ಚೈತ್ರಮಾಸ: ಪುಷ್ಪಮಾಸವು ಕಳೆಯೆ ಪುಷ್ಪವಿರಹಿತೆಯಾಗ ಭೂಷಣವ ಕಳೆದಿಟ್ಟ ಕಾಂತೆಯಂತಿಹಳು (ಕೃಷ್ಣಾಲೀ. ೬೭). [ಸಂ.]

**ಪುಷ್ಪರಥ** (ನಾ). (ಸಂತೋಷವಿಹಾರಕ್ಕಾಗಿ) ಹೂವುಗಳಿಂದ ಸಿಂಗರಿಸಿದ ಬಂಡಿ: "ವಿನೋದದ ರಥವಂ ಪುಷ್ಪರಥವೆಂಬುದು" (ಕರ್ಣಾಟಕು. ೬೩-೨೧೨); ಮರುದಿನ ಪುಷ್ಪರಥವು ಸಿದ್ಧವಾಯಿತು (ಮುಹಾಹ. ೩೦೨). [ಸಂ.]

**ಪುಷ್ಪರಸ** (ನಾ). ೧. ಹೂವಿನಲ್ಲಿರುವ ಸಾರವತ್ತಾದ ದ್ರವ; ಮಕರಂದ: "ಮಕರಂದಃ, ಪುಷ್ಪರಸಃ—೨ ಹುವ್ವಿನ ಜೇನು, ಹುವ್ವಿನ ಬಂಡು" (ಚಿತ್ರಾಂಅ. ೦೦೫). ೨. ಜೇನುತುಪ್ಪ: "ಸಾರಘಂ, ಮಾಕ್ಷಿಕಂ, ಕ್ಷೌದ್ರಂ, ಮಧು, ಪುಷ್ಪರಸಃ–ಈ ೫ ಜೇನ ತುಪ್ಪಂ" (ಕರ್ಣಾಟಕು. ೦೦೨-೪೬೬). [ಸಂ.]

**ಪುಷ್ಪರಾಗ** (ನಾ). ನವರತ್ನಗಳಲ್ಲಿ ಒಂದು; ನಸುಹಳದಿಬಣ್ಣದ ಒಂದು ಬಗೆಯ ಹರಳು; ಪುಷ್ಯರಾಗ: "ಪೀತಮಣಿಃ—ಪುಷ್ಪರಾಗ" (ಚಿತ್ರಂ. ೯೯). [ಸಂ.]

**ಪುಷ್ಪರಾಜ** (ನಾ). ೧. = ಪುಷ್ಪರಾಗ. ೨. ಹೂವುಗಳ ಅರಸ; ವಸಂತ (?): ಆ ಲಲಿತಕುಸುಮತತಿಯಾ ಬಾಲಕಪದಪದ್ಮಮಾಲೆಯಂ ಬಳಸಿದುವೊಡ್ಡೋಲಗಕೆ ಪುಷ್ಪರಾಜನನೋಲಗಿಸಲ್ ಬಂದ ಪುಷ್ಪನಿಚಯದ ತೆಜದಿಂ (ಶಾಂತಿಪು. ೦೦-೬೦). [ಸಂ. ಪುಷ್ಪರಾಜನ್]

**ಪುಷ್ಪಲತೆ** (ನಾ). ಹೂವಿನ ಬಳ್ಳಿ: ಕಾಮಚಾಪದೀ ಜನಿಯಿಸಿದಿಕ್ಕು ಚಂದ್ರನವರ್ಧಿಂ ಮಡುಗೊಂಡ ಕೊಳಂ ದಿವಂ ತವರ್ವನೆ ತನಗೆಂಬ ಪುಷ್ಪಲತೆ ಕಲ್ಪಮಹೀಜದ ಬೀಜದಂಕುರಂ (ಶಕ್ರಕೃ. ೨-೩೬). [ಸಂ. ಪುಷ್ಪಲತಾ]

**ಪುಷ್ಪಲಾವ** (ನಾ). ಹೂವುಗಳನ್ನು ಆಯ್ದು ತರುವವನಂ; ಹೂಮಾಡಿಗ. [ಸಂ.]

**ಪುಷ್ಪಲಾವಕ** (ನಾ). = ಪುಷ್ಪಲಾವ: ಹರಿಯುಂ ಕಾಣ್ಬುದುಮಾದುದು ಪರಮಜ್ಞತೆ ಪುಷ್ಪಲಾವಕಂಗಮಿದೇನಚ್ಚರಿ (ಜಗಂ. ೬-೦೪). [ಸಂ.]

**ಪುಷ್ಪಲಾವಿ** (ನಾ). ಹೂವಾಡಿಗಿತ್ತಿ; ಹೂವಡಿತಿ: ಮಾಲೆಯುಮಂ ನೆಗಳ್ದ ಸೊಗಯಿಸುತುಂ . . . ಪುಷ್ಪಲಾವೀಕದಂಬಂ (ಶಂರಾವಿ. ೧-೨೨೦); ಮಾಲೆಗಳಂ ಕೋಳ್ಗಳಿಮೊಪ್ಪೆ ಕಣ್ಗೊಳಿಸುತಿರ್ಪಂ ಪುಷ್ಪಲಾವೀಜನಂ (ಜಗ. ೯-೧೦೩). [ಸಂ. ಪುಷ್ಪಲಾವೀ]

**ಪುಷ್ಪಲಾವಿಕೆ** (ನಾ). =ಪುಷ್ಪಲಾವಿ: ಮದನನ ಪರಿಚಾರಿಕೆಯರಂತೆತ್ತು ವಂತೆ ಪೂವನೆತ್ತುವ ಪುಷ್ಪಲಾವಿಕಾಚತುಷ್ಪಥದೊಳ್ (ಶಾಂತಿಪು. ೮-೬೨ ವ). [ಸಂ. ಪುಷ್ಪಲಾವಿಕಾ]

**ಪುಷ್ಪಲಿಹ** (ನಾ). ದುಂಬಿ; ಭ್ರಮರ: "ಅಳಿ ಚಂಚರೀಕಮಿಂದಿಂದಿರಂ ತುಂಬಿ ಪುಷ್ಪಲಿಹಂ . . . ಭ್ರಮರಮಾಕ್ಷ್ಯಂ" (ಪಂಗನಿ. ೩೨-೧೧). [ಸಂ. ಪುಷ್ಪಲಿಹ್]

**ಪುಷ್ಪವಂತ** (ಗು). ೧. ಹೂವುಗಳುಳ್ಳ; ಹೂವು ಬಿಡುವ: ಪುಷ್ಪವಂತ ಸಸ್ಯಗಳು . . . ಈ ಸಸ್ಯಗಳು ಹೂವುಗಳನ್ನು ಬಿಡುತ್ತವೆ (ಸಸ್ಯಶಾ. ೩). (ನಾ). ೨. ಹೂವುಗಳಿಂದ ಅಲಂಕಾರಮಾಡಿಕೊಂಡವನು. ೩. ಸೂರ್ಯ ಮತ್ತು ಚಂದ್ರರಿಬ್ಬರಿಗೂ ಕೂಡಿ ಇರುವ ಒಂದೇ ಹೆಸರು: ಅವನ ಮೆಯ್ಯೊಗಮಂ ಈ ಪುಷ್ಪವಂತರ್ಗೆ ಪೋಲ್ವೊಡವಿದತ್ತೋ . . . ಆ ವನಜಾಕ್ಷನ ದಿವ್ಯಮೂರ್ತಿಯುಂ ಕಣ್ ತಣಿಯೆ ಕಂಡು (ಅದ್ಯಕ. ೬-೦೬). [ಸಂ. ಪುಷ್ಪವತ್]

**ಪುಷ್ಪವತಿ** (ನಾ). ೧. ಮುಟ್ಟಾದವಳು; ಋತುಮತಿ; ರಜಸ್ವಲೆ: "ಅವೀಃ, ಉದಕ್ಯಾ, ರಜಸ್ವಲಾ, ಆತ್ರೇಯಿಕಾ, ಪುಷ್ಪವತೀ — ಈ ೫ ಮುಟ್ಟುವೆಂಗಡವಳ್" (ಹಲಾಯು. ೮೦-೩೩೯); ಒಂದು ದಿವಸ ದೇವಕೀ ದೇವಿ ಪುಷ್ಪವತಿಯಾಗಿ (ಜಗ. ೨-೩೯ ವ); ನೀ ಪುಷ್ಪವತಿಯಾಗಲ್ಲಿ ಫಲ ವತಿಯಾಗು ನಡೆ ಕುರುರಾಯಭವನದಲಿ (ಕುವ್ಯಾಸ. ೧೯ ೬೩). ೨. ಹೂವುಗಳನ್ನು ಉಳ್ಳ ಬಳ್ಳಿ; ಹೂವುಬಿಟ್ಟ ಬಳ್ಳಿ: "ಪುಷ್ಪವತೀ =ಹೂತ ಬಳ್ಳಿ" (ಶಾಕಕ್ಕ. ೦೬೩). ೧, ೨: ಪರಾಂಗಿ ಲತೆಯಂತೆ ಪುಷ್ಪವತಿ ಯಾಗಿರ್ಪಂ (ಶೀಲಶೋಧ. ೯-೦೭೯); ಸಲೆ ಪಂಥ್ಯಾಲಯಮಂತಿರೆ ಪಲಕಾಲಂ ಪುಷ್ಪವತಿಯೆನಾದಪೆನೆಂದುಂ ಫಲವತಿಯಾದಪೆನಿಲ್ಲೆಂದು ಲತಾಲಿತಾಂಗಿ ಬಾಡಿ ಪಾಡುಳಿದಂಗುಂ (ಸುಕುಮಾ. ೯-೯೮); ಪರಪುಷ್ಪ ವತಿಲತೆ ಬಾಗಿ ತಬ್ಬಿರಲೆಂದು ವಿಂದೆದ್ದು ವಿಮಲವಾರಿಯನು ಮತ್ತೆ ಸೋಂಕುವಳೆಂದು ಅಂಜಿ ಮಾರುತನಿಂದು ಮೆಲ್ಲಮೆಲ್ಲನೆ ಬರುತಿಹನು (೨ರಾಜಕ. ೯೭-೬೨). [ಸಂ. ಪುಷ್ಪವತೀ]

**ಪುಷ್ಪವರ್ಷ** (ನಾ). ಹೂವಿನ ಮಳೆ; ಪುಷ್ಪವೃಷ್ಟಿ: ಜಯನಿನದಂ ಸುರದುಂದುಭಿಧ್ವನಿನಮಂ ಪುಷ್ಪವರ್ಷಮೊರ್ಮೆಯೆ ಸಕಲೋರ್ವಿಯು ನೆಯ್ದೆ ಪರ್ವುತಿರೆ ಚಿತ್ರಯು ಸಾಯುಂತೆಬಗಿ ಪೋದುದಮರಸಮಾಜಂ (ಆದಿಪು. ೦೯-೦೯೭); ಕರಂ ಸೊಗಯಿಪನ್ನೆಗಮಾಗಳೆ ತೋಳ್ದು ತನ್ನ ರೂಪಂ ಕಳೆದಂ ಬಟ್ಟೆಳ್ಳೆವಿದ್ಯಾಧರ ಹರ್ಷದೆ ಪುಷ್ಪವರ್ಷಮಂ (ಶಂಪ್ರಪು. ೩-೮೧). [ಸಂ.]

**ಪುಷ್ಪವಸೆ** (ನಾ). ಹೂವಿನ ಹಾಸುಗೆ; ಪುಷ್ಪಶಯ್ಯೆ: ಕೆಲವೆಡೆಗೆ ಕೆಂದಳಿರ ಹಸೆಗಳು ಕೆಲವು ಕೆಲವೆಡೆ ಪುಷ್ಪವಸೆಗಳು (ಕೌಶಿಕಾ. ೦೦-೨೨). [ಪುಷ್ಪ + ವಸೆ]

**ಪುಷ್ಪವಾಟ** (ನಾ). ಹೂವಿನ ತೋಟ; ಹೂದೋಟ: ಇಕ್ಷು ಪುಷ್ಪ ವಾಟಂಗಳನಾವ ಮಾಡಲಮಾವಮಂ ಗೆಲೆವಂದುದು ಮೆಗಿಪಾಂಡಲಂ (ಅಜಿತಪು. ೦-೨೦); ಪುಷ್ಪವಾಟದಿನಗಲ್ದಬಾಹ್ಯಕರಕ್ಕಾಗಿ ಪೊದರ್ವ ಮತ್ತ ಪ್ರವಾಳೀ . . . ಎತ್ತಲುಂ ಸೊಗಯಿಸುತುಂ ಚಂಪಾಪುರೋಪಾಂತದೊಳ್ (ಸುಕುಮಾ. ೪-೪೩). [ಸಂ.]

**ಪುಷ್ಪವಾಟಿ** (ನಾ). = ಪುಷ್ಪವಾಟ: "ಹೂವಿನ ತೋಂಟಮಂ ಪುಷ್ಪ ವಾಟಿಯೆಂಬುದು" (ಹಲಾಯು. ೩೬-೬೦); ಅಗಳುಂ ಮಾಸುಬಿ ನಿಂದಳಿ ಮಾಲೆಯು ಗೀತನಿಸ್ವನಾಭೋಗದೆ ಪುಷ್ಪವಾಟಿ ಬಗೆಗೊಳ್ವುದನಂಗನ ಗೀತಶಾಲೆವೋಲ್ (ಜಗ. ೯-೯೩); ಅಲರ್ಗಣೆ ಪುಷ್ಪವಾಟಿಕಾಲದೊಳ್ ಬಳೆದಿಪ್ಪುವು ವಿಮಾನಕೇತುಗಳ್ ಜಲರುಹಷಂಡದೊಳ್ ಮೆಚ್ಚಿಪುತಿರ್ದಪುವು (ಅಪಂಪು. ೩-೮). [ಸಂ. ಪುಷ್ಪವಾಟೀ]

**ಪುಷ್ಪವಾಟಿಕ** (ನಾ). = ಪುಷ್ಪವಾಟ: ಲಿಂಗಂಗಳಿಗೆ ಕೂರ್ತು ತಂದು ಪೂಜಿಪ ಪುಷ್ಪವಾಟಿಕವೃಂದಮುಂ ಲಿಂಗಂಗಳಿಗೆ ನಯಮೊಂದಿ ಧೂಪವ ನೀವ ಗುಗ್ಗುಳತರುಸಮುಚ್ಚಯವು (ಬಸಪು. ೦೯-೬೦). [ಸಂ. ಪುಷ್ಪವಾಟಿಕಾ]

**ಪುಷ್ಪವಾಟಿಕೆ** (ನಾ). = ಪುಷ್ಪವಾಟ: ಪುಷ್ಪವಾಟಿಕೆಗಳು ಮುರುಟಿದವು ಪಶುಗಳುಬಿದುವು (ಬಸಪು. ೩೬-೯೮); ಪೂಗಳಿಂದ ತಮ್ಮವಯವ ಸೌಂದರ್ಯಮಂ ವಿಟರಿಗೆ ತೋರಿಸುವಂತೆ ಮಾರುವ ಮಾಲೆಕಾರನ ಬಾಲೆಯರಿಂ ಮನೋಹರಮಾದ ಪುಷ್ಪವಾಟಿಕೆಗಳಿಂ (ಶ್ರೀಗಂಧಿ. ೩-೦); ತುಂಬಿಗಳು ಪುಷ್ಪವಾಟಿಕೆಯ ಬಳಿ ಹಾಡುತ್ತಿವೆ (ಶಾಕಕ್ಕ. ೬). [ಸಂ. ಪುಷ್ಪವಾಟಿಕಾ]

**ಪುಷ್ಪವಾಸ** (ನಾ). ಹೂವಿನ ವಾಸನೆ; ಪುಷ್ಪಗಂಧ: ಸುಕುಮಾರಂ . . . ಪುಷ್ಪವಾಸದಕ್ಕಿಯ ಕೂಳನಲ್ಲದೆ ಮತ್ತಿನಾಹಾರಮನುಂತಳಿಯಂ (ಜೀವಸಂ. ೦೦೭-೩೩ ವ). [ಸಂ.]

**ಪುಷ್ಪವೃಷ್ಟಿ** (ನಾ). =ಪುಷ್ಪವರ್ಷ: ಆ ರಾಜಭವನದೊಳ್ ವಸುಧಾರೆಯು ತಣ್ಣೆಲರ ಪುಷ್ಪವೃಷ್ಟಿಯು ಸುರಭೇರೀರವದ ಪೊಗಟ್ಟ ದೇವರಹೋರಭಸದ ಪುದುವಿನಾಯ್ತು ಪಂಚಾಶ್ಚರ್ಯಂ (ಕೃಷ್ಣಪು. ೦೯-೦೦); ಅಂತರಿಕ್ಷದಲ್ಲಿ ಅಮರರು ನೋಡಿ ಆಗ ಪುಷ್ಪವೃಷ್ಟಿಯನ್ನೆ ಕರೆಯಲು (ಪುರಂತ. ೯-೬-೭); ಆಕಾಶದಲ್ಲಿ ದೇವತೆಗಳೂ ಋಷಿಗಳೂ ಅಪ್ಸರೆಯರೂ ಪುಷ್ಪವೃಷ್ಟಿ ಕರೆದು ಇವನು "ಭೀಷ್ಮ!" ಎಂದು ಹೊಗಳಿದರು (ಪಕಾ. ೯). [ಸಂ.]

**ಪುಷ್ಪಶಯನ** (ನಾ). ಹೂವಿನ ಹಾಸುಗೆ: ಇದು ತಾನಾಕೆ ಪೊರಳ್ದ ಪುಷ್ಪಶಯನಂ . . . ಇದು ಹಸ್ತಾಬ್ಜದೆ ಜಾರಿದಾಕೆಯ ಮೃಣಾಳೀ ಕಂಕಣಂ (ಶಾಕುಂತ. ೯೩-೭೭). [ಸಂ.]

**ಪುಷ್ಪಶಯ್ಯೆ** (ನಾ). = ಪುಷ್ಪಶಯನ: ಜನತಾಸೇವೆಯೆಂದರೆ ಪುಷ್ಪ ಶಯ್ಯೆಯಲ್ಲ, ಮುಳ್ಳಿನ ಹಾಸಿಗೆ (ಜಕಸ. ೦೦೦). [ಸಂ. ಪುಷ್ಪಶಯ್ಯಾ]

**ಪುಷ್ಪಶರ** (ನಾ). ೧. (ಮನ್ಮಥನ) ಹೂವಿನ ಬಾಣ: ಪುಷ್ಪಶರತೀವ್ರತೆ ಯೆಂತು ರವಿಪ್ರತಾಪಮೊಂತಳಿಕಾಳದಂಗನೀಳರುಚಿಯೆಂತು ನಿಜಂ ತನಗಂತು ಸದ್ಗುಣಾವಳಿ ಸಹಜಾತಂ (ಶಾಂತಿಪು. ೭-೦೦೯). ೨. ಮನ್ಮಥ; ಕಾಮ: ಜಿತಕಾಮರ್ ಮರುಳಾದರ್ ಪುಷ್ಪಶರನ ಪಡೆ ನಡೆವಾಗಳ್ (೧೦ಳ. ೮-೮). [ಸಂ.]

**ಪುಷ್ಪಸಮಯ** (ನಾ). ೧. ಹೂವು ಬಿಡುವ ಕಾಲ; ವಸಂತಮಾಸ: "ವಸಂತಃ, ಪುಷ್ಪಸಮಯಃ, ಸುರಭಿಃ — ೩ ವಸಂತಋತುವಿನ ಹೆಸರುಗಳು" (ಸಿದ್ಧಾಂ. ೯೦). ೨. ಮುಟ್ಟಾಗುವ ಕಾಲ; ಋತು ವಾಗುವ ಸಮಯ: ಮೂಡಿದ ಮೊಡವಿ ಮುಗುಳ್ಮೊಗವೀಡಿ ಅಚ್ಛನ್ಮಂಜರೀಸ್ತನಂ ತೋಳ್ಮೊದಲೊಳ್ ತೀಡುವ ನಟುಗುಂಪೇಂ ಟಿಸು ಣಾಡಿದುದೋ ಸತಿಗೆ ಪುಷ್ಪಸಮಯೋದಯಮಂ (ಕೃಷ್ಣಪು. ೩-೦೦೫). [ಸಂ.]

**ಪುಷ್ಪಸಾಯಕ** (ನಾ). ೧. (ಮನ್ಮಥನ) ಹೂವಿನ ಬಾಣ: ಪುರಂದರಾದಿಗಳ ಸಿಡಿಲ್ದುಗುತಂದುವು ಪುಷ್ಪಸಾಯಕಂಗಳ ಪೊಗವಗಟ್ಟು ಚಂದ್ರಿಕೆಯ ದಟ್ಟು . . . ಎಂಬ ವಾರಿಧರವಾರಣವೇಣಾವರಾಹಮೌಕ್ತಿಕಂ (ಜಗ. ೦೩-೨೯). ೨. ಕಾಮ; ಮನ್ಮಥ: ಬಲ್ ಪುರ್ವು ಬಾಣಂ ನಿಜಾಕ್ಷಿ ವನಕ್ರೀಡೆಗೆ ಪುಷ್ಪಸಾಯಕನಿಭಂ ತನ್ನಾಯಕಂ ಸಿಲ್ವುದಂ (ಶಾಂತಿಪು. ೮-೦೦); ಇಂದಾಪಯೋಜಜಂಗೆ ಕೃತಕೃತ್ಯತೆ ಸಾರ್ದುದು ಪುಷ್ಪಸಾಯಕಂಗಿಂದೊಳ

ಸೋಮರ್ದೇಸುಮಂ . . . ಎಂದು ನೋಡಿದರ್ (ತಂತ್ರಪು. ೬-೬೯): ಪುಷ್ಪಸಾಯಕ ಜಗದೇಕವೀರನ ಮದಂಗಿಡೆ ಮರ್ದಿಸಿದ ಪ್ರತರ್ಕರ್ನನೊಳ್ . . . ಎತ್ತು ಗೆಲ್ವ ಬಗೆಯೂತನಿದೆನ್ನಯ ಮೋಹವೆಂತಾಟೋ (ಕಂಕಾ. ೯-೦೫೬). [ಸಂ.]

**ಪುಷ್ಪಸ್ರಜ** (ನಾ). ಹೂವಿನ ಮಾಲೆ: ಅನಲ್ಪಕಲ್ಪಲತಿಕಾಪುಷ್ಪಸ್ರಜಾ ಮೋದಂ . . . ಸೌಗಂಧ್ಯಮೇದೀಕೃತಭ್ರಮರಂ ತೆಕ್ಕನೆ ತೀವೆ ಗಂಧ ಮಯಮಾಯ್ತುದಾ ಮಹಾಮಂಡಪಂ (ಪುಷ್ಪ.ಪು. ೦೦-೯೦). [ಸಂ. ಪುಷ್ಪಸ್ರಜ್]

**ಪುಷ್ಪಹೀನೆ** (ನಾ). ಮುಟ್ಟು ನಿಂತು ಹೋದವಳು; ಮಕ್ಕಳಾಗುವ ವಯಸ್ಸನ್ನು ಮೀರಿದವಳು: "ಪುಷ್ಪಹೀನಾ, ನಿಷ್ಫಲಾ – ಈ ೨ ಮುಟ್ಟಿನ ಮಾತ್ವಾವಳ್" (ಕಹಾಯು. ೬೨-೩೩೩). [ಸಂ. ಪುಷ್ಪಹೀನಾ]

**ಪುಷ್ಪಾಂಜನ** (ನಾ). ಹಿತ್ತಾಳೆಯ ಭಸ್ಮದಿಂದ ತಯಾರಿಸಿದ ಒಂದು ಬಗೆಯ ನೇತ್ರಾಂಜನ,-ಕಣ್ಣಿಗೆ ಲೇಪಿಸುವ ಕಾಡಿಗೆ: "ಪುಷ್ಪಕೇತು– ಪುಷ್ಪಾಂಜನ" (೬ಕಂ. ೦೦೦). 'ಕುಸುಮಾಂಜನ' ಪರಾ. [ಸಂ.]

**ಪುಷ್ಪಾಂಜಲಿ, ಪುಷ್ಪಾಂಜಳಿ** (ನಾ). ೧. ಬೊಗಸೆಯ ತುಂಬ ಇರುವ ಹೂವು. ೨. ಬೊಗಸೆಯಲ್ಲಿ ಹೂವುಗಳನ್ನು ತಂದು ಅರ್ಪಿಸುವಿಕೆ; ೩ ನೃತ್ಯ, ನಾಟಕಪ್ರಯೋಗಗಳ ಆರಂಭದಲ್ಲಿ ರಂಗಪೂಜೆಯ ಅಂಗವಾಗಿ, ರಂಗಭೂಮಿಯ ಎಲ್ಲ ಭಾಗಗಳಿಗೂ ಬೊಗಸೆಯಿಂದ ಹೂವುಗಳನ್ನು ಚೆಲ್ಲುವ ಪರಿಪಾಟಿಯು 'ಪುಷ್ಪಾಂಜಲಿ' ಯೆನಿಸಿ ಕೊಂಡಿದೆ: ಕಂತು ಪುಷ್ಪಾಂಜಲಿಯಂ ಸೂಸಿದ ಪದದೊಳ್ ಸಭೆಗು ಸೂಸಿದನೊಡನೊಡನೆ ನನೆಯ ಮೊನೆಯಂಬುಗಳಂ (ಅಂಪು. ೬-೩೦); ಬಸವ ರಾಜಂ ನಲಿದು ಪುಷ್ಪಾಂಜಲಿಯನೀಯೆ (ಬಸ. ೬-೨೦); ನಾಟ್ಯಕಾರರು ಪುಷ್ಪಾಂಜಲಿಯೊಡನೆ ಪ್ರಾರಂಭಿಸುತ್ತಾರೆ (ಕಾಶ್ಚ. ೩೩೩). ಪುಷ್ಪಾಂಜಳಿ: ೨. ನಾಟ್ಯಾರಂಭಪ್ರಸ್ತುತಪವಿತ್ರಸೂತ್ರಧಾರನೆ ಮುಂದೆ ನಿಂದು ಪುಷ್ಪಾಂಜಳಿಯಂ ಕೆದಱಿ (ಶಾಂತಿಪು. ೦೦-೬೦ ವ); ಸುರದ್ರುಮಪುಷ್ಪಪ್ರಕರದೆ ರಂಗಮುಖದೊಳ್ ಮಾಡಿ ಮುಂದೆ ಪುಷ್ಪಾಂಜಳಿಯಂ (ಅಜಪು. ೩ ೬೦): ಇದು ಸಾಧ್ಯತಾಂಡವಾರಂಭದೊಳೆಸ್ತರಬಾಹುನರ್ತನಕ್ಷೇಪದೊಳೆನ್ನದ ಪುಷ್ಪಾಂಜಳಿಯೆನಲೇನುದಯಿಸಿದುದೊ ಗಗನದೊಳಗೆ ತಾರಾನಿಕರಂ (ಧರ್ಮಪು. ೫-೦೦೨). [ಸಂ.]

**ಪುಷ್ಪಾಂಜಳಿ** 'ಪುಷ್ಪಾಂಜಲಿ' ನೋ.

**ಪುಷ್ಪಾಂಜುಲಿ, ಪುಷ್ಪಾಂಜುಳಿ** (ನಾ). ೧. = ಪುಷ್ಪಾಂಜಲಿ ೧: ಒಲವು ಮಿಗೆ ಲಲಿತಾರ್ಘ್ಯಪುಷ್ಪಾಂಜುಲಿ[ಪಾಠಾಂ. ಳಿ]ಯನರ್ಪಿಸಿ (ಶಸಪು. ೬೦-೩೦). ೨. = ಪುಷ್ಪಾಂಜಲಿ ೨: ಒಲವಿನಿಂದಾ ಮೆಲ್ಲಡಿಗಳಂ ತೊಳೆದು ಪುಷ್ಪಾಂಜುಲಿ[ಪಾಠಾಂ.ಳಿ]ಗಳಂ ಕೈಗೊಳಿಸಿ (ಶಸಪು. ೩೨-೯೦); ಪುಷ್ಪಾಂಜುಳಿ: ೨. ಎರೆದರು ಪುಷ್ಪಾಂಜುಳಿಗಳ ಆಗ ಮೆರ್ಮಳೆಯಾಗೆ (ರಾಶಕ. ೯-೯). [< ಪುಷ್ಪಾಂಜಲಿ]

**ಪುಷ್ಪಾಂಜುಳಿ** 'ಪುಷ್ಪಾಂಜುಲಿ' ನೋ.

**ಪುಷ್ಪಾಪಚಯ** (ನಾ). ಗಿಡಬಳ್ಳಿಗಳಿಂದ ಹೂವುಗಳನ್ನು ಬಿಡಿಸುವುದು,–ಕಿತ್ತುಕೊಳ್ಳುವುದು: ಮೆ.ಭರತಂ ವನವಿಹಾರದೊಳೆ ತದೀಯಾಂತಃಪುರಾವರೋಧಜನಂ ಪುಷ್ಪಾಪಚಯಾಸಕ್ತಿಯಿಂ ವನಮಂ ತೊಟಲುತ್ತುಂ(ಆದಿಪು. ೯-೬೬ ವ); ಅಂತು ನಿರ್ವರ್ತಿತ ಪುಷ್ಪಾಪಚಯವಿನೋದರುಮಾಗಿ (ಪಾಪು. ೦೯-೯೯ವ). [ಪುಷ್ಪ+ಅಪಚಯ]

**ಪುಷ್ಪಾಯುಧ** (ನಾ). ಹೂವಿನ ಬಾಣಗಳನ್ನುಳ್ಳವನು; ಕಾಮ; ಮನ್ಮಥ: "ಮನಸಿಜಂ ಮನ್ಮಥಂ ಕಂದರ್ಪನಂಗಜಂ . . . ದರ್ಪಕಂ ಪುಷ್ಪಾಯುಧಂ" (ಮೊಗಾ. ೬-೩೨); ಪುಷ್ಪಾಯುಧನ ಕೋದ ಕೊಳ್ಗೊಳಸಂ ಪೋಲ್ತು ಪುಗೊಳದೊಳ್ ಸಾಜನ್ಯಕಂದಾಂಕುರನುಮಪ್ಪ ವಜ್ರಾಯುಧಂ . . . ಜಲಕ್ರೀಡಾವಿನೋದದೊಳಿರೆ (ಶಾಂತಿಪು. ೬-೯೭ ವ); ಅಂಗಜಾಗಿ ತ್ರಿಜಗಮುಮಿದಿರಿಲ್ಲೆಂಬಿನಂ ಪೂವಿನಂಬಂ ತಿರುವಾಯೊಳ್ಪೂಡಿ ಪುಷ್ಪಾಯುಧನಿರೆ ಕೆಲದೊಳ್ ಲೀಲೆಯಿಂ ಬಾಲೆಯಿರ್ಪಳ್ (ಚಗಾ. ೦೦-೦೬); ನೋಡು ನೋಡಿದು ಪುಷ್ಪಾಯುಧಪದ್ಮರಾಗಮುಕುರಪ್ರದ್ಯೋತವೋ . . . ಎಂಬ ಸಂಪದಮುಂ ಬೀಱಿದುದಿಂದ್ರದಿಗ್ವಿವರದೊಳ್ ಚಂದ್ರದ್ಯುತಿ ಪ್ರಾಭವಂ (ಗಿರಿ. ೯-೯೯). [ಸಂ.]

**ಪುಷ್ಪಾಯುಧಕೇಳಿ** (ನಾ). ಕಾಮಕೇಳಿ; ಸಂಭೋಗ: ಮತ್ತೀಯನಿಸಿ ಯಂಪುವೆತ್ತ ತುಟಿಯಂ ದಯೆಯಿಂದಮೆ ಪೀರ್ದಸಲ್ತೆ ಪುಷ್ಪಾಯುಧ ಕೇಳಿಯೊಳ್ (ಚ.ಕುಂ.ಕ. ೯೦-೦೫೦). [ಸಂ. ಪುಷ್ಪಾಯುಧಕೇಲಿ]

**ಪುಷ್ಪಾಯುಧವೈರಿ** (ನಾ). ಕಾಮನ ಶತ್ರು; ಶಿವ: ಪೊಱಮಟ್ಟ ದಟಂ ನಡೆಗೊಂಡಲ್ಲಿ ಪುಷ್ಪಾಯುಧವೈರಿಯಂಘ್ರಿಗಳನಾಂತರ್ದೆಯೊಳ್ಳಿಗೆ ರಾಜಶೇಖರಂ (ರಾಜಶೇ. ೦೯-೯೩). [ಸಂ. ಪುಷ್ಪಾಯುಧವೈರಿನ್]

**ಪುಷ್ಪಾರ್ಘ್ಯ** (ನಾ). ಹೂವುಗಳ ಕಾಣಿಕೆ,—ಅರ್ಘ್ಯ: ಬಂದಿ ದಿಗ್ರೊರ್ಕ್ಕಿಂತಾಯ್ತು ಕಲ್ಪಕ್ಷಿತಿರುಹಜಪುಷ್ಪಾರ್ಘ್ಯದಿಂದೆಂಬಿನಂ ಚೆಲ್ವಿದ ರ್ಗೋಡಶ್ರಿಂವೃಶ್ಚಿಕತಿಶಯಮಹಿಮಂ ಬಾದೊಡಂದಾದಿದೇವಂ (ಅಂಪು. ೬-೬೨). [ಸಂ.]

**ಪುಷ್ಪಾಸವ** (ನಾ). ಹೂವಿನ ರಸ; ಜೇನು; ಮಕರಂದ: ಕೀರಸ್ಥ ಲವಂಗಚೂತಲವಲೀಪುಷ್ಪಾಸವಾಸ್ವಾದಿತಾಲಿಯುತೋನ್ನಾದೆಯು . . . ಸೀತೋದೆಯು ಪೋಲ್ವೆಗಿಲ್ಲ ತೊಱೆಗಳ್ ವಿಶ್ವಂಭರಾಭಾಗದೊಳ್ (ಅಂಪು. ೦-೩೯); ಪುಷ್ಪಾಸವವನ್ನು ಳಿಯುವ ತೊತ್ತಿನ ಕೂಸಾದ ಈ ದುರುದುಂಬಿ ತುಂಬಿಯು ಪೂಜ್ಯಳಾದ ಈಕೆಯ ಮುಖಕ್ಕೆ ಎರಗುವುದು (ಶಾಕುಂತ. ೯೦-೦೬). [ಸಂ.]

**ಪುಷ್ಪಾಸಾರ** (ನಾ). ಹೂಮಳೆ; ಪುಷ್ಪವೃಷ್ಟಿ: ನುತ ಪುಷ್ಪಾಸಾರ ಮುಂದ್ದದ್ದಿ ವಿಜಯನಿನಾದಂ . . . ಚಾರುಸಿಂಹಾಸನಮನೆ ನೆಗಳ್ದೀ ಪ್ರಾತಿಹಾರ್ಯಾಷ್ಟಕಂ ವಿಶ್ರುತಮಾಗಿರ್ಕುಂ ಸುರೇಂದ್ರೋಪಕೃತಮೆನಿಸಿ (ಸುಕುಮಾ. ೯-೩೦). [ಸಂ.]

**ಪುಷ್ಪಾಸ್ತ್ರ** (ನಾ). ೧. (ಕಾಮನ) ಹೂವಿನ ಬಾಣ: ಇದು ನಿನ್ನಚರ್ಚಿಸು ವಿಕ್ರಮಚಾಪಮಿದು ನಿನ್ನೀ ಲೋಕಮಂ ಕೈಗೆ ಮಾಡಿದ ಪುಷ್ಪಾಸ್ತ್ರಂ (ಅಂಪು. ೦೦-೦೬). ೨. ಕಾಮ; ಮನ್ಮಥ. [ಸಂ.]

**ಪುಷ್ಪಿಣೆ** (ನಾ). ೧. ಹೂವು ಬಿಟ್ಟಿದ್ದು; ಹೂತುದು. ೨. ಮುಟ್ಟಾದವಳು; ಋತುಮತಿ: "ಪುಷ್ಪಿಣೀ–ರಜಸ್ವಲ" (ಶಾಕ್ಯ. ೦೬೩). ೧, ೨: ಅವಗಂ ಪುಷ್ಪಿಣಿಯರಾಗಿರ್ವರಿಲ್ಲಿಯ ಲತಾವಧುಗಳಿವರ ಸೋಂಕಲೆ ಬಾರದೆಂದು ರಾಜೀವಮಿತ್ರಂ ತನ್ನ ನಿರ್ಮಲಕರಂಗಳಿಂ ಪೆಱ ದೆಗೆದಂ (ಶ್ರೀಪಾಶಾ. ೬-೨೩). [ಸಂ. ಪುಷ್ಪಿಣೀ]

**ಪುಷ್ಪಿತ** (ಗು). ೧. ಹೂವು ಬಿಟ್ಟ; ಹೂವರಳಿದ: ಎಂದನು ಸೌಮಿತ್ರಿ . . . ವಿರಳ ವರ್ಣದ್ರುಮದ ಪುಷ್ಪಿತಶರೀರದಾ ಸ್ವರ್ಗಚುಂಬಿತಸಾಲಮುನ್ನತ ಶಿರದ ಕರದ ಗೋಪುರಕೆ (ಶ್ರೀರಾಮಾ. ೦೫೬-೦೯೬). (ನಾ). ೨. ಹೂವು ಬಿಟ್ಟದು; ಹೂತುದು: ಒದೆದಶೋಕೆಯಂ ಬಕುಳಮಂ ಮುಕ್ಕುಳಿಸಿ ಮುದ್ದದಿಂದೆ . . . ಪುಷ್ಪಿತಂ ಮಾಡಿ ತೋಱಿದರಂಬುಜಾಕ್ಷಿಯರ್ (ಕೃಪಿಶಾ. ೮-೦೬). [ಸಂ.]

**ಪುಷ್ಪಿತಾಗ್ರ** (ನಾ). [ಛಂದ] ಅರ್ಧಸಮವಾದ ಅಕ್ಷರವೃತ್ತಗಳಲ್ಲಿ ಒಂದು: ಪುಷ್ಪಿತಾಗ್ರ–ಇದರ ವಿಷಮಪಾದಗಳಲ್ಲಿ ನನರಯ ಗಣಗಳೂ ಸಮಪಾದಗಳಲ್ಲಿ ನಜಜರ ಗಣಗಳೂ ಒಂದು ಗುರುವೂ ಬರುವುವು (ಕೃಪಿಶಾ. ೯೯). [ಸಂ. ಪುಷ್ಪಿತಾಗ್ರಾ]

**ಪುಷ್ಪಿತೆ** (ನಾ). =ಪುಷ್ಪಿಣೆ ೨: "ತುಱುಮಿಂದಿಯೊಂದು ಪುಷ್ಪಿತಯಾದ ಕಾಂತೆ" (ಶಕಶಾ. ೬೨-೩೬೨); ಮೈನೆರೆಯದೆ ಬಹುಕಾಲ ಕಳೆದ ಸ್ತ್ರೀಯು ಈ

ಚೂರ್ಣವಂ ಸೇವಿಸೆ ಪುಷ್ಪಿತೆಯಹಳು (ಸಶಪ್ರ. ೧೯೬). [ಸಂ. ಪುಷ್ಪಿತಾ]

**ಪುಷ್ಪಿಸು** (ಕ್ರಿ). ಹೂವು ಬಿಡು; ಪುಷ್ಪಿತವಾಗು : ಅಲಕ್ತಕರಂಜಿತವಾದ ಚರಣಸ್ಪರ್ಶದ ಮಹಿಮೆಯಿಂದ ಪುಷ್ಪಿಸಿ ಸರ್ವದಾ ಪರಿಮಳಯುಕ್ತವಾಗಿರುವುದಾಯಿತು (ಶಾಗಂಂ. ೨೬೨-೦೬); ಪುಷ್ಪಿಸಿದ, ಮರಗಳ ಮಧ್ಯದಲ್ಲಿ ಪರಾವಸುವಿನ ಹೆಂಡತಿ ತನಿಯಾಗಿ ನಡೆಯುತ್ತಾ ಇದ್ದಳು (ಪ್ರಸತಿ. ೦೭೦). [ಪುಷ್ಪ + – ಇಸು$_1$]

**ಪುಷ್ಪೇಷು** (ನಾ). ೧. (ಕಾಮನ) ಹೂವಿನ ಬಾಣ : ಇವು ಕಂದರ್ಪಂಗೆ ದೋರ್ದರ್ಪವಂ . . . ಅಡಂಗುಗುಂ ತಮ್ಮ ಪುಷ್ಪೇಷುವಿಂ ತಮ್ಮ ವಿಕಾಸೋಲ್ಲಾಸದಿಂ ತಮ್ಮ ಕಿಪರಿಮಳದಿಂ ತಮ್ಮ ಚೆಲ್ವಿಂದೆನಲ್ ಜಾತಿವನೇಜಾತಪ್ರಸೂನಾವಳಿಯನಿಟ್ಟಿಸಿ ಸಂಪತ್ಸುಮತ್ತಿರ್ದುದೆತ್ತಂ (ಜಗಂ. ೯-೬೩). ೨. ಕಾಮ; ಮನ್ಮಥ : ಅದೆ ಕಂದರ್ಪಂಗೆ ದೋರ್ದರ್ಪದ ಮೊದಲದೆ ಪುಷ್ಪೇಷುಗೀ ಲೋಕಮಂ ಗೆಲ್ವದಟೆಂದತ್ತಿರ್ಪ ಚೈತ್ರಧ್ವಜಾ (ಅತಿಪು. ೨-೯೬). [ ಸಂ. ]

**ಪುಷ್ಯ** (ನಾ). ೧. ಹೂವು; ಪುಷ್ಪ. ೨. ಪುಷ್ಯರಾಗವೆಂಬ ರತ್ನ. ೩. ಚಾಂದ್ರಮಾನತಿಂಗಳುಗಳಲ್ಲಿ ಹತ್ತನೆಯದು : ಅಮರ್ದಿರೆ ಪುಷ್ಯ ಪೂರ್ಣಿಮೆಯೊಳಂ ನಯಮಂತಕಿಶುದ್ಧಮಪ್ಪ ಕುಂಕುಮಮನ ಪೂರ್ವಮಪ್ಪ ಫಲಮಂ . . . ಪಿಡಿದಿರ್ದ ಮಾಜಿಲಾ ಕ್ರಮದೊಳಗಿರ್ಕ್ಕ ಮಾಜಿನೆಯ ತಿಂಗಳೊಳಯ್ದಿಡಿಲಾಭಮಾತ್ರಮಂ (ಅಭಿಜಿ. ೬-೯೦): ಆ ಮಾಸವೇ ಚೈತ್ರ ವೈಶಾಖ . . . ಪುಷ್ಯ ಮಾಘ ಫಾಲ್ಗುಣವೆಂದು ಹನ್ನೆರಡು ತಿಂಗಳಾಗಿಹುದು (ಶಿವೇಕ. ೩೨೦); ಪುಷ್ಯಪ್ರಘಾತದೊಳ್ ಕ್ರೌಂಚ ಪಕ್ಷಿಯ ಪಂಕ್ತಿ ನೆರೆದು . . . ದನಿಸಂತೆಗೈವಂತೆವೋಲ್ ! (ಶ್ರೀರಾಮಾ. ೯೦. ೩೩೯). ೪. ಪೂಜೆ ; ಅರ್ಚನೆ. ೫. ಬೆಲೆ; ಕ್ರಯ. ೬. ಶೂನ್ಯ; ಅಮಂಗಳ : "ಬೆಲೆ ಶೂನ್ಯ ಮಾಸ ತಾರಕ ಕಲು ಪೂಜೆಯುಮಾಜಿ ಪುಷ್ಯ ಶಬ್ದಮದಕ್ಕುಂ" (ನಾನಾಕಂ. ೦೩೨); "ಶಿಳೆಯುಂ ತಾರಗೆ ಮಾಸಭೇದ ಬೆಲೆಶೂನ್ಯಂ ಪುಷ್ಯಮಕ್ಕುಂ" (ನಾನಾರ. ೦೩೦). ೭. [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಎಂಟನೆಯದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : "ಪುಷ್ಯಂ ತಿಷ್ಯಮೆಂದೆನಿಕ್ಕುಂ" (ಮಂಗರಾ. ೦೨-೬); ಪುಷ್ಯ ಅಂಗೀರಸ ತಿಷ್ಯಂ ವಾಚಸ್ಪತಿ ಬೃಹಸ್ಪತಿ—ಈ ೫ ಪುಷ್ಯನಕ್ಷತ್ರಕೆ ಹೆಸರು (ಚಾಸ್ಯರ. ೬೨-೦); ಪುಷ್ಯ ಪುಸಿಯದ ಕಾಳೆ (ಗಾದೆ). [ ಸಂ. ]

**ಪುಷ್ಯಮಾಸ** (ನಾ). ೧.=ಪುಷ್ಯ ೩: "ಪುಷ್ಯಮಾಸವುಂ ಸಹಸ್ಯವೆಂಬುದು" (ಹಲಾಯು. ೦೯-೦೦೬). ೨. ಮಂಗಳಕಾರ್ಯಗಳು ನಡೆಯದ ತಿಂಗಳು; ಶೂನ್ಯಮಾಸ : ಪುಷ್ಯಮಾಸವೆಂದರೆ ಶೂನ್ಯಮಾಸ. ಮಂಗಳಕಾರ್ಯಗಳಿಗೆ ಪ್ರಶಸ್ತವಲ್ಲದ ತಿಂಗಳು (ರೂಢಿ). [ ಸಂ. ]

**ಪುಷ್ಯಮಿ** (ನಾ). ೧.=ಪುಷ್ಯ ೭ : ಆ ಖಗೋಳದಲ್ಲಿ ಅಶ್ವಿನಿ ಭರಣಿ ಕೃತ್ತಿಕಾ ರೋಹಿಣಿ ಮೃಗಶಿರಾ ಆರ್ದ್ರಾ ಪುನರ್ವಸು ಪುಷ್ಯಮಿ . . . ರೇವತಿಗಳೆಂಬಿಪ್ಪತ್ತೇಳು ತಾರೆಗಳು (ಶಿವೇಕ. ೨೩೯); ಕಟಕದ ದೇಹವೇ ನಮ್ಮ ಪುಷ್ಯಮಿನಕ್ಷತ್ರ (ಪಕ್ಷಿಕ್ರ. ೬೩); (ಎಸಕ್ರ್ಯ. XV. ೩೦). 'ಪಾಡ್ಯಮಿ' ಪರಾ. [< ಪುಷ್ಯ]

**ಪುಷ್ಯರಾಗ** (ನಾ). ೧. ಹಳದಿಬಣ್ಣದ ಒಂದು ಬಗೆಯ ರತ್ನ : "ಪೀತಕಾಂತಮೆನೆ ಪುಷ್ಯಲಾಗಂ" (ಮಂಗರಾ. ೩೦-೬); ವಜ್ರದ ಕಂಬ ವಿದ್ರುಮದ ತೊಲೆ ಪುಷ್ಯರಾಗವೊಪ್ಪುವ ಜಂತೆ ಮರಕತದ ಲೋವೆ ಮುತ್ತಿನ ಸೂಸಕ (ಹಕೀಾ. ೯-೬); ಸಲೆ ಪುಷ್ಯರಾಗದ ತೊಲೆಗಳೆಸೆವ ಮಾಣಿಕಂಗಳ ಲೋವೆ ಮುತ್ತುಗಳ ಸೂಸಕಂ . . . ರಂಜಿಸುತು ಚಾವಡಿಯ ಚೌರಸದೆಡೆಯೊಳು (ಕೃಶಾಶಾ. ೦೬-೨೩). ೨. ಒಂದು ಕುಲಪರ್ವತದ ಹೆಸರು : ಶಂಖಕೂಟ . . . ಪುಷ್ಯರಾಗ . . . ಶೈಲೇಂದ್ರಮೆಂಬ ಹದಿನೇಳು ಕುಲಗೋತ್ರಂಗಳೇ ಪೂರ್ವೋಕ್ತ ಸುಪಾರ್ಶ್ವವೆಂಬ ಕೀಲಕ ಪರ್ವತಕ್ಕೆ ಬಡಗಣದಿಕ್ಕಿನಲ್ಲಿಹವು (ಶಿವೇಕ. ೨೦೬). [ ಸಂ. ]

**ಪುಸ್** (ನಾ). ಒಂದು ಅನುಕರಣ ಪದ : ಮಳೆ ಬಂದು ಪಟಾಕಿಗಳೆಲ್ಲ 'ಪುಸ್' ಎಂದುವು (ರೂಢಿ).

**ಪುಸಕಿ** (ನಾ). ಕೈಲಾಗದವನು ; ದುರ್ಬಲ : ಹೋಗೋ ಲೇ. ಹೋಗೋ . . . ಕರೀ ಕುರಿೀ. ಹೆಣ್ಣಾ ಪುಸಕೀ. ಕೈಲಾಗದವನೇ ! (ಪಕಿರಾ. I, ೩೨೩). [← ಮರಾ. ಪುಸಕಾ]

**ಪುಸಕ್ಕನೆ** (ಅ). ಕೂಡಲೆ ; ಒಮ್ಮೆಲೆ ; ಒಮ್ಮಿಂದೊಮ್ಮೆಲೆ : ನಿನ್ನವ್ವ ಮನೇಲೇ ಇರಬಹುದಾಗಿತ್ತು. ಪುಸಕ್ಕನೆ ತೌರುಮನೆಗೆ ಹೊರಟುಹೋದರು (ಕಂಕಕಾ. ೯೧). [ಪುಸಕ್$_0$ + – ಅನೆ$_1$]

**ಪುಸಲತ್ತು**, ಪುಸಲತ್ತು (ನಾ). ೧. (ಉಕ) ಸಲಿಗೆ ; ಸದರ. ೨. ಬೆಂಬಲ ; ನೆರವು ; ಪ್ರೋತ್ಸಾಹ : ನಿನ್ನ ಪುಸಲತ್ತಿನಿಂದಲೇ ಈ ನಿನ್ನ ಬಂಧುವು ನನಗೆ ಕುಚೇಷ್ಟೆ ಮಾಡುತ್ತಿರುವನು (ಕುಳಕಿ. ೪೬) ; ಅತ್ತೆಯವರು ತಾವಾಗಿ ಹೆಂಗ ಇರವಲ್ಲರ್ಯಾಕ. ನೀವೂ ಅಷ್ಟು ಪುಸಲತ್ತು ಕೊಟ್ಟು ನನ್ನ ಕಿರಿಭಾವಿ ಪಾಲಾಗೂ ಹಂಗ ಮಾಡಬ್ಯಾಡಿರಿ (ಗಂಡಾಳು. ೦೩೩). **ಪುಸಲತ್ತು**: ೨. ಅಕೆಗೆ ನಿಮ್ಮ ಗೆಳತಿಯರ ಪುಸಲತ್ತು ಬಹಳ ಅದ (ಚಾತ್ರಗ್ಯ. ೬೮) ; ಗಂಡನ ಪುಸಲತ್ತು ಇದೆ. ಆದಕ್ಕೆಂತಲೇ ಪಾರ್ವತಿ ಹೀಗೆ ಮಾಡುವಳು (ಪಟ್ಟಹೂ. ೬೦). [←ಹಿಂ. ಪುಸಲಾನಾ=ಸವಿಮಾತುಗಳಿಂದ ಮನವೊಲಿಸು]

**ಪುಸಲಾಯಿಸು** (ಕ್ರಿ). ೧. ಸವಿಮಾತುಗಳಿಂದ ಮನವೊಲಿಸು,– ಪ್ರೇರಿಸು : ನಾವು ಇದಕ್ಕೂ ಸೊಗಸಾದ ಮತ್ತೊಂದು ಊರಿಗೆ ಹೋಗೋಣವೆಂದು ಮೆಲ್ಲನೆ ಪುಸಲಾಯಿಸುವನು (ಚಾತ್ರ. ೬) ; ರಾಜಣ್ಣ ಗೋಗರೆಯುವ ದನಿಯಲ್ಲಿ ಪ್ರಮೀಳಳನ್ನು ಪುಸಲಾಯಿಸತೊಡಗಿದ (ಮರೀ. ೩೬). ೨. ಎತ್ತಿ ಹಾಕು ; ಕಳವು ಮಾಡು : ಮನೆಮಕ್ಕಳು ಅಟ್ಟದ ಮೇಲಣ ಡಬ್ಬದಿಂದ ಲಾಡುಗಳನ್ನು ಪುಸಲಾಯಿಸಲು ಸದ್ದಿಲ್ಲದೆ ಮೆಲ್ಲಮೆಲ್ಲನೆ ಹೆಜ್ಜೆ ಹಾಕಿ ಹೋಗುವಂತೆ, ನಾವಿಬ್ಬರೂ ಕ್ಲಬ್ಬಿಗೆ ಹೋಗಲು ಸದ್ದಿಲ್ಲದೆ ಹೆಜ್ಜೆಯನ್ನು ಹಾಕಲು ಪ್ರಾರಂಭಿಸಿದೆವು (ಪಕಿರಾ. II, ೬೮೦). [ ಪುಸಲಾ$_0$ (೯ ← ಹಿಂ. ಪುಸಲಾನಾ) + – ಇಸು$_1$]

**ಪುಸಲಾವಣೆ** (ನಾ). ಸವಿಮಾತುಗಳನ್ನಾಡಿ ವಶಪಡಿಸಿಕೊಳ್ಳುವಿಕೆ,— ತನ್ನ ಪಕ್ಷಕ್ಕೆ ಸೇರಿಸಿಕೊಳ್ಳುವಿಕೆ : ಅವರ ಪುಸಲಾವಣೆಗೆ ಮರುಳಾದವನಂತೆ ನಟಿಸಿ, ಅವರ ಮಾತನ್ನೆಲ್ಲಾ ಕೇಳಿ ನನಗೆ ವರದಿ ಮಾಡಬೇಕು (ಕಿಂಪ. ೦೦೦); ಇದೆಲ್ಲ ಎರಡನೆಯವರ ಪುಸಲಾವಣೆಯ ಫಲ (ಶ್ರೀಶಾಕ್ರ. ೯೨); ಈ ಪುಸಲಾವಣೆಯ ವಿಷಯವನ್ನು ಇವರು ತಮ್ಮ ನಿಶೆಯ ಗುಂಗಿನಲ್ಲಿ ಸಾಹೇಬಡನರಿಗೆ ಹೇಳಿದರೆ ಎಲ್ಲ ದೋಷ ನಿಮ್ಮ ಮೇಲಲ್ಲವೇ ? (ಚಾರಿತಿ. ೬೦). [ಪುಸಲಾಯಿಸು + – ಅಣೆ$_1$/ಮರಾ. ಪುಸಲಾವಣೀ]

**ಪುಸಿ$_1$**, ಹುಸಿ$_1$ (ಕ್ರಿ). ೧. ಸುಳ್ಳಾಗು ; ನಿಷ್ಫಲವಾಗು ; ವ್ಯರ್ಥವಾಗು : ಪುಸಿಗುವೆ ದೇವ ಮಂತ್ರಮಾಲೆಲೋಹಿವಿಜಯ ಎಂಬೀ ವಾಕ್ಯಂ (ಕಂಶಕಂ. ೨೦೦-೯); ಋಷಿಗಳಾಡಿದ ಮಾತು ಪುಸಿಯದು (ಕೃಖಶಾ. ೩೦-೩೬); ಶಿವನ ಬೆಸನದು ಪುಸಿವುದೇ (ಪವಮೋ. ೯-೩೮). ೨. ಕೊಟ್ಟ ಮಾತಿಗೆ ತಪ್ಪು ; ಕೈಕೊಂಡ ಪ್ರತಿಜ್ಞೆಯನ್ನು ಈಡೇರಿಸದಿರು ; ವಚನಭಂಗ ಮಾಡು : ಚಾಳುಕ್ಯವಂಶದೊಳೆಲ್ಲಿಯುಮಿನ್ನವರೆಗಂ ನುಡಿದು ಪುಸಿವುದುಂ ಆಡಿ ಅಳುವುವುದುಂ . . . ಕನಸಿನೊಳಪ್ಪೊಡಮಿಲ್ಲಂ (ಗದಾಯು. ೨-೬ ವ): ಖನ್ನಾಳಿ ವಾಸುದೇವ ಮೂಳಭದ್ರೋದ್ಭವನ್ ನುಡಿದು ಪುಸಿಯುತ್ತಿರ್ದಟ್ಟಿ ಲಿಂಗಿಯುಂ ಮಹಾಸಮುದ್ರದನ್ತೆ ಮೇರೆದಪ್ಪಬ್ಬಲದಲ್ ಮಹೇಶ್ವರನನ್ನರ್ (ಎಕ. IV. ಹೆಗ್ಗಡ. ೦೬-೦೨ ; 1033) ; ವಂಚಕನಂ ನುಡಿದು ಪುಸಿವನಂ ಸಂಗರದೊಳ್ ಹಿಂಚುವನಂ ಪುಟುಗೊಂಡದ ಸಂಚದೊಳ್ಕ್ಯಾವ ಕಾಲಮೇಲದ ತಲಿವಿಂ (ದಕಕು. ೩-೦೮). ೩. ಸುಳ್ಳು ಹೇಳು ; ಅಸತ್ಯವನ್ನು ನುಡಿ: ಪುಸಿಯುದುದು ಪರಾಂಗನೆಗಾಟಸಿದುದು ಕೊಲ್ಲದುದು

ಕೊಳ್ಳಲಣ್ಮದ ವ್ಯಾಳದೊಂಬ ಕುಂಟಣಿಗೆ ಮಾಱುವುದುಂ (ರಸಾಣ್ಣ. ೩-೦೨೩).
**ಹುಳುಕು :** ೧. ಬಲ್ಪುವತ್ರವಂ ಹುಳುಕುಯಿಲ್ಲದೆ ಕೋಮಲವಾಗಿಯಿರುವುದಂ ನೋಡಿ ಸಂಗ್ರಹಿಸಿ ನನಗೆ ಸಮರ್ಪಿಸಲು ಕೋಟಿಯಜ್ಞವಂ ಮಾಡಿದ ಫಲವು ಲಭಿಸುವುದು (ಶಿಗುಂ. ೩೮೦-೩); ಪಕ್ಕಳ ಮನಸ್ಸು . . . ಹುಳುಕು, ಕೊಳಕಾಗಿ, ಕೇಡೋಹೀನವಾಗಿ ಅಪವಿತ್ರವಾಗಬಹುದು (ಜ್ಞಾಸುಕಾ. ೪). ೨. ಖಳರ ಹೃದಯದ ಕಾಳಕೂಟದ ಹುಳುಕು ಬಲ್ಲರೆ ಮಾನ್ಯರು (ಕುವ್ಯಾ. ೦೩-೦೪) : ಹೊಳಲು ಬೇವಂದಿವಸ ಮಂದಿರವೆಳದು ದಂದೇ ಅಜಿತ ನಿನ್ನಯ ಹುಳೋನೆಲವೋ ನಿನ್ನ ರಾವನ ಕೊಂಡು ಬಾಯೆಂಬ (ಕೌತಾ. ೦೪-೩೪). (ನಾ). ೬. ಕುಂದು; ದೋಷ; ಲೋಪ; ತಪ್ಪು : ಭ್ರಷ್ಟನಾದ ನೀನು ಮತ್ತೊಬ್ಬರ ಹುಳುಕನ್ನು ಹುಡುಕಿಕೊಂಡು ಹೋಗುತೀಯೆ (ಶೀತಿಶಾ. XIII. ೦೩) : ಕುಳಿತರೆ ನಿಂತರೆ ಹುಳುಕನೆ ಬಗೆವೆ (ಒಂಬು. ೨೬-೬). [< ಪುಬು]

**ಪುಟುವಗೆ,** ಪುಳುವಗೆ (ನಾ). ಹೀನವಾದ ವಿಚಾರ ; ಕ್ಷುದ್ರವಾದ ಯೋಚನೆ : ಕೃತಾಂತಂ ಬಗೆದಂ ಪೆಱತೊಂದನಾರ ಪುಟುವಗೆಯುವಂ ಬಗೆಯದಿರೆ ನಿಮಿರ್ಗುವತಂ ಬಗೆದೊಡೆ ಬಗೆದಂತೆ ಬಗೆದ ಬಗೆ ನಿವಿರ್ದ ಪುದೇ (ಶಾಂತಿಪು. ೩-೦೦) : ಇಂತಪ್ಪ ದಲ್ಲವಂ ನೀನಱಿದಿರ್ದನ್ನುವಂ ಸಾಕ್ಷಿ ಮಾಡಿ ನುಡಿಸಿ ಕೆಡಿಸಲ್ಬಗೆದ ನಿನ್ನ ಪುಟುವಗೆ ಪೆಮ್ಮ ಕುಲಮನೆಲ್ಲವನಟಲ್ವ ಬಗೆ (ಶುಕಶಂ. ೦೩೩-೬) ; ಬಟ್ಟೆಯಟ್ಟ ಬಾರದು ಮುನ್ನಂ ಪುಟುವಗೆಗೊಳಗಾದಳೆಂದು ಸಾವಾಸಿಗಳಂ ಕಟ್ಟಿದನೆಲ್ಲಂ ತಲೆಯಂ ಬಟ್ಟಿಯಟ್ಟಿದನೆಂದು ಪೋದುದಸು ಶಶಿಮುಖಿಯು (ಅಂಶು. ೦೨ ೩). **ಪುಳುವಗೆ :** ಪುಸಿ ಪೃಥಿವಿಗೆ ಪುಳುವಗೆಯಾ ಪುಸಿ ನರಕದ ಕಾರಾಗಾರ ಪುಸಿ ಪುಳುವಿನ ಕೊಡಕೆ ಸಂಗಡಂ (ಜಯುಕಾ. ೦೦-೦೦). [ಪುಟು + ಬಗೆ]

**ಪುಟುವಚ್ಚೆ,** ಪುಳುವಚ್ಚೆ (ನಾ). ದುಂಬಿಯ ಹಸುರುಬಣ್ಣದ ರೆಕ್ಕೆ. **ಪುಳುವಚ್ಚೆ :**

**ಪುಟುವಚ್ಚೆಯ ಬೊಟ್ಟು, ಪುಳುವಚ್ಚೆಯ ಬೊಟ್ಟು** = ದುಂಬಿಯ ಹಸುರು ಬಣ್ಣದ ರೆಕ್ಕೆಯ ತಿಲಕ : ಕೇತಕಿಪತ್ರದೋಳೆ ಗುರುಗುಂಜಿಯ ದಂಡೆ ಕಳಾಪಗುಣಂ ಸಯ್ತೊಳವಲ್ಲ ಬಂದಿ ಪುಟುವಚ್ಚೆಯ ಬೊಟ್ಟು ವನಾಂತವಪ್ಪದಿಂ ಬೋತ ತಟಂಬು (ಮಲ್ಲಿಕಾ. ೪-೯೩); ಪ್ರಮಾಳಮಂಜರಿ ದುವತಂಸಮುಚ್ಚ ಪುಳುವಚ್ಚೆ[ಪಾಠಾಂ. ಪಱುವಚ್ಚೆ]ಯ ಬೊಟ್ಟುಮರಲ್ಮೆ ಬಿಲ್ಲರಿವೆರಸಿ ಕಿರಾತೆಯಾದ ಶಿವಮೋಹಿನಿ ರಕ್ಷಿಸಲಬ್ಬ ಜಾಂಡವಂ (ಶಬರಶಂ. ೨-೯೬); ಸುಡಿಮುತ್ತುಳದೆಳಲವರೆ ತಾಳ್ದ ಪುಳುವಚ್ಚೆಯ ಬೊಟ್ಟು . . . ಒಪ್ಪಿರೆ ಪುಳಿಂದಿಯರಾದರುಮತ್ಕಾಂತೆಯರ್ (ಕಶಂ. ೩-೯).

[ ಪುಟು+ಪಚ್ಚೆ, (<ಪಸ್ಸು) ]

**ಪುಟುವಾನಸ,** ಪುಟುವಾನಿಸ (ನಾ). ಕ್ಷುದ್ರಮನುಷ್ಯ ; ಅಲ್ಪನಾದ ವ್ಯಕ್ತಿ : ಸಂಪನ್ನಯೋಗನಿಯೋಗದಿಂದಮರಣ್ಯದೊಳ್ ನೆಲಸಿರ್ದಗಾಲ್ ಬನ್ನಮಿಲ್ಲದೆ ಬಾಳ್ವುದೇಂ ಪುಟುವಾನಸಂಗೆನಗಕ್ಕುಮೇ (ಕ.ಶಾ. ೯-೧೭), ಏಶ್ವಮೆಲ್ಲಂ ನಿನ್ನಾಣತಿಯೊಳಿರ್ಪಿನಂ ಪುಟುವಾನಸರ್ ದೂಱಲಾರ್ಪರೆ! (ಶಾಪುಕ್ಕ. ೩೪-೦) ; ಪುಟುವಾನಸರ್ ಇನ್ನೆಗಂ ರಕ್ಕಸರೊಳ್ ಪೋರ್ದ ಗೆಲ್ಲಂಗೊಂಡುದುಂಟೇ! (ಅಭ್ಯ. ಕ. ೯೭-೨೨). **ಪುಟುವಾನಿಸ :** ಪದಪದವಾಗಿ ಪಾಂಗಱಿದು ಬರ್ದುಂಬರಂ ತನಗಾಗುಮಾದರಂಱದೆಯುಮುಂಡೆಪು ಪೋಗೆ ಕುದಿಲಾಱದೆಯುಂ ಜಸವಂ ನಿವಿರ್ಚಲಾಱದೆಯುಮುದೇತೊ ಶಿವನ್ನನೆ ಕೆಲರ್ ಪುಟುವಾನಿಸರಕ್ಕಟಾ ಚದುರ್ ಚದುರೆನುತಿರ್ಪರ್(ಸೂಕ್ತಿಸು. ೬-೩೩೩).

[ಪುಟು+ಮಾನಸ್ಸ (<ಮನುಸ)]

**ಪುಟುವಾನಿಸ** 'ಪುಟುಮಾನಸ' ನೋ.

**ಪುಟ್ಟಿಲೂರ್** (ನಾ). ಒಂದು ಊರಿನ ಹೆಸರು : ಪುಟ್ಟಿಲೂರ್ ದೋಮಪ್ಪ ಪುತ್ರ ಪಾಸುಕರ್ದಿಗ (ಎಕ. VII. ೦೬೭-೪೦ ; ೦೦೩). 'ಪುಟಿಲೂರ್' ಪರಾ. [? + ಊರ್]

**ಪುಟ್ಟಿ,** ಪುಗ್ಗಿ, ಪುರ್ಗಿ, ಪುಳ್ಗಿ, ಪುಳ್ಗೆ, ಹುಗ್ಗಿ, ಹಂಗ್ಗೆ (ನಾ) ೧. ಅಕ್ಕಿಯೊಡನೆ ಹೆಸರು ಮೊದಲಾದ ಬೇಳೆಗಳನ್ನೂ ಇತರ ಪರಿಕರಗಳನ್ನೂ ಸೇರಿಸಿ ಮಾಡಿದ ಕಾರ ಅಥವಾ ಸಿಹಿಯ ಒಂದು ಬಗೆಯ ಅನ್ನ ; ಪೊಂಗಲ್ : "ಪುಟ್ಟಿ — ಉದುರ್ ತೊವರಿ ಹೆಸರು ಮೊದಲಾಮುವನಿಕ್ಕಿ ಅಟ್ಟ ಕೂಟು" (ಕಮುದ. ಕಂ. ೨೪೪) ; "ಪುಟ್ಟಿಯೆನಲ್ ಮುದ್ಗಾನ್ನಂ" (ಕರ್ಣಾಶ. ೬೬); ಕಿಱುಕಿಱುದಾಗಿರೆ ಮೆಯ್ಯಂ ಕೊಱಕೊಱದುಂ ಪುಟ್ಟಿಯಟ್ಟು . . . ಕಿಚ್ಚಿನೊಳಿಡುವರ್ (ರಸಾಣ್ಣ. ೩-೩೪) ; ಇದು ಮೊದಲಾಗೆ ಬಿನ್ನನೆ ನಿನ್ನನೆ ಕರೆವೆಡೆಯೊಳಂ ತಿಂಬ ಪುಟ್ಟಿಯೊಳೊಗ್ಗರಿಸಿದ ಕಡಲೆಯಂತೆತೆಗೆಡೆಗೆ ಬಾಯ್ಗೆ ಱುವಂದಪುದ್ದೆಸೆ (ಶಾಪುಕ್ಕ. ೦೩೪-೦೩).
**ಪುಗ್ಗಿ :** ೧. ಪುರ್ಗಿ — ಪುಗ್ಗಿ (ಕಮುತ. ೨೬೦ ಕೃಯೋ) ; ಮಳಲ ಪುಗ್ಗಿಯೊಳಱುವರೆ ಕಲ್ಗಳನು ನಿಂಬೆಯ ಪಣ್ಣನೊಳು ಕಡುಪುಳಿಯು ನೋಳ್ಪರೆ ಬೇವಿನೊಳು ಕಹಿಯಂ ವಿಚಾರಿಪರೆ (ಕಂಕಾ. ೬. ೬). **ಪುರ್ಗಿ :** ೨. (ಉಕ) ಗೋದಿಯನ್ನು ನೆನಸಿ ಬೆಲ್ಲದೊಡನೆ ಕುದಿಸಿ ಮಾಡುವ ಪಾಯಸದಂತಹ ಒಂದು ಬಗೆಯ ಪಕ್ವಾನ್ನ: ತನ್ನುರು ರಸನೆಗುರು ಸವಿಯದಾಗಲಾ ಪುರ್ಗಿಯು ಮುಟ್ಟಿ ಸದ್ಯಸ್ಸುದಿಂದೆ ಪರ ಭೀಮನಾಥಗೀ ಯೆಂದು ತೊಳ್ಪಿನ ಕೆಯ್ಯೊಳಿರದಿತ್ತು ಕಳುಪಲು (ಶಂಪುಕು. ೪-೩೦). **ಪುಳ್ಗಿ :** ೨. ಪುಳ್ಗಿಯಂ ತಂದು ತಮ್ಮವರು ಪೊಂಬಟ್ಟಲೊಳು ನೀಡಿಯುಂಣಲೆಂದು ಕೊಟ್ಟುಪ್ಪರಿಸಿ ಪೋಗಲು (ರಾಕಶ. ೦೨-೩೦): ಪುಳ್ಗಿಮುನದಂ ಸದ್ಯಸ್ಸುದಿಂ ಮುಟ್ಟಿ ಭಾಳಾಕ್ಷಂಗೀವುದೆನುತ್ತೆ ಚೇಟಿಯು ಕರಾಂಭೋದಾತದಿಂದಟ್ಟಿದಳ್ (ಪ್ರಕಾ. ೨೨-೦೨). **ಪುಳ್ಗೆ :** ೧. ಮಾಡಿದ ಪುಳ್ಗೆ ಕಜ್ಜ ತೊಗೆ ತುಪ್ಪದೆ . . . ಇಂತಿವರ ಭೋಜನಕಾರ್ಗಱುಯ್ಯೆ ಮಹೀಶ್ವರಾ (ಶಾಕಾಸ. ೦-೮-೩).
**ಹುಗ್ಗಿ :** ೧. ಬೇಮದ ಹುಗ್ಗಿಯನುಂಬ ಕಾದ ನೀರ್ಗುಡಿವ ಬಯಲ್ಗಳೊಳ್ ಪಡುವ ಬೇವಸಮೋಲಗಿಪಂಗೆ ದುಡಿನೊಳ್ (ಸೂಕ್ತಿಸು. ೦೦-೩೦): ಕಾರ ಹುಣ್ಣಿಮೆಯು ದನಗಳ ಹಬ್ಬ. ಅಂದು . . . ಎತ್ತು ಮೊದಲಾದವುಗಳಿಗೆ ಹುಗ್ಗಿಯನ್ನುಣಿಸುತ್ತಾರೆ (ಕನ್ನಕಾ. ೦೬೯). ೨. ಹೋಮದ ಹುಗ್ಗಿಯ ತಿಂದಾ ದೇವರ್ಕಳ ನೆಱೆ ಹೊಡೆದು (ಶಿ:ಪ್ರಕ. ೨-೦೩); ಹುಗ್ಗಿಯು ಕುಪ್ಪವು ಮನೆಯೊಳಗಿರಲಿಕ್ಕೆ ಗುಗ್ಗುರಿಯನ್ನವ ತಿಂದ್ಯಲ್ಲೊ ಪ್ರಾಣ (ಕೃಕಂತ. ೦-೬೭-೨); ಹುಗ್ಗಿ ಕಿಚ್ಚಡಿಯೆರೆಹುಪ್ಪ ನೇವಗೆ ಹಿಂದಿ ಗುಗ್ಗುರಿ ಸೂಸಲುಂಡಲಿಗೆ . . . ಬಗ್ಗೆಯಾಪುಕಿಯೊಟ್ಟಿತಲ್ಲಿ (ಕಕತ. ೨೦-೦೨೪).
**ಹುಗ್ಗೆ :** ೧. ದೇವರ ಓಟ್ಟು ಹುಗ್ಗೆ ತೆಱಗೇನು ಬಿಟ್ಟು (ಎಕ. VI. ಕಣ್ಣು. ೯೬-೦೪ : ೧೬೪೯). [ < ಪುಟ್ಟು ]

**ಪುಟ್ಟು,** ಪುಗ್ಗು, ಪುರ್ಗು (ಕ್ರಿ). ೧. ಸಂಡು ; ದಹಿಸು : "ಪುಟ್ಟು— ದಹನಕ್ರಿಯಾಯಾಂ (ಉರಿಸು)" (ಶಬ್ದಾ). ೨. ಸುಟ್ಟು ಹೋಗು : ಪೊಗೆ ಪುಗೆ ಕಣ್ಣಂ ಸಿಂಗಂಗಳುರಿ ಗರ್ಜಿಸಿ ಲಂಗಿಸಿ ಪುಡುಪುಡನೆ ಪುಟ್ಟಿ ಸತ್ತುವು ಪಲವುಂ (ಶಂಕಶಾಂ. ೩-೯೨). **ಪುಗ್ಗು :** ೨. ಸುಡುಮಿಡುವಂದು ನಡನಡನಡುಗಿ ಮಿಡು ಮಿಡುಮಿಡುಕಿ ಪುಡುಪುಡು ಪುಗ್ಗಿ ತಡತಡದಡಿಸಿ ಬಿಱುತುತ್ತುಮೋಱುತ್ತುಂ (ಆಕೃ. ೦೦.೦೦ ವ). **ಪುರ್ಗು :** ೨. ಪುಡುಪುಡನೆ ಪುರ್ಗಿ ಜೋರ್ಲೆಬ್ಬಟಲ್ಮತಗಾಗಿ ಸುರುಳ್ದು ಸುರುಳ್ದು ಬಾಯ್ಬಿಟ್ಟಿಲ್ಕಂ (ಸುಕುಮಾ. ೩-೦೩).

[ದೇ.೩ ತಮಿ. ಪುಟುಜ್ಯು, ಪೊಚುಪ್ಪು, ಪೊಚುಕ್ಕು ; ಮಲ. ಪುಟುಕ್ಕು, ಪುಟುಕು, ಪುಟುಙ್ಙು]

**ಪುಟ್ಟಿ** (ನಾ). ಒಂದು ವಂಶದ ಹೆಸರು : ಪೇರವಾಸರು . . . ಬೆಳ್ಳೆಮಣೆಯರುಂ ಸನ್ನಿಗಾಲಾ. ಪುಟ್ಟಿರುಂ ಬಟ್ಟವರುಂ ಮಸುನ್ನಾಯ ಕಟಲ್ಗಳು ಬಿರದರುಂ ಈ ಪೊಲನಂ ನಡಯಿಸಿದೋರ್ (ಎಕ. XVI. ಗುಬ್ಬಿ ೩೩-೩೯ ; ೭೩೨). [ ? ]

**ಪುಟ್ಟಿ** 'ಪುಷ್ಪ' ನೋ.

**ಪೂ$_1$**, ಹೂ$_1$ (ಕ್ರಿ). ಪೂತ$_1$, ಹೂತ$_1$ (ಭೂತಕೃ) : ಪೂತು$_1$, ಹೂತು$_1$ (ಭೂತನ್ಯೂ) : ಪೂವ$_1$ (ಭವಿಕೃ). ೧. (ಮರ, ಬಳ್ಳಿಗಳು) ಹೂವಿನಿಂದ ತುಂಬು ; ಹೂವು ಬಿಡು : "ಪೂ—ಪುಷ್ಪಸಂಭವೇ. ಪುಷ್ಪೇ ಚ" (ಶಬ್ದಾ); ಎಯ್ದೆ ಪೂತು ಕಿಕ್ಕಿರಿಗಿರ್ದ ಪಾದರಿಯಿಂ . . . ಒಪ್ಪಿ ತೋರ್ಪುಗು[ಂ] (ಎಕ. XIII. ೩೩೦-೨೭ : ೧೨೨೦); ವನದೊಳಲಂಪನಾಳ್ದು ನಿಡುನಟ್ಟಿರ ದೂದರ ಸೀಯನಪ್ಪ ಪಾತಿನ ರಸದೊಳ್ ಕೊನರ್ವುದು ತಳಿರ್ವುದು ಪೂವುದು ಕಾಯ್ವುದು . . . ವನದೊಳ್ ಕೊರತೆಯಿಲ್ಲದ ನಲ್ಮೆಯಿಂಬ ನಂದನವನವೋಪರೊಳ್ ನೆರೆದೊಡಂತು ರಸಂಬಿತ ಪಣ್ತುದಾಗದೇ (ಕುಸುಮಾ. ೪-೧೧೨); ಮಾಜಿದುಂಬಿ ಪೂತ ಚೂತದೊಳಿಜ ಗುಂಗುಮೆಣಗುಂಗುಮೆ ಸಲ್ಲಕೀಪಲ್ಲವದೊಳ್ (ಶಾಂತಿಪು. ೩-೭೯); ಅವ ಮರುವಿದು . . . ಸಕಲರಿತುವೊಳು ಪೂವ ಪಣ್ತ ಮಾವೇನು ? (ಗಿರಿಜಾ. ೨೪-೩೮). **ಹೂ$_1$** : ೧. ಎಲವದ ಮರ ಹೂತು ಫಲವಾವ ತೆಜನಂತೆ ಸಿರಿಯಾದರೇನು ಶಿವಭಕ್ತಿಯಿಲ್ಲದನ್ನಕ್ಕ (ಬಸವ. ೦೨೦); ಹೂತ ಸಂಪಗೆವನವನಳಸಂಘಾತ ಮುತ್ತಿವತೇನು (ಕುಮಾರ. ೦೩-೯); ಎನಿತು ಮುಳಿಗರೆದೊಡೇಂ ಹುಟ್ಟಿ ಹೂವುದೇ ದೇವ (ಪ್ರಭು. ೦೪-೬೦). ೨. ಅರಳು : ವಿಕಾಸವಾಗು : ಹುಟ್ಟಿದಾನಂದಾತಿರೇಕಕೆ ಚಿತ್ತ ನೆಜೆಯದು ಹೂತು ಹಿಗ್ಗುವ ಪುಳಕರಾಜಿಗೆ ದೇಹ ಕಿಜಿದು (ಕುಮಾರವ್ಯಾ. ೦೩-೨).

**ಹೂತ ಹೊಕ್ಕುಳ** ಮಗ=(ಪುರಾಣಗಳಲ್ಲಿರುವಂತೆ, ವಿಷ್ಣುವಿನ) ನಾಭಿಕಮಲದಿಂದ ಹುಟ್ಟಿದವನು ; ಪದ್ಮನಾಭನ ಮಗ ; ಬ್ರಹ್ಮ : ಹೂತ ಹೊಕ್ಕುಳ ಮಗನು ಬಂದನು ತಂದೆಯಿದ್ದೆಡೆಗೆ (ಜೈಮಿನಿ. ೬-೦೪-೨೭). [ದೇ. ॥ ತವಿ. ಮಲ. ಪರ್ಜಿ. ಪೂ]

**ಪೂ$_2$**, ಪುವ್ವು, ಪೂವು, ಹುವ್ವು, ಹೂ$_2$, ಹೂವು (ನಾ). ೧. ಅರಳು ; ಮಲರು ; ಕುಸುಮ ; ಪುಷ್ಪ : ಸುವರ್ಣಪೂರ್ಣಕಳಶಮುಂ ಕನ್ನಡಿಯುಂ ಪೂವುಮಾಲೆಯುಂ ಮಾದುಫಲಮುಂ ಮೊದಲಾಗೊಡೆಯ ನೀರಾಜನೆಯಿಂದಿದಿರಂ ಬಂದು ನಿಜಿಸಿ ಬಲಗೊಂಡು ಬಂದು (ವಡ್ಡಾರಾ. ೭೦-೭); ತನ್ಮುನಿಗಳ ಪಾದಪ್ರಕ್ಷಾಳನೋದಕದೊಳ್ ಪೂರಳ್ದು ಪುಷ್ಪವರ್ಷ ಪೂಗಳೊಳ್ ಪುದಿದು . . . ಉಪಶಮಭಾವಮಂ ತಾಳ್ದಿ (ಆದಿಪು. ೩-೨ ವ) ; ಗಂಪಿಲ್ಲದ ಕೇದಗೆಯುಂ ಕಂಪಿಲ್ಲದ ಪೂ ಸುಪುತ್ರನಿಲ್ಲದ ಭವನಂ . . . ಏನೊಪ್ಪುಗುಮೇ (ಆದಿಪು. ೬-೯೨); ಕಂಪುಳ್ಳ ಸಂಪಗೆಯ ಪೂಗಳಂ ಕಿಜಿತಂದು ಹೊಂಬಿನಿಂ ಶಶಿಧರನ ಸಿರಿಮುಡಿಗೆ ಬೇಕೆಂದು (ಬಸವ. ೧-೨೭). ೨. ತಾವರೆ ; ಕಮಲ : 'ಪೂಗೊಳ' ಪರಾ. ೩. ಕಣ್ಣುಗುಡ್ಡೆಯ ಮೇಲೆ ಉಂಟಾಗುವ ಬಿಳಿಯ ಚುಕ್ಕೆ ಮತ್ತು ಹಾಗೆ ಚುಕ್ಕೆ ಬಿದ್ದು ಉಂಟಾಗುವ ನೇತ್ರರೋಗ; ಕಾಚ : ಮೋತಿಬಿಂದು : ಅರದಿಂಬಾಗಿರೆ ತಾಜಿಯ ತಿರುಳಂ . . . ಜೇನೆಯ್ಯಿಂ ಕಪ್ಪುರವುಂ ಬೆರಸಚ್ಚಿ ಕಣ್ಣ ಪೂಗಳ್ ಕಿಡುಗುಂ (ರಸರತ್ನಾಕರ. ೯-೭೭); ಕಣ್ಣೊಳೀತನಿ ಪೂ . . . ಎಂದು ಬಾಯಂ ಕಿಸಿದಳ್ (ರಾಜಶೇಖ. ೬೭-೨೮). 'ಪೂಗಣ್' ಪರಾ. ೪. (ಅಲಂ)ಹಿತವಾದುದು; ಸುಖಕರವಾದುದು: 'ಪೂಗನಸು' ಪರಾ. **ಪುವ್ವು** : ೧. ಕಪ್ಪುರ ಕೆಸ್ಣನ ಮಗಳ್ × ಲಿಂಬದ ಜಟ್ಟಿ ಪುವ್ವು ಶಾಲೆ ಕಂಪುಪಳ್ಳಿ ಅಮಾ ನಾಸಿಪ್ಪರ್ಗಂ ನಾಲೆ (ಎಕ. VII. ಶಿಕಾ. ೩೩b-೭ ; ಸು. ೬೦೦ ?); ಪುವ್ವಿ[ಪಾಠಾಂ. ಪೂವಿ]ನೊಳ್ ಕಂಪು (ಶಾಸಕೂ. ೪-೮೮ ಕ್ರಮೋ). **ಪೂವು** : ೧. ಪೂವಿನಿಂ ಸಮೆದ ಪಕ್ಕಿಯಿಂದಂಬಿನಮಾಗಳೊಂದು ಸಾರಿಕೆ ಪರಿತಂದುದು (ಕಾದಂಬ. ೬೦): ಈಕೆಯ ನಳತೋಳಂಗೊಲ್ದು ತಮ್ಮ ಚಿಲ್ಪಿಕೆಯಂ ಕಂಡೆಳಲತೆಗಳ್ ಪೂವುಗಳಂ ತಳೆದಿರ್ದುಂ ತಳೆಯದಿರ್ಪುವಾ ಫಲಿನತೆಯಂ (ಧರ್ಮಾಮೃ. ೩-೦೩೩); ಪೂಜ್ಯವು. ಪೂಜಕ. ಪೂಜೆಯು. ಪೂವು ರೂಪರೂಪಗಳು ನಾವೂ ನೀವು (ಅರಳು. ೦೭೮-೦೦). **ಹುವ್ವು** : ೧. ಚೆನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ಮಂತೆಗೆ ಹುವ್ವ[ಪಾಠಾಂ. ಹೂವ] ತಾಹೆನಲ್ಲದೆ ಹುಲ್ಲ ತಾರೆನು (ಮಹಾದೇ. ವ.೬೦-೦೪೮); ಹುವ್ವ[ಪಾಠಾಂ. ಹೂವ] ತರುವರ ಮನೆಗೆ ಹುಲ್ಲ ತರುವ ಅವ್ವೆ ಲಕುವಿಶಾರಮಾಗ ಇವಗಿಲ್ಲ ಗರುವ (ಶರಣರ. ೦-೦೪೭ ಕಲ್ಲವ) : ಸುರರು ದುಂದುಭಿ ಮೊಳಗೆ ಹುವ್ವಿ[ಪಾಠಾಂ. ಹೂವಿ]ನ ಅರಳು ಸುರಿದರು (ರಾಮಾಶ. ೩೨-೦೦೭); ನಿನಗೆ ವೈಜಯಂತಿಯೆಂಬ ಒಂದು ದಿವ್ಯವಾದ ತಾವರೇ ಹುವ್ವಿನ ಮಾಲೆಯನ್ನು ಕೊಡುತ್ತಲಿದ್ದೇನೆ (ಕೃಷ್ಣ. ೪೪). **ಹೂ$_2$** : ೧. ಹೂ ಬಾಡಿದಲ್ಲಿ ಪರಿಮಳ ಮನಜಸುಮರೆ (ಬಸವ. ೦೨೭); ಒಂದರಳು ಮಲ್ಲಿಗೆ ಒಂದು ಹೂ ಮುಂದಾರ ಪುತ್ತಲಿ ಒಂದು ಚೆನ್ನೆಯ್ದಿಲು ಬಕುಳ ಒಂದೊಂದು ಅರವಿಂದ (ಬಸವ. ೦೯-೬೩). ೨. 'ಹೂಗೊಳ' ಪರಾ. ೩. ಅಲಿ ನೋಡುದೊ ಕಣ್ಣ ಬೇನೆಯೊ ಮೈಲಿಗೆಯೊ ಹೂ ಹುಟ್ಟಿದುದೊ (ಬಸವ. ೦೭-೬೬). ೪. (ಕಾಗದ, ಬಟ್ಟೆ, ಬಟ್ಟೆ ಮುಂತಾದುವುಗಳ ಮೇಲೆ ರಚಿಸುವ) ಹೂವಿನಾಕಾರದ ಚಿತ್ರ : ಕರಿಯ ಮಾಯಾಲಿನ ಮೇಲೆ ತಾನೇ ಹೂ ಹಾಕಿದ ಪತ್ತಲದ ಸೀರೆ ಅಲ್ಲಿರಲಿಲ್ಲ (ಕುಕ್ಕಿ. ೨೪). ೬. ಎಳೆಯದು : ಕೋಮಲವಾದುದು ; ಮೃದು : 'ಹೂಮರಿ' ಪರಾ. **ಹೂವು** : ೧. ಸಿರಿಮುಡಿಗೆ ಹೂವನಡಕುತ್ತಿವಿರು ನೀನು (ಸಂಚಿಕೆ ೦-೩೩) ; ಕಳೆದ ಹೂವಿನ ತೊಡಬೆಯೋ ಕುಸಿದಲೆಯ ಬಟ್ಟೆಯ ಭಾರವೋ . . . ನಳಿನನಾಭನ ಮಾತು ಹಿಂಚಿತು ಕಳಚಿದವು ಕೈದುಗಳು (ಕುಮಾರವ್ಯಾ. ೦೯-೩೦); ಜಡೆಗಳೊಳಗೆ ಮಲ್ಲಿಗೆಯ ಹೂವಿನ ಸರ ಬಿಡದುಟ್ಟು ಸಾಲಿಯ ಸೀರೆ ಕಡುಪರಿಮಳವಾಂತ ದಿವ್ಯಾಂಗದ ಚೆಲ್ವ ಮುಡಿದಿರನ್ನೆಯರೊಪ್ಪಿದರು (ಕಂಪಣ. ೨-೯೦) ; ಒಂದಾರ ಕೊಳಲಿಲ್ಲ ಲೋಕದ ಮುಂದಿ ನಿಂದಾವ ಲೋಕದ ಬಲು ಹೂವು ಎಂದೇನೊ (ಪಾಗ. ೨೦-೨೦).

**ಪೂಗಳಿನಿದು** = ಪುಷ್ಪರಸ ; ಮಧು ; ಮಕರಂದ : "ಮಧು ಮಕರಂದಮೆನಲು ಪೂಗಳಿನಿದಕ್ಕು" (ಮಂಗರಾ. ೩೩-೬). **ಪೂವಿನಂಬು**= (ಮನ್ಮಥನ) ಹೂವಿನ ಬಾಣ: ಮದನನ ಪೂವಿನಂಬುಗಳ ಪೆಣ್ಬರಿಜೆಂಬ ಬೆಡಂಗನುಂಟುಮಾಡಿದ . . . ರಾಜಕನ್ಯಕೆಯರು ಮಲರಂ ತನಯಂಗೆ ಮಾಡಿದು (ಮಲ್ಲಿಕಾ. ೪-೦೪೦); ಅವನ ಪೂವಿನಂಬಮಟರು ತಲೆವಾಗಿಸುತಿರ್ಪುದು . . . ಆತನೀಗಾವಗಮೆನ್ನ ಜಾಣ್ನುಡಿಗೆ ಮೆಯ್ಸರಿಯು (ಕರ್ನಾಟ. ೦). **ಪೂವಿನ ಪೊಟ್ತು**, ಹೂವಿನ ಹೊತ್ತು=(ಸಾಮಾನ್ಯವಾಗಿ) ಹೂವುಗಳು ಅರಳುವ ಸಮಯ ; ಸಾಯಂಕಾಲ : ಅಗಲಾ ಪೂವಿನ ಪೊಟ್ತಿನೊಳ್ ದೇವಕೀನಂದನಂ ಮಾಲೆಗಾಜಗೇರಿಯೊಳ್ ವಿಚಾರಿಸುತ್ತುಂ ಬಂದು (ಜಗನ್ನಾ. ೬-೦೦ ವ); ಪೂವಿನ ಪೊಟ್ತು ಸಾರಿವರೆ ಸಿಂಗರಗೈದನಂಗದಿಂ ಪ್ರಿಯಂ ಭಾವಜತಪ್ಯಕೇಳಿಗೃಹಮಂ ಪುಗುತಂದು (ಮನ್ಮಥ. ೦೦.೯) ; ಪಗಲೊಳೆ ಚಂದದಿಂ ಮಲಗಿ ಹೂವಿನ ಹೊತ್ತಿನೊಳೆಟ್ದು . . . ಒರ್ವಳ ದೊತ್ತಗೆಯ್ದುದಳ್ (ಮಲ್ಲಿಕಾ. ೬-೪೮೭) ; ಸರಸಿಜಾಕ್ಷಿಯರು ಹೂವಿನ ಹೊತ್ತಿನೊಳಗಾಗ ಚರಿಸುವರು ಬೀದಿಯೊಳಗೆ (ಕಂಪಣ. ೬-೦೦೨). **ಪೂವಿನ ಸುಗ್ಗಿ** = ಹೂವುಗಳ ಸಮೃದ್ಧಿಯ ಕಾಲ ; ವಸಂತಕಾಲ : ಪೂವಿನ ಸುಗ್ಗಿಯಲ್ಲಿ ಪೊಸವೇಟಂ (ಲೀಲಾವ. ೦೪-೪೩). **ಹೂವಾಗು**=೧. ಅರಳು ; ವಿಕಸಿತವಾಗು : ಮುತ್ತುಗನಿಡುಗೊನೆ ನಿಕರ ಹೂವಾದಂತೆ ನೆತ್ತರ ಬಣ್ಣ ತೋಱಸಲು ಚಿತ್ತಜನಾತ್ಮಸಂಭವನ ಕೀರ್ತಿಸಿದ ಖಳೋತ್ತಮ ಕಡುಮೆಚ್ಚಿ ನಗುತೆ (ಮೋಹತ. ೩೩-೪೦). ೨. ನಲಿ ; ಸಂತೋಷಪಡು : ಹೊಸಮನೆ ಹೂಡಿ ಸುಖಿಸುವ ನನ್ನ ಆಸೆ ಪೂರೈಸಿತೆಂದು ಹಿಗ್ಗಿ ಹೂವಾಗುತ್ತಿದ್ದೆ (ಶೂದ್ರಸಂ. ೦೩). ೩. ಮೃದುವಾಗು : ಮಗಳ ಪರಿಸ್ಥಿತಿಯನ್ನು ಕೇಳಿ ತಂದೆಯ ಮನಸ್ಸು ಹೂವಾಯಿತು (ರೂಢಿ). **ಹೂವಿನಕಾರ**=ಹೂವಾಡಿಗ (?) : ಶ್ರೀನಖರೇಶ್ವರದೇವರಲಿ ಮಾಡಿದ ಧರ್ಮ್ಮದ ವಿವರ . . . ಹುಲರ ದೇವಸ್ತದ ಗಡಿಯಿಂದಂ ಪಡುಮಲು

ತೇಂಲು ವಾಊರು ಕೇಯ್ದರ್ಗೆ ಹಲರ ಹೂವಿನಕಾರ ದುಗುಣಸೆಟ್ಟಿಯು ಗಡಿಯಿಂದಂ ಬಡಗಲು ಪಡುವಲು (ಶಾಸ. IX-ii, ೯೯೯-೦೨ ; 1433). **ಹೂವಿನ ಕೆಲಸ** = ಕಲ್ಲು, ಮರ, ಬಟ್ಟೆ, ಗೋಡೆ ಮೊದಲಾದುವುಗಳ ಮೇಲೆ ಹೂವು, ಎಲೆ ಮೊದಲಾದ ಚಿತ್ರಗಳನ್ನು ಬಿಡಿಸುವ ಕೆಲಸ : ಕಡಕತೂರ ಸೇನುಬೋವ ರಾಮರಸರ ಮಗ ಲಖಿಯನೂ ಜನಾರ್ದನ ದೇವರಿಗೆ ಹೂವಿನ ಕೆಲಸ ಮಾಡಿಸಿದನು (ಕ.ಶಾ. ೦೯೩೩, ೬೨-೩ : 1754). **ಹೂವಿನ ಕೋಲು** = ೧. ಹೂವಿನಿಂದ ಅಲಂಕೃತವಾದ ಕೋಲು. ೨. ಯಕ್ಷಗಾನ ಬಯಲಾಟಗಳಲ್ಲಿ ಒಂದು ಪ್ರಕಾರ; ಈ ಕಲೆಯನ್ನು ಅಭ್ಯಾಸ ಮಾಡಿದವರು ಶಿಷ್ಯರೊಂದಿಗೆ ನವರಾತ್ರಿಗೆ ಮನೆ ಮನೆಗೆ ಹೋಗಿ, ಪ್ರದರ್ಶನ ಮಾಡಿ ತೋರಿಸುತ್ತಾರೆ : ಆ ಶಿಷ್ಯರ ಕೈಯಲ್ಲಿ ದೊಡಿನ ಹೂವುಗಳಿಂದ ಅಲಂಕೃತವಾದ ಒಂದೊಂದು ಕೋಲು ಇರುತ್ತದೆ. 'ಹೂವಿನ ಕೋಲು' ಎಂದು ಹೆಸರು ಇದಕ್ಕೆ. ಈ ಪ್ರದರ್ಶನ ಸಂಪ್ರದಾಯಕ್ಕೂ ಹೂವಿನ ಕೋಲು ಎಂದು ಹೆಸರು ಬಂದಿದೆ (ಯಕ್ಷ. ೨೦). **ಹೂವಿನ ಪಡಿ, ಹೂವಿನ ಪಡಿ** = ಹೂವಾಡಿಗರಿಗೆ ಕೊಡುವ ಸಂಭಾವನೆ : ಶ್ರೀಗೊಮ್ಮಟದೇವರ ಪಾರಿಶ್ವದೇವರಿಗೆ ಪರ್ವನಿಬನ್ಧಿಯಾಗಿ ಹೂವಿನ ಪಡಿಗೆ ಜಾತಿಹವಳಕ್ಕೆ ಕೊಳಗ ತಾ ೧ . . . ಯಿದ ಆಚಂದ್ರಾರ್ಕ್ಕ ತಾರಂಬರ ಸಲಿಸುವರು (ಎಕ. II. ೨೪೦-೨ ; ಸು. 1175) : ಶ್ರೀ ಗೊಮ್ಮಟದೇವರಯರ್ಚನೆಗೆ ಹೂವಿನ ಪಡಿಗೆ ಶ್ರೀಮನ್ಮಹಾಮಣ್ಡಲಾಚಾರ್ಯ್ಯರು (ಎಕ. II. ೨೪೯-೩ ; 1198 ?). **ಹೂವಿನ ಮಕ್ಕಳ ಕುಣಿತ** = ಒಂದು ಜಾನಪದ ಕಲೆ ; ಇದರಲ್ಲಿ ಕಲಾವಿದರು ಜಾತ್ರೆಯ ಸಮಯದಲ್ಲಿ ಕೆಂಪು ಹೂವಿನಿಂದ ಉದ್ದವಾದ ಮಾಲೆಯನ್ನು ಕಟ್ಟಿ ತಲೆ, ಕೊರಳು, ಮುಂಗೈ, ತೋಳು ಮೊದಲಾದುವುಗಳಿಗೆ ಹೂವಿನ ಅಲಂಕಾರ ಮಾಡಿಕೊಂಡು, ಹೂವಿನ ಹಾರ ಸುತ್ತಿದ 'ಅಂಬುಗತ್ತಿ'ಯನ್ನು ಹಿಡಿದು, ಕಲಶಗಳನ್ನು ಹೂವಿನಿಂದ ಸಿಂಗರಿಸಿ, ಡೋಲಿನ ಬಡಿತಕ್ಕೆ ಸರಿಯಾಗಿ ಗೆಜ್ಜೆ ಕಟ್ಟಿ ಹೆಜ್ಜೆ ಹಾಕುತ್ತಾ ವೃತ್ತಾಕಾರವಾಗಿ ಕುಣಿಯುವರು : ಉತ್ತರಕನ್ನಡಜಿಲ್ಲೆಯಲ್ಲಿ ವಾಸವಾಗಿರುವ 'ಪಟಗಾರ'ರಲ್ಲಿ ಮಾತ್ರ ಕಂಡುಬರುವ ಕಲೆ 'ಹೂವಿನ ಮಕ್ಕಳ ಕುಣಿತ' (ಕಜಾ. ೦೯೦). **ಹೂವಿನ ಮಳೆ** = ಪುಷ್ಪವೃಷ್ಟಿ : ನಳನೃಪನ ಕರಸಿದರು ಹೂವಿನ ಮಳೆಯು ಕಜೆದರು ದೇವದುಂದುಭಿ ಮೊಳಗಲುರಸನ ಕೊರಳಿಗಿಟ್ಟಳು ಪುಷ್ಪಮಾಲಿಕೆಯ (ಕಜಾ. ೩-೬೭). **ಹೂವಿನ ಹಬ್ಬ** = ವಸಂತಕಾಲ : "ಹೂವಿನ ಹಬ್ಬ ಸುಗ್ಗಿ ಬಂದುದು ಬಸಂತಂ ದರಂದೆನೆ ವಸಂತಕ್ಕೆ ಪಿಸುಗುವ ಪೆಸರ್" (ಶಬ್ದ. ೦೭) : "ಹೂವಿನ ಹಬ್ಬವೆಂದು ಸುಗ್ಗಿಯು ಬಸಂತನು ಎಂದು ಪೆಸರು ತಾನೊಂದುಗು ವಸಂತಾಖ್ಯದಲ್ಲಿ" (ಕಶ್ಮ. ೨೦). **ಹೂವಿನ ಹಾಸಿಗೆ** = ೧. ಹೂವುಗಳಿಂದ ಮಾಡಿದ ಹಾಸುಗೆ ; ಪುಷ್ಪಶಯ್ಯೆ : ಶಶಿಕಾಂತ ವೇದಿಕೆಗಳಲ್ಲಿ ಹೂವಿನ ಹಾಸಿಗೆ[ಹಾಸಿ. ಕೆ]ಗಳಲ್ಲಿ . . . ನೆರೆದು (ಅವಿ. ೧೬೦). ೨. (ಅಲಂ) ಸುಗಮವಾದುದು ; ಸುಲಭವಾದುದು ; ಸುಖಮಯವಾದುದು : ಜೀವನವೆಂದರೆ ಹೂವಿನ ಹಾಸಿಗೆಯಲ್ಲ (ರೂಢಿ).

[<ಪೂ. / ತಮಿ. ತುಳು. ಪೂ ; ಮಲ. ಪೂ. ಪೂವು ; ತೆಲು. ಪೂ. ಪುವ್ವು, ಪೂವು ; ಕೋಲಾ. ಪೂವ್ ; ಗದಬ. ಪೂ. ಪುವ್ವು ; ಮಾಲ್ತೊ. ಪೂವು]

**ಪೂಂದಿ** 'ಪುಂದಿ' ನೋ.

**ಪೂಂಬಳಿ ?** (ನಾ). ಹೂವಿನ ಕಾಣಿಕೆ; ಪುಷ್ಪೋಪಹಾರ (?) : ಒರ್ವಳ್ ಮುಂದಿನಿಯನಂ ಕಿರಿಪರ್ ಕೆಳದಿಯಂ ನಂಬದೆ ಕೆಂದೆಲರ್ಗೆ ಪೂಂಬಳಿಯಂ ಬಟ್ಟುಯಟ್ಟುವಂತೆ ತನ್ನ ತಂಗಿಯನೆ ಬಟ್ಟುಯಟ್ಟ (ಅಪು. ೬-೦೦ ವ).

[<ಪೂ + ಬಳಿ (=ಬಲಿ)]

**ಪೂಂಬೆ** (ನಾ). (ಕರಾ) ಬಾಳೆಯ ಹೂವು.— ವೊಣಕೆ : ಬಾಳೆಗಿಡದ ಗೊನೆಯ ತುದಿಯಲ್ಲಿದ್ದ ಪೂಂಬೆಯನ್ನು ತಂದು ಅದನ್ನಾದರೂ ಬಜ್ಜಿ ಮಾಡೋಣ (ಬಾಳಗ. ೦೩೩) ; ಬಾಳೆಗೊನೆಯ ತುದಿಗೆ ನಮ್ಮಲ್ಲಿ 'ಪೂಂಬೆ' ಎಂಬ ಹೆಸರು (ಕಾಕೆಸು. ೯೩). [←ತುಳು. ಪೂಂಬೆ]

**ಪೂಂಬೆಕಿರೀಟ** (ನಾ). ಬಾಳೆಯ ಮೋತೆಯ ಆಕಾರದ ಕಿರೀಟ : 'ಪೂಂಬೆಯಂತಿರುವ ಕಿರೀಟ' ಎಂಬ ಅರ್ಥದಲ್ಲಿ 'ಪೂಂಬೆಕಿರೀಟ' ಎಂದೂ ಆಡುತ್ತಾರೆ (ಕಾಕೆಸು. ೯೩). [ಪೂಂಬೆ + ಕಿರೀಟ]

**ಪೂಂಬೊಲ** (ನಾ). ಹೂವಿನ ತೋಟ ; ಹೂದೋಟ : ಬಸವಸೆಟ್ಟಿ ಪದಿನಯ್ವರ್ ನೀರ್ಮ್ಮಣ್ಣು ಅಯ್ಗೆ ಪೂಮ್ಬೊಲನುಂ . . . ದೇಗುಲಕ್ಕೆ ಬಿಟ್ಟಂ (ಎಕ. IV. ಹಗ್ಗಡ. ೦೬-೦೦ ; 1021) : ಶ್ರೀದೇಕಬ್ಬೆ ಮಹಾದೇವರ್ಗ್ಗೆ ಬಿಟ್ಟ ಪೂಂಬೊಲಂ ತೋಣ್ಟಮಣ್ಣುಮುಮಂ . . . ಈ ಮಂಪದ[ರ್] ಪುಟ್ಟಿದವರ್ ಕಾ[ದ]ಳಿಸುಗೆ (ಎಕ. VI. ೨೦೭-೧೩ ; 1057). [<ಪೂ + ಪೊಲ]

**ಪೂಕರೆ** (ನಾ). (ಕರಾ) ಅಲಂಕಾರದ (ಬಾಳೆಯ) ಕಂಬ : ಬುದ್ಧಿವಂತನ ಗದ್ದೆಯ ಬಿತ್ತನೆವನ್ನು ದೇಡಿಗೆಯಲ್ಲಿಯೂ, ಬಿಲ್ಲರ ಗದ್ದೆಯ ಬಿತ್ತನೆವನ್ನು ಕುಕ್ಕೆಯಲ್ಲಿಯೂ ತಂದು ಬಿತ್ತಿ, ಬಾಳೆಯ ಪೂಕರೆಯನ್ನು ಹಾಕಿದರು (ಕೂಟಿಚ. ೯) ; "ಗದ್ದೆ ಬಿತ್ತಿದ ತರುವಾಯ ಅದರ ಮಧ್ಯದಲ್ಲಿ ಒಂದು ಬಾಳೆಯ ಗಿಡವನ್ನು ತಂದು ಅಲಂಕರಿಸಿ ನಡುವ ಸಂಭ್ರಮ" (ಕೂಟಿಚ. ಕೂಶ). [←ತುಳು. ಪೂಕರೆ]

**ಪೂಕು, ಪುಕ್ಕು$_2$** (ನಾ). ಸ್ತ್ರೀಯ ಜನನೇಂದ್ರಿಯ ; ಯೋನಿ : (*). **ಪುಕ್ಕು$_2$** : "ಭೂರುತ್ತದೊಳ್ ಯೋನಿಯೊಳ್ ಪುಕ್ಕು" (ಕಶ್ಮ. ೬೯).

[ದೇ. ೫ ತೆಲು. ಕೊಂಡ. ಪೂಕು]

**ಪೂಕುತಿತ್ತಿ** (ನಾ). ಶರಾಯಿ ; ಇಜಾರ ; ಚಲ್ಲಣ : (*). [?]

**ಪೂಗ** (ನಾ). ೧. ಗುಂಪು ; ಸಮೂಹ ; ಸಮುದಾಯ : "ನಿಕರಃ, ನಿಕಾಯಃ ... ಕದಂಬಕಃ, ಪೂಗಃ ... ಸ್ತೋಮಃ — ಈ ೩೯ ಸಮೂಹಂ" (ಕರಾಜು. ೦೦೯-೦) ; ಪೂಗದ ನವನಾಗಲತಾಪೂಗದ ಫಲಪತ್ರದೊಡನೆ ಬಹುವಿಧಫಲದಿಂ ರಾಗಯುತಕ್ರಮವಿರಹನ ರಾಗಯುತಕ್ರಮವುನ ವಾಳಿಭುಜನರ್ಚಿಸಿದಂ (ಶ್ರೀಕೃಚ. ೦೯-೬) ; ರಾಘವನು ವೈಮಜೀದ ಲಕ್ಷ್ಮಣ ಯೋಗನಿದ್ರೆಯ ತಾಳ್ದ ಕಪಿಗಳ ಪೂಗ ಜೀವನ್ಮುಕ್ತವಾದುದು (ತೊರೆರಾ. ೨೮-೬೩) ; ಶಿವಾಗಮಪೂಗದರ್ಪಮಂ ವಿವರಿಪ ಶೈವವರ್ಯರಿಂ ಮೆರೆದಿತ್ತು ಪುರಂ (ರಾಶಿ. ೨-೯೩) ; ಇಂದ್ರಿಯಸುಖದ ಪೂಗಮಂ ಮಿಾರದ ಪೋಲ್ ಸ್ವಗಳ್ಪುದವಿರುದ್ಧಂ (ಕಂಪ್ರಕೃ. ೦೨-೦೬). ೨. ಸಂಘ; ಸಮಿತಿ; ಮಂಡಳಿ; ಗುಂಪುಗಳ ಅಭಿಪ್ರಾಯದ ಮೇಲೆ ರಚಿಸಲ್ಪಟ್ಟ ಪೂಗ, ಶ್ರೇಣಿ, ಕುಲ ಎಂಬ ವಿಚಾರಣಾಸಮಿತಿಗಳಿದ್ದುವು. ರಾಜನ ನ್ಯಾಯಾಲಯವು ಈ ವಿಚಾರಣಾಸಮಿತಿಗಳ ಕಾರ್ಯಗಳನ್ನು ಪರಿಶೀಲಿಸುತ್ತಿತ್ತು (ಚರಿತ್ರೆ. ೩೬). ೩. ಅಡಕೆ ; ಕ್ರಮುಕ : "ಪೂಗಂ ವ್ರಜಮುಂ ಕೌಂಗುಂ" (ಪಮ್ಪಕೋ. ೦೨೬-೬೦) ; ಬಾಲಸಹಕಾರತರು ನವಮಾಲಿಕೆಗಳಿಲಲಿತಪೂಗಭೂಜಾತಂ ತಾಂಬೂಲಲತೆಗಂಬಪೋಲ್ ಸ್ಮರಲೀಲಂ ನಿಜತನಯನೆನ್ನ ತನುಜೆಗೆ ತಕ್ಕಂ (ಅರಿಕ. ೯-೨೦) ; ಲಸತ್ಪುಳಿನವೋ ಪುನ್ನಾಗಮೋ ಪೂಗಮೋ . . . ಕೆದಿರೆ ಪೇಟೆಮೆವ್ಮು ಪತಿಯಂ (ಸುಕುಮಾ. ೦೨-೨೦) ; ತುದಿಗೆ ಪರ್ವಿದೆಳವಳ್ಳಿ ಬಿಂದೆಸೆವ ಪೂಗಂ ನಾಡೆ ಕೊರ್ವಿ ತಿಂತಿಣಿವಣ್ಣಳಂತ ಕದಳಂ . . . ನಾಡೆ ಸಾರ್ವಕಾಲಂ ಕುಂದವು (ಕಂಕು. ೦೦-೨೨). ೪. ಒಂದು ಬಗೆಯ ಸಸ್ಯ ; ಹೂವರಸೆ ಗಿಡ : "ತೂದಃ, ಪೂಗಃ, ಕ್ರಮುಕಃ, ಬ್ರಹ್ಮಣ್ಯಃ, ಬ್ರಹ್ಮದಾರು, ತೂಲಂ — ೬ ಹುವ್ವರಸಿಗಿಡ, ಬೀಜವಿರುವ ಹುವ್ವರಿಸೇಗಿಡವೆಂದು ಕೆಲವರನ್ನುವರು" (ಸಿದ್ಧಾಕೃ. ೦೨೦). [ಸಂ.]

**ಪೂಗಂಪು, ಹೂಗಂಪು** (ನಾ). ಹೂವಿನ ವಾಸನೆ; ಪುಷ್ಪಗಳ ಸುಗಂಧ.— ಸೌರಭ: ಪಾದರಿಪೂಗಂಪಿಂಗೆಱಪಾದರಿಪೞಗಳ ಕುಳಕ್ಕೆ ನಿರವಧಿರಾಗೋತ್ಪಾದ ಪಟುವಾಯ್ತು ವಿಳಸತ್ಪಾದಪಜಾತಿಯೋಳೋಂದೆ ಸುಂದರಮಲ್ಲೇ (ಅಜಿತ.

೨-೯) ; ಸರಸ ಪೂಗಂಪುಗಳ ಸೊಂಪುಗಳ ತಂಪುಗಳ ಸಿರಿಗಂಧ ಪನ್ನೀರೊಳು ಬೆರಸಿರ್ಪ ಚಳಿಯುದ . . . ಕೀರಗಿಳ ಭೂರಿಗಳ ಭೇರಿಗಳ ರಭಸದಿಂ ಪುರ ಮೆಸೆದುದು (ಕಂಕೌ. ೩-೩) ; ಸತತಕುಸುಮಿತತರುಲತಾಳಿಗಳ ಪೂಗಂಪ . . . ಪೂಚ್ಚ ಪೊದಾವರೆಗಳ ಧೂಳಿಗಳ ತನಿಗಂಪನುಂಡು ಮಿಂಡೆದ್ದ ಭೃಂಗಾಳಿಗಳ ಬಳಗಂ ಪರಿಯಲು (ಕೃಶಿಬಾ. ೩-೬). **ಹೂಗಂಪು** : ಅಸುಕೆಯ ಬನದ ಕಡೆಯಿಂದ ಉತ್ತಮದ ಹೂಗಂಪು ಬರುತಿರಲು (ಶಾಕಿಬಾ. ೧೦-೪೯).

[ಪೂ₂ + ಕಂಪು]

**ಪೂಗಟ್ಟು**, ಹೂಕಟ್ಟು, ಹೂವುಕಟ್ಟು (ಕ್ರಿ). ಹೂವುಗಳನ್ನು ಮಾಲೆಯಾಗಿ ರಚಿಸು.—ಹೆಣೆ : ವರಚಕ್ಕವಜಾಜದೊಂದಜೆಯೊಳೆ ನೆಗಟ್ಟು ನಿರಂತರ ಸುಖಮಂ ಪಡೆವೆನೆಂಬ ನಿರ್ಬುದ್ಧಿ . . . ನಾಲ್ಲಿಲ್ಲದ ಪೂಗಟ್ಟುವೆನೆಂಬ ವೆರ್ಗಾವಿಲನಂ ಪೋಲ್ಗುಂ (ರಪೂರ್ಣ. ೩-೧೦೭). **ಹೂಕಟ್ಟು** : ಹೂಕಟ್ಟುವುದನ್ನು ಸಿಲ್ಲಿಸಿ, ಹೂಮಾರಿಗಳನ್ನು ನೋಡಲು ಓಡಿ ಹೋಗಿದ್ದ ಚನ್ನಮ್ಮನಿಗೆ ಅವಳ ಅಜ್ಜಿ . . . ಅಜ್ಜಿ ಮಾಡಿದಳು (ಕುಕಿಪು. ೨೭೦) **ಹೂವುಕಟ್ಟು₁** : ಮನೆಯ . . . ಒಂದು ಮೂಲೆಯಲ್ಲಿ ಚನ್ನಮ್ಮ ಹೂವುಕಟ್ಟುವ ಕಾರ್ಯದಲ್ಲಿ ನಿರತಳಾಗಿದ್ದಳು (ಕುಕಿಪು. ೨೬೯).

[ಪೂ₂ + ಕಟ್ಟು₁]

**ಪೂಗಣ್**, ಹೂಗಣ್ಣು, ಹೂವುಗಣ್ಣು (ನಾ). ೧. ತಾವರೆಯಂತೆ ಚೆಲುವಾದ ಕಣ್ಣು : 'ಪೂಗಣ್ಣ' ಪರಾ. ೨. ಹೂವು ಬಿದ್ದ ಕಣ್ಣು ; ಮೋತಿಬಿಂದುವಿರುವ ಕಣ್ಣು. ೧, ೨ : ಅಸಿದೊಡಲ ಪೂಗಣ್ಣ ಪೆಣ್; ಸಸಿವೊಗದ ಕಿಸುವಾಯ ಪುಸಿನುಡಿಯವಿನರಸಿ (ರಾಪಪಾಕೃ. ೯೬-೨೩). **ಹೂಗಣ್ಣು** : ೨. ಹೂಗಣ್ಣಿಗೆ ನಾಟ ಔಷಧಿ ಮಾಡಲು ಹೋಗಬಾರದು (ಕೊಶ). **ಹೂವುಗಣ್ಣು** : ೨. ಹೂವುಗಣ್ಣಿಗೆ : — ಸೀಲಿಯ ರಸವಂ ಹಚ್ಚಿದರೆ ಹೂವುಗಣ್ಣು ಮಾಣ್ಗುಂ (ಲಕ್ಷ್ಮಿ೦. ೬೯). [ಪೂ₂+ಕಣ್]

**ಪೂಗಣ** (ನಾ). ಹೂಗೊಂಚಲು ; ಪುಷ್ಪಗುಚ್ಛ : ಸ್ಥಿರ ಹರಶಕ್ತಿ ದೇವಮುನಿಪೋತ್ತಮಹಸ್ತದೆ ದಾನದೀಕ್ಷೆಯಿಂ ಸುರಕುಜವೀಕ್ಷಿಸಲು(ಲ್) ತಳೆದಪೋಲೆಸುಗುಂ ಸುರಶೈಲದಲ್ಲಿ ಬಂಧುರತರಪಪ್ಪ ಕೆಂದಳಿರ ಕೆಂಜೆಡೆ ಪೂಗಣ ರಾಕುಳಂ ಸುಭಾಸುರವೆನಿಪ ವಿಭೂತಿಯ ವರಾಗವಿಭೂತಿ ಫಳಂ ಕಮಂಡಳವು(೦) (ಕೆ೩. IV, ೦-೯೦ ; 1204). [ಪೂ₂+ಗಣ]

**ಪೂಗಣೆ**, ಹೂಗಣೆ, ಹೂವುಗಣೆ (ನಾ). (ಮನ್ಮಥನ) ಹೂವಿನ ಬಾಣ : ಅಂತು ತೊಟ್ಟ ಪೂಮುಡುಗೆ ಮದನನ ತೊಟ್ಟ ಪೂಗಣೆಗಳಮಾಗಿರೆ (ಶಂಕರಾ. ೨-೧೬ ಪ) ; ಪೂಗಣೆ ನಾಂಟಿದಂತೆ ತನು ಕಂಪಿಸುತಿರ್ಪುದು (ರಾಧಾಂಪು. ೬೯೬) ; ಮನ್ಮಥನಾಗ ಪೂಗಣೆಗಳನು ಸಂಧಿಸಿಯೆಚ್ಚನಂಗನೆಯ (ಶಕಪ. ೦-೩೬). **ಹೂಗಣೆ** : ಎನ್ನ ತರಳಕಟಾಕ್ಷೇಕ್ಷಣಯುಗವಿರ್ದಂತೀ ಹೂ[ಪಾಠಾಂ. ನನೆ, ಪೂ]ಗಣೆಗಳ ಪರ್ಯಂತವೇಕೆ ಮಕರಧ್ವಜಾ (೧೦೪. ೬-೬೩) ; ಮದನ ಮಸೆದೋಜಿದನು ಹೂಗಣೆ ಹೃದಯವನು ತಾಗಿದುದು (ಕುಮ್ಮಾಕಿ. ೨-೬) ; ಹೂಗಣೆಯ ಪರವರಿಯನುಗುಳುವ ಸೋಗೆಗಂಗಳ ಚೆಳಗ ಹಸರಿಸಿ ರಾಗರಸದೊಳು ಮುಳುಗಾಡಿದಳು ಜನದತ್ತ (ಶಾಕೃಶಾ. ೪ ೨೬). **ಹೂವುಗಣೆ** : ಬನವೆಣ್ಣೆ, ನಿನ್ನೊಳೇನಿದೆ ಎನಗೆ ಎಣೆಯಾಗಿ ? ಮೇಣೆನ್ನೆರ್ದೆಗೆ ಹೂವುಗಣೆಯಾಗಿ ? (ಕಬ್ರಾಂಗ. ೨೯-೬೬೬).

**ಪೂಗಣೆಯವ** = ಪೂಗಣೆಯ : ಪೂಗಣೆಯವನ ಕಿಚ್ಚು ನೂರ್ಮಡಿಯಾಗಿ ಮುಂದೆಯಾಪಾಯವಂ ಪಾಯೆಗೆಸುವುದದನಜಿದು ಕೋಮಳೆ . . . ಮಯುಗಿ (ಶಕಪು. ೯೫-೩). [ಪೂ₂ + ಕಣೆ₁]

**ಪೂಗಣೆಯ**, ಹೂಗಣೆಯ (ನಾ). ಹೂವಿನ ಬಾಣಗಳುಳ್ಳವನು ; ಮನ್ಮಥ : "ಪೂಗಣೆಯನಿಂಗೊಲ್ವಿಲ್ಲಸಕ್ಕುಂ" (ಕಶಾರಂ. ೫) ; ಪೂಗಣೆಯನ ಚಾಮರವಂ ಸೀಗುರಿಯಂ ಪಿಡಿವಳಂತೆ ಸೆಳೆಗೊಂಬು ಗಳಿಂಬಾಗೊತ್ತಿ ಗುಜ್ಜುಮಾವಿನ ಪೂಗೊಂಚಲನುಡಿದು ಪಿಡಿದಳೆ ವೆರಸೊರ್ವಳ್ (೦೦ಶಾಕ. ೦೩-೮೨) ; ಮುಟ್ಟಿತು ಸುಟ್ಟಿತು ತಿಂದು ತೇಗಿದತ್ತಗಿಯದೆ ನಿಂದ ಪೂಗಣೆಯನಂ ಪೆಣೆಗಣ್ಣುರಿ ಹಂಪೆಯಾಳ್ದನಾ (೧೧೪. ೬-೪೬) ; ಎಸೆದುದು ಪೂಗಣೆಯನಾಡುಂಬೊಲನವೊಲು ತತ್ಪುರೋದ್ಯಾನ (ಕಿಶಶ. ೦-೯-೦೩). **ಹೂಗಣೆಯ** : ಸುಗ್ಗಿಯಲಿ ತುಂಬುವೆರೆ ತಂಗಾಳಿ ಹೂಗಣೆಯರೊಡ್ಡಿದುರುಳಿಗೆ ಸಿಲುಕಿ ಅಳುಕದೆ ಇಹರು ಉಂಟೇ (ಕಂಕ್ರಪ್ರಕ. ೯೩-೦೬). [ಪೂಗಣೆ + — ಅ₇]

**ಪೂಗಣ್ಣ** (ನಾ). ೧. ತಾವರೆಯಂತೆ ಚೆಲುವಾದ ಕಣ್ಣುಗಳುಳ್ಳವನು ; ಕಮಲಲೋಚನ ; ವಿಷ್ಣು. ೨. ಕಣ್ಣಲ್ಲಿ ಹೂವು ಬಿದ್ದವನು ; ಕಣ್ಣಿನ ಕಾಚರೋಗವುಳ್ಳವನು. ೧, ೨ : ಅಳಿಯು ಪೂಗಣ್ಣನೆನ್ನೀ ಮಗಳ ಚಪಳೆ ಪುತ್ರಂ ಕರಂ ರಾಜಯಕ್ಷ್ಮಾಕುಳನೆನ್ನೈಶ್ವರ್ಯದಿಂ ನಿರ್ಜರರ ಕವರ್ದರ್ . . . ಎಂದೆಂದೋಳಗಂಭೋರಾಶಿ ಚಿಂತಾಗ್ನಿಯನೆ ತಳೆದಪೋಲೌರ್ವನಂತಸ್ಮಿರ್ಕಾಂ (ರಾಶಕೀ. ೦-೦೦೨). [ಪೂಗಣ್ + —ಅ₇]

**ಪೂಗನಸು**, ಹೂಗನಸು (ನಾ). ಹಿತಕರವಾದ ಸ್ವಪ್ನ; ಸುಖಕರವಾದ ಕನಸು : ಪಣ್ಣಾಗಲಿರ್ಪೊಂದು ಸಿರಿಯ ಪೂಗನಸಿಂದು ತನ್ನಿಷ್ಟದಾದರ್ಶಮಂ ಪೂಜಿಸೋಲೈಸಿ ಬೆಂಬಾಲಿವುದೊ (ಶ್ರೀರಾಮಪ. ೦೩೬-೬೨). **ಹೂಗನಸು** : ಇದಿ ಪರುಷದ ಹೊಸ ಹರುಷಕೆ ಹೂಗನಸಿನ ತೇರು (ಕಂಮು. ೯ ೩).

[ಪೂ₂ + ಕನಸು]

**ಪೂಗಫಲ**, ಪೂಗಫಳ (ನಾ). ಅಡಕೆ ; ಕ್ರಮುಕ : ಅತಿಮಧುರ ಪೂಗಫಲಂಗಳೊಳಂ ಸರಸನಾಗವಲ್ಲೀದಳಂಗಳೊಳವೆಸೆವ ತಾಂಬೂಲಿಕಾನಿಕೇತನಂಗಳೊಳ್ (ಕ್ಷತ್ರಚೂ. ೨-೮೦ ಪ). **ಪೂಗಫಳ** : ಕುಲುಮೆಯ ದುಗ್ಧದೊಳೊಂದಿರೆ ಮಲವು ಸೂಟ್ ತೊಯ್ದ ಪೂಗಫಳಮಂ ಪೋಣ್ ಪಿಪ್ಪಲಿಯಂ ಬಿಸುನೀರೊಳ್ ಕುಡಿಯಲೊಡಂ ಪ್ಲೀಹಾದಿ ಜಠರರೋಗಂ ಕೆಡುಗುಂ (ಕೋಶೋಕಿ. ೯-೦೨೩) ; ಗಿರಿ ಗಿರಿಮಲ್ಲೆ ಪೂಗಫಳಮಂ ಕಳಹಂಸೆಗೆ ಹಂಸಸಬ್ಬಕಂದಳಮನಿಭಂ ಕರೇಣಗೆ ಲವಂಗದಳಂಗಳನೀವ ಚಿತ್ರವಂ ತಳೆದು ವಿಳಾಸವಂ ತಳೆದ . . . ಮಣಿಭಿತ್ತಿ ಚೆಲ್ವನೊಳಕೊಂಡೊಳ ಕೊಂಡುದಪೂರ್ವಭಿತ್ತಿಯಂ (ಮಲ್ಲಿ. ೨-೬೩). [ಸಂ.]

**ಪೂಗಫಳ** 'ಪೂಗಫಲ' ನೋ.

**ಪೂಗರಡಿಗೆ** (ನಾ). ಹೂವಿನ ಬುಟ್ಟಿ ; ಪುಷ್ಪಕರಂಡಕ : ಲಿಂಗವಂ ಮೆಟ್ಟಿ ಪುಷ್ಪದ ದಂಡಿ ಲಿಂಗವಂ ಪೂಗರಡಿಗೆಯಲಿ ಬಡಿದು ಅಂಗುಗದ್ಮನ ಗುರುವ ಶಿವ ಕೋಪಿಸ್ (ಕಬಸ. ೩೬-೯೬). [ಪೂ₂ + ಕರಡಿಗೆ (<ಕರಂಡಿಗೆ)]

**ಪೂಗಲ್ಲು**, ಹೂಗಲ್ಲು (ನಾ). ಹೂವಿನಾಕಾರದ ಪಾಣಿಪೀಠದ ಕಲ್ಲು : ಅಗಳುಂ ನಿಮ್ಮುತ್ತವಮಾಂಗದ ಭಾಗಕೀ ಕಲ್ಲುಗಳ ಪೂ[ಪಾಠಾಂ. ಹೂ] ಗಲ್ಲಾಗಿಯಲ್ಲಾ ದೇಗುಲಂಗಳೊಳಿರಿಸಿ ಪೂರೆ (ಶಕಪು. ೫೦ ೬೩) ; ಗಮನಿಸುವ ಲಿಂಗಸಮುಚ್ಚಯಂ ಪೂಗಲ್ಲನಾಟ್ ಕಿಡನೂಂಕಿ ಪೋಣಮುಡುವ ಅಚ್ಚಲಿಂಗವ (ಶಕಪು. ೫೬-೯೩). **ಹೂಗಲ್ಲು** : ಶಿವನ ಸದ್ಭಕ್ತನೆಂದೆನಿಪ ವೀರಣ್ಣನುಟ್ ಶಿವನಿಳಯದಲ್ಲಿರ್ದ ಹೂಗಲ್ಲ ಹಾಜಿಸುತೆ ಶಿವಲೋಕಕ್ಕೈದಿದೆಡೆಯಂ ನೋಡಿ (ಶಿಕ್ಕನೃ. ೩-೨). [ಪೂ₂ + ಕಲ್ಲು (<ಕಲ್₂)]

**ಪೂಗವನ** (ನಾ). ಅಡಕೆಯ ತೋಟ : ಆ ಪುರದುಪವನದೊಳ್ . . . ಪಂಚಬಾಣ ಕೃಪಾಣ ಪಟ್ಟಿರ್ದೊಡನೆ ಕೊನೆಯ ಬಿಟ್ಟಿಂ ಕೊನೆದು ತೂಗುವ ಪೂಗವನವಿಲ್ಲ (ಕಂಕಾಪಪ. ೧-೦೦೬ ಪ) ; ಫಳಭರದಿಂ ಮನಂಗೊಳಿಪ ಪೂಗವನಂ . . . ಬನವಾಸಿದೇಸದೊಳು (ಎಕ. VIII. ಸೊರಬ. ೨೬೩-೯೩ ; ಸು. 1165) ; ಪರಿಪಕ್ವಾಂಬುವನೂಡಿ ಪೂಗವನಮಂ ಕಿಟ್ಟಿಕ್ಕಿ . . . ಮೆಟಿದುದುರ್ವಿಜಂಧುರಂ ಸಿಂಧುರಂ (ಕ್ಷತ್ರಚೂ. ೩-೭೯). [ಸಂ.]

**ಪೂಗವಸರ** (ನಾ). ಅಡಕೆಯ ಅಂಗಡಿ : ನಾಗವಲ್ಲಿಯ ದಲದೊಡಗೂಡಿ ನಲ್ಲರ ಬಾಯ್ಬೆಟಗಳ ರಾಗವಮಾಡುವ ಪೂಗವಸರ (ಹರಿಕ. ೦-೦೦೨).

[ಪೂಗ + ಪಸರ]

ಗೀದೇಜಗಳಲ್ಲಿ ಕರ್ವಿಲ್ಲು ಮೊರೆವ ಬಾಲೀವದೆ ಪೂಗೋಲ್ಗಳಿಲ್ಲಿ (ಶಿಖಹಕ. ೬-೭) ; ಖಳಂ ಕೈಮಾಡುವಂಗಜವ ಪೂಗೋಲ ಗಾಯದಿಂ ವ್ಯಮಾಜಿದು . . . ವಿಮೋಗನ ರಾಣಿಯಂ ನಾಡಿಸಿದೊಡೆ (ಕೃಖಣ. ೦೫-೨೭). **ಪೂಗೋಲು :** ಕಿಚ್ಚುಗಣ್ಣನ ತಪವಳಿವುದು ಪೂಗೋಲೊಳೆಚ್ಚು ಮನ್ಮಥ **ಸೋಡಿಸಲು** (ಶಿಖಹಕ. ೩-೦೬) ; ಬಾಳುಬಟ್ಟಲ ಪಿಡಿದೊಮ್ಮೊಮ್ಮೆ ಪೊನ್ನ **ಪೂಗೋ**ಲಲು ಪೂಂಬಾರಿಗೆಯಮಂತೊಮ್ಮೆ ಕಾಲಿಟ್ಟು ಹೊಳೆವುತಿದ್ದರು ಮನಸಿಜನ ಮೋಸಾಳುಗಳಂತೆ ದಿಟ್ಟೆಯರು (ಶಿಕ. ೦೨-೯೦). [ಪೂ$_{2}$ + ಕೋ:ಲ್$_{1}$]

**ಪೂಗೋಲ** (ನಾ). ಹೂವಿನ ಬಾಣಗಳುಳ್ಳವನು ; ಮನ್ಮಥ : "ಮನ್ಮಥನೊಳಂ ಪೂಗೋಲನೆಂದಾಯ್ತು" (ಕಶಾಕ. ೯೨) ; ಪೊಸ ಪೂಗೋಲನಂತೆಸೆವ ಜೀವಣನು ಶಶಿಮುಖಿ ಕಂಡು ಮದನನ ಕುಸುಮ ಶರಗಳಿಗೆ ತನುವಿತ್ತು ವಿರಹದುಬ್ಬಸದೊಳಗವಳೊಱಗಿದಳು (ಜೀವಂಸಾಂ. ೦೬-೦೬) ; ದಾಯೆನುತೆ ಪೂಗೋಲನ ಬಿಗಿಯುಪ್ಪಿ ಮುಂಗಾರಿಯಾದಾಗ ಮಾಂತರವ ಪೇಳಿದಳು (ಶೋಹಕ. ೦೦-೭೯) : ಕಾಮಿನಿಯರೊರ್ವಳ್ ಲೀಲೆಯಿಮಲರ್ವಿಲ್ಲಂ ಪೂಗೋಲಂಗಿರದೆತ್ತಿ ಕೊಡುವ ರತಿಯಂ ಪೋಲ್ತಳ್ (ಶೃಷ. ೯-೬೭). [ಪೂಗೋಲ್ + –ಅ$_{7}$]

**ಪೂಗೋಲು** 'ಪೂಗೋಲ್' ನೋ.

**ಪೂಗೌಂಗು** (ನಾ). ಮೃದುವಾದ ಅಡಕೆ : ಉತ್ತಮವಾದ ಅಡಕೆ : ಲತೆಯೊಳಲತೆ ಮಾವಿಮ್ಮಾವು ತೆಂಗು ಚೆಂದೆಂಗು ಕೌಂಗು ಪೂಗೌಂಗು . . . ಪಲಸು ಬಕ್ಕೆವಲಸಾ ಬಸದೊಳ್ (ಜಗಹ. ೨-೦೯).

[ಪೂ$_{2}$+ಕೌಂಗು (<ಕವುಂಗು)]

**ಪೂಚಂಡು** 'ಪೂಚೆಂಡು' ನೋ.

**ಪೂಚೆಂಡು**, ಪೂಚಂಡು, ಹೂಚೆಂಡು (ನಾ). ೧. ಹೂವುಗಳಿಂದ ರಚಿಸಿದ ಚೆಂಡು; ಹೂವಿನ ಚೆಂಡು : ಬಟ್ಟಲುಜಮ್ಮಗವತ್ತ ಪೂಚೆಂಡು ಪನ್ನೀರ ಪೊಟ್ಟಣ ಯಕ್ಷಕರ್ದಮವ ಬಟ್ಟು ಕಂತುಕದಿಂದೆ ಬಲ್ಲೊರೆ ಬಿದಿರುವಂತಿಟ್ಟಾಡಿದಾಡು ಸಖಿನಿವಹ (ಶೋಹಕ. ೦೯-೭೭). **ಪೂಚೆಂಡು :** ೨. ಹೂವಿನ ಗೊಂಚಲು ; ಪುಷ್ಪಗುಚ್ಛ : ಮೆಟ್ಟಿದ ಪೊನ್ನ ಪಾವುಗೆ ಕರದೊಳಗಳವಟ್ಟ ಸುಪಗೆಯ ಪೂಚೆಂಡು ತೊಟ್ಟ ಮುತ್ತಿನ ಪೈಠಣಿಯಿಂದ ಚೆಲುವಿನ ಕಟ್ಟೆಜಕಡೆ ನಡೆತಂದ (ಶಂಕಹ. ೯-೯೯). **ಹೂಚೆಂಡು :** ೩. ಮೇಲು ಮುತ್ತಿನ ಗೊಂಡೆ! ಮಲ್ಲಿಗೆಯ ಹೂಚೆಂಡೆ! ಹಾಲಾದೆ ಅಕಟ-ನಾ-ನಿಂದೋಡಾದೆ (ಶಂಕು. ೯೨-೦). [ಪೂ$_{2}$+ಚೆಂಡು (<ಸೆಂಡು)]

**ಪೂಜಕ** (ಗು). ೧. ಪೂಜಿಸುವ ; ಆದರಿಸುವ : ಪೂಜಿತನಪ್ಪ ಶಿವಲಿಂಗಕ್ಕೆ ಸಂತತವು ನವಿಸಿ ಪೂಜಿಸಿ ಉಂಬ ಪೂಜಕಸಮಿತಿ ದೊರೆಯೇ (ಚಕು. ೩೯-೨೯). (ನಾ). ೨. ಪೂಜೆ ಮಾಡುವವನಂ ; ಆರಾಧಿಸುವವನಂ : ಸ್ಥಾವರಜಂಗಮವಱಿಯದ ಪೂಜಕ ನಾನು (ಚಪ. ೬೭೯) ; ಲೌಕಿಕಾರ್ಚನೆಯು ಮಾಡುವ ಪೂಜಕರ ಮೆಚ್ಚನೆಂದ . . . ನಿಃಕಳಂಕ ಮಲ್ಲಿಕಾರ್ಜುನಾ (ಶೋಕಪು. ೬೦ ೨೩೦) ; ಸಾಧ್ಯ ಸಾಧಕ ಪೂಜ್ಯ ಪೂಜಕ ದೇವ ದೇಹಿಕ ಎಂಬ ಬರಾರೂ ಇಲ್ಲದ ಎರಡಿಲ್ಲದ ನಿರಾಳ ನೀನೆ (ಸಿದ್ಧೇಪ. ೦೭೭-೩೭೦). [ಸಂ.]

**ಪೂಜನ** (ನಾ). ೧. ಪೂಜಿಸುವುದು; ಆರಾಧಿಸುವುದು. ೨. ಆರಾಧನೆ; ಪೂಜೆ : ಸಿದ್ಧಕೂಟದ ಜಿನಬಿಂಬಪೂಜನಾ [ಶಾಕಾಂ. ಪೂಜಾ] ನಂತರಂ . . . ಆಕಾಶಚಾರಣಋದ್ಧಿಪ್ರಾಪ್ತರಾಗಿರ್ದು (ಶಾಪುಂಕ. ೦೭೯). [ಸಂ.]

**ಪೂಜನೆ** (ನಾ). = ಪೂಜನ ೨ : ದೇಗಬೇಗ ಅರ್ಚನೆ ಪೂಜನೆಯ ಮಾಡುವುದು (ಬಸವ. ೦೭೬). [ಸಂ. ಪೂಜನಾ]

**ಪೂಜಲ್ಲಿ**, ಹೂಜಲ್ಲಿ (ನಾ). ಹೂವಿನ ಕುಚ್ಚು : ರಂಗವಲ್ಲಿಗಳನಿಟ್ಟು ಪೂಜಲ್ಲಿಗಳಂ ಬಿಟ್ಟು (ಅದ್ಭುತ. ೦೦-೨೬). **ಹೂಜಲ್ಲಿ :** ಬಳ್ಳಿ ಬಳ್ಳಿ ಹೂಜಲ್ಲಿಯಲ್ಲಿ ಮುಂಬನಿಯ ತುಳುಕಿ ಚೆಲ್ಲು (ಕಮಳ. ೭-೨೦). [ಪೂ$_{2}$ + ಜಲ್ಲಿ$_{2}$]

**ಪೂಜಾಕಾರಿ** (ನಾ). ಅರ್ಚಕ ; ಪೂಜಾರಿ : ನಖರ ಜಿನಾಲಯದ ಪೂಜಾಕಾರಿಗಳು ಒಡಮ್ಬಟ್ಟು ಬರಸಿದ ಸಾಸನದ ಕ್ರಮವೆನ್ತೆನ್ದಡೆ (ಎಕ. II, ೩೩೬-೬; 1279) ; ಕೊಡಕಣಿಯ ರಾಮಯಿದೇವರ ಪೂಜಾಕಾರಿ ರಾಮಯಿದೇವನ ಅಳಿಯ ಬೊಮ್ಮಿದೇವಗೆ ಕನ್ಯಾದಾನವಾಗಿ ಮಾಡುವೆಯನು ಮಾಡಿ (ಎಕ. VIII, ಸೊರಬ. ೦೯-೩೧ ; 1449). [ಸಂ. ಪೂಜಾಕಾರಿನ್]

**ಪೂಜಾಗಜ** (ನಾ). ರಾಜನ ಪಟ್ಟಾಭಿಷೇಕಕಾಲದಲ್ಲಿ ಪೂಜೆ ಮಾಡಿಸಿಕೊಳ್ಳುವ ಆನೆ ; ಪಟ್ಟದಾನೆ ; ಪಟ್ಟವರ್ಧನ : "ಪೂಜಾಗಜಮೆನಲ್ ಪಟ್ಟವರ್ಧನಾಖ್ಯಂ" (ಅಭಿ. ೯೦) ; "ಪೂಜಾಗಜಮೆಂದೆನಿಪ್ಪುದು ಪಟ್ಟವರ್ಧನ ನಾಮ" (ಕನ್ನಡಂ. ೩೯). [ಸಂ.]

**ಪೂಜಾಗಾರ** (ನಾ). ದೇವರ ಪೂಜೆ ಮಾಡುವ ಸ್ಥಳ ; ದೇವಾಲಯ : ನಗರಗಳಲ್ಲಿ (ಬಹುಮಟ್ಟಿಗೆ ಹಳ್ಳಿಗಳಲ್ಲಿಯೂ) ಮೂರ್ತಿಯುತ ಅಥವಾ ಮೂರ್ತಿಗಳಿಲ್ಲದ ಪೂಜಾಗಾರಗಳಿದ್ದುವು. ಇವುಗಳಿಗೆ ಆಯತನ ಅಥವಾ ಚೈತ್ಯಗಳೆಂಬ ಹೆಸರಿತ್ತು (ಕನ್ಕಾ. ೭೦). [ಸಂ.]

**ಪೂಜಾದ್ರವ್ಯ** (ನಾ). ಅರ್ಚನೆಗೆ ಬಳಸುವ ನೀರು, ಹೂವು, ಗಂಧ, ಪತ್ರೆ, ಧೂಪ, ದೀಪ ಮೊದಲಾದ ಪರಿಕರ : ಅರಮನೆಯ ಸುಮಂಗಲೆಯರೂ ಬ್ರಾಹ್ಮಣರೂ ವೇದಘೋಷಗಳೊಡನೆಯೂ ಪೂಜಾದ್ರವ್ಯಗಳೊಡನೆಯೂ ನಂದಿನಿಯ ಬಳಿ ಸಾರಿದರು (ಮಹಾಂ. ೨೯). [ಸಂ.]

**ಪೂಜಾಫಲ** (ನಾ). ಪೂಜೆ ಮಾಡುವುದರಿಂದ ಉಂಟಾಗುವ ಪರಿಣಾಮ,–ಸಂಪಾದಿಸುವ ಪುಣ್ಯ : ನಹುಷಾವನೀಶನೆಂಬವನಿತ್ತರ್ ಪೂಜಾಫಲದಿಂ ಸಗ್ಗಕ್ಕೋಜೆಯಿನೆಯ್ದಿರ್ಪ ಸಮಯದೊಳ್ (ಜಾಂಶಸ್ಯ. ೬-೨-೩೭) ; ಹಾಗಾದರೆ ಪೂಜಾಫಲದಲ್ಲಿ ನನಗೂ ಅರ್ಧ (ಶಾಬಂಕ. ೮೦-೯). [ಸಂ.]

**ಪೂಜಾಮಂದಿರ** (ನಾ). ದೇವರ ಪೂಜೆಯನ್ನು ಮಾಡಲು ಇರುವ ಕೋಣೆ : ಬೆಳಕಿನ ಪೋಡದ ನಡುವೆ ತೂಗುವ ಹಸಿರು ಮನೆಯಲ್ಲಿ ಮೇನಕೆಯು ತನ್ನ ಪೂಜಾಮಂದಿರವನ್ನು ಕಟ್ಟಿದ್ದಾಳೆ (ಮಹಾಂ. ೦೬೮).

[ಸಂ.]

**ಪೂಜಾಮದ** (ನಾ). [ಜೈನ] ಎಂಟು ಬಗೆಯ ಮದಗಳಲ್ಲಿ ಒಂದು ; ತಾನು ಪೂಜ್ಯನೆಂಬ ಗರ್ವ : ಪೂಜಾಮದ . . . ತನಗೆ ಪವಾನ ಮರ್ಯಾದೆಗಳು ದೊರಕಿದವೆಂಬ ವಿಷಯದಲ್ಲಿ ಹಲವರಿಗೆ ಸೊಕ್ಕು ಬರುತ್ತದೆ. ಇಂಥ ಸೊಕ್ಕನ್ನು ಸಮ್ಯಗ್‌ದೃಷ್ಟಿಯು ಮಾಡುವದಿಲ್ಲ (ಜ್ಯಶಕ. ೮೦). [ಸಂ.]

**ಪೂಜಾಯ** (ನಾ). ಅರ್ಚನೆಯ ಕ್ರಮ ; ಪೂಜಾವಿಧಿ : ರಾಯನು ರಾಯನ ಸುತರು ವಸ್ತುಗಳ ಪೂಜಾಯವಱಿದು ನೀಡಿ ಕೊಡಲು ತಾಯಿ ಪೂಜಿಸಿದಳಾ ಸ್ವಾಮಿಯನು (ಶಚಹ. ೩೯-೨೦). [ಸಂ.]

**ಪೂಜಾರಾಧನ** (ನಾ). [ಜೈನ] ನಲವತ್ತೆಂಟು ಬಗೆಯ ದೀಕ್ಷಾನ್ವಯ ಕ್ರಿಯೆಗಳಲ್ಲಿ ಒಂದು ; ಗುರುಮುಖದಿಂದ ಧರ್ಮವನ್ನು ತಿಳಿಯುವುದು: ಎರಡನೆಯ ದೀಕ್ಷಾನ್ವಯಕ್ರಿಯೆಯೊಳಗವತಾರಮುಂ ವೃತ್ತಿ(ಧೃತಿ)ಲಾಭಮುಂ ಸ್ಥಾನಲಾಭಮುಂ ಗುಣಗ್ರಹಣಮುಂ ಪೂಜಾರಾಧನ [ಶಾಕಾಂ. ಪೂಜಾರಾಧ್ಯ]ಮುಂ . . . ಉಪಯೋಗಿತ್ವಮೆಂಬೆಂಟು ಗರ್ಭಾನ್ವಯ ಕ್ರಿಯೆಯೊಳ್ ಪೇಟ್ದು ಉಪನೀತಂ ಮೊದಲಾಗೆ ನಿರ್ವೃತ್ತಿಪರ್ಯಂತಮಪ್ಪ ನಾಲ್ವತ್ತುಮಂತು ನಾಲ್ವತ್ತೆಂಟು ದೀಕ್ಷಾನ್ವಯಕ್ರಿಯೆಯೊಳ್ (ಶಾಪುಂಕ. ೨೦೨). [ಸಂ.]

**ಪೂಜಾರಿ** (ನಾ). ಅರ್ಚಕ ; ಪೂಜಕ : "ಪೂಜಕಃ, ಪೂಜಾರೀ, ಪೂಜಾಕಾರಃ—ಈ ೩ ಅರ್ಚಕಂ" (ಅಭಿ. ೨೩೬) ; ದೇವರ್ಗ್ಗೆ ಭಕ್ತರಪ್ಪರನೆ ಪೂಜಾರಿ ಮಾಡಿ . . . ನಡಸುವುದು (ಎಕಲ್ಯಾ. ೯-೦೬ ; 1083) ; ಅಚ್ಚಗುಗ್ಗುಳಮನರ್ಪಿಸುತೋಹಿಲದೇಮನುದ್ದಂಡಭಕ್ತಿಯಿನಾ ಸೋಮೇಶ್ವರನ ಪೂಜಾರಿಗಳ್ಕಂಡು (ಅದ್ಭುತ. ೦೦-೯೬ ಶ) ; ಪೂಜಾರಿಯು ಕರ್ತವ್ಯ

ಭ್ರಷ್ಟನಾದರೆ ಅವನನ್ನು ದೇವರು ಶಿಕ್ಷಿಸುತ್ತಾನೆ (ಹುಾ. ೨೬) ; ದೇವರು ವರ ಕೊಟ್ಟರೂ ಪೂಜಾರಿ ಕೊಡ (ಗಾದೆ). [<ಸಂ. ಪೂಜಾಕಾರಿನ್. / ಓಂ. ತಮಿಳು. ಪೂಜಾರೀ. /ತೆಲು. ಪೂಜಾರಿ]

**ಪೂಜಾರಿಕೆ** (ನಾ). ಅರ್ಚಕನ ಕೆಲಸ ; ಪೂಜೆ ಮಾಡುವ ವೃತ್ತಿ : ನವಿರಂಗಳ ಆಯಿನೂರ್ಬ್ಬರ ಸಮಕ್ಷದಲ್ಲಿ ಕೊಟದು ೧೧ ಪೂಜಾರಿಕೆಗೆ ೧ (ಶಾಸ. XX, ೧೦೨-೧೪ ; 1132) ; ನಿಮ್ಮ ಓರಿಯುವರೇನೋ ನೀಲಕಂಠನ ಗುಡೀಲಿ ಪೂಜಾರಿಕೆ ಮಾಡ್ತಿದ್ವರಂತಲ್ಲ (ಶೇಃ. ೯೯). [ಪೂಜಾರಿ + —ಇಕೆ]

**ಪೂಜಾರ್ಹ** (ನಾ). ೧. ಪೂಜೆಗೆ ಯೋಗ್ಯವಾದುದು : ಕಳಾಹೀನವಾದ ಆ ಮೂರ್ತಿಯು ಪೂಜಾರ್ಹವಾಗುವುದಿಲ್ಲ (ಕಾರಂ. ೭೬). ೨. ಮಾನ್ಯನಾದವನು ; ಪೂಜೆಗೆ ಯೋಗ್ಯನಾದವನು : ಎಲೈ ಅಗ್ನಿಯೇ, ನೀನು ಅಲೌಕಿಕವಾದ ಪ್ರಕಾಶವುಳ್ಳವನು. ಪೂಜಾರ್ಹನು (ಋಗ್ವೇ. ೨೩). [ಸಂ.]

**ಪೂಜಾವಚನ** (ನಾ). ಗೌರವಾರ್ಥವಾಗಿ ಬಳಸುವ ಮಾತು : "ತತ್ರಭವಾನ್ ಭಗವಾನ್—(ಇವೆರಡುಂ) ಈ ೨ ಪೂಜಾವಚನಂ. ಪಾದಃ, ದೇವಃ, ಭಟ್ಟಾರಕಃ—ಈ ಮೂಱುಂ ಪೆಸರ ಕಡೆಯೊಳ್ ಪೂಜಾವ(ಚ)ನಂ" (ಶಬ್ದಮ. ೨೫-೦೫೪). [ಸಂ.]

**ಪೂಜಾವಾಜಿ** (ನಾ). (ರಾಜನ ಪಟ್ಟಾಭಿಷೇಕಕಾಲದಲ್ಲಿ) ಪೂಜೆ ಮಾಡಿಸಿಕೊಳ್ಳುವ ಕುದುರೆ ; ಪಟ್ಟದ ಕುದುರೆ : ಪೂಜಾವಾಜಿ ವಿಲೋಚನವಿಗಳದಶ್ರುಬಿಂದುಗಳನಾನಂದಾಶ್ರುಬಿಂದುಗಳೆಂದುಂ . . . ಅಭೂತಪೂರ್ವಮಪ್ಪುತ್ಪಾತಂಗಳನೇನುಮಂ ಬಗೆಯದೆ ಕೋಪಮನೆ ಬಗೆದು (ಶಂಖಾವ. ೦೪-೦೨೫ ವ). [ಸಂ.]

**ಪೂಜಾವಿಧಾನ** (ನಾ). ಪೂಜೆ ಮಾಡುವ ಕ್ರಮ : ಇಂದ್ರ ಚಕ್ರವರ್ತ್ಯಾದಿ ನಿತ್ಯನಿರ್ವರ್ತ್ಯಮಾನಂ ಮಹಾಮಹಸರ್ವತೋಭದ್ರಾದಿಕಂ ಪೂಜಾವಿಧಾನ ಮನೇಕವಿಧಂ (ಶಾಂತಿಪು. ೭-೯೪ ವ). [ಸಂ.]

**ಪೂಜಾವಿಧಿ** (ನಾ). ಆರಾಧನೆ; ಪೂಜಾಕಾರ್ಯ : ದ್ವಿಜರಿಂ ಪೂಜಾವಿಧಿ ಮಂತ್ರಪೂರ್ವಕಂ ಬಾಗಿಲೊಳ್ ತೋರಣಂಗಟ್ಟಿ . . . ಗೃಹವೇದಿಗಳಿಂ ಪ್ರಯೋಗಿಸುವುದು ಪ್ರೀತಿಕ್ರಿಯೆ (ಕಾಮಶಾ. ೨೦೬) ; ಯಾರ ಹೆಸರಿನಲ್ಲಿ ಅಷ್ಟೆಲ್ಲ ಪೂಜಾವಿಧಿಗಳು ಜರುಗುತ್ತಿದ್ದುವೋ ಅವೆಲ್ಲ ಆ ಯೋಸುವಿನ ಮುಖಕ್ಕೆಸೆದ ಪರಿಹಾಸದಂತೆ ಮೈತಳೆದ ಪಾಷಂಡಿತನದಂತಿದ್ದುವು (ಕ್ರಿಸ್ತು. ೦೬೯). [ಸಂ.]

**ಪೂಜಿ** (ನಾ). ೧. ಬಿಂದು ; ಅನುಸ್ವಾರ : ಜಾಜಿ ಪ್ರಶ್ನಾರ್ಥಕವು. ವಿಷ್ಣುಕ್ರಾಂತಿ ವಿಸರ್ಗ, ಪಾರಿಜಾತವೆ ಪೂಜಿ, ಅನುಸ್ವಾರವು ! (ಕರಿಹ್ಯಾ. ೨೫-೦೨). ೨. ಸೊನ್ನೆ ; ಶೂನ್ಯ : ಉತ್ತರ ನೂರು ಬರಬೇಕು. ಹತ್ತು ಬರೆದಿರುವಿ. ಮುಂದಿನ ಪೂಜಿ ಸ್ವಲ್ಪ ಅಳಿಸಿದ್ದೀತು! (ಸಂಶ. ೯೭) ; ಅವನ ಸಂಬಳ ದೊಡ್ಡದು, ಭೂಮಿಯ ಉತ್ಪನ್ನ ಬೇಕಾದಷ್ಟು, ಆದರೆ ಉಳಿಕೆ ಮಾತ್ರ ಪೂಜಿ (ಶಪನ. ೩೦). [<ಪೂಜೆ]

**ಪೂಜಿಗ** (ನಾ). ಅರ್ಚಕ ; ಪೂಜಾರಿ : ಆ [ಪೂ]ಜಿಗಂಗೆ ಪಾದ್ದಳಿ ಕಾಱಿರ್ವ್ವರ್ಗ್ಗೆ ಏರೆ ಮತ್ತರ ೨೭ ಪೊಗೆ ಮಾತ್ತ ೨೦ (ಶಾಸ. XX, ೩೦೦-೪ ; 12ನೆಯ ಶ). [ಪೂಜೆ + —ಇಗ]

**ಪೂಜಿತ** (ಗು). ೧. ಅರ್ಚನೆಯನ್ನು ಪಡೆದ; ಪೂಜೆ ಮಾಡಿಸಿಕೊಂಡ: ಈ ವಿಚಾರಶಾಸ್ತ್ರವು ವೇದದಂತೆ ಪೂಜ್ಯವಾದುದರಿಂದ ಪೂಜಿತ ವಿಚಾರ ಶಾಸ್ತ್ರವೆಂದು ಇದನ್ನು ಕರೆಯುತ್ತಾರೆ (ದಂಶಾ. ೦೯೯). (ನಾ). ೨. ಪೂಜೆಯನ್ನು ಪಡೆದುದು : ಸುರಪತಿಪೂಜಿತಂ . . . ಜಿನಸೇನಮುನೀಂದ್ರಪದಾಂಬುಜದ್ವಯಂ (ಆಪು. ೧-೭). ೩. ಪೂಜೆಯನ್ನು ಹೊಂದಿದವನು ಪೂಜ್ಯ : "ಪೂಜಿತಃ, ಅಪಚಿತಃ—ಈ ೨ ಪೂಜೆ ಪಡೆದವಂ" (ಶಬ್ದಮ. ೬೩ ೨೨೯) ; ಈ ದಿವ್ಯತೂರ್ಯಸ್ವರವೂ, ದಿವ್ಯಗಾಯನವೂ ಇವುಗಳಿಂ ಸುಗತನಿದೊ ಸತ್ಕೃತಂ, ಗುರುಕೃತಂ, ಮಾನಿತಂ, ಪೂಜಿತಂ ತಾನಲ್ಲ! (ಶ್ರೀಕಾ. ೬೩-೩೦೨). ೪. ಗೌರವ; ಮರ್ಯಾದೆ : 'ಪೂಜಿತ ಗೆಡಿಸು' ಪರಾ. [ಸಂ.]

**ಪೂಜಿತಗೆಡಿಸು** (ಕ್ರಿ). ಗೌರವವನ್ನು ಇಳಿಸು ; ಮರ್ಯಾದೆ ಕೆಡಿಸು; ಅಗೌರವಕ್ಕೆ ಗುರಿಮಾಡು : ರಾಜವಂಶೋದ್ಭವರನು ರಾಜರೆನ್ನದೆ ಪೂಜಿತಗೆಡಿಸಿ ವೇಳ್ವಾಗ ರಾಜತ್ವಕದು ಭಾಗವಲ್ಲವೆ (ಜೈಮಿ. ೩೬-೦೦೦). [ಪೂಜಿತ + ಕೆಡಿಸು]

**ಪೂಜಿಸು** (ಕ್ರಿ). ೧. ಅರ್ಘ್ಯ, ಪಾದ್ಯ, ಗಂಧ, ಮಾಲೆ ಮೊದಲಾದುವುಗಳಿಂದ ಸತ್ಕರಿಸು ; ಪೂಜೆ ಮಾಡು : ಪ್ರತಿವಾಸರೋಗಂ ನಿಂದೊರು ದೇವರ್ಕಳುಂ ಮನುಷ್ಯರ್ಕಳುಂ ಬಂದು ಓರಿದಪ್ಪ ಪೂಜೆಯಂ ಮಾಡಿಯ(ಲ್)ಚಿಸಿ ಪೂಜಿಸಿ ಬಂದಿಸಿದೊಡೆ (ವಡ್ಡಾರಾ. ೬೯-೨೭) ; ಎನಿಸು ಕಾಲ ನಿಮ್ಮ ಪೂಜಿಸಿ ಐದನಯ್ಯಾ ಮನದಲ್ಲಿ ದೃಢವಿಲ್ಲದನ್ನಕ್ಕ (ಬಸವ. ೯೯) ; ಕರ್ಣನಾಯುಧಶಾಲೆಯಲಿ ಶುಚಿಯಾಗಿ ಶಸ್ತ್ರಾಸ್ತ್ರವನು ಪೂಜಿಸಿದ (ಕುವ್ಯಾ. ೯-೬) ; ಪೂಜಿಸುವರೆಲ್ಲರೂ ಪೂಜ್ಯರೆನಗೆ : ಪೂಜ್ಯರನು ಪೂಜಿಸುವುನೂ ಪೂಜೆ ನಿನಗೆ ! (ಅಶೇ. ೩೬-೦). ೨. ಗುಣಿಸು; ಗುಣಾಕಾರವಮಾಡು : "ಕಾದಿಸು ಪೂಜಿಸು ಉತ್ತಮದಿಂ ಪೇಟ್ ಮೊದಲ ಗುಣಕಾರಂಗಳ್" (ಕ್ಷೇತ್ರಗ. ೦೦-೦೦). [ಪೂಜನ + —ಇಸು]

**ಪೂಜು** (ಕ್ರಿ). ೧. ಪೂಜೆಮಾಡು ; ಅರ್ಚಿಸು : ಹವಣಗಾರನು ಕಾರ್ಯ ಮಾಳ್ಪರೆ ಜವದಿ ಹರಿಯಸು ಪೂಜೆ ನುತಿಸುವ ಕವಡು ಕುಟಿಲಗಳಿಲ್ಲ ಮನದೊಳು ಅರಸಿ ನೋಡಿದಡೆ (ಹಮಚ. ೦೦೬). ೨. ಗೌರವಿಸು; ಮನ್ನಿಸು: ತನ್ನ ಮನೆಯ ಮದುವೆಯೊಳು ಮುಂಗಲದೊಳು ತನ್ನ ಬಾಂಧವರೆಲ್ಲರನು ಅನ್ನಪಾನಂಗಳಿಂದಾದರಿವುದು ಮತ್ತೆ ಪೊನ್ನುಡೆಯಿತ್ತು ಪೂಜುವುದು (ಕಂಠ. ೪-೩೯). [ < ಪೂಜೆ ]

**ಪೂಜೆ** (ನಾ.) ೧. ಅರ್ಚನೆ; ಆರಾಧನೆ : ದೇವರ್ಕಳುಂ ಮನುಷ್ಯರ್ಕಳುಂ ಬಂದು ಓರಿದಪ್ಪ ಪೂಜೆಯಂ ಮಾಡಿ (ವಡ್ಡಾರಾ. ೬೯-೨೬); ಕವಿತೆಯೊಳಾಸೆಗೆಯ್ದು ಫಲವಾವುದೊ ಪೂಜೆ ನೆಗಳ್ತಿ ಲಾಭಮೆಂಬಿವೆ ವಲಂ (ಅಂತ್ಯ. ೦-೩೭); ಒಲವಿಲ್ಲದ ಪೂಜೆ ನೇಹವಿಲ್ಲದ ಮಾಟ ಆ ಪೂಜೆಯು ಆ ಮಾಟವು ಚಿತ್ರದ ರೂಹು ಕಾಣಿರಣ್ಣಾ (ಬಸವ. ೦೨೬). ೨. ಗೌರವ ; ಮನ್ನಣೆ : ಸೆಣಸಿ ಶೂರ ಸಂಗ್ರಾಮದಲಿ ಬಳ್ದೊಡಂ ಬಳ್ದೊಡಂ ಸನ್ಮಾನ್ಯನಾ ಕಲಿಯ, ಮೇಣಾಳಿದ ಪಂದೆಗಳಿಗಾ ಪೂಜೆ ಸಲ್ಲದೈ (ಕಿತ್ತೂಂಗ. ೬೯-೨೦೬೬). ೩. ಸೊನ್ನೆ; ಶೂನ್ಯಚಿಹ್ನೆ: ಎಲ್ಲಕ್ಕೂ ಹತ್ತರಿನ ನಕ್ಷತ್ರವನ್ನು ಹೇಳಬೇಕಾದರೆ ಎರಡರ ಮುಂದೆ ಹದಿಮೂರು ಪೂಜೆಗಳನ್ನಿಡಬೇಕಾಗುವುದು (ಜ್ಯೋತಿಷ್ಯ. ೦೨). ೪. (ಆಲಂ) ಶಾಸ್ತಿ; ಶಿಕ್ಷೆ : ನಿಮ್ಮ ತಂದೆಯವರಿಗೆ ಹೇಳಿ ಬಡಿಸುತ್ತೇನೆ, ನಿನಗೆ ಪೂಜೆ ಆಗುತ್ತದೆ (ರೂಢಿ).

ಪೂಜೆ ಪುನಸ್ಕಾರ, ಪೂಜೆ ಪುರಸ್ಕಾರ = ಅರ್ಚನೆ ; ಆರಾಧನೆ : ಸನ್ನಿವಿಗ್ರಪಿ ನಾಗದೇವಮ್ಮಂ . . . ಮೂಲಸ್ಥಾನದೇವರ್ಗ್ಗಂ ಮಲ್ಲಿಕಾರ್ಜುನದೇವರ್ಗ್ಗಂ ಪೂಜೆ ಪುನಸ್ಕಾರ ನಿವೇದ್ಯಕ್ಕಮಿವು ಬಿಟ್ಟ ದತ್ತಿ (ಎಕ. VI, ಕಡೂರು. ೦೯೨-೦೭; 1196); ತೌರುಮನೆಯಲ್ಲಿದ್ದರೆ ಏನೋ ಒಂದಿಷ್ಟು ಪೂಜೆ ಪುರಸ್ಕಾರಗಳನ್ನಾದರೂ ಮಾಡಬಹುದು (ಶಾತಲ. ೯೯). P ಇದೊಂದು ಕೂಡುನುಡಿ. **ಪೂಜೆ ಮಾಡು** = ೧. ಅರ್ಚಿಸು; ಪೂಜಿಸು; ಆರಾಧನೆ ಮಾಡು: ಶಾಂತಲೆ ಲಕ್ಷ್ಮಿಯರುಬ್ಬರೂ ಸಹಸ್ರಸಹಸ್ರಪುಷ್ಪಗಳಿಂದ ಪರಮಾತ್ಮನ ಪೂಜೆ ಮಾಡಿ ಧನ್ಯರಾದರು (ಶಾಂತಲಾ. ೦೩೦); ಹುತ್ತಕ್ಕೆ ಹಾಲು ಹೊಯ್ದು ಪೂಜೆ ಮಾಡಿದರಂತೆ (ಸನ್ಯಾಸಿ. ೩೦). ೨. (ಆಲಂ) ಶಾಸ್ತಿ ಮಾಡು: ಪಾಠ ಓದದೆ ಇದ್ದುದಕ್ಕೆ ಮೇಷ್ಟರು ಪೂಜೆ ಮಾಡಿದರು (ರೂಢಿ). **ಪೂಜೆ ಹಾಕು** = ೧. ತಾಂತ್ರಿಕ ಪೂಜೆ ಮಾಡಿ ಮೆಟ್ಟಿಕೊಂಡ ದೆವ್ವವನ್ನು ಬಿಡಿಸು : ಪೂಜೆ ಹಾಕಿದ

ಸುಂದರಿಯು . . . ಗುಣಶಾಲಿನಿಯಾಗಿದ್ದುದರಿಂದ ಚಂದ್ರಶೇಖರನ ಯೋಗ್ಯತೆಯನ್ನು ಗ್ರಹಿಸಿ ಅವನನ್ನು ಪೂಜ್ಯಭಾವದಿಂದ ಕಾಣುತ್ತಿದ್ದಳು (ಚಂಶೇಪ. ೨೦೦). [ಸಂ.]

**ಪೂಜ್ಯಭಾವನೆ** (ನಾ). = ಪೂಜ್ಯಭಾವ : ಗಡ್ಡವು ಎದೆಯವರೆಗೂ ಬೆಳೆದಿದ್ದು ನೋಡುವವರಿಗೆ ಒಂದು ಪೂಜ್ಯಭಾವನೆಯನ್ನುಂಟುಮಾಡುತ್ತಿದ್ದುದು (ಆಹು. ೦). [ಸಂ. ಪೂಜ್ಯಭಾವನಾ]

**ಪೂಜ್ಯವಂತ** (ನಾ). ಗೌರವಾನ್ವಿತನಾದವನು ; ಮಾನ್ಯ : ಪೂಜೆಯಿಂದ ತಾ ಪೂಜ್ಯವಂತನಾದಿಹೆನೆಂದು ಮಾಡುವನಿರವು ಹೊಲತಿ ತನ್ನ ಹೊಲೆಯು ಮಾಜಿತು: ಶುದ್ಧ ನೀರ ಮಿಂದೆನೆಂದು ಕೆಲವರ ಮುಟ್ಟುವಂತೆ ಆ ವಿಧಿ ನಿಸ್ಸಂಬಂತ್ತು ತ್ರಿಕರಣಶುದ್ಧವಿಲ್ಲದ ಪೂಜೆ (ಸೋಸವಚ. ೩೯-೧೬೨). [ಸಂ. ಪೂಜ್ಯವತ್]

**ಪೂಜ್ಯೆ** (ನಾ). ಗೌರವಾರ್ಹಳಾದವಳು ; ಆದರಕ್ಕೆ ಯೋಗ್ಯಳಾದವಳು; ಮಾನ್ಯೆ : ದಯೆಯು ತವರ್ಮನೆ ಭವ್ಯಪ್ರಿಯೆ ... ಭುವನೈಕ ಪೂಜ್ಯೆ ಚೇಳಿನಿ ಧರೆಯೊಳ್ (ರತ್ನಾಕರಮ್ಮ. ೭-೯) ; ಪೂಜ್ಯೆಯಾದ ದಾಕ್ಷಾಯಣಿ ಹೇಳಿದುದು ನನ್ನ ಕೋರಿಕೆಯೇ ಅಲ್ಲವೆ ? (ಶಾಕುಂತ. ೦೦೩-೪) : ಪೂಜ್ಯೆಯುಂ ಪ್ರಾಣವಲ್ಲಭೆಯಾಗಿ ಪಡೆದ ನಾಂ ಧನ್ಯನೈ (ಶ್ರೀರಾಮಾ. ೭೨೭-೩೦೬). [ಸಂ. ಪೂಜ್ಯಾ]

**ಪೂಟ, ಪೂಟೆ, ಹೂಟ, ಪೂಟೆ, ಹೂಟೆ** (ನಾ). ೧. ಏರ್ಪಾಟು ; ಯೋಜನೆ : ಇನ್ನುಮೊಂದಂ ಬಯಸಿ ಪೂಟವಂ ಪೂಡಿದರ್ (ಹೊಂಗಳು ೩೭-೦). **ಪೂಟ** : ೨. ಬಂಡಿ, ರಥ, ಕುಂಟೆ, ನೇಗಿಲು ಮೊದಲಾದುವುಗಳನ್ನು ಎಳೆಯುವುದಕ್ಕಾಗಿ ಎತ್ತು, ಕುದುರೆ ಮೊದಲಾದುವುಗಳನ್ನು ಅಳವಡಿಸಿ ಕಟ್ಟುವಿಕೆ,—ನೊಗ ಹೇರುವಿಕೆ : ಚಿತ್ರಂ ಪೂಟಿಯ ಪಳ್ಗದುರೆಯು ತನ್ನ ರನ್ನದೇರಂ ನೂಂಕಿ ಕೋಲ ಹಂದರವನೊಡ್ಡಿ ... ನಿಲ್ಲೆಂದು ತಡೆದಂ (ರಾಮಾಶ್ವ. ೯೭-೩). **ಹೂಟ** : ೧. ಹೂಟ ಇನ್ನೇನು ಗದ್ದಿತು ಎನ್ನುವ ಹೊತ್ತಿನಲ್ಲಿ ಅವು ಹೀಗೆ ಕಾಲು ಜಾರಬೇಕೆ ? (ಶಕರಾ. ೩೩೦) ; ಕಾಳು ಮನೆಗೆಯ್ದು ಮದುಪೆಯ ಹೂಟವುಂ ತಿಳಿಸಿ ಕೇಳದಂ ಕಡೆಗೆ ಕಾಲ್‌ಗುಟ್ಟುವಿಹ ಕೇಡಃ (ಕಾಂಡಶ. ೦೪೦-೩೦೭). ೨. ಧುರ್ಯ್ಯ. ಧೌರೇಯಃ—ಈ ೨ ಹೂಟದೆತ್ತು (ಹಲಾಯು. ೪೪-೦೦೦) ; ಹೂಟದೊಳು ಎರಡ ಕಿಟ್ಟದೊಳು ಹಟ್ಟಿಂ (ಲಕ್ಷ್ಮೀಪ. ೯೦). ೩. ತೋರಿಕೆ ; ನಟನೆ : ಶಿವನತ್ತ ಕಾಲಾಗಿ ಮಾಜಿದು ಹೂಟದ ಹೆಣನ ಮಾಳ್ಕೆಯಿಂದಿರ್ಪನಂ ಅಜಿಸಿಪಟ್ಟ . . . ಕಾಲ್ತೆಗೆಯೆನಲು (ಬಸವಪು. ೪-೬-೬). ೪. ಕುಯುಕ್ತಿ ; ಪಿತೂರಿ ; ಸಂಚು ; ಜಾಲ : ನಮ್ಮ ತಪವನು ಕೆಡಿಸೆ ಸುರರು ಹೂಡಿದ ಹೂಟ—ಇಂತಿಲ್ಲದಿನ್ನಿಲ್ಲ—ಬಲ್ಲೆ ನಾನವರಾಟ (ಅತಕ್ಕ. ೯೯-೪); ಎಲ್ಲ ತರಹದ ಹೂಟ ಅವುಟಗಳೂ ನಿಷ್ಫಲವಾದಾಗ ಅವನನ್ನು ಹಿಡಿದೆಳೆವುದಂಪ ಮಾಡುವಲ್ಲಿ (ಚಂಶಾಂತ. ೭೭). ಅವನನ್ನು ಸೆಳೆಬಿಡಲು ಹೂಡಿದ ಹೂಟ ಅದು (ಚಾರಿತ್ರ. ೨೭೭) . ೫. ರಚನೆ; ಬಂಧ; ಸೇರುವೆ: ಸರಳ ಹರಹಿನ ಹೂಟವನು ಕಾಹುರದ ಕಡುಹಿನಲೊದೆದು ಬೊಬ್ಬಿಜಿ ಮುರಪಣೆಸಿದನು ಪಾರ್ಥನು (ಕುಮಾವ್ಯಾ. ೦೪-೩೦). **ಹೂಟ** : ೨. 'ಎಳ ಹೂಟ' ಪರಾ. **ಹೂಟೆ** : ೨. ಧೃತಿಗೆಡಿಸಿ ಹೋರಿಗಳ ಒಡಿಸುಗಳ ಬಡಿದ ನುನ್ನತ ಬಂಜೆಯನಾಕಳಂ ಹೂಟೆಯುಂ ಹೇಜಿಮಾಪಾತ್ರತರ ರಕ್ಷಿಸಲಜಿಯುನು (ರಶಿಶಂ ೩೯-೨೦) ; ಮತ್ತೆ ಕಡಿದನು ರಥವ ಚಾಪವ ಮತ್ತೆ ಹೊಸ ಹೂಟೆಯೊಳು ಹೊಕ್ಕರು ತೆತ್ತು ಸಮೆಯರು ಶೌರ್ಯದಧಿಮಾನವನು ಪಟುಭಟರು (ಕುಮಾವ್ಯಾ. ೬-೩೯). ೬. ಉಳುಮೆ; ಬೇಸಾಯ; ಸಾಗುವಳಿ : ಯೂರಯಾತ ಹೂಟೆಯುಲುಂ ಗ್ರಾಮಶಾನ್ತಿಯುಲುಂ ದೇವರ್ಗ್ಗೆ ಸಹಸ್ರ ನಡುಗೆ ಪೂಜೆ ನಿವೇದ್ಯಕ್ಕೆ . . . ಯರೆ ಮತ್ತ ೧ ಕಂ ಳಹಿಂ (ಶಾಇ. IX—1. ೨೭೭– ೭; 1183); ಜಡಿಮಳೆಯಾದುದರಿಂದ ಯಾರೂ ಹೂಟೆಗೆ ಹೊರಡುವ ಹಾಗಿರಲಿಲ್ಲ (ನಡಿರಾ. II. ೦೨೨೭) ; ಬೀಜ ಬಿತ್ತುವ ಸಮಯವಾಗಲಿಲ್ಲವೆ ? ಗದ್ದೆ ಹೂಟೆಯಾಗಬೇಡವೇ? (ಮುಗಿಯು. ೯೩). ೭. ಭಾರ; ಹೇರು : ಭಣ್ಣಿಗೆ ದಣ್ಣಿಗೆ ವೊಂದು ಸೆವೆಯಯ್ದು ಹೂಟೆಯ ರಡಕ್ಕರ್ಗಂ ವಣ್ಣಿಗೆವೊಂಡು(ದು)ಸೆವೆಯೆರಡು (ಎಇ. XIX. ೩೪-೩೨; 1135). ೮. ಕಟ್ಟು; ಬಂಧನ : ಇಕ್ಕೆಲದೊಳು ಕಬ್ಬಿಯೊಳು ಕಟ್ಟಿ ನೇಲುತಿರ್ಪಕ್ಕಿನ ಗುಂಡುಗಳಿಂದ ದಿಕ್ಕುದಿಕ್ಕಿನ ಹಗ್ಗದ ಹೂಟೆಯಿಂದತಿಕರ್ಕಸದಿಂ ನಡೆಯುವರು (ಕುರಾಗಾಂ. ೯–೪೬). ೯. (ಉದ್ಯೋಗದಲ್ಲಿ ಬಂಡವಾಳವನ್ನು) ತೊಡಗಿಸುವಿಕೆ ; ಹೂಡುವುದು : ಖಾಸಗಿ ಉದ್ಯಮಗಳಲ್ಲಿ ಬಂಡವಾಳ ಹೂಟೆಯು ಬೆಳೆಯುವುದಕ್ಕೆ ಉತ್ತೇಜನ ಕೊಡುವುದರ ಮೂಲಕ ಪ್ರಪಂಚದ ಆರ್ಥಿಕಾಭಿವೃದ್ಧಿಗೆ ಸಹಾಯ ನೀಡುವುದೇ ಕಾರ್ಪೊರೇಷನ್ನಿನ ಉದ್ದೇಶವಾಗಿದೆ (ಅಂತಸಂ. ೦೦೪).

ಹೂಟೆ ಹಾರು = ಬಂಡಿಯ ಹಿಂಬದಿಗೆ ಭಾರ ಜಾಸ್ತಿಯಾಗಿ ನೊಗದ ಭಾಗ ಕಳಚಿಕೊಂಡು ಮೇಲಕ್ಕೆ ನೆಗೆ: (*).

[< ಪೂಡು]

**ಪೂಟರ್ಜಿ** (ನಾ). ಸಾರಾಂಶವನ್ನು ಒಳಗೊಂಡ ಅರ್ಜಿ : (*). [ಪೂಟು (< ಪೂಟ್ಟು$_1$) + ಅರ್ಜಿ$_2$]

**ಪೂಟಲಾಯರಿ** 'ಪ್ಲೀಟ್‌ಲಾಯರಿ' ನೋ.

**ಪೂಟೆ** 'ಪೂಟ' ನೋ.

**ಪೂಟು** 'ಪೂಟ್ಟು$_1$' ನೋ.

**ಪೂಟುಲಾಯರು** 'ಪ್ಲೀಟ್‌ಲಾಯರು' ನೋ.

**ಪೂಡಿಸು, ಹೂಡಿಸು** (ಕ್ರಿ). ೧. ತೊಡಿಸು; ಸೇರಿಸು; ಹಾಕು : ಸೋಕ್ಕಿದರವನ ಭೃತ್ಯರವರೆಲ್ಲರಂ ತಂದು ಕಾರಾಗಾರದೊಳ್ಳಿಗಳವಂ ಪೂಡಿಸುವೆನು (ಕೃಷ್ಣಚ. ೨೯-೨೩). ೨. (ಬಂಡಿಯ ಮೇಲೆ ಹೇರಿ) ಸಾಗಿಸು; ರವಾನಿಸು : ಎಣ್ದೆಸೆಯ ಸೀಮೆಗಳನೊತ್ತಿದಂ ಪೂಡಿಸಿದ ನವರವರ ಮನೆಗಳ ಸುವಸ್ತುಜಾಲಂಗಳಂ ತನ್ನ ಪುರಕೆ (ಕೃಷ್ಣಚ. ೨೯–೯). ೩. ನಿರ್ಮಾಣ ಮಾಡಿಸು ; ರಚನೆಗೊಳಿಸು : ಧರಣಿ ಬೋಯಿತಿ ಧರೆಯೊಳ್ ಹೊಡೆಹುಲ್ಲ ಬೀಸಿ ಪೂಡಿಸಿ ಪಡೆವಳು ತುಂಗಭದ್ರ ಮಧ್ಯದ ಮೊಬಿನಂ (ಎಕ. VII, ಹೊನ್ನಾ. ೬-೦೫; 1220). ೪. ತಂದು ಒದಗಿಸು; ತರಿಸು : ಶಕಟಸಂದೋಹದಿಂ ಪೂಡಿಸುವ ಸಂಭಾರನೀರೆಧಿ ಪತಿಯಾದನನಿರುದ್ಧನು (ಕೃಷ್ಣಚ. ೩೪-೭). **ಹೂಡಿಸು** : ೨. ಅಂಧ್ರ ಜಾಳಾಂದ್ರಾಳಿಗಳನಪ್ಪಳಿಸಿ ಹೂಡಿಸಿದನು ಮಹಾಧನವ (ಕುಮಾವ್ಯಾ. ೪-೦೦); ರೂಢಿಗುತ್ತರೆಸುರುಗಳರ್ಥವ ಹೂಡಿಸಿದನರಮನೆಗೆ ದೈತ್ಯರ ಬೀಡ ಬಿಜಿಗೈದನು (ಕುಮಾವ್ಯಾ. ೭-೯). ೩. ಕಂದರ್ಪಾಂಧಕನನುಳುಹುವೊಡೆ ತನಗಿನ್ನಿಂಧನವ ಹೂ[ಪಾಠಾಂ. ಮಾ]ಡಿಸುವುದ್ಯಸಲೆಯೊದನಾ ಭೀಮ (ಕುಮಾವ್ಯಾ. ೨೨-೩೭). ೫. (ಕುದುರೆಗಳನ್ನು ಬಂಡಿಗೆ ಹೂಡಿ) ಅಣಿಗೊಳಿಸು; ಸಿದ್ಧಪಡಿಸು : ಈ ರಥವನೇ ಹೂಡಿಸಿದೆನೀ ಸಾರಥಿಯ ಬೆಸಸಿದೆನು (ಕುಮಾವ್ಯಾ. ೦೨-೦೦). ೬. ನೊಗವನ್ನು ಹೇರಿ, ಎಳೆಯಲು ತೊಡಗಿಸು,..ಎಳೆಯಿಸು : ಅವನಿಸುರರೊಳೀ ಸೋಮಯಾಜಿಯೆನಿಪ್ಪನಂ ಕೊಯ್ದು ಇಸಿತು ನೀರಂ ತೋಜಿರೇ ಧಿಕ್ಕನೆ ಇದಕೆ ಅಜಿದಡೆ ನಿಮ್ಮುಮನಿ ನಿಬರಂ ಪಟ್ಟಣದ ಸುತ್ತೆಳೆಹೂಟೆ ಹೂಡಿಸುವೆ [ಪಾಠಾಂ. ಹೂಟೆಯೊಳೆಳಸುವೆ] (ಹಕಪು. ೫೭ ೯೦). ೭. ತೊಡಗಿಸು; ಆರಂಭಿಸು: ಬೇರೆ ಹವ್ಯಾಸ ಹೂಡಿಸ ಬೇಕು (ಮುಂಬಿಪತ್ರ. ೭೮). [ಪೂಡು + — ಇಸು$_3$]

**ಪೂಡು, ಹೂಡ್ಡು** (ಕ್ರಿ). ೧. ಬಂಡಿ, ರಥ, ರೆಂಟೆ, ಕುಂಟೆ ಮೊದಲಾದುವುಗಳನ್ನು ಎಳೆಯುವುದಕ್ಕಾಗಿ ಅವುಗಳಿಗೆ ಎತ್ತು, ಕುದುರೆ ಮೊದಲಾದುವನ್ನು ಹೊಂದಿಸು, —ಕಟ್ಟು : ನೊಗ ಹೇರು : ಬೆಳ್ಗಟ್ಟಿ ಪೂಡಿದ ಪೊನ್ನ ರಥವಂ ಬೆಳ್ಗಟ್ಟಿಯನರಸರ್ಕಳೇ

ಜಿುವುದುವಮಂ . . . ಕಂಡೆಂ (ಜಗನ್ನಾ. ೮೩ ೩೦) ; ಆ ರಥದೊಳೊಡಂಬಡೆ ಪೂಡಿದ ಕುದುರೆಗಳುಂ . . . ಅಸದಳವೆಸೆಯೆ (ಹಂಹಕ್ಕೀ. ೧೦-೩೨ ಪ) ; ಸಂಜೀವಕ ನಂದಕಾಖ್ಯ ವೃಷಭಂಗಳನಂಬೆನೆ ಪೂಡಿ . . . ತಳರ್ದಂ ವಣಿಗ್ವರಂ (ಪಂಚತಂ. ೨೩-೬). ೨. ಅಣಿಗೊಳಿಸಂ ; ಸಿದ್ಧಗೊಳಿಸು : ಗಿಳಿಯ ಬಣ್ಣದ ಕುದುರೆಗಳೊಳ್ ಪೂಡಿದಜಿತಂಜಯಮೆಂಬ ರಥಮನೇಱಿ (ಅಂಕ್ಕೃ. ೦೨ ೬೪ ಪ) ; ಎಯ್ದೆ ಪೂಡಿ ತರವೇಟ್ಕೀರೆಲ್ಲಮಂ (ಅರ್ಜುನ. ೨-೫೩) ; ಪಲ್ಲಣಿಸು ಕುದುರೆಯಂ ಪೂಡು ತೇರಂ ಭಟರ್ ಕೈದುಗಳಂ ಕೈಕೊಳ್ಳಿಂ (ಅಗ. ೬-೬೩). ೩. (ಬಂಡಿಗಳಲ್ಲಿ ಸರಕುಗಳನ್ನು ಹೇರಿ)ಸಾಗಿಸು; ರವಾನಿಸು; ಕಳಿಸು : ನಿಚ್ಚಮೊಂದು ಮನೆಯೊಳಿರದೆಮ್ಮ ಪೋರಿಯೊಳ್ ಪೂಡಿದ ಪನ್ನಿರ್ಛಂಡುಗದಕ್ಕಿಯು ಕೂಟುವು[ವ]ದರ್ಕೆ ತಕ್ಕ ಪರಿಕರಮುಮಾನೊರ್ವ ಮಾಸಂ ಕೊಂಡು ಪೋಪು (ಹಂಹಕ್ಕೀ. ೩-೨೫ ಪ). ೪. (ಬಂಡಿಯಂ ಮೇಲೆ) ಸಾಗು ; ರವಾನೆಯಾಗು : ಹರಿಯಾಪುರದ ಸರಕುಗಳ್ ಪೂಡಿದುವು ಶಿವಲೋಕಕೆ (ಶಬಕ್ಕು. ೪೦-೩೦). ೫. ಜೋಡಿಸಂ ; ಸೇರಿಸು : ಕರಿಯು ರದನಂಗಳ್ಗೆ ತಲೆಯೋಡ ಸೂರೆಗಟ್ಟಿ ನರದ ತಂತ್ರಿಯು ಪೂಡಿ ದಂಡಿಗೆವಿಡಿದು ಪಾಡಿದುವು ಕೆಲವು (ಕೃಷ್ಣಾಭಾ. ೨೨-೨೪). ೬. ಬಿಲ್ಲಿಗೆ ಬಾಣವನ್ನು ತೊಡು ; ಶರಸಂಧಾನ ಮಾಡು : ಪೂಡು [ಶಿತ]ಶರಸಂತತಿಯಂ ಬಿಲ್ಲೊಳ್ (ಸಂಕಣ. ೫-೬೩) ; ಅರ್ಜುನನದ್ರಿ ಬಾಣಮಂ ಪೂಡಿದಂ (ಕೃಷ್ಣಾಭಾ. ೧೩-೦೫) : ಮದನಶಬರ ಸಂಯಮಿಮೃಗಗಳಿಗಾಗ ಕದುಬಿ ಪೂಡಿದ ಪೂಸರಕೆ ಪುದುಗಿದ ಎಂಟೆಗಳೆನೆ ಪರದುಗಳಿತಿ ಮುದವನಿತ್ತುವು ನೋಳ್ಪರಿಗೆ (ಸಂಸೆ. ೪-೦೪). ೭. ತೊಡಿಸು ; ಅಳವಡಿಸು : ಕಾಲಿಂದನಂ ದಂಡಿಸಿದನಾ ದುಷ್ಟಬುದ್ಧಿ . . . ಸೆಱೆಮನೆಗಿಕ್ಕಿ ನಿಗಳವಂ ಕಾಲ್ಗೆ ಪೂಡಿ (ಕೃಷ್ಣಾಭಾ. ೩೦-೨೬). ೮. (ಆಟ, ಕೆಲಸ ಮುಂತಾದುವನ್ನು) ಹಮ್ಮಿಕೊಳ್ಳು : ಪಿಂಗಾಕ್ಷನಕ್ಷಕ್ರೀಡೆಯಂ ಶಕುನಿಯೊಳ್ ಸಮೆಟ್ಟಿ ಪೂಡಲ್ಕೇಟ್ದು (ಹಂಹಕ್ಕೀ. ೬-೬೯೫). ೯. ತೊಡಗು ; ಮೊದಲಾಗು ; ಆರಂಭವಾಗು : ಪೂಡಿದುದು ಕರ್ಕಶದ ಕಾಳೆಗಂ ಸವ್ಯಸಾಚಿಗೆ ಬಭ್ರುವಾಹನನ ಕೂಡೆ (ಕೃಷ್ಣಾಭಾ. ೦೬-೫೪). ೧೦. ಉಂಟುಮಾಡು ; ಆಗಿಸು : ಕಲೆಗಳ ವಿಲಾಸವಂ ಪೂಡುತ್ತೆ ಕೂಡುತ್ತೆ ಕಣ್ಗೆಸೆದರೆಳವೆಣ್ಗಳು (ಕೃಷ್ಣಾಭಾ. ೩೦-೦೮). ೧೧. ಗುರಿಯಿಡು ; ಚಾಚು : ನಿನ್ನನಿಲ್ಲಿ ಕೊಲ್ಲದೆ ಮಾಣೆನೆಂದು ಸುರಗಿಯಂ ಕಿತ್ತು ಗಂಟಲ್ಗೆ ಪೂಡು [ಪಾಠಾಂ. ಮೋದು]ವುದುಂ (ರಹ್ಯೋಪ್ಯ. ೨-೦೨೪). ೧೨. ಮುಚ್ಚು ; ಹಾಕು : ಕೂಡೆ ಗಜಬಜವಾಯ್ತು ಮನೆಮನೆಯ ಕವಗಳಂ ಪೂಡಿದರ್ (ಶಲಕ. ೨೪-೨೮) ; ನಳಿನಾಳಿ...ಬಾಗಿಲ್ಗಳು ಪೂಡಿಕೊಳುತಿರ್ಪುವೆಂಬಂತೆ ಮುಗಿಯುತಿರ್ದುವು (ಕೃಷ್ಣಾಭಾ. ೦೬-೨೦). ೧೩. ಪ್ರಯೋಗಿಸು ; ಪ್ರಯೋಗ ಮಾಡು : ಸುಂಕಿಗನಂತಿರ ಪೂ[ಪಾಠಾಂ. ಹೂ]ಡಿ ರೇಖೆಯಂ ಭೋರೆನಲೊಡ್ಡಿ . . . ಧಾಪ್ಪನಿಸಲಾಡಿದರಿರ್ವರಿಗೇನೊ ಕೌತುಕಂ (ಕೃಷ್ಣಾಸ್ತ್ರ. ೪-೦೮). ಹೂಡ್ಕು : ೧. ಅರಿಷಟ್ಕವರ್ಗಮಂ ತಂದು ಹೂಡುವೆತ್ತಂ ಮಾಡಿ (ತಿಕೆ. ಪು. ೪೮-೦೫) ; ಆ ರಥಾಗ್ರಕೆ ವೇದ ನಾಲುಂ ವಾರುವಂಗಳ ಹೂಡಿದರು (ಕುಮಾವ್ಯ. ೬-೫). ೨. ಬಂಡಿ ಹೂಡುವವರಂತೆ ತೋರಣಂಗಟ್ಟುವರಂತೆ ಬಾಗಿಲ್ಮಾಡುವರಂತೆ . . . ಮುನ್ನಿನ ದರ್ಶನಮುಂ ನಿಶ್ಯಂಕೆಯುಮೆಂಬೆರಡುಂ ಲೇಸು ಮಾಡುವುವು (ರಹ್ಯೋಪ್ಯ. ೨-೪) ; ಬಱಿದೆ ಸೈನ್ಯವ ಹೂಡಿ ಹಲಬರ ಕೊಲಿಸಿ ಬಲವಕ್ಕಾಡೆ ಕುರುಪತಿ ಕಟ್ಟುವಡೆಯನೆ ಕಳನ ಮಧ್ಯದಲಿ (ಕುಮಾವ್ಯ. ೯-೨೮). ೩. ಸಾರಥಿಗಳನು ಹೂಡಿತಂತಕಪುರಿಗೆ ತೇಜಿಗಳಸುವ ಕಾಱಿದವು (ಕುಮಾವ್ಯ. ೪-೪೦). ೫. "ಹೂಡು-ಯೋಜನೇ" (ಶಮದ) ; ಧರಣಿಪತಿ ನಿನ್ನಿಂದ ಕರ್ಣನ ತುರಗಪಾಚ್ಛೆಯು ಚಮ್ಮಟಿಗೆಗೀಕರವು ಹೂಡು[ಪಾಠಾಂ. ಹೊದ್ದು]ವುದಾಯ್ತು (ಕುಮಾವ್ಯ. ೫-೨೯) ; ಹೂಡಿದಲು ಮರಮುಟ್ಟು ಮಾಂಸದ ಗೋಡೆ . . . ನರವಿನ ಕೂಡೆ ಹಿಂಡಿಗೆ ಬಗಿದ ಮನೆಯೊಳಗಾತ್ಮನಿರುತಿರಲು (ಹಂಸಾ. ೮೫) ; ಮುಖದಲ್ಲಿ ಸಗೆಯನ್ನು ಹೂಡಿದ್ದರೂ ಕೈಗಳು ಕಂಪಿಸುತ್ತಿದ್ದುವು (ಮುಕೋಹಂ. ೦೫೩). ೬. ಮದನಂ ಪುಷ್ಪಬಾಣಂಗಳಂ ಹೂಡಿದ ಬಿಲ್ಲು ಪೊತ್ತು ಪಿಂದಂ ಬರೆ (ಗಂಪ. ೪-೯೬) ; ಗಾಂಡೀವದಲಿ ಹೂಡಿದನು ಫಲುಗುಣ ಪಾಶುಪತಶರವ (ಕುಮಾವ್ಯ. ೦೪-೩೮) ; ಹೂಡಿದ ಕೂರ್ಗಣೆಯಿಂದ ದೈತ್ಯನ ಮೆಯ್ಯ ತೋಡಿದನೈದಂಬಿನಲಿ (ಕೋಹಕ. ೩೪ ೦೪). ೭. ಎನ್ನ ಮನೆ ಎಂಬವಂಗೆ ಬ್ರಹ್ಮನಿಕ್ಕಿದ ಕೋಳವಾಯಿತ್ತು, ಎನ್ನ ಸ್ತ್ರೀ ಎಂಬವಂಗೆ ವಿಷ್ಣುವಿಕ್ಕಿದ ಸಂಕಲೆ ಹೂಡಿತ್ತು (ಕಸ್ಮಪ. ೪. ೨೪೩-೫೩೦) ; ಒಂಭತ್ತು ಬಾಗಿಲ ಕದವನಿಕ್ಕಿ ಬಲಿದು ಬೀಗವ ಹೂಡಿ ನವಸಾಸಿರ ಮಂದಿಯ ಕೊಂದುಳಿದನು ಗುಹೇಶ್ವರ (ಅಪಸಂ. ೦೦೪-೫೪). ೮. ತಪ್ಪದೆ ಬಾಲಕೇಳಿಯೊಳು ಮೇಗುಲುಗುಲುಗುಪ್ಪಂಡೆಯ ಹೂಡಿದಂತೆ ಒಪ್ಪುವಡೆವ ಹಿಮದಿಂಡೆಗಳೆಸೆದುವು (ಕೋಹಕ. ೬-೫೦) ; ಮಕ್ಕಳು . . . ಹೊಸ ಹೊಸ ಕೆಲಸಗಳನ್ನು ತಾವೇ ಹೂಡಬಯಸುವಂತೆ ಮಾಡಬೇಕು (ಕೃಹಾಶಿ. ೯). ೯. ಚತುರ್ವಿಧ ಸೃಷ್ಟಿಯೊಡ್ಡಣೆ ನಿಗಮಮತದಲಿ ಹೂಡಿತು (ಕುಮಾವ್ಯ. ೦೪-೩೫). ೧೦. ಲಜ್ಜೆಗೆ ನೆಲೆಯ ಮಾಡಿದೆ ಹೂಡಿದೈ ದುರಿಯಶವನೆನಗೆ (ಕುಮಾವ್ಯ. ೬-೩೯). ೧೧. ಕೃಪಾಣವ ಜಡಿದು ಗಂಟಲ ಬಳಿಗೆ ಹೂಡಿದನರಿವುದಕೆ ಕೊರಳ (ಕುಮಾವ್ಯ. ೦೪-೦೦) ; ದೆಸೆಯಿಂದೆ ದೆಸೆಯಾವ ತಾಣಕ್ಕೆ ಹೂಡಿದ ಹೊಸವುಸವೆತ್ತ ಖಡ್ಗದಲಿ ಕುಸಿವೆತ್ತು ಖಳನ ಮಸ್ತಕವ ಕೀಳ್ಪಡಿಸಿ ರಂಜಿಸೆ ಕಾಮದೇವ ನಿಟ್ಟಿಸಿದ (ಕೋಹಕ. ೦೦-೬೬). ೧೨. ಜಗವರಾಜಕವಾಯ್ತು ಕುಮುದಾಳಿಗಳ ಬಾಗಿಲು ಹೂಡಿದವು ಸೂಱೆಗರು ಕವಿದುದು ತುಂಬಿಗಳು ಸಿರಿವಂತರರಮನೆಯ (ಕುಮಾವ್ಯ. ೦-೪೩). ೧೩. ಶಿವ ಶರಣೆಂಬ ದಂಡೆಯ ಹೂಡಿ ಗಣಮೇಳಾಪವೆಂಬಲಗಿನಿಂದಿಱಿವೆ (ಅಪಕ. ೬೪೪) ; ತೋಳ ಮೊದಲ ಚಪ್ಪಳೆಗೊಳಿಸಿ ದಂಡೆಯ ಹೂಡಿ ನಿಂದಿರುವೊಪ್ಪವನೇನ ಬಣ್ಣಿಪೆನು (ಕೋಹಕ. ೦೨-೪೪). ೧೪. (ಬಲೆಯನ್ನು) ಬೀಸು ; ಒಡ್ಡು : ಸಿಲುಕುವವು ಮೃಗಪಕ್ಷಿ ಹೂಡಿದ ಬಲೆಗಳಲಿ ಕಾಡಾನೆ ಬೀಸಿದ ಬಲೆಯ ಕೊಂಬುದೆ (ಕುಮಾವ್ಯ. ೦೩-೦೪). ೧೫. ಆರಂಭಿಸು ; ಉಪಕ್ರಮಿಸು : ಖಂಡೇರಾಯನು ಮುಂದಾಗಿ ಕದನವನ್ನು ಹೂಡಿ ಹೈದರನನ್ನು ಚೆನ್ನಾಗಿ ಸೋಲಿಸಿಬಿಟ್ಟನು (೬ಕಿಳ. ೪೦) ; ಅಂತೂ ಮನೆ ಮಾಡಿಯಾಯಿತು–ಸಂಸಾರ ಹೂಡಿದೆವು (ಕೂಶಸಂ. ೦೦). ೧೬. ರಚಿಸು ; ನಿರ್ಮಾಣಮಾಡು : ಕೊಳನ ತಡಿಯಲಿ ಹೂಡಿದನು ಶರವಳಯವಲಿ ಚಪ್ಪರವನು (ಕುಮಾವ್ಯ. ೦೦-೩೩) ; ಹೂಡುವ ಜಗವನೊಂದೆವೆಯಾಟದೆ ಬಯಲ್ಮಾಡುವ ಮಾರಳಿ ಸೃಷ್ಟಿಸುವ . . . ಒಳಹೊಱಗಾಡುವ ಚೇಷ್ಟಕನೀತ (ಕೋಹಕ. ೦೩-೬೪) ; ತ್ರಿಪುಟಿಯೆಂಬ ಒಲೆಯ ಹೂಡಿ . . . ಮಹಾಜ್ಞಾನವೆಂಬ ಪಾಕವ ಮಾಡಿ (ಅಜಂಡೀ. ೩೦೪-೨೨). ೧೭. ಉಳು ; ನೇಗಿಲು ಹೊಡೆ : ಗೌಡಬಸವಪ್ಪಯ್ಯಂಬವನು ಗದ್ದೆ ಹೂಡಿಕೊಂಡು ಕೃಷಿರೂಪದಿಂದ ಕಾಲಕ್ಷೇಪ ಮಾಡಿಕೊಂಡು (೪ಳವಂ. ೦-೫) ; ನಿನ್ನಪ್ಪನೂ ನಾನೂ ಹೂಡುತ್ತೇವೆ ; ನಡುತ್ತೇವೆ (ಸ್ಮಶಹೂ. ೩) ; ಫಲ ನೋಡದೆ ಕೆಟ್ಟಿತು, ಹೊಲ ಹೂಡದೆ ಕೆಟ್ಟಿತು (ಗಾದೆ). ೧೮. ಊರು ; ನೆಡು : ಹುರುಳುಗೆಡದೆಬ್ಬಾಡಿದರು ಫಲುಗುಣನ ರಥದಲಿ ಹೂಡಿದರು ಹೊಗರಂಬುಗಳನುಬ್ಬೆದ್ದು ತವಾತವಾಗೆ (ಕುಮಾವ್ಯ. ೧-೬೫) : ನೆಲದೊಳ ಗೊತ್ತಿ ಹೂಡಿದ ಕೈಗೋಲು ಹೊತ್ತು ಬೆಳ್ನರೆಕೂದಲಾ ಮುದಿಸೂಳೆಯಾರ ಮೊತ್ತವೊಪ್ಪಿದುದು (ಕುಸಪ. ೬-೮೪೦). ೧೯. ಸಿದ್ಧಗೊಳ್ಳು ; ಅಣಿಯಾಗು : ನಿಮಿಷಕೆ ಹೂಡಿದವು ತೇರುಗಳು (ಕುಮಾವ್ಯ. ೨-೦೪). ೨೦. (ಬ್ಯಾಂಕು, ವ್ಯಾಪಾರ, ವ್ಯವಹಾರ ಮೊದಲಾದುವುಗಳಲ್ಲಿ ಹಣವನ್ನು) ತೊಡಗಿಸು ; ವಿನಿಯೋಗಿಸು : ಹಣವಿದ್ದವರು ದೊಡ್ಡ ಕೆಲಸಗಳಿಗೆ ಹಣ ಹೂಡುವರು (ಹಚಕ್ರ. ೫).

[ದೇ.॥ ತಮಿ. ಮಲ. ಪೂಟ್ಟು]

**ಪೂಡೆ** (ನಾ). ಒಂದು ಬಗೆಯ ಖಾದ್ಯ ; P ಅಕ್ಕಿಯ ನುಚ್ಚಿನಂತೆ ಸಣ್ಣಗೆ ಕತ್ತರಿಸಿದ ಬದನೆಕಾಯಿಯ ಚೂರುಗಳನ್ನು ಬೇರೆ ಬೇರೆ ಭಾಗ ಮಾಡಿ, ಒಂದೊಂದಕ್ಕೆ ಒಂದೊಂದು ಬಗೆಯ ಸಂಬಾರವನ್ನು ಸೇರಿಸಿ, ಚೆನ್ನಾಗಿ ಬೆರಸಿ, ಒಗ್ಗರಣೆ ಕೊಟ್ಟು ಒಂದೊಂದಕ್ಕೂ ಒಂದೊಂದು ಬಗೆಯ ಸುವಾಸನೆಯನ್ನು ಕೊಟ್ಟು, ಬಿಸಿ ಆರದಂತೆ ಅರಿಸಿನದ ತರಗೆಲೆಯಲ್ಲಿ ಪ್ರತ್ಯೇಕವಾಗಿ ಕಟ್ಟಿ ಇರಿಸಿದುದು : ಕಡಿಯಕ್ಕಿಯಂತೆ ಕತ್ತರಿಸಿ ಬದನೆಯ ಕಾಯ . . . ಅರಿಸಿನದ ತಳಿಗಿಂದವಂ ಕಟ್ಟಿ ಬಿಸಿಯಾಱದಂತಿರಿಸಲವು ಪೂಡೆವೆಸರಂ ಪಡೆದವು (ಸೂಶಾ. ೪–೨೩).

[ < ಪೂಡು ? ]

**ಪೂಣ್**₁, ಹೂಣ್ಣು₁ (ಕ್ರಿ). ೧. ಹೂಡು ; ತೊಡು : ಕಬ್ಬುವಿಲ್ ತುಂಬಿವೆದೆ ಪೂಸರಲ್ ಪೂಣ್ದಸಲ್ಲಿಬ್ಬರುಮಿದೆಂದು ಮದನಂ ಮಾಲೆಗಾರ್ತಿಯರ ಹುಬ್ಬೆಂಬ ಚಾಪವಂ . . . ಅಳವಡಿಸಿಕೊಂಡು ಬಿಡದಬ್ಬರಿಸಿ . . . ಕಿಡಪುಶಿಹನಲ್ಲಿ ವಿಟರಕ್ಷಿಮೃಗಕುಲವನು (ಕೃಬಾಶಾ. ೬–೦೭). ೨. ಹೊಂದಿಸು ; ಅನ್ವಯಂಗೊಳಿಸು : ರಸಪ್ರಸರದೊಳು ಸವಿ ಸಂಗಳಿಪಂತೆ ಪೂಣ್ದು ಪೇಟ್ವುದು ಕೃತಿಯಂ (ಕುಸುವಾ. ೦–೩). ೩. ಅಳವಡು ; ಹೊಂದಿಕೆಯಾಗು ; ಕೂಡಿಕೊಂಡಿರು : ಜಾಣ್ ಮನಂಗೊಳಿಸೆ ಪೂಣ್ದಿರದರ್ಥಕೃತಿಪ್ರಬಂಧವಂ ಕಿವಿಗಿನಿದಾಗೆ . . . ಪೇಟಲೊಡರ್ಚಿದೆನೀ ಪ್ರಬಂಧವಂ (ಉತೋಂಶಾ. ೦–೦೧) ; ಇಟ್ಟ ನವಚಂದನದ ಬೊಟ್ಟಿಳವಟ್ಟಿರಲು ಪೂಣ್ದಿಕ್ಕಿಗಂಟಿನ ತೊಟ್ಟ ಜವಕೆಯು . . . ಉಟ್ಟ ಸಾಲೆಯ ಮೇಲುದೊಪ್ಪಿರೆ ದಿಟ್ಟಿಯೊರ್ವಳು ನಿಂದಳಂಗಜನಲಗಿನಂದದಲಿ (ಜೀಪಂಶ. ೦೭–೫೩). ೪. ಪಡೆ ; ಹೊಂದು : ಆ ಪೇಚರೇಂದ್ರಂಗವೇಂ ಬೆರಲಿಂದಗ್ಗಳಮಾವ ಕಾವ ಗುಣವಂ ಪೂಣ್ದಂದಭೂಪಾಳಕ (ಎಇ. XXVII, ೬೨.೩೦ ; 1114) ; ಬಂದುದಶಿವ್ಯದುಗಶಿಯಿಂ ಪೂಣ್ದಸವ ... ಬಟ್ಟದೊಡೆಗಳಬಲಾನೀಕಂ (ಜಗಂ. ೯–೦೦೬). ೫. ತೊಡಗಿಸು ; ಯೋಜಿಸು:ಬಲಸ್ಥನೊಳ್ ಬಲವುನೆ ಪೂಣ್ವುದುಂ [ಪಾಠಾಂ. ಮಾಟ್ಪುದುಂ, ಮಾಣ್ಪುದುಂ] ಪಂಥವಕ್ಕೆ ಮೊದಲ್ (ಆದಿಪು. ೦೨–೦೦೩). ೬. ಉಂಟುಮಾಡು ; ಆಗಿಸು : ಪ್ರಭು ಕಿಱಿಯಾತನಂ ನಿಱಿಸಿ ರಾಜ್ಯದೊಳಿನ್ನನವಸ್ತ್ರ ಮಾಡಿ ಪೂಣ್ದಾಭಿಭವವಾಗೀ ಭವದೊಳಿಂತಿದು ನೀಗದು (ಆದಿಪು. ೨–೩೯). ೭. ಸುತ್ತುಗಟ್ಟು ; ಆವರಿಸು ; ಮುಚ್ಚು ; ಕವಿ : ಮೊನೆಯಂಬುಗಳೊಳ್ ಪೂಣ್ದಾಪವನನಿಬರುಮಂ ಕಿಱಿದು ಬೇಗದಿಂ ಹರಿಗನವರ್ಕೆಸಗೆದೆವೇಟ್ಕುಮೆ ಎಂಬವೊಲನಿಬರುಮಂ ಪೂಣ್ದಾಸ[ತನು] ನನೆಯಂಬುಗಳಿಂ (ಪಂಪಭಾ. ೩–೩೨) ; ಪಾರ್ಥಂ . . . ಶಲ್ಯನ ಪದಾತಿಯುಂ ಪೂಣ್ದಾನುಗ್ರ ಶರಸಂಹತಿಯಿಂ (ಮುಹಾವೀ. ೦೨–೯೨). ೮. ಉಪಕ್ರಮವಾಗು ; ಆರಂಭವಾಗು ; ತೊಡಗು : ತಪನಸುತನುದನ ಸಂಧನ್ಯಗ್ ಕಾಳೆಗಂ ಪೂಣ್ದುದು (ಕೃಬಾಶಾ. ೦೨ ಸೂಕವ). ೯. ಒಪ್ಪಿಕೊಳ್ಳು ; ಸಮ್ಮತಿಸು ; ಒಡಂಬಡು : ಇಱಿಯಲ್ಕೇಡೆವ್ಮನೆಮ್ಮುಳ್ಳದಂ ನೆಱೆ ಕೊಂಡೆಮ್ಮಯ ಬಾಟ್ವಿಯೊಳ್ ನಿಱಿಸುವಂ ನೀನೆಂದು ತಂದಿತ್ತು ಕಯ್ನೆಱೆಯಂ ಕೊಟ್ಟಳವಟ್ಟ ಸಾರಧನಮುಂ ಮೂಱಿಟ್ಟಗು ಪೂಣ್ದು ಕಾಲ್ಗೆಱಗಿತ್ತಂತರಿಗಂಗೆ ಬೆರ್ಚಿ ಭಯದಿಂ ಗ್ರಾಮಂ ಕುಳಂ ರಾಜಕಂ (ಪಂಪಭಾ. ೬–೩೦); ಎನ್ನಾಳ್ದನಪ್ಪ ಮೃಗಾಧಿರಾಜು ಪಿಂಗಳಕನಂ ಕಾಣದೆಯುಂ ಆಳ್ದನಕ್ಕೆ ಪೂಣದೆಯುಮಿಲ್ಲಿ [ಪಾಠಾಂ. ಪೂಣ್ದಿಲ್ಲಿಯುಂ] ನಿನ್ನ ಬಾಟ್ವುಪಾಯುಮಾವುದು (ಪಂಚತಂ. ೯೯–೦೩); ನಗರನಾಯಂನುನ್ನತಿ ತನ್ನಂ ಮುನ್ನಲೆಯುತ್ತಿರೆ ಮಂದರಂ . . . ಸೇವಾವೃತ್ತಿಗೆ ಪೂಣ್ದು ನಿತಾಂತಮೋಲಗಿಸಲಟ್ಟಿದ ಸಾನುವದೆತ್ತಂ ಬಂದೆಳಸಿರ್ಪುದೆಂಬಿನಂ ಸೊಗಯಿಪ್ಪುದು ಪೊಮ್ಮಾದಿರ್ (ಶಾಂತಿಪು. ೨–೯೦). ೧೦. (ಕೆಲಸ, ವ್ರತ, ನಿಯಮ ಮೊದಲಾದುವನ್ನು) ಕೈಕೊಳ್ಳು ; ಸ್ವೀಕರಿಸು : ಇರು ಮೌನವ್ರತವಂ ಪೂಣ್ದು[ಪಾಠಾಂ. ಕೊಂಡ, ತಳೆದ] ರಣ್ಯದೊಳಗಾರ್ಗೆ ಮೆಱೆದಪ್ಪೆ ನಿನ್ನೆಸಮಿಚರಮುಂ ಕಳಕೋಕಿಳ (ಆದಿಪು. ೦೦–೦೩೨) : ಬೆಸನೆಂದು ಪೂಣ್ದು ದೇವರ ಬೆಸನಂ ಸುಕುಮಾರರೆನಿಪ ರಾಜಕುಮಾರರ್ ಬೆಸದಪ್ಪದರ್ (ಆದಿಪು. ೦೦–೩೨); ಆ ವಿಪಶ್ಚಿತ್ತ್ವಮಂ. . . ಮಾಸತ್ರಯುಂಬರೆ ಪ್ರಾಯೋಪಗಮನವಿಧಿಯಂ ಪೂಣ್ದು (ವೀಪ್ರಾಪು. ೨–೬೯೪) ೧೧. ದೃಢವಾಗು ; ಸ್ಥಿರವಾಗು : ಪರಭೂಪಾಳಕರುರ್ಕಡಂಗೆ ಪಣಮ್ಯರ್ [ತ]ವಿಸ್ಮಿರ್ಕಿಯೊಳ್ ಸುರ್ಕ್ಕಿ ಮುಪ್ಪುರೆಯಲು ಗಣ್ದಿನ ತೊಣ್ದು ನಂಕದಧಟಲ್ಪೊಂಕ್ಕ್ಕಳ್ನಂಬೂಣ ದಿಗ್ಭರಿತಾತ್ಯೋಜ್ವಳಕೀರ್ತಿ ಪಮ್ವರ್ತಿರೆ ಲೋಕಾಲೋಕವುವರ್ (ಎಕ. XIII. ೨೬. ೬೩; 1090). ೧೨. ಆಣೆಮಾಡು; ಪ್ರತಿಜ್ಞೆಮಾಡು; ಶಪಥಮಾಡು: "ಪೂಣ್–ಪ್ರತಿಜ್ಞಾಯಾಂ" (ಶಮ:ಧಾ) ; ಪಾಯ್ದು ಮಾಗಧನನೀಗಳೆ ಕಟ್ಟುವೆನಿಲ್ಲಿ ಪೂಣ್ದು ನಿಲ್ವನಿತುವರಂ ಸುರಾಗಹನಮೋ (ಆದಿಪು. ೦೨–೬೦); ಸಮಸ್ತಲೋಕಮಂಱಿದಂತಿರೆ ಪೂಣ್ದನಗಾಗದಂಗಜೋತ್ಪತ್ತಿಸುಖಕ್ಕೆ ಸೋಲಲ್ (ಕಃಕಾ.೦.೬೩) ; ಕುರುನಂದನರು ಕೊಂದು ಕುರುಶಾಬಾನುಜನ ನೆತ್ತರಂ ಕುಡಿದು ಪೂಣ್ದಿರಡು ತೀರ್ಚಿದು (ಗದಾಯು. ೦–೬೯). ೧೩. ವಚನ ಕೊಡು ; ಭಾಷೆ ಕೊಡು; ಮಾತು ಕೊಡು: ಉಟಿಯಲಾಗದು ನೆಟ್ಟನೆ ಪೂಣ್ದುದಂ ಪುಸಿವರಾಗಿರದೆ ಮಾನಸರ್ (ಕಾಪಾ.೦–೧೩೩); ಎನ್ನ ಬೇಡಿದುದನೀವೊಡೆ ನಿನ್ನಂ ಕಾದೆನೆಂದೊಡಾಕೆಯುಮಿಾವೆನೆಂದು ಪೂಣ್ದೊಡೆ (ವಡ್ಡಾರಾ. ೦೩–೨೩) ; ಇಂತಪ್ಪ ಬನಮುನಿದನಿ[ನ್ನೆ]ುತನಲನನೂತಲೆಂದು ಪೂಣ್ದಾಯ್ ಮುಂ ಪೂಣ್ದಂತೂಡು (ಪಂಚತಂ. ೩–೯೩) ; ಪೂಣ್ದುದು ವಿಫಳಮೆನಿಸದೇ ನೀತಿವಪ್ಪದಿಂ ನೆಗಟ್ಗೆ ಬಲ್ಲವೋಲ್ ನಿನ್ನರಸು (ಪಾರ್ಶ್ವಪು. ೬–೬೦). ೧೪. ನಿರ್ಧಾರಮಾಡು; ನಿರ್ಣಯಿಸು: ತನುವಂ ತೆಯ್ದುವ್ವಳಕ್ಕ ಬ್ರತದೊಳೆನುತೆ ಕನ್ಯಾಬ್ರತಕ್ಕಂತೆ ಪೂಣ್ದರ್ದಂ (ಕಾತಂಅ. ೬೯) ; ಈ ಕುಮಾರನಖಿಳೋರ್ವಿಗದೊರ್ವನೆ ವಲ್ಲಭಂ ಪ್ರತಾಪದೆ ಪೆಱನಿಲ್ಲೆನುತ್ತೆ ನೆಱೆ ಪೂಣ್ದು ವಿರಾಜಿಪ ರಾಜ್ಯಲಕ್ಷ್ಮಿ ರಾಗದೆ ಬೆರಲೆತ್ತಿದಂತೆ . . . ನವೀನಚೀನ ಚೇಲದ ಗುಡಿ ಕಣ್ಗೆವಂದುದು (ಕುಸುಮಾ. ೬–೬೬) ; ಬರ್ದಿಲದ ನಾಡ ಕಟ್ಟಕಡೆ ಬೀದಿಯ ಹಾದಿಯೊಳೊರ್ಮೆ ಸಲ್ವೆವೆಂದೆರ್ದೆಯೊಳೆ ಪೂಣ್ಬವರ್ ಪಡದ ಪಾಡುಗಳಾವುದುಮಿಲ್ಲ (ಜಗಂ. ೦–೬೯). ಹೂಣ್ಣು₁ : ೧. ಅಲಗು ಮುಱಿಯಿತ್ತು ಗಱಿ ಜಾಱಿತ್ತು ನಾರಿಯ ಹೂಣುವ ಹಿಳುಕು ಹೊಳ್ಳಾಯಿತ್ತು ಗೊಹೇಶ್ವರನ ಶರಣ ಅಲ್ಲಮ ಹಿಡಿದ ಬಿಲ್ಲು ಮುಱಿಯಿತ್ತು (ಸರ್ವಶ. ೩೯–೦೬೯). ೨. ವೀಣೆಯ ನುಡಿಸುತ ಪಾಡಿದರಿವಳೀಗ ವೀಣೆಗಳೆರಡನೊಂದಾಗಿ ಹೂಣಿ ನುಡಿಸುತ್ತಿದ್ದಳೆಂಬೊಲಿಹುದು (ಶಕಿ. ೦೦–೬) ; ಅನಾದಿಯೊಳಿರಲು ಹೂಣಿ ಲಿಂಗದಿ ಮನವ ಕೇಣವಿಡದಿಹನು ವಿರತಿಯಲಿ ದೇಹದಿಹ ಪ್ರಾಣಲಿಂಗಿಯು ತಾ (ಸರ್ವಜ್ಞ. ೦೩೮). ೧೪. ಹೂಣೆ ಭಾಂದಸರನ್ಟ್ಟದೆ ಕಾವನೆಡೆಗೆ ಪ್ರವೀಣ ದಕ್ಷಿಣನನಟ್ಟಿದನು (ಶಕಿ. ೯೬–೬೦). ೧೫. ಒದಗು; ಉಂಟಾಗು : ಅತಿ ಚಿಂತಾತುರ ಹೂಣೆಮುದಾ ಕಾಮಿನಿಗೆ (ಅಂಶಿ. ೬–೨); ವಿಣಾಕ್ಷಿಯರನೆಣಿಸಿಯೆಂದೆಗಟ್ಟ ಮೋಹಿಗಳು . . . ಉರ್ವೀತಳದೊಳಪಕೀರ್ತಿ ಹೂಣಿ ಹಬ್ಬುವುದೆಂಬುದಂ ನೆನೆಯರು (ಸಮ್ಯಕ್ತ್ವ. ೯–೨೨). ೧೬. ಎದುರಿಸು; ಹೋರಾಡು : ಹೂಣಿ ಹಿಡಿದು ಮೋಹವಲ್ಲನ ಕೆಡಹಿ . . . ಗೋಣ ಮುಱಿದು ಹಾಕಿದ ಬಲ್ಲಿದನ ನಿರ್ವಾಣಪೂಜೆಯ ಮಾಡಿದರು (ತ್ರಿಶಾಂ. ೦೯–೯೩). ೧೭. ಹೇರು ; ಹೊರಿಸು : ಹೂಣಿದ ಹೊಱೆ ಜಾಱಿದಂತಾದುದೆನಗೆ (ಭರಕ. ೯–೯).

**ಪೂಣೆ ಪುಗು, ಪೂಣೆ ಪೊಗು, ಹೂಣ ಹೊಗು, ಹೂಣೆ ಹೊಗು, ಹೂಣೆ ಹೊಗು, ಹೂಣೆಯು ಹೊಗು** = ೧ ಸುತ್ತುಗಟ್ಟಿ ದಾಳಿ ಮಾಡು.— ರಭಸದಿಂದ ನುಗ್ಗು : ಅರಾತಿಕಾಳಾಸಳಂ . . . ತಾನುಂ ಭೀಮಸೇನನುಂ ದಿವ್ಯಶರಾಸನಂಗಳಂ ಕೊಂಡು ಪೂಣೆ ಪುಗುವರಾತಿಬಲವುಂ ಮಾರ್ಕೊಂಡು ತೆಗೆನೆಱೆದಿಸೆ (ಪಂಪಭಾ. ೩–೬೯ ವ); ಹೂಣೆ ಹೊಕ್ಕನು ಹಿಡಿದು ವೈರಿಕ್ಷೋಣಿಪನ ತಱಿದಿದನು (ಕುಮಾರರಾ. ೯–೬); "ಹೂಣೆ

ಪೊಕ್ಕೆಂದವೆನೆ ಸತ್ರಾಣದಿಸೊಳಪೊಕ್ಕನೆಂಬುದು" (ಶಶಬಿ. ೨೦೭): ಮಗ ಸಳಲು ಮಿಗೆ ಹೂಣೆ ಹೊಕ್ಕನು ಮುಗುಳಲಹಿಯನು ತಮ್ಮನೆನುತ ವನಿಃಶ ಬಿಂತಿಸಿದ (ಕುಮ್ಮಕ್ರೋ. ೦೨ ೦); ಪ್ರಾಣನಾಯಕ ನಿನ್ನ ಸವಿನುಡಿ ಯಲ್ಲದೆ ವೀಣಾದಿಗಾನರವಗಳು ಸಾಣೆವಿಡಿದ ಶಲ್ಯದಂತೆ ಕಿವಿಯೊಳು ಹೂಣೆ ಹೊಸ್ಸುವು ನಿನ್ನಾಣೆ (ಕುಶಾ. ೯-೦೯೦). ೨. ಪೂರ್ತಿಯಾಗಿ ಒಳಪಡು (?) : ನೋಡಿದ ಮಂದಿರೆಲ್ಲಾ ಕಾಮದೇವನೆಂಬ ಟೀಂಟಿ ಕಾಜಿಂಗೊಡ್ಡಿದ ಪುಲ್ಲಿಗಳಂತರಲಂಬಿಸ ಮೊನೆಗೆ ಪೂಣೆ ಪೊಕ್ಕು ಪಕ್ಕಾಗಿರೆ (ಹಂಕಶಾ. ೪-೩೬ ಶ). ೩. ಒಂದಾಗು ; ತಲ್ಲೀನವಾಗು ; ತನ್ಮಯ ವಾಗು : ಅವುದು ನಿಮಿತ್ರಮಾದೊಡಂ ಬ್ರಹ್ಮದೊಳು ಹೂಣ ಹೊಗಲಾ ಬ್ರಹ್ಮವಪ್ಪನು (ಪೀಕ್ಕಿಕ. ೩ ೬-೨೦); ಚನ್ನಮಲ್ಲಿಕಾರ್ಜುನನ ಶರಣರ ಸಂಗದಲ್ಲಿ ಹೂಣಿ ಹೊಕ್ಕು ಬದುಕು ಕಂಡಾ ಮನವೆ (ಶುಕಾಶೀ. ೪. ೩೦. ೬೯); ಕಾಣಲಿಕೆ ಬಯಲೆಂಬ ಮಹಾರಾತಿಯು ತಾಸಲ್ಲ ಹೂಣೆ ಹೊಕ್ಕಿರಡಳಿದ ಲಿಂಗೈಕ್ಯನು (ಶಿಪಗಿ. ೩೬೨೬೬); ಚತುರ್ವಿಧ ಫಲ ಪದಗಳಲ್ಲಿ ಹೂಣೆಯ ಹೊಗುವ ಸುಖದುಃಖ ಆತುರಂಗಳಲ್ಲಿ ಭೇದಿಸಿ ಕೊಳ್ಳದೆ (ಸಗರೂ. ೪. ೬೩೩-೯೩). ೪. (?) : ಸಲಪ್ರಾಣಿಗಳಲತ್ಯಧಿಕ ನಾಗಿರುತಿರ್ದು ಜಡತೆಯಲಿ ಕೇಣಪನು ಕೈಕೊಂಡು . . . ಮರುಳಹ ಹೂಹೆ [ಣೆ] ಹೊಕ್ಕಿರುತಿರ್ಪ ಪರಿಯೇನು (ಶಿಕಾಗಿ. ೦೦. ೦೩-೬).
[ದೇ.॥ ತವಿ. ಪೂಣ್. ಪೂಣಿ ; ಮಲ. ಪೂಣ್ ತೆಲು. ಪೂನು]

**ಪೂಣ್₂** 'ಪೂಟ್' ನೋ.

**ಪೂಣ್₃**, ಹೂಣೆ (ನಾ). ೧. ಪ್ರತಿಜ್ಞೆ; ಶಪಥ : "ಪೂಣೆಂದು ಪ್ರತಿಜ್ಞೆ" (ಶಶಬಿ. ೩೯-೨೬೦). **ಹೂಣೆ :** ೨. ಮಾತು; ವಚನ; ನುಡಿ : ಹೂಣೆಯೇಕವರೊಡನೆ ಸೆಣಸಿನ ಸಾಣೆಯಿಕ್ಕುವ ಮಸೆವ ಕದನವ ಕಾಣೆವೆಮ್ಮಾಳಿಕೆಯಲಿ . . . ಬಹಮರಸ ನಿಮ್ಮಡಿಯಾಣೆಯೆಂದೊಡಬಡಿ ಸಿದರು (ಕುಮ್ಮಾ. ೬೦೨. ೦೯-೨೩); ಶರಣಸಿಹ ಮರ್ತ್ಯವನು ಹರನ ಕೈಲಾಸವನು ಹಿಂದು ಕಿರಿದಿನ ಹೂಣೆಯಿಂದೆ ಪ್ರಮಥರ್ಗೂಡಿ ಪರಿಕಿಸಲ್ ಬೇಕೆಂದು ನವಸೂತ್ರಧರ್ಮಚಿಂತಾಲಿಸಿಂ ತೂಗಲೊಡನೆ (ಬ್ಕ ಪಾಕ. ೩. ೦೯). ೩. (?) : ದಿನಗಳೆದು ದುರ್ವ್ಯಸನದಿಂ ಓರಿಯ ಹೂಣೆಯಂ ನೆನೆದು ... ಅಣ್ಣಾನಂ ನೋಯಿಪನುಜರ್ಗೆ ··· ತಪ್ಪದೆಂದೆಂದಿಗುಂ ನರಕವು (ಶ್ರೀಪಾಮ. ೪. ೯೯); "ಹೂಣೆಯ-ತ್ತ. ಪ್ರತಿಜ್ಞಾ. ಹೊಟ್ಟೆಯ ಕಿಚ್ಚು" (ಶ್ರೀಪಾಮ. ೬೬೩ ೨೬). [< ಪೂಣ್₁]

**ಪೂಣಿಕೆ** 'ಪೂಣ್ಕೆ' ನೋ.

**ಪೂಣಿಗ**, ಪೂಣಗ, ಹೂಣಿಗ (ನಾ). ೧. ಬಾಣವನ್ನು ಹೂಡುವವನು; ಬಿಲ್ಲುಗಾರ; ಧನುರ್ಧರ : ಎಚ್ಚು ಕಾದಿದುಮ ತಗುಳ್ದು ಬಿಲ್ವಡೆ ಪಡಲ್ವಡೆ ಮಹಾಣದ ನಿಂದು ಪೂಣಿಗರ್ (ಶಂಕ್ರೃಕ. ೦೦. ೬೩); ಪೂಣಿಗರೆನಿಸಿದರಹೀಕೆಯ ಪ್ರಾಣದ ಬಲ್ದೆಗೆದ ಬಲ್ಮೆಯಂತಾಜಿಮವೋಲ್ ಬಾಣಾ ನೆಣಗೊಳೆ ತೆಗೆದರ್ ಪ್ರಾಣಮನವಯವದಿನೆಚ್ಚು ರಿಪುನೃಪಬಲದೊಳ್ (ಶಾಕ್ಕೀಕ. ೩-೦೦೯); ಲವಣಾಂತಕನಂತೇನಂತೆ ಕನಲ್ದು ತೇರನೇಱಿ ಬಂದು ಕಟ್ಟಿದಿರ ಪೂಣಿಗನಂ ಕಂಡು (ರಾಶಶಿಕ್ಕ. ೦೫೬-೬). ೨. ಹೋರಾಟಗಾರ; ಸಾಹಸಿ ; ಶೂರ : ಓರಿಯರಂ ಪೂಣಿಗರಂ ಬಿರುದರನದಟಿನೊಳಬ್ಬರಮುರಿವರ ಸಾಯ್ದುಱಿಕಿಕೊಂಡುಪರಿಗನ ಕಣೆಗಳ್ (ಶಂಕಶಾ. ೦೨-೦೭೯); ಪೂಣಿಗರಂ [ತ]ಜೇಯರಥಟರ್ ಪುಗ್ಗಾಯಿಲರ್ ಜಟ್ಟಿಗರ್ ಚಲವಂ ಪೂಣ್ದದರಳ್ಮ . . . ಶರಣೆಂದು ಬಂದೆಱಗಿದರ್ ಚಕ್ರೇಶ ಪಾದಂಗಳೊಳ್ (ಶರ್ಶೀಶಾ. ೯-೬೦). ೩. ಹಟಮಾರಿ ; ಛಲವಾದಿ ; ತನ್ನ ರೀತಿಯೇ ಸರಿಯೆಂದು ವಾದಿಸುವವನು: ಜಾಣರ್ಕಳಲ್ಲವವರುಂ ಪೂಣಿಗರಱಿಯದೆಯುಮಱಿವ ವೋಲವಗುಣದಾ ತಾಣಮುಸಿನಿಸಡಿವತ್ತೂಡ ಮಹಾಣದ ಓದಿಧಧನೆ ಕೃತಿಗಳಂ ಕೆಡಸುದಿರ್ಪರ್ (ಶಂಪಾ. ೦-೪೦). ೪. ರಚಿಸುವವನು ; ನಿರ್ಮಾಪಕ : ಕರ್ತೃ : ಕಾಣನೇಗೆಯ್ದುಂ ತನ್ನ ದೋಷಮಂ ಕಾಣದಂತೆಂದುಂ ಕಣ್ಗಳ್ ತಮ್ಮ ಕಾಡಿಗೆಯುಂ ಪೂಣಿಗನಾದುದಱಿಂ ಪೆಱರಿಂ ಕಾಣರಿನೋದಿಸಿ ವೇಟ್ಬುದು ಕಬ್ಬಮಂ (ಶಂಶಾ. ೦-೪೩). **ಹೂಣಿಗ :** ೧. ಅರರೆ ಕವಿಕವಿದಂಬು ಕಡಿದವು . . . ಹೊಡೆಗೆಡಹಿದವು ಹೊಕ್ಕಿಸಿವ ಹೂಣಿಗರ (ಕುಮ್ಮಾಶೀ. ೪-೦೩); ದ್ರೋಣ ಭೀಷ್ಮರ ಪೋಲು ನೆಟ್ಟನೆ ಹೂಣಿಗರು ರಾಧೇಯ ಮಾದ್ರುಕ್ಷೋಣಿಪತಿಯೆಂದೆಂಬ ನುಡಿಯುಂಟೆರಡು ಥಟ್ಟಿನಲಿ (ಕುಮ್ಮಾಕ. ೩ ೦೬). ೨. "ಹೂಣಿಗನೆನೆ ಸಾಹಸಿಗ" (ಶಾಶಶಿ. ೨೬): ಸಾಣೆಗಂಡಲಿಗನನು ಸಮರಕೆ ಹೂಣಿಗನು (ಕುಮ್ಮಾಕ. ೦೬-೨೧) ; ಆತನುರವಣೆಸಿ ಹೂಣಿಗರು ನೆರೆ ಮುಂಸುಕಿತು (ಕಪಂಗಿ. ೩೩-೯೯). ೩. ಜಾಣೆ ಗುಡ್ಡ ವ್ಯಗಳು ವೀರಂ ಹೂಣಿಗಂ ಹೆಂದಯ್ಯನೋಮದೆ ಕೇಣಿಗನ ಕೊಡಸೆದ ಸಗರದ ಬೆಮ್ಮಿತಂದೆಗಳುಂ (ಶಾಶಂಕ. ೯-೬೩) ; ನೀವು ಹೂಣಿಗರಾಗಿ ರಿಪುವನು ಕಾವಡಿತ್ತಲೆ ತೊಲಗುವೆನು (ಕುಮ್ಮಾಕ್ರೋ. ೯-೩೦). ೫. ಪ್ರಯೋಗ ಸಾಧನ,-ಸಲಕರಣೆ : ಅಱ ಹೊದೆದ ಗೋಣ ಹೂಣಿಗನಾಯ್ತು ಕೊಲೆಗೆ ಸರಿ ಉಱದಱಿಸಿಕೊಂಡ ತಲೆಗುಱ ನೆಱಯಿತಿಲ್ಲಿಗೆ (ಶಾಶಂಕ. ೪-೨೨೩); ಶಿವನ ಘಾಟದ ಶರ ಚತುರ್ದಶ ಭುವನಭಂಜಸವಿದು ಮದೀಯಾಹವಕೆ ಹೂಣಿಗನಾಯ್ತಲಾ ಹೇರಾಳ ಸುಕೃತವಿದು (ಕುಮ್ಮಾಕ. ೦೨-೬೪). **ಹೂಣಿಗ :** ೨. ಬಿರುದ ಭುಟರಿಗೆ ಬೆಱಗು ಬಲಿದುದು ಹೂಣಿಗರ ಹೋರಟಿಗಳಳುಕಿದವು (ಕುಮ್ಮಾಶೀ. ೬-೬).

**ಪೂಣಿಗಳ್** = ಪ್ರತಿಜ್ಞಾ ಬದ್ಧಳಾದವಳಂ : ಪೂಣಿಗಳಾಗಿ ಬರ್ದು ಪೊಗಟ್ಟಿಪ್ಪ ವಿದಗ್ಧೆಯನೆಲ್ಲಿವಾತನಂ ಕಾಣಲೊಡಂ ಕರಂ ಬಯಸಿ ತಾಮೆಱದಟ್ಟುವರಟ್ಟ ಕೊಡೆಯುಂ ನಾ[ಣ]ಲಿವನ್ನರಾದರೆನುತೊಂದು ವಿದಗ್ಧತೆಯಿಲ್ಲ ಬದ್ದಿನೊಳ್ ಪೂಣಿಕೆಯಿಲ್ಲ ಬಾಲಿಕೆಯ ಯೆಂತುಗೆ ಕೊಡುತೆ ಗೆಲ್ದಿಯಾತನಂ (ಶಾಶಾ. ೩-೬೦). [ಪೂಣ್₁ + —ಇಗ]

**ಪೂಣಿಗತನ**, ಹೂಣಿಗತನ (ನಾ). ಸಾಹಸ; ಶೌರ್ಯ : ಪಲವು ದಿವಸಮಾಹಾರಂಬಡೆಯದೆ ಕಂಗೆಟ್ಟಲ್ಪಸಿಗ ಸಿಂಹಕ್ಕೆ ಪೂಣಿಗತನದಿಂದೇನಾ ನುಮೊಂದಂ ನುಡಿದೆನಪ್ಪೊಡೆನ್ನನೆ ಮುನ್ನಮಾಪೋಶನಂಗೊಳ್ಗುಂ (ಶಂಕಶಂ. ೦೬೩-೨೦). **ಹೂಣಿಗತನ :** ಇವನ ಹೂಣಿಗತನವನಿವನಾಹವದ ಹೊಱಗೆಯನಿವನ ಭಾರಿಯ ಪೆಗ್ಗಳಿಯತನವ ದಿವಿಜರಾನಲು ನೂಕದಿದು ನಮ್ಮವರ ಪಾಡೇನ್ಕೆ (ಕುಮ್ಮಾಕ್ರೋ. ೦೬-೦೯). [ಪೂಣಿಗ + — ತನ]

**ಪೊಣೆಸು₁**, ಹೂಣಿಸು₁ (ಕ್ರಿ). ೧. (ಬಿಲ್ಲಿಗೆ ಬಾಣವನ್ನು) ಹೂಡು,—ಸಂಧಾನಿಸು : ಧೃಷ್ಟದ್ಯುಮ್ನಂ ಪೂಣಿಸಿ ಕರ್ಣಗಣೆ ಕಿರುವಾಯ್ಗಾಣರೊಡಂ ಕೀವಿ ತೆಗೆದು ಪೊಱಮಡುಯ್ವವರಂ ದ್ರೋಣನ ನೆಟ್ಟಂ (ಪಂಪಾಶೀ. ೦೨-೨೦೩) ; ಶಂಬರಸೂದನನಾದ್ಯೆದಂಬುಗಳ್ಗೆ ಸಾಸಿರಂಬೆನಲ್ ಪೂಣಿಸಿಯಾರ್ಪಿಂ ಬಿಡದೆಚ್ಚವನೆನ್ನಂ (ಪಶಕು. ೯-೨೬೪). ೨. ಹೊಂದಿಸು ; ಸಜ್ಜುಗೊಳಿಸು : ಅಳವಡಿಸು : ಪೊಯ್ದು ಬೊಬ್ಬಿಱವ ಪಱಯೊಳಂ ತೆವೆಯಂ ತಳ್ತ ಪರಿಗೆಯೊಳಂ ಮೊನೆಯಂ ಪೂಣಿಸಿದ ಕೊಂತದೊಳಂ ಕೈಗೆಯ್ದು (ಅಹಂಕ. ೦೯-೬೨ ಶ). ೩. ಕೊಡು ; ನೀಡು ; ಅನುಗ್ರಹಿಸು : ಅವರ ದೇಶನಾಮಕುಲ ಗೋತ್ರಂಗಳನಱಿಯೆ ಬಿನ್ನಪಂಗೆಯ್ದು ಭೃತ್ಯಭಾವಮಂ ಪೂಣಿಸಿ ಸನ್ಮಾನ ದಾನಾದಿಗಳೊಳ್ ಸಂತಸಂಬಡಿಸಿ ತಂತಮ್ಮ ನೆಲೆಗಳ್ಗೆ ಪೋಗಲ್ವೇಟ್ಟು (ಅಂಕ. ೦೩-೪೦ ಶ); ಮಹಾಣದಿತ್ತಳು ಮಹಾಗಲ್ಪಾಪಾಕೆಯರಿಗೇನಲೋಚನೆ ಕರೆಕರೆದು ಪೂಣಿಸಿ ಕೊಟ್ಟಳಾರತಿಯೆತ್ತಿದರ್ವರ್ಗೆಲ್ಲ ಜಾಣೆ ರನ್ನದ ಭೂಷಣಗಳ (ಅಶಂಕ. ೬-೦೩೯). ೪. ನಿಯಮಿಸು ; ಆಜ್ಞಾಪಿಸು : ಬೆಸನನಾರ್ಮ ಕೇಳದಂತು ಪೂಣಿಸಿ ಕಟುಪಿ (ಅಂಕ. ೦೩-೬೦ ಶ); ಪೆಱಗಣ ಕಾವನೆನ್ನನೆ ಮಹೀಪತಿ ಪೂಣಿಸಿ ಪೋದಂ (ಪೂಕಶಾ. ೯-೯೬). ೫. ತಡೆ ಗಟ್ಟು; ಎದುರಿಸು : ಎದುರುಬೀಳು : ಮರ್ಬಲಮಂ ಕಂಡು ಪೊಣಿಸಿ

ಜೀವ ಕಡುಗಲಿಗಳುಮಂ . . . ನೋಡಿ (ಗದಾಯು. ೯-೩೪ ವ); ಕಾಣದೆ ದೆಸೆಯುಂ ಬಂದಕ್ಷೋಣಿಬಳಂ ಚಂಚುಯುಗ್ಮದಿಂ ಘಾತಿಸೆ ತತ್ಕಾಣಂ ತಿದಿಯುಂ ಬಿಸುಟುಂ ಪೂಣಿಸಿ ತಗುಳ್ದಿಯ್ದು ಮತ್ತೆ ತಿದಿಯುಂ ಪಿಡಿಗುಂ (ನೇಮಿಚಂ. ೯-೧೦೬). ೬. ಲಕ್ಷ್ಯವಿಡು ; ಗುರಿಯಿಡು : ನರನೆಚ್ಚೊಡೆ ಪಱಿದು ಶರಂ ಶರವಾಳಿಯೊಡನೆ ಮರೆ ಕಾಸಿ ಬೆಚ್ಚಂತೆ ವಸುಂಧರೆಯೊಳ್ ಬಿಟ್ಟಿರ್ದುದದೇಂ ತಿರಮೋ ಪೂಣಿಸಿದ ಪುಂಖ ಭೂರಿಶ್ರವನಾ (ಕುಂಶಾ. ೧೧-೧೭೦) ; ಬಾಚಿಯಿಂ ತಡಂಗಡಿದುಂ ಕೊಂತದಿಂ ತಗುಳ್ದಿಱಿದುಂ ಖಡ್ಗದಿಂ ಪೂಣಿಸಿ ಬಿಸುಟುಂ ಪೊಯ್ದುಂ (ರಮಾಶ್ವ. ೩-೭೩) ; ಪೂಣಿಸಿ ಕೇಶವಂ ತಿರಿಪಿ ಚಕ್ರದೊಳಿಟ್ಟೊಡೆ . . . ಶಿರಂ ಕರಿಯಿಂದೆ ನೆಲಕ್ಕೆ ಬೀಳ್ವ[3] (ಕಂವೃಶ. ೧೦-೧೧೩). ೭. ಶಪಥ ಮಾಡಿಸು ; ಪ್ರತಿಜ್ಞೆ ಮಾಡಿಸು : ಆನಿನಿತಂ ನಿಮ್ಮ ಪೂಣಿಸಲೆ ಬಂದೆಂ (ಕುಂಶಾ. ೧೧-೯೪ ವ). **ಹೂಣಿಸು₁ :** ೨. ಜಾಣೆಂದ ತಮ್ಮ ವಿಮಾನವ ಹೂಣಿಸಿ ಮಾಣದೆ ಮತ್ತೆ ನೋಡಿ ಮರು (ಅಂಜಿ. ೧೧-೧೪೭). ೩. ವಾಣಿ ಕಲ್ಯಾಣಿ ಕಟ್ಟಾಣಿ ಮಾತಿನೊಳು ಸುಪ್ಪಾಣಿ ತಂದಿರಿಸು ನಿಲ್ಲಿಸದೆ. . . . ಕಡುಜಾಣನುಡಿಯು ತಂದು ಹೂಣಿಸು ಕೃತಿಗೆ ಮಂಗಳದಿ (ಸೌಂದರ. ೧.೬). ೪. ಆರು ಲಕ್ಷಿಸಬಹುದು ಹೂಣಿ[ಪಾಠಾಂ.೪]ಸಿದಾರುಘಟಿಗಳ (ಕೊರಟ. ೭-೩೦-೧೬); ಭೂತೇಶ ತಾನಡ್ಡಬಂದು ಶ್ವೇತೋರಸ್ಥಲ ಬಲರಾಮ ತೊಲಗೆಂದು ಪೀತಾಂಬರಗೆ ಹೂಣಿಸಿದ (ಮೋಹತ. ೩೯-೨೦). ೫. ನೀಟ್ ನೂಕದಿರೆನ್ನ ಮನ ಮುಂಮ್ಮಾಜುವೋದುದು ನೀನು ಚಿತ್ರವ ಸೂಟಿಗೊಂಡೀ ಮದನ ನಂಬಿಂಗೊಡಲ ಹೂಣಿಸುವೆ (ಶಾಬ್ದಿ. ೨-೩೪) ; ಅಲಗಂ ಪಿಡಿಯೊಳಳವಡಿಸಿ ತಳತಳಿಸಿ ತನ್ನ ಕಂಠಕೆ ಹೂಣಿಸುತ್ತ ಶಿವಶಿವ ಕೊಱಿಯಲನುಗ್ಗೈದನು (ಶಿವಶಂ. ೯-೧೧); ಹೂಣಿಸಿ ಕೊರ್ಗಣಿಯಿಂದೆಚ್ಚು ಬಱಿಗಾಯಗಾಣಿಸಿದರು (ಮೋಹತ. ೩೫-೧೨). ೭. ಹೂಣಿಸುತ್ತಿಂದು ತಾರೇನಡಗ ನಿನ್ನ ನಿಜಬಾಣ ಕಾಹುತಿಯ ಕೊಟ್ಟೆಮ್ಮನಾಳಿಸು (ಸೀಕೃ.೩೯-೨೦). ೮. ಕೂಡಿಸು; ಸೇರಿಸು; ಬೆರಸು : ರಿಪುಶ್ರೇಣಿಯು ತಱಿದ ರೋಹಿತದಿ ಹೂಣಿಸಿ ಕೆಸಗರ್ಗೂಡಿ ಕೋಟಿಯು ರಚಿಸಲ್ಕೆ ಶೋಣಿತಪುರವೆಂಬುದಾಯ್ತು (ಮೋಹತ. ೨೦.೩) : ಕ್ಷೋಣಿಯೊಳು ಸತ್ಕೀರ್ತಿ ಬಪ್ಪುದು ಹೂಣಿಸುವೆನಗ್ನಿಯೊಳ್ ತನುವನು ಪ್ರಾಣವಾಪಂಚಪ್ರರ್ಕವಿಹುದೆ ತಾಯೆ (ಉತ್ತಕ.೯೩-೧೧). ೯. ಆಕ್ರಮಿಸು ; ದಾಳಿಮಾಡು : ಕಾಳರಕ್ಕಸಿ ತಿರುಗಿ ಹನುಮನ ಮೇಲೆ ಹೂಣಿಸೆ ಹನುಮನಾಬೆಯು ಕಾಲೆರಡ ಒಡಿದಭ್ರಮಂಡಲಕಿಟ್ಟನಬ್ಬರಿಸಿ (ತೊರರಾ. ೩-೧-೪). ೧೦. ಸ್ಪರ್ಧಿಸು ; ಹುರುಡಿಸು : ಜಾಣೆ ನಿನ್ನಯ ನಿಜವೇಷ ಮಾಣದೆ ನಿಂದ ವಿಲಾಸ ಹೂಣಿಸಿ ಬಲಿದ ಪ್ರಕಾಶ ನೆಱಿ ಕಾಣಿಸುತಿದೆ ಕೈಲಾಸ (ಶಿವಗೀ. ೦೭೬-೬೭೩) ; ಪಾಡು ಜಾಣೆಯ ಭಟರು ಹೂಣಿಸಿ ಬೆರಸಿ ಹೊಯ್ದಾಡಿತ್ತು (ಶಾಲಿಶ. ೩೭-೦೩); ಕಾಣುತ ಬೇಡರ ಪಡೆ ಹದವಿಲ್ಲಿಗೆ ಬಾಣವ ಹೂಡಿ ಬೊಬ್ಬೆಱಿದು ಹೂಣಿಸಿ ಕವಿದೆಸೆಯುಲು ಮಥನನು ಬೆಂಗಾಣಿಸಿ ಮರಳದ ಪುರಿಗೆ (ಜೈವಚೆಂ. ೬-೨೬) ; ಕ್ಷೋಣಿಯೊಳೀ ಬಲ್ಪಿನಿಂದೆ ಕಡುಗಾದ ಬಾಣಲಿಯೊಣ್ಣೆಯೊಳಬಾದಿ ಹೂಣಿಸಿ ಕಾದಿಗೊಂಡು ಮರಳ್ದುದು (ಶೋಹತ. ೦೯-೯೩). ೧೧. ಆಣೆ ಮಾಡು ; ಶಪಥ ಮಾಡು : ಶೂಲಿಯೊಳು ತಾ ಹೂಣಿಸಿದ ಹೀಹಾಳಿಯನು ಮಱಿಕಳಿಸಿ . . . ತಬ್ಬಿಬ್ಬುವೋಗುತಲಿರ್ದಳಾ ಮಾಯೆ (ಪ್ರಭುಲೀ. ೭-೨೬). ೧೨. ಹಂಗಿಸು; ಮೂದಲಿಸು : ಹೂಣಿಸಿ ಪೇಣ್ಣುಸುರಿದೊಡದನಾಲಿಪುದೇಣಾಂಕಾಂಕನವರ್ಗಿನ್ನೇ ನುಡು ನಾಣಿಲಿತನವಿದೆನುತೆ (ಉತ್ತರಾ. ೩-೭೨). ೧೩. ಉಂಟಾಗು ; ಹುಟ್ಟು : ಕಾಣುತವೆ ರಾಯನವ ದೊರೆಗಳು ಕ್ಷೋಣಿಪತಿಗಂಜುವವೊಲಾಗಳು ಹೂಣಿಸಿದ ಭೀತಿಯಿಂದ ಹೂಣಿಕೆಯ ನಾಯಕರು ಸಹಿತ (ಕೃಷ್ಣಾಕ. ೦೯೬). [ಪೂಣ್[1] + –ಇಸು₃]

**ಪೂಣಿಸು₂, ಹೂಣಿಸು₂, ಹೂಳಿಸು** (ಕ್ರಿ). ೧. ನೆಡು ; ನಿಲ್ಲಿಸು : ಪೂಂದ ಮಣಲೊಳಂ ಪೂಣಿಸಿದ ಗಾಣದೊಳಂ . . . ಮೊನೆಯುಂ ಪೂಣಿಸಿದ ಕೊಂತದೊಳಂ ಕೈಗೆಯ್ದು (ಆಶಂಕ್ಷ. ೧೨-೬೨ ವ). **ಹೂಣಿಸು₂ :** ೨. (ಆಲಂ) ಅಡಗಿಸು ; ನಾಶಮಾಡು : ದೈತ್ಯನ ಮಹಾಗರ್ವವ ಹೂಣಿಸಿ ಎನ್ನ ಮೊಮ್ಮಗೆ ತಕ್ಕ ಸತಿ ಕಟ್ಟಾಣಿರತ್ನವ ತಂದೆ ಜೀಯ (ಮೋಹತ. ೯೨-೩೩). **ಹೂಳಿಸು :** ೨. ನಿಮ್ಮ ಮಾವನ ಆಶೆ ಯಾಕೆ ? ಇನ್ನು ಸಾಯಂಕಾಲದೊಳಗೆ ಅವನನ್ನು ಹೂಳಿಸಿ ಬಿಡುತ್ತೀನಿ (ಕಂಗಾಳ್. ೯೨೬). ೩. ಹುದುಗಿ ಹೋಗುವಂತೆ ಮಾಡು ; ಮುಚ್ಚಿಸು : ಅಬುಧಿಯು ಹರುಹ ಹೇಳದಿರೊಂದುನಿಮುಪಕೆ ಹೂಳಿಸುವೆನು (ತೊರರಾ. ೭-೯-೨); ಹೂಳಿಸಿ ಹುತ ವಹಕುಂಡವನು (ಶಂಕರಸಾಂ. ೩೭-೧೭೭).

[ಪೂಣ್[2](<ಪೂಟು್) + –ಇಸು₃]

**ಪೂಣ್ಕೆ, ಪೂಣಿಕೆ, ಹೂಣಿಕೆ** (ನಾ). ೧. ಪರಿಶ್ರಮ ; ಸಾಧನೆ : ಕುಲಮಿಲ್ಲೆಯೋ ನಮಗೆ ದಾಯಿಗರಲ್ಲರೊ ಶಸ್ತ್ರವಿದ್ಯೆಯೊಳ್ ಪೂಣ್ಕೆಗಳಿಲ್ಲೆಯೋ (ಕುಂಶಾ. ೨-೯೦) ; ಪಲವುಂ ಪೂಣ್ಕೆಗಳಿಂದು ಛಲದಿಂದ ಸಹಾಯವಿಕ್ರಮಂ ತನ್ನಳವಂ ಕಲಿತನವುಂ ನಂಬಿ (ರಮಾಶ್ವ. ೦೨-೦೯). ೨. ಸಮಗ್ರತೆ ; ಸಮಷ್ಟಿ : ಸಾಕಲ್ಯ : ಶಾಸ್ತ್ರದರ್ಥಮಂ ಬಿಸುಡದೆ ಪೂಣ್ಕೆಯಿನೋದುವೇಟ್ಸೊಡಾರ್ ಮೆಚ್ಚರಿದಂ (ಜಾತಕ. ೦-೦೨). ೩. ಆಣೆ ; ಶಪಥ ; ಪ್ರತಿಜ್ಞೆ : "ಪೂಣ್ಕೆಯದು ಪ್ರತಿಜ್ಞೆಯೊಳಕ್ಕುಂ" (ಶಬ್ದಮ. ೦೨೯) ; ಆ ಕನ್ನೆಗೆ ಯೌವನಂ ನೆಱೆದುದು ಮದುವೆಯಾದೊಡೆ ತನ್ನ ಪೂಣ್ಕೆ[ಪಾಠಾಂ. ಪೂಣ್ದ ಪ್ರತಿಜ್ಞೆ]ಯುಂ ನೆನೆದು . . . ಮೈದುನ ನಿರ್ದಾಪಣಕ್ಕೆ ಪೋಪನ್ನೆಗಂ (ವಡ್ಡಾರಾ. ೦೩-೨೬); ತುದಿಯೆಯ್ದಿತ್ತೆನಗೆನ್ನ ಪೂಣ್ಕೆ ನಿನಗಂ ಪೂರ್ಣೋದಯಂ ಸಾರ್ಚಿ ಬಂದುದು (ಅಂಕೃ. ೯-೦೬) ; ಆತನ ಪೂಣ್ದ ಪೂಣ್ಕೆ ಶಿಲಾತಳಾಕ್ಷರಂ (ಗದಾಯು. ೦-೭೦). ೪. ದೃಢನಿರ್ಧಾರ; ಸಂಕಲ್ಪ : ಪೂಣ್ಕೆಯಂರಿದೋ ಮೆಚ್ಚಿದಂತೆ ನಡೆವುದರಿದೋ (ರಮಾಶ್ವ. ೭-೬೦). **ಪೂಣಿಕೆ :** ೧. ವಿದಗ್ಧತೆಯಿಲ್ಲ ಬದ್ದಿನೊಳ್ ಪೂಣಿಕೆಯಿಲ್ಲ ಬಾಲಕಿಯೆಯೆಂತಾಗೆ ಕೂಡುತ ಗೆಲ್ದಪನಾತನಂ (ಅಂಹಂ. ೩-೭೦). **ಹೂಣಿಕೆ:** ೩. ಹೂಣಿಕೆಯ ಸಬಳಿಗರೊಳೆಮ್ಮೆಗಾಣಿಕೆಯ ಬಲುಸೂತರಥಿಕರ ಜಾಣತಿಯ ಬಿಲ್ಲವರ ಧಾಳಾಧೂಳಿ ಬಲುಹಾಯ್ತು (ಕುಮಾವ್ಯಾ. ೨-೦೪); ಆಯಿತೇ ಕಡೆಯಾಟ ಹೂಣಿಕೆ ಹೋಯಿತೇ ಹುಸಿಯಾಗಿ (ಪ್ರಭುಲೀ. ೭-೩೯); ಕರ್ಣನು ಬಲ್ಪಿಡಿಯುವ ಹೂಣಿಕೆ ಮಾಡುತ್ತಾನೆ (ತಮ. ೭೭). ೫. ಹವಣಿಕೆ; ಏರ್ಪಾಡು ; ಯೋಜನೆ : ಕಟ್ಟಿಗೆಯ ಹೊರೆ ಹೊತ್ತು ಮಾರಿ ಜೀವನ ನಿರ್ವಹಿಸುವ ಹೂಣಿಕೆಯನ್ನು ಸ್ವಯಂಪ್ರೇರಣೆಯಿಂದ ಆರಿಸಿಕೊಂಡ ಕಾರಣದಿಂದ ಅದು ಆತನಿಗೆ ಸಹನೀಯವಾಯಿತು (ಶಾಳಿ. ೩೩) : ನಮ್ಮ ಅಂತಶ್ಶತ್ರುಗಳಾದ ಗಂಗರಾಜಾದಿಗಳು ಅಂಥದೇ ಹೂಣಿಕೆಯನ್ನು ಬೇರೊಂದು ಒಗೆಯಲ್ಲಿ ಹೂಣಿಸುತ್ತಿದ್ದಾರೆ (ಚೀರಂ. ೬).

**ಪೂಣ್ಕೆಯಾಳ್** = ದೃಢಸಂಕಲ್ಪವುಳ್ಳ ಸೇವಕ : ಕುದಾನಪ್ರೀತಿಯೆಂಬ ಪೂಣ್ಕೆಯಾಳ್ವೆರಸು ದುರ್ಬುದ್ಧಿಯೆಂಬ ಪೊಲಂಬಿಗರ್ವೆರಸು ನಿಲ್ಲದೆಲ್ಲಿಯುಂ ಬೆನ್ನಟ್ಟಿ ತಗುಳ್ದು (ರಮಾಶ್ವ. ೧೧-೬೭). [ಪೂಣ್[1] + –ಕೆ]

**ಪೂಣ್ಕೆಗೆಯ್, ಪೂಣ್ಕೆಗೈ** (ಕ್ರಿ). ಆಣೆ ಮಾಡು ; ಶಪಥ ಮಾಡು ; ಪ್ರತಿಜ್ಞೆ ಮಾಡು: ತದೀಯ ಪ್ರಿಯಮಂ ನಿವಾರ್ಚದೊಡೆ ಮನ್ಮಿತ್ರತ್ವಮೇ ಬಾಚಿತ್ತಿ ತತ್ಸತಿಯಂ ತಂದಪೆನೆಂದು ಮಂತ್ರಿತನಯಂ ತಾಂ ಪೂಣ್ಕೆಗೆಯ್ದಾಗಳುಣ್ಮಿತು . . . ಭೇರೀಗಭೀರಸ್ವರಂ (ಶಾಸುಶಮ. ೧೧-೦೦೯). **ಪೂಣ್ಕೆಗೈ:** ನಿನ್ನನರೆನಿಮಿಸದೊಳಗೆ ಧರೆಗೆ ನಾಂ ಕೆಡಹದಿರಲು . . . ದುರಿತಲಂಪಟನಾದ ದುರ್ಮತಿಯಘಂ ಘಟಿಸಲೆನಗೆಂದು ಪೂಣ್ಕೆಗೈದು (ಕೀಶರಾ. ೩೦-೦೬).

[ಪೂಣ್ಕೆ + ಕೆಯ್[1]]

**ಪೂಣ್ಕೆಗೈ** 'ಪೂಣ್ಕೆಗೆಯ್' ನೋ.

**ಪೂಣ್ಕೆದಪ್ಪು** (ಕ್ರಿ). ಪ್ರತಿಜ್ಞೆಯನ್ನು ಮೀರು: ಕದನೋದ್ಯೋಗದಿನಾಳ್ದನೆತ್ತಿ

ಬರೆಯುಂ ಬೆಳ್ಳುತ್ತು ಬಿನ್ನತ್ತನಿಲ್ಲ ದೃಢಾತ್ಮಂದಲೆದು ವಲರ್ಪೋಗಬ್ಬಿನಂ ನಿಶ್ಶಂಕೆಯಿಂ ಪೂಣ್ಕೆವಪ್ಪಿದನಿಲ್ಲ (ಸಂರಾಪು. ೭ ೩೩). [ಪೂಣ್ಕೆ+ತಪ್ಪು₁]

**ಪೂಣ್ಕೆವತ್ತಳೆ** (ನಾ). ಪ್ರತಿಜ್ಞೆಯ ಕಾಗದ : ಪ್ರತಿಜ್ಞಾಪತ್ರ : ಪೂಣ್ಕೆವತ್ತಳೆಯುನ್ನೂ ಮುದ್ರೆಯುನ್ನೂ ಲಿಂಗರಾಜನ ಬಗಸೆಗಿರಿಸುವನು (ಮುಂಕ್ರಿಕ. ೧೬೮-೨೯). [ಪೂಣ್ಕೆ+ವತ್ತಳೆ₁]

**ಪೂಣ್ಕೆವೆಡು** (ಕ್ರಿ). ಪಟ್ಟುಹಿಡಿ; ಹಟತೊಡು : ಅಂತೆಸಗಿದೆಸಪ್ಪೊಡೋವದೆ ಖಳನರಿತಂದು ಕಡುತ್ತು ಪೂಣ್ಕೆವೆತ್ತೊಸದೊಳಗಾಗಿ ಮೂಗನರಿದೀ ವಿಧಿಯಾಗಿರೆ ಮಾಡಿರ್ದರೇ (ಸುಕುಮಾ. ೬-೪೩).

[ಪೂಣ್ಕೆ+ವೆಡು₁]

**ಪೂಣ್ಕೊಳ್** (ಕ್ರಿ). ನಿರ್ಧಾರ ಮಾಡು; ದೃಢನಿಶ್ಚಯವನ್ನು ಕೈಕೊಳ್ಳು: ಪೂಣ್ಕೊಂಡಕ್ಕಟಾ ಸಾರಿದು ನಡೆನೋಡುರ್ಜಿಸು ಕೀರ್ತಿಸಾದರಿಸು . . . ಎಂದುಂ ವಿರೂಪಾಕ್ಷನಂ (ಶಂಕಾಕ. ೬೨). [ಪೂಣ್₃+ಕೊಳ್₁]

**ಪೂತ₁** 'ಪ್ಪೂ' ಪರಾ.

**ಪೂತ₂** (ಗು). ೧. ಶುದ್ಧಿಗೊಳಿಸಿದ; ಸ್ವಚ್ಛ ಮಾಡಿದ. ೨. ಧಾನ್ಯದ ಜಳ್ಳು ಹೋಗುವಂತೆ ಒಕ್ಕಿದ,-ತೂರಿದ. ೩. ಪವಿತ್ರವಾದ; ಪಾವನವಾದ; ಪುಣ್ಯಕರವಾದ: ಶಿವಕಥಾಪೂತಪೌರಾಣವನಿವಂ ಪೇಳಿಸಿದನತಿಪ್ರೀತಿಯಿಂದಂ (ಶಂಕಾ ೩೬-೦೭); ಆತನಂಗನೆ ಸೀತವಮಾಂಬೆಯು ಪೂತಗರ್ಭದೊಳುದಿಸಿ ಕನ್ನೆಯು ರೀತಿಯೂನುತಲಿರ್ದಳೀ ಚೆಲ್ವಾಂಬೆ ಧರೆಯೊಳಗೆ (ಕರಾಳ. ೩೦೦). (ನಾ). ೪. ಒಕ್ಕಿದ ಧಾನ್ಯ; ತೂರಿದ ಧಾನ್ಯ : "ಪೂತಂ, ಬಹುಳೀಕೃತಂ—೨ ತೂರಿಕ್ಕಿದ ಧಾನ್ಯ" (ಸಿದ್ಧಾಂತಿ. ೨೯೦). ೫. ಪವಿತ್ರವಾದುದು; ಪಾವನವಾದುದು : "ಪವಿತ್ರಂ ಪೂತಂ" (ಚನ್ನಕೋ. ೦೦೬-೬೦); ವನಜಾಕ್ಷಖ್ಯಾತಿಪೂತಂ ಕಥೆ ಕವಿ ಕವಿರಾಜಂ (ಜಗನ. ೦-೨೨). ೬. ಪವಿತ್ರಾತ್ಮ; ಪುಣ್ಯವಂತ : ಪಾಪಿಯ ಪೀಡಿಪ ಪುರುಷನು ಪೂತನೆಂತೋ (ಕಕನಾಂ. ೭೬-೯೦); ಆತನ ವ್ರತದ ನಿಟ್ಟೆಯ ಕಂಡು ಪಲಬರು ಪೂತರಾದರು (ಶರೀಳ. ೦೨-೯೯). [ಸಂ.]

**ಪೂತಕ್ರತಾಯಿ** (ನಾ). ಇಂದ್ರನ ಹೆಂಡತಿ; ಶಚೀದೇವಿ: ಮಾಯಗಾಶಿಶುವಂ ತಂದಿಟ್ಟಾಯೆಡೆಯೊಳ್ ಬೇಗನೆತ್ತಿಕೊಂಡಳ್ ಭುವನತ್ರಾಯಿಯನಾ ಜಿನಶಿಶುವಂ ತಾಯಿಲೆ ಪೂತಕ್ರತಾಯಿ ದಾದಿಯ ತೆಱದಿ (ವರ್ಧಮಾ. ೦೨-೮).

[ಸಂ. ಪೂತಕ್ರತಾಯೀ]

**ಪೂತತೆ** (ನಾ). ಪವಿತ್ರತೆ; ಪಾವನತೆ : ಸೊದರವೊಲನೂನಕಾಂತಿಯ ಕುಡಿಯಿಂದಂ ನಾಕದಂತೆ ಮಂದಾಕಿನಿಯಿಂ ನುಡಿಜಾಣೆ ವಿಬುಧನಪ್ಪೋಲ್ ಪಡೆದಂ ಪೂತತೆಯನಂತೆ ಶೋಭೆಯುನವಳಿಂ (ಕೃಷ್ಣಾಕೋ. ೨೦೯).

[ಸಂ. ಪೂತತಾ]

**ಪೂತನಾಂತಕ** (ನಾ). ಪೂತನೆಯೆಂಬ ರಾಕ್ಷಸಿಯನ್ನು ಕೊಂದವನು; ಕೃಷ್ಣ : ದಾರುಣಾಕ್ಷಕಿಪೂತನಾಂತಕನಾಡಿದಂ . . . ಮುರಾರಿ ಕೈವಱಗಾಡಿದಂ (ಜಗನ. ೩-೩೬). [ಸಂ.]

**ಪೂತನಿ** (ನಾ). ೧. (ಕೃಷ್ಣನು ಶಿಶುವಾಗಿದ್ದಾಗ ವಿಷವುಣಿಸಿ ಕೊಲ್ಲಲೆಂದು ಕಂಸನ ಆದೇಶದ ಮೇರೆಗೆ ಬಂದು, ಕೃಷ್ಣನಿಂದಲೇ ವಧೆಯಾದ) ಒಬ್ಬ ರಾಕ್ಷಸಿಯ ಹೆಸರು : ನಿಜವಕ್ಷೋಜನಿಕ್ಷಿಪ್ತಕ್ಷ್ವೇಡಪೀಡಿತ ಲೋಕಘಾತಿನಿಯಪ್ಪ ಪೂತನಿಯುಮಂ . . . ಬೆಸಸಿ (ಜಗನ. ೩-೨೨ ವ); ಶತಶ್ರೀಯೆ ಲಕ್ಷ್ಮಣಾರ್ಗವಿಳಸೇನೆ ಭಾವಿಸೆ ತವಾಕೃತಿಯ ಬಾಲಕರ ದೆಸೆಯಿಂದ ಗೋವರ್ಧನಂಗೆ ಮೊರೆಗೊಟ್ಟ ಪೂತನಿಪೊಲಾಯ್ತು (ಕೃಬಂಜಾ. ೨೦-೩). ೨. ಪಿಶಾಚಿ; ರಕ್ಕಸಿ; ರಾಕ್ಷಸಿ : ಸಂದಣಿಸಿ ಹರಿದೇಱ ಬಾಯ್ಗ ಳೊಳೊಂದಿ ಬಾಯ್ಗಳನಿಡುವ ಪೂತನಿವೃಂದವನು ಕಂಡೋಸರಿಸುವನದೊಂದು ದೆಸೆಗಾಗಿ (ಕುಮಾ್ರಗ. ೩-೦೦). [< ಸಂ. ಪೂತನಾ]

**ಪೂತನೆ** (ನಾ). ೧. = ಪೂತನಿ ೧ : ಪೂತನೆಯಂ ಕೊಂದಾ ಸ್ತ್ರೀಘಾತುಕವೃತ್ತಿಯುಮನೆನ್ನೊಳೇಂ ತೋಱಿದಪ್ಪೆ ಪೂತನೆಯ ತೆಱದೆ ನಿನಗಾನೇತಱ ಪೊಲ್ಲಮೆಯನರಸ ಬಗೆದೆಂ ಬಗೆಯೊಳ್ (ಜಗನ. ೦೨ ೯೬). ೨. = ಪೂತನಿ ೨. ೩. ಒಂದು ಬಗೆಯ ಮರ ಮತ್ತು ಅದರ ಕಾಯಿ; ಅಳಲೆ: "ಅಭಯಾ, ಅವ್ಯಥಾ, ಪಥ್ಯಾ, ವಯಸ್ಥಾ, ಪೂತನಾ, ಅಮೃತಾ . . . ಶಿವಾ—೧೧ ಅಳಲೇಗಿಡದ ಹೆಸರು ; ಅಳಲೇಕಾಯಿ ಪ್ರಸಿದ್ಧವು" (ಸಿದ್ಧಾಂತಿ. ೦೨೩). ೪. ಮಕ್ಕಳು ನವೆದು ಅಶಕ್ತರಾಗುವ ಒಂದು ಬಗೆಯ ರೋಗ ; ಹಕ್ಕಿರೋಗ ; ಬಾಲಗ್ರಹ. ೫. ಬಾಲಗ್ರಹಕ್ಕೆ ಕಾರಣಳಾದವಳೆಂದು ಭಾವಿಸಲಾದ ದೇವತೆ.

[ಸಂ. ಪೂತನಾ]

**ಪೂತಾಚರಣ** (ನಾ). ಪರಿಶುದ್ಧವಾದ ಆಚಾರವುಳ್ಳವನು ; ಸರಿಯಾದ ನಡವಳಿಕೆಯವನು: ಸಮರದಿತಭೂಪ ಜೀವಪ್ರದನುಂ ಅತಿಪೂತಾಚರಣಾರಿಪುಖಿತಕರಣಂ (ಎಕ. III, ಮಂಡ್ಯ. ೬೬ ೮ ; 1022). [ಸಂ.]

**ಪೂತಾತ್ಮ** (ನಾ). ಪರಿಶುದ್ಧವಾದ ಮನಸ್ಸುಳ್ಳವನು : ಪೂತಾತ್ಮಂ ಪರಿತೋಷವಮಂಡಿತವರಂ . . . ರಾಜೇಂದ್ರಚಕ್ರೇಶ್ವರಂ (ಹರಿಶ್ಚಂ. ೧.೨೭).

[ಸಂ. ಪೂತಾತ್ಮನ್]

**ಪೂತಿ** (ಗು). ೧. ಹೊಲಸುವಾಸನೆಯುಳ್ಳ ; ದುರ್ಗಂಧಮಯವಾದ : 'ಪೂತಿಗಂಧ' ಪರಾ. (ನಾ). ೨. ಕೊಳಕಂನಾತ ; ದುರ್ಗಂಧ ; ದುರ್ವಾಸನೆ. ೩. ದುರ್ಗಂಧವುಳ್ಳ ದ್ರವ; ಕೀವು. ೪. (ದುರ್ಗಂಧಮಯವಾದ) ಒಂದು ನರಕದ ಹೆಸರು : ಕೊಲ್ಲೋರುಂ ಕೊಂದು ಉಣ್ಬೋರುಂ ಪಞ್ಚಮಹಾಪಾತಕಸಂಯುಕ್ತನಾಗಿ ಪೂತಿ ಎನ್ನ ನರಗಕ್ಕೆ ಸಲ್ಗೆ (ಎಕ. VI, ಕೊಪ್ಪ. ೩೬-೮ ; ಸು. 675 ?). ೫. ಒಂದು ಬಗೆಯ ಸಂಗಂಧದ್ರವ್ಯ ; ಪುಣುಗು : ಕತ್ತುರಿ ಕಾಲಾಗುರು ಚಂದನಂ ಹಿಮಕರಂ ಜಾತೀಫಳಂ ಪೂತಿ . . . ಚೂಡಾರತ್ನಮೆಂಬೀ ಪವಾಂತರಸಂಜಾತವಮನಾತ ನೋಲಗಿಸಿದಂ (ತ್ರಿಷಷ್ಟಿ. ೩-೦೦೨) ; ಪೂತಿ ಎಂಬ ಹುಲ್ಲುಜಾತಿಯನ್ನೂ ಒಳಗೊಂಡಿದ್ದ ಹಳ್ಳಿಯನ್ನು . . . ಗೋವಿಂದಚಂದ್ರದೇವನು ದಾನವಾಗಿ ಇತ್ತ (ಶಾಸನ. ೬).

**ಪೂತಿಯ ಬೆಕ್ಕು**=ಪುಣುಗಿನ ಬೆಕ್ಕು : ಪೂತಿಯ ಬೆಕ್ಕುರಳೆಯ ಮಱಿಮಾತಂಗದ ಮುತ್ತು . . . ಎನಿಪ್ಪುವನಾಂತು ಕಿರಾತರ ನಿಜವಕ್ಕಣಕ್ಕೆ ನಡೆತರುತಿರ್ದರ್ (ತ್ರಿಷಷ್ಟಿ. ೨೭-೯೩). [ಸಂ.]

**ಪೂತಿಕ** (ಗು). ೧. ದುರ್ಗಂಧವುಳ್ಳ ; ದುರ್ವಾಸನೆಯುಳ್ಳ. (ನಾ). ೨. ತವಸಿ ಗಿಡ : "ಪ್ರಕೀರ್ಯಃ, ಪೂತಿಕರಜಃ, ಪೂತಿಕಃ, ಕಲಿಕಾರಕಃ—೪ ತವಸೀಗಿಡದ ಹೆಸರುಗಳು" (ಸಿದ್ಧಾಂತಿ. ೦೨೩). ೩. ಮಲ; ವಿಷ್ಟೆ. [ಸಂ.]

**ಪೂತಿಕರಜ** (ನಾ). ಒಂದು ಬಗೆಯ ಸಸ್ಯ ; ತವಸಿಗಿಡ : "ಪ್ರಕೀರ್ಯಃ, ಪೂತಿಕರಜಃ, ಪೂತಿಕಃ, ಕಲಿಕಾರಕಃ—೪ ತವಸೀಗಿಡದ ಹೆಸರುಗಳು" (ಸಿದ್ಧಾಂತಿ. ೦೨೩). [ಸಂ.]

**ಪೂತಿಕಾಷ್ಠ** (ನಾ). ೧. ಒಂದು ಬಗೆಯ ಮರ ; ದೇವದಾರುವೃಕ್ಷ : "ಸರಳವುದು ಪೂತಿಕಾಷ್ಠಮೆನಿಕ್ಕು" (ಮಂಗರಾ. ೩೯-೨೬). ೨. ಒಂದು ಬಗೆಯ ಮರ ; ಪೀತದಾರು; ಪೈನ್‌ಮರ. [ಸಂ.]

**ಪೂತಿಗಂಧ** (ನಾ). ೧. ದುರ್ವಾಸನೆ ; ದುರ್ಗಂಧ : ಆ ವಿವಿಧ ಭಕ್ಷೋಪದಂಶಪ್ರಾಯಮಪ್ಪ ದಿವ್ಯಾಹಾರಮೆತ್ತಲೀ ಕ[ನಿ]ತ ಪೂತಿಗಂಧ ಮಪ್ಪ ಮೃಗಪಿಶಿತವೆಶಿಯೆತ್ತಲ್ (ವರ್ಧಮಾ.೬-೯ ವ) ; ಆಪೋದ ಗಂಧದೊಳ್ ಪೂರದು ಮಣ್ಣಾಂ ತಳೆಯೆ ಪೂತಿಗಂಧದ ಗಿಡುಗಳ್ ಗೋಮಯ ತೋಯುಮನೆಱೆಯಲ್ಕಾಮೋದಸುಗಂಧವುಪ್ಪವಾಗಳೆ ಬರ್ಕುಂ (ಶೋಕೋಕ. ೬-೩೦). ೨. ದುರ್ಗಂಧದ ವಸ್ತು: "ಪೂತಿಗಂಧಃ, ದುರ್ಗಂಧಃ—೨ ಕೆಟ್ಟನಾತವುಳ್ಳ ವಸ್ತುವಿನ ಹೆಸರುಗಳು" (ಸಿದ್ಧಾಂತಿ. ೪೭). ೩. ಗಾರೆಗಿಡ ; ಇಂಗುದೀ ವೃಕ್ಷ. [ಸಂ.]

**ಪೂತಿಗಂಧಿ** (ಗುಂ). ದುರ್ಗಂಧವುಳ್ಳ. [ಸಂ.]

**ಪೂತಿದ್ರವ** (ನಾ). ಹೊಲಸು ನಾರುವ ಕೀವು ಮೊದಲಾದ ದುರ್ಗಂಧ ದ್ರವ: ನವವಿವರಾವೃತಪೂತಿ[ಪಾಠಾಂ. ತ]ದ್ರವ ಕ್ಷಗಾವೃತವಿಮಿಶ್ರ ಮಾಂಸೋಪಚಿತಮಧ್ರುವಮಸುಚಿತ್ರಭ್ರುವಿತಕ್ರಿವಹಂ ಮೆಯ್ ಬಗೆ ಪೊಡಿಂತು ಕಿಸುಗುಳಮಾದಂ (ಶಬ್ದಾ. ೩-೦೯೬). [ಸಂ.]

**ಪೂತಿನಾಶಕ** (ಗು). ೧. ಹುಣ್ಣು, ಗಾಯ ಮುಂತಾದುವು ಕೊಳೆತು, ಕೀವಾಗುವುದನ್ನು ತಡೆಯುವ: ರೋಗಿಯು ಕೊಠಡಿಯಿಂದ ಹೊರಬಂದ ನಂತರ ಕೂಡಲೆ ಪೂತಿನಾಶಕದ್ರಾವಕದಲ್ಲಿ (Anti-Septic Lotion) ಕೈತೊಳೆಯಬೇಕು (ಕೀರೋಗ. ೩). (ನಾ). ೨. ಹುಣ್ಣು, ಗಾಯ ಮುಂತಾದುವು ಕೊಳೆಯುವುದನ್ನು ತಡೆಗಟ್ಟುವಂಥ ವಸ್ತು: ಪೂತಿನಾಶಕ(ಆ್ಯಂಟಿಸೆಪ್ಟಿಕ್)ದ ಮಹದುಪಕಾರದಿಂದ ಹಿರೋಗೋವ್‌ನಿಗೆ ಅಶಕ್ಯವಾದಂತಹ ಶಸ್ತ್ರಕ್ರಿಯೆಗಳನ್ನು ಕೂಡಾ ಈಗ ಸರ್ಜನರು ಮಾಡುತ್ತಿರುವರು (ಚುಕ್ಕಸು. ೩೯). [ಸಂ.]

**ಪೂತಿಫಲಿ** (ನಾ). ಒಂದು ಬಗೆಯ ಔಷಧೀಸಸ್ಯ; ಬಾಹುಜಿಗೆ: ಸೋಮವಲ್ಲಿ: "ಅವಲ್ಗುಜಃ ... ಕೃಷ್ಣಫಲಾ, ವಾಗುಜೀ, ಪೂತಿಫಲೀ — ರ ಬಾಹುಜಿಗೆಯು ಹೆಸರುಗಳು" (ಸಿದ್ಧೌಷಧಿ. ೦೪೩). [ಸಂ. ಪೂತಿಫಲೀ]

**ಪೂತಿಬೆಕ್ಕು** 'ಪೂತಿವೆಕ್ಕು' ನೋ.

**ಪೂತಿಮಾಂಸ** (ನಾ). ೧. ಕೊಳೆತ ಮಾಂಸ: ಹೊಲಸು ನಾರುವ ಮಾಂಸ. ೨. ಒಂದು ನರಕದ ಹೆಸರು: ಕ್ರಿತು ಪೂತಿಮಾಂಸ . . . ಉಚ್ಛ್ವಾಸವೆಂಬ್ಬೆದು ಮಂತ್ರಿನರಕಂಗಳಿಂ ಕೂಡಿ ಕಾಲಸೂತ್ರವೆಂಬರಸುನರಕ ವಿಹುದು (ವಿವೇಕ. ೦೬೦). [ಸಂ.]

**ಪೂತಿರಸ** (ನಾ). = ಪೂತಿದ್ರವ: ಸಪ್ತಧಾತುಮಯುಮುಂ ಅವಸ್ಕರದ ಪೋಲ್ ಮೂತ್ರ ಪುರೀಷಾದಿ ಮಲಭಾಜನವುಂ ಅಲ್ಲಿ ಪೂತಿರಸನಿಷ್ಯಂದಿ ಶ್ರವಣಾದಿ ನವರಂಧ್ರಪರೀತಮುಂ . . . ಅಪ್ಪ ಶರೀರಮುಂ (ಕಬ್ಬ್ರತ್ರ. ೩೨೯). [ಸಂ.]

**ಪೂತಿವಕ್ತ್ರ** (ನಾ). ಒಂದು ನರಕದ ಹೆಸರು: ಪೂತಿವಕ್ತ್ರ ರಕ್ತಪೂತಿ ವ್ಯುಶ್ಚಿಕ ಕಣ ಧೂಮವೆಂಬ್ಬೆದುಮಂತ್ರಿನರಕಂಗಳಿಂ ಸುತ್ತಿ ಭೀಮವೆಂಬರಸು ನರಕವಿಹುದು (ವಿವೇಕ. ೦೬೦). [ಸಂ.]

**ಪೂತಿವೆಕ್ಕು, ಪೂತಿಬೆಕ್ಕು** (ನಾ). ಪುಣುಗಿನ ಬೆಕ್ಕು; ಕಸ್ತೂರಿಬೆಕ್ಕು: ಪೊಂಬುಲಿಸಮ್ಮವಾನೆದಲೆಮುತ್ತು ಮೊಲಂಗಳ ಬಿಕ್ಕು ಪೂತಿವೆಕ್ಕು . . . ಪೀಲಿಯೊಂಬಿವಂ ತುಂಬಿದ ಕಂಬಿಯುಂ ತಳೆದದೇಂ ತಳೆರ್ದತ್ತೊ ಪುಳಿಂದಸಂ ಕುಳಂ (ಆದಿಪು. ೩-೦೦೪); ಮರೆ ನರಿ ಪೂತಿವೆಕ್ಕು ನಕುಲಂ ಮರವಾವುಗಳೆಂಬಿ ವಾಗಳಂ ಕೆರಮೆಸೆದಿರ್ಪನಂ ಮೆಱೆದುದಾ ವಿಪಿನಂ (ಕಾಕೆಂ. ೩-೩೪). **ಪೂತಿಬೆಕ್ಕು**: ಸಿಂಗದಾಗುರೆ ವ್ಯಾಘ್ರಚರ್ಮವಂ ಕ್ರೋಢಶಾಬಂಗಳಂ ಪೂತಿಬೆಕ್ಕಂ ಹರಿಶ್ಚಂದ್ರರಾಯಂಗೆ ಕಾಣಿಕೆಯನಿತ್ತಡಿಗೆಱಗುತಿರ್ದರಗ್ಗದ ಬೇಡಪಡೆಯೊಡೆಯರು (ಹರಿಶ್ಚ. ೩-೩). [ಪೂತಿ + ಬೆಕ್ಕು (< ಬೆರ್ಕು)]

**ಪೂತ್ತು**₁ 'ಪೂ₁' ಪರಾ.

**ಪೂತ್ತು**₂ (ನಾ). ಭಲೆ, ಭಾಪು ಎಂಬಂತೆ ಬಳಸುವ ಒಂದು ಕೊಂಡಾಟದ ಮಾತು,—ಉದ್ಗಾರ: ಆ ಮಾಳವಚಕ್ರವರ್ತಿ ಜಗದೇವನೆ ತನ ಮದಾಂಧಸಿಂಧುರಂ ಕೀಳಡೆ ಪೂತು ರಾವುತನೆ ರಾವುತನಲ್ಲೆನಿದಿಚ್ಛ್ಯರ್ ವೀರಬಲ್ಲಾಳನೆನೆಂದು ಮೆಚ್ಚಿ ಶಿವಿದಾಳ್ದನವಚ್ಚರಿಯಾಯ್ತು ಧಾತ್ರಿಯೊಳ್ (ಎಕ. VI, ಕಡೂರು. ೯೫-೨೯; 1196); ನಿಘರ್ಷನಾರ್ಭಟಿಸುತ್ತುಂ ಪೂತು ಮಱ ಬಾಪೆನುತ್ತುಂ ಶಾತಾಸಿಯನಾಂತು ಸವಱತೊಡಗಿದನಾಗಳ್ (ಅದ್ಯ.ಟ. ೪-೬೦); ಪೂತು ಸಾರಥಿ ಭಾಪು ಮಝುರೇ ಸೂತ ಧಿರುಧಿರು ಎನುತ ರಥಿಕವ್ರಾತ ಮಿಗೆ ಬೋಳೈಸಿ ಕೊಂಡರು ಹಯದ ವಾಘೆಗಳ (ಕುಮ್ಮಾರವ್ಯ. ೪-೯೩).

**ಪೂತುರೆ** (ನಾ). = ಪೂತ್ತು₂: "ಅರರೇ ಭಾಪುರೆ ಮಝು ಪೂತುರೆ ಭಲರೇ ಲೇಸು ಜಾಗುವಮಾ ಧಣು ಧಿರುರೇ ಪುರೆಯೆನೆ ಕೊಂಡಾಟಂ" (ಕಸಂಗ. ೩೫); ಭಾಪುರೇ ಕಣ್ಣಂದ ಪೂತುರೇ ಕಣ್ಣಂದ ಭಾಪು ಮಝು ಭಾಪು ಮಝು ಭಾಪುರೇ ಕಣ್ಣಂದ (ಕುಕ್ಕಿ. ದೀ. ೦೪೯-೦೭); ನೆರೆದ ನುಸಿಗಳು ಗಿರಿಯ ಕಾದುವ ಪರಿಯ ನೋಡೈ ಪೂತುರೆ (ಕುಮ್ಮಾರವ್ಯ. ೨-೭೫). [<ಪೂತ್ತು₂]

**ಪೂತೆ** (ನಾ). ೧. ಪರಿಶುದ್ಧಳಾದವಳು; ಪವಿತ್ರವ್ಯಕ್ತಿ: ಮುನ್ನಂ ಲಂಕೆಯೊಳ್ ನೀನೆ ಪೇಟ್ದಿಯಲ್ತೆ ಸೀತೆ ಪೂತೆ, ಅವಳು ಕೈಕೊಳ್ಳುದೆಂದು (ರಾಮಾಶ್ವ. ೨೫-೫); ಮಲ್ಲಮ್ಮ ನಾರೀಲೋಕದ ದಾರಿದೀಪ, ನಾರೀಕುಲಕ್ಕೆಲ್ಲ ಗೌರವ ತಂದ ಮಹಾಮಾತೆ, ಪೂತೆ, ಖ್ಯಾತೆ (ಕರತ. ೬೬೬). ೨. ದುರ್ಗೆ. [ಸಂ. ಪೂತಾ]

**ಪೂತ್ಕರಿಸು** (ಕ್ರಿ). ಬಾಯಿಂದ ಊದಿ ಶಬ್ದಮಾಡು: ಬುಸಂಗುಡು: ಎಸೆದುದಾ ಮಣಿಖಚಿತಕಿರಣಪ್ರಸರಮುದ್ರಿಕೆ ಪೂತ್ಕರಿಸಿ ಲಳಿಮಸಗಿದೆ ವಸ ಪೆಡೆವಣೆಯಪೊಲು ಕರವಲನಿಲಜನ (ಕೃಷ್ಣಶಂ. ೪ ೬-೦೭); ಈ ಸುರಭಿತ ಸುಮಮಂಜರಿಯ ಹಿಂಜೆ ಪೂತ್ಕರಿಸುವ ಕಾಳಸರ್ಪ! (ಕರಿಶ್ಯಂ. ೨೫-೦೩). 'ಪೂತ್ಕರಿಸಂ' ಪರಾ. [ಪೂತ್ಕರಣ₂ + —ಇಸು₁]

**ಪೂತ್ಕೃತಿ** (ನಾ). ಪೂತ್ಕರಿಸುವಿಕೆ; ಊದಿ ಶಬ್ದ ಮಾಡುವಿಕೆ; ಪೂತ್ಕಾರ: 'ಪೂತ್ಕೃತಿಗೈ' ಪರಾ. [ಸಂ.]

**ಪೂತ್ಕೃತಿಗೈ** (ಕ್ರಿ). = ಪೂತ್ಕರಿಸು: ಪೂತ್ಕೃತಿಗೈದು ಸುಭಟನ ಸಿಂಹನಾದಕೆ ಮುಮ್ಮೆಗೆದು ಕರಿ ಕಾದುತಿರ್ದುದು ಭೀಮಸೇನನಲಿ (ಕುಮ್ಮಾರವ್ಯ. ೩-೩೬). [ಪೂತ್ಕೃತಿ+ಕೈ₁ (<ಕೆಯ್₁)]

**ಪೂದಂಡೆ** (ನಾ). ಹೂಮಾಲೆ; ಹೂವಿನ ಸರ; ಪುಷ್ಪಮಾಲೆ: ಮುತ್ತೈದೆಮೆಗಳು ಸಿರಿಮುಡಿಯು ಪೂದಂಡೆಗಳೊಡನೆ ಹಿಡಿಯಕ್ಕಿದಳೆದು ಬಂದರು ಮುತ್ತಿನಾರತಿವಿಡಿದಾ ರತಿದೇವಿಯೊಡನೆ (ಪೋಹಳ. ೦೭ ೪೩). [ಪೂ₂ + ದಂಡೆ₁]

**ಪೂದಂದಲ್** (ನಾ). ಹೂವಿನ ಮಳೆ; ಪುಷ್ಪವೃಷ್ಟಿ: ಎಸಗಿತ್ತಂದಸು ಕೊಲಮಂಡಪವನಂ ವೆಣ್ದುಂಬಿಗಳ್ ಮುತ್ತುತುಂ ಮುಸುಱುತ್ತುಂ ಬರೆ ಬಂದುದಿಂದ್ರವನದಿಂ ಪೂದಂದಲ್ (ಶಂಕರಾ. ೯-೯೩). [ಪೂ₂ + ತಂದಲ್]

**ಪೂದಳೆ** (ಕ್ರಿ). ಹೂವನ್ನು ತಾಳು, — ಧರಿಸು: ಪೂದಳೆದುವೆನಿಪ ಪುರ್ಬಿನ ಕುಡಿವೆರಸು ತೂಕಡನೊಳಕೊಂಡ ಜಾಡ್ಯಮುಂ . . . ಎಂತು ದೊರೆಕೊಳ್ಗುಮೆಂದು ಭಾವಿಸಿ (ಕಾದಂಬ. ೬೩೯). [ಪೂ₂ + ತಳೆ₁]

**ಪೂದಿಂಗಳ್, ಹೂದಿಂಗಳ್** (ನಾ). ಹೂವು ಬಿಡುವ ಕಾಲ; ವಸಂತ ಮಾಸ: ಕೋದು ಪೂಮಿಡಿ ತಳಿರ ಕಾಡು ನರುಪೊಗರಿಂ ಪೂದಿಂಗಳರಸನಂ ಕರೆಯುಗುಂ ತುಳಿಲ್ಗೆ (ಕಾವ್ಯಸಾ. ೦೦೯-೨೪೮). **ಹೂದಿಂಗಳ್**: ಹೂದಿಂಗಳ್ಗೆತರಲ್ಪೊಸಗೆಯಿಂ ಬನದೇವಿ ದೀಪೋತ್ಸವಂಗೈವಳೆಂಬಂತೆ ಮೊಗ್ಗುಗೊಳ್ಳಿಗಳಿಂದೆ ಪೂಂಜಿನುರಿಪೂವಿಂದೆ ರಂಜಿಸುವ ಮುತ್ತುಗದ ಮರಗಳು: ನೆನೆ, ಮನವೆ (ಶ್ರೀರಾಮಾ. ೧೧೦-೪೦೮). [ಪೂ₂ + ತಿಂಗಳ್]

**ಪೂದಿಸು** (ಕ್ರಿ). ಪೂಜೆ ಮಾಡು; ಪೂಜಿಸು; ಅರ್ಚಿಸು: ಉಚ್ಚಿಯ ಬಚ್ಚಲ ಕೊಟ್ಟಿಯ ತಾವ ಪೂದಿಸುವ[ಪಾಠಾಂ. ಪೂಜಿಸುವ, ಪೂಸುವ] ನಿಶ್ಚಯರಿಗೆ ಮಱೆಮಾಡುವ ಮೆಚ್ಚುನುಂಗಿಗೇಕೆ ನಿಶ್ಚಯದ ಅಱವು (ಸಗಕೊ. ೪. ೬೨೪-೦೬೬೨); ಇ[ವರ] ದೇವಸ್ಥಾನವಂ ಬ್ರಾ(೦)ಹ್ಮಣರು ಪೂದಿಸುವರು (ತೌಳ್ವಇ. IX—1, ೨೬೨-೨೩; ಸು. 1173); ಈ ದಿವ್ಯಲಿಂಗವಂ ಭಕ್ತಿಯಿಂದಂ ಕೊರ್ತು ಪೂದಿಸಿರೆ ನೀವಖಿಳರು (ಶಿಕ್ಕಶು. ೬-೩-೫೦). [<ಪೂಜಿಸು]

**ಪೂದಿಱು, ಹೂದಿಱು** (ಕ್ರಿ). ಹೂವುಗಳನ್ನು ಕೊಯ್ಯು,—ಬಿಡಿಸು: ತರಳಿಕೆ ದೇವತಾರ್ಚನಕೆ ಪೂದಿಱುಯುತ್ತಿರಲಾಗಳೀಕೆಯಂ ಕರೆದು (ಕಾದಂಬ. ೫೫೭); ನಿನ್ನ ಬಲಾಳಿ ಪೂದಿಱುವುದಂ ನೋಡಿಂ ಪವನಕ್ರೀಡೆಯೊಳ್ (ಜಗಂ. ೦೪-೯೬); ವರಭಕ್ತಂ ಪೂದಿಱುಯಲ್ ಕರಂಡಮಂ ಕೊಂಡು

ಪುಷ್ಪವನಕೇಳ್ತಿಂದಂ (ಪುಷ್ಪ. ೬ ೦೩). **ಹೂದಿಜಿ** : ತಾನೆ ಬಿತ್ತಿದ ಪುಷ್ಪವಾಟಿಗಂದರದೊಳುದಕವನಿತ್ತಿ ತೋರಿದು ಹೂದಿಜಿವ ಜಾಣ್ಕೆ ಯನದೇವಣ್ಣಸುವನು (ಸಿದ್ಧರಾ. ೯-೩೫). [ಪೂ$_3$ + ತಿಜಿ]

**ಪೂದುಡುಗೆ** 'ಪೂದೊಡಿಗೆ' ನೋ.

**ಪೂದುಱುಂಬು**, ಹೂದುಱುಬು (ನಾ). ಹೂವುಗಳನ್ನು ಪೋಣಿಸಿದ ತುರುಂಬು; ಪುಷ್ಪಗಳಿಂದ ಅಲಂಕೃತವಾದ ಹೆರಳು : ಪೂದುಱುಂಬಿನ ಪುಷ್ಪವತಿಯರಂದುಗೆಯ ಭಂಗಿಯರುಂ ನಗೆಗಣ್ಣಳ ನೀಱಿಯರುಂ ಗಿರಿಜೆಯ ಚರಣಕಮಲಕ್ಕೆ ಭರದಿಂದೆಱಗುತ್ತುಂ (ಗಿರಿಜಾ. ೯-೨೦ ವ). **ಹೂದುಱುಬು** : ಸನೆಯ ಕಂಚುಳಿಕೆಗಳ ಹೂದುಱುಬಿನ ಹಿಣಿಲ್ಗಳ ದಂಡೆಗಳ . . . ಕನಕರತ್ನಾಭರಣಕಾಂತಿಯ ವನಿತೆಯರು ಬಳಸಿದರು (ಕೊಡಗ. ೦.೦೬ ೩೨). [ಪೂ$_2$ + ತುಱುಂಬು$_1$]

**ಪೂದುಱುಗಲ್**, ಹೂದುಱುಗಲು (ನಾ). ಹೂವುಗಳ ರಾಶಿ.–ಒಟ್ಟಿಲು : ಮೇದಿನಿ ಬೇಗೆ ಬಿಟ್ಟ ಮುಡಿಯಂತೆಸೆದಿರ್ಪುದು ಪುಷ್ಪಿತಂ ತಟೀವಾದಪವೀಥಿ ಪೆತಿಗುರುಳಂತಿರೆ ಸಂಚಳಮಿನಸಂಚಯಂ ಪೂದುಱುಗಲ್ ತಡಂ ತೊಡರ್ದು ತೋರ್ಪವೊಲೊಪ್ಪಿರೆ ಕೊಂಕುವೆತ್ತ ಸೀತೋದೆ ಸಡಿಲ್ದು ನೀಳ್ದ ಶರದಿಂ ನಿಜಗೊಂಡು ಬಟಲ್ದ ಭಂಗಿಯಿಂ (ಅರ್ಜುನ. ೧-೬೦). **ಹೂದುಱುಗಲು** : ಮೆಱೆವುದಸುರನ ಹಸ್ತದಲಿ ಹೂದುಱುಗಲಿನ ಗಂಧಾಕ್ಷತೆಯ . . . ಶೂಲ ಮಹೋಗ್ರತೇಜದಲಿ (ಕೊಡಗ. ೬-೯೯-೩೫). [ಪೂ$_2$ + ತುಱುಗಲ್ (< ತುಱುಂಗಲ್)]

**ಪೂದುಱುಬು** (ಕ್ರಿ). ಹೂವುಗಳನ್ನು ಮೇಡಿದುಕೊಳ್ಳು : ಕಸ್ತೂರಿ ಪುಣುಗು ಜವಾದಿ ಮುಂತಾದ ಸುವಸ್ತುವ ತೊಡೆದು ಪೂದುಱುಬಿ ವಿಸ್ತಾರದಿಂದ ಪಾಡಿಸಿಕೊಂಡಳಾಗ ಸಮಸ್ತಭೃಂಗಗಳಿಂದ ತನ್ನ (ಶಶಿ. ೦೦-೬೬). [ಪೂ$_2$ + ತುಱುಬು$_1$ (< ತುಱುಂಬು$_1$)]

**ಪೂದೂಳಿ**, ಪೂಧೂಳು (ನಾ). ಹೂವಿನ ಹುಡಿ ; ಪುಷ್ಪಪರಾಗ : ಪವನಂ ಪೂದೂಳಿಯಿಂ ರಂಗವಂ ಕ್ರಮದಿಂ ಮಾಳ್ಕುದು ಕೇಕಿ ಬರ್ಹದೆಲಿಂ ಹೋಮಾಗ್ನಿಯಂ ವರ್ಧಿಸಂ (ಶಬರ. ೨-೬೨). **ಪೂಧೂಳು** : "ಪರಾಗಃ, ಕೌಸುಮೇರೇಣುಃ — ಪೂಧೂಳು" (ಸಿದ್ಧಾಂತಿ. ೩೬೬). [ಪೂ$_2$ + ದೂಳಿ]

**ಪೂದೇರ್**, ಹೂದೇರ್ (ನಾ). ೧. ಹೂವುಗಳಿಂದ ಅಲಂಕರಿಸಿದ ರಥ ; ಪುಷ್ಪರಥ : ಪಾಲಿಗಾಟ ಪೂದೇರುಳ್ಳನ್ನೆಗಂ ಸಲ್ಗೆ (ಶಾಸನ. ೦೯೩೬, ೨೬-೩೫: ೩೭೮ ; ತೊಡೆದುಮಟಿಯ ತರುಣೀರತ್ನದ ಸುಣ್ಣಂಡೆ ಮನೋಭವನೇಱುವ ಪೂದೇರಂದದಿನೊಪ್ಪಿದಂದು (ಅಹಲ್ಯಾ. ೩-೬); ಮಿಸುಪ ಕೀದಗಿಯೆಸಳ ಕಿಗ್ಗಟ್ಟ ಕಟ್ಟಿ ರಂಜಿಸುವ ಪೂದೇರನಾ ರಚಿಯ ಕೈವಿಡಿವದರಿ ಬಸಜಾತ ಪತ್ರಂಗಳಿಂದ ಪೋಬಾಳಿಗಳ ಚಮರದಿಂ ರಂಜಿಸಿದನು (ಸಂತೋ. ೩೫-೬). ೨. ಪುಷ್ಪಕವಿಮಾನ : ರಾಮಂ . . . ಪೂದೇರೊಳ್ ಸರ್ವರಿಂ ಕೂಡಿ, ನಿಜನಗರಿಯಂ ಪದಿನಾಲ್ಕಾಲು ಸಮೆಯೆ ಪುಗುತೆ (ಅದ್ಭುತ. ೬೭-೨೪). **ಹೂದೇರ್** : ೧. ಸುದತೀಮಣಿ . . . ಅರಸಂಚಿಯಂ ಕಿಱುದುಮ್ಮಳುವಾಸಂ ಪರಿಸದಿನೀಱಿದಳಗೋದೃವನದರ್ದರಗೀ ಹೂಡಿದ ಹೂದೇರೇಱುವ ರಚಿಯೊಂಬಂದದೊಳು (ಅಹಲ್ಯಾ. ೨-೩೨). [ಪೂ$_2$ + ತೇರ್$_2$]

**ಪೂದೊಂಗಲ್**, ಪೂದೊಂಗಲು (ನಾ). ಹೂವಿನ ಗೊಂಚಲು; ಪುಷ್ಪ ಮಂಜರಿ : ಪುಷ್ಪಪರಾಗಮಲ್ಲುಗುವಿನಂ ಪೂದೊಂಗಲಲ್ಲಾಡಿ ತೋಱುವಿನಂ . . . ಲೀಲೆಯಿನಾ ಪುದೇಶದೊಳದಾರ್ ತನ್ನಂಗಿಯರ್ ಕ್ರೀಡಿಪರ್ (ಜಗ. ೧೧ ೬೬). **ಪೂದೊಂಗಲು** : ಕಂಗೊಳಿಸುವ ಕಾವುಗೆ ಬೃಹಸ್ಪತಿ ಪೂದೊಂಗಲನಿತ್ತು ಸಂಧಿಸಿದ (ಪ್ರಾತ. ೩-೯೩) ; ಸುರಿವ ಪೂದೊಂಗಲ ತುಷಾರದಿಂ . . . ತಿರದಿಂಪೆಲ್ಲಿಯುಂ ನಂದನದೊಳು (ಕೃಷ್ಣಾ. ೩-೨೪). [ಪೂ$_2$ + ತೊಂಗಲ್]

**ಪೂದೊಂಗಲು** 'ಪೂದೊಂಗಲ್' ನೋ.

**ಪೂದೊಂಬೆ** (ನಾ). = ಪೂದೊಂಗಲ್ : ಪೂದೇರ ಬಲಬಂದ ಪೊಣರ್ವಕ್ಕಿ ಗಾಲಿಯ ಪೂದೊಂಬೆಯಿಂದ ಪೂಜಿಸಿದ ಪಾದಕೆ ನಮಿಸುತ ನಿಳಿಗುದುರೆಯ ಮಾರನಾದರದೊಳಗೇಱಿ ನಡೆದ (ಪರ್ವ. ೦೦-೧೦೩) ; ನಗೆ ಮಲ್ಲಿಗೆ ಮೊಗ ದಾವರೆ ಕಣ್ಣಾಡಿ ಸೊಗಸುವ ಕನ್ನೈದಿಲಾಗೆ ಮುಗುಳಂಬನ ಮುಡಿಗ ಮರಿದ ಪರಿಮಳವೊಗುವ ಪೂದೊಂಬೆಯಂತಿಹರು (ಶಿವತ. ೬-೯೯). [ಪೂ$_2$ + ತೊಂಬೆ$_1$]

**ಪೂದೊಡಂಬೆ$_1$** (ನಾ). ಹೂವಿನ ದೇಟು,–ತೊಟ್ಟು : "ಪ್ರಸವಬಂಧಃ ವೃಂತಮೆನೆ ಪೂದೊಡಂಬೆಗಳ ಪೆಸರಕ್ಕು" (ಶಬ್ದಮ. ೩೬-೫); ಕೆಂದಳಿರ್ ಮಿಸುಪ ಕೆಂಗಱಿಯಾದುದು, ಪೂದೊಡಂಬೆ ಪಿಳ್ಳಾದುದು (ಶಮರ. ೨೯೩ ಕ್ರಮ). [ಪೂ$_2$ + ತೊಡಂಬೆ$_1$]

**ಪೂದೊಡಂಬೆ$_2$**, ಹೂದೊಡಬೆ (ನಾ). = ಪೂದೊಂಗಲ್ : ಬಂದವಲೆದಂದು ಪಶ್ಚಿಮಾನಿಳನರ್ಚಿತು ಕೇತಕಿ ಪೂದೊಡಂಬೆಯಂ (ಗಿರಿಜಾ. ೯-೩೬); ಮುಗುಳ್ತುದು ಜಾದಿ ಕದಂಬಕೋರಕಂ ಬಲಿದುದು ಪೂದೊಡಂಬೆಗಳ ನಾಂತುದು ಕೇತಕಿ (ಅಹಲ್ಯಾ. ೩-೨-೯೦); ಸುತ್ತಿಡಿದ ಕೆಂದಳಿರ ಕೆಂಗಾವಿಗಾಸೆ ತಾನಿತ್ತಂಡಮಾಗಿ ನೇಲುವ ಪೂದೊಡಂಬೆಗಳ್ ಮುತ್ತ್ರಗುಲ್ಲಿಗಳ್ (ವೀರಾಂ. ೨೬-೩೯). **ಹೂದೊಡಬೆ** : ತಲ್ಲಣದ ತೋಪಿನ ವಿಷಾದದ ವಲ್ಲರಿಯ ಹೂದೊಡಬೆಗಳ ಹೊಯ್ಕುಳಿಗಳ ಮುನಿಜನವ ಕಂಡರು ಪಾಂಡುನಂದನರು (ಕುಮಾ.ಭಾ. ೨೨-೨೨). [ಪೂ$_2$ + ತೊಡಂಬೆ$_2$]

**ಪೂದೊಡವು** (ನಾ). ಹೂವಿನ ಆಭರಣ,–ಒಡವೆ : ಉಟ್ಟ ನವಾಂಬರಕ್ಕ ಮಾರ ಪೂದೊಡವಂ ತುಡುವೊಂದು ಕೌತುಕಂ ಪುಟ್ಟೆ ಮುರಾರಿಗೀಯಲರ ಕಂಪನೆ ಕಾಣಿಕೆಯಾಗಿ ಪೋಗಿ ನೀಂ ಕೊಟ್ಟೊಡಗೊಂಡು ಬರ್ಪುದು (ಜಗ. ೬-೧೨): ಒಳ್ಪಿಂ ಸಮೆದಚ್ಚಪೂದೊಡವನೋರಂತಿಟ್ಟು ನಾನಾ ವಿಳಾಸಂದೋಱುತ್ತಿನಿಯರ್ಗೆ ರಂಜಿಪುವಜಸ್ರಂ ಬೇಚರೀಸಂಚಯಂ (ಕಬಿಗ. ೨-೩೯). [ಪೂ$_2$ + ತೊಡವು]

**ಪೂದೊಡಿಗೆ**, ಪೂದುಡುಗೆ, ಹೂದುಡಿಗೆ, ಹೂದೊಡಿಗೆ (ನಾ). = ಪೂದೊಡವು : ಮಧುಕರಿಕೆಯಂ ಪೂದೊಡಿಗೆಯಂ ಮಾಡಲುಂ ಮಯೂರಿಯಂ ಕಿನ್ನರಮಿಥುನಂಗಳಂ ಸಂಗೀತಶಾಲೆಗೆ ಕಳುಪಲುಂ . . ಪೆಸರ್ವೆಸರೊಳೆ ಕರೆದು ಪೇಟ್ದು ಮನೋಹರಾಲಾಪಂಗಳಂ ಕೇಳುತ್ತಂ ಪೋಗೆವೋಗೆ (ಕಾದಂಬ. ೦೦೦೬). **ಪೂದುಡುಗೆ** : ಬಗೆಗೆ ವಂದ ಪೂಗಳೊಳ್ ಪೂದುಡುಗೆಯಂ ಮಾಡಿ ವಸಂತಕಾಂತೆಯರಂತೆ ನೆಟಿಯೆ ಕೆಯ್ಗೆಯ್ದಾಗಳ್ (ಆದಿಪು. ೦೦-೦೨೯ ವ); ಪೂದುಡುಗೆಯಿಂ ಚೆಲ್ವಾದರಾ . . . ಬಾಲೆಯರ್ (ಶಾಂತಿ. ೮-೦೩). **ಹೂದುಡಿಗೆ** : ವಾಸಂತಋತುಕಾಲಸಮಯ ಕುಸುಮವನಾ ವಿಳಾಸಿನೀಜನ ತೊಡಿಗೆಯಂ ಮಾಡಿ ತಂದೊಲ್ದು . . . ಶಿವಾರ್ಪಿತಂ ಮಾಡಿ ಹೂದು [ಹಾಲಾ. ದೊ]ಡಿಗೆದೊಟ್ಟು (ಹರಿಹ. ೩-೯೬). **ಹೂದೊಡಿಗೆ** : ಎಲೆ ಮುಗ್ಧೆ . . . ನಿನ್ನ ಸೌಕುಮಾರ್ಯಕ್ಕೆ ಹೂದೊಡಿಗೆ ಹೊಱೆ (ಸಂಗಿ. ೦೯-೦೩). [ಪೂ$_2$ + ತೊಡಿಗೆ (< ತೊಡುಗೆ)]

**ಪೂದೊಣೆ$_1$** (ನಾ). ಹೂವುಗಳಿಂದ ತುಂಬಿದ ಕೊಳ; ಹೂಗೊಳ : ನೈದಿಲಿಂ ಮೆಱೆವ ಪೂದೊಣೆಗಳಿಂದೆಸೆದತ್ತು . . . ರಜತಶೈಲಂ (ಚಾವತ. ೦-೨೬). [ಪೂ$_2$ + ದೊಣೆ$_1$]

**ಪೂದೊಣೆ$_2$** (ನಾ). ಹೂಬಾಣಗಳ ಬತ್ತಳಿಕೆ : ಮನೋಜನಸ್ಮೃತಿ ಗೊಪ್ಪುವ ಪೂದೊಣೆಯಕ್ಕುವಿಶ್ವಾಕ್ಷಿಸಲ್ ಪಂಜುಳದಾಡಿಮಾಕುಸುಮ ಮೊಂದದಱಿದೊರ್ವ ಸುಧಾಂಶುವಕ್ಕೆ . . . ಕರು ತಿಱಿದಳ್ಪೆಡಗಿನಿಂ (ಅದ್ಭುತ. ೯-೬೦). [ಪೂ$_2$ + ದೊಣೆ$_2$ (< ತೊಣೆ$_2$)]

**ಪೂದೋಂಟ**, ಪೂದೋಟ, ಹೂದೋಂಟ, ಹೂದೋಟ (ನಾ). ಹೂವುಗಳನ್ನು ಬೆಳೆಯುವ ತೋಟ ; ಪುಷ್ಪೋದ್ಯಾನ : **ದೇಗುಲದ**

ಬಡಗಣ ಪೂದೋಂಟ (ಪ್ರಕಾ. ೦೬೨೯, ೬೬–೯; 1024) ; ಮತ್ತೊರ್ವ ಚಿನ್ನ ಪೊನ್ನ ಕರುಮಾಡದವಂ ಬಳಸಿ ಬೆಳೆದ ಪೂದೋಂಟಮಂ ಪೊಕ್ಕು ಮಯ್ಗುರೆದ ನಲ್ಲನಂ ನೆವದಿನಿಂತೀವಳ್ (ಕಬ್ಬಿಗ. ೬೯) ; ಅಲ್ಲಲ್ಲಿ ಪೂದೋಂಟವಲ್ಲಲ್ಲಿ ಕೊಳಗಳಂತಲ್ಲಲ್ಲಿ ಕರ್ವಿನ ಪೊನಲು (ಶಬರ. ೦–೩೩). **ಪೂದೋಟ** : "ಪುಷ್ಪವಾಟಿ ತಾಂ ಪೂದೋಟಂ" (ಪು.ಶೋ. ೩೨–೦೨) ; ಪೂದೋಟವಮು ವಾಜಯಂ. . . ತಿಳಿಯಲ್ ಸ್ವಪ್ನದಿ ಲೇಸಲ್ತೆ (ಸೋಮೇಶ. ೬೯) ; ಸೌರಭ್ಯವ ತಾಳಿದನೇಕ ಪೂದೋಟ ಕೇಳಿಯ ವನಗಳಿದ್ದುವು ಪುರಲಕ್ಷ್ಮಿಯ ತಾಳಿಯ ಮರಕತದಂತೆ (ಸೋಮಶ. ೨–೩೩) ; ಎತ್ತಣ ತುರಂಗವಿದು ಪೊಕ್ಕು ಪೂದೋಟವಮಂ ತೊತ್ತಳದುಳಿವುದು (ಕೃಪಣಾ. ೨೦–೬). **ಹೂದೋಂಟ**: ಪಡುವಲು ಹೂದೋಂಟ (ಶಾಸನ. XI–ii, ೦೨೨–೮೬ ; ಸು. 1072) ; ಹೂದೋಂಟಗಳನುಜ್ ಹೊಕ್ಕು ಚೆಲುವನಾಗಿ ಪರೀಕ್ಷಿಸುತ್ತಂ (ಜಗ. ೨೨–೬). **ಹೂದೋಟ** : ಹಲವು ಹೂದೋಟಗಳಪರ್ಜಿಸಿ . . . ಹೂಗಳನೆಯ್ದೆ ಕುಯಿ ತಂದು (ಜಗಪು. ೨೨–೨೫) ; ಪರಿಪರಿಯ ಹೂದೋಟಗಳ ಹೊಯ್ದೊರಸಿದನು . . . ಲಾಂಗೂಲದಲಿ ಕಲಿ ಹನುಮ (ತೊರವೆ. ೩–೯ ೦೪) ; ಇಂತಹ ದಾಂಪತ್ಯ ಪ್ರಣಯಲೀಲೆ ಗಾಳಿ ಬೀಸದ ಹೂದೋಟ (ಕನ್ನಡ. ೦೦೯).

[ ಪೂ₃ + ತೋಂಟ ]

**ಪೂದೋಟ** 'ಪೂದೋಂಟ' ನೋ.

**ಪೂದೋಱಿಸು** (ಕ್ರಿ). ಹೂವು ಬಿಡುವಂತೆ ಮಾಡು ; ಪುಷ್ಪಿಸುವಂತೆ ಮಾಡು : ಮಿಂಡೆದ್ದ ಹೆಣ್ಗಳುಪವನಕ್ಕೆ ನಡೆತಂದು . . . ಕಂಡಕಂಡವನಿಜಾತಂಗಳು ಚಿಗುರಿಸಿದರೊಡನೆ ಪೂದೋಱಿಸಿದರು (ಕೃಪಣಾ. ೩೦–೩).

[ಪೂ₃ + ತೋಱಿಸು]

**ಪೂಧೂಳಿ** 'ಪೂದೂಳಿ' ನೋ.

**ಪೂನಾಡು** 'ಪುನ್ನಾಡು' ನೋ.

**ಪೂನಿಱು** (ಕ್ರಿ). ಹೂವುಗಳನ್ನು ಹೆಣೆ,—ಮಾಲೆಕಟ್ಟು : ಲಂಜಿಗೇಸರಂ ದೇವರ್ಕೆ ಪೂನಿಱುವ ಮಾಲ (ಲ) ಕಾರಗ್ಗೆ ಅರ್ದ್ಧ ವಿಸದಿ (ಎಕ. X. ೬೬–೨; 678). [ಔ ಇದು 'ಪೂನಿಱು' ಎಂಬುದರ ಅಪಲಿಖಿತವಿರಬಹುದು]

**ಪೂನೀರ್**, ಹೂನೀರು (ನಾ). ಹೂವಿನ ರಸ ; ಮಕರಂದ ; ಪುಷ್ಪರಸ : ತಳಿರಂ ತೂಗಿ ಪರಾಗವಂ ಪಿರಿದು ಪೂನೀರಂ ತಡಂಗೂಡಿ ಗುಗ್ಗುಳ ನಿಯರ್ಗಾ ಸಮನಾಂತು . . . ಏ ಗಂದಿಗರಂತೆ ಬಂದೊಲೆದುದೋ ಮತ್ತೊಂದು ಮಂದಾನಿಳಂ (ಅನಂತ. ೩–೯೬). **ಹೂನೀರು** : ನೀರಿನೊಂದು ನೀರಜಾತ ಬೆಳಕಿಗಾಗಿ ಕೆರಳಿತು ಈ ಕಿರಣಕರಳಿತು ಹೂವ ಹೊಕ್ಕ ಕಿರಣವಾಗ ಹೂನೀರ ನೆಕ್ಕಿತು (ಗಂಗಾಶ. ೦೩–೦೩). [ಪೂ₃ + ನೀರ್]

**ಪೂಪ** (ನಾ). ಹಿಟ್ಟಿನಿಂದ ಮಾಡುವ ದೋಸೆ, ಇಡ್ಲಿ, ಹೋಳಿಗೆ ಮುಂತಾದ ಮೃದುವಾದ ಭಕ್ಷ್ಯ : ''ಪೂಪಃ, ಅಪೂಪಃ, ಪೂಪಳಿಕಾ —ಈ ೩ ಪಕ್ವಾನ್ನಂ'' (ಕರಣಮು. ೩೬–೦೬೯) ; ವ್ಯಕ್ತ ಕಿರಾನ್ನವಂ ಘೃತದುಗ್ಧಶರ್ಕರೆಯು ವ್ಯಕ್ತಿಯಿಂಗೈದ ಕಜ್ಜಾಯವಂ ಪೂಪವಂ ಮುಕ್ತ ಭವಜಾಲನಾ ಶಿವಲಿಂಗನಾರೋಗಿಸಿದನು (ದುರಶಿ. ೬ ೩೨) ; ಲಡ್ಡು ಚಕ್ಕುಲಿ ಶರಗು ಪೂಪವ [ಪಾಠಾಂ. ತುಪ್ಪವ] ಬಡ್ಡಿಸಿದ ಪೊಂದಟ್ಟೆಯನು ಮುಂದೊಡ್ಡಿ (ಶರಾಮು. ೧೬೬–೨೯). 'ಅಪೂಪ' ಪರಾ. [ಸಂ.]

**ಪೂಪಲಿಕೆ** (ನಾ). = ಪೂಪ : ''ಪೂಪಲಿಕಾ ಪೂಪನಾಮಂ'' (ಪು.ಶೋ. ೯೯–೦೨). [ ಸಂ. ಪೂಪಲಿಕಾ ]

**ಪೂಪುಟ್ಟಿಗೆ** (ನಾ). ಹೂವಿನ ಬುಟ್ಟಿ ; ಪುಷ್ಪಕರಂಡ : ಪೂಪುಟ್ಟಿಗೆ ಪನ್ನೀರ್ಗುಪ್ಪಿಗೆ . . . ಕರ್ಪುರ ಕರಡಿಗೆಯಿರ್ದವು (ಕೊಂಕೋ. ೨೩–೩೨).

[ ಪೂ₃ + ಪುಟ್ಟಿಗೆ₁ (< ಪುಡಿಕೆ) ]

**ಪೂಪುಣುಂಬ** (ನಾ). ಹೂವುಗಳನ್ನು ಬಾಣಗಳಾಗಿ ಉಳ್ಳವನು ; ಮನ್ಮಥ : "ಇಂಗೋಲ್ಮಿಲ್ಲಂ . . . ಪೂಪುಣುಂಬ . . . ಗಳಿದೇರು ಇವು ೧೩ ಕಾಮದೇವಂಗೆ ಪೆಸರ್" (ಕಣಾ. ೯೭–೦೩) ; "ಕಬ್ಬುವಿಲ್ಲ ಸಿಂಗರ ಪೂಪುಣುಂಬ ವಿಶಾಂಬಪುಗೆಯ ಪೆಣ್ಬಡೆಯನ್ನೆಸರಲ ಕಾವ ಜತಿಗಳವಗೆಯು ನೆನೆ ಮನ್ಮಥನ ನಾಮಮಕ್ಕುಂ" (ಕಬ್ಬಿಗ. ೮). [ಪೂಪುಣುಂಬು + –ಅ₁]

**ಪೂಪುಣುಂಬು** (ನಾ). ಮನ್ಮಥನ ಹೂವಿನ ಬಾಣ, – ಪುಷ್ಪಾಸ್ತ್ರ : ಕಯ್ಬಿಱಿಗುಟ್ಟಿಯಾಡಿದರ್ ; ಪೊಪುಣುಂಬು ; ಪಲ್ಬಿಱಿಗುಟ್ಟಿದಂ (ಸುದ. ೬೬ ಕ್ರಿಯೋ) ; ಭಾವಜಶರ್ಪಾರ್ಗ ಪೂಪುಣುಂಬಂ[ಪಾಠಾಂ. ಪೂಪಿನಂಬಂ] ಪೂಡಿದಂ (ದಶಾವ. ೬–೬೦ ಕ). [ಪೂ₃ + ಪುಣುಂಬು (< ಪುಳುಂಬು)]

**ಪೂಪುರುಳ್** (ನಾ). ಹೂವಿನ ಸತ್ತ್ವ ; ಮಕರಂದ : ಪೊಂಬೆಳ್ಳಿ ಪೂಪುರುಳ್ ಬೆಳ್ದಂಗಳಿನ ಜಿತ್ತ ತುಂಬಿದಿರ್ಪಿನ ಬಗೆಯು ಬರೆಹದೊಳ್ಪಲ್ತೆ ? (ಶಾಂಪು. ೬೩–೦೦೨). [ಪೂ₃ + ಪುರುಳ್]

**ಪೂಪೊಡೆಯ**, ಹೂಪೊಡೆಯ (ನಾ). ಹೊಕ್ಕುಳಲ್ಲಿ ತಾವರೆಯ ಹೂವುಳ್ಳವನು ; ಪದ್ಮನಾಭ ; ವಿಷ್ಣು : "ವಿಷ್ಣು ಪೂಪೊಡೆಯನೆಂದೆನಲ್" (ಕಣಾಶ. ೯೩). **ಹೊಪೊಡೆಯ** : ಹರನ ಹುಟ್ಟುಗೆ ಹೂಪೊಡೆಯನೋಪಳ ನಜನರಸಿಯನಂಗಶೇಖರನ ತರುಣಿಯರನು ಗೆಲ್ದಳು ಗುಡಿ ಸಿರಿಜಾಣ್ಕೆ ಪಿರಿದಪ್ಪ ರೂಪಿನೀಡದವಳು (ಶ್ರೀಪಾಂ. ೩–೬೦). [ಪೂ₃ + ಪೊಡೆ₁ + –ಅ₁]

**ಪೂಬನ** (ನಾ). = ಪೂದೋಂಟ : ಬಾಲೆಯರೆಮ್ಮಯ ಪೂಬನದಿ ಆಡಲು ಬಂದು ನುಡಿವರು (ಗೀತಾ. ೦೯–೩೨). [ಪೂ₃ + ಬನ₁]

**ಪೂಬಾಣ**, ಹೂಬಾಣ (ನಾ). ೧. ಹೂವಿನ ಬಾಣ ; ಮನ್ಮಥನ ಬಾಣ. ೨. ಮನ್ಮಥ ; ಕಾಮ : ಬಾಣಪುತ್ರಿಯ ಕೆಳದಿಯರ ನೋಡಿದರು ಪೂಬಾಣಗನೆಯ ಸದ್ವಿಟರು (ಕೋಶಶ. ೨೯–೨೦). **ಹೂಬಾಣ** : ೩. ಸ್ಫೋಟವಾದಾಗ ಮೇಲಕ್ಕೆ ಸಿಡಿದು ಹೂವಿನಾಕಾರದ ಕಿಡಿಗಳನ್ನು ಸೂಸುವ ಒಂದು ಬಗೆಯ ಸುಡುಮದ್ದು : ಈ ಜನಸಾಲೆಯಲ್ಲಿ ಹಗಲುಬತ್ತಿ, ಹೂಬಾಣ, ಆಕಾಶಕೊಳವಿ . . . ಉತ್ಸವಗಳ ಕಾಲದಲ್ಲಿ ಹಚ್ಚಿಸುವಂತೆ ಕಟ್ಟಲೆ ಮಾಡಿದರು (ಮುಹಾಶಾ. I. ೦೨೯) ; ಎಡಪೂರ ತಳದಲ್ಲಿ ಏನೇನ ಶಡಗರ . . . ಹಾರೂವ ಹೂಬಾಣ ಹೂಬತ್ತಿ ಕಂಡಿರಿ (ಕನ್ನಡ. ೯). [ಪೂ₃ + ಬಾಣ₁]

**ಪೂಬಿಡು**, ಹೂಬಿಡು (ಕ್ರಿ). ಹೂವುಗಳನ್ನು ಹೊಂದು ; ಪುಷ್ಪಿತವಾಗು : ಪೂಬಿಡುವ ವಸಂತದಾ, ಪಣ್ ಬಿಡುವ ಗ್ರೀಷ್ಮದಾ, ಮುನ್ನಱಿವು ಇರ್ದುದಿಲ್ಲಂ (ಐಕ್ಯಶ. ೨೯–೩೦೬). **ಹೂಬಿಡು** : ಒಂದೂವರೆ ತಿಂಗಳಿಗೆ ಸಸಿಗಳು ದೊಡ್ಡವಾಗಿ ಹೂಬಿಡುತ್ತವೆ (ಮುಂತಾದು. ೯–೨೬) ; ಗಿಡ ಹಬ್ಬುವುದು ; ಚಿಗುರುವುದು ; ಹೂಬಿಡುವುದು ; ಹಣ್ಣು ಬಿಡುವುದು (ಶಾಹಿ. ೬೦). [ಪೂ₃ + ಬಿಡು₁]

**ಪೂಮಡಿ** (ನಾ). ಹೂವಿನ ಮಡಿಕೆ ; ಹೂದಂಡೆ : ತರಿಸಿಕ್ಕೆ ಕಟ್ಟಿಲೆಗಮಿಂದು ಮರೀಚಿಗವಮಾಯ್ತು ನಾಡೆ ಕಣ್ಗಳವಡೆ ಮಲ್ಲಯುದ್ಧವೆನೆ ದೇಸೆಯ ಪೂಮಡಿಯಂ ತೊಡರ್ಚಿದರ್ (ಶಂಪ್ರಶಿ. ೬–೬೯). [ ಪೂ₃ + ಮಡಿ₂ ]

**ಪೂಮರ** (ನಾ). ಹೂವು ಬಿಡುವ ವೃಕ್ಷ ; ಹೂವಿನ ಮರ : ತಳ್ಪಿರಟ್ಟಡಿಯ ಪೂಮರದಿಂ ಕಟಿಪೂನಳತ್ತವಿತ್ತಂ ಕವಿದಲ್ಲಿ ಮೆಲ್ಲನೂಗಿ ತೇಂಕುವ ಪೂವಿನ ಸಂಕರಂಗಳಿಂ (ಅಹಿ. ೦–೬೦) ; ಪೂಮರನಂ ಕೊಡಗೆ ವೇಱಿದಂತೆ ಕಬ್ಬಿನ ತೋಂಟವಂ ನೆ ಪೊಕ್ಕಂತೆ (ಶರರಾಕಸ್ಯ. ೨–೬೦).

[ಪೂ₃ + ಮರ₁]

**ಪೂಮಲಗು** (ನಾ). ಹೂವಿನ ದಿಂಬು ; ಹೂವುಗಳಿಂದ ರಚಿಸಿದ ಮೆತ್ತೆ : ಪೂಗೋಲ ತೂಗುತೆ ತಳಿರ ಪಾದಾಸನ ಮೇಗೆ ಕಾಲಿಟ್ಟು ಪೂಮಲಗ ರಾಗದೊಳೊಱಗಿ ತಾವರೆಗದ್ದುಗೆಯೊಳಿರ್ದ ಪೂಗೋಲನು (ಹರಿಶ. ೦೦–೬೬).

[ಪೂ₃ + ಮಲಗು₁ (< ಮಲಂಗು₁)]

**ಪೂಮಳೆ** 'ಪೂಮಟ್' ನೋ.

**ಪೂಮಳೆಗಟ್** 'ಪೂಮಟ್ಗಟ್' ನೋ.

**ಪೂಮಟ್ಟೆ** 'ಪೂವಟ್ಟೆ' ನೋ.

**ಪೂಮಾಲೆ, ಹೂಮಾಲೆ** (ನಾ). ಹೂವಿನ ಹಾರ, — ದಂಡೆ; ಪುಷ್ಪಮಾಲೆ: ನಿನ್ನಾಳ್ದ ಪೂಮಾಲೆಯಂದದೆ ಸಂದಿರ್ಪುದು ಮತ್ಕಿರೀಟದೊಳ್ (ಆದಿಪು. ೧೩-೧೬); ಕಪಿಯ ಕೊರಲೊಳ್ ಪೂಮಾಲೆಯಿಕ್ಕಿದಂತಾನುಮಕ್ಕುಂ (ರಘುನಾಥ್ಯ. ೧-೧೦೬); ಕಂಠದೊಳೊಂದಿಸಿದ ಕೊರಲಗಾಮಮು ಪೂಮಾಲೆಯಂ ಮಾಡಿ ಅಕ್ಷಯಂ ನಿಟಿಲಾಕ್ಷನಧವಂ . . . ಅಕ್ಷಣದೊಳರು ಮೋಕ್ಷಮಂ ಕೊಡಲು (ಬಸವಪು. ೨೮-೩೧). **ಹೂಮಾಲೆ:** ಹೂಮಾಲೆಗಳ ಸಿಂಪಿಸಿದ ಗಂಧದ ಬಂಧದಕ್ಷತೆಯ ಕೀಲಣೆಯ ಮಣಿವೆಳಗುಗಳ ಹರಿದಾಳಿಯಲಿ . . . ಎಸೆದುದಂಕುಶ ಭಟನ ಮುಂಚ್ಛೆಯಲಿ (ಶಬ್ದಾನ್ರಶ್ರೀ. ೩-೩೬); ಎತ್ತಿದ ಹೂ[ಪ್ರ.ಪಾ. ಪೂ]ಮಾಲೆ ಬಿಲ್ಲನಂತಿರಲಾಗ ಮುತ್ತಿನಮಾಲಿಡಿ ಹೆದೆಯಾಗೆ ಚಿತ್ತಭವಗೆ ಪುಷ್ಪಚಾಪವನೀವೊಲು ಬಿತ್ತರದೊಳಗೊರ್ವಳೆಸಗು (ಶರಶ. ೧-೦೦೫); ಕೋತಿಯ ಕೈಯಲ್ಲಿ ಹೂಮಾಲೆ ಕೊಟ್ಟ ಹಾಗೆ (ಗಾದೆ). [ಪೂ₃ + ಮಾಲೆ]

**ಪೂಮಾಲೆಗಾರ್ತಿ** (ನಾ). ಹೂವು ಮಾರುವವಳು; ಹೂವಾಡಿಗಿತ್ತಿ: ಮಲ್ಲಿಗೆಯಲರ್ದಂಡೆವಿಡಿಯೆ ಬಂದೆಬಿಗುವ ಜಲ್ಲಿದುಂಬಿಗೆ ಬೆರ್ಚಿ ನಿಂದು ಸೊಲ್ಲಿಪ ಪೂಮಾಲೆಗಾರ್ತಿ ಕಾಮನ ಕಬ್ಬುವಿಲ್ಲಿನಂತಿರ್ದಳು. (ಮೋಹತ. ೩-೦೬). [ಪೂಮಾಲೆ + — ಕಾಱ + — ತ್ತಿ₁ (< — ಇತ್ತಿ)]

**ಪೂಮಾಱು, ಹೂಮಾರು** (ಕ್ರಿ). ಹೂವುಗಳನ್ನು ವಿಕ್ರಯಿಸು, — ಮಾರು: ಇದು ಮನೆಯಾಣ್ಮನಂ ಮಾಱುವಂದದಮಲ್ಲದೆ ಪೂಮಾಱು ವಂದದಮಲ್ತು (ಶಂಕಶಾ. ೪-೮೧ ವ). **ಹೂಮಾರು:** ಹೂಮಾರುವ ಅಂಗಡಿಯಲ್ಲಿ ಹುಲ್ಲು ಮಾರುವುದುಂಟೆ? (ಪಾಂಡೇ. ೦೨೨). -ಹೂಮಾರಿದ ಕೈಲಿ ಹುಲ್ಲು ಮಾರಿಸಬಾರದು (ರಜಾಂಕಿ ೬೬). [ಪೂ₃+ಮಾಱು₂]

**ಪೂಮಿಡಿ, ಹೂಮಿಡಿ** (ನಾ). ತೀರ ಎಳೆಯ ಕಾಯಿ; ಚಿಕ್ಕ ಮಿಡಿ: ಮರ್ಮರಪತ್ರಮಂಬುತಳಮಂ ನಡುವಂತಿರೆ ನಟ್ಟೊಡತ್ತ ಬೀಟ್ಟಮರ್ ಗುಟ್ಟಿತ್ತ ಪೂಮಿಡಿಯ ಪೂವಿನ ಕಾಯ್ಗಳ ಕಯ್ಯುವೃಳ್ಕುಗುಂ (ಶಾಂತಿಪು. ೬-೯೪); ಸುತ್ತಿಟ್ಟು ಪರ್ಬಿದುದು ಮದವೇರಿ ಪೂಮಿಡಿಗಳೆತ್ತಲುಂ (ಋಜ್ಞಕ. ೦೪-೩); ಕೋದು ಪೂಮಿಡಿ ತಳಿರ ಕಾಡು ನರುವೊಗರಿನಿಂ ಪೂದಿಂಗಳರಸನಂ ಕರೆಯುಗು ತುಳಿಲ್ಗೆ (ಕಾಂಚೂಕಿ. ೦೦೪-೨೯೬). **ಹೂಮಿಡಿ:** ಹೂಮಿಡಿಯ ಹಜಾದು ಒತ್ತಿ ಹಣ್ಣ ಮಾಡಿದೆನೆಂದರೆ ಹಣ್ಣಾಗಬಲ್ಲುದೆ (ಅಪಶಂ.೨೨೬-೦೦೩೪); ಎಳೆಯ ಹೂಮಿಡಿಗಳು ಹಜಾದು ಹಣ್ಣಂ ಮಾಡಲಳವೆ (ಕಬಪು. ೬-೯): ಗೋದಿ ಹೊಡೆಗಟ್ಟಿರಲು ಕಡಲೆಯ ಮಡಿಲು ಹೂಮಿಡಿ ತುಂಬಿತು (ಸಂಕಮು. ೧೨-೦೨). [ಪೂ₃+ಮಿಡಿ₄]

**ಪೂಮುಡಿ₁, ಹೂಮುಡಿ₁, ಹೂವುಮುಡಿ** (ಕ್ರಿ). ಹೂವುಗಳನ್ನು ಧರಿಸು, — ಮುಡಿದುಕೊಳ್ಳು: ಸ್ಮರಸಂಜೀವನೆ ಕೃಷ್ಣೆ ಪೂಮುಡಿದಳ್ (ಗದಾಯು. ೬-೩೦). **ಹೂಮುಡಿ₁:** ಹಸುರೆಲ್ಲವು ಕುಸುರಾಯಿತು ಹೂಮುಡಿಯಿತು ಬೇಲಿ (ಶಂಕು. ೬-೨೨); ನೀಲ್ಗೊಂಬಿನಿಂ ಮಾವು ಹೂಮುಡಿಯು ತಿಹುದು (ಕಾಂಚೂಕಿ. ೦೦೩-೨೩೪). **ಹೂವುಮುಡಿ:** ಹೂವುಮುಡಿಯುವ ಹುಡುಗಿ ಹೆಂಗಸರಿಗೆ ಜನ್ಮಸಿದ್ಧವಾದುದು (ದೂರಕಿಲ್ಲ. ೬೦). [ಪೂ₃ + ಮುಡಿ₁]

**ಪೂಮುಡಿ₂, ಹೂಮುಡಿ₂** (ನಾ). ೧. ಹೂವುಗಳನ್ನು ಮುಡಿದು ಕೊಂಡ ಹೆರಳು, — ಜಡೆ: ಬಟಬಲ್ಮುಡಿಯ ಸೋರ್ಮುಡಿಯ ಪೂಮುಡಿಯ ನಿಱುದಲೆಯ ಸುಟಿಗುರುಳ . . . ವಿದ್ಯಾಧರಮಾರನಾರೀಕದಂಬಂ (ಧರ್ಮನಾ. ೮ ೦೯೬); ತರುಣಿಯರ ಪೂಮುಡಿಯ ಕಂಪಿಂದೆ ಸೌರಭ್ಯಧರನಾಗಿ . . . ಮಾರುತಂ ಸುಳಿದನು (ಕೆಬಪು. ೦೦-೬). **ಹೂಮುಡಿ₂:** ೧. ಅವನ ಹೆಂಡತಿ ಐವತ್ತೆರಡು ಕಣ್ಣುಳ್ಳವಳು ಅವಳು ತನ್ನ ಹೂಮುಡಿಯ ಬಿಟ್ಟು ಅತ್ತಾಳು (ಜಸಪ. ೯೩). ೨. ಹೂವನ್ನು ಹೆಣೆದ ಜಡೆ; ಮೊಗ್ಗಿನ ಜಡೆ· ಪೂರವಾರ್ಗಳಂ ಮಿಡಿವ ಹೂವುಮುಡಿಯು ಪಿಡಿಯುಲಿನೆ ಸೆರಗು ದಡದಡಿಸುತಿರೆ ಚಿಕ್ಕೆಯರ್ ಮೆರೆದು ತರಿವಿಂಡಿಯರ್ ನಡೆದರ್ (ಶಾಂ.ಪು. ೦೨೯-೨೬೦). [ಪೂ₃+ಮುಡಿ₁]

**ಪೂಯ** (ನಾ). ೧. ಗಾಯಗಳಿಂದ ಹೊರಡುವ ಬಿಳಿಯ ದ್ರವ; ಕೀವು. ೨. ಊತ; ಬಾವು: "ಪೂಯಂ, ಪೂಯೀ, ಪೂಯಯು, ಪೂಯಯನೇ, ಪೂಯಯನೀಯಂ ಈ ೫ ಬಾವು" (ಶಾಕಿ. ೦೦೦). [ಸಂ.]

**ಪೂರ₁** (ನಾ). ೧. ತುಂಬುವುದು; ತುಂಬಿಸುವುದು; ಪೂರ್ಣಗೊಳಿಸುವುದು. ೨. ತೃಪ್ತಿಗೊಳಿಸುವುದು; ಸಂತೋಷಗೊಳಿಸುವುದು. ೩. ಸುರಿಯುವುದು. ೪. ನದಿ, ಸಮುದ್ರ ಮೊದಲಾದುವು ಉಕ್ಕಿ ಹರಿಯುವುದು; ನೆರೆ: "ಪೂರಯೆಂಬುದು ತೊಱೆಯ ಭೂ(ಬೂ)ರಂ" (ಕಕೂಟ. ೦೦೦-೯೬); ಮಳೆಗಾಲದಲ್ಲಿ ಗಂಗಾನದಿಗೆ ಪೂರ ಬಂದ ಸಮಯದಲ್ಲಿ ಹುಮಾಯೂನನು ದಿಲ್ಲಿಯ ಕಡೆಗೆ ತಿರುಗಿದನು (ಶಿಂಕುಸ. ೯೯). ೫. ಹರಿವು; ಪ್ರವಾಹ: ಬಿಡದಬಲ್ಮ ಬಂಧುಜನದೊಟ್ಟುಡಿಯದ ಕಣ್ಣೀರ ಪೂರವಾ ಪ್ರೇತಮನೋಗಡಿಸದೆ ಸುಡುವುದು ಗತ (ಕಂಕಶಾ. ೨-೨೮); ಕಣ್ಣೀರ ಪೂರದಗುರ್ವಿಂ ದೆಸೆಗಾಣದಂದೆಡವುತಂ . . . ಪೋದಂ (ಶಾದಂಪೂ. ೯೦೪); ಪಾವಮರೀಮುಖಶಿಶಿಗೊರ್ಸವಿಂದುಗ್ರಾಪನಿರ್ಮಳಜಲದ ಪೂರದಿಂ ಬೆಳೆವುತಿಹ ಶಾಳಿಗಳ್ ಕಣ್ಗೆಸೆದುವು (ಕಂಪು. ೦೦-೬). ೬. ನೀರಿನ ಸಮೂಹ; ಜಲಾಶಯ: 'ಪೂರಾಂಬು' ಪರಾ. ೭. ಹುಣ್ಣು, ಗಾಯ ಮೊದಲಾದುವನ್ನು ತೊಳೆದು ಶುದ್ಧಗೊಳಿಸುವುದು. ೮. ಹಿಟ್ಟಿನಿಂದ ಮಾಡಿದ ರೊಟ್ಟಿ, ದೋಸೆ ಮೊದಲಾದ ಖಾದ್ಯ. ೯. ಮಾದಳದ ಗಿಡ; ಮಾತುಲುಂಗವೃಕ್ಷ. ೧೦. [ಯೋಗ] ಪ್ರಾಣಾಯಾಮದ ಒಂದು ಅಂಗ; ಮೂಗಿನಿಂದ ಉಸಿರನ್ನು ನಿಧಾನವಾಗಿ ಒಳಗೆ ಎಳೆದುಕೊಳ್ಳುವುದು: 'ಪೂರಕ' ಪರಾ. [ಸಂ.]

**ಪೂರ₂, ಪೂರಾ**(ಅ). ತುಂಬ; ತೀರ; ಪೂರ್ತಿಯಾಗಿ; ಬಹಳವಾಗಿ: ಕಾಲುಗಳು ಪೂರ ಸೋತುವು (ಶೂದ್ರತು. ೩೦); ರಾವಣಗೆ ಪೂರ ಕೋಪ ಬಂತು (ಶಂಶಕ. ೦೨೪). **ಪೂರಾ:** ನಾನು ಹೇಳುವ ಮಾತನ್ನು ಪೂರಾ ಕೇಳಬಾರದೆ? (ರಂಜಿಪ. ೦೯); ನಿನ್ನ ತಿಳಿವಳಿಕೆ ಪೂರಾ ತಪ್ಪಲ್ಲ (ಅಕ್ರಮ. ೨೦).

**ಪುಟ್ಟಪೂರಾ, ಪುಟ್ಟಾಪೂರಾ** (ದ್ವಿರುಕ್ತಿ): ಮಿಂಚುಬಳಗ ತೆರೆತೆರೆಗಳಾಗಿ ಅಲೆಯುವುದು ಪುಟ್ಟಪೂರಾ (ಕೃದಕ. ೧-೨); ಧಲಬಲ ಇದ್ದು ಧೀರಾ ಎಂಥ ಶೂರಾ ಆಸಕ್ತಿ ಇಲ್ಲದಾ ವೀರಾ ಪುಟ್ಟಪೂರಾ (ಸ.ಜಾ.ಗಾ. ೨೦-೦೬); ಕೃಷ್ಣದೇವರಾಯನು . . . ಮುಸಲ್ಮಾನರನ್ನು ಈ ಯುದ್ಧದಲ್ಲಿ ಪುಟ್ಟಾಪೂರಾ ಸೋಲಿಸಿದ ಕಾರಣ ಮುಸಲ್ಮಾನರು ವಿಜಯನಗರದ ರಾಜ್ಯದ ಕಡೆಗೆ ಆತನ ಕಾಲದಲ್ಲಿ ಇಣಿಕಿ ನೋಡಲಿಲ್ಲ (ಕಕ. ೦೨೨). [<ಪೂರ₁]

**ಪೂರಂಗವಿ** (ಕ್ರಿ). ಹೆಚ್ಚಾದ ನೆಱೆ ಬಂದು ಆವರಿಸು; ಮಹಾ ಪೂರವು ಬಂದು ಮುಸುಕು: ಸಭೆಯೆಲ್ಲಂ ಹೊನ್ನ ನೀರಿಂದರೆ ಬಳದವೂಲಿ ದರ್ಪುದೇಕೀ ಜಗದ್ವಲ್ಲಭನಂಗಜ್ಯೋಯೆ ಪೂರಂಗವಿದ ಪಸರದಿಂದೆ (ಅಪಂಪು. ೦೦-೪೯). [ಪೂರ₁+ಕವಿ₁]

**ಪೂರಂಗೊಳ್** (ಕ್ರಿ). ಪ್ರವಾಹವಾಗಿ ಹರಿ; ಧಾರೆಗಟ್ಟಿ ಸುರಿ: ಮುದಶ್ರುಗಳ್ ನಯನದಿಂ ಪೂರಂಗೊಳ್ಗಳಲ್ . . . ರಥಾಂಗರಾಜಿ ನೆರೆದತ್ತು (ಕುಸುಮಾ. ೦-೩೩); ಹೃದಯದೊಳ್ದೂತನವಪ್ರಸನ್ನಸುಧ ಪೂರಂಗೊಂಡುದು (ಕುಸುಮಾ. ೯-೦೦೬). [ಪೂರ₁+ಕೊಳ್₁]

**ಪೂರಂಬರಿಸು** (ಕ್ರಿ). ತುಂಬಿ ಹರಿಯುವಂತೆ ಮಾಡು; ಉಕ್ಕೇರಿಸು: ನೀರ್ಗಾಯ್ಗಳಿಂ ಭೋರ್ಗರೆದುಗಂವೆಳನೀರೇ . . . ಅತುಳಾಮಳ ಖಾತಂಗಳಿಂ ಶೀವಿ ನಿಶಾಂತಂ ಸುತ್ತಿ ಪೂರಂಬರಿವುದದಱೊಳೇ ನಾರಿ ಕೇಳಿಂಭ್ರಮಂಗಳ್ (ಕುಸುಮಾ. ೦-೯೬). [ಪೂರ₁+ಪರಿಸು (<ಪರಿಯಿಸು)]

**ಪೂರಕ** (ಗು). ೧. (ಅರೆಯನ್ನು) ತುಂಬುವ; (ಕೊರೆಯನ್ನು)

ಪೂರ್ತಿಮಾಡುವ. ೨. ಸಹಾಯಕವಾದ ; ಸಹಕಾರಿಯಾದ : 'ಪೂರಕಪರೀಕ್ಷೆ' ಪರಾ. ೩. ತೃಪ್ತಿಗೊಳಿಸುವ. (ನಾ). ೪. ಪೂರ್ಣಗೊಳಿಸುವಂಶವಹುದು ; ಪೂರ್ತಿಗೊಳಿಸುವ ಭಾಗ : ಮೊದಲನೆಯ ಕ್ರಮಕ್ಕೆ ಎರಡನೆಯ ಕ್ರಮ ಪೂರಕದಂತಿದೆ (ಶಿಕ್ಷಣ. ೨೩೬) : ಈ ಜ್ಞಾನವಾಹಿಗಳು ಪರಸ್ಪರ ಪೂರಕಗಳಾಗಿವೆ (ಕಶಕ್ಶಾ. ೩೭೦) : ಅನೇಕ ಸಂದರ್ಭಗಳಲ್ಲಿ ಒಂದು ದರ್ಶನವು ಮತ್ತೊಂದು ದರ್ಶನಕ್ಕೆ . . . ಪೂರಕವಾಗಿಯೂ ಇರುತ್ತದೆ (ಜಾನಾಕ. II ಪುಟ ೫). ೫. ಮಾದಲದ ಗಿಡ ; ಮಾತುಲುಂಗವೃಕ್ಷ. ೬. ಶ್ರಾದ್ಧದಲ್ಲಿ ಪಿತೃಗಳಿಗೆ ಅರ್ಪಿಸುವ ಪಿಂಡ. ೭. ರೊಟ್ಟಿ, ದೋಸೆ ಮೊದಲಾದ ಹಿಟ್ಟಿನಿಂದ ಮಾಡಿದ ಖಾದ್ಯ. ೮. [ಯೋಗ] ಪ್ರಾಣಾಯಾಮದ ಒಂದು ಅಂಗ ; ಮೂಗಿನಿಂದ ವಾಯುವನ್ನು ಒಳಗೆ ಎಳೆದು ಕೊಳ್ಳುವುದು : "ನಾಸಿಕದಿ ನಿಂದಾನಿಲಂ ಕುಂಭಕಮೆನಿಕ್ಕುಂ ನಾಸಿಕದಿ ಬಿಡುವಾನಿಲಂ ರೇಚಕಮೆನಿಕ್ಕುಂ ನಾಸಿಕದಿ ಸೇದುವಾನಿಲಂ ಪೂರಕಮೆನಿಕ್ಕುಂ" (ಪುಂಗಶಾ. ೦೭-೦೯) ; ಕುಂಭಕ ಸಂರೇಚಕ ಪೂರಕಂ ಪರಿವಮಳೊನ್ನಿಶ್ರಂ. . . ನಂಜಿನ ಸುಯ್ಯಂ ಗಾಳಿ ನೃಪನಂ ಕೊಂದಿಕ್ಕಿತು (ಶಾಂತಿಶ. ೬-೯೩) ; ಅಣು ವಿನಲಿ ಲಘುವಿನಲಿ . . . ವಶಿತ್ವದಲಿ ಪೆಂಟಿಸಿ ರೇಚಕ ಪೂರಕವ ರಿಂಗಣ ವನಜುವುದು ಯೋಗಸಿದ್ಧಿಗೆ ಲಕ್ಷಣವನು (ಕುಮ್ವಾ. ಉ. ೬-೯). ೯. = ಪಾದ ಪೂರಕ : ಮತ್ತೆಂಬ ಪೂರಕದ ಬಟ್ (ಎಂಬ) ಅವ್ಯಯಂ ಬಿಟಂ (ಕಶಬ್ದ. ೫. ಕೃತಿ ೩೭). ೧೦. [ಗಣಿತ] ಗುಣಿಸುವ ಸಂಖ್ಯೆ ; ಗುಣಕ. [ಸಂ.]

ಪೂರಕಪರೀಕ್ಷೆ (ನಾ). ೧. ಮುಖ್ಯ ಪರೀಕ್ಷೆಯಲ್ಲಿ ತೇರ್ಗಡೆಯಾಗದ ವಿಷಯಗಳಿಗಾಗಿ ಪುನಃ ನಡೆಯಿಸುವ ಪರೀಕ್ಷೆ : ಸೆಪ್ಟೆಂಬರಿನಲ್ಲಿ ಪೂರಕಪರೀಕ್ಷೆ ನಡೆಯಿತು (ಪ್ರ೦). ೨. ವಾಕ್ಯಗಳಲ್ಲಿ ಬಿಟ್ಟು ಹೋಗಿರುವ ಭಾಗವನ್ನು ಸರಿಯಾಗಿ ಊಹಿಸಿ ತುಂಬುವ ಪ್ರಶ್ನೆಗಳನ್ನೊಳಗೊಂಡ ಪರೀಕ್ಷೆ : ಪೂರಕಪರೀಕ್ಷೆ—ಉದಾಹರಣೆ ೧. ಹಿಂದೂಸ್ಥಾನ . . . ಖಂಡದಲ್ಲಿದೆ. ಮೇಲಿನ ಪ್ರಶ್ನೆಗಳಲ್ಲಿ ಒಂದೊಂದು ಪದ ಬಿಟ್ಟುಹೋಗಿದೆ. ವಿದ್ಯಾರ್ಥಿಗಳು ಅದನ್ನು ಸ್ಮರಣೆಗೆ ತಂದುಕೊಂಡು ಅದನ್ನು ಬಿಟ್ಟಿರುವ ಸ್ಥಳದಲ್ಲಿ ಬರೆದು ಪೂರೈಸಬೇಕು (ಶಿಕ್ಷಣ. ೩೩೯). [ ಪೂರಕ + ಪರೀಕ್ಷೆ ]

ಪೂರಣ (ನಾ). ೧. (ಅರಕೆಯನ್ನು) ತುಂಬುವುದು,—ಭರ್ತಿ ಮಾಡುವುದು : ಸಾಹಿತ್ಯದಲ್ಲಿ ಅಪ್ರತ್ಯಕ್ಷತೆಯ ಅಭಾವವನ್ನು ಪೂರಣ ಮಾಡಬೇಕು (ಶಂಶ. II, ೨೬೬). ೨. ಸಹಾಯಕವಾದುದು; ಪೂರಕ ವಾದುದು : ಆರೋಗ್ಯ ಆಯುಸ್ಸು ಐಶ್ವರ್ಯವೆಂಬ ಈ ಮೂರುವಿಧ ವಸ್ತುಗಳು ನಾರಾಯಣನ ಭಜಕರಾದವರ ಸಾಧನಕ್ಕೆ ಪೂರಣವಾಗಿಪ್ಪವು (ಜಗಶ. ೦೫೨). ೩. ಪೂರ್ಣತೆ ; ತುಂಬಿರುವಿಕೆ : ಸೋರುವಾನಂದಾಶ್ರು ಪುಳಕದ ಪೂರಣದಲೆತ್ತಿದನು ಪವನಕುಮಾರಕನ ಮಸ್ತಕವ ನಲಿದೊಲಿದ ಬಾಜುಭವಸೂನು (ಕೊಶಭಾ. ೫-೯-೬) ; ಕಿಡಿದೊಡಲ ಸೀಳಿಂದೆ ಕಡಿವಡೆದ ತೋಳಿಂದೆ . . . ಇಡಿದಿರ್ದುದಾ ರಣದಲೊರಣದ ಪೂರಣದ ಕಾರಣದ ಪೂರಣದೊಳು (ಕೃಬಿಚಾ. ೦೨-೯೯). ೪. (ನದಿ, ಸಮುದ್ರಗಳ ನೀರು) ಉಕ್ಕುವುದು ; ಹೆಚ್ಚುವುದು. ೫. ನೆರವೇರಿಸುವುದು ; ಮುಗಿಸುವುದು ; ಮುಕ್ತಾಯ : ನಮ್ಮ ಬಾಳ್ ಬರಿ ಸಮಸ್ಯೆಯೆ ? ಅದರ ಪೂರಣವದೆಲ್ಲಿ ? (ಸಂಕಲ್ಪ. ೩೩). ೬. ಹಿಟ್ಟಿನಿಂದ ಮಾಡಿದ ಒಂದು ಬಗೆಯ ಖಾದ್ಯ. ೭. ಕಡುಬು ಮೊದಲಾದುವುಗಳಲ್ಲಿ ತುಂಬುವ ಹುದುಗಲು : 'ಪೂರಣಗಡುಬು', 'ಹೂರಣ' ಪರಾ. ೮. (ಸುಷಿರವಾದ್ಯಗಳನ್ನು) ಊದುವುದು,—ಬಾಜಿಸುವುದು : 'ಪೂರಿಸು' ಪರಾ. ೯. ಬೂರುಗದ ಮರ ; ಶಾಲ್ಮಲಿ. ೧೦. ಪೂರ್ಣ ಗೊಳಿಸುವ ಸಂಖ್ಯೆ. ೧೧. ಬಿಲ್ಲನ್ನು ಬಾಗಿಸುವಿಕೆ. ೧೨. [ಗಣಿತ] ಗುಣಾಕಾರ. [ಸಂ.]

ಪೂರಣಂಗೆಯ್ (ಕ್ರಿ). ತುಂಬು ; ಭರ್ತಿಗೊಳಿಸು : ಕಿಕ್ಕಿಂದದಿಂ ಪೂರಣಂಗೆಯ್ವಲ್ಲಿ ಸಗಣ ಪ್ರಚ್ಛನ್ನ ನೆಮ್ಮುಗೆಗಳೊಳಗಡೆ ಶಬ್ದವು (ಕಬ್ಬಿಸಂ. ೬೨). [ಪೂರಣ+ಕೆಯ್[1]]

ಪೂರಣಗಡುಬು (ನಾ). ಹೂರಣವನ್ನು ತುಂಬಿಸಿ ಮಾಡಿದ ಕಡುಬು : ದೇವಿ ಮುಳಿಸನುಬಿಡು . . . ತನ್ನ ಕಯ್ಯಿಂದಮ ಪೂರಣಗಡುಬನಿತ್ತಳ್ (ಶಿಕ್ಷಗೋ. ೫೦-೦೬) ; ನಿನಗಾವ ಭಕ್ಷ್ಯದೊಳ್ಪುಂ ? ಪೂರಣಗಡುಬ ನೀವೆನೊ ಚಕ್ಕುಲಿಯಂ ? (ರಾಜಾಕ್ಶ. ೯೦-೦). 'ಹೂರಣಗಡುಬು' ಪರಾ. [ಪೂರಣ+ಕಡುಬು (<ಕಡುಂಬು)]

ಪೂರಣಿ (ನಾ). ಬೂರುಗದ ಮರ ; ಶಾಲ್ಮಲೀವೃಕ್ಷ : "ಪಿಚ್ಛಿಲಾ ಪೂರಣೀ, ಮೋಚಾ, ಚಿರಾಯುಃ, ಶಾಲ್ಮಲೀ—ಇ ಬೂರುಗದ ಗಿಡ" (ಶಿಘ್ರಾ೦. ೦೨೨). [ಸಂ. ಪೂರಣೀ]

ಪೂರಣೆ (ನಾ). ೧. ಪರಿಸಮಾಪ್ತಿ ; ಮುಕ್ತಾಯ : ಕ್ಷೀರಂ ದಧಿ[ಘೃ]ತಸಿತ ಮಧುಧಾರಾಳಿಯಃ ಲಕ್ಕಿಗಡುಗೊಟ್ಟ [ಸೊಂ]ಟಿಗೆ ಕರ್ಪೂರದಿ ಪೂರಣೆ ಮಾಡಿ ಮನೋರಾಗದೆ ಚಿತ್ರವಿಧದ ಪೂಜಾವಿಧಿಯಂ ಅನ್ತು ಮಹಾಪೂಜೆಯಂ ಮಾಡಿ (ಕ್ಶಿ೨ಶಾ. XX, ೯೯-೫೨ ; ಸು. 1076 ?). ೨. ಅರ್ಚನೆ ; ಪೂಜೆ (?) : ಅರಲಿಂ ಕುಂಕುಮದಿಂ ಕರ್ಪುರದಿಂ ತೀರ್ಥಕರದಿವ್ಯಚೈತ್ಯಾವಳಿಯಂ ಸರಸಿಜನೇತ್ರೆಯ ಮುಂದಾದರದಿಂ ಲೇಸಾಗಿ ಮಾಡುವಂ ಪೂರಣೆಯಂ (ರತ್ನಾಕರಸ್ಸ. ೦೦-೨೩). [ಸಂ. ಪೂರಣ]

ಪೂರತಿ (ನಾ). ಪರಿಸಮಾಪ್ತಿ ; ಕೊನೆ : ಕುಜನರ ಪಾಪ ಪೂರತಿ ಯಾಗುವ ತನಕ ಅಜನಯ್ಯ ಎನಗೆ ಈ ಮಾತು ದೊರಕುವದೇನೊ (ಕೋಲ್ಹಾ೦. ೭ ೩). [<ಸಂ. ಪೂರ್ತಿ]

ಪೂರತೆ 'ಪೂರ್ತೆ' ನೋ.

ಪೂರಯಿಕೆ 'ಪೂರೈಕೆ' ನೋ.

ಪೂರಯಿಸು 'ಪೂರಿಸು' ನೋ.

ಪೂರವಟ (ನಾ). ಒಂದು ಊರಿನ ಹೆಸರು (?) : ಇತ್ತೊಡು ಪೂರವಟ ಗೋಸಾಸಿಗರಾ ಮಹಿಧವರ್ಮ್ಮ ತುಸವಿನ್ ಪಡೆಮ (ಇಆ. VIII, ೨೬೩-೩ ; 700). [ ? ]

ಪೂರವಾರ (ನಾ). ದಡವನ್ನು ಸೂಸಿ ನೀರು ಹರಿಯುವಿಕೆ ; ಮಹಾಪೂರ : ಧರೆಯೊಳ್ ಶಾಲೂರಸಂಘಂ ಪವನಪಥದೊಳಂ ಭೋಧರಾನೀಕಂ . . . ತಟಿನೀವ್ಯೂಹದೊಳ್ ಪೂರವಾರಂ . . . ರುತಂ ಪರ್ವಿಸುತ್ತಿರ್ದುವೆತ್ತಂ (ಕಾದಂಬ. ೫೩೨). [ಸಂ.]

ಪೂರವಿಸು 'ಪೂರಿಸಂ' ನೋ.

ಪೂರಾ 'ಪೂರ್ರಾ' ನೋ.

ಪೂರಾಂಬು (ನಾ). ಜಲಾಶಯದ ನೀರು : ನೊರೆವೆಲ್ಲಂ ಪೋದೆರಟ್ಟಿಕ್ ಕುಮುಟ್ ಕುಡಿದು ಪೂರಾಂಬುವಂ . . . ಮಹಿಷೀಸಂತತಿ ವಿಪಿನಧಮಂ ಕಣ್ಗುವರ್ಯಿತ್ತು ಕಾರೊಳ್ (ಚಂದ್ರಕ. ೬-೯೬). [ಪೂರ್[1]+ಅಂಬು[1]]

ಪೂರಾಯ (ನಾ). ೧. ಸಂಪೂರ್ಣತೆ ; ಸಮಗ್ರತೆ : ಪೂರಾಯದಲಿ ನುಂಗಿದುದು ಕತ್ತಲೆ ನಿಮಿಷದಲಿ ಜಗವ (ಕುಮ್ವಾ. ಶ. ೬-೩೯) ; ಕೆಲ ಕೆಲರು ಪೂರಾಯದಿಂ ಪೊಯ್ದು ಘಾಯಂಗಳಿಂ ನೋವಿನೊಳ್ ಪೊರಳಿದರುರ್ವಿ ತಳಕೆ (ಕುಕಂಗ. ೫೦-೩೩). ೨. ನೆರವೇರುವಿಕೆ ; ಪೂರ್ಣ ಗೊಳ್ಳುವುದು : ಬಲ್ಲಿದರೊಡನೆ ಬವರವಾದಡೆ ಗೆಲಲುಂಟು ಸೋಲಲುಂಟು ಕಳ್ಳನೊಡನೆ ಭಾಷೆ ಪೂರಾಯವೆ ಅಯ್ಯಾ (ಬಸವ. ೦೫೦). ೩. ಅತ್ಯಧಿಕವಾದುದು ; ಅತಿಶಯವಾದುದು : ರಾಯನೊಡ ಹುಟ್ಟಿದರಲಾ ಪೂರಾಯವಿವರಿದಿರ ಕೈ ಮಹಾದೇವಾಯುಧದ ಮಳೆಗಳಿದರ್ (ಕುಮ್ವಾ ಕರ್ಣ. ೦೩-೨೮) ; ಕೋಪಾಗ್ನಿ ಪರ್ವಿ ಪೂರಾಯವಾಗಲ್ಕೆ (ಕಬತ್ತ.

೨೩–೨೩). (ಗು). ೪. ಪೂರ್ಣವಾದ ; ಸರ್ವಾಗ್ರವಾದ ; ಸಂಪೂರ್ಣವಾದ : ನೀರುನೀರಾಗಿ ಬೆರಸಿ ಪಾದೋದಕಧಾರೆಯು ಕಡಲೋಕುಳಿಯಲ್ಲಿ ಪೂರಾಯ ಸನ್ನುತವಾಗಿ ಮುಳುಗಿ ಕೂಡಲಸಂಗನ ಕೃಪೆಯಿಂದುಳಿದೆ (ಶಿಶಗೀ. ೧೦೯–೩೬೦). ೫. ಅಧಿಕವಾದ ; ಅತಿಶಯವಾದ : ಸರಸಸೌಗಂಧಿಕದ ಪುಷ್ಪೋತ್ಕರಕೆ ಪವನಜ ಹೋದನೆಂಬುದನರಸಿಯಿಂದರಿದವನಿಪತಿ ಪೂರಾಯ ದುಗುಡದಲಿ . . . ಚಿಂತಾಭರಿತನಿದ್ದನು ಭೀಮಸೇನನ ಕಾಂಬ ತವಕದಲಿ (ಕುಮ್ಮಾಕ. ೧೦–೨) ; ಆ ಯುವತಿ ಕಣ್ಣೀರಿನಲಿ ಪೂರಾಯಶೋಕದೊಳೆಂದಳಾ ತರಳಾಯತಾಕ್ಷಿಗೆ ತನ್ನ ವೃತ್ತಾಂತವನು ಬಿಸುಸುಯ್ಯುತ (ಕಳಶ. ೩ ೩೫). [ಪೂರ್ಣ+-ಆಯ್$_1$]

**ಪೂರಾಯಗಾಯ**, ಪೂರಾಯಘಾಯಂ (ನಾ). ಆಳವಾದ ಪೆಟ್ಟು,— ಏಟು ; ತೀವ್ರವಾದ ಕ್ಷತ : ಘಾರಮೋಘವೆದ್ದು ಧಾರಾವರ್ತ ಸುರಿವಾಗ ಧಾರಿಣಿಯೆಲ್ಲವು ಮುಳುಗಿತ್ತು, ನೋಡಾ . . . ಪೂರಾಯ ಗಾಯದಲ್ಲಿ ಸಾಯ ಕೊಂದಲ್ಲದೆ ಸೂರ್ಯರನೇಕರು ಮಡಿಯರು ಗುಹೇಶ್ವರ (ಅಪ್ರಾ. ೬೬–೩೯೦) ; ನಾರಾಯಣ ಮಹಾರೋಷದಿಂದೆಸುತಿರ್ಪ ತೋರಾಸಿಯದೆಸುಗೆಗಿಯುಂ ತರಹರಿಸದಾಕ್ಷಣಂ ಪೂರಾಯಘಾಯದಿಂ ಬಲಮಳಿಯ (ಕಂಠೀ. ೩೨–೯) ; ಪೂರಾಯಗಾಯದಿಂದಿರದೆ ಶತ್ರುಘ್ನಂ ಮಹೀತಳಕೆ ರಥದಿಂದೆ ಬೀಳ್ವನಿತಜ್ಽೊಳ್ (ಕೈಬಿಆ. ೨೦–೩೦).

**ಪೂರಾಯಘಾಯ** : ಎನ್ನವರೆ‌ಸಗೊಳಿದು ಹೊನ್ನ ಶೂಲದಲಿಕ್ಕಿದರಯ್ಯಾ ಅಹಂಕಾರ ಪೂರಾಯಘಾಯದಲಿ ಅನಂತರು ಬಡುಕುವೆನೆಂತು ಜಿ ವಿಸುವೆ (ಚಕಶ. ೩೯೭) ; ಬಿಜ್ಜಳನ ಕಾಯದಲಿ ಒಂದೆರಡುಮೂಪೂರಾಯ ಘಾಯದೊಳಿಜ್ಽದು ಕೆಡಹಿ (ಬಸಪು. ೬೦–೩೦) ; ಐದಾಜು ಶರದಲಿ ಕರ್ಣ ನೆದೆಯನು ಡೋಜುಗಳೆಯಲು ಬಳಲಿದನು ಪೂರಾಯಘಾಯದಲಿ (ಕುಮ್ಮಾರೈ.೭. ೩–೨೯). [ಪೂರಾಯ+ಗಾಯ]

**ಪೂರಾಯಗೆಯ್** (ಕ್ರಿ). ಮುಗಿಸು ; ಪೂರೈಸಂ : ಪೂರ್ಣಗೊಳಿಸಂ : ಕುಮಾರತಿಯರು ಶಿವಾರ್ಚನೆಯ ಪೂರಾಯಗೆಯ್ದು ಸದ್ಭಕುತಿಯನಾಂತು ಕೈವಾರಿಸುತಿರ್ದರು (ಸೋಹಶ. ೨೭–೨೫). [ಪೂರಾಯ + ಕೆಯ್$_1$]

**ಪೂರಾಯಘಾಯ** 'ಪೂರಾಯಗಾಯ' ನೋ.

**ಪೂರಾಯತ** (ಗು). ಸಂಪೂರ್ಣವಾದ ವಿಸ್ತಾರವುಳ್ಳ ; ಸರ್ವಾಗ್ರತೆಯುಳ್ಳ : ಸ್ಥಾಯಿಸಂಚಾರಿಗಳ ಸರಿಗಮಪಧನಿಯ ಸರದಾಯತದ ಶುದ್ಧ ಸಂಕೀರ್ಣ ಸಾಳಗದ ಪೂರಾಯತ ಸುತಾನಂಗಳಂ . . . ಗೇಯರಸಮೊಸರ ಪಾಡಿದರವರ್ (ಕೈಬಿಆ. ೨೦–೩೬). [ಸಂ.]

**ಪೂರಿ**, ಪುರ್ರಿ, ಪುರ್ರೆ (ನಾ). ಕಣಕವನ್ನು ಲಟ್ಟಿಸಿ ಎಣ್ಣೆ ಅಥವಾ ತುಪ್ಪದಲ್ಲಿ ಕರಿದು ಮಾಡುವ ಒಂದು ಬಗೆಯ ಖಾದ್ಯ : ಮಸಾಲ್‌ದೋಸೆ, ಚಪಾತಿ, ಪೂರಿ, ರವೆಇಡ್ಲಿ ಏನು ಕೊಡಲಿ ಸಾರ್? (ಮಹಾಂ. ೯೩). **ಪುರ್ರಿ** : ಖೀರು — ಪುರಿ ಅಂದಿನ ಮುಖ್ಯಭೋಜನವಾಯಿತು (ಕೃಕೃಕ. ೦೪೩) ; ಶ್ರೀಖಂಡ ಪುರಿಯನ್ನು ಚಕ್ಕರಿಸುವೆಯಂತೆ ಏಳು ! (ಬಾಕಿಂ. ೫೫). **ಪುರ್ರೆ** : ಅಂದು ಮನೆಯಲ್ಲಿ ಪುರೆ-ಸುಧಾರಸವಾಗಿತ್ತು (ಸಮಾಜ. ೦೦೦) ; ಪುರೆ; ಶ್ರೀಖಂಡ, ಸಿರ, ಅವಲಕ್ಕಿ . . . ಇತ್ಯಾದಿಯಿಂದ ದೊಡ್ಡ ಬಾಳೆಯೆಲೆ ಭರಗಚ್ಚಾಗಿ ತುಂಬಿದ್ದವು (ಅಕ್ಕ. ೨೩೩). 'ಪೂರಿಗೆ' ಪರಾ. [ ←ಹಿಂ. ಪೂರೀ : ಮರಾ. ಪುರೀ ]

**ಪೂರಿಗ** (ನಾ). ಕಠೋರನಾದವನು ; ಕಠಿಣಸ್ವಭಾವದವನು : "ಪೂರಿಗೆ[ಗ]ನೆ ಕಠೋರಂ" (ಚಾಕಂ. ೩೯). [?]

**ಪೂರಿಗೆ**, ಹೂರಿಗೆ (ನಾ). ತುಪ್ಪವನ್ನು ಸವರಿ ಹಂಚಿನ ಮೇಲೆ ಬೇಯಿಸಿ ಮಾಡುವ ಒಂದು ಬಗೆಯ (ಸಿಹಿಯಾದ) ಭಕ್ಷ್ಯ : ಪೂಗೆಯಡ್ಡಲಿಗೆ . . . ಮಂಡಿಗೆ ಮೊದಲಾಗೊಡೆಯಪುದಿನೆಂಟುಂ ತೆಱದ ಭಕ್ಷ್ಯರೂಪಗಳುಮಂ...ಬಡ್ಡಿಸಿದೊಡೆ(ಚಕ್ಕಾರು. ೭೬–೦೬); ಕಲ್ಪುರಿಗನೊಯ್ಯನೆ ಪೂರಿಗೆಗೊಟ್ಟೈದಾಬಿನ ಕೊಂಡವನಟ್ಟಿಯಾಯೊರಸಿ ನೋಟ್ಟುದುಂ (ಅಂಶ್ರೀ. ೩-೦೯); ಮಿದಿದಿಂದಾಗಿರೆ ಖರ್ಜೂರದ ಪಣ್ಣಂ ನಾರಿಕೇಳಮಂ ಶರ್ಕರೆಯುಂ ಪುದಿದಡುಗೆ ಕಣಿಕದೊಳ್ ತುಪ್ಪದೊಳದು ರಸಭರಿತಮಪ್ಪ ಪೂರಿಗೆಯಕ್ಕುಂ (ಸೂಪಶಾ. ೬–೬) ; ರುಚಿಮೆರಸಿದ ಲಡ್ಡುಗೆ ಚಕ್ಕುಲಿ ಗಾರಿಗೆ ಪೂರಿಗೆ ಮೊದಲಾಗಿರ್ದ ಪಲವು ಭಕ್ಷ್ಯಮನಾಗಳ್ ಆಜ್ಯಯುತ ಮಾಪ್ಪವಂ ಮೆಲ್ದು (ಚರ್ಮಾಕ್ಕು. ೦–೦೪೬). **ಹೂರಿಗೆ** : ಗಾರಿಗೆಯು ಅಳಸುಗಳ ಕುತ್ತಜುಗಳಲ್ಲಿ ಹೂರಿಗೆಯು ಲಡ್ಡುಗೆಯು ದೆಟ್ಟಿಂಗಳಲ್ಲಿ (ಬಸ. ೬–೦೦) ; ಶೋಧಿಸಿದ ತನಿಬೆಲ್ಲವಿಕ್ಕಿದ ಹೂರಿಗೆಯು ಮೆದೆಯಲ್ಲಿ . . . ನವಘೃತಸೂಪದಂಶಕದಲ್ಲಿ ನೋಡಲಿ ನಮ್ಮನೆಂದುದು ಧೂರ್ತಪಟುನಿಕರ (ಕುಮ್ಮಾಕ. ೦೩–೭) ; ಅರೆದ ತೆಂಗಾಯ ಪಿಡದೊಳು ಚಿಲುಪಾಲಿನೊಳು . . . ಹೆಜಿದುಪ್ಪ ಸಕ್ಕರೆಯು ಬೆರಸಿದಾ ಹೂರಣವನಿರದಿಕ್ಕಿ ಹೂರಿಗೆಯು ಮಾಡಿಕೊಂಡವಜವಜ ಹೆಸರ ಹೂರಿಗೆಯೆಂಬುದು (ಸೂಶಾ. ೦–೨೬).

[ < ಸಂ. ಪೂರಿಕಾ ]

**ಪೂರಿತ** (ಗು). ೧. ತುಂಬಿದ ; ಭರ್ತಿಮಾಡಿದ ಪೂರ್ಣಗೊಳಿಸಿದ. ೨. (ಸುಷಿರವಾದ್ಯವನ್ನು) ಊದಿದ ; ಬಾಜಿಸಿದ : ಪೂರಿತ ರಣಶುಭಗಂಧೀರಾರಾವಂ ದೆಸೆಯ ಕೋಣ ಕುಸುಕುಱ ಗಜಘೋಷಾರವ ಮುಜುಜಿದ ಪೆಜಗಿದ ಭೈರವಮೆಸದತ್ತು ಚರದ ಬಲಜಲನಿಧಿಯೊಳ್ (ಶಾಂತಿ ೩–೯೬). (ನಾ). ೩. ಪೂರ್ಣತೆ : "ಪೂರಿತನಲಂದು ಪೂರ್ಣಂ" (ಚಕುಶ. ೯. I. ೯೦). [ಸಂ.]

**ಪೂರಿತಗೆಯ್** (ಕ್ರಿ). ಪೂರ್ಣಗೊಳಿಸು ; ಪೂರ್ಣವಾಗಿ ಸಿದ್ಧಪಡಿಸು : ಗಾಡಿಕಾಱನ ತಾವರೆಗೋಲ್ಗೆ ಚಾಪದ ಮಾಡಿ ಪೂರಿತಗೆಯ್ದ ಕೆಱಿದ ಜೋಡಿಯಿಲ್ಲದೆ ರತಿದೇವಿಯ ಕಣ್ಣಿಗೆ ಕಾಡಿಗೆವಿಡಿದಬ್ದಿದರು (ಸೋಹಶ. ೦೬–೯೫). [ ಪೂರಿತ + ಕೆಯ್$_1$ ]

**ಪೂರಿಸು**, ಪೂರಯಿಸಂ, ಪೂರವಿಸಂ, ಪೂರ್ಯಸು (ಕ್ರಿ). ೧. ತುಂಬು ; ಭರ್ತಿಮಾಡು : ಪಲಕಾಲದೊಳಱಿರ್ದಾಮಲಕದ ಪಣೆಯಂ ಕೞಾರದು ಸೀರ್ದ್ದದಜ್ಽೊಳ್ ತಿಲ ಮಧು ಘೃತಮಂ ಪೂರಿಸೆ ಫಲಮಾ ಮರದೆಲೆ ಗಳಿಂದಮವು ಪಿರಿದಕ್ಕುಂ (ಲೋಕೋಪ. ೬–೩೯) ; ಅರ ಮೃದೂಕ್ತಿಯಂ ಬಯಸಿ ಕೇಳ್ದ ತನೂಜ ಮದೀಯಕರ್ಣದೊಳ್ ಪೂರಿಪನಿಂ ರಸಾಯನಮಂ (ಹುಕ್ರಕ. ೩-೦೭) ; ಮಿಸುಪ ಕಾಂಚನಪಾತ್ರೆಯಲಿ ಪೂರಿಸಿದ ಪರಮಾನ್ನವನು ಬೊಮ್ಮದ ರಸದ ಪರಿಪೂರ್ಣವನು . . . ಒಲಿದಿತ್ತುದಾ ನಿಜ ಮೂರ್ತಿ ದಶರಥಗೆ (ತೊರೆರಾ. ೦ ೬–೩೫). ೨. ಮುಸುಂಕು ; ಕವಿ ; ವ್ಯಾಪಿಸು : ಮುಸುಕಿರ್ದುದು ದುಂದುಭಿಧ್ವನಿ ದೆಸೆಯಂ . . . ಶಂಖಧ್ವನಿ ಪೂರಿಸಿದುದು ತಳ್ಪೊಯ್ದು ರೋದಸೀಮಂಡಳಮಂ (ಹುಕ್ರಕ. ೬–೭೨); ಧಾರುಣಿ ನಭ ದೆಸೆಗಳನು ಪೂರಿಸಿದಂತಂಧಕಾರ ದಟ್ಟೈಸಿದೆ (ಕೃಚರ. ೩-೦೯). ೩. ತುರುಕು ; ಗಿಡಿ ; ಒತ್ತಿ ತಳ್ಳು ; ಒಳಸೇರಿಸು : ಮಟ್ಟುರಿಮೀವನವಹ್ನಿವಕ್ತ್ರದೊಳ್ ಪೂರಿಪೆನೋ ಕಱುತ್ತುಗಿದು ಕತ್ತಿಗೆಯಿಂದೆರಡಾಗಿ ಪೋಟ್ಟೆನೋ . . . ಈತನಂ (ಹುಕ್ರಕ ೩–೩೬). ೪. ತುಂಬಿಡು ; ಕೂಡಿಡು ; ಸಂಗ್ರಹಿಸು : ಜವೆಯುಂ ನೆಲ್ಲುಂ ಕುಂದದೆ ಪೂರಿಸೆ ಕಾರ್ತಿಕ ಯಂದಿಗೆ(ನ)ಮಾಱ್‌ಗೆ ಮಾಱೆ(ಱು)ಮುಮ್ಮಡಿ ಲಾಭಂ (ಅಕ್ಕಕು. ೬–೩೯). ೫. ತುಳುಕು ; ಹೊರಸೂಸು ; ಅಧಿಕವಾಗು ; ಹೆಚ್ಚಾಗು : ಅವಂದಾಶ್ರುಸಲಿಲಂ ಕಂಗಳಲಿ ಪೂರಿಸಲು (ಚಾಪೂ. ೩೭–೬೨) ; ಬಾಂಬರಿದು ಚಂದ್ರಸುಧೆಯನು ಕುರ್ತು ಚಕೋರವಕ್ತ್ರಗೆ ಮೊಲೆಗೊಡಲುಪೂರಿಸಿ ಕಡೆವಾಯೊಳೀವ ತಣ್ಪಾಲೆನೆ ಸೋರಿತು ಬೆಳ್ದಿಂಗಳೆಳೆಗೆ (ಸೋಹಶ. ೦೬–೩೫). ೬. ಪೂರ್ತಿಮಾಡು ; ಪೂರ್ಣಗೊಳಿಸಂ : ಸಮಸ್ತಮಂ ಕೊಡಲೊಡನೆ ಪೂರಿಸುವ . . . ನವರಸರಸಿಕರ್ (ಕಂಠೀ. ೭-೦೦). ೭. ಪುಷ್ಟವಾಗು ; ವರ್ಧಿಸು : ಪೂರಿಸುವುದೊರ್ಮೆ ವಿಗತಾಹಾರದೆ ಗಲಿಯಿಸುವುದೊರ್ಮೆ ತಾನೀ

ಪೆರ್ಚಿಯೊಳ್ (ಜಗನ್ನಾ. ೨೦೯-೨೦). ೮. (ಬಾಯಿಂದ) ಊದು ; ಊದಿ ಬಾಜಿಸಂ : ಪರಸೈನ್ಯಭೈರವಂ . . . ದೇವದತ್ತಶಂಖಮಂ ಪೂರಿಸಿ (ಪಂಪಭಾ. ೧೦-೬೪ ವ) ; ಶಾರ್ಙ್ಗವಮನಂದೇಱಿಸಿದಪನಭಿಶಯ್ಯೆಯನೇಱಿದ ನಯ್ದಾಯು ಶಂಖಮಂ ಪೂರಿಸಿದಂ (ಗದಾ. ೨೬೪) ; ಬಿಸಜಾಕ್ಷಂ ಶಂಖಮಂ ಪೂರಿಸೆ (ಜಗ. ೬-೨೪). ೯. ನಾಟು ; ನಡು : ವಮಾರನ ಸರಳು ಸವಿಸಾರ ಕುಮಾರನ ಚಾರುತನುವಿನೊಳಗೆಯ್ದೆ ಪೂರಿಸಲವ ದೆದೆಯುತ ರವಿಪುರುಷಿ ದಾರಿಯನೊದು ನೋಡಿದನು (ಕುಮಾ. ೬-೧೬೦) ; ಓರೋರ್ವರ ಮೆಯ್ಯೊಳಂಟಿದ ಪುಳಕಗಳೋರೋರ್ವರ ಮೆಯ್ಯೊಳಗೆ ಪೂರಿಸಲು (ಕಲ್ಯಾಣಾ. ೬-೦೯). ೧೦. ಆಗಂ ; ಒದಗು ; ಬರು : ಕಾರ ಪ್ರಾಕಾರಂಗಳ ಮೇಲೆಯಾ ರೇಫಕ್ಕೆ ಪರದ ಖ ಟ ಲಕ್ಷ್ಯಂಗಳ್ ಪೂರಿಪುವಸ್ವರ ವಿಧಿಯಿಂ (ಶಬ್ದ. ೨೯೦(ಪ)). ಪೂರಯಿಸು : ೫. ಆ ಮಾತಿಂಗೆ ನಸುನಾಣ್ಚಿ ಹೃದಯಾರವಿಂದದುಲ್ಲಾಸ ಪೂರಯಿಸಿ ಚಂದನಸೌರಭ್ಯವಡೆದ ವಿಗ್ರಹಜಾತ ಸಂದೋಹ ಗುಂಡಿಗಟ್ಟಿತವಳ (ಸೋಮ. ೨೬-೬೬). ೬. ಆ ಕೆಱೆಯನೂ ಪೂರಯಿಸಿ ಆ ಕೆಱೆಯ ಕೆಳಗೆ (ಶಾಸ. ೦೯೭೪, ಶೃಂಗೇರಿ. ೦೫೬-೬ ; 1419) ; ಈ ಕಾರ್ಯದ ಜವಾಬ್ದಾರಿಯನ್ನು ಕೈಕೊಂಡಿರುವ ಮಹನೀಯರು ಅದನ್ನು ಆದಷ್ಟು ಬೇಗ ಪೂರಯಿಸಿಕೊಡಬೇಕೆಂದು ಬೇಡುತ್ತೇನೆ (ಸಾಹಿತ. ೬೬). ೮. ಭು ಭೂ ಭೂ ಎಂದು ಪೂರಯಿಸಿದುದು ಶಂಖು (ಶಬರ. ೧೦ ಪ್ರಯೋ) ; ಭು ಭೂ ಭೂ ಎಂದು ಪೂರಯಿಪ ಶಂಖದ ಧಟಂ ಧಟಂ ಧಟವೆಂದು ಮೊಳಗುವ ಭೇರಿಯ . . . ಬಲ್ಲಾಲಿಯೊಳ್ ಮಾಪೂಜೆ ಸಮಸಂದುದು (ರಾಜಶೇ. ೬೬-೩). ೧೧. ಮುಗಿ ; ಮುಕ್ತಾಯ ವಾಗಂ ; ಸಮಾಪ್ತಿ ಹೊಂದಂ : ಸ್ತೋತ್ರವು ಪೂರಯಿಸಿದ ಬಳಿಕ ವಂಶ ಲೋಚನರೆಂದರು (ಎರಶ. ೨೮). ೧೨. ಬಳಿ ; ಹಚ್ಚು ; ಲೇಪಿಸಂ : ಹಣೆಗೆ ರಾರಾಜಿಪ ತಿಲಕವನಿಟ್ಟು ಗಂಧವ ಪೂರಯಿಸಿದನು ನುಣ್ಪೆಯ್ಗೆ (ಸೋಹಶ. ೦೨-೯೬). ೧೩. ನೀಡು ; ಕೊಡು ; ಒದಗಿಸು : ಹಿಂದೂ ಸ್ಥಾನದಲ್ಲಿ ಬಂದು ನಿಂತುಕೊಳ್ಳುವ ಪೋರ್ತುಗೀಜ ಮತ್ತು ಇಂಗ್ಲೀಷರ ಬಗ್ಗೆ ಇವನು ಸಾಕಷ್ಟು ಲಕ್ಷ್ಯ ಪೂರಯಿಸಲಿಲ್ಲ (ಹಿಂಮುಸ. ೦೨೦).

ಪೂರವಿಸು : ೨. ಉಗಿದರೋ ಕಸ್ತುರಿಯ ಶವಲಾಯಿಗಳ ಮುಚ್ಚಳವನೆ ಕವಾಟವ ತೆಗೆಯೆ ಕವಿದರು ದಿವ್ಯಪರಿಮಳಸಾರ ಪೂರವಿಸೆ . . . ಅಂತಃಪುರಿಯಿಂಪ್ರನೋಲಗದ (ಕುಮಾ.ರಾ. ೬-೦೯). ೫. ಚೀರದಲಿ ನೆಱೆ ತುಂಬಿದಂತಿರೆ ಪೂರವಿಸಿ ಬುದಿಲೆನಿಸಿ ಭಸಿತದ ಧಾರೆ ಪೊಳವುಡೆ ಜಿಕ್ಕೊರ್ಳವೆಯಲಿ ಚಿಮ್ಮಿದಂತಾಯ್ತು (ರಸಕ. ೯೯-೦೩). ೮. ಜಂಗಮ ಸ್ತೋಮ . . . ಘೋರೆನಲಿಂದುಭಯಶಂಖದ ಪೂರವಿಸಿಕೊಳುತಿದ್ದು ಹೋದರು (ಪ್ರಭುಲಿ. ೨೩-೦೦). ೧೨. ಪೂರವಿಸಿದನು ಗಂಧವನು ಸರಳೋರೆಪ್ಪೋಲೆಯ ಮೆಯ್ಯ ಘಾಯದ ಹೇರುಗಳ ಹೊಳೆದನು ವರ ಕಸ್ತೂರಿಯ ಸಾರದಲಿ (ಕುಮಾ.ಗ. ೩-೯೦). ೧೪. ತೃಪ್ತಿಗೊಳಿಸು ; ತಣಿಸು : ಸೌದಿರಲು ರತಿ ಪೂರವಿಸದೋ ಬಂದು ಕಾಮನು ಕೃಪಿ ದಡೋ ಬಂದಿಕೆಂದೋ . . . ಇದಱ ಚಂದವೆಲ್ಲಂ ಹೇಳದಡೆ ಗುಣಪ್ಪ . ನಿಮ್ಮಡಿಯಾಣೆಯೆನಲ್ (ರಸಕ. ೯೩-೦೯). ೧೫. ನೆರವೇರಿಸು ; ಈಡೇರಿಸು : ಸಾರವಿಮಲಪ್ರಾಣಪದದಲಿ ಸೇರಿದೋಗರವಂ ಸಮರ್ಪಿಸಿ ಪೂರವಿಸುವುಪಚಾರವುಪಚಾರಂ ಶಿವಂಗೆ (ರಸಕ. ೩೩-೦೩).

ಪೂರೈಸು : ೧. ಹರಭಕ್ತಿ ಪೂರೈಸೆ ಪರಮಸುಖ ಕೋರೈಸೆ ಎಸದಿರ್ದ ನಮ್ಮಮ್ಮ ಬಾಹೂರ ಬೊಮ್ಮಯ್ಯ (ಶಾ.ಶ.ಕ. ೫. ೩೦೭-೦೨) ; ಆ ಬುದ್ಧ ಸಂಘನಂ ವರವೃಶ್ಚಸವಿಶಿಯಂಗದೊಳಸುವಂ ಪೂರೈಸಿ . . . ಪೂಜಿಸಿದ ರಲ್ಲಿಯಿಂ (ಸಮ್ಯ.ಕೌ. ೯-೯೯). ೨. ನಾನಾರವದ ವಾದ್ಯನಿರ್ಘೋಷವಾ ದಿಕ್ತಟವ ಪೂರೈಸಿ (ರಾಜಶೇ. ೩೬-೯೮); ರಥಾಘದ ಚೀತ್ಕಾರರವಂ ದಿಶಾ ವಿವರಮಂ ಪೂರೈಸೆ (ಪ್ರಶಾಂ. ೩-೨೨). ೫. ಸೋರಿದಮಮೃತಪಾಷಾಣ ಪಾಲ್ಗಡಲಂತೆ ಪೂರೈಸಿತು ಚಂದ್ರಕಿರಣ (ಸೋಹಶ. ೫೬-೫೩). ೬. ಇವಂ ತಿರ್ಯಕ್ಕ್ರೌಂಚದೊಳ್ನಿಲ್ವನೆನ್ನಗ[ಮಾಯಾಷ್ಕರಮಾದ ಯಜ್ಞಮನಿದಂ ಪೂರೈಸದಾನಿರ್ಪಂ] (ಶಾಕುಂತ. ೬೬೯); ಆ ಗರುವಮುನಿಮಂತ್ರದಿಂದ . . . ಯೋಗವನು ಪೂರೈಸಿದನು (ಕಳಶ. ೦-೩೦); ತನ್ನ ಕೆಲಸ ಪೂರೈಸಿ ಹಾಕಾಲಿಶನು ಹಿಂದಿರುಗಿದನು (ಕುಹೇ. ೯೩). ೮. ಪಲಹೊಟಿದ ಪಱೆಗಳಂ ಪೊಯ್ಸಿಯುಂ ಶಂಖಂಗಳಂ ಪೂರೈಸಿಯುಂ . . . ಎಂತುಂ ಪೊಱಮಡಿಸ ಲಾಱದೆ (ಗದಾಯು. ೬-೦ ವ); ಬರುದೆತ್ತಿ ದೆಸೆದೆಸೆಗೆ ಕರೆವ ಕಹಳೆಗಳೊಳಗೆ ನೆರೆದು ನೆಱೆ ಪೂರೈಪ ಶಂಖಧ್ವನಿಗಳೊಳಗೆ . . . ಬರುತಿರ್ದನವ್ರತಿಮ ಸುಕುಮಾರಶೇಖರನು (ಸುಕು. ೩-೬೯); ಫಲುಗುಣಂ ಪೂರೈಸಿದಂ ದೇವ ದತ್ತಮಂ (ಕೃಷ್ಣಾ. ೨೩-೩೯). ೧೨. ಬಣ್ಣ ಬಂಗಾರವನುಡತೊಡ ಕೊಟ್ಟು ಹೊಂಬಣ್ಣಚಂದನವ ಪೂರೈಸಿ (ಸೋಹಶ. ೦೦-೬೩). ೧೩. ನಿಮ್ಮ ಕುಟುಂಬಕ್ಕೆಬೇಕಾದ್ದನ್ನೆಲ್ಲನಾನು . . . ಪೂರೈಸಿ ಕೊಡುವೆನು (ಮುಂಶಿಖ. ೪-೬೬); ಕಾಗದ ಪೂರೈಸುವವರ ಕಡೆಯಿಂದ ವಕೀಲನ ಮುಖಾಂತರ ಪತ್ರ ಬರಲು ಭೂಪತಿಯು ಬೆರಗಾಗಿ ಬಿಟ್ಟನು (ಚಕ್ರ. ೨೬೦). ೧೫. ಜನದ ಮನದಾಸೆಯಂ ತಾನಿನಿಸುಂ ಪೂರೈಸದಾತನರ್ಥಂ ವ್ಯರ್ಥಂ (ಜಿನಕ್ಷೆ. ೩-೨೬); ಭಾಷೆಯಂ ಪೂರೈಸದಿಹನೇ ಕಾಶಿನಾಥನು (ರಸಕ. ೩೯-೩); ಈತನಿಂಮು ನೀನನಾಥನ ಮುಂದೆ ಭಾಷೆಯಂ ಪೂರೈಸಿ ಕೊಳುಗುಳದೊಳಿದನು (ಕೃಷ್ಣಾ. ೦೩-೬೦). ೧೬. ಸರಿದೂಗು ; ಸಾಕಷ್ಟಾಗಂ: ಮೇಲೆ ಬರೆದಂತೆ ಅಡಕೆ ಮತ್ತು ಮಡೂರಿ ತೆಗೆದುಕೊಂಡರೆ ಸಹ ನಮಗೆ ಪೂರೈಸುವದಿಲ್ಲ (ಮುಂಶಿಖಾ. ೦೯೯). ೧೭. ನೀಗಿಸು; ಸಾಗಿಸು: ಹೋರುವ ಸತಿಯಿಂದ ಸೋರುವ ಮನೆಯಿಂದ ಪೂರೈಸ ದವನ ಬದುಕಿಂದ ಕೊಂಡೊಯ್ವ ಮಾರಿ ಲೇಸು (ಸರ್ವಜ್ಞ. ೦೩೨೯) ; ಬೆಕ್ಕಿಗೆ ಶಿಕ್ಷಾಕಲಿಸಿ ಯಾರು ಪೂರೈಸಾರು (ರಾಸಹು. ೯೦). ೧೮. ಸಂಪೂರ್ಣ ವಾಗು ; ಸಮಗ್ರವಾಗು : ಪೂರೈಸಿ ವೇದಮೋದಿದನನೂಚಾನನಕ್ಕು (ಮುಂಗಶಾ. ೬೯-೩) ; ಪೂರೈಸಿ ತಾರಾಕರು ಕಂಠೀರವೇಂದ್ರನ ಕೂರಸಿಯಲಿ ನುಗ್ಗಾಯ್ತು (ಕಂಜಿ. ೦೩-೩೯). [ ಪೂರಣ + —ಇಸು ]

ಪೂರುವ 'ಪುಬ್ಬೆ' ನೋ.

ಪೂರುಷ (ನಾ). ಪುರುಷ ; ಮನುಷ್ಯ : "ಮನುಷ್ಯಃ, ಮಾನುಷಃ . . . ಪುರುಷಃ, ಪೂರುಷಃ, ವಿಟ್—ಈ ೧೨ ಮಾನಸರ್" (ಶಬ್ದಮ. ೫೩-೦೬೬); "ಮಾನವಂ ಮರ್ತ್ಯಂ ಮನುಷ್ಯಂ ನರು ಪುಮಾನ್ ಮಾನುಷಂ ಪೂರುಷಂ ...ಗುಂಡುಗೂಸಕ್ಕು" (ಮುಂಗಶಾ. ೬೬-೦). [ಸಂ.]

ಪೂರುಷತನ (ನಾ). ಪರಾಕ್ರಮ; ಪೌರುಷ : ಕಲಬಲದಿಂದುಮುಖಿಯರ ನೋಡಿದನು ನಲವಿಂದ ನುಡಿದನು ತನ್ನ ಪೂ[ಪಾಠಾಂ. ಪೌ]ರುಷತನದ ಪರಿಣತೆಯ (ಕುಮಾ.ರಾ. ೩-೦೩). [ಪೂರುಷ + —ತನ]

ಪೂರೈಕೆ, ಪೂರಯಿಕೆ (ನಾ). ೧. ಈಡೇರಿಕೆ ; ನೆರವೇರಿಕೆ : ಕಾವೇರಿ ತನ್ನ ಬಯಕೆಯ ಪೂರೈಕೆಗಾಗಿ ಬೇರೆ ಗಂಡನನ್ನು ಹಿಂಬಾಲಿಸಲು ಸಾಧ್ಯವೇ (ಕಾವೇ. ೬೩). ೨. ಒದಗಿಸುವಿಕೆ; ಸರಬರಾಜು : ಹಾಲು, ಮಧ್ಯಾಹ್ನದ ತಿಂಡಿ, ವೈದ್ಯಪರೀಕ್ಷೆ, ಚಿಕಿತ್ಸೆ ಮತ್ತು ಇತರ ಪೂರೈಕೆಗಳು—ಇವಕ್ಕೆ ಪಾಶ್ಚಾತ್ಯದೇಶಗಳಲ್ಲಿ...ವೆಚ್ಚ ಆಗುತ್ತಿದೆ (ಶಿಕ್ಷಣ. ೦೫೯). ೩. ಸಾಮಗ್ರಿಯ ಸಮೃದ್ಧಿ : ತನ್ನದೂ ಒಂದು ಸಂಸಾರ, ಹೆಂಡತಿ, ಹೊಲ, ಇತರ ಪೂರೈಕೆ ಸಾಕಷ್ಟು ಇದೆ ಎಂದು ನಂಬಿ ಅಭಿಮಾನದಿಂದ ಸುಬ್ಬ ಸುಧಾರಿಸಿದ್ದ (ಹೊಕ್ಕ. ೬೯). ಪೂರಯಿಕೆ : ೨. ಸಿದ್ಧವಾದ ಉಡುಪುಗಳು ವಿತರಣೆ ಗೋಸುಗ ಪೂರಯಿಕೆಯ ಮಂದಿರಗಳಿಗೆ ಹೋಗುತ್ತಿದ್ದುವು (ಕಾಂಯ. ೯೯). [ಪೂರೈಸು (< ಪೂರಿಸು) + —ಕೆ]

ಪೂರೈಸು 'ಪೂರಿಸಂ' ನೋ.

ಪೂರೋಟಿ 'ಪುರವಠೆ' ನೋ.

**ಪೂರ್ಣ** (ಗು). ೧. ತುಂಬಿದ ; ಭರ್ತಿಯಾದ ; ಪೂರ್ತಿಯಾದ : ಪೂರ್ಣ್ಕಾಂಬುಪೂರ್ಣಕುಂಭಾಗ್ರಮುಚಿತಕಂಕೇಲಿಪಲ್ಲವೋಲ್ಲಾಸರಚಿತಂ (ಅಭಿ. ೬-೩೦ ಪಠಿ). ೨. ಸಮಗ್ರವಾದ ; ಎಲ್ಲ ; ಇಡಿಯಾದ. ೩. ನೆರವೇರಿದ ; ಈಡೇರಿದ. ೪. ತುಂಬುದನಿಯುಳ್ಳ ; ನಾದಮಯವಾದ. ೫. ಸಮರ್ಥ ; ದಕ್ಷ ; ಬಲವುಳ್ಳ. ೬. (ಬಿಲ್ಲಿನಂತೆ) ಎಳೆದು ಬಾಗಿಸಿದ. ೭. ಮುಗಿದ ; ಮುಕ್ತಾಯವಾದ. (ನಾ). ೮. ಕಡುಬು, ಹೋಳಿಗೆ ಮೊದಲಾದುವುಗಳ ಹೂರಣ; ಹೂರಣ: (ಕ). ೯. ಸಂಕೀರ್ಣವಾದುದು ; ಸಂದಣಿ : "ಆಚಿತಂ, ನಿಚಿತಂ . . . ಪೂರ್ಣಂ—ಈ ೯ ಸಂದಣಿ" (ಚಂಡಾಖು. ೧೦೭-೦೭). ೧೦. ಸಮಗ್ರತೆ; ಸಂಪೂರ್ಣತೆ : ಕೊಂಚಕೊಂಚಗಳಿಂದು ಪೂರ್ಣದಿಂವಾದೀತೆ ? (ಮಂಕುತಿ. ೩೨೦). ೧೧. [ನಾಟ್ಯ] ಕಪೋಲದ ಆರು ಭೇದಗಳಲ್ಲಿ ಒಂದು: "ಕೆನ್ನೆಗಳನ್ನು ಸ್ವಲ್ಪ ಉಬ್ಬಿಸುವುದು, ರೋಷ, ಹರ್ಷ ಇವುಗಳಲ್ಲಿ ಇದನ್ನು ವಿನಿಯೋಗಿಸಬೇಕು" (ಭಾಸ್ಕರಂ. ೨೭೫ ಗದ್ಯಭಾವಾರ) : ಕುಂಚಿತ, ಕಂಪಿತ, ಪೂರ್ಣ, ಕ್ಷಾಮ, ಫುಲ್ಲ, ಸಮ—ಈ ಆರುಂ ಗಲ್ಲದ ಭೇದಂಗಳ್ (ಭಾಸ್ಕರಂ. ೩-೬೯ ವ).

**ಪೂರ್ಣವಾಗು** = ಪೂರೈಸು ; ಪೂರ್ತಿಯಾಗು : ಅದರ ಬೆಳವಣಿಗೆ ಪೂರ್ಣವಾಗಲಿಕ್ಕೆ ಐದು ವರ್ಷ ಹತ್ತುವವು (ಮುಂಗಾರು. ೬-೯೪). [ಸಂ.]

**ಪೂರ್ಣಕಂಠ** (ನಾ). ತುಂಬುಶಾರೀರ ; ತುಂಬು ಧ್ವನಿ : ಪೂರ್ಣಕಂಠದಿಂದ (ಧಾತು ಮತ್ತು ಮಾತು) ಮಹಾವೈದ್ಯನಾಥಅಯ್ಯರ್ ಅವರು ಹಾಡುತ್ತಿದ್ದರು (ಸಂಗೀತ. ೯). [ಸಂ.]

**ಪೂರ್ಣಕಾಮ** (ನಾ). ೧. ಇಷ್ಟವನ್ನು ಈಡೇರಿಸಿಕೊಂಡವನು. ೨. ಭಗವಂತ; ಪರಮಾತ್ಮ : ಕರ್ಣ ಕರ್ಣಕಠೋರಸಾಹಸ ನಿರ್ಣಯಿಸು . . . ಪೂರ್ಣಕಾಮನು ನೀನು ಕುರುಬಲಕರ್ಣಧಾರನು ನೀನು (ಕುಮಾರವ್ಯಾ. ೧-೧೭). [ಸಂ.]

**ಪೂರ್ಣಕುಂಭ** (ನಾ). ೧. (ನೀರು ಮೊದಲಾದ ದ್ರವದಿಂದ) ತುಂಬಿದ ಕೊಡ — ಕಲಶ : ಕಳಸಂ ಕನ್ನಡಿ ತೋರಣಂ . . . ರತ್ನಂ ದಧಿ ಪೂರ್ಣಕುಂಭಮಿನಿತುಂ ಪೂ ಮಂಗೆ ಬರ್ಪಂಗನಾಕುಳದಿಂ ಕಟ್ಟಿದಿರ್ವಂದೊಡಿಷ್ಟ ಫಲಮಂ ಶ್ರೀಶಿಷ್ಟಕಲ್ಪದ್ರುಮಾ (ಲೋಕೋಪ.ಕ. ೮೨-೬). ೨. ಮಂಗಳ ಸೂಚಕವಾಗಿ ಬಾಗಿಲಲ್ಲಿ ಇಡುವ ನೀರು ತುಂಬಿದ ಕೊಡ : "ಭದ್ರಕುಂಭ, ಪೂರ್ಣಕುಂಭ:—೨ ಅರಮನೆಯ ಬಾಗಿಲು ಮುಂತಾದವುಗಳಲ್ಲಿ ಮಂಗಳಕರವಾಗಿ ಇರಿಸತಕ್ಕ ಪೂರ್ಣಕಲಶಗಳ ಹೆಸರು" (ಸಿದ್ಧಾಂತ. ೨೯೫); ಬಿಗಿದೊಗೆದಾತ್ತತುಂಗಕುಚಕುಂಭಮನೊಡ್ಡಿಪ ಪೂರ್ಣಕುಂಭಮಂ . . . ಅಂಬುಜವದನೆ ಕಂಡಳ್ (ಕೃಷ್ಣಕೃ. ೯-೧೦೦೦); ಊರ ಬಾಗಿಲ್ಲಿಯೂ, ಊರ ಒಳಗೂ ಅಲ್ಲಲ್ಲಿ ಮಂಗಳಾರ್ಥವಾಗಿ ಪೂರ್ಣಕುಂಭಗಳನ್ನು ಇಟ್ಟಿದ್ದರು (ಪತಪಾ. ೩೩೦).

**ಪೂರ್ಣಕುಂಭಸ್ವಾಗತ** = ದೊಡ್ಡ ವ್ಯಕ್ತಿಗಳನ್ನು ಎದುರುಗೊಳ್ಳುವಾಗ ಮಠ, ದೇವಸ್ಥಾನಗಳಲ್ಲಿ ಪೂರ್ಣಕುಂಭಸಹಿತವಾಗಿ ಮಾಡುವ ಸ್ವಾಗತ : ರಾಷ್ಟ್ರಪತಿಗಳನ್ನು ರಾಮೇಶ್ವರದೇವಸ್ಥಾನದಲ್ಲಿ ಪೂರ್ಣಕುಂಭ ಮರ್ಯಾದೆಯೊಂದಿಗೆ ಎದುರುಗೊಳ್ಳಲಾಯಿತು (ಒಂ). [ಸಂ.]

**ಪೂರ್ಣಕ್ರಿಯಾಪದ** (ನಾ). [ವ್ಯಾಕ] ವಾಕ್ಯದ ಅರ್ಥವನ್ನು ಪೂರ್ಣಗೊಳಿಸುವ ಕ್ರಿಯಾಪದ : ಧಾತುಗಳಿಗೆ ಕೆಲವು ಆಖ್ಯಾತಪ್ರತ್ಯಯಗಳು ಸೇರಿ ಪೂರ್ಣಕ್ರಿಯಾಪದಗಳಾಗುತ್ತವೆ (ಕ್ರಿವಿವಿ. ೯೯); 'ಒಂದು' ಕಾಲವನ್ನಾಗಲಿ, 'ಅರ್ಥ' ವನ್ನಾಗಲಿ ಸೂಚಿಸುವ ಕ್ರಿಯಾಪದವನ್ನು ಉಪಯೋಗಿಸಿದರೆ ವಾಕ್ಯದ ಅರ್ಥವು ಪೂರ್ಣವಾಗುತ್ತದೆ. ಉದಾಹರಣೆಗೆ, ಅವನು ಮನೆಯಿಂದ ಹೊರಡುತ್ತಾನೆ . . . ಈ ಬಗೆಯ ಕ್ರಿಯಾಪದಗಳಿಗೆ ಪೂರ್ಣಕ್ರಿಯಾಪದಗಳೆಂದು ಹೆಸರು (ಕನ್ನಡಕು. ೭೪). [ಸಂ.]

**ಪೂರ್ಣಗರ್ಭಿಣಿ** (ನಾ). ತುಂಬಿದ ಬಸಿರಿ ; ಗರ್ಭವು ಸಂಪೂರ್ಣವಾಗಿ ಬೆಳೆದು, ಹೆರಿಗೆ ಸನ್ನಿಹಿತವಾಗಿರುವ ಹೆಣ್ಣು : ಎಮ್ಮಣ್ಣನಾಣತಿಗಳಿಂ ವನದೊಳಿರಿಸಿ ಪೋಪೆಂ ಪೂರ್ಣಗರ್ಭಿಣಿ ತಾಯಿರಿ ನೀಮೆಲ್ಲರ್ ಕಾವಲಿರ್ದು (ರಾಮಾಶ್ವ. ೩೯-೫); ಪೂರ್ಣಗರ್ಭಿಣಿಯಾದೀ ಹುಲ್ಲೆಗೆ ಯಾವಾಗ ಸುಖಪ್ರಸವವಾಗುವುದೋ ಅಗ ನನಗೆ ಕುಶಲಪತ್ರಿಕೆಯನ್ನು ಕಳುಹಿಸಬೇಕು (ಶಾಕುಂತ. ೩೫-೩). [ಸಂ. ಪೂರ್ಣಗರ್ಭಿಣೀ]

**ಪೂರ್ಣಗೊಳಿಸು** (ಕ್ರಿ). ಪೂರ್ತಿ ಮಾಡು ; ಮುಗಿಸು ; ಪರಿಸಮಾಪ್ತಿ ಮಾಡು : ಅಂಗವಿಜ್ಞಾನಿ ಹಾರ್ವೆಯು ರಕ್ತಪರಿಚಲನಾಸಂಶೋಧನೆಯನ್ನು ಪೂರ್ಣಗೊಳಿಸಿದನು (ವಿಕಾಸ. ೦೪); 'ಪರಿಶಿಷ್ಟ' ವು (Supplement) ಹೊರಬಿದ್ದು ಅದನ್ನು ಪೂರ್ಣಗೊಳಿಸಿತು (ಸವಾರೋ. ೨೬೫).

[ ಪೂರ್ಣ + ಕೊಳ್[1] + – ಇಸು[1] ]

**ಪೂರ್ಣಗೊಳ್ಳು** (ಕ್ರಿ). ಮುಗಿ ; ಸಮಾಪ್ತವಾಗು : ಈ ಕೊಪೆಯುವರಿಬ್ಬರ ಆಡಳಿತದಲ್ಲೇ ನಿರ್ಮಾಣ ಪೂರ್ಣಗೊಂಡದ್ದು (ಸವಾರೋ. ೨೮೩).

[ಪೂರ್ಣ + ಕೊಳ್ಳು[1] (< ಕೊಳ್[1])]

**ಪೂರ್ಣಗ್ರಹಣ** (ನಾ). ಸೂರ್ಯ ಅಥವಾ ಚಂದ್ರನು ಪೂರ್ತಿಯಾಗಿ ಮರೆಯಾಗುವ ಗ್ರಹಣ ; ಖಗ್ರಾಸಗ್ರಹಣ : ಚಂದ್ರಗ್ರಹಣ ಪೂರ್ಣಗ್ರಹಣವಾದರೂ ಆಗಬಹುದು, ಅರ್ಧಗ್ರಹಣವಾದರೂ ಆಗಬಹುದು (ಆಕಾಶ. ೯೨). [ಸಂ.]

**ಪೂರ್ಣಚಂದ್ರ** (ನಾ.) ೧. ಹದಿನಾರುಕಳೆಗಳಿಂದ ಕೂಡಿದ ಚಂದ್ರ ; ಹುಣ್ಣಿಮೆಯ ಚಂದ್ರ : ಉದಯಂಗೆಯ್ಯಲಿರ್ದ ಪೂರ್ಣಚಂದ್ರನನೊಳಕೊಂಡು ಬೆಳ್ಪೆಸೆವ ವಾಸವದಿಗ್ವನಿತಾನನಚೋಲಾನನರುಚಿ ಚೆಲ್ವನೇಂ ಪೆಱೆಯು ತಾಳ್ದಿದುದೋ ಬಿಸಕಾಂಡಪಾಂಡುರಂ (ಅಭಿ. ೬-೯೭). ೨. [ಕಾಮಶಾ] ಸ್ತ್ರೀಯರ ಯೋನಿಯಲ್ಲಿರುವ ಒಂದು ನಾಡಿ : ಮದನಾಂದೋಳನ ಮದನಚ್ಛತ್ರ ಪೂರ್ಣಚಂದ್ರಾದಿ ನಾಡೀಮರ್ದನ್ದಿಂ (ಶಿಶೀಕ. ೨೩೦) : ಭಗಕ್ಕೆ ಕೊಂಚ ದೂರದಿ ಕಾಮಜಲ ತುಂಬಿರ್ಪುದು ಪೂರ್ಣಚಂದ್ರವೆಂಬ ನಾಡಿಯುಂಟು (ಕಾಮಕಾ. ೨೩೦). [ಸಂ.]

**ಪೂರ್ಣಚಂದ್ರನಾಡಿ** (ನಾ). = ಪೂರ್ಣಚಂದ್ರ ೨ : ತುಟಿತುದಿಯಿಂ ಪೂರ್ಣಚಂದ್ರನಾಡಿಯಂ ಮರ್ದಿಸಿ ಪಲ್ಗಳಿಂ ಕಾಮಾತಪತ್ರದ ನ್ಯಾಡಿಯು ಕಷನ್ಮರ್ದನ. ನಾಲಿಗೆಯ ತುದಿಯಿಂ ಮದನಾಂದೋಳಿಕನಾಡಿಯಂ ಹಲವುದಾರಿ ಅಲ್ಲಾಡಿಸುವದು (ಕಾಮಕಾ. ೨೩೯). [ಸಂ.]

**ಪೂರ್ಣಚಂದ್ರಿಕೆ** (ನಾ). [ಸಂಗೀತ] ಒಂದು ರಾಗದ ಹೆಸರು : ಪೂರ್ಣಚಂದ್ರಿಕೆ—೨೯ನೇ ಮೇಳಕರ್ತ ಧೀರಶಂಕರಾಭರಣದಲ್ಲಿ ಜನ್ಯ (ಸಂಗೀತಾ. ೦೯೪) ; ಪಟ್ಟಣಂ ಸುಬ್ರಮಣ್ಯಅಯ್ಯರ್ ಅವರು ಪೂರ್ಣಚಂದ್ರಿಕಾರಾಗವನ್ನು ಹಾಡಿದ ರೀತಿಯಲ್ಲಿ ತಮ್ಮದೇ ಆದ ವೈಶಿಷ್ಟ್ಯವನ್ನು ತೋರುತ್ತಿದ್ದರು (ಸಂಗೀತ. ೨೭). [ಸಂ. ಪೂರ್ಣಚಂದ್ರಿಕಾ]

**ಪೂರ್ಣಜಠರ** (ನಾ). ೧. ತುಂಬಿದ ಹೊಟ್ಟೆ. ೨. [ನಾಟ್ಯ] ನರ್ತನದಲ್ಲಿ ತೋರುವ ಕ್ಷಾಮ, ಖಲ್ವ, ಪೂರ್ಣ, ರಿಕ್ತಪೂರ್ಣ ಎಂಬ (ಉದರಭಾಗದ) ನಾಲ್ಕು ಪ್ರಕಾರಗಳಲ್ಲಿ ಒಂದು ; ಹೊಟ್ಟೆಯನ್ನು ಮುಂದಕ್ಕೆ ಚಾಚುವುದು : ಪೂರ್ಣಜಠರಮೆಸೆಗುಂ ಪೊಡೆಯುಬ್ಬಿರ ರೋಗದನೊಳ್ ತೋಱುತ್ತುರುಜಠರನೊಳೆಯ್ದೆ ತೋರ್ಪ ನೆಗಳ್ತೆಯೊಳ್ ಬಟದನೊಳ್ (ಭಾಸ್ಕರಂ. ೨-೦೭೩). [ಸಂ.]

**ಪೂರ್ಣಜ್ವರ** (ನಾ). ಅತ್ಯಧಿಕವಾದ ಜ್ವರ : ಶುಂಠಿಯುಂ ಸೈಂಧವ ದುಪ್ಪಿನಲ್ಲಿ ಬಿಸಿನೀರು ಕೂಡಿಸಿ ತುಪ್ಪವು . . . ನೆಲಗುಳ್ಳ ಇವುಗಳ ಕಷಾಯದಿಂದ ಸಿದ್ಧಮಪ್ಪುದಂ ಕುಡಿಯಲು ಪೂರ್ಣಜ್ವರ, ಹಲವು ಕಾಲದ ಜ್ವರ, ಕೆಮ್ಮು, ಶೂಲೆ, ಊರ್ಧ್ವತೃಷೆ, ಮಂದಾಗ್ನಿ, ಗ್ರಹಣಿ, ಸಂಗ್ರಹಣಿ, ಈ ವ್ಯಾಧಿಗಳೊಳು ಹಿತವಪ್ಪುದು (ವೈಶಿ. ೦೦). [ಸಂ.]

**ಪೂರ್ಣತಟಾಕ** (ನಾ). ತುಂಬಿದ ಕೆರೆ : ಕೊಳನಂ ತಾವರೆಯುಂ . . . ಪೂರ್ಣತಟಾಕಮುಂ ಕಾವುದವುಂ ದೇವರ್ಕಳಂ ತುಂಬಿಯುಂ ಶಿಖಿಯುಲ್ ಸ್ವಪ್ನದಿ ಲೀಸೆಲ್ವೆ (ನೇಮಿನಾ. ೬೯); ಕೊಳರ್ವಕ್ಕಿಯಿಂದೊಪ್ಪುವ ಪೂರ್ಣತಟಾಕಂಗಳಿಂ (ಶಬರ. ೦೨–೨೬). [ಸಂ.]

**ಪೂರ್ಣತೆ** (ನಾ). ೧. ಸಮಗ್ರತೆ; ಪೂರ್ತಿಯಾಗಿರುವಿಕೆ. ೨. ಸಮೃದ್ಧಿ. [ಸಂ. ಪೂರ್ಣತಾ]

**ಪೂರ್ಣತ್ವ** (ನಾ). ಎಲ್ಲ ಬಗೆಯ ಶಕ್ತಿಗಳಿಂದ ಕೂಡಿರುವಿಕೆ ; ಸರ್ವಸಮರ್ಥತೆ : ಶಿವನ ಸರ್ವಕರ್ತೃತ್ವ, ಸರ್ವಜ್ಞತ್ವ, ಪೂರ್ಣತ್ವ, ನಿತ್ಯತ್ವ, ವ್ಯಾಪಕತ್ವ ಎಂಬ ಶಕ್ತಿಗಳು . . . ಕ್ರಮೇಣ ಪಂಚಕಂಚುಕಗಳಾಗುತ್ತವೆ (ಭಾರತ. ೨೦೭). [ಸಂ.]

**ಪೂರ್ಣದೃಷ್ಟಿ** (ನಾ). ಎಲ್ಲವನ್ನೂ ಚೆನ್ನಾಗಿ ಹೊಂದಿಸಿ ನೋಡುವ ಮನೋಧರ್ಮ ; ಸಮಗ್ರದೃಷ್ಟಿ : ಸಾಕಲ್ಯದೃಷ್ಟಿ : ವಿಜ್ಞಾನಿಗಳಲ್ಲಿ . . . ಗಭೀರವಾದ ವಿಶ್ವದ ಮೂಲಸಮಸ್ಯಾಪರಿಹಾರಕ್ಕೆ ಆವಶ್ಯಕವಾದ ಪೂರ್ಣದೃಷ್ಟಿ ಇರಲಿಲ್ಲ (ಪುಸ್ತ್ಯಾ. ೨೬ ಜೀಶ). [ಸಂ.]

**ಪೂರ್ಣಪಾತ್ರ** (ನಾ). ೧. ಮಂಗಳವಸ್ತುಗಳಿಂದ ತುಂಬಿದ ಪಾತ್ರೆ ಅಥವಾ ಪೆಟ್ಟಿಗೆ. ೨. ಒಂದು ಬಟ್ಟಲಿನಷ್ಟು ಪ್ರಮಾಣ. ೩. ಇನ್ನೂರಐವತ್ತಾರು ಮುಷ್ಟಿಗಳಷ್ಟು (ಕಾಳಿನ) ಅಳತೆ ; ☞ ಎಂಟು ಮುಷ್ಟಿ = ೧ ಕಿಂಚಿತ್ (ಅಥವಾ ಕುಂಚಿ), ೮ ಕಿಂಚಿತ್ = ೧ ಪುಷ್ಕಲ, ೪ ಪುಷ್ಕಲ=೧ ಪೂರ್ಣಪಾತ್ರ. ೪. ಯಜ್ಞಸಮಾಪ್ತಿಯಾದಾಗ ಬ್ರಾಹ್ಮಣರಿಗೆ ಕೊಡುವ ದಕ್ಷಿಣಾರೂಪವಾದ ಇನ್ನೂರೈವತ್ತಾರು ಮುಷ್ಟಿ ಅಕ್ಕಿ. ೫. ಹೋಮಕಾರ್ಯದಲ್ಲಿ ಬಳಸುವ ತಂಪ್ಪದ ಪಾತ್ರೆ : ಚಮಸ ದರ್ವಿ ಆಜ್ಯಸ್ಥಾಲೀ ಪ್ರೋಕ್ಷಣಪಾತ್ರ ಪೂರ್ಣಪಾತ್ರ ಪ್ರಮುಖಪಾತ್ರವಿಶೇಷಂಗಳಿಂ (ಪಂಪಭಾ. ೦೪೩). ೬. ಪುತ್ರ ಜನನ ಮೊದಲಾದ ಸಂತೋಷಸಮಾರಂಭಗಳಲ್ಲಿ ಅಥವಾ ಒಳ್ಳೆಯ ವರ್ತಮಾನವನ್ನು ಕೇಳಿದ ಸಮಯದಲ್ಲಿ ಪರಿಜನರಿಗೆ ಪಾರಿತೋಷಕವಾಗಿ ಕೊಡುವ ವಸ್ತ್ರ, ಆಭರಣ ಮೊದಲಾದುವನ್ನು ತುಂಬಿದ ಪಾತ್ರೆ ಅಥವಾ ಪೆಟ್ಟಿಗೆ; ☞ ಪರಿಜನರೂ ಬಂಧುಮಿತ್ರರೂ ಯಜಮಾನನಿಂದ ಈ ವಸ್ತ್ರಾಭರಣಗಳನ್ನು ತಾವಾಗಿ ಎಳೆದು ತೆಗೆದುಕೊಳ್ಳುತ್ತಾರೆ : ಮಹಾತ್ಮಜಾತಜನನೋತ್ಸವದೊಳ್ . . . ಪೂರ್ಣಪಾತ್ರಹರಣವಿಲುಠ್ಯಮಾನವಸನಭೂಷಣಮುಂ (ಕಾದಂಸಂ. ೪೦೦); ಒಸೆದೀ ವಾರ್ತೆಗೆ ಪೂರ್ಣಪಾತ್ರವಿದು ದೇವರ್ ಮನ್ನಿಸಲ್ವೇಟ್ಕುಮೆಂದು ಸಮಂತಿಟ್ಟುಕೆಗೊಂಡಳಾಕೆ ನೃಪಕಂಠೋದ್ದೇಶದಿಂ . . . ಹಾರಮುಂ (ಧರ್ಮಾ. ೪-೨೬). [ಸಂ.]

**ಪೂರ್ಣಪ್ರಜ್ಞ** (ನಾ). ೧. ಸಮಗ್ರವಾದ ಜ್ಞಾನವುಳ್ಳವನು; ಸರ್ವಜ್ಞ : ಅರ್ಜುನನು ಪಾರ್ಥಿವಪ್ರಜ್ಞೆಯ ಪಾರ್ಥ; ಶ್ರೀಕೃಷ್ಣನು ಪೂರ್ಣಪ್ರಜ್ಞನಾದ ಅಧ್ಯಾತ್ಮಶಕ್ತಿಯ ಪ್ರಭು (ಭಾರತ. ೦೦೧). ೨. ದ್ವೈತಮತಪ್ರವರ್ತಕರಾದ ಮಧ್ವಾಚಾರ್ಯರ ಹೆಸರುಗಳಲ್ಲಿ ಒಂದು : ಯತ್ಯಾಶ್ರಮವನ್ನು ಸ್ವೀಕರಿಸಿದ ಕೆಲವು ದಿನಗಳಲ್ಲಿಯೇ ಪೂರ್ಣಪ್ರಜ್ಞರ ಯಶಸ್ಸು ಎಲ್ಲ ದಿಕ್ಕುಗಳಿಗೂ ವ್ಯಾಪಿಸಿತು (ಭಾರತ. ೨೬೦); ಮಧ್ವಾಚಾರ್ಯರು ಈ ಕಾಲದಲ್ಲಿ ಜನ್ಮತಾಳಿದರು; ಆನಂದತೀರ್ಥರೆಂತಲೂ ಪೂರ್ಣಪ್ರಜ್ಞರೆಂತಲೂ ಅವರನ್ನು ಕರೆಯುತ್ತಾರೆ (ಕರ್ನಾಕ. ೪೭). [ಸಂ.]

**ಪೂರ್ಣಫಲ** (ನಾ). ೧. ಸಂಪೂರ್ಣವಾದ ಸಿದ್ಧಿ; ಪೂರ್ಣತ್ವ : ವಾರಣಾಸಿಯ ವಿಶ್ವೇಶ್ವರನ ದರುಶನದಿಂದ ಮಾತ್ರ ಪೂರ್ಣಫಲ ಪ್ರಾಪ್ತವಾಗದು (ನವಾ. ೦೬). ೨. ಒಡೆಯದೆ ಇರುವ ತೆಂಗಿನಕಾಯಿ : ಪಂಡಿತರು ಮಗಳ ಕೈಗೆ ಪೂರ್ಣಫಲವಿಷ್ಟು . . . ಧಾರೆಯೆರೆದು ಕೊಟ್ಟರು (ಕಾಂತಾ. ೦೦೨). [ಸಂ.]

**ಪೂರ್ಣಮಾಸ** (ನಾ). ೧. ಚಂದ್ರ. ೨. ಹುಣ್ಣಿಮೆ : ಅದು ಪೂರ್ಣಮಾಸ. ಹೀಗಾಗಿ ದೇವಸ್ಥಾನದಲ್ಲಿ ವಿಶೇಷಹಬ್ಬ (ತೊಳ್ಳ. ೦೫). ೩. ಹುಣ್ಣಿಮೆಯ ದಿನ ಮಾಡುವ ಯಾಗ (ಆಗ್ನೇಯ, ಅಗ್ನಿಷೋಮೀಯ ಮತ್ತು ಉಪಾಂಶುಯಾಜ — ಎಂಬ ಯಾಗಗಳನ್ನೊಳಕೊಂಡುದು) : "ಕೃಷ್ಣಪಕ್ಷ ಮುಗಿಯುವಾಗ ಮಾಡತಕ್ಕ ಯಾಗಕ್ಕೆ ದರ್ಶವೆಂತಲೂ, ಶುಕ್ಲಪಕ್ಷ ಮುಗಿಯುವಾಗ ಮಾಡತಕ್ಕ ಯಾಗಕ್ಕೆ ಪೂರ್ಣಮಾಸವೆಂತಲೂ ಹೆಸರು" (ಶಿಶ್ಯಾ.ಶಿ.೨೫೦). [ಸಂ.]

**ಪೂರ್ಣಮಾಸಿ** (ನಾ). ಹುಣ್ಣಿಮೆ; ಪೂರ್ಣಿಮೆ. [ಸಂ. ಪೂರ್ಣಮಾಸೀ]

**ಪೂರ್ಣಮಿ** 'ಪುಣ್ಣಮೆ' ನೋ.

**ಪೂರ್ಣಮೆ** (ನಾ). = ಪೂರ್ಣಮಾಸಿ : ಕಾರ್ತ್ತಿಕಮಾಸದ ಪೂರ್ಣಮೆ ಕಳೆದಿವಸವಾಗೆ . . . ಬಿಟ್ಟ ಧರ್ಮಸ್ಥಿತಿಕ್ರಮಂ (ಪ್ರಶಾ. ೦೯೯೬; ೫೯-೯; 1032). [ಸಂ. ಪೂರ್ಣಮಾ]

**ಪೂರ್ಣವರ್ತಮಾನಕಾಲ** (ನಾ). [ವ್ಯಾಕ] ಕ್ರಿಯೆಯು ಸಂಪೂರ್ಣವಾಗಿದೆ ಎಂಬುದನ್ನು ತಿಳಿಸುವ ಕಾಲ : ಒಂದು ಧಾತುವಿನ ಭೂತಕೃದಂತರೂಪಕ್ಕೆ 'ಇರು' ಧಾತುವಿನ ವರ್ತಮಾನಕಾಲದ ವಿಶೇಷರೂಪಗಳನ್ನು ಹತ್ತಿಸಿದರೆ ಪೂರ್ಣವರ್ತಮಾನಕಾಲದ ರೂಪಗಳಾಗುತ್ತವೆ (ಪುಕ್ಕತು. ೦೦೦). [ಸಂ.]

**ಪೂರ್ಣವಿರಾಮ** (ನಾ). ೧. ವಾಕ್ಯವು ಮುಗಿದುದನ್ನು ಸೂಚಿಸುವ ಚುಕ್ಕೆಯ ಗುರುತು (.) : ಅಲ್ಪವಿರಾಮ, ಅರ್ಧವಿರಾಮ, ಪೂರ್ಣವಿರಾಮಗಳನ್ನು ಅರಿತುಕೊಳ್ಳಬೇಕು (ಮುಜಾಯ. ೨-೮). 'ಅರ್ಧವಿರಾಮ', 'ಅಲ್ಪವಿರಾಮ' ಪರಾ. ೨. (ಅಲಂ) ಮುಕ್ತಾಯ; ನಿಲುಗಡೆ; ಕೊನೆ : ಗಂಡ ಲಕ್ಷ್ಮೀದಿಂದ ಮರಳಿ ಬರುವ ತನಕ ಯಶೋದೆಯ ಕಾಲೇಜುವ್ಯಾಸಂಗದ ಕುರಿತಾದ ಚಿಂತೆಗೆ ಪೂರ್ಣವಿರಾಮ (ವಾತ್ಸಲ್ಯ. ೬೯); ಮುದುಕಿ ಮಾತ್ರ ತನ್ನ ಕಥನಕ್ಕೆ ಪೂರ್ಣವಿರಾಮ ಎತ್ತಿರಲಿಲ್ಲ (ಹಳ್ಳಿಕಾ. ೦೦೪). [ಸಂ.]

**ಪೂರ್ಣಷಡ್ಜ** (ನಾ). [ಸಂಗೀತ] ಒಂದು ರಾಗದ ಹೆಸರು : ಪಲ್ಲವಿ ಶೇಷಯ್ಯರ್ ಅವರು ನಾದನಾಮಕ್ರಿಯಾ, ಭೈರವಿ, ಕೀರವಾಣಿ, ಪೂರ್ಣಷಡ್ಜಂ, ಗೌರೀಮನೋಹರಿ . . . ಷಣ್ಮುಖಪ್ರಿಯರಾಗಗಳಲ್ಲಿ ರಚಿಸಿರುವ ಕೃತಿಗಳು ಮನಮೋಹಕವಾಗಿವೆ (ಸಂಗೀತ. ೯೬). [ಸಂ].

**ಪೂರ್ಣಸಮಾಧಿ** (ನಾ). [ಯೋಗ] ವ್ಯಕ್ತಿ, ನಿಶ್ಚಿತ, ವಿಲಕ್ಷಣ, ನಿರ್ವಿಷಯ, ಸಮಷ್ಟಿ ಮತ್ತು ಪೂರ್ಣ ಎಂಬ ಆರು ಬಗೆಯ ಸಮಾಧಿಗಳಲ್ಲಿ ಒಂದು : ಪೂರ್ಣಸಮಾಧಿಯೆಂಬುದು ವಿಕಸನಂಗೈದಿರೆ ವನಸ್ಮನಿ ಸುಖಸಮಗ್ರವನೆಸಗಿ ತನುಮೋಹವನು ಮರಸುವುದು (ಗಗನಾ. ೦೪–೨೦). [ಸಂ.]

**ಪೂರ್ಣಾಂಕ** (ನಾ). [ಗಣಿತ] ಪೂರ್ಣವಾದ ಸಂಖ್ಯೆ ; ದುಂಡಂಕೆ ; ವಿಭಾಗವಾಗದ ಮೊತ್ತ : ಅಳತೆಯಲ್ಲಿ ಸರಪಣಿ ಸಂಪೂರ್ಣವಾಗಿ ಅದಲ್ಲಿ ಒಂದು ಪೂರ್ಣಾಂಕವೆಂತಲೂ . . . ಲೆಕ್ಕವಿಡಬೇಕು (ಭೂಮಾ. ೯). [ಸಂ.]

**ಪೂರ್ಣಾಯುಸ್ಸು** (ನಾ). ಜೀವಿತದ ಸಮಗ್ರ ಅವಧಿ; ದೀರ್ಘಾಯುಷ್ಯ; ನೂರುವರ್ಷಗಳ ಜೀವನಕಾಲ : ನಿನಗೆ ದೇವರಂಥಾ ಪೂರ್ಣಾಯುಸ್ಸಿನ ಗಂಡ ಸಿಕ್ಕಲಿ (ನೀರಯೋ. ೦೦೪). [ ಸಂ. ಪೂರ್ಣಾಯುಸ್ ]

**ಪೂರ್ಣಾವತಾರ** (ನಾ). ದೈವತ್ವವು ಪೂರ್ಣವಾಗಿ ಪ್ರಕಟವಾಗುವ ಭಗವಂತನ ಅವತಾರ ; ☞ ನರಸಿಂಹಾವತಾರ, ರಾಮಾವತಾರ ಹಾಗೂ ಕೃಷ್ಣಾವತಾರಗಳು ಪೂರ್ಣಾವತಾರಗಳೆಂದು ಗಣಿಸಲ್ಪಟ್ಟಿವೆ; ಅದರಲ್ಲಿಯೂ ಕೃಷ್ಣಾವತಾರವು ಪರಿಪೂರ್ಣವೆನಿಸಿದೆ : ಯಾರಲ್ಲಿ ದೈವತ್ವವು ಅತ್ಯಂತಪ್ರಕಾಶಮಾನವಾಗಿ ಮೆರೆಯುತ್ತದೊ ಅಂಥವರದು

ಪೂರ್ಣಾವತಾರ; ಯಾರಲ್ಲಿ ಅದು ಯಾವುದೇ ಒಂದು ವಿಶಿಷ್ಟಮುಖದಲ್ಲಿ ಪ್ರಕಟವಾಗುತ್ತದೋ ಅಂಥವರದು ಅಂಶಾವತಾರ; ಇನ್ನೂ ಕಡಿಮೆ ಯಾಗಿದ್ದರೆ ಅಂಥವರದು ಕಲಾವತಾರ (ಕಶ್ಯ್ಪಾ. ೭೫). 'ಅಂಶಾವತಾರ' ಪರಾ. [ಸಂ.]

**ಪೂರ್ಣಾಹುತಿ** (ನಾ). ೧. ಯಜ್ಞಾದಿಗಳಲ್ಲಿ ದರ್ವಿ ಅಥವಾ ಸವುಟನ್ನು ಪೂರ್ತಿಯಾಗಿ ತುಂಬಿಕೊಂಡು ಕೊಡುವ ಆಹುತಿ. ೨. ಯಜ್ಞದಲ್ಲಿ ಅಗ್ನಿಗೆ ಕೊನೆಯಲ್ಲಿ ಒಪ್ಪಿಸುವ ಬಹುಮುಖ್ಯವಾದ ಬಲಿ; ಯಜ್ಞವನ್ನು ಪೂರ್ಣಗೊಳಿಸುವ ಆಹುತಿ : ಭೂಪತಿಯ ರಣಯಜ್ಞ ಮುಖಕೆ ನಿಜಾಪಘನಪೂರ್ಣಾಹುತಿಯಲೇ (ಕುಮ್ಮ್ಯಾ. ೦-೨೬) ; ಚಂದ್ರ ಹಾಸಂ . . . ಪೂರ್ಣಾಹುತಿಗೆ ಶಿವನನರಿದಪೆನೆಂದು ಖಡ್ಗಮಂ ಗೋಣಗೆ ಪೂಡಿ . . . ಅರಿಯಲನುವಾದನು (ಜೈಮಿನಿ. ೬೦-೭೭) ; ಪೂರ್ಣಾಹುತಿ ಗೊಂಡು ವಿಜೃಂಭಿಸಿ ಶಾಂತನಾಗುವ ಯಜ್ಞೇಶ್ವರನಂತೆ ಸುತ್ತಮುತ್ತಲೆಲ್ಲ ಏನೋ ಶಾಂತಿ ತರೆದೋರಿತು (ಮಹಾಶ. ೭೬). ೩. (ಅಲಂ) "ಒಟ್ಟಿಗೆ ಕೊಟ್ಟ ಬಲಿ; ಸರ್ವನಾಶ" (Holocaust. ಇಂಕೊ). [ಸಂ.]

**ಪೂರ್ಣಿಮಾಂತ** (ಗು). ೧. ಹುಣ್ಣಿಮೆಗೆ ಕೊನೆಗೊಳ್ಳುವ. (ನಾ). ೨. ಹುಣ್ಣಿಮೆಯ ಕೊನೆ,_ಮುಕ್ತಾಯ. [ಸಂ.]

**ಪೂರ್ಣಿಮಾಂತಮಾಸ** (ನಾ). ಹುಣ್ಣಿಮೆಗೆ ಮುಗಿಯುವ ತಿಂಗಳು ; ಹುಣ್ಣಿಮೆಯಿಂದ ಹುಣ್ಣಿಮೆಯವರೆಗೆ ಎಂದು ಎಣಿಸುವ ತಿಂಗಳು; ಚಾಂದ್ರಮಾನಮಾಸ : ಕೃಷ್ಣಪ್ರತಿಪದೆಯಿಂದ ಪೂರ್ಣಿಮೆಯ ತನಕ ; ಇದಕ್ಕೆ ಪೂರ್ಣಿಮಾಂತಮಾಸವೆಂಬ ಹೆಸರು (ಮುಂಂಬು. ೬-೭೬). 'ಅಮಾಂತಮಾಸ' ಪರಾ. [ಸಂ.]

**ಪೂರ್ಣಿಮೆ** (ನಾ). ಚಂದ್ರನು ಹದಿನಾರುಕಳೆಗಳನ್ನೂ ಹೊಂದಿ ಪೂರ್ಣವಾಗಿರುವ ತಿಥಿ ; ಹುಣ್ಣಿಮೆ : ಅನುಮತಿಯನಿಕುಂ ಪೂರ್ಣಿಮೆ ಯನಿಸಾನುಂ ಕುಂದಿ ತೋಱುತಿರೆ ಚಂದ್ರಂ (ವತ್ಸ್ಯಕೋ. ೦೬-೯); ಮಾರ್ಗಶಿರ ಪೂರ್ಣಿಮೆಯು ಸಾಮಾನ್ಯವಾಗಿ ಡಿಸೆಂಬರ್ ಮಧ್ಯಭಾಗದಲ್ಲಿ ಬರುತ್ತದೆ (ಕಚ್ಚ್ರ. ೭). [ಸಂ. ಪೂರ್ಣಿಮಾ]

**ಪೂರ್ಣೆ** (ನಾ). ೧. ಪೂರ್ಣತಿಥಿ; ೫ ಪಂಚಮಿ, ದಶಮಿ ಮತ್ತು ಹುಣ್ಣಿಮೆ—ಇವು ಪೂರ್ಣತಿಥಿಗಳು. ೨. ಚಂದ್ರನ ಹದಿನಾರು ಕಳೆಗಳಲ್ಲಿ ಒಂದು: ಅಮೃತ ಪೂಷ ... ಪೂರ್ಣೆ . . . ಕಾಮದಾಯಿನಿ ಯೆಂಬ ಷೋಡಶಕಲೆಗಳಿಂ (ಏಕೀ. ೨೬೭). ೩. [ಸಂಗೀತ] ಮಧ್ಯಮ ಸ್ವರದಿಂದ ಹುಟ್ಟುವ ನಾಲ್ಕುಶ್ರುತಿಗಳಲ್ಲಿ ಒಂದು : ರಂಜಕ ಪೂರ್ಣೆ ಅಲಂಕಾರಿಣಿ ವಾಂಶಿಯೆಂಬ ನಾಲ್ಕುಶ್ರುತಿಗಳೆ ಮಧ್ಯಮಸ್ವರದಿಂ ಪುಟ್ಟಿದವು (ಲೀಶ. ೨೪೨). [ಸಂ. ಪೂರ್ಣಾ]

**ಪೂರ್ಣೇಂದು** (ನಾ). =ಪೂರ್ಣಚಂದ್ರ ೧ : ಸೌಂದರಪೆರುಮಾಳೆ . . . ರಾತ್ರಿಯುಂ ಬೆಳಗಲಿರ್ದ ಪೂರ್ಣೇಂದುವಿನಂತೆ ದಿವಮುಂ ಧವಳಿಸಲಿರ್ದ ಸಹಸ್ರಕರನಂತೆ ಇರ್ದಪಂ (ಸಂಶಿ. ೯-೦೪) ; ಕಂದ ಬಾರೋ ಎನ್ನ ಮನಕಾನಂದ ಬಾರೋ' ಬಾಲಕರ ಪೂರ್ಣೇಂದು ಬಾರೋ (ಕಮ್ಮ್ಯಕ್ಲೋ. ೬ ೨೦). [ಸಂ.]

**ಪೂರ್ಣೋಪಮೆ** (ನಾ). [ಕಾವ್ಯಮೀ] ಉಪಮೇಯ, ಉಪಮಾನ, ಸಾದೃಶ್ಯವಾಚಕ ಮತ್ತು ಸಾಧಾರಣಧರ್ಮ ಎಂಬ ನಾಲ್ಕೂ ಅಂಗಗಳನ್ನು ಸ್ಪಷ್ಟವಾಗಿ ಹೇಳಿರುವ ಉಪಮೆ : ತಾಯಂತೆ ಪೊರೆವ ತಂದೆವೊಲ್ಲಾಯತಿಯೊಳ್ ಹಿತಮನೆಣಿಸಿ ಚಿಕದೇವಮಹಾ ರಾಯಂ ಪ್ರಜೆಯನಿತಂ ನಾರಾಯಣನಂತೆ ಬೆಳ್ಗಿಪಡಿಸಿಯಾಳ್ವಂ ಸೊಗ ದೊಳ್ ಇದಱೊಳ್ 'ಚಿಕದೇವಮಹಾರಾಯಂ' ಎಂದು ಉಪ ಮೇಯಮಂ, 'ತಾಯ್ತಂದ ನಾರಾಯಣನ್' ಎಂದು ಉಪಮಾನಂಗಳಂ, 'ಪೊರೆವ' 'ಹಿತಮನೆಣಿಸಿ' 'ಏಳ್ಗೆಪಡಿಸಿ' ಎಂದು ಸಮಾನಧರ್ಮ ಗಳಂ 'ಅಂತೆ', 'ವೊಲ್' ಎಂದು ಉಪಮಾವಾಚಕಪದಂಗಳುಮಂ ಪೇಳ್ದ ಪ್ಪುದಱಿಂದಿದು ಪೂರ್ಣೋಪಮಾಲಂಕಾರವೆನಿಪುದು (ಅಶ್ರಿ. ೩೬-೦೬); ಬಳಸಿ ಸುಳಿದಾಡಿ ಕಾಲ್ತೊಡಿದೆಳಸಿ ಲಾಲಾರಾಪವೊದವೆ ಜನನಿಯ ಪೊಲೆ ವಾಲ್ಗಳನುಣ್ಪ ಶಿಶುಗಳಂತಿರೆ ಕಳವೆಯ ಪಾಲ್ದೆನೆಯ ಪಾಲನುಂಡುವು ಗಿಳಿಗಳ್—ಈ ಪದ್ಯದಲ್ಲಿ ಗಿಳಿಗಳೆಂಬ ಉಪಮೇಯವೂ ಶಿಶುಗಳೆಂಬ ಉಪ ಮಾನವೂ 'ಅಂತಿರೆ' ಯೆಂಬ ಉಪಮಾವಾಚಕವೂ ಸಹ . . . ಸ್ಪಷ್ಟವಾಗಿ ಉಕ್ತವಾಗಿರುವುದರಿಂದ ಈ ಹೋಲಿಕೆ ಪೂರ್ಣೋಪಮೆ (ಕೃಲಿ. ೨೪೬). [ಸಂ. ಪೂರ್ಣೋಪಮಾ]

**ಪೂರ್ತ**$_1$ (ಗು). ೧. ಎಲ್ಲ; ಸಂಪೂರ್ಣವಾದ; ಸಮಗ್ರವಾದ. ೨. ತುಂಬಿದ ; ಭರ್ತಿಯಾದ. (ನಾ). ೩. ಪೂರ್ಣಗೊಳಿಸುವಿಕೆ ; ಪೂರೈಕೆ ; ನೆರವೇರಿಕೆ. ೪. ಬಾವಿ, ಕೆರೆಗಳ ನಿರ್ಮಾಣ, ಯಾತ್ರಾರ್ಥಿ ಗಳ ಸೌಕರ್ಯಕ್ಕಾಗಿ ಉದ್ಯಾನವನ, ಅನ್ನಸತ್ರ, ಅರವಟ್ಟಿಗೆ, ದೇವಾಲಯ, ಧರ್ಮಶಾಲೆ ಮೊದಲಾದಂವುಗಳನ್ನು ಏರ್ಪಾಟು ಮಾಡುವುದು ಮುಂತಾದ ಧರ್ಮಕಾರ್ಯ : ಇಷ್ಟಂ ಯಾಗಾರ್ಥ ದೊಳುತ್ಕೃಷ್ಟಂ ಪೂರ್ತಂ ಪದ[ದಾ]ನಹೇತುವಿಕೀರ್ಣಂ ಇಷ್ಟಾಪೂರ್ತಂ ಗಳಪುತ್ಕೃಷ್ಟಶ್ರೀಯೋನಿಮಿತ್ತಮಕ್ಕುಮಪೆರತುಂ (ಚಪ್ಪುಕೋ. ೫೯-೯೩) ; ಮಾಡಿ ಷೋಡಶದಾನವನು ಮನ ಬೇಡಿದಂದದಲನ್ನಪಾನವ ನೀಡಿ ವಿಪ್ರರಿಗೊಲಿಯುತಿಷ್ಟಾಪೂರ್ತಗಳ ಮುಗಿಸಿ ಹೋಡಿಯಿಲ್ಲದ ಪುಣ್ಯಫಲ ಕೈಗೂಡೆ (ಅಶ್ವ್ಮ. ೨-೦೦೦). [ಸಂ.]

**ಪೂರ್ತ**$_2$ (ಅ). ಪೂರ್ಣವಾಗಿ ; ಪೂರ್ತಿಯಾಗಿ ; ಸಂಪೂರ್ಣವಾಗಿ : ಪೂರ್ತ ಕೂಲಿ ಅವರಿಗೆ ಕೊಟ್ಟರು (ಕೊಶಿಳ. ೨೨೧) ; ಸಾಮಾನುಗಳನ್ನು ಪೂರ್ತ ಹಿಂದಿರುಗಿ ಕೊಟ್ಟಿರಲಿಲ್ಲ (ಕೃಜಾ. II. ೨೨೦). [<ಪೂರ್ತ$_1$]

**ಪೂರ್ತಗೊಳಿಸು** (ಕ್ರಿ). ಪೂರೈಸು ; ಪೂರ್ಣ ಮಾಡು ; ಮುಗಿಸು : ಈ ಕೆಲಸವನ್ನು ಇಂದೇ ಪೂರ್ತಗೊಳಿಸಬೇಕು (ಜೂಪ).

[ ಪೂರ್ತ$_1$+ಕೊಳ್$_1$+_ಇಸು$_2$ ]

**ಪೂರ್ತತೆ** (ನಾ). ಪೂರ್ಣತೆ; ಪರಿಪೂರ್ಣತೆ: ಜೀವನದಲ್ಲಿ ಗೌರೀಶ, ನಿನಗೆ ಆತ್ಮಸಿದ್ಧಿ ದೊರೆಯಲಿ, ಪೂರ್ತತೆ ನಿನ್ನ ಪಾಲಿಗೆ ಬರಲಿ (ಮುಕ್ತ್ಯ. ೨೩೪) : ದೈವದೊಳಗೆ ಪೌರುಷದ ಪೂರ್ತತೆಯಿರುವುದು (ಕೃಬಂಧ. ೩೨). [ಸಂ. ಪೂರ್ತತಾ]

**ಪೂರ್ತಾನುಪಾಲನ** (ನಾ). 'ಪೂರ್ತ' ವೆಂಬ ಹೆಸರಿನ ದಾನದತ್ತಿಗಳನ್ನು ನಿರಂತರವಾಗಿ ನಡಸಿಕೊಂಡು ಬರುವುದು,_ರಕ್ಷಣೆ ಮಾಡುವುದು : ಪೂರ್ವದಿಂದ ನಡೆದು ಬರುತ್ತಿರುವ ದೇವದಾಯ ಬ್ರಹ್ಮದಾಯ ಧರ್ಮದಾಯ ಪೂರ್ತಾನುಪಾಲನ ಸರ್ವಮಾನ್ಯ ಭಟ್ಟವೃತ್ತಿ . . . ಮುಂತಾದುವೇನೂ ಹೆಚ್ಚುಕಡಿಮೆಯಾಗದಂತೆಯೂ ಅವೊಂದೂ ಈ ಪೌಜುಗಂದಾಯಕ್ಕೆ ಒಳಸೇರದಂತೆಯೂ ನಮ್ಮ ಕರಣಿಕರು ಎಚ್ಚರಿಸಿರ ಬೇಕು (ಅಸಂಗ. ೩೬-೨೦). [ಸಂ.]

**ಪೂರ್ತಿ**$_1$ (ನಾ). ೧. ತುಂಬುವುದು ; ಭರ್ತಿಮಾಡುವುದು. ೨. ಮುಗಿಸು ವುದು : ಮುಕ್ತಾಯಗೊಳಿಸುವುದು. ೩. ಪೂರ್ಣಗೊಳಿಸುವುದು ; ಪೂರೈಸುವುದು : ವಸುಧಯೊಳಿಷ್ಟಾರ್ಥಪೂರ್ತಿಯ [ಜಾಂ. ಮಂ ತವೆ] ನೆಗಳ್ಚುವನ ಬಹುವಿಧದ ಧರ್ಮಂಗಳಂ ರಚಿಸುವನ ಮನೆಯೂ ಇಂದಿರೆ ಬಿಡದೆ ನೆಲಸಿರ್ಪಳು (ಕೃಜೀಶ. ೩-೬೬). ೪. ಪೂರ್ಣಗೊಳ್ಳು ವುದು ; ಪೂರ್ಣತೆ. ೫. ತಣಿವು ; ತೃಪ್ತಿ. [ಸಂ.]

**ಪೂರ್ತಿ**$_2$ (ಅ). ಸಂಪೂರ್ಣವಾಗಿ ; ಪೂರಾ : ಇಲ್ಲಿಯ ಪರಿಸ್ಥಿತಿ ಪೂರ್ತಿ ಹದಗೆಟ್ಟುಹೋಗಿದೆ (ಜೂಪ). [<ಪೂರ್ತಿ$_1$]

**ಪೂರ್ತಿಗೊಳಿಸು** (ಕ್ರಿ). ೧. ಮುಗಿಸು ; ಮುಕ್ತಾಯಗೊಳಿಸು : ಈ ಕೆಲಸವನ್ನು ಪೂರ್ತಿಗೊಳಿಸದೆ ಇಂದು ಮನೆಗೆ ಹೋಗುವಂತಿಲ್ಲ (ಜೂಪ).

೨. ಈಡೇರಿಸು ; ನೆರವೇರಿಸು ; ಕೈಗೂಡಿಸು : ಈಗ ನನ್ನ ಮನೋಭಿಲಾಷೆಯನ್ನು ಪೂರ್ತಿಗೊಳಿಸು (ಪುತಿನ. ೬೩).

[ಪೂರ್ತಿ₁+ಕೊಳ್₁+ —ಇಸು₂]

**ಪೂರ್ತಿಸು** (ಕ್ರಿ). ೧. ಮುಗಿಸು ; ಮುಕ್ತಾಯಗೊಳಿಸು : ಕುಂದದನುದಿನ ವಚನನಿದ್ರಾವಂದಕತೆಯನುಳಿದಧಿಕಜಾಗ್ರತೆಯಿಂದ ವನವಾಸವನು ಪೂರ್ತಿಸಿ ಬಹುದು ನೀನು (ಅಕಂಕಾ. ೨-೦-೬೩) ; ಸಂಜೆಗಿಂತ ಮೊದಲೆ ಆಹಾರವನ್ನು ಪೂರ್ತಿಸದೇಕೆಯುದು...ಸ್ವತಃ ಬಂಕೆಯನಿಗೇ ನೆನಪಾಗಲಿಲ್ಲ (ತಿ:೮೫೩೦.೦೦). ೨. ಈಡೇರಿಸು ; ಕೈಗೂಡಿಸು : ಚೆಲುವನ್ನೇ ಮೂರ್ತಿಸಿ ಬಯಕೆಗಳನು ಪೂರ್ತಿಸಿ ಬರಲಿ ದೇವ—ದ್ವೀಪೀ ಬಾರ ದಾ ಮನೋನ್ಮನೀ (ಕೃದಳ. ೨೦-೪).

[ಪೂರ್ತಿ₁+ —ಇಸು₂]

**ಪೂರ್ಬ** (ಗು). ೧. ಹಿಂದಿನ ; ಪ್ರಾಚೀನ : 'ಪೂರ್ಬಮರ್ಯಾದೆ' ಪರಾ. (ನಾ). ೨. ಮೂಡಣದಿಕ್ಕು ; ಪೂರ್ವದಿಕ್ಕು : 'ಪೂರ್ಬಾಭಿಮುಖ' ಪರಾ. [<ಸಂ. ಪೂರ್ವ]

**ಪೂರ್ಬಮರ್ಯಾದೆ** (ನಾ). ಹಿಂದಿನಿಂದ ನಡೆದು ಬಂದ ಕ್ರಮ ; ಪರಂಪರಾನುಗತವಾದ ನಿಯಮ : ಹಾರಮರವೂರ ಕೋಟೆಯ ಪೂರ್ಬ್ಬಮರ್ಯಾದೆಯ ಚತುಸ್ಸೀಮೆ ಗದ್ದೆ ಬೆದ್ದಲು ಸೀಮೆ . . . ಕೊಟ್ಟೆವು (ಎಕ. IX. ಹಂಗಳೂ. ೫೦-೦೨ ; 1340). [ಪೂರ್ಬ+ಮರ್ಯಾದೆ]

**ಪೂರ್ಬಾಭಿಮುಖ** (ನಾ). ಮೂಡಣದಿಕ್ಕಿಗೆ ಎದುರಾಗಿರುವುದು; ಪೂರ್ವಕ್ಕೆ ಅಭಿಮುಖವಾಗಿರುವುದು: ಸರೋವರದ ಪಶ್ಚಿಮತಟದಲ್ಲೂ ಪ್ಪೂರ್ಬ್ಬಾಭಿಮುಖವಾಗಿಟ್ಟ ಶಿವಾಲಯಂ ಪ್ರದಕ್ಷಿಣಂ ಬಂದು ಶ್ರೀಸೋಮೇಶ್ವರದೇವರಂ ಕಂಡು (ಕಇಶಾ. XX. ೧೯-೧೯ ; ಸು. 1070).

[<ಪೂರ್ವಾಭಿಮುಖ]

**ಪೂರ್ಬಾಯ** (ನಾ). ಒಂದು ಬಗೆಯ ತೆರಿಗೆಯಿಂದ ಬರುವ ಆದಾಯ : ನಾಡುಮರಿಯಾದೆಯಲ್ಲಿ ಪೂರ್ಬ್ಬಾಯವೇನು ಬಂದಡೆ ಆ ಸ್ಥಾನದವರು ತೆಱುವರು (ಎಕ. III. ತಿರುಕು. ೦೦೦—೩೫ ; 1281) ; ಪಂಚಕಾರುಕ ಅಲೆದೆಱೆ ಮುಱುಡಿದೆಱೆ ಚಟ್ಟಿದೆಱೆ ಕೊನೆದೆಱೆ ಖಚಣಸಂಬಳವೊಳಗಾದ ಪೂರ್ಬ್ಬಾಯ ಅಪೂರ್ಬ್ಬಾಯ . . . ಎಲ್ಲವನೂ ಕಾರುಣ್ಯಂಮಾಡಿ ಧಾರಾಪೂರ್ಬ್ಬಕಂ ಮಾಡಿ ಕೊಟ್ಟರು (ಎಕ. VI. ಕಡೂರು. ೧೯-೧೩ ; 1291). [<ಪೂರ್ವಾಯ]

**ಪೂರ್ಬಿಗ, ಪೂರ್ವಿಗ, ಪೂರ್ವಿಕ** (ನಾ). (ವಂಶದ) ಹಿರಿಯ ; ಪೂರ್ವಿಕ : ಅಡಗಿನ ಬಸನಿಗರ್ಗ್ಗಂ ಕಳ್ಳುಡಿವವರ್ಗ್ಗಂ ವೃತ್ತಿಲೋಪವೆಂದು: ನುಡಿಯಂ ಕಡೆಗಣ್ಗಾಣಿಸದೆ ಮೊದಲಿಂದೆ ಕಿಡಿವುದರಂ ಸ್ಥಾನಗುರುಗಳುಂ ಪೂರ್ಬ್ಬಿಗರುಂ (ಕೌಶಾ. IX-i. ೦೦೬-೩೯ ; ಸು. 1055). **ಪೂರ್ವಿಗ** : ಬಿಂದರನೂರ ಪೂರ್ವ್ವಿಗರ ಗೊಲುಕಿಗಾವುಣ್ಣನ ಮಗ ಪಿರಿಯಮ್ಮಗಾವುಣ್ಣನು (ಎಕ. IX (೩). ಹೊಸಕೋ. ೨೦೬-೪ ; ಸು. ೯೦೦) ; ಜಗವಱಿಯೆ ಪಮ್ಮನ್ನೆಯದ ಪೂರ್ವಿಗನಲಾ ನಹುಷಂಗೆ ಬಂದುದ್ದಿಗದ ಪದನಿದು (ಉತ್ತ.೦.೦೩-೬೦). **ಪೂರ್ವಿಕ**: ಅವರ ಪೂರ್ವಿಕರೆಲ್ಲ ಒಳ್ಳೆಯ ವಿದ್ವಾಂಸರಾಗಿದ್ದರು (ಕಅಶ). [< ಸಂ. ಪೂರ್ವಿಕ]

**ಪೂರ್ಯ** (ಗು). ೧. ತುಂಬಬೇಕಾದ. ೨. ತೃಪ್ತಿಗೊಳಿಸಬೇಕಾದ. ೩. ಅಧಿಕವಾದ ; ಅತಿಶಯವಾದ : ಗದ್ಗದಕಂಠವೆಸೆಯುಲು ಪೂರ್ಯಹರುಷಸಮುದ್ರ ಕಾಡ್ಡುಳಕ್ಕಿಗಳೆ ನಿಳುಗಲು (ಐಕತ. ೬-೬) ; ಸ್ಥೈರ್ಯಶೌರ್ಯಂ ವರಕ್ಷೌಹಿಣಿ ಪೂರ್ಯಧೈರ್ಯಂ . . . ಧೃಜನ ಶೇವುಸ್ವಾರ್ಯಸೇನನೆಸೆದ (ಐಕತ. ೨೨-೨೯). [ಸಂ.]

**ಪೂರ್ವ** (ಗು). ೧. ಹಿಂದಣ ; ಪ್ರಾಚೀನ : ನಿಮ್ಮಯ ಪೂರ್ವಪೃಥ್ವೀಪಾಲಮ್ಮರು ಗುಪ್ತದಿಂದ ವಿಶಾಲನಗರಿಯಲಿ (ಕುಮ್ಮಾ.ಕಿ. ೨-೦). 'ಪೂರ್ವಕಾಲ' 'ಪೂರ್ವಾಚಾರ್ಯ' ಪರಾ. ೨. ಮೊದಲಿನ ; ಎಳೆಯ : 'ಪೂರ್ವವಯಸ್ಸು' ಪರಾ. ೩. ಇಂದಿಗೆ ಹಿಂದಿನ ಕಾಲಕ್ಕೆ ಸೇರಿದ : ಇಂದಿಗೆ ಮುಂಚಿನ ಸಮಯದ. ೪. (ಅನುಕ್ರಮದಲ್ಲಿ) ಮೊದಲನೆಯ ; ಅಗ್ರೇಸರ ; ಪ್ರಥಮ. ೫. ಮೂಡಣ ; ಮೂಡಣ ದಿಕ್ಕಿನಲ್ಲಿರುವ : ಪೂರ್ವದಿಕ್ಕಿಗೆ ಸಂಬಂಧಿಸಿದ. (ನಾ). ೬. ಹಿಂದಣಕಾಲ ; ಪ್ರಾಚೀನಕಾಲ : ಪ್ರಾತಸಲ್ಲಾ ರಾಯರಲಿ ನಳಿನಾತಗಾಧಾವತ್ತ ಬಲ್ಲಿ ಕೇಳಿ ಪೂರ್ವದಲಿ (ಕೂಶಕಾ. ೬-೨-೦೩) ; ತ್ರಿಮೂರ್ತಿಗಳು . . . ಅತ್ರಿಯ ಸತಿಗನಸೂಯದೇವಿಗೆ ಪುತ್ರರಾದರು ಪೂರ್ವದೊಳು (ಹಅ. ೨-೯೩). ೭. ಹಿಂದೆ ನಡೆದು ಹೋದ ಸಂಗತಿ ; ಪೂರ್ವಕಾಲದ ಘಟನೆ : ನಂಬಿಯಣ್ಣಂ ಪೂರ್ವಮಂ ನೆನೆದು ಪಂತೆಂದು ಚರಣದೊಳು ಬಿಳುತುಂ (ಶಂಕಶ. ೬-೨೨೬). ೮. ಮೊದಲು ಇರುವಂತಹುದು ; ಮೊದಲಿನದು : "ಆದಿಃ, ಪೂರ್ವಃ, ಪೌರಸ್ತ್ಯಃ, ಪ್ರಥಮಃ, ಆದ್ಯಃ—ಈ ಮೊದಲನೆ ದರ ಹೆಸರುಗಳು" (ಸಿದ್ಧಾಂತ. ೩೯೯) ; ವಿದಿತ ಸಮಾಸಂಗಳ ಪೂರ್ವದಕ್ಕರಂ ಹ್ರಸ್ವಮದಱ ಪರದಕ್ಕರವಂತದು ದೀರ್ಘಂ (ಶಮತ. ೯). ೯. ಹಿಂದಿನ ಭಾಗ ; ಹಿಂಭಾಗ : ಆದೇಶವಾಗಿ ಮುಂಗಳ್ಗಾದರುಪದು ನಿಱ್ಱಿಮಿರ್ಗಮವುಂ ಪೂರ್ವಕ್ಕೆ (ಶಮದ. ೨೨೦). ೧೦. ಮೂಡಣದಿಕ್ಕು : "ಪ್ರಾಚಿಯೆನೆ ಪೂರ್ವವೈಂದ್ರಿಯೆನೆ ಮೂಡಲೆನಿಕ್ಕು" (ಶುಂಗಣ. ೦೬-೨೯). ೧೧. ಹಿಂದಿನವನು ; ಹಿರಿಯಂ : "ಪೂರ್ವಃ-೧ ಮೂಡಲಲ್ಲಿರುವಂಥಾದ್ದು, ಪೂರ್ವಕಾಲ, ಮೂಡಲಲ್ಲಿ ಹುಟ್ಟಿದವರು, ಪೂರ್ವಕಾಲದಲ್ಲಿ ಹುಟ್ಟಿದವರು" (ಸಿದ್ಧಾಂತ. ೪೦೩) ; ಅರಸದೂರಾಗತರ ಪೂರ್ವರ ಚಿರಸಮಾಶ್ರಿತರೆನಿಪ ಧರಣೀಸುರರ ಸಲಹಲು ಸಮನೆನಿಸುವೀ ಮೂಱು ತೆಱದವರ . . . ರಕ್ಷಿಸುತಲಿರಬೇಕು (ತಿಪ್ಪ.೮. ೩-೩೬). ೧೨. [ಜೈನ] ಹನ್ನೆರಡನೆಯ ದೃಷ್ಟಿವಾದದ ಅಂಗಗಳಲ್ಲಿ ಬರುವ, ಶ್ರುತಾಂಗಗಳ ವಿವರಣೆಯನ್ನು ನೀಡತಕ್ಕ ಉತ್ಪಾದಪೂರ್ವ, ಅಗ್ರಾಯಣೀಯಪೂರ್ವ, ವೀರ್ಯಾನುವಾದಪೂರ್ವ, ಅಸ್ತಿನಾಸ್ತಿಪ್ರವಾದಪೂರ್ವ, ಜ್ಞಾನಪ್ರವಾದಪೂರ್ವ, ಸತ್ಯಪ್ರವಾದಪೂರ್ವ, ಆತ್ಮಪ್ರವಾದಪೂರ್ವ, ಕರ್ಮಪ್ರವಾದಪೂರ್ವ, ಪ್ರತ್ಯಾಖ್ಯಾನಪೂರ್ವ, ವಿದ್ಯಾನುವಾದಪೂರ್ವ, ಕಲ್ಯಾಣವಾದಪೂರ್ವ, ಪ್ರಾಣಾವಾಯುಪೂರ್ವ, ಕ್ರಿಯಾವಿಶಾಲಪೂರ್ವ ಮತ್ತು ಲೋಕಬಿಂದುಸಾರಪೂರ್ವ ಎಂಬ ಹದಿನಾಲ್ಕು ಆಗಮಗ್ರಂಥಗಳು : ಪ್ರಥಮಾನುಯೋಗಮುಮಂ ಪದಿನಾಲ್ಕುಪೂರ್ವಂಗಳುಮನಯ್ದು ಚೂಳಿಕೆಯುಮಂ . . . ಪೇಸರ್ಗೊಂಡು (ಅಪು. ೩-೯೦೫) ; ಅಂಗಗಳಿಗಿಂತ ಮುಂಚೆ ಶಾಸ್ತ್ರಜ್ಞಾನವು ಶ್ರುತರೂಪದಿಂದ ಪ್ರಚಾರದಲ್ಲಿತ್ತು. ಆಗ ಅದು ಹದಿನಾಲ್ಕು ಪೂರ್ವಗಳ ರೂಪದಲ್ಲಿ ಪ್ರಚಲಿತವಾಗುತ್ತಿತ್ತು (ಕೃಕಶ. ೦೩೯). 'ಚತುರ್ದಶಪೂರ್ವ' ಪರಾ. ೧೩. ದೀರ್ಘವಾದ ಒಂದು ಕಾಲಮಾನ : ಎಪ್ಪತ್ತುಲಕ್ಷದ ಐವತ್ತಾರುಸಾವಿರ ಕೋಟಿ ವರ್ಷ : ಲಕ್ಕೆಯ ಲೆಕ್ಕದೊಳೊಂದಿ ಪೂರ್ವವಿರ್ಪತ್ತು ನಿರಂತರಂ ನಡೆದುದಾ ವೃಷಭಂಗೆ ಕುಮಾರಕಾಲದೊಳ್ (ಆಪು. ೬-೩೦); ಎರಡುಲಕ್ಷಪೂರ್ವಂ ಪರಮಾಯುಷ್ಯಮನಂ . . . ಧವಳವರ್ಣನುಮಾಗಿ ಬಳೆದಯ್ವತ್ತುಸಾಸಿರಪೂರ್ವಂ ಕುಮಾರಕಾಲಂ ಪೋಗೆ ರಾಜ್ಯಾಭಿಷೇಕಮಾಗಿ (ಅಪುಂ೩. ೦೨೬). ೧೪. ಹದಿನಾಲ್ಕು ಎಂಬ ಸಂಖ್ಯೆಯ ಸಂಕೇತ. ೧೫. [ಯೋಗ] ಉಚ್ಛ್ವಾಸ ನಿಶ್ವಾಸಗಳ ಒಂದು ಬಗೆ : "ನಾಸಿಕದಿ ನಿಂದಾನಿಲಂ ಕುಂಭಕಮೆನಿಕ್ಕು . . . ಅನವರತ ಸಂಚರಿಸೆ ಪೂರ್ವಮುಕ್ಕುಂ" (ಶುಂಗಣ. ೦೩-೦೪).

**ಪೂರ್ವಪೂರ್ವ** — ೧. ಹಿಂದು ಹಿಂದಿನ ; ಹಿಂದಿನದಕ್ಕಿಂತ ಹಿಂದಿರುವ : ಹೀಗೆ ಉತ್ತರೋತ್ತರಾವಸ್ಥೆಗಳಿಂದ ಉತ್ಪತ್ತಿವ್ಯವಹಾರಗಳು, ಪೂರ್ವಪೂರ್ವಾವಸ್ಥಾವಿನಾಶದಿಂದ ವಿನಾಶವ್ಯವಹಾರ (ಹಿಂದಶಾ. ೯೩). ೨. ಹಿರಿಯರಿಗೆ ಹಿರಿಯ; ಪುರಾತನರಿಗೆ ಪುರಾತನನಾದವನು;

ಆದಿಪುರಂಪ ; ಪರಮೇಶ್ವರ : ನಿಜನಿರ್ವಾಲಿತರೂಪವನಂ ಪೂರ್ವ ಪೂರ್ವನಂ . . . ದೇವದೇವನಂ ಭಜಿಸಿದಳಗಜೆ ಬನದೊಳು (ಕೃ.ಬಿಜಿ. ೦೩-೨೩). **ಪೂರ್ವದ ಹಳಗನ್ನಡ** = ಹಳಗನ್ನಡಕ್ಕೂ ಹಿಂದಿನ ಅತಿ ಪ್ರಾಚೀನವಾದ ಕನ್ನಡಭಾಷೆಯ ರೂಪ : ಹಳಗನ್ನಡಕ್ಕೂ ಹಿಂದೆ ಕನ್ನಡಕ್ಕೆ ಒಂದು ರೂಪವಿತ್ತು . ಅದನ್ನು "ಪೂರ್ವದ ಹಳಗನ್ನಡ" ವೆನ್ನುತ್ತಾರೆ (ಕೃಶಾ. ೦). **ಪೂರ್ವಾಪರ** = ೧. ಮೊದಲಿನ ಮತ್ತು ಅನಂತರದ. ೨. ಹಿನ್ನೆಲೆಯಿಂದ ಪರಿಣಾಮದ ವರೆಗಿನ ಸಮಸ್ತ ವೃತ್ತಾಂತ; ಹಿಂದುಮುಂದಿನ ಸಮಗ್ರವಿಷಯ : ಎಲೆ ಮುನೀಶ್ವರ ಪೇಳು ಪೇಳೆನೆ ತಿಳುಹಿ ಪೂರ್ವಾಪರವ ರಾವಣಗೆ ಬಳಿಕಹಲ್ಯಾದೇವಿಯರ್ತಿಯ ಸಲಿಸಿ ಬೀಳ್ಕೊಂಡ (ಕೌ.ರಾ. ೦-೯೬). ಪೂರ್ವಾಪರಗಳನ್ನು ಅರಿಯದ ಮಾನವರ ಕಣ್ಣಿಗೆ ನಾವು ಹುಚ್ಚರು (ಬುಹಾ. ೦೩). ೩. ಹಿಂದೆ ಇರುವುದು ಮತ್ತು ಮುಂದಿರುವುದು : ಪರಿಗೀತಾರ್ಥಂ ಪೂರ್ವಾಪರದೊಳ್ ಬಗೆವಾಗಳೆಂದುಮೊಂದಜ್ಞೊಳೊಂದುಂ ದೊರೆಕೊಂಡೊಂದದೊಡದು ದುಷ್ಕರಮೆ ವಿರುದ್ಧಾರ್ಥಮೆಂಬುದಾದು ದೋಷಂ (ಕಾಜಾ. ೦-೬೦). ೪. ಸಂಬಂಧ. **ಪೂರ್ವಾಪೂರ್ವ** = ಬಹಳ ಹಿಂದಿನ : ಪ್ರತಿಕ್ಷಣಂ ವಿಶರಾರುಗಳ್ ಚಿತ್ರಕ್ಷಣಂಗಳ್ ಪೂರ್ವಾಪೂರ್ವಚಿತ್ರವಿಶೇಷ ಪ್ರಥಮಂಗಳ್ ಪ್ರಬೋಧದಿಂದಂ ಪ್ರವರ್ತಿಸುವುವು (ಶಾಂತಿಪು. ೬-೦೧೨ ವ). **ಪೂರ್ವೋತ್ತರ** = ಮೊದಲಿನ ಮತ್ತು ಅನಂತರದ; ಮುಂಚಿನ ಹಾಗೂ ಕೊನೆಯ : ಪೂರ್ವೋತ್ತರಕಾಲವ್ಯಾಪ್ತಿ ಜೀವತತ್ತ್ವಮೊಂದುಂಟೆಂಬರದೊಂದುಮಿಲ್ಲ (ಶಾಂತಿಪು. ೬-೦೧೨ವ) ; ವಿದಿತಪೂರ್ವೋತ್ತರದ ಯಾದು ವಂಶದ ಕಥಾವಿಸ್ತಾರವನು ಹೇಳಿದನು ದುಷ್ಯಂತನಲಿ ಶಾಕುಂತಲೆಯ ಕಥೆಸಹಿತ (ಜಯ್ಮಿ. ೩-೦೭). [ಸಂ.]

**ಪೂರ್ವಂ** (ಅ). ಮುಂಚೆ; ಮುನ್ನ; ಮುಂಚಿತವಾಗಿ : "ಆದೀ, ಅಗ್ರ, ಪು(ರಾ)ರಂ, ಪೂರ್ವಂ, ಪ್ರಥಮಂ, ಪ್ರಾಕ್, ಪುರಃ — ಈ ೭ ಮುನ್ನಂ" (ಕರಾಚು. ೦೦೬ ೩೨); ಪೂರ್ವಂ ದೇವೇಶನಿಂ ನಿರ್ಮಿತ ತುರಗಚಯಂ ಲಾಯದೊಳ್ ಕಟ್ಟಿರುತ್ತುಂ . . . ಪರ್ವಿತ್ತಾ ಪಟ್ಟಣಾದ್ಯಂತ್ಯದೊಳ್ (ಜೈಭಾ. ೯-೦೨-೨). [ಸಂ.]

**ಪೂರ್ವಕ** (ಗು). ೧. ಮುಂಚಿನ ; ಮೊದಲಿನ : ಹಿಂದಿನ. ೨. ಸಹಿತವಾದ ; ಕೂಡಿಕೊಂಡ : ಆದರಪೂರ್ವಕ ವಿಜ್ಞಾಪನೆಗಳು (ಬಳಕೆ). (ನಾ). ೩. ಪೂರ್ವಜ; ಪೂರ್ವಿಕ. ೪. ಸಹಿತವಾದುದು; ಕೂಡಿಕೊಂಡಿರುವುದು : ದೃಷ್ಟಿಗಳೆಗೆಯ್ದಿಸದವಂ ನಿಜದೃಷ್ಟಿಪೂರ್ವಕವಾಗಿ ನೋಡಲು ದೃಷ್ಟಿವಾರತನಜುಃಒವಪೆನೆಂದ ತರನಪಸುವವ (ಅನಪು. ೫೧-೯೯). [ಸಂ.]

**ಪೂರ್ವಕಂಕಣ** (ನಾ). [ಸಂಗೀತ] ನೂರೆಂಟು ತಾಳಗಳಲ್ಲಿ ಒಂದು : ಚಂಚತ್ಪುಟ . . . ಪೂರ್ವಕಂಕಣ ಕಾವ್ಯಕಂಕಣ . . . ಜಯಾಳಮೆಂಬಿವು ಮೊದಲಾದ ನೂಱೆಂಟು ತಾಳಂಗಳು (ಅಭೀಚ. ೨೩೬). [ಸಂ.]

**ಪೂರ್ವಕಕ್ಷೆ** (ನಾ). ವಾದದಲ್ಲಿ ಮಂಡಿಸುವ ಮೊದಲನೆಯ ಆಕ್ಷೇಪಣೆ : ಇಂತೀ ಸ್ಥಲಂಗಳಲ್ಲಿ ಸ್ಥಿರೀಕರಿಸಿ ಆರೋಪಿಸಿ ಪೂರ್ವಕಕ್ಷೆಯಂ ಕಂಡು . . . ಉತ್ತರಕಕ್ಷೆಯು ಕೂಡಿದಲ್ಲಿ ಆಬುಸ್ಥಲದ ಸೋಂಕಿಲ್ಲ (ಕೋಲಿಶಾ. ೦೩೯-೩೩೬); ಜಾತಿಭೇದಂಗಳಂ ಸಪ್ತಸ್ಯಂಗಳಂ ಪ್ರೀತಿಬಿಂದಾ ತ್ರಿಶ್ವಂಗಳಂ ವೀರಶೈವಾತಿಶಯಂಗಳಂ ಪೂರ್ವಕಕ್ಷೆಯೊಳಗೆಂದವಂ ಬಿತ್ತರಿಸಿದಂ ದೇಶಿಕಂ (ಶೀಕ್ಷೆ ಕೃ. ೬-೨ ಕೂಕಪ). [ಸಂ. ಪೂರ್ವಕಕ್ಷಾ]

**ಪೂರ್ವಕರ್ಮ** (ನಾ). ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮ ಮತ್ತು ಅದರ ಫಲ : ಪೂರ್ವಕರ್ಮವ ಕೆಡಿಸಿದೆನೆನ್ನ ಗುರು ಉಭಯಕರ್ಮವ ಬಿಡಿಸಿ ತೋರಿದ ಶರಣರವರಿಂದ ಬದುಕಿದೆನು(ಶಶಾ. III. ೦೩೩-೩೬೧); ಅಂಗ ಮೆಂಬುದು ಪೂರ್ವಕರ್ಮಸಂಗಶೇಷವು ಪುಣ್ಯಪಾಪೋತ್ಪತ್ತಿಗನಿಲಯಂ ಸುಕೃತದುಷ್ಕೃತಗತಿಗಳಾಶ್ರಯವು (ಅನಪು. ೫೧-೨೬). [ಸಂ. ಪೂರ್ವಕರ್ಮನ್]

**ಪೂರ್ವಕಲ್ಪನೆ** (ನಾ). ೧. ಮೊದಲು ಮಾಡಿದ ಕಲ್ಪನೆ; ಮುಂಚೆ ಮಾಡಿದ ಊಹೆ : ಅವರು ಬಹಳ ಅಹಂಕಾರಿಗಳೆಂಬುದು ನನ್ನ ಪೂರ್ವಕಲ್ಪನೆಯಾಗಿತ್ತು (ಬಳಕೆ). ೨. ಪುರಾಕೃತಕರ್ಮ : ಪೂರ್ವಕಲ್ಪನೆಯ ವಿಸಾಜುವರಾರ್ (ಕಬೀಕಾ. ೦೦). [ಸಂ. ಪೂರ್ವಕಲ್ಪನಾ]

**ಪೂರ್ವಕಲ್ಯಾಣಿ** (ನಾ). [ಸಂಗೀತ] ಒಂದು ರಾಗದ ಹೆಸರು : ಪೂರ್ವಕಲ್ಯಾಣಿ-೫೩ನೇ ಮೇಳಕರ್ತ ಗಮನಶ್ರಮದ ಜನ್ಯ. ಪ್ರಾಚೀನ ರಕ್ತಿರಾಗ. ಕರುಣಾರಸಪ್ರಧಾನರಾಗ (ಸಂಗೀಕೋ. ೦೩೩). [ಸಂ. ಪೂರ್ವಕಲ್ಯಾಣೀ]

**ಪೂರ್ವಕಾಲ** (ನಾ). ೧. ಮುಂಚಿನ ಕಾಲ; ಹಿಂದಿನ ಕಾಲ; ಪ್ರಾಚೀನ ಕಾಲ : ಪೂರ್ವಕಾಲದಲ್ಲಿ ಈ ಪ್ರಾಣಿಗಳು . . . ಕಮಲಗಳನ್ನು ಮುತ್ತಿ ಸುತ್ತುತ್ತಿದ್ದವು (ಗಾಳಿ. ೨೦೬). ೨. [ವ್ಯಾಕ] ಭೂತಕಾಲ : ಇಕಾರ ಮುಮುಮುಕಾರಮುಂ ಪೂರ್ವಕಾಲಕ್ರಿಯೆಯೊಳಕ್ಕುಂ (ಶಬ್ದ. ಶ. ೨೪೬ ವೃತ್ತಿ). [ಸಂ.]

**ಪೂರ್ವಕೋಟಿ** (ನಾ). ೧. ಪೂರ್ವಪಕ್ಷ; ವಾದದ ಪ್ರಾರಂಭದಲ್ಲಿ ಮಂಡಿಸುವ ಪ್ರಶ್ನೆ. ೨. [ಜೈನ] ಅತಿದೀರ್ಘವಾದ ಒಂದು ಕಾಲ ಪ್ರಮಾಣ; ಒಂದು ಕೋಟಿ ಪೂರ್ವವರ್ಷ : ಪೂರ್ವಕೋಟ್ಯಾಯುತ್ತಾಯುರ್ವಿಶಿಷ್ಟವೃತ್ತಂ ಷಡ್ವಿಧೇತಿಪ್ರಕ್ರತಿನಿಯತವೃನೂರುಬಿಲ್ ಮರ್ತ್ಯಮೂರ್ತ್ಯಾನ್ನತಿಯಿಂದುಂ ತನ್ನೊಳೆಂಬೀ ಸ್ತುತಿವಡೆದುದು ಸೌಖ್ಯಾವಗಾಹಂ ವಿದೇಹಂ (ಶಾಂತಿಕೃ. ೦-೬೬) ; ಪೂರ್ವಗಳು ಒಂದು ಕೋಟಿಯಾವರ್ತಿ ಯಾದರೆ . . . ಪೂರ್ವಕೋಟಿ (ತ್ರಿಲೋಕ. ೦೨). [ಸಂ.]

**ಪೂರ್ವಕ್ರೀ** (ನಾ). ಹಿಂದೆ ನಡೆದು ಹೋದ ಸಂಗತಿ; ಪೂರ್ವಚರಿತ್ರೆ : ಶಾಸ್ತ್ರ ಬಲ್ಲಿತ್ತೆಂದೆನೆ ಶಬ್ದಕ್ರೀ ಪುರಾಣ ಬಲ್ಲಿತ್ತೆಂದೆನೆ ಪೂರ್ವಕ್ರೀ [ಪಾಠಾಂ. ಕ್ರಿ] (ಅಶ. ೩೩೨) ; ಮುತ್ತು ರತ್ನಸಿತಕೆ ಘ್ರಾತಕೆ ಮತ್ತೆ ಪೂರ್ವಕ್ರೀ [ಪಾಠಾಂ. ಕ್ರಿಯ]ಗಳಂಟೆ ನಿತ್ಯಮುಕ್ತಶರಣಗುಂಟೆ ಮತ್ತೆ ಪೂರ್ವಚರಿತವು (ಶಬೀಸ. ೦೨-೯೯೪). [<ಸಂ. ಪೂರ್ವಕ್ರಿಯಾ]

**ಪೂರ್ವಗಿರಿ** (ನಾ). ಮೂಡಣ ದಿಕ್ಕಿನ ಬೆಟ್ಟ ; ಸೂರ್ಯನು ಹುಟ್ಟಿ ಬರುವ ಸ್ಥಾನವೆಂದು ನಂಬಲಾದ ಪರ್ವತ; ಉದಯಾಚಲ : ಪೂರ್ವಗಿರಿಯ ಶಿಖರಾಂತರದ ಪದ್ಮರಾಗದ ಕಳಸಮೆನೆ ಸೂರ್ಯಮಂಡಲಂ ರಂಜಿಸಿದುದು (ಶಂಪು. ೯೬-೯೬). [ಸಂ.]

**ಪೂರ್ವಗುಣ** (ನಾ). ಹಿಂದಿದ್ದ ಸ್ವಭಾವ. —ಪ್ರಕೃತಿ : ಆದ್ಯ ಪ್ರಾಣಲಿಂಗವೆಂದೆನಿಸಿದು ಪೂರ್ವಗುಣವಳಿದು ಪುನರ್ಜಾತನಾದ ಬಳಿಕ ಸಂಸಾರಬಂಧಂಗಳೆನ್ನವರೆಂದೊಡೆ ನಂಟಭಕ್ತಿ ನಾಯಂನರಕ (ಅಶ. ೯೯). [ಸಂ.]

**ಪೂರ್ವಗ್ರಹ** (ನಾ). ಯಾವುದಾದರೊಂದು ವಸ್ತು, ವಿಷಯ ಅಥವಾ ವ್ಯಕ್ತಿಯ ವಿಷಯಕವಾಗಿ, ಪರಿಶೀಲನೆಗೆ ಮುಂಚಿತವಾಗಿಯೇ ಮಾಡಿಕೊಂಡ (ಅನುಕೂಲವಾದ ಅಥವಾ ಪ್ರತಿಕೂಲವಾದ) ಅಭಿಪ್ರಾಯ ; ಅವಿಚಾರಕಲ್ಪಿತಅಭಿಪ್ರಾಯ ; ಅಭಿನಿವೇಶ : ಅದು ಅನಾರ್ಯಪದ್ಧತಿ ಎಂಬ ಪೂರ್ವಗ್ರಹವನ್ನು ನಾವೇಕೆ ಒಪ್ಪಬೇಕು ? (ಸಂಸ್ಕೃ. ೬೨) ; ವಿಮರ್ಶಕನ ಮನಸ್ಸಿನ ಸ್ವಾಸ್ಥ್ಯವನ್ನು ಎಲ್ಲಕ್ಕಿಂತಲೂ ಮಿಗಿಲಾಗಿ ಕೆಡಿಸತಕ್ಕದ್ದು ಪೂರ್ವಗ್ರಹ (ವಿಮರ್ಶೆ. ೦೬).

**ಪೂರ್ವಗ್ರಹಪೀಡಿತ** = ಯಾವುದಾದರೊಂದು ವಸ್ತು, ವಿಷಯ ಅಥವಾ ವ್ಯಕ್ತಿಯ ವಿಷಯವಾಗಿ, ಪರಿಶೀಲನೆಗೆ ಮುಂಚಿತವಾಗಿಯೇ (ಅನುಕೂಲವಾದ ಅಥವಾ ಪ್ರತಿಕೂಲವಾದ) ಅಭಿಪ್ರಾಯವನ್ನು ಹೊಂದಿದ ವ್ಯಕ್ತಿ; ಅವಿಚಾರಕಲ್ಪಿತಅಭಿಪ್ರಾಯವನ್ನುಳ್ಳವನು : ಪೂರ್ವಗ್ರಹಪೀಡಿತರಾದವರಿಂದ ಯಾವ ವಿಚಾರದಲ್ಲಿಯೂ ನಿರ್ದುಷ್ಟವಾದ ಪರಿಶೀಲನೆ ಸಾಧ್ಯವಿಲ್ಲ (ಬಳಕೆ). [ಸಂ.]

**ಪೂರ್ವಗ್ರಹಿಕೆ** (ನಾ). = ಪೂರ್ವಗ್ರಹ : ಆದರ್ಶವಾದಿ ಎಷ್ಟೋ ಸಲ ತನ್ನ ವಿಶ್ವದ ಪರಿಚಯವನ್ನ ಸಂಪೂರ್ಣವಾಗಿ ಮಾಡಿಕೊಂಡಿರುವುದಿಲ್ಲ. ಪೂರ್ವಗ್ರಹಿಕೆಯ ಬಣ್ಣದ ಕನ್ನಡಕದಲ್ಲಿಯೆ ಎಲ್ಲವನ್ನೂ ನೋಡುತ್ತಾನೆ (ಕೀಕನ್ನ. ೬). [ಸಂ. ಪೂರ್ವಗ್ರಹಿಕಾ]

**ಪೂರ್ವಚಿಂತನೆ** (ನಾ). ಮೊದಲಿನ ಆಲೋಚನೆ : ಪೂರ್ವಚಿಂತನೆಯಿಂದ ಕಂಡು ಉತ್ತರಚಿಂತನೆಯಿಂದ ಖಂಡಿಸಿ . . . ಪುರಾಣಾಗಮಂಗಳೆಲ್ಲವೂ ನಾನಾರೆಂಬುದ ತಿಳಿವುದಕಿಕ್ಕಿದ ಭಿತ್ತಿ (ಸಕಆ III. ೨೯೩-೩೦೩). [ಸಂ. ಪೂರ್ವಚಿಂತನಾ]

**ಪೂರ್ವಜ** (ಗು). ೧. ಮೊದಲು ಹುಟ್ಟಿದ ; ವಯಸ್ಸಿನಲ್ಲಿ ಹಿರಿಯ. ೨. ಬಹು ಹಿಂದಿನ ಕಾಲಕ್ಕೆ ಸೇರಿದ ; ಪುರಾತನ ; ಪ್ರಾಚೀನ : ಬಹುಶಃ ಅವುಗಳ ಪೂರ್ವಜ ಕೀರ್ತಿಗಳಿಗೆ ರೆಕ್ಕೆಗಳು ಇಲ್ಲದೆ ಇದ್ದಿರಬಹುದು (ಕೀಟಪ. ೦೮). (ನಾ). ೩. ಹಿರಿಯ ಸೋದರ ; ಅಣ್ಣ : "ಅಗ್ರಜಃ, ಪೂರ್ವಜಃ, ಶ್ರೇಷ್ಠಃ—ಈ ೩ ಅಣ್ಣನ" (ಶಠಾಯು. ೬೩-೩೩). ೪. ವಂಶದಲ್ಲಿ ಹಿಂದೆ ಆಗಿಹೋದವನು ; ಮೂಲಪುರುಷ ; ಪೂರ್ವಿಕ : ಅವರ ಪೂರ್ವಜರಪ್ಪರಸುಗಳೊಳಗೆಯೋಧ್ಯಾಪುರಪರಮೇಶ್ವರನುಂ ಸತ್ಯಾದಿಗುಣಾಶ್ರಯವಲ್ಲಭನುಮಪ್ಪ ಪ್ರೌಢವಿಶಾದಂತಿಪ್ರಕಟಪ್ರಭಾವನಪ್ಪ ಸತ್ಯಾಶ್ರಯದೇವನಿಂ (ಗಜಾಯು. ೨-೬ ವ) ; ನಮ್ಮ ಪೂರ್ವಜರ ಪುಣ್ಯದಿಂದ ಕೆಲವು ಸಂಪ್ರದಾಯ ಇನ್ನೂ ಬದುಕಿದ್ದು ನಮ್ಮ ವಿನೋದಪ್ರವೃತ್ತಿಗೆ ಆಗಾಗ ಅನುವು ಮಾಡಿಕೊಡುತ್ತವೆ (ಗಾಳಿಕ. ೯೩). ೫. (ಚಂದ್ರಲೋಕದಲ್ಲಿ ವಾಸಿಸುವ) ಪಿತೃ. [ಸಂ.]

**ಪೂರ್ವಜನ್ಮ** (ನಾ). ಹಿಂದಿನ ಜನ್ಮಗಳಲ್ಲಿ ಯಾವುದಾದರೊಂದು : ಪೂರ್ವಜನ್ಮನಿವೃತ್ತಿಯಾಗಿ ಗುರುಕರುಣವಿಡಿದಂಗೆ ಬಂಧನವೆಲ್ಲಿಯದೊ (ಏಕಆ. ೬೭೦) ; ಆರೋನು ಮಾಡುವರು ಆಬಿಂದರೇನಹುದು ಪೂರ್ವಜನ್ಮದ ಕರ್ಮವಿಧಿ ಬೆನ್ನ ಬಿಡದು (ಭುಸಂಕ. ೨-೬೦ ಶಟ್ಪದಿ). [ಸಂ. ಪೂರ್ವಜನ್ಮನ್]

**ಪೂರ್ವತತ್ತ್ವ** (ನಾ). ಮೊದಲಿನ ಸಂಬಂಧ ; ಪೂರ್ವಾಶ್ರಯ : ಪೂರ್ವತತ್ವ ಬಿಟ್ಟುದು ಭಕ್ತಸ್ಥಲ ಮಧ್ಯದ ಭಾವವ ಬಿಟ್ಟುದು ಮಾಹೇಶ್ವರಸ್ಥಲ ತ್ರಿವಿಧವ ಕೂಟವ ಬಿಟ್ಟುದು ಪ್ರಸಾದಿಸ್ಥಲ (ಚೋಳಆ. ೦೩೯-೩೩೬). [ಪೂರ್ವ + ತತ್ತ್ವ]

**ಪೂರ್ವದಿಕ್ಕು** (ನಾ). ಮೂಡಣ ದೆಸೆ : ಈ ಕೋಲಲರು ಕೇವಲ ಭಾರತದ ಪೂರ್ವದಿಕ್ಕಿನಲ್ಲಿ ಮಾತ್ರ ನೆಲಸಿದಂತೆ ತೋರುತ್ತದೆ (ಪ್ರಾಚೀ. ೬೦) ; ನಾವು ಪೂರ್ವದಿಕ್ಕಿನ ಕಡೆ ನಮ್ಮ ಮುಖ ತಿರುಗಿಸೋಣ . . . ಚಂದ್ರನು ನಮ್ಮ ಗಮನವನ್ನು ಕೂಡಲೆ ಸೆಳೆಯುತ್ತಾನೆ (ನಕ್ಷತ್ರ. ೯). [ಪೂರ್ವ + ದಿಕ್ಕು]

**ಪೂರ್ವದಿಕ್ಪತಿ** (ನಾ). ಮೂಡಣ ದಿಕ್ಕಿನ ಒಡೆಯ ; ಇಂದ್ರ : "ಇಂದ್ರಃ . . . ಪೂರ್ವದಿಕ್ಪತಿಃ . . . ಮೇಘವಾಹನಃ—ಈ ೩೯ ದೇವೇಂದ್ರನ ಪೆಸರ್" (ಶಠಾಯು. ೦೦-೩೩). [ಸಂ.]

**ಪೂರ್ವದೀರ್ಘ** (ನಾ). [ವ್ಯಾಕ] ಹಿಂದಿನ ಸ್ವರ ದೀರ್ಘವಾಗಿರುವ ಶಬ್ದ : ಪೂರ್ವದೀರ್ಘಮಾದೊಡಂ ಅವ್ಯಯಮಾದೊಡಂ ಅನೇಕಾಕ್ಷರಮಾದೊಡಂ ದ್ವಿತ್ವಮಿಲ್ಲ (ಶಬ್ದಮ. ೬೯ ವೃತ್ತಿ). [ಸಂ.]

**ಪೂರ್ವದೇವ** (ನಾ). ೧. ಹಿಂದೆ ದೇವತೆಗಳಾಗಿದ್ದು, ಅನ್ಯಾಯ, ಅಕೃತ್ಯಗಳಿಂದ ಹಾಗು ದ್ವೇಷದಿಂದ ದೇವತ್ವವನ್ನು ಕಳೆದುಕೊಂಡ ವರ್ಗ. ೨. ದೇವತೆಗಳ ಶತ್ರು ; ರಾಕ್ಷಸ : "ಅಸುರಃ, ದಾನವಃ . . . ಪೂರ್ವದೇವಃ, ಶುಕ್ರಶಿಷ್ಯಃ, ಪಾತಾಲನಿಲಯಃ (ಸ್ತ್ರೀಮಾ)—ಈ ೮ ಅಸುರರ ಪೆಸರ್" (ಶಠಾಯು. ೨-೩) ; ಅಮೋಘಂ ಸಕಲನೃಪಕುಲಜ್ಯಾಯಸಾಂ ಪೂಜನೀಯಂ ಸಮನಾವಂ ಪೂರ್ವದೇವಂಗೆನೆಗೆ (ಜಗು. ೦೩-೬೦). ೩. ಅನಾದಿದೇವ ; ಪುರಾತನಪುರುಷ ; ವಿಷ್ಣು. ೧, ೩ : ಈ ಮಹಾಪುರುಷಂ . . . ಸರ್ವಾರ್ಥಿಯಾಗಿಯುಂ ಹುತವಹನಲ್ತು ಸಮವರ್ತಿಯಾಗಿಯುಂ ದಕ್ಷಿಣದಿಕ್ಪಾಲಕನಲ್ತು ಪೂರ್ವದೇವನಾಗಿಯುಂ ನೈಋತನಲ್ತು (ಆಕ. ೯-೦೦ ವ). [ಸಂ.]

**ಪೂರ್ವದ್ರಾವಿಡ** (ನಾ). ದ್ರಾವಿಡಭಾಷೆಗಳಿಗೆ ಮೂಲವಾಗಿ ಇದ್ದಿರಬಹುದಾದ ಪ್ರಾಚೀನ ಭಾಷಾರೂಪ ; ಮೂಲದ್ರಾವಿಡ : ಕ್ರಿ.ಪೂ. ೫೦೦-೬೦೦ ವರುಷಗಳಿಂದಲೂ ಈ ದ್ರಾವಿಡಭಾಷೆ ಬೆಳೆದುಬಂದಿರಬೇಕೆಂದು ಹೇಳಲು ಸಾಧ್ಯವಿದೆ. ಆಗಿನ ದ್ರಾವಿಡಭಾಷೆಯನ್ನು ಮೂಲದ್ರಾವಿಡ ಅಥವಾ ಪೂರ್ವದ್ರಾವಿಡ ಅಥವಾ ಪ್ರಾಕ್‌ದ್ರಾವಿಡವೆಂದು ಕರೆಯಲಾಗಿದೆ (ದ್ರಾಭಾ. ೩೨). [ಸಂ.]

**ಪೂರ್ವಧರ** (ನಾ). [ಜೈನ] ಪೂರ್ವಗಳೆಂಬ ಆಗಮಗಳನ್ನು ಚೆನ್ನಾಗಿ ತಿಳಿದವನು ; ಚತುರ್ದಶಪೂರ್ವಗಳಲ್ಲಿ ಪಾರಂಗತನಾದವನು : ಎಣ್ಬತ್ತುನಾಲ್ವರ್ ಗಣಧರದೇವರುಂ ನಾಲ್ಸಾಸಿರದೇೞ್ನೂಱಯ್ವತ್ತಿಂಬರ್ ಸಕಲಪೂರ್ವಧರರುಂ ನಾಲ್ಸಾಸಿರದೆಣ್ನೂಱಯ್ವತ್ತಿಂಬರ್ ಶಿಕ್ಷಕರುಂ (ಆದಿಪು. ೦೬-೧೦ ವ) ; ಇರ್ಪತೆಣ್ಬರ್ ಗಣಧರರುಂ ಅಯ್ನೂಱಯ್ವತ್ತಿಂಬರ್ ಪೂರ್ವಧರರುಂ (ಶಾಂತಿಪು. ೦೯-೦೬೯). [ಸಂ.]

**ಪೂರ್ವನಾಡಿ** (ನಾ). ದೇಹದೊಳಗಿನ ನಾಡಿಗಳಲ್ಲಿ ಒಂದು : ಮಯೂರನಾಡಿ . . . ಉತ್ತರನಾಡಿ ಪೂರ್ವನಾಡಿ ಪಶ್ಚಿಮನಾಡಿ ಗಜಗಮನನಾಡಿ, ಅಚ್ಯೊತ್ತುನಾಡಿ . . . ಸಂತೋಷನಾಡಿ ಇಂತೀ ನಾಡಿಗಳೊಳಗಾದ ಶರೀರದಲ್ಲಿ ತೋಱುವ ನಾಡಿ ಜೀರ್ಣವರ್ಣದೀತೆ (ಶಿಶಕ. ೯೬೦). [ಸಂ.]

**ಪೂರ್ವನಿರ್ದಿಷ್ಟ** (ಗು). ಮುಂಚೆ ನಿಶ್ಚಯಿಸಿದ : ಮೊದಲು ನಿರ್ಧಾರ ಮಾಡಿದ ; ಪೂರ್ವನಿಶ್ಚಿತ : ಈ ಷಡ್ದರ್ಶನಗಳೂ ಅಲ್ಲಲ್ಲಿ ತಮ್ಮ ಪೂರ್ವನಿರ್ದಿಷ್ಟಉದ್ದೇಶದಿಂದ ಭಿನ್ನವಾದ ಅಡ್ಡದಾರಿ ಹಿಡಿದಂತೆ ಕಾಣುತ್ತದೆ (ಪಾಕಿರ. ೦೨೦). [ಸಂ.]

**ಪೂರ್ವನಿರ್ದೇಶಿತ** (ಗು). ಮುಂಚೆ ತೋರಿಸಿದ,—ತಿಳಿಸಿದ : ಇವೆಲ್ಲವನ್ನೂ ಪೂರ್ವನಿರ್ದೇಶಿತ ರೂಪದಲ್ಲಿ ನಡೆಸಬೇಕು (ತಿಪ್ಪೆ. ೩೩೬). [ಸಂ.]

**ಪೂರ್ವನಿಶ್ಚಯ** (ನಾ). ಮೊದಲೇ ಮಾಡಿದ ನಿರ್ಣಯಂ ; ಮುಂಚಿತವಾಗಿ ಮಾಡಿಕೊಂಡ ತೀರ್ಮಾನ : ಅವರು ಪೂರ್ವನಿಶ್ಚಯವಿಲ್ಲದೆ ಯಾವ ಕಾರ್ಯದಲ್ಲೂ ತೊಡಗುವುದಿಲ್ಲ (ಕಅಠ). [ಸಂ.]

**ಪೂರ್ವನಿಶ್ಚಿತ** (ಗು). ೧. ಮೊದಲೇ ನಿರ್ಧಾರವಾದ,—ನಿಗದಿಯಾದ. (ನಾ). ೨. ಮೊದಲೇ ನಿರ್ಣಯಿಸಿದುದು : ಅನುಭವಾನ್ನ ಹುಡುಕಿಕೊಂಡು ಹೋದರೆ, ಸಿಗೋದು ಪೂರ್ವನಿಶ್ಚಿತವಾದದ್ದು (ಹೂಸಕ್ಕ. ೨೯೬). [ಸಂ.]

**ಪೂರ್ವನೇತ್ರ** (ನಾ). ಕಣ್ಣಿನ ಕುಣಿಕೆ : "ಅಕ್ಷಿಮೂಲಂ ಪೂರ್ವನೇತ್ರಮೆಂಬಿವೆ ಮೊದಲಗಣ್" (ಕುಂಗಿಆ. ೯೯-೩). [ಸಂ.]

**ಪೂರ್ವಪಕ್ಷ** (ನಾ). ೧. ತಿಂಗಳಿನ ಮೊದಲನೆಯ ಹದಿನೈದು ದಿನಗಳ ಅವಧಿ ; ಶುಕ್ಲಪಕ್ಷ. ೨. ವಾದವನ್ನು ಮಂಡಿಸುವ ಮೊದಲ ಭಾಗ. ೩. ಶಾಸ್ತ್ರಸಿದ್ಧಾಂತವನ್ನೊ, ಪ್ರಮೇಯವನ್ನೊ ವಿರೋಧಿಸುವುದಕ್ಕಾಗಲಿ ಅಥವಾ ಸಂಶಯಗಳ ಪರಿಹಾರಕ್ಕಾಗಲಿ ಹೂಡುವ ಪ್ರಶ್ನಸಹಿತವಾದ ಯುಕ್ತಿ : ಇಲ್ಲಿಗೇವಿಧೇಯಂ ಮಾಱ್ಪುದೆಂದು ಪೂರ್ವಪಕ್ಷದ ಪಕ್ಷಸಿದ್ಧಿಯ ವಿಸ್ತಾರಕ್ಕಮಕಾಶಮಪ್ಪಂತು ನುಡಿದು (ಶಾಂತಿಪು. ೨-೩೩ ವ) ; ಪೂರ್ಣವಾಗಿ ವಿಚಾರ ಮಾಡದೆ ಇರುವಾಗ ತೋರುವ ಪಕ್ಷವೇ ಪೂರ್ವಪಕ್ಷವು (ಬ್ರಹ್ಮಸೂ. ೩೭-೨) : ಅವಳು ಹೀಗೆ ತನ್ನ ಇಡೀ ಪೂರ್ವಪಕ್ಷವನ್ನೇ . . . ವಿರೋಧಿಸುತ್ತಾಳೆಂದು ಅವನು ಎಣಿಸಿರಲಿಲ್ಲ (ದೂಕಕ. ೨೬೯). ೪. ಹೇಳಿಕೆ; ಪ್ರತಿಪಾದನೆ. ೫. ವಿರುದ್ಧವಾದ ಹೇಳಿಕೆ : ನಿಷ್ಕೃಯ ಪೂರ್ವಪಕ್ಷಮುಮಂಗಾದುದೇ ಮಲಂ ಸಿದ್ಧಾಂತಂ (ಗಜಾಯು. ೯-೮). [ಸಂ.]

**ಪೂರ್ವಪಕ್ಷಿ** (ನಾ). ಪೂರ್ವಪಕ್ಷವನ್ನು ಮಂಡಿಸುವವನು: ಸಿದ್ಧಾಂತವನ್ನು ವಿರೋಧಿಸಿ ಪ್ರಶ್ನಿಸುವವನು : ಸಿದ್ಧವಸ್ತುವು ಪ್ರತ್ಯಕ್ಷಾದಿಗಳಿಗೆ ವಿಷಯವಾಗುವುದರಿಂದ ಶಾಸ್ತ್ರಕ್ಕೆ ಅನುವಾದ ತತ್ತ್ವವು ಬರುವುದೆಂಬ ದೋಷವನ್ನು ಇಲ್ಲಿ ಪೂರ್ವಪಕ್ಷಿಯು ತೆಗೆದಿರುತ್ತಾನೆ (ಶ್ರಿಶ್ಯಾ. ೨೨ ೩೮೪). [ಸಂ. ಪೂರ್ವಪಕ್ಷಿನ್]

**ಪೂರ್ವಪದ** (ನಾ). [ವ್ಯಾಕ] (ಸಮಾಸದಲ್ಲಿ) ಮೊದಲು ಇರುವ ಪದ : ಪರಪದಪೂರ್ವಂ ದ್ವಿತ್ವಾಕ್ಷರಮಾಗಿರೆ ಪೂರ್ವಪದದ ಚರಮಂ ಹ್ರಸ್ವಾಕ್ಷರಮಾಗೆ ಸಂಧಿದೋಷಂ (ಶಮಶ. ೩೯); ಉತ್ತರಪದವೆಂದರೆ ಮುಂದೆ ನಿಲ್ಲುವ ಪದ; ಹಿಂದೆ ನಿಲ್ಲುವ ಪದಕ್ಕೆ 'ಪೂರ್ವಪದ' ಎಂದು ಹೆಸರು. 'ಮಳೆಗಾಲ' ಎಂಬುವಲ್ಲಿ 'ಮಳೆ' ಪೂರ್ವಪದ; 'ಕಾಲ' ಉತ್ತರಪದ (ಶುಕ್ರ್ರಿಕ ೩೦ ೧೦೩). [ಸಂ.]

**ಪೂರ್ವಪರಾಮರ್ಶೆ** (ನಾ). ಹಿಂದಿನ ಸಂಗತಿಯ ಸ್ಮರಣೆ; ಪೂರ್ವಸ್ಮರಣೆ : ಅಯೆಂಬುದು ಪೂರ್ವಪರಾಮರ್ಶೆಗವೊದವುಗುಂ (ಶಮಶ. ೦೯೪). [ಸಂ. ಪೂರ್ವಪರಾಮರ್ಶ]

**ಪೂರ್ವಪರಿಷ್ಕಾರ** (ನಾ). ಮುಂಚೆ ಮಾಡಿಕೊಳ್ಳಬೇಕಾದ ಅವಶ್ಯಕ ಬದಲಾವಣೆ, ಹೊಂದಾಣಿಕೆ, ಸಿದ್ಧತೆ ಮೊದಲಾದ ಕಾರ್ಯ : ಭಿನ್ನಶ್ರುತಿಪ್ರಮಾಣವಿರುವ ವಾದ್ಯಸಮೂಹವು ಪ್ರಬಲವಾಗಿ ರಚನೆಗಳಲ್ಲಿಯೂ, ಪ್ರಯೋಗದಲ್ಲಿಯೂ ಪೂರ್ವಪರಿಷ್ಕಾರದ ಅವಶ್ಯಕತೆಯು ಹೆಚ್ಚಿ . . . ಸಂಗೀತವು ಒಂದು ಮೂರುಕಾಲಿನ ಓಟದಂತೆ (Three legged race) ಆಗಿದೆ (ಶಾಸಂಕ. ೩೪೩). [ಸಂ.]

**ಪೂರ್ವಪರ್ವತ** (ನಾ). ಮೂಡಣದಿಕ್ಕಿನ ಬೆಟ್ಟ; ಸೂರ್ಯನು ಹುಟ್ಟುವ ಪರ್ವತ ; ಉದಯಾಚಲ : "ಉದಯಃ, ಪೂರ್ವಪರ್ವತಃ— ೨ ಉದಯಪರ್ವತದ ಹೆಸರುಗಳು. ಮೂಡಲಲ್ಲಿ ಸೂರ್ಯನು ಮೂಡುವುದಕ್ಕೆ ಸಂಧ್ಯಾಸ್ಥಾನವಾದ ಪೂರ್ವಾದ್ರಿ" (ಸಿಶ್ಯಾಂಶಿ. ೦೦೩). [ಸಂ.]

**ಪೂರ್ವಪುಣ್ಯ** (ನಾ). ಮುಂಚಿನ ಜನ್ಮಗಳಲ್ಲಿ ಗಳಿಸಿದ ಪುಣ್ಯ : ಕನ್ನಡದೋಳಗನಗಭಿರುಚಿ ಬೆಳೆಯಿತು ಪೂರ್ವಪುಣ್ಯದ ಫಲದ ತೆರದೆ (ಕಂಚಾಶ. ೫೩೪). [ಸಂ.]

**ಪೂರ್ವಪ್ರಕೃತಿ** (ನಾ). ಮೊದಲಿನ ಸ್ಥಿತಿ; ಮುಂಚಿನಿಂದಲೂ ಬಂದ ಸಹಜಸ್ಥಿತಿ ; ಅರಳಿದ ಮಧುಮಾಸ ಮಾಣಲಿ ಮರುಷಟ್ಪತುವೇ ಸಾಕು ಜಾತಿಗೆ ಜಡರೆಮಗಿನ್ನೇನು ಪೂರ್ವಪ್ರಕೃತಿ ವನವಾಸ (ಕಂಚ್ಯಾಕ. ೦೬ ೩೨). [ಸಂ.]

**ಪೂರ್ವಪ್ರಜ್ಞೆ** (ನಾ). ಮುನ್ನರಿವು ; ಮುಂಗಾಣ್ಕೆ; ಪೂರ್ವಸೂಚನೆ : ಸ್ನಾನ ಪಾಡುವಾಗ, ದೇವರ ಪೂಜೆಗೆ ಲೇಟಾಗ ತೀಳಲಿರುವ ಯಾವುದೋ ಕಿಡಕಿನ ಪೂರ್ವಪ್ರಜ್ಞೆಯಿಂದ ಎಂಬಂತೆ ಜೀವ ನಡುಗಿತ್ತು (ಶುಕಶುಚಾ. ೦೪). [ಸಂ. ಪೂರ್ವಪ್ರಜ್ಞಾ]

**ಪೂರ್ವಪ್ರತ್ಯಯ** (ನಾ). [ವ್ಯಾಕ]ಶಬ್ದಗಳ ಆದಿಯಲ್ಲಿ ಸೇರಿ ಪದವನ್ನು ಸಿದ್ಧಗೊಳಿಸುವ ಪ್ರತ್ಯಯ; ಉಪಸರ್ಗ: ಪೂರ್ವಪ್ರತ್ಯಯ (ಪ್ರಿಫಿಕ್ಸ್), ಪರಪ್ರತ್ಯಯ(ಸಫಿಕ್ಸ್), ಅಂತಃಪ್ರತ್ಯಯ(ಇನ್‌ಫಿಕ್ಸ್) (ಕಶಸೋ I. ೬೬೩). [ಸಂ.]

**ಪೂರ್ವಫಲ್ಗುನಿ** (ನಾ). ಅಶ್ವಿನಿ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಹನ್ನೊಂದನೆಯದು. [ಸಂ. ಪೂರ್ವಫಲ್ಗುನೀ]

**ಪೂರ್ವಭವ** (ನಾ).—ಪೂರ್ವಜನ್ಮ : ಶಾರ್ದೂಲನ ಪೂರ್ವಭವವೃತ್ತಾಂತಮುಮಂ . . . ಅಱಿಪಿ (ಅಶಿ. ೩ ೧೦ ೪); ನಿನ್ನ ತಪಕ್ಕೆ ಮೆಚ್ಚಿ ಪರವಿತ್ತಂ ಶ್ರೀವರಂ ತಾನೆ ನಂದನನಪ್ಪಂ ನಿನಗೆಂದು ಪೂರ್ವಭವದೊಳ್ (ಶಾಂಪು. ೨-೬೯). [ಸಂ.]

**ಪೂರ್ವಭಾಗ** (ನಾ). ೧. ಮೊದಲನೆಯ ವಿಭಾಗ—ಖಂಡ : ವೇದದಲ್ಲಿ ಪೂರ್ವಭಾಗ, ಉತ್ತರಭಾಗವೆಂದು ಎರಡು ವಿಭಾಗ (ಶಂಕಶಾ. ೨೧೩). ೨. ಮೂಡಣದಿಕ್ಕಿಗಿರುವ ಪ್ರದೇಶ; ಪೂರ್ವಪಾರ್ಶ್ವ : ಬೆಟ್ಟದ ಪೂರ್ವಭಾಗದಲ್ಲಿ ಒಂದು ಆಳವಾದ ಕಮ್ಮರಿಯಿದೆ (ಬಂಶಿ). ೩. ಮುಂಭಾಗ: ಮುಂದಿನ ಪ್ರದೇಶ. [ಸಂ.]

**ಪೂರ್ವಭಾವಿ** (ಗು). ೧. ಮುಂಚೆ ಇರುವ ; ಮೊದಲೇ ಇರುವ. ೨. ಮುಂಚೆ ಆಗಬೇಕಾದ ; ಮೊದಲೇ ಮಾಡಬೇಕಾದ: ಈ ಕೆಲಸಕ್ಕೆ ಕೆಲವು ಪೂರ್ವಭಾವಿ ಸಿದ್ಧತೆಗಳನ್ನು ಮಾಡುವುದು ಅಗತ್ಯ (ಶುಪ್ರಕ. ೩೪). (ನಾ). ೩. ಮೊದಲನೆಯದು ; ಮುಂಚಿತವಾದುದು : ಪ್ರತಿಷ್ಠಾಪನೆಗೆ ಪೂರ್ವಭಾವಿಯಾದ ವಿಧಿಗಳೆಲ್ಲ ಸಾಂಗವಾಗಿ ನಡೆದುವು (ಶಾಂಕಶಾ. ೦೨೪) ; ಓದು ಬರಹ, ಲೆಕ್ಕಗಳನ್ನು ಹೇಳಿಕೊಡದಿದ್ದರೂ ಅವುಗಳನ್ನು ಕಲಿಯಲು ಆವಶ್ಯಕವಾದ ಪೂರ್ವಭಾವಿಯಾದ ಶಿಕ್ಷಣವೀಯಬಹುದು (ಶಿಕ್ಷಶ. ೦೨೮). [ ಸಂ. ಪೂರ್ವಭಾವಿನ್ ]

**ಪೂರ್ವಭಾಷಿ** (ನಾ). (ಗೌರವಸೂಚಕವಾಗಿ) ಬೇರೆಯವರನ್ನು ತಾನೇ ಮೊದಲು ಮಾತನಾಡಿಸುವ ವ್ಯಕ್ತಿ. [ಸಂ. ಪೂರ್ವಭಾಷಿನ್]

**ಪೂರ್ವಮರ್ಯಾದೆ** (ನಾ). ಹಿಂದಿನಿಂದ ನಡೆದು ಬಂದ ಕ್ರಮ ; ಸಂಪ್ರದಾಯ : ನಾಲ್ಕು ನಾಡ ಸುಂಕಮುಂ ಪೂರ್ವ್ವಮರ್ಯ್ಯಾದೆಯುಂ ಪ್ರತಿಪಾಳಿಸಿ ಕೊಟ್ಟ ಸಾಸನಂ (ಕಶಾ. ೦೦೩—೦೯—೨೫; 1057). [ಸಂ. ಪೂರ್ವಮರ್ಯಾದಾ]

**ಪೂರ್ವಮೀಮಾಂಸೆ** (ನಾ). [ತತ್ತ್ವಶಾ] ಸಾಂಖ್ಯ, ವೈಶೇಷಿಕ ಮೊದಲಾದ ಆರು ದರ್ಶನಗಳಲ್ಲಿ ಒಂದು ; ಕರ್ಮಮೀಮಾಂಸೆ : ವೇದಗಳಲ್ಲಿ ಉಕ್ತವಾದ ಕರ್ಮಾಚರಣೆ ಹಾಗೂ ವೇದಪಾಠಗಳನ್ನು ಕುರಿತ ನಿರ್ಣಯಗಳನ್ನೊಳಗೊಂಡು ಜೈಮಿನಿಋಷಿಗಳಿಂದ ರಚಿತವಾದ ದರ್ಶನ : ಪೂರ್ವಮೀಮಾಂಸೆಯು ತಾತ್ಪರ್ಯನಿರ್ಣಾಯಕವಾದ ಉಪಕ್ರಮಾದಿ ಷಡ್ವಿಧಲಿಂಗಂಗಳಂ ವೇದವಾಕ್ಯವಿಚಾರಪೂರ್ವಕಮಾಗಿ ಜ್ಯೋತಿಷ್ಟೋಮಾದಿ ಯಾಗಪ್ರಮುಖವಿಧಾನಕ್ರಮಮಂ ನಿರ್ವಹಿಸುವುದ ಱಿಂದ ಕರ್ಮಕಾಂಡವೆನಿಪುದು (ಷಣ್ಮ. ೯) ; ಜೈಮಿನಿಸೂತ್ರಕ್ಕೆ ಪೂರ್ವಮೀಮಾಂಸೆ, ಧರ್ಮಮೀಮಾಂಸೆಯೆಂದೂ, ಬಾದರಾಯಣಸೂತ್ರಕ್ಕೆ ಉತ್ತರಮೀಮಾಂಸೆ, ಬ್ರಹ್ಮಮೀಮಾಂಸೆಯೆಂದೂ ವ್ಯವಹಾರ (ಶಂಕಶಾ. ೦೬೪). [ ಸಂ. ಪೂರ್ವಮೀಮಾಂಸಾ ]

**ಪೂರ್ವರಂಗ** (ನಾ). ೧. ಪೂರ್ವಸಿದ್ಧತೆ ; ಪೂರ್ವಭಾವಿವ್ಯವಸ್ಥೆ : ಜಿನಜನ್ಮಾಭಿಷವಂ ನರ್ತನದಿಂ ಸೊಗಯಿಸುವುದಂತದಂ ಸುರರಾಜಂ ಪುನರುಕ್ತಂ ಮಾಡೆ ಜಿನೇಂದ್ರನ ವಿಹರಣಪೂರ್ವರಂಗಮೋನೊಪ್ಪಿದುದೋ (ಶಾಂಪು. ೦೨-೦೬). ೨. [ನಾಟ್ಯ] ನೃತ್ಯ ಅಥವಾ ನಾಟಕವು ಆರಂಭವಾಗುವುದಕ್ಕೆ ಪೂರ್ವಭಾವಿಯಾಗಿ ರಂಗಸ್ಥಳದಲ್ಲಿ ನಡೆಸತಕ್ಕ ರಂಗಪೂಜೆ, ನಾಂದಿ ಮೊದಲಾದ ಕಾರ್ಯಕ್ರಮ : ಶುದ್ಧಚಿತ್ರ[ಶುಚಿಂ. ಪವಿತ್ರ, ವಿಚಿತ್ರ]ಮೆಂಬ ಪೂರ್ವರಂಗಪ್ರಸಂಗದೊಳ್ ಜರ್ಜರಪೂಜಾಮಂಗಳಪಠೋಚ್ಚಾರಣಪುಷ್ಪಾಂಜಲಿವಿಕ್ಷೇಪಣಾದಿ ನಾಂದೀವಿಧಿಯಂ ನಿರ್ವರ್ತಿಸಿ (ಅಶಿ. ೬-೦೦೩ ೪) ; ಪೂರ್ವರಂಗಪ್ರಸಂಗದೊಳುರ್ವಿಂದಂ ಕೂಡೆ ಚೆಲ್ಲಿ ಪುಷ್ಪಾಂಜಳಿಯುಂ ಸರ್ವಜ್ಞಂಗೆಱಗಿ ಮುಂದಂ ಪರ್ವಿನ್ನಂ ನಡೆದು ಬಂದು ರಂಗಂದೊಳ್ಕಂ (ಶಾಂಪು. ೯.೦೦) ; ಪೂರ್ವರಂಗವೆಂದರೆ ನಾಟಕದ ಕಥೆ ಕ್ರಮವಾಗಿ ಆರಂಭವಾಗುವುದಕ್ಕೆ ಮುಂಚೆ ರಂಗಸ್ಥಾನದಲ್ಲಿ ನಟರು ನಡೆಸ ತಕ್ಕ ಕಾರ್ಯಗಳು (ಕೃಶಿಶಿ. ೨೦೨). ೩. ಮೊದಲನೆಯ ನೃತ್ಯ : " ಮೊದಲ ನಾಟ್ಯಮಂ ಪೂರ್ವರಂಗಮೆಂಬುದು " (ಶಂಚಾರು. ೦೩-೯೩). [ ಸಂ. ]

**ಪೂರ್ವರಾಗ** (ನಾ). [ಕಾವ್ಯಮೀ] ನಾಯಕನಾಯಿಕೆಯರ ಸಮಾಗಮಕ್ಕೆ ಪೂರ್ವದಲ್ಲಿಯೇ ಅವರಿಬ್ಬರಲ್ಲಿ ಉಂಟಾಗುವ ಪರಸ್ಪರ

ಪ್ರೇಮಭಾವ,-ಅನುರಾಗ ; ಕಣ್ಪೇಟ, ಕಿವಿವೇಟಗಳಿಂದ ಉದ್ಭವಿಸುವ ಅನುರಾಗ: ಸೀತೆಯ ಮನಸ್ಸಿನಲ್ಲಿ 'ಪೂರ್ವ-ರಾಗ'ವನ್ನು ಉದ್ದೀಪನಗೊಳಿಸುವುದು ಕವಿಯ ಅಭೀಪ್ಸಿತವಾಗಿದೆ (ಕ್ರಿತ್ರ.ಶ್ರ. ೨). [ಸಂ.]

**ಪೂರ್ವರಾತ್ರಿ** (ನಾ). ಸಾಯಂಕಾಲದಿಂದ ಮಧ್ಯರಾತ್ರಿಯ ವರೆಗಿನ ಸಮಯ : ಇರುಳಿನ ಪೂರ್ವಾರ್ಧ : ಪೂರ್ವರಾತ್ರಿಯಲ್ಲಿ ಬೇಗನೆ ಮಲಗಿಕೊಂಡು, ಬೆಳಗ್ಗೆ ಬೇಗ ಏಳುವುದು ಬಹಳ ಹಿತವು (ಮ.ಆರೋ. ೯-೨೮). [ಸಂ.]

**ಪೂರ್ವರಾತ್ರೆ** (ನಾ). = ಪೂರ್ವರಾತ್ರಿ : ತುರಗಂ ವಾಯುಸ್ಯದಿಶಾಂತರದೊಳ್ ಪುನರವದಲ ಪಲವು ಸೂಱುಂ ಕಿಳಿಱುತ್ತಿರೆ ಪೂರ್ವರಾತ್ರೆಯೊಳ್ ತನ್ನರಸನ ಪೆರ್ಗಡೆಗೆ ಮರಣಮಂ ಪ್ರಕಟಿಸುಗುಂ (ಅಶ್ವಶಾ. ೪ ೩೩). [ಸಂ. ಪೂರ್ವರಾತ್ರ]

**ಪೂರ್ವರೂಪ** (ನಾ). ೧. ಮೊದಲು ಇದ್ದ ರೂಪ,-ಆಕಾರ; ಹಿಂದಿನ ರೂಪ. ೨. ಹಿಂದಿರುವ ಅಕ್ಷರದ ರೂಪ : ನಿರುತಂ ಚಟತವಂಗಳವರದ ದಕಾರಕ್ಕೆ ಪೂರ್ವರೂಪವಮಕ್ಕುಂ (ಶಮದ. ೨೫೦). ೩. [ಕಾವ್ಯವಿಮ] ಅರ್ಥಾಲಂಕಾರಗಳಲ್ಲಿ ಒಂದು: ಒಂದು ವಸ್ತುವು ತನ್ನ ಗುಣವನ್ನು ಬಿಟ್ಟು ಬೇರೆ ಗುಣವನ್ನು ಹೊಂದಿದ್ದರೂ ಕಾರಣಾಂತರದಿಂದ ಪುನಃ ತನ್ನ ಮೂಲಗುಣವನ್ನೇ ಪಡೆಯುವುದು : ಒಂದು ವಸ್ತುವಿನ ಗುಣಂ ಪೆಱತೊಂದು ತೆಱನಾಗಿ ತೋಱಿ ಮಗುಳ್ದಿಂದಿನಂತಾಮದೆಂಬುದು ಪೂರ್ವರೂಪಂ ಎಂತೆನೆ ಏಗೂರರಸನ ಪೆಂಡಿರ ಮೊಗುಗುತಿ ಬಣ್ಣನಿಯೊಳಿರ್ಪ ಕಾಡಿಗೆಯುಂ ಕರ್ಪಾಗಿ ಬಟ್ಟಿಕ್ಕುಗುಮ ತನಿನೀರ್ ತಾಗುವಿನಂ ತೊಳಗಿತ್ತಂದಿನಂತಪ್ರತಿಸಿಮ (ಅಶ್ಸಿ. ೦೦-೯೯). [ಸಂ.]

**ಪೂರ್ವರೂಪಾಲಂಕಾರ** (ನಾ). = ಪೂರ್ವರೂಪ ೩ : ತನ್ನ ಗುಣವನು ಬಿಟ್ಟು ಅಂತಹ ಅನ್ಯಗುಣವನು ಹೊಂದಿ ಮತ್ತೆ ತನ್ನ ಪೂರ್ವಗುಣವನು ಹೊಂದಿದಡೆ ಪೂರ್ವರೂಪಾಲಂಕಾರ (ಕಾಸಂ. ೮೯೦). [ಸಂ.]

**ಪೂರ್ವಲಿಖಿತ** (ನಾ). (ಅಲಂ) ಹುಟ್ಟುವುದಕ್ಕೆ ಮುಂಚೆಯೇ ನಿರ್ಧಾರವಾದುದು ; ಹಣೆಬರಹ ; ವಿಧಿಲಿಖಿತ : ಮಾಣದೆ ಅರಳೆಯ ತಿಟ್ಟನೆ ತಿರುಗುವ ಗಾಣದೆತ್ತಿನಂತೆ ಪೂರ್ವಲಿಖಿತ ಮುಂದುಗಾಣಲೀಯದು (ಜಕಪ. ೩೬೦) ; ಪೂರ್ವಲಿಖಿತವಿದಾಯಿತು (ಜಕ್ಕ. ೧೮-೦೨). [ಸಂ.]

**ಪೂರ್ವವಯಸ್ಸು** (ನಾ). ಎಳೆಯ ವಯಸ್ಸು ; ತಾರುಣ್ಯ ; ಯೌವನ : ಪೂರ್ವವಯಸ್ಸಿನ ಪರಿಶುದ್ಧಪರಿಸ್ಥಿತಿಯನ್ನವಳು ಪಡೆದಳೆಂಬುದೂ ಅವನ ಇಚ್ಛೆಯಾಗಿತ್ತು (ಭೃಶಶು. ೧೯೭). [ಸಂ. ಪೂರ್ವವಯಸ್]

**ಪೂರ್ವವರ್ಣ** (ನಾ). ಹಿಂದಿರುವ ಅಕ್ಷರ : ಲಘ್ವಾದಿಯೂ ದ್ವಿಲಘುಸ್ವರಯುಕ್ತವೂ ಆದ ಧಾತುವಿನ ಅಂತ್ಯಾಕ್ಷರವು ಗು, ಸು, ಡು, ಬು ಆಗಿದ್ದರೆ ಆ ಅಕ್ಷರಗಳಿಗೆ ಕ್ರಮವಾಗಿ ಕ್, ಚ್, ಟ್, ತ್‌ಗಳೂ ಪ್ರತ್ಯಯಕ್ಕೆ ಪೂರ್ವವರ್ಣವು (ಕ್, ಚ್, ಟ್, ತ್) ಆದೇಶವಾಗುತ್ತವೆ (ಶ್ರಶಾ. ೯೭). [ಸಂ.]

**ಪೂರ್ವವಾಸನೆ** (ನಾ). ೧. ಹಿಂದಿನ ಜನ್ಮದ ನೆನಪು ; ಪೂರ್ವಜನ್ಮದ ಸ್ಮರಣೆ : ಮೆಲ್ಲಮೆಲ್ಲನೆ ಪೂರ್ವವಾಸನೆ ಮನಕೆ ತೋಱೆ ಇಲ್ಲಿ ಪುಟ್ಟಿದುದೆಲ್ಲ ಏನೆನಿಸಂದದೆ ತೋಱಿ (ಕಂಠಶ. ೭-೦೦೯). ೨. ಪೂರ್ವಜನ್ಮದ ಸಂಸ್ಕಾರ : ಈ ಬುದ್ಧಿ ಅವನವನ ಪೂರ್ವವಾಸನೆಗಳಿಂದ . . . ಅಲ್ಲಿ ಪ್ರಧಾನವಾದ ತಾಮಸ ಅಥವಾ ರಾಜಸಗುಣಗಳ ಪ್ರಬಲತೆಗೆ ಅವಕಾಶ ಮಾಡುತ್ತದೆ (ಶಾಂತಿ. ೦೦೦). [ಸಂ. ಪೂರ್ವವಾಸನಾ]

**ಪೂರ್ವವಿದೇಹ** (ನಾ). [ಜೈನ] ಸುಮೇರುಪರ್ವತದ ಪೂರ್ವದಿಕ್ಕಿನಲ್ಲಿ ಇದ್ದ ಕಚ್ಛ ಮೊದಲಾದ ಹದಿನಾರು ಕ್ಷೇತ್ರಗಳ ಪ್ರದೇಶ ; ಜಂಬೂದ್ವೀಪದ ಸಪ್ತಕ್ಷೇತ್ರಗಳಲ್ಲಿ ಒಂದು ; ಮಂದರದ ಪರ್ವತದ ಪೂರ್ವಕ್ಕೆ ಇದೆ (ಕ್ರಿಶಕೋ. ೦೬೨) : ಅಪೂರ್ವಸಂವತ್ಸಾರಸರ್ವಸ್ವಗೇಹಮಾದ ಪೂರ್ವವಿದೇಹದನುಪಮಧ್ಯದೊಳ್ (ಶಾಂತ್ರ.ಕೃ. ೦-೮೦ ಶ): ಮೋಡಶತಮಹಾವಿಷಯಂಗಳಿನೊಪ್ಪಿ ಮಾಪಟ್ಟದುರ್ವಿಗೆ ಮುದವಂ ಸುಪ್ತೈಕನಿಧಿ ಪೂರ್ವವಿದೇಹಮಹುರ್ವಸಂಪದು (ಕೃಶ್ರ.ಕೃ. ೨-೬). [ಸಂ.]

**ಪೂರ್ವವಿರೋಧ** (ನಾ). ಮೊದಲಿನಿಂದಲೂ ಇರುವ ಹಗೆತನ : ಪೂರ್ವವಿರೋಧದಿಂ ನಿಜವರಾಶ್ರಯದಿ ಪರರಾಜ್ಯಕಾಂಕ್ಷೆಯಿಂ . . . ಮಹೀಪಭೂಮಿಪಾಲಕಂ ಸರ್ವಬಲಾನ್ವಿತಂ ನಡೆದು ಮಾಗಧನೊಳ್ ಮುಳಿದೊಡ್ಡಿನೊಡ್ಡಿದಂ (ದಶಸು. ೨-೦೯). [ಸಂ.]

**ಪೂರ್ವವೃತ್ತಿ** (ನಾ). ಮೊದಲಿನ ಉದ್ಯೋಗ ; ಪರಂಪರೆಯಿಂದ ಬಂದ ಉದ್ಯೋಗ : ತಾಂಬೂಲಾದಿ ದಾನಸನ್ಮಾನಪುರಸ್ಸರಮವರ ಪೂರ್ವವೃತ್ತಿಯುಮವಂ ಕಮ್ಮವಟ್ಟಿಯುಮನಿತ್ತು (ಸುಶಶಃ. ೨-೮೩ ಶ). [ಸಂ.]

**ಪೂರ್ವವೇದಿ** (ನಾ). ಯಜ್ಞಕುಂಡದ ಮುಂದಿರುವ ಜಗಲಿ : ಯಮನಂದನನು ವೈಶಾಖದ ಚತುರ್ದಶಿದಿನದಲುತ್ತರಪೂರ್ವವೇದಿವರಾಭ್ಯುದೈಕ್ಯದಲಿ . . . ಮಾಱಿದಿನ ಯಜ್ಞದೀಕ್ಷಿತನಾದನೊಲವಿನಲಿ (ಜೈಮ್ಯಾ.ಶ. ೭-೨೭). [ಸಂ. ಪೂರ್ವವೇದೀ]

**ಪೂರ್ವವೈಭವ** (ನಾ). ಹಿಂದಿನ ಕಾಲದ ಸಂಪತ್ತು, ಯಶಸ್ಸು ಮುಂತಾದುವುಗಳ ಸಮೃದ್ಧಿ : ಶೈಲಪನು . . . ತನ್ನ ಮನೆತನದ ಪೂರ್ವವೈಭವವನ್ನು ಸಂಪಾದಿಸಿದನು (ಕಶಾಂ. ೩೧). [ಸಂ.]

**ಪೂರ್ವವೈರ** (ನಾ). = ಪೂರ್ವವಿರೋಧ : ಪೂರ್ವವೈರವಂ ಮನಸ್ಸಿನೊಳ್ ವಿಚಾರಿಸುತ್ತೆ ಬಂದೊರ್ವನಿಲ್ಲಿ ಸಿಲ್ಕಿದು (ರರಶ. ೦ ೯೬). [ಸಂ.]

**ಪೂರ್ವಶಾಸ್ತ್ರ** (ನಾ). ಪ್ರಾಚೀನಕಾಲದಿಂದ ನಡೆದು ಬಂದ ಶಾಸ್ತ್ರ : ಪರಂಪರಾಗತಶಾಸ್ತ್ರ : ಅಱಿದು ಪೀನು ಮಾರ್ಗಗತಿಯಂ ತಱಿಸಲಾಗದಾರ್ಗಂ ಬಹುವಿಕಲ್ಪದೊಳ್ ಕಱಿತು ಪೂರ್ವಶಾಸ್ತ್ರವಿದವಿಧಿಯಂ ತೆಱದಿರೆ ಪೇಳ್ದೆನಿಸಂ ಕನ್ನಡದೊಳ್ (ಕಶಾ. ೨-೯೬). [ಸಂ.]

**ಪೂರ್ವಶೈವ** (ನಾ). ಶೈವದ ಪ್ರಭೇದಗಳಲ್ಲಿ ಒಂದು : ಶುದ್ಧಶೈವವ ಹೊದ್ದದೆ ಪೂರ್ವಶೈವವನಾಚರಿಸದೆ ಮಾರ್ಗಶೈವದ ಮನ್ನಣೆಯ ಮಾಡದೆ ವೀರಶೈವವನಾಧರಿಸದೆ ಆದಿಶೈವವನನುಕರಿಸದೆ ಭೇದಿಸಬಾರದ ಲಿಂಗ ಕರದಲ್ಲಿದ್ದು ಕಂಗಳನಲ್ಲಿ ನಿಂದು ಮನದಲ್ಲಿ ಸಿಂಹಾಸನಂಗೈದು ಸಕಲೇಂದ್ರಿಯದ ಮಱೆದು ಕಾಯದ ಜೀವದ ಹೊಲಿಗೆಯ ಬನ್ನಾಣದಿಂ ಬಿಟ್ಟು ದೇಶಿಂದ ಅಱಿಕಲಿಲ್ಲವಾಗಿ ಬಯಕೆ ಅಱತು ಭವ ಹಿಂಗಿ ತಾನೆನ್ನದೆ ಇದಿರೆನ್ನದೆ ಏನುವೆನ್ನದ ಲಿಂಗೈಕ್ಯಂಗೆ ಸ್ವಾನುಭಾವದಿಂದ ನಮೋ ನಮೋ ಎಂಬೆ (ಷಟ್ಸ್ಥಲವ. ೦೨೬-೯೯೦); ಶುದ್ಧ ಮಿಶ್ರ ಸಂಕೀರ್ಣ ಪೂರ್ವಮಾರ್ಗಶೈವಂಗಳಲ್ಲಿ ಕರ್ಮಭಕ್ತಿಯಲ್ಲದೆ ನಿರ್ವಾಣಸದ್ಭಕ್ತಿ ಎಲ್ಲಿಯದೋ (ಅವಶ. ಮು. ೯೩-೭೭). [ಸಂ.]

**ಪೂರ್ವಶಾಸನ** (ನಾ). ಹಿಂದಿನ ಕಾಲದ ರಾಜಾಜ್ಞೆ ; ಪೂರ್ವಕಾಲೀನ ಶಾಸನ : [ಪೆ]ರ್ಗ್ಗಡೆ ವಾಸುದೇವಯ್ಯನುಂ ಮಲ್ಲಯ್ಯನುಂ ಪೂರ್ವ್ವಶಾಸನಮರ್ಯ್ಯಾದೆ ಕೊಟ್ಟರ್ದ್ದಾರೆಂದು ಬಿನ್ನಪಂಗೆಯ್ಯಲು (ಕ್ಶಾಶಾ. XX. ೬೦-೨೦; 1068). [<ಸಂ. ಪೂರ್ವಶಾಸನ]

**ಪೂರ್ವಸಿದ್ಧತೆ** (ನಾ). ಮುಂಚಿತವಾಗಿ ಮಾಡಿಕೊಳ್ಳಬೇಕಾದ ಏರ್ಪಾಡು,-ತಯಾರಿ : ಈ ಪೂರ್ವಸಿದ್ಧತೆ ಪ್ರದರ್ಶಕರ ಕಡೆಯಿಂದ, ಅದಕ್ಕಿಂತ ಹೆಚ್ಚಾಗಿ ಪ್ರೇಕ್ಷಕರ ಕಡೆಯಿಂದ ಆದಾಗ ಮಾತ್ರ ಆ ಪ್ರದರ್ಶನ ಸಂಪೂರ್ಣ ಫಲದಾಯಿ (ರಾಶುಮಾ. ೬೦). [ಸಂ. ಪೂರ್ವಸಿದ್ಧತಾ]

**ಪೂರ್ವಸಿದ್ಧಾಯ** (ನಾ). ಒಂದು ಬಗೆಯ ತೆರಿಗೆ : ರುದ್ರಪ್ರದೇವಂ ಪತಿಬೆಸಸಿದ ಧರ್ಮೋತ್ಸಕ್ತಿಯಿಂ ಪೂರ್ವಸಿದ್ಧಾಯದೊಳೊಲ್ದಯ್ಯತ್ತು ಪೊಂನಂ ನಿಯ[ಮ]ದ ಪುರಾಣಕ್ಕೆ ಭೋಗಕ್ಕೇನು ... ಪೂಣ್ಣು ...ಧಾರಾ

[ಪೂ]ರ್ವ್ವಕೀಲ ಮಾಡಿ ಕೊಟ್ಟರ್ (ಎಕ. ೪. ೨೧-೧೦; ೧೧೨೪). [ಸಂ.]

**ಪೂರ್ವಸುರ** (ನಾ). = ಪೂರ್ವದೇವ ೨ : "ಸುರವೈರಿಗಳು . . . ಅಸುರರು ಪೂರ್ವಸುರರೆನಲು ದೈತ್ಯರು " (ಶಂಗರಾ. ೩-೯). [ಸಂ.]

**ಪೂರ್ವಸೂಚನೆ** (ನಾ). ೧. ಮುಂಚಿತವಾಗಿ ಸೂಚಿಸುವುದು,— ತಿಳಿಸುವುದು; ಮುನ್ಸೂಚನೆ : 'ಪೂರ್ವಸೂಚನೆಗೆಯ್' ಪರಾ. ೨. ಮುಂದೆ ಒದಗಲಿರುವ ಘಟನೆಗಳ ವಿಚಾರವಾಗಿ ಮುಂಚೆಯೇ ತಿಳಿದು ಬರುವ ಕುರುಹು : ಅಪಘಾತದ ಪೂರ್ವಸೂಚನೆ ಸಿಕ್ಕಿದ ತಕ್ಷಣ ವಿಮಾನಚಾಲಕ ಪ್ರಯಾಣಿಕರಿಗೆಲ್ಲ ಎಚ್ಚರಿಕೆಯನ್ನು ನೀಡಿದನು (ಹೊಸ). [ ಸಂ. ಪೂರ್ವಸೂಚನ ]

**ಪೂರ್ವಸೂಚನೆಗೆಯ್** (ಕ್ರಿ). ಮುಂಚಿತವಾಗಿ ತಿಳಿಸು ; ಮುನ್ಸೂಚನೆ ಕೊಡು : ಇದೆಲ್ಲವಂ ದೇವರ್ಗೆ ಪೂರ್ವಸೂಚನೆಗೆಯ್ದು ಬಟ್ಟೆಕೊಡ ಗೊಂಡು ಬರ್ಪಂ (ಪಂಪಭಾ. ೩೪-೧೪). [ಪೂರ್ವಸೂಚನೆ + ಕೆಯ್]

**ಪೂರ್ವಸ್ಥಿತಿ** (ನಾ). ಮೊದಲು ಇದ್ದ ರೀತಿ ; ಮೊದಲಿನ ಕ್ರಮ : ಅವಾಸಿತವಿಷಯಕಟಕನಾಗಿ ಪೂರ್ವಸ್ಥಿತಿಯೊಳ್ ಪೋಗಿ (ಅಂಕ್ರಿ. ೦೪-೩ ಪ). [ಸಂ.]

**ಪೂರ್ವಸ್ಮರಣ** (ನಾ). ಹಿಂದಿನದನ್ನು ನೆನೆಸಿಕೊಳ್ಳುವುದು ; ಹಿಂದಾದುದನ್ನು ನೆನೆಯುವುದು : ಅ ಎಂಬುದು ಪೂರ್ವಸ್ಮರಣದೊಳಂ ಪ್ರಸಿದ್ಧಿಯೊಳವುಂಟು (ಶಬ್ದ. ೦೬೯ ವೃತ್ತಿ). [ಸಂ.]

**ಪೂರ್ವಸ್ಮರಣೆ** (ನಾ). ಹಿಂದಿನ ಕಾಲದ ನೆನಪು : ಸ್ವಾಮಿಯಡಿಗೆ ಶಿರ ಬಾಗಿ ಬಂದೆವಿದೊ ಎಲ್ಲ ಸೀಮೆಯಿಂದ, ಅರಿವು—ಮರೆವು ಕಣ್ತೆರೆದು ಕರೆದ ಆ ಪೂರ್ವಸ್ಮರಣೆಯಿಂದ (ಕಂಬು. ೩೯-೨). [ಸಂ. ಪೂರ್ವಸ್ಮರಣ]

**ಪೂರ್ವಸ್ವರ** (ನಾ). [ವ್ಯಾಕ] ಸಂಧಿ ಮಾಡಬೇಕಾದಾಗ ಸಂಧಿಸ್ಥಾನ ದಲ್ಲಿರುವ ಎರಡುಸ್ವರಗಳಲ್ಲಿ ಮೊದಲು ಇರುವ ಸ್ವರ : ಸ್ವರಮಿರ ಪರದೊಳ್ ಪೂರ್ವಸ್ವರಲೋಪಂ ಕೃತವಿಭಕ್ತಿಗಳ್ಕುಂ ಪ್ರಕೃತಿಸ್ವರದೊಳುದೇ ದಂತಕ್ಕುಚರಿಸುವರವಿಸಪ್ಪನಾಪಾಭಾಗಸ್ಥಿತಿಯೊಳ್ (ಕಾವ್ಯಾವ ೩೨); ಏಧು ಇದು, ಕವಿ ಅರ್ ಎಂಬಿವನ್ನು ಏಧಿದು, ಕವಾರ್ ಎಂದು ಪೂರ್ವಸ್ವರಕ್ಕೆ ಲೋಪಮಾಡಿ ಕೂಡಿಸಿದರೆ ಅರ್ಥಕ್ಕೆ ಹಾನಿ ಬರುತ್ತದೆ (ಕ ಬಿಂ. ೭). [ಸಂ.]

**ಪೂರ್ವಹಗೆ** (ನಾ). ಮೊದಲಿನ ದ್ವೇಷ; ಮುಂಚಿನ ವೈರ : ಅಂತರಿಸದೆ ಕೊಲ್ಲಿರೆಂದು ಕಳುಹಿದ ಎಂತವನಿಗೆ ಪೂರ್ವಹಗೆಯೊ (ಚಿಕ್ಕರಾ. ೬-೯). [ಪೂರ್ವ + ಹಗೆ (<ಪಗೆ)]

**ಪೂರ್ವಾಂಗ** (ನಾ). ೧. ಮೊದಲನೆಯ ಭಾಗ; ಪೂರ್ವಾರ್ಧ : ನಾಟ್ಯ ಶಾಸ್ತ್ರದ ಪ್ರಕಾರ ಶಾಂಡವವು . . . ನಾಟಕದ ಪೂರ್ವಾಂಗವಾಗಿ ಅಭಿನಯಿ ಸಲ್ಪಡುತ್ತಿತ್ತು (ಕಾರಕ. ೩೩೨). ೨. ಅಂಗೈ ಮತ್ತು ಮಣಿಕಟ್ಟಿನ ಮಧ್ಯಭಾಗ : ಸೆಳೆಯುತ್ತಿರ್ಪಂತಿರಿಂ ಮೌರ್ವಿಯು ಲಿಸಿತವೆತ್ತಿರ್ಪ ಪೂರ್ವಾಂಗದಿಂ ಕಂಗೊಳಿಸುತ್ತುಂ (ಕಾಕುಂತ. ೨೨-೪೮). ೩. [ಜೈನ] ಎಂಬತ್ತುನಾಲ್ಕುಲಕ್ಷ ವರ್ಷಗಳ ಅವಧಿ : ರಾಜ್ಯದೊಳ್ಪುದುವುದುಂ ಲಕ್ಕೆಯುಬುಜಾನೂಚುಪೂರ್ವವಿಪ್ಪತ್ತುನಾಲ್ಕುಪೂರ್ವಾಂಗವುಮಂ ರಾಜ್ಯ ಕಾಲಂ ಸಲೆ (ಆದಿಪು. ೦೨೨); ಎಂಬತ್ತುನಾಲ್ಕುಲಕ್ಷವರುಷಗಳಾದರೆ ಪೊಂದು ಪೂರ್ವಾಂಗವೆಂದು ಪೇಳುವರು (ಕ್ಷೇತ್ರ. ೦೬). [ಸಂ.]

**ಪೂರ್ವಾಚಲ, ಪೂರ್ವಾಚಳ** (ನಾ). = ಪೂರ್ವಗಿರಿ : "ಮೂಡಣವೆಟ್ಟೆಂದು ಪೂರ್ವಾಚಲಂ" (ಶಬ್ದಾ. ೯೯-೩೦); ಬೀಡುಗೊಂಡಿರ್ದ ಕಸ್ತೂರಿಯು ಪಾಳೆಯು ಮೆತ್ತಲೋಡಿದುದೋ ನೋಡಿದಪೆನೆಂದು ಪೂರ್ವಾಚಲದ ಕೋಡುಗಲ್ಲಂ ಪತ್ತುವಂತೆ ಪೆಂಪಿಂ ಪ್ರಭೆಯೊಳ್ಳುನ್ನತ್ಯನಾದಿತ್ಯನು (ಕೃಷ್ಣಾ. ೨-೬೨). **ಪೂರ್ವಾಚಳ** : "ಪೂರ್ವಾಚಳಮ ಮೂಡಣವೆಟ್ಟೆಂದಕ್ಕುಂ" (ಕಬ್ಬಿಗಂ. ೯೯); ಎಣೆಮಿಗಿಲೆನಿಸಿದರದೊಳ್ ಪಾಸಿಗಣಪತಿಯುಂ ನೃಪತಿ ತಂದು ಕುಳ್ಳಿರಿಸೆ ನಭೋಮಣಿ ಪೂರ್ವಾಚಳಚೂಡಾಮಣಿಯೆನಿಸಿದನೆನೆ ಪೊದಟ್ಟುದಪಘನ ಕಿರಣಂ (ಸುಕುಮಾ. ೦೯-೩); ಸುರುಚಿರ ಪೂರ್ವಾಚಳದೊಳ್ ಗುರುತರ ಪೂರ್ಣೇಂದುವುದಯಿಪಂತಿರೆ ರಾತ್ರೀಶ್ವರವದನೆ ಗಿರಿಜೆ ಭರದಿಂ ಗಿರಿರಾಜನ ತೊಡೆಯ ಮೇಲೆ ವಿಜಯಂಗೆಯ್ದಳ್ (ಗಿರಿಜಾ. ೪-೯೯). [ಸಂ.]

**ಪೂರ್ವಾಚಳ** 'ಪೂರ್ವಾಚಲ' ನೋ.

**ಪೂರ್ವಾಚಾರ** (ನಾ). ಹಿಂದಿನ ಕಾಲದಿಂದ ಬಂದ ನಡವಳಿಕೆ ; ಸಂಪ್ರದಾಯ : ಶ್ರೀಪೃಥುವೀವಲ್ಲಭ ಮಹಾರಾಜಾಧಿರಾಜ . . . ಪೂರ್ವ್ವಾಚಾರದಾ ಕೆಯ್ದುಪ್ಪಿಪ್ಪ ಈಯಿಮೆನ್ದೊಡೆ ಪೊನ್ನೆಬ್ಬನುಂ ಚೋಳಮಹಾರಾಜನುಂ ಮೂಲದಿಂಪೂರ್ವ್ವಪೂರ್ವರಾನೊಸ್ನಾ × ಶ್ರೀಧನಪತಿಆಚಾರಿಮ (ಎಕ. XVI. ಮುದ್ರಿತ. ೦೦೬-೩ ; ೩೩೪ ೪೪) ; ವಿಪ್ಪಾಖಂಡದ ಜನರು ಪೂರ್ವಾಚಾರಗಳಲ್ಲಿ ಬಹುಪ್ರೀತಿಯುಳ್ಳವರಾಗಿದ್ದಾರೆ (ಕೂರ್ಗ್ಚರಿ. ೨೨). [ಸಂ.]

**ಪೂರ್ವಾಚಾರ್ಯ** (ನಾ). ಹಿಂದಿನ ಕಾಲದ ವಿದ್ವಾಂಸ,—ಪಂಡಿತ : ಪೂರ್ವಾಚಾರ್ಯರ್ ದೇಸಿಯನೆ ನಿಜಾಸಿ ಖಂಡಪ್ರಾಸವನತಿಶಯವಿದೆಂದು ಯತಿಯಂ ಮಿಕ್ಕರ್ (ಕಾವ್ಯಾ. ೦-೬೩); ಹವಿನಾರುವಿಧವಾದ ಸನ್ನಿಪಾತ ಗಳಿಗೂ ಆಯುಃಪ್ರಮಾಣಂಗಳ ಅವಧಿಯು . . . ಪೂರ್ವಾಚಾರ್ಯರಿಂದ ಪೇಳಲ್ಪಟ್ಟಿರುವುದು (ಸಕಲ. ೦೬೯). [ಸಂ.]

**ಪೂರ್ವಾದತ್ತ** (ಗು). ಹಿಂದೆ ಗಳಿಸಿಕೊಂಡ,—ಸಂಗ್ರಹಿಸಿದ : ಪೂರ್ವ ಸಂಚಿತವಾದ : ಜಲಧಿಯಲಿ ಫಣಿವದನದಲಿ ರಿಪುಬಲದ ಮುಖದಲಿ ಸಿಡಿಲ ಹೊಯ್ಲಲಿ . . . ಸಿಲುಕಿದಡೆ ಬಿಡಿಸುವವಲೇ ಪ್ರತಿಫಲಿತ ಪೂರ್ವಾದತ್ತಪುಣ್ಯಾವಳಿಗಳು (ಕುಮಾರ. ೯-೨೫). [ಸಂ.]

**ಪೂರ್ವಾದ್ರಿ** (ನಾ). = ಪೂರ್ವಗಿರಿ : ಪೂರ್ವಾದ್ರಿಯೊಳಪರಾದ್ರಿಯ ನಿರ್ವಂದದೆ ತಾಗುವಂತೆ ತಾಗಿದುವು ಗಜಂ (ಪಾರ್ಶ್ವ.ಪು. ೩-೦೨೬). [ಸಂ.]

**ಪೂರ್ವಾನುಭವ** (ನಾ). ಹಿಂದೆ ಅನುಭವಿಸಿದುದು ; ಇಂದ್ರಿಯ ಮೂಲಕವಾಗಿ ಅಥವಾ ಮಾನಸಿಕವಾಗಿ ಈ ಮುಂಚೆ ಪಡೆದ ಅನುಭವ : ಮತ್ತೊರ್ಪಂ ಪೂರ್ವಾನುಭವವಮಂ ನೆನೆದು . . . ಕೆಳದಿಯೊಳ್ ನುಡಿದಂ (ಚಂದ್ರಪ್ರ. ೮-೬೯ ವ). [ಸಂ.]

**ಪೂರ್ವಾನುರಾಗ** (ನಾ). [ಕಾವ್ಯಮೀ] ಪೂರ್ವಾನುರಾಗ, ಮಾನ, ಪ್ರವಾಸ ಮತ್ತು ಕರುಣಾತ್ಮಕ ಎಂಬ ನಾಲ್ಕು ವಿಪ್ರಲಂಭಶೃಂಗಾರ ಪ್ರಭೇದಗಳಲ್ಲಿ ಒಂದು ; ಪ್ರಿಯೆ, ಪ್ರಿಯಕರರು ಒಂದುಗೂಡುವ ಉತ್ಸುಕತೆಯುಳ್ಳದ್ದರೂ ಅದು ಸಾಧ್ಯವಾಗದೆ ಉಂಟಾಗುವ ಮರುಕ: ಸಮಸಂದು ನೋಡಿ ಮೋಹಿಸ್ಸುಡಿದು ಮೋಹ್ಮನಂಗೊಂಡು ಕೂರ್ತರ್ ಕೂಟಂ ತನ್ನೊಳ್ ಸಮನಿಸದೆ ಮಜುಗುವಾ ಮಜುಕಮುಮದು ಪೂರ್ವಾನುರಾಗಮೆನೆ ಪಸರ್ಪಡೆಗುಂ (ಶೃಂಗಾರ. ೯-೧೦) ; ಪೂರ್ವಾನುರಾಗ ಮೆಂಬುದಭಿಲಾಷೆ ಅದು ದೈವ ಪಾರವಶ್ಯಮೆಂದಿರ್ಪೆಜು (ಅಪ. ೦-೩೪ ವ್ಯಾ. [ಸಂ.]

**ಪೂರ್ವಾಭಾದ್ರ** (ನಾ). ಇಪ್ಪತ್ತೇಳಂ ನಕ್ಷತ್ರರಾಶಿಗಳಲ್ಲಿ ಇಪ್ಪತ್ತೈದನೆಯದು : ಪೂರ್ವಾಭಾದ್ರಾ ಅಜಪಾದ ಪೂರ್ವ ಪ್ರೋಷ್ಠಪದ ಯಿವು ೪ ಪೂರ್ವಾಭಾದ್ರನಕ್ಷತ್ರಕ್ಕೆ ಪೆಸರು (ಅಕ್ಷರ. ೬೩-೬). [ಸಂ.]

**ಪೂರ್ವಾಭಾದ್ರಪದೆ** (ನಾ). = ಪೂರ್ವಾಭಾದ್ರ : ಪುಟ್ಟೆಯುತ್ತರೆ ಶತವಿಶಾಖೆ ಸಂದ ಪೂರ್ವಾಭಾದ್ರಪದೆ ಮೂಜಹವು (ಶಂಗರಾ. ೦೯-೨). [ಸಂ. ಪೂರ್ವಾಭಾದ್ರಪದಾ]

**ಪೂರ್ವಾಭಾದ್ರೆ** (ನಾ). = ಪೂರ್ವಾಭಾದ್ರ : ಅಶ್ವಿನಿ ಭರಣಿ . . . ಪೂರ್ವಾಭಾದ್ರೆ . . . ರೇವತಿಗಳೆಂಬಿಪ್ಪತ್ತೇಳು ತಾರೆಗಳು (ಎವ್ಯ. ೨೩೬). [ಸಂ. ಪೂರ್ವಾಭಾದ್ರ]

**ಪೂರ್ವಾಭಿಮುಖಿ** (ನಾ). ೧. ಮೂಡಣದಿಕ್ಕಿಗೆ ಎದುರಾಗಿ ಇರುವವನು ; ಪೂರ್ವದಿಕ್ಕಿಗೆ ಮುಖ ಮಾಡಿದವನು : ಯೋಗ ಪಲ್ಯಂಕಾಸನದಿಂದಂ ಯೋಗನಿರೋಧದೊಳ್ ಪೂರ್ವಾಭಿಮುಖನಾರ್ದಂ

(ಅಂಕ್ರಿ. ೧೬–೧೦ ವ); ಪೂರ್ವಾಭಿಮುಖಂ ಜನಿಶಿಶು . . . ಕನಕೋರ್ವೀಧರ ಶಿಖರವಂತೆ ವೀಗೆ ಸೊಗಯಿಸಿದಂ (ಜಗ್ತಿ. ೦೪–೦೩) ೨. ಪೂರ್ವ ದಿಕ್ಕಿಗೆ ಎದುರಾಗಿರುವುದು : ವಿಂಧ್ಯಪರ್ವತಗಳು . . . ನರ್ಮದಾ ನದಿಯು ಉತ್ತರದಲ್ಲಿ ಪೂರ್ವಾಭಿಮುಖವಾಗಿ ಪಾಯುತ್ತವೆ (ಭೂಗೋಳ. ೩೧). [ಸಂ.]

**ಪೂರ್ವಾಮರ** (ನಾ). = ಪೂರ್ವದೇವ ೨ : ಪೂರ್ವಾಮರರೊಳಾ ದುರ್ದಾಂ ಧುರ ಮಹಾದ್ಭುತವಾಗಿ (ಶಾಂತಿ. ೧–೨೬); ಮಥಿಯಿಸಿದೊಡಂ ತತ್ಕ್ಷೀರಧಿ ಪೂರ್ವಾಮರಾಮರರ ಬಲ್ಪಾವ ಓಡಿಸುತುಚ್ಚೈಃಶ್ರವಮೆನಿಪ್ಪ ಹಯಮ ಸರ್ವಬಾಧೆಯೊಳಿತ್ತಂ (ಶಾಂತಿ. ೬–೦೨). [ಸಂ.]

**ಪೂರ್ವಾಯ** (ನಾ). = ಪೂರ್ಬಾಯ : ರಾಮನಾಥದೇವಂಗೆ ಆಗುವ ಚಿಕ್ಕ ಕೊಡಲಿಯ ಹನಸವಾಡಿಯ ಪೂರ್ವ್ವಾಯ ಅಪೂರ್ವ್ವಾಯ ಅಳಿಯನ್ಯಾಯ ಯೇನುಯಿಲ್ಲೆಂದು ಧಾರಾಪೂರ್ವ್ವಕ ಮಾಡಿದ ಧರ್ಮ್ಮ (ಎಕ. VII. ಶಿಕಾರಿ. ೬೮–೩; 1313); ರಾಮದೇವರಂಗಭೋಗಕ್ಕೆ ಕೊಟ್ಟ ಧರ್ಮವಿದಕೆ ಪೂರ್ವ್ವಾಯವಪೂರ್ವ್ವಾಯವೊಂದಿಲ್ಲ (ಎಕ. VII. ಶಿಕಾರಿ. ೬೯–೨೬; 1320). [ಸಂ.]

**ಪೂರ್ವಾರ್ಜಿತ** (ಗು). ೧. ಹಿಂದೆ ಗಳಿಸಿದ ; ಪೂರ್ವಜನ್ಮದಲ್ಲಿ ಸಂಪಾದಿಸಿದ : ಯಥಾಕಾಲಾನುಭವನ ತಪೋನಿಮಿತ್ತಮಾಗಿ ಸವಿಪಾಕಾವಿಪಾಕ ರೂಪದಿಂ ಪೂರ್ವಾರ್ಜಿತಕರ್ಮನಿರ್ಜರಣಂ ನಿರ್ಜರೆಯೆಂಬುದು (ಅಂಕ್ರಿ. ೧೦–೬೬ ವ) ; ಗಣಪತಿಯಪ್ಪು ನಿಷ್ಠೆಯಿಂದ ಅಷ್ಟೊಂದು ದೀರ್ಘಕಾಲ ಸಾಧನೆಮಾಡಿದ ಒಬ್ಬನನ್ನೂ ಅವರು ಕಂಡಿರಲಿಲ್ಲ. ಅದಕ್ಕೆ ಪೂರ್ವಾರ್ಜಿತ ಪುಣ್ಯವಿಶೇಷ ಬೇಡವೆ? (ಹೂಕ್ಷ್ಮ. ೩೬). ೨. ಹಿರಿಯರು ಗಳಿಸಿ ಕೊಟ್ಟ; ಪೂರ್ವಜರಿಂದ ಸಾಗಿ ಬಂದ : ಅವರಿಗೆ ಪೂರ್ವಾರ್ಜಿತ ಆಸ್ತಿ ಏನೂ ಇರಲಿಲ್ಲ. ಸ್ವಂತ ಪರಿಶ್ರಮದಿಂದಲೇ ಅವರು ಮುಂದೆ ಬಂದರು (ಹೂಕ್ಷ). (ನಾ). ೩. ಹಿಂದೆ ಗಳಿಸಿದುದು ; ಪೂರ್ವಸಂಚಿತವಾದದು : ಸಮ್ಯಗ್ದರ್ಶನ ಜ್ಞಾನಚಾರಿತ್ರವಿಷಯಮಪ್ಪುದಾವು . . . ಅದೆಂತೋ : ಪೂರ್ವಾರ್ಜಿತಮಪ್ಪ ಮಹಾಸುಕೃತವಿಶೇಷದಿಂ ಪ್ರಾಪ್ತಮಾದುದು (ಧರ್ಮಾಮೃ. ೦೪೬–೨೬). ೪. (ಆಲಂ) ಹಣೆಬರಹ : ಮಣಿಯೊಳಂ ಪೂರ್ವಾರ್ಜಿತಂ ಹಾಗಿರಲ್ ಕೊಲನೇ ಕ್ಷುದ್ರ ಸಮರ್ಥನಂ (ಕೋಮುಲ. ೩೦). [ಸಂ.]

**ಪೂರ್ವಾರ್ಣವ** (ನಾ). ಮೂಡಣ ಕಡಲು ; ಪೂರ್ವಸಮುದ್ರ : ಪೂರ್ವಾರ್ಣವಮಂ . . . ನೋಡಿದಂ ಚಕ್ರನಾಥಂ (ಆದಿ. ೦೨–೭೦). [ಸಂ.]

**ಪೂರ್ವಾರ್ಧ** (ನಾ). ಮೊದಲನೆಯ ಅರ್ಧಭಾಗ : ಕಂದರ ಪೂರ್ವಾರ್ಧದೊಳನು ಸಂದಿಸಲಾರ್ಯಾಪರಾರ್ಧಮದನುಕ್ರಮದಿಂದೊಂದಿರ್ದೊಡೆ ಸಂಕೀರ್ಣಕಂ (ಛಂದೋಂಬು. ೪–೨೩೪) ; ಈ ಶತಮಾನದ ಪೂರ್ವಾರ್ಧಕ್ಕಿಂತಲೂ ಉತ್ತರಾರ್ಧದಲ್ಲಿ ಭಾಷಾವಿಜ್ಞಾನದ ದೃಷ್ಟಿಯಿಂದ. . .ಒಳ್ಳೆಯ ಕೆಲಸ ನಡೆಯುತ್ತಿದೆ (ದ್ರಾವಿಡ. ೦೩). [ಸಂ.]

**ಪೂರ್ವಾರ್ಧಗೋಳ** (ನಾ). ಭೂಮಂಡಲದ ಪೂರ್ವಭಾಗ : ಪಶ್ಚಿಮಾರ್ಧಗೋಳದಲ್ಲಿರುವ ಭೂಮಿಯು ಎರಡರಷ್ಟಕ್ಕಿಂತಲೂ ಪೂರ್ವಾರ್ಧಗೋಳದಲ್ಲಿರುವ ಭೂಮಿಯು ಹೆಚ್ಚಾಗಿದೆ (ಭೂಗೋಳ. ೦೩). [ಸಂ. ಪೂರ್ವಾರ್ಧಗೋಲ]

**ಪೂರ್ವಾಶ್ರಮ** (ನಾ). (ಸಂನ್ಯಾಸಕ್ಕೆ) ಮುಂಚಿನ ಆಶ್ರಮ : ಬ್ರಹ್ಮಚರ್ಯ ಅಥವಾ ಗೃಹಸ್ಥಾಶ್ರಮ : ಶೈವಪಂಥೀಯಸಂನ್ಯಾಸಿಗಳು ತಮ್ಮ ಪೂರ್ವಾಶ್ರಮದ ಮನೆಯನ್ನು ಅಪರಿಚಿತಸ್ಥಳವೆಂದು ತಿಳಿಯುತ್ತಾರೆ (ಅಕ್ರಮ. ೨೪). [ಸಂ.]

**ಪೂರ್ವಾಶ್ರಯ** (ನಾ). ಹಿಂದಿನ ಇರವು; ಮೊದಲಿನ ಅಸ್ತಿತ್ವ : ಗುರುಕಾರುಣ್ಯವ ಪಡೆದ ಭಕ್ತನು ಹಿಂದಣ ಪೂರ್ವಾಶ್ರಯವ ಬೆರಸಿದರೆ ಗುರುದ್ರೋಹ ಲಿಂಗದ್ರೋಹ ಜಂಗಮದ್ರೋಹ ಆಚಾರದ್ರೋಹ ಪ್ರಸಾದದ್ರೋಹ (ಚನ್ನ. ೬೬೬); ಇಂತಪ್ಪ ಪದಾರ್ಥದ ಪೂರ್ವಾಶ್ರಯವನು ಶಿವಮಂತ್ರ ಶ್ರೀವಿಭೂತಿಯಿಂದೆ ಕಳೆದು ಶುದ್ಧಸಂಸ್ಕಾರವೆನಿಸಿ . . . ಶಿವಲಿಂಗಕ್ಕೆ ಅರ್ಪಿಸಿದಲ್ಲಿ ಶಿವಪ್ರಸಾದವೆನಿಸಿತ್ತು (ಅಹಂಕಾ. ೦೬೨–೨೪). [ಸಂ.]

**ಪೂರ್ವಾಷಾಢ** (ನಾ). ಇಪ್ಪತ್ತೇಳುನಕ್ಷತ್ರಗಳಲ್ಲಿ ಇಪ್ಪತ್ತನೆಯದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : ಆರ್ದ್ರೆ ಪೂರ್ವಾಷಾಢ . . . ಮಖೆಯೆಂಬುವೇ ಕ್ರಮದಿಂದ ಷಡ್ಜಾದಿ ಸ್ವರಗಳ ಜನ್ಮನಕ್ಷತ್ರಂಗಳು (ಶಿವತ. ೨೪೦). [ಸಂ. ಪೂರ್ವಾಷಾಢಾ]

**ಪೂರ್ವಾಸನ** (ನಾ). ಮುಂದಿನ ಆಸನ; ಪೂರ್ವಪೀಠ : ಪೂರ್ವಾಸನದೊಳ್ ಪದೆಪಿಂ ಪಾರ್ವತಿಯುಂ ಪರ್ವವೇಣ್ ಬಿಜಯಂಗೆಯ್ಯುತ್ತ . . . ಪರ್ವತರಾಜಂ ಪುರಕ್ಕೆ ತಿರುಗಿದನಾಗಳ್ (ಗಿರಿಜಾ. ೩–೦೦೨); ಮಹಾದೇವಿ ಶರ್ವಾಣಿ ಸಮಸ್ತಾಧಿಕ್ಕೆ ಪೂರ್ವಾಸನದೊಳಿರೆ ಬರುತ್ತೊಕ್ಕುದಂ ಶೈಳಮ (ಗಿರಿಜಾ. ೩.೦೦೩). [ಸಂ.]

**ಪೂರ್ವಾಹ್ಣ** (ನಾ). ಸೂರ್ಯೋದಯದಿಂದ ಮಧ್ಯಾಹ್ನದ ವರೆಗಿನ ಕಾಲ; ಹಗಲಿನ ಪೂರ್ವಾರ್ಧ : ಪೂರ್ವಾಹ್ಣದೊಳಾಂ ಕಂಡ ಬಲಾಕೆಯ ನುತ್ತೊಂದಿದಲ್ಲು (ಶಕ್ತ್ಯಕ್ಷ್ರ. ೩೬); ಅಯೋಧೆಯ ಸೌಂದರ್ಯ ಪೂರ್ವಾಹ್ಣದ ಸೂರ್ಯರಶ್ಮಿಯಂತೆ (ಅಂತಃಪು. ೦೩೩). [ಸಂ.]

**ಪೂರ್ವಿ** (ನಾ). [ಸಂಗೀತ] ಒಂದು ರಾಗದ ಹೆಸರು : ಪೂರ್ವಿ ರಾಗವು ರಕ್ತದ ಒತ್ತಡವನ್ನೂ . . . ಗುಣಪಡಿಸುವುದೆಂಬ ಭಾವನೆ ಉತ್ತರ ಭಾರತದಲ್ಲಿದೆ (ಭಾರಕಾ. ೩೪೪); ಆನಂದಭೈರವಿ ಮುಗಿಯುವುದೇ ತಡ ನೇರವಾಗಿ ಪೂರ್ವಿರಾಗವನ್ನೆತ್ತಿಕೊಂಡ (ಸಂಸ್ಕಾರ. ೦೩೬). [ಸಂ. ಪೂರ್ವೀ]

**ಪೂರ್ವಿಕ** (ಗು). ೧. ಹಿಂದಿನ; ಪೂರ್ವಕಾಲದ ; ಪೂರ್ವಕಾಲದಿಂದ ಬಂದ. (ನಾ). ೨. ಹಿರಿಯ; ಪೂರ್ವಜ; ವಂಶದ ಹಿಂದಿನ ವ್ಯಕ್ತಿ : ನನ್ನ ಪೂರ್ವಿಕರನು ಕುರಿತೀಗ ಹೇಳುವೆ ತಿಳಿದಷ್ಟು ಸಂಗತಿಗಳನು (ಇಂಚರ. ೪–೦೦); ಮೊದಲು ಮಗುವಿನ ಪೂರ್ವಿಕರ ಇತಿಹಾಸವನ್ನು ಸಂಗ್ರಹಿಸಬೇಕು (ಶಿಕ್ಷಣ. ೯೬). [ಸಂ.]

**ಪೂರ್ವಿಗ** 'ಪೂರ್ಬಿಗ' ನೋ.

**ಪೂರ್ವೀಕ** 'ಪೂರ್ಬಿಗ' ನೋ.

**ಪೂರ್ವೆ** (ನಾ). ೧. ಮೂಡಣ ದಿಕ್ಕು : "ಐಂದ್ರೀ, ಪೂರ್ವಾ, ಪ್ರಾಚೀ— ಈ ೩ ಮೂಡಣ ದೆಸೆ" (ಶಬ್ದಾಮ. ೦೭–೦೦೦). ೨. ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು; ಪುಬ್ಬೆ ನಕ್ಷತ್ರ ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : ಭರಣಿ ಮಘೆ ಪೂರ್ವೆ ಕೃತ್ತಿಗೆ . . . ಎಂಟೆಯಂ ವೈಶ್ವಾನರ ಮಂಡಳಮೆಂಬ ನಾಮಮಂ ತಳೆದಿರ್ಕುಂ (ಕೋಣೆಕಾಣ. ೪–೩೦); ಮಹಾ ಪೂರ್ವಾ ಉತ್ತರಾನಕ್ಷತ್ರಗಳ ಮಳೆಗೆ ಹತ್ತಿಯ ಬಿತ್ತಿಗೆಯಾಗುತ್ತದೆ (ಮುಂಗಾರು. ೪–೨೬). [ಸಂ. ಪೂರ್ವಾ]

**ಪೂರ್ವೇತರ** (ಗು). ಪಶ್ಚಿಮದ; ಪಡುವಣ ದಿಕ್ಕಿನ : ಘನಸಂಧ್ಯಾರಾಗತೀವ್ರಾನಲನೊಳೊಲವಿನಿಂ ಕಾಸಿ ತಿಗ್ಮಾಂಶುವೆಂದೆಂಬ ನವೀನ ಸ್ವರ್ಣಸಪಿಂಡಮಂ . . . ಪೂರ್ವೇತರಶರನಿಧಿಯೊಳ್ ಅದ್ದೆಂದೋ ಜನರ್ದ್ದಲ್ಲನಿಸುರ್ಬೇಳ್ಪುದೋ ಕಾರ್ಬೊಗೆಯನೆ ದೆಸೆದೀವಿತ್ತು ಘೋರಾಂಧಕಾರಂ (ರಾಜಶೇ. ೦೦–೦೪). [ಸಂ.]

**ಪೂರ್ವೇತಿಹಾಸ** (ನಾ). ಹಿಂದಿನ ಕಥೆ : ಪೂರ್ವಚರಿತ್ರೆ : ತುಸು ನೀಳವಾಗಿಯೆ ಮನದೊಳು ಮೂಡಿತು ಪೂರ್ವೇತಿಹಾಸದ ನೆಳಲು (ಅಂಚಾಕ. ೬೦–೯೯). [ಸಂ.]

**ಪೂರ್ವೋಕ್ತ** (ಗು). ೧. ಹಿಂದೆ ಹೇಳಿದ ; ಮೊದಲೆ ತಿಳಿಸಿದ,— ನಿರೂಪಿಸಿದ : ಆ ವಾಕ್ಯಮುಂ ವಿಜ್ಞಾನಮೆಂಬೆಯಪ್ಪೊಡೆ ಪೂರ್ವೋಕ್ತ

ದೋಷಪಾಷಾಣಸಂಚೂರ್ಣಿತಪಾಶಿಯ್ಯ ಏನನೇತಱೊಳ್ ನಿಶ್ಚಯಿಸುವ್ಯೆ (ಅಜಿತ. ೨-೦೦ ವ); ಪೂರ್ವೋಕ್ತಸ್ಥಿತಿಯೊಳ್ ವಜ್ರಕವಾಟೋದ್ಘಾಟನಂಗೆಯ್ದು (ಶಾಂತಿ. ೦೦-೬೬ ವ). (ನಾ). ೨. ಮುಂಚೆ ಹೇಳಿದುದು; ಮೊದಲು ನಿರೂಪಿತವಾದುದು : ವಿಶ್ವಸಾರೋತ್ತರಾಗ್ರನಿರ್ವಾಣಸೂತ್ರದಿಂದ ಪೂರ್ವೋಕ್ತವಹ ಕಾರ್ಯಂಗಳೊಳು ಶಬ್ದವೃತ್ತಿ ಕೋಣಾತ್ರ ನಿರ್ವಾದದಲ್ಲಿ (ಶಿಕ್ಷಿತ. ೬-೨-೩೮); ಎದುರುಗೋಡೆಯಲ್ಲಿ ಪೂರ್ವೋಕ್ತವಾದ ಕಿಟಕಿಗಳ ಮಧ್ಯೆ . . . ಗಡಿಯಾರವಿದೆ (ಚಿಚಯೋ. ೧). [ಸಂ.]

**ಪೂರ್ವೋದಿತ** (ಗು). =ಪೂರ್ವೋಕ್ತ ೧ : ಪುನರುಕ್ತವೆಂಬುದಕ್ಕಂ ನೆನೆಯದ ಪೂರ್ವೋದಿತಾರ್ಥಪದಪದ್ಧತಿಗೊಂದಿನಿಸುಂ ವಿಶೇಷವಿಲ್ಲದೆ ಜನಿಯಿಸುವ ಪದಾರ್ಥಂ (ಶಬ್ದ. ೦-೯೪). [ಸಂ.]

**ಪೂರ್ವೋಪಾರ್ಜಿತ** (ಗು). =ಪೂರ್ವಾರ್ಜಿತ ೧ : ಅಂತವರ್ ಕರ್ಕಟಕೇಶಚರ್ಮರಾಗಿ ಪುಟ್ಟಿ ಪೂರ್ವೋಪಾರ್ಜಿತಸುಕೃತಮಹೀರುಹನಿಶಾಕರನಿಜಾಂಗುಳಿನಿಸ್ಸರದ್ದುಗ್ಧಧಾರೆಯು ಸವಿಯುಂ ಸೇವಿಸಲೇೞುದಿವಸಂಗಳುಂ ಪೋಗೆಪೋಗೆ (ಶಾಂತಿ. ೬-೦೦೬ ವ); ನೀಳನೆಂಬ ಮಾದೆಗಂಗಂ ಕೌಶಂಬಿಯೆಂಬ ಮಾದುಗಿಗಂ ಮಗಳಾಗಿ ಪೂರ್ವೋಪಾರ್ಜಿತ ಶುಭಾನುಪೂರ್ವಿನಾಮಕರ್ಮೋರ್ವೀರುಹಫಳಮನನುಭವಿಸುತ್ತುಂ (ಸುಕುಮಾ. ೫-೨೧ ವ). [ಸಂ.]

**ಪೂಲತೆ** (ನಾ). ಹೂವು ಬಿಟ್ಟಿರುವ ಬಳ್ಳಿ : ಪೂಲತೆ ಪೂಗಿದು ಪೂಮರಸಾಲಿಂದಲ್ಲಲ್ಲಿ ಕೇಳಿಕೇಣಿಗಳೊಳ್ ಚೈತ್ಯಾಲಯದ ಮುಂದೆ ತುಂಬಿಯಜಾಳಂ ಮದಮೇಱೆ ಮೆಱೆವವಾ ಪುರಮಾಳದೊಳ್ (ಎಕ. VIII. ಸೊರಬ. ೨೬೦-೨೨ : 1408). [ಪೂ₂+ಲತೆ]

**ಪೂಲಿ₁, ಹೂಲಿ₁** (ನಾ). ಒಂದು ಬಗೆಯ ಸಸ್ಯ : ಪೂಲಿಯ ವರ್ಣಂತೆ ಪೊಱವಾಯ್ವ ಕೀವುಂ (ರಘುಪ್ರ. ೪-೬೩); ಅದಱ ಬಱಿವಿಡಿದು ಬೆಳೆದ ಬಳ್ಳಿದು ಪಸಿಯ ಪುಲ್ಲ ಪೂಲಿಯ ಸಾನಲನಱಿದು ನಡೆವಾಗಳ್ (ಶಾಂತಿ. ೬ ೪೨ ವ). **ಹೂಲಿ₁** : "ಶಂಬಾ ಸುಖನಿ ಹೂಲಿಯಕ್ಕುಂ" (ಶಾಂಗಸಾ. ೪೦-೨೦); ಪಂಪಾಪುರಂ ಪಿರಿದಾಗಿರೆ ಹೂಲಿಯ ಬೇರ ತ್ರಿಗುಣನೆಮ್ಮೆಯಮೊಸರೊಳ್ ಬೆರಸಿಟ್ಟು ಸ್ಕಂಧವಂ ಕೂಡಿರೆ ಮೆಲುವುದು ದಿವ್ಯಯೋಗವಿದು ಪರಿಹಾರಕಂ (ಕಲ್ಯಾಣ. ೪-೧೩) ; ಹೂಲಿ ಮಾಲಿನಿ ಬನ್ನಿ ಹೊನ್ನೆ . . . ನಾನಾಭೂಜದೊಗ್ಗಿನಿಂ ಕಾನನಂ ಕಣ್ಗೆಸೆದುದು (ಸೋಮಕು. ೩-೨). [ದೇ.॥ ತಮಿ. ಪೂಳ ; ತೆಲು. ಪೂಲಿ./ಹಿಂ. ಪೂಲೀ, ಪೂಲಾ]

**ಪೂಲಿ₂, ಹೂಲಿ₂** (ನಾ). ೧. ಒಬ್ಬಾತನ ಹೆಸರು: ಪೂಲಿಯಮೂಕೊಂಗಿಯಮೂಕಾಲಿಯುಮ್ಮನೂ ಇಟ್ಟು ಕೊಟ್ಟರ್ (ಎಕ. VIII. ಸೊರಬ. ೨೨-೦೦; ಸು. ೯೦೦). ೨. ಒಂದು ಊರಿನ ಹೆಸರು : ಅರವತ್ತಗಿಯರವರ್ಪೂಲಿಯಮರ್ಡಿದ ಸಿಲಾಶರ್ಮ್ಮ (ಎಕ. VIII. ಸೊರಬ. ೨೨-೧೦ ; ಸು. ೯೦೦); ಸ್ವಯಂಭುದೇವರ ದೇಗುಲದ ಪೂಲಿಯ ಪಣ್ಡಿತರ ವಿದ್ಯಾಶಿಷ್ಯರ್ಕೊಳ್ಪಿನ ವಿಖ್ಯಾಣಜೀಯರ ಶಿಷ್ಯರಪ್ಪ ಕಾಳಗ್ನಾನಿ ವಕ್ಖಾಣಿಜೀಯರ್ಗ್ಗೆ ಧಾರಾಪೂರ್ವ್ವಕಂ ವಿದ್ಯಾದಾನವಾಗಿ (ಸೌಇಇ. XI–I. ೯೮-೯; 1002); ಪಡುವಲು ಪೂಲಿಯ ದಶಕಂ ಒಡ[ಗಲು] ಪೆರ್ವ್ವಟ್ಟೆ (ಸೌಇಇ. XV. ೩೦-೯೯; 1142). **ಹೂಲಿ₂** : ೨. ಅಬ್ಜಗರ್ಭಸಹಿತಂ ಶ್ರೀಹೂಲಿಗೆಯ್ಯೆಂದು ನಿನ್ನಾರಾಧ್ಯಂ ಕರುಣಾಕರಸಾರ್ದ್ರಹೃದಯುಂ ರಕ್ಷಿಕ್ಕೆ ಸಾಸಿರ್ವ್ವರಂ (ಕಇ. I. ೩೬-೭ ; 1162) ; ಆ ಸಿದ್ಧೇಶ್ವರರಾಚಾರ್ಯ್ಯ ಚಂದ್ರಭೂಷಣದೇವರು ಹೂಲಿಯ ಯಿಶ್ವರಭಟ್ಟರ ಕೈಯಿಂ ××× ಗೆ ಕೊಟ್ಟ . . . ವೊಂದು (ಕಕಾಂ. ೩ ೯೬ ; ೪).

**ಪೂಲಿ₃** (ನಾ). ಒಂದು ಬಗೆಯ ಚಿನ್ನದ ನಾಣ್ಯ : (೪). 'ಕಾಲ್ಪೋಲಿ ರೂಪಾಯಿ' ಹೋ. [ದೇ.॥ ತೆಲು. ಪೂಲಿ]

**ಪೂಲಿಕಂಟಿ, ಹೂಲಿಕಂಟಿ** (ನಾ). ಒಂದು ಊರಿನ ಹೆಸರು : ಆಗ್ನೇಯದ ಎಲಂಟೆಕುಪ್ಪೆಯಿನ್ದೆ ಪೂಲಿಕಂಟೆಯಿನ್ದೆ ಪೆರ್ವಳದೊಳಗಣಚಾದುಪೂಲದಿನ್ದೆ ಪಿರಿಯೊಟ್ಟಿಯ ಕೈವರದೊಳ್ ಒನ್ದು ಮಹಾನ್ನಂ (ಎಕ. X (೪), ಕಕ್ಕ. ೦೦೬-೩೦ ; ೫೬೦). **ಹೂಲಿಕಂಟಿ** : ಪೂಲಿಕಂಟಿ ಚೆಂದನಾಯಕನ ಮಗ ತಳಪಾಱ ದೊಡ್ಡಗೆ ಕಾಚಪ್ಪೊಡೆಯ ಅಗಳಿ ತಳವಾಱಿಕೆನೂ ಆಚಂದ್ರಾ(೦)ರ್ಕಸ್ವಾತ್ರ್ಯವಾಗಿ ಕೊಟ ಶಾಸನ (ಸೌಇಇ. IX–II. ೩೦೯-೧; ೪). [ಪೂಲಿ₂+ಕಂಟೆ₃]

**ಪೂಲಿಕೆಱೆ** (ನಾ). ಒಂದು ಊರಿನ ಹೆಸರು : ಪೂಲಿಕೆಱೆ ಕಾದವಾಕಣ್ಮೊರ್ಬ್ಬಡಿ (ಪ್ರಾಕಕ. ೦೯೨೪, ೯೦·೦೮೦; 799). [ಪೂಲಿ₂+ಕೆಱೆ]

**ಪೂಲು** (ನಾ). ಸಂಕ; ಸೇತುವೆ : ಕಟ್ಟೆ : ಹರಿಹರದ ಹತ್ತಿರ ಈ ಹೊಳೆಗೆ ದೊಡ್ಡ ಪೂಲು ಕಟ್ಟಿದ್ದಾರೆ (ಕರ್ನಾಗೆ. ೧೨) ; ಅಪ್ಪಣ್ಣನು ಲೋಕಾಪುರದ ಹಳ್ಳದ ಪೂಲಿನ ಮೇಲೆ ಬರುತ್ತಿದ್ದನು (ಕಂಕು.೦೩೬). [←ಫಾರ. ಹಿಂ. ಪುಲ್ ; ಮರಾ. ಪೂಲ]

**ಪೂವ** (ನಾ). ಒಂದು ಬಗೆಯ ಔಷಧೀಸಸ್ಯ : ರಜನಿ ಕೃತಾಂಜಲಿ ಕಳವಿಗೆ ಬಜೆ ಗಂಧಕ ಪೂವಮೆಂಬಿವಂ ತವೆ ತಿಲತೈಲಜಳಾನ್ವಿತಘೃತದಿಂ ದಂಬುಜಾಕ್ಷಿಯರ್ಗೆಱೆಯೆ ನಸ್ಯಮಂ ಮೊಲೆ ಬರ್ಪಂ (ಲೋಕೋಪ. ೯-೦೬೦). "ಸುಗಂಧಿ" (ಲೋಕೋಪ. ಟೀಕು). [ದೇ.॥ ತಮಿ. ಮಲ. ಪೂವ–ಅರಗಿನ ಮರ]

**ಪೂವಂಡು** (ನಾ). ಹೂವಿನ ರಸ ; ಮಕರಂದ ; ಪುಷ್ಪರಸ : ಅಂಚಿಕೊಂಚಿ ಪೂವಂಡು ಗಳವಿಂದು ರಂಜಿಸುವ ಕಾದಲರಲರ್ ಸವಿಮಾವು ಪೂವು . . . ಸೊಂಪು ಮೆಂಪಿಂದೀ ಪುರೋಪವನಮೆಸೆದಿರ್ಪುದು (ಕಂಠೀ. ೧೦-೨೦) ; ಬರೆ ಪೀರಿ ಪೂವಂಡನುರೆ ಸೊಕ್ಕಿ ರ್ಝೇಂಕರಿಪ ಮರಿದುಂಬಿಗಡಣದಿಂ . . . ಒಪ್ಪುವೊಂದುದ್ಯಾನಮಲ್ಲಿರ್ದುದು (ಚಿಕದೇ. ೯-೩೬). [ಪೂ₂+ಉಂಡು₂]

**ಪೂವಕ್ಕಿ₁, ಹೂವಕ್ಕಿ** (ನಾ). ೧. ದುಂಬಿ ; ಭ್ರಮರ : ಸುರುಳಿಕೊ ಪೂವಕ್ಕಿಗಳ ಬಳಗವೊ ಅರಿವೆಱೆಯೊ ಪಡೆಯೊ . . . ಪೇಳಲೇನೆಂದ (ಕನಕ. ೦೩-೯೬); ತೀಡೆ ತಂಗಾಳಿ ಪರಿದಾಡೆ ಪೂವಕ್ಕಿ ದಾನಮಾಡೆ ಪರಪುಟ್ಟ . . . ಆರ್ಯಮನುದಿಸಿದಂ (ಗುರುಬಾ. ೩-೦೯). **ಹೂವಕ್ಕಿ** : ೨. ಒಂದು ಬಗೆಯ ಹಕ್ಕಿ : ಹೂವಕ್ಕಿಯ ಇಂಚರ ಟೂವ್ವಿಟ್ಟುವೊ (ಅಹಲ್ಯೆ. ೩೦-೬). 'ಅಲರ್ವಕ್ಕಿ' ಪರಾ. [ಪೂ₂+ಪಕ್ಕಿ]

**ಪೂವಟ್ಟೆ** (ನಾ). ಹೂವುಗಳನ್ನು ಪಟ್ಟಿಗಳಂತೆ ಜೋಡಿಸಿ ರಚಿಸಿದ ಚಿತ್ರ,—ಹಸೆ : ಕತ್ತುರಿಯ ಸಾರವಣೆ ಬಡುಮುತ್ತಿನ ಕಡೆ ಕಂಪು ವಿಡುವ ಕಪ್ಪುರವುಡಿಯಿಂದೊತ್ತಿದ ಲತೆ ಪೂವಟ್ಟೆಯಿನೊತ್ತಿರಿಸಿದ ಬಂಧವಸೆಯ ದೇವಿಯ ಗೃಹದೊಳ್ (ರಾಜಶೇ. ೦೦-೪). [ಪೂ₂+ಪಟ್ಟೆ₂]

**ಪೂವಡಿ** (ನಾ). ಹೂವಿನಂತೆ ಕೋಮಲವಾದ ಪಾದಗಳುಳ್ಳ ವ್ಯಕ್ತಿ : ಶಾಂಭವಲೋಕದ ಗಂಭೀರ ಪೂವಡಿ ಜಂಬೂದ್ವೀಪಕೆ ಪೋಪೆ (ಸೌಂದರ. ೦-೪೪). [ಪೂ₂+ಅಡಿ₁]

**ಪೂವಡಿಗ, ಹುವ್ವಾಡಿಗ, ಹೂವಡಿಗ, ಹೂವಾಡಿಗ** (ನಾ). ಹೂವುಗಳನ್ನು ಕಟ್ಟಿ ಮಾರುವವನು ; ಹೂವಿನ ವ್ಯಾಪಾರಿ : "ಪೂವಡಿಗಂ ತಾಂ ಪುಲ್ಲವಡಿಗನೆಂದು ತಿಳಿವುದು" (ಶಬ್ದ.. ೦೦೦) ; ಅಡಿಗ ಪ್ರತ್ಯಯಕ್ಕೆ–ದೇವಡಿಗಂ, ಪಾವಡಿಗಂ, ಪೂವಡಿಗಂ (ಶಬ್ದಾನು. ೨೦೩ ವೃತ್ತಿ.) ; ಪೊಸ ಪೂವಡಿಗರ ಗರಮಗಗಳ ಕೊಲ್ಲಾಯ್ತರ ನುಡಿಗಾಱರ ಮಾಸ್ತಾರರ ಸಂದಣಿ ಸಲೆ ಸೊಗಯಿಸಿತಾಗ (ಜಗನ್ನಾ. ೦೨-೦೯) ; ಈ ಧರ್ಮವತೀ ಪಟ್ಟಣವು ಸೋಮಸೂರ್ಯವೀಧಿಗಳಿಂದಲೂ . . . ಪೂವಡಿಗರ ಸಾಲಿನಿಂದಲೂ ಒಪ್ಪುತ್ತಿರುವುದು (ವೃಷಭ. ೬). **ಹುವ್ವಾಡಿಗ** : "ಮಾಲಾಕಾರಃ, ಮಾಲಿಕಃ—೨ ಹುವ್ವಾಡಿಗನ ಹೆಸರುಗಳು" (ಅಮರಕೋ. ೩೦೯) ; ಹುವ್ವಾಡಿಗರು ಬಚ್ಚಣೆಯ ಕೆಲಸದವರು ಚಿಪ್ಪಿಗರು . . . ಮುಂಚ್ಚಿಗರು ಮೊದಲಾದ ನಾನಾಜಾತಿಯವರಿಗೆ ಬೇರ್ಬೇರೆ ಬೀದಿಗಳು ಹಂಚಿ (ಕೌಗಂ.

೦೪೩-೭). **ಹೂವಡಿಗ :** ಪಡಪಿಗರು ಬಾವುಗಿಗರಡೆಯಾಡುವವರು ಹೂವಡಿಗರು ಸುವಾರರರಸಾಳುಗಳು . . . ಇಡಿಕಿಬಾದು ಸೊಗಯಿಸಿದರು (ಕೌಂಡಷ್ಟ. ೬ ೩೯); ಹೂವು ಯಾವ ತೋಟದಲ್ಲಿ ಬೆಳೆಯಿತು ಎಂಬ ಚಿಂತೆಯನ್ನು ಪುಟ್ಟಿಕೊಳ್ಳದೆ ರಸಿಕರು . . . ಮುಡಿದು ನಲಿಯಲಿ ಎಂಬ ಹೂವಡಿಗನ ನಿಲವು ನನ್ನದು (೨೦ಶತಕ. VI. ೫೦೯). **ಹೂವಾಡಿಗ :** "ಹೂವಾಡಿಗನೆನಲ್ಕೆ ಹೂ ಮಾರುವವನು" (ಕಕಕ. ೧೦೩); ಹೂವಾಡಿಗನ ಪುತ್ರಿಯರಿಬ್ಬರು ಜಿನದೇವನ ಪೂಜ್ಯನ ಮೇಲೆ ಹೂವನರ್ಚಿಸಿದ ಫಲದಿ ಸ್ವರ್ಗದೀವ್ರಗೆ ದೇವಿಯರಾಗಿ ಪುಟ್ಟಿದರು (ಧ್ಯಾರಚ. ೦೦-೬೬೯).

[ಪೂ₃ + — ಅಡಿಗ₂]

**ಪೂವಡಿಗವೆಣ್** (ನಾ). ಹೂವನ್ನು ಕಟ್ಟಿ ಮಾರುವ ಹೆಣ್ಣು ; ಹೂವಾಡಿಗಿತ್ತಿ : ಕುಸುಮದ ವಸರದೊಳೊಪ್ಪಿದರಲ್ಲಿ ಪೂವಡಿಗವೆಣ್ಣಳದ ನೇಪೆಳ್ದೆನು (ತ್ರಿಪುರಾ. ೬-೧೬). [ಪೂವಡಿಗ + ಪೆಣ್]

**ಪೂವಡಿಗಿತಿ**, ಪೂವಾಡಗಿತ್ತಿ, ಹೂವಾಡಗಿತ್ತಿ (ನಾ). = ಪೂವಡಿಗವೆಣ್ : ಪಾವಡಿಗಿತಿ, ಪೂವಡಿಗಿತಿ, ವಾಲೆವಡಿಗಿತಿ (ಕರ್ಣಾಭಾ. ೦೯೨ ಪ್ರಯೋ). **ಪೂವಾಡಗಿತ್ತಿ:** ವಾಸವರಾಯನ ಓರಿ ಹೂವು ಎಂದು ದೇಶವ ತಿರುಗಿದರು ಪೂವಾಡಗಿತ್ತೇರು (ಜಾಸಗ. ೨೦-೦೦). **ಹೂವಾಡಗಿತ್ತಿ :** ಬಾಗಿಲಲ್ಲಿ ಹೂವಾಡಗಿತ್ತಿಯೊಬ್ಬಳು ಸೊಗಸಾದ ಮಲ್ಲಿಗೆಮಾಲೆಗಳನ್ನು ಹೆಣೆದುಕೊಂಡು ಬಂದಳು (ಕಮವ. ೦೩೦).

[ಪೂವಡಿಗ + — ಇತಿ₁ (< — ಇತ್ತಿ)]

**ಪೂವಡೆ** (ನಾ). ಒಂದು ಬಗೆಯ ವಸ್ತ್ರ (?) : ಕಂಡುಗಂ ಚಿತ್ರಾವಟಿ ಪಟಾಯಿದಪಟ್ಟೆ ಸುವರ್ಣಚೇಲವುಂ ತಿವಟಂ ಪೂವಡೆ ಕರ್ಮಾಂ ನೆರೆವಂ ವಣಾಲೆಡೆಯಂ ರತ್ನಂಗವಸನವುಂ ಪಸನಾಂಗು (ಶಾಂತಿಪು. ೬-೦೦೦). [?]

**ಪೂವಣಿಗ** (ನಾ). = ಪೂವಡಿಗ : ಪೂವಣಿಗಂ ಪಣಿಗಂ (ಕರ್ಣಾಭಾ. ೪೦೬ ಪ್ರಯೋ). [ಪೂ₃ + — ವಣಿಗ₂ (< — ವಳಿಗ₂)]

**ಪೂವರಸೆ** (ನಾ). ಒಂದು ಬಗೆಯ ಕಣ್ಣಿನ ರೋಗ : ಅರಿವಾಳ ಪಟೋಲಂ . . . ತವುಸ್ಸುವಿರಂ ಪೂವರ[ಪಾಠಾಂ. ಪುರಿ]ಸೆ ಸರಿಯೆಂಬ ಪಲವಕ್ಷಿರೋಗವುಂ ಕಳೆಗುಪಂಜನಂ (ಅಕ್ಷರ. ೦೩-೦೩). [?]

**ಪೂವಲಿ, ಪೂವಳಿ, ಹೂವಲಿ** (ನಾ). ೧. ರಂಗವಲ್ಲಿಯಂತೆ ರಚಿಸಿದ ಹೂವುಗಳ ಅಲಂಕಾರ : ಗಂಧಾಂಬುವಿಂದಾದ ಪೂವಲಿಯಿಂ ಚೆಲ್ವೆಸೆದಿರ್ದ ಬೀದಿಗಳ್ . . . ಚೆಲ್ವನಗ್ಗಳಿಸುತ್ತಿರ್ಪುವು ತತ್ಪುರಕ್ಕೆ ಸುರರಾಜವಾಸ ಸಾಮ್ರಾಜ್ಯಮಂ (ಅರಿಷ್ಟ. ೬-೦೦೩); ಇದಿರ ತಪನೀಯಸೋಪಾನಂಗಳ್ ಜಿನಸವನಗಂಧೋದಕಂಗಳಿಂ ಪೂವಲಿಯುಂ ಮುದವೆ ತಲೆಯೊಳ್ ಪೊತ್ತಂತಿರ್ಪುವು (ಶಾಂತಿಪು. ೭೦-೬೭); ಸೊಗಯಿಪ ಸುಧಾಬ್ಧಿವೋಹದೊಳಿಂದು ಬಂದನ್ನವಾಗನು ದಟ್ಟಡಿಯಿಡುವ ರಾಜಾಂಗಣವಿದಂದು . . . ಸಮ್ಮಾರ್ಜನೆಯ ಮಾಡಿ ಮಲ್ಲಿಗೆಯ ಪೂವಲಿಯ ಕೆದಱಿ ಗಗನವನಲಂಕರಿಸಿದಳೊಯೆನಿಪ್ಪಂತೆ . . . ಮೃಗಧರಂ ಕಣ್ಗೆಸೆದುದು (ಜಕಕಾ. ೩-೫೦). ೨. ರಂಗವಲ್ಲಿ : "ಕಡೆಯುಮೆಂದುಂ, ಪೂವಲಿಯೆಂದುಂ ರಂಗವಲಿ" (ಶಬ್ದಾ. ೩೩-೪೦೯). ೩. ಹೂವುಗಳ ಮಳೆ ; ಪುಷ್ಪವೃಷ್ಟಿ : ಸುರವೈರಿಯ ವಧದಿನದೊಳ್ ಧರೆಗುದಿರ್ದುವು ತಾರಕಂಗಳೆನೆ ಪೂವಲಿ ಭಾಸುರವಮೃಯ್ದು ಮಲ್ಲರಂಗದೊಳ್ (ಜಗನ. ೬-೪೦); ಮಲಯಾದ್ರಿಗಂಧವಹನರ್ತಕನು ತಳಿರೆಂಬ ಕರಗಳಿಂ ಪೂವಲಿಯ ಸಲೆ ಸೂಸಿ (ಕೃಷ್ಣಶತಂ. ೦-೬೦); ಸೂಸಿ ಪೂವಲಿಯನಾಹ್ವಾನಗೈವಳಿದೊ ಈ ವಿಪಿನರಾಜೇಶ್ವರಿ (ಪ್ರಿಯಾತಮಾ. ೦೯೩-೨೬). **ಪೂವಳಿ :** ೧. ಸುರಹೆಯ ಕಾರಣೆಯ ಗಂಧೋದಕದ ಚಳೆಯಗಳ ಸೌರಭದ ಪೂವಳಿಗಳಲಿ ಶೃಂಗಾರಿಸಿದ ಬೀದಿಗಳ ಸೊಬಗಿನ ಸಾರದಲಿ ಸಮನಿಸಿದುದತಿ ಸೌರಭ ಬನವಸೆಯ (ಪ್ರಭುಲಿಂ. ೩-೯). ೩. ಇಳೆಯುಂ ಪಾದಾಬ್ಜರಾಗಂ ಮಱುರಜಿ ಘುಸೃಣಾಂಭಶ್ಛಟಾಸಕ್ತಿಯಿಂ ಪೂವಳಿಯಿಂ ದಿಕ್ಚಕ್ರಮಂ . . . ಪೂರಿಸೆ ನೆರೆಮಂದಜಸ್ರಂ ಪುರಸ್ತ್ರೀಸಪಸ್ರಂ (ಜಗನ. ೦೩-೬೯). **ಹೂವಲಿ :** ೧. ಹೂವಲಿಯ ವೀಥಿಗಳ ನವರತ್ನಾವಳಿಯ ಸೂಸಕದ ಭದ್ರದ ಲೋವೆಗಳ ಲಂಬಳವಲೆಸೆದವು ಕೇರಿಕೇರಿಗಳು (ಕುಮಾ್ಯ್ರಾಭಿ. ೧೮-೯೭); ಹೂವಲಿಯ ವುರರಚನೆಗಳ ಸಂಭಾವನೆಯನೆಸಗುವುವು (ಶಿವತ. ೧-೭-೯).

[ಪೂ₃ + ಬಲಿ₃]

**ಪೂವಲಿಗೆದಱ್, ಪೂವಲಿಗೆವಱು** (ಕ್ರಿ). ಹೂವುಗಳನ್ನು ಚೆಲ್ಲು; ಪುಷ್ಪಗಳನ್ನು ಹರಡು : ಪೂವಲಿಗೆದರ್ದ ಸಂಪಗೆಯೆಸಳ ಪ್ರಸರದಿಂ ಸುವರ್ಣದ್ವೀಪದಂತೆಯುಂ . . . ಅಪ್ಪ ಮಾರ್ಗಮಂ ನೋಡುತೆ (ಶಾಂತಿಪು. ೦೦೧೦); ನಲಿದು ನರ್ತಿಸುವ ಪೂವಲಿಗೆದರ್ವ . . . ಪೂಗಳ ಬೊಂಚಿಗಳ ಸಾಲ್ಗಳಿಂದೆ ಚೆಲ್ವಾದುದಾ ಬನಂ (ಕಬಕ್ಕಿ. ೪೩-೨೬). **ಪೂವಲಿಗೆದಱು :** ಪೂವಲಿಗೆದಱಿದ ಪೊಂಗೇದಗೆಯ ಗಱಿಯ ಕಿಱುವಾಮಳ್ಗೆ ಬಱಿದೆ ಭೃಂಗಾಳಿಗಳಂ ಮಾಡಿಯುಂ . . . ಎಂತಾನುಂ ತತ್ಕಾಂತೆ ಒಂದೆರಡಡಿಯನಿಡುವಲ್ಲಿ (ಶಾಂತೀಶ್ವ. ೩೬); ಅವಱೆಡೆಯೆಡೆಯೊಳ್ ಪೂವಲಿಗೆದಱಿದಂದದಿಂ ಪ್ರಕೀರ್ಣಕಂಗಳಿರ್ಪುವು (ವರ್ಧಮಾ. ೦೦-೩ ಆ); ಕತ್ತುರಿಯ ಕೆಸಱಿನಲಿ ಸಾರಿಸಿ . . . ಸುರಕುಜಕುಸುಮದಲಿ ಪೂವಲಿಗೆದಱಿ . . . ಸೇವೆಯ ಮಾಳ್ಪರಮರಿಯರು(ಶಾಕ್ಕರಾ. ೩೨-೩೩). [ಪೂವಲಿ + ಕೆದಱು₁]

**ಪೂವಲಿಗೆದಱು** 'ಪೂವಲಿಗೆದಱ್' ನೋ.

**ಪೂವಲಿಗೆಯ್** (ಕ್ರಿ). = ಪೂವಲಿಗೆದಱ್ : ಪೂವಲಿಗೆಯ್ದು ಪೂವಿನ ತೊಡಂಬೆಯ ನಿಬ್ಬರಮಪ್ಪ ಸೋಂಕಿನೊಳ್ ನೋವುವೆನಿಪ್ಪ ಮೆಲ್ಲಡಿಯ ನೆಂತಿಡುವಂ ಮಹಿಪಂ ತಪೋವನಸ್ರಾವವಿಕೀರ್ಣಮಪ್ಪೆಡೆಯೊಳ್ (ಮಲ್ಲಿಕಾ. ೧೦-೩೫); ಸ್ತನಕಲಶಂ ಕದಕ್ಕದಿಸೆ ಸೋರ್ಮುಡಿ ಪೂವಲಿಗೆಯ್ಕೆ . . . ತಾಂ ತಳರ್ದತ್ತು ವಿಲಾಸಿನೀಜನಂ (ಕುಸುಮಾ. ೩-೯೯).

[ಪೂವಲಿ + ಕೆಯ್₁]

**ಪೂವಲಿಗೊಡು** (ಕ್ರಿ). = ಪೂವಲಿಗೆದಱ್ : ಮಣಿಮಯಕಳಶವಕ್ತ್ರದ ವಿಷಣ ನಿರ್ಜನದೆಡೆ ಕುರೂಪಾದ ಲಲನೆ ಪೂವಲಿಗೊಡದ ಮಾರ್ಗಸ್ಥಳದ ಕೋವಿದಮನುಜರಿಲ್ಲೆನೆ ಹೊಳಲ ಮಹದೈಶ್ವರ್ಯವನು ವರ್ಣಿಸುವರಾರು (ಜೀವಂತ. ೨-೨೩). [ಪೂವಲಿ + ಕೊಡು₁]

**ಪೂವಲ್ಲಿ** (ನಾ). ಹೂವು ಬಿಡುವ ಬಳ್ಳಿ; ಪುಷ್ಪಲತೆ : ಪೂವಲ್ಲಿ ಹಾಳಾಗಿ ಮಾವುಫಲಗಳು ಪೋಗಿ ಗೋವುಗಳೆಲ್ಲವು ಮಾಲು ಕೊಡದಾಗ ಜಗದೊಳಗೆ ಸಾವು ಪೆಚ್ಚುವುದು (ಕಾಲಜ್ಞಾ. ೬೬-೧೦೦); ಓರಿದೆನಿಸುವ ಕಲ್ಪವೃಕ್ಷ ನಾನಾಬಗೆ ಪರಿಮಳಪೂವಲ್ಲಿಗಳು ವರದಿವ್ಯಸರಸಿಯ ಬಳಸಿದುದ್ಯಾನದ ಮೆಱೆದುವು (ಶಿಂಶಪು. ೨೩-೩೩). [ಪೂ₃ + ವಲ್ಲಿ₂]

**ಪೂವಸರ** (ನಾ). ಹೂವು ಮಾರುವ ಅಂಗಡಿ : ಪ್ರೀತಿ ವಿಗೆ ಮಾಲೆಗಾರ್ತಿಯರುರಿಸಿರುತಿರ್ದ ಸವಿಮಾತಿನರ್ ಮಧುಪರವಮೊಡಗೂಡಿ ಕಂಪುಗಳ ಜಾತಿಯಂ ಬೇಱಿಬೇಱಿದಿಸುತೆ ಸುಳಿಗಾಳಿ ಪೂವಸರದೊಳ್ ಮೆಱೆದುದು (ಕಬಕ್ಕಿ. ೦೨-೩); ಮದಹಸ್ತಿಗಮನೆ ಮತ್ತೋರ್ವಳಾ ಪೂವಸರದವನಕ್ಕೆ ಮಂಗಡೆ(ಯೊಳಿಟ್ಟು) ಸಾಣೆಯನು ಮೃಗಮದಕುಂಕುಮಂಗಳಂ ಧರಿಸಿ ಪೋಷಣೆಗೆಯ್ಯೆ (ವಂಕಾರು. ೦-೯-೨೬). [ಪೂ₃ + ಪಸರ]

**ಪೂವಸೆ** (ನಾ). ಹೂವಿನ ಹಾಸುಗೆ; ಪುಷ್ಪಶಯ್ಯೆ : ಕೋಮಲ ವೀಣಾರುತಿಗಳ್ದ ಪೂವಸೆಗಳೊಳ್ ಪಟ್ಟಿರ್ದ ಸೌಖ್ಯಾಳಿ ದೋಹಲಕೇಳೀ ಮುದಮುಂ ಸಮಂತು ತಳೆದಲ್ ತತ್ಕಾಂತೆಯಿಂತಾದಾಗು (ಕೇಶಿರಾಜ. ೦೨-೩೯); ಪೊಸಸುಸಿಲೊಳ್ ನೃಪಾತ್ಮಜೆಯೋಲಿಂತು ವರಂ ಪಡೆಯಲ್ಕೆ ಕೂರ್ತು ಪೂವಸೆಗೆಸೆವಾಕೆಯಿಂ ಬರಿಪುದುಂ (ಕಹಿ. ೦-೩೯); ಕೂರ್ಪಳ ಕೈವಿಡಿದೆಯ್ದು ಪಲ್ಲವಪ್ರಸರಸಮೇತಮಾದ ಮೆಯಿಯೊಳ್ ಪೂಸ ಪೂವಸೆಯಲ್ಲಿ ಕೂಡಿದಂ (ರಾಜಶೇ. ೩-೦೦೩). [ಪೂ₃ + ಪಸೆ₂]

**ಪೂವಳ, ಹೂವಳ** (ನಾ). = ಪೂವಾಡಿಗ : " ಅಲರ್ವಡಿಗನೆನಲ್

ಪುಲ್ಲವಡಕಾಱ ಪೂವಳನೆಂದು ಪೂವಡಿಗನೆಂದೆನಿಸ್ಸಿಂ" (ಕಲ್ಯಾ. ೩೪); ಒಂದುದಿವಸಂ ಪೂವಳಂ ಶೈಲದಾತೆಗಾ ಮಾಲೆಯಂ ಕೊಡುತಿರಲ್ಕೆ (ಕಥಾ. ೧೯-೩). **ಹೂವಳ :** ಮಡದಿ ಮುಡಿದಿರುವ ಹೂ ಯುವಕಂಗೆ ಚೆಂದ ಗುಡಿಯೊಳಗೆ ಕೊಡುವ ಹೂ ದೈವಭಕ್ತಗೆ ಚೆಂದ ಬಿಡಿಗಾಸು ಹೂವಳಗೆ (ಕುಂಕಾಳ. ೩೦೦). [ಪೂ₃ + – ವಳ]

**ಪೂವಳಿ** ‘ ಪೂವಲಿ ’ ನೋ.

**ಪೂವಳೆ** ‘ ಪೂವಟ್ ’ ನೋ.

**ಪೂವಟ್**, **ಪೂಮಳೆ**, **ಪೂವುಟ್**, **ಪೂವಳೆ**, **ಹೂಮಳೆ** (ನಾ). ಮಳೆಯಂತೆ ಹೂವು ಸುರಿಯುವಿಕೆ; ಹೂವಿನ ಮಳೆ; ಪುಷ್ಪವೃಷ್ಟಿ : ‘ ಪೂವಟ್‌ಗಱೆ ’ ಪರಾ. **ಪೂಮಳೆ :** ದುಂದುಭಿಗಳೆಸೆಯೆ ಪೂಮಳೆ ಸುರಿಯೆ (ಸಿದ್ಧರಾ. ೦-೩೬) ; ಅಬುಜಾಸನ ಸುರೇಂದ್ರಾದಿಗಳು ಜಯಜಯ ನಿನದದಲಿ ಸೂಸಿದರು ಸುಮ್ಮಾನದಲಿ ಪೂಮಳೆಯ (ಕೊಕಾ. ೦-೦೦-೨೩) ; ಚಿನ್ನಾರಂಗದ ಮೇಲೆ ಮೆಚ್ಚಿ ಪೂಮಳೆಗಳಂ ಕಱೆದರಮರರ್ (ಕೃಚಿ. ೨೦-೧೨). **ಪೂಮಟ್ :** ಪೂಮಟ್‌ಯು ಕಂಪನಿತಿಂಪು ಪೊದಟ್ಟು ಬಂದು ಬಂಧುರಹಿಮಮಂದಗಂಧವಹಮೆಟ್ಟಱಸಿತ್ರವ್ಯಾತಾಂಶುವಕ್ರಿಯಂ (ಅದಿಪು. ೩-೨೨): ನಭದೊಳ್ ಪೂಮಟ್ ಭೂಮಿಯೊಳ್ ಮರುತಕಂ ದಿಗ್ಭಿತ್ತಿಯೊಳ್ ದೇವದುಂದುಭಿನಾದಂ . . . ಒಪ್ಪುತಿರೆ ಬಂದಂ ಲೋಕನಾಥಂ (ಶಾಂತಿಪು. ೮-೮೦) ; ಪೂಮಟ್‌ಯುತಲ್ಲೊಕ್ಕುವು ಪೂಮರಗಳ ಪೂಗಳ್ (ಕಂಠಾಮ. ೦೦-೦೩). **ಪೂವಳೆ :** ಸರಿದುದು ಪುಸಿವೇಷದ ತೆರೆ ಸುರಿದುದು ಕಯ್ನಾರ ತೆಱದ ಪೂವಳೆ (ಗಿರಿಕ. ೯-೭೦) ; ಸುರಿದುದು ಪೂವಳೆ ಕಾಮಗೆ ನೇತ್ರದೆ ಸುರಿದುದುದಾನಂದಾಶ್ರು ರತಿಗೆ (ಸೋಮಶ. ೦೨-೬೯); ದೇವಗಂಧರ್ವಸಂದೋಹ ಚಿದುರಿಂದ ಪೂವಳೆಯ ಕರೆದು ಪಾಡಿದರಾ ಮರುತ್ಸುತನ ಕೀರ್ತಿಗಳನು (ವಂಕಾರಾ. ೩-೦-೨೯). **ಹೂಮಳೆ :** ಹೂಮಳೆಗಳೆಱಗಿ ಸುರಿದವಾತನ ಮೇಲೆ (ತಿಹರ. ದೇ. ೧೩-೦): ಎಕ್ಕತುಳದಲಿ ಬಂದನಮರರ ಹೆಕ್ಕಳದ ಹೂ ಮಳೆಯ ಹೊಯ್ಲಿನ ಪೂರದಲಿ ಹನುಮ (ಕೊಕಾ. ೩-೯-೬); ದೇವತೆಗಳು ಹೂಮಳೆ ಕರೆದರು (ಭ್ರಾಂತಿ. ೧೩). [ಪೂ₃ + ಮಟ್]

**ಪೂವಟ್‌ಗಱೆ**, **ಪೂಮಳೆಗಱೆ**, **ಹೂಮಳೆಗಱೆ** (ಕ್ರಿ). ಮಳೆಯಂತೆ ಹೂವುಗಳನ್ನು ಸುರಿಸು ; ಪುಷ್ಪವೃಷ್ಟಿ ಮಾಡು : ಅಱಿವುದುಮ ಪಾತಿಗಳ್ ಪೂವಟ್‌ಗಱೆದುದು ನಭದಿಂ (ಶಾಂತಿಪು. ೦೨-೩೩) ; ಸುರರ್ ಪೂವಟ್‌ಗಱೆವರ್ (ಕಬ್ಬಿಸು. ೦೦೩ ಕ್ರಿಯೋ). **ಪೂಮಳೆಗಱೆ :** ಸುರರು ಪೂಮಳೆಗಱೆದರು (ಕೊಕಾ. ೯-೦೨-೩೮); ದೇವದುಂದುಭಿ ಮೊಳಗೆ . . . ಪೂಮಳೆಗಱೆಯೆ (ಶ್ರೀಚರಿ. ೩-೧೦). **ಹೂಮಳೆಗಱೆ :** ದೇವದುಂದುಭಿ ವೃಂದವುಲಿಯಲು ತೀವಿ ಹೂಮಳೆಗಱೆಯೆ . . . ಪ್ರಮಥರುತ್ಸವಿಸೆ (ಬಸವಪು. ೦೮ ೬೮) ; ನಾಕಜನಿವಹ ಹೂಮಳೆಗಱೆದು ಹರುಷಿಸು ಪವನಜನ ತಾಯರ್ ಭೀಮಸೇನನುಯೆಂದು ಹೆಸರಿಡಲು (ಸಂಕರ. ೦೩-೩೬); ಅಮರಿರ್ವರಿಗೆ ಹೆತ್ತಿನೊಸಲಮರಾಂಗನೆಯರು ಹೂಮಳೆಗಱೆದರು ರಣ ರಂಗದೊಳಗೆ (ಸೋಕಶ. ೩೯-೨೯). [ಪೂವಟ್ + ಕಱೆ₁]

**ಪೂಪಾಡಗಿತ್ತಿ** ‘ ಪೂವಡಿಗಿತಿ ’ ನೋ.

**ಪೂವಾಸು₁** (ಕ್ರಿ). ಹೂವಿನ ಹಾಸುಗೆಯನ್ನು ರಚಿಸು : ಚಂದನದೆಳ ದಳಿಗರ್ಳಂ ಪಾಸಿ ಮಲ್ಲಿಗೆಯಲರ್ಗಳಂ ಪೂವಾಸಿ (ಕಂಕಾ. ೩-೬ ೫).

[ಪೂ₃ + ಪಾಸು₁]

**ಪೂವಾಸು₂** (ನಾ). = ಪೂವಸೆ : ಪೂವಾಸಿಗೆ ತಿಱಿವರೆಂಬ ಭಯದಿಂ ಮುಟ್ಟಿಂಗಿದ ಚೆನ್ನೆಯ್ದಲ್ಗಳಂತಿರೆ ನಿರಂತರಾಶ್ರುಪಾತದಿಂ ಕೆಂಪುದಳೆದ ಕಣ್ಮಲರಸೋಳಿಯ್ದುಪವನದ ತಿಳಿಗೊಳಂಗಳೊಳು ಪುಗುವರ್ (ಶಾದಂಕಾ. ೩೩೯) ; ತರಳೆ ನಿನ್ನಯ ವಿರಹದಿಂದ ಪೂವಾಸಿನೊಳು ಪೊರಳೆ ಮತ್ತಲ್ಲಿ ಸೈರಿಸಲಾಱದೆರ್ದು ಕುಳ್ಳಿರಲ್ (ಅಜ್ಞಾತ. ೨-೨೯) ; ಪಾಸಿದ ಪೂವಾಸಿನೊಳು ಸ್ಮರಾಸಿಯಂದದಿ ಮಲಗಿತಾಳೀ ಮಡದಿ (ಜಗಂಕ. ೩೩ ೬೩೩).

[ಪೂ₃+ಪಾಸು₂]

**ಪೂವಿನಪಿಪ್ಪರಗೆ** (ನಾ). ಒಂದು ಊರಿನ ಹೆಸರು ; ಈಗಿನ ವಿಜಾಪುರಜಿಲ್ಲೆಯ ಬಾಗೆವಾಡಿ ತಾಲ್ಲೂಕಿನ ಹೂವಿನ ಹಿಪ್ಪರಗೆ ಎಂಬ ಊರು : ಪೂವಿನ ಪಿಪ್ಪರಗೆ[ಯ] ನಾಲ್ಕು ದೆಸೆಯ ಪೊಲ ಮೇರೆಯುಂ [ನ]ಡುಸರಿಯಾಗಿ ನಡದು[ಂ] ಕೊಟ್ಟರ್ (ಶಾಸನ. XI-i, ೯-೨೩; 862). [< ಪೂ₃ + ಪಿಪ್ಪರಗೆ]

**ಪೂವಿನಪುಲ್ಲಿಮಂಗಲ** (ನಾ). ಒಂದು ಊರಿನ ಹೆಸರು : ದಂಪೂರು ತೊವಗೂರು ಪೂವಿನಪುಲ್ಲಿಮಙ್ಗಲ . . . ಪರಪೂರು ಕೊಡಗೆ ಇವಿತು ಮುಮ್ ಪೊಲಮೇರೆ ಸಹಿತಂ ಇತ್ರನ್ ಎಱೆಯಪಂ ಕೇಪುಱರನ್ ನಾಗ [ತ್ರ]ರಱೆಗ (ಎಪಿ. IX. ಕೆಂಗೇರಿ. ೯೩-೬ ; ಸು. ೩೯೦).

[< ಪೂ₃ + < ಪುಲ್ಲಮಂಗಲ]

**ಪೂವಿಲ್**, **ಪೂವಿಲು**, **ಪೂವಿಲ್ಲು** (ನಾ). ಹೂವಿನ ಧನುಸ್ಸು ; ಮನ್ಮಥನ ಬಿಲ್ಲು : ‘ ಪೂವಿಲ್ಲ ’ ಪರಾ. **ಪೂವಿಲು :** ‘ಪೂವಿಲುಗಾಱ’ ಪರಾ. **ಪೂವಿಲ್ಲು :** ಸ್ಮರನಿಗೆ ಪೂವಿಲ್ಲನು ಕೊಡುವಂದದಿ ಮರಗಳಾ ಮಾಲೆಯು ತನ್ನ ಹರಣದೊಡೆಯನ ಕೈಯಲಿ ಪೂಮಾಲೆಯಾದರದಿಂದಿತ್ತಳು (ಜೈಮಿನಿ. ೦೩-೨೯) ; ಕಾಮನ ಪೂವಿಲ್ಲ ಗೊಂಡೆಯಗಳನೊರ್ವ ಭಾವಕಿ ವಂಚಿಸಿ ತಂದು ಪೂವಿನಂಗಡಿಯೊಳಿರಿಸಿ ಮಾಱುವೊಲು ಪೊಸ ಸೇವಂತಿಯರಲ ಮಾಱುವಳು (ಅಂಶಕ. ೩-೬೪) ; ಪೂವಿಲ್ಲನೇರಿಸಿ ಕಾಮನು ಕೆಣೆಗೊಂಡು ಟಂಕಾರ ಮಾಡಿದನಲ್ಲ (ಆಂತಾಕ. ೦೯೯-೯). [ಪೂ₃ + ಬಿಲ್₂]

**ಪೂವಿಲು** ‘ ಪೂವಿಲ್ ’ ನೋ.

**ಪೂವಿಲುಗಾಱ** (ನಾ). ಹೂವಿನ ಬಿಲ್ಲಿನಲ್ಲಿ ಹೂಬಾಣಗಳನ್ನು ಹೂಡುವ ಬಿಲ್ಲುಗಾರ ; ಮನ್ಮಥ ; ಪುಷ್ಪಬಾಣ : ನಾಡಿಮೂಲವ ತೀದು ಗೆಲವಿತ್ತು ಸುಸಿಲಿಂಪುಗಲಿಸಿ ಕಾಣಿಪರು ಪೂವಿಲುಗಾಱನಾಗ ಮಾರ್ಥವನು (ಕೃಕವೇ. ೨-೦೦೩). [ಪೂವಿಲು (<ಪೂವಿಲ್) + –ಗಾಱ]

**ಪೂವಿಲ್ಲ** (ನಾ). ಕಾಮ ; ಮನ್ಮಥ : " ಅಲರಂಬು ನನೆವಿಲ್ಲ ಬಲ್ಲಹ ನೆಸಲ್ ಪೂವಿಲ್ಲ ಕಾವಂ " (ಕರ್ಣಾಟಕ. ೮) ; ಪುಣ್ಣಲ್ಲದೆಯುಂ ಪೂವಿಲ್ಲನ ಶರಹತಿಯಿಂ ನೋವನೆ ತಳೆದಪುದಿದನ್ನ ಹೃದಯಂ (ಜಗನ್ನಾಥ. ೦೦-೬೦); ಪೂವಿಲ್ಲನ ಚಾಪಸಂಜನಿತಮೋಹನನಾದಮೊ ಸೋಮರಾಜಭೂವಲ್ಲಭ ನಿಂಪುವೆತ್ತ ವಚನಾಮೃತಮೋ ವಿಬುಧಾನುರಾಗಮೋ (ಉದ್ಭಟ. ೦-೩೩) ; ಹೊರ್ಲಹದೊಂದು ಹೆಣ್ಣೇನು ಕಂಡಱಗಿ ಪೂವಿಲ್ಲನ ನೆಱೆ ನಂಗಿತಾಗ (ಸೋಕಶ. ೧೨-೬). [ಪೂವಿಲ್ + –ಅ₁]

**ಪೂವಿಲ್ಲು** ‘ ಪೂವಿಲ್ ’ ನೋ.

**ಪೂವು** ‘ ಪೂ₃ ’ ನೋ.

**ಪೂವುಟ್ಟಿ**, **ಹೂಬುಟ್ಟಿ** (ನಾ). ಹೂವಿನ ಕರಂಡ, –ಬುಟ್ಟಿ : ರಾಣಿ ಕೋರಿದ್ದ ಹಾರವನ್ನು ... ಅದೇ ಪೂವುಟ್ಟಿಯಲ್ಲಿರಿಸಿದಳು (ಚಾರು. ೨೯೨). **ಹೂಬುಟ್ಟಿ :** ದೇವರ ಪೂಜೆಗೆಂದು ಅವರು ಹೂಬುಟ್ಟಿಯ ತುಂಬ ಸಂಪಿಗೆಹೂವುಗಳನ್ನು ತಂದಿದ್ದಾರೆ (ಚೂತ). [ಪೂ₃ + ಪುಟ್ಟಿ₁]

**ಪೂವುಡಿ** (ನಾ). ಹೂವಿನ ಧೂಳು, –ಪರಾಗ : ಅಲರ್ಗುಡಿ ಚಾಮರಂ ನೆಗೆವ ಪೂವುಡಿ ಸೀಗುರಿ ತುಂಬಿಯಂಚರಂ ಸುಲಲಿತಗಾನಂ . . . ಆಗೆ ಬನಮೋಲಗಶಾಲೆವೊಲಾಯ್ತು ಕಾವನಾ (ಕೃಷ್ಣ. ೯-೩೮) ; ತನಿಯುಸಿರ ಪೂವುಡಿಯ ಪೊಸಸೋನೆಯೆನಿತು ? (ಶಾಂತಿಕ. ೦೨೦-೨೮೦) ; "ಉದಿರ್ದ ಪೂವುಡಿ ಬನರಾಣಿಯ ಮೊಗಮಾಡದ ಪಳಿಕಿನ ಪೊಸಂತಿಲೊಳ್ ಬರೆದ ರಂಗವಲ್ಲಿ"ಯಂತಿದ್ದಿತು (ಜಾಜಿಹೂ. ೨೩೯). [ಪೂ₃ + ಪುಡಿ]

**ಪೂವೃಷ್ಟಿ** (ನಾ). = ಪೂವಟ್ : ನಿಟ್ಟಿಸಿ ಬೀರಿವ ಗಜವದನಂಗೆ ಪೂವೃಷ್ಟಿಯ ಸುರರು ಚೆಲ್ಲಿದರು (ಸೋಕಶ ೩೮-೬೪). [ಪೂ₃ + ವೃಷ್ಟಿ]

**ಪೂವೆಂಟೆ** (ನಾ). ತಾವರೆಯಿಂದ ತುಂಬಿದ ಸರೋವರ; ಹೂಗೊಳ : ಪೂವೆಂಟೆಯುಂ ಪೊಱವಟ್ಟುಂಬರವಂನಡುಗದೆ ಪಱಿದು ಮುತ್ತುವ ಮತ್ತಮಧುಕರಂಗಳುಮಂ (ಅಜಿತ. ೫-೬೨ ೮). [ಪೂ₂ + ಬೆಂಟೆ]

**ಪೂವೆತ್ತು**, ಹೂವೆತ್ತು (ಕ್ರಿ). ೧. ಹೂವಿನ ಮಾಲೆಯನ್ನು ಮೇಲೆತ್ತು,–ಎತ್ತಿ ಹಿಡಿ : ಚೆಲ್ವಮಾಡಿ ಪೂವೆತ್ತುವ ಮಾಲೆಗಾರ್ತಿಯರ ನಂದರಕೇಸರಿ ನಿಂದು ನೋಡಿದಂ (ಕುಕಶಾ. ೪-೬೦). ಹೂವೆತ್ತು : ೨. ಹೂವನ್ನು ಕೀಳು,– ತಿರಿ : ಬೆಳಗ್ಗೆ ಪೂಜೆಗೆ ಹೂವೆತ್ತುವುದು ಅವರ ಪ್ರತಿದಿನದ ಕಾರ್ಯಕ್ರಮ (ಜಾಂ). [ಪೂ₂ + ಎತ್ತು₁]

**ಪೂವೊರ್ಕುಳ** (ನಾ). ಹೊಕ್ಕುಳಲ್ಲಿ ತಾವರೆಯುಳ್ಳವನು ; ಪದ್ಮನಾಭ ; ವಿಷ್ಣು : ಬೊಮ್ಮಂ ಪೂವೊರ್ಕುಳನ ಗಂಗಾವರ್ತಸನಾಭಿಯೊಳ್ ನಾಭಿಯೊಳ್ ಪುಟ್ಟಿಯುಂ ಸತ್ಯಲೋಕಕ್ಕೊಡೆಯನಾದಂ (ಕಾಮೂಕ್ಕ. ೦೪೮–೨). [ಪೂ₂ + ಪೊರ್ಕುಳ್ (< ಪೊಕ್ಕುಳ್) + –ಅ₇]

**ಪೂಷ** (ನಾ). ೧. ಸೂರ್ಯ : "ರವಿ ಮಾರ್ತಂಡಂ ಪತಂಗಂ ತಪಿ ತಪನನಿನಂ ಭಾನು ಪೂಷಂ ... ಆದಿತ್ಯನಕ್ಕುಂ" (ಪಟ್ಟಕೋ. ೦೦-೬೪): ಅಘತಿಮಿರಪೂಷನತಿವಿಗತದೋಷ . . . ಪಂಪಾವಿರೂಪಾಕ್ಷನೆಮಗೀಗೆ ಭಕ್ತಿಜ್ಞಾನಸಂಪದವನು (ಹಕಾ. ೦-೪); ಹರಿಯ ಶಿರವರಿದು ಸಿರಿ ಮುಂದಲೆಯ ತಱಿದುಯಿ ವರುಣನಂ ಮೆಟ್ಟಿ ಪೂಷನ ಪಲ್ಗಳಂ ಕುಟ್ಟಿ . . . ವೀರನಂ ಭಂಗಂಬಟ್ಟರೆಸೆ ಜನವಾದ ಬಂದು ನುಡಿದಂ (ಕತಿಂ. ೩-೦೦೪). ೨. ವಿಶ್ವರಕ್ಷಕ; ಜಗತ್ಪಾಲಕ : ಎಲೈ ಸವಿತೃವೇ . . . ನಿನ್ನ ಸಂಚಾರಕಾರ್ಯಗಳಿಂದ ನೀನೇ ಪೂಷನೆನ್ನಿಸಿಕೊಳ್ಳುತ್ತೀಯೆ (ಋಕ್ಸಾರ. ೦೬೬). ೩. ಒಬ್ಬ ವೈದಿಕದೇವತೆ : ಜಗನ್ನಿರ್ಮಾತ್ರಿಯಾದ ರಾತ್ರಿಗೆ ಪತಿಯಾದ ಪೂಷನನ್ನು ನಾನು ಸ್ತುತಿಸುತ್ತೇನೆ. ಸಹೋದರಿಯಾದ ಉಷಸ್ಸಿಗೆ ಉಪಪತಿಯಾದ ಪೂಷನು ನಮ್ಮ ಸ್ತುತಿಗಳನ್ನು ಕೇಳಲಿ (ಋಕ್ಸಾರ. ೦೬೬). ೪. ಹನ್ನೆರಡು ಜನ ಆದಿತ್ಯರಲ್ಲಿ ಒಬ್ಬ : ಧಾತಾ ಅರ್ಯಮಾ ಮಿತ್ರ ವರುಣ ಇಂದ್ರ ವಿವಸ್ವಾನ್ ಪರ್ಜನ್ಯ ಪೂಷ ಅಂಶುಮಾನ್ ಗಭಸ್ತಿಮಾನ್ ತ್ವಷ್ಟ್ರ ವಿಷ್ಣುಗಳೆಂಬವರ್ ಕ್ರಮದಿಂ ದ್ವಾದಶಾದಿತ್ಯರು (ಶಿಕೋ. ೨೬೬). ೫. ಭೂಮಿ. [ಸಂ. ಪೂಷನ್]

**ಪೂಷಕ** (ನಾ). ಸೂರ್ಯ : ಪೂಷಕ ನಿಶೇಶಾಕ್ಷಿಯಾಶಾಂತ ಭಾಸುಯಶ ಶೇಷ . . . ನಂಜೇಶ ಜಯತು (ಗುರುಚಾ. ೦೩-೦). [ಸಂ.]

**ಪೂಷಣ** (ನಾ). ಸೂರ್ಯ : "ಸೂರಃ, ಸೂರ್ಯಃ . . . ಅರುಣಃ, ಪೂಷಾಃ, ದ್ಯುಮಣಿಃ . . . ರವಿಃ–೩೭ ಸೂರ್ಯನ ಹೆಸರುಗಳು" (ಸಿದ್ಯಾಂಕ. ೩೨). [ಸಂ.]

**ಪೂಷೆ** (ನಾ). ೧. ಮನುಷ್ಯಶರೀರದಲ್ಲಿರುವ ಒಂದು ನಾಡಿ : ತರಳ ತಿಳಿ ನಾಡಿಗಳ ಬಾದಶಗಳಿಗೆ ನಾಮಂಗಳಿಂಯಿಡುವರಂ ಸುಷುಮ್ನೆಯು ಪಿಂಗಳೆಯು ಯಿಡಾ ಸರಸ್ವತಿ ಪೂಷೆ ವಾರುಣಿ ಮೆರೆವ ಹಸ್ತಿನಿ ಜಿಹ್ವೆಯಾ ಅಶ್ವಿನಿ ಅಲಂಬುಸೆಯು . . . ಗಂಧಾರಿಯು ವರಸದಪ್ಪದೆಯಿರುವವು (ಗಗಶಾ. ೪-೦೦). ೨. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು : ಅಮೃತಾ ಮಾನದಾ ಪೂಷಾ ತುಷ್ಟಿ ಪುಷ್ಟಿ ರತಿ ಧೃತಿ ಶಶಿನಿ ಚಂದ್ರಿಕಾ ಕಾಂತಿ ಜ್ಯೋತ್ಸ್ನಾ ಶ್ರೀ ಅಂಗದಾ ಪೂರ್ಣ ಪೂರ್ಣಾಮೃತಾ ಕಾಮದಾಯಿನಿಯೆಂಬ ಷೋಡಶಕಲಾಧರಿತನಾಗಿ (ಅಕೀ. ೨೦೪). [ಸಂ. ಪೂಷಾ]

**ಪೂಷ್ಣ** (ನಾ). =ಪೂಷಣ : "ನಿಶಿವೈರಿ ಮಿಹಿರಂ ವಿರೋಚನಂ ಭಾಸ್ಕರಂ . . . ಸಹಸ್ರಾಂಶು ಪೂಷ್ಣವೆನೆ ಸೂರ್ಯನಕ್ಕುಂ" (ಕುಜಿಚಾ. ೦೦–೨); ಕೃಷ್ಣಾಂಗೀ ಯಾತ್ರಾಟನೆ ಪೂಷ್ಣಾಂಗಂ ಕೃಷ್ಣವರ್ತ್ಮಕೃಷ್ಣಗಂ ವೇಣುಪ್ರಾರ್ಜನೆಯೊಳ್ಕೃಷ್ಣಂ ವಿಷ್ಣುಶ್ಚಾರ್ಜನೆಯು ಯತ್ನಮೆಂಗುಂ ವಿಬುಧರ್ (ಕೃಸೂತು. ೫-೦೬೬). [< ಸಂ. ಪೂಷಾ]

**ಪೂಸ**, ಹೂಸ (ನಾ). (ಆಲು) ಒಳಗೊಂದು, ಹೊರಗೊಂದು ನಡವಳಿಕೆ ಇರುವ ವ್ಯಕ್ತಿ; ಡಂಭಾಚಾರಿ : ಭಕ್ತಿಧಾಳಕರ ದರ್ಶನ ಚೋರಕರ ವಾಚಾರಚನೆಗರ ಬಱಿಮಾತಿನ ಪೂಸರ ಈಶ್ವರಭಕ್ತರ ಪರಮೇಶ್ವರನ ರೂಪು ಎನಲಾಗ (ಚಾಕೂಮ್ನ. ೪. ೩೬೦-೨೭); ಹಂದೆಯು ಶೃಂಗಾರ ಪೂಸನ ಕಠಿಸದಂದ ಅಱಿವಿಲ್ಲದವನ ಸಂಗ (ಶುತುಗಂ. ೪. ೨೩೬–೩೮); ವಿರುತಿಗಳ್ ನಿಜವನಱಿದು ಪೂಸರ ಆಸೆಯನಱಿದು ವೇಷಗಳ್ಳರ ನಿಹಿತವ ನೋಡಿ (ಸರ್ವಕ. ೦೨೨-೬೨೪). ಹೂಸ : 'ಹೂಸತನ' ಪಾಠ.

**ಹೂಸಹುಂಡ**=ತೋರಿಕೆಯವನು; ಡಂಭಾಚಾರಿ : ಹೂಸಿ{ಸ}ಹುಂಡನೆಂದಾಡಿದ ಮಾತೆ ನಿರ್ವ್ಯಾಜನನಪ್ಪ ಜಿನೇಂದ್ರನೊರ್ವರ್ ಕೂರ್ತು ಕೊಂಡಾಡಿದೊಡಣ್ಣ ಮುಕ್ತಿ ಮನೆದೊಟ್ಟನೆ ಮಚ್ಚ ಮರಲ್ದು ಬಾರಳೇ (ರರ್ಮಾಪಾ. ೧–೩೩); ಮರ್ತ್ಯರ ಹೂಸಿ{ಸ}ಹುಂಡರ ನಡೆವಳಿಯ ನೀನೊಪ್ಪವಿಟ್ಟೆಯಲಾ (ಶ್ರಶುಲೀ. ೦೩–೦೨); ಮಾಡಬಾರದು ಮಾಡಬಾರದು ಹುಸಿಡಂಭಕ ಹೂಸ ಹುಂತರ ಸಂಗವ (ಅಜಿಂಶೀ. ೦೨೪–೯೩).

[ಪೂಸು₁ + –ಅ₇]

**ಪೂಸಂತೆ** (ನಾ). ಹೂವನ್ನು ಮಾರುವ ಅಂಗಡಿಗಳ ಸಾಲು : ಇನಿತು ಸೊಬಗಂ ಪಡೆದ ಪೂಸಂತೆಯುಂ ಮುಂದೆ ನೆನೆವವರ ಚಿತ್ತಮೆಲ್ಲಂ ಪರಿಪುಳಂ (ಕಂಪು. ೦೦-೫). [ಪೂ₂ + ಸಂತೆ₁]

**ಪೂಸಣಂಬ**, ಪೂಸಣಬ, ಹೂಸಣಂಬ (ನಾ). ಒಂದು ಬಗೆಯ ಸಿಹಿಯಾದ ಭಕ್ಷ್ಯ (?) : ಸರವಳಿಗೆ ಸಣ್ಣಸರವಳಿಗೆ ಮಣಿಸರವಳಿಗೆ ವರಮಧುರ ಪೂಸಣಂಬಂ ಸಮೆದವರಂತೊಳಗೆ (ಶಶಕ. ೬–೦೪). **ಪೂಸಣಬ** : ಅಂಗಾರಕಂ ಕ್ಷೀರಪೂರಿಗೆಯುಂ ಪೂಸಣಬಾದಿ ಭಕ್ಷ್ಯಚಯಮಂ ತಂದಿಕ್ಕಿ ದರ್ಕಾಂತೆಯರ್ (ರರ್ಮಶ. ೨-೩೪). **ಹೂಸಣಂಬ** : ಹಾಲಲವುಗು ಹಾಲಲುಂಡೆ ಹಾಲ ಮಂಡಿಗೆಗಳನಿಟ್ಟು ಮೇಲೆನಿಪ್ಪ ತಱಿಗ ಹೂಸಣಂಬ[ಪಾಠಾಂ. ಪೂಷಣಂಬು]ಮಂ ತೆರಳ್ಕೆ ಇಟ್ಟು (ವೃಶಶ. ಹ ೨೬೬-೨); ತಱಿಗು ಚಕ್ಕುಲಿ ಹೂಸಣಂಬ ಪೂರಿಗೆಗಳಂ ... ಕಱಿಕಂಠನಾರೋಗಿಸಿದೊಡೆ ಇನ್ದಾಮರಿಸಿ ಗರಳ ಸುಧೆಯಂತಿರ್ದುದು (ಸಿಶ್ಯಾ. ೯–೮೫). [?]

**ಪೂಸಣಬ** 'ಪೂಸಣಂಬ' ನೋ.

**ಪೂಸತನ**, ಹೂಸತನ (ನಾ). ದಂಭ; ದಂಭಾಚಾರ : ಆಸೆಯೆಂಬ ಕತ್ತೆಯ ಮೇಲೆ ಪೂಸತನವೆಂಬ ಸಟ್ಟವೇಷ ವೇಷಲಾಂಛನದ ತನ್ನಾತ್ಮವಾಸದ ಪಾಶವನೆತ್ತಿ ಈಶನಱಿಯದ ಸಟ್ಟ ವಿಷಕ್ಕಾಗಿ ಕೈಯಾಂತು ತನ್ನ ದೇವಹಾರಕ್ಕೆ ನಷ್ಟ ಬಂದಿತ್ತು ಬಂಕೇಶ್ವರಲಿಂಗಕ್ಕೆ ಲಾಭವಾಯಿತ್ತು (ಸುಂಕೆಂ. ೪. ೬೨೪-೨೫); ಪೂ[ಪಾಠಾಂ. ಹೂ]ಸತನದಂದವ ಹೇಳಿ ಎಡಗಾಲ ಸಂಧಿಯ ಮೆಟ್ಟಿ ಅನಂಗನ ಬಲೆಯೊಳಗಾದವರಿಗೆ ಘನಲಿಂಗನ ಶುದ್ಧಿಯೇಕೆ (ತಗಮು. ೪. ೪೨೦-೩೪). **ಹೂಸತನ** : ಮೇಲಿನ 'ನಗೆಮಾ' ಪ್ರಯೋಗದ ಪಾಠಾಂತರವನ್ನು ನೋಡಿ. [ಪೂಸ + – ತನ]

**ಪೂಸತ್ವ** (ನಾ). = ಪೂಸತನ : ಕೂಪರ ಕೈಯಿಂದ ಘಾತಕತನದಿಂದ ವ್ಯಾಪರಿಸುತ್ತ ಸುಡು ಆದೇಶವಿ ವಿರಕ್ತಿ ಮಾತಿನ ಮಾಲೆಯ ಪೂಸತ್ವದ ನಿಹಿತ ಲಿಂಗಾಂಗಿಗಳೆಂತಪ್ಪರು (ಚಾಸೋಸಂ. ೪. ೩೯೦-೩೦). [ಪೂಸ+–ತ್ವ]

**ಪೂಸರ** (ನಾ). ೧. ಹೂವಿನ ಹಾರ : ಹೂಮಾಲೆ : ಬಲಗೈಯ ಪೂಸರದೊರ್ವ ವನಿತೆ ನಿಂದಿರ್ದಳುತ್ಸವದಿ (ಮೋಹಕ. ೫-೩೬); ಅವನ ಕರಾಬ್ಜದ ಪರಿಮಳವನು ನಿನ್ನ ಜವಳಿಮೊಲೆಗಳ ಮಧ್ಯದಲಿ ತವೆ ತಿಗುರಿಸಿಕೊಂಡು ಮುಡಿಗೆ ಪೂಸರವ ಬಲ್ಪವಳದೆ ಬಿಗಿದು ಸುತ್ತುವುದು (ಕಂಕಂ. ೬–೦೩೪); ತುರು ನಡೆವ ದೆಸೆಗೊಲ್ದು . . . ಸರಳಿಸುತುಮಾಡುತುಂ ಕರು ಪಿಂತನೆಯೆ ಪೋಪ ಪಾಂಗಿನಿಂ ಪೂಸರದ ಪಥಕೆ ಪೊರಮಟ್ಟೆ ನಾಂ (ಸಂಶಕ. ೨೮-೬). ೨. ಹೂವಿನ ಬಾಣ; ಪುಷ್ಪಬಾಣ; ಮದನಾಸ್ತ್ರ : ಅಟ್ಟರಿಪಡೆದ ಭ್ರೂಲತೆ ಸಿಂಗಾಡಿಗಳೊಟ್ಟೀರಗಣ್ಣ ಪೂಸರದಿ ಎಚ್ಚುಱುವರ ಜಿತೇಂದ್ರಿಯರೆರ್ದೆಯನು ತಟ್ಟುರ್ಚಲು ವನವಧೂಟಿಯರು (ಮೋಹಕ. ೦೪–೯೩); ಕಬ್ಬಿನ

ಬಿಲ್ಲಲರ್ವಕ್ಕಿಯ ತಿಬ್ಬಂ ಒಲಿದತನು ಪೂಸರಂಗಳನಿಸಲಾ ಉಬ್ಬೆಗೆ ಕೊಬ್ಬಿದ ಪೆಣ್ಣಂ ತಬ್ಬಿದೊಡದಱಬ್ಬು ನಿಲ್ಕುಮಿಂತಿದು ಸುಖಮೇ (ಕಬ್ಬಿ. ಸಾ. ೫೮ ಶ್ರಹೋ); ಮದನಶಬರಸಂಯಮಿಮೃಗಗಳಿಗಾಗ ಕದುಬಿ ಪೂಡಿದ ಪೂಸರಕೆ ಪುದುಗಿದ ಮಿಂಟೆಗಳೆನೆ ಪರಡುಗಳತಿಮುದದಿನಿತ್ತುವು ನೋಳ್ಪರಿಗೆ (ಕಂಕಟ. ೯–೧೯). ೩. ಕಾಮಂ; ಪುಷ್ಪಾಸ್ತ್ರ; ಮನ್ಮಥ: ಎಳಿದೆ ರ ನನೋಡಿಪೆನೆಂದು ಪೂಸರಂ . . . ಪಡೆಯೆಲ್ಲಮಂ ಪಲವುಂ ಸನ್ನಣದಿಂ ಬರಲಿವೆಂದು ವೇಟ್[3] (ಕಬ್ಬಿಗ. ೧೦೩); ವಾಸರವಾಹವಹನ ಪೂಸರನಂಗ ದಹನಕರ . . . ಲೋಕಾಧ್ಯಕ್ಷ ಸಲಹೆಮ್ಮನು (ತಂಕ್ಷ. ೨೦-೦); ಚೆನ್ನಿಗನೆ ಸೂಸಿ ನಿನ್ನಯ ರತಿಸುಖದ ವಿಲಾಸದ ಪೂಸರನುಱಬ ನೀ ಬಡಿಸೊ (ಕಂಕಟ. ೦೦–೩೨). [ಪೂ₂ + ಸರ₃]

**ಪೂಸರಂಬಡೆ** (ಕ್ರಿ). ಹೂವಿನ ಗುಚ್ಛಗಳನ್ನು ಹೊಂದು; ಹೂಮಾಲೆ ಯನ್ನು ಧರಿಸು: ನಿನ್ನಡಿಯಂ ನೆರವಿಲ್ಲದ ನಂಬಿದೆವೆಂಬರಸರ ಚೆನ್ನ ಪೊನ್ನ ನೆಲೆವಾಡದಂತ ಪೂಸರಂಬಡೆದ ಕೊಸಗಿನ ಮರಂಗಳೊಳಂ (ಕಬ್ಬಿಗ. ೮೯). [ಪೂಸರ + ಪಡೆ₁]

**ಪೂಸರಗರ್ಭಿಣಿ** (ನಾ). ಮನ್ಮಥನನ್ನು ಗರ್ಭದಲ್ಲಿ ಧರಿಸಿದವಳು; ರುಕ್ಮಿಣಿ: ಮಾಣಿಕ್ಯಸಿಂಹಾಸನದೊಳು ಕೃಷ್ಣ ಕುಳಿತು ಪೂಸರಗರ್ಭಿಣಿ ಮೊದಲಾದ ರಾಣೀವಾಸಕ್ಕೆ ವನವನೊಪ್ಪಿಸಿದ (ನೇಮಿಚಕ. ೯-೩೩). [ಪೂಸರ + ಗರ್ಭಿಣಿ]

**ಪೂಸರದಹನ** (ನಾ). ಕಾಮದಹನ: ಪೂಸರದಹನ ಕಾಮೋತ್ಪತ್ತಿ ವರಶಂಬರಾಸುರವಧೆ ಕಂತುಸುತನ ಭಾಸುರಲೀಲೆ ಬಾಣನ ಗೆದ್ದ ಜಯಲಕ್ಷ್ಮೀಶನ ಕೃತಿಯ ವರ್ಣಿಪೆನು (ನೇಮಿಚಕ. ೦ ೩೩). [ಪೂಸರ + ದಹನ]

**ಪೂಸರಲ್**, ಪೂಸರಲು, ಪೂಸರಳು (ನಾ). ಹೂವಿನ ಬಾಣ; ಕಾಮನ ಬಾಣ: ಇಂದು ನೀನೆನಗೋಸುಗ ಧೂರ್ಜಟಿಯ ಮೇಲೊಂದು ಪೂಸರಲಿಂದಲೆಸೆಯೊ ನೊಂದು ಲಲಾಟನೇತ್ರದ ತೆಱೆದರೆ ನೀನು ಬೆಂದು ಹೋದವೆ ಬೇಡ ಮಗನೆ (ನೇಮಿಚಕ. ೬-೨೬); ಕಬ್ಬುವಿಲ್ಲುಂಬಿವೆದೆ ಪೂಸರಲ್ಬೂಣ್ದಿಸಲ್ ನಿಬ್ಬರವಾದು (ತ್ರಿಪುರಾ. ೬-೦೭). **ಪೂಸರಲು**: ಕಾಣದಾರದು ಪುಂದ್ರೇಕ್ಷುಕೋದಂಡನೊ ಬಾಣ ಪೂಸರಲುಗಳಿಲ್ಲ . . . ಜಾಣನಾರೆಂದು ನೋಡಿದರು (ನೇಮಿಚಕ. ೦೯ ೬೦). **ಪೂಸರಳು**: ಪೂಸರಳಿಂದೆ ಶಿವನ ತಟ್ಟನೆ ತಾಗಲಿಕ್ಕುವೆನೆಂದು ಬಾಸೆಯ ಕೊಟ್ಟ ಮನ್ಮಥ ಜೀವನಿಗೆ (ನೇಮಿಚಕ. ೩-೬೦). [ಪೂ₂ + ಸರಲ್₁]

**ಪೂಸರಲ**, ಪೂಸರಳ (ನಾ). ಹೂವುಗಳ ಬಾಣವುಳ್ಳವನು; ಮನ್ಮಥ: ತೊಳಪ ಕೋರವೊಲೆಗಳೆಂಬ ಪೂಗೊಂಚರ್ ಪೂಸರಲನೆಂಬ ತುಂಬಿಗಿಂಬಾಗೆಯುಂ (ಕಬ್ಬಿಗ. ೦೨೩); ಪೂಸರಲನ ಜಸಮಂ ದೂಸರಮಂ ಗೆಯ್ದನ . . . ದಿವಿಜಾಸುತನತಪದನಂ . . . ನುತಿಸಿದ ವನಭವನ (ಉದ್ಭಟೀ. ೬-೦೯); ಸೂಸುವೋಹನದ ಸಿಂಗರದೊಟ್ಟು ತನ್ನ ವಿಲಾಸಿನಿಯರ ಬಳಸಿನೊಳು ಪೂಸರಲನ ಪುಣ್ಯದೇವತೆಯಂತಿರ್ದ ಭಾಸುರಾಂಗಿಯ ಕಂಡರಾಗ (ಶಕಟ. ೯೦–೯೯). **ಪೂಸರಳ**: ಮೈಸೂರಧಿಕಾರಿಯಿವನೀಗ ಚಿತ್ತ್ರಸು ಪೂಸರಳನ ಪಟ್ಟದಾನೆ (ಕಂಕಟ. ೨೩ ೬೦). [ಪೂಸರಲ್ + –ಅ₁]

**ಪೂಸರಲು** 'ಪೂಸರಲ್' ನೋ.

**ಪೂಸರಳ** 'ಪೂಸರಲ' ನೋ.

**ಪೂಸರಳು** 'ಪೂಸರಲ್' ನೋ.

**ಪೂಸರಿ** (ನಾ). ಹೂವಿನ ಮಳೆ; ಪುಷ್ಪವೃಷ್ಟಿ: ವೇಣನೆಧರಗೀಶ ಪ್ರತ್ಯಕ್ಷವಾಗಿ ಸುರದುಂದುಭಿಯೊಳು ಪೂಸರಿಯೊಳು ಕೈಲಾಸಗಿರಿಗೆ ಕೊಂಡೆಯ್ದ ಸೋಮೇಶ (ಕೃರಚೀ. ೦-೨೯೯). [ಪೂ₂ + ಸರಿ₁]

**ಪೂಸಿ** 'ಪೂಸು₁' ನೋ.

**ಪೂಸಿಕೆ** (ನಾ). ಬಳಿಯುವಿಕೆ; ಹಚ್ಚುವಿಕೆ; ಲೇಪನ: ಭರದ ತೊಲೆ ಸಿಡುಗಂಭ ಜಂತೆಸುಸ್ಸಿಗಳುಮಾ ನರಗಳೇ ಕಟ್ಟುಮಿಂಡಿಗೆ ಮಾಂಸ ಪಂಕದಾ ಸಱಯಾ ಪೂಸಿಕೆ (ಲಕ್ಷಂ. ೩೯–೮೨). [ಪೂಸು₁ + –ಇಕೆ]

**ಪೂಸಿಮಾತು** (ನಾ). ಪುಸಲಾಯಿಸುವ ಮಾತು; ರಮಿಸುವ ಮಾತು: ಅವಳು ಅಳುವ ಹುಡುಗನನ್ನು ಪೂಸಿಮಾತುಗಳಿಂದ ಸಮಾಧಾನಗೊಳಿಸಿದಳು (ಬೂತ). [ಪೂಸಿ (<ಪೂಸು₁) + ಮಾತು₁]

**ಪೂಸು₁**, ಪೂಸು₁ (ಕ್ರಿ). ೧. ಬಳಿ; ಸವರು; ತೊಡೆ; ಲೇಪಿಸು: "ಪೂಸು–ವಿಲೇಪನೇ, ಅಪಾನವಾಯೌಚ" (ಶಮಂಚ); ಏವಿರಿದಿದೆನ್ನ ಭುಜಾಸಿಗೆ ತೇದು ಪೂಸಲುಂ ನೆಱೆಯದು ನೀನಿರಾನೆ ರಿಪುಸೇನೆಗೆ ಸಾಲ್ವೆಂ (ಕಾವ್ಯಸಾ. ೯೦೦ ಕೂದ್ರಳ); ಏಮ್ಮ ಮಾವಂ . . . ಕೆಱೆಗೆವೋಗಿ ವಿಮಾನಗಳ್ ತಲೆಯಂ ಪೂಸಲೆಣ್ಣೆಯನಪ್ಪುಡವೆಱೆಯಿಸಿಯುಮಾಱಯಂ (ವಡ್ಡಾರಾ. ೯–೦೬); ಪೂಸಿದರು ಸೇವಕರು ಪರಿಮಳ ವಾಸಿಸುವ ಸಿರಿಗಂಧ ವಸು (ಕೊರಚ. ೬-೨೬-೬೦). ೨. ತೊಳೆ; ಪ್ರಕ್ಷಾಲನ ಮಾಡು: 'ಬಾಯಪೂಸು' ಪರಾ. ೩. ಪರಿಮಳವನ್ನು ಕೊಡು; ಸುವಾಸನೆ ಯನ್ನು ಕೊಡು: ಅರೆದ ತೆಂಗಾಯ ಸವಿಹಾಲು ಸಕ್ಕರೆ ಬೆಣ್ಣೆವೆರಸಿ ಪಾಕಂ ಮಾಡಿ ಪೂಸಿದ[ಪಾಠಾಂ. ಪೂವಿನೊ, ಹುವ್ವಿನೊ]ಗ್ಗರಣೆಯಂ ಕೊಟ್ಟು ಪರಿಪಾಳಿವಿಡುವುದು (ಸೂಪಶಾ. ೯-೬೨). ೪. (ಅಲಂ) ಸಲ್ಲಿಸು; ಕೊಡು: ಪೂಸಿಯ ನೀ ಮಾಡುತನ್ನನು ಪೂಸಿವರೆ ಧನವನೆಲ್ಲಿ ನಾ ತರಲೀಗ (ಹರಿಚ. ೮೩). ೫. (?): ಇದಾನಟರ್ತ್ಯೋನ್ಯಾವಮಹಾ ಪಾತಕನಾಗಿ . . . ಆಟ್ಟುವೆಣ್ಣತ್ರಲ ಪೂಸುವೋನಕ್ಕು (ಎಕ. III, ಶಂಕ. ೨೬–೬; ಸು. 810). **ಹೂಸು₁**: ೧. ಹಂದಿ ಶ್ರೀಗಂಧವ ಹೂಸಿದಡೇನು ಗಂಧರಾಜನಾಗಬಲ್ಲುದೇ (ದೇವಾಕ. ೨೨–೩೯); ದೂಪಿಸಿದ ಬಿಳಿದುಗುಳ ಸುಟ್ಟನು ಲೇಪನಂಗಳ ಹೂಸಿ ಮಧುರಾಳಾಪದಲೆ ಬೋಳೈಸಿ ಸಾರಥಿ ಗಜಹಮಾಪಳಿಯ (ಕುಮ್ಮಾಗ. ೦-೨೬); ಎಣ್ಣೆಮಜ್ಜನವಿಲ್ಲದವಳ ತಲೆ ಮಾಸಿಹುದೊ ಹೂಸಿ ಎರೆವನು ತನ್ನ ಕೂಸು ಬರಲಿ (ಶಿಶುನಿ. ೩೩-೦೯). ೪. ಬೊಪ್ಪಣಾಗಿ ಹಿಟ್ಟಂ ಹೂಸಿ ಗೆಜ್ಜೆಯ ಹಿಸ್ಯಿಯುದು (೩೦. ೦೯೩೦, ಕಾವಗರ್. ೬೦-೩೬; 1026). ೬. ಲೇಪಿಸಿಕೊಳ್ಳು; ಬಳಿದುಕೊಳ್ಳು: ಒಳಿಯ ಬೂದಿಯ ಬಿಲಿಯಲು ಬೇಡ ಒಲಿದಂತೆ ಹೂಸಿಕೊಂಡಿಪ್ಪುದು ಹೂಸಿ ಏನು ಫಲ ಮನದಲ್ಲಿ ಲೇಸಿಲ್ಲದನ್ನಕ್ಕ (ಬಸವ. ೦೧೯).

**ಪೂಸಿಕೊಳ್**, **ಪೂಸಿಕೊಳ್ಳು** = ೧. ತೊಡೆದುಕೊಳ್ಳು; ಬಳಿದು ಕೊಳ್ಳು: ಇದು ವೇಲಿಮ ಮೆಯ್ಯೊರೆಬಾದನಱಯದ ಮೆಯ್ಗೆ ಪೂಸಿಕೊಳ್ಳುವ ಮಕ್ಕಳ್ (ಧರ್ಮಾಮೃ. ೩–೬೬೬); ಪೂಸಿಕೊಂಬ ಅನುಲೇಪನ ಮೊದಲಾಗಿ (ಗಣಿತ. ೨೩೨–೩). ೨. ಕ್ರೀಡಿಕೊಳ್ಳು; ನೀವಿಕೊಳ್ಳು: ಪಕ್ಷಿಗಳು . . . ತಮ್ಮ ಗರಿಗಳನ್ನು ಪೂಸಿಕೊಳ್ಳುತ್ತಿದ್ದವು (ಶಿಬ. ೩). **ಹೂಸಿಹುಂಡನ ಮಾತು**, **ಹೂಸಿಹುಂಡನೆ ಮಾತು** = ತೋರಿಕೆಯನ್ನು ಮಾಡು; ಡಂಭಾಚಾರವನ್ನು ಮಾಡು: ಹೂಸಿಹುಂಡನ ಮಾಡಿ ಕಂಗೆಟ್ಟೋಸರಿಸದಸ್ರಾಂತಲಕ್ಷ್ಮವನಾಸುರತೆಯಿಂ ತೊಡಲ ಬಿಡದಂತ ಡಗದನ್ಯೋನ್ಯವಾಸಿಯಾಗಿರುತಿರಲು (ಸಡ್ಯುಕು. ೨ ೬); ನಾನೀಸುದಿನ ಪರಿಯಂತರಂ ಬಹಿಃಕ್ರಿಯೆಗಳಿಂ ಹೂಸಿಹುಂಡನ ಮಾಡಿ ಹೊಱಗೆ ನಾಂ ಪೂಜಿಸೆ ವೃಥಾ ದಿನಂಗಳು ಸವೆದುವು (ಕಂಕಟ. ೬-೦೦); ಹೂಸಿಹುಂಡನೆ ಮಾಡಿ ಬಾಯ ಸವಿಯ ನುಡಿವರೆಲ್ಲಾ ಭಕ್ತರಪ್ಪರೆ (ಇಸಟಂ. ೨೨೩-೦೦೦೦). [ದೇ. ॥ ತಮಿ. ಮಲ. ಪೂಚು; ತುಳು. ಪೂಜು; ತೆಲು. ಪೂಯು]

**ಪೂಸು₂**, ಹೂಸು₂ (ಕ್ರಿ). ಅಪಾನವಾಯುವನ್ನು ಬಿಡು: "ಪೂಸು ವಿಲೇಪನೇ, ಅಪಾನವಾಯೌ ಚ" (ಶಮಂಚ). **ಹೂಸು₂**: "ಹೂಸು— ಅಧೋವಾಯೌ" (ಶಮಂಚ); ಹೂಸಿದವರ್ಯಾರು ಅಂದ್ರೆ ಹಳೇಸೀರೆ ಯಾವರು (ಹುಬ್ಬಿಕ. ೦೩೦).

ಮೆಟಿಯಿತ್ತು (ಶಶಿಅ. ೩-೦೯). **ಹೂಳು**₁ : ೧. ಬೀದಿಯಲ್ಲಿ ಬಿದ್ದ ಮಾಣಿಕ್ಯದ ಹೂಳಿರ್ದ ನಿಧಾನದವಾರಿಗೂ ಕಾಣಬಾರದು ನೊ.ಡ (ಅವಶು. ೩೨೬-೦೦೩೨): ಒರೆಸಿ ಹಡಿಯಲಿ ಹೂಳಿದನು ಕಿವ್ಮಾರದಾನವನ (ಕುವ್ಯಾ.೮. ೦-೪೯) ; ಭಸ್ಮಭರಣ ಧಾನ್ಯ ಜೇವುದ ಮಣ್ಣು ಸತ್ತವರನು ಹೂಳಿ ಸುಡುವುದೆ ಮಣ್ಣು (ಪುರಂದ. ೨-೬೦-೩). ೨. ಸರೆ ಸುರಂಗಗಳ ಘಾತವ ಹೂಳಿದರಾಗ ತಳುವದೆ ಹೊಚಿಕಾಹಿನವರು(ಕಂತಶ. ೦೪-೯೩). ೩. ವಾರಣಾಘವ ಸೀಳಿದನು ಹೂಳಿದನು ರಕುತದಲಿ (ಕುವ್ಯಾ.೬. ೨೦-೨೨). ೪. ಹಗಲ ಹೂಳಿ ದರಮವು ಬಾಣಾಳಿಗಳಲಸಮವಹಾರಥರು (ಕುವ್ಯಾ.೬. ೪-೯೬) ; ಹೊಗರು ಗಣೆ ಹೂಳಿದುವು ಗುರುಸುತನಃಪಿನಂಬುಧಿಯ (ಕುವ್ಯಾ.೬. ೩-೩). ೫. ಉಗಿವ ಹುಂಗಳ ಬಾಯಿದೊಟಿದುಗುವ ನೆತ್ತರಿಂ ಹೂತೊಟಗಿ ಬಂದಾಗೆ ಪೊಲೊಟಗಿದಂ ಕಲಿ ಸಂಕನು (ಶಾಸ. XX. ೦೨೩-೦೦ ; 1186) : ಅಲಿ ಹೂಳಿದವಶ್ರುಜಲವರಿ (ಕುವ್ಯಾ.ಸ್ವ. ೦೩-೦) ; ಹೂಳಿದಾಸ್ಯಪಂಕದಲಿ ಹೂತಿರುವೆವು (ಶಿಲೀ. ೦೨೦-೨೦). ೬. ಮಹಾರಥರೆಸಗೆಯಲಿ ಹೂಳಿದುವು ನಭ ನುಗ್ಗಾಯ್ತು ನೆಲ ಚತುರಂಗಪದಹತಿಗೆ (ಕುವ್ಯಾ.೬. ೦೦-೦೨) ; ಅಲ್ಲವು ಹೂಳಿ ಹೋದನು ಕವಣೆಗಲ್ಲಲಿ (ಕೃಕುಲೀ. ೦೩-೦೬) : ಹೂಳಿತಂಬರ ರತ್ನ ಮಯ ಕಲಶಾಳಿ ಸತ್ತಿಗೆಗಳಲಿ (ಕುರಂಗ. ೬-೨೦-೪೯). ೭. ತುಂಬು ; ಗಿಡಿ ; **ಭರ್ತಿ ಮಾಡು** : ಹೊಟ್ಟೆಯ ಹೂಳಲಿಕೆ ಹಿಂಸೆಯನು ಮಾಡುವ ಹೊಲಬು ತಾನಲ್ಲ (ಕೃಕುಲೀ. ೦-೦೨) ; ಜೋಗಿ ಕಡುದರವೇಸಿ ಜಂಗಮರು ಹಡಗಯೊಳಗೆ ಹೂತು ಕೊಡುವನ್ನವಾನದೆ ಬಿಡದೆ ಸಂತುಷ್ಟಪಡೆವರು (ಕಂತಶ. ೨೦-೦೦). ೧೦. ಇಂಗಿಸು ; ಪರಿಹರಿಸು ; ನಾಶಪಡಿಸು : ರಾಮಾಯಣವನಾ ಮುನಿ ಹೇಳಿದನು ಹೂಳಿದನು ಭೂಪನ ಮಾನಸ ವ್ಯಥೆಯ (ಕುವ್ಯಾ.೮. ೨೩.೦) ; ವಿಷಯದ ಹೂಳುವದು ನಿಜಮುಕ್ತಿಕಾಂತೆಯ ನಾಳುವದು (ಶಿಶಾ. ೦೦೨) ; ಕರಣಂಗಳನು ಆಳು ಕಾಮಂಗಳನು ಹೂಳು (ಸಂಶಾಕ. ೦೩೩-೫೨). ೧೧. ಅಡಗು ; ಹುದುಗು ; ಮರೆಯಾಗು ; **ಕಾಣದಾಗು** : ಹೂಳಿಹೋಯಿತನ್ನವಾನವ ಮೇಲಣಿಚ್ಛೆ (ಕೃಕುಲೀ. ೬-೦೯); ಮುಚ್ಚಿದೆರಡುತುಟಿಗಳಲ್ಲಿ ಅರ್ಥವೆಲ್ಲ ಹೂಳಿದೆ (ಅರಳು. ೨೩-೬). ೧೨. (ಕಣ್ಣು, ಕಿವಿ, ಬಾಯಿ ಮುಂತಾದುವನ್ನು) ಮುಚ್ಚು ; **ಮುಚ್ಚಿ ಕೊಳ್ಳು** : ಕಾಳಿ ನಿರ್ವಾಣದಾಕೃತಿಯ ತಾಳಿ ಬಂದಿದಿರಾಗಿ ನಿಲಲಚ್ಯುತ ನೋಡಿ ಹೂಳಿದ ದೃಗ್ಯುಗಳವನು (ಮೋಹತ. ೩೬-೨೯). ೧೩. ಹೊಗು ; **ಪ್ರವೇಶಿಸು** : ಹೂಗಣೆ ಹೃದಯದನು ಹೂಳಿದವು [ಶಿಶಾಂ. ಶಾಗಿಸಿದುದು] (ಕುವ್ಯಾ.೬. ೨.೬).

**ಹೂಳಿದು, ಹೂತಿದು** = (ನೆಲದಲ್ಲಿ) ಮುಚ್ಚಿಡು ; ಬಚ್ಚಿಡು : ಪರಿ ಕೊಟ್ಟ ಕಾಲಕ್ಕೆ ಉಣಲಿಲ್ಲ . . . ಹತ್ತುಸಾವಿರಹೊನ್ನು ತಿಪ್ಪೇಲಿ ಹೂಟಟ್ಟು ಮತ್ತೆ ಉಚ್ಚಿಲ್ಲದೆ ಉಂಡ್ರೆಲ್ಲೊ ಪ್ರಾಣಿ (ಪುರಂದ. ೦-೬೭ ೦) : ಹೆಂಗುಸ ರೆಂದರೆ 'ಗೃಹಸ್ವಾಮಿನಿಯರು', ಎಂಬ ಬೀದವಾದ ಹೆಸರಿನಿಂದ ಅವರನ್ನು ಅಡುಗೆಯ ಮನೆಯಲ್ಲಿ ಹೂಳಿಡುವ ಕಾಲವು ಮುಗಿದು ಹೋಯ್ತು (ಹುಣ್ಣಕ್ರ. ೦೯೦) ; ಹಣವನ್ನು ಹೂಳಿಟ್ಟು,ಅದರ ಮೇಲೆ ಗೋಣಿತಟ್ಟನ್ನು ಹಾಸಿಕೊಂಡು ಯಾವಾಗಲೂ ಅಲ್ಲಿಯೇ ಕೂತಿರುತ್ತಿದ್ದನು (ಕಿತಿಶಾ. X. ೩) ; ಗೆದ್ದವರು ಬಳೆಗಾಜನ್ನು ಹೂತಿಡುವ ಕೆಲಸವನ್ನು ಮಾಡಿಸಬೇಕಾಗುತ್ತದೆ (ಕಶಿಕೋ. I. ೬೦೩) ; ನೆಲದಲ್ಲಿ ರೂಪಾಯಿ ಹೂತಿಟ್ಟರೇನು ಫಲ ? (ಹಶಶಾ. I. ೪೭೦).

[ದೇ.॥ ಮಲ. ಪೂಟು, ಪೂಣಾ ; ಕೊಡ. ಪುಳ್ ; ತೆಲು. ಪೂಡುಚು, ಪೂದ್ಚು ; ಪಾರ್ಯ್ಗ. ಪುರ್ವ್; ಕೋತ. ಪುಗ್ ]

**ಪೂಟ್ಕೆ** (ನಾ). ಶವವನ್ನು ಹೂಳುವುದು,_ಸಮಾಧಿ ಮಾಡುವುದು : ಇನ್, ಅವಳ ಮೇಲೆಯುಮ್ ಪೂಜೆಸಿದಪನ್, ಈ ಪೂಟ್ಕೆಯಾ ಸಂಚಿ ವೇಳಗೆ ಸಿರಿಪಾಲ ತವ್ವನ್. ಕರಿತನ್ನಮವಳನ್ (ಶಾಶಿಗೊ. ೨೩-೯೬೩).

[ಪೂಟ್ + — ಕೆ]

**ಪೂಟ್ದಿ** 'ಪೂಟು' ಪರಾ.

**ಪೂಟ್ದು** 'ಪೂಟು' ಪರಾ.

**ಪೃಕ್ತಿ** (ನಾ). ಸ್ಪರ್ಶ ; ಸಂಪರ್ಕ : "ಸ್ಪೃಷ್ಟಿಃ, ಪೃಕ್ತಿಃ—೨ ಮುಟ್ಟುವಿಕೆ, ಸೋಂಕುವಿಕೆ" (ಸಿದ್ಧಾಂತಿ. ೩೩೬). [ಸಂ.]

**ಪೃಚ್ಛಕ** (ನಾ). (ಪ್ರಶ್ನೆಯನ್ನು) ಕೇಳುವವನು : 'ಪೃಚ್ಛಕಲಗ್ನ' ಪರಾ. [ಸಂ.]

**ಪೃಚ್ಛಕಲಗ್ನ** (ನಾ.) [ಜ್ಯೋತಿ] ಪ್ರಶ್ನಿಸುವ ಕಾಲ : ದಿವಾಕರನಂ ಪೃಚ್ಛಕಲಗ್ನದೊಳ್ ನೆಲಸೆ ಮತ್ತಂ ಗ್ರೀಷ್ಮಮಾ ಕಾಲಮುಂ (ಕಾಶಿಶ. ೨೯-೬), ಪೃಚ್ಛಕಲಗ್ನದಿಂ ಸರುತದಿಂದಾರೂಢದಿಂ ನೋಡಿದಾ ಬೋಧಂ . . . ಭೋಂಕನೆ ಪೇಟ್ವ ಜೋಯಿಸಮಾರ್ಗಂ ಮರ್ತ್ಯರೊಳ್ ದುರ್ಲಭಂ (ಕ.ಕುರು. ೩-೨೦). [ಸಂ.]

**ಪೃಚ್ಛನೆ** (ನಾ). ೧. ಕೇಳುವುದು ; ಪ್ರಶ್ನಿಸುವುದು. ೨. ವಿಚಾರಣೆ. ೩. [ಜೈನ]ವಾಚನ, ಪೃಚ್ಛನೆ, ಅನುಪ್ರೇಕ್ಷೆ, ಆಮ್ನಾಯ, ಧರ್ಮೋಪದೇಶ—ಎಂಬ ಪಂಚವಿಧಸ್ವಾಧ್ಯಾಯಗಳಲ್ಲಿ ಒಂದು; "ಶಬ್ದಾರ್ಥಗಳೆರಡರಲ್ಲಿಯೂ ಪ್ರಶ್ನೆಗಳನ್ನು ಮಾಡಿ ನಿರ್ಣಯ ಮಾಡಿಕೊಳ್ಳುವುದು" (ಕೈಶಕೋ. ೦೩೨) : ವಾಚನೆಯುಂ ಪೃಚ್ಛನೆಯುಮನುಪ್ರೇಕ್ಷೆಯುಮಮ್ನಾಯಮುಂ ಧರ್ಮೋಪದೇಶಮುಮೆಂಬ ಪಂಚವಿಧಸ್ವಾಧ್ಯಾಯದೊಳಂ ನೆಲಸಿ (ಅಶಕ್ಕ ೧೨-೯ ವ) ; ವಾಚನಾ – ವಕ್ಕಾಣಿಸುವುದುಂ, ಪೃಚ್ಛನಾ—ಬೆಸಗೊಳ್ವುದುಂ . . . ಧರ್ಮೋಪದೇಶಃ—ಧರ್ಮಮನುಪದೇಶಂಗೆಯ್ವುದುಂ ಎಂಬಯ್ದುಸ್ವಾಧ್ಯಾಯವಿಕಲ್ಪಂಗಳಪ್ಪುವು (ತತ್ತ್ವಸೂ. ೩೯೯); ಸ್ವಾಧ್ಯಾಯವು ವಾಚನೆ, ಪೃಚ್ಛನೆ, ಅನುಪ್ರೇಕ್ಷೆ, ಆಮ್ನಾಯ, ಧರ್ಮೋಪದೇಶ ಎಂದು ಅಯ್ದು ಬಗೆಯಾಗಿದೆ (ಕೈಸಶ. ೬೮).

[ಸಂ. ಪೃಚ್ಛನ]

**ಪೃಚ್ಛಿಸು** (ಕ್ರಿ). ಪ್ರಶ್ನೆಮಾಡು ; ಪ್ರಶ್ನಿಸು : "ಗಾಂಧಾರೀನೂ ರಾಜರ ತಾಯಿನಾ ಅಲ್ಲ ಏನರೀ ?" ವಿಶ್ವಾಸ ಪೃಚ್ಛಿಸಿದ (ಬಿಕಹ. I. ೯೬).

[<ಪೃಚ್ಛನ + — ಇಸು]

**ಪೃಚ್ಛೆ** (ನಾ). ೧. ಕೇಳುವುದು; ಪ್ರಶ್ನೆಮಾಡುವುದು; ಪ್ರಶ್ನಿಸುವುದು : "ಪ್ರಶ್ನಃ, ಅನುಯೋಗಃ, ಪೃಚ್ಛಾ—೩ ಕೇಳುವದಕ್ಕೆ ಹೆಸರುಗಳು" (ಸಿದ್ಧಾಂತಿ. ೫೨). ೨. ಪ್ರಶ್ನೆ : ಪರಮಹಂಸಂ ಬಂದು ಕುಳ್ಳಿರ್ದೊಡಿತ್ತು ಬಟ್ಟಿರ್ಕಿರ್ಫಮನೆಯ್ದೆ ನೀವಾರ್ಮಗೆ ಪೇಟಿಂ ಸ್ವೇಚ್ಛೆಯಿಂ ಪೃಚ್ಛೆಯಂ (ಶುಕಸಪ್ತ. ೪-೬). ೩. ವಿಚಾರಣೆ ಮಾಡುವುದು; ವಿಚಾರಿಸುವುದು.

**ಪೃಚ್ಛಾಪೃಚ್ಛೆ** (ದ್ವಿರುಕ್ತಿ) : ನೀವಿಷ್ಟು ಪೃಚ್ಛಾಪೃಚ್ಛೆ ಮಾಡಿದ ಕಾರಣವೇನೆಂದು ನಮಗಿನ್ನೂ ಹೇಳಲಿಲ್ಲವಲ್ಲ ? (ಅಂಬರು. ೦೯); ಭಾರತೀಯರು, ಇಲ್ಲದ ಪೃಚ್ಛಾಪೃಚ್ಛೆ ಮಾಡದೆ, ಎಷ್ಟೋಸಲ ವಿಚಾರ ಸಹ ಮಾಡದೆ, ಪರಾತ್ಪರಸತ್ಯವನ್ನು ಒಪ್ಪಿ ಸ್ವೀಕರಿಸಿ ಬಿಡುತ್ತಾರೆ (ಪುಹಾಶೋ. ೦೫೯).

**ಪೃಚ್ಛೆ ಮಾಡು**=ಪೃಚ್ಛಿಸು : ಸಾಮ್ಯವಾದದ ಪ್ರವೃತ್ತಿಗಳ ರಸವೇನು ಎಂದು ಪೃಚ್ಛೆಮಾಡಿ ಆತ್ಮನಲ್ಲಿ ಅವುಗಳ ಉಗಮವನ್ನು ತೋರಿಸಲು ಯತ್ನಿಸುವವನು (ಸಾಶಿಶ. ೬೪). [ಸಂ. ಪೃಚ್ಛಾ]

**ಪೃಚ್ಛ್ಯ** (ಗು). ೧. ಕೇಳಬೇಕಾದ ; ಪ್ರಶ್ನಿಸಬೇಕಾದ. ೨. ವಿಚಾರಣೆ ಮಾಡಬೇಕಾದ; ವಿಚಾರಿಸಬೇಕಾದ. [ಸಂ.]

**ಪೃತನಾಜಾಲ** (ನಾ). ಸೇನೆಯ ಸಮೂಹ,_ಗುಂಪು : ಗಿರಿರಾಜೋದಗ್ರ ಸಿಂಧೂರಿತಕರಟಘಟಾಟೋಪಮುಂ . . . ಚಿತ್ರನೇತ್ರಾಂಬರನಾನಾ ಹೇತಿಹಸ್ತೋದ್ಭಟಭಟಪೃತನಾಜಾಲಮುಂ ಚಿತ್ರದೊಳ್ ವೀರರಸಂ ಕೈಗಣ್ಣೆ ಪೊಣ್ಮುತ್ತಿರೆ ನಿಜಬಲಮಂ ನೋಡಿದಂ ಸಾರ್ವಭೌಮಂ (ಅಂಕ್ರ. ೦೯-೯೭).

[ಸಂ. ಪೃತನಾಜಾಲ]

**ಪೃತನೆ** (ನಾ). ೧. ಸೈನ್ಯ; ಪಡೆ : "ಪೃತನಾ, ಸೇನಾ . . . ಅನೀಕಂ

—ಈ ೧೦ ಪಡೆ" (ಕರಾಯು. ೬೩-೪೦೩); ಪತ್ತಿಯೆಂದುಂ ಸೇನೆಯೆಂದುಂ ಸೇನಾಮುಖಮೆಂದುಂ ಗುಲ್ಮಮೆಂದುಂ ವಾಹಿನಿಯೆಂದುಂ ಪೃತನೆಯೆಂದುಂ ಚಮೂವೆಂದುಮನೀಕಿನಿಯೆಂದುಮಿಂತೆಂಟುತೆಱದಿಂ ಪಡೆಗೆ ಪೆಸರಕ್ಕುಂ (ಶಂಬರಶಾ. ೦೩-೯ ವ); ಫಣಿಪತಿ ಪೃತನಾಭರದಿಂ ಪೃಥಗ್ಭಣನಾದುದು ಸೂನೃತವೆಂದು ಸೂಚಿಪಂತದ್ಭುತವಾದುದು ಬಾಣಗಮನದೊಳ್ ಘೋಕಂಪಂ (ಜಗಿಪ. ೦೬-೪೩); ಅಶ್ವಲಾ ತೆರೆತೆರೆ ತೆರಳ್ವುದದ್ಭುತಪೃತನೆ (ಶ್ರೀಚಾಪತಾ. ೬೩೨-೯೬). ೨. ೨೪೩ ಆನೆಗಳು, ೨೪೩ ರಥಗಳು, ೭೨೯ ಕುದುರೆಗಳು ಮತ್ತು ೧೨೧೫ ಕಾಲಾಳುಗಳಿಂದ ಕೂಡಿದ ಒಂದು ಸೇನಾವಿಭಾಗ : ಆನೆ ೨೪೩ ರಥ ೨೪೩ ಕುದಿರೆ ೭೨೯ ಕಾಲ್ಗಳು ೧೨೧೫ಯದು ೧ ಪೃತನೆಯೆಂಬ ಬಲ (ಪ್ರಬಹಾ. ಅನುಬಂಧ ೦-೦೨). ೩. ಕದನ; ಯುದ್ಧ. [ಸಂ. ಪೃತನಾ]

**ಪೃಥಕ್ಕರಣ** (ನಾ). ಬೇರೆಬೇರೆ ಮಾಡುವಿಕೆ ; ವಿಂಗಡಿಸುವಿಕೆ : ವಿಂಗಡಣೆ : ಕಲೆಯು ವೈಜ್ಞಾನಿಕಪೃಥಕ್ಕರಣಕ್ಕೆ (Scientific analysis) ತಲೆಬಾಗುವ ಶಾಸ್ತ್ರವಲ್ಲ (ಠಾಕಕ್ರ. ೦೨). [ಸಂ.]

**ಪೃಥಕ್ಕರಣೆ** (ನಾ). = ಪೃಥಕ್ಕರಣ : ಈ ವಿಷಯದಲ್ಲಿ ಶ್ರೀಗೋವಿಂದ ಪೈಗಳು ಮಾಡಿದ ಪೃಥಕ್ಕರಣೆ ಯೋಗ್ಯವೇ ಆಗಿದೆ (ಕಶಾಕ. ೬೬); ಈ ಕವಿಯ ಕಾಲಕ್ಕಾಗಲೇ ಭಾಷಾಕ್ಷೇತ್ರದ ಪೃಥಕ್ಕರಣೆ ನಡೆದಿತ್ತೆಂಬುದು ಸಂತೋಷದಾಯಕವಾದ ಮಾತು (ದ್ರಾಕಿಐ. ೦೨ ಹಿನ್ನೆಲೆ). [ಸಂ. ಪೃಥಕ್ಕರಣ]

**ಪೃಥಕ್ಕರಿಸು** (ಕ್ರಿ). ವಿಂಗಡಿಸು ; ವಿಭಾಗಿಸು : ಕಥೆ ಮತ್ತು ರೇಖಾಚಿತ್ರಗಳ . . . ಸಾಮ್ಯ ವೈಷಮ್ಯಗಳನ್ನು ಬರಹಗಾರರೇ ನೇರವಾಗಿ ಪೃಥಕ್ಕರಿಸದೆ, ಬೇರೊಬ್ಬರ ಬಾಯಿಂದ ಹೇಳಿಸಿರುವ ರೀತಿ ಮನೋಜ್ಞವಾಗಿದೆ (ಕ್ರೀಹಕ್ರ. iv ಮುನ್ನುಡಿ); ಕಾದಂಬರಿಗಳಲ್ಲಿ ಪಾತ್ರ ಮೇಲ್ಮಟ್ಟದ ಹುಡುಗ—ಹುಡುಗಿಯರ ಗುತ್ತಿಯಲ್ಲ. ಕೇವಲ ಅವರ ಮುಳ್ಳು ಪರಚಿದ ಸಂಕಷ್ಟಗಳನ್ನು ಹೇಳುತ್ತ, ವರ್ಣಿಸುತ್ತ, ಪೃಥಕ್ಕರಿಸುವುದೊಂದೇ ಕಾದಂಬರಿಯ ವಸ್ತುವಲ್ಲ (ರಕ್ತರಾಷ. ಪ್ರಸ್ತಾವ). [ಪೃಥಕ್ಕರಣ + —ಇಸು]

**ಪೃಥಕ್ತ್ವ** (ನಾ). ೧. ಬೇರೆಯಾಗುವಿಕೆ; ಹೊರತಾಗಿರುವಿಕೆ; ಪ್ರತ್ಯೇಕತೆ. ೨. = ಪೃಥಕ್ತ್ವವಿತರ್ಕವೀಚಾರ : ಇವರ್ ರುಪಶಮಕರ್ಗಂ ನಾನಾಜೀವಾಪೇಕ್ಷೆಯಿಂ ಸಾಮಾನ್ಯದವೊಲ್ ಏಕಜೀವಾಪೇಕ್ಷೆಯಿಂ ಜಘನ್ಯದಿಂ ಅಂತರ್ಮುಹೂರ್ತಂ ಉತ್ಕೃಷ್ಟದಿಂ ಪಲ್ಯೋಪಮಶತಪೃಥಕ್ತ್ವಂ (ತತ್ತ್ವಸೂ. ೪೦). [ಸಂ.]

**ಪೃಥಕ್ತ್ವವಿತರ್ಕವೀಚಾರ** (ನಾ). [ಜೈನ] ಎಂಟನೆಯ ಗುಣಸ್ಥಾನದಿಂದ ಪನ್ನೆರಡನೆಯ ಗುಣಸ್ಥಾನದ ಕೆಲವು ಭಾಗಗಳವರೆಗೆ ನಡೆಯುವಂತಹ ಶುಕ್ಲಧ್ಯಾನ; ಪ್ರಥಮಶುಕ್ಲಧ್ಯಾನ: ☞ "'ವಿತರ್ಕ' ಎಂದರೆ ಶಾಸ್ತ್ರ, 'ವೀಚಾರ' ಎಂದರೆ ವಿಪರೀತವರ್ತನ" (ಜೈಪಕೋ. ೬೭೨): "ಮೊದಲ ಶುಕ್ಲಧ್ಯಾನದಲ್ಲಿ ೮ನೆಯ ಗುಣಸ್ಥಾನದಿಂದ ೧೨ನೆಯ ಗುಣಸ್ಥಾನದ ಕೆಲವು ಭಾಗದವರೆಗೆ ನಡೆಯುವಂಥದು" (ಜಮ್ಮಾಕಾ. ಜೈನಪಾರಿಭಾಷಿಕಶಬ್ದಕೋಶ); "ಗುಪ್ತಿ ಮುಂತಾದವುಗಳ ಅಭ್ಯಾಸ ಮಾಡಿದವನು ಮತ್ತು ದ್ರವ್ಯಪರ್ಯಾಯಗಳ ಚಿಂತನೆಯಲ್ಲಿ ನಿಪುಣರಾದ ಮುನಿಗಳು ಅರ್ಥ, ವ್ಯಂಜನ, ಕಾಯಯೋಗ, ವಚನಯೋಗ ಇವುಗಳ ಪೃಥಕ್ ಪೃಥಕ್‌ರೂಪದಿಂದ ಸಂಕ್ರಮಣ ಮಾಡುವ ಮನಸ್ಸಿನ ಮುಖಾಂತರವಾಗಿ ಮೋಹನೀಯ ಕರ್ಮ ಪ್ರಕೃತಿಗಳ ಉಪಶಮ ಅಥವಾ ಕ್ಷಯ ಮಾಡುವುದಕ್ಕೋಸುಗ ಉದ್ಯುಕ್ತರಾಗುತ್ತಾರೆ. ಅಂಥವರಲ್ಲಿ ಈ ಶುಕ್ಲಧ್ಯಾನವು ಉದಯವಾಗುತ್ತದೆ." (ಅಪು. ಜೈನಪಾರಿಭಾಷಿಕಶಬ್ದಕೋಶ) : ಪೃಥಕ್ತ್ವವಿತರ್ಕವೀಚಾರಮೆಂಬ ಪ್ರಥಮಶುಕ್ಲಧ್ಯಾನದೊಳ್ ಕೂಡಿಯುಪಶಾಂತಗುಣಸ್ಥಾನದೊಳಿರ್ದು ರತ್ನತ್ರಯಮಂ ಸಾಧಿಸಿ ಸಮಸ್ತಪಾದೇಪನಾಗಿ ಪುಟ್ಟಿದೊಂ (ವಡ್ಡಾರಾ. ೨೯-೧೩); ಪೃಥಕ್ತ್ವವಿತರ್ಕವಿ[ವೀ]ಚಾರಮೆಂಬ ಮೊದಲ ಶುಕ್ಲಧ್ಯಾನದೊಳ್ ಸಮಾಹಿತನುಪಶಾಂತಗುಣಸ್ಥಾನದೊಳ್ ಪ್ರಾಣಪರಿತ್ಯಾಗಂಗೆಯ್ದು ಸರ್ವಾರ್ಥಸಿದ್ಧಿಯೊಳಹಮಿಂದ್ರನಾದಂ (ಆಪು. ೬-೩೯ ವ): ಪೃಥಕ್ತ್ವವಿತರ್ಕವೀಚಾರಮೆಂಬ ಪ್ರಥಮಶುಕ್ಲಧ್ಯಾನಪರಿಣತಿಯಿಂ ಕ್ಷೀಣಕಷಾಯವೀತರಾಗಛದ್ಮಸ್ಥಗುಣಸ್ಥಾನವ್ಯವಸ್ಥಿತನಾಗಿ (ಸುಕುಮಾ. ೮-೬೨ ವ). [ಪೃಥಕ್ತ್ವ + ವಿತರ್ಕ + ವೀಚಾರ ?]

**ಪೃಥಕ್ಪರ್ಣಿ** (ನಾ). ಒಂದು ಬಗೆಯ ಸಸ್ಯ ; ನರಿಹೊನ್ನೆಗಿಡ : "ಪೃಶ್ನಿಪರ್ಣೀ, ಪೃಥಕ್ಪರ್ಣೀ, ಚಿತ್ರಪರ್ಣೀ, ಅಂಘ್ರಿಪರ್ಣಿಕಾ—೪ ಕೋಲಿಪೊನ್ನೆಯೆಂಬುವಮು, ನರಿಹೊನ್ನೆಗಿಡ, ನಕ್ಕಚಿಕ್ಕನಾಕು" (ಸಿದ್ಧಾಂಶಿ. ೦೩೩). [ಸಂ. ಪೃಥಕ್ಪರ್ಣೀ]

**ಪೃಥಗರ್ಥ** (ನಾ). ಬೇರೆಯ ಅರ್ಥ : ಪೆಸರೊಳಸಂಭವಮೆನಿಸುಗುಮಸಂಭವಂ ತದ್ವಿಶೇಷಣಾಂ ಪೃಥಗರ್ಥಂ ಪೊಸಯಿಸೆ ಭಿನ್ನರಸಂ ಸುಪ್ರಸಿದ್ಧವಾಚ್ಯದೊಳದಲ್ತೆ ವಕ್ರೋಕ್ತಿ ಕರಂ (ಶಾವ್ಯಾಕ. ೬೬೩); ಏಗಂ ವಲಂ ಪೆಟ್ಟಿದರ್ ತಾಗುಗುಮಾತಿನಿಶ್ಚಯಾರ್ಥಮಂ . . . ಬೇಱಬೇಱಯೆನೆ ಪೃಥಗರ್ಥಂ (ಕಮಕ. ೩೮೬). [ಸಂ.]

**ಪೃಥಗ್ಜನ** (ನಾ). ೧. ತಿಳಿವಳಿಕೆ ಇಲ್ಲದವನು ; ದಡ್ಡ ; ಪಾಮರ : "ಪ್ರಾಕೃತನಪಶದಂ ಪೃಥಗ್ಜನೇತರಂ ಪಾಮರನೆನಿಪ್ಪನಕ್ಕುಂ ಬಾಲ್ಕುಂ" (ಅಸ್ತಕೋ. ೬೯-೬೨); ಪೃಥಗ್ಜನವಂತರುದಾತ್ತಚಿತ್ತಂ ಜನಪತಿ ಧೈರ್ಯಮೆಂಬುರಾಶಿ ಚಳಿಯಿಸಿದವನೆ (ಅಕಪು. ೦೦-೪೮). ೨. ನೀಚ ; ದುಷ್ಟ : "ವಿವರ್ಣಃ, ಪಾಮರಃ, ನೀಚಃ, ಪ್ರಾಕೃತಃ, ಪೃಥಗ್ಜನಃ . . . ಇತರಃ—೧೦ ನೀಚನ ಪೆಸರು" (ಸಿದ್ಧಾಂಶಿ. ೩೦೨). [ಸಂ.]

**ಪೃಥಗ್ಭಾವ** (ನಾ). ಬೇರೆಯೆಂಬ ಭಾವನೆ,—ಆಲೋಚನೆ ; ಬೇರೆ ಎಂಬ ಕಲ್ಪನೆ : ಅನೇಕ ಪ್ರಕಾರಕಪಟೋಪಾಯಂಗಳಿಂದತಿಸ್ನೇಹಿತರೊಳ್ ಪೃಥಗ್ಭಾವಮಂ ಮಾಟ್ಪುದೇ ಭೇದಮೆಂಬುದು (ಹಂಕಕಂ. ೨೦-೨೨) ; ನೀವು ನಾವೆಂಬೀ ಪೃಥಗ್ಭಾವಾವಲಂಬನವೇಕೆ ನಿಮ್ಮಲಿ ನಾವು ನಮ್ಮಲಿ ನೀವೆಯೆಂದನು ನಗುತ ಕುರುರಾಯ (ಕುವ್ಯಾಸ. ೮೩-೩೬) ; ಭಾವಿಸಲು ಯಾದವರೊಳು ಪೃಥಗ್ಭಾವದಲಿ ಸಂಕರುಷಣಾಖ್ಯೆಯನೀ ವಿಬುಧನುತ ನೆಮ್ಮಿದನು (ಶಿಶಾಗ. ೦೦-೬-೪೦). [ಸಂ.]

**ಪೃಥಗ್ವಿಧ** (ನಾ). ಬೇರೆ ಬೇರೆಯ ರೀತಿ,—ವಿಧ : "ವಿವಿಧಃ, ಬಹುವಿಧಃ, ನಾನಾರೂಪಃ, ಪೃಥಗ್ವಿಧಃ—೪ ಬೇರೆ ಬೇರೆ ರೂಪವುಳ್ಳದ್ದು, ನಾನಾರೂಪವನಾಗಿರುವಂಥಾದ್ದು" (ಸಿದ್ಧಾಂಶಿ. ೩೪೮). [ಸಂ.]

**ಪೃಥವಿ** (ನಾ). ಭೂಮಿ; ಧರೆ: ಪೃಥವಿಗೊಱಗಿದುವೆಂಟುಸಾವಿರಪೃಥುಳಹಯ ನುಗ್ಗಾಯ್ತು ಗಣನೆಯ ರಥ ಪದಾತಿಯೊಳಿತ್ತಲೆನೆ ಸವಱದನು ಪರಬಲವ (ಕುವ್ಯಾಗ. ೧-೦೩). [ಸಂ. ಪೃಥವೀ]

**ಪೃಥಾಕು** (ನಾ). ಹಾವು ; ಸರ್ಪ : "ವಿಷಧರಃ, ದಂದಶೂಕಃ . . . ಪೃಥಾಕುಃ, ಕಾಕೋದರಃ . . . ಭುಜಂಗಮಃ—ಈ ೨೫ ಹಾವಿನ ಪೆಸರ್" (ಕರಾಯು. ೦೦೫ ೦೬) ; ಪೃಥಾಕು ಸನ್ನಂಡನನ್ನೆಕ್ಕಮಂ ವಿಧಿಸುವೀ ಕೃತಿಯುಂ ಕಿಱದೆಸ್ನಬಪ್ಪುದೇ (ಹರಿಂ. ೦ ೦೬). [ಸಂ.]

**ಪೃಥಾಸುತ** (ನಾ). ಕುಂತಿಯ ಮಕ್ಕಳಲ್ಲಿ ಒಬ್ಬ ; ಭೀಮ : ರಥವಾಜಿಗಳೊಂದೆಸೆಯೊಳ್ ರಥಾಂಗಳೊಂದೆಸೆಯೊಳುರುಳ್ದು ಕೆಡೆದುವು ನೋಡಾ . . . ಪೃಥಾಸುತಪ್ರಥಿತ ಪೃಥುಗದಾಪ್ರಹರಣೆಯಿಂ (ಗದಾಯು. ೩-೬). ☞ ಧರ್ಮರಾಯ, ಭೀಮ, ಅರ್ಜುನ ಈ ಮೂವರೂ ಕುಂತಿಯ ಮಕ್ಕಳಾದರೂ ಅರ್ಜುನನೊಬ್ಬನಿಗೇ ವಿಶೇಷವಾಗಿ ಈ ಹೆಸರನ್ನು ಅನ್ವಯಿಸುವುದುಂಟು ಮತ್ತು ಪಾಂಡವರಲ್ಲಿ ನಕುಲ ಸಹದೇವರು ಮಾದ್ರಿಯ ಮಕ್ಕಳಾದರೂ ಒಟ್ಟು ಪಾಂಡವರೈವರಿಗೂ ಅನ್ವಯಿಸಿ ಹೇಳುವುದು ಬಳಕೆಯಾಗಿದೆ.

**ಪೃಥಾಸುತರ್** –ಕುಂತಿಯ ಮಕ್ಕಳು ; ಪಾಂಡವರು: ನಿರ್ದೋಷಿಗಳೊಳ್ ಪೃಥಾಸುತರೊಳಿಂ ಮಗುಳ್ದುಂ ಪುದುವಾಟ್‌ನೆಂಬೆನೇ (ಕಂಪಕಾ. ೧೪-೧೯) ; ಅಗಡು ಮಾಡಿದ ನಿಮ್ಮ ಮಕ್ಕಳ ವಿಗಡತನಕಂಜದರೊ ದುರಿತದ ಸೊಗಡಿಗಂಜದರೋ ಪೃಥಾಸುತರಂದಳಿಂಮುಪಾಯವಿ (ಕುಮಾ.ಭ. ೦೩-೯೬). [ಸಂ.]

**ಪೃಥಿವಿ** (ನಾ). ೧. ಪಂಚಭೂತಗಳಲ್ಲಿ ಒಂದು ; ನೆಲ ; ಧರೆ ; ಭೂಮಿ : "ಭೂಃ, ಭೂಮಿಃ, ಪೃಥಿವೀ . . . ಧರಾ, ಅಧಾರಾ—ಈ ೩೭ ಭೂಮಿಯ ಪೆಸರ್" (ಹಲಾಯು. ೨೬-೦) : ಸೊಗಯಿಸುವೆಂದು ಪೃಥಿವ್ಯಾದಿಗಳೆನಿಸುವ ಪಂಚಭೂತಮೆಲ್ಲವನುಟಾರಾವಗಮುಜ್ಜ್ವಲಾಂಗಿಯಂ ಧವಳಗುಣದೆ ನಿರ್ವಿಜಸಿದನಾಗವೆಟ್ಟುಂ ಧಾತ್ರಂ (ಆದಿಪು. ೬೬೦) ; ಪೃಥಿವಿ ನೆಗ್ಗಿತು ಹೊತ್ತ ಕಮಠನ ವ್ಯಥೆಯುನಾರುಸುರುವರು ಸುಮಹಾರಥರ ಹೊರಜಿರಿ ಹೊಕ್ಕನುರಿ ಬಲುಮಳೆಯ ಹೊಕ್ಕಂತೆ (ಕುಮಾ.ವ್ಯಾ. ೨-೩೦) ; ಮತ್ತಂ ಪೃಥ್ವ್ಯಂಶಮರ್ಧಮುಂ ಮಿಕ್ಕ ಭೂತಂಗಳಷ್ಟಮಾಂಶಂಗಳ್ ನಾಲ್ಕುಂ ಕೂಡಿ ಪೃಥಿವಿಯೆನಿಕ್ಕುಂ (ಜಗ. ೨೮ ಪ). ೨. ಮಣ್ಣು.

**ಪೃಥಿವಿಯಾತ್ಮಜೆ**–ಭೂಮಿಯಲ್ಲಿ ಜನಿಸಿದವಳು ; ಸೀತೆ : ಪೃಥಿವಿಯಾತ್ಮಜೆ ಬಳಿಕ ಚೇತರಿಸಿ ತನಗಿನ್ನು ಪಥವಾವುದೆಂದು ದೆಸೆದೆಸೆಗಳಂ ನೋಡಿ . . . ಹಲುಬಿವಳ್ಕಲ್ಲರಂ ಕರಗುವಂತೆ (ತೊ.ರಾಮಾ. ೦೯-೭೬). [ಸಂ.]

**ಪೃಥಿವಿಜೆ** (ನಾ). ಭೂಮಿಯಲ್ಲಿ ಹುಟ್ಟಿದವಳು ; ಸೀತೆ : ಪೃಥಿವಿಜೆಯುನಜಸಲ್ಕೆ ವೀರಹನುಮಂತನಂ ಕಳುಹಿದಂ ಕಾಕುತ್ಸ್ಥನು (ತೊ.ರಾಮಾ. ೦೮-೩). [ಸಂ. ಪೃಥಿವಿಜಾ]

**ಪೃಥಿವಿಪ** (ನಾ). ಭೂಮಿಯ ಒಡೆಯ; ಪೃಥ್ವೀಪತಿ : ಬಂದುದೆ ಪೃಥಿವಿಪನ ಮುಖಕೆದರಕಟಯೆನುತೆ ಮನದೊಳಗೆ ಕೃಷ್ಣನಂ ಧ್ಯಾನಿಸಿದನು (ತೊ.ರಾಮಾ. ೦೪-೨೦). [ಸಂ.]

**ಪೃಥಿವಿಪಂಚಕ** (ನಾ). [ವೇದಾಂತ] ಭೂಮಿಯ ಅಂಶದಿಂದ ಉತ್ಪನ್ನವಾದ ವಾಕ್ಕು, ಪಾಣಿ, ಪಾದ, ಪಾಯು ಮತ್ತು ಉಪಸ್ಥಗಳೆಂಬ ಐದರ ಗುಂಪು : ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥಗಳೈದಸ್ತು ಇವು ಪೃಥಿವಿಯ ಅಯಿದುಭಾಗಗಳಿಂದ ಉತ್ಪನ್ನವಾದವುಗಳು, ಇವು ಪೃಥಿವಿ ಅಂಶವಾದ್ದರಿಂದ ಇವುಗಳನ್ನು ಪೃಥಿವಿಪಂಚಕವೆಂದು ಹೇಳುವರು (ವೇದಾಂತ. ಸಾಂಖ್ಯಸೂತ್ರ). [ಸಂ.]

**ಪೃಥಿವಿಪತಿ** (ನಾ). ಭೂಮಿಯ ಒಡೆಯ ; ರಾಜ : ಪೃಥಿವಿಪತಿ ಕೇಳೆ ದೆಯ ಮೇಲೆ ಕೋಲ್ಮಿಂಚಿಸರ್ ವ್ಯಥಿಸಿ ಮೈಮಱೆದನು (ತೊ.ರಾಮಾ. ೬-೩೯). [ಸಂ.]

**ಪೃಥಿವಿಪಾಲ** (ನಾ). =ಪೃಥಿವೀಪಾಲ. [ಸಂ.]

**ಪೃಥಿವೀಚಕ್ರ** (ನಾ). ಭೂಮಂಡಲ ; ಭೂಭಾಗ : ಪೃಥಿವೀಚಕ್ರಂ ಪ್ರಕಂಪಾಕುಳಿತಮುದಧಿಸೀಮಾತಿಮಾತ್ರಂ ಘನಾಧ್ವಂ ಪಥಿಕಾಂಭೋವಾಹಮವ್ಯಂತೊಡವೆ ಬಹುಳಪಕ್ಷಾನಿಳಂ ಕೂಡೆ ಬಂದಂ . . . ಆ ವೈನತೇಯಂ (ಜಗ. ೦೦-೯೦). [ಸಂ.]

**ಪೃಥಿವೀಧಾತು** (ನಾ). [ತತ್ತ್ವಶಾ] ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ ಮತ್ತು ಋತುಗಳೆಂಬ ಆರು ಧಾತುಗಳಲ್ಲಿ ಒಂದು : ಪೃಥಿವೀಧಾತು . . . ಋತುಧಾತು ಇವುಗಳೇ ಆರು ಧಾತುಗಳು. ಇವುಗಳಲ್ಲಿ ಪೃಥಿವೀಧಾತುವು ಅಂಗುರದಲ್ಲಿ ಕಾಠಿಣ್ಯವನ್ನು ಮತ್ತು ಗಂಧವನ್ನು ಹುಟ್ಟಿಸುವುದು (ಶಾಕತ್ತ. ೨೦೬). [ಸಂ.]

**ಪೃಥಿವೀಪತಿ** (ನಾ). ಭೂಮಿಯ ಒಡೆಯ ; ರಾಜ : ಪೃಥುಲಯಶನಮಿತತೇಜಂ ಪೃಥಿವೀಪತಿನತಕಿರೀಟಮಣಿಗಣಕಿರಣಗ್ರಥಿತಪದಪೀಠನಾಗಳ್ ರಥನೂಪುರಚಕ್ರವಾಳಪುರವಂ ಪೊಕ್ಕಂ (ಶಾಂತೀಶ. ೬-೦೩೩). [ಸಂ.]

**ಪೃಥಿವೀಪಾಲ, ಪೃಥಿವೀಪಾಳ** (ನಾ). ಭೂಮಿಯನ್ನು ಪಾಲಿಸುವವನು ; ಭೂಮಿಯ ರಕ್ಷಕ ; ರಾಜ. ಪೃಥಿವೀಪಾಳ : ಪೃಥಿವೀಪಾಳಸಹಸ್ರಂ ಪ್ರಥಿತಮಹೀನಾಥನಂತೆ ದೀಕ್ಷೆಯನಾಂತೇಂ ಕಥಿಯಿಪೊಡೆ ಯಥಾರಾಜಾ ತಥಾಪ್ರಜಾಯೆಂಬ ನೀತಿಯಂ ಪ್ರಕಟಿಸುಕೋ (ಹಾಕ್ಕ್ಯಾ. ೦೬-೩೦). [ಸಂ.]

**ಪೃಥಿವೀಪಾಳ** 'ಪೃಥಿವೀಪಾಲ' ನೋ.

**ಪೃಥಿವೀರಾಜ್ಯಂಗೆಯ್** (ಕ್ರಿ). ಭೂಮಿಯನ್ನು ಆಳು ; ರಾಜ್ಯಭಾರ ಮಾಡು : ಗಂಡಕ್ರೀಡಿತ್ರ ಶ್ರೀಬೆಯ್ದುಂಬಮಹಾರಾಜರ್ ಪೃಥಿವೀರಾಜ್ಯಂಗೆಯೆ (ಎಪಿ. XXIV. ೨೬-೯ ; ಶಾ. ೩೩೬). [ಸಂ. ಪೃಥಿವೀ + ರಾಜ್ಯಂಗೆಯ್]

**ಪೃಥಿವೀಶ್ವರ** (ನಾ). ಭೂಮಿಯ ಒಡೆಯ ; ರಾಜ : ಆ ಪೃಥಿವೀಶ್ವರಂ ಪಗಲ ತಿಂಗಳಂತಚ್ಚರಿವಟ್ಟು ನೋಡಿದಂ (ಶಂಕರ. ೯-೬). [ಸಂ.]

**ಪೃಥು** (ಗು). ೧. ವಿಸ್ತಾರವಾದ ; ವಿಶಾಲವಾದ. ೨. ದೊಡ್ಡದಾದ ; ಗಾತ್ರವಾದ : ಪೃಥುಕವಲಪರಿವಾಲಪರಾಗಭರೀಲಿದಿಂ . . . ಪರಮ ಜಿನರಾಜನಂ ದುರಿತಾಬ್ಧರಾಜನಂ ಪೂಜಿಸಿ (ಶಂಕರ. ೬-೦೦೦ ರಗಳೆ) ; ಪಾಂಡುಸುತರ್ಕೈವರು ನಡೆಯಲು . . . ಆ ಪೃಥುಕಃಕ್ಕರನು ಸಪ್ತಮವಾಗಿ ಕಾನನುಸರಿಸಿದುದು (ಅಮ್ಮ. ೦-೦೯). ೩. ಅಸಂಖ್ಯವಾದ ; ಲೆಕ್ಕವಿಲ್ಲದ ; ಹೇರಳವಾದ. ೪. ವಿವರವಾದ. ೫. ಪಂಂಖ್ಯವಾದ. ೬. ವಿವಿಧವಾದ; ಬೇರೆಬೇರೆಯ. ೭. ಚುರುಕಾದ; ಕುಶಲತೆಯುಳ್ಳ. (ನಾ). ೮. ವಿಶಾಲವಾಗಿರುವಿಕೆ : ವಿಸ್ತಾರವಾಗಿರುವಿಕೆ: "ಬಹು ಭೂಯಿಷ್ಠಮದಭ್ರಂ ಬಹುಳಂ . . . ಪೃಥು ಗುರು ಮಹದ್ವಿಶಾಳಂ ವಿಶಂಕಟಂ ವಿಸ್ತೀರ್ಣಂ" (ಚನ್ನ.ಕೋ. ೦೦೬-೩೩) ; "ಬೃಹದುರು ಪುರು ಪೃಥುಳ ಪೃಥು . . . ವ್ಯೂಢಮೆನೆ ವಿಸ್ತೀರ್ಣಮೆಂದೆನಿಕು" (ಕಣಗಾ. ೦೨೬-೮). ೯. ದೊಡ್ಡದಾಗಿರುವುದು ; ಹಿರಿದಾದುದು : "ಬೃಹತ್ . . . ಪೃಥು, ಪೃಥುಳು . . . ಭದ್ರಂ, ವರಿಷ್ಠಂ—ಈ ೧೨ ಹಿರಿದು" (ಹಲಾಯು. ೦೦೬-೦೯). ೧೦. ಒಂದು ಬಗೆಯ ಜೀರಿಗೆ; ಕರಿಜೀರಿಗೆ : "ಸುಷವೀ, ಕಾರವೀ, ಪೃಥ್ವೀ, ಪೃಥುಃ, ಕಾಲಾ, ಉಪಕುಂಚಿಕಾ—೬ ಕರೀಜೀರಿಗೆ" (ನಿಘಂಟು. ೩೮೯). ೧೧. ಹಿಂಗಿನ ಮರ : "ಕಾರವೀ, ಪೃಥ್ವೀ, ಬಾಷ್ಪಿಕಾ, ಕಬರೀ, ಪೃಥುಃ—೫ ತತ್ಪತ್ರೀ—ಆ ಹಿಂಗಿನ ಮರದ ಹೆಸರುಗಳು" (ನಿಘಂಟು. ೨೮೩). ೧೨. ಅಗ್ನಿ. ೧೩. ವಿಷ್ಣು. ೧೪. ಮಹಾದೇವ ; ಶಿವ. ೧೫. ಅಷ್ಟವಸುಗಳಲ್ಲಿ ಒಬ್ಬ. ೧೬. ಅಫೀಮು. ೧೭. ಪ್ರಸಿದ್ಧರಾದ ಹದಿನಾರು ಜನ ಚಕ್ರವರ್ತಿಗಳಲ್ಲಿ ಒಬ್ಬ ; ☞ ಭೂಮಿಯನ್ನು ಆಳಿದ ಮೊದಲನೆಯ ರಾಜ ಇವನೇ ಎಂದೂ ಇವನಿಂದಲೇ ಭೂಮಿಗೆ 'ಪೃಥ್ವೀ' ಎಂಬ ಹೆಸರಾಯಿತೆಂದೂ ನಂಬಿಕೆಯಿದೆ : ಮಹಿಯೊಳುಳಿದರೇ ಪೃಥುಪುರೂರವ ಹರಿಶ್ಚಂದ್ರಾದಿ ನರಪತಿಗಳು (ತೊ.ರಾಮಾ. ೦೬-೩೯). [ಸಂ.]

**ಪೃಥುಕ** (ನಾ). ೧. ಅವಲಕ್ಕಿ : "ಪೃಥುಕಮೆನಲವಲಕ್ಕುಂ" (ಚನ್ನ.ಕೋ. ೯೬-೦೫); "ಅವಲಕ್ಕಿ ಪೃಥುಕಮಕ್ಕು" (ಕಣಗಾ. ೦೦೦-೬). ೨. ಯಾವುದೇ ಪ್ರಾಣಿಯ ಮರಿ ; ಶಾಬ. ೩. ಮಗು ; ಶಿಶು : "ಬಾಲಃ, . . .ಪೋತಃ, ಪೃಥುಕಃ, ಶಿಶುಃ, ಶಾಬಃ, ಡಿಂಬಃ— ಈ ೯ ಮಗುವು" (ಹಲಾಯು. ೦೩-೩೯೬). ೪. ಒಂದು ಬಗೆಯ ರತ್ನ ; ಪಚ್ಚೆ : ಪಿಶ್ಯಕವೆಂಬುವದು ಗಿಣಿಯ ರೆಕ್ಕೆಯಂತೆ ಇರುವುದು . . . ಪೃಥುಕವೆಂಬುವದು ತಾವರೆಯ ಎಲೆಯ ವರ್ಣವಾಗಿಯಿರುವುದು (ಶಾಗಂಧಿ. ೩೩೭-೦೬). [ಸಂ.]

**ಪೃಥುಕತ್ವ** (ನಾ). ಎಳೆತನ ; ಬಾಲ್ಯ ; ಶೈಶವ : ದೊರೆವೆತ್ತುದು ಪೃಥುಕತ್ವಂ ಪರಮನೊಳಾತ್ಮೀಯಜನನಿಯುದರದೊಳಿರ್ದಂ ಪರಿಕಿಪೊಡಾಕ್ರಾಂತಚರಾಚರಗೋಚರಸಕಳಭುವನನಾದುದಱಿಂದಂ (ಶಂಕರ. ೦೨-೦೩೩). [ಸಂ.]

**ಪೃಥುಕುಂಭ** (ನಾ). ವಿಶಾಲವಾದ ಕುಂಭಸ್ಥಳಪ್ರದೇಶ : ಪೃಥುಕುಂಭಂ ದೀರ್ಘಹಸ್ತಂ ವಿಪುಳತರರದಂ ಪೀನಬದ್ಧೋದರಂ . . . ಮೇಚಕ ಕೋಚ್ಚೇಡಚಂಚತ್ಪೃಥುವಿಭ್ರುತ್ತಸ್ನಮ್ನಕಾಯಂ ಘನನಿನದಮದೇಂ ಬಂದುದೋ ದಂತಿಪಾಳಂ (ಧಾಕಶೀ. ೦೩-೬೬). [ಸಂ.]

**ಪೃಥುತ್ವ** (ನಾ). ವಿಶಾಲವಾಗಿರುವಿಕೆ : ವಿಸ್ತೀರ್ಣತೆ : "ಪೃಥುತ್ವ ಮೆಂಬುದಕ್ಕುಂ ಪ್ರಥಿಮಂ" (ಶಬ್ದಮಣಿ. ೦೦೫-೨೬). [ಸಂ.]

**ಪೃಥುನಿತಂಬಿನಿ** (ನಾ). ವಿಶಾಲವಾದ ನಿತಂಬವನ್ನು ಉಳ್ಳವಳು : ಲಳಿತವಿಲಾಸಿನಿಯುಂ ಕೋಮಳಾಂಗಿಯುಂ ಪೃಥುನಿತಂಬಿನಿ[ಶಾತಂ. ಪೃಥು ನಿತಂಬಬಿಂಬೆ]ಯನುಬುದಂ (ಕಥಾರ. ೩-೦೨). [ಸಂ. ಪೃಥುನಿತಂಬಿನೀ]

**ಪೃಥುನಿತಂಬೆ** (ನಾ). = ಪೃಥುನಿತಂಬಿನಿ : ಆ ಪೃಥುನಿತಂಬೆ ನಿತಂಬ ಭರಪರಿಸ್ಖಲಿತಪದವಿನ್ಯಾಸದಿಂದಂಬಿಯುಂ ಪಳಂಚಲೆವ ತನ್ನ ಚೆಲ ಕಣ ಮುಮಂ . . . ಅವಲೋಕಿಸುತ್ತುಂ (ಶಂಗಾರಶಾ. ೯-೦೨೦ ವ); ಪೆಜತೋರೆದೆ ಯೊಳೊರ್ವ ಪೃಥುನಿತಂಬ . . . ಆ ತಳಿರಂ ತನ್ನ ಸೋರ್ಮುಡಿ ಯೊಳ್ಮುಡಿದು (ಧಾಕಶೀ. ೦೦-೪೪ ವ).

[ಸಂ. ಪೃಥುನಿತಂಬಾ (ಪೃಥು + ನಿತಂಬ + —)]

**ಪೃಥುಯಶ** (ನಾ). ೧. ಅತಿಶಯವಾದ ಕೀರ್ತಿ. ೨. ಅತಿಶಯವಾದ ಕೀರ್ತಿಯನ್ನು ಹೊಂದಿದವನು : ಸಾಹಿತ್ಯನಟೀಶೈಲೂಷನಶ್ಚೂರ್ಜಿತ ಶುಭಚರಿತಂ ಸಜ್ಜನಾಧಾರನಿರ್ದಂ ದ್ಯುನದೀಫೇನಪ್ರಕಾಶಪ್ರಥಿತಪೃಥು ಯಶಂ ಭಾರತೀಕರ್ಣಪೂರಂ (ಕಂಠಾಮ. ೬-೦೬೦). [ಸಂ. ಪೃಥುಯಶಸ್]

**ಪೃಥುರೋಮ** (ನಾ). ಮೀನು. ತಿಮಿಂಗಿಲ ಮೊದಲಾದ ಜಲಚರ ಪ್ರಾಣಿ : "ವಿಸಾರಂ ಶಫರಂ ತಿಮಿ ಪಾಠೀನಂ ಝಷಮನಿಮಿಷಂ ವಿಶಾರಂ ಮಾತ್ಸ್ಯಂ ವಿಸಾನಮೆಸರ್ ತದ್ಭೇದಮನೂನತಿಮಿತಿಮಿಂಗಿಲಾದಿ ಪೃಥು ರೋಮಂಗಳ್" (ಅಭಿಧಾನ. ೨೨-೩); ಪೃಥುರೋಮಮೀನ ತಿಮಿಂಗಿಲಂ ತಿಮಿಯ ನೂರ್ಗಲ್ ಸಿಂಧು ತಾನುಕ್ಕಿದೇ (ಕೋಲಕಿಶ. ೬೬); ಪ್ರಸಾದವ . . . ಪೃಥುರೋಮ ಭುಂಜಿಸಲು ಜಾಲವನಿಕ್ಕಿಯದನೊಯ್ದು ಧೀವರಂ ಭಕ್ಷಿಸಿದನೀರ್ವರ್ಗೆ ಪದವಾದ ಶಿವಲೋಕವಾಮುದು (ಧಾಶಕ. ೦೨-೨೨).

[ಸಂ. ಪೃಥುರೋಮನ್]

**ಪೃಥುಲ, ಪೃಥುಳ** (ಗು). ೧. ವಿಶಾಲವಾದ ; ವಿಸ್ತಾರವಾದ : ಶ್ರೀ ವಧೂಚಂಚತ್ಕಾಂಚನಲೀಲಾಮಂದಿರ ಶ್ರೀನಿಲಯ ಪೃಥುಲವಕ್ಷಸ್ಥಲಂ ತೀರ್ಥನಾಥಂ (ಅಜಪು. ೩-೧೯). ೨. ದೊಡ್ಡದಾದ; ಗಾತ್ರವಾದ : ನುತಸುವರ್ಣದ ಚಿತ್ರಮಂಟಪದ ಮಧ್ಯದೊಳು ಪೃಥುಲನವರತ್ನನವಮಣಿ ಖಚಿತಸಿಂಹಾಸನದಿ . . . ಸಿದ್ಧನುಜೇಶಗುರುಮೂರ್ತಿಯೊಪ್ಪಿರ್ದನು (ಗುರುಚಾ. ೦-೯೦) ; ಪೃಥಿವಿಗಿರದತ್ಯತುಲಮಾ ಪೃಥುಲಪುಷ್ಪರಂ(ಪ್ರಭುಲಿಂಗ ೨೦೬-೧೧೮). ೩. ಅಸಂಖ್ಯವಾದ ; ಲೆಕ್ಕವಿಲ್ಲದ. ೪. ಅಧಿಕವಾದ ; ಅತಿಶಯವಾದ : 'ಪೃಥುಲಯಶ' ಪರಾ. (ನಾ). ೫. ದೊಡ್ಡವನು; ಹಿರಿಯ : ಸ್ವಪ್ನಿಮೂಲಪ್ರಥನುನಾಂ, ಸ್ಫೂರ್ತಿಯೂಂ, ಪೃಥುಲನವ ಸುಖದುಃಖಮಾಶದಿಂ ಜೀವರನು ಬಂಧಿಸುವೆನಾಂ ಭಾವಜಾ! (ಅಕ್ಕಾಂಗ. ೨೧-೬೨೬). **ಪೃಥುಳ** : ೧. ಪೃಥುಳಭುಜದಿಂ ಪೃಥ್ವೀಶು ತಾಳ್ದಿದಂ ನೆಲ ನೆಲ್ಲಮಂ (ಗಾಜಕು. ೦೬). ೨. ಅಂಗರುಚಿ ಶರಭಬಲಮಂ ಬಲದ ವಾಜಿ ಕರಣಂಗಳಂ ಲೋಹಿತಾಕ್ಷಿಗಳತುಳಭೂಧರಶೃಂಗಮಂ ಪೃಥುಳಕಂಧರ ಮೃಗಲುಲಾಯರಿತುಮಹಿಷೆಗಳ ಸಡುವಿರ್ದುದು (ಹರಿಶ್ಚ. ೩-೩೬) ; ಪೃಥುಳಕರ್ಣಶಶುಚಂಗಳ ನಿಮ್ನನಾಭಿಯ ಕೃಶಮಧ್ಯದ ತನುಲತೆಯ ಗಜಗಮನೆಯಂ ನೋಡಿ (ಜಕ್ಕ. ೦೨-೩); ಪೃಥವಿಗೊಜಗಿದಮೆಂಟುಸಾವಿರ ಪೃಥುಳಹಯ ನಾಗ್ನಾಯುತ್ತ ಗಣನೆಯ ರಥ ಪದಾತಿಯೊಳಿತ್ತಲೆಸೆ ಸಪಜ ದನು ಪರಬಲವ (ಕುಮಾರಾಗ. ೦-೦೨). ೪. ಪೃಥುಳಜಳವಾಜಿಗಳ್ ಮಣಿ ರಥಂಗಳಾಪರಿಸುತಿರದೆ ಪರಿದುವು ರಣದೊಳ್ (ಪ್ರಭುಲಿಂ. ೨೯-೩೦೯).

'ಪೃಥುಳಬಲ' ಪರಾ. ೬. ವಿಶಾಲವಾಗಿರುವಿಕೆ : ವಿಸ್ತಾರವಾಗಿರು ವಿಕೆ : "ಬೃಹದುರುವುರು ಪೃಥುಳ ಪೃಥು . . . ಪೂರ್ವಮನೆ ವಿಸ್ತೀರ್ಣ ಮೆಂದೆನಿಕುಂ" (ಚುಂಗನಾ. ೦೨೬-೬). ೭. ದೊಡ್ಡದು; ಗಾತ್ರವಾದುದು : "ಬೃಹತ್, ಉರು, ಗುರು, ವಿಸ್ತೀರ್ಣಂ, ಪುರು, ಪೃಥು, ಪೃಥುಳಂ . . . ವರಿಷ್ಠಂ—ಈ ೧೨ ಹಿರಿದು" (ಕರ್ಣಾಟಶ. ೦೦೬-೦೪). [ಸಂ.]

**ಪೃಥುಲಯಶ** (ನಾ). ಅತಿಶಯವಾದ ಯಶಸ್ಸನ್ನು ಹೊಂದಿದವನು ; ಅಧಿಕವಾದ ಕೀರ್ತಿಯನ್ನು ಪಡೆದವನು : ಪೃಥುಲಯಶನಮಿತತೇಜಂ . . . ರಥನೂಪುರಚಕ್ರವಾಳಪುರವಂ ಪೊಕ್ಕಂ (ಶಾಂತೀಶ್ವ. ೬-೧೩೬).

[ಸಂ. ಪೃಥುಲಯಶಸ್]

**ಪೃಥುಲೆ** (ನಾ). ಪಾರ್ವತಿ ; ಶಿವೆ : ಶರ್ವಾಣಿ ಮೃಡೆ ರುದ್ರಾಣಿ ಪೃಥುಲೆ ನಿಗಮಾಲಯೆ ಸಹಸ್ರಭುಜಸಂಯುಕ್ತೆ (ಕೆಳದಿ. II. ೬-೪).

[ಸಂ. ಪೃಥುಲಾ]

**ಪೃಥುವಿ, ಪಿಟ್ಟುವಿ, ಪಿಟ್ದುವಿ, ಪುಡವಿ, ಪೊಡವಿ, ಪ್ರಿತುವಿ, ಪ್ರಿಥುವಿ** (ನಾ). = ಪೃಥಿವಿ ೧ : ಶ್ರೀಪೃಥುವಿಸಾಗರ ಶ್ರೀಮದುಪಳಮೇನ್ದ್ರಸೋಮ ವಂಶೋದ್ಭವ ಕುಲತಿಲಕನ್ (ಎಇ. IX, ೨೧-೦ ; ಕ. ೬೦೦); ಪೃಥುವಿ ನೆಗ್ಗಲು ಸುಭಟಸಾಗರಮಥನ ಕರ್ಣನು ಭೀಮಸೇನನ ರಥವನಜಸುತ ಬಂದು ಪುನರಪಿ ಕಾಳಗವ ಹಿಡಿದ (ಕುಮಾರವ್ಯಾ. ೦೩-೪೨) ; ರಥಿಕರಿಬ್ಬರು ಮಲತು ನಿಲಲು ಬೊಬ್ಬಿರಿದು ಸಾರಥಿಗಳಬ್ಬರು ತೇರ ತೇಜಿಯಂ ಚಪ್ಪರಿಸಿ ಪೃಥುವಿ ನೆಗ್ಗಲ್ಸುಭಟರುದ್ದಂಡಕಾರ್ಮುಕವನೊದರಿಸುತ ಹೂಂಕರಿಸುತ (ತುರಂಗ. ೩೩-೩೦). △ **ಪಿಟ್ಟುವಿ** : 'ಪಿಟ್ಟುವಿರಾಜ್ಯಂಗೆಯ್' ಪರಾ. △ **ಪಿಟ್ದುವಿ** : 'ಪಿಟ್ದುವಿಪತಿ' ಪರಾ. **ಪುಡವಿ** : ಪುಡವಿಯೊಳಗ್ಗಳನ್ ನೆಗಟ್ದ ದಾನಿಗಳಿನ್ನಿವರನ್ನರ್ ಆರೊ ಪೇಟ್ (ಎಕ. IV.ನಾಗಮಂ. ೦೯-೬೨ : 1118 ?) ; ಚರಿಸಿದೆನು ಸತ್ಯಕಂ ಪು[ಶಾಕಂ. ಪೊ]ಡವಿಯೊಳಗ್ಗಾವು (ತುರಂಗ. ೪೩-೩೬). **ಪೊಡವಿ** : ಪೊಡವಿ ಪಟ್ಟಂಡಕ್ಕಡಿಯಿಡು ಪಡಿಗಳ ತೊಳಗಿ ಬೆಳಗುವ ಪಚ್ಚೆನೊಸಲಂ ಪಡೆದ . . . ಬಾಲಕನಂ . . . ಎತ್ತಿಕೊಂಡಿದ್ದನು ದೇವಿ ಬಂದಳ್ (ಶಾಂತಿಪು. ೦೦-೯); ಈಗ ಕಿಡಲಿ ಕೌರವ ರಾಯನಾಳಲಿ ಪೊಡವಿಯನು ಪರಿತೋಷವಾಗಲಿ ನೃಪನ ಮಿತ್ರರಿಗೆ (ಕುಮಾರವ್ಯಾ. ೩-೩೬); ಸುಡುವರೆ ಪಂಜಿಹವು ಬಡಿಯೆ ಭೇರಿಯು ಇಹುದು ಪೊಡವಿಯೊಳು ಪರ ಮದುವೆಯ ವೆಚ್ಚಕೊಂದಡಿಕೆಲೆಯು ಬೇಡ (ಸರ್ವಜ್ಞ. ೬೪೬); ಪೊಡವಿಯಲ್ಲಿದ್ದವಗೆ ಅಡವಿ ಗೊಡವೆ ಯಾಕೆ? (ಗಾದೆ). **ಪ್ರಿತುವಿ** : ಹೊಯಸಳ ಶ್ರೀ ವೀರಬಲಾಳದೇವರು ಪ್ರಿತುವಿ ರಾಜ್ಯಂಗೆ ಉತಿರಲು (ಎಕ. X (೫), ಕೋಲಾರ. ೩೨-೯ ; 1342). **ಪ್ರಿಥುವಿ** : ದೋರಂ ಪ್ರಿಥುವಿರಾಜ್ಯಂಕೆಯ (ಎಇ. VI, ೦೬೩-೦; ೯೮೦). ☞ 'ಪೃಥುವಿ' ಎಂಬುದರ ಜೊತೆಗೆ ಪರ್ಯಾಯರೂಪವಾಗಿ ಬಂದಿರುವ ಈ ಎಲ್ಲಾ ಶಬ್ದರೂಪಗಳಲ್ಲಿ 'ಪುಡವಿ', 'ಪೊಡವಿ' ಎಂಬ ಎರಡು ರೂಪಗಳನ್ನು ಬಿಟ್ಟು ಮಿಕ್ಕುವೆಲ್ಲ ಅಪಲಿಖಿತಗಳು.

[< ಸಂ. ಪೃಥ್ವೀ/ಪ್ರಾ. ಪುಹವಿ, ಪುಢವೀ]

**ಪೃಥುವೀರಾಜ್ಯ** (ನಾ). ವಿಸ್ತಾರವಾದ ಸಾಮ್ರಾಜ್ಯ : ಸ್ವಸ್ತಿಶ್ರೀಸಾನ್ತರಸ ಪೃಥುವೀರಾಜ್ಯಮದುಳ್ . . . ಬೆಸಗೆಯ್ವಲ್ಲಿ ಮಾರಲಿ ಬಟಾರಿಂಗೆ ಕೊಟ್ಟಾರ್ (ಎಕ. VI, ಕೊಪ್ಪ. ೩೯-೨; ಸು. 700); ಸ್ವಸ್ತಿ ಶ್ರೀಕೊಂಗುಣಿವರ್ಮಮಹಾರಾಜ ಶ್ರೀಪುರುಷ ಪೃಥುವೀರಾಜ್ಯ ವಿಜಯವತ್ಸರ ಇರ್ಪ್ಪತ್ತಾ ಎಣ್ಣನೆಯೊಳು (ಎಕ. X, ಕೋಲಾರ. ೬-೦; 753). [<ಸಂ. ಪೃಥ್ವೀರಾಜ್ಯ]

**ಪೃಥುಶ್ರೋಣಿ** (ನಾ). ವಿಶಾಲವಾದ ಜಘನವನ್ನುಳ್ಳವಳು : ಅತನರ್ಧಾಂಗಿ . . . ಪರಮಕಲ್ಯಾಣಿ ಭವಪಾಶಕಾತೀತೆ ತತ್ವಾನುಭವೆ ಮಾವರಹಿತೆ ಆತತಪೃಥುಶ್ರೋಣಿಯರುಣಪಲ್ಲವಪಾಣಿಯಾ ವಿಮಲ ರುದ್ರಾಣಿಯು (ಧಾಶಕ. ೦-೪೩). [ಸಂ. ಪೃಥುಶ್ರೋಣೀ]

**ಪೃಥುಸತ್ತ್ವ** (ನಾ). ೧. ಹೆಚ್ಚಾದ ಬಲ, – ಸಾಮರ್ಥ್ಯ; ಪರಾಕ್ರಮ. ೨. ಹೆಚ್ಚಾದ ಸಾಮರ್ಥ್ಯವನ್ನುಳ್ಳ ವ್ಯಕ್ತಿ; ಪರಾಕ್ರಮಿ: ಪೃಥುಸತ್ವಂ . . . ಜಗತ್ಪ್ರಥಿತಕ್ಷಾತ್ರಗುಣಂ ಭವತ್ಪದಪಯೋಜಾತಾಂಶಿಕೃಪ್ಪದಿಂ ಪೃಥಿವೀಪಾಲನ್ನಪಾಲನುಜ್ಜ್ವಲಯಶಂ ಮತ್ತಾವಿ ಸತ್ಕೀರ್ತಿಮದಿಂ (ಶಂದ್ರಪ್ರ. ೯-೯೩); ಪೃಥುಸತ್ತ್ವರ್ ದೇವದೈತ್ಯರ್ ತಮಗಭಿಮತವಾಗಲ್ಕೆ ಸಂರಂಭದಿಂದಂ ಮಥಿಸಲ್ ಮಾಂಗಲ್ಯವಸ್ತುಪ್ರಕರಮನಮೃತಾಹಾರಮಂ ಕೊಟ್ಟು . . . ಪ್ರಖ್ಯಾತಿವೆತ್ತಂ ಸಲೆ ಜಲಚರಸಂಘಾತರೌದ್ರಂ ಸಮುದ್ರಂ (ರಕಾಉ. ೭-೬). [ಸಂ.]

**ಪೃಥುಸ್ಕಂಧ** (ನಾ). ೧. ದೊಡ್ಡ ಭುಜಗಳನ್ನುಳ್ಳುದು; ಅಗಲವಾದ ಹೆಗಲನ್ನುಳ್ಳುದು: ದೀರ್ಘವಾಲಂ ಪೃಥುಸ್ಕಂಧಂ . . . ಸುನಾಸಾಪುಟಮವರ್ದ ತುರಂಗಂಗಳಂ ಕಾಣ್ಕೆಗೆಯ್ದಂ (ರಾಜಶೇ. ೦೨-೧೦೦). ೨. ದೊಡ್ಡ ಕೊಂಬೆಗಳನ್ನುಳ್ಳುದು: ಕಾಂತಾರಾಂತರದೊಳ್ . . . ಅತಿದೀರ್ಘಪೃಥುಸ್ಕಂಧಮುಮಪ್ಪುದೊಂದು ಮಹಾವಟವಿಟಪಿಯೊಳನೇಕವಿಹಗಕುಳಂ ಗಳರ್ವವು (ಜಂಕಶಂ. ೨೬೮–೨೨). ೩. ಹಂದಿ; ವರಾಹ. [ಸಂ.]

**ಪೃಥುಳ** 'ಪೃಥುಲ' ನೋ.

**ಪೃಥುಳಗತಿ** (ನಾ). ಸರ್ವಾಂತರ್ಯಾಮಿ; ಪರಮಾತ್ಮ: ಶಿತಿಕಂಠಪೃಥುಳಗತಿ ವರದಹತಮಲವಿರತವಿತತಿ ಹೃನ್ನಳಿನಭೃಂಗ . . . ಮಾಯಾದೂರ ಸತತ ರಕ್ಷಿಸುಗೆಮ್ಮುಮಂ (ಅಕಾಲೇಶ. ೦-೭).
[ಸಂ. ಪೃಥುಲಗತಿ]

**ಪೃಥುಳಬಲ, ಪೃಥುಳಬಳ** (ನಾ). ೧. ಹೆಚ್ಚಾದ ಬಲ; ಅತಿಶಯವಾದ ಶಕ್ತಿ; ಪರಾಕ್ರಮ. ೨. ಹೆಚ್ಚು ಶಕ್ತಿಯುಳ್ಳವನು; ಪರಾಕ್ರಮಿ: ಬಳಿರಥಿಕರೀತನ ಬಟ್ಟು ಹಾಯ್ದರು ಪೃಥುಳಬಲನ್ನೆ ಭೀಮನೆಚ್ಚನು ಗುರುತನೂಭವನ(ಕುಮ್ಯಾ. ೯. ೬-೨೩). **ಪೃಥುಳಬಳ:** ೨. ಪೃಥುಳಬಳವಾದಿ ಕೂರ್ಮಂ . . . ಮಿಥಿಲಾಪುರದರಸನೆಂಬ ಮಹಿಮಾವರ್ಮಂ(ದಕಾಉ. ೦೦-೩).
[ಸಂ. ಪೃಥುಲಬಲ]

**ಪೃಥುಳಬಳ** 'ಪೃಥುಳಬಲ' ನೋ.

**ಪೃಥ್ವಿ** (ನಾ). ೧. ಪಂಚಮಹಾಭೂತಗಳಲ್ಲಿ ಒಂದು; ಧರೆ; ಭೂಮಿ: "ಭೂ, ಭೂಮಿಃ . . . ಪೃಥ್ವೀ, ಪೃಥಿವೀ . . . ಧರಾ, ಅಧಾರಾ–ಈ ೩೭ ಭೂಮಿಯ ಪೆಸರ್" (ಹಲಾಯು ೨೬-೦); ಪೃಥ್ವಿಯೊಳಗಿಲ್ಲ ಆಕಾಶದೊಳಗಿಲ್ಲ ಚತುರ್ದಶಭುವನಾದಿ ಭುವನಂಗಳೊಳಗೆಯೂ ಇಲ್ಲ ಹೊಱಗೆಯೂ ಇಲ್ಲ ಏನಾಯಿತ್ತೆಂದಱಿಯೆನಯ್ಯ (ಅಪಶಂ. ೩೩-೬೨೦);ನವದ್ವಾರಗಳ ಮುಚ್ಚಿ ಶಿವಧ್ಯಾನದೊಳಗಿರಲು ನವಖಂಡ ಪೃಥ್ವಿಯೊಳಗಣ ಮಾತೆಲ್ಲ ಕಿವಿಯೊಳಗೆ ಇಹುದು(ಸರ್ವಜ್ಞ. ೩೯೯); ಗಗನಮಂ ಪೃಥ್ವಿಯಂ ವಾರ್ಧಿಯಂ ಪರ್ವತಾರಣ್ಯವಿಸ್ತಾರಧೀರೋದಾತ್ತಗಾಂಭೀರ್ಯಮಂ . . . ಧ್ಯಾನಿಸುತೆ ಭಾವಿಸುತೆ ರೂಪಿಸುತೆ ಕಾವಿಸಿದನಾ ಭೂಮಿಪಂ (ಶ್ರೀರಾಮಾ. ೦೨-೩೦೭). ೨. ಕರಿಜೀರಿಗೆ: "ಸುಷವೀ, ಕಾರವೀ, ಪೃಥ್ವೀ, ಪೃಥುಃ, ಕಾಲಾ, ಉಪಕುಂಚಿಕಾ – ೬ ಕರೀಜೀರಿಗೆ" (ಸಿದ್ಧಾಂಊ.೨೬೯). ೩. ದೊಡ್ಡ ಏಲಕ್ಕಿ. ೪. ಹಿಂಗಿನ ಮರ: "ಕಾರವೀ, ಪೃಥ್ವೀ, ಬಾಷ್ಪಿಕಾ, ಕಬರೀ, ಪೃಥುಃ – ೫ ತತ್ಪತ್ರೀ–ಆ ಹಿಂಗಿನ ಮರದ ಹೆಸರುಗಳು" (ಸಿದ್ಧಾಂಊ.೨೬೫) .೫. [ಛಂದ] ಪಾದದಲ್ಲಿ ಹದಿನೇಳು ಅಕ್ಷರಗಳಿರುವ, ಅತ್ಯಷ್ಟಿಛಂದಸ್ಸಿನ ಒಂದು ವೃತ್ತದ ಹೆಸರು: ಇನಾನಿಲ ದಿನೇಶ ಕೂರುತಪಯೋಲಗಂಗಳ್ಪಡಂಗನಾಳ್ದು ನಿಲೆ ವಿಶ್ರಮಂ ಪಸುಗಳಲ್ಲಿ ಚೆಲ್ವಾಗೆ ನೀಲನೀರಜವಿಲೋಚನೇ ಬಗೆದು ಕೇಳಿದಂ ಪೃಥ್ವಿಯೆಂಬ ಪಾವುದಿನಿದಲ್ತೆ ಸಂದುದುದು ನಿರಂತರಂ ಪೃಥ್ವಿಯೊಳ್ (ಛಂದೋಂಬು. ೨-೦೬೯); ಜಸಂಜಸಯಲಂಗಮೊಂದಿದೊಡೆ ಪೃಥ್ವಿಯೆಂಬರ್ ಬುಧರ್ (ಕೃಶಿಾ. ೮೪). ೬. [ಜೈನ] ಷಡ್ದ್ರವ್ಯಗಳಲ್ಲಿ ಒಂದು: ದ್ರವ್ಯಗಳು ಅರುವಿಧಗಳೆಂದು ವಿಭಾಗ ಮಾಡಿರುವುದರಿಂದ ಪೃಥ್ವಿ ಜಲ ತೇಜಸ್ಸು ವಾಯು ಮನಸ್ಸು ಎಂಬ ಐದು ದ್ರವ್ಯಗಳು ಪುದ್ಗಲದಲ್ಲಿ ಸೇರಿದುವು (ಹಿಂರಸಾ. ೯೦). 'ಷಡ್ದ್ರವ್ಯ' ಪರಾ. [ಸಂ. ಪೃಥ್ವೀ]

**ಪೃಥ್ವಿಕೆ** (ನಾ). ೧. ದೊಡ್ಡಜಾತಿಯ ಏಲಕ್ಕಿ: "ಪೃಥ್ವಿಕಾ, ಚಂದ್ರಬಾಲಾ, ಏಲಾ, ನಿಷ್ಕುಟೀ, ಬಹುಲಾ – ೫ ದೊಡ್ಡಯಾಲಕ್ಕೀ ಹೆಸರುಗಳು" (ಸಿದ್ಧಾಂಊ. ೦೪೧). ೨. ಜೀರಿಗೆ: "ಜೀರಿಗೆಯಜಾಜಿ ಪೃಥ್ವಿಕೆಯಕ್ಕು" (ಕಂಗರಾ. ೪೦ ೩೩). [ಸಂ. ಪೃಥ್ವಿಕಾ]

**ಪೃಥ್ವಿತತ್ತ್ವ** (ನಾ). ಮಣ್ಣಿನ ಸ್ವಭಾವ; ಭೂಮಿಯ ಗುಣ: ಘಟತತ್ತ್ವ ಪೃಥ್ವಿಭೇದವಾಗಿ ಆತ್ಮತತ್ತ್ವ ಅಪ್ಪುಭೇದವಾಗಿ ತೇಜತತ್ತ್ವ ಅಱುವು ಭೇದವಾಗಿ . . . ಪೃಥ್ವಿತತ್ತ್ವವ ಕೂಡಲಾಗಿ ಉತ್ಪತ್ತಿ ಎಲ್ಲಿ ಅಡಗಿತ್ತು (ಮೋಳಿಗೆಮಾ. ೭-೨೩). [<ಸಂ. ಪೃಥ್ವೀತತ್ತ್ವ]

**ಪೃಥ್ವಿಮಂಡಲ** (ನಾ). ಭೂಮಂಡಲ; ಭೂಗೋಳ: ವಜ್ರದಿಂದಂಕಿತಮಪ್ಪ ನಾಲ್ಕು ರೇಖೆಗಳನ್ನುಳ್ಳುದು ಹೊಂಬಣ್ಣವಾಗಿರ್ಪುದು ಪೃಥ್ವಿಮಂಡಲಂ (ಶ್ರೀಶಿಕ್ಷಾ. ೦೦-೩೨). [<ಸಂ. ಪೃಥ್ವೀಮಂಡಲ]

**ಪೃಥ್ವಿವಲ್ಲಭ** (ನಾ). ದೊರೆ; ರಾಜ: ಶ್ರೀಪೃಥ್ವಿವಲ್ಲಭ ಮಹಾರಾಜಾಧಿರಾಜಪರಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ . . . ಆಚನ್ದ್ರಾರ್ಕತಾರಂಬರಂ ಸಲುತ್ತಮಿರೆ (ಶಾಇ. XX. ೪೬-೩; 1072).
[<ಸಂ. ಪೃಥ್ವೀವಲ್ಲಭ]

**ಪೃಥ್ವೀಗೋಳ** (ನಾ). = ಪೃಥ್ವಿಮಂಡಲ: ಪಾಠಶಾಲೆಗಳಲ್ಲಿರುವ ಒಂದು ಅಡಿ ವ್ಯಾಸದ ಪೃಥ್ವೀಗೋಳದಲ್ಲಿ ಅತ್ಯಂತ ಎತ್ತರವಾದ ಪರ್ವತವೆಂದು ತೋರಿಸಲು ಒಂದು ಸಣ್ಣ ಮರಳುಕಣವನ್ನು ಉಪಯೋಗಿಸಿರುವರು (ಖಂಶ. ೯). [ಸಂ. ಪೃಥ್ವೀಗೋಲ]

**ಪೃಥ್ವೀತತ್ತ್ವ** (ನಾ). = ಪೃಥ್ವಿತತ್ತ್ವ: ಅವಳ ಮಾಂಸಲದೇಹವು ಪೃಥ್ವೀತತ್ವಕ್ಕೆ ಜೋತುಬಿದ್ದು ಕುಡಿಚಿಯನ್ನು ಒಮ್ಮೆ ಪ್ರಭು ಎಂದು ಒಪ್ಪಿಕೊಂಡಿತ್ತು (ಸಮಜಾ. ೯೩೦). [ಸಂ.]

**ಪೃಥ್ವೀಧವ** (ನಾ). ಭೂಮಿಯನ್ನು ಆಳುವವನು; ಭೂಮಿಯ ಒಡೆಯ; ದೊರೆ; ರಾಜ: ಶಿಶಿವಾ ಪವಡಿಸಿತೆ ಚತುರಂಗವಿಪರಿಪರಿಧಾನ ಪೃಥ್ವೀಧವನ ಬಾಳಿಕೆ ನೀರೊಳೆಂದಳಿದನು ಗುರುಸೂನು (ಕುಮ್ಯಾ.ಗ. ೯-೬); ಪ್ರಣತಪ್ರತ್ಯರ್ಥಿಪೃಥ್ವೀಧವನಿವಹಕಿರೀಟಾಗ್ರಮಾಣಿಕ್ಯಮಾಲಾಪ್ರಾಣಿಚಂಚತ್ಕಾಂಚಲಾಂಚತ್ಸುರವಪಾಣಿತಮಹಾಪೀಠಮೇಘಸ್ಯಪಾದಂ . . . ಲಸದ್ಯಕ್ಷನಾ ರಾಜಚೂಡಾಮಣಿ ಪೆಂಪಂ ತಾಳ್ದು ಕಣ್ಗೊಪ್ಪಿದಂ (ರಾಜಶೇ. ೩-೦೩). [ಸಂ.]

**ಪೃಥ್ವೀಪಾಲ** (ನಾ). ಭೂಮಿಯ ರಕ್ಷಕ; ದೊರೆ; ರಾಜ: ಖೂಳ ಗೋವರಹಳ್ಳಿಯಲಿ ಕಟ್ಟಾಳಲಾ ಬಳಿಕೇನು ಪೃಥ್ವೀಪಾಲರೀತಗೆ ಸರಿಯ ದಿಟದಿಟವೆಂದನಾ ಚೈದ್ಯ (ಕುಮ್ಯಾ.ಶ. ೦೦-೦೩); ನೆರೆದ ಪೃಥ್ವೀಪಾಲರಿಗೆ ವಿಪ್ರರಿಗೆ ಮಣಿಮಯದಾಲಯಂಗಳು ಸವದವೈಗಾಪುದದೆಣೆತಯಲಿ (ಕೂಕೂ. ೦-೦೩-೦). [ಸಂ.]

**ಪೃಥ್ವೀರಾಮ** (ನಾ). ಒಬ್ಬಾತನ ಹೆಸರು: ಶ್ರೀಮದಮರೇಂದ್ರವಿಭವೋದ್ದಾಮಂ ಸುಗ್ರಾಮರಾಮನೂರ್ಜಿತತೇಜಂ ಭೀಮಪರಾಕ್ರಮನೆನಿಸಿದನೀ ಮಹಿಯೊಳ್ ಪೃಥ್ವೀರಾಮನನುಪಮರೂಪಂ (ಶಾಇ. XX. ೦೮-೦೦; ೯೮೦).
[ಸಂ.]

**ಪೃಥ್ವೀವಲ್ಲಭ** (ನಾ). = ಪೃಥ್ವೀಧವ: ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಂ ದ್ವಾರಾವತೀಪುರವರಾಧೀಶ್ವರಂ ವಿಷ್ಣುವಂಶೋದ್ಭವಂ (ಕೂಶಾ.ಶಾ. ೦೬-೩೩; 1160); ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜಪರಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ (ಶಾಇ. XX. ೩೦-೨; ೯).
[ಸಂ.]

**ಪೃಥ್ವೀಶ** (ನಾ). = ವೃಥ್ವೀಧವ : ಪೃಥ್ವೀಶಕೋಟೀರವ್ಯಾಪ್ತಿಗೆ ಸಂದ ಚಕ್ರರವಿ ದೈತ್ಯಧ್ವಾಂತಮಂ ಗೆಲ್ದ ಭೂಭಾರಚ್ಛೇದವಿನೋದಿ ಕೃಷ್ಣನೆಮಗೀಗಾನಂದಸಂದೋಹಮಂ (ಜಗ. ೧-೧). [ಸಂ.]

**ಪೃಥ್ವೀಶ್ವರ** (ನಾ). =ಪೃಥ್ವೀಧವ : ಅಖಿಳಪೃಥ್ವೀಶ್ವರರ ಬಹಳಾಸ್ಥಾನದಲಿ ಮೋಹರಿಸಿದರು ಮೋಹನದ ಮೋಡಾವಮೋಡಿಯಬಲೆಯರು (ಕುಮ್ಯಾ.ಅ. ೦೫-೯೯). [ಸಂ.]

**ಪೃಥ್ವೀಸ್ವರ** (ನಾ). (ಭೂಮಿಂ, ಜಲ, ಅಗ್ನಿ, ವಾಯು ಮತ್ತು ಆಕಾಶಗಳೆಂಬ ಪಂಚಭೂತಗಳಿಗೆ ಸಂಬಂಧಿಸಿದ ನಾಳಗಳಿಂದ ಹೊರಡುವ) ಪಂಚಸ್ವರಗಳಲ್ಲಿ ಒಂದು (?) : ಇಡೆ ಪಿಂಗಳೆಂಬೆರಡು ನಾಡಿಗಳಿಂದೊಡಗೂಡಿದೆರಡು ನಾಳಗಳಹವು ಅವುಗಳೊಳಗೊಂದೊಂದು ನಾಳದಲ್ಲಿ ಪೃಥ್ವೀಸ್ವರ ಅಪ್ಪುಸ್ವರ ತೇಜಸ್ಸಿನ ಸ್ವರ ವಾಯುವಿನ ಸ್ವರ ಆಕಾಶಸ್ವರ ಇಂತೀ ಪಂಚಸ್ವರಸಂಜ್ಞೆಯಂ ತಾಳಿ ಕಾಲಕಲ್ಪಿಯಿಂ ಉಚ್ಛ್ವಾಸ ನಿಶ್ವಾಸವಾಯುವೇ ಸಂಚರಿಸುತ್ತಿಹುದು (ಶಿವೀಶ. ೦೯೭). 'ಆಕಾಶಸ್ವರ' ನರಾ. [ಸಂ.]

**ಪೃದಾಕು** (ನಾ). ೧. ಹಾವು ; ಸರ್ಪ : "ಉರಗಂ . . . ಪೃದಾಕು ಭುಜಗಂ ಕುಂಭೀನಸಂ ಪನ್ನಗಂ ಪುರುದಾಶಂ ಶನಿಗೂಢಪಾದ್ವಿಷಧರಂ ಸರ್ಪಂ ದ್ವಿಜಿಹ್ವಾಹ್ವಯಂ" (ಶಬ್ದಕೋ. ೦೯-೭). ೨. ಚೇಳು ; ವೃಶ್ಚಿಕ. ೩. ಹುಲಿ; ವ್ಯಾಘ್ರ. ೪. ಆನೆ; ಗಜ. ೫. ಚಿರತೆ. ೬. ಒಂದು ಬಗೆಯ ಮರ. [ಸಂ.]

**ಪೃಶ್ನಿ** (ಗುಂ). ೧. ಚಿಕ್ಕ : ಕುಳ್ಳಾದ : ಕುಬ್ಜ. ೨. ದುರ್ಬಲವಾದ : ಕ್ಷೀಣವಾದ. ೩. ಚುಕ್ಕೆಗಳಿಂದ ಕೂಡಿದ. ೪. ಬೇರೆಬೇರೆಯ : ವಿಭಿನ್ನವಾದ. (ನಾ). ೫. ಕುಳ್ಳಾಗಿರುವವನು ; ಕುಬ್ಜ : "ಗಡುಳಂ ತಾಂ ಕುಬ್ಜನಲ್ಪಸತ್ವನುಪರಿಗತಂ ಪೃಶ್ನಿ[ಯುತಂ] ಕಿರಾತಂ" (ಶಬ್ದಕೋ. ೬೯-೪೦). ೬. ಕದಿರು ; ಕಿರಣ. ೭. ಭೂಮಿ. ೮. ನಕ್ಷತ್ರಗಳಿಂದ ತುಂಬಿದ ಆಕಾಶ. ೯. ಮೋಡ: ಮೇಘ. ೧೦. ಕೃಷ್ಣನ ತಾಯಿ; ದೇವಕಿ. ೧೧. ಹಾಲು; ಕ್ಷೀರ. ೧೨. ಮೈಮೇಲೆ ಮಚ್ಚೆಗಳಿರುವ ಹಸು. [ಸಂ.]

**ಪೃಶ್ನಿಪರ್ಣಿ** (ನಾ). ಒಂದು ಬಗೆಯ ಸಸ್ಯ : ನರಿಹೊನ್ನೆಗಿಡ : "ಪೃಶ್ನಿಪರ್ಣಿ ಘನೆರ್ಜಕಂ" (ಶಬ್ದಕೋ. ೩೬-೨೩). 'ಪೃಥಕ್ಪರ್ಣಿ' ನರಾ. [ಸಂ. ಪೃಶ್ನಿಪರ್ಣೀ]

**ಪೃಷತ** (ನಾ). ೧. ಮೈಮೇಲೆ ಚುಕ್ಕೆಗಳಿರುವ ಜಿಗರೆ.– ಎರಳೆ; ಸಾರಂಗ : "ಸಾರಂಗಃ, ರು(ಮ)ಕ್ಷಃ, ಪೃಷತಃ, ರುರುಃ — ಈ ೪ ಸಾರಂಗಂ" (ಹಲಾಯು. ೩೯-೬೬). ೨. ತುಂತುರು : ಹನಿ : "ಪೃಷತ ವಿಪ್ರುಟ್ಸೀಕರ್ಣ" (ಶಬ್ದಕೋ. ೨೪-೧೯). [ಸಂ.]

**ಪೃಷತ್ಕ** (ನಾ). ಬಾಣ; ಶರ : "ಕಂಕಪತ್ರಃ . . . ಪೃಷತ್ಕಃ, ಪತ್ರೀ, ಖಗಃ, ಶಿಲೀಮುಖಃ, ರೋಪಃ.–ಈ ೧೬ ಅಂಬು" (ಹಲಾಯು. ೬೩-೩೦೩): ಉತ್ಕೋಪದಹನದೊಡನೆ ಪೃಷತ್ಕಂಗಳ್ ಕೋಟಿಗಣಿತದಿಂದುಱುವಿನಂ... ಎಚ್ಚಂ (ಶಂಕಪಾ. ೦೨-೮) ; ಇರದೆ ವಿಮುಚ್ಛರಾಧಿಪತಿಯೆಚ್ಚ ಕೃಶಾನು ಪೃಷತ್ಕಮಂ ಪಯೋಧರಶರದಿಂ ಅಜಿತಸೇನನದಃಕ್ಷಿರದುಚ್ಚು ತಳ್ವಿದಂ (ಶಂದ್ರಪ್ರ. ೬-೯೭). [ಸಂ.]

**ಪೃಷದಶ್ವ** (ನಾ). ದೇಹದಲ್ಲಿ ಬೇರೆ ಬೇರೆ ಬಣ್ಣಗಳನ್ನುಳ್ಳ ಕುದುರೆಗಳನ್ನು ಹೊಂದಿರುವಂತಹುದು ; ಗಾಳಿ ; ವಾಯು : "ಪವನಃ, ಶ್ವಸನಃ . . . ಪೃಷದಶ್ವಃ, ಪವಮಾನಃ . . . ಮಹಾಬಲಃ— ಈ ೨೦ ಗಾಳಿಯ ಪೆಸರ್" (ಹಲಾಯು. ೦೯-೬೩) ; ವಿಶ್ವಮೂರುತಿ ಗಗನ ಶಿಖಿ ಪೃಷದಶ್ವ ಜಲತತ್ವಾತ್ಮನಾಗಿರೆ ಕಂಡನಸುರೇಂದ್ರ (ಕೂಜಿಪಾ. ೬-೩೦-೯೯). [ಸಂ.]

**ಪೃಷದಶ್ವಸಖ** (ನಾ). ವಾಯುಸಖ : ಅಗ್ನಿ : ಅಶ್ವತಾಧರಣ ಪ್ರಥಾಸ್ವರ ಶಶಾಂಕಪೃಷದಶ್ವಸಖ ಚಂಡಸವ್ಯಾಶ್ವಲೋಚನ . . . ಜಯ ಶಶ್ವದಗಣಿತ ಚಿತ್ಸುಖ (ಕಾರ್ತ್ತರೀ. ೬-೫೦). [ಪೃಶದಶ್ವ+ಸಖ]

**ಪೃಷದಾಜ್ಯ** (ನಾ). (ಹೋಮಕ್ಕೆ ಉಪಯೋಗಿಸಲೆಂದು ಸಿದ್ಧಪಡಿಸುವ) ಮೊಸರಿನೊಂದಿಗೆ ಬೆರಸಿದ ತುಪ್ಪ : "ಪೃಷದಾಜ್ಯಂ . . . ಮೊಸರಿನಿಂದೊಡಗೂಡಿದ ತುಪ್ಪ, ಮೊಸರು ಬೆರೆತ ತುಪ್ಪ" (ಸಿದ್ಧಾಂತಿ. ೨೨೦) ; ಗುರುಸೂನು . . . ಸರೆನರಂಗಳ ದರ್ಭೆ . . . ವಿಶಾಳದನು ಮಜ್ಜೆಗಳ ಪೃಷದಾಜ್ಯ ಅರುಣಜಲದಾಜ್ಯಾಹುತಿಯ ವಿಸ್ತರದ ವಿರಚಿತ ನಿಗಮಮಂತ್ರೋಚ್ಚರಣೆಯಲಿ ಪೂರ್ಣಾಹುತಿಗೆ ತನ್ನೊಡಲನೊಪ್ಪಿಸಿದ (ಕುಮ್ಯಾಗ. ೯-೨೨). [ಸಂ.]

**ಪೃಷಿತ** (ನಾ). ಸುರಿಯುತ್ತಿರುವ ಹನಿ ; ತುಂತುರು ಮಳೆ : "ಪೃಷಿತಂ, ಪೃಷತಮೆನೆ ಕಿದರ್ದ ಕಿಱುವನಿಗಳಕ್ಕು" (ಮಂಗರಾ. ೦೪೯-೦೫). [ಸಂ.]

**ಪೃಷ್ಠ** (ನಾ). ೧. ಹಿಂಬದಿ ; ಹಿಂಭಾಗ : 'ಪೃಷ್ಠಭಾಗ' ನರಾ. ೨. ಶರೀರದ ಹಿಂಭಾಗ; ಬೆನ್ನು: "ಪೃಷ್ಠಂ, ಪಶ್ಚಿಮಧಾಗಃ — ಈ ೨ ಬೆನ್" (ಹಲಾಯು. ೬೬-೩೬೪): "ಬೆನ್ನದು ಪಶ್ಚಿಮಂ ಪೃಷ್ಠಮಕ್ಕು" (ಮಂಗರಾ. ೯೭-೦೫). ೩. ಓರ್ಪ ; ಕುಂಡೆ : ಆಸನದ ಪೊಱಗೆ ಪೃಷ್ಠಮದೀಸನಿಪಾ ಪೆಸರದಕ್ಕುಂ (ಅಶ್ವಶಾ. ೯-೯೯). ೪. ಪುಟ ; ಹಾಳೆ : ಹಾಳೆ ಅಥವಾ ಪತ್ರಸಂಪುಟದ ದಕ್ಷಿಣದಲ್ಲಿ ಪೃಷ್ಠ ಅಥವಾ ಪ್ರಥಮಪುಟದ ಮೇಲೂ ಇತರ ಕಡೆ ಎರಡನೆಯ ಪುಟದ ಮೇಲೂ ಗುರುತಿರುತ್ತದೆ (ಶಾಸಕ. ೨೦).

ಪೃಷ್ಠಮಾಂಸಾದನ = ಒಬ್ಬ ವ್ಯಕ್ತಿಯ ಬೆನ್ನ ಹಿಂದೆ ಆಡಿಕೊಳ್ಳುವಿಕೆ : (?). [ಸಂ.]

**ಪೃಷ್ಠಕ** (ನಾ). ೧. ಹಿಂಭಾಗ ; ಬೆನ್ನು. ೨. [ಜೈನ] ಅರುವತ್ತು ಮೂರು ದೇವವಿಮಾನ ಅಥವಾ ಇಂದ್ರಕಗಳಲ್ಲಿ ಒಂದು ; "೧. ಋತು, ೨. ವಿಮಳಂ, ೩. ಚಂದ್ರಂ, ೪. ವಲ್ಗು, ೫. ವೀರಂ, ೬. ಅರುಣಂ, ೭. ನಂದನಂ, ೮. ನಳಿನಂ, ೯. ಕಾಂಚನಂ, ೧೦. ಲೋಹಿತಂ, ೧೧. ಚಂಚನ್ನಾಮಂ, ೧೨. ಮರುತಂ, ೧೩. ಋದ್ಧಿಷಂ, ೧೪. ವೈಡೂರ್ಯಂ, ೧೫. ರುಚಕಂ, ೧೬. ರುಚಿರಂ, ೧೭. ಅಂಕಂ, ೧೮. ಸ್ಫಟಿಕಂ, ೧೯. ತಪನೀಯಂ, ೨೦. ಮೇಘಂ, ೨೧. ಅಭ್ರಂ, ೨೨. ಹಾರಿದ್ರಂ, ೨೩. ಪದ್ಮಂ, ೨೪. ಲೋಹಿತಂ, ೨೫. ವಜ್ರಂ, ೨೬. ನಂದ್ಯಾವರ್ತಂ, ೨೭. ಪ್ರಭಾಕರಂ, ೨೮. ಪೃಷ್ಠಕಂ, ೨೯. ಗಜಂ, ೩೦. ಮೈತ್ರಂ, ೩೧. ಪ್ರಭಾ, ೩೨. ಅಂಜನಂ, ೩೩. ವನಮಾಲಕಂ, ೩೪. ನಾಗಂ, ೩೫. ಗರುಡಂ, ೩೬. ಲಾಂಗಲಂ, ೩೭. ಬಲಭದ್ರಂ, ೩೮. ಚಕ್ರಂ, ೩೯. ಅರಿಷ್ಟಂ, ೪೦. ಸುರಸಮಿತಂ, ೪೧. ಬ್ರಹ್ಮಂ, ೪೨. ಬ್ರಹ್ಮೋತ್ತರಂ, ೪೩. ಬ್ರಹ್ಮಹೃದಯಂ, ೪೪. ಲಾಂತವಂ, ೪೫. ಶುಕ್ರಂ, ೪೬. ಶತಾರಂ, ೪೭. ಆನತಂ, ೪೮. ಪ್ರಾಣತಂ, ೪೯. ಪುಷ್ಪಕಂ, ೫೦. ಶತಾಕಂ, ೫೧. ಆರಣಂ, ೫೨. ಅಚ್ಯುತಂ, ೫೩. ಸುದರ್ಶನಂ ೫೪. ಅಮೋಘಂ, ೫೫. ಸುಪ್ರಬುದ್ಧಂ, ೫೬. ಯಶೋಧರಂ ೫೭. ಸುಭದ್ರಂ, ೫೮. ಸುವಿಶಾಲಂ, ೫೯. ಸುಮನಸಂ, ೬೦. ಸೌಮನಸ್ಯಕಂ, ೬೧. ಪ್ರೀತಿಂಕರಂ, ೬೨. ಆದಿತ್ಯಂ, ೬೩. ಸರ್ವಾರ್ಥಸಿದ್ಧಿ — ಎಂಬಿವು ಅನುಕ್ರಮದಿಂ ಅಱುವತ್ತುಮೂಱು ಇಂದ್ರಕಂಗಳ ಪೆಸರ್ಗಳ್" (ಶಕ್ರ. ೨೦೩). [ಸಂ.]

**ಪೃಷ್ಠಗ್ರಂಥಿ** (ನಾ). ಬೆನ್ನಿನ ಮೇಲೆ ಏಳುವ ಗಂಟು,—ಡುಬು: "ಪೃಷ್ಠಗ್ರಂಥಿಃ, ಗಡುಃ — ಈ ೨ ಬೆನ್ನ ಡುಬು" (ಹಲಾಯು. ೯೯-೫೬೦). [ಸಂ.]

**ಪೃಷ್ಠಚಕ್ಷು** (ನಾ). ಏಡಿ; ನಳ್ಳಿ. [ಸಂ. ಪೃಷ್ಠಚಕ್ಷುಸ್]

**ಪೃಷ್ಠದ್ವಾರ** (ನಾ). ಗುದದ್ವಾರ : ನಿರ್ಗಮಮಪ್ಪುದೇ ಕಾರಣಮಪ್ಪ

**ಪೆಂಕುಳಿಗೊಳ್, ಪೇಕುಳಿಗೊಳ್, ಹೇಕುಳಿಗೊಳ್** (ಕ್ರಿ). ೧. ಆವೇಶಗೊಳ್ಳು; ಉದ್ರೇಕಗೊಳ್ಳು : ಧರ್ಮಪುತ್ರಂ ಶಿಖಂಡಿಯುಂ ಮುಂದಿಟ್ಟು ಕೊಂಡು ಬಂದು ಪೆಂ[ಪಾಠಾಂ. ಪೇಂ]ಕುಳಿಗೊಂಡ ಸಿಂಹಮಂ ಮುತ್ತುವಂತೆ ಸುತ್ತಿ ಮುತ್ತಿದಾಗಳ್ (ಪಂಪಭಾ. ೧೧-೪೦ ವ); ಪೆಂಕುಳಿಗೊಂಡ ಮದೇಭವ್ಯೂಹದೊಳ್ ಸೊರ್ದರ್ (ಪಂಪಭಾ. ೧೦-೧೦೩); ಕೇಸರಿ ಪೆಂಕುಳಿಗೊಂಡಂ ತಾಸುರದನತ್ಯುಗ್ರದಿವ್ಯದಾಡೆಗಳಿಂ ಪೇಸೇಟ್ ಕೊಂದಂ (ಕಬ್ಬಿ:ಕ.೧೨-೧೧೧). ೨. ಹುಚ್ಚು ಹಿಡಿ; ಹುಚ್ಚಾಗು : ಪೆಂಕುಳಿಗೊಂಡರೋ ತಿಳಿಯದ್ದೈ ಶ್ರೀಪಾರ್ವತೀವಲ್ಲಭಾ (ಪಾಪ. ೩೦). **ಹೇಕುಳಿಗೊಳ್** : ೨. ಆ ನಾಯ್ . . . ಬಾಯ್ವಿಟ್ಟು ಘೋಳಿಟ್ಟು ಪೇಕುಳಿಗೊಂಡಾದ ವಿಷಾದದಿಂ ಪುಟಿತು ಸತ್ತಿತು (ಪ:ಶಾಪು. ೭-೨೦); ಕನಕದ ರಸವಂ ಗುಡಮುಂ ವಿನುತಕ್ಷೀರದೊಳವಿರ್ಪಲವನಿೀಂಟಲ್ಕಂ ಶುನಕಂ ಪೇಕು[ಪಾಠಾಂ. ಪೇಕರ್(ಕ್ಕು)]ಳಿಗೊಂಡುದು ತಿನೆ ಶದ್ವಿಪವಡಗುಂ (ಜಮುಠ. ೦೩-೨೯). **ಹೇಕುಳಿಗೊಳ್** : ೨. ಅಲರ್ಕ, ಯೋಗಿತ__ಮದ್ದಿಂದ ಮರುಳಾಗಿ ಹೇಕುಳಿಗೊಂಡಿದ್ದ ನಾಯಿ (ಪಾಪಕಾ. ೬). [ಪೆಂಕುಳಿ + ಕೊಳ್₁]

**ಪೆಂಕುಳಿನಾಯ್, ಪೇಕುಳಿನಾಯ್** (ನಾ). = ಪೆಂಕುಳಿಗ : ಬಡಿಗೊಂಡು . . . ಪೆಂಕುಳಿನಾಯುಂ ಬಡಿಪಂತಿರೆ ಪಾಱಿಡುವಂ ಬಡಿವಂತಿರೆ ಬಡಿದ ನನಿಬರಂ ಕೌರವರಂ (ಗದಾಯು. ೩-೦೦); ಶಿಲೀಪವೊಂದನೆ ಜಲದಿಂದೆ ಪೂಸುಗದು ಪೆಂಕುಳಿನಾಯು ವಿಷಾಪಹಾರಕಂ (ಕೋಕಕೋಶ. ೦೦-೩೫); ಪೇಕುಳಿನಾಯು ವಿಷಕ್ಕೆ__ಕನಕದ ಬೇರುಂ ಶರ್ಕರೆಯುಘುಪಮುಮನಿಸಿರ್ದ ತುಪ್ಪವಿಂತಿವನೊಸದಿಂಟಿನ ಪಾಲೊಳ್ ಕುಡಿಸಿದೊಡಂ ಶುನಕನ ಪೆಂಕುಳಿಗನಧಿಕವಿಷಮನದಟಿಗುಂ (ಜಮುದ. ೦೩-೨೯). **ಪೇಕುಳಿನಾಯ್** : ಪಳಿಯಂ ದೊಷಽಜುಗುಂ ಪೇಕುಳಿನಾಯೊಳಗಾಗಿ ಖಳನದೇಂ ಕಷ್ಮಸೊ (ಧರ್ಮಾಮ. ೦-೬೩). [ಪೆಂಕುಳಿ + ನಾಯ್]

**ಪೆಂಗ್ನಾಮ** 'ಪಂಗನಾಮ' ನೋ.

**ಪೆಂಗ, ಪೆಗ್ಗ, ಹೆಗ್ಗ₁, ಹೇಗ** (ನಾ). ಪೆದ್ದ; ದಡ್ಡ ; ಶಿಳಿಗೇಡಿ ; ಮರುಳ ; ರಾಘು ಪೇಗನಂತೆ . . . ಕಣ್ಣು ಹೊರಳಿಸುತ್ತ ಹೊರ ಬಂದನು (ಕುಹಿರಾವ. ೨೦೦) ; ಬುದ್ಧಿ ಕೆಟ್ಟುಹೋಗ್ತದೆ: ಪೆಂಗ ಆಗ್ತೀಯೆ (ಕಂಗೂಂ. ೧೫); ಲಿಂಗವೇ ಗತಿಯೆಂದು, ಪೆಂಗ ಕುರುಂಬರಿಗೆಂದ (ಕಷ್ಮಪಾ. ೦೯೨). **ಪೆಗ್ಗ** : ಪೆಗ್ಗನಾದರೂ ಅಗ್ಗದಲ್ಲಿ ತಂದ (ಗಾದೆ). **ಹೆಗ್ಗ₁** : ಹೆಗ್ಗ ಬುದ್ಧಿಯ ಬಲ್ಲನೇ ಅಯ್ಯ (ಸಿದ್ಧೇಶ. ೨೦೭-೬೪೫); ಲವಲೇಶ ಮೌಲ್ಯವಿಲ್ಲದೆಯರ್ಥಮಂ ಪಡೆವೆನೆಂದೆಂಬ ಕಡುಹೆಗ್ಗ [ಪಾಠಾಂ. ಹೆಡ್ಡ, ಹೆಬಗ]ನುಂ (ಸಮ್ಯಕ್ತ್. ೦೨-೭): ಕುನ್ನಿ ಮರುಳ ಜೋಗಿ ಹೆಗ್ಗ . . . ಎನ್ನಿಸಿ ನಾಮಮೆತ್ತಿಹ ಪರಮಳಿವರ್ಗೆ ನಿನ್ನೊಲವುಂಟೆ (ಶಶಸಾಂ. ೦೨-೬೫). **ಹೇಗ** : ಹೇಗರಿರ . . . ಬಸದಿಗಳನೆಲ್ಲವ ಬೇಗದಿಂ ಹಿರಿಹಿಂದು ಕೆಡೆಹಾಯ್ಕಿಸುವೆನು (ಬಸವ ೫೦-೫೨); ಹೇಗರೆನಿಸುವ ಸವಣರುಗಳು ಶಾಸ್ತ್ರದ ವಾದವಾಗಿ ಸೋಲ್ತೊಡೆ (ಸಿದ್ಧೇಶ. ೭ ೨೬); ತಾಗಿ ಬಾಗುವರಿಂದ ತಾಗದಿರುವುದು ಲೇಸು ತಾಗಿ ಮೂಗೊಡೆದು ಬಾಗುಟಿದ್ದು ಬಾಗುವದು ಹೇಗದ[ನ] ಗುಣವು (ಸರ್ವಜ್ಞ. ೦೫೫೩). 'ಎಗ್ಗ', 'ಹೆಬಗ' ಪರಾ.
[ದೇ. ॥ ತುಳು. ಪೆಂಗೆ; ತೆಲು. ಪೆಂಕಿ]

**ಪೆಂಗಣಿಸು, ಪಿಂಕಣಿಸು, ಪಿಂಗಳಿಸು** (ಕ್ರಿ). ಅಗಲವಾಗಿ ತೆರೆ; ಅಗಲಿಸು : ಕುರುಪುಗಣ್ಣನಿತು ಪೆಂಗಣಿಸೆ ಕಾಣದ ತೆಱದೆ ಕರುಮವನಿತೆಸಗಿದರು ವಸ್ತು ತೋಱುವುದೆ (ಕೈಕಶ. ೫-೫-೩). **ಪಿಂಕಣಿಸು** : ಕಣ್ಪಿಂಕಣಿಸುತೊಲೆವ ಶಿರ ಸವಿವ ಜಾಯಧರಧರಮಂ ಕಡಿವುತ (ಕಕಪು. ೦೦-೦೪). **ಪಿಂಗಳಿಸು** : ಮತ್ತೆ ಅವನು ಕಣ್ಣನ್ನು ಪಿಂಗಳಿಸಿ ನೋಡಿದನು (ಕುರಿಪಾ. ೪೪).
[? + —ಇಸು₃]

**ಪೆಂಗಿನಾಮ** 'ಪಂಗನಾಮ' ನೋ.

**ಪೆಂಗು₁, ಪೆಗ್ಗು** (ನಾ). ೧. ದಡ್ಡತನ; ಮೂಢತನ : ಯಾಕೆ ಹೀಗೆ ನಿನ್ನ ಪೆಂಗು ತೋರಿಸಿಕೊಳ್ಳುತ್ತಿದ್ದೀಯಾ ? (ಕೂಶಿ). ೨. ಪೆದ್ದ ; ದಡ್ಡ : ಇಷ್ಟು ಹೊತ್ತಾದರೂ ನಿನಗೆ ಜ್ಞಾಪಕ ಬರಲಿಲ್ಲವೆ ? ಅಯ್ಯೋ ಪೆಂಗೆ! (ರತ್ನಾಶ. ೬೨) ; ಪೆಂಗಿನ ಹಾಗಾಡಬೇಡ (ಹೂಪ:ಪ. ೨) ; ಹೋಗೊ, ಹೋಗೊ, ಪೆಂಗೆ! (ಶಕಿಪಾ. II, ೯೨೫). **ಪೆಗ್ಗು** : ೧. 'ಪೆಗ್ಗ' ಪರಾ. [ಪೆಂಗ + —ಉ₄]

**ಪೆಂಗು₂** (ನಾ). ದ್ರಾವಿಡಭಾಷಾವರ್ಗಕ್ಕೆ ಸೇರಿದ ಒಂದು ಭಾಷೆ : ಪೆಂಗು ಎಂಬುದೂ ದ್ರಾವಿಡಗುಂಪಿಗೆ ಸೇರಿದ ಭಾಷೆಯಾಗಿದ್ದು . . . ಒರಿಸ್ಸಾಸಂಸ್ಥಾನದ ಕೊರಾಪುತ್ ಜಿಲ್ಲೆಯ ಉತ್ತರಭಾಗಕ್ಕೆ ಇರುವ ಜನರು ಆಡುತ್ತಾರೆ (ದ್ರಾಭಾ. ೦೬೨).

**ಪೆಂಗುರು** 'ಪೊಂಗುರು' ನೋ.

**ಪೆಂಗುಸು** 'ಪೆಣ್ಗೂಸು' ನೋ.

**ಪೆಂಗೂಸು** 'ಪೆಣ್ಗೂಸು' ನೋ.

**ಪೆಂಗೊಲೆ** 'ಪೆಣ್ಗೊಲೆ' ನೋ.

**ಪೆಂಗೊಲೆಯ** (ನಾ). ಹೆಣ್ಣನ್ನು ಕೊಲೆ ಮಾಡುವವನು ; ಸ್ತ್ರೀಹತ್ಯೆ ಮಾಡುವವನು : ವಿರಹದಿಂದಾಗನೆ ಬಳಲ್ದು . . . ಪೆಂಗೊಲೆಯರಿವರೆಂದು ಶಶಿಯುಮಂ ತಣಿಯದೆ ವಿಹಂಗಪತಿಯುಬ್ಬಿ ಪರಶಿವ ಬ್ರಹ್ಮರಂ ಬೈದಳೇನೆಂಬೆನಚ್ಚರಿಯನು (ಕಿರಿಕೃ. ೧೦-೬೫).
[ಪೆಂಗೊಲೆ (<ಪೆಣ್ಗೊಲೆ) + —ಅ₇]

**ಪೆಂಗ್ವಿನ್** (ನಾ). "(ನೀರೊಳಗೆ ಈಜಾಡಲು ಉಪಯೋಗವಾಗುವ ಹುಟ್ಟುಗಳಂಥ ರೆಕ್ಕೆಗಳುಳ್ಳ, ದಕ್ಷಿಣಾರ್ಧಗೋಳವಾಸಿಯಾದ) ಒಂದು ಜಾತಿಯ ಕಡಲ ಕೋಳಿ" (Penguin. ೩೦೪೬) : ದಕ್ಷಿಣ ಶೀತವಲಯದಲ್ಲಿ 'ಪೆಂಗ್ವಿನ್'ಗಳ ಸಮೂಹವೂ ಅಟ್ಲಾಂಟಿಕ್ ಕಡಲಿನಲ್ಲಿ 'ಪಫ್ಫಿನ್'ಗಳ ಸಮೂಹವೂ ಕೋಟಿಸಂಖ್ಯೆಯನ್ನು ಮೀರುತ್ತದೆ (ಶಕ್ತಿ. ೩೬).
[← ಇಂ. Penguin]

**ಪೆಂಚಿರಿ** (ನಾ). "ಒಂದು ಬಗೆಯ ಹಾವು" (ಅಪಂವಾ).
[ದೇ. ॥ ತೆಲು. ಪೆಂಜೆರ]

Δ**ಪೆಂಚು** 'ಹೆಂಚು₂' ನೋ.

**ಪೆಂಚೆ** 'ಪಿಂಚೆಯು' ನೋ.

**ಪೆಂಚೆಯ** 'ಪಿಂಚೆಯು' ನೋ.

**ಪೆಂಜಱ** 'ಪೆಂಜಱುವು' ನೋ.

**ಪೆಂಜಱುವು, ಪೆಂಜಱ, ಪೆಂಜಱೆವು, ಪೆಂಜೆಱು, ಹೆಂಜಱ, ಹೆಂಜೆಱು** (ನಾ). ೧. ಒಂದು ಸ್ಥಳದ ಹೆಸರು ; ಈ ಮಡಕಶಿರಾ ತಾಲ್ಲೂಕಿನ ಈಗಿನ ಹೆಂಜೇರು : ಪೆಂಜಱುವಿನ ಪಟ್ಟಮಟಸ್ಥಾನಮುಂ ಮಹಾನಖರಮುಂ ಸಕಿಯಾಗಿ ಬರಗೂರ ಮಹೇಂದ್ರೇಶ್ವರದೊಳಗೆನ್ನು ಕೊಟ್ಟುದು (ಎಕ. XII, ಶಿರಾ. ೩೯-೪೪ ; 920) ; ಪೆಂಜಱುವಿನ ನೊಟವ್ಪುಗಾವುಣ್ಣನು (ಎಕ. XII, ಶಿರಾ. ೨೯-೪೬ ; 943). **ಪೆಂಜಱ** : ೧. ಸ್ವಸ್ತಿಶ್ರೀ ಶಿವಮಾರ ಮಹಾರಾಜ ಪೃಥುವೀರಾಜ್ಯಂಗೆಯೆ ಕಾಡುಪಟ್ಟಿ ಪೆಂಜಱಕೆ ಕನ್ನಳ್ಳಿಯ ರಾಜಿಗದೊಳ್ × × ಚ್ಚನ್ ಕವಿತ್ತೂರನ್ ಪಸುವಟಿಧನುವೆಟ್ಟಿ ಕೊನ್ದು ಬಿಟ್ಟಾರ್ (ಎಕ. IX (೩). ತೂಕೆಕೋ. ೦೬೯-೨; ಸು. 800). **ಪೆಂಜಱೆವು** : ೧. ಪೆಂಜಱೆವಂ ಕಾವ ತಳಜ ಬಟ್ಟರೇಚಯ್ಯನೆಂಬ ತೈಲಕಟೇಲಿ ದೇವಕೆಱೆಯು ಕಟ್ಟಿ . . . ಬಿಟ್ಟ ಭೂಮಿ (ಎಕ. XII, ಶಿರಾ; ೩೩-೭ ; ಸು. 1100 ?). **ಪೆಂಜೆಱು** : ೧. ಪೂಗಱವೆಱಗನ ಜಾವಲ್ಲು ಕೆಳ ಪೆಂಜ್ಜೆಱಿಲ್ಲಂ ಪೂಗಲ್ಕೆ ವೀಱನ ಸಾವು ಕತೆಯಾಗಿ ಪರದುದು (ಶಾಇಸಂ: IX-1. ೩೦-೦೪; ೫೦೦). **ಹೆಂಜಱ** : ೧. ಹೆಂಜಱಸಮರದೊಳ್ಮರಾರಿ ಮಾರನಾಗಿ ಗುದುಗೆಯ ಪಾಯಿಸಿ (ಎಕ. III, ಪಂಜಕ. ೦೨೨-೧೪ : 266 ? ಕೃಶಾ);

ದಿಗ್ವಿಜಯಯಾತ್ರಾಂ ಬಿಜಯ ಕರೆವಿ ಹೆ:ಜಜಗ್ರಾವಮಾತು ಕಟಕ ಮಾಹುಲೀತಮ್ (ಎಕ. VIII, ೯೯ ೮: 444 ಕ್ರಿ.ಶ). ೨. ಒಬ್ಬಾತನ ಹೆಸರು: ಮಧಿಗವುಪನ ಶಾಪುತ್ರ ರಾಮಧೇವನು ಹೆಞ್ಜಱಿನಿಱುದು (ಎಕ. VII, ಶಿಕಾರಿ. ೩೨-೦೨; 357 ? ಕ್ರಿ.ಶ). **ಹೆಂಜೆಱು** : ೧. ಕೊಯತೂರ ತುಳಿವ ಪೆಂಜೆಱು ದಿಸಾಪಟ್ಟ ಸಂಗ್ರಾಮ ಜತ್ತಲಟ್ಟ ವಾಂಡ್ಯನು ಬೆಂಕೊಂಡ (ಎಕ. II, ೦೯೩-೩೬; 1131). [?]

**ಪೆಂಜಱಿವು** 'ಪೆಂಜಱುವು' ನೋ.

**ಪೆಂಜೆಱು** 'ಪೆಂಜಱುವು' ನೋ.

**ಹೆಂಟಿ$_1$** 'ಪೆಂಟೆ$_1$' ನೋ.

**ಪೆಂಟಿ$_1$, ಪೆಂಟೆ$_1$, ಪೆಂಡಿ$_2$, ಪೆಂಡೆ$_2$**(ನಾ). ೧. ಮೂಟೆ; ಗಂಟು: ಪುನರ್ದ್ವ್ಯತ್ತಿಯಾಗಿ ನಾಲ್ಕುಂ ಸುಂಕದೊಳವೆರಡೊಲ್ಲಿಱ್ ಕೊಡವೀಸವ ಸಹಿತವಾಗಿ ಬಿಟ್ಟ ಉಪ್ಪಿನ ಪೆ[ಂಟಿ] ಅಱುವತ್ತು (ಕೌಇ. XX, ೬೦-೨೫; 1088). **ಪೆಂಟೆ$_1$** : ೨. ಹೊರೆ; ಸಿವುಡು; ಪಿಂಡಿ: ವಿರಹಭರೋತ್ಕಂಠ ಮನೋಹರಿಯ ಕಪೋಳಂಗಳತೆ ನಿಟ್ಟುಸಿದ ಬೆಳ್ಕರಿಸಿದೆರೆಗಳಿಸದೆಲೆಗಳ ಜರಿಸುವುದನುನಯದೆ ಪೆಂಟೆ ಗಂಟಱ ವಿಟರಂ (ಕೃಶ್ಶಕೃ. ೨-೬೨). **ಪೆಂಡಿ$_2$** : ೨. ಕದಿರು ಸೂತ್ರ ದಾರ ಬಲುಗಣಿಕೆಯ ಪೆಂಡಿ ಹೂಡುಗೋಲುಗಳನು ಒಲಿದು ಕಟ್ಟಿದನು ಆ ಶರಣ (ಅಱುಸಾಂ. ೩-೩); ಒಣಗಿ ಕಾರವಾದ ಸಿಬರಿನ ಪೆಂಡಿಯನ್ನು ತೆಗೆದು, ಮೊದಲು ಸೂಜಿಯಂತಹ ಸಿಬರು ಪೆಚ್ಚಿಟ್ಟುಕೊಳ್ಳುತ್ತಾನೆ (೧೭೩೩. II, ೩); ಎಲ್ಲಾರು ಕಟ್ಟ್ಯಾರ ಮಲ್ಲಿಗ್ಹೂವಿನ ದಂಡಿ ಬೀಗುತಿ ಕಟ್ಯಾಳ ಹುಲ್ಲ ಪೆಂಡಿ (ಕೂ:ಕಗೀ. ೨೫). **ಪೆಂಡೆ$_2$** : ೨. ಚಂಡಿತನವೆಂಬ ಹಿಂಡಿ ಇಡಬೇಕು ದಿಂಡತನವೆಂಬ ಪೆಂಡೆಮೇವು ಪುಂಡತನವೆಂಬೊ ಪಿಂಡಿ ರುಬ್ಬಿಡಬೇಕು (ಕುರಿಂದ. ೨-೩೫-೨): ಹೊಲ ಕೊಯ್ಯುವವರಿಗೆ ಅವರು ಕೊಯ್ದು ಪೆಂಡೆಗಳನ್ನೇ ಕೂಲಿಯಾಗಿ ಕೊಡುತ್ತಾರೆ (ಹುಂಜಿಯ. ೩-೦೯೭); ಬಲಗಡೆ ನಾರಿನ ಪೆಂಡೆಯಿತ್ತು (ಕ್ರೀಮಂಕ. ೯೭). [<ಸಂ. ಪಿಂಡಿ]

**ಪೆಂಟೆ$_1$, ಪಿಟ್ಟೆ$_{11}$, ಪೆಂಟಿ$_1$, ಪೆಂಡಿ$_1$, ಪೆಟ್ಟ, ಪೆಟ್ಟ$_1$, ಪೆಟ್ಟೆ$_1$, ಹೆಂಟಿ$_1$, ಹೆಂಡೆ$_1$, ಹೆಟ್ಟ$_1$, ಹೆಟ್ಟೆ** (ನಾ). ೧. (ಮಣ್ಣು, ಬೆಲ್ಲ ಮೊದಲಾದಂವುಗಳ) ಮುದ್ದೆ; ಉಂಡೆ: "ಪೆಟ್ಟಿಯೆ ತಾಂ ಪೆಂಟಿಯಕ್ಕುಂ" (ಕಶಕಾ. ೨೨೬); ಪೆಂಟೆಯ ಅಂಟುಪಲೆಯ . . . ಬಲ್ಲೂಱುಗಳ ಬಲ್ಪೊದಱ್ಪೊತ್ತು (ರಾಮಾಶ್ಕ. ೯೩-೨೯); ಈ ಕಟ್ಟವು ಆರಿ ಕಲ್ಲಿನಂತ ಭಾರವುಳ್ಳ ಪೆಂಟೆಸಾಗುತ್ತದೆ (ಮುಂಐದು. ೯ ೦೯೯). **ಪಿಟ್ಟೆ$_1$** : ೧. ಕಲ್ಲು ಜಲ್ಲು ಪಿಟ್ಟೆಗಳನ್ನು ನಾವೇಲಾದರಿಂದ ಹೆಕ್ಕುತ್ತೇವೆ (ನಾತೂ:೩. ೬೫). ೨. (ಮಣ್ಣಿನ) ರಾಶಿ; ಗುಪ್ಪೆ; ದಿಬ್ಬ : ನಾಲ್ಪಟ್ಟಿಯ ಪಿಟ್ಟೆಮೂಲ್ ಕುಲನಗೌಘಂ ನುರ್ಗಿದತ್ತು (ಜಗಂ. ೧-೬೦). ೩. (ಶರೀರದಲ್ಲಿ ರೋಗದ ಪರಿಣಾಮವಾಗಿ ಬೆಳೆಯುವ) ಗಡ್ಡೆ; ಗಂಟು : ಕಾಮೇರಿಯ ಹೊಟ್ಟೆಯಲ್ಲಿ ಅನ್ನದ ರಸ ಹೋಗಿ ಪಿಟ್ಟೆ ಬಾವಿತ್ತು (೬೩ವೀಂ. ೨೦೨). **ಪೆಂಟಿ$_1$** : ೧. ಬೆಲ್ಲದ ಪೆಂಟೆಯ ಅವಲ್ಲಿ ಕಟ್ಟಿ ನೋಡಿದಡೆಯೂ ರುಚಿಕರವಾಗಿ ತೋರುವದಲ್ಲದೆ ವಿಷವಾಗಿ ತೋರದು (ಕಕಅ. II, ೦೯೩-೬೨ ಅರ್ಥ). **ಪೆಂಡಿ$_1$**: ೨. "ಪೆಂಡಿ—ಪಿಂಡಿ=ಕಣೆಗಾಲು, ಗುಂಪು" (ಕದ್ಯಕೋ. ೨೬). **ಪೆಟ್ಟ**: ೧. "ಪೆಟ್ಟವೆನೆ ಲೋಷ್ಟ" (ಕಚಕ. ೬೯); ನೇಗಿಲೊಳುಕ್ಕೆಯನುಳುವ ಕುಡಿಯನಂ ಕಂಡುಮಿಾ ಹಲಕ್ಕೆನಿತು . ಪೆಟ್ಟಿಯೀ[ಪಾಠಾಂ. ಹೊಲಕ್ಕೆ ಪೆಟ್ಟೆಯೆನಿತೆಂ, ಹಳ್ಳಕ್ಕೆನಿತು ಪೆಂಟಿಯೆಂ]ದು ಬೆಸಗೊಳುತ್ತಲ್ಲಿಂ ಪೋಗಿ (ಕುಕ್ಕುಸ್ಯ. ೩-೧೨ ವ). ೪. ವ್ಯವಸಾಯದ ಒಂದು ಉಪಕರಣ; ಮಣ್ಣಿನ ಗಟ್ಟಿಯನ್ನು ಒಡೆಯಲು ಬಳಸುವ ಸಾಧನ : 'ಪೆಟ್ಟಪೆಟ್' ಪರಾ. **ಪೆಟ್ಟ$_1$** : ೧. "ಪೆಟ್ಟಯೆಂದು ಹಂಟೆ" (ಕಚಕಾ. ೬೦-೬೦೬). **ಪೆಟ್ಟೆ$_1$** : ೧. "ಪೆಟ್ಟಿಯ ತಾಂ ಪೆಂಟಿಯಕ್ಕುಂ" (ಕಶಕಾ. ೨೨೬); ದಿವ್ಯಮಪ್ಪ ಜಯಾಶ್ವತಳದೊಳ್ ನಿದ್ರುಗೆದ್ದ್ಯಾನಿಯವ್ ತಗಳ್ ಪೆ[ಪಾಠಾಂ. ಬೆ, ವೆ]ಟ್ಟೆಗಳುಂ ಕಿಱುಗಲ್ಗಳುಮೊತ್ತೆ ನಿದ್ರೆಗೆಯ್ದೊಯಾದಯ್ (ಪಶ್ಚಾ.ರಾ. ೦೫೦-೨); ಕಡುಕುಂ ಪೆಟ್ಟೆ[ಪಾಠಾಂ. ಬಿಟ್ಟೆ]ಯುಮನೊತ್ತೆ ಮಲ್ಲಡಿಗಳಂ (ಶಂಕಪ. ೩-೯); ಆಕೆ ಕಕ್ಕಳಗೆಳರ್ದಿಟ್ಟರ್ಗಾಱದೆ ಪೆಟ್ಟೆಯಂ [ಪಾಠಾಂ. ಹೆಂಟಿಯಂ, ಪೆಂಟಿಯಂ] ಕಟ್ಟುವಂತೆ . . . ಆ ಕಪ್ಪಡಮನೆರಟ್ಡಿಯಾಗೆ ಸಱ್ರನೆ ಸೀಳ್ದಿ ದಾಡುವುದುಂ (ಅರ್ಜನೀ. ೬-೯ ವ); ತನ್ನ ನೆಳಲಂ ಪ್ರತಿಗಜಮೆಂದುಱಿದ ಕಱುತ್ತೆಱಗಿ ಬೆಟ್ಟದ ಪೆಟ್ಟೆ[ಪಾಠಾಂ. ಪೆಂಟೆ] ಗಳೆನೆತ್ತಿಯುತ್ತಿ ಕೋಪವಮಾಱಿದ (೧೦೪. ೦-೦೨೬ ವ). **ಹೆಂಟಿ$_1$** : ೧. "ಮಣ್ಣಿನ ಹೆಂಟೆ—ಲೋಷ್ಟ" (ಪಾಪರಾ.೬); ಕಲ್ಲು ಹೆಂಟಿ ಹೋರಿಯಾಡಿ ಕಲ್ಲು ಕರಗಿ ಹೆಂಟೆ ಉಳಿಯಿತು (ಪುಪುಗಂ. ೪. ೨೪೯-೦೩); ತಾನಿರ್ಪ ನೆಲದ ಡೊಗಱ್ಗೊಳಗೆ ಹೊಕ್ಕಗೆಯುತ್ತುಮಿರೆ ಜಱಿದು ಬಲು ಹೆಂಟೆಯಾಗಿ ಮೇಲಿಪ್ಪೆರಯ ಮಣ್ಣಿನ್ನ ಬೆನ್ನನೋಪದೆ ಮುಱಿಮುದು (ಸಮ್ಮಕ್ಕ. ೨-೯೩); ಬೇಸಾಯಗಾರನು . . . ಉಂಟಿಯಿಂದ ಹೆಂಟೆ ಒಡೆದು ಪುಡಿ ಮಾಡಿ (ಶಿಂ. II, ೨೬೨). ೪. 'ಹೆಂಟೆಗೊಡತಿ' ಪರಾ. ೫. ಹಸಿಯ ಇಟ್ಟಿಗೆ; ಸುಡದೆ ಇರುವ ಇಟ್ಟಿಗೆ: ಕೆಮ್ಮಣ್ಣಿನ ಹೆಂಟೆಯನ್ನು ಕೆಂಪಾಗಿ ಸುಟ್ಟು, ನೀರಲ್ಲಿ ಹಾಕಿ, ಆರಿದ ನೀರಂ ಕುಡಿಯಲು ಪಿತ್ತ ಛರ್ದಿ ಮಾಣ್ಬುಂ (ಸಕಮ್ಮ. ೨೬೩); ಒಂದು ಹೆಂಟೆಯಾದಾದರೂ ಸುಂದರವಾದ ಮನೆಯೂ ಇತ್ತು (ಕ್ರೀಮಂಕ. ೯೯). **ಹೆಂಡೆ$_1$** : ೧. "ಪೆಂಡೆ[ಪಾಠಾಂ. ಹೇಂಟಿ] ಲೋಷ್ಠಂ" (ಮಂಗರಾ. ೦೦೯-೨); ಏಡ ಸಕ್ಕರೆ ಹಣ್ಣು ಕೊಟ್ಟರೊಲ್ಲದೆ ಮಣ್ಣು ಹೆಂಡೆಯನು ಬೇಡಿ (ಕುರಿಂದ. ರಾ. ೩-೦೦೬-೨); ಹೆಂಡೆ ಕಲ್ಲಿನೊಳಿಟ್ಟು ಕೊಲಲಿ (ಅವ:ಚಾಂ. ೩-೦೬೦). **ಹೆಟ್ಟ$_1$**: ೪. 'ಹೆಟ್ಟಹೊಡೆ' ಪರಾ. ೬. ಉಳುಮೆ: ಹೂಟಿ. ೭. ಹರಳಿನಿಂದ ಎಣ್ಣೆಯನ್ನು ತೆಗೆದ ಮೇಲೆ ಉಳಿಯುವ ಹಿಂಡಿ,_ ಗಪ್ಪು : "ಲೋಷ್ಟದೊಳು ಹೂಟದೊಳುಯೇರಂಡಕಿಟ್ಟದೊಳು ಹೆಟ್ಟಂ" (ಕಶ್ಯಪಂ. ೯೦). **ಹೆಟ್ಟೆ** : ೧. "ಲೋಷ್ಟಕಃ, ಲೋಷ್ಟಂ—ಈ ೨ ಪೆಟ್ಟೆ" (ಕರಾಱು. ೯೯-೯೨೨); ತೊಟ್ಟನೆ ಪಲ್ಲಾಣಂಬು ತವೆ ಬತ್ತಿಮುದಾಕ್ಷಣವೆಟ್ಟ ಹೆಟ್ಟೆ[ಪಾಠಾಂ. ಟ್ಟೆ]ಕಾಯ್ದಿಟ್ಟಿಗೆಯುಂದವಮಾಯ್ತು (ಕ:ಸುಪಾ. ೯-೧೨೯); ಮಣ್ಣಿನ ಹೆಟ್ಟೆಯೊಂದನೆತ್ತಿ ನೀರಿಗೆ ಒಗೆದ(ಮೂರುರಾ. ೨೯೩).

[ದೇ.॥ ತುಳು. ಹಂಟೆ, ಎಂಟಿ; ತೆಲು. ಪೆಂಟ, ಪೆಡ್ಡ, ಬೆಡ್ಡ./ ಪ್ರಾ. ಪೇಂಡ./ಸಂ. ಪಿಂಡ]

**ಪೆಂಟೆ$_2$, ಹೆಂಟೆ$_2$, ಹೇಂಟೆ, ಹೇಟೆ, ಹೇಟೆ** (ನಾ). ೧. (ಕುದುರೆ, ಕತ್ತೆ ಮುಂತಾದ) ಪ್ರಾಣಿಗಳಲ್ಲಿ ಹೆಣ್ಣು : ಅಂತು ಪೆಂಟೆಗಳಂ ದಾಂಟಿ ಕೆಡವುತ್ತುಂ ಕಡವಂಗಳಂ ಕಟ್ಟಿ ಕೆಡವುತ್ತುಂ . . . ಕೇಳ್ದರ್ದಿ ತೆಱಿವಿನ ಮೊಳಱ್ ಪೆಂಟೆ[ಪಾಠಾಂ. ಪೆಟ್ಟ, ಪೆಟ್ಟೆ]ಯ ಪೊಟ್ಟೆಯಂ ಕರ್ಚಿ ಸೆಳೆದು (ಅರಜನೀ. ೬-೯೧ ವ). **ಹೆಂಟೆ$_2$** : ೨. "ಹೆಣ್ಣುಕೋಳಿ" (ಪಾಠಕ. ೨೬೭). **ಹೇಂಟೆ** : ೨. ಚಂದ್ರಮನಂತೆ ಸುಪಕ್ಷದಿಂದೆ ರಂಜಿಸಿದುದು ಪುಂಜನಗ್ಗದ ಸುವಸ್ತುವಿನಂಕಿರೆ ತಟ್ಟು ಹೇಂಟೆಯೊಳ್ (ಹು:ಕೋ:೩. ೩-೬೯); ತನ್ನ ಹೂಮರಿಗಳೊಡನೆ ನೆಲವನ್ನು ಕೆದರಿ ಗಲೀಜು ಮಾಡುತ್ತಿರುವ ಹೇಂಟೆ (ಕಾಸೂರು. ೩೬). **ಹೇಟೆ** : ೨. ಪೇಳಲಿನ್ನೇಂ ಸಿದ್ಧರಾಮ ಹೇಟಯ ಮರುಳ ಕೋಳಿಗಳ ಮೇಲೆ ತನ್ನಯ ಹೇಟಯುಂ ಬಟ್ಟು. ಕಾಳಗದಿನೆಲ್ಲವಂ ಗೆದ್ದುಕೊಂಡು (ಪಂಕ್ತಿ. ೬೩-೨೬). **ಹೇಟೆ** : ೨. ಹೇಟೆಯ ಮುಗ್ಗುಲಲ್ಲಿನ ಕೋಳಿಮರಿಗಳಂತೆಯೂ . . . ಹೋದರು (ಕೋಟಿಕ. ೯೬).

[ದೇ.॥ ತಮಿ. ಪೆಟ್ಟೈ, ಪೆಟ್ಟೈ$_2$, ಪೇಟು, ಪೇಟ್ಟೈ; ಮಲ. ಪೆಟ್ಟ, ಪೆಡ, ಪೇಡ, ಪಿಡ; ತುಳು. ಪೆರಡೆ; ತೆಲು. ಕೋಲಾ. ಪೆಟ್ಟ]

**ಪೆಂಟೆ$_3$** 'ಪೆಂಟೆ$_2$' ನೋ.

**ಪೆಂಟೆ$_4$** 'ಪೆಟ್ಟೆ$_2$' ನೋ.

**ಪೆಂಟೆಗಟ್ಟು** (ಕ್ರಿ). ಮುದ್ದೆಯಾಗು; ಉಂಡೆಯಾಗು: (೬). [ಪೆಂಟೆ$_1$ + ಕಟ್ಟು$_1$]

**ಪೆಂಟೆಬೆಲ್ಲ** (ನಾ). ಮುದ್ದೆಯಾಗಿರುವ ಬೆಲ್ಲ ; ಉಂಡೆಬೆಲ್ಲ : ಒಂದು ದೊಡ್ಡ ಕೊಪ್ಪರಿಗೆಯಲ್ಲಿ ಕಬ್ಬಿನ ಹಾಲನ್ನು . . . ಚೆನ್ನಾಗಿ ಕುದಿಸಿ ಪೆಂಟೆಬೆಲ್ಲವನ್ನು ಮಾಡುತ್ತಿದ್ದರು (ಕಶಕು. ೩-೮೩). [ಪೆಂಟೆ₁ + ಬೆಲ್ಲ]

**ಪೆಂಡ, ಹೆಂಡ** (ನಾ). ಈಚಲು, ತೆಂಗು, ಬಗನಿ, ತಾಳೆ ಮೊದಲಾದ ಮರಗಳಿಂದ ಇಳಿಸಿ ತೆಗೆದ ರಸ ; ಮದ್ಯ : "ಮದ್ಯಂ=ಪೆಂಡು" (ಶಾಲ್ಯ. ೦೧೦) ; ಕಂಡವರೆಲ್ಲರು ಉಗುಳೆ ಓಕರಿಪಂತೆ ಪೆಂಡದ ಗಡಿಗೆ ಮುಂದಿಟ್ಟು (ಬಕ್ಕಾ. ೬-೭೮). **ಪೆಂಡ** : ಬೆಳದಿಂಗಳಲ್ಲಿ ನಿಂದು ಹೆಂಡವ ಕೊಂಬವಂಗೆ ಲಿಂಗದ ಸಂದನಿ:ನ ಬಲ್ಲ (ತೋಂಟದಾ. ೩೩-೩೬೮) ; ಲದ್ದುಗೆಯಂ ಬೆಸಕಂಗೆ ಪೆಂಡಮಂ ಮಾರಿಗೆ ಬೊಮ್ಮಯಂಗೆ ಚರುವಂ ಪಡೆದೆತ್ತುವೆಂ (ಸೂಕ್ತಿಸು. ೬-೮೯) ; ಹೇರೂರ ನಾಗಣ್ಣ ಹೆಂಡದಾ ಮಾರಯ್ಯನು (ಗ.ರುಚಾ. ೯-೬೩).

ಹೆಂಡದ ಬುರುಡೆ = ಹೆಂಡವನ್ನು ತುಂಬಿಡುವ ಒಣ ಸೋರೆಕಾಯಿಯಿಂದ ಮಾಡಿರುವ ಉರುಟುಪಾತ್ರೆ : (೬).

[ದೇ.॥ ತುಳು. ಹೆಂಡ ; ಗದಬ. ಪೆಂಡೂವ್. /ಪ್ರಾ. ಪೇಢಾ]

**ಪೆಂಡತಿ** 'ಪೆಂಡಿತಿ' ನೋ.

**ಪೆಂಡತಿವಂತ** (ನಾ). ಪೆಂಡತಿಯುಳ್ಳವನು ; ಮದುವೆಯಾಗಿರುವವನು : ಪೆಂಡತಿವಂತನೀತಂ (ಶಬ್ದಾಮ. ೪೧೨ ವೃತ್ತಿ).

[ಪೆಂಡತಿ (<ಪೆಂಡಿತಿ) + – ವಂತ]

**ಪೆಂಡಯ** 'ಪೆಂಡೆಯ' ನೋ.

**ಪೆಂಡವಾಸ** (ನಾ). ೧. ಅಂತಃಪುರ ; ರಾಣೀವಾಸ : "ರಾಣಿವಾಸಕ್ಕೆ ಪೆಂಡವಾಸವದನಿಸುಗುಂ" (ಅಭಿಧಾ. ೩೬); ಧಾರಿಣಿಮಹಾದೇವಿಯ ಮುಖ್ಯವಾದರರಸಿಯರ್ಕಳುಂ ಪೆಂಡವಾಸದಗ್ಗಳದ ಸೂಳೆಯರ್ಕಳುಂ ಬೆರಸು . . . ಪೊಕ್ಕು (ವಡ್ಡಾರಾ. ೧೦-೯) ; ಪೆಂಡವಾಸದೊಳ್ ಪೆಂಡಿರೊಯ್ಯನೊಯ್ಯನೆ ನಡೆದರ್ (ಆದಿಪು. ೦೦-೯೦) ; ಪಲುಂಬಿ ಪಂಬಲಿಸುವ ಪೆಂಡವಾಸದ ತಂಡಮಂ ಕಂಡು (ಶಾಂತಿಪು. ೩-೧೦೨ ವ). ೨. ಅಂತಃಪುರದಲ್ಲಿ ವಾಸಮಾಡುವ ಸ್ತ್ರೀಯರು : "ಪೆಂಡವಾಸಮೆಂದು ಅಂತಃಪುರಸ್ತ್ರೀಯರ್" (ಕಶಕಾ. ೩೭-೩೨೦) ; ಅಂತು ಪೆಂಡವಾಸಮುಂ ಪುರಪುರಂಧ್ರಿಯರುಂ . . . ಕುಮಾರರುಂ ಬೆರಸು ಧಾರಿಣೀಮಹಾದೇವಿಯುಂ ತಾನುಂ ಗಂಧಸಿಂಧುರಾರೂಢರಾಗಿ (ರತ್ನಕರಂ. ೮೩-೦೬) ; ಪಣ್ಯವೀಥಿಯೊಳ್ ನಡೆಯುವ ಪೆಂಡವಾಸವಾತಸಾಧ್ವಜಿನೀರಥಯೂಥ ಮೋಹನಂ (ಧರ್ಮಪು. ೩-೩೯). ೩. ಸೂಳೆ ; ವೇಶ್ಯೆ : 'ಪೆಂಡವಾಸಗೇರಿ' ಪರಾ. [<ಪೆಣ್ + ವಾಸ್ಯ]

**ಪೆಂಡವಾಸಗೇರಿ** (ನಾ). ವೇಶ್ಯೆಯರು ವಾಸಿಸುವ ಬೀದಿ ; ಸೂಳೆಗೇರಿ; ವೇಶ್ಯಾವಾಟ : ಆ ಪೆಂಡವಾಸಗೇರಿಯೊಳಗೆ ಸೌಭಾಗ್ಯದ ಭೋಗದ ಬಾಗದ ರೂಪುಗಳ್ ಮಾನಸರೂಪಾದಂತೆ (ಕಂಠೀರ. ೯-೬೩ ವ) ; ಪೆಂಡವಾಸಗೇರಿಯೊಳಗನೆ ಬರೆವರೆ (ಶಾಂತಿಪು. ೬-೬೩ ವ). [ಪೆಂಡವಾಸ + ಕೇರಿ]

**ಪೆಂಡಾರ** (ನಾ). ೧. ಕಾಲಿಗೆ ಧರಿಸುವ ಒಂದು ಬಗೆಯ ಆಭರಣ : ಅಂದುಗೆ : ಉರಗೆಜ್ಜೆ ದಂಡೆ ಪೆಂಡಾರ ಬಾಸಿಗವನಾವರಿ ರುದ್ರಾಕ್ಷಿಯೊಳಲಂಕರಿಸಿ ಭಸಿತದಿಂ ಹೊರಿಸಿ ಹೊಸ ಹೋರಿಯೆತ್ತುಗಳ ನೊತ್ತಂಬದಿಂ ದೂಡಿದರ ಗಾಡಿವಡೆದು (ಸಿದ್ಧರಾ. ೬-೨೯). ೨. ಶ್ರೇಷ್ಠನಾದ ವೀರನಿಗೆ ಶೌರ್ಯಸೂಚಕವಾಗಿ ಒಡೆಯನು ಕೊಡುವ ಬಿರುದು ಮತ್ತು ಅದನ್ನು ಸೂಚಿಸುವ ಆಭರಣ: ಎಡಗಾಲೊಳ್ ಪೊಸತಪ್ಪ ಪೊಂಬೆಸದ ಪೆಂಡಾರಂ ಭುಜದ್ವಂದ್ವದೊಳ್ ಕುಡುಮಿಂಚೆ ಕೊನರಿಪ್ಪ ವಜ್ರಪಳಯುಂ (ಜಗನ್ನಾ. ೬-೪೦). 'ಗಂಡಪೆಂಡಾರ' ಪರಾ. ೩. (ಅಲಂ) ಶ್ರೇಷ್ಠನಾದವನು; ಹಿರಿಮೆಯುಳ್ಳವನು : ಗಂಭೀರಾಭೀರಪ್ರಚಂಡಪೆಂಡಾರ ವೀರಲಕ್ಷ್ಮೀದೇವ . . . ಪ್ರತಿಜ್ಞಾಪರಶುರಾಮ ಇತ್ಯಾದಿ ನಾಮಾವಳೀವಿರಾಜಮಾನ ಶ್ರೀಮತು ಪ್ರಾಢಪ್ರತಾಪ ಚಕ್ರವರ್ತಿ (ಕರ್ನಾ. ೪, ೮೨-೦೨ ; 1239) ; ಗಂಭೀರಾಭೀರಪ್ರಚಂಡಪೆಂಡಾರ ನಿಖಿಳಕುಲಕಾಂತಾರವಂಸಾವಳಿದಹನ (ಮ್ಯೂಆ. ೦೯೭೯, ೬೯-೦೮ ; 1276).

[ದೇ.॥ ತೆಲು. ಪೆಂಡಾರ, ಪೆಂಡರ, ಪೆಂಡೆರ, ಪೆಂಡೇರ]

**ಪೆಂಡಾರಿ** 'ಪಿಂಡಾರಿ' ನೋ.

**ಪೆಂಡಾರೆ** (ನಾ). (ಕಣ್ಣಿನ ಬೇನೆಗೆ ಮದ್ದಿನಂತೆ ಉಪಯೋಗಿಸುವ) ಒಂದು ಬಗೆಯ ಔಷಧೀಸಸ್ಯ : (೬). [< ಸಂ. ಪುಂಡರ್ಯ]

**ಪೆಂಡಾರೆಗಡ್ಡೆ** (ನಾ). ಪೆಂಡಾರೆಗಿಡದ ಗಡ್ಡೆ ; ಬಳಿನೈದಿಲೆಗಡ್ಡೆ : "ಪ್ರಪೌಂಡರೀಕಂ, ಪೌಂಡರ್ಯಂ—೨ ಪುಂಡರೀಕವೆಂಬುವ ಗ್ರಂಥದ್ರವ್ಯದ ಹೆಸರುಗಳು. ಪೆಂಡಾರೆಗಡ್ಡೆ, ಪಾಂಡವರ ಮದ್ದು, ಇದು ಬಿಳೀನೈದಿಲೆಗಡ್ಡೆ" (ಸಿದ್ಧಾಂತಿ. ೦೪೦). [ಪೆಂಡಾರೆ + ಗಡ್ಡೆ]

**ಪೆಂಡಾವಾಸ** (ನಾ). = ಪೆಂಡವಾಸ ೨: "ಪೆಂಡಾವಾಸಮುಮೆನಲ್ಕೆಯಂತ್ರವುತದೊಳ್ ಗುಂಡುಗೊಂಡಿರ್ಪ ಸಖಿಯರ್" (ಶಬ್ದಮ. ೦೪೬).

[☞ ಇಲ್ಲಿ 'ಪೆಂಡವಾಸ' ಎಂಬ ಶಬ್ದವನ್ನು ಛಂದಸ್ಸಿಗಾಗಿ 'ಪೆಂಡಾವಾಸ' ಎಂದು ಮಾಡಿಕೊಂಡಿದೆ]

**ಪೆಂಡಾಳ** (ನಾ). ದರೋಡೆ ಮಾಡುವವನು ; ಕಳ್ಳ : ಜಾರಚೋರಶಿಖಾಮಣಿಯಾದ ಕೃಷ್ಣನಂ ಪೆಂಡಾಳರುತೆ ಕುದುರೆಯನ್ನೇರಿ (ಅಕಾರ. ೨೮-೨೮ ವ). 'ಪೆಂಡಾರಿ' ಪರಾ. [< ಪಿಂಡಾರಿ]

**ಪೆಂಡಿ₁** 'ಪೆಂಟೆ₁' ನೋ.

**ಪೆಂಡಿ₂** 'ಪೆಂಟೆ₂' ನೋ.

**ಪೆಂಡಿ₃** (ನಾ). ಕುಲ ; ಮನೆತನ : 'ಅರಸುಪೆಂಡಿ', 'ರಾಜಪೆಂಡಿ' ಪರಾ. 'ಪೀಡಿ' ಹೋ. [← ಹಿಂ. ಪೀಢೀ]

**ಪೆಂಡಿಕ್ಕಿಜು** (ನಾ). ಒಂದು ಸ್ಥಳದ ಹೆಸರು (?) : ಅಂಗಾರಸಿಂಗ ಪೆಣ್ಣೆಕ್ಕಿಜುಮಂ ಕಾಳಾ ಉಡುಗುಜೆಯನುಟ್ಟುಕೊಳ್ಳೆ (ಎಕ. VIII, ಸೊರಬ. ೫೨-೩ ; ಸು. 800). [?]

**ಪೆಂಡಿತಿ, ಪೆಂಡತಿ, ಹೆಂಡತಿ, ಹೆಂಡತ್ತಿ, ಹೆಂಡಿತಿ** (ನಾ). ೧. ಮಡದಿ ; ಪತ್ನಿ : ಆತನ ಪೆಂಡಿತಿ ಪೃಥುಶ್ರೀಯೆಂಬಳ್ (ಶಾಂತಿಪು. ೯-೬೩ ವ) ; ಪೆಂಡಿತಿಯ ಮಂಗಳಸೂತ್ರವದು ಮೊದಲು ಇಂದು ನಾಳೆನ್ನದೆ ದಿನಂಪ್ರತಿಯಿಂದೆ ಧನವಂ ಸಲಿಸಲು (ಬಸವು. ೨೬-೯) ; ಕನಕಂ ನೀರಕ್ಕರಂ ಪೆಂಡಿತಿ ಕನಸು (ರತ್ನಾಕ. ೩೦). **ಪೆಂಡತಿ** : ೧. ಕಾಪ್ಪಕೂಟಂ ತನ್ನ ಪೆಂಡತಿ ಜಯಘಂಟೆಯೆಂಬೊಳನಿಂತೆಂದು ಕಲ್ಪಿಸಿದಂ (ವಡ್ಡಾರಾ. ೬೬-೫) ; ಕಟ್ಟಿಲ್ಲದಡುಗೆಯುಂ ನಚ್ಚಿಲ್ಲದ ಪೆಂಡತಿಯುಂ . . . ಒಪ್ಪಲಾರ್ಕುಮೆ (ಧರ್ಮಾಮೃ. ೦-೬೩). ೨. ಹೆಣ್ಣು ; ಸ್ತ್ರೀ : ಅಟಾತಿಗಳ್ಗಳ್ಕಿಂ ತನ್ನ ಕುಲಮುಂ ಚಲಮುಂ ದೊರೆಯುಂ ಕಿಡೆ ಬಾಟ್ಟಂ ಗಂಡರೂಪಿನೊಳ್ ಗಂಡನಲ್ಲುತ್ತು ಪೆಂಡತಿಯ ಮಲಂ (ಆದಿಪು. ೦೨-೯೬). **ಹೆಂಡತಿ** : ೧. ರಾಮಧೇವನು ಹೆಜ್ಜುಜನಿಜಗು ರಾಜಮಲ್ಲನ ಹೆಂಡತಿ ಭಣ್ಣರವನು ಬಲ್ಲಾಳತಿನ್ನೊಕ್ಕಿಸಿದಲ್ಲಿಗೆ ಮೆಚ್ಚುಗೊಟ್ಟ ಭೂಮಿ (ಎಕ. VII, ಶಿಕಾ. ೫೨-೦೨ ; 887 ? ಕ್ರಿಶ) ; ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ . . . ಇದ್ದರೇನೊ ಶಿವಶಿವಾ ಹೋದರೇನೊ (ಬಸವ. ೦೦೯) ; ಹೆಂಡತಿ ಪ್ರಾಣ ಹಿಂಡುತಿ ದೊಡ್ಡ ಕೊಂಡಕೋತಿಯಂತೆ ಕುಣಿಕುಣಿಸುತ್ತ (ಪುರಂದ. ೯-೦೫ ಪಲ್ಲವಿ); ನನ್ನ ಹೆಂಡತಿ ಪ್ರಸ್ತ ಕೇಳುವುದರಲ್ಲಿ ನಿಸ್ಸೀಮಳು (ಜುಹಾಕಾ. ೦೦). **ಹೆಂಡತ್ತಿ** : ೧. ಆತನ ಹೆಂಡತ್ತಿ ಸೋಮವೆ (ಎಕ. VII, ಚನ್ನಗಿ. ೩೨-೨೬೩ ; ಸು.1060 ?). **ಹೆಂಡಿತಿ** : ೧. "ದಾರಾಃ, ಕ್ಷೇತ್ರಂ . . . ಗೃಹಿಣೀ, ಗೃಹಾಃ—ಈ ೧೩ ಹೆಂಡಿತಿ" (ಕರಾಮು. ೬೦-೩೮೦) ; ಮಾಟಕುಟಿಲಗಳಿಂದ ನನ್ನನ್ನು ನೀನು ಹೆಂಡಿತಿಯನ್ನಾಗಿ ಮಾಡಿಕೊಂಡೆ (ಅರ್ಜುಸ. ೬೯). [< ಪೆಣ್ + –ಇತ್ತಿ (< –ಇತ್ತಿ)]

**ಪೆಂಡಿಲ್ಬಿಂತೆ** (ನಾ). ಒಂದು ಸ್ಥಳದ ಹೆಸರು : ಮುಡಣದೆಸೆ ಪೆಣ್ಣಿಲ್ಬಿಣ್ಣೆ

ವುಳ್ಳೇಡು ಉದಿಚೇಡು ಚೀರಳಟನ್ತೆ (ಎಕ. XII. ತಿಪ. ೩೯-೩೩; 878).
[ ? ]

**ಪೆಂಡೆ₁** 'ಪೆಂಡೆಯ' ನೋ.

**ಪೆಂಡೆ₂** (ನಾ). ಹೆಣ್ಣು : ಸಮಶೀಲರೊಳು ಪೆಂಡೆ ದೊರಕಲು ನಾಡೆ ಸಮನಿಲ್ಲದ ಸುಖವಹುದು ಸಮನಾನಿಲ್ಲದರೊಳು ನಂಟು ದುಃಖಗಳ ನಮಗಿರಿಸುವುದು ಚಿತ್ತದೊಳು (ಶಶೆಗೆ. ೦೯-೩೦). [ < ಪೆಣ್ ]

**ಪೆಂಡೆ₃** 'ಪೆಂಟಿ₂' ನೋ.

**ಪೆಂಡೆಯ**, ಪೆಂಡಯ್ಯ, ಪೆಂಡೆ₁, ಪೆಂಟೆಯ್ಯ₁ (ನಾ). ೧. ಕಾಲಿಗೆ ತೊಡುವ ಒಂದು ಬಗೆಯ ಆಭರಣ ; ಗೆಜ್ಜೆಗಳಿಂದ ಕೂಡಿರುವ ಕಾಲುಬಳೆ,—ಅಂದುಗೆ : "ಪೆಂಡೆಯಮಂ ಪಾಯವಟ್ಟಂ" (ಶಬ್ದಮಣಿ. ೦೦೦-೩೦) ; ಬಾಲೆ ಮಾಣಿಕವನುಡು ಸಾದ ಕಿವಿಯಲಿ ಕೂಡು ಕಾಲ ಪೆಂಡೆಯವ ಮುಡಿ (ಜಕಾ. ೯-೯೯) ; ಪೆಂಡೆಯಾಮವರಳಲೆಯಬಲ್ಪ ಕಿಱುವುಲಿಯಯಂಗುರ್ಗಳ್ . . . ಅತ್ಯದಂಗೆ ರಂಜಿಸುತಿರ್ಕುಂ (ದಶಕು. ೨-೬೩). ೨.—ಪೆಂಡಾರ ೨: ಮುತ್ತಿನ ಪೆಂಡೆಯಂ ಮುರಹರಂ ಕನಕಾದ್ರಿಯೊಳಂದು ಶೇಷನಂ ಸುತ್ತಿದ ಭಂಗಿಯಿಂದಮೆಸೆದಿರ್ಪುದು (ಎಕ. V. ಚೆಂಡಾರು. ೦೦೨-೬೩; ಸು. 1220 ?) ; ಕಾಲ ಕಡೆಹದ ಪೆಂಡೆಯಂಗಳ . . . ಸರಪಳಿ ಜಾಳದಾಭರಣಂಗಳ ಧರಿಸಿ (ಜಕಾ. ೬೦-೨೭) ; ಪೆಂಡೆಯದ ಪಾಮಾಂಘ್ರಿ ಮೆಱೆದಿರೆ (ಶೌರಿಚ. ೯೦-೩). ೩. ಒಂದು ಬಗೆಯ ಆಯುಧ ಮತ್ತು ಅದನ್ನು ಹಿಡಿದು ಮಾಡುವ ಸಾಧನೆ ( ? ) : ಜಟ್ಟಿಸಾಧಕ ಬಲ್ಲುವಿದ್ಯೆ ಕತ್ತಿ ಕಠಾರಿ ಪೆಂಡೆಯ ನೆಟ್ಟೆ ತಿರುಗುಚಕ್ರ ಗಂಡುಕೊಡಲಿ ಮೊದಲಾದ ಸಾಧಕಗಳನು ಕಲಿತು (ಜಕಾ. ೯). 'ಪಟ್ಟೆಯ್ಯ₁' ಹೋ. **ಪೆಂಡಯ** : ೧. ಮುತ್ತಿನ ದಂಡೆ ಮುತ್ತಿನ ಲಸತ್ತಿಲಕಂ ಸುರಿಮುತ್ತಿನೋಲೆಯೊಳ್ ಮುತ್ತಿನ ಪೆಂಡ[ಪಾಠಾಂ. ದೆ]ಯಂ . . . ಒಪ್ಪಿಯೆಂಬ ಸದಲಂಕರಣಂಗಳನೆಯ್ದೆ ತೊಟ್ಟು (ಧಾರಪು. ೬-೦೦೭). **ಪೆಂಡೆ₁** : ೧. ಮಿನುಗುವ ಮುತ್ತಿನ ಪೆಂಡೆ ಚರಣದಿ . . . ಧರಿಸಿ (ಜಕಾ. ೦೯-೯೯) . . ೨. ಬಿರಿದೀನ ಕಾಲ ಪೆಂಡೆಯಾ (ಶೌಂಡಕಾ. ೫-೯೯). **ಪೆಂಟೆಯ್ಯ₁** : ೧. ನೇವಳದ ಪೆಂಟೆಯವ (ರೇಶಪ. ೬೫-೨೨) : ಹರಳೋಲೆ ಟಿಬ್ಬಣೆ ಮುತ್ತಿನ ಪೆಂಟೆಯ ಮಿಱುಗುವ ಚಿನ್ನಸರಗಳು ತುಱುಗಿದ ದಿವ್ಯಕಾಂತಿಯ ಮೂಕುತಿಯಿಂದ ಸರಸಿಜಗಂಧಿಯೊಪ್ಪಿದಳು (ಕಂಕಪ. ೯-೬೩).

[ದೇ. ೩ ತಮಿ. ಪೆಣ್ಟ್ಯ, ಪೆಣ್ಣಯ ; ತೆಲು. ಪೆಂಡಿಯ, ಪೆಂಡೆ]

**ಪೆಂಪಾನ್** (ಕ್ರಿ). ಚೆಲುವನ್ನು ಹೊಂದು ; ಶೋಭಿಸು : ವಕ್ರದ ಪೆಂಪಾಂತ ಕೋಱದಾಢೆಗಳು ನುಂಪಿನ ಚೆಣ್ಣಾಂತ ಮೃಸಿರಿ ರೌದ್ರದ ಜೊಂಪಿನ ಸಿಂಗವೆಸೆದುದು (ಶರಕ. ೬-೯೬). [ಪೆಂಪು+ಆನ್₁]

**ಪೆಂಪಿಡಿ** (ಕ್ರಿ). ಹಿರಿಮೆಯಿಂದ ಕೂಡಿರು; ಘನತೆಯನ್ನು ಹೊಂದಿರು : ಪೆಂಪಿಡಿದೊಪ್ಪುತ್ತಿಪ್ಪಸಮೂರ್ಜಿತೋಜ್ವಳಯಶಶ್ರೀಕಾನ್ತನಾಗಿಪ್ಪ (ಎಕ. XVI. ಶಕ್ರ. ೯೦-೯೯ ; 1160); ನೆಱೆಯ ನವಿರ್ ಪೆಂಪಿಡಿದೆಡದೆಱಿವಿಲ್ಲದ ನೆನದ ಪದ್ದಿಂ ಸೂರ್ಕುತಾಂ (ಸಕಕ. ೬-೨೨೯). [ಪೆಂಪು+ಇಡು]

**ಪೆಂಪು**, ಪೆಣ್ಪು, ಹೆಂಪು (ನಾ). ೧. ಹಿರಿಮೆ ; ಘನತೆ ; ಶ್ರೇಷ್ಠತೆ : "ಪೆಂಪೆಂದನಲ್ಗಾರವಂ" (ಕರ್ಣಾಟ. ೬೩) ; ಸುನ್ದರಪೆಂಪ್ಪುದಾಗ್ರುತಪ (ಎಕ. II. ೬೯-೦ ; ಸು. 750) ; ಬೀಗೆ ಮನದ ಪೆಂಪುಮಂ ಕೈವಿಗೆ ವಿಭವದ ಪೆಂಪುಮಂ ವಿಶೇಷಿಸಿ ಪೇೞಲ್ ಬಗೆವುದುದಾತ್ತಾಲಂಕಾರಗುಣೋದಯಂ (ಕವಿರಾ. ೩-೦೬೩) ; ಕುಡುವೆಟ್ಟನ ಕುಡುವನ ಕುಡೆ ಪಡೆವನ ಪೆಂಪೇಂ ನೆಗೞ್ತೆವೆತ್ತುಮೊ (ಪಂಪಭಾ. ೬-೯೯). ೨. ಕೀರ್ತಿ ; ಯಶಸ್ಸು ; ಖ್ಯಾತಿ : ಪಡೆದಂ ಬ್ರಹ್ಮಂ ಜಗಮಂ ಪಡೆಯಲ್ ತಾನಾರ್ತನಿಲ್ಲ ಪೆಂಪಂ ನಿಮ್ಮಂ ಪಡೆದಲ್ತೆ ಪಡೆವನೆನಿಸಿದ ಕಡುಪೆಂಪಿನ ಪೋೞಿಗೆ ನೀವು ಮೊದಲಿಗರಾದಿರ್ (ಪಂಪಭಾ. ೬-೦೨); ಪೆಂಪಿನುಚ್ಚಂಗಿಯ ಕೋಟೆಯಂ . . . ಕೊಣ್ಡು ನೆಗೞ್ತೆ (ಎಕ. II. ೫೯-೯೭; 974); ತನಗೆ ವಲ್ಲಭೆ ಲಕ್ಷ್ಮಿಯೆನಿಪ್ಪ ಪೆಂಪು (ದಶಕು. ೦-೦೯). ೩. ಆಧಿಕ್ಯ ; ಹೆಚ್ಚಳ; ಅತಿಶಯ : "ಉಬ್ಬರಂ . . . ಪೆಂಪು . . . ಪೆರ್ಚುಗೆ—ಈ ೧೯ ಅತಿಶಯಂ" (ಶಬ್ದಮ. ೩೬-೨೩೯); ಕಂಪಿನ ಪೆಂಪು ಪೊಂಪುಳಿಯೆನಲ್ (ಕಾಂತಿಪು. ೫-೩೩); ಆ ಕುಮಾರರ್ಗೆ ಪೆಂಪಿಂದ ಮದುವೆಯಂ ಮಾಡಿದಂ (ಧಾಕಾಂ. ೫-೩೦); ಧನದ ಪೆಂಪನು ಹೊಗಳಲೇಂ (ಶಾಕ್ಯಪಾ. ೦೬-೩). ೪. ಶೋಭೆ; ಸೊಗಸು; ಚೆಲುವು: ವ್ಯಡಗಣಾವಳಿಸಹಿತ ಪೆಂಪಂ ಪಡೆದು (ಜಕಾ. ೩೨-೪೯); ಪೆಂಪೊಗುವ ತಾವರೆಗೊಳಂಗಳ . . . ಸೊಂಪು ಸೆಳೆವುದು ಮನವನು (ಶಬ್ದಶಾ. ೯-೩೬); ಪೆಂಪಿಂದೆ ಪುರವನಿತೆ ಗಹಗಹಿಸಿ ನಗುವಂತೆಸೆವ ಸೌಧಂಗಳ ಮರೀಚಿ ನೋಡೆಂದನು (ಕೃಶೀಪಾ. ೬ ೦೫); ತಂಗದಿರ ಬೆಂಗದಿರನುದಯಾಸ್ತಂಗಳ ಪೆಂಪು (ಶಕ್ತಾಂಗಿ. ೨೯-೬೦೭). ೫. ಎತ್ತರ ; ಔನ್ನತ್ಯ : ತೊಂಭತ್ತೊಂಬ್ಬಸಾಸಿರ ಯೋಜನಮಂ ನೆಗೆದೀ ಸುರಗಿರಿಪೆಂಪನೇಂ ಪುಮಂಗೊಳಿಸಿದುದೋ (ಆದಿಪು. ೬-೬೯); ತುತ್ತತುದಿ ರುತುವಿಮಾನವಮನೊತ್ತಿರ್ದುದು ನಗದ ಪೆಂಪನದನೇವೊಗೞ್ವೆಂ (ಆದಿಪು. ೦೦-೬); ಗೋಪಾಮುಖವಿಲಸನದಿಂ ತಾನೆ ಮೇಲಾದ ಪೆಂಪಿಂ ಮುಗಿಲಂ ಮುಟ್ಟಿರ್ದುದೆಂಬಂತಿರೆ ಕರಮೆಸೆಗುಂ ವಿಶ್ರುತೋತ್ತುಂಗವಪ್ರಂ (ಸುಕುಮಾ. ೦೦-೫೨). ೬. ಏಳಿಗೆ ; ಅಭಿವೃದ್ಧಿ : 'ಪೆಂಪೇೞಿಸು' ಪರಾ. ೭. ಹೆಮ್ಮೆ ; ಜಂಭ : ಅವರ ಪೆಂಪುಗಳನುರ್ಕಿವದೆ ತನ್ನ ಒರ್ವಗಲ ಪುಟುಗಳ್ಗೆ ಬಯಲ್ ಗೈದವನ್ (ಅಭ್ಯಕ್ರ. ೫೦-೦೦೯೬). **ಪೆಣ್ಪು** : ೧. ಅಮರಶ್ಕಳದ ಪೆಣ್ಪಂ ತಳೆದಯ್ಯದಿಂಬರೇಂ ಕೇವಳಮೋ (ಶಾಇಇ. XI—11. ೦೯೯-೦೨; 1098) ; ಪೆಣ್ಪನ ಕಣಿಯೆಂದು . . . ಪೊಗಳುತಿರ್ಪುದು (ಶಾಇಇ. IX—i. ೨೬೬-೨೨; 1183). **ಹೆಂಪು** : ೧. ವೇದದಲಿ ಓರಿದು ಹೆಸರಾದ ಹೆಂಪುಳ್ಳ ಶಿವನಾದಿನಾಮವು ನೋಡು ಪಂಚಾಕ್ಷರಿ (ಶಿವಗೀ. ೦೯-೫೦); ಹೆಂಪಿನ ಹೆಚ್ಚಿನ ನಿಧಿಯೊಪ್ಪಿರ್ದಂ (ತಿರುಪಾ. ಪ. ೦೨೩-೬); ದೇವ ನಾವ ಭಮವನು ಬೇಡಲು ನೀವೊಲಿದು ಕೊಡದಿಹುದು ಹೆಂಪೇ (ಜಕಾ. ೪೬-೯೬). ೩. ವೀರಭಕ್ತಿಯ ಹೆಂಪು ಧೀರೋದಾತ್ತರತೆಯ ಸೊಂಪು (ಜಕಾ. ೩೬-೨೯); ಆ ದೇವತಾನಿ ಪೊಗಳುತ್ತಲಿರ್ದನು ಹೊಱಿವ ಹರುಷದ ಹೆಂಪಿನುಬ್ಬಿನಲಿ (ಕೋಶಪ. ೬-೫೦-೦೦). ೪. ಎನ್ನ ಭಕ್ತಿ ಎಲವದ ಕಾಯಿ ಫಲದಂತೆ ನೋಡಯ್ಯ ಹೊಱಗೆ ಹೆಂಪು ಒಳಗೆ ಬೂರವಯ್ಯ (ಬಸವ. ೨೯೬); ಕುಸುಮದ ಕಳಿಕೆಗಳ ಹೆಂ[ಪಾಠಾಂ. ಹಿಂ]ಪಿನಲಿ . . . ತಂಬೆಲರ ತಂಪಿನಲಿ ಸಲಿಸಿತಾ ಸಹಕಾರ ಸೊಗಸಿನ ಸುಲಭತೆಯನರಸಂಗೆ (ಕೋಶಪ. ೩-೬ ೬೨); ಮನಸ್ಸನ್ನು ಮರುಳುಗೊಳಿಸುವ ಬೆಳದಿಂಗಳ ಹೆಂಪೂ . . . ಅನುರಾಗದ ಮೊಳಕೆಯನ್ನು ನಾಟಿಡುವು (ಧಾಕೋ. ೦೪). ೫. ಪರಮಾಣು ಮೇರುವಿನ ಹೆಂಪಿಗೆ ಮುಳಿವಂತೆ (ಶಿಕಪ. ಪ. ೯೯೯-೨೦); ಸುರಗಿರಿಯ ಸೌಭಾಗ್ಯವನು ಹರಗಿರಿಯ ಹೆಂಪನು ಮಂದರಗಿರಿಯ ಸೊಂಪನು (ಕಥಾಗ. ೬-೨-೦೦). ೬. ಕಿಱುಮಳ್ಳಿಯಾಗಿಯು ಕಣ್ಗೆ ಮೆಱೆವ ಹೆಂಪಿನೊಳಿರ್ಪುದು (ಸಿದ್ಧರಾ. ೦-೩೦) ; ಕಳೆದನೆಳೆಯೊಳು ಭಕ್ತಿಬೀಜಮನಳಿದನಾ ಕಬ್ಬಿಲರ ಹೆಂಪ (ಜಕಾ. ೫೯-೫೯). ೮. ಸಂತೋಷ ; ಹಿಗ್ಗು : ಕಂಪುಳ್ಳ ಸಂಪಗೆಯ ಪೂಗಳಂ ಕಿತ್ತೀದು ಹೆಂಪಿನಿಂ ಶಶಿಧರನ ಸಿರಿಮುಡಿಗೆ ಬೇಕೀದು . . . ಕೊಡಲು (ಜಕಪ. ೦-೨೯); ಶಿವಕವಿಗಳ ಮನದಿಂಪು ಭುವನಜನರ ಹೆಂಪು ಲಿಂಗನ ಕೃತಿ (ಕವಚ. II. ೨೦೮ ಕೋಳಿಪಾಟಚರಿತ್ರ). ೯. ವಿಲಾಸ; ಬೆಡಗು : ಕಳದ ಹೂವಿನಲ್ಲಿ ಕಂಪಮಳಿದ ಸೂಳೆಯಲ್ಲಿ ಹೆಂಪ ಕೊಳಚೆಯ ನೀರಿನಲ್ಲಿ ಗುಂಪನಱಸುವರಿ (ಜಕಪ. ೫೬೯) ; ಪುತ್ತವಳಿವಕ್ರತೆಯನೀವ ವಹಣಿ ತರಂಗಿಸುವ ತಿರುವು ಸುಳಿಗೊಳ್ಳೆ ಹೆಂಪು (ಗಂಚಿ. ೨-೦೦೫ ಪ).

[ < ಪಿರಿದು₁ + -ಪು₂. / ತೆಲು. ಪೆಂಪು, ಪೆಸುಪು ]

**ಪೆಂಪುಂಗಾಱ** 'ಪೆಂಪುಗಾಱ' ನೋ.

**ಪೆಂಪುಗಾಱ,** ವೆಂಪುಂಗಾಱ (ನಾ). ಹಿರಿಮೆಯುಳ್ಳವನು : ಘನತೆಯುಳ್ಳವನು : ಪೆಂಪುಗಾಱರು, ಪೆಂಪುಂಗಾಱರು . . . ದೇಹುಗಾಱರು (ಶಾಶಾಕು. ೦೫೩ ಕ್ರ.ಹೋ). **ಪೆಂಪುಂಗಾಱ :** ಮೇಲಿನ ಪ್ರಯೋಗವನ್ನು ನೋಡಿ. [ ಪೆಂಪು+—ಗಾಱ ]

**ಪೆಂಪುಗಿಡು** 'ಪೆಂಪುಗೆಡು' ನೋ.

**ಪೆಂಪುಗೆಡು,** ಪೆಂಪುಗಿಡು (ಕ್ರಿ). ೧. ಹಿರಿಮೆಯು ಹಾಳಾಗು, ನಾಶವಾಗು: ದಿವಾಕರನಂ ಪೋಲ್ವವರ ಪೆಂಪುಗೆಟ್ಟಿಣ್ಣಾರೆಗಳ್ (ಶಾಸಂ. XX. ೯೮-೯೯; 1076?): ಬಡತನದೆಂದವಿಂದನ್ನಂಬಡೆಯದೆ ಮಱುಗಿ ಕರನೊಣ್ಣೀವಿಂ ಪೆಂಪುಗೆಟ್ಟು ನಮೆಯುತ್ತಿರ್ದರ್ (ಧರ್ಮಾಮೃ. ೯-೨೩೦). **ಪೆಂಪುಗಿಡು :** ೨. ಘನತೆಯನ್ನು ಕಳೆದುಕೊಳ್ಳು : ಕಿರಿಟವಿದು ಪೆಂಪುಗಿಡೆ ಪೇಳಿಂಗೆಱಗುವುದೇ (ಅಂಕ್ಷ. ೦೨-೦೦೦). [ಪೆಂಪು+ಕೆಡು]

**ಪೆಂಪುಗೊಳ್,** ಪೆಂಪುಗೊಳು (ಕ್ರಿ). ೧. ಅಧಿಕಗೊಳ್ಳು; ಹೆಚ್ಚಾಗು : ಕಡಂಗಿ ಬಾಯ್ದೆಱೆಯನೊಲ್ದು ಕರ್ದುಂಕಿ ಕರ್ದುಂಕಿ ಪೀರ್ದು ಪೀರ್ದೊಡ ನಡಸಿರ್ಪ ಬಾಯಱಿಕೆಯಂ ತವಿಪಂ ಸವಿಪೆಂಪುಗೊಂಡಿರ್ಪಂ (ಶಕಿಂ. ೬-೨೦೨). **ಪೆಂಪುಗೊಳು:** ೨. ಘನತೆಯನ್ನು ಪಡೆ; ಹಿರಿಮೆಯನ್ನು ಹೊಂದು: ಬಡುವಂ ಈ ಬಾಳ್ ಅದೇಕೆಂಬ ಚರ್ಚೆಯು ; ನಾವು ದುಡಿದಂ ಅದು ಪೆಂಪುಗೊಳೆ (ಶುಂಸಸ. ೬೦೯). [ ಪೆಂಪು + ಕೊಳ್ ]

**ಪೆಂಪುಗೊಳು** 'ಪೆಂಪುಗೊಳ್' ನೋ.

**ಪೆಂಪುವಡೆ** (ಕ್ರಿ). ೧. ಹಿರಿಮೆಯನ್ನು ಹೊಂದು; ಘನತೆಯನ್ನು ಪಡೆ: ಚಿತ್ರರಥನಂಬನೊರ್ವಂ ಪುತ್ರಂ . . . ಪೆಂಪುವಡೆದು ಜಗತ್ತ್ರಯವಿಖ್ಯಾತಕೀರ್ತಿ ಮುನ್ನಿನಗುದಯಿಸಿದಂ (ಕಾದಂಸಂ. ೭೦೯) : ಜಿತದತ್ತಂ ಗುಣವಾರ್ಧಿ ತಪ್ಪಲಱಿಯಂ ಜೀವಾದಿಗಳ್ಗಿಂಬ ಭಾವನೆಯಿಂದಾನಿನಿತೊಂದು ಪೆಂಪುವಡೆದಂ (ಧರ್ಮಾಮೃ. ೨-೩೩೩): ಭೂತಳದಲ್ಲಿ ಪೆಂಪುವಡೆದಂ ಭವ್ಯಾದಿ ಭಾಳೇಕ್ಷಣಂ (ಶರಶ. ೦೨-೦೦೭). ೨. ಖ್ಯಾತಿಯನ್ನು ಪಡೆ; ಯಶಸ್ಸಿನಿಂದ ಕೂಡಿರು : ಪೆಂಪುವಡೆದ ಗೋತ್ರಣವಿಭಾಗಂಗನುಕೂಳವಂತ್ರಿ ನರಸಿಂಗನಾಯಕಂ ಶಿಷ್ಟತುಷ್ಟಿದಾಯಕನೆಸೆದಂ (ಶಾಸಂ. ೬೬-೦೨-೨೭ ; 1170): ಈ ರೀತಿಯ ಪೆಂಪುವಡೆವ . . . ತಾತಾಚಾರಿಯ ರಡಿಗೆಱಗುವನು (ಜೋಕಶ. ೦-೯) ; ಪರಮಪುಣ್ಯನಾಮನೆನಿಸುವ ಸಿದ್ಧವೀರೇಶನೆಸೆದನಂದವನಿಯೊಳು ಪೆಂಪುವಡೆದು (ಶಂಕ್ಷ. ೦-೨೦). ೩. ವೈಭವದಿಂದ ಕೂಡಿರು : ಜಗಕ್ಕತಿಚೋದ್ಯಾವಹವಾಗಿ ಪೆಂಪುವಡೆದತ್ತುಂ ಶಾಶ್ವಜನ್ಮೋತ್ಸವಂ (ಅಂಕ್ಷ. ೭-೩೮); ಭಾಸ್ಕರಗೆ ಕರಸರಸಿಜವನಾ ಪರವೆ ಮುಗಿದು ನಿಲಲಂದು ಮೇಳಂ ಪೆಂಪುವಡೆದಿರ್ದುದು (ಶಾಂತಪ. ೯-೩). ೪. ಚೆಲುವಾಗಿರು ; ಶೋಭಿಸು: ಸೂಳೆಗೇರಿಯಂಗಡಿಯು ಪಗುಂತಿ ಪೆಂಪುವಡೆದಾ ಪೊಚ್ಚಲೊಳ್ ನೆಱೆದೊಪ್ಪಿ ತೋಱುಗುಂ (ಶಬಶಿಶ. ೯-೦೯೭). [ಪೆಂಪು+ಪಡೆ]

**ಪೆಂಪುವೆಱು** (ಕ್ರಿ). ೧. ಹಿರಿಮೆಯನ್ನು ಹೊಂದು ; ಶ್ರೇಷ್ಠತೆಯನ್ನು ಪಡೆ : ಇದು ಮಾಳಯಾಚಳಂ ಮಾಳಯಜಂ ಮಾಳಯಾನಿಳನೆಂದು ಪೆಂಪುವೆತ್ತುದು (ಶುಕಶಾ. ೯-೨೦): ಪೆಂಪುವೆತ್ತ ಮಹಿಮೋನ್ನತಿ ಮೇರುಗೆ ಮಂಡಪಂ ದಲಾಗೆಸೆವುದು(ಎಕ. VII. ಶಿವ. ೯-೬೪; 1122); ವರಸೌಂದರ್ಯ ಗಭೀರವಾರಿನಿಧಿಯೋ . . . ತಾನೆನೆ ಪೆಂಪುವೆತ್ತುದವನೀಶೋದ್ಯಕ್ಷಭಾಮಂಡಲಂ (ಶಬಮ. ೩-೯೦). ೨. ಕೀರ್ತಿಯನ್ನು ಹೊಂದು; ಪ್ರಸಿದ್ಧವಾಗು : ಸಕಳವರ್ಣಾಶ್ರೇಷ್ಠಮಿವಿ ವರ್ಣಾಮೆಂದೆನೆಸುಂ ಕೈಕೊಳೆ ಪೆಂಪುವೆತ್ತ ನೆನಟ್ಟತ್ತಂಭೋಜಜನ್ಮಾನ್ವಯಂ (ಶಾಸಂ. ೩-೨-೩೭; 1068); ತೊಡವಾರ್ಹತಕ್ಕೆನೆ ಜನಂ ಭೂಭಾಗದೊಳ್ಪೆಂಪುವೆತ್ತುದು ಸೂರಸ್ಥಗಣಾ (ಶಾಸಂ. XI-೧. ೦೦೦-೦೯; 1071). ೩. ಅತಿಶಯವಾಗು; ಅಸಾಧಾರಣತೆಯಿಂದ ಕೂಡಿರು : ಪೆಂಪುವೆತ್ತ ತಪಃಪೋತದಿನಣ್ಣ ನೀಂ ತಡಿಮುನೆಯುದ್ದು (ಅಂಕ್ಷ. ೩-೩೬): ಕಟ್ಟಾಯದ ಪೆಂಪು ಶಕ್ರನೊಡನೆಱೆದ ಪೆಂಪಿವ ಪೆಂಪುವೆತ್ತು ನಿಟ್ಟಾಯುಗಂಗಳಾಗಿ ನಿನ್ನೊಳಿರ್ದುದು (ಪಂಕಶ. ೦೯-೦೩); ತನ್ನ ಪವರನ ಯುತು ಪೆಂಪುವೆತ್ತೊಪ್ಪಿ ತೋರ್ಕುಂ (ಅಕ್ಷಟಿ. ೦-೦೦೦). ೪. ಅಂದವನ್ನು ಪಡೆ; ಶೋಭೆಯನ್ನು ಹೊಂದು : ಪೆಂಪುವೆತ್ತಗಲ್ ಬಿಸರುಹಮುಳ್ಳಸಲ್ಲು ಸಿರಿ ಕಣ್ದೆಱೆವಂತಿರೆ (ಕುಂಶಮು. ೩-೩೩) ; ಪೆಂಪುವೆತ್ತೆಸಳದಿನಿರ್ದ ಸಂಪಗೆಯು ಪೂವಿನೊಳಾದ ಬೆಡಂಗು ನಾಡೆ ರಂಜಿಸೆ (ಪಾರ್ಶ್ವಪು. ೦೩-೦೭). [ ಪೆಂಪು + ಪೆಱು ]

**ಪೆಂಪುವೇೞ್** (ಕ್ರಿ). ಹಿರಿಮೆಯನ್ನು ಹೇಳು,-ಸಾರು : ಎರೆದವ ಪೆಂಪುವೇೞ್ದೊಡನಲಾ ಪೊಣಾರ್ಮಕನ ಪೆಂಪುವೇೞ್ದೊಡಾ ಸುರಪತಿ (ಪಂಕಶ. ೩-೭೩). [ ಪೆಂಪು + ಪೇೞ್ ]

**ಪೆಂಪೇಱಿಸು** (ಕ್ರಿ). ೧. ಏಳಿಗೆಯನ್ನುಂಟುಮಾಡು ; ಅಭಿವೃದ್ಧಿಗೊಳಿಸು : ತತ್ತತ್ಕುಲಧರ್ಮದೊಳ್ ಸ್ವಜನಮಂ ಪೆಂಪೇಱಿಸು (ಶಕಂ. ೩-೦೨೦). ೨. ಹೆಚ್ಚು ಮಾಡು ; ವೃದ್ಧಿಪಡಿಸು : ಎನ್ನ ಮುನ್ನಿನ ಮಣೆಯೋ ಬಿನ್ನಣಮಂ ಪೆಂಪೇಱಿಸಿ ತನ್ನೊಲ್ಗಿಸಿಯಿತ್ತು ಮನ್ನಿಪಂ ನಿನ್ನಿನಿಸುಂ (ಶಕಂ. ೬-೨೨೯). [ ಪೆಂಪೇಱು + — ಇಸು ]

**ಪೆಂಪೇಱು** (ಕ್ರಿ). ೧. ಹೆಚ್ಚು ; ಅಭಿವೃದ್ಧಿಗೊಳ್ಳು: 'ಪೆಂಪೇಱಿಸು' ಪರಾ. ೨. ಕಾಂತಿಯನ್ನು ಪಡೆ ; ಸೌಂದರ್ಯವನ್ನು ಹೊಂದು ; ಚೆಲುವಾಗು : ಸಕಳಜಗು ಪೆ[ ಪಾಠಾಂ. ಹೊ ]ಪೇಱಿತು ಪದ್ಮಮಿತ್ರನುದಯಿಸುವಾಗಳ್ (ನಂಶ. ೩-೯) : ಪೆಱೆತೊಂದು ಪೆಂಪೇಱುವರ್ದೆಯ ಮಿಱುಪ ಮೆಯ್ಯ . . . ಉಱುತು ನೋಡುವ ನೋಟದ ಕೊಮರಿಯ ಬಗೆಯಱಿತೆಱೆದೊಳೆಱಗುವುದು (ಶಂಶ. ೬-೦೭). [ ಪೆಂಪು + ಏಱು ( < ಏೞ್ ) ]

**ಪೆಂಬಿದಿರ್** (ನಾ). ಒಂದು ಸ್ಥಳದ ಹೆಸರು: ಗಾವುಣ್ಡುಗಳೆ ಸೀಮೆದೋಱಿದ ಕ್ರಮ ತೊಳಂತಿಯುದ ಪೆರ್ಗ್ಗಯ್ಯಾಡಿಯ ಸೂಱಿಲ್ಲದ ಪಂಬಿದಿಂವ ಮೆವ್ವ ತೊ× (ಎಕ. XII. ತುಂಕ. ೨೬೯-೭೦ ; ೯೦೪). [ ? ]

**ಪೆಂಬುಯ್ಯಲ್** 'ಪೆಣ್ಬುಯ್ಯಲ್' ನೋ.

**ಪೆಕರ** ' ಪೆಕ್ರ ' ನೋ.

**ಪೆಕ್ಕ** (ನಾ). ಆಧಿಕ್ಯ; ಹೆಚ್ಚಳ : ಸುಡುವಡಂ ಕರಂ ಪೂಗೆವ ಪರ್ಬುವ ಕರ್ಬೊಗೆ ಪೆಕ್ಕಮಪ್ಪ ಪೆರ್ಬಡಿಕೆಯ ನಾಶಂ (೦೬ರಾಕ. ೬-೩೩). 'ಪೆಕ್ಕಳ' ಪರಾ. [ ದೇ. ೩ ತೆಲು. ಪೆಕ್ಕು, ಪೆಕ್ಕುವ ]

**ಪೆಕ್ಕಣ,** ಪೆಕ್ಖಣ, ಪೇರ್ಕಣ (ನಾ). ೧. (ನಾಟಕದಂಥ) ನೋಟ; ಕಾಣ್ಕೆ; ದೃಶ್ಯ: "ಪೆಕ್ಕಣಮೊಂದು ಪ್ರೇಕ್ಷಣಾ" (ಶಕಾ. ೬೬-೩೦೯); ಕೂಗುವ ಬೇಡರ ತಂಡವಾರ್ವ ಹಾಯಿಸಿಗಳಗುರ್ವಿನಿಂದೆಸೆಯ ಪೆಕ್ಕಣದಿಂದೆಸೆದತ್ತು ಪಕ್ಕಣಂ (ಕ್ರಿಶೃ. ೨೬-೩೯). ೨. ನೃತ್ಯ ; ಕುಣಿತ : ಕಳ್ವರೊಡಲ್ಗಳೊಟ್ಟು ರಜನೀಚರಿಮಾರ್ಕಳ ಮಿಕ್ಕ ಪೆಕ್ಕಣಂ (ಕಾಕ್ಯಶಾ. ೩೩೦ ಕುರ್‍ತ್ರ್ಕ); ಹೃದ್ಯವಾದ್ಯಲಯದೊಡೆಯಿನೊಂದ ಲಯಾಕ್ಕಿ ಲಕ್ಕಿಯಂ ಮೆಟ್ಟುವ ಪೆಕ್ಕಣಂ . . . ಲೀಲೆಯಾ ಪುಟ್ಟಿಸೆ (ಮುಕ್ತಿ. ೯-೯೦); ಗಂಧರ್ವಾಮರರ್ ಪಾಡೆ ಪೆಕ್ಕಣಮಂ ದೇವಿಯರಾಡೆ . . . ಕಣ್ಗಿಂ ಬೆಡಂಗಾದುದೋ (ಕಂಕೃಶ. ೦೨-೬೩); ಬಿರುದರ ಕೂರಲಗಿನೆಸೆವ ನಾದಮೆ ತಾಳಂ ನರರಟ್ಟೆಯ ಪೆಕ್ಕಣದಿಂ ಕರಮೆಸೆದುದು (ಎಕ. VI. ಕಡೂರು. ೦೯೯-೫೦ ; 1206). ೩. ಒಂದು ಬಗೆಯ ನೃತ್ಯ ; ತಾಂಡವ, ನಾಟ್ಯ, ನೃತ್ಯ, ಲಾಸ್ಯ, ಗುಂಡಿಲ, ಪೆಕ್ಕಣ, ಲಕ್ಷಣ, ಅಪರಪಾತ್ರ, ಸುಪಾತ್ರ ಮತ್ತು ಸರ್ವತೋಭದ್ರವೆಂಬ ಹತ್ತು ಬಗೆಯ ನೃತ್ಯಪ್ರಭೇದಗಳಲ್ಲಿ ಒಂದು : ತಾಂಡವ ನಾಟ್ಯ ನೃತ್ಯ ಲಾಸ್ಯ ಗುಂಡಿಲ ಪೆಕ್ಕಣ ಲಚ್ಚಣ ಅಪರಪಾತ್ರ ಸುಪಾತ್ರಸರ್ವತೋಭದ್ರವೆಂಬ ದಶವಿಧ ಪಾತ್ರಂಗಳಿಂ ತೋಱಿ ರಂಜಿಸುವ ನರ್ತಕಿಯರಿಂ (ಎಶಿಶ. ೦೯೩); ಪೇರಣ ಪೆಕ್ಕಣಂ ಗುಂಡಲಂ ಸಮಮಲದ ದಂಡಲಂ ಲಾಸ್ಯಮೆಂಬವಂ ತೋಱು ತಿರ್ದಂ ಮಹೇಶಂ (ಹರಿಮ. ೦೦-೩೯) ; ಪೇರಣ ಪೆಕ್ಕಣ ಗುಂಡಲಂಗಳಂ ಬಲ್ಲ

ಸಾತ್ವಿಕ ಆರಭಟ ಕೌಶಿಕಿಯೆಂಬ ಪಾತ್ರಂಗಳಿಂ (ದಶಾವ.೨-೧೦ ವ). ಪೆಕ್ಖಣ: ೪. ಮದ್ದಳೆಯನ್ನು ಬಾರಿಸುವ ಒಂದು ಕ್ರಮ : ಆ ಸಮಯದೊಳ್ ಮದ್ದಳೆಗಂ ಮದ್ದಳೆಯು . . . ಪಪಣಿಜಿದು ಪೆಕ್ಖಣ ಪಕ್ಕೆಯೊಳ್ಪಕ್ಕ ನೆನಿಸಿ ಲಾಗು ಮೋಡಿ . . . ಪಹರಣೆಗಳೆಂಬ ನಾನಾಶಬ್ದಂಗಳಂ ಬಾರಿಸಿ (ರಜಾಶೇ. ೨-೨೩ ವ). ಪೇರ್ಕಣ : ೧. ಚಿತ್ರಗಣ್ಣಿವಲೆಯಂ ಸಮಕಟ್ಟುವ ಬೆಟ್ಟುಗೊಂಟವಮಂ ಬಸಿವ ಪುಳಿಂದಸಂಕುಳದ ಪೇರ್ಕಣದಿಂದೆಸೆದತ್ತು ಪಕ್ಕಣಂ (ಚಂದ್ರಪ್ರ. ೫-೫೯).

[< ಸಂ. ಪ್ರೇಕ್ಷಣ. / ಪ್ರಾ. ಪೇಕ್ಖಣ. / ತುಳು. ಪೆಕ್ಕಣ, ಪ್ರೆಕ್ಕಣ]

ಪೆಕ್ಕಣ್ಣ, ಪೆಕ್ಕಳ$_{2}$ (ನಾ). ಬೇಡರು ವಾಸಿಸುವ ಹಳ್ಳಿ : ಬೇಡರ ಬಿಂದ ವೊಪ್ಪಿಪಾ ಪೆಕ್ಕಣದೊಳು (ಸಕ್ಕಣಿ. ೧೦-೨೬); ಗುಂಜಾಭರಣವಾಂತಾ ಲೀಲೆಯಿಂ ಶಬರಿಯರೆಸೆದರಾ ಪೆಕ್ಕಣದೊಳಂದು (ಶಾಕ್ಕಣ. ೩-೬); ತನಜೆಯುಹ ಪೊಲತಿಪತಿಯಳ ಕೊಂಡು ಬೇಗ ಪೋಗುತ್ತ ಕೈರಾತದೇಶ ದೊಳ್ ಒಂದು ಪೆಕ್ಕಣವ ಸಾರಲು (ಶಕುಪು. ೩-೫.೬೦). ಪೆಕ್ಕಳ$_{2}$ : ವ್ಯಾಧರೆಕ್ಕತುಳದಿಂದಿರ್ದ ಪೆಕ್ಕಳ ವರ್ಣಿಸಲ್ ಮುಗ್ಗಣ್ಣಗಳವಲ್ಲ (ಕುಶ್ಯಾಂಗ. ೧೦-೨೦).

[<ಸಂ. ಪಕ್ಕಣ]

ಪೆಕ್ಕಣಂಗೆಯ್ (ಕ್ರಿ). ನೃತ್ಯ ಮಾಡು ; ಕುಣಿ : ಪೆಕ್ಕಣಂಗೆಯ್ವ ಸೋಗೆ ಗಳಿಂದೆ . . . ತಂಬೆಲರಿಂದೆ ತಾವುನೋಹರದ ವನಮಧ್ಯದೊಳ್ ಸರಸಿ ಮೆಱೆದುದು ಕೂಡೆ ಸೊಗಸುವೆಸಿಸಿ (ಶೀಕಸು. ೬-೦೬).

[ಪೆಕ್ಕಣ$_{1}$ + ಕೆಯ್$_{1}$]

ಪೆಕ್ಕವಿ (ನಾ). ಒಂದು ಸ್ಥಳದ ಹೆಸರು : ಅರಿಉಳ್ಪುನ್ನಿಪ್ಪರು ತೊಱೆ ಕ್ಯಾರಾಟ್ಟಿಉ ಪೆಕ್ಕವಿಯ ಮುಂಪಲ್ಪೋಗೆಯು ಕೊಡಲಾತು ಇನೆತ್ತು ಮಾಱರ್ ನೆರ ಸಾಸನವಾಗ ಕುದಿಯ್ಯ ಕೊxx ಲಾx (ಎಕ. IV, ಗುಂಡ್ಲುಪೇ. ೯೯-೩ ; ಸು. ೭೮೦) . [?]

ಪೆಕ್ಕಳ$_{1}$, ಪೇರ್ಕಳ, ಹೆಕ್ಕಳ, ಹೆಗ್ಗಳ (ನಾ). ೧. ಹೆಚ್ಚಳ ; ಅತಿಶಯ : ಚಿಕ್ಕದೇವೇಂದ್ರನಿಗೆ ಸಿರಿಯನೀಟಿಗೆಗೊಳಿವ ಪೆಕ್ಕಳದೊಳೆಸೆವ ಪೊಸಬನ್ನಣಿಕೆ ವಂಗಳಂ (ಗೀತಗೋ. ೩೫-೬); ಸೊಕ್ಕುಜವ್ವನದ ಲಲಿತಾಂಗಿ ಯರುರದ ಮೇಲೆ ಪೆಕ್ಕಳದೊಳಿಟ್ಟ ಚಂದನದ (ಕುಶ್ಯಾಂಗ. ೩-೦೨). △ಪೇರ್ಕಳ : ೧. ತರ್ಜಿಗಲಿಸುವರುಂ ಮಿಗೆ ಪೇರ್ಕಳದಿಂ ರಾಯನೆಡೆಗೆ ಪೆಟ್ಟರ್ (ಜಳಪ. ೪-೯೯); ಕುಳಿಕನಂ ಗುಳೆಗೆಟ್ಟುವ ಪೇರ್ಕಳದ ಕಾಲಿಂಕ್ಕಾಳ ಪಡೆಯ (ಪಿ.ಪುಷ್ಟ. ೯೯ ೦೬). ೨. ಹಿಗ್ಗು ; ಸಂತೋಷ : ಇದೆ ಬಂದ ನೆಂದು ಕೇಳ್ದಿದಿರ್ಗೊಂಡು ಪೇರ್ಕಳದೆ ಪದಕೆಱಗಿ (ಜಳಪ. ೬-೦೩೩). ಹೆಕ್ಕಳ : ೧. ಚೈದ್ಯನಿಂದುಬ್ಬಿಸವ ಮಾಡಿದೊಡವ್ವ ಕೈಯಲಿ ಹರಿವ ಹೆಕ್ಕಳವೆ (ಕುಮ್ಯಾಸ. ೧೦.೦೩); ಜನಪತಿಯು ಮಗಳೆಂಬ ಹೆಕ್ಕಳ ಹೆಮ್ಮೆ (ಪ್ರಭುಲಿ. ೫ ೨೩); ಹುಲುನೃಪಾಲನ ಹಗೆತನದ ಹೆಕ್ಕಳವ ಹೇಳುವ ಹಂದೆಗಳ ಬಾಯ್ಗಳನು ಹೊಯ್ (ಕೂಕರಾ. ೬-೦ ೨೯); ತಾಯಿಗೆ ಮಕ್ಕಳ ಸುವಿವೇ ಹೆಕ್ಕಳ (ಶಿಬಸ. ೩೪). ೨. ವರತನೂಭವೆ ಬಂದಳೆಂಬ ಹೆಕ್ಕಳದಿ ಮಣಿಮಯನಿಳಯದೊಳಗಣಿಂದ ಪರಿದು ಬಂದು (ಹಾಶಕ. ೧೬-೦); ಆ ವೈಭವವನಾರೊ ಕಿಸುತಲಾ ಹೆಚ್ಚಿ ಹೆಕ್ಕಳದೋಳಿರೆ (ಶಕುಪು. ೩-೩-೪). ೩. ಗರ್ವ ; ಜಂಭ : ಅಳಿಬಲುತ ಹೆವಱಿಸಿವ ಹೆಕ್ಕಳವೇಕೆ ಸಾರೆನುತ ತೂಳುಕಿದನು ಕಂಗೋಲ ಜಲಧಿಯ (ಕುಮ್ಯಾಕಾ. ೬-೧೯); ಅಳಿಗಬ್ಬಿಗನ ಹೆಕ್ಕಳದ ಕೃತಿಯವೊಲು (ಕೂಕರಾ. ೩-೦೦-೮). ೪. ರೀವಿ; ಗಾಂಭೀರ್ಯ: ಘುಳುಘುಳಿಸಿ ಮಡಿತಂದು ಉಂಗುಟದಿಂ ಭಾಳಾಗ್ರಂಬರಂ ಪೋಲ್ದಿತ್ತಿ ತನ ಗಿದಿರು ಕಾಣದ ಹೆಕ್ಕಳದಿಂ ಕೆಕ್ಕಳಿಸಿ ನೋಡುವೆಕ್ಕಲಂಗಳುಮಂ (ಶಂಕರ ೦೬-೦೯); ಹೆಕ್ಕಳದೊಳಾತನಂ ಬೀಳ್ಕೊಂಡು ಭೀತಹನಾ ಮುಳಿದಿದ್ದು ನಡೆಯುತಿರಲು (ಕೈಪಿಡಾ. ೦೬-೩೦). ೫. ಉಬ್ಬರ ; ಉಕ್ಕುವಿಕೆ : ಉಕ್ಕಿದುದು ಜೇಗಂಡ ಕಡಲಿನ ಹೆಕ್ಕಳದವೊಲು ಹರುಷರಸ (ಕೂಕರಾ. ೦-೦೩-೯೩). ಹೆಗ್ಗಳ : ೧. ಅಂಬನು . . . ಬಿಡಲಾಗಿ . . . ಬಸವ ನೆಂದಱಿದು ಮಱುಗಿ ಹೆಗ್ಗಳದೋಷವಾದುದೆಂದು (ಶೀಕ್ಕಪ್ರಿ. ೪-೬-೩೦); ಹೆಗ್ಗಳವಾದ ಹೃದಯತಾಪದಿಂದ . . . ಅಳುತ್ತಿರುವ ಮಾದ್ರಿಯನ್ನು ನೋಡಿ (ಕೃಪಾಶ. ೨೨೯). 'ಪೆಗ್ಗಳ' ಪರಾ.

ಪೇರ್ಕಳವಾಗು =ಅಧಿಕವಾಗು; ಮೀರು : ಇಂತಳವಿಗುಱಿದ ಸೊಬಗಿನ ಸೊಂಪು ಪೇರ್ಕಳವಾಗಿರ್ಪುದುಂ (ಕಪ್ಯಾಕಾ. ೦೨೩). [<ಪೆಕ್ಕ ?]

ಪೆಕ್ಕಳ$_{2}$ 'ಪೆಕ್ಕಣ್ಣ' ನೋ.

ಪೆಕ್ಕಳಿಗ 'ಪಿಕ್ಕಳಿಕ' ನೋ.

ಪೆಕ್ಕಳಿಸು, ಪೇರ್ಕಳಿಸು, ಹೆಕ್ಕಳಿಸು (ಕ್ರಿ). ೧. ಅಧಿಕವಾಗು ; ಉಲ್ಬಣಿಸು : ಆ ರಣಾಗ್ರದೊಳ್ಪೆಕ್ಕಳಿಸಿದುಕ್ಕಂದದದಟಿಂದೆ ಸುರಥನಱಿಸಿ ದನಚ್ಯುತಾರ್ಜುನರನು (ಕೈಪಿಡಾ. ೦೯-೬). △ಪೇರ್ಕಳಿಸು : ೧. ಅಂದಿಂಗೆ ಪುಯಿಲ್ ಪೇರ್ಕಳಿಸಿ ಪರಿಯದಿರೆ (ಜಳಪ. ೨-೯೦). ೨. ಹಿಗ್ಗು; ಉಬ್ಬು; ಸಂತೋಷಗೊಳ್ಳು : ಲಾಯನ ಕುವರಿ ಬಳಿಸಲ್ಬ ದಾದಿಯ ಬನ್ನಣೆನುಡಿಗೆ ಪೇರ್ಕಳಿಸುತ್ತೈದಿದಳಾ ಸಭೆಗೆ (ಕರ್ಣಪ. ೫-೦೨) ; ದೇವರಿಲ್ಲಿಗೆಯ್ತಂದುದರ್ಕೆ ಪೇರ್ಕಳಿಸಿ ದೇವರ ಕುಶಲಮಂ ಶಿಳಿಯುತ್ತಾವುದಮಂ ಕೊಟ್ಟೆನ್ನಂ ಕಳುಪಿದರ್ (ಜಳಪು. ೦೯-೪). ೩. ಗರ್ವಿಸಂ ; ಅಹಂಕಾರಪಡು ; ಹೆಮ್ಮೆಪಡು ; ಸಕಲಲೋಕ ಸ್ತುತೆಯಂ ಗೌರಿಯನಾಯ್ತುದನೀಗಳ್ ಬಾರಿಸಲಶಿಜಡರದೇಕೆ ಪೇರ್ಕಳಿ [ಶಾಕುಂ. ಗರ್ಲಿ]ಸುವರೋ (ಲೀಲಾಪ. ೦೯-೦೦೬); ಈ ಮೆಯ್ಯುಂ ನಿಚ್ಚಮೆಂದೆ ನಂಬಿ ಸೊಮ್ಮಿಂ ಪೇರ್ಕಳಿಸುವಂ ಗಾಂಪನಲೇ! (ರಾಶತಕ್ಕ. ೬೩-೬)

'ಪೆರ್ಗಲಿಸು' ಪರಾ. ೪. ಎರಗು ; ಆತುರದಿಂದ ಬರು ; ಮುನ್ನುಗ್ಗು : ಪೇರ್ಕಳಿಸುವ ರಕ್ಕಸಪಡೆಯುರ್ಕಂ ಮುಱಿದಿಕ್ಕಿ ತಕ್ಕನ ಚ್ಯುತನೊರ್ಪಂ (ಅಶ್ವಪ್ರಿ. ೬೦-೬); ಕಿವಿವೇಟದ ಬಗೆ . . . ಅನಿತಂ ಬಱಟಕ ಮಾಯಾಟಮಂ ವಿಟಂ ಕೇಳ್ದು ಪೇರ್ಕಳಿಸಿ ಬರ್ಕಂದು ಬನ್ನಂಬಡುವ ಬಗೆಯಂಬುದುಂ (ಜಳಪ. ೬-೦೫೭ ವ). ಹೆಕ್ಕಳಿಸು : ೧. ಲೋಲಲೋಚನೆ ಯಳಲು ಮಿಗೆ ಹೆಕ್ಕಳಿಸಿತದಿಗದಿಗೆ (ಕುಮ್ಯಾಕ.೨-೦೬); ನನ್ನಳಗಡೆ ಮಹೇಶ್ವರನ ಹಗೆ ಹೆಕ್ಕಳಿಸಲು (ಶಿಶಾಗ. ೧೦-೨೮-೦೫); ಅಂಗನೆಯುತ್ಸಂಗದೊಳು ಅಂಗವನೀಡಾಡಿಯುವಳ ಸಂಗತಿಯೊಳಿ ಹಿಂಗದೆ ಹೆಕ್ಕಳಿಸುವುದು (ಜಳಪ. ೬-೦೫೭ ಸಾಂಗತ್ಯ). ೨. ನಿನ್ನ ಕಂದಾ ಪಡೆದು ನಾಂ ಸುಖಿಯಾದೆ ನೆಂದುಡಲಿತ್ತ ಹೆಕ್ಕಳಿಸಿ (ಕೌಶಿಕಾ. ೨೦-೨) ; ಕಂಗಳು ಹೊಳೆಯೆ ಮಱಿ ಮಿಸಾನೆಂದು ಹೆಕ್ಕಳಿಸಿದರು ಹಿಡಿಹಿನಲಿ (ಕುಮ್ಯಾಕ. ೦೦-೨೮) ; ಹೊಳಲು ಹೊಸ ರೀತಿಯಲಿ ಮಿಗೆ ಕಂಗೊಳಿಸುತಿರ್ದುದು . . . ಹೆಕ್ಕಳಿಪ ಕೋಗಿಲೆಗಳಲಿ ಮೊರೆವಳಿಗಳದ ಮೇಳದಲಿ (ಕೂಕರಾ. ೧-೯-೦೧). ೩. ಜಗ ತನ್ನದೆಂಬ ಹೆಮ್ಮೆಗೆ ಹೆಚ್ಚಿ ಹೆಕ್ಕಳಿಸಿ ಮುಗಿಲುನ್ನವಾಗಿ (ಶುಕೋವ. ೦-೦೬) ; ಹೆಕ್ಕಳಿಸಿ ಜಱಿದನು ಕರ್ಣಶಲ್ಯನನೆಲವೊ ಫಡ ನೋಡೆನುತ ತೆಗೆದೆಚ್ಚನು ಧನುಜಯನ (ಕುಮ್ಯಾಕ. ೨೯-೨೮) ; ಹೆಮ್ಮೆಮಾತಾಡದೆ ಹೆಕ್ಕಳಿಸದೆ ಚಿತ್ತಸಮ್ಮತಿ ಯಱಿತ್ತಿಸಗುವುದು (ಹರಿಶ. ೪-೦೫). ೪. ಪರಬಲಕೆ ಜಾಱುವ ಜಯ ಸಿರಿಯ ಮುಂದಲೆಯ ಹಿಡಿಹಿಡಿಯೆನುತ ಹೆಕ್ಕಳಿಸಿದನು ಕುರುರಾಯ (ಕುಮ್ಯಾಕ. ೨-೫೦) ; ಹೆಕ್ಕಳಿಸಿ ಹರಿ ತಿವಿದ ಘಾತಕೆ ಲಂಕ್ಕರಿಸಿ ಕೆಡೆದು (ಅಕ್ರೂಕ. ೬-೪೦). ೫. (ಅಲಂ) ಹೆದರು; ಹಿಂಜರಿ: ಲಕ್ಕಕುಮಾರೆಯ ಧಾಳಿಯ ಕಂಡು ಮನದೊಳು ಹೆಕ್ಕಳಿಸಿದನೆ ಬಾಮರನು (ಕುಮಾರರಾ. ೦೮-೦೫೫) ; ಮುಕ್ಕುಳಿಸಿ ಮೇಲುಗುಳ್ದಪನೇನನಾದೊಡು ಮಾಡುವಂ ನೀನದಕ್ಕೆ ಹೆಕ್ಕಳಿಸಿ ಹಿಮ್ಮೆಟ್ಟದಿದಿರ್ಗೊಡೆ (ಕೈಪಿಡಾ. ೫-೨೯). ೬. ಅಧಿಕವಾಗಿ ತೋರು ; ಮೇಲಾಗು : ಸಿಡಿಲ ಬೊಬ್ಬೆಯ ಧ್ವನಿಯಲಿ ನಡನಡಿಸಿ ತಾಗಿ ನಿಮಾಘಥಃಪನೆ ಹಿಡಿದು ಹೆಕ್ಕಳಿಸಿದನು ಮೇಘಾಗಮಮಹೀಪಾಲ (ಕೂಕರಾ. ೪-೬-೪). ೭. ಹುರಿದುಂಬಿಸು ;

ಪ್ರೋತ್ಸಾಹಿಸು : ಅವಂ ಕಂಡು ಕಂಸಂ ವಂದಿಗೆಱಿಗಿದ ನಾಯುಂ ಪೆಕ್ಕ [ಪಾಠಾಂ. ಪೆಕ್ಕ್ಳಿ]ಸುವಂತೆ ತೊಡೆಯನಪ್ಪಳಿಸಿ (ಅರ್ಧನೇ. ೬-೧೦೩ ವ); ಕವಿವ ಕಣೆ ಕಿಱುಗಣೆಯು ಮಾಣ್ಕಳಿಸಿದವು ಹೆಕ್ಕಳಿಸಿದವು ಹಂದೆಗರ (ಕುಮಾ.ರಾ. ೪-೧೪). ೮. ಅಗಲವಾಗಿ ತೆರೆ : ಪಿಂಗದಸುರರ ಬಲುವ ಪಾಱಿಸುತ್ತೇ ಱಿಸುತ ಕಂಗಳು ಕೆಕ್ಕಳಿಸಿ ಕಿವಿಗಳಂ ಹೆಕ್ಕಳಿಸಿ (ಕಮಪು ೩-೬-೬೬). ೯. ಸಿಡಿ ; ಚಿಮ್ಮು ; ಹಾರು : ಸೀಸಿಳಿಧ್ವನಿ ಮಸಗೆ ಶಿಲ ಹೆಕ್ಕಳಿಸಿದವು ಝುಮ್ಮೆಂದು ಸವಿಧಾವಳಿಗಳಬ್ಬರಿಸಿದವು ಛಟಛಟಛಟನಿನದದಲಿ (ಹೊರಡಾ. ೦-೬-೪೪). [ಪೆಕ್ಕಳ್₁ + — ಇಸು₂]

ಪೆಕ್ಕಣ 'ಪೆಕ್ಕಣ್₁' ನೋ.

ಪೆಕ್ರ, ಪೆಕರ (ನಾ). ದಡ್ಡ ; ತಿಳಿಗೇಡಿ : ನಿನಗೆ ಮದುವೆಯಾಗಿರ ಬೇಕಲ್ಲವೆ? . . . ನಾನೊಬ್ಬ ಪೆಕ್ರನ ಹಾಗೆ ಕೇಳುತ್ತಿದ್ದೇನೆ? (ಸಂಸ್ಕೃತಿ. ೧೦೪). ಪೆಕರ : ಅವನೊಬ್ಬ ಪೆಕರ (ರೂಢಿ). [?]

ಪೆಗಲ್, ಪೆಗಲು, ಹೆಗಲ್, ಹೆಗಲು (ನಾ). ೧. ಸ್ಕಂಧ ; ಭುಜ : "ತೆಗಳ್=ಪೆಗಲ್" (ಶಬಮ. ೫೦ ೨); ಬಲದೇವಂ ದುರ್ಯೋಧನು ಗಾಯು ಬರ್ಪಂತೆ ಪೆಗಲೊಳ್ ಹಲಾಯುಧಮನಿಕ್ಕಿಕೊಂಡು ಜಂಗಮ ಪರ್ವತಮೆ ಬರ್ಪಂತೆ ಬಂದು (ಪಂಪಭಾ. ೦೩-೯೯ ವ); ನೇಹದಿಂದಾ ಮಹತಂ ಪೇಳ್ದ ತುಂಬುರನ ಪೆಗಲೊಳ್ ಕಯ್ಯಿಕ್ಕಿ (ಹಂಪರ. ೪-೪೮) ; ಕಾಮಮಂಜರಿ ಮುನಿಪನ ಪೆಗಲೊಳ್ ಕೆಯ್ಯನಿಟ್ಟಿರ್ದಳ್ (ಧರ್ಮಾ. ೬ ೬೦ ವ); ಜನ್ನಿವಿತಮಂ ಪೆಗಲೊಳ್ ತೆಗೆದಿಕ್ಕಿ (ಲೀಲಾ. ೫೩೫). ಹೆಗಲು : ೧. ಮುಂಚೆತಗ ನಿಲಿವಿದು ಪೆಗಲೆತಡ ಸುತ್ತಿ (ಕಾಂಕಾರ. ೧೧೮-೩೯). ಹೆಗಲ್ : ೧. ಸೊಡ್ಡಳ ಬಾಚರಸರ ಹೆಗಲ ಮೇಲೆ ಹಸ್ತಮಂ ಮಡಗಿ (ಶೂನ್ಯಸಂ. ೨೦೦-೨); ಹೆಗಲ ಕಂಬಳಿ ಕೈಯ ಕಲ್ಲಿಯೋಗರದಿಂದೆ . . . ಎಸವುತಿರೆ (ಬಸವ. ೯-೯೩) ; ಹೆಗಲಡ್ಡವರಿಗೆಯು ನೀಡಿ ವ್ಯಾಮಣಿವೌಕಿ ತಿವಿದಾಡಿದರು ಸಬಳಿಗರು (ಕುಮಾ.ರಾ. ೯-೦೩). ೨. ಎತ್ತು, ಆನೆ ಮುಂತಾದವುಗಳ ಹೆಗ್ಗತ್ತು-ಬೆನ್ನಿನ ಮೇಲೆ ಇರುವ ಏಣು : "ಸ್ಕಂಧದೇಶ, ವಹ- ಈ ೨ ಹೆಗಲ್" (ಕರ್ಣಾಟ. ೪೪-೦೦೨). ಹೆಗಲು : ೧. ಅರೆಮರಳು ವಾಲಿಗಳ ಹೆಗಲಲಿ ಮೂರಿದ ಗೋಣಿನ . . . ಅರಸನನು ಕಂಡಳಲಿದರು (ಕುಮಾ.ಕ ೦೦-೫೩) ; ಅಕ್ಷಯಮಾಡಿಗೆಯು ದಕ್ಷಿಣದ ಹೆಗಲಿಗೇಱಿಸಿ (ಹೋಶಾಂ ೩-೬-೩); ಹೆಗಲ ಹಸಿಬೆಯೊಳಗಿಟ್ಟು ಮಡಿಯನುಟ್ಟು (ಪುರಂದ. ೨-೩೯-೧) ; ಹೆಗಲು ಮೇಲೆ ಹೊದೆದಿದ್ದ ಒಂದು ಉತ್ತರೀಯ (ಕಳಹು. ೦). ೨. "ಹೆಗಲು=ಸ್ಕಂಧಪ್ರದೇಶ, ವಹ" (ಪಾಠಾ. ೬) ; ದಂತಿಗಳ ಹೆಗಲಲಿ ನಿಡುನೊಗನ ಕಟ್ಟಿದರು (ಕುಮಾ.ದ್ರೋ. ೬-೪೩) ; ಅಗಣಿತಲೋಕಾದಿ ಲೋಕಂಗಳುದರದಿ ಸೊಗಯಿಪ ನಾರಾಯಣನ ಹೆಗಲೊಳು ಹೊತ್ತು ಹೆಚರದೆ ಸಂಚರಿಸುವ ಖಗರಾಜ ಕರುಣಿಪುದು (ವೋಹಕ. ೦-೦೩); ಸಿಂಹವ . . . ಗೋಣಾ ಹೆಗಲುಗಳ ಮೇಲೆ ಬಿರುಸುಗೂದಲು ಉದ್ದವಾಗಿ ಬೆಳೆಯುವವು (ಪಂಚಂಬಹು. ೪-೨೦೩).

ಪೆಗಲೆಣೆ, ಹೆಗಲೆಣೆ=ಸರಿಸಮಾನ ; ಸಾಟಿ : ಅವನ ಪೆಗಲೆಣೆಯು ಕೆಳೆಯರನ್ ಟಾಟರಸ್ ಗವಿಗಟ್ಟಲೆಯಿತುಳ್ ಮಾಟ್ಟಿ ಮುಸುಕಿರ್ದಪುದು (ಅದ್ಭುತ. ೦೩-೨೬೩) ; ಜಸದೊಳು ಪರಮರೋಹಿಣಿಗೆ ಹೆಗಲೆಣೆ . . . ಚಂದ್ರಮತಿ (ಹರಿಶ. ೦-೪೪). ಹೆಗಲ ಕೆಲಸ=ಭುಜದ ಸಹಾಯದಿಂದ ಮಾಡುವ ಕೆಲಸ ; ಹೊರುವ ಕೆಲಸ : ಬುದ್ಧಿಯ ಕೆಲಸ ಶ್ರೇಷ್ಠ . . . ಕಾಲ್ಕೆಲಸ ಹೆಗಲ ಕೆಲಸಗಳು ಅಧಮ (ವಚನ. ೩೩೬). ಹೆಗಲ ಮೇಲೆ ಬೀಳು=ಹೊಣೆ ಹೊರುವಂತಾಗು ; ಭಾರ ಬೀಳು : ಆತನ ಹೆಗಲ ಮೇಲೆ ಬಿದ್ದಿದ್ದ ಜವಾಬ್ದಾರಿ ಎಷ್ಟು ಗುರುತರವಾಗಿತ್ತು (ಕೃಷ್ಣ. ೦೨). ಹೆಗಲ ಸಾಳುವ=ಬೇಟೆಗಾರರು ಬೇಟೆಗೆ ಹೊರಡು ವಾಗ ಭುಜದ ಮೇಲೆ ಕೂಡಿಸಿಕೊಂಡು ಹೋಗುವ ಸಾಕಿದ ಗಿಡುಗ : ಹಿಡಿನಾಯಿಗಳು ಹೆಗಲ ಸಾಳು[ಪಾಠಾಂ. ೪]ವಂ . . . ಪರಿಪರಿಯ ಹಕ್ಕಿ ವೆರಸದವಿಗಂತಕರಂತೆ ನಡೆವ ಶಬರರ ಕಂಡನು (ಹೊಸಗ. ೩-೪). ಹೆಗಲಿಗೆ ಹೆಗಲು ಕೊಡು=ಜೊತೆಯಾಗಿರು ; ಸಮಸಮವಾಗಿರು : ಶಿಷ್ಯರ ಹೆಗಲಿಗೆ ಹೆಗಲು ಕೊಟ್ಟು ನಾನು ದುಡಿಯುತ್ತೇನೆ (ಶಕ್ತಿಶ. ೫೦) ; ನನ್ನ ಹೆಗಲಿಗೆ ಹೆಗಲು ಕೊಟ್ಟಿರಿ, ಹಿಂದೆ ಬೆಂಬಲವಾದಿರಿ (ಕಂಬನಿ. ೫೨-೦೩). ಹೆಗಲು ಕೊಡು = ಸಹಾಯ ಮಾಡು ; ನೆರವು ನೀಡು : ನೆರೆಹೊರೆ ಯವರು ಸಹಾಯ ಬೇಡಿದರೆ ಎಷ್ಟು ಶ್ರಮವಾದರೂ ಹಿಂಜರಿಯದೆ ಹೆಗಲು ಕೊಡುವವನು (ಹೊಳಪು. ೬೪) ; ಬಾ ಬಂಧು, ಹೆಗಲು ಕೊಡು, ನಡುದಾರಿ ಯಲಿ ನಿಂತ ಈ ರಥವ ಸಾಗಿಸೋಣ (ಕಂಬನಿ. ೦೬-೨೨). ಹೆಗಲು ತೊಳೆ = ಜವಾಬ್ದಾರಿ ಇಲ್ಲದಂತೆ ಮಾಡು : ನನಗಂತೂ ಸಾಧಿಸುವದಿಲ್ಲ, ನನ್ನ ಹೆಗಲು ತೊಳೆದು ಬಿಡಿರಿ (ಶಕ್ತಿಶ. ೦೩). ಹೆಗಲೆಣೆಯಾಗು = ಸರಿ ಸಮಾನವಾಗು ; ಸಾಟಿಯಾಗು : ಅವಳಿಗೆ ಹೆಗಲೆಣೆಯಾಗಿ ನಿಲ್ಲಬಲ್ಲ ಮತ್ತೊಬ್ಬ ವ್ಯಕ್ತಿಯೆಂದರೆ ಮಾಣಿಕ್ಯಾಯಕ್ಕ (ಹೂಕ್ರಸ. ೦೦೩) ; ಮಾನವನಿಗೆ ಸೌಂದರ್ಯದರ್ಶನವೃತ್ತಿ ಲಭಿಸಿದಾಗ ಅವನು ದೇವತೆಗಳ ಹೆಗಲೆಣೆಯಾಗಿ ನಿಂತು ಅಮರನಾಗುತ್ತಾನೆ (ಶ್ರೀಪಥ. ೫೪).

[ದ್ರಾ.॥ ತಮಿ. ಪಿಟರ್ ; ತುಳು. ಪುಗೆರ್, ಪುಗ್ಗೆಲ್ ; ಕೋತ. ಪೆಯ್ಗ್, ಪೆಯ್ಗ್]

ಪೆಗಲಿಕ್ಕು (ಕ್ರಿ). ಹೆಗಲಿನ ಮೇಲೆ ಇಡು,—ಇರಿಸು : ಬಲ್ಗೆಯ್ಯು ಪೆಗಲಿಕ್ಕಿ ಬಪ್ಪ ಯೋಗೀಂದ್ರರ ಸುಳುಹುಗಾಣದೆ ಚಿಂತಿ ಮಾಳ್ಪ (ಹರ. ೩-೩೩). [ಪೆಗಲ್ + ಇಕ್ಕು₁]

ಪೆಗಲೀ (ಕ್ರಿ). ಹೆಗಲನ್ನು ಕೊಡು : ಪೆಗಲಿತ್ತು ಪೊತ್ತು ಜವದಿಂ ಮಿಗೆ ಪರಿಯೆ ವಿರಾಜಿಸಿರ್ದ ಗೋರಥಮಂ ಪೆಂಪಗಲದೊಡನೇಱಿ (ಧ್ವಜಪ. ೩೪. ೬೦). [ಪೆಗಲ್ + ಈ₂]

ಪೆಗಲು 'ಪೆಗಲ್' ನೋ.

ಪೆಗಲೇರು 'ಪೆಗಲೇಱು' ನೋ.

ಪೆಗಲೇಱು, ಪೆಗಲೇರು, ಹೆಗಲೇರು, ಹೆಗಲೇಱು (ಕ್ರಿ). ೧. ಭುಜವನ್ನು ಹತ್ತು ; ಭುಜದ ಮೇಲೇರು : ಸಮನಾಗೆ ಮೋಘ ದೊಳ್ ಕಾಳಮಹಾಕಾಳರ್ಕಳವರ ಪೆಗಲೇಱಿದ ವಿಭ್ರಮದಿಂ ನೋಡು ವರ್ಗನ್ನರ್ಘಮಾದುದಾ ಮೇಘರಥನ ಪೆಸರಂಬರದೊಳ್ (ಶಾಂತಿಪು. ೯-೬೪). ೨. ಹೆಗ್ಗತ್ತಿನ ಮೇಲೆ ಏರು,—ಹತ್ತು : ಸಿಂಗನ ಪೆಗಲೇಱಿ ಸಾಗೆ ಕರಿ (ಕುಸುಮ. ೨-೬೪-೩). ಪೆಗಲೇರು : ೧. ಬಡಬಡಿವ ಪರಿಗಳುಂ ಪೆಗಲೇರೆ (ಶಾಂತೀಶ. ೦೩೦-೬೬೦). ಹೆಗಲೇರು : ೧. ಮಂಗ ಡೊಂಬರವನ ಹೆಗಲೇರಿ ಕುಳಿತುಕೊಂಡಿತು (ರೂಢಿ). ಹೆಗಲೇಱು : ೧. ಪಾಪ ಪುಣ್ಯಗಳೆರಡು ವ್ಯಾಪಿಸುತ ಬೆಂಬಿಡಿದು ಪಾಪ ಮಾಡಿದನ ಹೆಗಲೇಱಿ ರಾಜಕುಲದೀಪ ಬರುತಿಹನು (ಶಬ್ದಮ. ೬೩೩).

ಪೆಗಲೇಱಿಸಿಕೊಳ್=ಹೆಗಲಿನ ಮೇಲೆ ಕೂಡಿಸಿಕೊಳ್ಳು : ಸುಖದೋಱು ಲೋಕವಱಿಯಲ್ ಪೆಗಲೇಱಿಸಿಕೊಂಡು ಪೋದಂ (ಶಬ್ದಾಕ. ೬೪): ಪೆಗ ಲೇಱಿಸಿಕೊಂಡನ್ನಂ ಮಿಗೆ ನಿವ್ವೋಲಗಕೆ ಬರ್ಪನತಿಸಂಭ್ರಮದಿಂದಗಲದನು ದಿನಮುಂ (ಧ್ವಜಪ. ೩೨-೪೦). [ಪೆಗಲ್+ಏಱು₁ (<ಏಱ್₁)]

ಪೆಗಲ್ಗೂಟ್ (ನಾ). ಹೆಗಲ ಮೇಲಿಟ್ಟುಕೊಂಡು ಹೋಗುವ ಬುತ್ತಿ : ಹರಿ ಗೋಪಾಲರೊಳಾಡಿದೊದರ್ ಪೆಗಲ್ಗೂ [ಪಾಠಾಂ. ಪೆಗಲ್ಗೂ]ಟುಂಡ ತಾಣಂ . . . ತನ್ನದೀತೀರದೊಳ್ ತರದಿಂ ರಂಜಿಪುವು (ರಹು. ೦೪-೬). [ಪೆಗಲ್+ಕೂಟ್₁]

ಪೆಗಲ್ಪೊಱೆ (ನಾ). ಹೆಗಲಿನ ಮೇಲೆ ಹೊತ್ತುಕೊಂಡಿರುವ ಹೊರೆ : ಪಟು ಕೊಟ್ಟಿಗೆ ಪೆಗಲ್ಪೊಱೆ . . . ಅಪ್ಪವರ್ಗಂ ಸಹಿತವಿನವನಂ ಸೇನೆಯುಂ ಕೊಟ್ಟು (ಮಳಹು. ೩-೩). [ಪೆಗಲ್+ಪೊಱೆ]

**ಪೆಗೆವೆಗೆ** (ನಾ). ಒಂದು ಸ್ಥಳದ ಹೆಸರು : ಗೆಟ್ಟವಡಿಗೆ ಪೆಗೆವೆಗೆಯ ಎಟ್ಟದಿವಪ್ಪಗ್ಗ್ರ ಎಳಚಾಗವಳ್ಳಿಯ ವಾರಯ್ಯ . . . ಕವಪ್ಪಳದೆಳೆವೊಟ್ಟು ಕೊಟ್ಟ (ಎಇ. III, ಶಿಕಾಪು. ೯೮-೨; ೨೩೭ ?). [?]

**ಪೆಗೋಡ** 'ಪಗೋಡ' ನೋ.

**ಪೆಗ್ಗ** 'ಪೆಂಗ' ನೋ.

**ಪೆಗ್ಗಡೆ** 'ಪೆರ್ಗಡೆ₁' ನೋ.

**ಪೆಗ್ಗಣ** 'ಪೆರ್ಗಣ' ನೋ.

**ಪೆಗ್ಗಟಿಯ್ಯ** (ನಾ). ಒಬ್ಬಾತನ ಹೆಸರು : ಪಚ್ಚಪಯ್ಯನ ವಾಗ ಶ್ರೀ [ಕೊ]ನ್ನದ ಪೆಗ್ಗಟಿಯ್ಯಂ (ಕಾಇ. XI_1, ೯೩-೦೯, 970).

[? + ಅಯ್ಯ₆₁]

**ಪೆಗ್ಗಟ್ಟಿ**, ಹೆಗ್ಗದ್ದೆ (ನಾ). ದೊಡ್ಡ ಗದ್ದೆ; ವಿಸ್ತಾರವಾದ ಗದ್ದೆ: ದೇಗುಲಕೆ ಸಲ್ವುದು ದೇವರ ಕೆಱೆಯ ಮೂಡಣ ಕಡೆಗೋಡಿನಲಿ ಪೆಗ್ಗಟ್ಟಿ (ಎಇ. IX, ಕೂಗಿ. ೬೩-೨೦; ೯೬೬). ಹೆಗ್ಗದ್ದೆ : ವಿಷ್ಣುಭಟೋಪಾಧ್ಯಾಯರಿಂಗೆ . . . ಮೂಡಣ ಹೆಗ್ಗದ್ದೆ ಅದಱ ಮೇಗಣ ಕೊಡಂಗೆ ಎರಡಱಲ್ಲಿಯೂ ಮೂಡೆ ೨ (ಎಇ. XXVII, ೨೯-೪೯; 1256).

[<ಪಿರಿದು₁ + ಗಟ್ಟಿ]

**ಪೆಗ್ಗು** 'ಪೆಂಗು₁' ನೋ.

**ಪೆಗ್ಗೊರಿಡು** 'ಪೆರ್ಗೊರಿಡು' ನೋ.

**ಪೆಗ್ಗೊರು** 'ಪೆರ್ಗೊರು' ನೋ.

**ಪೆಗ್ಗೊಲ್ಲಿ** 'ಪೆರ್ಗೊಲ್ಲಿ' ನೋ.

**ಪೆಗ್ಗೋಣೆ** 'ಪೆರ್ಗೋಣೆ' ನೋ.

**ಪೆಚ್ಚ** (ನಾ). ದಡ್ಡ; ತಿಳಿಗೇಡಿ: "ಎಗ್ಗ, ಹುಂಬ . . . ಪೆಚ್ಚ" (ಶಬ್ದಮಣಿ. ೬೯); ಶುದ್ಧ ಪೆಚ್ಚ ನಾನು (ತ್ರಕ. ೬೯). 'ಪಿಚ್ಚ₁' ಪರಾ.

[ಪೆಚ್ಚು₃ + —ಅ₇]

Δ**ಪೆಚ್ಚಳ₁** 'ಹೆಚ್ಚಳ' ನೋ.

**ಪೆಚ್ಚಳ₂** 'ಪಚ್ಚಳ₂' ನೋ.

Δ**ಪೆಚ್ಚಳಿಸು** 'ಹೆಚ್ಚಳಿಸು' ನೋ.

**ಪೆಚ್ಚಾಟ** (ನಾ). ತಿಳಿಗೇಡಿತನ; ಹುಚ್ಚಾಟ; ಅವಿವೇಕ: ಈಚೀಚೆಗಂತೂ ಅವನ ಪೆಚ್ಚಾಟ ಹೇಳತೀರದು (ಕೂಹಿ). [ಪೆಚ್ಚು₃ + ಆಟ]

**ಪೆಚ್ಚಿ** (ನಾ). ದಡ್ಡ ಹೆಂಗಸು; ಪೆದ್ದಿ : ಅವಳೊಬ್ಬಳು ಪೆಚ್ಚಿ. ಬಾಯಿಗೆ ಬಂದ ಹಾಗೆ ಹರಟುತ್ತಿದ್ದಾಳೆ (ಕೂಹಿ). [ಪೆಚ್ಚ + —ಇ₂]

**ಪೆಚ್ಚಿಸು** 'ಪೆರ್ಚಿಸು' ನೋ.

**ಪೆಚ್ಚು₁** 'ಪೆರ್ಚು₁' ನೋ.

**ಪೆಚ್ಚು₂** 'ಪೆರ್ಚು₂' ನೋ.

**ಪೆಚ್ಚು₃** (ಗು). ೧. ಏನೂ ತಿಳಿಯದ; ಮೂಢತನದಿಂದ ಕೂಡಿದ : ಏನೋ ಪೆಚ್ಚುಹುಡುಗಿ. ಕನಿಕರದಿಂದ ಹಾಗೆ ಆಡುತ್ತಾಳೆ (ಶಿರಾಕ. ೬೩). (ನಾ). ೨. ದಡ್ಡತನ; ತಿಳಿಗೇಡಿತನ : 'ಪೆಚ್ಚ', 'ಪೆಚ್ಚಿ' ಪರಾ. ೩. ಹುಚ್ಚು; ಮರುಳು : "ಪೆಚ್ಚು (ಪುಚ್ಚು) — ಪಿತ್ತ = ಧಾತುವಿಕಾರ" (ಕರ್ಣಕೋ. ೨೭). ೪. ಕಾಂತಿಹೀನವಾದುದು; ಮಂಕು : ನವಶಾಸ್ತ್ರ ದೊರೆಸಾವಿ ಇವಗಚ್ಚುಮಚ್ಚು ವೇದವೇದಾಂತಗಳೆ ಅವಾದಿರು ಪೆಚ್ಚು ! (ಗಹೊಕ. ೬೦-೦೨). ೫. ದಡ್ಡವ್ಯಕ್ತಿ; ತಿಳಿಗೇಡಿಯಾದ ವ್ಯಕ್ತಿ : ಅಯ್ಯೋ ಪೆಚ್ಚೆ . . . ನಿನಗೆ ಗೊತ್ತೇ ಆಗಿಲ್ಲ (ಪಪಿರಾ II, ೯೯೩); ಪೆಚ್ಚುಗಳು ಲಲಿತ, ನರಸಮ್ಮ (ಪಪಿರಾ. II, ೦೦೫೯).

**ಪೆಚ್ಚಾಗು** = ತಬ್ಬಿಬ್ಬಾಗು; ಕಂಗಾಲಾಗು; ಮಂಕು ಕವಿ : ಅವಳು ಮಾತನಾಡಿದ ಧಾಟಿಗೆ ಆನಂದ ಪೆಚ್ಚಾಗಿ ಕುಳಿತ (ದೂರಕ. ೬೭); ರಂಗನಾಥನು ಬಹಳ ಪೆಚ್ಚಾಗಿದ್ದನು (ಶಂಕಹೊ. ೭೬೩); ಪೆಚ್ಚಾಗಿ ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತಾರೆ (ಕಂಕಕೂ. ೩೯). **ಪೆಚ್ಚುಪೆಚ್ಚಾಗು** = ಪೆಚ್ಚಾಗು : ಏನೇ ಪೆಚ್ಚುಪೆಚ್ಚಾಗಿ ನಿಂತಿದ್ದೀಯಾ ? (ಕೂಗು. ೦೭). **ಪೆಚ್ಚುಬೀಳು** = ಪೆಚ್ಚಾಗು : ಹಿಂದೆ ಕೆಲವು ಸಲ ಇವರ ಮಾತಿನಂತೆ ನಡೆದು ಪೆಚ್ಚು ಬಿದ್ದಿದ್ದ ತಂಗವೇಲು ಆಗಡಿಯುವವನನ್ನು ಕೇಳುವುದಕ್ಕೆ ಹಿಂಜರಿದ (ಹುಹೂ. ೦೯೬). **ಪೆಚ್ಚು ಮಾಡು** = ಮಂಕು ಕವಿಸು; ತಬ್ಬಿಬ್ಬುಗೊಳಿಸು : ಭೋಳೆಮನುಷ್ಯರೆಂದು ನಮ್ಮ ನಂದಬಾಬುಗಳನ್ನು ಪೆಚ್ಚು ಮಾಡಿದ (ಕಾಂಹಿ. ೯೬). **ಪೆಚ್ಚೆನ್ನಿಸು** = ತಬ್ಬಿಬ್ಬಾಗು; ಮಂಕಾಗು : ಈ ನಾಮಕರಣದ ಪರಿಯನ್ನು ಕಾಣದವರ ಮಾತು ಹಾಗಿರಲಿ, ಕಂಡವರಿಗೂ ಸ್ವಲ್ಪ ಪೆಚ್ಚೆನ್ನಿಸುದೇಉ (ಪಚ್ಚುಕು. ೨೩೨).

**ಪೆಚ್ಚುಗೆ** 'ಪೆರ್ಚುಗೆ' ನೋ.

**ಪೆಚ್ಚುತನ** (ನಾ). ೧. ದಡ್ಡತನ; ಅವಿವೇಕ : ನಿನ್ನ ಪೆಚ್ಚುತನದಿಂದ ಕೆಲಸ ಹಾಳಾಯಿತು (ಕೂಹಿ). ೨. ಹುಚ್ಚುತನ : "ಉನ್ಮಾದ, ಚಿತ್ತವಿಭ್ರಮ . . . ಪೆಚ್ಚುತನವು" (ಸಿರ್ಕೋಪ. ೬೬). [ಪೆಚ್ಚು₃ + — ತನ]

**ಪೆಜ್ಜುಂಕ** 'ಪೆರ್ಜುಂಕ' ನೋ.

**ಪೆಜ್ಜೆ** 'ಪಜ್ಜೆ' ನೋ.

**ಪೆಜ್ಜೆಗೆಡು** 'ಪಜ್ಜೆಗೆಡು' ನೋ.

**ಪೆಜ್ಜೆವಿಡು** (ಕ್ರಿ). ದಾರಿ ಬಿಡು ; ಕ್ರಮವನ್ನು ಮೀರು : ನಾಡಿಗರ್ ದಿನದಿನಂ ಬೇಳ್ಪೊಂದು ಹವ್ಯಮನುಂಡುಂಡು ಸವಿಗೊಂಡ ಬೋಟೆಯ ರೆಕ್ಕಾನುಪೂರ್ವನೀ ನಿಚ್ಚವಲಿಯಡಿಯಂ ಪುರುಳ್ಗಾಣದೆ ಪಜ್ಜೆವಿಟ್ಟು . . . ತಡೆವರ್ಪರ್ (ರಾಚಾಕ್ಕ. ೫೫ ೩೦). [ಪಜ್ಜೆ (<ಪಜ್ಜೆ) + ಬಿಡು₁]

**ಪೆಟಲ್**, ಪೆಟಲ, ಪೆಟಲು, ಪೆಟ್ಟಲು, ಪೆಟ್ಲು (ನಾ). ೧. ಯುದ್ಧದಲ್ಲಿ ಮದ್ದನ್ನು ಸಿಡಿಸಲು ಉಪಯೋಗಿಸುತ್ತಿದ್ದ ಒಂದು ಬಗೆಯ ಸಾಧನ; ತುಪಾಕಿಯಂತಹ ಸಾಧನ : ಹೊಡಿದುವು ಪೆಟಲ್ಗಳಿಕ್ಕುವ ದಱಗಳಾಗಳೊಂದಾಡಿದುವು (ಕಚಪು. ೯೨-೩೨). **ಪೆಟಲ** : ೧. ಹಾರೆ ದಿರಿ ಕೊಱಿದು ಪೆಟಲ ತಿರುಗಣೆ ಬೀಸುವಲೆ ತಳಿಯ ಮರದ ಗೊಂದಣದ ಸಂವರಣೆಯಿಂದಾ ಕೋಂಟೆ ಕಣ್ಗೊಪ್ಪಿತು (ಸಚ್ಚು. ೮-೨೯), ಗುಂಡು ಪೆಟಲ ತಿರುಗಣೆ ಹಾಲದ ಕಱೆಗೆಂಡ . . . ದಾಣೆಯ ತಂಡತಂಡದಿಂದೆಸೆದುದಾ ಕೋಟೆ (ಶಂಕ್ರಕಾ. ೮-೦೦). **ಪೆಟಲು** : ೧. ಸುಡುವ ಪೆಟಲು ಕೊಡೆ ನೆಗೆವ ಗುಡಿ ಕೇತು ತೋರಣದಿಂದ ಪಾಯ್ದಳವೆಲ್ಲ ಸಡಗರಗೊಂಡುದು (ಕತಕ. ೯೩-೨೨); ಪೆಟಲು ಡವ್ವನೆ ಗುಂಡು ಸಿಡಿದು ಪೋಪಂತೆ (ಪ್ರಕುಶು. ೬-೦೬೬); ಸುಭಟರ ಹರಣಗೊಳುವ ಪೆಟಲುಗಳ ಕಱೆವ ಗುಂಡಿನ ಮಳೆಯುಱರೊಳಗೆಸೆದುದು (ಕಂಕಹಿ. ೦೬ ೩೬); ಛಟಿಛಟಿಲುಛಟಿಲೆಂದು ನಾದಿಸೆ ಪೆಟಲಿನಿಂ ಸಿಡಿವ . . . ಗುಂಡುಗಳು (ಅಕಂಠಾ. ೪-೨.೮). **ಪೆಟ್ಟಲು** : ೧. ಇಡುವ ಪೆಟ್ಟಲು ಕೊಡಬ್ಬುರಿಸುವ ಬಾಣ . . . ಹರಿಗೆಗಳ ಕಡುಗಲಿಭಟರು ಭೇರಿಯಿ-ದಾರ್ದು ರಿಪುಗಳ ತುಡುಕಿದರು (ಕಂಕಹಿ. ೩-೬೫). ೨. ಮಕ್ಕಳು ಆಟಕೆಯಾಗಿ ಬಳಸುವ ತುಪಾಕಿಯಂಥ ಒಂದು ಸಾಧನ: (೩). **ಪೆಟ್ಲು**: ೨. ಪೆಟ್ಲಗೆ ಗಜ ಒದಗಿಸುತ್ತಿದ್ದವರು ರಾಗಜ್ಜ (ತ್ರಕ. ೦೭); ಉಡುಪಿಯಲ್ಲಿ ಕೃಷ್ಣಜಯಂತಿಯಂದು ಯಾವ ಹುಡುಗರ ಕೈಯಲ್ಲಿ ನೋಡಿದರೂ ಪೆಟ್ಲು ಇರುತ್ತದೆ (ಕೂಹಿ) ೩. ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ; ಮಕ್ಕಳು ಈ ಕಾಯಿಯನ್ನು ತುಪಾಕಿಯಂತಿರುವ ಸಾಧನದಲ್ಲಿ ಹಾಕಿ 'ಟಪ್' ಎಂದು ಸದ್ದಾಗುವಂತೆ ಹೊಡೆಯುತ್ತಾರೆ : ಉಸುಮುನಿ, ಹೊಮ್ಮುಗುಳಿ, ಪೆಟ್ಲು, ಗೋರಿ (ಪಚ್ಚುಕು. ೨೩೯).

**ಪೆಟಲ ಕಂಡಿ** = ಯುದ್ಧಕಾಲದಲ್ಲಿ ಕೋಟೆಯಲ್ಲಿ ಮರೆಯಾಗಿ ನಿಂತು ತುಪಾಕಿಯನ್ನು ಹೊಡೆಯುವುದಕ್ಕಾಗಿ ಮಾಡಿಕೊಂಡಿರುವ ಕಂಡಿ : ಎಸುವಂಬುಗಂಡಿ ಪೆಟಲ ಕಂಡಿ . . . ಲಾಳವುಂಡಿಗೆ ಕಣ್ಗೆಸೆದವು

ಕುಮ್ಮಟದೊಳಗೆ (ಶಬರಶಂ. ೩೭-೩೨). **ಪೆಟಲ ಗುಂಡು** = ಪೆಟಲಿಗೆ ಹಾಕುವ ಗುಂಡು,–ಗೋಲಿ: ಒಂಗದಿಡುವ ಚಂಡು ಪೆಟಲ ಗುಂಡಿನ ಸಮುಭಂಗಿಯಂತೆದೆಗೆಡಿಸಿದುದು (ಶಬರಶಂ. ೩೧-೧೧೦); **ತೂಳಿಸು ಪೆಟಲ** ಗುಂಡುಗಳನೆಂಬಸುರರ ಕೋಳಾಹಳವೊಪ್ಪಿತು (ಶಂಪರ. ೦೯-೩). **ಪೆಟಲವರ್**, **ಪೆಟಲವರು** = ತುಪಾಕಿಯನ್ನು ಹಿಡಿದಿರುವವರು : ಪೆಟಲವರ್ ಥರೆ ಪಾಲೆಯೊಳ್ ಪರಿದರು (ರಕ್ಷ್ಮಣ. ೧-೨೧); ಸುತ್ತ ಬಳಸಿ ಪೆಟಲವರು ಕೋವಿಗಳನು ತೆತ್ತಿಸಲು (ಶಬರಶಂ. ೦೦-೩೩).

[ ದೇ. ॥ ತಮಿ. ಪೊಟ್ಟಿಲ್ ; ತುಳು. ಪೆಟ್ಲ, ಪೇಟ, ಪೇಟ್ಲ, ಪೇಟ್ಲೆ; ತೆಲು. ಪೆಟಲು, ಪೆಟಿಲು, ಪೆಟಾಲು, ಪೆಟ್ಲ ]

**ಪೆಟಲ** 'ಪೆಟಿಲ್' ನೋ.

**ಪೆಟಲಂಬು** (ನಾ). = ಪೆಟಿಲ್ ೧ : ಪೆಟಲ ಕೋವಿಯು ಬಂಡಿ ಪೆಟಲಂಬಿನ ಬಂಡಿ . . . ಕಟಕದೊಳೆಯ್ದಿದವು (ಶಬರಶಂ. ೪೦-೯೯); ಪೆಟಲಂಬು ಗುಂಡುಗಳಾಂತು ರಕ್ಕಸರು . . . ಕೋಂಟೆಗಾಳಗವನುಜ್ ಮಾಡುತಿರೆ (ಒಕ್ಕೃ. ೨ ೦೧-೨೦). [ಪೆಟಲ್ + ಅಂಬು]

**ಪೆಟಲು** 'ಪೆಟಲ್' ನೋ.

**ಪೆಟಲುಪ್ಪು**, ಪೆಟ್ಲುಪ್ಪು (ನಾ). ೧. ಒಂದು ಬಗೆಯ ಉಪ್ಪು; ಬಂದೂಕಿಗೆ ಹಾಕುವ ಮದ್ದು: ಪೆಟಲುಪ್ಪು ಗುಂಡು ದಸಿ ಬಿತ್ತರಿಸಲೀಂ (ಹನ್ಮಣ. ೩-೨೦): ಪೆಟಲ ಬೆಳೆಯ ಬಂಡಿ ಪೆಟಲುಪ್ಪಿನ ಬಂಡಿ ಕಟಕದೊಳೆ ಯ್ದಿದವು (ಶಬರಶಂ. ೪೦-೯೯). ೨. ಒಂದು ಬಗೆಯ ಉಪ್ಪು; ಕಡ್ಡುಪ್ಪು: ಪಿ[ಪೆ]ಟಲುಪ್ಪನ್ನು ಸಣ್ಣನಾಗಿ ಪುಡಿ ಮಾಡಿ . . . ನಿಂಬೇಹುಳಿಯನ್ನು ಬಿಟ್ಟು ಕಲಸಿಕೊಂಡು ನುಂಗುವುದು (ಒಪ್ಪಂ. ೯೯). **ಪೆಟ್ಲುಪ್ಪು**: ೧. ಉಣ್ಣೆ, ಪೆಟ್ಲುಪ್ಪು, ಎಣ್ಣೆಕಾಳುಗಳು, ಪರಿಮಳದ್ರವ್ಯಗಳು ಪರನಾಡುಗಳಿಗೆ ಪೋಗುವುವು (ಮುಂಶಿಬು. ೯-೦೩೭); ಈ ದಹನಕಾಲದಲ್ಲಿ ಅಂಗಾರ, ಗಂಧಕ, ಪೆಟ್ಲುಪ್ಪು ಮೊದಲಾದುವು ಆಮ್ಲಜನಿಲದೊಡನೆ ಸೇರಿ ಕೆಲವೊಂದು ಅನಿಲಗಳು ಉಂಟಾಗುವುವು (ಶಾಂಶ್ರ. II, ೦೧೧೯). ೨. "ಪಾಂಡುಜಃ —ಪೆಟ್ಲುಪ್ಪು" (೭ಶು. ೯೯); ಪೆಟ್ಲುಪ್ಪುಗ ೧ ತೂಕವಂ ನರಮೂತ್ರ ದೊಳರೆದು ಕೊಡಲು ಆ ಕ್ಷಣವೇ ಮೂತ್ರ ಬಿಡುವುದು (ಕಲ್ಯ. ೩೭೯).

[ ಪೆಟಲ್ + ಉಪ್ಪು₁./ತಮಿ. ಪೊಟ್ಟಲುಪ್ಪು; ತುಳು. ಪೆಟ್ಲುಪ್ಪು, ಪಟ್ಲುಪ್ಪು; ತೆಲು. ಪೆಟ್ಲುಪ್ಪು ]

**ಪೆಟಲುಯಂತ್ರ** (ನಾ). ಪೆಟಲನ್ನು ಅಳವಡಿಸುವ ಯಂತ್ರವಿಶೇಷ: ದಡಿ ದಸಿ ಕಪಣೆ ಕೈಕಲ್ಲೆತ್ತುಗುಂಡಾರ್ದಿಡುವ ಪೆಟಲುಯಂತ್ರ . . . ಎಸೆದವು (ಶಬರಶಂ. ೩೭. ೩೯). [ ಪೆಟಲು ( < ಪೆಟಲ್) + ಯಂತ್ರ ]

**ಪೆಟಲ್ಗೋವಿ** (ನಾ). =ಪೆಟಲ್ ೧: ನಾಸಿಕದಿರವು ಹೊಂಚುಂಪಕವೂ ಹೇಮದಿ ವಿರಚಿತದ ಪೆಟಲ್ಗೋವಿ ಕೇಳಲರಂಬನಾಡುತಿಹ ಪರಿಯೊಳೆ ಸದಿಹುದು (ಶಶಶಾ. ೭೬-೩೯). [ ಪೆಟಲ್ + ಕೋವಿ₁ ]

**ಪೆಟಾರಿ** 'ಪಿಟಾರಿ' ನೋ.

**ಪೆಟಾರಿಗೆ** 'ಪಿಟಾರಿ' ನೋ.

**ಪೆಟ್ಟ** 'ಪೆಂಟೆ₁' ನೋ.

**ಪೆಟ್ಟಣಿಗೆ** (ನಾ). ನೆಲವನ್ನು ಧಮ್ಮಸ್ಸು ಮಾಡಲು ಉಪಯೋಗಿಸುವ ಒಂದು ಬಗೆಯ ಮರದ ಸಾಧನ ; ಬಡಿಮಣೆ : "ಪೆಟ್ಟಣಗೆ [ಪಾಠಾಂ. ಕೇಚಣಗೆ] ಶರಪೀಠವಕ್ಕು" (ಮಂಗರಾ. ೪೭-೩). [ ? ]

**ಪೆಟ್ಟಮೆಟಿಸು**, ಹೆಟ್ಟವೆಳಸು (ಕ್ರಿ). ಹೆಂಟೆಯೊಡೆಯುವ ದಿಮ್ಮಿಗೆ ಕಟ್ಟಿ ಎಳೆಯಿಸು: ಬೆಟ್ಟೇಜ್ ಬೀಟ್ಟರಂ ಪೆಟ್ಟಮೆಟಿಸಿಕೊಳ್ವರಂ . . . ನೆರೆದು ನೋಡುವರಂತೆ (ರಪಾಶು. ೯-೨೩). **ಹೆಟ್ಟವೆಳಸು** : ಕಡಹ ಮೂಗನರಿದೆಳೆಹೂಟೆಯಂ ಕಟ್ಟಿ ಹೆಟ್ಟವೆಳಸುವ ಬಟ್ಟಬಯಲೊಳು (ಹಪಾ. ೯-೦೩). [ ಪೆಟ್ಟ (< ಪೆಂಟೆ₁) + < ಎಟಿಸು ]

**ಪೆಟ್ಟಮೆಟ್**, ಪೆಟ್ಟವೆಟ್ (ಕ್ರಿ). ೧. ಹೆಂಟೆ ಒಡೆಯುವ ದಿಮ್ಮಿಗೆ ಕಟ್ಟಿ ಎಳೆ ; ☞ ಇದನ್ನು ಅಪರಾಧಕ್ಕೆ ಶಿಕ್ಷೆಯಾಗಿ ಪ್ರಯೋಗಿಸು ತ್ತಿದ್ದರು : ಪಿಡಿ ಪಿಡಿ ಕಟ್ಟು ಪೆಟ್ಟಮೆಟ್ ಕೋಲಾಗಿ (ಪರಶು. ೩-೨೯); ಈ ಪುಸಿವನಂ ಕುಸಿಯೊತ್ತಿ ಬಟ್ಟೆಯೊಳ್ ಪೆಟ್ಟಮೆಟ್ದು ಬಳಸಿದ ದಸಿಯಡಳ್ಳಿಗೆಯಿಂ (ಸುಕುಮು. ೭. ೩ ೪). **ಪೆಟ್ಟವೆಟ್** : ೨. (ಆಲಂ) ನೆಲಸಮ ಮಾಡು ; ನಾಶಮಾಡು. ೧, ೨ : ಮೂವತ್ತುಱುಂ ಗುಣದಿಂ ಭಾವಜನಂ ಕಟ್ಟಿ ಪೆಟ್ಟವೆಟ್ [ ಪಾಠಾಂ. ಪಟ್ಟವೆಟ್, ಪೆಟ್ಟವೇಳ ] ದರ್ ವೃಷದಿಂ (ಶಂಬಾಪು. ೬-೦೯). [ ಪೆಟ್ಟ (< ಪೆಂಟೆ₁) + ಎಟ್₁ ]

**ಪೆಟ್ಟಯ**, ಪೆಟ್ಟಯ (ನಾ). ಪೆಟ್ಟಿಗೆ ; ಸಂದೂಕ : "ಪೇಟಾ, ಮಂಜೂಷಾ—ಈ ೨ ಪೆಟ್ಟಯಂ" (ಶಬ್ದಮ. ೩೨-೮೩೭). **ಪೆಟ್ಟಯ** : "ಪೆಟ್ಟಿಗೆ(ಯ)—ಪೇಟಕ (ಪಿಟಕ)" (ಕರ್ಣಕೋ. ೨೭). [<ಪ್ರಾ. ಪೇಡಿಆ./ತಮಿ. ಮಲ. ಪೆಟ್ಟಕಮ್; ತೆಲು. ಪೆಟ್ಟಯ; ಪರ್ಜಿ. ಪೆಟಿಯ]

**ಪೆಟ್ಟಲು** 'ಪೆಟಲ್' ನೋ.

**ಪೆಟ್ಟವೆಟ್** 'ಪೆಟ್ಟಮೆಟ್' ನೋ.

**ಪೆಟ್ಟಾರಿ** 'ಪಿಟಾರಿ' ನೋ.

**ಪೆಟ್ಟಿ₁** 'ಪೆಂಟೆ' ನೋ.

**ಪೆಟ್ಟಿ₂** (ನಾ). ಒಂದು ಬಗೆಯ ಪಕ್ಷಿ : ಪರಡೆ ಪಸುಂಬಂ ಪ್ಯೆನಂ ಎರಳೆ ನವಿಲ್ಕಾಗೆ ಪೆಟ್ಟಿ ಪೋದಗೆ ಕರಭಂ ಶರಕವಿವು ಪೋಗೆ ಶಾರುಂ ಬರೆಯೆಡಕ ಯಂದೂರಡಳೊಳ್ಪಂ (ಕೋಕೋಶ. ೦೨-೦೭).

[ ದೇ. ॥ ತೆಲು. ಕೋಲಾ. ಪಿಟ್ಟ; ಗೊಂಡಿ. ಪಿಟಿ, ಪಿಟ್ಟೆ, ಪಿಟ್ಟೇ ]

**ಪೆಟ್ಟಿ₃**, ಪೆಂಟೆ₄, ಪೆಟ್ಟೆ₃ (ನಾ). ೧. = ಪೆಟ್ಟಯ : ಮುಜಾತಂದ ಪೆಟ್ಟಿ[ಪಾಠಾಂ. ಪಚ್ಚಿ]ಯಂ . . . ಎನುತ ಸಖಿಯರು ನೆರೆದು ಪೆಟ್ಟಿಗೆಗಳು ಮನೊಡೆದು (ಶಂಬಿರ. ೦೩-೩೩); ಚಂದ್ರಾನನೆ ತೊಡವಿನ ಪೆಟ್ಟಿಯು ನಾನಂದದಿನೀಯಲ್ (ದಶಕು. ೬-೦೦೯): ಅವರ ಕನಸಿನೊಳು ಶಂಕರ ನಿರಿಸಲಾ ಪುಸ್ತಕವನೆದ್ದು ಪೆಟ್ಟಿಯೊಳ್ಕಂಡು (ಶಂಕೃಶ್ರ. ೭-೦೭-೬). ೨. (ಹಾವು ಗಳನ್ನಿಡುವ, ಬಿದಿರಿನಿಂದ ಮಾಡಿದ) ಬುಟ್ಟಿ : ಹೇಳಿಗೆ : ಪಾವು ಗಳಿಗಾದೊಡಂ ಸುಖವುಂಟೆ . . . ಜೋಗಿಗಳು ಮಂತ್ರದಿಂ ಪಿಡಿದು ಪೆಟ್ಟಿಯೊಳು ಮುದುಡಿ ತುಂಬಿ (ಏಕೃಶ್ರ. ೯-೨೩-೩೦). ೩. ಭರಣಿ ; ಕರಂಡ : ಅಲ್ಲಿರ್ದ ಪೆಟ್ಟಿಯೊಳಗಣ ಸಲ್ಲಲಿತಕ್ರಮುಕಪತ್ರಕರ್ಪೂರವಾನಾಂ ಬಲ್ಲನಿತಂ ಕೊಂಡು (ದಶಕು. ೬-೩೦೩). **ಪೆಂಟೆ₄** : ೪. ಧಾನ್ಯಗಳನ್ನು ತುಂಬುವ ಗಳಗೆ ; ತೊಂಬೆ ; ಮೂಡೆ : ಧಾನ್ಯವನ್ನು ಪೆಂಟೆಯಲ್ಲಿಟ್ಟರೆ ಹುಳು ಬೀಳುವುದಿಲ್ಲ (ಜಾರಿ). **ಪೆಟ್ಟೆ₂** : ೧. ಪರಿಪರಿಯ ವಸ್ತುಗಳಂ ತುಂಬಿರುವ ಪೆಟ್ಟಿಗಳ ಪೆಸರ ದುಕೂಲಗಳ ಪಿಂಡಿಗಳ್ (ಶಕ್ತಿಶ. ೯-೩೭-೩). ೪. ಹಗ ಪೆಟ್ಟಿ ಕಣಜದೊಳಿಹ ಬಹುಧಾನ್ಯವ ಬಗೆಯದೆ ಸೂಜೆಯ ಕೊಟ್ಟು . . . ಜನವಂಜಿ ಜಗುಳಿದರು (ಶಂಶಿ. ೦೦-೪೬).

[ < ಸಂ. ಪೇಟೀ./ತಮಿ. ಪೆಟ್ಟಿ, ಪೊಟ್ಟಿ : ಮಲ. ಪೆಟ್ಟಿ : ಕೊಡ. ಪೊಟ್ಟಿ; ತೆಲು. ಪೆಟ್ಟಿ ]

**ಪೆಟ್ಟಿಕಾಳಿ** (ನಾ). ಪೆಟ್ಟಿಗೆಗಳ ಸಾಲು,–ಪಂಕ್ತಿ : ಮುಂದೆ ಸುವರ್ಣದ ಪೆಟ್ಟಿಕಾಳಿಯುಗ್ಗಳಿಸಿ ಬರುತ್ತಮಿರೆ (ಶಂಬಿರ. ೦೩ ಸೂಕಶ):

[ <ಸಂ. ಪೇಟಿಕಾಲಿ ]

**ಪೆಟ್ಟಿಕ್ಕು** (ಕ್ರಿ). ಏಟು ಕೊಡು ; ಹೊಡೆ ; ಬಡಿ : ನೆತ್ತಿಯನು ನೀರ್ವಂದಿಗೆಯೊಳು ಟೊಂಗುಟೊಂಗೆನಲ್ಪೆಟ್ಟಿಕ್ಕಿ (ಮಾದೇಶ. ೨೩-೩೦).

[ ಪೆಟ್ಟು₂ + ಇಕ್ಕು ]

**ಪೆಟ್ಟಿಗೆ**, ಪೆಡಗೆ, ಪೆಡಿಗೆ, ಪೇಳಿಗೆ, ಪೇಳ್ಗೆ, ಹೆಡಗೆ, ಹೆಡಿಗೆ, ಹೇಳಿಗೆ (ನಾ). ೧. (ವಸ್ತುಗಳನ್ನು ತುಂಬಿಡಲು ಮಾಡಿದ, ಲೋಹ ಅಥವಾ ಮರದ) ಸಂದೂಕ : ಪೇಟಕಾ—ಪೆಟ್ಟಿಗೆ (ಕಮಶ. ೨೩೩ ಶ್ರಯೋ) ;

**ಪೆಣ್ಗೊಸುಮೆಯ್ಯುಮಮ್__ಅರ್ಧನಾರೀಶ್ವರ** : ಶಿವ : ಪೆಣ್ಗೊಸುಮೆಯ್ಯುಮಂ ಮುಳಿದು ತಾನೆಮ್ಮುಮಂ ಕೊಲಬುಪ್ಪುದು ಪಸನಾಯ್ತು (ಶಂಪು. ೯೭-೦೯). **ಹೆಂಗುಸುಗಳು (ಬಹುವ)** : ಹೆಂಗುಸುಗಳಾವ್ ಬಲ್ಲಿವೇ (ಕೂಡಂ. ೪-೦೦-೨೬). [ಪೆಣ್+ಕೂಸು]

**ಪೆಣ್ಗೊಳಿ** (ನಾ). ಯಾವಾಗಲೂ ಹೆಂಗಸರೊಡನೆಯೇ ವ್ಯವಹರಿಸುವವನು ; ಹೆಣ್ಣಿಗ : ಪೇಡಿಯು ಬತ್ತೀ ದ್ರುಪದನ ನೋಡಿದೆ ಪೆಣ್ಗೊಳಿ ಮತ್ಸ್ಯನುಂ ಪಾಂಡವರೊಳ್ ಕೂಡಿ ಬರೆ ನಚ್ಚಿದಂ ಹರಿ ನಾದಾವಿಗಳಲ್ಲ ಪಗ್ಗಿದೊಳ್ಳಿಯ ಓದಂ (ಸುಧಾಪು. ೧೧-೧೦೦). 'ಪೇಕುಳಿ' ನೋ. [ಪೆಣ್ + –ಗೂಳ್ಳ (< –ಕುಳ್ಳ)]

**ಪೆಣ್ಗೊಲೆ**, ಪೆಂಗೊಲೆ, ಹೆಂಗೊಲೆ (ನಾ). ಹೆಂಗಸಿನ ವಧೆ; ಸ್ತ್ರೀ ಹತ್ಯೆ : ಅಕಟೆಮ್ಮುಮಂ ಶರಣ್ಗೊಕ್ಕುಮಂ ಕಂಡು ನಾಚಿಕೆಯಾಲಾ ಪೆಣ್ಗೊಲೆ ಘಟಗ್ಗೊಂದು ತಿಳಿದು ಪೇಸಿಕೆಯುಳ್ಳದಿನಿತುಮಂ ಕೈಗೈದೆ (ಶಂಪು. ೨೦-೬೭) ; ಪೆಣ್ಗೊಲೆಗಳುಂಬುವೆನೆಂದು ಪಾರ್ಥನು (ಕೃಷ್ಣಕಾ. ೧೪-೦೭). **ಪೆಂಗೊಲೆ** : ಕೋಪವನುರುಪದಿಂ ಪೆಂಗೊಲೆಯುಮ ನಾಗಡಿಸಿ (ಪಂಪಾರಾ. ೩-೬೧೭). 'ಪೆಂಗೊಲೆಯು' ಪಠಾ. **ಹೆಂಗೊಲೆ** : ಹೆಂಗೊಲೆಯುಮನು ಕಂಡು ಸುಮ್ಮನಿರುವುದಾವಂಗವು (ಶಬರಂಕಾ. ೦೯-೩೩) ; ಹೆಂಗೊಲೆ ವೀರರಿಗೆ ಪೈಸಿಯೆ (ವಿರಾಟ. ೧೦-೨-೦೦) ; ಎಲೆ ಪಾರ್ಥ ಹೆಂಗೊಲೆಗೆ ಹೇಸದೆ ಮಹಾಸ್ತ್ರದುಂ ತಾಡುವೆ ನೀಂ (ಕೃಷ್ಣಕಾ. ೧೪-೦೩). [ಪೆಣ್ + ಕೊಲ್ಲೆ]

**ಪೆಣ್ಗೊಳ್** (ಕ್ರಿ). ಹೆಣ್ಣನ್ನು ಪಡೆ, – ಹೊಂದು : ಸಾಣೆ ಕೂರ್ಪೇಜವುಂ ಸ್ವತೇಜುವಂತೆಪ್ಪೊಳ್ ಪಣಾಪೊಲ್ಪಾರ್ಥ ಘನದೊಳ್ಪು ಪೆಣ್ಗೊಂಬ ಜಾಣಗಂಡರ್ಗೆ ಜಯಮಕ್ಕೆ (ಶಶಿ. ೬-೦೩೪ ೩೭೨). [ಪೆಣ್ + ಕೊಳ್]

**ಪೆಣ್ಬನ** (ನಾ). ಹೆಂಗಸರ ಸಮೂಹ, – ಗುಂಪು : ಬಾಲಿನಾತೆಸೆದನು ಸುಜನರ ಕಣ್ಗೆ ಪೂಗೋಲನಂದದಿ ಪೆಣ್ಬನಕೆ (ಮೋಹನತ. ೦೨-೩೦). [ಪೆಣ್ + ಜನ]

**ಪೆಣ್ಣನ್ನ**, ಪೆಣ್ಣುಜನ್ಮ, ಹೆಣ್ಣುಜನ್ಮ (ನಾ). ಹೆಣ್ಣಾಗಿ ಹುಟ್ಟಿರುವುದು : ಹೆಣ್ಣಾಗಿ ಇರುವಿಕೆ : ಈತನೊಳೊಡಗೂಡದಿದ್ದರೆ ಪೆಣ್ಣನ್ನ ಪೇತಜಮ (ಶೂಷಶ. ೦೬-೬೪). **ಪೆಣ್ಣುಜನ್ಮ** : ಕಷ್ಟವೀ ಸ್ತ್ರೀವೇಷ ಮುಕ್ತಿಯಿಲ್ಲವರೇನು ಶಿಷ್ಟಾತ್ಮಭೋಗದೋಡಪರೆ ನಷ್ಟ ಪಾಳ್ದಿಪ ಪೆಣ್ಣುಜನ್ಮವನೆಂದು ಸಪ್ಪಳಿಸು ಸತಿಯರಾಡಿದರು (ಪಡ. ೦೬-೩೯). **ಹೆಣ್ಣುಜನ್ಮ** : ಸೂಳೆಯಾದರೂ ನಾಚಿಕೆ, ಹೆಣ್ಣುಜನ್ಮದ ಹುಟ್ಟುಗುಣ (ಪಬಿಶಾ. ೯೯). [ಪೆಣ್ + ಜನ್ಮ]

**ಪೆಣ್ಣಊರ್** (ನಾ). ಒಂದು ಸ್ಥಳದ ಹೆಸರು : ಕೊಂಗುನಾಡ ವಿಷಯ ಪೆಣ್ಣಊರ್ನಾರ್ಯಾವಂಗ್ರಾಮದ (ಕೃಷ್ಣಂ. ೦೯೪೨, ೩೦-೪೩ ; ೯೧೦). [ ? + ಊರ್]

**ಪೆಣ್ಣಂಚೆ**, ಹೆಣ್ಣಂಚೆ (ನಾ). ಹೆಣ್ಣುಹಂಸ ; ಹಂಸೆ : ಅಗಲೆಪ್ಪೋದ ಹಂಸನನಜಸಲ್ ಪಡೆದೆಳಸುವ ಪೆಣ್ಣಂಚೆಯ ಪದ ಕೊರಲಿಂಚರದ ಸರವು ಸವಿ ಕಿವಿಗಿದಜ್ಞೊಳ್ (ಶಂಶಶಾ. ೩-೩೬) : ತಾವರೆವಂಡಿನ ತನಿಸೊಕ್ಕಿಂ ಸೊಕ್ಕಿದ ಪೆಣ್ಣಂಚೆಗಳಿಂಚರಂಗಳ್ (ಕಾದಂಬ. ೦೦೬); ಅಗಲ್ದ ಪೆಣ್ಣಂಚೆಯುಂ . . . ಅಜಸಿ ಪೋಗಿ (ಗಿರಿಜ. ೩-೦೦೩ ೫). **ಹೆಣ್ಣಂಚೆ** : "ಮರಾಳ, ಮರಾಳು, ವರಟಾ__ಈ ೩ ಹೆಣ್ಣಂಚೆ" (ಕರಾಯು. ೪೨-೯೬). [ ಪೆಣ್ + ಅಂಚೆ ]

**ಪೆಣ್ಣಂದೂರ್** (ನಾ). ಒಂದು ಸ್ಥಳದ ಹೆಸರು : ಪೆಣ್ಣನ್ದೂರ್ × × ಕೀರ್ತ್ತಣ್ಣನ್ . . . ಎಱುದು ವಿಟ್ಟೋರ್ (ಎಕ. IX, ದೇವಪ. ೬೯-೩ ; ತಂ. ೭೯೦). [? + ಊರ್]

**ಪೆಣ್ಣಗಲ್ಕೆ** (ನಾ). ಹೆಣ್ಣಿನ ಅಗಲಿಕೆ, – ವಿಯೋಗ ; ಪ್ರಿಯೆಯಿಂದ ಆದ ಅಗಲಿಕೆ : ಇದಿರೊಳಿರ್ದ ಸತಿಯುಂ ಕಂಡು ಪಾ ತರುಣಿ ಹಾಯೆಂದು ಪಲುಬಿದಂ ಭೃಗು ಪೆಣ್ಣಗಲ್ಕೆಯೊಂತಪ್ಪದೋ ಭ್ರಮೆಗೋಳಿ ಸದೇಂ ಬಡುವುದೆ (ಶಂಪು. ೨೦-೨೯). [ಪೆಣ್ + ಅಗಲ್ಕೆ]

**ಪೆಣ್ಣಗೆ**, ಹೆಣ್ಣಗೆ (ನಾ). ಹೆಣ್ಣಿನ ನಗು; ಮೆಲುನಗೆ : ಪೊಳ್ಪರೆಯ ಪೆಣ್ಣಗೆಯು ಚಿಮ್ಮಿವಳ್ ಬಾಸ್ಗೆ (ಕಾಂಚನ. ೬೬-೦೦೩). **ಹೆಣ್ಣಗೆ** : ಹೆಣ್ಣಗೆಯು ನಯನದಿ ಭವಿಷ್ಯವಂ ಶಿವಿವ ಪುರುಷನ,ವೃಷ್ಟಿ, ಹೆಣ್ಣದೆಯ ಪಾರ್ಪಪದಿ ಗಂಡಿನ ಮನೋದಾರ್ಢ್ಯ (ಗೂಡ್ಕೋ. ೪೦-೬೪). [ಪೆಣ್ + ನಗೆ]

**ಪೆಣ್ಣರಿ** (ನಾ). ನರಿಯ ಜಾತಿಯಲ್ಲಿ ಹೆಣ್ಣು : ಮುನ್ನಿನ ಜನ್ಮಾಂತರ ದತ್ತಿಗೆಯುಪ್ಪ ಪೆಣ್ಣರಿಯಿಂದಂ . . . ಇರುಳುಂ ಪಗಲುಂ ತಿನೆವಡು ತಿರ್ದನಾಗಿಯುಂ (ವಡ್ಡಾರಾ. ೨-೦). [ಪೆಣ್ + ನರಿ]

**ಪೆಣ್ಣಾನೆ**, ಹೆಣ್ಣಾನೆ (ನಾ). ಆನೆಯ ಜಾತಿಯಲ್ಲಿ ಹೆಣ್ಣು ; ಪಿಡಿ : "ವಶಾ ಕರಿಣಿ ಧೇಣಾ ಕರೇಣಾ ಪಿಡಿಯೆನಲು ಪೆಣ್ಣಾನೆ" (ಮುಗನಾ. ೯೬-೦); ವಾಜಿವರ್ಗಂಕಿನೆಗಳ ಕಾಂಚೀವಾಮುದಿಂದೆಸೆವ ಪೆಣ್ಣಾನೆಗಳ ಮೇಲೆ ಬರುತಿರ್ಪವರು[ಪಾಠಾ. ಪೆಣ್ಣಾನೆಗಳ ಮೇಲ್ಗೆತಂದರು] (ಕೃಷ್ಣಕಾ. ೦೬-೩). **ಹೆಣ್ಣಾನೆ** : "ಕರಿಣಿ__ಹೆಣ್ಣಾನೆ" (ಅಕಾಂ. ೩-೦೭); ಬಸೆ-ನೆಣ, ಹೆಣ್ಣಾನೆ, ಗೊಡ್ಡಾಕಳು (ಕವಿತ. ೨೩೮ ೦೩೪); ಇಂದ್ರನೈರಾವತವು ಹೆಣ್ಣಾನೆಗಳ ಹಿಂಡುಗಳಗೆಲ್ಲ ಅರಸನು ಆಗಿ (ತ್ರಿಗಂ. ೬೦-೯). [ಪೆಣ್ + ಆನೆ]

**ಪೆಣ್ಣಾಯ್**, ಹೆಣ್ಣಾಯಿ, ಹೆಣ್ಣುನಾಯಿ (ನಾ). ನಾಯಿಯ ಜಾತಿಯಲ್ಲಿ ಹೆಣ್ಣು ; ಶುನಕಿ : "ಶುನಕೀ, ಸರಮಾ__ಈ ೨ ಪೆಣ್ಣಾಯ್ (ಹೆಣ್ಣುನಾಯಿ)" (ಕರಾಯು. ೯೭-೦೨೭); ಪೆಣ್ಣಾಯಾಗಿ ಪುಟ್ಟಿ ಸತ್ತು (ವಡ್ಡಾರಾ. ೦೬-೫); ಸತ್ತಲ್ಲಿ ನಿಷಾದನ ಮನೆಯೊಳ್ಪೆಣ್ಣಾಯಾಯ್ತು (ಸಮಯಪರ. ೩-೦೯). **ಹೆಣ್ಣಾಯಿ** : "ನಾಯಿಸಾ = ಹೆಣ್ಣಾಯಿ" (ಕಾಶಶ. ೦೨೦). **ಹೆಣ್ಣುನಾಯಿ** : "ಹೆಣ್ಣುನಾಯಿ–ಶುನಿ, ಸರಮೆ" (ಕಾಶಶಾ. ೬). [ಪೆಣ್ + ನಾಯ್]

**ಪೆಣ್ಣಾಳ್**, ಪೆಣ್ಣಾಳ್, ಹೆಣ್ಣಾಳು (ನಾ). ೧. ಹೆಂಗಸು; ಹೆಣ್ಣು : ಆ ಅಬ್ಬೆಯಲ್ಲದ ಪೆಡಿಗಳ್ಗೆ, ಪೆಣ್ಣಾಳ್ಗೆ ! (ಅಕ್ಕಾ. ೨೩-೩೬೦). **ಹೆಣ್ಣಾಳ್** : ೧. ಪೆಣ್ಣಾಳ್ಗಳಿನ್ನದೆ ತಜದಿಕ್ಕಿ ತೆಗೆತಂದು ಚಣ್ಣನನೆಮಗೊಪ್ಪಿಸುವ (ವಿಜಯತ. ೬೬-೬೦). **ಹೆಣ್ಣಾಳು** : ೨. ಕೂಲಿ ಕೆಲಸ ಮಾಡುವ ಹೆಂಗಸು : ಹೆಣ್ಣಾಳು ಗಂಡಾಳು ಕಬಟ್ಟಗ[ಳು] ಸಹ (ಶಾಸನ. IX-ii, ೪೧೬ ೧೧; 1577); ಮುಂಗವಡದ ಗುಂಗುರುಹಣೆ ಗೂವಾಳ್ಳ ಹೆಣ್ಣಾಳುಗಳು . . . ಕಾಣುತ್ತಿದ್ದರು (ಕೃಸು. ೩೦೯). [ಪೆಣ್ + ಆಳ್]

**ಪೆಣ್ಣಿಲಿ**, ಹೆಣ್ಣಿಲಿ (ನಾ). ಇಲಿಯ ಜಾತಿಯಲ್ಲಿ ಹೆಣ್ಣು ; ಮೂಷಿಕೆ : ಅಬರದೊಳಗೊಬ್ಬ ಪರ್ದಿನ ಬಾಯಿಂದಂ ಬಿರ್ದು ಬರ್ದುರಂಕಿದೊಂದು ಪೆಣ್ಣಿಲಿಯಂ ಕಂಡು (ಪ.ತಂ. ೨೩೬-೬). **ಹೆಣ್ಣಿಲಿ** : ಗಂಡಿಲಿ, ಹೆಣ್ಣಿಲಿ, ಮರಿಯಿಲಿ, ಹುಡುಗಿಲಿ, ಎಲ್ಲಾ ಬಂದುವು ಓಡೋಡಿ ಹೋಗಿಯು ಬಾರಿಸೆ ಕಿವಿದಿಂ ! (ಕಿಶೋರ. ೦೦-೨೫೦). [ಪೆಣ್ + ಇಲಿ]

**ಪೆಣ್ಣು** 'ಪೆಣ್' ನೋ.

**ಪೆಣ್ಣುಗ**, ಹೆಣ್ಣುಗ (ನಾ). ೧. ಹೆಂಗಸಿನೊಂದಿಗೆ ವ್ಯವಹರಿಸುವವನು. ೨. ಹೆಣ್ಣಿನಲ್ಲಿ ಆಸಕ್ತಿಯಿರುವವನು : ಪೆಣ್ಗೊಳ್ ಪ್ರವಣಂ ವ್ಯಾಪೃತಂ ಪೇಣ್, ಪೆಣ್ಣುಗಂ (ಶಬ್ದಾನು. ೯೨೪ ಪ್ರಯೋ); "ಸ್ತ್ರೀಭೋಗದಲ್ಲಿ ಚತುರನಾದವನು" (ಶ್ರಶಕ್ರ). ೩. "ನಪುಂಸಕ" (ಶ್ರಶಕ್ರ). **ಹೆಣ್ಣುಗ** : ೧. ಉಗ ಪ್ರತ್ಯಯಾಕ್ಕೆ–ನಾರುಗಂ . . . ಹೆಣ್ಣುಗಂ,

ಮಣ್ಣುಗಂ (ಕವಿರಾ. ೨೧೪ ಕ್ರಡೋ). ೩. "ನಪುಂಸಂ, ನಪುಂಸಕಂ, ಈ ೨ ಪೆಣ್ಣುಗಂ" (ಶಾಕಕೃ. ೩೬೩). ೪. ತಲೆಹಿಡುಕ; ಕುಂಟಣಿ : (?). [ಪೆಣ್ + — ಉಗ]

**ಪೆಣ್ಣುಜನ್ನ** 'ಪೆಣ್ಜನ್ನ' ನೋ.

**ಪೆಣ್ಣುಡೆ, ಹೆಣ್ಣುಡೆ** (ನಾ). ಹೆಣ್ಣಿನ ವೇಷ,–ವಸ್ತ್ರ,–ಉಡುಗೆ : ಸೀರನೋಡಿ ಪುಗೆ ಪೆಣ್ಣುಡೆಯುಟ್ಟರೆ ಪುತ್ರನೇಜ಼ ಕೊಲ್ಲದ ತುಟಲೆಲಾಳ್ತ ನಕ್ಕ ಸಮನಾಪನೊ ಸಾಹಸಭೀಮಭೂಪನೊಳ್ (ಗದಾಯು. ೧–೨೨): ಪೆಣ್ಣುಡೆಯನಾಟಟು ಬಾಟ್ಟ ಶಿಖಂಡಿ ಮುಂ ನ್ನಿಟ್ಟಿನರ್ಜುನನ ಸಾರಥಿ (ಕಾವ್ಯಾವ. ೩೬೨): ಪೆಣ್ಣುಡೆಯುಟ್ಟು ಬೈತಲೆಯನೊಳ್ಪಿನಲೊತ್ತಿ . . . ತಳೆದಂ ಸತಿರೂಪವನುರ್ವಿಪಾ (ಬಕಚ. ೧೧–೬೦). **ಹೆಣ್ಣುಡೆ** : ಬಳೆಗಳನ್ನು ನೆಗ್ಗಿ, ಹೆಣ್ಣುಡೆಯನ್ನು ತೊರೆದು, ವೀರವೇಷವನ್ನು ಧರಿಸಿದನು (ಕರಾಕ. ೯೦). [ಪೆಣ್ + ಉಡೆ]

**ಪೆಣ್ಣುವಿಂಡು** 'ಪೆಣ್ವಿಂಡು' ನೋ.

**ಪೆಣ್ಣೆ, ಪೆನ್ನ, ಹೆನ್ನೆ** (ನಾ). ಒಂದು ನದಿಯ ಹೆಸರು; ಆಂಧ್ರ ಪ್ರದೇಶದ ನೆಲ್ಲೂರಿನ ಬಳಿ ಸಮುದ್ರವನ್ನು ಸೇರುವ ಪೆನ್ನಾರ್ ನದಿ: ಪಿನಾಕಿನಿ : ಪಟ್ಟಣ್ಣೆ ಪೆಣ್ಣೆನದೀ ಪೂರ್ವದಿಶಾಂ ಕ್ಷೇತ್ರಂ (ಎಕ. IX. ದೊಡ್ಡ. ೬೬–೯೮; 517): ಪೆಣ್ಣೆನದೀ ಪೂರ್ವ್ವತಟೇ (ಎಕ. VI. ತುರುವೆಗೆ. ೩೬–೯೨; 749). ಪೆನ್ನ : ಪೆನ್ನನದೀ ಪೂರ್ವ್ವದಿಶಾಂ ಕ್ಷೇತ್ರಂ (ಇಕ. V. ೧೬೯–೧೯; 513). ಹೆನ್ನೆ₁ : ಮೂಡಲು ಕೊಟ್ಟನೂಜಿ ಪೊಲವೇರೆ ಹೆ(ಂ)ನ್ನೆಯ ತೊಱೆ (ಶಾಇಇ. IX–1. ೩೫೭–೨೦; 1828): ದೇವಂಗಳಿಗೆಲ್ಲಾ ಉದಕವೇ ಪ್ರಾಣವಾಗಿ ಪೆನುಗೊಣ್ಡೆಗೆ ಪೆನ್ನೆಯ ನದಿಯನೂ ತರಬೇಕೆನ್ದು (ಎಕ. X. ಗೌರೀಬಿ. ೬.೧೨; 1888). [ದೇ. ॥ ತಮಿ. ಪೆಣ್ಣೈ; ತೆಲು. ಪೆನ್ನ]

**ಪೆಣ್ಣೆಗಡಂಗ** (ನಾ). ಒಂದು ಸ್ಥಳದ ಹೆಸರು : ಸರ್ಬ್ಬನಾನ್ದಿದೇವರ್ಗ್ಗೆ ಪೆಣ್ಣೆಗಡಙ್ಗದ ಸತ್ಯವಾಕ್ಯಜಿನಾಲಯಕ್ಕೆ . . . ಕೊಟ್ಟರ್ (ಇಕ. VI. ೦೦೩–೩; 887). [ಪೆಣ್ಣೆ + ಕಡಂಗ₁ (< ಕಡಂಗ್ಕು)]

**ಪೆಣ್ಣೆರ್ದೆ, ಹೆಣ್ಣೆದೆ** (ನಾ). (ಆಲಂ) ಹೆದರುವ ಮನಸ್ಸು; ಅಳ್ಳೆದೆ. **ಹೆಣ್ಣೆದೆ** : ಅಳ್ಳೆದೆಯ ಹೆಣ್ಣು ಹೆದರಿ, ಹೆಣ್ಣೆದೆಯ ಗಂಡನನ್ನೊರಗಿ ದಂಡಿತ್ತು ಪಾರ್ವತಿ, ಕಿಟ್ಟಯ್ಯನನ್ನೊರಗಿದ್ದ ಆ ದೃಶ್ಯ ! (ಕಿಕಾ. ೧೫೩). **ಪೆಣ್ಣೆರ್ದೆಯಂ** = ಅಳ್ಳೆದೆಯವನು; ಅಂಜುಬುರುಕ : ನೀನ್ ಸ್ಯೂಸನಾ ತಜಿಸಲವಿಸಲ್ಕಿಂದೆ, ಪೆಣ್ಣೆರ್ದೆಯನಾದಪನ್ ಎಂದು . . . ಕನಸು ಕಾಣ್ಬುದುಂ ಬೇಡ ನೀನ್ (ಜಿಕ್ಷೆಕ್ಷ. ೩೩–೧೬೮೬). [ಪೆಣ್ + ಎರ್ದೆ]

**ಪೆಣ್ಣೊಡಲ್, ಹೆಣ್ಣೊಡಲ್** (ನಾ). ೧. ಹೆಣ್ಣಿನ ದೇಹ,–ಶರೀರ. ೨. (ಆಲಂ) ಹೆಣ್ಣಿನ ಮನಸು ; ಹೆಂಗರುಳು: ಪೆಣ್ಣೊಡಲಲ್ಲೆ ಎಂತು ಸೈರಿಪೆಂ (ಅಕಮಾಕ್ಷ. ೩೩–೨೨). **ಹೆಣ್ಣೊಡಲ್** : ೧. 'ಹೆಣ್ಣೊಡಲ' ಪರಾ. [ಪೆಣ್ + ಒಡಲ್]

**ಪೆಣ್ತನ, ಹೆಣ್ಣುತನ** (ನಾ). ೧. ಹೆಣ್ಣಾಗಿರುವಿಕೆ : 'ಪೆಣ್ತನಂಗೊಳಿಸು' ಪರಾ. ೨. ಹೆಣ್ಣಿನ ಸ್ವಭಾವ,–ರೀತಿ ; ತನಕ್ಕೆ–ಕಲಿತನಂ . . . ಪೆಣ್ತನಂ (ಕವಿರಾ. ೨೦೦ ಕ್ರಡೋ); ಕವಿತಾವನಿತೆಯ ಸಂಗಕೆ ಪೆಣ್ತನ ಸವಿಯುಲ್ಲವೆಂದಾ ವಾಣಿ ತವಕದಿಂ ಗಂಡುರೂಪಾಂತಳ್ (ಕುರಾಪಾ. ೦–೩೯): ಪೆಣ್ತನಕೆ ತಗುವಂತೆ ಮೇಣ್ ಚೆಲ್ವುರಳುವಂತೆನ್ನ ಪಸದನಂಗೈ (ಕಶ್ಯಾಂಗ. ೦೯–೮೨). **ಹೆಣ್ಣುತನ** : ಈ ಹೆಣ್ಣುಮಗುವಿನಲಿ . . . ಉಳಿದಿಹುದು, ಚೆಲುವಾದ, ನಿರ್ಮಲದ ಹೆಣ್ಣುತನವೊಂದು ! (ಇಂಗೀತ. ೬೨–೬) ; ಹರಿಯದ ಹೆಣ್ಣು ಚಾವುರೆ ಹೆಣ್ಣುತನದ ಆ ಬನಿಯನ್ನು, ಚೆಲುವನ್ನು ತಳೆಯುತ್ತಿದ್ದಳು (ಕಕಿ. ೩೬); ಹೆಣ್ಣುತನ ಶಿವನೆ ಜಗದಾಗ ಕೈಮುಗಿವೆ ಕಂದಯ್ಯ ಕೊಟ್ಟು ಕಡಿಮಾಡು (ಜಕಗೀ. ೩೯). [ಪೆಣ್ + — ತನ]

**ಪೆಣ್ತನಂಗೊಳಿಸು** (ಕ್ರಿ). ಹೆಣ್ಣಾಗಿರುವಂತೆ ಮಾಡು : ಧರಣಿಯೊಳಾನೆ ದಿವ್ಯಪುರುಷೋತ್ತಮನೆಂಬ ಸಗರ್ವಶೌರಿಯಂ ಭರದೊಳೆ ಪೆಣ್ತನಂಗೊಳಿಸಿದಂ ಕೃತುಪಕ್ಷಂ (ಪ್ರಶಂ. ೩೬–೧೦೦). [ಪೆಣ್ತನ + ಕೊಳ್₁ + — ಇಸು₁]

**ಪೆಣ್ದಂಡ** (ನಾ). ಹೆಂಗಸರ ಗುಂಪು ; ಸ್ತ್ರೀಯರ ಸಮೂಹ : ತ್ರಿದಶೇಂದ್ರಂ . . . ಅಟ್ಯರ್ತ್ಥ ನಿರಂತರಂ ಸಮುಜಿದಂ ಪೆಣ್ದಂಡವಿಂದ್ರಾಣಿಯೆಂದುದನುದೆಂದೆಡೆಯೂಡುತಿರ್ಪುದೆನೆ ಮತ್ತೇನೆಂದದಂ ಬಣ್ಣಿಪೆಂ (ಅಂಕ್ರಿ. ೬–೨೨). [ಪೆಣ್ + ತಂಡ]

**ಪೆಣ್ದಂತಿ** (ನಾ). ಹೆಣ್ಣು ಆನೆ ; ಪಿಡಿ : "ಪೆಣ್ದಂತಿ . . . ಭೂಜವಿಶೇಷ ಕರೇಣುವಾಚಕಂ" (ಜಾನಾರ. ೦೨೦). [ಪೆಣ್ + ದಂತಿ]

**ಪೆಣ್ದಳ** (ನಾ). ಹೆಂಗಸರ ಪಡೆ ; ಸ್ತ್ರೀಸೈನ್ಯ : ಲೀಲೆ ವಿಂಗೆ ಪೆಣ್ದಳಂ ಬಂದು ವಿಜಯನ ಪಡೆಯ ಮೇಲೆ ಬಿದ್ದುದು (ಕ್ಕಜಿಕಾ. ೧೬.೯). [ಪೆಣ್ + ದಳ್ಳ (= ದಲ)]

**ಪೆಣ್ದುಂಬಿ** (ನಾ). ತುಂಬಿಯ ಜಾತಿಯಲ್ಲಿ ಹೆಣ್ಣು ; ಭ್ರಮರಿ : ಆ ಪೆಣ್ದುಂಬಿಗಳ ಸರಮನಿಕ್ಕಿ ತಣಿಂಬುತ್ತುಂ ಬಂದುದು ಪ್ರಭಾತಸಮೀರಂ (ಕಂಕಚ. ೧೨–೦೦೩); ಬಂಡುಂಬ ಪೆಣ್ದುಂಬಿ ಸುಸ್ವರದಿಂದೋದುವ ಕೀರಮಾರ ಬಗೆಗಂ ಸಮ್ಮೋದನುಂ ಮಾಡವೇ (ಕುಕುಚು. ೧–೩೩) : ಆಗಳಿ ಬಾದ ಮುನಿವೃಂದಾರಕನ ಬರವಿನೊಸಗೆಯೊಳ್ ಮಂಗಳಂಬಾಡು ಪಂತಿನಿಯ ದನಿಯಂ ನೆರೆದು ನೊರೆವ ಪೆಣ್ದುಂಬಿಗಳುಂ (ಕಂತ್ರಪು. ೨–೦೭೩). [ಪೆಣ್ + ತುಂಬಿ₁]

**ಪೆಣ್ದೊಡವು** (ನಾ). ಹೆಂಗಸು ಧರಿಸುವ ಒಡವೆ ; ಹೆಣ್ಣಿನ ಆಭರಣ : ಪರ್ನ್ನದಾ ಪಡೆ ಒಡವೆ ? ಅದರೊಡವೆ ಪೆಣ್ದೊಡವೆ ? (ಹಾರಶು. ६–೦೩೦). [ಪೆಣ್ + ತೊಡವು]

**ಪೆಣ್ದೊಡೆಯ** (ನಾ). ಅರ್ಧದೇಹ ಹೆಣ್ಣಾಗಿರುವವನು ; ಅರ್ಧನಾರೀಶ್ವರ ; ಶಿವ : "ಎಣ್ಮಯ್ಯಂ . . . ಪೆಣ್ದೊಡೆಯುಂ, ಈಸು . . . ಅಯ್ಮೊಗಂ – ಈ ೩೩ ಈಶ್ವರಂಗೆ ಪೆಸರ್" (ಕಕಾಕ. ೯೬–೧): "ಎಳದೇರ . . . ಪೆಣ್ದೊಡೆಯ ಮಿಡ ಈಸರಂ ದೇಸಿಗಂ" (ಕಶ್ಮಿಮಂ. ೩). [ಪೆಣ್ + ತೊಡೆ₂ + — ಅ₇]

**ಪೆಣ್ದೊರೆ** (ನಾ). ಹೆಣ್ಣುನದಿ,–ಹೊಳೆ : (?). 'ಗಂಡುದೊಱೆ' ಪರಾ. [ಪೆಣ್ + ತೊರೆ₂ (< ತೊಱೆ₂)]

**ಪೆಣ್ಬಾಳ್ಕ** (ನಾ). ಹೆಂಗಸರ ಪಡೆ,–ಸಮೂಹ : ಸತ್ಯಸತ್ಪುರುಷರದಿ ದರ್ಶನಂಗೊಂಡು ಪೋಪಂತೆ ಪೆಣ್ಬಾಳ್ಕದೊಡನೆ ನಡೆಗೊಳಲು (ಸಸಸಶೀ. ೨೯ ६). [ಪೆಣ್ + ಪಾಳ್ಕ (< ಪಾಳೆಯ)]

**ಪೆಣ್ಬು** 'ಪೆಂಪು' ನೋ.

**ಪೆಣ್ಬಕ್ಕಿ** 'ಪೆಣ್ವಕ್ಕಿ' ನೋ.

**ಪೆಣ್ಬಟ್ಟ** (ನಾ). ಹೆಂಗಸು ತೊಡುವ ಆಭರಣ : ಹೆಣ್ಣಿನ ಒಡವೆ ಮಚ್ಚರದಾಯಮಂ ಮಱೆದು ಕೈದುಗಳಂ ತೊಱೆದುಟ್ಟು ತೊಟ್ಟ ಪೆಣ್ಬಟ್ಟಂ (ಅಕಂಪು. ೦೩–೬೬). [ಪೆಣ್ + ಪಟ್ಟ₂]

**ಪೆಣ್ಬಡಣ** (ನಾ). ಹೆಣ್ಣಿನ ದೌರ್ಭಾಗ್ಯ,–ದುರದೃಷ್ಟ : ನಾಹೊಡೆಯ ನನಪ್ಪಿಯುಂ ಮಗುಟ್ಟ್ದ ನಿರ್ಲಜ್ಜ ಗಂಡಸನಪ್ಪುತಿರ್ಪ ಪೆಣ್ಬಡಣದ ಮುನ್ನ ಮುಳ್ಳನಿತು ಭಾಗ್ಯಮುಮೋನರಯಾಗಿ ಪೋಗದೆ (?)(ಸೂಕ್ತಿಸು. ೯–೪೩). [ಪೆಣ್ + ಪಡಣ]

**ಪೆಣ್ಬಡೆ** (ನಾ). = ಪೆಣ್ಬಾಳ್ಕ : ನುಡಿವ ನಡೆನೋಡುವ . . . ಚಿತ್ರದ ಪೆಣ್ಬಡೆಯಿಂ ಸ್ತ್ರೀರಾಜ್ಯದಂದಮುದಱೆಯೆಡೆಯೊಳ್ (ಅಂಕ್ರಿ. ೯–೩೨); ಒದವಿದ ನಿಜಲಾವಣ್ಯದಿನುದಕಂ ಸ್ಪರ್ಶನಾಮಿತಮೆನಲ್ ಪೆಣ್ಬಡೆ ನಿಂದಿದು ಪೊಕ್ಕು (ಜಗಾ. ೦೯–೯೩); ಪೆಣ್ಬಡೆ ಸೂಸಿತು . . . ಪಟವಾಸದ ರಜಮಂ (ಜಾಕಿಕ. ೯–೯೦ ರಗಳೆ). [ಪೆಣ್ + ಪಡೆ]

**ಪೆಣ್ಬಡೆಯ** (ನಾ). ಹೆಂಗಸರನ್ನೇ ಸೈನ್ಯವನ್ನಾಗಿ ಉಳ್ಳವನು: ಮನ್ಮಥ: "ಅಂಗೋಲ್ಲಿಲ್ಲಂ . . . ಪೆಣ್ಬಡೆಯುಂ . . . ಗಿಳಿದೇರುಂ --ಇವು ೧೩ ಕಾಮದೇವಂಗೆ ಪೆಸರ್" (ಅಭಿಧಾ. ೦-೦೩) ; "ಬಂಡುಣಿವೆದೆಯುಂ . . . ಪೆಣ್ಬಡೆಯುಸೈಸರಲ ಕಾವ ಜಳಿಗಳವಗೆಯನೆನೆ ಮನ್ಮಥನ ನಾಮುಂ" (ಅಭಿಧಾ. ೬). [ಪೆಣ್ಬಡೆ + - ಅ]

**ಪೆಣ್ಬರಿಜು** (ನಾ). ಹೆಣ್ಣಿನ ಆಕಾರ,-ಆಕೃತಿ: ಮದನನ ಪೂವಿನಂಬುಗಳ ಪೆಣ್ಬರಿಜೆಂಬ ಬೆಡಂಗನುಂಟುಮಾಡಿದ . . . ರಾಜಕನ್ಯಕೆಯುರು ಪಲರಂ ತನಯಂಗೆ ಮಾಡಿದಂ ಮದುವೆಯುನಾ ನೃಪಂ (ಸುಕುಮಾ. ೪-೧೪೮): ಸಾತ್ತ್ವಿಕೋದಯಂ ಪೆಣ್ಬರಿಜಾಗಿ ಮನಂಗೊಳಿಪಂತೆ ರಂಜಿಪ ತತ್ಕಂಜದಳಾಕ್ಷಿಯು ಭಾವವುನಜಿದು (ಉದ್ಭಟ. ೬-೧೦೦ ವ); ಚೆಲ್ವಂಬೊತ್ತಾ ಚಿತ್ರದ ಪೆಣ್ಬರಿಜಂ ನೋಡಿದನಾ ಕುವರಂ (ಜಯನೃ. ೩-೮). [ಪೆಣ್ + ಪರಿಜು]

**ಪೆಣ್ಬಸ** (ನಾ). ಒಂದು ಸ್ಥಳದ ಹೆಸರು: ಪೆಣ್ಬಸ ಅರು ಕಿಸುಮಂಗಲಂ (ಎಪಿ. IX. ೨೦೪-೬೦; 750). [ ? ]

**ಪೆಣ್ಬಾವ** (ನಾ). ಹೆಣ್ಣಿನ ಅಂಗವಿನ್ಯಾಸ: ಹಾವಕ್ಕನುರೂಪವಪ್ಪಾದ ಪೆಣ್ಬಾವಕ್ಕಂ . . . ಲಕ್ಷ್ಮತೆಯಿಂ ಪೊಗಟ್ಟು (ಶಾಂತಿಪು. ೩-೩೩ ವ); ಕೊಳದಿಂದಂ ಬಂದ ಲಕ್ಷ್ಮೀಪಥುದೆನಿಸುವ ಪೆಣ್ಬಾವದಿಂತಾಗವೇಡ (ಗದಾಯು. ೬-೬೦). [ಪೆಣ್ + ಬಾವ]

**ಪೆಣ್ಬಾಳ್ತೆ** (ನಾ). ಹೆಣ್ಣಿನ ಬದುಕು: ನುಣ್ಬಣ ಮೆಲ್ಲಗದವು ಮರಲ್ಗಳಾಳ್ದ ಯ್ದಿಜ ತುಂಬುಗೊಂದವಿಂಬಿಡಿದರ್ದಗಳ್ ಪುಣ್ಪಡುವಿನೆಗಂ ಬಗಿದೀ ಪೆಣ್ಬಾಳ್ತೆಯು × × × (ಶಬರ. ೬-೨೦೩). [ಪೆಣ್ + ಬಾಳ್ತೆ]

**ಪೆಣ್ಬುಯ್ಯಲ್, ಪೆಂಬುಯ್ಯಲ್, ಹೆಣ್ಬುಯ್ಯಲು** (ನಾ). (ಅಪಹರಣ ಕಾಲದಲ್ಲುಂಟಾಗುವ) ಹೆಣ್ಣಿನ ಆರ್ತಧ್ವನಿ,-ಗೋಳಾಟ: ಪೆಣ್ಬುಯ್ಯಲೊಳಬುವಸದೊಳ್ ನಂಟನೆಡಟಿರ್ಳ್ . . . ತಲೆಸಂದು ಗಂಡುತನವಂನೆ ನೆಲಿಪದವಂ. ಗಂಡನಲ್ಲನೆಂತುಂ ಷಂಡಂ (ಗದಾಯು. ೨-೨೪); ಕೇಳ್ದು ಪೆಣ್ಬುಯ್ಯಲಂ ವಿಚಾರಿಸದ ಪುರುಷಂ ಪೋಗಲಾಗದೆಂದು ತತ್ಸಮೀಪವಮನೆಯ್ದಿ (ಶಬರಶಂ. ೦೬-೩೯ ವ); ಎನ್ನಿನೆಯಂಗೆಯ್ದಿಸಿಪುರದ ನಾಡ ಜನವಿದಾ ಪೆಣ್ಬುಯ್ಯಲಂ . . . ಹಾ ನೃಪ ನೀಬಿನೆಂದಬಲೆ ಬಾಯ್ವಿಟ್ಟಟ್ಟು ಹುಯ್ಯಲ್ಲಿದಳ್ (ಅತಂತ್ರ. ೦೨-೪೩). **ಪೆಂಬುಯ್ಯಲ್**: ಅಗಸದೊಳು ಬರುತಂ ಪೆಂಬುಯ್ಯಲನಾಗಳೆ ಕೇಳ್ದಾ ಖಚರಂ ಸಿಡಿಮಿಡಿಯಾಗಿ ವಿಚಾರಿಸಿ (ಚಂದ್ರಪ್ರಭಾ. ೦೦-೬೦). **ಹೆಣ್ಬುಯ್ಯಲು**: ಹೆಣ್ಬುಯ್ಯಲನು ತಾ ಕೇಳಿ ಸಾಕ್ಷಾದ್ವಿಷ್ಣು ಬಂದವತರಿಸಿದನು ಧರೆಗೆ (ಅಭಾಗ. ೦೦-೨೪-೨೦). [ಪೆಣ್ + ಪುಯ್ಯಲ್ (<ಪೊಯ್ಯಲ್)]

**ಪೆಣ್ಬುರುಳಿ** (ನಾ). ಹೆಣ್ಣುಗಿಳಿ: ಪೆಣ್ಬುರುಳಿಯುನೊರ್ವ ಮೆಲ್ನುಡಿಯಿನಾಳಿಸಿ ಕೇಳಿಂತೆ ವಿನೋದದಿಂ . . . ಪೊಟ್ಟುಗಳೆವಳ್ (ಕೃಷ್ಣಕೃ. ೪-೧೬). 'ತೊಂಡುವೆಣ್ಬುರುಳಿ' ಪರಾ. [ಪೆಣ್ + ಪುರುಳಿ]

**ಪೆಣ್ಬುಲಿ, ಹೆಣ್ಣುಹುಲಿ** (ನಾ). ಹುಲಿಯ ಜಾತಿಯಲ್ಲಿ ಹೆಣ್ಣು: ಅಸ್ನಗಂ ತಾಯಪ್ಪ ಪೆಣ್ಬುಲಿ . . . ರಿಸಿಯರಂ ಕಂಡು ಮುಳಿದು ಮಸಗಿ ಮೇಲ್ವಾಯಲ್ (ಚಿತ್ರಾನಾ. ೪೬-೯); ಪೆಣ್ಬುಲಿಯು ಮುಂದೆ ನಲಿದುದು ಕಣ್ಬಲಿವೆತ್ತರಲಿ (ಚಂದ್ರಪ್ರಭು. ೦೪-೨೯); ಗಂಡುಮರಿ ಸಹಿತ ಪೆಣ್ಬುಲಿಯು ತರೆ ನೃಪನವಂ ಕಂಡಿವಂ ಕಪಿಲೆ ಬಸವಂಗಳಂ ಮಾಡೆನಲು (ಚೆನ್ನಬಸ. ೬-೪-೧೬). **ಹೆಣ್ಣುಹುಲಿ**: ವ್ಯಾಘ್ರಿಣಿ(ಹೆಣ್ಣುಹುಲಿ)ಯು . . . ತನ್ನ ಗಂಡನು ಆಹಾರ ತರುವುದನ್ನು ಎದುರು ಕಾಯುತ್ತಿತ್ತು (ಕಾವ. ೩೬); ಅವಳು ಹೆಣ್ಣುಹುಲಿಯಂತೆ ಗರ್ಜಿಸುತ್ತ (ದುಂದಾಶಿ. ೦೬೬). [ಪೆಣ್ + ಪುಲಿ]

**ಪೆಣ್ಮಗಳು, ಹೆಣ್ಣುಮಗಳು, ಹೆಮ್ಮಗಳು** (ನಾ). ೧. ಹೆಂಗಸು; ಸ್ತ್ರೀ: ಜಗದೊಳು ಹೊಕ್ಕು ವಿಶ್ವವನೆಲ್ಲ ತೃಣವೆಂದು ಬಗೆವ . . . ಅತಿಬೇಗದಿ ಬಂದೆ ನಿನ್ನ ಪೆಣ್ಮಗಳೆನ್ನಬಹುದೆ (ಚೋಹಶ. ೩೦-೩೮). ೨. ಹುಡುಗಿ; ಬಾಲಕಿ: ಪೆತ್ತ ಪೆಣ್ಮಗಳ ಪೆರ್ಚಿಸಿ ಪ್ಯೈಮಾಲಿದಾನ್ನತ್ರಯಪ್ಪಂತೆ ಮನ್ನಿಸದೆ (ಹರಿ. ೩-೩೪). **ಹೆಣ್ಣುಮಗಳು**: ೧. ವಿದ್ಯಾಪತಿಯಂತೆ ತೋರುವ ಹೆಣ್ಣುಮಗಳನ್ನು ಕಂಡು ನರ್ಮದೆ ನಮಸ್ಕಾರ ಮಾಡಿದಳು (ಮುಕ್ತ್ಯರ. ೧೫೩). **ಹೆಮ್ಮಗಳು**: ೧. ಪಾಂಡವರ ಬಿರುದಿನ ಕುದುರೆಯನ್ನು ಒಬ್ಬ ಹೆಮ್ಮಗಳೂ ಕಟ್ಟುತ್ತಾಳೆ (ಜೈಮಿ. ೬). ೨. ಒಮ್ಮೆ ದ್ರುಪದನು ಶಿವನ ಧ್ಯಾನಿಸಿ ಹೆಮ್ಮಗಳಯಿನ್ನಾರಿಗೀವೆನೆನಲ್ಕೆ (ಸಂಕಶ. ೨೪-೦೪); ಹೆಮ್ಮಗಳು ನಾ ನಿಮ್ಮ ನೆಮ್ಮಿಕೊಂಡಿರುವೆನ್ನೆ (ಸುಕಾರ. ೨-೨). [ಪೆಣ್ + ಮಗಳು (<ಮಗಳ್)]

**ಪೆಣ್ಮಗು, ಹೆಣ್ಣುಮಗು, ಹೆಮ್ಮಗು** (ನಾ). ೧. ಹೆಣ್ಣುಕೂಸು. ೨. ಹೆಂಗಸು; ಸ್ತ್ರೀ: (ಕ). **ಹೆಣ್ಣುಮಗು**: ೧. ಅವರ ಹೆಣ್ಣುಮಗು ತುಂಬಾ ಮುದ್ದಾಗಿದೆ (ಕಥಾ). ೨. ಜಪರಾಯ ನುಂಗಿದೀ ಹೆಣ್ಣುಮಗುವಿನಲಿ ಹೊರೆದ ಕಲ್ಮಷ ತೊಳೆದು, ಈಗ ತಾನುಳಿದಿಹುದು . . . ಹೆಣ್ಣುತನವೊಂದು! (ಅಂಗೀತ. ೬೨-೨). **ಹೆಮ್ಮಗು**.

**ಪೆಣ್ಮಕ್ಕಳ್, ಪೆಣ್ಮಕ್ಕಳು, ಹೆಣ್ಣುಮಕ್ಕಳು, ಹೆಣ್ಮಕ್ಕಳು, ಹೆಮ್ಮಕ್ಕಳು** (ಬಹುವ): ಪೆಣ್ಮಕ್ಕಳ್ಗಂ ಕ್ರಮಂ ಸಲ್ವುದು (ಎಕ. VI. ಕಡೂರು. ೯-೦೦; ಸು. ೯೯೦ ?); ಬೆಸೆಯದಿರ್ ಕುಸುಮಾಯುಧ ನಿನ್ನ ಬಲ್ಪು ಪೆಣ್ಮಕ್ಕಳೊಳಲ್ಲದಿಲ್ಲ (ಕಮಲ. ೧೨೩ ಪ್ರಯೋ); ಪೆಣ್ಮಕ್ಕಳು ಭೀತಿಸದಂತೆ ಚೊಕ್ಕಟವಾಗಿ ನೀ ತಳರು (ಮೋಹತ. ೪೨-೬); ಇಂತಪ್ಪ ಕಾಯ ಮಾಯಮನಱಿತು ಪೆಣ್ಮಕ್ಕಳಂ ತಕ್ಕಿನಂದೊಲ್ಮಗರೊಳ್ ಮುನಿವರ್ (ಶಬರ. ೬-೪೬ ವ); ಹೆಣ್ಣುಮಕ್ಕಳಿಗೆ ಹಾಡ ಕಲಿಸಿದವರಿಲ್ಲ, ನಾಯಿಗೆ ಬೊಗಳ ಕಲಿಸಿದವರಿಲ್ಲ (ಗಾದೆ): ಗಂಡ ಕುಳ್ಳಿರಲು ಮೂವರು ಹೆಣ್ಮಕ್ಕಳು ಸೇವೆಯ ಮಾಡುವರು (ಕೂಷ್ಮಸಂ. ೩೦೬-೩): ನೆರೆಮನೆಯ ಮುಮ್ಮನೆಯ ಹೆಮ್ಮಕ್ಕಳಂ ಬೇಗ ಕರೆ (ಸಿದ್ಧರಾ. ೨-೨); ಇಬ್ಬರು ಹೆಮ್ಮಕ್ಕಳು ರಾಜಮರ್ಯಾದೆಯ ಹರಿವಾಣಗಳನ್ನು ತಂದರು (ಕಪಿ. ೪೬). [ಪೆಣ್+ಮಗು]

**ಪೆಣ್ಮಣಿ, ಹೆಣ್ಣುಮಣಿ** (ನಾ). ಹೆಂಗಸರಲ್ಲಿ ರತ್ನಪ್ರಾಯಳಾದವಳು; ಅತ್ಯಂತ ಶ್ರೇಷ್ಠಳಾದವಳು; ಸ್ತ್ರೀರತ್ನ: ಉರ್ವಿಯನಿಪ್ಪ ಪೆಣ್ಮಣಿಯ ಮೇಲಸುರಾಗದೆ ಸೂಸಿದಂತೆವೊಲ್ಪವಿರ್ದುದಂಬುಜಾಶ್ರಸಮುದಾತಘನಾನತ ನೂತನಾತಪಂ (ಉದ್ಭಟ. ೦೨-೦೦); ಚೆಲ್ವ ಪೆಣ್ಮಣಿಯು ಸುಸಿಲ ಮಸಕದೊಳಿಂಪ ನುಗುತೊಗೆವ ನುಣ್ಣಾತುಗಳ ರೀತಿಯಂತೆ (ಶಬ್ದರಾ. ೦-೪೮), ಪೆಣ್ಮಣಿಯುಂ ನೃಪಕುಳಚೂಡಾಮಣಿ ಯುವರಾಜಂಗೆ ಮದುವೆಯಂ ಮಾಡಿದಂ (ರಾಜಶೇ. ೬-೪೪). **ಹೆಣ್ಣುಮಣಿ**: ಊರಿಗೆ ಬಾರಲೆ, ಹೆಣ್ಣುಮಣಿ! (ಅಂಗೀತ. ೪೨-೨೨). [ಪೆಣ್ + ಮಣಿ]

**ಪೆಣ್ಮಾಣಿಕ** (ನಾ). = ಪೆಣ್ಮಣಿ: ಕಣ್ಮಲರ್ಗಳ್ ಕಡುನಿಡಿದಾದುವು . . . ಪೆಣ್ಮಾಣಿಕಕೆ (ಜಯನೃ. ೩-೨೫). [ಪೆಣ್ + ಮಾಣಿಕ]

**ಪೆಣ್ಮಿಗ** (ನಾ). ಹೆಣ್ಣು ಜಿಂಕೆ: ಹರಿಣಶೃಂಗದ ತನ್ನಯ ವಾಮನೇತ್ರಮಂ ತುರಿಸುತುಮಿರ್ಪ ಪೆಣ್ಮಿಗಮುಮಂ ಬರೆಯಲ್ಕಿದರಲ್ಲಿ ಮಾಂಥಮಂ (ಕಾದಂಬ. ೪೦-೨). [ಪೆಣ್ + ಮಿಗ]

**ಪೆಣ್ಮೀನ್, ಪೆಣ್ಮೀನು, ಹೆಣ್ಣುಮೀನ್, ಹೆಣ್ಣುಮೀನು, ಹೆಮ್ಮೀನ್** (ನಾ). ಮೀನಿನಲ್ಲಿ ಹೆಣ್ಣು: "ಪ್ರೋಷ್ಠೀ, ಶಫರೀ—ಈ ೨ ಪೆ(ಹೆ)ಣ್ಮೀನ್" (ಹಲಾಯು. ೦೦೬-೩೬); "ಶಫರೀ—ಪೆಣ್ಮೀನ್" (ಚಿತ್ರ. ೦೬೦). **ಪೆಣ್ಮೀನು**: ಅನುವರಿಲ್ಲದೆ ಬಿದ್ದ ಶಿಶುವನು ಪೆಣ್ಮೀನು ನುಂಗಿತು ತತ್ಕ್ಷಣದೆ (ಚೋಹಶ. ೧೦-೩೦). **ಹೆಣ್ಣುಮೀನ್**: "ಪ್ರೋಷ್ಠಿಯೆನೆ ಶಫರಿಯೆಂದೆನೆ ಹೆಣ್ಣುಮೀನಕ್ಕು" (ಮಂಗರಾ. ೦೨೦-೬). **ಹೆಣ್ಣುಮೀನು**: ಮದ್ಗುರವೆಂಬ ಆಬುದಾಡೆಯ ಹೆಣ್ಣುಮೀನು (ಶಾಸಾ. ೬). **ಹೆಮ್ಮೀನ್**: 'ಪೆಣ್ಮೀನ್' ಉಲ್ಲೇಖದ 'ಹಲಾಯು' ಪ್ರಯೋಗವನ್ನು ನೋಡಿ. [ಪೆಣ್ + ಮೀನ್]

**ಪೆಣ್ಮೇನು** 'ಪೆಣ್ಮೀನ್' ನೋ.

**ಪೆಣ್ಮುದ್ರೆ** (ನಾ). ಹೆಣ್ಣಿನ ಚಿಹ್ನೆ,—ಲಕ್ಷಣ: 'ಪೆಣ್ಮುದ್ರೆವೆಱು' ಪರಾ. [ಪೆಣ್ + ಮುದ್ರೆ]

**ಪೆಣ್ಮುದ್ರೆವೆಱು** (ಕ್ರಿ). ಹೆಣ್ಣಿನ ಲಾಂಛನವನ್ನು ಪಡೆ,—ಹೊಂದು: ತವ ಪಂಚಬಾಣಕ್ಕೆ ವ್ಯಾಡ ವಿಧಿ ವಿಷ್ಣು ದೇವೇಂದ್ರ ಒಡಲೊಳ್ ಪೆಣ್ಮುದ್ರೆವೆತ್ತರು (ಲೋಕಹಿ. ೩-೯೬). [ಪೆಣ್ಮುದ್ರೆ + ಪೆಱು₁]

**ಪೆಣ್ಮೆಯ್ಯ** (ನಾ). ತನ್ನ ಅರ್ಧ ಶರೀರದಲ್ಲಿ ಹೆಣ್ಣನ್ನು ಹೊಂದಿರುವವನು; ಅರ್ಧನಾರೀಶ್ವರ; ಶಿವ: ಗಜ್ಯಾಳಿವೆಂಗಳು ನಿಖಿಳಪುಷ್ಪಗಳ ಪೆಣ್ಮೆಯ್ಯ[ಯ್ಯ]ಗೊಸುಗ ಕಳಚಿದರು (ಲೋಕಹ. ೨೪-೬೭).
[ಪೆಣ್ + ಮೆಯ್₂ + —ಅ₇]

**ಪೆಣ್ಮೊತ್ತ** (ನಾ). ಹೆಂಗಸರ ಗುಂಪು; ಸ್ತ್ರೀಸಮೂಹ: ಪುತ್ರಿಗೇಗೆ ಚೇತನವ ಇತ್ತರೀ ಬನದೊಳು ಬಂದರೆಂಬಂತೆ ಪೆಣ್ಮೊತ್ತಪೊಪ್ಪಿರ್ದುವಲ್ಲಲ್ಲಿ (ಲೋಕಹ. ೧೯-೬೦). [ಪೆಣ್ + ಮೊತ್ತ]

**ಪೆಣ್ಮೊಲ, ಹೆಣ್ಣುಮೊಲ** (ನಾ). ಮೊಲದ ಜಾತಿಯಲ್ಲಿ ಹೆಣ್ಣು: ಕಿಱುವೇಂಟೆಯ ನಾಯ್ಗಳಿಂದ [ಮು]ಟ್ಟುವಟ್ಟ ಪೆಣ್ಮೊಲನಂತೆ ಭಯಮಾಡಿದಗಲಿಸಿ ಬೆಳ್ಕೋಟವೋಡಿ (ಶಾಂತಿಪು. ೬-೯೦ ವ). **ಹೆಣ್ಣುಮೊಲ**: ಅವಳು ಎರಡು ಹೆಣ್ಣುಮೊಲಗಳನ್ನು ಸಾಕುತ್ತಿದ್ದಾಳೆ (ರೂಢಿ). [ಪೆಣ್ + ಮೊಲ]

**ಪೆಣ್ವಕ್ಕಿ, ಪೆಣ್ಬಕ್ಕಿ, ಹೆಣ್ಣುಹಕ್ಕಿ** (ನಾ). ಹಕ್ಕಿಯ ಜಾತಿಯಲ್ಲಿ ಹೆಣ್ಣು: ಆಗಸದಲಿ ಮೆಱೆದಳು ಪೆಣ್ವಕ್ಕಿಯಂತೆ (ಲೋಕಹ. ೩೦-೦೨). **ಪೆಣ್ಬಕ್ಕಿ**: ಒಂದುದಿವಸಂ ಗಂಡುವಕ್ಕಿ ಪೆಣ್ಬಕ್ಕಿಯನೆಂದುದಾನೊಂದೆಡೆಗೆ ಪೋಗಿ ಬಂದಪ್ಪೆ ನೀನಿಲ್ಲಿರ್ದುದೆನೆ (ಶಾಪುಂಪು. ೨೪೭); ಚಿನ್ನೆಯ್ದುಲುರಿಯೊಂದು ಪುಗಲನುಗೆಯ್ದುದು ಪೆಣ್ಬಕ್ಕಿ ವಿಪುಳವಿರಹವ್ಯಥೆಯಿಂ (ಸೂಕ್ತಿಸು. ೮-೨೯). **ಹೆಣ್ಣುಹಕ್ಕಿ**: ಹೆಣ್ಣುಹಕ್ಕಿಯು ಅದರ ವಯ್ಯಾರವನ್ನು ಸುಲಭವಲ್ಲಿ ಮೋಹಿಸಿ ಬರುವುದಿಲ್ಲ (ರಾಂಕೃ. II. ೬೬೧). [ಪೆಣ್ + ಪಕ್ಕಿ]

**ಪೆಣ್ವಿಂಡು, ಪೆಣ್ಣುವಿಂಡು** (ನಾ). = ಪೆಣ್ಮೊತ್ತ: ಬಿಡೆಯವಿಲ್ಲದೆ ಪುಧ್ಯ ಮಧ್ಯದೆ ಪೆಣ್ವಿಂಡು ನಡೆಗೊಂಡುದೇನ ಬಣ್ಣಿಪೆನು (ಲೋಕಹ. ೧೪-೨೩). **ಪೆಣ್ಣುವಿಂಡು**: ಆ ಪೆಣ್ಣುವಿಂಡಂಗಜನ ಬಾಣದೇಱಿಂ ನೋವುತಡಿಯುಟ್ಟತಾಕ್ಷಣದೊಳು (ಶಬರ. ೦೯-೨೬). [ಪೆಣ್+ಪಿಂಡು₂]

**ಪೆಣ್ವೃಂದ** (ನಾ). =ಪೆಣ್ಮೊತ್ತ: ಮುಂದೆಸೆಯಲಿ ಬಾಣಸುತೆ ಚಿತ್ರಲೇಖೆ ಪೆಣ್ವೃಂದದೊಳನಿರುದ್ಧ ಬರಲು (ಲೋಕಹ. ೪೨-೯೭). [ಪೆಣ್+ವೃಂದ]

**ಪೆಣ್ಸೆಱೆ, ಹೆಣ್ಣುಸೆಱೆ** (ನಾ). ಹೆಣ್ಣಿನ ಬಂಧನ,—ಸೆರೆ: ಅಗಣಿತ ಮುದ ಪೆಣ್ಸೆಱೆಗಳಂ ಬಿಡಿಸುತ್ತುರುವಿಕ್ರಮಾರ್ಕನ ಅಭಿಮತವಿತ್ತು (ರಾಜಶೇ. ೦-೩೪). **ಹೆಣ್ಣುಸೆಱೆ**: ಹೆಣ್ಣುಸೆಱೆ ತುಱುಸೆಱೆಯಂ ೯ 'ವ (ಕ್ಯಾಅ೦. ೦೯೪೭, ೦೯-೦೦ : 1162). [ಪೆಣ್+ಸೆಱೆ₂]

**ಪೆತ್ತ₁** 'ಪೆಱು₁' ಪರಾ.

**ಪೆತ್ತ₂** 'ಪೆಱು₂' ಪರಾ.

**ಪೆತ್ತಣಿಸತ್ಯಾಂಕ** (ನಾ). ಒಂದು ಬಿರುದು (?): ಪೇರಾಳ್ಕವರ ಪೆತ್ತಣಿಸತ್ಯಾಂಕನ್ ಅಟ್ಟುಳ್ಳಭಟನ್ ಬೆದರೆ ಮಹೇಂದ್ರನ್ (ಕ್ಯಾಅ೦. ೦೯೭೩, ೬೨-೨ ; 7ನೆಯ ಶ). [ ? ]

**ಪೆತ್ತಿಳ, ಹಿತ್ತಳ, ಹೆತ್ತಿಳ** (ನಾ). ಒಂದು ಸ್ಥಳದ ಹೆಸರು: ಪೆತ್ತಿಳದಾ ಮಹಾಜನಕ್ಕೆ ಸಾಲೆ ಆಚನ್ದ್ರತಾರಕಂ (ಎಕ. VII. ಶಿಕಾ೦. ೯೫ (b)-೦೬ ; ಹು. ೯೦೯?). **ಹಿತ್ತಳ**: ಮೂಡಲು ಹಿತ್ತಳದ ಸೀಮೆಯ ಒಳಗುಳ ... ಅಷ್ಟಭೋಗತೇಜಸಾಮ್ಯಗಳನು (ಎಕ. VII. ಶಿಕಾ೦. ೨೫-೨೦ : 1616). **ಹೆತ್ತಿಳ**: ಹೆತ್ತಿಳದ × × × ಮಾದಯ್ಯನ ಆಳಿಯ (ಕ್ಯಾಅ೦. ೦೯೨೬, ೦೬೨-೨ ; 11ನೆಯ ಶ). [ ? ]

**ಪೆತ್ತು₁** 'ಪೆಱು₁' ಪರಾ.

**ಪೆತ್ತು₂** 'ಪೆಱು₂' ಪರಾ.

Δ**ಪೆದರು** 'ಹೆದಱು₁' ನೋ.

**ಪೆದೆ, ಹೆದೆ** (ನಾ). ಬಿಲ್ಲಿಗೆ ಹೂಡುವ ಬಾಣಕ್ಕೆ ಆಧಾರವಾದ ದಾರ: ಸಾರೀಸರನಾಂತ ಪೆದೆನಾಸಕ ಸಿಕ್ಕಿ ತೋರಿಯು ಬಿಲ್ವಾಸದಂತೆ ... ನಿನಗಾನೊಳಗಾಗಿ ಸಾರಸತ್ಯಕೃತಿಯು ವಿಸ್ತರಿವೆ (ಪೊಹೆಶ. ೩೯-೨); ಕುಡಿವುರ್ವ ಚಾಪಕ್ಕೆ ನಿಡುಗುರುಳ ಪೆದೆಯಕ್ಕ ... ಬೇಂಟೆಯಾಡುವಂ ಮನ್ಮಥ ಮಹಾಶಬರನು (ಶ್ರಕುಪು. ೯-೧೨೬); ನಾರಿ ಶರಂ ತದಂಗಜನೆ ಸಾರಥಿ ... ತದಹಿತಂ ಪೆದೆ (ರಾಜಶೇ. ೩-೯೭). **ಹೆದೆ**: "ಬಿಲ್ಲ ಹೆದೆ ... ಗುಣವೆಮೆನಿಕು" (ಕುಂಗರಾ. ೮೭-೩೩); ಇಂದಿಂಗೀ ಬಿಲ್ಲ ಹೆದೆಯೆ ಸಾಲ್ಗುವೆಂದುವುದಂ ಕಡಿವುದುಂ ... ಆ ಸರಿ ಬಿಱುಪರಿದು ಸತ್ತುದು (ಶಂಕಶ. ೩೦೨-೦೬); ದಶರ್ಥವರ್ಮವೆನಿಪ ಧನುವಿನೊಳು ಸ್ಮೃತಿಯೆಂಬ ಮಿಸುವ ಹದೆಯುನಳವಡಿಸಿ ... ತೀವಿದನು (ಕೃತೃತಾ. ೦೦-೦೦೦); ಬಿಲುಗಳ ಸರಳ ಹೆದೆಗಳ ... ಪರಿಪರಿಯ ಕೈದುಗಳ ಪಿಡಿಪಿಡಿದು (ಬಕಪು. ೬೧-೨೩).

**ಪೆದ್ದ₁** (ನಾ). ೧. ದೊಡ್ಡದಂ; ಹಿರಿದು: 'ಪೆದ್ದಿ₁' ಪರಾ. ೨. ಮುಖ್ಯವಾದುದು; ಪ್ರಧಾನವಾದುದು: 'ಪೆದ್ದಕಾಪು' ಪರಾ.
[ದೇ. ‖ ತುಳು. ಹದ್ದ ; ತೆಲು. ಪೆದ, ಪೆದ್ದ]

**ಪೆದ್ದ₂** (ನಾ). ೧. ಮೂರ್ಖ; ದಡ್ಡ; ಹೆದ್ದ: ಒಣಿಯ ಜನರೆಲ್ಲ ಶಿವನಿಗೆ ... ಪೆದ್ದ, ಕೈಲಾಗದವ ಎಂದು ಸಿಕ್ಕ ಸಿಕ್ಕ ಹಾಗೆ ಕರೆಯುತ್ತಿದ್ದರು (ಕುಂಹಿಂ. ೬೨); ನೀನೊಬ್ಬ ಪೆದ್ದ (ಕುಂಗರ. ೦೫): ಅವನೊಬ್ಬ ಶುದ್ಧ ಪೆದ್ದ (ರಮಗಾ. ೯೮). (ಗು). ೨. ತಿಳಿಗೇಡಿಯಾದ: ದಡ್ಡತನದಿಂದ ಕೂಡಿದ: ದೇವ ಈ ಪೆದ್ದ ಹಾರುವನ ಸುದ್ದೇನು (ಸೌಗುಂ. ೬೨ ೨); ಅವಳ ಆ ಪೆದ್ದ ತಾಯಿಯನ್ನು ಮಾತನಾಡಿಸಲು ಹೋದದ್ದೇ ತಪ್ಪಾಯಿತು (ಕುಂಕುರಾ. ೦೬೬). 'ಹೆದ್ದ₁' ಪರಾ.
[ಪೆದ್ದ + —ಅ₇]

**ಪೆದ್ದಂಭಟ್ಟ, ಪೆದ್ದಭಟ್ಟ** (ನಾ). ತಿಳಿಗೇಡಿ; ದಡ್ಡ: ನೀನೊಬ್ಬ ಪೆದ್ದಂಭಟ್ಟನ ಹಾಗೆ ಆಡಬೇಡ (ರೂಢಿ). **ಪೆದ್ದಭಟ್ಟ**: ಏ ಪೆದ್ದಭಟ್ಟ ... ಮಾತಾಡದೆ ಸುಮ್ಮನಿರು (ಶಾರಿಮ. ೦೯೬). [ಪೆದ್ದ₂+ಭಟ್ಟ]

**ಪೆದ್ದಕಾಪು** (ನಾ). ಗ್ರಾಮದ ಮುಖ್ಯಾಧಿಕಾರಿ.—ಮುಖಂಡ; ಪಟೇಲ: ಪಟೇಲನಿಗೆ ಪಟೇಲ ... ಪೆದ್ದಕಾಪು ನಾಯಡು ವಗೈರೆ ಹೆಸರುಗಳುಂಟು (ಗ್ರಾಕೂ. ೦). [ ← ತೆಲು. ಪೆದ್ದಕಾಪು, ಪೆದ್ದಂಕಾಪು ]

**ಪೆದ್ದಕ್ಕ** (ನಾ). ತೂಕ ಮಾಡಲು ಬಳಸುವ ದೊಡ್ಡ ಕಲ್ಲು,—ಬಟ್ಟು: ಹಸುಬೆಯೊಳ್ ಪೆದ್ದಕ್ಕ ನಾ ಸೇರುಲ್ಲುಗಳನೂ ಸಂತಸದೊಳಿಟ್ಟು (ಅಕಾರಿ. ೩೦-೩೬). [ ಪೆದ್ದ₁ + ? ]

**ಪೆದ್ದಣ್ಣ** (ನಾ). ದಡ್ಡ; ಪೆದ್ದಂಭಟ್ಟ: ನೋಡುತ್ತೀರೇನು ಪೆದ್ದಣ್ಣಗಳಂತೆ! (ದೇರಜಾ. ೩). [ ಪೆದ್ದ₂ + ಅಣ್ಣ₁ ]

**ಪೆದ್ದಭಟ್ಟ** 'ಪೆದ್ದಂಭಟ್ಟ' ನೋ.

**ಪೆದ್ದಾಣೆ** (ನಾ). ಒಂದು ಸ್ಥಳದ ಹೆಸರು: ಪ್ರತೀಚೀದೆಸೆ ಪೆದ್ದಾಣೆಯ (ಎಕ. IX (೩). ಕುಣಿಗಲ. ೩೨೮-೩೦; ಸು. 650 ; ಕ್ಯಾಅ೦. ೦೯೦೭, ೯-೩೦ ನೋ).
[ ? ]

**ಪೆದ್ದಿ₁** (ನಾ). ೧. ವಯಸ್ಸಾದ ವ್ಯಕ್ತಿ; ಹಿರಿಯ ವ್ಯಕ್ತಿ: (೬). ೨. ಗೌರವಕ್ಕೆ ಪಾತ್ರವಾದ ವ್ಯಕ್ತಿ; ದೊಡ್ಡವ್ಯಕ್ತಿ: (೬). ೩. ಕೆಲವರ ಹೆಸರಿನ ಕೊನೆಯಲ್ಲಿ ಗೌರವಾರ್ಥವಾಗಿ ಸೇರುವ ಪದ: ಗುಂಡದೇವ ಪೆದ್ದಿ ಬನ್ನಿಯ ಬೆನಕನಲ್ಲಿ ಶ್ರೀಧರದೇವರ ಕೆಯ್ಯಿಂ ಬಡಗ ನಾಕಱ ಹಸುಗೆಯಲು ಕೊಟ್ಟ ಮತ್ತರು ನಾಲ್ಕು (ಸೌಇಇ. IX—I. ೩೩೩-೯೯: 1216).
[ ಪೆದ್ದ₁ + —ಇ₃./ತೆಲು. ಪೆದ್ದಿ ]

**ಪೆದ್ದಿ₂** (ನಾ). ಮೂರ್ಖಳಾದ ಹೆಂಗಸು; ದಡ್ಡಿ: ಶುದ್ಧ ಪೆದ್ದಿ. ಇನ್ನು

ಯಾರು ನಿನಗೆ ಪುರಾಣ ಹೇಳುತ್ತಾರೆ (ಚಾರಿತು. ೦೬); ಯಾಕೆ ಸುಸಂದಾ. ಪೆದ್ದಿಯ ಹಾಗಾಡ್ತೀಯ ? (ಬೂದಿಬ್ಬ. ೫೦). [ ಪೆದ್ದ₂ + — ಇ₃ ]

**ಪೆದ್ದಿಗ** (ನಾ). ದೊಡ್ಡವನು ; ಶಕ್ತಿವಂತ : ಎನ್ನದಿರಿಸಲಿ ನಿಂದು ಕಾದುವರ ನಿನ್ನಿಂದಲಪ್ಪುದೆ ಕರಸು ನಿಮ್ಮ ಪೆದ್ದಿಗನ (ಜೈಮಿನಿ. ೩೨-೬). [ ಪೆದ್ದ₁ + — ಇಗ ]

**ಪೆದ್ದು** (ನಾ). ೧. ದಡ್ಡತನ ; ಮೌಢ್ಯ : ಪೆದ್ದು ಪೆದ್ದಾಗಿ ಆಡಬೇಡ (ರೂಢಿ). ೨. ಮೂಢವ್ಯಕ್ತಿ ; ತಿಳಿಗೇಡಿಯಾದ ವ್ಯಕ್ತಿ : ನನ್ನ ವಕೀಲ ಶುದ್ಧ ಪೆದ್ದು (ಕೃಸಮು. ೨೦೯); ನಟಾಷ . . . ಸುಮ್ಮನೆ ನಿಂತಿದ್ದಳು. ಶುದ್ಧ ಪೆದ್ದು, ಅಲ್ಲವೆ ? (ಮೋಚಕಿ. ೧೫). [ ದೇ. ॥ ಕೊಡ. ಪೆದ್ದ್ ]

**ಪೆದ್ದುತನ** (ನಾ). = ಪೆದ್ದು ೧ : ಈಗ ಓಡಿಸುವರ ಅವರ ಕೆಟ್ಟತನವಲ್ಲ; ನನ್ನ ಪೆದ್ದುತನ ಕಾರಣ ಅಷ್ಟೆ (ಮೊಕಚಿ. ೦೨೬). [ ಪೆದ್ದು + -ತನ ]

**ಪೆದ್ದೊರೆ** 'ಪೆರ್ದೊಱೆ' ನೋ.

**ಪೆದ್ದೊಱೆ** 'ಪೆರ್ದೊಱೆ' ನೋ.

**ಪೆದ್ದೊಱೆಗರೆ** (ನಾ). ಒಂದು ಸ್ಥಳದ ಹೆಸರು : ಪೆದ್ದೊಱೆಗರೆಯಿಟ್ಟ ದಿಂಬರುಂ ಏಡ್ಕೊಕ್ಕಲುಂ ಇವಂ ಕಾಪರ್ (ಎಕ XIV, ೭೬-೦೫; ೬೦೦). [ ? ]

**ಪೆನ್** 'ಪೆನ್ನು' ನೋ.

**ಪೆನಸಲು** 'ಪೆನ್ಸಿಲ್ಲು' ನೋ.

**ಪೆನ್ನ** 'ಪೆಣ್ಣೆ' ನೋ.

**ಪೆನ್ನಪುಟ್ಟುವೆಗಿಡ** (ನಾ). ಒಂದು ಬಗೆಯ ಸಸ್ಯ : (ವೃಕೋಶ. ೫೬-೦೦೬೯). [ ? + ಗಿಡ ( < ಗಿಡು ) ]

**ಪೆನ್ನಸ** 'ಪನ್ನಸು' ನೋ.

**ಪೆನ್ನು**, ಪೆನ್, ಪೇನ್ನ, ಪೇನಾ, ಪೇನ್ನು (ನಾ). ಬರೆಯಲು ಬಳಸುವ ಒಂದು ಬಗೆಯ ಸಾಧನ : ಟಿಪ್ಪಣಿಯನ್ನು ತೆಗೆದುಕೊಳ್ಳಲು ಪೆನ್ನು . . . ಬೈನಾಕ್ಯುಲರ್—ಇವಿಷ್ಟು ಅವರ ಪ್ರಯಾಣದ ಸಲಕರಣೆಗಳಾಗಿದ್ದುವು (ವಾಚಸ್ಪ. ೩೦) : ಈ ಪೆನ್ನು ನನ್ನ ಬಳಿ ಇರಲಿ (ಕಶಕ. ೪-೫೫). **ಪೆನ್** : ಸೀತಾ ರಾಮು ಪರನಿಗೆ ಒಂದು ಪಾರ್ಕರ್‌ಪೆನ್ . . . ಓದಿಸಿದ (ವಕಿಶಾ. ೩೬೦). **ಪೇನ್ನ** : ಪೇನ; ಬರೆಯುವ ಕಡ್ಡಿ (Pen. ಇಂಕಾ). **ಪೇನಾ** : ಗೂಸರು "ಎಲ್ಲಿ ಆ ಪೇನಾ" ಎಂದು ಕೂಗಿದರು (ಕೂಸಜ್ಜ. ೧೯೬). **ಪೇನ್ನು** : ಪೇನು ಎತ್ತಿದಾಗ ಆ ಪ್ರವಾಹವು ಕಡಿಮೆಯಾದುವು (ಬಾರ್ಚ್ಯ. III, ೦೩೨) ; ಕೈಯ ಲ್ಲೊಂದು ಪುಸ್ತಕ, ಪೇನು (ಸ್ವಕ್ಕಕೂ. ೨೬೩). [ ←ಇಂ. Pen]

**ಪೆನ್ನೇರು** (ನಾ). ಒಂದು ಬಗೆಯ ಸಸ್ಯ : ಹಿರೀಮದ್ದಿನ ಗಿಡ, ಪೆನ್ನೇರು. ಅಶ್ವಗಂಧಿ (ವೃಕೋಶ. ೭೬-೦೬೭೦). [ ? ]

**ಪೆನ್ಶನ್** 'ಪೆನ್ಷನ್ನು' ನೋ.

**ಪೆನ್ಶನ್‌ದಾರ** 'ಪೆನ್ಷನ್‌ದಾರ' ನೋ.

**ಪೆನ್ಷನ್** 'ಪೆನ್ಷನ್ನು' ನೋ.

**ಪೆನ್ಷನ್‌ದಾರ**, ಪಿಂಚಣಿದಾರ, ಪೆನ್ಶನ್‌ದಾರ (ನಾ). ನಿವೃತ್ತಿವೇತನ ವನ್ನು ಪಡೆಯುತ್ತಿರುವವನು : ಗವರ್ನಮೆಂಟಿನ ಪೆನ್‌ಷನ್‌ದಾರರಿಗೆ ಕೊಡುವ . . . ಸಂಬಳಗಳು (ಗ್ರಾಕಾಶ. ೩೫). **ಪಿಂಚಣಿದಾರ** : ಈಗ ಪಿಂಚಣಿದಾರರಿಗೂ ಸಹ ಪಿಂಚಣಿ ಹೆಚ್ಚಾಗಿದೆ (ರೂಢಿ). **ಪೆನ್ಶನ್‌ದಾರ** : ನಾನೊಬ್ಬ ಪೆನ್‌ಶನ್‌ದಾರನು (ಮೋಹಾಚಾ. ೯೦); ಪೆನ್‌ಶನ್‌ದಾರ ಪಂತೋಜಿ —ಪಿಂಚಣಿಯನ್ನು ಪಡೆದು ಮನೆಯಲ್ಲಿ ಸುಖವಾಗಿ ಇರಲಾರದೆ . . . ಒಂದು ಜಾಗಕ್ಕೆ ಅರ್ಜಿ ಹಾಕಿದ್ದ (ಐತಿಹ. II, ೨೫). [ ಪೆನ್ಷನ್ ( < ಪೆನ್ಷನ್ನು ) + —ದಾರ₄ ]

**ಪೆನ್ಷನು** 'ಪೆನ್ಷನ್ನು' ನೋ.

**ಪೆನ್ಷನ್ನು**, ಪಿಂಚಣಿ, ಪಿಂಚನ್, ಪಿಂಚನಿ, ಪಿಂಚನ್ನು, ಪಿಂಛನು, ಪೆನ್ಶನ್, ಪೆನ್ಷನ್, ಪೆನ್ಷನು (ನಾ). ೧. ಸೇವೆ ಯಿಂದ ವಿಶ್ರಾಂತಿ ಪಡೆದ ಮೇಲೆ ಪಡೆಯುವ ವೇತನ ; ನಿವೃತ್ತಿವೇತನ : ನೌಕರಿಯಿಂದ ತೆಗೆದ ಆಯಾ ನೌಕರರಿಗೆ ಪೆನ್‌ಷನ್ನನ್ನೂ ಕೂಡಲೆ. . .ಪಾವತಿ ಮಾಡಿಸಬೇಕು (ಮಹಾವಂ. II, ೦೨). **ಪಿಂಚಣಿ** : ೧. ಸಂಬಳ, ಬಡತಿ, ಭತ್ಯೆ, ಪಿಂಚಣಿ, ಪದವಿ ಇವೇ ಈ ವರ್ಗದ ಪಂಚಪ್ರಾಣಗಳಾದವು (ಮೂಕಾದ. ೯೫). ೨. ನಿವೃತ್ತಿ : ಇಲ್ಲಿಯೇ ಅವರ ಪಿಂಚಣಿ ಆಗಬಹುದು (ಕಂಗಿರೋ. ೬೨). **ಪಿಂಚನ್** : ೧. ಪಿಂಚನ್ ಪಡೆದು ಬಂದವನೇ . . . ಕಾಲ ಮೇಲೆ ನಿಂತುಕೊಂಡಿದ್ದೇನೆ (ಅಕಥ. ೪೦). **ಪಿಂಚನಿ** : ೧. ನನಗೆ ಬರೋ ಮೂವತ್ತು ರೂಪಾಯಿ ಪಿಂಚನಿಯಲ್ಲಿ. . . ಹೇಗೆ ಎಂಬುದೇ ಚಿಂತೆಯಾಗಿದೆ (ಗೃಹಂ. ೬೪); ಕೇವಲ ಮೂವತ್ತೈದೇ ವರ್ಷ ಪಿಂಚನಿಯನ್ನು ಅನುಭವಿಸಿ. . .ಕಣ್ಮರೆಯಾದ ಮಹನೀಯರ ಆತ್ಮಕ್ಕೆ ಶಾಂತಿ ಕೋರುತ್ತೇವೆ (ಹುತ್ತುಹು. ೬೨). **ಪಿಂಚನ್ನು** : ೧. ಅವರು ಈಗ. . .ಅಲ್ಪ ಪಿಂಚನ್ನಿನಿಂದ ತಮ್ಮ ಜೀವನ ತಳ್ಳುತ್ತಿದ್ದರು (ಶಾಂತಕ. ೬೦). **ಪಿಂಛನು** : ೧. "ನೌಕರನು ಒದಿ ಸಲ್ಲಿಸಿದ ಸೇವೆಗಾಗಿ. . .ಕೊಡುವ ನಿಯತಕಾಲಿಕ ವಿಶ್ರಾಂತಿ ವೇತನ ; ಪಿಂಛನು " (Pension. ಇಂಕಾ). **ಪೆನ್ಶನ್** : ೧. ನಿರಾಯಾಸವಾಗಿ ಸಿಗುವ ಈ ಪೆನ್ಶನನ್ನು ಕಳೆದುಕೊಳ್ಳು ವುದು ಯುಕ್ತವಲ್ಲ (ಶರಿಶ್ನ. ೯೫). **ಪೆನ್ಷನ್** : ೧. ಯಾವುದಾದರೂ ಸರ್ವಿಸ್ ಫ್ಯಾಮಿಲಿ ಪೆನ್‌ಷನ್ ಫಂಡಿನಿಂದ ಸಲ್ಲುವ ಸಂಬಳಗಳು ಮತ್ತು ಗ್ರಾಚುಯಿಟಿಗಳು (ಗ್ರಾಕಾಶ. ೩೫). **ಪೆನ್ಷನು** : ೧. ಪೊಲಿಟಿಕಲ್ ಯಾ ರಾಜಕೀಯ ಪೆನ್‌ಷನುಗಳು (ಗ್ರಾಕಾಶ. ೩೫).

ಪಿಂಚಣ್ಯಾಗು=ನಿವೃತ್ತಿ ಹೊಂದು : ಈಗ ಪಿಂಚಣ್ಯಾಗಿ ಸ್ವಂತ ಊರಲ್ಲಿದ್ದೇನೆ (ಅಕಥ. ೩೦). [ ←ಇಂ. Pension ]

**ಪೆನ್ಸಿಲ್** 'ಪೆನ್ಸಿಲ್ಲು' ನೋ.

**ಪೆನ್ಸಿಲಿನ್** 'ಪೆನ್ಸಿಲಿಯನ್' ನೋ.

**ಪೆನ್ಸಿಲಿಯನ್**, ಪೆನ್ಸಿಲಿನ್ (ನಾ). ಏಕಾಣುಜೀವಿಗಳಿಂದ ಹರಡುವ ಅಂಟುರೋಗಗಳ ಚಿಕಿತ್ಸೆಯಲ್ಲಿ ಬಳಸುವ, ಶಕ್ತಿಯುತವಾದ ಒಂದು ಬಗೆಯ ಔಷಧ : ಒಂದು ಕೋರ್ಸ್ ಪೆನ್ಸಿಲಿಯನ್ ಕೊಡೋಣವೆಂದು ನುಡಿದರು (ಹುತ್ತುಹು. ೫೦). **ಪೆನ್ಸಿಲಿನ್** : ವಿಷಫಲಗಳಲ್ಲದೆ ಬರಿಯ ಪೆನ್ಸಿಲಿನ್ ಕೊಟ್ಟರೆ ರೋಗಿಯು ಬಹುಬೇಗ ಸಾವನ್ನಪ್ಪುತ್ತಾನೆ (ಕಂರೋ. ೨೫). [ ←ಇಂ. Penicillin]

**ಪೆನ್ಸಿಲು** 'ಪೆನ್ಸಿಲ್ಲು' ನೋ.

**ಪೆನ್ಸಿಲ್ಲು**, ಪೆನಸಲು, ಪೆನ್ಸಿಲ್, ಪೆನ್ಸಿಲು (ನಾ). ಬರೆಯಲು ಉಪಯೋಗಿಸುವ ಒಂದು ಬಗೆಯ ಸಾಧನ ; ಸೀಸದ ಕಡ್ಡಿ : ಮಣಿಸಿನ ಹಲಗೆಯೊಳಿ ನಿಯತ ಬರೆವರು ನೆನಹಿನ ಪೆನ್ಸಿಲ್ಲಿನಿಂದೆ (ಕಾವ್ಯ. ೫೯-೦೫). **ಪೆನಸಲು** : ಅವುಗಳ ಮೇಲೆ ಅದೇ ಜಾತಿಯ ಪೆನಸಲಿನಿಂದ ಬರೆಯುತ್ತಾರೆ (ಮುಂಬಾಬು. ೫೭). **ಪೆನ್ಸಿಲ್** : ಸದಾಶಿವನಿಗೆ ಕಾಗದ ಪೆನ್ಸಿಲಿಗೂ ಕಷ್ಟವಾಗುತ್ತಿತ್ತು (ಕ್ಯಾಗಮು. ೦೮೫). **ಪೆನ್ಸಿಲು** : ಅದೇ ಪ್ರಮಾಣದಿಂದ ಅಲ್ಲಿರುವ ಪೆನ್ಸಿಲು ಕೆಳಗಿನ ಕಾಗದವನ್ನು ಒತ್ತಿಕೊಂಡು ಚಲಿಸುವುದು (ಬಾರ್ಚ್ಯ. III, ೦೫೨೫); ಕೈಯಲ್ಲಿ ಹಿಡಿದಿದ್ದ ಪೆನ್ಸಿಲನ್ನು ಮೇಜಿನ ಮೇಲಿಟ್ಟು . . . ಕುರ್ಚಿಗೆ ಒರಗಿ ಕುಳಿತುಕೊಂಡ (ಕಾವಾದು. ೨೭). [ ← ಇಂ. Pencil ]

**ಪೆನ್ನಿದಿಬೋಯ** (ನಾ). ಒಬ್ಬ ವ್ಯಕ್ತಿನ ಹೆಸರು: ಪೆನ್‌ಹಿದಿಬೋಯಸ್ಯ ಕೌಣ್ಡಿನ್ಯಗೋತ್ರ ಜಕ್ಕಿಶರ್ಮಣ ಏಕ್ಕಂಶಃ (ಇಇ. VII, ೧೮೭-೩೨ ; ೬೬೮). [ ? + ಬೋಯ ]

**ಪೆಪ್ಪರಮೆಂಟ್** 'ಪೆಪ್ಪರ್ಮೆಂಟು' ನೋ.

**ಪೆಪ್ಪರಮೆಂಟು** 'ಪೆಪ್ಪರ್ಮೆಂಟು' ನೋ.

**ಪೆಪ್ಪರ್ಮಿಂಟು** 'ಪೆಪ್ಪರ್ಮೆಂಟು' ನೋ.

**ಪೆಪ್ಪರ್ಮೆಂಟ್** 'ಪೆಪ್ಪರ್ಮಿಂಟು' ನೋ.

**ಪೆಪ್ಪರ್ಮೆಂಟು**, ಪೆಪ್ಪರಮೆಂಟ್, ಪೆಪ್ಪರಮೆಂಟು, ಪೆಪ್ಪರ್ಮಿಂಟು, ಪೆಪ್ಪರ್ಮಿಂಟ್ (ನಾ). (ಯಾವುದಾದರೂ ಕೆಲವುಬಗೆಯ ಸಸ್ಯದ ಪರಿಮಳವನ್ನು ಸೇರಿಸಿ) ಸಕ್ಕರೆಯಿಂದ ಮಾಡಿದ ಸಣ್ಣ ಆಕಾರದ ಒಂದು ವಿಧವಾದ ತಿನಿಸು ; P 'ಮಿಂಟ್' ಎನ್ನುವುದು ಇಂಗ್ಲಿಷ್‌ಭಾಷೆಯಲ್ಲಿ ಕೆಲವು ಸಸ್ಯಗಳ ವರ್ಗವನ್ನು ಸೂಚಿಸುತ್ತದೆ : ಗುಂಡಣ್ಣನು ಪೆಪ್ಪರ್ಮೆಂಟುಗಳನ್ನು ತಂದಾಗ ಚನ್ನ ಗೆಳೆಯರಿಗೆ ಮಾತ್ರ ಕೊಡುತ್ತಿದ್ದನು (ಕಂಗರೂ. ೨೮). **ಪೆಪ್ಪರಮೆಂಟ್** : ಅವರಿಗೆಲ್ಲ ರಾಜರು ಈಪರಿಗೆ ಅದೆಷ್ಟು ಚಾಕ್ಲೇಟ್, ಪೆಪ್ಪರಮೆಂಟ್ . . . ಕೊಟ್ಟಿದ್ದಾರೋ (ಕಂಠಿಹು. ೧೨೦). **ಪೆಪ್ಪರಮೆಂಟು** : ಮಕ್ಕಳು ಪೆಪ್ಪರಮೆಂಟಿಗೆ ಆತ್ತು ತಿಂದಂತೆ ಮಕ್ಕಳ ತಂದೆ ತಾಯಿಗಳು ಆಸ್ಪಿರಿನ್ ತಿಂದರು (ಹುಕ್ಕು.ಹು. ೩೨). **ಪೆಪ್ಪರ್ಮಿಂಟು** : ಹರಿಕಥೆಗಳಲ್ಲಿ ಮಕ್ಕಳಿಗೆ ದೊರೆಯುವುದು ಅದ್ದಕಥೆ'ಯ ಸವಿಯಾದ ಪೆಪ್ಪರ್ಮಿಂಟು (ಕಲೆ. ೨). **ಪೆಪ್ಪರ್ಮಿಂಟ್** : ಗೋವಿಂದ ಜೇಬಿನಿಂದ ಎರಡು ಪ್ಯಾರಿ ಪೆಪ್ಪರ್ಮಿಂಟ್‌ಗಳನ್ನು ತೆಗೆದು . . . ಬಾಯಿಗೆ ಹಾಕಿಕೊಂಡನು (ಬಕಾ. ೯). [ ← ಇಂ. Peppermint ]

**ಪೆಪ್ಪಳಿಸು** 'ಪೆಳ್ಪಳಿಸು' ನೋ.

**ಪೆಪ್ಪಿಡು**, ಹೆಪ್ಪಿಡು (ಕ್ರಿ). ೧. ಹೆಪ್ಪಾಗಲು ಹಾಲಿಗೆ ಮೊಸರನ್ನು ಬೆರಸು : ಹೆಪ್ಪು ಹಾಕು : ಪೆಪ್ಪಿಟ್ಟು ಕಡದು ಪಾಲೊಳು ತುಪ್ಪಂಬಡೆವಂತೆ (ಶಠವಾ. ೩೯.೮೪). **ಹೆಪ್ಪಿಡು** : ೧. ಹೆಪ್ಪಿಟ್ಟೊಡೆ ಪಾಲ್ ಮೊಸರಾಗಿಪ್ಪಂತಿರೆ ನೀರ್ಗಳಾಗಲಜಿಗುಮೆ (ರಶಶೇಖ. ೧೧.೦೬೭); ಹೆಪ್ಪಿಟ್ಟ ಹಾಲು ಗಟ್ಟಿಗೊಂಡು ಸಿಹಿಯಾದುದುಂಟು (ಮಹಾರೀ. ಬ. ೦೦೦-೨೯೯); ಅಪ್ಪುದದರಿಂದ ಕಾರ್ಯವ ತಪ್ಪದೆ ಮಾಡುವದು ಏರಿಯರೀವುದು ಹಾಲಂ ಹೆಪ್ಪಿಡುವರೆ ಪಾಳೆಯಲ್ಲದೆ ತುಪ್ಪವನೆರದಪುದೆ (ಹಿತೋ. ೨೬೨). ೨. ಗಡ್ಡೆ ಕಟ್ಟು; ಘನೀಭವಿಸು : ಬಾಣಂತಿಯರಲ್ಲಿ ಒಮ್ಮೊಮ್ಮೆ ಹೆಪ್ಪಿಟ್ಟ ರಕ್ತದ ತುಣುಕೊಂದು . . . ಶ್ವಾಸಕೋಶದ ರಕ್ತನಾಳಕ್ಕೆ ಅಡ್ಡಬೀಳಬಹುದು (ಜನೋಸಂ. ೦೩). [ಪೆಪ್ಪು + ಇಡು]

**ಪೆಪ್ಪು**, ಹೆಪ್ಪು, (ನಾ). ೧. ಮೊಸರು ಮಾಡುವುದಕ್ಕಾಗಿ ಹದವಾಗಿ ಕಾಯಿಸಿದ ಹಾಲಿಗೆ ಹಾಕುವ ಮೊಸರು ಅಥವಾ ಮಜ್ಜಿಗೆ: ಕ್ಷೀರದೊಳಿಸ ವಂತಿರೆ ಕಾಶ್ಮೀರವನೊಡಗೂಡಿ ಪೆಪ್ಪನಿಟ್ಟು ಮೊಸರಂ ಸೀರೆಯೊಳಗಿಕ್ಕಿ ಪಿಟಿದಂದು (ಲೀಲಾ. ೬-೩೨): ಆ ಕಾಯ್ದಾಜಾದ ಪಾಲೊಳೆ ತುಪ್ಪ ವಾಗದೆಂದು ಪೆಪ್ಪನೆಜೆದು ಬಯ್ತಿಟ್ಟು (ಜೀವಸಂ. ೨೦೬.೦೦). **ಹೆಪ್ಪು** : ೧. "ಆ(ವಿಾ)ವಿಕ್ಷ್ವಾಯೆಂಬುದು ಹೆಪ್ಪು" (ಶಬ್ದಮ. ೬೯-೨೬೨); ಕ್ರಮದಿಂ ಪಾಲಂ ಕಾಸಿ ಹೆಪ್ಪನಿಟ್ಟು (ಶಠಶೋಕ್ಕು. ೯-೦೨೦); ದ್ವಿತ್ವಕಿಲ್ಲದು ದರ್ಶ_ತಪ್ಪು, ಸೊಪ್ಪು, ಹೆಪ್ಪು . . . ಕಪ್ಪುರಂ ಎಂಬಂತೆ (ಕಹರ. ೦೩೯ ಕೃಶೂ); ಒಗತನ ಬಿಟ್ಟು ಹೋಹಾಗ ಹಾಲಿಗೆ ಹೆಪ್ಪ ಮೊಗೆದಿಕ್ಕ ದವರಾರುಂಟು (ಬೋಕಶ. ೯-೦೯). ೨. ಗಟ್ಟಿಯಾದ ಭಾಗ ; ಮುದ್ದೆ : ವಸ್ತುವೊಂದರ ಉಪಾದಾನಕಾರಣವು ಅದರ ನಿಮಿತ್ತಕಾರಣಕ್ಕಿಂತ ಭಿನ್ನವಾಗಿರುತ್ತದೆ: ಮಣ್ಣಿನ ಹೆಪ್ಪು, ಕುಂಬಾರನಿಗಿಂತ ಭಿನ್ನವಾಗಿರುವಂತೆ (ಕಶ್ಯಪ್ರಾ. ೩೬೦). ೩. ಗಾಢತೆ : ತೀವ್ರತೆ : ತನ್ನಯಾತೆಯ ಹೆಪ್ಪನ್ನು ಒಡೆದದ್ದು ಒಂದು ವಿಚಿತ್ರವಾದ ನಗೆ ! (ಜೀತುಸೂ. ೧). ೪. ಹುಲ್ಲುಗರಿಕೆ ಬೆಳೆದ ನೆಲದಿಂದ ಅಗೆದು ತೆಗೆದ ದಪ್ಪ ಹೆಂಟೆ : ತೆಂಡೆ : ಆನೆಯನ್ನು ಹಿಡಿಯುವ ಕೆಲಸದಲ್ಲಿ . . . ಕಪ್ಪಗಳು ತೋಡಿದ ಹಾಗೆ ಅವೆ. ಅವುಗಳಮೇಲೆ ಗಳುಗಳ ಹಾಕಿ ಅವುಗಳಮೇಲೆ ಹೆಪ್ಪುಗಳ್ನ ಇಟ್ಟು ಮಣ್ಣು ಸುರಿದು ಭತ್ತದ ಪೈರು ನೆಟ್ಟರೆ . . . ಅದರ ಮೇಲೆ ಕಾಲಿಟ್ಟರೆ (ಕೆಂಗಾಕ್ಕ. ೨೩೭). 'ಹೆಪ್ಪುಗಟ್ಟು,' ಪರಾ.

**ಹೆಪ್ಪಾಗು** = ೧. ಗಡ್ಡೆಯಾಗು : ಗಟ್ಟಿಯಾಗು : ಇವನ ಸಂಶೋಧನವಿಷಯ ರಕ್ತನಾಳಗಳಲ್ಲಿ ರಕ್ತ ಹೆಪ್ಪಾಗುವಿಕೆ (ಅಆಸ. X ಅಹಾರರಹಾ); ಕುಳಿರಿಂದ ಹೆಪ್ಪಾದ ಹಾಲ್ಗಡಲಿನ್ನೆಕಿಲೊಳ್ಗಡ್ಡೆಯಂ ಕಡಿ ಕಡಿಯುತ (ತತ್ವಾಂಗ. ೯೦-೨೯೯೯). ೨. ಹಾಲು ಮೊಸರಾಗಿ ಪರಿವರ್ತನೆ ಹೊಂದು : ಹಾಲ ಹರವಿಯ ಮೇಲೆ ಮಜ್ಜಿಗೆಯ ತುಂಬಿರಿಸಿದಡೇನು ಹೆಪ್ಪಾಗಬಲ್ಲುದೆ ಅಮ್ಮಾ ಸಮ್ಮಿಶ್ರದಿಂದಲ್ಲದೆ (ಅಆಂದೀ. ೧೬೨-೧೦೩). ೩. ಗಾಢವಾಗು ; ತೀವ್ರವಾಗು ; ಹೆಚ್ಚಾಗು ; ಶಿವಲೀಲೆ ಹೆಪ್ಪಾಗಿ ಶಿವಶರಣ ಚೌಡಂಗಿ ಭವದೊಳಗೆ ಹುಟ್ಟಿ ಶಿವನುಡಿಯ ಸಾರಿದನು (ಕನ್ನಜಾ. ೨೯೦). ೪. ಅತಿಶಯವನ್ನು ಹೊಂದು ; ಹಿರಿಮೆಯನ್ನು ಪಡೆ : ಒಬ್ಬ ಬಸವನಿಂದ ಭೂಮಿಗೆ ಹೆಪ್ಪಾಯ್ತೆಂದು ಉಬ್ಬಿ ಹೇಳುವಿರಿ ಲೋಕದೊಳು (ಬಶಂಂ. ೯-೬೬). **ಹೆಪ್ಪು ಹಾಕು** = ಹೆಪ್ಪಾಗಲು ಹಾಲಿಗೆ ಮೊಸರನ್ನು ಬೆರಸು ; ಹೆಪ್ಪಿಡು : ಒಳ್ಳೆಯ ಹೆಪ್ಪು ಹಾಕಿದ ಧೃಂಡಿ ಮೊಸರು (ಕಂಗಶ. ೧೨೬) ; ಉಳಿದ ಹಾಲನ್ನು ಅರೆಗಾವು ಕಾಸಿ ಹೆಪ್ಪು ಹಾಕಿ . . . ಮಾರುತ್ತಿದ್ದಳು (ಜಿಕಾಂ. IX, ೨೯) ; ಓಡಿ ಹೋಗುವ ಬದ್ದಿ ಹಾಲಿಗೆ ಹೆಪ್ಪು ಹಾಕ್ತಾಳೇ ? (ಗಾದೆ). [<ಪೆಜು, + -ಪು]

**ಪೆಬ್ಬಾವು** 'ಪೆರ್ಬಾವು' ನೋ.

**ಪೆಬ್ಬೀಳ್** (ನಾ). ಒಂದು ಊರಿನ ಹೆಸರು : ಸ್ವಸ್ತಿಶ್ರೀವಲ್ಲಭ ಪೃಥುವೀರಾಜ್ಯಂಕೆಯ್ಯ ಸಿಯಗೆಲ್ಲ ಕೆಸುವಮಾಣ್ಣು ನಾಡಾಳೆ ಗುಣ್ಣಿಗೆವಾಟಕ್ಕ ಕೆಟ್ಟಲಂಬುತ್ತುಮ್ ಕಾಡುವಟ್ಟ ಬೋಳದುಳ್ಳಿ ಪಬ್ಬೀಳ ನಲ್ಲಕ್ಕಳ್ ಎಱಿದುವಿಟ್ಟಾರ್ (ಎಕ. XVI. ತುಮುಕೂ. ೯೬-೨ : ಸು. ೭೮೦). [?]

**ಪೆಬ್ಬೆಟ್ಟು** 'ಪೆರ್ಬೆಟ್ಟು' ನೋ.

**ಪೆಬ್ಬೊಟಿಲ್** 'ಪೆರ್ಬೊಟಿಲ್' ನೋ.

**ಪೆಮೊಗೆ** (ನಾ). ಒಂದು ಸ್ಥಳದ ಹೆಸರು : P ಈಗಿನ ತಿರುವ ಕೂಡಲುನರಸೀಪುರ ತಾಲ್ಲೂಕಿನ ಹೆಮ್ಮಿಗೆ : ಪೆರ್ಮಾನಡಿಗಳ್ ಅರಸಿಯ ಬೆಸಕೆ ಪೆಮೊಗೆಯುನ್ ಆಳಿದೊಪದುದಿನ ಈಬ್ಬಲೆ ಪತೊನ್ನಿಟ್ಟಿರ್ (ಎಕ. XIV. ತಿರುಮ. ೨೬೯-೬ ; ೩ನೆಯ ೮೩). [?]

**ಪೆಮ್ಮ,** 'ಪೆರ್ಮ,' ನೋ.

**ಪೆಮ್ಮ,** (ನಾ). (?) : ಗಣಿಗರು ಪೆಮ್ಮದವರು ಆಸನ್ನರು ಏನಿತ್ತರು ಸಾಕ್ಷಿ (ಎಕ. XIV, ೨೬೬-೦ ; ಸು. ೨ನೆಯ ೮೩). [?]

**ಪೆಮ್ಮಟ್ಟಿ** 'ಪೆರ್ಮಟ್ಟಿ' ನೋ.

**ಪೆಮ್ಮಡಿ** 'ಪೆರ್ಮಾನಡಿ' ನೋ.

**ಪೆಮ್ಮನಡಿ** 'ಪೆರ್ಮಾನಡಿ' ನೋ.

**ಪೆಮ್ಮರ** 'ಪೆರ್ಮರ' ನೋ.

**ಪೆಮ್ಮರುಳ್** 'ಪೆರ್ಮರುಳ್' ನೋ.

**ಪೆಮ್ಮಳಿಸು** (ಕ್ರಿ). (?) : ಪಾಣ್ಡ್ಯನೃಪನ ಮುಖದಾಸ್ತ್ರ ತೂಳ್ದು ಬನ್ದವೆಮ್ಮಗನೂರಲೊಡ್ಡಿದಡೆ ವಿಷ್ಣುನೃಪಾಳಕ ನೋಡೆ ವೈರಿಯಂ ಪೆಮ್ಮಳಿ ಸಿದ್ದ್ಲ ಮಾಜಿಗಜಯೂಥಮನಾಳ್ದಜೆಯಟ್ಟಿ (ಎಕ. XII, ಕಕ್ಕಜಾ. ೩೩.೬೬; ಸು. 1200). [? + – ಇಸು]

**ಪೆಮ್ಮಾಡಿ** 'ಪೆರ್ಮಾನಡಿ' ನೋ.

**ಪೆಮ್ಮಾಡಿಗೊಂಡ** 'ಪೆರ್ಮಾನಡಿಗಾವುಂಡ' ನೋ.

**ಪೆಮ್ಮಾನಡಿ** 'ಪೆರ್ಮಾನಡಿ' ನೋ.

**ಪೆಮ್ಮಾಳ್** (ನಾ). (?) : ಕೊಪಳಾಟಮಹೇಶ್ವರ ದಿವಿಜಗ್ಗಟಪಲ್ಲಹ ಪೆಂಪಮಳ್ಳಜಿಸೆ ಪೊಗೊಳ್ದ ಸಾದಾರಣ (ಎಕ. XVI. ತುಮುಕೂ. ೯೦-೦೯; ಸು. 775) ; ಮೂನೂರ್ವ್ವರುಂ ಸೂಳೆಯರುಂ ಪೆಮ್ಮಾಳರಾನುಳ್ಪಟ್ಟ ಮೂನೂರ್ವ್ವರುಂ ಪಹುದಿದಕ್ಕೆ ಸಾಕ್ಷಿ (ಎಕ. X. ಶ್ರೀನಿವಾ. ೦೬-೬; ೯). [?]

**ಪೆಮ್ಮೆ** 'ಪೆರ್ಮೆ' ನೋ.

**ಪೆಯಿನಕೆಚಿ** (ನಾ). ಒಂದು ಊರಿನ ಹೆಸರು : ಅಲ್ಲಿನ್ದ ತೆಙ್ಕಲು

ಬೆದಿರೂರ(ರ) ತೊಱೆವೊನ್ದು ಕೂಡಿದ ಪೆಯಿಸಕಱೆಯ ಜಲಾಶಯಂ (ಮೈ.ಶಾ. ೦೯೫೫, ೦೦೫-೯೦; ೮೩೪). [ ? + ಕೆಱೆ[3] ]

**ಪೆಯ್ಕು** 'ಪಯ್ಕು' ನೋ.

**ಪೆರ್** 'ಪಿರ್ಕು' ನೋ.

**ಪೆರ$_1$** 'ಪೆಱು$_1$' ನೋ.

**ಪೆರ$_2$** 'ಪೆಱು$_2$' ನೋ.

**ಪೆರಂಬ** 'ಪರಂಬೆ' ನೋ.

**ಪೆರಂಬೆ** 'ಪರಂಬೆ' ನೋ.

**ಪೆರಗಿಕ್ಕು** 'ಪೆಱಗಿಕ್ಕು' ನೋ.

**ಪೆರಗು** 'ಪೆಱಗು' ನೋ.

**ಪೆರಗೆ** 'ಪೆಱಗೆ' ನೋ.

**ಪೆರಟ** (ನಾ). ಒಂದು ಸ್ಥಳದ ಹೆಸರು: ವಾತ್ರಿಶತಮ್ರ್ಮಣೇ ಪೆರುವಿಷಯೇ ಪೆರಟಭೋಗೇ ಕುರಲೂರನಾಮ ಗ್ರಾಮೋದತ್ತ (ಮೈ.ಶಾ.೦೯೧೫, ೦೬-೦೬; ?) [ ? ]

**ಪೆರತಿ** (ನಾ). ಅನ್ಯಳು: ಪರಕೀಯಳು: ನಿನ್ನೊಳನುರಾಗ ವೆಗ್ಗಳಿಸಿ ಪೋಸಕ್ಕೆ ಸಿಕ್ಕಿ ಮನ್ನಿಸದೆ ಕೌಸಲ್ಯೆಯುಮಂ ಪೆರತಿಯೆಂದೆಣಿಸಿ (ಪಂಕಾಶಾ. ೨-೬-೯೦). [ ಪೆರ$_1$ (< ಪೆಱು) + — ತಿ$_1$ (< — ಇತ್ತಿ) ]

**ಪೆರದೆಗೆ** 'ಪೆಱದೆಗೆ' ನೋ.

**ಪೆರದೇಗು** (ನಾ). ದೊಡ್ಡ ತೇಗದ ಮರ: ಸೋಮೆಯದೇವರಿಗೂ ರಾಮಚಂದ್ರದೇವರಿಗೂ ಪೆರದೇಗಿನ ತೇರಾಗಿ ಪೊಂದು ಮಾಸವಾಗಿ ರತೋತ್ಸವ ನಡೆಯಬೇಕೆಂದು ಮಾಡಿಸಿದನು (ಎಕ. X (S), ಮುಳಬಾ. ೦೯೬-೦೭; 1498). 'ಹೆದ್ದೇಗು' ಪರಾ. [ ೯ ಇದು 'ಪೆರ್ದೇಗು' ಎಂಬುದರ ಅಪಲಿಖಿತ ]

**ಪೆರಮಾಟ[3]** (ನಾ). ಒಂದು ಸ್ಥಳದ ಹೆಸರು: ಪಡಗಣ್ಣಾಸೀಮೆ ಪೆರಮಾಟ[3] ಪಡುವಣ್ಣಾ ಸೀಮೆ ತನ್ನಾಳ್ಕೆಗಾರ ಪಾಟ[3] (ಎಶ. XXI, ೧೬೯-೦೨; ಕು. ೩೫ಡು ೫೫). [?]

**ಪೆರಮುಟಬೇರು** (ನಾ). ಒಂದು ಬಗೆಯ ಮೂಲಿಕೆ: "ಬಲರಕ್ಕಸಿ, ಪೆರಮುಟಬೇರು, ಕರೇಬಾಳದ ಬೇರು, ಬಾಲರಾಕ್ಷಸಿ" (ಸಕ್ಕ೩. ೦೦೨); ಬಲರಕ್ಕಸಿ, ಪೆರಮುಟಬೇರು (ವೈಕಿಗಿ. ೬೦-೦೨೦೯). [ ? + ಬೇರು (< ಬೇರ್) ]

**ಪೆರಮೊಂದ** (ನಾ). ಒಬ್ಬಾತನ ಹೆಸರು: ಪೆರಮೊಣ್ಣ ಮಗಂ ಮೊದಯರ್ಸ್ತ ನೆಮಲದ ತೊರೆಗಳಳ್ಳಿಯಿದು (ಎಕ. X, ಶಂಕಾಶು. ೦೦೯-೨; ಕು. 1000). [ ? ]

**ಪೆರಸಾರು** 'ಪೆಱಸಾರ್' ನೋ.

**ಪೆರಿಯಾಳ** (ನಾ). ಒಂದು ಊರಿನ ಹೆಸರು: ಸ್ವಭಾವಯಾ ಪೆರಿಯಾಳ ನಾಮ ಗ್ರಾಮಂನ್ತ್ರಮ್ (ಎಕ. X, ಗೋ೦೬೮. ೯೬-೦೯; ಕು. ೬೪೦). [?]

**ಪೆರಿಯೂರು** (ನಾ). ಒಂದು ಊರಿನ ಹೆಸರು: ಸ್ವಸ್ತಿಶ್ರೀ ಮಾದಿಯ ಗಾಮುಣ್ಡರೀ ಪೆರಿಯೂರು × × × (ಎಕ. IX, ಪೆಂಗಳೂ. ೬೯-೨; ಕು. 1000). 'ಪೇರೂರ್' ಪರಾ. [< ಪಿರಿದು$_1$ + ಊರು$_1$ (< ಊರ್)]

**ಪೆರಿಸಂದು** (ನಾ). ಒಂದು ಸ್ಥಳದ ಹೆಸರು: ಅನ್ತೆ ಒನ್ದು ಬಾಳಗೆಱೆಯ ಮಾಱಣ ಕಟಿಯ ಪೆರಿಸನ್ದರಿಂ (ಎಕ. III, ಶಂಕಸ. ೦೬೯-೦೬; 916?). [?]

**ಪೆರು$_1$** 'ಪೆಱು$_1$' ನೋ.

**ಪೆರು$_2$** 'ಪಿರ್ಕು' ನೋ.

**ಪೆರುಂತಚ್ಚ** (ನಾ). ಪ್ರಸಿದ್ಧನಾದ ಬಡಗಿ: ನಾರಾಯಣ ಪೆರುನ್ತಚ್ಚನ್ (ಮೈ.ಶಾ. ೦೯೬೨, ೫೮-೭; ಕು. 826). [← ತಮಿ. ಪೆರುನ್ತಚ್ಚನ್]

**ಪೆರುಂದಾಳಿಸೆಟ್ಟಿ** (ನಾ). ಒಬ್ಬಾತನ ಹೆಸರು: ಗಾಣಗರ ಪೆರುನ್ದಾಳಿಸೆಟ್ಟಿಯರ ಮಗಂ ಗಜ[3] ಸೆಟ್ಟಿ (ಎಕ. X, ಕೋಲಾರ. ೨೯೫-೨; ೯೬೦). [? + ಸೆಟ್ಟಿ]

**ಪೆರುಂಬೆ** 'ಪರಂಬೆ' ನೋ.

**ಪೆರುದಟ್ಟಾರ** (ನಾ). ಹಿರಿಯ ಅಕ್ಕಸಾಲಿಗ: ಕೊಱಿಕ್ಕೊಣಿ ಪೆರುದಟ್ಟಾರೇಣೇದಂ ತಾಮ್ರಶಾಸನಲಿಖಿತ (ಎಕ. X (S), ಮುಳಬಾ. ೩೨೮-೬೨; ಕು. ೬೫೦). [ಪೆರು$_2$ (< ಪಿರಿದು$_1$) + ತಟ್ಟಾರ]

**ಪೆರುಮಾಳ್, ಪೆರುಮಾಳು** (ನಾ). ೧. ಪರಮಾತ್ಮ; ದೇವರು: ಕಡುಫಿನ ಪೆರುಮಾಳೇಯುಎಫೊಡೆಯೋ (ಶಿಲಾಶಾ. ೯೮. ೨೨೫-೯). ೨. ಶ್ರೇಷ್ಠನಾದವನು; ಹಿರಿಮೆಯುಳ್ಳವನು: ಎಡೆಗಣೆಯ ಪೆರುಮಾಳೆ ಜಾಗವಾಕ ನೀಡಿ (ತಲಕ. ೫೫-೯೨). **ಪೆರುಮಾಳು**: ೧. ಆಳಾಗಿ ಹೊರಟು ಆಳುವದು ಜಗವ ಪೆರುಮಾಳಿ ಜನಿಸುವಂತೆ (ಅಶಳ. ೬೨-೯). ೩. ಒಬ್ಬಾತನ ಹೆಸರು: ಶ್ರೀಪೆರುಮಾಳು ಗುರವಡಿಗಳಾ ಶಿಷ್ಯ (ಎಕ. II, ೭-೦; ಕು. 700). [ದೇ. ॥ ತಮಿ. ಮಲ. ಪೆರುಮಾಳ್; ತೆಲು. ಪೆರುಮಾಳ್ಳು]

**ಪೆರುಮಾಳು** 'ಪೆರುಮಾಳ್' ನೋ.

**ಪೆರುಮಾಳ್ತನ** (ನಾ). ಹಿರಿಯತನ; ಶ್ರೇಷ್ಠತೆ: ಅತಿಶಯತೆ: ಸಾಯುವುದರೊಳಗೆ ಒಂದು ದಿನಕ್ಕಾದರೂ ತನ್ನ ಗಂಗಕುಲದ ಪುರಾತನ ಪೆರುಮಾಳ್ತನದ ಗದ್ದುಗೆಯನ್ನೇರುವುದೆಂತು? (ಶಿ.ಕಶಾ. ೬೨). [ಪೆರುಮಾಳ್ + — ತನ]

**ಪೆರೆ$_1$** 'ಪೆಱೆ[3]' ನೋ.

**ಪೆರೆ$_2$** 'ಪೊರೆ$_1$' ನೋ.

**ಪೆರೆಗಳೆ, ಪರೆಗಳೆ, ಹರೆಗಳೆ, ಹೆರೆಗಳೆ, ಹೊರೆಗಳೆ** (ಕ್ರಿ). ೧. (ಹಾವು) ಚರ್ಮದ ಆವರಣವನ್ನು ಕಳಚು: ನಿರ್ಮೋಕವನ್ನು ಬಿಡು; ಪೊರೆಯನ್ನು ಕಳಚು: ಪೆ[ಪಾಠಾಂ. ಹ]ರೆಗಳೆದ ಮನೋಜವಿಷೋರಗ ಮೊಂದು ಒಗೆದನಕ್ಕುಂ ಮನದೊಳ್ (ಪರಪು. ೩-೦೭); ಪೆರೆಗಳೆ[ಪಾಠಾಂ. ೯]ದ ಫಣಿಕುಲದಂತೆ ನಲಿದುದು ಚತುರ್ಬಲಂ (ಕೈ.ಶು.ಶಾ. ೨೦-೩೦). **ಪರೆಗಳೆ**: ೧. ನಿರ್ಮುಕ್ತ—ಪರೆಗಳೆವ ಹಾವು (ಗಂಗಾಮ. ೮೬೫). **ಹರೆಗಳೆ**: ೧. ಹ[ಪಾಠಾಂ. ಹೊ]ರೆಗಳೆದ ಉಲೋರಗಗಂಗಣೆಯಾವನವಾರಾರಿ (ಶಿಕಾಗ. ೦೦-೨-೯೦). **ಹೆರೆಗಳೆ**: ೧. ಹಸಿದ ಹುಲಿಂೋ . . . ಹೆರೆಗಳೆದ ನಿಟ್ಟುಸಿರಿನುರಗನೋ ಮೋಹನಲು ಸಾವಿತ್ರಿ ಹಲುಮೊರೆದ (ಕೋಕಶಾ. ೨-೩-೭): ಮನೋಜ್ಞಾಂಗಂ ಪೊದಳ್ದುರ್ಬಿದೊಡದು ಜಾಱಿತ್ತು ಬಾಹಾಹಿತದ್ದೇಹ ಮಹಾಶ್ರೀಖಂಡಶಾಖಾಗ್ರದೆ ಹೆರೆಗಳೆವುತ್ತಿರ್ಪುದೆಂಬಂದದಿಂದಂ (ಶಾಕಕ. ೦೦-೦೯೦): ಹರೆಗಳೆವ ಉರಗನ ನರಳ ತಾ ತಪ್ಪುವದೆ (ಸರಕ್ಕ. ೦೦೦೬). **ಹೊರೆಗಳೆ**: ೧. ಹೊರೆಗಳೆದ ಫಣಿಯಂತೆ ಪುರುನ್ನನ ಶರೀರವಳಿದುದು ದಿವ್ಯತನು ಸಡಗರಿಸಿತಾಕ್ಷಣ ದೆಸೆಯು ಬೆಳಗಿಡೆ ಕಾಂತಿಯುಕ್ತದಲಿ (ಶಂಕಶಾ. ೪೯-೬೮). ೨. (ಹೊರ) ಪದರವು ಸುಲಿ: ದೊರೆವಣ್ಣಾ ಹೊಂಬಾಳೆದೊಡೆ ಸೊಂಪು ನುಣ್ಪುವೆತ್ತಿರೆ ಕಂಡು ಕದಳಿ ಕಂಗಲಿಬಿ ಒರೆಗೆ ತಾ ಸಲ ಬಂದುದಿಲ್ಲವೆಬೋದೊಂದು ಹೊರೆಗಳೆದುದು ಬಾಳೆ ಬಸದಿ (ಕೋಹಶ. ೨೯-೯೦). [ ಪೆರೆ$_2$ (< ಪೊರೆ$_1$) + ಕಳೆ$_1$ ]

**ಪೆರೆಗೊಡೆಯ** 'ಪೆಱೆಗೊಡೆಯ' ನೋ.

**ಪೆರೆದಲೆ** 'ಪೆಱೆದಲೆ' ನೋ.

**ಪೆರೆದಲೆಯ** 'ಪೆಱೆದಲೆಯ' ನೋ.

**ಪೆರೆನೊಸಲು** 'ಪೆಱೆನೊಸಲ್' ನೋ.

**ಪೆರೆಯಿಕ್ಕು** (ಕ್ರಿ). ಪೊರೆಯನ್ನು ಬಿಡು.—ಕಳಚು: ಬೀಚರಪತಿ ಭೀಕರ ರೂಪಂ ಸಿಜವಿಂದಂ ಪೆರೆಯಿಕ್ಕಿದ ಕೃಷ್ಣಸರ್ಪನಿರ್ಪಂತಿರ್ದಂ (ಶಂರಾಪಾ. ೦೦-೩೦). [ ಪೆರೆ$_2$ (< ಪೊರೆ$_1$) + ಇಕ್ಕು ]

**ಪೆರೆಯುಚ್ಚು** 'ಪೊರೆಯುರ್ಚು$_1$' ನೋ.

**ಪೆರೆಯುರ್ಚು** 'ಪೊರೆಯುರ್ಚು$_1$' ನೋ.

**ಪೆರೆಸುಲಿ** (ಕ್ರಿ). = ಪೆರೆಯಿಕ್ಕು : ಪೆರೆಸುಲಿದ ಪಾವಿನಂತೆ (ಶಾಂತಿಪು. ೪-೩೯) ; ಪೆ[ಶಾಶಾ. ಪೆ]ರೆಸುಲಿವ ಹಿಮಪದವನೀಧರಪೆಂಪುವೆಗಾಧಿಪತಿಯ ನಿರ್ಮೋಕದೊಳೇಂ ದೊರೆಯಾದುವೊ ವಿದ್ಯುತ್ತಡರ್ಪುರ ಭೂರ್ಜದ್ರು(ಮ)ವನಂಗಳಿಂದಬ್ಬಳಂಗಳ್ (ಶಾಶ್ವ.ಕ. ೬೬೯).

[ಪೆರೆ$_2$ ( < ಪೊರೆ$_6$ ) + ಸುಲಿ$_1$ ]

**ಪೆರೇಡ್** 'ಪರೇಡು' ನೋ.

**ಪೆರೇಡು** 'ಪರೇಡು' ನೋ.

**ಪೆರೋಲು** (ನಾ). ಸೆರೆಯಾಳನ್ನು ತಾತ್ಕಾಲಿಕವಾಗಿ ಬಿಡುಗಡೆ ಮಾಡಲು ಒಪ್ಪಿ, ಅವನಿಂದ ಪಡೆದುಕೊಳ್ಳುವ ನಂಬಿಕೆಯ ವಾಗ್ದಾನ: ಹೆಗಡೆಯವರು ಪೆರೋಲಿನ ಮೇಲೆ ಬಿಡುಗಡೆ ಮಾಡಲ್ಪಟ್ಟರು (೪೮೦೬. ೦೩೦). [ ← ಇಂ. Parole ]

**ಪೆರ್ಕಣ** 'ಪೆಕ್ಕಣ$_1$' ನೋ.

Δ**ಪೆರ್ಕಳ** 'ಪೆಕ್ಕಳ$_1$' ನೋ.

**ಪೆರ್ಕಳಂಗೊಳ್**, **ಹೆಕ್ಕಳಂಗೊಳ್**, **ಹೆಕ್ಕಳಂಗೊಳು**, **ಹೆಕ್ಕಳಗೊಳ್**, **ಹೆಕ್ಕಳಗೊಳು** (ಕ್ರಿ). ೧. ಸಂತೋಷಪಡು : ಹಿಗ್ಗು : ಬಿಜ್ಜವಳರ್ ಪೆರ್ಕಳಂಗೊಳ್ವರ್ (೫೪೮೦. ೦೭೦-೦೨). **ಹೆಕ್ಕಳಂಗೊಳ್** : ೨. ಅಧಿಕವಾಗು : ವ್ಯಾಪಿಸು : ಅಧರದೊಳ್ಪೊಂದಿರ್ದುದು ಕೊಳಲನೊಪ್ಪದಿಂ ಮಧುರಾಕ್ಷರಂಗಳಂ ಸವಿವ ಸಮರಾಗದಿಂ ಹಲ್ಲಣೆ ಹೆಕ್ಕಳಂಗೊಂಡು ವನದೊಳು ತೀವೆ (ಅಶಾಕ. ಕೀ. ೦೬೦-೦೯). **ಹೆಕ್ಕಳಂಗೊಳು** : ೩. ಬೀಗು ; ಹೆಮ್ಮೆಪಡು ; ಗರ್ವಿಸು : ಅರಿಯ ಗೆಲಿದನೆನುತ್ತ ಹೆಕ್ಕಳಂಗೊಳದಿರು (ಕುರಂಗ. ೬೮-೪೦). **ಹೆಕ್ಕಳಗೊಳ್** : ೩. ಉರಿಯ ಕಂಡ ಪತಂಗ ಹೆಕ್ಕಳಗೊಂಡ ಪರಿಯಹುದು (೪೨ಕಾ. ೩೮-೦೦). **ಹೆಕ್ಕಳಗೊಳು** : ೧. ಇಂತು ರೇವಣಸಿದ್ಧಶಿಷಯೋಗಿ ಬಹ ಜನದನಂತವಾರಾಶಿಯಂ ನೋಡಿ ಹೆಕ್ಕಳಗೊಳುತ್ತೆ (ಕಠುಕ. ೨-೪-೩೦). ೩. ಕೊಪ್ಪಂಗೆಯೊಳಗಣ್ಣಿಯಂ ತುಂಬಿ ಹೆಕ್ಕಳಗೊಳುತ್ತಾ ಪುರದ ನೊಳಗಳೆಲ್ಲವನೆಯ್ದೆ ಬಳಿಗೆ ಸೋಹುತ್ತೆ (ಶಾಸೋಕ. ೮೮-೫೯). [ ಪೆರ್ಕಳ ( < ಪೆಕ್ಕಳ$_1$ ) + ಕೊಳ್$_1$ ]

**ಪೆರ್ಕಳಿಕೆ**, **ಹೆಕ್ಕಳಿಕೆ$_1$**, **ಹೆಗ್ಗಳಿಕೆ** (ನಾ). ೧. ಹೆಚ್ಚುಗಾರಿಕೆ ; ಹೆಚ್ಚಳ ; ಮೇಲ್ಮೆ : ಲೋಗರೊಳ್ ಬಲ್ಲರ್ ತಮ್ಮಾಳ್ತನದ ಪೆರ್ಕಳಿಕೆಯಂ ಗಳಪುವರೆ ? (ಶಾಖುಕ್ಕ. ೮೫-೨೩). ೨. ಗರ್ವ ; ಸೊಕ್ಕು : ಒರ್ವಂ ನಾರದಂ ಗಾನಶಾಸ್ತ್ರದ ಬೀರಂ ಒಡಿದೆತ್ತಿರ್ಪನೆಂಬ ಪೆರ್ಕಳಿಕೆಯಿಂದೋರೊರ್ವರ್ ಪಾಡುತಿರಲ್ (ಅಶ್ವಕ. ೨೩-೩) ; ನಿನ್ನ ಪೆರ್ಕಳಿಕೆಯುಂ ರೂಢಿಯುಂ ಹಾನಿಯಂ ಸಯ್ದನಂ ತನಗುಪಾದಿರಾಂಪಥಟರೆತ್ತಣವರೆಂಬ ಪಂತಮು ಪಳಟ ! (ಚಂಶಕ. ೨೩-೩) ; ಕಲಿಸುಗರ್ವಾ ಪಡ್ಯಾಯುಧು, ಅವನ ಮೇಲ್ ಕಟ್ಟಿಟಿ ಉರ್ಬಟೆಯ ಪೆರ್ಕಳಿಕೆಯನ್ ಎತ್ತಿ ಬಡಿಯಿತ್ತು ಅವನನ್ (ಅಧ್ಯಕ್ರ. ೨೦-೪೦೩). **ಹೆಕ್ಕಳಿಕೆ$_1$** : ೧. ಅನಂತಕಾಲಂ ಸುಖದ ಹೆಕ್ಕಳಿಕೆಯಿಂದಲತಿರಮಿಸುತಿರಲು (ಕುರಂಗ. ೩೦-೩೦) ; ಆ ಹೆಕ್ಕಳಿಕೆಯ ಸಾಧನೆಯಿಂದ . . . ಶಿವಿಯನ್ನು ಪೋಷಣೆಗೆಯ್ದು ಜೀವಿಸಿಕೊಳ್ಳುವುದೇನು ? (ಚಿತ್ರಂ. ೬೩-೪). ೨. ಅವಳು ಹೆಕ್ಕಳಿಕೆಯಿಂದ ಕೊಟಡಿಯೊಳಗೆ ಹೆಜ್ಜೆಯಿಟ್ಟಳು (ಪ್ರಜು. ೨೦೬). ೩. ಸಂತೋಷ ; ಹಿಗ್ಗು : ಆ ಎಂಬುದು ಸ್ವಯಂತೃಪ್ತ ಹೆಕ್ಕಳಿಕೆಯಲ್ಲಿ ಬರುತ್ತಿದ್ದರೆ . . . ಆಹಾ ಎಂಬುದು ಕೊಂದರೆ ದಾಟಿದ ಆನಂದದಲ್ಲಿಯೂ ಬರುತ್ತದೆ (ಶಾಕಾಶ. ೬). **ಹೆಗ್ಗಳಿಕೆ** : ೧. ಅದರ ವಾತ್ಸಲ್ಯ . . . ಮೋಹಕಶೈಲಿಗಳು ಕನ್ನಡ ನುಡಿಯ ಹೆಗ್ಗಳಿಕೆಯನ್ನು ಸಾರಬಲ್ಲವು (ಕಪ. ೦೬೩) ; ಸಾಮಾನ್ಯ ವ್ಯಕ್ತಿಯೊಬ್ಬನಾದರೆ ಆಗ ತನ್ನ ಹೆಗ್ಗಳಿಕೆಯನ್ನು ಕೊಚ್ಚಿಕೊಳ್ಳುವ ಸಂಭವವಿತ್ತು (ಶಾಶಕ. ೬೬) ; ಅದೇ ನಿನ್ನ ಹೆಗ್ಗಳಿಕೆ (ಸಂಕಪು. ೪೬-೧೦). ೨. ವಿಜಯೋನ್ಮಾದದ ಹೆಗ್ಗಳಿಕೆಯಿಂದನುತ್ತಾ ಸಂಜೀವರಾಯರು . . . ನೋಡಿದರು (೪ುರುಣ. ೪೮). ೪. ದೊಡ್ಡಸ್ತಿಕೆ ; ಡೌಲು : ಗಂಡನ ಹುಚ್ಚು ಹೆಗ್ಗಳಿಕೆಗೆ ಬಲಿಯಾಗಿ . . . ನಿರಾಶೆಯು ಸಂಕೇತವಾಗಿ ಕಂಡಳು (೪ಪಾಕ. ೬೮). [ಪೆರ್ಕಳ (<ಪೆಕ್ಕಳ$_1$)+ –ಇಕೆ]

Δ**ಪೆರ್ಕಳಿಸು** 'ಪೆಕ್ಕಳಿಸು' ನೋ.

**ಪೆರ್ಕುಡಿ** (ನಾ). ೧. ಹಿರಿಯ ಮನೆತನ ; ದೊಡ್ಡವಂಶ : ಪೆರ್ಕುಡಿಯ ಮಕ್ಕಳಿರ್ ನೀಮ ಇಂತಾದುವೊಡೆ, ಕೀಟ್ಗಳೇನಪ್ಪರ್ (ಅಕ್ಕಶಾ. ೪೨-೬೩೦) ; ಇನ್ ತೋಱಿಪ್ಪಿ ನಿನ್ನ ಪೆರ್ಮೆನೆಯ ಪುಟ್ಟಿನ್ ; ಇಲ್ಲ ಪೆರ್ಕುಡಿಗೊಗೆದ ನಿನ್ನ ಕೀಟ್ತನಮನ್ (ಅಂಶಗಶ. ೨-೩೯) ; ಪೆರ್ಕುಡಿಯ ಪೆರ್ಮೆಯವರೊಡನೆ, ಪಂಬಲಿಸಲೇವುದಯ್ ದಾಂಪತ್ಯಯೋಗಮನ್ ? (ಅಧ್ಯಕ್ರ. ೪೬-೦೦೨೩). ೨. ಉತ್ತಮರ ಸಹವಾಸ ; ಶ್ರೇಷ್ಠರಾದವರ ಸಂಗ : ಅಕ್ಕರರ ಗೋಷ್ಠಿ ಸುಜನರ ಪೇ[ಪೆ]ರ್ಕುಡಿ ಸಜ್ಜನರ ಕೇಳಿ ವಿದಗ್ಧರ ಸಂಗು ತಕ್ಕರೊಡನಾಟವಾಗಲು ಮಿಕ್ಕ ಸುಖಂ ಬಳಿಕದೇಕೆ (ಚಿಂಶಾ. ೩೦೮).

[ಪೆರ್ (< ಒರಿದು$_1$) +ಕುಡಿ$_2$]

**ಪೆರ್ಕಂಗಿಡಿ** (ನಾ). ದೊಡ್ಡದಾದ ಕೆಂಪುಕಿಡಿ : ಮಹಾಸ್ತಂಭಮಂ ಮುನ್ನೊಡೆದಾರ್ಪಿಂ ಸಿಂಹವಕ್ತ್ರಂ ಪೊಗೆ ನೆಗೆದೊಡನೆತ್ತೆತ್ತಲುಂ ತೀವೆ ಪೆರ್ಕಂಗಿಡಿಗಳ್ ನೇತ್ರಂಗಳಿಂ ಸೂಸುತುಮಿರೆ ಪೊಱಮಟ್ಟಂ ಮಹಾಘೋರರೂಪಂ (ಅಷ್ಟಕ. ೦. ೩-೨೪೩). [ಪೆರ್ (< ಒರಿದು$_1$) + ಕೆಂಗಿಡಿ]

**ಪೆರ್ಕೆಳೆ** (ನಾ). ಗಾಢವಾದ ಸ್ನೇಹ ; ಉತ್ಕಟವಾದ ಮೈತ್ರಿ : ರಾಮನೊಳ್ ನನಗೆ ಪೆರ್ಕೆಳೆ ನುಡಿಸಿತಲ್ಲದೆಯೆ ಭಾವಿಸದಿರ್ಕ್ಕಮಂ (ಶ್ರೀರಾಮ. ೩೨೨-೫೪೬). [ಪೆರ್ (< ಒರಿದು$_1$) + ಕೆಳೆ$_2$]

**ಪೆರ್ಕೊರಗು** (ನಾ). ಹಿರಿದಾದ ಅಳಲು ; ಅತೀವವಾದ ವ್ಯಥೆ : ಇಂತೆಮಗೆ ಪೆರ್ಕೊರಗು—ಆ ಪುರ್ಬ ಪಱಿದೊಡು (ಅಕ್ಕಶಾ. ೦೦-೨೩೪). [ಪೆರ್(< ಒರಿದು$_1$) + ಕೊರಗು$_2$]

**ಪೆರ್ಗಜ** (ನಾ). ದೊಡ್ಡಗಾತ್ರದ ಆನೆ : ಮಾಱದೆ ಮದಜಲ ಸುರಿವ ಪೆರ್ಗಜ . . . ನಂದಿವಾಹನಸಹಿತ ಗೀರ್ವಾಣರೊಪ್ಪಿರ್ದರೋಲಗದಿ (ಕೋಹಕ. ೦೬-೦೩). [ಪೆರ್ (< ಒರಿದು$_1$) + ಗಜ]

**ಪೆರ್ಗಟ್ಟ** (ನಾ). ಬಹು ಇಳಿಜಾರಾದ ಪ್ರದೇಶ ; ಘಟ್ಟ : ಪೆರ್ಗಟ್ಟದ ಕೆಳಗೆ ಪಡುವಣದೆಸೆಯೊಳ್ (ಎಪಿ. VII, ಶಿಕಾ. ೦೩೦-೬೪ ; 1047).

[ಪೆರ್ (< ಒರಿದು$_1$) + ಗಟ್ಟ$_1$]

**ಪೆರ್ಗಡಣ** (ನಾ). ದೊಡ್ಡ ಸಮೂಹ.—ಗುಂಪು : ಮೋದದಿಂ ಪೆರ್ಗಡಣಂ ಬೆರಸೊಲ್ದು ಪೊಕ್ಕನಬ್ಜಾಕರಂ (ಉದ್ಭಟ. ೪-೪೩).

[ಪೆರ್ (< ಒರಿದು$_1$) + ಗಡಣ]

**ಪೆರ್ಗಡಲ್**, **ಹೆಗ್ಗಡಲು**, **ಹೆರ್ಗಡಲ್** (ನಾ). ದೊಡ್ಡ ಸಮುದ್ರ ; ವಿಸ್ತಾರವಾದ ಕಡಲು : ಕಡಲಂ ಪೀರ್ದನಗಸ್ತ್ಯನೆಂಬ ಪುರುಡಿಂ ಪತ್ತೊಂದನಮ್ಭೋದ್ಭವಂ ಪಡೆದಂ ಪೆರ್ಗಡಲಂ ... ಎಸಲ್ವ ಪೆಂಪುವಡೆಗುಂ ಗುಣ್ಪಿಂದೆ ಪಂಪಾಸರಂ (ಶಾಂಕಪು. ೦೦೩); ಪೆರ್ಗಡಲಲ್ಲಿ ಗಂಟಲಂ ಮುಱಿದು ತಳರ್ಚದಿಕ್ಕುವುದು ಲೇಸು (ಕರ್ಣಾಮೃ. ೦೦-೪೪); ಬಿಱುವರಿಯ ದೇಗದಿಂದಂ ಕುಱುಹಿನ ಪಟುವುಗೆಗಳೊಳೆಯೆ ಪೆರ್ಗಡಲೆಡೆಯೊಳ್ ನೆಱೆ ನಾವೆ ತಾಗುವಂದದೆ ತೆಱಪಿಲ್ಲದೆ ತೇರ್ಗಳೊಡ್ಡು ತಾಗಿದುದು (ಕಪ್ಪಶಾ. ೨೬೩). **ಹೆಗ್ಗಡಲು** : ಕುರುಬಲದ ಹೆಗ್ಗಡಲು ಬಱತುದು (ಕುಮ್ಮಾಕ. ೩-೪); ಪೊಡವಿಯನು ಕೆಳಗಿಕ್ಕಿ ಮಿಗೆ ಹೆಗ್ಗಡಲು ಕವಿತಹವೋಲು ಬಂದುದು ಪಡುವಲಭಿಮುಖವಾಗಿ ಮಧುರೆಗೆ ಬಹಳನೃಪಕಟಕ (ಚಿಶಾಗ. ೦೦-೪೮-೩); ಹಿರಿಗಾಳಿ ಹೆಗ್ಗಡಲು ಬಯಲು ನೆಲ ಬೆಂಕಿಗಳೊಳಗ ನೀಡುವ ದಿವ್ಯ ದೇವಲದಿ (ಚುಶಿಕ. ೩೩-೪). **ಹೆರ್ಗಡಲ್** : ಪಾಣ್ಬ ಮಾಕ

ರೋದ್ಧತ ಕಾಡವಸೈನ್ಯವಪ್ಪು ಹೆರ್ಗ್ಗಡಲನಳುರ್ಕೆಯನ್ನೆ ಭುಜವನ್ನರದಿಂ ಕಡೆದು (ಎಕ. XI. ಚಾಕಚ. ೨೫-೯೦; 1224).

[ಪೆರ್ (< ಪಿರಿದು) + ಕಡಲ್]

**ಪೆರ್ಗಡಹು** (ನಾ). ವಿಸ್ತಾರವಾದ ದಾಟುವ ಸ್ಥಳ ; ಹಾಯ್ಗಡ: ಎರಡು ಬೆಟ್ಟದ ನಡುವಣ ಪೆರ್ಗ್ಗಡಹು ಅಂತೆ ಬರೆ ಬೆಟ್ಟದ ಪೋಗಣ ಕೊಳವಾವಿ (ಶ್ರುಹಿಂ. ೧೯೩೦, ೧೦-೦೯೯; ೫೮೭).

[ಪೆರ್ (< ಪಿರಿದು) + ಕಡಹು]

**ಪೆರ್ಗಡಿತ** (ನಾ). ಬರೆಯುವುದಕ್ಕಾಗಿ ಬಳಸುವ, ಕಪ್ಪುಲೇಪನವುಳ್ಳ ಬಟ್ಟೆಯ ದೊಡ್ಡ ಪುಸ್ತಕ,–ಕಡಿತ: ಧೀರರ್ ಶುಕರಶಾಬ್ಗಿಗಳ್ ಪೊಣರೆ ತತ್ಸಂಘಟ್ಟದಿಂ ಭೂತಳಂ ನೀರೊಳ್ ಪಾಸಿದದೊಂದು ಪೆರ್ಗಡಿತದಂತಳ್ಪಾಡಲ್ (ಜಗ. ೦೯-೨೬). [ಪೆರ್ (< ಪಿರಿದು) + ಕಡಿತ]

**ಪೆರ್ಗಡಿತಿ**, ಹೆಗ್ಗಡತಿ, ಹೆಗ್ಗಡಿತಿ, ಹೆರ್ಗಡಿತಿ (ನಾ). ೧. ಅರಮನೆ ಮುಂತಾದ ಕಡೆಗಳಲ್ಲಿ ಒಳಾಡಳಿತವನ್ನು ನೋಡಿಕೊಳ್ಳುವವಳು : ಭಂಡಾರವತಿಯುಂಬ ಪೆರ್ಗಡ[ಿ]ತಿಗೆ ಪೇಳ್ದು ತಂದ ನಂಬುಗೆವಂತರ ಸಯೆ . . . ಭೂಷಾದ ಕರಂಡಗೆಗೊಟ್ಟು ಕಳುಹಿದ (ಧಕಚ. ೪೭-೦೨೬). **ಹೆಗ್ಗಡತಿ**: ೧. ಹೆಗ್ಗಡತಿಯನೊರ್ವಳಿವೇಗದಿಂದ ಕರೆದು (ಶಬಚಾ. ೪೫-೬೦); ಗಂಧವ ಸಂಗೋಳಿ ನೀವೆಂದು ಹೆಗ್ಗಡ[ತಾ.ಡಿ]ತಿಯರೊರವರಲ್ಲಿ (ಕುರೀಚ. ೨-೦೯); ವಿಜಾನ ತಂದವನಿಗೆ ಬೇಡಿದ ವಸ್ತುಗಳ ಕೊಟ್ಟು ಭೂನಾಥ ತಾ ತ್ವರಿಯದಲಿ ತಾನೊರ್ವ ಹೆಗ್ಗಡತಿಯ ಕೈಯ ಕಳುಹಿದ ಬೋನದ ಮನೆಗೀವುದೆನುತ (ಕೋಚಕ. ೧೦-೩೬). ೨. ಗ್ರಾಮದ ಮುಖ್ಯಾಧಿಕಾರಿಣಿ, –ನಾಯಕಿ : (ಎಕಪ್ಕ. I. ೦). ೩. ಗ್ರಾಮದ ಮುಖ್ಯಾಧಿಕಾರಿಯ ಹೆಂಡತಿ : ಆತನ ಹೆಗ್ಗಡತಿ ಮಾಚೌವ (ಎಕ. VI. ಕಕ್ಕಮ. ೩೦-೩; 1179); ಹೆಗ್ಗಡತಿಗೆ ಪ್ರಸಾದ ಕೊಡಿ (ಬೀಪಹಂ. ೦೯೦). ೪. ದಿಬ್ಬೆ : ಗೇಡುಬೇರಿ ; ಉದ್ಧಟಿ : ಲೋಕದಲ್ಲಿ ಗಂಡ ಒಡವನಾವರ ಹೆಂಡತಿ ಹೆಗ್ಗಡತಿಯಾಗುವಳು (ಅಚಾ. ೦-೨೦೦). **ಹೆಗ್ಗಡಿತಿ** : ೧. ಕೆಲಬರ ಕಳುಹಿ ತಿರುವೆನನುತ್ತ ಹೆಗ್ಗಡಿತಿಯರನಟ್ಟಿದರೆ (ಕ್ರಕುಬೀ. ೦೦-೬). ೨. ಚಿಕ್ಕ × × ಹೆಗ್ಗಡಿತಿ (ಎಕ. II. ೩೩೬-೯೦; ಸು. 1185); ಕಾನೂರಿಗೆ ಹೆಗ್ಗಡಿತಿಯಾಗಿ ಹೋಗುವ ವಿಚಾರವನ್ನು ಯಾರಾದರೂ ಎತ್ತಿದರೆಂದರೆ ಪಾತ್ರ ಆಕೆ ಹುಚ್ಚಿಯಂತೆ ವಿಚಿತ್ರರೀತಿಯಿಂದ ವರ್ತಿಸುತ್ತಿದ್ದಳಂತೆ (ಕಾಹೆಹೆ. ೬೨೦). ೩. ಗಂಡು ಹೆತ್ತರೆ ಗ್ಡನ ಹೆಸರು, ಹೆಣ್ಣು ಹೆತ್ತರೆ ಹೆಗ್ಗಡಿತಿಯ ಹೆಸರು (೧೧೪). **ಹೆರ್ಗಡಿತಿ** : ೨. ಶ್ರೀಮತು ಹಿರಿಯ ಹೆರ್ಗ್ಗಡಿತಿಯಾಚಲದೇವಿಯುನ್ನುಯವ್ರೆತೆಂದೊಡೆ (ಎಕ. II. ೩೨೬-೯೩ : 1181) ; ಮಲಯಾಳಿತಿಯುಂ, ಹೆರ್ಗಡಿತಿಯುಂ, (ಕಾಕಕ್ಕ. ೦೩೪).

[ ಪೆರ್ಗಡೆ + —ಇತಿ ( < —ಇತಿ) ]

**ಪೆರ್ಗಡೆ**, ಪೆಗ್ಗಡೆ, ಪೆರ್ಗಡೆ, ವೆಗ್ಗಡೆ, ವೆರ್ಗಡೆ, ಹೆಗಡಿ, ಹೆಗಡೆ, ಹೆಗೆಡೆ, ಹೆಗ್ಗಡಿ, ಹೆಗ್ಗಡೆ, ಹೆಗ್ಗೆಡೆ, ಹೆಗ್ಡೆ, ಹೆರ್ಗಡೆ (ನಾ). ೧. ಗ್ರಾಮದ ಮುಖ್ಯಾಧಿಕಾರಿ,– ಒಡೆಯ : ದಾಮಮಡಿಗಟಿಂ ಪೆರ್ಗ್ಗಡೆ (ಎಕ. IV. ಹಗ್ಗದ. ೯೬-೯ ; ಸು. 780); ದುಷ್ಟಮನ್ನೆಯಪ್ರಳಯಕಾಳಂ ಶ್ರೀಮತ್ಪೆರ್ಗ್ಗಡೆ ಮಾದಿ[ಮ]ದ್ಯಂ (ಕಿಇ. XX. ೨೯-೬ : 1084); ಬಲ್ಲಾಳ ಪೆರ್ಗಡೆ ಮಾಸಾಮಂತ ಮನ್ನೆಯ ರಾಯರ್ ಮುಂತಪ್ಪ ನಾಡೊಡೆಯರ್ . . . ಕೈಮುಗಿದು (ಧಕಚತ್ಕ. ೩೦-೦೩). ೨. ಅರಮನೆ ಮುಂತಾದ ಕಡೆಗಳಲ್ಲಿ ಒಳಾಡಳಿತವನ್ನು ನೋಡಿಕೊಳ್ಳುವವನು ; ಮನೆವಾರ್ತೆಯ ಮೇಲ್ವಿಚಾರಕ : ಮಂತ್ರಿಯುಂ ಪೆರ್ಗಡೆಯುಂ ಮೊದಲಾಗಿ ಪೊಬಲೊಳಗುಳ್ಳ ಜನಮೆಲ್ಲಮರ್ಚನೆಗಳಂ ಕೊಂಡು ಬಂದು (ಪಚಾ. ೯೩-೨೩) ; ಶಂತನು . . . ದಾಶರಾಜನಲ್ಲಿಗೆ ಕೂಸಂ ಬೇಡೆ ಪೆರ್ಗಡೆಗಳನಟ್ಟಿದೊಡೆ (ಜಚಪಾ. ೦-೬೦ ಪ) ; ರಾಣೀವಾಸದ ಪೆರ್ಗಡೆ ತನ್ನಜನಿಯೋಗವುಂ ಬಿನ್ನವಿಕಂ (ಜಾಂತಿ. ೩-೬೦) ; ರಾಣಿವಾಸದ ಪೆರ್ಗಡೆಯಂತೆ (ಧರ್ಮಾಮೃ. ೩-೦೬೦). ೩. ಮಂತ್ರಿ : ಪ್ರಧಾನಿ : ಅರಸಂ ಸ್ವಬ್ದಂ ಪೆರ್ಗಡೆ ಮರುಳಂ (ಮೃಚ. ೦೦-೫೦) ; ಪಡಿಯಿಲ್ಲದ ಮನೆಯುಂ ಪೆರ್ಗಡೆಯಿಲ್ಲದ ರಾಜ್ಯವುಂ . . . ಒಪ್ಪಲಾಣವು ಜಗದೊಳ್ (ಧರ್ಮಾಮೃ. ೯-೦೫೦); ಇಂತು ಷಡಂಗಬಲಮುಂ ಅರಸು ಪೆರ್ಗಡೆ ಜನಪದ ದುರ್ಗ ಭಂಡಾರ ಮಿತ್ರರುಮೆಂಬಿವರುಂ ಷಡ್ವರ್ಗಬಲ ಸಹ ಚಕ್ರಿಗೆ ಸಪ್ತಾಂಗ ದುನಿಕ್ಕುಂ (ಆಂಚ. ೬-೦೦). ೪. ಮುಖ್ಯಸ್ಥನಾದವನು : ಉನ್ನತಾಧಿಕಾರಿ ; ಹಿರಿಯ : "ಪೆರ್ಗಡೆಯನರ್ ಮುಖ್ಯನಕ್ಕು" (ಶಬ್ದಮ. ೩೬) ; ಬಸಂತನಿವರ್ಕೆ ತಾನೆ ಪೆರ್ಗಡೆ ಗಡ (ಶಬ್ದಾ. ೦೫೩) ; ಅತನು ಪುರಾಧಿಪಂ ತಳವರ್ ಶಶಿ ಪೆರ್ಗಡೆ ಮಂದಮಾರುತಂ (ಚಳು. ೯-೫೦). ೫. "ರಾಯಭಾರಿ" (ಕುಂಚಿ. ೩೩೩) : ಅಟ್ಟಿದ ನಿಮ್ಮ ಪೆರ್ಗಡೆ ಬರ್ದುಂಕಿದನಂಬು ದನಿಂದ್ರಜಾಲಮಂ ತೊಟ್ಟನೆ ತೋಱ ಬಂದು ಬರ್ದುಕಾಡಿದಂ (ಕುಂಚಿಕ. ೯-೫೯); ತನ್ನ ದೂತರ ಕೈಯೊಳ್ ಪಾಗುಡಮಂ ಕೊಟ್ಟು ಬೆಡಿಯಟ್ಟಿದೊಡೆ ಬಂದ ಪೆರ್ಗಡೆಗಳಂ ಜಡಿದು ನುಡಿದು ಕಳಿಯೆ (ಕಾಪುಂಪು. ೧೯೬). **ಪೆಗ್ಗಡೆ** : ೧. ಪೆಗ್ಗಡೆ ನಾಯಕ ಕಲ್ಲುಣ್ಣಪುರದೂರಬಾವಿನೊಳು (ಕ್ಪುಇ. ೦೯೩೬. ೨೦-೬; ಸು. ೫೨೦); ಕರಹಡನಾಡ ಪೆಗ್ಗಡೆ (ಕಇ. II. ೦೩-೨೨; 1115); ಪರಮೇಷ್ಠಿಯೆಂಬ ಪೆಗ್ಗಡೆಯುಂ ವಿಲಾಸದಿಂ ಮಿಱಪ ಧ್ರುವನೆಂಬ ಕೊಲ್ಲಟಗನೆಲ್ಲಾ ಜಗಂ ಬೆರಟ್ಟು ನೋಡಲಿರ್ದಾಡಲೆಂದಿರಿಸಿರ್ದ ನಿಡು ವಿಸುನಿಗಳಿಯೊ ತಿಳಿಯೆ (ಪಂಚತಂ. ೨-೦೨). **ಪೆರ್ಗಡೆ** : ೧. ಪೆರ್ಗ್ಗಡೆ ಮಾಚಯ್ಯಂ ಮಂಗಲದ ಗಾವುಣ್ಣಗಳುಯ ಮುಟ್ಟಿಟ್ಟಡೆ ಬಾಳಿಸಿದ ಸ್ಥಿತಿ ಕ್ರಮಮಾವುದೆನ್ನೊಡೆ (ಎಕ. IV. ಹಾಸಹಾ. ೯೯ ೬; ೫೬೬). ೩. ನೊಳಂಬನ ಪೆರ್ಗ್ಗಡೆ ತ್ರಿಭುವನಯ್ಯಂ ಪೆರ್ಮಾಡಿಯನೋಲಗಿಸಿ (ಎಕ. IV. ಹಾಸಹಾ. ೦೯೦-೦; ೯೯೦ ?) ; ಶ್ರೀಮತ್ಕಲದಂಕಕಾಚಿದೇವನ ಪೆರ್ಗ್ಗಡೆ ಬಸವಯ್ಯನಂಕನ ಭಟ್ಟನು ಮಾಡಿಸಿದ ಮಾನಸ್ತಮ್ಭವ್ (ಎಕ. X. ಕುಳಿಚಾ. ೫೯-೮; ಸು. ೯೦೦ ?). **ವೆರ್ಗಡೆ** : ೧. ಮೂವತ್ತೊರ್ಬ್ಬಾಸಿರದ ನೂಱಿರಡು ಬಾಡಮುಂ ಲೋಕಟೆಯರಾಳೆಯಾಪನಾಳ್ವ ನಾಟ್ಕೆಲ್ಲಂ ವೆರ್ಗಡೆ ದಿಟ್ಟಯ್ಯನ್ . . . ಪ್ರಶಾಪಿಯುಂ (ಎಕ. VII (೩), ಶಿಕಾಂ ೩೬೬-೮; ೯೦೨). **ಹೆಗಡಿ** : ೧. ಅಡಿಯರ ಬಳಿ ಹೆಗಡಿ ಬಳಿ ತಪ್ಪಿಸಿ . . . ಯಿಸರಂಣನಾಯಕನು ವುಭಯದಳ ಮೆಚ್ಚಿ ಹೊಯಿಮು (ಕಇ. I. ೯೬-೦೩; 1483). **ಹೆಗಡೆ** : ೧. ಹೆಗಡೆ ಮಾರತಮ್ಮನ × × ಮಾದ ಮಾರಗವುಡರ ಮಕ್ಕಳು ಮಾದಿಗವುಡ ಮಾದಿಗವುಡನವರು ಕೊಟ್ಟ ಕೊಡಗೆಯ ಮಣ್ಣು ೫೦೦ (ಎಕ. III (R). ಹಗ್ಗದ. ೨೯-೦ ; ಸು. 1೬ಶತಮ ಕಶ) ; ವಿ × × × ೯ಳೂರ ಹೆಗಡೆ ಕೂವಲೂರ ಕೊಲಗಟ ಮಾರಯ ಹರದೆ . . . ಪೊಳಗಾವ ಸಮಸ್ತ ಗ × × ನಂಜುಂಡೇಸ್ವರದೇವರ ಅವಿಪ್ರುತವಡಿಗೆ (ಎಕ. III (R). ಕಂಚಕ. ೦೩೨-೯, 17ಶತಮ ಶಶ); ಹೆಗಡೆಯವರನ್ನು ಕಂಡಾಗಲೇ ಅನಂತ ಕೂಸಿದು ಬಿದ್ದ (ಕೀಚಕಂ. ೦೩೯). ೬. ಗೌಡಸಾರಸ್ವತಬ್ರಾಹ್ಮಣರಲ್ಲಿ ಒಂದು ಒಳ ಪಂಗಡ ಮತ್ತು ಆ ಪಂಗಡಕ್ಕೆ ಸೇರಿದವನು : ಪರ್ಬು, ಹೆಗಡೆ, ಬಾಳಿಗ . . . ಭಕ್ತ—ಎಂಬುದಾಗಿ ಕೊಂಕಣರಲ್ಲಿ ಹದಿನಾಲ್ಕು ಭೇದ ಗಳುಂಟು (ಕುಳಿಚಾ. ೦೬೦) : ಇವರಲ್ಲಿ ಭಟ್ಟರೂ (ವೈದಿಕರೂ) ಹೆಗಡೆ ಗಳೂ (ಗೃಹಸ್ಥರೂ) ಎಂಬ ಎರಡು ಭೇದಗಳಿವೆ (ಗಾರಚ. ೯೩). ೭. (ಅಧಿಕಾರಸೂಚಕವಾಗಿ, ಹೆಸರಿನ ಕೊನೆಯಲ್ಲಿ ಸೇರಿಸುವ) ಒಂದು ಮನೆತನದ ಹೆಸರು : ಶಂಂಠಿಕೊಪ್ಪದ ಹೆಗಡೆ ಮನೆತನದವನು ನಾನು (ಬೀಚಕಂ. ೦೩೩). **ಹೆಗೆಡೆ** : ೧. ದಂಡನಾಯಕ ಗಂಗಪ್ಪಯ್ಯಂಗಳನ್ನು ಹೆಗೆಡೆ ಬಮ್ಮಣಯ್ಯನ ಮ(೦)ಗ ಕಿರಿಯೋಜಿಮುಂಯ ಮಾಡಿಸಿದ ಶಾನ್ತಿ ನಾಥದೇವರುಮಂ ಬಸದಿಯುಮುಂ ಮಾ[ಡಿ]ಸಿದ (ಎಕ. II (R). ೦೬೯-೦: 12ಶತಮ ಕಶ). **ಹೆಗ್ಗಡಿ**: ೧. ಈ ಹೆಗ್ಗಡಿಗಳ ವಂಶವು ಮುಂದೆ ಸಾಗುತಾ

ಹೋಯಿತು (ಶಾಸಂ. ೩). ೪. ಪಂಥದಿಂ ಕೀಳದೆಲ್ಲರೊಳಗೆ ಹೆಗ್ಗಡಿಯಾದನು [ಪಾಠಾಂ. ಹೆಗ್ಗಡಿಗನಾಗಿ] (ಅಶ್ವಶಂ. ೩-೩). **ಹೆಗ್ಗಡೆ :** ೧. ಶ್ರೀಕರಣದ ಹೆಗ್ಗಡೆ ಎಚಿಯಣ್ಣನ ಕಯ್ಯಲು ಕ್ರಯದಾನಂ ಕೊಂಡು . . . ಧಾರಾಪೂರ್ವಕಂ ಮಾಡಿ ಬಿಟ್ಟ ದತ್ತಿ (ಎಕ. XIV, ಶ್ರೀರಂಗ. ೨೨೪-೩; 1178): ತೆರಣೆಯ ಚೌಣ್ಡಯ ಹೆಗ್ಗಡೆ ಬಸವಣ್ಣ (ಎಕ. II, ೨೩೬-೧೮; ಸ. 1185); ನಾಡ ಹೆಗ್ಗಡೆ ಗುಂಮ್ಮಣ್ಣ (ಎಕ. XI. ಹಿರ್ಯೂರು. ೬-೨೦; 1338); ಪಟೇಲನಿಗೆ . . . ಬೊಂಬೈದಿಲ್ಲಾದಲ್ಲಿ ನಾಡುಪಟೇಲ, ಹೆಗ್ಗಡೆ ಎಂತಲೂ ಹೆಸರುಂಟು (ಗ್ರಾಮಶಾ. ೦). ೩. ಅತನ ಹೆಗ್ಗಡೆ ತೂಮ್ಮನೆಪ್ಪೊ × × × [ಆದಿ] ಯೊಳ್ಮಾದಿ ಸತ್ತೊಡೆ (ಕೌಶಾ. IX-1. ೩೬-೬; 908) : ಸಾಮಂತ ಬೊಪ್ಪ ಗೌಡನ ಹೆಗ್ಗಡೆ ಸೋಮಯ್ಯನು (ಇಕ. XII, ೦೦೦-೬; 1246). ೪. "ಸಿರಿವೆತ್ತ ಹೆಗ್ಗಡೆಗಳಧ್ಯಕ್ಷರಧಿಕೃತರಖ್ಯಂ" (ಪಂಪಭಾ. ೬೮-೭): ಮತ್ತಂ ಪಟ್ಟಣದ ಹೆಗ್ಗಡೆ ಗೊಮ್ಮಲಯನಾಯಕನ ಬಿಂನಪದಿಂ ಕುಪಾರಂ . . . ಹತ್ತು ದ್ರ[ಮ್ಮಮಂ] ಬಿಟ್ಟ (ಎಕ. XXVIII, ೩೮-೩೩; ಸ. 1082); ಹೆಗ್ಗಡೆಯು ರೇದೆನಿಸುವ ಮಿಸುಪ ಭಂಡಾರಿ ಲಕ್ಕಣ್ಣ (ರಾಜಶೇ. ೩೪-೯೩) ; ಈಗ ನಮ್ಮಲ್ಲಿ ಉಳಿದಿರುವ ನಮ್ಮ ಯಜಮಾನಿಕೆಯ ಪದಗಳೆಂದರೆ ಗೌಡ ಹೆಗ್ಗಡೆ (ಕಪ್ಪುಹು. ೨೧೪); ನನ್ನನ್ನು ನೀವು ಈ ದಿನದ ಆಟಕ್ಕೆ ಹೆಗ್ಗಡೆಯನ್ನಾಗಿ ಚುನಾಯಿಸದಿದ್ದರೆ ನಿಮ್ಮ ಪಾಲಿಗೆ ಇದೊ, ಸೊನ್ನೆ (ಬಾಹುಶಿ. ೨೬). ೬. ಗೌಡಸಾರಸ್ವತರು–ಕಾಮತ, ನಾಯಕ, ಶಿಣ, ಪ್ರಭು, ಹೆಗ್ಗಡೆ (ಕುಟುಂಬ. ೦೭೪) ; ಗೌಡಸಾರಸ್ವತದಲ್ಲಿರುವ ಬೇರೆ ಬೇರೆ ಕುಲಗಳು (ಕೌಟುಂಬಿಕ ಹೆಸರುಗಳು) ಉದ್ಯೋಗಪರವಾಗಿ ಈ ಕೆಳಗಿನಂತೆ ಬಂದಿರಬಹುದೆಂದು ನನಗನಿಸುತ್ತದೆ . . . ಹೆಗ್ಗಡೆ–ಹಿರಿಯ ಮನುಷ್ಯ (ಮುಖ್ಯಸ್ಥ) (ಕುಟುಂಬ. ೨೩೯). **ಹೆಗ್ಗೆಡೆ :** ೭. ಕಂಡಟ್ಟನಾಯಕನ ಮದವಳಿಗೆ ರಾಚವನಾಯಕಿತಿಯ ಮಗ ಕುಂದಾಡಹೆಗ್ಗಡೆ ನಯಚಕ್ರದೇವರ ಬೆಸದಿಂ ಮಾಡಿಸಿದ ಬಸದಿ (ಎಕ. II (R), ೫೬೨-೨೪; ಸ. ೧೯೫ಡು ೫೪). **ಹೆಗ್ಡೆ :** ೭. ಹೆಗ್ಡೆಯವರ ಕೈ ಥರಥರನೆ ನಡುಗತೊಡಗಿತು (ಕೃಶಾಶ. ೦೦೫). **ಹೆರ್ಗಡೆ :** ೧. ಜನಕಂ ಹೆರ್ಗ್ಗಡೆ ಚಾಚಿರಾಜಮಹಿಮಂ (ಕೌಶಾ. IX-1. ೨೫೭-೨೬; 1160) : ಶ್ರೀನಾರಸಿಂಹದೇವರು ಹೆರ್ಗ್ಗಡೆಯುಂ ಹಡವಳಯ್ಯನುಂ ಅರಿವಿನತೊಳಲ ಕಾರುಣ್ಯಂಗೆಯ್ದು (ಎಕ. VI, ಕಡೂರು. ೨೩-೧೭; 1156) ; ಹೆರ್ಗ್ಗಡೆ ಚವ್ವ[ಂ]ಡಮಯ್ಯನಾಯಕರ ಮಗ ಹೆರ್ಗ್ಗಡೆ ಮಲ್ಲಯ್ಯನ ಕಯಿ (ಇಕ. XII, ೯೭-೯೦; 1187). ೨. ಬ್ರಹ್ಮದೇವರ ದಂಡನಾಯಕರುಂ ಅವರ ಹೆರ್ಗ್ಗಡೆ ಮಟ್ಟರಸರುಂ . . . ಬಿಟ್ಟ ಧರ್ಮವೆಂತೆಂದಡೆ (ಕೌಶಾ. V, ೨೬-೨೭; 1178). ೪. ದಂಡಾಯುದ ಹೆರ್ಗ್ಗಡೆ ದಂಡನಾಯಕ ಮಾಹಾದೇವಯ್ಯಂಗಳುಂ (ಕೌಶಾ. XI-1, ೫೦-೨೪; 1138).

**ಹೆರ್ಗಡೆವಾಳಸೂಳೆ** = ಗ್ರಾಮದ ಮುಖ್ಯಾಧಿಕಾರಿಯ ಆಶ್ರಯದಲ್ಲಿದ್ದ ಸೂಳೆ (?) : ಹೆರ್ಗ್ಗಡೆವಾಳಸೂಳೆಗೆ ಮತ್ತರ್ ಪದಿನಯ್ದು (ಎಕ. XV. ೬೯-೯೪; 1060).

[ಪೆರ್ (< ಪಿರಿದು₁) + ಕಡ್ಡ₃. / ತುಳು. ಪೆರ್ಗಡೆ, ಹೆಗ್ಗಡೆ; ತೆಲು. ಪ್ರೆಗ್ಗಡ, ಪೆಗಡ, ಪ್ರೆಗಡ, ಪ್ರೆಗ್ಗಡ, ಹೆಗ್ಗಡಿ, ಹೆಗ್ಗಡು]

**ಹೆರ್ಗಡೆ₂** 'ಪೆರ್ಗಳೆ' ನೋ.

**ಹೆರ್ಗಡೆಗದ್ಯಾಣ**, ಹೆಗ್ಗಡೆಗದ್ಯಾನ (ನಾ). ಒಂದು ಬಗೆಯ ನಾಣ್ಯ : ಪೊಬ್ಬ[ದ್ಯಾಣ]ಮುಯ್ದು [ಪೆರ್ಗ್ಗಡೆ]ಗದ್ಯಾಣವು × × × (ಕೌಶಾ. XI-1, ೯೦-೦೨; 966). **ಹೆಗ್ಗಡೆಗದ್ಯಾನ :** ಪರಿಹಾರ ಹೆಗ್ಗಡೆಗದ್ಯಾನಗನ ಹೂರಲು (ಎಕ. IX. ಕೊರಟಗೆರೆ. ೩೩-೯; 1115 ?) ; ಸುಂಕದ ಬೆಡುಗೊಳು ನಲ್ವತ್ತು ಪರಿಹಾರ ಹೆಗ್ಗಡೆಗದ್ಯಾನ ಗನಹೂರಲು ಒಂದು ಹಳ್ಳಿಗೆ ಹಣವೈದು (ಎಕ. I (R). ೪೬-೯ : 1175). [ಪೆರ್ಗಡೆ₁ + ಗದ್ಯಾಣ]

**ಹೆರ್ಗಡೆಗೋಲ್** (ನಾ). ದೊಡ್ಡದಾದ ಕಡೆಯುವ ಕೋಲು,–ಮಂತು : ಪೆರ್ಗಡೆಗೋಲಾದುದುಮಿಲ್ಲ ಮ್ಯಢನ ಕಾರ್ಮುಕವಾದುದಿಲ್ಲೆಂದು ಗುರುತ್ವಪಡೆದಿರ್ದುದಾ ಕುರ್ವೆಟ್ಟು (ಕೂಚಕ. ೬-೯೬).

[ಪೆರ್ (< ಪಿರಿದು₁) + ಕಡೆಗೋಲ್]

**ಪೆರ್ಗಡೆತನ**, ಪೆರ್ಗ್ಗಡೆತನ, ಹೆಗ್ಗಡೆತನ (ನಾ). ೧. ಗ್ರಾಮದ ಮುಖ್ಯಾಧಿಕಾರಿಯ ಅಧಿಕಾರ,–ಸ್ಥಾನ : ನೀಮಾರ್ಗದೇಕೆ ಕಿಡೆನುಡಿದಪರಿಟ್ಟೆಡೆಪೆರ್ಗಡೆತನದೊಳ್‌ದೇಪಡೆವಿರ್ (ಅಂಪೂ. ೯-೧೦೭) ; ಇನಿವಿಂದು ಸತ್ಕಾರಮಂ ಪೆರ್ಗಡೆತನಂ ಬಂದನಾವನಂ ದೇವರ ದೊರೆಯ ರಾಜಾಧಿರಾಜನೊಳ್ ಪಡೆಯಂ (ಶಾಂತಿಪು. ೨-೭೪ ಪ): ಪೆರ್ಗ್ಗಡೆತನಮಂ ಬಲ್ಲರ್ (ಎಕ. VII. ಶಿಕಾರಿ. ೦೦-೯೨ ; 1086?). **ಪೆರ್ಗಡೆತನ :** ೧. 'ಪೆರ್ಗಡೆತನಂಗೆಯ್' ಪರಾ. **ಹೆಗ್ಗಡೆತನ :** ೨. ಮುಂದಾಳುತನ ; ನಾಯಕತ್ವ: ಚುಚು ಎನ್ನದೆ, ಅವನನ್ನು ನಾವು ಹೆಗ್ಗಡೆತನಕ್ಕೆ ಚುನಾಯಿಸುತ್ತಿದ್ದೆವು (ಬಾಹುಶಿ. ೨೬). [ಪೆರ್ಗಡೆ₁ + –ತನ]

**ಪೆರ್ಗಡೆತನಂಗೆಯ್**, ಪೆರ್ಗಡೆತನಕೆಯ್, ಪೆರ್ಗ್ಗಡೆತನಂಗೆಯ್ (ಕ್ರಿ). ೧. (ಅರಮನೆಯಲ್ಲಿ) ಒಳಾಡಳಿತವನ್ನು ನೋಡಿಕೊಳ್ಳು : × × × ಗಾವುಣ್ಣಂಗೆಯು ಕಲಿಗನಾತಙ್ಗೆ ಪೆರ್ಗ್ಗಡೆತನಂಗೆಯು (ಎಕ. VII (೩). ಶಿಕಾರಿ. ೩೬೯-೦೨ ; 902). **ಪೆರ್ಗಡೆತನಕೆಯ್ :** ೨. ನಾಯಕನಾಗಿರು ; ಮುಂದಾಳಾಗಿರು : ಅಂಬುರದ ಅಗ್ಗರಪರ್ ಪೆರ್ಗ್ಗಡೆತನಕೆಯ್ (ಎಕ. IV, ಗುಂಡ್ಲುಪೇ. ೯೯-೩ ; ಸ. 750). **ಪೆರ್ಗಡೆತನಂಗೆಯ್ :** ೧. ನಣ್ಣುಪರ ಕಲಿಗಂ ಪೆರ್ಗ್ಗಡೆತನಂಗೆಯ್ಯೆ (ಎಕ. VII. ಶಿಕಾರಿ. ೨೧೯-೦೨ ; 918). ೨. ದುಷ್ಟನಿಗ್ರಹ ವಿಶಿಷ್ಟಪ್ರತಿಪಾಳನದಿಂ ಪೆರ್ಗ್ಗಡೆತನಂಗೆಯ್ಯೆ (ಕೌಶಾ. XX. ೨೯-೪ ; 1034) ; ಶ್ರೀಮತ್ಪೆರ್ಗ್ಗಡೆ ನಾರಣಯ್ಯ ಪ್ರಮುಖಕರಣಂ ಬನವಾಸಿಪನ್ನಿಚ್ಛಾಸಿರಕ್ಕಂ ಪೆರ್ಗ್ಗಡೆತನಂಗೆಯ್ಯೆ (ಕೌಶಾ. XX. ೪೩-೬; 1055).

[ಪೆರ್ಗಡೆತನ + ಕೆಯ್₁]

**ಹೆರ್ಗಡೆತನಕೆಯ್** 'ಪೆರ್ಗಡೆತನಂಗೆಯ್' ನೋ.

**ಪೆರ್ಗಣ**, ಪೆಗ್ಗಣ, ಹೆಗ್ಗಣ₁ (ನಾ). ಇಲಿಯ ಜಾತಿಗೆ ಸೇರಿದ ಒಂದು ಬಗೆಯ ಪ್ರಾಣಿ : ಓವೊ ಪೆರ್ಗಣಮನಿಕ್ಕಿ ಮನೆ ಮಾಡುವಂದಮಂಕ್ಕಂ ಓಡೆಯೊಳ್ (ರಪಾರಿಕ್ಕು. ೩-೦೨೨) ; ಒಡಮತ್ತಿಯ ತೊಕ್ಕಿನೊಳೆಂದೊಡ ಗೂಡಾಡುಂಬ ಶುಂಠಿ ನೆಲಗುಳ್ಳಿಮಿಮಂ ಕಿಡುಗುಂ ನೀರಿಂ ಪಾಸಂಗುಡೆ ಪೆರ್ಗಣಮುಗ್ರಮಪ್ಪ ವಿಷಮಾ ಕ್ಷಣದೊಳ್ (ಐಹುದ. ೦೨-೩೨). **ಪೆಗ್ಗಣ :** "ಖನಕಮುಂದುರುವೆನಲು ಪೆಗ್ಗಣಂ" (ಶಬ್ದಮ. ೯೯-೦೨) ; ಬೆಳಗಿನೊಳಂ ಕಾಣದು ನಿಶಿಯೊಳ್ ಕಾಣ್ಬುದು ಪೆಗ್ಗಣಕ್ಕೆ (ರಪಾರಿಕ್ಕು. ೦-೦೦೬) ; ಒರಿ ಒರಲುಣಲಱಯದವಂ ಧರೆಯೊಳು ಬೈಚಿಟ್ಟು ಸತ್ತು ಪೆಗ್ಗಣರೂಪ ಧರಿಯಿಸಿ ತೋಡುತ್ತುವಿರ್ಪಂ ಧರೆಯೊಳು (ಚಾಕ್ಷುಪೇ. ೩೨-೨). **ಹೆಗ್ಗಣ₁:** "ಉಂದುರು, ಖನಕ:–ಈ ೨ ಹೆಗ್ಗಣಂ" (ಕರ್ನಾಟಕ. ೩೯-೦೨); ಹೆಗ್ಗಣಮನಿಕ್ಕೆ ನೆಲಗುಟ್ಟಿ ಕಟ್ಟಿದಂತೆ ಆಯಿತೆನ್ನ ಕಾಯಗುಣ (ಕಕ್ಕೀ. ೪. ೦೬-೩೩) ; ಬಡಿಗಲ್ಲಿನಲಿ ಹೆಗ್ಗಣ ಮಿಡುಕುವಂದದಿ ಮದನಶರಮಾಯಾಪ್ರಬಂಧದಲಿ ಕೊಡಹಿ (ಅಕ್ಕಾಕ. ೨-೬೨) ; ಹಾಳು ಹೆಗ್ಗಣಗಳ ಉಪದ್ರವಂತು ಹೇಳವು ದಕ್ಕೇ ತೀರದು (ಕುಪುಲ್ಲಕುಂ. ೦೦೬) ; ಹೆತ್ತವಳಿಗೆ ಹೆಗ್ಗಣ ಮುದ್ದು, ಕೂಡಿದವಳಿಗೆ ಕೋಡಗ ಮುದ್ದು (ಗಾದೆ).

[ದೇ. ? ತುಳು. ಪೆರ್ಗುಡೆ ; ಕೋತ. ಪೆಗಣ್ ; ಕೊಡ. ಎಗಣ್, ಎಗನ್]

**ಹೆರ್ಗಣೆ** (ನಾ). ದೊಡ್ಡ ಗಣೆ : ಲತೆಗಳ ಜನ್ಮಭೂಮಿ ಪುಣಿನಂಗಳ ಪೆರ್ಗಣೆ . . . ತಣ್ಣಿಲ ತಾಯ್ಮನೆ ತಾನೆನಿಸಿರ್ದುದಾ ವನಂ (ಶಾಂತಿಪು. ೦೦-೦೬೯).

[ಪೆರ್ (< ಪಿರಿದು₁) + ಕಣ್ಣೆ]

**ಹೆರ್ಗಣಿಗಿಲ್** (ನಾ). ಕಣಗಿಲೆಯಲ್ಲಿ ಒಂದು ಬಗೆ : "ದ್ವಿಪಿ ಉನ್ಮಧುಕ ಪೆರ್ಗಣಗಿಲ್" (ಶಬ್ದಮ. ೯೨-೩೬).

[ಪೆರ್ (< ಪಿರಿದು₁) + ಕಣಗಿಲ್ (< ಕಣಗಿಲೆ₁)]

**ಪೆರ್ಗಣೆ** (ನಾ). ದೊಡ್ಡ ಬಾಣ. —ಸರಳಂ ; 'ಪೆರ್ಗಣೆದೊಡು' ಪರಾ. [ಪೆರ್ (< ಪಿರಿದು$_1$) + ಕಣೆ$_1$]

**ಪೆರ್ಗಣೆದೊಡು** (ಕ್ರಿ). ದೊಡ್ಡ ಬಾಣವನ್ನು ಹೂಡು : ಉತ್ತುಂಗಗಜವನೋಂದೆಡೆಯಲ್ಲಿ ಬೇಡ ಕಾಣುತ್ತೆ ಪೆರ್ಗಣೆದೊ[ಶಾಂತಿ. ದು]ಟ್ಟು ಕಿವಿವರಂ ತೆಗೆದು ನಡುನೆತ್ತಿಯೊಡೆಯೆಚ್ಚನು (ರಾಜಶೇ. ೧೭. ೬೯). [ಪೆರ್ಗಣೆ + ತೊಡು$_1$]

**ಪೆರ್ಗದ** 'ಪೆರ್ಗದಪು' ನೋ.

**ಪೆರ್ಗದಪು, ಪೆರ್ಗದ, ಹೆಗ್ಗದ** (ನಾ). ಬಾಗಿಲಿಗೆ ಜೋಡಿಸಿರುವ ದೊಡ್ಡದಾದ ಮರದ ಹಲಗೆ,—ಬಾಗಿಲಿನ ಪಡಿ : ಮಗಿಲನೇಱಿ ಧುಮಿಕ್ಕಿ ಪೆರ್ಗದಪುಗಳನೊಡೆಪಡಿ (ಚಂಪು. ೩೭. ೩೭). **ಪೆರ್ಗದ** : ಪಾದಪಸ್ತಿಗಳ ಕೈಯು ನೂಕಿ ಬಂಧಿಸುವ ಪೆರ್ಗದ ವಜ್ರಲೋಳವಿಂಡಿಗೆಯು ಅದಟನ ದ್ವಾರಾಷ್ಟಕವ ವರ್ಣಿಸುವೊಡೆ ವದಕವಿಗಳಿಗಗೋಚರವು (ಚೋಳಪ. ೨೦. ೦೩). **ಹೆಗ್ಗದ** : ಶ್ರೀದ್ವಾರದ ಹೆಗ್ಗದಗಳನ್ನೆಳೆದು ಮುಚ್ಚಿ ಒಳಗೆ ಸರಪಳಿ ತಾಳುಗಳನು ಸಶಬ್ದವಾಗಿ ಹಾಯ್ಕಿ ಬೆಟ್ಟುವರು (ಬಸವ. ೦೨-೨೦). [ಪೆರ್ (< ಪಿರಿದು$_1$) + ಕದಪು$_2$ (< ಕದವು$_1$) ]

**ಪೆರ್ಗದೂರು** (ನಾ). ಒಂದು ಸ್ಥಳದ ಹೆಸರು : ಪೆರ್ಗ್ಗದೂರುಂ ಪೊಸವಾಡಗಪುನಸಭ್ಯಸ್ತರಸಿದ್ಧಿಯಾಗೆ ಪಡೆದರ್ (ಇಪಿ. VI. ೦೦೨-೦೦ ; ೧೧೧ ?) : ಶ್ರೀವಂತ್ ಅನ್ನವೀಯ್ಯಂಯ್ಯಂಗಳ್ ಪೆರ್ಗ್ಗದೂರು ಪೊಸವಾದ ಗಪುಮನಭ್ಯಸ್ತರಸಿದ್ಧಿಯಾಗೆ ಪಡೆದರ್ (ಇಪಿ. XIV. ೬೬-೦೦ ; ೯೧೧). [ ? + ಊರು$_2$ (< ಊರ್) ]

**ಪೆರ್ಗದೆ** (ನಾ) ದೊಡ್ಡ ಗದೆ : ಭಾರಿಯಾದ ಗದೆ : ಮತ್ತಗಜಾನನ ಹರವಸದಿಳಿದಟ್ಟುತ್ತು ಪೆರ್ಗದೆಯು ತೆಕ್ಕೊಂಡು . . . ಅಪ್ಪಳಿಸುತಿಕ್ಕಿದನು (ಚೋಳಪ. ೩೮-೬೦). [ಪೆರ್ (<ಪಿರಿದು$_1$)+ಗದೆ]

**ಪೆರ್ಗರಡಿ, ಹೆಗ್ಗರಡಿ** (ನಾ). ದೊಡ್ಡಗಾತ್ರದ ಭಲ್ಲೂಕ : ಪೆರ್ಗರಡಿಯು ಬೇಂಟೆ . . . ಸಿಂಹ ಶರಭಂಗಳ ಬೇಂಟೆಗಳಾದಿಯಾದ ಭೀಕರಮೃಗಸಂಘ ಸಂಹನನಮುಣ್ಮೆತು (ಗಿರಿಜಾ. ೦-೮೦) ; ಪುತ್ತನಗುಟ್ಟು ಪೆರ್ಗರಡಿಗಳ್ ಮೊಗವಿಟ್ಟಿಸೆಗುಂ ವನಾಂತದೊಳ್ (ದಳವಾ. ೨-೬೦೯) : ಕುಂತಳವುಯಾವಾಗಿರ್ದ ಪೆರ್ಗರಡಿಯು ಕೊಂತದಿ ಕಡಿದ ಪೆರ್ದಲೆಯು ಸಂತಸ ಬಡದೆ ಹೊತ್ತಿರ್ದರು (ಚೋಳಪ. ೦೯-೨೬). **ಹೆಗ್ಗರಡಿ** : ಹೆಗ್ಗರಡಿಯು ಹಿಂಡಿದೆ . . . ಪಂದಿಯು ಗೊಂದಣವಿದೆಯೆಂದು ಮುಗ್ಗಿ ಕವಿದರು ಶಬರರು (ಶಾಕುಂತಂ. ೨೬-೬೦). [ಪೆರ್ (<ಪಿರಿದು$_1$)+ಕರಡಿ$_1$]

**ಪೆರ್ಗರಡೆ** (ನಾ). ದೊಡ್ಡದಾದ ಕರಡೆ ಎಂಬ ವಾದ್ಯ : ಉಣ್ಮಿದವು ಪೆರ್ಗರಡೆ ದೊಂಬಳಿ ಮದ್ದಳೆ (ಸಿಂಗಿರಾ. ೬-೯೨). [ಪೆರ್ (<ಪಿರಿದು$_1$)+ಕರಡೆ$_2$]

**ಪೆರ್ಗರುಳ್, ಹೆಗ್ಗರುಳು** (ನಾ). ೧. ಗಾತ್ರವಾದ ಕರುಳು : ಕಿಲಕಿಲವು ನಾಯ್ಗಳೋವರ್ಗಿಯು ಮಲೆದಿಱ್ಱನೆ ಪೊಯ್ದು ಕಚ್ಚಿ ತಿನೆ ಪೆರ್ಗರುಳು (ಚಮೂಕು. ೬-೬೮)/ ; ವಿಳ್ತರುತಿರ್ದಪುದಿತ್ತ ನಿನ್ನ ಪೆರ್ಬಲವೊಡಿದಸ್ತ್ರಯಂ . . . ಪಱಿದ ಪೆರ್ಗರುಳಿಂ (ರಾಜಶೇ. ೩-೦೦೯). **ಹೆಗ್ಗರುಳು** : ೧. "ಸ್ಥೂಲಾಂತ್ರವೆಂದರೆ ಹೆಗ್ಗರುಳು" (ಶಾಹಟೀ. ೨-೩-೪೮ ಕ). ೨. ಮನುಷ್ಯ ದೇಹದ ಎರಡು ಕರುಳುಗಳಲ್ಲಿ ಒಂದು : ದೊಡ್ಡ ಕರುಳು : ಕರುಳುಗಳಲ್ಲಿ ಸೊಂಪು ಹತ್ತದೆ ಹೀಗೆಯೇ ಆದು. ರಕ್ತ ಬೀಳುವುದಾದರೂ ಹೆಗ್ಗರುಳಿನ (ಕೋಲನ್) ಸೋಂಕಿನಿಂದ ಆದುದಕ್ಕೇ ಈ ಹೆಸರು ರೂಢಿಯಲ್ಲಿದೆ (ಆರೋಗ್ಯ. I. ೮೨೬). [ಪೆರ್ (< ಪಿರಿದು$_1$) + ಕರುಳ್]

**ಪೆರ್ಗಲ್, ಹೆಗ್ಗಲ್ಲು** (ನಾ). ದೊಡ್ಡ ಕಲ್ಲು : ಹೆಬ್ಬಂಡೆ : ಪೆರ್ಗಲ್ಲಿಂದ ದವುತ್ತುಂ . . . ನೆಲದೊಳೊರಸಿ ಮೇಲ್ಮುತ್ತುತ್ತಂ (ಚಮೂಕು. ೬-೦೯೦) : ಪೆರ್ಗಲ್ಲನೆತ್ತಿದ ಬಲ್ಪಿಂಗೆ ಕಡಂಗಿ ಪೊಂಗಿ ಗೋವಿಂದನೊಳ್ ಬಂದು ತಾಗಿದ (ಚರಿತ್ರೆ. ೬. ೩೬). **ಹೆಗ್ಗಲ್ಲು** : ಕೆಲರು ಹೆಗ್ಗಲ್ಲುಗಳ ಕಟ್ಟಿದರು (ಭಾರತ. ೨೦-೦೩). [ಪೆರ್ (< ಪಿರಿದು$_1$) + ಕಲ್$_3$]

**ಪೆರ್ಗಲಸು** (ಕ್ರಿ). "ಗರ್ವಿಸು, ಹೆಮ್ಮೆಪಡು" (ಕ್ರಿ.ಕೋ. ೬೦೦೯) : ಪೆರ್ಗಲಸಿ ಸಿರಿಯುಳ್ಳ ಪೆರ್ಮೆಯು ಬಲಮನಿದಂ ಮೆಱೆವೆಯೆನ್ನೊಳಿಂದಂ ಮುನಿಪಂ (ಕ್ರಿ.ಕೋ.೯-೬೩). [☞ ಇದು 'ಪೆಕ್ಕಳಿಸು' ಎಂಬುದರ ಅಪಲಿಖಿತವಿರಬಹುದು]

**ಪೆರ್ಗಲಿ** (ನಾ). ಮಹಾಪರಾಕ್ರಮಿ : ಹಿರಿಯ ಯೋಧ : ಕಿಱುವುಸೂರ ಪೆರ್ಗ್ಗಲಿಯರ ಬಿಜಯಿತಗಾವುಣ್ದನ ಮಗಂ ಅಮ್ಮಡಿಗಾವುಣ್ದಂ . . . ಭಾಗಂಗೊಣ್ದು (ಕ್ರಿ.ಉ. ೦೯೩೧, ೯೩-೩ ; ೯೯೨). [ಪೆರ್ (<ಪಿರಿದು$_1$)+ಕಲಿ$_2$]

**ಪೆರ್ಗವತೆ** (ನಾ). (ಬೆರಳುಗಳನ್ನು ವಿರಳವಾಗಿಟ್ಟ) ದೊಡ್ಡ ಅಂಗೈ : ಪೆರ್ಗವತೆ ಸೇರೆ ಒಡಿ ಶರಭಂಗಳನಿಬವಱೊಳಭಿನಯಿಸಿ ತೋಱಿಸಲ್ ವೃದುವಾಣಿಜನಜವಂ ಸೃಷ್ಟಿಸಿದನೆಂಬ ಚೆಲ್ವಿನ ಕೋಮಲೆಯರಲ್ಲಿ ಕಣ್ಗೆಸೆದರು (ಕೃಷ್ಣಾ. ೬-೨೦). [ಪೆರ್ (< ಪಿರಿದು$_1$) + ಕವತ್ತೆ]

**ಪೆರ್ಗಳ$_1$** (ನಾ). ಧಾನ್ಯಗಳನ್ನು ಒಕ್ಕುವುದಕ್ಕಾಗಿ ಸಿದ್ಧಪಡಿಸಿದ ವಿಶಾಲವಾದ ಕಣ : ನುರ್ಗಿದುದೆನೆ . . . ಪೆರ್ಗಳವೆನೆ ಕುರ್ಗಿದುದೆನೆ ಮಾರ್ಗದೊಳ್ ಸರೇಫಪದಂಗಳ್ (ಕಬ್ಬಿ. ೩೬). [ಪೆರ್ (< ಪಿರಿದು$_1$) + ಕಳ$_3$]

**ಪೆರ್ಗಳ$_2$** (ನಾ). ದಪ್ಪವಾದ ಕುತ್ತಿಗೆ : ಕೊಬ್ಬಿದ ಕತ್ತು : ಹೊಳೆವ ಕರ್ಗಣೆಯಿಂದೆ ಹೊಡೆದೆಕ್ಕಲನ ಪೆರ್ಗಳದೊಳು ಸುರಿವ ರೊಹಿತದ ನೆಳಲೊಳು ಕಣ್ಗೆ ಕಾಣಿಸ ಬಂತು ಗಗನಸ್ಥಳದಲಿ ಹೊಳೆವಂತೆ ವಿಟನ (ಚೋಳಪ. ೦೯-೩೩). [ ಪೆರ್ (< ಪಿರಿದು$_1$) + ಗಳ$_2$ (= ಗಲ) ]

**ಪೆರ್ಗಳೆ, ಪೆರ್ಗಡೆ$_2$** (ನಾ). ೧. ಬಲಿತಿರುವ ದಂಟು; ದಪ್ಪವಾದ ಕಾಂಡ : ಕುವಳಯಕುಟ್ಮಳಾವಳಿಯು ಪೆರ್ಗಳೆಯಿಂ ನೆಗೆದೇಱಿ ಲಾಗಿಸುತ್ತೆ ...ಆಡಿದುದು ಕೂಡೆ ರಥಾಹ್ವ ಪೊಸಡೊಂಬನಂಬಿನಂ (ರಾಜಶೇ. ೨-೬೨). **ಪೆರ್ಗಡೆ$_2$** : ೨. ಉದ್ದವಾದ ಕೋಲು,—ದಂಡ : ಗಡೆಮ ಭಟರು ಗಗನವ ತಿವಿವಂತೆ ಪೆರ್ಗಡೆಯೆತ್ತಿ ಪೆರ್ಗಡೆಗೂಡಿ...ಕುಣಿವುತೆಯ್ದುವರು (ಚಿತ್ರ. ೨೩-೨೪). [ ಪೆರ್ (<ಪಿರಿದು$_1$)+ಗಳೆ (<ಗಟೆ$^2$) ]

**ಪೆರ್ಗಳ್ತಲೆ, ಹೆಗ್ಗತ್ತಲೆ** (ನಾ). ದಟ್ಟವಾದ ಕತ್ತಲೆ ; ಗಾಢಾಂಧಕಾರ : ಮುಸುಂಕುಗಳ್ತಲೆ ಪೊದಳ್ದ ಪೆರ್ಗಳ್ತಲೆ . . . ಕಸಗಳ್ತೆಯೆನಿಸಿ ಕೂಡೆ ಕೀವಿತು ಕಿವಿಯರಂ (ಗಿರಿಜಾ. ೯-೬೩) ; ನೆಲೆಗೊಂಡ ಪೆರ್ಗಳ್ತಲೆಯೊಳ್... ಪಲವುಂ ದೀವಿಗೆಗಳ್ ಕಳ್ತಲೆ ಪೊತಂತೊಪ್ಪುತಿರ್ದುವಾ ಮನೆಮನೆಯೊಳ್ (ಗಿರಿಜಾ. ೯ ೬೯). **ಹೆಗ್ಗತ್ತಲೆ** : "ಸಂತಮಸಂ, ವಿಷ್ವಕ್‌ಧ್ವಾಂತೇ—ಎಲ್ಲ ಕಡೆಗಳಲ್ಲಿಯೂ ವ್ಯಾಪಿಸಿ ಇರುವ ಕತ್ತಲೆ ಅಂದರೆ ಹೆಗ್ಗತ್ತಲೆ" (ಅಮ.ಟೀ. ೬೦). [ ಪೆರ್ (< ಪಿರಿದು$_1$) + ಕಳ್ತಲೆ (< ಕಟ್ತಲೆ) ]

**ಪೆರ್ಗಱಿ, ಹೆಗ್ಗಱಿ** (ನಾ). ೧. (ಹಕ್ಕಿಯ) ದೊಡ್ಡದಾದ ರೆಕ್ಕೆ,—ಉದ್ದವಾದ ಪುಕ್ಕ : ಕಾಡೆಮ್ಮೆಯ ಕೋಡು ಪದಹದಂತಿಯ ದಾಡೆ... ಭೇರುಂಡನ ಕೂಡಪೆರ್ಗಱೆಯಿತ್ತರೊಲಿದು (ಚೋಳಪ. ೦೯-೬೯). **ಹೆಗ್ಗಱಿ** : ೨. (ಉದ್ದವಾದ ಈಡುರೆಕ್ಕೆಗಳಿರುವ) ಒಂದು ಬಗೆಯ ವಿಮಾನ : ಲಕಲು ಹೆಗ್ಗಱಿ . . . ಹುಡೆಗಾನೆಮೊಗನೆಂಬ ಪರಿಜಾಯ ಮಿಾನ್ಗಳಂ ಗುದಿಗೆಯ್ಸರು (ಪಚಾ. ೭-೯೩). [ಪೆರ್ (< ಪಿರಿದು$_1$)+ಗಱಿ]

**ಪೆರ್ಗಟನಿ** (ನಾ). ಒಂದು ಸ್ಥಳದ ಹೆಸರು : ಪ್ರಥಮಂ ದುಗ್ಗನ್ನೆಱ ಮಱಿದ್ಯ ಕಡೆಗೋಡವಿ ಸಂಗವೊಯರಾ ಕೆಱೆಯಿನ್ತೆಂಕೈ ನಟ್ಟ ಕಲ್ಲೆ ಪೆರ್ಗ್ಗಟನಿಯಿನ್ ಬಡಗ್ಗೆ ನಟ್ಟ ಕಲ್ಲೆ (ಎಕ. X (ಶಿ). ಚಳ್ಳಕೆ. ೬೬-೦೬ : ಸು. ೮೬೦). [ಪೆರ್ (< ಪಿರಿದು$_1$) + ಕಟನಿ]

**ಪೆರ್ಗಟ್ಟೆಪ್ಪು** (ನಾ). ಒಂದು ಸ್ಥಳದ ಹೆಸರು : ☞ ಈಗಿನ ಶ್ರವಣಬೆಳಗೊಳ : ಹೆಗ್ಗಟ್ಟೆಪ್ಪಿನಾ ಪೊಲದಿನ್ನಡದು ಕೊಟ್ಟದು (ಎಕ II. ೩೩-೪ ; ಸು. ೮೦೦). [ಪೆರ್ (< ಪಿರಿದು$_1$) + ಕಟ್ಟೆಪ್ಪು]

**ಪೆರ್ಗಾಗಾವಮಾಸಿ** (ನಾ). ಒಂದು ಊರಿನ ಹೆಸರು : ಪೆಗ್ಗ್ರಾಗಾವಮಾಸಿ ಗ್ರಾಮದ ಪಶ್ಚಿಮಭಾಗ ಕೃತಾಕೃತಕ್ಷೇತ್ರಾ (ಎಕ. XI. ದಾವಣ. ೬೬-೨೯ : ೧೧೮೬). [ ? ]

**ಪೆರ್ಗಾಡು, ಹೆಗ್ಗಾಡು** (ನಾ). ದಟ್ಟವಾದ ಅಡವಿ ; ಗೊಂಡಾರಣ್ಯ : ಬಾಗೆ ತೇಗು ಪನೆ ಕಪ್ಪುರಮೆಸಳೆಯೆನಿಪ್ಪುವಿರ್ಪುವಾ ಪೆರ್ಗಾಡೊಳ್ (ರಾಜಶೇ. ೩-೩೮) : ಇದು ದವಶಿಖಿಯಿದು ಕಿಂಶುಕಂ...ಇದು ಮದಗಜ ಮಿಂಕಿದು ಗಂಡಶೈಲಮೆಂದೆಂಬುದು ತಿಳಿವೊಡಶಕ್ಯಮೆನಿಪುದಾ ಪೆರ್ಗಾಡೊಳ್ (ಕಬಕಂ. ೩-೩೦). **ಹೆಗ್ಗಾಡು** : "ಮಹಾರಣ್ಯಂ, ಅರಣ್ಯಾನೀ–೨ ದೊಡ್ಡ ಅಡವಿ, ಹೆಗ್ಗಾಡು, ಗೊಂಡಾರಣ್ಯ" (ಶಿರ್ಷ್ಯ.ಕಿ. ೦೨೯) : ಈ ಹೆಗ್ಗಾಡಿನಲ್ಲಿ ಯಾವ ಮಾರ್ಗ್ಗನ್ನರಿಯಬಹುದು? (ಶಿರಹಾ. ೯೯) : ಸುತ್ತಲೂ ಹೆಗ್ಗಾಡೂ ಅಡಕೆತೋಟಗಳೂ ಬೆಳೆದು ಸ್ಥಳ ಏಕಾಂತವಾಗಿತ್ತು (ಕಾನೂಹು. ೩೯೮). [ ಪೆರ್ (<ಪಿರಿದು₁) + ಕಾಡು₂ ]

**ಪೆರ್ಗಾಲ್** (ನಾ). (ನೀರು ಹಾಯಿಸಲು ಮಾಡಿರುವ) ದೊಡ್ಡದಾದ ನಾಲೆ,–ಕಾಲುವೆ : ಲೀಲೆಗಾರ್ತಿಯರುಚ್ಚುಕ್ತನಾಳ್ದ್ಭಯಿಂದೆ ಪೆರ್ಗಾಲ ಹೊಂದೊಂಬನು ನೆಗಹೆ . . . ಸುರಿದುದು ಸಲಿಲ (ಚೋಚಶ. ೦೯-೩೬). [ ಪೆರ್ (<ಪಿರಿದು₁) + ಕಾಲ್₂ ]

**ಪೆರ್ಗಾವಲಿ, ಹೆಗ್ಗಾವಲಿ** (ನಾ). ದೊಡ್ಡದಾದ ಹರಿಯುವ ಹಂಚು; ಅಗಲವಾದ ತವೆ : ಕಾಯ್ದ ಕರ್ಬೊನ್ನ ಪೆರ್ಗಾವಲಿವೊಲಾಯ್ತು ನೆಲಂ (ಜಗಿ. ೦೬.೬೦). **ಹೆಗ್ಗಾವಲಿ** : ಕಾದ ಹೆಗ್ಗಾವಲಿಯ ಮೇಲಿರಿದಿರಿದು ದೇಹಸನುರುಹಲುಹಿಸುವ (ರಶಪು. ೧೬-೨೮). [ ಪೆರ್ (<ಪಿರಿದು₁) + ಕಾವಲಿ₂ ]

**ಪೆರ್ಗಾವಿಲ** (ನಾ). ಸ್ವಲ್ಪವೂ ತಿಳಿವಳಿಕೆಯಿಲ್ಲದವನು ; ಮಹಾ ಮೂರ್ಖ : ಬಾದೆ ಗಾಲಿಯೊಳ್ ರಥಮಂ ನಡೆಯಿಸುವೆನೆಂಬ...ನಾರಿಲ್ಲದೆ ಪುಗಟ್ಟುವೆನೆಂಬ ಪೆರ್ಗಾವಿಲನಂ ಪೋಲ್ಬುಂ (ಧರ್ಮಾಮೃ. ೩-೦೦೬). [ ಪೆರ್ (<ಪಿರಿದು₁) + ಗಾವಿಲ ]

**ಪೆರ್ಗಾವುಂಡ** (ನಾ). ಹಿರಿಯ ಗೌಡ ; ಮುಖ್ಯ ಗ್ರಾಮಣಿ : ಮುಳ್ಗುನ್ದ(ನ್ದ) ಪನ್ನೆರಡುಮಂ ಪಾಯಿಮ್ರ್ನಾಲ್ಕಿ ಸಿರಿವುರಕೆ ಬಗೆಗ ಪೆಗ್ಗ್ರಾವುಣ್ಡಮಾಗುತ್ತಿರೆ (ಎಇ. XXVI. ೬೨-೦೨ ; ೯೦೦). [ಪೆರ್ (<ಪಿರಿದು₁) + ಗಾವುಂಡ (<ಗಾಮುಂಡ)]

**ಪೆರ್ಗಾಳಿ** (ನಾ). ರಭಸವಾಗಿ ಬೀಸುವ ಗಾಳಿ ; ಬಿರುಗಾಳಿ : ಪೆರ್ಗಾಳಿಯ ಕೋಳೊಳ್ (ಪೊಯ್ಲೊಳ್) ಕೆಡೆದಿರ್ದ ವಟವೃಕ್ಷಮಂ ಕಂಡು (ಶಾಂತಿಪು. ೨೬.೩)ಸದ್ಯಸ್ಸುಸಂದೋಹಮಂ ನಿರುತಂ ತೀವಿ ಬರುತ್ತಿ ಧೈಕ್ರುಮಡಿಯೊಳ್ ಪೆರ್ಗಾಳಿಯಿಂ ಪುಟ್ಟಿದಾ ಧೂಳಿಯಿಂ ದುರ್ಧರಮಪ್ಪುದೋದು ಸುಟಿಯೊಳ್ಪಿಟ್ಟು (ಕರ್ನಾಕ. ೦೦-೬೨) ಕಾಳಿಂಗಮರ್ದನ ಖಗರಾಯನ ಮೇಲೆ ವಾಳಿಯು ಬಂದ ನಿಷ್ಠುರದಿ ಕೇಳಿ ಮಾಡುವುದೇನು ಗರುಡನ ಗಾಳಿಯ ಪೆರ್ಗಾಳಿಯಂ ದೀಶ್ವರ ನುಡಿದ (ಚೋಚಶ. ೩೬-೬೦). [ಪೆರ್ (< ಪಿರಿದು₁) + ಗಾಳಿ₁]

**ಪೆರ್ಗಿಚ್ಚು** (ನಾ). ದೊಡ್ಡ ಉರಿ ; ದಳ್ಳುರಿ : ಮದನನ ಪೆರ್ಗಿಚ್ಚಿಂ ಮುಗ್ಗಿದ ಪೊಣರ್ವಕ್ಕಿಗಳ ಹೃದಯಸಂಕುಳದಿಂದುಣ್ಮಿದ ಕರ್ಬೊಗೆಯೆಂಬನೆಗಂ ಪುದಿದತ್ತಂ ಮರ್ಬುಸುರ್ಬು ಪರ್ವಿತ್ತು (ಶಬರಶಂ. ೦೧೦) ; ಮುಕುರಂ ಮಾಂಸವು ಮದ್ದು ತುಂಬಿದ ಕೊಡ ಪೆರ್ಗಿಚ್ಚು[ಪಾಠಾಂ. ಚಿಗ] ನಾರ್ ಕಂಡೊಡಾ ಶಕುನಂ ಶೋಭನಕಾಸ್ಪದಂ (ಚೋಚಶ. ೬೬) ; ಸಲೆ ಮುಕ್ಕುಳಿಸಿ ಮೊಗೆವ ಪೆರ್ಗಿಚ್ಚುಗಳ ಪಂಕ್ತಿ ಮೇಲಿಕ್ಕಿದುದು (ಕೈಪಾಠ. ೦೬-೨೨). [ಪೆರ್ (<ಪಿರಿದು₁) + ಕಿಚ್ಚು]

**ಪೆರ್ಗಿಡಿ, ಹೆಗ್ಗಿಡಿ** (ನಾ). ಬೆಂಕಿಯ ದೊಡ್ಡ ಕಣ : ವಡಬಾಗ್ನಿಯಿ ಸಿಡಿದ ಪೆರ್ಗಿಡಿಯಿದೋ . . . ಎನಲಷ್ಟಗಿರಿಮಸ್ತಕದೋಳಿನಬಿಂಬಮೆಸೆದಿರ್ದುದು (ಕಂಶಪು. ೯-೨). **ಹೆಗ್ಗಿಡಿ** : ಕುಪಿತ ಯಮನುಬ್ಬರದ ಕೋಪದ ಕಾಲರುದ್ರನ ಹಣೆಯ ಹೆಗ್ಗಿಡಿಯೋ (ಕುಮ್ಯಾಕ. ೨-೩೦). [ಪೆರ್ (<ಪಿರಿದು₁) + ಕಿಡಿ]

**ಪೆರ್ಗಿಡುಗ, ಹೆಗ್ಗಿಡುಗ** (ನಾ). ದೊಡ್ಡ ಜಾತಿಯ ಡೇಗೆ : ಕಾವಂಡಂ ಕೆಂಗಣ್ಣಂ . . . ಹರಡೆ ಸುರಗಿಗಿಡಿ ಪೆರ್ಗಿಡುಗಂ (ಶಾಕ್ಯಸಾ. ೦೦೯೩). **ಹೆಗ್ಗಿಡುಗ** : ದೊಡ್ಡಡೇಗೆ, ಹೆಗ್ಗಿಡುಗ (Gerfalcon. ೫೮೪೩). [ಪೆರ್ (<ಪಿರಿದು₁) + ಗಿಡುಗ (< ಗಿಡಿಗ)]

**ಪೆರ್ಗುಂಜಿ, ಹೆಗುಂಜಿ** (ನಾ). ಒಂದು ಸ್ಥಳದ ಹೆಸರು : ☞ ಸೊರಬ ತಾಲ್ಲೂಕಿನ ಈಗಿನ ಮಾವಳಿ : ಆ ಕಾಶರಾಸರುಮುಬ್ಬು ಪೆಗುನ್ಜ್ಯಾಯ ಕೋಟೆಯಾನ್ ರೋಹಿಸಿ (ಎಕ. VIII, ಸೊರಬ. ೦೦-೯ ; ಕ್ರಿ. ೬೦೦). **ಹೆಗುಂಜಿ** : ಬಾಳ ಚತುಸೀಮೆಯ ವಿವರ . . . ಹೆಗುಂಜ್ಯಿಯ ಗಡಿಯಿಂದಲು ಬಡಗಲು ಪಡುವಲು ಕಿಂನ್ನಿಕಗೂಮಂ[ದನ] ಬಾಳಿಂದಲು ಮೂಡಲು (ಕೌಇತ. IX-ii. ೪೦೬-೮ ; 1877) ; ಹಿಂಯ ದೇವ[ಕ]ನಾಯಕಿತಿಯ ಮೊಂಮಗ ಹೆಗುಂಜಿಯಲಿ ಹುಟಿಕೊಂಡ ಹೊಲೆಯ ಬಳಿಯ (ಕಇ. I. ೬೬-೦೦ ; 1494). [?]

**ಪೆರ್ಗುಂಡು, ಹೆಗ್ಗುಂಡು** (ನಾ). = ಪೆರ್ಗಲ್ : ಎರಡು ಪೆರ್ಗುಂಡುಗಳು ತಮ್ಮೊಳಗಿರದೆ ತಾಗುವವೆಡವಿಡದೆ ಪಂತರರ ದೆಸೆಯಿಂದೆ (ಪಾರ್ಶ್ವನಾ. ೨೬-೨೬) ; ಒಂದು ಪೆರ್ಗುಂಡನು ಕಟ್ಟಿ ಕೊರಳಲಿ . . . ನಿಂದಿರಲ್ (ಕಂಶಪು. ೬-೩೬). **ಹೆಗ್ಗುಂಡು** : ಒದಗಿದರೆ ಪರ್ವತದ ಶಿಖರದ ಲುದುರುದುವು ಹೆಗ್ಗುಂಡುಗಳು (ಕುಮ್ಯಾಭ. ೦೦-೮). [ಪೆರ್ (<ಪಿರಿದು₁) + ಗುಂಡು]

**ಪೆರ್ಗುಡಿ** (ನಾ). ಅತಿಯಾಗಿ ಮದ್ಯಪಾನ ಮಾಡುವವನು : ಜೂಜಾಟಕೆ ಸೋಲಿಂಬಕೆ ರಣದ ಸಂಪಾಜ ಪೆರ್ಗುಡಿಗಳ ಚರ್ಚೆ ರಾಜವೀಧಿಯೋಳಿದಾಡುವ ಸಂದಣಿ ಮಾಜದು ನಿತ್ಯಕೃತ್ಯದಲಿ (ಚೋಚಶ. ೨೮-೨೬). [☞ ಇದು 'ಪೆರ್ಗುಡಿಹ' ಎಂಬುದರ ಸಂಕ್ಷಿಪ್ತರೂಪವಿರಬಹುದು]

**ಪೆರ್ಗುಡುಗು** (ನಾ). ಭಾರಿಯಾದ ಮೇಘಧ್ವನಿ : ಕಾಮರ್ಗುಗಿರ್ ಗಡಣವೆನಿಪ್ಪ ದಂತಿಕತಿಯುಗ್ರದ ಡಿಂಡಿಮನಾದದಂತೆ ಪೆರ್ಗುಡುಗು ನಿದಾಘನಂ ತಗುಳಲೈದಿದ ನೀರದಕಾಲರಾಜನಾ (ರಾಜಶೇ. ೬-೦೦೨). [ಪೆರ್ (<ಪಿರಿದು₁) + ಗುಡುಗು₂]

**ಪೆರ್ಗುಡುಗೋಲು** (ನಾ). ದೊಡ್ಡ ಕುಡುಗೋಲು : ಮಿಂಡಿಮಂಗಳ ನಗಲಿದ ಚದುರರು ತಮ್ಮ ದಂಡಿಪ ಸ್ಮರಚಾಪವೆಂದು ಬಂಡಿ ಪೆರ್ಗುಡುಗೋಲುಗಳಿಂದಲಡಗಿಕ್ಕಿ ಖಂಡಿಸುವರು ಕಬ್ಬುಗಳನು (ಚೋಚಶ. ೨-೯೯). [ಪೆರ್ (< ಪಿರಿದು₁) + ಕುಡುಗೋಲು (< ಕುಡುಗೋಲ್)]

**ಪೆರ್ಗುತ್ತ** (ನಾ). ೧. ದೊಡ್ಡ ಕಾಯಿಲೆ ; ಮಹಾರೋಗ : ಈ ಮಹಾಪುರುಷಂ ನಿಷ್ಠುರಮಪ್ಪೀ ಪೆರ್ಗುತ್ತದ ನಿರೋಧಮಂ ತಾಳ್ದಿ ಮಹಾಗದಂತಿರ್ದಪನೋ (ಧರ್ಮಾಮೃ. ೯-೬೬). ೨. ದೊಡ್ಡ ಅಪಾಯ ; ದೊಡ್ಡ ಕೇಡು,–ವಿಪತ್ತು : ಸಣ್ಣಕುತ್ತಂ ಚಿಕ್ಕದಾದ ಯತ್ನದಿಂ ಮಾಣಲಪ್ಪುದು ಪೆರ್ಗುತ್ತಂ ಪಿರಿದುಂ ಯತ್ನಂಗೆಯ್ಯೆ ಪೋಕುಮೊ ಪೋಗದೊ (ಶಾಕಂಠ. ೦೦-೦೦) : ಅಡಸಿದ ಪೊಸವಗೆ ಪೆರ್ಗುತ್ತಗಳನ್ ನುಡಿಯಲ್ಕಾಜಿಂ (ಅದ್ವಕ್ರ. ೬-೦೩೬). [ ಪೆರ್ (<ಪಿರಿದು₁) + ಕುತ್ತ]

**ಪೆರ್ಗುರುಂಟಗೆ, ಹೆಗ್ಗುರಂಟಿಕೆ, ಹೆಗ್ಗುರಟಗೆ, ಹೆಗ್ಗುರುಟಗೆ, ಹೆಗ್ಗುರುಟಿಕೆ, ಹೆಗ್ಗುರುಟಗೆ** (ನಾ). ಒಂದು ಬಗೆಯ ಔಷಧೀಸಸ್ಯ: ಅಜಶೃಂಗಿ: ಕಕ್ಕೆ ಮೊದಲ(ಲೆ) ಪೆರ್ಗುರುಂಟಗೆ . . . ನುಗ್ಗೆಯಿವೆಲ್ಲಮಂ ಟೆಯಿಂ ಕೊಳುತ್ತಿರೆ ಪೊಸಲಿಂ ನಿಕ್ಕುಮಂ ಕಿಡುಗುಂ ಫಣೀಂದ್ರಮುಖಪ್ರಚಂಡವಿಷಂಗಳುಂ (ಕಮಿಟ. ೩-೬೯). **ಹೆಗ್ಗುರಂಟಿಕೆ** : ಮಂಜನ ನಾರು, ಗೊಡ್ಡುಮಂಚಿ, ಹೆಗ್ಗುರಂಟಿಕೆ (ಕ್ರಿಕಶಿ. ೬೮-೦೬೫೦). **ಹೆಗ್ಗುರಟಗೆ** : ಗಂಟುಭಾರಂಗಿ, ದ್ರಾಕ್ಷಿ, ನೆಲಬೇವು, ಹೆಗ್ಗುರಟಗೆ . . . ತೈಲಪಾಕ

ದಲ್ಲಿಳಾಟಿಕೊಂಡು ಸೇವಿಸಲು ಶೀತಜ್ವರಂ ಶಮನಮಕ್ಕುಂ (ಕಲ್ಯಾ. ೬೨). **ಹೆಗ್ಗುರುಟಗೆ**: "ತ್ರಿಪರ್ಣೀ—ನರಿವಾಲ, ಹೊನ್ನೆ, ಹೆಗ್ಗುರುಟಗೆ, ಮುತ್ತುಗ, ಕುಹರಲಿಹೊನ್ನೆ" (ಬಸಂ. ೬೯). **ಹೆಗ್ಗುರುಟಿಕೆ** : "ಪೂರ್ವಾ, ದೇವೀ... ಗೋಕರ್ಣೀ, ನೀಲುಪರ್ಣೀ—೧೦ ಹೆಗ್ಗುರುಟಿಕೆಯು ಹೆಸರುಗಳು" (ಶಿದ್ಯಾಂಚ. ೦೩೦). **ಹೆಗ್ಗುರುಟಿಗೆ** : "ಮೂರ್ವೆ . . . ಗೋಕರ್ಣೆ, ನೀಲುಪರ್ಣೆ- ಹೆಗ್ಗುರುಟಿಗೆ" (ಪಾತಶಾ. ೪): ಹೆಗ್ಗುರುಟಿಗೆ, ಇದನ್ನು ಕೆಲವರು ಸವಗೇ ಗಡ್ಡೆ ಎಂಬರು (ವೈದ್ಯ. ೩೬): ಅಂಬಟಿಬೇರು,ಕಟುಕರೋಹಿಣಿ,ಹೆಗ್ಗುರುಟಿಗೆ, ಹುರುಗಲುಬೇರು, ಕಹಿಪಡವಲ ಸಹ ಕಷಾಯುವಂ ಮಾಡಿ ತೆಗೆದುಕೊಳ್ಳಲು ಶ್ಲೇಷ್ಮಜ್ವರ ನಾಶವಾಗುವುದು (ಕಲ್ಯಾ. ೮೯).
[ಪೆರ್ ( < ಪಿರಿದು$_1$) + ಕುರುಂಟಿಗೆ ( < ಕುರಂಟಗೆ)]

**ಪೆರ್ಗುಳಿ** 'ಪೆರ್ಗುೞ್' ನೋ.

**ಪೆರ್ಗುಱಿ, ಹೆಗ್ಗುಱಿ** (ನಾ). ೧. ಕೊಬ್ಬಿದ ಕುರಿ : ಆತನ ಬಲಿಗಟ್ಟ ಮನ್ಮಥಬಳಾರಿಗೆ ಪೆರ್ಗುಱಿ ಮಾಡಿ ಪೊಯ್ದಪೆಂ (ಲೀಲಾ. ೧೦-೭೩). **ಹೆಗ್ಗುಱಿ** : ೨. (ಅಲಂ) ಅತ್ಯಂತ ತಿಳಿಗೇಡಿ : ಮಹಾಮೂರ್ಖ : ಪೆಣ್ಣಾಗಿಕ್ಕಿ ಹೆಗ್ಗುಱಿಯಾಗಬೇಡಾ (ಚಾವ. ೨೦೦).
[ಪೆರ್ ( < ಪಿರಿದು$_1$) + ಕುಱಿ$_3$]

**ಪೆರ್ಗುಱಿಪು, ಪೆರ್ಗುಱುಪು, ಹೆಗ್ಗುಱುಹು** (ನಾ). ೧. ಮುಖ್ಯವಾದ ಲಕ್ಷಣ : ಪ್ರಧಾನವಾದ ಗುರುತು,-ಚಿಹ್ನೆ : ಜನಪತಿಯಾಪ್ಪ ಪೆರ್ಗುಱಿಪಿನಿಂದಿವು ಬಿಡವು ನಾಡೆಯುಮೂರ್ಗಳೆಂದನುಮಿಪರೆಲ್ಲರುಂತಱಿಯಬಾರದು (ಅಜಿತ. ೧೧-೧೧). **ಪೆರ್ಗುಱುಪು** : ೨. ಅಧಿಕವಾದ ಕೀರ್ತಿ,-ಪ್ರಸಿದ್ಧಿ : ಪೆರ್ಗುಱುಪಿ[ಪಾಠಾಂ. ಹೆಗ್ಗುಱುಹಿ]ನ ಬೇಡರಂ ತಱಿದು ಸೀಳ್ದುಱಿದಿಕ್ಕಿತು ಸೊಕ್ಕಿದೆಕ್ಕಲಂ ([illegible]; [illegible] II, ೮೩೬ ನೋ). **ಹೆಗ್ಗುಱುಹು** : ೨. ಆಸ್ಥಾನದೊಳು ಸತಿಯರ ನಾಮ ಸಲ್ಲದಂತಸ್ಥದೊಳ್ ಪತಿ ಕೇಳವೇಕೆ ಈ ಸ್ಥಿತಿಗಪರ ಹೆಗ್ಗುಱುಹಿನವರನ್ನು ಸ್ವಸ್ಥವೆಂದೆಣಿಸಿದರವರು ([illegible]). [ಪೆರ್ ( < ಪಿರಿದು$_1$) + ಕುಱಿಪು]

**ಪೆರ್ಗುಱುಹು** 'ಪೆರ್ಗುಱಿಪು' ನೋ.

**ಪೆರ್ಗುೞ್, ಪೆರ್ಗುೞಿ, ಹೆಕ್ಕಳಿ, ಹೆರ್ಕುೞಿ** (ನಾ). ದೊಡ್ಡದಾದ ಹಳ್ಳ,-ಗಣಿ,-ತೆರಪು : ಎಯ್ದೆ ಮುನ್ನೀರನಡುತರ್ಪ ಪೀರ್ದುಗಂಟ್ಟ ಪೆರ್ಗುೞ್ಗಳ್ ದಿನಕೃದ್ವಿಮಾನಮಾಕಾರಮಡಂಗೆ ಪೊತ್ತಡರ್ದು ಮುಚ್ಚಿದುದೆಂಬಿನೆಗಂ ವಿಕೀರ್ಣಸೇನಾರಜಮುರ್ವಿ ಪರ್ವಿದುದು (ಶಾಂತಿ. ೬-೦೪). **ಪೆರ್ಗುೞಿ** : ಸಮೆದ ಪೆರ್ಗುೞಿಯೊಳ್ ಕರಿಪೋತಕಂಗಳು ಕೆಡೆವು ([illegible] ೦-೬೩). **ಹೆಕ್ಕಳಿ** : ಎತ್ತಾನುವಿವತ ಮಱಿದೊಡೆ ಮೊಯ್ಯರಂ ಹುಳಿತು ಸತ್ತು ನರಕದ ಹೆಕ್ಕಳಿ[ಪಾಠಾಂ. ಹೆಕುಳಿ]ಯೊಳಿಳುತಿಹರಿದಕ್ಕೆ ಸಂದೇಹ ಬೇಡ ([illegible] ೩-೬೦). **ಹೆರ್ಕುಳಿ** : ಇಳಿದು ನರೇಭೂಮಿಯ ಹೆರ್ಕುಳಿಯೊಳ್ ಮುಳುಗಿ ನೆಗೆದು ಜೀವಿಸುತಿಹರ್ ([illegible] ೦೦-೦೩).
[ಪೆರ್ ( < ಪಿರಿದು$_1$) + ಕುೞಿ$_1$]

**ಪೆರ್ಗೂಪ** (ನಾ). ಆಳವಾದ ಭಾವಿ : ದೊಡ್ಡದಾದ ಕೂಪ : ಲಿಂಗದಿಂ ನೃಪಗೆ ಸಾಕ್ಷಿಯು ಕೊಟ್ಟು ತನ್ನಿಷ್ಟಲಿಂಗದಿಂ ಪೆರ್ಗೂಪವಗಲಿಸಿದ ([illegible] ೦-೪-೨). [ಪೆರ್ ( < ಪಿರಿದು$_1$) + ಕೂಪ$_1$]

**ಪೆರ್ಗೂರಿಕ್ಕು** (ಕ್ರಿ). = ಪೆರ್ಗೂರಿಡು : ಪೆ[ಪಾಠಾಂ. ಹೆ]ಗ್ಗೂರಿಕ್ಕಿ ನುಡಿವ ನಾಲಿಗೆ ಜಾಳೆ ([illegible] ೩೦೬-೦೩). [ಪೆರ್ಗೂರು+ಇಕ್ಕು$_1$]

**ಪೆರ್ಗೂರಿಡು, ಪೆಗ್ಗೂರಿಡು, ಹೆಗ್ಗೂರಿಡು** (ಕ್ರಿ). ಅತಿಯಾದ ಉಬ್ಬಸದಿಂದ ಕೂಡಿರು ; ದಮ್ಮು ಹೆಚ್ಚಾಗು : ಪೆರ್ಗೂರಿಡುತ್ತೆಯು ಬಂದಿರ್ದವರಂದಲ್ ಶ್ವಾಸಮೇಱುತ್ತಿಯುತುಮಿರೆ ([illegible] ೯೦). **ಹೆಗ್ಗೂರಿಡು** : ಕಾಲನವರನುವಾಗೆ ಬಾಯೊಳ್ಸುರಿಯೆ ಲೋಳೆ ಮೊಗವು ಕುಗ್ಗಿ ಗೂರು ಪೆ[ಪಾಠಾಂ. ಹೆ]ಗ್ಗೂರಿಡುತ್ತಮಿರೆ ([illegible] ೩೦೬-೨೬). **ಪೆಗ್ಗೂರಿಡು** : ಕವಿದು ಪೆಗ್ಗೂರಿಟ್ಟು ಸುಯಿವುತೆ ([illegible] ೬-೩೩).
[ಪೆರ್ಗೂರು+ಇಡು$_1$]

**ಪೆರ್ಗೂರು, ಪೆಗ್ಗೂರು, ಹೆಗ್ಗೂರು** (ನಾ). ಹೆಚ್ಚಾದ ದಮ್ಮು,-ಉಬ್ಬಸ : 'ಪೆರ್ಗೂರಿಡು' ಪರಾ. **ಪೆಗ್ಗೂರು** : 'ಪೆಗ್ಗೂರಿಡು' ಪರಾ. **ಹೆಗ್ಗೂರು** : 'ಹೆಗ್ಗೂರಿಡು' ಪರಾ.
[ಪೆರ್ (< ಪಿರಿದು$_1$) + ಗೂರು$_2$]

**ಪೆರ್ಗೂೞಿ** (ನಾ). ಮೀನಂ ಹಿಡಿಯುವ ದೊಡ್ಡ ಬುಟ್ಟಿ : ಕಿಱುಗೂೞಿ ಪೆರ್ಗೂೞಿ . . . ಸೂಸುಗೂಳ್ಗಳೆಂಬಿಸಂ ಕೊಂಡು . . . ಬಿನ್ನಣಂಬಡೆದ ಬೇಡರೊಡನೆ ([illegible] ೩-೦೦೪೩).
[ಪೆರ್ (< ಪಿರಿದು$_1$) + ಕೂೞಿ (< ಕೂೞ್$_1$)]

**ಪೆರ್ಗೆಂಡ** (ನಾ). ದಪ್ಪವಾದ ಕೆಂಡ,-ಇಂಗಳ : ಪೆರ್ಗೆಂಡಂಗಳು ಸೂಸುತಂ ಗಜ್ಜೆಂದೋವದೆ ತೇಗಿಯುಂ ([illegible] ೬-೦೪೯).
[ಪೆರ್ (< ಪಿರಿದು$_1$) + ಕೆಂಡ]

**ಪೆರ್ಗೆಚ್ಚಲ್, ಹೆಗ್ಗೆಚ್ಚಲು** (ನಾ). ದೊಡ್ಡ ಕೆಚ್ಚಲು : ತುಂಬಿದ ಕೆಚ್ಚಲು : ಬರಲಾಱದೆ ಪೆರ್ಗೆಚ್ಚಲ ಭರದಿಂದು ಪೆಱಗು ಕುಸಿಯೆ . . . ಬಂದುವಂದು ಪಯಗಳ್ ಪಲವುಂ ([illegible] ೩-೮೯) ; ಪೊರಲಾರದೊಲೆ ದಾಡುತಿರ್ಪ ಪೆರ್ಗೆಚ್ಚಲಿಂ ಚುಸುತಿಹ ಹೋಮಧೇನುಗಳಂದೆ . . . ಆಶ್ರಮವದೇನೊಪ್ಪಿತೊ ([illegible] ೧೦-೬). **ಹೆಗ್ಗೆಚ್ಚಲು** : ಪೀನೋಧ್ನೀ, ಪೀವರಸ್ತನೀ—ಈ ೨ ಹೆಗ್ಗೆಚ್ಚಲಾವು ([illegible] ೪೩-೦೦೬) : ಪೀವರಸ್ತನಿ ಪೀವರೋಧ್ನಿಯೆನೆ ಹೆಗ್ಗೆಚ್ಚಲಾಪದು ([illegible] ೩೪-೩).
[ಪೆರ್ (< ಪಿರಿದು$_1$) + ಕೆಚ್ಚಲ್]

**ಪೆರ್ಗೆಡೆ** 'ಪೆರ್ಗಡೆ$_1$' ನೋ.

**ಪೆರ್ಗೆಡೆತನ** 'ಪೆರ್ಗಡೆತನ' ನೋ.

**ಪೆರ್ಗೆಡೆತನಂಗೆಯ್** 'ಪೆರ್ಗಡೆತನಂಗೆಯ್' ನೋ.

**ಪೆರ್ಗೆಯ್ಪಾಡಿ** (ನಾ). ಒಂದು ಊರಿನ ಹೆಸರು : ಗಾವುಂಡುಗಳಿ ಸೀಮೆಯೊಳಗಾದ ಕ್ರಮ ತೊಳಂಚಿಯುವ ಪೆರ್ಗೆಯ್ಪಾಡಿಯು . . . ತೊಳಂಚಿಯದ ಸೀಮೆಯೊಳ್ ತಾಗಿ (ಎಕ. XII, [illegible]).
[ಪೆರ್ (< ಪಿರಿದು$_1$) + ಕೆಯ್$_4$ + ಪಾಡಿ$_2$]

**ಪೆರ್ಗೆಲಸ** (ನಾ). ದೊಡ್ಡ ಕೆಲಸ ; ಮಹತ್ಕಾರ್ಯ : ಕಳಕಳಸಂಭ್ರಮಂ ನೆಲಸಿ . . . ಸಮಂತು ವಿವಾಹಗೇಹಮಂಗಳ[ಕರ]ವಾದ ಪೆರ್ಗೆಲಸಮುದ್ಯೋಗಮಂ ತಳೆದಿರ್ದುದಾವಗಂ ([illegible] ೯೨೩). [ಪೆರ್ (< ಪಿರಿದು$_1$) + ಕೆಲಸ]

**ಪೆರ್ಗೆಸಱ್, ಹೆಗ್ಗೆಸಱು** (ನಾ). ಅತಿಶಯವಾದ ರಾಡಿ : ಅಧಿಕವಾದ ಕೆಸರು : ಪೆರ್ಗೆಸಱಾಗಿರ್ಪುದು ಬಟ್ಟೆ ಪೋದವಿದಱೊಳ್ ಪೆರ್ಬಂಡಿಗಳ್ ([illegible] ೦೩೬) ; ಅಂಭೋಧಿಯುಂ ಪಿರಿವಂ ಪೆರ್ಗೆಸಱಾಗಿ ಶತ್ರುಶಿರಪಂ ಸೆಣ್ಸಾಡಿ ವೈರಿಶ್ರೀಯುಂ ಪರಿತಂದೀವುದು (ಎಕ. XI, [illegible]; 1280). **ಹೆಗ್ಗೆಸಱು** : ದೇವವಯಿರಿಯ ಸೆಣಸಿ ಸಮರದಿ ದಾಪಟಿಪವರಿವರಿದು ರಿಪುಗಳ ಹೇಸಗೆಡಿಸಿದ ರಣಾಂಕಣದ ಹೆಗ್ಗೆಸಱು ಮಯುಮೆನಿಸಿ ([illegible] ೪-೬೨). [ಪೆರ್ (< ಪಿರಿದು$_1$) + ಕೆಸಱ್]

**ಪೆರ್ಗೆಱೆ$^3$, ಹೆಗ್ಗೆರೆ$_1$, ಹೆಗ್ಗೆಱೆ, ಹೆರ್ಗೆಱೆ** (ನಾ). ದೊಡ್ಡ ಕೆರೆ,-ತಟಾಕ : ಪೆರ್ಗೆಱೆಯಾ ಕೆಳಗೆ ಅಱುಗಣ್ದುಗಂ (ಎಕ. IV, [illegible] 776); ಪೆರ್ಗೆಱೆಗಳ ಚೆಲ್ವಿಂ . . . ಒಪ್ಪುವುದು ರೌರವಪುರಂ ([illegible] ೪-೬); ಪೆರ್ಗೆಱೆಗಳೆಂಬ ವಿನಿಶ್ಚಲಲೋಚನಂಗಳಿಂ ಭೂರಮೆ ದೇಶಸಂಪದಮನೀಕ್ಷಿಸಿ ([illegible] ೪-೦೬). **ಹೆಗ್ಗೆರೆ$_1$** : ಒಂದು ಅಡವಿಯಲ್ಲಿ ತಿಳಿನೀರನೆಂಬ ಹೆಗ್ಗೆರೆಯುತ್ತು ([illegible] ೩೯). **ಹೆಗ್ಗೆಱೆ** : ಆ ಊರ ತೆಂಕಣ ಹೆಗ್ಗೆಱೆಯದು ಕೀಳೇರಿಯಲು ಗದ್ದೆ ಖಂಡುಗ ಬದಕ್ಕೆ ಗುಳಿ ೫೦೦ (ಎಕ IV (B), [illegible] ೨-೨೯: ಕ್ರಿ. 1110): ಮತ್ತಿಹಳ್ಳಿಯ

ಹೆಗ್ಗೞಿಯ ಬಡಗಣ ಕೋಡಿಯ ಸಂಕಿನ ಯೇರಿಯ ಕೆಳಗೆ (ಸೌಇಇ. XX. ೨೨೬-೩೭; 1207). **ಹೆರ್ಗೞಿ**$^3$: ಕಣಂಬುರಿಗೆಯಾಳೂಂ ಪಡುವಣ ಹೆರ್ಗ್ಗೞಿಯುಂ ಪಡುವಲ್ ಕೆಯ್ಯುತ್ತರ್ ಹನ್ನೆರಡು (ಎಕ. XIII. ೨೦-೪೫; 1204). [ಪೆರ್ (< ಪಿರಿದು$_1$) + ಕೞ$^3$]

**ಪೆರ್ಗೇಡು** (ನಾ). ಭಾರಿಯಾದ ಕೇಡುಕು,—ಅಪಾಯ; ಮಹಾ ವಿಪತ್ತು: ಈ ನಿನ್ನ ಪೆರ್ಗೇಡ ನೋಡುತ್ತುಮಾನುಂ ಮುನ್ನಮಿದೆ ಅರಯ್ಕೆ ಅರಯ್ದಂ (ಅಕ್ಕ್ರ. ೨೯-೭೨೦). [ಪೆರ್ (< ಪಿರಿದು$_1$) + ಕೇಡು]

**ಪೆರ್ಗೊಂಬು, ಹೆಗ್ಗೊಂಬು** (ನಾ). ೧. ದೊಡ್ಡದಾದ ಶಾಖೆ,—ಟೊಂಗೆ: ಧರಿಯ ಭೂಮಿಯೊಡಗೂಡಿ ಮೊದಲಿಂದಂ ಪಣೆಯಿಂದಂ ಪೆರ್ಗೊಂಬುಗಳಿಂದಂ [ಕಿಱುಗೊಂಬುಗಳಿಂದಂ] ಆಲದ ಮರನೆಂತೊಪ್ಪುಗುಂ (ಧರ್ಮಾಮೃ. ೦೩-೫); ಧರಿ ಮುಱಿದ ಪೆರ್ಗೊಂಬಿನಿಱುಂಬಿನೊಳೊಟ್ಟಿತ್ತಾಗುವ ಪಾಲ ಪೂನದೊಳ್ ಮಿಗೆ ನೆಗೆವ ಗಗನಚರಿಯ ನಿಡುಜಡೆ ತೊಡಂಕೆ (ಶಾಂಪು. ೩-೩೫ ವ): ಪೊತ್ತು ಬಲ್ಪಿಂ ಮುರಿದ ಮರದ ಪೆರ್ಗೊಂಬಿನೊಳ್ ಕೊಂಬದೊಂದಂಟಿರೆ (ಶಾಸೂತ. ೦೬-೩೩). ೨. ಕಹಳೆಯಾಕಾರದ ಒಂದು ಬಗೆಯ ದೊಡ್ಡ ವಾದ್ಯ: ಬಾರುಗಿನ ಪೆರ್ಗೊಂಬಿನ ಕಾಳೆ ಡಾಗಟಿ ... ದಮಾಸಗಳಬ್ಬರಮೆಸೆದುದು (ಶಂಪ. ೯-೬೦). **ಹೆಗ್ಗೊಂಬು**: ೧. "ಸ್ಕಂಧಶಾಖಾ. ಶಾಲಾಃ — ಈ ೨ ಮರದ ಹೆಗ್ಗೊಂಬು" (ಹಲಾಯು. ೩೦-೨೬): ಮರದ ಹೆಗ್ಗೊಂಬುಗಳಲಿಟ್ಟನು (ಶಬ್ದ.ಕ. ೬-೨೨): ದಧಿಮುಖನೊಂದು ಹೆಗ್ಗೊಂಬುಳ್ಳ ಹೆಮ್ಮರನ ಹಿಡಿದು ಕಡಹುತ ಹರಿದು ಬಂದನು (ತೊರ. ೩೨-೩೬): ಖಳನಿಕುರುಂಬವನು ಬಲುಹೆಮ್ಮರನ ಹೆಗ್ಗೊಂಬುಗಳಲೇ ಹೊಯ್ದು ಹೊಱವಂಡಿಸಿದನುಸುರುಗಳ (ಕೊರಾ. ೩-೪-೨೨). [ಪೆರ್ (< ಪಿರಿದು$_1$) + ಕೊಂಬು$_1$]

**ಪೆರ್ಗೊಡಲಿ** (ನಾ). ದೊಡ್ಡದಾದ ಪರಶು: ಸಂಜಯಂತಮುನೀಶ್ವರಂ ಕ್ಷಮೆಯೆಂಬ ಪೆರ್ಗೊಡಲಿಯಿಂ ದುರಿತಾಟವಿಯಂ ತಱಿದು (ಧರ್ಮಾಮೃ. ೯-೦೦೬): ಮೊಳೆಯೊಳೆ ತೋಱಿ [ಕೀಂಟಿ] ಕಳಿಯಲ್ ಬಗೆದಪ್ಪುದು ಮೂಡದಾಗಳುಮ್ಮಳಿಸಿ ಬಟಿಕ್ಕೆ ಪೆರ್ಗೊಡಲಿಗೊಳ್ವೊಲಕ್ಕುಮದೋಳ್ ತಕ್ಕುದೇ (ಕೊಸು. ೦೬-೦೬). [ಪೆರ್ (< ಪಿರಿದು$_1$) + ಕೊಡಲಿ]

**ಪೆರ್ಗೊಣ್ಣಂದ** (ನಾ). ಒಂದು ಸ್ಥಳದ ಹೆಸರು (?): ಪೆರ್ಗೊಣ್ಣಂದ ತಟಾಕ ಪೂರ್ವ್ವಭಾಗ (ಎಕ. VII (B), ಶಿಂಕ. ೩೫-೩೯; 713). [ಪೆರ್ (< ಪಿರಿದು$_1$) + ಕೊಣ್ಣಂದ]

**ಪೆರ್ಗೊತ್ತಳ** (ನಾ). ದೊಡ್ಡ ಬುರುಜು: ಪರಿಖಾದಿಗಳಂ ಸಾಂಗಮಪ್ಪ ರಚಿಸಿಯುಂ ಪೆರ್ಗೊತ್ತಳ ಪಿರಿಯ ಪಿರಾಗಿಗಳನಮರ್ಚಿಯುಂ (ಕ್ಷಚೂ. ೦೨-೦೦ ವ). [ಪೆರ್ (< ಪಿರಿದು$_1$) + ಕೊತ್ತಳ$_1$]

**ಪೆರ್ಗೊತ್ತು** (ಕ್ರಿ). ಹೆಚ್ಚಾಗಿ ತಳ್ಳು; ಅಧಿಕವಾಗಿ ನೂಕು (?): ಮೊರೆಯಿಂದಂಬಿರಿವಿಟ್ಟು ಪಾಲುಗುತದೋರಂತಿರ್ದೊಡಂ ತಮ್ಮ ಕೆಚ್ಚಲ ಪಂದೊಯ್ಯನೆ ಕಂದದರ್ವಿ ಕಿಲನಂ ಪೆರ್ಗೊತ್ತೆಯುಂ . . . ವಿಭ್ರಾಜಿಸುತಿರ್ಪುವಾ ವಿಷಯದೊಳ್ ಸಾನಂದದಿಂ ಧೇನುಗಳ್ (ಶಾಂತೀಶ್ವ. ೦-೬೫); ಮನದೊಳ್ ಪುಟ್ಟಿದ ಸಮ್ಮದಂ ಪುದಿದು ಪೆರ್ಗೊತ್ತಲ್ಕೆ ತಾನುರ್ದದತ್ತನೆ ಮೆಯ್ಯೊರ್ಚೆ . . . ಸುತನಂ ನೋಡುತ್ತುಮಿರ್ದಂ ನೃಪಂ (ಶ್ರೀಸುಚ. ೦೫-೦೨೬). [?]

**ಪೆರ್ಗೊನೆ** (ನಾ). (ಹಣ್ಣು, ಹೂವು ಮುಂತಾದುವುಗಳ) ದೊಡ್ಡ ಗೊಂಚಲು; ತುಂಬಿದ ಗೊಲೆ: ಸುಲಭದಾನಿಯ ಪೋಲ್ತು ಪೆರ್ಗೊನೆಯೊಳು ಕಾತ ಹಲಸಿನ ಮರಗಳೊಪ್ಪಿದುವು (ಚೋಚಕ. ೨೩-೯೬); ಕಿಕ್ಕಿಱಿದ ಪೆರ್ಗೊನೆಗಳಿಂದೆ ಎಸೆವ ಚೆಂದೆಂಗಾಯ್ಗಳೊದೊಂದನೊಡೆಯೊತ್ತಲೊಸರಿ ಸೋರ್ವೆಳನೀರ್ಗಳಘ್ರ್ರಂಗಳಾಗೆ (ಕ್ಷಬಸಾ. ೩-೨೭). [ಪೆರ್ (< ಪಿರಿದು$_1$) + ಗೊನೆ$_2$ (< ಗೊಲೆ$_2$)]

**ಪೆರ್ಗೊರವ, ಹೆಗ್ಗೊರವ** (ನಾ). ೧. ಉತ್ತಮ ಸಂನ್ಯಾಸಿ; ಹಿರಿಯ ತಪಸ್ವಿ: ಕೇಳೋಯಿಪ್ಪನ್ಯಟವಪ್ರಕ್ಕಲವಾಡಱಿದ್ದೀನಮ್ಮಾ ಕಳನ್ತೂರನಂ ಬಾಲೇ ಪೆಗ್ಗೊರವಂ ಶಮಾಧಿ ನೆಱೆದೊನ್ ನೋನ್ತೆಯ್ದಿದೋರ್ಸ್ವರ್ದ್ದಿಯಾನ್ (ಎಕ. II. ೨೨-೪; ಸು. 700). **ಹೆಗ್ಗೊರವ**: ೨. ಈಶ್ವರ; ಶಿವ: ಧಿಟ್ಟನೈ ಹೆಗ್ಗೊರವ . . . ಅಬಲಾಜನಾನ್ಯಮ[ನ]ನಂಗನನು ಬಳಿಕ ಸುಟ್ಟನು (ಶಂಕಗ. ೨೯-೪೦). [ಪೆರ್ (< ಪಿರಿದು$_1$) + ಗೊರವ]

**ಪೆರ್ಗೊಲ್ಲಿ, ಪೆಗ್ಗೊಲ್ಲಿ** (ನಾ). ದೊಡ್ಡ ಪ್ರವಾಹ,—ಹಳ್ಳ: ತೆಂಕಯ್ಯ ಗ್ಗೊರ್ಕಿತ್ತಿಗೂಡಲ ಪಳ್ಳಮೇ ಪಡುವಾಯ್ ಪೆಗ್ಗೊರ್ಲ್ಲಿಯೆ . . . ಸೀಮೆ (ಎಕ. IV. ಹಗ್ಗಡ. ೪-೨೬; ಸು. 750), ಪೆಗ್ಗೊರ್ಲ್ಲಿಯುಮುಳ್ಳುಡಿತ್ತು ಪೆಟಿಗ್ಗೇಗೆಯ ಮೊದಲುಳ್ ಬಡಗಾಯ್ಪುಗ್ಗೊರ್ಲ್ಲಿಯ ಸನ್ದು ಕಾವೇರಿಯುಳ್ ಕೂಡಿತ್ತು ಸೀಮೆ (ಎಕ. IV. ಎಡತೊ. ೬೮-೬೬; ಸು. 890). **ಪೆಗ್ಗೊಲ್ಲಿ**: ಪೆಗ್ಗೊಳ್ಳಿಯ ನೀರ್ವ್ವುರ್ಗಿಲು ಬಡಗಣದೆಸೆಯೊಳ್ (ಮ್ಯಆ. ೦೯೨೦, ೦೦-೧೮೪; 967). [ಪೆರ್ (< ಪಿರಿದು$_1$) + ಕೊಲ್ಲಿ]

**ಪೆರ್ಗೊಸರ್ಕೆ** (ನಾ). ಅತ್ಯಧಿಕವಾದ ಮೋಹ: ಘನಕುಚಮಧ್ಯತಾಡನೆಗೆ ಪಮುಂದಲೆಯೊಳ್ ಸಮನಾಗೆ ಬಲ್ಲಿಯಿಂದಿನಿಯನ ಪೆರ್ಗೊಸರ್ಕೆ ಸರಿಯಾಗೆ ಪತಿಕ್ಷಮನಾಳ್ದ ಬಾಟ್ಟನಿಸ್ವನಮರ್ದಗೊಳ್ವ ಚುಂಬನಕೆ ಬೆಂಬಟ್ಟಿಯಿಂದಿರ್ವಪ್ಪ ತನ್ನ ಚುಂಬನ[ಮೆ]ಣಿಯಾಗೆ ಕಾಂತೆ ಪುರುಷಾಯಿತದೊಳ್ ಕರಮೊಪ್ಪಿ ತೋಱಿದಳ್ (ಸೂಕ್ತಿಸು. ೦೪-೪೬). [ಪೆರ್ (< ಪಿರಿದು$_1$) + ಕೊಸಱ್$_0$ (< ಕೊಸಱು$_2$) + —ಕೆ]

**ಪೆರ್ಗೊಱಡು** (ನಾ.) ದೊಡ್ಡ ಮರದ ತುಂಡು,—ಕಟ್ಟಿಗೆ: ಆತನ ಕೈಗಳಂ ಕಟ್ಟಿಸಿ ತಳಪಳನೆ ಕುದಿವೆಣ್ಣೆಗೊಪ್ಪಂಗೆ ಕಾಯ್ಮಲ್ಲಿಗಳತರಿಸಿ ಮತ್ತೆ ಪೊತ್ತುವೂಲಾರಿವ ಪೆರ್ಗೊಱಡುಗಳನಿಡಿಸಿ (ಕ್ಷಬಸಾ. ೦೦-೩೧). [ಪೆರ್ (< ಪಿರಿದು$_1$) + ಕೊಱಡು (< ಕೊಱಂಡು)]

**ಪೆರ್ಗೋಣೆ, ಪೆಗ್ಗೋಳೆ** (ನಾ). ಗೋಣೆಯ ಮರದಲ್ಲಿ ಒಂದು ಬಗೆ; ದೊಡ್ಡ ಗೋಣೆ: ಗೋಣೆಗೆ—ಕಿಱುಗೋಣೆ, ಗೋಣೆಕಾಪುತ್ರ, ಪೆರ್ಗೋಣೆ (ಕಶಬ್ದ. ೨೯೬ ಕ್ರಿಯೋ). **ಪೆಗ್ಗೋಳೆ**: ಹಾಲೆಯರನೇಱಿಲು ಕಡವ ಪೆಗ್ಗೋಳೆ . . . ಹಾದರಿಯ ಮರ ಮೊದಲಾದವುರ್ವಿಹವು (ಶಾಸ್ತ್ರಕಾ. ೩-೩). [ಪೆರ್ (< ಪಿರಿದು$_1$) + ಗೋಣೆ$_1$ (< ಗೋಳಿ$_1$)]

**ಪೆರ್ಚಾಳ್, ಹೆಚ್ಚಾಳು** (ನಾ). ಹಿರಿಮೆಯುಳ್ಳವನು; ಶ್ರೇಷ್ಠನಾದವನು: ಕೋಪಪ್ರಸಾದಮುಳ್ಳವರೆ ದೈವಮೆಂಬೊಡೆ ಮನ್ನೆಯರು ಮರಸರುಂ ತಳಾಱರುಂ ದಂಡಾಧಿಪರುಂ ಪೆರ್ಚಾಳ್ಗಳುಂ ದೈವಮಪ್ಪರ್ (ಧರ್ಮಾಮೃ. ೯-೦೦೪). **ಹೆಚ್ಚಾಳು**: "ಮಹೋತ್ಸಾಹಃ, ಮಹೋದ್ಯೋಗಃ, ಮಹೇಚ್ಛಃ, ಮಹಾಮನಾಃ—ಈ ೪ ಹೆಚ್ಚಾಳು" (ಹಲಾಯು. ೩೬-೨೦೦): ನಿನಗೆ ಮಣಿವವನಲ್ಲ ರಾಧಾತನಯನವ ಹೆಚ್ಚಾಳು ಕಡ್ಡಿಯ ಮೊನೆಗೆ ಕೊಂಬನೆ ನಿನ್ನನು (ಶಬ್ದ.ಕ. ೦೬-೦೬). [ಪೆರ್ಚ್$_3$ + ಆಳ್$_1$]

**ಪೆರ್ಚಿಸು, ಪೆಚ್ಚಿಸು, ಪೆಟ್ಚಿಸು, ಹೆಚ್ಚಿಸು** (ಕ್ರಿ). ೧. ವೃದ್ಧಿಪಡಿಸು; ಅಧಿಕಗೊಳಿಸು: "ಪೆರ್ಚಿಸು-ವರ್ಧನೇ" (ಕಧಾಂ): ಬಂಧುಜನಕ್ಕೆ ಪುಂಗ್ಗ ಮುಖಚಂದ್ರಾಲೋಕಮಾಲೋಕನೋತ್ಸವಮಂ ಪೆರ್ಚ[ಶಾಶಂ. ಚ್ಚಿ]ಸೆ ಬಾಲನಿಂತೊದವಿದಂ ಸಂಸಾರಸಾರೋದಯಂ (ಅಜಿತ. ೬-೦೨೪); ತದೀಯ ಸರ್ಬ್ಬಸ್ವಮಂ ನಿಜೇಶಂಗೆ ತಂದುಕೊಟ್ಟು ಪತಿಪ್ರಸಾದಮಂ ತನ್ನೊಳಮದಿನಂ ಪೆರ್ಚಿಸುತ್ತುಂ (ಶಾಂತೀಶ್. ೩-೨೨ ವ; 1047): ಚೇತಃಪ್ರೀತಿಯಂ ಪೆರ್ಚಿಸುವುದು ಪವನಸ್ಸ್ವೈರಚಾರಂ ಸಮೀರಂ (ಶುಭ್ರಕ. ೨-೪೦). ೨. ಹಬ್ಬಿಸು; ಹಬ್ಬುವಂತೆ ಮಾಡು: ವಿಷಯವಿಷವಲ್ಲಿಯಂ ಪೆರ್ಚಿಸುವ ಜಳಧಾರೆ (ಆರಂಭೂ. ೫೫೩). ೩. ಉಕ್ಕುವಂತೆ ಮಾಡು; ಹೊರಹೊಮ್ಮಿಸು: ಕೊಳಪ ದಯಾಂಭೋನಿಧಿಯಂ ಪೆರ್ಚಿಸಿಯುತಮಾಗಳಿದ ಸತ್ಪಥದೊಳ್ಪರಿಯಿಸುವಲಭಾಗುಣ ಪ್ರಾಭೇಂದ್ರಪದಂ ನಮ್ಮಂ ಪರಿರಕ್ಷಿಸುಗೆ (ಅಜಿತಾ. ೮-೪): ಬಾಣನ ಮಹ

ದಾಸ್ಥಾನದುಗ್ಧಾಬ್ಧಿಯು ಕ್ಷೀಣವಿಲ್ಲದೆ ಪೆರ್ಚಿಸುವ ಏಕಾಂಕ ತಾನೆಂಬಂತೆ . . . ಮಂತ್ರೀಶನೊಪ್ಪಿದನು (ಕೋಹಕ. ೨೦-೩೨). ೪. ವಿಸ್ತಾರಗೊಳಿಸು : ಮನೆಯುಂ ಪೆರ್ಚಿಸುವೊಡೆ ಮುನ್ನಿನ ಪಾಟ್ಯೆಯೊಳಯ್ದೆ ಮಾಡಲುಂ ಬಡಗರ್ ಪೊತ್ತಿ ನಿಮಿರ್ಚುಗುಟ್ಟದ ದೆಸೆಗಳೀನಿತುಂ ಪೆರ್ಚಿಸಲೇಡ (ಕೋಕಿಳಾಕ. ೩-೦೩). ೫. (ಅಲಂ) ಕತ್ತರಿಸು : ಕಡಿ; ಕೊಯ್ಯು : ಆಗಳಾ ಮದಗಜಾಂಕುಶದಿಂದೆ ಪೆರ್ಚಿಸಿ ನಾಭಿಯಂ (ಶಂಕರಾ. ೦-೯೩); ಕ್ಷೀರಾಬ್ಧ್ಯಾಮೃತಮಾನ್ಧಿಯೊಳ್ತೀದು ಫಾತಿಕ್ಷಯಮಾಕ್ಕೆಂದು ಪರಸೆ ನಾಭಿನಾಳಮಂ ಪೆರ್ಚಿಸುವುದು (ಜಾಪುಂತ. ೨೩೫); ಪೊರ್ಕ್ಕುಟಿ ಕುಡಿಯುಂ ಪೆರ್ಚಿಸಲಿಕ್ಕಿದ ಮಣಿಕನಕಪುಂಜಮೆಸೆದಿರೆ (ಅಜಿಂಪು. ೦೨-೬೨). 'ಪಚ್ಚಿಸಂ$_1$' ಪರ್ಗಾ. ೬. ಬೀಗುವಂತೆ ಮಾಡು; ಉಬ್ಬಿಸಂ : ಅವರನೆ ಪೊರೆವರ್ ಪೆರ್ಚಿಪರವರನೆ . . . ನೋಡುವರ್ಗಳೆ ನಂಟರ್ (ಕಾಪಂಪು. ೫೬೨); ಸಂತಸದೆ ಪೆರ್ಚಿಪುದೆಂದಮಾರ್ದಕ್ಕಿನೊಳ್ ಕರಂ ಕರಗಿವುದೆನ್ನನೆಂದೊಸೆದು ನೀಂ ಕೃಪೆಯಿಂದಲೆ ಹಾಪೆಯಾಳ್ದನೇ (ಕುಂತಾತ. ೫); ನೀನೆಣಿಕೆಗೊಂಡನ್ನ ಪೆರ್ಚಿಸಿ ಬಯಲಿಗೀಗ ಮಾನಿದಣಕದಿಂ ದಿಟ್ಟ ತಪ್ಪಿಸಿದೊಡೆ (ಸೌಂದರ. ೦೯-೨೯). ೭. [ಗಣಿತ] ಗುಣಾಕಾರ ಮಾಡು; ಗುಣಿಸು : "ಪೆರ್ಚಿಸು ನೂಂಕು . . . ಗುಣಿಸು . . ಬೆಳಸೆುದು ಇಂತಿನಿತುಂ ಗುಣಿಸೋದಕ್ಕೆ ಹೆಸರು" (ಕೃಕಚ. ೦೦-೮); ಕ್ರಮದಿಂದು ಗ್ರಹರಾಶಿಭಾಗಕಲೆಯಂ ನೂಹಿಂಟಿಟಂ ಪೆರ್ಚಿಸು (ಜಾತಕ. ೮-೦). ಪೆಚ್ಚಿಸು : ೧. ಚತುರೋಪಾಯಮನೊದವಿಸಿ ಸಿಹಾಧಿಪತಿ ಯಾದವನಾರಾಯಣನ ರಾಜ್ಯಶ್ರೀಯಂ ಪೆಚ್ಚಿಸುವಜ[ಂ]ಗೆ ಸಲ್ಲಂ ಮಲ್ಲಂ (ಕೌಶ. XX. ೨೦೨-೦೬; 1244). ಪೆಚ್ಚಿಸು : ೧. ಮಾಜು ತೋಣ್ಯದ ನೆಲನುಮಾದಿತ್ಯಭಟರರಸ್ಥಾನವುವ ರಕ್ಷಿಸಲ್ಪೆಟ್ಟಿಸಲಿವರ ಸಮರ್ಥರೆನ್ದು ಗೋಕರ್ಣ್ಣಪಣ್ಣತ ಭಟರಗ್ಗೆ . . . ಕೊಟ್ಟರು (ಕಶಾ. I, ೦೩-೦೫; ೫೩೫); ತನ್ನ ನಡಯಿಸಿದ ಬಂಕನ್ತಂದುವರ ಬಡ್ಡಿಗೊಟ್ಟು ಪೆಚ್ಚಿಸಿ ಪೊನ್ನಂ ಮನ್ದರಗಿರಿಧೈರ್ಯ್ಯಂ ಸಾನನ್ದದೆ ಶ್ರೀಸಾನ್ತಿಸೆಟ್ಟಿ ಪರಿರಕ್ಷಿಸಿದಂ (ಕೌಶ. XX. ೫೫-೩೨; 1082). ಹೆಚ್ಚಿಸು : ೧. ಅಸನ-ಶತ್ರುವನಾಕ್ರಮಿಸಲು ಸಮರ್ಥನಲ್ಲ ಎಂದು ದೇಶ ಕಾಲಾದಿಗಳಂ ಹಾರಾತೆ ದುರ್ಗಾದಿಗಳಂ ಹೆಚ್ಚಿಸುವ ವಿಜಿಗೀಷುವಿನ ಸ್ಥಿತಿಯು (ಕಾಕಚಾ. ೬); ಕೊಳುಗುಳದ ಹೆಚ್ಚಳಸು ಹೆಚ್ಚಿಸಿತಂತಕನ ಭಯವ (ಉತ್ಪ್ರಕ್ರೋ. ೨-೨೬). ೬. ಮಕ್ಕಳನ್ನು ಪ್ರೀತಿಯಿಂದ ಸಾಕಬೇಕು ಹೊರತು, ಅವರನ್ನು ಹೆಚ್ಚಿಸಿ ಹಾಳು ಮಾಡಬಾರದು (ಜೂಪ). ೭. "ಗುಣಿತಂ, ಆಹತಂ — ೨ ಗುಣಿಸಲ್ಪಟ್ಟದ್ದು, ಹೆಚ್ಚಿಸಲ್ಪಟ್ಟದ್ದು, ಹೊಡೆಯಲ್ಪಟ್ಟದ್ದು" (ಸಿದ್ಧಾಂತ. ೩೯೬). ೮. (ಅಲಂ) (ಶುಭವೆಂದು ಗಣಿಸುವ ದೀಪವನ್ನು ಕುರಿತು ಹೇಳುವಾಗ) ಆರಿಸು,– ನಂದಿಸು : ಕಡೆ ಹಗಲ ಕೊಳುಂಡ ಮೇಗೆ, ಹಣತೆ ಹೆಚ್ಚಿಸೆ ಕಣ್ಣು ತೂಗೆ ಮುಚ್ಚುವುದೆ ವಾನಚ್ಚಿಯಾ (ಗೆಲಾಂ. ೬೦-೨೬).

ಪೆರ್ಚಿಸಿಕೊಳ್ಳು–ವೃದ್ಧಿಯನ್ನುಂಟು ಮಾಡಿಕೊಳ್ಳು : ವಿಧಿಪೂರ್ವಸಾಧಿತ ಮಹಾಮಂತ್ರವ್ರಜಂ ತನ್ನ ತೋಳ್ವಲದಿಂ ಪೆರ್ಚಿಸಿಕೊಂಡಿಳಾಲಲನೆಯೊಳ್ ಮುಗಿಂಗಮೆಕ್ಕೆಗಂ ಚಲಂಗೆಯ್ವುದಾರ್ (ಜಾಜಿಪು. ೫-೦೩).

[ಪೆರ್ಚು$_2$ + — ಇಸು$_1$]

**ಪೆರ್ಚು$_1$**, **ಪೆಚ್ಚು$_1$**, **ಪೆಚ್ಚು**, **ಹೆಚ್ಚು$_1$** (ಕ್ರಿ). ೧. ಅಧಿಕವಾಗು : ವೃದ್ಧಿಯನ್ನು ಹೊಂದು : ಅತಿಶಯಂವಾಗು : ಸಂಸಾರವೈರಾಗ್ಯಮಾದಮಾನುಂ ಪೆರ್ಚೆ (ಶಬ್ದಾ. ೬೫-೨೯); ಆ ಶಂಕೆ ಪೊಣ್ಮುತ್ತಿರೆ ಪೆರ್ಚೆತ್ತುಗ್ರಭೋಗಂ (ಆದಿಪು. ೦೩-೩೬); ಪಗೆ ನೀಗೆಯುಂ ಮುಳಿಸು ಪೋಗೆಯುಂ ಪಾಯುತಿ ಪೆರ್ಚೆಯುಂ ಜಗಂ ಪೊಗಟೆಯುಂ ಮಾಂತರಾತಿನೃಪತಂ ಕವ ಕೊಲ್ವುದು (ಶಂಕರಾ. ೮-೯೯). ೨. (ಮರ, ಗಿಡ ಮೊದಲಾದುವುಗಳಂತೆ) ಬೆಳೆ : ಸಂದಧಿಪತಿ ಮೊಟಕಾಲ್ವರಂ . . . ತಲೆಯ ನೆಲೆಗೆ ಲೋಕಾಂತರಮಡೆಯಲ್ಲೆನಿಸ ಪೆರ್ಚಿದಂ ದನುತನಯಂ (ಶಂಕರಾ. ೭೨-೦೦) : ಬಸದೊಡನೆ ಕೂಡಿ ಪೆರ್ಚಿದ ಸಸಿಯುಂ . . . ಪಲವಂ ಭಾಪಿಸುತಿರ್ಪನ ತಪಮುಮೊಪ್ಪಲಾರ್ಗಮೆ ಕಡೆಯೊಳ್ (ಧರ್ಮಾಮೃ. ೨-೬೨). ೩. ದೊಡ್ಡದಾಗು ; ಹಿರಿದಾಗಂ : ಅಲ್ಲಿಯ ಖಚರರ್ . . . ದೇಹಪ್ರಮಾಣದೊಳ್ ಕುಂದುವರುಂ ಪೆರ್ಚುವರುಮಲ್ಲರ್ (ಆದಿಪು. ೯-೦೨೦ ವ) : ಪವನಂ ಪೆರ್ಚಿದ ಮಹಾವೃಕ್ಷಂಗಳಂ ಕೀಲ್ವುದಲ್ಲದೆ ಮೃದುಪಪ್ಪ ತೃಣಂಗಳಂ ಕೀಲದು (ಕುಕಕು. ೯೬-೯); ಕೆಳಮಸಿಯಾ ಪೆರ್ಚಿತು (ಸಿದ್ಧರಾ. ೦-೯೯). ೪. ಉಕ್ಕು ; ಪ್ರವಹಿಸು : ಸುಯ್ಯಲರುಬುಲಾಶಿ ವಾರಿವಾಯುಮನಲ್ಕೆ ಪೆರ್ಚುವುದು (ಕಾದಂಬ. ೩೩೫) ; ಶ್ರುತದುಗ್ಧಾಂಭೋಧಿ ಪೆರ್ಚಲ್ಪಿನಗದಿತ ತತ್ತ್ವಾಂಶು ಪರ್ವಲ್ (ಧರ್ಮಾಮೃ. ೦-೯); ಜಿನಧರ್ಮ್ಮಾಂಬೋಧಿ ಪೆರ್ಚುತ್ತಿರೆ (ಎಕ. VIII (S), ಸೊರಬ. ೫೮೭-೯೭ ; 1207). ೫. ವಿಸ್ತಾರವಾಗಂ; ಹಬ್ಬು; ವ್ಯಾಪಿಸು ; ಹರಡು : "ಪೆರ್ಚು – ವಿಸ್ತಾರೇ" (ಕವರಾ) : ಪೊಗೆ ಪೆರ್ಚಿ [ಪಾಠಾಂ. ಪೊಣ್ಮಿ] ನೆಗೆದ ಕಾಟ್ಕೆಚ್ಚುಮು ಸಿಂಹಾಸನದ ಮೇಗೇಳ್ದ ಕೋಡಗಮುಮಂ . . . ಇಂತೀ ಪದಿನಾಱುಂ ಕನಸುಗಳಂ . . . ಕಂಡೆನೆಂದಂಜಿ (ಶಬ್ದಾ. ೬೫-೨೬); ದಿಗ್ಭಿತ್ತಿವಿಭೇದಿ ಪೆರ್ಚಿ ಕವನಾನರಾವಂ (ಶಂಕರಾ. ೮-೯೨); ಹಿರಿಂಬೇಶ್ವರಮೆಂಬುದು ಆ ಲಿಂಗಂ ಪೆರ್ಚ್ಚೆ ಪೆರ್ಚುವ ಕಾರಣದಿಂ ಕಳೇಶ್ವರಮದಮೃತಲಿಂಗದೇ[ವರ್] ಪ್ರಸನ್ನತೆಯಿಂ ಕಣ್ಡು ಶ್ರೀಮದ್ದಣ್ಡನಾಯಕ ದೇವಪಯ್ಯ . . . ದೇಗುಲದ ಅಧಿಷ್ಠಾನಮಂ ಕಟ್ಟಿಸಿ (ಕೌಶ. IX-i, ೦೨೬-೨೯; 1084). ೬. ಬೀಗು ; ಹೆಮ್ಮೆಪಡು ; ಗರ್ವಿಸು : ಎನ್ನನೆ ನಚ್ಚಿ ಪೆರ್ಚಿ ಮಸಂ ಪೊರೆದು (ಶಂಕರಾ. ೯-೬೦) : ಗಂಗಾನ್ವಯಂ ಪೆರ್ಚ್ಚೆ ವರ್ತಿಸುತ್ತಿರೆ (ಎಕ. VII, ಶಿಕಾರಿ. ೯ ೩೯ ; 1122) ; ಅದಟಿಂ ಪುಂ ಗೆಲ್ದುದಂ ನೀಂ ನೆನೆನೆನೆದು ಭುಜಾಗರ್ವದಿಂ ಪೆರ್ಚಿದಿರ್ ಪೆರ್ಚಿದಿರ್ (ಶಗಬ. ೮-೬೯). ೭. ಸಂತೋಷಿಸಂ ; ಹಿಗ್ಗು : ಸವಣರೆಂದೊಡೆ ಪೆರ್ಚುವಳ್ ಜಿನಪೂಜೆಯೆಂದೊಡೆ ನೋಡುವಳ್ (ಧರ್ಮಾಮೃ. ೮-೦೯); ನುಡಿಯ ಬಳಲ್ದ ಪಾಂಥನೆರ್ದೆ ತಾಳ್ದನ ಸೋನೆಯನಾಂತ ಮಾಳ್ಕೆಯಿಂ ಪೊಡಕರಿಸುತ್ತ ಪೆರ್ಚೆ (ಗಿರಿ. ೨-೦೯): ಅವಗುಣಕೋಟಿಯಂ ಮಚಿದು . . . ತಲೆದೂಗಿ ಮೆಚ್ಚಿ ಪೆರ್ಚುವ ವಿದಸೂಯರಂ . . . ಅರ್ಚಿಪೆಂ (ಜಗನ್ನಾ. ೦-೦೦). ೮. ನೀಳವಾಗು ; ಚಾಚು ; ನಿಡಿದಾಗು : ದೆಸೆಗಳ್ ಪೆರ್ಚಿದೆ ಮೊಟ್ಟನಾದುವಗಲಕ್ಕೆಂಬನ್ನೆಗಂ . . . ಅದ್ರೀಂದ್ರಂಗಳಂ ತಂದು ಕೀಲಿಸಿದಂ (ಆದಿಪು. ೮೫-೫೦). ೯. ವಿಜೃಂಭಿಸು ; ಅಟ್ಟಹಾಸ ಮಾಡು : ದಡಿಗನ ವಿಚ್ಚುಮಂ ಮಿಡಿದೊಡಲ್ಲದೆ ಪಾಪನ ಮೊಳಭವೆಂದು . . . ರಥಂಗಳನಚ್ಚುಡಿಯಚ್ಚು ಭೀಮನಂ ಕಡೆಯದ ಮಾಟ್ಟ ಪೆರ್ಚಿ ನುಡಿದಂ ಕಟಕೀತನನಂ ಮುರಾಂತಕಂ (ಶಂಕರಾ. ೭೨-೦೬). ೧೦. ಅಭಿವೃದ್ಧಿ ಹೊಂದು; ಏಳಿಗೆಯಾಗು, ವರ್ಧಿಸು : ಒಳಗಿರ್ದ ವೈರಿಗಳ್ ಮೊಕ್ಕಳವಿಱಯರ್ ಪೆರ್ಚಲಧಿಪವಿಧವರ್ಗಳುಮಂ ತಳರದೊಡನಿರ್ದ ಬಡಬಾನಳನೆಂದುಂ ಪೆರ್ಚಲೀಯು[ದಂ]ತಂಬುಧಿಯುಂ (ಕಶಾ. ೩-೮೯೯); ಪೆಣ್ಣ ಪೆತ್ತವರ ಬಳಗ ಬಳೆವುದು ದೇಗ ಪೆಣ್ಣ ಪೆತ್ತವರು ಪೆರ್ಚುವರು (ಜಾಪ. ೫-೯). ೧೧. ಉಬ್ಬು : ಒಳಗಿರ್ದ ವೈರಿಗಳ್ ಮೊಕ್ಕಳಮಿಱಯರ್ ಪೆರ್ಚಲಧಿಕವಿಧವರ್ಗಳುಮಂ ತಳರದೊಡನಿರ್ದ ಬಡಬಾನಳನೆಂದುಂ ಪೆರ್ಚಲೀಯು[ದಂ]ತಂಬುಧಿಯುಂ (ಕಶಾ. ೩-೮೯೯); ಉರಿಗಣ್ ಕಿತ್ತುವ ಮೀಸೆ ಪೆರ್ಚಿದ ಕೊರಲ್ ಪೆರ್ಚಾಲ . . . ಚೆಲ್ವಾಗೆ ತತ್ತ್ವನನಾಂತರದೊಳ್ ಪೆರ್ಚುಲಿಯುದ್ಧದು (ಕಳಾಂ. ೬೬). ಪೆಚ್ಚು$_1$ : ೧. ಎನಿತನಿತಂ ಪೆಚ್ಚುಗುವಂತನಿತನಿತೊಡನೊಡನೆ ಪೆರ್ಚುತಿಕ್ಕೆಂ ಮೋಹಂ ಧನದಿಂ ಪರಿಜನದಿಂದೆಂದಿನಿತಱಿವಗ್ಗಳವನೊಲ್ಲೆನೆಂಬಂ ಜೈನಂ (ಶಬುಕ. ೫-೬೩); ಒಂದಕ್ಕೆ ನೂಱುಮಡಿಯಾಗಿ ಪೆಚ್ಚುವುದು (೬ಕ್ಕಿ. ೬-೦೯) : ಉಚ್ಚವದೊಳಗಿತ್ತ ನವರತ್ನಭೂಷಣ ಪೆಚ್ಚಿ ಬಂದಿವ ನೋಡೇಳು (ಶಂಕರ. ೨೨-೯೩). ೪. ಒಸೆದು ಕಣ್ಗಳಿಂದೆ ಸುರಿದ ರಸದ ಹೊನಲು ಸೆಚ್ಚಿ ಪೆ[ಪಾಠಾಂ. ಪುಟ್ಟಿ] (ಶಬುಕ. ೫೬.

ಸಹೋದರರ ಪ್ರೀತಿಯು ಸಂಕಟದ ಮುಂದೆ ಸನ್ನದೇನೂ ಅಷ್ಟು ಹೆಚ್ಚಿನದಲ್ಲ (ಶಾಂತಾ. ೯ ೭೭). ೩. ಮುಂದೆ ಹೆಚ್ಚುಲಡುವ ಹೆಚ್ಚಿ ? ಸುಳ್ಳು. ಹುಸಿಳ್ಳು. ಆ ಸ್ತುತಿ! (ಅಲಕ. ೦೭-೦). ೯. "ಹೆಚ್ಚು ಎಂದರೆ ಧಾನ್ಯ ಸಾಗಿಸುವುದಕ್ಕೆ ಮೊದಲು ಮಾಡುವ ಒಂದು ಕ್ರಿಯೆ" (ಮೂಠಾಣ. ೫೮) ಇಸ್ನುಳಿರುವುದು ಧಾನ್ಯವನ್ನು ಮನೆಗೆ ಸಾಗಿಸುವುದೋವೇ. ಇದಕ್ಕೆ ಮೊದಲು "ಹೆಚ್ಚು" ಮಾಡುತ್ತಾರೆ (ಮೂಠಾಣ. ೫೮).

**ಹೆಚ್ಚು ಹೆಚ್ಚು, ಹೆಚ್ಚೆಚ್ಚು** (ದ್ವಿರುಕ್ತಿ) : ಇತ್ತೀಚೆಗೆ ಅವನು ಹೆಚ್ಚು ಹೆಚ್ಚು ಮಸೆಯಾಗತೊಡಗಿದ್ದನು (ಅನತಿ. ೩೩೯); ದೊಂಬಲಿಗೆ ನೀರ ಹಾಕಿ ದೊಂಡೊರಿದೆ ಹೊರಳಿದಲ್ಲಿ ಹೆಚ್ಚೆಚ್ಚು ಬಯಸಿದರಿಲ್ಲ (ಪುರಂದ. ೩.೦೭೯ ೧); ನಾವು ಮೇಲಕ್ಕೆ ಹತ್ತಿದಷ್ಟೂ ನಮಗೆ ಭೂಮಿಯು ಹೆಚ್ಚೆಚ್ಚಾಗಿ ಕಾಣುವದು (ಭೂಗೋಲ. ೨). **ಪೆರ್ಚುಕಡಮೆ, ಹೆಚ್ಚುಕಡಮೆ, ಹೆಚ್ಚುಕಡಿಮೆ**=೧. ವ್ಯತ್ಯಾಸ; ಭೇದ : ಲೋಕವಾವುದಾದೊಡವೇನ್? ಪೆರ್ಚುಕಡಮೆ ಗಳೇನೆ ಸಚ್ಚಿದಾನಂದದೀ ಲೀಲಾವಿನೋದದೊಳ್ (ಶ್ರೀರಾಮ ೭೨೫. ೧೭೬); ಕೆಲಸದಲ್ಲಿ ಹೆಚ್ಚುಕಡಮೆ ಆಗದಂತೆ ಮಾಡು (ರೂಢಿ); ಸದಸ್ಯರ ಹಿಡಿವಳಿಗಳಲ್ಲಿ ಯಷ್ಟೂದಲ್ಲಿ ಹೆಚ್ಚು ಕಡಮೆ ಬಾರದಂತೆ ಸರಿ ನೋಡುತ್ತಿರುವ ನಾಸ್ತಿಕ್ಯಸ ಹೆಸರು (ಸಿರಿ೩. ೦೫. ೨೦೭); ಚಿನ್ನಕ್ಕೂ ಕಬ್ಬಿಣಕ್ಕೂ ಹೆಚ್ಚು ಕಮಿಮೆ ಇಲ್ಲವೇ? (ಅದೇ). ೨. ಸುಮಾರು; ಅಜಮಾಸು : ಹೆಚ್ಚುಕಡಮೆ ನಾನು ಅಲ್ಲಿ ಆರು ಗಂಟೆಗೆ ಬರುತ್ತೇನೆ (ರೂಢಿ); ಹೆಚ್ಚು ಕಡಮೆ ನಾಳೆಯೊಳಗೆ ಈ ಕೆಲಸವನ್ನು ಮಾಡಿ ಮುಗಿಸುತ್ತೇನೆ(ರೂಢಿ); ಕೆಲವರು ಈ ವಿವರಣೆಯನ್ನು ಹೆಚ್ಚು ಕಡಿಮೆ ಒಪ್ಪಿಕೊಂಡು ತಮ್ಮ ದೃಷ್ಟಿಯನ್ನು ಅಂತರ್ಯಾಮಿಯಾದ ನಿರಪೇಕ್ಷ ಸತ್ವದ ಕಡೆಗೆ ತಿರುಗಿಸುವರು (ತತ್ವಶಾ. ೪೦೯). **ಪೆರ್ಚು ಕುಂದು, ಹೆಚ್ಚು ಕುಂದು**=೧. ಆಧಿಕ್ಯ ಹಾಗೂ ಕೊರತೆ; ನ್ಯೂನಾಧಿಕ್ಯ : ಪೆರ್ಚುಕುಂದಿಲ್ಲ ದಂತೆಚ್ಚೆಚ್ಚಱುಗೂಡಿ . . . ಸೊಲ್ಲಿಸುವೆನು (ಹಂಪ. ೧. ೪೪); ಮಾಹಿನ ಮಾಳಿಯು ಹೆಚ್ಚು ಕುಂದಿನ ಹೋರಾಟವುಳ್ಳನ್ನಕ್ಕರ ಅನ್ಯತೀಯಲ್ಲ (ಅಂತ ೩೩-೯೭); ಶರಣರ ಹೆಚ್ಚು ಕುಂದುಗಳು ನುಡಿಯದಿಹ ಸಚ್ಚರಿಗ್ರದ ಭಾಷೆ (ಬಸ೫ ೬. ೧). ೨. ವ್ಯತ್ಯಾಸ; ಹೆಚ್ಚುಕಡಮೆ; ಅಂತರ: ಪರಿಕಲ್ಪನೆಗ್ಯುದಸ್ಸಂ ಕುಹರ ಮರಕುಙಂ ಪೆರ್ಚುಕುಂದುಳ್ಳುಗು (ಶಬ್ದಮ. ೨-೦೩೦). ೩. ಏರಿಳಿತ; ಉಬ್ಬರವಿಳಿತ : ಒಂದು ಭಂಗವನಾಂತೆನೆಸುತಪ್ಪ ತಗ್ಗಿ ತಾಂ ಪೆರ್ಚು ಕುಂದಿನೊಳೆಸೆದುದು (ಕುಂ೪. ೨-೩). **ಹೆಚ್ಚಲಿ** = 'ವೃದ್ಧಿಯಾಗಲಿ' ಎಂಬರ್ಥದಲ್ಲಿ ಹೇಳುವ ಮಾತು : ರಾಗಿಯನ್ನು . . . ಅಳೆಯಲು ಪ್ರಾರಂಭಿಸುತ್ತಾರೆ. ಪ್ರಾರಂಭದಲ್ಲಿ ಒಂದು ಎಂದು ಹೇಳುವುದಿಲ್ಲ. "ಹೆಚ್ಚಲಿ" ಎನ್ನುತ್ತಾರೆ (ಮೂಠಾಣ. ೫೮). [< ಪೆರ್ಚು₁/ತೆಲು. ಪೆಚ್ಚು]

**ಪೆರ್ಚುಂಬುರುಳ್** (ನಾ). ಅಧಿಕವಾಗುತ್ತಿರುವ ಹೊನ್ನು; ಹೆಚ್ಚುತ್ತಿರುವ ಸಂಪತ್ತು : ಆತುಂಬೊಲುಮಿಂಚುಂಬುಱು, ಪೆರ್ಚುಂಬುರುಳ್ (ಕವಿರಾ. ೦೮೦ ಕ್ರಪೊ). [ಪೆರ್ಚು₁ + ಪೊರುಳ್]

**ಪೆರ್ಚುಗೆ, ಪೆಚ್ಚುಗೆ, ಹೆಚ್ಚಿಗ್ಗೆ, ಹೆಚ್ಚುಗೆ** (ನಾ). ೧. ಆಧಿಕ್ಯ ; ವೃದ್ಧಿ: ಬಾಹುಳ್ಯ : "ಉಬ್ಬರಂ . . . ಒಟ್ಟಜೆ, ಪೆರ್ಚುಗೆ-ಈ ೧೯ ಆತಿಶಯಂ" (ಕಶಾ. ೩೬-೨೬೯); ಉತ್ತಮವೈರಾಗ್ಯದ ಪೆರ್ಚುಗೆಯಿಂ ತಡಮುದ ಸೆಟ್ಟಿಯನೆಯ್ದೆವಂದು (ಧರ್ಮಾಮೃ. ೨-೦೯೩): ಪರರ್ಗೆ ತಮ್ಮಯ ಸುವಿದ್ಯೆಯನಿತ್ತೊಡೆ ಮತ್ತೆನಿತ್ತೆಯುಂ ಸೌಂದರವಾಗಿ ಪೆರ್ಚುಗೆಯನೆಯ್ದುವುದು (ಚಾರಿ೪. ೯-೨೯). ೨. ದೊಡ್ಡದು ; ಹಿರಿದು : "ಪೆರ್ಚುಗೆಯೆನೆ ಪಿರಿದಪ್ಪುದು" (ಕಶಾ. ೫೬). ೩. ನೀಳವಾದುದು; ನಿಡಿದಾದುದು : ನಿನ್ನ ವಿಕ್ರಮಸಿಂಹದಾ ಕೇಸರವನ್ನೆಲ್ಲ ಕತ್ತರಿಸದಿರೆ, ಪೆರ್ಚುಗೆಯ ದಂಷ್ಟ್ರ ನಖಗಳಂ ಕಿಸಿವಾಡದಿರೆ . . . ಹೆತ್ತಬ್ಬೆ ಪೋಣಾಣ್ಯನಾಣೆ (ಕತ್ತಾಂಗ. ೭೯-೨೦೭). ೪. ಹೆಚ್ಚಿನದುಂ; ಅತಿಶಯವಾದುದು; ಉತ್ತಮವಾದುದಂ : ತರುಣಿಯರಿರ್ವರುಂ ತಂತಮ್ಮ ಸಖಿಯರ ೮ರದೊಳಗಿತ್ತಾದ ಪುಡಿಯು ಪರಿಮಳ ಪೆರ್ಚುಗೆಯೆಂದು ವಿದಗ್ಧರಿಂದಱಿದು ಬರುವುದೆಂದು ಕಳುಹೆ (ಅನಂತನಾ. ೦೨-೦೭). ೫. ಉಬ್ಬರ ; ಉಕ್ಕುವಿಕೆ : ತೆರೆಸೊತೆ ಬುಮ್ಮುವಂ ಸುಟ್ಟಿ ಜಲಂ ತೆನೆ ಪೆರ್ಚುಗೆ ಗುಣ್ಪು ಘೋಷಣಂ . . . ಬಗೆಗಾ ದೊಡೆ ಸೈತು ಸಮುದ್ರವರ್ಣನಂ (ಸೂಕ್ತಿಸು. ೨ ೦); ಪೆರ್ಚುಗೆಯೊಳುಪ್ಪೆವ್ವ ವಾಲ್ಗಡಲ ವೀಚಿಗಳೊ . . . ಎನಲ್ಪಸರಿಸಿತ್ತು ಚಂದ್ರಿಕೆಗಳಂಗಳೆಲ್ಲಾ ದೆಸೆಯೊಳು (ಕೃಷ್ಣರಾ. ೨೬-೦೩): ವಾರ್ಧಿ ಪೆರ್ಚುಗೆಯಂಪಾರ್ಚೆ ತಾಳ್ದಸುಪ್ಪ ತೋಱಯಮುಂ ಪಿಸುಕಾಲಚಂದ್ರಮಂ (ರಾಜಶೇ ೯. ೪). ೬. ಏಳಿಗೆ ; ಅಭ್ಯುದಯ ; ಪ್ರಜೆಗಳ ಪೆರ್ಚುಗೆಗೆಂದಱಿಜನಾರ್ಥಿತ ಘನ ನಮ ಸಂಸದ್ರುಮಮುಂ ವಿಶ್ವಜಗನ್ನುತನಮಳಿನಬುದ್ಧಿ ಜಳದ ಬಳೆಯಿಸಿನನೀಸದಾ ರಸೊ ಭೂಮಂ (ವರ್ಧ೪. ೦ ೬೪). ೭. ವೈಶಾಲ್ಯ; ವ್ಯಾಪ್ತಿ: ಒಂದು ಬಿಸ್ತಿ ಪೆರ್ಚುಗೆಗೆ ಕಾರಣಮಲ್ಲದುವಂ ಕಾರಣಗಳೆಯ್ದುಸುರಳದು ಪ್ರೌಢೋಕ್ತಿ ಯೆನಿಪುದು (ನರಸ. ೦೯-೨೩೩). ೮. ಪರಾಕ್ರಮ ; ಶೌರ್ಯ : "ಪೆರ್ಚುಗೆಯೊಳ್ ಬಲಂ" (ಕಶಾ. ೬೭). **ಪೆಚ್ಚುಗೆ** : ೧. "ಮುಖ್ಯ ಮಿಸಲ್ ಪೆಚ್ಚು [ಶಾಂತಾ. ಹೆಚ್ಚು]ಗೆ" (ರಾಜ. ೨೫). ೫. ಭಂಗದೆ ಗೊಂಡಾಡಂ ನೆನೆನೆನೆದು ನಿಟ್ಟುಸಿರ್ವಿಟ್ಟು ಸುಯ್ಯಿಂತುಮಿಧಿ ತೆರೆ ಪೆಚ್ಚು [ಶಾಂತಾ. ಪೆರ್ಚು]ಗೆಯೊಳಿರ್ಪುದು (ಕೃಷ್ಣರಾ. ೬. ೨): ಕಣ್ಗೆಸೆದಂದು ಮಾರ್ಪರ್ಗಾವಮಂಡಪಚ್ಚರಿಯ ಪೆಚ್ಚುಗೆಯನ್ನೆಚ್ಚಱಿಸುತ (ಸಂದಿ೭೨. ೨-೭). ೯. ಹಿರಿಮೆ ; ಹೆಗ್ಗಳಿಕೆ : ಕಿಚ್ಚು ಮಚ್ಚರಿಸಿ ಜಲದ ಮೇಲೆ ನಡೆಸರೆ ಪೆಚ್ಚುಗೆ ತನಗುಂಟಂತೆ ಮಚ್ಚರಿಸಿಯೆ ಮಾಱಲಂತೊಡೆ ನಿನ್ನನು ಹೆಚ್ಚು ಮಾಡುವೆ ರಣಧರೆಗೆ (ಅಂತ. ೬-೨೦೩). **ಹೆಚ್ಚಿಗ್ಗೆ** : ೧. ನೆಲಕ ಕೈಗಳ ಬಿಟ್ಟ ಬಿದ್ದನು ಪುತ್ರವಿರಹದ ಹೆಚ್ಚಿಗ್ಗೆಯ ಖಾವದನು ಹಸಿದಬಳಿ ಸರ್ಪನನ (ಸಂವ್ಯಾರ್ತ್ರ. ೬-೩೦). ೧೦. [ಗಣಿತ]ಗುಣಾಕಾರ (?) : ಆಮೂಹಾಸನು ತಂದ ಹಾಲಿಗೆ ಬೀದ ಭೂಮಿಯು ಎಳೆಗೆ ಕೊಟವು ಗ ೪॥ ಉಭಮಂ ಗ ೮॥ ತುಂಡಾವಗ ನಿಂದ ಗ ೧೧೩ = ೩ ಟ್ಟಿನಲು ಕೂಡಿದ ಹೆಚ್ಚಿಗೆ ಯಿಂದ ಗ ೨೦೩ ॥ ಅಂತು ಗ ೯ ॥ (ಅ೯. VII. ೬೩೭೨. ೨೯-೨೩; ೧೧೩೨). **ಹೆಚ್ಚುಗೆ** : ೧. ಹಸಿದು ಹೆಚ್ಚುಗೆ ಹಸದ ಕೊಡುವುದೆ (ಸಂವ್ಯಾ೪. ೬. ೪೯) : ಕಂಚುಕಿಯೊರ್ವಳ್ ತನ್ನಪರದಟಸ ಪೆಂಪಂ . . . ಏಲಿಸಾಸ್ತ್ರದು ಶಬ್ದದ ಹೆಚ್ಚುಗೆಸಂ . . . ಪೇಳುತ್ತೈಂ ನುಲ್ಲಸೆ ನಡೆಸಿದಳು (ಅದಿ೩೯. ೫-೯೭): ಶ್ಲೇಷ್ಮ ಹೆಚ್ಚುಗೆಯುಂಟವ ಭರ್ಗಿಯು ಪ್ಲೇಷ್ಮದಿಂದುಮಯಿಂಮಾಡೆದಪ ವುದು(೫೪೩. ೨೬೯). ೫. ತನ್ನನೇ ಹೀರಿ ಬಡ ಮಾಳ್ಪ ಪಡುಬಿಸ್ನಿಯುಂ ತನ್ನನೇ ಹೆಚ್ಚುಗೆ [ಶಾಂತಾ. ಪೆರ್ಚುಗೆ]ಯ ಮಾಳ್ಪವೃತಿಕರುಣಂ ಮಾರ್ಪರಿಸು ತನ್ನ ಗಂಭೀರತನವನೇ ಮೆಱೆದು ಗರ್ಭೀಕರಿಸಿತಲ್ಲದೇ (ಸತ್ಯಾ೪. ೬-೫೭). ೬. ಈ ಸಿರಿಯ ಸುಗ್ಗಿಯಲಿ ನಿನ್ನ ಪರೀಸು ಹೆಚ್ಚುಗೆಯಾಗಿ ಬಯಕೆಪರ್ಸುವನು ನೀ ನೋಡಿ ಹಿಗ್ಗದೆ . . . ಮಾಜಿಗಾತ ಸೂಸಿತ್ತೆ ಸಾಹಿತ್ಯಭಾಷೆಯಸೆಂದನಾ ಕರ್ಣ (ಕಾವ್ಯಾ೪ ೦೭-೦೭): ಗತ್ರಿಯಮಾಪ್ಪುದು ತನಗೆ ವಂಶೋನ್ನತಿಯು ಹೆಚ್ಚುಗೆಗೇನು ಹವನೆಂದತಿಶಯದ ಪೋ ವಲಿ ೧೦ಬಿನಿಮಂಬಿದನು ಭೂಪ (ಕೀರ್ತ. ೦-೪-೩). [ಪೆರ್ಚು₁ + -ಗೆ]

**ಪೆರ್ಚುಗೊಳ್** (ಕ್ರಿ). (ಅಲಂ) ಹಿಗ್ಗು ; ಸಂತೋಷಿಸು : ತನ್ನ ಪೆರ್ಚುಗೆಯೊಳು ಪೆರ್ಚುಗೆಗೊಂಡುಱ್ ತನ್ನ ಕುಂದಿನೊಳು ಕುಂದುವಳ . . . ಮನ್ನಿಪುದೊಲಿದು (ಹಂಪ. ೬. ೪೪). [ಪೆರ್ಚುಗೆ + ಕೊಳ್₁]

**ಪೆರ್ಚುಗೆಗೊಳಿಸು** (ಕ್ರಿ). ಹೇಲ್ಮೆಯನ್ನುಂಟು ಮಾಡು ; ತನಗಾವ ರೀತಿಯಿಂದಪಾದೊಡಂ ಬ್ರಹ್ಮಾಸ್ತ್ರಮಂತ್ರಮುಂ ಕಲಿಸಿ ಪೆರ್ಚುಗೆಗೊಳಿಸು ಎಂದು ನಾನಾ ಪ್ರಕಾರವಾಗಿ ಬಿನ್ನವಿಸುವಲು (ಶಾರಿಣಂ. ೯-೨).

[ಪೆರ್ಚುಗೆಗೊಳ್ + -ಇಸು₁]

**ಪೆರ್ಚುಗೆಡು** (ಕ್ರಿ). ಕುಂದು ; ಕಡಮೆಯಾಗು : ಚಂದ್ರನ ಪೆರ್ಚಿ ಪೆರ್ಚುಗೆಡಲಾಗಿ . . . ಮಹುಸಿಂಧುವ ಕೀರವೂ ಬಳಸಿ ನಿಂದುವು

ನೀಲಪುಟಂಗಳೊಳೆಯಿಂ (ಶಾರತು. ೬-೭೪). [ ಪೆರ್ಚು$_2$ + ಕೆಡು$_1$ ]

**ಪೆರ್ಚುಗೆವಡೆ** (ಕ್ರಿ). ವಿಸ್ತಾರಗೊಳ್ಳು ; ವಿಶಾಲವಾಗಂ : " ಅಗ್ಗಲಿಕಂ-ಪೆರ್ಚುಗೆವಡೆದುದು " (ಕಮರ. ೦೩೬ ೬೪೪). [ ಪೆರ್ಚುಗೆ + ಪಡೆ$_1$ ]

**ಪೆರ್ಚುವಡೆ** (ಕ್ರಿ). ಹೆಚ್ಚಾಗು ; ಅಧಿಕವಾಗು : ತನುಭೋಗಾಯುಷ್ಯಂಗಳ್ ಮನುಷ್ಯರೊಳ್ ಪೆರ್ಚುವಡೆಗುಮುತ್ಸರ್ಪಣದೊಳ್ (ಶಂಕರಾ. ೦-೩೬); ಎರಡುಂ ಪಕ್ಕದ ವಜ್ರವೇದಿಕೆಗಳಂ ಮೆಯ್ಯೆರ್ಚಿಯುಂ ಕ್ಷೀರಸಾಗರದುಲ್ಲಂಘಿಸದಂತೆ ಪೆರ್ಚುವಡೆದುಂ ಧರ್ಮಾರ್ಥಮು ಕಾಮರಾಗರಸಂ ವಿರಾಜಿದೆ ಚಿತ್ತವೃತ್ತಿಗದು ಲೀಲಾಮಾತ್ರವಮಾದಿತನಲ್ . . . ಭೂಚಕ್ರಮಂ ತಾಳ್ದಿದಂ (ಜಗ್ಗಪು. ೩-೩೦). [ ಪೆರ್ಚು$_2$ + ಪಡೆ$_1$ ]

**ಪೆರ್ಚುವೆಱು** (ಕ್ರಿ). ಅತಿಶಯವಾಗು : ಪೆರ್ಚುವೆತ್ತಪರಂಜಿಗಳಶವನಪ್ಪ ವಿಧಾರ್ಚನೆಯಿಂದ ಸತ್ಕರಿಸಿ (ಧರ್ಮ. ೦೬-೬೩). [ ಪೆರ್ಚು$_2$ + ಪೆಱು$_1$ ]

**ಪೆರ್ಜಡಿ** ' ಪೆರ್ಜೆಡಿ ' ನೋ.

**ಪೆರ್ಜಸ** (ನಾ). ಹಿರಿದಾದ ಕೀರ್ತಿ,—ಹೆಸರು : ಪೆರ್ಜಸಮನೆ ಪಡೆದನ್ನನೆ ರಣದೊಳಟಟಮಂ (ಶಂಕರಾ. ೯-೬೬); ಚಿಕದೇವನೃಪನಂದು ಪೆರ್ಜಸಮೊಂದಿ ಸೊಗವಾಳ್ದಂ (ಅಕ್ರಿತಿ. ೦-೨೦). [ ಪೆರ್ (< ಪಿರಿದು$_1$) + ಜಸ$_1$ ]

**ಪೆರ್ಜಾರಂಗಿ** (ನಾ). ಒಂದು ಊರಿನ ಹೆಸರು : ಎಡೆದೀರ್ಜ್ಞೇ ಸಪ್ತತಿ ಪ್ರತಿಬದ್ಧ ಪೆಜ್ಜಾರಂಗಿ ನಾಮಗ್ರಾಮಸ್ಸರ್ವಬಾಧಾಪರಿಹಾರಸಮೇತೋ (ಶ್ರ.ಅಂ. ೦೪೯೩, ೭೩-೦೦೦; 819). [ ? ]

**ಪೆರ್ಜುಂಕ**, ಪೆಜ್ಜುಂಕ, ಹೆಜುಂಕ, ಹೆಜ್ಜುಂಕ, ಹೆರ್ಜುಂಕ (ನಾ). ಬೆಲೆಬಾಳುವ ಸರಕು, ಪ್ರಾಣಿ, ಧಾನ್ಯ, ಅಂಗಡಿ ಮೊದಲಾದುವುಗಳ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ಟಾಣೋಪಸಹಿತಂ ಪಜ್ಜುಂಕಂ ಬಿಲ್ಕೊಡೆ (ಓರಿಕಾ. ೦೪೩೬, ಹಾಸನಗ್. ೩೩-೦೪; 975); ಆಯೂರ ಪೆಜ್ಜುಂಕಮುಮಂ ಬಿಟ್ಟು (ಶ್ರ.ಅಂ. ೦೪೩೦, ೬೬-೯೭; 1080); ಅತ್ತಿಮರಸಂ ಮೂರುಲಕ್ಷದಡಕೆಯ ಪೆಜ್ಜುಂಕಮಂ ಬಿಟ್ಟ (ಕ್ರೆ.ಎ. IX—1. ೦೦೯-೬೬. 1107). **ಹೆಜ್ಜುಂಕ** : ಪೆಜ್ಜುಂಕಕ್ಕೆ ದ್ರಮ್ಮ ೧ (ಕಾಂಚೀ. ೩-೨೨ ಕ; 1047); ಕೆಱಿಗೆ ಪೆಜ್ಜುಂಕದಲುಯರಡುಲಕ್ಕವ(ಂ)ಡಕೆಯಂ ಬಿಟ್ಟರ್ (ಕ. II. ೯-೨೯; 107೭). **ಹೆಜುಂಕ** : ಹೆಜುಂಕ ಪಡರಾವು[ಳ]ದ ದಂಡನಾಯಕಂ ಕರಿಯ ಮಹೇಸ್ವರದೇವ ಗೋಯಿದರಸರ ಬೆಸದಿಂ (ಕ. IV. ೦೯-೦೦; ಸು. 117೭); ಉಭಯಮಾರ್ಗದ ಹೆಜುಂಕ × × ಸುಂಕ (ಎಕ. XII, ತಿಪ. ೬೬-೦೬; 1879). **ಹೆಜ್ಜುಂಕ** : ಶ್ರೀಮನ್ಮಹಾಪ್ರಧಾನಂ ಬೆಳ್ವಲನಾಡ ಹೆಜ್ಜುಂಕ ದಂಡನಾಯಕ ಮಲ್ಲಪಮ (ಶಾಕಶ. ೨೩-೨೯; 991); ಗವಜೇಶ್ವರ ದೇವರ್ಗೆ ಮೂಱುಲಕ್ಕ ಅಡಕೆಯ ಸುಂಕ ಪಡ್ಡರಾಉಳ ಹೆಜ್ಜುಂಕಮಂ ಬಿಟ್ಟರು (ಕ್ರೆ.ಎ. IX—1, ೨೩೬-೯; 1142); ಹೆಜ್ಜುಂಕದ ಅಧಿಕಾರಿ ಮಲ್ಲರಸರು (ಎಕ. IX, ಕಂಗಳ. ೬-೯; 1440). **ಹೆರ್ಜುಂಕ** : ವಿನಾಯಕ ದೇವರ ನಿವೇದ್ಯಕ್ಕೆ ಹೆಜ್ಜುಂಕದಲು ತಿಂಗಳಿಂಗೆ ಪಣವರಿಸಂ ಬಿಟ್ಟರು (ಕ್ರೆ.ಎ. IX—1, ೨೨೩-೬೬, 1127) ; ಪತ್ತರಾವುಳದಲೂ ಹೆರ್ಜುಂಕದಲೂ . . . ಕೊಟ್ಟರು (ಕಂಂಶ. ೧೦-೦೫ ; 1186) ; ಭತ್ತ ಭಾಗ ಕ್ಕಂ ಹೆರ್ಜುಂಕಂ (ಕ್ರೆ.ಎ. IX-II, ೧೦೦-೦೬ ; 1366) ; ಹನ್ನಿಪ್ಪಾಸಿರದ ಹೆಜ್ಜುಂಕ ಬಿಲ್ಕೊಡ (ಕ್ರೆ.ಎ. ೦೪೯೬, ಹಾಸನಗ್, ೨೦೯-೨೯ ; ?).

**ಹೆರ್ಜುಂಕದ ಹೆಗ್ಗಡೆ, ಹೆಜ್ಜುಂಕದ ಹೆಗ್ಗಡೆ** — ಬೆಲೆ ಬಾಳುವ ಸರಕು, ಪ್ರಾಣಿ, ಧಾನ್ಯ ಅಂಗಡಿ ಮೊದಲಾದುವುಗಳ ಮೇಲೆ ಹಾಕುವ ತೆರಿಗೆಯನ್ನು ವಸೂಲು ಮಾಡುವ ಅಧಿಕಾರಿ : ಶ್ರೀಮತ್ ಹೆಜ್ಜುಂಕದ ಪೆರ್ಗ್ಗಡೆ ಮಾವನಯ್ಯಂಗಳ ಬೆಸದೆ (ಕ್ರೆ.ಎ. XX. ೩೯-೦೦ ; 1089) ; ಹೆಜ್ಜುಂಕದ ಪೆರ್ಗ್ಗಡೆ ಕರಣಂಗಳುಂ ಗ್ರಾಮೇಶ್ವರದೇವರ್ಗೆ . . . ಬಿಟ್ಟರ್ (ಕ್ರೆ.ಎ. XI—II, ೦೯೫-೩ ; 1099).

[ಪೆರ್ (< ಪಿರಿದು$_1$) + ಸುಂಕ$_1$]

**ಪೆರ್ಜೆಡಿ**, ಪೆರ್ಜಡಿ (ನಾ). ಒಂದು ಊರಿನ ಹೆಸರು : ಶ್ರೀ ಕಾಲಾ ವಿಗ್ಗುರವಡಿಗಳ ಶಿಷ್ಯರ್ ತಱಿಕಾಡ ಪೆಜ್ಜಿಡಿಯ ಮೊದೆಯ ಕಲಾಪಕದ ಗುರವಡಿಗಳ್ (ಎಕ. II, ೩೩-೨ ; ಸು. 700). **ಪೆರ್ಜಡಿ** : ಪೆರ್ಜ್ಜಡಿಯ ಕೆಱಿಯ ಕೆಳಗೆ ಮೂಗಣ್ಣಾಗಂ ಕಟಿನಿ(ಎಕ. IX. ಹಾಗಮಂ. ೬೦-೦೨೩; 797).[?]

**ಪೆರ್ಜೆಡೆ** (ನಾ). ನೀಳವಾದ ಜಡೆ : ಉದ್ದವಾದ ಹೆರಳು : ಪೂಳಿತ ಪೆರ್ಜೆಡೆಯಲವರ್ಾಲೆ ಹೋಗೆಡ್ಡೆ ಬಿಡಯವಿಲ್ಲದ ಹೊನ್ನಂಡೆಗಾತಿಯರು ಬೆಂಗಡೆಯ ಸಾರಿದರು ರುಕ್ಮಿಣಿಯ (ಕಣಾಹ. ೦೯-೬೦).

[ಪೆರ್ (< ಪಿರಿದು$_1$) + ಜೆಡೆ (< ಜಡೆ$_1$)]

**ಪೆರ್ಜೆಱಪು** (ನಾ). ದೊಡ್ಡ ಆತಿಥ್ಯ : ಮೂಱುಮ ಪೆರ್ಜ್ಜೆಱಪು ಪಟ್ಟಮು ತ್ರಿಭುವನಾಚಾರಿಯನ್ನು ಪೆಸರಿಟ್ಟು (೨೮. X, ೦೬೯-೫ ; ಸು. ೭೮ಕು ೬೪)

[ಪೆರ್ (< ಪಿರಿದು$_1$) + < ಸೆಱಪು]

**ಪೆರ್ಜೊಡರ್**, ಹೆಜ್ಜೊಡರ್, ಹೆಜ್ಜೊಡರು (ನಾ). ೧. ದೊಡ್ಡ ದೀವಿಗೆ,—ದೀಪ : ಇರುಳ ಪೆರ್ಜೊಡರ ಕಜ್ಜಕೆ ಬೇಱೇನುಮಿಲ್ಲದಿರಲಾಗ ದೀಪದ ಕಲಿಯನಾರು ತಲೆನವಿರ ಪೆರ್ಜೊಡರ ಪಕ್ಷಿಸಿ (ಜಾತಕ. ೬-೨೨). ೨. ದೊಡ್ಡ ಪಂಜು,—ದೀವಟಿಗೆ : ದುರ್ಜಯರುಂ ಬಡಿವ ಹಜೆಗಳ ಕೈಗಳೊಳಗಾಂತ ಪೆರ್ಜೊಡರ ಗಡಣದಿಂ . . . ಕೋಂಟೆಯಂ ಕಾದಿರ್ದರು (ಚಂಪು. ೯೨-೯). ೩. [ತತ್ತ್ವಶಾ]ಚಿದಾಕಾಶದ ದೀಪದ ಕುಡಿ : ಚಿಜ್ಜ್ಯೋತಿ : ಅಹಿಗಳ್ ಪಕ್ಷಿ ಪರಿದಾಡುತ್ತಿರೆ ನಡುನೆತ್ತಿಯ ಪೆರ್ಜೊಡರನೊರ್ವನೀಕ್ಷಿಸುತಿರ್ದಂ (ಗಾಂಕೀ. ೦-೦೬೪). **ಹೆಜ್ಜೊಡರ್** : ೧. ಮೊಳೆತ ಸಂಧ್ಯಾಂಗನೆಗಬುಧಿ ನಿವಾಳಿಸಲೆಂದು ತಳೆದ ಪಹಣಕದ ಹೆಜ್ಜೊಡರೊ . . . ಎನಿಸಿ ಕಡೆವಗಲ ರವಿ ಚೆಲ್ಗೆ ಸೊಗಸಿರ್ದನು (ಹಕಾ ೩-೬೩) ; ಹಿಡಿದ ಹೆಜ್ಜೊಡರನಿಂದುಬಿಂಬಂ ಪೋಲ್ವುದು (ಸಿದ್ಧರಾ. ೦-೫೪). **ಹೆಜ್ಜೊಡರು** : ೧. ನಡೆಮುಂದೆ ಕಲಿಬೋಳನ ಗಳಸನ್ನದಿ ಹೆಜ್ಜೊಡರು ಪೆರಸಿ ನಿನ್ನ ಬಳಿಗೆ ನಡೆವೆಂ (ಕಾಮುಂ. ೬-೦೨೩) ; ಅಂಚಿನೊಳುರಿವ ತುಪ್ಪಗಳ ಹೆಜ್ಜೊಡರಿಂದ ಸಂಚಿಸಿದ್ದುದು ಶಸ್ತ್ರಪೂಜೆ (ಕರಜ. ೨೦-೦೨೭) ; ಬೆಳಗಲಿ ಹೆಜ್ಜೊಡರು (೨೦ಕಾಶ. ೦೫೦-೬೬). [ಪೆರ್ (< ಪಿರಿದು$_1$) + ಸೊಡರ್]

**ಪೆರ್ಜೋಡೆ** (ನಾ). ಅನುಭವಸ್ಥೆಯಾದ ಸೂಳೆ : ಪೆರ್ಜೋಡೆಯಂತೆ ನುಣ್ಣಿತಂ ದೇಟ್ಟು (ಕಂಕಚ. ೬-೬೨ ಕ). [ಪೆರ್ (< ಪಿರಿದು$_1$) + ಜೋಡೆ]

**ಪೆಜ್ವಾಲೆ** (ನಾ). ಉರಿಯನ್ನು ಚಾಚುವ ಜ್ವಾಲೆ,—ಅಗ್ನಿಶಿಖೆ : " ಉರಿಯ ಪೆಜ್ವಾಲೆ ಕೀಲಕಮೆನಲ್ " (ಕುಂಗಶಾ. ೦೯-೬).

[ಪೆರ್ (< ಪಿರಿದು$_1$) + ಜ್ವಾಲೆ]

**ಪೆರ್ತಾಯ್** (ನಾ). ಶ್ರೇಷ್ಠಳಾದ ಜನನಿ ; ಹಿರಿಮೆಯುಳ್ಳ ತಾಯಿ : ಓ ತಾಯೆ, ಕನ್ನಡದ ಪೆರ್ತಾಯೆ, ನಮ್ಮಮ್ಮ, ದೇವಿ, ಸಾಮ್ರಾಜ್ಞಿ (ಹೊಂಗಳು. ೦೩. ೦೬). [ಪೆರ್ (< ಪಿರಿದು$_1$) + ತಾಯ್]

**ಪೆರ್ದಂಡೆ** (ನಾ). ವಿಶಾಲವಾದ ದಡ : ವಿಸ್ತಾರವಾದ ತೀರ : ಉಪಾಂತದೊಳ್ ಪರ್ವಿದ ಪೊಗೇದಗೆಯ ರಜದಿಂ ಪುಟ್ಟಲ್ಪಟ್ಟದ ಪೆರ್ದಂಡೆಗಳೊಳಂ (ಕಾದಂಬ. ೦೦೬). [ಪೆರ್ (< ಪಿರಿದು$_1$) + ದಂಡೆ$_2$]

**ಪೆರ್ದಡಿ** (ನಾ). ಉದ್ದವಾದ ಬಡಿಗೆ ; ದೊಡ್ಡದಾದ ದೊಣ್ಣೆ : ಪಾಣಿಯೊಳಾಂತ ಪೆರ್ದಡಿಗಳ ಲುಬ್ಧಕಶ್ರೇಣಿ ಬೊಬ್ಬಿಡುತಲೈದಿದುದು (ಪೋಜಕ. ೦೯-೯). [ಪೆರ್ (< ಪಿರಿದು$_1$) + ದಡಿ$_1$]

**ಪೆರ್ದರಿ** (ನಾ). ದೊಡ್ಡದಾದ ಗಿಡ,..ದೊಗರು : ವಿಜಃಗುವ ದಾಡೆಯಿಂದಗೆದು ಪೆರ್ದರಿಯಂ ಕರದಿಂದಮೆತ್ತುತುಂ . . . ಬರುತಿರ್ದುದು ಭೀಕರನೊಂದು ಸೂಕರಂ(ಕಾವ್ಯಸಾ. ೦೦೧೨). [ಪೆರ್ (< ಪಿರಿದು$_1$) + ದರಿ]

**ಪೆರ್ದರಿಯಂಗಿ** (ನಾ). (?) : ಕರಡಿ ರುರುಪ್ರತಾಪನಮುಡು ಬೆಳ್ಳಿಲಿ ಪೆರ್ದರಿಯಂಗಿ ಪೇರಣಿಲ್ ಮರದಣಿಲೆಂಬಿವಂ ಕೆಡಪಿಯೇಂ ತಿರುಗಿತೊ ಕಿರಾತಸುಕುಳಂ (ಅಕಳು. ೨-೦೨೦). [?]

**ಪೆರ್ದಲ** (ನಾ). ಒಂದು ಸ್ಥಳದ ಹೆಸರು : ಪೆರ್ದಲೆಯಾ ಸೀಮೃತಃ ಪೂರ್ವತಃ (ಎಶ. VIII, ಸೊರಬ. ೩೩-೩ ; ಹು. 420 ಕ್ರಿಶ). [?]

**ಪೆರ್ದಲೆ, ಹೆದ್ದಲೆ** (ನಾ). ೧. ದೊಡ್ಡ ತಲೆ: ಪೆರ್ದಲೆಯ ಕಟ್ಟಿಬಾಯ್ದೆಗಳುವಮಾಗಿ ಮೆಯ್ಯೊಳ್ಳಮನಸರ್ಚ[ಯುಂ] (ಅಜಿತ. ೧೬೮-೩) ; ಪೆರ್ಗರಡಿಯ ಕೊಂಕದ ಕಡಿದ ಪೆರ್ದಲೆಯ ಸಂತಸ ಬಡದ ಹೊಕ್ಕಿರ್ದರು (ಚೋಕಕ. ೦೯-೨೮). **ಹೆದ್ದಲೆ :** ೨. ಮುಖ್ಯನಾದವನು : ಪ್ರಮುಖ: ಬ್ರಹ್ಮಾಚ್ಯುತಾದಿಗಳ ಒಳಗೆ ಹೆ[ಪಾಠಾಂ. ಹೊ] ದ್ದಲೆಯಾಗಿ ಜಾಳ್ವನ ತಲೆಯುಂ ನಿನ್ನಯ ತಲೆಯುಂ ಸರಿಯು (ಅಜಿ. ೩೬-೩೯). [ ಪೆರ್ (< ಪಿರಿದು$_1$ ) + ತಲೆ$_1$ ]

**ಪೆರ್ದಸಿ** (ನಾ). ದೊಡ್ಡ ಬೆಣೆ,—ಗೂಟ: ಪೆರ್ದಸಿಯ ಮೇಲೆ ಮಹಾ ದ್ಯುತದಿಂದವಿದ್ದು . . . ವೇದನೆಗೆ ಸ್ವೈರಣೆಗೆಟ್ಟುಟಿರ್ದ ಭೀತರಂ ನೋಡುತ್ತುಂ (ಧರ್ಮಾಮೃ. ೦೨-೨೦). [ಪೆರ್ (< ಪಿರಿದು$_1$ ) + ದಸಿ]

**ಪೆರ್ದಳಿ** (ನಾ). ದೊಡ್ಡ ದಿಮ್ಮಿಗಳ ಬೇಲಿ : ಸಾಲ್ಗೊಂಡು ತರತರದ ಪೆರ್ದಳಿಯ ದಡ್ಡಿಗಳನಟ್ ಮಾಡಿದು . . . ಪುರವನೊಳಪುಗುತಿರ್ದರು (ಅಜಿ. ೭೨-೨೮). [ ಪೆರ್ ( < ಪಿರಿದು$_1$ ) + ತಳ್$_4$ (< ತಟ್ ) ]

**ಪೆರ್ದಾತು?** (ನಾ). ಒಂದು ಸ್ಥಳದ ಹೆಸರು (?) : ತತ ಆಗತ್ಯ ಕರ್ದೇಸುರಿ ಗೋದು ತತ ಪೆರ್ದಾ(?)ತು ತತ ಅಲೆಟಿ (ಎಶ. VI, ಕ೩-೩೨ : 695). [?]

**ಪೆರ್ದಾರಿ, ಹೆದಾರಿ, ಹೆದ್ದಾರಿ** (ನಾ). ದೊಡ್ಡ ಹಾದಿ ; ಪ್ರಧಾನವಾದ ಬೀದಿ ; ರಾಜಮಾರ್ಗ : "ಪೆರ್ದಾರಿ—ಬಟ್ಟೆಸಳ್ಳು" (ಕಶಬ. ೯. I. ೩೮) : ನರಕಕ್ಕೆ ಪೋಪ ಪೆರ್ದಾರಿ ಮಹಾವ್ಯಸನಕ್ಕೆ ಮೂಲಮಾಪ್ಪುದ ವುಸಿಯಿಂದಂ ಬಿಟ್ಟು ಪಾತಕಂ ಪೆಚಿತೂಳಪೇ (ಧರ್ಮಾಮೃ. ೦೦-೦೮೦). **ಹೆದಾರಿ:** ಪಡುವಲು ಸುಗ್ಗಿಯ ಗದುಯು ಕಟಗಡಿ ಬಡಗಲು ಹೆದಾರಿಯು ಸುಗ್ಗಿಯು ಗದ್ದೆಯ ಹಾಳಿ ಗಡ . . . ಬಿಟ್ಟರು (ಕಇ. I. ೪೦-೪೦ : 1417 ಕ್ರಿ). **ಹೆದ್ದಾರಿ :** ಪಡುವ ಮೂಲಿಗವ ನೆಯ ಹೆ[ದ್ದಾ]ರಿ ಮೂಡ ಬಡಗ ಮುಖ ಬಂದ ಕ್ಯೆ ಳರ (ಕೌಇತ. XI-1. ೬೯ ೩೫ : 1038) ; ಕೊಗುವ ಕಲ್ಲ ಸಮೀಪದ ಹೆದ್ದಾರಿ (ಎಶ. VII. ಶಿಕನಿ. ೨೬-೨೮೬ ; 1584) ; ವಿವಿಧ ರಾಷ್ಟ್ರಗಳ ನಡುವೆ ಕ್ರಮವಾಗಿ ಹೆದ್ದಾರಿಗಳನ್ನು ಒದಿಸುವುದರ ಮೂಲಕ ಉತ್ಪನ್ನವಾದ ಅಂತರರಾಷ್ಟ್ರೀಯ ಹೆದ್ದಾರಿ ಗಳನ್ನು ನಿರ್ಮಿಸುವುದು ಇಲಾಖೆಯ ಮುಖ್ಯ ಉದ್ದೇಶ (ಅಂಕಸಂ. ೪೬) ; ಉದ್ದ ಉರುಳಿದರೆ ಹೆದ್ದಾರಿ ದಾಟೀತೇ ? (ಗಾದೆ).

[ ಪೆರ್ ( < ಪಿರಿದು$_1$) + ದಾರಿ ]

**ಪೆರ್ದಿದಿ** (ನಾ). ದೊಡ್ಡ ಚೀಲ : ಪೆಟಲುಪ್ಪಿನ ಪೆರ್ದಿದಿ ಪರ್ದಿದೆಂಬಿವಂ ಸುರಿದು . . . ಭಟಂರಿಂತು ಕಾದುತಿರೆ (ಆದಿಪು. ೬-೦೦೬).

[ ಪೆರ್ (< ಪಿರಿದು$_1$ ) + ತಿದಿ]

**ಪೆರ್ದಿನಿ, ಹೆದ್ದೀನಿ$_2$** (ನಾ). ಎಲ್ಲವನ್ನೂ ತಿನ್ನುವವನು ; ಸರ್ವಭಕ್ಷಕ : "ಸರ್ವಾನ್ನೀನಃ, ಸರ್ವಭಕ್ಷಃ—ಈ ೨ ಪೆರ್ದಿನಿ [ಪಾಠಾಂ. ಹೆದ್ದೀನಿ]" (ಕರ್ಣಾಪು. ೩೬-೦೯೬). **ಹೆದ್ದೀನಿ$_2$ :** ಮೇಲಿನ ಪ್ರಯೋಗದ ಪಾಠಾಂತರ ವನ್ನು ನೋಡಿ. [ ಪೆರ್ ( < ಪಿರಿದು$_1$ ) + — ತಿನಿ$_2$ ]

**ಪೆರ್ದುಡುಗೆ** (ನಾ). ಬಹಳ ಬೆಲೆಬಾಳುವ ಆಭರಣ ; ಅಮೂಲ್ಯ ವಾದ ಒಡವೆ : ಪಸರಿಸಿದ ತೋರಹಾರದ ಪೊಸಪೆರ್ಮಿಂಗಳಸಾಸನಪರ್ದ ಪೆರ್ದುಡುಗೆಗಳೊಳ್ ಮಿಸುಗುವ ಪೊಸಮಾಣಿಕಮೆಳಮಿಸಿಲಸಾನನೊಡಗೂಣ ಲಾದುದಾಸ್ಥಾಯಿಕೆಯೊಳ್ (ಅಜಿ. ೯-೩).

[ ಪೆರ್ ( < ಪಿರಿದು$_1$ ) + ತುಡುಗೆ ( < ತೊಡುಗೆ) ]

**ಪೆರ್ದುರ್ಗ** (ನಾ). ದೊಡ್ಡ ಕೋಟೆ,— ಕಿಲ್ಲೆ : ಬರುತಿರಲು ಮುಂದೊಂದು ಪೆರ್ದುರ್ಗಮಿರಲದರ ಬಾಹ್ಯದೊಳೆಸೆದುದುದ್ಯಾನವನಂ (ಕಕಬೋ. ೯-೦೬). [ ಪೆರ್ ( < ಪಿರಿದು$_1$ ) + ದುರ್ಗ]

**ಪೆರ್ದುಱುಬು** (ನಾ). ದೊಡ್ಡ ಮಂಡಿ,—ಗಂಟು : ಪೂಸಿದ ಗಂಧ ನಡುವಿನ ಬಂಕಂ ಪೆರ್ದು[ಪಾಠಾಂ. ಪೂದು]ಱುಬು ಉಡಿವಲ್ಲಿಯುಟ್ಟ ಕಾಸೆಯ ಸಬಳಿಗರಂದು ನಡೆದು ಬಂದರು (ಕಂಡಾಪು. ೦೦-೩೬): ಮಖಾಕೃತದ ಹಾರ ಕಿರೀಟ ಪೆರ್ದುಱುಬಿನೊಳೊಪ್ಪುವ ತೋರಮುತ್ತುಗಳ ಪಾಲಿಸಿದ (ಚೋಕಕ. ೦೫-೦೬).

[ ಪೆರ್ (< ಪಿರಿದು$_1$) + ತುಱುಬು$_1$ (< ತುಱುಂಬು$_1$) ]

**ಪೆರ್ದೂಲ** (ನಾ). ದೊಡ್ಡ ದಿಮ್ಮಿ; ಭಾರಿಯಾದ ತೊಲೆ : ಸಾಲ ದಂತಣೆ . . . ಪೆರ್ದೂಲ ಕಕ್ಕಡವಂದಿ . . . ಜೊತ್ತುಗಂಡುಗಳ ಜಾಲ ಪೊಟ್ಟಿಹವು (ಗುಶಕ. ೦-೩೦). [ಪೆರ್ (< ಪಿರಿದು$_1$)+ದೂಲ]

**ಪೆರ್ದೆಪ್ಪ** (ನಾ). ದೊಡ್ಡದಾದ ಹರಿಗೋಲು,—ನಾವೆ : ಕಾಡೊಡೆಯುಂ . . . ಬೇಡರೊಡವರ ನೀಡುಂ ಪರಿವ ಪೆರ್ದೊಱೆಗೆಯ್ದಿ ಸಾರ್ದ ಪೆರ್ದೆಪ್ಪಮನೇಱಿ ನಿಂದು (ಆದಿಪು. ೩-೦೦೯ ವ).

[ಪೆರ್ (< ಪಿರಿದು$_1$)+ ತೆಪ್ಪ]

**ಪೆರ್ದೆರೆ, ಹೆದ್ದೆರೆ** (ನಾ). ೧. ದೊಡ್ಡ ಅಲೆ,—ತರಂಗ : "ಊರ್ಮಿಃ, ಉತ್ಕಲಿಕಾ, ಉಲ್ಲೋಲಃ, ಕಲ್ಲೋಲಃ, ಲಹರೀ—ಈ ೫ ಪೆರ್ದೆರೆ" (ಕರ್ಣಾಪು. ೦೦೬-೩೦): ಭಯಂಕರತರಮಾದ ಪೆರ್ದೆರೆಗಳಂ ಹಮಸಂತತಿ . . . ನಿರಂತರಂ ತಿರಸ್ಕರಿಸಿರೆ (ಕಂಕಂಚ. ೦೦-೨೮); ಕಣ್ಗೊಳಿಸಿದಳಾಕೆ ಪಾಲ್ಗಡಲ ಪೆರ್ದೆರೆಯೊಳ್ ಸಿರಿ ನಿಂದಳೀಬಿನಂ (ಕಮ್ಮಕ. ೬೪): ಪಾರ್ದಲ ತಾಳಾನುಗತಿಯೊಳು ನಡೆದಳು ಪೆರ್ದೆರೆಯಂತೆ ಮುಂದೊತ್ತಿ (ಚಕತ. ೦೨-೬೪). **ಹೆದ್ದೆರೆ : ೧.** "ಹೆದ್ದೆರೆ—ಉಲ್ಲೋಲ, ಕಲ್ಲೋಲ" (ಪಾಕಂ. ೪): ಅದ್ದೆನದ್ದೆನು ನರಕದುಃಖದ ಹೆದ್ದೆರೆಯ ಹೊನಲಿನಲಿ (ಕತಾಗ. ೬-೨-೩೩) ; ಪೆರ್ಗಡಲ ಹೆದ್ದೆರೆಗಳೆದ್ದು ತನ್ನಂ ಕೊಂಡು ಕಾರ್ಗತ್ತಲೋಳದ್ದುವಂತೆ (ಭರ. ೪-೬೩). ೨. ಅಗಲವಾದ ಪರದೆ,—ಜವನಿಕೆ : ಅಸಹನೀಯ ಮೌನದ ಹೆದ್ದೆರೆಯೊಂದು ನಮ್ಮ ನಡುವೆ ಇಳಿಬಿದ್ದಿತು (ಹಂಸಗೀ. ೦೩೪).

[ಪೆರ್ (<ಪಿರಿದು$_1$)+ತೆರೆ$_1$]

**ಪೆರ್ದೆವರ್, ಹೆದ್ದೆವರು** (ನಾ). ಎತ್ತರವಾದ ದಿಣ್ಣೆ,—ತಿಟ್ಟು : ಪೆರ್ದೆವ ರಂದ್ದ ಬಟ್ಟುಮೆಂಜಡೆಯುಣಮಿಲ್ಲದೆಯ್ದೆ ಧರೆ ತರ್ಗಿ ಬಟ್ಟಕ್ಕದು ಕೊಳ್ಳ ವಾದುದಾ ಪಡೆ ನಡೆಯಲ್ (ಕಬಾಕ್ಕ. ೦೨-೩೩). **ಹೆದ್ದೆವರು :** ಏಗಡ ಭೀಮನ . . . ಮುಂದುಹಾ ಸೋಂಕಿದೊಡಾ ಮಹಾದ್ರಿಗಳೊಡನೆ ತೋರ ಹತರು ಕಡೆಮಪಡಿಯಡಲು ಹಜ್ಜೆಗೆ ತಗ್ಗಿದುದು ನೆಲಸಹಿತ ಹೆದ್ದೆವರು (ಕುಮ್ಮಾಅ. ೦೨-೯). [ಪೆರ್ (<ಪಿರಿದು$_1$)+ತೆವರ್ (<ತೆವರ್$_2$)]

**ಪೆರ್ದೆಸೆ** (ನಾ). ಏಳಿಗೆಯ ಕಾಲ; ಅಭ್ಯುದಯಾವಸ್ಥೆ; ಸುಸ್ಥಿತಿ : ಕಳವಿಂ ಧನಲಾಭಮಾದೊಡಾ ವನಿತೆಯುಮಿಷ್ಟರುಂ ಸುತರುಮುಂಟ್ಟೊಡೆ ಯೊಳ್ ಪುದುಗಳ್ವನೆಂದು ಭೋಂಕನೆ ಕಡದಿಕ್ಕಿ ಪೆರ್ದೆಸೆಯೊಳಲ್ಲದವರ್ಪುದು ಬಾಗಳಾರ್ಪರೇ (ಧರ್ಮಾಮೃ. ೬-೦೬೮). [ಪೆರ್ (<ಪಿರಿದು$_1$)+ದೆಸೆ$_2$]

**ಪೆರ್ದೊಡವು** (ನಾ). ಬಹಳ ಬೆಲೆ ಬಾಳುವ ಆಭರಣ,—ಒಡವೆ : ಮಾಣಿಕದ ಪೆರ್ದೊಡವಿಂ ಪೊಣಿಪ್ಪೊಣ್ಮುವೆಸಗುಗಳ್ ದಾಮೋದರೋಪಮಾವಕನೆ ತನ್ನೊಡಲಂ ಸುಡುವಂದ ಮಾಗೆ (ಕಂಡಾಕಾ. ೦೯-೦೩೬).

[ಪೆರ್ (<ಪಿರಿದು$_1$)+ತೊಡವು]

**ಪೆರ್ದೊಡೆ, ಹೆದ್ದೊಡೆ, ಹೆದೊರ್ಡೆ** (ನಾ). ಸೊಂಟದಿಂದ ಮಂಡಿಯ ವರೆಗಿನ ದೇಹಭಾಗ; ಊರು : "ಊರುಗಳು ಪಿಚಂಡಿಗಳೆನಲು ಪೆರ್ದೊಡೆಗೆ ನಾಮಮಾಳ್ಕುಂ" (ಕಂಗಂಆ. ೯೮-೦೬); ಪೆರ್ದೊಡೆ ಕಟಿ ಮುಂಬ್ಬುಡಂ ಪೆರಡು ಸಂದಿ ನೊಸಲ್ ಪಣೆ ಗಣ್ ಕದಂಪಿವೆಂಬಿಡೆಯನೆ ನಟ್ಟುಪುರ್ಚಿದಪು ನೇರ್ದುಪ್ಪು ಸೀಳ್ದುಪು ಪಾರ್ಥನಂಬುಗಳ್ (ಕಂಡಕಾ. ೦೦-೦೩೬): ನೆನೆಯಾಸಿ ಕಾಡುಗಂ ಸತತವಾತನುದಗ್ರ ಲಲಾಟಪಟ್ಟವು . . ಆತನ ಬಗೆಗೊಳ್ವ ಪೆರ್ದೊಡೆಗಳ್ (ಕಗಂ. ೦೨-೦೩): ಬಟ್ಟಮುತ್ತುಗಳು

ಕೀವಣಿಸಿರ್ದ ವಾರಿಯ ಪಟ್ಟುವಳಿ ಚಲ್ಲಣವ ತೊಟ್ಟು ಪೆರ್ದೊಡೆಗೆ ಕೇಸಂ ಮಧ್ಯಕೆ ಬಿಗಿದುಟ್ಟ ಕಾಸೆಯ ರಣೋತ್ಸವದಿ (ವೀರಶೈ. ೧೨-೪೩). **ಹೆದ್ದೊಡೆ :** ಊರುದಘ್ನ, ಊರುಮಾತ್ರಂ, ಊರುದ್ವಯಂ ಇವು ಹೆದ್ದೊಡೆಯ ಉದ್ದವ ಹೇಳುವುದು (ಶಾಶಬ್ದ. ೧೨೨); ಹಾಯ್ದು ಗಡೆ ಹೆದ್ದೊಡೆಗಳನು ಮುರಿದಯ್ದುತ್ತಪನಿಯುಸರಾಣಜಲದಲಿ ತೊಯ್ದು ಧೂಪ್ಪನೆ ಕೆಡೆವನಿಳೆಯಲಿ ಕೌರವರ ರಾಯ (ಕುಮಾವ್ಯಾಗ. ೭-೫೯). **ಹೆದೊರ್ಡೆ :** ೧. " ಊರು. ಸಕ್ಥಿ. ಒಚಂಡಂ ?—ಈ ೩ ಹೆದೊರ್ಡೆ " (ಹಲಾಯು ೬೫-೩೮೦). ‘ ಕಿಜುದೊಡೆ’ ಪರಾ. [ಪೆರ್ (< ಪಿರಿದು$_1$) + ತೊಡೆ$_2$]

**ಪೆರ್ದೊರೆ** ‘ ಪೆರ್ದೊಱೆ ’ ನೋ.

**ಪೆರ್ದೊಲೆ** (ನಾ). ದೊಡ್ಡ ದಿವ್ಗೆ : ಜಲ್ಗುಂಡು ಪೆರ್ದೊಲೆ ಕೊಱತು ಕಾಯ್ದ ಮಣಲ ರಾಶಿ (ಕರ್ಣಾ. ೩-೨೦); ಉರಿಪರಿವೆಣ್ಣ ಪಂದಿವಲೆ ಪೆರ್ದೊಲೆ . . . ಪೆರ್ದಿಡಿಮುರ್ದಿವೆಂಬಿವು ಸುರಿದು (ರಾಜಶೇ. ೬-೦೦೬).
[ಪೆರ್ (< ಪಿರಿದು$_1$) + ತೊಲ್ಲೆ$_3$]

**ಪೆರ್ದೊಱೆ**, ಪೆದ್ದೊರೆ, ಪೆದ್ದೊಱೆ, ಪೆರ್ದೊರೆ, ಪೆಱ್ದೊಱೆ, ಹೆದ್ದೊರೆ$_1$, ಹೆದ್ದೊಱೆ (ನಾ). ೧. ದೊಡ್ಡ ಹೊಳೆ ; ಮಹಾನದಿ : ಎರಡು ಬೆಟ್ಟದ ನಡುವೆ ಪರಿವ ಪೆರ್ದೊಱೆಯಂತೆ (ರಕರಾಘ. ೨-೬೩); ಗೋಮತಿಯೆಂಬ ಪೆರ್ದೊಱೆಯ ರಾಮಣೀಯಕ ಶೀತಜಲವೀಂಟ (ಕೋಹಕ. ೩೬-೬೪). ೨. ಕೃಷ್ಣಾನದಿ: [ಪೆದ್ದೊ]ಱೆ[ಪ]ರ್ಯ[೦ತ]ಮುಮ ನಾಳುತ್ತುಮಿಟ್ಟು (ಎಇ. IV. ೩೫೨-೦೫; 975); ಅಱುಕೆಯ ಗಟ್ಟಗೆಯುಂ ಪೆರ್ದೊಱೆಯುಂ ಪರಿದಲ್ಲಿ ತದ್ವಾಮಡಿಗೆ ತೊಲಲ್ (ಅಹ್ಕು. ೦೨-೪೬); ಪೆದ್ದೊಱೆಯ ತಡಿಯ ಕೊಪ್ಪದಲು (ಕುಇಇ. ೧೯೨೮, ೩೦-೨; 1056) **ಪೆದ್ದೊರೆ :** ೨. ಅವನು ಪೆದ್ದೊರೆಯ ದಂಡೆಯಲ್ಲಿದ್ದಾಗ ಅನುಕೂಲಸ್ಥ ನಾಗಿದ್ದ (ಹಾಹುಕ್ತ. ೫೪). **ಪೆದ್ದೊಱೆ :** ೧. ಇದ್ದೊಱೆಯೆಂಬ ಪೆದ್ದೊಱೆ ತುಂಬಿ ಬರೆ (ಅಕಥ.೩೨-೩೨) ; ಒಂದುದಿನ ಪೆದ್ದೊಱೆಯು ತುಂಬಿ ಹರಿವುತ್ತಿರಲು (ಗುರುಚ. ೦೫-೮). **ಪೆದೊರ್ರೆ :** ೧. ಪೆದೊರ್ರೆಗಳಂ ಪೇರಡವಿ ಪೆರ್ಬೆಟ್ಟುಗಳನಂತು ನೂರಾರು ಪೇರೂರ್ಗಳಂ ದಾಂಟಿ (ಕೀಹಾ. ೬-೫೦) ; ಮುಂಗಾರ ಸಮಯುವಿದು ಪೆದೊರ್ರೆಯು ಸಂಬ ಲಾಗದು (ಅನಾಳ. ೩೯). △ **ಪೆಱ್ದೊಱೆ :** ೨. ಗಂಗಾನ್ವಯ ಕುಳತಿಳಕಂ ಬೂತಯ್ಯ ಪೆಮ್ಮಾರ್ಡಿ ಪೆಱ್ದೊಱೆ ಮುಯ್ಯಾರ್ದೆ ಗಂಗಾಪಾಡಿ ತೊಂಬತ್ತಱುಸಾಸಿರಮುಮಂ ಪ್ರತಿಪಾಳಿಸೆ (ಶೃಇ. XI-1. ೩೮-೪; 950); ಪೆಱ್ದೊಱೆ ಮರ್ಯಾದೆಯಾಗೆ ನಿರಾಕುಳಪಾಳುತ್ತಿರೆ(ಎಇ. VI. ೨೫೪-೫;975). **ಹೆದ್ದೊರೆ$_1$ :** ೧. ಅಲ್ಪಾಲ್ಪಕಾವ್ಯಗಳ ಭಾವನೆಯ ಹೊನಲಾದರೂ ಆ ತೊರೆ—ಹೆದ್ದೊರೆಗಳತ್ತಲೇ ಹರಿದುಹೋಗುವುದೆಂಬುದನ್ನೂ ಬಗೆವಡೆದವು (ಕಾಕೊ. ೩೫೩); ಸಾಹಿತ್ಯವಾಹಿನಿ ಬತ್ತದ ತೊರೆ. ಅದು . . . ಹೊಳೆ ಹಳ್ಳಗಳ ಜೀವಂತವಾಹಿನಿಯನ್ನು ತುಂಬಿಕೊಂಡು ಹೆದ್ದೊರೆಯಾಗಿ ಹರಿಯುತ್ತದೆ (ಸುಹಾಲ. ೨೨೪). ೨. ವಿಷ್ಣುವರ್ಧನಪ್ರಭು ಹೆದ್ದೊರೆಯನ್ನು ಸೇರಿ, ಆ ನದಿಯಲ್ಲಿ ತಮ್ಮ ಕಾಂಭೋಜವನ್ನೂ ಕತ್ತಿಯನ್ನೂ ತೊಳೆದರು (ಶಾಂಕೆಲಾ. ೨೩೩). **ಹೆದ್ದೊಱೆ :** ೧. ಹರನೀವ ಕಾಲಕ್ಕೆ ಸಿರಿಯು ಬೆನ್ನಲ್ಲಿ ಬರ್ಕರ್ ಹರಿದು ಹೆದ್ದೊಱೆಯ ಕೆಱೆ ತುಂಬಿದಂತಯ್ಯಾ (ಬಸವ. ೦೬೪); ಹೆದ್ದೊಱೆಯನುಱೆ ತಡಿಗೆ ದಾಂಟಿಸುವ ತೋರವಹ ಬಲುದೆಪ್ಪವಿರೆ ಮನಹಾರಿ ಸೊರೆಯೋಡಂ ಪಿಡಿದು ತಾಂ ಪಾರವೆಯ್ದುವೆನು (ಅಕಥ.೬೦-೪೬); ಕರಗಿ ಹರಿದವು ಹೇಮರಸ ಹೆದ್ದೊಱೆಯವೊಲು (ಕೊರಾ. ೫-೮-೮೦). ೨. ಹುಲಿಗೆಱೆ ಮಾನೂಱುವಂ ಹೆದ್ದೊಱೆ ಪರಿಯನ್ತಮಾಗಿ ಯಾನ್ತನಿತುಮಂ . . . ಸುಖರಾದ್ಯಂಗೆಯ್ಯುತ್ತಿರೆ (ಎಇ. XII. ಶಿರ್ರ. ೩೦-೦೨ ; 1149 ?); ಬಾದುರನೊಕ್ಕಲ ಕೊಂಡು ಹೆದ್ದೊಱೆಯ ದಾಂಟಿದನು (ಕುಮಾವ್ಯಾಂ, ೦೮-೮೫೦). [ಪೆರ್ (< ಪಿರಿದು$_1$) + ತೊಱೆ$_3$]

**ಪೆರ್ಧಮ್ಮಿಲ್ಲ** (ನಾ). = ಪೆರ್ದುರುಬು : ನಿರ್ಮಲ ಬಹಿರ್ಭಾಗದೊಳಿಸೆ ಪಂತೆ ಪೆರ್ಧಮ್ಮಿಲ್ಲ ಜಡೆಗಳೊಪ್ಪಿದವು (ಕೋಹಕ. ೦೪-೪೩).
[ಪೆರ್ (< ಪಿರಿದು$_1$) + ಧಮ್ಮಿಲ್ಲ]

**ಪೆರ್ನಂದಿ** (ನಾ). ಒಂದು ಬಗೆಯ ನಾಣ್ಯ (?) : ಅವರಾ ಪಡೆಯಂ ಪೆರ್ಮ್ಬಟ್ಟಿಯಯೂರುನ್ದು ತೆಱೆ ಪೆರ್ನ್ನನ್ದಿ ಎರಡು ತೆಱುವುದು (ಎಇ. IV. ಹೆಗ್ಗ. ೪-೨೨; ಸು. 760). [?]

**ಪೆರ್ನಗರ** (ನಾ). ಒಂದು ಸ್ಥಳದ ಹೆಸರು : ಅನ್ದರಿಯ ಆಲನೂರ್ರ ಪೌತುಳಱಿಅ ಪೆರ್ನ್ನಗರಾದ್ಯನೇಕ ಸಮರಮುಖಮುಖಾಹುತ ಪ್ರಪಾತ ಶೂರಪುರುಷ (ಇಇ. V. ೦೩೪-೪; ಸು. 788); (ಪ್ರಇ. ೧೯೩೪. ೬೪-೦೫: ಸು. 788 ನೋ). [ಪೆರ್ (< ಪಿರಿದು$_1$) + ನಗರ]

**ಪೆರ್ನಗೆ** (ನಾ). ಅಧಿಕವಾದ ನಗೆಪಾಟಲು : ಘನನಪ್ಪುದು ಲೋಕದೊಳ್ ಪೆರ್ನ್ನಗೆಗೆಡೆಯೆನಿಸಿಕೃತಕೃತ (ರಾಜಶೇ. ೬-೪). [ಪೆರ್ (< ಪಿರಿದು$_1$) + ನಗೆ]

**ಪೆರ್ನರ, ಹೆನ್ನರ** (ನಾ). (ದೇಹದೊಳಗಿನ) ಮುಖ್ಯವಾದ ರಕ್ತನಾಳ,- ಸೆರೆ : ಗೋಣರೆಗಡಿದು ಪೆರ್ನರವಾಂತು ಮಿಡುಕುವ ಪ್ರಾಣದ ಶವಗಳೊಪ್ಪಿದುವು (ಕೋಹಕ. ೪೦-೬೦). **ಹೆನ್ನರ :** "ಕಣ್ಡರವೆಂಬುದು ಕೊರಳ ಹೆನ್ನರ" (ಹಲಾಯು. ೦೦೪-೧೨); ತಲೆ ಕಿವಿಸಂದುಯೆಲ್ಲಾ ಪುಷ್ಪ ನೋವಡೆ ದಾಹಮಾಗೆ ಮೈ ಬಲಿವಡೆ ಹೆನ್ನರಂ ಪೆಗೆಯೆ ಮೂರ್ಛೆಗೆ ಕಣ್ಣಾತಿ ರಕ್ತಮಾಗೆ (ಕಲ್ಯಾ. ೩-೧೩); ಶಿರದೊಳು ಖಡ್ಗವನಿರಿಸಿ ಬಲ್ಪಿನಲೊತ್ತಿ ಘಂಘರಿ ನರಿದು ಹೆನ್ನರವ ಭರದಿಂದ ಬಿಡಿಸಿ ಗೋಣಾಳಿ ಇಬ್ಬಗಿಯಾಗೆ ಉರವಣಿಸಿತು ಬಲುರುಧಿರ (ಶಿಜಾಂ. ೪-೧೦೬). [ಪೆರ್ (< ಪಿರಿದು$_1$) + ನರ$_1$ (< ನರವು)]

**ಪೆರ್ನಾವೆ** (ನಾ). ದೊಡ್ಡ ತೆಪ್ಪ,– ದೋಣಿ : ಕಟ್ಟಿದೆ ೮ಲಿ ಕಾಲ್ಪಳಂ. ಮೆಚ್ಚಿನ ಪೆರ್ನಾವೆಗಳುಂ, ಉಾಜರಾಜನಾಣೆಯಾಯ್ತು ! (ಶಾರಸಿ. ೩-೧). 'ಪೆರ್ದೆಪ್ಪ' ಪರಾ. [ಪೆರ್ (< ಪಿರಿದು$_1$) + ನಾವೆ]

**ಪೆರ್ನಿಣ** (ನಾ). ಅಧಿಕವಾದ ಕೊಬ್ಬು,– ಮೇದಸ್ಸು : ಪೆರ್ನಿಣದ ಖಂಡದ ಮಾಂಸದ ತಾಣಮಲ್ಲವೇ ಎಂದು ಶರೀರದೊಳಾದ ಅಶುಚಿತ್ವಮಂ ಭಾವಿಸಿ (ರಕರಾಘ. ೫-೨೮). [ಪೆರ್ (< ಪಿರಿದು$_1$) + ನಿಣ]

**ಪೆರ್ನೊಣ** (ನಾ). ದೊಡ್ಡ ಜಾತಿಯ ನೊಣ : ಪೆರ್ನೊಣಂಗಳು ತಗುಳ್ದೊಱಿಸಿಯುಂ . . . ಸೈರಿಸಲಾಱದೆ (ರಕರಾಘ. ೩-೬೩).
[ಪೆರ್ (< ಪಿರಿದು$_1$) + ನೊಣ (< ನೊಳವು)]

**ಪೆರ್ನೊರೆ** (ನಾ). ಅಧಿಕವಾದ ಫೇನ ; ಅತಿಶಯವಾದ ಬುರುಗು : ಪೆರ್ನೊರೆ[ಶಾಶಂ. ಪೊನ್ನೊರೆ]ಯು ತಗುಳ್ದ ವಿಹತಾಂಬುವ ಬಲ್ಪೊನಲಿಂದ ಪಾರಿಐದ ಬಟ್ಟೆಯೊಳೊಕ್ಕ ಪಲ್ಲವನಿಕಾಯದಿನಂದಱಿದು ಕಾದಾನೆಗಳಾಗಡೆ ಪೋದುದಂ (ಶಾಲ್ಯಾಕ. ೬೨೬); ಪೆರ್ನೊರೆ ಸೂಸುತ್ತಿರೆ ಭೀರಂ ಸೊಗಯಿಸಿತ್ತುತ್ತ್ಯೇಕರಂ ಸೂಕರಂ (ಕಂಪ್ರಥ. ೫-೬೦).
[ಪೆರ್ (< ಪಿರಿದು$_1$) + ನೊರೆ$_2$]

**ಪೆರ್ನೊಸಲ್** (ನಾ). ವಿಶಾಲವಾದ ಹಣೆ; ದೊಡ್ಡ ಹಣೆ : ಪೆಱ್ನೊಸಲ್ ಪೆರ್ನೊಸಲಂಗೆ . . . ಸೀತೆ ಕರಾಳಮುಖಿಯಾದಳ್ (ಅದ್ಭು. ೫೦-೨೦).
[ಪೆರ್ (< ಪಿರಿದು$_1$) + ನೊಸಲ್]

**ಪೆರ್ಪಟ್ಟಪೊಲ** (ನಾ). ಒಂದು ಸ್ಥಳದ ಹೆಸರು : ಸ್ವಸ್ತಿಶ್ರೀ ಕೊಙ್ಗಣಿ ಮುತ್ತರಸರ್ ಕೊಟ್ಟತು ಪೆರ್ಪ್ಪಟ್ಟಪೊಲವ್ (ಎಇ. X (8). ಶ್ರೀಊ. ೦೦೬-೩; 750). [? + ಪೊಲ]

**ಪೆರ್ಬಂಟು** (ನಾ). ದೊಡ್ಡ ಸೈನ್ಯ,– ಪರಿವಾರ : ತಲೆಕಬಿಗಾಗಿ ಕಟ್ಟಿದಲ ಗೊಱೆಸುನಾರ್ಬ ಬೀಟೆ ಪುವ್ವಡಿಯುಂ ಪಱೆಯ ಪೆಱಗಂ ನೋಡುತ್ತುಂ ಪರಿವ ಪೆರ್ಬಂಟುಮಂ (ಶಿಲಾಶ. ೫-೦೦೪ ಕ).
[ಪೆರ್ (< ಪಿರಿದು$_1$) + ಬಂಟು]

**ಪೆರ್ಬಂಡಿ** (ನಾ). ದೊಡ್ಡ ಗಾಡಿ,– ಶಕಟ : ಎತ್ತಲಾ ಪೆರ್ಬಂಡಿ ಬೀಳಪು

ಭಂಡಾರಂಗಳಂ ಲೋಭದಿಂ ಪೆರ್ವಾವಾಗಿ ಪಿಶಾಚರಾಗಿ ಪಲಕಾಲಂ ಕಾದು ಕೊಂಡಿರ್ದರ್ (ಪಂಪಾಭಾ. ೬-೦೩೬). ೨. ಆದಿಶೇಷ : ಇಂಗಡಲೆಡೆಯ ಪೆರ್ಬಾವಿನ ಪೆಡೆಯ ರತ್ನಂಗಳ ಬೆಳ್ಳಿಗನಲಿ ಕಂಗೊಳಿಸುವ ವಾಸುದೇವನ ಶ್ರೀಚರಣಂಗಳ ಸನ್ನುತಿಸಿದನು (ಪಂಜಪ. ೩-೯). **ಪೆಬ್ಬಾವು :** ೨. ಸಮ್ಮಬಸನಂಬೊದೆದ ಕತ್ತಲೆವೆಸರ್ವಡೆದನಂ ಕೊಂದ ಬಗೆಯೊಳೊಗೆದನನೆನೆಲೆಯೋರ್ವನೊಡನಾಡಿಗಿತ್ತುರು ತೊಣನಂ ತುಳಿದ ಪೆಬ್ಬಾವಿನೆಂಜಲುಂಡ (ಪಂಪಾಭಾ. ೨೦-೩೩). **ಪೆಬ್ಬಾವು :** ೧. ಅಂತಿರುಳ್ ನಾಲ್ಕುಂ ಜಾವಮುಂ ಮಹೋರ್ಘಿಕನಂತೆ ಪುತ್ತಿನಳವಿಯುಂ ನೋಡುತ್ತುಂ ಪೆಬ್ಬಾವಿನಂತೆ ಮಂಡಲಂಗೊಳ್ಳುತ್ತುಂ ... ಚಕ್ಕೆಳೆ ಬೆಳಗಾಗೆ (ಕರ್ಣಾಮೃ. ೦-೦೬೦): ಈರ್ವರು ಒಲಿದು ಭಂಡಿಯನೇಱಿ ಪೋಪಾ ಬಳಿಯಲಿರೆ ಪೆಬ್ಬಾವು ಕಾಣುತ (ಜೈಮಿಭಾ. ೨೦-೬೩). **ಹೆಬ್ಬಾವು :** ೧. "ಅಜಗರಃ ಶಯುಃ, ವಾಹಸಃ —ಈ ೩ ಹೆಬ್ಬಾವಿನ ಹೆಸರು" (ಅಭಿಧಾ. ೯೮); ಹಸಿವೆಂಬ ಹೆಬ್ಬಾವು ಬಸಿಱಬಂದು ಹಿಡಿದಡೆ ವಿಷವೇಱಿತ್ತಯ್ಯ (ದೇವಾಶ. ೦೬-೨೫); ಹೊಕ್ಕು ಹೆಬ್ಬಾವಿನ ಬಸುಱ ಸಿಲುಕಿದನೆ (ಕುಮಾವ್ಯಾ. ೦೦-೦೯); ಒಲೆಯ ಮತ ಕೆಡೆದಂತೆ ಹೆಬ್ಬಾವುಗಳೀಳೆತರುಳತಿದ್ದುವಾಗ (ಚಂಪ. ೨೦-೯೦).

[ಪೆರ್ (< ಪಿರಿದು$_1$) + ಪಾವು$_1$]

**ಪೆರ್ಬಾಳ್**, ಪೆರ್ಬಾಳು$_1$ (ನಾ). ನಿಡಿದಾದ ಕತ್ತಿ; ಉದ್ದವಾದ ಖಡ್ಗ : ಪೆನರ್ರಂ. ಪೆರ್ಬಾಳ್ (ಶಾಸಾಭಾ. ೦೩೬ ಕ್ರಮೋ). **ಪೆರ್ಬಾಳು$_1$ :** ಚಕ್ರಪರತು ಪಿಡಿವಳು ಪೆರ್ಬಾಳು (ಜಿನಚ. ೨-೩೧).

[ಪೆರ್ (< ಪಿರಿದು$_1$) + ಬಾಳ್$_2$]

**ಪೆರ್ವಿಡಿ**, ಪೆರ್ಬಿಡಿ (ನಾ). ದೊಡ್ಡ ಹೆಜ್ಜಾನೆ : ವಿಚಿತ್ರಾತಪತ್ರವ್ರಜಂ ಪೆರ್ವಿಡಿ ಸೌಧಂ ಚಿತ್ರದಣ್ಡಂ (ಎಕ XIII. ೩೩೦-೦೩: ೭೨೮); ಏಱಿದ ಪೊನ್ನ ಪಣ್ಣಿಗೆಯ ಪೆರ್ವಿಡಿ ಕಟ್ಟದಿರಾಗೆ (ಪಂಚಕಾ. ೯-೦೦೦): ವಾಜಿ ಪೆರ್ವಿಡಿ ಪೇರಾನೆ ಸುಖಾಸನಂ ತಂಡಾಗೆ (ಮಲ್ಲಿಪು. ೫-೬೭). **ಪೆರ್ಬಿಡಿ :** ಪೊಸವಂದದಾನೆಯುಂ ನಸೆಯ ಪೆರ್ಬಿಡಿ . . . ಪೊರ್ವಿ ಶೋಭಿಸುವವೊಲ್ (ಶಾಂತಿಪು. ೬-೨೯). [ಪೆರ್ (< ಪಿರಿದು$_1$) + ಪಿಡಿ$_2$]

**ಪೆರ್ವಿದಿರ್**, ಪೆರ್ಬಿದಿರ್, ಪೆರ್ವಿದಿರಂ, ಹೆಬ್ಬಿದರಂ, ಹೆಬ್ಬಿದಱು, ಹೆಬ್ಬಿದಿರ್, ಹೆಬ್ಬಿದಿರು (ನಾ). ಎತ್ತರವಾಗಿ ಹಾಗು ದಟ್ಟವಾಗಿ ಬೆಳೆಯುವ ಒಂದು ಬಗೆಯ ದೊಡ್ಡ ಜಾತಿಯ ಬಿದಿರು : ನಟ್ಟ ಕೂರ್ಗಣೆಯ ದಿಕ್ಕೋಪೆಱೆಯಿಂದೆ ಬಱಲ್ದನು ಪೆರ್ವಿದಿ [ಪಾಠಾಂ. ದ]ರ ಸಿಡಿಂಬಿನೊಳ್ ಪುದಿದದೊಂದು ಕುಳಾಚಳದಂತೆ ಸಿಂಧುಜಂ (ಪಂಚಕಾ. ೦೦-೯೫): ತನಿಗಂಪಿನ ಬೆಳ್ವಲ್ಲೆಯುಂ ಜನಾರ್ದನಂ ಭೃಂಗದಂತೆ ಸುಮನೋರಾಗಂ ಜನಿಯಿಸೆ ತಮಾಲಪಲ್ಲವತನುರುಚಿ ಪೆರ್ವಿದಿರ ಪೊದಱನಂತ್ಯ ತಂದಂ (ಪಂಪಾಭಾ. ೯-೦೯). **ಪೆರ್ಬಿದಿರ್ :** ಕರ್ಬೆರಲು ಪೆರ್ಬಿದಿರ ಕಡಿವುತಿರ್ದಂ ದೇವ (ಜಗನ್ನಾ. ೫೭. ೨೬೦-೦೫); ಬರುತ ದಾರಿಯೊಳೀಡಿಱಿವ ಪೆರ್ಬಿದಿರ ಮೆಳೆಯಲಿ ರೂಢಿಗುರುವಿನ ಸುತರನಱಿಯದೆ (ಪಂಚತಂ. ೨೫-೯); ಎಸೆದುದಾ ಗಿರಿ . . . ಪೆಸಲಾದ ಪೆರ್ಬಿದಿ[ಪಾಠಾಂ. ದ]ರ ಕೊಡುಗಳ ಬೀಡುಗಳ ಶಬರಿಯರ ಸಂಕುಲದೊಳು (ಕೃಷಕಾ. ೦೦-೩). **ಪೆರ್ವಿದಿರು :** ಬಿಡದೆ ಜಟ್ಟಿಗಳೆಲ್ಲರುಂ ಸೊಗಸದೆ ತೋಳ್ಗಳನೊದಱಿಸಲು ಕಿಚ್ಚುದಿಸಿತೊ ಪೆರ್ವಿದಿರ ಮೆಳೆಗೆನೆ ಪರ್ವಿತಾ ರವವು (ಜೈಮಿಭಾ. ೨೨-೬೯). **ಹೆಬ್ಬಿದರು :** ಹೆಬ್ಬಿದರು ಕಿರುಬಿದರು . . . ಹುಣಸೆಯ . . . ಎಡೆಯಡೆಗೆ ಹಾ ಭಾವಿ ಕೆರೆಯಿಹವಲ್ಲಿ (ಮುಂಡಸು. ೦-೬೮). △ **ಹೆಬ್ಬಿದಱು :** ಮೂಡ ಹೆಬ್ಬಿದಱು ಅಲ್ಲಿ ಮೂಱು × × × ಮೂಡಣಕಿನರಲು ಅಲ್ಲಿ × × × ದ್ದೆಯ ಕಲ್ಲಱದು (ಎಕ. VII. ಶಿಕಾಪು. ೬೯-೦೦೦, ೧೧೧೫). **ಹೆಬ್ಬಿದಿರ್ :** ಎಚ್ಚೊಡಿಚ್ಚಳಿಸಿದ ದಾಳ ಹೆಬ್ಬಿದಿರ್ಗಳ ಕೊಚ್ಚಲು ಪಸುಱ್ತು ಭಟರ್ಗೆ ಮೆಚ್ಚುಕೊಟ್ಟಂತೆ ಮುತ್ತುಗಳು ಮೆರೆದು (ಜೋಜಚ. ೦೯-೨೩). **ಹೆಬ್ಬಿದಿರು :** "ವಾಂಶನೀಯಃ —ಹೆಬ್ಬಿದಿರು" (ಕಚಂ. ೦೩೦) : ಹಿಳಿದುರಿವ ಹೆಬ್ಬಿದಿರ ಗಂಟಿನ ಠಳಠಳತ್ಕಾರದಿ ದಿಶಾವಮಂಡಳದ ಮೂಲೆಗಳೊಡೆದುವದ್ಭುತವಾಯ್ತು ವನದಹನ (ಕುಮಾವ್ಯಾ. ೨೦-೩೬): ಬಿದಿರ ಮೆಳೆ ಧಗಧಗಿಸೆ ಘನ ಹೆಬ್ಬಿದಿರು ಛಟಿಛಟಿರೆನಲು . . . ಪಕ್ಷಿಸಂಕುಲ ಪುದುರಿದುವು ಗಜಸಹಿತ ಬೆಂದುವು ವನದ ಮಧ್ಯದಲಿ (ಪಳಕ. ೬-೬); ನೇಱಿಲು ಹೆಬ್ಬಿದಿರುಗಳು ಕಾರಾಚ ಕಗ್ಗಲಿ ಕಂಚಿವಾಳದ ಮರ ಸೂರವರ್ಗವ ತಡೆದಿಹವು (ಪಂಚತಂ. ೦೯-೩೬). [ಪೆರ್ (< ಪಿರಿದು$_1$) + ಬಿದಿರ್$_2$]

**ಪೆರ್ವಿದಿರು** 'ಪೆರ್ವಿದಿರ್' ನೋ.

**ಪೆರ್ವಿಲ್** (ನಾ). ದೊಡ್ಡ ಬಿಲ್ಲು. —ಧನುಸ್ಸು : ಸಗ್ಗಿಗವೆಟ್ಟು ಪೆರ್ವಿಲ್ಲು ಸುಗಿಯಗ್ಗಳದೊಳ್ತಿರು (ಆದ್ಯಕೀ. ೯-೯೬). [ಪೆರ್ (< ಪಿರಿದು$_1$) + ಬಿಲ್$_2$]

**ಪೆರ್ವಿಸಿಲ್**, ಪೆರ್ಬಿಸಿಲ್, ಹೆಬ್ಬಿಸಿಲು (ನಾ). ಹೆಚ್ಚಾದ ಬಿಸಿಲು; ಅತ್ಯಧಿಕವಾದ ಬಿಸಿಲು : ಪರ್ವಿದ ಬೆಟ್ಟ ಬೇಸಗೆಯ ಪೆರ್ವಿಸಲರ್ವಿಸೆ ಮೆಯ್ಯನೊಡ್ಡಿ ತಾಂ ನಿರ್ವಹಿಸಲ್ಕಮಾಱದೆ ಹಿಮಾಂಶುಕಳಾಳಿಯನೆತ್ತಿ ಪೊತ್ತಸಾ ಶರ್ವಂ (ಶಾಂತಿಪು. ೯-೮೦). **ಪೆರ್ಬಿಸಿಲ್:** ಕೆಂಡವುಂ ಕಿಡಿಯುಸೊಡ ಚಕ್ರತಿರ್ದನೆನಲುರ್ಬುವ ಪೆರ್ಬಿಸಿಲಿಂದೆ ತಾಪಮಂ ಪಡೆದು (ಕಬ್ಬಿಗ. ೨-೨೨೦). **ಹೆಬ್ಬಿಸಿಲು :** ಹೆಬ್ಬಿಸಿಲ ಉಗುಳುವಂತಿಹುದು ಹೊತ್ತಾರೆ (ಕುಮಾ. ೯೯-೩). [ಪೆರ್ (< ಪಿರಿದು$_1$) + ಬಿಸಿಲ್]

**ಪೆರ್ವೀಡೆ** (ನಾ). ದೊಡ್ಡ ಬಿರುಕು. —ಸೀಳು : ಕೆಱೆಗಳ ತೊಱೆಗಳ ಸರಸಿಗಳಱುನೀರಂ ಪೀರ್ದು ಪೀರ್ದು ನೆಱೆಯಾದೆ ಧರೆ ಮತ್ತಮಱಿದಾಯ್ಕಟ್ಟ ತೆಱದಿಂ ನೆಱೆ ಪರ್ವಿದವೆಂದು ಬಿರಿದ ಪೆರ್ವೀಡೆಗಳುಂ (ಶಾಂತಿಪು. ೯-೮೦). [ಪೆರ್ (< ಪಿರಿದು$_1$) + ಬೀಡು$_1$ (< ಬೀಟ್$_2$)]

**ಪೆರ್ವೀದಿ** (ನಾ). ದೊಡ್ಡ ರಸ್ತೆ; ರಾಜಮಾರ್ಗ : ಪೆರ್ವೀದಿಗಳಂ ನೇಸಱುಪಿರ್ವಡಗಲುದೆಸೆಯ . . . ಸೊಗಯಿಪುದು ಸಮವಸರಣ ವಿಲಾಸಂ (ಶಾಂತಿಪು. ೬-೦೮). [ಪೆರ್ (< ಪಿರಿದು$_1$) + ಬೀದಿ]

**ಪೆರ್ವುತ್ತು**, ಪೆರ್ಬುತ್ತು (ನಾ). ದೊಡ್ಡ ಹುತ್ತ : ಬಡಗ್ಗೆ ಪೆರ್ವುತ್ತು ಅತ್ತಿಯಿನ್ ತೆಂಕ್ಕ ದಿಣ್ಣೆಯಿನ್ ಪಡುವಯ್ ನೋಡಿ ಪೋದ ಒಟ್ಟಿಯೊಳಲೆ ಪೆಬ್ಬನಂದಿ ಕೆಱೆಯ ಮೂಡ್ಯ ಕಡೆಗೋಡತ್ತು ಬಡಗ್ಗೆ ನಡದು (ಮೈ.ಆ. ೦೯೦೯. ೧೨-೦೯; ೮೧೦). **ಪೆರ್ಬುತ್ತು :** ಎಪ್ಪೆಸುರಿಗೊಳಂ ತತಃ ಪೆರ್ಬುತ್ತು ತತ ಆಲ್ದೊರೆ ತತೋ ಆಲ್ದೊಳ (ಎಕ. XI. ಚಾಪಾ. ೬೬-೬೨ ; ೭೯೩) ; ಪೆರ್ಬುತ್ತು ಧಾರಣೀಧರವಾದುದೈ (ಶಿಕ್ಷಾಪು. ೬-೩-೧).

[ಪೆರ್ (< ಪಿರಿದು$_1$) + ಪುತ್ತು$_1$]

**ಪೆರ್ವುರ್ಬು** (ನಾ). ಅತಿಶಯವಾದ ದಾನ. —ಕೊಡುಗೆ : ಪೆರ್ವುರ್ಬುಗೆಯ್ ' ಪರಾ.

[ಪೆರ್ (< ಪಿರಿದು$_1$) + ಪುರ್ಬು$_2$ (ಪ್ರ ← ತದ್ಭ. ಪುರವು)]

**ಪೆರ್ವುರ್ಬುಗೆಯ್** (ಕ್ರಿ). ಅತಿಶಯವಾದ ದಾನವನ್ನು ಮಾಡು : ಸೂರ್ಯಗ್ರಹಣದನ್ದು ದಕ್ಷೆಯ್ಯನುಂ ಶಿಂಕಯ್ಯನುಂ ಪೆರ್ವುರ್ಬುಗೆಯ್ಯ ಕಾಗೆರತ್ತಿಯ ಮಹಾಜನಕ್ಕೆ ಪೊನ್ನಟ್ಟೆ ಪೊನ್ನ ಕೊಟ್ಟು ಸಾಲೆ ನೀಡೆನ್ದು ಪಾತ್ರಲಂ ಕೊಣ್ಡು ಕೊಟ್ಟ× (ಎಕ. VII. ಶಿಕಾಪು. ೬೦-೫ ; ೯೭೮).

[ಪೆರ್ವುರ್ಬು + ಕೆಯ್$_1$]

**ಪೆರ್ವುಲಿ**, ಪೆರ್ಬುಲಿ, ಹೆಬ್ಬುಲಿ$_1$ (ನಾ). ದೊಡ್ಡ ಗಾತ್ರದ ಹುಲಿ ; ಮಹಾವ್ಯಾಘ್ರ : ಮಾಱಿದಾಱದಿಂದ ಪೆರ್ವುಲಿಯ ಮೀಸೆಯೊಳುಯ್ಯಲೆನಾಡುವೊಂದು (ಕೊಪಣ. ೦೯೩೬, ಜಾತಕತಿ. ೬೯-೩೮ ; ೧). **ಪೆರ್ಬುಲಿ :** ಆ ಪರ್ವತದ ಗುಹೆಯೊಳೊಂದು ಪೆರ್ಬುಲಿಯಿರ್ದುದು (ಚಾವುಂ. ೦೯೬-೮೦), ಕುರಂಗಯೂಥದೊಳ್ ಬೆರಸಿದುದೊಂದು ಪೆರ್ಬುಲಿಗಳುಂದ್ರುತನೂಜತಪಃಪ್ರಭಾವದಿಂ (ಪಂಪರಾ. ೬-೮೦) ; ಕಲಿತನದಿಂದಂ ಲೋಗರ್ ಪುಲಿಯಂ ಪಿಡಿದೊಡಪುದೇಂ ಜಡೆಂಬರ್ ವೆಂದಿಲಿಯಂ ಪಿಡಿದೊಡಪುದು ಪೆರ್ಬುಲಿಯೆಂಬರ್ದುರ್ಜನರ್ಗೆ ತಾನಿದು ಸಹಜಂ

ಮುಗವುಪ್ ಬುಟ್ಟುಣಪತಿ ಸತ್ರವಟ್ (ಎಕ. IX (೪). ಶಂಗಳೂ. ೦೮೨-೩ ; ಕ್ರಿ. ಶ. ೫೮೦). [ಪೆರ್ವೊಣ್ಣ + ಸೆಟ್ಟಿ]

**ಪೆರ್ವೊಡದರು** ‹ ಪೆರ್ವೊಡದಱ್ › ನೋ.

**ಪೆರ್ವೊಡದಱ್**, ಪೆರ್ವೊಡದರು (ನಾ). ಒತ್ತಾಗಿ ಬೆಳೆದ ಪೊದೆ; ದಟ್ಟವಾದ ಹೊದರು: ಒಣಗಿದುದೊಂದು ಪೆರ್ವಿದಿರ ಪೆರ್ವೊಡದಱಂ ಪಿಡಿದುವಪೂರ್ವಾಶುಶುಕ್ಷಣಿಯಪುಲ್ . . . ಅಭಿಮನ್ಯುವ ಕೂರ್ಗಣೆ ಪಾಱ್ದು ಮಂಗಲುಂ ನೊಣೆಯಲುಮಾರ್ಚಿ ಮುಳ್ಳಲುಮಿದೇಂ ನೆಱೆ ಕಲ್ತುವೊ ಯುದ್ಧರಂಗದೊಳ್ (ಪಂಪಭಾ. ೦೦-೯೯); ತಾ ಪಿಂಥವ ಪೆರ್ವೊಡದಱ ಕರಿ ಶಂಕೆಯಿಂ ಪಾಯ್ದುದಱೊಳ್ ಹರಿವಿಶತಿ ಬಂಜೆವಡಿವುದು ಮಾಳಿಸಂ (ಪಂಪ್ರಕ್ರಿ. ೩-೩೦). **ಪೆರ್ವೊದರು**: ಒಟಿ ಮುಳ್ಳಿಡಿಗಳಂ ಪೆರ್ವೊದರುಗಳನುಳಿದ ಬೇಟೆಯಾಟದಿ ಹುಲಿಯು ನೆಲೆಗೆಟ್ಟುದಿಲ್ಲಂ (ಸಾಹಿಕ. ೬೦-೦೭೦). [ಪೆರ್ (< ಪಿರಿದು₁) + ಪೊದಱ್]

**ಪೆರ್ವೊನಲ್**, ಪೆರ್ಬೊನಲ್, ಪೆರ್ಬೊನಲು (ನಾ). ತುಂಬಿದ ನೀರು ಇರುವ ನದಿ; ದೊಡ್ಡ ನದಿ; ಮಹಾನದಿ: ಭುವನಾಂತರಮಂ ಸಿಂಚಿಸುವಪೊಲಾಶಾವಸಿತಿಯರುವಮನೋಲಾಡಿಸುವಂತೆಪೊಲೆಸೆದರಂಗನೆಯ ರಣ್ಣುವ ನಿಜರಾವಣ್ಣರಸದ ಪೆರ್ವೊನಲಿಂದಂ (ಆಪುಂಪು. ೯೯೯); ಸಂನ್ಯಸನಮಂ ಕೈಕೊಂಡ ಮಹಾಪುರುಷನ ಕರ್ಮಂ . . . ಪೆರ್ವೊನಲಿಂಗಿದಿರಾದ ಮಳಲೇರಿಯಂತೆ ಜರಿಗುಂ (ಧರ್ಮಾಮೃ. ೦೯-೦೦೨); ಮಂದಾಕಿನಿಯ ಪೆರ್ವೊನಲ್ ಗಿರಿಗೆ ಮೇಖಲೆಯಾಗಿ ಕಂದರದ ಸೀಮೆಯಂ ಸಿಂಗರಿಸಿದತ್ತು (ಶ್ರೀಚಾತು. ೦೧೦-೯೩೨). **ಪೆರ್ಬೊನಲ್**: ಕಾಂಚಾಜನೋತ್ಕರರತ್ನಾಭರಣಪ್ರಭಾಪ್ರಸರವಾದಂ ಶಲ್ಯ ಶದ್ವೀಧಿಶಾಂತರದೊಳ್ ಪೆರ್ಬೊನಲಂದದಿಂ ಪರಿಯೆ (ಆಪುಂಪು. ೦೦೦೦); ಶಪಾಲದೋಳ್ ಬಾಟ್ನಿಣಬೆಡೆ ಖಂಡದಿಂಡೆ ಬಸುನೆತ್ತರ ಪೆರ್ಬೊನಲರ್ಬಿಸಲ್ಕೆ ಮಾರ್ಗಣಗಣಘಾತದಿಂ ತವಿಸಿದಂ ದಿವಿಜಾರಿ ವಿರೋಧಿಸೈನ್ಯಮಂ (ಜಗ. ೬-೯೯). **ಪೆರ್ಬೊನಲು**: ಪೆಗ್ಗರಾಳ ತಿನ್ನಣಿ ನೆತ್ತರ ಪೆರ್ಬೊನಲು × × × ಕಪಿದನ್ (ಎಕ. VIII, ಶೋರಬ. ೦೨-೬; 1155 ?). [ಪೆರ್(< ಪಿರಿದು₁) + ಪೊನಲ್]

**ಪೆರ್ವೊಳೆ**, ಪೆರ್ಬೊಳೆ (ನಾ). = ಪೆರ್ಬೊನಲ್: ಘುಳುಘುಳುಲಿಸಿ ನೊರೆ ವಿಂಡು ಪಸರಿಸೆಯುಮಾ ಪೆರ್ವೊಳೆ ಪರಿಯುಡುಗದ ಸಿರಿಯುನೋಲ ಕೊಡು ಭೂಮಂಡಳಕ್ಕೆ ಮಂಡನಮೆನಿಸಿ ರಂಜಿಸಿರ್ಪುದು (ಶಾಶಾ. ೬-೩೯ ಪ). **ಪೆರ್ಬೊಳೆ**: ಕಳಿತ ರಸಾಲ ನೀಲಾಲವಣ್ಣಕ ಪಿಕಗಿಳಿ ಚಂಚುಪುಟದಿ ಕರ್ದುಕಿ ತುಳುಕಿದ ಮಧುರಸ ಪಡಸೂಸಿ ಪರಿವ ಪೆರ್ಬೊಳೆಯೆಸೆದುದುದ್ದೀಕ್ಷಿಸಿದ (ಕೋಶಕ. ೩-೨೩), ಕೋಕಿಲದು ಬಿತ್ತರು ಬಿದು ಬಿತ್ತಿತ್ತುಂಬಪೊಲಿರ್ದ ಪೆರ್ಬೊಳೆ (ಶಾಶಿಪಂಕ. ೦೦೨-೦೭೦).
[ಪೆರ್ (< ಪಿರಿದು₁) + ಪೊಳೆ₂ (< ಪೊಱೆ²)]

**ಪೆರ್ವೊಱೆ** (ನಾ). ಅಧಿಕವಾದ ಭಾರ, —ಹೊರೆ, —ಹೇರು: ಇಾವಿರಿದನ್ನಯಕ್ಷಣಚದಪವಾದದ ಪೆರ್ವೊಱೆಯಂ ಅನೋರ್ವಲೆನಗಂ ಪೊತ್ತು ವಿತ್ತರಿಸಲಾರ್ಪುದೆ (ಶಾಂತಿಪು. ೯-೬೯ ಪ); ಅರ್ಥಮಂ ಸಾಗಿಸಿದನಿಭಪುಗೆ ಪೆರ್ವೊಱೆಗಳಟ್ಟಣಿಸಲು (ಕೈಟಭಾ. ೩-೬೨).
[ಪೆರ್ (< ಪಿರಿದು₁) + ಪೊಱೆ¹]

**ಪೆರ್ವೊಟಲ್**, ಪೆಬ್ಬೊಟಲ್, ಪೆರ್ಬೊಳಲು, ಹೆಬ್ಬೊಳಲ್ (ನಾ). ೧. ಒಂದು ಊರಿನ ಹೆಸರು: ಪೆರ್ವೊಟಲ ಉಮ್ಮಾದಗಾಮುಣ್ಡರುಂ ಪಿಟ್ಟುವಿಗಾಮುಣ್ಡರುಂ . . . ಸಾಕ್ಷಿ (ಎಕ. IV, ಎಡತೊ. ೬೦-೬೨, ಕ್ರಿ. ಶ. ೬೯೦). **ಹೆಬ್ಬೊಟಲ್**: ೧. ಮುದುಕೊಟ್ಟೂರ ವಿಷಯೇ ಪೆಬ್ಬೊಟಲ್ ಗ್ರಾಮೇ (ಎಕ. X, ಕೋಲಾರ. ೬೩-೦೬; ಕ್ರಿ. ಶ. 370 ಕೃತಿ). **ಪೆರ್ಬೊಳಲು**: ೨. ದೊಡ್ಡ ನಗರ, —ಊರು: ಪುಲಿಯೂರೆನಿಪ್ಪ ಪೆರ್ಬೊಳಲಿನಲ್ಲಿ ಹರನ ಮೆಚ್ಚಿಸಿ ಹೊನ್ನ ಮಳೆಯನೇಳುಂ ದಿವಸ ಕರೆಸಿದಳು . . . ನಿಂಬ (ಶಿಂಪತ್ತು. ೦೦-೨೯). **ಹೆಬ್ಬೊಳಲ್**: ೧. ಶ್ರೀಮತು ಹೆಬ್ಬೊಳಲ ಕೊಂಗಳೇಶ್ವರದೇವರಿಗೆ (ಎಕ. IV, ಕೃಷ್ಣರಾ. ೪೦-೦; 950 ?).
[ಪೆರ್ (< ಪಿರಿದು₁) + ಪೊಟಲ್]

**ಪೆರ್ಸಂಪಗೆ** (ನಾ). ದೊಡ್ಡ ಜಾತಿಯ ಸಂಪಗೆಹೂವುಗಳನ್ನು ಬಿಡುವ ಒಂದು ಬಗೆಯ ಮರ: ಗಂಧ ಪಟ್ಟದ ಪಾರಂಗೆ ಇಂಪಾದ ಸೌಗಂಧ ರುಚಿದೋಱದಂತೆ ಪೆರ್ಸಂಪಗೆ ಮರಗಳೊಪ್ಪಿದುವು (ಕೋಶಕ. ೨೯-೯೯).
[ಪೆರ್ (< ಪಿರಿದು₁) + ಸಂಪಗೆ]

**ಪೆಲ್ಲಣೆ**, ಪೆಲ್ಲವಣೆ, ಹೆಲ್ಲಣ₁, ಹೆಲ್ಲಣೆ₁, ಹೆಲ್ಲವಣೆ (ನಾ). ೧. ಕತ್ತಿ ಕಾಳಗದಲ್ಲಿ ಒಂದು ವರಸೆ; ಖಡ್ಗಯುದ್ಧದಲ್ಲಿ ಒಂದು ಪಟ್ಟು: ರಕ್ಕಸಿ[ಸಿ]ಂದುವ × × × ಗಡ್ಡದೊಳೆಡ್ಡಿ ಗಡಂ[ಗಿ ಚಾಮವುಟ]ಹೊಕ್ಕುತಿ ವೇಗದಿಂ ಕಡಂಗ[ದಿಂ]ಗಿ ಪೊರಗ ಕಾಳೆವಟ್ಟದಿಂದಿಕ್ಕಿದ ಭೂರಣಾಂ ನೆಗಳ್ದ ಪೆಲ್ಲಣೆ ಸುತ×[ಣ]ಚಿರಣಗಳಿಂ ಮಿಕ್ಕಿರೆಸಪ ವೀರವಳಕಾಲ × × ಕಲಿಗೊಗ್ಗಭೂಭುಜಂ (ಎಕಾಶಿ. XV. ೫೯-೩೨; 1184). ೨. [ಸಂಗೀತ] ಕೊಳಲನ್ನು ನುಡಿಸುವುದರಲ್ಲಿ ಒಂದು ಕ್ರಮ: ಭಣಿತ ಬೆಡಂಗು ಕಾಕು . . . ಬಹುಲಾಯ ದೇಸೆ ಪೆಲ್ಲಣೆ ಕಳೆಯೆಂಬಿವಂ ಪೊಱೆದು ಬಾಜಿಸಿದಂ ಮುರವೈರಿ ವಾಸಮಂ (ಜಗ. ೩-೩). **ಪೆಲ್ಲವಣೆ**: ೨. ವಾಸಮಂ ಪಿಡಿದು ಕಳೆಯ ಮಯಣಮನನುಪಿಂ ಪವಣಾಗಿರೆ ಪತ್ತಿಸಿ ಪೊ[ವೆ]ಲ್ಲವಣೆಕರಂ ಶುದ್ಧಮಾಗೆ ಪೂರಿಸಿ (ಧರ್ಮಾಕ. ೨ ೦೯). **ಹೆಲ್ಲಣ₁**: ೨. ಕಿನ್ನರಂ ತನ್ನಯ ಸೊಳಹೆಯೆಂಬ ವಾಸಮಂ ಕೊಂಡು ಹೆಲ್ಲಣೆಯಂ ಸುದ್ಧಮಾಗಿ ಪೂರಿಸಿ . . . ಮಧ್ಯಮಾದಿಯಿಂಬಾದಿರಾಗಮಂ ರೂಹುಗೋಳಿಪುದಂ (ಶಾಂತೀಶ್ವ. ೦೬-೬೭). **ಹೆಲ್ಲಣೆ₁**: ೧. ಖಡ್ಗಂಗಳಂ ಜಡಿದು ಮೆಱೆವಾರ್ಪಿ ಸ್ವಪಕ್ಷ ಪರಪಕ್ಷ ಹೆಲ್ಲಣೆ ನಿರ್ವಾದ ಮಂದಗತಿ ಚಾರಣ . . . ತಾಳದಟ್ಟವೆಂಬ ನಾನಾವಿಧಖಡ್ಗವಿನ್ನಾಣಮಂ ತೋಱ (ಕೃಷ್ಣ. ೨೩-೦೬ ಪ). ೨. ರಾಗನಾಗರನೆಂಬ ವಾಸುಕೀರಂ ಭಾಸುರತೆವಡೆದ ದಾರಹೆಯೆಂಬ ವಾಸವಮಂ ಕಳೆದುಕೊಂಡು ಪೊಳೆವದಱ ರಸಂಗಳಿಂ ಪುಟ್ಟುವ ನಾದಲಕ್ಷ್ಮಿಯ ಮಾರ್ಗವೀಧಿಕೆಯೆನಿಸಿ ಕಣ್ಗೊಳಿಸಿ ಕಳೆಯ ಮಯಣಮಂ ನುಣ್ಪಾಗೆ ತಿರ್ದಿ ಪೂರಿಸಿ ಹೊ[ಹೆ]ಲ್ಲಣೆಯ ಶುದ್ಧಮಾಗಿ ಮುಹಚಾಳೆಯಮಂಮಾಡಿ (ಶಾಂತೀಶ್ವ. ೬-೯೩ ಪ): ಹದಿನೆಂಟುತೆಱದ ವಾಸಂಗಳ ಲಕ್ಷಣವನಱದಾ . . . ಹೇಳಿಕೆ ಹೆಲ್ಲಣೆ ವ್ಯಾಪ್ತಿ ಮೊದಲಾದ ಇಪ್ಪತ್ತುನಾಲ್ಕು ತೆಱದಲ್ಲಿ . . . ಆಲಾಪಿಸಿ ಕೇಳಿಸುವ ಭಾಸುರತರವಾರವಿಲಾಸಿನಿಯರಿಂದ (ಶಪೀಕ. ೦೧೦). **ಹೆಲ್ಲವಣೆ**: ೨. ಅಧರದೊಳ್ತಂದಿರಿಸಿದಂ ಕೊಳಲನೊಪ್ಪದಿಂ ಮಧುರಾಕ್ಷರಂಗಳಂ ಸವಿವ ಸಮನಾಗದಿ ಹೆಲ್ಲವಣೆ ಹೆಕ್ಕಳಂಗೊಂಡು ವನದೊಳು ತೀವೆ ಎಲ್ಲಾ ಮೃಗಂ ಮೋಹನಂಬಿದು ಕಿವಿಗಳನೋವೆ (ಅವಶಿ. ೬೬. ೦೮೦-೦೯). [ ? ]

**ಪೆಲ್ಲಯಿಸು**, ಪೆಲ್ಲಿಸು (ಕ್ರಿ). ೧. ಒಟ್ಟುಗೂಡು; ತುಂಬು; ಮಡುಗಟ್ಟು: ನವಸುಧಾಜಳಪ್ರವಾಹಂ ಪ್ರಸರಿಸಿ ಪರಿದು ಮಂದರರೋದಾರ ಕಂದರದುಪ್ರದೇಶಂಗಳೊಳೆಲ್ಲಮಲ್ಲಿಗಲ್ಲಿಗೆಲ್ಲಿಯಾನುಂ ಪೆಲ್ಲಯಿಸಿ ನಿಂದುಂ . . . ಎಲ್ಲಿಯಾನುಂ ಕಾಲ್ಪುರವಾಗುಬ್ಬರಿಸಿಯುಂ ಪೋಗಿ ಪೊಲ್ಲಮೆಲ್ಲನೆ ಭದ್ರಶಾಲವನಮನೆಯ್ದಿದಾಗಳ್ (ಧರ್ಮಾಮೃ. ೦೨-೨೯ ಪ). **ಪೆಲ್ಲಿಸು**: ೨. ಒಟ್ಟುಗೂಡಿಸು; ಸೇರಿಸು: ಪೊದೆಯಿಸಿದಡ್ಡಣಂಬೊಲಿರೆ ಸುತ್ತಿದ ಸತ್ತಿಗೆ ಡಿಂಡಿಮಸ್ವನಂ ಕೆದಱೆ . . . ಕರ್ಪುರ ಕಂದದ ಕದಗಣ್ಣಗೇಣ್ ಪೊಸೆಯ ಪೆಲ್ಲಿಸಿ[ಪಾಠಾಂ. ಬಲ್ಲಿಸೆ, ಪೆಲ್ಲಿಸೆ]ಚಟ್ಟಿ ಕಳಕ್ಕೆ ಪರ್ವ ದರ್ವದ ಕುಸುಮಾಸ್ತ್ರನಂಕಕಾಱನೆ ಪೇರರಿ ಬಂದಳದೆಂದು ದೇಸೆಯಿಂ (ಅಂಗಶ. ೩-೦೯); ಅಲ್ಲಿಗೆ ಮುಂನ್ನ ಬಂದಹಸಿ ನಿಂದ ಗುಹಾಮುಖನೆಂಬ ರಕ್ಕಸಪೆ[ಪಾಠಾಂ. ಪಿ]ಲ್ಲಿಸಿ ಕಂಡಕಂಡರನೆ ನುಂಗುತಮಿರ್ವೊಡೆ ಬರಿಗಟ್ಟಮಂದೆಲ್ಲರುಮಿರ್ದು ಮಾಡಿದೊಡೆ ಮಾಡಿದ ಬಾರಿಯ ಸೂಟ್

ನಿಯೋಗದಿಂದಲ್ಲಿಯುಮಂತೆ ಬಂದು ಬಟಿಕಾ ಮನೆಯಲ್ಲಿಗೆ ಬಂದುದೆಂಬುದಂ (ಕೀವಂಕಂ. ೩೮-೨೩)· [ಪೆಲ್ಲ (ಪ್ರಾ. ಪೇಲ್ಲ./ಸಂ. ಪೂರಯ) + —ಇಸು]

**ಪೆಲ್ಲವಣೆ** 'ಪೆಲ್ಲಣೆ' ನೋ.

**ಪೆಲ್ಲಾಪೆಲ್ಲಿ** 'ಹೆಲ್ಲಾಹೆಲ್ಲಿ' ನೋ.

**ಪೆಲ್ಲಿಸು** 'ಪೆಲ್ಲಯಿಸು' ನೋ.

**ಪೆವಡಿ** 'ಪೀವಡಿ' ನೋ.

**ಪೆವ್ವಳಿಸು** 'ಪೆಳ್ವಳಿಸು' ನೋ.

**ಪೆಸದೊರ** ? (ನಾ). ಒಬ್ಬಾತನ ಹೆಸರು (?) : ಪೃ(ವೃ)ಥಿವೀರಾಜ್ಯಂಗೆಯೆ ಪೆಸದೊರಾ ಮಗನ್ ರೆವಡಿಬದ್ದರ್ (ಶಾ. VIII. ೨೪೬-೨ : 732). [ ? ]

**ಪೆಸರ್**, ಪೆಸರ್ು, ಪೇರ್, ಪೇರ್ು, ಹೆಸರ್ (ನಾ). ೧. ನಾಮಧೇಯ ; ನಾಮಾಂಕಿತ ; ಅಭಿಧಾನ : ವನರುಹದಂತೆ ಮುಖಂ ಲೋಚನಮೆಸೆವುತ್ಪಲದವೋಲ್ ತಳಂ ತಳಿರಂತೆಂದನುರೂಪವಪ್ಪಾಗಿ ಪೇಟ್ಟೊಡ ದೆನಸುಂ ವಸ್ತೂಪಮಾನಮೆಂಬುದು ಪೆಸರಿಂ (ಕಎಾ. ೩-೬೦); ಆ ಕೂಸಿಂಗೆ ಭದ್ರಬಾಹುವೆಂಬ ಪೆಸರನಲ್ಲರುಂ ನೆರೆದಿಟ್ಟೊಡೆ (ಶಮ್ಮಾ. ೬೩-೧೯): ಪೆಸರಿಲ್ಲದಿರ್ಪುದರಿಂದೀ ಪೆಸರೊಳೆ ಮುನ್ನಡೆಯೆ ನಡೆದುದೀ ವ್ಯವಹಾರಂ ಪೆಸರಿಲ್ಲದೊಡಂದಾ ಮನು ಪೆಸರಿಟ್ಟು ಯಶಸ್ವಿಯೆಂಬ ಪೆಸರಂ ಪಡೆದಂ (ಅಂಕ. ೬-೬೦); ಕರ್ಣಾಟಕವ್ಯಾಕರಣಮುಂ ಶಬ್ದಮಣಿದರ್ಪಣಮೆಂಬ ಪೆಸರ ನಿಟ್ಟು ಲಕ್ಷಣಾಚಾರ್ಯರ್ ಪೇಳಿಂದು ಬೆಸಸೆ ಮನಂಬುಗುವಂತೆ ಪೇಳ್ದಂ (ಶಬ್ದ. ಪೀ೫೪ ೩ ವೃ). ೨. ಪ್ರಸಿದ್ಧಿ ; ಖ್ಯಾತಿ ; ಹೆಸರುವಾಸಿ : ಗುಣಿ ಧರ್ಮ್ಮವೆಯಿಂ ವರ ಕಾಶ್ಮಪಾನ್ವಯಂ ತಳೆದುದು ಪೆರ್ಮ್ಮೆಯಿಂ ಪೆಸರನುಂ ನತಿಯಿಂ ಯಶಮುಂ ಪ್ರಭುತ್ವಮಂ (ಶಾ. IX—i. ೨೬೭-೩೩ ; 1160) : ಪೆಸರ ನರೇಂದ್ರನಂದನರ ಚಾಮರವಾಯು ಕಟಲ್ಗೆ . . . ನಿಶ್ವಸಿತದ ಗಾಳಿ ಚಾಳಿಸೆ ತೆರಳ್ದುದಿಗ್ಗೆತು ಧೂಳಿದಾಳಮುಂ (ಕುಕ್ಕ. ೯-೩೬). 'ಪೆಸರ್ವಡೆ' ಪರಾ. ೩. ಬಿರುದು ; ಪ್ರಶಸ್ತಿ : ವಿಕ್ರಮಾರ್ಜುನನುಮರಾತೀಲಾಳನಳನುಂ . . . ಪಡೆವೆಚ್ಚಿಗಂಡನುಂ ಪರಸೈನ್ಯಭೈರವನುಮೆಂಬ ಪೆಸರ್ಗಳ ನನ್ವರ್ಥಂ ಮಾಡಿ (ಕಂಪಾ. ೦೦-೦೨೯ ಪ); ಪಡೆಯೆಡೆಯ ಕಡೆಯ ಬಡವರ್ ಕಂಡೆ ಪಡೆವನೊ ಚಕ್ರವರ್ತಿಯೊಳ್ ತೈಲಪನೊಳ್ ಪಡೆದಂ ಮಹಿಮೋನ್ನತಿಯಿಂ ಪಡೆದಾ ಕವಿಚಕ್ರವರ್ತಿಪೆಸರಂ ರನ್ನಂ (ಗದಾಯು. ೦-೩೬); ಸಂಗರದೊಳ್ ಭೀಕರದೊಸಿಪ್ಪ ಮದ್ದುಬಲದಿಂದರಿಮರ್ದನನಂ ತವೆ ಕೊಂದರಿಮರ್ದನನೆಂಬ ಪೆಸರನಾಂ ತಳೆದಪ್ಪೆಂ (ಶಾಂತೀಶ. ೨೦೬-೦೩). ೪. (ಅಲಂ) ದೂಷಣೆ ; ಅಪವಾದ ; ನಿಂದೆ : 'ಪೆಸರ್ವು' ಪರಾ. **ಪೆಸರ್ು** : ೧. ನಂಬಿ ನಂಬೀ ಕಂದ ಮೊಸಳೆ ನುಂಗಿತೆ ಮಗನೆ ನಂಬಿಯಣ್ಣನ ಪೆಸರು ಫಲಿಸದಿಂತಲೆ ಮಗನೆ (ಶಪುರ. ೦೬-೦೩೬); ಧರಣಿಯೊಳು ಮೇಣ್ ತಮ್ಮ ತಮ್ಮ ಪೆಸರುಗಳೊಳು ಹರನಾಮಂ ಸಲೆ ಧರಿಸಿ ಭಜಿಸುವವರ ಗಿರಿತರುಖಗಮೃಗಾದಿಗಳು (ಬಸವ. ೦೯-೬೨); ಮಡಿಪೆಸರು ಮರುಗದೊಳು ವಳಿಪೆಸರೊಂದು ವಚನದೊಳು . . . ಅಲ್ಲದೆ ನೋಳ್ಪೊಡಿಲ್ಲಾ ಮೆಚ್ಚ ನಾಡೊಳಗೆ (ಸಾಳ್ವಭಾ. ೦-೬೦)· ೨. ನೆಲಪಡಿದು ಕಲಿತೊಡನೆ ನಾಡ ಬಂದಿತು! ನೋಡೆ ಚಲುವಲ್ತೆ ಪೆಸರ ಪುಲಿ ನನ್ನಿಯುಳಿವರಿದು (ಕಾಂಡಿ ೦೨೨-೨೦೬). 'ಪೆಸರುಪೆಱು' ಪರಾ. **ಪೇರ್** : 'ಪೇರ್ಗೊಳ್' ಪರಾ. **ಪೇರು** : ೧. ಮಾರನ ತೇರುಪೆಸರನಿಟ್ಟು ಜಾಣರದಾರೆ ಧರೆಯೊಳೀ ತರುವಿಗೆ ದೂರದಿಂ ನೋಡೆ ತೇರಂತೆ ಸೊಬಗುತಿದೆ ಪೇರು ಸಲುವುದು ಕಿಂಶುಕಗೆ (ಕೃಕೃಗೋ. ೯-೦೩). **ಹೆಸರ್ು** : ೧. ಅಯ್ಯ ಅಜೀವನಜಾತ ಅಜೀವ ತೀರದು ಮಚ್ಚ ಮಚ್ಚು ಮಚ್ಚನೆಂದು ಕುಚುಕಾದು ಹೇಳ ಹೆಸರಿಲ್ಲದೆ ಗುರುಲಿಂಗಜಂಗಮ ತ್ರಿವಿಧ ಒಂದಾದ ಎಡೆಯ ತೋರು ಬದ.ಶಿಸಾ (ಅಶರ. ೪೬-೦೩೬) : ನೀನೆತ್ತಲನಿಮಿತ್ತವೀಯಮನೆಗೆ ಬರಮೆತ್ತ ನೀನಾರು ಮನೆಯಲ್ಲಿ ಪೆಸರಾವುದು (ಸಿದ್ಧಲಿ. ೨-೨೬). ಹರಿಹರಬ್ರಹ್ಮಾಮರೇಂದ್ರಾದ್ಯರ ಹೆಸರ ದಿವ್ಯಾಸ್ತ್ರಮಂತ್ರವನೊರೆದನಾಚಮನೀಯ ಸಾಂಗೋಪಾಂಗಮುದ್ರೆಯಲಿ (ಕೂರಿರಾ. ೦-೯-೯೩) ; ಹೆಸರು ಕ್ಷೀರಸಾಗರ ಭಟ್ಟ ಮಜ್ಜಿಗನೀರಿಗೇ ತತ್ವಾರ (ಗಾದೆ). ೨. ನುಡಿವ ಬೆಡಂಗು ನೋಡುವ ಪರಾಕ್ರಮ ಮಾಡುವ ಸಾಹಸೋಕ್ತಿ ನಡವ ಚರಿತ್ರಮುಂ ಹೆಸರು ರೂಪು ಗುಣಾರ್ಣವನೆಂತು ನೋಳ್ಪೊಡಂ ಕತುಗಲಿಯಪ್ಪ ವಿಕ್ರಮನ ಗಂಡಿನ ದೊಂದು ಪೊಡರ್ಪನೇನ ಬಣ್ಣಿಸಲಳವಲ್ತೆ (ಶಾ. IX-i. ೨೬೬-೨೮ ; 1163); ಹೆಸರ ನಾಯ್ಗಳ ಹಾಸ ಹರಿದುಬ್ಬಸದಲುಗಿಗದವದಿರ ಓಡಿಮ್ಮಗ ಮುಸಗಿದವು ಹದವಿಲುಗಳೊದೆದವು ಹೆದೆಯ ಹರವಿನಲಿ (ಕುಮ್ಮಾ. ೦೩-೨೦); ಆ ಪ್ರಯತ್ನಗಳು ತರುವ ಫಲಕ್ಕಿಂತ ರಾಯರಿಗೆ ಬೇಕಾದುದು ಒಳ್ಳೆಯ ಹೆಸರು (ರಾಹುಳ. ೯).

**ಪೆಸರ್ಪೆಸರ್** (ದ್ವಿರುಕ್ತಿ) : ಭರತಂಗೆಯ್ಯಾಗಳ್ ನೀಂ ಪೆಸರ್ಪೆಸರೊಳಾ ನಾಲ್ವರುಂ ಮನಾದರಂ[ಗೊಂಡು] ನಾಲ್ಕುಂ ದೆಸೆಗೆ [ಬೆಸಸಿಂ] ಬೆಳ್ಳಂವಿನಂ (ಶಂಪುರಾ. ೬-೨೬) ; ಹರಿಣಕಿಯುಂ ಶುಕ ಸಾರಿಕೆಗಳನೋದಿಸಲುಂ ಪೆಸರ್ಪೆಸರೊಳೆ ಕರೆದು ಪೇಳ್ದ ಮನೋಹರಾಲಾಪಂಗಳಂ ಕೇಳುತ್ತುಂ ಪೋಗೆಪೋಗೆ (ಕಾದಂಪೂ. ೦೦೦೬) ; ತಂದ ಕಷ್ಟಂಗಳಂ ಪೆಸರ್ಪೆಸರೊಳೆ ಪೇಳ್ದು ಕಂಡೆ (ಶಂಗ್ರಪೂ. ೯-೪ ಪ). **ಪೆಸರಾಗು**, **ಹೆಸರಾಗು**—೧. ಹೆಸರು ಬರು ; ಹೆಸರುಂಟಾಗು : ಅಗುಬ್ದಿರಲಾ ಕುಟೀಯೊಳ್ ತೊಟ್ಟಿಗೆ ನಿಧಿಗಂಡಂತೆ ವಸುಧೆಗಸದಳವಾಯ್ತು ಮಗ[ನಂ]ದಮೊಂದು [ಲೋಗರ್] ಬಗೆದಿರೆ ವಸುಷೇಣನೆಂಬ ಪೆಸರಾಯ್ತಾಗಳ್ (ಶಂಪುರಾ. ೦-೯೬); ಚಂದ್ರಹಾಸನೆಂದಿಳೆಯೊಳೀತಗೆ ಪೆಸರಾಗಲೆಂದುಚ್ಚರಿಸಿ ನಾಮಕರಣಂಗೈದರು (ಜೈಮಿನಿ. ೨೬-೬೦) ; ಚರಿಸುವುದು ರಥವೊಂದು ವಾಗೀಶ್ವರನ ಪುರಿಗೆ . . . ಉರಗರಾಜನ ನಗರಿ ಗದಱಿಂ ಧರೆಯೊಳಗೆ ಹೆಸರಾದುದಾ ಭೂಮರಶಿರೋರತ್ನಂಗೆ ದಶರಥನೆಂಬ ಗುಣನಾಮ (ಕೂರಿರಾ. ೦-೩-೨೨)· ೨. ಪ್ರಸಿದ್ಧವಾಗು ; ಪ್ರಖ್ಯಾತವಾಗು ; ಹೆಸರುವಾಸಿಯಾಗು : ಹೊಸ ಹರೆಯದಲಿ ದ್ರವ್ಯದ ನೆಚಿಕೂಡಿಸು ಹೆಸರಾಗು ವಸ್ತ್ರಭೂಷಣದಿ ವ್ಯಸನಕ್ಕೆ ಪ್ರಾಧನೊಳಬಿಗದಿರೆಂದು ರಕ್ಷಿಸುವುಂದೆ ಮಗಳ ಹಿಂದಿದಳು (ಮೋಹತ. ೦೮-೬೩) ; ಡಾಕಾ ಎಂಬ ಪಟ್ಟಣದಲ್ಲಿ ಹುಟ್ಟುವ ಜಿನುಗಾದ, ಮಲಮಲಿಯು ದಿಗ್‌ದೇಶಕ್ಕೆ ಹೆಸರಾಗಿದೆ (ಮುಂಬಾಯಿ. ೪-೨೬); ಸೀಕೆಯ ಗೌಡರು ಭಾಂಡ್ಯದ ಗೌಡರು ಊರಿಗೆ ಹೆಸರಾದ ಜನರು (ಇಂಹಿಕ. ೬-೨೦)· **ಹೆಸರುಬರ್**, **ಹೆಸರುಬರು**—೧. ಹೆಸರು ಉಂಟಾಗು ; ಹೆಸರು ರೂಢಿಗೆ ಬರು : ಬಸವನಾಲ ವಿದೆಂಬುದೇತಕೆ ಪೆ[ಸಾಲಂ. ಹೆ]ಸರು ಬಂದಿತ್ತುಸುರಿ ನೀವೆನೆ (ಬಸವ. ೩೨-೦೯)· ೨. ಪ್ರಸಿದ್ಧಿ ಬರು ; ಖ್ಯಾತಿಯುಂಟಾಗು : ಆ ವ್ಯಕ್ತಿಯ ಮಹತ್ಕಾರ್ಯದಿಂದ ಅವರ ವಂಶಕ್ಕೆ ಹೆಸರು ಬಂದಿದೆ (ರೂಢಿ). ೩. ಅಪಖ್ಯಾತಿಯುಂಟಾಗು ; ಅಪವಾದ ಬರು ; ದೂಷಣೆ ಬರು : ಅವರು ನಾಲ್ಕು ಜನರ ಬಾಯಲ್ಲಿ ಹೆಸರು ಬರದಂತೆ ನಡೆದುಕೊಂಡರು (ರೂಢಿ)· **ಹೆಸರುಳಿಸು**, **ಹೆಸರುಳಿಸು**—ಹೆಸರನ್ನು ಉಳಿಸು ; ಕೀರ್ತಿಗೆ ಕಳಂಕ ತರದಿರು ; ಹೆಸರು ತರು : ಈರೇಳು ಜಗದೊಳಗೆ ಮೆಚ್ಚಿ ಪೆಸರುಳಿಸಿತಣ್ಣಾ ಉಳಿಸಿತು (ಭಕ್ತಿಪ. ೦-೦೬೦-೦); ಹೆಸರುಳಿಸುವ ಮಕ್ಕಳಾಗಬೇಕೆಂದು ಎಲ್ಲರೂ ಬಯಸುತ್ತಾರೆ(ರೂಢಿ). **ಪೆಸರೆತ್ತು**, **ಹೆಸರೆತ್ತು**—ಹೆಸರನ್ನು ಹೇಳು; ಹೆಸರನ್ನು ನೆನಪಿಗೆ ತಂದುಕೊಳ್ಳು : ಹನ್ನೊಂದರೊಳ್ ನೆರವಿಯುಂ ಬಳಗ ನೆರೆದು ಚೆನ್ನೆಯಂ ಪೆಸರೆತ್ತಿ ತಣಿವುಂಡು ಮರೆಯಾಯ್ತು (ಕಾಂಡಿ. ೦೦೬—೭೨೦), ಅವರ ಹೆಸರೆತ್ತಿದರೆ ಮೈಯೆಲ್ಲ ಉರಿಯುತ್ತದೆ (ಪ್ರಹು. ೩೩೦): ಹನ್ನೊಂದನೆಯ ದಿನ ಬಳಗದವರೆಲ್ಲ ಚೆನ್ನೆಯ ಹೆಸರೆತ್ತಿ, ಉಂಡು ತಣಿದು ಮರೆಯಾಯ್ತು (ಕಾಂಡಿ. ೦೯ ಕನ್ನಡ). **ಹೆಸರ್ಮಾಡು**, **ಹೆಸರುಮಾಡು**—೧. ಪ್ರಸಿದ್ಧಿಯನ್ನುಂಟು ಮಾಡು ; ಖ್ಯಾತಿಯನ್ನುಂಟು ಮಾಡು :

ಪೆಸರಲಿಯ ಬೊಟ್ಟಿನಿಂದಂ ದೆಸೆದೆಸೆಗಂ ಮಿಡಿದು ಮಿಡಿದು ಕೈಮುಗಿ ವುತ್ತುಂ (ಚಾರಿತ್ರ. ೧೧-೦೨೧). [ಪೆಸರ್ + — ಇಲ್ಲಿ]

**ಪೆಸರಿಸು, ಹೆಸರಿಸು** (ಕ್ರಿ). ೧. ಹೆಸರನ್ನು ಹೇಳು,—ಸೂಚಿಸು: ಸುನಿಮೇಷವಿಮಾನಚಾಪಲನೇತ್ರೆ . . . ಮನಸಿಜಶಶಾಂಕಕರ್ಕಟಕ ಚೀಳಂ ಗುಡುವ ತನಿಸೊಬಗುವಡೆದ ಸನ್ಮೋಹನದ ಕಣಿಯ ಬಾಯನುಕೊರ್ವ ನೀಳ್ ಸವಿಯುಂ ಕರೆದಳೀರಾಶಿ ರಾಶಿಯಂ ಪೆಸರಿಪವೊಲು (ಕೃಷ್ಣ. ೬-೨೫). ೨. ಎತ್ತಿ ಹೇಳು; ಹೊಗಳು; ಪ್ರಶಂಸಿಸು: ಎಡೆವರಿಱಿವರ್ ಪೊಮ್ಮರುಬ್ಬುವರ್ ಕೊಬ್ಬುವರ್ ಮಸಕದಿ ಸಮರಂಗಕುಬ್ಬುವರ್ ತೞುಬ್ಬುವರ್ ಪೊಸ ಪರಿಯ ಬಿರುದನುೞ್ ಪೆಸರಿಪರ್ ಪಸರಿಪರ್ ತಂತಮ್ಮ ಬೀರಂಗಳ . . . ಉಭಯಭಟರು (ಕಂಠೀ. ೩೮-೩೬): ನಾಗರಿಪುಮಧ್ಯ ಮುಮರ್ವಸಿಮು ನಡುವಿಂಗೆ ಸರಿಯಾಗಬಲ್ಲುದೆ . . . ಪೂಗಣೆ ವಿಲಾಸದಾ ರಂಭೆಯು ವಿರಾಜಿಸುವ ಸೋಗೆಗೆಣ್ಗೆಣೆಯಹುದೆ ನೋಡೆಂದು ಪೊಗಳ್ದನನು ರಾಗದಿಂದೊರ್ವಳಂ ವಿಟನಪ್ಸರಸ್ತ್ರೀಯರಂ ಪೆಸರಿಸುವ ನೆಸದೊಳು (ಕೃಷ್ಣ. ೬-೩೯). **ಹೆಸರಿಸು:** ೧. ಅವರು ನಾಡಿನಲ್ಲೆಲ್ಲ ಹೆಸರಿಸು ವಂತಹ ಕಲಾವಿದರು (ಲೂಕ). ೩. ನಿಗದಿಪಡಿಸು; ನಿರ್ದಿಷ್ಟ ಪಡಿಸು: ಹೆ.ಮಭಾರದ ವಿಮಲರತುನಸ್ತೋಮವಿದೆ ಮಣಿವೆನಲು ಕೌರವ ಭೂಮಿಪತಿಯೊಡ್ಡಿದನು ಧರ್ಮಜ ಹೆಸರಿಸಿದ ಧನವ (ಕುಮಾ.ಸ. ೦೩-೯೯). ೪. ಹೆಸರಿಡು; ನಾಮಕರಣಮಾಡು: ಚರಿತ್ರಕಾರನು ಅಂದಂದಿನ ದೃಷ್ಟಿಯಿಂದ ನಡೆದ ಘಟನೆಗಳನ್ನೂ ಹುಟ್ಟಿದ ಕೃತಿಗಳನ್ನೂ ಪರಿ ಶ್ಲಿಸಿ ಹೆಸರಿಸಬೇಕಾಗುತ್ತದೆ (ಪಟು. ೨೦). ೫. ಹೆಸರನ್ನು ಗಳಿಸು; ಪ್ರಸಿದ್ಧಿ ಯನ್ನು ಪಡೆ; ಖ್ಯಾತಿಯನ್ನು ಹೊಂದು: ಹೆಸರಿಸಿದ ಗಂಧರ್ವ ಕಿನ್ನರವಿಸರವಾಗಧವಂದಿಗಳು ವೇಷ್ಟಿಸಿತು ನಾರದನಭ್ರುಸುಂಡಲದೊಳಗೆ ಸಲಿದಾಡೆ (ಕರ್ಣಾಗ. ೪-೦೦.೪೦); ಎಸೆದನದಱೊಳು ಭೂಪನೊಬ್ಬನು . . . ಸಂಬಲಾಶ್ವನೆಂಬುವನು ಹೆಸರಿಸಿದ ವ್ಯಾಘ್ರಲಸ್ಮವಾಲರ ನೊಸಲ ತಿಲಕದವೊಲು ಮಿಗೆ ರಂಜಿಸುತ (ಕರ್ಣಾಗ. ೦೦-೪೦-೨).

[ಪೆಸರ್ + — ಇಸು]

**ಪೆಸರೀ** (ಕ್ರಿ). ಹೆಸರನ್ನು ಕೊಡು; ಹೆಸರಿಡು: ಈ ಸುತನ ಸೌಂದರ್ಯಾತಿ ಶಯದಿಂದಂ ಪೆಸರಿತ್ತಪ್ಪೆನೆಸುತ್ತುಮಿತ್ತನರಸಂ ಕಂದರ್ಪದೇವಾಖ್ಯಮಂ (ಕುಸುಮಾ. ೬-೦೦೩). [ಪೆಸರ್ + ಈ]

**ಪೆಸರು** 'ಪೆಸರ್' ನೋ.

**ಹೆಸರು** 'ಪೆಸಱ್' ನೋ.

**ಪೆಸರುಗೊಳ್** 'ಪೆಸರ್ಗೊಳ್' ನೋ.

**ಪೆಸರುವಡೆ** 'ಪೆಸರ್ವಡೆ' ನೋ.

**ಪೆಸರುವೆಱು** 'ಪೆಸರ್ವೆಱು' ನೋ.

**ಪೆಸರ್ಗಿಡು, ಹೆಸರುಕೆಡು** (ಕ್ರಿ). ಅಪಕೀರ್ತಿಯುಂಟಾಗು; ಕೆಟ್ಟ ಹೆಸರು ಬರು; ದೂಷಣೆಯುಂಟಾಗು: ಪವಣ್ನಂ ತುದನೋ ತಂದನೊ ಪೆಸರ್ಗಿಡೆ ಪೆರ್ಮಾರಿಯಂ ನಮ್ಮ ದುರ್ಗಕ್ಕರಸಂ (ಅಜಿತ. ೦೦.೬೦). **ಹೆಸರುಕೆಡು:** ಸಮಾಜದಲ್ಲಿ ಹೆಸರುಕೆಡದಂತೆ ಜೀವನ ನಡೆಸಬೇಕು (ಲೂಕ). [ಪೆಸರ್ + ಕಿಡು (< ಕೆಡು)]

**ಪೆಸರ್ಗೇಳ್** (ಕ್ರಿ). ಹೆಸರನ್ನು ಕೇಳು: ಅಂಗಳ್ ಪೆಸರ್ಗೇಳ್ದೆರ್ದೆವೊಡೆದ ರಂಬ ಶೂದ್ರಕನ ವಿಕ್ರಮಾಡಂಬರಮಂದರವೇಣಿಸಿಕೆಯೊಳಿಂದಿದ ನರಸಿಂಹಾ ಡಂಬರಕ್ಕೆ ನಿಸುನಗುತಿರ್ಕುಂ (ಅಶಂಪೂ. ೦೦); ಮಸುಜಮನೋಜ ನಿನ್ನ ಪೆಸರ್ಗೇಳಲೊಡಂ ಬೆಮರಿಂದೆ ಕಣ್ಣಾ ಲಾಗಿನ ನೆಱ್ ನಾಂದು ಪತ್ರದ ನಿಜಾಂಶುಕಮಂ ಪುಳಕಂಗಳೆತ್ತೆ (ಕಾದಂಬ. ೩೦೪). [ಪೆಸರ್ + ಕೇಳ್]

**ಪೆಸರ್ಗೊಳ್, ಪೆಸರುಗೊಳ್, ಪೇರ್ಗೊಳ್, ಹೆಸರುಗೊಳ್, ಹೆಸರ ಗೊಳ್ಳು, ಹೆಸರ್ಗೊಳ್** (ಕ್ರಿ). ೧. ಹೆಸರನ್ನು ಹೊಂದು: ಜಂಬೂ ದ್ವೀಪದ ಭರತಕ್ಷೇತ್ರದೊಳಖಿಳಸುಖಮುಖದ್ವಾರಂ ದ್ವಾರಾವತೀಪುರಂ ಪುರಂದರಪುರೀವಿಳಾಸಮಂ ಪೆಸರ್ಗೊಂಡಂತೆ ಮೆಱೆದಿರ್ಪುದು (ನೇಮಿ. ೦೨-೯೩ ವ). ೨. ಹೆಸರನ್ನು ಹೇಳು, — ಉಚ್ಚರಿಸು; ಹೆಸರೆತ್ತು: ವಿನಯ ಮುಮೆಂಱಕಮುಮಪ್ಪುದು ಸನಾಭಿಗಳ್ ಸಂಗಸಂಗಳಪ್ಪೊಡೆ ಪೆಸರ್ಗೊಂಡನಿತ ಱೊಳೆನ್ನಂ ಸ್ಮರಿಸನೆನೆ ಭರತಂಗೆಱಿ ಲೋಕದಿಂ ನಗಿಸುವನೇ (ಆದಿಪು. ೦೪. ೩೬); ಆತನನಾರಾಧಿಸಿ ನೃಪನೀತಿವಿದರ್ ಪೇಚರಾಡನೀಚರಾಕ್ಮಖ್ಯಾತಿಸ್ತ್ರೀಯು ಕಾದಭಿಜಾತನ್ಯಪನ್ನಯರನೆನಿಬರಂ ಪೆಸರ್ಗೊಳ್ಳಂ (ಶಾಂತಿಪು. ೩-೫೩); ಪೆಸರ್ಗೊಳೆ ವಿಷಹರಮಂ ಮಾಟಿಸಿಕದ ಮಣಿಮಂತ್ರತಂತ್ರತತಿಯಿಂ ಕಾನೆಟ್ಟಿಸಲಾಱದೆ ಭೂರಮಣಂ ಬಸವಟೆದಾ ಸತಿಯ ಮೇಲೆ ಮೂರ್ಛೆಸಿ ಬಿದ್ದಂ (ಶಾಂತೀಶ್ವ. ೩-೦೬೪); ಉದಯಕಾಲದೋಳಿದ್ದೊಲಿದಿಷ್ಟದೈವದ ಪದ ಗಳ ಪಾಡುವಂದದೊಳು ಹದಿಬದೆಯರ ಪೆಸರ್ಗೊಂಡು ಪೊಗಳ್ವುದು ವಿದಿತ ವೈಸಲೆ ವೈದಿಕರಿಗೆ (ಕಂಠ. ೨-೦೫). ೩. ಹೆಸರಂ ಹಿಡಿದು ಕರೆ, —ಕೂಗು; ಸಂಬೋಧಿಸು: ಪೆಸರ್ಗೊಂಡಿಂದ್ರನರೇಂದ್ರವಂದ್ಯನನೋಱಲ್ದೆತ್ತಾನು ಮೋರೊರ್ವೆ ಚಿಂತಿಸಿದೊಂಗು ಪವಣಲ್ಲ ಪುಣ್ಯಮನೆ (ಅಜಿತ. ೦-೩೬); ಆಗಳಾ ಕೊಳನ ಬಳಿಸ ಬಂದು . . . ಮಹಿಮಹಾವಾದ್ಯಗಳಂ ಬಾಜಿಸಿಯುಂ ಎಂತುಂ ಪೊಱಮಡಿಸಲಾಱದೆ ಸುಯೋಧನನಂ ಪೆಸರ್ಗೊಂಡು ನಕುಲನಾಸ್ಫೋಟಿಸಿ (ಗದಾಯು. ೬-೦ ವ); ಸಮಾಧಿಯನಾಗ ತೆಗೆಸುತ್ತ . . . ಪೆಸರ್ಗೊಂಡಾ ಸುಪುತ್ರಕನಂ ಕರೆಯಲು (ಜಗನ್ನಾ. ೧೮-೩೯); ಎನ್ನಂ ಪೆಸರ್ಗೊಂಡನೇ ನುಡಿಸಿದನೆ ಬಿಲ್ಕಿರಂದನೆ (ಕಂಠೀ. ೩೦-೦೪). ೪. ವರ್ಣಿಸು; ಬಣ್ಣಿಸು; ವಿವರಿಸು: ಕಳಹಂಸೀಲೀಲೆ . . . ಶ್ರೀಚಕ್ರವಾಕದ್ವಯ ವಿಳಸನಮುಂತಃಪುರಸ್ತ್ರೀಸಹಸ್ರಂಗಳ ಮೆಯ್ಯೊಳ್ ತಾನೆ ತಳ್ಪೊಯ್ದಸದುದು ಪೆಸರ್ಗೊಳ್ವೆಗ್ಗರಾರೇಬಿನಂ (ಅನಂತ. ೦೦-೦೬೭); ಗಂಡನನೊರ್ವಳೊರ್ವಳಿಗೆ ಗಂಗೆಗೆ ಗೋಪಿಗೆ ಕೊಟ್ಟನೆಂದೊಡಾ ಪೆಂಡಿರ ರೂಪುಮಂ ಸೊಬಗುಮಂ ಭಪವುಂ ಪೆಸರ್ಗೊಳ್ವುದೇ (ಸುಕುಮಾ. ೨-೫೫); ಅವರ ವಿಲಾಸಿನಿ ಜನದ ರಾಣಿಮ ಪಾಸದ ಪುತ್ರಮಿತ್ರಬಾಂಧವರ ವಿಯೋಗಸಂಕಟಮನೇ ಪೆಸರ್ಗೊಂಡಪೆಂ (ಅಜಿತ. ೪-೪). ೫. ಪ್ರಸಿದ್ಧಿಯನ್ನು ಪಡೆ; ಖ್ಯಾತಿ ಯನ್ನು ಹೊಂದು: ಪೆಸರ್ಗೊಂಡರ್ತಿಯೊಳೆತ್ತುವಬ್ಬೆಯ ಗುಣವ್ರಾತಂಗಳು ಕೇಳ್ದ ಭವ್ಯಸಮೂಹ ಪೊಣ್ಮಂತು . . . ಬಣ್ಣಿಸುವೆಂ ಪುಣ್ಯಪುರಾಣಮಂ ಜಿತಮನೋಜಾತಾಜಿತಸ್ವಾಮಿಯಾ (ಅಜಿತ. ೦-೯೬). ೬. (ಉತ್ತಮ ವಾದುದೆಂದು) ಆಯ್ದುಕೊಳ್ಳು; ಆರಿಸಿಕೊಳ್ಳು: ಕುಸುಮಾಸನಕ್ಕೆ ಪೆಱಪಂ ಪೆಸರ್ಗೊಳ್ಪವು ತುಂಬಿ ಬಾಣಾಸನಕ್ಕೆ ಪೆಱವಂ ಪೆಸರ್ಗೊಳ್ಳಂ ಮನಸಿಜನೆನೆ ಪೊಸಸುಗ್ಗಿಯು ತೊಡವ ಪೆಱತೆ ಮಲ್ಲಿಗೆಯೊವೊಲಂ (ಸುಕುಮಾ. ೩-೦೫). ೭. ಹೊಗಳು; ಸ್ತುತಿಸು; ಧ್ಯಾನಿಸು; ನೆನೆ: ಭಕ್ತಿಯಿಂ ಪಾಡದ ಬಾಯದೇಕೆ ಪೆಸರ್ಗೊಳ್ಳದ ಜಿಹ್ವೆಯದೇಕೆ . . . ಲೂಡಿಯಲ್ಕಾಡದ ಚಿತ್ತವೇಕನಗೆ ಹಂಪೆಯ ಲಿಂಗವೆ ನಿಮ್ಮೊಳ್ಳಱಂ (ಹಂಪಾಶ. ೬); ಭಕ್ತರ್ಗೆ ಬಂದೆಡರನಾವಗಂ ಪರಿಹರಿಪೆ ಗಡ ದೇವ ನಿನ್ನಂ ಪೆಸರ್ಗೊಂಡೊಡೆ (ಕೃಷ್ಣ. ೦೦-೩೫). **ಹೆಸರುಗೊಳ್:** ೨. ನಿನ್ನೂರ ಪೆ[ಕಾಣಂ, ಹೆ]ಸರುಗೊಂಡಡೆ ನಿನ್ನ ವಾರ್ತೆಯನುಸುರಿದಡೆ ಕೇಳಿದಡೆಯು ತಪ್ಪಸಮವಿಸ್ಮಯಮಾದಪನು ಒಡಿದು ಕೊಲಿಸುವೆನು (ಚಕಫ. ೩೬-೬೦). ೩. ಬಸವರಸನಿಂತೊಂದನೊಂದಂ ಪೆಸರುಗ್ಗೊಳುತಿವು ಮೊದಲೆನಿಪ ಗಜ ವಿಸರವುು ಕ್ಷಣದೊಳು ತರಿಸಿ ಮತ್ತಾ ನಿರೂಪಿಸಿದ (ಚಕಫ. ೫೯-೩೫). **ಪೇರ್ಗೊಳ್:** ೫. ಅದರಿಂದೀ ಕೃತಿ ಕೃಷ್ಣರಾಜದಮಹಿಮಾಖ್ಯಾತಂ ಪುನೀತಾಂಕಿತಂ ಬುಧರಿಂ ಮೈಸುರನಾಡ ಮೈಸಿರಿಯೆನಲ್ ಪೇರ್ಗೊಂಡುದೈ ಲೊ.ದೊಳ್ (ಕೃ.ಸೂಮ. ೦ ೨೦). **ಹೆಸರುಗೊಳ್:** ೨. ಹುಸಿಯಿಂದೆ ಜನಿಸಿದೆನಯ್ಯಾ . . . ಹುಸಿಯಿಂದಲಿ ಲಿಂಗವ ಹೆಸರುಗೊಂಡು ಕರೆದೆನಯ್ಯಾ (ಶಿಶಿ. ೯೨೩): ಹೆಸರುಗೊಂಡವನಂ ಕೊಲುವೆನೆಂಬಸವಭಾಷೆಯೊಳಿರು

ತಿರಲು (ಐತಿ. ೩೩-೩೧); ಹೆಸರುಗೊಂಡರೆ ಕವಿಗಳಿಗೆ ಕರ್ಕಶರು ರಕ್ಕಸರೆಂಬ ಹೆಸರಿದು ನುಸಿಗಳೊಳಗಾಶ್ರಯಿಸಿ ಕೆಟ್ಟುದು (ಶಬ್ದಾನುಶ್ರೀ. ೦೩-೬೦). **ಹೆಸರುಗೊಳ್ಳು :** ೫. ಹೆಸರುಗೊಂಡ ಬಹುಮಂದಿ ವೀರರು ಮಡಿದರು (ಪಶಾ. II. ೯೯೩); ದಂತಿದುರ್ಗನು ಹರ್ಷವರ್ಧನ . . . ಕೇರಳ ರಾಜರನ್ನು ಸೋಲಿಸಿ ಹೆಸರುಗೊಂಡ ಕರ್ಣಾಟಬಲವನ್ನು ಅನಾಯಾಸ ವಾಗಿ ಜಯಿಸಿದನೆಂದು ಹೇಳಿದೆ (ಕವಿಚ. ೯೬). **ಹೆಸರ್ಗೊಳ್ :** ೫. ಪಾಶರವ್ಯಜರೂಪನಾವ ರಾಯನ ಕುಮಾರಕನೆಂದು ಹೆಸರ್ಗೊಂಡುದಿಲ್ಲ ಮುಖವರೀಕ್ಷೆಯ ಬಲ್ಲನಾತನ ತಂದೆನ್ನ ಸುಖಬಡಿಸುವುದೆಂದಳೊಲಿದು (ಕೋಪಿಶ. ೨೬-೨೩). [ಪೆಸರ್ + ಕೊಳ್$_1$]

**ಪೆಸರ್ಚು** (ಕ್ರಿ). (?) : (ಕ)ರಿ ವ ರ ಗ ಜ ರ್ ತ ತ ೦ ಯ ರ್ ಸ್ವ ರ ವ ೦ ೦ ಸಂರಂಭವಾಂ ? ಪೆಸರ್ಚಲ್ ಕಾತರವೆನೆ ಪಡೆಗಂ (ಪಸ್ತುಕೋ. ೦೩೦-೬೪). [?]

**ಪೆಸರ್ಪು** (ಕ್ರಿ). ದೂಷಿಸು ; ಆಕ್ಷೇಪಿಸು ; ದೂರು : ನೆಟ್ಟನೆ ಚಂದ್ರನೊಳ್ ಬಸುವು ಪುಟ್ಟಿದವೊಲ್ ನೃಪರೂಪಚಂದ್ರನೊಳ್ ಪುಟ್ಟಿದುದಂತಿದಂ ತಿಳಿವುಗೆಟ್ಟ ಕೃತಜ್ಞತೆಗೆಟ್ಟ ಪಾತುಸಂಗೆಟ್ಟ ದುರಾತ್ಮನಂ ಕಜಿತು ಭಾವಿಸದೇನುಮನೀ ಮಹಾತ್ಮನಂ ತೊಟ್ಟನೆಲೀತು ದೇವ ಯುವರಾಜನನೀ ತೆಱದಿಂ ಪೆಸರ್ಪುದೇ (ಶಾಂತಿಪು.೯೬೪). ☞ ಇಲ್ಲಿ ನಾಮಪದದ ಮೇಲೆ 'ಪು' ಪ್ರತ್ಯಯವು ಪ್ರೇರಣಾರ್ಥದಲ್ಲಿ ಹತ್ತಿದೆ. [ಪೆಸರ್ + —ಪು$_1$]

**ಪೆಸರ್ವಡೆ,** ಪೆಸರುವಡೆ, ಹೆಸರುವಡೆ (ಕ್ರಿ). ೧. ಹೆಸರನ್ನು ಹೊಂದು; ನಾಮಧೇಯವನ್ನು ಪಡೆ : ಪೆಱವಱ ಧರ್ಮಂಗಳನೇತೆಱದಿಂದಂ ತಂದು ಪೆಱವಱೊಳ್ ಪತ್ತಿಸಿ ಕಣ್ದೆಱೆಯ ಚತುರೋಕ್ತಿ ಕೃತಿಯೊಳ್ ನೆಱೆದಿರೆ ಪೇೞ್ವುದು ಸಮಾಧಿಯೆನೆ ಪೆಸರ್ವಡೆಗುಂ (ಕಮದ. ೯೬ ಕ್ರಿಯೋ); ಹೊಱಟ ಬೆನ್ನಿಂತೆಂಬ ನುಡಿಯುದು ಧರೆಗೆ ಕೂನನೆನಿಪ್ಪುದು ಪರಿಹಾಸಿ ಸೌಂದರಪಾಂಡ್ಯರಾಯನೆನಲು ಪೆಸರ್ವಡೆದ (ಐತಿ. ೩೦-೬೦). ೨. ಪ್ರಸಿದ್ಧಿಯನ್ನು ಪಡೆ ; ಖ್ಯಾತಿಯನ್ನು ಹೊಂದು : ಪಾತ್ರಂ ಸ್ವಯಂಭುವಾಭಿಧಾನಪದವಿದ್ಯಾಚ್ಛಂದೋವಿಚಿತ್ರಾಲಂಕಾರಂಗಳೆಂಬ ಪಾಜಿಜಂ ಪೆಸರ್ವಡೆವ ವಾಙ್ಮಯಪುಂಮಂ . . . ಪಾತ್ರಿನ ತನೂಜ ಗ್ಗೆಲ್ಲವುಪದೇಶಂಗೆಯ್ದುಂ (ಆದಿಪು. ೮-೬೦ ಕ); ಧರೆಯೊಳು ವಿಶಾಲತೆ ಯೊಳತಿ ಪೆಸರ್ವಡೆವೆರ್ವ ಪುರಪಟ್ಟಣಗ್ರಾಮಸಂಕುಳದ ನಡುವೆ ಕಿಱುವಳ್ಳಿಯಾಗಿಯು ಕಣ್ಗೆ ಮೆಱೆದು ಹೆಂಪಿನೊಳಿರ್ಪುದು (ಹಿದ್ವರಾ. ೦೩೬೦) : ಧರ್ಮಾನುಜಂ ಭೂಪಾಲರೊಳ್ಪೆಸರ್ವಡೆದವಂ (ಕೃಪಾಪ. ೨೪-೦೩). **ಪೆಸರುವಡೆ :** ೨. ಪೆಸರುಪಡೆವ ಮಾಧುರಸವಾಹಿನಿಯ ದಾಂಟಿಸಲು ಚಂದಪಡೋಣಿಗಡರ್ದು . . . ನಿಟ್ಟಿಸಿದ (ಕೋಪಶ. ೩-೨೬). **ಹೆಸರುವಡೆ :** ೧. ದಶಗುಣೋತ್ತರವೆನಿಪ ತತ್ವಪ್ರಸರವೇಳೋರಂತೆ ಪರಿವೇಷ್ಟಿಸಿದ ಜಾಂಡಘಟಹಕೋಟಿಗಳೀವನುದರದಲಿ ನುಸಿಗಳಂತಿಹವದು ನಿಮಿತ್ತವೆ ಪೆಸರುವಡೆದುದನಂತನೆಂಬ್ ^ಹೆಸರು ನಿಮ್ಮಡಿಯಲ್ಲದಾರಿಂಗಳವಡುವುದೆಂದ (ಶರಾಗ. ೬-೧೩ ೦೩). ೨. ಹೆಸರುವಡೆದತಿ ಖಳರಸಡೆಗೆಡಹಿದನು ರಣದೊಳಗೆ (ಶಬ್ದಾನುಶ್ರೀ. ಕಂ. ೨೮೨). [ಪೆಸರ್+ಪಡೆ$_1$]

**ಪೆಸರ್ವಾಸಿ,** ಹೆಸರುವಾಸಿ (ನಾ). ಕೀರ್ತಿ ; ಖ್ಯಾತಿ ; ಪ್ರಸಿದ್ಧಿ : ಮಹಿಷಾಸುರಪುರಾಧೀಶ ಚಾಮರಾಜೇಂದ್ರನಿಂ ಮೆಚ್ಚುಂ ಪಡೆಯುದಿರ್ದೊಡೆವಗೆ ಪೆಸರ್ವಾಸಿಯಿಲ್ಲು (ಪಂಪಾಶ. ೦೧೩-೦೪). **ಹೆಸರುವಾಸಿ :** "ಯಶಃ, ಕೀರ್ತಿಃ. ಸಮಜ್ಞಾ—ಇ ಕೀರ್ತಿಯು ಹೆಸರುಗಳು ಆದರೆ ಹೆಸರುವಾಸಿ" (ಸಿದ್ಧಾಂತ. ೩೨). [☞ ಇದು ಒಂದೇ ಅರ್ಥದ ಎರಡು ಶಬ್ದಗಳು ಸೇರಿ ಆಗಿರುವ ರೂಪ]

ಹೆಸರುವಾಸಿಯಾಗು = ಪ್ರಸಿದ್ಧವಾಗು ; ಕೀರ್ತಿಯನ್ನು ಹೊಂದು : ಅವನ ಮನೆತನದವರೆಲ್ಲರೂ ಮಿಲಿಟರಿಸಾಹಸಗಳಿಗೆ ಹೆಸರುವಾಸಿಯಾಗಿದ್ದರು (ಸನ್ನ್ಯಾ. ೦೦೪); ಠಾಕೂರವುನೆತನ ಕೀರ್ತಿ, ಪ್ರತಿಷ್ಠೆಗಳಿಗೆ ಹೆಸರುವಾಸಿಯಾದುದು (ರವೀಂದ್ರಾ. ೩೩). [ಪೆಸರ್+ವಾಸಿ$_1$]

**ಪೆಸರ್ವಿಡಿ,** ಹೆಸರುಹಿಡಿ (ಕ್ರಿ). ಹೆಸರನ್ನು ಹೇಳು : ಶಿವಂ ಪಿಂತಿರುಗಿ ಪೆಸರ್ವಿಡಿದು ನಿಲ್ಲೆಂಬ ದನಿಯುಣ್ಮಲೊರ್ವರೊರ್ವರ್ ಮುಖಿ ಯೊಳಡಗುವರ್ (ಶಂಕ. ೯೩-೬೦) ; ಪೆಸರ್ವಿಡಿದು ಕರೆವುತೇಳೇಳ್ಬಿಸಜಾಕ್ಷಿ ಯೆನುತ್ತ ಕರೆಯಲೊಡನಾಕ್ಷಣದೊಳ್ಸೊಸನುಲಿಗಳ್ಪಟಭಟರವಮೆಸೆಯೆ ಕರಂ ಸಿಡಿಯ ಸಿಬಿಕೆಯಿಂದವಳೆಳ್ದಳ್ (ಕೃಷ್ಣಶ. ೨೦-೪೦). **ಹೆಸರುಹಿಡಿ :** ಅವಳು ಮಗನನ್ನು ಹೆಸರುಹಿಡಿದು ಕೂಗಿದರು (ರೂಢಿ). [ಪೆಸರ್ + ಪಿಡಿ$_1$]

**ಪೆಸರ್ವೆಱು,** ಪೆಸರುವೆಱು (ಕ್ರಿ). ಪ್ರಸಿದ್ಧಿಯನ್ನು ಹೊಂದು : ಮಹಿಯೊಳು ಮಾರಸಿಂಗನಾ ಕುರುಳ ರಾಜೇಂ ಪೆಸರ್ವೆತ್ತಾ ಮರುಳಂ ತನ್ನುಪತಿಳಕಂ ಬಿರಿಯ ಮಗಂ ಸತ್ಯವಾಕ್ಯಂ (ಎಕ. VII. ಶಿವಮೊ. ೩೭-೦೦ ; 1116) ; ಗರುವಿಕೆಗಿಂಬು . . . ಪೆಸರ್ವೆತ್ತ ನೆಗಳ್ತೆಗೆ ತಾಣವಾಗಿ ಬಲ್ಲರ ಬಗೆಯಲ್ಲಿ ಕೂಡಿ ನೆಲಸಿರ್ಪ ಪೊಗಳ್ತೆಯನಾಂತಳಾಪಳಾ ಸರಸತಿ ಕೊರ್ಮೆಯಿಂದೊಸೆದು ಮಾಡುಗೆ ಕಬ್ಬದ ಬರ್ದಿನೇಬಗ್ಗೆಯು (ಕನ್ನಾ. ೩) ; ಪೆಸರ್ವೆತ್ತ ಗಣಾಧರಪ್ರಮುಖಸಮಸ್ತಸಭಾಜನಾಂಗತತಿಯೊಳ್ಪೊಳಪ್ರಸತ ಮನಂದೊರ್ದರೊಳ್ [ಪಸರಿಸೆ] ಪೊಣ್ಮಿದುದನೂನ ದಿವ್ಯಧ್ವಾನಂ (ಶಾಂತೀಶ್ವ. ೦೩. ೦೦೦). **ಪೆಸರುವೆಱು :** ಬಸವ ಪೋಳಿಗೆ ಮಾರನಂತಹ ಪೆಸರು ವೆತ್ತ ಶಿವೈಕ್ಯನಾವನು ವಸುಧೆಯೊಳು (ಐತಿ. ೬೦-೬). [ಪೆಸರ್ + ಪೆಱು$_1$]

**ಪೆಸಱ್,** ಪೆಸರು$_2$, ಪೆಸಱು, ಹೆಸರು$_2$, ಹೆಸಱ್, ಹೆಸಱು (ನಾ). ಒಂದು ಬಗೆಯ ದ್ವಿದಳಧಾನ್ಯ ; ಮುದ್ಗ : ರಾಜಾನ್ನದ ಕೂಟುಂ ಪೆಸಱ ತೊವೆಯುಂ . . . ನಾನಾ ಪ್ರಕಾರದ ಪಾನಂಗಳುಮಂ ಭಟ್ಟಾರರ್ಗೆ ಬಡ್ಡಿಸಿದಂತೆ ಬ್ರಹ್ಮಯ್ಯಂಗೆ ಮಹಾದೇವಿ ಬಡ್ಡಿಸಿದೊಡೆ (ವಡ್ಡಾರಾ. ೬೮-೦೪); ಪೊಸಪೆಸಱಗೆಯ ಬಣ್ಣದಂತೆ ಸೊಗಯಿಸುವ ಸಾಮಂತಚೂಡಾಮಣಿಯ ಮೆಯ್ಯ ಬಣ್ಣಂ ವಿಧಾತ್ರನೆಂಬ ಚಿತ್ರಕಾರಿಯ ವರ್ಣಕ್ರಮಂನೆಯ್ದ ಕದಳೀ ಗರ್ಭಶ್ಯಾಮಮೆಂಬ ಬಣ್ಣದಂತಾದುದು (ಕುಸುಮಾ. ೨-೩೯ ಪ) ; ಜವೆ ಪೆಸಱುರ್ದೆಂಬಿಪನಾಡುವ ಪಾಲೊಳಗಟ್ಟು ಕಜವ ಮೂಲಂಗಳೊಳಿಕ್ಕಾವುದಾ ಮರನೊಪ್ಪುವ ಪಲ್ಲವದಿಂ ಪುಷ್ಪಂಗಳಿಂ ಫಲಂಗಳಿನೆಸೆಗುಂ (ಲೋಕೋಪ. ೬-೦೩). **ಪೆಸರು$_2$ :** ದೇವರ ನಿವೇದ್ಯಕ್ಕೆ ರಾಜಾನ್ನದಕ್ಕಿ ಕೊಳಗ ಒಂದು ಪೆಸಲು ಮಾನ ಒಂದು... ನಂದಾದೀವಿಗೆ ಒಂದು ಇನ್ನಿತಿಂ ನಿತ್ಯವ್ರಯಮಾಗಿ ನಡೆವುದು (ಕಶಿ. ೭೪-೦೩-೪೦ ; ಸು. 1088). **ಪೆಸಱು :** ಘೃತದೊಳ್ ಪುರಿದುಮ್ಮ ಪೆಸಱು ಗೋಮವೆರಸಿ (ಲೋಕೋ. ೩೬). **ಹೆಸರು$_2$ :** "ಮುದ್ಗಃ—ಹೆಸರು" (ಒಡಿ. ೦೨೬) ; ಅಕ್ಕಿ ತುಪ್ಪ ಹೆಸರು ಮೆರೊಗರವ ಆಯಿ (ಕೊಂಗರಾ. ೦೯೯೦, ಅರಸು. ೦೦೨-೪೬ ; 1332) ; ಧ್ವಜಾರೋಹಣದ ಧ್ವಜಸ್ತಂಭದ ನಯಿವೇದ್ಯಕೆ ಪೂತೆ ಗ ೧ಸಂ ಅಕ್ಕಿ ಹೆಸರು ಚ ಗ ೩ ಪೇಲೆಒ.ಗರ . . . ತೆಂಗಿನಕಾಯಿ ಚ ಗ ೧ (ಪ್ರಾಕ್ತ. IX-II. ೬೩೬-೬ ; 1554) ; ಹೆಸರೂ ಬೇಡ, ಉಸ್ಸೂ ಬೇಡ, ಸದ್ಯ ಮನೆಗೆ ಹೋದರೆ ಸಾಕು ಎನ್ನಿಸಿತು (ರಾಮು. ೨೦). **ಹೆಸಱ್ :** "ಹೆಸಱ್—ಮುದ್ಗ" (ಚತು. ೪). **ಹೆಸಱು :** "ಮುದ್ಗಮೆನಲ್ಕೆ ಹೆಸಱು" (ಕಬ್ಬಿಗರ. ೦೦೦-೩) ; ಪುಟ್ಟಿ-ಉರ್ದು, ತೊಗರಿ, ಹೆಸಱು ಮೊದಲಾದುವನಿಕ್ಕಿ ಅಟ್ಟ ಕೂಟು (ಕಪಾಂ. ಕಂ. ೦) ; ಭಕ್ಷಕ್ಕೆ ಗೋಧಿ ವ ೩ ಉದ್ದು ವ ೪ ಬೆಲ್ಲ ೧೦ . . . ಹೆಸಱು ವ ೨೧ ತೆಂಗಿನ ಕಾಯಿ ಬಾಳೆಯ ಹಣ್ಣು ಅತಿಕರೆ ಸಹ (ಎಕ. XV. ಕೇಲೂರು. ೬೦-೯೯ ; 1486) ; ಹೆಸಱು ತನಗುಣ ಕಡಲೆ ತೊಗರಿಗಳ ಬೇಳೆಯು ಹೊಸ ಬೆಲ್ಲವಿಕ್ಕಿ ಬೇಯಿಸಿ (ಸೂಪಶಾ. ೦-೬೦).

[ದೇ. ॥ ತಮಿ. ಪಯುಱು; ಮಲ. ಪಯಱ್, ಪಯಱು; ತುಳು. ಪದೆಂಜಿ ; ತೆಲು. ಪೆಸರ, ಪೆಸಲು; ಕೋಲಾ. ಪೆಸಲ್, ಪೆಸಾಲ್; ನಾಯ್ಕ್. ಪೆಸಳ್ ; ಪರ್ಜಿ. ಪಯರಿ ; ಗೊಂಡಿ. ಪೆಸಲ್]

**ಪೆಸಱು** 'ಪೆಸಱ್' ನೋ.

**ಪೆಹೆಲ್ವಾನ್** 'ಪೈಲವಾನ' ನೋ.

**ಪೆಳಕು** (ನಾ). ನಿಗದಿ ಮಾಡಿಕೊಂಡ ಸ್ಥಳ; ಸಂಕೇತಸ್ಥಾನ : "ಸಂಕೇತಯುಕ್ತಸ್ಥಳಂ ಪೆಳಕೆಂದು" (ಕರ್ಣಾ. ೯೫). [ ? ]

**ಪೆಳಕೆ, ಪೆಣಕಿ, ಪೆಣಕ್ಕೆ, ಹೆಳಕೆ** (ನಾ). ತೆಳುವಾದ ಹಲ್ಲೆ,—ಬಿಲ್ಲೆ; ಹೆಕ್ಕಳೆ: ಮಾಶಿಲ್ಲದೆ ಉಗುರುಗಳಿಂದ ಪೆಳಕೆಗಳನ್ನು ಕಿತ್ತಿಸಯ್ಯುತ್ತಿದ್ದಾಗ (ಹರಿ.ಚ. ೩೭೮). **ಪೆಣಕಿ** : ಗೋಡೆಯ ಮೇಲೆ ಸುಣ್ಣದ ಪೆಣಕಿಯು ಹಾರಿ ನಾಲ್ಕು ಕಲೆಗಳು ನಿಂತಿದ್ದರೆ ಚಿಂತಾಮಣಿಯು ತನ್ನ ನಿಸ್ತೇಜಮುಖದ ಪಡಿನೆಳಲನ್ನೇ ಅಲ್ಲಿ ಕಾಣುವನು (ಕಥೆ. ೬೩). **ಪೆಣಕ್ಕೆ** : ಕಲ್ಲಿನ ಪೆಣಕೆ ಹಾರಿ ಶಾಸನದ ಎಡೆಕಡೆಯ ಭಾಗವು ನಷ್ಟವಾಗಿದೆ (ಶಾಸಕ. ೬೮). **ಹೆಳಕೆ** : ಬಿರುಕಿನ ಸಂದಿಯಲ್ಲಿ ಚಿರಳು ತೂರಿಸಿ ಹೆಳಕೆಯನ್ನೆಬ್ಬಿಸಿದರೆ . . . ಕಾಣಬಹುದು (ಹರಿಚ. ೬೮). 'ಹೊಳಕ್ಕೆ' ಪರಾ. [←ತಮಿ. ಪಿಳವೈ]

**ಪೆಳರ್** 'ಪೆಳಱು₁' ನೋ.

**ಪೆಳರು₁** 'ಪೆಳಱು₁' ನೋ.

**ಪೆಳರು₂** 'ಪೆಳಱು₂' ನೋ.

**ಪೆಳರ್ಚಿಸು** (ಕ್ರಿ). ಹೆದರಿಸು; ಅಂಜಿಸು; ಭಯಪಡಿಸು: ಪುರದ ಪೃಥಿವಿಪಾಲಪೂರ್ವಾನ್ವಯವರಸುಗಳಿಂದಿನ ಚಕ್ರೇಶ್ವರರಂ ಪಿರಿದಪ್ಪವ ಗಡದಿಂದ ಪೆಳರ್ಚಿಸಿ ಬಲ್ಲಪ್ಪಂಗೊಂಡು ಇರಿಸಿದ ನವನಿಧಿಯೊ: ಎನಲ್ (ಆದಿಪು. ೦-೩೭). [ಪೆಳರ್ಚು + —ಇಸು₃]

**ಪೆಳರ್ಚು** (ಕ್ರಿ). ಹೆದರಿಸು; ಅಂಜಿಸು; ಭಯಪಡಿಸು: 'ಪೆಳರ್ಚಿಸು' ಪರಾ. [<ಪೆಳಱು₁ + —ಚು₁]

**ಪೆಳರ್ವಡು** (ಕ್ರಿ). ಭಯಪಡು: ಹೆದರು; ಅಂಜು: ಪಸಗಜಪೊಕ್ಕ ಪೊಳ್ಳದವ ಕೋಟಿಗ್ಗಿಸಜಿಓಳ್ ಕಿಸಜಿನುಟವಾಡಿ ಸೊಕ್ಕಿನ ಸೊವಡಿಂಗೆ ಪುತ್ತಿ ಪಜಿಮಾಜಿಗಳೆಂಜಿಸಿ ರೋಮವಿಕ್ಕಿ ಬಿಕ್ಕನೆ ಬಿರಿವಂತೆ ಬಂದ ಬಲದೊಳ್ಪೆಳರ್ವಟ್ಟು [ಪಾಠಾಂ. ಬೆಳರ್ವಟ್ಟು, ಬೆಳರ್ವಟ್ಟು] ಪುವಕ್ಕೆ ಪಂದ ಕಂಪಿನ ಕಳಭಂಬೊಲಿರ್ದುದತಿರ್ಪರಸಾರನೊಂದುಸೂಕರಂ (ಆರ್ದಿಪು. ೩-೩೩). [ಪೆಳಱ್ (<ಪೆಳಱು₂) + ಪಡು₁]

**ಪೆಳವ** 'ಪೆಬವ' ನೋ.

**ಪೆಳವಳಿಸು** 'ಪೆಳ್ವಳಿಸು' ನೋ.

**ಪೆಳವಿ** 'ಪೆಬವಿ' ನೋ.

**ಪೆಳಱ್** 'ಪೆಳಱು₁' ನೋ.

**ಪೆಳಱಿಸು, ಪೆಣಱಿಸು** (ಕ್ರಿ). ೧. ಹೆದರಿಸು; ಭಯಪಡಿಸು; ಅಂಜಿಸು: ಜುಂಜೆಯ ದನಿ ದಿಕ್ಪಾಲರನಂಜಿಸೆ ತಳ್ತೊಗೆವ ಕೋಡ ಕಾಳೆಯ ದನಿ ದಿಕ್ಕುಂಜರಮಂ ಪೆಳಱಿಸೆ [ಪಾಠಾಂ. ಬೆದಱಿಸೆ] ನಭಮಂ ಜೀವೂಡೆಯುಲಿವ ಸುತ್ತಿ ಮುತ್ತಿತ್ತಾಗಳ್ (ಶಂಖಾಪು. ೪-೩೬): ಪೊಡವಿ ಬೊಳಗಿರ್ದುರಗರಾಜನ ಹೆಡೆಹೆಡೆಯುನಪ್ಪಳಿಸಿ ದಿಗಿಭಪನೊಡನೆ ಪೆಳಱಿಸೆ . . . ಶೀವಿತ್ರಪ್ರದೆತ್ತುಂ ಬಿಡದೆ ದಶರಥನೃಪನ ಧನುರ್ಗುಣಘೋಣಟಂಕಾರ (ಶಬ್ದಮಣಿ. ೨-೩೦); ನೀನು ಪ್ರೀತಿಯಿಂ ಸಕಲದೇವಾನ್ನಮಂ ಸಲಿಸೆ ನಿನ್ನಯ ನೆನಹಿನಿಂ ಜನಿಸಿದ ಭೂತಜೀವರ್ಗೆ ಸಂತೃಪ್ತಿಯಹುದೆಲೆ ಮಹಾಪೂತ . . . ಪೆಳಱಿಸಬೇಡ ಸಲಿಸೆನಲು (ಶ್ರೀಕೃಷ್ಣ. ೯-೩೫). ೨. (ಅಲಂ) ಓಡಿಸು; ನಿವಾರಿಸು; ತೊಲಗಿಸಂ; ನಾಶಮಾಡು: ಬೆಳಗಿ ದಿಗಂಬರ ಪ್ರತತಿಯಂ ಕುಮುತೋಗ್ರತಮಃಪ್ರಕಾಸಮಂ ಪೆಳಱಿಸಿ . . . ನಿರ್ಮಳನ ಕಳಂಕ ಚಂದ್ರನೆಸೆದಂ ಧರೆಗಚ್ಚರಿ ಪೆರ್ಚೆ ತೇಜದಿಂ (ಶಾಂತಿಪು. ೦-೨೦); ಪೊಳರಹಿತದರ್ಶನವನಪ್ಪಳಿತಸ್ವರ್ಗಾಪವರ್ಗಸುಖಕರವನದಂ ಪೆಳಱಿಸು ಪುದಾತ್ಮನೊಳ್ಸಂಗಳಿಸಿವನಂತಾನುಬಂಧಿನಾಮಕಪಾಯಂ (ಶಾಂತೀಶ್ವ. ೦೩-೬೨). ೩. ಕಳೆಗುಂದಿಸು; ತೇಜೋಹೀನವನ್ನಾಗಿ ಮಾಡು: ಬಳಸಿ ಚಿಲಿಪಿಲಿಪ ವಿಹಗಂಗಳ ಕಳಕಳದೊಡನೆ ತೊಡರ್ದು ಸರಸಿಜನಳಮಂ ಪಲುಗೊಳಿಸಿ ಕುಮುದಮುಖಮಂ ಪೆಳಱಿಸಿ ಸೀಡಿತ್ತು ಸುಪ್ರಭಾತಸಮೀರಂ (ಶಾಸಕು. ೪-೬೦). **ಪೆಣಱಿಸು** : ೧. ರಥಪರಿವೃಢಮೇಬ ಗಿರಿಯೆಂಬ ಪೆಣಱಿಸಿ ರಥರಾಕ್ಷಸನೊಸದೀಯ ಪೃಥುವೀರ್ಯನು ಮೇರಧ್ವಜಯುತ ಪುಷ್ಪರಥಮನಿರದೆ ಕೈಕೊಂಡು (ಪಂಪಸಂ. ೦೪-೦೯೪). [ಪೆಳಱು₁ + —ಇಸು₁]

**ಪೆಳಱು₁, ಪೆಡಱು, ಪೆಣಱು, ಪೆಳರ್, ಪೆಳರು₁** (ಕ್ರಿ). ೧. ಹೆದರು; ಭಯಪಡು; ಅಂಜು: "ಪೆಳಱು—ಭಯೇ" (ಶಮಂ); ಮದಕೋಕಿಲ ಕಲನಿನದೆಯ ವದನಸುಧಾಸೂತಿ ಬೆಳಗೆ ಪೆಳಱಿದ ತಮವಿವಾ ಪುದಿದು ಪೆಱಗಿರ್ದುದೆನಿಪುದು ಮದಗಜಗಮನೆಯ ವಿನೀಲಕೇಶಕಲಾಪಂ (ಆದಿಪು. ೩-೮೨); ಪೆಳಱಿದ ವಾಜಿರಾಜಿಜವನಂಜಯನಾ ಶರುವಿಂಚಲದೇಶದಿಂ ತಳರ್ದು . . . ಮಣಿತೃಂಖಲೆಯುಂ ಪಿಡಿಯಲ್ (ಶಾಸಕಾ. ೦೪-೯೩); ಬಿಡು ಬಿಡು ಓಡಿಯದಿರಲಿಯೆಲೆ ಜಡಮತಿ ಸಾವಿಂಗೆ ಪೆಳರ್ದು ಪೊಕ್ಕುದು ಬಂದೀ ಗುಡಿಯಂ ಬಿಡಿಯದು (ಪ್ರಭು. ೦೬-೮). Δ **ಪೆಡಱು** : ೧. ಧರೆ ಕಂಪುಗೊಳ್ಳುಗ್ಗಮೂಸಾಲಿ ಪೆಡಱುಗು (ಎಕ. VII. ಶಿಕಾ. ೦೦೪-೨೫; ೧೦೯೬). **ಪೆಣಱು** : ೨. (ಅಲಂ) ಸೀಳಿಹಾಕು; ಕೊಲ್ಲು (?) : ಇರುಳೆಂಬ ಕಿಭದಿಂ ಹಿಮಕರನಾದು ಕರಿಯ ತೆಜಿದಿ ತಳ್ತೊಗೆಯ ಸುಧಾಕಿರಣಮದಮ್ವಶ್ಚ ಪರಿದುದು ವಿರಹಾಕುಳರೇಬ ಬೀಱರಂ ಪೆಣಱುತ್ತುಂ (ಆದಿಪು. ೬-೯೩). **ಪೆಳರ್** : ೧. ಲಲನೆಯರು ಮಾನಕಗಿದಾದಡಂ ಶಿಕ್ಷಾದಿಗಳೆಗೆ ಪೆಳರ್ದಾವಡಂ ಪರಪುರುಷಸಂಪರ್ಕವುಳಪುದೆ ಕನಿಷ್ಠತರಮಾದ ಪಾತಿವ್ರತ್ಯವು (ಪುಣ್ಯಾಶ್ರ. ೦೪-೨೧). **ಪೆಳರು₁** : ೧. ಪಾಮರಿಯ ಬರುದನಿಗೆ ಕೈಪರೆಗೆ ಬಾಯ್ಬುಲಿಗೆ ಕಲ್ಗವಣೆಗೊಂದಿನಿತು ಪೆಳರಿ ಗಾರಾಗುತುಂ, ಭುರ್ರೆಂದು ಪೆರತೊಂದೆಡೆಗೆ ಪಾರಿ ಮಂಡಿಸುತೆ ತೊಡಗಿದವಿನ್ನೊರ್ಮೆ ನೆರ್ಮೆವಿಗೆ (ಕಣ್ವಾಂಗ. ೩೩-೦೯೭೨).

[ದೇ.೩ ತಮಿ. ಪಿಱುಟು ; ತೆಲು. ಪೆಱುಕುಱು, ಪೆಲ್ಲುಱು]

**ಪೆಳಱು₂, ಪೆಳರು₂, ಪೆಳಱ್** (ನಾ). ಭಯ; ಅಂಜಿಕೆ; ಭೀತಿ; ಹೆದರಿಕೆ: "ಅಗುರ್ವು, ಬಿಗುರ್ . . . ಪೆಳಱು, ಮಲ್ಲುಱು, ತಲ್ಲಣ, ಅದಿರ್ವು — ಈ ೧೦ ಭಯಂ" (ಶಬ್ದಾ. ೩೬-೨೨೬); ಇಂದಿಲಯನೀಂದಂ ಸೂತುಲಿಯೋಕುಳ ಕಳಱು ಪೆಳಱು ಮಱುಕುಳಯಳಿಯಂ. . . ಇಱುಕುಳಿ ಯಿಪ್ಪಾದಿಯೊಗಱು ಕೂಳನು (ಕಬಿಪ. ೨೩); ಕೋಗಿಲೆವಱು ಪಾಮಮರದೊಳ್ ಕಾಗೆಯ ಕೊತ್ತಲುಯೊಳೆಟ್ಟು ಪೋಗಲೀಮಿರಲುಂ ಕೂಗಲುಮೆಮೆದಱ್ ದಿಕ್ಕಲುವೇಗೆಯ್ಕುಲುವಪಾರ್ತುದಿಲ್ಲ ಬನದೊಳ್ ಪೆಳಱಿಂ (ಕಣ್ಣಪ. ೩೩ ವ್ಯಾಖ್ಯಾ.). **ಪೆಳರು₂** : ಇಲ್ಲ ಕರು ದನವೆಬ ಹೋಹೋಯ್ತು ಯತ್ತೆಬ ಸೊಲ್ಲಿನಿಂ ಮನೆಮನೆಯ ಪೆಳರು ಪಿರಿದಾಯ್ತು (ಇಂದಿರ. ೭೮-೦೪೭); ಸುಯ್ಯೊಡಲಿನಿಂ ಪೆಳರ ಪೊಟ್ಟು ಬಂದಂ ಕೊರಗೆ ಹುಯ್ಯಲಿಂ ಹುಂದರಂ ಕಳವಳಿಸುತಿರಲು (ಶಾಂಭವಿ. ೦೭೦-೩೬೨). **ಪೆಳಱ್** : "ಪೆಳಱುಬಲೆಂದೆಲ್ಲಿಯೂ ಕವಿವರರುಸಿರಲ್ ನಿಲ್ಲದ ಭಯನಾವು" (ಕವಿಕ. ೦೦೪); ಮನದೊಳಗೆ ಧೃತಿಗೆಡದೆ ಅವನಿಪಂ ಕೇಳ್ದೊಡಂ ತನುವ ತತ್ತ್ವಜಱ್ ಸುವಂ ಬಳಿಕವೆಂಬ ಪೆಳಱುವಾಯ್ದು ತಲೆದೋಱದೆ ನೆನಸುಮನೆಗಂ ಸಾವು ತಪ್ಪದು (ಕರಾಶ. ೦.೬-೨೨). [<ಪೆಳಱು₁]

**ಪೆಳಱುಗೊಳ್** (ಕ್ರಿ). ಹೆದರು; ಅಂಜು; ಭಯಪಡು: 'ಪೆಳಱುಗೊಳಿಸು' ಪರಾ. [ಪೆಳಱು₂ + ಕೊಳ್₁]

**ಪೆಳಱುಗೊಳಿಸು** (ಕ್ರಿ). ಭಯಗೊಳಿಸು; ಅಂಜಿಸು; ಹೆದರಿಸು: ಅತ್ತ ಮತ್ತೊರ್ಮೆ ಹಳಿಗೂಳಿಯಂ ಪೆಳಱುಗೊಳಿಸದದೆ ಕಿಸಬಿಂಕಕಾಜರ ನಿಕ್ಕಿದೊಡೆ ಕಂಸನಾ ಜಾಳಾನೆಯುಂ ಕೆಡಹಿದೊಡೆ ಮಹಾದ್ಭುತವಾಯ್ತು (ಜಗನ್ನಾಥ. ೨೫-೪೦). [ಪೆಳಱುಗೊಳ್ + —ಇಸು₁]

**ಪೆಳಿ** (ನಾ). (?) : ಮತ್ತಂ ಉಭಯ ನಾನಾದೇಸಿಗಳು ದೇ × × ×ಕ್ಕೆ

ಪೊಳೆವುನ್ನತ ತಿಗ್ಮರೋಚಿ ಬಣ್ಣದ ರುಚಿ ಮಿಂಚು ಮಿಂಚು ಪೆಱಕಣ್ಬಿಱ ವಾಗಿರೆ . . . ಮಣಿಪಂ ಕುಮಾರರಂ (ಅನಂತ. ೬-೧೮).

[ಪೆಱ್ಕ (< ಪೆಱಗು) + ಕಣ್ಬಿಱು]

**ಪೆಱಕಾಲ್** 'ಪೆಱಗಾಲ್' ನೋ.

**ಪೆಱಕಾಲ್ಗೊಳಿಸು** (ಕ್ರಿ). ಹಿಂಗಾಲಿನ ಮೇಲೆ ನಿಲ್ಲಿಸು : ಸುಱುಸುಱುದಶ್ವ ಮನೇಱುತೆ ಪೊಱಮಾಸಿ ಮಿಗೆ ದಂತೆಗುಡುತ್ತಿರ್ದುತೆ ಪೆಱಕಾಲ್ಗೊಳಿಸಿ ಪೆಡಂಮೆಟ್ಟುತ್ತುಸ್ವಸನುತ್ತೆ ಪಳಂಚಿದರ್ತುರಂಗಂಗಳಿಡಱೊಳ್ (ಹರಿಚ. ೦೪-೮೩). [ಪೆಱಕಾಲ್ (< ಪೆಱಗಾಲ್) + ಕೊಳ್₁ + – ಇಸು₂]

**ಪೆಱಗಣ್** 'ಪೆಱಗು' ಪರಾ.

**ಪೆಱಗಣ** 'ಪೆಱಗು' ಪರಾ.

**ಪೆಱಗನೆ** (ಅ). ಹಿಂದೆಯೇ; ಹಿಂಬದಿಯಲ್ಲೇ : ಎನ್ನಯ ಸಖನತ್ತ ಪೊನ್ನುವ ಪಮಾಣಂದೆನುತಂ ಕೋಪದಿನಾ ಪುರುಷನ ಪೆಱಗನೆ ಹಾನುಮಂತ ರಿಶ್ಚಕ್ಕೊಗೆದಂ (ಅನಂತ. ೯೧೩) : ಪೊಱಮಟ್ಟು ಮಿಂಟಂ ಪೆರ್ದಱುವಿನ ಪೆಱಗನೆ ಚಕ್ರರ್ಬಳ್ಳೊಪೇತಂ ತಂ ತಱೆಸಂದು ಪೋಪ ಪದದೊಳ್ (ಶಬ್ದಮ. ೦೦-೦೩೬).

**ಪೆಱಪೆಱಗನೆ** (ದ್ವಿರುಕ್ತಿ) : ಬಱಿಯಾನೆ ಮಕ್ಕಳ್ ಭೋರ್ಗರೆದುಯುತು ಪೆಱಪೆಱಗನುತೆ ಪರಿಧರೆ (ಶಂಕರಾ. ೨-೨೪). [ಪೆಱಗು + – ಅನೆ₁]

**ಪೆಱಗಾಲ್**, ಪೆಱಕಾಲ್ (ನಾ). ಹಿಂದಿನ ಕಾಲು; ಹಿಂಗಾಲು : ಪೆಱಗಾಲಿನೆಯಿಂ ನುಸುಳ್ಮೊಡಿ ಬಾಡಿ ಸಂಗಳಿಸಿತದೊಂದು ಪಲ್ಲಮಱು ತಾಯ್ಕುಡಿಗುತುಮನಂತಸೌಖ್ಯಮುಂ (ಚಂದ್ರಪ್ರ. ೩-೬೩). **ಪೆಱಕಾಲ್** : ಕಡವ ತುಱಿದು ಕಡಡಿದೆಡಯೊಳೆಲೆ ಕಬಲ್ದು ಕಡವ ತೋರಗೊಂಬುಗಳಂ ಪೆರ್ವಾವಂದು ಪೊರ್ದಲಂಜಿ ಗೆಂಟಱಿಕೊಳ್ ತೂಗಿ ನೋಡಿ ಪೆಱಕಾಲೊ ಕೊಡುವ ಕಿಱುನರಿಗಳುಮಂ (ಕಬ್ಬಿಗ. ೨೩೯).

[ಪೆಱ್ಕ (< ಪೆಱಗು) + ಕಾಲ್₁]

**ಪೆಱಗಿಕ್ಕು**, ಪೆರಗಿಕ್ಕು (ಕ್ರಿ). ೧. ಹಿಂದೆ ಉಳಿಯುವಂತೆ ಮಾಡು : ಹಿಂದೆ ಇರಿಸು : ಹಿಂದಕ್ಕೆ ಹಾಕು : ತಮಸ್ಪುಗುಹೆಮೊಳಗನೆ ಕಾಕಿಣೀ ರತ್ನದೊಳ್ ಬರೆದ ಚಂದ್ರಾದಿತ್ಯರ ಬೆಳಗುಗಳೊಳ್ ನಿಜವಿಜಯಪ್ರಕಟಕಂ ನಡೆಯೆ ವಿಜಯಾರ್ಧಾಚಲಮಂ ಪೆಱಗಿಕ್ಕಿ ಶಬರಖಂಡಂಗಳಂ ಸೇನಾನಾಯಕನೆ ಬಾಯ್ಕೋಳಿಸಿ ಬರೆ (ಆದಿಪು. ೦೧-೩೭ ವ) ; ನಿಜಜೀಟಿಯರಂ ಪೆಱಗಿಕ್ಕಿ ಬೇಗದಿಂ ನಡೆವು ಪೆಱಿಳ್ ಜನಾರ್ದನನ ರೂಪವಿರಾಸಮನೊಲ್ದು ನೋಡಿದಳ್ (ಜಗನ್ನಾ. ೦೬-೬೩). ೨. ಹಿಮ್ಮೆಟ್ಟುವಂತೆ ಮಾಡು : ಹಿಮ್ಮೆಟ್ಟಿಸು : ಮುನಿದ ಜನಾಸುತೆಸ್ತ್ರೀನಾ ಭೀಷ್ಮನಂ ಪೆಱಗಿಕ್ಕಿದು (ಕೆಲುಬು. ೦೨-೦೯). ೩. ಹಿಂದಿಟ್ಟುಕೊಳ್ಳು, ಕಾಪಾಡು ; ರಕ್ಷಿಸು : ವಿಜಯಾದಿತ್ಯಂಗೆ ಗೋವಿಂದರಾಜಂ ಮುಳಿಯೆ ತಳರದೆ ಪೆಱಗಿಕ್ಕಿ ಕಾವ ಶರಣಾಗತಬಲ ನಿಧಿಯ ಪೆಂಪುಮಂ (ಕಾಂಚಾ. ೬-೩೦ ವ) ; ಮುಡಿಪೊಱಿಯ ವಿಷಯದೆ ಮಱಿಗೆದಂದಂಥಕಮಸಮಂ ಪೆಱಗಿಕ್ಕಿ ತನ್ನೊಳ್ ಮಲೆವ ಲಲನೆಯರ ವದನವಿಧುಬಿಂಬದೊಳ್ ಕಪೋಳಸಂಭೃತಪ್ರತಿಕೃತಿಚ್ಛದ್ಮದಿಂ ಪೊಕ್ಕು ಪೋರ್ಕುಳಿಯಿಕ್ಕಿಯುಂ (ಪರ್ವಪು. ೬-೯೩ ವ). ೪. ಬಿಡು ; ತ್ಯಜಿಸು : ಬಾಲಿಕೆ ಮುಂಗ್ದೆ ತಕ್ಕುದಱಿಯಳ್ ಪಲರಂ ಪೆಱಗಿಕ್ಕಿ ಸೂಡಿದಳ್ ಮಾಲೆಯಂ (ಕುಂದಮಾ. ೬-೯೭) ; ಪ್ರಿಯೆ ತನಗೇಬಿದಂ ಬಗೆಯದಿನ್ನವಂ ಪೆಱಗಿಕ್ಕಿ ಪೋಗಿ ಸಂಜೆಯೊಳನಾರತ್ನನಾಗಿ ನೆರೆದಿರ್ದಪಂ (ಚಂದ್ರಪ್ರ. ೬-೦೯). ೫. ಮೀಱು ; ಅತಿಕ್ರಮಿಸು ; ಉಲ್ಲಂಘನೆ ಮಾಡು : ಅಱಿವ ಮಗಂ ಪ್ರಾರ್ಥಿಸೆ ಚಂದೊಱಿಪು ಪಗಂ ಮಾಡೆ ಸಂಧಿಮಾಡುವೆನೆನುತಂ ಮಱುಗದಿ[ರ್ದ್ದನ] ಮಾತಂ ಪೆಱಗಿಕ್ಕುಮೆ (ಗದಾಯು. ೦-೬೨). ೬. ಉದಾಸೀನ ಮಾಡು ; ಉಪೇಕ್ಷಿಸು : ಈ ನುಡಿಯನೀ ಪದದೊಳ್ ಪೆಱಗಿಕ್ಕಿ ನಾರದಂ ಮನದೊಳ್ ಪೆಸುಗುಂ ಸುರಪನುಂ ನಗುಗುಂ . . .

ಎಂತು ಪೇಳ್ಸುವುದೀ ಮಾಖಿಮಂ [ಸರಸೀರುಹೋದರಾ (ಶಂಕರಾ. ೬-೭೩). **ಪೆರಗಿಕ್ಕು** : ೨. ವಿಕ್ರಮಾಸು . . . ಪರಾಕ್ರಮದಿಂದ ಪರಸೈನ್ಯನನ್ನು ಪೆರಗಿಕ್ಕಿ ಎಡೆಗೊಡದಟ್ಟಿ ಕೊಂದನು (ಶಬರ. ೬೦). [ಪೆಱಗೆ + ಇಕ್ಕು₁]

**ಪೆಱಗಿಡು** (ಕ್ರಿ). ೧. ಹಿಂದಕ್ಕೆ ಇಡು : ಚಳಕೆ ಬಿಡದಿರ್ಪ ನೆಲಂ ಬಿಡದಣ್ತ ತಮ್ಮ ಮುಂದಿರ್ದಡಿಯುಂ ಪೆಱಗಿಡದ ಸತ್ತ್ವರಿಲ್ಲಿ ಭಟರ್ಕಳ್ (ಗದಾಯು. ೪-೩೯). ೨. ಹಿಮ್ಮೆಟ್ಟು ; ಹಿಂದೆ ಸರಿ : ಕವಱಿ ಚತುರಂಗಬಲಂ ಬೆದಱಿ ತಳ್ತ ದಟಂ ಕೆಡೆದಟ್ಟಿ ತಱ್ಗಿ ಪಮಾಣದ ಪೆಱಗಿಟ್ಟು ಬಾಯ್ವಿಡೆ ಘಟಾಳಿ . . . ಕನಲ್ದೊನಲ್ದು ಪಮಾಣದ ಪೆಸೆವ ಹರಂ ದಿಗಿಭದೊಳ್ ದಿಗಿಭಂ ಪೆಸೆವಂತೆ ಪಾರ್ಥನೊಳ್ (ಪಂಪಭಾ. ೯-೨೦). ೩. ಮೀಱು ; ಅತಿಕ್ರಮಿಸು ; ಸೋಲಿಸು : ಪೂರಿತರಣಶಂಖಿಗಭೀರಾರಾವಂ ದೆಸೆಯ ಕೊಣ ಕುಸುಱಿಜ ಗಜಘಂಟಾರವಮನುಱಿದ ಪೆಱಗಿಡೆ ಭೈರವಮಾತವಕ್ಕು ಬರಿಪ ಬಲಜಲನಿಧಿಯೊಳ್ (ಚಂದ್ರಪ್ರ. ೬-೯೬). [ಪೆಱಗೆ + ಇಡು₁]

**ಪೆಱಗು**, ಪೆರಗು, ಹೆಱಗು (ನಾ). ೧. ಹಿಂಬದಿ : ಹಿಂಭಾಗ : ಹಿಂದಂಗಡೆ : "ಪೆಡಮೆಟ್ಟು, ಪೆಱಗು, ಪೆಱತು, ಪಿಂತಿಲ್_ಈ ೪ ಪಿಂಗಡೆಗೆ ಪೆಸರ್" (ಶಬ್ದಮ. ೬೩-೯೩೩) ; ಪೆಱಗುಸಿದಾಗಿ ಮಾಂತ್ರಗಲಿತವ್ಯವಜಂದೆ . . . ಪೊಲ್ಲದು ಮಖಾನದಿ ರುಂದ್ರಪ್ರಣೀಂದ್ರರಾಜನಂ (ಶಬ್ದಮ. ೬೯೬ ಸೂತ್ರ ೪) ; ಬುದ್ಧಿವಂತರ್ಗೆ ಕೇಡಿಲ್ಲೆಂದು ನಿಶ್ಚೈಸಿಕೊಂಡು ದಿನಾಂತಂಬರೆಗಂ ತಡೆದು ಬಟ್ಟೆಕ್ಕಿಲ್ಲಿಯುಂ ನಿಲ್ಲದೆ ಪೆಱಗಂ ನೋಡುತ್ತುಂ ಭಯಾತುರನಂತೆ ಬಂದುಂ (ಕುಚಕಂ. ೬೬-೦೯) ; ಭಯದಿಂದೋಡುತ್ತಿರೆ ಕಾಡೊಳೊಂದುಮಾರದ ಕೊಂಬುಗೊಂಬಾತನ ತಱುಂಬು ಪಿಡಿದು ತಡೆಯೆ ಪೆಱಗಂ ನೋಡ ಲಣ್ಮದೆ (ಧರ್ಮಾಮೃ. ೨-೩೬). ೨. ಹಿಂದೆ ನಡೆದುದು,–ಆದುದು ; ಪೂರ್ವ ಸಂಗತಿ : ಪೋದುದಿ ಪೋಗಲಿ ಪೆಱಗನೆಸಲಾಗದು (ಧರ್ಮಾಮೃ. ೨-೮೯) ; ಎತ್ತಣನಿತ್ತಲೆಟ್ಟರವನಲ್ಲದು ಪಾರ್ದನನಾ ವಣಕ್ಕಮೂಹೋತ್ತ್ರನುಂ . . . ಪೆಱಗಂ ನೆಱಿ ಬಿನ್ನವಿಸಲ್ಕೆ ವಿಷ್ಣು ವೆಚ್ಚಿತ್ತ್ರನನರ್ಘ್ಯವಸ್ತ್ರುಗಳನಾ ಪರವುಗೆ ಪಸಾಯದಾನಮಂ (ಕುಮಾರ. ೦೨-೪೪). **ಪೆರಗು** : ೧. "ಪೆಡಮನಲ್ ಪೆರಗೆ ನಲ್ಮಿಧಾನಮಪ್ಪು ಬೆಂಗಡೆಗೆ" (ಕಬ್ಬಿ ೬೬). **ಹೆಱಗು**.

**ಪೆಱಗಂ ತಗುಳ್**=ಬೆನ್ನಟ್ಟು : ಬಲದೇವನನಾಮಂತದೊಳ್ ಪೆಱಗಂ ತಗುಳ್ದು ಯಾದವಬಲಮುಂಟಪ್ಪುದದನಂಬುಗಿಱಿಣಸಲ್ ನೀನೆ ಸಾಲ್ವೆಯ್ (ಹರಿವಂ. ೫-೨೦ ವ). **ಪೆಱಗಣ್**=೧. ಹಿಂಬದಿ ; ಹಿಂದಣಗಡೆ ; ಹಿಂಭಾಗ : ಅವರ್ಗಳನಿಬರುಂ ಪೆಱಗಣ್ಗಿರುಳ್ದು ಬಟ್ಟೊಡಿದು ನಾಹಾ ಚೋದ್ಯಂ ಸಾರೆ ಪೋಗಿ ನೋಳ್ಪೆವೆಂದು ಪೋಪರ್ (ವಡ್ಡಾರಾ. ೯೬-೭) ; ಕನ್ನಡಿಯಂ ನೋಡುತುಮವಂ ತನ್ನಯ ಪೆಱಗಣ್ಗೆ ಕಾಣಲಾರ್ಪನೆ ರೂಪಂ (ಧರ್ಮಾಮೃ. ೦-೦೮೨). ೨. ಹೊರಗಡೆ ; ಹೊರಭಾಗ : ಒಳಗಣ ಕಿವುಡಿಯರ್ ಪಿಡಿವುಕೊಂಡಂತೆಸಂ ಪೆಱಗಣ್ಗೆ ನೂಂಕಿದರ್ (?) (ಧರ್ಮಾಮೃ. ೨-೫೨) **ಪೆಱಗಣ**=೧. ಹಿಂದುಗಡೆಯ ; ಹಿಂದಿನ : ಅತಿಶೋಕಾಕ್ರಾಂತ ಮತಿಯುಂ ಶ್ರೀಮತಿಯುಂನೊರ್ವಳನೆ ಕನ್ನಮಾಡದ ಪೆಱಗಣ ಪಂದವವನ ಟ್ಟಿಯ್ಯು (ಆದಿಪು. ೬-೨೮ ವ); ಪುರೋಱಣನಂ ಪೆಱಗಣ ಕಾವಂ ಕಣ್ಗಾಣಿನಲೆ ಕಾದಿರ್ಪನ್ನೆಗಂ (ಶಬ್ದಮ. ೬-೯ ವ) ; ಪೆಱಗಣ ಮಾಂತಣನಿತುಗಳ ಕೇಳಿಯಂ ನಿಶ್ಚಯಿಸಿ ಮಧುಕರಂ ಮಧುಕರಮಂ ತೆಱಲಾಱದ ಪಳ್ಳಿಗೆಯೊಳ್ ಸೆಱಿಗೆಯ್ಕುಂತಿರ್ದುದೊಂದು ಪರಿಮಳಪುಲಮಂ (ಆದಿಪು. ೬-೦೮). ೨. ಹಿಂದೆ ನಡೆದ ; ಘಟಿಸಿದ : ನಿಮ್ಮಡಿಯ ಪ್ರಸಾದದಿಂದೆನಗೆ ಮಹಾಪಾತಕಂ ಪಿಂಗಿ ಪೋದುದೆಂದು ಪೆಱಗಣ ವಾರ್ತೆಯೆಲ್ಲಮಂ ಪೇಳ್ದು ದೀಕ್ಷೆಯಂ ಪ್ರಸಾದಂಗೆಯ್ಯಮೆಂದೊಡೆ (ಧರ್ಮಾಮೃ. ೬-೨೦೦). ೩. ಬಹಿರಂಗದ ; ಹೊರಗಿನ ; ಬಾಹ್ಯ : ಉಪವಾಸಕ್ಕಲಸಿ ಕರಂ ತಪಮಂ ಬಿಸುಡಲ್ಕೆ ಬಾರದಪನೀತಳದೊಳ್ ವಿಪರೀತಮಾಗೆ ಪೆಱಗಣ ತಪದಿಂದಲ್ಲದೆ ಪೊಗಟ್ಟಿ

ಫೇಢೆ : ಖಾದರನು ಕೈಚೀಲದಲ್ಲಿ ಫೇಢೇದ ಪುಡಿಕೆಗಳನ್ನು ತಂದಿಟ್ಟನು (ಮುಕ್ತ್ಯ.೭. ೫೬೭) : ಊರಲ್ಲೆಲ್ಲಾ ಆ ಸಂಭ್ರಮದ ಪ್ರತೀಕವಾಗಿ ಫೇಢೆ ಹಂಚಿದರು (ಆಡೂ. ೨೨). [← ಹಿಂ. ಪೇಡಾ : ಮರಾ. ಪೇಡಾ, ಪೇಢಾ]

ಪೇಡಿ₁, ಪೇಟಿ₁, ಹೇಡಿ (ನಾ). ೧. ಅಂಜುಕುಳಿ ; ಕೈಲಾಗದವನು ; ಹೆದರುಪುಕ್ಕ : ಆನೆ ರಿಪುಸೇನೆಗೆ ಸಾಲ್ವೆನವುಂಕಿ ಪೇಡಿ ಪಾಡಿಗಟ್ಟಿಯುಂ ಪೆಡೆಗೈಯ ಕೈಯುಗುರ ಸಾಲದೆ ನಟ್ಟಿನ ಕೈದುವೇಟ್ಟುದೇ (ಶಕ್ತಿಮಾ. ೪೦೦ ಹೊತ್ತಗೆ) ; ಮುಂ ಬಳೆದೊಟ್ಟ ಪೇಡಿಯ ನಿಮ್ಮನಿಂತೀಳಿಸಿ ಮದ್ಬಲಮಲ್ಲವಂ ಕೊರೆ ನೋಡುತಿರ್ಪುದು ಪಾಟಿಯೇ (ಹಂಪಿ. ೦೦–೦೯) : ಪೇಡಿಯಪ್ಪರಸಿನ ಮಾತಿನಂತೆ ದೇಸಗೆಯು ಮುಗಿಲಂತೆ (ರಹಸ್ಯ. ೯–೨೬). ೨. ನಪುಂಸಕ : ಷಂಡ : "ನಪುಂಸಕಂ ಪೇಡಿ ಷಂಡಕಂ ತಾಂ ಷಂಡಂ" (ಅಭಿ. ೩೬–೨೬). ಪೇಟಿ₁ : ೧. ಧರ್ಮಾನುಜಂಗೇಕೆ ಕಿಂಕರನಾದಂ ಕರವೇಟಿಯಾದನದಟಂ ಸೂತಂ ಭುಟಂ ಪೇಟಿಯೆಂಬರ ಮಾತೊಪ್ಪುಗುಂ (ಗದಾಯು. ೩–೯೩). ಹೇಡಿ : ೧. ಹೇಡಿ ಬಿರುದ ಕಟ್ಟಿದಂತಾಯಿತನ್ನ ವೇಷ ಕಾದ ಬೇಕು ಕಾದುವರೆ ಮನವಿಲ್ಲಾ (ಜಾಪ. ೩೦೦) ; ರಾಯನಿದಿರಲಿ ಹೇಡಿ ಕಲಿಯಹ (ಕುಮಾ. ೯–೨೬): ನನ್ನನ್ನು ಹೇಡಿಯೆಂದು ಎಲ್ಲರೂ ತಿಳಿದುಕೊಂಡಿದ್ದಾರೆ (ಕಥಾ. ೧೦೨) ; ಹೇಡಿ ಯುದ್ಧಕ್ಕೆ ಹೋಗ, ಮೋಡಿ ಕೆಲಸಕ್ಕೆ ಹೋಗ (ಗಾದೆ). ೨. "ಉಭಯವ್ಯಂಜನಾ, ಪೋಟಾ—ಈ ೨ ಹ(ಪೆ)ೇಡಿ" (ಕಹಾಮು. ೬೦–೩೬). ೩. ಗಟ್ಟಿಯಲ್ಲದುದು ; ಪೊಳ್ಳಾದುದು : ಅರಳೆ . . . ಕಟ್ಟಿಗೆ ಹೇಡಿ, ಕೆಲಸಕ್ಕೆ ಬರುವುದಿಲ್ಲ (ಕಥಾಗ. ೩೪). 'ಹೇಡಿಮಣ್ಣು' ಪರಾ.

[ದೇ.೩ ತಮಿ. ಪೇಟಿ; ಮಲ.ಪೇಡಿ; ತುಳು. ಹೇಡಿ,ಹೇಡ; ತೆಲು. ಪೇಡಿ]

ಪೇಡಿ₂, ಪೇಢಿ (ನಾ). (ಉಕ) ಚಿನ್ನ, ಬೆಳ್ಳಿಯ ವ್ಯಾಪಾರಕೇಂದ್ರ ; ಸರಾಫ್ ಕಟ್ಟೆ : ಈ ಅಜ್ಞಾನ ಮತ್ತು ಭಯದ ಮೂಲಕ ಪೇಟೆಯ ವ್ಯವಹಾರವು ಅಡತಿ ಅಂಗಡಿ ಇಲ್ಲವೆ 'ಪೇಡಿ' ಗಳ ಮುಖಾಂತರವಾಗಿ ಇದುವರೆಗೆ ನಡೆದಿರುವುದು . . . 'ಪೇಡಿ' ಗಳ ವ್ಯವಹಾರಕ್ಕೆ ಕಾಯದೇ ಕಾನೂನಿನ ನಿರ್ಬಂಧವಿರುವುದಿಲ್ಲ (ಜ್ಞಾಂಕ್ಷ. ೦): ಈ ಮುಂಬಯಿಯೊಳಗಿನ ದುಕಾನಿನ ಹೊರ್ತು ನಮ್ಮ ಮುಖ್ಯ ಪೇಡಿಯೂ ನಮ್ಮ ವಾಸಸ್ಥಾನವೂ ಸೋಲಾಪುರದಲ್ಲುಂಟು (ಮುಂಬ್ಯಾ. ೨೦). ಪೇಢಿ : ಆಗಿಂದ ನಡೆದು ಬಂದ ಕೆಲವು ಪೇಢಿಗಳು, ಅಂಗಡಿಗಳು, ಸಂಸ್ಥೆಗಳು (ಕಕ್ಕಿ.೬. ೪೨): ನಮ್ಮೂರಲ್ಲಿ ಪೇಢೀ ನಡೆಸುತ್ತಿದ್ದ ಗಂಗಾಪ್ರಸಾದಶಿವಾಚಿ . . . ರಂಗಣ್ಣಾ, ಇವರೇ ಈ ವಾಸಂತಿಕಾಭತ್ರಕ್ಕೆ ಮಹಾಪಾಲಕರಾಗಿದ್ದರು (೦೦೬೫. II. ೦೯೯).

[← ಮರಾ. ಪೇಢೀ]

ಪೇಡಿತನ, ಹೇಡಿತನ (ನಾ). ಅಂಜುಬುರುಕುತನ ; ಪುಕ್ಕಲುತನ : ಏನಮ್ಮ ಪೇಡಿತನಂ, ಅಂಜದಿರ್ (ಅಕ್ಕಾ. ೯–೬೨): ಕೊಲೆಯ ಅವಮಾಧದಿಂದವಾ ಪೇಡಿತನದವಮಾನವೋ ಮೇಲು (ಅಕ್ಕಿ. ೯೬–೯೯೩). ಹೇಡಿತನ : ನೋಡಿದಳು ದಮಯಂತಿ ಭೀತಿಯುರೋಡುತಿಹ ಬೀಡಿನೆಯ ವ್ಯೆಸ್ಕರ ಪೇಡಿ[ಪಾಠಾಂ. ಹೇಡಿ]ತನವನು (ಚಕಚ. ೩–೯೦): ಅವರಲ್ಲಿ ದೇಗನೆ ಪುಕ್ಕು, ಹೇಡಿತನಗಳು ಮೆಲ್ಲನೆ ಸೇರಿಕೊಳ್ಳುವುವು (ಮುಕ್ತ್ಯ. ೩೦).

[ಪೇಡಿ₁ + – ತನ]

ಪೇಡೆ 'ಪೇಡ' ನೋ.

ಪೇಢಿ 'ಪೇಡಿ₂' ನೋ.

ಪೇಢೆ 'ಪೇಡ' ನೋ.

ಪೇಣಿ (ನಾ). ಒಂದು ಬಗೆಯ ಸಿಹಿಭಕ್ಷ್ಯ : ಬೆಳತಿಗಕ್ಕಿಯ ಹಿಟ್ಟ ಹೊಸ ಬೆಣ್ಣೆಯಿ ಕಲಸಿ . . . ಸರಿಬೆಣ್ಣೆ ಸರಿದುಪ್ಪದೊಳಗೆ ಪಾಕವ ಮಾಡಿ ಪರಿನೊಳು ಸಕ್ಕರೆಯನಿಡಲದುವೆ ಪೇಣಿಯಹುದು (ಸೂಪಶಾ. ೦–೯೬) : ಚಿಲುಪಾಲುಪ್ರತವೆಂದಳಿರ್ಪ್ವಳು ಪೇಣಿಯ ಮಲರೊಲ್ಲೆನೆಂದ ಕೊರ್ಪ್ಚಲಿ (ಶಕಶ. ೨೧–೨೯). [< ಸಂ. ಫೇಣೀ]

ಪೇತ, ಪೇತು, ಹೇದೆ (ನಾ). ೧. ಭೂತ ; ಪಿಶಾಚಿ ; ಪ್ರೇತ : ಕೆಲಕೆ ಕಾದಿಹ ಬೂತಪೇತವು (೯೦ತಾ. ೩೯–೨೬) ; ಕೊಳುಗಾಣದ ಪೇತರು ಗಳಂತೆ ಕಾದುವರು ಕಂಡವರ (ಕಂಕಾ. ೬–೨೦). ೨. ಹೆಣ; ಶವ : 'ನರಪೇತ' ಪರಾ. ಪೇತು : ೧. "ಪೇತು(ತ)—ಪ್ರೇತ = ಪಿಶಾಚಿ" (ಕರ್ನಾ. ೨೬): ಪೇತೆ ನೀನೇನು ದೊಡ್ಡಿತು (ಕೋಹಕ. ೦೨–೦೫೯) : ಪೇತುಗಳಲ್ತೆ ಪೇಚರರು ಭೂಚರರೆಲ್ಲ ಭೂತಗಳಲ್ತೆ (ಕಕ. ೯೯–೩೩). ೩. ಅಂಜುಬುರುಕ ; ಹೇಡಿ : 'ಪೇತುಗ' ಪರಾ. ಹೇದೆ: ೧. "ಹೇದೆ_ಭೂತಂ" (ಕಮಕ. ಮಾ. ೨) ; ತೊನೆವ ನೆಲ ಮಾಟವಿದು ಮನೆಯ ಕಾಟದ ಹೇದೆ ಬಮಗೊಂದು ನೆಲವಮುಕ್ಕು ಕಾದಾತಿಹುದು (ಗಾಂಧಿ. ೦೫೯–೩೩೯). [< ಸಂ. ಪ್ರೇತ]

ಪೇತು 'ಪೇತ' ನೋ.

ಪೇತುಕಣೆ (ನಾ). (ಅಲಂ) ಹಿಂಸೆಗೊಳಗಾಗಿಸುವ ಅನಂಗನ ಬಾಣ ; ಪುಷ್ಪಬಾಣ : ಚೂತ ಕುಮುದಂ ಕಮಲ ಮಲ್ಲಿಗೆಯಶೋಕೆಗಳ ಪೇತುಕಣೆ ಗಳ ತೊಟ್ಟು ಕಾಡಲಿಪ ಸ್ತ್ರೀಪುಂಸರೆಸೆಯ ದೀಳುವರು (ಶ್ರಕಚ. ೩–೦೨೬).

[ಪೇತು (< ಪೇತ) + ಕಣೆ₁]

ಪೇತುಗ (ನಾ). ೧. ಪಿಶಾಚಿಯಂತಹವನು ; ದುಷ್ಟ : ದುರಾತ್ಮನು ಪಾಂಡವರ ಕಪಟದ್ಯೂತದಲಿ ವನವಾಸಕಟ್ಟಿದ ಪೇತುಗನು ಕಡುಲಜ್ಜೆ ಧಂಡನು (ಕುಮುಂ. ೦೯). ೨. ಅಂಜುಬುರುಕ; ಹೇಡಿ : ತಿರುಗಿ ಸೀತೆಯ ಬಿಟ್ಟೆನಾದರೆ ಕರೆಯ ಪೇ[ಪಾಠಾಂ. ಕೇ]ತುಗನೆಂದು (ಕೊರ. ೬–೦೨–೦೬) ; ಕಂಡ ದೆಸೆಗೋಡುತಿರಲು ಕೇಳಿ ಚೈದ್ಯಂ ಪೇತುಗರ ಬಯ್ಯುು (ರಾಜಶ. ೩೯). [ಪೇತು (< ಪೇತ) + —ಗ₂]

ಪೇದೆ 'ಪ್ಯಾದೆ' ನೋ.

ಪೇದೆಮಾತು 'ಪ್ಯಾದೆಮಾತು' ನೋ.

ಪೇನ್, ಪೇನ್ನು, ಹೇನ್, ಹೇನು (ನಾ). ೧. (ಸಾಮಾನ್ಯವಾಗಿ ಕೊಳಕಾದ ಬಟ್ಟೆ ಹಾಗೂ ತಲೆಯ ಕೂದಲಿನಲ್ಲಿ ಸೇರಿಕೊಳ್ಳುವ) ಒಂದು ಬಗೆಯ ಸಣ್ಣ ಹುಳು ; ಯೂಕ : ಅಂತೊಪ್ಪುವ . . . ಶಯ್ಯಾತಳದೊಳ್ ಮಂದವಿಸರ್ಪಣೆಯೆಂಬುದೊಂದು ಪೇನಿರ್ಪುದು[ಪಾಠಾಂ. ಯೂಕಮಿಪ್ಪುದು]. (ಹಂಪಿ. ೦೫೩–೦೦) ; ರಸಮಂ ಘನವಲ್ಲೀದಳರಸದೊಳ್ ಮರ್ದಿಸಿ ಬಟ್ಟೆ ಕಪ್ಪಡದೊಳ್ ಭಾವಿಸಿ ತಲೆಯೊಳ್ ಕಟ್ಟಿದೊಡುಳ್ಳ ಸೀರುಪುಳ್ಳನಿತು ಪೇನುಮಾಗಳೆ ಕಿಡುಗುಂ (ಕೋಕೋತ. ೯–೩೭) ; ತಲೆಯೊಳ್ಕಿವಿದ ಪೇನ ಸೀರ್ಮಾಲವನೆಂತುಂ ಬಾರ್ಚಿ (ಅಜಿತ. ಮಾ. ೦.೮) : ಕಣ್ಣಂಜಲೆಂದು ತೂಪಿಟ್ಟುದು ಬಣ್ಣದಾವರೆಮೊಗ್ಗೆ ಮೊರೆಯು ಬಾಯೊಳಗುಡಿಯುಣ್ಣಾರ್ಕೆ ಪೇನ್ಸಡಕುವಳು (ವಜ್ರಕ. ೦೭–೬೪). ಪೇನ್ನು : ೧. ಸ್ಪರ್ಶ ರಸ ಗಂಧಂಗಳೆಂಬೀ ಮೂಜಿನಜೀವ . . . ಪೇನು ಸೀರು ತೇಟು . . . ತುರುಟು ಮೊದಲಾದವಜೊಳಂ (ಜೀವ. ೯೯). ಹೇನ್ : ೧. "ವಸ್ತ್ರಕವ್ಯಗಂ ಷಟ್ಪದಂ ಹೇನೆನಿಕ್ಕುಂ" (ಹಂಗಣ. ೯೯–೦೯); "ಉಂದುಕಂ=ಹೇನ್" (ಶಬ್ದ. ೨೬) ; ಕೇಶವೀದಿಕದಂತೆ ಹೇನ್ನಿರ್ ಸೂಸುತಿಹವೆಲ್ಲೆಲ್ಲ ಮೃತವಹ ಘಾಸೆ ಬಪ್ಪುದು (ಕಟಚ. ೩–೦೩). ಹೇನು : ೧. "ಹೇ[ಪಾಠಾಂ. ಪೇ]ನಿಗಂಜಿ ಸಂವರ್ಜಿಪರಂತೆ ಕುಂತಳವಂ (ನಾಗವು.೦–೬೬) ; ಹೇನನೊವಸುವದೇಕೆ ಶರಸಂಧಾನ (ಕೂರ ೬–೯–೩೬) ; ಹೇನು ಬಲ್ಲುದೆ ಮುಡಿದ ಹೂವಿನ ಪರಿಮಳವ (ಭೂತಂದ. ೦–೦೨೩.೨). ೨. ಗಿಡಮರಗಳಿಗೆ ಹತ್ತುವ ಕೀಟಗಳಲ್ಲಿ ಒಂದು ಬಗೆ : ಗಿಡಮರಗಳಿಗೆ ಅಂಟಿರುವ ಹೇನುಗಳಲ್ಲೂ ಇನ್ನು ಅನೇಕ ಕೀಟಗಳಲ್ಲೂ ಈ ರೀತಿಯಿಂದ ಸಂತತಿಯು ಬೆಳೆಯುವುದು (ಜಾಂತ್ರ. II. ೬೦೦) ; ಗಿಡದ ಸೀರು ಅಥವಾ ಹೇನುಗಳು (aphids) ಲಕ್ಷಾವಧಿ ಸಂತಾನವನ್ನು ಉತ್ಪತ್ತಿ ಮಾಡುವವು (ಕೀಟ. ೬).

**ಹೇನ ಕೆರೆ**=ಕೂದಲು ಉದುರುವ ಒಂದು ಬಗೆಯ ರೋಗ : ಇಂದ್ರಲುಪ್ತ ಎಂಬುದೊಂದು ಮಂಡೆಯ ಕೂದಲು ಒಂದೂ ಇಲ್ಲದೆ ಉದುರಿ ಮಂಡೆಯ ಚರ್ಮ ಕಾಣಲ್ಪಡುವುದು ; ಅದನೇ ಹೇನ ಕೆರೆ ಎಂಬರು (ವೈದ್ಯಸಾ. II. ೦೩೦). [ದೇ. ಶ ತಮಿ. ಮಲ. ನಾಯ್ಕ್. ಗದಬ. ಪೇನ್ ; ತುಳು. ತೆಲು. ಕುಇ. ಮಾಲ್ತೊ. ಪೇನು ; ಕುವಿ. ಪೇನು, ಪೇನೂ]

**ಪೇನ್ನ**$_1$ (ನಾ). ನೊರೆ ; ಬುರುಗು : "ಫೇನ–ಫೇನ=ನೊರೆ" (ತತ್ಸಕೋ. ೨೭); ಫಕಾರಕ್ಕೆ ಪಕಾರಂ . . . ಫಾಲ್ಗುನ – ಪಾಲುಗುಣ ; ಫೇನ-ಪೇನ (ಶಮದ. ೨೩೩ ವೃತ್ತಿ). [ < ಸಂ. ಫೇನ ]

**ಪೇನ್ನ**$_2$ 'ಪೆನ್ನು' ನೋ.

**ಪೇನಾ** 'ಪೆನ್ನು' ನೋ.

**ಪೇನಾರಿ** 'ಪೀನಾರಿ$_1$' ನೋ.

**ಪೇನಿ** (ನಾ). ೧. ಒಂದು ಬಗೆಯ ಪಿಶಾಚಿ : ಬಟ್ಟೆವೋಮ್ ಪಸಿದೆಗೆಯ್ಯಂ ಪೊಕ್ಕಂತೆ ಪೊಟ್ಟೆಯನುರ್ಚಿ ತಿಂಬ ಪೇನಿಗಳುಂ (ಅಂಶಹ. ೨-೦೦ ಕ). ೨. (ಅಲಂ) ಲೋಭಿ ; ಜಿಪುಣ : ಪೇನಿಗಳಂ ಪೊಗಳದಿರಭಿಮಾನಿಗಳಂ ಗುಣದ ಕಣೆಗಳಂ ವಸುಮತಿಯೊಳ್ ದಾನಿಗಳನೂನಮಿಲ್ಲದ ಮೋನಿಗಳಂ ಪೋಗಿ ಪೊಗಟ (ಎಕ. V. ಅರಸೀಕೆ. ೦೨೩-೦೭ ; ೧೬೪) ; ತಾನುಣ್ಣದ ಪೆರ್ಗಿಕ್ಕದ ಪೇನಿಯ ಪಕ್ಕಡಿಕೆಯೆನಿಪ ಲೋಭಿಯ ಪೊನ್ನ . . . ಕವರ್ದುಕೊಂಡು (ರಾಜಾಸ್ಸು. ೨-೩೪). [ದೇ. ಶ ಕುವಿ. ಪೇನು]

**ಪೇನು**$_1$ 'ಪೇನ್' ನೋ.

**ಪೇನು**$_2$ 'ಪೆನ್ನು' ನೋ.

**ಪೇಪಂದಿ** (ನಾ). ಹೆಣ್ಣುಹಂದಿ : ಆ ಪೊಬರೊಳ್ . . . ಪೇಪಂದಿಯಾಗಿ ಪುಟ್ಟಿ (ಶಬ್ದಾಸಾ. ೧೦-೬) ; ಆ ಪುರದೊಳ್ ಪೇಪಂದಿಯಾಗಿ ಬಂದು (ಸುಕುಮಚ. ೩-೨೭) ; ಅಮೇಧ್ಯದ ನಾಯು ಪೇಪಂದಿಯ ಕತ್ತೆಗಳ ನಡುವೊಂದೆರಡು ಜಾವಂಬರಮಿರ್ದು (ಅಂಶಹ. ೪-೪ ವ). [ < ಪೆಣ್ + ಪಂದಿ ]

**ಪೇಯ** (ನಾ). ೧. ಕುಡಿಯಲು ಯೋಗ್ಯವಾದುದು ; ಪಾನೀಯ ; ಮದ್ಯ, ಪಾನಕ, ಚಹಾ, ಕಾಫಿ ಮುಂತಾದುವು : ನೀರಿಲ್ಲದಿದ್ದರೆ ಚಹಾ, ಕಾಫೀ, ಕೋಕೋ ಮೊದಲಾದ ಪೇಯಗಳನ್ನು ಕುಡಿದು ಬದುಕಬಹುದಲ್ಲವೆ (ಶಕೋದ. ೦೪) ; ಬಾಯಿಂದ ಯಾವ ಯಾವುವೋ ಪೇಯಗಳನ್ನು ತರಿಸಿ ಕುಡಿಯುತ್ತಿದ್ದಾರೆ (ಚೈತ. ೬). ೨. ಭಕ್ಷ್ಯ, ಭೋಜ್ಯ, ಲೇಹ್ಯ ಮತ್ತು ಪೇಯ ಎಂಬ ನಾಲ್ಕು ವಿಧವಾದ ಆಹಾರಗಳಲ್ಲಿ ಒಂದು : ಬಾರದ ಭವದಲ್ಲಿ ಬಂದು, ಉಣ್ಣದ ಪೇಯುವನು ಉಂಡು, ಕಾಣದ ದುಃಖವ ಕಂಡು (ಶಶತ. ೬೩೬) : ಮನುಷ್ಯರ ಜಠರದಲ್ಲಿರುವ ವೈಶ್ವಾನರಾಗ್ನಿಯಲ್ಲಿ . . . ಸಂಯುಕ್ತನಾಗಿ ಭಕ್ಷ್ಯ, ಭೋಜ್ಯ, ಲೇಹ್ಯ, ಪೇಯ ಎಂಬ ನಾಲ್ಕು ವಿಧ ಅನ್ನವನ್ನು ಜೀರ್ಣ ಮಾಡುತ್ತೇನೆ (ಭಾಕತ್ಯ. ೦೦೪). ೩ ಭೋಜ್ಯ, ಪೇಯ, ಚೋಷ್ಯ, ಲೇಹ್ಯ, ಖಾದ್ಯ, ಚರ್ವಣ, ನಿಷ್ಪೇಯ ಮತ್ತು ಭಕ್ಷ್ಯಗಳೆಂದು ಆಹಾರಗಳು ಎಂಟು ವಿಧ ಎಂಬ ವಿವರಣೆಯೂ ಇದೆ. ೩. ನೀರು. ೪. ಹಾಲು. [ಸಂ.]

**ಪೇಯತ್ತಿ** (ನಾ). ಒಂದು ಬಗೆಯ ಅತ್ತಿಮರ : "ಮಲಯೂಃ–ಕಲ್ಲತ್ತಿ, ಪೇಯತ್ತಿ" (ಓಶಂ. ೦೦೪). [ಪೇಯ$_?$ + ಅತ್ತಿ$_1$]

**ಪೇರ್**$_1$ 'ಪಿರಿ' ನೋ.

**ಪೇರ್**$_2$ 'ಪೆಸರ್' ನೋ.

**ಪೇರ್ಡಂಡೆ** (ನಾ). ದೊಡ್ಡ ಪಾತ್ರೆ,–ಅಂಡೆ : ಶತಸಂಪ್ಯೆ ಕೊಪ್ಪರಿಗೆಯಿಂ ಬಹುವಿಧದ ತೈಲಂಗಳ ತುಂಬಿದೆದ್ದು ಪೇರಂಡೆಗಳಲಿ ಮೊಗದತಿ ಪಂಜು ತಂದಮಂ ಪತ್ತಿಸಿದರು (ಲಕ್ಷ್ಮೀಶಾ. ೬-೬-೩೩). [ಪೇರ್$_1$ ( < ಪಿರಿದು$_1$)+ಅಂಡೆ$_2$]

**ಪೇರಂದ** (ನಾ). ಅತಿಶಯವಾದ ಪ್ರದರ್ಶನ : ಆ ಪರ್ತಕನು ದೊರೆಯನ್ನು ತನ್ನ ಮನೆಗೆ ಔತಣಕ್ಕೆ ಕರೆದನು ; ತನ್ನ ಭಾಗ್ಯವನ್ನೆಲ್ಲಾ ಪೇರಂದ ಮಾಡಲು ಹೊರಟನು (ಶತಿಹಂ. IV. ೩). [ಪೇರ್$_1$ ( < ಪಿರಿದು$_1$)+ಅಂದ]

**ಪೇರಗಳು** 'ಪೇರಗಟ್ಟ್' ನೋ.

**ಪೇರಗಟ್**, ಪೇರಗಳಂ (ನಾ). ದೊಡ್ಡದಾದ ಕಂದಕ : ಸೀಪವನಿಯಮ್ಯುಬ್ಧಿಯೆನುತ್ತುಮಾರ್ದುಲಿವವೋಲೊಪ್ಪೆರ್ದಾ ಪೇರಗಟ್ (ಸಂಸಚಜಾ. ೨-೬೩). **ಪೇರಗಳು** : ಪೇರಗಳು ವಾರಿನಿಧಿ ಚಕ್ರವಾಳಾದ್ರಿ ವಿಸ್ತಾರತರ ಕೋಟೆ ತತ್ಪುರವೆ ಜಂಬೂದ್ವೀಪ (ಶಿಕ್ಷಶತ. ೨-೪) ; ನೆಗಳಾನೆ ಮೀನ್ಗಳನೊಳಕೊಂಡು ಬಂದು ಪೇರಗಳಾಮದಬ್ಧಿ ದ್ವಾರಕೆಗೆ (ಶೋಪಕ. ೩-೩) ; ಬಂದು ಬಿದ್ದರಮರಾವತಿಯ ಪೇರಗಳನಮರಭಟರು (ಕಂಠೀ. ೨೪-೨೪). [ಪೇರ್$_1$ ( < ಪಿರಿದು$_1$)+ಅಗಟ್$_2$( < ಅಗುಟ್$_2$)]

**ಪೇರಗುಟ್** (ನಾ). ದೊಡ್ಡ ಅಗುಳ ; ಭಾರಿಯಾದ ಲಾಳವಿಂಡಿಗೆ : ಭರದೊಳ್ಳುಚಿದರ್ ಬಿಡುಗಣ್ಣರೂರ ಪೇರಗುಟ್ಗಳಂ (ಅಕ್ರೂ. ೩೨-೨). [ಪೇರ್$_1$ ( < ಪಿರಿದು$_1$)+ಅಗುಟ್ ( < ಅಗ್ಗಟ್$_1$) ]

**ಪೇರಟಿ** (ನಾ). (ಕರಾ) ವರನ ಮನೆಗೆ ಮದುಮಗಳ ಸಂಗಡ ಹೋಗುವ ಆಕೆಯ ಅಕ್ಕ ಅಥವಾ ತಂಗಿ : ಅಕ್ಕನ ಜೊತೆಗೆ ಪೇರಟಿಯಾಗಿ ಅವಳ ಊರಿಗೆ ಹೋಗಿದ್ದಳು (ರೂಢಿ). [ ? ]

**ಪೇರಟ್ಟಣೆ** 'ಪೇರಟ್ಟಳೆ' ನೋ.

**ಪೇರಟ್ಟಳೆ**, ಪೇರಟ್ಟಣೆ (ನಾ). ದೊಡ್ಡ ಬುರುಜು,–ಕೊತ್ತಳ : ಮಿಳಿರ್ವುತ್ತುಂಗಧ್ವಜು ಮಾರ್ವೊಳಿಪ ಜಲಧರವ್ರಾತವೆಂಬಂತೆ ಪೇರಟ್ಟಳೆಗಳ್ ತಳ್ತಿತ್ತಲುಂ ಬಿಬಿಸೆ (ಧರ್ಮಾಮ. ೨-೬೪). **ಪೇರಟ್ಟಣೆ** : ಮಕರದಿಬ್ಬಿ ಪೇರಟ್ಟಣೆಗಳಮರನಾಯಕರ ಕಾಯ್ವಿಂ . . . ಮನೆಕೆ ಮಂಗಳವೆನಿಸು ವಮರಾವತಿಯ ಪುರಕ್ಕೆ ಪ್ರತಂದನೆಪ್ಪು ರುದ್ರಂ (ಶಶ್ಕೃತ. ೨-೬-೦೪). [ಪೇರ್$_1$ ( < ಪಿರಿದು$_1$) + ಅಟ್ಟಳೆ]

**ಪೇರಟ್ಟೆ** (ನಾ). ದೊಡ್ಡ ಮುಂಡ ; ದಪ್ಪವಾದ ದೇಹ : ನೆಟ್ಟನೆ ನಡುಮುತ್ತೆ ಪಡಲ್ಪಟ್ಟರ ಪೇರಟ್ಟೆಗಳನೆ ಮೆಟ್ಟುಗೆಯ್ದು (ಶಕಾ. ೨-೦೦೪). [ಪೇರ್$_1$ ( < ಪಿರಿದು$_1$) + ಅಟ್ಟೆ$_1$]

**ಪೇರಡಗು** (ನಾ). ಅಧಿಕವಾದ ಮಾಂಸ : ದೆಸೆದೆಸೆಗೆ ನರಶಿರಂ ತತ್ತಿಸಿ ಮೆಚಿದುವು ಮಾಗಿರೊಳಬ್ಬೆ ಪೇರಡಗಿನ ಪರ್ದಸನದೆ ಪೊಣಗಣ ಜೀವ ಪ್ರಸರಮುಮಂ ಪಲವು ಮುಖದಿನವಲೋಕಿಪವೋಲ್ (ಮುತಕೀಶ. ೦-೩೩) : ತೊಡೆ ಪೇರಡಗಿನ ಕಾಳಜದೆಡೆ ಚರಣಂ ದುರಿತಕಾರಣಾ ಕಾಣೆನಿಸ . . . ಗಣಿಕೆಯರೊಡಲೊಳ್ಪೊರಬುಡುಂಟೆ (ಕೃತಶ. ೨೪-೬೦). [ಪೇರ್$_1$ ( < ಪಿರಿದು$_1$)+ಅಡಗು$_2$]

**ಪೇರಡಬಳ** (ನಾ). ಹೆಚ್ಚಾದ ಆತಂಕ ; ಅಧಿಕವಾದ ಕಾತರ : ಕಾರುಣ್ಯನಿಧಿಯು ಕಾರುಣ್ಯಮಿಂತಾಯ್ತೆನುತಪಾರಭೀತಿಗ್ರಸ್ತಮನನಾಗಿ ದಾಯುಳಿದು ಪೇರಡಬಳಂ ಬಲಿದು ಬಸವಳಿವುತಿರ್ದನ್ನಂ (ಕೊಟ್ಟೂರು. ೦೩–೦೪). [ಪೇರ್$_1$ ( < ಪಿರಿದು$_1$) + ಅಡಬಳ$_2$ ]

**ಪೇರಡವಿ**, ಹೇರಡವಿ (ನಾ). ದೊಡ್ಡ ಕಾಡು ; ದಟ್ಟವಾದ ಅರಣ್ಯ : ಒರ್ವನೆ ಸಂಧಿಸಿ ಪೋದನಂದು ಪೇರಡವಿಯೊಳಾ ತುರಂಗವದನರ್ಕಳ ಬೆಂಬಳಿಯುಂ ಮಹೀಭುಜಂ (ಕಾದಂಪೂ. ೬೨೦) ; ಭೃತ್ಯರ್ಗೆ ಪೇರಡವಿಯೊಳ್ ಪಣ್ಗಲಂಗಳನಜಿಸಿ ಪೆಪ್ಪೆಂದು ಪೇಟ್ಟುದರಿ (ಧರ್ಮಾಮ. ೨-೦೩೬) ; ಪಾತಕಿಯುನಟ್ಟುವಂತೆ ಪೇರಡವಿಗಟ್ಟುವೊಡೆ (ಪ್ರಣಾರು. ೩-೨೨). **ಹೇರಡವಿ** : ಆಡಿನ ತತ್ತಿಯೊಳಗೊಂದು ಹೇರಡವಿ ಇದ್ದಿತ್ತು ಆ ಹೇರಡವಿಯೊಳಗೆ ಪೋರುವೆ ಇದ್ದಿತ್ತು (ಆದಶ. ೪೦–೦೦೬) ; ಕೌರವಪಡೆಯು ಹೇರಡವಿಯನು ಸವಬಿಲು ಕಡಿತಕಾಬರು ಮುಂದೆ ಹೊಕ್ಕುದು(ಕುಮ್ಮಾಅ. ೩-೪);

ಪೇರಡವಿಗಳ ವೊತ್ತುದಲಿ ವ್ಯೆವಾಟಿಯಾದಬಿಸಿದರಾ ನಿಶಾಚರನ (ಪಂಪಭಾ. ೯-೧೦-೦೩). [ಪೇರ್$_1$ ( < ಪಿರಿದು$_1$) + ಅಡವಿ ]

**ಪೇರಡಿ** (ನಾ). ೧. ದೊಡ್ಡ ಪಾದ: ಪದದಾದಿಯಾ ಹ್ರಸ್ವಕ್ಕೆ ಬಹುಳತೆಯುಂ ದೀರ್ಘವಾಕ್ಯಂ . . . ಪೇರಡಿ, ಪೇರೊಡಲ್ (ಕವಿರ. ೧೬೦ ವೃತ್ತಿ). ೨. ಶ್ರೇಷ್ಠವಾದ ಪಾದವುಳ್ಳವನು ; ಪೂಜನೀಯ: ಕಣ್ಬಾನ್ ಕವರ್ ಪೇರಡಿ ಬಾರಯ್ ! ನೋವನ್ ನೀಗುವ ಪೇರಡಿ ಬಾರಯ್ ! (ಅಂತಿಗೊ. ೩೦-೦೦೬). ೩. ದಾಪುಗಾಲುಂ ಹಾಕಲುಂ ಅನುಕೂಲವಾಗುವಂತಹ ಕಾಲುಳ್ಳುದು ; ನಾಯಿ : "ಪೇರಡಿ, ಸೊಣಗಂ, ಜಾಬಿಲಂ—ಈ ೩ ಕುಕ್ಕುರಂ" (ಕಹಾ. ೩೦-೦೦೯); ಪೇರಡಿ ತನ್ನನಟ್ಟಿಯುಂ ನಲಿನಲಿದಾಡೆ ಪೋದ ಮನುಜಂ ಪಡೆಗುಂ ತನಗಿಷ್ಟಸಿದ್ಧಿಯುಂ (ಲೋಕೋಪ. ೦೨-೨೩): ಬೇಂಟೆಯ ಪೇರಡಿಗಳಂ ಮುಂ ಬಿಟ್ಟು (ಶಾಕಾಶ. ೦೦-೭೧).
[ಪೇರ್$_1$ ( < ಪಿರಿದು$_1$) + ಅಡಿ$_1$]

**ಪೇರಡ್ಡ** (ನಾ). (ಅಲಂ) ಮುಖವನ್ನು ತಿರುಗಿಸುವಿಕೆ; ತಿರಸ್ಕಾರ : ಅಂತುದಾಸೀನವಮಾನಸಂ ಮುಸಕಮಿಲ್ಲದ ಸಾರ್ವಭೌಮಂ ಪೇರಡ್ಡವಾಗಿ ಕೆಲದ ಚಾರಾಯುಧನೊಳ್ ತಮ್ಮಂಗಬಾಹ್ಯವಸ್ತುವಂ ಪರಿತಂ ಮಾಡುತ್ತಿರೆ (ಶಾಂತಿಪು. ೦೮-೦೦೬ ವ). [ಪೇರ್$_1$ ( < ಪಿರಿದು$_1$) + ಅಡ್ಡ$_1$]

**ಪೇರಣ, ಪೇರಣೆ** (ನಾ). ನೃತ್ಯ ಮುಂತಾದ ಮನರಂಜನೆಯ ಪ್ರದರ್ಶನ : ಭೂವರನ ಮುಂದಾಡುತಿಹ ಪೇರಣ ದಲೆಂಬ ಸಂವರಣೆ ಗುಂಟಾದ ವಾಜಿಗಳೆಯ್ದೆ ಚಾರಿವರಿದಾಡಿದವು ಶತಕೋಟಿಯು (ಹಕಾ. ೩-೨೦); ರುದ್ರಕನ್ನೆಯರುಗ್ಗಡದ ಪಾತ್ರ ಸೂಜಿಯೊದು ತಾಳಮೇಳದ ಲಕ್ಷಲಕ್ಷಣವ ತೋಱು[ತ್ತ] ಗುಂಡಾಲದೊಲಂಡಲೆದು ಪೆಕ್ಕಣದ ಪೇರಣದ ಲಾಸ್ಯಗಳ (ಗುಪಕ. ೩-೯೯); ಪೇರಣ ಪೆಕ್ಕಣ ಗುಂಡಲಂಗಳಂ ಬಲ್ಲ ಸಾತ್ವಿಕ ಆರಭಟಿ ಕೌಶಕಿಯೆಂಬ ಪಾತ್ರಂಗಳಂ (ರಕಾವ. ೨-೦೦ ವ). **ಪೇರಣೆ:** ಹಾಡುತಿಹ ಗುರುನಿರೂಪಿತದ ವಚನಂಗಳಿಂದಾಡುತಿಹ ಪೇರಣೆಯ ವೇಡಾಂಕ ಕೇಳಿಕೆಯ ನೋಡುತಿಹ ಪೃಥ್ವಿಯ ಮಹಾಭಕ್ತಜನದ ಸಮ್ಮರ್ದನವ ಕಿವಿಂಗಿಸಿ (ಸಿದ್ಧರಾ. ೮-೬೯); ಲಾಲಿಪ ಪೇರಣೆಯೊಳ್ಳಿಗೆ ಮೇಳೆನಿಸುವ ಕುಶಲೆ . . . ಕಾಲೇ ನಾಲಗೆಯೆಂಬಂತೋಲಗದೊಳ್ ಕುಣಿದು ದೇವಿಯುಂ ಮೆಚ್ಚಿಸಿದಳ್ (ಚರಪು. ೬-೬೩) ; ನಾಟಕದ ಪಾತ್ರದ ಪೇರಣೆಯ ಜೋಳಗಳ ಜೋಕೆಗಳ ಪ್ರಕಟವೆಸೆಯಲು (ಬಸಪು. ೯-೬) ; ಬಿತ್ತರದ ನೂಪುರಂಗಳನಿಟ್ಟು ಕಾಲೊಳಗೆಯತ್ಯಧಿಕ ಸಪ್ತತಾಳದ ಪೇರಣೆಯ ನಟಿಸೆ (ಕಹುಪು. ೦-೯-೬೬). [ < ಪ್ರಾ. ಪೇರಣ./ಸಂ. ಪ್ರೇರಣ]

**ಪೇರಣಿ$_1$** (ನಾ). ೧. ದೊಡ್ಡ ಪದಾತಿಸೇನೆ; ಭಾರಿ ಸೈನ್ಯ: ಅಂತು ಪೇರಣಿ ಪೆಂಪುಮಾಗೆ (ಕಂರಾಮ. ೦೩-೩೬ ವ); ಈಸುವ ಧನುರ್ವಲು ಭರದಿನೆಯ್ದುವ ಪೇರಣಿ (ಜಗು. ೦೬-೯೯). ೨. ದೊಡ್ಡ ಸಾಲು, — ಶ್ರೇಣಿ : ಅಣಿಯರಮಿಸೆ ಉವರನ ಕೂರ್ಗಣೆಯೇಱಿಂ ಪಱಿದು ಬಿರ್ದ ಖಚರರ ತಲೆ ಸಂದಣಿಸೆ ವಿಮಾನಂಗಳ ಪೇರಣಿ ಪೋಲ್ತುದು ತೆಱಿದ ಮೊಗದ ಪೇಳಿಗಳಿರವಂ (ಚಂದ್ರಪು. ೬-೩೯). [ಪೇರ್$_1$ ( < ಪಿರಿದು$_1$) + ಅಣಿ$_2$]

**ಪೇರಣಿ$_2$** (ನಾ). = ಪೇರಣ: ಗೀತದ ಮಾತ ಮಾನುಷಮಿದೇಂ ಪಂಚಾಂಗ ಮೊಪ್ಪಿತ್ತೊ ಪೇರಣಿ ಸಂಕ್ರಮಣನನ್ನಲ್ಲದಿರ್ದ್ದನಿಸಿವತ್ತಾ ತಾಂಡವಾಡಂಬರಂ (ಅವಂಪು. ೩-೯೬). [ಸಂ.]

**ಪೇರಣಿಗ** (ನಾ). ನಾಟ್ಯ ಮಾಡುವವನು; ನರ್ತಕ : ಕವಿ ಗಮಕಿಗಳ ನವರಸಂಗಳಂ ಕೇಳುತುಂ ನವಪೇರಣಿಗರ ರಸದಾಟವಂ ನೋಡುತುಂ (ಶಂಪಪ. ೯-೬೯೦); ಸುಕವಿಗಳ ಶಾಸ್ತ್ರಾಗಮಿಕ ಭಾವಕ ಕಲಾವಿದ ಪೇರಣಿಗ ವಾದ್ಯಕರ ಶಿಲ್ಪಿಗ . . . ಸುಗಂಧಾಧಿಕರ ಕೇರಿಗಳಿರವ ಚಿತ್ರ್ಯಸೆಸುತರಸ ಸಡೆದ (ಸಂಕರಾ. ೯-೨೬). [ಪೇರಣ + —ಇಗ]

**ಪೇರಣಿಲ್, ಹೇರಣಿಲ್, ಹೇರಣಿಲೆ** (ನಾ). ೧. ಒಂದು ಬಗೆಯ ಕೋಡಗ (?): "ಪೇರಣಿಲೆನೆ ಸೊಂದಿಗೋಡಗಂ" (ಕಹಾ. ೬೬). **ಹೇರಣಿಲ್**: ೨. ದೊಡ್ಡ ಜಾತಿಯ ಅಳಿಲು : ಪೇರಣಿಲ್ ಗಿಡುಗ ಮೊಲಂ . . . ಕೂರಗೆಯೆಂಬವನ್ಸದೆ ಕಾಸಿನೊಳ್ಗಡಣದೆ ಪೊತ್ತು ಬೇಡವಡೆ ಬಂದುದು (ಸೂಕ್ತಿಸು. ೩-೦೬೮). **ಹೇರಣಿಲೆ:** ೨. ಪೇರಣಿಲೆಯಿವು ಮುಂಗುರಿಗಳಿವು ಗೌಜುಗೆಗಳಿವು ಗಜಗಮನೆ ನೋಡು (ಕರಾಠಾ. ೩-೧-೩೦).
[ಪೇರ್$_1$ ( < ಪಿರಿದು$_1$) + ಅಣಿಲ್]

**ಪೇರಣೆ** 'ಪೇರಣ' ನೋ.

**ಪೇರಣೆಮಣಿ** (ನಾ). (?) : ಪತ್ತಿದರುಣೌಘದಿನಾ ವೃಷಶೃಂಗಯುಗ್ಮ ಮೊಂದಣಿಯರವಮಾಯ್ತು ಸಾರವಿಷ ನೆತ್ತರೊಳೊಕ್ಕಿಱಿದರ್ಚಿಸಿರ್ದ ಪೇರಣೆ [ಪಾಠಾಂ. ಣಿ]ಮಣಿಯೆಂಬ ಭೈರವನ ಲಿಂಗದ ಸೀಯದರಂಬೊಲದ್ಭುತಂ (ಅರ್ಧನೇ. ೯-೦೨೨). [ ? ]

**ಪೇರರ್ಬಿ** 'ಪೇರರ್ವಿ' ನೋ.

**ಪೇರರ್ವಿ, ಪೇರರ್ಬಿ** (ನಾ). ದೊಡ್ಡ ಜಲಪಾತ : ಪೇರರ್ವಿಗಳ್ಪರಿಸು ಜಾಡಿನ ಪರ್ವತಂಗಳಂತೆ ಕೆಡೆದು (ಶಂಕರಾ. ೦೦-೯೬ ವ): ಪೇರರ್ವಿಗಳ ನಸದಳಂ ಕಣ್ಗೆ ಚಿಲ್ವಾಗಿ . . . ಚಿತ್ರಕೂಟಂ ಸೊಗಯಿಸೆ (ಶಾರಾಮಾ. ೬-೩೦). **ಪೇರರ್ಬಿ:** ಪೆರ್ಗಱಿಗಳಿಂ ಪುಂಡ್ರೇಕ್ಷುವಾಟಕ್ಕೆ ಪೊಣ್ಮುವ ಪೇರರ್ಬಿಗಳೆತ್ತಲುಂ ಸೊಗಯಿಸುಂ (ಸುಕುಮಾ. ೯-೯೩).
[ಪೇರ್$_1$ ( < ಪಿರಿದು$_1$) + ಅರ್ವಿ]

**ಪೇರಲ, ಪೇರಲೆ$_2$, ಪೇರಿಲ, ಪೇರಿಲು** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಸೀಬೆ : ಚಂದೂರಿನಲ್ಲಿಯೇ ಅವರ ಪೇರಲ ಬನ ದೊಡ್ಡದು (ಶಿಸಗ. ೯೩) ; ಪೇರಲದ ತೋಟಗಳ ಹಳದಿ ಬಣ್ಣದ ಹಣ್ಣು (ಚಾಕಚ. ೨೨-೨೩) ; ಹುಬ್ಬಳ್ಳಿಯಿಂದ ಪೇರಲಹಣ್ಣಿನ ಬುಟ್ಟಿ . . . ಕಳಿಸಿ ಕೊಡುವಳು (ಗಂಪತಿ. ೩೬). **ಪೇರಲೆ$_2$:** ಹೊರಗಡೆ ಪೇರಲೆ ಮರದ ಮೇಲೆ ಮಂಗಗಳ ಕುಣಿತ (ಹೊಸಕ್ಷಿ. ೬೬). **ಪೇರಿಲ :** ನೇರಿಲ ಪೇರಿಲ ಬೋರೆಯ ಬೆಳವಲ ಫಲವಿಹುದು (ಕರಾಂತ್ರ. ೩೯-೦೩). **ಪೇರಿಲು :** ಬೆಲ್ಲವತ್ತಂ ಬೇವು ಜಕ್ಕ ತಂಡಸಿ ತವಸಿ ನೆಲ್ಲಿ ಪೇರಿಲು ಮಾವು ಬದರಿ (ಸಿದ್ಧರಾ. ೬-೦೬). [?./ಮರಾ. ಪೇರ, ಪೇರು]

**ಪೇರಲೆ$_1$** (ನಾ). ಭಾರಿಯಾದ ಅಲೆ ; ದೊಡ್ಡ ಅಲೆ : ಇದು—ದುಗುಡ ಸಂತಸದ ಪೇರಲೆಗಳೇರಿಳಿತದಿಂದೆ ಮರೆದಾಡುತಿಹ ಸಂಸಾರಸಾಗರದೊಳಲೆ ಯುತಿಹ ಜೀವಿಗಳ . . . ನೀಗುರ್ಡಿಸಿ ನಗುನಗುವ ಕಾಲನರಮನೆ ! (ಶಂಕಾ. ೨೯-೦೯). [ಪೇರ್$_1$ ( < ಪಿರಿದು$_1$) + ಅಲೆ$_1$]

**ಪೇರಲೆ$_2$** 'ಪೇರಲ' ನೋ.

**ಪೇರಳ್ಕು** (ನಾ). ಅತಿಯಾದ ಹೆದರಿಕೆ,—ಅಂಜಿಕೆ : ಪೇರಳ್ಕು ಪೇರಟಿಲ ಕಲ್ಲೋಲದಂತವೋಲ್ ಪುಟ್ಟಿಬ್ದು ಬಡಿಗುಮೇ ಬಡಿಬಡಿಪ ನುಡಿಗಳ್ (ರತ್ನಕ್ರ. ೯೬-೦೦೦೩). [ಪೇರ್$_1$ ( < ಪಿರಿದು$_1$) + ಅಳ್ಕು$_2$]

**ಪೇರಳ್ತಿ** (ನಾ). ಹೆಚ್ಚಿನ ಪ್ರೀತಿ ; ಅತ್ಯಾಸಕ್ತಿ : ಬಾಧಪಟ್ಟವೃಜಕೆ ಪೇರಳ್ತಿಯಂ ಜನಿಸುವೀ ಕಾವ್ಯಂ . . . ಫಲವನೀಯದಿರದು (ಲೀಸಾ. ೦-೦೨). [ಪೇರ್$_1$ ( < ಪಿರಿದು$_1$) + ಅಳ್ತಿ( < ಅಟ್ಟು)]

**ಪೇರಜಾಕೆ, ಹೇರಜಾಕೆ** (ನಾ). ಅಧಿಕವಾದ ಕೀರ್ತಿ ; ಅತಿಶಯವಾದ ಖ್ಯಾತಿ : ಪೆರ್ಬುಲಿಯ ವಿಾಸೆಯೊಳುಯ್ಯಲನಾಡುವೊಂದು ಪೇರಜಾಕೆಯ ಬೀರರ್ (ಎಕ. VII, ಶಿಕಾ. ೯೬-೦೬ ; 1100) : ಇರ್ಪರಿರ್ವರ್ ನೆಱದೊಕ್ಕಲ್ತನದ ಪೆರ್ಮೆಯೊಕ್ಕಲಿಗರ್ ಪೇರಜಾಕೆಯ ಶಶಿ ಸೂರ್ಯರ್ ಖ್ಯರ್ (ಚಂದ್ರಪು. ೩-೯೬) ; ತಕ್ಕಿನ ರಕ್ಕಸರನೊಕ್ಕಲಿಕ್ಕಿದ ಪೆಸರ ಪೇರಜಾಕೆಯೊಳಿಂತೆಂದಂ (ಶಬ್ದಸಾ. ೨೯೩). **ಹೇರಜಾಕೆ:** ಅದಱ ರಾಮಂ ಮಱುಗರೆ ನಾಡೊಳಗೇ ಹೇರಜಾಕೆಯ ಕಯ್ದಾಳದಲಿ ಧರ್ಮ್ಮೋನ್ನತಿಯುಂ ಆ ಕಯ್ದಾಳವ ವಿಳಾಸಾಟ್ಟದವದೆಂತೆಂದೊಡೆ (ಎಕ. XII, ಕುಣಿಗಲ. ೯-೩೬; 1151) ;

ಕುಂದದೆ ಲಕ್ಷ್ಮಿಯಿರ್ಪ್ಪ ಹೇರಚಿಕೆಯಶೇಷಸೌಖ್ಯನಿಳಯಂ (ಎಕ. IV. ಹುಣಸೂ. ೦೪೭-೯೩ : 1162). [ಪೇರ್$_1$ (< ಪಿರಿದು$_1$) + ಅಚ್ಚಿಕೆ]

**ಪೇರಚ್³** (ನಾ). ದೊಡ್ಡ ಬಂಡೆ: ಪೇರಚ್ಚಿಯ ತೆಐದೆ ಜಲಪುಂಜದಿಂ ಮಿಂಚಿನಿಂ ಸಾರವೊಳಗಿಂದೆ . . . ಮುಂಗಾರ್ ಬಂದುದು (ಶಾಪಂ. ೬-೨). [ಪೇರ್$_1$ (< ಪಿರಿದು$_1$) + ಅಚ್$_4$]

**ಪೇರಾಣ್ಕೋವ** (ನಾ). ಒಬ್ಬಾತನ ಹೆಸರು : ಸತ್ಯಾನ್ ಪೇರಾಣ್ಕೋವನ್ (ಪ್ರಮಕಂ. ೧೧೦೭. ೦೦-೫ ; 7ನೆಯ ಶತ) ; ಮಂದುವೂರಾ ತೊಟು ಕೊಳ್ವಲ್ಲಿ ವಿಟ್ಟಿಯ್ದೇರ್ ಪೇರಾಣ್ಕೋವರ್ (ಎಕ. X, ಶ್ರೀನಿವಾ. ೨೦-೬ ; ಸು. 750). [?]

**ಪೇರಾನಂದ, ಹೇರಾನಂದ** (ನಾ). ಅತಿಶಯವಾದ ಸಂತೋಷ,-ಹಿಗ್ಗು; ಮಹದಾನಂದ: ಹೋ! ಆನಂದಂ! ಪೇರಾನಂದಂ! ನೆಗೆವಾ ಗುಣವಾ ಮಿಗುವಾನಂದಂ! (ಅಕ್ಷತಾ. ೨೯-೫೧೩). **ಹೇರಾನಂದ** : ಅವನಾಟವನು ಕಣ್ಣುಂಬ ನೋಡುತಿಹವದುವೆ ಹೇರಾನಂದವಾನಂದ! (ಪಕಣಾ. I, ೯೩೨). [ಪೇರ್$_1$ (< ಪಿರಿದು$_1$)+ಆನಂದ]

**ಪೇರಾನೆ, ಹೇರಾನೆ** (ನಾ). ದೊಡ್ಡ ಆನೆ: ಪಾಱಿ ತುಱಿದ ಪೇರಾನೆಯೊಡಲ್ಗಳಭ್ರತಳದೊಳ್ ಸಿಲ್ಕಿರ್ದುವು (ಶಂಕಪಾ. ೧೦-೬೬); ಭೂತಗಣಂ ಪೇರಾನೆಯ ನೆಣನಂ ತಿಂದೆರ್ದಾನಂದದೆ ಕೂಡೆ ನಲಿದು ನರ್ತ್ತಿಸುತಿರ್ಕ್ಕುಂ (ಎಕ. VIII, ಸಾಗರ. ೧೧೯-೩೯ ; 1042) ; ಪೇ[ಪಾಠಾಂ. ಹೇ]ರಾನೆವೆಟ್ಟುಗಳ ನೆತ್ತಿಯ ಮುತ್ತುಗಣಿಯನುಗುಚ್ಚಿ ವಜ್ರದ ಗುದ್ದಲಿಗಳೆನಿಸಿ . . . ಅಳುಂಬವಾದ ದಂಷ್ಟ್ರಾಂಕುರಂಗಳೊಳಂ . . . ಭಯಂಕರವಾದುದು (ವರ್ಧಕು. ೦೦-೩೭). **ಹೇರಾನೆ** : ಕಡಿದು ಬಿಸುಟನು ತುರಗದಳವನು ಕೆಡಹಿದನು ಹೇರಾನೆಗಳ (ಕುಮಾ.ಐ. ೯-೦೮); ಹೇರಾನೆಯ ತಲೆಯಡಗ ಭಕ್ಷಿಸುವ ಕಂಠೀರವನೊಡಲ ನೆಗ್ಗೊತ್ತಿ . . . ಶರಭ ಹೂಂಕಾರದಿಂದಿರ್ದುದಾಗ (ಮೋಹತ. ೦೯-೩೯). [ಪೇರ್$_1$ ( < ಪಿರಿದು$_1$ ) + ಆನೆ$_1$]

**ಪೇರಾಮೆ, ಪೇರಾವೆ** (ನಾ). ೧. ದೊಡ್ಡ ಆಮೆ. ೨. ವಿಷ್ಣುವಿನ ಹತ್ತು ಅವತಾರಗಳಲ್ಲಿ ಎರಡನೆಯದು ; ಆದಿಕೂರ್ಮ : ಶ್ರೀಯುಮಕ್ಕೆ ಶೈಲಮಂ ಪೊತ್ತಾಯಸಮಂ ಮಱೆದು ನೀಡಿ ಕೊರಲಂ ಮಲೆತೊಂ ದೋಯರದಿಂದಂ ನಿಟ್ಟಿಪ ಮಾಯೆಯ ಪೇರಾಮೆ ಕುಡುಗೆ ನರಪತಿಗೊಳ್ಪಂ (ಕಕಂ. ೩-೧). **ಪೇರಾವೆ** : ೧. ಪಾವಸೆಗೊಂಡ ಪೇರಾವೆಯಂ ತಾಪಸರೆಯ ಕೊಡೆಯೆಲೆಗೆತ್ತಬಱಿಯದೆಬಗಿ (ಶಂದ್ರಪ್ರ. ೫-೧೦ ಪ); ಏಡಿಯಿಂ ಮೊಸಳೆಯಿಂ ಪೇರಾವೆಯಿಂದಾನೆಯಿಂ ... ಒಪ್ಪಿದುದಿಳಾಶ್ರೀಗಾಗರಂ ಸಾಗರಂ (ಶಾಶ್ವ. ೦-೦-೦೮). [ ಪೇರ್$_1$ ( < ಪಿರಿದು$_1$ ) + ಆಮೆ$_1$]

**ಪೇರಾಲ್** ' ಪೇರಾಲ ' ನೋ.

**ಪೇರಾಲ, ಪೇರಾಲ್, ಹೇರಾಲ** (ನಾ). ದೊಡ್ಡ ಆಲದ ಮರ : ಚಳಿಗಾಱಿದ ಪೇರಾಲದ ಕೆಳಗಿರ್ಪನಿತಱಿಂದೊಳೆ . . . ಸೂಸುವರೆವನಿಗಳೆನೊರ್ವಂ ನೆನೆದು ನಡುಗಿ ಸಿಡಿಮಿಡಿಗೊಂಡಂ (ಶಾಂತೀ. ೯-೨೪); ಬಳಿಯ ಪೇರಾಲವು ಬೀರ್ವರಸುರುಳಿರುವೆಡೆಗೆಡೆಯೂರೆನಿಸುವುದು (ನಾಕಾಸ. ೨೯-೯೯). **ಪೇರಾಲ್** : ಮೊಱಡಿಯ ಮೇಗಿಟ್ಟ ಪೇರಾಲೆ ಈಶಾನಂಗೆ ಸೀಮೆ ನೆಡು ಮೊಱಡಿಯಾ . . . ಪಳ್ಳಮ (ಎಕ. IX (S), ಕಂಗಳೂ. ೦೫೦-೪೮ ; 828). **ಹೇರಾಲ** : ಅದೊಂದು ವಟಭೂಜಾತಮೊಪ್ಪಿತು ಪಿರಿದಾಗಿ ಕಾಲಿಕ್ಕಿ ನೆಱೆದ ಹಲ ಹೆಣನೆಲ್ಲಲುಮಾಲೆಗಟ್ಟಿದ ಬಳ್ಳಿಗಳುಳು ಸಾಲೇಱಿದ ಪಂದಲೆಯಿಂದ ಹೇ[ಪಾಠಾಂ. ಪೇ]ರಾಲಯ[ವು] ಭಯಂಕರವಾಯಿತ್ತು (ಶ್ರೀಪಾಂ. ೬-೩೩). [ಪೇರ್$_1$ ( < ಪಿರಿದು$_1$ ) + ಆಲ$_1$]

**ಪೇರಾವೆ** ' ಪೇರಾಮೆ ' ನೋ.

**ಪೇರಾಸೆ, ಹೇರಾಸೆ** (ನಾ). ಹಿರಿಯಾಸೆ ; ಹೆಬ್ಬಯಕೆ ; ಮಹತ್ವಾಕಾಂಕ್ಷೆ: ನಾಡಿನಲ್ಲಿ ಹಿಂದಣ ಅದೇ ದಿನಗಳು ಮರುಕಳಿಸಬೇಕು ಎಂಬ ಪೇರಾಸೆಯಿಂದ ಅಂತಹ ಕಜ್ಜದಲ್ಲಿ ಮನವಾಡಿದೆನಹುದು (ಸತಕ. ೦೬೦) ; ತನ್ನ ಕುವರಂ ತನಗೆ ಸರಿಯೆನ್ನಲೆಳಸಿದೊಂದುನ್ನತಿಯ ಪೇರಾಸೆ ಬಯಲಾದುದೇ (ಅರುಣ. ೨೦-೮೯). **ಹೇರಾಸೆ** : ಈ ಪಾಳೆಯಗಾರಿಕೆಗಳ ಹೇರಾಸೆಯ ದೊರೆಗಳು ಒಬ್ಬರೊಬ್ಬರ ಮೇಲೆ ಮತ್ತೆ ಮತ್ತೆ ಯುದ್ಧ ಮಾಡಿದುದು ಕಂಡುಬರುತ್ತದೆ (ಕಕ್ಕಪ್ರಾ. ೩೨೯) ; ಹೇರಾಸೆಗಳನಟ್ಟಿ ಮಿತಿಯೊಳಗಿದ್ದರೆ ನೆಮ್ಮದಿಯಿರುವುದು ಮನಕೆ (ಇಂತಿಶ. ೨೨೬-೦೭). [ಪೇರ್$_1$ ( < ಪಿರಿದು$_1$ ) + ಆಸೆ$_1$]

**ಪೇರಾಳ್** ಹೇರಾಳು (ನಾ). ಕಟ್ಟಾಳು ; ಮಹಾಶೂರ: ಈರಯ್ಯನಸ್ತ್ರದಿಂದೆಚ್ಚು ಖಂಡಿಸಿ ಪೇರಾಳ್ ತಿಱಿದಿಕ್ಕಿದಂತೆ ತಲೆಯಂ ಪೋಗೆಚ್ಚನಾ ಶ್ವೇತನಾ (ಶಂಕಪಾ. ೦೦-೧೨೩); ದ್ವಿಷತ್ಸೇನೆಯೊಳ್ ಪೇರಾಳುಂ ತುರಗಂಗಳುಂ ರಥಮುಮುನ್ಮತ್ತೇಭಮುಂ ಬಿಟ್ಟುವು (ಶಂಪಾಶು. ೦೪-೦೨೦). **ಹೇರಾಳು** : ಬಂದ ಬಲ ಹೇರಾಳ ತೆಗೆತೆಗೆ (ಕುಮಾರ. ೦೮-೩೩). [ಪೇರ್$_1$ ( < ಪಿರಿದು$_1$ ) + ಆಳ್$_3$]

Δ **ಪೇರಾಳ$_1$** 'ಹೇರಾಳ$_1$' ನೋ.

**ಪೇರಾಳ$_2$** (ನಾ). ಅತಿಯಾದ ಆಳ,-ಗಭೀರತೆ : ಇಹರು ಹೆಗ್ಗಡಲ ತಳಕೂ ಮುಳುಗಿ ಬಂದವರು . . . ಈ ಬರಿಹೆಣ್ಣಾ ಎದೆಗಡಲ ಪೇರಾಳ ಕಂಡ ಕಲಿಗಳು ಮಾತ್ರ ಕಂಡರಿಲ್ಲ (ಪಕಣಂ. ೩೯-೩). [ಪೇರ್$_1$ ( < ಪಿರಿದು$_1$ ) + ಆಳ$_1$ ( < ಆಟ)]

**ಪೇರಾಟ್ಟಿಪಳ್ಳ** (ನಾ). ಒಂದು ಹಳ್ಳದ ಹೆಸರು : ಬಡಗ ಪೋಗಿ ಬೆಳ್ಳೊಲೆಯ ಬಟ್ಟೆಯ ಪೇರಾಟ್ಟಿಪಳ್ಳಂಬಡಿದು ಪೋಗಿ ಪಿರಿಯ ಪಳ್ಳದಳ್ಕೊಡಿ (ಸೌಇಇ. IX-I. ೩೮-೨ : ?). [ಪೇರಾಟ್ಟಿ$_0$ + ಪಳ್ಳ]

**ಪೇರಿ$_1$** 'ಫೇರಿ' ನೋ.

**ಪೇರಿ$_2$** (ನಾ). (?) : ಪೆರಿಯಾ ಒಸಗೆಯಂ ಅಲವಣವುಂ ಅಪುತ್ರಕ ಪೊಗಳುಮಾನ್ ವಿಟ್ಟಾರ್ (ಇಇ. XIX. ೦೪೯-೫ ; 880); ತಪ್ಪದೆ ನಡಸುವುದಕ್ಕೆ ಕೊಟ್ಟ ಕೇಳ್ವಿಯ × ಪೇರಿಯ × × × ಉಭಯಂವೆರಸಿ ಯಿಾ ಗ್ರಾಮಕೆ ಅಱಿವಾಮನ್ಯವು ಮಠಕ್ಕೆ ಅಱಿವಾಮನ್ಯವಾ[ಗಿ] ಕೊಟದು (ಸೌಇಇ. IX—II. ೯೬೬-೮ ; ಸು. 1472). [?]

**ಪೇರಿಕೆ** (ನಾ). ಓರಣವಾಗಿ ಒಂದರ ಮೇಲೊಂದರಂತೆ ವಸ್ತುಗಳನ್ನು ಇಟ್ಟಿರುವುದು : ಪಟ್ಟಿಗಳನ್ನು ಸೇರಿಸಿ ಪರಮಾಣು ಪೇರಿಕೆಗಳನ್ನು (Atomic piles) ಮಾಡುತ್ತಾರೆ (ಕಿಂಕಾ. ೨೬೨) ; ಹೀಗೆ ಮಾದರಿಗಳನ್ನು ಒಳಗೊಂಡ ಹೀರುದಾಳಿಗಳ ಪೇರಿಕೆ ಒಂದು ಒಂದೂವರೆ ಅಡಿ ಎತ್ತರವಾದರೂ ಚಿಂತೆಯಿಲ್ಲ (ಹಸುಹೂ. ೦೨೬). [ ಪೇರು$_1$ (<ಪೇಱು$_1$) + -ಇಕೆ./ತುಳು. ಪೇರಿಕೆ ]

**ಪೇರಿಟ್ಟಿ, ಹೇರಿಟ್ಟಿ, ಹೇರೀಟಿ** (ನಾ). ನೀಳವಾದ ಶಲ್ಯ ; ದೊಡ್ಡ ಈಟಿ : "ಪೇರಿಟ್ಟಿಯ ಬಿಟ್ಟೇಱು" (ಕಶಬ್ದ. ೨೦೩) ; ಮುಸಲ ಪೇರಿಟ್ಟಿ ··· ಶಕ್ತಿಯಾದಿಯನು ವಿಭುಗಳು ಧರಿಸಿ ಯುದ್ಧಕೆ ಸೇರಿದರಾಗ ಸುಭಟರಂದಾಳು ಪೇರಿಯನು (ಅಪಂಕ. ೦೯-೯೩). **ಹೇರಿಟ್ಟಿ** : ಸುಲಿ ತೊಗಲ ಹಿಡಿದು ಹೇರಿಟ್ಟಿಯಿಂದಿಱಿ ಕರುಳ (ಹಕಳಾ. ೬-೩೯) ; ಹೇರಿಟ್ಟಿ ಪೊಱೆಯ ಪೆರ್ಬಲೆ . . . ಕವಲಂಬುಸಹಿತಂ ಭೋರನೆ ನೆಱೆದತ್ತು ಬೇಂಟೆಕಾಱರ ತಂಡಂ (ವಕಕಂ. ೬೯) ; ಸಾಲವನು...ಹಿಂದೆ ಕೊಡುವಾಗ ಹೇರಿಟ್ಟಿ[ಪಾಠಾಂ. ಟ್ಟೆ] ಬಂದು ಬಡಿದಂತೆ (ಸರ್ವಜ್ಞ. ೦೩೯೨). **ಹೇರೀಟಿ**: ಹೇರೀಟಿಯಿಂದಿಱುಬುವ . . . ಕರಗಸದಿ ಕೊಱೆವ ರೌರವದ ನರಕಂ ಭಯಂಕರವಾದುದು (ಸಿದ್ಧರಾ. ೬-೨೮). [ ಪೇರ್$_1$ (<ಪಿರಿದು$_1$) + ಇಟ್ಟಿ$_2$ ]

**ಪೇರಿರ್ವೆ** (ನಾ). ದೊಡ್ಡ ಹಿಪ್ಪೆಮರ : ತಸ್ಯ ಸೀಮಾನ್ತರಂ ಕೊಳ್ಳಿನ ತೊಱೆವ ಪೇರಿರ್ಪ್ಪೆಎ (ಎಕ. XVI. ಗುಬ್ಬಿ. ೬೫-೫೦ ; 733). [ಪೇರ್$_1$ (<ಪಿರಿದು$_1$) + ಇರ್ವೆ]

**ಪೇರಿಲ** 'ಪೇರಲ' ನೋ.

**ಪೇರಿಲು** 'ಪೇರಲ' ನೋ.

**ಪೇರಿಸು**$_1$ 'ಪೇಱಿಸು$_1$' ನೋ.

**ಪೇರಿಸು**$_2$, ಪೇರ್ಚಿಸು (ಕ್ರಿ). ೧. ದೊಡ್ಡದಾಗು ; ಅಗಲವಾಗು : ಕೊಡಿದುವವ್ವ ಕಣ್ಮಲರ್ಗಳಳ್ಕಿರ್ದೆಯೊಳ್ ತಡವಾಡ ಶಾವ ಕಣ್ ಪೇರಿಸೆ ಪುರ್ವು ನಾಲಗೆವೊಲಾಗೆ ಮನಂಬುಗಿಸಲ್ಕೆ ಬಲ್ಲೊಡಾ ಜಾರೆಯ ಜಾರೆ (ಪಂಪಭಾ. ೪-೬೩). **ಪೇರ್ಚಿಸು** : ೨. ಅಧಿಕವಾಗು ; ಅತಿಶಯಿಸು(?) : ಅದಱ ಕರ್ಣಚಮರದ ರ್ಝಲ್ಲಿಯಂತೆ ಜಲ್ಲೆನೊಟ್ಟು ಧಾರೆಗೆದಱ ಪೇರ್ಚಿಸಿ ಸೂಸುವುಭಯಕಟದ ಸೊರ್ಕುಕದಡಿನ ತೆರ್ಕೆಗಡಲ್ಗಳೊಕ್ಕೈಸಿ (ಆಪಂಪು. ೦೩-೨೦ ವ). [ಪೇರ್$_1$ (< ಪಿರಿದು$_1$) + — ಇಸು$_3$]

**ಪೇರೀಳೆ**, ಪಿರಳೆ, ಹೆರಳೆ, ಹೇರಳೆ, ಹೇರಿಳೆ, ಹೇರೀಳೆ (ನಾ). ಈಳೆಯ ಜಾತಿಗೆ ಸೇರಿದ ಒಂದು ಬಗೆಯ ಮರ ಮತ್ತು ಅದರ ಹಣ್ಣು : ಕಂಚೀಕಾಯಿ : ಪೇರೀಳೆಯು ನಾರಂಗವ ಕಂಚೀಳೆಯ ತನಿವಣ್ಣನಿಕ್ಕೆ ಮೆಲ್ದು (ಧರ್ಮಾಮೃ. ೦-೦೫೦) ; ಬಾಳೆ ಪೇರೀಳೆ ತಾಳೀತರು ತೆಂಗುಂ . . . ಸಾಲ್ಗೊಂಡು ಕಣ್ಗೊಪ್ಪುತಿರ್ಕುಂ (ರಾಜಶೇ. ೨-೩೬); ಕಿತ್ತೀಳೆ ಪೇರೀಳೆ ಬಾಳಂಬಂ . . . ಮನೋಹರವಾಗಿರ್ಕುಂ (ರಾಜಶೇಖ. ೬-೨೩). **ಹಿರಳೆ** : "ಹಿರಿಳೆ, ಹಿರುಳೆ, ಹಿರಳೆ = ಕಂಚೀಕಾಯಿ" (ಗಂಗಾಧರ. ೩೯೬) ; ಹಿರಳೆ ಕಾಯಿ ಗೊಜ್ಜು, ಉಪ್ಪಿನಕಾಯಿ ತಿನ್ನಲು ರುಚಿಯಾಗಿರುತ್ತವೆ (ರೂಢಿ). **ಹೆರಳೆ** : "ಐರಾವತಃ, ನಾಗರಂಗಃ—೨ ಹೆರಳೇಗಿಡ" (ಸಿದ್ಧಾಂತಿ. ೦೨೦) ; ನಾರಾಯಣನಿಗೆ ಕಣ್ಣು ಹೆರಳೆಕಾಯಿ ಗಾತ್ರವಾಯಿತು (ಗುರುರಾ. ೬೭). **ಹೇರಳೆ** : "ಕಾಗಿನೇರಳೇಗಿಡ . . . ನೆಲನೇರಳೇಗಿಡ—ಈ ೪ ಹೇರಳೇ ಗಿಡವೆಂದು ಕೆಲವರನ್ನುವರು" (ಸಿದ್ಧಾಂತಿ. ೦೨೦) ; ಹೇರಳೆ: ಈ ಚೆಕ್ಕೆಯನ್ನು ಎಮ್ಮೆಕಟ್ಟುವೊಸರಿನಲ್ಲಿ ಅರೆದು ಕಟ್ಟುವೊಸರಲ್ಲಿ ತೆಗೆದುಕೊಳ್ಳೆ ಅತಿಸಾರ ಪರಿಹಾರ್ಗಂ (ಅಶ್ವಶಾ. ೮) ; ಕಿತ್ತಲೆ, ಹೇರಳೆ . . . ಅಂಜೂರ ಇವೇ ಮುಂತಾದ ಹಲವು ಹಣ್ಣಿನ ಗಿಡಗಳನ್ನು ತೋಟಗಳಲ್ಲಿ ಬೆಳೆಯಬಹುದು (ವೃಕ್ಷವು. ೩೬). **ಹೇರಿಳೆ** : "ಜಂಬೀರಃ—ನಿಂಬೆ, ಹೇರಿಳೆ, ಮರುಗ, ಲಕ್ಕೊರಲೆ" (ಓಷಧಿ. ೭೦) ; ಹೇರಿಳೆ ಪರಿಮಳಸಾರವಂ ನಿನ್ನಲ್ಲಿ ಮಾರಾರಿಗೀಯೆಸುತ್ತಂ ಹೂಗೊಳುತ್ತಲ್ಲಿ (ಭಕ್ತಸ. ೯-೦೬) ; ಪೂರ್ಚಿಸಿದ ಫಲ ಸಹ ಹೇರಿಳೆಯ ಮರವಾರಾಮದೊಳೊಪ್ಪಿದುವು (ಕಂಪಪಿ. ೫-೮೨) ; ಹೇರಿಳೆ ಹಾಗಲಗಳಲ್ಲಿ, ಒಬ್ಬೊಬ್ಬರಿಗೆ ಒಂದೊಂದು ಇಷ್ಟವಾಗಿರುತ್ತದೆ (ಜೀವಶಾ. ೩೯). **ಹೇರೀಳೆ** : "ಹೇರೀಳೆಯೆನೆ ಕಂಚಿ" (ಮಂಗರಾ. ೩೯-೦೦) ; ಮಂಜುಳಫಲೋಚ್ಚಂಡವಾದ ಕಿತ್ತೀಳೆಯಿಂ ಕಂಜಿಗುರಲರ್ವಣ್ಣಗಳವರ್ದ ಹೇರೀಳೆಯಿಂ . . . ವಿಮಲಪಲ್ಲವಿಗಳಿಂ ಪೊಂಗಿ ಪೊಂಪುಟೆಯೋಗಿ (ಉದ್ಭಟ. ೩-೯೦) ; ಮಧುರರಸದ್ರುಮದ ಕಿತ್ತೀಳೆ ಕಂಪಿತ ಫಲಭರದ ಹೇರೀಳೆ (ಕೊರಟಾ. ೫-೪-೬). [ಪೇರ್$_1$ (< ಪಿರಿದು$_1$) + ಈಳೆ]

**ಪೇರು**$_1$ 'ಪೇಱು$_1$' ನೋ.

**ಪೇರು**$_2$ 'ಪೇಱು$_2$' ನೋ.

**ಪೇರು**$_3$ 'ಪೆಸರ್' ನೋ.

**ಪೇರುಕಟ್ಟು** (ಕ್ರಿ). ತಕ್ಕಡಿಯ ಪರಡೆಗಳ ಸಮತೋಲನವು ವ್ಯತ್ಯಾಸಗೊಂಡಾಗ ಭಾರವನ್ನು ಹೆಚ್ಚು ಕಡಮೆ ಮಾಡಿ ಸಮಗೊಳಿಸಂ : ಪದಾರ್ಥವನ್ನು ತೂಕ ಮಾಡುವುದಕ್ಕೆ ಮುಂಚೆ ಪೇರುಕಟ್ಟಿ ತೋರಿಸು (ರೂಢಿ). [ಪೇರು$_2$ (< ಪೇಱು$_2$) + ಕಟ್ಟು$_1$]

**ಪೇರುಡು**, ಹೇರುಡು (ನಾ). ದೊಡ್ಡ ಉಡು : ಫಲ್ಗಾನೊಳಾ ಪೋಪ ಪೇರುಡುವಂ ಸೋವು (ಸೂಕ್ತಿಸು. ೩-೦೦೫) ; ಪೇರುಡುವಿೞಿದು ಬಂದುಂಡು ರಸವನು ಪೋಗುತದ (ಶಾರ್ಙ್ಗ್ನಾ. ೦೭-೬೬). **ಹೇರುಡು** : ಭಲ್ಲಾತಕತರು ಮೂಲಂ ಸಲ್ಲಲಿತ ಗುಡಸೂಚಿ ಭದ್ರಮುಸ್ತೆಯಿಮಂ ತಾಂ ನಿಲ್ಲದೆ ನೀರಿಂ ಕುಡಿಯಲ್ ನಿಲ್ಲದು ಪೇರುಡುಗಳಗಿದು ತುಡುಕಿದ ಗರಳಂ (ಖಗೇಂ. ೦೩-೯೯). [ಪೇರ್$_1$ (< ಪಿರಿದು$_1$) + ಉಡು$_2$]

**ಪೇರುರ**, ಹೇರುರ (ನಾ). ೧. ವಿಸ್ತಾರವಾದ ಎದೆ : ಹರವಾದ ವಕ್ಷಸ್ಥಳ : ಸಕಳಕಳಾಧಾರನ ಪೇರುರದೊಳ್ಮಣಿಹಾರಂ ಥಳಥಳಿಸಿ ಪೊಳೆವುತ್ತಿರ್ದತ್ತಾಗಳ್ (ಕಾದಂಪೂ. ೩೦) ; ಶ್ರೀರಮಣಿಗೆ ನೆಲೆ ತನ್ನಯ ಪೇರುರಮಂ ಮಾಟಿಸ್ಸೆಂಬ ಬಗೆ ಮಿಗೆ (ಗರುಡಪು. ೬-೦) ; ಖಳನ ಪೇರುರದಲ್ಲಿ ತಾಗ ಲೆಚ್ಚನು ಕಡೆಯೆನುತ (ಜೋಹಷ. ೩೯-೨೦). ೨. (ಸ್ತ್ರೀಯ) ಉನ್ನತವಾದ ಎದೆ ; ಪುಷ್ಪವಾದ ಸ್ತನ : ಜಾರ ಗೋಪಾಂಗನೆಯ ಪೇರುರದ ಸೋಂಕು ಚಿಂತಾರತ್ನವನೆ ತ್ರಿದಿವದೂರ ಸಂಪತ್ತಲಾ (ರಾಪಶಂ. ೫-೯). **ಹೇರುರ** : ೧. ಕಲಿಪಾರ್ಥನು . . . ಕೌರವನ ಹೇರುರದಲಂಬನು ಹೂಳಿದನು (ಕುಮಾವ್ಯಾಕೀ. ೬-೦೦೬) ; ಓನಹೃದಯನ ಹೇರುರವನೆಚ್ಚೊಡನೆ ಕೆಡೆಕೆಡೆಯೆನುತ ನಡೆತಂದ (ತೊರವೆರಾ. ೪-೪-೨೯). ೨. ಮದನಾರಿಯರ್ಧದ ನಾರಿ ಹರಿ ತಾ ಹೇರುರದ ಹೆಂಗುಸುಱ ಬೊಮ್ಮನು ಮಗಳ ಮೋಱಗೇಡಿ (ಕುಮಾವ್ಯಾಉ. ೦೩-೩೭). [ಪೇರ್$_1$ (< ಪಿರಿದು$_1$) + ಉರ$_2$]

**ಪೇರುರಿ**, ಹೆಬ್ಬುರಿ (ನಾ). ದೊಡ್ಡ ಉರಿ ; ದಳ್ಳುರಿ : "ದಳ್ಳುರಿಯು ಪೇರುರಿಯು ಘನಜ್ವಲಿತದೊಳು ಸೊಗಯಿಪ್ಪುದು" (ಶಬ್ದಮಂ. ೦೨) : ಪೇರುರಿಯಾರತಿಯನೋರಂತೆ ಪಿಡಿದು ಬೆಳಗೆಯುಂ (ವೃಷಭ. ೯-೨೦ ವ). **ಹೆಬ್ಬುರಿ** : ಎಬ್ಬಸುತ ಹೆಬ್ಬುರಿಯ ಕಾರ್ಬೊಗೆಯ ಕಣೆಗಳಂ (ಶರಶ. ೨೯-೩೩). [ಪೇರ್$_1$ (< ಪಿರಿದು$_1$) + ಉರಿ$_2$]

**ಪೇರುಸಿರು**, ಪೇರುಸಂರು (ನಾ). ನಿಡಿದಾದ ಉಸಿರು ; ನಿಟ್ಟುಸಿರು : ಕೊಡವಿಡಿದು ಪೆಡಯುಸದರಡಿಯ ಮರಿಯನ್ನಿಟ್ಟು ನಿಡುತರದ ಪೇರುಸಿರ ಗಾಳಿಯಿಂ ತಣ್ಣಿಸುತೊಡನಂದು ಮರುಗುತಿರಲು (ವೆಂಕಟಾರಾ. ೩-೭-೦೨). **ಪೇರುಸುರು** : ತಲ್ಲಣಿಸಿ ಹೋಗುತ ಬರುತ್ತಿದೆ ಡಿಳ್ಳವಾಗುತ್ತಿರನೆ ಲಕ್ಷ್ಮೀವಲ್ಲಭಂ ನಂದೀಶ್ವರನ ಪೇರುಸುರುಗಳು ತೊಡಕಿ (ಬಸಪು. ೫೪-೪೦). [ಪೇರ್$_1$ (< ಪಿರಿದು$_1$) + ಉಸಿರು$_2$ (< ಉಸಿರ್$_2$)]

**ಪೇರುಸುರು** 'ಪೇರುಸಿರು' ನೋ.

**ಪೇರೂರ್**, ಹೇರೂರ್ (ನಾ). ೧. ದೊಡ್ಡ ಊರು—ಗ್ರಾಮ : ನೂರಾರು ಪೇರೂರ್ಗಳಂ ದಱಂಟ (ಶಿವಶಾ. ೬-೫೦). ೨. ಒಂದು ಊರಿನ ಹೆಸರು : ಕೋರಿಕುನ್ದವಿಷಯೇ ವೆನ್ನೆಲ್ಕರನಿಗ್ರಾಮಃ ಪೇರೂರೇವಾನಿ ಅಡಿಗಳ್ (ಎಕ. X, ಮಾಲೂರು. ೭೨-೨೯; 425 ? ಕೃಶಾ); ನ್ಯೆರಿತಿಯೊಳೆ ಅವದಕಲ್ ತೆಂಕ ಪೇರೂರ ಪಳ್ಳಂ (ಎಕ. XI, ಮೊಳಕಾ. ೨೭ ೬; ೯೬೨). **ಹೇರೂರ್** : ೨. ಹೇರೂರ . . . ಶ್ರೀಪಾದಪದ್ಮಾರಾಧಕ ರಾಚಯ್ಯ (ಎಕ. VII, ಹನ್ನಗಿ. ೩೨-೨೩೩; ಸು. 1050 ?); ಮಾನ್ನ ತನ್ನರ್ತಿಗೆ ಹೇರೂರ ಹೆಣ್ಣಂ ಗಂಡುರೂಪಂ ಮಾಡಿದೋಪಾದಿಯಿಂದೆನ್ನಂ ಹೆಣ್ಣಂ ಮಾಡದೆಂತು ಪೋದಪಂ (ಏಕರ. ೦೨-೦೨೫). [ಪೇರ್$_1$ (< ಪಿರಿದು$_1$) + ಊರ್]

**ಪೇರೆದೆ** (ನಾ). = ಪೇರುರ ೧ : ಉನ್ನತನ ಭುಜಯುಗಲ ಪೇರೆದೆ ಹೊನ್ನ ಸಳಿನಡು ಬಾಳೆದೊಡೆ ಮೆಱೆದನ್ನರಂ ಸೋಲಿಸುವ ಜವ್ವನ ವಾಂತನಾ ಕುವರ (ಶಾಕ್ಶಾ. ೪-೬). [ಪೇರ್$_1$ (< ಪಿರಿದು$_1$) + ಎದೆ (< ಎರ್ದೆ)]

**ಪೇರೆಲು** (ನಾ). ದೊಡ್ಡ ಎಲುಬು; ನಿಟ್ಟೆಲುವು : ರಕ್ತದೊಳ್ ನನೆದು ಪೇರೆಲುಗಳುಮನೊದೆದು ಕೈದುಗಳ ಸೋಂಕಿಂ ಗಾಯವಡೆದು (ಚೆಂಪು. ೪೪-೪೪). [ಪೇರ್$_1$ (< ಪಿರಿದು$_1$) + ಎಲು$_1$ (< ಎಲ್ವು)]

**ಪೇರೆಲೆ** (ನಾ). ಅಗಲವಾದ ಎಲೆ : ಬಲದ ಕೈಯಲಿ ಮಾಂಸವಿಹ ಪೇರೆಲೆಯ ಜೊನ್ನೆಯನಾ ಶಿವೈಕ್ಯಂ ಪಿಡಿದು ನಡೆತಂದು (ಬಸಪು. ೧೮-೨೦). [ಪೇರ್$_1$ (< ಪಿರಿದು$_1$) + ಎಲೆ$_1$]

**ಪೇರೆಳ್ತು** (ನಾ). ಭಾರಿಯಾದ ಎತ್ತು: ಭಾಳಮಧ್ಯಸ್ಥಳಬದ್ಧಸ್ವರ್ಣಪಟ್ಟಾಂಕನದಿನಿಸವ ಪೇರೆಳ್ತುಗಳ್ಪೆರ್ಮೆಯಿಂದಂ . . . ಪರಿಯೆ (ಧ್ವಕಂ. ೩೮-೬೯). [ಪೇರ್$_1$ (< ಪಿರಿದು$_1$) + ಎಳ್ತು (<ಎಱ್ತು$_1$)]

**ಪೇರೇರ** (ನಾ). ಒಬ್ಬಾತನ ಹೆಸರು: ಇಳಮ್ಮಟುವಸ್ಯ ಪುತ್ರೇಣ ಪೇರೇರನ್ನಾಮಲಿಖಿತಮ್ ಪಟ್ಟಿಕಾ (ಕ್ಕುಅಂ. ೦೧೩೬, ೧-೪೯: ಸು. 567). [?]

**ಪೇರ್ಸಿರಿ** (ನಾ). ಹಿರಿದಾದ ಸಂಪತ್ತು,—ಐಶ್ವರ್ಯ: ಈ ರೇಖೆಯೆ ಧನರೇಖೆಯಿದಾರಯ್ಯಂ ನುಡಿಗುವಿವನ ಪೇರ್ಸಿರಿಯಿಯಂ (ಜಕ್ಕಕಂ. ೫-೩೭). [ಪೇರ್$_1$ (< ಪಿರಿದು$_1$) + ಸಿರಿ]

**ಪೇರ್ಸಿಸು** 'ಪೇರಿಸ್ಸು' ನೋ.

**ಪೇರೊಕ್ಕಲ್**, **ಪೇರೊಕ್ಕಲು** (ನಾ). ದೊಡ್ಡ ಮನೆತನ,–ಕುಟುಂಬ: ದೀರ್ಘಕ್ಕೆ–ಪಿರಿದು + ಆನೆ=ಪೇರಾನೆ; ಪೇರಡವಿ, ಪೇರೊಕ್ಕಲ್, ಪೇರಡಿ. ಪೇರೊಡಲ್ (ಶಮಕ. ೧೬೦ ವೃತ್ತಿ). **ಪೇರೊಕ್ಕಲು**: ಎಲ್ಲರೂ ನನ್ನಕ್ಕ ತಂಗಿಯರು . . . ಆ ಕಡೆಗೆ, ಈ ಕಡೆಗೆ ತೂಗುವರು ತೂನೆಯುವರು . . . ಪೇರೊಕ್ಕಲಾಗಿ ವಾಸುವರು (ಹೊಂಗಳು. ೦೮-೯); ಪೇರೊಕ್ಕಲು! ಈ ಮಕ್ಕಳು ಬಡವರ ಮೈಸಾಲ (ದೀಕಮ. ೧-೦೭). [ಪೇರ್$_1$ (< ಪಿರಿದು$_1$) + ಒಕ್ಕಲ್$_2$]

**ಪೇರೊಕ್ಕಲು** 'ಪೇರೊಕ್ಕಲ್' ನೋ.

**ಪೇರೊಡಲ್**, **ಪೇರೊಡಲು**, **ಹೇರೊಡಲ್**, **ಹೇರೊಡಲು** (ನಾ). ದೊಡ್ಡ ದೇಹ; ಭಾರಿಯಾದ ಶರೀರ: ಕಾರಿರುಳ ತಿರುಳ ಬಣ್ಣಂ... ವಿಳರ್ಪುರಿಗೆಸಂ ಪೇರೊಡಲಸದಿರೆ ಪುಟ್ಟಿದನಾರುಮಗುರ್ವಿಸೆ ಮಗಂ ಘಟೋತ್ಕಚನೆಂಬಂ (ಪಂಪಭಾ. ೩-೨೦); ಕಾರೊಸಡುಂ ಕಬ್ಬಿಯಂ ಪೇರೊಡಲುಂ ... ದನುಜಾಕಾರಮನೊಡರಿಸೆ ನಿಶಾಚರರ್ವಿಸಿ ತೋರ್ಪರ್ (ಕಾವ್ಯಾವ. ೨೨೦); ಪಲರ್ಗೆ ಬಿಂದಲೆ, ಸುರಿವಾಯ್ ಪಲರ್ಗೆ . . . ಅರಬರ್ಗೆ ಪೇರೊಡಲ್ (ಅದ್ಭುತ. ೨೫-೨೭). **ಪೇರೊಡಲು**: ಪೇರೊಡಲ ಧಿಟ್ಟನೆ ತಿರುಗಿಸುತೆ . . . ಅಪ್ಪಳಿಸುತಿಕ್ಕಿದನು (ಕೋಚಚ. ೩೬-೩೦). **ಹೇರೊಡಲ್**: ಮಿಂಚುದಲೆಗಳ ಖಂಡಿಮಲ್ಗಳ . . . ಡೊಳ್ಳುಗಳ ಹೇರೊಡಲ ವಂಚಕರ . . . ಹಿಂದು ನೆರೆದು (ಬಸವು. ೫೦-೫೯). **ಹೇರೊಡಲು**: ಕರೆ ನಿಮ್ಮಯ್ಯನನು ಹೇರೊಡಲ ತೋಱಿ ಬಲವ ಬಿದಱಿಸಲಗ್ಗಳಿಕೆಯಹುದೇ (ಕುವ್ಯಾದ್ರೋ. ೦೫-೫೫); ಮಹೋದರನ ಹೇರೊಡಲನೊಡೆದು . . . ಶತ್ರುಜಿತುವನು ಹುಡುಕುನೀರದ್ದಿದನು ನಡೆದು ಸಮುದ್ರಮಧ್ಯದಲಿ (ತೊರಿರಾ. ೫ ೯-೫); ಪೊಡೆಗೆಡೆದ ಹೇರೊಡಲ ಸೀಳ್ಗಳಿಂ ಪೊಳ್ಗಳಿಂ . . . ಕಡುಭಯಂಕರವಾಗಲು (ಕೃಪಾಲ. ೯-೯೬). [ಪೇರ್$_1$ (< ಪಿರಿದು$_1$) + ಒಡಲ್]

**ಪೇರೊಡಲು** 'ಪೇರೊಡಲ್' ನೋ.

**ಪೇರೊನಕೆ** (ನಾ). ದೊಡ್ಡ ಒನಕೆ: ಇಕ್ಕಡಿಮಡಿದ ಕಾರ್ಮುಕವ ನಿವಾರಿಸಿ ತೆಕ್ಕೊಂಡು ಭಾರಿಯ ಹಲವ ಒಕ್ಕಯ್ಯೊಳಾಂತ ಪೇರೊನಕೆಯಿಂದಿಕ್ಕಿದ ಸೊಕ್ಕಾನೆದಲೆಗಳ ಮೇಲೆ (ಕೋಚಚ. ೩೬-೫೯). [ಪೇರ್$_1$ (< ಪಿರಿದು$_1$) + ಒನಕೆ]

**ಪೇರೊರ್ಬೆ** 'ಪೇರೊಟ್ಟೆ' ನೋ.

**ಪೇರೊಸಗೆ** (ನಾ). ದೊಡ್ಡ ಹಬ್ಬ,–ಉತ್ಸವ: 'ಪೇರೊಸಗೆಗೆಯ್' ಪರಾ. [ಪೇರ್$_1$ (< ಪಿರಿದು$_1$) + ಒಸಗೆ]

**ಪೇರೊಸಗೆಗೆಯ್** (ಕ್ರಿ). ದೊಡ್ಡ ಹಬ್ಬವನ್ನು ಆಚರಿಸು; ಭಾರಿ ಉತ್ಸವವೇರ್ಪಡಿಸು: ಕಲಸೋಗರಮಂ ನಲಿದಿಕ್ಕಿ ಭೂಷಣಪ್ರಚಯಮ ನಿಟ್ಟು ಪೇರೊಸಗೆಗೆಯ್ದು ಸಹೀಜನದೊಂದುಗೂಡಿ (ಧಾಣಿಕ. ೯-೯೨). [ಪೇರೊಸಗೆ + ಕೆಯ್$_1$]

**ಪೇರೊಟ್ಟೆ** 'ಪೇರೊಟ್ಟೆ' ನೋ.

**ಪೇರೊಟ್ಟೆ**, **ಪೇರೊರ್ಬೆ**, **ಪೇರೊಟ್ಟೆ**, **ಪೇಱೊರ್ಪೆ**, **ಪೇಱೊರ್ಬೆ**, **ಹೇರೊಬ್ಬೆ** (ನಾ). ದೊಡ್ಡ ಮುಳ್ಳುಪೊದರು (?): ಅಱಿಯಿನ್ತೆಂಕ್ಕಿ ನೋಡಿ ನಡದು ಪೇರೊಟ್ಟೆ ಮಗ್ಗನ್ನೆಱಿ (ಎಕ. X (ಏ), ಶ್ರೀಪ. ೬೬-೨೨: 860); ಸಾಲತ್ತ ಕಾಡೇಱಿನ ಪೇರೊಟ್ಟೆಎ ಪಗನ್ತೆವಳ್ಳಮ (ಎಕ. IV, ಎಡತೊ. ೬೦-೬೫: ಸು. 890). **ಪೇರೊರ್ಬೆ**: ಪಡುವ ನೋಡಿ ಪರಿದ ಪೇರೊರ್ಬೆಯಿ (ಎಕ. IX (ಏ), ಬಂಗಳೂ. ೦೫೦ ೩೭: 828). **ಪೇರೊಟ್ಟೆ**: ಪುಲಿಪದಿಯ ತನ್ನಣ ಪೇರೊಟ್ಟೆಯೆ (ಇಇ. XII, ೦೩-೯ (b): 813); ಇಗ್ಗಲಿಯ ಆರಿವುರ ಮೂಱೂರ ಸನ್ದಿನಲ್ಲಿ ತಣ್ಸಾಲಿಗಾಲ ಮೂಡಣ ಪೇರೊಟ್ಟೆಯಿಂ (ಎಕ. III, ಶಂಕಪ. ೦೫೯-೦೯; 916 ?). Δ**ಪೇಱೊರ್ಪೆ**: ದಕ್ಷಿಣಾಸ್ಯಾನ್ದಿಶಿ ಪಡುವ ನೋಡಿ ಪೋದ ಪೇಱೊರ್ಪೆಯ (ಎಕ. XVI, ತಿಕಟೂ. ೧೯೦-೬೮: ಸು. 900). Δ**ಪೇಱೊರ್ಬೆ**: ಅನ್ತೆ ತುಟ್ಟಿಲ ಪೇಱೊಟ್ಟೆಯೆ (ಎಕ. XVI, ತಿಕಟೂ. ೦೯೦-೬೮: ಸು. 900). **ಹೇರೊಬ್ಬೆ**: ತೆಂಕಣ ಕಡೆಗೋಡಿ ಏರಿಯ ಮೇಲೆ ಬಂದು ಚಣ್ಡಿಹನಲೇದು ಹೇರೊಬ್ಬೆ ಪುಳಿಗಡಪಿನೊಳು ಕೂಡಿ (ಎಕ. XIV, ಎಳಂದೂ. ೦೭೦-೦೫; ಸು. 12ನೆಯ ಶತ); ಚಕ್ರನ ಕೊಡಗೆಯ ಹೊಲದ ಹೇರೊಬ್ಬೆಯಿಂ ಮೂಡಲು (ಕ್ಕುಅಂ. ೦೯೪೦, ೫೬-೬೫: 1413). [ಪೇರ್$_1$ (<ಪಿರಿದು$_1$) +ಒಟ್ಟೆ]

**ಪೇರೋಟ** (ನಾ). ವೇಗವಾದ ಓಟ: ಕುದುಕುವರಿಯಲಿ ಪರಿದು ಪೇರೋಟದಲಿ ಪರಿದೋಡುತ್ತವಾಯಸದಿ ಬಳಲುತೊಯ್ಯನೆ ನಡೆದು (ಬಸವು. ೨೬-೩೨). [ಪೇರ್$_1$ (<ಪಿರಿದು$_1$) +ಓಟ]

**ಪೇರೋಣಿ** (ನಾ). ದೊಡ್ಡ ಓಣಿ: ಸೀಮೆ ಮೂಡಾಯ್ತೊಱ್ ಎ ತೆಂಕಾಯ್ಯಟಾರನ ಮೂಡಮೆ ಪೇರೋಣಿ ಎ ಸನ್ದು (ಎಕ. IV, ಎಡತೊ. ೬೦-೬೫: ಸು. 890). [ಪೇರ್$_1$ (<ಪಿರಿದು$_1$) +ಓಣಿ]

**ಪೇರೋಲಗ** (ನಾ). ದೊಡ್ಡ ಸಭೆ; ಮಹಾಸಭೆ: ಪೇರೋಲಗಮಂ ಪರೆಯವೇಳ್ದಲ್ಲರಂ ಕಳುಪಿ (ಬಸವ. ೬-೩೭): ಚಂದ್ರಾಚೂಡನೆಲ್ಲರುಮಂ ಕಳುಹಿ ಪೇರೋಲಗಂ ಪರಿದು (ಬಸವು. ೦-೫೦). [ಪೇರ್$_1$ (<ಪಿರಿದು$_1$) +ಓಲಗ$_1$]

**ಪೇರ್ಗೊಳ್** 'ಪೆಸರ್ಗೊಳ್' ನೋ.

**ಪೇಲ್**, **ಹೇಲು$_1$** (ಕ್ರಿ). ಹೇತು (ಭೂತನ್ಯೂ). ಮಲವಿಸರ್ಜನೆ ಮಾಡು: "ಪೇಲ್–ಮಲವಿಸರ್ಜನೇ, ಮಲೇ ಚ" (ಶಮಧಾ); ಗುದತಿ=ಪೇಲ್ವಮ (ಶಾಕೃ. ೨೪೦). **ಹೇಲು$_1$**: ನೂರೋ ಹೆಂಡತಿ ಬಿಟ್ಟು ಹೇಲೋ ಮೂಳಿ ತಂದ (ಗಾದೆ); ನಡುಮನೇಲಿ ಹೇತು, ನಾತ ಬರುತ್ತೆ ಎಂದ (ಗಾದೆ). [ದೇ. ೫ ತಮಿ. ಪೇಲ್, ಪೇಳ್; ಗೊಂಡಿ. ಪೇಲಾನಾ]

**ಪೇಲ್$_2$**, **ಪೇಲು**, **ಹೇಲು$_2$** (ನಾ). ಅಮೇಧ್ಯ; ವಿಷ್ಠೆ; ಮಲ: ಪೇಲಂ ಕಚ್ಚಲ್ ತಕ್ಕುದೆ (ಶಶಚ. ೯-೩೯); ಪಂದಿಗಳೊಡನಾಡಿದ ಕಱುಪುಂ ಪಂದಿಯಂತೆ ಪೇಲಂ ತಿಂಗೆಂಬುದು ನಾಣ್ನುಡಿ (ಧರ್ಮಾಮೃ. ೨-೬೬). **ಪೇಲು**: ಸಾಸನಮಯ್ಯಾರ್ದೆಯುಂಮಂ ಪೇಸದೆಯಿದನಳಿವೆನೆಂಬ ಮಹಪಾತಕನಿಂತೀಸನೆ ಪೇಲಿನ ಸುಳಿಯೊಳ್ಸಾಸಿರಸಬರ್ಷ ಬಾಲಮ್ಮುಳುವಾಗಿಯುವಂ (ಇಇ. I. ೨೯-೫೬: 1148). **ಹೇಲು$_2$**: ಹೇಲೊಳಗಣ ಹುಳುವ ಕೋಳಿ ಕವಱಿದಂತಾ ಯಿತ್ತವನ ಶಿವಪೂಜೆ (ಗಣಭಾ. ೦೯೦-೬); ಯಿಾ ಧರ್ಮಕೆ ತಪಿದವರು ಹೇಲೊಳಗಣ ಹುಳುವಾಗಿಯಿರಲುಳವರು (ಕ್ಕೌಇ. IX–ii. ೫೬೦-೩೨: 1684); ದಂಡಿಗೆ ಮೇಲೆ ನಾಯಿಯಾ ಕುಂಡ್ರಿಸಿದರೆ ಹೇಲು ಕಂಡು ಹಾರಿತು (ಗಾದೆ). [<ಪೇಲ್$_1$]

**ಪೇಲವ** (ಗು). ೧. ಕೃಶವಾಗಿರುವ; ತೆಳುವಾದ. ೨. ಕೋಮಲವಾದ; ಸಂಕುಮಾರ. ೩. ಮಸುಕಾದ; ನಿಸ್ತೇಜವಾದ; ಬಿಳಿಚಿ

ಕೊಂಡ : ಅರಬಿರಿದ ಸಂಪಿಗೆಯು ಹೂವಿನ ಹಾಗೆ ಪೇಲವವರ್ಣದಾಕೆ ಈಕೆ (ಅಶ್ವ. ೪೦೩). ೪. ಸಣ್ಣ ; ಎಳೆಯ. ೫. ವಿರಳವಾದ ; ಬಿಡಿಬಿಡಿಯಾದ. (ನಾ). ೬. ಕೃಶವಾದುದು : "ಕ್ಷಾಮಂ . . . ಪೇಲವಂ, ತಳಿನ(ವು)ಂ. ತನು—ಈ ೭ ಆಸಿದು" (ಶಬ್ದಮ. ೦೧೯-೩೩). ೭. ವಿರಳವಾದುದು : "ಪೇಲವಂ, ವಿರಳಂ, ತನು—೩ ಎಡೆಬಿಟ್ಟಿದ್ದು, ವಿರಳವಾದದ್ದು" (ಸಿಶ್ವಾ.ಪಿ. ೪೧೦). ೮. (ಅಲಂ) ಸತ್ತ್ವವಿಲ್ಲದುದು ; ನೀರಸವಾದುದು : 'ತಾಯಿ' ಯಂಥ ಕಥೆಗಳ ಜೊತೆಗೆ ಬಂದಿರುವುದರಿಂದ ಅವು ಪೇಲವವಾಗಿ ಕಾಣಾತ್ತವೆ (ಎಜುಕ. XVI, ಮುನ್ನುಡಿ) ; ಪಂಪನ ಆದಿಪುರಾಣದಲ್ಲಿ ಬರುವ ಸನ್ನಿವೇಶದ ಎದುರು ಇದು ತೀರಾ ಪೇಲವವಾಗಿದೆ (ಕಂಶಿ. ೦೩೬). [ಸಂ.]

ಪೇಲವತೆ (ನಾ). ಬಿಳಿಚಿಕೊಂಡಿರುವಿಕೆ : ಗರ್ಭಿಣಿಯಾಗಿ ಬಂದಾಗ ಇದ್ದ ಆ ಪೇಲವತೆ ಈಗಿಲ್ಲ (ಅಕಾಶ. ೨೬೩). [ಸಂ. ಪೇಲವತಾ]

ಪೇಲು 'ಪೇಲ್' ನೋ.

ಪೇಲೆ, ಪ್ಯಾಲೆ (ನಾ). ಕುಡಿಯಲು ಬಳಸುವ ಪಾತ್ರೆ ; ಬಟ್ಟಲು : ಬೆಳ್ಳಿಯಿಂದ ತಾಟು, ತಬಕ, ಪೇಲೆ ಮುಂತಾದ ಸಾಮಾನುಗಳನ್ನು . . . ಮಾಡುತ್ತಾರೆ (ಕುಂಂಂಹು. ೪-೦೨೦) ; ಚಿನ್ನಾ ಹಾಲಿನ ಪೇಲೆ ಹಿಡಿದು ಅಡಿಗೆ ಮನೆಯ ಹೊಸ್ತಿಲ ಮೇಲೆ ಕುಳಿತ (ಕ್ರಿಶಿ. ೩೩) ; ಪೇಲೆಗಳು ತುಂಬಿದವೆನ್ನುವಷ್ಟರಲ್ಲಿ ಬರಿದಾಗುತ್ತಿದ್ದವು (ಮೋಹಾಕು. ೦೨). ಪ್ಯಾಲೆ : ಆ ಮುಹೂರ್ತದಲ್ಲಿ ಕಾರ್ಕೋಟಕವಿಷ ತುಂಬಿದ ಪ್ಯಾಲೆ ಕೊಟ್ಟಿದ್ದರೂ ಗುಟುಕರಿಸಿಬಿಡುತ್ತಿದ್ದರು (ಕೃಕೃಕಿ. ೯).

[←ಪಾರ. ಹಿಂ. ಪ್ಯಾಲಾ ; ಮರಾ. ಪೇಲಾ, ಪ್ಯಾಲಾ]

ಪೇಲೆವೆರಿಗೆ (ನಾ). ಒಂದು ಬಗೆಯ ತೆರಿಗೆ (?) : ಬಸವನಹಳ್ಳಿಯ ಪೇಲೆವೆರಿಗೆ ಹಟ್ಟಿಗೆ ಹುರಿಗೆ ಸಿನ್ನುವಳುದು ದೇವಳಿಗೆನಾದ ಎಳ್ಳದಿವ್ವರು ಪ್ರಭುಗಳ್ ಅಟ್ಟಿಯಲು (ಎಕ. VI, ತಳ್ಳಳು. ೦೫-೦೦; 1674 ?). [?]

Δ ಪೇವಯ್ಸು 'ಹೇವಯಿಸು' ನೋ.

ಪೇಶಣ 'ಪೇಸಣ' ನೋ.

ಪೇಶಲ, ಪೇಶಳ (ಗು). ೧. ಕೋಮಲವಾದ; ಮೃದುವಾದ : ಓಸರಿಸದಿಂದೆನ್ನ ಬಡಸೇವೆಯನು ತಾವು ಪೇಶಲ ಸುಭಾವದಿಂ ನೋಡಿ ಕೈಕೊಳಲು (ಕಂಶಿಲ. ೦೦-೫೦). ೨. ತೆಳುವಾದ ; ಕೃಶವಾದ. ೩. ಸುಂದರವಾದ; ಮನೋಹರವಾದ : ದೇವ ದೋಷಹೃದ್ಗರಧರ ವಂದ್ಯ ಪೇಶಲ ಪಿನಾಕ ಸುಪಾಣಿ ಮಹೇಶ ಪಾಲಿಸಾ (ಹಮ್ಮಿಕ. ೧-೨). ೪. ಸಮರ್ಥವಾದ; ದಕ್ಷ. ೫. ಮೋಸದ ; ವಂಚನೆಯ. ೬. ಅಲಂಕಾರ ಮಾಡಿದ ; ಸಿಂಗರಿಸಿದ. (ನಾ). ೭. ಮೃದುತ್ವ ; ಕೋಮಲತೆ : ಪ್ರಯೋಗವರ್ಮಾರ್ಗದೊಳಶಿಪೇಶಲವಾಗೆ (ಶಬ್ದಾನು ೨-೨೪೩); ಮೃದು ಪೇಶಲವಸಾಂತ ನುಡಿಗಳಿಂ ಬಿನ್ನವಿಸಿದು (ಪಂಕಾರಾ. ೬-೬೩ ೨). ೮. ತೆಳುವು ; ಪಾರದರ್ಶಕವಾದುದು : ನಟಿಯಂತೆ ಪೇಶಲವಾದ ವಸ್ತ್ರಗಳನ್ನು ಧರಿಸಿ . . . ತನ್ನ ವಕ್ಷಸ್ಸನ್ನು ಲೋಕದೆದುರಿಗೆ ಆವಿಷ್ಕಾರ ಮಾಡುತ್ತಾ (ಕಾಕಪ. ೨೨). ೯. ಶುಭ; ಮಂಗಳ : "ಕವನಂ ಶುಭಂ ಪೇಶಲಂ ಶೋಭನಂ" (ಕುಂಗಣಾ. ೦೨೬-೨). ೧೦. ಒಂದು ಬಗೆಯ ಬಣ್ಣ ; ತಿಳಿ ಹಳದಿ : ಪೇಶಲವೆಂಬುವದು ಭತ್ತದ ಗರಿಯ ವರ್ಣವಾಗಿಯಿರುವದು (ಶಾಗಂರಿ. ೩೬೬-೦೯). ೧೧. ಅಂದ ; ಸೊಬಗು : ಮನೋವಿಕಾಸವಂ ಕನ್ನಡಿಸಿತ್ತು ಸೀತೆಗೆ ಮುಖಾಂಬುರುಹಂ ದರಹಾಸಪೇಶಲಂ (ಶಂಕಾಶಿಶ. ೦೦-೬೩). ೧೨. ದಕ್ಷತೆಯಿಂದ ಕೂಡಿದ ವ್ಯಕ್ತಿ ; ಪರಿಣತ : "ದಕ್ಷಃ, ಚತುರಃ, ಪೇಶಲಃ . . . ಉಷ್ಣಃ—ಆಲಸ್ಯವಿಲ್ಲದವನ ಹೆಸರುಗಳು" (ಸಿಶ್ವಾ.ಅ. ೩೦೨). ೧೩. ಮೋಸದಿಂದ ಕೂಡಿದುದು ; ಕುಟಿಲತನ. ೧೪. ವಿಷ್ಣುವಿನ ಹೆಸರುಗಳಲ್ಲಿ ಒಂದು. ಪೇಶಳ : ೩. ಪ್ರವಾಳಜಾಳಕಮನೆ ಕಣ್ಗೊಳಿಸಿರ್ದುದಾ ವಧೂವರರ ಸಲೀಲಪೇಶಳಶರಶ್ಮಿ ಪಾಣಿಗ್ರಹಣಂ (ಶರಾಮಹ. ೩-೬೩). [ಸಂ.]

ಪೇಶವಾಯಿ (ನಾ). ಮರಾಠರ ಆಳ್ವಿಕೆಯಲ್ಲಿದ್ದ ಮುಖ್ಯಮಂತ್ರಿಯ ಆಡಳಿತ, ಅಧಿಕಾರ : ಇದು ಪೇಶವಾಯಿಯಲ್ಲಿ ಕಿತ್ತೂರ ದೇಸಾಯಿಯ ವಶಕ್ಕಿತ್ತು (ಕಳಕ. ೬೨).

[←ಪಾರ. ಹಿಂ. ಪೇಶವಾಈ; ಮರಾ. ಪೇಶವಾಯಿ]

ಪೇಶವೆ, ಪೇಶ್ವೆ, ಪೇಷ್ವೆ (ನಾ). ಮರಾಠರ ಆಳ್ವಿಕೆಯಲ್ಲಿದ್ದ ಮುಖ್ಯಮಂತ್ರಿ : ಅವನು . . . ಕೊಂಕಣಸ್ಥ ಬ್ರಾಹ್ಮಣನಿಗೆ ಪೇಶವೆ (ಮುಖ್ಯಪ್ರಧಾನಿ) ಎಂಬ ಅಧಿಕಾರ ಕೊಟ್ಟು, ಯಾವತ್ತು ಕಾರಭಾರವನ್ನು ಅವನ ಸ್ವಾಧೀನ ಮಾಡಿದನು (ಕರ್ನಾ. ೭೭). ಪೇಶ್ವೆ : ಪೇಶ್ವೆಗಳ ಆಡಳಿತವು ಬಿಗಿತಪ್ಪಿ ಸುಬೇದಾರನು ಪರಾಕ್ರಮವುಳ್ಳವನಾಗಿದ್ದನು (ಕುಮಾರಕ. ೦). ಪೇಷ್ವೆ : ಎಂಟುವರ್ಷಗಳಿಂದಲೂ ಮುತ್ತಿದ ಶತ್ರುಗಳನ್ನು ಎದುರಿಸಲು ಅವರು ಪುಣೆಯ ಪೇಷ್ವೆಯ ನಾಯಕತ್ವವನ್ನು ಅಂಗೀಕರಿಸಲಿಲ್ಲ (ಕಾರಪ. ೪೨೩). [←ಪಾರ. ಹಿಂ. ಮರಾ. ಪೇಶವಾ, ಪೇಶ್ವಾ]

ಪೇಶಳ 'ಪೇಶಲ' ನೋ.

ಪೇಶಿ (ನಾ). ೧. ಮಾಂಸ ; ಅಡಗು ; ಬಾಡು : ಹೊಟ್ಟೆಯೊಳು ರಕ್ತಪೇಶಿಯು ಬಲಿದ ಗರ್ಭ (ಪಿಕ್ಕೆಪು. ೨-೩-೦೩). ೨. ಮಾಂಸದ ಮುದ್ದೆ : ವಿವಿಧಭಕ್ಷೋಪದಂಶಪ್ರಾಯಮಪ್ಪ ದಿವ್ಯಾಹಾರಮೆತ್ತಲೀ ೮[ನಿ]ತ ಪೂತಿಗಂಧಮಪ್ಪ ಮೃಗಪಿಶಿತಪೇಶಿಯೆತ್ತಲ್ (ವರ್ಧಮಾ. ೬-೯ ವ). ೩. ಮೊಟ್ಟೆ ; ತತ್ತಿ : "ಕೋಶಂ ಪೇಶಿಯುಂಡಮೆನೆ ತತ್ತಿಯಕ್ಕುಂ" (ಮಂಗರಾ. ೫೦-೧). ೪. ಗರ್ಭಧಾರಣೆಯ ನಂತರದ ಕೆಲವೇ ದಿನಗಳ ಭ್ರೂಣ. ೫. ಅರಳುವುದರಲ್ಲಿರುವ ಮೊಗ್ಗು. ೬. ಇಂದ್ರನ ವಜ್ರಾಯುಧ. ೭. ಒಂದು ಬಗೆಯ ವಾದ್ಯ. ೮. ಹಣ್ಣಿನ ಓಟೆ. ೯. ಕತ್ತಿಯ ಒರೆ, ಕೋಶ. ೧೦. ಚೆನ್ನಾಗಿ ಬೇಯಿಸಿದ ಅಕ್ಕಿ. ೧೧. ಸ್ನಾಯು ; ಸ್ನಾಯುರಜ್ಜು : ಶರೀರದ ನಷ್ಟವಾದ ಹಲವೊಂದು ಪೇಶಿ (Tissues)ಗಳು ರಕ್ತವನ್ನು ಸೇರಿ ಯಕೃತ್ತಿಗೆ ಬರುವುವು (ಶಾಂಕ್ರ. I, ೪೦೦). [ಸಂ.]

ಪೇಶು (ಕ್ರಿ). ಹೊಗಳು ; ಕೊಂಡಾಡು : ಪೇಶಾದ ದಿನವೆಲ್ಲ ಪೆಜವಾದ ದಿನವಯ್ಯ ಈಶನಂ ನೆನೆಯದ ದಿನಂ ಬಂಜೆದಿನವಯ್ಯ (ವಾಗೀಶ. ದೀ. ೨೬೩-೯); ಪೇಶಾದ ನಾಳಿಲ್ಲ ಪೆಜನ್ನ[ವಾ]ದ ದಿನ (ಪಿಕ್ಕೆಪು. ೪-೯-೦೩).

[ದೇ. ? ತದ್ರು. ಪೆ:ಚು ; ಮಲ. ಪೆ:ಚು = ಮಾತನಾಡು]

ಪೇಶ್ವೆ 'ಪೇಶವೆ' ನೋ.

ಪೇಷ್‌ಕಷ್, ಪೇಷಕಶಿ (ನಾ). ಹಿಂದೆ ಜಮೀನುದಾರ ಮುಂತಾದವರು ಸರ್ಕಾರಕ್ಕೆ ತೆರುತ್ತಿದ್ದ ನಿಗದಿಯಾದ ಹಣ ; ಪೊಗದಿ : ಪ್ರಭುಗಳೂ . . . ನಿಯಮಿತವಾದ ಪೇಷ್‌ಕಷ್‌ನ್ನು ಕ್ರಮವಾಗಿ ಸಲ್ಲಿಸುತ . . . ಅವರ ದೇಶಗಳನ್ನೆಲ್ಲಾ ಸರ್ಕಾರಕ್ಕೆ ಸೇರಿಸಿಕೊಂಡರು (ಕುಹುವಂ. II, ೦೩) ; ಇಂಗ್ಲೀಷ್ ಸರ್ಕಾರದವರು . . . ಪೇಷ್‌ಕಷ್ ಎಂಬ ಪೊಗದಿಯನ್ನು ತೆಗದುಕೊಳ್ಳುತ್ತಿದ್ದಾರೆ (ಕಾಳಗಾ. ೩೦). ಪೇಷಕಶಿ : ಫವುಜಿನ ಖರ್ಚಿಗೆ ಮೊಗಲು ಮುಂಟಾಟೀರ ಪೇಷಕಶಿ ಸಹಾ ನವಾಬರೇ ತೀರಿಸಿಕೊಳಬೇಕು (ಹೈದರ. ೫೦). [←ಪಾರ. ಮರಾ. ಪೇಶ್‌ಕಶ್; ಹಿಂ. ಪೇಶಕಷ್]

ಪೇಷಕಶಿ 'ಪೇಷ್‌ಕಷ್' ನೋ.

ಪೇಷಣ₁ 'ಪೇಸಣ' ನೋ.

ಪೇಷಣ₂ (ನಾ). ೧. ಧಾನ್ಯವನ್ನು ಹಿಟ್ಟು ಮಾಡುವುದು, ಬೀಸುವುದು. ೨. ಅರೆಯುವುದು : ಪೇಷಣದ ಶಿಲೆಯೊಳಂ ಪೊಸೆದಿರ್ಕು ಕಂದು (ಕಶ್ಯಮಂ. ೯೯). ೩. ಬೀಸುವ ಕಲ್ಲು. ೪. ಅರೆಯುವ ಕಲ್ಲು ; ಕಲಬತ್ತು. ೫. ನರಕದ ಶಿಕ್ಷೆಗಳಲ್ಲಿ ಒಂದು : ಪೇಷಣ . . .

ದುರ್ಭೋಗ್ಯ ನಾನಾವಿಧಾಸಂಖ್ಯಾತತೀವ್ರವೇದನಾರೂಪಂಗಳಾಗಿ ಶಿವ ದ್ರೋಹಿಗಳಿಗೆ ನಿಷ್ಕಾರುಣ್ಯದಿಂ ಮಾಳ್ಪ ಶಿಕ್ಷಾಲೇಶವೆಂದೆನಿಸಿ (ಏಕಾ. ೦೬೦). [ಸಂ.]

**ಪೇಷಣಿ** (ನಾ). ಅರೆಯುವ ಕಲ್ಲು : ಚುಲ್ಲಿ ಪೇಷಣಿ ಕಂಡನಿ ಉಪಸ್ಕರ ಉದಕುಂಭ ಎಂಬೈದು ಗೃಹೋಪಕರಣಗಳೂ ಹತ್ಯಾಕಾರಕಗಳು . . . ಪೇಷಣಿ—ಅಂದರೆ ಅರೆಯುವ, ಬೀಸುವ ಕಲ್ಲುಗಳು (ಅರ್ಧ. ೦೬೬). [ಸಂ. ಪೇಷಣೀ]

**ಪೇಷುಖಾನೆ** (ನಾ). ಹಿಂದೆ ರಾಜ ಮೊದಲಾದವರು ಪ್ರವಾಸ ಹೊರಡುತ್ತಿದ್ದಾಗ ಅವರ ಮುಂದಿನ ಮೊಕ್ಕಾಮಿಗಾಗಿ ಮೊದಲೇ ರವಾನಿಸುತ್ತಿದ್ದ ಡೇರೆ ಮೊದಲಾದ ಸರಂಜಾಮು: ಮೂರು ಮಂದಿ ಪಾದುಶಹರು ತಮ್ಮ ತಮ್ಮ ಪೇಷುಖಾನೆ ಸಂಗಡ ರುಖಾಂಡಾವನ್ನು ಹೊರಗೆ ಹಾಕಿಸಿದರು (ಬಖೈರು. ೩).
[←ಪಾರ. ಫಾರಾ. ಪೇಶ್‌ಖಾನಾ; ಹಿಂ. ಪೇಶ್‌ಖೇಮಾ]

**ಪೇಷ್ಕಾರ್**, ಪೇಷ್ಕಾರ (ನಾ.) ಕಂದಾಯವನ್ನು ವಸೂಲು ಮಾಡುವ ಒಬ್ಬ ಅಧಿಕಾರಿ : (ಮೈಗೆ. IV. ೬೬೨). **ಪೇಷ್ಕಾರ** : ಸಿದ್ಧನಾಯಕ ಬೇಗ ನೀನೋಡು ಪೇಷ್ಕಾರರದ್ದಿದ್ದರುಸುರು (ಅಕಾಶ. ೩೦-೩೮); ಪ್ರತಿ ತಾಲ್ಲೂಕಿಗೂ ಒಬ್ಬ ಸುಬೇದಾರ, ಒಬ್ಬ ಪೇಷ್ಕಾರ . . . ಗೊತ್ತಾಗಿ (ಮಹಾಐ. II, ೯೨). [←ಪಾರ. ಹಿಂ. ಮರಾ. ಪೇಶ್‌ಕಾರ್]

**ಪೇಷ್ಕಾರ** 'ಪೇಷ್ಕಾರ್' ನೋ.

**ಪೇಷ್ವೆ** 'ಪೇಶವೆ' ನೋ.

**ಪೇಸಣ**, ಪೇಶಣ, ಪೇಷಣ₁, ಪೇಸಣಿ, ಪೇಸಾಣಿ, ಪೇಸಾಳಿ (ನಾ). ೧. ಕೆಲಸ ; ಕಾರ್ಯ. ೨. ಸ್ವಾಮಿಕಾರ್ಯನಿರ್ವಹಣೆ ; ಒಡೆಯನ ಕೆಲಸ ಮಾಡುವುದು. **ಪೇಶಣ. ಪೇಷಣ₁. ಪೇಸಣಿ. ಪೇಸಾಣಿ. ಪೇಸಾಳಿ.**

**ಪೇಸಣಗರುಡ, ಪೇಷಣಗರುಡ** = ಸ್ವಾಮಿಕಾರ್ಯನಿರ್ವಹಣೆಯಲ್ಲಿ ಗರುಡನಂತಿರುವವನು; ಒಂದು ಬಿರುದು : ಶ್ರೀಮತ್ರಿ × ಪನಮಲ್ಲ ದೇವ ಪೇಸಣಗರುಡಂ ಜಯಲಕ್ಷ್ಮೀನಿಳಯಂ (ಕಾಇಇ. IX-೬, ೦೧೨-೯; 1079) ; ಶ್ರೀಮತ್ರಿಭುವನಮಲ್ಲದೇವ ಪೇಷಣಗರುಡನಾಮಾದಿ ಸಮಸ್ತ ಪ್ರಸಸ್ತಿಸಹಿತಂ (ಕಾಇಇ. VIII, ೩೬೬-೯; 1088). **ಪೇಸಣಹಣುವಂತ, ಪೇಶಣಹಾನ್ಮಂತ, ಪೇಸಣಹನುಮಂತ** = ಸ್ವಾಮಿಕಾರ್ಯನಿರ್ವಹಣೆಯಲ್ಲಿ ಹನುಮಂನಂತಿರುವವನು ; ಒಂದು ಬಿರುದು: ಜಯಸಿಂಹದೇವ ಪೇಸಣಹಣುವನ್ತ (ಮೈಇ. ೦೯೨೯, ೬೩-೩೩; 1081); ಸ್ವಸ್ತಿಶ್ರೀಮಚ್ಚಾಳುಕ್ಯಪ್ರತಾಪಚಕ್ರವರ್ತ್ತಿ ಜಗದೇಕಮಲದೇವ ಪೇಶಣಹಾನ್ಮಂತರಪ್ಪ ಶ್ರೀಮಹಪ್ರಧಾನಂ ಕನ್ನಡಸಂಧಿವಿಗ್ರಹಿ (ಕ೩. IV. ೦೦-೯; ಸು. 12ನೆಯ ಶ೩); ಪೇಸಣ ಹನುಮಂತನೆನಿಪ ನಾವಿದದಾಸ (ಕಾಇಇ. XI-ii, ೦೩೩-೦೬ ; 1087). **ಪೇಸಣ ಹನುಮ, ಪೇಷಣ ಹಣುಮ, ಪೇಸಣಿ ಹನುಮ, ಪೇಸಾಣಿ ಹನುಮ, ಪೇಸಾಳಿ ಹನುಮ** = ಪೇಸಣಹಣುವಂತ : ಪತಿಹಿತು ರಾಯನ್ಯ ಸಿಂಹನ ನಚ್ಚಿನಚ್ಚು ಪೇಸಣಹನುಮಂ (ಕಾಇಇ. IX—i, ೩೯೩-೦೦; 1226); ಕಡುಗಲಿ ದಣ್ಣನಾಥಮಿತನಾತ್ಮಜ ಪೇಷಣಹಣ್(ನು)ಮ ಬಲ್ಲಿಗನ್ (ಎಕ. V. ಚನ್ನರಾ. ೦೯೬-೬೬; 1223) ; ದಣ್ಣನಾಥ ಪೇಸಣಿಹನುಮ (ಎಕ. VI. ಕಡೂರು. ೯೯-೩೯; 1291); ಪೇಸಾಣಿಹನುಮ ಮೋಹರಮುರಾರಿ (ಎಕ. XI. ಹೊಳಲ್ಕೆ. ೯೦-೦ ; ಸು. 1225 ?) ; ಚಕ್ರೇಶ್ವರ ಹಾವಾದಿ ಕೋಲಾಹಳ ಪೇಸಾಳಿಹನುಮ ಗಜಬೇಂಟೆಕಾರ (ಎಕ. XIV. ಎಳಂದೂ. ೦೩-೩ ; ಸು. 1511). [< ಪ್ರಾ. ಪೇಸಣ. / ಸಂ. ಪ್ರೇಷಣ]

**ಪೇಸಣಿ** 'ಪೇಸಣ' ನೋ.

Δ **ಪೇಸರಗತ್ತೆ** 'ಹೇಸರಗತ್ತೆ' ನೋ.

Δ **ಪೇಸರು** 'ಹೇಸರ' ನೋ.

**ಪೇಸಾಣಿ** 'ಪೇಸಣ' ನೋ.

**ಪೇಸಾಳಿ** 'ಪೇಸಣ' ನೋ.

**ಪೇಸಿಕೆ, ಹೇಸಿಕೆ** (ನಾ). ೧. ಹೊಲಸು ; ಕೊಳಕು : ಬೇಡಮಟ್ಟುಮಂ ಕಂಡಂ . . . ನರಕದ ನೆಲೆ ಪೇಸಿಕೆಗಳ ಕರು ಮಸಣದ ಪುಟ್ಟು ಪಾಪ ದೇಟಿ ಪಾತಕದಾಗರಮಂದು (ಶಾದಂಅ. ೬೯೬); ಉದುರಿದುವು ಧರಣಿಯಲಿ ಬಲುಮಾಂಸದ ಸುರಕ್ತದ ಘಟ್ಟಿಗಳು ಖಂಡದ ಸುಡಾಳದ ಜಗಿಯ ಪೇ[ಶಾಂ. ಹೇ]ಸಿಕೆ ನಿಕರ ನೂಕಿ೯ಂದು (ಕುಷ್ಣಾ. ೯-೯೨). ೨. ಅಸಹ್ಯ ; ಜುಗುಪ್ಸೆ : ನೀನಲಬ್ಧಸಮ್ಯಗ್ದರ್ಶನೆಯಪ್ಪುದಱಿಂ ಪೇಸಿಕೆಯಂ ತಾಳ್ದದೆ (ಶಾಂತೀಶ್ವ. ೬-೦೩೨ ವ). **ಹೇಸಿಕೆ** : ೧. ಸಂತವೊಂಬತ್ತುಮಾಸಂ ಹೇಸಿಕೆಯ ನಡುವೆ ಕತ್ತಲೆಯ ಕರುಳೊಳಗೆ ಮರುಳಂದದಿಂ ಬೆಳೆದು (ಸಿಂಹಾಸ. ಹ. ೩೦೦-೨) ; ರಕುತದ ಹೇಸಿಕೆಯನು . . . ನೆರಹಿದಂ ನಿಳಯದೊಳಗೆ (ಹತಕಾ. ೦೦-೩೦); ಮುಂದಿಳುಹಿದಳು ಹೇಸಿಕೆ ಹೊನಲಿಡುವ ಹಂದಲೆಯನು (ಕೊಶರಾ. ೩-೬-೨೦) ; ಹೇಸಿಕೆಯ ಕಿಸುಕುಳದ ಕೀವು ತುಂಬಿ ಒಸರುವ ಹಸಿಯ ತೊಗಲಿನ ಹಳಿಯ ಗಾಯದಲ್ಲಿ ವಿಷಯಾತುರದಿಂದ ಬಿದ್ದು (ಅಣಂಕ್ಷೀ. ೬-೩). ೨. ಮಾತಿನಲ್ಲಿ ಮಾನ್ಯತನ ಮನದಲ್ಲಿ ಆಶೆ . . . ಇದು ಎನಗೆ ಹೇಸಿಕೆಯಾಯಿತ್ತು (ಬೋಳಶಾ. ೩೬-೦೩೭); ಹಾಸಿಕಿಲ್ಲದೆ ಹಾವಿನ ಮೇಲೆ ಒಱಗಿದವ ಹೇಸಿಕಿಲ್ಲದೆ ಕರಡಿಯ ಕೂಡಿದ (ಪುರಂದ. ೨-೦೦ ೦) ; ವಿನಾಯಕರಾಯನಿಗೆ ತನ್ನ ಪ್ರಿಯಪತ್ನಿ ಸರಳೆಯನ್ನು ಬಿಟ್ಟು ಪೇಶ್ಯೆಯ ಮನೆಗೆ ಹೋಗಲು ಹೇಸಿಕೆ (ಕಂಚಿಕುಮು. ೬೦). ೩. (ಅಲಂ) ಅವಮಾನ ; ಅಗೌರವ : ತಿರುಗಿ ರಾಮಯನು ಕೊಟ್ಟು ತಮ್ಮನ ಕರಸಿಕೊಂಬೀ ಹೇಸಿಕೆಯ ನಿಜಶಿರದೊಳಾನುವನಲ್ಲನುತ ನಡೆತಂದನಾಹವಕೆ (ಕೊಶರಾ. ೯-೯-೦೦). [ಪೇಸು₁ + — ಇಕೆ. / ತುಳು. ಪೇಸಿಗೆ, ಪೇಶಿಗೆ]

**ಪೇಸು₁, ಪೇಚು₁, ಹೇಸು₁** (ಕ್ರಿ). ೧. ಅಸಹ್ಯಪಡು ; ಜುಗುಪ್ಸೆಹೊಂದು : ದೋಸಮೇನಾನುಂ ಸ್ವಲ್ಪಮಾದೊಡಂ ಮಾಸಿಸಿರ್ಕುಮಣಂ ಕೃತಿವಧುವಂ ಪೇಸದೆ ದುರ್ಜನದೊಳಾದ ಪರಿಚಯಂ ಮಾಸಿ ಕಿಡಿಸುವವೊಲೊಪ್ಪುವ ಕುಲವಧುವಂ (ಕಪಾ. ೦-೦೦೦) ; ಭೀಭತ್ಸಮಂ ಕಂಡಾದಮಾನುಂ ಪೇಸಿ ಶರೀರ ವೈರಾಗ್ಯಮನೊಡೆಯನಾಗಿ (ಪಪ್ಪಾ. ೬೩-೦೭); ನಾರದಂ ಮನದೊಳೆ ಪೇಸುಗುಂ (ಜಂಪಾ. ೬-೨೩); ಬೇನೆ ಬದ್ದಿರೆ ಪೇಸದೆ ಬೇಸಱದೆ ಸನ್ಮಾನದೊಳುಪಚರಿಸುವುದು (ಜಂಬಿ. ೯-೦೯); ತನ್ನ ಗಂಡುಸುತನಕೆ ಪೇಸಿದಳ್ ತಾನೆ ಚಿತ್ರಾಂಗನೆ (ಪಶ್ಯಾಂಗ. ೦೬-೯೩೬). **ಪೇಚು₁**: ೧. ಭಸ್ಮಧಾರಿಯ ಕಂಡು ಪೇಚುತಂ ನಿಂದಿಸುವವಂ ಶೂದ್ರಗೊಗೆದನೆಂದೇ ಚತುರ ರೂಹಿಪುದು (ಭಾಪಿ. ೯-೦೯). **ಹೇಸು₁**: ೧. "ಹೇಸು__ಜುಗುಪ್ಸಾಯಾಂ" (ಶಮಧಾ); ಕಾಳುದ್ವಕ್ಕೆಱಗಿ ನಾನು ಶಿವಭಕ್ತನೆನಿಸಿಕೊಂಬ ಚಂಡಿನಾಯಿಗಳ ಕಂಡು ಎನ್ನ ಮನ ಹೇಸಿತ್ತು ಕಾಣಾ (ಬಸವಶಾ. ೨೬-೯೦). ೨. ಹಿಂಜರಿ; ಹಿಂದೆಗೆ; ಅಳುಕು : ಹೇಸುವುದು ಮನ ಬೊಮ್ಮಹತಿಗಾಗಿ (ಕಾಶಿಪಾ. ೦೬-೦೨); ಕೌರವ ಹೇಸದೆ ನಿನ್ನನು ಕಟ್ಟಿಸಲು ಸಾಸಿರನಾಮನೆ ವಿಶ್ವರೂಪವ ತೋಱಿ ಮೋಸಗೊಳಿಸಿದಾಟವಲ್ಲಿ ಕಲಿತೆಯ್ಯ (ಪುರಂದ. ೦-೯೬-೨೨); ಸೂಸುವ ಮನವನ್ನು ಹೇಸದಲೆ ಹಱಿದೊಗೆದು ಲೇಸಾಗಿ ಇಪ್ಪ ಶಿವಯೋಗಿ ಗುರುವಿನ ಕೂಸು ತಾನಿರುವ (ಸರ್ವಜ್ಞ. ೩೯೩); ಏನೂ ಇಲ್ಲದವ ಯಾವುದಕ್ಕೂ ಹೇಸ (ಗಾದೆ).

**ಹೇಸಿ ಪಡು**—ಇತರರ ಜುಗುಪ್ಸೆಗೆ ಒಳಗಾಗು,—ಅಸಹ್ಯಕ್ಕೆ ಗುರಿಯಾಗು : ವಿನಯಮತಿಯೆಂಬೊಳ್ ಗುಜ್ಜಿ ಎರಳದಂತೆ ಅದಮಾನು ಎರೂಪೆ ಪೇಸಪ[ಶಾಂ. ಪೇಸ್ಟ್]ಡುಮಳ್ (ವಡ್ಡಾರಾ. ೦೦೬-೨೨).
[ದೇ. ೩ ತುಳು. ಪೇಸು]

**ಪೇಸು₂, ಹೇಸು₂** (ನಾ). ಅಸಹ್ಯ; ಜುಗುಪ್ಸೆ: **ಪೇಸೇಟಿಲ್ ಪದಾ**

**ಪೇಸು₂** : ಪರಿಚಯವಿದ್ದವರೊದ್ದರು ಕಡುಪೇಸು . . . ಪರಿಚಯವಿರದವರೊಲಿದರು ಕಡುಹೇಸು (ರಂಕಾಶ. ೬೮-೬೬). [<ಪೇಸು₁]

**ಪೇಸುಗೆ** (ನಾ). ಅಸಹ್ಯ; ಜುಗುಪ್ಸೆ: ಮಕ್ಕಿನ ಪಂಡಿರ್ಗೆ ಪೇಸುಗೆಯಂ ಪುಟ್ಟಿಸುವ ನಾಯಕಸ್ತ್ರೀಯಂತಪ್ಪ (ಧರ್ಮಾಮೃ. ೦೨-೨೪); ಪೇಸುಗೆ ಪೆಸರಬಾಯೆ ಹೇಯಂ ಮಾಯವಾಗೆ (ಜಗು. ೨-೫೩ ವ); ಜುಗುಪ್ಸೆ ಪೇಸುಗೆಯುಂ ಮಾಡುವುದು (ಕಶಾರ. ೦೨). [ಪೇಸು₁ + -ಗೆ]

**ಪೇಸುಗೆಡು** (ಕ್ರಿ). ಅಸಹ್ಯಭಾವವನ್ನು ಕಳೆದುಕೊಳ್ಳು; ಜುಗುಪ್ಸೆಯಿಲ್ಲದಂತಾಗು: ಸಂಸಾರದೊಳ್ ಪೇಸುಗೆಟ್ಟೀ ನಾಣ ಪುತ್ರಪ್ರಬಾಜಗಳದೊಳೇನವ್ವ ತಕ್ಕೂರ್ಮೆಯಿಂಟೇ (ಶಾಂತಿಪು. ೬-೬೬). [ಪೇಸುಗೆ+ಕೆಡು₁]

**ಪೇಸುತಪ** (ನಾ). ಜುಗುಪ್ಸೆಯನ್ನುಂಟುಮಾಡುವ ತಪಸ್ಸು: ಭಾವಿಸು ವಂದಿಸು ಪೇಸುತಪವಮಂ ಕಣೆಂ (ಧರ್ಮಾಮೃ. ೪-೧೦೬). [ಪೇಸು₁+ತಪ]

**ಪೇಸುಪತ** 'ಪೇಸುಪಥ' ನೋ.

**ಪೇಸುಪಥ, ಪೇಸುಪತ** (ನಾ). ಅಸಹ್ಯ; ಜುಗುಪ್ಸೆ: ರಾಜ್ಯಾಭಿಲಾಷೆಯಿಂದಿರ್ದನಪ್ಪೊಡೆ . . . ಸೌಂತೆಯ ತೋಂಟದಂತೆ ಕಡೆಯೊಳ್ ಪೇಸುಪಥಮುಮಶೋಭೆಯುಮಾಗದೆ ಪೋಗದು (ಧರ್ಮಾಮೃ. ೬-೦೨೨); ಕಣ್ಗೆ ಕೊಕ್ಕರಿಕೆ ಮನಕ್ಕೆ ಪೇಸುಪಥಮಾಯ್ತೆನಸುಂ ನೆಗಟ್ದಾ ರಣಾಂಗಣಂ (ಶಾಂತೀಶ್ವ. ೬-೦೨). **ಪೇಸುಪತ** : ತಿಪ್ಪೆಯಂತೆ ಪೇಸುಪತಪಪ್ಪುದು . . . ಬಣಗಿನಂತೆ ನೇರಿತಲ್ಲದು ಬಗೆವಂದೀ ಶರೀರಂ (ಧರ್ಮಾಮೃ. ೯-೦೬೩); ಪೇಸುಪತಂ ಕರಂ ಕಿಸುಗುಳಂ ಕಾಯಂ ಶುಚಿಪ್ರಾಯಮೇ (ಪುಷ್ಪ. ೦೩-೯೯). [ಪೇಸು₂+ಪಥ ?]

**ಪೇಸುವೆ** (ನಾ). ಹೇಳಿದುದಂ ; ವಿಷಯ ; ಸಂಗತಿ : ಮಾಣಿಗಬಸುಣ್ಣೆ ಪೇಸುವೆ ಚಲಭೂಷಣನೆಬ್ಬ × ಪರಾಕ್ರಮನ ಪುದಿದ ಕಲ್ಲು ಕೊತ್ತಟಿ ಸುದ್ದೀವಡೆಯರಂ ಮಾರ್ಗಳಂ (ಎಕ. X. ಕಿಪ್ಪ. ೦೨-೨; ಸು. ೮೦೦ ?).
[←ತಮಿ. ಪೇಚ್ಚು]

**ಪೇಸೇಲ್** 'ಪೇಸೇಟ್' ನೋ.

**ಪೇಸೇಳು** 'ಪೇಸೇಟು' ನೋ.

**ಪೇಸೇಟ್, ಪೇಸೇಲ್, ಪೇಸೇಳು, ಹೇಸೇಲ್** (ಕ್ರಿ). (ಅಜ್ಜಬಜ್ಜಯಾಗಿ) ಅಸಹ್ಯವುಂಟಾಗು ; ಜುಗುಪ್ಸೆಯಾಗು : ಪದಿನೆಂಟುಕೋಟಿ ಪದಾತಿಯುಮನಲಸದೆ ಪೇಸೇಟಿ ಕೊಂದು (ಪ.ಭಾ. ೦೦.೦೯ ವ) ; ಒಡಿದು ಪೇಸೇಟಿ ಸಿಲ್ಕಿದುದು (ಧರ್ಮಾಮೃ. ೩-೨೨) ; ರಣದೊಳ್ ಪೇಸೇಟಿ ಪೊಯ್ದು (ಎಕ. VIII. ಸೊರಬ. ೨೫೦-೯ ; 1237). **ಪೇಸೇಲ್** : ನಿಬದ್ಧಿಸಿ ಕಟ್ಟಾಳಿಲಾರದ ನಾವೀ ಅಧಿರಾಜರು ಪಾಲಕರೆನಿಸಿರುವುದು ಪೇಸೆಲ್ದು, ಪಟ್ಟಣದ ರತ್ನಸಿಂಹಾಸನದಡಿಯಲ್ಲಿ ಭೂಕಂಪವಾಗುತ್ತಿರಬೇಕೆಂಬ ಶಂಕೆಯನ್ನುಂಟುಮಾಡಿ ಬಾಧಿಸುತ್ತಿದೆ (ಕಬ್ಬಿ. ೬೯-೦೬). **ಪೇಸೇಳು** : ಉಗ್ರಾಂಶುಕನಂದ್ರದಿಂದ ಪಲರುಂ ಪೇಸೇಳೆ ಕೊಂದಿಕ್ಕಿ (ಎಕ. VII. ಶಿಕಾ. ೦೬೩-೦೦ ; 1198 ?). **ಹೇಸೇಲ್** : ಜವನೊಕ್ಕಲಿಕ್ಕಿದಂತಿರದ್ಭುತವಾಗೆ ಹೇಸೇಲೆ ಕೊಂದು ಬೆನ್ನಟ್ಟಿದಲ್ಲಿ (ಎಕ. VII. ಹೊನ್ನಾಳಿ. ೫೫-೦೦ ; 1247). [ಪೇಸು₂ + ಎಟ್₁]

**ಪೇಳ್** 'ಪೇಟ್' ನೋ.

**ಪೇಳಾಪೇಳಿ** (ನಾ). [ಸಂಗೀತ] ತಾಳದಲ್ಲಿ ಒಂದು ಪ್ರಕಾರ: ತಾಳ ಸಾರಿಪರೀತ ಪೇಳಾಪೇಳಿಯುಂ ಸಂಜಾತಜಾಯನುಜಾಯುಚಿತ್ರಮೊಯ್ಯಾರವೊಡಗೂಡಿ (ಬಸಪು. ೦೮-೦೨).
[← ತೆಲು. ಪೆಳ್ಳಾಪೆಳ್ಳಿ. / ಸಂ. ಪೇಲಾಪಲಿ = ಒಂದು ನಿರ್ದಿಷ್ಟ ಸ್ವರಶ್ರೇಣಿ]

**ಪೇಳಿ** 'ಪೇಟ್ಕಿ' ನೋ.

**ಪೇಳಿಕೆ, ಹೇಳಿಕ್ಕೆ** (ನಾ). ೧. [ಕಾವ್ಯಮೀ] ಶಬ್ದಾಲಂಕಾರದಿಂದ ಕೂಡಿದ ಕಾವ್ಯರಚನೆ ; ಒಗಟು ; ಒಡ್ಡಪು : ಸುಕವಿಪ್ರಕರಕ್ಕೆ ವಿನೋದ ಕೇಳಿಗುಪಯೋಗಹೇತುಗಳ್ ಪ್ರಚ್ಛನ್ನಪ್ರಕಟಾರ್ಥಗಳನೇಕಪ್ರಕಾರದಿಂದೊಂದಿ ವರ್ತಿಕುಂ ಪೇಳಿಕೆಗಳ್ (ಕಾವ್ಯಾವ. ೫೯೩) ; ನುಸುಳೊರ್ನುಡಿ ಭಾವಮನಕ್ಕೆಸೆವಸ್ವಪ್ನಾರ್ಥಮುಬ್ಬ ನಾಮಾಂತರಿತಂ ಕುಸುರಿಯ ನುಡಿಯೆಂಬವು ಭಾವಿಸೆ ಪೇಳಿಕೆಗಳೊಳ್ ಪೇಟ್ದ ಭೇದಮುವಕ್ಕುಂ (ಕಾವ್ಯಾವ. ೫೯೪). **ಹೇಳಿಕ್ಕೆ**: ೧. ಅನುಗತಂ ಪೂರ್ವಕವಿಗಳ್ ನೆನೆದಿನ್ನುಂ ಪೇಟ್ಟಿಂ ದುಷ್ಕರೋಕ್ತಿಯನ್ನನುಗತಕ್ರಮದೆ ಬಗೆದು ಹೇಳಿಕ್ಕೆಯೊಳ್ ಜನಿತವಿಭೇದಮುಮಂ ಪೇಟ್ಟಿಂ (ಶಬ್ದ. ೨-೦೪೦). ೨. [ಸಂಗೀತ] ಕೊಳಲನ್ನು ನುಡಿಸುವುದರಲ್ಲಿ ಒಂದು ಪ್ರಕಾರ : ಆಲಾಪ . . . ಹೇಳಿಕೆ . . . ವ್ಯಾಪ್ತಿ ಮುಂತಾದ ಪೃತ್ಕಾಲ್ಕು ತೆಜವಲ್ಲಿ . . . ಭೇದವಱಿದಾಲಾಪಿಸಿ (ಅಡಿಪ. ೨೬೬).
[< ಸಂ. ಪ್ರಹೇಲಿಕಾ]

**ಪೇಳಿಗೆ** 'ಪೆಟ್ಟಿಗೆ' ನೋ.

**ಪೇಳಿಸು** 'ಪೇಟಿಸು' ನೋ.

**ಪೇಳು** 'ಪೇಟ್' ನೋ.

**ಪೇಳ್ಕೆ** 'ಪೇಟ್ಕೆ' ನೋ.

**ಪೇಳ್ಗೆ** 'ಪೆಟ್ಟಿಗೆ' ನೋ.

**ಪೇಱಿಸು, ಪೇರಿಸು₁, ಹೇರಿಸು, ಹೇಱಿಸು** (ಕ್ರಿ). ೧. (ಭಾರವನ್ನು) ಹೊರುವಂತೆ ಮಾಡು ; ಹೊರಿಸು : ಶೀವಿರ್ದ ನಿಖಿಳಭಂಡಾರಮಂ ತೆಗೆಸಿ ನಾನಾವಸ್ತುನಿಚಯಮುಮಂ ಪೇಱಿಸಿ ಸಮಸ್ತಸೇನಾವಿತತಿಸಹಿತ . . . ಪೊಱಮಟ್ಟನು (ಕೃಷ್ಣಚಾ. ೯-೬೬). **ಪೇರಿಸು₁**: ೨. (ವಸ್ತುಗಳನ್ನು) ಒಂದರ ಮೇಲೊಂದರಂತೆ ಇಡು; ಅಡುಕು: ಮಡಿಕೆಗಳನ್ನು ಪೇರಿಸಿ ಇಟ್ಟುಕೊಟ್ಟನು (ಕರ್ನಾಮಂ. IV. ೩೭) ; ಬಲಭಾಗದಲ್ಲಿ ಪೇರಿಸಿದ್ದ ಹಾಸುಗೆಸುರುಳಿಯನ್ನೇರಿ ಕುಳಿತಳು (ಮುದ್ರಾಮಂ. ೫) ; ಹೀಗೆ ಬೆಳವಣಿಗೆಯು ಪದರಗಳು ಒಂದರ ಮೇಲೊಂದನ್ನು ಪೇರಿಸಿಟ್ಟಂತೆ ಕಾಣಿಸುತ್ತವೆ(ಜಸುಹೂ. ೨೦೩). **ಹೇರಿಸು**: ೧. ವಿವಿಧರತ್ನಾಭರಣಕಾಂಚನಸವಮಕೂಲಂಗಳನು ಅವರವರ ತೆರನರಿತು ಹೇರಿಸಿಪಳು ವಿಚಿತ್ರದಲಿ (ಕೋಗನು. ೦೩-೯) ; ಹೊಗಳಿಕೆಯ ಹೊರೆಯನ್ನೇ ಹೇರಿಸುತ್ತಿದ್ದರು (ಕಂಕ. ೯೨). **ಹೇಱಿಸು** : ೧. ಕೇರಳರ ಸದೆದು ಮಹಾರ್ಘರತ್ನಾವಳಿಯ ಹೇಱಿಸಿದನು ಸುಚಿತ್ರಾಂಬರ ವಿಲೇಪನವ (ಕುಮಾವ್ಯಾ. ೩-೨೦) ; ಅತಿ ಸುಮ್ಮಾನದಲಿ ಶಿಶುಪಾಲ ಹೇಱಿಸಿದನು ಮಹಾಧನವ (ಕುಮಾವ್ಯಾ. ೯-೩).
[ಪೇಱು₁ + - ಇಸು]

**ಪೇಱು₁, ಪೇರು₁, ಹೇರು₁, ಹೇಱು₁** (ಕ್ರಿ). ೧. (ವಸ್ತುಗಳನ್ನು) ಒಂದರ ಮೇಲೊಂದರಂತೆ ಇಡು; ಅಡುಕು: ತಳಿರ್ಗಳಿಂಬಿನೊಳ್ಪರದೆ ಪೇಱಿದ ಕೃಷ್ಣಮೃಗಾಜನಂಗಳಿಂ . . . ತೋಱುವಾಗಳಶೋಕಭೂರುಹಂ (ಕಾದಂಬ. ೨೨೬): ಆ ಜವನಿಕ್ಕಂ ಕೋಣನಿನ್ನಂ ಪಗೆವರ ಪೆಣನಂ ಪೇಱಲೀ ವಿಷ್ಣುಮಂ ಕಾದುವನಾವಂ (ಎಕ. V. ಹಾಸನ. ೬೫-೨೫ ; 1149). ೨. ಇಡು ; ಇರಿಸು : ವಿಜಯಾಗಜವನೇಱಿ ... ಬಲದ ಕೋಡ ಮೇಲೆ ಕೆಯ್ಯಂ ಪೇಱಿ (ಪಂಪಭಾ. ೯-೭೫ ವ); ಗಿರಿಡೆಗೆ ಶಿವಲಿಂಗಮಂ . . . ತೋಱಲೊಡಂ ಕಣ್ದೆಱೆದಿರ್ದ ಪೇಱಿದವೆಱೆದಂ ಕರಂಗಳಂ ನೊಸಲೊಳ್ (ಗಿರಿಜಾ. ೩-೫೯). ೩. ತುಂಬಿಕೊಳ್ಳು ; ತಾಳು ; ಹೊಂದು : ನನೆಯನೆ ಪೇಱು ಕೊದಳಿರೊಳೆಯ್ದ ಬಜಲ್ದಳಿಪೂವು (ಅಂತ. ೦-೩೫) ; ಕಾಯ್ಗುಳಿಗಲಂ ಪೇಱಿರ್ದ್ದ ಚೆನ್ನಿಗು (ಎಕ. VIII. ಸೊರಬ. ೨೬೫-೯ ; 1231) ; ಬೇರಿಂದಂ ಕಾಯ್ಗಳಂ ಪೇಱಿದ ಪಲಸುಗಳಿಲ್ಲಲ್ಲಿಯುಂ(ಶಾರಕ. ೦-೦೬); ಮಾಮರಗಳು ತಳಿರ್ಗಳಂ ಪೇಱಿ ವಿರಹಿಗಳ ಬಾಯಾಱಿ (ಕಂಪು. ೯೫-೯). ೪. ಹೆಚ್ಚಿಸು ; ಅಧಿಕಗೊಳಿಸು : ಮಂದವಮನಂ ಸಂತೋಷಮಂ ಪೇಱಿ (ದಶಕು. ೩-೯). **ಪೇರು₁**: ೨. ಬಿಳ್ದ ಕಲ್ತೊಲೆಯುಮಾರ್ಯಂ ಪೇರಿರಂದೊರೆಯಲು ಕಲ್ಲುಗಳನೆಲ್ಲ ಪೇರಲು (ಮಹಾಂಕೀ. ೨೧-೩೩); ತನ್ನ ಕುಕ್ಕೆಯನ್ನು ನಿಧಾನವಾಗಿ ಮಂಡೆಯ ಮೇಲಿನ ಚುಂಡಿನ ಮೇಲೆ ಪೇರಿಕೊಂಡಳು ಕಾವೇರಿ (ಹೂಕ್ಕ ೩೩). **ಹೇರು₁**: ೧. ಅವುಗಳ ಮೇಲೆ ಕಟ್ಟಿಗೆಯ ತುಂಡುಗಳನ್ನು ಹೇರಿ

. . . ಓಪಾಯಿಯನ್ನು ತುಂಬುತ್ತಾರೆ (ತುಂಬಿಯ. ೯-೩೩). ೫. ಭಾರವನ್ನು ತುಂಬು,–ಹೊರುವಂತೆ ಮಾಡು : ಹೇರುವ ಮಾನ್ಯದ ಎತ್ತು ನಡೆ ೫೦ (ಎಕ. VII. ಶಿಕಮೊ. ೨೬-೯೩ ; 1670); ಇಷ್ಟೊಂದು ಪಠ್ಯ ವಿಷಯಗಳನ್ನು ಮಕ್ಕಳ ಮೇಲೆ ಹೇರುವುದೆ ? (ಶಿಕ್ಷರ. ೦೨೬). ೬. (ಅಲಂ) ಹೊಡೆ; ಬಡಿ : ತನ್ನ ಎರಡೂ ಕೈಗಳಿಂದ ಬಲವಾಗಿ ಪಟಾ, ಪಟಾ ಎಂದು ಏಟು ಹೇರುತ್ತಿದ್ದಳು (ಹಕ್ಕಿಕಾ. ೦೦೯); ಆ ಪುಂಡನನ್ನು ಹಿಡಿದು ಚೆನ್ನಾಗಿ ಹೇರಿದರು (ಕಅಾ). ಹೇಱು₁: ೧. ಹೇಱಿದರು ಹಿಳಿಕು ಗಳ ಮೈಯಲ್ಲಿ (ಕುಮ್ಯಾರಿ. ೬-೦೯)· ೨. ಕರಂಗಳ್ ಚೆಲ್ವನಾಂತಿರ್ದೊಡಂ ಮುಱಿದಂತಿರ್ಪರ ಮೇಲೆ ಹೇಱಿ ನಡೆಪರ್ (ಸೋಮೇಶ. ೩೬)· ೩. ಲೋಕಕರ್ಧರ್ಮವಂ ಮಿಱಿ ಕಡುನಿಷ್ಠೆಯಂ ಹೇಱಿ ಪರಮಸುಖದಿಂದಿ ರ್ಪುದು (ಚಕ. ೯-೩೩); ತುದಿ ಮೊದಲ್ಗನಕ ಹೇಱಿದ ಕಾವ್ಯರಸಫಲಂಗಳನು ಸವಿಸುವುದು (ಹಕಾ. ೦-೧೬) ; ನೂಱಿರೊಡನೈವರನು ಧರಿಸಿರಲಾಱದೀ ಪುರಿಯೇನುತ ದುಗುಡದ ಹೇಱಿ ಹೊದಕಳಿಗೊಳುತಲಿರ್ದುದು ಹಸ್ತಿನಾ ನಗರ (ಕುಮ್ಯಾಕ. ೯-೩). ೪. ಹೇ[ಶಾಣಂ. ತೋ]ಱಿದವು ಹರುಷವನು ತನು ನಗೆದೋಱಿದವು ಮುಖಕಮಲ (ಕೂರಿರಾ. ೦-೮-೨) ; ಅತಿತ್ವರಿತ ಗಮನದಿಂದೆ ಹೇಱಿದುದು ಭಯಮನಹಿಸಂಕುಲಂ (ಕಲಿಶ್ರಿ. ೧೦-೮). ೫. ಹುಲ್ಲ ಹೇಱುವೊಡೆ ಬಂದಿರುವ ಕವಾಡದ ರ್ಶ‍ಲ್ಲಿಯ ಕೊಂಬಿನೆತ್ತುಗಳ ನಿಲ್ಲದೆ ಶಿರುಹಿಕೊಂಡು (ಕುಶಂ. ೩-೬೨)· ೬. ಹೇಱಿದನು ಶತಬಲಿಯ ಕರು ಳನು ಕಾಱಿಸಿದನಂಗದನ (ಕೌಶಿಂ. ೩೩-೦೭); ಖಳರಾಯ ತ್ರಿಶೂಲದಿ ಹದ್ದೈ ವವ ಹೇಱಿದನು (ಶೋಕಶ. ೧೦-೬೩). ೭. ತುಂಬಿ ಸಾಗಿಸು : ಇಱಿದಡೆ ದಂಡವಿಲ್ಲ ಹೇಱಿವಡೆ ಸುಂಕವಿಲ್ಲ (ಎಕ. VI. ಕಡೂರು. ೦೫೭-೬೩ ; 1191). ೮. ಮುತ್ತು ; ಕವಿ ; ಆವರಿಸು : ಖಡ್ಗ ತೋಮರ ಸುರಗಿ ಹೊಳೆದವು ಕೈದು ಹೇಱಿದವಖಿಳದೆಸೆಗಳಲಿ (ಕುಮ್ಯಾದ್ರೋ. ೩. ೬): ಮಿಱಿದ ಕವ್ಯ ಲರ್ಗಳ ದೇವಾರ್ಚನೆಗೇಱಿಸಗೊಡದೆಯೆಂಜಲಿಸಿ ಹೇಱಿದ ಪಱಿಮೆವಿಂದು ಗಳ ಬಂಧಿಸಿವಂತೆ ನೇಱಿಲ ಪನ್ನಾಳೊಪ್ಪಿದುವು (ಶೋಹಶ. ೨೯-೯೩). ೯. ಹೆಚ್ಚಾಗು ; ಅಧಿಕಗೊಳ್ಳು : ವೈರಾನುಬಂಧದ ಬೇಗುದಿಯ ದುಮ್ಮಾನ ದಳವೇಱಿದುದು ಹೇಱಿತು ಭೀತಿ ಭೂಪತಿಗೆ (ಕುಮ್ಯಾಗ. ೦-೬೨).

ಹೇಱುವೆತ್ತು, ಹೇರ್ವೆತ್ತು, ಹೇಱುವೆತ್ತು–ಭಾರವನ್ನು ಹೊರುವ ಎತ್ತು : ಸಾಸಿರ ಪೇಱುವೆತ್ತಿಗೆ ಪೆಱ್ಜುಂಕ . . . [ಪ] ರಿಹಾರಂ ಮಾಡಿ ಬಿಟ್ಟಂ (ಎಇ. XXVIII. ೩೩-೫೦ ; ಸು. 1082); ಅಖಿಳಧಾನ್ಯಂಗಳಾ ಪೇರ್ವೆತ್ತುಗಳ ಮೇಲೆ ಬರೆ (ಕಲಿಶ್ರಿ. ೯೬-೯೦); “ಸ್ಥಾರೀ, ವೃಷ್ಟವಾಹ್ಯ – ಈ ೨ ಹೇಱುವೆತ್ತು” (ಹಲಾಯು. ೯೯-೦೦೦) ; ನವನಿಧಿಯೊಳಗೊಳಿದು ದುಮಂ ಬ್ಯವಹರಿಸಲುಕೆನ್ದು ಪೇಱುವೆತ್ತ್ವಾತ್ತುಂ ಭುವನದೊಳಿತ್ತಲು ನಡೆದಡೆ (ಎಕ. XI. ದಾವಣ. ೩೯-೬೦ ; 1280).

[ದೇ. ? ತಮಿ. ಏಱಿಕ್ಕು ; ಮಲ. ಪೇಱು ; ತುಳು. ಪೇರು ; ತೆಲು. ಪೇರುಚು]

ಪೇಱು₃, ಪೇರು₃, ಹೇರ್₂, ಹೇರು₂, ಹೇಱ್, ಹೇಱು₂ (ನಾ). ೧. ಪೇರಿಸಿಟ್ಟಿದ್ದು ; ಅಡಕಿಲು : ಬಳೆಯ ಪೇಱನಾನೆ ಮೆಟ್ಟಿದಂತೆ ನುರ್ಚುನೂಱಿಪ್ಪಿನಮುಪುಂಕಿ (ಹಂಶಶಾ. ೮-೬೩ ಕ) ; ಬೆಲ್ಲದ ಪೇಱನಿಲಿ ಪ್ಪೊಕ್ಕಂತೆ (ಧರ್ಮಾಮ್ನ. ೨-೬೦) ; ಪತ್ತಿಯ ಪೇಱುಗಳಂ ಕೊಯಿದೆತ್ತುಗಳಾ ಬಿಲ್ಲರಾಜರೊಯ್ದುಡೆ (ಕುಮ್ಯಾಸ್ತ್ರ. ೯-೨೨). ೨. (ಒಂದು ಪ್ರಾಣಿ ಅಥವಾ ಒಬ್ಬ ಆಳು ಹೊರುವಷ್ಟು ತೂಕದ) ಹೊರೆ ; ಭಾರ : ಅಡಕೆಯ ಪೇಱಿಂಗೆ ಮೂಱನೆಱು (ಎಇ. IX. ೨೨-೮ ; 800) ; ಒಂದು ಪೇಱು ಪೊನ್ನಂ ಕುಡುವಂ (ಕಶ್ವಾರಾ. ೦೫೬-೨೨) ; ದೇವರಿಗೆ ನನ್ದಾದೀವಿಗೆಗೆ ತಿಂಗಳ್ದಂಗಳಿಗೆ ಬಿಟ್ಟ ಎಲೆಯ ಪೇಱು ೧ (ಕಾಇಇ. IX-I. ೦೯೯-೩ ; 1081). ೩. ಚೀಲ : ‘ತೊಗಲ್ವೇಱು’ ಪರಾ. ಪೇರು₂ : ೪. ತಕ್ಕಡಿಯನ್ನು ಸಮ ತೋಲನಗೊಳಿಸಲು ಪರಡೆಗಳಲ್ಲಿ ಹಾಕುವ ಬಟ್ಟು ಇತ್ಯಾದಿ ಭಾರವಾದ ವಸ್ತು : ‘ಏರುಪೇರು’, ‘ಪೇರುಕಟ್ಟು’ ಪರಾ. ಹೇರ್₂ : ೧. ಇದು ವರಹ ರೂಪಾಯಿ ಹೇರ್ಗಳವು ಕನಕಾಭಿಷೇಕದಕ್ಷಿಣೆಗಿದು (ಕೃಕ್ಷ೦. ೨-೨೩). ಹೇರು₂ : ೨. ಉಭಯಮಾರ್ಗದ ಬೇಹಾರಿಗಳ ಹೇರು ಗಳಿಗೆ ಕೊಂಬ ಕಟ್ಟಣೆ (ಎಕ. XII. ಶಿರಾ. ೬೬-೭ ; 1370) ; ಹಸುಗಳ ಮೇಲೆ ಹೇರುಗಳನ್ನು ಎತ್ತದೆ . . . ರಕ್ಷಿಸುತ (ಕೃಪಾ. ೦೦೯) ; ಉಳುವ ನಾ ಭೂಮಿಯಸು ; ಹೊರುವ ನಾ ಹೇರನ್ನು (ಕೀಗಟ್ಟಿ. ೦೬೩). ೫. (ಅಲಂ) ಹೊಣೆ ; ಜವಾಬ್ದಾರಿ : ನಾನಿನ್ನೂ ಕಾಲ ಮೇಲೆ ನಿಲ್ಲೋದೇ ಕಷ್ಟ ವಾಗಿದೆ. ಆಗಲೇ ಬೆನ್ನ ಮೇಲೆ ಹೇರು ಹೊರು ಅಂದರೆ ? (ಹಿಂದಿ. ೦೯). ಹೇಱ್ : ೩. ಹೇರ್ಗಳು ಬಿಸಂಟ ಹೋರಿಗಳ ಚಪ್ಪರಣೆಯಿಂ ನಿಲಿಸಿ ಮೂಗುನೇಣೆಡುತೆ ಹೇರ್ಗಳ ಹೊಲಿವುತೆ (ಕಂಶ್ರಿ. ೯೭-೯೬). ಹೇಱು₂ : ೨. ಉಪ್ಪಿನ ಹೇಱು ಅಯ್ವತ್ತು (ಕೊಂಕಣಾ. ೦೯೩೬, ಹಾಗಲ್. ೬೩-೨೦ ; 976) ; ಕೋಣನ ಹೇಱಿಂಗೆ ಕುನ್ನಿ ಬಸುಗುತ್ತಬಡೆವಂತೆ ತಾವು ನಂಬರು ನಂಬುವವರ ನಂಬಲೀಯರು (ಬಸವ. ೬೬೩) ; ಹೇಱನೊಪ್ಪಿಸಿದವಂಗೆಲ್ಲಿ ಯದು ಸುಂಕ (ಹಕಾ. ೯-೩೯) ; ಎತ್ತು ಹೇಱುಗಳಿಂದ ಹೊತ್ತು ಮಾಱುವು ದಲ್ಲ (ಪುರಂಪ. ೦-೦೨೬-೩).

[ <ಪೇಱು₁./ ತಮಿ. ಪೆಱು₃ ; ಮಲ. ಪೇಱು ; ತೆಲು. ಪೆಱ್ಕ ]

Δ ಪೇಱಿರೊರ್ಪೆ ‘ಪೇರೊಟ್ಟಿ’ ನೋ.

Δ ಪೇಱಿರೊರ್ಬೆ ‘ಪೇರೊಟ್ಟಿ’ ನೋ.

ಪೇೞ್, ಪೇಳ್, ಪೇಳು, ಹೇಳ್, ಹೇಳು, ಹೇೞ್, ಹೇೞು (ಕ್ರಿ). ಪೇಳ್ದ, ಪೇೞ್ದ (ಭೂತಕೃ). ಪೇರ್ದು, ಪೇಳ್ದು, ಪೇೞ್ದು, ಹೇಳ್ದು (ಭೂತನ್ಯೂ). ೧. ತಿಳಿಸು ; ನುಡಿ ; ಅರಿಯುವಂತೆ ಮಾಡು : ಏನೇನಭಿಮತಮಂ ಪೇೞ್ ನೀನಾಸ್ವಾದಿಸಿದೆ ದೇವಿಯರ ಮನೆಯೊಳ್ (ಕಾಂಬು. ೬೩) ; ನೀವೆನಗೊಂದಪೂರ್ವಮಪ್ಪ ಕಥೆಯಂ ಪೇೞ್ವೀ ಟ್ಟುದು (ಹಂಕಶಾ. ೦೦-೦೦) ; ಇಂದು ನೃಪಂಗೆ ಸಂಭವಿಸಿದಂ ಭುಜಶಕ್ತಿ ಸವಿಕಾರನಂದನಂ ನಂದನನೆಂದು ಪೇರ್ದು (ಕುಸುಚಾ. ೬-೦೦೯)· ೨. ನಿರೂ ಪಿಸು ; ವಿವರಿಸು ; ವಿಶದಪಡಿಸಂ : “ಪೇೞ್ದಂ = ನಿರೂಪಿಸಿದಂ” (ಕಟುತ. ಕಾ. ೦) ; ಕಟ್ಟಿಪ್ಪಿನಾ ಪೆಟ್ಟುದುಳ್ಳಿತಂಗುಗಳ ಪೇೞ್ದ ಸಿದ್ದಸಮಯನ್ನ ಪ್ಪಾದೆ ನೋನ್ತು (ಎಕ. II. ೨೬-೦ ; ಸು. 700) ; ನೀವಿರ್ವರುಂ ಬಂದುದ ಮುಮಂ ಮನೆವಾರ್ತೆಯುಮಂ ಪೇೞಿಂ (ಹಂಕಶಾ. ೯-೦೦ ಕ) ; ಬಣ್ಣಾ ಸರಂಗೋದಂತೆ ಧರ್ಮಶಾಸ್ತ್ರಮೆಪೇೞ್ವರ್ (ಕಹುಕ. ೩-೬೬). ೩. ಕಾವ್ಯ ರಚನೆ ಮಾಡು : ಪ್ರಕಟತರವಸ್ತುವಿಸ್ತರವಿಕಲ್ಪವಿದನಲ್ಲದಾಗದಾಗದು ಪೇೞಲ್ (ಕಶಾ. ೦-೨೮) ; ಧಂದಧಂದದಿಂ ಪೇೞ್ವಾಡುವುದು ಕಂಡು (ಕಶ್ವಾರಾ. ೯೯-೦೯) ; ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತಭಾರತಮನಪೂರ್ವಮಾಗೆ ಸಲೆ ಪೇೞ್ದ ಕವೀಶ್ವರರಿಲ್ಲ (ಹಂಕಶಾ. ೦-೦೦) ; ಕರ್ಣಾಟಕಲಕ್ಷಣಶಬ್ದಶಾಸ್ತ್ರಮಂ ಲಾಕ್ಷಣಿಕರ್ಪೇೞಿಂದು ಬೆಸೆಸೆ ಬಗೆವುಗೆ ಪೇೞ್ವಿಂ (ಕಶುಕ. ೩). ೪. (ಯಾಂದಕ್ಕೆ ಹೋಗುವಂತೆ) ವಿಧಿಸು ; ನಿಯಮಿಸು : ಅಂತು ಭೀಮಸೇನನನಿಂದ್ರನ ಮೇಲೆಪೇೞ್ವತೆ ಪೂರ್ವದಿಗ್ಭಾಗಕ್ಕೆಪೇೞ್ದು (ಹಂಕಶಾ. ೬-೨೮ ಕ). ೫. ನಿರ್ದೇಶಿಸು ; ಸೂಚಿಸು : ಆಕೆ ಪುರೋಹಿತನ ಪೇೞ್ವೋಜೆಯೊಳ್ ಲಾಜೆಯಮಗ್ನಿಕುಂಡ ದೊಳ್ ಸುರಿದು (ಹಂಕಶಾ. ೩-೬೫ ಕ). ಹೇಳ್ : ೧. ಪನ್ನಿಮ್ರ್ಮತ್ತೆಕ್ಕಯ್ಯುಂ ಮಾನ್ಯಂಗುಡುಗೆನ್ದು ಪೇಳೆ (ಎಕ. XII. ೨೨೩-೫ ; ೯೫೦) ; ತತ್ಪುರದ ಮಹಾ ಜನದ ಮಹಿಮೆಯಂ ಪೇಳ್ವಡೆ (ಕಾಇಇ. XI-II, ೦೨೬-೦ ; 1080) ; ಸರ್ವಾ ಭರಣವಳ್ಳಿಗೆ ಕಳಿಪುವುದೆಂದು ನಾರದಮುನಿ ಪೇಳ್ದು ಪೋಗೆ (ಶಾಕಿ-೨ ಕಾಂಡ) ೩. ರಸಪೂರಿತ ಸುಪ್ರಬಂಧ ವಿಲಕ್ಷಣವೆನಿಸುವಂತೆ ಪೇಳ್ದಪುದನು (ಹೂಂಕಶಾ. ೦-೨೬). ೫. ಪಾಮಿಸಟ್ಟಿ ಪೇಳೆ ಬರೆದಂ (ಎಇ. ೦೯೬೩, ೩೩-೦೩ ; 1064)·

೬. ಹೆಸರಿಟ್ಟು ತಿಳಿಸು; ಗುರುತಿಸು: ಮಂತ್ರೀಶ ಪೇಳ್ದ ಪೇಳ್ದರಿಗುಡು ಗೊಜೆಯಿತ್ತು ಮನ್ನಿಸಲು (ವಾಽಚಕ. ೧೦-೩೯). **ಹೇಳು :** ೧. ಪೊಗಳ್ವಲ್ಲಿಗಾತಳವೆ ಪೇಳು ಸಾಸಿರ್ವರ ಖ್ಯಾತಿಯಂ (ಶಾವ್ಯಾ. V, ೬೪೯-೨೦ : ೧೧೬೬); ಎಂತುಸುರದಿರ್ದೆನಿನ್ನೆಂತು ಪೇಳುವೆನಿವಂ (ಶಿವರು. ರೀ. ೨೦. ೫); ಮುಂದೆಗತುನೆ ಇವನಾರೆ ಪೇಳತ್ತು (ಪುರಂದ. ೨-೭೦-೦) ; ಒಡೆಯನಿರಿಸಿ ದೀತಿರ್ವುದಲ್ಲದೆ ಪೇಳೊಡವೆಗೆ ಬೇಜಾರವ್ಪುಟಿ (ಹರಿಶ. ೧-೯೯). ೨. ಬಣ್ಣಿಸಿ ಪೇಳುತ್ತಿಪ್ಪುದು (ಪ್ರಿಕಂ. ೦೯೩೬, ೩೨-೦೩ : 1140). ೩. ಸಕಲ ಸೂರಿಗಳ ಪಾದಾರವಿಂದವ ನೆನೆದೀ ಕೃತಿಯನು ಮೇದಿನಿ ನಲಿಯೆ ಪೇಳು ವೆನು (ಕಂಸವ. ೦-೦೨). **ಹೇಳ್ :** ೫. ಎಲ್ಲರ ಕಜುಬ ಹರ್ಮ್ಯವ ಹತ್ತಿ ಹೇಳ್ವಳು ಪುಲ್ಲಶರಾತ್ಮಸಂಭವಗೆ (ನೇಮಿಚಕ. ೩೩-೩೯); ದೇವಾಲ್ಯವು . . . ಮಾಡೆಂದೊಸೆದು ಹರಿಹರಂ ಹೇಳ್ದು ತಾಂ ಮಾಡಿಕೊಣ್ಣಾವ್ (ಎಕ. XI. ದಾವಣ. ೨೩-೪೦ : 1224). ೭. ಶಾಸನದಲ್ಲಿ ಬರೆಸಿ ದಾನ ಮಾಡು : ಗವುಡುಗೆಜೆಯಲ್ಲಿ ತಮ್ಮ ಕೊಡಗಿಯಲು ಖಣ್ಣುಗಗದ್ದೆಯುಂ ಹೇಳ್ದು (ಎಕ. V. ಹಾಸನ. ೩೬-೬೨ : 1170). **ಹೇಳು :** ೧. ಜೀವ ಪರಮನ ಮಧ್ಯದಲ್ಲಿ ನಿಂದು ಅರ್ಥಿಕೆಗೊಂಬರಾರು ಹೇಳಿರಣ್ಣಾ (ಕೋಂಡಾಂ. ೪-೯) : ಕಡೆಗೆ ಧರ್ಮಜ ಹೇಳು ಕೊಂದವನಾರು ನಂದನನ (ಕುವ್ಯಾರ್ನ್ಯಾ. ೬-೨೬) ; ಕಬ್ಬಿನಂತಿರಬೇಕು ಬಿದಿರಂತೆ ರಚಿಸಲೇ ಕಬ್ಬ ಹೇಳೆಲೆ ಸರಸ್ವತಿಯೆ (ಚಕ. ೦-೬). ೨. ರವಕುಳವ ನಾನೇನ ಹೇಳುವೆನವನಿಪತಿ (ಕುವ್ಯಾ.ಕ. ೦-೬). ೩. ತಿಳಿಯ ಹೇಳುವೆ ಕೃಷ್ಣಕಥೆಯನು ಇಳೆಯ ಜಾಣರು ಮೆಚ್ಚುವಂತಿರೆ (ಕುವ್ಯಾ.ಕ. ೦-೦೩). ೪. ಕಾಳಗವ ಮಾಡಲ್ಲದಿದ್ದರೆ ಹೇಳಿದಾ ಕವ್ಯನು ತೆತ್ತೀ ತರೆಯನುಳುಹಿಕೊಳು (ಶಾಳ್ವಭಾ. ೦೯-೦೦) ; ದೊರೆ ಹೇಳಿದನೆಂದರೆ ಮರದ ಕಾಯಿ ಬಿದ್ದೀತೆ ? (ಗಾದೆ). ೮. ಕಥನ ಮಾಡು ; ಕಥಿಸು : ಆ ದೇವರಲ್ಲಿ ಶಾಸ್ತ್ರವ್ಯಾಖ್ಯಾನವುಂ ಮಾಡಲುಂ ಪುರಾಣಮುಂ ಹೇಳಲುವೊಬ್ಬುವಾಧ್ಯಾಯರ್ಗೆ ವರ್ಷವರ್ಷಕ್ಕೆ ಬಃಗುಳಿ ಯೇಳು ಗದ್ಯಾಣ (ಶಾಸನ. IX-i, ೨೬೭-೬೨ : 1160) ; ಹೆ.[ಪಾಠಾಂ. ಪೇ]ಳಿದ ಹರಿಕಥೆಯ ಕೇಳದವ ಹೊಲೆಯ (ಪುರಂದ. ೦-೦೭೨-೦). ೯. ಗಮನಕ್ಕೆ ತರು : ತಾಂ ಹೇಳದೆ ಸೋಮಭೂಮಿಪತಿಯಲ್ಲಿಗೆ ಬಂದಡೆ ರಾಜ್ಯ ವಾಯಿತ್ತು ಸಲ್ಲೀಲೆಯೊಳು (ಕುವ್ಯಾ.ಚಾ. ೯-೪೦ : 1147). ೧೦. ಕರೆ ; ಆಮಂತ್ರಿಸು ; ಬರಹೇಳು : ಹೇಳದಾತನಕೆ ಬರ ಹೊಲ್ಲ (ಸರ್ವಜ್ಞ. ೦೯೩೩). ೧೧. ದೂರು ; ಚಾಡಿ ಚುಚ್ಚು : ಮೇಲಧಿಕಾರಿಯೊಂದಿಗೆ ಉಳಿದವರ ಮೇಲೆ ಯಾವಾಗಲೂ ಹೇಳೋದೇ ಅವಳ ಸ್ವಭಾವ (ರೂಢಿ). ೧೨. ಒತ್ತಿ ನಂಡಿ,—ತಿಳಿಸು : ನೀನು ಹಾಗೆ ಹೇಳಬೇಡ (ರೂಢಿ). ೧೩. ಪ್ರಕಟಿಸು ; ತೋರ್ಪಡಿಸು : ಕಾಳಿಕೆಯು ಕೈಕೊಂಡು ಸಿರಿವೊಗ ಹೇಳುತಿದೆ ಭೀತಿಯನು (ಕುವ್ಯಾರ್ನ್ಯಾ. ೬-೩೭). **ಹೇಟ್ :** ೧. ದಾಳಿಂಬ ದೊಳ್ವಣ್ಣನೊಡೆದು ಬೆಮ್ಮೊಗಿಟ್ಟು ಹೇಟಲಳವಡದ ಸಲ್ಲೀಲೆಯೊಳಗಳ ಪಟ್ಟು ಕೋಚಿದೆಚ್ಚು ಪಾಯ್ದ ತನಿರಸವನುಂಡು (ಅದ್ಭುತ. ೩-೯೩). **ಹೇಟು :** ೧. 'ಹೇಟುಹ' ಪರಾ.

**ಹೇಳ್:ಹೇಳು** (ದ್ವಿರುಕ್ತಿ) : ಮುಂಗುಳುಸಗೆ ನಿನಗೇಕೆ ಬಂದಿತ್ತು ಹೇಳುಹೇಳನಲು[ಪಾಠಾಂ. ಪೇಳೆಸಲು] (ಬಸವ. ೧೦-೩) ; **ಹೇಳುಹೇಳಿ** ನ್ನೊಮ್ಮೆ ನುಡಿನುಡಿ ಕೇಳುವೆನು ಶಿವಿಯಾರ (ಕುವ್ಯಾ.ಕ. ೩-೨೦) ; ಹೇಳು ಹೇಳಭಿಮಾನಭಂಗಭಡಾಳವಾರಿಂವಾಯಿತೆಂಬುದ (ಕೋರಾ. ೩-೩-೯). **ಪೇಟ್ ಪಡು, ಹೇಳಿಪಡು** = ಹೇಳಲ್ಪಡು : ಮಹಾಪುರಾಣದೊಳ್ **ಪೇಟ್ ಪಟ್ಟುದು** (ಚಾವುಂಪು. ೦೬೨) ; ಪರಮಾಗಮುಂ ಪುಸಿಯೆಂ **ದೆಯುಪ್ಪಾಡೀ** ಸಿದ್ಧಾಂತದೊಳ್ **ಪೇಟ್ಪಟ್ಟ** ಗಣಿತ ಜೋಯಿಸಂಗಳೆಕೆ **ತಪ್ಪುವು** (ಧರ್ಮಾಮೃ. ೩-೦೯೭) ; ಎಳನೆಮುದೇ ತುರ್ಯಗಾಮಿನಿ **ಹೇಳಿಪಡುಗುಂ** (ಚಿತ್ರಪ. ೦೬-೨೩). **ಹೇಳದೆ ಕೇಳದೆ**=ಅಪ್ಪಣೆಯಿಲ್ಲದೆ : ಹೇಳದೆ ಕೇಳದೆ ಅಲ್ಲಿಗೆ ಯಾರೂ ಹೋಗುವಂತಿಲ್ಲ (ರೂಢಿ). **ಹೇಳ ಹೆಸರಿಲ್ಲದಂತೆ** = ನಿಶ್ಶೇಷವಾಗುವಂತೆ ; ಸಂಪೂರ್ಣವಾಗಿ : ಅರ್ಜುನನ ಶಕ್ತಿಗೆ ಶತ್ರುಸೈನ್ಯ ಹೇಳ ಹೆಸರಿಲ್ಲದಂತೆ ಓಡಿತು (ರೂಢಿ). **ಹೇಳಿ ಕಳಿಸು**=ಸಂದೇಶ, ವರ್ತಮಾನ, ಅಪ್ಪಣೆ ಮೊದಲಾದುದ ನ್ನು ಬೇರೆಯವರ ಮುಖಾಂತರ ತಿಳಿಸು ; ಸುದ್ದಿ ಮುಟ್ಟಿಸು : ಈ ಸಂಜೆ ಅವರ ಮನೆಗೆ ಬರಬೇಕೆಂದು ಹೇಳಿಕಳಿಸಿದ್ದಾರೆ (ರೂಢಿ). **ಹೇಳಿ ಕೇಳಿ** = ಎಲ್ಲರಿಗೂ ಗೊತ್ತಿರುವಂತೆ ; ತಿಳಿದೂ ತಿಳಿದು : ನೀವೆ ಕರೆಯದಿರುತಿರೆ ಛಂದನೇನು ನೀವೆ ಹೇಳಿ ? ಕೂಸು ನಾನು **ಹೇಳಿ ಕೇಳಿ** (ಹೃದಕ. ೨೬-೦೬); ಹೇಳಿಕೇಳಿ ಮೊದಲೇ ಅವಳ ಕೆಲಸ ನಿಧಾನ. ಈಗಂತೂ ಕೇಳುವ ಹಾಗೇ ಇಲ್ಲ (ರೂಢಿ). **ಹೇಳಿಕೊಂಡು ಹೋಗು** = (ಸುಳ್ಳು) ಸುದ್ದಿ ಹಬ್ಬಿಸು ; ಪ್ರಚಾರ ಮಾಡು: ಅವಳು ಆ ಸಣ್ಣ ವಿಷಯವನ್ನು ಎಲ್ಲರೊಡನೆ ಹೇಳಿಕೊಂಡು ಹೋಗಿದ್ದರಿಂದ ಅದೇ ದೊಡ್ಡ ಹಗರಣವಾಗಿ ಹೋಯಿತು (ರೂಢಿ). **ಹೇಳಿಕೊಟ್ಟ ಮಾತು** = ಅರ್ಥ ಮಾಡಿಕೊಳ್ಳದೆ ಬೇರೆಯವರು ಆಡಿದುದನ್ನೇ ಆಡುವುದು; ಗಿಳಿಪಾಠ : ಕಟ್ಟಿ ಕೊಟ್ಟ ಬುತ್ತಿ, ಹೇಳಿಕೊಟ್ಟ ಮಾತು ಎಲ್ಲಿವರೆಗೆ ಬಂದೀತು ? (ಗಾದೆ). **ಹೇಳಿ ಕೊಡು** = ೧. ತಿಳಿಸು : ಇದಕ್ಕೆ ಪೇಚಾಡಬೇಡಿ ಎಂದು ಉಪಾಯ ವನ್ನು ಹೇಳಿಕೊಟ್ಟನು (ಶೀತಿಶಂ. IV. ೬). ೨. ಕಲಿಸು ; ಬೋಧಿಸು : ಹೀಗೆ ಹೇಳಿಕೊಟ್ಟರೆ ಸ್ವಲ್ಪವೂ ಪ್ರಯೋಜನವಿಲ್ಲ (ಶಿಕ್ಷು. ೬೬). ೩. ಚಾಡಿ ಹೇಳು ; ಚುಚ್ಚಿಕೊಡು : ಅಕ್ಕಪಕ್ಕದವರು ಹೇಳಿಕೊಟ್ಟು ಅವಳ ಸಂಸಾರ ಹಾಳುಮಾಡಿದರು (ರೂಢಿ). **ಹೇಳಿಕೊಳು, ಹೇಳಿಕೊಳ್ಳು** = ೧. ಬಿನ್ನವಿಸಿ ಕೊಳ್ಳು ; ಕೋರು: ಶಾಸನವ ಬರಸಿಕೊಡಬೇಕೆಂದು ನೀನು ಹೇಳಿಕೊಳುಧಾನೆಂದು ನಿರ್ವಾಣಯ್ಯಮೂವನವರು ಹೇಳಿದರಿಂದ ಬರಸಿ ಕೊಟ್ಟದು (ಪ್ರಿಕಂ. ೦೯೩೩, ೩೦-೨೦; 1730). ೨. ತಿಳಿಸಂ ; ನುಡಿ : ಜನ್ಮ ಇರುವವರೆಗೂ ತಮ್ಮ ಉಪಕಾರ ನೆನಸುವೆನು ಎಂದು ವಿನಯದಿಂದ ಹೇಳಿಕೊಂಡನು (ಮುಂಡಿಯ. ೪-೩೦). ೩. ದುಃಖ, ಕಷ್ಟ ಮುಂತಾದುದ ನ್ನು ಬೇರೆಯವರಲ್ಲಿ ತೋಡಿಕೊಳ್ಳು : ನಾಲ್ಕು ಜನರ ಹತ್ತಿರ ದುಃಖವನ್ನು ಹೇಳಿಕೊಂಡರೆ ಮನಸ್ಸಿನ ಭಾರ ಎಷ್ಟೋ ಕಡಮೆಯಾಗುತ್ತದೆ (ರೂಢಿ). ೪. ಜಂಬ ಕೊಚ್ಚಿಕೊಳ್ಳು : ಸದಾಕಾಲವೂ ತನ್ನ ವಿಷಯ ಬೇರೆಯವರ ಮುಂದೆ ಹೇಳಿಕೊಳ್ಳೋದೆ ಅವಳ ಜಾಯಮಾನ (ರೂಢಿ). **ಹೇಳಿದ್ದು**=ಶಾಸ್ತ್ರಸಮ್ಮತವಾದುದು ; ವಿಧಿವತ್ತಾದುದು : ಸ್ವಯಂ ವರದಲ್ಲಿ ಬ್ರಾಹ್ಮಣರಿಗೇನು ಅಧಿಕಾರ ? ಅದು ಕ್ಷತ್ರಿಯರಿಗೆ ಹೇಳಿದ್ದು (ಶಕಭಾ. ೩೩). **ಹೇಳಿ ಬರೆಯಿಸು**=ಯಾವುದಾದರೊಂದು ವಿಷಯ ವನ್ನು ಮತ್ತೊಬ್ಬರು ಬರೆದುಕೊಳ್ಳಲು ಆಜ್ಞಾಪಿಸು:ಆ ಅಧಿಕಾರಿಯು ಆ ಎರಡು ನಿಯಮಗಳನ್ನು ಹೇಳಿ ಬರೆಯಿಸಿದರು (ರೂಢಿ). **ಹೇಳಿ ಮಾಡಿಸಿದ್ದು** = ಸಂಪೂರ್ಣವಾಗಿ ಹೊಂದಿಕೊಳ್ಳುವಂತಹುದು ; ತಕ್ಕುದು : ಈ ಕೆಲಸ ಅವಳಿಗೆ ಹೇಳಿ ಮಾಡಿಸಿದ್ದು (ರೂಢಿ). **ಹೇಳುವವ**= ಗ್ರಾಮದ ನಿರ್ದಿಷ್ಟ ಮನೆಗಳ ಮುಂದೆ ನಿಂತು ಅವರ ಮನೆತನದ ಬಗೆಗೆ ಹೊಗಳಿ ಜೀವನ ನಡೆಸುವವನು ; ಹೆಳವ : ಹೆಳವ ಎಂಬ ಪದವು ಬಹುಶಃ 'ಹೇಳುವವ' ಎಂಬುದರಿಂದ ಬಂದಿರಬಹುದು (ರೂಢಿ). **ಹೇಳುವವರು ಕೇಳುವವರು**=ಅಧಿಕಾರಯುಕ್ತವಾಗಿ ಅಪ್ಪಣೆ ಮಾಡು ವವರು : ಹೇಳುವವರು ಕೇಳುವವರು ಇಲ್ಲದಿದ್ದರೂ ಅವರವರ ಕೆಲಸವನ್ನು ಒಪ್ಪವಾಗಿ ಮಾಡಬೇಕು (ರೂಢಿ).

[ದೇ. ‖ ತೆಲು. ಪೇಲು, ಪ್ರೇಲು ; ಮಾಲ್ತೊ. ಪೇಳ್ಳೆ]

**ಪೇಟ್ಟು$_1$** 'ಪೇಡಿ$_1$' ನೋ.

**ಪೇಟ್ಟು$_2$, ಪೇಳಿ** (ನಾ). ಬುಟ್ಟಿ ; ಗೂಡೆ : ಪಜಾದು ಬರ್ದ ಖಚರರ ತಲೆ ಸಂದಣಿಸ ವಿಮಾನಂಗಳ ಪೇರಣ್ಣೆ[ಣ್ಣ] ಪೋಲ್ತುದು ತೆಜಿದ ಮೊಗದ

ಪೇಟಿಗೆಳರವಂ (ಚಂದ್ರಪ್ರ. ೬-೩೪). ಹೇಳಿ : ದೇವರ ಪೂಜೆಗಂ ಅಱವಂಟಗೆಗಂ ಬಿಟ್ಟ ಧರ್ಮ್ಮವೆಂತೆಂದಡೆ ಪೇಳಿಯಲಂ ಪೂವಯ್ದು (ಶಾಇ. IX–1. ೨೨೩-೪೪ ; 1127). [←ತಮಿ. ಪೇಟ್ಟಿ. / ಸಂ. ಪೇಟೀ]

ಪೇಟಿಸು, ಪೇಳಿಸು, ಹೇಳಿಸು, ಹೇಟಿಸು (ಕ್ರಿ). ೧. ಅಭಿಪ್ರಾಯವನ್ನು ವ್ಯಕ್ತಪಡಿಸುವಂತೆ ಮಾಡು ; ಮಾತನಾಡುವಂತೆ ಮಾಡು; ಹೇಳುವಂತೆ ಮಾಡು : ಶುಕನಾಸನಂದನಂ ಬಂದಪನಾತನಿಂದವಾಱೆವಂತಿರೆ ಪೇಟಿಸಿ ಮತ್ತಮಂಚಿಮು (ಕಾದಂಬ. ೩೬೨). ೨. ಕಾವ್ಯವನ್ನು ಬರೆಸು ; ಕಾವ್ಯರಚನೆ ಮಾಡಿಸು : ಇಂತು ಪೇಟಿಸಿದ ನರೇಂದ್ರರುಂ ನೆಱೆಯೆ ಪೇಟ್ದ ಕವೀಂದ್ರರುಮಾರ್ ಧರಿತ್ರಿಯೊಳ್ (ಶಂಕಪಾ. ೦೪-೩೩) ; ಮಲ್ಲಪಾರ್ಯನುಮುದಾತ್ತಯಶೋನಿಧಿ ಪುನ್ನಮಾರ್ಯನುಂ ಸವಿ ತವದಂತು ಪೇಟಿಸಿದರ್ (ಶಾಂತಿಪು. ೦ ೩೭). ೩. (ಕಾವ್ಯವನ್ನು) ಓದಿಸು ; ವ್ಯಾಖ್ಯಾನಿಸು : ಪಿತ್ಯ ಪುತ್ರನಂ ಕಥೆಯುಂ ಪೇಟಿಸಿದಂ (ಕಬ್ಬಸು. ೨೦೬ ಪ್ರಹೂ). ಪೇಳಿಸು : ೨. ಪಂಪಾಕ್ಷೇತ್ರದೊಡೆಯಂ ವಿರೂಪಾಕ್ಷನೇ ಪೇಳಿಸಿದೊಡೆ ಸವಿನುಡಿಗಳಿಂದೀ ಚೆನ್ನಬಸವಪುರಾಣವಂ ಪೇಳ್ದೆ ನಧಿಕೋತ್ಸವದೊಳು (ಚಂಪು. ೦-೩೦); ಪೊತಪಿಪ ದಳವಾಯಿ ನಂಜರಾಜೇಂದ್ರ ತನ್ನೊಡೆಯನ ಕಾರ್ಯದೇಳಿಗೆಯ ಗಡಣವೆ ಚಿಂತೆಯಾಗೊಲಿದು ಪೇಳಿಸಿದನು (ಶಂಕಶ. ೦-೨೬); ಸಂತಸದಿ . . . ಪುರಂದರವಿಠಲ ವ್ಯಾಸಮುನಿಗಳು ಪೇಳಿಸಿದರು (ಹಗಾಡಾ. ೬೬). ೩. ಕವಿದು ಪಂಯಿ ರಸದೊಳ್ಗಂಪು ಕವ್ಮನೆ ಕವಿತೆಯೊಂದನು ಪೇಳಿಸು (ಹಂಪ. ೦-೨೬). ಹೇಳಿಸು : ೧. ಗಾಳಿಯಂ ಗಂಟಿಕ್ಕಲುಂ ಕಣ್ಣಾಲಿಗಳೊಳಿಹ ಬಾಲಕರನೊಳು ಸೂಳುಮಾತಂ ಹೇಳಿಸಲು . . . ಬಲ್ಲ ನೆಱೆ ಜಾಣೆ (ರಕಪು. ೬೨-೪); ಭೀಮಗೆಹೇಳಿಸಿದಳಾ ಫಲುಗುಣನ ಕೈಯಿಂದ (ಕುಮ್ಮಾ. ೬ ೨೨); ಮಂದಬುದ್ಧಿಯ ಬಿಟ್ಟು ಬಾಗಿಲ ತೆಗೆಸ ಹೇಳೆಂದ ನಾಯಕಗೆ ಪೇಳಿಸಿದ (ಮೋಹತ. ೩೩-೬೩). ಹೇಟಿಸು : ೪. ವಿಧಿಸು; ಆಜ್ಞಾಪಿಸು : ಅನುಜ್ಞೆ–ಬೆಸನ ಹೇಟಿಸಿಕೊಳುಹ (ನಾಟಕ. ೬).

ಪೇಟಿಸಿಕೊಳ್ = ವಿವರಣೆಯನ್ನು ಪಡೆ; ವರ್ಣನೆಯ ವಸ್ತುವಾಗು: ಈ ಲಕ್ಷಣಂಗಳನುಳ್ಳ ಕುದಿರೆ ಸಂಪೂರ್ಣಮಪ್ಪಾಯುಷ್ಯಮನುಳ್ಳುದೆಂದು ಪೇಟಿಸಿಕೊಳ್ವುದು (ಲೋಕೋಪ. ೦೦-೬೩ ೬೬೪). [ಪೇಟು + –ಇಸು]

ಪೇಟ್ಕೆ, ಪೇಳ್ಕೆ, ಹೇಳಿಕೆ$_1$ (ನಾ). ೧. ಹೇಳಿದಂದು; ಅಭಿಪ್ರಾಯ ಕಥನ : ಅನ್ನರ ಪೇಟ್ಕೆಯದೆಂಬ ಬಿಟ್ಟೆಯೊಳ್ಪಡೆಯದಿರ್ (ಕಾದಂಬ. ೪೦೭); ಕೆಮ್ಮನೆ ಮೂರ್ಖರ ಪೇಟ್ಕೆಗೆ ತಮ್ಮ ಮನಂ ಸೋಲ್ಪು (ರಮಾರ್ಪ. ೦೦-೩೪); ತತ್ಪ್ರಪಂಚಮುಂ ನಿಜಪ್ರಿಯಸಖಿಯ ಪೇಟ್ಕೆಯಿಂ ಕೇಳ್ದು (ಜಗಪು.೦೩-೩ ೪); ಏನ್ ಪೇಟ್ಕೆ ಪೇಟ್ದೆ ನೀನ್, ಮುತ್ತಪ್ಪೆ.. ಫೋರಂ! (ಅಕ್ಕ. ೦೦-೦೪೬). ೨. ಆಜ್ಞೆ; ಅಪ್ಪಣೆ : ಸುರಸಿಂಧುವಾರಿನಿರ್ಝರನವರತಕ್ಕಕಂಭಶತಗಳ್ . . . ಸುರರಾಜನದೊಂದು ಪೇಟ್ಕೆಯಿಂ ಸುರಪಥದಿಂದೆ ಬಂದುವಭಿಷೇಕಮಹೋತ್ಸವದೊಳ್ ಮುಕುಂದನಾ (ಜಗಪು. ೬-೦೦೩); ಪುರದ ಸಮಸ್ತಚೈತ್ಯನಿಳಯಂಗಳೊಳೆಯ್ದೆ ಜಿನೇಂದ್ರಪೂಜೆಯಂ ನಿರುಪಮಭಕ್ತಿಯಿಂ ಹಿತಪುರೋಹಿತನೊಪ್ಪಿರೆ ತನ್ನ ಪೇಟ್ಕೆಯಿಂ ನಿರವಿಸಿ (ಶಾಂತಿಪು. ೩-೩೩). 'ಪೇಟ್ಕೆಗೇಳ್' ಪರಾ. ೩. ವಿವರಣೆ ; ನಿರೂಪಣೆ : ಚಾಮರಾದಿಗಳನಿಕ್ಕಿದ ಗದ್ದುಗೆಯೊಳ್ ಮಹಾಪ್ರತೀಹಾರರ ಪೇಟ್ಕೆಯಿಂದೆಳಸಿ ಮತ್ತಮರಂ ಪೆಸಗೊಂಡು (ಸೂಕ್ತಿಸು.೩-೨೪). ಪೇಳ್ಕೆ : ೪. ಕಾವ್ಯರಚನೆ : ಅಗ್ಗಳದ ಪಳಿಗಬ್ಬಿಗರ[ಪೇಳ್ಕೆಯ]ತೆಱದಿ ವಿರಚಿಸದ (ಶಾಪ್ತ. ೦-೪೩). ಹೇಳಿಕೆ$_1$: ೧. ನಿಮ್ಮ ಹೇಳಿದ ಹೇಳಿಕೆಯಿಂದ ಪೀಚೇರ ಮೈಲಿಗೆ ಮೇಳವಾಡುತ್ತಿದ್ದ ಕಾಣಾ ತ್ರೈಜಗದೊಳಗೆ (ಬಸವ. ೩೬೬); ಈ ಹಳೆಯ ಹೇಳಿಕೆಗೆ ಹೊಸ ಉಸಿರು ತುಂಬಿದ್ದಾರೆ (ಪ್ರಾ.ಶಿ. ೮೨) ; ಈ ವಿಷಯದಲ್ಲಿ . . . ಒಬ್ಬರ ಹೇಳಿಕೆಯನ್ನಾಗಲೀ, ನಾವು ನಂಬುವುದಕ್ಕಿಲ್ಲ (ಕೃಶಾಶ. ೩೯). ೨. ಎಲ್ಲಾ ಸುಂಕವಮಂ ಶ್ರೀಮತು ಭುಜಬಲಚಕ್ರವರ್ತ್ತಿ ಬಿಜ್ಜಲದೇವರಸರ ಹೇಳಿಕೆಯಿಂ ರಾಮೇಶ್ವರದೇವರ್ಗ್ಗೆ ಧಾರಾಪೂರ್ವ್ವಕಂ ಮಾಡಿ (ಕಇ. II. ೨೪-೨೬; 1167); ನಮ್ಮ ಹೇಳಿಕೆ ಯಾವುದದನೀ ತಮ್ಮ ವಿಚಾರಿಸದು ನಡೆದನಾದಡೆ ನಮ್ಮ ವಾಕ್ಯದ ಬೀಳುಕೊಡುವವು (ಕುಮ್ಮಾ.ಕ. ೬-೩); ಮದನನ ಹೇಳಿಕೆಯೊಳಂಮ ವಿದಿತ ಮಂಗಳವಿವಾಹೋಚಿತಕ್ರಿಯೆಗಳಂ ವಿರಚಿಸಿದರು (ಕೃಪಚಾ. ೩೦-೩೪). ೩. ಎನ್ನ ಜನ್ಮಗಳೇಳನೊಲ್ಲದೆ ಬಂದವಾವ್ ಜನ್ಮತ್ರಯಂಗಳಲಿ ಹೇಳಿಕೆಯಲಿನ್ನೊಂದು ಜನ್ಮದ ಬಾಳುವೆಯು ನಮಗುಂಟು (ಕೂರಂಗ. ೬-೪೬-೨೫). ೫. ಕರೆ ; ಆಹ್ವಾನ ; ಆಮಂತ್ರಣ : ಪ್ರಾಣೇಶಾಚಾರ್ಯರು ಯಾಕೆ ಬರಲಿಲ್ಲ . . . ಏನು ಹೇಳಿಕೆ ತಪ್ಪಲಿಲ್ಲವೆ ಅವರಿಗೆ ? (ಸಂಸ್ಕಾರ. ೯೦) ; ಎರಡೂ ಕಡೆಯ ಹೇಳಿಕೆಗಳು ಶೀನಮಯ್ಯರಿಗೆ ಬಂದಿದ್ದುವು (ಜಮು. ೨೬೪). ೬. ಕೋರಿಕೆ ; ಬಿನ್ನಹ : ಹೇಳಿಕೆಯಲಿ ವಿಚಿತ್ರ ಕುಳಿತಳು ಕಾಂತಿ ಥಿಡಾಳಿಪ ಮಣಿಮಂಚದೆಡೆಯ (ಮೋಹತ. ೨೬-೩೩).

ಹೇಳಿಕೆ ಮಾಡು, ಹೇಳಿಕೆಯನ್ನು ಮಾಡು = ಕರೆ; ಆಮಂತ್ರಿಸು: ಚಾನಿಯ ಪ್ರತಿಯೊಬ್ಬರನ್ನು ಕಂಡು 'ನಾಳೆಗೆ ಪೂಜೆ ನಿಶ್ಚಯ ಮಾಡಿದೆ' ಎಂದು ಹೇಳಿಕೆ ಮಾಡಿದ (ಕುಡಿಕಾ. ೦೪೩) ; ತಿಮ್ಮ ಎಲ್ಲರಿಗೂ ಹೇಳಿಕೆಯನ್ನು ಮಾಡಿದ. ಊಟಕ್ಕೆ ಜನರೂ ಬಂದಿದ್ದರು (ಕುಡಿಕಾ. ೨೨೬). ಹೇಳಿಕೆ ಮಾತು = ಚಾಡಿ ; ಪಿಸುಣು : ಹೇಳಿಕೆ ಮಾತು ಕೇಳಿ ಅನೇಕ ಸಂಸಾರಗಳು ಹಾಳಾಗಿವೆ (ಕಾಪೆ). ಹೇಳಿಕೆಯಾಗು = ೧. ವರದಿಯಾಗು ; ಅಭಿಪ್ರಾಯ ತಿಳಿ : ಕೊರಳ ತೆತ್ತುದು ಚೂಣಿ ದಳಮುಖ್ಯರಿಗೆ ಹೇಳಿಕೆಯಾಯ್ತು (ಕುಮ್ಮಾಉ. ೬-೦೪). ೨. ಅಪ್ಪಣೆ ಮಾಡು ; ಆಜ್ಞಾಪಿಸು : ಹೇಳಿಕೆಯಾಯ್ತು ವರವಾಲಂಚಾಲರಿಗೆ (ಕುಮ್ಮಾಉ. ೩-೦೬) ; ಬರೆಸಿದವು ಬಿಳಿಯೋಲೆ ಮಣಿಹಾರಿಗೆ ಹೇಳಿಕೆಯಾಯ್ತು (ಕೂರಂಗ. ೦-೬-೪).

[ಪೇಟು + –ಇಕೆ]

ಪೇಟ್ಕೆಗೇಳ್ (ಕ್ರಿ). ಆಜ್ಞೆಯನ್ನು ಪಾಲಿಸು : ಗೋವಿಂಡುಗಳಂ ಮೊಲೆತೊರೆದಾವುಗಳಂ ಪೇಟ್ಕೆಗೇಳ್ವ ತೊಟ್ಟಿರ್ಕಳ ಸದ್ಯಾವಮನವ್ಮೆಯ ಪಿಂಡಂ ಭಾವಿಸಿ ನೋಡಂಬುಜಾಕ್ಷಿ ಚಿತ್ತೋತ್ಸವದಿಂ (ರಮಾಶ್ವ. ೩-೦೦೬ ೬೬೮). [ಪೇಟ್ಕೆ + ಕೇಳ್]

ಪೈ$_1$ (ಗು). ೧. ಮೇಲಿನ ; ಹೆಚ್ಚಿನ : 'ಪೈಪೋಟಿ' ಪರಾ. ೨. ಹೊರಗಿನ ; ಬಾಹ್ಯ : (೬). (ನಾ). ೩. ಮೇಲುಗಡೆ ; ಮೇಲು ಭಾಗ : (೬). [←ತೆಲು. ಪೈ, ಪಯಿ]

ಪೈ$_2$ 'ಪಾಯ್ಯಿ$_3$' ನೋ.

ಪೈಂಗಲ, ಪೈಂಗಳ (ನಾ). ಚಾಂದ್ರಮಾನಗಣನೆಯ ಪ್ರಕಾರ ಅರುವತ್ತುಸಂವತ್ಸರಗಳಲ್ಲಿ ಐವತ್ತೊಂದನೆಯ ಸಂವತ್ಸರ; ಪಿಂಗಳ. ಪೈಂಗಳ : ಆ ವರ್ಷವೇ ಪ್ರಭವ ವಿಭವ . . . ನಳ ಪೈಂ[ಜಾತಂ. ಪಿಂ] ಗಳ ಕಾಳಾಯುಕ್ತಿ . . . ಅಕ್ಷಯವೆಂದಱುವತ್ತುತೆಱನಾಗಿಹುದು (ಬಿಡಿಳ. ೨೬೩). 'ಪಿಂಗಲ' ಪರಾ. [ಸಂ.]

ಪೈಂಗಳ 'ಪೈಂಗಲ' ನೋ.

ಪೈಂಜಣ 'ಪೈಜಣ' ನೋ.

ಪೈಂಟು 'ಪಾಯಿಂಟು' ನೋ.

ಪೈಕ 'ಪಯಿಕ' ನೋ.

ಪೈಕರಿ (ನಾ). ತಾತ್ಕಾಲಿಕ ಬಾಡಿಗೆದಾರ ಅಥವಾ ಒಂದು ಊರಿನಲ್ಲಿ ವಾಸವಾಗಿದ್ದು ಇನ್ನೊಂದು ಊರಿನಲ್ಲಿರುವ ಜಮೀನಿನ ವ್ಯವಸಾಯ ಮಾಡುವವನು : (ಕೃಸಗ. II. ೩೩೮). [?]

ಪೈಕಿ, ಪಯಿಕಿ (ಅ). ಸಂಬಂಧಿಸಿದುದರಲ್ಲಿ ; ಸೇರಿದುದರಲ್ಲಿ : ನೆಲ ಮಂಗಲತಾಲೂಕು ಪೈಕಿ ಹೇಗುಂದ (ಎಂಕಶಾ. ೦೪೪೦. ಹಿಶಿ. ೨೬-೬; 1260);

ಬಿಳುಕಾರವ ಪೈಕಿ ಕೈಲಿಗೆರೆ ಗ್ರಾಮದ ಸಾಧನಪ್ರತಿ (ಪ್ರಂ೦. ೦೯೩೯. ೨೫-೦ ; ೧೫೨೪) ; ರಾಯರ ಶಿಷ್ಯರ ಪೈಕಿ ಯಾರು ಯಾರು ಅನುಭವಸ್ಥರು (ಅಹುಳ. ೬೯). **ಪಯಿಕಿ** : ನಮ್ಮ ಮೊದಲನೇ ಆವೃತಿಯ ರಿವಾಜ ಪುಸ್ತಕ ದೊಳಗಿನ ಪಾನು ೭೩೮ರ ಪಯಿಕಿ ೭ನೇ ಕಲಮಿನಲ್ಲಿ ಸೂಚನಾ ಪ್ರಸಿದ್ಧ ಮಾಡಿದಾಗ್ಯೂ (ಮುಂಚಿಮ್ಮಾ. ೨೦೭). [←ಮರಾ. ಪೈಕೀ]

**ಪೈಗಂಬರ್** 'ಪೈಗಂಬರ' ನೋ.

**ಪೈಗಂಬರ**, **ಪೈಗಂಬರ್** (ನಾ). ದೇವರ ಸಂದೇಶವನ್ನು ಸಾರು ವವನು; ಪ್ರವಾದಿ : ಮಹಮ್ಮದನು ಪೈಗಂಬರನೆನಿಸಿ ಮಕ್ಕಳ್ಕೆ ಮರಳಿದನು (ಹಾಂಶ್ರ. II. ೯೩೩) ; ಪೈಗಂಬರನು ನೀನೆ, ಮರಿಯಾತ್ಮಜನು ನೀನೆ ಎಂಬ ಸತ್ಯವನೀ ಜಗತ್ತರಿವುದೆಂದು? (ಗಾಂ೦. ೦೯-೯). **ಪೈಗಂಬರ್** : ಇಸ್ಲಾಂಸಂಸ್ಕೃತಿಗೆ ಆದ್ಯಪ್ರವರ್ತಕ ಪೈಗಂಬರ್ ಮಹಮ್ಮದ್ (ಇಸ್ಲಾಂಸಂ. ೦). [←ಪಾರ. ಪೈಗಂಬರ್, ಪೈಗಾಂಬರ್ ; ಹಿಂ. ಪೈಗಂಬರ್ ; ಮರಾ. ಪೈಗಂಬರ್, ಪೇಗಂಬರ್]

**ಪೈಗಸ್ತಿ**, **ಪೈಗಸ್ತು** (ನಾ). ೧. ಪಹರೆ ; ಗಸ್ತು : ಎರಡು ದಿನಗಳು ಒಂದೇ ಕಮನಾಗಿ ಸರಸ್ವತಿಯ ಮನೆಯ ಬಳಿ ಪೈಗಸ್ತಿ ತಿರುಗಿಸಿ ಗಣೇಶ ಹೊಸ ಸುದ್ದಿಗಳನ್ನು ತಂದು ದಣಿಗೆ ಒಪ್ಪಿಸಿದ (ಕಹಸಂ. ೨೦೦). **ಪೈಗಸ್ತು** : ೨. ಹೆಚ್ಚಿನ ಮೇಲ್ವಿಚಾರಣೆ ಮಾಡುವವನು; ಮೇಲ್ವಿಚಾರಕ : (*). ೩. ಕಾವಲುಗಾರನು; ಗಸ್ತುತಿರುಗುವವನು : (*). ೪. ಸೇವಕ : ರಾಮನಾಥಯ್ಯನವರ ಜತೆ ಬಂದಿದ್ದ ಅವರ ಪೈಗಸ್ತಿಗೆ ಹೊರಗೆ ಎಲೆ ಹಾಕ ಹೇಳಿ, ಅವರೊಂದಿಗೆ ಶಾಸ್ತ್ರಿಗಳು ಊಟಕ್ಕೆ ಕುಳಿತರು. (ಮುಬ್ಬುಮು. ೯೩). [←ಹಿಂ. ಪೈಗಶ್ತೀ; ಮರಾ. ಪೈಗಸ್ತ್./ತೆಲು. ಪೈಗಸ್ತಿ]

**ಪೈಗಸ್ತು** 'ಪೈಗಸ್ತಿ' ನೋ.

**ಪೈಗು**, **ಪೈಗೋ** (ನಾ). ೧. ಬರ್ಮಾದ ಸಮೀಪದಲ್ಲಿರುವ, ಕುದುರೆ ಗಳಿಗೆ ಪ್ರಸಿದ್ಧವಾದ ಒಂದು ದೇಶದ ಹೆಸರು : (*). ೨. "ಒಂದು ಜಾತಿಯ ಕುದುರೆ, ತಟ್ಟು" (ಕವಕಾಂ. ೩೯೬). **ಪೈಗೋ** : (*).

**ಪೈಗೋ ಟಾಂಕ್ಣಾ**=ಪೈಗೋದೇಶದ ಉತ್ತಮಜಾತಿಯ ಕುದುರೆ : ಜವನಃ, ಜವಾಧಿಕಃ—ವೇಗದಿಂದ ಅಧಿಕವಾದ ಕುದುರೆಯ ಹೆಸರು . . . ಅರಬ್ಬೀಟಾಂಕ್ಣಾ, ಪೈಗೋಟಾಂಕ್ಣಾ, ಮುಂತಾದವುಗಳು (ಸಿಶ್ಯಾತಿ. ೨೯೯). [←ಮಲಯಾ. ಪೈಗು / ತಮಿ. ಪೈಕೋವ್ಪೈ]

**ಪೈಗೋ** 'ಪೈಗು' ನೋ.

**ಪೈಚುಕಿ** (ನಾ). ಒಂದು ಬಗೆಯ ಸಸ್ಯ : "ಪೈಚುಕಾ_ಕುರುಟಿಗೆ, ನಾಯಹತ್ತಿ" (ಓಸಂ. ೦೦೩). [?]

**ಪೈಜಣ**, **ಪೈಂಜಣ**, **ಪೈಜಣಿ**, **ಪೈಜಣು** (ನಾ). ೧. ಕಿರುಗೆಜ್ಜೆಗಳಿಂದ ಕೂಡಿದ ಕಾಲಿನ ಆಭರಣ ; ಅಂದುಗೆ ; ನೂಪುರ : ಆಕೆಯ ಕಾಲಲ್ಲಿ ಇನ್ನೂ ಪೈಜಣಗಳಿದ್ದು ಆಕೆಯು ನಡೆಯುವಾಗ ಅವುಗಳ ಸಪ್ಪಳದಿಂದ ಅಲ್ಲಿ ನಿಂತವರ ಎದೆಯು ಖಲಖಲಿಸುತ್ತು (ಗಾಂ೦ಗ. ೦೬೩) ; ಕಾಲೊಳಗಿನ ಪೈಜಣದ ರತ್ನಪ್ರಭೆಯು ಅವಳ ಮೈಯಲ್ಲಿ ಹಬ್ಬಿರುವುದು (ಮುಂಂಹು. ೩-೪೦೦). ೨. ಗೆಜ್ಜೆಯ ನಾದ : ಬೇಸಗೆಯ ನಿಟ್ಟುಸಿರು ಮಳೆಮನಿಯು ಪೈಜಣಕೆ ಕುಣಿದು ಕೊನರುವ ಹಸಿರು (ಸಂಪಮು. ೯೨-೩). **ಪೈಂಜಣ** : ೧. ಬಾಲೆಯರ ಕಾಲಲ್ಲಿ ರುಳಿ ಪೈಂಜಣ ಗಿಲಿಗಿಲಿ ಎಂದು ನುಡಿದುವ (ಸಿತ್ಯಕಿ. ೦೬-೭೦). **ಪೈಜಣಿ**: ೧. ಹುಡುಗಿಯ ರತ್ನಾಭರಣಗಳ ತೊಡಿಗೆಯ ಪೈಜಣಿ ಚಾದರದುಡಿಗೆಯ ತ್ರಿಭುವನ ಮೋಹಿಪ ಬರಿ ಬೆಡಗಿಯ ಕಂಡಾಗ . . ಖಳರು ಸೋಲುತ (ಸಮುಹು. ೨೯). **ಪೈಜಣು** : ೧. ಅವುಗಳ ಕೋಡು ಗಳಲ್ಲಿ ಸಟ್ಟರ ಹೆಣ್ಣುಮಕ್ಕಳ ಕಾಲೊಳಗಿನ ಬೆಳ್ಳಿಯ ಸರಪಳಿ, ಪೈಜಣು ಗಳು ಒಪ್ಪುತ್ತಿದ್ದುವು (ಕಾಂಇ. ೨೦೨).

[←ಹಿಂ. ಪೈಜನೀ, ಪೈಂಜನಾ ; ಮರಾ. ಪೈಜಣ್, ಪೈಂಜಣ್]

**ಪೈಜಣಿ** 'ಪೈಜಣ' ನೋ.

**ಪೈಜಣು** 'ಪೈಜಣ' ನೋ.

**ಪೈಜಾಮ** 'ಪಾಯಜಾಮ' ನೋ.

**ಪೈಜಾಮಾ** 'ಪಾಯಜಾಮ' ನೋ.

**ಪೈಜಾರ** 'ಪೈಜಾರು' ನೋ.

**ಪೈಜಾರು**, **ಪೈಜಾರ** (ನಾ). ಜೋಡು ; ಮೆಟ್ಟು ; ಪಾದರಕ್ಷೆ : ಏಕಲವ್ಯನು ರತ್ನಖಚಿತವಾದ ಪೈಜಾರುಗಳನ್ನೂ . . . ಹಿಡಿದು (ಕೃವಾಸ. ೦೨೦). **ಪೈಜಾರ** : ಪೈಜಾರದಿಂದ ಒಂದು ಮೆಟ್ಟು ತಪ್ಪಿಸಿದ್ದು ನಿಶ್ಚಯವು (ಕಹಾರ. ೩೦). [←ಅರ. ಪಾರ. ಹಿಂ. ಮರಾ. ಪೈಜಾರ್]

**ಪೈಜಿ** (ನಾ). ಶರತ್ತು ; ಕರಾರು ; ಪಣ : ಶಿಲಮೆನಾತನ ನಿಜವನಥವಾ ಸೆಳೆದುದೊಡೆ ಮುಟ್ಟ ಹಿಡಿಕೊಂಡೆಳೆವು ತಹೆ ನಾನೆನುತ ಪೈಜಿಯ ನುಡಿದಳಾ ಮಾಯೆ (ಪ್ರಭುಲಿ. ೨-೯೦) ; ಎರೆರೆ ಗರುವೆ ನಿನ್ನಯ ಪೈಜಿಯಂ ಸಲಿಪನಿನ್ನುಮಾತನು ಪೋಗೆ ಮರ್ತ್ಯಕೆ (ಪ್ರಭುಲಿ. ೯-೩೦); ಧೀರಮುನಿ, ಪೈಜಿಯಂ ಪಾಲಿಸುವ ನಿನ್ನ ಧೈರ್ಯಪದೆತ್ತ ಜಾರಿದುದೊ? (ಹರಿಶ್ಚಂಗ. ೩೯-೦೦೩೯). [<ಪ್ರಾ. ಪಇಜ್ಜಾ. / ಸಂ. ಪ್ರತಿಜ್ಞಾ./ಹಿಂ. ಮರಾ. ಪೈಜ್]

**ಪೈಜಿಗ** (ನಾ). ಪಣ ತೊಟ್ಟವನು ; ಶಪಥ ಮಾಡಿದವನು : ನಡೆವು ತಿರ್ದುದು ಸಮರವೀಥಿಯ ಕಡೆಯಲ್ಲೈವರು ರಕ್ಕಸರ ಖಳರೊಡೆಯ ಕಳವಿನ ಕಾಳಗಕೆ ಕಳುಹಿದನು ಪೈಜಿಗರ (ಕೋರಿಂ. ೬-೦೩-೩೦).

[ಪೈಜಿ + — ಗ]

**ಪೈಜಿಗಾಜಿ** (ನಾ).=ಪೈಜಿಗ : ಅಜಿರಂಗದಲಿಂದು ನಿನ್ನಯ ಭುಜಶಿರೋ ಮಣಿಯ ಪೈಜಿಗಾಜಿನ ಗೆಲಿದಡಹುದು ಬಿಡೌಪಸುತನೆಂಬಗ್ಗಳಿಕೆ (ಕೋರಿಂ. ೯-೯-೩). [ಪೈಜಿ + — ಕಾಜಿ]

**ಪೈಟನ** 'ಪೈಠಣಿ' ನೋ.

**ಪೈಟನಿ** 'ಪೈಠಣಿ' ನೋ.

**ಪೈಟಾಣಿ** 'ಪೈಠಣಿ' ನೋ.

**ಪೈಟಿ** 'ಪಲ್ಲಿ' ನೋ.

**ಪೈಠಣಿ**, **ಪೇಠಣಿ**, **ಪೈಟನ**, **ಪೈಟನಿ**, **ಪೈಟಾಣಿ**, **ಪೈಠಣೆ** (ಗು). ೧. 'ಪೈಠಣ' ಎಂಬ ಸ್ಥಳದಲ್ಲಿ ತಯಾರಾದ : ಐದಂಬು ತಿಂಗಳಿಗೆ ಕೊಯ್ದು ಮಲ್ಲಿಗೆದಂಡೆ ಹಸುರು ಪೈಠಣಿಸೀರೆ ಕುಬ್ಬಸ ಬಗೆಸುವಳ (ಕೋಟಗೀ. ೯೯). (ನಾ). ೨. ಪೈಠಣ ಎಂಬ ಸ್ಥಳದಲ್ಲಿ ತಯಾರಾದ ಒಂದು ಬಗೆಯ ಬಟ್ಟೆ ; ಜರಿಯ ನಕಾಸೆಯುಳ್ಳ ರೇಷ್ಮೆವಸ್ತ್ರ ; ▶ 'ಪೈಠಣ' ಎಂಬುದು ಈಗಿನ ಔರಂಗಾಬಾದ್ ಜಿಲ್ಲೆಯ ಹಿಂದಿನ 'ಪ್ರತಿಷ್ಠಾನ ಪುರ' ವೆಂಬುದಕ್ಕೆ ಈಗ ಇರುವ ಹೆಸರು : ಕೇಜಿಡೆಗೊಪ್ಪುವ ಕಾಸಿ ಚಿನ್ನಾಂಬರವ ರಂಜಿಪ ಸಣ್ಣ ಪೈಠಣಿಯು (ದೇವಾಂಕು. ೬-೨೩೩) ; ಹಸಿರ ಪೈಠಣಿ ಮೇಲೆ ಕುಸಲದ ಹೂಗಳು ಕಸುತಿ ತಗದಾರ ಕುಬಸೀಗೆ ಕನ್ನೆಯರು (ಸಿರ್ಯಕಿ. ೦೭. ೬೩). ೩. ರೇಷ್ಮೆಯ ಅಂಗಿ : ತೊಟ್ಟ ಮುತ್ತಿನ ಪೈಠಣಿ ಯಿಂದ ಚೆಲುವಿನ ಕಟ್ಟೆಬೇಡದೆ ನಡೆತಂದ (ಕಂಸಂ. ೯-೯೯). **ಪೇಠಣಿ** : ೧. ಪೊನ್ನ ಪೇಠಣಿಯ ಪೂ'ರ್ ಥಳತ್ಥಳಿಸೆ (ರಾಜಕೀ. ೦೩. ೬೨). **ಪೈಟನ** :೪. ಜರತಾರಿ ಬಟ್ಟೆ ; ಜರಿಬಟ್ಟೆ : ಉಟ್ಟ ಎಳಗಾವಿಯ ಸುಧೋತ್ರವ ತೊಟ್ಟಗೆಲಸದ ಪೈಟ[ಟ]ನಂಗಿಯ ಕಟ್ಟಿದನು ಮಣಿತಾತಿಯುಂಗುಲಕಟ್ಟು ಮುದ್ರಿಕೆಯ (ಕಕಂ. ೨೨೯-೨). **ಪೈಟನಿ** : ೧. ಹಸರು ಪೈಟನಿಸೀರೆ ನಿರಿವಿಡಿ ದುಟ್ಟು ಪೊಸ ವಜ್ರಗಾವಿಕುಪ್ಪಸವನ್ನು ತೊಟ್ಟು (ಕಂಬ್ಯಾವ. ೬). **ಪೈಟಾಣಿ**: ೧. ಉಟ್ಟಾಳು ಪೈಟಾಣಿಶೀರೆಯ ತಾನೂ ತೊಟ್ಟಾಳು ಜರುತಾರಿ ಕುಪ್ಪುಸನನ್ನು (ಕಹಮಾ. ೦೨). **ಪೈಠಣೆ** : ೨. ವರನೂತನವಸ್ತ್ರವನು ಸುರುಚಿರುಮಪ್ಪ ಪೈಠಣೆ ಮುಂತಾದುವ ದೊರೆಗುಡಲಿತ್ತನಾ ದೇವ

(ಜಗ್ಗ.ಕಹ. ೩-೪೯). ೩. ಪೊಳೆವ ಪಸುರುವಟ್ಟೆಯ ಪೈಠಣೆ ಪೊಸ ಸಣ್ಣ ರುದ್ರಾಕ್ಷಿಗಳ ಕಂಠಮಾಲೆ ರಾಜಿಸಲು ನಂಬ್ಯಣ್ಣ ನಂದಂಬಡೆದ (ಸೌಂದಕಾ. ೩-೯). ೪. ಇಳೆಯೊಳೆಳಲುವ ಶೋಣ ಪೈಠಣೆಯ ಪೈರಣೆಯು ಕಳಕಳಿಸೆ ಮೈಯೊಳಂ ದಾಳಿಂಬಪೂವಿನಂತಳವಟ್ಟ ಚಿಂದಿ ವಸ್ತ್ರಕಠಟದೊಳಂ ಚುಂಗ ಮೆಱೆವುತಿರೆ ಸೊಬಗಿನೀದಂ . . . ನಿಂದು (ಶ್ರೀಕುಕು. ೫-೨೬).

[←ಮರಾ. ಪೈಠಣೀ./ಸಂ. ಪ್ರತಿಷ್ಠಾನ]

**ಪೈಠಣಿ** 'ಪೈಠಣೆ' ನೋ.

**ಪೈಠರ** (ನಾ). ಮಡಕೆಯಲ್ಲಿ ಬೇಯಿಸಿದ ಹಿಟ್ಟು ಮುಂತಾದುವು : "ಉಖ್ಯಂ, ಪೈಠರಂ—೨ ಮಡಕೆಯಲ್ಲಿ ಅಟ್ಟ ಹಿಟ್ಟು" (ಸಿದ್ಧಾಂತಿ. ೨೬೬). [ಸಂ.]

**ಪೈಠವ** (ನಾ). ಒಂದು ಬಗೆಯ ಸಿಹಿ ಖಾದ್ಯ : ಕಣಿಕದ ಬಟುವ ತೆಗೆದ್ದು ವಣಿಕ ಸೂಸಲನಿಕ್ಕಿ ಮಣಿದು ಪೈಠವದ ವರ್ತುಳಭಾಷಣಾಂಗೈದು (೦೦ಗಕು. ೬-೦೦). [ ? ]

**ಪೈಣ** 'ಪಯಣ' ನೋ.

**ಪೈಣಗತಿ** 'ಪಯಣಗತಿ' ನೋ.

**ಪೈಣಿಗ** 'ಪಯಣಿಗ' ನೋ.

**ಪೈತಿಕ, ಹೈತಕ, ಹೈತಿಗೆ**[1] (ನಾ). ೧. ಪಿತ್ತಸಂಬಂಧವಾದುದು : ಲಲನಾಮುಖೇಂದುರಾವಣ್ಯಾಲೀಲೆಯಂ ಪಡೆವ ಬಣ್ಣದಿಂ ಕಱೆದೇ ನಲೆದುದೊ ಪೈತಿಕ[ ಪಾಠಾಂ-ಪೈತಿಗ, ಬಯ್ಯುಗ]ದಂತಿರೆ ತಲೆಗೇಱುವ ಕುಸುಮನಿಚಯಮಂ ಕಾಶ್ಮೀರಂ (ಅದಿಪು. ೦೦-೦೨೯). **ಹೈತಕ** : ೨. ಮೈಮೇಲೆ ಪಿತ್ತದಿಂದುಂಟಾಗುವ ಗಂದೆ,— ಗಾದರಿ : (೪). **ಹೈತಿಗೆ**[1] : ೨. ಮಗುವಿನ ಮೈಮೇಲೆ ಹೈತಿಗೆ ಎದ್ದಿದೆ (ಉಹಿ).

[ <ಸಂ. ಪೈತ್ತಿಕ ]

**ಪೈತೃಕ** (ಗು). ೧. ತಂದೆಗೆ ಸಂಬಂಧಿಸಿದ. ೨. ಪಿತೃಸಂಬಂಧವಾದ ; ಪಿತ್ರಾರ್ಜಿತವಾದ : ದುರ್ಯೋಧನಾದಿಗಳಿಗೆ ಭೀಷ್ಮದ್ರೋಣಾದಿಗಳು ಎಷ್ಟೋ ಬಗೆಯಲ್ಲಿ ಬುದ್ಧಿ ಹೇಳಿ ಪಾಂಡವರಿಗೆ ಅವರ ಪೈತೃಕ ರಾಜ್ಯವನ್ನು ಕೊಡಿರೆಂದು ಎಷ್ಟು ಬೇಡಿದರೂ ಅವರು ಕೇಳಲಿಲ್ಲ (ಜಿಕ್ಕಕ. ೦೩೬) ; ಕಗ್ಗತ್ತಲೆ, ಗುಹೆ, ಕಾಡು ಮತ್ತು ಭಯ ಇತ್ಯಾದಿಗಳ ಸಂಸ್ಕಾರಗಳು, ಗುಣಗಳು ಪೈತೃಕ ಆಸ್ತಿಯಂತೆ ನಮ್ಮನ್ನು ಸಂಬಂಧಿಸಿಕೊಂಡು ಬಂದಿರುವುವುಗಳಾಗಿರುತ್ತವೆ (ಜೀವಾಕ್ಕೆ. ೨೦೬). (ನಾ). ೩. ಪಿತೃಗಳಿಗೆ ಮಾಡುವ ಶ್ರಾದ್ಧ ; ತಿಥಿ : ನಾಳೆ ಪೈತೃಕಮುದಂ ನಾಡಿದಲ್ಲದೆ ಮಾಡೆನು (ಕೃಖಾಕಾ. ೦೦-೨೬) ; ಬೇಗದಿಂ ಪೈತೃಕಕೆ ಕ್ಷಣಸಲ್ಲಿರಿಯ ಭಕ್ತನಾಗಿ ಬಂದರ್ಚನೆಯ ಕೈಕೊಂಡು ನಿಜವುಂಕನಾಗೆ ಚಿತ್ರೀಸಪುರವರಕು ಕೈಲಾಸಕ್ಕೆ ಸಾವುವೇದಿಯನೊಯ್ದನು (ಶಾಕಕ. ೬-೨೦). [ ಸಂ. ]

**ಪೈತೃಕಕರ್ಮ** (ನಾ). ಶಾಸ್ತ್ರೋಕ್ತವಾಗಿ ಮಾಡುವ ಶ್ರಾದ್ಧ ; ಪಿತೃಕರ್ಮ : "ಶ್ರಾದ್ಧಂ . . . ಬ್ರಾಹ್ಮಣಭೋಜನ, ಪಿಂಡಪ್ರದಾನಾದಿ ರೂಪವಾದ ಪೈತೃಕಕರ್ಮಕ್ಕೆ ಹೆಸರು" (ಸಿದ್ಧಾಂತಿ. ೨೨೩). [ಸಂ.]

**ಪೈತೃಕಧನ** (ನಾ). ಪಿತ್ರಾರ್ಜಿತವಾಗಿ ಬಂದ ಸ್ವತ್ತು ; ವಂಶಪಾರಂಪರ್ಯವಾಗಿ ಬಂದ ಐಶ್ವರ್ಯ. [ಸಂ.]

**ಪೈತೃಪತಿ** (ನಾ). ಪಿತೃಗಳ ಒಡೆಯ ; ಯಮ : ಪೈತೃಪತಿವಿಧ್ವಂಸನ ಸುರನಿಕರಪೋಷಣ ಮಹಾಪೌರುಷಪ್ರಯುತ . . . ತ್ರಿಣೇತ್ರ ದಾನವ ವೈತ್ರ ಸುಪವಿತ್ರಚಾರಿತ್ರನೆ (ಶಂಪು. ೦೩-೦). [ಸಂ.]

**ಪೈತ್ತ** (ಗು). ಪಿತ್ತದಿಂದ ಉಂಟಾದ. [ ಸಂ. ]

**ಪೈತ್ತಲ** (ಗು). ಹಿತ್ತಾಳೆಯಿಂದ ಮಾಡಿದ. [ ಸಂ. ]

**ಪೈತ್ತಲಜ** (ನಾ). ಹಿತ್ತಾಳೆಯಿಂದ ಹುಟ್ಟಿದುದು ; ಕಂಚು ಮುಂತಾದ ಮಿಶ್ರಲೋಹ : ಪಾದವೆರಡಾ ಸವಾಂಗುಲವದಂ ಚಿನ್ನದಿಂದಾದಡಾಗಲಿ ಬೆಳ್ಳಿ ತಾವ್ರ ಪೈತ್ತಲಜ ಲೋಹಾದಿಯಾಗಲಿ ಪಿಷ್ಟರಚಿತವಾಗಲಿ ಪಾತ್ರೆಯುಂ ರಚಿಸಿ (ಶೀಕ್ಕೆಶು. ೬-೦೦-೩೪). [ ಸಂ. ]

**ಪೈತ್ತಿಕ** (ಗು). ೧. ಪಿತ್ತಸಂಬಂಧವಾದ ; ಪಿತ್ತದಿಂದುಂಟಾದ : ೩೦ ಕಂಡಂ ಮುಟ್ಟಗೆಯುಂಟರೂಷಕಂ ಕಕ್ಕೆ ಮುಸ್ತೆ ನಿಂಬಂ ಕೊತ್ತುಂಬರಿಯೆಂಬಿವ ನೆಂಟೊಂದಾಗಿರೆ ಮಱುಗಿಸಿ ಕುಡಿಯೆ ಪೈತ್ತಿಕಜ್ವರಹರಣಂ (ಕೋಕಕೋಕ. ೯-೦೬) ; ಇಮ ನಿಮಗೆನಿತು ಪೈತ್ತಿಕಜ್ವರಮಾದೊಡಮಿಂತೆನಲಕ್ಕುಮೆ (ಜಂಹಂ. ೬-೩೯ ಪ). (ನಾ). ೨. ಪಿತ್ತದಿಂದ ಉಂಟಾಗುವ ವಿಕಾರ ; ಉನ್ಮಾದ : ನೀತಿಯ ತಾಯಿ ಪೈತ್ತಿಕವಾದಾದೊಡವಾಡಲವೋಘ ಮೆನ್ನೋಳೀ ಮಾತಂ (ಜಿಜಂಕು. ೬-೦೯೩). ೩. ಪಿತ್ತಶರೀರಿಯಾದುದು: ವಾತಪ್ರಕೃತಿಯ ಗುಣಂಗಳ್ ಮಾತಾಪಿತೃಗಳ್ಗೆ ಮುನ್ನಮುಳ್ಕೊಡೆ ಮಱಿಯುಂ ವಾತಿಕನಕ್ಕುಂ ಪೈತ್ತಿಕಜಾತಿಕನುಂ ಶ್ಲೇಷ್ಮಕಾಂಗನುಂ ತಜ್ಜಾತಂ (ಅಶ್ವಶಾ. ೬-೯೬). [ ಸಂ. ]

**ಪೈತ್ಯ** (ಗು). ೧. ಪಿತ್ತದಿಂದುಂಟಾದ ; ಪಿತ್ತಸಂಬಂಧವಾದ : ಅನಿಲ ಕಫ ಪೈತ್ಯದೋಷದಿನನಿಲನ ಕುಂದಿಂದೆ ಪಂಗುಳಾಂಧ ಕೃಶಂ ವಾಮನ ಕುಬ್ಜ ಬಧಿರ ಮೂಕರುಮನೇಕವಿಧದಂಗಹೀನರುಂ ಜನಿಯಿಸುವರ್ (ಸುದಾ. ೦-೯೩). 'ಪೈತ್ಯಜ್ವರ' ಪರಾ. (ನಾ). ೨. ಪಿತ್ತಸಂಬಂಧವಾದ ದೋಷ ; ಪಿತ್ತದೋಷ : ಬೇಗದಿ ಹರಿ ಶೀತಳೆಯು ಪೈತ್ಯದ ರೋಗವನುಜ್ಜಾಯಿಯು ವಜ್ರಾಸ್ತ್ರವ (ಕರ್ಣಾಟಕ. ೩೩) ; ಕಳ್ಳಂಕಡಲೆ ೫೦ ಹಲ . . . ಸಕ್ಕರೆ ೩೦ ಭಾಗ, ಇವಂ ಚೂರ್ಣವಂ ಮಾಡಿ ಸೇವಿಸೆ ಪೈತ್ಯ, ಶ್ವಾಸ, ಕಾಸ ಮಾಣ್ಗುಂ (ಖ್ಯಶ್ವೀ. ೬೪) ; ಬಲುಭೂತ ಸೋಂಕಿತೋ ಗ್ರಹದ ಚೇಷ್ಟೆಯೋ ಪೈತ್ಯ ತಲೆಗಡರ್ದುದೊ ಮಿತ್ರೆಯ:ನಪ್ಪಳೋ (ಜಕಮೋ. ೨೩-೯೯). ೩. ಉನ್ಮಾದ ; ಹುಚ್ಚು : ಪೈತ್ಯದೊಳುಲಿದ ಯತಿನುಡಿ ನಿಶ್ಚಯವೆ (ಹರಿಕ್ಕಾ. ೨೧೬-೯೩) ; ಪೈತ್ಯವಾದವಗೆ ಸ್ವೈತ್ಯವಾಗದೋ ? (ಗಾದೆ). 'ಪೈತ್ಯಗಾರ' ಪರಾ. [ < ಸಂ. ಪೈತ್ತ ]

**ಪೈತ್ಯಗಾತಿ** (ನಾ). ಹುಚ್ಚಿ ; ಉನ್ಮಾದಿನಿ : (೪). [ ಪೈತ್ಯ + — ಗಾತಿ ]

**ಪೈತ್ಯಗಾರ** (ನಾ). ಉನ್ಮತ್ತ ; ಹುಚ್ಚ : ಪಿತ್ತ ಮಗಳಂ ಮಡದಿಯಾಗಿ ಮಾಡಿಕೊಂಡ ಬೊಮ್ಮನಂ ಪಾರ್ವರ್ ಪೈತ್ಯಗಾರರಾಗಿ ಪೊಗಳುತ್ತಿರ್ಪರ್ (ಅಕಾಂಶಿ. ೨೬-೨೬ ಪ). [ ಪೈತ್ಯ + — ಗಾರ ( < — ಕಾಱ ) ]

**ಪೈತ್ಯಜ್ವರ** (ನಾ). ಪಿತ್ತದಿಂದ ಉಂಟಾದ ಜ್ವರ : ಫೋಡಾಬೋಳೀರಸ . . . ಪೈತ್ಯಜ್ವರಕ್ಕೆ ಜೀರಿಗೆಯಲ್ಲಿ ಕೊಡುವುದು (ವೈದ್ಯಶಿ. ೨೬); ಉನ್ಮಾದರೋಗದವರು, ಪೈತ್ಯಜ್ವರದವರು . . . ವಿಷದ ರೋಗದವರು, ಇವರಿಷ್ಟೂ ವಮನಯೋಗ್ಯರೆಂದರಿವುದು (ಸಕವ್ಯ. ೨೩). [ಸಂ.]

**ಪೈತ್ಯಾಧಿಕೆ** (ನಾ). ಪಿತ್ತವು ಹೆಚ್ಚಾಗಿರುವವಳು : ಪೈತ್ಯಾಧಿಕೆಗತಿಕೋಪಂ (ಸುದಾ. ೦೦-೬). [ ಸಂ. ಪೈತ್ಯಾಧಿಕಾ ]

**ಪೈತ್ರ**[1] 'ಪಯಿತ್ರ' ನೋ.

**ಪೈತ್ರ**[2] (ಗು). ೧. ಪಿತೃಗಳಿಗೆ ಸಂಬಂಧಿಸಿದ, — ಸೇರಿದ; ಪಿತೃಸಂಬಂಧವಾದ. (ನಾ). ೨. ಪಿತೃಗಳನ್ನು ಉದ್ದೇಶಿಸಿ, ಅಂಗುಷ್ಠ ಮತ್ತು ತೋರುಬೆರಳುಗಳ ಮಧ್ಯದಿಂದ ಬಿಡುವ ತೀರ್ಥ : "ಪೈತ್ರಂ— ಪಿತೃಸಂಬಂಧವಾದ ತೀರ್ಥವು. ಅಂಗುಷ್ಠಾಂಗುಳ್ಯೋಃ —ಹೆಬ್ಬೆರಳಿಗೂ ಅದರ ತರ್ಜನೀ ಬೆರಳಿಗೂ ಮಧ್ಯದಲ್ಲಿರುತ್ತ" (ಸಿದ್ಧಾಂತಿ. ೨೪೦). ೩. ಹೆಬ್ಬೆರಳು ಮತ್ತು ತೋರುಬೆರಳುಗಳ ನಡುವಿನ ಭಾಗ. [ ಸಂ. ]

**ಪೈದಲ್** (ನಾ). ಕಾಲಾಳುಗಳ ಪಡೆ ; ಪದಾತಿಸೈನ್ಯ : ಇವರ ಸಂಗಡ ಭಾರಿ ಫೌಜು, ಕುದುರೆ, ಪೈದಲ್ ಸಹಾ, ಕೊಡಗಿನ ಕಡೆಗೆ ರವಾನೆ ಮಾಡಿದ್ದರಿಂದ (ರಾಕೇಂದ್ರ. ೩೬). [ ← ಹಿಂ. ಪೈದಲ್ ]

**ಪೈನೆ** 'ಬಯಿನೆ' ನೋ.

**ಪೈಹಾಡು** 'ಪಯಂಪಾಡು' ನೋ.

**ಪೈಪು** (ನಾ). ೧. ನಳಿಕೆ ; ಕೊಳವೆ : ಮಂಡಿಯು ಈಗಿರುವ ಆಕಾರದ ಬದಲು ಮೂರು ಅಂಗುಲದ ಪೈಪಿನ ಹಾಗೆ ಇದ್ದರೆ ಎಷ್ಟೋ ಚೆನ್ನು (ಪಾಂಗಿ. ೪೪). ೨. ಕೊಳಾಯಿ ; ನಲ್ಲಿ ; ನಳ : ಪೈಪುಗಳಿದ್ದ ಪಟ್ಟಣಗಳಲ್ಲಿ ಮೊದಲಿನಷ್ಟು ಗಿರಾಕಿ ದೊರೆಯದಿದ್ದರೂ ಒಟ್ಟಿನ ಮೇಲೆ ಅವನ ಪ್ರಾಪ್ತಿ ಚೆನ್ನಾಗಿಯೇ ಇತ್ತು (ದಾಸಹು. ೨೮). [ ← ಇಂ. Pipe ]

**ಪೈಪೋಟಿ** (ನಾ). ಹುರುಡು ; ಸ್ಪರ್ಧೆ ; ಮೇಲಾಟ : ಅವರ ಮನೆಯಲ್ಲಿ ನಡೆದ ಸತ್ಕಾರದಲ್ಲೆಲ್ಲಾ ಒಂದು ಪೈಪೋಟಿ ಮನೋಭಾವ ಕಾಣುತ್ತಿತ್ತು (ಹೊಸಕ್ಕೆ. ೦೦೬); ಅಲ್ಲಿ ಯಾವಾಗಲೂ ಜನರ ಪೈಪೋಟಿ ನಡೆಯುತ್ತಿರುತ್ತದೆ (ಕೊಪಶೇ. ೨೩೮).

**ಪೈಪೋಟಿ ಹಾಕು** = ಸ್ಪರ್ಧಿಸು ; ಮೇಲಾಟವಾಡು ; ಹುರುಡಿಸು : ಗುರು ಅಜಿತಸೇನನ ಕೀರ್ತಿ ವಲ್ಲಿಗೆಯೊಂದಿಗೆ ಪೈಪೋಟಿ ಹಾಕಿತಂತೆ! (ಚಾಸಗಿ. ೬೯).

[ ಪೈ₁ + ಪೋಟ್ಟಿ₁ . / ತೆಲು. ಪಯಿಪಾಟು, ಪೈಪಾಟು = ವಿಜೃಂಭಣೆ ]

**ಪೈಮಾಯಿಷಿ, ಪೈಮಾಷಿ, ಪೈಮಾಷೆ, ಪೈಮಾಸಿ** (ನಾ). ಭೂಮಿಯನು ಅಳೆಯುವಿಕೆ ; ಮೋಜಣಿ ; ಸರ್ವೆ : ಜಮೀನು ಪೈಮಾಯಿಷಿಯಿಂದ ಬೀಜವರಿಯ ಮೇಲೆ ಬಂದಾಯವನ್ನು ಠರಾವ್ . . . ಮಾಡಿದರು (ಕುಭಾಪಂ. II, ೩೦). **ಪೈಮಾಷಿ** : ಮೋಜಣಿ, ಪೈಮಾಷಿ ( — ಮಾಡುವುದು) (Surveying. ೩೮೫). **ಪೈಮಾಷೆ** : ಇದು ಈಗಿನ ಪೈಮಾಷೆಯ ಸಾಕಳಿ ಅಳತೆಯು (ಕೃಶಿಕ್ರ. ೦೩೯). **ಪೈಮಾಸಿ** : ೧೮೦೪ ರಲ್ಲಿ ಸೀಮೆ ಪೈಮಾಸಿಯುಂ ಮಾಡಲು ಮಹಂಜೆಸರದಾರಂ ಲಕ್ಷ್ಮಣರಾಯಂಮೆಸರು ಕನಕಗಿರಿಗೆ ಬಂದು (ಕಿಂಕ. III, ೦೪೭); ಒಂದು ಸಾಕಳಿ ಅಗಲ ಹಾಗು ಹತ್ತು ಸಾಕಳಿ ಉದ್ದ ಅಳೆದರೆ ಈಗಿನ ಪೈಮಾಸಿ ಪ್ರಕಾರ ಒಂದು ಎಕರೆ ಆಗುವುದು (ಕೃಶಿಕ್ರ. ೦೩೯).

[ ← ಪಾರ. ಪೈಮಾಇಶ್, ಪೈಮಾಯಿಶ್; ಹಿಂ. ಪೈಮಾಇಶ್; ಮ:ರಾ. ಪೈಮಾಯಿಷ್, ಪೈಮಾಶೀ, ಪೈಮಾಷೀ ]

**ಪೈಮಾಷಿ** 'ಪೈಮಾಯಿಷಿ' ನೋ.

**ಪೈಮಾಷೆ** 'ಪೈಮಾಯಿಷಿ' ನೋ.

**ಪೈಮಾಸಿ** 'ಪೈಮಾಯಿಷಿ' ನೋ.

**ಪೈಯಿವಸ್ತಿಕೆ** (ನಾ). ಪತ್ರವು ಬಂದ ತಾರೀಖಿನ ದಾಖಲೆ : ಶ್ರೀಕೃಷ್ಣ ಪೈಯಿವಸ್ತಿಕೆ ಚಿತ್ರಭಾನು ಸಂ॥ ರದ ಉಭಯಾತ್ಮಕ ಪುಷ್ಯ ಬ ೩ ಮಂಗ್ಗಳವಾರ (ಪ್ರಇಂ. ೦೯೩೦, ೯೨-೦೭; 1822).

[ ←ಪಾರ. ಪೈವಸ್ತ್; ಮರಾ. ಪೈವಸ್ತೀ, ಪೈವಸ್ತಾ ]

**ಪೈರಣ** 'ಪೈರಣೆ' ನೋ.

**ಪೈರಣಿ** 'ಪೈರಣೆ' ನೋ.

**ಪೈರಣು** 'ಪೈರಣೆ' ನೋ.

**ಪೈರಣೆ, ಪೈರಣ, ಪೈರಣಿ, ಪೈರಣು, ಪೈರನ, ಪೈರಾಣ, ಫೇರಣೆ** (ನಾ). ಸಡಿಲವಾದ ಅಂಗಿ : ಇಕ್ಕಿದ ಕುಂಡಲಯುಕಕಾಯಿ ಪೈರಣೆ ಸುಕ್ಕುಗುಪ್ಪಸ ಕಿಜುವೆರಲ ಚೊಕ್ಕಮುದ್ರಿಕೆ ಚೆಲ್ವುವೆತ್ತಿರಲಾಸ್ಥಾನ ಪೊಕ್ಕನಾ ಮಂತ್ರಿತಿಲಕನು (ಕುಮಾರಾಂ. ೯-೦೦೭); ಇಳೆಯೊಳೆಳಲುವ ಶೋಣ ಪೈಣಿಶೆಯ ಪೈರಣೆಯು ಕಳಕಳಿಸೆ (ಕೃಕುಪು. ೩-೨೬) ; ನರಸೇಂದ್ರನ ಪೈರಣೆಯು ಜೋಲ್ಸೆಟಿಗಾಂತು ಗರುವಮುರಿವರ್ಕೈದಿದರು (ಕಂಸಪ. ೨೪-೬೩). **ಪೈರಣ** : ಮೈಮೇಲೆ ಬಿಳಿದಾದ ಒಂದು ಪೈರಣ; ಅಂಚು ಇಲ್ಲದ ಧೋತರವನ್ನು ತೀಡಿ ಉಟ್ಟುಕೊಂಡಿದ್ದಾನೆ (ಉಂಪ್ರ. ೯). **ಪೈರಣಿ** : ಲೋಕೇಶ ಜನನ ಕೊರಳೊಳಿಕ್ಕಿ ಮಾಲೆಯ ಬೇಕಾದ ಪೈರಣಿದೊಡಿಸಿ (ಪ್ರಾಪಕ. ೬-೮೪). **ಪೈರಣು** : ಬಂದುಮಾಧವನು . . . ಪೈರಣನ್ನು ಕಳೆದು ಬರಿಮೈಯಿಂದ ಅಡಿಗೆಮನೆಗೆ ಹೊರಟನು (ಶರ್ಮಗಿ. ೦೪೭); ಕೋಟು ಟೊಪ್ಪಿಗೆ ತೆಗೆದಿಡಿರಿ, ಪೈರಣು ಇರಲಿ (ಹಂಚಿಕ ೮೦). **ಪೈರನ** : ಮೈಯಲ್ಲಿ ಒಂದು ಉದ್ದನ್ನ ಪೈರನದ ಮೇಲೆ ಜಾಕೀಟು (ಮಂದಾಕಿ. ೦೯೧). **ಪೈರಾಣ** : ಧೋತ್ರ, ಪೈರಾಣ, ಟೊಪ್ಪಿ—ಎಲ್ಲ ಖಾದಿಬಟ್ಟೆಯದೇ (ಆಳಾ. ೭). **ಫೇರಣೆ** : ತೊಟ್ಟ ಫೇರಣೆ ಮೇಲುಟ್ಟ ದೇವಾಂಗವು ಇಟ್ಟ ಶ್ರೀಭಸಿತ ರುದ್ರಾಕ್ಷಿ (ಬಸಶ. ೦-೦೯೩).

[ ←ಪಾರ. ಪೆರಾಹನ್, ಪೀರಾಹನ್ ; ಹಿಂ. ಪೈರಾಹನ್ = ಹೊದಿಕೆ ; ಗುಜ. ಪಹೇರಣ್./ಪ್ರಾ. ಪರಿಹಾಣ./ ಸಂ. ಪರಿಧಾನ ]

**ಪೈರನ** 'ಪೈರಣೆ' ನೋ.

**ಪೈರಾಣ** 'ಪೈರಣೆ' ನೋ.

**ಪೈರು** 'ಪಯಿರ್' ನೋ.

**ಪೈರುದಾರ** (ನಾ). ಜಮೀನನ್ನು ಸಾಗುವಳಿ ಮಾಡುವವನು ; ರೈತ ; ಕೃಷಿಕ : ನಾಲ್ದೆಸೆಯೊಳಿರ್ಪ ವರ್ತಕ ಪೈರುದಾರ ಗಂದಿಗ ಕೊಂಕಣಿಗ ಪರ್ಯಂತಾದ ಮಹಾನಾಡಪರಂ ಬರಿಸಿ (ಕಕಪ್ರ. ೬-೨) ; ಇವನಿಗೆ ಶೇಕದಾರನು, ಸಾಗುವಳಿದಾರನು, ಪೈರುದಾರನು ಎಂಬ ಹೆಸರುಂಟು (ಕಥಾಪಂ. IV, ೩೦). [ ಪೈರು (<ಪಯಿರ್) + — ದಾರ್ ]

**ಪೈರೆ** (ನಾ). ೧. ದಿನಗೂಲಿಯ ಹಣ. ೨. ದಿನಗೂಲಿ ಕರಾರಿನ ಮೇಲೆ ಮಾಡುವ ಕೆಲಸ : ನಮ್ಮ ಕೂಡೆ ಪೈರೆ ಮಾಡ್ತೇನ ಅಂದರ ಕೊಡತೇನಿ (ಆಟೋಣ. ೪೦). [ ← ಮ:ರಾ. ಪೈರೇ ]

**ಪೈರೆತ್ರ** (ನಾ). ಒಂದು ಬಗೆಯ ಸಸ್ಯ : ಪೈರೆತ್ರಂ, ಕ್ರಿಮಿನಾಶಹೂವು (ವ್ಯಶಿಗಿ. ೬೫-೦೪೨೯). [ ? ]

**ಪೈಲವಾನ, ಪಯಿಲ್ವಾನ್, ಪಹಿಲವಾನ, ಪಹಿಲ್ವಾನ್, ಪೆಹೆಲ್‌ವಾನ್, ಪೈಲ್ವಾನ್** (ನಾ). ಕುಸ್ತಿಯಾಳು ; ಜಟ್ಟಿ ; ಮಲ್ಲ : ಮತ್ತೊಂದು ಕಡೆಯಲ್ಲಿ ಟಗರು ಕೋಣ ಮೊದಲಾದವುಗಳ ಕಾಳಗವನ್ನೂ ದೊಂಬರು ಪೈಲವಾನರು ಮುಂತಾದವರ ಆಟಗಳನ್ನೂ ನೋಡಿ (ಮುಖಾಪಂ. I, ೩೬) : ಅವನು ಪೈಲವಾನನಂತೆ ಹುರಿಕಟ್ಟಾಗದಿದ್ದರೂ ಆರೋಗ್ಯಕ್ಕೆ ಹೊಂದಿಕೊಂಡು ದುಂಡಗೆ ಬೆಳೆದಿದ್ದನು (ಜಯಂಕ. ೩೦). **ಪಯಿಲ್ವಾನ್** : ಅವನು ಆ ಊರಿನ ಭಾರಿ ಪಯಿಲ್ವಾನ್ ಆಗಿದ್ದಾನೆ (ಕೂಂ). **ಪಹಿಲವಾನ** : ಗ್ರಂಥಕರ್ತನು . . . ೧೫೫೫ ವರ್ಷದ ಒಬ್ಬ ಬಲಿಷ್ಠನಾದ ಅರಬೀ ಪಹಿಲವಾನ (ಜಟ್ಟಿ)ನನ್ನು ಸ್ವತಃ ಕಣ್ಣಾಟ್ಟ ನೋಡಿರುವನು (ಶ್ರಿಹ್ಯಕ್ಷ. ೦೪೬); ದೊಡ್ಡ ದೊಡ್ಡ ಜಟ್ಟಿಗಳು (ಪಹಿಲವಾನರು) ಇಷ್ಟು ನಿರ್ವಿಕಾರಿಗಳೂ ಶಾಂತರೂ . . . ಬಲವಂತರೂ ಆಗುವ ನಿಜವಾದ ರಹಸ್ಯವು ವ್ಯಾಯಾಮವೇ ಸರಿ (ಶ್ರಿಹ್ಯಕ್ಷ. ೦೪೭). **ಪಹಿಲ್ವಾನ್** : ಕೆಲವು ಪಹಿಲ್ವಾನ್ ಚಿತ್ರಗಳಲ್ಲಿ ಎದೆಯ ಮೇಲೆ ದೊಡ್ಡ ಎರಡು ಕಾವಲಿಗಳಿರುತ್ತವೆ (ಕಸಕ. ೯೩). **ಪೆಹೆಲ್‌ವಾನ್** : ನಮ್ಮ ತಾಲೀಮಿನಲ್ಲಿಯ ಪೆಹೆಲ್‌ವಾನ್‌ರನ್ನೆಲ್ಲ ಕೂಡಿಕೊಂಡು, ಒಬ್ಬೊಬ್ಬ ಕಾಫರ್‌ನನ್ನೂ ಹಿಡಿದು, ಗುಟಲನ್ನೊತ್ತಿ ಪಡಚಾ ಮಾಡಿಬಿಡುತ್ತಿದ್ದೆ (ಅಕಾಂಡ. ೦೮೧). **ಪೈಲ್ವಾನ್** : ಪೈಲ್ವಾನ್ ಸುಬ್ಬುವೂ ತೊಡೆ ತಟ್ಟಿ ನಿಂತ (ಅಮುಕಾ. ೩) ; ನಮ್ಮೆಲ್ಲರ ಪೈಲ್ವಾನ್ ಆಗಿದ್ದವನು ಹೀಗಾದೆಯಲ್ಲ (ಅಕ್ರಾರ್ಕ. ೯೮).

[ ←ಪಾರ. ಹಿಂ. ಪಹಲವಾನ್ ; ಮ.ರಾ. ಪಹಿಲವಾನ್, ಪಹೇಲ್ವಾನ್, ಪೈಲವಾನ್ ]

**ಪೈಲಾ** 'ಪಯಿಲಾ' ನೋ.

**ಪೈಲಾನಂಬರು** 'ಪಯಿಲಾನಂಬರು' ನೋ.

**ಪೈಲಿಕೆ** (ನಾ). ಒಂದು ಬಗೆಯ ಮೂಲಿಕೆ : "ಪೈಲಿಕಾ—ಅಗುಳುಶುಂಠಿ" (ಓಪಧಿ. ೦೦೩). [ ? ]

**ಪೈಲು** (ನಾ). (ವಿಶೇಷವಾಗಿ ರತ್ನಗಳ) ಪಾರ್ಶ್ವ ; ಮಗ್ಗುಲು : ಒಂದು ನಕ್ಷತ್ರ ನೂರು ಕಡೆಗೆ ಬೆಳಕನ್ನು ಚೆಲ್ಲುತ್ತದೆ. ಹಾಗೆ ಭಗವಂತನ ಸೃಷ್ಟಿಯಲ್ಲಿ ಒಂದೊಂದು ಘಟನೆಗೂ ನೂರೊಂದು ಪೈಲುಗಳಿರುತ್ತವೆ

(ಕರುಣೆ. ೯೩೩); ಕರ್ಮಕೌಶಲತೆಯು ಅವನ ವ್ಯಕ್ತಿತ್ವದ ಒಂದು ಪೈಲು (ಕಶ್ಯಾ. ೨೩). [← ಪಾರ. ಹಿಂ. ಪಹ್ಲೂ; ಮರಾ. ಪೈಲೂ, ಪಹಲೂ]

**ಪೈಲ್ವಾನ್** 'ಪೈಲವಾನ' ನೋ.

**ಪೈವಸ್ತಿ** (ನಾ). ವಾಸ್ತವ್ಯ; ವಸತಿ: ಇದರ ಮುಂದೆ ವಿಜಾಪುರದಲ್ಲಿ ಮುಸಲ್ಮಾನರ ಪೈವಸ್ತಿಯು ಬಿದ್ದದ್ದರ ಪ್ರಮಾಣಗಳು ಇತಿಹಾಸದಲ್ಲಿ ಇರುತ್ತವೆ (ಕಹಾಗಿ. ೩೩೯). [← ಪಾರ. ಪೈವಸ್ತ್; ಮರಾ. ಪೈವಸ್ತೀ]

**ಪೈವಸ್ತೆ** (ಗು). ಮೂರು ವರ್ಷಗಳ ಹಿಂದಿನ: (ಮ್ಯಗೆಕೆ. IV, ೬೮೦). [←ಮರಾ. ಪೈವಸ್ತಾ]

**ಪೈಶಂಗಿತ** (ನಾ). ನಸುಪಳದಿಬಣ್ಣ: ಪಿರಿದುಂ ಮಾಡಿತ್ರಮಾತ್ರ್ಯಪ್ರಕರದ ನಯನಕ್ಕಂ ಮನಕ್ಕಂ ಸುರಸ್ತ್ರೀಯರ . . . ಅಧರನಾಯೂಷಾಳಿಯಿಂ ದೆತ್ತಲುಂ ಪಾಂಡುರಿತಂ ಪೈಶಂಗಿತಂ ಕರ್ಬುರಿತಮರುಣಿತಂ ವ್ಯೋಮರಂಗಂ ಬೆಡಂಗಂ (ಶಂತ್ರಪು. ೦೨-೬೭). [ಸಂ.]

**ಪೈಶಾಚ** (ಗು). ೧. ಪಿಶಾಚಿಗೆ ಸಂಬಂಧಿಸಿದ. ೨. ಆಸುರೀಸ್ವಭಾವದ; ಅಮಾನುಷವಾದ. (ನಾ). ೩. ಪಿಶಾಚಿ: ಹಿಂದೆ ರಣದೊಳಭಿಲಾಷೆಯಿಂ ಪೈಶಾಚರಂತೆ ಹೇಸದೆ ರಕ್ತಪಾನಮಂ ಮಾಡಿಯೊಡಲ ಪೋಷಿಸಿದೆ (ಕೃಬಿಶಾ. ೨-೬೦). ೪. ಹಿಂದೂವಿವಾಹಪದ್ಧತಿಯ ಎಂಟು ಪ್ರಕಾರಗಳಲ್ಲಿ ಒಂದು: 'ವಿವಾಹ' ಪರಾ. [ಸಂ.]

**ಪೈಶಾಚಕ** (ನಾ). ೧. = ಪೈಶಾಚಿಕ ೩: ಹರಂ ಗಿರಿಸುತೆಗೆ ಪೇಟ್ದಾ ಕಥೆಗಳಂ ಪೈಶಾಚಕಭಾಷೆಯೊಳ್ ಬೃಹತ್ಕಥೆಗಳಂ ಮಾಡಿ ಪೇಟ್ದೊಡೆ (ಶಂಕಶಂ. ೦೦-೧೩). ೨. ಪಿಶಾಚಿ ಹಿಡಿದವನು; ದೆವ್ವ ಮೆಟ್ಟಿಕೊಂಡವನು: ದಿಗ್ಭ್ರಮೆ ಪದೆಂಗೆಟ್ಟಂಗೆ ಪೈಶಾಚಕಂಗೆ ದುರಾವೇಶಮಧಾಮ್ರಿಕಂಗೆ ಕುಮತಂ ತತ್ವಪ್ರಮೂಢಂಗೆ ಬೀಸಿದ ಕಣ್ಮಾಯದ ಕುಂಚ ದಂತಿರೆನಗಾದಶಾಸ್ತ್ರಗಳೇನೆಂಬುದೋ (ಕಾಮಂಖ. ೯೦೩). [ಸಂ.]

**ಪೈಶಾಚಿ** (ನಾ). ೧. ಪಿಶಾಚಿ: ಪುತ್ರಾಭ್ಯುದಯಮೋಹದ ತಮಸ್ಸು ತೀವಿರ್ದ ಲೋಭಪೈಶಾಚಿಗೀ ಪಿರಿಯ ಬಲಿಯಹುದೆಂದು ಮುನ್ನಮಾನರಿಯಲಾರದೆ ಹೋದೆ (ಶ್ರೀರಾಮಾ. ೦೦೬-೨೨೧). ೨. = ಪೈಶಾಚಿಕ ೩: ಈ ದೃಶ್ಯಕಾವ್ಯದಲ್ಲಿ ರಾಜನು ಮುಂತಾದವರುಗಳಿಗೆ ಸಂಸ್ಕೃತಭಾಷೆಯೂ . . . ರಾಕ್ಷಸ ಪಿಶಾಚಾದಿಗಳಿಗೆ ಪೈಶಾಚೀ ಮತ್ತು ಚೂಳಿಕಾಪೈಶಾಚೀ ಭಾಷೆಯೂ ಚಂಡಾಲಾದಿಗಳಿಗೆ ಅಪಭ್ರಂಶಭಾಷೆಯೂ ವ್ಯವಹಾರಾರ್ಹವಾಗಿ ವಿಹಿತವಾಗಿರುವುದು (ವಾರಕ. ೯೩೩). [ಸಂ. ಪೈಶಾಚೀ]

**ಪೈಶಾಚಿಕ** (ಗು). ೧. ಪಿಶಾಚಿಗೆ ಸಂಬಂಧಿಸಿದ. ೨. ಆಸುರೀಸ್ವಭಾವದ. (ನಾ). ೩. ಪ್ರಾಕೃತ ಭಾಷೆಗಳಲ್ಲಿ ಒಂದು; ಗುಡ್ಡಗಾಡುಜನಾಂಗದ ಭಾಷೆ: ಸಂಸ್ಕೃತಂ ಪ್ರಾಕೃತಂ ಅಪಭ್ರಂಶಂ ಪೈಶಾಚಿಕಮೆಂಬ ಮೂಱು ವರಭಾಷೆಗಳೊಳ್ ಪುಟ್ಟುವುವೆಲ್ಲಂ ಸರ್ವವಿಷಯಭಾಷಾಜಾತಿಗಳಕ್ಕುಂ (ಛಂದೋಂಬು. ೧-೯೬ ವ); ಸಂಸ್ಕೃತ ಪ್ರಾಕೃತ ಪೈಶಾಚಿಕ ಮಾಗಧ . . . ಮಿಶ್ರಾದಿ ಭಾಷಾಭೇದಗಳಂ ಪೇಳ್ವ ಲಾಕ್ಷಣಿಕರಪ್ಪ ಕವಿಗಳಂ (ಶಿವೇಕ. ೨೨೬). [ಸಂ.]

**ಪೈಶುನ್ಯ** (ನಾ). ೧. ಚಾಡಿ ಹೇಳುವಿಕೆ; ಚಾಡಿಕೋರತನ. ೨. ಪಿಸುಣು ಚಾಡಿ; ದೂರು: ಆ ಬಳಿಕ ನೀವು ಮಾಡಿಟ್ಟಿರುವ ಪೈಶುನ್ಯದ ಕುಚೇಷ್ಟಿತವನ್ನು ತಿದ್ದುವುದಾಗಲಿ (ಶಿಗಕ. ೬-೦೩). ೩. ದುಷ್ಟತನ; ದುರ್ಗುಣ. [ಸಂ.]

**ಪೈಶೂನ್ಯ** (ನಾ). ೧. ಚಾಡಿ; ದೂರು; ಪಿಸುಣು: ಪರಿವಾದಂ ಪೈಶೂನ್ಯಂ ಪರಮರಹಸ್ಯಪ್ರಕಾಶಕರಣಂ ಕೂಟಾಕ್ಷರನಿಧಿನಿಕ್ಷೇಪಾದ್ಯಪಹರಣಂ ಸತ್ಯವ್ರತಕ್ಕತಿಕ್ರಮಮಕ್ಕುಂ (ವರ್ಧಮಾ. ೬-೯). ೨. ದುಷ್ಟತನ: 'ಪೈಶೂನ್ಯದೂರ' ಪರಾ. ೩. ಚಾಡಿಕೋರ; ಪಿಸುಣ: ಒತ್ತಿ ಬುದ್ಧಿಯ ಪೇಳ್ದಡಲಗನು ಕಿತ್ತು ನಾ ಮರುಳಾದೆನೆಂಟವನೆತ್ತ ಪೋದನೊ ಕೊಲುಗು ಹಗೆ ಪೈಶೂನ್ಯನೆಂದೆನುತ (ಶೌರಿಕಾ. ೦೩-೦). [<ಸಂ. ಪೈಶುನ್ಯ]

**ಪೈಶೂನ್ಯದೂರ** (ನಾ). ದುಷ್ಟತನವಿಲ್ಲದವನು; ದುರ್ಗುಣವಿಲ್ಲದವನು: ದೇವಾಗ್ರಗಣ್ಯಂ ಶಂಭುಸ್ವಾಮಿಷ್ಟಲಿಂಗಂ ಪ್ರಮಥಪರಿವೃಢಂ ಪಾತು ಪೈಶೂನ್ಯದೂರಂ (ಹರಿಶ್ಚ. ೩-೬೬). [ಪೈಶೂನ್ಯ + ದೂರ]

**ಪೈಷ್ಟಿಕ** (ಗು). ೧. ಹಿಟ್ಟಿನಿಂದ ತಯಾರಿಸಿದ; ಪಿಷ್ಟಸಂಬಂಧವಾದ. (ನಾ). ೨. ಹಿಟ್ಟಿನಿಂದ ಮಾಡಿದ ಮಾದಕಪೇಯ: "ಪೈಷ್ಟಿಕಃ—ಮದ್ಯ" (೬ಶಂ. ೦೦೩). [ಸಂ.]

**ಪೈಸ, ಪೈಸಾ, ಪೈಸೆ** (ನಾ). ೧. ಒಂದು ನಿರ್ದಿಷ್ಟ ಬೆಲೆಯ ತಾಮ್ರದ ನಾಣ್ಯ; ಆಣೆಯ ಮೂರನೆಯ ಒಂದಂ ಅಂಶ; ಒಂದು ದುಡ್ಡು; ನಾಲ್ಕು ಕಾಸು: ಟಂಕೆ ವಿವರ: ಟಂಕೆಗೆ ಶೋಡಶ ದುಡ್ಡಂ ಬಿಂಕದಿ ಸಸಿಗಾಣಿ ನಾಲ್ಕು ಪೈಸಗಳೆಂಟಂ ಪಂಕಜಮಿತ್ರನ ಗಣನೆಗೆ ಭೋಂಕನೆ ತಾಂ ಒರಗಾಣಿ ದುಗ್ಗಾಣೆರಡಂ (ಶಾಕ್ಕರ. ೬೬-೯). ೨. ಹಣ; ದಂಡ್ಡು: (ಕ) ೩. ಒಂದು ರೂಪಾಯಿಯ ನೂರನೆಯ ಒಂದು ಭಾಗ: (ಕ). ಪೈಸಾ: ೨. ಭಟಾರಜಿ . . . ನಿಮಗ ಪೈಸಾ ಖೂಬ ಕೊಡ್ತಾವ (ಸ್ವಾಕಂ. ೮). ಪೈಸೆ: ೧. ಚಕ್ರವ ಪರರಿಗೆ ವಿಕ್ರಯ ಮಾಡಲು ಹನ್ನೆರಡೇ ಪೈಸೆ (ಕೃಆಶಾ. ೯೯). ೩. ಈಗಿನ ದಿನಗಳಲ್ಲಿ ಐವತ್ತು ಪೈಸೆ ಕೊಟ್ಟರೂ ಒಂದು ಒಳ್ಳೆಯ ಬಾಳೆಹಣ್ಣು ಸಿಕ್ಕುವುದಿಲ್ಲ (ಕೂಶಿ). 'ಪಾಯಿ' ಪರಾ. [← ಪಾರ. ಪೈಸ; ಹಿಂ. ಮರಾ. ಪೈಸಾ]

**ಪೈಸರ, ಪಯ್ಸರ, ಪೈಸಾರ** (ನಾ). ೧. ಮಲ್ಲಯುದ್ಧದ ಒಂದು ಪಟ್ಟು; ಕುಸ್ತಿಯ ಒಂದು ವರಸೆ: ಗಳಹತ್ತ ಡೊಕ್ಕರ ತಳಮೇಲು ಪೈಸರ ಸುಳಿವು ವಂಚನೆ ಪತಸದಲಿ . . . ಹೋರಿವರು (ಕಂಪಶ. ೨೦-೯೨). ೨. ಯುದ್ಧದಲ್ಲಿ ಬಳಸುವ ಒಂದು ಪಟ್ಟು: ಓಸರದ ಪೈಸರದ . . . ಸಮರವಿಲಾಸಿಗಳು ಸರಕಟಿಸಿ ಕಾದಿದರು (ಕೊರಂ. ೬-೨೦-೨೦). ೩. ಕುಗ್ಗುವುದು; ಕುಸಿ ಬೀಳುವುದು; ಜೋಲುವುದು: ಮುರಿದ ಕಂಗಳ ಮಲಗಿನಲಿ ಪೈಸರದ ಗಾತ್ರದ ಗಾಢವೇದನೆಯುರವಣಿಸೆ ಸೊಂಪಡಗಿ ನಿಮಿಷ ಮಹೀಶ ವ್ಯೆಮಱಿದ (ಕುವ್ಯಾಕ. ೩-೪೩). ೪. ಜಾರುವುದು; ಜಾರುವಿಕೆ: ವ್ಯೋಮದೊಳಿಯ್ದುವ ನಿಮಗೆ ಪೈಸರವುಂಟೆ (ಕರಾಶ. ೩-೬೯). ೫. ಹಿಂದಕ್ಕೆ ಸರಿಯುವುದು; ಹಿಂಜರಿತ; ಹಿಮ್ಮೆಟ್ಟುವಿಕೆ: ಆಸೆಯ ಪೈಸರಂ ಮೊಱೆವ ಚೆಲ್ವಂ ದೇವ ನೀವೇಱಿ ನೋಡಿರೆ (ಅಶಂಪು. ೨-೩೦); ☞ ಇಲ್ಲಿ 'ಪೈಸರಂ' ಎಂಬುದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪವಿರಬಹುದು; ಮನಕೆ ಭೀತಿಯು ಬೆರಕೆಯುಳ್ಳಡೆ ಬಿಟ್ಟು ಕಳೆ ಪೈಸರಕೆ ಸಮಯವಿದು (ಕುವ್ಯಾಕ. ೦೩-೫೮). ೬. ಹಿಂದು ಮುಂದು ನೋಡುವುದು; ಅನುಮಾನ: ಕನ್ನಗಳ್ಳರನಿವರ ಪೊಗದಿ ಪೈಸರವ ಮಾಡದೆ ವಿಚಾರಿಸುವುದು (ಕಪ್ಮಾ. ೨-೯೩). ೭. ತಪ್ಪುವುದು; ನುಣುಚಿಕೊಳ್ಳುವುದು: ಭಾಷೆ ಪೈಸರವಿಲ್ಲ ಓಸರಿಸೆನನ್ಯಕ್ಕೆ ಆಸೆಮಾಡೆನು ಮತ್ತೆ ಭಿನ್ನಸುಖಕ್ಕೆ (ಮುಹಾರೀ. ಬ. ೩೦-೬೬). ೮. ನಷ್ಟ; ಹಾನಿ: ಈಸು ಕಳವಳವೇನು . . . ನಿನ್ನ ಹರುಷಕೆ ಪೈಸರವದೇನು (ಕುವ್ಯಾಸ. ೬೦೩. ೦೩-೨೯). 'ಪೈಸರಂಗೊಳ್' ಪರಾ. ೯. ಇಳಿಜಾರಾದ ಪ್ರದೇಶ; ಇಳುಕಲು: ಪಾಂಡುನಂದನರು ಗಾಸಿಯಾದರು ಗಟ್ಟ ಬೆಟ್ಟದ ಪೈಸರದೊಳು (ಕುವ್ಯಾಆ. ೦೬-೦೬); ಪಾದವೆಟ್ಟಱಿಕೆ ಪೈಸರ ಪರಾಕವಧಾನವೆನಲು (ಶರಶ. ೩೯-೩೮); ಅವರು ಒಂದು ಬೆಟ್ಟದ ಶಿಖರದ ಅಂಚಿನ ಸಮೀಪದ ಪೈಸರದಲ್ಲಿ ನಿಂತಿದ್ದರು (ಗಿಂಶಾ. ೬೦). ೧೦. ಸೋಲು; ಭಂಗ: ನೆನಹಿನಭರುಚಿಯ ವಾಸಿಗಳ ಪೈಸರವನೆನ್ನಲಿ ಸೂಸಬಾರದೆ (ಕುವ್ಯಾಸ. ೦೨-೨೮). ೧೧. "ಸೋರಿಕೆ" (ಷಟ್ಟಿ): ಪರಿಕಾಲ್ಗಳೇಳ್ಗೆದಪ್ಪಿದರ್ಗಡವಱೋಳಿಯುಂಭೋವಾಟವಮಾ ಪೈಸರವು ಮುಂದಕಸೂತ್ರಕ್ಕೆ ಹರಿಯಾದೊಡೆ . . . ನೀವೆಲ್ಲರಾರ್ದು ಪೊಗಳ್ವಂ ತೆಸಗದೊಡೆ ಮಹಾದೇವನೇ ದೇವನೆಂದೆನಲಕ್ಕುಮೇ (ಶತ್ಮರಾ. ೬-೯೦).

೧೨. ವ್ಯಾಪನೆ; ವಿಸ್ತಾರ; ಹರಹು : ಪೈಸರಿಸು ' ಪರಾ. ೧೩. (ಯಂದ್ರದ ಪಟ್ಟನಿಂದ ಒದಗಂವ) ರಕ್ಷಣೆ (?) : ಅಚಲ ಮೂಜಿಣ ಪೈಸರದ ಬಲನಿಚಯ ನಮ್ಮದು ವೀರಸುಭಟಪ್ರಚಯಮುಮ್ಮುರ ಮಾಡಿ (ಶುಪ್ಮಾ.ಕ. ೦-೨೦). ಪಯ್ಸರ : ೩. ' ಪಯ್ಸರವೋಗು ' ಪರಾ. ೪. 'ಪಯ್ಸರಿಸು' ಪರಾ. ೭. ನುಸುಳು ನೆರೆ ಡಿಳ್ಳಾಯ್ತು ಪಯ್ಸ [ಪಾಠಾಂ. ಪೈಸ]ರ ಬೆಸುಗೆ ಬಿಗುಹುಳುಕೊತ್ತು ಕಲಿಗಳ ರಸದ ಪಸರವ ನಜಿಯಬಾರದು ವಿಗಡವಿಟರುಗಳ (ಶುಪ್ಮಾ.ಅ. ೦೩-೨೩). ಪೈಸಾರ : ೧೨. ಬಯಲ ಬಿಡಾರ ಪೈಸಾರದಿಂದೆ ಬಿಟ್ಟಿತು ಬಹುಬಲವಾ (ಸೌಂದಕಾ. ೬-೩).

ಪೈಸರವಾಗು, ಪಯ್ಸರವಾಗು = ೧. ಸೋಲುಂಟಾಗು; ಪರಾಭವ ವುಂಟಾಗು : ಬೇದಿಗಲಹದೊಳೊಮ್ಮೆ ಪೈಸರವಾದಡದು ಪರಿಹರಿಸಿದವರೇ ಸೋದರರಲಾ (ಶುಪ್ಮಾ.ಅ. ೨೦-೩೩). ೨. ಇಲ್ಲವಾಗು; ಮರೆಯಾಗು : ಶೌರ್ಯದ ಪಾಸಿ ಪೈಸರವಾಯ್ತು ರಣದಾವೇಶವಿಲ್ಲದುದು ಮಗಧಪತಿಗೆ (ಶುಪ್ಮಾ.ಕ. ೨-೦೦೯); ಉಜಿ ಮನದ ಪಾಸಿ ಪಯ್ಸರವಾಯ್ತು ಗೆಲ್ವಾಸೆ ಯಡಗಿತು (ಪಂಪ. ೨೩-೩೩). [ದೇ. ೪ ತೆಲು. ಪೈಸರ, ಪಯಿಸರ]

**ಪೈಸರಂಗೊಳ್**, ಪೈಸರಗೊಳ್ (ಕ್ರಿ). ೧. ಹಾಳಾಗು; ಕೆಡು : ' ಪೈಸರಂಗೊಳಿಸು ' ಪರಾ. ಪೈಸರಗೊಳ್ : ೨. ಅನುಮಾನಿಸು; ಹಿಂದೇಟು ಹಾಕು; ಹಿಂದುಮುಂದು ನೋಡು : ಕೈಸೇರಿದೊಡವೆ ಯೆನುತ ಕೊಡಬೇಕೆಂದು ಪೈಸರಗೊಳಬೇಡ ಮನದಿ (ಮೋಹಕ. ೨೬-೪೯). [ಪೈಸರ + ಕೊಳ್$_1$]

**ಪೈಸರಂಗೊಳಿಸು** (ಕ್ರಿ). ಹಾಳು ಮಾಡು; ಕೆಡಿಸು : ಹಣ್ಣನಿಟ್ಟೊಡೆ ಕಾಯಿ ಬಿದ್ದ ತೆಱದಿಂ ನಾನು ಪಣ್ಣದಾ ಕಾರ್ಯಮಂ ಪೈಸರಂಗೊಳಿಸಿ ಮಸಿವಣ್ಣಮಂ ಮಾಡಿದೆಯಲಾ ಪಾಪಿದೈವವೇ ಎಂದು ಬಸಿಱಂ ಹೊಸೆಯುತ (ಸಮ್ಯ್ಕಾ. ೩-೩೦). [ಪೈಸರಂಗೊಳ್ + — ಇಸು]

**ಪೈಸರಂಬೋಗು**, ಪಯ್ಸರವೋಗು, ಪೈಸರವೋಗು (ಕ್ರಿ). ೧. ಜಾರು ; ಜಗುಳು : ಗತಿ ಸ್ತಂಭಿಸಿ ಪಾದಂ ಪೈಸರಂಬೋ[ಪಾಠಾಂ.ವೋ]ಗಿ … ಮೂರ್ಛಿಸುವ ಮಗಳಂ ಪದ್ಮಾವತಿ ಕಂಡು (ಪುಂಖಂ. ಹ. ೦೩೯-೦೬). ೨. ಇಲ್ಲವಾಗು ; ತೊಲಗು : ಪನ್ಮತಿಕೆ ಪೈಸರಂಬೋಗಿ ಪ್ಯಗರದು ದೇವತ್ವಮುಡುಗಿ ಬಲಗಟ್ಟು ನಾಣ್ಗೆಟ್ಟು ನಿಂದು (ಅರಾಕ. ೩-೬-೩೩). ಪಯ್ಸರವೋಗು : ೩. ಜೋಲು ; ಕುಸಿಬೀಳು : ಅಸಮಸಾಹಸು ಶಿವಿದರಮಮಾ ದೆಸೆಗೆ ಚೆಲ್ಲಿತು ಕರುಳು ಪಯ್ಸರವೋಗಿ ಖಳ ಕೆಡೆದ (ಕೌಶಿಕಾ. ೨೨-೨೦). ಪೈಸರವೋಗು : ೧. ಮುಂದೆ ಹೆಜ್ಜೆಯನಿಡುತ ಪೈಸರವೋಗಿ (ಶುಪ್ಮಾ.ಗ. ೩-೦೩). ೨. ಆಶೆ ಪೈಸರವೋಯ್ತು (ಶುಪ್ಮಾ.ಅ. ೬-೩೬); ಬದಿರ್ದುದು ಬಿಂಕಂ ಬಿಡುದು ಪರಿ ಪೈಸರವೋದುದು ಪಂಪು (ಜಮುಖಾ. ೩-೩೨). ೪. ತಪ್ಪಿಸಿಕೊಳ್ಳು ; ನುಣುಚಿಕೊಳ್ಳು : ತಿರುಗಿ ಪೈಸರವೋಗಿ ಪವನಜ ಮರಳಿ ತಿವಿದನು ಕೀಚಕನ ಪೇರುರವನು (ಶುಪ್ಮಾ.ಅ. ೩-೮೨). [ಪೈಸರ + ಪೋಗು$_1$ (< ಪೋ$_1$)]

**ಪೈಸರಗೊಡು** (ಕ್ರಿ). ವಿಸ್ತಾರವಾಗಿಡು ; ಅಗಲವಾಗಿಡು: ಕಾಲ ಪೈಸರ ಗೊಟ್ಟು ಸರಪಣಿವಿಡಿದು ಹಿಮ್ಮಾಲಾಗಿ ಪಡೆ ತೆಗೆವಾಗ ತೋಳ ಸಿಕ್ಕಿಗೆ ರಾಯ ನೀಡಿದನುಱೆ ಹೊಟ್ಟೆಮೇಲಾಗಿ ಕೆಡೆದರುರ್ವಿಯೊಳು (ರಾಜಶೇ. ೪೯-೦೦೯). [ಪೈಸರ+ಕೊಡು$_1$]

**ಪೈಸರಗೊಳ್** ' ಪೈಸರಂಗೊಳ್ ' ನೋ.

**ಪೈಸರಗೋಲು** (ನಾ). ದೊಣ್ಣೆವರಸೆಯಲ್ಲಿ ಬಳಸುವ ಕೋಲು : ಉರ ತಗ್ಗಿ ಬಗ್ಗಿ ಕುಪ್ಪಳಿಸಿ ಪ್ಯಸಿರಿಯುಬ್ಬ ಭರತಕೋವಿದರಂತೆ ಹೆಣಗಿ ಸಂಬವರಿಯೊಳು ಪೈಸರಗೋಲ ತಿರುಗಿ ಶ್ರೀಕರದ ಸಾದೇವ ತೋರಿದರು (ಕಂಠಿ. III, ೪೯ ಸೌಂದರಕಾವ್ಯ). [ಪೈಸರ+ಕೋಲು$_1$ (<ಕೋಲ್$_1$)]

**ಪೈಸರವೋಗು** ' ಪೈಸರಂಬೋಗು ' ನೋ.

**ಪೈಸರಿಸು**, ಪಯಿಸರಿಸು, ಪಯ್ಸರಿಸು (ಕ್ರಿ). ೧. ಕೆಳಕ್ಕೆ ಬೀಳು; ಜಾರು; ಜಗುಳು: "ಪೈಸರಿಸಿತನಲ್ಕೆ ಜಾಱಿತೆಂದಱಿಗೆ ಬುಧರ್" (ಶಾರಂ. ೩೩); ಸಂಜಯನು ಬರಬರಲು ಕಂಡನು . . . ಕರಿಗಳೊಟ್ಟಿಲನೆಱಿಂದು ಪೈಸರಿಸಿ ಮಿದುಳಿನ ಜೋಲು ಜೊಂಡಿನ ತೊರಳೆಯಲಿ ದಡದಡಿಸಿ ಜಾಱುತ ಬೀಳುತೇಳುವನ (ಶುಪ್ಮಾ.ಗ. ೩-೬); ಜೋಲುವ ದೋತ್ರ ಪೈಸರಿಸಿದಕ್ಷಮಾಲೆ (ಸೌಂದಪು. ೩-೦೩); ಪಾದಪಶಾಖೆಯಿಂ ಪೈಸರಿಸಿ ಧೊಪ್ಪನೆ ಕೆಡದು ಪವನನ ಕಾಲು ನೊಂದಿರಲು (ತಿಮ್ಮ.ಅ. ೭-೨೩). ೨. ಕುಸಿದುಬೀಳು.— ಕೆಡೆ: ಅಧಟ ನವನಿಗೆ ಪೈಸರಿಸಿ ಹರಿವದನವನು ನೋಡುತ್ತ ಬಿಟ್ಟನು ನಿಜಕಳೇವರವ (ಜಗಾಗ. ೩-೬-೪೯). ೩. ಕುಗ್ಗು ; ಕುಂದು ; ಕಡಮೆಯಾಗು : ಬರಸು ಭಾಷೆಯನಿಂದು ಕರ್ಣನ ಶಿರವಳಿದು ತಾವರೆಯ ನಗೆ ಪೈಸರಿಸಿದರೆ . . . ಕಲಿಭಿ.ಮನಯ್ಯನ ಹರಹು ನಿಂದರೆ ಬಳಿಕ ನಿಮ್ಮಯ ತಮ್ಮನಲ್ಲ (ಶುಪ್ಮಾ.ಕ. ೦೯-೬); ಜೀನರಂಬೊಂದಿತ್ತು ಮನದೆಸಕವಾವಗಂ ಪೈಸರಿಸಿತತಿಧೈರ್ಯಂ (ಅರಾಕ. ೨-೩.೬); ಧೃತಿ ಪೈಸರಿಸುತಾ ನೃಪನೊಡನೆ ತದ್ವಿಪ್ರುನೀತೆಂದು (ತಿಮ್ಮ.ಅ. ೩-೮೨). ೪. ಕ್ಷಯಿಸು; ನಾಶವಾಗು : ಇರುತಿರುತ ರವಿಸೂನು ಗಂಧರ್ವರಲಿ ತನ್ನಯ ಕೀರ್ತಿಲತೆ ಪೈಸರಿಸಿದಂದವನ್ನದೆ ಚಿಂತಿಸುತಿರಲು ರಜನಿಯಲಿ ತರಣಿ ಕಂದನ ಮೋಹದಿಂದವೆ ಧರೆಗೆ ಬಂದನು (ಶುಪ್ಮಾ.ಅ. ೦೩. ೨೩-೩); ಆತ್ಯಂತವಿಷಯಾತುರರಿಗೆ . . . ಬಲ ಪೈಸರಿಸುವುದು (ಜೀವಂಕ ೯-೨); ತೇಜದೇಳಿ ಯುದು ಪೈಸರಿಸಿತ್ತೆ (ಜೀರಂ. ೨೦-೭೩). ೫. ಹಿಂಜರಿ; ಹಿಮ್ಮೆಟ್ಟು : ೨ರಿಗೆ ಸೆಡೆದಾ ನಕುಲ ಪೈಸರಿಸಿದನು (ಶುಪ್ಮಾ.ಗ. ೨-೩೩); ವೀರಹನುಮನ ಮುಱಿಯ ಹೊಕ್ಕುದು ಭೂರಿವಾಸರಸೇನೆ ಪೈಸರಿಸಿ (ತೊರವೆ. ೬-೩೨-೯); ಆ ಸುರಾರಿಗಳೆಮ್ಮ ದೆಸೆಯಿಂ ಪೈಸರಿಸುವವರಲ್ಲ (ಜಾರಂ. ೩-೨೬). ೬. ತೊಲಗು ; ದೂರ ಸರಿ: "ಪೈಸರಿಸಿತನಲ್ಕೆ ಪೋದುದು" (ಶಬ್ದಮ. ೦೨೬-೦೬೯); ಬೀಸುವ ಗಾಳಿಗೊಯ್ಯನೆ ಪೈಸರಿಸುವ ರಾಸಿಮುಗಿಲ ತೆಱನಂತೆ (ಅಂಜಕ. ೦೩-೪೯೯); ಎರಡುಘಳಿಗೆಯು ಮೇಲಾ ಕಾಂತೆ ನಿದ್ರೆ ಪೈಸರಿಸಿ ಪ್ಯಮುರಿದೆದ್ದಳು (ಭರತ. ೪೦-೦೬೬). ೭. ಹಿಂದಿರುಗು ; ವಾಪಸ್ಸಾಗು : ಪೈಸರಿಸುವುದು ಬಂದ ಬಳಿವಿಡಿದು (ಶುಪ್ಮಾ.ಉ. ೩-೦೩) ; ಪುರತ ಹೊಱವಂಟುರಗಪತಿ ಪೈಸರಿಸಿದನು ಯವನೇಶನೈತರೆ (ಜಿಲ.ಗ. ೯-೦೩-೨೬). ೮. ಮರೆಯಾಗು ; ಕಾಣದಾಗು : ಅತುಳಮೋಹಮದೋ ಸರಿಸಲ್ ಥಳಥಳಿಪ್ಪ ವಿಮಲಾತ್ಮನವೋಲ್ ಪೈಸರಿಸಲಿಂದ್ರಜಾಲಕಮಾ ಸನ್ಮುನಿಯೊರ್ವನೊಪ್ಪಲು (ಅದ್ಭುತ. ೩-೯೬). ೯. ಪಕ್ಕಕ್ಕೆ ಸರಿ; ಓರೆ ಯಾಗು : ಬಿಗಿದು ತೊಟ್ಟ ಕಂಚುಕಮಿನಿತು ಪೈಸರಿಸೆ ನಿಬಿಡಕುಚವಿಟ್ಟ ಸಲ್ ನಸುದೋರೆ . . . ಗಟ್ಟಿವಾಳ್ಯಿಯರೆಸೆದರು (ಶಶಾಪು. ೦-೩-೩೦). ೧೦. ಸಡಿಲವಾಗು; ಅಳ್ಳಕವಾಗು : ನಿಱಿಯ ಬಿಗಿ ಪೈಸರಿಸೆ (ಕೃಶಂಚ. ೦೦-೦೯). ೧೧. ಬಿಡು; ವರ್ಜಿಸು; ತ್ಯಜಿಸು: ಆ ಸುರುತಾಳನ ಖಾನನ ಕರೆದುಕೊಂಬಾಸುರಕೃತ್ಯ ಬೇಡೆಮಗೆ ಪೈಸರಿಸುವುದದನು (ಶಂಖಿಸಾಂ. ೦೩-೦೩೬); ಅದಿಶ್ರೀವಾಚರಣೆಯಿಂ ಮುಕ್ತಿವನಿತೆಯೊಳಗಾವರವೆ ಸುಖ ವಿರ್ಪುದಂ ಪೈಸರಿಸಿಯರ್ಪತೋದಿತಾಚಾರದೊಳ್ವರ್ತಿಸುತವಿದ್ಯಾಂಗನಾ ಸಂಗದಿಂದಿರ್ಪುದು ಹಾದರಮದಲ್ಲವೆ? (ಶಾಸೋಪು. ೯-೦೦೩). ೧೨. ಕೆಡು; ಹಾಳಾಗು : ಹೇಸದರಿಭೂಪಾಲರನು ನಿಶ್ಶೇಷವೆನಿಸುವುದಲ್ಲದಿರ್ದೊಡೆ ಪೈಸರಿಸುವುದು ರಾಜಕಾರ್ಯವಿದು (ಶುಪ್ಮಾ.ಅ. ೬-೪೬). ೧೩. ಸಿಡಿ ; ಚಿಮ್ಮು : ಪೊಂಗೇವಗೆಯ ಕಿಱಿಯ ಗಱಿಗಳಂ ಪೈಸರಿಸಿದ ಅಲರ್ವುಡಿಗಳಂ (ಲೀಲಾವ. ೨೬-೨೬) ; ಪೈಸರಿಸಿ ಭೂತ್ಕರಿಪ ಕಿಡಿ ನಿಶ್ವಾಸದುರಿ ಭುಗಿಭುಗಿಲೆ ನುತ ಪೆಡೆಸಾಸಿರವ ಪಸರಿಸುತ ಪವನನ ಕರೆದನಾಹವಕೆ (ಅಶಂಗಾ. ೦-೬-೨೩). ೧೪. ಹರಡು ; ವಿಶಾಲವಾಗಿಸು ; ಹರಹು : ಉಱುಗಿತು ಬ್ರಹ್ಮಾಂಡವೆನೆ ಖಗರಾಜ ಕಿಳ್ಳಱಿಯನೊಯ್ಯನೆ ಪೈಸರಿಸೆ (ಮೋಹಕ.

೩೬-೬೨) : ಸದಮಲಸರ್ವಜ್ಞ ನಿಂದು ನಿಟ್ಟಿಸೆ ವಿಶಾರದ ಗಜಿಯಿಸು ಪೈಸರಿಸೆ ಮದವಕ್ಕಳಿಲದರು (ಮೋಹಕ. ೮೨-೯೩). ೧೫. ಹರಡಿಕೊಳ್ಳು; ವಿಸ್ತಾರಗೊಳ್ಳು : ತೆರೆತೆರೆಗೊಂಡು ಜಾರುತ ಪೈಸರಿಸುತ ಸಿರ ಮುಖ ಕಂಠ ವಕ್ಷಕ್ಕೆ ಪರಿದು ಜಠರ ಕಟಿಯೂರುಗಳಿಗಿಳಿತಂದು ಚರಣದಿಂದಂಗಣ ತುಂಬಿ (ಗೂಢಪು. ೭-೨೨೨). ೧೬. (?) : ಆ ಸಮಿಾಪದ ಸುಂಡಿಲ ಗಳೆಂಟು ಪೈಸರಿಸಿ ಸುಂಡಿಲುಗಳಿಟ್ಟು ವಿಲಾಸದಿಂ ವರ್ತಿಸಿ ನೂಂಕುತೆ ಬೃಹ್ಮೇತಂಗೈದು ವಾಸದಿಂ ಪೂರ್ವಾನೆಗಳದಿಂ ದೋಸವದೊಪ್ಪಿದುದು ಬರುತಿಹ ಭೂಸುರರೋತ್ತಮರುಗಳಿಗಂ ಭಯಮಿಾವುತೇಳೆಯಲಿ (ಕಾವೇರಿಮ. ೬೦-೦೯). ಪಯಿಸರಿಸು : ೧೭. ತಪ್ಪಿಸಿಕೊಳ್ಳು; ನುಣುಚಿಕೊಳ್ಳು : ದೊರೆಗಳ ಹಿಂದೆ ದೊರೆ ಪಯಿ[ ಪಾಠಾಂ. ಪೈ] ಸರಿಸಿತಲ್ಲಿಯದಲ್ಲಿ ಭೀಮನ ಹೊಯ್ಲು ಹೋರಟಿಗೆ (ಕುಮಾ೩. ೦೩-೬೬). ಪಯ್ಸರಿಸು : ೧. ಕುಚ ಯುಗಂ ವರನಿತಂಬಂ ಕದಕ್ಕದಿಸೆ ಮೇಲುದ ನಿಬಿಗಳರದೆ ಪಯ್ಸರಿಸೆ (ಕಂಪು. ೩-೦೩). ೧೭. ಬಾಹುಗಳಿಂದೆ ಕಂಠಮಂ ತೊಡರೆ ಕುಸುಂಗಿ ಪಯ್ಸರಿಪ ಬಿನ್ನಣವೊಪ್ಪೆ ಕಡಂಗಿ ಕಾದಿದರ್ (ಕಂಕಂ. ೯-೭೩).

[ಪೈಸರ + — ಇಸು$_3$]

**ಪೈಸಾ** 'ಪೈಸ' ನೋ.

**ಪೈಸಾರ** 'ಪೈಸರ' ನೋ.

**ಪೈಸೆ** 'ಪೈಸ' ನೋ.

**ಪೊಂ** 'ಪೊನ್' ನೋ.

**ಪೊಂಕ** (ನಾ). ೧. ಗರ್ವ; ಅಹಂಕಾರ : ಅಲರ್ದರಗಳಿಗೆಯ ಜಾದಿಯ ಮಲೆವೂ ಮಲ್ಲಿಗೆಯ ಪೊಂಕಮುಂ ಬಟ್ಟೆವನಾರ್ ತಲೆಯೊಳ್ ತಾಳ್ದುವರ್ (ಅದಿಪು. ೦೦-೧೦೬) ; ಪಂಕಜನಂದನ ದಾನವಾರಿ ರುದ್ರರ್ ಪೊಂಕದ ಬೋಳಿ ಯರಾದಿಕಾರಣಾಂಗರ್ ಬಿಂಕದ ಮೂಪರಿಪರ್ಗೆ ಬೀಜಮಿಾಶಂ (ಹಾಲಾಸ್ಯ. ೦-೦೭-೨೬) : ಪೊಂಮಿಟಿದು ಬಂದು ಎನ್ನ ಕಳೆಯ ನೆರೆದಪನ್ (ಬಿಪ್ಪಕೃ. ೦೩-೨೩೯). ೨. ಉಬ್ಬು; ಉತ್ಸಾಹ; ಸಂಭ್ರಮ : ಪಂಕರುಹಸಖನುಮುದಯಿಸೆ ಪೊಂ[ ಪಾಠಾಂ. ಕೊಂ, ಬಿಂ ]ಕದೆ ಬಂದೊಡ್ಡಿ ನಿಂದುವೆರಡುಂ ಪಡೆಗಳ್ (ನೇಮಿಪು. ೦೨-೦೦೦) ; ಶಂಕೆಯಿಲ್ಲದೆ ಬದಿಯಲಿ ಬಂದು ನಿಂತು ಪೊಂಕದಲಿ ನಲಿದಾಡುವನವನ್ನಾ (ಪುರಂದರ. ೩-೦೩೦-೨) ; ಮನೀಂದ್ರದೇವಶಾಸಂಕುಳವೊಲ್ದು ಭಕ್ತಿರಸಪೂರಣದಿಂದೆ ಪರಸುತ್ತ ಸೇಸೆಯುಂ ಪೊಂಕಮದಾಗೆ ಸೂಸಿದರ್ (ಹಾಲಾಸ್ಯ. ೦-೦೭-೬೦). ೩. ಸೊಗಸು; ಶೋಭೆ : ಕಂಕಣಾಝಣತ್ಕಾರಕಿಂಕಿಣೀಅಲರವದ ಪೊಂಕ ಮಿಾರ್ಪಡಲು ವಿಮಾನಾಂಕನೋಜೆಯು ಬೆಡಗ ಸೋಂಕಿಸುತ ವಿಟತತಿಗೆ ಬಾಪನ್ನವನ್ನರೆವ ನಲವು ಚೆಲುವಾಗಿರ್ದುದು (ಕಂಕಂರಾ. ೦-೯-೨೮).

[<ಪೊಂಗು$_1$./ತಮಿ. ಪೊಙ್ಕು, ಪೊಙ್ಕ ; ಮಲ. ಪೊಙ್ಕ ; ತೆಲು. ತೆಲು. ಪೊಂಕ]

**ಪೊಂಕಂಗಿಡಿಸು** (ಕ್ರಿ). ಗರ್ವಭಂಗಮಾಡು : ಶಿತಾಸ್ತ್ರಂಗಳ್ ಪೊಂ[ಕ]ಂಗಿ [ಪಾಠಾಂ. ಪೊಂಖಂಗಿ, ಪೊಂಗಂಕ]ಡಿಸೆ ಸುಗಿದಂ ಭಾರ್ಗವನಿದೇಂ ಪ್ರತಿಜ್ಞಾ ಗಾಂಗೇಯಂಗದಿರದಿರ್ದಿಲ್ಲನ್ನರೊಳರೇ (ಕಂಪಶಾ. ೧-೬೦) ; ಕಿಂಕರ್ವಾಣ ಪ್ರವಣರರೆಬರ್ ಬರ್ಪಿನಂ ಕಾದು ತನ್ನಂ ಬಿಂಕಂ ಪೊಂಕಂಗಿಡಿಸೆ ನನೆವಿಲ್ಲಾತನಂ ತೊಟ್ಟ ದಿವ್ಯಾಲಂಕಾರಗಳ್ ನಯನಸುಖಮಂ ನೀಡೆ (ಕಂಠಾಪಶ. ೭-೦೩೦). [ಪೊಂಕಂಗಿಡು (<ಪೊಂಕಂಗೆಡು) + — ಇಸು$_3$]

**ಪೊಂಕಂಗಿಡು** 'ಪೊಂಕಂಗೆಡು' ನೋ.

**ಪೊಂಕಂಗೆಡು, ಪೊಂಕಂಗಿಡು** (ಕ್ರಿ). ಗರ್ವಭಂಗವಾಗು ; ಸೊಕ್ಕಿಳಿ : ಪೊಂಕಮುಳ್ಳವರ್ ಪೊಂಕಂಗೆಟ್ಟಪ್ಪಡೆ (ರರ್ಮಾಮೃ. ೦೩-೨೩). **ಪೊಂಕಂಗಿಡು :** ಅಂದದ ನರೇಂದ್ರತನಯರು ಪೊಂಕಂಗಿಡೆ ಜನದ ನೆರವಿ ಬಾಯಂ ಬಿಡೆ...ಕೊಂಡುದರ್ಜುನನ ಶರಂ (ಬಿಂಕಂ. ೦೦-೦೩). [ಪೊಂಕ + ಕೆಡು$_1$]

**ಪೊಂಕು$_1$** 'ಪೊಂಗು$_1$' ನೋ.

**ಪೊಂಕು$_2$** 'ಪೊಂಗು$_2$' ನೋ.

**ಪೊಂಕುಂದ, ಪೊಕ್ಕುಂದ, ಹೊಂಕುಂದ** (ನಾ). ಒಂದು ಊರಿನ ಹೆಸರು; ☞ ಈಗಿನ ಕೋಲಾರಜಿಲ್ಲೆಯ ಬೌರಿಂಗ್‌ಪೇಟೆ ತಾಲ್ಲೂಕಿನ ಹನಕುಂಡ : ಶ್ರೀಮಾಧವಮುತ್ತರಸರ್ ... ಅವನ್ನನಾಡು ಮೂವತ್ತುಂ ಪೊಂಕುನ್ದು ಪನ್ನೆರಡುಮಾಳುತ್ತು[ಮಿ]ರೆ (ಎಕ. X. ಬೌರಿಂಗ್. ೦೩ ೨ ; ಸು. ೪೯೦) ; ☞ ಇದು 'ಪೊಂಕುಂದ' ಎಂಬುದರ ಅಪಲಿಖಿತ ; ಸ್ವಸ್ತಿಶ್ರೀ ದಿಲೀಪಯ್ಯಂ ಪ್ರಿಥುವೀರಾಜ್ಯಂಗೆಯ್ಯುತ್ತಿರೆ ಪೊಂಕುನ್ದದ ತುಱುಗೊಳೆ ... ಕಾದಿ ಸತ್ತು ಸಗ್ಗಿಯಾದನ್ (ಪ್ರಕಂ. ೦೯೩೦, ೬-೨ ; ೪). **ಪೊಕ್ಕುಂದ :** ಪೊಕ್ಕುನ್ದದ ತುಱುಗೊಳೆ ಕೊಂಗಮಂಗಲದ ಪೋಪಯ್ಯ ಕಾದಿ ಸತ್ತು ಸಗ್ಗೆಯ್ದ (ಎಕ. X, ಬೌರಿಂಗ್. ೪೦-೨ ; ಸು. ೪೫೦). **ಹೊಂಕುಂದ :** ಸ್ವಸ್ತಿಶ್ರೀಮತು ಪಲ್ಲವಾನ್ವಯಪ್ರದೀಪಕರ್ ಕುಮಾರರ್ ಮಾಚಿ ದೇವರಸರುಮ್ . . . ರಾಜಾಧ್ಯಕ್ಷ ವಾಮನಶ್ರಮಿತ್ತರುಮ್ ಹೊಳಲ ಕೆಱೆನಾಡುಮುಮ್ ಹೊಂಕುನ್ದಮೂವತ್ತುಮುಮ್ ದುಷ್ಟನಿಗ್ರಹ ಶಿಷ್ಟ ಪ್ರತಿಪಾಳನೆಯಿನಾಳುತ್ತಮಿರ್ದ್ದು (ಎಕ. XI. ಚಿಕ್ಕನಾ. ೨೩-೨೦ ; 1205).

[ಪೊಂ (< ಪೊನ್) + ಕುಂದ$_3$]

**ಪೊಂಗ$_1$** (ನಾ). ಧೈರ್ಯಶಾಲಿ; ದಿಟ್ಟ : 'ಚಿನ್ನಪೊಂಗ' ಪರಾ. [ಪೊಂಗು$_2$ + — ಅ$_7$]

**ಪೊಂಗ$_2$** 'ಪೊಂಗಯಿ' ನೋ.

**ಪೊಂಗಂಟೆ, ಹೊಂಗಂಟೆ** (ನಾ). ಚಿನ್ನದ ಗಂಟೆ : ಎಳಸದ್ರುದ್ರಾಕ್ಷಮಾಲಾ ಭರಣದ ಕೊರಲೊಳ್ತಳ್ತ ಪೊಂ[ಪಾಠಾಂ. ಹೊಂ]ಗಂಟೆಯಿಂ . . . ಎಸೆವ ಪೇರೆಳ್ತುಗಳ್ (ಪ್ರಶಂ. ೩೬-೬೯) ; ಬಾಳದೊಳ್ ಬಂಧಿಸಿದ ಜಲ್ಲಿ ಪೊಂಗಟ್ಟ [ಂಟೆ]ಗಳ ಮೇಳದಿಂ ಸೊಗಸಾಂತ ಚೆಂಡುವೂವ್ವಳನು ವಿಗೆ ಧಾಳಿಸುವ ಪುಲಿವಾಲಗಳನಾಂತ ತುಲಿಲಾಳ್ಗಳು (ಕೋಲಾರಾಸು. ೭-೦೦). **ಹೊಂಗಂಟೆ :** ಹಯನಿಕರ . . . ಹೊತ್ತಿನುವು ಝಡಿವ ಹೊಂಗಂಟೆಯು ವಿಡಾಯವರೂಥ ವನು (ಕುಮಾ೯೧. ೪-೯೨) ; ಹೊಂಗಂಟೆ ಹೊಮ್ಮೇಳದ ಕಠಾರಿಗಳು . . . ಒದವಿತೊಗ್ಗಿನಲಿ (ಮೋಹಕ. ೦೯-೦೦). [ಪೊಂ (< ಪೊನ್) + ಗಂಟೆ$_2$]

**ಪೊಂಗಂಬ** (ನಾ). ಚಿನ್ನದಿಂದ ಮಾಡಿದ ಕಂಬ ; ಬಂಗಾರದ ಕಂಬ : ವರತನು ಪೊಂಗಂಬವಾಗೆ ಪೊಲ್ದುಟ್ಟಂಬರದ ಸೆಱಗು ಪಟವಾಗೆ ಅರಲ್ಗಣ್ಣು ಮಿಾನಾಗೆ ಬಂದರು ಪೆಣ್ಗಳು ಸ್ಮರನ ಪತಾಕೆಯಂಬಂತೆ (ಶಂಕ್ರಶಾಂ. ೦೨-೦೩೯). [ಪೊಂ (< ಪೊನ್) + ಕಂಬ$_1$ (< ಕಂಭ)]

**ಪೊಂಗಜೆ** (ನಾ). ಬಂಗಾರದ ಗದೆ : ಪಾಱುಂಬಳೆ ಸಂಕು ಪೊಂಗಜೆ ಬಿಗುರ್ಪಿನ ಬೀಯಮರಲ್ದ ಪೇರುರಂ (ಚಕಂ. ೩-೯೯).

[ಪೊಂ (< ಪೊನ್) + ಗಜೆ]

**ಪೊಂಗಟ್ಟ, ಪೊಂಘಟ್ಟ** (ನಾ). ಬಂಗಾರದ ಗಟ್ಟಿ,-ತುಂಡು : ಸುರ ಶೈಲಂ ಪುಟ್ಟ ಪೊಂಗಟ್ಟ [ಪಾಠಾಂ. ಬುಟ್ಟ]ವೊಲಿರೆ . . . ಜಗದ್ವ್ಯಾಪಿಯಾ ದತ್ತ್ಯುಯುದ್ಧೋದ್ಧರತತ್ಸೇನಾದ್ವಯಾಭ್ಯುಚ್ಛಲನದಳದಿಳೋತ್ಪಾತಪಾಂಸು ಪ್ರತಾನಂ (ಶಂಕ್ರಪು. ೦೦-೬೬ ; ಕಾವ್ಯಸಾ. ೪೬೦ ನೋ). **ಪೊಂಘಟ್ಟ :** ಕೆಸಱೊಳಗಬ್ಬಂ ಕಲ್ಲೊಳು ಮಿಸುಗುವ ಪೊಂಘಟ್ಟ ಪೋಲವಂತಾ ಯೆಡೆಯುಂ ಪಸುಧಾಸೇವ್ಯಂ ಕ್ಷೀರಂ ಪಸುವಿನ ತನುವಿನೊಳೆ ಪುಟ್ಟ ಪೋಲದು ತನುವಂ (ಚನಾರ. ೨೯೬). [ಪೊಂ (< ಪೊನ್) + ಗಟ್ಟಿ]

**ಪೊಂಗಟ್ಟಿಗೆ, ಹೊಂಗಟ್ಟಿಗೆ** (ನಾ). ಚಿನ್ನದ ಕೋಲು : ಹಡಪ ಕಾಳಾಂಜಿ ಪೊಂಗಟ್ಟಿಗೆ ಕಂಚು ಕನ್ನಡಿ ಗಿಂಡಿ ಬಜ್ಜಣಿಗೆಗಳ ಪಿಡಿವೋಳಿಗ್ಗೈವ ಬಿಂಕ ಗಾತಿಯರಾ ಪೊಡವಿಯಾಣ್ಮನ ಪೊದ್ದಿಹರು (ಹರಿಶ. ೦-೦೬). **ಹೊಂಗಟ್ಟಿಗೆ :** ಹರುಷದಲಿ ನೃಪ ಹೊಂಗಟ್ಟಿಗೆಯ ಚರರಿಂದಲಾ ಮನಮುಟ್ಟಿದಾಪ್ತರ ಕರೆಸಿ (ಕೊರಾರಾ. ೨-೮-೦೦). [ಪೊಂ (< ಪೊನ್) + ಕಟ್ಟಿಗೆ$_1$]

**ಪೊಂಗಡಗ,** ಹೊಂಗಡಗ (ನಾ). ಬಂಗಾರದ ಕಡಗ: ಬೇಸರಿಂದೆಡಗ ಯ್ಯೊಳ್ ಪಿಡಿದಾಂತು ಪೊಂಗಡಗವೊಂದಂ...ರಂಜಿಪನಿವಂ ತೇಜೋನ್ವಿತಂ ಭೂಮಿಪಂ (ಶಾಕಂ.ಶ. ೬೨-೦೭೬). **ಹೊಂಗಡಗ**: ಹೊಂಗಡಗದ ಲಿಂಗ ವಂತೆಗೆ ತೋಳಬಂದಿಯ ಬಾಲಕಿಗೆ . . . ರಕ್ಷಣಾರ್ಥಂ ತಂದೆ ನಿಯಾಮಿಸಿ ಕೊಟ್ಟ . . . ಷೋಡಶಸಹಸ್ರ ವಿಲಾಸಿನಿಯರ್ವೆರಸು (ಗಿರಿಜೆ. ೩-೧೦ ಕ); ಹೊಂಗಡಗದ ಲಿಂಗವಂತಂ ಉಡೆವಣೆಯ ದಿಗಂಬರಂ ಗೆಜ್ಜೆಗಳ ಸಜ್ಜನನೆನಿಪ ಸಿದ್ಧರಸಂ . . . ಭೋಂಕನೆದ್ದು (ಬಸವ. ೩೨-೨೦೩).

[ ಪೊಂ (<ಪೊನ್) + ಕಡಗ$_1$ ]

**ಪೊಂಗಡಲು,** ಹೊಂಗಡಲು (ನಾ). ಚಿನ್ನದ ಬಣ್ಣದ ಸಮುದ್ರ; ಹೊಂಬಣ್ಣದ ಕಡಲು: ಪೊಂಗಡಲ ನುಣ್ದೆರೆಗಳ ಬಿಣ್ಪಿನ ಮೊರ್ದೆರಳ್ಕೆಯ ಗಾಂಭೀರ್ಯದಿಂದ ಚಳಚಳಿಸುತ್ತ (ಪುಂತ್ರಿ. ೬೮-೦೬). **ಹೊಂಗಡಲು**: ಪಡುವಣ ಹೊಂಗಡಲಿನಲ್ಲಿ ಮಾಯಲಿದಿರುವ ಮುಳುಗುನೇಸರು (ಕಿರುಕ್ಕೆ. ೦೨೯); ಬಾ ಗೆಳತಿ, ನನ್ನೊಡನೆ ಗಗನದಂಚಿಗೆ ರವಿ ಮೂಡುವ ಹೊಂಗಡಲಿನ ಮಿಂಚು ಹೊಂಚಿಗೆ! (ಅಂಚೂ. ೯೩).

[ ಪೊಂ (<ಪೊನ್) + ಕಡಲು (<ಕಡಲ್$_2$) ]

**ಪೊಂಗಣೆ** (ನಾ). ಚಿನ್ನದ ಗಣೆ: ಬೆಳಗೆಯ್ಯುಂ ಪೊಂಗಣೆಯುಂ ಫಲತರುವಿ ದೊಳ್ಪಿಯಂಗಳಿಂ ಕುಸುಮರಜಾನಿಳನಿಂ ಪಗರೆಯ ಪರಿಯಿಂ ತಳರದ ಸಿರಿ ಬಲ್ಲಿಲುಂದೆನಾಳ್ಕೆಸೆದಿರ್ಕುಂ (ಗೌಶಾ. IX-i, ೨೯೯-೦೩; 1147).

[ ಪೊಂ (<ಪೊನ್) + ಗಣೆ$_2$ (<ಕಣೆ$_2$) ]

**ಪೊಂಗಣೆ,** ಹೊಂಗಣೆ (ನಾ). ಚಿನ್ನದ ಬಾಣ: ಮಕರಾಂಕಮಂಡಿತ ಪೊಂಗಣೆಗಳ್ಗೆ ವಶ್ಯಾಕ್ರಮಿಯೇಟಿಯ ಸಾರ್ಚಿದಂತೆ ನಖಚಕ್ರದಶದಿಂ ಬೆರಲ್ಗಳೊಪ್ಪಿರ್ದುವು (ಪೋಚಶ. ೨೬-೧೯). **ಹೊಂಗಣೆ**: ಹೊಳಕಿಸಿದ ಹೊಂಗಣೆಯ ಶರಧಿಯ ತುಳುಕಿಸಿದ (ಅಂಂಕಿ. ೨೦-೩).

[ ಪೊಂ (<ಪೊನ್) + ಕಣೆ$_1$ ]

**ಪೊಂಗದ** (ನಾ). ಚಿನ್ನದ ಕದ: ಸೋಮೇಶ ನೀಂ ತೆಗಿಸಿ ಬಾಗಿಲ ಪೊಂಗದಂಗಳನೆನುತ್ತಂದೋಹಿಲಂ ಕೂಗಿದಂ (ಅಸ್ತ್ರಲಿ. ೦೦-೬೦); ನವ ಪುಷ್ಪರಾಗಾಳಿಯಿಂ ಸಮೆದ ಬಾಗಿಲ್ ಪೊಂಗದಂಗಳಿಂ ಪೇಳಲಚ್ಚರಿಯಾದು ದರವಮನೆ (ಶಂಕ್ರ. ೩-೯೮). [ ಪೊಂ (<ಪೊನ್) + ಕದ (<ಕದವು$_1$) ]

**ಪೊಂಗದಳಿ,** ಹೊಂಗದಳಿ (ನಾ). ಒಂದು ಬಗೆಯ ಬಾಳೆ; ಹೊಂಬಾಳೆ: ತಾಮರಸಜನು ನಿರ್ಮಿಸಿದ ಪೊಂಗದಳಿಯೊ ವಾಮಲೋಚನೆಯ ತೊಡೆ ಗಳೊ (ಶಶಿಕ. ೨-೨೨); ಪೊಂಗದಳಿಸ್ತಂಭಂಗಳು ನೆರೆ ಸೋಲಿಪಾ ಪೊಳೆವ ನುಣ್ದೊಡೆಯುಗಳಂ (ಶಶಿಪೋ. ೬-೦೩). **ಹೊಂಗದಳಿ**: "ಗೌರೀಕಃ — ನೀರಿಸ್ಟೆ, ಹೊಂಗದಳಿ" (ಓಶಂ. ೩೨); ಹೊಂಗದಳಿಯ ಕೋಮಲಪತ್ರ ವೀಜನದೀಗನೆ ಮೆಚಿವಳೊತ್ತಿನಲಿ (ಶೋಚಶ. ೩-೩೯).

[ ಪೊಂ (<ಪೊನ್) + ಕದಳಿ$_2$ (=ಕದಲಿ) ]

**ಪೊಂಗದಿರ್$_1$** (ನಾ). ಚಿನ್ನದ ಬಣ್ಣದ ತೆನೆ: ಪೊಂಗದಿರಿನೆನೆ ಪೊಂಗದಿರಿಂ ಟಿಕ್ಕೋಳವ ಕಿಯ್ಯೊಲನತ್ತಣಿಂ ಪಕ್ಕಿ ಸೋವ ಕಳ್ಮಸಜಸ್ವನೆಯರ ಮೆಲ್ಲುಲಿ ಕೇಳಿವರ್ಪುದು (ಶಾಪೂಕ್ತ. ೯-೬). [ಪೊಂ (<ಪೊನ್) + ಕದಿರ್$_1$]

**ಪೊಂಗದಿರ್$_2$, ಪೊಂಗದಿರಂ,** ಹೊಂಗದಿರು (ನಾ). ಚಿನ್ನದ ಬಣ್ಣದ ಕಿರಣ; ಹೊಂಬಣ್ಣದ ಕಿರಣ: ಪೊಂಗದಿರ್ ಚವರಿಯಂ ಬೀಸಿ ರವಿ ಮೂಡಣದ್ರಿಯನೇರಿ ಬರ್ಪನಿತರೊಳ್ (ಶ್ರೀರಾಪ. ೩೬-೦೨೩). **ಪೊಂಗದಿರು**: ಗಗನಾಂಗಣವನ್ನು ತನ್ನ ಪೊಂಗದಿರುಗಳಿಂದಲೇ ದೀಪ್ತಿಗೊಳಿಸುವ ಸೂರ್ಯ (ಕ್ಕೋಶಿರ್. ೦೯೨). **ಹೊಂಗದಿರು**: ಮೇರುಗಿರಿಯೊಂದುದಿನ ಗರ್ವದಿಂ ತಲೆಯೆತ್ತಿ ಕಿಂಗದಿರ ಹೊಂಗದಿರ ಜಿಹ್ವೆಯಲಿ ನುಡಿಯಿತ್ತು (ಕಂಸಿಕ. ೨೦-೨); ಹೊಂಗದಿರ ಜೀರ್ಕೋಳವಿಯಿಂ ಸಂಜೆ ಜಿರ್ರೆಂದು ರಂಗೇರಿಚಿ (ಕಶ್ಯಾಂಗ. ೨೦-೩೪೬). [ ಪೊಂ (<ಪೊನ್) + ಕದಿರ್$_2$ ]

**ಪೊಂಗದಿರು** 'ಪೊಂಗದಿರ್$_2$' ನೋ.

**ಪೊಂಗದುಗು** (ನಾ). ಚಿನ್ನದ ಗಜ್ಜುಗ: ಜೂಜಿನಲಿ ಭರವಸದೊ ಳಾಸಕ್ತಿಯಾವಡೆದು ಪೊಂಗದುಗುಗಳ ಕರತಳದೊಳಾಂತು (ಶಾಂಚಕ್ರ. ೦೬-೩).

[ ಪೊಂ (<ಪೊನ್) + ಗದುಗು$_1$ (<ಗದರ್ಗು) ]

**ಪೊಂಗದ್ಯಾಣ** (ನಾ). ಚಿನ್ನದ ಗದ್ಯಾಣ: ಅರಸರ ದೆಸೆಗೆ ಸಿದ್ದಾಯಂ ಪೊಂಗ ದ್ಯಾಣಮೆರಡು (ಎಪಿ. XIV, ೩೬೯-೦೬; 946); ಎಲಸಿಯು ಮಹಾಜನಕ್ಕೆ ಕೊಟ್ಟ ಪೊಂಗದ್ಯಾಣವಯ್ವತ್ತಯ್ದು (ಸ್ಮಶಾ. ೦೪೨೯, ೬೮-೦೩; 964); ಅಂಕದೊಳಂ ಪೊಂಗದ್ಯಾಣಂ ೧೨೦ (ಎಪಿ. XIII, ೯೯-೬೪; 1112).

[ಪೊಂ (<ಪೊನ್) + ಗದ್ಯಾಣ]

**ಪೊಂಗನ್ನಡಿ** (ನಾ). ಚಿನ್ನದಿಂದ ಮಾಡಿದ ಕನ್ನಡಿ: ಕಣ್ಮಲರ್ಗಳ್ ಕಡು ನಿಡಿದಾದುವು ಪೊಜಪೂರ್ಣ್ಮತು ಪೊಂಗನ್ನಡಿಯೊಗದೊಳ್ ಪೊಗರುಣ್ಮಿದು ದಂಗಲತಿಕೆಯೊಳು ಕಂಪು (ಶಜಲಕ. ೩-೨೬).

[ ಪೊಂ (<ಪೊನ್) + ಕನ್ನಡಿ$_1$ ]

**ಪೊಂಗಯ್** (ನಾ). ಹೊಂಬಣ್ಣದ ಕೈ: ತಲೆಯಲ್ಲಿ ಪೊನ್ನ ಮುಡಿ, ಪದಿ ದರಿಲ ಪೆಂಪು, ಬೆಳ್ದಾವರೆಯ ಪೊಂಗಯ್! (ಹೊಂಗಳು. ೦೬-೦).

[ ಪೊಂ (<ಪೊನ್) + ಕಯ್$_2$ (<ಕೆಯ್$_2$) ]

**ಪೊಂಗಯಿ, ಪೊಂಗ್ಯ** (ನಾ). ದೋಣಿ; ನಾವೆ: ದೋಣಿಯಲ್ಲಿ ಅಥವಾ ಪೊಂಗಯಿಯಲ್ಲಿ ವಿಶ್ಕ ಹುಡುಗರ ಸಂಗಡವಿದ್ದಾಗ ಸಾಮಾನ್ಯವಾಗಿ ನಾನೇ ಅದನ್ನು ನಡೆಸುವ ಯಜಮಾನನಾಗುತ್ತಿದ್ದೆ (ಶಂಖಪ್. ೦೬). **ಪೊಂಗ್ಯ**: ಪಂಪನೆಂದರೆ ಎರಡು ಭಾರತಗಳ ದೋಣಿಗಳಲ್ಲಿ ಕಾಲಿಟ್ಟು ತಾನೇ ಮುಳುಗಿಹೋಗುವಂತಾದನೆಂದು ಭಾವಿಸುವುದಾಗಲಿ, ಆ ಕಾರಣ ದಿಂದಲೆ ಸುಭದ್ರೆಯನ್ನು ನಾಯಿಕೆಯನ್ನಾಗಿ ಮಾಡಿದ ಪೊಂಗ(ಕಿರು ದೋಣಿ)ವನ್ನೇರಬೇಕಾಗಿ ಬಂತೆಂದು ಬಗೆವುದಾಗಲಿ, ಈ ಎರಡರಿಂದಲೂ ಪರಿಣಾತಿಯೊಂದೇ (ಶಾಪೋಕ. ೦೯೩). [ ←ತುಳು. ಪೊಂಗಾಯಿ ]

**ಪೊಂಗರಗ,** ಹೊಂಗರಗ (ನಾ). ಚಿನ್ನದ ಕರಗ; ಬಂಗಾರದ ಜಲ ಪಾತ್ರೆ: ಪೊಂಗರಗದೊಳ್ಪೊಸದ ಫುಸ್ಸಣರಸಂ (ಶಾಗಳು. ೩೦-೪೬ ಕ); ಪನ್ನೀರ ಗಿಂಡಿ ಕುಡಿನೀರ ಪೊಂಗರಗ . . . ಬಹುವಿಧಾಭರಣವಿತತಿಗಳ ನಾಂತ ಕನ್ನೆಯರು . . . ನೆರೆದಿರ್ದರು (ರಾಶಿಕ. ೭-೬೯). **ಹೊಂಗರಗ**: ನೀಡಿಹರು ಪನ್ನೀರ ಹೊಂಗರಗದಲಿ ಸಲಿದಾ ನಾರಿಯರು (ಶ್ರೀಕುಂ. ೯-೩೯).

[ ಪೊಂ (<ಪೊನ್) + ಕರಗ ]

**ಪೊಂಗರಡಿಗೆ,** ಹೊಂಗರಡಿಗೆ (ನಾ). ೧. ಚಿನ್ನದ ಸಂಪುಟ,-ಭರಣಿ: ತಂದೆ ಪುಷ್ಪವನೊಂದನಿಂದುಮಪೌಳಿಗೆಂದು ಮುಂದಿಡೆ ಪೊಂಗರಡಿಗೆಯ (ಶೋಚಶ. ೦-೬೦). **ಹೊಂಗರಡಿಗೆ**: ೧. ಹೊಜಡಾಗದಂತೆ ನಾಲ್ಕೊಗ ಜಂತದಲಿ ಹೊಂಗರಡಿಗೆಗಡೆದು ಕರ್ಮಣಿಯು ಜಿರುಡಿಯ ಬಿಗಿದಿಟ್ಟನೆಂಬಂತೆ ಬಲ್ಕೊಲೆಯೆರಡಜಿ ಮೊಗವು ತೋಜಿದುವು (ಪೋಚಶ. ೨೪-೨೪). ೨. ವೀರಶೈವರು ಧರಿಸುವ ಚಿನ್ನದ ಕರಡಿಗೆ: ಎದೆಯ ಮೇಲೆ ಲಿಂಗಹಾರ, ಹೊಂಗರಡಿಗೆ (ಕುಂಗಕ. ೨).

[ ಪೊಂ (<ಪೊನ್) + ಕರಡಿಗೆ (<ಕರಂಡಿಗೆ) ]

**ಪೊಂಗರಿ** 'ಪೊಂಗಜಿ' ನೋ.

**ಪೊಂಗರು** (ನಾ). ಚಿನ್ನದ ಎರಕ: ಹೃದಯದೊಳಿಸಿವ ಶಾಂತತೆ ಬಹಿರಂಗ ದೊಳೊದವಿದ ರೌದ್ರತೆಯಿಂದ ಸದಮಲಗಿರದೊಪ್ಪಿತು ಪಾವರಸ ನೆಜೆ ವುದಿದ ಪೊಂಗರುವಿನಂದದೊಳು (ಕಿಬಸಂ. ೨೯-೯೭); ಕರಮೆಸದಲು ಕರು ಪಾಡದ ಮೇಲೆ ಪೊಂಗರುವಿನ ಪುತ್ತಳಿಯಂತೆ (ಕಂಚಸಾಂ. ೨೦-೬೩); ಅರಮನೆಯಕುಳಶಾಲಾಗ್ರದ ಮೆಜೆವ ಪೊಂಗರುವಿನ ತೆನೆಗಳೊಪ್ಪಿದವು (ಕಂಪಪ. ೬-೨೨). [ ಪೊಂ (<ಪೊನ್) + ಕರು$_2$ ]

**ಪೊಂಗರುವಪಾಡ** (ನಾ). ಚಿನ್ನದ ಉಪ್ಪರಿಗೆ: ಆ ಪುರವರದ ಪೊಂಗರು

ವಾಡಗಳೊಳು ಕರಮೆಸೆದಿರ್ಪವು ಕಣ್ಗೆ ದುಕೂಲದ ವರಮೃದುಯಂತಿ ಕೋಟೆಗಳು (ಕೃತಾಸಂ. ೩-೩೦). [ಪೊಂ (<ಪೊನ್) + ಕರುವಮಾಡ]

**ಪೊಂಗರೆ,** ಹೊಂಗರೆ (ನಾ). ಜರತಾರಿ ಅಂಚು ; ಜರಿಯಂಚು : ಒಟ್ಟಿರ್ಪ ಕಂಟೊಗರಿ ನೆರೆಯುಡೆಯು ತಲೆಸುತ್ತಿ ನಿಟ್ಟೆಳದ ಪೊಂಗರೆಯ ಕಣ್ಸೋರೆಗಳಿಗೆ ಕಟ್ಟಿರ್ಪ ಕವಲಾಳಗಂ ನೋಡೆ ಕಣ್ಸೆಸರ್ ಮುಟ್ಟುವುದೆ (ಗಾಜೊ. ೦೪೭-೩೨೨). **ಹೊಂಗರೆ :** ಈ ಪೊಂಗಾರ ತೊಂಡಿಲು ಬಂದಿ ಹೊಂಗರೆಯಂಬರವೀ ಸಾಲ್ಕು ಹೆಚ್ಚು ಪೆಣ್ಮಾಂಗನೆಗಿವು ಸಲಲಿ (ಕಕ. ೩೬-೭೭). [ ಪೊಂ (<ಪೊನ್)+ಕರೆ₄ ]

**ಪೊಂಗಲ್₁,** ಹೊಂಗಲ್ಲು (ನಾ). ಚಿನ್ನದ ಕಲ್ಲು : ಚಿಪ್ಪಿನ ಮಂದಿರದಲ್ಲಿ ಮುತ್ತು ಬೆಳೆದ ಭಂದದಂತೆ ವ್ಯಕ್ತಿಕೆಯ ಸಾತದಲ್ಲಿ ಹೊಪ್ಪಿದ ಪೊಂಗಲ [ಲ್ಲ] ಪರಿಯಂತೆ (ಕೋಳಕಾ. ೯೩-೩೭೭); ಸ್ವರ್ಗೋಪಲೋ_ಪೊಂಗಲ್ಲೆಲ್ (ಶಬ್ದಮ. ೦೬೭-೨ ೮೪೯ ). **ಹೊಂಗಲ್ಲು :** ಮಂದರತಳದ ಹೊಂಗಲ್ಲಂತೆ ಬಹಿರಂಗಸಾಮಗ್ರಿಯನೊಂದುಂ ಪಡೆಯದೆ ನಿಗೋದಾವಾಸದೊಳು ನಮೆಯುತ್ತಿರ್ಪರನಭವ್ಯಸಮಾನದ ಭವ್ಯರೆಂದಱೆವುದು (ಜಸಾರ. ೪೩೨). [ ಪೊಂ (< ಪೊನ್) + ಕಲ್₂ ]

**ಪೊಂಗಲ್₂,** ಪೊಂಗಲು₁ (ನಾ). (ವಿಶೇಷವಾಗಿ ಸಂಕ್ರಾಂತಿಯಂದು) ಅಕ್ಕಿ, ಹೆಸರುಬೇಳೆ, ಬೆಲ್ಲ, ತುಪ್ಪ ಮುಂತಾದುವುಗಳಿಂದ ತಯಾರಿಸುವ ಖಾದ್ಯ ; ಹುಗ್ಗಿ : ಈ ದಿನ ನೈವೇದ್ಯಕ್ಕೆ ಪೊಂಗಲ್ ಮಾಡಿದ್ದರು (ಆಪ್ರ). **ಪೊಂಗಲು₁ :** ಜನಕ್ಕೆಲ್ಲ ಪೊಂಗಲು ಹಂಚಿದರು (ಗಾಬಿಗಾಂ. ೪೭) ; ಪೊಂಗಲು ಮತ್ತು ಪಕ್ವಾನ್ನಗಳನ್ನು ಮಕ್ಕಳಿಗೆ ಕೊಟ್ಟು ತಿನ್ನಿಸುತ್ತ ಉಪಚರಿಸುತ್ತಿದ್ದರು (ಇರಾದು. ೩೬).

**ಪೊಂಗಲುಹಬ್ಬ** =ಸೂರ್ಯನು ಮಕರರಾಶಿಯನ್ನು ಪ್ರವೇಶಿಸುವ ದಿನದಂದು ಸೂರ್ಯನಿಗೆ ಪೊಂಗಲಿನ ನೈವೇದ್ಯವಿಟ್ಟು ಪೂಜಿಸುವ ಹಬ್ಬ ; ಮಕರಸಂಕ್ರಾಂತಿ : ನಮ್ಮಲ್ಲಿ ಪೊಂಗಲುಹಬ್ಬದಂದು ಎಳ್ಳು ಬೀರುವ ವಾಡಿಕೆಯಿದೆ (ಆಪ್ರ).

[ದೇ.॥ ತಮಿ. ಪೊಙ್ಕಲ್ ; ತೆಲು. ಪೊಂಗಲಿ, ಪೊಂಗಳಿ]

**ಪೊಂಗಲು₁** 'ಪೊಂಗಲ್₂' ನೋ.

**ಪೊಂಗಲು₂** (ನಾ). ಒಂದು ಬಗೆಯ ಆಭರಣ (?) : ಲಾಳಿದಾರ ಕಂಠಿಕೆ ಖಡೆಯ ಪೊಂಗಲು ಹೊನ್ನ ಬಳೆಯುಂತ್ರಿಗೆ ಚಿನ್ನಸರವ ಕವುವು (ಕುಗಾಶಾಂ. ೯೨-೨೪). [?]

**ಪೊಂಗವಚ** (ನಾ). ಚಿನ್ನದ ಕವಚ ; ಹೊನ್ನಿನ ಮೈಜೋಡು : ಸಂಗರಲಾಭೋತ್ಸವಪುಷ್ಪಾಂಗತೆಯಿಂ ಕಿಱಿಯುವಾದೊಡಟ್ಟಿ ಜನಕ್ಕಾ ಪೊಂಗವಚಂಗಳನಿತ್ತರ್ . . . ಮಹಾವೀರಭಟರ್ (ಶಂತ್ರಶ. ೦೦-೬೪). [ಪೊಂ (<ಪೊನ್) +ಕವಚ]

**ಪೊಂಗವಡಿಕೆ** (ನಾ). ತಲೆಯಲ್ಲಿ ಧರಿಸುವ ಕವಡೆಯಾಕಾರದ ಒಂದು ಬಗೆಯ ಚಿನ್ನದ ಆಭರಣ : ಎಡೆಗಿಱಿದಿರೆ ಪೊಂಗವಡಿಕೆ ಬಡೆ ಘಲ್ಲೆನೆ ಗೆಜ್ಜೆ (ಜಗಾ. ೩-೪೪) ; ಮಾಂಗಾಯ್ ಕದಪಂ ಚುಂಬಿಸೆ ಪೊಂಗವಡಿಕೆ ನೊಸಲೊಳಲೆಯ (ಶಂತ್ರಶ. ೩-೪೬) ; ಪೊಳೆವ ಪೊಂಗವಡಿಕೆ[ಪಾಠಾಂ. ಗೆ] . . . ಉಲಿವ ಪೊಂಗೆಜ್ಜೆಗಳಿಂದ ಸಿಂಗರವಾಗಿ ನೆಲದೆಱೆಯನ ಸುತನಿಹನು (ಶಂತ್ರಶಾಂ. ೪-೬೬). [ಪೊಂ (<ಪೊನ್) +ಕವಡಿಕೆ₂]

**ಪೊಂಗವಳಿಗೆ** (ನಾ). ಚಿನ್ನದ ಕರಂಡಕ ; ಹೊನ್ನಿನ ತಾಂಬೂಲದ ಪೆಟ್ಟಿಗೆ : ತಂಬುಲಂದೀವಿವ ಪೊಂಗವಳಿಗೆಯಂ ಪಿಡಿದಂಬೆಗವಟ್ಟಯ್ಸದಳೊರ್ವಳಿಂದ್ರವಧು ತಂಬುಲಮಂ (ಶಾಂತಿಶ. ೯-೦೫೦) ; ಮೆಲ್ಲನೆಯ್ತಂದೊರ್ವಳ್ ಪೊಂಗವಳಿಗೆಯಂ ಪಿಡಿದು ಮನಂಗೊಳೆ ನೃಪಸತಿಗೆ ನೀಡಿದಳ್ ತಂಬುಲಮಂ (ಶರ್ಶಕ. ೮೦-೪೭). [ ಪೊಂ ( < ಪೊನ್ ) + ಕವಳಿಗೆ₂ ]

**ಪೊಂಗಸೆದೇವ** (ನಾ). ಒಬ್ಬಾತನ ಹೆಸರು : ಪೊಂಗಸದೇವನ ಮಗ ಪೊನ್ನಯ್ಯ (ಎಕ. XII, ಪಾವುಗ. ೯೦-೧ ; ಸು. ೯೭೮). [ಪೊಂಗಸೆ ? + ದೇವ]

**ಪೊಂಗಹಳೆ, ಪೊಂಗಾಳೆ** (ನಾ). ಚಿನ್ನದ ಕಹಳೆ : ಕೊಂಬುಗಹಳೆ ಪೊಂಗಹ[ಪಾಠಾಂ. ಪೊಂಗಾ]ಳೆಯುತ್ಕಟತಾಳಮದ್ದಳೆಗಳೆಂಬ ಬಹುವಾದ್ಯದುಬ್ಬಟೆಯುಜ್ಜಳದೆಸೆಯೊಳಾವರಿಸಲು (ಶಂಕ. ೩-೭) ; ಪಿಡಿನಡುವು ರತುನ ಕೈಪಿಡಿ ಗಂಡಮಂಡಲಗಳಡಿವಾವರಯು ಸ್ಮರನ ಪೊಂಗಹಳೆ ಜಂಘೆಗಳೊಪ್ಪುವಿ ಜಘನಂ ತಳೋದರ ಶ್ರೀಫಲೋಪಮಿತ ಕುಚ ಕಂಬುಕಂಠಗಳೊ (ಶಂಗಾದ. ೩-೬-೩೪). **ಪೊಂಗಾಳೆ :** ಮೇಲಿನ 'ಚಿಬವು' ಪ್ರಯೋಗದ ಪಾಠಾಂತರವನ್ನು ನೋಡಿ. [ಪೊಂ (<ಪೊನ್) +ಕಹಳೆ]

**ಪೊಂಗಳಂತಿಗೆ** (ನಾ). ಚಿನ್ನದ ಜಲಪಾತ್ರ : ತಣ್ಪಿನ ನೀರ್ ಸೆಱೆಯಾದ ಪೊಂಗಳಂತಿಗೆಯಿರೆ ಸಜ್ಜೆಯೋವರಿಯಿದೋವರಿ ಮಾಡಿತು ಕಂತುಗೆಮ್ಮುಮಂ (ಶಂತ್ರಶ. ೬-೩೦). [ಪೊಂ (<ಪೊನ್) +ಗಳಂತಿಗೆ₁]

**ಪೊಂಗಳಶ,** ಹೊಂಗಲಶ, ಹೊಂಗಳಶ (ನಾ). ೧. ಚಿನ್ನದ ಕಲಶ : ಸ್ವರ್ಣಕುಂಭ : ಸುಲಲಿತಲಾವಣ್ಯಸುಧೆಯ ಪೊಂಗಳಶಗಳಲಿ ತುಂಬಿ (ಕಂಶಪ. ೯-೨೬). ೨. ಗುಡಿ ಗೋಪುರಗಳ ಮೇಲೆ ಇರಿಸುವ ಚಿನ್ನದ ಕಲಶ : ಅಭ್ಯುದಯಕರಮೆನಿಪ ಕರುಮಾಡದ ಶಿಖರದೊಳೊಪ್ಪಿ ತೋರ್ಪುಗುಂ ಪೊಂಗಳಶಂ[ಪಾಠಾಂ. ಸಂ](ಸುಕುಮಾ. ೦೦.೫೦). **ಹೊಂಗಲಶ:** ೧. ಹೊಂಗಲಶ[ಪಾಠಾಂ. ಸ]ಮೊಲೆ ಹೊಗರೊಗುವ ನೆರೆದಿಂಗಳೊಲು ಮೊಗ . . . ಕಣ್ಣಿನವ ಸೋಲಿಸಿದವು ಮನೋಭವನ (ಸಾಳ್ವಭಾ. ೨೮-೨೭). ೨. ಬಳಿಬಳಿಯ ಸೌಧಾಳಿಗಳ ಹೊಂಗಲಶ[ಪಾಠಾಂ.ಳಸ]ಗಳ ಹೊದಱಿನ ಪತಾಕಾವಳಿಯ ಪಸರದಿನೆಸೆದುದಾ ಪುರ ಮುನಿಯ ಕಣ್ಮನಕೆ (ಕೂರಂಗ. ೦-೯-೦೫). **ಹೊಂಗಳಶ :** ೧. ಇದು ಭೂದೇವತೆ ಹೊತ್ತ ಹೊಂಗಳಶಮೋ . . . ತಾನೆಂದು × × × ಲೋಕಂ ಮನೋಮುದದಿಂ ಬಣ್ಣಿಸೆ ಬಮ್ಮಿಸೆಟ್ಟಿ ಜಿನಚೈತ್ಯಾವಾಸಮಂ ಮಾಡಿದಂ (ಎಕ. VII, ಶಿಮೊ. ೫೭-೫೭; 1116); ತರಿಸಿದನು ಹೊಂಗಳಶ[ಪಾಠಾಂ.ಸ]ತತಿಯಲಿ ವರನದೀವಾರಿಗಳನು (ಕುವ್ಯಾಕ. ೦-೨೮). [ಪೊಂ (<ಪೊನ್) + ಕಳಶ (=ಕಲಶ)]

**ಪೊಂಗಳಸ,** ಹೊಂಗಲಸ, ಹೊಂಗಳಸ (ನಾ). ೧. = ಪೊಂಗಳಶ ೧: ಪೊಂಗಳಸಂಗಳೊಳಿರ್ದ ಪುಣ್ಯತೋಯಂಗಳೊಳಟ್ಟೆಱೆಂ ಮಿಸಿಸಿ ಕಟ್ಟಿದನಾ ವಿಭು ವೀರಪಟ್ಟಮಂ (ಶಂಶಕಾ. ೧೦-೧೫); ರಸರಸಾಯನಂಗಳಂ ತೀವಿ ನೇಱಿದ ಪೊಂಗಳಸಂಗಳಂತಪ್ಪ ನವಫಲಂಗಳಿಂ ನೆಱೆದೊಪ್ಪುವ ಮಾತುಲುಂಗದ ಪೊವಱುಗಳುಮಂ (ಶಂಶಕಂ. ೦೦೭-೦೩); ನೀರ್ದುಂಬಿ ಮೆಱೆವ ಪೊಂಗಳ[ಪಾಠಾಂ.ಲ]ಸಂಗಳಂ ಕೊಂಡು ಬಂದರುತ್ಸವದಿಂದೆ (ಕೃಬಿಥಾ. ೩೪-೪). ೨. = ಪೊಂಗಳಶ ೨: ಮಂಗಳಜಲಕುಂಭದಂತೆ ಕಂಗೊಳಿಸುವ ಕೋಟೆಯ ತೆನೆಗೊಂದೊಂದು ಪೊಂಗಳಸಂಗಳೊಪ್ಪಿದುವು (ವಾಹಕ. ೨೪-೩). **ಹೊಂಗಲಸ :** ೨. ಬೆಟ್ಟದ ಕಿತ್ತು ತಂದಿರಿಸಿದಂದದಿ ಮುಗಿಲಟ್ಟಣೆ ತೆನೆಗಳಗ್ರದಲಿ ಬಟ್ಟರನ್ನಗಳ ತೆತ್ತಿಸಿದ ಹೊಂಗಲಸಂಗಳಿಟ್ಟಿರ್ದುವೇನ ಬಣ್ಣಿಸುವೆ (ಪೋಹಕ. ೨೦-೮). **ಹೊಂಗಳಸ :** ೧. ಕರವತಿಗೆ ಹೊಂಗಳ[ಪಾಠಾಂ.ಲ]ಸ ಹೊಂಗೊಪ್ಪರಿಗೆ . . . ವೈಡೂರಿಯದ ಪಡಿಗವ ಚರರು ತಂದೊಟ್ಟಿದರು ಬಂಡಿಗೆ ಭಾರಸಂಖ್ಯೆಯಲಿ (ಕುವ್ಯಾಗ. ೪-೦೩); ಮಡಿವಸನವನುಟ್ಟು ಪೂರ್ವದಿಗ್ವನಿತೆಯ ಮುಡಿಯೊಳು ಹೊತ್ತ ಹೊಂಗಳಸ ನಿಡಿನಿಂದ ರಥದ ಮೇಲಡರ್ಚಿದ ರನ್ನಗನ್ನಡಿಯಂತೆ ಸೂರ್ಯ ಮೂಡಿದನು (ಪೋಹಕ. ೦೬-೦೦೪). ೨. ತೋಱಿದನುತ್ತಮದ ಹೊಂಗಳಸವೊಂದನು ನಿಮಿಷಮಾತ್ರದಲಿ (ಶ್ರಕುಂ. ೦೦-೦೮); ಕೋಂಟೆಯ ತೆನೆ ಹೊತ್ತ ಹೊಂಗಳಸಂಗಳಿಂದ . . . ರಾಜಿಸಿತು (ಕೋಹಕ. ೨೯-೨೫) ; ಹೊಂಗಳಸವಿರಾಗುವಡೆ . . . ಸುಳಿವ ಮಾರುತದ ಪಾವಿತ್ರ್ಯದೊಸಗೆಯನು ತಳೆದು (ಕುಶದೀ. ೩೪-೦). [ಪೊಂ (< ಪೊನ್) + ಕಳಸ₁ (<ಕಲಸ)]

**ಪೊಂಗಱು**, ಪೊಂಗರಿ, ಹೊಂಗರಿ$_1$, ಹೊಂಗಱು (ನಾ). (ಬಾಣದ ಹಿಂಭಾಗಕ್ಕೆ ಕಟ್ಟುವ) ಚಿನ್ನದ ಗರಿ : ರವಿಕಿರಣಂಗಳಸ್ತ್ರವಿಸೆ ಕಟ್ಟಲೆ ಕೈವಿಂಗೆ ಸುತ್ತಿ ಮುತ್ತಿ ದಿಗ್ವಿವರಮನಾಗಸಂ ಪೊಳೆವ ಪೊಂಗಱಿಯಿಂ ೯ವಿಲಾಗೆ ... ಬಾಣಸಂತಾಳಂ ಕವಿದುವು (ಶಂಗಾಶತ. ೧೩-೯೩). **ಪೊಂಗರಿ** : ಪೊಳೆವ ಪೊವಃಸ್ಕುಡಿಗೆಯ ಪೊಂಗರಿಯ ಬಾಣಗಳ . . . ಸೆಳೆದು (ಸವಪೋ. ೧೨-೫೬). **ಹೊಂಗರಿ$_1$** : " ಪೊಂಗರಿ = ಚಿನ್ನದ ಗರಿ " (ಸಿಂಕೋ. ೫೫೯). **ಹೊಂಗಱು** : ಪೊಂಗಱಿಯ ಬಿಲ್ಲುಕೋಲನೊಂದು ಕೈಯಲಿ ಪಿಡಿದು (ತಸ್ವಕ. ೪. ೦೯೬-೩೩೨); ಪೊಗರೊಗುವ ಪೊಂಗಱಿಯ ಬಿಲುಸರಳುಗಳ ಪೊದೆಗಳ ನಡೆದುವಡವಿಯು ಬೆಗಡುಗೊಳಿಸುತ ಮುಂದೆಮುಂದೆ ಪುಳಿಂದ ಸಂದೋಹ (ಶುಪ್ರಾಆ. ೧೩ ೨೨); ಸರಳ ಹಿಳುಕಿನ ಹೊಂಗಱಿಯ ತುದಿ ವೆರಳಲೊಯ್ಯಾರಿಸುತ (ಕೂಶರಾ. ೩-೪-೦೫). [ಪೊಂ (< ಪೊನ್) + ಗಱು]

**ಪೊಂಗಱಿಗ** (ನಾ). (?) : ಆ ಪ್ರಾಸಾದಂಗಳ ಚೌಪಳಿಗೆಗಳ ಪೊನ್ನ ಪೊಂಗಱಿಗೆ ನೀಳ್ಪುಂ ಬೆಳ್ಪುಮಂ ತಾಳ್ದಿ ಕರ್ಬಿನೊಳುಪಾಶ್ರಯಂಬಡೆಮ (ಶಾಶಶಾ. ೩-೪೦ ವ). [?]

**ಪೊಂಗಾಜು**, ಹೊಂಗಾಜಂ (ನಾ). ಚಿನ್ನದ ಬಣ್ಣದ ಗಾಜು ; ಹೊಂಬಣ್ಣದ ಗಾಜು : ಮಧುವಂ ವನಲಕ್ಷ್ಮಿ ಹೀರ್ವ ಪೊಂಗಾಜಿನ ಬಟ್ಟಲಂತೆ (ಪ್ರ್ಯಕ. ೫-೨೦). **ಹೊಂಗಾಜು** : " ಕಾಂಚನಭೂಷಣಂ– ಹೊಂಗಾಡು " (ಟಕಂ. ೩೨). [ಪೊಂ (< ಪೊನ್) + ಕಾಜು]

**ಪೊಂಗಾರುಕ** (ನಾ). ಚಿನ್ನದ ಕೆಲಸ ಮಾಡುವವನು ; ಅಕ್ಕಸಾಲಿಗ : ಚಾರುವೈದ್ಯರ ಜೋಯಿಸರ ಪೊಂಗಾರುಕರ ಪರಿಹಾಸಕರ . . . ತೇರಂಗರ ವಾಹೇರ ಜೋದರ ಸೇರುವೆಯ ಸಂಭ್ರಮದೊಳೆಸೆದಿರ್ದಂ ಧರಾಕಾಂತ (ಶಂಳರಾ. ೧೦. ೭). [ಪೊಂ (< ಪೊನ್) + ಕಾರುಕ$_2$ ]

**ಪೊಂಗಾಲಿ** (ನಾ). (ರಥದ) ಚಿನ್ನದ ಚಕ್ರ : ಅರದದ ಪೊಂಗಾಲಿಯ ಜೇಗರ್ರೆವಂದವುಸಂತವೀರ್ಯನೇಜಿಃವ ನಿನಗಂ ಪರಿವೆನಗಮೊಡನೆ ಕೇಡಂ ತರೆ ನಿನ್ನುಮನೆನ್ನುಮಂ ಪೆಱ ೯ಾವಪನೇ (ಶಾಂತಿಪು. ೩-೦೦೦); ಪೊಳೆವ ಪೊಂಗಾಲಿಗಳಿಂದೊಪ್ಪುವ ರಥಂಗಳಿಂ . . . ಎಸೆದು (ರರ್ಮಾವ್ಯ. ೯-೦೯೭); ಪೊಂಗಾಲಿ ಮಿಱುಗೆ ಪೞಯಿಗೆ ಬಾಂಗೆ ಪೆಡಂಮುಗುಟ . . . ರಥಂಗಳ್ ಪರಿದುವು (ಜಗೂ. ೭-೬೨). [ ಪೊಂ (< ಪೊನ್) + ಗಾಲಿ ]

**ಪೊಂಗಾಳೆ** ' ಪೊಂಗಹಳೆ ' ನೋ.

**ಪೊಂಗಿಂಡಿ**, ಹೊಂಗಿಂಡಿ (ನಾ). ಕೊಂಬು ಅಥವಾ ಸೊಂಡಿಲಿರುವ ಚಿನ್ನದ ಪಾತ್ರೆ: ವರುಣಂ ಪೊಂಗಿಂಡಿಯ ವಾಸವನೆ ಡವಕೆಯುಂ ಪಾವಕಂ ದೀಪವುಂ . . . ಪಿಡಿದೋಲೈಸಿ ನಿಂದಿರ್ದರಾಗಳ್ (ಶಾಶಕೇ. ೦೪-೧೫೮). **ಹೊಂಗಿಂಡಿ** : ಏಳುಮುನಿಗಳೋಡಿವರು ಕನ್ಯಾವರಣಗಳ ಹೊಂಗಿಂಡಿಯುದಕ ವನೆರೆವರರಸನ ರಾಣಿಯರು ನಿಜಭಾವ ಶುದ್ಧಿಯಲಿ (ಅಪಂಶಾ. ೧-೨೪-೨೪). [ ಪೊಂ (< ಪೊನ್) + ಗಿಂಡಿ ]

**ಪೊಂಗಿರುಗಟೆ** (ನಾ). ಚಿನ್ನದಿಂದ ಮಾಡಿದ ಒಂದು ಬಗೆಯ ವಾದ್ಯ : ಪೊಂಗಿರುಗಟೆಯ ಕೇಳಿಕೆಯ ಜೋಕೆಗಳ ಭೂರಿಯೆನಿಸಿದ ಸೊನ್ನಲಿಗೆಪುರ (ಬಸಪು. ೫-೯೦). [ ಪೊಂ (< ಪೊನ್) + ಗಿರುಗಟೆ ]

**ಪೊಂಗಿಸು**, ಹೊಂಗಿಸು (ಕ್ರಿ). ೧. ಹೆಚ್ಚಿಸು ; ಅಧಿಕಗೊಳಿಸು ; ಉತ್ಕರ್ಷಗೊಳಿಸು : ಲಲನಾಸಂಭೋಗರೋಗಂ ಪಸಿವನುಡುಗಿಸು ತ್ತಾ ಕಿರ್ಯಂ ಪೊಂಗಿಸುತ್ತುಂ ಬಲಮಂ ಕೈಗುಂದಿಸುತ್ತುಂ . . . ಸಲೆ ಲಜ್ಜಾಭಾವಮಂ ವಿಜೃಂಭಿಸುತುಮಿದೆ (ರಕ್ಷಾಶ. ೨೭). ೨. ಹಿಗ್ಗಿಸು ; ದೊಡ್ಡದು ಮಾಡು : ರೇಚಕ ಪೂರಕಗಳೆಂಬ ವಾಯು ಧಾರಣದಿಂ ಪೊಟ್ಟೆಗಳಂ ಪೊಂಗಿಸಿ ಕುಳ್ಳಿರ್ಪುದುಂ (ಕುಶಾಸ್ತ್ರ.೩-೯೯ ವ). ಅಂಗವಂ ನಡುಗಿಸುತ ಬಸುಱಂ ಪೊಂಗಿಸುತ . . . ಬೆಚ್ಚುತ ಬೆದಱುತಂ (ಬಸಪು. ೦-೯೯). **ಹೊಂಗಿಸು** : ೧. ನಿನ್ನಂ ನುಡಿಯ ತೊಡಂಕಿನ ಬೆಡಂಗಿನಿಂ ಸೋಲಿಸಿ ಸಮಸ್ತರಾಜ್ಯವನು ಒಡಮುನಿ ಕೊಂಡು ಮೇಲೆ ಋಣವ ಹೊಂಗಿಸಿ ತಗುಳ್ವುದಿದು ದೈವಿಕಂ (ಹಕಶಾ. ೦೦-೦೩). ೩. ಚೆನ್ನಾಗಿ ಕುದಿಸಿ ಮೆದುವಾಗಿಸು ; ಹದವಾಗಿ ಬೇಯಿಸು : ಬೇವಾಗ ಗಂಜಿಯ ಬಸಿದುಕೊಂಡು ಮುಚ್ಚುಳನಿಕ್ಕಿ ಘಟ್ಟಿಪಾವದೆಗಟ್ಟಿ ತಱಗಂತ ದೊಳಗೆ ಹೊಂಗಿಸಿಕೊಂಡು ಮೃದುವಾಗಿ ಮಾಡಿದುದು ತಾ ಶುದ್ಧ ಮಪ್ಪೋದನಂ (ಸೂಶಾ. ೩-೨). [ ಪೊಂಗು$_1$ + – ಇಸು$_3$ ]

**ಪೊಂಗು$_1$**, ಪೊಂಕು$_1$, ಹೊಂಗು$_1$ (ಕ್ರಿ). ೧. ಹೆಚ್ಚಾಗು ; ವೃದ್ಧಿಗೊಳ್ಳು ; ಅಧಿಕಗೊಳ್ಳು : ತಿರಿವುತ್ತುಂ ಜವದಿಂ ಮುಕುಂದನಿಡೆ . . . ತರುತ್ರ ಮಾಂಗದೊಡನುದ್ದಂಪಾಱ ವ್ಯಕ್ತಾಸ್ಫಾಳಟಂಬೆರಸುದ್ಯದ್ಭುಜದಂಡವರ್ತನ ದಿನುಗ್ರಾಡಂಬರಂ ಪೊಂಗೆ . . . ತಿರಿದುದಾ ಚಕ್ರಂ ವಿಯಚ್ಚಕ್ರದೊಳ್ (ಶಾಂತಿಪು. ೪-೫೯); ಅವಿವೇಕಿಯಾದ ನೃಪನೊಪ್ಪುವ ಪುಣ್ಯಂ ತೀರ್ದು ದೋಷಮುಂ ಪೊಂಗುವವೋಲ್ (ಉದ್ಯಟ. ೪-೨೭) ; ಗಂಗಾನದೀತಟಕೆ ನಡೆತಪ್ಪ ಷಟ್ಕೃತ್ತಿಕಾಂಗನೆಯರೀ ಮಹಾಜ್ವಾಲೆಯೆತ್ತಣದೆಂದು ಹಿಂಗದೀ ಪೀರ್ಯದೆಡೆಗೈತಂದು ನೋಡುತಿರಲಾ ಸ್ತ್ರೀಯರಂ ಕಾಣುತೆ ಪೊಂಗು ತೊಡನೊಡನೆ ಘನಗಾಢದಿಂದವರ ಗರ್ಭಂಗಳಂ ಬಿಡದೆ ಭೇದಿಸಿ ಬಲಿಯ ಲಾಕ್ಷಣಂ (ಕಿಶಪು. ೩೯-೦೩). ೨. ಉಕ್ಕು ; ಸೂಸು ; ಹೊರಹೊಮ್ಮು : " ಪೊಂಗು-ಸ್ಫುಟನೇ (ಹೊಮ್ಮು, ಉಕ್ಕು) " (ಕಧಾ) ; ಸುಧಾಂಗನಿಂ ಪೊಂಗುವೆಳದಿಂಗಳ ತೊಡರ್ದ ಕಂಗಳ ಬೆಳಗಿನ . . . ಲತಾಂಗಿಯರೆನಿಪ್ಪ ಪಣ್ಯಾಂಗನಾಜನವೆಸೆದುದು (ಹಕಶಾ. ೪-೪೦). ೩. ಕೆರಳು ; ಉದ್ರೇಕ ಗೊಳ್ಳು : ಪೊಂಗುವುದು ಗಡಶಿಕೋಪದೆ ಕಿಂಗೋಲೊಗ್ಗಳ್ವುದು ಗಡಿಂದ್ರ ಜಾಲದ ಸಿಂಗಂ ತಾಂ ಗಡ (ಶಾಶಕಂ. ೨೫೨-೨೦). ೪. ವ್ಯಾಪಿಸು ; ಹರಡು : ಮಂಗಳಗೀತವಾದ್ಯನಿನದಂಗಳಶೇಷದಿಶಾತಟಂಗಳೊಳ್ ಪೊಂಗಿರೆ (ವರ್ಧಪು. ೧೪-೩೯). ೫. ಅರಳಂ ; ಬಿರಿ ; ವಿಕಸಿಸು : ಮುಗಮುಗಿಸುವುವು ಪೊಂಗಿ ಪೊಂಗೇದಗೆಗಳ್ (ಲೀಲಾವ. ೬-೧೨೪) ; ಶೃಂಗಾರವಾರಿ ತೀವಿದ ಮೊಗಗೊಳದೊಳು ಪೊಂಗಿದ ಪುಂಡರೀಕಗಳೊ...ತಿಂಗಳ ಮೊಗದಳಕ್ಷಿಗಳೊ (ವರ್ಧಶ. ೨-೩೯) ; ಪೊಂಗುವ ಸಂಪಗೆದಂಡೆಯೊಳಂಗೈಸುವರಷಳಜನರಾಂ (ಶಳಂ. ೬-೯೭). ೬. ಉಬ್ಬು ; ದೊಡ್ಡದಾಗು ; ದಪ್ಪವಾಗು : ತನುಪಳಿರೇಖೆಗಳ್ ಕಿಡೆಯುಂಮೊಯ್ದು ಬೆಡಂಗಿಸದೊಂದು ರೇಖೆಯಂ ತನಗೆಡೆಮಾಡಿ ಪೊಂಗೆ ನಡು (ಅಂಪು. ೬-೯೭); ಸುದತಿಯು ಗರ್ಭಚಿಹ್ನಮನ ದೇವ್ಪೊಗಟ್ಟುಪ್ಪುದೊ ಬಾಸೆ ಕರ್ಪನಾಂತುದು ನಡು ಕೂಡೆ ಪೊಂಗಿದುದು (೬ಗಂ. ೨-೯೫) ; ಪೊಂಗಿದಧರಂ ಮಾಗಿದ ಕಣ್ಮಲರ್ವರೆದ ಸುಕ್ಕಂಗುರುಳ್ (ಸೌಂದಪು. ೯-೨೦). ೭. ಉತ್ಸಾಹಿಸು; ಹಿಗ್ಗು : ಅಂಗಜನಂಕವಿದೆನೆ ವಿಂಗೆ ಪೊಂಗುವ ಮಧುವಿಂಗೆ ರಾಗದಿಂ ಕಟ್ಟಿದ ಸಾರಂಗದ ಪಟ್ಟಿಯು ತೊಂಗಲ ಭಂಗಿಯನಿಳಿಸಿದುವು ಪೂತ ಮುತ್ತ್ರದ ಗೊಂಚಲ್ (ವರ್ಧಮಾ. ೦೦-೩೭); ಇನಿಪಣ್ಗೊಂಚಲಂ ಕಂಡರಗಿಳಿಯಂತೆ ಪೊಂಗಿ ಪೊರೆಯಿಱು (ಉದ್ಯಟ. ೦೦-೦೦೭ ವ); ಪೊಂಗಿ ನಾಟ್ಯವನಾಡುತಂಗಜಾಂಗೆ ಸಮಿಸಿದಂಗವಱದಾ ಗಿರಿಜೆ ತಂಗಕೋಪದಲಿ ತನ್ನಂಗವಂ ತಾರೆನಲು (ಕಬಪು. ೧-೪) ; ಅಬ್ಬೆ ! ಪಿಡಿ ಸಡೆದಪನೆನುತುಮೆರಟ್ಯಾಬಿಡಿಯುಡುತೆ ಪೊಂಗಿ ತಾಯ ನಿಡುದೋಳಂ ತಾಂಗಿ (ರಾಮಾಕ್ಯ. ೧೯-೨೪). ೮. ನಮಿರೇಳು ; ರೋಮಾಂಚವಾಗು : ಪೊಂಗಿ ಹಾಡುತ ಕಮುತವಾಗೆ ವಾದ್ಯಂಗಳುಲಿಯಲ್ಕೆ (ಬಸಪು. ೦೪-೦೪) ; ಪಡಿದು ನಾಣ್ಗೆಡೆ ನುಡಿಯುಲಿಂಬ್ಬುವಂ ಬಿಱಸಿನಿಂ ಪೊಡೆಯೆ ಪೊಂಗುವಂ (ಕಬಪು. ೦೦-೨೪). ೯. ಸೊಕ್ಕೇಳಂ ; ಗರ್ವಪಡಂ ; ಬೀಗಂ : ಪೊಂಗಿ ಸೊಡರ್ಗುಡಿಯ ಮೇಲೆ ಪತಂಗಂ ಪಾಯ್ವಂತೆ ಪಾಯ್ದು ಬರ್ದುದು ಸಿಂಗಂ (ಕಾವ್ಯಸಾ. ೦೦೦೪ ಜೂದ್ರಕ) ; ಅನಗಿವಱದಿರ್ದೊಡಂ ಚಲದಿನೆನ್ನೊಳೆ ಪೊಂಗಿ ಪೊಡರ್ಪುದೋರ್ಪಂ . . . ಕೊಂದಪನಕಾರಣದಿಂ ಮೊಱೆಯೋ ಮನೋಭವಾ (ಅಂಪು. ೨೨-೩೩) ; ಪೊಂಗುವ ರಿಪುಕುಳ

ಮದವಮಾತಂಗವಮನಟಿಯಟ್ಟಿ (ಕೌಶಿ. XX. ೩೦-೧೬ ; 1088). ೧೦. ಹೊಳೆ ; ಪ್ರಕಾಶಿಸು : ಪೊಂಗುವ ನುಣ್ಮೊಗು ಪೊಳೆದು ಪೊಂಚುವ ಸಂಚಿನ ನೋಟದಬ್ಬೆರಿಯಿಂದಂಗಜವೀರನಾರುಬಟಿಯಿಂ ಪಟುಗೆಯ್ವುತೆ ಬಾಜಪೋಡೆಯೊಳ್ (ಅಕಾಂ. ೬-೨). ೧೧. ಸೋಕು ; ಮುಟ್ಟು : ಪೊಲೆ ಪಿಂಗದೆ ಪೊಂಗುವುದಕ್ಕಲಸುವರಾಳಿಜನಂಗಳ್ (ಧರ್ಮಾ. ೩ ೬೬). ೧೨. ತಟ್ಟು ; ತಾಕು : ಮಹಿಯು ಪೊಂಗಿ ತಲೆಕೆಳಗು ಮಾಡಿದ ಹಿಮವ ಮರಳು ಭಾವು (ಜಾತಕಂ. ೬-೧೯). ೧೩. ಕೂಗು ; ಅರಚು : ವಾತಪೂರಣಾಂಗಳಿಂ ನೊಂದಂತೆ ದೆಸೆದೆಸೆಗೆ ಪೊಂಗುವ ಗೂಗೆಗಳಿಂ . . . ಉಯ್ಯಾಲಾಡುವ ರಣದೇವತೆಯರಿಂದತಿಭಯಂಕರಾಕಾರವಪ್ಪುದು (ಕಾವ್ಯಸಾ. ೩೨೯ ಪೂರ್ವ೪). ೧೪. ಕುಂದಣಿಸಿ ತುಂಬಿರು ; ಮೆಟ್ಟು : ಮುಂಗುರುಳನು ಪಿಡಿದೊಯ್ದನ್ನ ನವರತ್ನ ಪೊಂಗಿದ ಮಣಿಮಂಚದಲಿ ಅಂಗಜಕೇಳಿಯ ನಿತ್ತನ್ನನುಳುಹೊ (ಶಂಕರ. ೯-೦೬). ಪೊಂಕು$_1$ : ೧೧. ಸೊಗಸನಗಲ್ದಾಗಿಸೆ ಲತಾಂಗವನರ್ತಿಯ ಪೊಂಕುವಾಸೆಯಂ ತೆಗೆದವರ್ದವ್ಯವಾಸೆಯ ನಪೇಕ್ಷಿಸೆ (ಶಃಹಾಶೀ. ೬-೭೮); ತುಂಗವಯೋಧರೆ ವಿಂದು ಸಿಂಗರಗೈದಾಸನ ದೊಳು ನಲ್ಲನರ್ಥಾಂಗವ ಪೊಂಕಿ ಕುಳ್ಳಿರ್ದು (ವರ್ಧಕ. ೧೦-೭೭). ಹೊಂಗು$_1$ : ೧. ಹೂತ ಹರುಷದ ಹೊಂಗಿದುತ್ಸವದ . . . ಉಬ್ಬಿನಲಿ ಹೊಂವುಳಿಯೋದನು (ಸಂಭಕ. ೩೩-೫೭). ೨. ಹೊಂಗಿ ಪೈತ್ಯಶ್ಲೇಷ್ಮತತಿ ರಂಧ್ರಂಗಳಲಿ ಮುಸುಕಿದಡೆ ತನುರೋಮಂಗಳನಿತುಂ ಕವುಚುನಾತಡೆ . . . ದೃಷ್ಟಿಗಳು ವಿಚ್ಛಿನ್ನವಾದಡೆ ನಿಮ್ಮಯಾಣೆ ಪ್ರಮಥರುಗಳಾಣೆ (ಬಸವ. ೯೯-೨೭). ೪. ಧ್ರೊಲ್ಲರ ಥಳಂಕಾರ ಹೊಂಗುತಿದೆ (ಗಿರಿಜಾ. ೭೦-೯). ೫. ಹೊಂಗಿದ ಪುಷ್ಪದ ಪರಿಮಳವನುಂಡೆಳ್ಳು ಅವು ತಮ್ಮಂಗವ ಬಿಟ್ಟು ಹೋಹಾಗ ಕಮ್ಮೆಣ್ಣೆಯಾಗದಿಪ್ಪುವೆ (ಶಮ್ಮವ. ೪. ೩೩೫-೭೦೦). ೬. ನವನೀಳಕಾಂತಿಯಿಂದಿರೇಜುತಿರೆ ಬಾಸೆ ನಡು ಹೊಂಗಿ ಕಿಕ್ಕೊಡೆಯದೊಪ್ಪದಿಂ ಹಿಗ್ಗುತಿರೆ (ಶಸರ. ೦-೦೦೯). ೭. ಜನಕಂ ಸಾಮಂತಭೀಮಮ್ . . . ವಿಜಾಟಿ ೧ಡಂಗಿ ಹೊಂಗಿ ಮದವೇಟಿ ಚಲಂ ತಲೆದೋರಿ ಬಿಲ್ಲನಾರ್ದ್ರೇಟಿಸಿ ನೀವಿ ಜೇವೊಡೆದು (ಎಕ. XII. ಶಕ್ಕವಾ. ೨೦-೯೭ ; 1160) ; ಸಂಗಡವಿರ್ದಂಗನೆಯರ್ ಶೃಂಗರಿಸೆ ಮುಂಗಳಮುಖ ಹೊಂಗಿ ಹೊರೆಯೇಟಿ (ಗಿರಿ. ೯-೭ ವ) ; ವನಜನಾಭಧ್ಯಾನಸುಧೆಯಲಿ ನನೆದು ಹೊಂಗಿದ ಕರಣ ಹೊರೆಯೇಟುತ್ತು (ಶುವ್ಯಾಕ್ರೋ. ೦-೨೨). ೧೦. ಹೊಂಗಿ ಮಿಡುಕುವ ವಿಮಾನ ಗುಂದಿಗಳಂ . . . ಪೂತಿಬೆಕ್ಕಂ ಹರಿಶ್ಚಂದ್ರರಾಯಂಗೆ ಕಾಣಿಕೆಯನಿತ್ತು (ಹಕಾ. ೫-೩) ; ಮುಗುಳುನಗೆಗಳ ಹೊಂಗುವಂಗದ ನಗೆಮೊಗದೊಳಾನಂದಬಿಂದುಗಳೊಗುವ ಕಂಗಳ . . . ಪಾಂಡವರೆಜಗಿದರು (ಶುವ್ಯಾಕ. ೦೭-೩೦) ; ಅರಸರ ವಿಭವದುತ್ಸವದ ತೆರವ ಕಂಡು ಕುಶಲವ ಪಡೆದ ಕಂಗಳಿವು ಹೊಂಗುವುವು (ಕುಂಠಕೀ. ೯೭-೫). ೧೨. ರಂಗ ನಿನ್ನಯ ವಕ್ಷದೊಳಗಿರ್ಪ ಕೌಸ್ತುಭಮಂಗಂಡ ಘನಮಹಿಮರನು ಹೊಂಗದು ಕಿಲ್ಬಿಷವು (ಕಶನಂ. ೩-೦೩). ೧೩. ಬಾಗು ; ಬಳುಕು : ಅವನ ಭಾರ ತುಂಬ್ದ ಹೊಡೆತಕ್ಕೆ ಬಚ್ಚನ ಕೈ ಹೊಂಗಿ, ಬೈಸಿಕಲ್ ಅವನತ್ತ ಬಾಗಿ, ಬೀಳುವುದರಲ್ಲಿತ್ತು (ಮಂಕಿಹು. ೧೬೩). ೧೪. ಹುಟ್ಟು ; ಉಂಟಾಗು ; ಪ್ರಕಟವಾಗು : ತಿಂಗಳಿಗೆ ತಲೆ ಮಾಸವೆರಡಜಲಿಂಗ . . . ಹೊಂಗುವವು ಧಾತುಗಳು ನಾಲಕುತಿಂಗಳಿಗೆ ಒರೆ ಹಸಿವು ತೃಷೆಗಳು ತಿಂಗಳ್ಗಿದಲಿ (ಶಿಶಾಗ. ೩-೧೯-೨೦).

[ದೇ. ॥ ತಮಿ. ಪೊಙ್ಗು; ಮಲ. ಪೊಙ್ಙು; ತುಳು. ಪೊಂಗು, ಬೊಂಗು ; ತೆಲು. ಪೊಂಗು ; ಕೋತ. ಪೊಙ್ಗ್, ಪೊಗ್ ; ಕೋಲಾ. ನಾಯ್ಕಿ. ಪೊಂಗ್]

ಪೊಂಗು$_2$, ಪೊಂಕು$_2$, ಹೊಂಗು$_2$ (ನಾ). ೧. ಗರ್ವ ; ಸೊಕ್ಕು : ಪೊಂಗುಟಿದು ಭರತನೃಪಚರಣಂಗಳ್ಗೆ ಮಾಗಧಾಮರಂ . . . ಬಾಗಿದಂ (ಆದಿಪು. ೦೨-೦೦೧) ; ಮಲೆಪರ ಪೊಂಗಡಂಗಿದುದು ಮನ್ನೆಯರುರ್ಕ್ಕು ಕದಲ್ದುದು (ಎಇ. XV. ೩೦-೯ ; 1028) ; ಅಂತಾ ದೇವತೆಯರ್ ಪೊಂಗುಟಿದು ಪಿಂಗಿ ಪೋಗೆ (ನೇಮಿಪು. ೬-೯೭ ವ). ೨. ಸೊಗಸು ; ಅಂದ ; ಶೋಭೆ : ಪೊಸದೇಸೆ ಪೊಂಗು ಪಾಂಗೆಸೆವೆಸಕಂ ಕಡುಗಾಡಿ ಗರುಡಿಯೆಂಬಿವಳಿಂದಂ . . . ವಸುದೇವಂ ಧರೆಗೆ ಕಣ್ಣಾಮುಳ್ಳಾಗಿರ್ದಂ (ಅರ್ಧನೇ. ೯-೦೩೧) ; ಅಂಗನೆಯ ಹಸ್ತನಖಮೆ[ಳ]ದಿಂಗಳ್ ಕೇದಗೆಯ ಸುಟಿಯ ಮಧುವೆಂಬುದನೆತ್ತಂ ಗೆಲ್ದಿರ್ದವು ತೊಳಗುವ ಪೊಂಗಿನೊಳಾಕೃತಿಯೊಳೆಸೆವ ವರ್ಣಕ್ರಮದೊಳ್ (ಬುಹು. ೭-೩೭). ೩. ಶುಭ ; ಮಂಗಳ : 'ಪೊಂಗುನೂಲ್' ಪರಾ. ೪. ವ್ಯಾಪನೆ ; ವಿಕಾಸಹೊಂದುವಿಕೆ : (೧). (ಗು). ೫. ವ್ಯಾಪಕವಾದ ; ಹೆಚ್ಚಾದ : ಎಸಳುಗಂಗಳ ಪೊಂಗುಶೋಭೆಯಿಂ ರಂಜಿಸುವ ವಿಸುಪ ತುರುಗೆವೆ (ಶುಕಂಗ. ೯-೩೦). ಪೊಂಕು$_2$ : ೨. ಕುಂಟುಮ ಪನ್ನೀರು ಕೂಡಾ ಗೋಡೆಗೆ ಪೂಶಿ ಪೊಂಕಾದ ಚಿತ್ರಪತ್ತಿಗೆಯನ್ನು ಬರದು (ಹುಪಳ. ೩೭). ೬. ಬೆಡಗು ; ಬಿನ್ನಾಣ ; ಬಿಂಕ : ಮಯ್ಸರಿಯಲು ಗಣ್ಣನ ತೊಣ್ಣಸಂಕದಧಟಲ್ ಪೊಂಕಾ(ಕ)ಳ್ತನಂ (ಹ್ಯಆಸಿ. ೦೩-೨೭-೭೩ ; 1090) ; ಸೊಗಯಿಪ ಪೊಂಕು ಲಾಲಿಸುವ ಲಲ್ಲೆ ಮರಲ್ದುವ ಮಾತು (ಕಂದ್ರಪು. ೯-೭೦). ಹೊಂಗು$_2$ : ೭. ಉತ್ಸಾಹ ; ಹುರುಪು : ನಾರುಡೆಯುದಾರವಯ್ ? ಹೋಹ ಹೊಂಗಿಂದಿದಂ ಮರೆದಿರೇಂ ? (ಶ್ರೀರಾಮ. ೨೨೯-೯೭). ೮. ಕೊಂಕು ; ಬಾಗು : ಕಂಗಳಲಿ ಕುಡಿಮೇಳ ಹುಬ್ಬಿನ ಹೊಂಗಿನಲಿ ಭಂಜವಣೆ ಭಾವದ ಭಂಗಿಯಲಿ ವಶಿಕರಣೆ (ಶುವ್ಯಾಕ. ೦೩-೨೫). ೯. ಉತ್ಕರ್ಷ ; ಏಳಿಗೆ : ಬ್ರಾಹ್ಮಣಮತದ ಹೊಂಗು ಹೆಚ್ಚಾಗಿತ್ತು (ಶೀವಾಶಾ. ೭೨). ೧೦. ತೀವ್ರತೆ ; ಹೆಚ್ಚಳ : ಹಿಂಗದಾಸಜು ಮನವ ಬಯಕೆಯ ಹೊಂಗು ಮುಜಿಯದು ಚಿತ್ರದೊಲವಿನ ಹುಂಗು ಹಜಿಯದು (ಶಿಶಾಗ. ೬-೨೩-೨). [< ಪೊಂಗು$_1$./ತಮಿ. ಪೊಙ್ಗು. ಪೊಙ್ಕು. ಪೊಙ್ಕ ; ಮಲ. ಪೊಙ್ಕ ; ತುಳು. ಬೊಂಗು ; ತೆಲು. ಪೊಂಗು]

ಪೊಂಗುಡುಪು (ನಾ). ಚರ್ಮವಾದ್ಯವನ್ನು ಬಾರಿಸುವ ಚಿನ್ನದ ಕೋಲು ; ಚಿನ್ನದ ವಾದನದಂಡ : ಸಮರಸನ್ನಾಹಭೇರಿಯುಂ ಪೊಂಗುಡುಪಂ ಪಿಡಿದಡಸಿ ಪೊಡೆಯಲ್ (ರಾಜಶೇ. ೬-೩೦ ವ).

[ ಪೊ (< ಪೊನ್) + ಕುಡುಪು ]

ಪೊಂಗುನೂಲ್, ಪೊಂಗುನೂಲು, ಹಂಗನೂಲು (ನಾ). ೧. ಮಂಗಳಕಾರ್ಯಗಳಲ್ಲಿ ಮುಂಗೈಗೆ ಕಟ್ಟಿಕೊಳ್ಳುವ ಹಾಗೂ ದೇವರು, ಕಲಶ ಮೊದಲಾದುವುಗಳಿಗೆ ಏರಿಸುವ ಅರಿಸಿನದ ದಾರ : ನಾಂದುವ ಬೇವಿನ ಸರಳಿಗೆಗಳುಂ ಕೂಲೊಳ್ ಪೊ[ಹಾಕಾಂ. ಪಾಂ]ಗುನೂಲಂ ಸುತ್ತುವ ಕುಡುಗೋಲ್ಗಳುಂ . . . ಪುಂಜಿಸುವ ಕಣಶಂಗಳು ಮೆಸೆಯೆ (ಉಃಶಾಶ. ೭-೩೮ ವ). ೨. ಎಳೆಯ ಮಕ್ಕಳಿಗೆ ಹಾಕುವ ಒಂದು ಬಗೆಯ ಆಭರಣ : ಅರಳೆಲೆ ಪೊಂಗುನೂಲ್ ಪುಲಿಯುಗುರ್ . . . ಭುವನೈಕಮಂಡನನೊಳೇನೆಸೆದಿರ್ದುದೊ ಬಾಲಮಂಡನಂ (ಅಜಿತ. ೫-೭೨). ಪೊಂಗುನೂಲು : ೧. ನನೆಯ ದಂಡೆಗಳನು ಕಟ್ಟು ಅನುಮಾಡು ಪೊಂಗುನೂಲನು ಗಂಧವರೆ (ಕಂಶ್ರಸಾಂ. ೦೨-೩೭). ಹಂಗನೂಲು : ೧. ಗಂಧದ ಬೊಟ್ಟು ಗವುಕಲೆ ಇಟ್ಟು ಹಂಗನೂಲು ಹಾಕಿಯೆಮ್ಮು . . . ಆ ಕಲ್ಲೇನೂ ಉಣಲಿಲ್ಲಾ ಎಡೆಮಾಡಿ ನೀನೆ ಉಂಡೆಲ್ಲಾ (ಕಂಟಕ. ೩೭-೦೫) ; ಈ ದಿನ ಈ ನಾಗಗಳ ಪೂಜೆ ಮಾಡಿ ಹಂಗನೂಲು ಕುಬಸಗಳನ್ನು ಏರಿಸಿ . . . ಬರುತ್ತಿದ್ದರು (ಹಮ್ಮಿ. ೭೯). [ಪೊಂಗು$_2$ + ನೂಲ್$_2$]

ಪೊಂಗುನೂಲು 'ಪೊಂಗುನೂಲ್' ನೋ.

ಪೊಂಗುಪ್ಪಸ (ನಾ). ಜರತಾರಿ ಎಳೆಗಳಿರುವ ಕುಪ್ಪಸ : ಪೊಂಗುಪ್ಪಸಂ ದೊಟ್ಟೊಡನಿಟ್ಟೋರಂತೆ ಮಾಣಿಕ್ಯದ ಕಿವಿದೊಡವಂ (ರಾಜಶೇ. ೦೩-೭೦).

[ಪೊಂ (< ಪೊನ್) + ಕುಪ್ಪಸ ]

**ಪೊಂಗುಪ್ಪೆ** (ನಾ). ಚಿನ್ನದ ಜಾಡಿ ; ಬಂಗಾರದ ಹೂಜಿ : ಪರಿಮಳಿಪ ಸೀತಳೋದಕವ ಪೊಂಗುಪ್ಪೆಯೊಳು ತುಂಬಿತುತ್ತ (ಪಪರೋ. ೧೪-೧೬).

[ಪೊಂ (< ಪೊನ್) + ಕುಪ್ಪೆ$_3$ (< ಕುಪ್ಪಿ$_1$)]

**ಪೊಂಗುಬ್ಬಿ** (ನಾ). ಚಿನ್ನದ ಗುಬುಟು,–ಗುಮುಟು : ಅಂಗದೊಳ ಗವರ್ದ ಬಣ್ಣಬಗೆಗಳ ಬೆಳ್ವೊಂಗುಬ್ಬಿವರಿಗೆಯುಂ ತೊಡೆ ಚಾಚು ಗೊಳುತೆ (ಕಂಪು. ೯೪. ೩೦). [ಪೊಂ (< ಪೊನ್) + ಗುಬ್ಬಿ$_1$]

**ಪೊಂಗುರು**, ಪಿಂಗುರು, ಪೆಂಗುರು, ಹೆಂಗುರು, ಹೊಂಗರ್ಕಿ, ಹೊಂಗುರು (ನಾ). ಕೊಕ್ಕರೆಜಾತಿಗೆ ಸೇರಿದ ಒಂದು ಬಗೆಯ ಪಕ್ಷಿ : ಕೋಗಿಲೆ ಚಾದಗೆ ಪೋದಗೆ . . . ಕಾಗೆ ಪೊಣರ್ವಕ್ಕಿ ಪೊಂಗುರು ಗೂಗೆ ಮುಳಂದಂ ಬಲಾಕಿ ಲಾವುಗೆ ಸೇನಂ (ಶಬ್ದಮ. ೧೦೯೯ ಕಾವ್ಯ). **ಪಿಂಗುರು** : ಪೊಣರ್ವಕ್ಕಿ ಪಿಂಗುರು[ಪಾಠಾಂ. ೦] ಗೂಗೆ ಮುಳಂದ ಬಳಾಹಕ (ಸೂಕ್ತಿಸು. ೩-೦೯೯). **ಪೆಂಗುರು** : ಗಿಳಿ ಪುರುಳಿ ಪೆಂಗುರು[ಪಾಠಾಂ. ಪಿಂಗುರಿ] ಕುರಂಡವಾಂದ ಮೊದಲಾಗೊಡೆಯ ಗಗನಚರಂ ಪಂಚೇಂದ್ರಿಯಂ ಗಳುಮಾಗಿ (ಶಬ್ದಾ.ಶಾ. ೯೬-೯). **ಹೆಂಗುರು** : ಚಾನಾಡಿ ಪರ್ಬಕ್ಕಿ ಹೆಂ[ಪಾಠಾಂ. ಹಿಂ]ಗುರು ಕಾಕಂ . . . ಇರ್ಕುಂ ತದ್ವನಾಗೌಘದೊಳ್ (ಜಾಜಿಕೆ. ೩-೩೯); ಕಾಕಂ ಬಕಂ ಕೊಂಚೆ ಹೆಂಗುರು . . . ಚಾತಕಮುಮಿರ್ಕುಂ ತತ್ಪ್ರರು ವ್ರಾತದೊಳ್ (ಹರಿವಂ. ೪-೪೬); ಪಾರಾವತಂ ಹೆಂಗುರು ಟೀವಂ ಟಿಟ್ಟಿಭಂ . . . ತದ್ವನಾಂತಸ್ಥಮಿರ್ಕುಂ (ಶಬಶಿ. ೩-೩೩). **ಹೊಂಗರ್ಕಿ** : ಹೊಂಗು ಚರಣಾಯುಧಂ ಗಿಡುಗ ಗೀಜಗನಾ ಗಿಳಿ ಕಾಡ ಗುಬ್ಬಿಗಳ್ ಬರುತಿರೆ (ಶಶ್ವಿಶಾ. ೬-೨೦೩). **ಹೊಂಗುರು** : ಹೊಂ[ಪಾಠಾಂ. ಹೆಂ]ಗುರು ಚರಣಾಯುಧಂ ಶಕುನಿ . . . ತಿತ್ತಿರಿ ಗಿಡುಗಂಗಳೆಂಬ ಖಗವೃಂದದಿನಲ್ಲಿಯರಣ್ಯ ಮೊಪ್ಪುಗುಂ (ಗಿರಿಶ. ೦-೬೯ ; ಶುಶ್ರೂಶಾ. ೩-೧೯೦ ನೋ) ; ಹರಡೆ ಹಸುಬ . . . ಹೊಂಗುರುವಕ್ಕಿಯೆಸೆದವಂದಲ್ಲಿ (ತ್ರಿಪಾಂ. ೬-೦೬).

[< ಪ್ರಾ. ಪೋಕ್ಖರ./ಸಂ. ಪುಷ್ಕರ./ತೆಲು. ಪೆಗ್ಗುರು, ಬೆಗ್ಗುರು]

**ಪೊಂಗುರುಜು** (ನಾ). ಬಂಗಾರದ ಮಂಟಪ : ಕೇರಿಕೇರಿಯಲಿ ಪನ್ನೀರ ಚಳಯ ರನ್ನದೋರಣ ಪೊಂಗುರುಜುಗಳು ಮೇರೆಯಿಲ್ಲದ ಕಾಂತಿ ವಿಡಿದುವು (ಕಂಪಕ. ೨೩-೨೬). [ಪೊಂ (< ಪೊನ್) + ಕುರುಜು]

**ಪೊಂಗುಲ** (ನಾ). ೧. ಚಿನ್ನದ ಕೆಲಸ ಮಾಡುವವರ ಕುಲಕ್ಕೆ ಸೇರಿದವನು ; ಅಕ್ಕಸಾಲಿಗ : ಕಡೆಕೋಳಂದ ಮಣ್ಣಗಪ್ಪೊಂಗುಲಂ ಕೊಡಲಿಯುಂ ಬಲ್ಲಹಿಯ ಕಮ್ಮಾಳು ಮಾಟ್ಟಗೊವೊಡೆಮೊಂ ಓದಲಪೋಲೆಯುಂ ಮಾಣ್ಗಳಂ (ಪ್ರಕಿಂ. ೦೯೩೯, ೩೮-೨೨ ; ಸು. 11ನೆಯ ಶತ). ೨. ಒಬ್ಬಾತನ ಹೆಸರು : ಸಾಕ್ಷಿ ಕೂಡಲೂರ್ ಪೊಂಬ್ಗುಲರು ಎಳ್ಮಡಿಯರು ಬದಿರಿಯರುಮ್ (ಪ್ರಕಿಂ. ೦೯೦೩, ೦೩-೯ ; 726). [ಪೊಂ (< ಪೊನ್) + ಕುಲ]

**ಪೊಂಗುಲ್ವಟ್ಟಿ** (ನಾ). ಒಂದು ಪ್ರದೇಶದ ಹೆಸರು (?) : ತೆನ್ಕಣ ಕೊಸೆದು ಪೊನ್ಗುಲ್ವಟ್ಟಿಯ ತೆನ್ನೊಳ್ವಿ ತೆನ್ಕಣಾಸೀಮೆ (ಪ್ರಕಿಂ. ೦೯೨೬, ೦೨೨-೬೦ ; 808 ?). [ ? ]

**ಪೊಂಗುಳ** (ನಾ). ಚಿನ್ನದ ಕುಳ,–ಗುಳ : ಪೊಂಗುಳಂಗಳಂ ಕಬ್ಬಿಣದ ಗುಳವೆಂದು ಕೈಯಲೀಯೆ (ಶಶಾಪು. ೬-೩-೨).

[ ಪೊಂ (< ಪೊನ್) + ಕುಳ$_1$ (< ಕುಟು) ]

**ಪೊಂಗುಳಿಗೆ** (ನಾ). ಚಿನ್ನದ ಗುಳಿಗೆ : ಪೊಂಗುಳಿಗೆಗಳ ಪರಿಯೊಳುಂಗು ಷ್ಟಂಗಳೊಪ್ಪುಗು ನಿಮಿರ್ದ ಕೋಮಳದಂಗುಳಂಗಳು ಮೆಜಿಮವುಡುಗಣ ದೊಲು ಪದನಪಾಳಿ (ಅಶಪು. ೯-೦೬). [ ಪೊಂ (< ಪೊನ್) + ಗುಳಿಗೆ$_1$]

**ಪೊಂಗುಜುವ** (ನಾ). ಚಿನ್ನದ ದ್ವೀಪ : ಪಾಲ್ಗಡಲೊಳಗಣ ಪೊಂಗುಜುವಮ ಗಡುಮೆನಿಸಿದುದಮರನಗಮಿದೇನಚ್ಚರಿಯೋ (ವರ್ಧಮಾ. ೦೨-೩೩).

[ ಪೊಂ (< ಪೊನ್) + ಕುಜುವ$_1$ ]

**ಪೊಂಗೆಜ್ಜೆ**, ಹೊಂಗೆಜ್ಜೆ (ನಾ). ಚಿನ್ನದ ಗೆಜ್ಜೆ : ಮಧುಪಾನದಿಂ ಸೊಕ್ಕಿದ ಮುತ್ತುಂಚಿಯ ಧ್ವನಿಗಳಂತೆ ಜರ್ಝರವಾದ ಪೊಂಗೆಜ್ಜೆಗಳ ಮೊಲ್ಲಾಲಿಯೊಳು (ಕಾಕಂಪು. ೬೬) ; ಪೊಂಗೆಜ್ಜೆಯುಲಿವು ನೆಲನುಗ್ಗಡಿಸುತ್ತುಂದೆಸೆಯ . . . ನಡೆತರುತಿರ್ದಳ್ (ಗಿರಿಶ. ೩-೧೦೬). ಮೊಚೆಯಲೊಡ್ಡಾಣದ ಪೊಂಗೆಜ್ಜೆಗಳ ದನಿ . . . ಪಾಪುತ ಹರಿದು ಸಂಭ್ರಮದ ಬೀದಿದರು (ಕಂಪಕ. ೨೦-೧೦೦). **ಹೊಂಗೆಜ್ಜೆ** : ಹೊಂಗೆಜ್ಜೆಗಳ ಮುಕುರದ ಘಂಟೆಗಳ . . . ವಜ್ರಮಯಧಾರೆಗಳಲೆಸೆದುದು ಭದ್ರಮಂಟಪ (ಕುಮಾವ್ಯಾ. ೦೨-೦೨); ಪುಟ್ಟಪಾದಗಳ ಹೊಂಗೆಜ್ಜೆಗಳ್ ಘಲಿರೆನೆ ದಟ್ಟಡಿಯಿಡುತೊಡಗಿದನು (ಕೋಹಕ. ೦೬-೬೨); ಸುಗತಿಗುಲಿವ ಹೊಂಗೆಜ್ಜೆಗಳ ರಭಸದಿಂದೆಸೆವ ನಿರ್ಮಲ ವಾಜಿಯಂ ಸುವೇಗಂ ತುದು ನಿಲಿಸಿದಂ (ಕೃಚಂಪು. ೩-೦೦).

[ ಪೊಂ (< ಪೊನ್) + ಗೆಜ್ಜೆ$_1$ ]

**ಪೊಂಗೆಲಸ**, ಹೊಂಗೆಲಸ (ನಾ). ಚಿನ್ನದ ರೇಕಿನ ಕೆಲಸ : ಪೊಸ ಪೊಂಗೆಲಸದ ಯೂಪಸ್ತಂಭಂಗಳ ಭಂಗಿಯನನುಕರಿಸಿದುವುಳ್ಳೊಡೆಯಾ ಕಮಲ ದಳಾಂಬಕಿಗೆ (ಶಹುಶಾ. ೩-೩೦). **ಹೊಂಗೆಲಸ** : ತೀವಿದವು ಹೊಂಗೆಲಸ ಗತಿಯಲಿ ಲೋವೆಗಳು (ಕುಮಾವ್ಯಾ. ೦೨-೯) ; ಹೊಂಗೆಲಸದ ಪೊಟ್ಟಪದುವ ವಿಟ್ಟರದೊಳು ಮಂಗಲಮಜ್ಜನಗೆಯ್ದು (ಮೋಹಕ. ೨೦-೩).

[ ಪೊಂ.(< ಪೊನ್) + ಕೆಲಸ ]

**ಪೊಂಗೇದಗೆ**, ಹೊಂಗೇದಗೆ (ನಾ). ಒಂದು ಬಗೆಯ ಕೇದಗೆ ; ಹೊಂಬಣ್ಣದ ತಾಳೆಹೂವು : ಮಗಮಗಿಪ ಜಾದಿ ಪೊಂಗೇದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಳಂ ಬಗೆಯಚಿದೋಲಗಿಪುದು ಮಾಲೆಗಾಜನಂ ಪೋಲ್ತುದಗ್ರಮಾಲ್ಯಮಹೀಜಂ (ಅರಿಪು. ೩-೩೬). ಸೋಮರ್ಮಡಿಯಿಂ ಸೂಸಿದ ಪೊಂಗೇದಗೆಯ ಕುತ್ತುಂಗಜಿ (ಕಂಪಾಪ್ರ. ೨-೦೩ ಕ) : ವನಮ ನಾಜಿ ಬಳಸಿ ಕಂಗೊಳಿಪ ಪೊಂಗೇದಗೆಗಳೊಪ್ಪಿದುವು (ಕಂಪು. ೯೩-೦೬). **ಹೊಂಗೇದಗೆ** : ಕುರವಕದ ಮಕುಳದೆಳಗೌಂಗಿನ ಹೊಂಗೇದಗೆಯ ಬಳಸಿನೊಳಂ . . . ಲತಾಮಂಟಪಂಗಳ್ ಮನಂಗೊಳಿಪುವು (ಕಾದಂಪು. ೯೬) ; ಈಳೆ ಹೊಂಗೇದಗೆಯ ಕಂಚಿಯ . . . ಕಿತ್ತೊರಸಿ ಹುಡಿಹುಡಿ ಮಾಡಿದನು (ಕಾಶಿರಾ. ೦೦-೨೦) ; ಹೊಂಗೇದಗೆಯೆಸಳಂ ಮುಸಿಸಿ (ಶಹುಶಾ. ೨-೧೯).

[ಪೊಂ (< ಪೊನ್) + ಕೇದಗೆ]

**ಪೊಂಗೊಡ**, ಹೊಂಗೊಡ (ನಾ). ಚಿನ್ನದ ಕೊಡ ; ಸ್ವರ್ಣಕುಂಭ : ಪೊಂಗೊಡಂ ತಮಾಳಪಲ್ಲವದೊಳೆ ಮುಚ್ಚಿಮಂದದೊಳೆ ಚೂಚುಕ ಮಾಂತುದು ಕರ್ಪನಾರಿಯಾ (ಕಂಶಕು. ೧-೧೨೩) ; ಬೆಳೆಯ ಸಾಸವೆ ಪೊಂಗೊಡ ನಷ್ಟಶೋಭೆ ಕನ್ನಡಿ . . . ಎಲ್ಲಡೆಗಳೊಳಲ್ಲಿಗಲ್ಲಿಗಧಿಕಂ ಪಡೆದತ್ತು ಜನಾನುರಾಗಮಂ (ಕಾವ್ಯಾಶ. ೬೩೨) ; ಕೀಲಾಲಮನಾಜಿ ಸಾಸಿರಸೂಳ್ಪೊಂಗೊಡನಂ ತಂದು . . . ಅಭಿಷೇಕಂಗೆಯ್ದಂ (ಅದ್ಭುರಾ. ೩-೯೩). **ಹೊಂಗೊಡ** : ತೊಳೆದ ಹೊಂಗೊಡದೊಳಗ್ಗಣಿಗಳು ತುಂಬಿ ತಂದಿಳುಹಿದರು ಕಾಮಿನಿಯರು (ಹಕಶಾ. ೩-೩೬) ; ಹೊಂಗೊಡನ ಹಿಡಿದೈತರಲಿ ನಾರಿಯರು (ಕುಮಾವ್ಯಾ. ೧-೩೬) ; ಮಜ್ಜನಕುಷ್ಣಜಲ ಹೊಂಗೊಡದಲಿಳುಹಿದವು (ಕೋರರಾ. ೩-೩-೩೯). [ಪೊಂ (< ಪೊನ್) + ಕೊಡ$_3$]

**ಪೊಂಗೊಡೆ** (ನಾ). ಚಿನ್ನದ ಛತ್ರಿ ; ಬಂಗಾರದ ಸತ್ತಿಗೆ : ಶಕ್ರಂಗೆತ್ತಿದ ಮಾಣಿಕಗೊಡೆ ಪೊಂಗೊಡೆ ಬೆಳ್ಗೊಡೆಯೆನಿಸುವುದು ಶಶಿಬಿಂಬಂ (ಶಗಪು. ೦೬-೦೦೬) ; ಚೈತ್ರನೆತ್ತಿದ ಪಲವುಂ ಪೊಂಗೊಡೆಗಳೆನಿಸಿ ಪೂತು ಮನಂಗೊಳಿಸಿದುವೆಸೆವ ಕರ್ಣಿಕಾರಕುಜಂಗಳ್ (ಸುಕುಮಾ. ೩-೯೦).

[ಪೊಂ (< ಪೊನ್) + ಕೊಡೆ$_3$]

**ಪೊಂಗೊಳಗು** (ನಾ). ಪಶುಗಳ ಗೊರಸಿಗೆ ತೊಡಿಸುವ ಚಿನ್ನದ ಆಭರಣ : ಪೊಂಗೋಡು ಪೊಂಗೊಳಗು ಪೊಂಗೆಜ್ಜೆ ಘಂಟೆಗಳು ಪೊಂಗಲಶ ಪೊನ್ನ ಬಾಸಿಗ ತಂದು ವೃಷಭನಂ ಸಿಂಗರಿಸಿ (ಸಿಂಗರಾ. ೩-೦೩).

[ಪೊಂ (< ಪೊನ್) + ಕೊಳಗು]

**ಪೊಂಗೊಳಲು** (ನಾ). ಚಿನ್ನದ ಕೊಳಲು : ಪೊಂಗೊಳಲನೂದುತಿಹ ಯಾದವಕಾಲೋತ್ತುಂಗ (ಧರ್ಮ. ೪-೫೬ ವ್ಯಾ) ; ಪೊಂಗೊಳಲಾಂತು ನಿಂದು . . . ಬಾಜಿಪೋಳಯೊಳ್ (ಚಿಕ್ಕ. ೬-೨).

[ಪೊಂ (<ಪೊನ್ ) + ಕೊಳಲು (<ಕೊಟಲ್)]

**ಪೊಂಗೋಂಟೆ, ಹೊಂಗೋಂಟೆ, ಹೊಂಗೋಟೆ** (ನಾ). ಚಿನ್ನದ ಕೋಟೆ : ವರಯೋಜಿಜ್ಜನದಾಂ ಪುರಂ ಪುರವಾನೊಳ್ಪೊಂಗೋಂಟೆ ಪೊಂಗೋಂಟೆಯುಂ ತರುಷಂಡಂ . . . ತಳ್ಪೊಳಕೆಯ್ಯ ಬೆಲ್ಪನೊಳ ಕೊಂಡಿರ್ಕುಂ ತದುರ್ವೀತಳಂ (ಜಗನ್ನಾ. ೦-೩೨) ; ಪ್ರಕಟಂಬೆತ್ತಿರ್ದ ಪೊಂಗೋಂಟೆಯ ತನೆಯೆಸಟ್ಟಗ್ರ್ ಕೇಸರಂ . . . ತಾನೆಸಲ್ಪೊಪ್ಪುಗುಂ . . . ತತ್ಪುಸುಮಾಪುರಿ (ಮಲ್ಲಿ. ೦-೨೫) ; ಬಗೆಗೊಂಡುದಾ ಪೊಳಲ ಪೊಂಗೋಂಟೆ (ಶಾಂತೀಶ. ೪-೬೨). **ಹೊಂಗೋಂಟೆ** : ಪುರದ ಮಧ್ಯದ ಮಣಿಮಯದ ಹೊಂಗೋಂಟೆ ರಂಜಿಸಲು (ಜೈಮಿ. ೨-೪೯) ; ಹೊಂಗೋಂಟೆ ಗಗನಮಂಡಲವ ಮುಟ್ಟಿಹುದು (ಕುಮಾ. ೬-೯). **ಹೊಂಗೋಟೆ** : ಸುತ್ತಣ ಮಣಿಗಲ್ಲ ಹೊಂಗೋಟೆ ನೋಡಲು ತತ್ತಳಗೆಯ್ಯುವುದಕ್ಷಿಗಳ (ಪ್ರಭು. ೪ ೬); ದಿನಮಣಿಯ ಮಣಿರಥದ ಗಾಲಿಗಳ ನೇಮಿಗಳ ಪೊಯ್ಲಿಂದೆ ಪುಡಿವಡೆದಯೆದ್ದ ಸಾಲ ಹೊಂಗೋಟೆದನೆಗೊನ ಗಳಿಂದೇಳ್ವ ದೂಳಲ್ಲಿಗಲ್ಲಿಗೆ ನಭದೊಳು ಸ್ಥೂಲದಂಡಾಕೃತಿಯುಸಾಂತವೋಲ್ (ಕೃಷ್ಣ. ೪-೨೦). [ಪೊಂ (<ಪೊನ್) + ಕೋಂಟೆ]

**ಪೊಂಗೋಡು** (ನಾ). ಪ್ರಾಣಿಗಳ ಕೊಂಬುಗಳಿಗೆ ಹಾಕುವ ಒಂದು ಬಗೆಯ ಚಿನ್ನದ ಒಡವೆ : ಚಿನ್ನದ ಕೋಡಣಸು : ಪೊಂಗೋಡು ಪೊಂಗೊಳಗು . . . ಪೊನ್ನ ಬಾಸಿಗ ತಂದು ವೃಷಭನಂ ಸಿಂಗರಿಸಿ (ಸಿಂಗಿ. ೩-೦೫). [ಪೊಂ (<ಪೊನ್) + ಕೋಡು₁]

**ಪೊಂಗೋಲ್** (ನಾ). ೧. ಚಿನ್ನದ ದಂಡ ; ಬಂಗಾರದ ಕೋಲು : ಮೇಲ್ಗಳೊ . . . ಪಾರ್ವತಿಯ ಚಿತ್ರಮಾ ಸೋಲಿಸುವಾ ಕೀಲ್ಗಳೋ ಸಲ್ಲೀಲೆಯ ಪೊಂಗೋಲ್ಗಳೊ ಕಣಕಾಲ್ಗಳೋ ಲಲಾಟೇಕ್ಷಣನಾ (ಗಿರಿ. ೦೦-೬೦). ೨. ಚಿನ್ನದ ಬಾಣ : ಪೊಂಗೋಲ ಪಿಡಿದವರೊಳಾರಾರ್ಗೆ ನಮ್ಮಳ್ಕೆ ? (ಶಾಂತಿ. ೦೪-೪೦೦). [ಪೊಂ (<ಪೊನ್) + ಕೋಲ್₁]

**ಪೊಂಘಟ್ಟ** 'ಪೊಂಗಟ್ಟ' ನೋ.

**ಪೊಂಚು₁, ಹೊಂಚು₁** (ಕ್ರಿ). ೧. ತಕ್ಕ ಸಮಯವನ್ನು ಕಾಯು. — ಎದುರುನೋಡು : ಪೊಂಚುವ ಪಾಯ್ವ ಪೊಯ್ವ ಕೊಯ್ವ . . . ಸಾವ ದೇವನಿಬರುಂ ಪದ್ಮಾಸನಂ ಕಂಡನು (ಕಂಠೀ. ೯೯-೪೨). ೨. (ಬೇಟೆಯಾಡುವಾಗ) ಗುಟ್ಟಾಗಿ ಅಡಗಿದ್ದು ಬೇಟೆಯ ಮೇಲೆ ಬೀಳಲು ಸಿದ್ಧವಾಗಿರು : ಬೆಸ್ಕಂ ಇರದೆ ಪೊಂಚಿ ಪಿಡಿದು ಹಾವು . . . ನುಂಗಲಾಚಿದಿರುತಿರಲು (ಕಬ್ಬಿ. ೪೭-೩). ೩. ಇತರರ ಚಲನವಲನಗಳನ್ನು ರಹಸ್ಯವಾಗಿ ಗಮನಿಸು ; ಕದ್ದು ನೋಡು; ಬೇಹು ಮಾಡು : ಪೊಂಗುವ ನುಣ್ಪೊಗಂ ಪೊರೆದು ಪೊಂಚುವ ಸಂಚಿನ ನೋಟದಟ್ಟಿಯಿಂದಂಗಜ ವೀರನಾರುಬಟೆಯುಂ ಪಟುಗೆಯ್ಯುತ ಬಾಜಿಪೋಜೆಯೊಳ್ (ಚಿಕ್ಕ. ೬-೨). ೪. ಯಾರಿಗೂ ಕಾಣದಂತೆ ಗುಪ್ತವಾಗಿರು ; ಅಡಗಿ ಕುಳಿತಿರು : ಕಾಂತರಾಲಿಂಗನದೊಳು ಪೊಂಚಿರ್ದ ಕಾಮಿನಿಯರದೆ ಧಿಗಿಲೆನಲ್ಕೊಗಲುಂಚದೊಳ್ಪೊಳೆಗಳ್ (ಕೃಷ್ಣ. ೨೬-೨೯). **ಹೊಂಚು₁** : ೧. ಮಿಂಚಿದವು ದೆಸೆಗಳಲಿ ಗಮನಕೆ ಮುಂಚಿದವು ಹಂಸೆಗಳು ನಭದಲಿ ಹೊಂಚಿದಾದು ಜೀವನಕೆ ಜೀವನವಿರಹಿಸಿಕರುಂಬ (ಕುಮಾ.ಅ. ೦೯-೨೦); ಕತ್ತಲೆಯೊಳು ಮಿಂಚುವ ವಿಭೂಷಣಕೆ ಮುಸುಕಿಟ್ಟು ಸುಳಿವರ್ಗೆ ಹೊಂಚುವ ಚಮತ್ಕೃತಿಯುನಳವಡಿಸಿ ನೆನಹಿಂಗೆ ಮುಂಚುವ ಪದನ್ಯಾಸವಂ ಕಲಿತು ನಡೆವ ಜಾರೆಯರ ಚದುರೆಸೆದಿರ್ದುದು (ಕೃಷ್ಣ. ೨೬-೦೦) ; ತನಗಾದ ಅಪಮಾನಕ್ಕೆ ಪ್ರತೀಕಾರವನ್ನು ಮಾಡಬೇಕೆಂದು ಮನಸ್ಸಿನಲ್ಲಿ ನಿಶ್ಚಯಮಾಡಿಕೊಂಡು ಸಮಯವನ್ನು ಹೊಂಚಲು ಮೊದಲಿಟ್ಟನು (೬ಕಿ. ೦೫). ೨. ಆ ಪೊಸತಾಗಿ ಸೊರ್ಕಿದಿಭಮಂ ಪದೆದೀಕ್ಷಿಸಿಯೊರ್ವ ಧೀವರಂ ಕೋಪದೊಳೊಯ್ಯನೊಯ್ಯನಾಚಿ ಹೊಂಚಿ ನಿಕುಂಜಮನೊತ್ತುಗೊಂಡು ಮೇಣ್ಸ್ವಪಮನಾದರ್ದ ನೋಡಿ ತೆಗೆದಂದಿಸೆ (ಉತ್ತರ. ೨-೫೫); ತೂಳ ದಾಡೆಯಲಿರಿಸಿ ಮೆಟ್ಟಿಸಿ ಕಾಲುಗೊರೆಯಲಿ ಸುಂಡಿಲಲಿ ಸಮಾಸೀಳ ತೋಟಿಸಿ ಹಾಚಿ ಹೊಂಚುವ ವೀರವಾನರರು . . . ಜೋದರುಗಳಂತಕನಾಲಯವ ಹೊಗಿಸಿದರು (ತೊರವೆ. ೬-೨೦-೦೯) ; ತಲೆಯೆತ್ತುವ ವಿಶಾಂಗಳನೋರಂತೆ ಮುಂದಿಕ್ಕಿ ತಲಿಹ ಬಕದಂತೆ ಹೊಂಚುತೆ ಕುಳಿತಿರುವನು ಕಾದು ! (ಕುಂಶ. ೯೨.೫). ೫. ಗುಪ್ತವಾಗಿ ಪ್ರಯತ್ನಿಸು ; ರಹಸ್ಯವಾಗಿ ಕಾರ್ಯ ನಡೆಸು : "ಹೊಂಚು–ಸಂಕೇತೋದ್ಯೋಗೇ" (ಶಮ). ೬. ಉಪಾಯ ಮಾಡು; ತಂತ್ರವನ್ನು ಹೂಡು : ನಿನ್ನೀ ನಿಲವು ನೀ ಹೊಂಚಿಹುದು ಸಮರಕೆ ಬಂದ ಸಿಂಗರವೊ (ಅಕ್ರೂ. ೪೨-೬೯). ೭. ಸೂಸು; ಹೊರಹೊಮ್ಮು : ಹರಿಗೆಗಳ್ ಮೇಘದೊಡ್ಡಣೆ ಕತ್ತಿಗಳ ತೊಳಪದಿರವೆ ಹೊಂಚುವ ಮಿಂಚು ಕವಿದೆಸೆವ ಸಾಯಕದ ಸರಿಯೆ ಸರಿವಳೆ (ಕಂಠೀ. ೪೮-೪೭); ನಳಿತೋಳ್ಗಳಿಂ ಜಡಿದು ರ್ಝಳಪಿಸುವ ಕೈದುಗಳ ದೀಧಿತಿಗಳು ಹೊಂಚಿದುವು ವಜ್ರಮಣಿ ಭೂಷಣದ ಕಾಂತಿಯಿಂ (ಕೃಷ್ಣ. ೦೬-೭); ನಿನ್ನ ನಡೆದಂತಿಹುದ ಮರೆವೆನೆಂತು ? . . . ಸಂಜೆಸೂರ್ಯನ ಸೌವರ್ಣರಾಗದ ಕಾಂತಿ ಹೊಂಚಿ ಎಮ್ಮಿಬ್ಬರನು ಹೊದಿಸಿ ಬೆಳಗಿದುದ (ಜೀವನ. ೬೯-೦೬). ೮. (ಆಹಾರ, ಹಣ ಮೊದಲಾದುವನ್ನು) ಹೊಂದಿಸಿಕೊಳ್ಳು ; ಜೋಡಿಸಿಕೊಳ್ಳು : ಸಾಮಾನ್ಯವಾಗಿ ಎಂಥ ಬಡರಾಷ್ಟ್ರವಾದರೂ ಯುದ್ಧಕಾಲವಲ್ಲಿ ಹಿಮಾಲಯದೆತ್ತರಕ್ಕಾದರೂ ಹಣವನ್ನು ಹೊಂಚಲು ಶಕ್ತವಾಗುತ್ತದೆ (ಬ್ಲಿಟ್ಜ. ೬೪೬). ೯. ಅಳವಡಿಸು ; ಹೊಂದಿಸು ; ಜೋಡಿಸು : ಪಂಚರತ್ನದ ರಾಸೆ ನವರತ್ನಭೂಷಣ ಮಿಂಚುಮುತ್ತಿನ ಮೊರೆಗಟ್ಟು ಹೊಂಚಿ ರತ್ನದೊಳು ನಿರ್ಮಿಸಿದ ಪುತ್ತಳಿಗಳ ಸಂಚಯದಂತಿದ್ದರಾಗ (ಚಿಕ್ಕ. ೦೪-೯೮).

[ದೇ.ಶ ತುಳು. ಅಂಚು; ತೆಲು. ಪೊಂಚು]

**ಪೊಂಚು₂, ಹೊಂಚು₂** (ನಾ). ೧. ಅಡಗಿಕೊಂಡು ಕಾಯುವಿಕೆ : ಗುಪ್ತವಾಗಿ ನಿರೀಕ್ಷಿಸುವಿಕೆ : ಪದವಮೆತ್ತಮಿಡುತುರ್ಮಿಡವೆ ಪೊಂದೆ [ಚಿ]ನೊಳ್ ಶಾರ್ದೂಲವೊಂದು ಮುಂಗಡೆಯ ಮೆಳೆಯ ಒಪ್ಪಿನೊಳು ಮೇವ ಮೃಗಕಮ್ಮಳಿಸುತಾರ್ದು . . . ಮುತ್ತರುಣಜಲವ ಪೀರಿದುದು (ಕಂಠೀರ. ೪-೬-೪೭). ೨. ಸೇರಿಕೆ; ಜೋಡಣೆ ; ಹೊಂದಾಣಿಕೆ : "ಪೊಂಚಿನೆ ಪೊರ್ದಿದ ಬಗೆ" (ಶಬ್ದಾ. ೪-೫). **ಹೊಂಚು₂** : ೨. ಈ ಕತೆಗಳಲ್ಲಿ ಸೋದ್ದಿಶ್ಯವಾದ ಆಕಾರರಚನೆಯ ಪ್ರಯತ್ನವಿದೆ. ಇಲ್ಲಿಯೂ ಪಾತ್ರಗಳಿರುತ್ತವೆ, ಸನ್ನಿವೇಶಗಳಿರುತ್ತವೆ ; ಆದರೆ ಅವುಗಳನ್ನು ಜೋಡಿಸಿರುವ ಕ್ರಮದಲ್ಲಿಯೇ ಹೊಸ ಅರ್ಥವೊಂದು ಪ್ರಕಟವಾಗುವಂತೆ ಅವುಗಳ ಹೊಂಚು ಕಾಣುತ್ತದೆ (ಹೊಸಕ. ೨೬೩). ೩. ಗೂಢಚರ್ಯೆ ; ಬೇಹು. ೪. ಉಪಾಯ ; ತಂತ್ರ ; ಹಂಚಿಕೆ : ಅಳಿಯ ತ ಆಕರ್ಷಣೆಗೆ ಸುಲಭವಾಗಿ ಬಲಿಯಾಗುತ್ತಾನೆಂದು ಏರ್ಪಡಿಸಿದ ಇಂದ್ರಾಣಿಯ ಹೊಂಚು ವಿಫಲವಾಗಲಿಲ್ಲ (ಹೊಸಕ. ೨೫) ; ಅವರ ರಾಜಕೀಯ ಹೊಂಚು-ಸಂಚುಗಳು ಜಗತ್ತಿನಲ್ಲಿ ಯಾವೆಡೆಗಳಲ್ಲಿ ಎಷ್ಟು ಯಶಸ್ವಿಯಾದವು ? (ಮಾಡಿಶ. ೦೭೦). ೫. ಸಿದ್ಧತೆ ; ಹವಣಿಕೆ : ದಾಯಾದಿಗಳು ದತ್ತಕಪುತ್ರನನ್ನು ಕೊಡಲು ನಾ ಮುಂದೆ ನೀ ಮುಂದೆ ಎಂದು ಹೊಂಚಿನಲ್ಲಿಯೇ ಒದ್ದಾಡುತ್ತಿದ್ದರು (ಬಿಡಾಕ. ೦೦೪).

**ಹೊಂಚು ಕಾಯು** = ಸರಿಯಾದ ಸಮಯಕ್ಕಾಗಿ ರಹಸ್ಯವಾಗಿ ಕಾಯು : ಒಬ್ಬ ಹುಡುಗನನ್ನು ಹಿಡಿದು ಅವನ ಸಂಗಡ ಹೊಂಚು ಕಾದು, ಅವಳು ಆನಂದನೊಡನೆ . . . ತಿರುಗಾಡಲು ಹೋಗುವುದನ್ನು ಕಂಡುಹಿಡಿದ (ದೂರಶ. ೨೦೮) ; ಬೆಕ್ಕು, ಏಡಿ ಮುಂತಾದುವು ತಮ್ಮ

ಆಹಾರಕ್ಕಾಗಿ ಹೊಂಚು ಕಾಯುತ್ತವೆ (ಜೀವಾತ್ಮ. ೧೯೯). **ಹೊಂಚು ಕೇಳು**= ರಹಸ್ಯವಾಗಿ ಕೇಳಿಸಿಕೊಳ್ಳು; ಕದ್ದು ಕೇಳು : ಎಲ್ಲರೂ ಅವನಿಗೆ ಕಾಣಿಸದಂತೆ ಹೊಂಚು ಕೇಳುತ್ತಿದ್ದರು (ಗೋತೃಶ. ೩). **ಹೊಂಚು ಜಾಗ**= (ಕಳ್ಳರು ಹಾಗೂ ಬೇಟೆಯಾಡುವ ಪ್ರಾಣಿಗಳು) ಅಡಗಿಕೊಂಡು ಕಾಯುವ ಸ್ಥಳ.– ರಹಸ್ಯವಾದ ಜಾಗ : (೯). **ಹೊಂಚು ನೋಡು**= ಗುಟ್ಟಾಗಿ ನೋಡು ; ಕದ್ದು ನೋಡು : ಗುಬ್ಬಿಗಳ ಮೇಲೆ ಎರಗಲು ಕಾಯುತ್ತಾ ಬೆಕ್ಕು ಹೊಂಚು ನೋಡುತ್ತಿದೆ (೧೩೨). **ಹೊಂಚು ಹಾಕು**= ೧. ಅಡಗಿಕೊಂಡು ಕಾಯು ; ಗುಪ್ತವಾಗಿ ಸಮಯವನ್ನು ನಿರೀಕ್ಷಿಸು : ಅಲ್ಲಲ್ಲಿ ಕಂಡು ಕಾಣದಂತೆ ಹೊಂಚು ಹಾಕುತ್ತಿದ್ದ ಇತರರೂ ಬೆರಗಾಗಿ ನೋಡುತ್ತ ವಿಷಯವೇನೆಂದು ತಿಳಿಯದಿದ್ದರೂ ಏನೋ ಒಂದು ದೊಡ್ಡ ಕಾರ್ಯವನ್ನು ಸಾಧಿಸಿದವರಂತೆ ಸಮಾಧಾನಗೊಂಡರು (ಶರೀಶ. ೬೭); ಹೀರೆಯು ಸ್ವಲ್ಪ ಮುಂಚೆ ಬಂದಿದ್ದು ಕಿಟಕಿಯ ಹತ್ತಿರ ಹೊಂಚು ಹಾಕಿ ಎಲ್ಲವನ್ನೂ ಕೇಳಿ ಹೋಗುತ್ತಿದ್ದಾಗ, ದೇವೇಂದ್ರನ ಕೈಗೆ ಸಿಕ್ಕಿದಳು (ಬಂಕಿಮ. ೩೧). ೨. ಬೇಟೆ ಮೊದಲಾದುವುಗಳಿಗಾಗಿ ಅಡಗಿಕೊಂಡು ಕಾಯು ; ಗುಟ್ಟಿನಿಂದ ಮೇಲೆ ಬೀಳಲು ಸಿದ್ಧವಾಗಿ ನಿರೀಕ್ಷಿಸು : ಒಂದು ದೊಡ್ಡ ಹುಲಿ ಬೆಕ್ಕಿನಂತೆ ಹೊಂಚು ಹಾಕುತ್ತ ಕುಳಿತಿದ್ದುದನ್ನು ಅವರು ನೋಡಿದರು (ಕಳಹು. ೩) ; ದೂರದಿಕ್ಕಿನ ಅಂಚಿಗಿದೆ ಹೊಸಹೊಂಚು ಹಾಕಿದ ಬೇಡವು (ನಂಮು. ೯೭-೦೯). ೩. ಉಪಾಯವನ್ನು ಮಾಡು ; ತಂತ್ರವನ್ನು ಹೂಡು : ಪೋಗದೊತ್ತಾಯದಿಂ ದನದ ಹಟ್ಟಿಯೊಳಹಳ್ಬಂಡಿ ಭೀತಿ ಲಜ್ಜೆಗಳಿಲ್ಲದೆ ಮತ್ತೇನು ಹೊಂಚು ಹಾಕಿಹಳೊ ಸಂಶಯವಿಹುದು (ಮಲ್ಲಶ. ೭-೩೯) ; ಮುಸಲ್ಮಾನರು . . . ಈ ಹಿಂದೂರಾಜ್ಯವನ್ನು ಸಮೂಲ ನಾಶಮಾಡಲು ಹೊಂಚು ಹಾಕಿದ್ದುದೂ ಸುಪ್ರಸಿದ್ಧವಿದೆ (ಹುಕ್ಕಶ್ರ. ೨೦). ೪. ಜೊತೆ ಮಾಡು ; ಹೊಂದಿಸು : ನಿನ್ನ ದೊಡ್ಡಪ್ಪ ನನ್ನ ಮದುವೆಯ ಪ್ರಸ್ತಾವ ಮಾಡಿದರು. ಅವರು ಯಾರನ್ನೋ ಹೊಂಚುಹಾಕಿಕೊಂಡಿರುವಂತಿದೆ (ವಾತ್ಸಲ್ಯ. ೨೬೯).

[ <ಪೊಂಚು₁ / ತೆಲು. ಪೊಂಚು ]

**ಪೊಂಜಗಲಿ, ಪೊಂಜಗುಲಿ** (ನಾ). ಚಿನ್ನದ ಕಟ್ಟೆ; ಬಂಗಾರದ ವೇದಿಕೆ: ಪಸೆವಾಸಿನ ಪಟ್ಟವಟಿಯ ದುಗುಲದ ರುಚಿಗಳ್ ಪಸರಿಸೆ ಪೊಂಜಗಲಿ ವಿರಾಜಿಸುತಿರ್ದುದು (ಜಗ. ೧೦-೯೩) ; ಬೆಳ್ಮುಗಿಲ ಕೆಳಗಳವಡಿಸಿದ ಸುರಯಿಯರಲ ಪರಾಗದ ಪೊಂಜಗಲಿಯ ಮೇಲಣಸುಗೆದಳಿರಲರ್ವಾಸಿನೊಳರಸಿ ವೆರಸಿ ಕುಳ್ಳಿರ್ದು (ರಾಜಶೇ. ೧೦-೩೦ ವ). **ಪೊಂಜಗುಲಿ** : ಪೊಂಜಗುಲಿಯೊಳಗೆ ಮಣಿಮೊಸೆದು ಮಂಡಿಸಿರಲು (ಕಂಠೀ. ೯೬-೯).

[ ಪೊಂ (<ಪೊನ್) + ಜಗಲಿ]

**ಪೊಂಜಗುಲಿ** 'ಪೊಂಜಗಲಿ' ನೋ.

**ಪೊಂಜರಪಣಿ** (ನಾ). ಚಿನ್ನದ ಸರಪಣಿ : ಮಾಮಕರದ ಪೊಂಜರಪಣಿಯ ಬೆರಲ ಮಣಿಮುದ್ರಿಕೆಗಳ . . . ಸಂಗರಧೀರರಾಜಸುಕುಮಾರರೊಪ್ಪಿರ್ದರು (ಕಂಠೀ. ೬-೩). [ ಪೊಂ (<ಪೊನ್) +ಸರಪಣಿ ]

**ಪೊಂಜರಿ** (ನಾ). ಚಿನ್ನದ ಮಳೆ; ಸುವರ್ಣವೃಷ್ಟಿ : ತನುವೆಲ್ಲ ವಿಶಾಲದ ಕನಕವರ್ಣಮದಾಗೆ ಮನ ನೆನೆದನಿತು ಪೊಂಜರಿಯಾ ನೆನೆದಾಗಲುಗುಳ್ವಂ (ಕೃಕಪೇ. ೨-೦೫೩). [ ಪೊಂ (< ಪೊನ್) + ಸರಿ₂ ]

**ಪೊಂಜರಿಗೆ** (ನಾ). ೧. ಚಿನ್ನದ ಎಳೆ ; ಬಂಗಾರದ ತಂತಿ : ಕಿವಿಗಳೊಳ್ ಪೊಂಜರಿಗೆಯು ಮಿಸುಪ ತ್ರುದಿಯೊಳ್ ರನ್ನಮಾಗಾಯ್ಗಿ ಲೋಲದಾಡೆ (ಕಂಠೀ. ೩-೩೭) ; ಅನಿತುಂ ತಂತ್ರಿಗಳಿಂದಮೊಂದೆ ದನಿಯುಣ್ಮಿತ್ತುಂಬಿನಂ ಕೂಡೆ ನುಣ್ಣನೆ ಕಂಬಚ್ಚಿನೋಳೀಟ್ಟ ಪೊಂಜರಿಗೆಯಂ ಪೋಲ್ತುಂ (ಶಕಪ. ೫-೦೦೩). ೨. ಬಂಗಾರದ ಕಲಾಬತ್ತು ; ಚಿನ್ನದ ಜರಿ : ಪೊಸ ಪೊಗುಲದುಡಯಿನಮರ್ದೊಪ್ಪುವ ಪೊಂಜ[ಶಾಕಂ. ಜು]ರಿಗೆಯುಮುಜ್ವಲ ನಾನಾಭರಣಂಗಳುಮೋಂ ವಿಲಾಸಮಂ ಮಾಡಿದುವೋ (ಸುಕುಮಾ. ೧೦.೯೭); ಎಸೆವುವು . . . ಕೊಂಬವರ್ಗೆ ತೋರಿಪ ಬಲ್ಲೆಲೆಯ ಪಟ್ಟಸೀರೆಗಳ ಪೊಂಜರಿಗೆ ಗಳ್ಬೊಟ್ಟಿಗರ ಪಸರಪಸರದೊಳಗೆ (ಜೀವಂ. ೦೬-೯).

[ ಪೊಂ (<ಪೊನ್) + ಜರಿಗೆ ]

**ಪೊಂಜಲಗೆ** (ನಾ). ಚಿನ್ನದ ಸಲಾಕೆ: ಪೊಂಜಲಗೆಯಂತೆ ಕಿರ್ಚಿಂದಂ ಜಾನಕಿ ಶುದ್ಧೆಯಾಗೆ (ಕಂರಾಮ. ೦೬-೩೦). [ಪೊಂ ( <ಪೊನ್) + ಸಲಗೆ₂]

**ಪೊಂಜಳಂಬ** (ನಾ). ಚಿನ್ನದ ಎಳೆಯಿಂದ ಮಾಡಿದ ಮುಸುಕು,– ಹೊದಿಕೆ : ವಿಳಸದ್ ಭವ್ಯರ್ಮಹಮ್ಯರ್ರಪ್ರಭಾವಿಸ್ಫುರಿತಾಭ್ರಂ ಪೊಂಜಳಂಬಂ ಮಿಸುಪವೊಲಿರೆ ಕಾಂಚೀಪುರಂ ಕಣ್ಗೆ ತೋರ್ಕುಂ (ಕೃಶಂ. ೧೦-೩).

[ ಪೊಂ (<ಪೊನ್) + ಜಳಂಬ ]

**ಪೊಂಜಾಜಿ** (ನಾ). ಒಂದು ಬಗೆಯ ಜಾಜಿಹೂವು ; ಹೊಂಬಣ್ಣದ ಜಾಜಿ : "ಚಾರುಮೈದ–ಪೊಂಜಾಜಿ" (ಅಶಾ. ೦೦-೨೩).

[ಪೊಂ (<ಪೊನ್) + ಜಾಜಿ₁ (<ಜಾದಿ) ]

**ಪೊಂಜಾಮರ** (ನಾ). ಚಿನ್ನದ ಹಿಡಿಕೆಯುಳ್ಳ ಚಾಮರ : ಪೊಂಜಾಮರ ಮುಚಿಚ್ ತೊಳಪಾರಂಜಿಯ ಬೀಸಣಿಗೆ ಗಿಂಡಿ ಹಡಪಂ ಮಣಿಕಾಳಾಂಜಿಯ ನಾಂತೆಸೆವರ್ . . . ಪಲಂಬರ್ ಸಖಿಯರ್ (ಉದ್ಯಲ. ೨-೯).

[ ಪೊಂ (<ಪೊನ್) + ಚಾಮರ ]

**ಪೊಂಜಾಳಿಗೆ, ಹೊಂಜಾಳಿಗೆ** (ನಾ). ಚಿನ್ನದ ನಾಣ್ಯಗಳಿರುವ ಚೀಲ, –ಹಮ್ಮಿಣಿ : ಪೊಂಜಾಳಿಗೆಯೊರಡ ವಿನಯದಿಂದಿಬ್ಬರು ಜಂಗಮಕಿತ್ತು (ಪೋಲೀಪು. ೩-೯೯) ; ಪಣಾಂಗನೆ ಕನಲ್ದು ಪೊಂಜಾಳಿಗೆಯಂ ನೂಂಕಿ ಕಳೆದು (ವೃಶಂ. ೦೭-೧೩ ವ). **ಹೊಂಜಾಳಿಗೆ** : ಮಾರಯ್ಯನವರ ವಚನಗಳು, ಬಸವಣ್ಣ . . . ಹೊಂಜಾಳಿಗೆಯನಿರಿಸಿ ಹೋದ ಸಂಗತಿಯನ್ನು ಪ್ರತ್ಯಕ್ಷವಾಗಿ ಇಲ್ಲವೆ ಪರೋಕ್ಷವಾಗಿ ಹೇಳುತ್ತಿವೆ (ಮೋಳಿಗೆ. ೯೦ ಶ್ರಾವಣ).

[ ಪೊಂ (<ಪೊನ್)+ಜಾಳಿಗೆ₁ ]

**ಪೊಂಜುರಿಗೆ, ಹೊಂಜುರಿಗೆ** (ನಾ). ಚಿನ್ನದ ಕಿರುಗತ್ತಿ ; ಬಂಗಾರದ ಕಠಾರಿ : ಕರೆವೆರಸಿದ ಹೊಸದುಗುಲದ ತೆರಳ್ಕೆಪೆತ್ತುಡೆ ಹಟತ್ಕಟೀಸೂತ್ರ ಪರಿಸ್ಫುರಿತದೊಳಂ ಕಟ್ಟಿದ ಪೊಂಜುರಿಗೆಯೊಳಂ ಜನಮನೇಂ ಮನಂಗೊಳಿಸಿದುದೊ (ಅಂಪು. ೯-೩೭) ; ತರತರದಿನೆಸೆವ ಕರೆಗಳ್ಪರಸಿದ ಪೊಸದುಗುಲದುಡೆಯಿನಮರ್ದೊಪ್ಪುವ ಪೊಂಜುರಿಗೆಯುಂ . . . ಏಂ ವಿಲಾಸಮಂ ಮಾಡಿದುವೋ (ಸುಕುಮಾ. ೧೦-೯೭) ; ಬಿಗಿದುಡೆಯೊಳ್ಪೊಂಜುರಿಗೆಯುಂ ಕಟ್ಟಿ (ರಾಜಶೇ. ೬-೦೦ ವ) ; ಪೊಂಜುರಿಗೆಯೆಂದೇ ಏರ್ದಗೊತ್ತಿದೆ (ರಾಘಾಂಕ. ೨೯-೨೬). **ಹೊಂಜುರಿಗೆ** : ನಡುವಿನೊಳು ಚೆಲ್ವಂಕಿಗೊಪ್ಪಿಸುವ ಹೊಂಜುರಿಗೆ (ಶರಕ. ೨೯ ೦೩). [ಪೊ (< ಪೊನ್)+ಸುರಿಗೆ₂]

**ಪೊಂಜೂಜಿ** (ನಾ). ಚಿನ್ನದ ಸೂಜಿ : ಪೊಂಜೂಜಿ [ಶಾಕಂ. ಜೂಜಿ. ಪೂಜಿ]ಯೊಂದೊಂದು ಚೂರ್ವೊನೆಗೊಂಡೊಂದಲರಾಯ್ದು ಕೋದ ತೆಜದಿಂದಿರ್ಪಂತು ಪುಲ್ಲಾಂಬುಜಾನನೆ ಪುಷ್ಪಾಂಜಲಿಗೊಟ್ಟಳ್ (ಅರ್ಧನೇ. ೩-೯೯). [ಪೊಂ (< ಪೊನ್) + ಸೂಜಿ]

**ಪೊಂಜೂಡಗ** (ನಾ). ಚಿನ್ನದ ಕಡಗ ; ಬಂಗಾರದ ಬಳೆ : ರ್ಣವ ಕನನ್ಮಣಿಕುಂಡಲಮೊಂದೆ ಕಯ್ಯ ಪೊಂಜೂಡಗಮೊಂದೆ . . . ಒಪ್ಪಿರೆ (ಕಂಪ್ರಕ. ೦೦-೭) ; ಪೊಂಜೂಡಗವ ಪಿಡಿದ ಚಯ್ಯುಡಿಯ ನೋಳ್ಪುದೆಸೆ (ಶಾರದಾ. ೦೯೮-೩೨೯). [ಪೊಂ (<ಪೊನ್)+ಸೂಡಗ]

**ಪೊಂಜೂಲು** (ನಾ). ಚಿನ್ನದ ಎಳೆಗಳಿಂದ ಮಾಡಿದ ಹೊದಿಕೆ ; ಜರತಾರಿ ಹೊದಿಕೆ : ಆಂತ ರತ್ನಂಗಳೇ ಮಣಿಪೊರಜೆ ಕಳಧೌತಕಾಂತಿ ಪೊಂಜೂಲೆನೆ ವಿರೂಪಾಕ್ಷನಡರೆ ಬೊಮ್ಮಂ ತಿರ್ದಿ ತೋರ್ಪ ಪಟ್ಟದ ದಂತಿಯೆಂದೆಸಲ್ ಕನಕಾಚಲಂ ಮೆಚಿದುದು (ಕಂಪು. ೨-೯). [ಪೊಂ (<ಪೊನ್)+ಜೂಲು₂]

**ಪೊಂಜೆಂಡು** (ನಾ). ಚಿನ್ನದ ಚೆಂಡು : ರನ್ನದ ಚೆಂಡು ಮೇಲೆ ಪೊಂಜೆಂಡು

ಮೌಕ್ತಿಕದ ಚೆಂಡಾದಂತನುಕ್ರಮದೊಳಿಂದುಬಿಂಬಂ ಸಾಲಾಗಿಯರುಣಂ ಪಿಶಂಗಮಾ ಸಿತರುಚಿಗಳೋಲೈಸಿ . . . ಚೆಲ್ವಾದುದು (ಶಂಪು. ೯-೦೬).
[ಪೊಂ (<ಪೊನ್) + ಚೆಂಡು (<ಸೆಂಡು)]

**ಪೊಂಜೆಳೆ, ಹೊಂಜೆಳೆ** (ನಾ). ಚಿನ್ನದ ಕೋಲು ; ಬಂಗಾರದ ಬೆತ್ತ : ಗಂಧಸಿಂಧುರದವೊಲ್ನಡೆಯನಾಂತ ನವಯೌವನೆ . . . ಪೊಂಜೆಳೆಯ ಮೆಯ್ಯ ಪದ್ಮಿನಿ (ಪಂಪಭಾ. ೭-೦೦). **ಹೊಂಜೆಳೆ**: ಕರತಳದೊಳು ಹೊಂ[ಪಾಠಾಂ. ಪೊ]ಜೆಳೆಯನು ಪಿಡಿದು ತನ್ನರಸಗಂಗಜಲಾಸ್ಯವನು ಭರದಿಂದುವದೆಶಿವ ಲಾಸ್ಯಕಿಯೆನೆ ತರುಣಿ ಕಣ್ಗೊಪ್ಪವಡೆದಳು (ಕಂಪ್ರಕಾಂ. ೯-೨೯) ; ಹೊಂಜೆಳೆಯಂದದಿ ಬಳಲುವ ಕಾಯದಿ (ಜ್ಞಾಶತ. ೩-೦೬೦).

**ಪೊಂಜೆಳೆಮೆಯ್, ಹೊಂಜೆಳೆಮೆಯ್, ಹೊಂಜೆಳೆಮೈ**=ಚಿನ್ನದ ಬೆತ್ತದಂತೆ ಹೊಳೆಯುವ ಶರೀರ : ಸುಂದರವಾದ ದೇಹ : ಪೊಂಜೆಳೆ ಮೆಯ್ಯ. . . ಗೌರೀದೇವಿಯೆಂಬ ತರುಣಿಯಂ ಮದುವೆಯಂ ಮಾಡಿ (ಹಮ್ಮಿರ. ೨-೩೨ ವ) ; ನೀರಾಟಮನಾಡಿ ಪೋದ ವಾರನಾರಿಯರ ಪೊಂಜೆಳೆ ಮೆಯ್ಗೊಳ್ ರಂಜಿಸಿರ್ದ ರಜನೀರಜಂಗಳಿಂ ಕದಡೇಳ್ದು (ರಾಜಶೇ. ೦೨-೩೯ ವ); ಅಂಜನದಲರುವಕ್ಕಿಯು ಬಣ್ಣಮನೆ ತೋರ್ವ ಕಂಜಲೋಚನನ ಮೂರುತಿಯು ರಂಜಿಸುವಂತಲರ್ಗಂಗಳೊಳಿಡುವರು ಹೊಂಜೆಳೆಮೆಯ್ಯ ನೀಚೆಯರು (ಶರಶ. ೯-೨) ; ಮೊಳೆಯೆ ಹೊಂಜೆಳೆಮೈಯೊಳಾಗಳೆ ಪುಳಕಸಸಿ ತನಿನೋಹರಸ ಮನದೊಳಗೆ ಕಾಳ್ಪುರವಾಗೆ ಸಾರ್ದಳು ರೋಹಿಣೀದೇವಿ (ಶಾಳ್ಮಲಾ. ೦೬-೩೭). [ಪೊಂ (< ಪೊನ್) + ಸೆಳ್ಳೆ]

**ಪೊಂಜೆಳೆಮಂಚ** (ನಾ). ಚಿನ್ನದ ತೂಗುಮಂಚ : ಪೊಂಜೆಳೆಮಂಚದ ಮೇಲೆ ಪೂರೆಯೊಳೇಜುಂಬೌವನೆ ಲಜ್ಜಾತುರೆ ಕಾಂಚನಪಂಜದನೆ ತಲೆವಾಗಿರೆ (ಜಿಮುಕಾ. ೬-೯೯). [ಪೊಂ (<ಪೊನ್) + ಸೆಳೆಮಂಚ]

**ಪೊಂಜೆಂಗು** (ನಾ). ಚಿನ್ನದ ಎಳೆಗಳಿಂದಾದ ಸೆರಗು ; ಜರತಾರಿಯಿರುವ ಸೆರಗು : ವಿಟಜಂಗಮಂ ಬಂದಜುಪೆ ಕರೆಸಿ ನಲ್ಲಳ ಸೀರೆಸೆಜಗು ಪಿಡಿದೆಳೆವುತಿರಲು ಅಂಗಸ್ಥವಸನವಂತಿರ್ದುದದಟೊಳ್ಪೊಂಜೆಂಗು ರಂಗೆಸೆವ ಸೀರೆಗಳಪರಿಮಿತಮುದಿಸೆ ಜಂಗಮಮಾವಳಿ ವಣೆಯಲಿತ್ತು (ರಾಜಶೇ ೬-೪೦).
[ ಪೊಂ (<ಪೊನ್) + ಸೆಜಂಗು ]

**ಪೊಂಜೊನ್ನಲಿಗೆ** (ನಾ). ಚಿನ್ನದ ಕೊಡ,—ಕಲಶ : ಜಲಜನ್ಮಕೋರಕವ್ರಯಸೊಕ್ಕುಮಿಕ್ಕಾನೆದಲೆ ಗಾಲಿವಕ್ಕಿ ಪೊಂಜೊನ್ನಲಿಗೆಗಳ ಚೆಲ್ವನೆಲೆದು ಮೆಲೆದು . . . ನೆಲಮೊಲೆಗಳ್ . . . ಎಡ್ಡಂಬಡೆದವು (ಉದ್ಭಟ. ೯-೨೦).
[ಪೊಂ (<ಪೊನ್) + ಸೊನ್ನಲಿಗೆ]

**ಪೊಂಡವಕೆ** (ನಾ). ಚಿನ್ನದ ಪೀಕದಾನಿ : ಶಕ್ತಿವ್ರಜಮಾನ್ಮೆ ಪೊಡವಕೆಯಾಂತಿರ್ದಾದಿದೇವಿಸಮುತ್ಕರಮೊಲ್ದಾಂತಿರೆ ರನ್ನಮಾವುಗೆಯನೊಪ್ಪಿರ್ದ ಭವಾನೀಧವಂ (ಶಂಕಂ. ೦-೭೯) ; ಪರಮಗಾಯತ್ರಿ ನಿಂದಿರೆ ಶಕ್ತಿಗಳ ವಿಕತಿ ಪೊಡವಕೆಯೊಲ್ದಾಂತಿರಲ್ (ಉಪಮಾಪು. ೦-೭೦).
[ಪೊಂ (<ಪೊನ್) + ಡವಕ್ಕೆ]

∆**ಪೊಂತಕಾರಿ** 'ಹೊಂತಕಾಱಿ[1]' ನೋ.

∆**ಪೊಂತಕಾಱಿ** 'ಹೊಂತಕಾಱಿ[1]' ನೋ.

**ಪೊಂತಿವಣೆ** (ನಾ). (?) : ಬಟ್ಟ ಕಣ್ಣುಂ ಬಿಗಿದ ಮೊಗಮುಂ ಮನದ ಮುನಿಸುಂ ಮೆಯ್ಯ ಮುಟುಕಮುಂ ಪ್ರತಿಮಾನದ ಪೆಣನುಮಣಲೊಳಡಿಸಿ ದಾನೆಯಡಂಗು ಕೊಂಡ ಕಯ್ಯ ಪೊಂ[ಪಾಠಾಂ. ಪೊಸಂ]ತಿವಣೆಯ ನೆತ್ತರ ನೊಂದುನಿವಿಷಮುಂ ಕುಂದಿಸದ ಕ್ರೋಧಿನಿಯೆಂಬುದ್ದಾನೆಯ ಮದದೊಳ್ (ಅರ್ಜುಪ. ೬-೪೪ ವ). [ ? ]

**ಪೊಂದಂಡ** (ನಾ). =ಪೊಂಗೋಲ್ ೧ : ಎಣಾಂಕವದನೆಯರು . . . ವಾಣಿಯುಲಿ ಪೊಂದಂಡವಿಡಿದವರು ಮುನ್ನಡೆಯೆ (ವವಪೋ. ೩೯-೨೭).
[ಪೊಂ (< ಪೊನ್) + ದಂಡ]

**ಪೊಂದಂಡಿಗೆ, ಹೊಂದಂಡಿಗೆ** (ನಾ). ಚಿನ್ನದ ಪಲ್ಲಕ್ಕಿ : ಬಂಗಾರದ ಮೇನೆ : ಮಂಗಳಪಾಠಕರು ಸಂಗಡಿಸಿ ಬಿರಿದುಗಳಂ ಪೊಗಳುತಂ ನಡೆಯೆ ಪಿಳ್ಳೆಯನಾಯನಾರ್ ಪೊಂದಂಡಿಗೆಯನೇಜ್ (ಶಿಶಪು. ೩೦-೦೬). **ಹೊಂದಂಡಿಗೆ** : ನೆಗಹಿದವು ಕೈದೀವಿಗೆಯ ಸಾಲುಗಳು ಹೊಂದಂಡಿಗೆಯ ದೂವಾರಿಗಳು ವೆಟಣಿಸಿದರು (ಉಪ್ಪಾಡ್ಯ. ೬-೩೩).
[ಪೊಂ (<ಪೊನ್) + ದಂಡಿಗೆ]

**ಪೊಂದಗಡು, ಹೊಂದಗಡು** (ನಾ). ಚಿನ್ನದ ತಗಡು ; ಬಂಗಾರದ ವರ್ತಿ : ಪೊದಗಡಿನ ಕಡಾರಮಂ ಕಾದಿರ್ವಂತೆ ಕಂಪು ಪೀರ್ದು (೧೬ಶಾವ. ೬-೭೦ ವ) ; ಮುತ್ತಿನ ಪುಡಿಯಂ ಪೊರಳ್ಚಿ ಪೊಸಪೊಂದಗಡಂ ತಱಿದಿಕ್ಕಿದಂತೆ ತೋರ್ಪಿನಿಯನ ಬಾಯ ಕರ್ಪುರದ ತಂಬುಲಕೊಯ್ಯನೆ ಕೆಯ್ಯನೊಡ್ಡಿದಳ್ (ಅನಂಪು. ೦೨-೬೬) ; ಸ್ಮರನ ಪಸ್ಮದ ಯಂತ್ರವ ಪೊಂದಗಡಲಿ ಬರೆವಂತೆ ಕಸ್ತುರಿಯಿಂದ ತರುಣಿಯು ಕದಪಿನಲಿ ಮಕರಿಕಾಪತ್ರವ ವಿರಚಿಸಿದರು (ಜೀವಂಧಸಾಂ. ೦೦-೦೯). **ಹೊಂದಗಡು** : ಹೊಂದಗಡಿನ ಹೊದಕೆಯ ಮನೆ ಬಹಳ ನೇರಂದವಡೆದ ಪಟ್ಟಶಾಲೆ (ಮೋಹತ. ೩-೩೯).
[ಪೊಂ (<ಪೊನ್) + ತಗಡು]

**ಪೊಂದಟ್ಟೆ, ಹೊಂದಟ್ಟೆ** (ನಾ). ಚಿನ್ನದ ತಟ್ಟೆ ; ಬಂಗಾರದ ಹರಿವಾಣ : ಕರಯುಗದೊಳಾಂತ ಪೊಂದಟ್ಟೆಯನದಱ ಮೇಲೆ ಪರಪಿರ್ದ ಸಂಪಗೆಯ ಪೂಗಳಂ . . . ಕೊಂಡು ಬಂದು (ಕೃಶಿಚಾ. ೦೦-೦೦) ; ಹೊಳೆವ ಪೊಂದಟ್ಟೆಯಾರತಿಗಳ ಪಿಡಿದಾಗ ಲಲಿತಾಂಗಿಯರು ಸಾರ್ಲ್ದೊಡು (ಕಂಪಪ. ೭-೧೦೬). **ಹೊಂದಟ್ಟೆ** : ಹೊಂದಟ್ಟೆಯೊಳು ಕುಂಕುಮರಸಪೂರಿತ ಗಂಧಾಕ್ಷತೆಗಳ ಕೊಟ್ಟು ಅಂದವಡೆದ ಕದಳಿಯ ಪರ್ಣದೊನ್ನೆಯ ತಂದಿರಿಸಿದ ರಲ್ಲರಿಗೆ (ಮೋಹತ. ೩-೫೦) ; ಮಕರಂದಾಜ್ಯಮೆಂಬೊರ್ವ ನೀಟ್ . . . ಕೆಳದಿಯ ಕೈಯ ಹೊಂದಟ್ಟೆಯ ತಾನೊಯ್ದು . . . ಭಾವಗೆ ಕೊಟ್ಟಳು (ಶಶ. ೯-೨೦). [ಪೊಂ (< ಪೊನ್) + ತಟ್ಟೆ]

**ಪೊಂದಳಿಗೆ, ಹೊಂದಳಿಗೆ** (ನಾ). = ಪೊಂದಟ್ಟೆ : ಮಂಗಳಭೂಷಣಾವಳಿಯ ಬೆಳ್ಪು . . . ಪೊಂದಳಿಗೆ ಸೂಸಿದ ಸೀಸೆಯ ಬೆಳ್ಪು ತಳ್ತಿರಲ್ (ಜಗಪ. ೦೦-೪೦) ; ಪೊಂದಳಿಗೆವಿಡಿದಾರತಿಯನೆತ್ತಲ್ವೆದೆಯರು . . . ಕಂಗೊಳಿಸಿತಾ ದಂಪತಿಗಳ ಮದುವೆ (ಕೃಶಿಚಾ. ೩೦-೦೬). **ಹೊಂದಳಿಗೆ** : ಸುಳಿದವಾರತಿಯಮಾರಿಯರ ಹೊಂದಳಿಗೆಗಳ ದೀಪಗಳ ಮುಕ್ತಾಫಲದ ಸೇಸಾಕ್ಷತೆಯ ಮಳೆ ಸಿರಿಮುಡಿಯ ಸರಿಸದಲಿ (ಕೊಕರಾ. ೩-೬-೩೬) ; ಹೊಂದಳಿಗೆಯಲಿ ಸಂಧ್ಯೆಯೋಕುಳಿಯನೆರಚುತ್ತೆ . . . ನಿನ್ನ ಪೂಜಿಸುವಳನುದಿನಂ ! (ಕಕ್ಕಾಂಗ. ೦೭-೪೪೨). [ಪೊಂ (< ಪೊನ್) + ತಳಿಗೆ]

**ಪೊಂದಳಿರ್, ಪೊಂದಳಿರು** (ನಾ). ೧. ಹೊಂಬಣ್ಣದ ಚಿಗುರು : ಪೊಂದಳಿರ್ಗಳ್ ತೋರಣಮನೆ ಕರಮೆಸೆವುವು (ಸುಕುಮಾ. ೯-೬೦). ೨. ಚಿನ್ನದಿಂದ ಮಾಡಿದ ಚಿಗುರಿನಾಕಾರದ ಅಲಂಕಾರವಸ್ತು : ಬಳಸಿದ ಚಿಂಬೊನ್ನ ಮಾಂಗಾಯ ಗೊಂಚಲ್ಗಳ ಪೊಂದಳಿರ ತೊಂಗಲ್ಗಳ . . . ನಡುವೆ (ಆನಪು. ೬-೦೩ ವ). **ಪೊಂದಳಿರು** : ೧. ಕುರವಕದ ಕುತ್ಪುಂಗಣಿಯುಮಂ ಮಾಂದಳಿರ ಪೊಂದಳಿರುಮಂ . . . ಮನೋಹರಮೆನೆ ಸಮೆದು (ಕಂಪ್ರಶಿ. ೭-೦೦೯ ವ). [ಪೊಂ (< ಪೊನ್) + ತಳಿರ್]

**ಪೊಂದಳಿರು** 'ಪೊಂದಳಿರ್' ನೋ.

**ಪೊಂದಳೆ** (ನಾ). ಚಿನ್ನದ ಸತ್ತಿಗೆ : ತುಱುಗಿದ ಪೊಂದಳೆಗಳ ಬಱಿನೆಳಲೊಳ್ ನೆಟ್ ಬರ್ಪ ಗಣಂಗಳ್ (ಕೃಶಚಿ. ೩-೨೨ ವ).
[ಪೊಂ (< ಪೊನ್) + ತಳ್ಳೆ (< ತಟ್)]

**ಪೊಂದಾಮರೆ, ಪೊಂದಾವರೆ, ಹೊಂದಾವರೆ** (ನಾ). ಒಂದು ಬಗೆಯ ತಾವರೆ ; ಹೊಂಬಣ್ಣದ ಕಮಲ : ಭೂಮಿಯ ಮೇಗೆ ಸಿಂಹಾಸನಮಕ್ಕುಂ ಅದಱ ಮೇಗಲರ್ದ ಪೊಂದಾಮರೆಯಕ್ಕುಂ (ಚಕ್ರಾಗಾ. ೦೫೫-೩) ;

ತಾಮರೆ ಪೊಂದಾಮರೆ ಕಲ್ಪಲತೆಯ ಲತೆಯಲ್ಲುಂ (ಶಾಂತಿಪು. ೩-೭). **ಪೊಂದಾವರೆ :** ಮಂದರಧರನೀ ಪೊರ್ಕುಳ ಪೊಂದಾವರೆವೊಲ್ ವೇಣಾವಂ ಬರ್ದುಕಾವನೇ (ಶಂಕರಾ. ೧೦-೧೨೦), ಸರೋವರವಂ ಪೊದಟ್ಟ ಪೊಂದಾವರೆ ಬಳ್ಳಿ (ಸುಕ್ತಿಪು. ೨-೨೨). **ಹೊಂದಾವರೆ :** ತಾವರೆ ಹೊಂದಾವರೆಗಳ್ ಪಾಮವಿವಸ್ತ್ರಾವಳಿವಾದಾಳಿ ಗಿಳಿಯರಗಿಳಿಗಳ್ (ಗಂಳ. ೨ ೩೮) : ಕೆಲರು ಹೊಂದಾವರೆಯ ಹಂತಿಯ ಕೊಳನ ಹೊಕ್ಕರು (ಕುವ್ಯಾಶ. ೦೬-೪), ಶರಧಿಯೊಳೊಗೆದ ಹೊಂದಾವರೆಯಂತಿರ್ಪ ಪುರಮಧ್ಯದಲಿ ಕೃಷ್ಣರಾಯ ಅರಮನೆ . . . ರಂಜಿಸಿತು (ಪೋಹಶ. ೩-೬೨). [ಪೊಂ (< ಪೊನ್) + ತಾಮರ]

**ಪೊಂದಾರ** (ನಾ). ಚಿನ್ನದ ದಾರ ; ಜರತಾರಿ ಎಳೆ : ಪೊಂದಾರಗೆಯ್ಮೆಸೆಜಗಿನ ಚಂದದ ಬಂಗಾವಿಯುಡೆಯನುಟ್ಟಸಾರಿವಳ್ (ಶಶಿ. ೬-೦೯೦).

[ಪೊಂ (< ಪೊನ್) + ದಾರ$_1$]

**ಪೊಂದಾವರೆ** 'ಪೊಂದಾವರೆ' ನೋ.

**ಪೊಂದಾವು** (ನಾ). ಚಿನ್ನದ ಎಳೆಯಿಂದ ಮಾಡಿದ ಹಗ್ಗ : ಕೊರಲೊಳ್ ಕಟ್ಟಿರ್ದ ಪೊಂದಾವುಜ ಪಜಿದದನೀಳುತ್ತ ಬಾಗಿಲ್ಗದಂಗಳ್ ಬಿರಿವಂತೊತ್ತುತ್ತೆ (ಬುತ್ರಗೂ. ೨೦-೩೯). [ಪೊಂ (< ಪೊನ್) + ದಾವು$_2$]

**ಪೊಂದಾಳ, ಹೊಂದಾಳ** (ನಾ). ಚಿನ್ನದ ತಾಳ : ಮಿಗೆಯೊತ್ತುವ ಪೊಂದಾಳದ ಬಗೆಯಂ ಪೊಲ್ಲಲರ್ದ ಕರ್ಣಕಾರಮದೆಸೆಗುಂ (ಉದ್ಯಲಿ. ೯-೨೨); ಹರನಿತ್ತ ಪೊಂದಾಳವಂ ನುಡಿಸುತ್ತ ಪಾಡಿದಂ (ಶಂಕರಪು. ೯-೫೦); ಶ್ರೀಗಿರವ ಪೊಂದಾಳವಂ ತೆಗೆದು ತಿರುಪಾಡನೇಕವಂ ಪಾತಲ್ಗೆ (ಒೀಕ್ಕಪು. ೮-೯-೦೨). **ಹೊಂದಾಳ :** ಸುಡಿಗೇಳಿ ಹೊಂದಾಳವಂ ಪಿಡಿವುತಂ (ಅಂಗಪು. ೦೯- ೩೬).

[ ಪೊಂ (< ಪೊನ್) + ತಾಳ$_2$ (= ತಾಲ) ]

**ಪೊಂದಿಕೆ, ಹೊಂದಿಕೆ** (ನಾ). ಹೊಂದಾಣಿಕೆ : ಸಾಮರಸ್ಯ : ಒಂದಿಕೆ. ಒಂದಿಕೆಗಳ್ . . . ಪೊಂದಿಕೆ, ಪೊಂದಿಕೆಗಳ್ (ಶಬ್ದಾನು. ೫೩೮ ಪ್ರಯೋ). **ಹೊಂದಿಕೆ :** ಹೊಂದಿಕೆಯ ಪೋಲಬಲ್ಲವೀ ನುಡಿ (ಕೊರತಾ. ೫-೩-೭೬); ಅಪೂರ್ಣವಾದರೂ ಹೊಂದಿಕೆಯುಳ್ಳ ಅರ್ಥವನ್ನು ಕೊಡುವ ಪದಗಳ ಗುಂಪಿಗೆ ಪದಸಮುಚ್ಚಯ ಎಂದು ಹೆಸರು (ಶುರ್ಧನು. ೩). 'ಪೊರ್ದುಗೆ' ಪರಾ. [ ಪೊಂದು$_1$ (< ಪೊರ್ದು) + – ಇಕೆ ]

**ಪೊಂದಿಗೆ** 'ಪೊರ್ದುಗೆ' ನೋ.

**ಪೋದಿಸು** 'ಪೊರ್ದಿಸು' ನೋ.

**ಪೊಂಮ್ಮು$_1$** 'ಪೊರ್ದು' ನೋ.

**ಪೊಂದು$_2$, ಹೊಂದು$_2$** (ಕ್ರಿ). ಸಾಯು ; ಮರಣ ಹೊಂದು : ನೀಲಸಿನ್ನ ಮನಸಿಜರಾನಿಜೀವು ಒಡಿವು ತಾನ್ಪೊಂದಿದಾನ್ (ಪ್ರಯೋ. ೦೯೮೧. ೨-೪; ಸು. 788); ಕಿಡೆದು ಪೊಂದಿದನಾಮಿಳೆಯುಲ್ಲಚೇತನಂ (ಕಾದಂಬ. ೫೭೩); ನಿಜಕಾಲಪೂರ್ತಿಯೊಳ್ ಪೊಂದುವರೊಯ್ಯಗೆ (ಅಶ್ವ.ಪು. ೦-೪-೦೨೪); ತಂತಮ್ಮ ದುಷ್ಕೃತಂಗಳ ಫಲಂಗಳತ್ತಣಿನಾ ರಕ್ಕಸರ್ ಪೊಂದಿದರ್ (ರಾಮಾಶ್ವ. ೦೨-೦೮). **ಹೊಂದು$_2$ :** "ಹೊಂದು – ಮರಣೇ" (ಶಮಂ); ಹುಟ್ಟುವಲ್ಲಿ ಭವಿ . . . ಹೊಂದುವಲ್ಲಿ ಭವಿಯಾಗಿ ಹೋಹರ ಮುಟ್ಟಲಾಗದು (ಬಸವ. ೬೭೮); ಹರಣವಿರೆ ಹೊಂದಿದನದಾವನು (ಕುವ್ಯಾಶ. ೨೩-೪೪): ಮರಳಿ ಮರಳಿ ಹುಟ್ಟಿ ಹೊಂದಿ ತೊಳಲಿ ಬಳಲಿ ಬಂದೆ ನಾ (ಪುರಂದ. ೧-೮೭೬-೪).

[ದೇ.೩ ತಮಿ. ಪೊನ್ನು ; ಮಲ. ತೆಲು. ಪೊಲಿ ]

**ಪೊಂದು$_3$, ಹೊಂದು$_3$** (ನಾ). ೧. ಸೇರಿಕೆ; ಹೊಂದಿಕೆ: 'ಪೊಂದುಗುಂದು' ಪರಾ. ೨. ಸಮೂಹ : ಗುಂಪು : ಎಡೆಯಡೆಯೊಳಿಡಿಕಿರಿದ ದೋಣಿಗಳ ಶ್ರೇಣಿಗಳ ಸಿಡಿಸಿಡಿದುರುಳ್ವ ಜಲಬಿಂದುಗಳ ಪೊಂದುಗಳ . . . ಕಡಲೆಸೆದುದು (ಕಬಿಪು. ೨-೪). **ಹೊಂದು$_3$ :** ೩. ಪಕ್ಕ ; ಬದಿ ; **ಸಾಮಿಪ್ಯ :** ಗಂಜೀಯ ಸೀರುಟ್ಟು ಗಂಧದಾ ಬೊಟ್ಟಿಟ್ಟು ನಂದೀಶ ನಿಮ್ಮ **ಹೊಂದಿಲಿ** ಕೂತಿರುವ ನಾರಿ ಗಂಗವ್ವ ಎಳ ಹೋಗಿ ನೀ ಗಂಡರನಬ್ಬಿಸೇಳ (ಜೋಳಗ. ೦೩೩) ; ಬೆಳಗುಜಾವದ ಎಲರು ಕದಿರಿನ ಬದಿಗೆ ನಿರ್ನೆರನಲಗುತ ಎಲೆಯ ಸಂದಿಗೆ ಅಲರಿನಂದಿಗೆ ಮರದ ಹೊಂದಿಗೆ ನಲಗುತ (ಕಾಕುಶಾ. ೫೩-೨೮). [ < ಪೊಂದು$_1$. / ತಮಿ. ಪೊರುತ್ತು ; ತೆಲು. ಪೊಂದು ]

**ಪೊಂದು$_4$, ಹೊಂದು$_4$** (ನಾ). ಸಾವು ; ಮರಣ : ಪುಟ್ಟು ಪೊಂದಿಗೆಡೆಯಲ್ಲದೆ ತೋರ್ಪರ್ (ಚಕಳು. ೯-೬): ಕುವಳೆವ ಪೊಂದುಗಳ . . . ನೋಡಿ ನಗುತಲಿಹೆಯೊ (ಅಹಿಗ. ೬೯-೦೦). **ಹೊಂದು$_4$ :** ಹೆಸರಿಲ್ಲದ ಕುಲವಿಲ್ಲದ ಹುಟ್ಟಿಲ್ಲದ ಹೊಂದಿಲ್ಲದ ಅಯೋನಿಸಂಭವ ನೀನಾದ ಕಾರಣ ನಿನ್ನ ನಾಮ ನಿಷ್ಕಲಲಿಂಗವೆಂದೆನಯ್ಯ (ಸಿದ್ಧೇಶ. ೬-೨೨); ಭಾವಲಿಂಗದಲ್ಲಿ ಬಯಲನೈದಿದ ಮಹಾಶರಣಂಗೆ ಹುಟ್ಟು ಹೊಂದುಗಳು ನಷ್ಟವಾದುವಯ್ಯ (ಅಣಂಶಿ. ೦೬೬-೪೩). [ < ಪೊಂದು$_2$ ]

**ಪೊಂದುಗುಂದು** (ಕ್ರಿ). (ಸಾಂಸಾರಿಕಜೀವನದೊಡನೆ) ಹೊಂದಿಕೆಯನ್ನು ಕಳೆದುಕೊಳ್ಳು,—ಸಂಬಂಧವು ಕಡಿದುಹೋಗು : ಈ ಪಂಬಲಿಂ ಬೆಂಡಾಗಿ ಕಂದುಬಗೆಯಿಂ ಸಂದಿ ಪೊಂದುಗುಂದಿರ್ಪ ಪುರರಧಿರಾಜಂ ಸುರಥರಾಜಂ ತಾನೋಲಗದೊಳಿರ್ಪನ್ನೆಗಂ (ರಾಜಾಶ್ವ. ೦೩೯-೪).

[ ಪೊಂದು$_3$ + ಕುಂದು$_1$ ]

**ಪೊಂದುಗುಲ** (ನಾ). ಚಿನ್ನದ ಎಳೆಗಳಿರುವ ರೇಷ್ಮೆಬಟ್ಟೆ : ತರೆ ಮಾಸಗುವ ಪೊಂದುಗುಲದ ಪೊಗರು (ಗಿಕಗೂ. ೧೩-೨೬).

[ಪೊಂ (< ಪೊನ್) + ದುಗುಲ$_1$]

**ಪೊಂದುಗೆ** 'ಪೊರ್ದುಗೆ' ನೋ.

**ಪೊಂದುಡಿಗೆ** 'ಪೊಂದೊಡಿಗೆ' ನೋ.

**ಪೊಂದೆನೆ. ಹೊಂದೆನೆ** (ನಾ). ೧. ಚಿನ್ನದ ಬಣ್ಣದ ಧಾನ್ಯದ ಹೊಡೆ: ಹಣ್ಣಾದ ತೆನೆ : ತುಂಬುವುದು ಕಾಡುಗಳನೆಲ್ಲ ಪೊಂದೆನೆಯ ಕಮ್ಮಿತು ಗಾಳಿ (ಶಶ್ರಾಂಗ. ೫೩-೦೯೯೦). ೨. ಕೋಟೆಯ ತುದಿಗಿರುವ ಚಿನ್ನದ ಕೊತ್ತಳ : ಕೋಂಟೆಯ ಪೊಂದೆನೆಗಳ್ ವಿರಾಜಿಕುಂ (ತಗಿಪ. ೨-೦೯) ; ಪೊಂದೆನೆಗಳ್ ಖರಕರಕರದಿಂದಂ ಕರಗುಗುಂ (ರಾಜಶೇ. ೨-೬೬). **ಹೊಂದೆನೆ :** ೧. ಚಿಲ್ವ ಹಸುಗೊರ್ನೆಯಲ್ಲಿ ನೆಲ್ಲ ಹೊಂದೆನೆಯಲ್ಲಿ ಚಿಲ್ಲಹವು ಇಬ್ಬನಿಯ ಮುತ್ತುಗಳಿವಿಲ್ಲಿ (ಅಹಿಗ. ೨೯-೧೫). [ಪೊಂ (< ಪೊನ್) + ತೆನೆ$_1$]

**ಪೊಂದೆರೆ$_1$** (ನಾ). ಚಿನ್ನದ ರೂಪದಲ್ಲಿ ಕೊಡಬೇಕಾದ ತೆರಿಗೆ : ಎಷ್ಟಾದಾ ಸಾಮಂತರೆಲ್ಲ ಪೊಂದೆರೆಯ ತೆರಲೊಲ್ಲರಲ್ಲ ! (ಹಾಚಿ. ೨೨ ೪೯೬).

[ಪೊಂ (< ಪೊನ್) + ತೆರೆ$_3$ (< ತೆಱೆ$_3$)]

**ಪೊಂದೆರೆ$_2$, ಹೊಂದೆರೆ** (ನಾ). ೧. ಜರತಾರಿಯ ಪರದೆ : ಪೊಂದೆರೆಯ ಪೊರೆಯ ಮಱೆವಿಡಿದು . . . ನಿಂದಳು ವಿನಾಸದಿಂದ (ಶಂಕರಪು. ೬-೨) ; ವ್ಯಾಗ್ರಾಕ್ಷಿಯೊರ್ವಳುಜ್ಜ್ವಳತರಮಾದ ಪೊಂದೆರೆಯನೋಸರಿಸುತ್ತಿರೆ ಕಂಡನಿಂದುಮಂಡಳಮುಖಿಯಂ (ರಾಜಶೇ. ೦೦-೬). **ಹೊಂದೆರೆ :** ೨. ಹೊಂಬಣ್ಣದ ಅಲೆ : ಅಲರ್ದ ತಾವರೆವಂಡನುಮಿಸಿ ಕೊಳನ ಹೊಂದೆರೆಯೆತ್ತಿ ಎಂದು . . .ಸುಳಿದಾಡುವುದು ಬಾಲಕನವದೊಂದಲರು (ಶಾಕ್ಯಭಾ. ೨-೫). [ಪೊಂ (< ಪೊನ್) + ತೆರೆ$_4$]

**ಪೊಂದೇರ್, ಪೊಂದೇರು, ಹೊಂದೇರ್, ಹೊಂದೇರು** (ನಾ). ಚಿನ್ನದ ತೇರು ; ಸ್ವರ್ಣರಥ : ಪೊಂದೇರ ಮೇಲಿರ್ದ ವಸುದೇವನಂದನರ್ಗೆ ಮುಕುಳಿತಾಂಜಲಿಯಾಗಿ (ಜಗಿಪ. ೫-೧೦೨ ೫) ; ಧೀರರ ದೇವ ಮಾಣಿನೆಸು ಜಾವದೊಳು ಪೊಂದೇರೇಱು ನಡೆವನಬ್ಧಿಯೊಳು (ಕರಶ. ೨೪-೨೬) ; ಪೊಂದೇರನಳವಡಿಸಿ ತುರಗಂಗಳಂ ಪೂಡಿ (ಕೃಷ್ಣರಾ. ೦೨-೮). **ಪೊಂದೇರು :** ಕರಿತುರಗನಿಚಯುದೆಡೆಯಾಟಗಳ ಘಾಟಗಳ ಪೊಂದೇರ ಸಂದಣಿಗಳ . . . ಪಾಳೆಯಂ ಕಣ್ಗೆಸೆದುದು (ತಬಿಪು. ೪೨-೧೫). **ಹೊಂದೇರ್ :** ಅಭ್ರಮಾರ್ಗದೊಳ್ಸುಳಿವ ಮುಂಗಾರ ಮಿಂಚಂ ತನ್ನ ಹೊಂದೇರ ಚಲಕೆಱಗುವಶನಿಯುಂ ತನ್ನ ಘಾತಿ . . . ಶಿರಸ್ಸರಿಸೆ ವೃಷಕೇತು ರಿಪುಸೈನ್ಯಮಂ ಪೊಕ್ಕನು

(ಕೃ.ಜಿ. ೧೨-೧೫). **ಹೊಂದೇರು :** ಹೊಳೆಹೊಳೆದು ಹೊಂದೇರು ಹರಿದವು (ಶಬ್ದಾ.೮೯. ೬-೨) ; ನೇಸರಾಗಳೆ ತನ್ನ ಹೊಂದೇರನ್ನಗಿರಿವಂಸ್ತಕದೊಳಿಳಿ ಸುತಿರ್ಪನ್ (ಅಗ್ರಾ. ೬೪-೮). [ಪೊಂ (<ಪೊನ್) + ತೇರ್$_{2}$]

**ಪೊಂದೇರು** 'ಪೊಂದೇರ್' ನೋ.

**ಪೊಂದೊಟ್ಟಿಲ್**, ಹೊಂದೊಟ್ಟಿಲು (ನಾ). ಚಿನ್ನದ ತೊಟ್ಟಿಲು : ಆ ವಣಿಜನ ಗೇಹದೊಳಿರ್ಪುದರಿ ಪೊಂದೊಟ್ಟಿಲೊಳಗೆ . . . ಜೀವಂಧರ ನೊಪ್ಪುವ ಲೀಲೆಯಿಂ . . . ಬೆಳೆದನು (ಜೀವಂ. ೬-೨); ಗಿರಿಜೆ ವಾಗನಂ . . . ಕೊಂಡಾಡಿ ಹರುಷ ಪೊಂದೊಟ್ಟಿಲೊಳ್ ತೂಗಿದಳ್ (ಕಬ್ಬ. ೫-೨೩). **ಹೊಂದೊಟ್ಟಿಲು :** ಚಿನ್ನ ಹವಳದ ಮಿಳಿಗಳಲಿ ಹೊಂದೊಟ್ಟಿಲನು . . . ರತ್ನಿಯ ಕಟ್ಟಿರಿಸಿ ಹಾಡಿದಳು ಗೋಪಿ ಮುಕುಂದನನು (ತಿಶಾಗ. ೦೦-೬-೦೫). [ಪೊಂ (< ಪೊನ್) + ತೊಟ್ಟಿಲ್$_{1}$]

**ಪೊಂದೊಡರ್**, ಹೊಂದೊಡರು (ನಾ). ೧. ಚಿನ್ನದ ಅಂದುಗೆ : ಪೀತಪಟಂ ಕಟಿಯೊಳ್ ಬೆಡಂಗು ಮೆಯ್ಯೊಳ್ಪಿರ ಕಾಲ ಪೊಂದೊಡರ ದ್ಯುತ್ಕರ ಹಾಹೆಗಳೊಪ್ಪೆ . . . ಗೋವಳರಾಯನ ಲೀಲೆ ರಾಜಿಸಂ (ಜಗ. ೫-೯೩); ಎಡಗಾಲೊಳ್ ಪೊಂದೊಡರ್ ತಳ್ತಿರೆ (ರಾಜಶೇ. ೦೪-೬೦). **ಹೊಂದೊಡರು :** ೧. ಹೊಂದೊಡರು ಕಿಱುಗೆಜ್ಜೆ ಘಂಟೆಗಳುಂದವಡೆದರಳೆಲೆ . . ಕಂಣಂಗಳ ಗೊಂದಣದ ಭೂಷಣಗಳಲಿ ಗೋವಿಂದ ರಾಮರು ಮೆಱೆದರು (ತಿಶಾಗ. ೦೦-೬-೪). ೨. ಚಿನ್ನದ ಆಭರಣ : ಬಂಗಾರದ ಒಡವೆ : ಹೊಂದೊಡರ ಹಾರಾದಿಗಳಲೊಪ್ಪಂಬಡೆದು ನಸುನಗೆಮೊಗದ ಸೊಂಪಿನಲೀಪಡಕ್ಕನುವಾದನಭಿಮನ್ಯು (ಶಬ್ದಾ.ದ್ರೋ. ೯-೯೯); ಹೊಂದೊಡರು ತೊಡರಲ್ಲವೇ ? (ಕೀರ್ತ. XXIV. ೩೬೮೯).

[ಪೊಂ (< ಪೊನ್) + ತೊಡರ್$_{2}$]

**ಪೊಂದೊಡವು**, ಹೊಂದೊಡವು (ನಾ). ಚಿನ್ನದ ಒಡವೆ ; ಬಂಗಾರದ ಆಭರಣ : ಪೊಂದೊಡವಿನೊಳಾದ ನಿಸ್ವನಮೆ ದುಂದುಭಿಯಾಗೆ (ಕರ್ಣಾಮೃ. ೯-೦೩೮); ಮಾನದಣಿವಂದದಿ ಪೊಂದೊಡವಂ ದೆಚ್ಚಿತ್ತು (ಶಮಗ. ೨-೨೨). **ಹೊಂದೊಡವು :** ಹೊಂದೊಡವುಗಳನಿತ್ತು ಮಚರಿಸಿ ಹರುಷಿಗಳು (ಕೊರ. ೩-೦-೯); ಕಾಲ್ಗೆಜ್ಜೆ ನೇವುರ ಬಳೆಯು ಹೊಂದೊಡವುಗಳ ಕಿಂಕಿಣಿಗೆ . . . ಹಾರಿದವನಾಲಿಸಿ ಮಾರಳಿ ಮಾರಳಿ ದನಿಯನಾಕರ್ಣಿಸಲ್ಕಟಿಸುತ್ತ (ಶ್ರೀರಾಜಾ. ೫೫-೯೩). [ಪೊಂ (<ಪೊನ್) + ತೊಡವು]

**ಪೊಂದೊಡಹ** (ನಾ). ಚಿನ್ನದ ಲೇಪನ ; ಬಂಗಾರದ ಗಿಲೀಟು : ಉಡಿರ್ನುಲ್ಲಿ ಕಟ್ಟಿದ ಸುರಗಿ ಕೈಪೊಡೆ ಪೊಂದೊಡಹದಂಬಿನ ಬತ್ತಳಿಕೆ (ಶಬ್ದಾಗಾಂ. ೨೬-೨೬). [ಪೊಂ (< ಪೊನ್) + ತೊಡಹ$_{1}$ (<ತೊಡೆಪ)]

**ಪೊಂದೊಡಿಗೆ**, ಪೊಂದುಡಿಗೆ, ಹೊಂದುಡಿಗೆ, ಹೊಂದೊಡಿಗೆ (ನಾ). = ಪೊಂದೊಡವು : ಪೊವಟ್ಟ ಪೊಂದೊಡಿಗೆ ಶಕ್ತಿ ವಿರಾಜಿಪ ಶಕ್ತಿ ಶೂಲವೊಪ್ಪಿಡಿದ ಕರಾಸಿ ಗೌರಿ ನಿಜವಲ್ಲಭೆ (ಶಂಕರೀಶ. ೦-೨); ಪರಿಪರಿಯ ಪೊಂ[ಪಾಠಾಂ.ಹೊಂ]ದೊಡಿಗೆಗಳ ಪರಿಪರಿಗಳುಡುಗೆಯ ದೇಶಿ ವಿಂಗ (ಶಬ್ದಾ.ಅ. ೬-೬); ಇಡೆ ತೊಟ್ಟಲಿಲ್ಲಾಡಿಸುವರಿಲ್ಲ ನಿನಗೆ ಪೊಂದೊಡಿಗೆಯಿಲ್ಲ (ಕೃ.ಜಿ. ೨೮-೦೬). **ಪೊಂದುಡಿಗೆ :** ಎಲೆ ಶಬರರಾಜ ನೋಡಿದೆ ಪಲವುಂ ಪೊಂದುಡಿಗೆದೊಟ್ಟು ಬಂದೊರ್ವಂ ವ್ಯಾಕುಲನಾಗಿರ್ಪಂ (ಶಂಕಶಂ. ೦೦೫-೨೨) : ಅಳವಡೆ ತೊಟ್ಟ ಪೊಂದುಡಿ[ಪಾಠಾಂ. ದಾಡು, ದೊಡಿ]ಗೆಯಿಂ (ಅರ್ಗಸೇ.೨-೦೦). **ಹೊಂದುಡಿಗೆ:** ಅರಿಸಿನವನೆ ಮಿಂದು ಹೊಂದು [ಪಾಠಾಂ. ದೊ]ಡಿಗೆಯನೆ ತೊಟ್ಟು ... ಪುರುಷ ಬಾರಾ (ಶುಕಾರೀ. ೮. ೦೭೦-೩೨೦). **ಹೊಂದೊಡಿಗೆ :** ಅರಿಸಿನವನೆ ಮಿಂದು ಹೊಂದೊಡಿಗೆಯನೆ ತೊಟ್ಟು ಪುರುಷನ ಒಲವಿಲ್ಲದ ಲಲನೆಯಂತಾಗಿರ್ದನಯ್ಯಾ (ಬಸವ. ೨೬೯) : ರಾರಾಜಿಸುವ ಹೊಂದೊಡಿಗೆಯ ಕುವರ ನೀನಾರವನು (ಕೋಹಶ. ೦೦-೬೦).

[ಪೊಂ (<ಪೊನ್) + ತೊಡಿಗೆ (<ತೊಡುಗೆ)]

**ಪೊಂಪಲ** 'ಪೊಂಪುಲ' ನೋ.

**ಪೊಂಪಲ್ಲ** 'ಪೊಂಪುಲ' ನೋ.

**ಪೊಂಪು**, ಹೊಂಪು (ನಾ). ೧. ಸೊಗಸು ; ಅಂದ : ಚಂದ : ಪುರಿಯೇಱ ದಶದಿಸೆಯ ಪೊಂಪು ಪೊನ್ನದ ಹೊಂಪು ಮೆಱೆದುದಾ ಚಾರುಚಂದ್ರೋದಯದ ಸಮಯದು ಬಗೆದು ಬಣ್ಣಿಸುವರೊಳರೆ (ಶಂಭಜಾ. ೦೯-೦೦). **ಹೊಂಪು :** ೧. ಸೊಂಪಿನಿಂ ಕಂಪಿಡುವ ಸಂಪಗೆಗಳಂ ಕೊಂಡು ಹೊಂ[ಪಾಠಾಂ.ಹೊ]ಪಸೆವ ಹೊಂಗೇದಗೆಯ ಹೂಗಳಂ ಕೊಂಡು (ಅಸಿ. ೩-೨೯). ೨. ಹೆಚ್ಚಳ ; ಮೇಲ್ಮೆ ; ಅತಿಶಯ : ರಾಣೀವಾಸ ಬಿಡದೆ ವಸಂತವಾಡಿ ವಿಲಾಸದಲಿ ಶ್ರೀಕಾಂತೆಯೋಲಗ ಕೊಡಗಿತ್ತ ವಾಜ್ಞಸಾಳನು ರಚಿಸಿ ಕಿಂತಿನುಕೊಂಡಾಭರಣಗಳ ಕಂತುವಿನ ಮದದಾನೆ ಸಾಲಿಟ್ಟಂತೆ ಪರಿಮಳೆಱಗುವಳಿಗಳ ಹೊದಱ ಹೊಂಪಿನಲಿ (ಕೃಷ್ಣಾ.ಕ. ೦೬-೨೯). ೩. ಹಿರಿಮೆ ; ದೊಡ್ಡಸ್ತಿಕೆ : ನಳನೃಪಮುಗುಳುನಗೆಯಿಂದಲ್ಲಿಗಲ್ಲಿಗೆ ಜಗಳವಾಡುವ ಭಟರ ದಟ್ಟಿಸುತಧಿಕ ಹೊಂಪಿನಲಿ ಒಗುಮಿಗೆಯ ಹರುಷದಲಿ ರಥವಿಳಿದಗಡು ಪುಷ್ಕರನಿರ್ಪ ಸಭೆಗೊಡೆವ್ವೆಗದೊಳ್ಪಿದಿದ (ನಳಚ. ೯೯-೬೩). ೪. [ಸಂಗೀತ] ಸ್ವರವಿಸ್ತಾರ (?) : ಗತಿ ಗಮಕ ಗಹಗಹಿಕೆ ತಿರುಪು ಚಾಳಿಯ ಕೊಂಕು ಜತಿ ಜೋಕೆ ಮಾರ್ಗವಣೆ ವಹಣಿ ತರಹರಿಕೆ ಕಂಪಿತ ಹೊಂಪು ಬಾಗು ದೊಕ್ಕರ ವಿವರ ಕಾಳಾಸ ಕಪ್ಪುವಣೆ ಲೋಲಂಗಿತ ನುತಶುದ್ಧಸಾಳಂಗಸಂಕೀರ್ಣವಂ ಯಥೋಚಿತ ತಾರ ಮಧುರ ಮಂದ್ರಂಗಳಿಂ ಹಾಡಿ (ಹಕಗ. ೬-೩). [<ಪೊಂಗು$_{2}$. / ತೆಲು. ಪೊಂಪು]

**ಪೊಂಪುಲ**, ಪೊಂಪಲ, ಪೊಂಪಲ್ಲ (ನಾ). ಒಬ್ಬಾತನ ಹೆಸರು : ಸ್ವಸ್ತಿ ಗುವಳಾಲಂ ಗೊಂಗುಂ ಪಾಣರಸ ಆಳೆ ವೇಗೂರುಂ ಪೊಂಪುಲಂ ಆಳೆ (ಎಕ. X. ಮುಳಬಾ. ೨೬೫-೦ ; ಸು. ೫೦೦?). **ಪೊಂಪಲ :** ರಾಜಾಲ ಪೊಮ್ಪಲ ಭುಲ್ಲನಕ್ಕಮ್ಮ ಮುದ್ದಯ್ಯನುಂ ಎಱಯಮ್ಮನೆಸುವರಾದಿತ್ಯಂ ತುಱುವನಿಕ್ಕಿಸಿ ಸತ್ತೊಂಗೆ (ಎಕ. X. ಶಂಕಾಶು. ೦೯೩-೦೦ ; ೯೫೦?). **ಪೊಂಪಲ್ಲ :** ಸತ್ಯಶೌಚಶೀಲಾಚಾರಸಮ್ಪನ್ನ ಬೆಂಗದನಾಥ ಶ್ರೀಮ[ತ್] ಪೊಮ್ಪಲ್ಲಮೊಡೆಯಮ್ ಉಗ್ಗ್ರ ಪಾಡಿಯೊಳೊಡ್ಡಿ ಬಾಣರಸರುಳ್ಳಾದಿ ... ಬೀರಲೋಕಮಯ್ದಿದ (ಎಕ. X. ಕೋಲಾರ. ೬೯-೦೦ ; ಸು. ೫೯೦). [ ? ]

**ಪೊಂಪುಳಿ** 'ಪೊಂಪುಳ್' ನೋ.

**ಪೊಂಪುಳಿಗೊಳ್** 'ಪೊಂಪುಳ್‌ಗೊಳ್' ನೋ.

**ಪೊಂಪುಳಿಯೋಗು** 'ಪೊಂಪುಳ್‌ವೋಗು' ನೋ.

**ಪೊಂಪುಳಿವಡೆ** 'ಪೊಂಪುಳ್‌ವಡೆ' ನೋ.

**ಪೊಂಪುಳಿವೆಱು** 'ಪೊಂಪುಳ್‌ವೆಱು' ನೋ.

**ಪೊಂಪುಳಿವೋಗು** 'ಪೊಂಪುಳ್‌ವೋಗು' ನೋ.

**ಪೊಂಪುಳ್**, ಪೊಂಪುಳಿ, ಹೊಂಪುಣ, ಹೊಂಪುಳಿ (ನಾ). ೧. ಹೆಚ್ಚಳ ; ಆಧಿಕ್ಯ ; ಅತಿಶಯ : "ಪೊಂಪುಳ್ – ಪೆರ್ಚುಗೆ" (ಕಬಿತ. ಕಾ. ೦) ; ಸುತಶೋಕದ ಪೊಂಪುಳ್‌ಯೊಳ್ ಮೆಯ್ಮಱಯದೆ ನೀರಿಱ್ಪಂತೆಪೊಲಿಱ್ದ ನಪರಜಳಧಿಗೆ ದಿನಪಂ (ಶಂಕಹ. ೦೨-೨೨೦); ಕಂಪಿನ ಪೆಂಪು ಪೊಂಪುಳ್‌ಯೆನಲ್ ದೊರೆವತ್ತ ನವೇರುಪಾಲೆಯುಂಪಂ ಪರಿಚುಂಬಿಸಲ್ ಬಯಸಿ ಬರ್ಪಳಿಮಾಳೆಯಂತೆ (ಶಾಂತಿಪು. ೫-೩೩) ; ಸುಱಿವ ಮರಾಳಯೂನೆಯುರಪಾಂಗ ಮರೀಚಿಚಯಂ ತ್ರಿವರ್ಣವಂ ಗಱಯಿಸೆ ಪೆರ್ಮೆ ಮಾಂ ನೆರೆಯೆ ಬೀತಪೊಲಿರ್ದ ಲತಾಳಿ ಮತ್ತೆ ಬೆಂಬಱಯೊಳೆ ಪಲ್ಲವಪ್ರಸವಭೃಂಗಕುಳಂಗಳನಾಂತು ಸೊಂಪು ಪೊಂಪುಳ್‌ಯೆನಿಪಂತೆ ತೋಱದುದು (ಜಿನಶ್ರ. ೬-೦೦೬). ೨. ಹರವು ; ಪ್ರಸರ : ದಿವಿಜಸೌಂದರಿಯರ್ ಗೊಂದಣಂ ಮಾಡುವಲ್ಲಿ ಕಡೆಗಣ್ಣೋಳ್ ತುಳುಂಕಿಯುಂ ಕದಪಿನೊಳ್ ಪೊಂಪುಳ್ ಯೋಗಿಯುಂ ಭ್ರೂವಿಭ್ರಮದೊಳ್ ಪೊನಲ್ಕರಿದುಂ . . . ಆಗಳಂಗೋ

ಪಾಂಗದೊಳಿಂತು ನಾಟ್ಯರಸಮ ತೀವಿ ತುಳುಂಕುಗುಟ್ಟಿ (ಅಂಪು. ೬-೧೫೬ ಪ); ರಂಜಿತಗೀತವಾದ್ಯನಿನದಂ ಮಾಧುರ್ಯವೀಣಾಲಸನ್ನಿನದಂ ಪೊಂಪುಟಿಯಾದುದಚ್ಚರಿಯೆನಲ್ ವೇಶ್ಯಾಲಯಾನೀಕದೊಳ್ (ಕೃಕೃಕೆ. ೮-೧೦೯). ೩. ದೊಡ್ಡತನ ; ಘನತೆ ; ಹಿರಿಮೆ : ದಾನದ ಪೊಂಪುಟಿ ಲೋಭದಾಸೆಯೊಳ್ತೊಡರದು (ಕಸುಚ. ೬-೨). ೪. ಹಿಗ್ಗು ; ಸಂತೋಷ : "ಪೊಂಪುಟಿಯೆನಲ್ ಸಂತಸಂ" (ಸಂಕೀಕ. ೨) ; ಧಾರಿಣೀಶ್ವರಂ ತಣಿಯೆ ಮನಂ ವದನಾಬ್ಜಂ ಪೊಂಪುಟಿಯೊಳ್ ಪುದಿದಿರೆ ವರಸುರತಸುಖಮ ನೆಯ್ದಿದನಾಗಳ್ (ಸುಸುಮ. ೯-೬೩). ೫. ಮೈ ನವಿರೇಳುವಿಕೆ ; ಪುಳಕ ; ರೋಮಾಂಚನ : "ಪೊಂಪುಟಿಯೆಂದು ಪುಳಕಂ" (ಕಚಿಪಾ. ೬೯-೯೦೯) ; ಒದವುವ ಗದ್ಗದಂ ನೆಗೆವ ಪೊಂಪುಟಿಯುಣ್ಮುವ ಸೇದೆಯಿಂದೆಯುಂ ಪದವಟಿದೋದು ಪೊಚ್ಚಪೊಸದೇಸೆ ಪುದುಂಗೊಳೆ (ಚಕೆಚ. ೩-೯೯). **ಪೊಂಪುಳಿ :** ೧. "ಪೊಂಪುಳಿಯೆನಲ್ ವರ್ಧನೆಯೊಳ್" (ಚಚಕ. ೬೯) ; ಅಭಿಮಾನದ ಜನ್ಮಭೂಮಿ ಮಾನ್ಯನ ಮೊದಲ್ನೆಲೆಸಾಸಿರ ರೂಪಿನ ಪೊಂಪುಳಿ (ಶಾಇಇ. XI-1, ೬೩-೪೯ ; 1028) ; ಮನಂಗೊಂಡು ರಮಾಧಾಜನಮೆನೆ ಹಿರಿಯಾರತಿ ರಾಜಿಸುವುದು ಸಕಲಸುಖದ ಪೊಂಪುಳಿಯಿಂದಂ (ಮೂರಚಾ. ೧-೫). ೪. ನಳಿನನಾಭನ ಕರುಣದಳತೆಯ ತಿಳಿದು ಪೊಂಪುಳಿಯಾಗಿ ಧೌಮ್ಯನ ಬಳಿಗೆ ಬಂದರು ಪರಮಸುಖದಲಿ ಕುಂತಿಯಾತ್ಮಜರು (ಸಂಕಶ. ೨೬-೧೫) ; ತಾಂ ಪೊಂಪುಳಿಯಿತ್ತು ನೋಳ್ಪ ನರರ್ಗೆ ನಲವಾಂತರೊ ಮಾಲೆಗಾರ್ತಿಯರ್ (ಚಸುಮ. ೨-೩೬). ೫. "ಪೊಂಪುಳಿಯೆನಲ್ ರೋಮಾಂಚಮಕ್ಕು" (ಕಚಕ. ೭೦) ; ಕಾಯಜವೈರಿಯ ದಿವ್ಯ ಮೂರ್ತಿಯಂ ನೆಟ್ಟನೆ ಕಂಡು ಪೊಂಪುಳಿಯನಾಳ್ದು . . . ಸುಭಕ್ತಿಯಿಂದೆಱಗಿದಂ ಹರನಂಘ್ರಿಯೊಳಾ ಹಲಾಯುಧಂ (ನೃಶಿ. ೦೫-೯೩) ; ತವ ಶೀರ್ಷದೊಳ್ನೆಗಳಲೀ ರಾಜ್ಯಾಭಿಷೇಕೋತ್ಸವಂ ದೊರೆಗುಂ ಪೊಂಪುಳಿ ತಣ್ಪು ಮಾಡಿದುದು ತಾಂ ಸರ್ವಪ್ರಜಾಂಗಂಗಳೊಳ್ (ಪರಕ. ೬೩-೦೫೬).

**ಹೊಂಪುಣೆ :** ೧. ಹೊಂಬಟ್ಟೆಗಳ ಹೊಂಪುಣೆಯಿಂದ ಮೆಱೆದಿಹ ಪಂಚಘಂಟೆಗಳಿಂದ್ರನೈರಾವತಕೆ ಸರಿಮಿಗಿಲೆಂದುದಖಿಳಜನ (ಸಂಕಶ. ೨೦-೦೦).

**ಹೊಂಪುಳಿ :** ೧. ಹೊಂಗಿದರು ಹೊಂಪುಳಿಯ ಪುಳಕದ ಮುಂಗುಡಿಯ ರೋಮಾಂಚನದ ರಣರಂಗಧೀರರು ತಱುಬಿ ನಿಂದರು ಮತ್ತೆ ಕಾಳಗವ (ಕುಪ್ಪಾಕೃ. ೦೫-೯೦) ; ಹೊಂಪುಳಿಯ ಘನಸೌಖ್ಯ ಮಿಕ್ಕಳೆಗೇಲ್ಪುಗಳಲಿಲ್ಲೆನುತ ತನ್ನೊಳು ಜೊಂಪಿಸುವ ಮನವೆಂಬ ತುಂಬಿಯ ಭಾವ ಮಿಗೆ ತುಂಬಿ ಸಂಪಿಗೆಯ ಸಾರ್ವಂತೆ ಬಂದಳಲಾಪಿನಲಿ ಮಹದೇವಿ . . . ಅಲ್ಲಮ ಪ್ರಭುರಾಯನಿದ್ದೆಡೆಗೆ (ಪ್ರಲಿಂ. ೦೬-೩). ೪. ಇಂದ್ರನು ಪೃಥೆಯ ಮಾತಿಗೆ ನೆನೆದು ಹೊಂಪುಳಿಯಾಗಿ . . . ವನಿತೆಗೆಂದನು (ಸುಶಕ. ೦೫-೦೯) ; ಶರಣಾಗತರ ಸೇವೆಯೊಳು ಹೊಂಪುಳಿಯಾಗಿ ಬಾಳುವರೇಸು ಧನ್ಯರೊ (ಹಂಪಾ. ೦೬). ೫. ಒಡನೊಡನೆ ರೋಮಾಂಚಿ ಮೂಡುತ ತನುಲತೆ ನಡುಗಿ ಹೊಂಪುಳಿಯಾಗಿ . . . ತಲೆವಾಗಿ ಮೆಲ್ಲಡಿಯಿಡುತ ನಸುಲಜ್ಜೆಯಲಿ ನಡೆತಂದಳು ಧರಾತನುಜೆ (ಅಶಂಕಾ. ೧-೨೩-೪೫).

[ದೇ. ॥ ತಮಿ. ಪೊಮ್ಮಲ್ ; ತೆಲು. ಪೊಂಪಿರಿ]

**ಪೊಂಪುಟಿಗೊಳ್, ಪೊಂಪುಳಿಗೊಳ್** (ಕ್ರಿ). ಸಂತಸಪಡು ; ಹಿಗ್ಗು : ಸುಟಿಗುರುಳೊಳ್ ತೊಡಂಕಿ ವದನಾಂಬುಜಸೌರಭದೊಳ್ ಮುಱುಂಗಿ ಪೊಂಪುಟಿಗೊಳುತಿರ್ಪ ಸೋರ್ಮುಡಿಯೊಳೊತ್ತಿದ ಕತ್ತುರಿಯಂ ಕಲಂಕಿ . . . ತೀಡಿದುದು ವಲ್ಲಭನಂತಿರೆ ಮಂದಮಾರುತಂ (ಸೂಕ್ತಿಸು. ೯-೦೯೦). **ಪೊಂಪುಳಿಗೊಳ್ :** ಮುಂ ಪೇಳ್ದ ಬಾಹ್ಯರತಮಂ ಪಿರಿದೆಸಗಿ ರಮಿಸೆ ಪೊಂಪುಳಿಗೊಳುತ್ತವಳ್ ಪುರುಷನೊಡನೆ ತಂಪಿಂ ದ್ರವಿಸಿ (ಜಪವ. ೮-೩೬).

[ಪೊಂಪುಟಿ + ಕೊಳ್$_1$]

**ಪೊಂಪುಟಿಯೇಱು** (ಕ್ರಿ). ಸಂತೋಷವು ಹೆಚ್ಚಾಗು ; ಹಿರಿಹಿಗ್ಗು : ರಾಜನ್ಯವನಂದನಂ ಧರೆ ಸೊಂಪೇಱೆ . . . ಮುಂ ಪೊರ್ದಿದರ್ ಪಿರಿದುಂ ಪೊಂಪುಟಿಯೇಱೆ ಪಟ್ಟವಣೆಯಂ ತಾನೇಱಿದಂ (ಚಕೆಚ. ೨-೬೫).

[ಪೊಂಪುಟಿ + ಏಱು$_1$ (< ಏಱ್$_1$)]

**ಪೊಂಪುಟಿಯೋಗು** 'ಪೊಂಪುಟಿವೋಗು' ನೋ.

**ಪೊಂಪುಟಿವಡೆ, ಪೊಂಪುಳಿವಡೆ** (ಕ್ರಿ). ೧. ಸಂತೋಷಪಡು ; ಹಿಗ್ಗು : ಕಂಕೆಲ್ಲಿಯ ಸೋಂಕಿನೊಳ್ ಚಂಪಕದುಣ್ಪಿನೊಳಂ ಪೊಂಪುಟಿವಡೆದು ವನವಲ್ಲಭೆಯಧರಪಲ್ಲವಕ್ಕೆ ಕುಸುಮವಿಸರದಿಂ ಪಾಟಳರುಚಿಯಂ ಪಾಟಿಸಲ್ ನೆಱೆದ ಪಾಟಲಿಯಂ ಸಹಕಾರನೆಂಬ ನಾಗರಕಂ ನೋಡಿ (ಅಪಂಕೃ. ೬-೧೦ ಪ). **ಪೊಂಪುಳಿವಡೆ :** ೨. ಅಧಿಕ್ಯವನ್ನು ಪಡೆ ; ಹೆಚ್ಚಾಗು : ಕಂಪಿಂ ಸೊಂಪಿಂ ಪೆಂಪಿಂ ಪೊಂಪುಳಿವಡೆದಿರ್ದ್ದಮೆಲ್ಲಿನೊದವಿದ ಗುಣದಿಂ ಗುಂಪಿಲ್ಲದೆ ಪಡೆದಳ್ ಪತಿಗಿಂಪಂ ಮಾಳವ್ವೆ ಮಾಲತೀಮಾಲೆಯವೊಲ್ (ಎಕ. ೯, ಅರಸೀ. ೦೨೬-೩೦ ; 1186 ; ಶಾಶಕಮಂ. ೦೦೦೫ ನೋ) ; ತೊಳಗಿ ಬೆಳಗುವ ವಿಮಳ ವಸತಿಯ ಬಳಿಗೆ ಭಕ್ತಿಯ ರಸಮ ಪೊಂಪುಳಿವಡೆಯೆ ನಡೆತಂದ (ಸುಕ್ಕಾ. ೯-೩೬). ೩. ರೋಮಾಂಚನವನ್ನು ಹೊಂದು ; ಪುಳಕಗೊಳ್ಳು : ಒಂದೆಡೆಯೊಳ್ ನಿಲ್ಲದೆ ಗೋವಿಂದಂ ಬಳಸಿರ್ಪ ಗೋಪಿಯರ ಕೈಮೈಸೋಂಕಿಂದಂ ಪೊಂಪುಳಿವಡೆದಾನಂದದಿನಕ್ಷಿಗಳನಲ್ಲಿ ತೇಲಿಸುತಿರ್ದಂ (ಎಸ್ಮಕೃ. ೫-೩-೦೬೬). [ ಪೊಂಪುಟಿ + ಪಡೆ$_1$ ]

**ಪೊಂಪುಟಿವೇಱು, ಪೊಂಪುಳಿವೇಱು** (ಕ್ರಿ). ೧. ಸುಖವನ್ನು ಪಡೆ : ದೇವಕಾಂತೆಯರ್ . . . ತನ್ನಿಂಪರುಪಭೋಗದ ಪೊಂಪುಟಿವೆತ್ತ ರಂದು . . . ತಪಃಪ್ರಭಾವದಿಂ (ಶೀಬಿಕೃ. ೧-೦೨೬). ೨. ಅತಿಶಯವಾಗು : ರಾಗದಿನಾಡುವೀ ಹರನ ರಾಗಮ ಪೊಂಪುಟಿವೆತ್ತದೊಂದು ರೂಪಾಗಿಯೆ ನಿಂದುದೆಂಬರುಣವಸ್ತ್ರದಿನುಜ್ವಲದೇಹವಾದು ಚೆಲ್ವಾಗಿರೆ (ಜಗಾ. ೦೬-೦೦೦). **ಪೊಂಪುಳಿವೇಱು :** ೩. ಹಿಗ್ಗು ; ಸಂತೋಷಿಸು : ಆ ಪ್ರೋಜ್ವಳರಂಗಾಧೀಶವೃತ್ತಾಂತಮನತಿಮುದದಿಂ ಪೇಳೆಯಾ ಗೌತಮಮ ಪೊಂಪುಳಿವೆತ್ತು (ಶ್ರೀಕು. ೫-೪). ೪. ರೋಮಾಂಚನಗೊಳ್ಳು : ಪೊಂಪುಳಿವೆತ್ತ ಮಯ್ಯ ಪೊರ್ದುಗೆಯೞದಬ್ಬ ಜಾಣೞದು ಮುದ್ದಿಸಿ (ಯಶಃಚ. ೩-೦೯೦). [ ಪೊಂಪುಟಿ + ವೇಱು$_1$ ]

**ಪೊಂಪುಟಿವೋಗು, ಪೊಂಪುಳಿಯೋಗು, ಪೊಂಪುಳಿವೋಗು, ಪೊಂಪುಟಿಯೋಗು, ಹೊಂಪುಳಿಯೋಗು, ಹೊಂಪುಳಿವೋಗು, ಹೊಂಪುಳಿಹೋಗು** (ಕ್ರಿ). ೧. ಹೆಚ್ಚಾಗು ; ಅಧಿಕವಾಗು ; ವೃದ್ಧಿಹೊಂದು : ಕೇಸರಿಣೀಸ್ತನ್ಯಮನನ್ಯವನ್ಯಗಜಪೋತಾನೀಕಮುಂಡಾಡೆ ಶಾಂತರಸಂ ಪೊಂಪುಟಿವೋದುದಾ ಮುನಿಪನಿಂ ತತ್ಕಾಂತಕಾಂತಾರದೊಳ್ (ಆಂಕೃ. ೯-೯೭) ; ಪೊಂಪುಟಿವೋಯ್ತು ದೀಪ್ರತಪವೆಂಬಿನಮರ್ಕಕರಂಗಳತ್ತ ಮಿತ್ತಂ ಪುದಿದುಷ್ಣರಶ್ಮಿ ಪುರುಷಾಕೃತಿಯೆಂತಿರೆ (ಶಾಂತಿಪು. ೯-೧೦೫) ; ಕಂಪಿನ ಪೊಂಪುಟಿವೋಪ ನಿಳಿಂಪನ ಮೆಯ್ಯೆಳಗೇಂ ಕರಂ ಮನಂಗೊಳಿಸುದುದೋ (ಶರೇಪು. ೦೨-೯೯). ೨. ಸೊಗಸಾಗು ; ಚೆನ್ನಾಗು : ಪುಷ್ಪವಾಸನೆಯ ಮೆಲ್ಪಿನ ತಣ್ಪಿನ ಕಂಪಿನಲ್ ಪೊಂಪುಟಿವೋಗುತ್ತಿರ್ದ ತಂಡುಲಂಗಳಂ ಕಳದುಕೊಂಡು ಬಾಗಿದೋಗರಮನಾರೋಗಿಸುವಂ (ಸುಸುಮ. ೧೦-೩೫ ಪ) ; ಗಾಂಪಿನೊಳನ್ಯಪುಷ್ಪದೊಳು ಮೇಳಿಸಿ ನೀಳ್ದುದಿದೇಕೆ ಕಂಪಿನೊಳ್ ಪೊಂಪುಟಿವೋಗುತಿರ್ದಮಳವಕ್ತ್ರಸರೋಜಮ ಸಾಲ್ದುಮೆಂದು ತಣ್ಣಂಪಸುಣಲ್ಕೆ ಬಂದೆಱಗಿ (ಕರ್ಣಾಕು. ೬-೨೦೦). ೩. ವ್ಯಾಪಿಸು ; ಹರಡು ; ಹಬ್ಬು : ಈ ಬಂದಂ ಧರಾಧೀಶನೆಂಬ ರವಂ ಪೊಂಪುಟಿವೋಗೆ ವಾರಿಧಿತಟಂ ಚೆಲ್ವಾದುದಾ ಸೈನ್ಯದಿಂ (ಅಂಕೃ. ೦೨-೦೨೬) ; ಪೊಂಪುಟಿವೋಗೆ ರಾಗವರದುಂ ಕೆಲದೊಳ್ ಮದನಾನುರಾಗಮುಂ ಸಿಂಪಿಸುವಂತೆ ಬಾಜಿಸುವ ಬಂಚದ ನುಣ್ದರದೊಳ್ ಪಳಂಚಿ ಗೀತಂ ಪಂಪುಷ್ಪಮಾಗೆ (ಮಲ್ಲಿಪು. ೦೧-೦೦೨). ೪. ಹಿಗ್ಗು ; ಸಂತೋಷಪಡು :

ವಿದ್ಯಾಧರೀರಮ್ಯ ನರ್ತನರಂಗೋತ್ಥಿತವಾರಿಹಾರ್ಯರಶನಾಮಂಜೀರಿಕೋದ್ಧಾಮನಿಸ್ವನದೊಳ್ ಪೊಂಪುಟಿವೋಗುತಿರ್ಪುವೆರಡುಂ ವಿದ್ಯಾಧರಶ್ರೇಣಿಗಳ್ (ಆದಿಪು. ೧-೬೦) ; ತವೆ ಮುಂಚಸ್ಥಿತ ಭೂಮಿಭವನಂ ನಡೆನೋಡಿ ಕಾಂತೆ ಪೊಂಪುಳಿವೋದಳ್ (ಉದ್ಭಟ. ೬-೭೯) ; ತನಗೆ ದೊರೆವಡೆದೋದು ಜವ್ವನದ ಪೊಸ ಕುದುರೆಯಂ ನಿಟ್ಟಿಸಿಯಟ್ಟಿಜೀಂ ಪೊಂಪುಟಿವೋಗಿ (ರಾಜಶೇ. ೬೩-೨). **ಪೊಂಪುಳಿಯೋಗು :** ೧. ಮಯ್ಯಿಕ್ಕಿ ಪೊಂಪುಳಿಯೋದನಾ ಮುನಿಪನಂದು (ರಶಿಶಂ. ೪೬-೧೩) ; ಸಂಪಗೆ ನಾಗಸಂಪಗೆ . . . ಪೂಂಪುಳಿಯೋಗುವೋವರ ಮನ ತನುವಿಗೆ ತಂಪ ಪುಟ್ಟಿಸುವವೆನೆಂಬೆ (ಅನಂತ. ೦-೦೧೨). ೨. ರೋಮಾಂಚನ ಹೊಂದು ; ಪುಳಕಗೊಳ್ಳು : ನಳಿನಗಂಧದ ಗಾತ್ರತರಸುಖದೊಳಗೆ ಪೊಂಪುಳಿಯೋಗಿ [ಪಾಠಾಂ. ಹೊಂಪುಳಿವೋಗಿ] ಭೂಪತಿತಿಲಕನಿದ್ದನು ಗಂಧಮಾದನಗಿರಿಯ ತಪ್ಪಲಲಿ (ಕುಮಾ್ರ. ೧೦-೩) ; ಮಗುಳೆ ಸೊಂಪಿಡಿದು ಕುಣಿಕುಣಿವುತ್ತೆ ಪೊಂಪುಳಿಯೋಗುತಡಿಗಡಿಗೆ (ಕಾವೇಪು. ೩೩-೦೯). **ಪೊಂಪುಳಿವೋಗು :** ೧. ರಸವಿಸರಂ ಪಸರಿಸೆ ಸೊಂಪು ಪೊಂಪುಳಿವೋಗೆ ರೀತಿ ಕೌತುಕಮನೀಯೆ . . . ಪ್ರಮುಖಪ್ರಬಂಧಂಗಳಂ ಪೇಳ್ದ (ರಾಜಶೇ. ೫-೧೯ ವ). ೨. ಹರಿಯ ದಮಳಾನಂದರಸದಲಿ ಹೊರೆದು ಪೊಂಪುಳಿವೋಗಿ[ಪಾಠಾಂ. ಹೊಂಪುಳಿಯೋಗಿ] ಲಕ್ಷ್ಮೀಧರನ ನೆನೆದನು (ಕುಮಾ್ರ. ೪-೦೨೨) ; ಪೊಡವಿಯೊಳ್ ಮಯ್ಯಿಕ್ಕಿದಗರಾಜ ಮೇನೆಯರನೊಡನೆತ್ತಿ ತಾನೆಱಗಲುಮೆಯನವರೆತ್ತಿ ಬಿಗಿಯಪ್ಪಿ ಪೊಂಪುಳಿವೋದರು (ಶಂಕ್ರ. ೩೬-೦೭); ನೀ ಕೇಳಿದ ದನಿಯಿದಕಾಲದ ವೋಡದ ವೊಳಗೆಲೆ ಮುಗುದೆ ಗಂಡನ ಬಿಲ್ಲಿನ ಸಿಂಜಿನಿದನಿಯೆಯವದೇತಕೆ ಪೊಂಪುಳಿವೋದೆ (ಗಣಾವಾ. ೦೩-೯). ೨. ಲತಾಂಗಿಯ ಮಲ್ಲುವೆತ್ತ ಸಿರಿಮಯ್ಯ ಸೋಂಕಿಗೆ ಮಯ್ಯರೆದು ಪೊಂಪುಳಿವೋದ ಮಾರಾಯನ ಕಯ್ದಾವರೆಯಂ ಪಿಡಿದು (ಮುಂಶ. ೪-೫೨ ವ); ಮಣಿದೆನದ್ವೈತದ ಪೀಠಕೆ ಕೊಂಡಾಡಿ ಕುಣಿದು ನಾ ಪೊಂಪುೞವೋದೆ (ಇಂಪಾಶ. ೦೭-೨೫). **ಪೊಂಪುಟಿಯೋಗು :** ೧. ವಿಮಲವಲ್ಲರಿಗಳಿಂ ಪೊಂಗಿ ಪೊಂಪುಟಿಯೋಗಿ ಪೊದಟ್ಟು ನುಣ್ಣರವೆತ್ತಿರ್ಪೋಕರಿಸುವಳಿಗಳಿಂ (ಉದ್ಭಟ. ೩-೯೯). ೨. ಮಹಾದೇವನ ಮೂರ್ತಿಯಂ ಕಂಡು . . . ಪೊಂಗಿ ಪೊರೆಯೇಱಿ ಪೊಂಪುಟಿಯೋಗಿ ಮಹಾನಂದಂಬಡೆದು (ಉದ್ಭಟ. ೦೨-೦೩೬ ವ). **ಹೊಂಪುಳಿಯೋಗು:** ೩. ಬಸವನ ಪುಣ್ಯಕೀರ್ತಿಲತೆ ಬೀರ್ವರಿಯಿತ್ತುರಗೇಂದ್ರಲೋಕದೊಳ್ . . . ಕುಸುಮಿತವಾಗಿ ಸೌರಭದಿ ಹೊಂಪುಳಿಯೋಯ್ತುಪುರೇಂದ್ರಲೋಕದೊಳ್ (ಬಸವ. ೦೨-೦ ಸೂಕಪಾಪದ್ಯ). ೧. ರೋಮಾಂಚನದರಾನಂದಾಶ್ರುಜಲದಲಿ ನನೆದು ಹೊಂಪುಳಿಯೋಗಿ ಕಣ್ಣವೆ ಮುಚ್ಚಿ (ಕುಮಾರಸ್ವಾ. ೦೬-೬೦); ಹೊರೆಯೇಱಿ ಹೊಂಪುಳಿಯೋದಕುಮ ಮಹಿಮೆಗೆ ಮಧುದ್ವಿಷನ (ತೊರರಾ. ೪ ೬-೩೨). ೨. ತೆಗೆದು ಬಿಗಿಯಪ್ಪಿದನು ಯಮಜಾದಿಗಳ ಮನ್ನಿಸಿ ವೀಳೆಯವನಿತ್ತೊಗುಮಿಗೆಯ ಹರುಷದಲಿ ಹೊಂಪುಳಿಯೋದನಾ ಭೀಷ್ಮ (ಕುಮಾ್ರಬೀ. ೭-೦೭); ಉಬ್ಬರದ ಹರುಷದಲಬಲೆ ಹೊಂಪುಳಿಯೋದಳಡಿಗಡಿಗೆ (ತೊರರಾ. ೫-೩-೯೩); ವರಮುನೀಶ್ವರರ ಮನದೊಳಗಜಾವರನ ಮೂರ್ತಿಯ ಕಂಡು ಹರ್ಷೋತ್ಕರದ ಸುಖಮಯನಾಗಿ ಹೊಂಪುಳಿಯೋವನಡಿಗಡಿಗೆ (ಅಂಬಿಕಾ. ೨ ಸೂಕಪಾ). **ಹೊಂಪುಳಿವೋಗು :** ೧. ನಗೆದೊಗವರಿ ಹೊಂಪುಳಿವೋ[ಪಾಠಾಂ. ಯೋ]ಗಿ ಕೌರವರರಸ ನುಡಿದನು (ಕುಮಾರಸ್ವಾ. ೦-೩೯); ಜೋಗದ ಜಲಪಾತದ ಧುಮುಕುವ ಮನ. ಮಲೆನಾಡಿಗೆ ಹೊಂಪುಳಿವೋಗುವ ಮನ (ಕೊಳಲು. ೪೩-೦೬). ೨. ವನಿತೆ ಗುಣಗಳೊಳೊಂದನೊಂದನು ಮನದೊಳಗೆ ಸವಿಮಾಡಿ ತರುಣಿಯ ನೆನನು ಹೊಂಪುಳಿವೋ [ಪಾಠಾಂ. ಯಾ]ಗಿ ವಿರಹದ ಮದನಗೀಡಾಗಿ ... ಜನಪ ನಳನಿರೆ (ನಳಚ. ೨-೬). **ಹೊಂಪುಳಿಹೋಗು :** ೧. ಮನದ ಭಾವದ ರಾಗರಸದುಬ್ಬಿನಲಿ ಹೊಂಪುಳಿಹೋದನವರನು ಕಂಡು ಪಾಂಚಾಲ (ಕುಮಾ್ರಭ. ೦೬-೬೨). [ಪೊಂಪುಟ್+ಪೋಗು$_1$(<ಪೋ$_1$)]

**ಪೊಂಪುಟಿಸು** (ಕ್ರಿ). ೧. ಅಧಿಕವಾಗು; ಹೆಚ್ಚಾಗು; ಉಕ್ಕು : ಮನೋಹರಿಯರ್ ಬಂದೊಡಲಪು ಪೊಂಪುಟಿಸೆ (ಅನಂತ. ೩-೭೭); ತುಂದಿಗಳ್ಗದ ನಱುಗಂಪು ಪೊಂಪುಟಿಸೆ ಪೆಂಪೆಸೆದಿರ್ದುದು ಚಂಪಕವ್ರಜಂ (ಪಶು. ೦-೩೨). ೨. ವ್ಯಾಪಿಸು; ಹರಡು; ಹಬ್ಬು : ಪೊಱಲನಿತುಂ ಪಳಚ್ಚನಮೃತಪ್ಲವದಿಂ ತೊಳೆದಂತೆ ಸೊಂಪು ಪೊಂಪುಟಿಸೆ (ಅನಂತ. ೭-೯೦). [ಪೊಂಪುಟ್ + –ಇಸು$_1$]

**ಪೊಂಬಕ್ಕರಗೆ** 'ಪೊಂಬಕ್ಕರಿಕೆ' ನೋ.

**ಪೊಂಬಕ್ಕರಿಕೆ, ಪೊಂಬಕ್ಕರಗೆ, ಪೊಂಬಕ್ಕರಿಗೆ** (ನಾ). ಆನೆ, ಕುದುರೆಗಳಿಗೆ ಹಾಕುವ ಚಿನ್ನದ ರಕ್ಷಾಕವಚ, –ಪ್ರಯೋಗ : ಎರಡುಂ ಬಳಿಗಳ ಪೊಂಬಕ್ಕರಿಕೆಗಳೊಳ್ಳುಱುಗಿ ನಟ್ಟು ಗಜಂಗಳ್ ಗಜಿಯಂತಿರೆ . . . ತುರಂಗತತಿ ಗರುಡಬಳಮನೇನಿಳಿಸಿದುದೋ (ರಾಜಶೇ. ೬-೩೩). **ಪೊಂಬಕ್ಕರಗೆ:** ಪರಿದುವು . . . ಘೋಟಕಾಯ್ಯಲರ್ ಪರಿಯಿಸೆ ತರದಿಂ ಪೊಂಬಕ್ಕರಗೆಯ ತುರಗಂಗಳಹವಾಂಭೋನಿಧಿಯೊಳ್ (ಶಂಕ್ರಪು. ೦೦-೬೮). **ಪೊಂಬಕ್ಕರಿಗೆ :** ಪೊಸೆವ ಪೊಂಬಕ್ಕರಿಗೆಯ ತೇಜಿಗಳು ರಣಜಲನಿಧಿಯಲ್ಲಿ ಪರಿವವು (ಶಂಕ್ರಸಾಂ. ೨೧-೦೯೮). [ಪೊಂ (<ಪೊನ್) + ಪಕ್ಕರಿಕೆ]

**ಪೊಂಬಕ್ಕರಿಗೆ** 'ಪೊಂಬಕ್ಕರಿಕೆ' ನೋ.

**ಪೊಂಬಕ್ಕರೆ** (ನಾ). =ಪೊಂಬಕ್ಕರಿಕೆ : ಹಾಯ್ಕಿದ ಪೊಂಬಕ್ಕರೆ ರುಲ್ಲಿಗಳೆಸೆವ ಮಿಕ್ಕ ಮನದ ಕುದುರೆಯನೇಱಿ ಬಂದನಂದಕ್ಕಸಾಲೆಯ ಚಿಕ್ಕಬೇಗ (ಕುರಾಶಾಂ. ೦೦-೫೩). [ಪೊಂ (<ಪೊನ್) + ಪಕ್ಕರೆ$_1$]

**ಪೊಂಬಕ್ಕಿ** (ನಾ). ಚಿನ್ನದ ಬಣ್ಣದ ರೆಕ್ಕೆಗಳುಳ್ಳ ಹಕ್ಕಿ ; ಗರುಡ : ಇಕ್ಕಿದ ಪಕ್ಕರಕ್ಕೆ . . . ಮೊಗರಂಬಮೊಂದು ಪೊಂಬಕ್ಕಿಯ ತೋಟ್ಯ ಮಯ್ಗರೆಯೆ ಬಾಸಿಗದಿಂ ಮೆಱೆದತ್ತು ಸಪ್ತಿಗಳ್ (ಕಶಿಂ. ೨-೯೬). [ ಪೊಂ (<ಪೊನ್) + ಪಕ್ಕಿ ]

**ಪೊಂಬಗರಿ** 'ಪೊಂಬೊಗರಿ' ನೋ.

**ಪೊಂಬಟ್ಟ** (ನಾ). ಚಿನ್ನದ ಒಡವೆ ; ಸ್ವರ್ಣಾಭರಣ : ಕೊರಳ ಪೊಂಬಟ್ಟಗಳ ಬೆಳ್ಪಿಯ ಮುರುಹುಗಡಗದ . . . ಪರಮಗೋವರ ಕಂಡು ನಸುನಗುತಿರ್ದನಕ್ರೂರ (ಅಕ್ರೂ. ೨-೯೯) ; ಪೊಂಬಟ್ಟಮಂ ಪಣ್ಣ ಬಣ್ಣಮಂ ಕೇಳ್ದಯ್ ? (ರಾಜಶೇ. ೦೨-೨೩). [ ಪೊಂ(< ಪೊನ್) + ಪಟ್ಟ$_2$ ]

**ಪೊಂಬಟ್ಟಲ್** (ನಾ). ಚಿನ್ನದಿಂದ ನಿರ್ಮಿತವಾದ ಬಟ್ಟಲು,– ಸ್ನಾನದ ಮನೆ : ಲೇಸೆನುತ್ತೆ ತಂದು ಮಗ ಸೊಸೆಗೆಣ್ಣೆಯ ಪೂಸಿ ಪೊಂಬಟ್ಟಲೊಳ್ ನಿಲಿಸಿ ಮಾಸಿದ ಬಳಿಕ ಸಿಂಗರಗೆಯ್ದು ರನ್ನದ ಬಾಸಿಗವನು ಕಟ್ಟಿದರು (ಮೋಹಕ. ೦೩-೬೮). [ಪೊಂ(<ಪೊನ್)+ಬಟ್ಟಲ್]

**ಪೊಂಬಟ್ಟು** (ನಾ). ಒಂದು ಬಗೆಯ ಹುಳು,–ಕ್ರಿಮಿ : ನಮ್ಮಲ್ಲೂ, ಒಮ್ಮೊಮ್ಮೆ ಬತ್ತದ ಪೈರಿನ ಮೇಲೆ ತಲೆದೋರುವ "ಪೊಂಬಟ್ಟು" ಹುಳುವು ಬಯಲಿಗೆ ಬಯಲನ್ನೇ ಕೆಡಿಸಿಬಿಡುವುದು (ಶಾಂಶ್ರ. III. ೦೩೬೬). [ ? ]

**ಪೊಂಬಟ್ಟ, ಹೊಂಬಟ್ಟ** (ನಾ). ಚಿನ್ನದ ಹಣೆಪಟ್ಟಿ,–ಫಲಕ : ಪೆತ್ತನಗೆ ನೀಂ ಪೊಂಬಟ್ಟಮಂ ಕಟ್ಟಿದೈ (ಧರ್ಮಾಮೃ. ೨-೦೦೦) ; ಮೇದಿನಿಯೊಳಾರಾದೊಡಂ ಮಿಡುಕುಳ್ಳೊಡುನ್ನತವರಾಶ್ರಮಿ ತಡೆಯಲಿ ವಾಜಿಯನೆಂದು ತನ್ನ ಬಿರುದಂ ಬರೆದು ಪೊಂಬಟ್ಟಮಂ ಕಟ್ಟಿ ಬಿಡುವುದಾ ಹಯದ ಪಣೆಗೆ (ಜೈಮಿಭಾ. ೨-೨೬). **ಹೊಂಬಟ್ಟ :** ಇದು ಇಂತಹ ರಾಯನ ಕುದುರೆ . . . ಎಂದು ಬರೆದಿರುವ ಹೊಂಬಟ್ಟವನ್ನು ಕಟ್ಟಿ ಬಿಡಬೇಕು (ಜಮಿಕಿ. ೪). [ ಪೊಂ ( < ಪೊನ್ ) + ಪಟ್ಟ$_2$ ]

**ಪೊಂಬಟ್ಟಲ್, ಪೊಂಬಟ್ಟಲುಂ, ಹೊಂಬಟ್ಟಲು** (ನಾ). ೧. ಚಿನ್ನದಿಂದ ಮಾಡಿದ ಬಟ್ಟಲು : ಪೊಂಬಟ್ಟಲೊಳ್ಪಿವಿದಾಸವದ ರುಚಿ ಗಿರ್ವರುಂ ಬಿಡದೆ ಮೊಗಮಿಟ್ಟರಲ್ಕೆ (ಜೈಮಿಭಾ. ೦೫-೯೬) ; ಕಪಿಲಾಕ್ಷೀರಮಂ

ಕಮ್ಮಗಿನಿದಪ್ಪಂತೆ ಕಾಸಿ ಬಚ್ಚದಿನಳೆದು ಪೊಯ್ದು ಪೊಂಬಟ್ಟಲ್ಗಿಂವಿ (ಕ್ಷಕಾ. ೯-೬೦ ಪ). **ಪೊಂಬಟ್ಟಲು** : ೧. ಪೊಂಬಟ್ಟಲೊಳಗಿನ ಹಾಲು ಉಚ್ಛಿಷ್ಟ ಹಾಕಿಸೊ (ಪೊಂಶ. ೬೩-೨). ೨. (?) : ತೊಟ್ಟ ವಜ್ರಾಂಗಿಯು ಜೋಡುಸವಗ ಪೊಂಬಟ್ಟಲ[ಪಾ. ಕಾಂ. ಲು] ಚೀನಿಯ ಶೌಳ ಕಟ್ಟಿದ ಬಿರಿದು ಮೆಚ್ಚೆಯ ರಾವುತರು ಬಿಟ್ಟಲ್ಚಿದರು ಕುದುರೆಗಳ (ಕುಶಾಕಾಂ. ೦೨-೮೬). **ಹೊಂಬಟ್ಟಲು** : ೧. ಬಳಿಕಿನಿತು ಪಾಲ್ಗರೆದು ಹೊಂಬಟ್ಟಲೊಳಿರಿಸಿ ತಾಂ ನಿಲಿಸಿ ಬಂದಾ ಮಲಹರನ ಬಳಗದೆ ಯುವತಿ ಹೋದಹಳು ನೋಡೆನಲು (ಶಿತ. ೩೦-೬೨) ; ಹೊಳೆವ ಹೊಂಬಟ್ಟಲಲಿ ಸೂಸಿದ ಸಕ್ಕರೆಜಲವನು ಜನಕನದಿರಿನಲಿ (ಕುಜ್ಞಾ. ೬-೦೬) ; ಹೊಂಬಟ್ಟಲಲಿ ಪೀಳೆಯವ ನಂದನಂಗಿತ್ತು . . . ಬೆಸಸಿದನು ಬಳಿಯಲಿ ಬವರಕನಿಲಜನ (ಕೊಶಾ. ೫-೫.೦೦). [ಪೊ (< ಪೊನ್) + ಬಟ್ಟಲ್]

**ಪೊಂಬಟ್ಟಲು** 'ಪೊಂಬಟ್ಟಲ್' ನೋ.

**ಪೊಂಬಟ್ಟು** (ನಾ). ಚಿನ್ನದ ದುಂಡನೆಯ ವಸ್ತು : ಮುಗಿಲೊಡ್ಡಿಗೆಲೆವಂದ ಕಾಯಭರದಿಂ ಪೊಂಬಟ್ಟನೊಟ್ಟೈಪ ದಿಟ್ಟಿಗಳಿಂ . . . ಪೆಚ್ಚೆಯ ಸೌಭಾಗ್ಯಕ್ಕೆ ತೋಡಾದ ಕೋಡುಗಳಿಂದೇಂ ಜನಕಂಗೆ ಹರ್ಷಜನಕಂ ತಾನಾಯ್ತೊ ವನ್ಯದ್ವಿಪಂ (ಶಂಕಾಪು. ೯-೦೦೯) ; ಭೂತಳಕ್ಕೆ ಪರಿದೇಪಂಗೊಂಡು ಬೀಳ್ವಂತೆ ಭಾಸ್ಕರನಂತಿರ್ದುದು ಸೀಹಹೂಡನ ಶಿರಂ ಪೊಂಬಟ್ಟನಾಳ್ದಟ್ಟನೊಳ್ [ಪಾ. ಕಾಂ. ಲ್ಪಟ್ಟೆಯೊಳ್] (ಅಪೂಕೃ. ೦೦-೬೩).
[ ಪೊಂ (< ಪೊನ್) + ಬಟ್ಟು ]

**ಪೊಂಬಟ್ಟೆ, ಹೊಂಬಟ್ಟೆ** (ನಾ). ಜರತಾರಿಯ ಪೀತಾಂಬರ : ವಕ್ಷಶಾಳಿ ಲಿಣಿಶಾಳೀನಮುದೊಪ್ಪಿರ್ದದೇಂ ಗೆಲೆವಂದತ್ತೊ ಸುವರ್ಣವರ್ಣದಿನಿಸಾ ಶ್ರೀಯುಟ್ಟ ಪೊಂಬಟ್ಟೆನೋಲ್ (ಪಗಪ. ೨-೩) ; ಜಾಣವರೆ ಪೊಂಬಟ್ಟೆಯುಟ್ಟು ನೀರಾಬ್ಬಮಂ ಪಾಣಿಯೊಳ್ ಪಿಡಿದು . . . ಒಪ್ಪಿದಳ್ (ಶಬ್ದ್ಗಾ. ೯-೯೬) ; ಹುಚುಗೆವಗ್ಣಾ ನೀರಿಂಗೆ ಹಚ್ಚಿಗೋಲ ಹಾಯ್ಕುಸಬೇಡೆಂದು ಪೊಂಬಟ್ಟೆಸೆಜಗಿನಿಂ ತೊಡೆದ ಲೋಚನವ (ಕೋಚಕ. ೯-೬೬). **ಹೊಂಬಟ್ಟೆ** : ತಂದು ಹೊಂಬಟ್ಟೆಗಳ ಹೊಂವುನೆಯಿಂದ ಮೆಚ್ಚಿಡಿಹ ಪಂಚಘಂಟೆಗಳಿಂದ್ರ ಸ್ವೈರಾವತಕೆ ಸರಿವಿಗಿಲೆಂದುದುಖಿಳಜನ (ಸಂಕಶ. ೨೦-೦೦); ಪಡಗ್ಗೆಯೊಳಾಂತ ಹೊಂಬಟ್ಟೆ ಅಕ್ಷತೆ ಪುಷ್ಪ ಸಿಡುಗಿಂದಿ ಬಲದ ಹಸ್ತದೊಳು ತೊಡಿಗೆಯ ಪ್ರಭೆ ದಿಕ್ಕುದಿಕ್ಕಿಗೆ ಪಸರಿಸಿ ನಡೆಯೆ ನಡೆದನಾ ರಾಯ (ಶಶಕ. ೩-೬).
[ ಪೊಂ (< ಪೊನ್) + ಬಟ್ಟೆ ]

**ಪೊಂಬಡಲಗೆ, ಪೊಂಬಡಲಿಗೆ** (ನಾ). ಚಿನ್ನದಿಂದ ಮಾಡಿದ ಅಗಲವಾದ ತಟ್ಟೆ : ಎಡದ ಕರದೊಳ್ಗಿಂದು ಪೂಮಾಲೆ ಸಿರ್ಚಿನ ಸೇಸೆ ಪೊಂಬಡಲ[ಪಾ. ಕಾಂ. ಲಿ]ಗೆಯೊಳೊಂದಂದಂ ಚೆಲ್ವಾಗೆ ಗಂಧಜಳಂಗಳಂ ಪಿಡಿದ ಕಳಸಂ ಬಯ್ಕೊಳ್ಳತ್ತೊಂದಚ್ಚೊಳ್ಸಿಗೆ ಶೋಭೆಯಂ ಪಡೆಯೆ ಪದಪಿಂದೊರ್ವಂ ಬಂದಂ ಪ್ರಗಲ್ಭಪುರೋಹಿತಂ (ಅರ್ಧನೇ. ೨-೦೯). **ಪೊಂಬಡಲಿಗೆ** : ನಿಜಜನನಿಯ ಮನೋಹರಮಪ್ಪ ಮಣಿದೊಡವುಗಳಂ ಪೊಂಬಡಲಿಗೆ ಯೊಳ್ಪೇವಿಯೋರ್ವ ಕೆಳದಿಯು ಕೈಯೊಳಾತೆಯೆಡಗೆಟ್ಟಿರ್ (ಪಾಗಳ. ೯-೦೦೯ ಪ). [ ಪೊಂ (< ಪೊನ್) + ಪಡಲಗೆ ]

**ಪೊಂಬಡಲಿಗೆ** 'ಪೊಂಬಡಲಗೆ' ನೋ.

**ಪೊಂಬಡಿಗ** (ನಾ). ೧. ಚಿನ್ನದ ಪೀಕದಾನಿ : ಮಿಂದಿಯರ್ ಪೊಂಬಡಿಗವ ಸಾರ್ಚಿ ಬಿಸಿನೀರ ಗಿಂಡಿಯೊಳ್ ತಂದು ಕಾಲ್ತೊಳೆಯೆ (ಕೋಚಕ. ೦೬-೯೯). ೨. ಚಿನ್ನದ ಪಾತ್ರೆ: ಪಾವನಪಾದ್ಯಮಂ ತಳೆದ ಪೊಂಬಡಿಗಂಬೊಲ ದಾಯ್ತು ಮೇರು (ಜಕಶ. ೯-೨). [ ಪೊಂ (< ಪೊನ್) + ಪಡಿಗ ]

**ಪೊಂಬಡೆ** (ಕ್ರಿ). ಹಣವನ್ನು ಗಳಿಸು ; ಐಶ್ವರ್ಯವನ್ನು ಸಂಪಾದಿಸು : ಗಂಡುಗೂಸುವೆತ್ತ ಸಜ್ಜನದಂತೆ ಪೊಂಬಡೆದ ಸೂಳೆಯಂತೆ . . . ಚಿತ್ರದೊಳಾನಂದಂ ಬೆರಸಿರ್ಪುದು (ರಶಿತಾಕ್ಕು. ೯-೩). [ ಪೊಂ (< ಪೊನ್) + ಪಡೆ$_1$ ]

**ಪೊಂಬಣಾತಿ** (ನಾ). ಚಿನ್ನದ ದೀಪ : ಪಟ್ಟುಸೂತ್ರದಿ ಪೊಸೆದು ಬತ್ತಿಯನಿಟ್ಟು ಪೊಂಬಣಾತಿಯೊಳು . . . ಮುದದಿಂದ ದೀಪ್ತಿಯ ಮುಟ್ಟಿಸೆ (ಸಂಗರಾ. ೩-೩೬). [ ಪೊಂ (< ಪೊನ್) + ಪಣತಿ (< ಪಣತೆ) ]

**ಪೊಂಬಣ್ಣ, ಹೊಂಬಣ್ಣ** (ನಾ). ೧. ಬಂಗಾರದ ಬಣ್ಣ ; ಚಿನ್ನದ ಬಣ್ಣ : ಕನ್ನಾರೆ ಬಿರಯಿಯುಂ ಮೂಪವಣ್ಣಂ ಬರಿಸಿದುವರಲ್ಲ ಸುರ ಹೊನ್ನೆಯ ಪೊಂಬಣ್ಣದ ಬೆಳರ್ವಣ್ಣದ ಕೆಂಬಣ್ಣದ ಕೇಸರಮುಮೆಸಟ್ಟಳುಂ ಕರ್ಣಿಕೆಯುಂ (ಮುಕ್ತಿ. ೩-೦೬); ಒಲೆದಾಡುವ ಪೊಂಬಣ್ಣಮೆಸೆವ ಕಳವ ಶ್ರೀಯ ಪರಿಚರ್ಯೆಯಂ ಬಿಡದೆ ಮಾಳ್ಪ ಕೆಳದಿಯರನಲ್ಕೀರನಿಕುರುಂಬಮಂ ಸೋವಲೆಂದಲ್ಲಿರ್ದ ಪಾಮರಿಯರದ್ಧಗರ ನಡೆಗೆಡಿಪರು (ಕೃಪಿಶಾ. ೩-೬). ೨. ಕೆಂಪು ಬೆರೆತ ಹಳದಿ ಬಣ್ಣ ; ಮಾಸಲುಕೆಂಪು ; ಕಪಿಲವರ್ಣ : "ಕಪಿಲವಣ್ಣಮೆಂದು ಪೊಂಬಣ್ಣಂ" (ಶಕಾ. ೩೬-೨೨೦) ; ಪೊಂಬಣ್ಣದ ಕೆಂಪಿಡಿದಿರೆ ಸೊಗಯಿಪುವುವು ಗಂಧಶಾಲಿವನಂಗಳ್ (ಅಜಿತ. ೦-೩೦) ; ತೋರ ಮುಯ್ಯುಗಳೊಳೆಸೆವ ಕುಂಕುಮಂಗಳ ಬಂಬಲ ಸೋಂಕಿನೊಳ್ ರಜಂ ನೆಗೆದು ದೆಸೆಗಳ್ ಪೊಂಬಣ್ಣಮಸಗೆಸೆಯಿರುಯುಂ (ಗಾರುಂಪು. ೬). **ಹೊಂಬಣ್ಣ** : ೧. ಮೇರುವ ಸಾರಿದ ಕಾಗೆ ಹೊಂಬಣ್ಣವಪ್ಪುದು ತಪ್ಪದು (ಬಸಪ. ೪೬೦): ಪೂರ್ವಮಂದರಂ . . . ಅಂಬುಜಜಂ ನಟ್ಟಿರಿಸಿದ ಹೊಂಬಣ್ಣದ ಕಂಭಮೆಂಬಿನಂ ರಂಜಿಸುಗುಂ (ಪಾಕಪ. ೯-೯); ಹೊಂಬಣ್ಣಮೈಯುಳೊರ್ವಳು . . . ಇಂದಳು ಹೊನ್ನ ಬೊಂಬೆಯಂತರಸನೊತ್ತಿನೊಳು (ಭಕ. ೩-೨೯). ೨. ಅಣ್ಣಗಳೆ! ಹೊಂಬಣ್ಣ ತಿರುಮಾಸೆಯುಟ್ಟರಕೆ ಮಣ್ಣಿಕ್ಕಿ! (ಕಂತು. ೯೨-೩). [ ಪೊಂ (< ಪೊನ್) + ಬಣ್ಣ ]

**ಪೊಂಬಣ್ಣಿಗೆ** (ನಾ). ಚಿನ್ನದ ಅಲಂಕಾರ,–ಶೃಂಗಾರ : ಬಂದತ್ತು ಪೊಂಬಣ್ಣಿಗೆಯ ಪಿಡಿಗಳೊಳ್ ತಂದದಿಂ ಪೆಂಡವಾಸಂ (ಜಗ. ೦೩-೬೯).
[ಪೊಂ (< ಪೊನ್) + ಪಣ್ಣಿಗೆ (< ಪಣ್ಣುಗ)]

**ಪೊಂಬರಣೆ** (ನಾ). ಬಂಗಾರದ ಕರಂಡಕ; ಚಿನ್ನದ ಡಬ್ಬಿ: ಪೊಂಬರಣೆಯ ಮೇಲೇನಿದು ತುಂಬಿಯ ಕತ್ತುರಿಯ ಬೊಟ್ಟೆ (ಜಕಶ. ೬-೩೦).
[ಪೊಂ (< ಪೊನ್) + ಬರಣೆ]

**ಪೊಂಬರದ** (ನಾ). ಚಿನ್ನದ ವ್ಯಾಪಾರ ಮಾಡುವವನು ; ಸರಾಫ : "ಸೊನ್ನೆವರದನೆಂದುಂ ಪೊಂಬರದನೆಂದುಂ ಚಿನ್ನವರದಂ" (ಶಕಾ. ೬೦-೩೩೩) ; ಪೊಂಬರದರ ಪೂವಡಿಗರ ತಂಬುಲಿಗರ . . . ಕದಂಬದಿನಾ ರಾಜವೀಧಿ ಕಣ್ಗೆಸೆದಿರ್ಕುಂ (ಕಾವ್ಯಶಿ. ೦-೩೦) ; ತಂಬೆಲರೆಂಬ ಪೊಂಬರದ ನಲರ್ಪೊನ್ನಂ ಪರ್ಣಕರ್ಪೋವಲರೊಳೊರೆಯ (ಕಂಕಿ. ೨-೯೨ ಪ).
[ಪೊಂ (< ಪೊನ್) + ಪರದ$_1$]

**ಪೊಂಬರಹ, ಹೊಂಬರಹ** (ನಾ). ೧. ಚಿನ್ನದ ಎರಕದಲ್ಲಿ ಬರೆದ ಲಿಪಿ,–ಬರವಣಿಗೆ : ಆತನ ಮೇಲೆ ಪೊಂಬರಹಶೋಭಿತಶರವ್ರಾತವನೆಚ್ಚು ಬೊಬ್ಬಿರಿದ (ಕೋಚಕ. ೩೬-೬). ೨. ಬಂಗಾರದ ಚಿತ್ರ,–ಅಲಂಕಾರ : ಕರುವಾಡ ಕಂಡರಿಸಿದ ಗೋಪುರ ಪೊಂಬರಹದ ಲೋವೆ . . . ಮಣಿವಾಗಿಲೆಸೆಯೆ ಕಣ್ಗರವನೆ ಗಾಡಿವೆತ್ತಿಹುದು (ಕುಶಾಕಾಂ. ೩-೯). ೩. ಚಿನ್ನದ ಎಳೆಯ ಕಸೂತಿ ; ಜರತಾರಿ ಹೆಣಿಗೆ : ಪರಚಂದ್ರಿಕೆಯ ಪಾವುಡಕೆ ಶೋಭಿಸುವ ಪೊಂಬರಹದ ಶುಭ್ರದೂಮಟವ ಸ್ಮರಬಾಣಾಗಚುಯಂತೆ ನಿಚ್ಚಿ ವಿಡಿದುದುಡಿಸಿದರ್ ದರಹಾಸವುಮುಖಿಗೆ (ಕೋಚಕ. ೨೩-೦೩). **ಹೊಂಬರಹ** : ೧. ಹೊಂಬರಹದಂಬಿನ ಮಿಂಚುಗಳಲೆಡೆಹಳಚಿದವು ಹರಿಹರ ಪುರಂದರರ (ಕುಜ್ಞಾ. ೨೩-೦೦); ಹೊಳೆವ ಹೊಂಬರಹದ ಸುರೇಖೆಯ ತಳಪದಸ್ಪುದಲವಳ ಹಸ್ತವ ಕಳಚಲೆಚ್ಚನು ಭೂತಗಣ ಬಿಚ್ಚಿತೋಡೆ ಭೀತಿಯಲಿ (ಕೊಶಾ. ೦-೦೨-೦೩). ೨. ಕೀಲಿಸಿದ ಪಟ್ಟಿಗಳ ದಿವ್ಯದುಕೂಲದಲಿ ಹೊಂಬರಹದೆಲೆಗಳ [ಪಾ. ಕಾಂ. ಹೊಂಬಾಳೆತೆಟಿಗಳ] ಚೂಳಿಕೆಯ ಕನ್ನಡಿಯ ತೋರಣವೆರಡುಪಕ್ಕದಲಿ (ಕುಜ್ಞಾ. ೦೨-೦೩); ತೆಗೆದು ವಜ್ರಾಂಗಿಯಾಸು

ವ್ಯಾಯಲಿ ಬಿಗಿದು ಹೊಂಬರಹದ ಸುರತ್ರಾಣೀಗಳ ಬಲುಸೀಸಕವನಳವಡಿಸಿ ದನು ಸಿರಿಪುಡಿಗೆ (ಶುಕ್ಲಾ.ಗ. ೩-೪೦).

[ಪೊಂ (< ಪೊನ್) + ಬರಹ (< ಬರಪ)]

**ಪೊಂಬರಿಗೆ** (ನಾ). ಬಂಗಾರದ ಥಾಲು; ಚಿನ್ನದ ಗುರಾಣಿ: ಕಡಿತಲ ದೂಗುತ ಕಯ್ಯ ಪೊಂಬರಿಗೆಯುನೆಡಬಲಗಳಿಗೆ ತೋಱುಸುತ ಕಡಿದಾಡಿ ಮಡಿದರು (ಕುಮಾರಾ. ೦೨-೪೧); ಬಾಳುಬಟ್ಟಲ ಹಿಡಿದೊಮ್ಮೊಮ್ಮೆ ಪೊನ್ನ ಭೂಗೋಲು ಪೊಂಬರಿಗೆಯಾಂತೊಮ್ಮೆ ಕಾಲಿಟ್ಟು ಹೊಳೆವುತಿದ್ದರು ಮನಸಿಜನ ಮಹಾಸಾಳುಗಳಂತೆ ದಿಟ್ಟೆಯರು: (ಜಕ. ೦೨-೪೦).

[ಪೊಂ (< ಪೊನ್) + ಪರಿಗೆ]

**ಪೊಂಬರಿಜು** (ನಾ). ಚಿನ್ನದ ವಿಗ್ರಹ; ಬಂಗಾರದ ಪ್ರತಿಮೆ: ಕಿಟ್ಟ ಹಾಱಿದ ಪೊಂಬರಿಜೊ ನಿಜಾತ್ಮನ ತಿಟ್ಟವೊಯೆನೆ ನೃಪವರನ ದಿಟ್ಟಿಗತ್ತಾ ನಂದಮನೊದವಿಸಿದುದು ದಿಟ್ಟಿಯೋಗಿಯ ದಿವ್ಯಮೂರ್ತಿ (ಸಂತ್ರಕಾ. ೩-೬೫).

[ಪೊಂ (< ಪೊನ್) + ಪರಿಜು]

**ಪೊಂಬರಿಯಣ** 'ಪೊಂಬರಿಯಾಣ' ನೋ.

**ಪೊಂಬರಿಯಾಣ, ಪೊಂಬರಿಯಣ, ಪೊಂಬರಿವಾಣ, ಹೊಂಬರಿಯಣ, ಹೊಂಬರಿವಾಣ** (ನಾ). ಚಿನ್ನದ ತಟ್ಟೆ; ಬಂಗಾರದ ಹರಿವಾಣ: ಬಳಿಕ ಪೊಂಬರಿಯಾಣದೊಳು ವೀರರಾಮನ ಕಳಕಳಿಸುವ ಮಂವಲೆಯನು ತಳುವದಿರಿಸಿಕೊಂಡು ತಂದು ತೋಱಸಲು (ಕುಮಾರಾ. ೩೩-೬೦); ಮಿಸುನಿ ಯದ್ದಣಿಗೆಯೊಳ್ಪೊಂಬರಿಯಾಣಾವುನನರ್ಘ (ವೃಕಶಿ. ೩-೬೨ ಕ). **ಪೊಂಬರಿಯಣ**: ನೀಂ ಬಯಸಿದಗ್ರಪೂಜೆಯ ಪೊಂಬರಿಯಣಮಿದೆ ನಿಶಾಟ ಕೊಳ್ಳೆಂದು ಸರೋಜಾಂಬಕನಿಡೆ (ಜಗ. ೦೬-೨೦); ಪೊಂಬರಿಯಣದಿ ಪೋಳ್ಕಣಿವಯುವಡೆದಿರ್ದ ಸಂಬಳಿಗೆಯ ವರ್ಣಚೂರ್ಣ ಕೊಂಬ ಕರ್ಪೂರ ಕರಂಡವ ಸ್ಮರನ ತಲೆಗೆಂಬಿನೊಳ್ ಪಂದಿರಿಸಿದರು (ಸೋಹಚ. ೦೬-೨೬). **ಪೊಂಬರಿವಾಣ**: ಬಹುವರ್ಣದಲ್ಲಿ ರಂಜಿಪ ಬಣ್ಣಗೂಳು ಬೆಳ್ಳಿ ಪೊಂಬರಿವಾಣಗಳ ತುಂಬಿ ಸುಂಹೆತ್ತಿ ಚಿಲ್ಲಿಸಿದಳು ದೆಸೆದೆಸೆಗೆ (ಸೋಹಚ. ೩೦-೩೬); ಮಿನುಮಿನುವ ಪೊಂಬರಿವಾಣಗಳೊಳೆಯ್ದೆ ನೀಡಿದರ್ ಪರಿಮಳಿಯ ಪರಿಕರವನು (ಕಂಕೃ. ೩-೩೪). **ಹೊಂಬರಿಯಣ**: ಹೊಂಬರಿಯಣ ದೂಳೊಸೆದು ಬಡಿಸಿದ ಸುಕೃತ ದಿವ್ಯಾನ್ನಮಂ ನಿವೇದ್ಯಂಗೊಟ್ಟು (ಹಕಳಾ. ಕಂ. ೩-೬೭); ಮಿಗೆ ರವ್ಯಾವಡೆದ ಹೊಂಬರಿಯಣ ಕಳಿಗೆ ತಂಬಿಗೆ . . . ದೀವಿಗೆಗಂಬಗಳನಿತ್ತನೊಲಿದು (ಸೋಹಚ. ೦೩-೦೯). **ಹೊಂಬರಿವಾಣ**: ಮುತ್ತಿನಾರತಿಯ ಹೊಂಬರಿವಾಣದಿಂ ಬೆಳಗಿಸಿ ಮಂತ್ರಿ ಪೀತಾಂಬರಧರನ ಕೀರ್ತಿಸಿದ (ಸೋಹಚ. ೪೦-೩೩); ಲಾವಣ್ಯ ಧಗಧಗಿಸುವ ಸರಪತಿಯ ಮುಂದೋಟ್ಟಿ ಹೊಂಬರಿವಾಣ ಭಾವಿಸಲೊಪ್ಪಿತು . . . ಚಿಲ್ವಿನೊಳು (ಜಕ. ೪-೬೨). [ಪೊಂ (< ಪೊನ್) + ಪರಿಯಾಣ]

**ಪೊಂಬರಿವಾಣ** 'ಪೊಂಬರಿಯಾಣ' ನೋ.

**ಪೊಂಬಲಗೆ** (ನಾ). ಚಿನ್ನದ ಹಲಗೆ; ಬಂಗಾರದ ಫಲಕ: ಕಡಿತಕೆ ವಾರೆ ಪೊಂಬಲಗೆ ಬೀಳೆ ಶಿರಂ ಸಿಡಿದೇಳೆ ಭೂತಸಂಗಡಣದಿ ನೋಡಿ (ಎಕ. VI. ಕಡೂರು. ೦೩೩-೪೩; 1191); ಮನಸಿಜಮಂತ್ರಾಕ್ಷರಮಂ ಬಳಪದಿನನುರಾಗದಿ ಬರೆಯಲ್ಪೊಂಬಲಗೆಗೆ ಮಿನುಗುವ ಮಸಿಯಿಡು ವಂದದೆ ನೊಸಲೊಳ್ ಮೃಗಮದಮಿಕ್ಕಿದಳು (ಜಯಸಾ. ೨-೩೪).

[ಪೊಂ (< ಪೊನ್) + ಪಲಗೆ]

**ಪೊಂಬಲೆ** (ನಾ). ಜಾಲರಿಯಂತಹ ಚಿನ್ನದ ಆಭರಣ: ದಿಟ್ಟಸರ ಪೊಂಬಲೆಗಳ್ ವೊಗರಂಬಮೋದು ಪೊಂಬಳ್ಳಿಯ ತೋಳ್ಕೈ ಮಯ್ದಗಿರೆಯು ಬಾಸಿಗದಿಂ ಮೆಱೆದತ್ತು ಸತ್ತಿಗೆಗಳ್ (ಜಗ. ೨-೪೬).

[ಪೊಂ (< ಪೊನ್) + ಬಲ್ಲೆ]

**ಪೊಂಬಲ್ಲಕಿ** 'ಪೊಂಬಲ್ಲಕ್ಕಿ' ನೋ.

**ಪೊಂಬಲ್ಲಕ್ಕಿ, ಪೊಂಬಲ್ಲಕಿ** (ನಾ). ಚಿನ್ನದ ಅಂದಣ; ಬಂಗಾರದ ಪಲ್ಲಕ್ಕಿ: ನಿಲ್ಲದಾಳಿಯರುದಣಗಳ ನಡುವೆ ಪೊಂಬಲ್ಲಕ್ಕಿಯೋಱ ಲೀಲೆ ಯೊಳು ಮಲ್ಲನೆಯ್ತಂದಳಾ ಸುರುತಾಳಸುತೆ (ಕುಮಾರಾ. ೦೬-೪೨); ಸಲ್ಲಲಿತಾಂಗಿಯ ವರವಱವಿದು ಪೊಂಬಲ್ಲಕ್ಕಿಯ[illegible] ಸುಂದಿಸಿದ (ಸೋಹಚ. ೧೦-೪೫). **ಪೊಂಬಲ್ಲಕಿ**: ಅಲ್ಲಿ ತವೊಡ[illegible] ಬಲುವನಿರವೆಲ್ಲ ಪೊಂಬಲ್ಲಕಿಯನೀಂದು . . . ಒಳವುಗೆ (ಜನ್ನ. [illegible] ೨೨); ಪೊಂಬಲ್ಲಕಿಯ ಹರಿಸದಿಂದೀಂದು . . . ಅರಮನೆಯ ಪೂಕ್ಕು (ಜಕ[illegible] ೨-೨೩).

[ಪೊಂ (< ಪೊನ್) + ಪಲ್ಲಕ್ಕಿ (< ಪ[illegible]ಂಗ)]

**ಪೊಂಬಸದಿ** (ನಾ). ಬಂಗಾರದಿಂದ ನಿರ್ಮಿತವಾದ ಬಸದಿ: ಇವ ನೆಮ್ಮಾಳ್ದನಸ್ಕಿ ಸಾಧುವಿನವೋಲ್ ತಾನಲ್ಲದಂತಿಲ್ಲಿ ಪೋ ಕವಿದಿರ್ಪಂ ಜಿನನೆಂದು ಪೊಂಬಸದಿಯಂ ಪುಷ್ಪಾಸ್ತ್ರಸೇನಾಳಿ ಮುತ್ತುವವೋಲ್ ಪಂದಿರ ತಂಡವೊಪ್ಪೆ (ಅರಕಿಜಕ. ೨-೯೬). [ಪೊಂ (< ಪೊನ್) + ಬಸದಿ]

**ಪೊಂಬಸಿರ** 'ಪೊಂಬಸಿಱ' ನೋ.

**ಪೊಂಬಸಿಱ, ಪೊಂಬಸಿರ, ಪೊಂಬಸುಱ** (ನಾ). ಬ್ರಹ್ಮ; ಹಿರಣ್ಯ ಗರ್ಭ: ೯ ಚಿನ್ನದ ಮೊಟ್ಟೆಯಿಂದ ಜನಿಸಿದನೆಂಬ ಪ್ರತೀತಿಯಿಂದ ಬ್ರಹ್ಮನಿಗೆ ಈ ಹೆಸರು ಬಂದಿದೆ: "ಅಂಚೆದೇರಂ, ನುಡಿಮಣ್ಣನಿಯಂ, ಪೊಂಬಸಿಱಂ . . . ತಾವರೆಮಸೆಯಂ—ಈ ೮ ಬ್ರಹ್ಮಂಗೆ ಪೆಸರ್" (ಕಜಾ. ೧೬-೦೩); ಪೊಂಬಸಿಱನ ಬಾಯ ಬೀಯಗ ಜಯಯೆಂದು ಶಂಬರಾರಿಯ ಹೊಗಳಿದರು (ಸೋಹಚ. ೦೬-೩); ಪೊಂಬಸಿಱನ ಗುಂಡಿಗೆಯಂ ಪೊಕ್ಕು ಪೊಱಮಟ್ಟುಂ ಧರೆಗಿೞಿದು ಬಂದು . . . ತ್ರಿಪಥಗೆ ಕಾಣಿಸಿಕೊಂಡಳ್ (ರಾಜಶೇಖ. ೩೦-೦೨). **ಪೊಂಬಸಿರ**: ಪೊಂಬಸಿರನೀ ಪರಿ ಬರೆದನೇತಕೆ ಹಾ ಮಹಾದೇವ (ಶಾಕುಂತ. ೬ ಸಿದ್ಧಾಂತ ಅರಸ್ವಾಹು). **ಪೊಂಬಸುಱ**: ಪೊಂಬಸುಱನ ಪೆಣ್ಣುಗಂಡಿಂದ ತಕ್ಕನೆ ತುಂಬಿತು ಕಿಱಿದೆ ಕುಟುಂಬ (ಜಕ. ೬೨-೪೫). [ಪೊಂಬಸಿಱು + — ಅ]

**ಪೊಂಬಸಿಱು, ಹೊಂಬಸಿರು** (ನಾ). ೧. ಚಿನ್ನದ ಗರ್ಭ: 'ಪೊಂಬಸಿಱ' ವರಾ. ೨. ಶ್ರೇಷ್ಠವಾದ ಗರ್ಭ: ವಂದಲೆ, ಬೆಂದೊವಲ್, ಬೆಂಬಱ್, ಪೊಂಬಸಿಱು (ಶಬ್ದಾ. ಸೂ. ೦೦ ವ್ಯಾಖ್ಯಾ). **ಹೊಂಬಸಿರು**: ೨. ಬೇಂದ್ರೆಯವರ ಕವಿತೆಯಲ್ಲಿ ಮೇಲೆ ಹೇಳಿದಂತೆ 'ಹೂ' ಎಂದರೆ ಸಮಾಧಿಯಲ್ಲಿದ್ದ ಹೊಂಬಸಿರಿನ ಉಸಿರು (ಕಕ್ಕಾ. ೬೨); ನಮ್ಮ ಕನ್ನಡತಾಯಿ, ತನ್ನ ಹೊಂಬಸಿರಿನಿಂದ ನಮ್ಮನ್ನು ತೆರೆದು . . . ಹಾರೈಸುತಿಹಳು (ಹೊಂಗನಸು. ೦೯-೨). [ಪೊಂ (< ಪೊನ್) + ಬಸಿಱು (< ಬಸಿಱ್)]

**ಪೊಂಬಸುಱ** 'ಪೊಂಬಸಿಱ' ನೋ.

**ಪೊಂಬಳಯಿಗೆ, ಹೊಂಬಳಯಿಗೆ** (ನಾ). ಚಿನ್ನದ ಕಾಂತಿಯ ಬಾವುಟ; ಹೊಂಬಣ್ಣದ ಪತಾಕೆ: ಪೊಂಬಳಯಿಗೆ ಮಿಂಚು ಮಣಿತೋರಣ ಕಣ್ಗೊಂಬಿಂದ್ರಧನು ಕುಸುಮವಾಳಿ ಇಂಬುಗೊಂಡಾಲಿಲ್ಲುಗಲಾ ನಗರಿ ವಿಡಂಬಿಸಿದುದು ಕಾರ ಸಿರಿಯ (ಕುಮಾರಾ. ೬-೬೯). **ಹೊಂಬಳಯಿಗೆ**: ತಳಿತ ಪಲ್ಲವಸತ್ತಿಗೆಯ ಹೊಂಬಳಯಿಗೆಯ ಸೀಗುರಿಯ ಚಮರಾವಳಿಯ ಲಗ್ಗೆಯೊಳ್ಳಿಱಿವ ಘನವಾದ್ಯರಭಸಗಳ ಒಲವಿನಿಂದಾ ನೃಪತಿ ಚಾತುರ್ಬಲ ಸಹಿತ ಬಂದಾ ಕಿರಾತರನಳವಿಯಲಿ ತಾಗಿದನು (ಕುಶಂತ. ೬-೦೦).

[ಪೊಂ (< ಪೊನ್) + ಪಳಯಿಗೆ (< ಪಟಯಿಗೆ)]

**ಪೊಂಬಳೆ** 'ಪೊಂಬಾಳೆ' ನೋ.

**ಪೊಂಬಳೆದೊಂಗಲ್** (ನಾ). ಅಡಕೆ, ತೆಂಗು ಮೊದಲಾದುವುಗಳ ಹೂವಿನ ಗೊಂಚಲು: ಎಱಲೆಲೆಸಿಂ ತೆಱಂಬೊಳೆದು ಪೊಂಬಳೆದೊಂಗಲ ನಾಂತ [ಪಾಠಾಂ. ಪೂಮುಡಿದೊಂಗಲನಾಂತು] ಕೌಂಗುಗಳ್ (ಜಗ. ೦೯-೨೦).

[ಪೊಂಬಳೆ (< ಪೊಂಬಾಳೆ) + ತೊಂಗಲ್]

**ಪೊಂಬಳ್ಳಿ, ಹೊಂಬಳ್ಳಿ** (ನಾ). ೧. ಚಿನ್ನದ ಬಳ್ಳಿ; ಸ್ವರ್ಣಲತೆ:

ಪೊಂಬಳ್ಳಿಯ ಪೊಗರಂ ಗೆಲ್ಲುಂಗುದ ಕಂಬುಬಲಿತಕಂಧರೆ ಮುನ್ನೆಟಿದ ನವಾಂಬು ಜಲಕ್ಕನೆ ಕೀವಲ್ಕೆ (ಜಯಗಾ. ೧-೯೩); ವರನಾರಾಯಣನ ರಾಣಿಯರ ಪಾದದ ಹೊನ್ನ ಸರಪಳಿಯೆಳೆಯುತ್ತ ಬರಲು ವರನೀಲದ ನೆಲಗಟ್ಟುಗಳಲ್ಲಿ ಪೊಂಬಳ್ಳಿ ಬರೆದಂತೆ ರೇಖೆದೋಱಿದುವು (ಕೋಹಕ. ೧೯-೨೬). ೨. ಹಳದಿಬಣ್ಣದ ಒಂದು ಬಗೆಯ ಲತೆ : ಖರ್ಜೂರ ದ್ರಾಕ್ಷೆಗಳೊಪ್ಪ ಪೊಂಬಳ್ಳಿಗಳ ಫಲಪೊಪ್ಪ ಘನತರಾಘ್ರಗಳಿಂದ ಶಾಂತಿಧಾರೆಗಳಿಂದ ಜನಪನಂದಿಕೆಯನಟಿಗಾಣದ (ಜಕ. ೧೯-೧೨೦). **ಹೊಂಬಳ್ಳಿ**: ೧. ಹೊಂಪಿಡಿದ ಹೊಂಬಳ್ಳಿಯೊಳೆಸೆವ[ ಪಾಠಾಂ. ಹೊಂಬಳಿವಾಯ್ಕೊಳೆಸೆವ ] ಕಡುಬಣ್ಣನ ಜಘನದ ಕಾಮಿನಿಗಿಂದು ಪಡಿಗಟ್ಟ ಪೇಳುವನೇನ (ಶೀಬಸಾಂ. ೧೧-೨೫); ವಿಲಾಸಿನೀಚರಣದ ನಿಗಳಪೇಳ್ತರಲು ವರನೀಲಮಣಿಗಟ್ಟಿನ ಮೇಲೆ ಹೊಂಬಳ್ಳಿ ಬರೆದಂತೆ ಕಣ್ಗೆ ರಂಜಿಸಿತು (ಕೋಹಕ. ೨೯-೩೯). [ಪೊಂ (<ಪೊನ್) + ಬಳ್ಳಿ]

**ಪೊಂಬಟುಗಲ್** (ನಾ). ಚಿನ್ನದ ದೋಣಿ : ಬಂಗಾರದ ನಾವೆ : ಗಗನತಟಾಕದೊಳೊಗೆದು ಪೊಳೆವ ವಿಮಾಂಗಳೆಂಬ ವಿಮಾಂಗಳ್ಗೆ ಬಿಂಬಮೆಂಬ ಪೊಂಬಟುಗಲ ಕಳುಕಧೀವರನಡರೆ ಬೀಸಿದ ಜಾಲದಂತೆಯುಂ (ಅಶಂಪು. ೬-೬೦ ವ). [ಪೊಂ (<ಪೊನ್) + ಪಟುಗಲ್ (<ಪಟ್ಟಿಗೋಲ್)]

**ಪೊಂಬಾಗಿಲ್, ಪೊಂಬಾಗಿಲು** (ನಾ). ಚಿನ್ನದ ಬಾಗಿಲು; ಬಂಗಾರದ ದ್ವಾರ : ಪೊಂಬಾಗಿಲ್ಗೆ ಬಂದನಾ ಕವಿರಾಜು (ಉದ್ಭಟ. ೧೨-೫೫). **ಪೊಂಬಾಗಿಲು** : ಮದಿಲೊಳು ಮಣಿಪಾಡದೊಳು ಪೊಂಬಾಗಿಲ ತುದಿಯೊಳು . . . ಪುರಸುಂದರಿಯರವನ ನೋಡಿದರು (ಶ್ರೀಶಾಂ. ೧೪-೩೯); ಅಂತರಾಂತರದ ಪೊಂಬಾಗಿಲೊಳಗೆ ನೀಲಕುಂತಳೆಯರು ನಸುನಗುತ ಸಂತೋಷದೆ ಮುತ್ತಿನಾರತಿಗಳ ಭೂಕಾಂತನಿಗೊಲಿದೊಪ್ಪಿದರು (ಕಂಪಾ. ೬-೫೦). [ಪೊಂ (<ಪೊನ್) + ಬಾಗಿಲ್]

**ಪೊಂಬಾಗಿಲು** 'ಪೊಂಬಾಗಿಲ್' ನೋ.

**ಪೊಂಬಾದರಿ** (ನಾ). ಹೊಂಬಣ್ಣದ ಪಾದರಿಹೂವು : ಪಾಟಲಪುಷ್ಪ : ಸುರಭಿಯ ಚೊಲ್ಲೆಯುಮುಂ . . . ಪೊಂಬಾದರಿಯ ಕಿಱುಪುಗುಳ ತೊಡರುಂ ಪರಿವಡೆದಿರೆ ಬಂದನಟ್ಟಿಯಿಂದೆ ಬಸಂತಂ (ಕಬ್ಬಿಗಾ. ೩೨೫). [ಪೊಂ (<ಪೊನ್) + ಪಾದರಿ$_2$]

**ಪೊಂಬಾರಿಕ** (ನಾ). ಓಲಗದಲ್ಲಿ ಚಿನ್ನದ ದಂಡ ಹಿಡಿದು ಶಿಸ್ತು ಕಾಯುವವನು : ಕುಂಭಾಂಡಮಂತ್ರೀಶ್ವರನ ಚಿತ್ತ್ಯಸಂದು ಪೊಂಬಾರಿಕರು ಪೊಗಳಿದರು (ಮೋಹಕ. ೨೦ ೫೬). [ಪೊಂ (<ಪೊನ್) + ಬಾರಿಕ]

**ಪೊಂಬಾವಡೆ** 'ಪೊಂಬಾವುಡೆ' ನೋ.

**ಪೊಂಬಾವುಗೆ, ಹೊನ್ನುಹಾವಿಗೆ** (ನಾ). ಬಂಗಾರದ ಪಾದುಕೆ : ಮಾಣಿಕವೆತ್ತ ಪೊಂಬಾವುಗೆವೆರಸಿ . . . ಹಂಸಕನಕ್ಕಂಚರಭೇದಿ ನಡೆವ (ಮೋಹಕ. ೧೯-೧೬). **ಹೊನ್ನುಹಾವಿಗೆ** : ಎನ್ನ ಮಾನ ಪ್ರಾಣಗಳು ಹೊನ್ನುಹಾವಿಗೆಯಾಗಿ ನಿನ್ನ ಚರಣಕೆ ಯೋಗ್ಯ ಮೆಟ್ಟಾಗಲಿ (ಸುಶಾರ. ೧೯-೫). [ಪೊಂ (<ಪೊನ್) + ಪಾವುಗೆ]

**ಪೊಂಬಾವುಟ** (ನಾ). ಹಳದಿಯ ಬಣ್ಣದ ಬಾವುಟ.—ನಿಶಾನೆ : ನೋಡಲ್ಲಿ ಗುಡಿ ತೋರಣಂ ಅಲ್ಲಿ ಪೊಂಬಾವುಟಂ (ಶ್ರೀಪಾವತಿ. ೫೯-೦೫೯). [ಪೊಂ (<ಪೊನ್) + ಬಾವುಟ]

**ಪೊಂಬಾವುಡೆ, ಪೊಂಬಾವಡೆ** (ನಾ). ಹೊಂಬಣ್ಣದ ವಸ್ತ್ರ; ಪೀತಾಂಬರ: ತಡಿ ಸುಖಾಸನ ಸುಗತಿ ಪೊಂಬಾವು[ಪಾಠಾಂ.ವ]ಡೆ ಜನಾಖಿ . . . ಮಣಲಂಬಳದ ಹಯ ಮಿಗೆ ಗುಡಿಯಿಱಿದು ಮೊಗವೆತ್ತಿ ನರ್ತಿಸಿತು (ಕೂರಗಾ. ೬-೨೯-೧೨). **ಪೊಂಬಾವಡೆ** : ಬರುದಿನ ಪೊಂಬಾವಡೆ ಸತಕಿನ ವಲ್ಲಿ . . . ಮಿಱುಗುವ ರತ್ನಭೂಷಣಗಳಾಂತಿಹ ಹಯ ಖುರವೆತ್ತಿ ಕುಣಿಯುತ್ತಿದಿದುವು (ಕಂಪಾ. ೧೫-೧೯). [ಪೊಂ (<ಪೊನ್) + ಪಾವುಡೆ$_1$ (<ಪಾವುಡ$_1$)]

**ಪೊಂಬಾಸಿಗ** (ನಾ). ಚಿನ್ನದ ಬಾಸಿಂಗ : ಲಲನೆಯರು ಪೊಂಬಾಸಿಗವ ನಿಕ್ಕಿದರು ಶಶಿಮುಖಿಗೆ (ಬಸಪು. ೯-೯೦). [ಪೊಂ (<ಪೊನ್) + ಬಾಸಿಗ]

**ಪೊಂಬಾಸು** (ನಾ). ಚಿನ್ನದ ಎಳೆಗಳ ಪಾಶ : ಮಾಣಿಕ್ಯರಚಿತ ಕಂಬಟ್ಟಿ ಪೊಂಬಾಸಿನ ನೇಣ ಚತುಷ್ಪಾದಿಗಳ ಪಾಣಿಯೊಳಾಂತ ಪೆರ್ಡಿಗಳ ಲುಬ್ಧಕಶ್ರೇಣಿ ಬೊಬ್ಬಿಡುತಲೈದಿದುದು (ಮೋಹಕ. ೧೯-೯). [ಪೊಂ (<ಪೊನ್) + ಪಾಸು$_2$ (<ಪಾಸ$_1$)]

**ಪೊಂಬಾಳೆ$_1$, ಪೊಂಬಳೆ, ಹೊಂಬಾಳೆ$_1$** (ನಾ). ೧. ಅಡಿಕೆ, ತೆಂಗು ಮುಂತಾದ ಮರಗಳಲ್ಲಿ ಹೊರಡುವ ಹೊಡೆಯಾಕಾರದ ಹೂವಿನ ಗೊಂಚಲು ; ಸಿಂಗಾರ ; ಕಂತಳೆ : ಓರೋಂದೆಡೆಯೊಳ್ ವನವಿಲಾಸಿನಿಯ ವಿಲಾಸಭವನದಂತಿರ್ದ ಪೊಂಬಾಳೆಯ ಕುರುಂಬುಗಳೊಳ್ (ಶಾಂತಿಪು. ೨-೩೩); ಇಂಬಾಗಿರೆ ವರಹಿಮಕರಬಿಂಬದ ಬೆಂಬಳಿಯೊಳಿವ ತಣ್ಗದಿರ್ಗಳೆನಲ್ ಪೊಂಬಾಳೆಯ ಚವರಮದಾಲಂಬಿಸೆ ಪಿಡಿದೊರ್ವ ಚಂದ್ರಮುಖಿ ನಡೆತಂದಳ್ (ಗಿರಿ. ೭-೯); ಪರಿವ ಕಾಲ್ವೆಗಳಿಂದ ಬಾಳೆಮಿನ್ನೆಗೆದು ಬಂಧುರಪೂಗಮುಂ ಮುಟ್ಟಲಲ್ಲಿರ್ದ ಪೊಂಬಾಳೆ ಬಿರಿದು ಮಕರಂದರಸಮುಂ ಸೂಸಲ್ (ಶಾಂತೀಶ. ೫-೯೨). **ಪೊಂಬಳೆ** : ಅಗ್ಗಲಿಸಿ ಬಿರಿವ ಪೊಂಬಳೆಯ [ಪಾಠಾಂ. ಪೊಂಬಟೆ$^3$ಗಳ, ಪೊಂಬಾಟೆ$^3$ಯ ]ತಣ್ಮಲೆವ ಪೊಸಗುಂಪಿನೊಳ್ ಪುದಿದಲೆವೆಲರಾಱುಪುದು ಖಚರದಂಪತಿಶತಮುಂ (ಆದಿಪು. ೧-೬೮) ; ಕಂಪಿಡಿದ ಪೊಂಬಳೆಗಳಿಂದೆಸೆವ ಅಡಕೆ ಎಸೆದವು ಕಣ್ಗಳಿಗೆ (ಕುಂದಸಾಂ. ೩-೫೫). **ಹೊಂಬಾಳೆ$_1$** : ಮಘಮಘಿಪ ಹೊಂಬಾಳೆಗಳ ರಸವೂಗುವ ಮಧುರದ್ರಾಕ್ಷಿಗಳ . . . ಸೊಗಸು ಸೆಳೆದುದು ಮನವನು (ಕುಮಾರಾ. ೭-೨೬); ಗಾಳಿಯೊಲಹಿಗೆ ನಿಲುಕುವವು ಹೊಂಬಾಳೆ ಖಚರೀಜನದ ಕಬರಿಗೆ (ಕೂರಗಾ. ೫-೩-೧೩); ಆಗರಳಿದ ಕಸ್ತೂರಿ ಹೊಂಬಾಳೆಯ ಪೂಗವೃಕ್ಷಗಳೊಪ್ಪುತಿಹವು (ಕಂಪಾ. ೨-೪೦). [ ದೇ. ॥ ತಮಿ. ಪೂವ್ವಾಳೈ; ತುಳು . ಪೂಂಬೆ; ತೆಲು. ಪೂಂಬಾಳ ]

**ಪೊಂಬಾಳೆ$_2$** 'ಪೊಂಬಾಟೆ$^3$' ನೋ.

**ಪೊಂಬಾಟೆ$^3$, ಪೊಂಬಾಳೆ$_2$, ಹೊಂಬಾಳೆ$_2$, ಹೊಂಬಾಟೆ$^3$** (ನಾ). ಒಂದು ಬಗೆಯ ಬಾಳೆಯ ಗಿಡ ಮತ್ತು ಅದರ ಹಣ್ಣು : ಶತಪತ್ರದ ಸಿತಾತಪತ್ರದೊಳಂ ಪೊಂಬಾಟೆ$^3$ಯ ಚಾಮರಂಗಳೊಳಮೆಸೆವ ಮಂಟಪಂಗಳ ನಡುವಣ ಪದ್ಮರಾಗದ ಪಟ್ಟವಣೆಯೊಳ್ ನಿಲಿಸಿದ ಕಾಮದೇವನನತಿಪ್ರೀತಿಯಿಂದರ್ಚಿಸಿ (ಕಾದಂಬ. ೬೬೦); ಅಂದಚಿತ್ತ ಬಂದುಗೆಯೆಸಟಂ ಕತ್ತರಿಸಿ ಪತ್ತಿಸಿದ ಚಿತ್ರಪತ್ರಂಗಳೊಳುಂಬಮಾದ ಪೊಂಬಾಟೆ$^3$ಯ ಕಂಬಂಗಳೊಳಂ (ಚಂದ್ರಪ್ರ. ೭-೯೫ ವ) : ಪೊಂಬಾಟೆ$^3$ಯ ಪಣ್ಣ ಬಿಸ್ಗೊನೆಗಳೊತ್ತಂಬಂಕರಂ ಬೀಱುತಿರ್ಪುದು . . . ಅಲಂಪಂ (ಕುಸುಮಪು. ೨-೯೯). **ಪೊಂಬಾಳೆ$_2$**: ಪಳಿಕಿನ ಪಟ್ಟಕೆಯಲ್ಲಿ ಪೊಂಬಾಳೆಯ ಸುಳಿಯಲ್ಲಿ ರತಿಯ ಕುಳ್ಳಿರಿಸಿ ನಳಿನಾಕ್ಷಿಯರೊಡತಿಯ ಕಾಲೆರಡುಮಂದಳಿರನು ಜಲದೊಳದ್ದಿದರು (ಮೋಹಕ. ೯-೯೦); ತಮಾಲದೆಳೆದಳಿರಂ ಕೊಱೆ$^3$ದು ಚಿತ್ರಪತ್ರಮಪ್ಪಂತೆ ಪತ್ತಿಸಿಸಟ್ಟ ಪೊಂಬಾಳೆಯ ಬಾಳ್ಗಂಬಂಗಳಿಂ (ರಾಜಶೇ. ೧೧-೩೦ ವ). **ಹೊಂಬಾಳೆ$_2$**: ಹೊಂಬಾಳೆಗಳ ಸುಳಿಯ ಸಫುರನೇತ್ರಂಗಳು ಇಂಬಱಿದು ಹಾಸಿ (ಪುಷ್ಪರ. ೯-೨೬); ಬಣ್ಣಬಣ್ಣದ ಪೂಗೊಯ್ದು ಹೊಂಬಾಳೆಯ ಪರ್ಣದ ಪೊಟ್ಟಣಗಟ್ಟಿ . . . ತೋಱಿದರು (ಮೋಹಕ. ೨೪-೬೮). **ಹೊಂಬಾಟೆ$^3$** : ಇಂತೆಸೆವ ನುಣ್ಪಳಿನತಳದೊಳ್ ಹೊಂಬಾಟೆ$^3$ಯ ಕಂಬಂಗಳಿಂ ಪಚ್ಚೆಯ ಪಲಗೆಗಳಿಂ ಬಾಳೆಯ ಬಿಜ್ಜಣಿಗೆಗಳಿಂ ಬಿತ್ತರಿಸಿ ಚೆಲ್ವಿನ ನೆಲೆಯುಂ ಕಂಪಿನ ಕಣಿಯುಂ ತಂಪಿನ ತಾಯ್ಮನೆಯುಮೆನಿಪ ಲತಾಮಂಟಪಮುಂ ಕಂಡು (ಶಾಂತೀಶ್ವ. ೧೦-೧೧೭ ವ). [ಪೊಂ (<ಪೊನ್) + ಬಾಟೆ$^3$]

**ಪೊಂಬಿಸಿಲ್, ಪೊಂಬಿಸಿಲು, ಹೊಂಬಿಸಿಲು** (ನಾ). ಪ್ರಾತಃಕಾಲ ಮತ್ತು ಸಂಧ್ಯಾಕಾಲಗಳಲ್ಲಿ ಕಾಣುವ ಹೊನ್ನಿನ ಬಣ್ಣದ ಬಿಸಿಲು :

ಕುಸಿದುವು ಕಿರಣಂಗಳ್ . . . ಅನಂತರಂ ಪೊಂಬಿಸಿಲಾದುದು ಪೂರ್ದೆ ಪಟ್ಟಿಪೆಟ್ಟಮನರ್ಕಂ (ಶಂರಾಶತಿ. ೧೦-೦೭೭) ; ಪೊಸಸೊದೆ ಕೌಮುದಿಯಂ ಪಸರಿಸೆ ಕನಕದ ಕಳಶವಾಳಿ ಪೊಂಬಿಸಿಲಂ ಪೂರಿಸೆ ತರತರದಿಂದಂ ರಾಜಿಸು ತಿರ್ಪುವು ಸೋಮಸೂರ್ಯವೀಥಿಗಳ್ (ಗಿರಿಕ. ೨-೬೨) ; ಪರೆದುದಾಕ್ಷಣ ಮನದ ಸಂದೇಹಮೆಂದೆಂಬ ಪರವಾಶಿವಿರಂ ವಿವೇಕವೆನಿಪ್ಪ ಪೊಂಬಿಸಿಲ್ ನಿರುತದಿಂ ಪಸರಿಸಿತು (ಚಂಕೃ. ೬-೨೨). **ಪೊಂಬಿಸಿಲು :** ಹಗಲು ಸವೆದುದು ಪೊಂ[ಪಾಠಾಂ. ಹೊಂ]ಬಿಸಿಲು ನೆಲಕೆ ತೆಗೆದುದತಿವೇಗದಲಿ (ಪಕಕ. ೫-೯೩). **ಹೊಂಬಿಸಿಲು :** ಮುತ್ತಿನ ಧಾಳ ಧವಳಿಸಲಾಯ್ತು ಚಂದ್ರಿಕೆ ತನುವ ಡೊಳ್ಗರಿಸಿ ಮೇಲೆ ಹೊಂಬಿಸಿಲಾಯ್ತು ಮಾಣಿಕದೀಳಿಗೆಯ ಲಹರಿಯಲಿ (ಕುಜ್ಞಾಕ. ೫-೯೯) ; ಬಿಡದೆ ಚಂದ್ರಾತಪವಪಹರಿಸುವುದು ಹೊಂಬಿಸಿಲು (ಕೊರಂ. ೫-೨-೭೯) ; ಗಿರಿಯುತ್ತಮಾಂಗದಲಿ ಮೈದೋರಿದನು ಅಹ ಹೊಂಬಿಸಿಲಿನೆಳನೇಸರು ! (ಕಣ್ವಾಂಗ. ೬-೧೫೯).

[ಪೊಂ (<ಪೊನ್) + ಬಿಸಿಲ್]

**ಪೊಂಬಿಸಿಲು** 'ಪೊಂಬಿಸಿಲ್' ನೋ.

**ಪೊಂಬಿಸುಗೆ** (ನಾ). ಚಿನ್ನದ ಅಂಬಾರಿ : ಪೊಂಬಿಸುಗೆಯು ಕರಿಗಳ ಚೆಂಬೊ [ಬ]ಕ್ಕರೆಯಶ್ವಚಯದ ಬಹುವಿಧಮಪ್ಪಾಡಂಬರದ ಪತಾಕೆಯ ಪಲವು ಬಿರುದಿನ ಭಟರ ಬಹಳ ಬಲದರ ನೆಲೆಯೊಳ್ . . . ಅಪರಾಜಿತಕುಮಾರ ನಿರ್ಪುದುಂ (ಸುಕಾಪೇ. ೫-೩೦). [ಪೊಂ (<ಪೊನ್) + ಬಿಸುಗ್ಗೆ]

**ಪೊಂಬೀವು** (ನಾ). ಚಿನ್ನದ ತಂತಿಗಳಿಂದ ಮಾಡಿದ ಹಗ್ಗ : ಪೊಂಬಡ ಲಿಗೆಯೊಳ್ ಪರಪಿದ ಪೊಂಬೀವಿಂ ಕಗೋಳಿಪ ಮೋಹನಂಬೆತ್ತ ಕಾಂತೆಯರ್ (ಕಂರಕೊ. ೨೮೩). [ಪೊಂ (<ಪೊನ್) + ಬೀವು]

**ಪೊಂಬುಗುಡಿ** (ನಾ). ಚಿನ್ನದ ಬುಗುಡಿ : ಕೊಪ್ಪು ಪೊಂಬುಗುಡಿ ಬಾವುಲಿ . . . ಪಿಲ್ಲಿ ವಿಂಚು ಮೊದಲಾದ ಪೊಸವಿಸುನಿದೊಡವುಗಳಿಂ ತೊಡಿಲ್ಲಗಿಂದಲಂಕೃತಯಾದ . . . ಕನ್ನಿಕೆಯಂ . . . ಬಿಜಯಂಗೆಯ್ಸು ತಮಿರ್ಪಿನಂ (ಹಾಲಾಸ್ಯ ೯-೯-೬೪ ಪ). [ಪೊಂ (<ಪೊನ್) + ಬುಗುಡಿ]

**ಪೊಂಬುಜ್ಜ** 'ಪೊಂಬುಟ್ಟ' ನೋ.

**ಪೊಂಬುಜ್ಜಣಿ** (ನಾ). ಚಿನ್ನದ ಬಣ್ಣದ ಬುದ್ದಲಿ : ಮುಟ್ಟಲಮ್ಮದೆ ಬುಂಕುಮರಸಪನೀರ ಬಟ್ಟಬಲ್ಲೊಲೆಗೆ ಸಿಂಪಿಸಲು ಇಟ್ಟ ಮುಡಿಗೆಯು ಪೊಂಬುಜ್ಜಣಿ ತೈಲಸಂಘಟ್ಟದಿಂ ಪೊಗಿದಂತಾಯ್ತು (ಸೋಹಕ. ೨೬-೦೮).

[ಪೊಂ (<ಪೊನ್)+ಬುಜ್ಜಣಿ (<ಬುದ್ದಲಿ)]

**ಪೊಂಬುಡಿ** (ನಾ). ಚಿನ್ನದ ಪುಡಿ ; ಬಂಗಾರದ ಹುಡಿ : ತೊಟ್ಟ ಮೈದುಡಿಗೆಗಳ ಮಸೆದ ಪೊಂಬುಡಿಯಂತೆ ಬುಂಕುಮರಜಂಗಳು . . . ಸೂಸುತಿರೆ (ಕೃಶಿಪಾ. ೩೩-೨೨) ; ತಂಬೆಲರೇಬ ಪೂಬರದನಲರ್ಪೊನ್ನಂ ಪರ್ಣಕರ್ಪೋಪಬರೊಳೊರೆಯೆ ಸುರಿದು ಪಂದ ಪೊಂಬುಡಿಯಂಬಂ ತಿಬುವೆತ್ತ ರಜನೀರಜಃಪಿಂಜರರಜೋಗುಣದಿಂ ಸುರುಚಿರವಾದ ಸುರಯು ಮುಂ (ಕಶಕಂ. ೨-೯೨ ಪ). [ಪೊಂ (<ಪೊನ್) + ಪುಡಿ]

**ಪೊಂಬುತ್ತಳಿ, ಹೊಂಬುತ್ತಳಿ** (ನಾ). ಚಿನ್ನದ ಬೊಂಬೆ ; ಬಂಗಾರದ ಪ್ರತಿಮೆ,- ವಿಗ್ರಹ : ಭಾವಿಸಲಧಿಕ ಪೊಂಬುತ್ತಳಿಯೆಂಬಂತೆ ಕೋವಿದ ಕೋಮಲಾಂಗಿಯರು ದೇವಕಿಯಾತ್ಮಸಂಭವನೆಡಬಲದಲಿ ತೀವಿರ್ದರೇನ ಬಣ್ಣಿಪೆನು (ವೋಹಕ. ೯-೯) ; ಬಿಸಜಗಂಧಿನಿಯೆನಿಸಿ ರಾಮರುದ್ರರ ರಾಣಿ ಪೊಂಬುತ್ತಳಿಯೊಲೆಸೆದಳು (ಏಕೋಶು. ೬-೯೦). **ಹೊಂಬುತ್ತಳಿ :** ಅತ್ಯಂತ ರೂಪಯೌವನಗಾರ್ತಿಯರು ಹೊಂಬುತ್ತಳಿಯೆಡೆಯಾಡುವಂತೆ . . . ಸತ್ಯಭಾಮೆಯನು ಸಾರಿದರು (ಮೋಹಕ. ೦೯-೬೨).

[ಪೊಂ (<ಪೊನ್) + ಪುತ್ತಳಿ (=ಪುತ್ತಲಿ)]

**ಪೊಂಬುದಿ** (ನಾ). ಬಂಗಾರದ ಬಾಗಿಲುವಾಡ : ಕಾಮುಜಟ್ಟಿಯು ಕಟ್ಟು ಕಬ ಕಾಮಗೃಹದ ಪೊಂಬುದಿ[ಪಾಠಾಂ. ಪೊಂದುಡೆ, ಪೊಂಬುಡೆ, ಪೊಂಪುಡೆ]ಯೆನಲೊಪ್ಪಿದುದಾ ಮುಗ್ಧೆಯಸೆವೊಳ್ತೊಡೆಗಳು (ಶ್ರೀಚಾಂ. ೩-೫೧). [ಪೊಂ (<ಪೊನ್) + ಪುದ್ದಿ]

**ಪೊಂಬುರ್ಚ** 'ಪೊಂಬುಟ್ಟ' ನೋ.

**ಪೊಂಬುಲಿ** (ನಾ). ಹಳದಿಬಣ್ಣದ ಹುಲಿ : ಬೆಂದುವು ಪೊಂಬುಲಿದೊಲಬ ಪಲ್ಲಣಂಗಟ್ಟಿದ ಪಟ್ಟಸಾಹಣದ ವಾಜಿಗಳುದು ಜಯೋತ್ಸವಾದಿಗಳ್ (ಮಲ್ಲಿಪು. ೯-೯) ; ಪೊಂಬು[ಪಾಠಾಂ. ಪೆರ್ಬು]ಲಿಯ ತೊವಲನಾನೆಯ ಕೊಂಬಂ ಕುತ್ತಟಿಸದಡು ಪಿಡಿದುಗಿದೆತ್ತಿದುವಂ ಪತಿಗೆ ಕಾಣ್ಕೆಗೊಟ್ಟಂತೆಂದಂ (ಅಜಂಪು. ೧೦-೩೮) ; ಪೊಂಬುಲಿಯ ಚರ್ಮದ ಕಕ್ಷಪಾಳಿಕೆಯೊಳಳವಟ್ಟ ನಿಗ್ಗವದ ಕರಂಡಕದೊಳಗೆ ಮುದ್ರಿಸಿರ್ದನರ್ಘ್ಯಮಣಿಯಂ . . . ತುಡುಂಕಿ ತೆಗೆದು (ಕಾಚಕೆ. ೫-೨೫ ಪ). [ಪೊಂ (<ಪೊನ್) + ಪುಲಿ]

**ಪೊಂಬುಲಿಸಮ್ಮ** (ನಾ). ಹಳದಿಬಣ್ಣದ ಹುಲಿಯ ಚರ್ಮ : ಆನೆದೊವ ಲ್ವೊಂಬುಲಿಸಮ್ಮಂ ತಾವರೆಗಣ್ಣಂ ಕಣ್ಣೊಟಿಸಿದಡಿದಾವರೆಯಿಂತೀ ಮಿ ಸೊಗಯಿಪ ಶೋಭಾವಹದಿವ್ಯಾಂಗಂ ಲಿಂಗದಿನೆಲ್ಲಂದು (ಶಾಸ್ತ್ರಕೆ. ೩-೩೯) ; ಪೊಂಬುಲಿಸಮ್ಮಮಾನೆದಲೆಮುತ್ತು . . . ಪೀಲಿಯುಂಬಿವಂ ತುಂಬಿದ ಕಂಬಿಯುಂ ತಳೆದದೇಂ ತಳರ್ವತ್ತೊ ಪುಳಿಂದಸಕುಳಂ (ಶಾಕಕೆ. ೫-೧೦೯).

[ಪೊಂಬುಲಿ+ಸಮ್ಮ (<ಚಮ್ಮ)]

**ಪೊಂಬುಟ್ಟ, ಪುಂಬುಚ್ಚ, ಪೊಂಬುಚ್ಚ, ಪೊಂಬುರ್ಚ, ಪೊನ್ನುಬ್ಬ, ಹೊಂಬುಚ, ಹೊಂಬುಚ್ಚ, ಹೊಂಬುರ್ಚ, ಹೊಂಬುಟ್ಟ** (ನಾ). ೧. ಒಂದು ಊರಿನ ಹೆಸರು ; ಈಗಿನ ಶಿವಮೊಗ್ಗಜಿಲ್ಲೆಯ ನಗರತಾಲ್ಲೂಕಿನ ಹುಂಚ. ಇದು ಜೈನರ ಪ್ರಸಿದ್ಧವಾದ ತೀರ್ಥ ಕ್ಷೇತ್ರ : ಉದಯಪುರದ ನಕ(ಗ)ರಸಹಿತಂ ಪೊಂಬುಟ್ಟದ ನಕ(ಗ)ರಕ್ಕೆ ಸುಂಕಕಾದುದು (ಎಕ. IX. ೨೨-೫ ; ಸು. ೯೦೦) ; [ಪೊ]ಮ್ಬುಟ್ಟದ ಮೇಲೆಟ್ಟು ಕೋಟಿಯು ಕೊಳ್ಳನ್ನು (ಕೌಇಇ. XX. ೦೫-೬ ; ೯೦೪). 'ಪಟ್ಟಿಪೊಂಬುಟ್ಟ' ಪರಾ. ೨. ಒಂದು ಊರಿನ ಹೆಸರು ; ಈಗಿನ ಗದಗು ತಾಲ್ಲೂಕಿನ ಹೊಂಬಳ : ಪೊಂಬುಟ್ಟದ ಮಹಾಜನಂ . . . ಧರ್ಮಾ ನುಷ್ಠಾನಪರಾಯಣರಾಗಿ ಸುಖದಿನಿರೆ (ಕೌಇಇ. XI-i, ೯೯-೧೦ ; 1049). **ಪುಂಬುಚ್ಚ :** ೧. ತುಂಗಾದ್ರಿಯ ದೊರೆಯ ××× ಭಕ್ತಿಮನದಿಂ ಪುಂಬುಚ್ಚಮಿಪುನೆಗಂ ಪ ××× ಹದಿಲೊಕ್ಕಿಯುಬಿಯಂ ಜಿನಗೇಹಮಂ ಮಾಡಿದಂ (ಎಕ. VII. ಶಿವಮೊ. ೦೦೯-೧೦ ; 950?). **ಪೊಂಬುಚ್ಚ :** ೧. ಏಕಾಂಗವೀರ ಸಂಗ್ರಾಮಧೀರ ಪೊಂಬುಚ್ಚನಿರ್ದ್ಧಾಟಣ ಸಾವಿಮಲೆ ನಿರ್ಘಾಟಣ (ಎಕ. II. ೦೯೩-೩೬ ; 1131) ; ಪೊಂಬುಚ್ಚಪುರವರಾಧೀಶ್ವರ ಮಾರಿಹೊಳ್ಕರ ಕಾವ ವಸಂತಾಂತರ ವೈರಿ (ಇಕ. V. ೯೦-೬ ; 1586). ೩. ಒಂದು ವಂಶದ ಹೆಸರು (?) : ಸ್ವಸ್ತಿಶ್ರೀಪೊಮ್ಬುಚ್ಚಕುಲ ತಿಲಕಂಬ್ಬಳರ ಹರಿತಿನ್ರಿಪಂ ಲೋಕ್ಕಿಕ (ಎಕ. VIII. ನಗರ. ೨೨-೦ ; ಸು. 900 ?). **ಪೊಂಬುರ್ಚ :** ೧. ಕೊಂಗಳಿಯುಬ್ಬಂಗಿ ತಲೆಯೂರ ಪೊಂಬುರ್ಚ . . . ಮೊದಲಾಗನೇಕದುರ್ಗತ್ರಯಂಗಳನಶ್ರಮದಿಂ ಕೊಣ್ಡು (ಎಕ. II. ೦೩೨-೨೬ ; 1123). **ಪೊನ್ನುಬ್ಬ :** ೧. ಸ್ವಸ್ತಿಶ್ರೀ ಮಟ್ಟಿತ್ರವಾಹನ ಪೊನ್ನುಬ್ಬಾಳಿಕಿಳ್ಳಂ ನಾಗಣ್ಣನಧಿಕಾರಿಗಳಾಗೆ (ಎಕ. VI. ಕೊಪ್ಪ. ೩೬-೦ ; ಸು. 675 ?). **ಹೊಂಬುಚ :** ೧. ಇಂತಪ್ಪುದಕ್ಕೆ ಸಾಕ್ಷಿಗಳು ಹೊಂಬುಚನಾಡು ಮುದುವಂಣನಾಡು ಸಾಕ್ಷಿಗಳು ಪೂಪ್ಪ ಬಿಲ್ಲೇಶ್ವರ ದೇವರು (ಎಕ. VIII. ತೀರ್ಥ. ೦೨೬-೯೦ ; 1378) ; ಹೊಂಬುಚದ ಸೀಮೆಯಿಂದಲು ಪ್ರಾಕು ಸುಂಕದ ಬಸ್ತಿಯ ಸಿದ್ಧಾಪುರದ ಮಠಕೆ ಉತ್ತಾರವಾಗಿಯಿದ್ದ ಸ್ವಾಸ್ತಿಯು (ಎಕ. VIII. ತೀರ್ಥಹ. ೯೬-೦೩ ; 1664). **ಹೊಂಬುಚ್ಚ :** ೧. ಶ್ರೀಮತು ಹೊಂಬುಚ್ಚದ ಆದಿಬಿಲ್ಲೇಶ್ವರ ದೇವರ ದಿವ್ಯಶ್ರೀಪಾದಪದ್ಮಾರಾಧಕಂ (ಎಕ. VIII, ನಗರ. ೦೨೫-೯ ; 1216) ; ಮಲ್ಲಪ್ಪಗಳ ಮಗ ಹೊಂಬುಚ್ಚದ ಯಿಂ ×× ಪಾಯಣ್ಣ . . .

ಸ್ವರ್ಗಸ್ಥರಾದರು (ಎಕ. VIII. ಶಿಕ. ೫೮-೯ ; 1300). **ಹೊಂಬುರ್ಳ** : ೧. ಹದಿನೆಂಟುಕಂಪಣದೊಳಗಣ ಹೊಂಬುರ್ಳ್ನಾಡ × × × ನಾಗರ ಹಳ್ಳಿಯ (ಎಕ. VIII. ಶಿಕ. ೬೯-೦೮ ; ?). **ಹೊಂಬುಟ್ಟು** : 'ಪಟ್ಟ ಹೊಂಬುಟ್ಟು' ಪರಾ.

**ಪೊಂಬೆಟ್ಟು**, ಪೊಂಬೆಟ್ಟು, ಪೊನ್ಬೆಟ್ಟು, ಹೊಂಬೆಟ್ಟು (ನಾ). ಚಿನ್ನದ ಬೆಟ್ಟ; ಮೇರುಪರ್ವತ : "ಪೊಂಬೆಟ್ಟದೆಂದೆನಲಕ್ಕು ಹೇಮಾದ್ರಿಗೆ" (ಶಕ. ೬೦); ದಿಟ್ಟಿಗೆ ಪೊಲನಾದುದು ಪೊಂಬೆಟ್ಟುಂ ಜಿನಜನ್ಮಸವನವಾಣ ಮಯಮಪ್ಪುಂ (ಹರಿವಂಶ. ೦-೯೯); ಅಂಬುಧಿಮಧ್ಯದ ಧರೆಯೊಳು ಚತುರಾಸ್ಯ ನೆಂಬ ವಿದ್ಯಾಧಿಕನೊಲಿದು ಕಂಭಸೂತ್ರವ ಪ್ರತಿಷ್ಠೆಯ ಮಾಡಿದಂದದಿ ಪೊಂಬೆಟ್ಟ ಕಣ್ಗೆ ರಾಜಿಸಿತು (ಭೋಜಕ. ೨-೦೦). **ಪೊಂಬೆಟ್ಟು** : "ಸೊಗ ಯಿಕುಂ ಪೊಂಬೆಟ್ಟು ಪನ್ನದಪ್ಪಲು ಸುರಗಿರಿಗೆ" (ಶಬ್ದಮ. ೦೦) : ಭೂಪನಿತೆ ಭರ್ಗೆಗೆ ನೆತ್ತಿಯೊಳ್ ಪೊತ್ತ ಸೊಡರೋ ಎಟಾ ರಪೊಡಿನಿಸಿ ಪೊಂಬೆಟ್ಟೆಸೆವುದು (ಶಕ್ತಿಶ. ೨-೬) ; ಗಿರಿಯಗ್ರದ ನಾಲ್ಕುಶಿಖರ ದೊಳು ನಾಲ್ಕುನಾಲ್ಕಿರೆಯಕೃತ್ರಿಮಜಿನವಾಸ ವರರತ್ನ ರಜತ ಸುವರ್ಣದಿ ಪದಿನಾಱು ಮೇಱೆಯಲಾ ಪೊಂಬೆಟ್ಟನಲಿ (ಜೀವಂಧರ. ೦-೨೫). **ಪೊನ್ಬೆಟ್ಟು** : ಮಾದೇವನ ಪೊನ್ಬೆಟ್ಟೇಱದರತ್ಕಾದರದಿಂದ ಕರೆದೊಡೆಳೆ ಯರ್ವುರಸರ್ವ ಸಂಹಿತೆ (ಶಾನ್ತಕೀ. ೬-೬೬). **ಹೊಂಬೆಟ್ಟು** : ವನ್ನನೆಯ್ದೆ ಪೂಪ್ಪೆಟ್ಟಮನಾ ಗಭೀರತೆಯೊಳಮ್ಬುಧಿಯುಂ ಗೆಲೆವನ್ನಂ (ಎಕ. VIII. ಶಿಕ. ೬೨೪-೫೦ ; 1178 ?) ; ತಟ್ಟ ಸಮ್ಮೋಹಸಮುದ್ರಕೆ ಹೊಂಬೆಟ್ಟದೊಟ್ಟ ಸೇತುವೆಗಟ್ಟ ದಂತೆ ಬಟ್ಟವೊಲೆಗಳೂಡ್ಡ ಪೋಱದುವು ಮೊಲೆಕಟ್ಟನ ಮಱೆಯೊಳು (ಕಕಕ. ೦೬-೯೨).

**ಪೊಂಬೆಟ್ಟಬಿಲ್ಲಯ್ಯ** = ಮೇರುಪರ್ವತವನ್ನು ಧನುಸ್ಸಾಗಿ ಉಳ್ಳ ವನು; ಶಿವ : ಸುಕುಮಾರನಂ ಒಯ್ದು ಪೊಂಬೆಟ್ಟಬಿಲ್ಲಯ್ಯನೋಲಗದಲ್ಲಿ ನಿಲಿಸಲ್ಕೆ (ಶ್ರೀಶಿಕ. ೦೯-೨೬). **ಪೊಂಬೆಟ್ಟುವಿಲ್ಲ**, ಪೊಂಬೆಟ್ಟುವಿಲ್ಲ = ಪೊಂಬೆಟ್ಟಬಿಲ್ಲಯ್ಯ : "ಎಣ್ಣಯ್ಯಂ . . . ಪೊಂಬೆಟ್ಟವಿಲ್ಲಂ, ಇಂಗಳಗಣ್ಣಂ . . . ಅಯ್ಯೊಗು—ತಾ ೩.೩. ಈಶ್ವರಂಗೆ ಪೆಸರ್" (ಕಕಕಾ. ೬೬-೦) ; ವಿರಹಾಗ್ನಿಯ ಕಿಡಿಸು ಪೊಂಬೆಟ್ಟುವಿಲ್ಲನ ಪಟ್ಟದರಸಿ (ಉದ್ಭಟಕಾ. ೨೬-೬೫).

[ಪೊಂ (< ಪೊನ್) + ಬೆಟ್ಟ]

**ಪೊಂಬೆಟ್ಟು** 'ಪೊಂಬೆಟ್ಟ' ನೋ.

**ಪೊಂಬೆತ್ತ** (ನಾ). ಚಿನ್ನದ ಬೆತ್ತ.—ಸೆಳೆ : ಕೆಯ್ಯ ಸೋಂಕಿಂದೆ ಕೆಂಪಂ ತಳೆದೊಪ್ಪಂಬೆತ್ತ ಪೊಂಬೆತ್ತದ ಸೆಳೆಗೆ ತಳಿರ್ಮೂಡಿದಂತಾಗೆ . . . ಬಂದಳ್ ಪ್ರತೀಹಾರಿಯರ್ಬಳ್ (ಅಜಿತ. ೯-೬೬) ; ನೆರೆದೊತ್ತರಿಪ ಸುರಸಿದ್ಧ ಸಾಧ್ಯಗಂಧರ್ವಾದಿಗಳ ವಿಸರದರಳ್ವಿಗಳೆದ ಕಳಕಳಮಂ ಪೊಂಬೆತ್ತಮನೆತ್ತಿ ಹೋ ಸಾರ್ ತೊಲಗೆಂದು ನಿವಾರಿಸಿ (ಕಬಕಾ. ೦-೭೯ ೩).

[ಪೊಂ (< ಪೊನ್) + ಬೆತ್ತ]

**ಪೊಂಬೆಸ**, ಹೊಂಬೆಸ, ಹೊಂಬೆಸೆ (ನಾ). ಚಿನ್ನದ ಕೆತ್ತನೆಕೆಲಸ; ಹೊಗೆಲಸ : ಕಂಬುಲತಾಸುಲಲಿತಲವಣಾಂಬುಧಿಪರಿಧಾನವಾಗೆ ಬೆಲ್ಲಂ ಪಡೆದೀ ಜಂಬೂದ್ವೀಪಪ್ರಭುಗಿದು ಪೊಂಬೆಸದೊಳೆ ಸಮೆದ ಮಕುಟ ವಿವರ್ಣಂತಿರ್ಪಂ (ಆದಿಪು. ೬-೬೨) ; ಪೊಂಬೆಸದುಪ್ಪರಿಗೆಯ ಬಿಸವಂದ ವಿಪಾದ ಚುಂಚುಲೋವೆಗಳೊಳಗೆ ಬಳಸಿ ಸಲಿದುಲಿವ ಪಾರಿವಂಗಳ ಕೊರಲುಲಿಯೊಳಂ (ಕನ್ನ. ೯೮). **ಹೊಂಬೆಸ** : ಸಿಡಿಲ್ . . . ದಿಟಂ ಹೊಂಬೆಸಕ್ಕಂ ಬಡೆಯಲ್ ಯಕ್ಷೇಶನಂ ನಿರ್ಮಿಸಿ ನಿರುಪಮಸಾಮ್ರಾಜ್ಯ ಪಟ್ಟಾರ್ಹನಂ ಮಾಡಿಡೆ . . . ಅದರಕಪ್ಪುನಾ ವಜ್ರಪಾತಂ (ಶಾಂತೀಶ್ವ. ೩-೬೬) ; ಚಂದ್ರಾತಪವನಪಹರಿಸುವುದು ಹೊಂಬಿಸಿಲು ಕಡೆದ ಕರುವಾಪದ ಕವಾಟದ ಕಢವಿಡಿದು ಹೊಂಬೆಸದಲುಱಿ ಹೊಗರಿಡುವ ನೀಲದ ಮಹೌಕ್ತಿಕದ ಮಾಣಿಕದ ಲಹರಿಯಲಿ (ಕೂಕಡಾ. ೩-೨-೬೯). **ಹೊಂಬೆಸೆ** : ಅಂಬರ ವಿಂಬಿಲ್ಲ ಮುಂಬಲಿ ತುಂಬಿದ ಹೊಂಬೆಸೆಯಾಲಮ್ಮುಲಿಗೆ ಜಂಭಾರಿಗಿಂಬಾದ ಕುಂಭಯುಂದದ ಮದಸ್ತಂಬೇರಮಗಳ್ವಿದಿದುವು (ಕಂಶಕ. ೦೬-೨೬).

[ಪೊಂ (< ಪೊನ್) + ಬೆಸ]

**ಪೊಂಬೆಸಗೆಯ್** (ಕ್ರಿ). ಚಿನ್ನದ ಕೆತ್ತನೆಕೆಲಸವನ್ನು ಮಾಡು : ಇರೆ ಚಂದ್ರಂ ತೊಲೆಯೊಳ್ ಹಿಮಕಿರಣಸುತಾದಿ ಗ್ರಹತ್ರಯಂ ನೋಡೆ ಧರಾಮರಪತಿ ಪೊಂಬೆಸಗೆಯ್ವಂ (ಜಾತಕ. ೨೦-೭). [ಪೊಂಬೆಸ + ಕೆಯ್]

**ಪೊಂಬೆಸಱ್**, ಹೊಂಬೆಸರು, ಹೊಂಬೆಸಱ್, ಹೊಂಬೆಸಱು (ನಾ). ಹೊಂಬಣ್ಣದ ಹೆಸರುಕಾಳು : ತಿಪುಡುಗಳೆದ ಪೊಂಬೆಸಱ ಮಹೋ ಜ್ವಳಮಪ್ಪ ಕಂಪಿನಿಂಪಿನ ನಿಳಯಮುಮೆನಿಸಿರ್ದ ಸವಿಯಿನೊದವಿದ ತೊವೆಯಂ . . . ಉಂಡು (ಧರ್ಮಾಮೃ. ೦-೦೪೯) ; ಪೊಂಬೆಸಱ ಸೂಪದ ನೊಪ್ಪುವ ಮಾದುರಂಗಳಂ ಯುವತಿ ತೆರಳ್ಚಿ ಬಡ್ಡಿಸಿದಳ್ (ವಿಳ್ಳು. ೦೨-೦೬೦). **ಹೊಂಬೆಸರು** : "ಪೀತಮುದ್ಗಾ — ಹೊಂಬೆಸರು" (ಚಿತ್ರಿ. ೯೮). **ಹೊಂಬೆಸಱ್** : ಹೊಂಬೆಸಱ ಸೂಪಮದಱೊಳಗಿಂಬಾದುದು (ಚಾರಿತ್ರ. ೦೦-೬೬). **ಹೊಂಬೆಸಱು** : ಸಿಹಿತೊಂಡೆ, ಹೊಂಬೆಸಱು, ಕಳ್ಳಂಗಡಲೆ ಇವಂ ಕಷಾಯವಂ ಕಾಸಿ . . . ಪ್ರತಿಪಾಕ ಹಾಕಿ ಕೊಡುವುದು (ಶಿಶ್ವ. ೦೬೩).

[ಪೊಂ (< ಪೊನ್) + ಪೆಸಱ್]

**ಪೊಂಬೆಳಗು**, ಹೊಂಬೆಳಕು, ಹೊಂಬೆಳಗು (ನಾ). ೧. ಹಳದಿಬಣ್ಣದ ಕಾಂತಿ ; ಹೊಂಬಣ್ಣದ ಪ್ರಕಾಶ : ಪೊಂಬೆಳಗುಮಂ ಪರಪುತ್ತದು . . . ಸುಟ್ಟತು ತಿಂದು ತೇಗಿದತ್ತಗಿಯದೆ ನಿಂದ ಪೂಗಣೆಯನಂ ಪಣೆ ಗಣ್ಣರಿ ಹಂಪೆಯಾಳ್ವನಾ (ಗಿರಿಜಾ. ೬-೯೭). **ಹೊಂಬೆಳಕು** : ೨. (ಅಲಂ) ಜ್ಞಾನದ ತೇಜಸ್ಸು; ಅರಿವಿನ ಬೆಳಕು : ತಂಬೆಳಕಾಗಲಿ ನಂಬೆಳಕೆನು ವೊಲು ಹೊಂಬೆಳಕೇ ಹೊರಸೂಸಲಿ (ಕಳಕು. ೬೦೦-೭); ಈಚೆಗೆ ಪಾಶ್ಚಾತ್ಯ ಶಿಕ್ಷಣರಂಗದಲ್ಲಿ ಸಂಶೋಧನೆಯ ಹೊಂಬೆಳಕು ಬಿದ್ದು, ಅಲ್ಲಿನ ಬೋಧನ ಕ್ರಮ ಬಹುವಾಗಿ ಉತ್ತಮಗೊಂಡಿದೆ (ಶಿಕ್ಷಕ. ೨೦೯). **ಹೊಂಬೆಳಗು** : ೧. ಅಸಿಯಳೆ ಕಂಡಪ್ಪಿ ಜ್ಯೋತಿ ಪ್ರಜ್ವಲಿಸಲು ಮಸುಳಿಸದೆ ಜ್ಯೋತಿ ಹೊಂಬೆಳ ಗಾಯಿತಮ್ಮ (ಅನಕಂ. ೨೯೯-೦೫೦೩). [ಪೊಂ (< ಪೊನ್) + ಬೆಳಗು]

**ಪೊಂಬೊಂಬೆ**, ಹೊಂಬೊಂಬೆ (ನಾ). ಚಿನ್ನದ ಗೊಂಬೆ; ಸ್ವರ್ಣ ಪುತ್ಥಳಿ : ಕಂದರ್ಪನೆಂಬ ಡೊಂಬನ ಚಂದದ ಪೊಂಬೊಂಬೆವಿಂದು ನೆರೆದತ್ತಾಗಳ್ (ಹರಿಶ್ಚ. ೨-೬೦). **ಹೊಂಬೊಂಬೆ** : ನನ್ನ ಸರಿಹರೆಯದ ರಮಣಿಯರು ಹೊನ್ನ ಸಸಿ ಹೊಂಬೊಂಬೆ ರನ್ನದ ಚೆನ್ನ ನ್ನಡಿಯೆನಿಪ ಮಕ್ಕಳ ನೋಡಿ ಪಾಡುವರು (ಹಾಳ್ಳಳ. ೬-೦೦); ಇಟ್ಟ ಕಿರೀಟ ಮೂಡುವ ಸೂರ್ಯನಂತೆ ಮೈಗಟ್ಟು ಹೊಂಬೊಂಬೆಯಂತೆಸೆಯೆ ಬೆಟ್ಟದ ನಡೆಸುವಂತಾ ರಾಯ ಮುಂದಕೆ ಪಟ್ಟದಾನೆಯ ನಡೆಸಿದನು (ಕಕಕ. ೨೦-೬೨).

[ಪೊಂ (< ಪೊನ್) + ಬೊಂಬೆ]

**ಪೊಂಬೊಗರ್**, ಹೊಂಬೊಗರು (ನಾ). ೧. ಚಿನ್ನದ ಕಾಂತಿ.— ಹೊಳಪು. ೨. ಚಿನ್ನದ ಬಣ್ಣದ ಕಾಂತಿ; ಹೊಂಬಣ್ಣದ ಪ್ರಕಾಶ.— ಹೊಳಪು : ಕೆಂಬೊಗರಿನ ಸಿರಿಯಿಂದಂ ಮೊದಲೊಳ್ ಪೊಂಬೊಗರಿಂದಂ ಸಮನಂತರದೊಳ್ ಅಂಬರಕೇರುತ ಚಂದ್ರಂ ತುದಿಯೊಳ್ ಬೆಳ್ಪೆಳಗಿಂ ಮೆರೆದಂ (ಶಾಸಕಾ. ೦೫೯); ಒಪ್ಪಿನಿಂ ಕುಣಿವ ಪರಿಜಂ ನೆರೆದು ಜೋಲ್ವವಿರ ಕಪ್ಪು ಬೆಳ್ಪುಗಳ ಪೊಂಬೊಗರ ನೇವರಿಸಿ . . . ಹಬ್ಬುಲಿಯಿಂ ಬರುತಿಹುದು (ಶಾಂತಿಶ. ೯೯-೦೬೬). ೩. ವಿಶೇಷವಾದ ಕಾಂತಿ,—ತೇಜಸ್ಸು : ನಗೆಮೊಗದ ಪೊಂಬೊಗರ ಮಿಂಚಿನ ಬೊಗಸೆಗಂಗಳ ಸೆಳೆನಡುವ ಸೆಳ್ಗುರ ಬೆಡಗಿನ ಕಾಂತ ರಂಜಿಸುತಿರ್ದಳಾ ಪುರದಿ (ಚಕಕ. ೨-೨೫). **ಹೊಂಬೊಗರು** : ೧. ಕವಿಯೊಬ್ಬ ಚಂದ್ರೋದಯವನ್ನು ನೋಡುತ್ತಿದ್ದಾನೆ . . . ಪೂರ್ವ ದಿಶೆಯಲ್ಲಿ ತಣ್ಣನೆಯ ಹೊಂಬೊಗರು ಹಬ್ಬುವುದು ಕಣ್ಣಿಗೆ ಬೀಳುತ್ತದೆ (ಕಾಂಚನ. ೦೦).

[ಪೊಂ (< ಪೊನ್) + ಪೊಗರ್]

**ಪೊಂಬೊಗರಿ,** ಪೊಂಬಗರಿ, ಹೊಂಬುಗುರಿ, ಹೊಂಬೊಗರಿ (ನಾ). ಬಂಗಾರದ ಬುಗುರಿ; ಚಿನ್ನದ ಬೊಗರಿ : ಅವಳ ನೆಲೆ ಮೊಲೆಗೆ ತಾವರೆಮೊಗ್ಗೆ ಪೊಂಬೊಗರಿಗಳೆಣೆಯೆಂದು ಭಾವಿಪನವನೆಗ್ಗನಲ್ತೆ (ಕುಸಾಸಾಂ. ೬-೨೬) ; ಪೊಂಬೊಗರಿಯುಂತಿರ್ಪ ಸುಕ್ಕೊಲೆಯ ದ್ಯುಗುಯುಗಳದಿಂ ನೋಡಿ (ಕೋಹಕ. ೧೯-೮೨). **ಪೊಂಬಗರಿ :** ಮೊಳೆತುವು ಮೊಲೆ . . . ಪೊಂಬಗರಿಯ ಬೆಳುಗಾಯ ಕರಂಡದೆಣೆ ವಕ್ಕಿಯ ಕಳಸದ ದೊರೆಯೆನೆ ಪರಿವಿಡಿಯಿಂ ಸುಕುಮಾರಿ ಸುರೋಚನೆಗೆ (ಶಹುಸಾ. ೩-೨೯). **ಹೊಂಬುಗುರಿ :** ಪೊಳ್ತರೆ ಬಂದು ನಿಶಿಯು ಬೋಗುಣಿಯೊಳಕೆ ಹೊಂಬುಗುರಿಯೆಸೆದು ತಾರೆಯರಳುಗಳನಲ್ಲಿಂದೆ ಚೆಲ್ಲಾಡಿಹನು (ಉಷಾ. ೦-೦). **ಹೊಂಬೊಗರಿ :** ಹೊಳೆವ ಹೊಂಬೊಗರಿಗೆ ಬೆವಟಕ್ಕೆ ಕೈಯಾರ ಬೆಳಗಿದೊಡೊಪ್ಪುವೆತ್ತಂತೆ ಅಳಲುವ ರತಿಯುರಸ್ಥಳದ ಭಸ್ಮಾಂಕಿತ ಕಳಸಕುಚಂಗಳೊಪ್ಪಿದುವು (ಕೋಹಕ. ೬-೨೨).

[ಪೊಂ (< ಪೊನ್) + ಬೊಗರಿ (< ಬವರಿ)]

**ಪೊಂಬೊಡೆಯ** (ನಾ). = ಪೊಂಬಸಿಱಿ : “ಪೊಂಬೊಡೆಯನಂಚಿದೇರಂ . . . ಬ್ರಹ್ಮಗೆಸವ ನಾಮಂ” (ಅ್ನ.ಶಾ. ೯) ; ಸುರಲಾಜನ್ಯತಂದು ಪೊಂಬೊಡೆಯಗಿಂತೆಂದು ಬಿನ್ನವಿಸಿದಂ (ಕಂಶಾಶಾ. ೧-೦೩-೯೩) ; ಮಹಾತಪದಿನೊಲಿಸಿ ಪೊಂಬೊಡೆಯನಂ ಪಡೆದನಾ ರಾವಣಂ ತ್ರೈಲೋಕ್ಯರಾಜ್ಯಾಧಿಕ್ಯತಿಪದವನು (ಕೀಹಶಾ. ೩-೯೩). [ಪೊಂ (< ಪೊನ್) + ಪೊಡ್ಡ + –ಅ]

**ಪೊಂಬೊರಜೆ** (ನಾ). ಚಿನ್ನದ ಹಗ್ಗ : ಬೆಳಗುವ ದಂತ ಪೊಂಬೊರಜೆ . . . ಪೊಕ್ಕುಳ ಫಂಟೆಯುಳಸಲೆಯ್ತಂದುದಾ ಹಸ್ತಿ (ಕುಶಾಸಾಂ. ೭-೯೯); ಕರದ ಪಟ್ಟೆಯ ಕೊಂಬಿನ ಸೂನಗಿ ಪೊಂಬೊರಜೆ[ಶಾಕಾಂ. ದೆ]ಮಣಿಯ . . . ಕರಿ ಲರಿಗಳು ಶಾಗಿದವು (ಕುಶಾಸಾಂ. ೦೨-೦೦೨).

[ಪೊಂ (< ಪೊನ್) + ಪೊರಜೆ]

**ಪೊಂಭಾಂಡ** (ನಾ). ಚಿನ್ನದ ಪಾತ್ರೆ; ಸ್ವರ್ಣಭಾಜನ : ಅದಲೊಡ ರ್ಚುವ ಪೊಂಭಾಂಡಗಳ ಕರ ಬೋನಗಡಣವ ಕೊಟ್ಟುಸುತ್ಸವದಿ (ಕೋಹಕ. ೦೩-೦೯). [ಪೊಂ (< ಪೊನ್) + ಭಾಂಡ]

**ಪೊಂಭಿತ್ತಿ** (ನಾ). ಚಿನ್ನದಿಂದ ನಿರ್ಮಿತವಾದ ಗೋಡೆ; ಬಂಗಾರದ ಗೋಡೆ : ಆ ಸಭಾಮಂಟಪದ ಪೊಂಭಿತ್ತಿಗೋಪುರದಿ ಲೇಸಿನ ವಿಚಿತ್ರ ಪತ್ರಪಾನಿರದೆ ರಚಿಸಿ (ಶಶಹೋ. ೨೦-೦೭). [ಪೊಂ (< ಪೊನ್) + ಭಿತ್ತಿ]

**ಪೊಂಭುಣಶೆ** (ನಾ). ಒಂದು ಬಗೆಯ ಮರ : ಅನ್ತ ತುಟ್ಟಿಲ ಪೇಱಿಂ ಱುಟ್ಟಿಯ ಕಮ್ಮರೆಯ ಗುಮಿವುಣಸೆಯ ಅಲೆ ಪೊಮ್ಮುಣಶೆ ಅನ್ತ ಬಳಿವುಣುಶೆಯ (ಎಕ. XVI, ತಿಪಟೂ. ೦೯೦-೬೬ ; ಸು. ೯೦೦).

[ಪೊಂ (< ಪೊನ್) + < ಪುಳಿಸೆ]

**ಪೊಕ್ಕ₁** ‘ಪೊಗು’ ಪರಾ.

**ಪೊಕ್ಕ₂** (ನಾ). ‘ಲೆಕ್ಕ’ ಶಬ್ದದ ಜೊತೆ ಬರುವ ಪ್ರತಿಧ್ವನಿಪದ : ಉಳ್ಕೊಮಗಳೊಳಗೆನಿತಱಿವುಳ್ಳರ್ಗಂ ತಿಳಿವಲರಿಯದೆನಿಪೆಡೆಗಳುಮಂ ತಳ್ಳಗಿರೆ ತಿಳಿವುಗುಂ ಬೆಸಗೊಳ್ಳೆ ಗುಣಾರ್ಣವನ ಲೆಕ್ಕಮುಂ ಪೊಕ್ಕ[ಶಾಕಾಂ. ಬಂಕ]ಮುಮಂ (ಶಂಶಾ. ೨-೪೩) ; “ಪೊಕ್ಕಮುಮಂ = ಲೆಕ್ಕಪಕ್ಕಗಳನ್ನು” (ಶಂಕರಿ. ೬೯). [?]

**ಪೊಕ್ಕರಣಿ** ‘ಪೊಕ್ಕರಣೆ’ ನೋ.

**ಪೊಕ್ಕರಣೆ,** ಪೊಕ್ಕರಣಿ, ಹೊಕ್ಕರಣಿ, ಹೊಕ್ಕರಣೆ, ಹೊಕ್ಬರಣೆ, ಹೊಖರಣೆ (ನಾ). ೧. (ದೇವಸ್ಥಾನದ ಬಳಿಯಿರುವ ಪವಿತ್ರವಾದ) ಕೊಳ; ಕಲ್ಯಾಣಿ : ತೀವಿದ ಪೊಕ್ಕರಣೆಗಳ ನೆಱೆದ ಕೆಱೆಗಳ ಸರೋವರಂಗಳ ಬೆಡಂಗುಗುಂದಲೆ ಪುರದೊಳ್ (ಸುಕುಮಾ. ೯-೩೦); ಇಕ್ಕೆಲದೊಳಗೊಪ್ಪುವ ಕರಣೀಶಾಲೆ ಪೊಕ್ಕರಣೆಗಳಿರುತಿಹವು (ಶಂಕಶ. ೩-೪೩). **ಪೊಕ್ಕರಣಿ :** ೧. ಮಲ್ಲಿಕಾರ್ಜುನದೇವರ ಗಟ್ಟಿಯಿಂ ಪಡುವಲು ಪೊಕ್ಕರಣಿಯಿಂ ಬಡಗಲು ಬಟ್ಟ ಗಟ್ಟ (ಎಕ. VII, ಶಿಕಾ. ೦೯-೨೬; 1066). **ಹೊಕ್ಕರಣಿ :** ೧. ಪಾಯಬ್ಬ ಬಾಡನಕಳ ಹೊಕ್ಕರಣಿಯ ಬಡಗಣ ದತ (ಎಕ. V, ಹಾಸಕ. ೬೦-೯೩ ; 1218) ; ಕೆಱೆ ಬಾವಿ ಹೊಕ್ಕರಣಿ ದೀರ್ಘಿಕೆ ಕೊಳು ಪಳ್ಳಂಗಳು ತುಸತೆನಗೆ ನೇಮಿಸಿರ್ಪುವು ಲೆಕ್ಕವಿಲ್ಲ (ಶಂಶ. ೦೭-೨೯) ; ಬಲಾಪುದರವು ನರಕದ ಹೊಕ್ಕರಣಿ (ಶಶಾಕೋ. ೩೬-೬). **ಹೊಕ್ಕರಣೆ :** ೧. “ಖಾತಾ, ಪುಷ್ಕರಿಣೀ – ಈ ೨ ಹೊಕ್ಕರಣೆ” (ಹಶಾಘು. ೦೦೧-೩೩) ; ದೇವರ ಹೊಕ್ಕರಣೆಯಿಂದ ಮೂಡಣ ದೆಸೆಯೊಳು . . . ಮತ್ತರೊನ್ದಂ ಬಿಟ್ಟರು (ಸೌಇಶಾ. IX–I, ೦೩೩-೩೯ ; 1083) ; ಗುರುಲಿಂಗಜಂಗಮಕ್ಕೆ ಪಾದಾರ್ಚನೆಯ ಮಾಡುವ ಹೊಕ್ಕರಣೆ ನಾಲ್ಕು ಪುರುಷಪ್ರಮಾಣದ ಘಾತ (ಕಶ್ಮಕ. ೯. ೦೩೬-೩೩೭) ; ಒರೆದ ವಜ್ರದ ಗಾರೆಗಳ ಹೊಕ್ಕರಣೆಗಳ ಸಾಲುಗಳು ಯೋಜನವೆರಡಱಲಿ ಘೃತತೈಲದಾಗ್ರಾದಿಗಳಿಗೆಡೆಯಾಯ್ತು (ಕೋಕಶಾ. ೦-೭-೬). ೨. ಕಮಲಗಳಿಂದ ತುಂಬಿರುವ ಕೊಳ ; ತಾವರೆಕೊಳ : (೩). **ಹೊಕ್ಬರಣೆ :** ೧. ಹಿರಿಯ ಹೊಕ್ಬರಣೆಯಿಂ ತೆಂಕಣ ಹೆಗ್ಗೆಱೆಯೊಳಗಣ ಮತ್ತರಾಱು ಕಮ್ಮಂ ನಾಲ್ಕೂಱಯ್ವತ್ತು (ಶಾಸಕ. ೯೭-೩೩ ; 1107 ?). **ಹೊಖರಣೆ :** ೧. ಹೆಗ್ಗಡೆ ಶ್ರೀಪದ್ಮನಾರಾಯಣದೇವರ ಮುಂದಣ ಹೊಖರಣೆಯ × × × ಗೆಳ್ದ ದೇವರ ವುಪಹಾರಕ್ಕೆ (ಎಕ. XI, ಹೊಳಕ್ಕೆ. ೦೬-೮೭ ; 1210).

[< ಪ್ರಾ. ಪೋಕ್ಖರಿಣೀ, ಪುಕ್ಖರಿಣೀ./ಸಂ. ಪುಷ್ಕರಿಣೀ]

**ಪೊಕ್ಕಳು** ‘ಪೊಕ್ಕುಳ್’ ನೋ.

**ಪೊಕ್ಕುಳು** ‘ಪೊಕ್ಕುಳ್’ ನೋ.

**ಪೊಕ್ಕಿ** (ನಾ). ಹಾದರಗಿತ್ತಿ ; ಜಾರೆ : ‘ನಾನು ಆ ಮಾಸ್ತರನ ಸುದ್ದಿ ತೆಗೆದ ಕೂಡಲೆ . . . ಓಡಿದಳಲ್ಲ ಹೆಣ್ಣುನಾಯಿ—ಪೊಕ್ಕಿ (ಮೂಕಶಾ. ೦೯೯).

[← ತುಳು. ಪೋಕಿ = ವ್ಯಭಿಚಾರಿ]

**ಪೊಕ್ಕು₁** ‘ಪೊಗು’ ಪರಾ.

**ಪೊಕ್ಕು₂,** ಹೊಕ್ಕು₂ (ನಾ). ಮಗ್ಗದ ನೆಯ್ಗೆಯಲ್ಲಿ ಅಡ್ಡವಾಗಿ ಹಾಕುವ ಎಳೆ : ಪಾಸಿನ ಪೊಕ್ಕಿನ ಮಾಣಿಕದ ಕಾಂತಿಯು . . . ಕೂಟದಂತೆ ಮಹಾಪುರುಷರ ಸಮ್ಯಕ್ತ್ವದೊಳಾದ ಕೂಟಮುಮತಿಶಯಂ (ಧರ್ಮಾಮ್ಮ. ೩-೦೯೯). **ಹೊಕ್ಕು₂ :** ಒಂದೆ ಕಾಲೊಳ್ ಪರಿವೆನೆಂಬ ಹೊಕ್ಕಿಲ್ಲದೆ ಸೀರೆಯು ನೆಯ್ವನೆಂಬ . . . ಪರ್ಗಾವಿಲನು ಪೋಲ್ಕುಂ (ಧರ್ಮಾಮ್ಮ. ೩೨-೦೩ ಅಂತರ್) ; ಅಡ್ಡಕ್ಕೆ ಬೀಳುವ ನೂಲುಗಳು ‘ಹೊಕ್ಕು’ ಎನಿಸುವುವು (ಶಾಂತ್ರ. I, ೯೨೦). [< ಪೊಗು]

**ಪೊಕ್ಕುಂದ** ‘ಪೊಂಕುಂದ’ ನೋ.

**ಪೊಕ್ಕುಳ್** ‘ಪೊಕ್ಕುಳ್’ ನೋ.

**ಪೊಕ್ಕುಳವಕ್ಕಿ** ‘ಪೋರ್ಕುಳಿವಕ್ಕಿ’ ನೋ.

**ಪೊಕ್ಕುಳಿ** ‘ಪೋರ್ಕುಳಿ’ ನೋ.

**ಪೊಕ್ಕುಳಿವಕ್ಕಿ** ‘ಪೋರ್ಕುಳಿವಕ್ಕಿ’ ನೋ.

**ಪೊಕ್ಕುಳು** ‘ಪೊಕ್ಕುಳ್’ ನೋ.

**ಪೊಕ್ಕುಳುಘಂಟೆ** (ನಾ). ಮಕ್ಕಳಿಗೆ ಉಡಿದಾರದಂತೆ ಕಟ್ಟುವ, ಘಂಟೆಯಾಕಾರದ ಒಂದು ಬಗೆಯ ಆಭರಣ : ಅರಳೆಲೆಯು ಮಾಗಾಯಿ . . . ಪೊಕ್ಕೊ[ಕ್ಕು]ಳುಘಂಟೆ ಪಾಲ್ಗಡಗ ಗೆಜ್ಜೆ ಸಹ ಬಾಲದೊಡವಾ ಪರಿಪರಿಯ ರತ್ನಖಚಿತಾಭರಣಗಳನಿಟ್ಟು (ಶಶವೋ. ೦೩-೩೦).

[ಪೊಕ್ಕುಳು (< ಪೊಕ್ಕುಳ್) + ಘಂಟೆ]

**ಪೊಕ್ಕುಳ್ಗೊಯ್** (ಕ್ರಿ). (ಮಗುವು ಹುಟ್ಟಿದ ತಕ್ಷಣ) ಹೊಕ್ಕುಳು ಬಳ್ಳಿಯನ್ನು ಕತ್ತರಿಸು : ಪುಟ್ಟಲೊಡನೆ ಪೊಕ್ಕುಳ್ಗೊಯ್ದು ಬೆನ್ನೀರಟ್ಟಿ . . . ಕೌರಿನ ಹೊಗೆಗೊಟ್ಟೊಪ್ಪದಿದರು ಬಾಲಕನನು (ಶ್ರೀಶಾಂ. ೨-೬೬).

[ಪೊಕ್ಕುಳ್ (< ಪೊಕ್ಕುಳ್) + ಕೊಯ್]

**ಪೊಕ್ಕುಟ್**, ಪೊಕ್ಕಳು, ಪೊಕ್ಕಟು, ಪೊಕ್ಕುಳ್, ಪೊಕ್ಕುಳು, ಪೊಕ್ಕುಟು, ಪೊರ್ಕುಳ, ಪೊರ್ಕುಳ್, ಪೊರ್ಕುಟ್, ಹೊಕ್ಕಳು, ಹೊಕ್ಕುಳ್, ಹೊಕ್ಕುಳ, ಹೊಕ್ಕುಳು, ಹೊಕ್ಕುಟ, ಹೊಕ್ಕುಟು (ನಾ). ೧. ಹೊಟ್ಟೆಯ ಮೇಲಿರುವ ಸಣ್ಣ ಕುಣಿ ; ನಾಭಿ : ಈಕೆಯ ಪೊಕ್ಕುಟ ಚೆಲ್ವೋ ಲೋಕದೊಳತಿಸೇವ್ಯಂ (ರವರ್ಮಾಕ್ಕು. ೩-೧೪೬) ; ಅರಿಸಿನ ವಂಚಿಯನಿಸಿಸೋಸರಿಸಲುವಿಾಯದೆ ಯತೋದರಿಯಾತಂ ಪೀತಾಂಬರನೆಂದು ಧರೆಗೆ ಪೇಟ್ಟುಂತಿರೆ ಪೊಕ್ಕುಟೊಳಿಕ್ಕಿದಳ್ ಪಯೋಜೋದರನಾ (ಅರಪ. ೬-೩೪) : ಒಸಗೆಯ ಮೇಲೆ ಮತ್ತೊಸಗೆ ಪೊಕ್ಕುಟ ಪೆರ್ಚಿನ ಮೇಲೆ ಪೆರ್ಚು . . . ಪಸರಿಸುವಂತಿರಗ್ರುಜೆ ತನೂಭವನಂ ಪತೆದು (ಅನಂಪು. ೦೨-೮೦). **ಪೊಕ್ಕಳು**: ೧. ನಿನ್ನ ನಡೆ ಜಗವ ಈರಡಿ ಮಾಡಿತು ನಿನ್ನ ಪೊಕ್ಕಳು ಸರಸಿಜ ನಾಭನ ಪಡೆಯಿತು (ಪ್ರರಂದ. ೩-೦೬೦-೧೪೨). **ಪೊಕ್ಕಟು** : ೧. "ಪೊಕ್ಕಟು ನಾಭಿಯಕ್ಕು" (ಶಬ್ದಗಣ. ೯೬-೦೩). **ಪೊಕ್ಕುಳ್** : ೧. ಹರಿಯ ಪೊಕ್ಕುಳ ಕನಕಾಂಬುಜದೊಳುದಯಿಸಿದು . . . ಬ್ರಹ್ಮಂ (ನಾಂರ್ಪಮ. ೨೪-೬ ; 123ಪದ್ಯ ೮೫) ; ಅಡಿ ತಳ್ತಿರ್ಗಳ್ ಕುರುಳ್ ತುಂಬಿಗಳ್ . . . ಪೊಕ್ಕುಳೇ ಕೊಳಂಗಳ್ (ಕಂಪು. ೯೫-೩೪). ೨. ಮಧ್ಯಭಾಗ ; ಕೇಂದ್ರ : ಪರಿಗೋಲಲನೇರ್ದು ಪೊಳೆಯಂ ಪಾಯ್ದು ಪೋಪವಂ ಪೊನಲ ಪೊಕ್ಕುಳ್ಗೆ ಬರೆ ಕಾಣ್ಬನದೊ ; ರಂಧ್ರದಿಂ ನೀರೊಳ್ಕಿ ನುಗ್ಗುಶಿರ್ಪುದು ಬುಗ್ಗೆಯೋಲ್ ! (ಶ್ರೀರಾಮಪಾ. ೬೬-೬೦೦). ೩. ಒಳಗು ; ಒಳಭಾಗ : ಪೊಳೆಗಳ ಮೂರರ ಪೊಕ್ಕುಳೊಳಿರ್ಪನ ಮೃತ್ಯುಂಜಯಾ ಎನ್ನಿರೊ (ಕಶ್ವಿಸ. I. ೨-೨). **ಪೊಕ್ಕುಳು** : ೧. ಚಿನ್ನವಿರದ ಪೊಕ್ಕುಳಲಿ ಬೆಳೆದು ಬಾಸೆನಾಳದ ಸರಸಿಜಪನ ಕೃಷ್ಣಗೆಸೆಗು (ವರ್ಧಕ. ೬-೩೦) ; ಎಸೆವ ತಿಲಕದ ನೊಸಲ ನೆಲೆಮೊಲೆಯ ನೀಳ್ದ ಬಾಸೆಯಗುಳಿದ ಪೊಕ್ಕುಳಿನ ... ಸೊಬಗಿನ ನಾರಿ ಸಕಲಸೌಖ್ಯಾಧಾರಿ (ಕಬಪು. ೩೬-೦೦). ೪. ದ, ಪ, ಬ ಮೊದಲಾದ ಕೆಲವು ಅಕ್ಷರಗಳಿಗೆ ನಡುವೆ ಬರುವ ಒಳಸುಳಿ : ಪೊಕ್ಕುಳು ತಲೆಕಟ್ಟುಮನನ್ಯಕ್ಕರದವಯವಮನಱಿದು ಬಣ್ಣಿಸಲುಕೀ ಇಳ್ಕುಡನೆ ಬಲ್ಲನ್ (ಎಕ. XI. ದಾಪಶ. ೦೪೯-೨೫ ; 1113). **ಪೊಕ್ಕುಟು** : ೧. ನಗೆಗಣ್ ನೀಳಸಪಸ್ರಪತ್ರದೆಸಟಂ . . . ಪೊಕ್ಕುಟು ನಂದಿವಟ್ಟದರಲಂ ಚೆಲ್ವಿಂದುಗುರ್ಗೂಡೆ ಕೇದಗೆಯಂ . . . ಪುಷ್ಪಾಸ್ತ್ರನ ಪಂಚಬಾಣವಿಸಿಪಳೆಂಬಾಶಂಕೆಯಂ ಮಾಡಿದಳ್ (ರವರ್ಮಾಕ್ಕು. ೬-೨೦೭). **ಪೊರ್ಕುಳ**: ೧. ಪೊಂಗಯ್ ಪೊಗು ಪೊರ್ಕುಳ ಕಿಟ್ಸ್ಟೊಡೆ ... ಪುರ್ವಳ್ಪೆ ಪಲ್ ಕೆಕ್ಕೆ ಕಾಲಡಿಯೆಂದಿಂತಿಪ್ಪನುರ್ಚಿ ಪೋದುವಿಸೆ ತತ್ಸಾಜನ್ಯಕಂದಾಂಕುರಂ (ಶಾಂತಿಪು. ೪-೦೭). **ಪೊರ್ಕುಳ್** : ೧. ನಿರುತಂ ಶ್ರೀಯುತಪುರವೆಂಬಿಂದ್ರಾವರಜನ ಮಧ್ಯದ ಪೊರ್ಕುಳ ಹೊದಾವರೆಯೆನೆ ರಂಜಿಪ ರಾಜಾಲಯಮೆಸೆಯುತ್ತಿರ್ದರ್ (ಕಮಲಾ. ೦-೬೬) ; ಪೊರ್ಕುಳೊಳ್ ವೇದಾಗಮಸೃಷ್ಟಿಕರ್ತೃ ಪೂಾದೇವರೂಪ ಚಂದ್ರನ ಕಣ್ಣೊಳಗಾಂತ ಮಾಧವನಿರವ ನೋಡಿದಳು (ಪಾರ್ಶ್ವಕ. ೨೯-೪೪). ೫. ಚಕ್ರದ ಮಧ್ಯಭಾಗ ; ಗುಂಬ : ದರುಮದ ಚರಕಂ ನಿನ್ನಿಯ ಪೊರ್ಕುಳುಮರಿವು ಸಮಾಧಿ ಧೃತಿಯುಮಿರೆ ನೇಮಿ ಅರವನೆ ನಯ ವಿನಯಮಪಂ ಹಿತಕಾ ಪರಿಷದದೊಳವಂ ನಡೆಯಿಸಿದಂ (ಸೌಂದರ. ೩-೦೦). **ಪೊರ್ಕುಟ್** : ೧. "ನಾಭಿ ಪೊರ್ಕುಟೆಂದೆಱಿವುದು" (ಶಸ್ತುಕೋ. ೬೮-೬) ; ಕೊಂದೆನ್ನ ಮಗನನಿಂ ಭಯದಿಂದಂ ರಸಪೊಕ್ಕುಮಜನ ಗುಂಡಿಗೆಪೊಕ್ಕುಂ ಮಂದರಧರನೀ ಪೊರ್ಕುಟ ಪೊಂದಾವರೆಪೊಕ್ಕು ಮೇಣಮಂ ಬರ್ದುಕುವನೇ (ಶಂಶಭಾ. ೦೦-೦೨೦) ; ಆ ಮಹೀಪಾಲನ ಲೋಲಲೋಚನಂಗಳಾಕೆಯ ಲಾವಣ್ಯರಸಕೂಪದಂತೆ ನಿಮ್ನಮಾದ ಪೊರ್ಕುಟಂ ಪೊಕ್ಕಱಿದುಂ . . . ತನೂಲತೆಯೊಳ್ಪುಳಕಾಂಕುರಮನೊದವಿಸುತ್ತುಮಿರೆ (ಮಲ್ಲಿಪು. ೩-೮೮) ; ಎಳೆವೆಣ್ಣ ಪೊರ್ಕುಟಲಗ್ಗೋರ್ಡೆಯಂತಿರೆ ಪೊಂಬೆಟ್ಟಂ . . . ಕಣ್ಗೊಳಿಕುಂ (ರಾಜಾಕ್ಕ. ೬-೩). ೪. ಬಿಂದುವಿನೊಂದು ಶೋಭೆ ತಲೆಕಟ್ಟಿನ ಪೊರ್ಕುಟ ಚೆಲ್ವು . . . ಪೋದಿರಲಕ್ಕರಕ್ಕೆ ಬರೆವಂ ಚತುರರ್ ಪರಿವರ್ತಿಸಲ್ ನವಿಲ್ಗುಂದದ ಮಾದಿರಾಜವಿಬುಧಂ (ಪುಪ್ಪಪ್ಪ. ೦೪-೫೬). **ಹೊಕ್ಕಳು** : ೧. "ನಾಭಿಃ . . . ಹೊಕ್ಕಳಿಗೆ ಹೆಸರು" (ಸಿದ್ಧಾಂತಿ. ೪೦೬) ; ಘೀವಾನು ಹೊಕ್ಕಳ ಕೆಳಗೆ ಹೊದೆದನಲ್ಲಾ . . . ಹೊಕ್ಕಳಿಂದ ಕೆಳಗೆ ಹೊದೆಯಕೂಡದೆಂಬುದು ನಿಯಮವು (ಪತಳ. ೩೦೫). **ಹೊಕ್ಕುಳ್** : ೧. ಹೊಕ್ಕುಳಿಂದ ಕೆಳಗೆಯು ಧರಿಸುವರಿಗೆ ಅಕ್ಕು ನೋಡು ಮಹಪಾತಕವವರಿಗೆ (ರಂಗ್ನಾಸೋ. ೬೩ ೦೪೩). ೨. ಅರ್ಚನೆಯು ಮಂಟಪವಮನಿಮಿರ್ಚಿ ನಡುವೆ ಕಟ್ಟಿದ ಮೇಲ್ಕಟ್ಟಿನ ಹೊಕ್ಕುಳ ಪುಲ್ಲಿಯು ತೊಂಗಲ್ಗಳಂ (ಕೇಶಕ. ಹ. ೩೦೪-೫). **ಹೊಕ್ಕುಳ** : ೪. ಹೊಕ್ಕುಳ ಎಂಬುದು ಕೆಲವು ಅಕ್ಷರಗಳಿಗೆ ನಡುವೆ ಬರುವ ಒಳಸುಳಿ. ದ, ಪ, ಬ – ಇಂತಹ ಅಕ್ಷರಗಳಲ್ಲಿ ಹೊಕ್ಕುಳವನ್ನು ಕಾಣಬಹುದು . . . ಕೆಲವು ಅಕ್ಷರಗಳಿಗೆ ಹೊಟ್ಟೆ ಹೊಕ್ಕುಳಗಳಿಲ್ಲ (ಸಂಕೋರ. ೧೦). ೬. (ಅಲಂ) ಹೊಟ್ಟೆ : ಬಸಿರು: ಎಲೆ ಆತ್ಮನೆ ಪಾತಕದ ಹೊಕ್ಕುಳದಲೇಕೆ ಹುಟ್ಟಿದೆ (ಪೋಲೀಶವಾ. ೦೦-೩೪). **ಹೊಕ್ಕುಳು** : ೧. ತ್ರಿವಳಿ ವ್ಯಗರೆಯ ಹೊಕ್ಕುಳ ಗುಣ್ಪು ಹೊಜಸೂಸೆ (ಚಕರ. ೦-೦೦೬) ; ಪುಷ್ಪವ ತಂದು ನಿನಗರ್ಪಿಸುವೆನೆಂದರೆ ಪುಷ್ಪ ಪಲ್ಲವಿಸಿದ ಹೊಕ್ಕುಳಲಿ (ಪುರಂದ. ೨-೬೬-೨). ೪. ಅನೇಕರು . . . ಹೊಕ್ಕುಳು, ತಲೆಕಟ್ಟು ಮುಂತಾದ ಅಕ್ಷರಗಳ 'ಅವಯವ' ಗಳನ್ನರಿತು ಕೆತ್ತಬಲ್ಲೆವೆಂದೂ ಹೇಳಿಕೊಂಡಿದ್ದಾರೆ (ಕಶಾಅ. ೬೩). ೬. ಬಿಡದೆ ಪಾಂಡುಕುಮಾರರತಗರಿ ಹರಿಯ ಹೊಕ್ಕುಳಲಿ . . . ರಿಪುಗಳ ಕಡಿದು ತಿನಿಸುವೆನು (ಕುಮ್ಹಾಕ. ೬೦೨. ೨೫-೦೩). **ಹೊಕ್ಕುಟ**: ೧. "ತುಂದಿಯೆನೆ ಬುಗುಡು ಹೊಕ್ಕುಟಮೆನಿಕು" (ಮಂಗರಾ. ೧೧೧-೫). **ಹೊಕ್ಕುಟು**: ೧. ಹೊಕ್ಕುಟು ಬುಗುಡುಳ್ಳವನು.. ತುಂಡಿಲ, ತುಂಡಿ (ಶಾಶರಾ. ೬).

**ಪೊಕ್ಕುಳ ಅರಸುಮಕ್ಕಳು** = ಪರಸ್ಪರ ಸಂಬಂಧವುಳ್ಳ ರಾಜವಂಶ : ಆತ್ತಲಿದ್ದರು ಸೆಟ್ಟಿಮುದ್ಯರು, ಗುತ್ತಿನಡ್ಯಂತಾಯರು, ಇತ್ತ ಪೊಕ್ಕುಳ ಅರಸುಮಕ್ಕಳ ಒತ್ತಿನಲಿ ಕಳದೆಡದಲಿ (ಕಬಪು. ೩೮-೪). **ಪೊಕ್ಕುಳ ಘಂಟೆ, ಪೊರ್ಕುಳ ಗಂಟೆ, ಪೊರ್ಕುಳ ಘಂಟೆ, ಹೊಕ್ಕುಳ ಗಂಟೆ, ಹೊಕ್ಕುಳ ಘಂಟೆ** = ೧. ಆನೆ, ಕುದುರೆ ಮುಂತಾದ ಪ್ರಾಣಿಗಳ ಹೊಟ್ಟೆಗೆ (ಹೊಕ್ಕುಳಿನ ಭಾಗಕ್ಕೆ ಬರುವಂತೆ) ಕಟ್ಟುವ ಘಂಟೆ : ತಳೆದು ಕಾಲ್ಪರಜೆಯ ಪೊಕ್ಕುಳ ಘಂಟೆಯನೆಳಲಿಕ್ಕಿ ಬಿಗಿದು ಗುಳವನು . . . ಕರಿಯನೇಱಿ ಕಲಿಜೋವರೆಸ್ತಿಂವರಂದು (ಕ.ರಾಸಾಂ. ೦೦-೨೫) ; ಪೊಕ್ಕುಳ ಘಂಟೆ ದೌಡೆ ಜಾಗಟೆರವಂ ಶೀವಿತಕ್ಷೆಸೆಯನಿರದೆ (ಪಪಪೋ. ೨೬-೬೦) ; ಪೊರ್ಕುಳ ಗಂಟೆಯ ಮೋಹಿಸುವ ದೊಗವಡದ . . . ಪರಿದು ಶರಧಿಯನೆಡಗಲಿಪ ಗಗನಮಣನಡರ್ವ ಜಾತ್ಯಶ್ವಂಗಳ ವಳಯಮಂ (ಗಂಕ. ೬-೫೩ ಪ) ; ಗರ್ಗರವ ಶರಜಾಗತ್ರಿಯ ಪೊರ್ಕುಳ ಘಂಟೆಯು . . . ತುರಗಸಂಘಾತದಿಂ (ರಾಶಕೀ. ೬-೦೦ ಪ) ; ಹೊಕ್ಕುಳ ಗಂಟೆ ಸೂಡಿದ ಸುವರ್ಣಗನ್ನಡಿ ಮೌಕ್ತಿಕಾವಳಿಯ ಜೋಡು (ಸಿಂಗಿರಾ. ೩೫-೬) ; ಕಟ್ಟಿದ ಹೊಕ್ಕುಳ ಗಂಟೆಯ ತೇಜಿಗಳಿಟ್ಟಣಿಸುತಲ್ಯೆದಿಮವು (ಕಂಪಂ. ೨೬-೪೪) ; ನೊಸಲಗನ್ನಡಿ ಥಣರೆಂಬ ಹೊಕ್ಕುಳ ಘಂಟೆ ಮಿಸುನಿಬರಹದ ಹಾವರಣ ಬಸಿವ ಗಲ್ಲದ ಮದಧಾರೆಯಿಂದಾನೆಗಳ್ಪೊಸಗಿ ಬಂದುವು ರಾಮ ನೆಡೆಗೆ (ಕರಕ. ೨೦-೬೨). ೨. ಮಕ್ಕಳಿಗೆ ಉಡಿದಾರದಂತೆ ಕಟ್ಟುವ, ಗಂಟೆಯಾಕಾರವುಳ್ಳ ಒಂದು ಬಗೆಯ ಆಭರಣ : ಪೊಕ್ಕುಳ ಘಂಟೆ ಪುಲಿನಖಂ . . . ಮಣಿಮಯಮುದ್ರೆಗಳ ಬೆರಳ್ಗಳಿಗಮರ್ಚಿ (ಪಪಪೋ. ೦೨-೦೬). **ಪೊಕ್ಕುಳ ಪುರಿ, ಹೊಕ್ಕುಳ ಹುರಿ** = ಭ್ರೂಣ ಮತ್ತು ಗರ್ಭಾಶಯದಲ್ಲಿರುವ ಪೋಷಕಾಂಗವನ್ನು ಸಂಬಂಧಿಸುವ ನಾಳ ; ನಾಭಿ ನಾಳ : ನೆರೆದಿರ್ದ ವಾರಿಜಾಕ್ಷಿಯರು ಪೊಕ್ಕುಳ ಪುರಿಯ ಕೊಯ್ದು . . . ಉಪಚಾರಮಂ ಮಾಡುತಿರಲು (ಪಪಪೋ. ೦೦-೨೦); "ಹೊಕ್ಕುಳ ಹುರಿ=

ಭ್ರೂಣವನ್ನೂ ಗರ್ಭಾಶಯದಲ್ಲಿರುವ ಪೋಷಕಾಂಗವನ್ನೂ ಸಂಬಂಧಿಸುವ ನಾಳ; ನಾಭಿನಾಳ" (ಅಕಂಶ). **ಪೊಕ್ಕುಳ ಬಳ್ಳಿ, ಹೊಕ್ಕುಳ ಬಳ್ಳಿ**=ಪೊಕ್ಕುಳ ಪುರಿ: ಮಿಡಮಿಡನೆ ಮಿಡುಕಿ ಪೊ[ಪಾಠಾಂ. ಹೊ]ಕ್ಕುಳ ಬಳ್ಳಿಯಂ ಕೊಯ್ದು (ಶಂಕೊ.ಅ. ಹ. ೩೦೦-೨೪) ; ಬೆಳ್ಳಿಯ ಒಡಿಯ ಕತ್ತಿಯ ತಂದು ಹೊಕ್ಕುಳ ಬಳ್ಳಿಯ ಕೊಯ್ದರಿರ್ಭಕನ (ಕೋಹಕ. ೦೭-೨೦) ; ಜೀವ ಜೀವವ ಬಂಧಿಸಿದ ಹೊಕ್ಕುಳ ಬಳ್ಳಿಯಯ್ಯಾ ಇದು (ಕುಮಾರಾ. ೨೦೭). **ಪೊಕ್ಕುಟಂ ಕೊಯ್** = ನಾಭಿನಾಳವನ್ನು ಕತ್ತರಿಸು: ಮಕ್ಕಳು ಪುಟ್ಟಿದಾಗಳೆ ಪೊಕ್ಕುಟಂ ಕೊಯ್ವುದನೆಲ್ಲರ್ಗಱಿಪಿ ನಾಭಿರಾಜನೆಂಬ ಪೆಸರನ್ವರ್ಥಂ ಮಾಡಿ (ಪುಣ್ಯಾಸ್ರ. ೦೦-೧೯ ಪ). **ಪೊಕ್ಕುಟ ಕುಡಿ, ಹೊಕ್ಕುಳ ಕುಡಿ**=ಪೊಕ್ಕುಳ ಪುರಿ : ಪೊಕ್ಕುಟ ಕುಡಿಯಂ ಪೆರ್ಚಿಸಲಿಕ್ಕಿದ ಮಣಿಕನಕಪುಂಜಮೆಸೆದಿರೆ ಮೂಲೋಕಕ್ಕೋಜನೆನಿಸುವಜನಂ ಪೊಕ್ಕುಟ ಪೂವಿಂದೆ ಪಡೆದುದುಂಟೆನಿಸಿರ್ದಂ (ಅಪಂಥ. ೧೨-೮೨) ; "ಹೊಕ್ಕುಳ ಕುಡಿ=ಭ್ರೂಣವನ್ನೂ ಗರ್ಭಾಶಯದಲ್ಲಿರುವ ಪೋಷಕಾಂಗವನ್ನೂ ಸಂಬಂಧಿಸುವ ನಾಳ ; ನಾಭಿನಾಳ" (ಅಕಂಶ). **ಪೊಕ್ಕುಟ ಪೂ, ಪೊರ್ಕುಟ ಪೂ** = (ವಿಷ್ಣುವಿನ) ನಾಭಿಯಲ್ಲಿ ಹುಟ್ಟಿದ ಹೂವು : ಲೋಕಂಗಳನಾ ಹರಿ ಬಸುಱೊಳ್ಟುನಂತಾತನ ಪೊಕ್ಕುಟ ಪೂವಿನಲ್ಲಿ ಲೋಕಂಗಳನೆಲ್ಲ ಮಾಡಿದಜನೆ ಪುಟ್ಟಿದನೆಂಬರ್ (ಸಮಚ. ೦೦-೯೯) ; ಮೂಲೋಕಕ್ಕೋಜನೆನಿಸುವಜನಂ ಪೊಕ್ಕುಟ ಪೂವಿಂದೆ ಪಡೆದುದುಂಟೆನಿಸಿರ್ದಂ (ಅಪಂಥ. ೧೨-೮೨) ; ರಾಜೀವಸಖಂ ಸಜಳಜಳಧರಶ್ಯಾಮಾಭ್ರು ಶ್ರೀವತ್ಸಾಂಕನ ಪೊರ್ಕುಟ ಪೂವೆನೆ ಕೆದಱಿದವನಪಂಳಕರಕೇಸರವಂ (ಅಂಣಾಚ. ೪-೦೯೯). **ಪೊಕ್ಕುಟ ಸುೞಿ, ಹೊಕ್ಕುಳ ಸುೞಿ** = ೧. ನಾಭಿಯ ಪರ್ತುಲ: ಅಳಿಪಿಂ ಪೆಂಡಿರ ಪೊಕ್ಕು[ಪಾಠಾಂ. ಪೊರ್ಕು]ಟ ಸುೞಿಯೊಳ್ ಸುೞಿತರ್ಪ ನೃಪನ ಕಣ್ಬೊನ್ನಗಳನೇನೆಱಿಸಿದವೊ ನದಿಯೊಳೊಡವಿದ ಸುೞಿಗಳ ಬಱಿಉಡಿದು ಸುೞಿದು ಪೊಳೆವೆಳಮಿಾಂಗಳ್ (ಕಾಕ್ಯಕ. ೪-೨). ೨. ಪ, ಮ ಮೊದಲಾದ ಅಕ್ಷರಗಳ ಅಡಿಯಲ್ಲಿರುವ ಒಳಸುೞಿ : ಪ, ಮ, ವ—ಇಂಥವಕ್ಕೆ ಅಡಿಯಲ್ಲಿ ಅಂದರೆ ಕೆಳಗಡೆ ಒಳಸುಳಿಯಿದೆ. ಈ ಕೆಳಗಡೆ ಇರುವ ಸುಳಿ "ಹೊಕ್ಕುಳ ಸುಳಿ" ಎನಿಸುತ್ತದೆ (ಸಂಕೋಶ. ೨೦೦). **ಹೊಕ್ಕುಳಲಿ ಹೂದುಱುಬಿದಾತ** = ನಾಭಿಯಲ್ಲಿ (ಕಮಲದ) ಹೂವುಳ್ಳವನು ; ಪದ್ಮನಾಭ ; ವಿಷ್ಣು: ಹೆಱಿಯ ಹೊತ್ತನ ಹೊಕ್ಕುಳಲಿ ಹೂದುಱುಬಿದಾತನ ಮಗಳಗಳುಪಿದ ಮೊಱೆಯವನ ಹೆಂಡಿರನು ಬಲ್ಲೆನು ಕಂಡು ಪಾಸು (ಕೊರವ. ೬-೯-೨೯). **ಹೊಕ್ಕುಳ ಸೀಳು** = ದ, ಪ ಮೊದಲಾದ ಅಕ್ಷರಗಳನ್ನು ಮಹಾಪ್ರಾಣಗಳಾಗಿ ಬರೆಯುವಾಗ ಆ ಅಕ್ಷರಗಳ ಹೊಕ್ಕುಳ ಸುಳಿಯಿಂದ ಕೆಳಗೆ ಗೆರೆ ಎಳೆ : ಡ, ದ, ಪ—ಮುಂತಾದುವನ್ನು ಮಹಾಪ್ರಾಣಗಳಾಗಿ ಬರೆವಾಗ 'ಹೊಕ್ಕುಳ ಸುಳಿ'ಯಿಂದ ಕೆಳಗೆ (ಢ, ಧ, ಫ—ಎಂಬಂತೆ) ಗೆರೆ ಎಳೆಯುವರಷ್ಟೆ. ಇದನ್ನು 'ಹೊಕ್ಕುಳ ಸೀಳು ವುದು' ಎನ್ನುತ್ತಾರೆ (ಸಂಕೋಶ. ೨೦೨). **ಹೊಕ್ಕುಳ ಹೂವ** = ನಾಭಿಯಲ್ಲಿ ಹೂವಿರುವವನು ; ವಿಷ್ಣು : ಹೊಕ್ಕುಳ ಹೂವನ ರೂಹ ತೋಱಿದಳು ಪೆಣ್ಮಕ್ಕಳ ಮಂಡೆಮಸಣಕಕೆ (ಕೋಹಕ. ೩೦-೨೩). **ಹೊಕ್ಕುಳಾರದ ಶಿಶು**=ಅದೇ ಹುಟ್ಟಿದ ಕೂಸು ; ಹಸುಗೂಸು : ಮಹೀಶೂರರತ್ನಸಿಂಹಾಸನದ ಸಮರಾಂಗಣಧರ್ಮಕ್ಕೆ ಇಂತಹ ವೀರವಿಶ್ವಾಸವನ್ನೊಪ್ಪಿಸಿ, ತವಕದ ಪ್ರತ್ಯಾಶೆಯಿಂದ ಕುದಿಯುತ್ತಿರುವ ಕಯ್ದುಗೊಳ್ಳದ ಮಾರಾಳಿ . . . ಸ್ತ್ರೀ !—ಹೊಕ್ಕುಳಾರದ ಶಿಶು ! (ಚಿಕ್ಕಿಂ. ೭೩-೦೫). **ಹೊಕ್ಕುಟ ಬುಗಟು** = ಉಬ್ಬಿರುವ ನಾಭಿ : ವೃದ್ಧನಾಭಿಃ, ತುಂದಿಲಃ, ತುಂಡಿಭಃ—ಈ ೩ ಹೊಕ್ಕುಟ ಬುಗುಟುಳ್ಳವನು (ಪಾಠಕಾ. ೦೨೦). [ದೇ. ॥ ತಮಿ. ಪೊಕ್ಕುಳ್, ಪೋಕಿರ್; ಮಲ. ಪೊಕ್ಕುಳ್, ಪೊಕ್ಕಿಳ್ ; ತುಳು. ಪುವಳು, ಪುವೊಳು, ಪುವೊಳು ; ಕೊಡ. ಪೊಕ್ಕಿ ; ತೆಲು. ಪೊಕ್ಕಿಲಿ ; ಕೋಲಾ. ನಾಯ್ಕಿ. ಬೊಗುರ್]

**ಪೊಕ್ಕುಟು** 'ಪೊಕ್ಕುಟ್' ನೋ.

**ಪೊಕ್ಳ** 'ಪುಗುಳ್೩' ನೋ.

**ಪೊಗಟು** 'ಪಗಟು' ನೋ.

**ಪೊಗಡ, ಪಗಡೆ೧, ಪೊಗಡೆ** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು ; ಬಕುಳ ; ಕೇಸರ : ಪೊಗಡದ ಪೊಸಪೂವಿನ ತುಡುಗೆಗಳ್ಗಮಧರದ ಪೊದಟ್ಟ ತಣ್ಗಂಪಿಂಗಂ ಮೃಗನಯನೆಯರನೆ ಬಿಡದೋಲಗಿಸುದುದಳಿನಿಕರಮವರನಾರೋಲಗಿಸರ್ (ಅದಿಪು. ೧೦-೧೦೨). **ಪಗಡೆ೧** : ಸುರಗಿ ಸುರಹೊನ್ನೆ ಸಂಪಿಗೆ ಪಗಡೆ ಪನ್ನೀರು ಪಾರಿಜಾತ ಮೊದಲಾದ ತರುಗಳಲ್ಲಿ (ಸೌಗಂಧಿ. ೪-೦) , ನೇರಳೆ, ಪಗಡೆ, ಪಾದರಿ . . . ಮೊದಲಾದ ಪುಷ್ಪಫಲ ಭರಿತವಾದ ವೃಕ್ಷಗಳನ್ನು (ಕೃಪಾಅ. ೨೨೮). **ಪೊಗಡೆ**: ಸೌಗಂಧಿಕಾದೇವಿಗೆ . . . ಪೊಗಡೆಹುವ್ವುಗಳ ಪೋಣಿಸಿದ ಒಡ್ಯಾಣವಂ ನಡುವಿನೊಳ್ ಕಟ್ಟಿದರೆ ನಡೆಯುವವರೆ ತಡವಾಗಿ ಬಳಲಿ ಅಲ್ಲಲ್ಲಿ ನಿಲ್ಲುವಳು (ಸೌಗಂಧಿ. ೨೦೦-೨೨). [ದೇ. ॥ ತೆಲು. ಪೊಗಡ, ಪೊವಡ]

**ಪೊಗಡೆ** 'ಪೊಗಡ' ನೋ.

**ಪೊಗದಸ್ತು** 'ಪಗದಸ್ತು' ನೋ.

**ಪೊಗದಿ** 'ಪಗುದಿ' ನೋ.

**ಪೊಗರ್, ಪೊಗರು, ಹೊಗರ್, ಹೊಗರು೨** (ನಾ). ೧. ಕಾಂತಿ ; ಹೊಳಪು ; ಮೆರುಗು ; ಪ್ರಕಾಶ : "ತೊಳಗು, ಬೆಳಗು . . . ಪೊಗರ್, ತೊಳಪಂ, ಮಸೆ—ಈ ೧೪ ಕಾಂತಿ" (ಕಕಹಾ. ೩೩-೨೦೨) ; ಪೊಗರಳವಟ್ಟು ಪೊನ್ನನೊರೆದಂತೆವೊಲಿರ್ದೊಡೆ . . . ತಾನೆ ವೀರಲಕ್ಷ್ಮಿಗೆ ನೆರೆಯಕ್ಕುಮಿಾ ತೆಱದ ಬಾಳ್ವಿಡಿದಂ (ಕೋಲೋಶ. ೦೦-೦೦೦) ; ಅಂಗಜನ ಬಾಳ ಪೊಗರ್ ನಿಜಬಾಹುಮೂಲದಿಂ ತುಳ್ಕಿ ತುಳುಂಕಿದಳ್ ಹರಿಯ ಮೇಲೆ ಪೆಱಳ್ ತರಳಾಕ್ಷಿ ತೋಯಮಮ (ಜಗಂ. ೦೪-೦೦೩) ; ಪೊಂಬಳ್ಳಿಯ ಪೊಗರಂ ಗೆಲ್ದಂಗದ ಕಂಬುಲಲಿತಕಂಧರೆ ಮುನ್ನೆಱಿದ ನವಾಂಬು ಜಲಕ್ಕನೆ ತೀವಲ್ಕೆ (ಅಹುಂಕ. ೦-೯೩). ೨. ಹರ್ಷ; ಉತ್ಸಾಹ; ಉಬ್ಬು: ಗಮಕಂ ಪ್ರಯೋಗಮಾಭೋಗಮಳಂಕಾರಂ ಪೊಗರ್ ನಯಂ ಮಿಱುಗು ಪೊದಟ್ದುಮರೆ ಕೊಳೆ ಪಾಡುವವರಿ ದಲಮರ್ದಂ ಮುಕ್ಕುಳಿಸಿಯುಗುಟ್ಟ ತೆಱನಂ ಪೋಲ್ತಳ್ (ಅಂಪು. ೬-೦೬); ದನಿಯ ಪೊಗರ್ ಮನೋಭವನ ಬಾಳ್ಪೊಗರಂತಿರೆ . . . ವಸಚರಿ ಪಾಡಿದಳ್ ಮಧುರಗೀತಿಗಳು (ಅಂಣಾಚ. ೬-೩೨) . ಪೊಗರಿಂಪು ನುಣ್ಪು ಪೆಂಪಿನ ಸೊಗಸಿನ . . . ಚೆಲ್ವ ಕಾವ್ಯದ ಬಗೆಯಱಿಯದ ಪುಚ್ಚುಗುನ್ನಿ ಕುಗಿದೊಡಳ್ಕೇಂ (ಹರ್ಷಿಕ. ೦-೦೮). **ಪೊಗರು** : ೧. "ಪೊಗರೆನಲ್ಕೆ ಕಾಂತಿಯುಕ್ಕುಂ" (ಕಕಕ. ೬೧) ; ಧುರದೊಳರುಹದ್ದಾಸರಾಯನ ಪರಕೃಪಾಣದ ಪೊಗರು ಪೊಗರಿಲ್ಲರಿನೃಪಾಲರ ಶಿರವನೊಡೆವುಯಿದೆತ್ತೆ (ಜಾಕ್ಷೀಶ. ೨-೨೩) ; ಮೊಗಮುಂ ಮೆಯ್ಯುಂ ಪೊಗರುಂ ಮಿಗೆ ಸೊಗಸಂ ಪಡೆಯೆ (ಅಳಿ. ೩-೦೦); ಮೂಡಲಿದೆ ಹೊಸಚಿಗುರು ಮೂಡಲಿದೆ ಹೊಸ ಪೊಗರು (ಅರಕು. ೪೪೮-೩). ೩. ಬಿಂಕ; ಗರ್ವ; ಸೊಕ್ಕು: ಹೈಹಯಾತ್ಮಜನೃದೆ ನಗರವಂ ಪೊರಮಟ್ಟು ಚತುರಂಗಬಲವೆರಸಿ ಪೊಗರಿನಿಂದೈತರುತಲಿರೆ (ಜಕಪು. ೦೦-೦); ಮುಂದಕೆ ವಿಗಡಿಸುವ ದಾಯವನು ತಿಳಿಯದೆ ಪೊಗರಿನಿಂ ದುರ್ನೀತಿಗೆಳಸಿದ ಪಾರ್ಥನು (ಕೋಣಹು. ೦೭-೬೦) ಮಿತ್ತುವಿನ ಕೋರೆದಾಡೆಯು ಪೊಗರಿಗಂಜದೆದೆಯು . . . ಕಂಗಟ್ಟು ಮಮ್ಮಲನೆ ಮರುಗುತಿಹುದು! (ಕಹಿಕಾ. ೨೨-೨). **ಹೊಗರ್** : ೧. ಉರವಣಿಸಿ ತಮ್ಮನಱಿಗುಂ ಧುರದೊಳದೆಂದಂಜ ಹೊಗರ ನೆವದಿಂ ರಿಪುಭೂಪರ ನೊಸಲಕ್ಕರವಿರ್ಪವು ನೆರೆದು ಶರಣ್ಬೊಕ್ಕಿಳಾಧಿಪನ ಕೂರಸಿಯೊಳ್ (ಜಗಂ. ೬-೩೦); ನಳಿತೋಳ ಮೊದಲು ಹೊಗರಂ ಕಱಿಯ ಕಡೆಗಣ್ಣ ತೊಳಪ ಮಿಂಚಂ ಕೆದಱಿ (ಕಪು. ೩-೩೦) ; ಹೂವೊಗ್ಗಗಳ ಹೊದಱಿನ ಹೊಗರ ಹೊಸದೇಸಿಯಲಿ ಯಾದ್ಯೋಂತ್ಯ ತ್ರತನನುವಾದ (ಕೂಲಕಾ. ೬-೨೯-೩೬). **ಹೊಗರು೨** : ೧. ಲಲಿತವಿದ್ರುಮಲತಾವಿಭ್ರಮೋಪಮ

ಜಟಾವಳಿ ಹೊಗರನಂಗುಳ್ಗ ರುದ್ರಾಕ್ಷವಮಾಲಾಜಾಲ (ಶಬ್ದಮ. ೨-೩೦); ಹೊಗರನಂಗುಳುವ ಹೊಸವಮಸೆಯ ಕೋಲುಗಳ ಕವಿಸಿದನು (ಕುಮ್ಮಾ.ಕ. ೪-೦೪); ಕಾಸಿದಂತೆ ಕಾಂಚನದ ಹೊಗರು ಅಧಿಕವಲ್ಲವೆ ? (ಜೈಮಿ. ೭). ೨. ಬಾಹುಸತ್ವದ ಹೊಗರು ಹೋಗದು ಮನದ ಖಾತಿಯು ತೆಗಹು ತಗ್ಗದು ಹೊಕ್ಕು ತಿವಿದಾಡಿದರು ಬೇಸಱದೆ (ಕುಮ್ಮಾ.ಕ. ೨-೦೦೦). ೪. ಹೆಚ್ಚಳ; ಆಧಿಕ್ಯ: ಭುಜಪ್ರತಾಪದ ಹೊಗರು ಹೊಸ ಪರಿಯೆನುತ ರಿಪುಗಳ ಹೊಗಳುತಿರೆ (ಕುಮ್ಮಾ.ದ್ರೋ. ೩-೩೭); ಜಗದುಸುರು ಪಸರಿಸಿತು ಹರುಷದ ಹೊಗರು ಮಸುಗಿತು ರಿಪುನೃಪರ (ಕುಮ್ಮಾ.ದ್ರೋ. ೦೯-೩೦). ೫. (ಆಲಂ) ಮಂಕು: ಮೇಲುಮುಸುಕಿನ ಹೊತ್ತ ದುಗುಡದ ಹೊಗರ ಹೊಗೆಮೊಗದ ಕಾಳಿಗೆಯ ನಿರ್ದ್ರವದ . . . ನೃಪಾಲ ಹೊಕ್ಕನು ನಡು ವಿರುಳು ನಿಜರಾಜಮಂದಿರವ (ಕುಮ್ಮಾ.ಕ. ೦೨-೧).

[ದೇ.ಶ ತಮಿ. ಮಲ. ಪುಕರ್; ತೆಲು. ಪೊಗರು, ಪೊವರು]

**ಪೊಗರಂಬು**, ಹೊಗರಂಬು (ನಾ). (ಸಾಣೆ ಹಿಡಿದ) ಹೊಳೆಯುವ ಬಾಣ; ಹರಿತವಾದ ಸರಳು: ಹರಿಯರ್ದೆಯೊಳುಮಾನಿಯು ನಾಡಿಯು ಮಂಗಜನ ಪೊಳವರಲ ಹೊಸವಮಸೆಯ ಪೊ[ಪಾಠಾಂ. ಹೊ]ಗರಂಬುಗಳು ವೊಡನೊಡನೆ ಭರದಿ ನೆರೆಗೊಂಡುವು (ಶಾಕ್ಕ.ಶ. ೨೯-೨೨). **ಹೊಗರಂಬು**: ತಳತ ಹೊಗರಿನ ಬಾಯಧಾರೆಯ . . . ಹಂಗನ ಗಱಿಯ ಬಿಗುಹಿನ ಹಿಳುಕುಗಳ ಹೊಗರಂಬು ಕವಿದವು (ಕುಮ್ಮಾ.ದ್ರೋ. ೩-೦೩); ಹೊಡಕರಿಸಿ ಹೊಗರಂಬು ಹೊಕ್ಕವು ಕೊಡಹಿದರು ಕೊಬ್ಬಿದ ವಿರೋಧಿಗಳೊಡಲ ಬಗೆದುವು ಬಿಗಿಯ ನೆತ್ತರ ಧಾರೆ ದೆಸೆದೆಸೆಗೆ (ಶಾಕ್ಕ.ಶ. ೭-೩೯).

[ಪೊಗರ್ + ಅಂಬು$_1$]

**ಪೊಗರಲಗು**, ಹೊಗರಲಗು (ನಾ). (ಕತ್ತಿ, ಖಡ್ಗ ಮೊದಲಾದುವುಗಳ) ಹೊಳೆಯುವ ಅಲಗು,-ಬಾಯಿ: ಬಗೆಯ ನಿಜದೇಹದನ್ನರ್ ಮಗನಾಮಕರಟಿದೊಡುರ್ಕುಗೆಟ್ಟನೆ ಮುನ್ನಿಂ ಮಿಗೆ ಉಡುಗೂರ್ವಂ ತಳೆದಂ ಪೊ[ಪಾಠಾಂ. ಹೊ]ಗರಲಗಂ ಪಱಿಯೆ ಮಸೆದವೋಲ್ ಹಯಕಂಠಂ (ಪರ್ವ. ೬-೩೭). **ಹೊಗರಲಗು**: ಹಿಪ್ಪೆಗರ ಹರೆಗಡಿದು ಹೊಗರಲ ಗೊಪ್ಪಿದವು ಕರುಳ್ಗಳ ನಿಮಿಷದೊಳೊಪ್ಪಗೆಡಿಸಿದವರಿಕದಂಬವನೀತ ನಂಬುಗಳು (ಕುಮ್ಮಾ.ದ್ರೋ. ೨-೩೩); ಮೈಯೊಳಗೆ ಹೊಚ್ಚಿದವು ಹೊಗರಲಗು ಮುಚ್ಚಿದವು ನೆಣಸಯನು (ಕೃ.ಬಿಕ್ಷಾ. ೦೩-೦೯). [ಪೊಗರ್ + ಅಲಗು$_1$]

**ಪೊಗರಳಿ**, ಹೊಗರಳಿ (ಕ್ರಿ). ಕಾಂತಿಗುಂದು; ಕಾಂತಿಹೀನವಾಗಂ: ಅವನಿಪರ ಮುಖಂ ಪೊಗೆ ಸುತ್ತಿದ ಪೊಂಗನ್ನಡಿಯಂದದಿ ಪೊಗರಳಿದುವು ಪೊಗಸಿನ ಚಂದ್ರಬಿಂಬೊರ್ (ಶಬರ. ೬-೧). **ಹೊಗರಳಿ**: ಒಗೆದ ಚಿಂತೆಯ ಹೊಗರಳಿದ ಮೊಗದ ಮಯ್ದೆಗೆದ ಮಾತಿನ ಬಲವೆರಸು ದುಗುಡದಿಂ ಬಂದು ಪೊಕ್ಕನು ಬೀಡ ಒಲ್ಗಾಳ ಬಿಗುವುಗುಂದಿದ ಬಿಂಕದೊಳು (ಕುಮಾರಾಮ. ೦೩-೦೩೩).

[ಪೊಗರ್ + ಅಳಿ$_1$ (<ಅಟ್$_1$)]

**ಪೊಗರಾನ್**, ಹೊಗರಾನ್ (ಕ್ರಿ). ಕಾಂತಿಯನ್ನು ಹೊಂದು; ಥಳ ಥಳಿಸು: ಪುಳಿದ ಪೊಳೆವುರ್ವ ಮುಮ್ಮೊನೆಯ ಕೆಂಗಿಡಿ ಸೂಸಿಡೆ ರೂಢಿ ಸುತ್ತಿ ಓಂಗದೆ ಪೊಗರಾಂತ ಕರ್ಗತೆಗಳೇಂ ಪರಿತಂದುವೊ ಪಾಂಡು ಪುತ್ರನಾ (ಶಬರ. ೪-೯೨). **ಹೊಗರಾನ್**: ಹೊಗರಾಂತ ಹೊಸ ಹೊನ್ನ ರಸ ಕಾಯ್ದಿರೆ ಕಂಡು ಸೆಗಣಿಯೊಳೆಱೆವಂತೆ ಮೊಱಿದಿ ಮೃಗಮದ ಗಂಧಿಯರ್ ಗೋಮಯದಿಂ ಮುದ್ದುಮಗನ ದೇಹವ ಸಾರ್ಚಿದರು (ಮೋಹಕ. ೦೭-೩೦).

[ಪೊಗರ್ + ಆನ್$_1$]

**ಪೊಗರು** (ನಾ). [ಜೈನ] ಮುನಿಗಳ ಒಂದು ಸಂಘದ ಹೆಸರು; ಗಚ್ಛ ಗಳಲ್ಲಿ ಒಂದಂ: ಗಚ್ಛೇ(ಚ್ಛೇ)ಶು ತುರ್ಭ್ಯೇ(ಚ್ಛೇ)ಪಿ ಪೊಗರ್ಯ್ಯಾಭಿಖ್ಯೇ ಸಂಸ್ತುಯಮಾನೇ ಮುನಿರಾರ್ಜ್ಯ(ರ್ಯ್ಯ) ಸೇನಃ (ಎಂ. XIX, ೫೬೨-೦೯; 1054); ಜಿನಧರ್ಮಕ್ಕೆ ಮೂಲವಾದ ಮೂಲಸಂಘದಲ್ಲಿ ಪ್ರಸಿದ್ಧವಾದುದು ಸೇನಗಣ; ಅದರಲ್ಲಿ ಪ್ರಸಿದ್ಧವಾದುದು ಪೊಗರಿಗಚ್ಛ (ಕಶಾಅ. ೮೭ ಅತಿ). [?]

**ಪೊಗರಿಗೆಱ್** (ನಾ). ಒಂದು ಊರಿನ ಹೆಸರು: ತಳವನಪುರದೊಳ್ ತಳ ವಿತ್ತಿಯ ಮಱ್ ಪೊಗರಿಗೆಱ್‌ಯೊಳ್ ವನ್ನಿಸ್ಕರ್ಣಾಗಂ ಮನೋಹರಂ ದತ್ತಂ (ಎಕ. I, ೦-೨೦; ಸು. ೯೩೩ಟು ೩೩).

[೭ ಇದು 'ಪೊಗರಿಗೆಱ್' ಎಂಬುದರ ಅಪಲಿಖಿತವಿರಬಹುದು]

**ಪೊಗರಿಡಿ** (ಕ್ರಿ). ಕಾಂತಿಯಿಂದ ತುಂಬಿರು: ಪತೆಯನಾಱ್ ಕೊಂದುವು ಶರಧಿಭವಪಭವನ ಪೊಗರಿಡಿದಂಬುಗಳ್ಗಳಯುಶತಕೋಟಿ ಶತಕೋಟಿಯಂ ಪೋಲ್ತು ಸಂಗರದೊಳು (ಕೃ.ಬಿಕ್ಷಾ. ೨೨-೨೦). [ಪೊಗರ್ + ಇಡಿ$_1$]

**ಪೊಗರಿಳಿಸು** 'ಪೊಗರಿಟಿಸು' ನೋ.

**ಪೊಗರಿಟಿಸು**, ಪೊಗರಿಳಿಸು (ಕ್ರಿ). ಗರ್ವವನ್ನು ಕುಗ್ಗಿಸು; ಅಹಂಕಾರ ವನ್ನು ಹೋಗಲಾಡಿಸು: ಸೊಕ್ಕಿಳಿಸು: ಜಯಲಕ್ಷ್ಮಿಯ ನಯ ನೋತ್ಪಲವಮಯೂಖಮನೆ ತಾನೆ ಬಂದು ಕರಕಿಸಲಯಕಾಂತಿಯನೇಂ ರಾಗಂಬೆತ್ತುದೊ ಜಯಮಾ ಪೊಗರಿಟಿಸೆ ಕಿಸುರ ಮಸಿಯಗ್ಗರವಂ (ಶಂಆಪ. ೯-೨೦). **ಪೊಗರಿಳಿಸು**: ಯಾರಾದರೂ ಆ ಜಂಬಗಾರನ ಪೊಗರಿಳಿಸಬೇಕು (ಊ).  [ಪೊಗರ್ + ಇಟಿಸು]

**ಪೊಗರು** 'ಪೊಗರ್' ನೋ.

**ಪೊಗರುಗು**, ಹೊಗರುಗು (ಕ್ರಿ). ಚೆಲುವು ಹೊರಸೂಸು; ಕಾಂತಿಯು ಹೊರಚೆಲ್ಲು: ನಾಡೆ ಕಡುಚೆಲ್ವು ವಿಕ್ಕ ಪೊಗರುಗುವ ಹೊಂಬಣ್ಣ ವೊಲೆಯಾಯತದ ಸೆಕ್ಕಂದುಬುಂಬಿನ . . . ವೆಣ್ಣಿಕ್ಕಳೆಯ್ತಂದರೊಸೆದು (ಶಬ್ದಮ. ೩-೬೭); ಪಲ್ಲವಾಧರ ದಂತ (ಕುಚ ಪೊಗರುಗುವ) ಧಮ್ಮಿಲ್ಲದ ವೆಱಿವ ಹೆಣ್ಣುಗಳು ಪುಲ್ಲದಳಾಕ್ಷಗೆ ಪೊಸವೇಟ ಪುಟ್ಟುವಂತೆಲ್ಲರ್ಬ್ಬಗೆ ಯಾದರಾಗ (ಮೋಹಕ. ೦೯-೬೩); ಪೊಗರುಗುವ ಕಣೆಗಳ್ ಸಾರ್ತವುರ್ದಂ ಕಾಣುತೆ ರಾಘವಂ ಪಡಿಸರಳಂ ತುಡುತೆ ಬಿಡದೋರೊಂದು ಪಗೆಗೋಲಂ ನಡುದಾರಿಯೊಳೆ ಇರ್ಕಡಿಗೆಯ್ವಂ (ಅದ್ಭುತ. ೪೯-೨೦). **ಹೊಗರುಗು**: ಹೊಗರು[ಪಾಠಾಂ. ರೊ]ಗುವ ಹೊಸ ಕಣೆಯ ದಡ್ಡಿಯ ಬಿಗಿದನೆಡಬಲ ನಿದಿರಿನಲಿ ಸೆಗಳೆಗೆಯ ಸುಯಿಯಂತಾಯ್ತು ಕೌರವಸೇನೆ ನಿಮಿಷದಲಿ (ಕುಮ್ಮಾ.ಶ. ೭-೩೨); ಹೊಗರುಗುವಂಗೋಪಾಂಗ ವಕ್ಷದೊಳು ಪೊಂಬೊಗರಿಯಂತಿರ್ಪ ನುಣ್ಗೂಲಿಯ ದೃಗುಯುಗಳದಿ ನೋಡಿ ಹೆಱುಂಗಲಾಱದೆ ಮುಗುಳಂಬ ನಮರ್ದಪ್ಪಿದನು (ಮೋಹಕ. ೦೯-೬೨). [ಪೊಗರ್ + ಉಗು$_1$]

**ಪೊಗರುವೆಱು** (ಕ್ರಿ). ಗರ್ವಪಡು; ಬೀಗು; ಹೆಮ್ಮೆಪಡು: ಗದ್ದೆಯ ಗೊರವನೊಳ್ ಕಡಿದಾಡಿ ಪೊಗರುವತ್ತಿದ್ದೆ ನೀ ರಣರಂಗದೊಳಗೆ ಬಿದ್ದೆಯ ನನ್ನ ಬಾಧೆಗೆ ಕೃಷ್ಣ ಕರ ನಿನ್ನ ದೊಡ್ಡೆಯ ನಿಲಲೊಬ್ಬಗರಿದು (ಮೋಹಕ. ೪೦-೦೯). [ಪೊಗರು (<ಪೊಗರ್) + ಪೆಱು$_1$]

**ಪೊಗರೆ** (ನಾ). ಪೊಟರೆ; ಬಿರುಕು; ಹೋರು: ಕಲ್ಲ ಪೊಗರೆಯೊಳಿಟ್ಟ ಕಾಮುರ್ಗಿಲ ಮೊಟ್ಟೆಗಳ್ ತಾಮನಿಸಿ ಪರ್ಬಿದುವು ಪೆರ್ಜೇನ ಪುಟ್ಟುಗಳ್ . . . ಪೊಕ್ಕು ಕುಕ್ಕಿಱಿಸಿ ಜೋಂಪಿಸಿ ಕಲ್ಲ ಪೊಗರೆಯಂ ನಿಮ್ಮಿ ಪುಲಿ ಸಮುಱಿದುವು ಚಟವಾಯ ಸವಿಗಳಂ (ಅಪಂಕೃ. ೯-೦೬ ರಳೆ).

**ಪೊಗರೇರು** 'ಪೊಗರೇಱು' ನೋ.

**ಪೊಗರೇಱು**, ಪೊಗರೇರು, ಹೊಗರೇರು, ಹೊಗರೇಱ್, ಹೊಗರೇಱು (ಕ್ರಿ). ೧. ಕಾಂತಿಯೇರ್ಕ್ಕು; ಸೊಬಗು ಹೆಚ್ಚಾಗು: ಪೊಂಗುವ ಪೊಱವಾಱಿನ ಪೊಗರೇಱುವ ಪೊಂಗೊಡವೋಲಯ ಸೋರ್ಮುಡಿಯ ಉಂಗುರವಿಡಿನಡುವಿನ ನಿಡುಗಣ್ಣ ಲತಾಂಗಿಯರೆಸೆದರಂದಲ್ಲಿ (ಶಂಅಪ. ೨೯-೩೪); ಅಲಿಗಳರಲ್ದವಸು ಪಸರಿಸಿತೊಡಲೊಳಗೆಸೆದುದಾ ಲಲಿತಮುಖ ಕಾಂತಿ ಪೊಗರೇಱಿತವಯವಂ (ಕೃ.ಬಿಕ್ಷಾ. ೨೯-೬೭); ಪವನೆಗೆಯೊಪ್ಪೆ ಪುರುಳು ಪೊಗರೆಱಿಯಂಗವಿಸೆಯಲಂಕಾರಗಳು (ಹಂಪ. ೩-೨೬).

೨. ಹರ್ಷಗೊಳ್ಳು; ಉಬ್ಬು; ಉತ್ಸಾಹಪಡು : ಸುರರುಂ, ಕಿನ್ನರರುಂ, ನರರುಂ, ವಾನರರುಂ ಪೊಗರೇಱ ಕಳೆವೆರ್ಚಿದರ್ (ಅಜಪು. ೧೦೪-೯).

**ಪೊಗರೇರು** : ೩. ಗರ್ವವು ಹೆಚ್ಚಾಗು; ಸೊಕ್ಕು : ಈಚೀಚಿಗೆ ತುಂಬಾ ಪೊಗರೇರಿರುವುದರಿಂದಲೇ ಈತ ಹೀಗಾಡುವುದು (ಬಂಶಿ).

**ಹೊಗರೇರು** : ೧. ಗಿಡಬಳ್ಳಿ ಚಿಗುರಿಡಲು ಹೊಗರೇರಿ ಹೂಬಿಡಲು ನಕ್ಷಿಡಲು ಮುತ್ತಿಡಲು ತುಂಬಿ ಬಹವು (ಶಾಪೀ. ೨೦-೧೦೧); ಉಡಿಗೆ ತೊಡಿಗೆಗಳಿಂದ ಹೊಗರೇರಿದ ರಾವುತನು ಅಂಗಳಕ್ಕಿಳಿಯುತ್ತಿದ್ದನು (ಕಥಾ. I, ೧೧೩). **ಪೊಗರೇಱ್** : ೧. ಹೊಗರೇರ್ವ ಹೊಂಬಣ್ಣ ಮುಖದೊಳು ಮುಖವಿಟ್ಟ ಸುಗುಣಿ (ಕಿಹಗೀ. ೦೬೯-೬೨೩). **ಹೊಗರೇಱು** : ೧. ವಿಜಾಜಬಾರದು ಪ್ರಾಪ್ತವಶನೆಂದವಳಿಗೆ ಮಾಱುತ್ತರಗೊಟ್ಟು ನಗುತ ನೂಱಿಲೆಗಣ್ಣ ರುಕ್ಮಿಣಿಗೊಡರ್ಚಿದ ಹೊಗರೇಱುವ ಗರ್ಭೋತ್ಸವವ (ಮೋಹಕ. ೯-೬೬); ಹೊಮ್ಮಿದ ಮೊರೆ ಹೊಗರೇಱಿದ ಜೌವನವೊಪ್ಪಾಱು ಜಡೆಯ ಸೊಬಗಿನ ಉಮ್ಮತ್ತೂರು ಗೌರಾಜಿ ಚಿತ್ತಿನಿ ಬಲುಸುಮ್ಮಾನ ದೋಳ್ಯಿದಿದಳು (ಕಂಶಿಕ. ೨೦-೬೬). ೨. ಕೇಶವನಾತ್ಮಸಂಭವಸೂನು ವೀರಾವೇಶದಿ ಹೊಗರೇಱುತಿರಲು ಆ ಸಮಯದಿ ಚಿತ್ರಲೇಖೆ ನಿರ್ಮಿಸಿದಳು ಭಾಸುರರಣಯಂತ್ರಮಣಿಯ (ಮೋಹಕ. ೩೩-೩೮). ೪. ಉದ್ದೀಪನ ಹೊಂದು ; ಅಧಿಕವಾಗು ; ಹೆಚ್ಚಾಗು : ಮನದ ಖತಿ ಹೊಗರೇಱೆ[3] ದುಶ್ಶಾಸನನ ಮಗನದಿರಾಗಿ ಖಡ್ಗಗದ ಮೊನೆಯ ಚೂರಿಸಿ . . . ತನಗೆ ವ್ಯತ್ಯುವ ಕರವಪೋಲರ್ಜುನಕುಮಾರನ ಕರೆದು ಹಳಚಿದನು (ಕುಮ್ಮಾದ್ರೋ. ೬-೩೬). [ಪೊಗರ್ + ಏಱು$_1$ (< ಏಱ್$_1$)]

**ಪೊಗರೇಟ್**, ಹೊಗರೇಲ್, ಹೊಗರೇಳು (ಕ್ರಿ). ೧. ಕಾಂತಿಯನ್ನು ಸೂಸು ; ತೇಜಸ್ಸನ್ನು ಬೀರು : ಸಮಸಂದಾ ಮಲಯಜ ಕುಂಕುಮ ಕಸ್ತೂರೀಜಲಾರ್ದ್ರಸನುತತಿಯಿಂ ತತ್ಸಮದಾಜನಮೆಸೆದುದು ರತಿರಮಣನ ಪೊಗರ್ವೆತ್ತ ಕುಸುಮಶರಸಮಿತಿಯವೋಲ್ (ಕುಸುಚ. ೩-೧೬೦). **ಹೊಗರೇಲ್** : ೧. ಅಗುರು ಕುಂಕುಮ ಪಚ್ಚೆಗಪ್ಪುರ ಪನ್ನೀರು ಮೃಗನಾಭಿ ಮುಖ್ಯಲೇಪನದಿ ತಿಗುದಸ್ಕಿದರಾಳಿಯರು ಸತ್ಯಮರಿಯ ಹೊಗರೇಳ್ವ ಹೊಂಬಣ್ಣವೆಯ್ಗೆ (ಮೋಹಕ. ೨೩-೧೨). **ಹೊಗರೇಳು** : ೧. ಮುಗಿಲ ಮುಟ್ಟುವ ಕೋಟೆಯ ತೆನೆಯೆಡೆಯೆಡೆ ಹೊಗರೆದ್ದ ದಸಿ ಮೊನೆ ಶೂಲ ರುಗಗಳುಗಿಸುವ ಹೇರಿಟ್ಟೆ ಮರುಳುಗ್ಗೆಗಳುಗುಳುತಿರ್ದುವ ಕೆಂಗಿಡಿಗಳ (ಕಂಶಿಕ. ೦೦-೦೩೦). ೨. ಉಬ್ಬು ; ಸಂತೋಷಪಡು : ನೆಗಱ ಪುಳಕಾಂಬುಗಳ ಲೋಚನ ಬಿಗಿದು ಹೊಗರೆದ್ದಾಗ ಹಿಮ್ಮಡಿಗೊಗುವ ಕೇಶದ ಬಾಲೆ ಭಾಮಿಷ ನೆನೆದಳಚ್ಯುತನ (ಕುಮ್ಮಾಕ. ೬೦೩. ೦೬-೨೩); ಬಲಸಂಘಾತಕೆಭಯವನಿತ್ತು ಬಾಣವ್ರಾತವನು ಹೊಡೆಗೆದಱ ಹೊಸ ಹೊಗರೆದ್ದನಡಿಗಡಿಗೆ (ಕುಮ್ಮಾಕ. ೦೩-೨೨). ೩. ಉದ್ದೀಪನಗೊಳ್ಳು ; ಹೆಚ್ಚಾಗು : ಅಧಿಕವಾಗು : ಹೃದಯದಲಿ ಹೊಗರೆದ್ದುದುರಿ ಬಳಿಕಾ ದಶಾನನನ (ತೊರಶಾ. ೩-೬-೦೩) ; ಬೊಬ್ಬೆರಿಯೆ ವೀರಧ್ವನಿಯಿಂದ ತರು ಗಿರಿ ಹಬ್ಬಿ ಮುಂಚೂಣೆ ಉರಿ ಹೊಗರೆದ್ದು ಸುತ್ತೆ (ಐರಾಳ್ಯ. ೬೩-೩).

[ಪೊಗರ್ + ಏಟ್$_1$]

**ಪೊಗರೊಗು**, ಹೊಗರೊಗು (ಕ್ರಿ). ೧. ಕಾಂತಿಯನ್ನು ಹೊರ ಸೂಸು,—ಚೆಲ್ಲು : ಮುಗುದೆಯೊರ್ವಳು ನೀರನೆಱೆವುತ ಪಥಿಕನ ಪೊಗರೊಗುತಿರ್ದ ಪಲ್ಲುಗಳ ಸೊಗಸುವ ದಾಡಿಮಬಿತ್ತೆಂದು ಶುಕನಗೆ ಏಗೆ ತೋಱೆ ನಗುವರಬಲೆಯ (ಕಳ್ಗಿಕ. ೦-೬೦) ; ಗಗನವಡರ್ದ ಸೌಧಂಗಳ ಮಱಿಚಿಯಿಂ ಪೊಗರೊ[ಪಾಠಾಂ. ರು]ಗುವ ಪೊಚ್ಚಪೊಸ ಪೊನ್ನ ಕೋಟಿಗಳ ಕಾಂತಿಗಳ್ಯೆದೆ ಮುಸುಕಿಕೊಂಡೆಸೆದಿರ್ದುವರ್ಜುನನ ಕಣ್ಗೆ ಕೌತುಕವಾಗಲು (ಕೃಐಶಾ. ೦೬-೬). ೨. ಹೆಚ್ಚಾಗು ; ಅಧಿಕವಾಗು : ಪೊಗರೊಗುವ ಲಟ್ಟಲೆಗೆ ಕಣ್ಗಳಂ ಮುಚ್ಚುತ್ತಂ (ಅಕ್ಕಬಿ. ೦೦-೦೨೬).

**ಹೊಗರೊಗು** : ೧. ಹೊಗರೊಗುವ ಸೂನಿಗೆಯ ಸುಮತಾಕೆಗಳ ಸಿಂಧದ ಹೊಳೆವ ಹೊಂಗಂಬುಗೆಯ . . . ಅಗಿವ ಚೀತ್ಕಾರದ ಧಡಾಳದ ವಿಗಡ ರಥಿಕರ ರಹಿಯ ರಥವಾಜಿಗಳ ನೋಡೆ ಪಾರ್ಥ (ಕುಮ್ಮಾಭೀ. ೩-೦೧) ; ಹೊಗರೊಗುವ ದಾಡೆಗಳ ದರ್ಶಿಸುವ ಗಡುಮೋಱೆಯ ಕೆಂಪಡರ್ದ ವಿಸಾಸಗಳ ಕೆಂಗಣ್ಣುಗಳ ಮುಮ್ಮುರಿಗೊಂಡ ಹುಬ್ಬುಗಳ . . . ರಕ್ಕಸರನೀಕ್ಷಿಸಿ ನುಡಿದನಸುರೇಂದ್ರ (ಕೂರಕಾ. ೬-೦೩-೬). [ಪೊಗರ್ + ಒಗು$_1$]

**ಪೊಗರೊಗೆ** (ಕ್ರಿ). ಕಾಂತಿಯು ಸೂಸು ; ಪ್ರಕಾಶವು ಹೊಮ್ಮು : ಕಾಮಿನಿಯ ನಿಡುಜಡೆ ರಂಜಿಸಿದುದು ಪೊಗರೊಗೆಯೆ ವಿಜೃಂಭಿಸುವಂಗಜ ನೃಪನ ಮಸೆದ ಸುರಗಿಯ ಪಾಂಗಿಂ (ಅಕ್ಕಬಿ. ೯-೦೦೩). [ಪೊಗರ್ + ಒಗೆ$_1$]

**ಪೊಗರ್ಗಣ್**, ಹೊಗರುಗಣ್ಣು (ನಾ). ಹೊಳಪಿನಿಂದ ಕೂಡಿದ ಕಣ್ಣು; ಕಾಂತಿಯುಕ್ತವಾದ ಕಣ್ಣು : ಪೊಗರ್ಗಣ್ಗಳ ಪೊಳೆವಲರ್ಗಣ್ಗಳ ಬೆಳತಿಗೆಗಣ್ಗಳ ಬೆಳರ್ದಾವರೆಗಣ್ಗಳ ಸೊಗಯಿಪ ಸೊರ್ಕುಂಗಣ್ಗಳ ಸುದತಿಯರೀಕ್ಷಿಸಿದರ್ ನೃಪನ (ಶಮುಶಾ. ೦೦-೩೯). **ಹೊಗರುಗಣ್ಣು** : ಹೊಗರುಗಣ್ಣು, ನಿಗುರಿದ ಕಿವಿ ಹಗುರುಮೈಯ್ಯ ಚಿಗುರೆಯು ಎರಡೆ ದಿವಸ ಕೂಡಿ. ಬೇಡಿ ತಿಗುರೆಳಿದಿತು ಚಿಗುರೊಲು (ಶಾಪೀ. ೨೬-೦). [ಪೊಗರ್ + ಕಣ್]

**ಪೊಗರ್ಗಣೆ**, ಹೊಗರುಗಣೆ (ನಾ). ಕಾಂತಿಯುಕ್ತವಾದ ಬಾಣ ; ಹೊಳಪಿನಿಂದ ಕೂಡಿದ ಸರಳು : ಉಬ್ಬಿದುದು ಮೈ ರೋಷದಿಂದೆ ಗಂಟಿಕ್ಕಿದುವು ಪುಬ್ಬುಗಳ್ಪಟಭುಪಾಹುಗೆ ತೆಗೆತೆಗೆದಿಸುತ ಬೊಬ್ಬಿಱಿದನನು ಸಾಲ್ವನಂ ಮುಸುಕಿದುವು ಕೋಟಿಸಂಖ್ಯೆಯ ಪೊಗರ್ಗಣೆಗಳು (ಕೃಐಶಾ. ೨೨-೦೦). **ಹೊಗರುಗಣೆ** : ಘೃತಲೇಪನದ ಬಂಧದ ಹೊಗರುಗಣೆ ಹೂಳಿದುವು ಗುರುಸುತನಬನಂಬುಧಿಯ (ಕುಮ್ಮಾಕ. ೩-೩).

[ಪೊಗರ್ + ಕಣೆ$_1$]

**ಪೊಗರ್ತೆ** 'ಪೊಗಟ್ತೆ' ನೋ.

**ಪೊಗರ್ತೆವಡೆ** 'ಪೊಗಟ್ತೆವಡೆ' ನೋ.

**ಪೊಗರ್ತೆವೆಱು** 'ಪೊಗಟ್ತೆವೆಱು' ನೋ.

**ಪೊಗರ್ವಟ್ಟು** (ನಾ). ಕಾಂತಿಯ ವೃತ್ತ,—ಬಿಂಬ; ಶೋಭೆಯ ಮಂಡಲ: ಪೊಗರ್ವಟ್ಟನತನುಬಾಣದ ಪೊಗರಂ ನುಣ್ಪೊಗರೊಳಿಟ್ಟಿಸಿ ನೋಡಿದ ಕಣ್ಣಾಣ್ಮುಗುಮೆನಿಪ ನುಣ್ಪಿನಿಂದೇಂ ಸೊಗಯಿಸುವುವೊ ಬಾಹುಮೂಲಮಾ ಕಾಮಿನಿಯಾ (ಕುಳ್ಳಕ. ೩-೯೮); ಸಿಡಿಲ್ದಾಗುತುದುವು ಪುಷ್ಪಸಾಯಕಂಗಳ ಪೊಗರ್ವಟ್ಟು ಚಂದ್ರಿಕೆಯ ಬಿಟ್ಟೆಳಮಿಂಚಿನ ತತ್ತಿ ತಾರಕಂಗಳ ಮಱಿಯೆಂಬ ವಾರಿಧರವಾರಣವೇಣಾವರಾಹವನೌತ್ಕಿತಂ (ಜಗಂ. ೦೩-೨೧).

[ಪೊಗರ್ + ಬಟ್ಟು]

**ಪೊಗರ್ವಟ್ಟೆ** (ನಾ). ಹೊಳಪಿನಿಂದ ಕೂಡಿದ ಬಟ್ಟೆ,—ವಸ್ತ್ರ : ರಾಂತಕ್ಕೆ—ಕುಳ್ಗಾರ್ಕೆ, ಬೆಳರ್ಗಂಪು . . . ಪೊಗರ್ವಟ್ಟೆ, ಬಿಮರ್ವಣಿ, ಅಲರ್ಜೊಂಪಂ, ಕದಿರ್ಜೊನ್ನಂ (ಕಶಬ್ದ. ೧೩ ಶ್ರಟೀ); ತಳರ್ಗಂಪು, ಬೆಳರ್ಗಂಪು . . . ಪೊಗರ್ವಟ್ಟೆ (ಕಮ್ಮಾಶಾ. ೬೩ ಶ್ರಟೀ).

[ಪೊಗರ್ + ಪಟ್ಟೆ$_1$]

**ಪೊಗರ್ವಡು** (ಕ್ರಿ). ೧. ಪ್ರಕಾಶವನ್ನು ಹೊಂದು,—ಪಡೆ; ಕಾಂತಿಯುಕ್ತವಾಗು : ಸೊಗಯಿಸಿ ತೋಳ ಮೊತ್ತಮೊದಲೊಳ್ ಪೊಗರ್ವಟ್ಟೆಸೆವೊಂದು ನುಣ್ಪು ಸಾವಗಿಸುವ ಮೇಲುದಂ ಪೊಲೆಗಳ್ಕಿಱಿಯುತ್ತಿರೆ . . . ಘಟ್ಟಿಮಗುಟ್ಟುವ ಘಟ್ಟವಳ್ಳಿಯುಂ ಭೋಂಕನೆ ಕಂಡು (ಶಂಕಶಾ. ೯-೩೧); ಅಗಲದ ರೇಖಾತ್ರಯದಿಂದಗಲದ ಪೊಗರ್ವಟ್ಟ ಬಂಧುರಚ್ಛವಿಯಿಂ ಕಂಬುಗಳಂ ನಗುವಂತಿರೆ ಕಂಬುಗಳಂ ಕರಮೆಸಗುವಮಾ ವಣಿಕ್ಪತಿಸತಿಯಾ (ಸುಕುಸು. ೯-೩೧). ೨. ಚೆಲುವನ್ನು ಹೊಂದು : ಸೊಗಯಿಸಿ ತೋರ್ಪ

ಸೋಗೆಕೊರಲೊಳ್ ಪೊಗರ್ವಟ್ಟಿಸೆದಿರ್ಪ ಕರ್ಪು ... ಮನಂಗೊಳೆ ಚೆಲ್ವ ನಾಳ್ದುದೀ ನಗವನರಾಜಿಯೊಳ್ ಸುಬ್ಬಿಯುತಿರ್ಪ ವಿಚಿತ್ರಶಿಖಂಡಿಮಂಡಲಂ (ಕಾವ್ಯಾವ. ೩೦೯)· [ಪೊಗರ್+ಪಡು$_1$]

**ಪೊಗರ್ವಡೆ** (ಕ್ರಿ). ಕಾಂತಿಯುಕ್ತವಾಗು ; ಪ್ರಕಾಶಮಾನವಾಗು : ತೋರ್ಪ ಕಣೆಯಲ್ಲ ಪರಸುವ ಕಣೆಗಳಗ್ರದಿ ಪೊಗರ್ವಡೆದ ರತ್ನಂಗಳೆಯ್ದೆ ಚಿತ್ಕಾರತ್ನಮುರ್ವಿ ಬೆಳೆದಿರ್ಪ ತರುಗಳ್ ಕಲ್ಪತರುಗಳಲ್ಲಿ ಗಿರಿಸಾನುವಿಂದೆ ...ಕೈಲಾಸವರ್ವತಂ ಕಣ್ಗೆಸೆದುದು (ಶಂಕ್ರ. ೨-೦೦) ; ಉಡುರಾಜಮಂಡಲಂ ಶಂಖವರ್ಣಂ ಪೊಗರ್ವಡೆವ ಕೌಮುದಿಯಾಗೆ ರಾತ್ರಿಲಕ್ಷ್ಮಿಯ ಭಾವಮಡಸಿ ಕಣ್ಗೆಸೆದುದು (ಶಂಕರಾ. ೨-೬)· [ಪೊಗರ್ + ಪಡೆ$_1$ ]

**ಪೊಗಸು** (ನಾ). ೧. ಬೆಳಗಿನ ಜಾವ ; ಮುಂಜಾವ ; ಪ್ರಾತಃಕಾಲ : ನಿನ್ನ ಮೊಲಗಟ್ಟಲೆಗಾಂ ಬೆಳಗಾದೆನಿಂದು ಪೇಟೀಗೆಳೊ ಬಯ್ಗೆಯೋ ಪೊಗಸೊ ನಾಳೆಯೊ ನಾಡಿದೊ ನಿನ್ನ ಜೀವಿತಂ (ಅಂಕ್ರ. ೩-೬೩) ; ವಿಮಲ ಪ್ರಗುಣನುಮಶಾಂತಕಾಮಂ ಪೊಗಸಿನ ಚಂದ್ರಂಬೊಲಿರ್ದನಾ ಶ್ರೀಚಂದ್ರಂ (ಅರ್ಜಸೇ. ೧-೩೨) ; ನಸುನಗೆ ಮಿಸುಗುವ ಮೊಗಮಾಕೆ ಪೊಗಸಿನ ಶಶಿಯಂತೆ ಕಲೆಗುಂದಿದುದು (ಶಲ್ಯಸಂ. ೮-೭೦). ೨. ಹಗಲು : ನಿನ್ನೊಳಿರುಳುಂ ಪೊಗಸುಮೆಟ್ಟ ಪೊಗೆ ಗುಡುಗುಂಗಳನ್ ಆ ಬೇವ ಬೆಂಕೆ ಒಳಗೆನಿತಿರ್ಕು ಮೆಂಬುದು ! (ಆಕ್ಕಾ. ೩೬·೭೨೪).

**ಪೊಗಳ್** 'ಪೊಗಟ್ಟು$_1$' ನೋ.

**ಪೊಗಳಿಕೆ** ' ಪೊಗಟ್ಕೆ ' ನೋ.

**ಪೊಗಳಿಸು** ' ಪೊಗಟಿಸಂ ' ನೋ.

**ಪೊಗಳು** ' ಪೊಗಟ್ಟು$_1$ ' ನೋ·

**ಪೊಗಳ್ಕೆ** ' ಪೊಗಟ್ಕೆ ' ನೋ·

**ಪೊಗಳ್ತೆ** ' ಪೊಗಟ್ತೆ ' ನೋ.

**ಪೊಗಳ್ತೆವಡೆ** ' ಪೊಗಟ್ತೆವಡೆ ' ನೋ.

**ಪೊಗಟ್ಟು$_1$**, ಪೊಗಳ್, ಪೊಗಳು, ಹೊಗಳ್, ಹೊಗಳು$_1$ (ಕ್ರಿ). ೧. ಕೊಂಡಾಡು ; ಬಣ್ಣಿಸು ; ಸ್ತುತಿಸು : " ಪೊಗಟ್ಟು–ಸಂಸ್ತವನೇ " (ಶಬ್ದಾನು) ; ಮಾದಕ್ಷಿಣಾಪಥಬಹುಶತಹವನಾಹವದು[ಳ್] ಪಶುಪ್ರದಾನ ಶೌರ್ಯೋರ್ಗಿದ್ಯಮಭರಿತೋ[ನ್ನಾನ]ಪಶುಪತಿಯೆನ್ದು ಪೊಗಟೆಪ್ಪಟ್ಟಣ ಪಶುಪತಿ ನಾಮಧೇಯನಾಸರಕ್ಕೆಲ್ಲಭಟರಿಯಾ ಪ್ರೇಮಾಲಯಸುತನ್ದ (ಪ್ರಕಾ. ೦೯೩೬, ೦೬-೮ ; ಶು. ೩೬೦) ; ಪಟಿಗೆ ಮೇಣ್ಪೊಗಟ್ಗೆ ಮೇಣ್ ನೆಪಮಿಲ್ಲದೊಡಿಂತು ಕೈಗಟುಯೆ ಬಗ್ಗಿಸುಗೆ ಮೇಣ ವರೆಲ್ಲರುಮಂತುಮಮಾನು ಚುವನಲ್ಲಂ (ಕಂಠಾ. ೦-೦೩೬) ; ನೀನ್ನಿನ್ನ ನೃಪನ ದಿಗ್ವಿಜಯೋನ್ನತಿಯಂ ಪೊಗಟ್ದು ಮೂರ್ಛೆಪೋಪ್ಪೆ ಪೊಗಟ್ದುಂ ನೀನ್ನಿನ್ನ ಮನದೊಳೀಶಿದು ಬನ್ನಮನೆತ್ತುಪಮೊಳಾಯ್ತು ನಿನ್ನವನಿಪನಾ (ಅಂಕ್ರ. ೦೪-೬೬)· **ಪೊಗಳ್**: ೧. ತಮ್ಮದೊಂದರ್ಕ(ಬ್ಬ)ಚಿಂದಂ ಪೊಗಳಲ್ (ಎಇ·XIII. ೩೩೦-೬; ೯೭೦); ರಾಜಕುಲದೀಪಕನ ರೂಪು ಸೌಂದರ್ಯಮನೇನೆಂದು ಬಣ್ಣಿಪೆಂ ಎಂತು ಪೊಗಳ್ವೆಂ (ಶಂಖರ· ೧-೨೦) ; ಹದಿಬದೆಯರ ಪೆಸರ್ಗೊಂಡು ಪೊಗಳ್ವುದು ವಿದಿತಮೃಸಲೆ ವ್ಯದಿಲಗೆ (ಹರಿಶ· ೨-೦೩)· **ಪೊಗಳು** : ೧. ಆ ಸತಿಯ ರೊಲಿದು ಬಲಗೊಂಡಚಿಗೆ ಪೊಗಳುತಿರ್ಪಾ ಸಮಯದೊಳು . . . ಸಿರಿ ಸರಸ್ವತಿವೆರಸಿ ಗಿರಿಜೆ ಬಿಜಯಂಗೈದಳು (ಸಿದ್ಧರಾ. ೦-೩೬) ; ಸುಜ್ಞಾನ ದಿಂದಜಾದು ಪೊಗಳತೊಡಗಿದನಃ ಸೌಂದರಕವರನು (ಶೌಂದರ್. ೩-೦೬) ; ಪರಮಪಶಿವ್ರತೆಯರ ನಡತೆಯನಿಲ್ಲಿ ಪುರುಳುಗೊಳಿಸಿ ಪೊಗಳುವೆನು (ಹರಿಶ. ೦-೯೬)· **ಹೊಗಳ್** : ೧. ಹೊಗಳ್ವ ವೇದಾಳಿಗತಿಗೂಢ ಕೂಡಲಸಂಗ **ಸೊಗಯಿಸುವ** ಘನವೃಷಾರೂಢ ಕೂಡಲಸಂಗ (ಬಸವ. ೩-೯೩). **ಹೊಗಳು$_1$** : ೧. ಎನ್ನವರೊಲಿದು ಹೊನ್ನ ಶೂಲದಲ್ಲಿಕ್ಕಿದರನ್ನ ಹೊಗಳಿ **ಹೊಗಳಿ** (ಬಸವ. ೩೩೬) ; ತೆಗೆಸು ದಳವನು ಸಾಕು ಬಚಿದೇ ಹೊಗಳುತಿಹ ನೀ ನಮ್ಮನು (ಕುಮಾರವ್ಯಾ. ೦೩-೪) ; ಅಗಣಿತವಿದ್ಯಾಧಿಕರು ಬಂದಲಸದೆ ಹೊಗಳಿದರಬುಧಾಂಬಕನ (ಕೊಳಕ. ೪-೬೦) ; ಹೊಗಳಿ ಮಾರಬೇಕು, ತೆಗಳಿ ಕೊಳ್ಳಬೇಕು (ಗಾದೆ)· ೨. ನಿರ್ಧಾರವಾಗಿ ಹೇಳು ; ವಿವರವಾಗಿ ಹೇಳು : ಧರ್ಮಜ ಹೊಗಳು ಹೊಣೆಯನು ವಚನಿಸೊಡ್ಡಮನಿದು ವಿನೋದವಲೆ ಒಗೆವಡೊಂದೇ ಹಲಗೆ ಮೇಲಣ ದುಗುಣ ಸಲ್ಲದು (ಕುಮಾರವ್ಯಾ. ೦೬-೯೭) ; ಮನೆಯನ್ನು ಎರಡನೆಯ ಭೋಗ್ಯಕ್ಕೆ ಕೊಟ್ಟಾಗ ಭೋಗ್ಯಪತ್ರದಲ್ಲಿ ಮೊದಲ ಭೋಗ್ಯವನ್ನು ಹೊಗಳಿ ಬರೆಯಬೇಕು (ಆಡು).

**ಪೊಗಟ್ ಪಡು** = ಹೊಗಳಿಸಿಕೊಳ್ಳು : ಸುಬ್ರಾಹ್ಮಣನಾಗಿರ್ದುಂ ಸುಬ್ರಾಹ್ಮಣರಿಂದೆ ಪೊಗಟ್ವಟ್ಟುಂ ಮತ್ತಂ ಸುಬ್ರಾಹ್ಮಣತ್ವಮಾ ನೀಂ ನಿರ್ಬ್ರಹ್ಮಂ ಕಿಡಿಸಿ ಸವಣನಾದ್ಯೆ ಮರುಳೇ (ವಡ್ಡಾರಾ. ೯-೬೬).

[ ದೇ. ॥ ತಮಿ. ಪುಕಟ್ ; ಮಲ. ಪುಗಟು ; ತುಳು· ಪೊಗಳು, ಪುಗಳು ; ತೆಲು. ಪೊಗಡು, ಪೊಪಡು ]

**ಪೊಗಟ್ಟು$_2$**, **ಹೊಗಳು$_2$** (ನಾ). ಸ್ತುತಿ ; ಕೊಂಡಾಟ ; ಪ್ರಶಂಸೆ : ಜಟಕ್ಕೆ —ಪೊಟ್, ಬೀಟ್ . . . ನೆಗಟ್, ಪೊಗಟ್, ತೆಗಟ್ (ಶಬ್ದಮ. ೯೯ ಪ್ರಯೋ)· 'ಪೊಗಟುಲಿ' ಪರಾ. **ಹೊಗಳು$_2$** : ದೂರನನ್ನು ಎದುರಿಗಾಡು, ಹೊಗಳನ್ನು ಹಿಂದಾಡು (ಗಾದೆ)· [ < ಪೊಗಟ್$_1$ ]

**ಪೊಗಟಿಸು**, ಪೊಗಳಿಸು, ಹೊಗಳಿಸು (ಕ್ರಿ). ಸ್ತುತಿ ಮಾಡಿಸು ; ಪ್ರಶಂಸೆ ಮಾಡಿಸು : ಮಾನಧನಾ ಪೊಗಟಿಸಲೇಂ ದಾನಿಯ ನೀನುಂಕೆ ನಿನ್ನ ಕಸವರಮೆಂದುಂ ದೀನಾನಾಥರ ಕೆಯ್ಗದು ದಾನಿಯದೆಂತೆಂಬುದಿಂತು ಹೇತ್ವಾಕ್ಷೇಪಂ (ಕಾವ್ಯಾ· ೩-೦೦೩) ; ಬಲಿಂದಮನಿಂ ಬಲ್ಲ ಬಲ್ಮೆಯಂ ಪೊಗಟಿಸಿದಂ (ಶಂಕರಾ. ೩-೯೯); ತುಂಬಿಯಿಂದಂ ಗಿಳಿಯಿಂದಂ ಬೀರಮಂ ಪಾಡಿಸಿ ಪೊಗಟಿಸುವಂ ಚೈತ್ರದೊಳ್ ಚೈತ್ರಮಿತ್ರಂ (ಜಗಂ· ೦೪-೪೦)· **ಪೊಗಳಿಸು** : ಮನಮೊಲ್ದಾಗ್ಗಿರ್ಯನಾರಿಂ ಪೊಗಳಿಸನವನಿಮಂಡನಂ ವೀರಲಕ್ಷ್ಮೀಸ್ತನಹಾರಂ ವಾಜಿವಂಶಾಂಬರಹಿಮಕಿರಣಂ . . . ನಾಗವರ್ಮ್ಮ (ಹಾಂಡೇಶ್. ೩-೦೭ ; 1047); ಶಿವನಾಜ್ಞೆಯಂ ಸಂಪಾದಿಸಲು ಪಾಲಿಸ ಲಖಿಳರಂ ಛೇದಿಸಲು ಲೋಕಂಗಳಂ ಪೊಗಳಿಸಲು ನಗಿಸಲು ಈ ಮಹಿಹ ವಾಗಿಳೆಗೆ ಬಂದ ಮಹಾಮಹಿಮ ಹರಮೂರ್ತಿ (ರಾಶ್ರ. ೩೬-೪೨). **ಹೊಗಳಿಸು** : ಅರಸ ಕರ್ಣಚ್ಛೇದವೇ ಜಯಸಿರಿಯ ನಾಸಚ್ಛೇದವಿನ್ನ ರವರಿಸದಿರು ಹೊಯ್ದಾಡ ಹೊಗಳಿಸು ಬಾಹುವಿಕ್ರಮವ (ಕುಮಾರವ್ಯಾ. ೦-೦೬).

[ಪೊಗಟ್$_1$ + — ಇಸು]

**ಪೊಗಟುಲಿ** (ನಾ). ಹೊಗಳಿಕೆಯ ಮಾತು ; ಕೊಂಡಾಟದ ನುಡಿ : ಮಗಮಗಿಸುತ್ತುಮಿರ್ಪ ನಜುಸುಯ್ಗಲರ್ವಕ್ಕಿ ಜನಂಗಂತರ್ಪಿನಂ ಬಗೆಗೊಳೆ ಬಂದು ನಿಂದು ನೆಚ್ದಗ್ಗದ ನೀಚೆಯರೊಲ್ದು ಪರ್ಚುವಾ ಪೊಗಟುಲಿ ಪೊಣ್ಮೆ ಬಿತ್ತರದೆ ಮುತ್ತಿನ ಸೇಸೆಯನಾಗಳಿಕ್ಕಿದರ್ (ಕಾವ್ಯಾ. ೩೪೨). [ಪೊಗಟ್$_2$ + ಉಲಿ$_2$]

**ಪೊಗಟ್ಕೆ**, ಪೊಗಳಿಕೆ, ಪೊಗಳ್ಕೆ, ಹೊಗಳಿಕೆ, ಹೊಗಳ್ಕೆ (ನಾ)· ಕೊಂಡಾಟ ; ಪ್ರಶಂಸೆ : 'ಪೊಗಟ್ಕೆವೆಟು' ಪರಾ. **ಪೊಗಳಿಕೆ** : ಎನ್ನ ಜಿಹ್ವೆಗೆ ಮೊಳಗುವಂದದಿ ನಿನ್ನ ನಾಮಾವಳಿಯ ಪೊಗಳಿಕೆಯಿತ್ತು ರಕ್ಷಿಸು ನಮ್ಮನನವರತ (ಹಂಪಾ· ೨೦) ; ಪೊಗಳಿಕೆಗೆ ಹಿಗ್ಗಲೊಲ್ಲದೆ, ತೆಗಳಿಕೆಗೆ ಕುಗ್ಗಲಾರದೆ, ಲತೆ ಫಲಕೆ ಸಿಗ್ಗಲೇಕೆ ? (ಗೀತಾ. ೦೦೪-೪೦)· **ಪೊಗಳ್ಕೆ** : ಮುನಿಸಿಗಳ ಪೊಗಳ್ಕೆಯುಂಡಲಗೆ ಕೆಲದವನಿನಂದನೆಯ ಮೊಗ ನೋಡಿ ನಸುನಗುತಾ ರಘೂದ್ವಹಂ . . . ಮುಂ ನೆರೆದ ಸಭೆಗಿಂತೆಂದನು (ಶ್ರೀರಾಕು. ೩-೪೦). **ಹೊಗಳಿಕೆ** : ಹೊಗಳಿಕೆಗೆ ಹೊಚಿಗಾದರೈವರು ವಿಗಡರ ದರೊಳಗಿಬ್ಬರಳಿದರು ಹಗೆಗಳುಳಿದಿರಿ ಮೂವರೆಂದನು ಭಾನುಸುತ ಮುಳಿದು (ಕುಮಾರವ್ಯಾ. ೪-೦೬) ; ನೋಟಕರು ಹೊಗಳಿಕೆಯ ಪರಿಪರಿಯ ಕೈವಾರಿಗಳು ನೆರೆದುದು ನಿಮ್ಮಯೋಧ್ಯಾನಗರದಧಿರಾಜೇಂದ್ರಚಂದ್ರಮನಶ್ವಮೇಧದಲಿ

(ಕೊರಗಾ. ೦-೬-೨೩). **ಹೊಗಳ್ಕೆ:** ಣೂ—ಸ್ತವನೇ, ಹೊಗಳ್ಕೆಯೊಳ್ (ಶಾಕಶ್ಕ. ೨೩೦). [ಪೊಗಟ್ $_1$ + — ಕೆ]

**ಪೊಗಟ್ಕೆವೆಱು** (ಕ್ರಿ). ಪ್ರಶಂಸೆಯನ್ನು ಪಡೆ: ಅಂತು ಪೊಗಟ್ಕೆವೆತ್ತ ಒಡ್ಡಾಯನವಮಹಾಂಬಂಗೆ ಪಟ್ಟದರಸಿ ಪ್ರಭಾವತಿಯೆಂಬಳ್ (ಧರ್ಮಾಮೃ. ೯-೦೩). [ಪೊಗಟ್ಕೆ + ಪೆಱು]

**ಪೊಗಟ್ತೆ, ಪೊಗರ್ತೆ, ಪೊಗಳ್ತೆ, ಹೊಗರ್ತೆ, ಹೊಗಳತೆ, ಹೊಗಳ್ತೆ** (ನಾ). ಹೊಗಳಿಕೆ; ಕೊಂಡಾಟ; ಪ್ರಶಂಸೆ: "ಪೊಗಟ್ತೆಯೆನೆ ಕೀರ್ತನಾಖ್ಯಂ" (ಶಂಹೇಶ. ೬); ಗುರುಗಳ ಪೊಗಟ್ತೆಗೆ ರಾಗಿಸಿ ಸಂತೋಸಂಬಟ್ಟರ್ದೊಡೆ (ಶಬ್ದಾರ. ೬೨-೨೯); ನೆಗಟ್ತೆವೆತ್ತ ಪತಿಭಕ್ತಿಯ ಮೈಮೆಯ ಮಾನಸಿಕ್ಕೆಯಗ್ಗಲದ ಪೊಗಟ್ತೆ ತನ್ನದೆನೆ ಪೆಂಪು ಮನೋಹರಿಗಲ್ಲದಕ್ಕುಮೇ (ಅಂಕ್ತು. ೦-೬೨); ಇನ್ನು ಜನಂ ಪೊಗಳೆ ಪೊಗಟ್ತೆಗಂ ನೆಗರ್ತೆಗಂ ತಾನೆ ನೆಲೆಯಾಗಿ (ಎಕ್. XI, ಕಶ್ರರು. ೩೯-೨೩; 1123); ಜನಮನೋಹರಮಾಗಿ ಪೊಗಟ್ತೆಗೊಪ್ಪುವುಪ್ಪರಿಗೆಗಳಿಂ ನೆಗಟ್ತೆವಡೆದಿರ್ದುದು ಸೌಂದರರಾಜಮಂದಿರಂ (ದಕಶು. ೬-೨೩೬). **ಪೊಗರ್ತೆ:** ಇನ್ನಾರ್ಪೊರ್ಗರ್ತ್ರ(ಟ್ತೆ)ಗಡ ಪ್ರಾರ್ದ ಮಹಾಮಾಹರ್ (ಎಕ. XIII. ೩೨-೬೨; 928); ಅಜ್ಞಾನ ಪೊಗರ್ತೆಯಿಂ ಶಾಸ್ತ್ರಜ್ಞ ನೃಪಾಳಿ[ಯು]ಪದೇಶಮೆಂಬಾತೆ ಕರಂ ಪ್ರಾಜ್ಞಂಗೆ ಬಗೆದು ನೋಡೆ ಮನೋ[ಜ್ಞ]ಗೆ ಪ್ರಣಯಾನುರಾಗಮಂ ಪುಟ್ಟಿಸುಗುಂ (ವರ್ಧಮಾ. ೦-೦೭); ರೂಪಿನ ಪೊಗರ್ತೆಯುಂ ಸಹಜದ ನೆಗರ್ತೆಯುಮುಂ ಕೇಳ್ದು (ಬಂಕಜಂ. ೬-೩೨ ಪ). **ಪೊಗಳ್ತೆ:** ಕಾಳಗಾವುಣ್ಣನ ಮಗ ಕಲ್ಲಣ . . . ಪೊಗಳ್ತೆಗಂ ನೆಗರ್ತೆಗಂ ನೆಲೆಯಾಗಿ ಕಾದಿ (ಎಕ್. VIII, ಸೊರಬ. ೯೯೩-೬; 975 ?); ಅನ್ತು ಪೊಗಳ್ತೆಗಂ ನೆಗಳ್ತೆಗಂ ಜನ್ಮಭೂಮಿಯಾಗಿ (ಎಕ್. VI, ಕಡೂರು. ೬೯-೯; 1160); ತ್ರಿಲೋಕಶರಣಂ ಶರಣಾಭರಣಂ ಸಮಸ್ತಮುಕ್ತಾಪರಣಂ ಎಂಬ ಪೊಗಳ್ತೆಗೆ ಮಿಗಿಲೆನಿಸಿ ನೆಱೆ ಮೆಱೆವ ಶಿವನ ಪುಣ್ಯಾಗಣ್ಯ ಲಾವಣ್ಯಮಯಸುಕುಮಾರಾವಯವಂಗಳಂ ಕಂಡು (ಗಂಕ್. ೦೦-೬೦ ಪ). **ಹೊಗರ್ತೆ:** ಹೊಗರ್ತ್ರೆಯುಂ ತಳೆದು (ಶೂಂಕಶಾ. ೦೯೩೦. ಶಾಗೀವಾ. ೦೦೯-೯೩; 1168). **ಹೊಗಳತೆ:** ಕೂಡಲಸಂಗಮದೇವಾ ನೀನೆನಗೊಲ್ದ ನಾದರೆ ಎನ್ನ ಹೊಗಳತೆಗಡ್ಡ ಬಾರಾ ಧರ್ಮ (ಬಸವ. ೩೮೬); ನಿಶ್ಶಬ್ದಂ ಬ್ರಹ್ಮ ಉಚ್ಚತೆ ಎಂಬ ಘನವು ಹೊಗಳತೆಗೆ ಸಿಕ್ಕುವುದೇ ಎಲೆ ಮರುಳುಗಳಿರಾ (ಅಪಕಂ. ೨೩೨-೦೦೯೯). **ಹೊಗಳ್ತೆ:** "ಸ್ತವನಂ, ಸ್ತವನೀಯಂ . . . ಸ್ತುತಂ, ಸ್ತೋತವ್ಯಂ, ಈ ೭ ಹೊಗಳ್ತೆ" (ಶಾಕಶ್ಕ. ೦೬೯); ಹೊಗಳ್ತೆಗವಗ್ಗಳವೆನಿಸಿದ (ಕೊಂಕಶಾ. ೨೯೩೩. ಶಾಕರಪ್ರೊ. ೨೬-೦೦; ?).
[ಪೊಗಟು $_1$ + — ತ್ತೆ $_2$]

**ಪೊಗಟ್ತೆವಡೆ, ಪೊಗರ್ತೆವಡೆ, ಪೊಗಳ್ತೆವಡೆ** (ಕ್ರಿ). ಹೊಗಳಿಕೆಯನ್ನು ಗಳಿಸು: ಪ್ರಶಂಸೆಯನ್ನು ಹೊಂದು: ಅಂತು ಪೊಗಟ್ತೆವಡೆದಾ ಮಹಾದೇವಿಯೊಳಾ ಮಹಾನುಭಾವನೇಕಭಾವದೊಳನಂಗಸಾಮ್ರಾಜ್ಯಸುಖಮನನುಭವಿಸಿ (ಅಂಕ್ತು. ೨-೯೬ ಪ); ಮತ್ತಮೆಲ್ಲರೊಳಂ ಬಲ್ಲರೆನಿಸಿ ಎಲ್ಲಾ ನಾಡೊಳಂ ಪೊಗಟ್ತೆವಡೆದು ಮಲ್ಲುಡಿಗರ್ ಅಜೆವರ್ (ಕಶಚಂ. ೦೯೯-೦). **ಪೊಗರ್ತೆವಡೆ:** ಅಂತು ಪೊಗರ್ತ್ರೆವಡೆದ ಪ್ರಕಾಮಿ ದೇವದಂಡನಾಥ (ಇಎ. ೦೯೯೬, ಮುಂಡರಗಿಶಶಿ. ೩೩೫-೫೭; ?). **ಪೊಗಳ್ತೆವಡೆ:** ಅಂತು ಪೊಗಳ್ತೆವಡೆದ್ಯವತ್ರೊಕ್ಕಲ್ಗಲೀಲಸ್ಥರಾಗಿಲ್ದರಂಬರಾಪುರದೀಶಾನದಿಗ್ಬಾಗದೊಳ್ ತೆಲ್ಲಿಗೇಶ್ವರದೇವರ ಪ್ರತಿಷ್ಠೆಯುಂ ತದ್ದೇವಾಯತನಮುಮಂ ಮಾಡಿಸಿದರ್ (ಎ. XX. ೦೦೬-೩೬; 1167); ಆ ಮಹೀಕಾಂತಸುತಂ ಪೊಗಳ್ತೆವಡೆದೂಪ್ಪತ್ತವಿದ್ದೋದುಶುಭದಿನದಲ್ಲಿ . . . ಪುಗುತಂದ ನಕ್ಕಿಜೀಂ (ರಾಜಶೇ. ೪-೦೦೦ ಪ). [ಪೊಗಟ್ತೆ + ಪಡೆ $_1$]

**ಪೊಗಟ್ತೆವೆಱು, ಪೊಗರ್ತೆವೆಱು** (ಕ್ರಿ). = ಪೊಗಟ್ತೆವಡೆ: ನಯಮಂ ತಾಳ್ದಿ ಪೊಗಟ್ತೆವೆತ್ತು ಭುವನಕ್ಕಾರಾಧ್ಯಯಿದತ್ತಿಮಬ್ಬೆಯ . . . ಭಕ್ತಿ ಕ್ರಮಕಕ್ತಿಮಬ್ಬೆಯ ಗುಣಕ್ಕಾರುಂ ಸಮಂ ಪೋಲ್ವರೇ (ಅಕ್ಕ. ೦೨-೦೩); ಪೊಗಟ್ತೆವೆತ್ತುವೊಪ್ಪಂಬಡೆದಯಿರುಪಗದಂಡಾಧೀಶನ ಸತ್ಕೀರ್ತಿಯೆಂತೆಂದೊಡೆ (ಜಪುದ. ೦-೨೯ ಪ). **ಪೊಗರ್ತೆವೆಱು:** ಶಿಷ್ಟರು ಪೂರಿಪ ಪೊಗರ್ತೆವೆತ್ತ ಬಲಿ ಭಾವಿಪೊಡೀತನೆ ತಾನೆನುತ್ತಮಿಾ ಧರೆ ಮನಮೊಲ್ದು ಬಣ್ಣಿಸುವುದೆನ್ತು ಚಮೂಪತಿ [ಸೋ]ವಿದೇವನ (ಶಾ೨೨. XX. ೬೯-೦೩; 1112); ಇನ್ನು ಪೊಗರ್ತ್ರೆವೆತ್ತ ಸುಜನಂಗೆ ಮಹೋತ್ಸವನಾ ಬಸಾತಿಮಯ್ಯಂ ತನಯಂ ಸಮಸ್ತವಿಬುಧಾಶ್ರಯನಾತನ ಧರ್ಮಪತ್ನಿ . . . ಮಾಡಿದ ಪುರಾಕೃತ ಪುಣ್ಯಮನೇಪೊಗಳ್ವುದೋ (ಶಾ೨೨. IX-i. ೨೦೦-೦೯; 1121). [ಪೊಗಟ್ತೆ + ಪೆಱು]

**ಪೊಗಿಲ್ಲಿ** (ನಾ). ಒಬ್ಬಾತನ ಹೆಸರು: ಶ್ರೀ ಪೊಗಿಲ್ಲಿ ಸೇನ್ದ್ರಕಮಹಾರಾಜರ್ ನಾಯರ್ಖಿಣ್ಣಮುಂ ಜೆಡುಗೂರಾಳ್ಗೆಯ್ಯಾಳುತ್ತು (ಇಕ. XIX, ೦೯೯-೩; ಸು. 680). [ ? ]

**ಪೊಗಿಸು, ಪುಗಿಯಿಸು, ಪುಗಿಸು, ಹುಗಿಸ್ಸು, ಹೊಗಿಸು** (ಕ್ರಿ). ೧. ಹೊಗುವಂತೆ ಮಾಡು; ಪ್ರವೇಶಗೊಳಿಸು; ಒಳಹೊಗಿಸು: ಈ ಬ್ರಹ್ಮೇತಿಕಾಜಿನನಾರ್ ಪೊಗಿಸಿದರಾರ್ ತಂದರ್ (ಶಂಶರ. ೬-೫೩); ಹಗೆಯ ಹೆಂಗಳನರಮನೆಗಳೊಳು ಪೊಗಿಸಲಾಗದು (ಶಬ್ದಾಕ. ೬-೩೫); ಉರಿಗಳೊಳ್ ಪೊಗಿಸುತುಂ ದರಿಗಳೊಳ್ ನೂಂಕುತುಂ (ಶಂಕ್ತು. ೫೬-೨೬). **ಪುಗಿಯಿಸು:** ೨. ಒಳಗಿರಿಸು; ಒಳಗಿಡು: ವಿಪಣಿವೀಥಿಯೊಳ್ ಮಾಲೆಗಾರ್ತಿಯ ರೆತ್ತಿದ ಬೆಲೆವೂವಿನ ಸರಂಗಳನಲರಂಬಂಗೆ ಪೊದೆಗೆದಱುವಂತೆ ಕದಱೆ ಪರಿಮಳ ಭಂಗಭಯಮನವಲ್ಲಿರೊಳ್ ತಗುಳ್ಚಿ ಪಡಲಗೆಯಿಂ ಮಗುಟೆ ಪುಗಿಯಿಸಿಯುಂ (ಕಂತ್ರಕ್ತು. ೬-೯ ಪ). **ಪುಗಿಸು:** ೧. ಸಮಾಧಿ ಇಲ್ಲಾದೆಜೆ ಪೊನ್ನತ್ತಿಕೊಳೆ ಕೊಟ್ಟ ಒಕ್ಕಲ್ಗೆ ಪೊನ್ನಿಟ್ಟು ಪುಗಿಸಿದಾರ್ (ಎಕ್. XIV, ತಿರುಮು. ೨೩೩-೫; ಸು. 800); ವಿಷಧಿಗಳೊಳಗೊಯ್ದಿರ್ದುವ ವಿಷಮಮರಣಾಂಗಣಮನಿರದೆ ಪುಗಿಸುವ . . . ವಿಷಯಸುಖಂಗಳೊಳೆ ತೊಡರ್ದು ಬಿರ್ದಪುದು ಜಗಂ (ಅಂಕ್ತು. ೦೯-೦೨೯); ಹುಟ್ಟಿದುದೆಲ್ಲಿ ನೀನುಱೆ ಬೆಳೆದುದು ಬಳ್ಳಿವೆಟ್ಟು ನೋಡಬಲೆ ಮತ್ತವ್ವ ಪಟ್ಟಣದೊಳು ಪುಗಿಸಿತು ಪುಣ್ಯ (ಶರಕ. ೩೫-೦೨೯). ೨. ಎಡದಡಿಯುಂ ಪುಗಿಸುವ ಬಲದಡಿಯಂ ಪೊಱಗಿಡುವ ದುಂಡೆಯುಂ ನಿಲ್ಕುವ . . . ಬಿಡಂಗು ರಂಜಿಸಿತು ಭೀಮ ದುರ್ಯೋಧನರಾ (ಗದಾಯು. ೬-೯). ೩. ಪ್ರವೇಶಕ್ಕೆ ಅನುಮತಿಯನ್ನು ಕೊಡು: ಅರಸಾಡಿದಂತೆ ನೀನಾಗಿರೆ ನಿನ್ನಂ ತಂದೆಯೆಂತು ಮನೆಯಂ ಪುಗಿಪಂ (ಶಾಕುಂತ. ೬೨-೦೨೬). ೪. ಮುಟ್ಟಿಸು; ತಲಪಿಸು: ನೀಂ ಪತ್ರಲೇಖೆಯನೊಡಗೊಂಡು ಪೋಗಿ ಕಟಕಮಂ ಪುಗಿಸು (ಕಾದಂಬ. ೩೨೯). ೫. ಒಂದುಗೂಡಿಸು; ಸೇರಿಸು: ಕಥಕಶ್ರೇಣಿಯೊಡನೆಳಸಿ ಬಳಸುವ ನಾಣಿಲಿಗಳನೀ ಬುಧಾಳಿಯೊಳ್ ಪುಗಿಸುವುದೇ (ಕುಶಲಕಾ. ೨-೨೯). ೬. ಹೊಂದಿಸು; ಅನ್ವಯಿಸು: ವಿಪುಳಯಶೋವಿತಾನಗುಣಮಿಲ್ಲದನಂ ಪ್ರಭು ಮಾಡಿ ಪೂರ್ವಭೂವಿಭವರ ಪದಂಗಳಂ ಪುಗಿಸಿ ಪೋಲಿಪೊಡಂತನು ದಾತ್ತ ಪೂರ್ವಭೂವಿಭವರನೊಳ್ಪನೊಳ್ ತಗುಳೆವಂದೊಡೆಯಾ ಕಥೆಯೊಳ್ ತಗುಳ್ಚಿ ಪೋಲಿಪೊಡೆನಗಳ್ಳಿಯೊಮದು ಗುಣಾರ್ಣವಭೂಭುಜನಂ ಕಿರೀಟಿಯೊಳ್ (ಶಂಚಶಾ. ೦-೦೯). **ಹುಗಿಸ್ಸು:** ೧. ಹುಗಿಸಿದನೆ ಮನೆಗಿತರ ಪಾತಕನನುಗಿಸಿದನೆ ಲಿಂಗಪ್ರಸಾದವನಗಲಿಸಿದನೇ ಕಲಹವಂ ಮಾಡಿಷ್ವಶಿಷ್ಟರನು (ಬಸಕ್ತು. ೯೫-೦೯); ನೆಳನಾಥನು ನಗುತ ಮಹಮಂಡಲದ ಶಿಷ್ಯನು ಬರಲಿಯೆನೆ ಜಾಗಲಲಿ ಕೈದುವ ಕೊಂಡು ಹು[ಶಾಂತ. ಹೊ]ಗಿಸಿದರಂದು ಸಂಜಯನ (ಶುಲ್ಯಾಳು. ೨-೨೯); ಒಳವುಗಿಸೆನೆ ಹುಗಿಸಿದಳಾ ಸ್ತ್ರೀ ಸಭೆಯಂ ಭರದಿಂದ (ಜಮುಶಾ. ೨-೨೦). **ಹೊಗಿಸು:** ೧. ಅಧ್ಯಶ್ರುಮದ ಥಗೆ ಪರಿಹರಿಸಿ ನೀರೊಳು ಹೊಗಿಸಿದನು ಹರಿ ಹಯಚತುಷ್ಟಯವ (ಶುಲ್ಯಾಕ್ರೋ. ೦೦-೩೯); ಬಲುರಸ್ಥಾಳದ ರಥಾದಿಯನಟ್ಟಿದನು ದೆಸೆದೆಸೆಗೆ ಧಾವಿಸುವ

ನೆಲಉ ಹೊಗಿಸಿದನೆಲ್ಲರನು (ಶಿಶುಗ. ೧೧ ೧೮-೨). ೩. ಸುರರ ಮೆಚ್ಚಿದ ರಾಮ ನೀತನ ಕರೆದು ಗರುಡಿಯ ಹೊಗಿಸಿದನು (ಕುಮಾ.ಕ. ೬-೨); ಗತಸೂನು ವಿಪನೆಂದೆನ್ನ ಹೊಗಿಸರು ಸ್ವರ್ಗವನು ಸುರರು (ಕೊರಟಾ. ೦-೪-೪). ೪. ತುರಗವರಸನ ಕೊಂಡು ಮಂದರಗಿರಿಯ ಹೊಗಿಸಿತು (ಸಂಶಕ. ೩-೦೭).

**ಪೊಗಿಸಿಕೊಳ್** – ಸೇರಿಸಿಕೊಳ್ಳು: ಶರೀರದೊಳ್ ಪುಗಿಸಿಕೊಂಡಪನೆಂಬಿನ ವಾದಮುಪ್ಪುತುಂ . . . ಕಾಲ್ಗಳಂ ನೆತ್ತಿಯಲಿಟ್ಟುಕೊಂಡಬುತ್ತವಿರ್ದಂ (ಶಾಂತಿಪು. ೭೦೭). [ಪೊಗು + – ಇಸು]

**ಪೊಗು, ಪುಗು, ಹುಗು, ಹೊಗು** (ಕ್ರಿ). ಪೊಕ್ಕ$_1$, ಹೊಕ್ಕ (ಭೂತಕೃ). ಪೊಕ್ಕು$_1$, ಹೊಕ್ಕು$_1$ (ಭೂತನ್ಯೂ). ೧. ಒಳಸೇರು; ಪ್ರವೇಶಿಸು: ಶ್ವೇತ್ರವಾಹನನ್ ಉದಯಪುರವಮಾನ್ ಪೊಗುವಲ್ಲಿ ಎಱಿದು ಶ್ವ(ಸ್ವ)ರ್ಗ್ಗ(ರ್ಗ್ಗ)ಲಯಕ್ಕೇಱಿ[ದೊನ್] (ಎಪಿ. IX. ೧೯-೧೪; ಸು. 800); ಅಯೋಧ್ಯೆಯನಿದು ಪೊ[ಶಾಶು. ಪು]ಗದೆ ತಱುಂಬಿ ನಿಂದ ಕಾರಣಮೇನೋ (ಆದಿಪು. ೧೯-೭); ತನುವೆರಸಿ ಎಂತು ಪೊಗುವೆಂ ದೇವ ನಿಮ್ಮೊಳಗೆ (ವಾಗೀಶ. ದೇ. ೨೭೮-೧೯); ಕನ್ನಾಲಯಕೆ ತಿಂಗಳ ದಿನ ಸವೆಯೆ ಪೊಗಲು (ಸಂಶಕ. ೨೫-೨೮). **ಪುಗು**: ೧. "ಪುಗು–ಪ್ರವೇಶೇ" (ಶಮದ). ; ಶ್ರೀದಾಸಿ ಅಮ್ಮನ್ ಕಣ್ಣಿಯೊಳ್ಪನ್ನೊಬ್ಬರಿದನೆಱಿದು ಸ್ವರ್ಗ್ಗ ಆದನ್ ಭೂತಲ ದೊಳೆಲ್ಲಿಯು ಸ್ನೋನ್ನತಿ ಪುಗೆ (ಕ್ಕಆ. ೦೯೩೪. ೨೩-೦೯; ಸು. 740); ಎನ್ನ ಜಾತ್ರ ಸಮೆವನ್ನಗಂ ನೀವಿೂ ಪೊಲಂ ಪುಗದಿರಿಂ (ಜಮ್ಮಾ. ೦೩೪-೦೯); ವಿಗುವಪಥಿ ಬುಧರಱಿಯೆ ನಿನ್ನಿನ ಹಗಲು ನಿನ್ನದು ಪಾಂಡು ತನಯರು ಪು[ಶಾಶಾ. ಹೊ]ಗುವೊಡಿಂದಿನ ದಿವಸವವರದು ಕಂದ (ಕುಮಾ.ಭಿ. ೭-೨೨); ಸೀತೆ ಪೆಂಕಿಯ ಪುಗೆ ಶೀತಳವಾದುದು (ಹರಿ. ೨-೪೭). ೨. ಮುಟ್ಟು; ಸ್ಪರ್ಶಿಸು: ಅಳಿಯೆಱಗದನಿಲನಲುಗದ ರವಿಕರಂ ಪುಗವ . . . ಇರವಂತಿಯರೆ ಕಂಡು (ಪುಷ್ಪರ. ಹ. ೫೨೩-೨೩). **ಹುಗು**: ೧. ಇದಿರಾಗಿ ಕಾದದೋಡುವರೆನೆ ದೇವತಾಭವನವಂ ವನವಂ ಹುಗುವಂತು ಮಾಡುವಂ . . . ರಾಯಮುರಾರಿ ಭೂಭುಜಂ (ಕೊಲ್ಲಾಪು. ೯-೩೫; 1147); ಎನ್ನ ಭಕ್ತಿದ್ವಾರವನು ಹುಗದನ್ಯಮಾರ್ಗದಲಿ . . . ನನ್ನನಱುವುದು ಹುಸಿ ಕಣಾ (ಪ್ರಭುಲಿ. ೧೮-೫). ೨. ಕಲಿ ಹುಗದ ಹೆಸರಿಂಗದೋಟಿ ಕೊರಗದ ದರ್ಪವುಗದ ಬಗೆ ಹುಸಿ ಹುಗದ ನುಡಿ (ಜಕಣ. ೦-೪೪). **ಹೊಗು**: ೧. ಮಾಚಮು[ನಾ] ಊರಲ್ವಿನೊಳೆ ಹೊಗೆನೆನ್ದು . . . ಸಿಂಗಮದೇವ ಯೆಱಿಪ್ಪುನ ಪಾಗ ಪಡಿಗನೊಂಬಾ ದಣ್ಡಿನೊಳ್ಕಾದಿ ಸತ್ತಾನ್ (ಎಪಿ. IX-i. ೩೦-೧೩; 981); ಬಗಿದು ಹೊಗುವೆನು ನಾ ನಿಮ್ಮ ಮನವನು (ಬಸವ. ೪೬೭); ಅಕಟನ್ನೆಲ್ಲಿ ಹೊಗುವೈ ಕಂದ ಕುಂತಿಯ ಜಠರವಲ್ಲವಲೇ (ಕುಮಾ.ದ್ರೋ. ೨-೪೭); ಅಡವಿಂಡ ಹೊಕ್ಕ ಹೆಬ್ಬುಲಿಯಂತೆ ಸೊಕ್ಕಿದ ಗಜವಿಂಡ ಸಿಂಹ ಹೊಕ್ಕಂತೆ ... ಕುಜನರ ಕಟ್ಟ ಹಾಯ್ಕಿದನು (ಕೋಹಕ. ೩೫-೨೦). ೨. ಆನು ಗುರುವಾಜ್ಞೆಯಂ ಮಿಱಿದುದಱಿಂದೆನಗೆ ಹಾನಿ ಹೊಗದಿರದು (ಜಕಣ. ೭-೪೭); ನಿಂದೆ ಹೊದ್ದದು ನಡೆವಳಿಗಳಲಿ ಕುಂದು ಹೊಗ[ಶಾಶಾ. ಅ]ದು (ಕೊರಟಾ. ೦-೩-೨೮). ೩. ಮೇಲೆ ಬೀಳು; ಆಕ್ರಮಿಸು: ಉಱುಬಿ ಹೊಕ್ಕನು ದ್ರೋಣ ಪರಬಲವ (ಕುಮಾ.ದ್ರೋ. ೧-೫೩); ಮಂದಮತಿ ಸುತ ಹೊಲ್ಲ ಹಂದೆಯುನು ನಂಬಿ ಹೊಗ ಹೊಲ್ಲ (ಸರ್ವಜ್ಞ. ೭೪೪). ೪. ಸೇರು; ಕೂಡಿಕೊಳ್ಳು: ಅತ್ತಡೇನಹುಪೆಲೆಗೆ ತೊತ್ತಿರ ಹಿಂಡ ಹೊಗು (ಕುಮಾ.ಸ. ೦೪-೭೯).

**ಪೊಗುಪೊಗು, ಹುಗುಹುಗು, ಹೊಗುಹೊಗು** (ದ್ವಿರುಕ್ತಿ): ಅಕ್ಕಱಿಂ ದಾಲೇಂದುಧರನೊಳು ಪೊಕ್ಕುಪೊಕ್ಕಲರ್ದಲರ್ದು ಕೂಡುತ ಸೊಕ್ಕಿ ತಲ್ಲಿಂಗದೊಳಗಿಂತು ವಿಲೀನನಾಗಿರ್ದು (ಬಸವ. ೩೫-೪); ರಕ್ಷಿಸುವೆನೊಲ ವುಣ್ಣಿಯನಿತು ಮನಕ್ಷತಂಗೊಳಲೇಕೆಯನ್ನಯ ವಕ್ಷವಂ ಕೆಱಿದಪೆನು ಹುಗು ಹುಗು (ಬಸವ. ೫೩-೪೮); ಹೊಗುಹೊಗುತ ಹೊರಬರುವ ಮಾನುಷ್ಯ ವಾಹಿನಿಯ ಕಲ್ಲೋಲಲೀಲೆಯೊಳು ದಿಟ್ಟಿ ಸಲಿಸಿ (ಮಲೆಗ. ೪೭-೫). **ಪೊಕ್ಕಿಲ್, ಹೊಕ್ಕಿಲ್** – ಹೆಣ್ಣು ಮದುವೆಯಾಗಿ ಸೇರುವ ಮನೆ; ಅತ್ತೆಯ ಮನೆ: ತವರುಂ ಪೊಕ್ಕಿಲುಮವಾಗಿ ಮದ್ಗೃಹವಿಮಳ್ಗೆ (ಅರ್ಧನೇ. ೭-೦೯); ಅದರ್ಗೆ ತಾಯ್ಮನೆಯವರ್ಗೆ ತವರ್ಮನೆಯವರ್ಗೆ ಹೊಕ್ಕಿಲ ಮನೆಯು ಮೇಳುಂ ಗವಿಯ ಬೆಳಗುವನೆಯ್ದೆ ರಕ್ಷಿಪ್ಪರಮನೆಯು ತಾನೆ (ಶಾಕುಂತ. ೯-೦೨). **ಪೊಕ್ಕುಱ್, ಹೊಕ್ಕುರಿ, ಹೊಕ್ಕುಱ್** – ೧. ಆಕ್ರಮಿಸಿ ಯುದ್ಧ ಮಾಡು: ಆಣಚಲ್ಯನಣುಮಪರಾಕ್ರಮನ್ನೀರಮಹಾಮೇರು ಪೊಕ್ಕುಱಿ ಪೊರದೊಗರಾಜನ್ . . . ನಾಯಕರುಳ್ಳಿಳ್ಳಿಱಿದೋಡಿಸಿ ಬಿಟ್ಟನ್ (ಎಕ. X, ಶ್ರೀನಿವಾ. ೭-೫; ಸು. 780); ಪುರುಷವಂ ಸಮುಕಟ್ಟುವವುಪೊಡೆ ಪೊಕ್ಕುಱಿಯಲಣ್ಣುವರಿಲ್ಲ (ಸಂಶಕಾ. ೭-೭೭ ಬ); ನಿಶ್ಶಂಕೆಯಲಿ ಹೊಕ್ಕುಱಿದು ಬಹ ಸತ್ತ್ವಾತಿಶಯ ಬೇಹುದು ರಣಾಗ್ರದಲಿ (ಕುಮಾ.ಕ. ೦೭-೩೩). ೨. ಆಕ್ರಮಿಸಿ ಚುಚ್ಚು,–ತಿವಿ: ಎಕ್ಕಲನ ಹೊಕ್ಕುರಿದು ಕರಡಿ ಬಾಯ್ದೆರೆಯ ಮುಸುಡಂ ಮುರಿಯಲಿಕ್ಕಿ (ಜಕಹೋ. ೦೭-೨೩); ಹೊಳೆವ ಕಣೆ ಹೊಕ್ಕುಱಿದ ದಾರಿಯೊಳಳಿದ ಕಣೆ ದಾಂಟಿದವು (ಕುಮಾ.ಕ. ೦೪-೦೯). **ಹೊಕ್ಕ ಅಮಾವಾಸ್ಯೆ, ಹೊಕ್ಕಮಾಸೆ**="ಮಧ್ಯಾಹ್ನದ ಮೇಲೆ ಬಂದು ಮಾರನೆ ದಿನವಿರುವ ಅಮಾವಾಸ್ಯೆ ತಿಥಿಯ ಪೂರ್ವಭಾಗ" (ಆಕಂಬಾ). **ಹೊಕ್ಕು ತುಂಬುವ ಬಾವಿ** – ಇಳಿದು ನೀರು ತುಂಬಿಕೊಳ್ಳಬಹುದಾದಂತಹ ಬಾವಿ; ಮೆಟ್ಟಿಲುಗಳಿರುವ ಬಾವಿ; ನಡೆಬಾವಿ; ಕಲ್ಯಾಣಿ: ಲಕ್ಕುಂಡಿಯಲ್ಲಿ ಗುಡಿಗಳಂತೆ ಹಲವು ದೊಡ್ಡ ದೊಡ್ಡ ಹೊಕ್ಕು ತುಂಬುವ ಬಾವಿಗಳಿರುತ್ತವೆ (ಕಭಾಗ. ೪೭೮); ಅಕ್ಕತಂಗಿಯರ ಬಾವಿಯೆಂಬ ದೊಡ್ಡ ಹೊಕ್ಕು ತುಂಬುವ ಬಾವಿಯನ್ನು ಇಬ್ಬರು ಪಾತರದವರಾದ ಅಕ್ಕ ತಂಗಿಯರು ಕಟ್ಟಿಸಿದರು (ಕಭಾಗ. ೫೦೯).

[ದ್ರಾ. ॥ ತಮಿ. ಮಲ. ಪುಗು; ತುಳು. ಪೊಗ್ಗು]

**ಪೊಗುಂಡಿ** (ನಾ). ಒಂದು ಸ್ಥಳದ ಹೆಸರು: ಕುಕ್ಕನರೆನಾಡ್ × × × ಜತ್ತ ತಳವಾರ ಪೊಗುಂಡ್ಡಿ ಕಾಳೆಗದುಳ ಎಱಿದು ಸತ್ತ (ಎಕ. IX. ಚಂಡು. ೩೪-೪; ಸು. 750 ?). [?]

**ಪೊಗುತರ್, ಪುಗುತರ್, ಹೊಗುತರು** (ಕ್ರಿ). ಒಳಹೊಗು; ಪ್ರವೇಶಿಸು: ಚಪ್ಪರದ ಬಾಗಿಲ್ಗೆ ಬಂದೊಡವರ್ ಪೊಗಲೀಯದಿರ್ದೊಡೆ ಅವಂದಿರಱಿಯ ದಂತೆ ಪೊಗುತಪ್ಪಾಗಳು (ಸಂಶಕ. ೭-೩೦). **ಪುಗುತರ್**: ಆಳುಪೇನ್ದ್ರ . . . [ಉ]ದ[ಯಾ]ಪುರವಮಾನ್ ಪುಗುತಪ್ಪಲ್ಲಿ . . . ಅಟಿದು ಸುರಲೋಕಕ್ಕೆ ಏಱಿದನ್ (ಎಪಿ. IX. ೨೦-೫; ಸು. 800); ಸಂಗರಾರ್ಜುನಂ ಸಿದ್ಧನಂತಾ ಸಿದ್ಧಕ್ಷೇತ್ರಮಂ ಪುಗುತಂದಂ (ಶಾಸಸಂ. ೫೨೪ ಬೂದ್ರುಕ); ಸಂಚಿತ ಪುಣ್ಯರ್ ಪಾಂಚಾಲದೇಶಮಂ ಪುಗುತಂದರ್ (ಸಂಶಕಾ. ೩-೩೭); ಆ ಗೃಹಮಂ ಪುಗುತಂದನಚ್ಯುತಂ (ಜಗಿ. ೦೨-೦೩೧). **ಹೊಗುತರು**: ಹೊಳಲ ಹೊಗುತರುತಮಾವ ಕಂಡನು . . . ನಿಜಧಾಮದಲಿ ಮುಕ್ಕುಳಿಸಿ ದಮಳಮೃಘಿಯಿದೇನೆಂದು ಬೆಱಗಾದ (ಶಿಶುಗ. ೬-೨೦-೨೭). [ಪೊಗು + ತರ್]

**ಪೊಗುತೆ, ಪುಗುತೆ, ಹುಗುತೆ, ಹೊಗುತೆ** (ನಾ). ಹೊಗುವಿಕೆ; ಪ್ರವೇಶ: ಬಗೆ ಭಾವ ಧಾತು ಮಾತುಗಳಿಂವು ಸೂಱಿನ ಪೊಗ[ಗು]ತೆ ಯನೆಳ್ಳನಿತನಱಿಯೆ ಅಗಣಿತಮುಕಿಗಳಾವವರೀ ಕೃತಿಯನು ವಿಗೆ ತಿರ್ದ ಬಣ್ಣಿಡುವದು (ಅಂಶಕ. ೦-೦೦೭). **ಪುಗುತೆ**: ಪೊಗಟ್ತಿ, ನೆಗಟ್ತಿ, ಪುಗುತೆ (ಕಮುಕ. ೨೦೦ ಪ್ರಹೋ); ಪುಗುತೆ, ಪುಗುತೆಗಳ್: ವಿಗುತೆ, ವಿಗುತೆಗಳ್ (ಶಬ್ದಾಸು. ೫೭೦ ಪ್ರಹೋ). **ಹುಗುತೆ**: ಕವಿಯ ಹುಗು[ಶಾಶು. ಗ]ತೆ ಗಮಕಿಯ ಸಂಚ ವಾದಿಯ ಚೋಕ್ಕೆಹ ವಾಗ್ಮಿಯ ಚೇತನ ಇಂತೀ ಚತುಷ್ಟಯ ದಲ್ಲಿ ಯುಕ್ತಿವಂತನಾದಡೇನು (ಚಬಸವ. ೪. ೨೩೦-೪೯). **ಹೊಗುತೆ**: ಕಾರಂಕನ ಹೃದಯದ ಕಪಟ ಕಣಲೆಂದು ಕೈಯ ಕಲ್ಲು ತನು ಕಟ್ಟಳೆಹೀನನ ಹೊಗುತೆ ಸ್ಮರಣೆಯವಳೊಳುಪಿನ ಮಾತು ಇವು ಸಾರದ ಪ್ರಸ್ಥದಂತೆ

(ಕಗಲೂ. ೪. ೬೯೪-೭೯) : ತೆಗೆದು ಗಳಹತ್ತ್ರದಲಿ ಕೊರಳನು ಬಿಗಿಯೆ ಬಿಡಿಸುವ ತೋರಹತ್ತ್ರದ ಹೊಗುತೆಯನು ವಂಚಿಸುವ . . . ಬಿನ್ನಾಣದಲಿ ಹೆಣಗಿದರು (ಕುಮ್ಯ. ೦೯-೪೩). [ಪೊಗು + — ತ್ತೆ₂]

**ಪೊಗುಲೂರ್** (ನಾ). ಒಂದು ಊರಿನ ಹೆಸರು : ಪೊಗುಲೂರ ವಾಸ್ತವ್ಯಸ್ಯ ಭಾರದ್ವಾಜಸಗೋತ್ರಸ್ಯ ಭಾರದ್ವಾಜಸೂತ್ರಸ್ಯ (ಎಕ. XIII. ೦೩೯-೦೯ ; ಸು. ೬೬೦). [ ? + ಊರ್]

**ಪೊಗೆ₁, ಹೊಗೆ₁** (ಕ್ರಿ). ೧. ಹೊಗೆಯನ್ನು ಕಾರು ; ಧೂಮವನ್ನು ಉಗುಳು ; ತ್ರಿಪುರಂಬೊತ್ತಿಸಿದಂತೆ ಪೊತ್ತಿ ಪೊಗೆದತ್ತೆತ್ತಂ ವಿಯನ್ಮಂಡಳಂ (ಶಂಕರಾ. ೬೦-೦೭) ; ಆ ಪುಲ್ಲು ಪೊತ್ತಿ ಪೊಗೆದುರಿದು ಮಂದುರವಂ ಪೊತ್ತಿದೊಡೆ (ಶಂಕಸಂ. ೭೭೯-೦೨) ; ಪೊಗೆದುದು ಪೊತ್ತಿದತ್ತು . . . ಸುಟ್ಟತು ತಿರುದು ತೇಗಿದತ್ತಗಿಯದೆ ನಿಂದ ಪೊಗಣೆಯನಂ ಪಣೆಗಣ್ಣುರಿ ಹಂಪೆಯಾಳ್ದನಾ (ನೂ೯. ೬-೪೭) ; ಧಗಧಗತ್ಕಾರದಿಂದಂ ಧರಣಿಮಂಡಲಂ ಪೊಗೆವುತಿರ್ದುದು ಸಮುದ್ರಂ ಕುದಿದು ತಳಮಳಲನುಗುಳುತಿರ್ದುದು (ಕಂಕ್ರ. ೪೦-೨೦). ೨. (ಪರಿಮಳವುಳ್ಳ) ಹೊಗೆ ಆಡಿಸು ; ಹೊಗೆಕೊಡು : ಮಂಡಿಯಂ ಗುಗ್ಗುಳದಿಂ ಪೊಗೆದಾಱಿಸಿ ಪೂವಂ ಸೂಡಿ . . . ಪೊದೊಡವು ಗೆಂ ವಸದನಂಗೊಂಡು ವಿನಂಬಟಯಿಗೆಯಾನ ಕುಲದೇವಿಯರೆನೆ ಕಣ್ಗೆಂಬುದರ್ (ರಾಜಶೇಖ. ೦೨೯-೪). ೩. (ಅಲಂ) . (ಬಿಸಿಲಿನಿಂದ) ಕಡಿಕಾಗು ; ಸೀಯು : ಪೊಗೆದುದು ಸಸ್ಯಾನೀಕಂ ಮೃಗತೃಷ್ಣಾಂಬುವಿನ ವೀಚಿ ಪೊಂಗಿದುದಿರದಂದುಗುಟ್ಟುದು ಕೆಂಗಿಡಿಯಂ ಬೇಸಿಗೆ ಬಿಸಿಪೊಯ್ಲು ನರ್ತಮಣಿಗಣಮಾಗಳ್ (ಅಭ್ಯಶಿ. ೯-೬೩). ೪. ಕಪ್ಪಾಗು : ಮನೆಮನೆ ದಪ್ಪದೆ ನೆಗೆದುದು ತನಿಗಿರ್ಚಿನೆ ದಹನವಿದ್ಯೆಯಿಂ ಸುಟ್ಟಂ ಪಾವನಿ ಲಂಕೆಯನಸುರಾಧೀಶನ ಮನಮುರಿವನ್ನಮಾನನಂ ಪೊಗೆವನ್ನಂ (ಕೂಣಶಾ. ೦೦-೦೯೯). ೫. ದೀಃಖಿಸಂ ; ಪರಿತಪಿಸು ; ಮರುಗು : ಅನಿವಿರಿದು ದುಃಖದೊಳ್ ನಮೆದು ನಾರುಗಿದು ಪೊಗೆದು ಸತ್ತಲ್ಲಿ ನಿಷಾದನ ಮನೆಯೊಳ್ಪೆಣ್ಣಾಯಾಯ್ತು (ಸುಕುಮಾ. ೩-೦೯) ; ಸುಯ್ ಬಿಸಿಯವಾದುವಿದೇಕೆ ಕದಂಪು ಕೆಂಪನಾಳ್ದುಗುಟ್ಟುವುದೇಕೆ ಗಗ್ಗರಿಕೆಯಗ್ಗಳವಾದುದಿದೇಕೆ ನೀಂ ಕರಂ ಪೊಗೆದಪೆಯೇಕೆ ಪೇಟನಗೆ ಪಂಕಜಪತ್ರವಿಶಾಲಲೋಚನೇ (ಅರ್ಗಶೇ. ೭-೦೯). **ಹೊಗೆ₁** : ೧. ಗುಂಡು ಬಿದ್ದೊಡೆ ಹೊತ್ತಿ ಹೊಗೆದು ದಳ್ಳುರಿ ಮಸಗೆ (ಸಿದ್ಧರಾ. ೭-೭೨) ; ತೋರಣದಲುರಿ ತಳಿತು ರಾಜದ್ವಾರ ಹೊಗೆದುದು (ಕುಮ್ಯಸ. ೦೩-೪೨) ; ಹೊಗೆದು ದಾನವನವಕ್ಕಿ ಕಿಡಿಗಳನುಗುಳಿದವು ಹೊಗೆ ಸುತ್ತಿ ಕುಡಿಮಿಸೆಗಳು ಕೌಚಿದವಂಗ ಕಾಹೇಱದುದು ಕಡುಹಿನಲಿ (ಕೂಶರಾ. ೨-೭-೮). ೬. ಸುಡು ; ದಹಿಸು : ವಿಗಡರುದ್ರನು ಲೋಚನಾಗ್ನಿಯೊಳೊಗುವಿಗೆಯ ಕೋಪದಲಿ ಕಾವನ ಮಿಗೆ ದಹಿಸಿದಂದದಲಿ ರಿಪು ಕಂಠೀರವಮಾರಕರ ಹೊಗೆದು ೬೪ ಲಾಕ್ಷಾಭವನದಲಿ (ಕುಮ್ಯಆ. ೬-೩೦). ೭. ಪ್ರಚಂಡವಾಗು ; ಪ್ರಜ್ವಲಿಸು : ವಿರಹಾಗ್ನಿಯೆತ್ತಿ ಮನಂ ಪೊತ್ತಿ ಬುದ್ಧಿ ಕವರ್ದು ಅಹಂಕಾರು ಹೊಗೆದು ಚಿತ್ತಂ ಬೆಂದು ಹರಿಣಮುರಿದು . . . ಭೋಗದ ವಿಯೋಗಿಯೆನಿಸಿರ್ದ ತರುಣಿಯರ ವಿರಹಾತಿಶಯಮಂ ಗಿರಿರಾಜಂ ಕರುಣಿಸಿ ನೋಡಿ (ಗಿಆ. ೪-೦೦೬ ಪ) ; ಉರಿಯ ಕರುಮಿಟ್ಟಂತೆ ವಿಲಯದ ಹರನ ಖತಿ ಹೊಗೆವಂತೆ ಸಿಡಿಲಿನ ಹೊರಳಿ ಹೊದಱದಂತೆ ನಿಂದವನವ ಘಟೋತ್ಕಚನು (ಕುಮ್ಯಶೀ. ೨-೦೨). ೮. ಮಸುಕಾಗು ; ಮಂಕಾಗಂ ; ಕಾಂತಿಹೀನವಾಗು : ಚಿತ್ರವಿಸು ಧೃತರಾಷ್ಟ್ರ ಕೌರವನಿತ್ತನಿರುಳೋಲಗವ ಮಂಜಿನ ಮುತ್ತಿಗೆಯ ನಭದಂತೆ ಹೊಗೆದುದು ರಾಯನಾಸ್ಥಾನ (ಕುಮ್ಯಉ್ಯೋ. ೪-೪). ೯. ಸಿಟ್ಟಿಗೇಳು ; ಧುಮುಗುಡು : ಅಪ್ರಸನ್ನಾ=ಹೊಗೆವುತ್ತಿರ್ದಳ್ (ಶಂಕಸಾ. ೩೦-೦೯) ; ಹೊತ್ತ ಕೋಪದ ಹೊಗೆವ ಮುಖದೌಡೊತ್ತುವಧರದ ವೈರಿಸೇನೆಯ ಕುತ್ತಿ ತೇಗುವ ಮನದ ಮಾರುತಿ ಪೊಳಗಿದನು ಮುಂದೆ (ಕುಮ್ಯಶ. ೦೨-೨೦). ೧೦. ದ್ವೇಷಿಸು ; ಈ ಅಣ್ಣ ತಂಗಿ ಮೇಲೆ ಮೊದಲಿಂದ ಹೊಗೆದು ಹೊಗೆದು ಹೊಗೀತಾರೋ ಇದ್ದಿದಾವೆ. ಇವನು ಹೊಗೆದರೆ ನಮಗೇನಾಯ್ತು ? (ಕಲಾ. ೨೩೯). ೧೧. [ವೈದ್ಯಶಾ] ಚಿಕಿತ್ಸೆಗಾಗಿ ಔಷಧೀಯಗುಣವುಳ್ಳ ಹೊಗೆಯನ್ನು ಹಾಕು,—ಹೊಗೆಯೇಳಿಸು : "ಹೊಗೆ_ಧೂಮನಿರೋಧಕ್ರಿಯಾಯಾಂ, ಧೂಮೇ ಚ" (ಕಮುರಾ).

**ಹೊಗೆಹಾಲ ಮೊಸರು** — "ಸೂರ್ಯೋದಯಕ್ಕೆ ಸ್ವಲ್ಪ ಮುಂಚೆ ಹಾಲಿಗೆ ಹೆಪ್ಪುಹಾಕಿ ಮುಚ್ಚಿರಿಸಿ ಅದೇ ದಿವಸ ಮಧ್ಯಾಹ್ನ ತೆಗೆದು ಉಪಯೋಗಿಸುವುದು. ಇದಕ್ಕೆ ಹೊಗೆಹಾಲ ಮೊಸರೆಂದು ಹೆಸರು" (ಸೂಶಕಾ. ೨-೦೦ ಅಡಿ) : ಬಿಸಿಲುವುದಿಸದ ಮುನ್ನ ಹೆಪ್ಪನೆಱದಾ ಹಾಲ ನೊಸದು ಹಿಂಬಗಲಿನೊಳು ತೆಗೆಯಲದು ಹೊಗೆಹಾಲ ಮೊಸರೆಂಬ ಹೆಸರಾಯ್ತು (ಸೂಶಕಾ. ೨-೦೦).

[ದೇ.೩ ತವಿ. ಪುಕ್ಕೆ ; ಮಲ. ಪುಕ ; ತುಳು. ಪುಗೆ, ಪೊಗೆ ; ತೆಲು. ಪೊಗಯು, ಪೊವಯು]

**ಪೊಗೆ₂, ಹೊಗೆ₂** (ನಾ). ೧. ಧೂಮ : "ಪೊಗೆಯೆನಲ್ ಧೂಮ" (ಶಬ್ದ. ೬೦) ; ಪೊಗೆ ಪೆರ್ಚೆ ನೆಗೆದ ಕಾಟ್ಕಿರ್ಚುಮಂ . . . ಕಂಡಂ (ಪಮ್ಪಾಭಾ. ೬೩-೨೬) ; ಬಳಸಿ ಮುಗಿಲ್ಗಳ್ ಕನಕಾಚಳಮಂ ಬಳಸುವವೊಲ್ಕಿದಾಹುತಿಗಳ ಗೊಂದಳದಿನೊಡನೊಗೆದ ಪೊಗೆಗಳ್ ಬಳಸಿದುವೆತ್ತಿದ ಕನಕಯೂಪವಂ ನಾಗಳ್ (ಶಂಕಸಾ. ೭-೩೫) ; ಪೊಗೆಯಿಂ ಕರ್ಚಂ ಮೊಟಗಿಂ ಮಟಿಯಂ . . . ಜೋಯಿಸರಿಂ ಗೃಹನಾಮನಱವಂತೆ . . . ಅಱವುದು (ಧರ್ಮಾಮೃ. ೯-೩೯) ; ಕೆಯ್ಯ ಶ್ರೀಗಂಧ ಧೂಪಾರ್ತಿ ಪಾಪಾರಣ್ಯದ ಬೇಗೆಪೊಂ ಪೊಗೆ ಮುಸುಕಿದುದು (ಪೂಶಚ. ೪೨-೩೦). ೨. ಆವಿ ; ಹಬೆ : ಗೇರ ವಣ್ಣನಿದು ಕೆಂಡಮೆನುತ್ತಂ ಸಾರಿ ಮೇಲೆ ತೃಣಮಿಟ್ಟದನೂದಲ್ ಸೇರಿ ಬಾಯ ಪೊಗೆ ತಳ್ತಿರೆ ಕಂಡಾ ದೂರಿಗಂ ಮುದದಿನೂದುತಮಿರ್ದಂ (ಶಂಶಕೇ. ೯-೨೩). ೩. (ಅಲಂ) ಅಗ್ನಿ ; ಬೆಂಕಿ ; ಜ್ವಾಲೆ : 'ಪೊಗೆಮೊಗ' ಪರಾ. ೪. ಅಗ್ನಿಯ ದಿಕ್ಕು ; ಆಗ್ನೇಯದಿಕ್ಕು : ಹರನೊಳೊಗೆದು ನೈಋತಿಗೆ ಬರ್ಪೊಡಂ ಪೊಗೆಯಲೊಗೆದನಿಲಂಗೆ ಬರ್ಪೊಡಂ . . . ಇವ ನೋಡಿ ಪೇಟ್ ಮಟಿಯಧಿಕ ತಾನೆಂಬುದಂ (ಅಭ್ಯಸು. ೨-೦). **ಹೊಗೆ₂** : ೧. "ಧೂಮಮೆನೆ ಹೊಗೆಮುಕ್ಕ್ಮ" (ಶಂಗಶಾ. ೦೯-೬) ; ಒಲೆಯಡಿಯನುರುಹಿದಡೆ ಹೊಗೆ ಗೋಳಕನಾಥನ ಕೊರಳ ಸುತ್ತಿತ್ತು ಮಹೀತಳನ ಜೆಡೆ ಸೀಯಿತ್ತು ಮರೀಚಕನ ಸಿರ ಬೆಂದಿತ್ತು (ಬಸವ. ೯೩೦) ; ಮೊಗದ ಹೊಗರವಗಡಿಸೆ ಸುಯಿಲಲಿ ಹೊಗೆಯು ಹೊದಱಂಕುರಿಸೆ ಬಿಡುಗಣ್ಣುಗಳೊಳೊಕ್ಕುದು ಕೆಂಪು ಸೋಂಪಡಗಿತು ಮುಖಸ್ನೇಹ (ಕುಮ್ಯಶೀ. ೬-೨೦) ; ಹೊಗೆಯೊಳಗೆ ಹೋಗಬೇಕಾದರೆ ಬಾಗಿಕೊಂಡು ಹೋಗಬೇಕು (ಕುಂಶಾಹು. IV. ೬೦). ೨. ಒಂದೆಲಗನ ಸೊಪ್ಪು, ಗಾಂಧಾರಿಸೊಪ್ಪು . . . ಇವುಗಳನ್ನೆಲ್ಲಾ ದಳಿಗೆಯಲ್ಲಿ ಹಾಕಿ ಹತ್ತು ಪೊಗೆ ಅಂಬಲಮಂ ಹುಯ್ದು ಕುದಿ ಬರುವ ಹಾಗೆ ಕಾಯಿಸಿ ಆ ಹೊಗೆಯಿಂದುಬ್ಬೆಯ ಕಾಯಿಸಲು ವಾತಜ್ವರಂ ತೀರ್ಗುಂ (ಸಕವೈ. ೬೯). ೩. ಬಾಣದ ಹೊಗೆಯಲಿ ರಿಪುಗಳ ತೊಳಸಿಕೊಂಡೇಣಾಂಕವಂಶಸಂಭವನು ಕ್ಷೋಣೀಪ ಬೆಟ್ಟದ ಚಾಮೇಂದ್ರನೊಳಹೊಕ್ಕು ಮಹಾದಿಱದ ರಿಪುಬಲವ (ಕಂಶಂ. ೩-೭೪). ೫. ಮಂಕು ; ಮ್ಲಾನತೆ : ನಗೆಗೆ ನಗೆ ಕುಂಟಣಿ ವಿವೇಕದ ಹೊಗೆಗೆ ಹೊಗೆ ಸಖಿಯಾದುದಲ್ಲಿಯು ಹಗರಣಿಗ ನಾನಾದೆನದು ನೋಟಕದ ಜನಮಾಯ್ತು (ಕುಮ್ಯಸ. ೦೨-೪೨) ; ಇವರ ಹರುಷದ ನಗೆಯುನಾ ಬಲದವರ ಮೋಱಯ ಹೊಗೆಯನು . . . ನೀ ಚಿತ್ತವಿಸಿದೈ ಧೃತರಾಷ್ಟ್ರ (ಕುಮ್ಯಶ. ೦೨-೨). ೬. ಹೊಗೆಸೊಪ್ಪು ; ತಂಬಾಕು : ಆ ಮರುಷ ಮೂರು ಕೊಳಗದಷ್ಟು ತಕ್ಕಲು ಕಿತ್ತು ಹೊಗೆ ಹಾಕಿದ್ದರಿಂದ ಸುಂಕಗಿಂಕ ಕಳೆದು ಅರುವತ್ತು ವರಹ ಬಂತು (ಕಂಗಾಳ್ಪ. ೩೦೩).

**ಹೊಗೆಯ ಬತ್ತಿ** = ಹೊಗೆಸೊಪ್ಪಿನಿಂದ ತಯಾರಿಸಿದ ಬೀಡಿ, ಸಿಗರೇಟು ಮುಂತಾದುವು: ಕಾರ್ಖಾನೆಯ ಹೊಗೆಯು ವಾತಾವರಣವನ್ನು ತುಂಬಿರುವುದು ಸಾಲದೆ ಪ್ರತಿಯೊಬ್ಬನೂ ಒಂದೊಂದು ಹೊಗೆಯ ಬತ್ತಿಯನ್ನು ಬಾಯಲ್ಲಿಟ್ಟುಕೊಂಡು ಹೊಟ್ಟೆ ತುಂಬಿಸಿ ಮತ್ತೆ ಹೊಗೆ ಕಾರುತ್ತಿರುವನು! (ಕೈಲಾಸ. ೩). **ಹೊಗೆಯಾಗು** = ಹೊಗೆಯಿಂದ ಆವೃತವಾಗು; ಧೂಮವುಂಟಾಗು: ಹಸಿಸೌದೆಯಾದ್ದರಿಂದ ಒಲೆ ಸರಿಯಾಗಿ ಉರಿಯದೆ ಮನೆಯೆಲ್ಲಾ ಹೊಗೆಯಾಯಿತು (ಜೂಶ). **ಹೊಗೆ ಹಾಕು** = ೧. ಹೊಗೆಯನ್ನು ಉಂಟುಮಾಡು; ಧೂಮವುಂಟು ಮಾಡು: ಹೋಗು ಅನ್ನಲಾರದೆ ಹೊಗೆ ಹಾಕಿದರು (ಗಾದೆ); ಹೊಗೆ ಹಾಕುವುದರಿಂದ ಸೊಳ್ಳೆಗಳು ಕಡಮೆಯಾಗುತ್ತವೆ (ಜೂಶ). ೨. (ಶಿಕ್ಷೆಗಾಗಿ) ಮೆಣಸಿನ ಕಾಯಿ ಮುಂತಾದ ಖಾರದ ಹೊಗೆಯನ್ನು ಉಂಟುಮಾಡು: ಹಿಂದೆ ಮಠದ ವಿದ್ಯಾರ್ಥಿಗಳಿಗೆ ವಿಧಿಸುತ್ತಿದ್ದ ಕಠಿಣಶಿಕ್ಷೆಗಳಲ್ಲಿ ಹೊಗೆ ಹಾಕುವುದೂ ಒಂದು (ಜೂಶ). ೩. (ಚಿಕಿತ್ಸೆಗಾಗಿ) ಔಷಧೀಯ ಗುಣವುಳ್ಳ ಹೊಗೆಯನ್ನು ಉಂಟುಮಾಡು; ಧೂಪಹಾಕು: ಹಿಂದಿನವರು ಶೀತ ಕಡಮೆಯಾಗಲು ರಾಗಿಹಿಟ್ಟು, ಅರಿಸಿನದ ಪುಡಿ ಮುಂತಾದುವುಗಳಿಂದ ಹೊಗೆ ಹಾಕುತ್ತಿದ್ದರು (ಜೂಶ). ೪. ಒಲೆಹಚ್ಚು; ಅಡುಗೆ ಮಾಡು: ಅವಳಿಗೆ ನಾನು ಶರಣಾಗತನಾದರೆ ನಾನು ಈ ಊರಲ್ಲಿ ಹೊಗೇ ಹಾಕ್ಕೊಂಡು ಇರೋಕಾಯ್ತದಾ! (ಹುಚ್ಚುಹ. ೦೫೭); ಹೆಣ ಸಾಗಿಸೋವರೆಗೂ ಊರಲ್ಲಿ ಹೊಗೆ ಹಾಕೋ ಹಾಗಿಲ್ಲ (ಜೂಶ). ೫. (ಕಾಯಿಗಳನ್ನು ಕೃತ್ರಿಮವಾಗಿ ಹಣ್ಣುಮಾಡಲು) ಕಾವಿಗೆ ಹಾಕು; ಅಡೆಹಾಕು: ಬಾಳೆಗೊನೆಯನ್ನು ಹೊಗೆ ಹಾಕಿ ತಂದಿದ್ದಾನೆ (ಜೂಶ).
[ < ಪೊಗೆ₁./ತಮಿ. ಪುಕೈ; ಮಲ. ಪುಕ; ತುಳು. ಪುಗೆ, ಪೊಗೆ; ಕೊಡ. ಪೂಗೆ; ತೆಲು. ಪೊಗ, ಪೊವ; ಕೋಲಾ. ಪಾಯ್ಕ. ಪೊಗ್ ]

**ಪೊಗೆಗುಡಿ, ಹೊಗೆಗುಡಿ** (ನಾ). ಹೊಗೆಯುಗುಳುವ ಕುಡಿ; ಹೊಗೆ ಕಾರುವ ದೀಪದ ತುದಿ: ನೆಗೆವ ಪೊ[ಪಾಠಾಂ. ಹೊ]ಗೆಗುಡಿಗಳಿಂದೆಲಂ ಸೊಗಯಿಸುತಿರ್ದಪುವು ಸುತ್ತಲುಂ ಲಬ್ಧಲಿಯಂ ಮಿಗೆ ಕುಡಿದಲ್ಪುಸಲಾಜಿದ ಮಗುಳ್ದುವೆ ಕಾಜದವುವೆನಿಸಿ ಕೆಯ್ದಾವಿಗಳ್ (ಪಾರ್ಶ್ವ. ೫-೩). **ಹೊಗೆಗುಡಿ**: ಮೇಲಿನ 'ವರ್ಧಮ' ಪ್ರಯೋಗದ ಪಾಠಾಂತರವನ್ನು ನೋಡಿ. [ ಪೊಗೆ₂ + ಕುಡಿ₁ ]

**ಪೊಗೆಗೆಱೆ** (ನಾ). ಧೂಮರೇಖೆ: ಪೊಗೆಗೆಱೆಯಂತೆ ಕಣ್ಗೆಸೆದುದಾ ರಾಯನ ವ್ಯಗನಯನೆಯ ರೋಮರಾಜಿ (ಕಬ್ಬಿಗಾಂ. ೬-೨೪). [ಪೊಗೆ₂ + ಗೆಱೆ]

**ಪೊಗೆಗೊಳ್** (ಕ್ರಿ). ಹೊಗೆ ಹಿಡಿ; ಹೊಗೆಯಿಂದ ಮಸುಕಾಗು: ಪೊಗೆಗೊಂಡ ಚಿತ್ರಲತೆ ದೂಳಿಗೊಂಡ ಪುತ್ತಳಿಗೆ ಮಂಜುಗೊಂಡಬ್ಜಿನಿ ಕಾರ್ಮುಗಿಲೊಳಕೊಂಡೆಳವೆಱೆಯೆನೆ ಮೃಗಲೋಚನೆ ಸೀತೆ ನಾಡೆ ಪಾಡಟೆದಿರ್ದಳ್ (ಶಂಠಾಮಾ. ೦೦-೬೪); ಮಿಗೆ ಕಾತರವ ಪುಟ್ಟಿಸುವ ಸುಗುಣನ ಸೋಂಕದವಳ ಜನ್ಮ ಸೊಗಸಲ್ಲ ಪೊಗೆಗೊಂ[ಪಾಠಾಂ. ಯಂ]ಡ ಪುತ್ತಳಿಯಂತೆ (ಕಬ್ಬಿಗಾಂ. ೨೨-೨೫). [ ಪೊಗೆ₂ + ಕೊಳ್₁ ]

**ಪೊಗೆಗೊಳಿಸು, ಹೊಗೆಗೊಳಿಸು** (ಕ್ರಿ). (ಪರಿಮಳದ) ಹೊಗೆಯಾಡುವಂತೆ ಮಾಡು; ಧೂಪಹಾಕು: ಕಳೆ ಕರ್ಪೂರದ ಕಸವಂ ತಳಿ ಕಸ್ತೂರಿನೀರನಿಕ್ಕು ಮಾಂತ್ರಿನ ಕಡೆಯಂ ಬೆಳಗು ಮಣಿದೀಪಮಂ ಪೊಗೆಗೊಳಿಸಗರುವನೆಂಬರಲ್ಲಿ ಸೂಳೆವಳರ್ಕಳ್ (ಅಗಂ. ೯-೦೦೦); ಪೂಜಿಸಿ ನಿಳಿಂಪಸಂಕುಲಪೂಜಿತನಂ ಮಗುಳ್ದು ಪೊಗೆಗೊಳಿಸಲೆಂದಾದಂ ರಾಜಿತ ಧೂಮಮನೊಸೆದಾ ರಾಜೋತ್ತಮನೋಹಿಲಾಂಕನೆಂದನುವಾದಂ (ಅಕ್ಕಲ. ೦೦-೬೮). **ಹೊಗೆಗೊಳಿಸು**: ಲಲನೆ ಕಳೆ ಕಪ್ಪುರದ ಕಸವನು ತಳಿ ಸುಗಂಧೋದಕವನಗಿಲ ಪೊಗೆಗೊಳಿಸು (ಕಾಶಂಕ. ೩-೦೨). [ಪೊಗೆಗೊಳ್ + –ಇಸು₂]

**ಪೊಗೆಧ್ವಜ** (ನಾ). ಹೊಗೆಯೇ ಧ್ವಜವಾದವನು; ಧೂಮಧ್ವಜ; ಅಗ್ನಿ: ಪೊಗೆಧ್ವಜನ ಬಾವಿಂಗೆ ತೃಣದ ಪರ್ವತವು ಬರ್ಪಂದದಿಂ (ಶಬರೋ. ೬-೬೨). [ಪೊಗೆ₂ + ಧ್ವಜ]

**ಪೊಗೆಮೊಗ, ಹೊಗೆಮೊಗ** (ನಾ). ಹೊಗೆ ಕಾರುವ ಮುಖ; ಉರಿಮೊಗ: ಒಗೆದ ಕರುಜಂ ಪೊಗಂಗುಡದೆ ಚೆಲ್ವಿನೊಳೀಳಿಸಿ ತತ್ಸಮಿಪದೊಳ್ ಪೊಗೆಮೊಗವಾದಪೊಲ್ ತಳೆದ ಧೂಮಘಟಂಗಳಿನುಣ್ಮಿ ಪೊಣ್ಮಿ ತಟ್ಟಗರುವ ಧೂಮಲೇಖೆ ಸುರಸುಂದರಿಯರ್ ನಡೆತಂದರಂದು (ಶಂಠಾಮಾ. ೦೬-೯೬). **ಹೊಗೆಮೊಗ**: ಹೊಗೆಮೊಗದ ಕಿಡಿಗಣ್ಣ ಕವಿಷ್ಟಾಸಿಗಳ ಗುಜುಜಿನ ಜುಜಜಗೇಶದ ವಿಗಡನೆದ್ದನು (ಕುಜ್ಞಾಶ. ೦೯-೦೦೦). [ಪೊಗೆ₂ + ಮೊಗ]

**ಪೊಗೆಯಿಡು** (ಕ್ರಿ). ಹೊಗೆಯು ಹೊಮ್ಮು: ಪಡುವೆಡೆ ಕಿರ್ಚಿಲ್ಲದೆ ಪೊಗೆಯಿಡುವೊಡೆ ಮೇಣ್ ಪಟದ ಸೀರೆಯಿಂದೇಟ್ಪೊಡೆ ಮೇಣ್ ಕಿಡಿಗಳ್ ತಲೆಯಿಂದಂ ಪೊಱಮಡುವೊಡೆ ಯಮಂಗೃಹಮನೆಯ್ದುವಂ ತಡೆಯದವಂ (ಕೋಕಿಲ. ೯-೯೬). [ಪೊಗೆ₂ + ಇಡು₁]

**ಪೊಗೆವಂಡಿ, ಹೊಗೆಬಂಡಿ, ಹೊಗೆಭಂಡಿ** (ನಾ). ಹಬೆಯಿಂದ ಚಲಿಸುವ ಗಾಡಿ; ಉಗಿಬಂಡಿ; ರೈಲುಗಾಡಿ: ಪೊಗೆವಂಡಿಯು ತಂಗಿನೆಡೆಯೊಳಿರ್ದು (ಪುರಾಶ. ೬-೫). **ಹೊಗೆಬಂಡಿ**: ಹೊಗೆಬಂಡಿ ಹೊರಟಿತು (ಕಶಕ. ೦-೨೪). **ಹೊಗೆಭಂಡಿ**: ಇವರು (ಇಂಗ್ಲೀಷರು) ಮಹಾಬುದ್ಧಿಯಿಂದಾ ಹೊಗೆಭಂಡಿಯನ್ನೂ ಹೊಗೆಹಡಗವನ್ನೂ . . . ದೂರದೃಷ್ಟಿಯಂತ್ರಗಳನ್ನೂ ಹೊಸಹೊಸದಾಗಿ ಮಾಡುತ್ತಾ ಇರುವರು (ಅವಂಶ. ೯೦ ಬೀಳು). [ಪೊಗೆ₂ + ಬಂಡಿ₁]

**ಪೊಗೆವಣ, ಹೊಗೆಹಣ** (ನಾ). ಹೊಗೆಸೊಪ್ಪಿನ ಮೇಲೆ ಹಾಕುವ ಒಂದು ಬಗೆಯ ತೆರಿಗೆ: ಪಡವಳದೇವರಸರು ಪೊಗೆವಣವು ಬಟ್ಟರು (ಕೊಂಕಣಾ. ೦೯೯೫, ಬಂಕಾಪುರ. ೯೯-೨೦; ೯). **ಹೊಗೆಹಣ**: ಗದ್ದೆ ಬೆದ್ದಲು ತೋಟ ತುಡಿಕೆ ಅಡುಮಂಗಡೆಱೆ ಹೊಗೆಹಣ × × × ಬೇಡಿಗೆ ದವಸ ಮುಂತಾದ ಸರ್ವಸ್ವಾಮ್ಯ ಸರ್ವಆದಾಯವನು ಆಗುಮಾಡಿಕೊಂಡು (ಕುಂಅಂ. ೦೯೭೦, ೩೩-೦೫; 1668); ಹೊಗೆಹಣ ಹೊಗೆಕಾಣಿಕೆ ಕುಱುದೆಱಗೆ . . . ಆ ಸಕಲಸ್ವಾಮ್ಯವನೂ . . . ಅನುಭವಿಸಿ ಕೊಂಡು ಬಹರು (ಎಕ. XIV. ಮೈಸೂರು. ೦೦೫-೪೦೩; 1674). [ಪೊಗೆ₂ + ಪಣ₃]

**ಪೊಗೆವರಿ** (ಕ್ರಿ). (ಅಲಂ) ರುಚಿಯನ್ನು ಕುಂದಿಸು,—ಕಡಮೆಮಾಡು; ಹೀಗಳೆ: ಮುಗುದೆಯರ ತಲೆರನ್ನ ಕೇಳು ಮದ್ದಣನರುಚಿ ಪೊಗೆವರಿಯದೇ ಕಾಯ್ದ ಚಿನಿವಾಲ (ಕವಪೋ. ೨೬-೯). [ಪೊಗೆ₂ + ಪರಿ₁]

**ಪೊಗೆವಳವಿಗೆಯ** 'ಪೊಗೆವಟಯಿಗೆಯ' ನೋ.

**ಪೊಗೆವಟಯಿಗೆಯ, ಪೊಗೆವಳವಿಗೆಯ, ಪೊಗೆವಟವಿಗೆಯ** (ನಾ). ಹೊಗೆಯೇ ಧ್ವಜವಾದವನು; ಅಗ್ನಿ; ಬೆಂಕಿ: "ಮರಗೂಟಂ, ಪೊಗೆವಟಯಿಗೆಯಂ, ಕರ್ಬಟ್ಟೆಗಂ . . . ಇಂಗಳಂ, ಎಲರ್ಗೆಳೆಯಂ—ಈ ೧೩ ಅಗ್ನಿ" (ಕಕಾಂ. ೯೯-೩೩). **ಪೊಗೆವಳವಿಗೆಯ**: "ಪೊಗೆವಳವಿಗೆಯನೆನೆ ಧನಂಜಯಗೆ ಪೆಸರು" (ಕಹ. ೬೦). **ಪೊಗೆವಟವಿಗೆಯ**: "ಇಂಗಳನೆಲಗೆಳೆಯ ಪೊಗೆವಟವಿಗೆಯನಗ್ಗಿ ಹಗ್ಗಿ . . . ಅಗನಿಯೆನೆ ಕಿಚ್ಚು" (ಕಬ್ಬಕೈ. ೨೦). [ಪೊಗೆ₂ + ಪಟಯಿಗೆ + –ಅ₇]

**ಪೊಗೆವಟವಿಗೆಯ** 'ಪೊಗೆವಟಯಿಂಗೆಯ' ನೋ.

**ಪೊಗೆವೊಗೆ** (ನಾ). ಒಂದು ಬಗೆಯ ತೆರಿಗೆ,—ಸುಂಕ (?): ಮಂಂನೆಯ ಸಾಮ್ಯದೊಳ್ ಬಟ್ಟ ಮರ್ನ್ನಣೆಯೆನ್ನೆನ್ನೊಡೆ ಮನ್ನೆಯದೆಱೆ ಆಳಿವಸತಾಯ ಪೊ[ಗೆ]ವೊಗೆ ತಳಾಱಗೂಲಿ (ಶಾಇಇ. XI–1, ೬೩-೨೦; 1042); ಪೊಗೆವೊಗೆಯು ಮನೆಗೆ ಪಣವುಂ ಪಾಗದ ತೆಱೆಯುಮಂ . . . ಬಿಟ್ಟರ್ (ಎಇ. XVI. ೬೫-೨೪; 1067). [ ? ]

**ಪೊಗೆಸುತ್ತು** (ನಾ). (ಅಲಂ) ಮಂಕಾಗಿರುವಿಕೆ : ಮುಸುಕು ಪೊಗೆ ಸುತ್ತು ಹೊದಕೆಗಳಸದೃಶದೊಲವಿಕೆ ವಿಚಿತ್ರಪುಳಕವಿಲಾಸಪ್ರಸರಂ ಸನ್ನಾಹನ ವಿಂತಸವಾ ವೇಗಕ್ಕೆ ತರದಿನನುಭಾವಂಗಳ್ (ಜಜಿ. ೯-೧೦೨). [ಪೊಗೆ₁+ಸುತ್ತು₁]

**ಪೊಚ್ಚ₁**, **ಹೊಚ್ಚ** (ನಾ). ೧. ನವೀನವಾದಂದು ; ಹೊಸದು : "ಪೊಚ್ಚಪೆನಲ್ ಪೊಸತು" (ಶಬ್ದಾನು. ೩೬) ; ಅಂಗರಾಜನೋರ್ದಿರ್ದ ಭಾವನೆ ಪೊಚ್ಚವಾಗೆ ಹೇಮಾಂಬುರುಹಾಸ್ಯೆ ಸೋಲ್ಪುದೆನೆ ಕನ್ನಿಕೆ ಜನ್ಯಯನೊತ್ತೆ (ಶಾಂತಿಪು. ೩-೦೧೬). (ಗು). ೨. ಹೊಸದಾದ ; ನವೀನವಾದ : ಹೊಂಗೆಲಸದ ಪೊಚ್ಚ ಪದುಮಮಿಟ್ಟಿರ್ದರೊಳು ಮಂಗಲ ಮಜ್ಜನಗೆಯ್ದು (ಜೋಹಚ. ೨೦-೩); ಕೊರಲೊಳೊಪ್ಪುವಚ್ಚ ಪೊಚ್ಚಸರಂ ಮುಕುತಿವೆಣ್ಣ ಸಿರಿಗೊರಲ ಕರ್ಮಣಿಸರವನಡಿಗೊತ್ತೆ (ರಾಜಾಕ್ಷ. ೦೬೯-೦೯). 'ಪೊಚ್ಚ ಮುತ್ತು', 'ಪೊಚ್ಚ ವಚ್ಚ' ಪರಾ. ಹೊಚ್ಚ : ೨. ಕಾಲರಾಯನ ಬೆರಳುಂಗುರದೊಳು ಗಾದ ಮಿರುಗುವ ಹೊಸ ಹೊಚ್ಚಹರಳು (ಜಂಜಾಕ. ೨೨೦-೯೯). [<ಪೊಸ]

**ಪೊಚ್ಚ₂** (ನಾ). ೧. ತಪ್ಪು ; ದೋಷ : ಹಾನೆಚ್ಚಂ ಪೊಚ್ಚಮಲ್ಲದರಿ ವಾಹಿನಿಯಾಂ (ಕಬುಕ. ೨೨೯ ಕ್ಷಿಹೋ). 'ಪೊಚ್ಚಂಬೋಗು' ಪರಾ. ೨. ಕಳಂಕ ; ಮಾಲಿನ್ಯ : ಪಂಚೇಂದ್ರಿಯಪ್ರಾಣಿಗಳೊಳಂ ಪೊಲ್ಲರಪ್ಪ ತಿರ್ಯಙ್ಮನುಷ್ಯರ್ಕಳ ಆಸಾರಮಾಗಿ ಪೊಚ್ಚಮಪ್ಪ ಔದಾರಿಕಪೊಲ್ಲ ಶರೀರಂಗಳುಂ (ಜಾರ. ೯೯). [ದೇ.೩ ತಮಿ. ಪೊಚ್ಚ. ಪೊಚ್ಚ್ಯು. ಪೊಶ್ಶ ; ಮಲ. ಪೊಶ್ಶ ; ತೆಲು. ಪೊಚ್ಚ, ಪೊಚ್ಚೆ ]

**ಪೊಚ್ಚ₃** (ನಾ). ಹೊಳೆ ; ತೊರೆ ; ಪ್ರವಾಹ : "ಪೊಚ್ಚಂ=ಪೊಟೆ" (ಕಬುಕ. ಕಾ. ೨) ; ಕಾಳುವೈಷ್ಣವ ರಹಸ್ಯದೊಳು ತಲ್ಲಿಂಗವಂ ಮೇಳೈಸಿ ಕೊಳುತೊಂದು ಪೊಚ್ಚದೊಳು ಹಾಯ್ಕಿಯಾಮೇಲೆ ವೆಟ್ ವೀರನಾರಾಯಣ ನೆನಿಪ್ಪ ಪ್ರತಿಮೆಯನಲ್ಲಿ ನೆಲೆಗೊಳಿಸಲು (ಚಾಕೋಪ. ೦೦-೩೯) ; ತಡಿಯೊ ಳ್ನೀರ್ಗೊಂಬ ಕಾಡಾನೆಗಳಿಂ . . . ಮತ್ಸ್ಯಂಗಳಿಂ ಪೆಂಪಿಡಿದೊಪ್ಪಿತ್ತಲ್ಲಿ ಫೇನಸ್ಮಿತೆಯೆನಿಸುವ ಪೊಚ್ಚಂ ಪೊದಳ್ದೊಪ್ಪದಿಂದಂ (ಜಾಜಚ. ೬-೨೩) ; ಇಾತು ಮುಂಗಾರ್ ತರದೋಟ್ ತಿರವಣ್ಣ ಮುಗಿಲ್ಪೊಂದಿಯೊಳ್ ಬಳ್ಳಿ ವರಿವ ನೇಹದಿಂ ಬೆಳ್ಳಂಗೆಡವ ಸೊಗದಾಲಿಸೀರೆನೆ ಪೊಚ್ಚಂ ಪೆರ್ಚಿ ಪರಿದುದು (ರಾಜಾಕ್ಷ. ೩-೦೯). 'ಬಾಂಬೊಚ್ಚ' ಪರಾ.

**ಪೊಚ್ಚ₄** ? (ನಾ). (?) : ಪೆಸರ್ಗಳ್ಕೆತ್ತು ಸಮಸ್ತಪೇಚರಬಲಂ ತೇಜಕ್ಕೆ ಬೆರ್ಚಿತ್ತು ಮುಂ ಪೊಸಪೊಚ್ಚಂ[ಪಾಠಾಂ. ಪೊತ್ತಂ, ಪೊಟ್ಟಂ, ಪೊರ್ತಂ] ಬೆರಸಿರ್ದ ಭೂಚರಬಲಂ . . . ಎಂಬ ಗುಣಸಂಘಾತಂಗಳಂ ತಾಳ್ದಿ ಪಂಪೆಸಕಂಬೆತ್ತಿರೆ ಸಂತಮಿಂತತಿಬಳರ ರಾಜ್ಯಂಗೆಯುತ್ತಿರ್ಪಿನಂ (ಅಂಪು. ೦-೬೮). [ ? ]

**ಪೊಚ್ಚಂಬೋಗು** (ಕ್ರಿ). ೧. ದೋಷಯುಕ್ತವಾಗು ; ಕಳಂಕ ಹೊಂದು : ಮಚ್ಚರದಿಂ ಜನಮತಮಂತುಚ್ಛಳನಪ್ಪನ್ನಸಮಯಿ ಪೊಲ್ಲೆಂದೊಡದೇಂ ಪೊಚ್ಚಂಬೋಕುಮ ವಾಯಸ ವಚ್ಚಮನಿಕ್ಕಿದೊಡೆ ವಾರ್ಧಿಗಕ್ಕುಮೆ ಭಂಗಂ (ಕಮಶ. ೦೩-೩೦); ಮುಚ್ಚಂ ರಾಗದ್ವೇಷಂ ಮೆಚ್ಚವೆ್ಯೆಯಿಂದಾಗೆ ಕೆಟ್ಟರೀ ಯೆರಡಱೊಳಂ ನಚ್ಚುವುದಾಸೀನಂ ತಾಂ ಪೊಚ್ಚಂಭೋ[ಬೋ]ಗದ ತಗುಳ್ದೊಡಪುಮಟ್ಯದುದೇ (ಜಿನಸಂ. ೦೭೦ ೦೩). ೨. (ಅಲಂ) ಹುಸಿಯಾಗು : ಪೊಚ್ಚಂ[ಚ್ಚಂ]ಬೋಗದ ಶೌರ್ಯಮದಚ್ಚರಿಯಾಗಿರೆ ವ್ಯಗಾರಿಯಿಂ ಪೊಕ್ಕುಬಲಿಂ ಮಚ್ಚರಿಸಿ ಕೊಂದು ನಚ್ಚಿಂ ಮೆಚ್ಚೆ ಜಗಂ ತಗುಳೆ ಪೊಗಟೆ ನೆಗಟ್ದಂ ಕೃಷ್ಣಂ (ನರ್ನೇಮಿ. ೩-೨೩). [ ಪೊಚ್ಚ₂ + ಪೋಗು₁ (<ಪೋ₁) ]

**ಪೊಚ್ಚಮುತ್ತು** (ನಾ). ಹೊಸದಾದ ಮುತ್ತು ; ಕಾಂತಿಯಿಂದ ಕೂಡಿದ ಮೌಕ್ತಿಕ : ಆಳದೊಳಗೆ ಏನೋ ಒಂದು ಪೊಚ್ಚಮುತ್ತಿನಂತಿದೆ (ಕ್ಷರಸ. ೨೩-೦೦). 'ಪೊಸಮುತ್ತು' ಪರಾ. [ಪೊಚ್ಚ₁+ಮುತ್ತು₁]

**ಪೊಚ್ಚರ** 'ಪೊಚ್ಚಱು₂' ನೋ.

**ಪೊಚ್ಚವಚ್ಚ** (ನಾ). ಹೊಸ ಆಭರಣ ; ನೂತನವಾದ ಅಲಂಕಾರ : ಪಚ್ಚವಮಾಭರಣಂ ; ಪಾವುವಚ್ಚಂ, ಪೊಚ್ಚವಚ್ಚವಿತ್ಯಾದಿ (ಶಬ್ದಾಕು. ೧೧೦ ವ್ಯಾ.ಶಾ.). [ಪೊಚ್ಚ₁+ವಚ್ಚ₂]

**ಪೊಚ್ಚಳ** 'ಪೊಯ್ಸಳ' ನೋ.

**ಪೊಚ್ಚಱ** 'ಪೊಚ್ಚಱು₂' ನೋ.

**ಪೊಚ್ಚಱತನ** (ನಾ). ಅಹಂಕಾರ ; ಹೆಮ್ಮೆ ; ಗರ್ವ : ಪುಱಿದಪ್ಪಡ ಮೆಂದುಂ ನುಡಿದಱಿಯಂ ದಿಟಮಪ್ಪ ನುಡಿಗಳಂ ಮಱಿದ ಪೊಚ್ಚಱತನದಿ ನುಡಿವನೆನಿಸಿಲ್ಲಱಗುಲಿಗಂ ಮೊಗ್ಗೆ ಸೂನ್ರುತವ್ರತವೆಂತುಂ (ಸಮುಕ. ೫-೩೦). [ ಪೊಚ್ಚಱ (< ಪೊಚ್ಚಱು₂) + –ತನ ]

**ಪೊಚ್ಚಱಿಸು** (ಕ್ರಿ). ೧. ಗೋಚರಿಸು : ಪ್ರಕಟವಾಗು : " ವಿಗೆ ಪೊಚ್ಚಱಿಸಿತೆಂದು ಕಣ್ಣಾಲಿದುದೆಂದಿರದ ಪೊಡಕರಿಸಿತಕಿ ನಾಮಮಕಂ" (ಕಕ್ಕಿ. ೬೯) ; ತಱಿದು ನಿಶಿತಾಸ್ತ್ರದಿಂದಂ ತೆಱಪಾಗಿರೆ ದಿವ್ಯಬಾಣದಿಂ ನಿಟ್ಟಿಸೆ ಪೊಚ್ಚಱಿಸೆ ಶಿಶುಪಾಳಶಿರಮಂ ಪಱಿಯಿಚ್ಚಂ ಕೃಷ್ಣನುಷ್ಣತೇಜೋ ನಿಳಯಂ (ನೇಮಿಪು. ೭-೩೩) ; ಕಿಱುವೆಳಗಿಂದ ಧರ್ಮಧ್ಯಾನರೂಪ ಪೊಚ್ಚಱಿಪ ಮಹಾಪ್ರಭೆಯಿಂದ ವಿಱುವ ಶುಕ್ಲಧ್ಯಾನರೂಪ ನನ್ನದೆಯೊಳಿರೆಱಿಯ ಚಿದಂಬರಪುರುಷಾ (ರಚಕ. ೩೯-೦೦೩). ೨. (ಗರ್ವವನ್ನು) ತೋರ್ಪ ಡಿಸು ; ಪ್ರದರ್ಶಿಸು : ಆಗಳಾನೇೞ್ಪೆನೆಂದು ಪೊಚ್ಚಱಿಸಿ ಬಂದು ಸುಯೋಧನನನುಗ್ರಹಾಪಮಂ ಮಾಱಿಸೂಟ್ ಬಲವಂದು ಪೊಡಮಟ್ಟು (ಕಂಕಥಾ. ೩-೩೬) ; ಕೆಲಬರೆವ್ವಿಂ ಮುನ್ನಿಱಿವರಾರೆಂದು ಪೊಚ್ಚಱಿಸಿ ಕೈದುವೆತ್ತಯುಂ (ವರ್ಧಮಾ. ೯-೩೯ ವ). ೩. ಗರ್ವಪಡುವಂತೆ ಮಾಡು ; ಹೆಮ್ಮೆಪಡುವಂತೆ ಮಾಡು ; ಉಬ್ಬಿಸು : ಮಱಿಯದಹೋರಾತ್ರಂ ಕಯ್ಯಱಿದಿಲ್ಲದ ಗುಣಮನಂತೆ ಬಡದೇಱಿಸಿ ಪೊಚ್ಚಱಿಸುತ್ತಮಿರ್ಪ ಪಿಡ್ಡಗ್ಗಿಜಯವರೞಿವಿಲ್ಲದವನಿಪಾಲರ್ ಜಗದೊಳ್ (ಕಾಠಂಪು. ೩೬೦). ೪. ಎಚ್ಚರವಾಗು ; ಜಾಗೃತಗೊಳ್ಳು : ಕುರುಪತಿಯಂತಿರೆ ಕಂಡಾ ಗುರು ತನಯಂ ಮುನಿದು ರೌದ್ರರುದ್ರನ ತೆಱದಿಂ ಪಿರಿದಿರುಳೊಳಿಱಿದು ಕೌಂತೇಯರ ಬೀಡಂ ಕೂಡೆ ಮುಸಗಿ ಕೊಲ್ವುದುಮಾಗಳ್ ನೆಱೆದಿರದೆ ಗುರುಜನಂ ಪೊಚ್ಚಱಿಸೆ ಕಱುತ್ತುಱಿದೆ ತಾಗೆ . . . ತಱಿದಂ ಭೋಂಕಲ್ (ನೇಮಿಪು. ೦೨-೨೦೬). [ಪೊಚ್ಚಱು₁+–ಇಸು]

**ಪೊಚ್ಚಱು₁** (ಕ್ರಿ). ೧. ಗೋಚರಿಸು ; ಪ್ರಕಟವಾಗು ; ಕಾಣು : " ಪೊಚ್ಚಱು—ಸ್ಫುರಣೇ (ತೋರ್ಪಡು) " (ಕಮುಕ); ಉಱದೆನ್ನಂ ಮಾಯೆ ಯಿಂ ಬಂಚಿಸಿ ಮಹಿಷೆಯನೆಂತೊಯ್ದನೊಯ್ದಂದದಿಂ ಪೊಚ್ಚಱದಿನ್ನಂ ತೋರ್ಕೆ ಸಂಗ್ರಾಮದೊಳೆಡಗಡಿದಾ ಕೋಳ್ಗಳಿರ್ಪತ್ತುಮಂ . . . ಮೆಟ್ಟಿ (ಕ್ಷಂಗಾರ. ೦-೭೦) ; ಪೆಱತೊಂದು ಸಕ್ಕಲೋಕದ ಪೊಱಪಳೆಯದೊಳಂಡ ಭಿತ್ತಿಯೊಳಪಯಲೊಳ್ ಪೊಚ್ಚಱುವುದು ಪರಮೈಕಂತದ ಮಱಿಯೆನೆ ಕಾನೊಂದುಕೋಟಿಯೋಜನಮಾನಂ (ಕಶಶ. ೩-೦೯೦). ೨. ಬರು ; ಒದಗು : ಪೊಚ್ಚಱುಗುಂ ತೃತೀಯ ಬಂದಂತಱಿಂಬ ಪದಕ್ಕಮಾ ಎಕಾರ ಕ್ಕಿತರಂ (ಕಮುತ. ೪೦೭).

**ಪೊಚ್ಚಱು₂**, **ಪೊಚ್ಚರ**, **ಪೊಚ್ಚಱ** (ನಾ). ೧. ಹೆಮ್ಮೆ ; ಗರ್ವ ; ಅಹಂ ಕಾರ : ಪಾಂಚಾಳಿಯನೆಱೆವದಟೇನಾದುದೋ ಗಂಡ ಪೇಟ್ ಪೊಚ್ಚಱನಂತಾ ಮಾತುಮಿಂತಿಱುರ[ವೆನೆ] ನಗೆಯಂ ಮಾಡಿದ್ದೆ (ಕೃಕಥಾ. ೦೩-೭೭) ; ತಳ್ತಿ ಱಿಯಲ್ಬ್ಯಾಮುಕರೊಳ್ ಮನೋಭವನೃಪಂ ಮೇಲಿತ್ತಿದಂ ನಾಡೆ ಪೊಚ್ಚಱು ಬೇಡೆಂಬಪೊಲರ್ಪ ಕಾಮಿನಿ ಬಸಚ್ಚಿಂಗಾರದಿಂದೊಪ್ಪಿದಳ್ (ರರ್ಮಾಕ್ಯ. ೭-೨೦೩) ; ಕಿಱುಯನಿವಂ ಪ್ರಾಯದೊಳೆಂದುಱದೆನ್ನಂ ನುಡಿವುದಳವೆ

ಬಲ್ಪಿನೊಳೆನ್ನೀ ಕಡುಚಕಂಕಿಗೆ ನೆಱೆಯ್ಯೆ ಪೊಚ್ಚಱನೊಳಿದೇಂ ಪೊಣರ್ದು ನೋಡಲಾಗದೆ ಕನ್ನಂ (ಶಾಂಹು. ೦೦-೩೯). ೨. ಎಚ್ಚರ : 'ಪೊಚ್ಚಱಿಸು', 'ಪೊಚ್ಚಉಗಡು' ಪರಾ. ೩. ಪರಾಕ್ರಮ ; ಶೌರ್ಯ : ಆತನಂ ತಾಗಿ ತಳ್ತಿಱಿಯಲ್ ಕೋಡಗಗಟ್ಟುಗಟ್ಟಿ ತರಲಿನ್ನಾರಾರ್ಪರಂತಪ್ಪ ಪೊಚ್ಚಱ ಸಾಮಂತರೆ ಪೋಗಿಂ (ಶಂಪಾ. ೩-೩೦) ; ಗುರುವಂ ಪ್ರೋಜ್ಜ್ವಿತ ಚಾಪನಂ ಪುಸಿದು ಕೊಂದಾ ಬೀರವಂ ಭೀಷ್ಮರಂ ಶರಶಯ್ಯಾಗತರಂ ಕಱುತ್ತು ಗುಜಿಯೆಚ್ಚಾ ಪೊಚ್ಚಱಂ . . . ಪಾಂಡುಪುತ್ರರೆ ಬಲ್ಲರ್ (ಗದಾಯು. ೩-೩೩). ೪. ತೇಜಸ್ಸು ; ಕಾಂತಿ : ರತಿಯಶಿರೂಪವಂ ಸಿರಿಯ ಪೊಚ್ಚಱನಾ ಮುನಿಪತ್ನಿಯಪ್ಪರುಂಧತಿಯ ಸುಶೀಲವಂ . . . ಎಲ್ಲವನೊಂದುಗೂಡಿ ಪಾರ್ವತಿ ಸಮೆದಂತೆ ಕಣ್ಗೆಸೆವುತ್ತಿರ್ದಳವಳ್ಮನಕಿಂಪ ನೀವುತುಂ (ಜಗಂ. ೯-೩). ೫. (ಪ್ರಕಟವಾದ) ತೀವ್ರತೆ ; ತೀಕ್ಷ್ಣತೆ : ಮಾತ್ಸರ್ಯಂ ಬಸನದ ಮೆಚ್ಚು ಪೊಚ್ಚಱಾದ ಇಚ್ಛೆಕಾಣೆನಿಂತೆಂದಂ (ಅಜಿಂತು. ೯-೩೬ ಕ). ಪೊಚ್ಚರ : ೬. "ಸ್ಫುರಣ, ಆವೇಶ" (ಕಾಂಬರ. ಕೋಶ) : ಕಡಿದು ಮೇಣ್ ಬೋಳನು ಬಡಿದು ಕಮ್ಮರಿಗಿಕ್ಕಿ ತೊಡಗಿರ್ಪ ಯೇಂ ವುದುವೆ ? ಪೊಚ್ಚರೇನೊಪ್ಪಂ (ಕಾಂಬರ. ೦೩೦-೩೩೯). ಪೊಚ್ಚಱ : ೭. ವಿತಱೊಂದು ಪೊಚ್ಚಱದ ಮಾತಿನೊಂದು ನಿಜುಗೆಯೊ ! ಲೋಗರೊಳ್ ಬಲ್ಲರ್ ತವಸ್ವಾಳ್ತನದ ಪೆರ್ಚಳಿಕೆಯುಂ ಗಳಪುವರೆ ? (ರಾಮಾಶ್ವ. ೩೩-೨೩) ; ಕಬ್ಬಿಗರ್ಗೆ ನೀಂ ಕಲ್ಲಾಯ್ತೆನಲ್ಕೆಂ ಎಂದುಂ ಕಾಣದರೋಂದು ವಾಂಗಿನಿಂ ಪೇಟ್ದ ಪೊಚ್ಚಱದ ನಿನ್ನೀ ಬಣ್ಣನೆಯ ನುಡಿಗೇನೆಂಪೆನೊ ! (ರಾಶಾಶ್ವ. ೬೭-೨೬). [< ಪೊಚ್ಚಱು₁]

**ಪೊಚ್ಚಉಗಿಡಿಸು** (ಕ್ರಿ). ತೀವ್ರತೆಯನ್ನು ಕಡಮೆಮಾಡು : ಪೊಱಮಟ್ಟು ಕೋಪದಿಂ ಮೆಯ್ಮಱಿಯದೆ ತನ್ನನಿಯ ತವಮನೇಗೆಯ್ದುಂ ಪೊಚ್ಚಱು ಗಿಡಿಸಿ ತರ್ಪಮೆಂಬೊಂದಱಕೆಯಿನವರೆಯ್ದೆವಂದರಾ ಗಿರಿವರವಂ (ರಶಾಶ್ವ. ೯-೩೯). [ಪೊಚ್ಚಉಗಿಡು (< ಪೊಚ್ಚಉಗೆಡು) + –ಇಸು₁]

**ಪೊಚ್ಚಉಗಿಡು** 'ಪೊಚ್ಚಉಗೆಡು' ನೋ.

**ಪೊಚ್ಚಉಗೆಡು, ಪೊಚ್ಚಉಗಿಡು** (ಕ್ರಿ). ೧. ಶೌರ್ಯಗುಂದು ; ಹೆದರು : ಪೊಱಮಟ್ಟಂ ಲಲಿತಾಂಗನೆಂದೊಡೆಮವರ್ಬಳ್ಕುತ್ತುಮಳ್ಕುತ್ತೆ ಪೊಚ್ಚಱ[ಉ]ಗೆಟ್ಟೋಡುವರ್ (ರಶಾಶ್ವ. ೨-೬೬). ೨. ಎಚ್ಚರ ತಪ್ಪು : ನಚ್ಚುಪುದೊಂದಂಬಂ ತೊಟ್ಟೆಚ್ಚೊಡೆ ನೆಱಗೊಂಡ ಸರದೊಳಾಗದೆ ಕರ್ಣಂ ಪೊಚ್ಚಉಗೆಟ್ಟುಱದಾಡಂ ಕಚ್ಚಿ ಮಹಾರೌದ್ರಭಾವದಿಂದಂ ಕೆಡೆದಂ (ಶಾಂಹು. ೦೨-೯೩). ೩. ಶೋಭೆಗೆಡು; ಅಂದಗೆಡು; ಹಾಳಾಗು : ಪೆಱತೇನೊ ಪಲವುದಿವಸು ಪೊಱಗಿರ್ದೊಡೆ ಕಿಡದ ವಸ್ತುಗಳ್ಕನುವನಿದಂ ನೆಱೆ ಪೂರ್ದಿದನಿತಱೊಳೆ ಪೊಚ್ಚಉಗೆಟ್ಟು ಮಲಂಗಳೆಂಬ ಪೆಸರಂ ಪಡೆಗುಂ (ರಶಾಶ್ವ. ೭-೦೯೦). ಪೊಚ್ಚಉಗಿಡು : ೪. ಮನುಷ್ಯಲೋಕ ಸುಖಮಸ್ಥಿರವೆಂದೆಳಿಪಿಂದೆ ಸೋಲಿಸ್ತು ಪೊಚ್ಚಉಗಿಡದಮ್ಮ ಜೀಯೆನಿಸಿ ಯಾಪೊಡಲಂ ಜಿನದೀಕ್ಷೆಗೊಡ್ಡಿ ಮಿತ್ರಱಿಕೆಯ ಮಾಱುಮಾಱಥ ಮುಮನೊರ್ವರಿಯೆ ಬಿಟ್ಟು (ರಶಾಶ್ವ. ೯-೦೧೨). [ಪೊಚ್ಚಉ₂ + ಕೆಡು₁]

**ಪೊಚ್ಚಉವಳಿ** (ನಾ). ಹೊಳೆಯುವ ಬಟ್ಟೆ; ಕಾಂತಿಯುಕ್ತವಾದ ವಸ್ತ್ರ : ಮಿಱುಪ ಕುಸುಮಾಯುಧಕೆ ಪೊನ್ನೊರೆಯಂ ಸೇರಿಸುವ ತೆಱದೆ ಪೊಂಬಣ್ಣದ ಪೊಚ್ಚಉವಳಿಯನುಡಿಸಿರ್ದಱಪೆಱನೊಸಲಂಗನೆಗೆ ಕೋವಿದ ಯುರತಿಮುದದಿಂ (ಜಗಂ. ೯-೯೩). [ಪೊಚ್ಚಉ₂ + ಪಳಿ₄ (< ಪಟ್ಟೆ₁)]

**ಪೊಚ್ಚು** 'ಪೊದೆಯಿಸು' ನೋ.

**ಪೊಟ್** (ನಾ). ಒಂದು ಅನುಕರಣಶಬ್ದ : ದಪ್ಪರಿದಟ್ಟುಂ ಪೊಟ್ಟನೆ ದೊಪ್ಪಧೊಗಪ್ಪನೆ ದಿಧಿಲ್ಬುಧಿಲ್ಲನೆ ಗದೆಗಳ್ ಸೊಪ್ಪುಸೊಪಡಪ್ಪಿನಂ ಸೊಟ್ಟಪ್ಪುದೆ ಕಡುಕೆಯ್ದು ಪೊಯ್ದರೊರ್ವರನೊರ್ವರ್ (ಗದಾಯು. ೮-೦೦).

**ಪೊಟರೆ** 'ಪೊಟ್ಟರೆ' ನೋ.

**ಪೊಟಿವಾಡಿ** (ನಾ). ಒಂದು ಊರಿನ ಹೆಸರು : ತಸ್ಯ ಸೀಮೆ ಮೂಡಾಯ್ಪುರ್ವಳ್ಳಮ ಪೊಟಿವಾಡಿಯ ಸೀಮೆಯುಳ್ ಕೂಡಿತ್ತು (ಎಕ. IV. ಹುಣ. ೯-೬: ಕ್ರಿ. 760). [ಪೊಟ್ಟಿ + ಪಾಡಿ₂]

**ಪೊಟ್ಟಗೆ** (ಅ). ಒಂದು ಅನುಕರಣಾವ್ಯಯ ; 'ಪೊಟ್' ಎಂಬ ಶಬ್ದದೊಡನೆ : ಘಟ್ಟಿಸಿದ ತೀಟ ಘಟ್ಟಣೆಯೊಳ್ ಪೊಟ್ಟಗೊಡೆದ ಕಾಳುಗೆಗಳ ರುಧಿರಜಲದೊಳ್ ಬೆರಸಿ (ಶಾಶಪಾ. ೦೦-೬೦ ವ); ಬಡಿವ ಬಡಿಗೆಗಳ ಕೋಳೆಳೋ ತೊಡೆಯುದು ಸಲೆ ಪೊಟ್ಟಗೊಡೆದು ಕಡಿವಡೆದೆತ್ತಂ ಪುಡುಪುಡನೆ ಪುಗ್ ಜೋಲ್ದಲ್ದಡಗಾಗಿ ಸುರುಳ್ದು ಸುರುಳ್ದು ಬಾಯ್ಬಿಟ್ಟರ್ಕಂ (ಸಃಶಜಾ. ೩-೦೩). [ಪೊಟ್ + –ಅಗೆ₁]

**ಪೊಟ್ಟಣ** 'ಪೊಟ್ಟಳ' ನೋ.

**ಪೊಟ್ಟಣಂಗಟ್ಟು** 'ಪೊಟ್ಟಳಂಗಟ್ಟು' ನೋ.

**ಪೊಟ್ಟಣಗಟ್ಟು** 'ಪೊಟ್ಟಳಂಗಟ್ಟು' ನೋ.

**ಪೊಟ್ಟಣವಾರಿ** (ನಾ). ಪೊಟ್ಟಣಗಟ್ಟಿದ ನೀರು ; ದೊನ್ನೆಯ ನೀರು : ಬನಮೆ ಬನಕ್ಕೆ ಬಾವರಿಗೆ ಬಂದಪೊಲಾದುದು ತಂಡತಂಡದಿಂ ಮುನಿಗಳ ಕೆಯ್ಯ ಉಂಚಣಿಗೆ ಚಾಂದ್ರಮಾಸೀದಳಕಾಂಡಿಕಾಳಿ ತಜ್ಜನಭವನಕ್ಕೆ ದುಗ್ಧನಿಧಿ ಕಟ್ಟಿದ ಪೊಟ್ಟಣವಾರಿಗಟ್ಟದಕ್ಕೆನಿಸಿದುದಿಂದು ಸಾಧುಜನಸಂಗ ಸಮಾಗಮನಪ್ರಪಂಚದೊಳ್ (ಅಪುರು. ೩-೩೦) ; ನೀರ ತಾರ್ಕ್ಯ ಹೋಗು ನಳಿಲ ಸರೋರುಹದ ಪತ್ರದಲಿ ಪೊಟ್ಟಣವಾರಿಯನು ಕಟ್ಟೆಂದು ಕುಂತೀ ಸೂನು ನೇಮಿಸಿದ (ಕುಮ್ಮಾ.ಅ. ೨೩-೦೨). [ಪೊಟ್ಟಣ (< ಪೊಟ್ಟಳ) + ವಾರಿ₂]

**ಪೊಟ್ಟಣಿಸು** 'ಪೊಟ್ಟಳಿಸು' ನೋ.

**ಪೊಟ್ಟನೆ** (ಅ). ಒಂದು ಅನುಕರಣಾವ್ಯಯ ; 'ಪೊಟ್' ಎಂಬ ಶಬ್ದದೊಡನೆ : ಪಾರ್ಥನ ದೇವದತ್ತನಿಸ್ವನದೊಳೆ ಸಿಱಿ ಪೊಟ್ಟನೊ[ಡೆದ ಬ್ರಹ್ಮಾಂಡ]ಗೊ]ಡೆವಂತೆವೊಡಾಮದಚಾಂಡ ತುಂಡಗಳು (ಶಾಶಪಾ. ೦೦-೦೯೩) ; ಬೀಸಿ ಕರಮೆತ್ತಿ ಪೊಯ್ದಡೆ ಸೂಸಿ ಮಿದುಳುಟ್ ಪೊಟ್ಟನೊಡೆಯೆ ತಲೆ ಕರವಿಂ ತೊಂದಾಸುರವಾಗಿರೆ ಕೊಂದು ವಿಧಾಸುರತೇಜದೊಳೆ ತಂದೆಯಲ್ಲಿಗೆ ಮಗುಟ್ದಂ (ಶಾಂಹು. ೩-೩೬). [ಪೊಟ್ + –ಅನೆ₁]

**ಪೊಟ್ಟಮುಡುಹ, ಪಟ್ಟಮುಡುಹು** (ನಾ). ಮಲ್ಲಯುದ್ಧದಲ್ಲಿ ಒಂದು ವರಸೆ : ಅಂ ಪಿಡಿದುದೆ ಕತ್ತರಂ . . . ಪೊಟ್ಟಮುಡುಹಂ ಮುಹಡಂ ದಣಂವಟ್ಟೆ ಪಟ್ಟಿಸಂ (ಅಶಂಪು. ೨-೨೭). ಪಟ್ಟಮುಡುಹು : ಚಿಮ್ಮಿ ಝುಡಿತೆಯ ಸೆಳೆದು ಮುಡಹಿನಲಾಕಿ ಬಿಗಿದರು ಪಟ್ಟಮುಡುಹಿನಲಿ (ಕುಮ್ಮಾ.ಸ. ೨-೯೯). [ ? ]

**ಪೊಟ್ಟರೆ, ಪೊಟರೆ, ಪೊರಟೆ₁** (ನಾ). (ಮರ, ಕಲ್ಲು ಮುಂತಾದುವುಗಳಲ್ಲಿರುವ) ಡೊಗರು ; ಹೋರು ; ರಂಧ್ರ : ಕಾಗೆಯು ಆ ಮರದ ಪೊಟ್ಟರೆಯಲ್ಲಿಯಿರುವ ಕೃಷ್ಣಸರ್ಪದಿಂದ ಭಕ್ಷಿಸಲ್ಪಟ್ಟ ತನ್ನ ನೂರಾರು ಮರಿಗಳಂ ತಿಳಿದು (ಕಾಗಂಂ. ೩೬೬-೦೯) ; ನಾರಾಯಣನು ಯಾರಿಗೂ ಕಾಣದಂತೆ ಊರ ಹೊರಗಣ ಒಂದು ದೊಡ್ಡಮರದ ಪೊಟ್ಟರೆಯನ್ನು ಸೇರಿ ಅನ್ನನೀರುಗಳಿಲ್ಲದೆ ಮೂರು ದಿನಗಳಿದ್ದನು (ಶಶ್ಯೋ.ಟಿ. ೦೪೭). ಪೊಟರೆ : ಪಕ್ಷಿಗಳೆಲ್ಲ ಸಂಚಾರಮಂ ಬಿಟ್ಟು ಕಲಕಲಧ್ವನಿಗಳಂ ಮಾಡುತ ಮರಗಳ ಪೊಟರೆಗಳಲ್ಲಿ . . . ಸೇರಿ (ಕಾಗಂಂ. ೦೮೯-೦೬) : ಮನೆಯ ಹದಿಗೆ ಹಾಕಿರುವ ಕಲ್ಲುಗಳ ಪೊಟರೆಗಳಲ್ಲಿ ಕಿರಿಜೇನು, ದುಂಬಿಗಳು ಒಂದು ವಿಧವಾದ ಜೇನನ್ನು ಶೇಖರಿಸಿಡುತ್ತಿದ್ದವು (ಹುಟ್ಟಿಹ. ೦೩೩). ಪೊರಟೆ₁ : ಆ ಕೋಡಗಿ ಕಾಡಂ ಕೂಡಿ ಕುರವಿಯಾಗಿರ್ದುದಱ ಪೊರಟಿಯೊಳ್ಪತತ್ರಿಗಳ್ಸತ್ತು ಪೋತುಗಳಾಗೆ (ಕೂಶ್ಯಸ್ರ. ೯-೩೩ ವ). [ದೇ. ॥ ತುಳು. ಪೊಟ್ರೆ]

**ಪೊಟ್ಟವಟ್ಟಳೆ** (ನಾ). (?) : ಬಳಸುವೇಱುವ ಸಱುವಗಲ್ವಿನ್ನಪ್ಪ ಚಾರಣ ದೋಷಮಿಲ್ಲದೆ ಪೊಟ್ಟವಟ್ಟಳೆಗೆ ಸಮನಾಗೆ ಗಿರಿಗೆಯ ಕೋಲ್ಮುಟ್ಟ

ಮಿಗಲುಂ ನೆಲಲುಮಣಮಿಾಯದಿನ್ನೊನ್ನಳವಿಯೊಳ್ ಬರೆ (ಎಕ. II, ೦೩೩-೪೦ ; ೪೩೩). [ ? ]

**ಪೊಟ್ಟವಣೆ** (ನಾ). [ಸಂಗೀತ] (?) : ತಾನು ಮೊದಲವು ಮಾನ್ಯವವ ಱೊಳು ಗಾನಮೊಪ್ಪುವ ದಂಡಿಗೆಯನವಧಾನಿಸುತ್ತ ಮಿಗೆ ಮೇಘಡಾಳವ ನೊಡನೆಯೌತಾಣಮೂನಿತಂ ನವತಾಣವುಂ ಸಂಧಾನಮಾವಾರಂ ತಾಳ ಪತ್ಯಮಾನೂನಪತ್ರಂ ಪೊಟ್ಟವಣೆ ಸಾರಣಮುಲರ್ದಿರಲು . . . ಬಾಜಿಸುತಾ ವಿಮಳರಾಗದೊಳಿ (ಚಸಕ್ಕ. ೦೯-೮). [ ? ]

**ಪೊಟ್ಟಳ, ಪೊಟ್ಟಣ, ಪೊಟ್ಟ** (ನಾ). ೧. ಕಾಗದ, ಎಲೆ ಮೊದಲಾದುವು ಗಳಿಂದ ಕಟ್ಟಿದ ಪುಡಿಕೆ, ದೊನ್ನೆ ಇತ್ಯಾದಿ : ಜೀವಿತಮಾರಣಂ ಗಳೆಂಬಿವಱಿಟ್ಟಳವುಂ ಪುಸಿಯ ಪೊಟ್ಟಳಮುಮಕ್ಕುಂ (ಜಾಚಚ. ೬-೦೩೨೪); ಕಾಂಚಮಾದ ಪೊಟ್ಟಳ ಜವಾದಿಯ ವಂಕಿ ಪೊಡರ್ವ ಗಂಧದ ಸಿಪ್ಪು ಕರ್ಪೂರದ ನಾಳಿಗಳ ಪಿಡಿದೊಡನೆ ನಡೆದರೊಲಿದು (ಹರ‍್ಕಾ. ೯-೬) : ಸರ ಕಾರದ ಸಾಲದ ಪತ್ರಗಳನ್ನು ಕರಿಯ ಮುದ್ದಿನ ಪೊಟ್ಟಳಗಳನ್ನು ಕಟ್ಟುವ ದಕ್ಕಾಗುಪಯೋಗಿಸಿ . . . ಸುಟ್ಟು ಬಿಟ್ಟನು (ಗುಂಶಾ. ೮೬). **ಪೊಟ್ಟಣ** : ೧. "ಪೊಟ್ಟಣ(ಳ)–ಪುಟ = ಎಲೆ–ಕಾಗದಗಳ ಬುಟ್ಟಿ" (ಹರ‍್ಕೋ. ೨೬) : ಅಭ್ಯರ್ಣಪಾದಪಸ್ಫುಟಿತ ಪಲ್ಲವಂಗಳೊಳಂ ಕಟ್ಟಿದ ಕರ್ಪೂರರಜದ ಪೊಟ್ಟಣಂಗಳೊಳಂ ಸ್ವೇದಪ್ರತೀಕಾರಮಾನನವರತಂ ಮಾಡಿಯುಂ (ಕಾದಂಪು. ೮೩೩) : ಬಾಳ್ಗನ್ನ ಭಾಳಾಕ್ಷನನುತ ಪಿನಾಕಿ ಕೊಟ್ಟ ಪೊಟ್ಟಣಮಂ ಬಿಟ್ಟು ಭಕ್ತರ್ಗಿತ್ತು (ಪಂಬಸ. ೯-೦೪); ಕಿಸೆಯಲ್ಲಿ ಅಡಿಕೆಯ ಪೊಟ್ಟಣವಿದೆ, ತಂದು ಕೊಡು (ಕೇಕೋಶ. ೦೦೬). ೨. (ಹಣ ಮೊದಲಾದುವುಗಳ) ಕಟ್ಟು; ಗಂಟು; ಥೈಲಿ: ತನ್ನ ಕಯ್ಯೊಳಿರ್ದ ಸಾಸಿರಗದ್ಯಾಣದ ಪೊಟ್ಟಣಮಂ ಸುಮತಿಯ ಕಯ್ಯೊಳ್ ಕೊಟ್ಟು (ಸುಕುಮಾ. ೬-೨೯ ವ). **ಪೊಟ್ಟ** : ೧. ಅಂಗಡಿಯಿಂದ ತಂದ ಕಾಫಿಪುಡಿಪೊಟ್ಟ ಒಡೆದುಹೋಗಿದೆ (ಕೂ೨). [ದೇ.II ತಮಿ. ಪೊಟ್ಟಲಿ, ಪೊಟ್ಟಣ, ಪೊಟ್ಟಲ; ತುಳು. ತೆಲು. ಪೊಟ್ಲ, ಪೊಟ್ಟ]

**ಪೊಟ್ಟಳಂಗಟ್ಟು, ಪೊಟ್ಟಣಂಗಟ್ಟು, ಪೊಟ್ಟಣಗಟ್ಟು** (ಕ್ರಿ). ೧. (ಕಾಗದ, ಎಲೆ ಮೊದಲಾದುವುಗಳಿಂದ)ಪೊಟ್ಟಣವನ್ನು ಕಟ್ಟು; ಪುಡಿಕೆಮಾಡು; ದೊನ್ನೆಯಾಗಿಸು: ಪಿಂದೊಂದು ತಾವರೆಯೆಲೆಯೊಳ್ ನೀರಂ ಮೊಗೆದು ಪೊಟ್ಟಳಂಗಟ್ಟಿ ಕೊಳದಿಂ ಪೊಱಮಟ್ಟು (ಬಂಹಂ. ೦೪-೩೩ ವ). **ಪೊಟ್ಟಣಂಗಟ್ಟು**: ೨. ಉಂಡೆಮಾಡು: ಉಟ್ಟ ಸೀರೆಯ ಪೊಟ್ಟಣಂಗಟ್ಟಿ ಶೂಲಿ ಯಕ್ಷಿಗೆ ಬಾಯ ಕೇಳುವನೋಳಿಯಿಂ ನಸು ಹತ್ತಿಸುತ್ತಿರೆ (ಚಸಕ್ಕ. ೦೬-೬೦). **ಪೊಟ್ಟಣಗಟ್ಟು** : ೧. ಆದರಿಸಿ ಸಕಲಪುಷ್ಪವನು ಪೊಟ್ಟಣಗಟ್ಟಿ . . . ಶಿವಲಿಂಗಾರ್ಚನೆಯ ಮಾಡಿ ಪುಳಕಿಸುತೆ (ಶಾಮಾಕ. ೬೯–೧೯) ; ಸಿಡಿಲ ಪೊಟ್ಟಣಗಟ್ಟಿ ಸೇಕವ ಕೊಡುವರೇ (ಕುವ್ಯಾಸ. ೦೪-೩೭): ಬಣ್ಣಬಣ್ಣದ ಪೂಗೊಯ್ದು ಹೊಂಬಾಳೆಯ ಪರ್ಣದ ಪೊಟ್ಟಣಗಟ್ಟಿ (ಮೋಹಕ. ೨೪-೬೮). [ಪೊಟ್ಟಳ + ಕಟ್ಟು₁]

**ಪೊಟ್ಟಳಿಗೆ** (ನಾ). (ಹಣ ಮುಂತಾದುವನ್ನು ಕಟ್ಟಿದ) ಪೊಟ್ಟಣ ; ಗಂಟು : ಸಾಸಿರದೀನಾರದ ಪೊಟ್ಟಳಿಗೆಗಳಂ ಪ್ರಾಸಾದದ ಮೇಗಿರ್ದು ಜನಸಂಕೀರ್ಣದ ನಡುವೆ ನಾಲ್ಕು ಪೊಟ್ಟಳಿಗೆಯನೀಡಾಡಿದೊಡಾ ಪೊಟ್ಟಳಿ ಗೆಯಂ ಕೊಂಡು ಕೊಳ್ಳೆನೆಂದು ಪುಗಿದೊಡೆ . . . ಸಾಸಿರದೀನಾರದ ಪೊಟ್ಟ ಳಿಗೆ ಕಟ್ಟುವುದು (ವಡ್ಡಾರಾ. ೦೩-೬); ಸಾಸಿರ ದೀನಾರದ ಸಮಕಟ್ಟಿನ ನಾಲ್ಕು ಪೊಟ್ಟಳಿಗೆಯುಮನೊಂದೆ ಮಾಡಿ (ಸುಕುಮಾ. ೬-೮ ವ). [<ಪೊಟ್ಟಳ]

**ಪೊಟ್ಟಳಿಸು, ಪೊಟ್ಟಣಿಸು, ಹೊಟ್ಟಳಿಸು** (ಕ್ರಿ). ೧. (ಅಲಂ) (ಪೊಟ್ಟಣ ದಂತೆ) ಉಬ್ಬು; ಊದಿಕೊಳ್ಳು; ಬಾತುಕೊಳ್ಳು: ಕದಂಪು ಬೆಳರ್ತು ಬಾಡಿ ಪೊಟ್ಟಳಿಸಿ ಬೆಳರ್ತು ಮುದ್ರಿಸಿದ ಬಾಯ್ಗಳಲರ್ಗಿರಿವಂತು ಲಂಪ ಕೈಕೊಳೆ ಬಂದಿವತ್ತು ತುಂಬಿ ನರೆಪಲ್ಗೆಗೆ ಮಲ್ಲಿಗೆ ಸಂತೆಯಂತೆವೊಲ್ (ಅಹಂಕು. ೬-೩೪). ೨. ಕೊಬ್ಬು; ಅಹಂಕಾರಪಡು; ಗರ್ವವನ್ನು ಪ್ರದರ್ಶಿಸು: ಲಲಿತಪದಂ ಪ್ರಸನ್ನಕವಿತಾಗುಣಮಿಲ್ಲದೆ . . . ಅರ್ಥದ ಕೇಡನೆ ಪೇಟ್ದು ಬೇಗಿ ಪೊಟ್ಟಳಿಸಿ ನೆಗಟ್ತೆಗಾಟಿಸುವ ದುಷ್ಕವಿಯುಂ ಕವಿ ಯೆಂಬ ಲೆಕ್ಕದೊಳ್ (ಪಂಪಭಾ. ೦-೦೨); ಒರ್ವರಪ್ಪೊಡಮಿದಿರ್ಚುವ ಗಣ್ಣಿರ ನಾಮ್ಪುವನ್ನು ಪೊಟ್ಟಳಿಸುವ ಬೀರರಂ ನೆಱೆಯೆ ಕಾಣೆವು (ಎಕ. IV. ಹುಂಶ. ೪೦೦೬; ೪೬೦) ; ರಾಜಗರ್ವದಿಂದ ಪೊಟ್ಟಳಿಸುತ್ತಿದ್ದ ಆ ದ್ರುಪದನಿಗೆ ಇದೇ ತಕ್ಕ ಪುರಸ್ಕಾರ (ಗುಕುಚ. ೨೩). **ಪೊಟ್ಟಣಿಸು**: ೧. ಬಱವಱ ಬತ್ತಿ ತೋಱೆ ಕಿಱುನಾಲಗೆ ಮುಟ್ಟಲೊಡಂ ಶಿರೋರುಹಂ ಪಱೆಯೆ ಕುವರ್ಣ ಮಾಗೆ ನಖದಂತಚಯಂ ಕಡುದಣ್ಣಸಾಗಿ ಸುಯ್ ಪೊಱಮಡೆ ಪೊಟ್ಟೆ ಪೊಟ್ಟಣಿ(ಳಿ)ಸೆ . . . ದಷ್ಟನ ಸಾವು ನಿಶ್ಚಯಂ (ಲೋಕೋಪ. ೦೦-೯) ; ಪತ್ತಿರೆ ಪಲ್ಲು ವಿವರ್ಣತಮತ್ತಿರೆ ನಖನಿಕರಮುಱುತಮಾಗಿರೆ ದಶನಂ ಕಿತ್ತಿರೆ ಗಂಟಲ್ ಬಸಿಱೊಳಪತ್ತಿರೆ ಪೊಟ್ಟಣಿಸೆ ದಷ್ಟತನುಗಮರಿಷ್ಟಂ (ಖಗೇಂದ. ೩-೪೩). **ಹೊಟ್ಟಳಿಸು** : ೨. ನುಡಿವಂತು ನಡೆವನಲ್ಲಂ ಕಡುಖಳ ಸಂಯೋಗಿತನಕೆ ಹೊಟ್ಟಳ[ಳಿ]ಸಿಪ್ಪಂ . . . ತಿಂಬುದಡಗು ನುಡಿವುದು ತತ್ತ್ವಂ (ಚೆಂಶಾ. ೬೩೪). [ಪೊಟ್ಟಳ + –ಇಸು₁]

**ಪೊಟ್ಟೆ** 'ಪೋಟ್ಟೆ' ನೋ.

**ಪೊಟ್ಟು, ಹೊಟ್ಟು₁** (ನಾ). ೧. ಧಾನ್ಯದ ಮೇಲಿನ (ನಿಸ್ಸಾರವಾದ) ಸಿಪ್ಪೆ.– ಕವಚ: ಪೊಟ್ಟೆಲರಿಂ ಪಾಱುವವೋಲ್ ಬಟ್ಟಂ ಪಾಱುಗುಮೆ (ಪಂಪಭಾ. ೬-೩೮); ಇವರೆಲ್ಲರ ಮನದ ದುಃಖಮನಾಱಿಸುವುದು ಬಟ್ಟೆಯಂ ಕರ್ಮದ ಪೊಟ್ಟಂ ಪಾಱಿಸುವುದು (ಜೀಪಂ. ೨೬-೫), ಪೊಟ್ಟುಗಳಂ ಕಳೆದು ಸಾರಂಗಳಂ ಸಂಗ್ರಹಿಸಿ (ಶಕಪು. ೦೩೬-೦೬). ೨. (ಅಲಂ) ಸತ್ತ್ವವಿಲ್ಲ ದುದು ; ನಿಸ್ಸಾರವಾದುದು : ಪೂರ್ವೋತ್ತರದರಡಱ ಪಕ್ಷಂಗಳೊಳ್ ಯುಕ್ತಿಜಾಲಂಗಳ ಸಾರಾಸಾರಮಂ ಸೋದಿಸಿ ಕಳೆದದಱೊಳೊಪ್ಪಟ್ಟಸೊಳ್ಗ ಟ್ಟೆಯುಂ ಕೂರ್ತೊಳಕೊಂಡಿರ್ಪೊಳ್ಪಿನಿಂ ತತ್ತ್ವದ ನೆಲೆಯಱಿತು . . . ತರ್ಕಿಕಂ ಚಿಕ್ಕದೇವಂ (ಚಿವಂ. ೪-೦೦೦). ೩. ಸುಳ್ಳು; ಸಟೆ: "ಧಾವ ನನ್ನ ಮುಂದೆ ಪೊಟ್ಟೇಕೆ ಹೇಳುತ್ತಿ?" . . . "ನಾನೇನು ಪೊಟ್ಟು ಹೇಳಿದೆ?" (ಹುಂಚಾ. ೨೮). **ಹೊಟ್ಟು₁** : ೧. ಜರಿದುದೀ ಬಲರಾಸಿ ಗಾಳಿಯು ಹೊರಳಿ ಗೊಡ್ಡಿದ ಹೊಟ್ಟು ಹಾಱುವುದರಿಂದ (ಕುವ್ಯಾದ್ರೋ. ೦೪-೨೭) ; ಗಟ್ಟಿಗೋದು ಮೆಯ ನಾಲ್ ಬಳ್ಳಮಂ ನೆನೆಹಿ ಕುಮ್ಮಿ ಹೊಟ್ಟು ಹಾಱುವ ಹೆಱದಿ ಕೇಱೆ (ಸೂಶಾ. ೦-೯); ಅದಕ್ಕೆ ಹಾಕುವ ಹುಲ್ಲು, ಹೊಟ್ಟು, ಕಾಡು ಮೊದಲಾದ ಆಹಾರವನ್ನು ನೀನೇ ತಿಂದು ಬಿಡು (ಕಮುಕ. ೦೨೩). ೪. (ಮರ ಮುಂತಾದುವುಗಳ) ಪುಡಿ ; ಸಣ್ಣ ಸಣ್ಣ ಚೂರು : ಒಲೆಗೆ ಹೊಟ್ಟು ತುಂಬಬೇಕು (ಕೂ೨). ೫. ತಲೆಯಲ್ಲಿ ಉಂಟಾಗುವ ಹಗರು.— ಹುರುಪು : ಮೆಂತ್ಯವನ್ನು ತಿರುವಿ ತಲೆಗೆ ಹಚ್ಚಿ ಸ್ನಾನ ಮಾಡಿದರೆ ಹೊಟ್ಟು ಕಡಮೆಯಾಗುತ್ತದೆ (ಕೂ೨). ೬. (ಅಲಂ) ನಿಸ್ಸತ್ತ್ವನಾದ ವನು : ಹೊಟ್ಟೆ ನೂಕಿ ವ್ಯಥಾಹವದ ಜಗಱ್ಟ್ಟಿ ನೀ ಹೊಱಕಾಲುಗೊಂಡರೆ ಬಿಟ್ಟೆನೇ (ಕುವ್ಯಾಕ. ೦೦-೩೪).

**ಪೊಟ್ಟಾಗು, ಹೊಟ್ಟಾಗು** = ೧. ಪುಡಿಯಾಗು ; ಸಣ್ಣ ಸಣ್ಣ ಚೂರಾಗು : ಸತ್ಸ್ಸರಭೂಜಂ ಪೊಟ್ಟಾದುದು (ಎಕ. VII. ಶಿಕಾ. ೨೪೪–೯ ; 1185). ೨. ನಿಷ್ಫಲವಾಗು ; ಹುಸಿಯಾಗು : ಅವರ ನುಡಿ ಸುಳ್ಳಾಗು ವುದಿಲ್ಲ ; ಹೇಳಿದ ಕಣಿ ಹೊಟ್ಟಾಗುವುದಿಲ್ಲ (ಕೇಚಮು. ೪). **ಪೊಟ್ಟು ಮಾಡು** = ವ್ಯರ್ಥ ಮಾಡು : ಕಟ್ಟಿದರ್ಥ ಕಱೆವ ಎಮ್ಮೆ ಕೊಟ್ಟ ಕೊಂಡ ಸಾಲ ಕದನು ಪೊಟ್ಟು ಮಾಡಿ ಮಕ್ಕಳೊಡನೆ ಅಪ್ಪು ಹೇಳಿ ಸಾವ ತನಕ ದುಷ್ಟ ಜನರು ಸುಮ್ಮನಿರುವರೆ (ಕಶಕ. ೦೯೬-೩).

[ದೇ.II ತಮಿ. ಮಲ. ತುಳು. ತೆಲು. ಪೊಟ್ಟು ; ಕೊಡ. ಪೊಟ್ಟ್; ಕೋತ. ಪೊಟ್; ಕೋಲಾ. ಪೊಟ್ಟ]

**ಪೊಟ್ಟುಕತೆ** (ನಾ). ನಿಸ್ಸಾರವಾದ ಕತೆ; ಜಳ್ಳುಕಥೆ; ಪೊಳ್ಳುಕಥೆ: ಅಲ್ಲಿಗೇ ಈ ಪೊಟ್ಟುಕತೆ ಮುಗಿದಂತಾಯಿತು (ಗಾಜಿಯಾ. ೪೩).

[ ಪೊಟ್ಟು + ಕತೆ ]

**ಪೊಟ್ಟುಕಳೆ** 'ಪೊಟ್ಟುಗಳೆ' ನೋ.

**ಪೊಟ್ಟುಗ, ಹೊಟ್ಟುಗ** (ನಾ). ನಿಷ್ಪ್ರಯೋಜಕನಾದವನು; ಬಲಹೀನ; ಹೇಡಿ: ನೆಟ್ಟನೆ ಪಿತೃಘಾತಿಯುಮಂ ನಿಟ್ಟಿಪುದುಂ ನಿಂದ್ಯವೆಮ್ಮವಂದಿಗರಿಂದೀ ಪೊಟ್ಟುಗನುಂ ಪೊಟಲಿಂದರೆಯುಟ್ಟುವೆವೆಂದೊರೆದು ಥಟ್ಟನೊಡನಳವಟ್ಟಂ (ಅಜಿ. ೨-೩೩). ಹೊಟ್ಟುಗ: ಬಟ್ಟನಾಹವಕಹಿತ ಬಲಜಗುಟ್ಟಿ ಕೌರವನ್ನಪತಿ ರಥವನು ಹೊಟ್ಟುಗರ ತೆಗೆ ಹೋಗಹೇಳೆಂದೆಚ್ಚ ಸತಿರಥರ (ಕುಮಾ.ವ್ಯಾ. ೨-೭೦); ಮರುಳೆ ಹೊಟ್ಟುಗರೊಡನೆ ಜಯಿಸಿದ ಪರಿಯು ಮೆರವುದೆ ನನ್ನೊಡನೆ (ಜೈಮಿನಿ. ೪-೨೮). [ಪೊಟ್ಟು + –ಗ₂]

**ಪೊಟ್ಟುಗಳೆ, ಪೊಟ್ಟುಕಳೆ** (ಕ್ರಿ). ೧. ಸಿಪ್ಪೆಯನ್ನು ಹೋಗಲಾಡಿಸು; ನಿಸ್ಸಾರವಾದುದನ್ನು ತೆಗೆ; ಜಳ್ಳನ್ನು ತೂರು. ೨. (ಅಲಂ) ಹಗುರವಾಗಿ ಕಾಣು; ಅಲ್ಪವೆಂದೆಣಿಸು: ಏವೆನವ್ವ ಏವೆನವ್ವ . . . ಬಲಂದಿಟ್ಟವ ಪೊಟ್ಟುಗಳೆವ ದೀರನವ್ವ (ಗೀತಗೋ. ೦೬-೦೯). ಪೊಟ್ಟುಕಳೆ: ೨. ಕಟ್ಟರೀದರಂಬ ಕೀರ್ತಿಗಂಜದ ಚೆಲಿಟ್ಟು ಕೆಳದಿಪೆಣ್ಗಳೊಳು ನಟ್ಟನೆ ಬಳೆದಿರ್ದ ನೇಹವ ನೆನೆಯದೆ ಪೊಟ್ಟುಕಳೆದು ಪೊಬಿಡಿವುದು (ಹರಿ. ೬-೪೩). [ ಪೊಟ್ಟು + ಕಳೆ₁ ]

**ಪೊಟ್ಟುಗೆಯ್** (ಕ್ರಿ). ಹುರುಳಿಲ್ಲದಂತೆ ಮಾಡು; ನಿಸ್ಸಾರಗೊಳಿಸು; ಶಕ್ತಿಗುಂದಿಸು: ಅಂತಿರ್ದ ಕೂರ್ಪನೀ ಪಟ್ಟಣದೊಳ್ ಪೊಟ್ಟುಗೆಯ್ದಂ (ಅಭಿ. ೩೯-೦೯). [ ಪೊಟ್ಟು + ಕೆಯ್₁ ]

**ಪೊಟ್ಟುಬಾವಿ, ಹೊಟ್ಟುಬಾವಿ** (ನಾ). (ನೀರಿಲ್ಲದೆ) ಹಾಳುಬಿದ್ದ ಬಾವಿ; ಪಾಳುಬಾವಿ: ಅದು ಯಾವುದೊ ಒಂದು ಪೊಟ್ಟುಬಾವಿ. ಅದೀಗ ಮುಚ್ಚುತ್ತಾ ಬರಾಬರಿ ಒಂದಾಳು ಆಳದಲ್ಲಿ ನಿಂತಿತ್ತು (ಕೊಳುಗು. ೩೩). ಹೊಟ್ಟುಬಾವಿ: ಅವರಲ್ಲಿ ನೀರು ಇರಲಿಲ್ಲ, ಅದು ಹೊಟ್ಟುಬಾವಿ (ಅಕ್ಕ. ೯೯). [ ಪೊಟ್ಟು + ಬಾವಿ ]

**ಪೊಟ್ಟುವಡೆ** (ಕ್ರಿ). ಹೊಟ್ಟಾಗು; ವ್ಯರ್ಥವಾದ ವಸ್ತುವಾಗು; ನಿಸ್ಸಾರವಾಗು: ತರ್ಕದೊಳ್ ಬಾದಂ ಬರ್ಕುಡಿಗುಟ್ಟಿ ಪೊಟ್ಟುವಡೆದಂ ದುರ್ವಾದದಿಂದಿನ್ನಗಂ ಭೇದಂಬಟ್ಟಿರ್ದಗೆಟ್ಟು ಕಟ್ಟನಿನಿತುಂ ಕಾಲಂಗಳೇಂ ಕರ್ಮವೋ (ಸುಕುಮಾ. ೪-೯೩). [ ಪೊಟ್ಟು + ಪಡೆ ]

**ಪೊಟ್ಟುಪಾಯ್** (ಕ್ರಿ). ನಿಸ್ಸತ್ತ್ವಗೊಳ್ಳುವಂತೆ ಮೇಲೆ ಬೀಳು, – ಎರಗು: ಮುಳಿದಿದಿರಾದುದಾದೊಡಿದಿರಂ ಮುಳಿಸಿಂದಮನನ್ತಪಾಳನಾಗಳ್ . . . ಪೊಟ್ಟುಪಾಯ್ವುಗ್ಗಮಾಗಳ್ ಪಡೆಪೊಯ್ವುಗಮಾಗಳ್ ಪೊರಳ್ಚುಗುಮಾಗಳ್ ಕೊಂದು ಕೂಗುಗು (ಶಾ. ೪, ೦೯-೬; ೧೦೯೯). [ಪೊಟ್ಟು + ಪಾಯ್₁]

**ಪೊಟ್ಟುಳಿ** (ನಾ). ಒಂದು ಬಗೆಯ ವಸ್ತ್ರ: ಆಲಿಲ ಬಣ್ಣವು ಅನೆವಾರ್ಗ ಶ್ರೀರಾಮನು ಕಳಸಗಂಟೆಯು ಪದ್ಮಮಿತ್ರ ಎಳೆಯ ಮಾಂದಳಿರು ಪೊಟ್ಟುಳಿ ಮುದ್ದುಕೇಸರಿ ಕಳಿದೂಟನಣಾಗ ನೇಯುವವನು (ಅಮುಸಾಂ. ೪-೨೩).

[< ಪಟ್ಟವಟಿ]

**ಪೊಟ್ಟೆ₁, ಹೊಟ್ಟೆ** (ನಾ). ೧. ದೇಹದ ಒಂದು ಭಾಗ; ಜಠರ; ಉದರ: ಪೊಟ್ಟೆ ಬಟ್ಟಾಗಿರ್ದ ಪೆಜನಟ್ಟ ನಡುವಂ ನೋಡಿ ಪೊಕ್ಕು ಮಿಟ್ಟೊಂದು ಮಿಡುಕಲಣ್ಣದೆ (ಗರುಡಪು. ೯ ೩೯ ೪); ನೆಕ್ಕ ಕದಂಪು ಕಂಪಿಪಧರುಂ ಮಿಗೆ ಕೆಂಪಡರ್ದಕ್ಷಿ ಬಟ್ಟ ಬಾಯುಕ್ಕುಳಿಸಿರ್ದ ಪೊಟ್ಟೆ ಪೊಚಾಯ್ತಿರ್ದ . . . ಮಸದ ಕತ್ತಿಗೆ ಕಣ್ಬೊಲನಾದುವತ್ತಲುಂ (ಹರಿಶ್ಚ. ೦೩-೪೯); ನೀನೆನ್ನ ಪೂರೆ ಪೊಟ್ಟೆಗಶನವನಿಕ್ಕು (ಕೃಶವೇ. ೦-೮೬೦). ೨. ಕಣ್ಣಿನ ರೆಪ್ಪೆ; ನಿಮೇಷ: ಚಕ್ಷುರಿಂದ್ರಿಯಕ್ಕೆ ಕರಿಯಾಲಿಯು ಮಧ್ಯಂತರೋಪಕರಣಮೆರಡು ಪೊಟ್ಟೆಯುಮುಮ ಇವು ಮೊದಲಾದುವೆ ಬಾಹ್ಯೋಪಕರಣಂ (ಕಸೂತ್ರ. ೪೦); ಕಣ್ದಂ ಮುಚ್ಚಿಹ ಪೊಟ್ಟೆಯು ಸನ್ನುತವರ್ಣನಿಕಯದಚ ಮೇಲಣ ರೇಖಂ ಬಣ್ಣಪೊಡದು ಕ್ಷಣಯಾಕ್ಕುಂ (ಅಕ್ಷಣ. ೯-೦೩). ಹೊಟ್ಟೆ: ೧. ಒಡನೆ ನುಡಿದಡೆ ಸಿರ ಹೊಟ್ಟೆಯೊಡವುದೆ (ಜಸಪ. ೨೯೦); ಕೊರಳಿಗಡರುವ ಹೊಟ್ಟೆಗಳ ಜುಷಿವರರು (ಕುಮಾ.ಭಾ. ೦೬-೯೦); ಎಲ್ಲರು ಮಾಡುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ (ಪುರಂದ. ೪-೩೩ ಕೀರ್ತನ); ತನ್ನ ಹೊಟ್ಟೆಗೆ ಸಹ ಪೂರಾ ತಿನ್ನುತ್ತಿರಲಿಲ್ಲ (ಮುಂಜಾವು. ೪-೩೨). ೨. ಚಕ್ಷುವಿಂಗೆ ಕರಿಯಾಲಿ ಬಿಳಿಯಾಲಿ ಇವೊಳಗಣುಪಕರಣಂ ಎವೆ ಹೊಟ್ಟೆಯೆಂಬವು ಬಾಹ್ಯೋಪಕರಣಂ (ಕಪಾಠ. ೯೪). ೩. ಬಸಿರು; ಗರ್ಭ: ಹೊಟ್ಟೆಯೊಳಗಿನ ಕೂಸು ಹೊಟ್ಟೆಯೊಳಗಿರುವಾಗ ಪುಟ್ಟಪ್ಪ ಅಂತ ಹೆಸರಿಟ್ಟರು (ಗಾದೆ). ೪. ಡೊಳ್ಳು; ಬೊಜ್ಜು: ಈಚೆಗೆ ಅವನಿಗೆ ಸ್ವಲ್ಪ ಹೊಟ್ಟೆ ಬಂದಿದೆ (ಜನ). ೫. ಸಂತಾನ; ವಂಶದ ಕುಡಿ: ಕಳೆದ್ಯ ಬಿಟ್ಟು ಮಗನೆ ನಮ್ಮನು ಬಟ್ಟಬಯಲೊಳಗಿರಿಸಿದ್ಯ ಹೊಗುಟ್ಟಿದ್ಯ ಕಾಳ್ಗಿಚ್ಚಿನಲಿ ಕಾಮೇಕ್ಷಿಯಲಿ ಪಡೆದ ಹೊಟ್ಟೆ ಬಚುದೊಬಿಯಾಯಿತೇ (ಕೋಕಿಲಾ. ೨-೪-೩೬). 'ಪೊಡ್ಕೆ' ಪರಾ.

**ಹೊಟ್ಟೆ ಕಿವಿಚಿಕೊಳ್ಳು** = (ಅಲಂ) ಕರುಬು; ಅಸೂಯೆ ಪಡು: ನಿದ್ರೆ ಬರದಿರಬೇಕಾದರೆ . . . ಆಸ್ತಿಯನ್ನು ಕಳೆದುಕೊಂಡಿರಬೇಕು, ಕಾಮಾತುರನಾಗಿರಬೇಕು ಅಥವಾ ಕಳ್ಳನಾಗಿರಬೇಕು. ಅನ್ಯರ ಆಸ್ತಿಗೆ ಆಸೆಪಟ್ಟು ಹೊಟ್ಟೆ ಕಿವುಚಿಕೊಳ್ಳುತ್ತಿರಬೇಕು (ಕಕಾ. ೨೩೬). **ಹೊಟ್ಟೆಗೆ ಹಾಕಿಕೊಳ್ಳು** = ೧. ಆಹಾರವನ್ನು ತೆಗೆದುಕೊಳ್ಳು; ಊಟಮಾಡು: ಹಸಿವು ತಡೆಯಲಾಗುತ್ತಿಲ್ಲ. ಮೊದಲು ಏನಾದರೊಂದಿಷ್ಟು ಹೊಟ್ಟೆಗೆ ಹಾಕಿಕೊಂಡು ಬರುತ್ತೇನೆ (ಜನ). ೨. (ಅಲಂ) ಕ್ಷಮಿಸು; ಮನ್ನಿಸು: ತಮ್ಮ ಮಗಳು ತಿಳಿಯದೆ ಮಾಡಿದ ತಪ್ಪನ್ನು ಹೊಟ್ಟೆಗೆ ಹಾಕಿಕೊಳ್ಳಬೇಕೆಂದು ಆವಳ ತಾಯಿ ಅವರನ್ನು ಕೇಳಿಕೊಂಡಳು (ಜನ). **ಹೊಟ್ಟೆಗೆ ಹಾಕು** = ೧. ತಿನ್ನಲು ಕೊಡು: ಮೊದಲು ಅವನಿಗೆ ಹೊಟ್ಟೆಗೆ ಹಾಕಿ ಕಳುಹಿಸು (ಜನ). ೨. ಸಾಯಿಸಲೆಂದು ಔಷಧವಿಡು, –ಮದ್ದಿಡು: ಅವರಿಗೆ ಯಾರೋ ಆಗದವರು ಹೊಟ್ಟೆಗೆ ಹಾಕಿ, ಬದುಕುವುದೇ ಕಷ್ಟವಾಯಿತು (ಜನ). **ಹೊಟ್ಟೆ ತಣ್ಣಗಾಗು** = (ಅಲಂ) ಸಮಾಧಾನವಾಗು; ತೃಪ್ತಿಯಾಗು: ನಿನ್ನ ಸೇಡು ತೀರಿತು. ಈಗಲಾದರೂ ಹೊಟ್ಟೆ ತಣ್ಣಗಾಯಿತಲ್ಲ (ಜನ). **ಹೊಟ್ಟೆ ತಣ್ಣಗಿಡು** = (ಅಲಂ) (ಸಂತಾನವನ್ನು) ಸುಖವಾಗಿರಿಸು: ದೇವರು ನಿಮ್ಮ ಹೊಟ್ಟೆ ತಣ್ಣಗಿಡಲಿ (ಜನ್ಮಕ. ೦೮). **ಹೊಟ್ಟೆ ತಣ್ಣಗೆ ಮಾಡಿಕೊಳ್ಳು** = (ಅಲಂ) ಸಮಾಧಾನ ಮಾಡಿಕೊಳ್ಳು; ಸಂತೃಪ್ತಿಗೊಳ್ಳು: ಬಿಸಿಲು ಮಳೆ ಗಾಳಿಗಳಿಗೆ ಸಿಕ್ಕಿ ತಮ್ಮಿನಲ್ಲಿ ನವೆಯುತ್ತಿದ್ದ ನಮ್ಮನ್ನು ಸುಖವಾಗಿದ್ದ ಈ ದುಷ್ಟ ನೋಡಿ ಹೊಟ್ಟೆ ತಣ್ಣಗೆ ಮಾಡಿಕೊಳ್ಳಬೇಕೆಂದು ಬಂದನು (ಪಕಥಾ. ೦೬೦); ತನ್ನ ಗಂಡನನ್ನು ಕೊಲ್ಲಿಸಿದವನನ್ನು ತಾನು ಕೊಂದು ಮುಯ್ಯಿ ತೀರಿಸಿಕೊಂಡು ಹೊಟ್ಟೆ ತಣ್ಣಗೆ ಮಾಡಿಕೊಂಡದ್ದಷ್ಟೇ ಅವಳಿಗೆ ಸಮಾಧಾನ! (ಬಂಕಿಸು. ೦೩೩). **ಹೊಟ್ಟೆ ತಣ್ಣಗೆ ಮಾಡು** = (ಅಲಂ) ತಂಪಾಗಿಸು; ತಂಪು ಮಾಡು: ಹಾದಿಯ ಮರದಿಂದ ಕೋತಿಗಳ ಹಿಂಡು ಬಂದರೆ ಗೊನೆಗೊನೆ ಸೀಯಾಳ ಹಾಳಾಗುತ್ತದೆ. ಅದನ್ನೆಲ್ಲಾ ನೋಡಿದರೆ ನಿಮ್ಮ ಹೊಟ್ಟೆ ತಣ್ಣಗೆ ಮಾಡಿದರೆ ಪುಣ್ಯವಾದರೂ ಬರುತ್ತದೆ (ರೀಕಹೂ. ೦೬೦). **ಹೊಟ್ಟೆಯ ಮೇಲೆ ಹೊಡೆ** = (ಅಲಂ) ಜೀವನೋಪಾಯಕ್ಕೆ ಅಡ್ಡಬರು: ಭಂಗೀಜನರು ತತ್ತರಿಸಿದರು . . . ಹೊಟ್ಟೆಯ ಮೇಲೆ ಹೊಡೆಯಬೇಡಿರಿ ಎನ್ನತೊಡಗಿದರು (ಸ್ವ.ಕಿತ. ೪೦೬). **ಹೊಟ್ಟೆ ಸಾಗಿಸು** = (ಅಲಂ) ಹೊಟ್ಟೆಯ ಪಾಡನ್ನು ನೀಗಿಸು; ಬದುಕನ್ನು ನಡೆಸು: ತನ್ನ ಹೊಟ್ಟೆ ಸಾಗಿಸುವ ಎಮ್ಮೆ ಸತ್ತಿದ್ದರಿಂದ ಆ ಗವಳಿಗನು ಎದೆ ಎದೆ ಬಡಕೊಂಡು, ಇನ್ನೇನು ಗತಿಯೆಂದು ಅಳಹತ್ತಿದನು (ಮುಂಜಾವು. ೦-೦೯). **ಹೊಟ್ಟೆ ಹಿಡಿ** = (ಅಲಂ) (ದುಃಖವನ್ನು) ತಾಳಿಕೊಳ್ಳು; ಸಹಿಸಿ

ಕೊಳ್ಳು: "ಅಪ್ಪರ ಅಂತಹ ಹುಡುಗೀನ ಮನೇಲಿ ಕೂರಿಸಿ . . . ನಾನು ಹೇಗೆ ಹೊಟ್ಟೆ ಹಿಡಿದು ಬರಲಿ" ಎಂದು ಗೋಳಿಡುತ್ತಿದ್ದರು (ದೂಕಟ್ಟಿ. ೬೦).
[ದೇ.ಶ ತುಳು. ಕೊಡ. ಪೊಟಿ ; ತೆಲು. ಕೋಲಾ. ನಾಯ್ಕ. ಪರ್ಜಿ. ಪೊಟ್ಟ./ಪ್ರಾ. ಪೋಟ್ಟ, ಪುಟ್ಟ./ಮರಾ. ಪೋಟ್]

**ಪೊಟ್ಟೆ₃** 'ಪೋಟ್ಟೆ₁' ನೋ.

**ಪೊಟ್ಟೆಕಿರ್ಚು**, ಹೊಟ್ಟೆಕಿಚ್ಚು, ಹೊಟ್ಟೆಗಿಚ್ಚು (ನಾ). ೧. ಹೊಟ್ಟೆಯೊಳಗೆ ಆಹಾರ ಜೀರ್ಣವಾಗಲು ಅನುಕೂಲವಾಗುವ ತಾಪ ; ಜಠರಾಗ್ನಿ : ಪಿರಿದುಣ್ಣೆಂದೊತ್ತಪಟ್ಟ ಪೊಟ್ಟೆಕಿರ್ಚಲ್ತೆ ವಂದುಗುಂ ಪಿರಿದುಂ ಸೌದೆ ಕವಿವ ಕಿರಿದಾದುರಿಯಂತೆವೊಲ್ (ಶ್ರೀಶಂತ. ೧೪ ೬). 'ಪೊಡೆಗಿಚ್ಚು' ಪರಾ. **ಹೊಟ್ಟೆಕಿಚ್ಚು** : ೨. (ಅಲಂ) ಅಸೂಯೆ ; ಕರುಬು ; ಮಾತ್ಸರ್ಯ : ಅವರಾಡುವ . . . ಬಯಲಾಟಗಳು ಹೊಟ್ಟೆಕಿಚ್ಚು ಹುಟ್ಟಿಸುವುವು (ಕಬ್ಬಿಹೂ. ೩); ಜೀವಜೀವನದ ಹೊಟ್ಟೆಕಿಚ್ಚು ಕಾರಿತು ವಿಷಪ್ರಸಾದ (ಅಕಳು ೯೩೯-೦೬). **ಹೊಟ್ಟೆಗಿಚ್ಚು** : ೨. ಈ ಹೊಟ್ಟೆಗಿಚ್ಚೆಗೇನು ಮದ್ದು ? (ಕೂರಿ).

**ಹೊಟ್ಟೆಕಿಚ್ಚಿನ ಮೊಟ್ಟೆಕೋಳಿ** = (ಅಲಂ) ಅತಿಯಾಗಿ ಅಸೂಯೆ ಪಡುವ ವ್ಯಕ್ತಿ; ಕರುಬುವ ವ್ಯಕ್ತಿ: ನೀನು ಹೊಟ್ಟೆಕಿಚ್ಚಿನ ಮೊಟ್ಟೆಕೋಳಿ (ಹಾಹುತ್. ೪). **ಹೊಟ್ಟೆಗಿಚ್ಚು ಪಡು, ಹೊಟ್ಟೆಕಿಚ್ಚು ಪಡು** = ಅಸೂಯೆ ಪಡು; ಕರುಬು ; ಮತ್ಸರಿಸು: ತನಗೆ ಸವತಿಯೆಂದು ಅವಳ ಮೇಲೆ ಹೊಟ್ಟೆಗಿಚ್ಚು ಪಡಲಿಲ್ಲ (ದೇಜೀಶ್. ೦೦); ನೀವೆಲ್ಲ. . .ತಮಾಷೆಯಾಗಿ ಕಾಲ ಕಳೆಯುತ್ತಾ ಇರುವುದನ್ನು ನೆನೆಮಕೊಂಡು ಹೊಟ್ಟೆಕಿಚ್ಚು ಪಡುತ್ತಿದ್ದೆ (ಚಾರಿರು. ೧೯೦). [ಪೊಟ್ಟೆ₁ + ಕಿರ್ಚು(< ಕಿಚ್ಚು)]

**ಪೊಟ್ಟೆಗವಡಿಕೆ** (ನಾ). (ಉಜ್ಜುಗಲ್ಲಾಗಿ ಬಳಸುವ ನುಣುಪಾದ) ದಪ್ಪ ಕವಡೆ : ಪೂರ್ವಾಪರದಿಗ್ಭಾಗದ ಸಮಭೂತಳಪ್ರದೇಶದೊಳ ಪೂರ್ವಶಿಲ್ಪಿಕೃತಮಪ್ಪ ಲೆಕ್ಕವಲಗೆಯಂ ಕಾಡಿಗೆಯೊಳ್ ಪು[ಘ]ಟ್ಟಿಸಿ ಪೊಟ್ಟೆಗವಡಿಕೆಯೊಳೊರಸಿದಂತೆ ಮಿಂಚೆ (ಕಾಂತಿಕ. ೯-೧೯೩ ವ).
[ಪೊಟ್ಟೆ₁ + ಕವಡಿಕೆ]

**ಪೊಟ್ಟೆಗುಡುಮ** (ನಾ). ೧. ಹೊಟ್ಟೆ ದಪ್ಪನಾಗಿರುವವನು; ಬೊಜ್ಜು ಬೆಳೆದವನು. ೨. ಹೊಟ್ಟೆಬಾಕ; ತಿಂಡಿಪೋತ: ಪಟ್ಟಿನಾಮವ ಬಳೆದು ಪಾತ್ರ ಕೈಯಲಿ ಹಿಡಿದು ಗುಟ್ಟಿನಲಿ ರಹಸ್ಯವ ಗುಜುಗುಜಿಯಿದೆ ಕಟ್ಟಿ ಕೂಗನು ಕೂಗಿ ಬಗುಳಿ ಬಾಯಾಬುವಂಥ ಪೊಟ್ಟೆಗುಡುಮ ಮೃಗಗಳೆಲ್ಲ ಶ್ರೀವೈಷ್ಣವರೆ (ಕಶಳ. ೦೨೬-೨). [ಪೊಟ್ಟೆ₁ + ಗುಡುಮ + –ಅ]

**ಪೊಟ್ಟೆಬೇನೆ**, ಹೊಟ್ಟೆಬೇನೆ (ನಾ). ಹೊಟ್ಟೆನೋವು; ಜಠರರೋಗ : ಅಸಾತೋಣಯಜನಿತಮಪ್ಪ ತಲೆಬೇನೆ ಪೊಟ್ಟೆಬೇನೆ ಶೂಲೆ . . . ಮೊದಲಾದಯ್ವತ್ತಾಕೋಟಿಯುಂ . . . ರೋಗ (ಕ್ರಾವಕಾ. ೯೯–೬). **ಹೊಟ್ಟೆಬೇನೆ** : "ಹೊಟ್ಟೆಬೇನೆಯದು ಗುದಪಾಸಮೆನಿಸಿಕ್ಕು" (ವಂಗರಾ. ೦೦೯-೩); ಹೊಟ್ಟೆಬೇನೆಗೆ :—ಅಪಿನಿ, ಅಳಲೇಕಾಯಿ, ಜಾಯಿಕಾಯಿ, ಗಜ್ಜುಗದ ತಿರುಳು, ಶುಂಠಿ . . . ಕುಟ್ಟುವುದು (ಬಿನ್ಯ೬. ೬೮) ; ರಾಘಪ್ಪನು ಹೊಟ್ಟೆಬೇನೆ ಹತ್ತಿ ಹಾಸಿಗೆ ಹಿಡಿದನು (ಗಂಹುಸಿ. ೩೦೦). [ಪೊಟ್ಟೆ₁+ಬೇನೆ]

**ಪೊಟ್ಟೆವಂತ** (ನಾ). ದಪ್ಪಹೊಟ್ಟೆಯನ್ನು ಹೊಂದಿರುವವನು : ಲಂಬೋದರ ; ಗಣಪ : ಪೊಟ್ಟೆವಂತಂ ಬೆನಕಂ (ಕಬ್ಬಾ ಸ. ೯೦೩ ಶ್ರಯೋ). [ಪೊಟ್ಟೆ₁ + – ವಂತ]

**ಪೊಟ್ಟೆವಾಯ್** (ಕ್ರಿ). ೧. ಹೊಟ್ಟೆಯು ಊದು_ಉಬ್ಬರಿಸು : ಅಂತು ಪೊಟ್ಟೆವಾಯುತ್ತಿಂದು ಸೂಲೆ ಪುಟ್ಟ ಸತ್ತು ಅಗ್ನಿಭೂತಿ ವಾಯುಭೂತಿಗಳಾದಿರ್ (ವಡ್ಡಾ ಕ. ೬–೫೬ ಡ). ೨. (ಕಣ್ಣಿನ) ರೆಪ್ಪೆಯು ಅದುರು ; ಎವೆ ಮಿಡುಕು ; ಇದು ಒಂದು ಶಕುನವೆಂಬ ನಂಬಿಕೆಯಿದೆ : ಅಗಿದಪುದೀಗಳಾಂ ಪಿಡಿದ ಕೆಂದಳಮಾಯೆಡದೋಳ್ಗೆ ಕತ್ತಾಗಳ್ ತಗುಳ್ದಪು ವೆತ್ತುಮೀ ಮಿಡುಕೆ ಮಾಣದೆ ವಾಯ್ದುದೆ ಪೊಟ್ಟೆವಾಯ್ದು ಚಕ್ಷುಗೆ ಪಿರಿದಾದುದಕ್ಕುಮೆ ವರಿಸ್ಫುರಿತಂ ವಿಪತೀನೊ ದೇವಿಯಾಕೆಗೆ ವರನಂ ಮನೋಹರನನಿಂದು ಕುಡಲ್ ಕಡುಗೂರ್ತಳಾಗಳೇ (ಅಜಿತ. ೦೦-೫೩).
[ಪೊಟ್ಟೆ₁ + ಪಾಯ್₁]

**ಪೊಟ್ಟೆಪೋಗು** 'ಪೋಟೆಹೋಗು' ನೋ.

**ಪೊಟ್ಟ** 'ಪೊಟ್ಟಳ' ನೋ.

**ಪೊಡಕರಿಸು**, ಹೊಡಕರಿಸು (ಕ್ರಿ). ೧. ಕಾಣಿಸಿಕೊಳ್ಳು; ತೋರು; ಸ್ಫುಟವಾಗು ; ಪ್ರಕಟವಾಗು : "ಮಿಗೆ ಪೊಳ್ಳುಜುಸಿತೆಂದು ಕಣ್ಣಲಿದು ದೊದಿರದೆ ಪೊಡಕರಿಸಿತಕೆ ನಾಮಮಂ" (ಕಕ್ಕ ೬೯) ; ನುಡಿಯ ಬಳ್ಳು ವಾಘನೆರ್ದೆ ತಣ್ಪನ ಸೋನೆಯನಾಂತ ಮಾಳ್ಕೆಯಿಂ ಪೊಡಕರಿಸುತ್ತ [ಪಾಠಾಂ. ಪೊಡರಿಸುವಂತೆ] ಪೆರ್ಚೆ (೧೦೯. ೨–೦೪); ಪೊಡಕರಿಪ ಗುಡಗುಣ ದುಗ್ಗಡಮೆಂತು[ಟೊ] (ಶ್ರೀಪ್ರ. IV, ೨೬೬–೨೯; 1380); ಗಗನಮಂಡಲವ ಬಗಿದು ಪೊಡಕರಿಸೆ ವೃಷಭಧ್ವಜಾನೀಕ (ಶ್ರೀಂಡಪ. ೦೯–೦೪); ರೋಷಶಿಖಿ ಪೊಣ್ಮಿ ಪೊಡಕರಿಸಿ ಪರ್ಬಿದುದನೇನೆಂಬೆನು (ಕಪಪ. ೨೦–೫೪). ೨. ಹೊರ ಹೊಮ್ಮು ; ಹೊರ ಬರು : ಪೊಸಗಾರ ಸಿಡಿಲ ಮಾಸಕ ಮನಸಕಟಿದು ಕೃತಾಂತಜಿಹ್ವೆ ಪೊಡಕರಿಸುವವೋಲ್ ಬೆಸಸು ಬೆಸಸೆಂದು ಕರಮುರ್ಬಿಸಿ ಸನ್ನಿದಮಾಯ್ತು ವಿದ್ಯೆ ರಾವಣನಿದಿರೊಳ್ (ಕಂರಾಮ. ೦೯–೦೦೫); ಶಿಶು ನಾಲಗೆಗಿತ್ತಳುವಂತೆ ರಂಗಮಂಟಪದೊಳ್ ಪೊರಳ್ದು ಪೊಡಕರಿಸಲಾಱದೆ ಕಿಂಕರ್ವಾಣ ಕೈ ಮಿಕ್ಕು . . . ಮಱುಗಿ (ಜಂಂರ. ೦೨–೬೨); ಮುನಿದೀ ಶಿಲೆಯಾನೆತ್ತಿದೊಡಾನುಂಗುಟದಿನೊತ್ತಿದೊಡೆ ಪೊಡಕರಿಸಲಾಱದೆವೊಳಱಿದಂ (ಶಾಂತೀಶ. ೦೩–೦೬ ವ); ಪೊಡಕರಿಪ ದಾರಿಯ ನಿತ್ಯ ನಿರುಕಿಸಾ ದುಃಖದಿಂ ಪರಿಪಕ್ವವಾದ (ಸಂಸಹ. ೨೩–೦೬). ೩. ನಡುಗು; ಕಂಪಿಸು : ಜಡೆಯಿಡುಕುಜಿಡೆಯಿಡೆಯೊಳಡಿಯಿಡುವ ಕಡಲ ತಡಿವಿಡಿ ದಃಡುಗಡಣದೊಡೆಯನೊಡಲೊಡಕು ನಡನಡುಗಿ ಪೊಡಕರಿಸಿ ಮಿಡುಮಿಡುಕಲು (ಕಕಕಾ.೧–೨). **ಹೊಡಕರಿಸು**: ೧. ಹಿಡಿ ಧನುವನೆಲೆ ಭೂಪ ಮಿಡುಕು ಧೃಷ್ಟದ್ಯುಮ್ನ ಸಾತ್ಯಕಿ ಹೊಡಕರಿಸು (ಕುವ್ಯಾಗ. ೩–೯೩); ಕಾಳಕೂಟದ ಕಡಲ ಕಟ್ಟೆ ಪಿತಾಳಿಸಿತೊ ಶಿವಮನಲು ಸಲೆ ಹೊಗೆವಾಲಿಗಳ ಹೊಡಕರಿಸುವಶಿಶಯವಿಕೃತವಿಗ್ರಹದ ಕಾಳಿಕೆಯ ಕುಡಿಪೆಳಗುಗಳ . . . ರಾಕ್ಷಸವರೂಥಿನಿ ಕಾಳಗಕೆ ಹೊಱವಂಟುದು (ತೊರರಾ. ೨–೦೩–೦೪); ಕೆಡೆಯೆನುತ ಕನಲಿ ಕುಶಾಗ್ರದಲಿಡಲು ಬಿದ್ದನು ಸೂತನವನಿಗೆ ಹೊಡಕರಿಸಿ ಹಾಯೆನುತ ವಿಪ್ರಸ್ತೋಮ ಗಜಬಜಿಸೆ (ಶಿಖಾಗ. ೦೦–೯೪–೨೬). ೨. ಸೂರ್ಯಾಂಶುವೆಂಬ ಕಿಚ್ಚಂ ಕಾದು ಕೆಂಗಲಿಸಿ ಚಾರು ಬೆಳಗಾಜೆ ರಪ್ಪಾಯ್ತೊ ಹೇಳೆಂಬ ವಿಸ್ತಾರದಿಂ ಕಾಳಗತ್ತಲೆಯಿಂಬಲತ ಹಚ್ಚಿ ಹೊಡಕರಿಸಿ ಮಡಲಿಱಿದುದು (ಹಕಕಾ. ೩–೬೬) ; ಹೊಗೆಯೆದ್ದು ಹೊಡಕರಿಸದೆ ಮದನಾಗ್ನಿ ಮೆಯ್ದಾಗೆವುದೆ ಮೃಗಶಾಬನೇತ್ರೆ (ಕುರಾಶಾಂ. ೨೬–೦೩೪) ; ಹತ್ತಿರಿದ್ದರು ದೂರ ಹೃದಯಗಹ್ವರದಲ್ಲಿ ಮಿಣಿ ಮಿಣಿ ಎನುವ ಪಣತಿ ನಮ್ಮ ಜೀವದ ಗೆಣತಿ ಹೊವ್ವಿ ಹೊಡಕರಿಸಿದರೆ ಹೊಸ ಬೆಳಕಿನಾಕೃತಿ (ಸಂಹು. ೬೨–೩). ೩. ಉಬ್ಬೇಜಾ ಹೊಮ್ಮಿದು ಹೊಡಕರಿಸಲಿಳಿ ವೀರರುಭಯದಲಿ (ಕೊರರಾ. ೬–೨೦–೦೦). ೪. ವ್ಯಾಪಿಸು; ಆವರಿಸು : ಹಿಂದೆನ್ನ ಹಸರೆಂದದೋಡುವ ಕತ್ತಲೆ ಹೊಡಕರಿಸುತಿರ್ದುದೆನ್ನಾಳಿಕೆಗೆ ಶಶಿಯ ಮುಂಗುಡಿ ಧಾಳಿ ಬರುತಿದೆಯಿದು ಕಂಡು ಜೀವಿಪೆ ನ್ನೊಡಲಾಸೆಯೇಕೆಂದು ಲಜ್ಜೆಯಿಂದಿಳಿವಂತೆ ಬಿದ್ದನಿನನಬುಧಿಯೊಳಗೆ (ಹಕಕಾ. ೩–೬೪) ; ಗಡಣದಂಬಿನ ಮಸೆಯ ಬೆಳಗಿನೊಳಡಸಿದಾಕ್ಷಣ ಮತ್ತೆ ನಿಮಿಷಕೆ ಹೊಡಕರಿಸಿ ಹಬ್ಬಿದುದು ಮಬ್ಬಿನ ಧಾಳಿ ದೆಸೆದೆಸೆಗೆ (ಕುವ್ಯಾದ್ರೋ. ೦೫–೨೬) ; ಮತ್ತೆ ಹೊಡಕರಿಸಿ ಕೋಪಾಗ್ನಿ ರಕ್ಕಸನ ಮೈ ಪೊತ್ತಿದುದು (ಕಂಕ. ೯೮–೦೩). ೫. ಹೊಳೆ ; ಸ್ಫುರಿಸು ; ಪ್ರಕಾಶಗೊಳ್ಳು : ಮಿಸುನಿ

ಯೋಲೆಗಳೆಸೆಯೆ ಫಳಿಫಳಿಲೆನಲಂದುಗೆ ಹೊಡಕರಿಸೆ ಹಾರವೆಡೆವಿಡದೆ ನರ್ತಿಸೆ ಕುರುಳು ಕಡುನೀಲಿಯೋರ್ವಳಿಯ್ಯಾಲನಾಡುತಿರ್ದಳು (ಲೀಲಾ. ೬-೨೪); ಮುಸುಕಿದ ಸಿಂಗಾಡಿಯಂಬುಗಳೊಳಗೆ ಕಣ್ಗೆಸೆದನು ಚಿತ್ರದಡವಿಯ ಹಸರದೊಳಗೆ ಹೊಕ್ಕು ಹೊಡಕರಿಸುವ ಸಿಂಗಸಿಸುವಿನಂತಾ ವೀರರಾವು (ಲುಚಾಸಾಂ. ೪೩-೯೮); ಲೋಚನದ ನೋಟದ ಹೊಳಹು ಹೊಡಕರಿಸೆ (ಕೃಬಣ. ೨೮-೨೬); ಗುಡುಗುಡಿಸುತ್ತ ಉಡಿಮೀಟಿಂ ಹೊಡೆದು ಹೊಡಕರಿಸುತೆ ಆಗಸದಲಿ ನೆಗೆದು (ಶಕ್ತಿ. ೬೨-೦೪). ೭. ಉರಿ; ಪ್ರಜ್ವಲಿಸು: ಕೆರಳಿ ರೋಷಾಗ್ನಿ ಹೊಡಕರಿಸೆ ಹೊಗೆ ಸುತ್ತಿ ಮುಯ್ಯಿರವು ಕಪ್ಪಾಗೆ (ಜಕಿಶ. ಶಾ. ೨೦೪). ೭. ಬೆರೆ; ಕೂಡು; ಒಂದಾಗು: "ಹೊಡಕರಿಸಿತೆನಲ್ಕೆ ಬೇಗ ಬೆರಸಿದುದಿದಕ್ಕುಂ" (ಶಾಕಿಶ. ೨೨); ಹರಹಿನಲಿ ಹೊದಜಿದ್ದು ಹರುಷದ ಹೊರಳಿಯಲಿ ಹೊಡಕರಿಸಿ ಚಿತ್ರವ ತಿರುಹಿ ಹಿಡಿದನು (ಕುಪ್ರಾ.ಶಿ. ೬-೬೯); ಹರಶರಾನಲ ತೀವ್ರಧೂಮಜ್ವಾಲೆಗಳ ರಭಸದ ಹೊರಳಿಯಲಿ ಹೊಡಕರಿಸಿ ಹಾಯೆಂದೊಡಲಿಲಿದುದು ಬಲವೆರಡು (ಶಿಭಾಗ. ೦೦-೯೧-೨೬). ೮. ಅಲುಗಾಡು; ಅಲುಗು: ನುಡಿಸಿದೊಡಿನಿಸಲಿಯದೆ ನೋಡಿ ಮರವಟ್ಟು ಹೊಡಕರಿಸದೆ ಸುಮ್ಮನಿರಲು ನಡುಗಿ ಶೋಕಿಪ ಮಡದಿಯರ ಅಂಗಳ ಜಲ ತಡತನೊಡೆದ ಮಳೆಯಯಾಯಿತು (ಅಂಚಿಶ. ೬-೯೯). ೯. ಹೊರಬೀಳು; ತಪ್ಪಿಸಿಕೊಳ್ಳು: ಶಿದ್ಧಿತಾತನ ತಪಸು ಮಾಯೆಯ ಮದ್ದಿನಲಿ ಮರುಳಾಗಿ ಮದನನ ಹೊದ್ದಿದನು ಹೊಡಕರಿಸಲಟಿಯದೆ ಬಳಕಲಾ ಮುನಿಪ (ಓರಿಣಾ. ೦-೩-೩೬). ೧೦. ಅಟ್ಟು; ಓಡಿಸು: ಪೊಡೆದು ಕೆಲವ ಹೊಡಕರಿಸಿ ಕೆಲವ ಕರ್ಚಿ ಕೊಡಹಿ ಕೆಲವಾಗಳೆಗೆ ಕೆಡಪಿತು ಭರದಿಂದ ಪಕ್ಕಿಗಳನು ಸಾಳ್ವ (ಲುಚಾಸಾಂ. ೨೬-೯೬). ೧೧. (ಗಾಳಿಯು) ಬೀಸು; ಚಲಿಸು: ತೆಂಕಣ ದಿಶಾಭಾಗದೊಳು ಗಾಳಿ ಹೊಡಕರಿಸೆ ಮನ್ಮಥಭೂಪನು ತೀವಿದು ಬಲು ಬತ್ತಳಿಕೆಗಳನಚಿಸೆ (ಜಕಿಶ. ೩-೦೪). ೧೨. ಒಡೆದುಹೋಗು; ಚೂರಾಗು: ರಕ್ತಮಳೆ ಸುರಿದು ದಳ್ಪುರಿ ದೇವಪ್ರತಿಮೆಗಳ್ ಉಕ್ಕರಿಸಿ ಬಿದ್ದು ಹೊಡಕರಿಸಿದುವು ಶಿಖರ ಪೊಂಗಳಸಗಳ್ ನೆಲಕುರುಳಿತು (ತುರಂಗ. ೨೨-೪೯).

[< ಪೊಡರ್$_1$ + – ಇಸು$_3$]

**ಪೊಡಸಾಗೆ** 'ಪೊಡ್ಡಣಿಗೆ' ನೋ.

**ಪೊಡಸಾಗೆಗೊಡು** 'ಪೊಡ್ಡಣಿಗೆಗೊಡು' ನೋ.

**ಪೊಡಪತ್ರ**, ಪೊಡಪತ್ರೆ (ನಾ). ಒಂದು ಬಗೆಯ ಔಷಧೀಯಗುಣ ವುಳ್ಳ ಮರ: ತಿಗಡೆ, ಹಿಪ್ಪಲಿ, ಬಜೆ . . . ಪೊಡಪತ್ರ, ನೀಲಿಬೇರು . . . ಇವನ್ನು ಸಮಭಾಗ ಕಷಾಯ ಮಾಡಿ ಕೊಡಲು ಭೇದಿಯಾಗುವುದು. ಜ್ವರ ಸಹ ಬಿಡುವುದು (ಸಕಪ್ಪ. ಶಾ. ೯೬೬). **ಪೊಡಪತ್ರೆ**: ಅಳಲೆಕಾಯಿ, ತಾರೆಕಾಯಿ . . . ಪೊಡಪತ್ರ, ಬ್ರಹ್ಮಿ—ಇವೆಲ್ಲವಂ ಚೂರ್ಣಿಸಿ ಸಕ್ಕರೆವೆರಸಿ ಸೇವಿಸಲು ಸ್ವರಭಂಗ ಪರಿಹರಮಕ್ಕುಂ (ಸಕಪ್ಪ. ೨೬೬). [← ತೆಲು. ಪೊಡಪತ್ರಿ]

**ಪೊಡಪತ್ರ** 'ಪೊಡವತ್ರ' ನೋ.

**ಪೊಡಪು** 'ಪೊಡರ್ಪು' ನೋ.

**ಪೊಡಮಡಿಸು** 'ಪೊಡೆಮಡಿಸು' ನೋ.

**ಪೊಡಮಡು** 'ಪೊಡವಡು$_1$' ನೋ.

**ಪೊಡಮಡುಹ** (ನಾ). ನಮಸ್ಕರಿಸುವಿಕೆ; ನಮನ: "ನತಂ ವಂದನಂ ಪೊಂಗಿ ಪೊಡಮಡುಹಂ" (ಮಂಗರಾ. ೦೩೬-೩೯).

[ಪೊಡಮಡು (<ಪೊಡೆವಡು$_2$) + – ಹ$_2$ (< – ಪ$_2$)]

**ಪೊಡಮಡುಹು** (ಕ್ರಿ). ನೆಲಕ್ಕೆ ಹೊಟ್ಟೆ ತಗುಲುವಂತೆ ಬಾಗು, ಬಗ್ಗು: ಪೊಡಮಡುಹಿ ನೆಗೆಯಲ್ಕೆ ಕಪಿಗಳು ಪಡುವ ಮೂಡಣ ದಿಕ್ಕು ಮುಟ್ಟುತ್ತಡವಿ ಗಿಡುಮರ ಕುಲನಗಂಗಳ ತೊಳಲಿಯಲಿಸುತಿರೆ (ಅರಿಶಾ. ೯-೫೨). [< ಪೊಡೆವಡು$_2$]

**ಪೊಡರ್** (ಕ್ರಿ). ೧. ಅಲ್ಲಾಡು; ಅದುರು; ನಡುಗು; ಕಂಪಿಸು: "ಪೊಡರ್–ಸ್ಫುರಣೇ (ನಡುಗು)" (ಶಮಶಾ); ನಡು ನಡುಗಲ್ಕೆ ಪುರ್ವು ಪೊಡರಲ್ಕೆ ಕುರುಳ್ ಮಿಳಿರಲ್ಕೆ . . . ತಗುಳ್ಪುದು ಕೆಂದನೀಕೆ ಕನ್ನಡಿವಳಿಂ ಪಾಡಿದೀ ನೆವದಿಂ (ಶಂಶಶಾ. ೬-೯೮); ಬಟ್ಟೆಯ ದೂಳಿದೂವೆ ಮೊದಲಾದುದು ಪೋದವೆನೆಂಬ ಮೆಯ್ಮುವಂಗೆಟ್ಟು ಪಿಪಾಸೆಯಿಂ ಪೊಡರ ಲಾರ್ತಪುದಿಲ್ಲ (ಅಜಿಪು. ೦೯೯); ಉಲಿಯೆ ಕಲಕಾಂಚಿ ಮುಡಿಯಿಂದ ಲರ್ಗೆ ಬಡನಡು ಬಳುಂಕೆ ಪೊಡರೆ ನಿತಂಬಂ ನೆಲೆವೊಲೆಗಳಲುಗೆ ಬಿಡದೇಳ್ವ ಬಿತಾಂಗಿಯ ಕೈಯನೊಯ್ಯನರಸಂ ಪಿಡಿದಂ (ಅಜಿಪು. ೦೦-೬). ೨. ಕಾಣಿಸಿಕೊಳ್ಳು; ಪ್ರಕಟವಾಗು: ನಿರಂತರಂ ಪೊಳೆವ ಬಾಳುಡಿ ಸುಯ್ವ ನವವ್ರಣಂಗಳೊಳ್ ಪೊಡರೆ ಪೊದಟ್ದುದದ್ಭುತಭಯಾನಕವಾಹವ ರಂಗಭೂಮಿಯೊಳ್ (ಪಂಪಭಾ. ೦೦-೨೯); ಪಂದಲೆಯೋಳಿದೋರಣದ ಸೀಯದರಂ ಪೊಸದೂವೆದೂವ ತೂಗುಂದಲೆ ಬಾಟ್ಟಿನಾಂ ಪೊಡರೆ ಬಳ್ಳುವ ಸಮ್ಮನ ಸೂಲವಾಲದೊಳ್ ಸಂದಣೆಯಾಗಿ ನೇಲ್ವ ಪೆಣನೊಂದಿರೆ . . . ಮೀಂಟಿದುದಾ ಶ್ಮಶಾನದೊಳ್ (ಶಾಕ್ಕಾ.ಶ. ೩೬); ಮೃಡಭಕ್ತರಾನಂದವೇಕುರಿಸುವಂತೆ . . . ಬಿಡುಬಿಡಂತಿಂತೆಂದು ಪೊಡರ್ವ ನುಡಿಗಡಣಗಳನೆಡೆವಾತದೇಂ ಷಟ್‌ಸ್ಥಲಸ್ಥಾಪನಾರ್ಥವಾ ಕಡುಮೆಯ್ಮೆವಡೆವ ಷಣ್ಮುಖನಖಿಳಶಕ್ತಿ ಬಂದೊಳಪೊಕ್ಕು ಶೋಭಿಸುತಿರೆ (ಪದ್ಮರಾ. ೯-೨೬). ೩. ಹೊಳೆ; ಪ್ರಕಾಶಿಸು; ಮಿರುಗು: ಇಡಿದಿರೆ ಗುಹಾಂಧಕಾರಂ ಪೊಡರ್ದೆಸದಿರೆ ಚಂದ್ರಕಾಂತರುಚಿ ನಗಮೊಂದೊಂದೆಡೆಯೊಳ್ ಪೊಲ್ಲೊಪ್ಪುವುದೊಂದೆಡೆಯೊಳ್ ನೆಲಸಿರ್ದ ಕಾಳಮಂ ಜೊನ್ನಮುಮಂ (ಆಕಪು. ೯-೨೦); ವಿಷಯರತಿಯೊಡನೆ ಮೆಯ್ಪುಸುಪಡಂಗೆಯುಂ ಪೊಡರದಡುಗುವ ಲೋಚನದೊಡನೆ ನಿಡುಸುಯ್ಗಳುಡುಗೆಯುಂ (ವರ್ಧಪು. ೯-೬೯ ಪ); ಪೊಡರ್ವ ಪೂರ್ಣಿಮೆಯ ಬಿಡುವೀಕ್ಷಣದೊಳಲರಂಬು ಮಡದಿಯಿಂದುದಟಿಯೊಳಿಲ ಪವಳಲತೆ . . . ತೋಱುತ್ತಿಪ್ಪುದು (ಶಾಕ್ಕಾ. ೨೯-೦೮). ೪. ಎದುರಿಸು; ಪ್ರತಿಭಟಿಸು: ಪೊಡರದೆ ಕಪ್ಪಮಿಪ ಪರಮಂಡಳೀಕರ್ ಮನೆದೀವಿ ಮಕ್ಕಳಂ ಪಡೆದಬಳಾಜನಂ . . . ವೃದ್ಧರಾಜಕಮುಮದೇನೆಸದತ್ತೊ ನಘಶರೇಂದ್ರನಾ (ಅಜಿಪು. ೨-೨೪); ಪೊಡರ್ವತ್ಕುದ್ಧತರಾಜವಂಶವನಮಂ ನಿರ್ಮೂಲಿಸಲ್ ಪೋಪಿ ನೆಂಚೊಡದಂ ಮುನ್ನಮೆ ನಿಮ್ಮ ವಿಕ್ರಮದವಾಗ್ನಿಜ್ವಾಲೆ ತಳ್ತಿರ್ದುದು (ಧರ್ಮಾಮೃ. ೩-೩). ೫. ಚಿಮ್ಮು; ಹೊಮ್ಮು: ತದ್ವ್ಯಾಮಗ್ನಿ ಶಾಟಾಸ್ತದಿಂ ಪೊಡರ್ದಸ್ರುಂಬುವಲಾತದಕ್ರಮನೆ ವ್ಯಕ್ತಾಕಾರದಿಂ ದುಣ್ಮುತಂ (ಜಗಪು. ೬-೬೯). ೬. ಹುಟ್ಟು; ಆವಿರ್ಭವಿಸು; ಉಂಟಾಗು: ಆನುಂ ಮಿಡುಕಲಣಮಟಿಯದಿರ್ದಂ ಪೊಡರದ ಗಟಿಯುವನೆ ತನ್ನ ತಂದೆಯ ಕೆಲದೊಳ್ (ಶಾರಂಪು. ೦೩೨); ಕಾಂಚೀಕ್ಷುದ್ರಘಂಟಾರವಂ ಪೊಡರುತ್ತಿರ್ಪಿನಮಿಂತು ಕಾಂತೆ ನಡೆತಂದಾ ಚಕ್ರಿಯಂ ನೋಡಿದಳ್ (ಕಾಂಶಿಶ. ೦೩-೯೯).

**ಪೊಡರ್ಕೆ** (ನಾ). ಚಲನೆ; ಸ್ಫುರಣ: ಒದವಿದ ನಿದ್ರೆ ದೂತಜನಗರ್ಜನದಿಂ ಕಿಡೆ ಹೃದ್ಗುಹಾಂತರಾಳದಿನುರುಕೋಪಸಿಂಹಮಿರದೆಟ್ದುದು ಮಿಸೆಯ ಕೆತ್ತು ಕೇಸರಂ ಕೆದಱುವ ಭಂಗಿ ಪುರ್ವಿನ ಪೊಡರ್ಕೆಯ ಮೆಯ್ಮುರಿವೋಜೆ ಕಣ್ಗಳಿಂದುದಯಿಪ ಕೆಂಪದಾಗಟಿಪ ವಕ್ತ್ರದ ಕೆಂಪೆನೆ ರಾಜಮೋರುವಾ (ಶಂರತ್ನ. ೬-೨೩). [ಪೊಡರ್ + – ಕೆ]

**ಪೊಡರ್ಪು**, ಪೊಡಪು (ನಾ). ೧. ಚಲಿಸುವಿಕೆ; ಅಲುಗಾಟ; ಕಂಪನ: ಪತಾಕೆಯೊಂದು ವಿಭ್ರಮಮನೆ ಪೋಲೆ ಪುರ್ವಿನ ಪೊಡರ್ಪೊಳಕೊಂಡುದ ವಳ್ಗಿ ಗರ್ಭಚಿಹ್ನಮೆ ಗಳ ಗರ್ಭದರ್ಭಕನ ಸೂಚಿಪ ಮುಂದಣ ರಾಜ್ಯ ಚಿಹ್ನಮಂ (ಪಂಪಶಾ. ೦-೨೦); ಇನಿಸಪ್ಪೊಡಂ ಪೊಡರ್ವನಪ್ಪುಗೆಯ್ಯದಿಟಿಯ ಪೊದಳಿದುದೆನಿಪ ಪುರ್ಬಿನ ಕುಡಿವೆರಸು ತೂಕಡನೊಳಕೊಂಡ

ಹಾಸ್ಯಮಾಂ (ಶಾಂತಿಪು. ೬೫೯). ೨. ಆಧಿಕ್ಯ : ಅತಿಶಯ : ತುಡುಗೆಯ ಮಣಿದೀಧಿತಿಗಳ ಪೊಡರ್ವು ಮೇಗೊಗೆವ ಕೊಡೆವೊಲೆಸೆದಪುದೆಂಬೀ ನುಡಿ ನೆಗಟ್ಟೆ ಪಂಚರತ್ನದ ಕೊಡೆಯಂ ಪಿಡಿದಮಾಜಿನದ ಮನದಡಿಪಿಡಿದಳ್ (ಆದಿಪು. ೬-೩) : ಕಡುಗಲಿಯಪ್ಪ ವಿಕ್ರಮಾನ ಗಂಡಿನದೊಂದು ಪೊಡರ್ವ ನೇನ ಬಣ್ಣಿಸಲಳವಲ್ತೆ (ಶಾಸನ. IX-1. ೨೬೬-೨೬; 1183) ; ಎಡೆಗುಡದು ಸಿರ್ದೆಗೆವಡೆಯೊಳ್ ಪೊಡರಿಸುವುದಾಸಿರನಿಕ್ಕುವಡೆಯೊಳ್ ಮುನ್ನೀರ್ಗಡ ಲಂದೊಡೆ ಪಡಬಾಗ್ನಿಯ ಪೊಡರ್ಪಿನಿತ್ತೆಂಬ ರಸನೆಗೊಗೆಯಾವೆ ಪುಗುಳ್ದಳ್ (ಸುಕು.ಚ. ೨-೨೦). ೩. ತಾಪ ; ಶಾಖ ; ಬಿಸುಪು : ಬಡಬಶಿಖಿಯಲ್ಲಿ ಪಬ್ಬಿವ ಪೊಡರ್ಪನೊಳಕೊಂಡು ಮೇಲೆಮೇಲ್ಪೈತರ್ಪನ್ನೊಡಲಾರಿಯನವ ಧರಿಸು (ಹರಿಶ್ಚ. ೧೩-೦೯೭). ೪. ಶಕ್ತಿ; ಪ್ರತಾಪ; ಸಾಮರ್ಥ್ಯ : ವಿಕ್ಕ ತೋಳ್ವಲದ ಪೊಡರ್ವು ಕರ್ಣ ನಿನಗುಳ್ಳನಿತೇನೆನಗುಂಟೆ (ಪಂಪಭಾ. ೧೦-೨೩); ಆ ಮಹಾರಾದ್ರಭದ್ರಾಕಾರನ ಪೊಡರ್ಪಿನಾರ್ಪಿನಳವಿಗಟ್ಟಿದ ದರ್ಪಮಂ ಪೇಟಿಸ್ಕೊಡೆ (ಪಂಪರಾ. ೯೩-೦೬) ; ಧರೆಗೆಸೆದತ್ತು ತಾರಕನ ದುರ್ಗತಿ ತಾರಕ ನೇಳ್ಗೆ ತಾರಕಾಸುರನ ಪೊಡರ್ವು (ಗಿರಿಜಾ. ೬-೧೦); ಮಾತಂಗದ ಬಲಂ, ಸಿಡಿಲ ಪೊಡರ್ವು, ಕಡಲ ಗುಣ್ಪು, ಪಡಿಗೊಳೆ ದಶರಥಕುಮಾರಂ ರಾಜ್ಯಮನಾಳು ತಿರ್ದಂ (ರಾಮಾಶ್ವ. ೬-೦೬). ೫. ಆವೇಶ ; ಉತ್ಸಾಹ; ಸ್ಫುರಣೆ : ತನ್ನ ಮನದ ಪೊಡರ್ವುಮಂ ಕೂರ್ಪುಮನುಂಟುಮಾಡಿ ನುಡಿದಂ (ಪಂಪಭಾ. ೧೦-೩೯ ವ) ; ಇದಿರ್ಗೆ ಬರೆ ಪುನ್ನಿಗಂ ಕಿಡಿಸದಿರಂ ಕವಿಗಮಕಿವಾದಿವಾಗ್ಮಿಗಳ ಕವಿತ್ವದ ಗಮಕಿತ್ವದ ವಾದಿತ್ವದ ಪೊಡರ್ವುಮಂ ದರ್ಪಮುಮಂ (ಶಾಂತಿಪು. ೧೨-೬೯) ; ಅರ್ಪುಗಳಪಿಪುದು ಹರಸೈನ್ಯಮಿಮಿ ಪರಿಯೊಳ್ ಪೊಡರ್ಪಿನಿಂದೈ ತರುತ್ತಿರ್ದುದು (ಕಂಪು. ೨೬-೧೨). ಪೊಡವು: ೪. ಸಿಡಿಲ ಪೊಡವು ಘುಡು ಘುಡಿಸುತ ಮಿಂಚಿನ ಕುಡುವು ಮೋಡದಿ ಹೊಳೆಹೊಳೆದು ಬಿಡದೆ ಸುರಿವ ಮಳೆಯಲಿ ತರುಮೂಲದಿ ತಡೆದಿರ್ದನಾ ಮುನಿರಾಜ (ಅಪಂಚ. ೯-೩೦) ; ಸುಖ ದುಃಖವಾಯ್ತೇ, ಪೊಡವು ಪುಡಿಯಾಯ್ತೇ, ಪಾಡೆಲ್ಲ ಗೋಳಾಟ ವಾಯ್ತೇ! (ಶಾರಸಿ. ೦೨-೨೦೬). [ಪೊಡರ್ + –ಪು₂]

ಪೊಡರ್ವುಗಿಡು ‘ಪೊಡರ್ವುಗೆಡು’ ನೋ.

ಪೊಡರ್ವುಗುಂದಿಸು (ಕ್ರಿ). ಬಲವನ್ನು ಕುಂದಿಸು; ಶೌರ್ಯಹೀನನನ್ನಾಗಿ ಮಾಡು : ಮನುಜಸುತಂ ಪನ್ನಗಶರದಿನಿಸುವುದುಂ ಜನಕಸುತನನದು ಪೆಣೆದಹಿಬಂಧನದಿಂ ಪೊಡರ್ವುಗುಂದಿಸೆ (ಪಂರಾಮಾ. ೦೩-೦೯೩). [ಪೊಡರ್ವು+ಕುಂದಿಸು]

ಪೊಡರ್ವುಗುಂದು (ಕ್ರಿ). ಬಲಗುಂದು ; ಶಕ್ತಿಯನ್ನು ಕಳೆದುಕೊಳ್ಳು : ಕುತ್ತದೊಳ್ ಪೊರಳುತ್ತಿರ್ಪವರನ್ನಲಿಂಗಿಗಳ ರೂಪಂ ಕಂಡು ತದ್ಬಾಧೆ ಯುಬ್ಬರದಿಂ ಪಿಂಗಿ ಪೊಡರ್ವುಗುಂದದೆ ಮಹಾಸಂತೋಷದಿಂದಿರ್ದರೇ (ರಾರ್ಮ. ೯-೯೬). [ಪೊಡರ್ವು+ಕುಂದು₁]

ಪೊಡರ್ವುಗಿಡಿಸು (ಕ್ರಿ). = ಪೊಡರ್ವುಗುಂದಿಸು : ಈ ಶರವ ಇಂದೆಸೆ ದವನ ಪೊಡರ್[ದ]ವುಗಿಡಿಸಿ ನಾವು ತಂದೊಪ್ಪಿಸುವೆವು ನಿನ್ನಡಿಗೆ (ಗೋಪುರಿ. ೦೦-೬೬). [ಪೊಡರ್ವು+ಕೆಡಿಸು₁]

ಪೊಡರ್ವುಗೆಡು, ಪೊಡರ್ವುಗಿಡು (ಕ್ರಿ). =ಪೊಡರ್ವುಗುಂದು : ವಿಗುವೆ ವೆಂಬ ಮಣ್ಣಾಳಕಲ್ಲಿಲ್ಲದಟಂದೆ ಬಯಲ್ಗೆವನ್ನು ಮೆಯ್ವೋಟುವೆವೆಂಬ ವಿಕ್ರಮಿ ಗಳಿಲ್ಲ ಕುನುಂಗಿ ಕಳಲ್ದಳಲ್ದು ಕಾಯ್ಪಾಪು ಪೊಡರ್ವುಗೆಟ್ಟು ಬೆಸಕೆಯ್ವ ರಲ್ಲದೆ ಮಿಕ್ಕ ತನ್ನ ಕೈಯ್ದೇಜಿದ ತೇಜದಿಂ ವಿಜಯಪಾಣ್ಡ್ಯಮಹೀಪನಿದೇ ಪ್ರತಾಪಿಯೋ (ಎಶಿ. XI. ದಾವಣ. ೩೨-೦೦ , 1171). ಪೊಡರ್ವುಗಿಡು : ಈ ಸಕಲಧರೆಯನುಗ್ರಭುಜಾಸಿಯೊಳಳವಡಿಸಿ ನಹುಷನಗ್ರಸುತಂ ಸಂವಾಸಂ ರಿಪುದಾರಕರಂ ದಾಸೀರಕರನೆ ಪೊಡರ್ವುಗಿಡೆ ನಡೆಯಿಸಿದಂ (ಪಂರಾಮಾ. ೨-೬೦); ಕೃಪ ಕೃತವರ್ಮರಿರ್ವರುಮನಂತಿಮಜಾಳದಿನೆಯ್ದೆ ಪೂಟಿ ಸಗ್ಗಪಿತ ಮನರ್ ಪೊಡರ್ವುಗಿಡೆ[ಪಾಠಾಂ.ಡುಗಿ]ನಿಲ್ವುದುಂ ( ಶಿರಿಚ. ೦೨-೯೦ ) ; ಪೊಡರ್ವುಗಿಡೆ ದೈನ್ಯದಿಂ ನಿಜಪದಾಬ್ಜದೊಳ್ಬಿಟ್ಟು ಬಾಯ್ಬಿಡುತ್ತುಮಿರೆ ನೋಡಿ ಪೇಡಿಯನದೆಂತು ಕೊಂದಪ್ಪೆನೆಂದಡಂಗಿಸಿದನಾತ್ಮಕೋಪಮಂ (ಪರ್ಶ್ವ. ೨-೫೩). [ಪೊಡರ್ವು + ಕೆಡು₁]

ಪೊಡರ್ವುಗೆಯ್ (ಕ್ರಿ). ಬಲವನ್ನು ತೋರಿಸು; ಶಕ್ತಿಯನ್ನು ಪ್ರದರ್ಶಿಸು; ಪೌರುಷವನ್ನು ಪ್ರಕಟಿಸು : ಕೊಲೆ ಪುಸಿ ಪರವಧು ಸಂಗಂ ಕಳವೆಂಬಿವು ಬೇಡ ಬೇಡ ಬೇಡೆಂಬೀ ನಿರ್ವಾಣವೀತರಾಗನಾಜ್ಞೆ ಯನಾಟಿದಣ್ಣ ಪೊಡರ್ವುಗೆಯ್ವ ಗಂಡರುಮೊಳರೇ (ರತ್ನಾಮ್ಮ. ೯-೯೩): ಮತ್ತನನ್ನನೊಳನನ್ನಪರಾಕ್ರಮನೊಳ್ ಪೊಡರ್ವುಗೆಯ್ದಿರಿಡುವೊಡ್ಡಿ ನಿತ್ತರಿಪ ಕಾದುವ ಮೆಯ್ಗಲಿಯಾರ್ದ್ರರಿತ್ರಿಯೊಳ್ (ಶಾಸನ. XX. ೬೯-೨೩; 1112); ಬಿಸಿಲೊಳೆ ಬಿಬ್ಬರಂಬರಿದ ಮಸ್ತಕಶಂಕ್ತಿಕೆಯಿಂದೆ ಮುತ್ತು ಮುಂದೆಸೆ ಕವಿತಂದೊಡೆ . . . ಪೊಡರ್ವುಗೆಯ್ದು ಪೂರಿಸುವಳಿಪಿಂದೆ ಪುಷ್ಕರವನತ್ತಿದುದೆಂದು ನಭಕ್ಕದೊಂದಿಭಂ (ಚಂದ್ರಪ್ರ. ೯-೬೩)
[ಪೊಡರ್ವು + ಕೆಯ್₁]

ಪೊಡರ್ವುಡುಗು (ಕ್ರಿ). ಶಕ್ತಿಯು ಕುಂದಿ ಹೋಗು; ಪರಾಕ್ರಮವು ಅಳಿ; ಬಲಹೀನವಾಗು : ಪೊಡರ್ವುಡುಗದೆ ಬಿಟ್ಟಿರ್ದ ನೆರೆಯಿಂ ಕಲವುನ್ನದ ಗಂಧಸಿಂಧುರಂ (ಪಂಪಭಾ. ೦೦-೯೯); ಯಕ್ಷರ್ ಭಗ್ನದಂಷ್ಟ್ರಹರ್ಯಕ್ಷರನಿಸಿ ಪೊಡರ್ವುಡುಗೆಯುಂ (ಜಗ. ೧೩-೬೬ ವ): ಪೆಟನಾಡೆಟ್ಟಿಯಂ ನಿನ್ನ ಕೈಯೊಳ್ ಬನ್ನಂಬಡೆಮು ಕಿನ್ನನಾಗೆಯವನ ಮೆಯ್ಗಂದಿದ ಚೆನ್ನವಾಂಗಿನಂತೆ ಪೊಡರ್ವುಡುಗಿದ ಜಾದಿಯಂ ನಗುವಂದದಿನರಲ್ದ ಸುರಹೊನ್ನೆಗಳೊಳಂ (ಕಂಪಾ. ೯೪). [ಪೊಡರ್ವು + ಉಡುಗು₁]

ಪೊಡರ್ವುದೋಟು ‘ಪೊಡರ್ವುದೋಱು’ ನೋ.

ಪೊಡರ್ವುದೋಱು, ಪೊಡರ್ವುದೋಟು (ಕ್ರಿ). ಶಕ್ತಿಯನ್ನು ತೋರಿಸು; ಪರಾಕ್ರಮವನ್ನು ಪ್ರದರ್ಶಿಸು; ಬಲವನ್ನು ತೋರು : ಭುಜಂಗಕಾಂಡಕ್ಕೆ ಖಗೇಶಕಾಂಡಮನಧೋಕ್ಷಜನೆಚ್ಚು ಪೊಡರ್ವುದೋಱಿದಂ (ಜಗ. ೦೬-೨೯). ಪೊಡರ್ವುದೋಟು : ಅನಗಿದಱದಿರ್ದೊಡಂ ಚಲದಿ ನೆನ್ನೊಳ್ ಪೊಂಗಿ ಪೊಡರ್ವುದೋರ್ವಂ (ಆದಿಪು. ೦೨-೩೩); ಬಲ ನಾರಾಯಣರಂ ನಿರೀಕ್ಷಿಸಿ ದಶಗ್ರೀವಂ ರಣಕ್ಷೋಣಿಯೊಳ್ಪಲೆಯುಂ ತೂಗಿ ಪೊಡರ್ವುದೋರ್ವೆನುತುಂ ಬಂದೊಡ್ಡಿ (ಪಂರಾಮಾ. ೦೩-೩೨).
[ಪೊಡರ್ವು + ತೋಱು]

ಪೊಡರ್ವುವೆಱು (ಕ್ರಿ). ಅತಿಶಯವನ್ನು ಪಡೆ; ಆಧಿಕ್ಯವನ್ನು ಹೊಂದು : ಪಂವ ಪಡಂಗು ಬಲ್ದೆರೆಯ ಸಾಲ ಬೆಡಂಗು . . . ಪೊಡರ್ವುವೆತ್ತು ಬಗೆಗೊಂಡುದು ಪೂರ್ಣಗುಣಂ ಮಹಾರ್ಣವಂ (ಶಂಕ. ೦-೩೯).
[ಪೊಡರ್ವು + ಪೆಱು₁]

ಪೊಡವಿಮಾಸೆ (ನಾ). ನಡುಗುವ ಮಾಸೆ; ಅದುರುವ ಮೀಸೆ : ಕೆಂಗಣ್ಣ ಕೆದರ್ದಲೆಯ ತೆರವಾಯ ಪೊಡವಿಮಾಸೆ ತುಂಗತರನಾಸಿಕಂ ಹೆದ್ದಂಷ್ಟ್ರ . . . ದುಃಶ್ಶಾಸಸಂಕಲಿತಸಂಗಡಿಗರೆಮನಾಳ್ಗೆಂತಮಮ ಮ್ಯೆದೋರಿತವನಿಯುಂ ಗದ್ಗದಿಪೊಲು (ಪಂಶಾಂ. ೦-೦೩-೯೬).
[ಪೊಡರ್ + ಮಾಸೆ]

ಪೊಡವಡಿಕೆ (ನಾ). ಅಡ್ಡಬೀಳುವುದು; ನಮಸ್ಕಾರ; ನಮನ :“ನಮಸ್ಕಾ, ವಂದನಾ–ಈ ೨ ಪೊಡವಡಿಕೆ” (ಶಬ್ದಮ. ೦೨೬-೯೦) ; ಕಾದಂಬರೀದೇವಿ ಪರಿಜನಂಬೆರಸು ನಿಮಗೆ ತನ್ನ ಪೊಡವಡಿಕೆಯುಂ ಬಿನ್ನಪಿಸಲ್ವೇಟ್ಟಪ್ಪದೆ ಲೆಂಬುದುಂ (ಕಾದಂಬ. ೨೬೦); ದೇವಿ ನಿಮ್ಮ ಸವತಿ ಜಯಂಧರನರಸಿ ವಿಶಾಳನೇತ್ರೆಯೆಂಬುದುಮಂತಾದೊಡೆನ್ನ ಪೊಡವಡಿಕೆಯಂ ಪಾರುತ್ತಿರೆ ಲಾರ್ಪೆಂದಱದು (ಜಿನಾಕ್ಷ. ೬-೯೬ ವ).
[ಪೊಡವಡು (< ಪೊಡೆವಡು₂) + –ಇಕೆ]

ಪೊಡವಡಿಸು ‘ಪೊಡೆವಡಿಸು’ ನೋ.

**ಪೊಡವಡು** 'ಪೊಡೆವಡ್ಮು' ನೋ.

**ಪೊಡವಿ** 'ಪೃಥುವಿ' ನೋ.

**ಪೊಡವಿಕಂಟಕ** (ನಾ). ಭೂಮಿಂಗೆ ಮುಳ್ಳಿನಂತಿರುವವನು ; ಲೋಕಕ್ಕೆ ತೊಂದರೆಯನ್ನು ಕೊಡುವವನು : ಪೊಡವಿಕಂಟಕರೆನಿಪ ನೃಪಕುಲ ದಡವಿಯನು . . . ತಡೆಗಡಿದನು (ಕಿಶಿಗ. ೨-೩-೦೦). [ಪೊಡವಿ (< ಪೃಥುವಿ)+ಕಂಟಕ]

**ಪೊಡವಿಜ** (ನಾ). ಭೂಮಿಯ ಮಗ ; ಮಂಗಳ : "ಮಂಗಳನ ಪೆಸರು ... ಪೊಡವಿಜನೆಂದು" (ಕ್ಮಹಂ. ೦೮). [ಪೊಡವಿ (< ಪೃಥುವಿ) + –ಜ]

**ಪೊಡವಿಜೆ** (ನಾ). ಭೂಮಿಯ ಮಗಳು ; ಸೀತೆ : ಪೊಡವಿಜೆಯ ಬಿಡೆನೆಂಬ ಚಿತ್ತದ ಕಡುಹು ಖರೆಯವೆ ಎನಗೆ ನೇಮವ ಕೊಡಿಸು (ಕೌಶಿರಾ. ೦೯-೬). [< ಸಂ. ಪೃಥ್ವೀಜಾ]

**ಪೊಡವಿಪ, ಪುಡವಿಪ** (ನಾ). ಭೂಮಿಯ ಒಡೆಯ ; ಅರಸ ; ರಾಜ : ಪೊಡವಿಪಂಗೀ ಹದನನಱುಪಲು ಘುಡುಘುಡಿಸುತಹುಡಹುದು ಭಸ್ಮನು ಕಡುಹುಗೊಡ್ಡಾಟಗಳಂ ಕುಪರಿಗಳನಾಡಿದನು (೨೫ಪ. ೨೯-೪೯) : ಕಡುಮುನದ ಕಪಿಬಲದ ಧಾಳಿಗೆ ನಡುಗಿ ಕಂಡುದು ಪೂರ್ವದಿಕ್ಕಿನ ಪೊಡವಿಪರು ಸಾಮಂತ ಮನ್ನೆಯ ಮಂಡಲೀಶ್ವರರು (ತೊರರಾ. ೪-೪-೨೨) ; ಪೊಡವಿಪ ಕೇಳು ನಿಮ್ಮೊಡನೆ ಮಚ್ಚರಿಸುವ ಕಡುಗಲಿಗಳನೆಲ್ಲವರನು ಪಿಡಿಯಾಳಾಗಿ ಹಿಡಿದು ನಿಮ್ಮಡಿ[ಗೊಪ್ಪಿಪ] ಸಡಗರವೆನಗಿರುತಿರಲಿ (ಕೃಕೃರಾಂ. ೦೯-೦೫೩). **ಪುಡವಿಪ** : ಕಡಲು ಕದಡಿತು ಭೂರಿಭೇರಿ ವಾದ್ಯಂಗಳಿಂ ಪು[ಶಾಂ. ಪೊ]ಡವಿಪರ ಮಣಿಮಕುಟಮಣಿಯೊಳಗೆ ತರಣಿ ಶಶಿಯಾಡಗಿದುವು (ಕಸಂಗ. ೪೩-೨೩). [ಪೊಡವಿ (< ಪೃಥುವಿ)+–ಪ್ಪ]

**ಪೊಡವಿಪತಿ, ಪಿಟ್ಟುವಿಪತಿ** (ನಾ). = ಪೊಡವಿಪ : ಪೊಡವಿಪತಿ ಗೊರವನೆನೆ ವೇಟ್ಟಡೆಯದುದುವದೆಕರಿಸಿ ಕಬ್ಬಿಗವರ್ಮಾಜ್ಞನೆಯುಂ (ಕವಿರಾ. ೦-೯೯) ; ಪೊಡವಿಪತಿ ಕೂರ್ತರ್ . . . ಅನಿರ್ದೆಡೆಗೆಟ್ಟಿಂದಂ (ರಕಳು. ೦೨-೯೩) ; ಪೊಡವಿಪತಿ ಕೇಳ್ಬಳಿಕ ಕಣ್ಕಂಡದಂತಾಗೆ ಉಡಿಹುಬ್ಬು ಧೂಮುಲತೆಯೆಂಬೊಲಿರೆ (ಕೃಶುರಾ. ೦೩-೬೬). **ಪಿಟ್ಟುವಿಪತಿ** : ಶ್ರೀಮತ್ ಪಿಟ್ಟುವಿಪತಿಯ ಮಗ ನನ್ನಿಯ ಗಂಗನಣ್ಣಿಯೆಂಬ ಗಣ್ಣ ಬೀರನೊಟವ್ಪಂ ತಾಗಿ ಶಾನ್ತರನೆಱಿಯರಟ್ಟಿದೊಡೆ (ಎಕ. ೫, ಗೋ೦೮೦. ೪-೯ ; ಸು. ೯೭೦). [ಪೊಡವಿ (< ಪೃಥುವಿ)+ಪತಿ]

**ಪೊಡವಿಯಾಣ್ಮ** (ನಾ). = ಪೊಡವಿಪ : ಬಿಜ್ಜಣಗಗಳ ಪಿಡಿದೂಳಿಗಗ್ಯವ ಬಿಂಕಗಾತಿಯಬಾ ಪೊಡವಿಯಾಣ್ಮನ ಪೊದ್ದಿಹರು (ಹಂಂ. ೦-೦೬). [ಪೊಡವಿ (< ಪೃಥುವಿ) + ಅಣ್ಮ (< ಅಳ್ಮ)]

**ಪೊಡವಿಯೆಱೆಯ** (ನಾ). = ಪೊಡವಿಪ : ಓವರ ಪೊಡವಿಯೆಱೆಯ ನಣುಗಿನ ಸುಕುಮಾರಂ ಸಡಗರದಿಂ ಸಲೆ ಸಂಪದದೊಳ್ ದಿನಮಂ ನೂಂಕುತ್ತಿಹನು (ಶಶುಕಾ. ೨-೬೬). [ಪೊಡವಿ (< ಪೃಥುವಿ)+ಎಱೆಯ]

**ಪೊಡವಿಮನೆ** (ನಾ). ಭೂಮಿಯಲ್ಲಿನ ಮನೆ ; ಹುತ್ತ.

**ಪೊಡವಿಮನೆಯರ್** = ಹುತ್ತದಲ್ಲಿ ವಾಸಿಸುವವರು ; ಹಾವುಗಳು; ನಾಗಗಳು : ಪೊಡವಿಮನೆಯರ ದಂಡು ಖಗಪತಿಯ ಮುತ್ತಿದೊಲು (ಶಪಪೋ. ೦೨-೯೯). [ಪೊಡವಿ (< ಪೃಥುವಿ) + ಮನೆ]

**ಪೊಡವಿವೆಣ್** (ನಾ). ಭೂಮಿಯ ಮೇಲಿನ ಹೆಣ್ಣು ; ಮಾನವಸ್ತ್ರೀ : ಪೊಡವಿವೆಂಗಳ ಬಿಟ್ಟು ಸಗ್ಗವೆಂಗಳಿಗೊಲ್ದು ಜಡಬ್ರಹ್ಮಚಾರಿಯ ಅವನು (ಕಕಕ. ೬-೦೦೬). [ಪೊಡವಿ (< ಪೃಥುವಿ)+ಪೆಣ್]

**ಪೊಡವಿಸು** 'ಪೊಡೆಯಿಸು' ನೋ.

**ಪೊಡವಿಸುತೆ** (ನಾ). = ಪೊಡವಿಜೆ : ಉಡುಗೊಱೆಯನುಚಿತದಲಿ ರಾಘವ ಕೊಡಿಸುತಿರ್ದನುಪೊಬ್ಬರುಳಿಯದೆ ಪೊಡವಿಸುತೆಯೊಲಿದಂತೆ ತಾನೊಲಿದಂತೆ ಮನ್ನಿಸಿದ (ಕೌಶಿರಾ. ೪೯-೩೯). [ಪೊಡವಿ (< ಪೃಥುವಿ) + ಸುತೆ]

**ಪೊಡವೀಶ** (ನಾ). = ಪೊಡವಿಪ : ಪೊಡವೀಶರ್ಭುವನೈಕವಲ್ಲಭನುತ ಪಾದಾಂಭೋಜರತ್ಯೂರ್ಜಿತರ್ ದೃಢಚಿತ್ತರ್ (ರನರಾಕು. ೦-೨೯); ಪೊಡವೀಶ ಬೊಟ್ಟುದೋಱುವ ಪೊಡರ್ವದೇಕಜ್ಜುಮಂತುಮಿದಿರಪ್ಪಡ ಮೆನ್ನೆಡಗೆಯ್ಯ ಕಿಱುಕುಣಿಕೆಯ ಮುಡಿಯೊತ್ತಿರೆ ನೋಟಪ್ಪೆಮೆಂದು ನೀಡಿದ ಬೆರಲಂ (ಶಂಹಕ. ೦೩-೨೦); ಬಡವನೊಳ್ಳಿಯ ಮಾತ ನುಡಿದರಲ್ಲೆಂಬುವರು ಪೊಡವೀಶ ಪೊಳ್ಳುಗೆಡೆದರೂ ಕೈವಾರಿ ಕಡುನಗುತಲಿಹರು (ಸರ್ವಜ್ಞ. ೦೨೬೬). [ಪೊಡವಿ (< ಪೃಥುವಿ) + ಈಶ]

**ಪೊಡವು** (ನಾ). ಗುರುತು; ಚಿಹ್ನೆ; ಸುಳಿವು : ಶಿರಿಯೊಳಿಹ ಕಲ್ಯಾಣ ಪುರವನಾಳುವ ಬಸವ ಧೊರೆಯ ಮಂದಿರ ಪೊಕ್ಕು ಚರಮೂರ್ತಿಯಂತೆ ಪೊಡವು ಶಿಕ್ಕದ ತೆರದೊಳಡರಿಯವರೊಳು ನೀನು ಮ್ಯಡನ ರೂಪಿಗಳೊಳಗೆ ಕಡುವಿನೋದದೊಳು (ದುಕೋಕ. ೬೬). [?./ತೆಲು. ಪೊತ]

**ಪೊಡಸೆಂಡು** 'ಪೊಡೆಸೆಂಡು' ನೋ.

**ಪೊಡಿಪ್ಪಾಡಿ** (ನಾ). ಒಬ್ಬಾತನ ಹೆಸರು : ಶ್ರೀಪೊಡಿಪ್ಪಾಡಿಯರ್ಗ್ಗೆ ಯುಮ್ದೊಂಬು ಕಟನಿ ಕೊಟ್ಟರ್ (ಮೈಶಂ. ೦೯೨೬, ೦೦೦-೦೦ ; ೫೩ಶು ೩೪). [ ? ]

**ಪೊಡಿಮಡೆ ?** (?) : ಹಾರವನ್ ಸೋರಡೆಯ ಕದಂಬರ ತೈಲಪನ್ ಇಱುದು ಪೊಡಿಮಡೆ ಉರ್ಬ್ಬಲ್ ಆ ತುಱು ಪರಿಯೆ ಬೊಪದಳಾಱ ಕಾದಿ ಸುರಲೋಕಪ್ರಾಪ್ತನ್ ಆದಡೆ (ಮೈಶಂ. ೦೯೨೩, ೬೨-೦೨ ; ೯). [ ? ]

**ಪೊಡೆ₁, ಹೊಡೆ₁** (ಕ್ರಿ). ೧. ಏಟುಕೊಡು ; ಪೆಟ್ಟುಹಾಕು : "ಪೊಡೆ-ಪ್ರಹರಣೇ, ಕುಕ್ಷಾಚ (ಹೊಟ್ಟೆ)" (ಕಧಾಂ); ಪೊಡೆವ ಬೀರರ ಪಂಕಿಗೆ ಗೊಂಟಣನೆಗೆಳ್ ಕೋಡುವಿನಂ ಕಡಂಗಿ ಪರಿತಂದುವು ತೋರ್ಕೆಯ ತೇರ್ಗಳೋಳಿಯಿಂ (ಕಶ್ಯಾ. ೨೦೩) ; ವೇತ್ರದಿಂ ಪೊಡೆದೆರೆಲೆ ಮಗನೆ ಯೇಳೇಳೆನಲ್ಕೆ (ಶರ್ಮ್ಯಾ. ೨-೩೨) ; ಪೊಡೆದರೇ ಕಾಮಧೇನುವ ಕಲ್ಪವೃಕ್ಷಮಂ ಕಡಿದರೇ ಸೌಂದರ್ಯರಸದ ಕೆಱೆಯಂ ಮಾಣಾದೊಡೆದರೇ (ಕಂಕು. ೩೩-೨೯). ೨. ಹರೆ, ನಗಾರಿ, ತಮಟೆ ಮೊದಲಾದ ಚರ್ಮ ವಾದ್ಯಗಳನ್ನು ಬಾರಿಸು—ಬಾಜಿಸು : ಪೊಡೆ ಪಱೆಯನೆಂದು ಪಱೆಯಂ ಪೊಯ್ಸು (ತಶ್ಯಾರಾ. ೦೯೦-೦೩) ; ಪೊಡೆವ ಪಟಹ ಢಕ್ಕೆಗಳ ಬೊಬ್ಬಿಱುವ . . . ಪೇಚರಿಯರ ತುಮುಳರವದೊಳ್ ತೊಡರ್ದು (ಕರ್ಣಶೇ. ೩-೦೬ ವ); ಪೊಡೆವ ಢಕ್ಕೆಯ ಪಿಡಿದ ಬಿರುದಿನ ಕಾಳೆಯ ಬಲ್ಲುಲಿಯ ಸಡಗರವೆಲ್ಲಾ ದೆಸೆಗಳು ಕಿವುಡುವಡಿಸೆ (ಕಶ್ಯಾ. ೨೫೦) ; ಪೊಡೆ ಭೇರಿಯನಡರಾನೆಯ ನಡೆಯಿಡು ಕದನಕ್ಕೆ ಬಲವ ನೊತ್ತಂಬ ರವಂ ಸಡಗರದಿಂದೆಡೆವಿಡಿದುಗ್ಗಡವಾದುದು (ಹರ್ಷಾಕ. ೩-೩೦). ೩. (ಸಿಡಿಲು ಮೊದಲಾದುವುಗಳು ಪೆಟ್ಟಾಗುವಂತೆ) ತಾಗು ; ಬಡಿ ; ಅಪ್ಪಳಿಸು : ನೆಗಟ್ಟಿಯ ಗಾಂಡಿವಮಂ ತಗುಳ್ದು ಜೇವೊಡೆಯ ಸಿಡಿಲ್ ಸಿಡಿಲ್ದು ಪೊಡೆವಂತೆವೊಲಾಯ್ತು (ಶಂಕಶಾ. ೬-೦೦೦) ; ಪೊಡೆದತ್ತುರ್ವರೆಯಂ ಯುಗಾಂತರದ ಸಿಡಿಲ್ (ಕಾರಂಪು. ೩೬೩); ದುರಿತಂ ಮತ್ತದ್ವಿಪಂ ಮರೂರ್ಖತೆ ಪೊಡೆವ ಸಿಡಿಲ್ ದುರ್ಜನಂ ದುರ್ಮದಂ ತಸ್ಕರರೆಂಬೀ ಕಂಟಕಸ್ತೋಮದ ನಡುವೊಡಲಿರ್ಪಂವಮೇಂ ಸೋಜಿಗಂ (ರಶ್ಮಾಕ. ೨೯). ೪. (ಗ್ರಹ ಮೊದಲಾದುವುಗಳು) ಮೈಮೇಲೆ ಬರು ; ಆವರಿಸು ; ಮೆಟ್ಟಿಕೊಳ್ಳು : ಪೊಡೆದುದು ಗರವಶಿಕೋಪದೆ ಪಿಡಿದುದು ಪುಲಿ ಗಾಳಿ ಸೋಂಕಿದತ್ತು (ಕಾರಂಪು. ೩೬೩); ಕವಿಗಳ್ ಕಾವ್ಯಂಗಳಂ ಮಾಡುವಾಗ್ರಹಮಂ ಮಾಡಿದೊಡಾ ಗ್ರಹಂ ಪೊಡೆದವೊಲ್ ಬೆಂಡಾಗಿ ಬೇಳಾಗರೇ (ಅನಂಪು. ೦-೩೯). ೫. (ಗಾಡಿ, ಪ್ರಾಣಿ, ಗಾಣ ಮೊದಲಾದುವುಗಳನ್ನು) ಮುಂದಕ್ಕೆ ಸಾಗಿಸು ; ಚಲಿಸುವಂತೆ ಮಾಡು; ಅಟ್ಟು; ನಡೆಸು : ಗಾಣವಂ ಪೊಡೆ (ಲೀಪವ. ೩-೩೨). ೬. ಮೂಡು; ಹುಟ್ಟು; ಕಾಣಿಸಿಕೊಳ್ಳು :

ಗಡಿಗೆ ಮಡಿಕೆಯ ಕೊಂಡು ಅಡಿಗೆಯ ವೇಳೆಯೊಳು ಬಿಡದೆ ಮಳೆಮೋಡ ಪೊಡೆಯಲ್ಕೆ ಈರ್ವರಿಗೆ ತಡಬಡಲಾಯ್ತು (ತರ್ಕಾ. ೮). ೭. ಸೋಲಿಸಂ; ಮಿಗಿಲಾಗು; ಮೀರು : "ಅಲಗಣಸಾದುದು ಮಿಕ್ಕಾದುದು ಗೆಲೆವಂದುದು ಮಳ್ಕಿಸಿದುದುಮೋರಂಡಲವುಂಡತೆದುದು ಪಳಂಚಿದುದು ತಾನಟ್ಟಿದುದಂ ಪೊಡೆದುದ್ದೆದ ವಿಜಿತುದೆಂದುಂ" (ಕಶಿಕಂ. ೦೩೭). ೮. ಇಲ್ಲದಂತೆ ಮಾಡು; ನಿವಾರಿಸು; ಕಳೆ : "ಕೊರ್ಬು ತೆನೆ ತಾಡನ ಬಸಿಱು ನಿವಾರಿಪುದೆಂಬವಱೊಳು ಪೊಡೆ" (ಶಬ್ದಮಂ. ೯೦). ೯. (ಆಲಂ) ತಿನ್ನು; ಭಕ್ಷಿಸು : ಕಡೆಗಣ್ಣೊಳೆ ರಕ್ಕಸನಂ ನಡೆ ನೋಡಿ ಕೊಲಲ್ಕೆ ಸತ್ತ್ವಮಪ್ಪಂತಿರೆ ಮುಂ ಪೊಡೆವಂ ಕೂಟಂ ಬಟ್ಟೆಯಂ ಪೊಡೆವಂ ರಕ್ಕಸನನೆಂದು ಸಾಹಸ ಭೀಮಂ . . . ಸಮಯ ತುತ್ತುವುದುಂ ಕಂಡು (ಶಂತಭಾ. ೭-೨೯). ೧೦. [ಗಣಿತ] ಗುಣಾಕಾರ ಮಾಡು ; ಗುಣಿಸು : ಪೊಡೆ ಪೊಡವಿಸು . . . ಗುಣಿಯಿಸೆಂಬುದು ನಿರತಂ (ಕೃಕಕಾ. ೦೦-೦೦). **ಹೊಡೆ₁** : ೧. ತಿರ್ರನೆ ತಿಗುರಿ ನೆಲದೊಳು ಹೊಡೆವ ಸಮಯಕೆ ಕಂಡು ಪಾರ್ವತಿ ಬಿಡುಬಿಡೆಲೆ ಪವಮಾನನಂದನ ಈತ ಶಿವನು ಕಣಾ (ಸಂಕಕ. ೦೭.೩೭) ; ಕದೆದರೆ ತಡೆದೊದ್ದರೊದ್ದೆ ಆಕೆಯೊಳಟ್ಟು ಹೊಡೆದರೆ ಹೊಡೆದು ದೊಕ್ಕರಿಸಿ ಕಿಡಿದರೆ ಕಿಡಿದುಗುರ್ಗಳೊಳೊತ್ತಿ ಭೀಕರವಡೆದು ಹೊಯ್ದಾಡಿದುವೆರಡು (ಮೋಹತ. ೩೯-೨೮) ; ತಱಿಯಿಱಿ ಹೊಡೆ ಕಾಹಿನವರನೆಂಬಬ್ಬರ ಮಱಿದುದು ಚೌದೆಸೆಯೊಳಗೆ (ಕಂತಿಶ. ೦೯-೬) ; ನಮ್ಮ ದೇಶದಲ್ಲಿ ಎಷ್ಟೋ ಜನ ಯಜಮಾನರು ತಮ್ಮ ಕೈಕೆಳಗಿನವರನ್ನು ಹೊಡೆಯುತ್ತಾರೆ (ಋಜುಬಾಯ.೯-೭೯). ೨. ಸಿಡಿಲ ಕುಡುಹುಗಳಿಂದ ಕಮಲಜ ಹೊಡೆಯಲ ಬುಜಭಮಾಂಡ ಭೇರಿಯ ಕಡುದನಿಗಳೆನಿಸೊಡಱಿದವು ನಿಸ್ಸಾಳಕೋಟಿಗಳು (ಕುಮಾರರ್ರಾ. ೦-೯೭); ಹೊಡೆದುದಮರರ ಭೇರಿ (ಕೂರೆರಾ ೧-೦೦-೦೯); ಆನೆಯ ಮೇಲೆ ಹೊಡೆವ ಡಮಾಮಿಗಳಬ್ಬರ ಗಗನವ ತುಡುಕಿತು (ಕಂವಿಪ. ೦೦-೨೩). ೩. ಸಿಡಿಲು ಹೊಡೆವಡೆ ಹಿಡಿದ ಕೊಡೆ ಕಾವುದೇ (ಜಶಾ. ೨-೩೦); ಉರಿ ಹೊಡೆದ ಕೆಂದಾವರೆಯವೊಲ್ ಕರುಕು ವಡೆದುದು ಮುಖ (ಕುಮಾ.ಕ. ೦೭-೦೩); ಧಗೆ ಹೊಡೆದಳ್ಕೆ ಹೊಯ್ಮುತ ಬಿಸಿಲಿಂಗೆ ನಾಲಗೆ ನೀರು ತಟಗುಟ್ಟಿ ಸುರಿಯೆ . . . ನಾಯಿಗಳಡಸಿದು ವೆಡಬಲದೆ(ಮೋಹತ. ೦೯-೧೮). ೪. ಕಳವಳಸುವ ಕಪಿಯ ಭೂತ ಹೊಡೆದು ಚೇಳ್ಒಱಿ ಘಾಳಿಯೊಳು ನಿಂದು ಧೂಳಿಯ ಹೊಯ್ಯುತ್ತಿದೆ (ಅದವ. ೦೩-೩೨). ೫. ಹಾದರಿಯ ನೆಳಲ್ಗೆ ಹರಿಣಂಗಳಂ ಹೊಡೆಯೆಂಬ ಕೆಲಸದ ನೆವದಿಂ ರತಿಪುಂಗಳೆ ಬಂದ ಕೆಳದಿಯರೆಲ್ಲರುಂ ಮೆಲ್ಲಮೆಲ್ಲನೆ ಕಳುಪಿ (ಕಂಚಿಕ. ೦೯-೩೯); ಹೊಡೆದನೊಬ್ಬನು ಸೂರ್ಯರಥವನು (ಸಂಕಕ. ೩-೯೦). ೬. ಎಡೆಯುಲೇ ಭಕ್ಷ್ಯಾದಿಗಳ ಬಱಿ ಹಡಗೆಯುಂಳಿದವು ಕೂಳೊರ್ಥವ ಹೊಡೆದು ಸುಱಿದನು ಹಾಲುಂತುಪ್ಪದ ಹರವಿಯೋಜೆಯಲಿ (ಕುಮಾ.ಕ. ೦೦-೩೦); ತುಡುಗುಣಿಯು ಗುಂಡನ ಬಡತನವ ಬಲ್ಲಳೆ ಕಡನ ತಂದಿಕ್ಕಿ ಕುಡಿಸಿ ತುಪ್ಪವ ಬೆರಸಿ ಹೊಡೆದು ಕುಳ್ಳಿಹಳು (ಸರ್ವಜ್ಞ. ೦೯೩೬). ೧೧. ಕಡಿ; ಕತ್ತರಿಸು : ತಲೆಯಂ ಹೊಡೆದ ಕೊಡಲಿಯಿಂ (೨ಶಾಕ. ರೇ. ೧೧೯-೦೭); ಕಡುಹಿನಲಿ ಸೈಂಧವನ ತಲೆಯನು ಹೊಡೆದು ನಿನ್ನಯ ಕಾಲ ಬಳಿಯಲಿ ಕೆಡಹುವನು (ಕುಮಾರರ್ರಾ. ೯-೩೩); ಅಖಿಲದ್ವೀಪಪತಿಗಳ ತಲೆಗಳನು ಹೊಡೆವಲ್ಲಿ ತನ್ನಗ್ಗಳಿಯ ಭೃತ್ಯರನಿರಿಸಿ ಬಂದನು(ಕೂರೆರಾ. ೦-೯-೩೭). ೧೨. (ಬಾಣ ಮೊದಲಾದುವನ್ನು) ಬಿಡು; ಪ್ರಯೋಗಿಸು; ಎಸೆ : ಕೂರ್ಗಣೆಯ ಗಾಯವ ತಿನ್ನು ಹೋಗೆಂದು ಹೊಡೆದನಂಬುಗಳ (ಮೋಹತ. ೩೯-೭). ೧೩. (ವೇಗದಿಂದ ಗಾಳಿ, ಮಳೆ ಮುಂತಾದುವು) ಬೀಸಂ; ಚಲಿಸು : ಹೊಡೆವ ಬಿಱುಗಾಳಿಯಲಿ ಮುಗಿಲೊಡ್ಡೊಡೆದವೊಲು (ಕುಮಾರರ್ರಾ. ೦-೭೯). ೧೪. ತಜ್ಜು; ಆಸ್ಫಾಲನ ಮಾಡು : ಮದ ಮುಖನಡಬಲನ ನೋಡಿದರೆ ರಕ್ಕಸಕೋಟಿ ಜೀಯೆನುತ ಸಿಡಿಲ ಸೆಱಿ ಬಿಟ್ಟಂತೆ ಭುಜವನು ಹೊಡೆದು ಮುಂಚಿತು (ಕುಮಾರರ್ರಾ. ೦೩-೯೩). ೧೫. ಲಪಟಾಯಿಸಂ; ಕದಿ; ಅಪಹರಿಸು : ಅಂಗಡಿಯಿಂದ ಉತ್ಪನ್ನವಾಗುವ ಹಣದ ಬಹುಭಾಗವನ್ನು ಆದಂಸಾಹೇಬ ಹೊಡೆಯುತ್ತಿದ್ದ (ತಿಸುಕ. ೨೯). ☞'ಹೊಡೆ' ಪದವು ಇತರ ಅನೇಕ ನಾಮಪದಗಳೊಂದಿಗೆ ಸೇರಿ ಬೇರೆ ಬೇರೆ ಅರ್ಥಗಳಲ್ಲಿ ಸಮಾಸವಾಗುತ್ತವೆ. ಉದಾ : ಊಟ ಹೊಡೆ, ದುಡ್ಡು ಹೊಡೆ, ಬಣ್ಣ ಹೊಡೆ, ಹರಟೆಹೊಡೆ— ಇತ್ಯಾದಿ.

**ಪೊಡೆಪೊಡೆ, ಹೊಡೆಹೊಡೆ** (ದ್ವಿರುಕ್ತಿ) : ಬಡಿಬಡಿ ತಿವಿತಿವಿ ಪೊಡೆ ಪೊಡೆ. . . ಎಂದು ನಾನಾಪ್ರಕಾರದಿಂ ನಾರಕರ್ದಂಡಿಸುವರ್ (ರವೋರ್ನಾ. ೬-೦೯೩) ; ಮುಟ್ಟೆ ಹೊಡೆಹೊಡೆ ನೀಳ್ದ ಪುಷ್ಪಮಾಲೆಗಳಿಂದೆ (ಶಂಚಿರ. ೦೩-೯೯). **ಹೊಡೆದಾಟ** = ಕಾದಾಟ; ಜಗಳ : ಸ್ವದೇಶಗಳಲ್ಲಿ ವ್ಯಾಜ್ಯ, ಹೊಡೆದಾಟ ಆಗುತ್ತಿದ್ದರೂ, ಸಂಘದವರು ಅಪ್ಪಣೆ ಮಾಡಿರುವಂತೆ. . . ಕೆಲವು ಮಾತುಗಳನ್ನು ಹೇಳುತ್ತೇನೆ (ರಾಜುಕ. ೯೬). **ಹೊಡೆದಾಡು** = ೧. ಕಾದಾಡು; ಹೋರಾಡು : ತರ್ಕಶಾಸ್ತ್ರದೊಳೊಡ್ಡಿ ಕಗರು ತಗರಿನಂತೆ ಮಾರ್ಕೊಂಡು ಹೊಡೆದಾಡಬಹುದು (ಶರಶ. ೨-೯೦) ; ಜೊಂಡುಹುಲ್ಲು ಬೆಳೆದಿತ್ತು. ಅದನ್ನು ಕಿತ್ತುಕೊಂಡು ಹೊಡೆದಾಡಿದರು (ಶಿಕಿಕಂ. II, ೬). ೨. ಶ್ರಮಪಡು : ಅದೆಲ್ಲ ಎನ್ನದೆಂದು ಹೊಡೆದಾಡಿ ಬೇಸತ್ತೆನಲ್ಲಾ! (ಕಂತಕಾ. ೩). **ಹೊಡೆದು ಕಾಣು** = ಎದ್ದು ತೋರು; ಸ್ಪಷ್ಟವಾಗಿ ಕಾಣು : ಈ ವಿಚಾರದಲ್ಲೂ ಕೇರಳದ ವೇಷಗಳಿಗೂ ನಮ್ಮ ವೇಷಗಳಿಗೂ ಬೇಕಷ್ಟು ಅಂತರ ಹೊಡೆದು ಕಾಣುತ್ತದೆ (ಯಕ್ಷಗಾ. ೦೩೮). **ಹೊಡೆದುಕೊಳ್ಳು** = ಕದಿ; ಲಪಟಾಯಿಸು : ನನ್ನ ಪರಿಶ್ರಮದಿಂದ ಗಳಿಸಿದ್ದ ಹಿಂಡನ್ನು ನನ್ನ ಅಲಕ್ಷ್ಯದಿಂದ, ಮೋಸಮಾಡಿ ನೀನು ಹೊಡೆದುಕೊಂಡಿದ್ದಿ (ಶಂಗಾಹ. ೩೨).

[ದೇ. ⁑ ತಮಿ. ಪುಟೈ ; ತುಳು. ಪೊಡೆ, ಪುಡೆ ; ಕೊಡ. ಪೊಡ ; ತೆಲು. ಪೊಡುಚು]

**ಪೊಡೆ₂, ಹೊಡೆ₂** (ನಾ). ಏಟು ; ಪೆಟ್ಟು ; ಹೊಡೆತ : 'ಪೊಡೆವಡು₁' ಪರಾ. **ಹೊಡೆ₂** : ಪತಿ ಬಿಱಿಸಿನಲಿ ಹೊಯ್ದು ಹೊಡೆಗಳು ಸತಿಯ ಮೇಲಣಾಮಾತ್ರದನಿತುಂ ತಾಗವು (ರಶಕ. ೩೨-೯); ಬಿಸಿಲ ಹೊಡೆಯಿಂದ ಕಂದದೆ ದೋಸವದದಿ ಸೊಗಯಿಸುವ ಸಕ್ಕರೆಗಳೆಳನೀರ ಕುಯಿದಿಳುಪಿ (ಸೂಕಶಾ. ೨-೩೦); ಚಬುಕಿನ ಹೊಡೆಗಳಱಿಯದ ರಾವುತರುಗಳ ಮಾಡದ ಸನ್ನೆಗೆ ಸುಳಿವ ದಿವ್ಯಾಶ್ವಂಗಳೊಪ್ಪಿದುವು (ಶಿವ್ಯ.ಅ. ೬-೯೨). [<ಪೊಡೆ₁]

**ಪೊಡೆ₃, ಹೊಡೆ₃** (ನಾ). ೧. ಹೊಟ್ಟೆ ; ಉದರ : ಒಡಲು : "ಪೊಡೆ__ಪ್ರಹರಣೇ, ಕುಕ್ಷೌಚ (ಹೊಟ್ಟೆ)" (ಕರುಣಾ) ; ಸತ್ತಿರ್ದನಡ್ಡಾಹನಂ ಕಂಡದಱ ಪೊಡೆಯಂ ಡಾಣೆಯಿಂ ಪೊಯ್ಯಲ್ಕೆ (ಶಂಕಕಂ. ೦೯.೦೩) : ಪೊಡೆಯೊಳ್ ತುಂಬಿರೆ ಪಂಕ ಮೇಲೆ ತೊಳೆಯಲ್ ತಾಂ ಶುದ್ಧನೇನಪ್ಪನೆ (ಸೋಬಾಂಕ. ೯೭) ; ಉದರದೇಶಮಂ ಪೊಡೆಯೆಂಬರ್ (ಕೈಜಾ. ೨-೯). ೨. ಬಸಿರು ; ಗರ್ಭ : ನಾಭಿ ಗುಣ್ಪಾಯ್ತು ಪೊಡೆ ಪೊಣ್ಮಿದುದು (ಶಠ್ಯರಾ. ೯-೨೯) ; ಪೊಡೆಯೊಳಗಿಹ ಬಾಲಕ ಮಹಾಬಲೋಕಕ್ಕೆ ಸಡೆಯ ನೆಂಬುದ ಜಗಜನಕ ಬಡದೆ ಪೇಳುವವೊಲು ಮಡದಿಯ ತನುಕಾಂತಿ ಮಡು ವಿಡುತಿಹುದು (ಶಂಕಶ. ೯-೧೦); ಬೆಳೆದುದು ಪೊಡೆಯುಂ ಜಘನಾಚಳಮುಂ ಕರ್ಪಿಡಿದುದಳಕಮುಂ ಚೂಚುಕಮುಂ (ರಾಕಪೀ. ೯-೩೮). ೩. ತೆನೆಯ ಮೊದಲಿನ ಸ್ಥಿತಿ ; ಗಬ್ಬ : "ಕೊರ್ಬು ತೆನೆ ತಾಡನ ಬಸಿಱು ನಿವಾರಿಪು ದೆಂಬವಱೊಳ್ ಪೊಡೆಯುದು" (ಶಬ್ದಮಂ. ೯೦) ; ಸಸಿಯಂತೆ ಪೊಡೆಯಂತೆ ಪಾಲ್ದೆನೆಯಂತೆ (ರವೋರ್ನಾ. ೦೩-೨೯) ; ಪೊಡೆಯೆಂಬುದು ಬೆಳೆಗೆಯ್ಯೊಳ್ (ಶಬ್ದಾ. ೨೫). ೪. ಬಿಲ್ಲಿನ ಹಗ್ಗವು ಕೈಗೆ ತಗುಲದಂತೆ ತೊಡುವ ರಕ್ಷಾಕವಚ ; ಗೋಧೆ : ಹೊಡಱ ಝಲ್ಲಿಗಳಡಾಯುಧ ಕೆಯ್ಯ ಪೊಡೆ ಸರಳ ಹೊಡೆಗಳಂ ತತ್ತಸ್ಥಳಂಗಳೊಳ್ ಕಟ್ಟಿ (ಶಂಶ್ಮ. ೯೬-೯೯).

ತಾಳಿಗೆ ಬತ್ತಿ ನೆತ್ತಿ ಹೊತ್ತಿ ಕಣ್ಣೊಳ್ ನೆತ್ತರುಚ್ಚು ವಾಯೆ (ಗಂಳ. ೯-೨೭ ವ). ೬. ಉಂಟಾಗು ; ಒದಗು ; ಪ್ರಾಪ್ತವಾಗು : ಅತ್ತಲಾ ದಮಯಂತಿ ನಳನೊಳು ಚಿತ್ತವಿಟ್ಟಳು ನೃಪಗೆ ವಿರಹವು ಹೊತ್ತಿತಾಕೆಯ ಮೇಲೆ ಯಿರ್ವರಿಗಾಯ್ತು ಸಂತಾಪ (ನಳ. ೨-೪೯) ; ಹೃದಯಗುಹೆಯಲ್ಲಿ ಹಿಗ್ಗು ಹೊತ್ತಿಹುದು ಅಗ್ನಿಸತ್ವದಂತೆ (ಅರಳು. ೦೬೩-೨) ; ಧ್ಯಾನಸುಷ್ಟಿಯಿಂ ಜ್ಞಾನ ವೆದ್ದಿತೋ ಧಾಳಿಗಾನಂದ ಹೊತ್ತಿತೋ (ಗೋಳಾಯಿ. ೬೩-೨೨). ೭. ಆರಂಭವಾಗು ; ಮೊದಲಾಗು : ಮತ್ತೆ ಕರ್ಣನ ಭೀಮನಾಹವ ಹೊತ್ತಿರುದು (ಕುಮ್ಯಾ. ೦೬-೨೯). ೮. ಉಗ್ರವಾಗು ; ಪ್ರಚಂಡವಾಗು : ಒಳಗೆ ಹೊ[ಪಾಠಾಂ. ಯೊ]ತ್ತುವ ಧಗೆಯ ಹೊಜಗಣ ತಳಿತ ಬವಿಶ್ವಿನ ನಗೆಯ ನೃಪಮಂಡಲದ ವಹೋಳಿಯನೇನನೆಂಬೆನು (ಕುವ್ಯಾ. ೦೬-೯೭). ೯. (ಆಲಂ) ಉದ್ವೇಗಗೊಳ್ಳು ; ಉದ್ವಿಗ್ನವಾಗು : ದುಗುಡವ ಹಿಡಿದ ರಾಯನ ಕೆತ್ತ ಮುಖವನು ಕಂಡು ಭಟರೆದೆ ಹೊತ್ತಿದವು ಹೊಗೆದೋಱದವು ಮೋಱೆಗಳು ಪಟುಭಟರ (ಕುವ್ಯಾಕ್ರೃ. ೦೩-೩). ೧೦. ಸಂಕಟಪಡು; ನೋಯು : ಮಾಡಿದ ಭೃತ್ಯರಪರಾಧಕ್ಕೆ ಚಿಂತಿಸಿ ಸುಯ್ಯು ತನ್ನೊಳಗೆ ಹೊತ್ತುವೆದೆಯುಲಿ ರವಿತನಯನಳಲುತ್ತ ನುಡಿದನು ದೂತರಿಗೆ (ಶಿಕಾಗ. ೬-೩-೨೦). ೧೧. ಸಂಕಟಪಡಿಸು; ನೋಯಿಸು : ಭಾಷೆ ಸಲ್ಲದೆ ಹೋಯಿ ತೆನ್ನಯ ವಾಸಿ ವರ್ಧಿಸಿ ಹೊತ್ತುತಿದೆ ಕೈಲಾಸದವರಿದ ಕೇಳಿ ನಗುವಂತಾಯಿತೇ ಎನಗೆ (ಶ್ರಕುಂ. ೬-೬೪). [ದೇ.$_{3}$ ತಮಿ. ತುಳು. ಪೊತ್ತು]

**ಪೊತ್ತು$_{3}$** 'ಪೊಱು' ಪರಾ.

**ಪೊತ್ತು$_{3}$, ಹೊತ್ತು$_{4}$** (ನಾ). ೧. ಹತ್ತಿಕೊಂಡಿರುವಿಕೆ ; ಉರಿಯುವಿಕೆ ; ಜ್ವಲನ: (?). ೨. ಸೀದು ಹೋದುದು ; ಕರಿಕಾದುದು ; ಸೀದು ತಳಹಿಡಿದ ಅನ್ನ ಮುಂತಾದುದು : "ಪೊತ್ತು—ಅಗ್ನಿ ಪಟೂಕರಣೇ, ಅತಿಪಕ್ವಾನ್ನೇ ಚ (ಸೀದ ಅನ್ನ)" (ಕಮುರಾ); "ಇಂಗಳವ ಪಟುವಾಟ್ಟಲ್ಲಿಯುತಿಪಕ್ವದೊಳು ಪೊತ್ತು" (ಕಪ್ರಮಂ. ೯೬). **ಹೊತ್ತು$_{4}$** : ೨. ದಗ್ಧಿಕೆ = ಸುಟ್ಟ ಅನ್ನ, ಹೊತ್ತು (ಗಂಗಾಶು. ೦೬೨). [< ಪೊತ್ತು$_{1}$]

**ಪೊತ್ತು$_{4}$** 'ಪೊಟ್ಟು' ನೋ.

**ಪೊತ್ತುಂಗೊಱಡು** (ನಾ). ಉರಿಯುತ್ತಿರುವ ಮರದ ತುಂಡು ; ಉರಿಗೊರಡು ; ಕೊಳ್ಳಿ : ಉಕಾರಾಂತದೊಳ್ ಗಕಾರಂ ಪರಮಾದುದರ್ಕೆ —ಎತ್ತುಂಗೋಲ್, ಕುತ್ತುಂಗಱ್, ಪೊತ್ತುಂಗೊಱಡು (ಕಶಬ್ದ. ೦೬೦ ಕ್ರ ಯೋ). [ಪೊತ್ತು$_{1}$ + ಕೊಱಡು (<ಕೊಱಂಡು)]

**ಪೊತ್ತುಗಳೆ** 'ಪೊಟ್ಟುಗಳೆ' ನೋ.

**ಪೊತ್ತುಗೆ** (ನಾ). ೧. ಹತ್ತಿಕೊಳ್ಳುವಿಕೆ; ಉರಿಯುವಿಕೆ; ಪುಟಗೊಳ್ಳುವಿಕೆ. ೨. ಬೆಂಕಿ; ಜ್ವಾಲೆ ; ಉರಿ : ವಿಕ್ಕು ಸೂಸುವ ತೊಱಗಿಡಿಗಳ ಕಣಾಳಿಗಳ ಕೌಂಡುವ ಪೊತ್ತುಗೆಗಳ . . . ಮೊಗೆವ ವರ್ಗಿಚ್ಚುಗಳ ವೆಂಕೆ ಮೇಲಿಕ್ಕಿದುದು ಹಂಸಧ್ವಜನ ಸೇನೆ ಬೆಂದು ಬೇಗುದಿಗೊಂಡುದಾಕ್ಷಣದೊಳು (ಕೃಬಾಳ. ೦೩-೦೨). [ಪೊತ್ತು$_{1}$ + —ಗೆ]

**ಪೊತ್ತುಪೋಕ, ಹೊತ್ತುಹೋಕ** (ನಾ). (ವ್ಯರ್ಥವಾಗಿ) ಕಾಲ ಕಳೆಯುವವನು; ಕಾಲಹರಣ ಮಾಡುವವನು : ದ್ಯೂತದುರ್ವ್ಯಸನಿಗಳೆನಿಪ್ಪ ಪೊತ್ತುಪೋಕರುಗಳೊಡನಾಡಿ ತನ್ನಯ ಲಿಂಗಪೂಜೆ ಲಿಂಗ ಧ್ಯಾನದಾ ಗೊತ್ತನಱಿಯದ . . . ಭಂಗಿಯು ತಿಂದಪೋಲಿರ್ಪಗೆತ್ತಣದು ಲಿಂಗನಿಷ್ಠೆ (ಸಿದ್ಧೇಶ. ೨೨-೬೬). **ಹೊತ್ತುಹೋಕ** : ವೇದವ ಪಠಿಸುವಲ್ಲಿ ಶಾಸ್ತ್ರವನೋದುವಲ್ಲಿ . . . ಪಗುಡಿ ಪರಿಹಾಸಕರ ಅರ್ತಿಕಾಱರ ಹೊತ್ತುಹೋಕನಿಗಾಗಿ ಘಟ್ಟುವರ ಕೂಡಲುಂಟೆ (ಅಂಕವ.ಕ. ೩೮೯-೯೨); ಅಸತ್ಯದಲ್ಲಿ ನಡೆದು ವಿಪ್ರರು ನಾವು ಘನವೆಂದು ಹೋರುವ ಹೊತ್ತುಹೋಕರ ಮಾತೇತಕ್ಕೆ (ಸರ್ವಜ್ಞ. ೦೦೩-೩೩೯); ಬಱಿದೆ ಹೊತ್ತುಹೋಕರೊಳಾಡದಿರು (ಸದ್ಗುರು. ೨-೦೩). [ಪೊತ್ತು$_{4}$ (< ಪೊಟ್ಟು) + ಪೋಕ]

**ಪೊತ್ತುವೆಳಗು** (ನಾ). ಪ್ರಾತಃಕಾಲದ ಬೆಳಕು ; ಬೆಳಗಿನ ಹೊಳಪು : ಕೆತ್ತ ಬಲ್ಗತ್ತಲೆಗೆ ತರಣಿ ಮುಂಗಾಣದಿರೆ ಪೊತ್ತುವೆಳಗಂ ಬೇಱೆ ತೋರ್ವರಾರ್ (ಕೃಬಾಳ. ೨-೦೬). [ಪೊತ್ತು$_{4}$ (< ಪೊಟ್ಟು) + ಬೆಳಗು$_{2}$]

**ಪೊತ್ತೆ** (ನಾ). ಕುಚ್ಚು; ಗೊಂಚಲು; ಗುಚ್ಛ: ಮರದಲ್ಲಿ ಪೊತ್ತೆ ಪೊತ್ತೆಯಾಗಿ ಹಿಡಿದ ಕಾಯಿಗಳೊಳಗಿಂದ ಒಂದು ಕಾಯನ್ನು ತೆಗೆದು ತಿನ್ನುತ್ತಿದ್ದಂತೆ ಅದರ ಹುಳಿರಸಕ್ಕೆ ಮೈಮೇಲೆ ಮುಳ್ಳು ನಿಂತವು (ಮೂರುರಾ. ೨೨೩); ಅಂಗಡಿಯ ಹುಡುಗ ಬಸ್ತ್ರಾಂವ ಇವರಿಂದ ಕೀಲಿಕೈ ಪೊತ್ತೆಯನ್ನು ತೆಗೆದುಕೊಂಡು ಬಾಗಿಲು ತೆರೆಯುತ್ತ (ಕುರುಡಾ. ೨೩೯).
[ದೇ.$_{3}$ ತಮಿ. ಪೊತ್ತೈ = ದೊಡ್ಡದು]

**ಪೊತ್ತೆಮಿಸೆ** (ನಾ): ಕುಚ್ಚು ಕುಚ್ಚಾಗಿರುವ ಮೀಸೆ ; ಹೊದೆಮೀಸೆ : ಮೋರೆಗೆ ಇಷ್ಟುದ್ದ ಕಪ್ಪು ಪೊತ್ತೆ—ಮೀಸೆಗಳು ; ಕಪ್ಪು ಎದೆಯ ಮೇಲೆ ಕಪ್ಪು ರೋಮ (ಹೊಸಕ. ೦೬೦). [ಪೊತ್ತೆ + ಮೀಸೆ]

**ಪೊತ್ಥ** 'ಪೊತ್ತು$_{3}$' ನೋ.

**ಪೊದಕುಳಿ, ಹೊದಕುಳ, ಹೊದಕುಳಿ** (ನಾ). ಅಳಲು ; ದುಃಖ ; ನೋವು : 'ಪೊವಕುಳಿಗೊಳ್' ಪರಾ. **ಹೊದಕುಳ** : ಇದಕ್ಕೆ ಪರಿಹಾರವನು ನೀ ಮಾಡಿದರೆ ನಾನಿಹೆನಲ್ಲದಿರ್ದೊಡೆ ಹೊದಕುಳದಿ ನಲುಗುತ್ತಲಿರಬೇಕನಿತು ನೀವಿದ್ದು (ಹರಿಶ್ಚ. ೦-೯೩). **ಹೊದಕುಳಿ** : "ಹೊದಕುಳಿಯೆನೆ ಸಂತಾಪಂ" (ಶಾರದ. ೨೯); ಆ ಚದುರರ್ಗೆ . . . ಮುಕ್ತಿಯಲ್ಲದೆ ಭವದ ಸಂಕಟದ ಹೊದಕುಳಿಯುವಿಲ್ಲೆಂಬುದಕ್ಕಿದೇ ಸಾಕ್ಷಿಯಾಯ್ತು (ಸಮ್ಯಕ್. ೦೦-೫೫).

**ಪೊದಕುಳಿಗೊಳ್, ಹೊದಕುಳಿಗೊಳ್, ಹೊವಕುಳಿಗೊಳು** (ಕ್ರಿ). ದುಃಖಪಡು ; ಶೋಕಗೊಳ್ಳು ; ನೋವನ್ನು ಹೊಂದು : ಪಿರಿದಾಗೆ ಪುಣ್ಯದ ಪೊಱೆಯುದನೆತ್ತುವೊತರಿಂದಾಗಿ ಪೊದಕುಳಿಗೊಳ್ವ ಪರಿಯೊಳು ಸಾಷ್ಟಾಂಗವೆಱಗಿ (ಶಾಗಸ. ೦೩-೯೫); ಈ ವನದೊಳಿನ್ನು ಪುಣ್ಯಾಶ್ರಮಂ ಗೋಚರಿಪುದೇ . . . ಹೇಳೆಂದು ಸೀತೆ ಪೊದಕುಳಿಗೊಂಡಳು (ಕೃಬಾಳ. ೦೯-೦೨). **ಹೊದಕುಳಿಗೊಳ್** : ಆಶಾಪಾಶದಿಂದ ತೊಳಲಿತ್ತಯ್ಯ ಎನ್ನ ಕಾಯವು ಆಶೆಯಿಂದ ಹೊದಕುಳಿಗೊಂಡಿತ್ತಯ್ಯ ಎನ್ನ ಮನವು (ಶಶಾ. I, ೨೬೩-೦೭); ತೊಲತೊಲಗು ತರುವಲಿಗೆ ರಣವಿದು ಸುಲಭವೇ ಲೋಕೈಕವೀರರು ಹಲಬರಿದಱೊಳು ಹೊಕ್ಕು ಹೊದಕುಳಿಗೊಂಡು ಹೋವರಲೆ (ಕುವ್ಯಾ. ೪-೦೨) ; ಪಾಂಡವನ ಸೇನೆ ಅಟ್ಟಿ ಸುಡುವನಲಧೂಮಜ್ವಾಲೆಗೊಡನೆ ಗೋಳಿಟ್ಟು ಹೊದಕುಳಿಗೊಂಡು ಹೊರಳುತಿರಲು (ಕೃಬಾಳ. ೮-೪೦) ; ಸರ್ವದೇವರುಗಳಂತೆ ಉತ್ಪತ್ತಿ ಸ್ಥಿತಿ ಪ್ರಳಯಂಗಳೆಂಬ ಕಷ್ಟಬಂಧನಂಗಳಲ್ಲಿ ಸಿಲ್ಕಿ ಹೊದಕುಳಿಗೊಂಬನೆ ಶಿವನು (ಅಂಕಶೀ. ೦೦೬-೬೨). **ಹೊದಕುಳಿಗೊಳು** : ಇಳೆಯ ಮೇಲಾವ ವಾದಿಗಳು ಹದಿಳವೇಳೆಂದೆತ್ತಲಾಖದೆ ಹೊದಕುಳಿಗೊಳುತ ನೋಡುತ್ತಿರ್ದಹರು (ಶಸಿ. ೩೩-೬೭) ; ದುಗುಡವ ಹೇಱ ಹೊದಕುಳಿಗೊಳುತಲಿರ್ದುದು ಹಸ್ತಿನಾನಗರ (ಕುವ್ಯಾ. ೮-೩) ; ಶುನನಂತೆ ಮನೆಮನೆಗೆ ತಿರುಗಿ ದೈನ್ಯಂಬಟ್ಟು . . . ಹೊದಕುಳಿಗೊಳುತ್ತ (ಶಕ್ತಿ. ೨೮-೪).
[ಪೊದಕುಳಿ + ಕೊಳ್$_{1}$]

**ಪೊದಕೆ$_{1}$, ಪೊದಟಿಕೆ$_{2}$, ಪೊದಿಕೆ, ಹೊದಕೆ$_{1}$, ಹೊದಿಕೆ$_{1}$, ಹೊದ್ದಿಕೆ$_{1}$** (ನಾ). ೧. ಮುಚ್ಚಲು ಬಳಸುವ ವಸ್ತು ; ಮುಸುಕು ; ಆಚ್ಛಾದನೆ : ಪಲವು ಪೊದಕೆಗಳ್ ಬಗಿದಿರ್ಪುದವಸನ್ ಮುಡಿಯಿಂದಮಾಡಿವರಂ (ಧರ್ಮಶ್ರ. ೬-೯೯). ೨. ಹೊದೆಯುವ ವಸ್ತ್ರ, —ಬಟ್ಟೆ ; ಅಂಗವಸ್ತ್ರ, ಸೆರಗು ಮುಂತಾದ ಮೇಲುಹೊದಿಕೆ : ಚಂದಿತ ಪೀಠಿಯ ಚಿಮ್ಮುರಿ ಮುಂಗಯ್ಯ ಮುಂದಣ ಪೊದಕೆಯ ಸೆರಗು ಅಂದವಾಗಿರೆ ಕರ್ನಾಟದರಸುಗಳು ಬಂದು ಕಂಡರು ಮಾತಂಗಿಯನು (ಕುಂದನಾಂ. ೯೦-೯೩); ತರದೆ ಕೊಂಬಿನ ಲಾಳಿಯಂ ಮುಟ್ಟಿ

ಸದೆ ರುಚಿರತರಮಾದ ಪೊದಕೆಯಂ ನೆಲ್ಸಿಕೊಳ್ವುದೆ ನಿರಂತರದೋರ್ಪ ತ್ತೊಂದನೆಯ ಶೀಲ (ಧಾಕೋಕ. ೨-೬೦). ೩. (ಮನೆ, ಗುಡಿಸಲು ಮುಂತಾದುವುಗಳ) ಛಾವಣಿ; ಮೇಲ್ಛಾವಣಿ: ಮೂಳೆಯ ಕಂಭ ವಿಲ್ಲಿ . . . ತಗುಳ್ದೆಳೆದಮಾಪ್ಪ ತೋಲ್ ಪೊದಕೆ ಮಾಂಸಮ ಕೀರ್ಗಳಮೋಧ್ಯ ಪೂರ್ಣ ದೇಹಾಲಯಂ (ಶಬಸಂ. ೧೩೦-೨೨); ಬಾಲಸತ್ಪಲ್ಲವದ ಪೊದಕೆ ಯಿಂದಿಕ್ಕುದಂಡುಂಗಳಿಂ ಕಣ್ಗೊಳಿಸಂ ನಾನಾಲತಾಂತಪ್ರಸರಸತಯುತಂಗಳ್ ಪ್ರಪಾಮಂಟಪಂಗಳ್ (ಧಾಶಕೇ. ೨-೨೦); ಪಸುರೆಲೆಯ ಸಟ್ಟವನೆ, ಸಳೆಗೊಂಬಿನ ಕೇರ್, ಪಣ್ಣೆಲೆಯ ಪೊದಕೆ . . . ಅಲಪೊರ್ಪಿಂಪವ ಮೆಲ್ಪಟ್ಟು ಚೆಲ್ವಾಗೆ ಕಣ್ಗಂ ಮನಕಮಿಂಬಾದ ಪರ್ಣಕುಟಿಯನೇರ್ಪಡಿಸಿ (ಧಮಾಕ. ೮೯-೦೦). ೪. (ವಸ್ತ್ರ ಮುಂತಾದುವುಗಳ) ಗಂಟು,– ಮೂಟೆ,–ಹೊರೆ: ಅಡಕೆ ೨೫ ಕತ್ತೆಯ ಬರಕಕ್ಕೆ ಪೊಂಗೆ ಅಡಕೆ ೨೦ ಸೀರೆಯ ಸುಂಕ ಪೊದಕೆಗೆ ಪಾಗ ೨ ಸೀರೆಗೆ ಪಾಗ ೧ ಪೊಟ್ಟೆಯ ಸೀರೆಗೆ ಪೊಂಗೆ ಪಣ ೧ (ಶಾಂತೇಶ. ೩-೨೨ ಪ; 1047). **ಪೊದಟ್ಕೆ$_2$**: ೨. ಭೋರ್ಂಕೆನೆ ಪಜ್ಜಳಿಪ ತನ್ನ ಸನ್ಮತವದನಸುಧಾಕರಬಿಂಬದಿನೊಸೆವ ಚಂದ್ರಿಕಾ ವಿಸ್ತಾರದಂತೆ ತೋರ್ಪಧಿಕಸಿತಧವಳಲೋಳಲೋಚನಂಗಳ ಬೆಳಗಿನ ಬಳಗದಿ ನಿಳಯಲಕ್ಷ್ಮಿಗೆ ಬೆಳ್ಪಸವನದ ಪೊದಟ್ಕೆಯನಿತ್ತು (ಧರ್ಮ. ೦೩-೬೩ ವ). **ಪೊದಿಕೆ**: ೧. ಕಂಡಷ್ಯಾಂಗಪ್ರಣಾಮಂಬೆರಸು ಹಂಸದಿಂ ನಾರದಂ . . . ಹಿಂಡೇಳ್ವಾನಂದರೋಮಾಂಚದ ಪೊದಿ[ಪಾಠಾಂ. ದ]ಕೆಗಳಂ ತಾಳ್ದು ನಿಂದಿರ್ದು . . . ಸ್ತೋತ್ರಮಂ ಮಾಡುತಿರ್ದಂ (ಗಿರಿಜಾ. ೯-೯೩). ೨. ಗದಗದಿಪ ಕರಕಮಲಮಂ ಕಂಡು ದಾತಿಚರ್ಮದ ಪೊದಿಕೆಯಿಂದದಂ ಮುಚ್ಚಿ (ಶಂಕ. ೩೨-೦). ೩. ಕುಳಿರ್ವ ಕುಳಿರ್ವೆರ ಕೇರ್ಗಟ್ಟಿನಿಂ ಅಸುಕೆಯ ಕಿಸುದಳಿರ ಪೊದಿ[ಪಾಠಾಂ. ದ]ಕೆಯಿಂ ಪಜ್ಜಳಿಸುವ ಪನ್ನೀರ ಚಳಿಯದಿಂ . . . ಲೀಲೆವಡೆದ ಲತಾಗೃಹಂ ಲತಾಂತಶರಜನ್ಮಭವನದಂತಿರ್ದುದು (ರಶಕು. ೦೦-೬೨ ವ). **ಹೊದಕೆ$_1$**: ೧. 'ಮೇಲುಹೊದಕೆ' ಪರಾ. ೨. ಧವಳದ ಕಾಂತಿಯ ನಿಲುವೋ ರುದ್ರಾಕ್ಷಿಯ ಹಂಗು ಬೇಡವೆಂದು ಹೊದ್ದ ಚರ್ಮದ ಹೊದಕೆಯಂ ತೆಗೆದ ಗಟಿಗಟಾಪತ್ರದ ನಿಲವೊ (ಶೂನ್ಯಸಂ. ೦೦೭-೪); ಹಿರಿಯ ಮೆಳೆಯಡಿಯಲ್ಲಿ ಹೊದಕೆಯಂ ಹಾಸಿ ಬಳ್ಳಿರಿಸಿ (ಸಿದ್ಧರಾ. ೨-೩೨); ಕಳಿದರಿ ಚಂಡಾಂಶುವಂಶೋಜ್ವಲರು ಬಳಿಕಾ ಹಿಮಸಮಯಮನು ಪುಲಿದೊಗಲ ಹರಿಣಾಜಿನದ ಹಾಸಿಕೆಯ ಹೊದಕೆಯಲಿ (ಕೊರಟಾ. ೩-೨-೩). ೩. "ಆಚ್ಛಾದನಂ, ವಲಭಿಃ – ಈ ೨ ಮನೆಯ ಹೊ(ದಿ)ದಕೆ" (ಹಲಾಯು. ೫೦-೦೯೬); ಕರಮೆಸೆದವು ಲತೆಗಳನೆಟ್ಟರದಿಂ ಪಚ್ಚೆಲೆಯ ಹೊದಕೆ ಬೆಳ್ವಾಳದ ಬೇರ್ ಸಿರಿಖಂಡದ ವಳೆಯಂ ಕಪ್ಪುರವಳುಕಿನ ಜಗಲಿ ಕೇತಕೀರಜದ ಮಟಲ್ (ಸೊಕ್ತಿಸು. ೦೦-೬೦); ಹೊಂದಗಡಿನ ಹೊದಕೆಯ ಮನೆ ಬಹಳ ನೇರಂದವಡೆದ ಪಟ್ಟಶಾಲೆ ಮುಂದೆಸೆಯಲಿ ತುಳಸಿಯ ಮಂಟಪದಿ ಗೋವಿಂದನ ಕೀರ್ತಿಸುತಿಹರು (ಕೋಹಕ. ೩-೩೪). ೪. ಒಂದುದಿನ ಮಡಿವಾಳ ಹೊದಕೆಯ ತಂದ ಕತ್ತೆಗೆ ಲಿಂಗವಿರದದರ ಕೊಂದು ಇರಿಸಾಕ್ಷಣದಿ ಅವ ಸಹವಾಗಿ ಕತ್ತೆಯನು (ಬಸ್ಸಕ. ೫೦-೨). **ಹೊದಿಕೆ$_1$**: ೧. ಏಳು ನೆಲೆಯ ಕರುಮಾಡದುಪ್ಪರಿಗೆಯೊಳಗೆ ಒಂದೆ ಮುತ್ತಿನ ನೆಲಗಟ್ಟಿನ ಮೇಲೆ ಭಿತ್ತಿ ಇಲ್ಲದ ರತ್ನದ ಹೊದಿಕೆಯ ಮೇಲಿಪ್ಪ ಬೆಳಸವ ಕಂಡವರನಾರನು ಕಾಣೆ (ಅದವ. ಪು. ೨೬೦-೩೯೨); ಕಾಮದ ಒಡಲು ಕ್ರೋಧದ ಗೊತ್ತು . . . ಮತ್ಸರದ ಹೊದಿಕೆ ಆ ಭಾವವಜಿತಲ್ಲದೆ ಚೆನ್ನಮಲ್ಲಿಕಾರ್ಜುನನ ಅರಿವು ದಕ್ಕೆ ಇಂಬಿಲ್ಲ ಕಾಣಿರಣ್ಣಾ (ಮಹಾದೇ. ವ. ೯೯-೧೦೪); ಎಲುಬು ನಳವ ಮಾಡಿ ನರದ ಬಳ್ಳಿಯಲ್ಲಿ ಬಿಗಿಯುತ . . . ಮಲಿನಚರ್ಮವನ್ನು ಹೊದಿಕೆ ಯೆಳೆದು ನಿತ್ಯ ಬೆಳೆವ ಈ ಹೊಲೆಯ ಗೂಡಿನೊಳಗೆ ಜನಿಸಲಾಜಿ ಲಕ್ಷ್ಮಿಯ ರಸನೆ (ಭರಂಪ. ೧-೦೬೬-೨). ೨. ನೀರ ಬೊಂಬೆಯ ಬೊಹವ ತೊಟ್ಟು ಅಗ್ನಿಯ ಬಣ್ಣದ ಹೊದಿ[ಪಾಠಾಂ. ದ]ಕೆಯ ಹೊದ್ದು ಗಾಳಿಯ ಗತಿಯಲ್ಲಿ ಸುಳಿದಾಡುವ ಪ್ರಾಣಿಗಳು ದೇವರನೆತ್ತ ಬಲ್ಲರು (ಅವಸಂ. ೨೦೭-೯೩೦; ಶೂನ್ಯಸಂ. ೬-೦೦ ನೋ); ತಮತಮಗೆ ನೆರೆದು ಬೆಚ್ಚಂಬಿಲವ ಕುದುಗೋಲ ಕಪ್ಪಡವನರಳೆಯಂ ತೈಲವಂ ತಾ ಬೇಗಲೆನುತಲಾತನ ಹೊದಿಕೆಯಂ ತೆಗೆ ದರು (ಸಿದ್ಧರಾ. ೨-೨); ಗಡ್ಡದ ಮುದುಕರು . . . ಕಂಗೆಟ್ಟು ಹಾಯ್ದರು ಹೊದಿ[ಪಾಠಾಂ. ದ]ಕೆ ದಾಡು ಕವುಂಡಲವ ಬಿಸುಟಟ್ಟಳದೆಸೆದೆಸೆಗೆ (ಕೊರಟಾ. ೦-೦೦-೧೨); ಹೊದಿಕೆಯನ್ನು ತೆಗೆದು ದೂರಕ್ಕೆ ಎಸೆದೆನು (ಪಂಟಿವು. ೯೯). ೩. "ಪಟಲಂ, ಛದಿಃ—೨ ಮನೆಯ ಮೇಲುಹೊದಿಕೆಯ ಪೆಸರು, ಮನೆಯ ಮೇಲುಮುಚ್ಚಳ" (ಸಿದ್ಧಾಂತಿ. ೦೦೩); ಹೊಡಿದೆಲು ಮರಮುಟ್ಟು ಮಾಂಸದ ಗೋಡೆ ಚರ್ಮದ ಹೊದಿಕೆ ನರವಿನ ಬೊಡೆ ಹಿಂಡಿಗೆ ಬಿಗಿದ ಮನೆ ಯೊಳಗಾತ್ಮನಿರುತಿರಲು (ಹಂಸಾ.೬೫); ಒಲೆಗಳನ್ನು . . . ಹುಲ್ಲಿನ ಹೊದಿಕೆಯ ಮನೆಗಳಲ್ಲಿ ಸುರಕ್ಷಿತವಾಗಿ ಉಪಯೋಗಿಸಬಹುದೆ? (ಅಡುಗೆ. ೨೯). ೫. (ಪುಸ್ತಕ ಮೊದಲಾದುವುಗಳ) ರಕ್ಷಾಕವಚ; ರಟ್ಟು: "(ಅಂಚೆಯ ಮೂಲಕ ಕಳಿಸುವ ವೃತ್ತಪತ್ರಿಕೆ, ಕಟ್ಟು, ಮೊ.ಗಳ ಮೇಲಿನ) ಆವರಣ, ಸುತ್ತುಹಾಳೆ; (ಪುಸ್ತಕಗಳಿಗೆ ಹಾಕಿರುವ, ಕಳಚಲಾಗುವ) ಕವಚ, ಹೊದಿಕೆ" (Wrapper. ಇಂಕಕ); ಆ ಹೊಸಪುಸ್ತಕದ ಹೊದಿಕೆ ಹರಿದು ಹೋಗಿದೆ (ರೂಢಿ). **ಹೊದ್ದಿಕೆ$_1$**: ೧. ಮಾಸವೆರಡಲಿ ಶಿರ ಮಾಸ ಮೂಱಱೊಳಂಗ ಮಾಸ ನಾಲ್ಕಲಿ ಚರ್ಮದ ಹೊದ್ದಿಕೆ (ಭರಂಪ. ೧-೧೫೨-೩).

[ಪೊದ$_1$ + –ಕೆ]

**ಪೊದಕೆ$_2$**, **ಪದಿಕೆ**, **ಹದಿಕೆ$_1$**, **ಹದಿಗೆ$_1$**, **ಹದ್ದಿಕೆ**, **ಹೊದಕೆ$_3$**, **ಹೊದಿಕೆ$_2$** (ನಾ). ಒಂದು ಬಗೆಯ ತೆರಿಗೆ: ಬಾಮರಸದೇವನು ಶ್ರೀರಾಯ ಕೇಶವಪುರವಾದ ಮೊರಲೆಯ ಸಿದ್ಧಾಯ ಪೊದಕೆ ಶ್ರೀಕೇಶವದೇವರ ಶ್ರೀ ಸಿದ್ದೇಶ್ವರದೇವರ ನಂದಾದೀವಿಗೆಯ ಸೊಡರೆಣ್ಣೆಯ ನಡಸುವಂತಾಗಿ ಕೊಟ್ಟ ಗ ೫ (ಪ್ರಾಶಂ. ೦೯೩೨. ೩೬-೨: 1245). **ಪದಿಕೆ**: ಗೌಡಿಕೆ ಮಾನ್ಯ ಪೇಠ ಪದಿಕೆ ಸಿದ್ಧಾಯ ದಾಯ ಕಾರಕ ಕಣ್ಣವಣ ಮೊದಲ ವಿಧ್ಯ × × ಸಂಟಾದನುವ ಮಾಡ್ಸಿ ಕೊಣ್ಣ (ಎಕ VIII. ಸೊರಬ. ೨೬೬-೩೪: 1620 ?). **ಹದಿಕೆ$_1$**: ಉಪಾಧ್ಯಾಯರ್ಗೆ ಮುಂಟಿದ ಹದಿಕೆಯಲ್ಲೀವಿ ತಮಂ ಕೊಟ್ಟು (ಸಾಇಇ. XI-ii, ೦೬೩-೫೬: 1124); ಮೂಜಡಿ ಮಣ್ಣಗೆ ಅಱು ಹೊನ್ನ ತೆತ್ತು ಮಿಕ್ಕಿ ಹದಿಕೆಯ ಬೇಡೆ(ಕೊಳ್ಳಿ) ನಂದೀಗ್ರಾಮದವರ ಮುಂದಿಟ್ಟು ವಿಚಾಱಲಿಲ್ಲ (ಸರ್ಗಿಕ. ೦೦೪-೫೬೪); ನಲವ್ಯೆಯ ಹದಿಕೆಯ ನೆತ್ತುವ ಹೆಗ್ಗಡೆಗಳಾರು ಬಂದಡಂ ತಂಮ ಧರ್ಮ್ಮವಾಗಿ ಪ್ರತಿಪಾಳಿಸುವರು (ಸಾಇಇ. IX-i, ೩೯೯-೯; 1282); ಮೊಱೆದದ್ದು ಸಕಲ ರಾಣಿಯವೆಯೊಂದು ಹುರಿಯಾಗಿ ಪುರವರದೊಳಿತ್ತಿ ಹದಿಕೆಯನು (ಸಮ್ಯಕ್ತ್ವ. ೨-೫೪). **ಹದಿಗೆ$_1$**: ಹದಿಗೆಯಾಗಿ ಗ ೭೨ × × ದಲೂ ಉಪ್ಪತ್ತೆರಡನೂ ತೆತ್ತು (ಎಕ. IX (S), ಕಂಡಿಗ. ೨೭-೦೮; 1563). **ಹದ್ದಿಕೆ**: ಗ್ರಾಮ ವಂದಕ್ಕಂ ಕುಳಗ ೨॥ ೦॥ ೭ ಗಂಪಶಿಕುಳ ೧ ಹದ್ದಿಕೆ ೯ (ಪ್ರಾಶಂ. ೦೯೩೪, ೨೭-೦೪; 1430). **ಹೊದಕೆ$_3$**: ಆ ಹತ್ತು ವ್ರಿತ್ತಿಯ ಸಿದ್ಧಾಯ ಸೇಸೆ ಅಳವು ಅನ್ಯಾಯ ಹೊವಕೆ ಮುಖ್ಯವಾಗಿ ಏನು ತೆಱುಗಡೆ ಬನ್ದಡೆವೂ . . . ನಡಸುವನ್ತಾಗಿ . . . ಧಾರಾ ಪೂರ್ವ್ವಕಂ ಮಾಡಿಕೊಟ್ಟರು (ಎಕ. XII. ಶಿಕ್ಯನಾ. ೨-೨೩; 1261); ಆವುಗೆ ಅನಾಯ ಹೊವಕೆ ಸಹಿತವಾಗಿ ಏನು ಬಂದದೂ ಸರ್ವ್ವಮಾನ್ಯವಾಗಿ ಅರಸುಗಳು ಯೇನುಬಂದದನೂ ಬಿಳಿಹಿಕೊಟ್ಟ ದರ್ಮ (ಕಇ. III-i, ೩-೪೪; 1348); ಆ ಪುರದ ಚತುಸ್ಸೀಮೆಯೊಳಗಣ ಅಕ್ಷೀಣಿ ಆಗಾಮಿ ನಿಧಿ ನಿಕ್ಷೇಪ ಜಲ ಪಾಶಾಣ ಸಿದ್ಧ ಸಾಧ್ಯ ಸಿದ್ಧಾಯ ಹೊವಕೆ ಹದಿಕೆ ಕಾಣಿಕೆ ಕಡ್ಡಾಯ . . . ಅಷ್ಟಭೋಗತೇಜಸ್ವಾಮ್ಯವನು (ಎಕ. XI. ಚಿತ್ರದು. ೨-೨೨;1355). **ಹೊದಿಕೆ$_2$**: ಶಾಂತಿಗ್ರಾಮದ ಅಧಿಕಾರಿಗಳು ಪ್ರತಿವರ್ಷ ಸಲ್ಲುಂತಾಗಿ ವರದನರಸಿಂಹದೇವರ್ಗೆ ತಂಮ ಹೊದಕೆಯ ಹೊಂನಿನೊಳಗೆ ಹತ್ತು ಗದ್ಯಾಣ ಹೊನ್ನನು ದೇವರ ಹೊದಿಕೆಯಂ ಧಾರಾಪೂರ್ವ್ವಕಂ

ವಹಾಡಿ ಕೊಟ್ಟರು (ಶ್ರ. ೯೯೦, ೪-೨೯ ; 1216); ಆ ಸೋಮನಾಥಪುರಕ್ಕೆ ಉತ್ತರವಾಗಿ ಬನ್ದ ಹದಿಕೆ ಹೊರಣೆ ಹೊದಿಕೆ ಮಳ್ಳುರುಯಿಯೊಳಗಾಯಿತ್ತು (ಎಕ. III. ತಿರುನ. ೯೬-೯೨ : 1300) : ಅರಮನೆಯಿಂದ ಬಂದ ಹದಿಕೆ ಹೊದಿಕೆ ಮಗಮೆ × × × ಸಿದ್ದಾಯ ಮನೆವಾರ್ತೆ ಹಣಕಾಹುಕಾಣಿಕೆ (ಶ್ರ.ಅ.೨೯೭. ೨೮-೨೩; 1485).

**ಪೊದವು**, ಹೊದವ್ಪು, ಹೊದೆವು (ನಾ). ಹೊದೆಯುವ ವಸ್ತ್ರ; ಹೊದಿಕೆ; ಮೇಲುವಸ್ತ್ರ: ಚರವೇಷದಿಂ ಶಂಭು ಬಂದು ಪೊದವಂ ಬೇಡೆ ತರಳಾಕ್ಷಿಯುಟ್ಟ ಜೀವಯಂ ಕೊಡಲು (ಶಾಶಿಕ. ೬-೨೩); ಅಂಬುದ ನಾಥಹಾ ಸಹಾವಾಂಟ ಶವನುಳಿದು ಮಣಿವ್ರಜದ ದೀಪ್ತಿಯ ಬೆಳಗಿನಿಂದ ಸ್ವಮಂದಿರಕೆ ಪೋಗಿ ಪೊದವಂ ತೆಗೆಯಲು (ಚಿತ್ತೋ. ೦೭-೦೭). **ಹೊದವ್ಪು**: ಚಿನ್ಮಯ ಚಿದ್ರೂಪ ಚಿತ್ಪ್ರಕಾಶವೇ ತನ್ನ ಹೊದವು (ಕ್ರಿಕಾ. II. ೦೩೯-೦); ಮಜೆಯೊಳು ರಮಿಸಿದರನೆ ಸಾಕು ಹೊದಪಿನ ಮಜೆ ಹೋಯ್ತು, ಪುಳಕ ವಾಯ್ತೆಂದು ತುಱುಬಿಳಿದುದು ದೇಹ ಕಂಪಿಸಿತೆಂದದ ಹೊಹಹೊವ್ಪಿ ಸುವುದಾವ ಪ್ರೌಢಿ (ಚಿಕ. ೦೦-೦೦೩); ಹಹಾವುರಿಗೆ ಕೆವ್ಪಿನ ಗಣಗಳಹುವ ಕೆವ್ಪಿನ ಹೊದವು ಸಾಣೆ ಕಟಕಡೆ ದಾಗಲುಯಿದು ಹಹಾವನಿಗೆ ಸಲುವದು ಯೆನ್ದು . . . ದೇಶನಾಡಿನವರು ಗ್ರಾಮಾಧಿಪತಿಗಳು ಕರಣಿಕರು ಸಹ ಹೇಳಿದರು (ಎಕ. IX. ಚಾಕಾ. ೯೦-೨೩; 1700). **ಹೊದೆವು**: ವಿಶ್ವಭೂತಿ ಯೇಟಾ ಪಾರ್ವಂ . . . ಒಂದುದಿನ ಪೊದಲು ಹಿಡಿವಂತೆ ಬಾಯ್ಸುವಿಯಾಗು ವಂದದಿಂ ಕವಸುವವನಸೊಳಂಬುದಂ ಕಾಣನೊಂದುದಿನಮಾಗಿಯುಂ ಮೆಯ್ಯುಂಬ ಹೊದೆ[ಪಾಠಾಂ. ದ]ವುಮಂ ಹೊದೆವುದಂ ಕಂಡಜೆಯನು (ಹುಕ್ಕೀ. ೬-೩೦). [ಪೊದ್₁ + – ವು₂]

**ಪೊದಯಿಸು** 'ಪೊದೆಯಿಸು' ನೋ.

**ಪೊದರ್** 'ಪೊದಱ್' ನೋ.

**ಪೊದರು₁** 'ಪೊದಱ್' ನೋ.

**ಪೊದರ್ು₂**, ಹೊದರು₂ (ನಾ). ೧. (ಮರದ) ಪೊಟರೆ; ಡೊಗರು: ಪೊಳ್ಳು, ಪೊಸ್ಪಿ (ಹೆಪಟ್ಟೆ), ಪೊದರು (ಹೊದರು), ಪದರು, ಡೊಗರು (ಶಂಶಬ. ೯೦). ೨. (ನೆಲದಲ್ಲಿರುವ) ರಂಧ್ರ; ಕುಳಿ; ಬಿಲ; "ತೂತು" (ಗುಣಾಷು. ೨೦೬). **ಹೊದರು₂**: ೧. ಮರದ ಹೊದರಿನಲ್ಲಿ ಗಂಭೀರವಾದ ಘಟಸರ್ಪವಿರುವುದನ್ನು ಬೋಧರಾಯ ಅರಿತಿರಲಿಲ್ಲ! (ರತ್ನಕೃ. ೯೯); ಕಪ್ಪೆಯು ನಿದ್ದೆಯಿಂದ ಇದೇ ಎಚ್ಚತ್ತು ಸಾವಕಾಶವಾಗಿ ಕಾಲಿಡುತ್ತ ದೆಲಪತ್ರಿಯ ಗಿಡದ ಹೊದರಿನೊಳಗಿಂದ ಹೊರಕ್ಕೆ ಬಂದಿತು (ಶಂಹಿಂ. ೬೬). ೨. ಷಹಾವ್ವುಗವು ನೆಲದ ಹೊದರಿನಲ್ಲಿ ಮನೆಮಾಡುತ್ತದೆ (ಶುಂಆಜು. ೯-೦೯೮); ಆಗ ಶಾಕ್ಯಸಂಘುಲನು ಅವನ ಶಕ್ತಿಯನ್ನು ಕಂಡು ಅವನೊಬ್ಬನ ಜೊತೆಗೆ ಬಂದು ನೆಲದ ಹೊದರನ್ನು ಹೊಕ್ಕನು (ಕಚಿ. ೩೦). ೩. (ಅಲಂ) ಬಿರುಕು; ಭಿನ್ನಾಭಿಪ್ರಾಯ: ಅಂತಃಪುರದಲ್ಲಿಯೂ ಎಲ್ಲಿಯಾದರೂ ಡೊಗರು ಬಿದ್ದಿದೆಯೋ, ಹೊದರು ಕೊರಕಲು ಆಗಿವೆಯೋ ಎಂಬ ಬಗ್ಗೆ ಒಮ್ಮೆಯಾದರೂ ಪರೀಕ್ಷಿಸಿ ನೋಡಬೇಕೆಂದು ಭೂಪತಿಯ ಮನಸ್ಸಿಗೆ ಹೊಳೆದಿರಲೇ ಇಲ್ಲ (ಇಕ್ಕ. ೨೬೬).

[ದೇ.೫ ತಮಿ. ಪೊನ್ತರ್, ಪೊನ್ತು; ಮಲ. ಪೊತ್ತು; ತೆಲು. ಬೊಂದ, ಬೊತ್ತ]

**ಪೊದರೊಡೆ** 'ಪೊದಱೊಡೆ' ನೋ.

**ಪೊದರ್ಕೊದಲ್** (ನಾ). ಅತಿಶಯವಾಗಿ ಸೇರಿರುವ ಮಧುರವಾದ ಮಾತು: ಪದ ಕೊರಲಿಂವವಪ್ಪುಕೆಯ [ಕೊಂಕು ನ]ಯಂ ಗಮಕಂಗಳಿಂ ಪೊದರ್ಕೊ[ಪಾಠಾಂ. ರ್ತೊ]ದಳೆಟದಿಕ್ಕಿದಂತೆ ಸುತಿಯೊಳ್ ಸಮವಾಗಿರೆ ಜಾಣನಾಂತು ಮೆಚ್ಚಿದ ತೆಱದಾಸವಟ್ಟಲಸದತ್ರಿದವೊಲ್ ದೊರೆವೆತ್ತು ದೂಱಿ ದಾಱದ ದನಿಮುಟ್ಟೆ ಮೇಣಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್ (ಶಂಪುರಾ. ೬-೯೮). [ಪೊದಱ್ + ಕೊದಲ್₂ (< ಕೊದಲು₂)]

**ಪೊದರ್ತಲೆ**, ಹೊದಱುದಲೆ (ನಾ). ೧. ಕೂದಲು ಜಡೆಗಟ್ಟಿ ಪೊದೆಯಂತೆ ಆಗಿರುವ ತಲೆ; ಪೊದೆಗಟ್ಟಿದ ಕೂದಲುಳ್ಳ ತಲೆ: ಕಿಮ್ಮೊಸೆಯ ಜೋಲ್ವಾಯ ಪೊದರ್ತಲೆಯ ಕರ್ಮೊಗದ . . . ಜವನ ದೂಱಿಗಾಱರ ಜಂಗುಳಿ . . . ಸಡಗರದ ದಟವುಂದಿಂ ಬಂದು ಮುತ್ತಿ ಮುತ್ತಿ ಅಱುಗುಱಿಜೀವಾತ್ಮನಂ ಸೆಱೆವಿಡಿದತ್ತು (ಚಾಮಾತ್ಮ. ೭೯-೦೯). **ಹೊದಱುದಲೆ**: ೨. ಅನೇಕ ತಲೆಗಳ ಗುಂಪು: ಹೊದಱುದಲೆ ಹೊಕ್ಕಾಳೆ ಬೆರಳಿನ ತುದಿಯ ತುಟಿಯುಲಿ ಬೊಬ್ಬೆಱೆದಡಿನದಿರೆ ದಳವುಳಿಸಿದುದು ಕೌರವ ಪಾಂಡವರ ಸೇನೆ (ಕುವ್ಯಾಭಿ. ೯-೯); ಬೆದಱಿದರು ಕಂಡವನ ರೂಪನು ಹೊದಱುದಲೆಗಳ ಹೊತ್ತ ಚೋಹದ ಮದದ ಗರ್ವದ ಗಾಢಗವುನದ ಭೂತ ವಲಯನುತ ಸುದತಿಯರು ಗಡಗಡನೆ ನಡುಗಿದರು (ಕೊರಂಣ. ೦-೦೩-೦೨). [ಪೊದಱ್ + ತಲೆ₁]

**ಪೊದರ್ವಡೆ** (ಕ್ರಿ). ದಟ್ಟವಾಗು; ಒತ್ತಾಗು; ನಿಬಿಡವಾಗು: ಪೊದರ್ವಡೆದಡವಿಯ ಪಥದೊಳ್ಪಿಡಿದುದೊಂದು ಕೇಸರಿ ತನ್ನ ನಂದನನನು (ಕೈಶಾಚಾ. ೨೬-೩೩). [ಪೊದಱ್ + ಪಡೆ₁]

**ಪೊದರ್ಮನೆ**, ಹೊದಱುವನೆ (ನಾ). ಬಳ್ಳಿಮನೆ; ಲತೆಮನೆ; ಪರ್ಣಶಾಲೆ: ಕೊಳದೆಡೆಗಯ್ದು ತವಕದಿಂದವಲೋಕನಂಗೆಯ್ದು ಒಡನೊಡನ ಮುರಳಿದಳ್ ಮಾರ್ಗಂದೆಂದವರ್ತಕರುತಲವ ಪೊದರ್ಮನೆಗೆ (ಶಕ್ರ್ಯಾಂಗ. ೫೨-೦೯೦೯). **ಹೊದಱುವನೆ**: ಕೆಲಬಲದಲ್ಲಿ ಅವನನು ಅಱಸುತ್ತ ಕಾಣದೆ ಗಿಡಪೊದರಗಳ ಬಳಿಯಲ್ಲಿ ಹೊದಱುವನೆಗಳಲ್ಲಿ ಕೊಳದ ತಡಿಗಳಲ್ಲಿ ನೋಡುತ್ತ ಬಹು ಹೊತ್ತಿನ ಮೇಲೆ ಒಂದು ಹೊದಱುವನೆಯ ಮುಂದುಗಡೆಯಲ್ಲಿ ಕಲ್ಲಱೆಯ ಮೇಲೆ ಕುಳಿತು . . . ಮನ್ಮಥಪರವಶನಾಗಿರುವ ಬಗೆಯನು ಕಂಡು (ಚಕಾ. ೨೬). [ಪೊದರ್ (< ಪೊದಱ್) + ಮನೆ]

**ಪೊದಲು** (ನಾ). (?) : [ಮೂವಂಕಾ]ಲ ಪೊದಲು ಎರಡುಂ (ಇಂ. ೦೯೯೬, ಹಾಸುಗ. ೨೯೮-೩೯ ; ?). [ ? ]

**ಪೊದಲ್ನಾಡು**, ಹೊದನಾಡು, ಹೊದೆನಾಡು (ನಾ). ಒಂದು ನಾಡಿನ ಹೆಸರು; ೯ ಈಗಿನ ಕೋಲಾರ ಜಿಲ್ಲೆಯ ಒಂದು ಭಾಗ: ವಲ್ಲಭ ಕುಲತಿಲಕ ಶ್ರೀವತ್ × × × ರಾಜ ಪ್ರಿಥಿವೀರಾಜ್ಯಂಗೆಯ್ × × × ಭೀಮ × × × ನೆ ಸಾಡು ಮೂನೂಱು ಪೊದಲ್ನಾಡಬುವತ್ತುಮನಾಳೆ (ಎಕ. X. ಶ್ರೀಭಾ. ೩೦-೬, ಸು. 880 ?); × × × ಪೊದಲ್ನಾಡು ದ × × ಬೆಳಙ್ಗಱ್ಗಿರ × ಕೊನ್ದನ್ ತುಱುಗೊಳೆಯ್ದು ಸತ್ತರ್ (ಎಕ. X. ಶ್ರೀಭಾ. ೦೯೩-೦ ; ?). **ಹೊದನಾಡು**: ಹೊದನಾಡಿನೊಳಗಣ ಗುರ್ಕಹಳ್ಳಿಯ ಮುತ್ತರಸನ ಮಗ ದೇವಣ್ಣನ ಮಗ ಮರಿಯಪ್ಪನು ಮಾಡಿಸಿದ ದೀಪಮಾಲೆಕಂಬ್ಪ (ಎಕ. X. ಶಂಕಾರು. ೦೯೭-೩ ; 1667 ?). **ಹೊದೆನಾಡು**: ಹೊದೆನಾಡ ಒಳಗೆ ನಮ್ಮ ಮುಳುವಾಯ ನಾಚೀದೇವಿಯರಿಗೆ ಸಲುವ ಕತರಿಯ ಹಳಿಹಳಿಯ ಸೀಮೆ ಒಳಗೆ (ಎಕ. X. ಶುಃಳಬಾ. ೬-೯ : 1416); ಶ್ರೀಮತು ಹೊದೆನಾಡ ಉತ್ತನೂರ ಮಾಡವಾಳದ ಕಾವಬ್ಬ ದೇವಿಯರ ಸ್ಥಾನಿಕನಾಯಕ . . . ಬರಸಿ ಕೊಟ ಶಾಸನ (ಎಕ. X. ಶುಃಳಬಾ. ೦೦೩-೩ ; 1636?). [ಪೊದಲ್₁ + ನಾಡು]

**ಪೊದಳ್** 'ಪೊದಟ್' ನೋ.

**ಪೊದಳು** 'ಪೊದಟ್' ನೋ.

**ಪೊದಳ್ಕೆ** 'ಪೊದಟ್ಕೆ₁' ನೋ.

**ಪೊದಳ್ಕೆವಡೆ** 'ಪೊದಟ್ಕೆವಡೆ' ನೋ.

**ಪೊದಱ್**, ಪೊದರ್, ಪೊದರು₁, ಪೊದಱು, ಹೊದರ್, ಹೊದರು₁, ಹೊದಱ್, ಹೊದಱು₁ (ನಾ). ೧. ದಟ್ಟವಾಗಿರುವ ಗಿಡಮರಗಳ ಸಮೂಹ; ಪೊದೆ; ಹಿಂಡಲು: "ಕುತ್ತುಱೆಂದು ಪೊದಱ್" (ಶಶಸ. ೩೦-೯೦) ; ಆಗಳ್ ದುರ್ಯೋಧನನಾತ್ಮೀಯಸೇನಾನಾಯಕನಪ್ಪ

ಗಾಂಗೇಯಂ ಬದಿರ ಸಿಡಿಂಬಿನ ಪೊದಱೊಳಗೆ ಮಱೆದೊಱಗಿದ ಮೃಗರಾಜನಂತೆ ಶರಶಯನದೊಳೊಱಗಿದಂ (ಶಂಕಶಾ. ೧೧-೫೦ ವ); ಭಟ್ಟನೀಚೋದ್ಯಮಂ ನೋಟ್ಪೆನೆಂದು ಅದಱ ಕೆಲದೊಳ್ ಪರ್ವಿ ಕೊರ್ವಿ ಸುರ್ವುಗೊಂಡ ಮಾಧವಿಯ ಪೊದಱೊಳಡಂಗಿರ್ದು ನೋಟ್ಪುದುಂ (ಶಂಕಶಂ. ೨೩೦-೬); ಬಿಡದೆ ಕುತ್ತುಱುಗಳಂ ಸೋವಿದರ್ತಿವಿದರ್ಗಿಡಗಳ ಪೊದರ್ಗಳಿಂದೆಬ್ಬಿಸಿದರುಬ್ಬಿಸಿದರೊಡನೊಡನೆ ಖಗಮೃಗವ್ರಾತಮಂ ಪಾತಮಂ ಮಾಡಿದರ್ಕೂಡೆ (ಕೃಚಿಶಾ. ೨೯-೪೬). ೨. ಗುಂಪು; ಸಮೂಹ; ಸಂದಣಿ: ಭೋರ್ಗರೆದುವನಿತಱೊಳ್ ಸಾಳ್ಗಸಾಳವಾ ತೇರ್ಗಳ ಪೊವಱ್ ಪೊದಳ್ದಿದುವು ಪ್ರೈಬೆವರ್ನೀರ್ಗಳೂಗೆಯಲ್ ವಾಜಿರಾಜಿ ನಡೆವುದು (ಕಂಪು. ೩೦-೩೦). **ಪೊದರ್:** ೧. ಹರಿಣೇಂದ್ರನಂ ಕ್ರೂರಕಣಂಗಳಿಂದನಿಬರುಂ ಭರದಿಂದ ಪೊವರ ಬಿಟ್ಟೇಳ್ವನಿತರಲ್ಲಿ ತಟ್ಟಿರದ ಲಕ್ಷ್ಯಂ ಬಿಡದಿಸುತ್ತ ಬೊಬ್ಬಿಡಲ್ (ಮಹಾಶಿ. ೬-೩೦); ಗರುವ ತರುವರಕುಲಂ ಮೂಲಮಂ ತಿರಿಪಿ ವಿಸಾಂಟದ ಪೋಲ್ ನೆಲಕ್ಕುರುಳ್ದುವು, ಪೊದರ್ ಗಿಡುಗಳಂ ಪುಡಿಗೈದು (ಶಬ್ರಾಂಗ. ೪೯-೧೩೦೪). **ಪೊದರು₁:** ೧. "ಪೊದರು ಕುಂಜಃ" (ಕಶಕ. ೬೯); ಸುತ್ತು ಬಲೆಯನ್ನು ಬೀಸಿ ಮತ್ತೆ ಪೊವರುಗಳನರಸಿ ಕುತ್ತಿ ಕೆಡಹಿ ಮಿಗಗಳನ್ನು ಮತ್ತೆ ದೊರೆಗೆ ತೋರಿಸಲು (ಸಕಪಾ. ೧೯-೫); ಅವಳ ಹೊಂಬಣ್ಣದ ಮುಖಮಂಡಲ ಗೈರಿಕವಸನಗಳಿಂದ ಪರ್ವತದ ಸನಿಹಪ್ರದೇಶದಲ್ಲಿ ಕೆಕ್ಕೇಗಿಡದ ಪೊದರು ಹೂಬಿಟ್ಟಿದೆಯೋ ಎಂಬಂತೆ ಕುಂಡಲಿತವಾಗಿದ್ದಿತು (ಶಾಂಬಕ. ೯೫); ವಾಯುಪುತ್ರನಾದ ಭೀಮಸೇನನು . . . ಆನೆಯು ಹಾಗೆ ಕಾಡಿನಲ್ಲಿ ಗಿಡಗಳನ್ನೂ ಪೊದರುಗಳನ್ನೂ ದೂರಮಾಡಿ ದಾರಿ ಮಾಡಿಕೊಂಡು ನಡೆದನು (ವ್ಯಾಸಕಿ. ೬೫). **ಪೊದಱು:** ೧. "ಕುತ್ತುಜಿನೆ ಪೊ[ಶಾಂಶಾಂ. ಹೊ]ದಱು" (ಕಕೂ. ೯೨); ಇನಿತು ದಿವಸಮಾ ಮರಗಳ ಗಿಡುಗಳ ಪೊದಱುಗಳ ಮಱೆಗಳೊಳ್ ಪೊಱಲು ಕಂಡೆವಿಲ್ಲೆಂದು ಮನದೊಳ್ ಬಗೆದು (ಕಬ್ಯಾರಾ. ೬೯-೨೨); ಪೊದಱು ಮರಂ ಗಿಡು ಪುಲ್ಲೆಂಬುದು ತಿರ್ಯಗ್ಜಾತಿಯೆಂಬುದಲ್ಲದೆ ನರನೆಂಬುದೆ (ಕಮಕ. ೪-೧೩೦); ಬಗಿದು ಪುಗಲ್ಕರಿದಲ್ಲಿಯುಮೊಗೆದ ಮರಂ ಪೊದಱು ಬಳ್ಳಿ ಗಿಡುವೆಂಬಿವಱಿಂ ಮಿಗಿಲೆನಿಪ ಬಲ್ಲೆ ನಗಸಾನುಗಳೊಳದೆಂತಾವ ಮೆಯ್ಯೊಳಂ ಪುದಿದಿರ್ಕುಂ (ಶಾವ್ಯಾವ. ೯೬); ಅರಳಾದ ಮಲ್ಲಿಗೆಯ ಪೊದಱೊಳಗೆ ತಿರುಗಿದೊಡೆ ತೆರಳ ಬಲ್ಲುದೆ ಸಂಪಗೆಯ ಬನಕೆ ಮಱಿದುಂಬಿ (ಕೃಚಿಶಾ. ೨-೫೬). ೨. ಮದಕರಿಗಳ ಮೊತ್ತ ಕದಳಿಯ ವನಗಳ ಪೊಪಱ ಕಿತ್ತೀಡಾಡುವಂತೆ ಕವನಗಲಿಗಳಿಂದ ಮುತ್ತಿದ ತುರುಕರ ಸದೆದೆಬ್ಬಿಸು ನೀನು (ಕಂಪಶ. ೧೪-೫೨). **ಹೊದರ್:** ೧. "ಕುಂಜಃ, ಕುಂಜಃ, ಕುಂಜನಂ, ಈ ೩ ಹೊದರ್" (ಶಾಕಕ್ಕ. ೬೫); ರಾಜಕುಮಾರಿ ಬನದೊಳಲ್ಲಲ್ಲಲೆದು . . . ಮೋಣೊರ್ವೆ ಬಳ್ಳಿಹೊದರನೆ ಕುಟೀರಂಗೆತ್ತು ತಲ್ಲಣಿಸಿ ಮುಂ ನಡೆದು, ತಪ್ಪನರಿಯುತೆ ನಾಚಿ, ಸಮ್ಮನಾಚಿಪನರಸುತಿರೆ (ಶಬ್ರಾಂಗ. ೨೦-೫೪೯). **ಹೊಧರು₁:** ೧. ಉದಕವಂ ಕೊಳಬಂದ ಮೃಗಗಳ ಬೆದರದಂತೆಸೆಯಲ್ಕೆ ತೋಹಿನ ಹೊದರಿನೊಳು ಕಾದಿರ್ದ ಚಾಪಾಸ್ತ್ರಗಳ ಕೈಕೊಂಡು (ಆಪಂಗಾ. ೨-೩-೬); ಬದಿರುಕೊಳ್ಳಕೆ ಹೋಗಿ ಹೊದರೊಳಗೆ ಕೈಹಾಕಿ ಬದಿರಳೆಯ ಕೊಯ್ದು ನಿತ್ಯದಲಿ ಕಾಯಕವ ಬದಿಕಿಸುತಲಿದ್ದ ಸತಿಯೊಡನೆ (ಕಪ್ನಕಾ. ೨೬೫); ಹೊದರೂ ಮುಳ್ಳೂ ತುಂಬಿದ್ದ ಆ ವನ ಹಿಂದೆ ಒಂದು ಕಾಲದಲ್ಲಿ ದೊಡ್ಡ ನಗರವಾಗಿ ಇತ್ತಂತೆ (ವ್ಯಾಸಕಿ. ೯೦). ೩. (ಆಲಂ) ತೊಡಕು; ಸಿಕ್ಕು; ತೊಂದರೆ: ಹೇಗೂ ನಾಲ್ಕು ದಿನ ಸಮಾಧಾನವಾಗಿ ನಡಕೊಂಡು ಅವರಿಗೆ ತಿಳಿವಳಿಕೆ ಕೊಟ್ಟು ಅವರನ್ನು ಈಗಿನ ಹೊದರಿಂದ ಬಿಡಿಸಿಕೊಳ್ಳೋದೇ ಸರಿ (ಶಕರಾ. ೧೧೫). ೪. ಪೊದೆಯಾಗಿ ಸಸ್ಯಗಳು ಬೆಳೆದಿರುವ ಭೂಮಿ (?): ಚಂದನಕೈಯಿಂದಲೂ ಬೀಜ ಖ ೨ಕೆ ಖ ೮ ಉಂಬಳಿ ಹೊದರಿಂದ ಬೀಜ ಖ ೫ಕೆ ಗಡಿ ಖ ೨೦ (ಮೈಅಂ. ೧೯೨೯. ೬೯-೨೬; 1632). **ಹೊದಱ್:** ೧. ತಾದಿಕೋಡೊಳ್ ವೇಣುಜಾಲಂಗಳ ಹೊದಱನಡರ್ದೆತ್ತುತ್ತುಂ . . . ಕಂಠದ ಬಿಣ್ಪಂ ಜೊಂಪಿಸುತ್ತುಂ ನಡೆದುದಡವಿಯೊಳ್ ದೀರ್ಘದೇಹಂ ವರಾಹಂ (ಸೂಕ್ತಿಸು. ೩-೩೯); ಹೊದಱಂ ಪುಗಿಸುರ್ಬು ನಟ್ಟು ನಿಲ್ಸರಳಿಸಲಿತ್ತು ಕುತ್ತು . . . ಸಾರೆನುತಿರ್ಪ ಬೇಡ[ರ]ಬ್ಬರಕೆರದೊಂದನೊಂದೆಡಪುತಾಳಿಳವಾಯ್ತು ಮೃಗೀಮೃಗವ್ರಜಂ (ಮಹಾಶೀ. ೮-೧೫); ಅದಱೊಳ್ ತಾವರೆವಳ್ಳಿಯ ಹೊದಱೊಳ್ ಬಿಸನಾಳಸಾರಮಂ ಸವಿದು ಸುಖಾಸ್ಪದದಿಂದಿರ್ದುದು ಜಾಂಬೂನದಹಂಸಂ ಮಱೆದು ತನ್ನ ಮಾನಸಸರಮಂ (ಕಳಕಂ. ೦೨೬). **ಹೊದಱು₁:** ೧. "ಉಲಪಃ, ಸ್ತಂಭಃ, ಗುಲ್ಮಃ, ವೀರುತ್, ವಿಟಪಃ—ಈ ೫ ಹೊದಱು" (ಕಶಾಹು. ೩೦-೩೬); ಇಡಿದಿರ್ದ ಹೊದಱನೊಳು ಸರಿವಿನೊಳು ವರಿವಿನೊಳು . . . ಬರುತಿರೆ (ಕಭ್ರಕ. ದೇ. ೦೨೯-೬); ಅರಣೆಯನು ಮೃಗವೆಳೆದುಕೊಂಡೀ ಹೊದಱ ಹೊಕ್ಕುದು ಬಹಳಕಾಸನದ (ಕುವ್ಯಾಭ. ೨೩-೬): ಹೊಕ್ಕು ಲೀಲಾಸರಸಿಗಳನಿರದೆ ಕಯ್ಯಿಕ್ಕಿ ಹೊದಱುಗಳೆಡೆಯನು ಹಿಕ್ಕಿ ಹೆಮ್ಮೆಳೆಗಳನಱಿಸಿ ನೋಡಿದೆವದು ಸಿಕ್ಕಿದುದಿಲ್ಲೆಮ್ಮ ಕಣ್ಗೆ (ಕುಶಾಸಾಂ. ೩೨-೨೪). ೨. ಬೆಳಗೆಯ್ಯ ಹೊದಱನೊಳು ಮುನ್ನಾಡಿದೆತೆಗಳೊಳು . . . ಮೇವ ತುಱುವಿಂಡಿನೊಳು ದಾರಿಯೊಳು ಸುತ್ತಿ ಸುಳಿದಱಿದಂ ಸಿದ್ಧರಾಮನಾ ಪರ್ವತಾಗ್ರಣಿ ಮಲ್ಲಿಕಾರ್ಜುನನನು (ಸಿದ್ಧರಾ. ೨-೩೬); ಸುಮಹಾರಥರ ಹೊದಱಲಿ ಹೊಕ್ಕನುರಿ ಬಲುಮೆಳೆಯ ಹೊಕ್ಕಂತೆ (ಕುವ್ಯಾದ್ರೋ. ೨-೩೦); ಹೊದಱ ರಥಾಳಿಗಳಡಾಯುಧ ಕಯ್ಯ ಪೊಡೆಸರಳ ಹೊದೆಗಳಂ ತತ್ತಸ್ಥಳಂಗಳೊಳ್ ಕಟ್ಟಿ ಬಿಲ್ ಹೆದೆಯನಾರ್ಕೈದು . . . ಎಟ್ಟಾಡಿದರ್ ಬಿಲ್ಲ ಬಿನ್ನಣಿಗರಂದು (ಕಂಪು. ೪೯-೪೯).

[ದೇ.॥ ತಮಿ. ಪುತರ್, ಪುತಲ್; ತುಳು. ಪುದೆರ್; ತೆಲು. ಪೊದರು]

**ಪೊದಱು** 'ಪೊದಱ್' ನೋ.

**ಪೊದಱುಗಟ್ಟು, ಹೊದಱುಗಟ್ಟು** (ಕ್ರಿ). ಗುಂಪುಗೂಡಂ; ದಟ್ಟೈಸು; ಒಟ್ಟುಗೂಡು: ಕೆದಱ್ ನಾಂದಿ ಪೊವಱುಗಟ್ಟುವ ಕದಳಿಗದಿರನಾರದಿನು ರಮಣಿಸಿ ನೆತ್ತಿಯಿಂ ಪೊತ್ತು ನೆಗೆದು (ಅಪಂಶು. ೬-೬೦ ವ). **ಹೊದಱುಗಟ್ಟು:** ಉದಯವಾಗದ ಮುನ್ನ ಕಳನೊಳು ಹೊದಱುಗಟ್ಟಿದ ವೈರಿಸೇನೆಯು ಹದನಿವರ ಪಾಳಯಕ್ಕೆ ಬಂದುದು (ಕುವ್ಯಾಶೀ. ೫-೬).

[ಪೊದಱು (<ಪೊದಱ್) + ಕಟ್ಟು₁]

**ಪೊದಱುಗೊಳ್, ಹೊದಱುಗೊಳ್** (ಕ್ರಿ). ದಟ್ಟವಾಗು; ಒತ್ತಾಗು: ಪುತ್ತಡರ್ದಿರ್ದ ಮೆಯ್ಯ್ ಪೊವಱುಗೊಂಡ ಜಟಾವಳಿ . . . ಕಷ್ಟಮೌನಮೊಪ್ಪುತ್ತಿರೆ ಜೀರ್ಣತಾಪಸಕುಲಂ ಮಱೆದಿರ್ಪುದು ತನ್ಮಹಾದ್ರಿಯೊಳ್ (ಧಕಲ. ೪-೩೦). **ಹೊದಱುಗೊಳ್:** ಚಲಿವ ಬಲುಶಾಖಾಸಮೂಹವ ಬಲು ಹೊದಱುಗೊಂಡಿಹ ಪಲಾಶಾವಳಿಗಳನು ಕಾಯ್ಗಳನು ಗೊಂಚಲುಗಳನ ವೆಲ್ಲವನು ಇಳುಹಿ ಬೊದರೇ ತಱಿವ ಮರದಂತಳವಡಿಸಿಕೊಂಡಿರಲು (ತಿಮ್ಮಕಾಂ. ೫-೧೧೯).

[ಪೊದಱು (<ಪೊದಱ್) + ಕೊಳ್₁]

**ಪೊದಱುವೆಳಗು, ಹೊದಱುವೆಳಗು** (ನಾ). ದಟ್ಟವಾದ ಪ್ರಕಾಶ: ಗಾಢವಾದ ಕಾಂತಿ: ತ್ರಿದಶಪತಿ ಗಿರಿಗಳಂ ಕಡಿವಂದು ತೆಗೆದಿಡುವೆನೆಂದು ತಿರಿಪಿದ ಕುಲಿಶದ ಪೊದಱುವೆಳಗಿಳೆಗಿಳಿದು ವಜ್ರಮಯವಾಗಿ ನಿಂದುದೊ . . . ಪೇಳೆನಲಿರ್ಪ್ಪೋಟೆ ಕಣ್ಗೆಸೆದುದು (ಕೃಪಚ. ೧೧-೩೬). **ಹೊದಱುವೆಳಗು:** ಮುದದಿನವನೀ ರಾಘವೇಂದ್ರನ ಪದಕನುತ ನಾನಾಸುರತ್ನದ ಹೊದಱುವೆಳಗಿನ ಹೊಂದೊಡವುಗಳ ಹೊಱಿಸಿ ಬೀಳ್ಕೊಟ್ಟ (ಕೂಕರಾ. ೪-೯-೨೦).

[ಪೊದಱು (< ಪೊದಱ್) + ಬೆಳಗು₁]

**ಪೊದಱೇಳ್, ಹೊದಱೇಳ್, ಹೊದಱೇಳು** (ಕ್ರಿ). ಗುಂಪುಗೂಡು; ದಟ್ಟವಾಗು; ಹೇರಳವಾಗು: ಇದಿರೆದ್ದು ಖಚರೇಶನೆಱಗೆ ನಾರದನಿಗೆ ಪೊವಱೆದ್ದು ಮಕುಟರತ್ನಾಂಶು ಕೆದಱಲು ಸುರಧನುವನು ಮುನಿ

ಕಾಳ್ಪಿರೆ ಮೃದುವಚನದೊಳಿಂತೆಂದ (ಶಬರ್ಶ. ೬-೦೦). **ಹೊದಱೇಳ್ :** ಘನವಿಕ್ರಮದ ಸಿರಿ ಹೊದಱೇಳೆ ಜಯವಿಕ್ರಮದೊಳಬ್ಬರಿಸಿದನ್ನ ನಿಷ್ಠುರಸಿಂಹನಾದಗಲಿ (ಕುಮಾ್ರರಾಮ. ೦೪-೯೮); ಹೊರಳಿಗಿಡಿಗಳು ಹೊದ ಕರಿಸಿ ಹೊದಱೆದ್ದು ರ್ಝುಳಪಲಿ ರ್ಝುಡಿಮದಾಶಾಭಿತ್ತಿ (ಕೊರಟಾ. ೬-೨೮-೨೮); ಹೊಂದಾವರೆಗೊಳ ಹೊವಱೆದ್ದ ತುಲಸಿಯ ನಂದನ ನಾಟ್ಯಕೀರ್ತನದಿ ಸಂದರ್ಶನದೊಳಬ್ಬುವ ಸ್ವಾಮಿಯ ಕೂರ್ತು ಮುಂದಣ ಕೃತಿವೇಳು ಮುದದಿ (ಜೋಹಕ. ೨೦-೦). [ ಪೊದಱ್ + ಏಳ್$_1$ (< ಎೞ್$_1$) ]

**ಪೊದಱೊಡೆ, ಪೊದರೊಡೆ, ಹೊದಱೊಡೆ** (ಕ್ರಿ). ೧. ಗುಂಪು ಚೆದರು; ದಿಕ್ಕಾಪಾಲಾಗು : ಪೊ[ಪಾಠಾಂ. ಹೊ]ದಱೊಡೆದು ಕುರುಸೇನೆ ತೆಗೆದೋಡಿದುದು ಭಯಜಲಧಿಯಲಿ ತೇಕಾಡಿದರು ಕೌರವಜನಪರೀ ಭೀಷ್ಮಾವಸಾನದಲಿ (ಕುಮಾ್ರಭಾ. ೦೦-೦೪). **ಪೊದರೊಡೆ :** ೨. ಗುಂಪುಗುಂಪಾಗಿ ಹರಡು ; ದಟ್ಟವಾಗಿ ವ್ಯಾಪಿಸು : ಕದಳೀಕ್ಷು ನಾರಿಕೇಳ ಚೂತ ದ್ರಾಕ್ಷೆಯಿಂ ಬದರಿ ದಾಡಿಮವು ಖರ್ಜೂರ ಹೇರಳೆ ನಿಂಬೆ ಪೊದರೊಡೆದ ಹುಳಿಸೆ ನೇರಿಲು ನೆಲ್ಲಿ ಹಲಸು ಫಲಭಾರದಿಂದೊಪ್ಪಿರ್ದುದು (ಶಬಷೋ. ೨-೬೨). **ಹೊದಱೊಡೆ :** ೧. ಮೇಲಿನ 'ಕುಮಾ್ರಭಾ' ಪ್ರಯೋಗದ ಪಾಠಾಂತರವನ್ನು ನೋಡಿ. [ ಪೊದಱ್ + ಒಡೆ$_1$ ]

**ಪೊದಱ್, ಪೊದಳ್, ಪೊದಳು, ಹೊದಳು$_1$** (ಕ್ರಿ). ೧. ಹೊರ ಹೊಮ್ಮು ; ಹೊರಸೂಸು : " ಪೊದಱ್ದುದೆನೆ ಪೊಣ್ಮಿದುದಕ್ಕ " (ಕಕಾಂ. ೭೮); ಮನ್ಮಥಶಿಖಿಜ್ವಾಲಾಳಿ ತಳ್ಪೀಱೆ ಬೇಯದೆ ಕಾಯ್ದೋಡಿನ ಜೋಳದಂತಲರ್ದೊಡಾ ಕಂಪುಂ ಮನಸ್ತಾಪಮುಂ ಪುದಿದೆತ್ತಂ ಬರೆ ಸುಯ್ ಪೊದಱ್ದು ಬಿಸಿದುಂ ಕಮ್ಮಿತ್ತುಮಾಯ್ತೀಪಳಾ (ಕಾವ್ಯಸಾ. ೫೬೮ ಕಾದ್ರಪ); ಪ್ರತಿದಿನಂ ನೃಪಚಂದ್ರನ ದಿವ್ಯದೇಹದಿಂ ಕಾಂತಿ ಪೊದಱ್ದು ಪರ್ವಿ ಗಗನಾಂತರಮಂ ಪುದಿದಿರ್ಪುದು (ಕಾದಂಸಾ. ೬೬೮); ವಿವಿಧಾತೋದ್ಯರವಂ ಪೊದಱ್ದುಖಿಳದಿಕ್ಚಕ್ರಂಬರಂ ಕೂಡೆ ಪೊಣ್ಮಿವಿನಂ (ಗದಾಯು. ೯-೬೭). ೨. ಉಂಟಾಗು; ಒದಗು; ಪ್ರಾಪ್ತವಾಗು : ಮುನೀಂದ್ರನ ದಿವ್ಯದೃಷ್ಟಿಮಂತ್ರದೊಳೆ ಪೊದಱ್ದುದಾ ಸತಿಯರಿರ್ವರೊಳು ನವಗರ್ಭವಿಭ್ರಮಂ (ಸಂಕಹಾ. ೦-೯೩); ಮನಕ್ಕುಮ್ಮಳಂ ಪೊದಱ್ದುದೆನಗಂ ಸರೋಜದಳನೇತ್ರೆ ನಿನ್ನಿಂದದಿ (ಪುಷ್ಪಶೃ. ೯-೨೫); ಮಱ್ ಕಂಬನಿಯಿಂ ದನಿಯಿಂ ಮೊಗೆಗೆಱಗಿದ ಮಕುಟದಿಂದೆ ಮಿಂಚೊಗೆಯೆ ಪೊದಱ್ದುಲಿಂದಂ ಮುನ್ನಡಿಯೊಳ್ ಮಱ್ ಗಾಲಮನೞ್ದು ಸೂನು ತಂದೆಗೆ ತಂದಂ (ಅಶಂಕೃ. ೩-೯೯). ೩. ಎದ್ದು ತೋರು; ಪ್ರಕಟವಾಗು ; ನಿಚ್ಚಳವಾಗಿ ಕಾಣು : ಕಂಜದಳೋಪ ಶೋಭಿತವಿಲೋಚನದೊಳ್ ನಿಟಲಾಗ್ರದೊಳ್ ಪೊದಱ್ದುಂಜನರೇಖೆ ಱಣ್ಗೆಸೆಯೆ (ಸುಕುಸೂ. ೧೦-೩೮); ಅಡಸಿ ಪೊದಱ್ದು ಪೆರ್ಮೊಲೆಗೆ ಕುಟ್ಮಲ ಹಾರಮನಾಂತಳಱ್ರಿಯಿಂ (ರಾಜಾಶ. ೦೪-೦೦೦); ಪೊದಱಿದ ಲಜ್ಜೆ ಪಲ್ಲಟಿಸ ದಾಸನಂ . . . ಪಲ್ಲ ಕೊನೆದಾಗದ ಚುಂಬನವೆಂಬಿವಿಚ್ಚೆಯೊಳ್ ಪುದಿದಿರೆ ಮೆಟ್ಟಿದಳ್ ನೆರೆದು ಪೊ:ಪವಳೋಪನ ಜಾಣ ಕೇಣಮು: (ಸೂಕ್ತಿಸು. ೯-೦೫೪). ೪. ಹರಡು; ವ್ಯಾಪಿಸು; ಆವರಿಸು: ಪುಟಂ ತನ್ನರ್ಚಿಗಳ್ ಬಂದು ಮೊಕ್ಕಳಮತ್ತಂ ಸುರಿಯುತ್ತುಮಿರ್ಪ ರಸಮಂ ಪುಟಂ ಪೀರ್ದುಕೊಂಡಂ ಮನಂಗೊಳೆ ಸಪ್ತಾರ್ಚಿ ಪೊದಱ್ದು ನೀಳ್ದೊಸಗೆಯಿಂದಾಪೋಶನಂಗೊಳ್ವ ಪೋಲ್ (ಶಂಪಾ. ೩-೯೬); ಪೊಸಜವ್ವನದೇಱ್ಗಿಯೊಳ್ ತಪಶ್ಚರಣಮಿದೇಂ ಪೊದಱ್ದಿದ ಕಾನನದೊಳ್ ಬಿಡದೊರ್ಬಳಿರ್ಪುದೇಂ (ಕಾದಂಪೂ. ೬೯೮); ಸಿಂಗರಮೇಱ್ಗಿಯುಂ ಪಡೆಯೆ ದೇಸೆ ಪೊದಱ್ದಿರೆ ಕೊಂಕು ತೀವೆ . . . ನನೆವಿಲ್ಲನ ಚೀರಮನೊಲ್ದು ಪೇಱ್ವನಾಂ (ಕಬ್ಬಿಗ. ೦೭). ೫. ಅಧಿಕವಾಗು ; ಹೆಚ್ಚಾಗು ; ವೃದ್ಧಿಯಾಗು : ಕಲಿಯುನೆ ಪಾದೆ ಮುಟ್ಟ ಕಡುವಂದೆಯನೊಳ್ಗಲಿ ಪಾಟ್ಟಿ . . . ತಮ್ಮೊಳಗ್ಗಲಿಸಿ ಪೊದಱ್ದು ಹರ್ಷದವಿಶೇಷತೆಯಿಂ ನೃಪಚಿತ್ತವೃತ್ತಿ ಸಂಚಲಮಪ್ಪದಱಿಂದಮೋಲಗಿಸಿ ಬಾಱ್ಪದೆ ಕಷ್ಟವಿಳಾಧಿನಾಥರಂ (ಶಂಕಹಾ. ೦೨-೯೨); ಪುಟ್ಟಿದ ನೂರ್ವರು ಮನೆನ್ನೊಡವುಟ್ಟಿದ ನೂರ್ವರುಮಿರ್ದರ್ ಸತ್ತೊಡೆ ಕೋಪಂ ಪುಟ್ಟಿ ಪೊದಱ್ಪುದು ಸತ್ತರ್ ಪುಟ್ಟರೆ ಪಾಂಡವರೊಳಿಱಾದು ಛಲಮನೆ ಮೆಱೆವೆಂ (ಗದಾಯು. ೩-೫೪); ಪಾದನನ ಬಲ್ಲ ಬಲ್ಮೆ ಬಲಿದಿತ್ತು ವಸಂತದ ಮೋಹನಂ ಪೊದಱ್ದುದು ಕಡುಗಾಡಿವೆತ್ತಲೆವ ತೆಂಗಾಳಿಯ ಸೋಂಕು ಸೊರ್ಕುವೆತ್ತುದು (ರಬಾಣಾ. ೦-೬೨). ೬. ದೊಡ್ಡದಾಗು ; ತೋರವಾಗು; ಸ್ಥೂಲವಾಗು : ಜಗದ ಬಡತನವನೊರ್ವಿಯೆ ಬಗೆದಂತಿರೆ ಕಿಡಿಪ ಚಕ್ರಿ ತನ್ನಿರ್ದೆಡೆಯೊಳ್ ನೆಗಟ್ದು ಬಡತನವನದನೇಕೆ ಗಡಂ ಸೈರಿಸುವನೆನೆ ಪೊದಱ್ಪುದು ಮಧ್ಯಂ (ಆದಿಪು. ೯-೩೦): ಬಿಸರುಹನೇತ್ರೆಯೊಳ್ನಡು ಪೊದಱ್ದುದು ದಾಂಗುಡಿಯಿಟ್ಟು ಬಾಸೆ ನೀಳ್ದಿಸೆದುದು . . . ಗರ್ಭದೇಱ್ಗಿಯೊಳ್ (ಶಂಕಹಂ. ೧೬೪-೧೧). ೭. ಶೋಭಿಸು ; ಕಾಂತಿಯುಕ್ತವಾಗು; ವಿರಾಜಿಸು: ಇದು ನಿನ್ನೀಯುಗಲ್ದುರದೊಳ್ ಪೊದಱ್ದು ತನತೊಂದು ಜನ್ಮಮಂ ಸಫಲಂ ಮಾಱ್ಪುದಿತೆಂದು ಕುಂವದಲಶಾರದ ನೀರದನಿರ್ಮಲಂ ಭವತ್ಕೀರ್ತಿಯಪೋಲ್ (ಆದಿಪು. ೦೨-೦೦೯) : ಪುಸಿ ಮುಳಿಸಿಂದಂ ಪಿರಿದುಂ ಪ್ರಯತ್ನದಿಂದಮೆ ವಿರಚಿಸೆ ಕಣ್ಗೆಸೆವ ಭೀಷಣ ಭ್ರುಕುಟಿ ಪೊದಱ್ದಿರೆ (ಕಾದಂಪೂ. ೭೬೦); ಭುವನಮನಾವಗಂ ಪುದಿದು ಕಿಱಿದ ತಣ್ಗದಿರ್ಗಳ್ ಪೊದಱ್ದು ಕೈರವವನಮಾದುವೆಯ್ದೆ ಪೊಸಮಲ್ಲಿಗೆಯಾದುವು . . . ಹಿಮಮಾದುವಲ್ಲದೊಡೆ ಚಂದ್ರನ ಚಂದ್ರಿಕೆ ಮಾಯಮಾದುದೇ (ರಾಜಾವ. ೩-೭). ೮. ಪ್ರಸಿದ್ಧವಾಗು; ಕೀರ್ತಿಯನ್ನು ಪಡೆ; ಹೆಸರನ್ನು ಗಳಿಸು: ಜಗತ್ತ್ರಿತಯಂಗಳೊಳ್ ಜಸಕ್ಕಾಗರಮಾದ ಒದ್ದೆಗನಿನಾ ನರಸಿಂಹನನತ್ತ ನಾಲ್ವರಲ್ ಮೇಗು ಪೊದಱ್ದು ಬಾಗದೊಳವೊಂದಿದ ಬೀರದೊಳಂ ಗುಣಾರ್ಣವಂ (ಶಂಕಹಾ. ೦-೩೦) ; ಪೊದಱ್ದಧಿರಾಜಲಕ್ಷ್ಮಿಯೊಳ್ ನಿಸದಮ ವಿಶ್ವಭೂತಿ ವಸುಧಾಪತಿ ತಾನೊಲವಿಂದಮಿರ್ದು ಭೋಗಿಸಿದನಶೇಷ ಭೋಗಮಂ (ವರ್ಧಪು. ೦-೯೦) ; ಕ್ರಮದಿಂದೆ ಸಂಧಿ ನಾಮಂ ಸಮಾಸಮಾ ತದ್ಧಿತಂ ಪೊದಱ್ದಾಖ್ಯಾತಂ ಪ್ರಮುದಿತಧಾತುವಪಭ್ರಂಶಮವ್ಯಯಂ ಸಂಧಿ ಶಬ್ದಮಣಿದರ್ಪಣದೊಳ್ (ಶಮದ. ೧). ೯. ಒಂದಾಗು; ಸೇರು; ಕೂಡು : ಎಸೆವ ವಿಮಾನಘಂಟೆಗಳ ಮೆಲ್ಲುಲಿ ಕಿನ್ನರಗೇಯದೊಳ್ ಪೊದಱ್ದಿಸೆಯೆ (ಆದಿಪು. ೨-೯೦); ನುಡಿ ಪುಸಿಯೊಳ್ ಪೊದಱ್ದಿರಪು ದಾನದ ಪೊಂಪುಱ್ ಲೋಭದಾಸೆಯೊಳೊತ್ತಡರದು (ಶಮಶ. ೬-೨). ೧೦. ಹೊಂದು; ಪಡೆ; ತಾಳು: ಧರಣೇಂದ್ರನೋಲಗಕ್ಕಂ ಸುರಪತಿಯೊಡ್ಡೋಲಗಕ್ಕಮಿದು ಮಿಗಿಲೆಂಬೋಲ್ ಕರಮೊಪ್ಪಿರ್ದುದು ಸಭೆಯಾ ತರಳಾಕ್ಷಿಯರಿಂ ಪೊದಱ್ದು ನೂರ್ಮಡಿ ಚೆಲ್ವಂ (ರವರ್ಣಾಮ್ರ. ೯-೦೯೬); ಮೊದಲೆರಡು ವಿಭಕ್ತಿಯೊಂ ಪೊದಱ್ಗುಮಲ್ ಕಾಲಮಾಚಿಯುಂದಿಂದುಂದೆಂಬುದುಮೇಕರೂಪಮಾಗಿರ್ಪುದು ಮೊದಲೆರಡುಂ ವಿಭಕ್ತಿಗಂ ಸಪ್ತಮಿಗಂ (ಶಮದ. ೦೨೦); ಶ್ರೀ ಚಾಮರಾಜೇಂದ್ರನೀ ಬಿರುದೆಲ್ಲಾ ಬಿರುದಂಗಳೊಳ್ಪನಿಱಿಕೆಯ್ದಾರ್ಪಿಂ ಪೊದಱ್ದೊಪ್ಪುಗುಂ (ಶಕಶ. ೨-೬). ೧೧. ಅಂಟಿಕೊಳ್ಳು; ಹತ್ತಿಕೊಳ್ಳು: ತರುಣಿಯರಂಮ ಕಂಸನ ವಿಯೋಗದ ಶೋಕದೆ ಬಿಟ್ಟು ಧಾತ್ರಿಯೊಳ್ ಪೊರಳೆ ಪೊದಱ್ದು ಮೆಯ್ಯ ರಜವಶ್ರುಜಲೌಘದೆ ನಾಂದು ಕರ್ದಮಂ ಬೊರೆದವೊಲಾಗಲ್ (ಜಗಂ. ೬-೯೬). ೧೨. ವಿಶಾಲವಾಗು; ವಿಸ್ತಾರವಾಗು : ನಗೆಮೊಗಮಂ ಪೊದಱ್ದಲರ್ದ ತಾವರೆಯೆಂಬ ವಿಮೋಹದಿಂ ಮೊಗಂಬುಗಲೊಡಮಾ ತಳೋದರಿಯ ಸುಯ್ಗಳ ಬೆಂಕೆಯೊಳಿಚ್ಚೆಗೆಟ್ಟು . . . ಪಾಱದುವುನ್ಮದಾಳಿಗಳ್ (ಶಂಕಹಾ. ೩-೧೦). ೧೩. ಚೆದರು; ಚೆಲ್ಲಾಪಿಲ್ಲಿಯಾಗು ; ದಿಕ್ಕಾಪಾಲಾಗು : ಆ ಸತಿಯಿಂಕ್ಕಿದ ಕಣ್ಣ ನೀರ ಧಾರೆಗಳೊಳೆ ನಾಂದೆಲರ್ಚಿ ಪೊದಱ್ದೊರ್ವಯೆ ಪಾಱಾದುವುನ್ಮದಾಳಿಗಳ್ (ಶಂಕಹಾ. ೩-೦೦). ೧೪. ಉಬ್ಬು ; ಉತ್ಸಾಹಿಸು ; ಹರ್ಷಿಸು : ವಿತತಕಳಾಪ್ರವೀಣತೆಯಿನೆಯ್ದೆ ಸರಸ್ವತಿ . . . ಪತಿಭಕ್ತಿಯಿಂ ನೆಗಟ್ದರುಂಧತಿಯೆಂದು

ಪೊದಟ್ದು ಬಣ್ಣಕುಂ ನುತವಿಜಯಾವನೀಶಸತಿಯಂ ಸಲೆ ಪೊನ್ನಲದೇವಿಯುಂ ಜಗಂ (ಪೇಬಿಕ್ಕ. ೦-೨೬); ಚಂದಿರನುಂ ರೋಹಿಣಿಯೊತನೊಂದಿ ಪೊವಟ್ದುದಿಸಿ ಬಂದನಿರುಳರೆಗಳಿದತ್ತುಂದಿನಪೋಲಟ್ಟಿಯಿನಾನಂದಂ ಪೊಗರೇಱೆ ಭವದೊಳಾವಿರ್ಭವಿಸಾ (ಕಲಿ. ೬-೨೩೦). **ಪೊದಳ್ :** ೧. ಪುದಿದ ಹಿಮಮೊಡಲೊಳಿತಂದುದರಾಗ್ನಿಯನೆಯ್ದೆ ನುಡಪೊಯ್ವುದು ನಿಜವಲ್ಲದೊಡೆಂತು ತೋರ್ಪುದೋ ಪೇಳ್ಮೊದಲಿಲ್ಲದ ಪೊಗೆ ಪೊದಳ್ದು ಜನದಾನನದೊಳ್ (ರಾಜಶೇ. ೯-೦೮). ೨. ವಿಳಸನವಂ ಪುದುಂಗೊಳಿಪ ನನ್ದನದೊಳ್ ಪೊದಳ್ದಳುಂಬದಿಂ ಬೆಳೆದೆಱಗಿರ್ಪ್ಪ ಶಾಳಿನವಸೌರಭಮಂ ನಯದಿಂ ದೆಸೆ × × × ನ್ವಳಸುವ ಗಾಳಿ (ಶಾ. V. ೨೦-೨೯ ; 1126) ; ಸ್ಫೀಪುನ್ನಾಗವೆರಡು . . . ಪೊದಳ್ದಾತುರದಿಂ ಸಮಸಂಭೋಗಕ್ರೀಡೆಯೊಳಾಲಿಂಗಿಸಿದುವು ಹೂಗಣೆಯಿಂ ಹುರಿಗೂಡಿದ ಸಂಮೋಹನಮಾಶದ ತೆಱದಿ (ಖಯಾಕಾ. ೦೦-೨೮). ೩. ಮೇಲುದಿನೊಳ್ಪೊದಳ್ದ ಕುಚಭಾರದಿಂ ನಸುವಾಗಿದಂಗಲತ್ತಲಹರಿಗಳ . . . ವಿನುತಾಷ್ಟಮಹಿಷಿಯರ್ಚಾರುಚಾಮರತಾಲವೃಂತಪಂ ಪಿಡಿದಿರ್ದರಚ್ಯುತನ ಕೆಲಬಲದೊಳು (ಕೃಪಾಶಾ. ೬-೯೬). ೪. ಒಪ್ಪುವ ಪಂಚಮಹಾನಕಂಗಳಿಂ ಬಳಸಿ ಪೊದಳ್ದ ವಾಜಿದಳದಿಂದಮಗುರ್ವ್ವಿಪ ವೀರಕೋಟಿಯಿಂ (ಸೌಇ. XI-1, ೫೨-೬೪; 1007) ; ತೇಜದುರ್ಬ್ಬೆಳಸಮುಂ(ಮು)ದ್ರುಮಂಗಳಿಯೆ ಪರ್ಬ್ಬಿಪೊದಳ್ದುದು (ಇಅ. V. ೦೬-೦೮ ; 1019) ; ಚತುರಂಭೋನಿಧಿವರೆಗಂ ಚತುರಂಗಬಲಂ ಪೊದಳ್ದು ಬಿಡೆ ಪದ್ಮಜನೇಂ ಚತುರನೊ ತದ್ಬ್ಯಾರಮಾನಹಿಪತಿ ಪೊಱಲೆಂದಂದೊಡರ್ಚಿದಂ ಬಹುಶಿರಮಂ (ರಾಜಶೇ. ೬-೨೫). ೫. ಪದತಳದೊಳ್ ತೊಡಂಕಿ ಪರಿದಾಡಿ ಪೊದಳ್ದಿಸೆವಂಗದೇಶದೊಳ್ ಪದೆದು . . . ಸನ್ತಪ್ತಧಾಂಶುಗಳ್ ಪುದಿದ ತದೀಯ ಮೌಳಿಯೊಳೆ ವಿಶ್ರಮಿಸಿರ್ದುದು ದೃಷ್ಟಿ ಪಾರ್ಥನಾ (ಕಬಕಂ. ೫-೦೫). ೬. ನಡು ಪೊದಳ್ದವು ವರವಳಿತ್ರಯವಡಗಿದವು . . . ಬೆಳ್ಪಡಸಿದವು ಮುಖಮಂಡಲಗಳಾ ಮಾನಿನೀತ್ರಯದ (ತೊರರಾ. ೦-೮-೩). ೭. ಪೊಱಪೊಳಲೊಳ್ ಪೊದಳ್ದ ನವನನ್ದನಬೃಂದದಿಂ (ಎಇ. XIII. ೩೩೦-೨೬ ; 929) ; ಅಡಿದಳದ ಬಲ್ಸೊಂಪು ಕೆಂದಳಿರ ಪೆಂಪನ ವಗಡಿಸಿ ಮರನೇಱಿಸ ಪೊದಳ್ದುಗುರ್ ಶುಕ್ತಿಜದ ಬೆಡಗಿಂಗೆ ಭಂಗಮಂ ಸಂಗೊಳಿಸೆ . . . ಸೊಗಸನೇವಣ್ಣಿಪಂ (ಕರ್ಣಾ. ೩-೨೬) ; ಸಣ್ಣನಡು ಸ್ಫನಿಮಿರೆ ತೋಳ ಮೊದಲೊಳ್ಪಸೆಯೆ ಪಿಣ್ಣ ಮೊಲೆಗಳ್ಪೊದಳೆ ... ಪೆಣ್ಣಿವಿಂದಾ ಬನದೊಳಲರ್ಗಳಂ ತಮ್ಮ ತನುವಿನ ಕಂಪಿನಿಂ ಪೊರೆದರು (ಕೃಪಾಶಾ. ೮-೧೮). ೮. ಸಂಗಡಿಸಿದ ಬಡತನದೆ ಕುನುಂಗಿ ಕರಂ ಪೆಸರಿನೊಂದರಿಂದುಳಿದಿರ್ದಾ ಸಂಗೀತಂ ದಿನದಿನಕಂ ಪೊಂಗಿ ಪೊದಳ್ದೇಳ್ಗೆವಡೆದುದೀ ಧಾರಿಣಿಯೊಳ್ (ಮಹಾಕ. ೯. ೦೦). ೯. ಮದಗನ್ಧಶಾಳಿವನದಿಂ ಬಿಡದೊಪ್ಪುವ ಕರ್ವ್ವಿನೋಣ್ಪದಿನೊಳ್ಗೆ ಪೊದಳ್ದ ದೇವಕುಲಸಂಕುಲದಿಂ ದ್ವಿಜಸೌಧಗೇಹದಿನ್ದೆಳೆಗಸೆದತ್ತು ಪಲ್ಲವಪುರಂ (ಎಕ. V. ಅರಸೀ. ೦೨೬-೬೦ ; 1185) ; ದಟ್ಟಡಿಯನಿಡೆ ರನ್ನದಂಮಗೆಯಾ ಮೆಱೆವ ದನಿ ತಾವರೆಯ ರಜದಲಿ ನೆಱೆ ಪೊದಳ್ದೆಳೆದುಂಬಿಮಾಲೆಯ ಕಿಱುದನಿಯಮೊಲು ಜನನ ಚರಣಾಂಬುಜ ದಲೊಪ್ಪಿದವು (ಶಾಲ್ಕಶಾ. ೩೩-೧೦೩) ; ಮಹೀರಮಣನ ತೇಜಮನೇನೆಂಬೆಂ ಪೊದಳ್ದ ರವಿಶತರುಚಿಯಿಂದಮದ್ದಿರ್ ಪೊಱಪಳಯಮಂ ಹೇಮಮಯಮಿದೆನಿಸಿತ್ತ್ರಹ್ಮಾಂಡಮಂಡಳಮನಿತಂ (ರಾಜಶೇ. ೫-೬). ೧೦. ನಿಮಗೊಪ್ಪುವುದಾವುದದಂ ಪೊವಳ್ದುಕೊಂಬುದು ವಿಪ್ರಾ (ಶಿವ್ಯಪು. ೨-೩-೦೩೦). ೧೧. ಕ್ಷಿತಿವಲ್ಲಭನೇಕಾಂತಸ್ಥಿತಸೌಭರಿಮುನಿಸಮೀಪಮಂ ಸಾರ್ದವನೀಂದತಿ ಸನ್ಮಾನಿತನಾಗಿಯೆ ಕೃತಾಸನಪರಿಗ್ರಹಂ ಪೊದಳ್ದಿಂತೆಂದಂ (ಶಿವ್ಯಪು. ೪-೦-೦೯೨). ೧೨. ಬಳಕೆಯಲ್ಲಿರು ; ಉಪಯೋಗದಲ್ಲಿರು : (೬). ೧೩. ಚಾಚು ; ನೀಡು : ವಸರಂಬೆತ್ತ್ರಿಡೆಯಾದ ನೀಡಡಿ ಪೊದಳ್ದಾಕರ್ಣವಾಕುಂಚಿತಾಸ್ತ್ರಸಮೇತೋಟ್ಟಕರಾಗ್ರಂ...ತಾನಿಸಲೊಂದೊಂದುಕುರಂಗಮಂ ಶಬರನಿಂತಿರ್ದಂ ಮಹಾರಣ್ಯದೊಳ್ (ಗಿರಿ. ೦-೯೯). ೧೪. ರಭಸವನ್ನು ಹೊಂದು ; ವೇಗವನ್ನು ಪಡೆ ; ತ್ವರೆಗೊಳ್ಳು : ಕ್ರೂರೋನ್ನತಸ್ಕಂಧನಾ ತ್ರಿದಶಾರಾತಿ ಪೊದಳ್ದು ಪೊಕ್ಕನಿರುಳೊಳ್ ತದ್ಗೋವ್ರಜಸ್ಥಾನಮಂ (ಶಿವ್ಯಪು. ೫-೩-೦೯೨). ೧೫. (?): ವಿತತಮತಿ ಬಾಷ್ಕಳಂ ಸಂಹಿತೆಗಳ್ ಮೂಱುಂ ಪೊದಳ್ದು ಬೇಱೆಸಗಿ ನಿಜಾಶ್ರಿತಶಿಷ್ಯವರ್ಗಕಾ ಸಂಹಿತೆಗಳನೋದಿಸುವವೇಕ್ಷೆಯಿಂದಿರ್ದಗಳ್ (ಶಿವ್ಯಪು. ೩-೦-೦೯೫). **ಪೊದಳು:** ೧. ಹದಿಬದೆಯು ತೋಡಿರುವ ಎದೆಯುದ್ದ ಶಿವಗುಣಿಯು ಪೊವಳಿದಾ ಒರತೆ ಕಲ್ಯಾಣಪುರದೊಳಗೆ ಕದಳಿಬನವೆಂದು ಹೆಸರಾಯ್ತು (ಕನ್ನಶಾ. ೩೬೬).

**ಹೊದಳು₁ :** ೧೬. ವದನವಿರ್ದುದು ಹತ್ತುಯೋಜನ . . . ಹೊದಳುತಿರ್ದುದು ನಡುವೆ ನಾಲಿಗೆಮುದಿಯು ತಾ ಹನ್ನೆರಡುಯೋಜನ ರುಧಿರಬೀಜನ ಘೋರತರ ಚೀರಿಸಿತು ಹರಿಹರರ (ಅಂಬಿಕಾ. ೯೨-೦೦೬).

[ದೇ.॥ ತಮಿ. ಮಲ. ಪೊತಿರ್ ; ತುಳು. ಪೊದಲು ; ತೆಲು. ಪೊದಲು, ಪೊದುರು]

**ಪೊದಟ್ಕೆ₁, ಪೊದಳ್ಕೆ** (ನಾ). ೧. ಹುಟ್ಟು ; ಉದಯ; ಆರಂಭ : ನುಡಿಯ ಪೊವಟ್ಕೆಯೊಳೊಳ್ನುಡಿ ನುಡಿದಂ ನಿಜಸಕಲಚಕ್ರವರ್ತಿತ್ವಕ್ಕಂದಡಿಯಿಡುವಂತೆ ನಿರಂತರಮಡಿಯಿಟ್ಟಂ ಪದ್ಮರಾಗಮಣಿಕುಟ್ಟಿಮದೊಳ್ (ಆದಿಪು. ೮-೯೦). ೨. ಹೆಚ್ಚಳ; ಆಧಿಕ್ಯ ; ಅತಿಶಯ : ಸಿರಿಯ ಶರೀರದ ರೂಪಿನ ನರರೈಶ್ವರ್ಯದ ಪೊವಟ್ಕೆಗಳ್ ಕರಗುವವೋಲ್ ಶರದಂಬುಧರಂ ಭೋಂಕನೆ ಕರಗಿದೊಡರ್ದೆ ಕರಗಿ ಕೊರಗಿದಂ ಧರಣೇಶಂ (ಆದಿಪು. ೯-೬೯); ಪುರುಡಿಸುವಳ್ ವಿಳಾಸದ ಪೊದಟ್ಕೆಗೆ ವಿಭ್ರಮದೇಟ್ಗೆಗಂಬರಚರಿಯ ರೊಳಿಂದ್ರಲೋಕಲಲಿತಾಂಗಿಯರೊಳ್ . . . ಆವಗಂ ಸೆಣಸುವಳ್ ಸಲೆ ಗಾಡಿಗಮುನ್ನತಿಕ್ಕೆಗಂ (ಧರ್ಮಾಮೃ. ೮-೦೬೬); ಹೃದಯದಲಂಪು ಪೊಗೆ ಪದೆದೀಂಟದೆ ಮುನ್ನಮೆ ತನ್ನ ಕಂಪಿನಿಂ ಮದದ ಪೊದಟ್ಕೆಯಂ ಮನಕೆ ಮಾಟ್ಪ ವಿನೂತನವೃಕ್ಷಧಾನ್ಯಸಾರದೆ ಮಧುಪಾಳಿಗಳ್ ಸುಟಿಗೊಳುತ್ತಿರಲ್ (ಶಾಂತೀಶ್ವ. ೩-೬೦). ೩. ಕಾಂತಿ; ಶೋಭೆ: ಕ್ಷಾಯಿಕದೃಷ್ಟಿ ತುಷ್ಟಿಯೊಳೊಡಂಬಡೆ ಜೈನವಚೋಮೃತಂ ಮುಖಶ್ರೀಯ ಪೊದಟ್ಕೆಯಂ ಬೆಳಗೆ (ಶಾಂತಿಪು. ೦-೯); ಕೊರಳ ಜನ್ನವರಂ ಪೊದಟ್ಕೆಯನೆಯ್ದೆ ಪೊಂಚುವ ಬೆಳ್ಪಿಯುತ್ತರಿಗೆ ಭಾಸುರಮಪ್ಪ ತೇಜಮಗುರ್ವ್ವ ಪರ್ವಿರೆ (ಧರ್ಮಾಮೃ. ೯-೨೦೬). ೪. ರಾಶಿ ; ಸಮೂಹ ; ಗುಂಪು : ಚದುರ ಪೊದಟ್ಕೆ ಸಂಪದದ ಬೊಂಬುಳಿ ಸತ್ಕದ ಬಿತ್ತರಂ . . . ಕೂಡೆ ಭೋಗದ ಕಣಿಯಾಯ್ತು ತಾಂ ತನಗೆ ಪೌರಜನಂ (ಜಗಂ. ೯-೦೦೬); ನಿಮಿರ್ಕೆವೆತ್ತ ತಣ್ಗದಿರ ಪೊವಟ್ಕೆಯಂ ಕಱೆವ ನವ್ಯಕಲಾವಿಸರಂ ಮಸುಳ್ದು ಮಾಸಿದ ಮುಕುರಂಬೊಲಂತೆ ವಿಗತಪ್ರಭನಾಯ್ತಮೃತಾಂಶುಮಂಡಲಂ (ಕುಸುಮಾ. ೪-೬೬). ೫. ಹರ್ಷ ; ಉತ್ಸಾಹ : 'ಪೊದಟ್ಕೆವಡೆ' ಪರಾ. **ಪೊದಳ್ಕೆ :** ೨. ರಾಜ್ಯಸಂಪದದ ಪೊದಳ್ಕೆ ತೇಜದ ತೆರಳ್ಕೆ ವಿರೋಧಿಯ ಬೞಲ್ಕೆ ತನ್ನದೆಂಬುದನೆ ಪೆರ್ಮೆಯಂ ತಳೆದನೋ ನೃಪರೊಳು ನೃಪತ್ಯಲಶಾಂತರಂ (ಎಕ. VIII. ಸಾಗರ. ೦೫೯-೦೩ ; 1169) ; ತಂನೆಸೆವ ರಾಯಮುರಾರಿವೆಸರು ಪೊದಳ್ಕೆಯಿಂ ನೆಲೆಗೊಳೆ ಸೋವಿದೇವಪೃಥ್ವೀಪತಿ ವಿಕ್ರಮಮಂ ನಿವಿಟ್ಚರ್ದಂ (ಐನಕ. ೫೦-೦೦ ; 1170) ; ಪರಿವ ಪಡಂಗು ಬಲ್ದೆರೆಯ ಸಾಲ ಬೆಡಂಗು ನವೀನವಿದ್ರುಮೋತ್ಕರದ ಪೊವಳ್ಕೆ ಶುಕ್ತಿಜದಳುರ್ಕೆ . . . ಚೆಲ್ವ ಬಿತ್ತರಿಸೆ ಪೊಡರ್ಪುವೆತ್ತು ಬಗೆಗೊಂಡುದು ಪೂರ್ಣಗುಣಂ ಮಹಾರ್ಣವಂ (ಕಬಕಂ. ೦-೩೯). ೬. ಎದ್ದು ಕಾಣುವಿಕೆ; ನಿಚ್ಚಳವಾಗಿ ತೋರುವಿಕೆ ; ಪ್ರಕಟವಾಗುವಿಕೆ : (೬). ೭. ರಭಸ; ವೇಗ; ತ್ವರೆ: ಪ್ರಲಂಬಕಂಧರಂ ದುರಾಸದಂ ಪೊದಳ್ಕೆಯಿಂದೆ ಗೋಕುಳಕ್ಕೆ . . . ಬರ್ಪನಂ ಭಯಂಗೊಳುತ್ತೆ ಗೋಪಗೋಪಿಯರ್ಕಳಾಕ್ಷಣಂ ಕೊರಲ್ಚಿದರ್ (ಶಿವ್ಯಪು. ೫-೩-೦೯೩). [ಪೊದಟ್ + –ಕೆ]

Δ**ಪೊದಟ್ಕೆ₂** 'ಪೊದಕೆ₁' ನೋ.

**ಪೊದಟ್ಟಿಗುಂದು** (ಕ್ರಿ). ಹೆಚ್ಚಳವು ಕಡಮೆಯಾಗು; ಅಧಿಕ್ಯವು ಕುಗ್ಗು: ಘನಾಘನಸ್ತನಂ ಪೊದಟೆ ಪೊದಟ್ಟಿಗುಂದಿದುದು ವಾಃಕಣ ಸಂತತಿ ಸೋರೆ ಸೋರ್ದಡಂಗಿದುದೆಳಗಾರೊಳಾ ಸಕಳಚಾತಕಪೋತಕೃಪಾ ವಿಷಾದನಂ (ಸಂಕ್ರಕ್. ೯–೯೬). [ಪೊದಟ್ಟಿ$_1$+ಕುಂದು$_1$]

**ಪೊದಟ್ಟಿವಡೆ, ಪೊದಳ್ಕೆವಡೆ** (ಕ್ರಿ). ೧. ಹೆಚ್ಚಳವನ್ನು ಪಡೆ: ಅಧಿಕ್ಯವನ್ನು ಹೊಂದು; ಸಮೃದ್ಧವಾಗು: ಆ ರಾಜಕುಮಾರನನೇಕ ಕಲಾಕಲಾಪಪ್ರವೀಣನಾಗಿ ಯುವರಾಜಲಕ್ಷ್ಮಿಯೊಡನೆ ವಿಸ್ತಾರಮಂ ಕೈಕೊಂಡ ವಕ್ಷಸ್ಥಲಮುಂ ಬಂಧುಜನಮನೋರಥಂಗಳೊಡನೆ ಪೊದಟ್ಟಿವಡೆದ[ಪಾಠಾಂ. ವೆತ್ತ] ವೃತ್ತೋರುಸ್ತಂಭಂಗಳುಂ...ಆತ್ಮೀಯಯೌವನಪ್ರಾದುರ್ಭಾವಮಂ ಪ್ರಕಟಂ ಮಾಡೆ (ಅಂಥಿ. ೩–೯ ಪ); ಪೊದಟ್ಟಿವಡೆದ ಸದ್ದರ್ಪಾಪೀಯೂಷ ಮಹಾಪ್ರವಾಹಂ ವಂಗಮಂಡಲದೊಳ್ ತರುಗಂಗೊಂಡು ಕಳಿಂಗಮಂಡಲ ದೊಳ್ ಮಡುಗಟ್ಟಿ ನಿಂದು . . . ಪರ್ವೆಗಾಪೀವರ್ಧಮಾದುದು (ಅಜಿತ. ೦೯–೯೬ ಪ). **ಪೊದಳ್ಕೆವಡೆ**: ೨. ಉತ್ಸಾಹವನ್ನು ಹೊಂದು; ಉಬ್ಬು; ಹರ್ಷಗೊಳ್ಳು: ಜೈನಸಮಯಾಂಬುಧಿಕೀರ್ತಿಸುಧಾಂಶುವಿಂ ಪೊದಳ್ಕೆವಡೆಯೆ ರೇಚಿರಾಜನಸದಂ ಜಸದಿಂ ಮಸುಧೈಕಬಾಂಧವಂ (ಎಕ. VII, ಶಿಕಾ. ೦೯೭–೭೨; 1182 ?). [ಪೊದಟ್ಟಿ$_1$+ಪಡೆ$_1$]

**ಪೊದಟ್ಟಿವೆಱು** (ಕ್ರಿ). ೧. = ಪೊದಟ್ಟಿವಡೆ ೧: ಆ ರಾಜಕುಮಾರ ನನೇಕಕಲಾಕಲಾಪಪ್ರವೀಣನಾಗಿ ಯುವರಾಜಲಕ್ಷ್ಮಿಯೊಡನೆ ವಿಸ್ತಾರವಮಂ ಕೈಕೊಂಡ ವಕ್ಷಸ್ಥಲಮುಂ ಬಂಧುಜನಮನೋರಥಂಗಳೊಡನೆ ಪೊದಟ್ಟಿ ವೆತ್ತ[ಪಾಠಾಂ. ವಡೆದ] ವೃತ್ತೋರುಸ್ತಂಭಗಳುಂ . . . ಆತ್ಮೀಯಯೌವನ ಪ್ರಾದುರ್ಭಾವಮಂ ಪ್ರಕಟಂ ಮಾಡೆ (ಅಂಥಿ. ೩–೯ ಪ). ೨. ಶೋಭೆ ಯನ್ನು ಹೊಂದು; ಮನೋಹರತೆಯನ್ನು ಪಡೆ: ಪೊಳೆವಲರ್ಗಣ್ಣ ನೀಳ್ದ ನಿಡುಮುರ್ವಿನ ಸುಕ್ಕಿದಮರ್ಕೆವೆತ್ತ ಕುಂತಳದ ಪೊದಟ್ಟಿವೆತ್ತಸಿಯ ಬಾಸೆಯ . . . ಅಂಗನಾವಳಿ ನೆರೆದೆಯ್ದು ಬಂದುದು ಮನೋಜನ ತಂತ್ರದವೋಲ್ ವಿಲಾಸದಿಂ (ಧರ್ಮಾಮೃ. ೦೩–೦೬). [ಪೊದಟ್ಟಿ$_1$ + ಪೆಱು$_1$]

**ಪೊದಟ್ಟು** (ಕ್ರಿ). ಉಂಟುಮಾಡು; ಒದಗಿಸು: ಶಾ ಮೊಗಂಗುಡ ಪದವೆತ್ತು ಚುಂಬಿಸಿ ಭಯಂಗೆಯೆ ಬಲ್ವೆಸಂ ಪೊದಟ್ಟೆ ನಾಣ್ಗಿಡೆ ನೆರೆ ದೂರ್ಥಯಂ ಪ್ರಥಮಸಂಗಮದೊಳ್ ಕುವರಂ ಮರುಳ್ಚಿದಂ (ಸಂಕ್ರಕ್. ೩–೯೨). [ಪೊದಟ್ + — ಚು$_1$]

**ಪೊದಟ್ತರ್** (ಕ್ರಿ). ಪೂರ್ಣವಾಗು; ತುಂಬು: ಬೀಗಿ ಬೆನ್ನಿಂ ಬರಿವನ್ನಂ ಕೊರ್ವಿ ಮುಂಗಾರೊಳ್ ಗಡಿಯೆನೆ ಕಡುಗೆಚ್ಚಲ್ ಪೊದಟ್ತಂದು ವತ್ಸೋತ್ಕರ ಮೆಲ್ಲಂ ಬಾಲವಂಬಾ ಕಚೀಯೆ(?) ಬಹಳರೋಮಂಥಫೇನಾವಳೀ ಪಾಂಡುರವಕ್ತ್ರಂ ಮಾಹಿಷೀಸಂತತಿ ವಿಪಿನಭವಂ ಕಣ್ಗಗುರ್ವಾಯ್ತು ಕಾರೊಳ್ (ಸಂಕ್ರಕ್. ೯–೯೬). [ಪೊದಟ್ + ತರ್]

**ಪೊದಿಕೆ** 'ಪೊದಕೆ$_1$' ನೋ.

**ಪೊದಿಸು** 'ಪೊದೆಯಿಸು' ನೋ.

**ಪೊದೆ, ಹೊದಿ, ಹೊದೆ$_1$** (ಕ್ರಿ). ಪೊದ್ದ, ಹೊದ್ದ (ಭೂತಕೃ). ಪೊದ್ದು$_8$, ಹೊದ್ದು$_8$(ಭೂತನ್ಯೂ). ೧. (ವಸ್ತ್ರ ಮೊದಲಾದುವನ್ನು) ಧರಿಸಿಕೊಳ್ಳು: ಆತನ ರತ್ನಕಂಬಳವಂ ಪೊದೆದು ತನ್ನ ಮನೆಗೆ ಬರ್ಪೊನಂ ಕಂಡು (ವಡ್ಡಾರಾ. ೩೯–೨); ಒಂದಂಚಿಯಂ ಪೊದೆಯೊ[ದೊಂ] ದಂಚಿಯನುಟ್ಟ ನಿನ್ನಿರವಿದೇನಂಭೋಜಪತ್ರೇಕ್ಷಣೇ (ಸಂ.ಶಿಪಾ. ೬–೩೩); ಚಂದ್ರಾಪೀಡದೇವಂ . . . ಪಾವಿನೆರೆಯ ದೊರೆಯ ದುಕೂಲಮಂ ಪೊದೆದು (ಕಾದಂಬ. ೩೩೦); ಕರ್ಮರ್ಗಿಲಾಗಸಮಂ ಮುಸುಂಕೆ ಕಾಲನೆಂಬ ಕಾಳರಕ್ಕಸಂ ಪೊದೆದ ನೀಲಪಟದೊಂದು ಪಾಂಗಿನೊಳೊಪ್ಪಿದುದು (ಲಾತುಕ್ಯ. ೩–೯). ೨. ಕವಿ; ಆವರಿಸು; ಮುತ್ತು: ಶ್ರೀದುರಿತಾ ಪೊದ್ದೈಹವಾಮ್ನಿಟ್ಟಲಚ್ ಪೊದೆದಜ್ಞಾನಕ್ಕಲೇಂದ್ರವಾನ್ ಪೋಟ್ಟುದ್ರ ವಿಥ್ಯಾತ್ವಪ್ರಮುಖಧ್ಯಕ್ಷಿರತರನೃಪನಾನ್ ವೆಟ್ಟಿ (ಎಕ. 11, ೦೨–೦; ಸು. ೭೦೦). **ಹೊದಿ$_1$**: ೧. ಒಡಲಿಗ್ಗಾಕುವ ನೀನೆ ಉಡಲು ಹೊದಿಯಲು ವಸ್ತ್ರ ಕೊಡುವವ ನೀನೆ (ಪುಂತ. ೦–೦೯೬–೨); ನಿವೀತಂ, ಪ್ರಾವೃತಂ—೨ ಹೊದಿಯುವ ಬಟ್ಟೆ (ಸಿದ್ಧ್ಯಂಕ. ೨೦೩). **ಹೊದೆ$_1$**: ೧. "ಹೊದೆ—ಆಚ್ಛಾದನೇ, ಶರಕೋಶೇ ಚ (ಬತ್ತಳಿಕೆ)" (ಕವಿರಾ); ಆವನಾದರೇನು ಶ್ರೀಮಹಾ ದೇವನ ನೆನೆವವನ ಬಾಯ ತುಂಬುಲವ ಮೆಲುವೆ ಬೀಳುಡಿಗೆಯ ಹೊದೆವೆ (ಬಸವ. ೩೩೩); ಮುನೀಂದ್ರುನಿವೇದಕಂಗೆ ತಾಂ ಹೊದೆದುದನಿತ್ತು (ಅಪಂಥ. ೯೮–೪); ಒದೆದನಳಲನು ರೋಮಹರುಷವ ಹೊದೆದು ಹೊರೆ ಹೆಚ್ಚಿದನು (ಕುಮಾರ್ಕ್ರೋ. ೦೯–೦೦); ಮಂಡೆ ಬೋಳಿಸಿಕೊಂಡು ಕೌಂಡುಗಂಬಳಿ ಹೊದೆದು ಹಿಂಡನಗಲಿದ ಗಜದಂತೆ ಇಪ್ಪವರ ಕಂಡು ನಂಬುವದು (ಸರ್ವಜ್ಞ. ೩೦೩).

**ಪೊದ್ದುಕೊಳ್, ಹೊದ್ದುಕೊಳ್**=(ವಸ್ತ್ರ ಮೊದಲಾದುವನ್ನು) ಧರಿಸಿಕೊಳ್ಳು: ಪೊದ್ದು[ಪಾಠಾಂ. ತಾಳ್ದು, ಪೊರ್ವಿ, ಪೊದರ್ದು]ಕೊಳ್ವೊಡೆ ಧವಳೋತ್ತರೀಯಂ . . . ಒಲ್ದು ನೋಳ್ಪೊಡೆ ರಜತಾದ್ರಿಯೆಂದೆನಿಸಿ ತೋಱತು ಮಾಱಿದ ಚಾದ್ರಿಕೋಜ್ವಳಂ (ಗಿರಿಜಾ. ೯–೦೦೬); ಪ್ರಾವಾರಃ —ಹೊದ್ದುಕೊಂಬ ಸೀರೆ (ವಾಕರಾ. ೬).

[ದೇ. ೮ ತಮಿ. ಪೊತಿ; ಮಲ. ಪೊತಿ, ಪೊತ್ತು, ಪುತ; ತುಳು. ಪೊದೆ, ಪೊದಿ, ಪೊದ್ದಿ, ಪೊದ್ದು; ಕೊಡ. ಪೊದ, ಪೊದಿ, ಪೂದೆ; ತೆಲು. ಪೊದುಗು, ಪೊದುವು]

**ಪೊದೆ$_1$, ಹೊದೆ$_2$** (ನಾ). ೧. ಬಾಣಗಳನ್ನಿಡುವ ಕೋಶ; ಮೂಡಿಗೆ; ಬತ್ತಳಿಕೆ: ಪದವಿಲ್ಲುಂ ನನೆಯಂಬಿನ ಪೊದೆಯುಂ ಪಿಡಿದಿರದ ಪದದೊಳಾ ನೆರ್ವಿಡಿದೊಡಂ ಮದನಂಗಂ ಮಾನಿನಿ ದಶವದನಂಗಂ ರೂಪಭೇದ ಮೇನಾದಪುದೇ (ಕಂಠಾಭಾ. ೯–೦೩೩); ಪೊದೆಯೊಳಗಿಂದಮುರ್ಚುವೆಡೆಯಲ್ಲಿ ಸರಲ್ ದಿಟಮೊಂದು . . . ಇದಿರ್ಚಿದರಂ ನಡುವಲ್ಲಿ ಲಕ್ಕಮೆಂಬುದನೆನೆ ಬಿಲ್ಲಬಿನ್ನಣಮನಾ ರಣದೊಳ್ ಮೆಱಿದಂ ಯುವಾಧಿಪಂ (ಸಂಕ್ರಕ್. ೬–೩೩); ಬರಯಿಗಳನಿಸಲನಂಗಂಗರಲಂಬಿನ ಪೊದೆಯನಖಿಳವನದೇವತೆಯರ್ ವಿರಚಿಸಿ ನೀಡಲ್ ಬಂದುತಿರಲೆಸೆವರ್ ಪುಷ್ಪಮಾಲಿಕಾಧಾರಿಣಿಯರ್ (ಕಕ್ಕಕ್. ೨–೬೯); ಕೆಲದೊಳಿಪಿಡಂಬಿನ ಪೊದೆಯ ಸಾರ್ಚಿ ನಿಲಿಸಿದ ಶರಾಸನದ (ರಾಜಶೇ. ೩–೦೦ ಪ). ೨. ಗಿಡಮರಗಳು ಒತ್ತಾಗಿರುವ ಸ್ಥಳ; ಹೊದರು; ಮೆಳೆ: ಮೆಯ್ಯುಱದು ಲಜ್ಜೆಯಂ ತೊಱದು ಪೊದೆಯೊಳಿರ್ದ ಪ್ಪಾರಡಿ ಯಂ ಕಂಡು ಕಾತರತನದಿಂ ಪಿಡಿದಡಂ ನೆರೆಯಲ್ (ರಮಾಶ ೩–೯೩ ಪ); ಕೇಬೂತಂ ಪಾರಿತು ಪೊದೆಯಿಂದಿತ್ತ (ಅಶೋಕ. ೯೯–೬); ಕುಬ್ಜಕ, ಮಲ್ಲಿಗೆ, ಕುರಂಟಕ, ನವಮಾಲಿಕೆ ಮೊದಲಾದವುಗಳ ಪೊದೆಗಳಿದ್ದವು (ಪಾಲಕ. ೩೩). ೩. ರಾಶಿ; ಹೊರೆ; ಗುಂಪು: ಕರವಾಳ ಕೂರ್ಪಂ ನೋಡಲೆಂದು ಬಾಯ್ದಾರೆ ನಿಲೆ ಕುಮಾರಂ ಪೊಯ್ದೊಡೆ ಕೈಯಳವಿದಾರ ಕೈಯಳವಿಯೆನಲ್ ನೆಯ್ದಿಲ ಕಾವಿನ ಪೊದೆಯಂ ಪೊಯ್ದಂತೊರ್ಮೊದಲೆ ಪಱದುದಾ ವಂಶ ವನಂ (ಸಂಕಾವತಾ. ೯–೨೩); ಸುಮ್ಮಾನದಲಿ ತಲೆಗೆಲೆಯ ಪೊದೆಯೊಳು ಮೌನ ದಲಿ ಉರಗೇಂದ್ರನಿದ್ದನು ಬಲಿದ ನಿದ್ರೆಯಲಿ (ಶಳಕ. ೩–೨೩). ೪. (ಮನೆ ಮುಂತಾದುವುಗಳ) ಹೊದಿಕೆ; ಛಾವಣಿ: (೬). ೫. ಕಟ್ಟು; ಕಂತೆ; ಹೊರೆ: (೬). ೬. (ಅಲಂ) ಗೋಜು; ಸಿಕ್ಕು: ಈ ಪೊದೆಯನ್ನು ಬಿಡಿಸಿದರೆ ಹಿಂದೂಧರ್ಮದ ಮೂಲತತ್ವಗಳು ದೊರೆಯು ತ್ತವೆ (ಶಂಕಕು. ೯೩೯). **ಹೊದೆ$_2$**: ೧. "ಹೊದೆ—ಆಚ್ಛಾದನೇ, ಶರ ಕೋಶೇ ಚ (ಬತ್ತಳಿಕೆ)" (ಕವಿರಾ); "ದೊಣೆ ಬತ್ತಳಿಕೆ ಮೂಡಿಗೆಯು ಮೆನಲ್ ಹೊದೆಯು" (ಕರ್ಣಾಟಂ. ೯೯); ಕಯ್ಯ[ಂ]ಬು ತವಲು ದೇವಂಗಾಗೆ ಬಿನ್ನಪಂಗೆಯ್ಯಲು ಅವ್ವನ ಹೊದೆಯುಂ ಕಾರುಣ್ಯಗೆಯ್ಯಲು ಮಹಾಪ್ರಸಾದ ಎಂನುತ್ತೆ ಕಾಳಗಕ್ಕೆ ಹಱದು (ಪ್ರಕಾಂ. ೦೯೩೨, ೩೨–೩; ಸು. 1125); ಭೀಷ್ಮನಿತ್ತಲು . . . ಬಿಗಿದ ಹೊದೆಗಳ ಹಱದು

ಬಲ್ಲಿಂದುಗುಳಿಸಿದನಂಬುಗಳನು (ಕುಮ್ಯಾಭಿ. ೯-೭) : ಎಸುವ ಹೊದೆಯಿಂದೆ ತೆಗೆದೆಸುವ ಬೊಬ್ಬಿಱಿದು ತೊಟ್ಟೆಸುವ . . . ಚಾಪಕಲಾಪ್ರವೀಣರೆಬ್ಬಾಡಿದರ್ (ಕಂಕಿ. ೪೦-೭). ೩. ದುಷ್ಕೃತಂಗಳ ಹೊದೆಯಂ ನೆಱೆ ಮುಂದು ಮಾಡಿ ಕೈವಿಡಿದೆಯುಂ . . . ತಿರ್ದುವ ಚದುರಂ ಬಲ್ಲವರೆ ಬಲ್ಲರ್ (ಕಸ್ತುಹಂ. ೯-೭೩). ೪. ಹೊಱಗೆ ಹಾಸಿದ ಹಸಿಯ ತೊಗಲ ಹೊದೆಯ ಮಾಣದೊಱಲಿ ಕೂಗಿಡುವ ನಾನಾಪ್ರಾಣಿವರ್ಗಮು ಕೊಱೆವ ಕೊಚ್ಚುವ ತಱೆವ (ಹರಿಶ. ೦೦-೩೦). [ < ಪೊದ$_{1}$./ತಮಿ. ಪುತ್ಯ, ಪೊತಿ, ಪೊತ್ಯ; ಮಲ. ಪುತ, ಪೊತಿ ; ತೆಲು. ಪೊದ, ಪೊದಿ ]

**ಪೊದೆಗಟ್ಟು** (ಕ್ರಿ). ಬತ್ತಳಿಕೆಯನ್ನು ರಚಿಸು : ಹೊಸ ಪೊ[ ಪಾಠಾಂ. ಹೊ]ದೆಗಟ್ಟುವಂಬುಗಳ ಕುಟ್ಟಿಯುನಾವರಿಪಾದ್ರ್ಯಾಡಾಳಿವಂ ಪಸರಿಪ . . . ಪುಳಿಂದಸಂಕುಳದ ಪೆರ್ಗಣದಿಂದೆಸೆದತ್ತು ಪಕ್ಕಣಂ (ಚಂದ್ರಪ್ರ. ೫-೫೯).

[ ಪೊದ$_{2}$ + ಕಟ್ಟು$_{1}$ ]

**ಪೊದೆಗೆದಱು, ಹೊದೆಗೆದಱು** (ಕ್ರಿ). (ದಟ್ಟವಾಗಿರುವುದನ್ನು) ಹ್ಯಾಟಿಸುವಂತೆ ಮಾಡು.—ಎಲ್ಲೆಡೆಗೆ ಹರಡು : ಮಾಲೆಪೂವಂ ನೆಗಪಿ ಸೊಗಯಿಪುಂ ನೀಱಿರೊಳ್ ಪುಷ್ಪಚಾಪಂ ಗುಱಿಯೆಸಂ ತೋಱಲಂಬಂ ಪೊದೆಗೆದಱಿದವೋಲ್ ಪುಷ್ಪಲಾವೀಕದಂಬಂ (ಕಂಠಾಕು. ೦-೦೨೦) : ಮಾಲೆಗಾರ್ತಿಯರೆತ್ತಿದ ಬೆಲೆಪೂವಿನ ಸರಂಗಳನಲರಂಬಂಗೆ ಪೊದೆಗೆದಱುವಂತೆ ಕೆದಱೆ (ಚಂದ್ರಪ್ರ. ೬-೯ ಚ) ; ಪೊದೆಗೆದಱಿರ್ದ ಪೂಗಣೆಯ ಕೆಂಗಱಿಯಂತೆ . . . ಪೂತ ಚೂತದ ಕೆಱುಗೊಂಬಿನೊಳ್ ನಿಱಿದಳಿರ್ ಮೆಱೆದತ್ತು (ಅಜಿತ. ೭-೮೨). **ಹೊದೆಗೆದಱು** : ಸುಶರ್ಮ ಶಲ್ಯರು ಸರಳ ಹೊದೆಗೆದಱೆ ಮೊನೆಗಣೆಯನಳವಡಿಸೆ ಗುರು . . . ಸೇನಾಪನಧಿ ಗರ್ಜಿಸಲಾಯ್ತು ಸಂಕುಲಸಮರಸಂರಂಭ (ಕುಮ್ಯಾಭಿ. ೫-೩) ; ದಾಣವ್ರಾತವನು ಹೊದೆಗೆದಱೆ ಹೊಸ ಹೊಗರೆದ್ದನಡಿಗಡಿಗೆ (ಕುಮ್ಯಾಕ. ೦೩-೨೨).

[ಪೊದ$_{2}$ + ಕೆದಱು$_{1}$ (< ಕೆದಱ್$_{1}$)]

**ಪೊದೆದುಂಬು** (ಕ್ರಿ). (ಬಾಣಗಳು) ಬತ್ತಳಿಕೆಯಲ್ಲಿ ತುಂಬಿರು.—ಭರ್ತಿಯಾಗಿರು : ಸಕ್ಕದ ಖಂಡದಂ ಬಗೆದ ಬಿಲ್ ಪೊದೆದುಂಬಿದ ದೋಳೆಯಂಬು . . . ಬಾಸಿಗದಿಂ ಮೆಱೆದತ್ತು ಸಗ್ಗಿಗಳ್ (ಕಳಾ. ೨-೯೬).

[ ಪೊದ$_{2}$ + ತುಂಬು$_{1}$ ]

**ಪೊದೆಯಿಸು, ಪೊಚ್ಚು, ಪೊದಯಿಸು, ಪೊದಿಸು, ಪೊದೆಸು, ಹೊಚ್ಚು$_{1}$, ಹೊದಸು, ಹೊದಿಯಿಸು, ಹೊದಿಸು, ಹೊದುಸು, ಹೊದೆಸು, ಹೊದ್ದಿಸು$_{2}$** (ಕ್ರಿ). ೧. ಮುಚ್ಚು ; ಆಚ್ಛಾದಿಸು : "ಪೊದಯಿಸು— ಆಚ್ಛಾದನೇ" (ಕಮಡಾ) ; ಬಿಸರುಹದಳಂಗಳಿಂ ಪೊದೆಯಿಸಿರ್ದ ಹಿಮಗೃಹಮನವನಿಪಾಲಂ ಕಂಡಂ (ಉದ್ಭಟಾ. ೨೦೯) ; ಪೊದೆಯಿಸಿದತ್ತೊ ಚಿತ್ರಪಟದಿಂ . . . ಎಂಬಿನಂ ತಳಿರ ಪೂವಿನ ತುಂಬಿಯ ಕಾಯ ಪಣ್ಣ ಬಣ್ಣದಿನೆಸೆದತ್ತು . . . ಬಸಂ (ಜಗಪ. ೦೦-೫೫) ; ಆ ವಿಷಯದೊಳೊಪ್ಪುವ ಕಳಮಾವಳಿ ನಳನಳಿಸಿ ಬೆಳೆದು ಪಸುರೇಱಿ ಲಸದ್ಭೂವನಿತೆಗೆ ಧಾತ್ರಿಂ ಪರಿಭಾವಿಸಿ ಪೊದೆಯಿಸಿದ ಹರಿತಪಟದಂತಿರ್ದಂ (ಗಿರಿ. ೨-೦೨). ೨. ಮುಸುಕು; ಕವಿ; ಆವರಿಸು : ಮುಕುಂದನ . . . ಹಸ್ತದ ಕಾಂಚನವಾರಿಯಂತ್ರಪಂಕದಱ ನಿರ್ವರ್ಕವೆತ್ತ ಘುಸೃಣೋದಕಧಾರೆ ನವಾರುಣಾಂಶುವೋಲ್ ಪೊದೆಯಿಸಿತಂಬುಜಾನನೆಯರೆಂಬ ನವಾಂಬುಜನೀಕದಂಬಮಂ (ಜಗಪ. ೦೯-೦೦೬). ೩. ವ್ಯಾಪಿಸುವಂತೆ ಮಾಡು ; ಹರಡು : ಸುಗುಡುತನಮಂ ಪುದಿವ ಚತುರಂಗದತ್ತು ಚದುರಂ ಪೊದಯಿಸುತೆ ಕೊಯ್ಲೆನಿಂದಿರಂ ಪಣೆದದಿಂ ಮಣಿಯಿಸುತ್ತೆ (ಹಮ್ಯಾ. ೬-೯೮). **ಪೊಚ್ಚು** : ೧. ಗುರುಪಾದೋದಕದಿಂದಲೆರೆದು ವಸ್ತ್ರವ ಪೊಚ್ಚಿ ಪರವಿಭೂತಿಯನು ಫಾಲದೊಳಿಟ್ಟು ಮುದದಿ (ಬ್ಯಾಣಿರ. ೦೬೪-೨). **ಪೊದಯಿಸು** : ೧. ಪೆಱತೊಂದೆಡೆಯೊಳ್ ಸಹಕಾರರಸದಿಂ ತೊಯ್ದರನೇಱಾಲ ತಳಿರ್ಗಳಿಂ ಪೊದಯಿಸಿದ ಕುಳಿರ್ವ ಕಾವಣಂಗಳುಮಂ . . . ನೋಡುತ್ತುಂ ಪೋಗೆ (ಕಾದಂಬ. ೨೦೯) ; ಪೊದಯಿಸುವಂತೆ ಚಿತ್ರಪಟದಿಂ ತನುವಂ ಬಹುರತ್ನಕಾಂತಿಗಳ್ ಪುದಿಯೆ ಲತಾಂಗಿ . . . ತಳೆದಳ್ ಪುಳಕಾಂಕುರಂಗಳಂ (ಪುಣ್ಯಾ. ೯-೬೯) ; ಪೆರ್ವರದ ನಟ್ಟೆಗೊಂಬಿನ ಕವಲ್ದಲೆಯೊಳಿಟ್ಟ ಗೂಡುಗಳೊಳ್ ಗೂಡುಗೊಂಡಿರ್ದ ಕುಱುಳೆವಱೆಗಳ್ಗೆ ಕುಟ್ಟುಂಕನಿಕ್ಕಿ ಕಡುಗಂದಿತನದಿಂ ಕೋಡಗಱಿಯ ತುಱುಗಲೊಳ್ ಪೊದ[ಪಾಠಾಂ. ದೆ]ಯಿಸೆ (ಚಂದ್ರಪ್ರ. ೬-೪ ಚ) ; ಸಪುರಬಿಳಿದಂ ಬಿಗಿದುಡಿಸಿ ಬೆಳಗುವ ದುಕೂಲವಮಂ ಪೊದಯಿಸಿ (ಕಂಬರ. ೦೦-೯೬). **ಪೊದಿಸು** : ೧. ಪರಿಮಳೋದಕದಿಂದೆ ಮಹಮಜ್ಜನಕ್ಕೆಱೆಸಿ ವರದುಕೂಲವನುಡಿಸಿ ಪೊದಿಸುತಂ (ಶಿಕುಕ. ಕೇ. ೬-೨೦) : ಕೋಮಳಸಿತಪಕ್ಷವಮಂ ಪೊದಿಸಿ ಲಾಲಿಪ ಹಂಸೆಯ ಪುತ್ರಮೋಹಮಂ ಲಳನೆ ಸಮಂತು ಕಂಡು ಮಿಗೆ ಚಿಂತಿಸಿದಳ್ ಸುಕುಮಾರ ಲಾಘವಂ (ಧರ್ಮ. ೦-೫೬); ಮಾಯಸಪ್ರತತಿ ಗಱೆಗಳಂ ಪೊದಿಸಿ ಮಗ್ಗುಲೊಳಿಟ್ಟು ಕೋಗಿಲೆಯ ಮಱೆಗಳಂ ಮೈಯೊಳ್ ಪುದುಗಿಕೊಂಡು ಮಱುಕದಿಂದ್ಯದೆ ಪಾಲಿಸುತಿರ್ದಪು (ಕೃಪಿಡ. ೨೬-೪). **ಪೊದೆಸು** : ೧. ಬಿಳಿಯ ಪಟ್ಟಾವಳಿಯ ಪೊಸ ಸಪುತವಮಂ ಪೊದೆಸಿ (ಅಜಿಶ. ರೇ. ೯೩-೯); ದುಗುಲವ ಪೊದೆಸುತ ನಿಱಿಯ ಸುಗಿದನು (ಚರಿ. ೪೦-೬೦). **ಹೊಚ್ಚು$_{1}$** : ೧. ಶರಪಂಜರವ ಖಿಳನೆಚ್ಚು ಶರದಲಿ ಕೈಟಭಾರಿಯ ಹೊಚ್ಚಿ ಬೊಬ್ಬಿರಿಯುತ್ತಲಿಂ ತಂದನು ಸರೋಪದಲಿ (ಕೋಗಹ. ೦೦-೩೯) ; ಮೈಮೇಲೆ ಮೆತ್ತಗಾಗಿ ಹೊದಕೆಯೊಂದನ್ನು ಹೊಚ್ಚಿ ತಾಯಿ ದೀಪವನ್ನಾರಿಸಿದಳು (ಕಮಡ. ೦೦೯) ; ಬಡವರಾದಪರು ಮನೆಗಳಿಗೆ ಹುಲ್ಲು ಹೊಚ್ಚುತ್ತಾರೆ (ಕುಂಬಾಯ. ೯-೦೦೮). ೨. ಬಚ್ಚಿದವು ಕವಚವಂ ಕಟ್ಟಿದವು ಖಂಡವಂ . . . ಮೈಯೊಳಗೆ ಹೊಚ್ಚಿದವು ಹೊಗರಲಗು ಮಚ್ಚಿದವು ನೆಣಮಸೆಯನು (ಕೃಪಿಡ. ೦೩-೦೯) ; ಮುಗಿಲ ಹೊಚ್ಚಿತು ಕಪ್ಪುಕಂಬಳಿಯ ಕತ್ತಲು (ಕಂಕು. ೦೯-೦೫). ೪. (ಕದ ಮುಂತಾದುವನ್ನು) ಮುಚ್ಚು: ಆ ಉಷ್ಣದಿವಸದೊಂದಿರುಳು . . . ಪಡಿಯ ಹೊಚ್ಚಿದೊಡುಬ್ಬೆ ತಾಗುವುದೆಂದು ಮಡದಿಯೆಡದ ತೋಳೊಳೊಱಗಿ ಬಡಗಾಳಿಗೆ ಮೈಯೊಡ್ಡಿ ನೃಪಾತ್ಮಜ ನಡುಸಿದ ನಿದ್ರೆಯೊಳಿರಲು (ಕೇಯಿಸಂ. ೯-೩೬). **ಹೊದಸು** : ೨. ರೋಷಜ್ವಾಲೆ ಹೊದಸಿತು ವದನವನು ಕಣ್ಣಾಲಿ ಕಾಹೇಱಿದವು ಪಾರ್ಥಂಗೆ (ಕುಮ್ಯಾಕ. ೦೬-೦). **ಹೊದಿಯಿಸು** : ೧. ಭರದಿಂದ ಹೊದಿಯಿಸಲೊಡನಾ ಪೀತಾಂಬರವೆಳೆದಳಿರಂತಾಗೆ ಸುರಜಿರವಪ್ಪ ತಮಾಲಲತಿಕೆಯೆನೆ ಸುದತಿ ಕಣ್ಗೊಪ್ಪವಡೆದಳು (ಕೇಯಿಸಂ. ೨೫-೦೬೯). **ಹೊದಿಸು** : ೧. ಕಂದನಂ ನೋಡುತ್ತ . . . ತಾಯಿ ಮೇಲ್ಸೆಱಗಿಂದ ಹೊದಿಸುತ ತೆಱೆವುತಂ ಹೊದಿಸುತ್ತ ತೆಱೆವುತ್ತ . . . ಸಲ್ಲಡಿಸುವಳು (ಬಸವ. ೦೫-೨೦); ಗುಡಿಲಂ ಹೊದಿಸಿ ಹಸಮಾಡುವ ಕಳನ ಕೆತ್ತುವ . . . ಕಡಿಯರುಗಳೊಳಗೊಪ್ಪವಂ ಪಡೆಮುದು (ಸಪ್ತಾಕ. ೦-೨೯); ಬಿಸಿನೀರಿಂದ ಮೆಯ್ದೊಳೆದು ಪಕ್ಕಯೊಳೊಱಗಿಸಿ ವಸ್ತ್ರದಿಂ ಮುಚ್ಚಿ ಹೊದಿಸಿ (ಕೋಹಕ. ೨೦-೯೬); ಆನೆಗಳಿಗೆ ಬಟ್ಟೆಯನ್ನು ಹೊದಿಸಿರುತ್ತಾರೆ (ಕೃಪಾಳ. II. ೦೬೬) ; ಹುಲ್ಲಡ ಹೊದಿಸಿದರೆ ಹುಚ್ಚು ಹೋದೀತೇ ? (ಗಾದೆ). ೨. ಅದಿರ್ದ ಖಿಡುಗದ ಕಾಂತಿ ಸೂರ್ಯನ ಹೊದಿಸಿದುದು (ಕುಮ್ಯಾದ್ರೋ. ೦೨-೬) ; ಸರಳು ಗಗನವ ಹೊದಿಸಿದವು (ಕುಮ್ಯಾಕ. ೯-೩೨). ೫. ಆವೃತವಾಗು; ಮುಸುಕಲ್ಪಡು : ದಿಗುಜಾಲವೆಂಬಿನ ಹೊರಳಿಯಲಿ ಹೊದಿಸಿದುದೆನಲು ಕವಿದೆಚ್ಚಿದಾ ಪಾರ್ಥ (ಕುಮ್ಯಾಕ. ೨೦-೨೦). ೬. ಆವರಿಸುವಂತೆ ಮಾಡು; ಕವಿಯಿಸು : ಹಿಳಿಲ ಹೊದಿಸಿದನಖಿಲದೆಸೆಗಳ ನಿಲುಕಲರಿದೆನೆ (ಕುಮ್ಯಾದ್ರೋ. ೦೬-೬೮) : ಪಂಚಪಾಂಡವರಡಸಿದರು ಹೊದಿಸಿದರು ಕಣೆಯಲಿ ರವಿಸುತನ ರಥವ (ಕುಮ್ಯಾಕ. ೦೩-೩೬). ೭. ಬಳಸು; ಸುತ್ತುವರಿ: ಆ ಕುಶದ್ವೀಪವದಱಂ ತುದಿಗೆ ತಿರುಗಿಹುದಿಕ್ಷುವಿಕ್ಷುವ ಹೊದಿಸಿಹುದು ತಾ ಕ್ರೌಂಚದ್ವೀಪವದು

(ಸಂಧಿಕ. ೧೦-೬). **ಹೊದುಸು :** ೧. ಛತ್ರದ ಮನೆಯ ಹೊದುಸುವದಕ್ಕೆ ೬ (ಎಕ. VII, ಶಿಕಾರಿ. ೭೦-೭೨ ; 1431). **ಹೊದೆಸು :** ೧. ಕೋಪು ಲಲಿಂಗಿಯರಿಗೆ ರಾಯ ತಾ ಹೊದೆದಿದ್ದ ಕ್ಷೌಮವಸ್ತ್ರವ ಪೊದೆಸಿದನು (ಚೆಕ. ೪೦-೧೦೯). ೨. ಹೃದಯ ಕಳವಳಿಸಿದವು ಕಂಗಳ ಪೊದೆಸಿದವು ನಯನಾಂಬು (ಕೊಕಲಾ. ೨-೨-೨೭). **ಹೊದ್ದಿಸ್ಸು :** ೧. ಜಿಪ್ಸೆಯಾಹಾರವ ಜಂಗಮವನೂಡಿಸುವೆ [ತ್ವ]ಚದಾಹಾರವ ಜಂಗಮಕ್ಕೆ ಹೊದ್ದಿಸುವೆ (ಬಸಕ. ೯೦೯) ; ಮಂಚದ ಮೇಲೆ ಮಲಗಿಸಿ ಹೊದ್ದಿಸಿ ಬಾಗಿಲು ಹಾಕಿಕೊಂಡು ಬಾ (ಕಂಗಾಳ್. ೨೫೯). [ಪೊದೆ₁ + — ಇಸು₃]

**ಪೊದೆವಡು** (ಕ್ರಿ). ಹೊದಿಸಲ್ಪಡು : ಪೊದವಟ್ಟ ಪಟ್ಟಾವಳಿಗಳಾನೆ ದೊವಲಿಸವ ಪುಲಿಸಮ್ಮವು (ವಂಕರು. ೦-೩೦). [ಪೊದೆ₁ + ಪಡು₁]

**ಪೊದೆಸೀರೆ** (ನಾ). ವಸ್ತ್ರದ ಹೊದೆಯುವ ಭಾಗ ; ಮೇಲುಸೆರಗು : ಅತಿವೇಗದೆ ಸಾರೆವಂದು ನೀರೇರುಹನೇತ್ರನಿರ್ದಿರವನೀಕ್ಷಿಸಿ ಗದ್ಗದ ಕಂಠನಾಗಿ ಕಣ್ಣೀರೆತ್ತ[ರೊಗೆ]ದುದಕ್ಕೆ ಕಣ್ಣಡಗಳಿಂ ಪೊದೆಸೀರೆಯಿನೊತ್ತು ತೊಂದು ಕಾಸರವುನೆಯ್ದಿದರ್ (ಪಂಪಾಶ. ೦೭-೩೪). [ಪೊದೆ₁ + ಸೀರೆ₂]

**ಪೊದೆಸು** 'ಪೊದೆಯಿಸು' ನೋ.

**ಪೊದ್ದ** 'ಪೊದ್ದೆ' ಪರಾ.

**ಪೊದ್ದಿಗೆ** 'ಪೊರ್ದುಗೆ' ನೋ.

**ಪೊದ್ದಿಸು** 'ಪೊರ್ದಿಸು' ನೋ.

**ಪೊದ್ದು₁** 'ಪೊರ್ದು' ನೋ.

**ಪೊದ್ದು₂** 'ಪೊದ್ದೆ₁' ಪರಾ.

**ಪೊನ್,** ಪೊಂ, ಪೊನ್ನು, ಹೊಂ, ಹೊನ್, ಹೊನ್ನು₁ (ನಾ). ೧. ಕಬ್ಬಿಣ, ತಾಮ್ರ, ಚಿನ್ನ ಮುಂತಾದ ಖನಿಜ ; ಲೋಹ : 'ಕರ್ಪೊನ್', 'ಬೆಂಪೊನ್' ಪರಾ. ೨. ಬಂಗಾರ ; ಚಿನ್ನ ; ಸ್ವರ್ಣ : "ಪೊನ್ ಸ್ವರ್ಣಂ" (ಕಶಾಂಕಾ. ೨) ; ಪಿರಿಯ ಪೊನ್ನ ತಳಿಗೆಯು ಮುತ್ತುಮುಪ್ಪಡ್ಡವಣಿಗೆಯುಮನಿಟ್ಟು . . . ತಾನೆ ಬಡ್ಡಿಸಲ್ (ವಡ್ಡಾರಾ. ೭೯-೦೨) ; ಇ[ದ] ಕಾದುಡಿದೋ[೦]ಗೆ ವಾರಣಾಸಿಯೊಳ್ಸಾಸಿರಕವಿಲೆಯ[೦] ಕೋಡುಂ ಕೊಳಗುಮಂ ಪೊನ್ನೊಳ್ಕಟ್ಟಿಸಿ ದಾನಂಗೊಟ್ಟ [ಫ]ಲಮಕ್ಕು (ಸೌಇಇ. XI–i, ೩೯-೦೯ ; 926) ; ಗಗನಗಜಕ್ಕೆಕ್ಕಿದ ಪೊನ್ನ ಗುಂಟಿಯೆರಡೆ ಸಲುಮಂಬರಾಂಭೋನಿಧಿಯೊಳ್ ನೆಗೆದುರಿವೌರ್ವಾನಲದುರ್ಬುಗಳೆನಲುಂ ನೆಗೆದುವಹಿಮಹಿಮಕರಬಿಂಬಂ (ಅಜಿಪು. ೬-೩೨) : ಉಡಕಂ . . . ಪೊನ್ನ ಬಣ್ಣದ ಮಣ್ಣೊಳ್ ಪರಲಾಗಿ ಕಿಂಪೆಸೆವ ಮಣ್ಣೊಳ್ ಕೈಪೆಯಪೂಗಿರ್ದಂ (ಲೋಕೋಪ. ೩-೬) ; ಪೊನ್ನ ನೇಗಿಲುಲುತ್ತು ಗುಳ್ಳದ ಬೀಜವು ನೆಲ್ ಬಿತ್ತುವಂದವಿ . . . ಲಿಂಗಪರಾಙ್ಮುಖರಾಗಳು ಭಜಿಸಿ ಭವಬಂಧನಕ್ಕೊಳಗಾಗದೆಂಶಿಹನು (ಬಸಪು. ೬೦-೩೦); ಮಿಸುಪ ಪವಳದ ಪುತ್ತಳಿ ಪೊನ್ನ ಪೊವಕಿ ರಂಜಿಸುತು ಚಾವಡಿಯ ಚೌರಸದೆಡೆಯೊಳು (ಕೃಷಿಪಾ. ೦೭-೨೩). ೩. (ಹಿಂದೆ ಚಲಾವಣೆಯಲ್ಲಿದ್ದ) ಹತ್ತು ಹಣ ಬೆಲೆಯುಳ್ಳ ಒಂದು ಚಿನ್ನದ ನಾಣ್ಯ ; ಗದ್ಯಾಣ : "ಪತ್ತುಂ ಪಣದಿಂ ಪೊನ್ನಕ್ಕುಂ" (ಕೃಶಕಾ. ೯-೨೩) ; ಈ ಪೊನ್ನೆನ್ದು ಕೊಡಗಗಾಗಿ ಅಳಿದೊನ್ . . . ಪಂಚ್ಚಾಮಹಾಪಾತಕವಕ್ಕು (ಎಕ. III, ತಿರುಮ. ೧೦೩-೬; ಕಿ. 760); ಕವಿವರರುಂ ಪೆಂಡವಾಸದೊಳ್ಪೆಂಡಿರ್ಕಳುಂ ವಿಮಾನಂಗಳ ಮುಂದಾಡುತ್ತುಂ ದವ್ವುಮುಮಂ ಪೊನ್ನುಮಂ ಕೇಳಿ ಮಾಡಿ ಮುಂದೆ ಸೂಸುತ್ತಮೊಯ್ಯುದಂ . . . ಕಂಡು (ವಡ್ಡಾರಾ. ೭೯-೨); ನಿತ್ಯದಾನಕ್ಕೆ ದೇವಸಬಳದ ಪದಿನೆಂಟುಕೋಟಿ ಪೊನ್ನುಮನಿತ್ತು (ಕಂಶಕಾ. ೨-೯೯ ಪ). ೪. ಸಂಪತ್ತು ; ಐಶ್ವರ್ಯ ; ನಿಧಿ : ಅರಸರ ದುಣ್ಣಗೆವರಸಿಟ್ಟ ಪೊನ್ನ ಕೆಯ್ದುಳಿಯಪ್ಪಂಗೊಟ್ಟಿಸಿಮನ್ದು ತನ್ದು (ಎಕ. III, ಕಂಶಕ. ೩೭-೭೪; ಕಿ. ೯೦೦); ಸಿಡಿಲ್ಕೊಡೆದಪೊಲಟ್ಟ ಮುಟ್ಟ ಕಡಿದಿಕ್ಕುದುದಾದೆಡರಂ ನಿರಂತರಂ ಕಡಿಕಡಿದಿತ್ತ ಪೊನ್ನ[ಕಾಶಾಂ. ನ್ನ] ಬುಧವಾಗಧವಂದಿಜನಕ್ಕೆ ಕೊಟ್ಟ ಕೋ[ವ]ದಳದ ಬೇಡಿ[ಮೋ]ಡಿಮಿದು ಚಾಗದ ಬೀರದ ಮಾತು ಕರ್ಣನಾ (ಕಂಶಕಾ. ೧-೯೯); ಅರಸನುಂ . . . ಪೂಜಿಸಿ ಬಂಡಾರದ ಪೊನ್ನೆಲ್ಲಮಂ ಮುಂದೆ ರಾಸಿಮಾಡುವುದುಂ (ಧರ್ಮಾಮೃ. ೩-೨೦೩); ನಿನ್ನ ನೀನಲ್ ಸಾಕು ಮಾಯೆಯ ಗನ್ನಗತಕವ ಗೆಲುವೆ ಕನಸಿನ ಪೊನ್ನ ಕಾಣದೆ ದುಃಖಿಪಡುವರೆ (ಕುಮಾರವ್ಯಾ. ೬-೨೬). ೫. ಹಣ : ಧನ ; ದುಡ್ಡು : ಈತಂಗೆ ಪೊಲಿಗೆ ನಾಡಿಲ್ಲೊಳಗೆ ಭಂಡಾರಮಿಲ್ಲೀತಂಗೆ ಪೊನ್ನೆನ್ನಿತ್ತನಿಂ ಬರ್ಪುದಿದನಾರಯ್ವೆಂ (ಧರ್ಮಾಮೃ. ೨-೦೦೬). ೬. (ಚಿನ್ನದ) ಒಡವೆ : ಆಭರಣ : ತೊಟ್ಟ ಪೊನ್, ಡಿಬ್ನಾದ ಮಿಡಿದು, ಪೀಲ್ ವಾಯ್ದು ಪೊನಲಿಟ್ಟು ಪಂದು . . . ಮಲೆದನ್ (ಅಂತಿಗೊ. ೭-೦೦೦). ೭. ಚಿನ್ನದ ಬಣ್ಣ ; ಹೊಂಬಣ್ಣ ; ಹಳದಿಬಣ್ಣ : 'ಪೊಂದಳಿರ್', 'ಪೊನ್ನೀರ್' ಪರಾ. **ಪೊಂ :** ೨. ಅರಸುಮಗಂ ಗಡ ಕಲಿ ಗಡ ಪಿರಿದೀವಂ ಗಡ ಬಲ್ಟಿಕ್ಕ ಜೈನಂ ಗಡೆನಲ್ದರಣಿಪತಿ ಕೀರ್ತಿದೇವಂ ನಿರುತಂ ಪೊಂ ಕಮ್ಮಿತಾದುದೆನಿಸಿದನಿಳೆಯೊಳ್ (ಸಮುಶ. ೦-೯೭). ೩. ಕೋಟಿ ಪೊಂಗೆ ಘಂಟೆಯಲುಗುವ ಕಿಂಬುಕಂಳೆಬೊಜಂಗರುಮಂ . . . ನೋಡಿ (ಕಂಶಕಾ. ೯-೯೭ ಪ); ಬುಧರಿಗೆ ಸಕಲರಿಗೆ ಪೊಂಗಳನು ಭೂಷಣವಸ್ತ್ರ ರತ್ನವನೊಲಿದು ದಾನವ ಮಾಡಿದನು ಮುಮುಕಾರಭೂಪಾಲ (ಶ್ರೀಕುಂಂ. ೩-೦೨). ೪. ಪೊಂಗೆಜಗುವ ದೀವವರ್ತಿ ಮಣ್ಣಳಿಗುಗುಮ (ಸಮುಶ. ೯-೨೩). **ಪೊನ್ನು :** ೩. ದಶಪಣದಿಂದಂ ಪೊನ್ನುಮೊಂದು ತಪ್ಪದು (ಕೃಶಕಾ. ಅಮುಂಂರ. ೬-೪೮). ೫. 'ಪೊಂಬಡೆ' ಪರಾ. ೭. 'ಪೊಂಗೇದಗೆ', 'ಪೊಂಬುಲಿ' ಪರಾ. ೮. ಶ್ರೇಷ್ಠವಾದುದು ; ಅತ್ಯುತ್ತಮವಾದುದು : 'ಪೊಂಬಸಿಱು' ಪರಾ. **ಹೊಂ :** ೨. 'ಹೊಂಗಂಟೆ', 'ಹೊಂಗಡಗ' ಪರಾ. ೩. ಅಕ್ಕಸಾಲೆ ನಾಗೋಜಂ ಹೊಂಗೆ ವೀಸ × × × [ಲೆ]ಕ್ಕದಿಂ ಕೊಟ್ಟ ಪವಣಾಯಮನಾ ಕೊತ್ತಳಿಗ [ಮಾ]ಡಿಸಿದ ಬಸದಿ ದೇವಾಲ್ಯಕ್ಕೆ . . . ಧಾರಾಪೂರ್ವಕಂ ಮಾಡಿಕೊಟ್ಟ ದಂಣಾಯ ಹೊಂಗೆ ವೀಸ ಲೆಕ್ಕ . . . ಪಚ್ಚುಕುಡುವುದು (ಕೊಂಡ್ಕಾ. ೪೯-೦೩ ; 1153) ; ಪಿಂಗದಾಸ್ಥಾನದಲ್ಲಿ ವಿಸುನಿಯ ಹೊಂಗಳೊಡನೊಡ ನುಕ್ಕಿ ಹೊಱವಡಲಂಗಣದಲದ್ಭುತರಸಂ ವಿಗೆ ಮೂಡುತ್ತಿರೆ (ಐಕ್ಕ. ೨೩-೩೩); ನೋಟ ಸವಿಸುಖಿಕೆ ಕೋಟಿ ಹೊಂ ಬೆಲೆಯಲ್ಲ ಕೂಟಕೆ ನೋಟವನು ಸಾರೆ ವ್ಯಸನಕ್ಕೆ ಬೇಟವೆ ಮೊದಲು (ಸರ್ವಜ್ಞ. ೧೯೯೦). ೭. 'ಹೊಂಗಾಜು', 'ಹೊಂಗೇದಗೆ' ಪರಾ. **ಹೊನ್ :** ೨. "ಹೇಮ, ಸ್ವರ್ಣಂ . . . ಕರ್ಬುರಂ, ತಪನೀಯಮುಂ-ಈ ೨೫ ಹೊನ್ (ಪೊನ್)" (ಹಲಾಯು. ೨೯-೦೯); ಸಹಸ್ರಕವಿಲೆಯುಂ ಕೋಡುಮಂ ಕೊಳಗುಮಂ [ಹೊನ್ನ]ಲುಂ ಬೆಳ್ಳಿಯ(೦)ಲುಂ ಕಟ್ಟಿಸಿ (ಸೌಇಇ. XI–i, ೬೯-೦೯; 1033); ಕವಡಿಕೆಯುಂ ಕಾಚುಂ ಸಲ್ಲುಮೆ ಹೊನ್ನುವೊಲೆಲ್ಲಿಯಾದೊಡಂ (ಸಮುಶ. ೩-೦೨); ಧರೆಯಜಿಯೆ ಹೊನ್ನ ಮೆಯ್ಯಾಂತಿರುತಿರ್ದುಂ ಲಜ್ಜೆಯಿಲ್ಲ ತನಗೆಂದು ಕರಂ ಸುರುಚಿರಧವಳಿಮದಿಂ ಸುರಗಿರಿಯುಂ ಹಿಮನಗದ ಚೆಲ್ವು ನಗದೇಕಿರ್ದುಂ (ನಂಶ. ೧-೩೭). ೩. ಕೊಠಾರದ ದಿವಾಕರದಂಡನಾಯಕರು ತಮ್ಮ ಕೈಯ ಹೊನ್ನ ಕೊಟ್ಟು (ಇಆ.IV. ೨೬೬-೯೩; 1154). ೭. 'ಹೊಂದಾವರೆ' ಪರಾ. ೮. 'ಹೊನ್ನುಡಿ' ಪರಾ. **ಹೊನ್ನು₁ :** ೨. "ಗ್ರೈರಿಂ ಕರ್ಬುರಂ . . . ಸ್ವರ್ಣಮೆನೆ ಹೊನ್ನಿಂಗೆ ನಾಮಮಕ್ಕು" (ಮುಂಗರಾ. ೪೦-೯); ಗಿರಿಯ ಮುತ್ತಿದ ಮಿಂಚುಬುಳುವಿನ ಹೊರಳಿಯಂತಿರೆ ಹೊನ್ನ ಬರಹದ ಸರಳು ಮಿಱಿದವು (ಕುಮಾರವ್ಯಾ. ೩-೨೭); ಹೊನ್ನಿನ ಹೊಳೆವ ಕಠಾರಿಯ ಮೊನೆಮೊಳೆ ಬೆನ್ನೊಳು ತಲೆದೋಱಿಸಲು (ಪೋಚಕ. ೧೨ ೩೬); ಹೊನ್ನ ತಂಬಿಗೆ ಗಿಂಡಿ ಪನ್ನೀರ ಚಂಬಿನಲಿ ಪೂರ್ಣಜಲವ ಕೊಂಡು . . . ಕನ್ನಿಕೆಯರು ರಾಜಿಸುವರು (ಕಂಸಂ. ೩-೩೩). ೩. ಈ ಗೂಳಿಯ ಕೊಂದ ಪಾತಕಕ್ಕೆ

ಹದಿನೆಂಟು ಲಕ್ಷ ಹೊನ್ನಿನಲ್ಲಿ ಗೂಳಿಯು ಮಾಡಿ . . . ಕೊಟ್ಟಲ್ಲಿ ಈ ಪಾಪ ಹೋಹುದೇ (ಅವತಾ. ೦೫೭-೭೬೦); ಪೂರ್ವ್ವಾಯವ ಪೂರ್ವ್ವಾಯದಿಂ ಬಹಾಯ ಪೊಂನು ಸಹಿತವಾಗಿ . . . ತಾಮ್ರಶಾಸನಮಂ ಕೊಟ್ಟರು (ಮೈಶಿ. ೦೧೯೦, ೦-೭೨ ; 13ಶತಂ ೫೫ ೧); ತಾಳಜಂಘನು . . . ಹೊನ್ನ ನೊಂದನು ಭೂಮಿದೇವಿಯ ಕನ್ನೆಯಲಿ ತಾನಿಡದೆ ಭೂಸುರರುನ್ನತಿಯನೇ ಬಯಸುತಿಪ್ಪನು (ಸಂಪ. ೨೫-೩೩) ; ಆಲಕಟ್ಟಲಿಗೆ ಬರಸಿ ಕೊಟ್ಟಹ ಪ್ರಮಾಣ ರೇಖೆ ೧೫೫೫ ಹೊಂನಿಗೆ (ಎಕ. VII, ಶಿವಮೊ. ೭೦-೨೩ ; 1431). ೪. ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದು ಎಂದು ನೆನೆನೆನೆದು (ಸುಕಾರೇ. ೫. ೦೯-೫೦); ಹೊನ್ನುಳ್ಳ ಹೊರೆಯರುತ್ತಮರು (ತ್ರಿರಂತ. ೦-೦೯೯-೪); ಮಣ್ಣು ಬಿಟ್ಟವ ದೈವ ಹೊನ್ನು ಬಿಟ್ಟವ ದೈವ (ಸರ್ವಜ್ಞ. ೦೨೭೯). ೫. ಮನೆಯಲ್ಲಿ ಮಂದಿ ಬಹಳ ಹೊನ್ನಿನ ಮೆಚ್ಚ ಘನವೆಂದು (ಕಂಶಶಿ. ೬-೦೯೯). ೬. 'ಹೊನ್ನೀರು' ಪರಾ. ೮. 'ಹೊನ್ನುನಡೆ', 'ಹೊನ್ನುನುಡಿ' ಪರಾ. ೯. ಪ್ರೀತಿಪಾತ್ರರಾದವರನ್ನು ಮುದ್ದಿನಿಂದ ಕರೆಯುವ ಮಾತು : ಫುಲ್ಲಶರಾತ್ಮಸಂಭವನ ಕಣ್ಗೆಸಮದು ಹೊಲ್ಲೆಹ ಮೃಗವೆನ್ನ ಹೊನ್ನೆ (ಕೋಡಶ. ೦೯-೫೩). 'ಚಿನ್ನ₁' ಪರಾ.

**ಪೊನ್ನ ಪೂ, ಹೊನ್ನ ಹೂವು** = ಹೂವಿನ ಆಕಾರದಲ್ಲಿ ಚಿನ್ನದಿಂದ ಮಾಡುವ ಒಂದು ಬಗೆಯ ಕರ್ಣಾಭರಣ : ಆ ಕಿವಿಗಳಲಿ ಪೊನ್ನಪೂ [ಪಾಠಾಂ. ಹೊನ್ನ ಹೂ]ಗಳನಾ ಕಮಳಲೋಚನೆಗೆ ಕೀಲಿಸಲು (ಐಶಪ. ೯-೫೬); ಚಿನ್ನಾಗಿ ಲಾಲಿಸು ಚೆಲ್ವದರಿದ ನಿನ್ನ ಕರ್ಣಾಂತರದಲಿ ಮೆಱೆವ ಹೊನ್ನ ಹೂವಿಗೆ ಪರಿಮಳ ಬರೆ ಪೇಳುವೆ ಬನ್ನಣೆಗಾರ್ತಿ ಚಿತ್ತೈಸು (ಕೋಡಶ. ೨೯-೨); ವಾಲೆ ಮೂಗುತಿ ಹೊನ್ನ ಹೂವು (ಶಿಪಾಶ್ಯ. ೦೦-೩). 'ಚಿನ್ನ ಪೂ' ಪರಾ. **ಪೊನ್ನ ಬೆಟ್ಟು** = ಚಿನ್ನದ ಪರ್ವತ; ಮೇರು : ಪೊನ್ನ ಬೆಟ್ಟು ಕೈಯಂ ಕಾಲುಂ ತಳೆದಿರ್ದುದೆಂಬಿನಂ ಕಣ್ಗೊಳಿಸಿದನಂತವರ ವಕ್ಷದೊಳ್ ಪಲಗಣ್ಣಂ (ಕಶ್ಮೀ. ೦೬೬). **ಪೊನ್ನ ಮಱೆ, ಹೊನ್ನ ಮಳೆ** = ಚಿನ್ನದ ಮಳೆ ; ಸುವರ್ಣವೃಷ್ಟಿ : ವಸುಮತಿವೆಸರನ್ವರ್ಥಂ ವಸುಧೆಗನಲ್ಪಮಱೆದು ಪೊನ್ನ ಮಱೆಯಂ ದಾನವ್ಯಸನಿ ದಶರಥನದೇಂ ಪೊಸಯಿಸಿದನೊ ಚಾಲೋಪನಯನನಮಹೋತ್ಸವಮಂ (ಶಂರಾಘ. ೩-೦೯೨) ; ದಾಸನಂತೆ ತವಸಿಧಿಯ ಬೇಡುವನಲ್ಲ ಚೋಳನಂತೆ ಹೊನ್ನ ಮಳೆಯ ಕಱೆಸೆಂಬವನಲ್ಲ (ಬಸವ. ೭೬೦). **ಪೊನ್ನ ಪ್ರ್ಯಯವನು** = ಹಿರಣ್ಯಗರ್ಭ; ಬ್ರಹ್ಮ : ಪೊನ್ನ ಪ್ರ್ಯಯವನು ನಮ್ಮಿಬ್ಬರಿಗೆ ಪೂರ್ವಾನುಕೂಲಗೈದು ಸೃಜಿಸಲು (ಪಪಚರ. ೨೫-೦೦). **ಪೊನ್ನರ್ಧ** = ಗದ್ಯಾಣದ ಅರ್ಧಭಾಗ : "ಭರಣಂ = ಪೊನ್ನರ್ಧಂ" (ಶಾಶ್ಯ. ೭೩). **ಪೊನ್ನವಣ, ಹೊನ್ನವಣ** = ಚಿನ್ನದ ಒಂದು ಬಗೆಯ ನಾಣ್ಯ : ಗಳಂತಿಗೆಯುಲು ಪುಟ್ಟದಾಯ ದೊಳಗೆ ಲೊಕ್ಕಿಯು ನವಿಲುವಾಗಿ ಪೊನ್ನವಣ ಚಿ(೦)ನ್ನವಣಾಯ್ದು ಕಳೆದು (ತೌಶಿ. IX-1. ೦೬೯-೨೮; 1098); ದೀವಿಗೆಗೆ ಗಾಣ ಒಂದು ಅಶೇಷನೀರ ಹೊನ್ನವಣ ಹೇಱಿಂಗೆ ೧೦೦ ಎಲೆಯಂ ಬಿಟ್ಟರು (ಕಶಿ. ೯೩-೬೦-೦೭; 11 ಶತಂ ೫೫). **ಪೊನ್ನುಳ್ಳವಂ, ಹೊನ್ನುಳ್ಳವಂ** = ಧನಿಕ : ಪೊನ್ನುಳ್ಳವನೆ ಕುಲೀನಂ ಚಿನ್ನಂ ಕಲಿ ಸತ್ಯವಾದಿಯೆನಿಸುಗುಂ (ಶಾಶ್ಯ. ೬೦); "ಧನವಾನ್, ಅಸ್ತಿಮಾನ್-ಈ ೨ ಹೊನ್ನುಳ್ಳವಂ" (ಹಲಾಯು. ೬೦-೨೦೯). **ಹೊನ್ನ ಕನಸು** = ಹೊಂಗನಸು ; ಸುಂದರವಾದ ಕಲ್ಪನೆ : ಗುರು ದೇವನ ಹೊನ್ನ ಕನಸನ್ನು ಹುಡಿಗುಟ್ಟಿ . . . ಮೆರೆಯುತ್ತಿರುವ ನೀನು ಪರಮಪಾತಕಿ (ಶಂಗಳ. ೭೨). **ಹೊನ್ನುತಾ ಗುಬ್ಬಿಯಾಟ** = ಕೈಯ ಬೆರಳುಗಳನ್ನು ಮುಚ್ಚಿ, ಬಿಡುವ ಆಟ; ಯಾರಾದರೂ ಏನಾದರೂ ಕೊಟ್ಟರೆ ಅದನ್ನು ಅಂಗೈಯಲ್ಲಿ ಹಿಡಿದುಕೊಳ್ಳುವ ರೀತಿ ಕೈಬೆರಳು ಗಳನ್ನು ಚಲಿಸುವ ಆಟ ; ☞ ತಾ ತಾ ಗುಬ್ಬಿ, ಹೊನ್ನ ತಾ ಗುಬ್ಬಿ, ರನ್ನ ತಾ ಗುಬ್ಬಿ, ತಾ ತಾ ಗುಬ್ಬಿ, ಚಿನ್ನ ತಾ ಗಂಬ್ಬಿ, ಹೊನ್ನ ತಾ ಗುಬ್ಬಿ, ತಾ ತಾ ಗುಬ್ಬಿ-ಎಂಬುದು ಮಗುವನ್ನು ಆಡಿಸುವಾಗ ಹೇಳುವ ಮಾತುಗಳು. ಗುಬ್ಬಚ್ಚಿಯು ಚಿನ್ನವನ್ನು ತಂದುಕೊಡ ಬೇಕೆಂಬುದನ್ನು ತಿಳಿಸುವ ಆಟ : ಕೈಸನ್ನೆಯಿಂದಾ ಮುಕ್ತಿಬಾಲೆಯಂ ಕೆಳೆತನಕೆ ಕರೆವಂತೆ ಹೊನ್ನ ತಾ ಗುಬ್ಬಿಯಾಟಂಗಳಾಡಿ (ಶಂಪ್ರ. ೫-೩೯). **ಹೊನ್ನ ದಾರ** = ಚಿನ್ನದ ಒಡ್ಯಾಣ; ಕಾಂಚೀದಾಮ : ಹೊನ್ನ ದಾರ ಉತ್ತಮ ಎಸುನಿಯ ಗಂಟೆಸರಗಳಿಂದ ಮತ್ತೇಭಯಾನೆಯೊಪ್ಪಿದಳು (ಕಂಪಶಂ. ೯-೭೦). **ಹೊನ್ನ ಹುಳು, ಹೊನ್ನೆಹುಳ** = ಮಿಂಚುಹುಳು : ಮಿಣಾಕುಹುಳು : ಹೊನ್ನ ಹುಳು[ಪಾಠಾಂ. ೪]ವ ಕಂಡು ನರಿ ತನ್ನ ಬಾಲವ ಹುಣ್ಣು ಮಾಡಿಕೊಂಡರೆ ಹೋಲಬಹುದೆ (ಬಶಪ. ೨೬೭) ; ಹೊನ್ನೆ ಹುಳಗಳು ಹಾರಾಡುತ್ತಿದ್ದಂತೆ ಕಾಣುವವು (ಮುಂಬಯಿ. ೬-೦೫೯) ; ಗಿಡ ಗಂಟಿ ಪ್ಯಮನಕಿ ಹೊನ್ನೆಹುಳಗಳ ಮಿಣುಕು ಚಲಿಸುತಿಹ ದೀಪಾವಳಿ (ಶಂಮು. ೪೦-೦೦) ; ಹೊನ್ನೆಹುಳ! ಹೊನ್ನೆಹುಳ! ಬೆಳಕೇಕೆ ? ನಿನ್ನ ಬೆಳಕೇಕೆ ? (ಶಶ್ವಕ್ಯ. ೬೩).

[ದೇ.॥ ತಮಿ. ಮಲ. ಪೊನ್ ; ತುಳು. ಪೊನ್ನು ; ಕೊಡ. ಪೊನ್ನ್ ; ತೆಲು. ಪೊನ್ನು, ಹೊನ್ನು, ಹೊಂ]

**ಪೊನಲ್, ಪೊನಲು, ಹೊನಲ್, ಹೊನಲಂ** (ನಾ). ೧. (ನದಿಯ) ಪ್ರವಾಹ ; ನೀರೋಟ : ಪರಚಕ್ರಭೂಪರಟ್ಟಿದ ಕರಿಗಳ್ಪಿಡುತಪ್ಪ ಮದದ ಪೊನಲಿಂದೆತ್ತಂ . . . ಕೆಸಱಕ್ಕುಂ (ಶಬ್ದ. ೩-೦೫೨) ; ಕಡಲ್ ಕಡಲಂ ಮುಟ್ಟಿ ತರಳ್ದ ನೆತ್ತರ ಪೊನಲ್ ಕಣ್ಗೊಂಡುದುಗ್ರಾಜಿಯೊಳ್ (ಶಂಶಣ. ೦೯-೯೦) : ಎಸೆವುದು ಪಳಿತ್ರಯಂಗಳಿನೆಸೆವಮಿಯಳ ತಿಳ್ಪಿನಿಱ್ . . . ತೆರೆಪಸಗಿದ ಲಾವಣ್ಯರಸದ ಪೊನಲಂಬಿನೆಗು (ಮಲ್ಲಿಕ. ೩-೬೩) ; ಪಱೆದು ಗುವ ಕರ್ಬುಗಳ ಕನಿರಸದ ಪೊನಲಿಂದೆ ನೆಱೆಯೆ ಬೆಳೆದವು ಪುರದ ಕಳಮಾದಿ ನಯದಿಂದೆ (ಶಂಶಶಿ. ೯-೦೯). **ಪೊನಲು** : ೧. ಪನ್ನೀರ ಪೊನಲೇ ಪ್ರವಾಹ ಸುದತಿಯರ ಎಡೆಗಣ್ಣ ಬೆಳಗು ಕುಡಿಮಿಂಚು (ಶ್ರೀಂದಶ್ರೀ. ೦೫-೩) ; ಅಲರ್ವಡಿವೆರಸಿ ನಲವಿನಿಂದ ಪರಿವ ಪರಿಕಾಲ್ಗಳ ಪೊನಲಲ್ಲಿ ಕುಂಕುಮರುಸದಿರಮಿನಂತಿಹುದು ನೋಳ್ಪರಿಗೆ (ಶಂರಾಶಂ. ೨-೨೫). **ಹೊನಲ್** : ೧. "ಹೂರಮೆಂದು ಹೊನಲ್" (ಕಶಶ. ೭೦-೫೬೯) ; "ಹೂರಮೆನಲ್ಕದುವೆ ಹೊನಲೆನಿಕ್ಕುಂ" (ಕಶಿ೪. ೨೩೯). **ಹೊನಲು** : ೧. ವೇದವನೋದಿದ ವಿಪ್ರರು ಹೊನಲ[ಪಾಠಾಂ.ರ]ಲ್ಲಿ ಹೋದ ಕೇಡ ನೋಡಿರೇ (ಬಶಪ. ೫೬೭) ; ಉಣ್ಣುವ ಶಿವಾನಂದರಸದ ಹೊನಲೊಳ ಗದ್ದು ಈಸಾಡಿ (ಬಶಪ. ೩-೦೧೬) ; ಎರಡು ಗೂಳಿಗಳಲ್ಲಿ ತಮ್ಮೊಳಗುರ ವಣಿಸಿ . . . ಕಾದುತ್ತಿರಲು ನೆತ್ತರ ಹೊನಲು ಪಂಪುತಿರೆ (ಬಶಪ್ರ. ೬೨-೨೦); ಕಡುಹಿನ ಕಾಳಕೂಟದ ನದಿಗೆ ನಂಜಿನ ಹೊನಲು ಬೆರಸಿದರೆ ಪಾಳೆಯವೆ (ಕುಮ್ಯಾಶ. ೦೯-೬೦). ೨. ತೊರೆ ; ಹೊಳೆ : ಹೊನಲು ನೂರೀ ಬಾಳ ಕಡಲನುಬ್ಬಿಸಲಿ (ಶುಂಕುಳ. ೬೯೯) ; ಆ ದೊಡ್ಡ ಕಂಬದ ಮನೆಯ ಅನತಿ ದೂರದಿಂದ ಒಂದು ಹೊನಲು ನಸುನಗುತ್ತ ಸದಾ ಸರ್ವದಾ ಹರಿಯುತ್ತಿರುತ್ತದೆ (ಕಂಶಹು. ೨).

**ಪೊನಲಾಗು, ಹೊನಲಾಗು** = ಪ್ರವಾಹದಂತೆ ಹರಿ : ಉಕ್ಕು ; ಪ್ರವಹಿಸು : ಇಂದುಮಬಿಂಬದಿಂದಮೃತಬಿಂದುಗಳೊಕ್ಕುಪವೆಂಬಪೋಲ್ ಮಹಾಕ್ರುಂದನವೇಗದಿಂದೆ ಸುಂಬಶ್ರುಜಲಂ ಪೊನಲಾಗೆ (ಧಕಶ. ೬-೫೯) ; ಆ ಭವನಪಂಕ್ತಿಗಳುರಿದು ಕರಗಿದವವನಿಯಲಿ ಹೊನಲಾಯ್ತು ಪುರಜನವ್ಯದೆ ಬೆಚಗಾಗೆ (ಶುಮ್ಯಾಶ. ೯-೫೯) ; ಇದಿರಾಂತ ಭಟರ ಗೋಣ್ಗಳ ನರಿಯಲು...ಹೊನಲಾಯ್ತು ರುಧಿರಂ ಪ್ರವಾಹದಂತೆ (ಕ್ಕಬ್ರಹ್ಮ. ೬-೫೩).

[ದೇ.॥ ತಮಿ. ಪುನಲ್ ; ಮಲ. ಪುನಲ್, ಪುಣಲ್ ; ತುಳು. ಪುಣಲ್ = ತೇಲುವುದು ]

**ಪೊನಲಿಡು, ಹೊನಲಿಡು** (ಕ್ರಿ). ೧. ಪ್ರವಾಹವಾಗು : ಉಕ್ಕಿ ಹರಿ ;

ಪ್ರವಹಿಸು : ತಾವ್ರುಧ್ವಜಂ . . . ಕಿಗೆದಿಸರ್ ಬಱಸಿಡಿಲ್ವೊಡೆದು ಗಿರಿ ಜರಿವಂತಿರೆ ನಿರ್ಜರೇಂದ್ರನ ಸೂನು ಪೊನಲಿಡಲ್ ಬಸಿಯ ನೆತ್ತರ್ದೊಂಪಿ ಸುತ್ತೆ ಮೈಮಱೆದು ಬಿದ್ದನು (ಕೃಖಿಕಾ. ೨೫-೩೫) ; ತೊಟ್ಟ ಪೊನ್ ಡಿಱಿದು ನಾದ ಮಿಡಿದು. ವೇಱಿಲ್ವಾಯ್ದು ಪೊನಲಿಟ್ಟು ಪರಿದು . . . ಮಲೆದನ್ (ಅಂತಿಗೊ. ೬-೧೦೨). **ಹೊನಲಿಡು** : ೧. ಮಿದುಳ ಕೊಳ್ಗೆಸಱ ಹೊನಲಿಡುವ ರಕುತದ ಕಡಲೊಳಡಿಯಿಡಲು ಬಾರದೆಯುಂತೆ ವಿಶ್ವಾಮಿತ್ರನು ಅಡವಿಯೊಳಗೆಯ್ದಿ ನಾನಾಭಯಂಕರವ ಸಾಲಿಡಲು (ಹಕಾ. ೦೨-೩೯) ; ಬೆಳುನೊರೆ ಮಸಗಿ ನಸುಬಿಸಿರಕುತ ಹೊನಲಿಡಲು . . . ಹೆಣನ ಮೆದೆ ಹೇರಾಳ ರಂಜಿಸಿತು (ಕುಮಾರ್ದ್ರೋ. ೧೦-೬) ; ಹೇಳಲೇನದನವಳು ಮೋಘದ ಜಾಳಿಯಲಿ ಮಳೆಗಱೆದಳತುಣಜಲಾಳಿ ಹೊನಲಿಡಲುಬ್ಬರಿಸುತಾಸುರವಿಕಾರದಲಿ (ಕೂಕರಾ. ೦-೧೦-೦೬). ೨. ವ್ಯಾಪಿಸು ; ಹೊಮ್ಮು . ಘನರವದ್ರುದ ಘೋರವದನದ ಹೊನಲಿಡುವ ದಾಡೆಗಳ ಹೊಗರಿನ . . . ಮನದ ಕಡುಹಿನ ದೂತರೆದ್ದುದು (ಅಂಬಿಕಾ. ೯-೩೨). [ ಪೊನಲ್ + ಇಡು₁]

**ಪೊನಲು** 'ಪೊನಲ್' ನೋ.

**ಪೊನಲುವರಿ** 'ಪೊನಲ್ವರಿ₁' ನೋ.

**ಪೊನಲೇಳ್**, **ಹೊನಲೇಳು** (ಕ್ರಿ). ಪ್ರವಾಹ ಬರು.-ಉಕ್ಕು: ಚಟ್ಟವಂ ಇಱಿಯೆ ವಿರೋಧಿ ಬಿದ್ದ ಸಮರಾಂಗಣದೊಳು ಶ್ರೀ ಗವುಣ್ಡಭೂಮಿಯಿಂದೊಱೆದೊಱೆದ್ದುಕ್ಕುಯಿಂನು ಪೊನಲೇಳ್ವುದು ಭೂತಪಿಶಾಚಕೋಟಿಯುಮಂ ನೆಱೆ ತಣಿಯಲ್ಲುಣ್ದು (ಎಕ.XVI, ಶಿಕ್ಕಾ. ೯೮-೨೫ ; 1160). **ಹೊನಲೇಳು** : ಅರುಣಜಲ ಹೊನಲೆದ್ದು ಮುಗ್ಗಿಲಲುನವಣೆಸರಾರಾವು . . . ನೋಡಿದನೆನಗೆ ಕಡುಮುಳಿದು (ಕುಮಾಕ. ೯-೩೨) ; ಅನಲಾಕ್ಷನಾಣೆ ನಾರದ ಕೇಳು ರೋಹಿತ ಹೊನಲೇಳೆ ಹೊಯ್ಯೆ ಹೊಕ್ಕುವನ (ಮೋಹಕ. ೩೩-೨೦). [ಪೊನಲ್ + ಏಳ್₁ (< ಎೞ್₁)]

**ಪೊನಲ್ಗೊಳ್** (ಕ್ರಿ). ಪ್ರವಾಹವಾಗು : ಮುಕ್ತಿಸಾರಂ ಪೊನಲ್ಗೊಂಡುದೋ . . . ಶಿವಾಂಗರುಚಿ ನದಿಯುಗವೆತ್ತುದೆನೆ ಸುರಗಂಗೆ ಕಣ್ಗೆ ಮಂಗಳಮಾಗಿ ತೋರ್ದುದು (ಶಂಬಸಾ.೦೦ -೨೯). [ಪೊನಲ್ + ಕೊಳ್₁]

**ಪೊನಲ್ನಾಡು** (ನಾ). ನದಿಗಳಿರುವ ದೇಶ.-ಪ್ರಾಂತ : ಮಲೆನಾಡೆ, ಪೊನಲ್ನಾಡೆ, ಬಯಲ ಪೊನ್ನಾಡೇ, ಪಲಕಾಲಮಾನಗಲ್ದಿರ್ದನ್ (ಶಕ್ರಕಾ. ೧೭-೩೫೩). [ಪೊನಲ್ + ನಾಡು]

**ಪೊನಲ್ವರಿ₁**, **ಪೊನಲುವರಿ**, **ಹೊನಲುವರಿ** (ಕ್ರಿ). ೧. =ಪೊನಲಿಡು೧ : ಕೊರವೊಡೆ ಬೆಟ್ಟುಗಳ್ ಬಿಂಪುವುಣ್ಮುವ ಲಾಳೆಯು ಲೋಳೆಗಳ್ ಪೊನಲ್ವರಿವವು (ಶಂಕರಾ. ೯-೧೦೦) : ಅಂತು ತಾಮ್ರಪಾಯಗುಹ್ಯಕಪ್ರತಿರೂಪಂ ಕಿಚ್ಚಿಂಗೆ ತೋಱಿದರಗು ಕರಗುವಂತೆ ಕರಗಿ ಪೊನಲ್ವರಿಯೆ (ಶಾಂತಿಪು. ೬-೨೯ ವ) ; ನವಮಣಿಮರೀಚಿಪುಂಜಂ ಕವಿದು ಪೊನಲ್ವರಿದು ದೆಂಬಿನಂ . . . ಜಲಜಲಿಸಿ ಪರಿವ ಬರಿಪೊನಲೆಸೆಗುಂ (ಕರ್ಣಪು. ೦೦-೬೯). ೨. ಹರಡು; ವ್ಯಾಪಿಸು; ಹೊಮ್ಮು : ಈ ನಾಟ್ಯರಸಂ ಸಮಸ್ತ ಸುರವೃಂದಾಧೀಶನೊಂದು ಪೊನಲ್ವರಿದತ್ಯಂಬಿನಮಾಡುವಲ್ಲಿ ಮಕುಟವ್ಯಾಲಗ್ನರತ್ನಪ್ರಭಾಪರಿವೇಷಂ ಲಲಿತೇಂದ್ರಚಾಪರುಚಿಯಂ ಮಾಡಿತ್ತು ದಿಕ್ಚಕ್ರದೊಳ್ (ಆಪು. ೭-೧೨೦). **ಪೊನಲುವರಿ** : ೧. ಆ ಮಾತಿಗೆ ಹರುಷಾಶ್ರುವಿನಿಂದ ಪೊನಲುವರಿಯೆ ಪುಳಕಾಂಬು ವನಿತೆ ಮಂಗಳಮಜ್ಜನವ ಮಾಡಿ ಸಿಂಗಾರಕನುವಾದಳು (ಶಂಕರ. ೯-೬೮). **ಹೊನಲುವರಿ** : ೧. ವಿನುತ ಸುಕವಿಯ ಸೂಕ್ತಿ ತಾಗಿದ ಮುನಿಗಳಂತಃಕರಣದಂತಿರೆ ಹೊನಲುವರಿದವು ಚಂದ್ರಕಾಂತದ ಸಾಲಶಿಲೆ ಕರಗಿ (ಕುಮಾರ್ದ್ರೋ. ೦೭-೦೬). [ಪೊನಲ್ + ಪರ್₃]

**ಪೊನಲ್ವರಿ₂** (ನಾ). (ನೀರಿನ) ರಭಸವಾದ ಓಟ, - ಹರಿವು : ಪರಿವ ಜರಿಕಾಲ ಪೊನಲ್ವರಿಯೊಳ್ವರ್ಪೂರೆದು ತಣ್ಪೆಟಲಿಕ್ಕಿದ ಮಡಿವರ್ಗದ ದುಗುಲಂಗಳುಂ (ಕರ್ಣಪು. ೩-೩೩ ವ). [ಪೊನಲ್ + ಪರ್₃]

**ಪೊನಲ್ವರಿಯಿಸು** (ಕ್ರಿ). ಪ್ರವಾಹವನ್ನುಂಟುಮಾಡು ; ರಭಸವಾಗಿ ಹರಿಯುವಂತೆ ಮಾಡು : ಕರಂ ಪೊನಲ್ವರಿಯಿಪ ಬಂಬಲ್ವರಿ ಬಲ್ವರಿ ಕಾಲ್ವರಿ ಸಾಲ್ವರಿ ಸಲೆ ಸುರಿದು ಕಱೆದುವಿರುಳುಂ ಪಗಲುಂ (ರಾಜಶೇ. ೯-೦೦೨). [ಪೊನಲ್ವರಿ₁ + - ಇಸು₃]

**ಪೊನ್ಮವಿ** (ನಾ). ಒಂದು ಸ್ಥಳದ ಹೆಸರು : ಪಶ್ಚಿಮಾಯಾನ್ದಿಶಿ ಪೊನ್ಮವಿ ತಾಟ್ಟುಮಾಯರಾ ಕೆಱೆ (ಎಕ. IV, ಹಾಗಡುಂ.೮೫-೬೩; 776). [?]

**ಪೊನ್ಮೊಳ** (ನಾ). ಒಂದು ಸ್ಥಳದ ಹೆಸರು : ಶ್ರೀಮಾರಸಿಂಘದೇವ ಪೃಥುವೀರಾಜ್ಯಙ್ಗೆಯ್ಯುತ್ತಿರೆ ಪೊನ್ಮೊಳದ ಎಮ್ಮತುಱುಗಳೊ × × × ಹಾಯ್ದು (ಮೃತಂ. ೦೯೩೦, ೦೨-೨; ಹು. 961). [? + ಕೊಳ್₂]

**ಪೊನ್ತನ** (ನಾ). ಚಿನ್ನದಂತೆ ಹೊಂಬಣ್ಣವಾಗಿರುವಿಕೆ; ಚಿನ್ನದಂತಿರುವಿಕೆ: ಒಯ್ಯನೊಯ್ಯನೆಯ ತುಂಬುದಿಂಗಳ ಕನಕಬಿಂಬಕ್ಕೆ, ಪೊನ್ತನಂ ಬಾಡಿ, ಮೂಡಿದುದು ಬೆಳ್ಪಿಯ ತನಂ (ಶ್ರೀರಾಪಟ್ಟ. ೪೮೦-೦೭೩). [ಪೊನ್ + - ತನ]

**ಪೊನ್ನಂಗಲ್** (ನಾ) . (?) : ಪೊನ್ನಂಗಲ್ . . . ಕಣ್ಣಂದೊಬಲಿ, ಕಣ್ಣಂಬಾಳೆ (ಕಮಾ.ಸು. ೫೫ ಪ್ರಯೋ). [?]

**ಪೊನ್ನಂಡೆ**, **ಹೊನ್ನಂಡೆ** (ನಾ) . ಚಿನ್ನದ ಜೀರ್ಕೊಳವೆ ; ಬಂಗಾರದ ಪಿಚಕಾರಿ : ಮನ್ಮಥ ರತಿ ಪೊನ್ನಂಡೆಗಳ ತುಡುಕಿದರು (ಮೋಹಕ. ೦೯-೮೦) ; ತಮತಮಗೆ ಹಸ್ತಕಳವಟ್ಟ ಜಲಯಂತ್ರ ಪೊನ್ನಂಡೆಗಳ ಗಡಣದಿಂ ನೀರಾಟಕನುವಾದರು (ಕಂಪು.೩೭-೩೫); ಕರದೊಳ್ ಪೊನ್ನಂಡೆಯುಮಂ ಜೀರ್ಕೊಳವಿಯೆಸಯೆ . . . ಕಾಂತಾಳಿ ನೀರ್ವೊರ್ಕಮ್ಮದಾಗಳ್ (ರಾಜಶೇ . ೦೦-೬೦). **ಹೊನ್ನಂಡೆ** : ಕೊಂಡು ಕುಂಕುಮವಾರಿಗಳ ಹೊನ್ನಂಡೆ ಜಲಜಂತ್ರಂಗಳಲಿ ಹೊಯ್ದಾಡಿದರುಪ್ಪೋಕುಳಿಯ (ಕೂಕರಾ. ೦-೦೬ ೫೩); ಕುಂಕುಮಜಲವ ಹೊನ್ನಂಡೆಗಳೊಳು ತುಂಬಿ ಮುಂಕೊಂಡು ಹೊಯ್ದಾಡಲು (ಮೋಹಕ ೦೯-೮೦); ಗುಂಡಿದುಳ್ಳಾಡಿ ಸರ್ವರು ಹೊಕ್ಕು ಕೂಡೆ ಹೊನ್ನಂಡೆ ಜೀರ್ಕೊಳವೆಯೊಳ್ಕೊಗೆದು ಸುಂಡಿಲೊಳ್ಪೂಸುವಾನೆಗಳಂತೆ ಚಲ್ಲಿದರ್ಮಂಡೆ ಮೈ ನನೆಯಲೆಲ್ಲರಿಗೆ (ಶರಶ. ೯೦-೨೯). [ಪೊನ್ + ಅಂಡೆ₂]

**ಪೊನ್ನಂದಣ** 'ಪೊನ್ನಂದಳ' ನೋ.

**ಪೊನ್ನಂದಳ**, **ಪೊನ್ನಂದಣ**, **ಹೊನ್ನಂದಣ** (ನಾ). ಚಿನ್ನದ ಪಲ್ಲಕ್ಕಿ ; ಬಂಗಾರದ ಶಿಬಿಕೆ : ಅಗಣಿತವಿಲಾಸಿನಿಯರುಗ್ಗಡಿಸೆ ಪಾಯವಧಾರೆ ನುತ್ತಲಂದು ಪರವೆ ಪೊನ್ನಂದಳವನಡರೆ (ಶಾಂರಪು ೬-೩೨). **ಪೊನ್ನಂದಣ** : ಬಳಿಕ ಪೊನ್ನಂದಣದ ಮೇಲೆ ವೈವಾಹಮಂಗಳಮಹೋತ್ಸವಕೆ ವಿರಚಿಸಿದ ಮಂಟಪದೆಡೆಗೆ ನಳಿನಪತ್ರಾಕ್ಷಿಯಂ ತಂದರೊಸಗೆಯೊಳು (ಕೃಖಿಕಾ. ೩೧-೦೩). **ಹೊನ್ನಂದಣ** : ಹಿಂದೆ ಮುಂದಿಕ್ಕೆಲದ ನಾರೀವೃಂದವೆಯ್ತರೆ ನಡುವೆ ತಾ ಹೊನ್ನಂದಣವನೇಱಿದಳು ಸುರಕರಿಯೆಡೆಗೆ ಗಾಂಧಾರಿ (ಶಂಕಶ. ೨೦-೦೯) ; ಮಣಿಮಯದ ದಡ್ಡಿಗಳು ಹೊನ್ನಂದಣವ ಮುಸುಕಿದವು (ಕೂಕರಾ. ೦-೦೬-೦೩) ; ಸಂದಣಿಸಿದರಣ್ಣಗಳು ದಾದಿಯರು ಹೊನ್ನಂದಣದೆಡದ ಭಾಗದಲಿ (ಕೂಹಕ. ೨೪-೨೩). [ಪೊನ್ + ಅಂದಳ]

**ಪೊನ್ನಂದುಗೆ** (ನಾ). ಚಿನ್ನದ ಕಾಲುಕಡಗ : ಉಂಗುರ ಗೆಜ್ಜೆ ಪೊನ್ನಂದುಗೆ ಪವಳಮಂ...ತಂದುಕೊಡುವರು (ಬಸಪು. ೦೯-೦೫). [ಪೊನ್ + ಅಂದುಗೆ]

**ಪೊನ್ನಂಬರ** 'ಪನ್ನಂಬರ' ನೋ.

**ಪೊನ್ನಂಬು**, **ಹೊನ್ನಂಬು** (ನಾ). ಚಿನ್ನದ ಬಾಣ : ಇತರ ಕುಮಾತಂಗಕೊಳುತ್ಪನ್ನಮಾತಿ ಮನಂಗೆಯ್ದುದು ಪೊ[ಪಾಠಾಂ. ಹೊ]ನ್ನಂಬಂ ನೀರೊಳೆಚ್ಚಿ ಕಿಡಿಪಂತಕ್ಕುಂ (ನಚುಶ. ೩-೩೫) : ಸನ್ನುತ ಜಿನಧರ್ಮಂ ನೆಱೆ ತನ್ನಿಂದಂ ತಾನೆ ಬಂದೊಡಲ್ಲದೆ ಬಿಡುಮಾತ್ರಂ ನೆಱೆ ಪೋಲ್ಕುಂ ಜಗದೊಳ್ ಪೊನ್ನಂಬಂ ನೀರೊಳೆಚ್ಚು ಕಿಡಿಸುವ ಮರುಳಂ (ಧರ್ಮಾಮೃ. ೩-೨೬೧). **ಹೊನ್ನಂಬು** : ಅಱಿತವರ ಮುಂದೆ ತನ್ನಱಿವನ್ನು ಮೆಱೆಯುವುದು ಅಱಿಯದರ ಮುಂದೆ ಹೊನ್ನಂಬ ತೊಱೆಯಲೆಚ್ಚಂತೆ (ಸರ್ವಜ್ಞ. ೦೯೬೯). [ಪೊನ್ + ಅಂಬು₂]

**ಪೊನ್ನಕ್ಕ** (ನಾ). ಒಬ್ಬಾಕೆಯ ಹೆಸರು : × × × ಸೆಟ್ಟಿಯ ಮಗ ಳ್ಪೊನ್ನಕ್ಕನ್ × × × (ಎಳ್. XII, ಗುಬ್ಬಿ. ೪೪-೩; ೨೬೩).

[ಪೊನ್+ಅಕ್ಕ$_1$]

**ಪೊನ್ನಗಂಟಿ** 'ಪೊನ್ನಗನ್ನೆ' ನೋ.

**ಪೊನ್ನಗನ್ನೆ, ಪೊನ್ನಗಂಟಿ, ಹೊನಗನೆ, ಹೊನಗನ್ನೆ, ಹೊನಗೊನೆ, ಹೊನಗೊನ್ನೆ, ಹೊನ್ನಗನ್ನೆ, ಹೊನ್ನಗೊನ್ನೆ** (ನಾ). ಒಂದು ಬಗೆಯ ತರಕಾರಿ ಗಿಡ ಮತ್ತು ಅದರ ಸೊಪ್ಪು : "ಪಾಂಡುರ- ಕಾಡುದ್ದು, ಕರಿಯ ಹುರುಳಿ, ಪೊನ್ನಗನ್ನೆ" (ಓಜಂ. ೪೯) ; ಪೆಸರೆಸೆವ ಪೊನ್ನಗನ್ನೆಯ ರಸಮಂ ಕೊಂಡಾಡ ಪಾಲೊಳಜಿ ಮಜುಗಿಸಿ ಹಿಂಗು ಸಮೇತಂ ಕುಡಿಯಿಸೆ ಕಿಡ್ಸೆ ದಸೆಗೆಟ್ಟೋದಿ ಪೋಗದೇಂ ನಿಂದವುದೇ (ಕೋಶೋಕ. ೯-೦೪೩). **ಪೊನ್ನಗಂಟಿ :** ಸೊಪ್ಪುಗಳು : ಅಗಸೆ . . . ಪೊನ್ನಗಂಟಿ, ಕೀರಕಸಾಲೆ (ಕಕ್ಕುಕು. ೨೩೭). **ಹೊನಗನೆ :** ಹೊನಗನೆ ಒಹಳ ತಂಪು (ಕೊಹ). **ಹೊನಗನ್ನೆ :** ಯಷ್ಟಿಮಧುಕ, ಹೊನಗನ್ನೆಯ ಬೇರು ಇವಿಷ್ಟನೂ ಪ್ರತ್ಯೇಕ ಒಂದು ವರಹ ತೂಕವ ಸಣ್ಣನಾಗಿ ಕತ್ತರಿಸಿ (ಕೃಸ್ಕಾ. II, ೩೫). **ಹೊನಗೊನೆ :** "ಬ್ರಾಹ್ಮೀ, ಮತ್ಸ್ಯಾಕ್ಷೀ, ವಯಸ್ಥಾ, ಸೋಮವಲ್ಲರೀ — ೪ ಹೊನಗೊನೇಸೊಪ್ಪು" (ಶಿವ್ಯಾಂಕಿ. ೦೪೪) ; ಹಳೆಅಕ್ಕಿಅನ್ನ, ಹೊನಗೊನೆಸೊಪ್ಪು . . . ಚಿಲಿಕೀರೆಸೊಪ್ಪು ಇವುಗಳೆಲ್ಲವೂ ಜ್ವರದವಂಗೆ ಪಥ್ಯದ್ರವ್ಯಗಳು (ಸಕಶ್ಯ. ೧೦೨). **ಹೊನಗೊನ್ನೆ :** "ಬ್ರಾಹ್ಮೀ, ಮತ್ಸ್ಯಾಕ್ಷೀ, ವಯಸ್ಥಾ, ಸೋಮವಲ್ಲರೀ — ಈ ೪ ಹೊನಗೊನ್ನೆ" (ಶಾಕಶಾ. ೦೦೦) ; ಹೊನಗೊನ್ನೆ ಸಂಗಡ ಆಪಿಂಕೆ ಮುಗುಳಂ ಹಾಲಲ್ಲಿ ಅರೆದು ಕುಡಿಯೆ ಹೊಟ್ಟೆಉರಿ ಸಹ ಗುಣ (ಶಿವ್ಯಪಿ. ೮). **ಹೊನ್ನಗನ್ನೆ :** "ಮತ್ಸ್ಯಾಕ್ಷಕಃ — ಹೊನ್ನಗನ್ನೆ" (ಓಜಂ. ೦೦೯) ; ಹೊನ್ನಗನ್ನೆಯ ರಸಮಂ ಕೊಂಡು ಆಡಿನ ಪಾಲೊಳಗೆ ಕೂಡಿ . . . ಕುಡಿಯಲ್ ಕಿಡ್ಸಯ ಬೇನೆ ಮಾಣ್ಬುದು (ಕೋಶೋಕ. ೯-೦೪೩ ಟೀಕೆ) : ತೊಟ್ಟ ಮುಸ್ಸಿಯನುಜಿ ಚೂರ್ಣವುದುಲಿಗ ಹೊನ್ನಗನ್ನೆ ಸಮೇತಂ (ಕಮದ. ೩-೯೪). **ಹೊನ್ನಗೊನ್ನೆ :** "ವಸುಕಾಂತಿಯೆನೆ ಹೊನ್ನಗೊನ್ನೆ" (ಮಂಗರಾ. ೪೦-೩೩).

[ದೇ. ಶ ತಮಿ. ಪೊನ್ನಾಙ್ಗಣ್ಣಿ, ಪೊನ್ನಾಙ್ಗಾಣಿ ; ತುಳು. ಪೊನ್ನಾಂ ಕಣ್ಣಿ, ಪೊನ್ನಾಂಗಾಣಿ, ಹೊಣ್ಣಾಂಗಣಿ ; ತೆಲು. ಪೊನ್ನಗಂಟಿಕೂರ]

**ಪೊನ್ನಬ್ಬೆ** (ನಾ). ಒಬ್ಬಾಕೆಯ ಹೆಸರು : ಕೋಸಿಗರಾ ಕೋಟಿಯಮ್ಮ ಗೋಸಾಸಿಯ ಪೆಣ್ಡಾತಿ ಪೊನ್ನಬ್ಬೆ (ಮೈಅಂ. ೦೪೨೯, ೬೯-೨; ೨೬೪) ; ತಾಗೆ ರತ್ತಿಯ ಮಹಾಜನಕ್ಕೆ ಪೊನ್ನಬ್ಬೆ ಪೊನ್ನ ಕೊಟ್ಟು ಸಾಲೆ ಸೀಡೆನ್ದು ಮುತ್ತಲಂ ಕೊಣ್ಡು (ಎಳ್. VII, ಶಿಕಾ. ೬೦-೭ ; 978). [ಪೊನ್ + ಅಬ್ಬೆ$_1$]

**ಪೊನ್ನಯ್ಯ, ಹೊನ್ನಯ್ಯ** (ನಾ). ಒಬ್ಬಾತನ ಹೆಸರು : ಪೊನ್ನಸದೇವನ ಮಗ ಪೊನ್ನಯ್ಯ (ಎಳ್. XII, ಚಾವುಗ. ೮೦-೧ ; ಸು. ೨೭೬). **ಹೊನ್ನಯ್ಯ :** ಗೊರವರ ಹೊನ್ನಯ್ಯಂ ತುಜುವಂ ಒನ್ನಿಕ್ಕಿ ಪಲರಂ ಕೊನ್ದು ತಳುತ್ತಿಜಿದು ದೇವಲೋಕಕ್ಕೆ ಸನ್ದೊಂ (ಎಳ್. VIII, ಸೊರಬ. ೩೪-೦೦ ; 1032).

[ಪೊನ್ + ಅಯ್ಯ$_1$]

**ಪೊನ್ನಲರ್** (ನಾ). ಬಂಗಾರದ ಹೂವು : ಮಾಣಿಕದ ಸೊಡರ್ಗಳಿಂ ನೀರಾ ಜನೆಯ ಪೊನ್ನಲರ್ಗಳಿಂ ಗೀರ್ವಾಣಾರ್ಚಿತನಂ ನರೇಂದ್ರವಧುವರ್ಚಿಸಿದಳ್ (ಶಬ್ದಪು. ೪-೩೮). [ಪೊನ್ + ಅಲರ್$_2$]

**ಪೊನ್ನವಾರಗಾವುಂಡ** (ನಾ). ಒಬ್ಬಾತನ ಹೆಸರು : ಮೋಳಿಯನೂರ ದೇವಯ್ಯನುಂ ಪಂಪಯ್ಯನುಂ ಕಳ್ಳಬುಣಾಸೆಯ ಪೊನ್ನವಾರಗಾವುಣ್ಡನುಂ . . . ಧರ್ಮರಾಸಿಭಟಾರರ ಕಾಲಂ ಕರ್ಚ್ಚಿ ಕೊಟ್ಟ ಸ್ಥಿತಿಯಾವುದೆನ್ದೊಡೆ (ಎಳ್. XI, ಚಿತ್ರದು. ೬೬-೨೦ ; 937).

[ಪೊನ್ನವಾರ್ + ಗಾವುಂಡ (< ಗಾಮುಂಡ)]

**ಪೊನ್ನವೂರ್** (ನಾ). ಒಂದು ಸ್ಥಳದ ಹೆಸರು : ಜಿಡಯೂರಾಳ್ದೆಟ್ಟತ್ತಜಿ ನಾಟ್ಟೂರಾವುಣ್ಡಮ್ × × × ಕಲಿವಿಟ್ಟನೊಳೆ ವಿರೋಧವಾಗಿ ನಾಡಿನ್ದಂ ಗಂಗವಾಡಿಗೆ ಪಶ್ಚಿಮೆನಿಪ್ಪೊನ್ನವೂರಲೊಳಿರೆ (ಎಳ್. VIII, ಸೊರಬ. ೬೬-೩ : ೯೧೪). [< ಪೊನ್ + ಊರ್]

**ಪೊನ್ನಳಜು** (ನಾ). ಒಬ್ಬಾತನ ಹೆಸರು : ಕಂಚುಗರ ಗುಜಯ್ಯಂಗೆ ಪೊನ್ನಳಜು ಒಮ್ಮ[ತ್ರ]ಲಂ ಕೊಟ್ಟ (ಎಳ್. VIII, ಸೊರಬ. ೯೦೩-೦೯ ; ೨೬೬). [ ? ]

**ಪೊನ್ನಳೂರ್** (ನಾ). ಒಂದು ಸ್ಥಳದ ಹೆಸರು : ಪೊನ್ನಳೂರ್ ಬೋಯಸ್ಯ . . . ಸರ್ವ್ವಶರ್ಮ್ಮಣ (ಇಇ. VII, ೦೪೬-೯೩ ; ೬೬೬). [? + ಊರ್]

**ಪೊನ್ನಳ್ಳಿ** (ನಾ). ಒಂದು ಸ್ಥಳದ ಹೆಸರು : ಪೊನ್ನಳ್ಳಿ ನಾಮಗ್ರಾಮಃ (ಎಳ್. IV, ಹಾಗಡಂ. ೬೩-೬೦ ; 770). [ಪೊನ್ + < ಪಳ್ಳಿ$_1$]

**ಪೊನ್ನಾಣ್ಮ** (ನಾ). ಸಂಪತ್ತಿನ ಒಡೆಯ ; ಕುಬೇರ : "ಧನಪತಿಯೊಳೆ ಪೊನ್ನಾಣ್ಮಂ" (ಕಕಾರ. ೪೦). [ಪೊನ್ + ಆಣ್ಮ (< ಆಳ್ಮ)]

**ಪೊನ್ನಾಯ** (ನಾ). ಒಂದು ಬಗೆಯ ತೆರಿಗೆ : ವೇಳಾಪುರದ ಬೀಡು ಚತುಶ್ಶೀಮೆ ಸುಂಕ ಪೊಂನಾಯ ಸಹಿತ ದೇವಳಿಗೆನಾಡಂಮ ಸಂದಿ ಹಂನೆರಡು (ಎಳ್. V, ಬೇಲೂರು. ೩೩-೬೨ ; 1117). 'ಪನ್ನಾಯ' ಪರಾ.

[ಪೊನ್$_1$+ಆಯ$_1$]

**ಪೊನ್ನಾಯುಗ, ಹೊನ್ನಾಯುಗ** (ನಾ). (ಕತ್ತಿಯ) ಚಿನ್ನದ ಹಿಡಿಕೆ : ರಂಜಿಸಿದುದು ಪೊನ್ನಾಯುಗದ ಪೊನ್ನ ಬಜ್ಜರಿ ಕಟಿಯೊಳ್ (ಅಪಂಪ್ಯ. ೬-೩೦). **ಹೊನ್ನಾಯುಗ :** ಹೊನ್ನಾಯುಗದ ಖಡುಗದ ಗಜಬು . . . ಮೊದಲೆಗಳ ಮಹಾಧ್ವನಿ ಬಗಿದುದೈ ತಾವರೆಯ ತನಯನ ಕರ್ಣಕೋಟರವ (ಕುಪ್ರಾಪಿ. ೨-೪) ; ಹೊನ್ನಾಯುಗದ ಖಡುಗವನಕ್ಷಯದ ಮೂಡಿಗೆಯು ದಕ್ಷಿಣದ ಹೆಗಲಿಗೇಜಿಸಿ . . . ಹೊಜವಂಟನು ರಘುಪ್ರಭವ (ತೊರರಾ. ೩-೬-೩). [ಪೊನ್ + ಆಯುಗ (< ಆಯಗ)]

**ಪೊನ್ನಾಯೋಗ** (ನಾ). ಚಿನ್ನದಿಂದ ಮಾಡಿದ ಅಲಂಕಾರವಸ್ತು,— ಆಭರಣ : ನಡೆಯ ತುರಗು ಪೊನ್ನಾಯೋಗಂಗಳಿಂದವರ್ದಟ್ಟಿಯಿಂ (ಶಂಕರಾ. ೯-೦೦೨). [ಪೊನ್ + ಆಯೋಗ]

**ಪೊನ್ನಾಳ್** (ನಾ). ಶ್ರೇಷ್ಠನಾದ ಯೋಧ,— ಸೈನಿಕ : ಪೋದವರಾ ಪೊನ್ನಾಳ್ಗಳ್ ಬಾರದೆ ಬಗೆ ಬೆದರುತಿಹುದು (ಚಾರಿತ. ೦-೦೩).

[ಪೊನ್+ಆಳ್$_1$]

**ಪೊನ್ನಿಗ, ಹೊನ್ನಿಗ** (ನಾ). ೧. ಒಬ್ಬಾತನ ಹೆಸರು : ಬದಿರೂರಲು ಬೂತುಗನ ತುಮ್ಮವಾಡಿಯ ಗಣ್ಡಯ್ಯನ ಮಗಂ ಪೊನ್ನಿಗಂ ಕಾದಿ ಸತ್ತು ಸ್ವರ್ಗ್ಗದಲಿಟ್ಟಂ (ಎಳ್. XII, ಕುಣಿಗ. ೨೬-೨೨ ; ಸು. ೨೬೦). ೨. (ಕನ್ನಡದಲ್ಲಿ ಪ್ರಸಿದ್ಧನಾದ ಪೊನ್ನನೆಂಬ) ಒಬ್ಬ ಕವಿಯ ಹೆಸರು : ಪೊನ್ನಿಗ[ನಿಂ] ಮಲ್ಲಪನುಂ ಪೊನ್ನನುಮಾರ್ತಿಯೆ ಪುರಾಣಚೂಡಾಮಣಿಯುಂ ಮುನ್ನಂ ಪೇಟಿಸಿದಂತೆ . . . ಪೇಟಿಸಿದಳ್ (ಅಪ್ಪು. ೦-೬೬). 'ಅರಿಗ' ಹೋ. **ಹೊನ್ನಿಗ :** ೧. ಹೊನ್ನಿಗ ಪಸುಗವೊನ್ನಮಣ್ಡ ತಮ್ಮ ಚವನವ ಊರಟಿವನ ಸತ್ತ (ಎಳ್. X (೩), ಬಾಗೇಪ. ೯೪-೨ ; 10ಶತಕ ೩೪).

[ಪೊನ್+—ಇಗ]

**ಪೊನ್ನಿಡಿಕೆ** (ನಾ). ಒಂದು ಸ್ಥಳದ ಹೆಸರು ; ಈಗಿನ ತುಮಕೂರು ಜಿಲ್ಲೆಯ ಹೊನ್ನುಡಿಕೆ : × × × ದ ಪೊನ್ನಿಡಿಕೆಯೊಳ್ ತನ್ನ ಅತ್ತ್ರದಟಿವಿನೊಳ್ ಕಾದಿ ನಾಲ್ವರ ಕೊನ್ದು ಸತ್ತನ್ (ಎಳ್. XII, ಕುಣಿಗ. ೪೦-೩ ; ಸು. ೨೬೦). [ ? ]

**ಪೊನ್ನೀರ್, ಹೊನ್ನೀರು** (ನಾ). ೧. ಹೊಂಬಣ್ಣದ ಕಾಂತಿ : ಒಯ್ಯನೆ ಸುತ್ತಂ ಸೂಸಿದೀಶಾನನ ಜಡೆಗಳವೊಲ್ ಕಾಯ್ದು ಪೊನ್ನೀರ್ಗಳಿಲ್ದೆಂಬಿನ ಪೆಂಪಂ ಸಿಂಪಿಸುತ್ತಿರ್ದಹಿಮರುಚಿಗಳಂ ತಿಗ್ಗುರುಬ್ಬಾಳಿಬಿಂಬಂ (ಕಾದಂಬ

೩೬೪). **ಹೊನ್ನೀರು**: ೨. ಹೊಂಬಣ್ಣದ ನೀರು : ಉದಯೋನ್ಮುಖ ಸೂರ್ಯನ ರಶ್ಮಿ ವಿಕಸನಪುಷ್ಪದ ಮೇಲೆ ಹೊನ್ನೀರನೆರಚಿತ್ತು (ಜೀಶಿಶ. ೨೫); ಹೊಂಗದಿರ ಜೇರ್ಕೊಳವಿಯಿಂ ಸಂಜೆ ಜರ್ರೆಂದು ರಂಗೆರಚಿ . . . ಕನ್ನೆಳಲ ಪಸಲೆಯಲಿ ಹೊನ್ನೀರ ಮಳೆ ಹೊಯ್ಯಲು (ಜಕ್ರಾಂಗ. ೨೦-೩೬೦).

[ಪೊನ್ + ನೀರ್]

**ಪೊನ್ನು** 'ಪೊನ್' ನೋ.

**ಪೊನ್ನುಗ** (ನಾ). ಚಿನ್ನದಲ್ಲಿ ವ್ಯವಹರಿಸುವವನು; ಅಕ್ಕಸಾಲಿಗ : ಮಣ್ಣುಗಂ, ಪೊನ್ನುಗಂ (ಶಬ್ದಾಶು. ೮೩೪ ವೃ.ಹೋ). [ಪೊನ್ + -ಉಗ]

**ಪೊನ್ನುಡೆ** (ನಾ). ಜರತಾರಿ ವಸ್ತ್ರ; ಚಿನ್ನದ ಬಣ್ಣದ ದುಕೂಲ : ಪೀತಾಂಬರ : ತನ್ನ ಮನೆಯ ಮದುವೆಯೊಳು ಮಂಗಲದೊಳು ತನ್ನ ಬಾಂಧವರೆಲ್ಲರನು ಅನ್ನಪಾನಂಗಳಿಂದಾದರಿಪುದು ಮತ್ತ ಪೊನ್ನುಡೆಯಿತ್ತು ಪೂಜಿಪುದು (ಜಿಒ. ೪-೩೫); ಪೊನ್ನುಡೆಯರೆ ತೊವಲಂ ಕೊಳೆಯುವನೆನ್ನಂ ತಾನಕ್ಕೆ ವಶವನೆಂದೇ ಬಗೆವರ್ (ಅನಿಥ. ೦-೩೦). [ಪೊನ್ + ಉಡೆ]

**ಪೊನ್ನುಯ್ಯಲ್**, **ಹೊನ್ನುಯ್ಯಲ್** (ನಾ). ಚಿನ್ನದ ತೂಗುಮಣೆ,-ಜೋಕಾಲಿ : ಚೂತವಹೀಜದ ಕಿಟಗಣ ಪೊನ್ನುಯ್ಯಲನೇಱಿ . . . ತರಳಾಕ್ಷಿಯಾಡುತುಮಿರ್ಪಿನಂ (ರಥಾಗಶ್ಚ. ೩-೨೬). **ಹೊನ್ನುಯ್ಯಲ್** : ಕಾಂಚನಮಾಲೆ . . . ಕೆಳದಿಯರ ಮೇಳದಲಿ ಹೊನ್ನುಯ್ಯಲಾಡುತ ಲೀಲೆಯಿಂದಿರೆ (ಚಾಳ್ಯಶಾ. ೨೯-೦). [ಪೊನ್ + ಉಯ್ಯಲ್]

**ಪೊನ್ನೆ**, **ಹೊನ್ನೆ** (ನಾ). ಒಂದು ಬಗೆಯ ಮರ; ಪುನ್ನಾಗ: ಚಿನ್ನೆ ಪೊನ್ನೆಯರಲಂ ಕೊಯ್ದಳ್ (ಆದಿಪು. ೧೦-೯೯. ಅಡಕದ್ರ); ಪೊನ್ನೆಯ ಮುಗುಳೆ ಶ್ಯಾಮಳೆ ತನ್ನ ಕೊರಲ್ಗೆಸೆಯೆ . . . ಕಣ್ಗೆಸದಿರ್ದಳ್ (ಶಾಂತಿಪು. ೬-೦೭); ಕದಂಬವಹೀಜದೊಡು ಶೋಭಾಗುಣಮೊಂದೆ ಪೂತಸವ ಪೊನ್ನೆಗೆ ಕರ್ಮಾಗಿಳಿಱಿದ್ದು ಬೆಳ್ಮಿಗಿಲ್ಗಾಗಿರೆ ಪೋದುದಿಂತು ಜಳದಾಗಮಮಪಹಾದುದು ಶಾರದಾಗಮಂ (ಜಗಶಾ. ೯-೪೬). **ಹೊನ್ನೆ** : "ಪೀತಸಾ(ಲ)ರಃ, ಅಸನಃ-ಈ ೨ ಹೊನ್ನ" (ಕಣಚಮು. ೩೩-೯೬); ಹೊನ್ನೆ ಕಂಟಜಂ ಕಬ್ಬುನ್ನಿ ಸೀವನ್ನಿ ತುಂಬುರುಹಂ ತಾಳಂ (ಚಾವ್ಯಸಾ. ೦೦೯೦ ಜುರಾಶ್ರ); ಉಱಿ ಬೀತುವು ಸುರಗಿ ಹೊನ್ನೆ ಮಲ್ಲಿಗೆ ವನದೊಳ್ (ಜಗಾ. ೪-೩).

[ದೇ.೩ ತಮಿ. ಪುನ್ನೈ, ಏನ್ನೈ; ಮಲ. ಪುನ್ನ; ತುಳು. ಪೊನ್ನೆ, ಹೊನ್ನೆ; ತೆಲು. ಪೊನ್ನ]

**ಪೊನ್ನೆಱೆಯ** (ನಾ).=ಪೊನ್ನಾಣ್ಮ : "ಪೊನ್ನೆಱೆಯ ತಿಸುಳಿಗೆಳೆಯಂ ಕಿನ್ನರಪತಿ" (ಕಜಾರಾ. ೦). [ಪೊನ್ + ಎಱೆಯ]

**ಪೊನ್ನೇಱಿರಸ** (ನಾ). ಒಬ್ಬಾತನ ಹೆಸರು : ಸಿಙ್ಗಪೋತರಸರು ಪೊನ್ನೇಱಿರಸರು ಧರ್ಮ್ಮಮಹಾದೇವಿಯರುಡಿಸಿಟ್ಟು ಪೊನ್ನೇಱಿ ದೊಡ್ಡರೆನ್ನು ಕಡಗವಿಟ್ಟರ್ (ಶಾಇಡು. IX-1. ೦೭-೦೨ : ೯೦೦). [ ? + ಅರಸ]

**ಪೊನ್ನೈರಣೆ** (ನಾ). (ಸೌಭಾಗ್ಯಸೂಚಕವಾಗಿ) ಮದುವೆಯಲ್ಲಿ ಚಿತ್ರ ಬರೆದಿಡುವ ಚಿನ್ನದ ಕೊಡ : ಮದನನ ರತಿಯ ಮದುವೆಯೊಳ್ ಸಿರಿ ಸಂಪದದಿಂ ಪೊನ್ನೈರಣೆಯ ಜವಳಿಗಳಸದ ಮೇಲೊಲಿದಿಕ್ಕಿದ ಮಂದಾರದ ಮಾಲೆಯ ಮಾಳ್ಕೆಯೊಳು ಮದಯೌವನೆಯುನ್ನತಕುಚತಟದೊಳ್ ಚದುರೆಯದೊರ್ಮೆಳ್ ನವನವರತ್ನದ ಪದಕಂಗಟ್ಟಿದಳು (ಜಯಶಾ. ೩-೦೪).

[ಪೊನ್ + ಐರಣೆ ( < ಅಯ್ರಣೆ)]

**ಪೊನ್ನೊಡೆಯ** (ನಾ). = ಪೊನ್ನಾಣ್ಮ : "ಪೊನ್ನೊಡೆಯಂ, ತಿಸುಳಿಗೆಳೆಯಂ—ಈ ೨ ಕುಬೇರಂ" (ಕಕಶಾ. ೪೯-೩೯); ಸಸಿಯಂ ಮೆಯ್ಯೊಳಗಿಂದ ಪೊನ್ನೊಡೆಯನಂ ಪೆಂಪಿಂದೆ . . . ಉಬ್ಬಸಮಂ ಮಾಡುವ ಬರ್ದೆಯರ್ ಪಲಬರುಂ ಕಣ್ಗೇಂ ಬಿಡಂಗಾದರೋ (ಶಬ್ದಶಾ. ೦೩೪). [ಪೊನ್ + ಒಡೆಯ₁]

**ಪೊನ್ನೊರ್ಕೆ** (ನಾ). ೧. ಚಿನ್ನದ ಬಣ್ಣ,-ಮೆರುಗು,-ಕಾಂತಿ : ಪೊನ್ನೊರ ಗನ್ನದೀಪಮೆಱಿಪಂತಿರೆ ಮಾಣಿಕ್ಯಪ್ರದೀಪಮೇನೆಱಗುಗುಮೇ (ಶಂಠಾಮು. ೬-೦೬೦). ೨. ಚಿನ್ನದ ಗೆರೆ : ಧರಣೀರಕ್ಷಣಮಂತ್ರಾಕ್ಷರಮಂ ಏದ್ವಿಷ್ಟಸೈನ್ಯ ಮಾರಣಮಂತ್ರಾಕ್ಷರಮಂ ಪೊನ್ನೊರೆಯಿಂದಂ ಬರೆದಂತಾ ನೃಪನ ತೋಳ ಬಾಳ್ಗೊಗರೆಸೆಗುಂ (ಮಲ್ಲಿಕ. ೩-೦೫); ಪೊನ್ನ ಬೆಟ್ಟದ ಬಳಸಿದಂ ಸಜ್ಜನ ಗೊರ್ಂದು ಪೊನ್ನೊರೆಯನಿತ್ತುದಿಲ್ಲ (ಚಾಕಶಾ. ೬-೩೬). [ಪೊನ್ + ಒರ್ಕೆ]

**ಪೊನ್ನೊರ್ಕೆ** 'ಪೊನ್ನೊಱೆ' ನೋ.

**ಪೊನ್ನೊಱೆ**, **ಪೊನ್ನೊರ್ಕೆ**, **ಹೊನ್ನೊಱೆ** (ನಾ). ಚಿನ್ನದಿಂದ ಮಾಡಿದ ಶಸ್ತ್ರಕೋಶ; ಕತ್ತಿಯನ್ನಿಡುವ ಚಿನ್ನದ ಕೋಶ : ಪೊಸದುಕುಲಂ ಬೆಡಂಗಮರ್ದ [ಪ]ಟ್ಟಗೆ ಪೊನ್ನೊಱೆ ಸೇತಮಾಲೆ ಬಣ್ಣಸರಮುಂದಾತ್ತ ಹಸ್ತಕಟಕಂ . . . ತಿರುಳೊರೆ ಕಠಂ ತಮಗೊಪ್ಪೆ (ಶರಚಶಾ. ೬-೫೬); ಪೊನ್ನೊಱೆ ಚಿಕ್ಕಗೇಣ್ ಮಱಿಯ ಟೊಪ್ಪಿಗೆ (ತ್ರಿಕ್ಷಪು. ೬-೪೦). **ಪೊನ್ನೊರ್ಕೆ**: ಎಡಕರದಿ ಪೊನ್ನೊರೆ ಕಠಾರಿಯಿಯುವನಾಂತು (ಕಪಕೋ. ೦೭-೩೭). **ಹೊನ್ನೊಱೆ** : ನಱಿ ರೂಪುವಡೆದ ಮನ್ಮಥನೆಂಬ ರತ್ನಹೊನ್ನೊಱಿ ಯಿಂದಲುಗಿದ ಕಾರಸಿಯು ಮಱಿಯಬಾರದು ಮಹಾದೇವ ಸತ್ಯಮರನ ಹೆಱಹಿಂಗಬಹುದೆ ಬಲ್ಲವರು (ಕೋಚಕ. ೨೯-೩೩); ಬಲಗೈಯೊಳಾಂತ ಹೊನ್ನೊಱೆಯ ಕಠಾರಿಯ ಕಿಲಕೂಱಿ . . . ಕಲಿಗಳ ದೇವನೊಪ್ಪಿದನು (ಚಿಕ. ೦-೩೨). [ಪೊನ್ + ಒಱೆ₂]

**ಪೊನ್ನೋಲೆ**, **ಹೊನ್ನೋಲೆ** (ನಾ). ಚಿನ್ನದ ಓಲೆ : ನಿಕ್ಕುವದಿಂ ತಾಳೋಲೆಯುನಿಕ್ಕುವವರ್ವಲರೂ ನೋಡ ಪೊನ್ನೋಲೆಯನಂತಿಕ್ಕುವವರ್ವಲರೂ (ರಥಾಗಶ್ಚ. ೦-೨೦೦); ನಾಗಕುಂಡಲಂ ಪೊನ್ನೋಲೆಯೊಸೆವ ಕಱಿ ರನ್ನದಾಳೆ (ಹಕಶಾ. ೦-೬); ಆತನ ಮತ್ತಗಜಗಮನೆಯ ಕಿವಿಯ ಪೊನ್ನೋಲೆಯಂ ಕಂಡು (ಚಿಕಿಪು. ೧೦-೯೩). **ಹೊನ್ನೋಲೆ** : ಪ್ರಾಗಾಯಿಗಳ ಮುಗ್ಗಿ ಹೊನ್ನೋಲೆಯ ಚಿನ್ನ . . . ಪೆಗ್ಗಳ ಪುಷ್ಕಾಕಾರೆಯುಮನಿಱಿ ಮನಂಗೊಳಿಸುತ್ತಿದ್ದಳು (ಉಷ್ಣಿ. ೩-೩೩ ಪ). [ಪೊನ್ + ಓಲೆ]

**ಪೊನ್ಬುಟ್ಟ** 'ಪೊಂಬುಟ್ಟ' ನೋ.

**ಪೊನ್ಬೆಟ್ಟು** 'ಪೊಂಬೆಟ್ಟ' ನೋ.

**ಪೊನ್ಮಿಗ** 'ಪೊಮ್ಮಿಗ' ನೋ.

**ಪೊನ್ಮುಡಿ**, **ಹೊಮ್ಮುಡಿ** (ನಾ). ೧. ಚಿನ್ನದ ಕಿರೀಟ : ಒದೆದೆ ಪೊನ್ ಮುಡಿಯನ್, ಒದೆದೆ ಕೌರವನ ಸಿರಿಮುಡಿಯನ್ (ಅಕೃಕಾ. ೪೩-೬೬೭). **ಹೊಮ್ಮುಡಿ** : ೨. (ಅಲಂ) ಶ್ರೇಷ್ಠವಾದುದು; ಘನತೆಯಿಂದ ಕೂಡಿದುದು : ಎನಿತೊಂದು ನಾಡುಗಳನಾಳಿದುದು ಸೂಸ, ಹೊಮ್ಮುಡಿಯ ನಮ್ಮ ಸೂಸ ! (ಚಾರಶ. ೩೩-೭೩೩). [ಪೊನ್ + ಮುಡಿ₁]

**ಪೊನ್ಮೋದಿರ**, **ಪೊನ್ಮೋಯಿರ** (ನಾ). ಚಿನ್ನದ ಉಂಗುರ : ಈ ಕಲ್ಲನೆತ್ತುವವರಿಗೆ ಈ ಪೊನ್‌ಮೋದಿರವನ್ನು ಕೊಡುವವು (ತುಂಶಾ. ೦೬೬). **ಪೊನ್ಮೋಯಿರ** : ಅಂದು ನಾನು ನಿನ್ನ ಬೆರಳಿಗೆ ತೊಡಿಸಿದ ಪೊನ್ಮೋಯಿರದೊಡನೆ ನನ್ನ ಹೃದಯವನ್ನೂ ನಿನಗೆ ಕೊಟ್ಟೆ (ಪಕಶಾ. II, ೦೦೩೨)

[ಪೊನ್ + ಮೋದಿರ. / ಕೊಡ . ಪೊಮ್ಮೊದ್‌ರ]

**ಪೊನ್ಮೋಯಿರ** 'ಪೊನ್ಮೋದಿರ' ನೋ.

**ಪೊಪ್ಪಳಿ₁**, **ಪವುಳಿ**, **ಪಪ್ಪಳಿ**, **ಪಾಪ್ಪಳಿ**, **ಪೊಪ್ಪುಳಿ** (ನಾ). ೧. (ಬೇರೆ ಬೇರೆ ಬಣ್ಣಗಳಿಂದ ಕೂಡಿದ) ಒಂದು ಬಗೆಯ ಬಟ್ಟೆ,-ವಸ್ತ್ರ : ಹಳದಿ ಪೊಪ್ಪಳಿ ಚಂದ್ರಗಾವಿ . . . ಬಳುವಟ್ಟೆ ನಾನಾ ವರ್ಣದ ಜವಳಿಯ ಮಳಿಗೆಗಳೆಸೆದುವರ್ತಿಯಲಿ (೪೦ಶಶಾ. ೬-೭೦). ೨. ಒಂದು ಬಗೆಯ ಸೀರೆ : ಪೊಪ್ಪಳಿ ಕರ್ಪಾಡಗಳೆಂಬ ಸೀರೆಗಳೊಪ್ಪಿ ಮೆಱಿಯೆ (ತಿರುಮಾಂ. ೪-೦೪); ಪೊಪ್ಪಳಿಯಾ ನಾಯಕಿ ರಂಗು ಕೊಪ್ಪಣದ ಬಣ್ಣವನುಟ್ಟು ರಾಯಸಂದಣಿಯ ನೋಡುವರು (೩೪೦ದಶಾ. ೬-೭೦). 'ಸಾರಪೊಪ್ಪಳಿ' ಪರಾ. ೩. ಚೌಕಳಿಯ ಆಕಾರವನ್ನು ಅಚ್ಚೊತ್ತಿರುವ ಬಟ್ಟೆ ; ಚೌಕಾಕಾರವಾದ ಅಚ್ಚುಗಳುಳ್ಳ ಬಟ್ಟೆ : ಅವಳು

ಉಟ್ಟಿರುವ ಹಸುರು ಪೊಪ್ಪಳಿ ಸೀರೆ ತುಂಬ ಚೆನ್ನಾಗಿದೆ (ಊ). **ಪಪ್ಪುಳಿ** : ೧. 'ಪಪ್ಪುಳಿಬಿಚ್ಚಡ' ಪರಾ. **ಪಪ್ಪಳಿ** : ೩. 'ಪಪ್ಪಳಿಬಟ್ಟೆ' ಪರಾ. **ಪಾಪ್ಪಳಿ** : ೨. ಬರಹದ ಪಾಪ್ಪಳಿ ಮಂಜಿಷ್ಠ ಚೌಪುಲ್ಲಿ ಮೇಚಿವಷ್ಟಗೊಳ ಚಂದ್ರಗಾವಿ (ಶ್ರಾ.ಪಠ. ೩೬-೯೭). **ಪೊಪ್ಪುಳಿ** : ೧. ಬೀದು ಪೊಪ್ಪುಳಿ ಚಂದ್ರಗಾವಿಗಳಿಳಿಗೆ ಪೊಸತಹ ಪಂಚಟಿಕೆ ಗುಜ್ಜರಿ ದುಕೂಲಗಳ ಆಳವಡಿಸಿ. . . ಶ್ರೀಕೃಷ್ಣನೋಲಗಶಾಲೆ ರಂಜಿಸಿತು (ಕೋಣಗಯ. ೩-೩೯). ೨. ಪೀತಾಂಬ್ರ ಪೊಸ ಚುದ್ರಗಾವಿ ಪೊಪ್ಪುಳಿಯ ಮಿಸುಪ ಶುಭ್ರದ ದಿವ್ಯ ದುಗುಲದ ನಿಜಿಗಳ ಶಶಿಮುಖಿಯರು ರಂಜಿಸಿದರು (ಕಂಶಪ. ೨೯-೯೯); ಪೊಪ್ಪುಳಿಯು ತಿಗುಳಿ ರಾಗಾವಳಿಯ ರತ್ನಾವಳೀ ಧಾವಳ್ಯ ದಿವ್ಯತಾರಾವಳಿಯ . . . ನಾನಾವಿಧದ ಸೀರೆಗಳ ಚಿನ್ನದೆಳೆವೊಗ್ಗ ಕಂಚುಕದ ಬೇಹನಿತ ತೆಗೆದು (ಶಠಪೋ. ೦೭.೭೦). ೩. ಸುವಾಸಗಲಿಯರು . . . ಬಣ್ಣಬಣ್ಣದ ಆನೆಪೊಪ್ಪುಳಿ, ಕವಡೇ ಸೀರೆಗಳನ್ನುಟ್ಟು . . . ಹೊರಟರು (ಮುಕಪಂ. ೩೯).

[ದೇ.॥ ತೆಲು. ಪೊಪ್ಪಳಿ, ಪಪ್ಪಳಿ./ಮರಾ. ಪೋಫಳೀ]

**ಪೊಪ್ಪಳಿ$_2$** 'ಪೊಪ್ಪಿಳಿ' ನೋ.

**ಪೊಪ್ಪಿಳಿ, ಪೊಪ್ಪಳಿ$_2$, ಪೊಪ್ಪುಳು** (ನಾ). ೧. ಒಂದು ಬಗೆಯ ಮರ : ಮಡ್ಡೀಹಂಬು, ಪೊಪ್ಪಿಳಿಮರ, ಸುಣಾಮರ (ಪ್ರ್ಯಶಿಗ. ೩೩-೦೧೯೭). ೨. (ಹಳದಿಯ ಬಣ್ಣದ ಪುಡಿಯನ್ನು ಕೊಡುವ) ಒಂದು ಬಗೆಯ ಪೊದೆ: (೩). **ಪೊಪ್ಪಳಿ$_2$** : ೧. "ಮಡ್ಡೀಹುಬು, ಪೊಪ್ಪಳಿಮರ, ಗುಣಾ ಮರ, ಮಡ್ಡಿಬನ್ನ, ಮಡ್ಡಿಚಕ್ಕೆ" (ಸಸ್ಯಾ. ೯೦); ಈ ವೃತ್ತಿಗೆ ಸಲ್ಲುವ . . . ಪೊಪ್ಪಳೀಗಿಡಗಾವಲು ಬ್ರಾಹ್ಮಣನಿವೇಶನ ಶೂದ್ರನಿವೇಶನ (ಹುಕ್ರಿ.ಕ. ೩); ಪೊಪ್ಪಳಿ, ಕುರುಡಿ, ಸಣಬು, ನೀಲಿ (ಪಮ್ಯಕು. ೨೩೯). **ಪೊಪ್ಪುಳು** : ೧. ಸೇಬು ಅಂಜುರ ಹಲಸು ಪೊಪ್ಪುಳು ಶೀತಫಲವು ಖರ್ಜೂರದ ಮರನು (ಸಂ೦೦೦. ೬-೨೭). [?]

**ಪೊಪ್ಪು** 'ಪರುಪು' ನೋ.

**ಪೊಪ್ಪುಕ** 'ಪಪ್ಪುಕ$_2$' ನೋ.

**ಪೊಪ್ಪುಳಿ** 'ಪೊಪ್ಪಳಿ$_1$' ನೋ.

**ಪೊಪ್ಪುಳು** 'ಪೊಪ್ಪಿಳಿ' ನೋ.

**ಪೊಪ್ಲಿ** 'ಪಪ್ಪುಳಿ' ನೋ.

**ಪೊಮ್ಮ, ಪೊಮ್ಮು$_2$, ಪೊಮ್ಮೆ** (ನಾ). ೧. ಒಂದು ಬಗೆಯ ತೆರಿಗೆ : ಸನ್ನಿಯವೊಳಗಣ ಕೊಡದೆಣ್ಣೆ ಯೆಲೆಯ ಹೇಱುಗಳ ಪೊಮ್ಮ ಕಿಱುಕುಳ ಧಾನ್ಯವರ್ಗಂಗಳ ಮೊಟ್ಟೆಯ ಸುಂಕವೊಳಗಾಗಿ (ಎ. XIX. ೩೯-೩೦ ; 1144). **ಪೊಮ್ಮು$_2$** : ೧. ಪಟ್ಟಿ ಪ್ರತೀಯೊಕ್ಕೆ ಸಲತಕ್ಕ ಪೊಮಿನ ಹಣವನ್ನು ಕೇಳದೆ (ಪ್ಯ.ಅಂ. ೦೧೨೯. ೯೮-೦೦ ; ಸು. 1711); ಪೊಮ್ಮು ಕೈದುದುಕುಗಳಂ ಪುಟ್ಟಿಸಿ ಪೊಣರ್ವ ಸೆಟ್ಟಿಗಳಟ್ಟುಳಿಯಂ ನಿಲಿಸಿ ಸುಂಕವುಂ ಬಾಳಿಸಿದಂ (ಕಳಪ್ರ. ೭-೩೦); ಸುಂಕ್ಕಾ ಪೊಂಮು ಮಾರ್ಗ ಕರಗ ಪಡಿ ಸುಂಕಾ ಹತ್ತಿ ಪೊಂಮು ಅಲೆಸುಂಕಾ ಕಬ್ಬಿಣದ ಪೊಂಮು (ಪ್ಯ.ಅಂ. ೦೧೩೯. ೪೨-೯೩ ; 1623); ಆ ಸಿದ್ದಾಯ ಈ ಪೊಮ್ಮು . . . ಸತ್ತ ಹೆಣಕ್ಕೂ ಕೊನೆ ಮೊದಲಿಲ್ಲದೆ ಹಣ ಹೊನ್ನು ತೆರುತಿರಬೇಕು (ಕಬ್ಬಿ.ಅ. ೦೩೩-೭). ೨. ಹೊಗೆಸೊಪ್ಪಿನ ಮೇಲೆ ಹಾಕುವ ತೆರಿಗೆ : (೩). **ಪೊಮ್ಮೆ** : ೧. ಪೊಂಮು ಸುಂಕ ದೇವಾದಾಯ ಬ್ರಂಹಾದಾಯ ನಟ್ಟ ಕಲ್ಲು ಬಿಟ್ಟ ಬಸವ ಮೊದಲಾದುವುಗಳನು ಈ ಮಠಕೆ . . . ಕೊಡುವುದು (ಪ್ಯ.ಅಂ. ೦೧೩೦, ೦೩-೩೬ ; 1346).

**ಪೊಮ್ಮಿನ ಚಾವಡಿ** = ಪೊಮ್ಮು ಸುಂಕವನ್ನು ವಸೂಲು ಮಾಡುವ ಚಾವಡಿ : ಪೊಮ್ಮಿನ ಚಾವಡಿ – ಇದರಲ್ಲಿ ಸೀಮೆಯಲ್ಲಿರುವ ತ್ಯಾಜಗಾರರು, ಮಾನ್ಯಗಾರರು . . . ತುರುಕರು ಮುಂತಾದ ಜನಗಳು ವ್ಯಾಪಾರವನ್ನು ತರುವಲ್ಲಿಯೂ ಕೊಡುವಲ್ಲಿಯೂ ಸರಕಾರದ ಶೀರ್ವ ಆಗದಿದ್ದ ಪದಾರ್ಥಗಳನ್ನು ತೆಗೆದುಕೊಳ್ಳುವಲ್ಲಿಯೂ ಅರ್ಧಸುಂಕವನ್ನು ತೆಗೆದುಕೊಳ್ಳುವುದೆಂದು ನಿಬಂಧನೆ ಮಾಡಿದರು (ಬುಹಾಪಂ. I. ೦೯೩). [?]

**ಪೊಮ್ಮಗಿಲ್** (ನಾ). ಚಿನ್ನದ ಪ್ರಾಕಾರ,–ಗೋಡೆ : ಪರಿಚೆಯ ತೆರೆವೊಯ್ಲಿಂದಂ ತೆರಳ್ದು ತಡಿವಿಡಿದು ತೆಕ್ಕೆಗಟ್ಟಿದ ಪೊದಾವರೆಯ ರಜದಂತೆ ನೃಪಮಂದಿರಮಂ ಬಳಸಿರ್ದ ಪೊಮ್ಮಗಿಲ್ ಸೊಗಯಿಸುಗುಂ (ಸುಲ್ಲಕ್ಷ್ಮಿ. ೨-೬೪); ಸರಸ್ಸಮಿತಿ ಸುತ್ತಿ ಪೊಮ್ಮಗಿಲ ಸುತ್ತಲುಂ ರಂಜಿಕುಂ (ಸಂಶಾತಾ. ೪-೦೩೦). [ಪೊ (< ಪೊನ್) + ಮಗಿಲ್]

**ಪೊಮ್ಮಡಿಬೆಳ್ಳಿ** 'ಪೊಮ್ಮಡಿವೆಳ್ಳಿ' ನೋ.

**ಪೊಮ್ಮಡಿವೆಳ್ಳಿ, ಪೊಮ್ಮಡಿಬೆಳ್ಳಿ** (ನಾ). ಶುದ್ಧವಾದ ಬೆಳ್ಳಿ ; ಚೊಕ್ಕ ಬೆಳ್ಳಿ : ರಾಜಮಂದಿರದ ಮುಂದುಗಡೆ ನೆಡಿಸಿರ್ದ ತೋರಣಸ್ತಂಭಯುಗಳಕ್ಕೆ ಪೊಮ್ಮಡಿವೆಳ್ಳಿದಗಡುಗಳನು ತೊಡಿಸಿದಂದದೊಳ್ವರ್ ಮಾಳ್ಕೆಯಿಂ ಧವಳಾಂಶುವಿಡಿಕಿಱಿದ ಪೊಸದೂವಟದ ಕಾಲ ಕುಪ್ಪಸವ ತೊಡಿಸಿದಳದೋರ್ವ ಕಾಮಿನಿ ವರವೆನಾಚಿಗೆ (ತ್ರಾಂವಚಿ. ೭-೨೪). **ಪೊಮ್ಮಡಿಬೆಳ್ಳಿ** : ಶ್ರೀಗಂಧ ಮಂಚ ಪೊಮ್ಮಡಿಬೆಳ್ಳಿಮಂಚ ಪಂಚರತ್ನದ ಮಂಚ ನವರತ್ನಮಂಚಗಳಂಚಿತವಾದುವಲ್ಲಲ್ಲಿ (ಕಠಕ. ೦೩-೨೩) ; ರಂಜಿಪ ಪೊಮ್ಮಡಿಬೆಳ್ಳಿಯ ಪೂವಪರಂಜಿಯ ಪೂಗಳ ತಂದು . . . ಆದಿಜಿನಗೆ ಪುಷ್ಪಾಂಜಲಿ ಮಾಡಿದರು (ಕಠಕ. ೭೦-೦೪).

[ಪೊಮ್ಮಡಿ$_2$ (p ← ತೆಲು. ಪವಿಡಿ = ಚಿನ್ನ) + ಬೆಳ್ಳಿ]

**ಪೊಮ್ಮತ್ತಿ** (ನಾ). ಚಿನ್ನದ ಬಣ್ಣದ ಮಚ್ಚೆ,–ಕಲೆ: ಉತ್ತುಂಗಕುಚಾದ್ರಿಯ ಪೊಮ್ಮತ್ತಿಯ ಮೊಳೆ ಮೊಳೆತ ಜರಗಿನಂತಿರೆ ಕಾಣಲ್ಕೆತ್ತ ಸತಿಗಾಯ್ತು ಸುತನಂ ಪೆತ್ತಂತಪ್ಪೊಂದು ಸಂತಸಂ (ಅರಪೀ. ೨-೪).

[ಪೊ (< ಪೊನ್) + ಮತ್ತಿ$_2$]

**ಪೊಮ್ಮದಿಲ್, ಪೊಮ್ಮದಿಲು** (ನಾ). = ಪೊಮ್ಮಗಿಲ್ : ನಿತಾಂತಮೋಲಗಿಸಲಟ್ಟಿದ ಸಾನುವದೆತ್ತಂ ಬಂದೆಳಸಿರ್ದವುದೆಂಬಿನಂ ಸೊಗಯಿಪ್ಪುದು ಪೊಮ್ಮದಿಲುಗ್ರಾಂಶೂದ್ಗತವಾಗಿರೆ ಕೆಮ್ಮುಗಿಲ್ (ಶ್ರೀಕ್ಕಪು. ೨-೯೦) ; ವರ್ಗಪಂಚಮಕ್ಕೆ . . . ಪೊಮ್ಮದಿಲ್, ಪೊಮದಿಲ್ (ಶಪುರ. ೦೩೦ ಪ್ರಹೋ). **ಪೊಮ್ಮದಿಲು** : ಇಂಬುವೆತ್ತಿಹ ರಾಜಗೃಹಲಕ್ಷ್ಮಿಯುಟ್ಟ ಪೀತಾಂಬರವೆನಿಸಿ ಪೊಮ್ಮದಿಲು ತಾಂ ಬಳಸಿಹುದವಳಿಕ್ಕಿದ ಮಕುಟ ತಾನೆಂಬಿನ ಕರುಮಾಡವಿಹುದು (ಶಾಗಕು. ೬-೬೭).

[ಪೊಂ (< ಪೊನ್) + ಮದಿಲ್]

**ಪೊಮ್ಮದಿಲು** 'ಪೊಮ್ಮದಿಲ್' ನೋ.

**ಪೊಮ್ಮರೆ, ಹೊಮ್ಮರೆ** (ನಾ). ಚಿನ್ನದ ಬಣ್ಣದ ಜಿಂಕೆ ; ಸುವರ್ಣ ಮೃಗ : ತತ್ಪರದೂಷಣರ್ಕಳಂ ಕೊಂದೆಡೆ ಪೋಗಿ ಪೊಮ್ಮರೆಯ ನೆಟ್ಟಿಡೆ ತಪ್ಪದಿದಪ್ಪುದು (ಪಂಪಭಾ. ೪-೦೯) ; ಮಱಿದು ಗಿರಿತಟದೊಳಲ್ಲಿಯ ಮೊಱಗಲೊಡಂ ಪೊರೆದು ಪೊನ್ನ ರಜದಿ ಮೆಯ್ಯಗ್ಳ್ ಪಿಱಿಮಿಱಿನೆ ಮಿಱುಗೆ ಪೊಸ ಪೊಮ್ಮರೆಯಂತಿರೆ ಪರೆವುವಲ್ಲಿ ಹರಿಣಗಣಂಗಳ್ (ಲೀಲಾವ. ೯-೯೦) : ಪೊಮ್ಮರೆವೋಲ್ ಪೊಳೆದು ಪಾಱಿ ಪೋದಂ ಶ್ವೇತಂ (ಶಪುರ. ೩. ೨೩೩ ಪ್ರಹೋ). **ಹೊಮ್ಮರೆ** : ತಾ ಬಳಿಕ ಭೂಸುರನಾಲಯವ ಸಾರಿದನು ಹೊಮ್ಮರೆಯಾಕೃತಿಯ ತಾಳಿ (ಕುವ್ಯಾ.ಅ. ೬೦೨. ೨೬-೨) ; ತೋಱಿದನು ತಾ ಬಳಿಕವಗೆ ಹದಿನಾಱುಬಣ್ಣದ ಪುಟದ ಚಿನ್ನಕೆ ನೂಱುಮಡಿಯೆನೆ ಹೊಳೆ ಹೊಳೆವ ಹೊಮ್ಮರೆಯ ರೂಪವನ (ಕೊರಿಪಾ. ೩-೬-೦೪); ಕಲಿಧನ್ವಿ ಹಳುವ ಹೊಕ್ಕನು ಹೊಮ್ಮರೆಯ ಹಿಂದೆ (ಶ್ರೀರಾಮಾ. ೨೩೩-೦೧೦).

[ಪೊಂ (< ಪೊನ್) + ಮರ್ಕ$_2$]

**ಪೊಮ್ಮಳೆ** 'ಪೊಮ್ಮಟಿ' ನೋ.

**ಪೊಮ್ಮಟಿ, ಪೊಮ್ಮಳೆ, ಹೊಮ್ಮಳೆ** (ನಾ). ಚಿನ್ನದ ಮಳೆ ; ಸುವರ್ಣ ವೃಷ್ಟಿ : ಅಲರ್ವಟಿ ಪೊಮ್ಮಟಿ ಮಂದಾನಿಳನನಿಮಿಷ ದುಂದುಭಿಸ್ವನಂ

ದಿವಿಜಮುಕೋಚ್ಚಳಿತಾಹೋದಾನಸ್ವನವಿಲಾಸಿತ ಳಾ ಶ್ಚರ್ಯಮಾಯ್ತು ಪಂಚಾಶ್ಚರ್ಯಂ (ಸಂಧ್ರಕ. ೧೪-೬೨); ನಿರವಿಸೆ ಮನುಷ್ಯಧರ್ಮಂ ಪರವಾಹನಸ ಮೇಱಿ ಬಂದವಿಮ್ಮಂಗಳದೊಳ್ ಸುರಿಗುಂ ಪೊಮ್ಮಳಿ ಭರದಿಂ ಬರವೇಟ್ಟಿಂ ಧನದನೆಟ್ಟು ಪೋಗದ ಮುನ್ನಂ (ಶಶಿ. ೬-೨೪೬). **ಪೊಮ್ಮಳೆ :** ಲೋಕಮ್ಮ ಮನೆ ಪೊಂಮಳೆಯುಂ ಕಱೆವಂ (ಎಪಿ. VI. ಕಡೂರು. ೦೬೯-೨೩: 1178); ಪೊಮ್ಮಳೆಯನೀವುತ್ತ ಕೈಲಾಸ ಸೂಱೆಗೊಟ್ಟು (ಜಿನಕೃ. ೬-೦-೮); ವಿಳಸದ್ವೃಕ್ತಿಗೆ ಕೂರ್ತು ಸಪ್ತದಿನಪರ್ಯಂತಂ ನೆಲಂದೀವಿ ಪೊಮ್ಮಳೆಯಂ ಪೂವಳೆಗೂಡಿ ತಾಂ ಕಱೆಯಿಸುತ್ತಾನಂದವಂ ಬೀಱನೇ (ಕೃಷಿ. ೩೬-೦೨೬). **ಹೊಮ್ಮಳೆ :** ಮೆಱೆವನೆಱೆಯುಂಗನಾತನ ಕುಣುಪಿನ ಸುತನೆಱಗಿದವರ್ಗೆ ಮಳೆಯೆಱಗಿದವೊಲ್ ಕಱೆವಂ ಹೊಂಮಳೆಗಳಂ (ಎಪಿ. XI. ದಾವಣ. ೨೩-೨೦; 1224); ಸಿರಿಯಾಳನಂದದಲಿ ಆ ಸುತನನರ್ತಿಸನು ಹೊಮ್ಮಳೆ ಸೂಸವೇಳೆನು ಚೋಳನಂತೆ (ಬಸವ. ೯-೩೩); ಸುರವಾಳ್ಯ ಸುರಭೇರಿ ಹೂಮಳೆ ಹೊಮ್ಮಳೆ ಸುರಭೇರವವೆಂದಿಂತು ಸುರಕೃತ ಪಂಚವೈಭವಗಳಾದುವು (ಜಿನ. ೩-೦೨೦).

[ ಪೊಂ (< ಪೊನ್) + ಮಳೆ ]

**ಪೊಮ್ಮಾಡ** (ನಾ). ಚಿನ್ನದ ಉಪ್ಪರಿಗೆ,—ಮಹಡಿ : ಹರಿಣಾಕ್ಷಿಯಾದರದೋಳೀಕ್ಷಿಸುವಿಚ್ಛೆಯಿಂದ ಪೊಮ್ಮಾಡಮಂ ಪರಿದೆಯ್ದುವಾಗ (ರಾಶಿಕ. ೦೬-೯೯); ಬಳಸಿದ ಸಾಲದ ತನ ದಳವೋಳಗಣ ಪೊಮ್ಮಾಡಮಮರ್ದ ಕರ್ಣಿಕ ಮಣಿಮಂಗಳಕಳಶಕಾಂತಿ ಮಧುವೆನೆ ಜಲರುಹಮೆಸಿದುದು ರಮೆಗೆ ಭೂವರಭವನಂ (ಕೃಷಿ. ೯-೫೯). [ ಪೊಂ (< ಪೊನ್) + ಮಾಡ₁]

**ಪೊಮ್ಮಿಕೆ** (ನಾ). ವ್ಯಾಪ್ತಿ; ವಿಸ್ತಾರ; ಹರಹು : ಸಮ್ಮದದೊಳೈತಂದು ಏಟರಾ ನೆವದಿ ಬೆರೆಗೇೞೇ ಪೊಮ್ಮಿಕೆಯ ಜಾಣ್ಮೆಯೊಳು ಬಗೆಗಳ ನೆಮ್ಮದಿಯುನಿರಿಯಲ್ಕೆ (ಶೃಶಾರ. ೯-೩೨). [ಪೊಮ್ಮು₁ + —ಇಕೆ]

**ಪೊಮ್ಮಿಗ, ಪೊನ್ನಿಗ, ಹೊಮ್ಮಿಗ** (ನಾ). = ಪೊಮ್ಮರೆ : ಪೊಮ್ಮಿಗವಿರದೊಯ್ದುದು ಸೀತೆಯನಗಲ್ದಿ ನಿಲಲೀಯದಲ್ಲಿ ದಶರಥಸುತನಂ (ರಾಮಾಂಕು. ೦೦೨); ಪಿಡಿಯಲ್ ಪೊಮ್ಮಿಗವೆಂದು ಪೋಗೆ ರಘುಜಂ ಧೂರ್ಜಟಿ ಸಂನ್ಯಾಸಿಯೆಂದಡಿಯಿಟ್ಟಳ್ (ಸೋಮೇಶ. ೯೬); ರಾವಣಂ ದುರುಳ ಮಾರೀಚಂಗೆ ಪೇಳಲ್ಕವಂ ಮುದದಿಂ ಪೊಮ್ಮಿಗವಾಗಿ ತೋಱಲ್ (ದಶಕ. ೬-೨೦೬). **ಪೊನ್ನಿಗ:** ಗರುತಿಸಿರ್ಯನ ವೇಣುವಣಿಗೆ . . . ನರ್ತಿಸುವಂತೆ ನಲಿದುದಾ ಪೊನ್ನಿಗಂ (ಶ್ರೀರಾಮ. ೨೩೨-೦೨೬). **ಹೊಮ್ಮಿಗ :** ಸುಬಿದಾ ಹೊಮ್ಮಿಗವಯ್ದೆ ಸೀತೆಯ ಖಳಂ ಕೊಂಡೊಯ್ದು ತಾಂ ದಾಟ್ಟನೇ (ಸೋಮೇಶ. ೯೨); ರಾಘವನು ಹೊಮ್ಮಿಗವುರುಕಪಟವೆಂದಱಿಯನೇ (ಜೀವಂಕ. ೯-೦೩); ಇದುವೆ ಹೊಮ್ಮಿಗವಧೆಗೆ ಕೋ . . . ಎನುತಸುರ ರಾವಣನನಿಟ್ಟು ಮೂದಲಿಸಿ (ಕೌತಿಲ. ೩೬-೩೦).

[ಪೊಂ ( < ಪೊನ್ ) + ಮಿಗ]

**ಪೊಮ್ಮಿಣಿ, ಹೊಮ್ಮಿಣಿ, ಹೊಮ್ಮಿಳಿ** (ನಾ). ಬಂಗಾರದ ಸರಪಣಿ : ಪಿಡಿದು ಪೊಮ್ಮಿಣಿಯ ರನ್ನದ ಮಣಿಯ ಮೇಲೆ . . . ಕಡುನೀಱೆಯೊರ್ವಳಯ್ಯಲನಾಡುತಿರ್ದಳು (ಅನಿರು. ೩-೨೩). **ಹೊಮ್ಮಿಣಿ :** ಮುಡದಿಯರು ಹೊಮ್ಮಿಣಿಗಳನು ಕೈದುಡುಕಿ ತೆಗೆವ ಬೆಡಂಗು ಮನ್ಮಥ ಕಡುಗಿ ಬಾಳುಗಿವಂದದಿವಾಗೆ . . . ನಲಿದೋಲೆದಾಡಿದರು ಕೋವಳೆಯರುಯ್ಯಲೆಯ (ಜೀವಂಕ. ೦೬-೬೦); ಬಿಗಿದ ಱೆಂಜಿಯ ಹೊಮ್ಮಿಣಿಯ ಹೊರಜೆಗಳ . . . ದಂತಿಯ ಹೆಗಲ ಹೊಂಗದ್ದುಗೆಗೆ ಬಿಜಯಂಗೈದನಾ ಭೂಪ (ಕುಮಾರ. ೦೨-೯೭); ಒಗುವಿಃಗೆಯೊಲವಿಂದುಯ್ಯಲನೇಱದ ಮುಗುದೆಯಲಭುಕುಟವುಧ್ಯದ ಹೊಮ್ಮಿಣಿ ಸೊಗಯಿಸಿದುದು (ಜಿನುಳ. ೦೯-೩೩). **ಹೊಮ್ಮಿಳಿ :** ಖಂಡಿಸಿ ಕಳಚಿದನು ಮೊಗರಂಬವನು ಹೊಮ್ಮಿಳಿಯ ಕಣಿಕಿ ಮುಟಿದು ತಱದನು ಸುತ್ತ ಱೆಂಜಿಗಳ (ಕುಮಾರೋ. ೩-೩೨); ಹೊರಜೆ ಹೊಮ್ಮಿಳಿ ನಿಗಳ . . . ಕರದ ಹೊಗರಂಬದ ವಿಲಾಸದಿನೆಸೆದುದಾ ದಂತಿ (ಕೂರಲ. ೬-೨೯-೦೯).

[ ಪೊಂ (< ಪೊನ್) + ಮಿಣಿ₂ (< ಮಿಳಿ₂) ]

**ಪೊಮ್ಮಿನ್** (ನಾ). ಹೊಳೆಯುವ ನಕ್ಷತ್ರ ; ಪ್ರಕಾಶಮಾನವಾದ ತಾರೆ : ಇದು ಬಾನಿಂ ಬರ್ಪ ಪೊಮ್ಮಿನ್ಗಂಡೊಣರ ತೆಱನಿದಲ್ತೆಂದ ಮಳ್ಪಿಂಚು ಮಿಂಚಲ್ದದಿವರ್ಚಂದ್ರಾರ್ಕರೇಂ . . . ಎಂದುರ್ವಿದಲಂಪಿಂ ನೋಡೆ ಭೂಪಂ ಗಗನದಿನಿೞಿದರ್ಚಾರಣರ್ಚಾರುರೂಪರ್ (ಅರೆಕೇ. ೨-೩೯). [ಪೊಂ (< ಪೊನ್) + ಮಿನ್₁]

**ಪೊಮ್ಮು₁, ಹೊಮ್ಮು₁** (ನಾ). ೧. ಆಧಿಕ್ಯ ; ಹೆಚ್ಚಳ : ತರುಲತಾಗುಲ್ಮಂಗಳ ಪೊ[ಪಾಠಾಂ. ಹೊ]ಮ್ಮಿನಿಂ ಪೆಕ್ಕಣಂಗಯ್ದು ಸೋಗೆಗಳಿಂದೆ . . . ತಂಬೆಲರಿಂದೆ ತಾಮ್ಮನೋಹರದ ವನಮಧ್ಯದೊಳ್ ಸರಸಿ ಮೆಱದುದು ಕೂಡೆ ಸೊಗಸುವೆರಸಿ (ಕೇರಳ. ೬-೦೪). **ಹೊಮ್ಮು₁ :** ೨. ಹುರುಪು ; ಉತ್ಸಾಹ : ಬಲುಭಟರ ಹೋಳೆಗಳ ಹೊಮ್ಮುಱದು ಕೊಟ್ಟನು ನಳನ ವಶಕೆ (ಕೂರಲ. ೬-೩-೦೦) ; ಹೊಸಹರೆಯದ ಹೊಮ್ಮಿನ ಬಾಲೆಯಂಗಳು ಜಸವಡೆದಸಿದರೇನೆಂಬೆ (ಶಂಕರ. ೨೯-೪೦). ೩. ಜಂಬ ; ಗರ್ವ ; ಸೊಕ್ಕು : ಹೊಮ್ಮಿನಲಿ ಸಿಂಹಾಸನಾಗ್ರದ ಸೊಮ್ಮಿನಲ್ಲಿರೆ ನೀನು ನಮ್ಮವರೊಮ್ಮದೀ ಮಾತಿದನು ಮಾಡಿದ ನೋಡಿ ಬಳಿಕಿವಗೆ (ಸಂಕರ. ೩-೦೦) ; ಕಾಗೆಕೂಟದೊಳಲ್ಲ ಕುಲಗೆಟ್ಟಾಗಲಾಡಿದ ಹೊಮ್ಮು ನೃಪನೆಡೆಗಾಗುವದೆ (ಚಕ್ರಕ. ೬-೩೯). ೪. ಕಾರ್ಯವ್ಯಾಪ್ತಿ ; ನಡವಳಿಕೆ ; ವ್ಯವಹಾರ : ಕಮ್ಮಯನ ಚೀಲನ ಹೊಮ್ಮೊರಡು ಒಂದಯ್ಯ (ಸರ್ವಜ್ಞ. ೦೦೦೯). ೫. ಸತ್ತ್ವ ; ಶಕ್ತಿ : 'ಹೊಮ್ಮಿಬು' ಪರಾ.

**ಪೊಮ್ಮಿದ** = ಮಿಗಿಲಾದವನು : ದಿಮ್ಮಿದರಕ್ಕರಕ್ಕಱವರೊಳ್ ನುಡಿಯೊಳ್ ಕಡುಜಾಣರಂದದೊಳ್ ಪೊಮ್ಮಿದರೊಂದಿ ನಿಂದ ಸಿರಿಯೊಳ್ (ಕಾವ್ಯಾ. ೦೦).

[< ಪೊಣ್ಮು./ತಮಿ. ಪೊಮ್ಮಲ್ ; ತೆಲು. ಹೊಮ್ಮು, ಒಮ್ಮು]

**ಪೊಮ್ಮು₂** 'ಪೊಮ್ಮ' ನೋ.

**ಪೊಮ್ಮುಗಿಲ್** (ನಾ). ಹೊನ್ನಿನ ಮಳೆಯನ್ನು ಸುರಿಸುವ ಮೋಡ : ಎಱಗಿದ ಜನಕ್ಕೆ ಪೊಮುಗಿಲೆಱಗಿದವೊಲು ಲೋಕ ಮಚ್ಚುವೆನೆ ಪೊಂಮಳೆಯಂ ಕಱೆವಂ (ಎಪಿ. VI. ಕಡೂರು. ೦೬೯-೨೩ : 1178).

[ಪೊಂ (<ಪೊನ್) + ಮುಗಿಲ್]

**ಪೊಮ್ಮೂಡಿಗೆ, ಹೊಮ್ಮೂಡಿಗೆ** (ನಾ). ಚಿನ್ನದ ಬತ್ತಳಿಕೆ : ಪೊಳೆವ ಪೊಮ್ಮೂಡಿಗೆಯ ಪೊಂಗರಿಯ ಬಾಣಗಳ ನಲವಿಂದೆ ಸಿಂಜನಿಗೆಯುಳವಡಿಸಿ (ಜಿನರಾ. ೦೨-೩೬). **ಹೊಮ್ಮೂಡಿಗೆ :** ಉಗಿದನುರಗಾಸ್ತ್ರವನು ಹೊಮ್ಮೂಡಿಗೆಯೊಳಗೆ ಹೊಱಕಯ್ಯ ಗಾಳಿಗೆ ಹೊಗೆಯ ಹೊದಱನ ಹೊರಳಿ ಹಬ್ಬಿತು ಕೂಡೆ ಕಿಡಿಯಿಡುತ (ಕುಮಾರ. ೨೩-೯); ಹೊಮ್ಮೂಡಿಗೆಯ ಹೊದಱಗಳ ಬಿರುದಿನ ಬೀಡುಕಾಱರು ಬೀದಿವರಿದಟ್ಟಿದರು ಬಲಿಮುಖರ (ಕೂರಲ. ೬-೩೬-೦೦). [ಪೊಂ (<ಪೊನ್) + ಮೂಡಿಗೆ]

**ಪೊಮ್ಮೆ** 'ಪೊಮ್ಮ' ನೋ.

**ಪೊಮ್ಮೊಗೆ** (ನಾ). ಚಿನ್ನದ ಪಾತ್ರೆ : ವೃತ್ತಕುಚಾನ್ವಿತೆಯೊಡಲ ಮಾಸಿನ ಬೀಜ ಮತ್ತೊಂದು ಶಿಶುವಾಗಲೆನುತ ಬಿತ್ತಲುದ್ಯೋಗಿಪ ತೆಱದಿಂದೆ ಪೂರ್ಣರು ಚಿತ್ತುವಯವೆತ್ತ ಪೊಮ್ಮೊಗೆಯ (ಜೀವಂಕ. ೦೬-೨೨).

[ಪೊಂ (<ಪೊನ್) + ಮೊಗೆ₂]

**ಪೊಯ್₁, ಪುಯಿ₁, ಪೊಯಿ, ಹುಯ್₁, ಹುಯಿ₁, ಹುಯ್ಯು₁, ಹೊಯ್₁, ಹೊಯಿ₁, ಹೊಯ್ಯು₁** (ಕ್ರಿ). ಪೊಯ್ದು₁, ಹುಯ್ದು₁, ಹೊಯ್ದು₁ (ಭೂತನ್ಯೂ). ೧. ಹೊಡೆ ; ಬಡಿ ; ಅಪ್ಪಳಿಸು : "ಪೊಯ್—ತಾಡನೇ" (ಶಬ್ದಾನು) ; ಕಡುಗುಣ್ಪುವೆರಸು ದಾಂಟಿ ಗಡ ಮೇರೆಯನೆಂದು ವಜ್ರವೇದಿಕೆಯಂ ತಾಂ ತೊಡೆಸಕ್ಕೆಪೊಯ್ದುವೊಲ್

ಪೊಯ್ದೊಡನೊಡನುಚ್ಚಳಿಪುವಿದಱ ತುಂಗತರಂಗಂ (ಅಜಿತ. ೧೨-೧೨೯); ಕೆಲರಂ ದೆಸೆವಲಿಗೆಯ್ದಂ ಕೆಲರಂ ಭುಜಬಲದಿನಱಿದು ಶಿಲೆಯೊಳ್ ಪೊಯ್ದಂ (ಗದಾಯು. ೩-೧೦). ೨. ಕಡಿ; ಕತ್ತರಿಸು: ಇಸುವಿಡುವ ಪೊಯ್ವ ಕುತ್ತುವ ಮಸೆಯಂ ಪತ್ತಿಸುವ ಕೈದುಬಿನ್ನಣವಂ ಈಕ್ಷಿಸಲು (ಪ್ರಭುಚ. ೫-೧೨೫); ಧಲದಿಂ ಪೂಣಸಿ ತಲೆಯಂ ಸೆರಗಿಲ್ಲದೆ ಪೊಯ್ವ (ಚಂದ್ರಪ್ರ. ೬-೧೦೬); ಪಶುಗಳನ್ ಪೊಯ್ದು ನೆತ್ತರನ್ ಕೋಡಿ ಕಡ ಪಿದಯನ್! (ಅಮೃತಾ. ೦೫-೩೦೯). ೩. ತಾಕು; ತಗಲು: ಸೂವ ದೊಂದೊಯ್ಕನೆ ಬಾದು ಪೊಯ್ಕೆ ಮುನಿಸಿಂದಾರಯ್ದು ... ನಿಂದೋ ರೊಂದಱಿೊಳ್ ತಾಗಿ ಪೋರ್ವುವು ಕಾಡಾನೆಗಳ್ (ಕಾವ್ಯಾ. ೩೯); ತಾಂ ಪೊಯ್ಕೆ ನುಣ್ಣದಂವಂ ಕರ್ನಾಕುಂಡಲಲು (ಕಾವ್ಯಾ. ೯-೧೮); ಗಂಡವುನೋ ರಂತಿರೆ ಪೊಯ್ಕೆ ಕುಂಡಲಯುಗಂ (ಕಾವ್ಯಾ. ೬೩೬). ೪. ಮೀಡು; ಮಿಟಿಂ: ತಂತಿಯುಂ ನೀವಿ ನಿರ್ಮಳವಂ ಮಾಡಿ ... ಸುಸ್ಥಾನಕಂಗಳನೋರಂತಿರೆ ಪೊಯ್ದು ಪೊಯ್ದು ... ಸುಕಂಠಿ ಬಾಜಿಸಿದಳಾ ಪಾಣಿ ಲಸದ್ವೀಣೆಯಂ (ಕುಸುಮಾ. ೦-೩೩). ೫. ಮೃದಂಗ, ತಬಲ ಮುಂತಾದ ವಾದ್ಯಗಳನ್ನು ಬಾಜಿಸು: "ಸೂಳೆಯಿಸುತೆನೆಲ್ ಪೊಯ್ಯುದು" (ಶಾಶ. ೯೦); ಅತ್ತಮಿತ್ತಂ ನಿಜಾವ ಕರಯುಗಂಗಳ್ ಪೊಯ್ವ ದೇವಾನಕಂಗಳ್ ... ಬೆಡಂಗಂ ಮೆಱಿಯ (ಅಜಿತ. ೬-೩೨); ಅವುಚಮನಳವಡಿಸಿಕೊಂಡು ಝುಂಕಾರವಂ ಪೊಯ್ದು (ಶಾಂತೀಶ. ೦೬-೩೩ ವ). ೬. ದಡದಡಿಸು; ಬಡಿದುಕೊಳ್ಳು: ವಾಹಾಧ್ವರಪಾವಕಜ್ವಾಲೆಯೆನಲು ಕುವಾರಾತಿಯುುಸಿರೊಳು ಪೊಯ್ಕೆ (ಮೋಹತ. ೨೯-೯೦): ಸೂಸುವ ಸುಯ್ ಬೆಮರೇಱಿದಾನನಂ ಪೊಡೆವೆರ್ದೆ ಪೊಯ್ವ ಕಿರ್ಬರಿ ... ತೋಱಿ ಪುಳಿಂದನೈದುತೆ (ರಾಜಶೇ. ೩-೦೦೬); ಪೊಯ್ವೆರ್ದೆಗಳ ಸೆರಗ ಮರೆದು ಬಳಿ ವಿಡಿದು (ಶಾಂತಿಪು. ೦೩೦-೩೬೯). ೭. ಪೆಟ್ಟನ್ನು ಹೊಂದು; ಹೊಡೆತಕ್ಕೆ ಒಳಗಾಗು: ಈ ಇರುಳ್ ನಡೆದುದೊಂದದ್ಭುತಂ. ಪಟ್ಟ ಪಡೆ ಪಟ್ಟಂತೆ ಪೊಯ್ದತ್ತು (ಅಮೃತಾ. ೦-೦೨). ೮. (ಭೂತ, ಪಿಶಾಚಿಗಳಂತೆ) ಮೆಟ್ಟಿ ಕೊಳ್ಳು; ಆವರಿಸು: ಆರೋಗಣೆಯ ಸಮಯಮಪ್ಪಾಗ ಭೂತಂ ಪೊಯ್ಯುದ್ದರಾರನೀ ಮನೆಯೊಳಿಂತೀಗಳೆೀತಕೆ ಮೌನಂ (ಕೃಚಿತಾ. ೬-೩೦). ೯. ಕೊರೆ; ಕಡೆ; ಕಂಡರಿಸು: ಕಲ್ಕುಟಿಗ ದೇಯೋಜು ಪೊಯ್ದಕ್ಕರವ್ (ಎಪ. XV, ೩೩೨-೩೬; 1029); ಚೆಣ್ಣಆಚಾರಿಯ್ಯ ಮಗಂ ಅನಿ ××ಗ××ಜ್ಞ ಆಚಾರಿ ... ಪೊಯ್ದ ಅಕ್ಕರವ್ (ಎಕ. IV, ಗುಂಡ್ಲು. ೫೯-೦೫; 1049); ದಾಮರಾಜು ಸಾಸನಗಬ್ಬವುಂ ಪೇಳ್ದು ಬರೆದಂ ಪೊಯ್ದಂ ಸಾನ್ತೋಜನುಂ ಪದ್ಮನುಂ (ಎಕ. VII, ಶಿಕಾರಿ. ೦೦-೩೯; 1085 ?). ೧೦. ನಾಶಮಾಗು; ಧ್ವಂಸಗೊಳಿಸು: ಭೀಮಸೇನಂ ... ಬಾಟಿಯ ಚಿಲ್ವನಪ್ಪ ಬನವಂ ಕಾಡಾನೆ ಪೊಯ್ವಂತೆ ಪೊಯ್ದನಿಸಂ ಮಾಣದ ನೀಚ ಕೀಚಕನಿಕಾಯಧ್ವಂಸನಂ ಮಾಡಿದಂ (ಪಂಪಭಾ. ೮-೮೦). ೧೧. [ಗಣಿತ] ಗುಣಿಸು: ತಿವಿ, ಪೊಯ್, ಪರ್ಚಿಸು ... ಬೆಳಸಂದು ಇಂತಿನಿಸುಂ ಗುಣಿಸೋದಕ್ಕೆ ಹೆಸರು (ವ್ಯವಹಾ. ೦೦-೬). ಪುಯಿ$_1$: ೧. ಬಯಿದೊಡ ಪುಯಿದನೆ ಪುಯಿದೊಡೆ ಯಱಿದನೆ (ಜ್ಞಾಸಿಂ. ೩೯-೯೩). ಪೊಯಿ: ೧. ಇನ್ನಿರನೆನ್ನು ಸಿಂಗದನ್ನಿರೆ ಹರಿ ಬೀರಲಕ್ಷ್ಮೀ ನೆರವಾಗಿರೆ ಚೋಟನ ಕೋಟೆಯೆುಪ್ಪ ಸಿನ್ದರದ ಶಿರಾಗ್ರಮಂ ಬಿರಿಯೆ ಪೊಯಿದು ಕದನೈಕ ಸೂದ್ರಕಂ (ಎಕ. III, ಮಂಡ್ಯ. ೯೦-೦೯; 950). ೧೧. ಪೊಯಿ ಗುಣಿಸು ಪರ್ಚಿಸನಲಿವು ಗುಣಕಾರಭಾಷೆಗಳ್ (ವ್ಯವಹಾ. ೦೦-೦೬). ಹುಯ್$_1$: ೧. ಚಿಕ್ಕತಂಮಾಸು ಮೂಡಣಬೆಟ್ಟದಲ್ಲಿ ಅಸಹಾಯಸೂರನಾಗಿ ಕೊಡಲಿಯಲ್ಲಿ ಕಳ್ಳರ ಹುಯ್ದು ಕಿತಹಿ ತಾನು ಬಿದ್ದ (ಇ‌ಕಾ. IX-ii, ೪೨೦-೩; 1386); ಹರಿಯೊ ಹರಿಯೋ ಹುಯ್ಯೊ ಕಪಿಗಳ (ಕೌತಿಕಾ. ೩೨-೦೩); ಕಡುಭರದಿ ಹಕ್ಕಿ ಕೋಂಟೆಯ ಮೇಲೆ ಕುದುರೆ ಕಾಲಿಡುವುದಂ ಕಂಡೆಕ್ಕಟ ಗಳೊಳಗಣಿಂ ಬಂದು ಕೆಡೆವಂತೆ ಹುಯ್ದು (ಸಪ್ಯಗೀ. ೬-೩೩). ೫. ಪ್ರಯಾಣಭೇರಿಯ ಹುಯ್ಯ ಹೇಳು (ಶೀಕೃಷ್ಣ. ೩-೨೩-೩೯).

ಹುಯಿ$_1$: ೧. ಇವನು ... ದಾರಿಯನ್ನು ಕಾದು ಬಂದವರನ್ನು ತರೇ ಹುಯಿದು ಅವರ ಹತ್ತಿರ ಇದ್ದುದನ್ನೆಲ್ಲಾ ಕಸಿದುಕೊಂಡು ಹೊಟ್ಟೆ ಹೊರೆಯುತ್ತಿದ್ದನು (ಶಿ‌ಕಾ. XII. ೦೨). ಹುಯ್ಯು$_1$: ೧. ಈ ಕೋಲನ್ನು ಹುಯ್ಯುವಾಗ ವೇಗಕ್ಕೆ ಮತ್ತು ಬಿರುಸಿಗೆ ಪ್ರಾಧಾನ್ಯ ಹೆಚ್ಚು (ಕಾಶಿಪೂ. I. ೩೦೬). ೨. ಆ ದೊರೆಯು ಇವಳ ತಲೆಯನ್ನು ಹುಯ್ಯುವ ಹಾಗೆ ಚಂಡಾಲನಾದ ವೀರಬಾಹುವಿಗೆ ಆಜ್ಞಾಪಿಸಿದನು (ಶಿ‌ಕಾ. IX. ೨೯).

ಹೊಯ್$_1$: ೧. ಬಾಯೆದ್ದು ಬಯ್ಯಲಾಱಿ ಕಯ್ಯ ಎದ್ದು ಹೊಯ್ಯಲಾಱಿ (ಬಸವ. ೬೨); ಬಸುಱಿ ಹೊಸೆದು ಹೊಯ್ದು ನೆಲನಂ ತಿರುಗಿ (ಕುಮಾ. ೩೬. ೦೫-೪); ಒಲೆದು ಕೇಸರಿ ಹೊಯ್ವವೋಲವ್ವಳಿಸಿ ಕರ್ಣನ ಹಯರಥವ ನಪ್ಪಳಿಸಿ ಮರಳುವ ಲಾಗಿನಲಿ ಖಂಡೆಯವ ಖಂಡಿಸಿದ (ಕುವ್ಯಾಕ್ಯೋ. ೬-೩೦). ೨. ಮೆಯ್ದೋಱಿ ಬುದ್ಧಿವೇಳ್ದರಸು ನಂಟಕರ್ಗಳಂ ಹೊಯ್ದು ನಿಕ್ಕಡಿಯಾಗೆ (ಇಷ್ಟ. ೩೬. ೪೦-೩); ಸಾವಿರಕಾಱಿಯ ಹೊಯ್ದುದರು ಪೂಜಿಸಿದರಾ ಚತುರ ಚಂಡಿಕೆಯ (ಸಂಚಿಕ. ೦೬-೦೦೦); ಮದದಂತಿಗಳ ಸೊಂಡಿಲ ಹೊಯ್ದು ಸುಭಟರ ಸದೆದರೇವೇಳ್ದಿನದ್ಭುತವ (ಸಂಚಿಕ. ೩-೬೪). ೩. ಸತಿಯರು ಭೂಪನಿರವ ಕಂಡುರಿ ಹೊಯ್ದು ಹೂಗೆಸೆಗಳಂತಿರ್ದರು (ಕಕಾ. ೮-೩೯). ೫. ಹೊಯ್ ಡಂಗುರವನವಂ ಹೊಱಗು ಹೊಱಗೀ ಸಭೆಗೆ ಹೊಯ್ ಡಂಗುರವನಾವನಾದೊಡಂ ಹೊಱಗೆವೊಗೆ (ಕುಶಿರ. ೩೬. ೬೯-೯); ಹಲಾಯುಧನು ತಾಳವಂ ಹೊಯ್ದನು (ಚಕ್ರ. ೩೬-೯೯). ೬. ಹೊಯ್ಮಳ್ಳೆಗಳ ಮುನಿಜನವ ಕಂಡರು ಪಾಂಡುನಂದನರು (ಕುವ್ಯಾಕ. ೨೨-೨೨); ಕಡಲಲ್ಲೆ ಹೊಯ್ವಂತೆ ಸಿಂಧು ಕಂಪಿಸಿತು (ಮೋಹತ. ೨-೬). ೯. ಗಂಗೋಜಂ ಹೊಯ್ದ ಶಾಸನಂ (ಎಕ. V. ಹಾಸನ. ೩೬-೩೬; ಸು. 1000 ?); ಅಸ್ಕಂದದೇವರು ಬರೆದ ಶಾಸನ ಕೇತೋಜ ಹೊಯ್ದ (ಇ‌ಕಾ. IX-i, ೨೦೩-೨೭; 1122). ೧೦. ನಾಳೆ ಹಗೆವನ ಹೊಯ್ವೆನೆಂಬುದ್ಬಾಳುತನ ವಿನ್ನೊಮ್ಮೆ ಭೂಪತಿಯೋಲಗಾತಿಯರಿದಿರಲಾಡಿದ ಭಾವೆಯಿನ್ನೊಮ್ಮೆ (ಕುವ್ಯಾಕ್ಯೋ. ೯-೪೩). ೧೨. ಕುಟ್ಟು; ಜಜ್ಜು: ಅಱಿಯದವ ರೊಡನೆ ಸಂಗವ ಮಾಡಿದರೆ ಕಲ್ಲ ಹೊಯ್ದು ಕಿಡಿಯ ತೆಗೆದುಕೊಂಬಂತೆ (ಮುಹಾರೇ. ೨. ೬೬-೦೬೦).

ಹೊಯಿ$_1$: ೧. ಅರಗಿನ ಪುತ್ಥಳಿಯುನೊರಿಯ ನಾಲಗೆ ಹೊಯಿದು ಮಾಕಾಡುವ ಸರಸ ಬೇಡ (ಚಂಡ. ೬೬೦ ಅ); ಮುಂದೆ ತ್ರಿವಿಧಮಲವಿದೆ ಆಸೆಯ ಕೀಳಿ ಆಳವಿದೆ ಎಡ ಬಲದಲ್ಲಿ ರೋಷ ತಾಮಸ ವೆಂಬ ಹೊಯಿಲು ಹೊಯಿವುತ್ತಿದೆ (ಸರ್ವಶ. ೮೦-೪೪೪); ಶಿಶುಗಳನು ಖಳ ದುರಾತ್ಮಕ ಕಂಸ ತಾನಾಗಳು [ಭರದಿ ಬಂ]ದತ್ತಲೊಯಿದತಿಮುಳಿದು ಶಿಲೆ ಯೊಳಗಸಗವೊಯಿಲನು ಹೊಯಿದು ವಿಗೆ ಕೊಂದ (ಶಾಕೃಕಾ. ೨೦-೩). ೫. ಹೊಯಿದ ಹೊಱಿಗೆ ಕುಣಿದಾಡುವರಲ್ಲ ಹಾಡಿದ ಗೀತಕ್ಕೆ ತಲೆ ದೂಗುವರಲ್ಲ (ಸಹಾಶ. ೬-೨೩); ಜಡರುಗಳಿರಾ ತೊಲಗಿ ಬೋ ಎನುತಡಿ ಗಡಿಗೆ ಜಯಘಂಟೆಯನು ಹೊಯಿದು (ಬಸಪು. ೨೦-೦೦). ೯. ಯಿಾ ಶಾಸನವ ಹೊಯಿದ ಹುಲಿಯೂರ ಸೋಮನಾಥನ ಮಗ ಆಲೋಜಗವುಡಗಳ ಒಪ್ಪ (ಎಕ. XII. ಕುಣಿಗ. ೦೦೬-೨೩; 1429); ಶ್ರೀ ಶಾಸನವ ಹೊಯಿದಾತ ಹೊನ್ನ ಹರೆಗೆಯ ಮಗ ಕರವೀರಯ್ಯ (ಎಕ. XI. ಹಿರ್ಯೂ. ೦೫-೨; 1605). ೧೩. ಒಪ್ಪಿಕೊಳ್ಳು; ಅಂಗೀಕರಿಸು; ಸಮ್ಮತಿಸು: ನೀನಿಕ್ಕಿದ ಜೂಜಿಂಗೆ ಹೊಯಿದು ಗೆದ್ದ ಸಿರಿಯಾಳ (ಬಸವ. ೬೬೯). ೧೪. ಕಾಳಗ ಮಾಡು: ಕರೆಕರೆದು ಮೂದಲಿಸಿ ಕಡುಹಿನ ದುರುಳರಬ್ಬಿನ ಮೇಲೆ ಹೊಕ್ಕಬ್ಬರಿಸಿ ಹೊಯಿದರು ಕಾದಿ ಕೊಂಡರು ಕಾಲನರಮನೆಯ (ಕುವ್ಯಾ. ೪೬. ೯-೨೬).

ಹೊಯ್ಯು$_1$: ೧. ತಾನೋವಿ ಮಾಯುತ್ತಿರಲು ನಿನ್ನಯ ಶೀವ್ರ ತೆರೆಗಳಲಿ ಓವೆನುತ ಹೊಯ್ಯಲಿಕೆ ನಿನಗೆಯು ನಾವು ನುಡಿದೆವು (ಸಂಚಿಕ.

೦೨-೨೯); ಚಿತ್ರಜಾ ಕತ್ತಿಯಾ ಕಿತ್ತುಕೊಂಡತ್ತಿ ಹೊಯ್ಯುತ್ತ ಬರಲು (ಕೈ ಏಕಾ. ೨೬-೩); ಆ ಅಂಗಿಯನ್ನು ದೊಪ್ಪನೆ ಹಾಸುಗಲ್ಲಿಗೆ ಹೊಯ್ಯುತ್ತಾನೆ (ಡೇಷ್ಟ. ೪೦). ೫. ಹೊಯ್ಯೋ ಡಂಗುರವ ಜಗದಯ್ಯನಯ್ಯ ಶ್ರೀಹರಿ ಯಲ್ಲದಿಲ್ಲವೆಂದು (ಶ್ರೀಪಂ. ೨.೨೦ ಕಲ್ಪಿಂ); ತಪ್ಪದೆ ಗಂಗೆಗೊಮ್ಮೊಮ್ಮೆ ಭೇರಿಯ ಹೊಯ್ಯುತಿಪ್ಪುದದೊಂದು ಬಾಗಿಲೊಳು (ಮೋಹತ. ೨೦-೬೦). ೬. ಧಗೆ ಹೊಡೆದಳ್ಳಿ ಹೊಯ್ಯುತೆ . . . ನಾಯಿಗಳಡಸಿದುವೆಡಬಲದೆ (ಮೋಹತ. ೦೯-೦೯).

[ದೇ.೩ ತಮಿ. ಪೊಯ್ಯು; ಕೊಡ. ಪೊಯ್; ಕೋತ. ಪೊಯ್, ಒಯ್]

**ಪೊಯ್₂**, ಹುಯ್₂, ಹುಯ್ಯಿ₂, ಹುಯ್ಯಿ₃, ಹುಯ್ಯು₂, ಹೊಯ್₂, ಹೊಯ್ಯಿ₂, ಹೊಯ್ಯಿ₃, ಹೊಯ್ಯು₂ (ಕ್ರಿ), ಪೊಯ್ಯು₂, ಹುಯ್ಯು₂, ಹೂದು, ಹೊಯ್ದು₂ (ಭೂತರೂಪ). ೧. ಸುರಿ; ಎರೆ: ಪೊಸವುಣ್ಣಗಳೊಳ್ ಪೊಯ್ದ ಮಣುಗುವಿನಂ ಲೋಹ ವಾರಿಯಂ ಮಣುಗುವಿನಂ (ಕಣ್ಣಾ. ೦೨೬-೩); ಮಣಿಮಯಯಳಂಭದಿನಂದು ಪೊಯ್ವಳ್ಳೊರ್ವಳ್ ವಿದಳಿತಪಂಕರುಹವದನೆ ಕುಂಕುಮಜಲವಂ (ಅನಂತಪು. ೬೬); ಮದವಶೀಕರಣಶೃಂಗಾರರಸಮಂ ಪೊಯ್ವಂತೆ ಕಸ್ತೂರಿವಾರಿಯಂ ಪೊಯ್ದುದಂ (ಕುಸುಮಾ. ೫-೦೫೫ ವ). ೨. ವರ್ಷಿಸು; ಕರೆ: ನೆಲನಟು ದೂಡುವ ಪೊಟ್ನೀರಲಂಬಿನಿ ವದಕೆ ಪೊಯ್ಯು ಮಟ್ನೀರ್ (ಕಣ್ಣಾ.ಸು. ೩೨೬ ಟ್ಯಾಕಾ). ೩. ನೆಡು; ನಾಟು: ಅಗೆಯಂ ಪೊಯ್ವರ್ ಸೂಡರಂ ಪೊತ್ತಿಸುವರ್ ಸತ್ತಡೆಯೊಳ್ ತವಗಂಜಿ ಭೀತಿಯಿಂದ ಮೂರ್ಛೆರ್ (ಸಮಾಹ. ಆಮರ್ಮ. I. ೩೬೯-೨೯): ಪೊಸಬೆಳ್ಳಿದಾವರೆಗಳಮಡೆಯೊಳ್ ನಡೆವಲ್ಲಿ ಪೊಯ್ದ ಪೂಗುಡಿ ಗಡ (ಕಣ್ಣಾ. ೦೮೩); ಗುಡಿಯಂ ಪೊಯ್ದಾನೆಯ ಪೊಂದೊವಲಿಂ ದುಡಿದ ಪತಾಕಾಪಟಸಂತತಿಯಿಂದೆಡೆವಟಿಯದ ಸರವಶಿಯಂ ಬಿಟ್ಟು (ಅಜಿತಾ. ೬-೨೯). ೪. ಅಚ್ಚಿಗೆ ಹಾಕು; ಎರಕಕ್ಕೆ ಹಾಕು: ಸುವರ್ಣ ಮಾನೂರೆದುಂ ಕಡಿದುಂ ಕಾಸಿಯುಂ ಪೊಯ್ದುಂ ನೋಡಿ ಪರೀಕ್ಷಿಪಂತರ್ ಪರೀಕ್ಷಿಸಿಕೊಳ್ವಂತೆ (ಧರ್ಮಾಮ. ೦೦-೩೯ ವ). ೫. ಸೂಸು; ಎರಚು; ಚಿಮುಕಿಸು; ಸಿಂಪಡಿಸು: ಆಗಳಂಗರಾಜಂ . . . ದುಕೂಲಾಂಬರ ದೊಳಿಂದಾಗಿ ಚಲ್ಲಣಮನುಟ್ಟು ಪುಡಿಗತ್ತುರಿಯ ತಲೆಯೊಳ್ ಶೀವೆ ಪೊಯ್ದು (ಪಂಪಭಾ. ೦೨-೦೦೬ ವ); ಕಣ್ಣೊಳ್ ಮಳಲಂ ಪೊಯ್ದು ಟ್ಟುದಂ ಕೊಂಡರೆಂಬಂತೆ (ಧರ್ಮಾಮೃ. ೬-೨೦೬); ಕಿವ್ವುನೆ ಕೈಗಾದಿರದೋ ಮಪುಪ್ಪನೊಲೆಯೊಳ್ ಪೊಯ್ವಂತೆ ವಾಜೀಟ್ ದುರ್ಜನನಂ ಬಯ್ವುದು ಬಯ್ಯೊಡಲ್ಲದವನಂ ಪೇಟ್ ಭಾವಿಸಲ್ ಬರ್ಕುಮೇ (ಸೂಕ್ತಿಸು. ೦-೩೨). ೬. ಬೀಸು; ತೀಡು: ಕತ್ತುರಿಯ ತಗುಳ್ದು ಪೊಯ್ವ ಸೊವಡಾ ಸೊವ ಡೊಳ್ ಕಡುಸೊರ್ಕು ಸೊರ್ಕಿಗಾವರಿಸುವ ತುಂಬಿ ಚೆಲ್ವೆಸೆಯೆ ಕಣ್ಣೆಸೆದತ್ತು ಖಗೇಂದ್ರನೋಲಗಂ (ಅನಂತ. ೨-೩). ೭. (ದಾನವಾಗಿ) ಕೊಡು; ನೀಡು: ಪನ್ನಿರ್ವ್ವರಾ ಏಟ್ವರಾ ಪೊಯ್ದು ಧರ್ಮ್ಮಮಿದೊವಟ್ ಕೆಡಿಸಿದೊನ್ ಪಞ್ಚ ಮಹಾಪಾತ[ಕ]ನಪ್ಪೊನ್ (ಎಕ. IV. ಹಾಸನಾ. ೬೩-೦೦; ಸು. 750); ಈ ಎನೆತುಂ ಜಡಿಯಕ್ಕೆ ಪೊಯ್ದೋದು (ಎಕ. IX. ಶಿಲಾಮಂ. ೬೦-೦೨೬; 797); ಮನೆ ತುಂಬಿದ ಪೊನ್ನಂ ಪೊಯ್ದು ಮನಂ ತೀವಿದ ಪರಿಣಾಮತೆಯಂ ಕೊಟ್ಟು ಅವರಂ ಕಳುಪಿ (ಶಾಂತಿಪು. ೨-೯೯). ೮. ಹೊಮ್ಮಿಸು; ಉಂಟು ಮಾಡು: ಮದನನಾಡ್ತೆಗಳ್ಮೆದರ್ ಮೋಹಿಗಳ ಕುಲಕ ಹೊಜಿಗೆಂದು ನೂಪುರ ರವದ ನಾದಮಂ ಪೊಯ್ವರಂಗನೆಯರಲ್ಲಿ (ಕರ್ಣಾಟ. ೯-೯೦). **ಹುಯ್₂**: ೧. ಆಜ್ಯ ಹುಯ್ಯುರಾಗುವುದಿಲ್ಲ (ಶಾಕುಂತಲ. ೬). ೨. ವೈಡೂರ್ಯಮಣಿಯ ಬೆಳ್ಳರಿ ಹುಯ್ದು (ಸಮ್ಯಕ್. ೬-೩೯); ದೈವಕರಗಳು ತನ್ನ ಪತಿಗೆರಗು ತೀಳುವಳು ಅಂಥವಳು ಹುಯ್ಯೆನಲು ಮಳೆ ಹುಯ್ಯುವುದು (ಕುಮಾರ. ೨೩). ೫. ಅಕ್ಕವ್ವೇ ಗಂಗೇ ದಡದಲ್ಲಿ—ಸರಸತಿಯ ಅಕ್ಕೀ 'ಹೂದ'ವಳಾ ಕರೆತನ್ನೀ (ಜಾನಪ. ೦೭೩). **ಹುಯ್ಯಿ₂**: ೧. ಒಮ್ಮಾನ ಹಾಲ ಹುಯಿದವನು ಸಟ್ಟುಗದಿ ತೊಳಸಿ (ಸೂತಕಾ. ೦-೯೦). **ಹುಯ್ಯಿ₃**: ೧. ಆ ಪಾತ್ರೆಯ ತುಂಬ ನೀರನ್ನು ಹುಯ್ಯಿ (ರೂಢಿ). **ಹುಯ್ಯು₂**: ೧. ನೀರ ಹುಯ್ಯೋ ಳವಳಿ ಹಣ್ಣು ಮೆಲ್ಲೋಳವಳಿ (ಜಾನಪ. ೯೩). ೨. ಹಸ್ತಮಳೆ ಎತ್ತಲಾದರೂ ಹುಯ್ಯುತ್ತ (ಗಾದೆ); ಹುಯ್ಯೋ ಹುಯ್ಯೋ ಮಳೆರಾಯ ಹೂವಿನ ತೋಟಕೆ ನೀರಿಲ್ಲ (ರೂಢಿ). **ಹೊಯ್₂**: ೧. ಅವಿಶ್ಚೆ-ಕಾಯ್ಯು ಬಿಸಿ ಯಾಗಿರ್ದ ಹಾಲಿನಲಿ, ಅವುದಾನೊಂದು ಮೊಸರ ಹೊಯ್ದುದಱತ್ತಣಿಂದ ಒಡೆದುದು (ಜಾತಕಾ. ೬); ಬೇವಿನ ಬೀಜವ ಬಿತ್ತಿ . . . ಜೇನುತುಪ್ಪವ ಹೊಯ್ದರ ಸಿಹಿಯಾಗಬಲ್ಲುದೆ ಕಹಿಯಹುದಲ್ಲದೆ (ಬಸವ. ೬೨೭); ನೀರ ಹೊಯ್ ನಂದಿಸು (ಕೊಠಾರ. ೫-೯-೬೩); ಒಡೆದ ಹಾಳುವಜ್ಜಿಗೆಯ ತಿಳಿಯುಮಂ ಚೆಲ್ಲಿ . . . ಕಡುಗಟ್ಟಿಯಾದುದ ತಗೆದು ಮಡಕೆಯೊಳು ಹೊಯ್ದು (ಸೂತಕಾ. ೨-೦೬). ೨. ಆರುಗಾಲ ಮಳೆ ಹೊಯ್ದರೂ ಮುತ್ತುಗಕ್ಕೆ ಮೂರೇ ಎಲೆ (ಗಾದೆ); ಎಮ್ಮೆ ಮೇಲೆ ಮಳೆ ಹೊಯ್ದ ಹಾಗೆ (ಗಾದೆ). ೩. ಹಾರುವನ ಭಕ್ತಿ ಓಡಿನೊಳಗೆ ಅಗೆಯ ಹೊಯ್ದಂತೆ ಕೆಳಯಿಂಕೆ ಬೇರೂಱದು (ಬಸವ. ೪. ೨೫೭-೫೯೦). ೫. ಗುರು ಲಘುಮೆಂಬವರ ಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಣ್ಬನೆ (ಬಸವ. ೫೬೭); ಕಳವಳ ಸುವ ಕಪಿಯ ಭೂತ ಹೊಡೆದು ಬೀಳೂಱ ಫಾಳಿಯೊಳು ನಿಂದು ಧೂಳಿಯ ಹೊಯ್ಯುತಿಪ್ಪುದೆ (ಅರವ. ೦೩-೩೨). **ಹೊಯ್ಯಿ₂**: ೧. ಅವನ ಪುಷ್ಪತೋರಣಂ ಗಳಿಗೆ ದೇವತಾಸ್ತ್ರೀರು ನೀರ ಹೊಯಿವರು (ಗರುಡ. ೨-೦೨-೧); ಕಾರ್ಬೋ ಲಿಕ್ ಆಮ್ಲದ ತೀಕ್ಷ್ಣವಾದ ದ್ರವ ಅಥವಾ ಸೀಮೆಎಣ್ಣೆ ಹೊಯಿವರೆ ಇರುವೆಗಳು ಬಾರದಂತೆ ಮಾಡಬಹುದು (ಅರ್ಥ. ೫೦). **ಹೊಯ್ಯಿ₃**: ೧. ಗಿಡಗಳಿಗೆ ನೀರನ್ನು ಚೆನ್ನಾಗಿ ಹೊಯ್ಯಿ (ರೂಢಿ). **ಹೊಯ್ಯು₂**: ೧. ಹಿಟ್ಟನ್ನು ಬೆಂಕಿಯಲ್ಲಿ ಸ್ವಲ್ಪ ಕಾಯಿಸಿ, ಅದಕ್ಕೆ ಕುದಿಯುವ ನೀರನ್ನು ಹೊಯ್ಯಬೇಕು (ಅಡುಗೆ. ೯೯); ಧಾರೇ ಹೊಯ್ಯುವಾಗ ಹೇಳುವ ಹಾಡು (ಜಾನಪ. ೦೯೨). ೨. ಬೆಳಗ್ಗೆಯಿಂದ ಒಂದೇ ಸಮನೆ ಮಳೆ ಹೊಯ್ಯುತ್ತಿದೆ (ರೂಢಿ). [ದೇ.೩ ತಮಿ. ಮಲ. ಪೊಟು; ತೆಲು. ಪೋಯು]

**ಪೊಯ್₃**, ಹೊಯ್₃ (ನಾ). ಹೊಡೆತ; ಏಟು; ಪ್ರಹಾರ; ಬಡಿತ: ಒರ್ಮೆಯ ಪೊ[ಜಾತಕಾ. ಪಾ]ಯ್ದು ಪೊಯ್ಗಳಿಂ ನೆಗೆದು ಮುಗಿಲ್ಗಳಿಟ್ಟೆಡೆ ಗಳೊಳ್ ತಲೆಗಳ್ ತೊಡರ್ದಿರ್ದ ಜೇನ ಪುಟ್ಟಿಗಳನೆ ಪೋಲ್ತುವು (ಪಂಪಭಾ. ೬೦-೯೦); ಕುದುರೆಗಳನೊಂದೆ ಪೊಯ್ಯಿಂ ಮದಕರಿಗಳನೆರಡೆ ಪೊಯ್ಯೊಳ್ ಕಣ್ಡಂ ಮಾಡಿದ ಖಡ್ಗಧರರ ಭುಜಬಲಮದೇಂ ನಿಮಿರ್ಚಿದುದೊ (ಗದಾಯು. ೯-೩೦); ಕೀಱುವ ಕುಱಿ ಪೊಯ್ದನವನ್; ಪೊಯ್ಯೆಡೆಯೆಡೆ ಬಯ್ಬಯ್ದು ನಲಿದನವನ್ (ಅಕ್ಷ್ಯಾ. ೦೦-೨೦೨). **ಹೊಯ್₃**: ಬಯ್ದು ಬಯ್ಗುಳಂ ಬೇಡುವ ಹೊಯ್ದು ಹೊಯ್ಗೆ ಪುಳಕಾವಳಿ ಮೂಡುವ ಗಂಡು ಹೆಣ್ ತಡಂ ಮಾಡುಗುಂ (ಆಶುಕ. ೬-೩೧); ಪವನಸಂಭವ ಹೊಯ್ದ ಹೊಯ್ಗಳ ನೆನೆದ ನಿಂದಪ್ಪರಿ (ಕೌರಾ. ೦೯-೩೨); ಖಾತಿಗೊಳ್ಳದ ಮುನ್ನ ಪವನಜನೋತು ಕೊಟ್ಟನು ತನ್ನ ಹೊಯ್ಗಳನು (ಕುಮಾ. ೦೦-೩೬). [< ಪೊಯ್₁]

**ಪೊಯಲ್**, ಪುಯಲ್, ಪುಯ್ಯಲ್, ಪೊಯ್ಯಲ್, ಹುಯಲು, ಹುಯ್ಯಲ್, ಹುಯ್ಯಲು, ಹುಯ್ಲು, ಹೂಯಲು, ಹೂಲ್ಕಿ, ಹೊಯಲು, ಹೊಯ್ಯಲು, ಹೊಯ್ಲು (ನಾ). ೧. ಏಟು; ಪೆಟ್ಟು; ಹೊಡೆತ: ವಿಷಯಗಳೆಂಬ ಪೊಯಲ್ಗಳಿಂ ಸಾರಲೀಯದೆ . . . ಸಂಸಾರ ಮೆಂಬ ಮಹಾನದಿಯಂ ದಾಂಟುವುದು (ಧರ್ಮಾಮೃ. ೬-೨೦೯); ವೀಚಿಮ ಪೊಯಲ್ಗಳೆಡೆ ಸಿಲ್ಕುವೆಳಮೀನ್ಗಳಿಂ ವೀಚಿಗಳನೊಡೆದುರ್ಬಿ ಪರಿವ ಬಳ್ಳೀನ್ಗಳಿಂ (ಅಭಿನವ. ೩-೮೪). **ಪುಯಲ್**: ೧. ಜಿನುಗುತ್ತುಂ ಭೋಂಕನೆ ಮಧುಪನಿಕಾಯಂ ಸೋಂಕೆ ತನ್ನನೇಮೈಸಿ ಕರಂ ಕೊನೆ ವಂತಿರ್ದುದು ವನಪವನನ ಪುಯಲಿಂದೊಲೆವ ಕಂಬುಲತೆ ಸೊಗಯಿಸುಗುಂ (ಕುಸುಮಾ. ೯-೨೫). ೨. ಹೊಡೆದಾಟ; ಕದನ; ಕಾಳಗ:

ಶ್ರೀಕಣ್ಣಯ್ಯ ತುಱುಗೊಣ್ಡಲ್ಲಿ ಪುಯಲ್‌ಗಾಗಿ ತುಱು ಅೞ್ದು ಸತ್ತ (ಎಕ. X. ಶ್ರೀನಿಪು. ೩೦-೧೧; ಸು. ೮೮೦ ?). **ಪುಯ್ಯಲ್**: ೨. ತುಱುಪಿನ ಪುಯ್ಯಲೊಳ್ ದೊಮ್ಮರ ಕಾಡವಂ ಸತ್ತು ಸ್ವರ್ಗಾಲಯಕ್ಕೇಱಿದನ್ (ಎಕ. VI. ೧೬೪-೬ : 780) ; ದಾವರಂಗದ ದೊದಿಪನ್ನಿಗಲಿಯುಂ ಕಲ್ಲೂರುಂ . . . ಕರ್ಪೂರ ತುಱುವಂ ನೊಱೆವಪ್ಪನ ಪರಿ ಬನ್ದು ಹೆಮ್ಮಾರ್ಗೆಯ ಪಳ್ಳಿಯೊಳಿಕ್ಕಿ ಕೊಣ್ಡು ಪರಿದೈದಿ ಬಲವಮ್ಮನಂ ಮೂದಲಿಸಿ ಮುನ್ನಣ ಪುಯ್ಯಲ ಪಿನ್ದಿಕ್ಕಿ . . . ಮಗುೞ್ದು ಬರುತಿರ್ಪ್ಪೊಡೆ (ಎಕ. XII. ತಿಪಟೂ. ೧೧-೬ ; ಸು. ೯೩೦ ?) ; ಪುಯ್ಯಲ್ಗೆ ವಂದ ಖರ ದೂಷಣರನವರ ಸೇನೆವೆರಸು ಕೊಂದು (ಪಂಪಭಾ. ೧೧-೨೭ ವ) . ೩. ಸೂರೆ ; ಲೂಟಿ : ನೃಪಬಾಧೆ ಕಳ್ಳರಿಂದಾದ ಪುಯ್ಯಲನ್ನಿಪ್ರಕೋಪಮುಬ್ಬರದಿಂದಪ್ಪುಪ ಸರ್ಗಮೆನಿಪ ವಾರ್ತಾಪ್ರಪಂಚಮಾದಲ್ಲಿ ಕೇಳಬೇಡೋಸಱಿಯುಂ (ಲೋಕೋಪ. ೧೨-೩೨). ೪. ಆರ್ತನಾದ ; ಆಕ್ರಂದನ ; ಚೀರಾಟ : ಈ ಪುಯ್ಯಲನಾರಪ್ಪುದ್ದ ಬರ್ಪನೆಂದು ಭೀಮನನಟ್ಟಿ ಕೊಂತಿ ತಾನೆ ಪೋಗಿ (ಪಂಪಭಾ. ೪-೨೯ ವ) ; ತುಱುವಂ ಕೊಣ್ಡು ಪೆಣ್ದರುಡೆಯನುೞ್ಚಿದರೆಂಬ ಪುಯ್ಯಲಂ ಕೇಳ್ದು ಕಡಿಗಣಿಸದೆ ಮಾಱಿಗಾಪುಣ್ಡನಟ್ಟಿ ಮುಟ್ಟಿಂಪೆ . . . ಸಂಗ್ರಾಮಮಂ ಪರಿಚ್ಛೇದಿಯಾಗಿ ಮಾರ್ಬಲದೞಂ ಮೂದಲಿಸಿ (ಎಕ. VII. ಶಿಕಾರಿ. ೮೪-೧೭ : 1068) ; ಈ ನೆಲನೆಯ್ದೆ ಕಾಯ್ದು ಮತ್ತಮಮ್ಮ ಮನಟ್ಟಿ ಮುಟ್ಟಿ ಸುಡುತಿರ್ದಪುದೆಂದಿಡುವಂತೆ ಪುಯ್ಯಲುಂ ತಮ್ಮ ಕರಾಗ್ರದೊಳ್ ತೊವಲನಾಂತು ನೆಟಿಲ್ಗ ತೊಟಲ್ದವಾನೆಗಳ್ (ಚಾರಪು. ೯-೬೨). ೫. ಗಲಾಟೆ ; ಗದ್ದಲ : ಬಂದ ಕತುಗುದುರೆ ಪೊಲದೊಳ್ ನಿಂದವರಂ ತಿವಿದುಮಕಟ ನೋಡಿರೆ ತಾನಿಂತೆಂದಱಿಯುಬಾರದಿದು ಪೊಸತೆಂದೊರ್ಮೆಯ ಪೊಱಗೆ ಪುಯ್ಯಲಾವತ್ತಾಗಳ್ (ಕಬ್ಬಿಗ. ೨೯೭) . ೬. ದೂರು ; ಮನವಿ ; ಅಹವಾಲು : ಏಱದರ ಪುಯ್ಯಲಂ ಕರೆದಾಳೋಚಿಸಿ ತಿರ್ದಿ ಸಂತಸಂಬಡಿಸದೆ . . . ಕೆಡಿಸಿದು ನೃಪಸುತನೇ (ರಮಾಚಮ್ಮ. ೨-೮೮) ; ನೀನಾರಯ್ಯಲಾರ್ಪೊಡೆನ್ನ ಪುಯ್ಯಲಂ ಪೇೞ್ವಿಂ (ಜೀವಸಂ. ೨೧-೨೨) ; ಅನಿತುಂ ಗಿರಿಗಳುಂ ಪಾಂಡವವನಮುಂ ಹಸಿವೋಗೆ ಮೇದು ಮೆಲ್ಲೊತ್ತುತಿರಲ್ ವನಪಾಲನೀಕ್ಷಿಸಿ ಪರಿದನಿಮಿಷಪತಿಯಲ್ಲಿಗೆಯ್ದಿ ಪುಯ್ಯಲನಿಟ್ಟಂ (ರಮಾಕ. ೪-೩೨). **ಪೊಯ್ಲು**: ೧. ಅಡಿಯಿಂ ಮೇಗಣ್ಗೆತ್ತುವ ಕಡುಗಾಳಿಯ ಪೊಯ್ಲೊಳೀವಱ ನೀರೊಗೆದಪುದು (ಅಂಕು. ೧೪-೩೨) ; ಪೊಱಮಡುವ ಸಾಪದಕ್ಕರದ ಪೊಯ್ಲಿಂಗೆ ನಡುಗುವಂತೆ ಕೆತ್ತುವ ತುಟಿಯುಂ (ಕಬ್ಬಿಗ. ೬೧೦); ಉರಿಯ ಪೊಯ್ಲುಗಳೊಳಂದು ಕಾಲಾಡುಗಿ ಬೀೞ್ವ ಬಹುದನುಜರಿಂ ಮನುಜರಿಂ . . . ಪಾೞಾದ ಸಕಲಲೋಕಂಗಳಿಂ ಕಂಗಳಿಂ ನೋಡಲುರಿ ಘನಮಾದುದು (ಕಂಕು. ೯೩-೨೭). **ಹುಯಲು** : ೧. ಒಂದು ಹುಯಲಂ ಗಣೇಶ್ವರನೆಯ್ದೆ ಹೊಡೆಯಲು (ಪ್ರಭುಶಿ. ೨-೯-೩೦). ೨. ಕಂಬೆಯನಾಯ್ಕ ಮಗ ಬೊಂಮೆಯನಾಯ್ಕನು ಪೂರ ಹುಯಲಿಕಾಗಿ ಕಾದಿ . . . ಸುರಲೋಕಕೆ ಸಂದಂ (ಎಕ. XVI. ತಿಪಟೂ. ೧೬೦-೦೨ ; 1277) ; ಜನ್ನೆಗುರುಗಳ ಪೂರಳಿಬ ಹುಯಲ ಹರಿದು ಕಾದಿ ತಳ್ತಿಱಿದು . . . ಸರ್ಗ್ಗಪ್ರಾಪ್ತರಾದರು (ಎಕ. VII, ಶಿಕಪು. ೩೦-೧೪ ; 1237) ; ಹೊಂಗನೂರ ಹುಯಲೊಳಗೆ ಬಿದ್ದನು (ಎಕ. IX, ಕನ್ನಕ. ೦೯೭-೭ ; 1437). **ಹುಯ್ಯಲ್** : ೭. ದಾಳಿ ; ಆಕ್ರಮಣ : ಕಡೆಗಣ್ಣಿಂದಿಸುವಂತೆ ಚಂದ್ರಕರಮಂ ತೆಂಗಾಳಿಯಂ ಜೋಲ್ದ ಪೂಮುಡಿಯಿಂ ರೆಘೋಷಿಸುವಂತೆ . . . ಎಲ್ಲರ ಧೈರ್ಯಮಂ ಮೊಲೆಯ ಬಿಣ್ಪಿಂ ನುರ್ಗಿ ನೂಂಕಲ್ಕೆ ಧೀಂಕಿಡುವಂತಾಡಿದಳುಯ್ಯಲಂ ತರುಣಿ ತಂದಳ ಕಾಮನಿಂ ಹುಯ್ಯಲಂ (ಅನುಕೃ. ೮-೭). **ಹುಯ್ಯಲು**: ೧. ಇನ್ನಿವನಿಂದಾಗ ಭವನ ಹುಯ್ಯಲು ಬಂದೆನ್ನ ನೋಯಿಸಿ ಕೊಲ್ವುದೆಂದು ಉನ್ನತಮಪ್ಪ ಭೀತಿಯೊಳು ನಡುಗುವಂತೆ ಕನ್ನೆಯ ತನು ಕಂಪಿಸಿದುದು (ಶ್ರೀಕಾಂ. ೯-೧೦೩). ೨. ಬೊಂಮಂಣ್ಣನು ದಿವಿಗೆಯು ಹಳಿಯ ಹುಯ್ಯಲಲ್ಲಿ ಸಮರಂಗವಲ್ಲಿ ಕಾದಿ ಸುರಲೋಕಪ್ರಾಪ್ತನಾದ .(ಎಕ. VII. ಶಿಕಾಂ. ೭೪-೨ ; 1048 ?) ; ಮಹಾಗಜವು ಪ್ರಳಯಾಪಹಲ್ಲಿ ಮಣ್ಣ ಮೊರಡಿ ಕದೆದಿದುದಿಲ್ಲ . . . ಬಲ್ಲಿದರೆಲ್ಲರು ಕಾದಿ ಮಡಿದಲ್ಲಿ ಹಾದೆ ಹುಯ್ಯಲಲ್ಲಿದ್ದು ಅಂಜಿದುದಿಲ್ಲ (ಬೋಳಕಾ. ೨೩೦-೬೦೨) ; ಹೊಳಲು ತಲೆಕೆಳಕಾಯ್ತು ಹುಯ್ಯಲು ತಳಿತುದೊಳ ಕೋಟೆಯಲಿ (ಕುಮ್ಮಾರಾ. ೭-೬). ೪. ಧಾರುಣಿಯ ಜನದ ಹುಯ್ಯಲ ನಿಲಿಸಬೇಕೆಂದು ಪಾರದಿಗೆ ಪೊಱಮಟ್ಟು . . . ಗುರು ವಿರೂಪಾಕ್ಷನಂ ಕಂಡನವನೀಶನು (ಹಕಾ. ೩ ಸೂಕತ) ; ಕೇಳಿದನು ಮುರವೈರಿ ತನ್ನಯ ಮೇಳದೈವರ ಸತಿಯ ಹುಯ್ಯಲ (ಕುಮಾ.ಸ. ೦೯-೨೩೦). ೫. ತನ್ನಂಗವ ತಾ ಬಡಿದುಕೊಂಡು ಇದಿರಿನಲಿ ನೋವ ಕೇಳುವನಂತೆ . . . ಹೆಮ್ಮೆಗೆ ಹುಯ್ಯಲಿನಲ್ಲಿ ಸಿಕ್ಕಿ ತನ್ನ ತಾನಱಸಿಕೊಂಡಂತಾಯಿತ್ತು (ಬೋಳಕಾ. ೩೨-೧೪೨) ; ಜಗದ ಹುಯ್ಯಲು ಜಡಿಯಲಭ್ರದಲಗಿದು ಕೌರವಸೇನೆ ಹರುಷದ ಸೊಗಸಿನಲಿ ಮೈಮಱೆಯೆ ಕೃಷ್ಣಾದಿಗಳು ಕೈಮಱೆಯೆ (ಕುಮಾರರಾ. ೦೯-೩೩). ೬. ಅಯ್ಯಾ ಅಯ್ಯಾ ಎನ್ನ ಹುಯ್ಯಲ ಕೇಳಯ್ಯಾ (ಬಸವ. ೯೭); ಅಯ್ಯಯ್ಯೋ ನಿಮ್ಮ ಕರುಣದ ಶಿಶು ಎಂದು ಹುಯ್ಯಲ ಲಾಲಿಸಿರೋ (ಶತಗೀ. ೧೬೨-೯೦೩); ಸುರರು ದಾನವಬಾಧೆಗಾಱದೆ ಹರಿಗೆ ಹುಯ್ಯಲ ನಿಟ್ಟೊಡವರಿಗೆ ಕರುಣದಲಿ ಮೈದೋಱಿ ನರಹರಿಯಭಯವನು ನೆಗಹಿ (ಕಾಶಿಕಾ. ೦-೧೭). **ಹುಯ್ಲು**: ೧. ತತ್ಪುರಾಗವನು ತೆಗೆದಂಗಣಾಕೆ ಹಲ್ಲಣಿಸಿ ಹತ್ತಿ ಹೊಯ್ದು ಚಮ್ಮವಟ್ಟಿಗೆಯ ಹುಯ್ಲಿಗೆ ಕರುತ್ತು ನಭ ಕುಪ್ಪರಿಸೆ (ಸಮ್ಮಕಾ. ೧೧-೬೦); ಆರ ನೋಡಲು ಸುರುಟಿಯ ಕತ್ತಿಗಳ ಹುಯ್ಲು ಧಾರೆಗಿಕ್ಕಡಿಯಾವವರು (ಕಂಪರ. ೦೩-೯೯). ೨. ಸೈನಿಕರೂ ತಮ್ಮ ಕತ್ತಿಗಳನ್ನು ಹಿರಿದು ಹುಯ್ಲಿಗೆ ಸಿದ್ಧರಾದರು (ಕಾಂಕರಾ. ೦೭೯). ೫. ಸಾರ್ವಭೌಮನ ಮನೆಯ ತುರಗವನೊರ್ವ ತಸ್ಕರ ಕೊಂಡು ಬರಲಿಕೆ ನೀರ್ವಹದಿ ಹುಯ್ಲಾಯ್ತು ಬೇಗದಿ (ಸಂಶಕ. ೦೯-೦೩). **ಹೂಯಲು**: ೫. ಮಿಯಲುಣ್ಣಲಿ ಮಿಳ್ಳ ಕೊಳ್ಳಲಿ ಹೀಯಲೊಱಗಲಿ ಕಾಂತೆಯರ ಬಲು ಹೂಯಲನು **ಮಾಡಲಿ** (ಶಿಕಾಗ. ೦೧-೩೯-೨೯). ೬. ಬಂದಿರ್ಪ ಸುರವರರು ಹೂಯಲ ತಂದಿರ್ಪ ತನಗಕಟ (ಶಿಕಾಗ. ೬-೩-೦೯). **ಹೂಲ್ಯ** : ೨. ತಗ್ಗಿಸಿವರೆಡಬಲನ ಹೂಲಿಯ (ಕೂಡ್ಮಕ. ೨೯೦). ೫. ಪುರುಷರ ವಿರುದ್ಧ ವ್ಯರ್ಥವಾಗಿ ಹೂಲಿಯನ್ನೆಬ್ಬಿಸಬಾರದು! (ಬ್ರಹ್ಮಕ. ೦೬೯); ಹುಲಿಯಬ್ಬರವು ನಿಲಲು ಇವನ ಹೂಲಿ ! (ಕಂಕಕ. ೦೯-೮); ಇಕೋ ನೋಡು ನಾನೆ ಹುಲಿ! ಬರಿ ಹೂಲಿ! ವನಮಾಲಿ! (ಶ್ರೀಂಕರ. ೦೩-೦೩). **ಹೊಯಲು** : ೨. ವರರೂಪ ಶೌರ್ಯಗಳರಸಿ ಅವರ ಹೊಯಲು ಸಾಹಸಗಳನ್ನು ವರಸಸಿಯಿಂ ಭಜಿಸಿ (ಸೌಗಂಧಿ. ೬೯-೭). **ಹೊಯ್ಯಲು** : ೪. ದೇವತತಿ[ವರಕೆ] ನಾ ದೂತ ಕಳುಹಿದರೆನ್ನ ನಿನ್ನ ಹೊಯ್ಯಲ ಕೇಳ್ದು ಕರುಣದಿಂದ (ಕುರಂಗ. ೨-೨೯). **ಹೊಯ್ಲು** : ೧. ಕಾಡೆಮ್ಮೆಯ ಹಾಲ ಊರ ಕೋಣ ಕುಡಿದು ಮತ್ಸರನು ಲೆಕ್ಕಿಸದೆ ಬಹುಜನರ ನೋಯಿಸಿ ಬಾಹಲ್ಲಿ ಒಂದಾಡಿನ ಬಾಲದ ಹೊಯ್ಲುಗಂಜಿ ಓಡಿ ಹೋಯಿತ್ತು (ಪೋಳವಾ. ೦೬೨-೭೮೩) ; ದಟ್ಟೈಸಿದುರಿಯ ಹೊಯ್ಲಿಂಗಾಱದಕಟ ಬಾಯ್ಬಿಟ್ಟು ಪಶುಮೃಗಪಕ್ಷಿ ನೆರೆದೊಱಲುತಿರೆ (ಸಿದ್ಧರಾ. ೭-೩೦) ; ಕೋಮಲೆಯರ ಕಟಾಕ್ಷದ ಹೊಯ್ಲುಗಳುಕದನೇ ಮಹಾಧೀರ (ಜೀವಂಕ. ೩-೭೯) ; ಊರವಣಿಪ ತೇಜಿಗಳ ಕತುಹಿನ ಖುರದ ಹೊಯ್ಲಿಲಿ ವಿಲಯಪವನನ ಗರಿಯ ಗಾಳಿಯಲಿ ಹರನ ನಯನಜ್ವಾಲೆ ಪಾರ್ಥಿಯ ಸರಳ ಕಿಡಿಯಲಿ ಪಲ್ಲಟಿಸೆ (ಕುಮಾರರಾ. ೩-೨). ೨. ಮಿಱಿಹ ಪಡೆಯರು ಘಾಯ ಖಂಡಿಗೆ ತೆಱಹುಗಾಣರು ಹೊಯ್ಲು ಹೋರಟೆ ಹೊಱಗೆ ಬದ್ದವು ಕದ್ದ ವಿಬ್ಬರ ದೃಷ್ಟಿ ಮನಮನವ (ಕುಮಾಗ. ೭-೨೭). ೫. ಕೇಣವಿಲ್ಲದೆ ಭಟರ ಹಾಣಾಹಾಣಿ ಮಸಗಿತು ಖಣಿಖಟಿಲ ಹೊಯ್ಲಾಣೆಗಳ ಬಿಱುಗಿಡಿಯ ಹಿರಿಯುಬ್ಬಣದ ಹೊಯ್ಲುಗಳ (ಕುಮಾಕ. ೨-೦೯). ೮. ಮಿಡಿತ ; ತುಡಿತ :

ಲಲನೆ ಮಾಣಿಗೊಳುಸುರುಸ್ಕರ್ಯೊಳು ಹೊಯ್ಸನಗುರೊಳು ರಜವನೆದೆಯೊಳಲ್ಲಾಟವಂ . . . ರೋಮದೊಳು ಬಲ್ಪನಾರಯ್ದು ಕಾಣದೆ ನೊಂದಳು (ಪತಿಗಾ. ೦೨-೩೭). ೯. ನಿಃಶ್ವಾಸ : ಮೇಲುದುಗುಡದ ಮುಖದ ಚಿಂತೆಯ ಬಾಳಿಗೆಯ ಜಡವುನದಲಿದ್ದರು ಸೂಳು ಸುಯ್ಸನ ಹೊಯ್ಲಿನಾಸಾಪುಟದ ಬೆರಳಿನಲಿ (ಕುಮಾ.ಅ. ೦೭-೦). ೧೦. ಬಾಜನೆ : ಹಚಿಯ ಹೊಯ್ಲಿನಲವುರಗಿರಿ ತಡತಡಿಸಿ ತರ್ೂದರಸ್ಸಶಸ್ಸದ ಹೊಚಿಗೆಯಲಿ ಹೂಳಿದರು ಹೊಗಿಸಿದರಾನೆಕಳುದುರೆಗಳ (ಕೊಶಾ. ೩-೩-೬) ; ನೆಚಿಯದಂಬರವಿವರ ಗವಸದ ತೆಬಿಗೆನೆ ತೆರಯ್ಸಿ ತೊಡೆಗಳ ಹಚಿಯ ಹೊಯ್ಲಿನಲೀವರಾ ಪ್ರಸ್ರವಣಗಿರಿಗಾಗಿ (ಕೊಶಾ. ೩-೯-೦೭). ೧೧. ಚಚ್ಚಿಕೊಳ್ಳುವಿಕೆ ; ಬಡಿದುಕೊಳ್ಳುವಿಕೆ : ಬಾಯ ಬಸುಚಿನ ನೊಸಲ ಹೊಯ್ಲಿನ ರಾಯನರಸಿಯರರಸನಿದಿರಲಿ ಹಾಯಿದರು (ಕುಮಾ.ಶ. ೦-೩).

ಹುಯ್ಯಲೇಲಿಸು = ಗೋಳಾಡುವಂತೆ ಮಾಡು : ಜೇಯ ಕಳುವು ವಾಳೆಯವನೀಗಳೆ ಹೊಕ್ಕು ಹುಯ್ಯಲೇಲಿಸಿ ಕುರುಬರನು ಕಯ್ಯಾರೆ ಕೊಂದು . . . ತೋಚಿದವೆವು (ಕುಶಾಶಾ. ೦೯-೩೭). ಹೂಲಿ ಎಬ್ಬಿಸು = ಗಲಾಟೆ ಮಾಡು ; ಗಲಭೆಯೆಬ್ಬಿಸು : ಕೂಗು ಕೇಕೆಗಳಿಂದ ಹೂಲಿ ಎಬ್ಬಿಸಿಕೊಂಡು ಇವರೆಡೆಗೆ ಬಂದು ನಿಂತ ಕೊಡಲಿ ಅವರಲ್ಲಿಯ ಒಬ್ಬನು ತನ್ನ ಕೈಯಲ್ಲಿಯ ಕೊಡಲಿಯನ್ನೆತ್ತಿ . . . ಬೀಸಿ ಒಗೆದನು (ಶಂಗಾಶ. ೩೦). 'ಪೊಯಿಲ್' ಪರಾ.

[ಪೊಯ್$_1$ + — ಅಲ್$_3$. / ತಮಿ. ಪೂಚಲ್; ಮಲ. ಪೂಯಲ್]

**ಪೊಯಸಳ** 'ಪೊಯ್ಸಳ' ನೋ.

**ಪೊಯಸಳ** 'ಪೊಯ್ಸಳ' ನೋ.

**ಪೊಯಿ** 'ಪೊಯ್$_1$' ನೋ.

**ಪೊಯಿನೀರು** 'ಪೊಯ್ನೀರ್' ನೋ.

**ಪೊಯಿಲ್**, ಪುಯಿಲ್, ಪೊಯಿಲು, ಹುಯಿಲು, ಹೊಯಿಲ್, ಹೊಯಿಲು$_1$ (ನಾ). ೧. ಏಟು ; ಪೆಟ್ಟು ; ಹೊಡೆತ: ತೃಣಮುಂ ತೆಸೆದೋದ ಬಟಿಕ್ಕೊಣಗುವುದದಱಿಂದೆ ನರರ ಬಾಟ್ ಲಘುಕಾಲು ಹನೆದದ ಪೊಯಿಲ್ಗೆ ಮೊದಲ್ನಡು ಕಣೆಯನ್ನದಿದೆಳವೆ ಜನ್ಮನಂ ಮುಪ್ಪನ್ನಂ (ಅಜಿಪು. ೩-೭೦) ; ಪೊಯಿಲ್ಗಳ್ ಸರಕು ಮಾಡದೆ ಮುಗ್ಗಿ ಕವಿದರಾ ತ್ರಿಪುರಮಂ ಸುತ್ತಲಾ ದಿವಿಜಭಟರು (ಶಂಪು. ೧೨-೩೦). ಪುಯಿಲ್ : ೨. ಹೊಡೆದಾಟ ; ಕದನ ; ಕಾಳಗ : ಇರ್ಕೆರಿ ಬಸವಪಟ್ಟಣದುರ್ಕರಸಗೊರಿಂದು ನೆವದೊಳಂದಿಗೆ ಪುಯಿಲ್ ವೆರ್ಚಿಸಿ ಮಯದಿರೆ ಭೃಶಕರ್ಕಶರಟಿಗೆಯ್ವಿಪಟ್ಟಿಗೊಡನಡಿಯಿಟ್ಟರ್ (ಶಕಪ. ೨-೯೦) ; ಅತ್ತಲಾ ಪುಯಿಲೊಳ್ ನೊಂದು ಪೊಟಲ್ಗಳ್ ಪೊರ್ದಿದ . . . ನೆರೆದೊರೆಗಳ್ (ಶಕಪ. ೯೯-೦೯). ಪೊಯಿಲು : ೩. ದೂರು ; ಮೊರೆ ; ಮನವಿ : ಬೆಳವ ಕೆಯ್ಗಳೊಳ್ ತಲೆಗೊಯಿಲು ಮುಳಿದ ಕಡುನಲ್ಲರೊಳೆ ಪೊಯಿಲು (ಶಂಶಾ. ೦-೦೯). ಹುಯಿಲು : ೧. ಅವ ದೆಶೆಗೊಡಲಲ್ಲಲ್ಲಿಗೆ ಬಂದು ಬೀಳುವವು ಹುಯಿಲುಗಳು (ಶಕೃತು. ೨-೯-೩೦). ೨. ಬೊರೊಪ್ಪುರಾ ಗವ್ವಿನ್ನಾನ್ ಅಚೆಚಿ ಹುಯಿ(ಲೊ)ಳು ಸತ್ತನ್ (ಕ್ಕಶಾ. ೦೯೨೬, ೯೦-೯ ; ೧೦೬೩ಕು ಕಕ) ; ನಿಮ್ಮ ತನ್ನೆ ನಮ್ಮ ಕಾರ್ಯನಿಮಿತ್ತ ಹುಯಿಲಲಿ ಬಿದನಾಗಿ ಈ ಕಾನನು ನೆತ್ತರಕೊಡಿಗೆಯಾಗಿ, ಕೊಟ್ಟನು (ಕ್ಕಶಾ. ೦೯೨೬, ೯೯-೩ : ?). ೪. ಗಲಾಟೆ ; ಗದ್ದಲ : ತಿಳಿಯದ ಮೂರ್ಖರು ಎಬ್ಬಿಸುವ ಹುಯಿಲು ವ್ಯರ್ಥಾಲಾಪವಲ್ಲದೆ ಮತ್ತೇನೂ ಅಲ್ಲ (ಶಕ್ಕಾಕ. ೭೩) : ಇದು ಸುಮ್ಮನೆ ಜನಸಾಮಾನ್ಯರನ್ನು ಹುರಿದುಂಬಿಸಲು ಎಬ್ಬಿಸಿದ ಹುಯಿಲು ಆಗಿದ್ದರೆ, ಅದರ ಬಗೆಗೆ ವಿಶೇಷ ಆಕ್ಷೇಪಣೆಯಿಲ್ಲ (ಹುಚ್ಚಿಕ್ರ. ೩೨). ೫. ದಾಳಿ ; ಆಕ್ರಮಣ : ಹಾದರದಲ್ಲಿ ಬಂದಿದ್ದು ಹುಯಿಲಲ್ಲಿ ಹೋಯ್ತು (ಗಾದೆ). ಹೊಯಿಲ್ : ೧. ಹೊದ್ದಿಯಾ ಹೊದ್ದದ ಹೊಯಿಲೆಸೆದುವು ಜೋಡರ ಸುಸಿಲೊಳ್ (ಅಕ್ರಕ. ೯-೦೭). ಹೊಯಿಲು$_1$ : ೧. ದಶಮರುತನ ಹೊಯಿಲಿಲ್ಲದೆ ತಾನೆ ಲಿಂಗದ ಜ್ಞಾನಜ್ಯೋತಿಯ ನಿಲವೋ (ಅಶಕಂ. ೨೨೬-೦೦೪೦) : ಕೆಲಬರನು ಹೊಚ್ಚಿಯ ಹೊಯಿಲಲಿ ಕೆಲಬರನು ಧನುವಿನಲಿ ಗದೆಯಲಿ ಹೊಯ್ದು ಕೆಲಕೆಲರ ಕಲಕಿದನು ಬಲಜಲಧಿಯನು (ಕುಮಾ.ದ್ರೋ. ೦೩-೩) ; ಕುಂಭಸ್ಥಲ ಬಿಯಲಂಕುಶದ ಹೊಯಿಲಿಂದ ಬರಿಸುತಿಹರು ಸಾಧನೆಯನಂಕದ ಮದಕರಿಗಳಿಗಲ್ಲಿ ಕೋವಿದರು (ಕುಶಾಶಾ. ೯-೭೦). ೨. ಏನೆಂಬೆನು ಕುಮಾರರ ಹೊಯಿಲ ಬೆಳಸಿರಿಯ (ಕುಮಾ.ದ್ರೋ. ೮: ೨೯). 'ಪೊಯಿಲ್' ಪರಾ.

ಹುಯಿಲು ಎಬ್ಬಿಸು, ಹುಯಿಲೆಬ್ಬಿಸು = ಗಲಾಟೆ ಮಾಡು ; ಗಲಭೆಯೆಬ್ಬಿಸು : ವಿದ್ಯಾರ್ಥಿಗಳು ಅವನ ಭಾಷಣಕ್ಕೆ ಗುಲ್ಲು ಮಾಡಿ ಹುಯಿಲು ಎಬ್ಬಿಸುತ್ತಿರಲಿಲ್ಲ (ಕೂಶಿ. ೦೯೭); ನಿಃಸ್ವಾರ್ಥಹೃದಯಿಯಾಗಿ ದುಡಿಯುತ್ತಿರುವಾಗ ಈಗ ಈ ಸ್ವಾರ್ಥದ ಸೆಳಕು ಹುಯಿಲೆಬ್ಬಿಸಬೇಕೆ ? (ರಕ್ತರ್ಮ. ೯೩). ಹುಯಿಲು ಕೊಡು = ಮಾಟ ಮಾಡಿ ಕೊಲ್ಲಿಸು : 'ಹುಯಿಲು ಕೊಡುತ್ತೇನೆ' (ಮಾಟ ಮಾಡಿ ದೆವ್ವದ ಸಹಾಯದಿಂದ ವೈರಿಗಳನ್ನು ಕೊಲ್ಲಿಸುವುದು ; ಎಂದರ್ಥ) (ಕಾಕೂರು. ೩೬೩). ಹೊಯಿಲು ಹಿಡಿ = ಜೋಲಿ ತಪ್ಪಿಸಿ ನಿಲ್ಲು ; ಸಮತೂಕದಲ್ಲಿರು : ಕೊಂಟೆಯನ್ನು ಹತ್ತಿ, ಎರಡು ಕಾಲುಗಳನ್ನೂ ಮೇಣಿಯ ಆಚೆ ಈಚೆ ಇಟ್ಟು . . . ಬೊಡ್ಡ ಎತ್ತುಗಳ ಹಗ್ಗದ ಆಧಾರದಿಂದಲೇ ಹೊಯಿಲು ಹಿಡಿದು ನಿಲ್ಲಬೇಕಾಗಿತ್ತು (ಕಳಸು. ೨೬೯). [ಪೊಯ್$_1$ + — ಇಲ್$_3$ . / ಕೊಡ. ಪೊಯಿಲ್]

**ಪೊಯಿಲು** 'ಪೊಯಿಲ್' ನೋ.

**ಪೊಯಿಲ್ವೆಜು** (ಕ್ರಿ). ಏಟು ತಿನ್ನು : ಪೊಯ್ದೊಡೆ ಬಱಬಂ ಪೊಯಿಲ್ವೆತ್ತಂತೇನುಮಂ ನಱಿಯದೆ ಪರಿಭವಾನಿಲನಿಂ ಶೋಕಾನಲನಿರ್ವಾಡಿಸೆ (ಶಂಶಶಾ. ೬-೭೦ ವ). [ ಪೊಯಿಲ್ + ಪೆಱು$_1$ ]

**ಪೊಯಿಸು**, ಪೊಯ್ಯಿಸಂ, ಹುಯಿಸು, ಹೊಯಿಸು$_1$ (ಕ್ರಿ). ೧. ಹೊಡೆಯುವಂತೆ ಮಾಡು ; ಹೊಡೆಯಿಸು : ಎಱಗಲಱಿಯದೆ ಜನ್ನ ಕಮ್ಮಗುಟ್ಟಂ ಬರಲಣಮಱಿಯದೆ ತಪ್ಪಂ ಪಿನ್ದಂ ತೆಱನನಱಿಯದೆ ಭಂಗಮನಿಕ್ಕಿಯುಂ ಮೂಱಿಡೆಗಲ್ಲದೆ ಕಟ್ಟಾಡಿಯುಂ ಮುಱಿಯ ಪೊಯಿಸಿದನು (ಎಕ. II. ೦೩೩-೦೯೦ : ೬೮೭). ೨. ವಾದ್ಯವನ್ನು ಬಾಜಿಸುವಂತೆ ಮಾಡು : ಶುಭದಿನಮುಹೂರ್ತದೊಳುತ್ತರಭರತ ವಿಜಯೋದ್ಯೋಗಮಂ ಭರತರಾಜನಱಿಪಲೆಂದು ವಿಜಯಭೇರಿಯಂ ಪೊಯಿಸಿದಾಗಳ್ (ಆಪು. ೦೩-೯೦ ವ) ; ಗುಡಿಯಂ ಕಟ್ಟಿರೊ ಭೇರಿಯಂ ಪೊಯಿಸಿರೊ . . . ಎನುತುತ್ಸವಂಬಡೆಯುತ್ತಾಕ್ಷಣಮೆಯ್ದಿದಂ ನೃಪವರಂ ತತ್ಪೂತಿಕಾಗೇಹಮಂ (ದಕಳು. ೨-೭೦). ೩. ಕತ್ತರಿಸುವಂತೆ ಮಾಡು; ಕಡಿಯಿಸಂ : ಚೆಂಡಿನ ನೆವದಿಂದ ಬಂದು ತನ್ನಬಲೆಯ ಕಂಡು ಪಿಡಿದ ರಾಮನೆಂದು ಕೊಂಡೊಯ್ದು ತಲೆಯ ಪೊಯಿಸಿದನೆಂದವನೆಬೆಗೊಂಡು ರಾಯಗೆ ಪೇಳಿದನು (ಕುಶಾಶಾ. ೩೭-೩೯). ೪. ಬಲಿ ಕೊಡುವ ಉದ್ದೇಶದಿಂದ ಪ್ರಾಣಿಯ ಆಹುತಿಯನ್ನು ಅರ್ಪಿಸು : ಚೌಷಷ್ಟಿ ಯೋಗಿನಿಯರ್ಗೆ ಬಲಿಗೊಟ್ಟು ಭೂತಸಂತುಷ್ಟಿಯವ್ವಂತೆ ಕುಱಿ ಕೋಣಂಗಳಂ ಪೊಯಿಸಿ . . . ಭೂಪನುತ್ಕೃಷ್ಟಮುಖಮಿನ್ನು ಸಂಪೂರ್ತಿಯಾದವು ದೆಂಬ ಹೃಪ್ತತೆಯೊಳರ್ಥಮಂ ಸಾಗಿಸಿದನು (ಕೃಜಿಶಾ. ೩-೭೨). ಪೊಯ್ಯಿಸು : ೫. ಕೆತ್ತಿಸು ; ಕೊರೆಯಿಸು ; ಕಂಡರಿಸು : ಚೋಳ ಸೆಟ್ಟಿ ಎಣ್ಣುಸಿರವಿಮ ಪೊಯ್ಯಿಸಿದ ಕಲ್ಲು (ಎಕ. IV. ಹುಣಸೂ. ೦೦-೦೫ ; ೧೦೨೦ ?). ಹುಯಿಸು : ೩. ಆ ಕೃಷ್ಣರಾಯನ ಮೇಲೆ ದೊಡ್ಡ ತಪ್ಪನ್ನು ಹಾಕಿ ಅವನನ್ನು ತಲೆಹುಯಿಸಬೇಕೆಂದು ಗಂಡನೊಡನೆ ಬಾಡಿ ಹೇಳಿದಳು (ಶಿತಿಶಾ. VII. ೨೦). ಹೊಯಿಸು$_1$ : ೨. ಹಱಿಯ ಹೊಯಿಸಿ ಕುಱಹ ಪೂಜಿಸುವರ ಮೆಚ್ಚ (ಬಸವ. ೨೦೬). ೫. ಶಾಸನದ

ಹೊಯಿಸಿದನು (ಶಾಸ. ೩೯-೩೩); ತಮ್ಮಯ್ಯಗೌಡನು ನನ್ನನಸಂವತ್ಸರದ ಚಯಿತ್ರ ಶು ೧ಲು ಹೊಯಿಸಿದ ಕಲೊರಲೂ ೧ (ಎಕ. X. ಶ್ರೀಂಗ. ೬೮-೯; ೪); ಹೊಲತೀಪುರಸ್ತಳದ(ದ) ಗಲುಡ ಅರಿಯಂಣನು ಪಾಲಿಹಿಸಿ ದಂತ್ಸ ಶಾಸನ ಹೊಯಿಸಿದರೂ (ಎಕ. VII. ಶಿಕಾ. ೦೦೦-೬; ೪). 'ಪೊಯ್ಯು₁' ಪರಾ. [ ಪೊಯ್₁ + – ಇಸು₂ ]

ಪೊಯ್ಯೆಂಡು 'ಪೊಯ್ಸೆಂಡು' ನೋ.

ಪೊಯ್ತ್ರ ? (ನಾ). (?): ಸ್ವಸ್ತಿಶ್ರೀ . . . ವಿಜಯಸಂವತ್ಸರ ಇಪ್ಪದಾ ಏಣ್ಣಾನೆಯೊಳು ಶಿವವಾರ ಕದವುಪ್ಪುರ ಆಳೆ ಕದವುಪ್ಪು × ಭೂವೊಟ್ಟ ಯೋನ್ ಕಟಾಕಣ್ಣೇಶ್ವಂಕಾ ಪೊಯ್ತ್ರಮಮೆನ್ತ ಕಟನಿಕಣ್ದುಗಂ ಎಟ್ಟು × × × ವಾಟು ಅಯ್ತು ಮಾಸೇ ಪೊನ್ನದೆ ಅಟಿದನ್ಪಟ್ಟರ ಕೊಡ ವೆನೂರುಂ ಆಳ್ವ ಅರಸನು ಮಾಡಿಸುವೋರ್ (ಎಕ. ೫, ಕೋಲಾರ. ೬-೯ : 758). [ ? ]

ಪೊಯ್ದು₁ 'ಪೊಯ್₁' ಪರಾ.

ಪೊಯ್ದು₂ 'ಪೊಯ್₂' ಪರಾ.

ಪೊಯ್ನೀರ್, ಪೊಯಿನೀರು, ಹೊಯ್ನೀರು (ನಾ). ೧. ಮಳೆಯ ನೀರಿನಿಂದ ಬೇರೆಯಾದ, ಪಾತ್ರೆಗಳಲ್ಲಿ ತುಂಬಿ ಸಸಿಗಳಿಗೆ ಹಾಕುವ ನೀರು : ಅವರಿರ್ವರ ದೇಟಮೆಂಬ ಲತೆಯ ಬೆಳಸಿಂಗೆ ಪೊಯ್ನೀರೆಱೆ ವಂತೆ ಕಯ್ನೀರೆಱೆದು ಬಯಸುವಂ ಮಱೆದು (ಶಂಕಲಾ. ೩-೩೩ ಕ); ಭೂಪಂ ತನ್ನ ಸಂತಾನವೃದ್ಧಿಗೆ ಪೊಯ್ನೀರೆಱೆವಂತೆ . . . ಕೈನೀರೆಱೆದಂ (ಕಂಪಿಪು. ೩ ೦೨೯); ಮಾಟಿಯಿಲ್ಲದೆ ಪೊಯ್ನೀರಿಂ ಬೆಳೆಗುವ ಧರ (ರಘುಚ. ೦-೯೯); ಬಾಷ್ಪಬಿಂದುಗಳಂ ಸೂಸಿ ಲತಾಂಗಿ ಭಂಗಿವಡೆದಿರ್ದಳ್ ಬೇಂಟವೇಲೊಂದು ಬಳ್ಳಿಗೆ ಪೊಯ್ನೀರೆಱೆವಂದದಿಂ (ಜಗ. ೦೦-೦೦). ೨. ನೀರು ಹಾಕಿ ಕಡೆದ ಮೊಸರು ; ಮಜ್ಜಿಗೆ : "ದಧಿಮಂಥಂ ಮಸ್ತು ವೆಂಬುದಕ್ಕುಂ ಪೊಯ್ನೀರ್" (ವಸ್ತುಕೋ. ೯೨-೩). ಪೊಯಿನೀರು : ೧. ಸಂತಾನಾಭಿವೃದ್ಧಿಗೆ ಪೊಯಿನೀರೆಱೆವಂತಾ ತುವರಗಂದವರು ಸಂತಸ ದಿಂಗೆ ಕೈಧಾರೆಯೆಱೆದರು (ಕುಂಣಾ. ೬-೦೩೪). ಹೊಯ್ನೀರು : ೧. ಬೇವಿನ ಆ ಗಿಡಕ ಬೆಲ್ಲದ ಕಟ್ಟೆ ಕಟ್ಟಿ ಜೇನುತುಪ್ಪದಲ್ಲಿ ಹೊಯ್ನೀರ ಹಣಿಸಿದರ ಬೇವು ತನ್ನಸವ ಬಿಡಲಿಲ್ಲ (ಕರ್ನಾಜ. ೩೩೬). [ಪೊಯ್₂+ನೀರ್]

ಪೊಯ್ಸಿಸು 'ಪೊಯಿಸು' ನೋ.

ಪೊಯ್ವಡೆ, ಹೊಯ್ವಡೆ (ಕ್ರಿ). ಏಟನ್ನು ತಿನ್ನು : ಪೆಟ್ಟು ಹೊಂದು : ಪ್ರಣಯಪ್ರಕೋಪಭರದಿಂದೆಯ್ತಂದು ಕಾಂತಾಜನಂ ಪಿಡಿತಂದೊರ್ಮೆಯೆ ಕಂಕಣಾಂಗಳುಲಿಯಲ್ ಪೂವಾಲೆಯಿಂ ಪೊಯ್ವಡೆವಂ ಕೇಸರದಾಮಬದ್ಧ ಚರಣಂ ಶೃಂಗಾರಸಾರೋದಯಂ (ಶಾಂತಿಪು. ೩೨೩); ನೃಪಂ ಪೆಱರ ಸೂಟ ದಿನಂ ಮಱೆದಿರ್ದ ಸೂಟ್ತಡಂ ಬಂದಳ ಸೂಟಿಗೆ ಬಂದು ಬಿಡೆ ಪೊಯ್ವಡೆವಂ ಬಿಡುತರ್ಪ ಕಣ್ಣಾ ನೀರ್ತಂದಲ ಬಳ್ಳಿಮಿಂಚಿನ ಪೊಳಂಚುವ ಲೋಲ ಕಟಾಕ್ಷಮಾಲೆಯಿಂ (ಮಲ್ಲಿಪು. ೩-೯೩); ಪೊಡೆಯ ಕೃಕವಾಕುನಿನದಂ ಬಿಡದುಣ್ಮುತಿರಲ್ಕೆ ಕಯ್ಯ ಬಾಳ್ ಬೀಟ್ಟರೆ ಪೊ[ ಶಾಂತಿ. ಹೊ ]ಯ್ವಡೆ ದಂತೆ ಪಂದೆಯಂ ಪಾವಡರ್ದಂತಾಗಿರೆ ಯಶೋಧರಂ ಬೆಱಗಾದಂ (ಜುಕೋಶ. ೩-೩೬). ಹೊಯ್ವಡೆ : ಈ ಐದು ಬಿಕ್ಕಳುಗಳು ಮಿಂಚುವವರಿಗೂ . . . ಹೊಯ್ವಡೆದವರಿಗೂ ಮರಣಕ್ಕೆ ಕಾರಣವಾಗಿ ಕಾಣಿಸಿಕೊಂಬುದು (ಕಶವೈ. ೨೧೦). [ ಪೊಯ್₂ + ಪಡೆ₁ ]

ಪೊಯ್ವಟು (ಕ್ರಿ). = ಪೊಯ್ವಡೆ : ದಶಾನನಂ . . . ಪೊಯ್ವೆತ್ತಿಭ ವೈರಿಯಂತೊದಱೆ ಕೆಂಗಱೆ ಮಾಡಿದ ಭೃಂಗವಾಲೆ ನೀಳ್ಪೆತ್ತನೆ ನೋಡಿದಂ ಮಯತನೂಜೆಯ ಬಾಡಿದ ವಕ್ತ್ರಪದ್ಮಮಂ (ಶಂಗಾಪು. ೦೯-೦೦೬); ಪೊಯ್ವೆತ್ತ ಪಾವಂತೆ ಪೊರೆದು . . . ಪೊಱಿಪಟ್ಟನ್ (ರ. ೧೩ . ೧೨-೨೩೨). [ ಪೊಯ್₂ + ಪೆಱು ]

ಪೊಯ್ಸಳ 'ಪೊಯ್ಸಳ' ನೋ.

ಪೊಯ್ಸಣ 'ಪೊಯ್ಸಳ' ನೋ.

ಪೊಯ್ಸಳ, ಪೊಚ್ಚಳ, ಪೊಯಶಳ, ಪೊಯಸಳ, ಪೊಯ್ಯಳ, ಪೊಯ್ಸಣ, ಪೋಶಳ, ಪೋಶಟ, ಪೋಸಳ, ಪೋಸಟ, ಹುಯಸಲ, ಹೊಯಸಣ, ಹೊಯಸಳ, ಹೊಯಿಸಣ, ಹೊಯಿಸಳ, ಹೊಯ್ಸಣ, ಹೊಯ್ಸಳ, ಹೊವಿಸಳ, ಹೋಸಣ, ಹೋಸಲ, ಹೋಸಳ, ಹೋಸಾಲ (ನಾ). ಕರ್ನಾಟಕದ ಒಂದು ಪ್ರಸಿದ್ಧ ರಾಜವಂಶ, ಆ ವಂಶದ ಮೂಲಪುರುಷ ಹಾಗೂ ಆ ವಂಶಕ್ಕೆ ಸೇರಿದ ವ್ಯಕ್ತಿ ಮತ್ತು ಅವರ ರಾಜ್ಯದ ಹೆಸರು ; ೯ ಸುಮಾರು ವರ್ಷಗಳ ಹಿಂದೆ ಸಳನೆಂಬ ಒಬ್ಬ ಶೂರಯುವಕನಿದ್ದನು. ಇವನ ಅಧ್ಯಯನಕಾಲದಲ್ಲಿ ಒಮ್ಮೆ ಹುಲಿಯು ಹಾಯ್ದು ಬರಲು 'ಪೊಯ್ ಸಳ' ಎಂದು ಗುರುವು ಸಳೆಯೊಂದನ್ನು ಇವನ ಬಳಿ ಗೆಸೆದು ಆಜ್ಞೆಯನ್ನಿತ್ತನು. ಸಳನು ಹುಲಿಗೆ ಕಿಂಚಿತ್ತೂ ಹೆದರದೆ ಗುರುವಿನ ಆಜ್ಞೆಯನ್ನು ಪಾಲಿಸಿ ಗುರುವು ಕೊಟ್ಟ ಸಳೆಯಿಂದಲೇ ಹುಲಿಯನ್ನು ಹೊಡೆದು ಕೊಂದನು. ಈ ಘಟನೆಯಿಂದ ಅವನಿಗೆ ಮುಂದೆ 'ಪೊಯ್ಸಳ' ಎಂದೇ ಹೆಸರಾಯಿತಲ್ಲದೆ ಇವನು ರಾಜ್ಯ ವೊಂದನ್ನು ಕಟ್ಟಿ ಪ್ರಸಿದ್ಧನಾದ ನಂತರವೂ ಇದೇ ಹೆಸರು ಇವನ ಮನೆತನಕ್ಕೂ ಉಳಿದು ಬಂದಿತೆಂಬ ಪ್ರಸಿದ್ಧವಾದ ಕಥೆಯು ಶಾಸನ ಗಳಲ್ಲಿ ಸಿಗುತ್ತದೆ. ಇದಕ್ಕೆ ಚಾರಿತ್ರಿಕ ಆಧಾರಗಳೇನೂ ಇರು ವಂತಿಲ್ಲ. ಬಹುಶಃ ಇದು ಕಾಲ್ಪನಿಕವಿದ್ದರೂ ಇರಬಹುದು : ಪೊಯ್ಸಳರಾಜ್ಯದ ಮೂಲಸ್ತಂಭಮಿದೆನಿಸಿದ . . . ಚೈತ್ಯಾಯತನದ್ವಯಂ ಗಳಂ . . . ಮಾಡಿಸಿ (ಎಕ. IV (R), ಕುಣಿಗಲ್. ೦೬-೪೪; 1124): ಶ್ರೀವಿಷ್ಣುವರ್ಧನ ಪೊಯ್ಸಳ ಶ್ರೀವೀರನಾರಸಿಂಹದೇವರ್ (ತ್ಯಕಂ. ೦೯೯, ೨೨-೩ ; 1124). ಪೊಚ್ಚಳ : ಭುಜಬಲವೀರಗಜ್ಗ ಪೊಚ್ಚಳ ಜಗದೇಕಮಲ್ಲ ಶ್ರೀನರಸಿಂಹದೇ[ವ] (ಎಕ. IV (R), ಕೃಷ್ಣ. ೬೭-೦೦ ; ಶು. ೧೨ಶತ ಕಶ). ಪೊಯಶಳ : ಶ್ರೀಮನ್ಮಹಾಮಣ್ಡಳೇಶ್ವರ ಪೊಯಶಳ ಬಿಟ್ಟಿದೇವನ ದಣ್ನಾಯಕ ಬೊಪ್ಪಣನೆತ್ತಿ ಬರಲು . . . ಬಮ್ಮಯ ನಾಯಕಂ ಸುರಲೋಕಪ್ರಾಪ್ತನಾದ (ಎಕ. VII. ಶಿಕಾ. ೦೨-೩ ; 1120). ಪೊಯಸಳ : ಪೊಯಸಳ ಶ್ರೀವೀರಬಲ್ಲಾಳದೇವರಸರು ಪ್ರಿಥ್ವೀರಾಜ್ಯಂ ಗೆಯುತ್ತಿರೆ (ಎಕ. IV (R), ಹಾಸನ. ೦೩೦-೨ ; 1335). ಪೊಯ್ಯಳ : ಪೊಯ್ಯಳ ಶ್ರೀವೀ[ರ]ನಾರಸಿಜ್ಗದೇವನ್ ಪೃಥವೀರಾಜ್ಯಮ್ ವಣ್ಣೆ (ಎಕ. IV (R), ಕೃಷ್ಣ. ೯-೦ ; 1224). ಪೊಯ್ಸಣ : ಸಳೆಯಿಂ ಪುಲಿಯಂ ಪೊಯ್ಸಳಯೆನೆ ಪೊಯ್ದುದಱಿಂ ಪೊಯ್ಸಣವೆಸರವನಿಂದ ವಾದುದು (ತ್ಯಕಂ. ೦೯೦, ೩೩-೩ ; ಶು. 1110). ಪೋಶಳ : [ತ್ರಿ]ಭು [ವ]ನ ಪ್ರತಾಪಚಕ್ರ[ಅ]ವ[ತ್ರಿ] [ಪೋಶಳದೇ]ವನ್ (ಎಕ. IV (R), ಹಾಸನ. ೦೩೬-೨ ; ಶು. ೧೩ಶತ ಕಶ). Δಪೋಶಟ : ಪ್ರತಾಪ ಚಕ್ರವತ್ತಿ ಪೋಶಟ ಶ್ರೀವೀರಸೋವಿಶ್ವರದೇವನ್ (ಎಕ. III (R), ಗುಂಡ್ಲು. ೬೦-೯ ; 1224). ಪೋಸಳ : ಸ್ವಸ್ತಿಶ್ರೀಪ್ರತಾಪಚಕ್ರವರ್ತಿ ಪೋಸಳ ಶ್ರೀವೀರನಾರಸಿಜ್ಗದೇವನ್ (ಎಕ. IV (R), ಎಳಂದೂ. ೦೩೬-೨ ; ಶು. ೧೩ಶತ ಕಶ); ಸ್ವಸ್ತಿಶ್ರೀ ಪೋಸಳ ಸೋವಿಸುರದೇವನ್ (ಎಕ. IV (R), ಕೃಷ್ಣ. ೯೩-೦ ; 1237). Δಪೋಸಟ : ಶ್ರೀ ಪೋಸಟ ವೀರವಲ್ಲಾಳದೇವನ್ (ಎಕ. IV (R), ಹಾಸನ. ೨೯೬-೦ ; ೧೨ಶತ ಕಶ). ಹುಯಸಲ : ಹುಯಸಲ ನಾಡಿಗೆ ಸಲುವ ಕೊತ್ತಾಗಾಲಕೆ ಸಲುವ ಉಮಗ್ರಾಮ ಹೊರವಳಲಿಪುರ ಗ್ರಾಮವನು . . . ಕೊಟೆವಾಗಿ (ಎಕ. III (R), ಹೆಗ್ಗ. ೦೬-೯ ; 1669). ಹೊಯಸಣ : ಶ್ರೀಮತುಹೊಯಸಣಚಕ್ರವರ್ತ್ತಿವಿನಯಾದಿತ್ಯಾ (ಎಕ. XI. ಚಿತ್ರದು. ೦-೮ ; 1310 ?). ಹೊಯಸಳ : ಪ್ರತಾಪಚಕ್ರವರ್ತ್ತಿ

ಹೊಯಸಳ ಶ್ರೀವೀರನಾರಸಿಂಹದೇವರಸರು (ಎಕ. IV (ll). ಕಾಕುರಾ ೨೨೦-೩; 1276); ಹೊಯಸಳರಾಜ್ಯಾಧೀಸ್ವರ ಶ್ರೀವೀರಸಂಜರಾಯ ಒಡೆಯರು (ಎಕ. IV (ll). ಕಾವುಂಠ. ೨೩೬-೬ : 1402). ಹೊಯಿಸಣ : ಹೊಯಿಸಣ ವೀರನಾರಸಿಂಹದೇವರ ಬೆಸದಿಂ . . . ಈ ಕಾರ್ಯ್ಯಕ್ಕೆ ತಲೆಗೊಟ್ಟಲ್ಲಿಗೆ ಬಿಟ್ಟವೃತ್ತೆ ತನ್ನ ಮಗಂಗೆ ನಿಲ್ಲಿಸಿದ ವೀರಗಲ್ಲು (ಎಕ. V. ಹಾಸನ. ೩೦ ೪ : 1293 ?) ; ಸ್ವಸ್ತಿಶ್ರೀಮತ್ಪ್ರತಾಪಚಕ್ರವರ್ತ್ತಿ ಹೊಯಿಸಣ ಶ್ರೀ ವೀರಬಲ್ಲಾಳದೇವರ್ಸರು ಸುಖರಾಜ್ಯಂಗೆಯುತ್ತಮಿರೆ (ಎಕ. VII. ಶಿವಮೊ. ೬೬-೦ ; 1313). ಹೊಯಿಸಳ : ಸಳನೆಂಬ ಯಾದವಂ ಹೊಯಿಸಳನಾದು . . . ಶಶಕಪುರದ ವಾಸಂತಿಕೆಯೊಳ್ (ಎಕ. VI. ಕಡೂರು. ೦೨-೩ ; 1253) ; ಶ್ರೀಮನುಪ್ರತಾಪ ಹೊಯಿಸಳ × × ಬಳ ಶ್ರೀ ವೀರಬಲ್ಲಾಳರು (ಮೈಶಾ. ೧೯೩೬, ೦೦-೨ ; ಸು. ೧೩ನೆಯ ಶತ) ; ಹೊಯಿಸಳ ತುಳುವ ಚೋಳ ಚೇರಮ ಪಾಂಡ್ಯ . . . ಕಾಂಬೋಜದೇಶದ ಸಕಲಶರಣರ್ಕೈತರುತಿರ್ದರು (ಶಂಕ. ೬-೯೯). ಹೊಯ್ಸಣ : ಶ್ರೀಮನುಮಹಾಮಂಡಳೇಶ್ವರನೆಚಿಯಂಗ ಹೊಯ್ಸಣದೇವನಳಿಯಂ (ಎಕ. VII. ಶಿವಮೊ. ೬೯-೯೨ : 1112 ?) ; ಹೊಯ್ಸಣಶ್ರೀವೀರಭುಜಬಲಬಲ್ಲಾಳದೇವರಸರು (ಎಕ. IV (R). ಹುಣಸೂ. ೦೯-೩ ; 1338) ; ಹೊಯ್ಸಣ[ಪಾಠಾಂ. ಯಿಸಣ]ದೊಳಿದಿಸಿರಲು ಭೂಮಿಪು (ಶಂಗಪಾ. ೩೩-೨೦). ಹೊಯ್ಸಳ : ಸಳನೆಂಬ ಶಶಕ ಪ್ರಸಿದ್ಧಪುರದೊಳ್ ವಾಸನ್ತಿಕಾದೇವಿಯಂ ತಳೆದಾರಾಧಿಸುವಾಗಳ್ . . . ಪುಲಿ ಪಾಯೆ ಕಂಡು ಮುನಿನಾಥು ಕುಂಚಮಂ ಕೊಟ್ಟು ಪೊಯ್ಸಳಯೆಂದಂ ಬಳಿಕಾಯ್ತು ಹೊಯ್ಸಳವೆಸರ್ವಾ್ಗಂ ಯಾದವೋರ್ಬ್ಬೀಸರೊಳ್ (ಎಕ. VI. ಕಡೂ. ೩೨-೪ : 1206) ; ಶ್ರೀಮತು ಪ್ರತಾಪಚಕ್ರವರ್ತ್ತಿ ಶ್ರೀಹೊಯ್ಸಳ ವೀರಬಲ್ಲಾಳದೇವರಸರು ಉಣ್ಣಾಮಲೆಪಟ್ಟಣದೊಳು ಪ್ರಿಥ್ವೀರಾಜ್ಯಂಗೆಯುತ್ತಿರಲು (ಎಕ. IX. ಕಂಗಳೂ. ೨೦-೪; 1342) ; ಮಾಳವ ಮಗಧ ಕಾಶ್ಮೀರ . . . ಹೊಯ್ಸಳ ಮಲೆಯಾಳದೇಶಂಗಳೊಪ್ಪಿದುವು (ಸೋಮಶ. ೨-೦೧). ಹೊವಿಸಳ : ಸ್ವಸ್ತಿಶ್ರೀಪ್ರದಾಪಚಕ್ರವರ್ತಿ ಹೊವಿಸ[ಳ] ಶ್ರೀ ವೀರಬಲ್ಲಾಳದೇವರಸರು (ಎಕ. IV(R). ಕೃಷ್ಣರಾ. ೦೩-೨ ; 1308). ಹೋಸಣ : ಹೋಸಣ ಸ್ವಾಮಿಯ ಚಾರದಲಿ ಪೊಕ್ಕು ಹೊಬಿವಡುವ ಸಾಮನ್ತರ ಗಣ್ಡ (ಎಕ. XII. ತಿಪಟೂ. ೯೦-೦೯ ; 1169) ; ಹೋಸಣ ಗೋವಿಮಸಟ್ಟಿಯ ರಾಯನಗ್ರತನೂಜಂ ಬಲ್ಲಗೌಡಂ (ಎಕ. VII. ಶಿವಮೊ. ೯೩-೩೨ ; 1172 ?) ; ಸ್ವಸ್ತಿಶ್ರೀಮತು ಹೋಸಣ ವೀರಬಲ್ಲಾಳ ದೇವ (ಎಕ. VIII. ಸೊರಬ. ೦೯೩-೦ ; 1204). ಹೋಸಲ : ಕಾವೇರೀ ತೀರಗೇ ರಾಜ್ಯೇ ಮಹಾಹೋಸಲನಾಡಕೇ ಶ್ರೀರಂಗಪಟ್ಟಣಕ್ಷ್ಮಾಯಾಂ ಬಸುರ ವಾನಸ್ಥಳೇ ಸ್ಥಿತಂ (ಎಕ. III. ಮಂಡ್ಯ. ೩೩-೯೩ ; 1534). ಹೋಸಳ : ವಿಷ್ಣುವರ್ದ್ಧನಪ್ರತಾಪಹೋಸಳವೀರಬಲ್ಲಾಳದೇವರು . . . ಹಿರಿಯ ಬೆಳುಗಲಿಯ ಸರ್ವ್ವಬಾಧೆ ಪರಿಹಾರಾರ್ತ್ಥವಾಗಿ ಧಾರಾಪೂರ್ವ್ವಕ ವಾಗಿ ಬಿಟ್ಟರು (ಎಕ V. ಬೇಲೂರು, ೦೦೬-೩೦; 1173); ಶ್ರೀ ಪ್ರತಾಪಚಕ್ರ ವರ್ತ್ತಿ ಹೋಸಳ ಶ್ರೀವೀರನಾರಸಿಂಹದೇವರಸರು ಪ್ರಿಥ್ವೀರಾಜ್ಯಂಗೆಯುತ್ತಿರೆ (ಮೈಶಾ. ೧೯೩೬, ೯೭-೪; 1278). ಹೋಸಾಲ: ಹೋಸಾಲಬಲಾಲ ಲಿತಾಲಕ್ಷ್ಮೀಕಂದಸಂದೋಹವರ್ಧನಗಜ (ಮೈಶಾ. ೧೯೩೯. ೬೯-೦೨; 1276). [?]

**ಪೊಯ್ಸಳವಾರುಗ** (ನಾ). ಒಬ್ಬಾತನ ಹೆಸರು : ಅರಕೆಲ್ಲನ ಮಗ ಅವನ ಮಮ ಪೊಯ್ಸಳ ವಾರುಗಂ (ಮೈಶಾ. ೧೯೩೩, ೩೭. ೩; ಸು. 950 ?). [ಪೊಯ್ಸಳ + ವಾರುಗ (< ವಾರಗ) ]

**ಪೊಯ್ಸು**$_1$, ಹುಯಿಸು$_1$, ಹೊಯ್ಸು$_1$ (ಕ್ರಿ). ೧. ವಾದ್ಯವನ್ನು ಬಾಜಿಸುವಂತೆ ಮಾಡು : ಶುಭದಿನನಕ್ಷತ್ರಮುಹೂರ್ತದೊಳ್ ದಿಗ್ವಿಜಯಭೇರಿಯಂ ಪೊಯ್ಸಿದಾಗಳ್ (ಆದಿಪು. ೦೦-೯ ವ); ಪಲತೆಱದ ಪಟಿಗಳಂ ಪೊಯ್ಸಿಯುಂ . . . ಭೇರಿಗಳಂ ತಾಟಿಸಿಯುಂ (ಗದಾಯು. ೬-೧ ವ) : ಪಂಚಮಹಾಶಬ್ದಮನೊಲ್ಲದೆ ಬೇಂಟೆವಟಿಯಂ ಪೊಯ್ಸಿ (ಧರ್ಮಾಮೃ. ೬-೬೩). ೨. (ಡಂಗುರ ಬಾರಿಸುವುವರ ಮೂಲಕ) ಪ್ರಕಟಿಸು; ಸಾರಿಸಂ : ಗರ್ಭದೋರ್ದಂತೆ ಅವರ ತಾಯ್ಗೆ ಜೀವಂಗಳಂ ಕೊಲ್ಲ ದಂತಪ್ಪ ಬಯಕೆಯಾಗಿ ಅಭಯಘೋಷಣೆಯಂ ಪೊಬಲೊಳಂ ನಾಡೊಳಂ ಪೊಯ್ಸಿ ಜೀವಂಗಳ್ಗಭಯದಾನಂಗೊಟ್ಟು ಪುಟ್ಟಿದರಪ್ಪುದಱಿಂದವರ್ಗಭಯ ಘೋಷರೆಂಬ ಪೆಸರಾದುದು (ವಡ್ಡಾರಾ. ೯೩-೨೦). ಹುಯ್ಸು$_1$ : ೩. ಕೆತ್ತಿಸು ; ಕೊರೆಯಿಸು ; ಕಂಡರಿಸು : ಸುಬೋಜನ ಮಾವ ಜಯಿಸೋಜನು ವೀರಗಲ ಹುಯ್ಸಿ ನಿಲ್ಸಿದ ವೀರಗಲು (ಎಕ. III. ಮಳವ. ೦೩-೪; 1381). ಹೊಯ್ಸು$_1$ : ೧. ಹರುಷನ್ವಾಂತದಲಿ ಹೊಯ್ಸಿದನು ಕಮಲಜನಮಲಭೇರಿಗಳ (ಕೊರಟಾ. ೪-೬-೨೬). ೨. ನಂಬಿಗಿಂಬಿಯ ನಂಬಿ ಗೊಲಿದಿಹ ಶಂಭು ಗಿಂಭು ಸಮಸ್ತಭಕ್ತಾಡಂಬರಕೆ ಹೊಬಿಹೊಬಿಗಿಸುತ ಹೊಯ್ಸಿದನು ಡಂಗುರವ (ಶಿಕಪು. ೨೬-೨೨) ; ಅರಸ ಹದುಳಿಸು ನಿನ್ನ ಸೊಸೆಯರ ಕರೆದು ಸತ್ಯಸಕಟ ಹಸ್ತಿನಪುರದ ಗಾವಳಿ ಗಜಬಜಕೆ ಡಂಗುರವ ಹೊಯ್ಸಿಂದ (ಕುವ್ಯಾಕ. ೦-೪). ೪. ಪೆಟ್ಟುಕೊಡುವಂತೆ ಮಾಡಂ ; ಹೊಡೆಸು : ಕಷ್ಟವ ಬಗೆದ ಕೈಕೆಯ ಕಾಳುದೊತ್ತಿರ ಜಗಳದಲಿ ಹೊಯ್ಸಿ [ಪಾಠಾಂ. ಯ್ಯು]ವೆನು ಬಾಯನು (ತೊರರಾ. ೨-೩-೪). 'ಪೊಯಿಸು' ಪರಾ. [ಪೊಯ್$_1$ + -ಸು$_1$]

**ಪೊಯ್ಸು**$_2$, ಹುಯಿಸು$_2$, ಹೊಯ್ಸು$_2$ (ಕ್ರಿ). ೧. ಹೊಯ್ಯುವಂತೆ ಮಾಡು ; ಸುರಿಸಂ : ಚನ್ನಿಗರಂ ಮನ್ನಿಸಿಮೆಂದು ಬಡಿದು ಬಾಯ್ಸ್ಸಾವೆ ಪುಡಿಯಂ ಪೊಯ್ಸುಮಂ (ಧರ್ಮಾಮೃ. ೨-೬೭). ಹುಯ್ಸು$_2$ : ೧. ಮಲ ದೇಹಿಗಳ ದೂತರಿಂ ಹಿಡಿದು ಕೆಡಹಿಸುತ ಘಳಿಲನವದಿರ ಬಾಯೊಳಂ ಹುಡಿಯಂ ಹುಯ್ಸಿ ಮುಡಗಳಲೊದೆಸಿ ನರಕದೊಳು ಹಾಯ್ಕಿಸುಪನಂತಕಂ (ಬಿಕ್ಕಪು. ೪-೪-೨೪) ; ನಾನು ಅವರ ಹತ್ತಿರ ಹೋಗಿ ಕೈಗೆ ನೀರು ಹುಯ್ಸಿ ಕೊಂಡು ಅವರ ಕೈಯಿಂದ ಚಂಬು ತೆಗೆದುಕೊಂಡ ಮೇಲೆ ಅತ್ತೈಯನೇ . . . ಬೇದಿಬಾಗಲಿಗೆ ಹೋದರು (ಕಂಗಾಳ್ಯ. ೦೬೯). ಹೊಯ್ಸು$_2$ : ೨. ನೆಡಿಸು ; ಸ್ಥಾಪಿಸು : ಧರಣೀಪಾಲ ಸುಮುಹೂರ್ತದಲಿ ಹೊಯ್ಸಿ ದನಾದು ಹೊಬಿಗುಡಿಯ (ಕುವ್ಯಾಕೀ. ೦-೯೩). [ಪೊಯ್$_2$ + -ಸು$_1$]

**ಪೊಯ್ಸೆಂಡಾಡು**, ಹೊಯ್ಚೆಂಡಾಡು (ಕ್ರಿ). ಹೊಡೆದು ಅಥವಾ ಎಸೆದು ಹಿಡಿಯುವ ಚೆಂಡಿನ ಆಟವನ್ನು ಆಡು : ಸಿಡಿಲಂ ನುರ್ಗುವ . . . ಪೆರ್ಗಡಲಂ ಪೀರ್ವ ಕುಲಾಚಲಂದಳೆದು ಪೊಯ್ಸೆಂಡಾಡು ವಾದಿತ್ಯನಂ ಪಿಡಿದಿವಾರ್ಪುಳ್ಳ ಗಣಾಧಿನಾಥರೊಡನೇಳ್ಗೆಂದರ್ ಮಹೋತ್ಸಾಹದಿಂ (ಜಾತಂ. ೩-೦೯). ಹೊಯ್ಚೆಂಡಾಡು : ತಲೆಯ ಹೊಯ್ ಚೆಂಡಾಡು ತಿನ್ನಿವನೆಲುವನೆನುತೀಟಿಯಲಿ . . . ಹೊಯ್ದರು ಪವನ ನಂದನನ (ಕುವ್ಯಾಶ. ೦೦-೩೦) ; ಕುಣಿಯ ಕುರುಳು . . . ಮೇಲುದು ನಸುಜಾಱಿ ಮಣಿಹಾರವಲೆಯ ಹೊಯ್ಚೆಂಡಾಡುವ ಬಾಲಗಣಿಕೆಯರೊಪ್ಪಿದರಲ್ಲಿ (ಕುರಾಸಾಂ. ೨೬-೩೦). [ಪೊಯ್ಸೆಂಡು + ಆಡು$_1$]

**ಪೊಯ್ಸೆಂಡು**, ಪೊಯ್ಚೆಂಡು, ಹೊಯಿಸೆಂಡು, ಹೊಯ್ಚೆಂಡು (ನಾ). ೧. ಚೆಂಡನ್ನು ಹೊಡೆದು ಅಥವಾ ಎಸೆದು ಹಿಡಿಯುವ ಒಂದು ಬಗೆಯ ಆಟ : (೬). ೨. (ಹೊಡೆದು ಆಡುವ ಅಥವಾ ಎಸೆದು ಹಿಡಿಯುವ ಆಟದಲ್ಲಿ ಬಳಸುವ) ಒಂದು ಬಗೆಯ ಚೆಂಡು : ಮೇಗಣ್ಗೆ ಪಾಱಿ ಮತ್ತೆ ಬೀೞ್ದಿಂತು ಪೊಯ್ಸೆಂಡಿನಂತೆ ಪಲವು ಸೂಟ್ಸಿಬಱಿ ಬೀೞ್ದಿಚ್ಚಜರಾಜಿದೆ ನೆಲನು ಕರ್ಚೆ (ಜಾಕಾ. ೦೯೯). ಪೊಯ್ಚೆಂಡು : ೨. ಅದೆಲ್ಲ ಹಳೇಗಾಲದ ಹಳಸಿದ ಸಂಪ್ರದಾಯಗಳು ಎಂದವನು ಮತ್ತೆ ಮತ್ತೆ ಗಾಳಿ ಊದಿದ. ಅವರೂ ಅದನ್ನು ಕೇಳಿ 'ಪೊಯ್ಚೆಂಡಿ'ನಂತೆ ಉಬ್ಬಿದರು (ಕೃಹಿಶಾ. ೩೪). ಹೊಯಿಸೆಂಡು : ೨. ಅಂಜನಾದೇವಿ

ನಿಜಸಖಿವೃಂದದ ನಡುವೆ ಹೊಯಿಸಂಡಂ ಚಂದದೆ ಪೊಯ್ಯುತ್ತಿರಲು (ಅಂಜನ. ೪ ೬೧). **ಹೊಯ್ಸೆಂಡು** : ೨. ಗಂಡನಷ್ಟೆಷ್ಟು ಮನ್ನಿಸಿದನಷ್ಟಷ್ಟು ಹೊಯ್ಸೆಂಡಿನಂತುಬ್ಬಿ ಹಾಡುವಳು (ಕರಕ. ೧೦-೬೯). ' ಪೊಡೆಸೆಂಡು ' ಪರಾ. [ ಪೊಯ್$_1$ + ಸೆಂಡು ]

**ಪೊರಕಮಲೆಯ** (ನಾ). ಒಬ್ಬಾತನ ಹೆಸರು : ಮಲ್ಲಯಂ ಊರ ತುಱು ಹುಯಿ(ಲೊ)ಲೊಳು ತುಱುವಂ ಕಟ್ಟಿ ಕಾದು ಸತ್ತು ಸಗ್ಗಿಯಾದಂ ಪೊರಕಮಲೆಯ ಕಲ ನಿಲಿಸಿದೊ (ಕ್ಕ್ಕೆಇ. ೦೯೨೬, ೯೬-೯ ; 10ನೆಯ ಶಶ). [ ? ]

**ಪೊರಕೆ**, **ಪರಕೆ$_2$** (ನಾ). ಕಸ ಗುಡಿಸುವ ಸಾಧನ ; ಬರಲು : ಪ್ರಸನ್ನಳು ಹಠಾತ್ತಾಗಿ ಪೊರಕೆಯನ್ನು ಕೈಯಲ್ಲಿ ಹಿಡಿದಳು ! (ಕಬುಕ. ೦೨೩) ; ಕೈಯಲ್ಲಿದ್ದ ಪೊರಕೆಯನ್ನು ಕೆಳಕ್ಕೆಸೆದು ಆಕೆ ಕೋಣೆಯೊಳಕ್ಕೆ ಕಾಲಿಟ್ಟಳು (ಬಕಾಂಗ. ೨೯). **ಪರಕೆ$_2$** : ಆನೆಯ . . . ಬಾಲದ ತುದಿಯ ಕೂದಲುಕುಚ್ಚು ಕಂಡವರು ' ಆನೆ ಪರಕೆಯ ಹಾಗಿದೆ ' ಎಂದರು (ಬಿಕ್ಕಕ. ೬೬) ; ಈ ಪರಕೆಗಳನ್ನು ಉದ್ದವಾದ ಗಳುಗಳಿಗೆ ಕಟ್ಟಿಕೊಂಡು ಛಾವಣಿಯ ಧೂಳನ್ನೂ ಬಲೆಗಳನ್ನೂ ಗುಡಿಸಬಹುದು (ಗೃಹಶಾ. ೧೬೯). [ ದೇ. ॥ ತೆಲು. ಪೊರಕ ]

**ಪೊರಗಣ** ' ಪೊಱಗು ' ಪರಾ.

**ಪೊರಗು** ' ಪೊಱಗು ' ನೋ.

**ಪೊರಜಿ** ' ಪೊರಜೆ ' ನೋ.

**ಪೊರಜೆ**, **ಪೊರಜಿ**, **ಹುರಜಿ**, **ಹುರ್ಜೆ**, **ಹೊರಜಿ**, **ಹೊರಜೆ**, **ಹೊರ್ಜೆ** (ನಾ). (ಆನೆಯನ್ನು ಕಟ್ಟುವುದಕ್ಕೂ ರಥವನ್ನೆಳೆಯುವುದಕ್ಕೂ ಬಳಸುವ) ದಪ್ಪವಾದ ಹಗ್ಗ, ಸರಪಣಿ ಮುಂತಾದುವು : ಪೊನ್ನೆಯ ಮುಗುಳೆಕ್ಕಾವಳಿ ತನ್ನ ಕೊರಲ್ಗೆಸೆಯೆ ಮಧುಪರುಚಿ ಮದನವಶಾತ್ಮುನ್ನತ ಪೂವಿನ ಪೊರಜೆಯೊಳುನ್ನಂ ಸೊಗಯಿಸುತ್ತೆ ಕಣ್ಗೆಸೆದಿರ್ದಳ್ (ಶಾಂತಿಪು. ೮-೦೬) ; ರನ್ನದ ಪೊರಜೆ ನವಾಂಭೋದಮಾದ್ಯದ್ಗಜಕ್ಕಿಕ್ಕಿದುದೋ ಪೇಱಿಂಬಿನಂ ಕಣ್ಗೆಸೆದುದು ಶಬಲಚ್ಛಾಯೆಯಿಂ ಶಕ್ರಚಾಪಂ (ಶಂಕರಶ. ೬-೧೯೩) ; ಸರಸಿಜಶಂತು ಕಿಂಶುಕದ ಉತ್ಪಲವೇಱಿದ ಕಯ್ಗೊಳಂಗಳಶಂ ಪೊರಜೆಗಳಾಗೆ (ಅನಂಪು. ೬-೦೯). **ಪೊರಜಿ** : ಪೊರಜಿಯೆ ಪರಿವೇಷಮೆಂಬಂತೆ ಕೆನ್ನೆಯೊಳಿಳಿದ ಮದವೆ ಲಕ್ಷದಂತೆ ಕರದ ತುಷಾರಾಂಬು ಚಂದ್ರಿಕೆಯಂತೆಸೆದಿರೆ ಶಶಿಯಂತಿರ್ದುದಾ ಗಜ (ತ್ರಿಶಷ್ಟಿ. ೨೬-೨೦) ; ರನ್ನದ ಪೊಗರುಂಬ ಬೆಳ್ಳಿಯ ಪಕ್ಕರೆ ಚಿನ್ನದ ಪೊರಜಿ ಮೆಱೆಯಲು . . . ಮನ್ನಣೆಯಾನೆಯಿದ್ದುದವು (ಶಬರಶಂ. ೦೦-೨೯). **ಹುರಜಿ** : ಬಸವನ ಆಭರಣದ ಲೆಖ್ಖ . . . ೨ ನೂಲುಹಗ್ಗದ ಹುರಜಿ (ಎಕ. XIV, ಪಂಪವ. ೨೮೭-೬ನೇ ಸಾಲು ; ಸು. 1849). **ಹುರ್ಜೆ** : ಬಸವನ ಆಭರಣದ ಲೆಖ್ಖ . . . ೪ ಕಬ್ಬಿಣದ ಹುರ್ಜೆ ಬಳೆ (ಎಕ. XIV, ಪಂಪವ. ೨೮೯-೬ನೇ ಸಾಲು ; ಸು. 1848). **ಹೊರಜಿ** : ಮನಸವೆಂಬ ಹೊರಜಿಯು ಕರಣಾಗಳೆಂಬ ಕಾಲಾಳ್ಗಳಿಂ ಪಿಡಿಸಿ ಸುಬುದ್ಧಿಯೆಂಬ ಭೂಮಿಯಲ್ಲಿ ಆನಂದವೆಂಬರಸು ರಥವಾ ನಡೆಸಿ (ಶಿವತಂ. ೨೬೦-೦೭೮೬) ; ಹಿಂಡಿ ಹಿಳಿವ ಕೆಡಹುವ ಹೊರಜಿ ಹೊಸೆವ ತಿರುಹುವ . . . ರೌರವಂ ಭಯಂಕರವಾದುದು (ಸಿದ್ಧರಾ. ೮-೨೯). **ಹೊರಜೆ** : ಆ ಸಮರಸಂಭ್ರಮದೊಳ್ ಹೊರಜೆಯೊಳ್ ಕಾಲ್ಗೋದು ನಿಂದ . . . ಗಜವ (ಅನಂಪು. ೦೯ ೬ ಪ) ; ಹೊರಜೆ ಹೋಕ್ಕಳ ಗಂಟೆ ಡಕ್ಕೆಯ . . . ಕಿಂಕಿಣಿಗಳಿರದೆಯ್ದೆ ತಳರ್ದವು ಕುಲಗಿರಿಗಳಂತೆ (ಕುಮಾರರಾ. ೩-೩೦) ; ಕನಕಘಂಟೆಗಳುಲಿಯೆ ಹೊರಜೆಯ ತನತನಗೆ ಪಿಡಿದಡರಿ ಪೂರ್ವಾಸನವ ವೆಂಠಣಿಸಿದರು ರಾಜಾರೋಹಕವ್ರಾತ (ಕುಮ್ರಾಭಾ. ೯-೬೦). **ಹೊರ್ಜೆ** : ಜಿನಬಿಂಬಾಂಕಿತ ಅಮೂಲ್ಯರತ್ನನಿರ್ಮಿತ ೨೪ ಘಂಟೆಗಳಂ ಮಾಡಿಸಿ ಅದಕ್ಕೆ ಚಿನ್ನದ ಹೊರ್ಜೆಯಂ ಕಟ್ಟಿಸಿ (ಶ್ರೀರಾಜ ೨೨೩).
[ದೇ. ॥ ತಮಿ. ಪುರಚ್ಚೈ, ಪುರೋಚ್ಚೈ]

**ಪೊರಜೆವಿಡಿ** (ಕ್ರಿ). (ಆನೆಗೆ ಕಟ್ಟಿರುವ) ಹಗ್ಗವನ್ನು ಹಿಡಿ : ಮದೇಭಂಗಳನಾರ್ದು ಬಿಟ್ಟಿರ್ಪ್ಪ ನಿಷಾದಿಗ[ಳಱ]ಯ ಪೊರಜೆ[ಶಾಶಾಂ.ಬಿ] ವಿಡಿದು ಕೊರಲ ಬಳಿಗಳೊಳೆ ಕಾಲ್ಗೋದು ಪರಿಯಿಸುವ ರಸ್ತಾರುಗರುಮಂ (ಶಂಕರಶಾ. ೦೨-೬೦ ವ). [ಪೊರಜೆ + ಪಿಡಿ$_1$]

**ಪೊರಟು$_1$** (ನಾ). ಮೋಸ ; ದ್ರೋಹ : ಪುಸಿಗಂ ಪೊಱ[ರ]ಟೆಗಂ ಮಾಯೆಗಂ ಮಱವೆಗಂ ಕಳವಿಂಗಂ ಕಪಟಕ್ಕಂ . . . ಸೊಱಹಿಂಗಂ ಇಂಬುಗೊಡದೆ (ಜಿನಮಂ. ೬೨-೦೦). [ದೇ.॥ ತಮಿ. ಪುರಟ್ಟು]

Δ **ಪೊರಟು$_2$** ' ಪೊಟ್ಟರೆ ' ನೋ.

**ಪೊರಡು** ' ಪೊಱಮಡು ' ನೋ.

**ಪೊರಣೆಮೊಗೆ** (ನಾ). ಒಂದು ಊರಿನ ಹೆಸರು : ಮಾರಿಜವಳಿ ಪೊರಣೆಮೊಗೆ ಕಿಟ್‌ಕೆಱ ಗುಡಗತಾಣವಳ್ ನೊಕ್ಕಿಗೋಡು (ಕ್ಕ್ಕೆಇ. ೦೯೦೮, ೦೦ ; 700). [?]

**ಪೊರತು** ' ಪೊಱತು ' ನೋ.

**ಪೊರಪಾಳೆಯ** ' ಪೊಱಪಾಳೆಯ ' ನೋ.

**ಪೊರಪು** ' ಪೊರೆಪು ' ನೋ.

**ಪೊರಪೊಣ್ಮು** ' ಪೊಱಪೊಣ್ಮು ' ನೋ.

**ಪೊರಮಡು** ' ಪೊಱಮಡು ' ನೋ.

**ಪೊರಯಿಂಕೆ** ' ಪೊಱಯಿಂಕೆ ' ನೋ.

**ಪೊರವಕ್ಕ** (ನಾ). ಒಬ್ಬಾಕೆಯ ಹೆಸರು : ಪೊರವಕ್ಕನುಂ ಸಿಮ್ಬಕ್ಕನುಂ ಪಾಱಿಯಕ್ಕನ ಕೆಳದಿಯೆ ಪುಱಯಣ್ಣನೀ ಧರ್ಮ್ಮಂ ನಡಸಿಮಸು × × × (ಎಕ. VIII, ಪಗರ. ೯೩-೦೩ ; ಸು. ೯೫೦). [? + ಅಕ್ಕ$_1$]

**ಪೊರವಾರ್** ' ಪೊಱಮಾಱು$_2$ ' ನೋ.

**ಪೊರವಾರ** ' ಪೊಱಮಾಱು$_2$ ' ನೋ.

**ಪೊರವಾರು** ' ಪೊಱಮಾಱು$_2$ ' ನೋ.

**ಪೊರಸು**, **ಹೊರಸು$_4$** (ನಾ). ಹಗ್ಗ ಅಥವಾ ನುಲಿಯಿಂದ ಹೆಣೆದ ಮಂಚ; ನೂಲುಮಂಚ : ಕೂಸಂ ಮಿಸಿಸಿ ಮನೆಯ ಮುಂದೊಂದು ಪೊರಸಿನ ಮೇಲೆ ಪಟ್ಟಿರಿಸಿದಾಗಳ್ (ಶಂಹಶಾ. ೬-೯ ವ). **ಹೊರಸು$_4$** : "ಹೊರಸು ಖಟ್ವಮೆನಿಕ್ಕು" (ಶುಂಗರಾ. ೬೦-೦೩) ; ಲಗ್ನಕ್ಕೆ ಷಟ್ ತ್ರಿನವ ದ್ವಾದಶಾಲಯಂಗಳ್ ಹೊರಸಿಂಗವು ನಾಲ್ಕು ಕಾಲ್ಗಳ್ (ಶಾಕಶ. ೯-೦೬) ; ತನಯಂ ಪಡೆತಂದ ವಸ್ತುವ ನೋಱ್ಪೆಂದತಿಸಂಭ್ರಮದಿಂದಿದಿರಂ ಬಂದು ಹೊರಸಿನ ಕಾಲ್ಗಳಂ ಕಂಡು (ಶುಕ್ಕ್ರಸ್ರ. ೦೨-೦೩ ವ) ; ಕಂಡಕಂಡವರು ಎಱಲ್ಕೆ ಕೈಲಾಸ ರಂಡೆಗು ಹೊರಸೆ (ಸರ್ವಜ್ಞ. ೬೯೦). [ ? ]

**ಪೊರಳ್**, **ಪೊರಳು$_1$**, **ಹೊರಡು$_2$**, **ಹೊರಳ್**, **ಹೊರಳು$_1$** (ಕ್ರಿ). ೧. ಉರುಳಾಡು ; ಉರುಳು : "ಪೊರಳ್-ಲಾಠನೇ" (ಶಮಿಣ) ; ಪೊರಳೆ ವಾರಿಧಿಗಳ್ ಕಲಂಕಿದುವು[ರ್ದ ಮೆ]ಯ್ಯನುದಗ್ರಮಂದರಮಂದಲುಗಿತ್ತು . . . ದಾಡೆಗುಟ್ಟೆ ಕಟಲ್ದು ತಾರಗೆಗಳ್ ನಭಂಬೆರ[ಸು] ಬಿಟ್ಟುವು ಪೆಂಪಿದೇಂ ಪಿರಿದಾಯ್ತೊ ದೈತ್ಯವರಾಹನಾ (ಶಂಕಶಾ. ೯-೦೩) ; ಬಡಗೊಂದೆಯಂತೆ ದಡದಡಿಸುವರ್ ಪಾವಿನಂತೆ ಪೊರಳ್ವರ್ (ಧರ್ಮಾಮೃ. ೩-೯೦). ೨. ತಿರುಗಂ : ಚಲಿಸಂ : ಕಸಕಳಿಯಂತೆ ನಾಲಗೆ ಪೊರಳ್ವುದು ರಾಜಸಭಾಂತರಾಳದೊಳ್ (ಅಂಕ. ೨-೦೦) ; ನುಡಿವೊಡೆ ನಾಲಗೆ ಪೊರಳದೆ ಕಿಡುಗುಂ ನೆಱೆ ಮೂಗನಾಗಿ ನಮೆಗುಂ (ಧರ್ಮಾಮೃ. ೬-೦೬೨) ; ಪಲಕಾಲದ ಪುಣಸೆಯ ಪಣ್ಣ ಲೇಹ್ಯಮಂ ಮೂಡೆ ಸನ್ನಿಪಾತಜ್ವರದಿಂ ಸಲೆ ಪೊರಳದಿರ್ದ ನಾಲಗೆಗೆ ಲೇಸನೀಗುಂ (ಕಲ್ಯಾಕಾ. ೩-೩೦). ೩. ಜಾರು ; ಸರಿ : ಮುದ್ದುಮೊಗಂ ಪೊರಳ್ವ ಮುಂಡೆಱಗು ಕಿವುಟ್ತು ಪೀರ್ವ ಮೊಲೆ ದಟ್ಟಡಿಯೊಳ್ಪರಿದೋಡುವಂಗಣಂ ನೆಱೆ ತನಗೊಪ್ಪುವರ್ಭಕನನೂರ್ವನಾಂ ಪಡೆವಂದಮಾವುದೋ (ಸುಕುಮಾ. ೯-೯೯). ೪. **ಬೇರೆ ದಿಕ್ಕಿಗೆ ತಿರುಗು** :

ಬೆಟ್ಟದ ಮೇಲ್ ಪೊರಳೆ ಬನ್ದು ಮೂಡಾಯ್ ಸಿ(ಸೀ)ಮೆಯುಳ್ ಕು(ಕೂ) ಡಿತ್ತು (ಎಇ. XVIII, ೩೩೯-೨೫ ; ೫ನೆಯ ಶ) . **ಪೊರಳು₁** : ೧. ರಂಗಮಂಟಪದೊಳಗೆ ಪೊರಳುತಂ ಮುಂದುಗೆಟ್ಟುಜುಪುಗೆಟ್ಟಲ್ಲಿಯೊಜಲುತಂ (ಕ.ಶ. ೩೮. ೦೯೭. ೦೯) ; ಮಡುವಿಸಂ ಪೊಣಿಮುಟ್ಟ ಮಣಿಮಿನಿಸುತೆ ಕೆಲಸಿದಿಸಿದು ಪೊರಳೆ ಬರುದ ಬೆಂಠಿಯಿಂ ಬೆಂದು ಕತಹರವಸಲೋದರಮುಣಿಯರ್ (ತಂಶ. ೦೯. ೯೩) ; ಸರಸಿಜಗಂಧಿಯ ದಿವ್ಯಾಂಗಲಾವಣ್ಯಕರಧಿಯೊಳ್ಳಿರವಿಗರಕ್ಷಿ ಪರಮಿನಗಳು ನೆಜಿ ಪೊರಳುತ ತೆರಳುತ ಮರಳೆ ಮುಳುಗುತೊಪ್ಪಿದುವು (೪೦ಶಂ. ೯. ೯೩). ೨. ಧರೆಯೊಳು ನಟ್ಟ ದಿಟ್ಟಯಲಂತಧರದೆ ಪೊರಳುವ ತುಬಿನಾಲಗೆಯ ಬೆರಳಲುಕದೊಳಾಂದೋಳಿಪ ಮುಸ್ತಕದರಳುಗ್ಗುಬಲಿಯೊಪ್ಪಿದಳು (೪೦ಶಂ. ೯-೦೩೯). **ಹೊರಡ್ತು₂** : ೧. "ಹೊರ[ಶಾಶಂ. ದ]ಡು –ಪರಿಲುಠನೇ (ಹೊರಳು)" (ಶಬ್ದಾ). **ಹೊರಳ್** : ೧. ಮುಂದಿವ ಬಿಡಿಸುವ . . . ಹೊರಳ್ವ ತನು ಹೋರಟಿಯ ಸತ್ಯೋತ್ಕರುಷ ಸರಿಯನೆ ಶಂಭುಶಿಷ್ಯಗೆ ಪರಿವಿಡಿಯ ತೋಜಸುವುಲಿದ್ದನು (ಶುಪ್ಪಾ೫. ೬-೫೦) ; ನಾ ಶಿವಿದ ಖಡ್ಗಕೆ ನರನ ಮೈ ಲವಲಮಿಸಲಡಿವೋಲಾಗಿ ಹೊರಳ್ವರೆ ಧನ್ಯ ತಾನು (ಶುಪ್ಪಾ೪. ೬-೯೦). **ಹೊರಳು₁** : ೧. [ಚೆನ್ನಮಲ್ಲಿಕಾರ್ಜುನನಿಜಿದಲಗು] ಒಡಲಲ್ಲಿ ಮುಜಿದು ಹೊರಳುವೆನ್ನಳಲನು ನೀವೆತ್ತ ಬಲ್ಲಿರೇ ಎಲೆ ತಾಯಿಗಳಿರಾ (ಶುಹಾರೇ. ಬ. ೧೯೦-೩೦೯) ; ಸೆರೆ ಬಿಗಿದು ಗದುಗದಿಸಿ ಬಿಕ್ಕುತೆ ಬಿದ್ದು ಹೊರಳುತ್ತಳುತ್ತಗಲಲಾಜಿದೆ (ಚಾಕ. ೩-೨೦) ; ಬಂದು ಭೀಷ್ಮನ ಚರಣಸೀಮೆಯಲಂದು ಕಾಯುವ ಕೆಡಹ ವಿಗತಾನಂದ ಭೂಪತಿ ಹೊರಳಿದನು ಹೇರಾಳಶೋಕದಲಿ (ಶುಪ್ಪಾ೦೯. ೦೦-೦೯). ೨. ಪರಕೆ ಬಾಹಿರನಾಗಿ ನಾನಾಮೋನಿಯೊಳು ಸುಳಿದು ಹೊರಳುವನುವನು ಕೃಷ್ಣದೇವನು ಕರುಣಿಸಿದನೇ (ಶುಪ್ಪಾ೦೯. ೩-೨೯). ೩. ಭೀಮ ಬದ್ದನು ತೊಡೆಯ ಮೇಲಿಂದೀ ಮಹಿಗೆ ತಚ್ಚೈಲಶಿಲೆ ನಿರ್ನಾಮವಾದುದು ಹಸುಳೆ ಹೊರಳಿದು ಬಿದ್ದ ಭಾರದಲಿ (ಶುಪ್ಪಾ೩. ೯-೩೩). ೪. ಹೊರಳಿ ನೋಡು ಮರಮರಳಿ ನೋಡು ಒಳಗರಳಿ ನೋಡು ನೋಟ (ಅರಕು. ೯೦೪-೦೦) ; ಇರುಳೇ ಹೊರಳಿತು ಹಗಲೇ ಮರಳಿತು ಚಿಗುರೆಲೆ ಹೂವಿಗೆ ಹಾಸು (೫೦ಮು. ೦೦-೦೦). ೫. ಹಿಂತಿರುಗು ; ಮರಳು : ನಂಜಮ್ಮ ಹೊನ್ನ ತಳಿಗೆಯನ್ನು ಎತ್ತಿಕೊಂಡು ಸೆರಮನೆಯಿಂದ ಹೊರಳಿದಳು (ಚಾತುಕ್ಕ. ೪೦).

[ದೇ. ೩ ತಮಿ. ಒರಳ್, ಪುರಳ್ ; ಮಲ. ಒರಳು ; ಪುರಳು, ತುಳು. ಪುರಲು, ಪೊರಲು, ಪೊರಡು, ಹೊರಳು ; ತೆಲು. ಪೊರಲು, ಪೊರ್ಲು]

**ಪೊರಳನ್ವಯ** (ನಾ). [ಜೈನ] ಯತಿಗಳ ಒಂದು ಶಾಖೆ : ಸ್ವಸ್ತಿಶ್ರೀ ಅರಿಯುರ ಪನ್ನಿರ್ವರು ಮೂ × × × ಯ್ಯಸ್ಲ ಮೊಜಮುನಿಜಿಸಿದಾಣಾವೆಯರುಂ ಪೊರಳನ್ವಯರುಂ × × × ಗಣಸಾಗರತಮ್ಮಡಿಗಳ್ಗೆ ಕೊಟ್ಟ × × × (ಎಕ. IV, ಗುಂಡ್ಲುಪೇ. ೯೯-೧೩; ಕು. 760). [? + ಅನ್ವಯ]

**ಪೊರಳೆ**, ಹೊರಳಿ, ಹೊರಸೈ (ನಾ). ೧. ಗುಂಪು; ಸಮೂಹ; ರಾಶಿ : ತಾವರೆ ಮೃಣಾಳನಾಳದ ಪೊರಳಿಯಂ ಪೊರಳ್ದು ತರ್ಕಯಿಸಿಯುಂ (ಅರ್ಜಣ. ೩-೨ ವ); ಕೆಡೆದ ಕರಿಗಳ . . . ಮಡಿದ ಕುದುರೆಗಳ ಪೊಡೆಗಲ್ಲ ಪೊರಳಿಗಳೊಳಗೆ ಕಡಿದ ಕೈಕಾಲ ನರರಟ್ಟೆಗಳ ತುಂಡುಗಳ ಮರಮಟ್ಟೆಗಳನೆಳೆಯುತ (ಕೈಜಿಶಾ. ೨೨ ೨೩). **ಹೊರಳಿ** : ೧. "ಬಂಬಲ್, ತುಜುಗಲ್ . . . ಹೊರಳಿ . . . ಗೊಂದಣ(ಉಂಡಲ್)— ಈ ೪೦ ಸಮೂಹಂ" (೪೬ಕಾ. ೩೩-೨೨೨); ಇರುಳ ತಿರುಳಿನ ಹೊರಳಿಗಾ ತರಣಿ ಕಿರಣ್ವಂತೆ ಸರಳ ತೆರಳಿಕೆಗೆ ಮರಳಿತು ಕರುಳ ಸುರುಳಿಯೊಳು ಹೊರಳುತ್ತ . . . ತರಕಚಿತ್ರದ ಹಂದಿ ಮರಳಿ ಕಾನನಕೆಯ್ದಿತು (ಹಕಾ. ೩-೩೦); ಇಂದುಕಳೆಯ ಸಂದಣೆಯಂತೆಯುಂ ಅರಲ ಸರಲ ಹೊರಳಿಯಂತೆಯುಂ . . . ವಿಲಾಸದಿಂ ಬರ್ಪ ವಿಲಾಸಿನೀ ಜನದ ನಡುವೆ (ದಳು. ೬-೩೦ ವ) ; ಗಿರಿಯ ಮುತ್ತಿದ ಮಿಂಚುಬುಳುವಿನ ಹೊರಳಿಯಂತಿರೆ ಹೊನ್ನ ಬರಹದ ಸರಳು ಮೆಜೆವುವು (ಶುಪ್ಪಾಶ್ರೀ. ೩-೨೩).

೨. ಆಧಿಕ್ಯ ; ಹೆಚ್ಚಳ : ಪರುಷದ ಹೊರಳಿಯಲಿ ಹೊಡಕರಿಸಿ ಚಿತ್ತವ ತಿರುಹಿ (ಶುಪ್ಪಾ೯. ೬-೬೯). **ಹೊರಳಿ₂** : ೧. 'ಹೊರಳಿಗಡಿ' ಪರಾ. ೩. ಹೊರೆ ; ಮೂಟೆ : ದೇವಾಂಗವಸ್ತ್ರಂಗಳ ಹೊರಳಿಯಂ ಕೈಕೊಳ್ಳಿ (ತಂಶ. ೩೬-೦೦).

**ಪೊರಳಿಸು**, ಹೊರಳಿಸು (ಕ್ರಿ). ೧. ಉರುಳಾಡುವಂತೆ ಮಾಡು ; ಉರುಳಿಸು : ಪರಿಭವರಜದೊಳ್ ಪಗೆಯುಂ ಪೊರಳಿಸಲುಂ . . . ತಕ್ಕುದು ನೀಂ ಪೊರಳಲ್ಕಕ್ಕುದೆ ಮದೀಶ ಭೂಪಾಂಸುವಿನೊಳ್ (ಆಗಂ. ೬-೬೩). **ಹೊರಳಿಸು** : ೧. ಸಕ್ಕರೆಯ ತಳಿಮುದ್ದನು ಅರೆದದಜಿಳಿನಿ ಸಕ್ಕಿಮಿಟ್ಟಕೈಕೊಂಡದಂ ಹೊರಳಿಸಿ ಬಿಳಿಕ್ಕ ತಿಳಿದುಪ್ಪದೊಳು ಕಿಂಪಾಗಿ ಹುರಿದು (ಸೂಶಾ. ೪-೬೦). ೨. ತಿರುಗಿಸಂ ; ಆಡಿಸು : ನಾನು ಕೋಣೆಯೊಳಗೆ ದೃಷ್ಟಿ ಹೊರಳಿಸಿದೆ (೫೦ಜಾ. ೦೦) ; ಅವನನ್ನೇ ನಿಟ್ಟಿ ಸುತ್ತಿದ್ದ ಮಾಲುಗಣ್ಣುಗಳನ್ನು ಅತ್ತಿತ್ತ ಹೊರಳಿಸದೆಯೆ ಅವಳು ಕಲ್ಲಿನಂತೆ ನಿಂತಳು (ಕೃಷು. ೦೯೦). [ಪೊರಳ್ + –ಇಸು₁]

**ಪೊರಳ್ಕು₁** 'ಪೊರಳ್' ನೋ.

**ಪೊರಳ್ಕು₂** 'ಪುರುಳ್' ನೋ.

**ಪೊರಳ್ಚು**, ಹೊರಳಚು, ಹೊರಳ್ಚು (ಕ್ರಿ). = ಪೊರಳಿಸು ೧: "ಪೊರಳ್ಚು –ಲುಠನೇ" (ಶಬ್ದಾ) ; ಅಸ್ವಾನೀಕಂ ಕಡಿಯಿಂ ಕೆಂಡದಿನೇಂ ಪೊರಳ್ಚಿದುದೊ ತನ್ನೇಘಾಮುರಾನೀಕಮಂ (ಅಂತ್ಯ. ೦೪-೬೬), ದುರ್ಯೋಧನ ನೊಕ್ಕಲಂ ಪುಡಿಯೊಳ್ ಪೊರಳ್ಚುವಂತೆ ಪಾಸಂಗೆಯುಂ ಪೊರಳ್ಚಿ (೫೬ಶಾ. ೬-೩೦ ವ) ; ದ್ರುಪದಾತ್ಮಜಾತನೋವದೆ ಪುಡಿಯೊಳ್ಪೊರಳ್ಚಿ ತಲೆಯಂ ತೆಗೆವಲ್ಲಿ ಪಿನಾಕವೆತ್ತವೋದುದೊ (ಗದಾಯು. ೯-೩೦). **ಹೊರಳಚು** : ಹೊಕ್ಕಾನೆಗಳು . . . ಲಾಳವುಂಡಿಗೆಯ ಸರಿಸಗುಂಡಿನೊಳೊಂದನೊಂದಿಟ್ಟೊರಸಿದವು ಕೊಡಹಿದವು ಸೀಳಿದು ಹೊರಳಚಿದವಜಿಗಿದವು ನಾನಾವಿಧದ ಕೊಲೆಗಳಲಿ (ಶುಪ್ಪಾ೦೯. ೯-೬೦) ; ಹೊಡೆದರಿಜಿದರು ಹೊರಳಚಿದರರಡಗೆಡಹಿದರು ಕೋಲಾಹಳದ ಬಲುಗಡಿಯ ಭಟರಬ್ಬರಿಸಿ ಸದೆದರು ಸೂಳುವಾಳಿನಲಿ (ಕೂರಾ. ೩-೬-೨). **ಹೊರಳ್ಚು** : ತೆರಳ್ಚಿ ಮರಳ್ಚಿ ಹೊರಳ್ಚಿಯುಟನಿಜವು ಜೀವ ಹತ್ತುತಜಿನೆ ಪ್ರಾಣವೆಂಬರಲ್ಲ ಹುಸಿಯುನಂತಜೀವ (ಶಾಪಂ೫. ೬-೬೦). [ಪೊರಳ್ + – ಚು₁]

**ಪೊರಳ್ನುಡಿ** (ನಾ). ದ್ವಂದ್ವಾರ್ಥವುಳ್ಳ ಮಾತು ; ಎರಡರ್ಥ ಬರುವ ಮಾತು : ಆಡೊಡಿವು ಅರ್ಥಯಿಸಲಾಗದಸ್ಪಷ್ಟತೆಯ ಪೊರಳ್ನುಡಿಗಳಿನ್ ಮರಲ್ಚುವಯ್ ಏಗಳುಂ (ಅಕ್ಕಶ್ರ. ೩೬-೬೩೩). [ಪೊರಳ್ + ನುಡಿ₂]

**ಪೊರಿ** 'ಪುರಿ₁' ನೋ.

**ಪೊರಿಗೆಜಿ** 'ಪುಲಿಗೆಜಿ' ನೋ.

**ಪೊರಿಮಯ್ಯ** (ನಾ). ಒಬ್ಬಾತನ ಹೆಸರು : ಕುಪ್ಪಸೆಯ ಮಾನವನೆಯರ ಪೊರಿಮಯ್ಯ × × × ಕೇಸಿಮಾಣ ಕೇಣ್ಬಗಣ್ಣಾಳುಮದಟನಾಗಿ ನೆಲ ಕುಪ್ಪಿಸೆಯನಿಜುಯಿಮೆನ್ಸು ಕೇಣ್ಬಿಗಂ ತನ್ನಾಳ್ ಬೆಸಮೋಟಿ (ಎಕ. VIII, ಸೊರಬ. ೬೬-೬ ; 912). [? + ಅಯ್ಯ₁]

**ಪೊರಿಸು** 'ಪೊಜಿಸು' ನೋ.

**ಪೊರು** 'ಪೊಜು' ನೋ.

**ಪೊರುಳ್** 'ಪುರುಳ್' ನೋ.

**ಪೊರುಳಜಿ** (ನಾ). ಒಂದು ಊರಿನ ಹೆಸರು : ಅಲಂತೂರ ಪೊರುಳಜಿ ಪೆರ್ನ್ನಗರಾದ್ಯನೇಕ ಸಮರಮುಖಮುಖಾಹುತಪ್ರಹತಶೂರಪುರುಷಪಶೂಪಹಾರ (ಎಕ. IX, ದೊಡ್ಡ. ೬೬-೬೯ ; 517). [ ? ]

**ಪೊರೆ₁**, ಹೊರೆ₁ (ಕ್ರಿ). ೧. ಕಾಪಾಡು ; ರಕ್ಷಿಸು : "ಪೊರೆ–ಪೋಷಣೇ, ಉಪಸರ್ಗೇ ಚ (ಹತ್ತಿರ)" (ಶಬ್ದಾ) ; ರಾಮೇಶ್ವರ ಎಮ್ಬ ತೀರ್ಥದಾ ಮೊದಲೊಳ್ ಮೆಪ್ಪಿಕ್ಕಿ ಪೊರೆದ ಪನ್ನಿದಗಳನಿಜಿಯುಲ್ ಬನ್ದಲ್ಲಿ(ಲ್ಲಿ)

(ಆಜ. XI. ೧೨೮–೨೦ ; ೩೦೩); ಒಡವಳಿದಂಬರೇಚರರನನ್ವಿತಮಂತ್ರಿಸಮೂಹಮಂ ಮನಂ ಬಿಡೆ ಪೊರೆದಿಷ್ಟಬಂಧುಜನಮಂ ಕರೆದು (ಅರ್ಜು. ೨–೩೦); ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ ಪೆಣ್ಣಲ್ಲವೆ ಪೊರೆದವಳು (ಹರಿ. ೩–೭). ೨. ಪೋಷಿಸು : ಈತನಂಗಡಿಯುಲವಡಂ ಪೆಱಕಿ ತಿಂದು ಪಾಟ್ಸ್ರೆಂ ಬೈಕಂಗುಳಿ ಬೇಡಿ ಪೊಟ್ಟರೆಲ್ಲಮಂ ತೊಟಲ್ಲು ಬಸಿಱ ಪೊರೆವೊಂ (ಶಬ್ದಾ.ಕಾ. ೯೬. ೬); ಶನ್ನೊಡಲು ಪೊರೆಯಲಱಿಯದವನಾರುವಿಲ್ಲಂ (ಕಂಕಕಂ. ೩೦–೧೭); ಪೊರೆದೆಂ ಬಾಟವೆ ಪಂದಿ ನಾಯ್ಗಳೊಡಲಂ (ಸೋಮೇಶ. ೦೮). ಹೊರೆ$_1$ : ೧. ನೀನು ಹೊರೆವ ಯುಗಜುಗಂಗಳು ಒಂದು ತೃಣಮಾತ್ರವಾದ ಕಾರಣ ನಿನ್ನ ಹಸುವಕ್ಕಳವರೆನುತ್ತಿದ್ದೆನಯ್ಯ (ಅರ್ಜು. ೦೯೯–೧೦೦); ನೀವಿನ್ನಿದಂ ರಕ್ಷಿಪುದು ಹೊರೆವುದಿನಿತಂ ಬೇಡಿ ಪಡೆದ ನಾ ನಿಮ್ಮಲ್ಲಿ ಕರುಣಿಸೆನಗೆ (ಶಶಾ. ೯–೦೯); ನಿನ್ನ ಭೃತ್ಯನ ಹೊರೆವ ಪರಿಯಿದು ಕೃಷ್ಣ ಜಯಜಯ (ಕುಮಾರ. ೭–೦೭). ೨. ದೇಂದೊಡಲ ಹೊರೆವುದಕ್ಕೆ ನಾನಾಜಿ (ಬಸವ. ೩. ೦೯–೦೭); ಹಗೆದು ಕೈಯಲಿ ಸಾಯಲಾಱಿವು . . . ಹೊರೆಯಲಾಪೆವು ಬೆಂದ ಬಸುಱುಗಳ (ಕುಮಾರ.ಸ. ೦೭.೦೦); ಪ್ರಜೆಗಳಿಗೆ ಹೊಟ್ಟೆಯನ್ನು ಹೊರೆದುಕೊಳ್ಳುವುದೇ ದೊಡ್ಡ ಸಮಸ್ಯೆಯಾಗಿತ್ತು (ಶಿಲ್ಪ.ಪಾ. ೯೯೭).

[ದೇ.॥ ತಮಿ. ಪುರ; ತೆಲು. ಪ್ರೋಚು; ಕೋಲಾ. ಪುರ್ಅಯ್; ಪರ್ಜಿ. ಪೊರಿಪ್; ಗೊಂಡಿ. ಪೊರ್ವನಾ]

ಪೊರೆ$_4$. ಹೊರೆ$_4$ (ಕ್ರಿ). ೧. ಸೇರು; ಕೂಡು; ಬೆರೆ : ಪರಶಬ್ದಾಲಂಕಾರದ ಪಿರಚನೆಗಳ್ ನೋಟ್ಪೊಡೊಂದೆ ತೋರ್ಕೆಗಳಿಂತುಂ ಪೊರೆದಿರಲೊಂದೊಂದಱೊಳ ಪರಮಕಪಿಶಪ್ರಯೋಗಗತವರ್ಗಂಗಳ್ (ಕವಿರಾ. ೨–೯೬); ಆವ ಕಾಲಮುಂ ಕಿಡದುದಂ ಪಾಪದಿಂ ಪೊರೆಯದುದು ಸುಖಮನೊಡೆ ತಪ್ಪುದಂ ಕಿಸ್ಮಂ ತಾನಾದುದನಂತಪ್ಪ ಮೋಕ್ಷಸುಖಮನೆಯ್ದಿ (ಶಬ್ದಾ.ಕಾ. ೯೯–೬); ಎಡಬಿಡದುವಿನಂ ಪೊರೆದೊಳ್ಳಿಗಟ್ಟಿಯೊಳ್ ಕೊರ್ದರೆ ವೃದ್ಧರಾಜ್ಯಮುವದೇನೆಸಿದತ್ತೊ ನಭಶ್ಚರೇಂದ್ರನಾ (ಅಜಿತ. ೨–೨೯). ೨. ಮೆತ್ತಿಕೊಳ್ಳು ; ಅಂಟು ; ಹತ್ತು : ವಿಧುಮುಖಿ ಪೆಳ್ಳಪಲ್ಲನೆ ಮಧುದ್ರವಮಂ ಸವಿದೀಂಟುವಲ್ಲಿ ತನ್ನಧರದ ರಾಗದೊಳ್ ಪೊರೆದುದಂ ಮಧುಮಂ ಬೆಱಗಾಗಿ ನೋಡುತುಂ (ಜಗ. ೦೬–೦೦೬); ಅಡಿಗಡಿಗೆ ಪೊಡವಿಯೊಳ್ ಪೊಡೆದುಕೊಳ್ಳ ರಭಸದೊಳ್ ಪೊರೆದ ಪುಡಿಯನೊಡನೊಡನೆ ಬೆಮರ ಬಿಂದುಗಳ್ ನಾಂದೆ (ಧರ್ಮಾ. ೯–೬೦ ವ). ೩. ಬಳಿ ; ಲೇಪಿಸು ; ತೊಡೆ : ಕರಡಿಯ ತೋಲಂ ಕಜ್ಜಲಪರಾಗದಿಂ ಪೊರೆದು ಪಿಡಿದು ಜೇನೆಯ್ಯೊಳ್ ತಂದಿರಿಸಿದಪ್ಪೊಲರಸನಂ ಪಚಿನರಚನೆ ಬಳಸಿದುದತೀವತಮಮೊದವಿನಂ (ಶಾಂತಿ. ೬. ೦೨೭); ಚಂದ್ರಗಾವಿಯ ದುಕೂಲದ ಬೈತಲೆಗೆ ಪೊರೆದ ಚಂದ್ರರಜದೆಂಬ್ಬೇಯ ಶೃಂಗಾರಸಾರದಿಂ ಚಂದ್ರಶೇಖರನ ಪಟ್ಟದ ರಾಣಿ ನಮಿತಗೀರ್ವಾಣಿ ರಂಜಿಸುತಿರ್ದಳು (ಕಂಪ. ೩೭–೨೯). ೪. ಧರಿಸು ; ತೊಡು : ಪೊರೆದ ದುಕೂಲಮೊಂದಿನಿಸು ಪಾಸಿದೆ ಭಾಳದೊಳಿಟ್ಟ ಚಂದನಂ ತರಳಿದೆ (ಪಳ. ೦೦–೨೦). ೫. ನೆನೆಹಾಕು ; ನೆನೆಯಿಸು : ಪೊರೆದಿರ್ಪತ್ತೊಂದುದಿನಂಬರೆಗಂ ಪಾಲೊಳಗೆ ಬೆಳಲ ತಿರುಳಂ ನೆಟಲೊಳ್ ಪರಿತೋಟಿಸಿ ಬಱ್ಪ್ಪಿಟ್ಟೆಕ್ಷುರಸದೊಳಿಕ್ಕಿದೊಡೆ ಸದ್ಯಮದು ಪಾಲಕ್ಕುಂ (ಲೋಕೋ.ಶ. ೬–೯೭). ೬. ಬಳಿಯಲ್ಪಡು ; ಲೇಪನವಾಗು : ಚೆಱಿಯಿಪ ಪನದೇವತೆಯರ ಚರಣಾಲಕ್ತದೆ ಪೊರೆದುಮಪ್ಪುವು · · · ಚಂದಲಿರ್ದುಱುಗಲ್ (ಕಾದಂಬ. ೯೭). ೭. ಲೇಪಿಸಿಕೊಳ್ಳು ; ಬಳಿದುಕೊಳ್ಳು : ಕತ್ತುರಿಯನಂಗದೊಳ್ಪೊರೆದು ನೀಲಾಂಬರವನೊತ್ತಿ ಬಿಗಿದುಟ್ಟು (ಕರ್ನಾ. ೯–೬೨). ೮. ಉಲ್ಲಸಗೊಳ್ಳು ; ಆರಳು : ಶ್ರೀಪಧುವಿನಬೞಿಕೊರೆಕರ ಪೊರೆಯೆ (ಕೃ.ಪಾ. ೦೦–೦). ೯. ಅಗಲವಾಗು ; ಹಿಗ್ಗು : ಅಂತ ರ್ನಿರ್ಘೂರ್ಣಿತಾಪೂರ್ಣವನ್ನು ಪೇಗದೊಳ್ ಬೀಗಿ ಬಾವಂತ ಗಗ್ಗರಿಪ ಕೊರಲೊಳಬ್ಬರಿಸಿ ಪೊರೆದ ಸರೆಗಳೊಳಂ (ಧರ್ಮಾ. ೯–೬೦ ವ). ೧೦. ಸಿಂಪಡಿಸು; ಚಿಮುಕಿಸಂ; ತಳಿ : ಸುರಹೊನ್ನೆಯ ಬೀಜಂ . . . ಕಪ್ಪುರಮೆಂಬಿವಱಿಂ ಪೂವಂ ಪೊರೆದೊಡೆ ಪುಷ್ಪದ್ರವಂ ಮನೋಹರಮಕ್ಕುಂ (ಲೋಕೋಪ. ೭–೯೭). ಹೊರ್ಕೆ : ೧. ಅಱಿವು ಪಸ್ತುವೆಂದಡೆ ಒಂದು ಕುಱುಹಿನ ಹೊರೆಯಲ್ಲಿ ಹೊರೆಯದು ಇಂತೀ ಹೊರೆಯದೆ ಹೊರೆಯದ ಪರೀಕ್ಷೆ ಏಥ(ದ)ನಾಗಿ ಗಾರುಡೇಶ್ವರಲಿಂಗವನಱಿದವಂಗಲ್ಲದೆ ಸಾಧ್ಯವಲ್ಲ (ಸರ್ವಕ. ೦೦೦–೩೭೭); ತರುಣಿ ನಿಜತನುಪರಿಮಳದಲುಱಿ ಹೊರೆದ ಹೂವಿನ ದಂಡೆಯನು ನಿಜವರನ ಕೊರಳಲಿ ಹಾಯ್ಕಿದಳು (ಕುಮಾರ. ೦೩–೩೩); ಪರಿಮಳದ ಪದ್ಮದ ಪರಾಗದಿ ಹೊರೆದ ನಿಱಿದೆರೆಯುಬ್ಬುಗಳ . . . ಸೊಗಸಿನ ಸರಸಿಗಳವರು (ಕೋಶಲ. ೨–೭–೯). ೨. ಹೊರೆದ ರಕುತದ ಧಾರೆಗಳ ತುದಿಕರದೊಳೆಲೆಲಾವ ತಲೆಗಳುಬ್ಬಿಯೊಳೊರೆದ ನೆಣನಡಗಿನ ಮಹಾಗಜ ಪೊಗೆದುದರಿಬಲವ (ಕುಮಾರ.ದ್ರೋ. ೩–೨೯). ೩. ಹೊರೆದ ಕತ್ತುರಿಸಾರಣೆಯು ನವಪರಿಮಳದ ಪನ್ನೀರ ಚಳೆಯವ . . . ಧೂಪದ ಧೂಮಗಂಧೋತ್ಕರಸಮುದ್ರದೊಳದ್ದನೊಲ್ಲದೆ ಪಥಪ ಪಪಮಾನ (ಕೋಶಲ. ೦–೦೯–೩). ೧೦. ಪರಿಮಳದ ಕುಸುಮ ಪನ್ನೀರ ಧಳೆಯಂಗಳಿಂ ಹೊರೆದ ಮುತ್ತಿನ ರಂಗವಾಲಿ ಕಸ್ತೂರಿಗಳ ಪರಿವಿಡಿಯ ಕುಂಕುಮದ ಕಾರಣೆಗಳು (ರಾಜಶೇ. ೩೦–೩೮). ೧೧. ಹೊಂದು ; ಪಡೆ ; ತಾಳು : ಹೊರೆದುದಿಳೆ ಸೌರಭ್ಯಕೃತ್ಯೋತ್ಕರವನು (ಕೋಶಲ. ೦–೦೭–೩೯); ಪರನಾರಿ ಸೋದರನು ಪರಶತ್ರುದಲ್ಲಣನು ಕರ ಪಾಪಭಯವ ಹೊರೆವ ಗುಣಿಯಹ ನೃಪನಿಗೆ ಸ್ಥಿರವಿಹಳು ಲಕ್ಷ್ಮಿ (ಸರ್ವಜ್ಞ. ೭೨೭). [ದೇ.॥ ತಮಿ. ಮಲ. ಪೊರು]

ಪೊರ್ಕೆ. ಹೊರ್ಕೆ (ನಾ). ೧. ರಕ್ಷಣೆ ; ಆಶ್ರಯ ; ಆಧಾರ : ಒಂದು ಮೊಡಂಬಡಂ ಪೊರೆಯುಮಿಲ್ಲದರ್ಗಂಬುದನೆಯ್ದೆ ನಂಬಿ ನಾಡಂ ದಯಿಗೆಯ್ದು ನೀಂ ಕುಡುಮಿನಂ ಪೆಱತೇ ಪಡೆವಖಾತೊ ಪಳ್ಳಿರಲ್ಕೆಂದರ್ಗೆವು ದೊಳ್ಪು ನಿಲೆ . . . ಆಯ್ದುದಾದಮಂ (ಕಂಕಕಣ. ೯–೯೩); ಸೆರಗಂ ಬೆಱಗಂ ಬಗೆಯದೆ ಪೊರೆಯಿಲ್ಲದೆ ಕಲಿಯ ದಂಡೆಯಂ ನೂಂಕಿದವೊಲ್ ಪೊರೆದಾಳ್ದನ ಕಾರಣದಿಂ ಪರಿಹರಿಪುದು ಭೃತ್ಯನರ್ಥಮಂ ಪ್ರಾಣಮುಮಂ (ಗದಾಯು. ೨–೨೨). ೨. ಪಾಲನೆ; ಪೋಷಣೆ; 'ಪೊರೆಕ್ಕೆ' ಪರಾ. ಹೊರ್ಕೆ: ೧. ಕಾಯವಸ್ತುವೆಂದಡೆ ನಾನಾವಾಲಗುಣಂಗಳ ಹೊಲೆ(ರೆ)ಯದು ಜೀವವಸ್ತುವೆಂದಡೆ ತ್ರಿವಿಧಮಲದ ಹೊರೆ (ಸರ್ವಕ. ೦೦೦–೩೬೭); ಉಳಿದ ಮೂವರ ಕಳುಹಿದನು ೦ರುಪತಿಯ ಹೊರೆಗಾಗಿ (ಕುಮಾರ.ಗ. ೯–೨೬); ತೋಱ ನಿಜರೂಪವನು ಭೀತಿಯ ಬೀಱ ಕೌರವನೃಪರೊಳಗೆ ಮುರವೈರಿ ಬಿಜಯಂಗೆಯ್ಯಲಾ ಪಾಂಡವರ ಹೊರೆಗಾಗಿ (ಕುಮಾರ.ಗ. ೩ ೦–೩). [<ಪೊರೆ$_1$]

ಪೊರ್ಕೆ, ಹೆರ್ಕೆ, ಹೊರ್ಕೆ (ನಾ). ೧. ಹತ್ತಿರ; ಬಳಿ ; ಸಮೀಪ ; "ಪೊರೆ ಸಮೀಪಂ" (ಕರ್ಣಾಟ. ೩೨); ಬೆಟ್ಟದಾ ಮೂಡಾಪ್ ಪೊರೆವ ಬನ್ನುತುಟ್ಟಿದ್ದಾಗ್ಲೊಡ್ಡಿತ್ತು (ಕ್ಷೇಮ. ೦೯೩೭. ೩೩–೨೯; ಸು. ೫೫೦); ಪೋದಂ ಬಗೆ ಕದಡಿ ತಾಯ ಪೊರೆಗೆ ನೃಪೇಂದ್ರಂ (ಮುಕುಂದ. ೨–೬೦). ೨. ಉತ್ಸಾಹ; ಚೈತನ್ಯ ; ಆನಂದ : 'ಪೊರೆಯೇಱು' ಪರಾ. ೩. ಸಂಬಂಧ ; ನಂಟು : ಕೊರೆಯೊಳ್ ಪೊರೆಯಿಲ್ಲದ ಪರಲಲನೆಗೆ ಬಗೆಗುಡದ ಕಳ್ಪದುಱಿ ಪುಸಿಯದ ಕಾದಲಿಸಿ ವಿಷಯಂಗಳೊಳ್ ಪಂಬಲಿಸದ ಗುಣಮ್ಯದಣಾವ್ರತಂ ಜನಮಾತದೊಳ್ (ಶಾಂತಿಪು. ೦–೮೬). ೪. ಲೇಪನ : ಬಳಿಯುವಿಕೆ : 'ಪೊರೆಯಿಡು' ಪರಾ. ೫. ಬೆರಕೆ ; ಮಿಶ್ರಣ : 'ಪೊರೆಯಿಕ್ಕು' ಪರಾ. ೬. ಹೊಳಪು ; ಕಾಂತಿ : 'ಪೊರೆಯಿಡು' ಪರಾ. ಹೆರ್ಕೆ: ೧. ಅಲ್ಲಿ[ಂ] ಮೂಡಲು ಶ್ವೇತಪಾಷಾಣಮಂತಿ ಅಲ್ಲಿ[ಂ] ಬಡಗ್ಗಾ ಹೆರೆ ಈಶಾನ್ಯದಲಿ ಹುಪನಱಿ ಅದಱ ತೆಂಕಯಿಣ ಹೊರೆಯಿಂ ಪಡುವ ಪೊಗದ ಜಲಪ್ರವಾಹ(ಶಾಸ. IX–i. ೨೩೯–೯೯: 1148). ೨. 'ಹೆರೆಹೆಚ್ಚು' ಪರಾ. ಹೊರ್ಕೆ: ೧. "ಹತ್ತಿರಕೆ ಹೊರೆಯೆನಿಕ್ಕುಂ" (ಶಬ್ದ. ೦೦೭);

ಅವೆಜಿ ತೆಂಕಯಿಣ ಹೊರೆಯಿಂ ಪಡುವ ಮೊಗದೆ ಜಲಪ್ರವಾಹ (ಶಾಸ. IX-1, ೨೫೯–೯೯ ; 1148) ; ಕಿಚ್ಚಿನ ಕಿಂಡದಂತೆ ಹೊರೆಯಲ್ಲಿಪ್ಪೆಯಯ್ಯ (ಅಜಿತ. ೬೮–೨೬೩) : ಅಪ್ಸರಗಣಕಿಯರು ಕೋಪಾಳನ ತುದರು ವಾಸವನ ಸಿಂಹಾಸನದ ಹೊರೆಗೆ (ಉಜ್ಜ್ವಲ. ೬.೬೩). ೨. 'ಹೊರೆಹೆಚ್ಚು' ಪರಾ. ೪. 'ಹೊರಸ್ಸು' ಪರಾ. [<ಪೊರ್ಕೆ]

**ಪೊರ್ಕೆ, ಪರ್ಕೆ, ಪೆರ್ಕೆ, ಹರ್ಕೆ, ಹೆರ್ಕೆ, ಹೊರ್ಕೆ** (ನಾ). ೧. ಆವರಣ ; ಹೊದಿಕೆ ; ಆಚ್ಛಾದನ ; ಮುಸುಕು : ಎರಡು ಘಟಿಗೆಯಿಂದೊಳಗೆ ಪಾಸಿನ ಪೊರೆಯೊಳ್ ಪುಟ್ಟಿ ಇಂದ್ರಪ್ರತೀಂದ್ರ . . . ಲೋಕಪಾಲಾಹಮಿಂದ್ರತ್ವವೆಂದೀ ಮಹರ್ಧೀದೇವರಾಗಿ (ಶಕ್ತಾ.ರಾ. ೯೮–೩) ; ದಿವ್ಯತಳ್ಪತಳ್ಪದ ಪೊರೆಯೊಳಗೆ ತೊಳತೊಳತೊಳಗಿ ಪೊಜಿವಡುವವಳನೇಸಜಿ ಬಳಗದ ಬೆಳಗನೊಳಕೊಂಡು (ಅಜಿ. ೨–೬೦ ವ) ; ನಾರದನಿರದೆ ಗಗನತಳಕ್ಕೊಗೆದು ಮುಗಿಲ ಪೊರೆಯೊಳಡಂಗಿದಂ (ಕಂಕಶಾ. ೬–೨೦ ವ). ೨. ಪದರ; ಮಡಿಕೆ : ಪಾಲ್ಗಡಲ ನೊರೆಯ ಪೊರೆಯ ತೆರೆಯನನುಕರಿಸಿಯುವಲ್ಲ ದಕನದಂಶವಾತ್ರುಖಂಡನೀಯಕರಂಗಳನಿಸಿದ ಮಂದಕಂಗಳುಮಂ . . . ಉಣ್ಣ ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್ (ಶಬಳುಶಾ. ೦೦–೨೯ ವ) ; ನಿಡೋತ್ರೀಯುಪಲ್ಲವದ ಪೊರೆಯಿಂ ತೆಗೆದು . . . ಮಣಿದೊಡವನೊರ್ವಳಂಗನೆಗಿತ್ತಳ್ (ಶುಲ್ಕಶ. ೯–೬೦); ಮೆಯ್ಯ ಪೊರೆಗಳಂತು ಮಾಂಜಿಯಾಗಂ ಅಲ್ಲಿ ಪೊಜಿಗಣ ಭಾಗಂ ಧಾತುಮಲಾದಿ ದೋಷಸಹಿತಂ . . . ಒಳಗಣ ಭಾಗಂ ಜ್ಞಾನಮಯಂ (ಶಜಿಚಂ. ೦೨೬–೦೯ ವ). ೩. ಹಾವು ತನ್ನ ಮೈಮೇಲಿನಿಂದ ಕಳಚುವ ತೆಳುವಾದ ಚರ್ಮದ ಆವರಣ_ಪದರ ; ನಿರ್ಮೋಕ : ದಂಡಕರಿಸಿಯರ ಮೆಯ್ಯ ತೊಗಲ್ ಪಾವಿನ ಪೊ[ಶಾಶಾಂ. ಪ್]ರೆ ಸುಲಿವಂತೆ ಸುಲಿದು ಪೋಗಿ (ಶಕ್ತಾ.ರಾ. ೦೬೨–೨). ೪. ಕಣ್ಣಿನ ಗುಡ್ಡೆಯ ಮೇಲೆ ಬೆಳೆಯುವ, ನೋಟಕ್ಕೆ ಅಡ್ಡಿ ತರುವ ಒಂದು ಬಗೆಯ ಪದರ ; ಕಣ್ಣಿನ ಒಂದು ದೋಷ : ಕಣ್ಣಿನ ಪೊರೆಯನ್ನು ಶಸ್ತ್ರಚಿಕಿತ್ಸೆ ಮಾಡಿ ತೆಗೆದುಬಿಡಬಹುದು (ಲೂಕ). ೫. ಕಣ್ಣಿನಲ್ಲಿ ಇರುವ ಒಂದು ಬಗೆಯ ತೆಳುವಾದ ಚರ್ಮ ; ದೃಷ್ಟಿಪಟಲ : ಅಂತರ್ದ್ರವದ ಚಲನೆಗೆ ಅಡ್ಡಿಯುಂಟಾಗಿ ಪಾಪೆಯ ಪೊರೆಯು ಕಿರಣ ಕಣ್ಣೊಳಗೆ ಅಂತರ್ದ್ರವದ ಒತ್ತಡವು ಹೆಚ್ಚುವುದು (ಆಮ್ನ್ಯ. ೦೬೦). ೬. ಕಿವಿಯೊಳಗಿನ ಪಟಲ : 'ರಾಜ' ಎಂಬ ಶಬ್ದ ಕಿವಿಯಲ್ಲಿನ ಪೊರೆಯನ್ನು ಚುಚ್ಚುವಂತೆ ಭಾಸವಾಗುತ್ತಿತ್ತು (ಕಂದಜ. ೯೮). ೭. ತಪ್ಪು ; ದೋಷ ; ಕೊಂದು : ಉಡುವಂ ಗುರು ಪಡೆವರ್ ಪೆಜಿರೆಡೆಯೊಳ್ ನೀವಮಾರ್ಗಮಿದೇಕೆ ಕಿಡೆನುಡಿದಬಿಟ್ಟಿಡೆವೆರ್ಗಡೆತನದೋದೇವಡೆವಿರ್ ನಿಮಗವ್ವ ಕಜ್ಜದೊಳ್ ಪೊರೆಯುಂಟೇ (ಅಜಿತ. ೯–೦೦೬). ೮. ಮುಚ್ಚು ಮರೆ ; ವಂಚನೆ : ನಿನ್ನಡಿಯರೋಗದವರೊಳ್ ನೀಂ ಪೊರೆಯಿಲ್ಲದೊಡವೆದಿರ್ದುರ್ಂ ತಣಿಯದೆ ಅರ್ಜುನಾದಿಗಳೊಳಾಳರಸುತನಮಂ ಪಲ್ಲಟಂಗೆಯ್ದು ನಲಿವ ಸುಶೀಲನೆಂದುಂ . . . ನಿನ್ನ ಕಲ್ಯಾಣಗುಣಂಗಳಂ ಕೇಳ್ದು (ಆಶಾ. ೩೦). ೯. ಅರಗಿನ ಕೀಟವು ದ್ರವರೂಪದಲ್ಲಿ ವಿಸರ್ಜಿಸುವ ಅರಗಿನ ಕವಚ ; ಅರಗಿನ ಲಾರ್ವಾಗಳು ಪ್ರೌಢತ್ವಕ್ಕೆ ಮುಟ್ಟುವ ಮುನ್ನ ಮೂರು ಬಾರಿ ತಮ್ಮ ಪೊರೆಗಳನ್ನು ಬಿಡುತ್ತವೆ (ಕಾಕೋಶ. I, ೯೯೩). ೧೦. (ಆಲಂ) ಮಾಯೆ ; ಭ್ರಮೆ : ಸುಬ್ಬುವಿನ ಕಣ್ಣಿನ ಪೊರೆ ಕೊಂಚ ಜಾರಿದಂತಾಯಿತು (ಆಜುಳಾ. ೨೦೩). **ಹರ್ಕೆ** : ೨. ಶ್ವಾಸಕೋಶದ ಒಳಮಗ್ಗುಲಲ್ಲಿ ನೂರಾರು ಸೂಕ್ಷ್ಮರಂಧ್ರಗಳೂ ಪರೆಗಳೂ ಇವೆ (ಜಾಅತ್ರ. I, ೩೦೬) ; ಗಾಳಿಯ ಪರೆಗಳೆಂಬ ಹೆಸರನ್ನು ಪಡೆದಿದ್ದ ಚಟ್ಟೆಗಳು ರಚಿತವಾಗಿದ್ದುವು (ಶಾಕರ. ೩೯೭). ೩. ಸುದತಿಯ ದಿವ್ಯಗಂಧಕಷಾಯಚಂದನಶಾಖೆಯೊಳಂಗಜಾಹಿಯೆಕ್ಕಿದ ಪ[ಶಾಶಾಂ. ಹೆ]ರೆಯಂತಿರುಟ್ಟ ದುಕೂಲಮಂ . . . ಒಪ್ಪಿದುದು (ಅರಕೀ. ೨–೦೬ ; ಶಾಸ್ತ್ರಸಾ. ೬೯೭ ನೋ) ; ಮಹಾಸರ್ಪವು ಜೀರ್ಣವಾದ ಪರೆಯನ್ನು ಬಿಡುವ ಹಾಗೆ (ಕೃಪಾಜಾ. ೨೬೪) ; ಹಳೆಯ ನೆನಪುಗಳು ಮರುಕಳಿಸಿದವು ಹಾವಿನ ಪರೆಯೊಳು ಜೀವ ನುಸುಳಿದೊಲು (ಕೃದರ್ಶ. ೨೬). ೪. ಪರೆ ಪ್ರಾರಂಭವಾಗಿರುವ ವ್ಯಕ್ತಿಯ ಮಾನಸಿಕ ಶಕ್ತಿ ಮತ್ತು ಕಾತುರತೆಗೆ ಭಂಗವಾಗದಂತೆ ಎಚ್ಚರಿಕೆಯಿಂದ ವೈದ್ಯರು ಸಲಹೆ ಕೊಡಬೇಕು (ಆಮ್ನ್ಯ. ೧೬೩). 'ಪರೆಗಣ್ಣು' ಪರಾ. ೫. ಆಮೆ (Turtle) ಪಾಪೆಯ ಪರೆಯನ್ನು ಹೊಂದಿರುವ ಮೊದಲ ಜೀವಿ. ಪಾಪೆಯ ಪರೆಯು ಕಣ್ಣೊಳಗೆ ಪ್ರವೇಶಿಸುವ ಬೆಳಕಿನ ಕಿರಣಗಳನ್ನು ಮಿತಿಗೊಳಿಸುವುದು (ಆಮ್ನ್ಯ. ಪ್ರಕೃತಿಯಲ್ಲಿನ ಕಣ್ಣುಗಳು — ಮಥಾಶಗಳು). ೧೧. ಭ್ರೂಣವನ್ನು ಆವರಿಸಿರುವ ತೆಳುವಾದ ಹೊದಿಕೆ ; ಭ್ರೂಣದ ಚೀಲ : ಜರಾಯು_ಗರ್ಭದೊಳಗಿನ ಶಿಶುವಿಗೆ ಸುತ್ತಿದ ಪರೆ (ಗಂಗಾಮು. ೦೬೬). ೧೨. ಮಂಡೆಯ ಚರ್ಮವು ಸುಲಿದು ಕೂದಲಿನ ಬುಡದಲ್ಲಿ ಏಳುವ ಹೊಟ್ಟು ; ಹಗರು : (೬). **ಪೆರ್ಕೆ** : ೩. ಕರ್ಚಿಲ್ಲದ ಕಾಡಿಗೆ ಕಂದರ್ಪನ ಜಸಂ . . . ಸರ್ಪನ ಪೆರೆ ಜಲಕನಾಯ್ತು ಪೊಸಪ್ಪಿಂಗಳ್ (ಜುಲ್ಕಶ. ೬–೯೯) ; ಪೊರೆವಿಡಿದು ಪೊಕ್ಕು ಪಾವಿನ ಪೆರೆಯಂ ಪೊತ್ತೋಂತಿಯೊಂದು ಪರಿತರೆ (ಅರಕೀ. ೩–೬೨) ; ನವರತ್ನರಾಜಿ ಫಣಮಣಿ ಕವಿದ ಮುಗಿಲ್ ಪೆರೆ ಕರಾಳಪವನಂ ಪೂತ್ಕಾರವೆನಲ್ ಮಂಡಳಿತಮಹಾಹಿಪೊಲಿರ್ಪುದು ಸುತ್ತಿ ಮಾನುಷೋತ್ತರಶೈಲಂ (ಧರ್ಮಶ. ೦–೯೨). **ಹರ್ಕೆ** : ೩. ಹಾವಿನ ಹರೆಯು ತಂದು . . . ಹರೆಯನಿಕ್ಕಿ ಕಟ್ಟಲು ಜ್ವರ ಮಾಣ್ಗುಂ (ಶಿವ್ಶ.ಶ. ೦೦೪). **ಹೆರ್ಕೆ** : ೩. "ನಿರ್ಲಯನೀ, ನಿರ್ಮೋಕಂ, ಕಂಚುಕಂ_ಈ ೩ ಹಾವಿನ ಹೆರೆ" (ಕಲಾಯು. ೦೦೬–೨೨) ; ಬಿನ್ನವಿಸು ಮನ್ನಣೆಯ ವನಪಾಕ್ಷ ಕೈಮುಗಿದು ನಿನ್ನ ಹೆಡೆಗಳನುಡುಗಿ ನಿಲ್ಲಿಹವ ಹೆರೆ ತೆಗೆದು (ಜೀಶ. ಹ. ೯೯೩–೩) ; ಹೀಲಿಗಜಿ ಗುಗ್ಗುಳ ಹಾವಿನ ಹೆರೆ ಇವಂ ಕೂಸಿಂಗೆ ಧೂಪವಿಕ್ಕುವುದು (ವಾಂಶ. ೦೨೯–೦೯). **ಹೊರ್ಕೆ** : ೧. ಬೆಂದ ಮುಸಿಯ ತೊಳೆದಡೆ ನೊಂದಿತ್ತೇ ಅದು ಎನ್ನ ಹೊರೆಯನೆತ್ತಿದರೆಂದು (ವೀರಶಾ. ೨೦–೬೯) ; ಕಾರ್ಗಾಲದ ಕರಿಯ ಮುಗಿಲ ಹೊರೆಯೊಳು ಹರಿದಾಡುವ ಕಿಜಿಮಿಂಚಿನ ತೆರದಿ (ಜಯಕಾ. ೩–೨). ೮. ಮಜಿಗಳಜಿಗಳು ವೈಶಿಕಂಗಳು ಬಟಿಯ ಹುಸಿ ನುಸುಳುಗಳು ಕಾಮುಕರಜಿಕಗಳು ಬಹುಭಾಷಣಂಗಳು ಹೊರೆಗಳಿರವುಗಳು (ಅಶಶ. ೯೦–೬೦) ; ಅರಸನಂಕಿಯ ಮನದ ಬಯಕಿಯ ಹೊರೆಯ ಬಳಕಿಯನೀ ಸಮಂಜಸತರದ ಸಾಕ್ಷಿಕರೆತ್ತ ಬಲ್ಲರು (ಉಪ್ಪಾ. ೬–೬೬) ; ತಪ್ಪೇನು ನಿನ್ನಯ ಹೇಳಿಕೆಗೆ ಹೊರೆಯಿಲ್ಲ ಹೋಗಲು ಬಹುದು ಬಾಧವರ ಆಲಯಕೆ (ಅಭಿಗ. ೯–೦–೨೩). ೧೩. ಸಿಪ್ಪೆ ; ತೊಗಟೆ : ಹಿರಿದು ಹೊರೆಗಳ ನೊಂದನೊಂದು ತರಳಿ ಸುಲಿಯಲು ಬಾಳೆಯದು ತಾನೊರೆಯಲಿಲ್ಲದೆ ಮುನ್ನಿನಾಕೃತಿಯಿಲ್ಲದಿಪ್ಪವೊಲು (ಅಶಶ. ೩೩–೩೬). ೧೪. ವ್ಯತ್ಯಾಸ ; ಭೇದ : ಕ್ಷೀರ ನೀರಿನಂತೆ ಹೊರೆ ಇಲ್ಲದೆ ವರ್ಣಭೇದವಿಲ್ಲದೆ ಕೂಡಬೇಕು (ವೀರಶಾ. ೨೬೦–೯೩) ; ತ್ರಿಪುಂಡ್ರವ ಧರಿಪವಗನ್ಯೊಳುಂ ಹೊರೆಯಿಲ್ಲ ನಿಶ್ಚಯವಿದು (ಅಶಿಶ. ೯೦–೨೨) ; ದೇವದೇವಾಧಿಪನ ಹೊರೆಯಿಲ್ಲದೆ ಕೂರ್ತು ಕೃತಿವೇಳು ಖಂಡಶರ್ಕರೆಯಂತೆ ಸವಿಮಾತುವೆರಸಿ (ವೀಶಕ. ೧೬–೧). ೧೫. ಶ್ವಾಸನಾಳ : 'ಹೊರೆಯೇರಂ' ಪರಾ.

**ಪೊರೆಯ ಲಡ್ಡುಗೆ** = ಒಂದು ಬಗೆಯ ಭಕ್ಷ್ಯ ; ಪದರಗಳಿಂದ ಕೂಡಿದ ಲಡ್ಡುಗೆ (?) : ಬಿಳಿಯ ಕಡಲೆಯ ಸಣ್ಣ ಹಿಟ್ಟ ಸೋದಿಸಿ ಹಾಲಿನೊಳಗಿಕ್ಕಿ ಸಂಪಳಿವ ಮಾಡಿ ತಂಗಿನ ಕರಟದೊಳಗೆ ಕಿಜುವೆರಲ ಗಾತ್ರದ ವೆಜ್ಜವಂ ಮಾಡಿ ತುಂಬಿ ತುಪ್ಪವನು ಕಾಸಿ ಇಳಿಯ ಬಿಡೆ ಬುರುಬುರನೆ ಬೆಂದು ಹದನಾದುಂಡೆಗಳಿಗೆ ಸಕ್ಕರೆಯ ಪಾಕವ ಹೊಯ್ದು ನವ್ಯಪರಿಮಳವನಿಕ್ಕಿ ಕಟ್ಟಿ ಪೊರೆಯ [ಶಾಶಾಂ. ಹೊರೆಯ, ಸೂನೆಯ] ಲಡ್ಡುಗೆಗಳೆಂದು ಹೆಸರನೊಲವಿಂ ಕರೆವುದು (ಸೂಶಾ. ೦–೩೬).

[ದೇ. ಕ ತಮಿ. ಪುರ್ಕ್ಕೆ; ತುಳು. ಪರೆ; ತೆಲು. ಪೊರ]

**ಪೊರ್ಕೆ** 'ಪೊಱೆ³' ನೋ.

**ಪೊರೆಕಳಚು**, ಪರೆಗಳಚು (ಕ್ರಿ). ೧. (ಹಾವು) ತನ್ನ ಚರ್ಮದ ಆವರಣವನ್ನು ಕಳಚು; ನಿರ್ಮೋಕವನ್ನು ಬಿಡು: ನಿರ್ಮುಕ್ತಃ, ಮುಕ್ತಕಂಚುಕಃ_ ೨ . . . ಪೊರೆ ಕಳಚಿದ ಹಾವು (ಬ್ರಾ.ಅ. ೬೩). **ಪರೆಗಳಚು**: ೨. (ಆಲಂ) ಜಾಡ್ಯವನ್ನು ಬಿಡು; ಉತ್ಸಾಹವನ್ನು ಹೊಂದು: ರಷ್ಯಾ ಜಪಾನು ತುರ್ಕಿಗಳೆಲ್ಲ ಪರೆಗಳಚಿ ಹೊರಟಿಹವು ಹೊಸಪ್ರಯಾಣಕೆ (ಕೋಗಿಲೆ. ೨೬-೬). [ಪೊರೆ₃ + ಕಳಚು (< ಕಱಲ್ಚು₁)]

**ಪೊರೆಕೈ** (ಕ್ರಿ). ಪೋಷಣೆ ಮಾಡು; ಪೋಷಿಸು: ಕವಳವನೊಲ್ಲದ ಕೂಡಿಸುವ ರೋಗದವಂ ಪೊರೆಕೈವ . . . ಸೂಕಳಾಶ್ವಮಂ ಜವಳಿಯ ನಿಕ್ಕಿಯೋಡಿಸುವ ವಾರುವವಂ ನಡೆಪಾಡಿಸಲ್ಕೆ ನೋಡುವ ಮಾಱುಗಳ್ಗೆ ಪಾಲನೆಱೆವುದುಸ್ಸುಗವಂ ತಳೆದಿರ್ಪನಾವಗಂ (ಜಗನ್ಮೋ. ೩೪೯). [ಪೊರೆ₃ + ಕೈ₁ (< ಕೆಯ್₁)]

**ಪೊರೆಗಳೆ** (ಕ್ರಿ). ಸಾಮೀಪ್ಯವನ್ನು ಕಳೆದುಕೊಳ್ಳು; ದೂರವಾಗು: ಕೆಲಕೆಲರ್ ಪೊಯ್ಲು ಪೊರೆಗಳೆವುತುಂ ಕಳೆವುತುಂ ಕೆಲಕೆಲರ್ ಪಂಥಗಳನುಡಿವುತುಂ ಜಡಿವುತುಂ ಕೆಲಕೆಲರ್ ಸೊಗಸಿನಿಂದಾಡುತ್ತುಂ ಪಾಡುತುಂ ಬಗ್ಗೆ ಸೆದರು ಕೊಳದೊಳು (ಕಂಪು. ೩೬-೬೮). [ಪೊರೆ₄ + ಕಳೆ₁]

**ಪೊರೆದೋಱು**, ಹೊರೆದೋಱು (ಕ್ರಿ). ೧. ಪದರವು ತೋರು; ಪದರು ಬಿಚ್ಚು: ಅರಳು: ಪರಿಯೆ ಪಸುರ್ಪು ಬೆಳ್ಪಡರೆ ಬಲ್ಮುಗುಳೊಳ್ ಪೊರೆದೋಱೆ ತಂಬೆಲರ್ ಪೊರೆವೊರೆಯಂ ಸಡಿಲ್ಚೆ ನಡುವೊಂಗಿರೆ ವಲ್ಲಿಗಳ್ ವಸಂತದೊಳ್ (ಅಂಪು. ೦೦-೦೦೬); ಕನಗೋನಸರೆಲ್ಲೆಯಲ್ಲಿ ಮಿಳಿರ್ದಾಡುವ ಮಣ್ಣಿರೆಲ್ಲಿಯಲ್ಲಿ ಬಲ್ಮನೆಗಳವಲ್ಲಿಯಲ್ಲಿ ಪೊರೆದೋಱುವ ಮೊಗ್ಗೆಗಳೆಲ್ಲಿಯಲ್ಲಿ . . . ಎನೆ ಸೋಲಿಸುಗು ಬಿಡದಾವನಂ ಬನಂ (ಕ್ಷ್ಮಾ.ಗ. ೩೨). **ಹೊರೆದೋಱು**: ೨. ಭೇದವು ಕಾಣು; ವ್ಯತ್ಯಾಸವು ತೋರು: ಹೆಸರಿಗಂ ದೇಹಿಗು ಭಿನ್ನವಿಲ್ಲದ ತೆಱದಿಯಸೆವ ಪಂಚಾಕ್ಷರಿಗೆ ಶಿವನೊಳಂ ಹೊರೆದೋಱದು (ಅಶಂ. ೯೦-೫). [ಪೊರೆ₄ + ತೋಱು]

**ಪೊರೆನೆತ್ತರ್** (ನಾ). ಹತ್ತಿರದ ಸಂಬಂಧ,_ಬಾಂಧವ್ಯ; ರಕ್ತಸಂಬಂಧ: ಪೊರೆನೆತ್ತರಯ್ವದಿಂಬರ್ ದಾಯಿಗರ ಬೇಂಟವಮನ್ ತಪ್ಪಿಸಲ್ಕೋಡಿ, ಒತ್ತಂಬದಿಂದಗಾಸ್ಗೆ ಪಿಂದಿರುಗಿದಪ್ಪರ್ (ಅಭಿಕ್ರ. ೭೫-೯೬೦). [ಪೊರೆ₄ + ನೆತ್ತರ್]

**ಪೊರೆನೆತ್ತರ** (ನಾ). ಹತ್ತಿರದ ಸಂಬಂಧಿ,_ಬಂಧು; ರಕ್ತಸಂಬಂಧಿ: ಪೊರೆನೆತ್ತರನೋ ಪೊಱಬಗನೋ ಮೇಣ್ ಏನಾದೊಡಮೇನ್ ಎಲ್ಲವರಿಂದಮ್ ನಿನ್ನನೆ ಮಿಗೆ ನಾನ್ ಮನ್ನಿಸಿದಪ್ಪೆನ್ (ಅಭಿಕ್ರ. ೦೬-೩೯೦). [ಪೊರೆನೆತ್ತರ್ + _ಅ₇]

**ಪೊರೆಪು₁**, ಹೊರಹು₁ (ನಾ). ೧. ರಕ್ಷಣೆ; ಆಶ್ರಯ: ಗೋಪಾಳಗನ ಮಗನೆಂ ಪೊರೆಪಾವುದುಮಿಲ್ಲೆನೆ ಮಾಳ್ವನಂತುಂ ಮಾಳ್ಪಂದೇವುದೊ ಚಾತುರ್ದಂತಂ ಕಾವುದೆ ಕಾವಡಮ ಪುಣ್ಯಮೊಂದೇ ಕಾಗುಂ (ಅಂಚ. ೬-೯೬). ೨. ಪಾಲನೆ; ಪೋಷಣೆ: ದುರಿತಭಯದಿಂ ಕಳತ್ರದ ಪೊರೆಪಂ ಬಿಸುಟಿರ್ದ ಮುನಿಗೆ ಪತ್ತುಂ ದೋಷಂ ಪೊರೆವೊಡೆ ಮರ್ದಿಂದಟ್ಟುಮ ಕರಮಪ್ಪೊಡದರ್ಕೆ ಪೆಗುಟ್ಟು[ಪಾಠಾಂ. ಮರ್ದು] ಬಲ್ಲವರೊಳರೇ? (ಜಗನ್ಮೋ. ೦೩೯-೦೯); ನಮ್ಮ ಮಹಾರಾಜಾಶ್ರಯದ ಪೊರೆಪಿನಿಂದ ತೇಜವಡೆದರೆ ಆ ಶಿಶುಗಳಿಗೆ ಸದಾಕಾಲದಲ್ಲೂ ದ್ವೇಷ ಹಿಂಸೆ ಪ್ರಾಣ ಸನ್ದೇಹಗಳು ತಪ್ಪದೆ ಅಡಸಲುಳ್ಳುವು (ಕಂತ್ರ.ಕ. ೦೬-೨೩). **ಹೊರಹು₁**: ೨. ಇರುಳೆಡೆಯೊಳಗೆ ಬಲ್ಲಿದರು ಜೊನ್ನದ ಪಾಲ ಹೊರಹಿಂದ ಬೆಳೆದ ರಸಿಕರು ತರುಣಿಯರಾಲಿ ಗಾಯತ್ರದ ಚಕೋರಿಯ ದೊರೆಗನ್ನಡಿಗರ ಪಾಡಿದೇಕೊ (ಕರ್ಕ. ೦೦-೦೩೦). [ಪೊರೆ₃ + _ಪು₁]

**ಪೊರೆಪು₂**, **ಪೊರಪು** (ನಾ). ೧. ಸಂಸರ್ಗ; ಸೋಂಕು: ನೀರಜದ ರಜದ ಪೊರೆಪಾ ನೀರೇಜದ ನೀರ ಪೊರೆಪು ಪೊರೆವೊರೆ ನೀಂ [ಸಂ]ಸಾರಕ್ಕೆ ನಿನಗವಿಸಾ ಸಂಸಾರಂ ಪೊರೆವೊರೆ (ಶಾಂತಿಪು. ೦೦-೯೬). ೨. ಉತ್ಸಾಹ; ಹುರುಪು: 'ಪೊರೆಪುದೋಱು' ಪದಾ. **ಪೊರಪು**: ೩. ಬಳಿಯುವಿಕೆ; ಲೇಪನ: ನಾಟಕಶಾಲೆ . . . ಸಿರಿಗಂಪು ಕುಂಕುಮ ಪನ್ನೀರು ಸಾದು ಕತ್ತುರಿಯ ಸಾರಣೆ ಚಳೆಯಗಳಾ ಪೊರಪಿಂದ ಸ್ವರ್ಗದ ಕಂಪ ತುಂಬಿದ ಹೊನ್ನ ಕರಡಿಗೆಯಂತೊಪ್ಪುತಿಹುದು (ಜಕ. ೦೨-೦೯). [ಪೊರೆ₄ + _ಪು₁]

**ಪೊರೆಪುದೋಱು** (ಕ್ರಿ). ಉತ್ಸಾಹಗೊಳ್ಳು; ಹುರುಪಾಗು: ವಿಳಾಸಿನೀ ನಯನಸ್ಮರವದಿಂ ದೆಸೆ ಕೂಡೆ ಪೂಗೊಳುಂದೋಱೆ ವಿಳಾಸದೊಳ್ ಪೊರೆಪು ದೋಱಿದುದಾಗ ಮನಂ ನೃಪೇಂದ್ರನಾ (ಅಕಂಪು. ೩-೬೫). [ಪೊರೆಪು₂ + ತೋಱು]

**ಪೊರೆಬಿಡು** 'ಪೊರೆವಿಡು' ನೋ.

**ಪೊರೆಯಿಕ್ಕು** (ಕ್ರಿ). ಕೂಡಿಸು; ಬೆರಸು; ಮಿಶ್ರಮಾಡು: ನಾರಳದಂಟ ಕತ್ತರಿಸಿ ಪಿರಿದು ಮಘಮಘಿಪ ತಿಳಿದುಪ್ಪವಂ ಹೊಯಿದು . . . ಕಾಯ್ದಾಱಿದಮೃತಾಲೊಳಗೆ ಮಾಱಿದಿರಿಸಿ ಹೊಸಸಕ್ಕರೆಯು ಹಾಕಿ ಪರಿಮಳಗಳಂ ಪೊರೆಯಿಕ್ಕಿದದುವೆ ತುಪ್ಪದ ಪಾಯಸಂ (ಸೂಶಾ. ೬-೧೨). [ಪೊರೆ₄ + ಇಕ್ಕು]

**ಪೊರೆಯಿಡು**, ಹೊರೆಯಿಡು (ಕ್ರಿ). ೧. ಬಳಿ; ಹಚ್ಚು; ಲೇಪಿಸು: ಅರುಣಾಂಭೋರುಹದಲರ್ಗಲತಗೆಯುಂ ಪೊರೆಯಿಟ್ಟು . . . ಕರಂ ಪಸದಿಬದಿ ನಿರ್ಮಿಸಿದಂದದಿನೊಪ್ಪಿದುವವಳಂಘ್ರಿಗಳು (ಜಯನೃ. ೬-೨೬). ೨. ಪುಷ್ಪರಸ, ಗಂಧ ಮೊದಲಾದ ಪರಿಮಳದ್ರವ್ಯಗಳನ್ನು ಬೆರಸಿ ಸುವಾಸನೆಯು ಹೆಚ್ಚುವಂತೆ ಮಾಡು: ಗೊಂದಣದ ಸಂಭಾರಮಂ ಮತ್ತೆ ತಿಳಿದುಪ್ಪದಿಂದೋಟೆಯಡಿಯಾಗಿ ಪೊಗ್ಗರಣೆಮಾಡಿ ಹೂವಿಂದ ಪೊರೆಯಿಟ್ಟು ಮಡಕೆಯೊಳಿರಿಸಲದು ತುಂಬುಮಾಳಿಗಾಯ್ಮಸರಾದವು (ಸೂಶಾ. ೯-೬೩). ೩. ಹೊಳಪು ಕೊಡು; ಒಪ್ಪ ಹಾಕು: ಕೊಳೆದವರ್ದಿನ ತಿರುಳ ಮಿಂಚ ಬಾಂಬೇವಳಗಿಂದವೆ ಪೊರೆಯಿಟ್ಟು ತಿಳಿಜೊನ್ನದೊಳು ಭಾವನೆ ಮಾಡಿದಂತೆ ಪಜ್ಜಳಿಸಿದುದಭವನ ಕಾಂತಿ (ತ್ರಿಷಷ್ಟಿ. ೬-೬೦). **ಹೊರೆಯಿಡು**: ೨. ಅಪ್ಪಭಾಗವನಷ್ಟಗಂಧದೊಳಗೆ ಹೊರೆಯಿಟ್ಟು ಬಟ್ಟಲುಗಳ ತಿಬಿಬಟ್ಟರೀರಾಱು ತಂಡಹ ಬಳಿಯೆಲೆಯ ತಂದಿಟ್ಟಣಿಸಿದರಬಲೆಯರು (ಅಭಿಕ. ೬-೯೯). [ಪೊರೆ₄ + ಇಡು₁]

**ಪೊರೆಯಿರ್** (ಕ್ರಿ). ಹತ್ತಿರದಲ್ಲಿರು; ಸಮೀಪವಿರು: ಕೊನೆಗೆ ಬಂದಿರ್ಪುದಿನ್ ಇರದೆ ಪೊಡೆದಾಟಕಮ್. ತಳವನಾವಮ್ ಪೊರೆಯಿರ್ಪನಿಲ್ಲ (ಅಂಶಗೊ. ೦೨-೨೯೨). [ಪೊರೆ₄ + ಇರ್₁]

**ಪೊರೆಯಿಸು** (ಕ್ರಿ). ರಕ್ಷಿಸುವಂತೆ ಮಾಡು; ಸಲಹುವಂತೆ ಮಾಡು: ಈ ಧಾರುಣಿಯನಾಳಿಸುವುದೊಂದೇನಂದೆ ನಾ ನಿನ್ನ ನೀರಧಿಯ ಪರಿಯಂತ ಭೂವಿಸ್ತಾರವಂ ಪೊರೆಯಿಸುವನು (ಜಪು. ೫-೬೮). [ಪೊರೆ₃ + _ಇಸು₁]

**ಪೊರೆಯುರ್ಚು₁**, ಪರೆಯುಚ್ಚು, ಪೆರೆಯುಚ್ಚು, ಪೆರೆಯುರ್ಚು, ಹೆರೆಯುಚ್ಚು, ಹೆರೆಯುರ್ಚು (ಕ್ರಿ). ೧. (ಹಾವು ತನ್ನ) ಹಳೆಯ ಚರ್ಮವನ್ನು ಬಿಡು,_ತ್ಯಜಿಸು: ಹಳೆಚರ್ಮ ಪೊರೆಯುರ್ಚುವ ಮೊದಲು ಈ ಚರ್ಮದ ಜೀವಕಣಗಳು (Hypodermal cells) ಒಳಗಡೆ ಹೊರಚರ್ಮ ಮತ್ತು ಮೇಲ್ಪದರಗಳನ್ನು ಸ್ರವಿಸುತ್ತವೆ (ಕೀಟಜ. ೦೨೯). **ಪರೆಯುಚ್ಚು**: ೨. ಆವರಣವನ್ನು ತ್ಯಜಿಸು,_ಕಳಚು: ಪರೆಯ ಮಱೆಯಲ್ಲಿಹ ಲಿಂಗವೇ ನೀ ಪರೆಯುಚ್ಚಿ ಬಹೆಯೆಂದು ಲಿಂಗವೇ (ಅಚ್ಚು. ೯೩೬-೫). **ಪೆರೆಯುಚ್ಚು**: ೧. ರಥಕಡರ್ದೆಚ್ಚನೆರಡಂಬನಿಂದೀತನ ಕಿರೀಟಮಂ ಕವಚವಂ ಮೂಱಱಿಂದ ಕೊಚ್ಚಿ ಕೆಡಹಿದನಾಗ ಜಾನಕಿಯ ಸೂನು ಪೆರೆಯುಚ್ಚಿದಹಿಪತಿಯ ಶೌರ್ಯವಿಮ್ಮಡಿಸೆ (ಕ್ಯಬಶಾ. ೨೦-೫೯). **ಹೆರೆಯುರ್ಚು**: ೧. ಪೆರೆಯುರ್ಚಿ ದಾಂಟಿ ಕೋಳ್ದ(ಲ್ದ)ಪ್ಪಿರೆ ಪಣಗೊಳೆ

ಸೊರ್ಕಿ ಶಂಕೆ ದೊರೆಕೊಳೆ . . . ಪಾವು ಕೊಳ್ಗಂ ನೆನೆನಂ (ಲೀಲಾವ. ೧೦-೨); ಜಾನಕಿಯನುಳಿದು ಪೆರೆಯುರ್ಚಿದುರಗನಂತಿರ್ದಪೆಂ (ಕೃಪಾಲ. ೦೬-೩೭). ಪೆರೆಯುಚ್ಚು : ೧. ಪೆರೆಯುಚ್ಚಿದ ಸರ್ಪದಂತೆ (ಪ್ರಾಗಂಥ. ೯೦೩-೨). ಪೆರೆಯುರ್ಚು : ೧. ಪಾವುಗಳ್ಗೆ ಪೆರೆಯುರ್ಚುವಾಗಳ್, ಮಂಡಲಂಗೊಂಡಿರ್ದಲ್ಲಿ ದಾಂಟಿ ಪೋಗಲ್, ಕೋಲಿನಲ್ಲಿ ಪೊಯ್ದು ನೋಯೆ ಪಗೆಗೊಂಡಿರ್ದಲ್ಲಿ . . . ಆ ಹಾವು ಮನುಷ್ಯರಂ ಕರ್ಚುವುದು (ಲೋಕೋಪ. ೧೦-೨ ಟೀಕು); ನಿರ್ಮೂಕ್ತಃ, ಮುಕ್ತಕಂಚುಕಃ – ಈ ೨ ಪೆರೆಯುರ್ಚಿದ ಹಾವಿನ ಹೆಸರು (ಅಭಿಧಾ. ೯೬). [ಪೊರ್ೆ + ಉರ್ಚು]

**ಪೊರೆಯುರ್ಚು₂** (ನಾ). (ಕೀಟ ಮುಂತಾದುವು ಹಳೆಯ) ಚರ್ಮವನ್ನು ಬಿಡುವಿಕೆ, –ತ್ಯಜಿಸುವಿಕೆ : ಹೊರಗಡುಸು ಚರ್ಮದ ಕೆಳಗೆ ಒಳಚರ್ಮ ಬಂದು ಪೊರೆಯುರ್ಚು ಪೂರ್ಣಸುತ್ತದೆ (ಕೀಟಕ. ೦೩೪); ಪೊರೆಯುರ್ಚುಗಳ ಸಂಖ್ಯೆ ನಿರ್ದಿಷ್ಟವಲ್ಲ (ಕೀಟಕ. ೦೩೩). [< ಪೊರೆಯುರ್ಚು₁]

**ಪೊರೆಯೆತ್ತು₁** (ಕ್ರಿ). ಕೂಡಿಸು ; ಬೆರಸು ; ಮಿಶ್ರಮಾಡು : ತೊಳೆದ ಗೋಧುವೆಗೆ ಜೀಂಗೆಯರಡ ಪೊರೆಯ[ಪಾಠಾಂ.ಯೊ]ತ್ತಿ (ಸೂಪಶಾ. ೩-೯೦). [ಪೊರ್ೆ + ಎತ್ತು₁]

**ಪೊರೆಯೆತ್ತು₂**, ಹೊರೆಯೆತ್ತು (ಕ್ರಿ). ಪದರವನ್ನು ತೆಗೆ : ಪೊರೆಯತ್ತಿದ ಬೆಳ್ಪಂಗಳ ಪೊರೆ ಗಂಗೆಯ ಪೊನಲೊಳೊಗೆದ ತೆರೆ ಶೇಷನ ಮಯ್ಪೊರೆಯೆನಿಪ ನವದುಗೂಲಾಂಬರಕ್ಕೆ ಪರಭಾಗವಾಯ್ತು ದೇಹಪ್ರಭೆಯಿಂ (ಶಬ್ದಶ. ೬-೨೦೧); ಖಚರಿಯರ್ ನೀರಡಸಲೊಡಂ ಕರಿಯ ಕಿಱಿಯ ಮುಗಿಲಂ ಖಚರರ್ ಪಿಡಿದು ಪೊರೆಯತ್ತಿ ಮಿಂಚಿನ ಪುಡಿಕೆಗಳಂ ತೆಱೆದ ತೆಱದ ತೋರ್ಪುವು ನಗಗಳ್ (ಅರ್ಧನೇ. ೨-೭೩); ಉಚ್ಚವೆರ್ದ್ದಂಗಳನೀಗಳ್ಪೊರೆಯೆತ್ತಿದರೇಬಂತಿರ್ಪ್ಪಂ ಗಡಗೊಂಡು ಸೊಗಯಿಸುವ ಮಂಡಗೆಯಂ . . . ಬಟ್ಟಲೊಳಿಟ್ಟರ್ (ಶಾಕ್ತೇಶ. ೬-೫೦). **ಹೊರೆಯೆತ್ತು** : ಮಾಡುವ ಭಕ್ತನ ಕಾಮ ಬಾಳೆಯ ಕಂಭದಂತಿರಬೇಕು ಮೆಲ್ಲಮೆಲ್ಲನೆ ಹೊರೆಯತ್ತಿ ನೋಡಿದರೆ ಒಳಗೆ ಕಟ್ಟಿಲ್ಲದಿರಬೇಕು (ಬಸವ. ೫೨೩). [ಪೊರ್ೆ + ಎತ್ತು₁]

**ಪೊರೆಯೇರು** ' ಪೊರೆಯೇಱು ' ನೋ.

**ಪೊರೆಯೇಱಿಸು** (ಕ್ರಿ). ೧. ಲೇಪಿಸು ; ಬಳಿ : ಕೆಂಪೆವರಿದ ಅರಲ್ಕೀವಿದಸುಕದೊಂಗಲು ತಿಱಿದರು ಕೈಗರಳ್ಗಿಂಪ ಪೊರೆಯೇಱಿಸಲೆಂದು (ಸೂಪಶೋ. ೩-೬೯). ೨. ಸಂತೋಷಪಡಿಸು : ತನ್ನಂ ಪೊತ್ತ ಮನ್ನಣೆಯಿಂ ಮುನ್ನಂ ಪೊರೆಯೇಱಿಸಿ ಪೊರೆದ ಮಣಿಗರ್ಭಗಣಿಯರಂ ಬಾಗಿ ಬಳ್ಕೆ ವಣಿಪ ಮಾಳ್ಕೆಯಿಂ . . . ಎಱಗಿ ನಿಂದ ರಾಜಕದೇಗಳಂ (ಕಬಕಾ. ೨-೯೨ ವ). ೩. ಚಿಗುರಿಸು ; ಪಲ್ಲವಿಸುವಂತೆ ಮಾಡು : ಅಶೋಕೆಯನೊದೆದಂಕುರವಂ ಪುಟ್ಟಿಪ ಪದ್ಮಮುಖಿಯುಂ ಕುರುವಕವಂ ಪರಿರಂಭಣದಿ ಪೊರೆಯೇಱಿಸುವ ತರುಣಿಯುಂ (ಗಿರಿಜೆ. ೭-೦೦ ವ). [ಪೊರೆಯೇಱು + – ಇಸು₁]

**ಪೊರೆಯೇಱು**, ಪೊರೆಯೇರು, ಹೊರೆಯೇರು₁, ಹೊರೆಯೇಱು (ಕ್ರಿ). ೧. ಸಂತೋಷಪಡು ; ಆನಂದಿಸು ; ಉತ್ಸಾಹಗೊಳ್ಳು : ಬಡಿದೊಡೆ ಪೊಗಿ ಪಂದೊವಲಪೊರ್ಪೊರೆಯೇಱುವ . . . ಬದಂಗನಂ ಬೆಸನಿಯಲ್ಲದೇಶನನೊಟ್ಟೆ ಸುಟ್ಟುಪಳ್ (ಅಜಿತಪು. ೨-೭೬) ; ಕೃತಕೃತ್ಯನಾದೆನೆನುತ್ತೆ ಪೊಗುತುಂ ಪೊರೆಯೇಱುತುಂ ನುತಿಸಿ (ಶಬ್ದಮ. ೫-೩೪); ತರಳನಯನದೊಳು ನಡೆನೋಡುತ್ತ ಪಾಡುತ್ತ ಪೊರೆಯೇಱಿ ನಲಿದಾಡುತ (ಸೌಂದರ. ೫-೨೦). ೨. ಪ್ರಖರವಾಗು ; ಉಜ್ವಲವಾಗು : ಪೆರೆವುದು ದುರಿತತಮಿಸ್ರಂ ಪೊರೆಯೇಱುವುದವಳದೃಷ್ಟಿ (ಧರ್ಮೇಶ. ೦-೨೬); ಮೆಲ್ಲಮೆಲ್ಲನೆ ಓವಂ ಸರಿಯೆ ಪೊಸಮಿಸಿಲ್ಪೊರೆಯೇಱಿ ಮೆಯ್ಯ ಬಿಱುಬು ಗಳಡಂಗಿ . . . ಮೆಱೆದುದು ಮೂಗಿಯಪಾಪಯಂ ಮಧುವಿನ ಜಯಂ (ಶಬ್ದಮ. ೬-೨). ೩. ದೊಡ್ಡದಾಗು : ತೆಳುವಸುಱು ಪೊರೆಯೇಱದಾ ಹೊಂಗಳಸವೊಲಿತುದಿ ಕಂದದು (ಶಾಕ್ತೇಶ. ೩೨-೫೯). ೪. ಉಬ್ಬು : ಕೂಡುವ ಪಾರಿವಂಗಳುಲಿ ಕೇಳನಗಂಗಳೊಳಸ್ಕೆ ಕೇಳ್ದಲಂಪೊಡೆ ಕೊಳಂಗಳೊಳ್ ನೆರೆದು ಕಣ್ಗೆಯಸಾಟಿವ ಹಂಸಯುಗ್ಮವಂ ನೋಡಿ ನವೋದಬಿಂದುಭರವಂಭರದೃಷ್ಟಿ ಮರಳ್ದು ನಲ್ಲನಂ ನೋಡಿದಳರ್ಸಿ ನೋಡೆ ಪೊರೆಯೇಱಿದ ತನ್ನಯ ಮುಯ್ಯನಂಗಜಂ (ಪರಶು. ೬-೨೪); ಕುಸುಮೋಲ್ಲಸತ್ಪರಿಮಳೋತ್ಕರದಿಂ ಪೊರೆಯೇಱಿ . . . ಸುಳಿವುದು ಸಂತತಂ ಪುರಬಹಿರ್ವನಸಾರಣಾ ಸಮಿಸಾರಣಾ (ಕುಸುಮಶಾ. ೨-೭೦). ೫. ಕಾಂತಿಯನ್ನು ಹೊಂದಂ,–ಪಡೆ : ಶಾಂತಿಲಕಮವಳ ನೇತ್ರಾಂಶುವಿಂದೆ ಪೊರೆಯೇಱಿ . . . ಉಯ್ಯಲಾಟವಾಡಿದಳೊರ್ವ ಬಾಲೆಯಂಬರದ ಮಿಂಚಾಡುವಂತ (ಕಿರಾ. ೧೦-೦೯). ೬. ಪುಳಕಗೊಳ್ಳು ; ರೋಮಾಂಚನಹೊಂದು : ಹರ್ಷದ ಶರನಿಧಿಯೊಳ್ ಪೊಕ್ಕು ಲೀಲೆ ಮಿಕ್ಕೋಲಾಡುತ್ತಿರಲುತ್ಕೀಸಾಡುತ್ತುಂ ಪೊರೆಯೇಱುತೆ ಜವದ ಮಿಪುಳೆ ತವವಂ ಬಿಟ್ಟಳ್ (ಗಿರಿಜೆ. ೩-೭೬).

**ಹೊರೆಯೇರು** : ೧. ಪೂರ್ಣದಿಂ ಪೂರ್ಣವನೆ ತೆಗೆದರೂ ಪೂರ್ಣವೇ ಉಳಿವುದೆಂದು ಪೂರ್ಣಾನುಭೂತಿಯನು ಪಡೆವ ಪೊರೆಯೇಱಿದರು ಶಿಷ್ಯಸಂತತಿ ಡಿಂಭದಿದಿರು ನಿಂದು (ಕುಲಶೇ. ೩೭-೯). ೫. ಎಷ್ಟು ದೊಡ್ಡವನಾಗಿ ಬಳೆದು ಮಡುಗ್ಗಿಡಿ ಪೊರೆಯೇಱಿಕೊಂಡಿರುವೆ ! (ಬೃಕ. ೦೬-೨೨). **ಹೊರೆಯೇರು₁** : ೧. ಇಂತಹ ಜಂಗಮದಿಂದಲೇ ಜಗತ್ತು ಪಾವನವೆಂದು ಹಿಗ್ಗಿ ಹೊರೆಯೇರಿದ್ದಾರೆ (ಷಟ್ಸ್ಥಲ. ೦೦೯ ಶ್ರ ಸ್ಥಾ ಟಿಕ); ತಂಗಾಳಿಯು ಕೊಳಲೂದಲಿ ಸಾಗಲಿ ಸ್ವರಸಮ್ಮೇಳನ ಹೊರೆಯೇರಿ ! (ಕಕಶ. ೬-೦೯೯). **ಹೊರೆಯೇಱು** : ೧. ಪೋಗಲಾಱದೆ ತಿರಿಗಿ ತಿರಿಗಿ ಪೊಡವಡುವುತುಂ ರಾಗದಿಂದಗ್ಗಿಸುತ ಹಿಗ್ಗಿ ಹೊರೆಯೇಱುತಂ (ಶಿವಪ. ರೇ. ೫-೨೨); ಆಹವವಿಜಯವಾರ್ತೆಯ ಹರಹಿನಲಿ ಹೊರೆಯೇಱಿ ಹೊಂಪುಳಿಯೋದರಡಿಗಡಿಗೆ (ಕುಮಾ. ರಾ. ೬-೩೯). ೬. ತನು ಹೊರೆಯೇಱಿ ಸರ್ವಾಂಗ ಕರಗಿ ಕೊರಗಿ ನೆರೆವ ಭರದುರವಣೆಯು ತವಕದಿಂ ಲಿಂಗದೊಳು ಪರವಶೀಭಾವ ತಲ್ಲೀಯವಾಗಿ (ಶತಗೀ. ೨೮-೦೨೪). ೭. ಹೆಮ್ಮೆ ಪಡು ; ಗರ್ವ ಹೊಂದು ; ಬೀಗು : ಎಲವೂ ಕರ್ಣಾರ್ತೃಜನ ಹೊಯ್ದಗ್ಗಳಿಕೆಯಲಿ ಹೊರೆಯೇಱಿದಿರು ಪಡಿಬಲಕೆ ಆರಸಾ ಕೃಷ್ಣ ಪಾರ್ಥರ ನಿನ್ನಲೇನಹುದು (ಕುಮಾ. ಭ. ೦೦-೯೪). [ ಪೊರ್ೆ + ಏಱು₁ (<ಏಱ್₁) ]

**ಪೊರೆಯೊತ್ತು** (ಕ್ರಿ). ೧. ಕೂಡಿಸು ; ಬೆರಸಂ ; ಮಿಶ್ರಮಾಡು : ಹಿರಿದು ಮೃದುವಾಗಿ ನನೆದಕ್ಕಿಯೊಳಗರಿಸಿನವ ಪೊರೆಯೊತ್ತಿ ಮುಗುಳ್ದದರಿಬೆಂದ ವಿದಳಗಳನೊಡವೆರೆಸಿ (ಸೂಪಶಾ. ೩-೫). ೨. ನೆನೆಸಿ ಇಡು ; ನೆನೆ ಹಾಕು : ಎರಡು ಸೂಳ್ ಪೊಸ ಬೆಣ್ಣೆಯಿಂ ಹಸಿಯ ಹಾಲಿನಿಂ ಪೊರೆಯೊತ್ತಿ ದುದ್ದಿನ ಬಿಳಿಯ ಬೇಳೆಯಿಂ ಕಲ್ಲೊಲ್ಲರೆದು . . . ಸಂಪಳೆ ಮಾಳ್ಪುದು (ಸೂಪಶಾ. ೦-೭೦) . [ಪೊರ್ೆ + ಒತ್ತು₁]

**ಪೊರೆವತ್ತಿಸು** (ಕ್ರಿ) . ಪದರಗಳನ್ನು ಕೂಡಿಸು : ಪೊರೆವತ್ತಿಸಿದನೊಪಳಿಯಂಬರವಿದು ನೆಱೆ ಪಱಿಗಾಬಂದು ಬಿದಿ ನವನೀಲಾಂಬರದಿನೆನೆ ತೀವಿ ಕವಿವಂಬರಮನದಂ ನೀಲಜಲದಮೇಂ ರಂಜಿಸಿತೋ (ಪ್ರಭು. ೦೯-೦೩). [ಪೊರ್ೆ + ಪತ್ತಿಸು]

**ಪೊರೆವಿಡಿ** (ಕ್ರಿ). ಸೇರು ; ಸಮೀಪಿಸು ; ಹತ್ತಿರವಿರು : ಪಿರಿಯ ಕೆಱೆಯೊಳಗೆ ಬೆಟ್ಟದ ಪೊರೆವಿಡಿದನ್ಯೆಯ್ದೆ ತೋಂಟಗಾಣಮುಂ ಮಹದೇಹರ ಮಲ್ಲಿಕಾರ್ಜುನದೇವರ ತೋಂಟ (ಶಾಸನ. XI–i, ೬೫–೨೬ : 1049). [ಪೊರ್ೆ + ಪಿಡಿ₁]

**ಪೊರೆವಿಡು**, ಪರೆಬಿಡು, ಪೊರೆಬಿಡು, ಹೊರೆಬಿಡು (ಕ್ರಿ). ೧. ಪದರವನ್ನು ಕಳಚು ; ಬಿರಿ : ಪೊರೆವಿಡ ಸೋಂಕಿ ತೆಂಕಣೆಲರೂದಲೊಡು ಸ್ಫುರದಗ್ರಭೂಜಮಂಕೆಃರಿಸಿರೆ (ಅಜಿತಪು. ೬-೬೩). **ಪರೆಬಿಡು** : ೨. (ಹಾವು) ತನ್ನ ಹಳೆಯ ಚರ್ಮವನ್ನು ಕಳಚಿಕೊಳ್ಳು ; ನಿರ್ಮೋಕವನ್ನು ಬಿಡು ; ಪರೆ ಬಿಟ್ಟ

ಹಾವಿನಂತೆ ತಾನು ಹೊಸಬಾಳನನ್ನು ಹೊಗುತ್ತಿದ್ದಂತೆ ಅವನಿಗೆ ಭಾಸವಾಯಿತು (ಮುಜಮು. ೨೭)· ಪೊರೆಬಿಡು : ೨. ಉದಕವು ಪೊರೆಯನು ಕಳಚುವುದಾದರೆ ಉರಗವು ಪೊರೆಬಿಡುವ ಹಾಗೆ ಬೆಳ್ಳಡೆಯಾಗುತಲಿದ್ದವು ಸತಿಯರ ನೀರಾಟವಾಡುವ ಮೈಗೆ (ಶಂಕಾಚ. ೦೧೧-೬) ; ಪೊರೆ ಬಿಟ್ಟ ಹಾವಿನಂತೆ ದೇಹವನ್ನು ತ್ಯಜಿಸಿ ಹೊರಟುಹೋದನೆಂದರೆ ಮತ್ತೆ ಅವನಿಗೆ ಪುನರ್ಜನ್ಮವಿಲ್ಲ(ಜಗಜ. ೩೬). ೩. (?) : ತನಿವಣ್ಣಂ ಪೊರೆಬಿಟ್ಟು ಕುತ್ತೆಸಟ್ಟಗಿಳಿತ್ತಿದೋಡಿ ನಿಂದೂಡೆ ಪಬ್ಬಿನಿಯೊಳ್ಗೋಸಗೆಯುಂಡು ಪಾಡುವಳಿಯಂ ಚಂಡಾಳಚಾಳಾಕಳೆಧ್ವನಿಯೊಳ್ ಮಂದ್ರತೆಯಂ ತಗುಳ್ಚಿ ಕಿವಿಯೊಕ್ಕೀ ಸಂಗದಿಂ ಸೌಖ್ಯಸಾಯಾನಿಕಂ ತಾನೆನಿಸಿತ್ತೊ ಸದ್ಮವನೆಯೊಳ್ ಸುಪ್ರಾತಗೀತಾನಿಲಂ (ಅನಂತ. ೯-೩೯). ಹೊರೆವಿಡು : ೨. ಹೊಡೆಯ ವಜ್ರಾ ಹಜಾವುವೇ ಕೀಸೆ ನೆಳಲು ಹೊರೆಬಿ [ಜೆಕೊಂ. ೧]ಡುವುದೇ (ಸಿದ್ಧರಾ. ೬-೪). [ಪೊರ್ಕ + ಬಿಡು₁]

**ಪೊರೆವೋಗು** (ಕ್ರಿ). ಉತ್ಸಾಹವು ಕಡವೆಯಾಗು : ಪೊರೆವೋಗದ ಕಟ್ಟಾಯುಮುಮಂ ಒರೆವೋಗದ ಚಲಮುಮಂ . . . ನೋಟಕರಪ್ಪಿನಮಪ್ಪವರಿಂ ಪೊಗಟಿಸುವೆನೆಂದು ತಪಿಸಂದು (ಕಾಂತಿತ. ೯-೩೬ ಕ). [ಪೊರ್₄ + ಪೋಗು₁ (< ಪೋ₁)]

**ಪೊರೆಸಾರ್** (ಕ್ರಿ). ಹತ್ತಿರಕ್ಕೆ ಬರು; ಸಮೀಪಿಸು: ಚಿರಕಾಲ ಬೇಟವ ಮಾಡಿ ಮುಳ್ಕಂಗನೆ ಕರೆಯಟ್ಟಿದಾ ದೂತಿ ಬಂದು ಪೊರೆಸಾರ್ದು ಪೇಳ್ವಂತೆ ನೃಪನ ಕನ್ನೆಯೊಳೊಂದು ನರೆಯಿದ್ದುದು (ಚಕಕ. ೭೭-೦೧). [ಪೊರ್₄ + ಸಾರ್₁]

**ಪೊರೆಹುಲ್ಲು** (ನಾ). ಒಂದು ಬಗೆಯ ಹುಲ್ಲು: ಹಂಬುಹಾವಕಹುಲ್ಲು, ಪೊರೆಹುಲ್ಲು (ಪ್ರ.ಶಿ. ೦೧-೨೧೦). [ಪೊರೆ₁ + ಹುಲ್ಲು (< ಪುಲ್)]

**ಪೊರ್ಕುರ್** 'ಪೊಕ್ಕುಟು' ನೋ.

**ಪೊರ್ಕುಳ್** 'ಪೊಕ್ಕುಟು' ನೋ.

**ಪೊರ್ಕುಳಿ** 'ಪೋರ್ಕುಳಿ' ನೋ.

**ಪೊರ್ಕುಳಿಗೊಳ್** 'ಪೋರ್ಕುಳಿಗೊಳ್' ನೋ.

**ಪೊರ್ಕುಳಿಯಿಕ್ಕು** 'ಪೋರ್ಕುಳಿಯಿಕ್ಕು' ನೋ.

**ಪೊರ್ಕುಳಿವಕ್ಕಿ** 'ಪೋರ್ಕುಳಿವಕ್ಕಿ' ನೋ.

**ಪೊರ್ಕುಳಿವುಗು** (ಕ್ರಿ). ಕದನಕ್ಕೆ ಇಳಿ; ಯುದ್ಧಕ್ಕೆ ತೊಡಗು : ಎಕ್ಕಯೊಳೊಕ್ಕು ಪಳಂಚುವ ಪಾಂಗಿಂ ತಕ್ಕು ಮಿಗಲ್ಕೆಕ್ಕತುಳಿ ಪೊರ್ಕುಳಿವೊಕ್ಕು ಕರಂ ಪಾಡಾಪಾಡಿಯೊಳಿಬಿದಿಬಿದರ್ ಕವ್ಯೊಳಗೆ (ಚಜುಚ. ೬-೨೦). [ಪೊರ್ಕುಳಿ (< ಪೋರ್ಕುಳಿ) + ವುಗು (< ಪುಗು)]

**ಪೊರ್ಕುಟ್** 'ಪೊಕ್ಕುಟ್' ನೋ.

**ಪೊರ್ತು** 'ಪೊಟ್ಟು' ನೋ.

**ಪೊರ್ತುಗೀಜ** 'ಪೋರ್ಚುಗೀಸ್' ನೋ.

**ಪೊರ್ದಿಗೆ** 'ಪೊರ್ದುಗೆ' ನೋ.

**ಪೊರ್ದಿಸು**, ಪೊಂದಿಸು, ಪೊದ್ದಿಸು, ಹೊಂದಿಸು, ಹೊದ್ದಿಸು₁ (ಕ್ರಿ). ೧. ಸೇರುವಂತೆ ಮಾಡು; ಸೇರಿಸು; ಕೂಡಿಸು : ನಿನ್ನಂ ರಸಾತಲಮಂ ಪೊರ್ದಿಸದಾಯ್ತುದೇಕೆಳೆ ಮರುತ್ತೀಕದೊಯ್ಕುದಾಯ್ತು (ಶಾರಂಗ. ೩೭೨); ಕಿಸುವಂ ಮೂಲಿಕೆಯಂ ಪೊರ್ದಿಸೆ ನಗೆಯೊಳೆ ಹೇಮಮಪ್ಪ ತೆಱದಿಂ ದುಃಸಂಕಿಸದೆ ವರಧರ್ಮದೊಳ್ ಕೂರ್ತೆಸಗುವನರನುಂ ವಿಶೇಷಸುಖಿಯಾಗಿರ್ಕುಂ (ಧರ್ಮಾಮೃ. ೯-೩೯). ೨. ಉಂಟುಮಾಡು : ಮೊದಲೊಳ್ ರಾಜ್ಯಾಭಿಷೇಕ ಪ್ರಬಲಜಲಮೆ ೭ರ್ಚಿತ್ತು ದಾಕ್ಷಿಣ್ಯಮಂ ಹೋಮದ ಧೂಮಂ ಚಿತ್ತದೊಳ್ಕೊಟ್ಟನೆ ಮಲಿನತೆಯಂ ಪೊರ್ದಿಸಿತ್ತು . . . ಎನಲ್ ದುಷ್ಕರಪ್ಪರ್ ನೃಪಾಲರ್ (ಶಾರಂಪು. ೩೩೪). ಪೊಂದಿಸು : ೧. ರಘುವರಂ . . . ಮಿತ್ರ ಸದ್ಭಾವದಿಂದವರವರ ನೋಡಿ ಸೌಮಿತ್ರಿಸಹಿತಾವವಂ ಪರಿಹರಿಸಿ ಕಾತಗುರ ಮಿತ್ರವಂಶೋತ್ತಮರ ಸಂಸ್ಕಾರವಿಧಿಯಿಂದ ಪೊಂದಿಸಿದನೊಂದುಗೂಡಿ (ಜಜು. ೨-೫೯). ೩. ಅಳವಡಿಸು ; ಹಚ್ಚು : ಒಂದೆಡೆಯೊಳಗೊರ್ವ ಗಟ್ಟಿವಳಿತಿ ಸಿರಿಗಂಧವ ಏಟನುರದೆಡೆಗೆ ಪೊಂದಿಸಿ (ಶಂಕರ. ೨-೩೪). ಪೊದ್ದಿಸು : ೨. ನಿರ್ಮಲತಪಸ್ವಿಗಳ ನಿಶ್ಚಲಹೃದಯಮಧ್ಯಪಂಕೇಜಾತದ ಗದ್ದುಗೆಯೊಳೆಸವ ಚಿದ್ರೂಪನಂ ಜಗದಜೆಯೆ ದೊದ್ದೆಯೊಳ್ಕೂಡಿ ತೀರ್ಗುದುರೆಯಂ ಪೊದವುದಂ ಪೊದ್ದಿಸಿದ ಪಾರ್ಥನಾರಿದರೊಳೆನಲು (ಶ್ರೀಪುರಾ. ೩-೯). ಹೊಂದಿಸು : ೧. ಅಸಮಸದುಭಕ್ತಾಂಘ್ರಿಗಳನರ್ಚಿಸಿ ಸಮಸ್ತಾಂಗಂಗಳಂ ಹೊಂದಿಸಿ ನಮಿಸಿ . . . ಬಸವರಾಜನು ಮುನ್ನ ತಾಂ ಮುದ್ರಿಸಿದ ಮುಸುಕಂ ತೆಗೆಯಲು (ಬಸಪು. ೩೬-೩೬); ಹಳೆಯದರ ಅಂದವನ್ನು, ಹೊಸದರ ಚಂದವನ್ನು ಹೇಗೆ ಹೊಂದಿಸುವುದು (ಕಕ್ಕೂಕು. ೩೦೯)· ೪. ಅಣಿಮಾಡಿಕೊಳ್ಳು ; ಜೊತೆಗೂಡಿಸಿಕೊಳ್ಳು : ಅವಳು . . . ಎರಡು ದೋಣಿಗಳನ್ನು ಹೊಂದಿಸಿಕೊಂಡು ಅವನನ್ನು ಸುರಿಯಾದ ಸ್ಥಳಕ್ಕೆ ಕರೆದುಕೊಂಡು ಹೋಗಿ ಉಪಚರಿಸಿದಳು (ಐಂಕಕು. ೨೨೦) ; ಸರಸಮ್ಮ ಸಗಣಿ ಹೊಂದಿಸಿ ಅಡಿಗೆಮನೆ ಮೊದಲು ಸಾರಿಸತೊಡಗಿದಳು (ಕುಸುಕು. ೯೦) ; ನಾಳೆಯ ಕೆಲಸಕ್ಕೆ ನಾನು ದುಡ್ಡು ಹೊಂದಿಸಿಕೊಳ್ಳಬೇಕು (ಅದೇ). ೫. (ವ್ಯವಹಾರ, ಅಭಿಪ್ರಾಯಭೇದ ಮೊದಲಾದುವನ್ನು) ಇತ್ಯರ್ಥ ಮಾಡು ; ತೀರ್ಮಾನಿಸು ; ನಿರ್ಣಯಿಸು : ಈ ವ್ಯಾಪಾರವನ್ನು ನೀವೇ ಹೊಂದಿಸಿ ಕೊಡಬೇಕು (ಅದೇ). ೬. (ಧಾರಣೆ ಮೊದಲಾದುವುಗಳನ್ನು) ಅನುವು ಮಾಡಿಕೊಡು ; ಕುದುರಿಸು : (?)· ೭. ಸರಿದೂಗಿಸು : ಭೂಪತಿಯು . . . ರೇಖಾಪತ್ರವನ್ನು ಹೊಂದಿಸಿ ಹೋಲಿಸಿ ನೋಡುತ್ತ ಕುಳಿತು ಬಿಟ್ಟನು (ಇಶ್ವಕ. ೨೩೪)· ೮. ಒಪ್ಪಮಾಡು ; ಅಣಿಗೊಳಿಸು : ಅವರು ಗೂಡಿನಲ್ಲಿ ದಬ್ಬಿಗಳನ್ನು ಅಂದವಾಗಿ ಹೊಂದಿಸಿ ಇಟ್ಟಿದ್ದಾರೆ (ಅದೇ). ಹೊದ್ದಿಸು₁: ೧. ಬದ್ಧನು ಭವಾಂಬುಧಿಯೊಳುದ್ಧರಿಸುವರ ಕಾಣೆ ಹೊದ್ದಿಸುವರಿಲ್ಲಾದಿರುದ್ರನು ನಿಮ್ಮಾಣೆ (ರೇಣ್ಕಾಕೋ. ೬-೦೧) ; ಇದ್ದರೆಯು ರಣವಿಜಯಮಹಿತೆಗೆ ಹೊದ್ದಿಗರು ದ್ರುಪದಾದಿರಾಯರ ಹೊದ್ದಿಸಲು ಬೇಡವರಿಗಂಜುವೆನುತ ನೂಕಿದರು (ಕುವ್ಯಾಶಾಂ. ೬-೨೦). ೯. ಧರಿಸುವಂತೆ ಮಾಡು ; ಧಾರಣೆ ಮಾಡಿಸು : ಇಂತಿವರು ಮುಟ್ಟಲರಿಯರು ತತ್ವದ ನಿಜಪನಜಿಯರು ಇಂತವರಿಗಿಷ್ಟಲಿಂಗವನು ಹೊದ್ದಿಸಲೇಕೆ (ವೀರಶವಾ. ೦೬-೭೦). ೧೦. ಸ್ಪರ್ಶಿಸುವಂತೆ ಮಾಡು : ನಯನದಾಹಾರವ ಜಂಗಮವ ನೋಡಿಸುವೆ . . . ಜಿಹ್ವೆಯಾಹಾರವ ಜಂಗಮವನೂಡಿಸುವೆ [ತ್ವ]ಚದಾಹಾರವ ಜಂಗಮಕ್ಕೆ ಹೊದ್ದಿಸುವೆ (ಬಸವ. ೪೨೪)· [ ಪೊರ್ದು + — ಇಸು₁ ]

**ಪೊರ್ದು**, ಪೊಂದು₁, ಪೊದ್ದು₁, ಪೊಟ್ಟು, ಹೊಂದು₁, ಹೊದ್ದು₁ (ಕ್ರಿ). ೧. ಕೂಡು ; ಸೇರು : ರವಿ ಪೊರ್ದಿದನಸ್ತಶೈಲಮಂ (ಶಂಕಶಾ. ೯-೯೬) ; ಆತಂ ಕೈಕೋಂಡುದಱಿಂ ಖಚಿಪೇಷ್ಟಗ್ರಾಮ್ಯತೆಯುಂ ಆತನಂ ಪೊರ್ದಿದ ಜವ್ವನಕ್ಕೆ ಸೌಂದರ್ಯಮುಂ... ಆದುದೆಂದು ಬಗೆಯುತ್ತಂ(ಶಾರಂಪು.೬೬೦), ಒಡವುಟ್ಟಿದರಂ ಕೊಂದವರಡಗಂ ತಿಂದವರ ನೆತ್ತರಂ ಬೆಸಲಗೆಯೊಳ್ ಕುಡಿವೀ ನಿಸ್ತ್ರಿಂಶತೆಯುಂ ಹಿಡುಬಿಯುಂ ಪೊರ್ದಿ ಕಲ್ಪನಾಗನೆ ಭೀಮಂ (ಗದಾಯು. ೬-೩೬). ೨. ಹೊಂದಿಕೊಳ್ಳು ; ಸರಿಯಾಗು ; ಜೋಡಿಯಾಗು : ಬೇಜೆವೇಱೆ ನಿಲೆ ಕಾರ್ದೊಳ್ ಕ್ರಿಯೆ ತಳ್ತು ಮುಂ ತೋಱೆ ಪೆಟ್ಟುವಗುಣಂ ಗುಣರೂಪದೆ ಪೊರ್ದುಗುಂ (ಕಶಾಂ. ೦-೦೩೯) ; ಪರಮಾರ್ಥಂ ಪೇಟೆವಟ್ಟಿರ್ದಧಿಕರಣಮಿವಿಂತಯ್ದುಱೊಳ್ ಶಬ್ದಸಿದ್ಧಿ ಸ್ಮರಣಕ್ಕಾದ್ಯಕ್ಕಾದಾತ್ತಪ್ರಕರಣಗುಣನಾವ್ಯಕ್ತಿಯಿಂ ಪೊರ್ದಿ ನಿಲ್ಕುಂ (ಶಾಬ್ದ. ೦-೬)· ೩. ಹತ್ತಿರಕ್ಕೆ ಬರು; ಸಮೀಪಿಸು; ಬಳಿ ಸಾರು : "ಪೊರ್ದು-ಸಮೀಪೇ (ಹತ್ತಿರಕ್ಕೆ ಹೋಗು)" (ಕಮಧಾ); ಪಸರಿಸಿದ ಪದ್ಮರಾಗದ ಪೊಸಗೆಂಪು ಮಾಂಸಮೆಂದು ಮುಂ ಕರ್ದುಕಲ್ಚಾಟಿಸಿಯುಂ ಬಟಿಕದನುರಿಯೆಟಿಸಂಕೆಯಿಂ ಪೊರ್ದದಿರ್ದುವೀ ಮತ್ಸ್ಯಂಗಳ್ (ಅಂಶ್ರ. ೦೨-೦೨೨); ಕರ್ಚಿನಂತೆ ಪೊರ್ದಿದತಂ ಕಿಡಿಸುವುದು (ಧರ್ಮಾಮೃ. ೯·೦೬೩). ೪. ತಾಕು ; ತಟ್ಟು;

ತಗ್ಗಲು : ಹೀನಬುಧನನಧಿಕಬಲಂ ತೊತ್ತುಟದುಟ್ಟದನೆಂಬ ಲೋಕದ ಪಟು ಪೊರ್ದವೆ ಮಾಣ್ಗೆ ಧರ್ಮಯುದ್ಧದೊಳೆನಗಿಂ (ಅಂಕ. ೧೪-೧೦೨) ; ಶೀಲಾಲಂಕೃತೆಯಂ ಗುಣಮಾಲಾಲಂಕೃತೆಯನಾ ಮಹಾಸತಿಯಂ . . . ಪೆಸರ್ಗೊಳೆ ಬಾಲೆಯರಂ ಖಳಕಲಂಕವೇಂ ಪೊರ್ದುಗುಮೇ (ಅಜಿ. ೧-೬೪); [ವ]ಲ್ಮೀಕಪುರವೆಂಬುದಾದಿಯ ಪೆಸರ್ ತನಗೆ ಕಲ್ಪಮಪ ಯುಗಧರ್ಮವೆಯ್ದೆ ಪೊರ್ದದು ತನಗೆ (ಶಂಕರ. ೯-೪). ೫. ಅಂಟು; ಹತ್ತು : ಪಾವರೆ ನೀರಂ ಪೊರ್ದದಂತೆ (ಧರ್ಮಾಮೃ. ೩-೦೩೯). ೬. ಹೋಗಿ ಸೇರು ; ತಲಪು : ಅದು ಸಂಧ್ಯೋಪಾಸ್ತಿಗೆ ಪೊರ್ದಿದಪುದು ಮಾನಸಸರಕ್ಕೆ ಮಿಗಾಗಳಿದೆಂಬವೊಲದಿನಾಪ್ತರಾಶಿಯಂ ಪೊರ್ದಿದತ್ತು ಸಪ್ತರ್ಷಿ ಮಂಡಲಂ ಕ್ರಮದಿಂದಂ (ಶಾಂತೀಶ್ವ. ೦೩೯). ೭. ಪ್ರವೇಶಿಸು : ವಾರಿಜಷಂಡವಮಂ ಪಡೆವು ಪೊರ್ದುವವೊಲ್ ಕಳಹಂಸೆ ಶಿಪ್ರೆಯಂ ಸಾರವಿದೆಂದು ಪೊರ್ದುಗುವೆ (ಧರ್ಮಾಮೃ. ೯-೨೦೨) ; ಎಳೆಸಿ ಪಿಪಾಸೆಯಂ ಮೃಗಚಯಂ . . . ಕಚ್ಛರಜ್ಜುಲವಿಹಗಂಗಳೊಳ್ಳಿರಿವುಗೇಳ್ದಿರದೊಯ್ಯನೆ ಪೊರ್ದಿ ಪೀರ್ವುವಾ ಸಲಿಲಮನೆಂದೊಡೇವೊಗಟ್ಟಿನಾ ವಿಪುಳಾತಟನೀಜಲಾಚ್ಛವಂ (ಕುಸುಮಾ. ೦-೫೦) ; ಕಾಮಜ ನಿಜಪುಷ್ಪಸಾಯಕದಿಂದೆಸಲಾಯತಗಿಡದಾ ಸರವ ಕಾಯವ ಪೊರ್ದಲೀಯದೆ ಚರಣದೊಳಂತ ಶ್ರೇಯಾಂಸ ಜನರ ವಂದಿಪನು (ಅಂಜನ. ೦-೦೦). ೮. ಆಶ್ರಯಿಸು ; ಅವಲಂಬಿಸು : ಚಂದ್ರನೊಡೆದುದು ಕಂಡುದಜಂ ಸದ್ಧರ್ಮದ ಮೊದಲ ಪೊರ್ದಿದ ಪಾರ್ಗದಿಂ ಬೆಳೆಯೊಳ್ ಪುಲ್ಗಳ್ ಪಲವಕ್ಕುಂ (ಧರ್ಮಾ. ೬೬-೦೪); ಆನೆಂತು ತತ್ವಜ್ಞನಾದೆನ್ನ ಪೊರ್ದಿವ ಜನಂಗಳುಮಿಂತೆ ತತ್ವಜ್ಞರಕ್ಕೆಂದು . . . ತತ್ಸ್ವೋಪವೇಶಂಗೆಯ್ದಂ (ಶಾಪುಂಪು. ೩) ; ಅಲ್ಪಬುದ್ಧಿಗಳ್ ರಾಗಿಸಿ ಪೊರ್ದಲೇಂ ಗಳ ಕುದ್ಯೆಪದೊಳಂ ಫಲಮಾಗಲಾರ್ಪುದೇ (ಧರ್ಮಾಮೃ. ೬-೬೪). ೯. ಪಡೆ ; ಗಳಿಸು : ಪಡಿವಡಸ್ತೋೞ-ಪೊರ್ದಿ [ಪಾಠಾಂ. ಪ್ಡ] ದೊಂ (ಪದ್ಮಾ. ೬೬-೮) ; ವಾಗಳೇ ನೀನುಚಿತಂ ನಂಬನುಕ್ರಮದಿಂದಂ ದೊರೆವೆತ್ತ ಸಪ್ತಪರಮಸ್ಥಾನಂಗಳಂ ಪೊರ್ದುವೈ (ಅಂಕ. ೩-೬೩); ಅನಂತಚತುಷ್ಟಯವುಮಂ ಪೊರ್ದಿ ಪೊರ್ದದಿರು ಸಂಸ್ಕೃತಿಯಂ (ಅಜಿ. ೬ ೬೩). ೧೦. ಉಂಟಾಗು; ಪ್ರಾಪ್ತವಾಗು; ಒದಗು : ನೆರೆಯಲ್ಕೆನ್ನ ದಯಪ್ರಭಾವವನೆ ಪಾರ್ದೊರೆಂದದಿಂ ಜೀಮಿರ್ಪ ರಥಾಂಗಪ್ರಚಯಕ್ಕೆ ಪೊರ್ದುವ ವಿಯೋಗವ್ಯಸ್ಥೆಯಂ ವೇಗದಿಂ ಪಿರಿವಂ ಬಾರಿಸದೆನ್ನ ತೇಜದೊಡವಿನ್ನೇ ಬಾರ್ತೆಯೆಂದೆಯ್ದೆ ತನ್ನುರು ತೀವ್ರಾಂಶುವನೀಂತು ಬಿಟ್ಟನೆನೆ ತಣ್ಪಂ ತಾಳ್ದನಾ ಭಾಸ್ಕರಂ (ಕುಸುಮಾ. ೯-೩೨). **ಪೊಂದು**1 : ೧. ಅಶುಚಿದೇಹಮನಿದನಿನ್ನನುಪಮಪೊಂದೆನಲಾಗದು ಜಿನಮತದೊಳ್ಪೊಂದಿಯುಪಾವಿನೊಳ್ಳಿಗಟ್ಟ ನರಂ (ಧರ್ಮಾಮೃ. ೪-೭೬೪). ೨. ಪೆರ್ಮೆಗೆಯೊಳ್ ಬಲಮೇದು ಪೊಂದಲುಗುಂ (ಕಬ್ಬಿಗ. ೬೭); ಕರೆದವಂ ಬಂದಿಲ್ಲ ಬಂದವನು ಪೊಂದಿಲ್ಲ (ಶಾಂತ.ಪು. ೩೩-೩೬). ೯. ಸುಖವಂ ಪೊಂದೆಂದು ಪಾಟಿಸುತಿರ್ಪನುಂ (ಧರ್ಮಾಮೃ. ೬-೭೦); ಹರಿಯ ಪಾದಜೆಯಳಿರಕದಿಂ ಪಾವನ ಪೊಂದಿ (ಕಕು ೭-೩); ಪುರೋಹಿತರ ಸಂಗಡ ಬ್ರಹ್ಮಾರ್ಚನೆಯಂ ಮಾಡಿಸಿ ಆಶೀರ್ವಾದಮಂ ಪೊಂದಿ (ಕ್ಯಾಟ. ೦೯೬೩, ೯೬-೯; 1824). ೧೦. ಕಂದರ್ಪನರ್ಧಾಂಗಿಯು ಪೋಲೆ ವೈಧವ್ಯ ಪೊಂದದೊಲ್ ಮಾಡು (ಮೋಹತ. ೯-೩೯); ಒಂದೆಡೆಯೊಳಗೊರ್ವ ನೀಲಿಕ್ ವಿಟನ ಮೇಲ್ಪೊಂದಿದ ಮೋಹವ ಬಿಡದೆ ಕಂದರ್ಪಕೇಳಿಯೊಳೋಲಾಡುತಿರೆ (ಕಂಪು ೭-೦೩೦). ೧೧. ಸಂಭೋಗಿಸು: ಬೇಟದ ಲಲ್ಲೆಯು ಬಲ್ಮೆ ಪತ್ತಿ ಸುತ್ತಿಸೆ ಪುರುಡಿಟ್ಟುಕೈಸೆ ಬಿಯಮಾಡಿ ಪೊಂದದವಂ ಬೊಜಂಗನೇ (ಅಂಕ. ೦೨-೦೬). **ಪೊರ್ದು**2: ೧. ಎಲ್ಲದ ಮನುಜರ ಕರೆಸೋದು ರೊಕ್ಕ ಪೊ[ಪಾಠಾಂ. ಹೊ]ದ್ದಿದ ಜನರನು ಬಿಡಿಸೋದು ರೊಕ್ಕ (ಪ್ರಭಂತ. ೨-೪೮-೩); ಬರಿಪಾತಿನಲ್ಲಿ ನೆರೆಯಲ್ಕೆಳಸಿ ಬಹ ಕಪಟವಿಟಂಗಳ ನಿಷ್ಫಲಮನುಕ್ರಮರಿದು ಲಲ್ಲೆಯಂ ಬಿಸಿಲಿಗರಿಸಿನ ತೊಲಲ್ದಂತವರನೆಲ್ಲಿಯುಂ ಪೊದ್ದದ ವಿದಗ್ಧೆಯರ ಮಂದಿರಗಳಲಿ ಸಿಂಜವ್ವನಗಳೊಪ್ಪಿರವೆ (ಕಂಕಾಲಾ. ೩-೬-೯೩). ೩. ಕಳವು ಹಾದರಮೆಂಬಿವೆಮ್ಮ ಶಿವಭಕ್ತಸಂಕುಳದೊಳಗೆ ಪೊದ್ದಲರಿಯವು (ಪಂಪ. ೭-೨೯); ಹಡಪ ಕಾಳಾಂಜಿ ಪೊಗಟ್ಟಿಗೆ. . .ಬಿಜ್ಜಣಿಗೆಗಳ ಪಿಡಿದೊಗೆಗ್ಗೆಪ ಬಿಂಕಗಾತಿಯರಾ ಪೊಡವಿಯಾಣ್ಮನ ಪೊದ್ದಿಹರು (ಕಂಪು. ೦-೭೬); ಕರಣಗಳ ಕಾಳ ಟಪೆರಗದ ಗುರುಲಘುತ್ವಗಳಳಿದ ತ್ರಿಗುಣಗಳುರುಬೆ ಪೊದ್ದದ ಮಾಯೆ (ಗಗನ. ೦೬-೩). ೪. ಒಳಗೆ ಭಾಳೇಕ್ಷಣನ ನೆನಹು ತೀವಿರೆ ಕರಂ ಚಳಿ ಪೊದ್ದದವರನೆಂತಿರ್ದೊಡಂ ಭಕ್ತರೆಂ (ಷಟ್ಪ. ೭೯. ೩೨-೦೬). ೬. ಹೊಲಲ ಬಳಿಯ ಪೊದ್ದಿರ್ದ ತುರುಕರ . . . ಸಾಸಿರಮಾಗರಿದಾಕ್ಷಣ ದಳಪತಿಯಡಿಗೊಪ್ಪಿಸಿದರು (ಕಂಪ. ೧೩-೩೩). ೮. ಎಲೆ ಮುನಿನಾಥ ನಾನಿನಿತು ಕಾಲಪಲ್ಲದ ಸಮಯವಾ ಮುಂದಣ್ಯುದೇ ಪೊದ್ದಿ ಗತಿಗೆಟ್ಟು ಪೋದೆನು (ಸಮ್ಯಕ್ತ್ವ. ೯-೦೯). ೧೨. ತಳೆ; ಧರಿಸು: ರುದ್ರಾಕ್ಷಭೂಷಿತವನು ಹೊದ್ದಿರಲು ದೇಹದೊಳಗಿದ್ದ ಪಾಪಗಳು ಬಯಲಾಗಿ ಶಿವನು ತಾನಿದ್ದಲ್ಲಿ ಬರುವ (ಸಣ್ಣ. ೦೨೦).

**ಪೊಟ್ಟು** : ೧೦. ವಿಶದ್ಗುಣಪದ [ಪು]ದಿದೊಡಂ [ವೀ]ತಿ [ಸಾ] × [ರ್ತ್ಯ] ದೊಳ್ ಪೊಟ್ಟುದಿನ್ನಪ್ಪಸಕಂ ತ್ರೈಗವಿರ್ಸ ಸನ್ದರ್ತ್ಯ [ಪಾ]ಚಮಹಿಮೆಯಂ (ಶಾಸನ. XI-I,೬೦-೩; 1026). **ಹೊಂದು**1 : ೨. ತಮ್ಮತಮ್ಮೊಳಗೆ ಹೊಂದಿದರೆ ಸಂತೋಷದಿಂದ ವ್ಯವಹಾರ ಮಾಡಬೇಕು (ಬುಂಕಾಯ.೩-೬೩) ; ಗತಿಯು ತನ್ನ ಧಂದದಲ್ಲಿ ಭಾವ ತನ್ನ ಬಂಧದಲ್ಲಿ ಹರಿವನಿಲ್ಲ ಹೊಂದದಲ್ಲಿ ಬಲ್ಲೆ ಎಲ್ಲು ಒಂದರಲ್ಲಿ (ಅರಳು. ೦೬೯-೦೦). ೪. ಭೂಪ ಹೊಂದದು ಪಾಪವೆಮ್ಮಂ (ಜನ್ನ. ೩೩-೭). ೯. ಹೊಂದುತಿಪರಾ ಪುರುಷತತ್ವದಿ ನಿಂದು ತೋರುತಲಿರ್ಪ ಭುವನವ (ಗಗನ. ೯-೬೩); ಕಾಲಕ್ರಮದಲ್ಲಿ ಅದು ವಿಜಯನಗರವೆಂಬುದಾಗಿ ಬದಲಾವಣೆ ಹೊಂದಿತು (ಕೃದೇಪ. ೨). ೧೩. ಕುದುರು; ವ್ಯವಸ್ಥೆಯಾಗು: ದುಡ್ಡು ಹೊಂದಿರಲಿಲ್ಲಪ್ಪ . . . ಇಷ್ಟೊತ್ತು ಹಣ ಕೈಗೆ ಬಂತು (ದೂರದ.೦೩೨). **ಹೊದ್ದು**1: ೧. ಇತ್ತ ಬಾ ಎನ್ನದವನ ಹತ್ತ ಹೊದ್ದಲು ಬೇಡ (ದೇರಾಪ. ೨೦-೯೪) ; ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ಹೊದ್ದುವಂತೆ ಮಾಡಾ ನಿಮ್ಮ ಧರ್ಮ (ಮಹಾದೇ. ೬. ೦೯-೦೪); ಅರವಿಂದಸಖ ಹೊದ್ದಿದನು ಮಲ್ಲನೆ ಪಶ್ಚಿಮಾಂಬುಧಿಯ (ಕುಮಾರವ್ಯಾ. ೦೯-೩೩). ೨. ಸಮ್ಯಕ್ತ್ವತದಲಿ ಕ್ಷೀರವಾದೊಡೆ ಹೊದ್ದುವುದು . . . ಶುದ್ಧರಾಕ್ಷಸರನ್ನವಿದ ತಾ ಶುದ್ಧಭೂಸುರರುಂಬರೇ (ಸುಪ್ರ. ೨೩-೦೬); ಹೊದ್ದಿ ನಿಲುವುದ ದರ್ಪಣದ ಮೇಲುದ್ದುರುಳಿ ಬೀಳ್ವಂತೆ ನಿಮಿಷದಿ ಬಿದ್ದು ಹೋಗುವ ಕಾಯವು (ಜಾನ. ೬೬). ೩. ನೋಡುವರೆ ಕಾಣ ಬರುತ್ತಿದೆ ಮುಟ್ಟುವರೆ ಕೈಗೆ ಸಿಲುಕದು ಹೊದ್ದುವಡೆ [ಪಾಠಾಂ. ಹೊದ್ದಿದರೆ] ಸವಿಪಾವ ಹತ್ತೆಸಾರಿದಡತ್ತತ್ತ ತೋರುತ್ತಿದೆ (ಶಿವಶಂ. ೦೬೬-೬೩೦) ; ಸರಳ ಮಂಚವ ಹೊದ್ದಿ ಭೀಷ್ಮನ ಚರಣಕಮಲವ ಹಿಡಿದು ನೊಸಲಿನೊಳೊರಸಿಕೊಂಡನು ನಾದಿದನು ಕಂಬನಿಯೊಳಂಘ್ರಿಗಳ (ಕುಮಾರವ್ಯಾ. ೦-೩೦) ; ಹೊದ್ದಲೀಯದೆ ಬಾಣಂಗಳ ತಪ್ಪಿದನಿರುದ್ಧ ಮಹಾಬಲನ ಕೊಂಡಾಡಿ . . . ಎಚ್ಚನು ಸುಭಟಪ್ರಸಿದ್ಧ ಬಾಣಾಸುರನೆದೆಯ (ಮೋಹತ. ೩೩-೪೦). ೪. ದೇಶವೆಲ್ಲವನನ್ಯತ ಹೊದ್ದದಂದದಿ ಕೊಟ್ಟು ಕಾಶಿಯ ನಿವಾಸದೊಳು ಸತಿ ಸುತರ ಮಾಜಿ . . . ಖಣಪನುತ್ತರಿಸಿದ (ಹರಿಶ್ಚ. ೦೦ ಸಂಧಿ); ಕಕ್ಕುಲಿತೆ ಕುಂದೆಡರು ಬಡತನ ಸಿಕ್ಕು ರೋಗಾದಿಗಳು ಹೊದ್ದದ ಉತ್ಕಟದ ವರಪಿಯಬೇಕೆನೆ ಕೊಟ್ಟನಾ ಮಾಸಿಪ (ಕೌಶಿಂ. ೯೯-೩೯); ಜನನ ಮರಣಾದಿಗಳು ಹೊದ್ದದ ತೋಱು ತೋಱದ ಜಗದ ದೇವರ ದೇವನಿದ್ದನು ರಜತಶಿಖರಿಯಲಿ (ಕೊರ. ೦-೨-೦) . ೫. ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನು ಜಲಪದ್ಮಪತ್ರದಂತೆ ಹೊದ್ದಿಯೂ ಹೊದ್ದದಂತಿಹನು (ಷಟ. ೭) ; ಮನ ವಚನ ಕಾಯದೊಳಗೊಮ್ಮೆಯುಂ ಹುಸಿ ಹೊದ್ದ[ಪಾಠಾಂ. ರ್ದ]ವಂತೆ ನಡೆವ ಕಲಿಗಳಾರಯ್ಯ (ಹಂಪಾ. ೨-೩) ; ವ ಂನ್ನಿಸಿ ಚಂಬುಕಾಗ್ರವಿಡಿದದ ಬೆರಲ್ಗಳ ಹೊದ್ದಿ

ದಾವುರಿದೊಕ್ಕೆಗೆಯ್ಯ ಬದ್ದಿಸಿ ಬಿಡದೆ ಕಾಲುವೆಯ ತಣ್ಣೀರೊಳಗದ್ದಿದರವಳ ಹಸ್ತವನು (ಕೋಹಕ. ೨೮-೦೯). ೬. ಎದ್ದು ನಡೆವ ಬಲಜಲಧಿಯ ಕಡೆಯನು ಹೊದ್ದಲಾಱದೆ ಖಗನಿವಹ ಎದ್ದವು ಕೆಲವು ವಕಾಗ್ರದೊಳಗಿಲ್ಲಿ ಬಿದ್ದವು ಕೆಲವು ನೆಲದೊಳು (ಕುಭಾಶಾಂ. ೩೭-೬೦). ೭. ದೊದ್ದೆ ಕೆಗೆಯಲಿ ಪಾರ್ಥ ವವನಪರಿಸ್ಪರರಾದರೆ ಬರಲಿ ಸಮರವ ಹೊದ್ದಲಾಪರೆ ಹೊಗಲಿ ಹರಿ ತೋಱಲಿ ಸಹಾಯತೆಯ (ಕುಭಾ.ಶಾಂ. ೬-೨೦) ; ಹೊದ್ದಿ ಗೊಲ್ಲರ ಮನೆಯಲ್ಲಿ ದ್ದಷ್ಟು ಬೆಣ್ಣೆಯನು ಕದ್ದು ಮೆದ್ದುದಕ್ಕೆ ಹೊಟ್ಟೆ ತುಂಬಿತೆ (ಪುರಂತ. ೦-೯೯-೨). ೮. ನೀನೇಕೆ ಈ ನುಡಿಯೇಕೆ ಹೊದ್ದಿದರಂ ಹೋಗೆಂಬರೆ (ಜಸ. ೪-೩೪) ; ಸಾಲ ಸಾವಿರದೀವಿಗೆಯ ಹಂದಾಳಿಗಳಕದೆ ನೃಪರ ಮೋಱೆ ಗಳೋಳಿಗಳ ನೆಱೆ ತೊದ್ದಿ ಕತ್ತಲೆ ನಿಂದುದಲ್ಲಲ್ಲಿ (ಕುಭಾ.ಕ. ೦-೦೯) : ಅಸುರರೀತನ ಹೊದ್ದಿ ಜಗದಲಿ ಹೆಸರು ಪಡೆದವರಿಲ್ಲವೇ ಛಾಪಿಸಿದಡೀಯನೆ ಲೋಕಪಾಲತ್ವವನು ನೈರುತಿಗೆ (ಕೊರಣ. ೬-೯-೩೨). ೯. ಚತುರ್ವಿಧ ಪದವಿಯಂ ಹೊದ್ದದೆ ಫಲಭೋಗಂಗಳಂ ಮುಟ್ಟದೆ (ಅರಪ. ೩೦-೮೭) ; ಗದ್ದುಗೆಯೇಱೆ ಸತ್ಕಥೆಗೇಳೆ ಮುಕ್ತಿಯ ಹೊದ್ದುವರಾರು ನಿನ್ನಂತೆ (ಚಂಕ. ೨ ೩೪). ೧೦. ಇವರಿಂದ ಪಲವು ಲೇಸವಾಗೆ ಮಿಗೆ ಹೊದ್ದಿದವು (ಸೀಂರಿ. ರೀ. ೦೬೩-೯) ; ಹೊದ್ದಿದುತ್ಪಾತಗಳನೀಕ್ಷಿಸುತ್ತಿದ್ದನಾ ಮುನಿನಾಥನು (ಶಾಕ್ತಲ. ೪-೯). ೧೧. ಪರಿಣಮಿಸು ; ಫಲ ಕೊಡು : ಯುಕ್ತಿ ಹೊದ್ದದ ಶಿವ ಸ್ನೇಹಿಗಳ್ ಬರುತವಿರೆ (ತಿರುಕ. ರೀ. ೦೪-೦೨).

**ಹೊಂದಿಕೊಳ್ಳು**— ೧. ಸೇರಿದಂತಿರು ; ಕೂಡಿಕೊಂಡಿರು : ಪದ್ಮಬ್ಬ ರಸಿಯು ತಾನು ಕಟ್ಟಿಸಿದ ಬಸದಿಗೆ ಹೊಂದಿಕೊಂಡಂತೆ ಒಂದು ದಾನಶಾಲೆ ಯನ್ನು ಕಟ್ಟಿಸಿದಳು (ಕಬಾಶಿ. ೪೩೦) : ಅವರ ಮನೆ ನಮ್ಮ ಮನೆಗೆ ಹೊಂದಿಕೊಂಡಿದೆ (ರೂಢಿ). ೨. ಒಗ್ಗು ; ಹೊಂದಾಣಿಕೆಯಾಗು : ನಾರಾಯಣನಿಗೆ ಅನುಕೂಲವಾದ ಮನೆಯು ಅನಾಗಿದ್ದು ತುಂಬ ಹೊಂದಿ ಕೊಂಡಿತ್ತು (ಕಂಬಹು. ೦೨೩) : ಎದುರುಮನೆಯ ಮಗು ನನಗೆ ತುಂಬಾ ಹೊಂದಿಕೊಂಡಿದೆ (ರೂಢಿ).

[ದೇ.1 ತಮಿ. ಪೊರುಂದು, ಪೊರುತ್ತು : ಮಲ. ಪೊರುತ್ತು : ತುಳು. ಪೊರ್ದು, ಪೊಂದು, ಹೊಂದು : ಕೋತ. ಪೊತ್]

**ಪೊರ್ದುಗೆ, ಪೊಂದಿಗೆ, ಪೊಂದುಗೆ, ಪೊದ್ದಿಗೆ, ಪೊರ್ದಿಗೆ, ಪೊಟ್ಟುಗೆ, ಹೋದಿಗೆ, ಹೊಂದುಗೆ, ಹೊದ್ದಿಗೆ, ಹೊದ್ದುಗೆ** (ನಾ). ೧. ಸಹವಾಸ ; ಸಂಬಂಧ : ಅರಮ್ನು ನೋಡೆ ತೊಱೆಗಳ ನೀರುಂ ವಾರಿಧಿಯ ನೀರ ಪೊರ್ದುಗೆಯಿಂದಂ ಸಾರಂಗುಟ್ಟಪ್ಪವಪ್ಪುದು (ಧರ್ಮಾಮೃ. ೨ ೬೬) : ಸಂಬಂಧಮೊಂದು ಪೊರ್ದುಗೆ (ಕಶುದ. ೪೬೯. ೭ ವೃತ್ತಿ) ; ವರವತ್ಸ ದೇಶಮೊಂಬುಮುದ್ದರವತ್ಸದ ನಿಬಿಡವಾದ ಪೊರ್ದುಗೆಯಿಂದಂ ಧರೆಯೊಳು ಸುರಭಿಸುಖಮೆಂಬ ಪರಮಾಮೃತಮನೆಯ್ದೆ ಕಱೆಯುತ್ತಿರ್ಕುಂ (ಪಾರಪು. ೪ ೨೩). ೨. ಬಳಿ; ಹತ್ತಿರ; ಸಮೀಪ : "ಪೊರ್ದುಗೆ, ಪೊರೆ, ಪಕ್ಕಂ, ಸಹಂ, ಕೆಲಂ—ಈ ೫ ಸಮೀಪಮು" (ಕ.ಶಾ. ೬೪-೪೩೪) ; ಮೃಗಮೂರ ಪೊರ್ದುಗೆಯ ಬಟ್ಟೆಗೆ ಮೇಲನ ಕಾಲನಿಂ ಮರಳ್ದುವು ದಿನನಾಯಕಂ ವರುಣದಿಙ್ನಗಮಂ ಮಱೆಗೊಳ್ವ ಕಾಲದೊಳ್ (ಸೂಕ್ತಿಸು. ೯-೨೦). ೩. ಅಧೀನವಾದುವಂ : ಅಪ್ರಧಾನವಾದುದು : "ಉಪಾಗ್ರಂ, ಉಪ ಸರ್ಜನಂ—ಈ ೨ ಪೊ(ಹೊ)ರ್ದುಗೆ" (ಕಾಶಿಯು ೦೨೬-೬೮). ೪. ಆಶ್ರಯ; ನೆಲೆ : 'ಪೊರ್ದುಗೆವಡೆ' ಪರಾ. **ಪೊಂದಿಗೆ** : ೨. ಮಾವನ ವಾಕ್ಯ ಗಳಿಗಾನಂದಪುಳಕಿತನಾಗಿ ಖಳಪತಿ ಪೊಂದಿಗೆಯ ಹೊಂಬಟ್ಟಲಲಿ ಕರ್ಪುರದ ವೀಳೆಯವ . . . ಇತ್ತು (ಅಂಬಿಕಾ. ೦೬-೨೧). **ಪೊಂದುಗೆ** : ೧. ರಂಗ ಯೆಂದೆಂಬ ನೀಱೆಯ ಪೊಂದುಗೆಯೆಂದು ವಂದಪುದೊ (ಕಕಶಾಂ. ೨೯-೩೦). ೫. ಹೊಂದಾಣಿಕೆ ; ಸೇರಿಕೆ ; ಸರಿಹೊಂದಿರುವಿಕೆ : ಚಂದನಾಗರು ಏಲೇವರ್ಗ್ಯಂಗಸೌರಭ್ಯಪೊಂದುಗೆಯು ಮಾಟ್ಟದಪೂರ್ವಗಂಧವಂ (ಕೃಷ್ಣಕೃ. ೩-೩೦). **ಪೊದ್ದಿಗೆ** : ೧. ಪಲವು ಪೊದ್ದಿಗೆಗಳನಾಳಿದಾಸೆಯೆಂಬೆಳವಲೆಯ ಪಗ್ಗವ ಪಱಿಯಿಟ್ಟು ನೆಲದೊಳೊಂದೆಕೆ ಕೈವಶವಾಗದೆ ಬೀಸುವೆಲರಂತೆ ತೊಡ ಕಿಲ್ಲದಿಹನು (ಕರ್ಣಪ್ರ. ೦೦-೨೮). **ಪೊರ್ದಿಗೆ** : ೨. ಆ ನೆಲದ ಪೊರ್ದಿಗೆ ಯಲು ಸಿರಿಯುರದಲು ಕರಿಯ ಕೆಯಿ ಮ[ತ್ತ] × × ಪದಿನೈಯ್ಯು (ಎಕ. IX-I. ೦೩೯-೦೯; 1001). **ಪೊಟ್ಟುಗೆ**: ೨. ದೇವರ ಕೆಯ್ಯ ಪೊಟ್ಟುಗೆಯಲು ಬಿಟ್ಟ ಕೆಯಿ ಮತ್ತರು ನಾಲ್ಕು (ಕಶಿ. ೬೯-೮೩-೩೬; 1088). **ಹೊಂದಿಗೆ** : ೫. ಅಂದಂದಿನ ಹೊಂದಿ[ಪಾಠಾಂ. ಹೊದ್ದಿ]ಗೆಯ . . . ಕೆಡಿ ಸಲಱಿಯದ ಅಂಧಕರ ನೋಡಾ (ಬಸವ. ೬೬); ಒಂದು ಸಾವಿರದೊಂದು ಶತ ಹನ್ನೊಂದು ಪದಮೆಂಬ ಪರುಷದ ಸಂದ ಸಿರಿಯನು ಬಳಸಿದಿಪ್ಪತ್ತೈದು ಗತಿಯೆಂಬ ಹೊಂದಿಗೆಯ ಸೋಪಾನಗಳ ಬಲಿದಂದವಿಸಿಯಲ್ಲಮನ ಕರವಾ ನಂದಲೀಲಾಮೃತಸರೋವರವಾಯ್ತು ಜಗದೊಳಗೆ (ಪ್ರಭುಲಿ. ೨೮-೨೮) ; ಹೊಂದೀಗಿ ಮನಿಯಾಗ ಇರವೊಳ ಆ ರಮಣಿ ಚಂದ ಚಂದ ಮಂತ ನಡೆಸೂಳ (ಜೋಕಗೀ. ೨೨). **ಹೊಂದುಗೆ** : ೫. ಅಗಲಿ=ಹೊಂದುಗೆಯಾಗದಿರೆ (ಕಶುದ. ೬. ೦೯೩ ಟೀಕು). **ಹೊದ್ದಿಗೆ** : ೧. ರುದ್ರನ ಕಪಾಲ ತುಂಬಿ ಬುದ್ಧಿವಂತರೆಲ್ಲರು ಕಪಾಲದ ಕೊಳನುಂಡು ಬುದ್ಧಿವಂತರಾಗಿ ಎನಗಾ ಹೊದ್ದಿಗೆ ಬೇಡ (ಅಕ್ಕ ೪. ೦೯೯-೨೬೩); ಇದ್ದ ನೆಲೆಗಳೆಮಡುವ ಭಕ್ತಿಯ ಶ್ರದ್ಧೆಯಲಿ ವಿತ್ತಾನುಸಾರವ ಹೊದ್ದಿಗೆಯನಱಿದಱಿದು . . . ಅಳವಟ್ಟೊಡಾತನೆ ಶುದ್ಧಭಕ್ತಿಯನಱಿವನೈ (ಪ್ರಭುಲಿ. ೦೩-೩೮). ೩. "ಉಪಸರ್ಜನಮುಪಾಗ್ರಮೆನೆ ಹೊದ್ದಿ[ಪಾಠಾಂ. ದ್ದು]ಗೆಗೆ ನಾಮಮಕ್ಕುಂ" (ಚುಂಗರಾ. ೦೨೩ ೨೯). ೫. ಮುದ್ದಿಸಿ ಮುಂದಾಡುತೊಲೆದರಳೆಲೆಯನು ತಿವ್ದುವ ಕೊರಳ ದಂಡೆಯನು ಹೊದ್ದಿಗೆ ಮಾಳ್ಪನು ಮಾಗಾಯ ಮುಟ್ಟುತ ಪುದ್ದಾಡುತಿರ್ದನಾ ಮಗನ (ಚಂಕ. ೨೬-೨೯). **ಹೊದ್ದುಗೆ** : ೧. ಕಿಗ್ಗಯ್ಯ ನೀರು ತಟಾಕಕ್ಕೆ ಹೊದ್ದಿದುದುಂಟೆ ಅಱಿದು ಮಱೆದವಂಗೆ ಸಮಯದ ಹೊದ್ದುಗೆ ಏನು (ಕಪ್ಪಸಾ. ೨೩೬-೨೨). ೬. ಸಮೀಪದಲ್ಲಿರುವ ಪ್ರದೇಶ; ನೆರೆಹೊರೆ: "ಹೊದ್ದುಗೆಯೊಳುಮುಪಹ್ವರವೆಂದೆನಿಸಿರ್ಪುದು" (ಚುಂಗರಾ. ೦೩೯-೩). [ ಪೊರ್ದು + -ಗೆ ]

**ಪೊರ್ದುಗೆವಡೆ** (ಕ್ರಿ). ೧. ಸೇರು : ಕೂಡು ; ಬೆರೆ : ಜಗವಬಳಾ ಜನಕ್ಕೆ ಮಿಗೆ ವರ್ತಿಪ ಗರ್ಭದ ಚಿಹ್ನಜಾಳದೊಳ್ ಬಗೆವಡೆದೊಂದುಮಾ ಸತಿಯ ಭಾಸುರಮಪ್ಪ ಲತಾಂಗದಲ್ಲಿ ಪೊರ್ದುಗೆವಡೆದಿರ್ದುದಿಲ್ಲ (ಧರ್ಮಾ. ೧೩-೬೬) ; ಪುಂಡವೆಣ್ಣಳೊಳು ಪೊರ್ದುಗೆವಡೆಯದೆ ನಲ್ವೆಂಡಿರೊಡನೆ ಬೆರ ಸುವುದು (ಹರಿಶ್ಚ. ೯-೪೬). ೨. ಆಶ್ರಯವನ್ನು ಹೊಂದು,-ಪಡೆ : ಎಮ್ಮಯ ಜನ್ಮಭೂಮಿಯಿಂತಿಲ್ಲಿ ಪೊರ್ದುಗೆವಡೆದು ಬಾಳ್ವೆವೆಂದೆನುತೆ (ಸೌಂದರ. ೭-೨೬). [ ಪೊರ್ದುಗೆ + ಪಡೆ$_1$ ]

**ಪೊರ್ದುಗೆವೆಱು** (ಕ್ರಿ). ಹತ್ತಿರವಾಗು ; ಸಮೀಪಗತವಾಗು ; ಸನಿಹ ದಲ್ಲಿರು : ಕರ್ಣಾಗ್ರದೊಳ್ ಪೊರ್ದುಗೆವೆತ್ತ ಮುಷ್ಟಿಯುಂ ಮಂಡಳಿಸಿದ ಧನುವುಂ ದಿಟ್ಟಿಪಾಲೋಕಮುಂ ನೆಟ್ಟಗೆ ತೋಱುತಿರ್ದುವೆಂಬಂತಗಧರನಿಸು ತಿರ್ದಂ (ಜಗನ್ನಾ. ೯-೩೧). [ ಪೊರ್ದುಗೆ + ಪೆಱು$_1$ ]

**ಪೊರ್, ಪೊಲಿ$_1$, ಹೊಲಿ$_1$** (ಕ್ರಿ). ೧. ಹೊಲಿಗೆ ಹಾಕು : "ಪೊರ್- ಸ್ಯೂತೇ (ಹೊಲಿ)" (ಕಶಬ್ದಾ) ; ಅಡಿಯೊಳ್ ಪಾಸಿದ ಚರ್ಮರತ್ನಪಟಮು ತಚ್ಛತ್ರರತ್ನಂ ಬೆಡಂಗಿಡಿದೋರುತಿರೆ ಮುಟ್ಟೆ ಪೊಲ್ದ ತೆಱದಿಂದಿಂಬಾಗೆ ತನ್ಮಧ್ಯದೊಳ್ ಸೊಡರಿರ್ಪಂತಿರೆ ಚಕ್ರರತ್ನಮುದಱೊಳ್ ನಿರ್ಬಾಧ ಮಿರ್ದತ್ತು (ಆದಿಪು. ೧೩-೬೦) ; ಸೆರೆದೆಗೆಯೆ ಸೂಜಿಯಿಂ ಪೊಲ್ವಿರ್ದ ಕಯ್ಗಳಿಂ (ಕಾದಂಬ. ೨೬೦). **ಪೊಲಿ$_1$** : ೧. ಕುಪ್ಪಸದಂತೆ ದೆನ್ನಂ ಪತ್ತಿ ಕೆತ್ತುವರ್ ಸಿಪ್ಪಿಗಸಂತೆ ಪೊಲಿವರ್ (ಧರ್ಮಾಮೃ. ೩-೬೩); ಬಾಯುಂ ತೆಱೆದಿಕ್ಕಿ ಕಾಯ್ದ ಲೋಹದ ಕೆಬುಪೊಂಗಳನಡಿಸಿ ಪಿಡಿದು ಪೊಲಿವರ್ ಬಾಯಂ (ಶಾಂತೀಶ್ವ. ೯-೯೪). **ಹೊಲಿ$_1$** : ೧. ದಂಡಿಯೊಳ್ ಪ್ರಚ್ಛನ್ನವೇಷದ

ಖಂಡಪರಶುವನರ್ ಮೆಚ್ಚಿದು ಕೈಕೊಂಡು ಕೌದಿಗಳಂ ಪೊಲಿವ ಕಾಯಕವೆ ತನಗಾಗಿ (ಬಸವ. ೨೩-೬); ಬಸುಱಿ ಪೊಲಿದ ಪೊಲಿಗೆಯ ದಡಿಗ ರಕ್ಕಸರಾಯರಿಂದ್ದುದು ಕೋಟಿಸಂಖ್ಯೆಯಲಿ (ಜೈಮಿ. ೩-೬-೬); ನೆಲವನ್ನು ಮುಗಿಲನ್ನು ಹೊಲಿವರುಂಟೆಂದರವ ಹೊಲಿವರು ಹೊಲಿವರೆನಲೇಕು ಮೂರ್ಖನಲಿ ಕಲಹ ಬೇಡೆಂದ (ಸರ್ವ. ೦೦೩೬); ಹೊಲಿಯುವವನ ಬಲ್ಮೆರಬೇಡ, ಅಳುವವನ ಎಡಕ್ಕೆರಬೇಡ (ಗಾದೆ). ೨. ಹೆಣೆ : ಉರುಳು ತರೆ ಕಾಲ್ವೆರಳ ಕೊನೆಯಲಿ ಮರಳಿ ಹೊಲಿದಳು ಜಡೆಯನು (ಕುಮಾ. ೪೯-೦೯). [ದೇ.: ತಮಿ. ಪೊಲ್ಲುವ್=ಹೊಲಿಯುವುದು; ಮಲ. ಪೊಲ್ಲು; ತುಳು. ಪೊಲ್ಲು, ಪೊಲ್ಲಿಯು; ಕೊಡ. ಪೊಲಿ, ಪೊಲ್]

**ಪೊಲ, ಹೊಲ** (ನಾ). ೧. ಬೆಳೆ ಬೆಳೆಯುವ ಭೂಮಿ ; ಜಮೀನು : ಪೂರ್ವಪೂರ್ವ್ಪಲ ನೆಲ್ಲು ಪಾಣ್ಡ್ಯರುವವರವರು ಸರ್ವಪರಿಹಾರಕ್ಕೊಟ್ಟೊರು [ರ್] (ಕ್ಲುಶಿ. ೯೪೩೦. ೩೬-೭: ೩೦೦); ದೇವಮಾತೃಕಮನಿಪ್ಪ ಪೊಲಂ ಸವಗಂಧ ಶಾಳಿಯುಂ ಬೆಳೆವುದು (ಶಾಂತಿ. ೦-೫೮); ಪೊಲಂ ಪಸುರೇಱೆ ಕಾಡ ಮಲ್ಲಿಗೆ ಸನೆಯೇಱೆ (ಜಗ೦. ೪-೪). ೨. ಸ್ಥಳ ; ಪ್ರದೇಶ ; ಎಡೆ : ಊರ ಪೊಱಪೊಱ[ಲ] ಪೊಲದೊಳ್ ಬಟ್ಟಿದು ಕರ್ಷ್ಣೊಳ್ ರಾತ್ರಿಪ್ರತಿಮೆ ನಿಂದೊರ್ (ಕಜ್ಞಾ. ೦೩೨-೦೨). ೩. ಆಶ್ರಯ; ಆಸರೆ: ಪೂ ಪೊಲನಲ್ಲು ನಾಳಗೆಗೆ ಪಂದೆತನಂ ಪೊಱಿಯಲ್ಲು ಕೈಯ ಕೊರಸಿಗೆ (ಜಗನ್ನಾ. ೬-೦೦೯). 'ಅಡುಂಬೊಲ' ನೋ. ೪. ಕ್ಷೇತ್ರ : ಜನರ ಪದಸೇವೆಯಿಂದಂ . . . ಈ ವಿಧವಂ ಜನಿಯಿಸಿದುದೀಗಳಲ್ಲದೊಡನಂತ್ಪವುಸುರವಿಭಮೆನಗೆ ವಿಷಯಃಮೊ ಪೊಲನೋ (ಜಗನ್ನಾ. ೯-೨೮). ೫. ವಿಷಯ ; ಸಂಗತಿ : ಸಕಳವಿದ್ಯಾಧರವಲ್ಲಭಸಭೆಯೊಳದು ಪೊಗಳ್ತೆಗೆಪೊಲನೇ (ಶಾಂತಿ. ೬-೨೨); ವಿಳಂಗ ಪೊಲನಲ್ತೆ ಕೃತಿಯೊಳ್ಳವ ದೋಷಂ (ಕೃಷ್ಣ. ೦-೯೭). ೬. ಗೋಚರ; ಕಾಣಿಸುವಿಕೆ : ದಿಟ್ಟಿಗೆ ಪೊಲನಾದುದು ಪೊಂದೆಟ್ಟಿಂ (ಜಗನ್ನಾ. ೦-೫೯); ಆಲೋಚನಗೋಚರ=ಕಣ್ಗೆ ಪೊಲನಲ್ಲದ (ನೇಮಿ. ೩-೨೬); ತೊಟ್ಟನೆ ಟಟ್ಟಿದಿರೊಳ್ ಪೊಂಬೆಟ್ಟಿಂ . . . ದಿಟ್ಟಿಗೆ ಪೊಲನಾದುದು (ಬಿ:ಹು. ೬-೦೩೯). ೭. ವ್ಯಾಪ್ತಿ ; ಪರಿಮಿತಿ : ನೆಲನಂ ಪೊಟ್ಟಿ ಪೊಲನು ಮನಱಿದು ಬಱಿಯೊಳ್ ಪೊಸತಂ ಪಲವುಮನಱಿದು ಪರಿಯಿಸಲ್ ಏನೆ ಬಲ್ಲಯ್ (ಶಾಸನ. ೩-೯೬ ಕ). **ಹೊಲ** : ೧. ಸಿರಿಗಾ(ರ)ವುಂಡನ ಹೊಲ ದೊಳಗೊಂದು ತೋಟಕ್ಕಂ ಹೊಲಗೇರಿಯ ಪಡುವಣ ಕರುವಗೆಯ್ಯಿಂದಂ ತೆಂಕಲಾಱುಮತ್ತರು ಕೆಯಿಂಗಮಱುವಣವುಯ್ದು ಗದ್ದ್ಯಾಣಮಂ ತಿಱುವರು (ಎಪಿಕ. XI-i, ಶಿ೦-೦೮; ೧೦೦೬); ಹೊಲದಲ್ಲಿ ಅವಿಲ್ಲ ಮನೆಯಲ್ಲಿ ಕಱುವಿಲ್ಲ ನೆಲಹಿಸ ಮೇಲಿನ ಬೆಣ್ಣೆಯಿದು ದಿಟವೋ (ಶಶಾಂ. ೦೨೩-೩೬೨); ಧರೆ ಬೀಜಂಗಳ ನುಂಗೆ ಬೇಲಿ ಸೊಲನೆಲ್ಲಂ ಮೇದೊಡಂ (ಸೋಮೇಶ. ೫೯); ಕಡಲೆಯು ತನಗೆ ಬೇಕಾದ ಅಂಶಗಳನ್ನು ಮಾತ್ರ ಹೊಲದಿಂದ ಹಿ:ರುತ್ತದೆ (ಕೀಟಾಕ್ಕ. ೨೨೭). ೨. ಗಹನವಲ್ಲಿ ಸಿಕ್ಕಿದ ಶಿಶುವಿನಂತೆ ಸ್ಥಾನದಪ್ಪಿ ಹೊಲಬುದಪ್ಪಿದ್ದೇನೆ ಹೊಲದ ಹೊಲಬ ಹೇಳು (ಕೊಂಡ. ೦೩-೬೦); ಬರುತಿರ್ದನವ್ರುತಿಮಶಿವಭಕ್ತನುರವಣಿಸಿ ಪುರದ ಹೊಲನಂ ದಾಂಟಿ (ಇಳಿ. ಕೀ. ೫೯-೨). ೮. ನಿವಾಸ ; ವಾಸಸ್ಥಾನ : ಸಿಂಹದ ಹೊಲನ ಹೊಗಃವಿಧದಂತೆ ಹೊಱಿಕಾಲೊಳ್ಲಿಳುತಲಿರೆ ಕಂಡು (ಕುಮಾರರಾ. ೦೨-೬೦) ; ಹಾಸ್ಮದ ಹೊಲಂ ಪರುಳಾಟದ ಮಂದಿರಂ . . . ಗಣಿಕಾಪ್ರತೋಳಿ ತಾಂ (ಕಬ್ಬಿಗ. ೨-೯೩) ; ಕರಿವಿಂದುಗಳು ಸಿಂಹದ ಹೊಲದಲಿ ಬಂದು ನಿಜಾ ವೇವ ಕೊಂಡು ಜಃವಿಪುವೆ (ಕುಶಿ. ೩-೯೬). ೯. ಕೇವಲ ಮಳೆಯ ನೀರಿನಿಂದ ಬೆಳೆಯುವ ಭೂಮಿ ; ಖುಷ್ಕಿ : ಕೇವಲ ಮಳೆನೀರಿನ ಆಧಾರದಲ್ಲಿ ಆಗಬಹುದಾದ ಬೆಳೆಯಿಡುವಂತಹ ಭೂಮಿಯನ್ನು ಖುಷ್ಕಿ ಅಥವಾ ಹೊಲವೆಂದು ಹೇಳುವುದು (ಕೃಷಿ. ೩೩).

**ಪೊಲಪೊಲ** (ದ್ವಿರುಕ್ತಿ): ಪಲವಂದದ ಪರ್ಣಗಳಂ ಪೊಲಪೊಲದೊಳ ಮಱಸಲೇಕೆ (ಗಿರಿಜಾ. ೦೩-೬೩). **ಪೊಲನಾಗು**=ಆಶ್ರಯವಾಗು: ಪೊಗಟ್ಸು ಮಹಾತ್ಮರುಜ್ಜ್ವಲವೆನಿಪ್ಪ ಗುಣಂಗಳನುಜ್ಜ್ವಲಪ್ರಸಿದ್ಧಿಗೆ ಪೊಲನಾಗದ... ಪೊಗಟ್ಸು ದುರಾತ್ಮರಂ ಪೊಗದೋಳೆದುರ್ಗುಣಂ ಪೊಱಗಿಕ್ಕಲಾದ ನಾಲಗೆ ಯುವನೆತ್ತನಾಲಗೆಯೊಳೋದಿದವಂ ಕೃತಿಯೇ ಕೃತಾರ್ಥನೇ (ಶಾಂತಿ. ೦-೩೩). **ಹೊಲಹಾಕು**=ಪ್ರದೇಶದಲ್ಲಿ ಓಡಾಡು : ನಾಡೊಳಗೆ ತುಱುಹಟ್ಟಿಯಲಿ ಹೊಲನಾಡಿ ಹಟ್ಟಿದ ಗೋಕವಂಬವ ನೋಡುವುದು ನೆವ (ಕುಮಾ. ೦೬-೨೦). **ಹೊಲಮನೆ**=ಹೊಲ ಮತ್ತು ಮನೆ : ಜಮೀನು ಮತ್ತು ಮನೆ : ಯಾ ಸ್ವಾಮಿಯು ಹೊಲಮನೆಯ ವರ್ತಯತ್ತಿ ಅತಿದವರು ಜಾತಿವಂತನಲ್ಲ (ಎಪಿ. XII, ಶಿಕು. ೬೬-೩ ; ೧೧೨೮) ; ಹೊಲಮನೆಯೊಳೊಲವುಗಳ ಕುಣಿಕೆಣಿಸಿ ಹೂ ಕೊಯ್ದು ಬೆಳ್ಳರ ಚರಲಿಂದ ಮುಡಿಯುವಳ್ ನೇವು (ಚಾಂ. ೩೩-೩೨). **ಹೊಲ ಮಾಡು**=ವ್ಯವಸಾಯ ಮಾಡು ; ಬೇಸಾಯ ಮಾಡು : ಅವನು ಹೊಲ ಮಾಡಿಕೊಂಡು ಜೀವನ ನಡೆಸುತ್ತಾನೆ (ಆಡು). [ದೇ.: ತಮಿ. ಪುಲ, ಪುಲವು; ಮಲ. ಪುಲವ್; ತುಳು. ಪುಲ; ತೆಲು. ಪೊಲ ; ಕೋಲಾ. ಪೊಲವ್]

**ಪೊಲಂಗೊಳ್** (ಕ್ರಿ). ಎಲ್ಲ ಕಡೆಗೂ ಚೆದರು ; ದಿಕ್ಕಾಪಾಲಾಗು : ನೃಪರಾರುಂ ವೀರಬಲ್ಲಾಳನೊಳದಿರದೆ ಮಾಱಾಂಪರೇ. . .ಪುಲ್ಲೆವಿಂಡಂತೆ ಪೊಲಂಗೊಂಡೋಡುವರ್ (ಎಪಿ. V, ಬೇಲೂರು. ೦೦೨-೫೪ ; ಸು. ೧೧೨೦ ?).

[ ಪೊಲ + ಕೊಳ್$_1$ ]

Δ **ಪೊಲಂತಿ** ' ಪೊಲತಿ ' ನೋ.

**ಪೊಲಂಬಿಗ, ಪೊಲಬಿಗ, ಹೊಲಬಿಗ** (ನಾ). ೧. ದಾರಿ ತೋರಿಸು ವವನು ; ಮಾರ್ಗದರ್ಶಿ : ಕುರುಡನಪ್ಪ ಪೊಲಂಬಿಗನು ನಂದಿ ಗಟ್ಟಿ ದಿಟ್ಟಿಡೆಯೊಳಿರುಳ್ ದೂರದೇಶಕ್ಕೆ ಪಯಣಂಬೋಪನೇದಾತನುಂ . . . ಬುದ್ಧಿವಂತರಲ್ಲರ್ (ಧರ್ಮಾಮೃ. ೬-೩೩). ೨. ನೆರೆಯನ್ನು ಅರಿತವನು: ಜೋಯಿಸಿಗಂ, ಲೆಕ್ಕಿಗಂ, ಪೊಲಂಬಿಗಂ (ಶಬ್ದ. ೦೯೭ ವೃತ್ತಿ). **ಪೊಲಬಿಗ** : ೧. ಮಿಣಮಹಿಸಿ ಕಾಲ್ಪೊಳ್ ಕಿರಿದ ಗುಳಿಗಳೆಯಿಂದು ಪೊಲಬಿಗ ಪೊಂದಾಳಿಗಳ್ ತೋಱಿದರ್ (ಪಾರ್ಶ್ವ. ೦೦-೩೯). **ಹೊಲಬಿಗ**: ೧. ಎಲೆ ಯಿಲ್ಲದ ಮರದಿ ಒಂಭತ್ತು ತಲೆಗಳು ನಡೆವುತಿದೆ ಕಲಿಗಳ ಕೈಗಳ ನೋಡಿರೆ ಉಳುವಿಗೆ ಹೊಲಬಿಗರಾದವರು (ಕಲ್ಯಾ. ೦೬೩-೯೦೬) ; ಶಿವಂ ಕೇಶವ ಬ್ರಹ್ಮರುಗಳಂತು ಹೊಸ ಹೊಲಬಿಗರು ರೂಪಾಗಿ ಭೂಮಿಯೊಳಗಿಂತು ಬಸವೇಶನಾದನು (ಬಸವ. ೩೩-೬೦); ಹೊಲಬಿಗರು ಹರಿದರು ಸುರೇಂದ್ರನ ದಳದ ಪಾಮರರು (ಕುಮಾ. ೦೨-೦೨). ೨. ಹೊರೆಯ ಹೊಲಬಿಗ ನಾದರೆ ಅವನ ಹೊರೆಯಲಿಪ್ಪುದು ಲೇಸು ಕಂಡಯ್ಯ (ಬಸವ. ೦೩೮) ; ಆ ಹೊಱಗಣ ಹೊಲಬ ಕಂಡು ಆ ಹೊಲಬಿಗನ ಹೊಲನ ನೋಡಿ (ಸೋಮೇಶ. ೦೩೨-೩೦೦) ; ಯೋಗಾವಸ್ಥೆಯಲಿ ಹೊಂದಿ ಚನ್ನೆಸೆದು ತಾನೆಂಬ ಹೊಲಬಿಗನನ್ನದಾವ ಕಳಂಕವಿಲ್ಲದೆ ತನ್ನೊಳದು ತಾನಾಗಿ ತಾನಿಪ್ಪಂದದಮೋ ಮತ್ತ (ಬಸವ. ೩೩-೩೩). ೩. ದಾರಿಗ; ಪ್ರಯಾಣಿಕ: ಶಿಲೆ ಹಲವು ತಱದಲ್ಲಿ ಹೊಲಬಿಗರಿಂಗೆ ಹೊನ್ನಾಗಿ ಒಲವರವಿಲ್ಲದೆ ಅವರ ಭಾವದಲ್ಲಿ ನಿಲ್ಲುವುದು ಶಿಲೆಯೋ ಮಾನವೋ (ಸರ್ವ. ೩೬-೬೩೩).

[ ಪೊಲಂಬು + -ಇಗ ]

**ಪೊಲಂಬು, ಪೊಲಬು, ಹೊಲಬು** (ನಾ). ೧. ದಾರಿ ; ಮಾರ್ಗ : ನಿಮಗಾ ಧರ್ಮದ ಪೋದ ಪೊಲಂಬದು ತಾ ನರ್ಮದೆಯಿಂ ಗೆಟದೇಕೆ ಕೇಳ್ದಪೆಯಮ್ಮಂ (ಜಗನ್ನಾ. ೦-೩೯); ನಿನ್ನ ಚರ್ಮರತ್ನಂ ಪೋದ ಪೊಲಂಬ ಬಲ್ಲೊಡೆ ಪೇಳ್ದಪುದುಂ (ಧರ್ಮ. ೯-೦೫೦ ಕ). ೨. ರೀತಿ ; ಬಗೆ : ಎಲೆ ನೃಪ ಜೀವತತ್ತ್ವದ ಪೊಲಂಬದು (ಶಾಂತಿ. ೫-೩೩) . ೩. ಸುದ್ದಿ; ಸಮಾಚಾರ : ಸಂಗತಿ : ನಾವದಱ ಪೊಲಂಬಂ ಬಲ್ಲುದಿಲ್ಲ ನೀವು ಬಲ್ಲಡೆ

ಪೇಟ್ಪಿಂ (ಪುಣ್ಯಾಸ್ರ. ೬-೩೩ ಪ). ೪. ಪರಿಚಯಂ; ಗುರುತುಂ: ಜನಗಣದೊಳು ಮುನ್ನ ತನಗೆ ಪೊಲಬುಳ್ಳ ಜನರ ಕಂಡವರ ಪೂರ್ವವನು ಅನುಜರಱಿಯಲೆಂದು ಪೆಸರುಗೊಂಡೆಬಿಗುತ (ಜೈಕ. ೬೦-೩೪). **ಪೊಲಬು:** ೧. ನಡೆದಂ ಭರದಿಂ ಪುಷ್ಕರಿಕೆ ಪೇಟ್ದ ಪೊಲಬಿಂಗಾಗಳ್ (ಜಕರು. ೦೦-೭೦); ಬಲ ಕೇಶವರ ಚೆನ್ನ ತಗುಳ್ದುಮವರು ಪೋದ ಪೊಲಬಱಿಯದೆ ಮುಂದೆ ಪೋಗಿ (ಶಾಂತೀಶ. ೩-೪೭). ೩. ಜಟಾಯುವಂ ಕಂಡು ಪೊಲಬಂ ಕೇಳ್ದು ಸೌಮಿತ್ರಿಸಹಿತ ನಡೆದಂ ಮುಂದೆ ರಘುನಾಥನು (ಕೃಬಿತಾ. ೦೬·೪): ಸುಲಭಮೆ ಪೊಲಬನೆಲ್ಲ ಪರರಿಂಗರಿಪಲ್ (ಕೃಣ್ಣಕೋ. ೨೬೪). ೫. ಮರ್ಮ; ರಹಸ್ಯ: ನಿಗಮವಱಿಯದು ಬೊಮ್ಮ ಚಿಂತಿಪ ನಗನಿಲಯ ಪೊಲಬಱಿಯ (ಕೃಕರ್ಣಾ. ೦-೨೪). **ಹೊಲಬು:** ೧. ಲಿಂಗದ ಪಂಪೂರ್ಣವ ಕಾಣದಿಹ ಅಂಗಹೀನನಿಗೇಕೆ ವ್ರತಾಚಾರದ ಹೊಲಬು (ಸರ್ವಜ್ಞ. ೬-೨೬): ಹೋಗುತಿರ್ದಳು ಹೊಲಬ ಕೇಳುತ (ಪ್ರಭುಲಿ. ೩-೪೨): ಲಂಕಾಪುರದ ಸರಣಿಯ ಹೊಲಬ ತೋಱಿಸಿ ಬೀಳುಕೊಂಡನು (ಕೊರಟಾ. ೪-೦೦-೨೨). ೨. ಅಕೃತಾಪುಣ್ಯ ಪಾಪದ ಹೊಲಬನಱಿಯರೇ (ತಿರುಕ. ಕೀ. ೦೬-೩); ಎಲೆ ಮಹಾತ್ಮನೆ ನಿನ್ನ ಸೂತ್ರದ ಹೊಲಬಿದಲ್ಲದೆ ಸುಮ್ಮನೀ ಪಂ ಸಿಲುಕಬಲ್ಲುದೆ (ಪ್ರಭುಲಿ. ೦೦-೩೦); ವಾಯಾವಿದ್ಯದೇಳ್ಗೆಯ ಹೊಲಬ ತೋಱಿದಳಾಳ್ದನಿಗೆ (ಕೋಹಕ. ೦೩-೪೪). ೩. ನಳನೃಪತಿಗೆ ಮುನ್ನಂ ಕಂಗೊಳಿ ಸಾರಥಿಯಾದ ಹೊಲಬನಱಿವೆಂ (ಕಳಕಂ. ೬೭೦); ಸತ್ಪುರುಷರ ಕಥೆಯಲ್ಲ ಜನನದ ಉತ್ಪತ್ತಿ ಕಾದಿಕಾದಿದು ಕರ್ಮದ ಕತ್ತಲೆಗೆ ಸಿಲ್ಕುವರ ಸೀಮೆಯ ಹೊಲಬು [ಪಾಠಾಂ. ಮಾತು]ತಾನಲ್ಲ (ಪ್ರಭುಲಿ. ೦-೦೩); ತರುಣಿ ನೀನಱಿದುದಿಲ್ಲವೆ ನಮ್ಮ ಪಾದರಕ್ಷೆಯ ಹೋದ ಹೊಲಬನು (ಸಮ್ಯಕ್. ೪-೩೩). ೪. ತರಣಿಯ ಪೊರೆಯೋ ಎನುತ್ತಿರೆ ಹಿಂದು ಶಂಕಿಸಿ ಕೇಳಿದರು ಹೊಲಬುಂಟೆ ನಿನಗೆಂದು (ಕೌಶಿಕ.೦೪-೪೭); ನೆಲನಾವುದಾಗಸವಾವುದೆಣ್ದೆಸೆಗಳ ಹೊಲಬಾವುದೆಂದು ತೋಱಿಸದೆ . . . ಬಾಣಾಬ್ಧಿ ಬಲಗೂಡಿ ಹರಿಯ ನುಂಗಿದುವು (ಕೋಹಕ. ೪೦-೩೬); ನಾಲ್ಕುಮಂದಿಗಳಿಯರಾವ ಮಂತ್ರಿಗಳು ಅವನಂತರಂಗವೇ ಆಗಿದ್ದರೆನ್ನಬಹುದು. ಅವರ ಯೋಗ್ಯತೆಯನ್ನರಿತಲ್ಲಿ ಅರಸನ ಅಂತರಂಗದಾಳಿಕೆಯ ಹೊಲಬು ಮಾಚೇರಿಗಾಗಬಹುದು (ಪಾಕೋಶ. ೩೬೬). ೫. ಅಂಗದೊಳಗೆ ದೆರಸಿಪ್ಪ ಲಿಂಗದ ಹೊಲಬನಾರೂ ಅಱಿಯರು (ಅವಶ. ೨೨-೩೪); ಎಲೆ ಕಿತವ ಚರ್ಮರತ್ನವ ನೊಲವಿಂದಾ ಕಾವಾವಡಾಗೆ ಕೊಟ್ಟಿನ್ನೊಳ್ ಹೊಲಬುಂ ಪೇಟದೆ ನೀಂ ಸಂಗಲಿಯೊಳ್ ಬೀಟಲ್ಕೆ ಬಿಡುವೆನೆ (ದಶಕು. ೬-೨೦೦); ನೀನತ್ತ ಲಕ್ಷಣದ ಹೊಲಬ ಬಲ್ಲೈ (ಕೊರಟಾ. ೩-೨-೨೦); ಮಾವನ ಮಾತಿನ ಹೊಲಬು ದಾಬಣ್ಣನಿಗೆ ಹೊಳೆಯಿತು (ಅಕೋಳ. ೨೬). ೬. "ಸರಹದ್ದು" (ಕನ್ನಶಾ. ಅಪಭ್ರಂಶ. ೨): ವೀರಪೊಂಕೆರಿಪುರದ ಹೊಲಮೇರೆಯಿಂದಾ ಹಾಯಿಕಲ್ಲು ಹೊಲಬಿಸಲು (ಎಕ. XI. ಚಿತ್ರದು. ೬೦-೩; ಕಾ. 1800 ?); ಈ ದಳವಾಯಿ ಮುದ್ದಣ್ಣನು ಬಿದರಕೆರೆ ಹೊಲಬಿನಲ್ಲಿ ಸಂತೇಮುದ್ದಾಪುರದ ಗ್ರಾಮವನ್ನೂ ಅಲ್ಲಿ ಆ ಹನುಮಂತರಾಯನ ದೇವಸ್ಥಾನ, ಕೆರೆಗಳನ್ನೂ . . . ಸ್ಥಾಪನೆ ಮಾಡಿದನು (ಚಿತ್ರಶಾ. ೩೩).

**ಹೊಲಬಾಗು** = ೧. ದಾರಿಯಾಗು; ದಿಕ್ಕುತೋರು: ಆ ಅರುಣನ ನೆಲೆ ಒಂದೆ ಹಲವು ಜಗಕ್ಕೆ ಹೊಲಬಾದಂತೆ ಸ್ಥಲಜ್ಞನಾದೆಯಲ್ಲಾ ಸ್ಥಲದ ನೆಲೆ ಒಂದೇನಱಿತಲ್ಲಿ ಏಕಸ್ಥಲಮೂರ್ತಿ ನೀನೆ (ಷೋಳಶಾ. ೨೦೦-೬೪೩). ೨. (ಪರಿಸ್ಥಿತಿಯ) ಅರಿವಾಗು; ಪರಿಚಯವಾಗು: ಚೀನದಲ್ಲಿ ಅಂಸಿದ ೧೬೭೮ ಸ್ಥಳಗಳ ಜನರಿಗೆ ತಲಾ ಒಂದರ ೧,೪೦೦ ಕಿಲೋಗ್ರಾಂ ಉತ್ಪನ್ನವನ್ನು ಉತ್ತರಅಮೇರಿಕದ ೨೦,೦೦೦ ಕಿಲೋಗ್ರಾಂ ಉತ್ಪನ್ನದೊಡನೆ ಹೋಲಿಸಿದರೆ ಏಶಿಯದ ಜೀವನದ ಮಟ್ಟದ ಹೀನಸ್ಥಿತಿಯ ಹೊಲಬಾಗುವುದಿಲ್ಲವೆ? (ಏಶಿಯಾ. ೩೩).

[ದೇ. ॥ ತುಳು. ಪೊಲಬು, ಪುಲಬು, ಪುಲಮೆ; ತೆಲು. ಪೊಲಾಪು]

**ಪೊಲಂಬುಗಿಡಿಸು.** ಹೊಲಬುಗೆಡಿಸು (ಕ್ರಿ). ೧. ದಾರಿತಪ್ಪಿಸು; ಮಾರ್ಗತಪ್ಪಿಸು: ತೇಜಿಗಳ ಕಾಲ ದೂಳಿ ನೆಗೆದು ಕೊಳಂಗುಳದೊಳ್ ಪಸಱಿ ದೀರರನಱಸುವಚ್ಚರಸಿಯರಂ ಪೊಲಂಬುಗಿಡಿಸೆಯುಂ (ಕಾವ್ಯಾ. ೨೬೬). **ಹೊಲಬುಗೆಡಿಸು:** ೧. ನಿನ್ನಾಳ್ದನನು ಹೊಲಬುಗೆಡಿಸಿ. . . ಎಳೆದೊಯ್ದನು (ತ್ರಿಪುರಾಂ. ೨೦-೨೩೩); ಹೆಬ್ಬುಲ ಸಘಾಡದಲ್ಲಿ ಕರ್ಣನ ಹೊಲಬುಗೆಡಿಸಿದು ದಂಬುಗಳ ಸಾರಾಯ ಸೋನೆಯಲಿ (ಕುಮಾ.ಕ. ೦೦-೨೦); ನಾನವನ ಹೊಲಬುಗೆಡಿಸಿ ಹೋರಿ ಹೊಣವಡಿಸುವೆನು (ರಾಜಶೇ. ೪-೩೪). ೨. ದಿಗ್ಭ್ರಮೆಯುಂಟುಮಾಡು; ಗೊಂದಲಗೊಳಿಸು: ಚಾತುರ್ಬಲವ ಸವಱಿ . . . ಹೊಲಬುಗೆಡಿಸಿ ಮಹೀಪತಿಯ ಪಡಿವಾಯಿಕೆ ಮಾಡಿಸಿಂತ (ಕುಮಾ.ಕ. ೩-೩೬). [ಪೊಲಂಬುಗಿಡು (< ಪೊಲಂಬುಗೆಡು) + — ಇಸು]

**ಪೊಲಂಬುಗಿಡು** 'ಪೊಲಂಬುಗೆಡು' ನೋ.

**ಪೊಲಂಬುಗೆಡು.** ಪೊಲಂಬುಗಿಡು. ಪೊಲಬುಗೆಡು. ಹೊಲಬುಕೆಡು. ಹೊಲಬುಗಿಡು, ಹೊಲಬುಗೆಡು (ಕ್ರಿ). ೧. ದಾರಿ ತಪ್ಪಿಸಿಕೊಳ್ಳು; ಮಾರ್ಗ ಕಾಣದಾಗು: ಒಂದೊಟ್ಟೆ ಪೊಲಂಬುಗೆಟ್ಟು ಬಂದಾಡು ತ್ರಿದುರ್ಗದಂ. . . ಕಂಡು (ಕುಶಶ. ೦೪೦-೮); ಕಾಂತಾರದೊಳ್ ಪೊಲಂಬು [ಪಾಠಾಂ. ಪೊಲ, ಪೊರೆ]ಗೆಟ್ಟು ಸೇದವಟ್ಟು (ಶಾಂತಿಪು. ೬೪-೦೬), ಸಂಸರಣಕಾನನದಲ್ಲಿ ಪೊಲಂಬುಗೆಟ್ಟೆ (ಚಾರಿತ್ರ. ೬-೦೩೪); ಒಂದಡ್ಡಾನಾಟವಿಯೊಳ್ ಮರುಳಾಗಿ ಪೊಲಂಬುಗೆಟ್ಟು ತಿರುಗುವ ನವಾಗಾದರದಿಂ ಪಥಮಂ ತೋಱಲ್ ಭರದಿಂ ಬಂದೈ (ಕರ್ಣಾಟ. ೦೦-೪೩). ೨. ದಿಗ್ಭ್ರಮೆಯಾಗು; ಏನೂ ತೋಚದಂತಾಗು: ರಾಜವೀಧಿಯೊಳ್ ಸುಳಿವ ಜವ್ವನಿಗರಂ ಕಂಡು ಪೊಲಂಬುಗೆಟ್ಟು ಪಲ್ಲೆಯಂತೆ ದೆಸೆದೆಸೆಗೆ ದೆಱಿಸುವ (ಗಂಕ. ೨-೦೦೩ ಪ). **ಪೊಲಂಬುಗಿಡು:** ೨. 'ಪೊಲಂಬುಗಿಡಿಸಂ' ಪರಾ. **ಪೊಲಬುಗೆಡು:** ೧. ನೆಲನಾಗಸಮಾವುದೆಂಬುದನಱಿಯದೆ ಪೊಲಬುಗೆಟ್ಟನು (ಅಂಬಿಕ. ೬-೦೩೪). **ಹೊಲಬುಕೆಡು:** ೧. ಮಾಯಾಪಾಶದಿ ಸಿಕ್ಕಿ ಕಡುನೊಂದೆ ಹೊಲಬುಕೆಟ್ಟೆನು ಜಗದೊಳಗೆ (ದೇವೀಕು. ೦-೦೦). **ಹೊಲಬುಗಿಡು:** ೨. "ಹೊಲಬುಗಿಡು (ಹೊಲಬು+ಕಿಡು) ದಿಗ್ಭ್ರಮಣೇ" (ಕಶುರಾ); ಜಠರದೊಳಿರ್ದು ತದ್ಬ್ರಹ್ಮಾಂಡಶತದೊಳು ಹೊಲಬುಗಿಡೆ (ಕುಮಾ.ಉ. ೬೬೨. ೦೦-೦೪). **ಹೊಲಬುಗೆಡು:** ೧. ಹೊಲಬುಗೆಟ್ಟೆನು ಬಟ್ಟೆಯ ತೋಱಯ್ಯಾ (ಬಸವ. ೬೩); ಅಡವಿಯೊಳು ಹೊಲಬುಗೆಟ್ಟನೋ (ಹರಿಶ. ೦೨-೮೩); ಕಾನನದ ಕಾಡಾನೆಗಳವೊಲು ಪಥದನುವ ಕಾಣದೆ ಹೊಲಬುಗೆಟ್ಟನು (ಕೊರಟಾ. ೬-೨೬-೩೩). ೨. ನೆನೆವ ಮನಂ ಹೊಲಬುಗೆಟ್ಟಪುದು (ಕಂಠೀ. ೦೬ ೩). [ಪೊಲಂಬು+ಕಿಡು]

**ಪೊಲಂಬುದಪ್ಪು.** ಹೊಲಬುತಪ್ಪು. ಹೊಲಬುದಪ್ಪು (ಕ್ರಿ). ೧. ದಾರಿತಪ್ಪು; ಮಾರ್ಗ ಕಾಣಿಸದಂತಾಗು: ರವಿರಥದ ಕುದುರೆಯೊಳೊಂದು ಪೊಲಂಬುದಪ್ಪಿ ನೆಲಕ್ಕಿಟಿದುದೆಂಬಂತೆ ಚೆಲ್ವನಪ್ಪ ವಾಜಿಯ ರೂಪನಳವಡಿಸಿ (ಪುಣ್ಯಾಸ್ರ. ೩-೬೨ ಪ); ಪೊಲಂಬುದಪ್ಪಿದ ಮಱಿಯಂ ನೆನೆದು . . . ಪಾಯ್ದುಗುತರ್ಪ ವನಮಹಿಷಿಗಳ ಪಾಲ ಧಾರೆಯಂ ಮಿಕ್ಕು ನೈಋತ್ಯದ ಪರ್ವ ಕಾನನಬಿಡಾಲಂಗಳಿಂ . . . ವಿಜೃಂಭಿಸಿ (ಶಾಂತೀಶ. ೩-೩೩ ಪ). ೨. ರೀತಿತಪ್ಪು; ಕ್ರಮ ತಪ್ಪು: ಪೊಲಂಬುದಪ್ಪಿ ಕೋಟಲೆಗೊಳಗಪ್ಪ ಪಾಪ್ಮನದ ಮಾನಸರಂ ಸುಡು ಸಂದ ಗೊಡ್ಡರಂ (ಕಂಪ್ರತಿ. ೬-೮೦). **ಹೊಲಬುತಪ್ಪು:** ೧. ಸಂಸಾರಪಂಬ ಘೋರಾರಣ್ಯದಲ್ಲಿ ಹೊಲಬುತಪ್ಪಿ ಬಳಲುತ್ತಿಹೆ (ಶತಕ.೪೨). ೩. ದಿಗ್ಭ್ರಾಂತವಾಗು; ದಿಕ್ಕುತೋಚದಂತಾಗು: ಪದವಿಯ ಫಲವ ಕಾಣದೆ ಹೊಲಬುತಪ್ಪಿದೆನು (ಹಂಶಾ. ೩೪). **ಹೊಲಬುದಪ್ಪು:** ೧. ಗಹನದಲ್ಲಿ ಸಿಕ್ಕಿದ ಶಿಶುವಿನಂತೆ ಸ್ಥಾನದಪ್ಪಿ ಹೊಲಬುದಪ್ಪಿದ್ದೇನೆ (ಕೋರಂಶಂ. ೦೩-೬೦); ಹೊಲಬುದಪ್ಪಿದ ಹುಲ್ಲೆ ಬೇಡನ ಬಲೆಗೆ ಬಿದ್ದಂತಾದೆನ್ನೆ (ಕುಮಾ.ಕ. ೧೩-೦೨೩): ನಿಜವಿರಕ್ತಿಯ ಹೊಲಬುದಪ್ಪದೆ

. . .ಅರ್ಗಿಯಿಂದಾಟಿಸುವರಯ್ಯ ನಿಮ್ಮ ಶರಣರು (ಶಿವಶ. ೬೦-೩೯). ೨. ಒಂದು ದ್ವಾರದಲ್ಲಿ ಬಂದ ಆತ್ಮಂಗೆ ಹಲವು ದ್ವಾರ ಉಂಟೆಂದು ಹೊಲಬುದಪ್ಪಿ ನುಡಿವವರ ನೋಡಾ (ಬೋ೯ವಚ. ೦-೦). ೩. ಹೊಲಬು ದಪ್ಪಿದ ಮನದ ಸತಿಯರು ಸುಳಿಯೆ ನಳನೃಪ ಬಂದನಿದೆಯೊ೦ದೆನುತ ಕಳವಳಿಸಿ ನಿಲುಕಿ ನೋಡುವಳು (ಶಳತ. ೩-೨). ೪. ಮಾರ್ಗವು ಕಠಿಣವಾಗು : ಗಹನವಾಗು ; ಅಗಮ್ಯವಾಗು : ಹೊಲಮೋರೆಯಿಂ ಮೇರೆ ಹೊಲಬುದಪ್ಪಿದ ನಾದಕಳೆಗಳ ಮಿಱಿರ್ದ ತುರ್ಯಂಗಳ ಗುರುವಿನ ಕರುಣದ ಅನಿಮಿಷದ ಮನೆಯಲ್ಲಿ ಹೊಲಬುದಪ್ಪಿದ ಕಂಡೆ ಮಧ್ಯವವನು (ಸಿದ್ಧಶ. ೪. ೩೯೦-೦೦೦೨). [ಪೊಲಂಬು + ತಪ್ಪು$_1$]

**ಪೊಲಂಬುದೋಱು** (ಕ್ರಿ). ಮಾರ್ಗ ಕಾಣು : ಸುಳಿವು ತೋರು : ನಂಬಿ೯ ತತ್ತ್ವವ ವ್ರತದೊಳಾಚರಿಸಿ ಪೊಲಂಬುದೋಱುವುದಾತ್ಮಸಿದ್ಧಿ (ಶಶಿಕ. ೬೯-೪). [ಪೊಲಂಬು + ತೋಱು]

**ಪೊಲಂಬೊಗು** (ಕ್ರಿ). ಕ್ಷೇತ್ರವನ್ನು ಪ್ರವೇಶಿಸು : ಭೇದವಿಲ್ಲದ ತಾನೆಯಪ್ಪಂತೆ ಸವಿಕಾರ್ಯವಾದ ವಿದ್ಯೆಯ ಪೊಲಂಬೊಗಲು ತತ್ಕ್ಷಣಕಂಗಳಾದ ವಂಶಾತ್ಮಚೈತನ್ಯದ ಪ್ರತಿಫಲದ ರೂಪವಹ ವಿದ್ಯಂಗಳಾ (ಶಿ೬ಕ್ಯ.೩-೪-೨೬). [ಪೊಲ + ಪೊಗು]

**ಪೊಲಕೇಶಿ** 'ಪುಲಿಕೇಶಿ' ನೋ.

**ಪೊಲಗ, ಪೊಲೆಗ** (ನಾ). ಒಬ್ಬಾತನ ಹೆಸರು : ಬನವಾಸಿನಾಡಂ ಧಲದಂಕರಾಮ ಸಾನ್ತರನಾಳೆ ರಟ್ಟಪಳ್ಳಿಯ ಪೊಲಗನು (ಎಕ. VIII, ಹೊನ್ನಾ೪. ೨೯-೩ ; 934). **ಪೊಲೆಗ** : ಪಿರಿಯವಾಗುಣ್ಡಿಯ ಪೊಲೆಗ ಊರ್ಗ್ಗಾಗ ಮುಣ್ಣುಗೆಯ್ಯುತ್ತಿರೆ (ಎಕ. VIII, ಸೊರಬ. ೪೦೩-೦೬; 986) ; ಎಱಕನ ವರ ಪುತ್ರಂ ಪೊಲೆಗನೀ ಮಹೀಮಣ್ಡಳದೊಳ್ ಸ್ಥಿರಮಾಗಿರೆ (ಸೌಇಇ. XI-I, ೩೩ ೩೬ ; 1029). [?]

**ಪೊಲಗಾ** (ಕ್ರಿ). ಹೊಲದ ಬೆಳೆಯನ್ನು ಕಾಯು.– ರಕ್ಷಿಸು : ಪೊಲಗಾವ ಪಾಮರಿಯರೋಳಗಳ ಮೃಗಂಪ . . . ಸುಳಿವ ತಂಗಾಳಿಗಳ ಕಡುಗಂಪ ಸೇವಿಸುತೆ ಪಥಿಕರಾಸರ್ಗಳೆವರಾ ನಾಡೊಳು (ಕೃಬಾಶಾ. ೩-೬). [ಪೊಲ + ಕಾ$_1$]

**ಪೊಲಗಾಪು** (ನಾ). ಪ್ರದೇಶದ ರಕ್ಷಣೆ.–ಕಾವಲು : ಆ ಬಿಡಿನ ಪೊಲಗಾಪಿನವರ್ ಕಾಣುತೆ ಪಲರುಂ ಪರಿತಂದು (ಶಿಜಾಂ. ೩೬-೩೯). [ಪೊಲ + ಕಾಪು]

**ಪೊಲಗಾಹಿ, ಹೊಲಗಾಹಿ** (ನಾ). ಹೊಲದ ಬೆಳೆಯನ್ನು ರಕ್ಷಿಸುವ ವ್ಯಕ್ತಿ : ಪೊಲಗಾಹಿಯುಬ್ಬರಿಸಿ ದಿಕ್ಕುದಿಕುಬೊಕ್ಕು ತಾನೆಳ್ಪುತಿರಲಿರದ . . . ಪೆರತೊಂದೆಡೆಗೆ ಪಾಱಿ ಮಂಡಿಸುತೆ (ಕಶ್ಯಾಂಗ. ೩೩-೦೪೪೬). **ಹೊಲಗಾಹಿ** : ಹೊಲಗಾಹಿಗಳೆಲ್ಲ ಗುಡಿಸಲುಗಳಲ್ಲಿ . . . ಸೇರಿಕೊಂಡಿದ್ದರೆ (ಕೇಬುಹು. ೨೬). [ಪೊಲ+ಕಾಹಿ]

**ಪೊಲಗಿಡಿಸು** 'ಪೊಲಗೆಡಿಸು' ನೋ.

**ಪೊಲಗಿಡು** 'ಪೊಲಗೆಡು' ನೋ.

**ಪೊಲಗೆಡಿಸು, ಪೊಲಗಿಡಿಸು** (ಕ್ರಿ). ೧. ದಿಕ್ಕು ತಪ್ಪಿಸು ; ದಿಗ್ಭ್ರಮೆಯುಂಟುಮಾಡು : ಪಚ್ಚೆಯ ಕಂಬಂಗಳ ಬೆಳಗುಂ ಪೊಲಗೆಡಿಸಿವತ್ತು ಸುರರೀಕ್ಷಣಮಂ (ಶಾರಕ. ೬-೪೩). **ಪೊಲಗಿಡಿಸು** : ೧. ನೀನಂತು ಪಲವೋದನೋದಿ ಎನ್ನಂ ಪೊಲಗಿ[ಪಾಠಾಂ. ಗೆ]ಡಿಸದೆ ಉಳ್ಳುದನುಳ್ಳಂತೆ ಪೇೞು (ಶಂಕರಂ. ೦೩೪-೪). ೨. ರೀತಿಗೆಡಿಸು ; ಕ್ರಮತಪ್ಪಿಸು : ನೆಲಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ ಸತತಮೆಂದೆ ಪಟಗನ್ನಡಮಂ ಪೊಲ(ಗಿ)[ಪಾಠಾಂ. ಗೆ]ಡಿಸಿ ನುಡಿವರಾಗಮಬಲಹೀನರ್ (ಕವಿರಾ. ೦-೪೬) ; ಪೇಱವಿಶಿಯೆಂಬ ವಿಧಿಗಳೊಳ್ ಬಂದು ನೆಲೆಗಿಡಿಸಲುಂ ಪೊಲಗಿಡಿಸಲುಂ ಬಲ್ಲಂ (ಶಾಂತಿಪು. ೩-೨೩ ವ). [ಪೊಲ + ಕಿಡಿಸು$_1$]

**ಪೊಲಗೆಡು, ಪೊಲಗಿಡು, ಹೊಲಗೆಡು** (ಕ್ರಿ). ೧. ದಾರಿ ತಪ್ಪು : ಮಾರ್ಗ ತಿಳಿಯದಂತಾಗು : ಅವಧಿವಿಬೋಧದ ಬರೆ ಮನಕ್ಕೆ ಬಗೆಯೊಳ್ ಕಂಡಂ ದಿವಿಜಪತಿ ತನ್ನ ಮುನ್ನಿನ ಭವಮಂ ಪೊಲಗೆಟ್ಟು ಬಟ್ಟೆಗಾಣ್ಬಂತಾಗಳ್ (ಶಾಂತಿಪು. ೬-೦೪); ಇರುಳ್ ನಡೆವಂ ಪೊಲಗೆಟ್ಟಲ್ಲಿಯೆ ನೇಸಱ್ಗಿಗೆವವೊಲ್ (ಶಂಕೃಕ. ೪-೬೩); ಪೆಟ್ಟುವಿನೊಳ್ ಪೊಲಗೆಟ್ಟು ತೊಟಲುತ್ತುಂ ಬಾದು ನಿಮ್ಮಂ ಕಂಡಂ (ಶೀಜಾಂ. ೦೬೬-೨೧). ೨. ಭ್ರಾಂತಿಗೊಳ್ಳು; ದಿಗ್ಭ್ರಮೆಯನ್ನು ಹೊಂದು; ದಿಕ್ಕು ತೋಚದಂತಾಗು : ಶಿಶುಶ್ರೇಣಿಗಳ್ ಪಿಡಿಮರ್ಗಿ ಪೊಲಗೆಟ್ಟು ಪೊಕ್ಕು ಮೃಗಶಾಬಾನೀಕಮಂ ಕೊಂಡು (ಅರ್ಗಶೀ. ೩-೩೦); ಬಳಕೋಳಾಹಳದಿಂ ವಿಯಚ್ಚರಗಣಂ ಶೇಷಂ ದಿಶಾಪಾಲಕರ್ ಪೊಲಗೆಟ್ಟಾರ್ಪೆದ (ಶಗಂ. ೬-೪೧). **ಪೊಲಗಿಡು**: ೨. ನೆಱನೀಕಂಗೀ ಯೆಡೆಯೆಂದು ತೋಱ ಕಡೆ ಪೊಲಗಿಡದಱದಂ ಪರಮಪಂಡಿತಂ ಪವನಸುತಂ (ಗದಾಯು. ೬-೩೩); ಕಾದಲನೆಡೆಗೆಯ್ದೆ ಬರ್ಪ ಖಚರೀನಿಚಯಂ ಕೈದಿರ್ವೋಗಿ ದಿಟ್ಟಿಗಳ್ ಪೊಲಗಿಡೆ ಚಿತ್ತದುಜ್ಜುಗಮುಮಂ ಮಱ ದಿರ್ದವೊಲಿರ್ದ ನಲ್ಲಳಂ . . . ನರಪತಿ ಭಾವಿಸಿ (ವರ್ಧಕ. ೪-೬೬); ಸವನಕ್ಷೀರಂ . . . ಪರಿದುದು ದಿವಿಜರ್ ಮೇರುಮಹೀಧರಮಲ್ಲದು ತಾರ ಮಹೀಧರವಿದೆಂದು ಪೊಲಗಿಡುವಿನೆಗಂ (ಅಜಿಂತ. ೩-೬೬). **ಹೊಲಗೆಡು**: ೧. ಮುನಿಗಳೊಳಱಿದರು ಮೂಮಾಸದಿಂ ಪುರಜನಂ ಭೂಪನಂ ಹೊಲಗೆಟ್ಟ ಕಱ ತಾಯನಱಸುವಂತೆ (ಹರಿಶ. ೮-೬೦): ಕೆಟ್ಟೆನಿನ್ನೇವೆನೆನ್ನಣುಗ ನಡವಿಯೊಳು ಹೊಲಗೆಟ್ಟನೋ (ಸಿದ್ಧರಾ. ೨-೪೩). [ಪೊಲ + ಕೆಡು$_1$]

**ಪೊಲಗೆಱೆ** (ನಾ). ಹೊಲಸು ತುಂಬಿದ ಕೆರೆ : ಪಾಪದ ಪುಂಜಂ ತೋಯಿಲ ಕುಟುಂ ಪೊಲಗೆಱೆಯೆಂದಾಯತಿಯಂ ಬಗೆವರುಟ್ಟವರಾ ಸೂಳೆಯರಂ (ಕವಾರ. ೨೯೯). [< ಪೊಲೆ + ಕೆಱೆ]

**ಪೊಲಗೇರಿ** 'ಪೊಲೆಗೇರಿ' ನೋ.

**ಪೊಲತಪ್ಪು** (ಕ್ರಿ). ದಾರಿ ಸಿಕ್ಕದಾಗು; ಹಾದಿ ತಪ್ಪು : ಪೊಲತಪ್ಪಿದ ಹುಲ್ಲೆಯಂತಾ ಸಖಿಯರು ಪಲುಬಿ ಪಂಬಲಿಸಿ (ಅಂಶಿಕ. ೪-೬೨). [ಪೊಲ + ತಪ್ಪು$_1$]

**ಪೊಲತಿ, ಪೊಲಂತಿ, ಹೊಲತಿ** (ನಾ). ೧. ಹೊಲೆಯರ ಹೆಣ್ಣು : ನೀಳನೆಂಬ ಮಾದೆಗಂಗು ಕೇಶಿಯೆಂಬ ಮಾದೆಗಿಗಂ ಮಗಳ್ . . . ಪೊಲತಿಯಾಗಿ ಪುಟ್ಟ (ವಡ್ಡಾರಾ. ೯-೬); ಬಿಡುವಂತುಟದೊಂದವಳ್ಗೆ ಪೇೞ್ದ ದೊರಕೊಳಲಾರ್ಗಮೋ ಪೊಲತಿಗೆ (ಶಾದಂಉ. ೬೪೬); ಪೊಲತಿಯಪಾಲಿಕೆ ಶುನಕನ ಕಳೆವರಮಂ ಪೊಕ್ಕು ಪೇಸದುಂಡಾ ಪಾಪನಿವರ್ತಳನಾಗಿ ಮುಕ್ತಿರಮೆಯೊಳ್ಳಲಿದಂ (ಸಶೀಶ. ೦೦-೦೦೪). Δ**ಪೊಲಂತಿ**: ೧. ಪೊಲಂತಿಯರೊಳೀ ಜನಮೋಹನಮಪ್ಪ ರೂಪು ತಾಂ ನೆಲಸುಗುಮೇ (ಪುಹಾಶೀ. ೬-೩೧). **ಹೊಲತಿ**: ೧. ಬಡ ಹೊಲತಿ ಮೈಗೆಟ್ಟವಳು ನೀನು . . . ದೂರದಿರತ್ತ ನಿಲ್ಲು (ಬಸಪು. ೩೬-೩೩); ಹೊಲಗೇರಿರಿ ಹೊಲೆಯ ಹೊಲತಿಲ್ಲ (ಪುರಂದ. ೧-೦೦೬ ಅಕುಶಲ್ಲಿ). ೨. "ಹೊಲೆಯುಳ್ಳವಳು, ರಜಸ್ವಲೆಯಾದವಳು" (ಶಿವ. ೪೦೬): ಹೊಲತಿ ಶುದ್ಧನೀರ ಮಿಂದಂತಾಯಿತ್ತಯ್ಯಾ (ಶಿವ. ೬೨೪): ಹೊಲತಿ ತನ್ನ ಹೊಲೆಯ ಮಱದು ಶುದ್ಧನೀರ ಮಿಂದನೆಂದು ಕೆಲವರ ಮುಟ್ಟುವಂತೆ . . . ತ್ರಿಕರಣಶುದ್ಧವಿಲ್ಲದ ಪೂಜೆ (ಬೋ೯ವಚ. ೩೪-೦೬೨). [< ಪೊಲೆ + – ತಿ$_1$ (< – ಇತ್ತಿ)./ತಮಿ. ಪುಲೈತ್ತಿ; ಕೊಡ. ಪೊಲತಿ]

**ಪೊಲದಿ** (ನಾ). ಕಾಮುಕ; ವ್ಯಭಿಚಾರಿ : "ಸಿತಗನುಂ ಪೊಲದಿಯಂ [ಪಾಠಾಂ. ಪೊಲೆಯನುಂ]ದಕ್ಕು" (ಶಬ್ದಕ್ಕ. ೮೩); "ಪೊಲದಿಯೆನೆ ಸಿತಗ" (ಬಿಶ್ಮಪು. ೩೬). [ದೇ. ‖ ಮಲ. ಪುಲಯಾಟಿ]

**ಪೊಲದಿಗಣ್ಣು** (ನಾ). ಕಾಮುಕ ಕಣ್ಣು ; ವಿಟದೃಷ್ಟಿ : ನಿನಗೆ ಪೊಲದಿಗಣ್ಣು ಕೊಟ್ಟಾಗ, ನಿನ್ನ ಅದ್ಭುತ ರೂಪ ಸೌನ್ದರ್ಯಗಳ ಕಿರುಜಪ್ಪನದ

ಅಂಗೋಪಾಂಗಪ್ರದರ್ಶನಗಳ ಹಾವಭಾವವಿಲಾಸವಿಭ್ರಮಗಳ ಪ್ರಯೋಗದಿಂದ ಬಗೆಗಲಂಕಿ ಅವನನ್ನು ಮುಂದರೆವಿಡಿಯದೆ (ಮುಂತ್ರಕ. ೩೬-೧೦).
[ಪೊಲದ+ಕಣ್ಣು (< ಕಣ್)]

**ಪೊಲಬಿಗ** 'ಪೊಲಂಬಿಗ' ನೋ.

**ಪೊಲಬು** 'ಪೊಲಂಬು' ನೋ.

**ಪೊಲಬುಗೆಡು** 'ಪೊಲಂಬುಗೆಡು' ನೋ.

**ಪೊಲಮಚ್ಚು** 'ಪೊಲಮೆಚ್ಚು' ನೋ.

**ಪೊಲಮೆಚ್ಚು**, ಪೊಲಮಚ್ಚು (ನಾ). ತನ್ನ ನೆಲೆಯ ಮೇಲಿರುವ ಪ್ರೀತಿ,-ಸೆಳೆತ; ಸ್ವಸ್ಥಾನದ ಆಕರ್ಷಣೆ: ಅದಟರ ಚೆನ್ನಪೊಂಗರ ಸಬಂಗಳ ತೊಟ್ಟುಚ್ಚೆಯೊಳ್ ತೊಡಂಕಿ ನಿಲ್ಲದೆ ಪೊಲಮೆಚ್ಚು[ಪಾಠಾಂ. ಪೊಲಮಚ್ಚು] ತಮ್ಮ ಮನದೊಳ್ ಮಿಗೆ ಬೆಚ್ಚಿಸಿದಂತೆ ತೋಱುವ . . . ಆರ್ಬಸುಗಳ್ ಪರಿಗೊಂಡುವಾಜಿಯೊಳ್ (ಶಂಕರಾ. ೬-೧೦೯). **ಪೊಲಮಚ್ಚು**: ನಿಲೆ ಪೊಲಮಚ್ಚು ತಮ್ಮ ಮನದೊಳ್ ಸರೆ ಕಟ್ಟಸು ಪರ್ವಿದುರ್ವಿಯೊಳ್ ಚಲದಿಜಿದಾಂತು ಬಿಟ್ಟ ಭಟರಂತ್ರದ ಪೊಂಕುಳಿಯೊಳ್ . . . ಪರಿತಂದುವು ಯುದ್ಧಭೂಮಿಯೊಳ್ (ಚಂದ್ರಾ. ೧೦-೦೫೩). [ಪೊಲ+ಮೆಚ್ಚು₂]

**ಪೊಲಮೇರೆ**, ಪೊಲೆಮೇರೆ, ಹೊಲಮೇರೆ, ಹೊಲವೆರೆ, ಹೊಲವೇರಿ, ಹೊಲವೇರೆ (ನಾ). (ಪ್ರದೇಶದ) ಗಡಿ; ಸೀಮೆ; ಸರಹದ್ದು: ಪೊಲಮೇರೆ ತಟ್ಟಗ್ಗಲಿಯ ಕಿಟ್ಟೆಯಿಜ್ ಪೋಗಿ (ಎಕ. II, ೩-೩೩: ಸು. ೬೦೦): ಇನಿತುಮಂ ಪೊಲಮೇರೆ ಸಹಿತಂ ಇತ್ತನ್ (ಎಕ. IX. ಕಂಗೆಳಾ. ೬೩-೦೩; ಸು. ೬೯೦); ಅಣಲಿಗೆಯೂರ ಮುಂದಣ ಪೊಲಮೇರೆಯ ಪಳ್ಳದ ತಡಿಯಾಲು (ಶಾಂಕೀರ್. ೯-೩೮; 1070). **ಪೊಲೆಮೇರೆ**: ಪೂರ್ವ ಪಿಪ್ಪರಗೆ[ಯ] ನಾಲ್ಕುದೆಸೆಯ ಪೊಲೆಮೇರೆಯುಂ [ನ]ಡು ಸರಿಯಾಗಿ ನಡದು[ಂ] (ಶಾಇಇ. XI-1, ೯-೨೯: ೯೮೭). **ಹೊಲಮೇರೆ**: "ಅವಧಿ, ಮರ್ಯಾದಾ, ಆಘಾಟ, ಸೀಮ, ಸೀಮಾ—ಈ ೫ ಹೊಲಮೇರೆ" (ಶಠಾಯು. ೯೩-೦೦೯); ನಮ್ಮ ಕೂಡಲಸಂಗನ ಶರಣರ ಅನುಭಾವವಿಲ್ಲದವರ ಹೊಲಮೇರೆಯ ಹೊಂದೆ ಹೊಲನ ಬಿಟ್ಟೋಡುವೆ (ಬಸವ. ೯೯೬): ಹೊಲಮೇರೆಯುಂ ಮೆಟ್ಟಲೊಲ್ಲದ ಚಲಂ ಮಿಕ್ಕು ಕಲಿಕಾಮನಲ್ಲಿ ತಿರುಗಿದನುಮ್ಮಳಂ ಮಿಕ್ಕು (ಕಂಠೀ. ದೀ. ೩೦೭-೯). **ಹೊಲವೆರೆ**: ಮೂಡಣ ಮೇರೆ ಮಂಗಳೂರ ಹೊಲವೆರ ಯೊಡವಿನ ಕೊತ್ತುರ ಹೊರೆಯಾಣ ಕವಿಲೆಯ ಕಲ್ (ಕೈಕ. ೭೬-೦೨-೫೨: 1170). **ಹೊಲವೇರಿ**: ಹೊನ್ನವುರವ ನಿರಗುನ್ನದ ಹೊಲವೇರಿಯ ಆಣಗದಲು . . . ಕಾದಿ ಸುರಲೋಕಪ್ರಾಪ್ತನಾದಲ್ಲಿ (ಎಕ. V. ಚಾಕಪ. ೩೯-೯ : 1174 ?); ಈಶ್ವರಪುರದ ಹೊಲವೇರಿಯ ಚಿಕ್ಕಕುಂಟೆ (ಎಕ. VII. ಶಿವಮೊ. ೨೩-೨೫೭; 1624). **ಹೊಲವೇರೆ**: ಶ್ರೀಮ[ತ್]ತ್ರಿಭುವನೇಶ್ವರ ದೇವರ ನಿವೇದ್ಯಕ್ಕೆ ದೇವಗೇರಿಯ ಹೊಲವೇರೆಯುಂ ತೆಂಕ . . . ಬಟ್ಟಯರೆ ಮತ್ತರಯ್ಯು (ಎಇ. XIX. ೦೯೨-೨೫; 1121); ಬಡಗವೊಲದ ಹೊಲವೇರೆಯ . . . ಕೆಯ ಘಳೆಯ ಮತ್ತರು ೪ (ಶಾಂಕೀರ್. ೩೨-೦೦; 1149); ಅಲ್ಲಿಂ ಪಡುವಲು ತೆಂಕಣ ಮೇರೆ ಸಿರಿಯೂರ ಹೊಲವೇರೆ ಯೊಡವಿನ ಕೊತ್ತುರ (ಶಾಸಕ. ೭೯-೦೯; 1170). [ಪೊಲ + ಮೇರೆ₁]

**ಪೊಲವಾನಸೆ** (ನಾ). = ಪೊಲತಿ ೧: ಚರಿಗೆವೋಗುತ್ತುಂ ನಾನಾನೂನ ಮಃಖಪೀಡಿತಮಾನಸೆಯಾಗುತ್ತಮಿರ್ದ ಪೊಲವಾನಸೆಯುಂ ಕರುಣಾಕೈಮಿಗೆ ಕಂಡು (ಸುಕುಮಾ. ೫-೨). [ < ಪೊಲೆ + ಮಾನಸೆ ]

**ಪೊಲವಿಡಿ** (ಕ್ರಿ). ನೆಲೆ ಮುಟ್ಟು: ಪೊಲವಿಡಿವುದು . ಬಗೆಯುಮಮಾ ಬಲೆಯೊಳ್ ಕಣ್ಬಾಳೆ ತೊಡರೆ ಪಿಡುಕುವುದುಮಮಾ (ಕಕಾ. ೩-೦೭೯).
[ಪೊಲ + ಪಿಡಿ₁]

**ಪೊಲಸಂದು** (ನಾ). ಬೇರೆಬೇರೆ ಹೊಲಗಳು ಕೂಡುವ ಸ್ಥಳ: ಅನ್ನಬನ್ನಿ ಬೆಳ್ಗಲಿಯ ಇಗ್ಗಲಿಯ ಕಲ್ಸನ್ನಿನ ಮಾಱೂರ ಪೊಲಸನ್ನಿನ ಕಟಿಕೊಡಿಯನ ಕಿಱಿಯಿಂ (ಎಕ. III, ಕಂಚಿಕ. ೦೩೯-೨೩; ೯೧೬ ?).
[ ಪೊಲ + ಸಂದು₁ ]

**ಪೊಲಸೀಮೆ** (ನಾ). = ಪೊಲಮೇರೆ: ಮಾಱೂರ ಮುಕ್ಕೊಡಲಲ್ಲಿ ಪೊಲಸೀಮೆ ಕೂಡಿತ್ತುಂ (ಶ್ವಾಅ. ೦೯೩೯, ೩೯-೩೦; 11ನೆಯ ಶತ).
[ ಪೊಲ + ಸೀಮೆ ]

**ಪೊಲಸು**₁, ಹೊಲಸು₁ (ನಾ). ೧. ಕೊಳೆ; ಕೊಳಕು; ಮಾಲಿನ್ಯ: ಅದ್ರಿಯನಗೆಯುತ್ತುರ್ವಿಯನಡಂಗಿಪ ಭಂಗಿಯೊಳಿಲ್ಲ ಭೇದವಾ ಕ್ಷಯ ಪವನಂಗಮಾತನ ಗದಾಪವನಂಗಮದೊಂದೆ ರಕ್ತಚರ್ಚೆಯ ಪೊಲಸುಂಟೆ ದೈತ್ಯನ ಗದಾನಿಳನಲ್ಲದೊಡಾ ಕ್ಷಯಾನಿಳಂ (ಜಾ. ೯-೬೯); ಪೊಲಸಿನ ನೆರೆ ರುಧಿರದ ಕುಳಿ ಎಲಿವಿಲಿಸುವ ಪುಳುಗಳೊಗೆವ ಪುತ್ತು ಪುರೀಷ ನೆಲಸಿದ ದರಿ ಕಾಮಾಹಿಯ ಬಿಲಮಂಗಜಗೃಹಮನಂಗದುರ್ಜಲಕೂಪಂ (ಕೃಶಾ. ೨೮-೬೦). ೨. ಅಮೇಧ್ಯ: ಮಲ: ಪೊಲಸಿನಂತಶುಚಿಯಪ್ಪ . . . ಸಂಸಾರಮಂ ನಂಬಿ ದರ್ಶನಮುಮಂ ವ್ರತಮುಮಂ ಕಿಡಿಸುವುದೆಗ್ಗಿಕೆ (ಧರ್ಮಾಮೃ. ೩-೦೫೬). ೩. ಕಳಂಕ; ದೋಷ: 'ಪೊಲಸುಗೊಳ್' ನೋ.

**ಹೊಲಸು**₁: ೧. ಹೊಲಸಱಿಯಟ್ಟಿ ನಾರ್ವ ನಿಜದೇಹದ ರಾಜತನೂಜ ನರ್ತಿಯಿಂ ತಳೆದುಪವಾಸದೊಂದು ಫಲದಿಂ ರತಿವಲ್ಲಭರೂಪನಾಗಿ ಕಣ್ಗೊಳಿಸಿ . . . ಅಮೃತೇಶನಾದಂ (ಪುಣ್ಯಾಸ್ರ. ೯-೦೭); ಬಾತ ಹೆಣ ನುಬ್ಬರದ ಹೊಲಸಿನ ಗವಲು ಕವಿದುದು ಕೂಡೆ ವನದೊಳಗೆ (ಕುಮಾ. ೦೦-೦೨); ಮೈಮೇಲೆ ಹೊಲಸು ಇದ್ದರೆ ಅದು ರೋಮರಂಧ್ರಗಳ ಬಾಯಿಗೆ ಕೂತು, ಬೆವರಿಗೆ ಅಡ್ಡಿ ಮಾಡುತ್ತದೆ (ಕುಂಹಯ. ೯-೨೯). ೨. ಹೊಲಸು ಮಾಂಸದ ಹುತ್ತ ಎಲುವಿನ ಹಂದರವು ಹೊಲೆ ಬಲಿದ ತನುವಿನೊಳಗಿರ್ದುಮದಱೊಳಗೆ ಕುಲವನಱಸುವರೆ (ಸರ್ವಜ್ಞ. ೨೦). ೪. ಕಸ; ಗಲೀಜು: ಮ್ಯುನಿಸಿಪಾಲಿಟಿಯ ಆರೋಗ್ಯಖಾತೆಯ ಟ್ರಕ್ಕೊಂದು ರಸ್ತೆಯ ಮೇಲೆ ಕೂಡಿ ಹಾಕಿದ ಹೊಲಸಿನ ರಾಶಿಯನ್ನು ತೆಗೆಯಲು ಬಂದು ನಿಂತಿತ್ತು (ಅಮೋಘ. ೦೦೨). ೫. (ಅಲಂ) ಹೀನವಾದ ಕಾರ್ಯ; ಕೆಟ್ಟ ಕೆಲಸ; ನೀಚಕಾರ್ಯ: ಇಂತಹ ಹೊಲಸಿನೊಳಗೆ ನಾನು ಕೈಹಾಕುವುದಿಲ್ಲ. ನನ್ನನ್ನು ಹಿಡಿದರೆ ನೀವು ಸಂಸ್ಥಾನದಿಂದ ಉಳಿಸಲು ಬರುವಿರಾ ? (ಕೂಕಳ. ೭೦). ೬. ಅನಾಗರಿಕತೆ; ಅಸಭ್ಯತೆ: ಮಾತು ಹೊಲಸಿನ ಗಂಧವಾಗಿದೆ ಛೀತಿರಸದಲಿ ಮನ ಮುಳುಗಿತೀ ಪ್ರೀತಿ ಮಾರಿಯ ಮುಸುಕನಾಗಿವುದನಾರು ಕಲಿಸಿದರು (ಕುಮ್ಮಾಸ. ೦೨-೬೬). (ಗು). ೭. ಕೊಳಕಾದ; ಅಶುದ್ಧವಾದ; ಮಲಿನವಾದ: ಹೊಲಸುಮೈಯಪಗೇಕೆ ಹೊಸಕಸ್ತೂರಿವಾಸ ತನೆದೋಱುವವಗೇಕೆ ದಟ್ಟ ಪುನುಗು (ಪುರಂದ. ೦-೦೦೦-೦); ನೆಲೆ ಇಲ್ಲದ ಕಾಯ . . . ಮಲಮೂತ್ರಂಗಳು ಕೀವು ಕ್ರಿಮಿಗಳುಳ್ಳ ಹೊಲಸು ತೊಗಲ ಮುಟ್ಟಿ ಕೆಡಬೇಡಿರೊ (ಪುರಂದ. ೨-೦೦-೨).

ಪೊಲಸಟ್ಟ ನಾಱು, ಹೊಲಸಟ್ಟ ನಾಱು = ವಿಪರೀತವಾದ ದುರ್ನಾತದಿಂದ ತುಂಬಿರು: ಕಾಡ ಪಂದಿಗಳ ಬಲ್ಪೆಣದಿಂ ಪೊಲಸಟ್ಟ ನಾರ್ವ . . . ನೆತ್ತರ ಕಯ್ ನಡುಗಲ್ಕೆ (ಜಾದಂಪು. ೦೬೩); ಮೆಯ್ಯ ವ್ರಣಮುಂ ಕೀವುಂ ಪೊಲಸಟ್ಟ ನಾಱೆ (ಪುಣ್ಯಾಸ್ರ. ೬-೨೭ ಪ); ಮುಂದೆ ನೋಡದೆ ಹೊಲಸಟ್ಟ ನಾರ್ತಪುದು ಪೆರ್ಬುಲಿಯಿರ್ಪುದಕ್ಕನುತ್ತ ಪೆರ್ಚಿದ ವನದಲ್ಲಿ ಪಚ್ಚವಟಾಯಿಂ ನಡೆಗೊಂಡುದು ಭಲ್ಲಸಂಕುಳಂ (ರಕಕು. ೨-೨೦೦). **ಹೊಲಸಾಗು** = ಕೊಳಕಾಗು; ಗಲೀಜಾಗು: ಸೊಡಲಿಗಿಂತ ನಾಲ್ಕುಪಾಲು ಹುಟ್ಟಿಗಿಸೀನು ಬಂದಿತು; ಮೂಗು ಇನ್ನಷ್ಟು ಹೊಲಸಾಯಿತು ! (ಶುಚಿಕು. ೩೬); ಮಗುವಿನ ಬಟ್ಟೆ ಹೊಲಸಾಗಿದೆ (ಊಂ). **ಹೊಲಸು ಮಾಡು** = ೧. ಕೊಳಕು ಮಾಡು; ಮಲಿನಗೊಳಿಸು: ಆತನು ಕಸ ಚೆಲ್ಲಿ ಮನೆಯನ್ನೆಲ್ಲ ಹೊಲಸು ಮಾಡಿದ್ದಾನೆ (ಊಂ). ೨. ಮಲವನ್ನು ವಿಸರ್ಜಿಸು; ಹೇಸಿಗೆ ಮಾಡು: ಮನೆಯ ಬಾಗಿಲಿನಲ್ಲಿ ನಾಯಿ ಹೊಲಸು ಮಾಡಿದೆ

(ಜಾಂ). ೩. ಕಳಂಕಗೊಳಿಸು ; ದೋಷಯುಕ್ತವನ್ನಾಗಿ ಮಾಡು : ನಿನಗೆ ಅಕ್ಕ ತಂಗಿ ಇಲ್ಲವೆ ? ಅವರ ಹೆಸರನ್ನು ಹೀಗೆ ಹೊಲಸು ಮಾಡಿದ್ದರೆ ನಿನಗೆ ಹೇಗೆ ಅನಿಸುತ್ತಿತ್ತು (ರಂಗಪೂ. ೯೯).

[ಪೊಲೆ + — ಸು₂. / ತುಳು. ಪೊಲಸ್, ಹೊಲಸ್]

**ಪೊಲಸು₂**, ಹೊಲಸು₂ (ನಾ). ಮಾಂಸ ; ಬಾಡು : ಮತ್ತಮಾನಂತೆ ಪೋಗಿಪೋಗೆ ಪೊಲಸಿನ ಗಂಧಮಂ ಪೊತ್ತು ಕಿಱಾತವ್ಯರೆಗೊಳ್ವ ಕೌರ ಪೊಗೆಯುಣಱಿಯರಾದ ಬೇಡವಟ್ಟವಂ ಕಂಡಂ (ಶಾಂಪು. ೬೯೨) ; ಇವರವರ್ಗೆ ಛಪಟದಿಂದಂ ಸವಿನಯದಿಂದೆಱೆಯೆ ಕಳ್ಳನಾದರದಿಂ ಮತ್ತ ಐರಿವರ್ಗೆ ತಂದು ಪೊಲಸಂ ಸವಿನಯದಿಂದಿಕ್ಕೆ ಕುಡಿದು ತಿಂದಂದಾಗಳ್ ಸಾವುದುಂ (ರಪೂಸು. ೨-೨೦೯). **ಹೊಲಸು₂** : ಕೊಲುವನೇ ಮಾದಿಗ ಹೊಲಸ ತಿಂಬವನೇ ಹೊಲೆಯ ಕುಲವೇನೊ ಅವಂದಿರ ಕುಲವೇನೊ (ಬಸವ. ೩೯೨) : ಅವನ ಕಯ್ಯೊಳು ಹೊಲಸು ವಸದೊಳವ್ಯತಾ (ಕಶ್ರ. ಪ. ೦೯೯-೦೩). [ದೇ. ॥ ತಮಿ. ಪುಲ್ಯೆಚು ; ತೆಲು. ಪೊಲುಸು]

**ಪೊಲಸುಗೊಳ್** (ಕ್ರಿ). ಕಳಂಕಿತವಾಗು ; ದೂಷಿತವಾಗು : ಕಾಯ ಮಾಡಿದವನ ಕೊಲೆಯಿಂದೆ ಪೊಲಸುಗೊಂಡೆಲ್ಲವನು (ಜುಂಜಾ. ೦೦೯-೩೬೯).

[ ಪೊಲಸು₁ + ಕೊಳ್₁ ]

**ಪೊಲಸುನಾಱು**, ಹೊಲಸುನಾರು, ಹೊಲಸುನಾಱು (ಕ್ರಿ). ಗಬ್ಬುನಾತ ಬರು ; ದುರ್ವಾಸನೆ ಬರು : ನೆತ್ತರೊಳ್ ಪೊರೆದು ನಿರಂತರಂ ಪೊಲಸು ನಾಱುವ ಮೆಯ್ಯನೆ ಛರ್ಮದಿಂದು ಚಿಚ್ಚರವಾಪರಾಂಬುರಾಶಿಗಿಱಿವಂತಿಱಿದಂ ಕಮಳೈಕಬಾಂಧವಂ (ಪಂಕಥಾ. ೦೦-೩೦) ; ದೈತ್ಯನಂ ಪೊಲಸು ನಾಱೆನೆಗಂ ತ್ರಿಶೂಲದಿನೊತ್ತಿ ಕೊಂದ ಕುಮಾರಿ ಕೊರ್ತಲಸದಿರ್ಕೆ ಧುಱಾಸಿಧಾರೆಯೊಳಂಕಮುಳ್ಳರ ದೇವನಾ (ಶಾಕ್ಯ. ೨೦೨). **ಹೊಲಸು ನಾರು** : ಕುಣಪ= ಹೊಲಸುನಾರುವ ಹೆಣ (ಗಂನಾಕು. ೯೯). **ಹೊಲಸು ನಾಱು** : ಹೊಲಸುನಾರ್ವ ಜಲಚರಂಗಳು ಬೆಳವು ನೆಱೆಯದ ಕಿಱುವೆಸಳ ನೆಯ್ದಿಲುಗಳೀ ಮಡದಿಯ ಕುಡಿತೆಗಂಗಳಿಗೆ ಪಡಿಯಲ್ಲ (ಚಸ್ತು. ೪-೨೩).

[ ಪೊಲಸು₁ + ನಾಱು₁ ]

**ಪೊಲಸೇಳು**, ಹೊಲಸೇಳ್, ಹೊಲಸೇಳು (ಕ್ರಿ). ೧. ದುರ್ಗಂಧ ವ್ಯಾಪಿಸು—ಹರಡು : ಶಿವಶಿವ ಇದೆಲ್ಲಿಯದ್ಭುತವೆನುತೆ ಪೊಲಸೇಳೆ ತಿರುಗಿ ಬಂದಗ್ಗಣಿಯನೊಂದು ಠಾವಿನೊಳಿರಿಸಿ (ಕಶ್ರ. ಪ. ೦೩೩-೨೦). **ಹೊಲಸೇಳ್** : ೧. ಮೇಲೆ ಮುಸುಕಿರ್ದ ಮಾಂಸ ಸುಲಿಯೆ ಹೊಲಸೇಳ್ದು (ಬಿ:ಸೋಪ. ಪ. ೩೦೦-೨೨). **ಹೊಲಸೇಳು** : ೨. ಕಸವು ತುಂಬಿರು ; ಗಲೀಜಾಗು : ಮನೆಯೆಲ್ಲ ಹೊಲಸೆದ್ದು ಹೋಗಿದೆ (ಜಾಂ).

[ ಪೊಲಸು₁ + ಏಳು₁ (<ಏೞ್₁)]

**ಪೊಲಿ₁** 'ಪೊಲ್' ನೋ.

**ಪೊಲಿ₂**, ಹುಲಿ₂, ಹೊಲಿ₂ (ನಾ). (ಕರಾ) ಧಾನ್ಯರೂಪದ ಬಡ್ಡಿ : ತಲವಾಸಿ : ನರ್ಗ್ಗಣ್ಣುಗ ಭಕ್ತ ಪೊಲಿಯು ಕೊಣ್ಡುಟ್ಟುವೊದು (ಎಕ. X. ಕೋಲಾರ. ೬-೯ ; 758) ; ಮುಡಿಗೆ ಒದು ಕಳಸಿಗೆ 'ಪೊಲಿ' (ಜಿಬು. ೩೯). **ಹುಲಿ₂** : ಗದ್ದೆ ಕೊಯ್ಲಾದ ನಂತರ ಹುಲಿ (ಬಡ್ಡಿ) ಸೇರಿಸಿ ಒಂದಕ್ಕೆ ಎರಡರಷ್ಟು ಭತ್ತವನ್ನು ಹಿಂದಕ್ಕೆ ಕೊಡಬೇಕಾಗಿತ್ತು (ಜಃಶಪೊ. ೮). **ಹೊಲಿ₂** : ಅಕ್ಕಿ ಮಳೆಗಾಲದಲ್ಲಿರಿಸಿಕೊಂಡು ಹೊಲಿಗೆ ಕೊಟ್ಟರೆ ಪ್ರಯೋಜನವಿದೆ (ಜುಗಜು. ೬೬) ; ಎಷ್ಟೋ ಮಂದಿ ಅವರಿಂದ ಹೊಲಿಗೆ ಬತ್ತ ಹೊಂದಿಕೊಂಡಿದ್ದರು (ಜುಸಕೊ. ೫).

[ದೇ. ॥ ತಮಿ. ಮಲ. ತುಳು. ತೆಲು. ಪೊಲಿ]

**ಪೊಲಿಕೇಶಿ** 'ಪುಲಿಕೇಶಿ' ನೋ.

**ಪೊಲಿಗೆ** 'ಪೊಲ್ಗೆ' ನೋ.

**ಪೊಲಿಸು**, ಹೊಲಿಸು (ಕ್ರಿ). (ಹರಿದುದನ್ನು ಜೋಡಿಸಿ) ಹೊಲಿಗೆ ಹಾಕಿಸು : ಹಾಸನಱಿದು ಕಂಥೆಯಂ ಪೊಲಿಸುವ (ರಪೂಸು. ೩-೨೦) : ಸಂಚೆಗೆಂಪಿನ ತೆಳ್ಪಮರ್ದಿರೆ ಪೊರೆಯನೆತ್ತಿ ಪೊಲಿಸಿದ ಕೆಱಿಂದೊಳ್ಪಿನ ಪೊಸತೊಪ್ಪರಂ . . . ಎಸೆದುದು (ಲೀಲಾಶ. ೪-೬೩). **ಹೊಲಿಸು** : ಹೋಳಾದ ಕವಚವ ಹೊಲಿಸಿದರು (ಕುಮಾವ್ಯ. ೫-೩೬) ; ಬೇನಸುಗಳ ಡಾಗಗಳನ್ನು ಹೊಲಿಸಿ ತಯಾರ ಇಡೋಣ (ಜುಂಬಪ್ಪ. ೨೬೯).

[ಪೊಲ್ + — ಇಸು₂]

**ಪೊಲುಕೇಸಿ** (ನಾ). ಒಬ್ಬಾತನ ಹೆಸರು : ಪೊಲುಕೇಸಿಯು ಬೂದಿಗನ ಕಾಳಿಗದೊಳ್ ಪೊಲುಕೇಸಿಯೊಡತಿಹದು ಕೊಕಾಳಿನ ಕೊನ್ನು ಸತ್ತ (ಎಕ. III, ಟ್ರಿಸೂರು. ೯೯-೬ ; ಸು. ೯೫೦ ?). 'ಪುಲಿಕೇಶಿ' ಪರಾ. [?]

**ಪೊಲೆ**, ಹೊಲೆ (ನಾ). ೧. ಮೈಲಿಗೆ; ಸೂತಕ : ಮಾನವರ ಮಖಯಾಜನಂ ಪೊಲೆ ಸುರಗರ್ಹಿತಮಲ್ಲ (ಕೃಂಚಾ. ೩-೨೩). ೨. ಮುಟ್ಟು ; ರಜಸ್ಸು : "ಮುಟ್ಟವೆಯುನೆ ಮಾಣಿಕವೆನೆ ಮುಟ್ಟನೆ ಪೊಲೆ ಸೂತಕಾಭಿಧಾನಂ" (ಶಬ್ದ. ೩೦); ಪೊಲೆ ಪಿಂಗದೆ ಪೊಂಗುವುದಕ್ಕಲಸುವರಾಳಿಜನಂಗಳ್ (ಪುಸ್ತು. ೩-೮೩). ೩. ಕೆಟ್ಟುದು ; ಒಳ್ಳೆಯದಲ್ಲದುದು : ಪೊಲೆ ಮುಳಿಸೆಱುವ ಮುಳಿಸು ಪುಟ್ಟಿದ ಪೊಟ್ಟಱೊಳಾವನಾದೊಡಂ ಪೊಲೆಯನೆ (ಪಂರಾಪು. ೦೦-೯೪). ೪. ಪಾಪ ; ದೋಷ ; ಕಳಂಕ : ಪೊಲೆ ಮಸಗಿ ದಿಕ್ಕುವರೆ ಗಂತಲಸದೆ ಭಾರತಮನೆಯ್ದೆ ಕಿಡೆ ಪೇೞ್ದುದಱಿಂ ಪೊಲೆಯರ ಬಸಿಱೊಳ್ಪಂದಮ್ಮುಳನಾತ್ಮಂ ವ್ಯಾಸನೆಂಬರಿವನಿದನಱಿಯರ್ (ಪಪುಪ. ೦೦-೦೬೯) ; ನಾಡಿಯೆಲ್ಲಂ ಪೊಲೆ ಸೂರುಳೊಳ್ ನಿಱೆ (ಲೀಲಾಶ. ೨-೦೦೨) ; ಪೊಲೆ ಪೊರ್ದಲ್ ಪೇಸಿ ಬೇಸರದಿ (ಎಕ. VII, ಶಿಕಾರಿ. ೫-೬ ; 1218) ; ಮರ್ದಲ್ತು ಪೊಲೆಗೆ ಪೊಲೆ (ಅಕ್ಷಮಾ. ೦೫-೩೮೨). **ಹೊಲೆ** : ೧. ಹೊಲತಿ ತನ್ನ ಹೊಲೆಯ ಮಱೆದು ಶುದ್ಧನೀರ ಮಿಂದೆನೆಂದು ಕೆಲವರ ಮುಟ್ಟುವಂತೆ . . . ತ್ರಿಕರಣ ಶುದ್ಧವಿಲ್ಲದ ಪೂಜೆ (ಬಸೋಸೂ. ೩೯-೦೬೨); ಸೂರ್ಯನ ಕಿರಣ ಹೊಲೆಯನ ಚಾಪಿದರೆ ಹೊಲೆ ಹೊಱುವುದೇ (ಕುಮಾವ್ಯ. ೩-೯೯) ; ಈ ದೇಹದೊಳು ನೀ ನೆರೆಸಿರಲು ಹೊಲೆಯುಂಟೆ (ಪಂಚಾ. ೯೯). ೨. ಜನನ ಮರಣದ ಸೂತಕಂ ಕಿಡುವ ಕೆಱದಿ ಕೆಟ್ಟವು ಹೊಲೆಗಳಾ ದಿವಸಕೆ (ಸಿದ್ಧರಾ. ೦-೩೯). ೪. ಹುಸಿಯೆಂಬುದೇ ಹೊಲೆ (ಬುಹಾರ. ೩. ೩೬-೦೯೦) ; ಮುನಿಗೆ ಹೊಲೆಯಾವುದತಿ ಕೋಪ ಬದ್ಧದ್ವೇಷ (ಹರಿಶ. ೬-೨) ; ನಿನಗಿನ್ನವದೆಸೆಯ ಹೊಲೆ ಹೋಯ್ತು (ಕುಮಾವ್ಯ. ೦೯-೬೨). ೫. ಕೊಳಕು ; ಮಲ ; ಹೇಸಿಗೆ : ಹೊಲಸು ಮಾಂಸದ ಹುತ್ತ . . . ಹೊಲೆ ಬಲಿದ ತನುವಿನೊಳಗಿರ್ದು ಮಮತೆಯೊಳಗೆ ಗಲವನಱಸುವರೆ (ಸರಗ್ರ. ೬೦). ೬. ಮೋಸ : ಮಾತೃದ ಕುಳಿಯ ಹೊಱವಡುವಾಗ ಹೊಲೆ ಮಾಂಸವಾಗಿ ಮುದುಡಿ ಬಿದ್ದಲ್ಲಿ ಹೆತ್ತವಳು ಹೊಲತಿ ಮುಟ್ಟಿದ ಮಗುವು ಹೊಲೆಯನೆಂದು ನಿಮ್ಮ ಕುಲಗೋತ್ರ ಮುಟ್ಟಲಮ್ಮದೆ (ಸಠಾಶ. ೦೬೫-೬೨೯).

**ಹೊಲೆಯಾಗಿರು**=(ಸ್ತ್ರೀಯು) ರಜಸ್ವಲೆಯಾಗಿರು ; ಮುಟ್ಟಾಗಿರು : (೬). **ಹೊಲೆಯಾಗು**=ಅಪವಿತ್ರವೆನಿಸು ; ಅಮಂಗಳವಾಗು : ಒಳ್ಳೇ ಕೆಲಸದ ಅರಿವು ಇರದ್ದರಿಂದ ಅವರ ಆಯುಷ್ಯವೆಂಬುದು ಹೊಲೆಯಾಗಿತ್ತು (ಗೌರಾಂಗ. ೯೬).

[ದೇ.॥ ತಮಿ. ಪುಲ್ಯೆ ; ಮಲ. ಪುಲ ; ತುಳು. ಪೊಲೆ, ಓಲೆ, ಹೊಲೆ ; ಕೊಡ. ಪೊಲೆ]

**ಪೊಲೆಕೇಶಿ** 'ಪುಲಿಕೇಶಿ' ನೋ.

**ಪೊಲೆಕೇಸಿ** 'ಪುಲಿಕೇಶಿ' ನೋ.

**ಪೊಲೆಗ** 'ಪೊಲಗ' ನೋ.

**ಪೊಲೆಗಲಸು₁**, ಹೊಲೆಗಲಸು (ಕ್ರಿ). ೧. ಅಪವಿತ್ರಗೊಳಿಸು ; ಮೈಲಿಗೆಯುಂಟುಮಾಡು : ಕಲ್ಲಂ ಮರನಂ ಕುಲದೈವಮೆಂದು ಪೂಜಿಸಿ ಪೊಲೆಗಲಸುವ ಪೆಂಡಿರಿಂದ ಬೆಳಗದು ಧರ್ಮಂ (ಸಪುಶ ೫-೯೩);

ಇಂದೀ ಗಳಿಗೆಯೊಳು ಹೊಲಗೇರಿಯೊಳೊರ್ವ . . . ಭಕ್ತನ ಮನೆಯೊಳ ಗುಂಡುದಲ್ಲದೆ ನಿನ್ನೋಲಗದೊಳು ಪೊಲೆಗಲಸಲುಂ ಬಂದವಂ (ಬಸವ. ೧೧-೩೦) : ಕುಲಹೀನನೋರ್ವನಂ . . . ನಿಲಯಕ್ಕೆ ತಂದು ಕಾಲ್ತೊಳೆದು ತಜ್ಜಲವೀಂಟಿಯುಣಲಿಕ್ಕಿ ಏಕಕ್ಕುದುಂಡು ಪೊಲೆಗಲಸಿದಂ (ಶಶ್ವರ. ೯-೯೦). ೨. ಮೈಲಿಗೆಯಾಗು ; ಅಪವಿತ್ರವಾಗು : ಪೊಲಲ ಬೇಳ್‌ಕಟ್ಟಿಗಳ್, ಮನೆಯ ಬೇಳ್‌ಕಟ್ಟಿಗಳ್, ಎಲ್ಲಮುಮವ್ ಪೊಲೆಗಲಸಿಯಿರ್ದತ್ತು, ಕೊಲೆವಿಟ್ಟ ದುರ್ವಿಧಿಯ ಒಯ್ಸೈವೌಸ್ ಮಗನ ಪೆಣದಿನ್ ಪರ್ದುಗಳ್ ನಾಯ್ಗಳುವ್ ಪಿಕ್ಕಿದೆರೆಯನ್ (ಉಂತಿಗೊ. ೯೩-೯೬೦). **ಹೊಲೆಗಲಸು** : ೧. ನಿಮ್ಮೂರ ಭೋಗಣ್ಣನೆಂಬ ಭಕ್ತಂ ವಿಜಾಚ ತಮ್ಮ ಭಕ್ತಾಚಾರವೆಗ್ಗಳಂ ತಲೆಗೇಚ ಹೊಲೆಗಲಸಿ ನೆಲೆಗೆಟ್ಟು ಛಲವುಡುಗಿ ಕುಲವಳಿದು ಹೊಲೆಯನೆನ್ನದೆ ಹಿರಿಯ ಭಕ್ತನೆಂದಬೀದಜೀದು (ಶೋಗಶ. ಹ. ೨೬೯-೯) ; ನೀನು ದೇಶಭ್ರಷ್ಟ ನಾಗಿದ್ದು, ಹಿಂತಿರುಗಿ ಬಂದುದಕ್ಕಾಗಿಯೂ ನಿನ್ನ ತಂದೆಯ ಏಕಾಂತ ಭವನವನ್ನು ಪ್ರವೇಶಿಸಿ ಹೊಲೆಗಲಸಿದುದಕ್ಕಾಗಿಯೂ ತಕ್ಕ ಫಲವನ್ನು ಅನುಭವಿಸುವೆ (ಕುಶಲ. ೧೧೧). ೨. ಬಲ್ಲಹನೆ ಕಲ್ಯಾಣಕಟಕವದೆಲ್ಲವು ಹೊಲೆಗಲಸಿ ಹೋಯಿತು (ಬಸಪು. ೫೩-೬) ; ಅಗ್ರಹಾರಂ ಹೊಲೆಗಲಸಿತೆನು ತಾಗ್ರಹಿಸಿ ವಿಪ್ರರು ನುಡಿವುತಿರೆ (ಬಸಪು. ೫೭-೩೬). ೩. ಕೆಡಿಸು ; ಹಾಳು ಮಾಡು : ಹೊಲೆಗಲಸದ ಯೋಗಿ ಹೊಲೆಗಲಸದುಳಿವನೇ ಹೊಲೆಗಲಸದಿಪ್ಪ ಕಡುಮೂರ್ಖ ಶಿವಯೋಗಿ ಹೊಲೆಗಲಿಸಿ ಹೋಹ (ಸರ್ವಜ್ಞ. ೫೪೬). ೪. ಜಾತಿಸಂಕರ ಮಾಡು ; ವರ್ಣಸಂಕರ ಮಾಡು : ಸಲುವದಷ್ಟಾದಶ ವಿವರ ವರ್ಣಂಗಳಾದಿಯಲಿ ಇಳಿಯೊಳಿವು ತಾನೀಗಲಾದವೆ ಹೊಲೆಗಲಸಿ ಕುಲಸಂಕರವನಗ್ಗಲಿಸಿ ಈ ಕಲ್ಯಾಣಕಟಕವನಿಂತು ಕೆಡಿಸುವರೇ (ಬಸಪು. ೫೫-೧೨). [ಪೊಲೆ + ಕಲಸು₁]

**ಪೊಲೆಗಲಸು₂** (ನಾ). ಜಾತಿಸಂಕರ ; ವರ್ಣಸಂಕರ : ಯುಧಿಷ್ಠಿರನಾಳ್ವ ದೇಶದೊಳ್ಕಳವು ಕೊಲೆ ಪಾದರಂ . . . ಪೊಲೆಗಲಸು . . . ಮೊಳೆ ದೋಜವು (ಕೃಷಿತಾ. ೨-೩). [< ಪೊಲೆಗಲಸು₁]

**ಪೊಲೆಗಿಡಿಸು** 'ಪೊಲೆಗೆಡಿಸು' ನೋ.

**ಪೊಲೆಗೆಡಿಸು**, ಪೊಲೆಗಿಡಿಸು, ಹೊಲೆಗೆಡಿಸು (ಕ್ರಿ). ಮಲಿನಗೊಳಿಸು ; ಅಪವಿತ್ರಗೊಳಿಸು : ಒಲವರದಿಂದಲ್ಲದುದಂ ಸಲೆ ನುಡಿದಪರಿದುವೆ ಚೋದ್ಯ ಮವರೊಳ್ಕರ್ಮಂ ಪೊಲೆಗೆಡಿಕುಂ ಪೊಲವಡಿಕುಂ ತೊಲಗಿಕುಮಪವರ್ಗ ಮಾರ್ಗದಿಂ ಭವ್ಯನುಮಂ (ಜಾರ. ೫೦೩). **ಪೊಲೆಗಿಡಿಸು** : ಪೊಲೆಯನುಂ ಕಿಟ್ಟುವ ದೇವರುಂಟೆ . . . ನೀಂ ಬಱಿದೆ ಕೊಂಡುಯ್ದು ವೈಕುಂಠವಂ ಪೊಲೆಗಿಡಿಸದಿರಿ (ರಾಷ್ಟ್ರಕ. ೬೦-೧೧). **ಹೊಲೆಗೆಡಿಸು** : ಒಂದು ಮಾತನು ಲೋಕ ಹೊಲೆಗೆಡಿಸಿಕೊಂಡಿಹುದು, ಹೊಲೆಗೆಡಿಸೆನದನು ನಾನು (ಶಂಗೀತ. ೫೫-೧). [ಪೊಲೆಗೆಡು + — ಇಸು₁]

**ಪೊಲೆಗೆಡು**, ಹೊಲೆಗೆಡು (ಕ್ರಿ). ೧. ಹೀನಸ್ಥಿತಿಗೆ ಇಳಿ ; ಕೀಳಾಗು : ಕೊಟ್ಟೊಡವೇಂ ಕನ್ನಿಕೆಯಂ ಕೊಟ್ಟೊಂಗಮಿದಾಗದೆಂದು ಕುಡೆ ಕೊಂಡೆ ನಗೇಗೆಟ್ಟಪುದೆಂದು ಮನಂ ಪೊಲೆಗೆಟ್ಟಿರೆ ಕೊಂಡಂಗಮೆನಗಮುಱೆಯಲ್ಕಕ್ಕುಂ (ಚಾಂತಿಪು. ೫-೯೯) ; ಕಾಳ್ಪುಳ್ಪವಂ ಕಟ್ಟಿ ಕೋಟಲೆಗೊಂಡೂರ್ಳ್ವನೊರ್ವ ನೊಲ್ಲವರ ಚಾತುರ್ಯಕ್ಕೆ ಕೈವಾರಮಂ ಪೊಲೆಗೆಟ್ಟೀವವನೊರ್ವಂ (ಲೀಲಾವ. ೦-೯೦). **ಹೊಲೆಗೆಡು** : ೧. ಕುಲ ಜಾತಿಗೆಟ್ಟು ಕುಳುಣಲುಡ ಹಡೆಯದೆ ಹೊಲೆಗೆಟ್ಟು ಹುಟ್ಟು ಹೋದಳಿದು ನೆಲಹೊರದಾ ಮಯ್ಗೆಟ್ಟು ಸಿದ್ಧರ ಪಾದ-ಲಘುಭಕ್ತಿಯೊಳಿಜಗುವೆನು (ಶ್ರೀಸಂ. ೩-೨). ೨. ಮುಟ್ಟಾ ಗುವುದು ನಿಲ್ಲು : ಎನ್ನ ಹರೆಯಂ ಬಟ್ಟು ಜರೆವಟ್ಟು ಹೊಲೆಗೆಟ್ಟು . . . ಧಾತುಗಳು ಪಲ್ಲಟವಾದವು ಇನ್ನು ನಾನೆತ್ತ ಮಗನಂ ಹಡೆವುದು (ಸಿದ್ಧರಾ. ೦-೯೦) ; ಹೊಲೆಗೆಟ್ಟು ಹೊಸಬೇಟಗೆಯ್ದು ಪಾತಕಿ ಮೊಗ್ಗೆಮೊಲೆವೆಂಗಳೆಗೆ ಪೇಳ್ದಪರೇ (ಮೋಹತ. ೦೬-೭೮). [ಪೊಲೆ + ಕೆಡು₁]

**ಪೊಲೆಗೆಯ್** (ಕ್ರಿ). ಅಪವಿತ್ರಗೊಳಿಸು ; ಕಲುಷಿತ ಮಾಡು : ಕೆಡಿಸು : ನೆನೆಯ ಮತ್ತವನ ತಾಯ್-ಪೆಂಡತಿಯನ್ . . . ಪುನೀನೇಣಿನುಸಿರ್ದಿಂಚಿ ಪೊಲೆಗೆಯ್ದು ಬಾಟನೀಡಾಡಿದಳ್ (ಉಂತಿಗೊ. ೩-೯೯). [ಪೊಲೆ + ಕೆಯ್₁]

**ಪೊಲೆಗೆಳೆ** (ನಾ). ಕೆಟ್ಟ ಸ್ನೇಹಿತ : ಆ ಪಾಪಕರ್ಮಂ ಪೊಲೆಗೆಳೆಯುತೆಯುಂ . . . ರಾಜ್ಯಕ್ಕಾಸವಟ್ಟು ನಿನ್ನಂ ಕೊಂದಪಂ (ಕಂಶಕಂ. ೯೨-೧೦). [ಪೊಲೆ + ಕೆಳೆ]

**ಪೊಲೆಗೇರಿ**, ಪೊಲಗೇರಿ, ಹೊಲಗೇರಿ, ಹೊಲೆಗೇರಿ (ನಾ). ಹೊಲೆಯರು ವಾಸಿಸುವ ಓಣಿ : ಪೂವೋಟ ಮತ್ತರೊನ್ನು [ಪೊ]ಲೆಗೇರಿಯ ಪಾಳರೆಮುತ್ತರು (ಜಾಂಸೀಡ್. ೯-೨೦ ; 1049); ಪಟ್ಟಣವಂ ಬಟ್ಟು ಪೊಲೆ ಗೇರಿಯೊಳ್ ಪಡುವಂತೆ (ರಪ್ಪಾಕು. ೧೧-೮೩); ಪೊಲೆಗೇರಿಯೊಳುರಿ ನೆಗೆದೊಡವ (ಬಂಹೊ. ೦೯-೨೬ ಕಗೆ). **ಪೊಲಗೇರಿ** : ಆ ಪೊಸಳ ತನುವಸು ಟುದು ಬಱಿಕ್ಕಾ ಪೊಲಗೇರಿಯಾಡಿನುದರದೆ ನೆಲಸಿ (ಚುಟೋಚ. ೩-೯೯). **ಹೊಲಗೇರಿ** : ಹೊಲಗೇರಿಯ ಪಡುವಣ ಕರುವಗೆಯ್ಯಂದು ತೆಂಕಲಾಜು ಮತ್ತರು (ಕೌಇಇ. IX-1. ೫೦-೦೬; 1005); ಹೊಲಗೇರಿಯೊಳೊರ್ವಂ . . . ಹಿರಿಯ ಭಕ್ತನ ಮನೆಯೊಳಗುಂಡುದಲ್ಲದೆ ನಿನ್ನೋಲಗದೊಳು ಪೊಲೆಗಲ ಸಲುಂ ಬಂದವಂ (ಬಸವ. ೧೧-೨೫); ಹೊಲಗೇರಿಲಿ ಹೊಲೆಯ ಹೊಲಶಿಲ್ಲ (ಪುರಂಶ. ೦-೧೧೬ ಅನುಕ್ರಮ). **ಹೊಲೆಗೇರಿ** : ನೆಲನೋಂದೆ ಹೊಲೆಗೇರಿ ಶಿವಾಲಯಕ್ಕೆ ಜಲವೊಂದೆ ಶೌಚ ಮಜ್ಜನಕ್ಕೆ (ಬಸವ. ೬೭೦); ಶಿರಿಯೊಳಂಟೇ ಮೃದುವಜಸಲಂಬಲದೊಳಂಟೇ ಬೆಣ್ಣೆ ಕರುಣಾಸುಲಭ ಹೊಲೆಗೇರಿಯೊಳ ಗುಂಟೇ ವೇದಘೋಷಣವು (ಬಸಪು. ೫೦-೨೦). [< ಪೊಲೆಯ + ಕೇರಿ]

**ಪೊಲೆತಾಳ್ವ** (ನಾ). ಒಬ್ಬಾತನ ಹೆಸರು : × × ಸತ್ತ ಪೊಲೆತಾಳ್ವನ ಮನೆವಗತಿ ಆಡಿಶದಥ × × × (ವೈಸಂ. ೦೯೯೨. ೨-೬ ; 973). 'ಪೊಲೆ ತ್ತಾಳ್ವ' ಪಠಾ. [ ? ]

**ಪೊಲೆತೆಱೆ**, ಹೊಲೆದೆಱೆ (ನಾ). ಒಂದು ಬಗೆಯ ತೆರಿಗೆ : ತೆಱೆಯಂ ಕಿಱುದೆಱೆಯುಂ ಪೊಲೆತೆಱೆಯಂ ಮಾನ್ಯಕ್ಕೆ ಬಂದ ತೆಱೆಯುಂ ದೇವತ್ರೆಯ ವೇಳ್ಕುಮೆಂಬ ಪಾತಕನಱಿದೀಗಳೊಳಗಿಗುಂ (ಕೊಲ್ಲಾ. ೩-೯೩; 1110). **ಹೊಲೆದೆಱೆ** : ಬಡಗಿಕೊಂಟೆಯ ಮನೆದೆಱೆ ಹೊಲೆದೆಱೆ ಸಾದಂ ಬಣ್ಣಿಗ ಬಳೆಂಬೆಯ ತೆಱೆ ತಳಸಾರಿಗೆ ಕಾಣಿಕೆ ಕವಣಾಯ ದಣ್ಣಾದಾಯ ವಿನ್ನಿನಿತುಮಂ . . . ಕೊಟ್ಟರ್ (ಕೌಇಇ. IX — 1. ೦೬೨-೦೮ ; 1109) ; ಶ್ರೀವೈಜನಾಥದೇವರಿಗೆ ಶಿವಪುರದ ಹಲುಗೂರ ಸುಂಕ ಆಗಂತುಕ ಹೊಲೆ ದೆಱೆ ಗಾಣದ ತೆಱೆ . . . ಕೈಯಾರ ಧಾರಾಪೂರ್ವಕಂ ಮಾಡಿ ಕೊಟ್ಟ ದತಿ (ಎಇ. XIV. ಮುಂಕ್ರ. ೦೯೦-೫ ; ?). [ಪೊಲೆ₁ + ತೆಱೆ₃]

**ಪೊಲೆತ್ತಾಳ್ವ** (ನಾ). ಒಬ್ಬಾತನ ಹೆಸರು : ಸ್ವಸ್ತಿ ಶ್ರೀಮತ್ ಶ್ರೀಪುರುಷ ಮಹಾರಾಜಂ ಪೃಥ್ವೀರಾಜ್ಯಂಗೆಯ್ಯೆ ಪೊಲೆತ್ತಾಳ್ವೊರನ್ನ ಕಂಕನಾಡ ಬಿದಿ ರ್ಕ್ಕಲ್ಲಾಳ್ದ ಕುಕ್ಕರ ಪಾಳಿಕ್ಕಾಜೀನಾಡಿಯುರ್ ತುರಿದು (ಎಇ. IX. ಕಂನಕೊ. ೩೬-೨ ; ಸು. 750). [?]

**ಪೊಲೆನುಡಿ** (ನಾ). ಹೊಲಸುಮಾತು ; ಕೀಳುನುಡಿ : ಐವರೊಡ ವುಟ್ಟಿದರು ಸನ್ನುತರು ಲಲನೆಯೋರ್ವಳನಾಳ್ದರೆಂಬೀ ಪೊಲೆನುಡಿಗೆ ಕಿವಿಗುಡದೆ (ಜಾಕ್ಕೃತಾ. ೦-೯೬). [ಪೊಲೆ + ನುಡಿ₂]

**ಪೊಲೆಬೂತು** (ನಾ). (ಆಲಂ) ಕ್ಷುದ್ರವ್ಯಕ್ತಿ : ಪಾಪ್ಪೈಯುಪ್ಪ ಸಜ್ಜನೆ ಯಂತೆ ಸಿಡಿವಿಡಿಗೊಳ್ಳದೆ ಪೊಲೆಬೂತಿನಂತೆ ಕಿಡಿನುಡಿಯದೆ. . . . ನಿಂದು ಸುವ್ರತಂಗಳಂ ತಾಳ್ದಿ (ರಪ್ಪಾಕು. ೧೧-೪೭). [ಪೊಲೆ + ಬೂತು₁]

**ಪೊಲೆಮನೆ**, ಹೊಲೆಮನೆ, ಹೊಲೆವನೆ (ನಾ). ೧. ಸಾಮಾಜಿಕವಾಗಿ ಚಾತುರ್ವರ್ಣಗಳಿಂದ ಬೇರೆಯಾಗಿರುವವರ ಮನೆ (?) : ಅಲ್ಲಿ ಬೆಸಗೆಯ್ವ ಕಲ್ಕುಟಿಗರ ಮನೆ ೧ ಸಾವಗರಿರ್ಪ್ಪ ಪೊಲೆಮನೆ ೧ (ಇಇ. XIX, ೨೬೩-೯೦; 1054). **ಹೊಲೆಮನೆ**: ೨. ಹೆಂಗಸರಂ ಮುಟ್ಟಾದಾಗ

ಉಳಿದುಕೊಳ್ಳುವ ಮನೆ: (೧). ೩. ಹೆರಿಗೆಮನೆ : ಸೂತಿಕಾ ಗೃಹ : ಅವರಿಗೆ ಒಂದು ಗಂಡುಮಗುವೂ ಆಗಿತ್ತು . . . ಹೊಲೆಮನೆಯಲ್ಲಿಯೇ ಸತ್ತು ಹೋಯಿತು (ಐಚಿಪು. ೬೩): ಕೃಷ್ಣನು ಹೊಲೆಮನೆಗೆ ಹೋಗಿ ನಿಶ್ಚಿಂತನವಾಗಿ ಬಿದ್ದಿದ್ದ ಮಗುವನ್ನು ನೋಡಿ . . . ಕೈಯಾಡಿಸಿದನು (ಕಹಕಾ. ೩೬೬). **ಹೊಲೆಮನೆ :** ೪. ಹೊಲೆಯನ ಮನೆ (?) : ಹೊಲೆಮನೆಯಿಂದಂ ಕಷ್ಟಂ ಪಲಲಮಯಂ ದೇಹಮಿದರಿಂ ಕೊಳಲ್ಕೊರ್ವನ್ನಿಂ ಹೊಲೆಯಂ ಕಷ್ಟನಹಾಂ (ಶಾಸಾರ. ೧೦-೨೯೬).

[ಪೊಲೆ+ಮನೆ]

**ಪೊಲೆಮುಡಿ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀಮರಿಗರ ಪೊಲೆಮುಡಿ ಕೊಟ್ಟುದು ಸೊಡರು ಆಚನ್ದ್ರತಾರಕಂ (ಎಕ. VII. ಶಿಕಾ. ೧೫-೬೯ ; ಕ್ರಿ. ೬೯೦ ?). [ಪೊಲ್+ಮುಡಿ]

**ಪೊಲೆಮೇರೆ** 'ಪೊಲಮೇರೆ' ನೋ.

**ಪೊಲೆಯ, ಹೊಲೆಯ** (ನಾ). ೧. ಪಂಚಮವರ್ಣಕ್ಕೆ ಸೇರಿದವನು ; ಚಾಂಡಾಲ : ಎಯ್ದಿದಂ ಪೊಲೆಯನಾ ಪೊಲೆವಟ್ಟನೊಳಿರ್ದ ಕನ್ನೆಯಂ ಕಂಡು ಗೆಂಟಣಿಕೆ ಪೊಡೆವಟ್ಟು (ಕಾದಂಕ. ೮೪೭) ; ಪೊಲೆಯರ್ತಮ್ಮಯ ಕೇರಿಗೆ ಪೊಲೆಯರ್ಬರೆ ತುಚ್ಛಿ ಮಾಟ್ಪರ್ (ಸಮಪ. ೪-೬೭) ; ಪಿತ್ತಳೆಯ ತೊಡವು ಪೊಲೆಯರ್ಗುತ್ತಮಮೆನಿಸಿರ್ದ ಪೊನ್ನ ತೊಡವೆನಿಸುವವೋಲ್ (ರಕ್ಷೋಶ್ರ. ೪-೩೬). ೨. ನೀಚ ; ಕೆಟ್ಟವನು : "ಸಿತಗನುಂ ಪೊಲೆಯನೆಂದಕ್ಕು" (ಕಕೈ. ೬೬) ; ನಿನ್ನಿಂದ ಬಟ್ಟು ಪೊಲೆಯರ್ಯಿನ್ನುಮುನ್ನು ದೊಡೊಳರೆಯಿಂತೀ ಪುರದೊಳ್ (ಪುಕ್ಷಾಸ್ರ. ೬-೨೨). ೩. ಕುಲಹೀನನಾದವನು : ಕಲಿಯನೆ ಪಂದೆ ಮಾಟ್ಪ ಕಡುಪಂದೆಯನೊಳ್ಗಲಿ ಮಾಟ್ಪ ತಕ್ಕನು ಪೊಲೆಯನೆ ಮಾಟ್ಪ ಮಂ ಪೊಲೆಯನಂ ನೆರೆ ತಕ್ಕನೆ ಮಾಟ್ಪ ತಮ್ಮೊಳಗ್ಗಲಿಸಿ ಪೊಮಟ್ಟು ಪರ್ವಿದವಿವೇಕತೆಯಿಂ ನೃಪಚಿತ್ತವೃತ್ತಿ ಸಂಚಲಮದಟಿಂದವೋಲಗಿಸಿ ಬಾಟ್ಟುದೆ ಕಷ್ಟಮಿಳಾಧಿನಾಥರಂ (ಶಂಶಕಾ. ೧೨-೯೨). **ಹೊಲೆಯ :** ೧. "ಅಂತಾವಸಾಯಿ ಚಂಡಾಳಂ ತಾ ಪೊಲೆಯಂ ಜನಂಗಮಂ ಮಾತಂಗ:" (ಚಸ್ರಕೋ. ೬೬-೯೭) ; ಹೊಲಸ ತಿಂಬವನೇ ಹೊಲೆಯ (ಬಸಪ. ೩೯೨); ಅತಿ ಹುಸಿವ ಯತಿ ಹೊಲೆಯ (ಹರಿಣ. ೦೯.೦೦): ಹೊಲೆಯ ಹೊಲಗಿಹನೆ ಊರೊಳಗಿಲ್ಲವೆ . . . ಉಂಡ ಮನೆಗೆರಡನ್ನು ಬಗೆವಾತನೇ ಹೊಲೆಯ (ಶ್ರೀರಂಶ. ೦-೦೭೬ ಶಲ್ಲಿ). ೨. ಹೊಲೆಯ ಹೋಗೇದ ಬಲೆ ಮುಖದಿರುಹಿದಳು ಖಾತಿಯಲಿ (ಕೊರಕಾ. ೫-೩. ೫೫).

[ಪೊಲೆ+–ಅ. /ತಮಿ. ಪುಲ್ಲೈಯ ; ಮಲ. ಪುಲಯ ; ಕೊಡ. ಪೊಲೆಯ]

**ಪೊಲೆಯಣ್ಣ** (ನಾ). ಒಬ್ಬಾತನ ಹೆಸರು : ಪುಂಗೆಜೆಯಿಂ ಬನ್ದ ಪೊಲೆಯಣ್ಣನ ಶಿಲಾಕರ್ಮ್ಮ (ಕ್ಕಾ೨೭. XI-1, ೦೦-೨೯; 865). [ಪೊಲ್ + ಅಣ್ಣ$_1$]

**ಪೊಲೆಯಮ್ಮ, ಹೊಲೆಯಮ** (ನಾ). ಒಬ್ಬಾತನ ಹೆಸರು : ಪೊಲೆಯಮ್ಮ × × × ಲ್ಲರನೆಱಿದು ಕೊನ್ದು ಗೆಲ್ದು ಪೊನ್ದಿ ಸ್ವರ್ಗ್ಗಾಲಯಮೇಱಿದನ್ (ಎಕ. VIII, ಸೊರಬ. ೦-೬ ; 797) ; ಶ್ರೀ ಬೇಡಿಗೆ ಮುತ್ತರಸರ ಮಗನು ಪೊಲೆಯಮ್ಮನ್ಮದಕರಿಕಲ್ಲನಾಳುತ್ತುಮಿರೆ (ಎಕ. XI, ಚಳ್ಳಕೆ. ೩೩-೨೦; ಕ್ರಿ. 816). **ಹೊಲೆಯಮ :** ಹೊಲೆಯಮನೆಂಬ ಗೋತ್ರನಿಧಿಗಂ ಗುಣಭೂಷಣೆ ಚಂಡಿಕಬ್ಬೆಗಂ ಕುಲತಿಲಕಂ ಗುಣಾಂಬುನಿಧಿ ಪುಟ್ಟಿದಂ . . . ನೆಗಳ್ದ ಜಕ್ಕಣಂ (ಕಇ. IV, ೦೦-೩೯ ; 1121). [ಪೊಲ್ + ಅಮ್ಮ$_1$]

**ಪೊಲೆಯ್ಗಬ್ಬೆ** (ನಾ). ಒಬ್ಬಾಕೆಯ ಹೆಸರು : ಶ್ರೀಮಾತ್ ಕನ್ನಯನಬ್ಬೆಗಳ್ ಪೊಲೆಯ್ಗಬ್ಬೆ (ಎಕ. XI, ಹೊಳಲ್ಕೆ. ೩೩-೦೯ ; 965). [ ? + ಅಬ್ಬೆ$_1$ ]

**ಪೊಲೆವಗೆ** (ನಾ). ಕೆಟ್ಟಬುದ್ಧಿ ; ನೀಚಬುದ್ಧಿ : ಮಂದಾಂಗಾರಕರಿರ್ವರು ಮೊಂದೆಡೆಯೊಳ್ ನಿಂದು ವಕ್ರಿಸಲ್ ಪಶು ಕಱಿಗುಂ ತಂದು ಪೊಲೆವಗೆ(ಗೆ) ಯೊಳರಸುಗಳಂದೊರ್ವರನೊರ್ವರಿಱಿದು ಸಾ(ವರ್)ವುಗೆ ಜಗದೊಳ್ (ಅಭಿಪು. ೬-೦೦೪). [ ಪೊಲೆ + ಬಗೆ$_2$ ]

**ಪೊಲೆವಟ್ಟು** (ನಾ). ಹೊಲೆಯರ ಬೀಡು ; ಚಾಂಡಾಲರ ಕೇರಿ : ಇರದೆಯ್ದಿದಂ ಪೊಲೆಯನಾ ಪೊಲೆವಟ್ಟನೊಳಿರ್ದ ಕನ್ನೆಯಂ ಕಂಡು ಗೆಂಟಣಿಕೆ ಪೊಡೆವಟ್ಟು (ಕಾದಂಕ. ೮೪೭). 'ಪೊಲೆಗೇರಿ' ಮರಾ.

[ <ಪೊಲೆಯ + ಪಟ್ಟು$_4$ ]

**ಪೊಲೆವಡು** (ಕ್ರಿ). ಕಳಂಕವನ್ನು ಹೊರು : ಈ ಪರಮಜಿನಾಲಯಂಗಳಂ ಪೊರೆವಟ್ಟದ್ದೊರ್ ಪಾಂಡ್ಯಚೋಳನೆಂಬ ಮಹಾಪಾತಕ ತಿವುಳನೆಳಿದರ್ಧೋಗತಿ ಗಿಳಿದ (ಎಇ. XV. ೪೪೦-೪೦; 1071); ಪೊಲೆವಟ್ಟ ಪೊಳಲಿಂ ಪೊಱಮಡಿಸಿ ಕೊಂಡಲಸದೊಂದದಮಿಯೊಳಿರ್ಪ ಕುಲಗೆಟ್ಟು ಬೇಡವಳ್ಳಿಯ ಹೊಕ್ಕಿರ್ದಾ ಖಳನೊಂದಾನೊಂದು ಪಗಲು . . . ಜೀವದನವ ಕಳ್ದೊಯ್ಯುತಮಿರಲು (ನೇಮಿಸಂ. ೬-೫೦). [ ಪೊಲೆ + ಪಡು$_1$ ]

**ಪೊಲೆಮಾತು, ಹೊಲೆಮಾತು** (ನಾ). ಕೀಳುಮಾತು ; ಕೆಟ್ಟನುಡಿ : ಎಲೆ ಮೂಢ ಲಿಂಗಮಂ ನೀಂ ಪೊಲೆಮಾತಿಂ ಬಳ್ಕೆಮೆಂಬುದಕ್ಕುಮೆ (ಪ್ರಚಾ. ೬-೦೯). **ಹೊಲೆಮಾತು :** ಹೊಲಬಱಿಯದೆ ತಾನು ರಾಯನೆಂದೆಂಬೀ ಹೊಲೆಮಾತಿಗುತ್ತರವುಂಟೆ (ಕುರಾಸಾ. ೦೦-೨೩); ಇಂಥ ಹೊಲೆಮಾತಾಡಿದವರ ಬಾಯಲ್ಲಿ ಹುಳು ಸುರಿಯದಿರುತ್ತದೆಯೆ (ಗೃಶಿ. ೬೩); ಇದನ್ನು ಕಂಡು ಅವನು ಕಿಡಿಕಿಡಿಯಾಗುತ್ತಿದ್ದ, ಶಪಿಸುತ್ತಿದ್ದ, ಹೊಲೆಮಾತಾಡುತ್ತಿದ್ದ (ಸೀಪರಾ. ೩೦೦). [ ಪೊಲೆ + ಮಾತು$_1$ ]

**ಪೊಲೆವೆಣ್, ಹೊಲೆವೆಣ್** (ನಾ). ಕೆಟ್ಟಹೆಣ್ಣು ; ನೀಚಸ್ತ್ರೀ : ಪೊಲೆವೆಣ್ಣೆ ನಿಪೆನಗೆಂದುಂ ನಿಲಲೊಲ್ಲದೆ ತೊಲಗಿ ಪೋಪ ಗಂಡಮಿಮುಕ್ತರ್ ಮಲಧಾರಿಸ್ವಾಮಿಗಳುಂ ನಿಲಿಸುವ ಸತ್ತುತ್ತನೆನಗದೆಂದಾದಪನೋ (ಅರ್ಧನೇ. ೦-೦೦೫). **ಹೊಲೆವೆಣ್ :** ಹೊಱಮಿಂಚಿಂ ಹೊಲೆವೆಣ್ಗೆ ಸೋಲ್ವ ಕೆಜದಿಂ . . . ವಿಟ ವೇಶ್ಯಾಕಾವ್ಯಮಂ ಕೇಳ್ದು ಮೆಯ್ ಮಱಿವರ್ (ರಜ್ಞಾಶ. ೯೭).

[ ಪೊಲೆ + ಪೆಣ್ ]

**ಪೊಲೆಸೂರುಳ್** (ನಾ). ಹೀನವಾದ ಪ್ರತಿಜ್ಞೆ ; ನೀಚವಾದ ಶಪಥ : ಸುಡಿಯೆಲ್ಲಂ ಪೊ[ ಶಾಕಾಂ. ಹೊ ]ಲೆಸೂರುಳ್ (ಶಬ್ದಾಪ. ೨-೦೦೨); ಮಾತೆಲ್ಲಂ ಪೊಲೆಸೂರುಳ್ (ಚಮರ. ೫೩ ಪ್ರಹೋ). [ ಪೊಲೆ + ಸೂರುಳ್$_2$ ]

**ಪೊಲ್ಗೆ, ಪೊಲಿಗೆ, ಹೊಲಿಗೆ** (ನಾ). ೧. ಹೊಲಿಯುವಿಕೆ : ಗೊಱಕ್ಕೆ ಉಡುಗೆ, ಪಸುಗೆ, ಪೊಲ್ಗೆ (ಶಮದ. ೨೦೦ ಪ್ರಹೋ). **ಪೊಲಿಗೆ :** ೧. "ಸೇವನಂ, ಸೀವನಂ, ಸ್ಯೂತಿ:–– ಈ ೩ ಪೊಲಿಗೆ" (ಶಾಚಕಾ. ೬). ೨. ಹೊಲಿದುದು : ತಾಱಗೆ, ಮಾಱಗೆ, ಪೊಲಿಗೆ (ಶಬ್ದಾಸು. ೫೬೫ ಪ್ರಹೋ). **ಹೊಲಿಗೆ :** ೧. "ಧಕ್, ದೇಹನಂ, ಈ ೨ ಹೊಲಿಗೆ" (ಕಾಚಕ್ಕ. ೬೬); ಜೋಡು ಪೈಠಣಿಗಳ ಹೊಲಿಗೆಯು ಗರುವ ಚಿಪ್ಪಿಗಗೇರಿಯಹವು (ಸಂಶಶಿ. ೬-೫೫). ೨. "ಊತ ಸ್ಯೂತ ಎಂಬಿವು ನೂಲ ನೆಯ್ಗೆಯಲ್ಲಿಯೂ ಹೊಲಿಗೆಯಲ್ಲಿಯೂ ವರ್ತಿಸುಗು" (ನಾಚಕಾ. ೬); ಹಱಿಗವಿಗಳ ಕಬ್ಬಂಗಳ ಹೊಱಗಳೆಯಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ . . . ಎಕ್ಕಸಕ್ಕಮುಸ್ತುಂಬ್ಬಸ್ಸಂ (ಗಂಶ. ೦-೨೩); ಕಲ್ಪಮೇಘದ ಹೊಲಿಗೆ ಹಱಿದವೊಲಾಯ್ತು ಮಾದ್ರೇಶ್ವರನ ಶರಜಾಲ (ಕುವ್ಯಾಶ. ೨-೩೭) ; ಬಸುಱಿಲಿ ಹೊಲಿದ ಹೊಲಿಗೆಯ ದಡಿಗರಕ್ಕಸಂಜಯ ರಿದ್ದುದು ಕೋಟಿಸಂಖ್ಯೆಯಲಿ (ಕೊರಕಾ. ೬-೬-೩). ೩. ಸಂಬಂಧ ; ಹೊಂದಾಣಿಕೆ : ಕಾಯದ ಜೀವದ ಹೊಲಿಗೆಯನಱಿವಂಗಲ್ಲದೆ ಲಿಂಗೈಕ್ಯವಿಲ್ಲ (ಷೋಶವಚ. ೨೫೮-೬೦೯) ; ಕಾಯ ಜೀವದ ಹೊಲಿಗೆಯ ಅಳಿದ ಭೇದವ ತಿಳಿಯಬಲ್ಲಡೆ ನಮ್ಮ ಗುಹೇಶ್ವರಲಿಂಗದ ಅಱಿವು ಸಾಧ್ಯವಪ್ಪುದು (ಅವಕಂ. ೨೭೩-೧೨೫೬). [ಪೊಲ್+–ಗೆ. /ತುಳು. ಪೊಲಿಕೆ, ಪೊಲಿಗೆ, ಪೊಲ್ಗಿಗೆ]

**ಪೊಲ್ಲ, ಹೊಲ್ಲ** (ನಾ). ೧. ಕೆಟ್ಟುದು ; ಹೀನವಾದುದು : ಪಾಪಕರ್ಮಂ ಪೊಲ್ಲಂ (ಶಬಾ. ೦-೬೯) ; ಪಗೆ ಪೊಲ್ಲ ಪಾಂಡುನಂದನರೊಳ್ (ಶಂಶಕಾ. ೬-೬೫). ೨. ಕೇಡು ; ಆಪತ್ತು : ಅವನು ನಂಬಿದಂದು ಪೊಲ್ಲಮಕ್ಕುಂ (ಶಂಶಕಂ. ೦೭೬-೩); ಗುರು ಪರಿವೇಷದೊಳ್ ನೆಲಸ ವಿಪ್ರಜನಕ್ಕದು ನಾಡ

ಪೊಲ್ಲ (ಅಭಿಪು. ೩-೦೬). ೩. ಕೀಳುತನ : (೬). ೪. ಕೆಟ್ಟಗುಣವುಳ್ಳವನು ; ಹೀನನಾದವನು : ಪೊಲ್ಲರಲ್ಲದರಂ ಪೊಲ್ಲರೆಂದು ನುಡಿದೊಡೀ ಬಾಹಾದುದು (ಶಂರಾಪಾ. ೦೩-೩೯ ವ) ; ಕಳ್ಗುಡಿವವರಂ ಪೊಲ್ಲರೆಂಬಂತೆ ಪಾಲ್ಗುಡಿವವರನೇಕೆ ಪೊಲ್ಲರನ್ನರ್ (ರಮಾಕಾಕ್ಷು. ೬-೯೩). ೫. ಕೇಡುಂಟುಮಾಡುವವನು ; ಅನಿಷ್ಟಕಾರಕ : ಹಿಮಧಾಮಂ . . . ಕ್ರೂರಂಧ್ರುಂಗಳೊಳತಿಶುಭಮಂ ಶೇಷದೊಳ್ ಪೊಲ್ಲನಕ್ಕುಂ (ಜಾತಕ. ೧೦-೪). (ಗು). ೬. ಒಳ್ಳೆಯದಲ್ಲದ ; ಕೆಟ್ಟದಾದ : ಪದಿನಾಱು ಪೊಲ್ಲ ಕನಸುಗಳಂ ಕಂಡಂ (ಪಾರ್ಶ್ವ. ೬೩-೨೦) ; ಸಂಜೆಯಂತೆ ಪೊಲ್ಲ ವಸ್ತುವಿನೊಳ್ ರಾಗಿಯಾಗದೆ (ರಮಾಕಾಕ್ಷು. ೩-೯೯); ಪೊಲ್ಲ ಕೆಯ್ಯುಮಂ ದುರ್ಭಗತ್ವಮುಮಂ ಕವಿಗೆ ಸೂಗಯಿಸಿದ ಪೊಲ್ಲ ಸ್ವರಂಗಳುಂ . . . ಎಂದಿವೆಲ್ಲವಶುಭನಾಮವಂಕರ್ಮಫಲಂಗಳುಂ (ಕಸಾರ. ೩೦) ; ಪೊಲ್ಲ ಸುದ್ದಿಗಳನೊರೆತರ್ಪ್ಪೊನನ್ ಒಲ್ವನೊರ್ವನುಮಿಲ್ಲ (ಅಂತಗೂ. ೦೩-೨೩೦). ಹೊಲ್ಲ : ೧. ಬೇಡ ಬೇಡ ಅನ್ಯದೈವದ ಸಂಗ ಹೊಲ್ಲ (ಏಸಪ. ೬೦೪) ; ಬಱಿಯ ವಿಚಾರ ಹೊಲ್ಲ (ಹಕಾಕ. ೮-೬೦) ; ನೆರೆ ಹೊಲ್ಲ ದುರಾಚಾರಿಗಳ (ಅಂಂಡೀ. ೦೨೬-೯೨) ; ಹೇಳಿ ಮಾಡುವುದು ಹೊಲ್ಲ, ಅದು ಆತ್ಮಪ್ರಶಂಸೆ (ಕಾಂತಕಾ. ೩೬). ೪. ಪೆಲ್ಲವನನಲ್ಲೆಂದು ಪೆಲ್ಲನಂ ಪೊಲ್ಲೆಂದು (ಜಗಿಂ. ೦೭-೦೦೬ ಕಗಳ) ; ಇಲ್ಲದಿಹ ಕಾಲಕ್ಕೆ ಶಾ ಹೊಲ್ಲನವ[ಶಾಕಾಂ. ಹೊಲ್ಲಹನು]ಜನರಿಂಗೆ ಅಲ್ಲದ ಗುಣದ ಅರಸಿಂಗೆ ಸಾಲಕ್ಕೆ ಕಲ್ಲೆದೆಯು ಬೇಕು (ಸರ್ವಜ್ಞ. ೦೪೧೭). ೭. ಅಪರಾಧ ; ತಪ್ಪು : ಹಗೆ ಹೊಲ್ಲ ದೈವದರಿ (ಕುಮಾರರಾಮ. ೧-೯). (ಗು). ೮. ಕೆಟ್ಟ ಸ್ವಭಾವದ ; ದುಷ್ಟ : ಕಲ್ಲಿನಲ್ಲಿ ವಲ್ಲಭನ ಕಂಡೆವೆಂದು ಬಡಿದಾಡುತ್ತಾರೆ ನೋಡಾ ಅಲ್ಲಯ್ಯಾ ಈ ಹೊಲ್ಲ ಮಾನುಜರು (ಸಿದ್ಧರ. ೪. ೨೦೩-೬೯೦) ; ಹೊಲ್ಲ ದೈವವನಿನಿತು ನೀ ನೋಡು ವೆನದೆಂದರೆ ಕರವ ನಾನೀಗ (ಸಂಶಶ. ೮-೬೩) ; ಹೊಲ್ಲ ಹೋಗಿಯು ಮಾತ ಕೇಳಿದರು (ಸಿದ್ಧಕು. ೨-೩೩).

ಪೊಲ್ಲಾಗು, ಹೊಲ್ಲಾಗು = ೧. ಕೆಡುಕಾಗು ; ಅನಿಷ್ಟವಾಗು : ಅದು ಲೇಸಾದೊಡಂ ಪೊಲ್ಲಾದೊಡವೇನ್ನ ಪುಣ್ಯಂ (ಅರ್ಜನೀ. ೩-೬೯ ವ); ಕಲ್ಲಾಗಲೇನು ಹೊಲ್ಲಾಗಲೇನು ಅದು ಬಲ್ಲತನಕೆ ಸಲ್ಲ ಆ ನಲ್ಲ ತಾನು ಇರುವಲ್ಲೆ ನಿತ್ಯ ಇರುತಿಹನು ಒಬ್ಬ ನಲ್ಲ (ಅರಳು. ೩೩-೦೩). ೨. ಕೇಡು ಬಗೆ ; ಕೆಟ್ಟದನ್ನು ಎಣಿಸು : ಇದಕ್ಕಾವನಾನುಂ ಹೊಲ್ಲಾಗಿರೆ × × × ಕುರುಕ್ಷೇತ್ರ ವಾರಣಾಸಿ ಸಾಯಿರಕವಿಲೆಯುಮಂ . . . ಕೊಂದ ಪಂಚ ಮಹಾಪಾತಕನಕ್ಕು (ಶಾ. IV. ೨೦-೦೩ ; ೧).

[ದೇ. ೩ ತಮಿ. ಪೊಲವ್, ಪೊಲ್ಲಾ; ಮಲ. ಪೊಲ್ಲಾ]

ಪೊಲ್ಲಕೆಯ್ 'ಪೊಲ್ಲಗೆಯ್' ನೋ.

ಪೊಲ್ಲಗೆಯ್, ಪೊಲ್ಲಕೆಯ್ (ಕ್ರಿ). ೧. ಕೆಡುಕುಮಾಡು : ಕೇಡುಂಟುಮಾಡು : ವನಜಾಕ್ಷಿ ದೋಷಿಯಲ್ಲದ ನಿನಗೆ ಕರಂ ಪೊಲ್ಲಗೆಯ್ದಂ (ಶಂಕಕಂ. ೬೬.೨೦); ಇದಾವುದು ಪೊಲ್ಲಗೆಯ್ದನೀ ಮುನಿಸವಿವೇಕಮೆಂದು ನುಡಿದಳ್ (ಶಂರಾಪಾ. ೦೦-೩೪). ೨. ತಪ್ಪು ಮಾಡು : ವಲ್ಲಭೆಯರ್ ಪೊಲ್ಲಗೆಯ್ದರಂತುಸಿರದೆ ಕುಳ್ಳಿರೆ (ರಮಾಕಾಕ್ಷು. ೪-೦೫೪). ಪೊಲ್ಲಕೆಯ್ : ೧. ಎನಿತಾದೊಡಮೇಂ ಪ್ರಭು ಪೊಲ್ಲಕೆಯ್ಗುಮೇ (ಶಂಕಕಾ. ೦೦-೩೩) ; ಕಳವಂ ಮಿಥ್ಯೆಯನೇಱಿಸಿ ಕಳತ್ರದೊಳ್ ಪೊಲ್ಲಕೆಯ್ದರೆಂದಿಲ್ಲದುದಂ ಗಟಪಿದೊಡೆ (ಶಂರಾಪಾ. ೯-೯) ; ಇವರ ಕೊಲ್ವುದುಂ ಪುರುಷಾರ್ಥಮಲ್ಲ ಚೀ ಪೊಲ್ಲಕೆಯ್ದರಿ (ನೇಮಿಪು. ೬-೦೦೩ ವ). ೩. ಹಾದರ ಮಾಡು ; ವ್ಯಭಿಚರಿಸು : ಬ್ರಹ್ಮ ಘಾತಿಪೋದನೆಂಬುದೇಕೆ . . . ತನ್ನ ಸುತೆ ಪದ್ಮೆಯೊಳು ಪೊಲ್ಲಕೆಯ್ದನೆಂಬುದೇಕೆ (ಕಸಾರ. ೯೬೪). [ ಪೊಲ್ಲ + ಕೆಯ್$_1$ ]

ಪೊಲ್ಲಗೆಯ್ಮೆ (ನಾ). ಅಯೋಗ್ಯವಾದ ಕೆಲಸ; ಕೆಟ್ಟ ಕಾರ್ಯ : ಇಲ್ಲದಿರೆ, ಎಂತಕ್ಕುಮಕ್ ಈ ಪೊಲ್ಲಗೆಯ್ಮೆ? (ಅಕ್ಷಕಾ. ೬-೦೩೪).

[ ಪೊಲ್ಲ + ಗೆಯ್ಮೆ (< ಕೈಮೆ) ]

ಪೊಲ್ಲದು, ಹೊಲ್ಲದು (ನಾ). ೧. ಕೆಟ್ಟುದು ; ಹೀನವಾದುದು : ಒಳ್ಳಿತ್ತಾ ಕೆಯ್ದೊರಾರ್ಪೊಲ್ಲದುಮಪದಱಿನ್ನೆ (ಇಶಿ. X. ೬೧-೭ ; ೭ನೆಯ ೫೬); ಇದು ಪೊಲ್ಲದೊ ತಾನಿದೊಳ್ಳಿತೋ ಪೇಣದೆಂಬುದಂ ಬಗೆಯಲಾರ್ತೆ ನಿಲ್ಲಾಕ್ಷಣದೊಳ್ (ಕಾರಂಶು. ೬೩೬) ; ಒಳ್ಳಿತ್ತು ಪೊ[ಶಾಕಾಂ. ಹೊ]ಲ್ಲದೆಂಬುದನೊಳ್ಳಿತ್ತಾಗಱಿವವಂಗೆ ಜನವಚನಂ ತಾನೊಳ್ಳಿತ್ತು (ಸಮಪ. ೩-೩೦). ೨. ಅಹಿತವಾದುದು ; ಅಸಹ್ಯವಾದುದು : ಪೊಲ್ಲದಂ ನುಡಿದೊಡೆ ಕೇಳ್ದುಮುನ್ನಾರೆ ಸದಾಚರಿತರ್ಜನಭಕ್ತರಲ್ಲಿಯುಂ (ಸಮಚ. ೬-೨೩) ; ಮನದೊಳ್ ಪೊಲ್ಲವನೆಂತುಂ ನೆನೆಯುಟ್ (ಕಾವ್ಯಾವ. ೨೩೪). ೩. ಅಯೋಗ್ಯವಾದುದು ; ಅನುಚಿತವಾದುದು : ಸರಿಯಲ್ಲದುದು : ಈ ನೆರೆದ ಗುರುಜನಂಗಳ್ ಮಾನಿನಿಯರ ಮುಂದೆ ಕರ್ಣ ಪೊಲ್ಲದಂ ನುಡಿದೈ (ಶಂಕಕಾ. ೨-೬೦) ; ಪೊಲ್ಲದಂ ನುಡಿದನಾತನಂ ಬಿಸುಟಂ ತಕ್ಕುವ ನುಡಿಯ ನುಡಿವನೇ (ಗದಾಯು. ೨-೨೦) ; ಸಲ್ಲದು ವಿಪ್ರಗಿಂತಿದು ಪೊಲ್ಲದು (ಸಮಚ. ೨-೩೪). ೪. ಅನಿಷ್ಟವಾದುದು ; ಕೇಡು ; ಕೆಡುಕು : ರಿಸಿಯರೊಂದಿಱುವೆಗಪ್ಪುಡು ಪೊಲ್ಲದು ಬಗೆಯದವರೆನಗಹಿತವಂ ಬಗೆವರೆ (ಪಾರ್ಶ್ವ. ೦೩೬-೨೬) ; ಎನ್ನ ಪುಣ್ಯೊಳಗೆ ನಿನ್ನ ರೋಮಂ ಪುಗೆ ಪೊಲ್ಲದಪ್ಪುದು (ಶಂಕಕಂ. ೦೯೩-೦೨) ; ನಿಮ್ಮಾಶ್ರುವದತ್ತಲ್ಯೋಗಿಮಿರ್ದಂದ ರಸರ ದೆಸೆಯಿಂ ನಿಕ್ಕುಮಂ ಪೊಲ್ಲದಕ್ಕುಂ (ಸುಕುಮಾ. ೭-೯೦) ; ಭುವನಜನಕ್ಕೆ ಗೋನಿವಹಕ್ಕೆ ಪೊಲ್ಲ[ದು ಸವನಿ]ಕ್ಕು (ಅಭಿಪು. ೭-೦೭). ಹೊಲ್ಲದು : ೩. ಕೋಲ ಬಲುಹುಂಟಾಗೆ ನಾಲಗೆ ಹೋಲ ನುಡಿಯದು ಹೊಲ್ಲದೇನಿದು ಮೂಳ ಟಕಿಯು ಮಾತು ಬೇಡಂಬಿನಲಿ ಮಾತಾಡು (ಕುಮ್ಮಾರ. ೯-೩೦).

[<ಪೊಲ್ಲ./ತಮಿ. ಪೊಲ್ಲತು, ಪೊಲ್ಲಾತು]

ಪೊಲ್ಲದುಗೆಯ್, ಪೊಲ್ಲದುಗ್ಗೈ (ಕ್ರಿ). ೧. ಕೆಡುಕು ಮಾಡು ; ಕೇಡು ಮಾಡು : ಒದವುಗೆ ನಿನ್ನ ಸಂತತಿಗೆ ನೂರ್ವರುದಗ್ರಸುತರ್ಕಳೊಂದೆ ಗರ್ಭದೊಳೆನೆ ಕೆಮ್ಮನಿಂತು ಪೊಸೆದಿಕ್ಕಿದೆ ಪೊಲ್ಲದುಗೆಯ್ದೆಯ್ (ಶಂಕಕಾ. ೦-೦೩೦) ; ಪೊಲ್ಲದುಗೆಯ್ದನೆಂದು ನಹುಷಾಜಗರಂ ಒರಿದಪ್ಪ ದೈನ್ಯದಿಂ ಬಲ್ಲಿದನಪ್ಪಗಸ್ತ್ಯಮುನಿಯೊಳ್ ದಯೆಯಂ ಪಡೆಯಲ್ಕೆ ಬಂದಪೋಲ್ (ಕಾರಂಶು. ೦೦೩) ; ಕರವಿಂತೊಂದವಿವೇಕವಂ ನೆಗಟ್ದಿರಂದೇಕಿಂತುಟಂ ಪೇಟದಿರ್ದಿರೆ . . . ಪೊಲ್ಲದುಗೆಯ್ದಿರೆಂದು ಜಡಿದರ್ ಕುಂತೀಸುತರ್ಕೊಂತಿಯಂ (ಗದಾಯು. ೦೦-೨೦). ೨. ಹೀನಕಾರ್ಯವನ್ನು ಮಾಡು; ಪಾಪ ಮಾಡು: ಭೋಗೋಪಭೋಗಂಗಳ್ಗೆ ಪೊಲ್ಲದುಗೆಯ್ದಲ್ಲದ ಪೆಂಡತಿಗೆ ಪೇಸಿದಂತೆ ಪೇಸಿ (ರಮಾಕಾಕ್ಷು. ೩-೨೦). ಪೊಲ್ಲದುಗ್ಗೈ : ೧. ಹಿಂದು ಮುಂದರಿಯದೆ ಪೊಲ್ಲದುಗ್ಗೈವನು ನರಕದ ಭಯವಿಸಿಲ್ಲ (ಇಂಕಾಕ. ೦೬೯-೮೨). [ ಪೊಲ್ಲದು + ಕೆಯ್$_1$ ]

ಪೊಲ್ಲದುಗ್ಗೈ 'ಪೊಲ್ಲದುಗೆಯ್' ನೋ.

ಪೊಲ್ಲನುಡಿ, ಹೊಲ್ಲನುಡಿ (ನಾ). ಕೆಟ್ಟ ಮಾತು ; ಅಹಿತವಾದ ನುಡಿ : ಶಿಶುಪಾಲನ ಪೊಲ್ಲನುಡಿಗೆ ಸೈರಿಪುದು (ಕಗು. ೦೭-೯೭). ಹೊಲ್ಲನುಡಿ : ಅಲಿಪುದುಮಾ ಹೊಲ್ಲನುಡಿಯ ಕಿಡಿಕಿಡಿವೋಗಿ (ಕೇಕರಾ. ೩-೩೯) ; ಬಿಲ್ಲೇಶನ ಬಾಯಿಂದ ಹೊಲ್ಲನುಡಿಗಳ ಕೇಳಿ ಎಲ್ಲರು ಬೆರಗುಗೊಂಡರು (ಸಿದ್ಧಕು. ೦೩-೯೬). [ ಪೊಲ್ಲ + ನುಡಿ$_2$ ]

ಪೊಲ್ಲಬ್ಬೆ (ನಾ). ಒಬ್ಬಾಕೆಯ ಹೆಸರು : ನಾಗುಳರ ಪೊಲ್ಲಬ್ಬೆ ಮಾಡಿಸಿದ ಬಸದಿ (ಶಿಲಾಂಶಕಾ. ೦೯೪೯, ರಾಜಿರಶ್ಯಾರ್. ೦೦೩-೨೦ ; 761).

[ಪೊಲ್ಲ$_1$ + ಅಬ್ಬೆ$_1$]

ಪೊಲ್ಲಮಾತು 'ಪೊಲ್ಲವಾತು' ನೋ.

ಪೊಲ್ಲಮಾನಸ, ಪೊಲ್ಲಮಾನಿಸ (ನಾ). ಕೆಟ್ಟ ಮನುಷ್ಯ; ದುರ್ಬುದ್ಧಿಯುಳ್ಳವನು : ಅಧಮರ ಪೊಲ್ಲಮಾನಸರ ದುರ್ಜನರ ಜಾರಜಾತರ ವಿಜಾತಿಗಳ್ಗೆ ಯೋಗ್ಯಮಪ್ಪಯೋಗ್ಯಮಂಗೆಯ್ದರ್ (ಪಾರ್ಶ್ವ. ೬-೦೪) ;

ದುರ್ಯೋಧನನಪ್ಪೊಡೆ ಪೊಲ್ಲಮಾನಸನಾತನುಂ ನೀಮುಮೊಂದೆಡೆಯೊಳಿರೆ ಕಿಸುಣುಂ ಕಲಹಮುಮೊಂದುಂ ಕುಂದದು (ಶಂಕಶಾ. ೬-೯೩ ವ). **ಪೊಲ್ಲಮಾನಿಸ**: ಪೊಲ್ಲಮಾನಿಸರ ಪೊಲ್ಲವೊಗಂಗಳ್ (ಕವಿರ. ೦೭೭ ಪ್ರಯೋ).

[ಪೊಲ್ಲ + ಮಾನಸ$_1$ (< ಮಾನುಸ)]

**ಪೊಲ್ಲಮಾನಸಿ** (ನಾ). ದುಷ್ಟಹೆಣ್ಣು: ನೀಂ ಪೊಲ್ಲಮಾನಸಿಯೆ ಎಂದು ಮನದೊಳೆ ಬಗೆದು (ಪಶ್ವಾ.ಶಾ. ೦೬-೨೬). [ಪೊಲ್ಲ + ಮಾನಸಿ]

**ಪೊಲ್ಲಮಾನಿಸ** 'ಪೊಲ್ಲಮಾನಸ' ನೋ.

**ಪೊಲ್ಲಮೆ, ಹೊಲ್ಲಮೆ** (ನಾ). ೧. ದುಷ್ಟತನ; ಕೆಟ್ಟತನ: ಪೊಲ್ಲಮೆಯುಂ ಗುಣಮುಂ ತಮಗಲ್ಲದೆ ಪುದುವಲ್ಲ (ಕಂಶಾ. ೩-೦೭೬); ಅವನೀನಾಥನ ಗೆಯ್ದ ಪೊಲ್ಲಮೆಯಿನೊಳ್ಪಿಂಗಮಿಂ ಸಕ್ಕದಾಗು (ಶಂಕಶಾ. ೯-೨೬): ಪೊಲ್ಲಮೆಯೊಳೊಂದದೆ ಚಾರಿತ್ರದೊಳ್ ಕೂಡಿ ನೆಗಟ್ಟ ಧರ್ಮಮೆ ಸದ್ಧರ್ಮಂ (ರಸವಾಕ್ಯ. ೯-೧೭). ೨. ಕೆಡುಕು; ಅಹಿತ; ಕೇಡು: ಕಂಸಕೃತಾಪಚಾರದಿಂ ನಿರ್ವಿಚಾರಮ ಪೊಲ್ಲಮೆಯಾದುದು (ಜಗಾ. ೨-೬೦ ವ): ಆ ನಿನಗೆ ಮಾಡಿದ ಪೊಲ್ಲಮೆಯುಂಟೆ (ದೇಶಾ. ೦೦-೩೩); ಈಗಳೋ ತಾನ ಗೆಯ್ದು ಪೊಲ್ಲಮಗೆ ದೇವರ್ಗೆ ತೆತ್ತಪನ್ ಈ ದಂಡಮನ್ (ಐಧಶ್ರ. ೦.೦೦). ೩. ದೋಷ; ತಪ್ಪು: ಸಂಸಾರದ ಪೊಲ್ಲಮೆಯುಮನನಿತ್ಯತೆಯುಮಂ ಬಗೆದು ವೈರಾಗ್ಯಪರರಾಗಿ (ಪಶ್ವಾ.ಶಾ. ೯೩-೬); ಏನಾನುಮೊಂದು ಪೊಲ್ಲಮೆಯನಿಲ್ಲದುದನುಮ್ಮವಿಸಿ (ಶರಶು. ೦೫-೫೯ ವ): ಮರುಳೇ ಪೊಲ್ಲಮೆಯ ಲೇಸು ನಲ್ಲರ ಮೆಯ್ಯೊಳ್ (ಚಿಕೋಶ. ೨-೪೨). ೪. ಕಳಂಕ; ಅಪವಾದ: ಇನ್ನುಮೊಂದು ಕಥೆಯುಂ ಪೇಟ್ದಿನ್ನ ಮೇಗಣ ಪೊಲ್ಲಮೆಯುಂ ಪಿಂಗಿಸಿಕೊಳ್ವಿಂ (ರಸವಾಕ್ಯ. ೦೨-೦೩೭). ೫. ಪಾಪ: ಆದಂ ಪೊಲ್ಲಮೆಯೊಳ್ ಸಲೆ ನಡೆವರ್ ದುಷ್ಟಮುಮೆಂಬಯ್ದನೆಯ ಕಾಲದೊಳ್ (ಐಂಶು. ೦೫.೩೭). **ಹೊಲ್ಲಮೆ**: ೧. ಅಗಲ್ಕೆಯಲ್ಲಿಯುಂ ಹೊಲ್ಲಮೆಯಲ್ಲಿಯುಂ ಪ್ರತ್ಯವಾಯಮೆಂಬುದು (ಹರಿಶಿಯು. ೦೩೭-೩೯); ಸ್ತ್ರೀಜೀವನದ ಹೊಲ್ಲಮೆ ಸಹ ನಯಸೇನನ ತೀಕ್ಷ್ಣವಾದ ನೋಟಕ್ಕೆ ಸಿಲುಕದೆ ಹೋಗಿಲ್ಲ (ಕವಿ. ೯೩). ೨. ವಲ್ಲಭ ನಿನಗೇಗೆಯ್ದಂ ಹೊಲ್ಲಮೆಯುಂ (ಪಶಕಂ. ೫೯೪). ೩. ಒಸಗೆ ತಮ್ಮಾಡಿನ ಪೆರ್ಮೆಯೊಡನಾಡಿ ಹೊಲ್ಲಮೆಯು ಕಳಗಿಕ್ಕಿ ತಿಳಿದೆರ್ಚುವ ಬಾಳ್ಗೆ ಸೊಲ್ಲೇನು? (ಕಾಂಅರ. ೭೩-೦೩೭). ೬. ಕೆಟ್ಟಮಾತು; ನಿಂದೆ: ಈ ಕಡೆಯ ಬಾಯಿಂದ ಒಳ್ಳೆಯ ಮಾತಾಡುತಿದೆ ಆ ಕಡೆಯ ಬಾಯಿಂದ ಬರಿಯ ಹೊಲ್ಲಮೆಯ ಹೊರಹೊಮ್ಮುತಿದೆ (ಐಗೀ. ೩೦). [ಪೊಲ್ಲ + -ಮೆ$_1$]

**ಪೊಲ್ಲಮೆಗಾಣ್** (ಕ್ರಿ). ದೋಷವನ್ನು ಕಾಣು; ತಪ್ಪನ್ನು ಕಾಣು: ಮನಮನಗಲ್ದಲೊಂದೆಡೆಯ ಪೊಲ್ಲಮೆಗಾಣೆನೆ ಬೇಜಿದೊಂದು ರೂಪಿನ ನಿಧಿ ಬೇಜಿದೊಂದು ಕಡುಗಾಡಿಯ ಸನ್ನಿಧಿ (ಶಾಂತಿಪು. ೬-೬೯); ಪೊಲ್ಲಮೆಗಂಡದ ನಚಿದಂ ಪೊಲ್ಲನೆ ಸಯ್ತಾಗೆ ತಿರ್ದುವರ್ಸುಕವೀಶರ್ (ರಸವಾಕ್ಯ. ೦-೯೩); ಪೊಲ್ಲಮೆಗಂಡವಮರ್ಗಳಿದು ತಮ್ಮಯ ತೊಟ್ಟಿರನಂತು ಮಾಟ್ಕೊಡಂ ಸಲ್ಲದೆ (ಶೃಂಗಾರ. ೩-೩೦). [ಪೊಲ್ಲಮೆ + ಕಾಣ್]

**ಪೊಲ್ಲಮೆಗೆಯ್** (ಕ್ರಿ). ಕೆಟ್ಟುದನ್ನು ಮಾಡು; ಕೇಡುಂಟುಮಾಡು: ಸಂಜೀವಕಂಗೆ ನೀ ಕೂರ್ಪೆಯಪ್ಪ ಕಾರಣದಿಂದಾತನೆನಿತು ಪೊಲ್ಲಮೆಗೆಯ್ದು ನಾಡೊಡಮೊಳ್ಪಿದನೆಂದು ನುಡಿದವ (ಶಂಕಶಂ. ೦೦೧-೬); ಪೊಲ್ಲಮೆಗೆಯ್ಯ ಲಾಜಿದಿದು (ಕಶುಶ. ೦೯-೬೦); ಪೊಲ್ಲಮೆಗೆಯ್ಯಲ್ಪಟ್ಟೆಡೆಗೆ ನೆಲನೆಲ್ಲ ಮನುಜರಳಿವ ಖಳ ಸೀ ನನೆವಿಲ್ಲಂ (ಉದ್ಭರೀ. ೯-೩೩).

[ಪೊಲ್ಲಮೆ + ಕೆಯ್$_1$]

**ಪೊಲ್ಲಯ್ಯ** (ನಾ). ಒಬ್ಬಾತನ ಹೆಸರು: ಮಟ್ವಾರ ಸಾಯಿರ ಒಟ್ಟೆಬ್ಬರುಂ ಪೊಲ್ಲಯ್ಯನ ಮಾಡಿಸಿದ ದೇಗುಲಕ್ಕೆ ಕೊಟ್ಟ ಮಣ್ (ಅಕ. IV. ಎಳಂದೂ. ೪೦-೩; 982). [ಪೊಲ್ಲ ? + ಅಯ್ಯ$_1$]

**ಪೊಲ್ಲಲಿಂಗಿ** (ನಾ). (ಅನ್ಯಪಂಥದ) ಹೀನಯತಿ: ಸಂನ್ಯಾಸಿ: ಪೊನ್ನ ತಳಿಗೆಯೊಳ್ ನಾಯಟ್ ತುಯ್ಯಲನುಣ್ಬುದಂ ಕಂಡುದಜಿಂ ಪೊಲ್ಲಲಿಂಗಿಗಳರ ಸರ್ಗಳಿಂದಂ ಪೂಜಿಸಿ ಪಡುವರ್ (ಪಶ್ವಾ.ಶಾ. ೧೬-೨೮). [ಪೊಲ್ಲ + ಲಿಂಗಿ$_2$]

**ಪೊಲ್ಲವಾತು, ಪೊಲ್ಲಮಾತು** (ನಾ). = ಪೊಲ್ಲನುಡಿ: ಎಲ್ಲಿಯದೀ ಸುದ್ದಿ ರಾಮ ಮಡಿದನೆಂಬ ಪೊಲ್ಲವಾತಿದ ತಂದರಾರು (ಕಂಶಾಸಂ. ೩೭-೦೦೯). **ಪೊಲ್ಲಮಾತು**: ನಿಮ್ಮೀದಿಗರ್ವಶದ ಕೇಡಂ ನೋಡದೊಳ್ಪಂ ಬಗೆಯದೆ ಪಟಂಗಂ ಪಾತಕಕ್ಕಂ ಭಯಂಗೊಳ್ಳದೆ ಪೇಟರ್ ಪೊಲ್ಲಮಾತಂ ನುಡಿಯಲಿದು ಮನಂ ನೋಟ್ಪ ಸಂಕಲ್ಪಜಲ್ಪಂ (ಶಂಶಾಶತ. ೯-೦೬೯).

[ಪೊಲ್ಲ + ಮಾತು$_1$]

**ಪೊಸ, ಹೊಸ** (ಗು). ೧. ನೂತನ; ನವೀನ: ಒರ್ವಳ್ ಪೊಸ ಶರ್ವರಿ... ಕಲ್ಪಲೆಯೊಳ್ ನಿರ್ಗ್ರಂಥಮಪ್ಪ ರೂಪು ಕಂಡು ಬೆರ್ಚಿದೊಡೆ (ಪಶ್ವಾ.ಶಾ. ೯೨-೧೧); ತಾವರೆಯ ರಜಂಗಳೆಂಬ ಪೊಸ ಸುಣ್ಣಗಲಿಂದೆ ಪುಟ್ಗಲ್ಗಳಂ ಮನೋಹರಕೃತಕಪ್ರವಾಹಿನಿಯೊಳಂಗನೆ ಮಾಡಿಸು ತಿರ್ದಳರ್ಥಿಯಿಂ (ಕಾದಂಶ. ೨೪); ಪೊಸ ಪೊನ್ನ ಪರಿಯಾಣದೊಳಿಸೆವ ಅಮೃತಾನ್ನಮನು ನಾಯ್ಸಿಂಬುದಂ . . . ನೃಪಾಳಂ ಕಂಡಂ (ಕುಶ್ಯಾಸ್ರ. ೯-೦೯); ಪೊಸ ಜೊನ್ನಂ ತನ್ನ ಕೀರ್ತಿಪ್ರಭೆ ಪಸರಿಸಿತೆಂಬಂತೆ ಸೊಂಪೇಜಿ (ವೃಶಂ. ೨೯.೦೦). ೨. ಚೆಲುವಾದ; ಮನೋಹರವಾದ: 'ಪೊಸವೆಳ್ದಿಂಗಳ್', 'ಪೊಸಸಂಜೆ' ಪರಾ. ೩. ಶುಭ್ರವಾದ; ಸ್ವಚ್ಛವಾದ; ನಿರ್ಮಲವಾದ: 'ಪೊಸದಳಿಂಬ', 'ಪೊಸನೀರ್' ಪರಾ. ೪. ಚಿಕ್ಕದಾದ; ಎಳೆಯ ವಯಸ್ಸಿನ: 'ಪೊಸನವಿಲ್' ಪರಾ. ೫. ಪಕ್ವವಾದ; ಮಾಗಿದ: 'ಪೊಸವಣ್' ಪರಾ. ೬. ಬಿಸಿಯಾದ: 'ಪೊಸನೆತ್ತರ್', 'ಪೊಸಪಾಕ' ಪರಾ. ೭. ಮಾಸದಿರುವ; ಅಳಿಸದಿರುವ: 'ಪೊಸಪಜ್ಜೆ' ಪರಾ. ೮. ಬೇರೆಯ; ಮತ್ತೊಂದು: 'ಪೊಸವೆಸರ್' ಪರಾ. ೯. ಮೊವಲನೆಯ; ಪ್ರಥಮ: 'ಪೊಸಗಾರ್' ಪರಾ. ೧೦. ಅಧಿಕವಾದ; ಅತಿಶಯವಾದ: 'ಪೊಸಸಿರಿ' ಪರಾ. **ಹೊಸ**: ೧. ಆವರಿಸಿದುದು ಮತ್ತೆ ಹೊಸ ಮೇಳಾಪವಲಿ ಕುರುಸೇನೆ (ಕುವ್ಯಾ.೬.೦೯-೨೮); ಹೊಳಲು ಹೊಸ ರೀತಿಯಲಿ ವಿಗೆ ಕಂಗೊಳಿ ಸುತಿರ್ದುದು (ತೊರಶಾ. ೦-೯.೦೦); ಈ ಹಳೆಯ ಹೇಳಿಕೆಗೆ ಹೊಸ ಉಸಿರು ತುಂಬಿದ್ದಾರೆ (ದ್ವಾಶಿ. ೯೨). ☞ 'ಪೊಸ' ಮತ್ತು 'ಹೊಸ' ಎಂಬ ಈ ಶಬ್ದಗಳು ಇತರ ಅನೇಕ ನಾಮಪದಗಳೊಡನೆ ಸೇರಿ ಸಮಾಸವಾದಾಗ ಬೇರೆ ಬೇರೆ ಅರ್ಥಗಳನ್ನು ಕೊಡುತ್ತವೆ.

**ಪೊಚ್ಚಪೊಸ, ಪೊಸಪೊಸ, ಹೊಚ್ಚಹೊಸ, ಹೊಸಹೊಸ** (ದ್ವಿರುಕ್ತಿ): ಪೊಚ್ಚಪೊಸ ಮಲ್ಲಿಗೆಯುಂ ಮುದದಿಂ ತುಜುಂಬಿ (ರಸವಾಕ್ಯ. ೬-೦೬೯); ತನಿಗಂಪು ತೀವಿರ್ದ ಪೊಚ್ಚಪೊಸ ಪೂಗಳಂ ಕೊಂಡು (ಕುಶ್ಯರ.ಹ. ೫೨೩-೨೮); ಪರಿಯಾಣದಲಿ ಪೊಸಪೊಸ ಪದಾರ್ಥಶ್ರೇಣಿಯುಂ ಲೇಸಾಗಿ ಗಡಣಿಸಿ (ಐಶಶು. ೩೩-೦೦): ಹೊಚ್ಚಹೊಸ ಬೆಣ್ಣೆಗಾಸಿದ ತುಪ್ಪ (ಸಮ್ಯಕ್ತ್ವ. ೭-೨೯); ಹೊಚ್ಚಹೊಸ ಹೊಂಗರಂಜಿನಲಿ ತೆಗೆದೆಚ್ಚನು (ಕೀಂ:ಮ. ೩-೨೭); ಆ ಅಂಗಡಿಗೆ ಹೊಸ ಹೊಸ ಬಗೆಯ ಸೀರೆಗಳು ಬಂದಿವೆ (ರೂಪ). **ಪೊಸವು** (ಬಹುವ): ರಸಭಾವಾಭಿನಯಂಗಳ್ ಪೊಸವೆ ಪುಗಿಲ್ ಪೊಸವೆ ಚಲ್ಲಿಗಳ್ ಪೊಸವೆ ನಯಂ ಪೊಸವೆ ಕರಣಂಗಳುಂ ನಿಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮುಮಂ (ಅಂಶು. ೯-೨೩).

[ದೇ.॥ತಮಿ. ಪುತಿಯ, ಪುತು; ಮಲ. ಪುದು; ತುಳು. ಪೊಸ, ಹೊಸ; ಕೊಡ. ಪುದಿಯದ್; ಕೋತ. ಪುವ್]

**ಪೊಸಅಡಕೆ** (ನಾ). ತಾಜಾಅಡಕೆ; ಹಸಿಯಡಕೆ: ಪೊಸಸುಗ್ಗಿ. ಪೊಸ ಅಡಕೆ (ಬಾಶಾಶು. ೦೯೯ ಶಾರ); ಪೊಚಿಅಡಿ, ಒಳಅಟ್ಟಂ, ಪೊಸಅಡಕೆ (ಕಮಿತ. ೫೬ ಪ್ರಯೋ). [ಪೊಸ + ಅಡಕೆ$_1$]

**ಪೊಸಎಲರು** (ನಾ). ಸ್ವಚ್ಛವಾದ ಗಾಳಿ ; ನಿರ್ಮಲವಾದ ವಾಯು : ಪಳವಾನೇ ! ಪೊಸಎಲರೇ ! (ಕೊಂಗಳು. ಹುಕ್ಕಿ. ೧೭).

[ಪೊಸ + ಎಲರು (< ಎಲರ್)]

**ಪೊಸಒಲುಮೆ** (ನಾ). ನವೀನವಾದ ಪ್ರೇಮ,–ಭಕ್ತಿ : ಭಕ್ತರ ಚರಿತೆಗಳನಾನಂದದಿಂ ತಿರುಪಾಟ ರೀತಿಯೊಳೊಂದಿ ಪಾಡುತ ಪೊಸ ಒಲುಮೆ ಸಲೆ ಪೊಣ್ಮೆ [ಪಾಠಾಂ. ಪೊಡವಡುತವೊಲವುಣ್ಮೆ] ಕೀರ್ತಿಸುತ (ಚಕ್ರ. ೨೭-೭೦).

[ಪೊಸ + ಒಲುಮೆ (< ಒಲ್ಮೆ)]

**ಪೊಸಂತಿಲ್**, ಪೊಸಂತಿಲು, ಪೊಸತಿಲ್, ಪೊಸತಿಲು, ಹೊಚ್ಚಲ, ಹೊಸಂತಿಲ್, ಹೊಸಂತಿಲು, ಹೊಸತಿಲ್, ಹೊಸತಿಲು, ಹೊಸಲು, ಹೊಸಿಲು, ಹೊಸ್ತಲು, ಹೊಸ್ತಿಲ್, ಹೊಸ್ತಿಲ, ಹೊಸ್ತಿಲು (ನಾ). ೧. ಬಾಗಿಲ ಚೌಕಟ್ಟಿನ ಕೆಳಭಾಗ; ಉತ್ತರಾಸ; ದೇಹಳಿ: "ಗೃಹಾವಗ್ರಹಣೀ ದೇಹಳೀ—ಈ ೨ ಪೊ(ಹೊ)ಸಂತಿಲ್" (ಹಲಾಯು. ೩೦-೦೯೭) ; ಮೇರು ಪೊಸಂತಿಲ್ ಕುಡಿತೆಯ ನೀರಂಬುಧಿ ಗಗನತಳಮೆ ಕೈ ದಿವಿಜಗಣಂ ಕಾರೊಕ್ಕಲೆಂದೊಡುಬೆದವರಾರಾತನ ಮಸಪ ಮಸಕದೆಸಕವನುಬೆಪರ್ (ಕಾವ್ಯಸಾ. ೨೩೯ ಜನ್ನ); ಎನಗೆ ಪೊಸಂತಿಲೀ ನೆಗೆದ ವಜ್ರದ ವೇದಿಕೆ ಗೋಷ್ಪದಂದಲೀ ವನನಿಧಿ ಪಾಯ್ದು ಮಾಗಧನನೀಗಳೆ ಕಟ್ಟುವೆನಲ್ಲಿ (ಜಗ. ೦೨-೬೦) ; ನಿತ್ಯಬಿಂದುಗಂ—ಬೆಡಂಗಂ. . . ಪೊಸಂತಿಲ್, ಗಳಂತಿಗೆ (ಕವಿರ. ೬೭ ವೃತ್ತಿ). **ಪೊಸಂತಿಲು** : ೧. "ಪೊಸಂತಿಲು ದೇಹಳಿಯುಮಕ್ಕು" (ಅಭಿ.ಪಂ. ೫೬). **ಪೊಸತಿಲ್** : ೧. ಪೊಸತಿಲ ಮೇಲನೊಕ್ಕಿಜಿದು ಮಿಸುಪ ತುಯ್ಯಲನಟ್ಟು ಬಾಗಿಲ್ಚರಿಸಿ (ಕಾಅ. ೯೬೬) ; ಪೂದೋಂಟಕ್ಕೆ ಪೋಗಿ ನಿಚ್ಚಲುಂ ಪೂಗಳು ಕೊಯ್ದು ಕೊಂಡು ಮನೆಗೆ ಬರುತ್ತಾ ಮಾರ್ಗದ ಬಸದಿಯ ಪೊಸತಿಲೊಳೊಂದೊಂದು ಪೂವನರ್ಚಿಸುತ್ತಂ (ವಡ್ಡಾರಾ. ೦-೪೨ ಪ). **ಪೊಸತಿಲು** : ೧. ಅಸುಮಪೊರಲೊನಕೆ ಗೂಟಂ ಪೊಸತಿಲು ಮನೆಮನೆಯು ಕಥ . . . ದೆಯ್ವಮಿಂತಿವೆಂಬಮರ್ಹ್ಯರ್ (ಸಮುಕ. ೯-೬೨) ; ಬಸವಿಯರೊಳು ಪಾತಕಿನಿಯರೊಳು ಮತ್ತಸತಿಯರೊಳು ಕೆಳೆಗೊಳದೆ ಪೊಸತಿಲ ಪೊಜಗಡಿಯಿಡದೊಳ್ವೆಂಡಿರ ಜಸವಳ್ಳಿ ಜಗವ ಪರ್ಬುವುದು (ಹರಿಭ. ೯-೯೩). **ಹೊಚ್ಚಲ** : ೧. ಬೆಚ್ಚನ ಮನೆಯಾ ಹೊಚ್ಚಲದೊಳಗೆ ನಿಂತರು ಭಟ್ಟರು ಹಣಕುತ ಹೊರಗೆ (ಗು. ೯೯-೭) ; ನೀ ಹೊಚ್ಚಲವಾಗ ಆಲಿಟ್ಟೇದಿ, ಹಿತ್ತಲದಾಗಿನ ತುಲಸೀಗಿಷ ಕಮರಿ ಹೋತು (ಸಪುಜ. ೭೪). **ಹೊಸಂತಿಲ್** : ೧. "ಗೃಹಾವಗ್ರಹಣೀ, ದೇಹಳೀ —ಈ ೨ ಪೊ(ಹೊ)ಸಂತಿಲ್" (ಹಲಾಯು. ೩೦-೦೯೭) ; ನುಡಿಯಲ್ಲಿಂ ಹೊರೆ ಸೂರುಳೊಳ್ಳಿಬಿ ಹೊ[ಪಾಠಾಂ. ಪೊ]ಸಂತಿಲ್ ಪೊಂಗೊಳಲ್ ಪುತ್ರುವಾಯ್ಕುಡಿನೀರೊರ್ವೆಗೆ ಕಮ್ಮನಪ್ಪ ಬಟೂನೀರೂರ ದೈವಂಗಳುಂ ಪಡಿಗೆತ್ತೋಡಿದುವೀಕೆಗಂಜಿ (೦೬ಜಾಪ. ೨-೦೦೨). **ಹೊಸಂತಿಲು** : ೧. ಒಂದು ಹೊಸಂತಿಲನ್ನು ದಾಟುವುದರೊಳಗಾಗಿ ಬಿಟ್ಟದೇವನೂ ಬಂದನು (ಸಚಚ. ೨೪೯). **ಹೊಸತಿಲ್** : ೧. "ದೇಹಳಿಯದೊಗೆದ ಹೊಸತಿಲೆನಿಕ್ಕುಂ" (ಮಂಗರಾ. ೫೯-೦೨). **ಹೊಸತಿಲು**: ೧. ಹೊಸತಿಲ ಪೂಜಿಸಿ ಹೊಚಿಪಟ್ಟು ಹೋದ ಒಕ್ಕಲಿತಿಯಂ ತಾಯಿತ್ತ್ರನ್ನ ಭಕ್ತಿ (ಅಸಚ. ೯೨೨); ಈ ಜನದ ಬದುಕಿನ ಸೊಗಸು ಸಂಸ್ಕೃತಿಯರಳಿ ಪರಿಮಳಿಸಲೆಂದು ಹೊಸತಿಲಲಿ ಹಚ್ಚಿಟ್ಟ ಹಣತೆ ಒಳಗು ಹೊರಗೂ ಕೂಡಿ ಬೆಳಗಲೆಂದು (ಸಂಪುಟ. ೯-೬); ಹೊಸತಿಲಲ್ಲಿ ಅಡಿಯಿಡುತ್ತಿದ್ದ ಹಾಗೆಯೇ ಮುಕ್ತಾ ಆನಂದಭರಿತಳಾದಳು (ಆಕೃಪು. ೦೨೬). **ಹೊಸಲು** : ೧. ಹೋಮಶಾಲೆಯ ಹೊಸಲು, ಹೊಸದಾಗಿ ಮಾಡಿರುವ ಸಮ್ಮಾರ್ಜನೆಯಿಂದ ಶೋಭಿಸುತ್ತಿರುವುದು (ಶಾಕುಂತ. ೬೬-೦೬); ರೈತರೆಲ್ಲ ಮನೆಯ ಹೊಸಲಿಗೆ'ಕಾಯಿ ಒಡೆದಿಟ್ಟು ಧೂಪ ಹಾಕಿ ಪೂಜಿಸುತ್ತಿದ್ದರು (ಹುಚ್ಚುಹ. ೬೨). **ಹೊಸಿಲು** : ೧. ಪೋಜಾ ನಸ್ರುದ್ದೀನ್ . . . ದೊಸಿಲನ್ನು ದಾಟಿದನು (ಸಗಹೂ. ೨೨೯). ೨. (ಅಲಂ) ಅಂಚು ; ಗಡಿ : ನನ್ನ ಬಾಳು ಸಾವಿನ ಹೊಸಿಲನ್ನು ಮುಟ್ಟಿತ್ತು (ಉಪಸಾ. ೬೦); ಹದಿನೆಂಟರ ಹೊಸಿಲನ್ನು ದಾಟಿದರೂ ವಿಲಾಸಜೀವನವೇನೆಂಬುದನ್ನೇ ಅವಳು ಅರಿಯದವಳಾಗಿದ್ದಳು (ರೂಕಸ. ೨೪). **ಹೊಸ್ತಲು** : ೧. ನರಸಿಂಹರೂಪದಿಂ ದೈತ್ಯನಂ ಪಿಡಿತಂದು ಹೊಸ್ತಲೊಳಗೆ ಸಂಜೆಯೊಳ್ ತನ್ನ ತೊಡೆಯೊಳ್ ಕೆಡಪುತುಗುಗುರ್ಗೊನೆಗಳಿಂ ಜಠರವಂ ಬಗಿದು (ಕಲಕ. ೩೩-೩); ಮುಂದಣಂ ಗಣಮನೆಲ್ಲಪನುಡುಗಿ ಸಲೆ ಹೊಸ್ತಲೊಳಗೆಳಗೆ ಸಾರಣೆಯನೇ ಹಾಕಿ (ಮಲ್ಲಿಕ. ೨-೦೭). **ಹೊಸ್ತಿಲ್** : ೧. "ಗೃಹಾವಗ್ರಹಣೀ, ದೇಹಲೀ—ಈ ೨ ಹೊಸ್ತಿಲ ಪೆಸರು" (ನಾಚಿರಾ. ೦೦೪). **ಹೊಸ್ತಿಲ** : ೨. ಬಳ್ಳಾರಿ ಕನ್ನಡ ನಾಡಿನ ಹೊಸ್ತಿಲದಂತೆ (ಮಂಗಳಾಕ್ಷ. ೨೭). **ಹೊಸ್ತಿಲು** : ೧. ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ ತುಂಬಿ ಮನೆಯೊಳಗೆ ಮನೆಯೊಡೆಯ ನಿದ್ದಾನೊ ಇಲ್ಲವೊ (ಜನಪ. ೯೭); ನಡುಹೊಸ್ತಿಲನು ಮೆಲ್ಲನೆ ದಾಟಿ (ಸಂಕಶ. ೦೪-೯೦); ಬಾಪೂಜಿಯ ಚಿತ್ರವೊಂದು ಮಾತ್ರ ಅವರ ಅರಮನೆಯ ಹೊಸ್ತಿಲನ್ನು ದಾಟಿ ಒಳಗೆ ಕಾಲಿಡುವುದು ಅಸಾಧ್ಯವಾಗಿತ್ತು (ಶಂಂಶು. ೯೯).

ಹೊಸತಿಲ ಹುಣ್ಣಿಮೆ, ಹೊಸ್ತಿಲ ಹುಣ್ಣಿಮೆ = ಮಾರ್ಗಶೀರ್ಷಮಾಸದ ಹುಣ್ಣಿಮೆ ; ದೇವತೆಗಳ ಆಗಮನಕ್ಕಾಗಿ ಹೊಸ್ತಿಲನ್ನು ಪೂಜೆ ಮಾಡುವ ದಿನ : ಮಾರ್ಗಶೀರ್ಷ ಶುದ್ಧ ೧೫ನೆಯ ತಿಥಿ ಹೊಸತಿಲ ಹುಣ್ಣಿಮೆ (ಜಾಕ್ಯಾ. ೦೬೪) ; ಹೊಸ್ತಿಲ ಹುಣ್ಣಿಮೆಗೆ ಹೊಸ್ತಿಲ ನಡುಗಿತ್ತು ಬನದ ಹುಣ್ಣಿಮೆಗೆಲ್ಲ ಬನ ನಡುಗಿದೆ (ಸತೀಗೀ. ೨೩-೬೩೩). **ಹೊಸತಿಲು ದಾಟು, ಹೊಸಲು ದಾಟು** = ೧. ಮನೆಯ ಹೊಸ್ತಿಲನ್ನು ದಾಟು : ಹೊರಗೆ ಹೋಗು : ಮನೆಯ ಹೊಸತಿಲು ದಾಟುವ ಮುನ್ನ, ಅವರು ಹಿತ್ತಲ ಕಡೆಗೆ ಹೋಗಿ, ತಮ್ಮ ಮೂಕಜೀವಗಳನ್ನು ಮಾತನಾಡಿಸಿ ಬರುವವರು (ಕಂದ್ರಕಾ. ೬೨). ೨. (ಅಲಂ) ಹದ್ದು ಮೀರು ; ಅಂಕೆತಪ್ಪು : ಬೀದಿಯವರ ಮುಂದೆ ನಾಟ್ಯವಾಡಲು ಸರಿಯಾದ ಹೊಸಲು ದಾಟಿದ ಹೆಣ್ಣು ಇವಳು (ಗೋಕೃರ. ೫೦). [< ಪೊಸತು ? + ಇರ್ಕೆ]

**ಪೊಸಂತಿಲು** 'ಪೊಸಂತಿಲ್' ನೋ.

**ಪೊಸಂಬ**, ಪೊಸಬ, ಹೊಸಬ (ನಾ). ಗುರುತಿಲ್ಲದವನು; ಅಪರಿಚಿತ : ಒಂದೆಡೆಗೆ ಪಬೆಯನಿಂ ಪೊಸಂಬನೆ ಲೇಸು (ಶಂಕಶಂ. ೦೦೬-೯) ; ವಿಚಾರಿಸದುಂತೆ ಪೊಸಂಬರೆಒತ್ತೆಯಂ ಕೊಳ್ವುದು ತಕ್ಕುದಲ್ತು (ಕವಿರ. ೦೫೬ ವೃತ್ತಿ); ಆವನಾನೊರ್ವನಾಗಲಿ ಪೊಸಂಬಂ ಬರಲ್ [ಪಾಠಾಂ. ಪೊಸಬನೆಯ್ದಿರಲ್] ಭಾವಜ್ಞರಾದವರ್ ವತ್ತೆಂಟು ವಗಲವನ ಭಾವಮಂ ನೋಡಿಯೊಳ್ಕಿದನಾದೊಡೊಳಕೊಳ್ಬೇಕು (ಪಶ್ಯೇಕ್ಷ. ೦೦-೫೦). **ಪೊಸಬ** : ಪೊಸಬರೀ ದೇಶದಳಬಳವನಜೆಯರಿ (ಶಾಂಕಥ. ೯-೩೭) ; ಪಿಸುನಿವಣ್ಣದ ಮೆಯಿ ಗವಾಧಿಪ ಕಂಧರವು ಮೆಡುವ ಪೊಸಬನಿವನಬಗೆನೆನಿಸನೀಕ್ಷಿಸಲು (ಶಾಕ್ತಿ. ೦೯-೩). **ಹೊಸಬ** : ಹೊಸಬರಪ್ಪ ಕೊಯ್ಲಾಳಿಗಳು ಬನ್ನಿಯೂರೊಳ್ . . . ಎರಡು ಪಣವುಂ ಕೊಟ್ಟು ಕೊಯ್ವರ್ (ಶಾಶಾ. XI-11, ೧೫೦-೨೦ ; 1094); ಸಂವರ್ತರುದ್ರನೊ ಹೊಸಬನಿವನಾರೆಂದು ತಲ್ಲಣಿಸಿತ್ತು ರಿಪುಸೇನೆ (ಕುಮಾರ್ರಾ. ೦೨-೨೦) ; ವರ್ತಕನೊಬ್ಬನು ಹೊಸಬು ಗಿರಾಕಿಗೆ ಉಪದೇಶವಿತ್ತನು (ತಂಪಾಕ. ೦೨೦-೯೦). [< ಪೊಸ + — ಬ್ಬ. / ತುಳು. ಪೊಸಬೆ]

**ಪೊಸಕಂಪು** 'ಪೊಸಗಂಪು' ನೋ.

**ಪೊಸಕನ್ನಡ** 'ಪೊಸಗನ್ನಡ' ನೋ.

**ಪೊಸಕಳ್ತಲೆ** 'ಪೊಸಗಳ್ತಲೆ' ನೋ.

**ಪೊಸಕಿಚ್ಚಳ** (ನಾ). ತಾರುಣ್ಯದ ಹೊಸಮದ,–ಸೊಕ್ಕು : ಅಸಿಯಸೆಳೆ ತಳೆದೊಳಕೆ ರಂಜಿಸೆ ಪೂರ್ವವ್ವಳಿಸೆ ಪತ್ತಸಾರ್ದವರಂ ಕರ್ಮಕಿಚಾಮನ ಪಡಿಯಜಿಪೊಲೆಸೆದಳ್ ಪೊಸದೆಸೆಕಾರ್ತಿ ಪೊಸಕಿಚ್ಚಳ [ಪಾಠಾಂ. ಲ್ಲ] ಕದೊಳ್ (ಅರ್ಜುನಚ. ೨-೦೪). [ಪೊಸ + ಕಿಚ್ಚಳ]

**ಪೊಸಕೆಂದಳಿರ್** 'ಪೊಸಗೆಂದಳಿರ್' ನೋ.

**ಪೊಸಗಂಪು**, ಪೊಸಕಂಪು (ನಾ). ಆಗ ತಾನೆ ಹುಟ್ಟಿರುವ ಸುಗಂಧ; ಹೊಸದಾದ ಸುವಾಸನೆ: ಮಲರ್ದಲರ್ದ ನಾಗಸಂಪಗೆಯಲರ್ಗಳೊಳ ಗ್ಗಲಿಸಿ ಬರಿವ ಪೊಂಬಾಳೆಯ ತಣ್ಮಲರ ಪೊಸಗಂಪಿನೊಳ್ ಪುದಿದಲೆವೆಲರಾಱುವುದು ಖಚರದಂಪತಿಶ್ರಮವಂ (ಆದಿಪು. ೦-೬೫); ಕಪ್ಪುರದ ಕಂಪುಮಂ ಸೂಡಿದ ಬಾಸಿಗದ ಪೊಸಗಂಪನಿಂಬಾಗೊಗೆದಿರೆ ಮಾಡಿದುದು ಚಮರರುಹ ಗಂಧವಹಂ (ಶಂಕರಾ. ೦೯-೨೩). **ಪೊಸಕಂಪು**: ಬಂದು ಮನೆಗೆಯ್ದೆ ಪೊಸಕಂಪು ಕವಿದಿರೆ ಕಂಡು ಎಂದಿನಂತಲ್ಲದೆ ನವೀನವಾಗಿರೆ ಕಂಡು (ಶಿವಪ. ೮೮. ೬-೯). [ಪೊಸ + ಕಂಪು]

**ಪೊಸಗನ್ನಡ**, ಪೊಸಕನ್ನಡ, ಹೊಸಗನ್ನಡ (ನಾ). ೧. ಹೊಸ ಬಗೆಯ ಕನ್ನಡ; ನವೀನತೆಯುಳ್ಳ ಕನ್ನಡ: ಪೊಸಗನ್ನಡದಿಂ ವ್ಯಾವರ್ಣಿಸುವ ಸತ್ಕೃತಿಯನೆಂದು ಕನ್ನಡವಂ ಚಿಂತಿಸಿ ಕೊಡಲಾಱದಕ್ಕಟ ಮಿಸುಕದ ಸಕ್ಕದ ಮನಿಕ್ಕುವವನುಂ ಟವಿಯೇ (ರಘಾಂಕ್ಕು. ೦-೮೦); ವಾಸುಂವುತಿ ವರ್ಣ್ಣಿಸಿದಂ ಶ್ರೀಸಜ್ಜನತಿಳಕನೊಸೆದು ಪೊಸಗನ್ನಡದಿಂ (ಕೊಂಡ್ಕು. ೦೪-೦೦೦; 1186); 'ಪೊಸಗನ್ನಡ' ಎಂಬ ಪದಪ್ರಯೋಗ ಪ್ರಾಚೀನಕನ್ನಡಸಾಹಿತ್ಯದಲ್ಲಿಯೂ ಆಗಾಗ ಬರುತ್ತಿದೆ (ಶಾಸಪಾ. ೦). **ಪೊಸಕನ್ನಡ**: ೧. ವುಹಾಮುನಿವುತ ವಿಗೆ ಪೇಟ್ಳುನೆಸೆಯೆ ಪೊಸಕನ್ನಡದಿಂ (ಖಚರ. ೦-೩೩). **ಹೊಸಗನ್ನಡ**: ೨. ಹಳಗನ್ನಡ, ನಡುಗನ್ನಡಗಳಿಂದ ಭಿನ್ನವಾದ ಈಗಿನ ಕನ್ನಡ: ಈಗ ನಾವು ಬಳಸುತ್ತಿರುವ ಭಾಷೆ 'ಹೊಸಗನ್ನಡ' (ಕೃಶಿ. ೦): ಕನ್ನಡವಮಾತೆಷ್ಟು ವಿಧವಾಗಿರುವದು?. ಹೊಸಗನ್ನಡವೆಂತಲೂ ಹಳಗನ್ನಡವೆಂತಲೂ ಎರಡು ವಿಧವಾಗಿರುವದು (ಹೊಸಗ. ೦). [ಪೊಸ + ಕನ್ನಡ$_1$]

**ಪೊಸಗಬ್ಬ** (ನಾ). ನವೀನರೀತಿಯ ಕಾವ್ಯ: ಈಗಡೀಗಡಿನ ಕಥಾನ್ವಯಕ್ಕೆ ರಸವುಂ ಪೊಸಗಬ್ಬವುಪೂರ್ವವಾಪುವುಳ್ಳೊಡವುವು ಪೇಟ್ವುದ ಸಾಧಿಸದ ಬ್ಬಮೆ ದಲ್ ಕವಿಚಕ್ರವರ್ತಿಯಾ (ಶಾಂತಿಪು. ೦೨-೬೯). [ಪೊಸ + ಕಬ್ಬ$_1$]

**ಪೊಸಗವಲು**, ಹೊಸಗವಲು (ನಾ). ಹೊಸಬಗೆಯ ವಾಸನೆ,— ಕಂಪು: ಪೊಸಗವಲು ನಾರುತಿದೆ ಬಂದು (ಕಂಕ. ೩೦). **ಹೊಸಗವಲು**: ನಱುಗೋಲನೊತ್ತಿಂದ ದಕ್ಷಿಣಗಿರಿದಾಗಿ ಮಱಿಯರಳೆಗಳೊಡಿ ಬಂದು ದುಱುದುಱನೀಕ್ಷಿಸಿ ಹೊಸಗವಲಿಗೆ ಬೆಚ್ಚಿ ಬಿಱಿತೋಡಿದುವು ಕಂಡ ಕಡೆಗೆ (ಕರಕ. ೯೬-೬೨). [ಪೊಸ + ಗವಲು (<ಗವುಲು)]

**ಪೊಸಗಳ್ತಲೆ**, ಪೊಸಕಳ್ತಲೆ (ನಾ). ಆಗ ತಾನೆ ಆವರಿಸುತ್ತಿರುವ ಅಂಧಕಾರ: ಪೊದಳ್ದ ಪೆರ್ಗಳ್ತಲೆ ನಾಲ್ದೆಸೆಗಳ್ತಲೆ ಪೊಸಗಳ್ತಲೆ ರಸೆಗಳ್ತಲೆಯೆನಿಸಿ ಕೂಡಿ ತೀವಿತು ತಿಮಿರಂ (ಗಿರಿಕ. ೯-೬೩). **ಪೊಸಕಳ್ತಲೆ**: ಪೊಸಕಳ್ತಲೆಯದು ತನುವಂ ಮುಸುಂಕೆ ಕರ್ಬಿಕ್ಕಿ ಗೆತ್ತಗಲ್ದುದು ಚಕ್ರಪ್ರಸರಂ (ರಾಜಶೇ. ೦೦-೦೪). [ಪೊಸ + ಕಳ್ತಲೆ (<ಕಟ್ಟಲೆ)]

**ಪೊಸಗಟಿಮೆ** (ನಾ). ಆಗತಾನೆ ಬೆಳೆಬಂದ ಬತ್ತ: ಪೊಸಜಾದಿಯ ಬೆಳೆದೊಱಗಿದ ಪೊಸಗಟಿಮೆಯ ಪೊಸತಲ್ದ ತಾವರೆಗಳ ಕಂಪಸದಳವೆಸೆದಿರೆ ದೆಸೆದೆಸೆಗೊಸಗೆಯೆ ಬರ್ಪಂತೆ ಕಣ್ಗೆ ವಂದುದು ಶರದಂ (ಆದಿಪು. ೦೦-೬). [ಪೊಸ + ಕಟಮೆ (<ಕಟವೆ)]

**ಪೊಸಗಾಡಿ** (ನಾ). ನವೀನವಾದ ಸೌಂದರ್ಯ; ಹೊಸಸೊಬಗು: ಅವರಿರ್ವರ ರೂಢಿವಡೆದ ಪೊಸಗಾಡಿಯುಮಂತವರಿರ್ವರ ಬೇಟಮುಮಂತ ವರಿರ್ವರೊಳಲ್ಲದಿಲ್ಲ ಪಱತೊರ್ವರೊಳಂ (ಕಬ್ಬಿಗ. ೦೨೯); ಮದನವುಹೀಪಿ ಮೆಯ್ಯಗ್ಗಳ್ಳಿನ ಪಟ್ಟದ ಸುದತಿಯರ್ಗಿವ್ಮುಡಿಯಾದ್ಯೆಸಿರಿ ಪೊಸಗಾಡಿ ಚದುರು ಚೆಲ್ವು ವಿದಿತವಿಭವವುಂಟೀಕೆಗೆ (ಜಗ. ೬-೯೭). [ಪೊಸ + ಗಾಡಿ$_1$]

**ಪೊಸಗಾರ್**, ಪೊಸಗಾರು (ನಾ). ವರ್ಷಾರಂಭದ ಮಳೆಗಾಲ ಮತ್ತು ಆಗ ಸುರಿಯುವ ಮಳೆ; ಮುಂಗಾರು: ಕರವುಚ್ಚವುಪ್ಪ ಬೆಟ್ಟುಗಳ ತಟಂಗಳಿಂ ಸುರಿವ ನಿರ್ಝರವುಂ ಪೊಸಗಾ[ಶಾಂ. ಕಾ]ರೊಳೀತು ಬೆಳ್ಳಗೆ ಪಥಿಕಾಂಗನಾಜನವುನಂಜಿಸುವಂತಿರೆ ತೋಱಿ ಸುತ್ತಲುಂ (ಕಂಡಾ. ೦-೦೨೯): ವಿದಗ್ಧ ಪುರುಷಾಯಿತಂ ತಗುಳೆ ನರ್ತಕೀಲೀಲೆಯಿಂದದೊಂದು ಪೊಸಗಾರ ಸೋಗೆಸವಿರಾಟವುಂ ತೋಱುದರ್ (ಆದಿಪು. ೦೨-೦೯); ಪಸುರ್ವುಲ್ಲು ಮೇದು... ಪೊಸಗಾರೊಳ್ಪಾರಲೊಳ್ ಕಣ್ಣರೆವುಗಿದಿರೆ ಸೃಕ್ಕಂಗಳಿಂ ಸೂಸೆ ಫೇನಪ್ರಸರಂ ಮೆಲ್ಲೊತ್ತುತ್ತುಂ ನಿಂದುದು ವನವುಹಿಷೀವೃಂದ ಮಾನಂದದಿಂದಂ (ಶಂರಾಮ. ೬-೦೫೭). **ಪೊಸಗಾರು**: ಪೊಸಗಾರೆನಿಸುತಕ್ಷನು ಗರವಪುಪಚರದಲ್ಲಿ ಜಾನಕಿವೆರಸು ಲಕ್ಷ್ಮಣಸಹಿತಲ್ಲಿತರಲಾಗ ಘನಕಾಲ (ಕಶಾಮ. ೦೯೬-೬೯). [ಪೊಸ + ಕಾರ್$_1$]

**ಪೊಸಗಾರು** 'ಪೊಸಗಾರ್' ನೋ.

**ಪೊಸಗಾವರ** (ನಾ). ಹೊಸದಾದ ಸ್ವರ; ನವ್ಯಧ್ವನಿ: ನುಣ್ಪೆಸೆವ ಮಾವಿನ ನೊರ್ವೊದಲಲ್ಲದುಣ್ಮುವುಯ್ಯಲ ಪೊಸಗಾವರಂ ಪುಗಿಲೊಳೀನಸೆದತ್ತೊ ಬಸಂತಮಾಸದೊಳ್ (ಶಂಕರಾ. ೨-೦೨). [ಪೊಸ + ಗಾವರ]

**ಪೊಸಗು** (ಕ್ರಿ). ಲಭಿಸು; ದಕ್ಕು: ವಸುಧೆಯೊಳಯಿಯಾ ತನುವು ಯಾರು ನಂಬುವರು ಪೊಸಗಿದಯಿಯಾ ರಾಜ್ಯಭೋಗಗಳು ನಿವಿಗ್ಯಾಕೆ (ಹುಶಿ. ೦೬). [ ← ತೆಲು. ಪೊಸಂಗು, ಪೊಸಗು ]

**ಪೊಸಗೆಂದಳಿರ್**, ಪೊಸಕೆಂದಳಿರ್ (ನಾ). ಎಳೆಯ ಚಿಗುರು,-ಕುಡಿ; ನವಪಲ್ಲವ: ಬಳೆಸಿದ ಮಾಧವೀಲತೆಯ ಬಳ್ಳಿವಳ್ಳಿಯ ಬಳ್ಳಿಗಾವಣದ ಮುಂದೆ ಬಳ್ಳಳಬಳೆದೆಳದಲೆಸುವ ಪೊಸಗೆಂ[ಶಾಂ. ಕೆಂ]ದಳಿರ ಗೊಂದಳದೊಳ್ (ಆದಿಪು. ೦೦-೭೦ ವ). **ಪೊಸಕೆಂದಳಿರ್**: ಪೊಸಕೆಂದಳಿರ್ಗಳ ದಾಳಿಂಬ ಸಾರವುಂ ಕಟ್ಟಿ ತನ್ನ ಬಣ್ಣದೊಳದು ರಂಜಿಸೆ (ಶಾಂತಿಪು. ೯-೦೬). [ಪೊಸ + ಕೆಂದಳಿರ್]

**ಪೊಸಗೆಂಪು** (ನಾ). ಮನೋಹರವಾದ ಕೆಂಪುಬಣ್ಣ: ಪಸರಿಸಿದ ಪದ್ಮರಾಗದ ಪೊಸಗೆಂಪಂ ಮಾಂಸವೆಂದು ಮುಂ ಕರ್ದುಕಲ್ಕಾಟಿಸಿಯುಂ (ಆದಿಪು. ೦೨-೦೨೨): ಪೊಸಗೆಂಪೇಱಿದ ಬಿಂಬಫಲವ ಗಿಳಿ ಮಸಗಿ ಸಂತಸದೆ ಪೀರ್ವಂತೆ (ಕಂಪಾ. ೦೦-೯೦). [ಪೊಸ + ಕೆಂಪು$_1$]

**ಪೊಸಗೆಲ್ಲ** (ನಾ). ನೂತನ ವಿಜಯ: ಸಾರಿಯಂ ನಲಿದಿದುವಂದು ಪಲ್ಲಟಿಸೆ ಪುಟ್ಟದಂದೋ ಪೊಸಗೆಲ್ಲವನಾಂಪೆನೀ ಲಲನೆಯೊಳೆಂಬ ಸಂಭ್ರಮದಿ ನುಣ್ಣಿದುದೋ ನಗೆ ನಿನ್ನ ವಕ್ತ್ರದೊಳ್ (ಕೃಶಿ. ೨೯-೩೩). [ಪೊಸ + ಗೆಲ್ಲ]

**ಪೊಸಗೆಱೆ**, ಹೊಸಕೆರೆ, ಹೊಸಕೆಱೆ, ಹೊಸಗೆಱೆ (ನಾ). ಹೊಸದಾಗಿ ಕಟ್ಟಿಸಿದ ಕೆರೆ; ನೂತನತಟಾಕ: ಇದಕ್ಕೆ ... ಆತ್ಕೂರ ಪೊಸಗೆಱೆಯುಂ ಬೆಲತೂರ ಇನಿಬರೆ ಸನ್ಮಥ ಬರದೊಂ ಶ್ರೀಧರಪ್ಪುನ್ (ಎಕ. III, ಮಂಡ್ಯ. ೦೯-೦೫; 907); ವಿದ್ಯಾದಾನಕ್ಕೆ ಪೊಸಗೆಱೆಯ ಬಟ್ಟಯಿಂ ಬಡಗಣುಣೆಯ ವೀಸಕದಯ್ದು ಮತ್ತರ್ (ಇಕ. XIII, ೯೩-೨೬; 1084). **ಹೊಸಕೆರೆ**; ನಡವ ಹೊಸಕೆರೆಯ ದಂಡಿನ ಹಾದಿಯಿಂ ತೆಂಕಲು ಪಡುವುವುುಖವಾದ ಲಿಂಗಮುದ್ರೆಯ ಕಲ್ಲು (ಎಕ. IV (R). ಕೊಳ್ಳೇಗಾ. ೬-೨೦; 1612). **ಹೊಸಕೆಱೆ**: ಮಿಣ್ಣುಗೆಲ್ಲಲ್ ಪಲ್ಲವಕಟ್ಟೆನ್ನು ಹೊಸಕೆಱೆಯ[ಂ] ಒಟ್ಟಿಸಿ (ಎಇ.V, ೨೦೭-೯; 1047); ಈಶಾನ್ಯಕ್ಕೆ ನಡದು ಹೊಸಕೆಱೆಯ ಮೂಡಣ ಮುರಿಯ ಮಡಿವಿನ ಹಬ್ಬಳ್ಳಮೆ (ಎಕ. III(R). ಗುಂಡ್ಲುಪೇ. ೯೦-೬೩; 1320). **ಹೊಸಗೆಱೆ**: ಹೊಸಗೆಱೆಯ ಕೆಳಗೆ ಗದ್ದೆ ... ಖ × × × ಪೂಕೆಱೆ ಕೆಳಗೆ ಖಂ (ಎಕ. IV(R). ಹುಣಸೂ. ೨೭೪-೬೨; 1484). [ಪೊಸ + ಕೆಱೆ$^1$]

**ಪೊಸಜವ್ವನ**, ಪೊಸಜೌವನ, ಹೊಸಜವ್ವನ (ನಾ). ನವಯೌವನ; ಹೊಸ ಪ್ರಾಯ; ಎಳಜವ್ವನ: ಪೊಸಜವ್ವನದ ಮುಂಬಣ್ಣದಂತೆ ಕರ್ಪಂ ಕೈಕೊಂಡು ಕತ್ತುರಿಯಲಿ ಬರೆದಂತಪ್ಪ ವಿಕ್ರಾಂತತುಂಗನ ವಿಜಿಸೆಗಳಾತನ ತೀವ್ರಪ್ರತಾಪಾನಳಧೂಮಲೇಖೆಯಂತಾದುವು (ಶಂಕರಾ. ೨-೯೯ ವ); ಸಿರಿ ಸುರಚಾಪದಂತೆ ಪೊಸಜವ್ವನವಿದ್ದಿಲ ಬೂದಿಯಂತೆ ...

ಕಿಡಲಲ್ಲದೆ ತಾಂ ಸ್ಥಿರವಪ್ಪಾಗಲಾರ್ಕುಮೇ (ಧರ್ಮಾಮೃ. ೩-೧೬); ಸೌಂದರ ವಾಹೀಪತಿಗೆ ಪೊಸಜವ್ವನವನಂತವಿಭವದೊಳೊಪ್ಪುತಿರೆ (ಸೌಂದರಪು. ೪-೭). **ಪೊಸಜೌವನ:** ವಸುವಂ ದ್ವಿಜನ್ಮದಾನದೆ ಪೊಸಜೌವನವಂ ಸ್ವದಾರ ಸಂತೋಷದೆ ನಿನ್ನಸುವಂ ಪತಿಕಾರ್ಯದೆ ವರ್ಜಿಸಿದ್ವೆ (ಗದಾಯು. ೩-೨೨). **ಹೊಸಜವ್ವನ:** ಚಳಿಗತ್ತಿಯ ನಿವರ್ತನಂಸಜಂಘೆಯ ಲುಳಿಯ ಲಾಗಿನ ಲಂಘನೆಯಲವ್ವಳಿಪ ಹೊಸಜವ್ವನದ ಹೊವ್ಮುರೆ ಹೊಳಕಿತಿದಿರಿನಲಿ (ಕೊಂರಾ. ೩-೮-೦೩). [ ಪೊಸ + ಜವ್ವನ ]

**ಪೊಸಜವ್ವನೆ, ಪೊಸಜೌವನೆ** (ನಾ). ನವಯೌವನವನ್ನು ಹೊಂದಿದವಳು: ನೋಡಿದರ್ ಭಾಮಿ ಸಗರನನಸಿಯ ವಸಿಯ ಪೊಸಜವ್ವನೆಯರ್ (ಅಜಿತ. ೯-೬೩); ಸುಧಾವುರೀಚಿಮಣಿವೇದಿಕಾಗ್ರದೊಳ್ತ್ಮಾವಿನಿಯಂ ಪಟ್ಟರಿಸಿ ಶಿರೋಪಚಾರವುನಸವಸದಿಂದಾ ಪೊಸಜವ್ವನೆಯರೆಸಗುತ್ತವಿರೆ (ಪಾರ್ಶ್ವಪು. ೭-೩೩ ವ). **ಪೊಸಜೌವನೆ:** ಪೊಸಜೌವನೆ ನಿನ್ನೀ ದೀರ್ಘಾಂಬಕ ದೇಸಕದ ಸಂಪತ್ತಿಗೆ ಮಿಗೆ ಸೋಲ್ತಿಯಂಸಿತೋತ್ಪಲ ದಾದಳಿತಂ ತನ್ನ ವರಾಗವ ಲಪ್ಪವನು ಒಸೆದೀಯಲ್ಬಂದಿದೆ (ಚಂದ್ರಪ್ರ. ೨-೦೭). [ಪೊಸ+ಜವ್ವನೆ]

**ಪೊಸಜಾಗ** (ನಾ). ಮನೋಹರವಾದ ಮರಕತಮಣಿ: ಪೊಸಜಾಗಂ ಪೂರ್ಣಕುಂಭಂ ದಧಿ ಮಧು ಸುಧೆ . . . ಮಿಸುಗೆ ಬಗೆಗೆ ಚಿಲ್ಮಾದುದುದ್ವಾಹಗೇಹಂ (ಕೃಷ್ಣರಾ. ೩-೪). [ ಪೊಸ+ಜಾಗ$_1$ (<ಜಾಗ$_1$) ]

**ಪೊಸಜಾದಿ** (ನಾ). ಆದೇ ತಾನೆ ಅರಳಿರುವ ಜಾಜಿ: ಪೊಸಜಾದಿಯ ಬೆಳೆದೊಜಗಿದ ಪೊಸಗಟುಮೆಯ ಪೊಸತರಲ್ದ ತಾವರೆಗಳ ಕಂಪಸದಳಮೆಸೆದಿರೆ ದೆಸೆದೆಸೆಗೊಸಗೆಯೆ ಬರ್ಪಂತೆ ಕಣ್ಗೆ ವಂದುದು ಶರದಂ (ಅಂಜಿತ. ೧೧-೬); ಪೊಸಜಾದಿ ಚೆಲ್ವನೀಯುತ್ತಿರೆ ದೇಸಿಯಿಂ ನಿವಿರ್ದ ಸೋರ್ಮುಡಿಯೊಳ್ (ಧರ್ಮಾಮೃ. ೪-೦೬೭). [ಪೊಸ + ಜಾದಿ]

**ಪೊಸಜೌವನ** 'ಪೊಸಜವ್ವನ' ನೋ.

**ಪೊಸಜೌವನೆ** 'ಪೊಸಜವ್ವನೆ' ನೋ.

**ಪೊಸತಳಿರ್** 'ಪೊಸದಳಿರ್' ನೋ.

**ಪೊಸತಿಕ್ಕು** (ಕ್ರಿ) ಪ್ರಥಮಬಲಿಯನ್ನು ಕೊಡು; P "ಪೊಸತಂ+ಇಕ್ಕು= ಪೊಸತಿಕ್ಕು: ಒಕ್ಕಣೆ ಆದ ಮೇಲೆ ಅನ್ನವನ್ನು ದಿಕ್ಕುದಿಕ್ಕಿಗೆ ಚೆಲ್ಲಿ ಬಲಿಕೊಡುವುದಕ್ಕೆ ಪೊಸತು ಎಂದು ಹೆಸರು, ಮಲೆನಾಡಿನಲ್ಲಿ ಇದು ರೂಢಿಯಾಗಿದೆಯಂತೆ" (ಶಂಶಬ್ದ. ೩೭೭): ಉತ್ತರನಂ ಜವಂಗೆ ಪೊಸತಿಕ್ಕುವಂತಿಕ್ಕಿ (ಶಂಶಬ್ದ. ೧೧-೦೦೨ ವ); ರಣದೊಳ್ ರಾವಣನಂ ಜವಂಗೆ ಪೊಸತಿಕ್ಕಲ್ . . . ಪುಟ್ಟಿದವರೇಂ ಸಾಮಾನ್ಯರೇ (ಶಂಶಾಪು. ೩-೦೬೦); ಟಕ್ಕಿಪನಂ ಸುಟಿ ಮೇಕುದೋರ್ವನಂ ಮಾಳೆಚಿಗಿಕ್ಕು ಪೊಟಿ ಪುಡಿವನಂ ಪೊಸತಿಕ್ಕು[ಪಾಠಾಂ. ಪೊಸದಿಕ್ಕು]ಗೆ ಪಚ್ಚಗಾಜಿನಂ (ಸೂಕ್ತಿಸು. ೮-೯೩೬; ಲೀಲಾಶ. ೨-೦೦೭ ನೋ). [ಪೊಸತು+ಇಕ್ಕು]

**ಪೊಸತಿಲ್** 'ಪೊಸಂತಿಲ್' ನೋ.

**ಪೊಸತಿಲು** 'ಪೊಸಂತಿಲ್' ನೋ.

**ಪೊಸತು, ಹೊಸತು, ಹೊಸದ್ದು, ಹೊಸ್ತು** (ನಾ). ೧. ನೂತನವಾದುದು; ನವೀನವಾದುದು: "ನವ್ಯಂ, ನವಂ, ನವೀನಂ, ನೂತನಂ, ಅಭಿನವಂ, ನೂತ್ನಂ—ಈ ೬ ಪೊ(ಹೊ)ಸತು" (ಹಲಾಯು. ೦೦೬-೨೬); ನೆಲನಂ ಪೊಟ್ಟುಂ ಪೊಲನ್ನಘಮನಜಿದು ಬಟಯೊಳ್ ಪೊಸತುಂ ಪಟಿದುಮನಜಿದು ಮಯಿಸಲ್ ನೀನೆ ಬಲ್ಲೆಯಪ್ (ಶಂಶಬ್ದ. ೩-೪೬ ವ); ಮುಂತೆ ಪರಿದರು ಕೇರಿಕೇರಿಗಿದು ಪೊಸತೆನುತೆ ಬಸವನ ಪ್ರಾಣವಂ ಪರಿದಬಸುವುದದಿಂ (ಬಸವ. ೪-೦೬೭); ವರಲಾಸ್ಯತಾಂಡವವೆಸೆದುದ್ಯ ರಂಭಾದಿ ನರ್ತಕಿಯರಲಿ ಪೊಸತೆನಿಸಿ (ಕುಮಾರ. ೭-೯೩). ೨. (ಅಲಂ) ಅಸಾಮಾನ್ಯವಾದುದು; ಅಪರೂಪವಾದುದು: ಪೆಸರೇನಾರ್ಗಿಂತನೀ ಜವ್ವನಿಗ ತಪಸಿ ತೊಟ್ಟಿರ್ಪ ಕರ್ಣಾವತಂಸು ಪೊಸತೀ ಲೋಕಕ್ಕೆ (ಕಾದಂಪು. ೬೭೦): ಲೋಕದೊಳ್ವಿಧಿಲಿಖಿತಪುನ್ನಿವಾರಿಪರುಂಟೆ ಶಿವಶಿವಾ ಪೊಸತೆಂದು ಬಿಸುಸುಯ್ಯುತ್ತು ಬೆಱಗಾದನು (ಕೃಷ್ಣರಾ. ೩೦-೪೩). ೩. ಮೊದಲನೆಯ ಬಲಿ,—ನೈವೇದ್ಯ: 'ಪೊಸತಿಕ್ಕು' ಪರಾ. **ಹೊಸತು:** ೧. ಹೊಸತನು ಹಾಡುವುದನ್ನಿಂದಲಾಗದು ಹೊಸತಾವುದಿರುವುದು ಹೇಳು ಈ ಜಗದೊಳಗಿಹುದೆಲ್ಲವು ಹಳೆಯದು ನನ್ನ ಸುಭಾಷಿತ ಕೇಳು (ಇಂದಾಶ. ೬೬-೨೭). ೨. ಒಸೆದಿಂಸ ಬಾರದಿರಿಸದೆ ತೆಗೆಯಬಾರದೀ ಹಸುಳೆಯುಂದಂ ಹೊಸತು (ಸಿದ್ಧರಾ. ೨-೩); ಮೇದಿನಿಗೆ ಹೊಸತೆನಿಸಿ ವಜ್ರವ ಕೊಂಡು ಕಾದಿದನು (ಸಂಕಶ. ಹಾ. ೨-೨೩). **ಹೊಸದ್ದು:** ೧. ಆ ವರ್ಣನಾವೈಖರಿಯನ್ನು ಕೇಳಿದವರು ಹೊಸದರಲ್ಲಿ ಸಂತಸಪಡದೇ ಇರುವುದಿಲ್ಲ (ಕಾಮಳ. ೯೪); ಹೊಸದರಲ್ಲಿ ಅಗಸ ಗೋಣಿಯನ್ನು ಎತ್ತಿ ಎತ್ತಿ ಒಗೆದ (ಗಾದೆ). **ಹೊಸ್ತು:** ೧. ಕಾಣಿಕೆ ಕಡ್ಡಾಯ ಬೀಡಗೊಳು ಹೊಸ್ತು ಹಳದು ಎರಡು ಎತ್ತಿನ ಹೇಱು ಮಾನ್ಯ (ಎಕ. X, ಮುಳಬಾ. ೨೦-೩; 1468).

**ಪೊಸತುಪೊಸತು, ಪೊಚ್ಚಪೊಸತು, ಪೊಸಪೊಸತು, ಹೊಚ್ಚಹೊಸತು, ಹೊಚ್ಚಹೊಸದು, ಹೊಸತುಹೊಸತು, ಹೊಸಹೊಸದು** (ದ್ವಿರುಕ್ತಿ): ಪೊಸತುಪೊಸತೀ ಪರಿಯೆನಲ್ಕೆ . . . ಆರೋಗಿಸುತ್ತಿರಲು (ಬಸವಪು. ೬-೯೩); ಸಭೆ ಮೆಚ್ಚೆ ಪೊಚ್ಚಪೊಸತಾಯ್ತು ರಸಂ (ಅಜಿತ. ೩-೩೩); ಪೊಸಪೊಸತಿಂತಿದೆಂದುಮಮೆಯಾಟಕೆ ಸ್ಯೆರಿಸದಿಂತಿದೆಂದು ಬಣ್ಣಿಸಲಿಂದಪ್ಪ ಮೆಯ್ಸಿರಿ (ಕಶಿ. ೬-೨೩೪): 'ಕಬ್ಬಿಗರ ಕಾವ' ಎಂಬ ಹೆಸರು ಕನ್ನಡ ಕೃತಿನಾಮಗಳಲ್ಲಿ ಹೊಚ್ಚಹೊಸತಾಗಿ ಕವಿಯ ವೀರವ್ಯಕ್ತಿತ್ವದ ಗುರುತಾಗಿ ನಿಂತಿದೆ (ಕಪಾ. ೦೪೪); ನಿನ್ನೆ ಮೊನ್ನೆಯೊ ಏನೊ ನಿನ್ನ ನೋಡಿದ ಮೊಲಿಹುದು ಒಲುಮೆ ಹೊಚ್ಚಹೊಸದಾಗಿರಲು ಇಂದು! (ಚಿತ್ರಾ. ೪೦-೪); ಹೊಸವರುಷಕೆ ಹೊಸಹರುಷವ ಹೊಸತು ಹೊಸತು ತರುತಿದೆ (ಗಂ. ೦೦೬-೦೦); ಅದನ್ನನುಸರಿಸುವ ರೀತಿಯೂ ಹೊಸಹೊಸದಾಗಿ ಕಂಡಲಿತವಾಗಬೇಕು (ನಾಕರ್ನಾ. ೨೨೬). **ಪೊಸತಾಗು, ಹೊಸದಾಗು, ಹೊಸ್ತಾಗು =** ನವ್ಯವಾಗು; ಹೊಸಪರಿಯಾಗು: ಪಸಂಡಿದಾ ಬಗ ವನವಮಂ ಪೊಸತಾಗೆ ನೆಗಟ್ಟಲಜಯನಾ ರಚನೆಯೊಳೇಂಬಸನಂ ತನಗೆ (ಕಬರಾ. ೦-೦೨); ಪೊಸತಪ್ಪ ಕಡಲಿದಂಬಂತೆಸೆದೊಪ್ಪಿರೆ ತಿಸುಳ ಬೇಗದಿಂ ಪುಟ್ಟಿಸಿದಂ ಪುಡಿವದೆಯುಂ (ಕರ್ಣಾ. ೨೪೪); ಮತ್ತೆ ಮೂರನೆಯ ದಿನವೊಮ್ಮೆ ಅಳಲು ಹೊಸದಾಯಿತು (ಕಾದಂಬರಿ. ೦೪ ಕಥಾಸಾರ); ಹೊಸ್ತಾಗಿ ದೇವಾಲ್ಯವ ಮಾಡಿದ ಸಂಬಂಧ (ಮೈಆಂ. ೧೯೨೬, ೪-೯: 1369); ಗಉಡಗೆ ಹೊಸ್ತಾಗಿ ಉರ ಕಟ್ಟಿ (ಎಕ. IX. ಕನ್ನಕ. ೦೬೯-೮; 1416); ಕಾಲುವೆನೂ ಹೊಸ್ತಾಗಿ ತೆಗಸಿ (ಎಕ. XV. ಅರಸೀ. ೨-೨೩; 1515). **ಪೊಸತು ಮಾಡು = ನವೀಕರಣಗೊಳಿಸು; ಹೊಸದನ್ನಾಗಿ ಮಾಡು:** ಸತ್ಕವಿಯೊಳ್ ಸಮನಾಗಿ ಮಾರ್ಗಮಂ ಪೊಸಯಿಸಿ ದೇಸಿಯಂ ಪೊಸತು ಮಾಡಿದರೊರ್ವಳಪೂರ್ವರೂಪದಿಂ (ಶಂಶಬ್ದ. ೩-೪೪). **ಹೊಸತನಿಕ್ಕು = ಮೊದಲನೆಯ ನೈವೇದ್ಯ ಮಾಡು:** ನಾಗಂಗೆ ಹೊಸತನಿಕ್ಕಿಹೆವೆಂಬರು ನಾಗ ಬಂದರೆ ಕೋಲ ಕಳೆದುಕೊಂಬರು (ಬಸವ. ೦೯೩). [ದೇ.II ತಮಿ. ಪುತಿಚು, ಪುತಿತು; ತುಳು. ಪೊಸತು]

**ಪೊಸತುಪ್ಪ, ಹೊಸತುಪ್ಪ** (ನಾ). ಆಗ ತಾನೆ ಬೆಣ್ಣೆ ಕಾಯಿಸಿದ ತುಪ್ಪ: ಪಸುವಿನ ಪೊಸತುಪ್ಪಂ ಜಾಜಿಯ ಪೂ ಅತ್ತಿ ಆಲ ಆರಳಿ ಬಸಿರಿ ಗೋಣಿ ಈ ಮರಂಗಳ ಎಳೆಯ ತಳಿರ್ ಯಷ್ಟಿಮಧುಕಂ ಇವಂ ಬಿಸುನೀರಲ್ಲಿ ಅರೆದು ಪೂಸಲ್ ಸ್ತ್ರೀಯರ ಯೋನಿಯ ದುರ್ಗಂಧಂ ಮಾಣ್ಬುದು (ಲೋಕೋಪ. ೪-೦೬೨ ಟೀಕು); ಬಾಳೆಯ ಕಾಯ ಕಹಿದೆಗೆದದಕೆ ಪೊಸತುಪ್ಪ ನೀರುಳ್ಳಿ ಕೊತ್ತುಂಬರಿಯನಿಕ್ಕಿ ಕೆಂಪಾಗಿ ಹುರಿದು . . . ಪರಿಮಳಂಗಳನಿಡುವುದು (ಸೂಪಶಾ. ೪-೬೦); ಪೊಸತುಪ್ಪದಿಂದ ತಲೆ ಕಾಲ್ಗಳೊಳ್ ಸೊಡರಿಕ್ಕಿ (ಬಾಲಗ್ರ. ೦೬೩-೦೦೩). **ಹೊಸತುಪ್ಪ:** "ಹಯ್ಯಂಗವೀನಂ, ಆಜ್ಯಂ—ಈ ೨ ಹೊಸತುಪ್ಪಂ" (ಹಲಾಯು. ೯೬-೦೦೪):

ಅಗ್ಗವಾಲೊಳು ಸೂಜ್ಜಿಗೆಯಂ ನನೆಹಿಕ್ಕಿ ಬಳಿಕ ಸಣ್ಣನ[ಪ್ಪ]ಂತೆ ಕಣಕವ ಮಾಡಿಯದಱ ಸರಿಬೆಣ್ಣೆ ನಸುಗೆಸೆಯಿಕ್ಕಿ . . . ಗಾರಿಗೆಯ ಮಾಡಿ ಹೊಸ ತುಪ್ಪದೊಳು ಬೇಯಿಸಿದೊಡೆ . . . ಸಮುದ್ರಫೇನ (ಸೂಶಾ. ೦-೨೩). [ಪೊಸ+ತುಪ್ಪ]

**ಪೊಸತೇರ್** (ನಾ). ಹಳೆಯದಲ್ಲದ ತೇರು; ನೂತನವಾದ ರಥ: ಪೊಸತೇರ್ ಪಡಗಂ ನೆಗಟ್ಟಿ ಪೆರ್ಚಿದ ಕಡಲೆಂಬಿನಂ ಮಸಗಿ ಬಂದುದು ಪೆರ್ಬಡೆ ಕರ್ಬುವಿಲ್ಲನಾ (ಕಬ್ಬಿಗ. ೨೦೭). [ಪೊಸ+ತೇರ್$_2$]

**ಪೊಸತ್ತಿಗಲ್ಲು** (ನಾ). ಒಂದು ಪ್ರದೇಶದ ಹೆಸರು: ಬಡಗಣ ದೆಸೆ ಪೊಣವ್ವೆಳಿ ಬಡಗಣ ಪಡುವಣ ಕೋಣೊದು ಪೊಸತ್ತಿಗಲ್ಲು ಪಡುವಣ ಸೀಮೆ ಕಡಂಬಗೆಱೆಯು ಪೆರ್ವ್ವಾಗಂ (ಎಕ. III (ಐ). ಶಂಶಾಪ. ೨೬೯-೬೦; ೬೦೩). [ ? + ಕಲ್ಲು (< ಕಲ್$_2$) ]

**ಪೊಸದಳಿಂಬ** (ನಾ). ಶುಭ್ರವಾದ ಬಟ್ಟೆ,—ವಸ್ತ್ರ: ಕಪ್ಪುರವಳಿಕನ ಜಗುಲಿಯ ಮೇಗಣ ಕುಸುಮವುದೆಸಱ ಮಿಸುಗುವ ಪೊಸದಳಿಂ[ಪಾಠಾಂ. ನಂ]ಬದ ಮೇಗೆ ಕಿಱಿದುಬೇಗಂ ವಿಶ್ರಮಿಸಿ (ಅಂಕು. ೦೦-೬೦ ವ). [ಪೊಸ + ದಳಿಂಬ]

**ಪೊಸದಳಿರ್**, **ಪೊಸತಳಿರ್**, **ಹೊಸತಳಿರು** (ನಾ). ಕುಡಿಯಿಡುತ್ತಿರುವ ಚಿಗುರು; ನವಪಲ್ಲವ: ಕುಸುಮಮಾಪಚಯುವ್ಯಸನಾವಸಕ್ತ ಸುರಯುವತಿ ಪಾಣಿಪಲ್ಲವರಾಗ ಮುಸುಕಿದುದೆನಿಸಿದುದಸುಗೆಯ ಪೊಸದಳಿರ್ಗಳೊಳಿಸೆವ ಕಂಪು ನಂದನವನದೊಳ್ (ಅಂಕು. ೬-೯೬); ತುಂಬಿಯ ಬಂಬಲಂ ಉರುಳ್ಚಿಸಿ ಪೊಸದಳಿರೀದವುಂ ಕರತಳು ದನಿ ಕೋಗಿಲೆಯಂ . . . ನೆಱೆ ಪೋಲ್ತು (ಧರ್ಮಾಮೃ. ೯-೦೫೦). **ಪೊಸತಳಿರ್**: ಪೊಸತ[ಪಾಠಾಂ. ದ]ಳಿರ್ಗಳ ಬಿಜ್ಜಣಿಗೆಯುನೆಸೆವಲರ್ಗಳಿನೊಗೆವ ಘರ್ಮಜಲಮಂ ಕೀರ್ದಾಱಿಸಿದುವು ಕುಸುಮಾರಜಂಗಳ್ ಪೊಸಯಿಸಿದುವು ಬಣ್ಣಮಂ ಲತಾಂಗಿಯರ್ಗಾಗಳ್ (ಅಂಕು. ೦೦-೬೭); ಪೊಸತಳಿರಿಂದೆ ಬೀಸಿ ಕಳೆದಂತಿರೆ ಕಾಂತೆಯ ಕಾಯ ಕಾಂತಿಯಂ (ಲೀಲಾವ. ೯-೦೨೩). **ಹೊಸತಳಿರು**: ಮಾದಲದ ಹೊಸತಳಿರು ಕರಿಬೇವು ಕೊತ್ತುಂಬರಿಯ ಸೊಪ್ಪು ಶುಂಠಿ ನೀರುಳ್ಳಿಗಳ ಚಿತ್ರಳಿಸಿ ತುಪ್ಪದೊಳು ಹುರಿದು ಪರಿಮಳಗೊಳಿಸಿ ಪೊದ್ದಣಿಗೆಯನು ಮಾಡುತ (ಸೂಶಾ. ೩-೦೯). [ಪೊಸ+ತಳಿರ್$_2$]

**ಪೊಸದಾಂಗುಡಿ** (ನಾ). =ಪೊಸದಳಿರ್: ಗುಡಿ ತುಱುಗಿ ಲತೆಯ ಪೊಸ ದಾಂಗುಡಿಯೆನಿಸಿದುದು (ಕಾಂತಿಕ. ೦೦-೬೯). [ಪೊಸ + ದಾಂಗುಡಿ(< ದಾಂಟುಂಗುಡಿ)]

**ಪೊಸದಾವರೆ** (ನಾ). ಆಗ ತಾನೆ ಅರಳಿರುವ ತಾವರೆ; ನಳನಳಿ ಸುತ್ತಿರುವ ಕಮಲ: ತಳಿರ್ತಸೆವಳಮಾವು ತುಂಬಿ ಪೊಸದಾವರೆ ಮಲ್ಲಿಗೆ ಯೆಂಬಿವಾಂತರಂ ದೆಸೆವಲಿಗೆಯ್ವ ಪಾಳಿ ಮೊನೆಯೊಳ್ ನೆಗಟ್ದಿರ್ದ ಬಸಂತಂ (ಕಬ್ಬಿಗ. ೦೭೯). [ಪೊಸ+ತಾವರೆ (<ತಾಮರೆ)]

**ಪೊಸದು** 'ಪೊಸ್ಸೆ' ಪರಾ.

**ಪೊಸದುಗುಲ** (ನಾ). =ಪೊಸದಳಿಂಬ: ಕರಿವೆರಸಿದ ಪೊಸದುಗುಲದ ತೆರಳ್ಕೆವೆತ್ತುಡೆ ಹುಟಕ್ಕಟೀಸೂತ್ರ ಪರಿಸ್ಫುರಿತದೊಳಂ ಕಟ್ಟಿದ ಪೊಱಂಗಿಗೆ ಯೊಳಂ ಜನಮನೇಂ ಮನಂಗೊಳಿಸಿದುದೋ (ಅಂಕು. ೯-೩೬); ಮೆಲ್ಲುಡಿ ವೀಣಾನಾದವಂಗಪ್ರಭೆ ಪೊಸದುಗುಲಂ ವಕ್ತ್ರಬಿಂಬೋಪ್ಪರಾಗು ಕಡುಚೆಲ್ವಾ ದಂಗರಾಗಂ (ಶಾಡೂಕು. ೦೦೦೨); ಪೊಸದುಗುಲಮನೊಲವಿಂದೆ ಪೊದೆದು (ಕಬ್ಬಿಗ. ೩೩೯). [ಪೊಸ+ದುಗುಲ$_1$]

**ಪೊಸದೂವಟ** (ನಾ). ಹಳೆಯದಲ್ಲದ ವಸ್ತ್ರ; ಹೊಸಬಟ್ಟೆ: ಧವಳಾಂಶು ವಿಡಿಕಿಱಿದ ಪೊಸದೂವಟದ ಕಾಲ ಕುಪ್ಪಸವ ತೊಡಿಸಿದಳದೋರ್ವ ಕಾಮಿನಿ ಪರವೆನಾಚಿಗಳವಡಿಸಿ ಚಾತುರ್ಯದಿಂದ (ಶಾಂಶಕು. ೬-೨೯); ಪೊಸದೂವಟದ ಕೋಟಿಯಿಂ ಮನೋಹರದಿ ಪೋಹಿಸುವ ಭದ್ರಾಸನ ಸುಖಾಸೀನನಾಗಿರ್ದ ಶಶಿಧರ ಶ್ರೀನಂದಿನಾಥಂ (ಶಂಶಪು. ೯-೩೩). [ಪೊಸ + ದೂವಟ (< ದುಪ್ಪಟ)]

**ಪೊಸದೂವೆ** (ನಾ). ಹೊಸದಾದ ಚಿತೆ: ಪಂದಲೆಯೋಳಿದೋರಣದ ಸೀಯದರಂ ಪೊಸದೂವೆ ದೂವ [ಪಾಠಾಂ. ದಂಬೆತೂವ] ತೂಗುಂಬದಲೆ ಬಾಟ್ಕಿಣಂ ಪೊಡರೆ ಬಳ್ಳುವ ಸಮ್ಮನ ಸೂಲಂ (ಕಾವ್ಯಾ. ೮೬); ಪರೇತವನದೊಳಗೆ ಪೊಸದೂವೆಯ ಕಲದೋಳ್ ಕಳೆದೊಟ್ಟಿದ ತೊಡವು ಗಳುಮಂ ಮರದ ಕೊಂಬಿನೊಳ್ ಬರೆದು ಕಟ್ಟಿದ ಕಪ್ಪಡಮುಮಿರ್ದವು ದೆಂದು . . . ಬಿನ್ನವಿಸಿ (ಅರ್ಧನೇ. ೩-೯೦ ವ). [ಪೊಸ + ದೂವೆ$_2$]

**ಪೊಸದೇಶಿ** (ನಾ). ಹಿಂದೆ ಇಲ್ಲದೆ ಇದ್ದ ಬೆಡಗು,—ವಿಲಾಸ; ನೂತನ ವಾದ ಬೆಡಗು: ಪೊಸದೇಶಿ[ಪಾಠಾಂ. ಸಿ] ಪೊಂಗು ಪೊಂಗೆಸೆವೆಸಕಂ ಕಡುಗಾಡಿ ರೂಢಿಯೆಂಬಿವಱಿಂದಂ ವಸುಧೇಶನನಾಗದಮ್ಮಂ ವಸುದೇವಂ ಧರೆಗೆ ಕಣ್ಣುಮುಳ್ಳಾಗಿರ್ದಂ (ಅರ್ಧನೇ. ೯-೦೫೦). [ಪೊಸ + ದೇಶಿ$_2$]

**ಪೊಸದೇಸಿ**, **ಪೊಸದೇಸೆ**, **ಹೊಸದೇಸೆ** (ನಾ). =ಪೊಸದೇಶಿ: ಸಾಗೆನಿಸಲ್ಕೆ ಸಾಲ್ವ ಸಗ್ಗದ ಪೊಸದೇಸಿಯೋಳಿಗಳನೊರ್ವಳೊಱಲ್ದು ನೆಱಲ್ದು ಪಾಡಿದಳ್ (ಶಂಶಕಾ. ೬-೯೦). **ಪೊಸದೇಸೆ**: ಕವಿಮಾರ್ಗದೊಳಂ ಪೊಸದೇಸೆಯ ನುಡಿಗಳೊಳಂ ಪೊಸಯಿಪ ಬಲ್ಮೆಗೆ ಚತುರ್ಮುಖಂ ಕವಿರನ್ನಂ (ಗದಾಯು. ೦-೩೯): ನೆಲೆಮಾಡದ ಪೊಸದೇಸೆಯ ನೆಲೆಮಾಡದ ಸುರವಿಮಾನ ಮೆಯ್ದುಲಣಂ ಕಿಟ್ಟಿಲೆಯಾದುವಿವಱ ತೆಱದಿಂ ನೆಲೆಯಾದುವೆ ಸಕಲಜನದ ಕಣ್ಗಂ ಮನಕಂ (ಮಲ್ಲಿಕು. ೨-೬೮). **ಹೊಸದೇಸೆ**: ಹೊನ್ನನ ಹೊಸದೇಸೆಯ ನುಡಿ ನೇಮಿಯ ಕನ್ನಡದೊಳ್ಪಭಿನವಪಂಪನ ಬಗೆಯೆನ್ನೀ ಪೇಳ್ದ ಕೃತಿಗೆ ಒರಿದುಂ ಸೇರುಗೆ ನಿರ್ವಿಘ್ನತೆಯಂ (ಜಗುಳಾ. ೦-೦೦). [ಪೊಸ + ದೇಸಿ]

**ಪೊಸದೇಸೆ** 'ಪೊಸದೇಸಿ' ನೋ.

**ಪೊಸದೇಸೆಕಾರ್ತಿ** (ನಾ). ತಾರುಣ್ಯವತಿಯಾದ ಸುಂದರಿ,—ಚೆಲುವೆ: ಪತ್ರಿಸಾರ್ವವರಂತರ್ಜಿಸಿ ಕಾಮನ ಪಡಿಯಱಿವೊಲೆಸೆದಳ್ ಪೊಸದೇಸೆ ಕಾರ್ತಿ ಪೊಸಕಟ್ಟಳದೊಳ್ (ಅರ್ಧನೇ. ೨-೦೩). [ಪೊಸ + ದೇಸೆಕಾರ್ತಿ (< ದೇಸಿಗಾರ್ತಿ) ]

**ಪೊಸದೋಂಟ** (ನಾ). ಹೊಸದಾಗಿ ಬೆಳೆಸಿದ ತೋಟ: ಬಸದಿಯ ಪಡು ವಣ ಎಳೆದೋಣ್ಣಮುಂ ಪಡುವಣ ತೊಱೆಯ ಮೂಡಗಣೆಯ ಪೊಸ ದೋಣ್ಣಮುಂ (ಎಕ. X. ಕೋಲಾರ. ೯೦-೯೭ : ೩೦೩). [ಪೊಸ + ತೋಂಟ]

**ಪೊಸನನೆ** (ನಾ). ಎಳೆಯ ಮೊಗ್ಗು; ಹೂಮೊಗ್ಗು: ಪೊಸನನೆಯೊಳ್ ಪಸುರ್ಪಲರೊಳಂ ಚಿರಮಲ್ಲದ ಬೆಳ್ಪು ಪಲ್ಲವಪ್ರಸರದೊಳೆಯ್ದೆ ಕೆಂಪು ಪಸರಿಸುಱಿದೊಪ್ಪುವ ಕೆಂಪು . . . ಬಗೆಗೊಳ್ವಿನಂ ಬಸಂತದೊಳ್ ಬಸದಿಯ ಬಾಗಿಲಂ ತೆಱಿದ ಮಾಟ್ಕಿಯೊಳಿರ್ದುವು ಬಂದ ಮಾವುಗಳ್ (ಅಂಕು. ೦-೬೬); ಪೊಸನನೆಯ ಬಿರಿಮುಗುಳ ಕುಸುಮಬಾಣಂಗಳಿಂ . . . ಎಸವನಂ (ಧರ್ಮಾಮೃ. ೦೦-೬೦). [ಪೊಸ + ನನೆ$_2$]

**ಪೊಸನವಿಲ್** (ನಾ). ಎಳೆಯ ವಯಸ್ಸಿನ ನವಿಲು; ಮರಿನವಿಲು: ಸುತ್ತಲುಂ ಪರಿವ ಜರಿಪೊನಲ್ಗಳಿಂದೆತ್ತಲುಂ ನಲಿವ ಪೊಸನವಿಲ್ಗಳಿಂ (ಶಂಶಕಾ. ೬-೨೨ ರಗಳೆ). [ಪೊಸ + ನವಿಲ್]

**ಪೊಸನಸೆ** (ನಾ). ೧. ಉಂಟಾದ ಬೆದೆ: ಪೊಸನಸೆಯಿಂ ಮೃಗಂ ಮೃಗಿಯ ಮಾಗ್ಗುಲಿಸುತ್ತಿರೆ (ಸೂಕ್ತಿಸು. ೩-೨೨೯). ೨. ಕಾಮೋದ್ರೇಕದಿಂದ ಆಗ ತಾನೆ ಸೂಸಿದ ಸುರತದ್ರವ: ಪೊಸನಸೆಯ ಸೊವಡನಾ ಘ್ರಾಣಿಸಿ ಮಣೆಕದ ಮಿಡುಕುಗಚ್ಚಿಯೊಳ್ ಮೊಗವೆತ್ತುತ್ತೆಸೆಮಮ ವೃಷಭಮುಮರರನೇಡಿಸುವವೊಲೇನುಂಟೆ ನಿಮಗವಿಮಾ ಸಂಖಮೆಸುತುಂ (ಲೀಲಾವ. ೩-೯೩). [ಪೊಸ + ನಸೆ$_1$]

**ಪೊಸನಾರ್** (ನಾ). ೧. ಒಣಗದಿರುವ ನಾರು; ಹಸಿಯಾದ ಕತ್ತ: ಬದಿರುದಿರ್ದಕ್ಕಿ ಪಕ್ಕಿವೊಱೆ . . . ಹೂತಿಯ ಬೆಕ್ಕು ಸೀಳ್ದ ಮುತ್ತದ

ಪೊಸನಾರ್ ಸೂಂಬು ಪಲವುಂ ಮೃಗಪಕ್ಷಿಗಳಿಂದಮೊಪ್ಪಿ ಕಟ್ಟಿದ ಮರಗಂಬಿ ಜೀರ್ಗರೆವಿನಂ ಗುದುಕಿಂ ಮುಗುಟ್ದರ್ ವನೇಚರರ್ (ಸುಕು.ಸು. ೩-೦೬೯) : ಪೊಸನಾರಂ ಕಲ್ಲೊಳಿತ್ತಲ್ಲಿಯುಲರಲನಾತಶದೊಳ್ . . . ಆ ಬರ್ದೆ ಬಲ್ಲಳ್ (ಧ್ವಪು. ೨೧-೯). ೨. ಹೊಳೆಯುವ ನಾರುಮಡಿ,–ವಲ್ಕಲ : ಒರಿಯ ಮಡುಗಳೆ ಮಜ್ಜನಮಾಗೆ ಪೊಸನಾರ ದೇವಾಂಗವಸ್ತ್ರವಾಗೆ (ಶಂಕಶಾ. ೬-೨೬). [ಪೊಸ + ನಾರ್]

**ಪೊಸನೀರ್**, ಪೊಸನೀರು, ಹೊಸನೀರು (ನಾ). ೧. ಶುದ್ಧವಾದ ನೀರು ; ನಿರ್ಮಲಜಲ : ಪೊಸನೀರಿಂ ಪೊಸಗಂಪಿನಿಂ ಪೊಸತು ಬೆಳ್ಪಾದಕ್ಕಿಯಿಂ ದೇವನಂ . . . ಅರ್ಚಿಸಿ (ಅಣಾಪು. ೩-೮೩). **ಪೊಸನೀರು** : ೧. ಶಶಿಕಾಂತಕಲಶದೆ ಚಂದ್ರವುಖಿಯರಾಗ ಪೊಸನೀರ ಪಥಿಕರಿಗೆಱೆಯೆ (ಕಂಪಾ. ೬-೬೬). ೨. ಮಳೆಯಿಂದ ಹೊಸದಾಗಿ ಬಂದ ನೀರು : ಪೊಸನೀರ ಹೂರದೊಳಗೆ ಮೞೆವಿನ್ನಗಳು ಮಸಗಿ ಮುಂ ಪೊಳೆದಾಡುವಂತ (ಕಂಪಾ. ೦೦-೩೮). **ಹೊಸನೀರು** : ೨. ಹೊಸನೀರು ಬಂದು ಹಳೆನೀರು ಕೊಚ್ಚಿಕೊಂಡು ಹೋಯಿತು (ಗಾದೆ). ೩. ಸಿಹಿನೀರು : ಗೋದಾವರಿ–ಕೃಷ್ಣ–ಈ ನದಿಗಳ ಮಧ್ಯೆ ಕೊಲೇರ್ ಸರೋವರವಿದೆ. ಇದು ಇಂಡಿಯಾದಲ್ಲಿ ಮುಖ್ಯವಾದ ಹೊಸನೀರಿನ ಸರೋವರ (ಕೂಗೋಳ. ೪೦). [ ಪೊಸ + ನೀರ್ ]

**ಪೊಸನೀರು** ' ಪೊಸನೀರ್ ' ನೋ.

**ಪೊಸನುಡಿ** (ನಾ). ಅಪೂರ್ವವಾದ ಮಾತು ; ನೂತನವಾದ ಮಾತು : ಕವಿಯಿಂ ಬಗೆವುಗುವೊಡೆ ಕೊಂಕುವೆತ್ತ ಪೊಸನುಡಿಯೆ ಪೊಗುಗುಂ (ಅಂಪು. ೦.೦೬) ; ರಸಭಾವಂ ಗಮಕಂ ಕಣಿಸೆ ನಾನ್ನುಡಿ ದೇಸಿವೆತ್ತ ಪೊಸನುಡಿ ಮಾರ್ಗಂ ಕುಸುರಿಯ ಬಗೆಯಿಂದಿನಿತಱೊಳೆಸೆಯದ ಕೃತಿ ಕೃತಿಯೆ ಬಗೆದು ನೋಟ್ಪೊಡೆ ಜಗದೊಳ್ (ರಘಾಂಕ್ಯ. ೦-೪೦) ; ನೀಳ್ಕೊಳಿಯು ಪೊಸ ನುಡಿಯು ಕಾಳು ಕೊರಗರ್ಗೆ ಕೀಳಿನೊಳಿವ್ದವರ್ ತಳವೆಳಗಿನಿಂ ನುಡಿಯೆ (ಶಾಂಪು. ೦೦೬-೨೦೬). [ ಪೊಸ + ನುಡಿ₁ ]

**ಪೊಸನೂಲ್** (ನಾ). ಹಸಿಯ ದಾರ ; ಹೊಸೆಯದ ದಾರ : ಮಿಸುಗುವ ಶಶಿ ರೋಹಿಣಿಯರನೆಸೆವ ಶರನ್ಮೇಘಮಾಲೆ ಬಳಸಿದವೋಲ್ಶೋಭಿಸಲಾ ಮದುಮಕ್ಕಳನುಟೆ ಪೊಸನೂಲಿಂ ಸುತ್ತಿದರ್ ಮಹೀಸುರರಾಗಳ್ (ಅಜ್ಞಪು. ೮-೬೩). [ ಪೊಸ + ನೂಲ್₂ ]

**ಪೊಸನೆತ್ತರ್** (ನಾ). (ದೇಹದಿಂದ ಆದೇ ತಾನೆ ಹೊರಬಂದ) ಬಿಸಿರಕ್ತ : ಶಿಸುಳದೊಳುಚ್ಚಳಿಪ ಪೊಸನೆತ್ತರೆ ಕೆಂದಳಿರಾಗೆ (ಶಂಕಶಾ. ೦-೬) ; ಚಲದಿಂ ಮಲೆವ ಮಱುವಕಸರ ಪೊಸನೆತ್ತರೊಳ್ ಪೊನೆದ ನಿನ್ನ ಬಾಳಂತೆ ಕಂದ ಳರ್ಗಳಿಂ ಒಳ್ಪುವಡೆದ ಮಿಸುಗುವ ಅಸುಗೆಗಳೊಳಂ (ಕಬ್ಬಿಗಾ. ೬೯). [ ಪೊಸ + ನೆತ್ತರ್ ]

**ಪೊಸನೆಯ್** (ನಾ). = ಪೊಸತುಪ್ಪ : ಇಂತೊಂದು ಪೂಜ್ಯೆ ಎಮ್ಮನ್ನರ್ಗೆ ದಳ್ಳಿಸುವ ಬಲ್ಗಿಚ್ಚಿನೊಳೆಱೆದ ಪೊಸನೆಯ್ಗೆ ಪಾಸಟವಾಅದೇಂ ಪೋಕುಂ (ರಾಪಪ್ರ. ೬೩-೩೦). [ಪೊಸ + ನೆಯ್₁]

**ಪೊಸನೆಲ್** (ನಾ). ಹೊಸ ನೆಲ್ಲು,–ಬತ್ತ : ಬೇಱೆವೇಱೆ ವಿಕಲ್ಪ ಸಮುಚ್ಚಯಯುಗ್ಮದೊಳ್ ತೋಱುವಂ ಕೃಪಾವಿಕಲ್ಪನೆಯಿಂ ಗುಣ ದೋಷಮಂ ಕೀಱಿಕೊಂಡು ಗುಣಮಂ ಕಳೆಗಲ್ಲಿಯ ದೋಷಮಂ ತೋಱಿ ಪಿಂಗಿಸುವವೋಲ್ ಪೊಸನೆಲ್ಲಿರೆ (ಪೊಳ್ಗ)ಳಂ (ಕಪಾ. ೧-೦೩೦). [ಪೊಸ+ನೆಲ್]

**ಪೊಸನೇಣ್** (ನಾ). ಹಳೆಯದಲ್ಲದ ಹಗ್ಗ ; ಹೊಸಹಗ್ಗ : ತೆಂಗಿನ ಪೊಸನೇಣಿಂದಱುದೀಗಳ್ವರಮಡಸಿ ಕಂಬಿಯಿಂ ಕಟ್ಟಿದೊಡಂ ತಾಂ ಗಡ ಬಿಟ್ಟೊಡೆ ಮತ್ತಂ ಒಂಗದು ಡೊಂಕೆಬ ನಾಯ ಬಾಲದ ತೆಱದಿಂ (ರಚಾರ್ಯ. ೨-೬೨) ; ಮಾತೆಲ್ಲಮಂ ಬರೆದು ಅರೆದ ಪೊಸನೇಣ್ಗಳಗೆ ಪೊಸೆಯಿಸಿಯದವರಿರವ ರೋಡಾಡುತಿಹುದು (ಶಾಂಪು. ೨೬-೦೬). [ಪೊಸ + ನೇಣ್₁]

**ಪೊಸನೇರಾಣೆ** (ನಾ). ಮಿರುಗುವ ಚಿನ್ನ,–ಅಪರಂಜಿ : ರಾಣಿಯ ವಾಸದ ಪೊಸನೇರಾಣೆಯ ಮಾಡಂಗಳೊಳಗೆ ಕೆಯ್ಗೆಯ್ದಿರೆ ರುದ್ರಾಣಿ ವರುಣಾನಿ ನೆಗಟ್ದಿಂದ್ರಾಣಿಯೆನಲ್ಕಕ್ಕು ಮಿಕ್ಕ ಮಹಿಷೀಬೃಂದಂ (ಶಾಂತಿಪು. ೦೦-೬೦). [ಪೊಸ + ನೇರಾಣೆ]

**ಪೊಸನೋಟ**, ಹೊಸನೋಟ (ನಾ). ನೂತನದೃಶ್ಯ; ಹೊಸದಾದ ನೋಟ : ಹರಹತ ಎನ್ನ ಕೈಯ ಹಸಿವೋಡಲಣಂ ತನುವಿಂದೆ ಪೂಜೆಯಂ ವಿರಚಿಪೆನೆಂದೊ ಕಣ್ಗಳ ಬೞಿ ತಿಳಿಯಲ್ ಪೊಸನೋಟದಿಂದೆ ಕೆಂಕರಿಸುವೆ ನೆಂದೊ (ಶಂಪಾಶ. ೯). **ಹೊಸನೋಟ** : ಎಂದಿನದೂ ಹಳೆತೋಟ ಹೊಸಬಗೆಗೆ ಹೊಸನೋಟ (ಕಾಣಿಂ. ೬೬-೦೦೬). [ಪೊಸ+ನೋಟ]

**ಪೊಸಪಚ್ಚ** (ನಾ). ಉಜ್ವಲಕಾಂತಿಯಿಂದ ಕೂಡಿದ ಆಭರಣ : ರನ್ನದ ಪೊನ್ನ ಚಿತ್ರವಸ್ತ್ರದ ಪೊಸಪಚ್ಚದೊಟ್ಟಲನೆ ಕೋಶಗೃಹಂ ಬಱಿದಾಗೆ ಕೊಟ್ಟು ಮಾಣದೆ ಮಗುಟಾನೆಯಂ ಕುದುರೆಯಂ ಧರಣೀಪತಿ ಸಾಱಿ ಬೀಱಿದಂ (ಚಂದ್ರಪು. ೬-೯೦) ; ನಿನಗೆ ವಸಂತದೂತಿವೆಸರೊಪ್ಪುವುದೆಂತೆನೆ ಮುಂತೆ ಬಂದು ನೀನೆನಗೆ ವಸಂತನಾಗಮನಮಂ ನೆಱೆ ಸೂಚಿಸಿ . . . ಇತ್ತ ಪಸಾಯದಚ್ಚ ಮುತ್ತಿನ ಪೊಸಪಚ್ಚಮುಂ ತಳೆದವೋಲದಿರ್ಮತ್ತೆ ಮುಗುಳ್ಪು ದತ್ತಲುಂ (ಚಂದ್ರಪು. ೬-೪೦). [ಪೊಸ + ಪಚ್ಚ₂]

**ಪೊಸಪಜ್ಜೆ** (ನಾ). ಅಳಿಸಿ ಹೋಗಿರದ ಹೆಜ್ಜೆಯ ಗುರುತು ; ಮಾಸದಿರುವ ಹೆಜ್ಜೆಯ ಗುರುತು : ಕುಂಜರಗುರುಕುಂಭಮಂಡಳ ದಿನಲ್ಲುಗುತಂದು ಕುಳುಂಪೆಗೊಂಡ ನೆತ್ತರ ಪೊಸಪಜ್ಜೆ[ಪಾಠಾಂ. ಹೊಸವಜ್ಜೆ] ಯೊಳ್ಕೆದಱಿ ೞಿಗ್ಗೆಸದಿರ್ದುವು . . . ಮುತ್ತುಗಳ್ (ಪಂಪಭಾ. ೧೦-೯೯ ; ಸುಕು.ಸು. ೩.೬೦ (ನೋ) ; ಅಗಲ್ದ ಪೆಣ್ಣಂಚೆಯ ಪುಳಿನಸ್ಥಳದ ಕುಸುಮಮರಜದ ಪೊಸಪಜ್ಜೆವಿಡಿದಱಿ ಪೋಗಿ (೧೦೪. ೩-೦೬೩ ಶ). [ಪೊಸ+ಪಜ್ಜೆ]

**ಪೊಸಪನ್ನೀರ್** (ನಾ). ಶುಭ್ರವಾಗಿರುವ ಪರಿಮಳದ ನೀರು : ಪೊಸ ಪನ್ನೀರೊಳ್ ಲತಾಂತಸ್ತಬಕಮನೊಲವಿಂ ತೊಯ್ದು ಭರ್ತಾರನಾದಬ್ಜ ಸಖಂ (ಅದ್ಭುತ. ೪-೨೬). [ಪೊಸ + ಪನ್ನೀರ್ (< ಪನಿನೀರ್)]

**ಪೊಸಪರಿಮಳ**, ಹೊಸಪರಿಮಳ (ನಾ). ಆಹ್ಲಾದಕರವಾದ ವಾಸನೆ : ನರುಗಂಪು : ಪೊಸಪರಿಮಳವಿಡಿದಿಹ ಕರ್ಪುರದ ಸವಿರಸದಂಬುಲದ ಕುಟುಕಿತ್ತು ನೊಸಲೆಡೆಯನು ಚುಂಬಿಸಿ ತಕ್ಕಿಸುತ ವರವಶೆಯಾದಳೇನ ಬಣ್ಣಿಸುವೆ (ಕಂಪಾ. ೯-೦೬೬). **ಹೊಸಪರಿಮಳ** : ಹಸನಾಗಿ ಸವಿಯಾದ ಸಂಭಾರವಿಕ್ಕಿಯವು ಮಾಸೇದಂದದಿ ನೇತ್ರವಂ ಕಟ್ಟಿ ಪೊಗ್ಗರಿಸಿ ಹೊಸ ಪರಿಮಳವನಿಕ್ಕುಲವು ತಾನೆ ಭಿನ್ನರುಚಿವ್ಯಂತಿಶಕವೆಸರುಮವು (ಸೂಪಶಾ. ೪-೯). [ಪೊಸ + ಪರಿಮಳ ( = ಪರಿಮಲ) ]

**ಪೊಸಪರೆಯ** 'ಪೊಸವರೆಯ' ನೋ.

**ಪೊಸಪಸಲೆ** (ನಾ). ಹಚ್ಚಹಸುರಾಗಿರುವ ಹುಲ್ಲು ; ಎಳೆಯ ಗರಿಕೆ : ನಳನಳಿಸಿ ಬೆಳೆದ ಪೊಸಪಸಲೆಯ ಮೇಲೆ ಕದಳೀದಳಂಗಳು ಕಮಲ ಪತ್ರಂಗಳಂ . . . ಪಾಸುತ್ತುಂ (೧೦೪. ೩-೬೬ ಶ). [ಪೊಸ + ಪಸಲೆ]

**ಪೊಸಪಸೆ** 'ಪೊಸವಸೆ' ನೋ.

**ಪೊಸಪಳುಕು** 'ಪೊಸವಳಿಕು' ನೋ.

**ಪೊಸಪಾಕ**, ಹೊಸಪಾಕ (ನಾ). ಆಗತಾನೆ ತಯಾರಿಸಿದ (ಸಕ್ಕರೆ ಅಥವಾ ಬೆಲ್ಲದ) ಬಿಸಿಯಾಗಿರುವ ಪಾಕ : ಕಳಿತ ಬಾಳೆಯ ಹಣ್ಣ ಸಕ್ಕರೆಯ ಪೊಸಪಾಕದೊಳಗೆ . . . ಇಳಿಹುವುದು (ಸೂಪಶಾ. ೪-೯೦). **ಹೊಸಪಾಕ** : ಕುಂಬಳದ ಕಾಯ ಕೈಸೇವಗೆಯ ಸಮವಾಗಿ ಸಂಬಳಿಸಿಕೊಂಡೊಣಗಲಿಕ್ಕಿ ತುಪ್ಪದೊಳಗಿಳಿಯಂ ಬಟ್ಟು ಹುರಿದು ಸಕ್ಕರೆಯ ಹೊಸಪಾಕದೊಳು ಕಟ್ಟುವುದು ಲಡ್ಡುಗೆಯನು (ಸೂಪಶಾ. ೦-೩೩). [ಪೊಸ+ಪಾಕ₁]

**ಪೊಸಪುಟ್ಟು**, ಹೊಸಹುಟ್ಟು (ನಾ). ಹಳೆಯ ಬಾಳಿನಿಂದ ಬೇರೆಯಾದ ಬಾಳು ; ಮತ್ತೊಂದು ಜನ್ಮ : ಎಳೆಯ ಕರ್ನಾಟಕಂ ಪೊಸಪುಟ್ಟು ಪುಟ್ಟುಗೆ ! (ಹೊಂಗಳು. ೪೦-೦೩). **ಹೊಸಹುಟ್ಟು** : ಹೊಸಹುಟ್ಟು ಬರುವದಿದೆ ಇನ್ನು ಮುಂದೆ ಆಗೋಣ ಆ ಜಗದ ತಾಯಿತಂದೆ (ನಾದಣೀ. ೬೬-೦೯). [ಪೊಸ + ಪುಟ್ಟು₂]

**ಪೊಸಪುಲ್** 'ಪೊಸವುಲ್' ನೋ.

**ಪೊಸಪೂ** 'ಪೊಸವೂ' ನೋ.

**ಪೊಸಪೊಡೆ**, ಹೊಸಪೊಡೆ (ನಾ). ಎಳೆಯ ತೆನೆ, – ಹೊಡೆ : ತೋಳಪ ಪಸುರ್ವಣಿಯ ಬೆಳಗುಜ್ಜುಳಿಸಲ್ಕನ್ನಧ್ಯದೊಳ್ವಿಜೃಂಭಿಪ ಸೂತ್ರೋಜ್ವಳ ರೇಖೆಯಂತೆ ಪೊಸಪೊಡೆಯುಳವಟ್ಟಿರಲೆಸೆದುದವರ್ದ ಕಳಮಕ್ಷೇತ್ರಂ (ಕಾದ್ಯಲಿ. ೩-೯೬). **ಹೊಸಪೊಡೆ** : ಉತ್ತಮದ ಹೂವು ಕಾಯ್ ಗೊಸುಗಳ ಹೊಸಪೊಡೆ [ಪಾಠಾಂ. ಪುಡಿ]ಯು ಮತ್ತುಳಿವವಕ್ಕೆ ಹಸವಾಡಿ ಬಟ್ಟತ್ರಿವದ ನಿತ್ಯ ಒಗ್ಗರಿಸಿಕೊಂಡವಲವಲಿ ಹಸರ ಹೂರಣಬದನೆಗಾಯೆಂಬುದು (ಸೂಶಾ. ೪-೨೦). [ಪೊಸ + ಪೊಡೆ₃]

**ಪೊಸಪೊನ್** 'ಪೊಸವೊನ್' ನೋ.

**ಪೊಸಪೊನಲ್** 'ಪೊಸವೊನಲ್' ನೋ.

**ಪೊಸಪೊಟ್ಟುಱ್** (ನಾ). ಯೌವನದ ಕಾಲ ; ತಾರುಣ್ಯ : ಪಾಂಡವರನ ಕಾರಣಂ ಕಣಕಿದೀ ಪೊಸಪೊಟ್ಟುಱೊಳಾದ ಕಿಚ್ಚರ್ ಕೌರವರ್ಗಿದು ನಾಡೆಯುಂ ಕಿಣುಕನಾಗಿಸದೇಂ ಗಳ ಸಯ್ತು ಪೋಕುಮೋ (ಹಂಪಾ. ೨-೬೬). [ಪೊಸ + ಪೊಟ್ಟುಱ್]

**ಪೊಸಬ** 'ಪೊಸಂಬ' ನೋ.

**ಪೊಸಬಗೆ** 'ಪೊಸವಗೆ' ನೋ.

**ಪೊಸಬಣ್ಣ**, ಹೊಸಬಣ್ಣ (ನಾ). ೧. ಉಜ್ವಲವಾದ ಬಣ್ಣ ; ಸ್ವಚ್ಛ ವರ್ಣ : ಪೊಸಬಣ್ಣದೊಳೊಂದಿದ ಪಾರಿಜಾತಮುಗ್ಗಳಮೆಸೆದೊಪ್ಪುವಂತೆ ತಳಿರಿಂ ಮುಗುಳಿಂ ನವಯೌವನಂ ಮನಂಗೊಳೆ (ಹಂಪಾ. ೨-೩೮). **ಹೊಸಬಣ್ಣ** : ೨. ಹೊಸ ಬಗೆ ; ನವೀನ ರೀತಿ : ಇಂದ್ರಚಾಪದ ಮಳೆಗಾಲದ ದಿನದಂತೆ ಬಾಳಿಗೆ ಹೊಸಬಣ್ಣವಾಗೆ ಸಂಸಾರವೆನುವುದು ಸುಖಮಯ ವೆನಿಸುತೆ ಕಳೆಯಿತು ಕಾಲವು (ಇಂಚಾಶ. ೪೨-೦೦೦). [ಪೊಸ + ಬಣ್ಣ]

**ಪೊಸಬಾಸಿಗ** 'ಪೊಸವಾಸಿಗ' ನೋ.

**ಪೊಸಬಾಸೆ** (ನಾ). (ಎದೆಯ ಮಧ್ಯಭಾಗದಿಂದ ಹೊಕ್ಕುಳ ಮೇಲು ಭಾಗದವರೆಗೆ ಇರುವ) ಮನೋಹರವಾದ ಕೂದಲ ಸಾಲು : ಪೊಸಬಾಸೆಯ ಚೆಲ್ವಂ ನಿಟ್ಟಿಸಲಾಂ ಮೊಲೆ ಕಾಣಲೀಯವೆಂದುಱ್ ಸುಯ್ವಂತುಸುರಂ ಪಸರಿಸಿಯುಲರೇಱಿಸಿದಳ್ ಸಿಂಧುವಾತದಲರನ ದೊರ್ವಳ್ (ಅಜ್ಞಲಿ. ೯-೪೩). [ಪೊಸ + ಬಾಸೆ₁]

**ಪೊಸಬಿಜ್ಜಣಿಗೆ** (ನಾ). ಮಿರುಗುವ ಬೀಸಣಿಗೆ : ಬಸಿಲೆಸಕದಿಂದೆ ಕೊರಗಿದ ರಸೆವೆಣ್ಗಳ ಬಿಸುಪನಾಱ್ ಪಂಕಿರೆ ಗಿಳಿಗಳ್ ಪಸುರೆಱೆಯೆಂಬ ಬಾಟಿಯ ಪೊಸಬಿಜ್ಜಣಿಗೆಗಳಿನೆಸಗಿಪುವು ತಣ್ಣೆಲರಂ (ಕಾದಂಪೂ. ೦೩೦). [ಪೊಸ + ಬಿಜ್ಜಣಿಗೆ]

**ಪೊಸಬಿಜ್ಜೆ** (ನಾ). ಹೊಸಬಗೆಯ ಮಾಯಾವಿದ್ಯೆ : 'ಪೊಸಬಿಜ್ಜೆವಳ' ಪರಾ. [ಪೊಸ + ಬಿಜ್ಜೆ]

**ಪೊಸಬಿಜ್ಜೆವಳ** (ನಾ). (ಇಂದ್ರಜಾಲವೆಂಬ) ವಿದ್ಯೆಯನ್ನು ತಿಳಿದವನು ; ಮಾಯಗಾರ : ಸಿಸುವಾಗಿ ತಾನಾಲದೆಲೆಯೊಳೊಱಗಿ ತನ್ನ ಬಸಿಱೊಳೀರೇಳುಲೋಕಗಳ ಪಸರವ ತೋಱ್ ಬಗೆಗೊಳಿಸುವ ಪೊಸಬಿಜ್ಜೆವಳಗೆಱಗುವೆನು (ಕರ್ಣಕೃ. ೦-೦೦). [ಪೊಸಬಿಜ್ಜೆ + -ವಳ]

**ಪೊಸಬಿಸಿಲ್** 'ಪೊಸವಿಸಿಲ್' ನೋ.

**ಪೊಸಬೀಡಾರ** (ನಾ). ನೂತನ ವಸತಿ ; ಹೊಸ ನೆಲೆ : ಪೊಸಬೀಡಾರದೊಳಿರ್ದ ಬಟ್ಟುಗನವೊಲ್ ಮೋಹಾಭಿವೇಶೋದಯಂ ವಸುಧಾಧೀಶನ ಚಿತ್ತದಲ್ಲಿ ಕಿಱಿದುಂ ಮೆಯ್ಯೋಱಿತಿಲ್ಲ (ಕಾಪಕ. ೦೨-೬೨). [ಪೊಸ + ಬೀಡಾರ]

**ಪೊಸಬು** (ನಾ). (?) : ಮುಕ್ಕಾಲು ದೀವಿಟಿಗೆ ಮೂರೆಳೆ ಜಾವರ ತುದಿಕಲವ ಪೊಸಬು ಚಕ್ರದ ಕೊಡೆ ಆಳ × × × ಬಲುಚೀಕತಕಡಿದೆಡ ತಕಡ (ಎಕ. XVI. ಗುಬ್ಬಿ. ೬೯-೨೮ ; ?). [< ಪೊಸತು ?]

**ಪೊಸಬೆ** (ನಾ). ಅಪರಿಚಿತೆ ; ಹೊಸಬಿ : ಎಳನಾಭಿಯೆಳೆಯಳ್ ಎಸೆವ ಡಿಯ ಪೊಸಬೆ ನುಣ್ದನಿಯ ನೂತನೆ ಧಾಳದ ಭಾಮಿನಿ ಕರ್ಣಪಾಲಿಕೆಯ ಕಾಮಿನಿ . . . ಪೆಣ್ಗಳ ಪುಣ್ಯಾಕಾರೆಯುಮೆನಿಸಿ ಮನಂಗೊಳಿಸುತ್ತಿದ್ದಳು (ಅದ್ಯಲಿ. ೩-೩೩ ವ). 'ಹೊಸಬಿ' ಪರಾ. [ಪೊಸಬ (< ಪೊಸಂಬ) + – ಎ₁]

**ಪೊಸಬೆಣ್ಣೆ**, ಹೊಸಬೆಣ್ಣೆ (ನಾ). ಆಗತಾನೆ ತೆಗೆದ ಬೆಣ್ಣೆ ; ನವನೀತ : ರಾಹುಗೆ . . . ಕೊಟ್ಟ ಪೊಸಬೆಣ್ಣೆವೊಲಿರ್ದುದು ಚಂದ್ರಮಂಡಲಂ (ಕಾವ್ಯಸಾ. ೬೩೮ ಚಂದ್ರಕ) ; ನನೆದ ಸೊಜ್ಜಿಗೆಯೊಳಗೆ ಪೊಸಬೆಣ್ಣೆ ಸಿಹಿಮೊಸರ ಕೆನೆ ಹಾಲ ಕೆನೆಯುಪ್ಪನಿಕ್ಕಿ ಕಣಕವ ಕುಟ್ಟಿಯನುವಾಗಿ ರೊಟ್ಟಿಯಂ ಮಾಡಿ ಒಟ್ಟಿಯ ಹಲ್ಲಿಗಳ ನಡುವೆಯಿರಿಸಿ ಹುದುಗಿ (ಸೂಶಾ. ೦-೦೨). **ಹೊಸಬೆಣ್ಣೆ** : ನೆಲಕೆ ಗಗನಕೆ ಸೂತ್ರವಿಡಲಂಬಿಲದೊಳಗೆ ಹೊಸಬೆಣ್ಣೆಯಂ ತೆಗೆಯಲು . . . ಬಲ್ಲ ನೆಱ್ ಜಾಣೆ (ಏಸಪು. ೪೨-೨) ; ಕುಟ್ಟಿ ಕಣಕವನು ಹಬ್ಬಿಟ್ಟಂತೆ ಹೊಸೆದು ಮೂವಟ್ಟಗಲದೊಳಗೊತ್ತಿಯಂತದಕೆ ಹೊಸಬೆಣ್ಣೆ ಮಿಟ್ಟುವಂ ತೊಡೆದು (ಸೂಶಾ. ೦-೩೦). [ಪೊಸ + ಬೆಣ್ಣೆ]

**ಪೊಸಬೇಟ** 'ಪೊಸವೇಟ' ನೋ.

**ಪೊಸಬೇಸಗೆ** (ನಾ). ಆಗತಾನೆ ಪ್ರಾರಂಭವಾದ ವೈಶಾಖಮಾಸ : ಮುಂಬೇಸಗೆ : ಪೊಸಬೇಸಗೆಯೊಳ್ ಮೃಗತತಿಯುಸುವೆರಸಿರವೇಳ್ಕು ಮೆಂದು ಕರಜಿಸಿ ಮಿತ್ರಂ ಬಿಸಿಲಂ ಪೀಡೊಡೆ ಬೆನ್ನೀರೊಸರ್ವಂತಿರ್ದುದು ಮರೀಚಿಕಾಜಲಮೆತ್ತಂ (ಗಂಥಿ. ೯-೦೮). [ಪೊಸ + ಬೇಸಗೆ]

**ಪೊಸಬೋನ** (ನಾ). ಹೊಸದಾಗಿ ಮಾಡಿದ ಅನ್ನ : ಜಂಗಮಕೆ ಮಾಡಿ ದನ್ನವ ಪುತ್ರನುಣುತಿರಲು ಲಿಂಗದಪನಂ ಕೊಂದು ಮುಚ್ಚಿ ಪೊಸ ಬೋನಮಂ ಸಾಂಗವಾಗಿಯೆ ಮಾಡಿ ತಜ್ಜಂಗಮಕೆ ನೀಡೆ (ಕಾಶಿ. ೬-೦೨). [ಪೊಸ + ಬೋನ]

**ಪೊಸಮಂಜು** (ನಾ). ಶುಭ್ರವಾದ ಮಂಜು, – ಹಿಮ : ಜೊನ್ನದ ವೊಲ್ ಪೊಸಮಂಜು ಮಾರ್ಧಿ ಪೆರ್ಚುಗೆಯನಮರ್ಚೆ ತಾಳ್ದನಿದಿಕೋದ ಯಮಂ ಹಿಮಕಾಲಚಂದ್ರಮಂ (ರಾಜಶೇ. ೯-೪). [ಪೊಸ + ಮಂಜು₁]

**ಪೊಸಮಕರಂದ** (ನಾ). ಆಗತಾನೆ ಅರಳಿರುವ ಹೂವಿನ ಬಂಡು : ಪೊಸಮಕರಂದದ ಮಾಂದದ ರಸಕ್ಕೆ ಮಂದಲರೊಳೆಱಗಿದಳಿ ರಚನೆಯ ಕರ್ಪಸಮಾತೆಸೆವಿನಮೇಂ ಸೊಗಯಿಸಿದುದೊ ವನಯುವತಿವದನತಿಲಕಂ ತಿಲಕಂ (ಶಾಂತಿಪು. ೭-೧೩೩). [ಪೊಸ + ಮಕರಂದ]

**ಪೊಸಮದ**, ಹೊಸಮದ (ನಾ). ೧. ತಾರುಣ್ಯದ ಸೊಕ್ಕು. ೨. ತಾರುಣ್ಯದ ಸೊಕ್ಕಿನಿಂದ ಸುರಿಯುವ (ಆನೆಯ) ಮದಧಾರೆ : ಪೊಸಮದದಾನೆಯುಂ ನಸೆಯ ಪೆರ್ಬಿಡಿ ಜಂಗಮಕಲ್ಪವೃಕ್ಷಮುಂ ಮಿಸುಗುವ ನಲ್ಪಕಲ್ಪಲತೆ ನೀರದಮುಂ ಕುಡುಮಿಂಚು ಪೊರ್ದಿ ಶೋಭಿಸುವವೊಲ್ (ಶಾಂತಿಪು. ೭-೨೯). **ಹೊಸಮದ** : ೨. ಹೊಸಮದದ ವನದಂತಿ ಕದಳಿಯ ಕುಸುರಿದಱಿದಂದದಲಿ ಘನಪೌರುಷವ ಮಾಡಿದನೆಂದನವನೀಪಾಲನನುಜಂಗೆ (ಕುಮಾರರಾ. ೬-೨೨). [ಪೊಸ + ಮದ]

**ಪೊಸಮದವಣಿಗ** (ನಾ). ಹೊಸದಾಗಿ ಮದುವೆಯಾದವನು : ಪೊಸ ಮದವಣಿಗಂ ದೇವೇಂದ್ರನ ಶಚಿಯ ವಿಳಾಸಾವಿಷ್ಕೃತವಿವಿಧವಿಭವಮಂ ಮಸುಳಿಸಿದಂ (ಶಾಂತಿಪು. ೭-೦೨೦). [ಪೊಸ + ಮದವಣಿಗ (< ಮದುಮಗ)]

**ಪೊಸಮದವಳಿಗೆ** (ನಾ). ಹೊಸದಾಗಿ ಮದುವೆಯಾದವಳು; ನವವಧು : ಆತನ [ಮನೆಗೆ ವಂದು ಪೊಸಮದವಳಿಗೆಯ ಕಿಲದೋರ್ದ ಪುಷ್ಪದಾಡನಂ ಕಂಡು] (ರಘುನೃ. ೬-೦೪೭). [ಪೊಸ + ಮದವಳಿಗೆ (<ಮದುವಳಿಗೆ)]

**ಪೊಸಮನೆ, ಹೊಸಮನೆ** (ನಾ). ಹೊಸದಾಗಿ ಕಟ್ಟಿದ ಮನೆ; ನೂತನ ಗೃಹ : ಕಿಸುರ ಕಸಗಳಿದುಮೆತ್ತಿಸಿ ಪೊಸಬಗೆಯುಂ ಪೂಸಿ ರಾಗರಸದಿಂ ಪೊಕ್ಕಂ ಪುಸಿದಬಾವೆಂದಿರ ಬೇಟಂ ಬಿಸುಟರ್ದೆಯುಂ ಸ್ಮರನ ಪುಗುವವೊಲ್ ಪೊಸಮನೆ [ಶಾಂತಿ. ಪಾಟ್ಮನೆ]ಯಂ (ಅರ್ಥಶಾ. ೪-೦೪೪) ; ಮಾಡಿದ ತೋರಣಮಿಟ್ಟುಗಳ್ ಪೊಸಮನೆ ಸುತ್ತಲುಂ ಬಳಸಿ ಪರ್ವಿದ ಕೇದಗೆ ಪಚ್ಚವಾಗಿಲ್ (ಕಬ್ಬಿಗ. ೦೦೦). **ಹೊಸಮನೆ:** ಹೊಸಮನೆಯ ಕಟ್ಟಿದನು ಗೃಹಶಾಂತಿ ಮನೆಯೊಳಗೆ (ಭ್ರಕುರ. ೨-೬೦-೩); ಹೊಸ ಊರು ಹೊಸಮನೆಯೆನೆ ಹೊಸತಾಯಿತು ನಮ್ಮ ಜೀವನ ಸುಖವಾಗಿ (೨೦ಶಾಕ. ೩೯-೬೬). [ಪೊಸ + ಮನೆ]

**ಪೊಸಮಲ್ಲಿಗೆ** (ನಾ). ಆಗತಾನೆ ಅರಳಿರುವ ಮಲ್ಲಿಗೆ; ನಳನಳಿಸುತ್ತಿರುವ ಮಲ್ಲಿಗೆ : ಸೊಡರ್ಗುಡಿಯೊಯ್ಯನಾಗೆ ಪೊಸಮಲ್ಲಿಗೆ ಮೆಲ್ಲಗೆ ಕಂಪು ನಾಜೆ (ಕಂಕಹ. ೪-೦೦೦) ; ಪೊಸಮಲ್ಲಿಗೆಗಮೊಮ್ಮಾವಿಗಂ ಮದುವೆಮಾಡಿ ದಳ್ಳನದೊಳ್ (ಶರಣ. ೯-೩೮). [ಪೊಸ + ಮಲ್ಲಿಗೆ]

**ಪೊಸಮಸೆ, ಹೊಸಮಸೆ** (ನಾ). (ಮಸೆದು) ಹೊಳೆಯುವಂತೆ ಹರಿತಗೊಳಿಸಿರುವುದು : ಗಗನಮಂಡನೆಜೆಯಮಂತಿರೆ ಗಗನೇಚರಸೈನ್ಯಮಿಸುವ ಪೊಸಮಸೆಯ ಸರಲ್ಗಳ ಗಧರನ ಮೇಲೆ ಪಾಯ್ದುವು (ಕಂಗಾಹಾ. ೯-೬೦) ; ದಮನನಂ ಪೊಸಮಸೆಯ ಕೂರ್ಗಣೆಗಳಿಸುತಂ (ರಾಮಕ್ಕ. ೯೦-೦೦). **ಹೊಸಮಸೆ:** ಹೊಸಮಸೆಯ ಹೊಗರಂಬುಗಳನೆಬ್ಬಿಸಿದನು (ಉಮ್ಮರ್ಡೊ. ೦೩-೬೦). [ಪೊಸ + ಮಸೆ]

**ಪೊಸಮಾವು** (ನಾ). ಚಿಗುರಿದ ಮಾವಿನ ಮರ : ಮುಸುಕಿದ ತಳಿರಂ ಪೇಜಿದ ಪೊಸಮಾವುಗಳಿಂ ಬಸಂತಮಸೆದಪುದು (ಅರಿಕೃ. ೦೦-೯೩) ; ತಣಿವುವುದು ಪೊಸಮಾವೆಳಸಿದ ಪಾಂಥಪ್ರತಾನಪಂಚೇಂದ್ರಿಯಮಂ (೧೦೪. ೨-೯೩). [ಪೊಸ + ಮಾವು]

**ಪೊಸಮಿಸುನಿ, ಹೊಸಮಿಸುನಿ** (ನಾ). = ಪೊಸನೇರಾಣೆ : ಪೊಸ ಮಿಸುನಿವೆಸದ ತೊಡೆಗುಪ್ಪಸಮೆಸೆದುದು ಪೂಾರಲೆಂದು ಪೊಂಬಾಳೆಯೊಳಂದಸಿಯಳ ನುಣ್ದೊಡೆ ತೊಳ್ದಮೊಲಸದೃಶರುಚಿ ಕನಕಕಪಟಮಂ ಕಡುಪಿಂದಂ (ಅರಿಕೇ. ೦೨-೬೦). **ಹೊಸಮಿಸುನಿ :** ಹೊಸಮಿಸುನಿಯ ಚಿನ್ನದಿ ಕರುವಿಟ್ಟು ನಿರ್ಮಿಸಿದ ಪುತ್ಥಳಿಯುಂದದಲಿ (ಶಬರಂಶಾ. ೦-೦೬). [ಪೊಸ + ಮಿಸುನಿ]

**ಪೊಸಮಿಾನ್** (ನಾ). ಹೊಳೆಯುವ ಮಿಾನು ; ನನೆಗಣೆಯನ ಮೆಯ್ಮೆಳಗೆಂಬನಿಗೊಳದೊಳ್ ಮೊದಲೆ ಮಿಳಿರ್ದು ನೆಗೆದಾಡಿದುವಂದೆನಸಂ ಕಡು ನೀಚೆಯ ಬೆಳ್ಸನೆ ತೊಳಗುವ ಕಣ್ಗಳೆಂಬ ಪೊಸಮಿಾಬೊಣರ್ಗಳ್ (ಕಬ್ಬಿಗ. ೩೩೦). [ಪೊಸ + ಮಿಾನ್]

**ಪೊಸಮುತ್ತು, ಹೊಸಮುತ್ತು** (ನಾ). ನೂತನವಾಗಿರುವ ಮುತ್ತು : ರಸದಾಡಿಮದ ಬಿತ್ತುಮಂ ಪೊಸಮುತ್ತುಮಂ ಮುಕುಳಿಸಿದಂತಪ್ಪ ವಿಬುಧವನಜವನಕಳಹಂಸನ ದಂತಪಂಕ್ತಿಗಳಮ್ಯಾತಕಿರಣನ ಕಾಂತಿಗಳನೀಸುವಂತಾದುವು (ಕಂಕಹ. ೨-೩೯ ವ) ; ಮತ್ತಗಜಮಸ್ತಕದ ಪೊಸಮುತ್ತಂ ಒಲ್ಪಿಂದೆ ತಂದೆಂ (೧೦೪. ೦-೦೦೩) ; ಪಲವುಸುರ್ದೋರಣ ಪಳಿ ಗುಡಿ ಸಂತಸವಜೆ ಪೊಸಮುತ್ತಿನ ಬಣ್ಣವುರಂ ಮನೆಮನೆದಪ್ಪದೆ ಶೋಭಿಸಿತು (ಜಬಂ. ೨-೩೯). **ಹೊಸಮುತ್ತು:** ಹೊಸಮುತ್ತಿನ ಸುಪ್ಪಾಣಿಯಂತೆ ಲಿಂಗೈಕ್ಯವು (ಅಶಂ. ೧೩೬-೬೨೪); ಎತ್ತಿದರು ಬಳಿಕಾರತಿಯ ಹೊಸಮುತ್ತುಗಳ ಸೇಸೆಯನು ಪರಿಕಲಿಸುತ್ತ ಹರಸಿದರಖಿಳವಿಪ್ರಸುವಾಸಿನೀನಿಕರ (ಕೂರಾ. ೦-೦೪-೨೦). [ಪೊಸ + ಮುತ್ತು]

**ಪೊಸಮೃಣಾಳ** (ನಾ). ತಾವರೆಯ ಎಳೆಯ ದಂಟು : ಎಳದೆಸಿರ್ದ ಪಾವಸೆಯ ತಣ್ಪೊಟಿಯಿಂದಮ ನೆಯ್ದ ಸೀರೆ ಶೀತಳಿಕೆಯ ಚಾಮರಂ ಪೊಸ ಮೃಣಾಳದ ತೋಳ್ವಳೆ (ಆತಂಕ. ೪೩೯). [ಪೊಸ + ಮೃಣಾಳ (= ಮೃಣಾಲ)]

**ಪೊಸಮೆಂಡಿ** (ನಾ). ಒಬ್ಬಾತನ ಹೆಸರು (?) : ಸಿರಿಸಗರನ್ × × × ಯನ್ ಪೊಸಮೆಣ್ಡಿ ಸಗ್ಗಮೇಱಿದ (ಎಕ. IX. ಹೊಸಕೋ. ೯-೪ ; ಸು. 870). [?]

**ಪೊಸಯಿಸು₁** (ಕ್ರಿ). ೧. ಹೊಸದನ್ನಾಗಿ ಮಾಡು ; ಹೊಸತುಗೊಳಿಸು : ರಸಭಾವಾಭಿನಯಂಗಳ್ ಪೊಸವೆ ಪುಗಿಲ್ ಪೊಸವೆ ಚಲ್ಲಿಗಳ್ ಪೊಸವೆ ನಯಂ ಪೊಸವೆ ಕರಣಂಗಳುಂ ನಿಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮಂ (ಅರಿಕೃ. ೯-೨೩) ; ಅಸಮಾನಮೆನಿಪ್ಪ ಲಾಸ್ಯಲೀಲೆಯುಮಂ ನಿರ್ಮಿಸಿ ತೋಱಿದನೊರ್ಮೊದಲೆನೆ ಪೊಸಯಿಸಿದಂ ನಾಟ್ಯವಿದ್ಯೆಯಂ ಪುರುಹೂತಂ (ಕೀರಿಕೃ. ೯-೦೬೪). ೨. ಜೀರ್ಣೋದ್ಧಾರ ಮಾಡು : ಗಂಗವಾಡಿಯ ಬಸದಿಗಳೆನಿತೊಳವನಿತಂ ತಾನಯ್ದೆ ಪೊಸಯಿಸಿದಂ (ಎಕ. II. ೬೩-೩೩ ; 1118). ೩. ಅತಿಶಯವಾಗು; ಅಧಿಕವಾಗು; ಹೆಚ್ಚಾಗು : ಸರಸಿರುಹದ ಮೇಗಾಡುವ ಸುರಸುವತಿಯರಾಟದಂದದಮೆಂತೆನೆ ಸಿರಿಯಂ ಪರಿಭವಿಸಿ ತಂದು ಪೊಸಯಿಪ ಸಿರಿವಂತಿಕೆಯಿಂದೆ ಕಾಲೊಳೊದೆದಪರೆನಿಕುಂ (ಶಾಂತಿಕೃ. ೦೦-೦೬) ; ಈ ಸಮಸ್ತವಸುಧಾತಳರಾಜ್ಯವಿಭೂತಿ ನಿಮ್ಮದೊಂದಸದೃಶಮಂತ್ರದತುಳತಂತ್ರಬಳಪ್ರಥಿತಪ್ರತಾಪದಿಂ ಪೊಸಯಿಸಿ ಸಂದುದಿಂದುವರಂ (ಶಾಂತಿ. ೨-೩೪). ೪. ಅಧಿಕಗೊಳಿಸಂ ; ಹೆಚ್ಚುಮಾಡು : ಎಡೆಯುವಹಿತರಂ ಚಕ್ರಮ ಸಾಧಿಸಿದಪ್ಪುದು ನವನಿಧಿಗಳ್ ಪೊಸಯಿಸಿದಪ್ಪುವು ವಿಭೂತಿಯಂ ಪುರುಸುತನಾ (ಅರಿಕೃ. ೦೪-೬೦). [ಪೊಸ + — ಇಸು]

**ಪೊಸಯಿಸು₂** 'ಪೊಸೆಯಿಸು' ನೋ.

**ಪೊಸರಂಗ** (ನಾ). ನೂತನವಾಗಿ ನಿರ್ಮಿಸಿದ ರಂಗಮಂಟಪ : ಪೊಸರಂಗದ ಪರಿಯುಂಕಂ ಮಿಸುಕುವ ಕೌಳುಡೆ ಮರಾಳತಳ್ಪಂ ಸಿತಸದ್ವಸನದಿ ಪಚ್ಚವಡಿಸಿ ರಾಜಿಸುತಿರೆ ಕುಳ್ಳಿರ್ದನಬಲೆವೆರಸಾ ಕುವರಂ (ಶ್ರೀಕೃ. ೦೪-೬). [ಪೊಸ + ರಂಗ]

**ಪೊಸರಕ್ತ, ಹೊಸರಕ್ತ** (ನಾ). ೧. = ಪೊಸನೆತ್ತರ್ : ಧಾತ್ರಿಗೆ ಪೊಸರಕ್ತ ಪೂರಮಸಗಿದತ್ತು (ರಾಜಶೇ. ೩-೦೦೬). **ಹೊಸರಕ್ತ :** ೨. (ಅಲಂ) ನವಯೌವನ : ಉತ್ತಮವಾದವು ಹರೆಯದ ದಿನಗಳು ಹೊಸರಕ್ತ ಹೊಸ ಅನುರಕ್ತಿ (೨೦ಶಾಕ. ೨೦೨-೯೯). [ಪೊಸ + ರಕ್ತ]

**ಪೊಸರಜ್ಜು** (ನಾ). = ಪೊಸನೇಣ್ : ಪೊಸರಜ್ಜುಗಳಿಂ ಲಿಂಗಮುನಸವಸದಿಂ ಸುತ್ತಿ ಮಾಱಿಬು ಘಟಿಯಾನೆಗಳಿಂ ಮಸಗಿ ಕಲಿ ಚೋಳವಿಭು ತೆಗೆಯಿಸೆ ದಿಟದಿಟಯೆನುತ ಪಱಿದು ಮುಗ್ಗಿದುವಾಗಳ್ (ಶ್ರೀಕೃ. ೨೦-೦೦). [ಪೊಸ + ರಜ್ಜು]

**ಪೊಸರತ್ನ** (ನಾ). ನೂತನವಾದ ರತ್ನ : ಸಾಲ ಮುತ್ತಿನ ಕುಚ್ಚಿನ ಪೊಸರತ್ನದ ಮೇಲುಪ್ಪರಿಗೆಗೆನ್ನನೊಯ್ದು ಕಾಲೋಚಿತದ ಕಲೆಗಳಿಂದ ಸೋಲಿಸಿ (ಕಂಪಹ. ೯-೦೪೦). [ಪೊಸ + ರತ್ನ]

**ಪೊಸರನ್ನ** (ನಾ). = ಪೊಸರತ್ನ : ಪೊಸರನ್ನದ ಪೊನ್ನ ಪೊದಟ್ಟ ಸೋಣೆ ಮಂದಾನಿಳನಿಟ್ಟ ಬೆರ್ಚಿಯೊಳಗಟ್ಟಿಱಿದಂತಿರೆ ದೇವರಾರ್ವ ಹೋಗ್ಯ್ವಾನನಿನಾದಮೊಪ್ಪಿದುದು ರಾಜಿತರಾಜಗೃಹಾಂತರಾಳದೊಳ್ (೨೧೦ಶಿಕೃ. ೬-೬೪); ಮಿಸುಗುವ ಕಣ್ಣಾ ನುಣ್ಪೆಳಗು ಪೊನ್ನದೊಳೊರಗೆಯಾಗೆ ಸೊಂಪು ಸಂದಿಸೆ ಪೊಸರನ್ನದಾರತಿಯನೆತ್ತಿದರಗ್ಗದ ಗಾಡಿಕಾರ್ತಿಯರ್ (ಕಬ್ಬಿಗ. ೩೯೩). [ಪೊಸ + ರನ್ನ (<ರತುನ)]

**ಪೊಸರೂಪು, ಪೊಸರೂವು** (ನಾ). ಹೊಸದಾದ ಚೆಲುವು ; ನವೀನ ರೂಪ : ಪೂಗಳಂ ತನ್ನುಮಂ ಮಱೆದಂ ನಿರೀಕ್ಷಿಸುತೆ ಮಱೆದಿರ್ದನಂ ಸಖಿಪುರಂಮ ಭೋಂಕನೆ ಕಂಡು ಬೆಱಗಾಗಿ ಸೋಲ್ದು ಪೊಸರೂಪು

ವನಂಗೊಂಡು (ಶಂಕರ. ೦-೪೪). **ಪೊಸರೂಪು :** ನೊಸಲ ಕತ್ತುರಿ ಬಾಗಿದ ಪುರ್ಬು ತಾವರೆಯೆಸಳನೇಳಿಪ ನಿಡುಗಣ್ಣು ಪಸರಿಪ ತಿಲಪುಷ್ಪ ನಾಸಿಕ ಸತ್ಕರ್ಣ ಪೊಸರೂಪ ನೋಡಿ ಹಿಗ್ಗಿದರು (ಪೋಶಚ. ೦೬-೬೨).
[ಪೊಸ+ರೂಪು]

**ಪೊಸರೂವು** 'ಪೊಸರೂಪು' ನೋ.

**ಪೊಸಲತೆ** (ನಾ). ಹೊಸದಾಗಿ ಚಿಗುರಿದ ಬಳ್ಳಿ : ಪೊಸಲತೆಯುಕ್ಕುವಲ್ಲ ಲತೆಗೆತ್ತಿನದೀ ಸವಿವಾತು ನೀಟ್ಟ ರನ್ನಸರವುದಕ್ಕುವಲ್ಲ ಸರಕೆತ್ತಿನವೀ ನವಘರ್ಮಬಿಂದುಗಳ್ . . . ಎಂದೊಸೆದು ಸರ್ವಜನಂ ಪೊಗಟ್ದುದಾ ಸತಿಯಂ (ಉತ್ಕೃಟಿ. ೬-೧೦). [ಪೊಸ+ಲತೆ]

**ಪೊಸಮಂದರ್** (ನಾ). ಹೊಸದಾಗಿ ಹಾಕಿದ ಚಪ್ಪರ : ಪರಿವೇಷದ ತೆಱದಿಂದನವರತಂ ಕರ್ಪೂರರಸದ ಪರಿಕಣೆ ಸುತ್ತಂ ಪರಿಯಲ್ ಮೃಣಾಳ ಪೊಸಮಂದರ ನಡುವಣ ಪೂವಿನಸೆಟ ಪಾಸಿನೋಳಿರ್ದಳ್ (ಕಾದಂಸಾ. ೨೨೪).
[ಪೊಸ+ಮಂದರ್]

**ಪೊಸವಗೆ, ಪೊಸಬಗೆ, ಹೊಸಬಗೆ** (ನಾ). ನವೀನರೀತಿ ; ನೂತನ ಕ್ರಮ : ಅಳಿಯರರಗಿಳಿಯರರಸಂಚಿಯುಮಿಳೆಯೊಳ್ ಭಾವುಕರ ಕಿವಿಗೆ ಸವಿಯುಂ ಪಡೆಗುಂ ಕಳಕಂಠಕಂಠನಾಳೋದ್ಗಳಿತಸುಧಾಸಾರದಿಂಪು ಪೊಸ ವಗೆಯಲ್ತೇ (ಜಗಂ. ೦-೦೬). **ಪೊಸಬಗೆ :** ಪೊಸಬಗೆ ದೇಸೆವೆತ್ತು ಚಿತವಂ ಪ್ರತಿಪಾಲಿಸುವರ್ಥದೊಳ್ಪು ರಂಜಿಸೆ ರಸಭಾವದೊಳ್ ನೆಗಟ್ವೆ ಳಂಕೃತಿ ಕೈವಿಗೆ ಪೇಟ್ದು ಕಾವ್ಯಮಂ (ಪುಣ್ಯಾಸ್ರ. ೦-೨೦). **ಹೊಸಬಗೆ :** ಈ ಹೊಸಬಗೆ ಎಂದರೆ, ಕಾವ್ಯದ ವಿಶಿಷ್ಟಧರ್ಮವೆಂಬಲ್ಲಿ ಸಂಶಯವಿಲ್ಲ (ಹಾಕೋಶ. ೨೨೬); ಕಂದೆರೆಯ ಮರೆಚಿಲ್ಲ ತಂಗಾಳಿ ಪೊರೆಯೆ ಎಂದಿನದೊ ಹರಿತೋಟ ಹೊಸಬಗೆಗೆ ಹೊಸನೋಟ ತಂದು ತೋರ್ಪುದು ಪಸಂ ಬಾಗಿಲಂ ತೆರೆಯೆ (ಕಾಉಕ. ೬೬-೧೦೬). [ಪೊಸ+ಬಗೆ೨]

**ಪೊಸವಟ್ಟ** (ನಾ). ೧. ಹೊಸ ಗದ್ದುಗೆ.–ಪೀಠ : ಅದು ಚಿತ್ರಜಂಗೆ ಕುಲದೈವವದುಂಗಜಚಕ್ರವರ್ತಿಗೆತ್ತಿದ ಪೊಸವಟ್ಟಮಂತದು ಮನೋಜನ ಕೈಪಿಡಿಯೆಂದು ಮಾಣ್ದನಾ ಸುದತಿಯ ರೂಪಿನಂ ಪೆಱತನೆಂದೊಡೆ ಚಿಃ ಕರಮಗ್ಗನಾಗನೇ (ಅಂಕ. ೨-೬೪). ೨. ಹೊಸದಾದ ಹಣೆಪಟ್ಟಿ : ಧವಳವಿಲೋಚನಂ ಧವಳಚಾಮರಮಾಗೆ ಲಲಾಟಪಟ್ಟಮೊಪ್ಪುವ ಪೊಸ ವ[ಹಾಕಾಂ. ಪ]ಟ್ಟಮಾಗೆ . . . ಪೋಲ್ತು ತೋಱುವುದಸಿತೋತ್ಪಲೇಕ್ಷಣೆಯ ಯೌವನಲಕ್ಷ್ಮಿಯ ರಾಜ್ಯಲಕ್ಷ್ಮಿಯಂ (ಅಜಪು. ೨-೨೮). [ಪೊಸ + ಪಟ್ಟ೨]

**ಪೊಸವಟ್ಟೆ, ಹೊಸಬಟ್ಟೆ** (ನಾ). ಹಳೆಯದಲ್ಲದ ಬಟ್ಟೆ ; ನೂತನವಸ್ತ್ರ : ಮಿಸುನಿಯ ಹಡಪ ಚಾಮರ ಕಲಂಚ ಕಾಳಂಜಿ ಪೊಸವಟ್ಟೆಯ ಪಾವಡೆಯು ಜಸವಟ್ಟಿಗೆಗಳವರ ಮೇಳದೊಳಾಗ ಮಸುಧೇಶ ಸಾರಿಗೈದಿದನು (ಕಂಪಿರಾ. ೨೨ ೬೬). **ಹೊಸಬಟ್ಟೆ :** "ಅನಾಹತಂ, ನಿಷ್ಪವಣಿ, ತಂತ್ರಕಂ...ಇ ನವಾಂಬರ, ಹೊಸಬಟ್ಟೆ" (ಶಿಶ್ಕಾಂತಿ. ೨೦೨) ; ಸಾಧಾರಣವಾಗಿ ಎಲ್ಲರೂ ಹಬ್ಬಗಳಲ್ಲಿ ಮಕ್ಕಳಿಗೆ ಹೊಸಬಟ್ಟೆ ತರುತ್ತಾರೆ (ರೂಢಿ).
[ ಪೊಸ + ಬಟ್ಟೆ೨ ]

**ಪೊಸವಣ್** (ನಾ). ಮಾಗಿದ ಹಣ್ಣು ; ಪಕ್ವಫಲ : ಎಸಗುವೆಲರಿನೊಡೆ ದೊಸರ್ವ ಪೊಸವಣ್ಣ ಪಸರದಿನೆಸೆವಸಿಯ ಕೊಂಬಸಿಂಟು ಮಾಡಿ ಸುಟಿದು ಗಟಪುವೆಳಗಿಳಿಯ ಬಳಗಕ್ಕೆ ತಮರ್ವನೆಯಾದಿವ್ಯಾವಿನ ಪೊದಟೊಳಂ (ಶಬ್ದಸಾ. ೩೦). [ಪೊಸ+ಪಣ್೨]

**ಪೊಸವರೆಯ, ಪೊಸಪರೆಯ, ಹೊಸಹರೆಯ** (ನಾ). ನವಯೌವನ : ನಯುಣ್ಣುಗುಳ ಪೊಸವರೆಯದಂಬುಜಾಸ್ಯದ ಸೂಳೆವೆಣ್ಣಳೊಡನೈದಲುಜ್ಜುಗಿಸೆ ಪಡೆ ಪೋಹಲಪ ಜಾಣ್ಗೆ ಸಂತೋಷಿಸುತ ವಂದಿಗಳು ಜಯ ಜೀಯ ಧಳಿಕೆ ಭಾವೆಂದುಲಿಯಲು (ಶಾಶಂ. ೬-೪) ; ಬಸಿಱೊಳು ಬಂದ ಕುವರನಾದೊಡಮೇನು ಪೊಸವರೆಯದ ಪುರುಷನನು ಒಸೆದು ನಟ್ಟಿಸಿ . . . ಬಣ್ಣಿಸಲಾಗದು ಭಾವೆಯರು (ಶಂಂ. ೪-೨೨). **ಪೊಸಪರೆಯ :** ಈ ಮೂರುಲೋಕದೊಳಗಿಂತ ಚೆನ್ನಿಗ ಚಲ್ವ ಪೊಸಪರೆಯದಾ ಗಂಡುಸರ ನಾ ಕಾಣಲಿಲ್ಲ (ಶಶಪೂ. ೨೬-೨೪). **ಹೊಸಹರೆಯ :** ಅಲಘುಕಬರಿಯ ಕಮಲ ನಿಭವದನದ ಕಳಕಂಠಾಳಿಯಮ ಹೊಸಹರೆಯದ ಲಲನೆಯರ ವಿಲಾಸಂ ನೃಪನಜಿತಮನೆಳಕುಳಿಗೊಳಿಸಿದುದು (ಕಹಸಾ. ೨-೩) ; ದೊರೆರಾಯನ ಸಮ್ಮುಖದೆ ಹೊಸಹರೆಯದ ತರುಣೆಯರುಗಳ ಹಸ್ತದಲಿ ವಿಜುವ ಮಿಸುನಿಯ ಬೊಂಬಾಳದೀವಟಿಗೆಗಳ್ಸುರುಚಿರಪ್ರಭೆಯ ಸೂಸಿದುವು (ಕಂಪಿರಾ. ೬-೨೩). [ಪೊಸ + ಪರೆಯ೨ (< ಪರಯ)]

**ಪೊಸವಸೆ, ಪೊಸಪಸೆ, ಹೊಸಹಸೆ** (ನಾ). (ಅರಳಿದ ಹೂವಿನಿಂದ ರಚಿಸಿದ) ಮೃದುವಾದ ಹಾಸುಗೆ : ಮಿಸುಗುವ ಪೊಸವಸೆಯೊಳಸದಳ ಮೆಸೆಯೆ ಬಯಸಿ ಪೊಸಯಿಸಿದ ಪೊಸಸುಸಿಲ ಮಸಕದ ಬಸದೊಳ್ ಬಸದಾಗಿಯುಮಸಿಯಳೆನಗಸವಸದೊಳಿ ಬೆಸೆದು ಪೋಗಿ (ಅಂಕ. ೪-೦೨ ಕ). **ಪೊಸಪಸೆ :** ಮಿಸುಪವೆಸಟ ಪಸರದಿನೆಸೆವ ಪೊಸಪಸೆಯೊಳ್ ಮೆಯ್ಯ ನೀಡಾಡಿ ಪೊಳೆವುಪಡೆದ ಪಾಲ್ಗಡಲ ತೆರೆದುಱುಗಲೊಳ್ ಪವಡಿಸುವ ಸಿರಿಯಂ ಪೋಲ್ತಿರ್ದಳ್ (ಶಬ್ದಸಾ. ೩೦೭). **ಹೊಸಹಸೆ :** ಹಂಸ ತೂಲಸ್ಥಲದೊಳ್ ತಾಂ ಬೈತೊಡು ಮುಳ್ಳಗಳ ಹೊಸಹಸೆಯೊಳ್ ಬೈತೊಡಂ . . . ಸರ್ವಮೊಂದಂದಮೆಂದಾಂ ಸಲೆ ಕಾಣ್ಬಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ಶಶಾಕ. ೬೩). [ಪೊಸ + ಪಸೆ೨]

**ಪೊಸವಳಕು, ಪೊಸವಳುಕು** (ನಾ). ನೂತನಸ್ಫಟಿಕ : ಪೊಸವಳಿನ ಸೆರೆಯೊಳ್ ನೆಟಲೆಸೆಯೆ ಮೊಗಂಬೊಕ್ಕು ಪಾಯ್ದು ಕರಿಯುಂ ಹರಿಯುಂ ಪೊಸವೋರ್ತಮನಜ್ಞಿಮಮೆ ಪುಟ್ಟಿಸೆ ನೆಟಲೊಳ್ ಪೋರ್ದು ಸೀದೆಗಿಡು ವುವು ನಗದೊಳ್ (ಶಾಂತಿಪು. ೨-೦೦೩). **ಪೊಸಪಳಕು :** ಪೊಸವಳುಕಿನ ಗಂಧಾಶ್ಮದಿನೆಸೆವ ಸುವರ್ಣಾದ್ರಿಯಂತೆ ಪಾಸಿದ ಸಿತಸದ್ವಸನದಿನೊಪ್ಪುವ ವಜ್ರದ ಪಸವಣೆಯುಂ ಪೊನ್ನ ಜಗುಲಿ ಕಣ್ಗೆಸದಿರ್ಕುಂ (ತ್ರಿಪುಪು. ೦೬-೩೬).
[ಪೊಸ + ಪಳಕು (< ಪಟಿಕ)]

**ಪೊಸವಳ್ಳಿ, ಹೊಸವಳಿ, ಹೊಸವಳ್ಳಿ, ಹೊಸಹಳಿ, ಹೊಸಹಳ್ಳಿ, ಹೊಸಳ್ಳಿ** (ನಾ). ಒಂದು ಊರಿನ ಹೆಸರು : ವಳ್ಳಾವಿಷಯ ಪಳ್ಳಿಗ್ರಾಮೋ ಕಡಿಗಾಲಊರ್ಪೊಸವಳ್ಳಿ ವಿಹಾದುಂಣ್ಣಾವಳ್ಳಿ (ಮೈಆಂ. ೦೯೩೦. ೩-೦೯; ಸು. 476); ಪುಂನಾಡಅಱುಸಾಸಿರಮಂ ತಟ್ಟಕಾಡು ಮಾಯ್ದಲೆಗೆಯುಂ ಪೊಸವಳ್ಳಿಯುಂ (ಎಕ. IV (R). ಹಾಮಂಅ. ೦೦೩-೩ ; ಸು. 10ನೆಯ ಶಕ) ; ವೀರಸಿದ್ದೇಶ್ವರಮಹಾದೇ[ವ]ಗ್ಗೆ ಪೊಸವಳ್ಳಿಯ ನೀರಗಾವುಣ್ಣನ ಕೆಯ್ಯಲ್ಲೊನ್ನಱ ಕೊಟ್ಟು ಮಣ್ಣಾಱ ಕೊಣ್ಣು (ಎಕ. I. ೪೯-೬; 1070). **ಹೊಸವಳಿ :** ಸರಗೂರು ಉಗುನೆಯ ಹೊಸವಳ[ಸಿವನ] ಹಳ . . ಚತುಸ್ಸೀಮಾಸಮನ್ವಿತವಾದ ಕಾಲುವಳಿಗಳು ಸಹಿತವಾಗಿಟ್ಟ (ಎಕ. IV (R), ಕೊಳ್ಳೇಗಾ. ೩೦-೩೬ : 1321). **ಹೊಸವಳ್ಳಿ :** ಅಶೇಷಮಹಾಜನಂ[ಗ]ಳು ತಮ್ಮ ಶ್ರೀಹರದ ಕಾಲುವಳ್ಳಿ ಹೊಸವಳ್ಳಿ ಶ್ರೀರ ×× ದೇವರ ಖಣ್ಡಸ್ಫುಟಿತಜೀರ್ಣೋದ್ಧಾರಕ್ಕಂ ದೇವರ ನಿತ್ಯನಿವೇದ್ಯಕ್ಕಂ . . . ಮಾಡಿ ಬಿಟ್ಟ ಎರೆ (ಎಕ. VII. ಹೊನ್ನಾಳಿ. ೧೧೭೩-೦೪ : ಸು. 1250 ೪). **ಹೊಸಹಳಿ :** ಚಿರುಕನ ಹಳಿಯ ಗ್ರಾಮವೊಂದಕೆ ಎಂಭತ್ತು ವರಹ ಹೊಸಹಳಿ ಗ್ರಾಮವೊಂದಕೆ ಐವತ್ತಐದುವರಹ (ಎಕ. III (R). ಗುಂಡ್ಲುಪೇ. ೦೩೦-೬೬ : 1521) ; ಹೊಸಹಳಿಯ ರಾಯಂಣ ವಡಿಯಂಣ . . . ಯಿವರು ಮುಂತ್ತಾದ ಸಮಸ್ತರು . . . ಯಿಾ ಸಾಲವನು ಧಾರಾ ಪೂರ್ವಕವಾಗಿ ಕೊಟ್ಟೆವು (ಎಕ. II (R). ೩೫೨-೦೯; 1634); ಪಾರ್ಶ್ವ ಪಕಂಲ ಪವಿತ್ರನುಂ ಕೃಷ್ಣರಾಜಪುಂಗವನುಂ ಬೆಳುಗುಳದ ಜಿನಧರ್ಮ್ಮಕ್ಕೆ ಬಿಟ್ಟಂಥ ಗ್ರಾಮಾದಿಗ್ರಾಮಭೂಮಿಗಳ್ ಅರ್ಹನಹಳಿಯುಂ ಹೊಸಹಳಿಯುಂ ಜಿನ ನಾಥಪುರಂ (ಎಕ. II (R). ೩೩೦-೨೦; 1723). **ಹೊಸಹಳ್ಳಿ :** ಹೊಸಹಳ್ಳಿಯ

ಗ್ರಾಮವನು ಕಲ್ಲ ನೆಟ್ಟು ಕೊಟ್ಟೆಉ (ಎ.ಕ. IV (R). ಹುಣ. ೧೪೦-೦೬ ; 1580) ; ಮಹಿಶೂರ ಶ್ರೀಕೃಷ್ಣರಾಜವಡೆಯರೈಯ್ಯನವರು ವೆಂಕಟರಾಮ್ಮಗೆ ಬರೆಸಿಕೊಟ್ಟ ಕ್ರಯ ಭೂದಾನ ತಾಮ್ರಶಾಸನದ ಕ್ರಮವೆಂತೆಂದರೆ . . . ಉಪಗ್ರಾಮ ಹರಯೂರ ಗ್ರಾಮ ೧ ಹೊಸಹಳ್ಳಿಗ್ರಾಮ ೧ (ಎ.ಕ. III (R). ತಂಕಟ. ೧೦೯-೦೦; 1761). **ಹೊಸಳ್ಳಿ**: ಸಿಂಗಸಮುದ್ರವಂ ಕೂಡಿದ ಕಂಬರಲೆಯ ಹಳ್ಳವೆ ಹೊಸಳ್ಳಿಗೆ ಆ ಕಲ್ಲಿಗೆಬಿ^ಗೆ ಆ ಸೀಮೆ ಆ ಕೆಬಿ^ ಹೊರಗಣ ಹಳ್ಳದಲು ಸೀಮೆ (ಎ.ಕ. IV (R). ಹುಣಸೂ. ೩೦೬-೩೭; 1318). [ಪೊಸ + ಪಳ್ಳಿ$_1$]

**ಪೊಸವಾಣತಿ** (ನಾ). ಆಗತಾನೆ ಹಡೆದವಳು : ಹಸಿ ಬಾಣಂತಿ : ಒಡನೆಯ ಚಕ್ರವಾಕಿ ಪೊಸವಾಣತಿ ಕೋಗಿಲೆಯಾಬಿಲಿಂದು ಕೇಳ್ಗಡ ಗಿಳಿವೆಣ್ಗ ಪೊತ್ತಿನೊಳಗೆಯ್ದೆ ನವಿಲ್ ಮನೆದೇವಿ ಮಕ್ಕಳಂ ಪಡೆದುದು (ಅಗೇಶಿ. ೦-೬೪) ; ಅಂತು ಮನಂಗೊಳೆ ನೋಟ್ಪಿನಮದಬಿ ಕೆಲನೆಲದ ಪಸುರ್ವುಲ್ಲಂ ಮೇವುತಿರ್ದ ಪೊಸವಾಣ[ಣ]ತಿವುಲ್ಲೆ ಮುನ್ನ ತನ್ನ ನಡಪಿ ದುದಪ್ಪುದಬಿಂ ಪಂಚಯಕ್ಕೆಳಸಿ (ಕೃಷ್ಣಶ. ೩-೬೬ ಪ). [ ಪೊಸ + ಬಾಣತಿ ( < ಬಾಳಂತಿ) ]

**ಪೊಸವಾದಗ** (ನಾ). ಒಂದು ಊರಿನ ಹೆಸರು : ಶ್ರೀಮತ್ ಅನನ್ತ ವೀರ್ಯ್ಯಯ್ಯಂಗಳ್ಗೆಗ್ಗದೂರುಂ ಪೊಸವಾದಗವುಮುಮನಥ್ನನ್ತರಸಿದ್ಧಿಯಾಗೆ ಪಡೆದರ್ (ಎ.ಕ. I (R). ೯೬-೦೦; 978). [ ಪೊಸ + ? ]

**ಪೊಸವಾವುಗೆ** (ನಾ). ಹೊಸತಾದ ಚಪ್ಪಲಿ, – ಪಾದರಕ್ಷೆ : ಅಗಳಂಗ ರಾಜಂ . . . ಪಂಚರತ್ನಗರ್ಭಂಗಳಪ್ಪ ಮಂಗಳಜಳಂಗಳಂ ಮಿಂದು ಮೆಯ್ಯನಾಱಿಸಿ ದುಕೂಲಾಂಬರಮನುಟ್ಟು ಪೊಸವಾವುಗೆಯಂ ಮೆಟ್ಟಿ (ಶಂಕರಾ. ೦೨-೦೦೬ ವ). [ ಪೊಸ+ಪಾವುಗೆ ]

**ಪೊಸವಾಸಣಿಗೆ** (ನಾ). ಹೊಳೆಯುವ ಮುಸುಕು: ಬಾಸಣಿಸಿದ ಚಿನ್ನದ ಪೊಸ ವಾಸಣಿಗೆಯ ಪೊನ್ನ ಸಿವಿಗೆ ಪಣಿವಮಯಳಕಳಶೋದ್ಭಾಸಿ ದೆಸೆದೆಸೆಯೊಳೆಸೆಯೆ ವಿಳಾಸಂಬೆರಸಣುಗಭೋಗಿಯರ್ ಕೆಲರೆಸೆದರ್ (ಅಂಕ. ೦೦-೪೦). [ಪೊಸ+ಬಾಸಣಿಗೆ$_2$]

**ಪೊಸವಾಸಿ** (ನಾ). ಅಂತಃಪುರದವರ ರಕ್ಷಣೆಗಾಗಿ ನಿಯುಕ್ತನಾಗಿರುವ ವೃದ್ಧ: "ಅಜ್ಜಂದು ಪೊಸವಾಸಿ (ಸಾವಾಸಿ)" (ಕಪಂಕ. ಕ. ಹು); "ಅಜ್ಜಂಬುದು ಪೊಸವಾಸಿ" (ಕಶಬ. ೦೪೦). [?]

**ಪೊಸವಾಸಿಗ, ಪೊಸಬಾಸಿಗ** (ನಾ). ನಳನಳಿಸುತ್ತಿರುವ ಹೂಮಾಲೆ.– ಸರ ; ಬಾಡಿರದ ಹೂವಿನ ದಂಡೆ : ಸುರಕುಸುಮದ ಪೊಸವಾಸಿಗ ಮೆರಡುಂ ಕರತಳದೊಳೆಸೆದು ತನ್ನಯ ತೋಳೊಳೆ ದೊರೆಯೆನೆ ಬಂದತ್ತು ಸೊಪಂಬಕ್ಕೆ ಬರ್ಪಂತೆ ದೇವಗಣಿಕಾನಿಕರಂ (ಅಂಕ. ೦೦-೨೦) ; ಪೊಸ ವಾಸಿಗವಂಗಜಚಕ್ರವರ್ತಿಗಂದೆತ್ತಿದ ವಿಜಯಕೇತನವಮನೊತ್ತರಿಸುತ್ತಿರೆ ಚಲ್ಲ ವಾಡಿ ಪೂವೆತ್ತುವ ಮಾಲೆಗಾರ್ತಿಯರನಂದರಿಕೇಸರಿ ನಿಂದು ನೋಡಿದಂ (ಶಂಕರಾ. ೪-೬೦) ; ಪೊಗಟ್ಟಾಕೆ ಪಣಿ ನಾಣಿನಿಸಗಲೆ ನಯಂ ಬೀಜಿ ದಿಟ್ಟ ನೆಯ್ದಿಲ ಪೊಸವಾಸಿಗದೊಳೆಸೆಯೆನೆ ಕುಮಾರನ ಪೆಗಲೊಳ್ ನೆಲೆ ನೆರೆಯ ಮಾಲೆ ಮೂಡಿದ ತೆಱದಿಂ (ಚಂತಂ. ೩-೦೩೬). **ಪೊಸಬಾಸಿಗ** : ಕಟ್ಟಿಯ ಮೇನೊ ಮಾಲೆಗಾಱನ ಪೊಸಬಾಸಿಗಂ ಮುಡಿವ ಭೋಗಿಗಳಲ್ಲದೆ ಬಾಡಿ ಪೋಗದೇ (ಅಶಂಕ. ೦-೪೩) ; ಪೊಸಬಾಸಿಗವಂ ಬಿಸುಡುತೆ ಮಿಸುನಿಯ ಭೃಂಗಾರಿಗಳ ಘಟಂಗಳನೊಡೆವುತ್ಸವಸದ ಕರ್ಪುರವಂ ತಾಪಸನುರುಮುಂಳಿ ಸಿಂದೆ ಮಾಡುತಿರಲಂತಾಗಳ್ (ಕೃಷ್ಣ. ೨-೬೩). [ಪೊಸ + ಬಾಸಿಗ]

**ಪೊಸವಾಳೆ** (ನಾ). ಎಳೆಯದಾದ ಬಾಳೆ: ಪಳಗಪ್ಪುರವನಿನೀರ್ ಪೊಸವಾಳೆಯ ಸುಳಿ ಕಮ್ಮಿದುಮಾದಲೆರಳೆಯಸುಗೆಯ ತಳಿರ್ . . . ಬಳಿಪರ್ಣಿಪ್ಪನ ಬಾವನ್ನದಿನಾಳೆಯರೆಳಸಿ ಕರಂ ಸತ್ಕರಿಸಲು (ಅಹುಳ. ೪-೪೦). [ಪೊಸ + ಬಾಳೆ$_1$ (<ಬಾಱ$^3$) ]

**ಪೊಸವಿಲ್** (ನಾ). ಹೊಳೆಯುವ ಬಿಲ್ಲು : ಇಸಲೊಡರಿಸುವಿಂಗೋಲಿನ ಮಿಸುಗುವ ಪೊಸವಿಲ್ಲ ಜೇವೊಡೆಯ ದನಿಯವೊಲೆಡ್ಡೆಸಿಯೊಳ್ ನೇವುರದುಲಿ ಪಸರಿಸೆ ಮೆಲ್ಲನೆ ಚೆಲ್ಲಗಾರ್ತಿಯರ್ ನಡೆತಂದರ್ (ಅಮ್ರ. ೯೩) ; ಪೊಸವಿಲ್ಲಂ ತೋಳ್ಗಲದಿಂ ಪಸರಿವುದಾಳಲ್ಲ ಪತ್ತಿ ಬಳಸುತೆ ಬೆನ್ನೊಳ್ ಮಿಸುಗುವ ಸಿಂಪುಗಳಂ ತಾಳ್ದಿಸೆವುದು ಪುಳುವಲ್ಲ ತೀರದು ಪೇಳ್ ಲಲಿತಾಂಗೀ (ಕೃಷ್ಣ. ೨೪-೦೭೩). [ಪೊಸ + ಬಿಲ್$_1$]

**ಪೊಸವಿಸಿಲ್, ಪೊಸಬಿಸಿಲ್** (ನಾ). ಎಳೆಯ ಬಿಸಿಲು ; ಹೊಂಬಿಸಿಲು : ತೆಕ್ಕನೆ ತೀವಿದ ತಮಾಲತರುಗಳುಮಂ ಪೊಸವಿಸಿಲ ಪೊಳೆಪಿನಿಂ ನುಣ್ಣ ನುಜ್ಜ್ವಳಿಪ ರನ್ನದೆಳವೆಳಗಿನ ಬಳೆಗದಿಂ ಬಣ್ಣಿಸಿ (ಕಾಕಂಚ. ೩೨೬): ಪೊಸ ವಿಸಿಲೊಳ್ ಮುಗುಳ್ಗಳ್ ಸಡಿಲ್ದುಸಿರ್ಪಂತೆ . . . ಬೆಳಪ್ಪನೀಗೆ ಪರಂಗಳು (ಕಾವ್ಯಾ.ಕ. ೯೦೬). **ಪೊಸಬಿಸಿಲ್** : ಪೊಸಬಿಸಿಲದು ಪೆಱದೆಗೆದಿರೆ ಕುಸುಂಬೆಯು ಮುಡುಸಮೂಹಮುಂ ಮಿಸುಪವೊಲೇನೆಸೆದುದೊ ಪವಳಂ ಮುಕ್ತಾವಿಸರಂ ಜಾಂಬವಜಳಂ ಪೆಡಂಮೆಟ್ಟಲೊಡಂ (ಅಕಂಕ. ೬-೦೦೪). [ಪೊಸ+ಬಿಸಿಲ್]

**ಪೊಸವುಟ್ಟಿ** (ನಾ). ಹೊಸದಾಗಿ ರಸ ತುಂಬಿದ ಜೇನುಹುಟ್ಟು : ಮುಸುಱಿತು ಕೋಂಟೆಯುಂ ಮಸಗಿ ಜೇಂಬುಬಿಗಳ್ ಪೊಸವುಟ್ಟಿಯಂತೆ (ಆಶಂ. ೨-೦೦೬). [ಪೊಸ + ಪುಟ್ಟಿ$_2$]

**ಪೊಸವುಣ್** (ನಾ). ಆಗತಾನೆ ಉಂಟಾದ ಗಾಯ : ಹಸಿಯಾಗಿರುವ ಗಾಯ : ಇಬಿ ಕಿಬಿವನೊಡಬಿ ಕೈರಂದಬಿ ಮುಂಬಿ ನಿಟ್ಟೆಲ್ಲನರಿದು ನೆಱ[ನೆ]ಡೆಗಳ್ ಬಾಯ್ದೆಱೆಯೆ ಪೊಸವುಣ್ಣಳೊಳ್ ಪೊಯಲ್ ಮಱುಗುವಿನಂ ಲೋಹವಾರಿಯುಂ ಮಱುಗುವಿನಂ (ಚನ್ದ್ರಾ. ೦೨೬-೩) ; ಹರಿ ಶಸ್ತ್ರ [ಹತಿಯಿಂ]ದಪ್ಪಾವ ಪೊಸವುಣ್ಣೆತಂಗೆ ಮೆಯ್ಯೊಳ್ ನವಾಭರಣಂ ಶೋಭಿಸುವಂತೆ ಶೋಭಿಸುವುದು (ಚಂತಂ.೪-೬೪). [ಪೊಸ + ಪುಣ್$^1$]

**ಪೊಸವುರ, ಹೊಸವುರ** (ನಾ). ಒಂದು ಊರಿನ ಹೆಸರು : ಶ್ರೀಮತುಷಾ ಮಹಾರಾಜರ್ ಪ್ರೀತಮವಿರಾಜ್ಯಂಗೆಯೆ ಲೋಕಗಾಳ್ಗೆಪೊಸವುರಂ ಬ್ರಮ್ಮದೆ ಕೊಟ್ಟು (ಮ್ಮಆ. ೦೯೭೩. ೦೦-೩; ಹ. 788). **ಹೊಸವುರ** : ಈ ಕಲ್ಲಿಗೆ ಬಡಗಲು ಹೊಸವುರಕ್ಕೆ ವಾಯುವ್ಯಮೂಲೆ ಬಸವನ ತಿಟ್ಟನ ಹೊಲದಲ್ಲಿ ನೆಟ್ಟ ಕಲ್ಲು ೧ (ಎ.ಕ. IV (R). ಚಾಂಕಶ. ೯೯-೩೪೦; 1722). [ಪೊಸ + ಪುರ$_2$]

**ಪೊಸವುಲ್, ಪೊಸಪುಲ್** (ನಾ). ನಳನಳಿಸುವ ಹುಲ್ಲು ; ಎಳೆಯ ಹುಲ್ಲು : ಪಳಿಗೊಂದೆ ಬಿಳ್ದ ಪೊಸವುಲ್ಗಳ ಪೊದಱೊಳ್ಸನ್ನನತ್ತುವವರಿಲ್ಲದೆ ಮೇಣ್ಪಳಲುತ್ತಿರ್ದಪುದು (ಶ್ರ.ಕಾ. ೦೦-೬). **ಪೊಸಪುಲ್** : ಪೊಸ ಪುಲ್ಲೊಳ್ ಕಿಚ್ಚನಿಟ್ಟೊದಿದೊಡುರಿದುರಿ ಕೂರ್ಪಾಗ್ರಮುಂ ಪತ್ತೆ . . . ನಂದಿಸಲೇತಂ ಪಾಂಥನುದಾಜಡೆ ನಡುಮಡುಮಂ ಪೋಗಿ ಬರ್ದ್ದುಕಿಲಂ ಕಂಪಿಸುತಿರ್ದಂ (ಅಂಕಾಪ. ೯-೨೦). [ಪೊಸ + ಪುಲ್]

**ಪೊಸವೂ, ಪೊಸಪೂ, ಹೊಸಹೂ** (ನಾ). ಬಾಡದೆ ಇರುವ ಹೂವು ; ನಳನಳಿಸುತ್ತಿರುವ ಹೂವು : ಜಲಜಲನೊ[ಟ್ಟು]ತಿರ್ಪ ಪರಿಕಾಲ್ ಪರಿಕಾಲೊಳಳರ್ಕೆಗೊಂಡ ನೆಯ್ದಿಲ ಪೊಸವೂ (ಶಂಕರಾ. ೦-೩೩) ; ತನಗನು ರೂಪವೆಂಬಿನೆಗವೊರ್ಪ ಕುಮಾರತಪಸ್ವಿ ದೇವತಾರ್ಚನೆಗೆ ಪನಕ್ಕೆ ಬಂದು ಪೊಸವೂಗಳನರ್ತಿಯೊಳಾಯ್ದು ಕೊಯ್ದು ಬೆನ್ನನೆ ಬರಲ್ (ಅಂಕ. ೩೪೦). **ಪೊಸಪೂ** : ಪೊಸಪೂವಬ್ಬಿನಿಯೊಂದಱೊಳ್ ಸೊಗಯಿಕುಂ (ಅಂಕ. ೬ ೩೪). **ಹೊಸಹೂ** : ಸಿರಿಮುಡಿಗೆ ಹೊಸಹೂಗಳಂ ತಂದು ಸೂಡುತುಂ (ಶಂಕರಾ. ೦-೩೬). [ ಪೊಸ + ಪೂ$_2$ ]

**ಪೊಸವೂರ್, ಹೊಸವೂರು, ಹೊಸೂರು** (ನಾ). ಒಂದು ಊರಿನ ಹೆಸರು : ಇಂತಿದಕ್ಕೆ ಸಾಕಂಬಾಟ ಕಂಭಯ್ಯನುಂ ಆಸಾಗೊರ ಕನ್ನನುಂ ಪೊಸವೂರ ಬೇದಮ್ಮನುಂ . . . ಸಾಕ್ಷಿ (ಎ.ಕ. XI. ಚಿತ್ರದು. ೬೪-೨೬; 968); ಆಯ × ಪೊಸವೂರ ತುಱುಪಂ ಮಗುಟ್ಟು × × × ಐದ

ಕೊಳ್ಳಿಯ[ಣ್ಣ] ಸತ್ತು ಸುರಗತಿಗೆ ಸನ್ದಂ (ಎಕ. III (R). ಗುಂಡ್ಲುಪೇ. ೩೦-೬ ; ೧೦೫೩ರ ೫೫). **ಹೊಸವೂರು :** ಹೊಸ[ವೂರು] ಅಲಗಿಕೊಂಡನ ಹಳ್ಳಿ . . . ಮುಂತಾಗಿ × × ವಣ ಚತುಸ್ಸೀಮಾಸವುನ್ವಿತವಹ ಕಾಲು ವಳಿಗಳು ಸಹಿತವಾಗಿ (ಎಕ. IV (R). ಕೊಳ್ಳೇಗಾ. ೩೦-೬೬ ; ೧೩೨೧).

**ಹೊಸೂರು :** ಪುನರ್ವಸುನಕ್ಷತ್ರದಲು ಹೊಸೂರಾದ ಯಳುಚಲ ಹೊದ ವಿಚಲು ಬೈರವುಂಗಲದ ಅಶೇಷ ಮಹಾಜನಂಗಳು . . . ಬಿಟ್ಟು ಕೊಡಂಗೆ (ಎಕ.IV (R). ಎಳಂದೂ. ೦೩-೬ ; ೧೨೮೩);ಬೊಮ್ಮಿದೇವವೊಡೆಯರಿಗೆ ಹಡಹಿ ಹೊಸೂರ ನಾಡೊಳಗನ ಮಾಚುವಳಗೊಂಕನು ಬಲಾಳಪುರವಾಗಿ ಆಚಂದ್ರಾರ್ಕಲೂ ಸರ್ವಮಾನ್ಯವಾಗಿ ಧಾರಾಪೂರ್ವಕವಾಗಿ ಕೊಟ್ಟೆಉ (ಎಕ. X. ಗೌರೀಬಿ. ೦೬-೦೬; ೧೩೩೩); ಊರಿನ ಹೆಸರು 'ಹೊಸೂರು' ಆದರೂ ಜನರಲ್ಲಿ ಮಾತ್ರ ಹಳೆಯ ಸಂಪ್ರದಾಯದ ಕೊಳೆ ನುಸಿಹಾಂತವಾಗಿ ತುಂಬಿ ಕೊಂಡಿತ್ತು (ಹೊಸೂಕ. ೦೬). [ಪೊಸ + ಊರ್]

**ಪೊಸವೆಣ್**, ಹೊಸವೆಣ್ (ನಾ). ನವಯುವತಿ : ಕಡುಚೆಲುವೊಪ್ಪೆ ಸಾರ್ದ ಪೊಸವೆಣ್ಣದನಾರಯೆ ಮುನ್ನವೇಂ ಕರಂಬಿಡಿದೆನೊ ಮೇಣ್ ಕರಂಬಿಡಿಯೆನೋ ಎನುತಂ ಮನದಲ್ಲಿ ನಿರ್ಣಯಂಬಡೆಯದೆ (ಶಾಕುಂತ. ೬೬-೦೦೯). **ಹೊಸವೆಣ್.**

**ಪೊಸವೆಂಡಿರ್, ಹೊಸವೆಂಡಿರ್** (ಬಹುವ) : ಶ್ರೀಮದೆಚಿಯಪ್ಪರಸನ್ ಸಮಸ್ತರಾಜ್ಯಙ್ಗಳ್ಗೆಯುತ್ತಮಿರೆ ಅವರ ಸಾಮನ್ತಂ ಶ್ರೀಮುತ್ತರ ಅತಿ ರಥಗಣ್ಣ ಪೊಸವೆಣ್ಡಿರಟ್ಟಿ ಬೀಸಿ ತಪ್ಪದೊಣ್ . . . ಆಸನ್ದಿನಾಡನಾಳು ತಿರೆ (ಎಕ. XV. ಅರಸೀ. ೨೦೫-೯ ; ಹು. ೮೯೦); ಕಳಸಂ ಕನ್ನಡಿ ಗುಡಿ ವಜ್ಜಳ ಸುವ ಮಾಂದಳಿರ ತೋರಣಂ ದೆಸೆದೆಸೆಯಂ ಬಳಸಿರೆ . . . ಪೊಜಿಮುಟ್ಟ ರೊಸಗೆಯಿಂ ಪೊಸವೆಂಡಿರ್ (ಕಳ್ಮಿಗಾ. ೩೨೬) ; ಆಧುನಿಕಕವಿತೆಯೂ ಹಸು ಮಕ್ಕಳಂತಾಡುವುದು. ಹೊಸವೆಂಡಿರಂತೆ ನಗುವುದು (ಶಾಹಿಕಿ. ೯೬).

[ಪೊಸ + ಪೆಣ್]

**ಪೊಸವೆಸರ್** (ನಾ). ಬೇರೆಯಂ ಹೆಸರು : ಪೊಸ – ಪೆಸರ್, ಪೊಸವೆಸರ್ ; ಎಳ್ – ಬಿದಿರ್, ಎಳೆವಿದಿರ್ (ಶಬ್ದಮಣಿ. ೩೦ ವೃ.ಯೋ). [ಪೊಸ + ಪೆಸರ್]

**ಪೊಸವೆಸಲ್** (ನಾ). ಮೊದಲನೆಯ ಹೆರಿಗೆ ; ಪ್ರಥಮಪ್ರಸೂತಿ : ಪೊಸ ಮೆಸರಾದ ಪೆಣ್ಗಳ ಜನ್ನನದ ಬಿಗುರ್ಪಿಟಿದು ತೀವಂತೆ ತೊಳ್ವೆಂಡಿರ್ಗೆ ಕಿನುಬ್ಬರಮಡಂಗಿ ತೀಡುದು (ಉಪಶಿತ್ಯ. ೯೬-೩). [ಪೊಸ + ಬೆಸಲ್]

**ಪೊಸವೆಳ್ದಿಂಗಳ್** (ನಾ). ಚೆಲುವಾದ ಬೆಳುದಿಂಗಳಂ ; ಮನೋಹರವಾದ ಬೆಳುದಿಂಗಳು: ಪೊಸವೆಳ್ದಿಂಗಳ್ ದೆಸೆದೆಸೆಗೆಸೆದುದು ಕುಮುದವನವಾಲದಿರ್ ದಂಬಂತಿರದೇನೆಸದುದೊ ಕಟಾಕ್ಷಮಾಲಾಪ್ರಸರಂ ಭ್ರೂಲಾಸ್ಯಸೌಂದರಂ ನರ್ತಕಿಯಾ (ಆದಿಪು. ೯-೩೯); ಪೊಸವೆಳ್ದಿಂಗಳ್ ಪಗಲೊಳಮಸೆವಂತಿರೆ ದಂತ ಕಾಂತಿಗಳ್ ಏಳು ನುಡಿದಂ (ಶಾಂತಿಪು. ೯-೦೩೬); ಪೊಸವೆಳ್ದಿಂಗಳ್ಪೊಸುಳಿದ ಮಿಸುವ ಕುಳಾದ್ರಿಗಳ ತೆಱದಿ ವಸುಂತಿನ ಭವನಪ್ರಸರದೊಳತಿಲೀಲೆಗಳಿಂ ದೆಸೆದಿರ್ದುವು ಸಪ್ರಮದದ ಭದ್ರಗಜಂಗಳ್ (ಶ್ರೀಪುರಾ. ೦೬-೩೯).

[ಪೊಸ + ಬೆಳ್ದಿಂಗಳ್]

**ಪೊಸವೆಳ್ಪು** (ನಾ). ಅತಿಶಯವಾದ ಬಿಳುಪು : ಪಸರಿಸಿದ ಪಯಃಪೂರದ ಪೊಸವೆಳ್ಪು ನಿಜಾಂಗರುಚಿಯ ಪೊಜಪೊಜಗೆ ಪೊದಟ್ಟಿಸಿದಿರೆ ಬೆಳ್ಮುಗಿಲಿಂದಂ ಮುಸುಕಿದ ಬಾಲಾರ್ಕಬಿಂಬಮಿರ್ಪಂತಿರ್ದಂ (ಆದಿಪು. ೬-೯೨); ಒಳಗೆಸೆವ ವೃಷಭಸಂಗದ ಬೆಳರ್ವಣ್ಣಂ ಪೊಗೆ ತೀವಿತೆನೆ ಪೊಸವೆಳ್ಪುಣ್ಮಿಸಿದುದು ತನು ವಿನೊಳ್ಮೊಮಳೆಗೆ (ವೃಷಭ ೬-೩). [ಪೊಸ + ಬೆಳ್ಪು₁]

**ಪೊಸವೇಟ, ಪೊಸಬೇಟ, ಹೊಸಬೇಟ** (ನಾ). ಮೊದಲ ಪ್ರಣಯ: ಪೊಸವೇಟವೆಂಬ ಚೆಲ್ವಿಡಿದೆಳವಾವರು ಪುಳಕಮೆಂಬ ನವಾಂಕುರದಿಂ ವಿಳಾಸಮಂ ಪಡೆದು . . . ಸುಸಿಲೆಂಬ ಬಸಂತದೊಳೇಂ ಪೊದಟ್ದುವೋ (ಆದಿಪು ೦೨-೨೮), ಪಲ್ಲವಾಧರ ದಂತ (ಕುಚ ಪೊಗರುಗುವ) ಧಮ್ಮಿಲ್ಲದೆ ಮೆಱೆವ ಹೆಣ್ಣುಗಳು ಪುಲ್ಲದಳಾಕ್ಷಗೆ ಪೊಸವೇಟ ಪುಟ್ಟುವಂತೆಲ್ಲರಿಬ್ಬಗೆಯಾದ ರಾಗ (ಪೊಟ್ಚರ. ೦೯-೬೩); ಪೊಂಗುವ ಪೊಸವೇಟದ ಗೋಪಾಂಗನೆ ತನ್ನಳವು ಗಿಡಿಸಿ ಪೊಮ್ಮುಱಿದುಸಿದಾ ಮಂಗಳಮೂರ್ತಿಯ ಸಿಂಗರದಿಂಗಿತವುಂ ಕೆಳದಿಗಿಂತು ಬಗೆವುಗೆ ಪೇಟ್ದಳ್ (ಇಂದಿರಾ. ೦೦-೨೯). **ಪೊಸಬೇಟ :** ಮತ್ತ ಮೊಂದೆಡೆಯೊಳೊರ್ವಳ್ ತನ್ನನುಱಿದ ಪೊಸಬೇಟದಾಣ್ಮನನೇಗೆಯ್ದುಂ ಪೋಗಲೀಯದೆ ತನ್ನೀವನೆ ತೋಱಿ (ಶಂಕರಾ. ೯-೯೬ ಪ). **ಹೊಸಬೇಟ :** ತಲೆಯಲಿ ಟಿರಿದು ಕೊಂಡಲುಗಳೌಷಧಿಗಿಲ್ಲ ಸಲೆ ಕುಚಯುಗಳವಿಂಗಿದವು ಹೊಲೆಗೆಟ್ಟು ಹೊಸಬೇಟಗೆಯ್ದು ಪಾತಕಿ ಮೊಗ್ಗಮೊಲೆವೆಂಗಳಿಗೆ ಪೇಳ್ದವರೇ (ಪೊಟ್ಚರ. ೦೯-೬೮). [ಪೊಸ + ಬೇಟ (< ಬೇಂಟ)]

**ಪೊಸವೇಟಕಾರ್ತಿ** (ನಾ). ಯುವಪ್ರೇಮಿಯಾದವಳು: ಬೆಳಗಾಯ್ತೆಂ ಬೊಂದಟಲಗ್ನೆಸಲ್ ಪೊಸವೇಟಕಾರ್ತಿಯರ ಬಿಸುಸುಯ್ಯೊಳ್ ಬೆಳಗಿದು ದೆಂಬಿನಮಾಗಳದೆಂ ಕೊರಗಿದುದೂ ಕುಮುದಿನೀವಿಸ್ತಾರಂ (ಕಾದಂಬ. ೦೬೩); ಪೊಸವೇಟಕಾರ್ತಿಯರ್ತಮ್ಮ ಕನ್ನೆವೇಟಮನವನೊಳಾಗದೆ ಕಟ್ಟಿವೆಂದು ಕಟ್ಟುಗೆಡೆಯೆಯ್ದು (ಅರ್ಧನೇ. ೩-೨ ಕ).

[ಪೊಸವೇಟಕಾಱ + – ತಿ₁ (< – ಇತ್ತಿ)]

**ಪೊಸವೇಟಕಾಱ** (ನಾ). ಯುವಪ್ರೇಮಿಯಾದವನು: ಮತ್ತಮೊಂದೆಡೆ ಯೊಳೆಂದೆ ಪೊಸಯಿಸಿದ ಪೊಸವೇಟಕಾಱರಪ್ಪ ಕಡುನಲ್ಲರಿರ್ಪರಿರೆ (ಅಂತ್ಯ. ೦೨-೨೬ ವ). [ಪೊಸವೇಟ + – ಕಾಱ]

**ಪೊಸವೊಗರ್, ಪೊಸವೊಗರು, ಹೊಸಹೊಗರು** (ನಾ). ಉಜ್ವಲ ವಾದ ಕಾಂತಿ: ನೇಸರೇಂ ನಗುನಗುತ ನಲ್ಮೆಗಳ ತೊಡವೆನಲ್ ಸೂಸುವಂ ಕದಿರ್ಗಳಂ ಕಳ್ತಲೆಯ ಸುಡುವಂ ಪೊಸವೊಗರ್ ಕೋದಿರ್ಪ ಪೊಳ್ತೆಳೆಯನೆಳೆ ಬಿಡುವ ಪೊಸಮ ನಲದೊಳ್ಪುಗಳ ಬೆಳ್ಳೆಳ್ಪ ತೊಡೆವಂ (ಕಾಂಚನ. ೬೦-೦೨೯). **ಪೊಸವೊಗರು:** ಹಸುರು ಹೊಲದುಸಿರಾಗಿ ಬೀಸುತಿರೆ ತಂಗಾಳಿ ಸುಸಿಲು ಮೈ ವಡೆಯುತಿದೆ ಪೊಸವೊಗರ ಪೆಂಪು (ಕಾಂಚನ. ೬೬-೦೦೬). **ಹೊಸಹೊಗರು :** ಹೊಸಹೊಗರ ಜವ್ವನ ಸಿರಿಯ ಜೋತಣೆ ಜನಮನವನಾವರಿಸಿದುದು ನಿಪ್ಪಸರದಲಿ ಪಾಂಚಾಲನಂದನೆಯ (ಕುಮಾರ. ೦೩-೨೬) ; ಬಂಬಲುಗುರುಳ ಹೊಸಹೊಗರ ಕಲಿತ ಮುದದುಬ್ಬುಗಳ . . . ಪುಳಿನಜಘನಸ್ಥಳದ ದಾನವಸತಿಯರಿರ್ಪರದೊಂದು ಠಾಣದಲಿ (ಕೂರಂಬ. ೫-೨-೬೯).

[ಪೊಸ + ಪೊಗರ್]

**ಪೊಸವೊಗರು** ' ಪೊಸವೊಗರ್ ' ನೋ.

**ಪೊಸವೊನ್, ಪೊಸಪೊನ್, ಹೊಸಹೊನ್ನು** (ನಾ). ೧. ಹೊಳೆಯುವ ಚಿನ್ನದ ನಾಣ್ಯ,— ವರಹ : ಇನ್ನಿವಕೆ ಬಡ್ಡಿಯೊಳೀತಮನೆನ್ದು ಪತ್ತು ಗದ್ದಿನ ಪೊಸವೊನ್ನನಿತ್ತನು (ಕೌಷ್ಟಾ. XX. ೫೫-೨೯ ; ೧೦೮೨). **ಪೊಸಪೊನ್ :** ೨. ಹೊಳೆಯುವ ಚಿನ್ನ,— ಬಂಗಾರ : ಪೊಸಪೊನ್ನ ವೇದಿ ನಾಲ್ಕುಂ ದೆಸೆಗಳೊಳಂ ಬೆಳ್ಳಿವೆಸದ ಬಾಗಿಲ್ವಾಡಂ ಪಸರಿಸಿದ ಸಕಳಮಂಗಳವಿಸರಂ ನಿಧಿಸಮಿತಿ ಯಕ್ಷರಕ್ಷಕರೆಸೆಗುಂ (ಶಂಕ್ರಪು. ೦೫-೫೫) ; ಲಾವಣ್ಯಾಮೃತ ರಸದೊಳ್ ತೀವಿದ ಪೊಸಪೊನ್ನ ಮಿಸುವ ಶುಕ್ತಿಕೆಗಳೆನಲ್ ದೇವಿಯ ತಾಂಬೂಲಚ್ಛಾಯಾವಿಮ್ಮಿತಮಾದ ತಳ್ಳದಂಪುಗಳೆಸೆಗುಂ (ಪುಷ್ಪದಂ. ೩-೯೮). **ಹೊಸಹೊನ್ನು :** ೨. ಹೊಗರಾಂತ ಹೊಸಹೊನ್ನ ರಸ ಕಾಯ್ದಿರೆ ಕಂಡು ಸೆಗಣಿಯೊಳೆಱೆವಂತೆ ಮೊಱದಿ ಮೃಗಮದಗಂಧಿಯರ್ ಗೋಮಯದಿಂ ಮುದ್ದುವಾಗನ ದೇಹವ ಸಾರ್ಚಿದರು (ಪೊಟ್ಚರ. ೦೬-೨೦) ; ಕಿವಿಯೊಳೊಪ್ಪುವ ನಾಗರ ಪಣೆ ಹೊಸಹೊನ್ನ ಸವಡಿದಾರದ ಕೊರಳಗಳ ನವರತ್ನಭೂಷಣದಾಳ್ಗಳ ಮೇಳದೆ ಭುವನೇಶ್ವರನೈತಂದ (ಶಂವಪ. ೦೨-೪೫). [ಪೊಸ + ಪೊನ್]

**ಪೊಸಪೊನಲ್, ಪೊಸಪೊನಲ್** (ನಾ). (ಕಾರ್ಗಾಲದಲ್ಲಿ) ಹೊಸದಾಗಿ ಉಂಟಾದ ಪ್ರವಾಹ, –ಹೊಳೆ : ಮಡದಿ ನಡೆದಳ್ ಮಾನಃಪ್ರಿಯ

ನೆಡುವರಮವರವರ ನಯನರುಚಿ ತನುರುಚಿಯೊಳ್ ತೊಡರ್ದು ಬರೆ ಪೊಸಪೊನಲ್ಗಳ ಗಡಣದಿನಪ್ಪತಿಯನೆಯ್ದುವಮಾಃಪಗೆವೋಲ್ (ಪರ್ಶ್ವ. ೯-೯೩). **ಪೊಸಪೊನಲ್ :** ಪೊಸಪೊನಲೊತ್ತಿ ಬಂದು ಪುಗೆ ಪುತ್ರದ ದಾಯೊಳವಲ್ಲಿ ವಾವೆಗಳ್ ಬಸವಬ್ದುದು . . . ಪೊಜಿವುಟ್ಟು ಬಂದು ಸಲೆ . . . ಪೆಡೆಯೆತ್ತಿ ದಲಾಡುತುವಿರ್ದುವರ್ಥಿಯಿಂ (ಚಾರ್ಶ್ವ. ೦೨-೫೬).
[ಪೊಸ + ಪೊನಲ್]

**ಪೊಸಪೋರ್ತೆ** (ನಾ). ಹೊಸಬಗೆಯ ಹೋರಾಟ,— ಕಾಳಗ : ಪೊಸವೇಳಿನ ಸಲೆಯೊಳ್ ನೆಟಲೆಸೆಯೆ ಮೊಗಂಬೊತ್ತು ಪಾಯ್ದು ಕರಿಯುಂ ಹರಿಯುಂ ಪೊಸಪೋರ್ತೆಮನಜಿಯಮೆ ಪುಟ್ಟಿಸೆ ನೆಲೆಯೊಳ್ ಪೋರ್ದು ಸೇದೆಗಿಡುವುವು ನಗರದೊಳ್ (ಚಾಂತಿ. ೨-೦೦೩); ನೀಪಕುಲನಾಗಿ ನೃಪ ತಿಲಕೋಃಪಮನೀತನನೆ ಸಾರ್ದು ಗುಣಗಣವುಂಬಿದತ್ತು ಪೊಸಪೋರ್ತೆ ಮನಪೊಕುಲಲೋಪಕನಂ ಪೊರ್ದಿ ಪಗೆಯುಃಬ್ದಂತೆ ಜಗಂ (ಚಾಂತಿ. ೩-೧೨೬).
[ಪೊಸ + ಪೋರ್ತೆ]

**ಪೊಸಸಂಜೆ** (ನಾ). ಮನೋಹರವಾದ ಸಾಯಂಕಾಲ : ಪೊಸಸಂಜೆ ಮುಗಿಲ ತುಜುಗಳ್ ಮುಸುಕಿದುದು ಪಯಃಪಯೋಧಿಯೆಲ್ಲಮನೇಬಂ ತಸದೇಮೆಸಿದುದು ಪೊಗೆವುದ್ದೆಸದೊಳೆ ತಳತಳಿಸಿ ಪೊನ್ನ ಪೊಸಕಳಸಂಗಳ್ (ಅಂಪು. ೬-೬೫); ಪೊಸಸಂಜೆಗೆಂಪಿನೆಡೆಯೊಳ್ ನಸುತೋರ್ಪ ಶಶಾಂಕಲೇಖೆ ಯಂದೆನೆಗಂ ರಂಜಿಸಿದಳರುಣಾಂಬರವನುಟ್ಟಸಿತಾಂಬುಜವಕ್ತ್ರನೇತ್ರ (ಅದ್ಭುಟ. ೩-೩೨).
[ಪೊಸ + ಸಂಜೆ]

**ಪೊಸಸಂಪಗೆ** (ನಾ). ಆಗತಾನೆ ಅರಳಿರುವ ಸಂಪಿಗೆ ; ನಳನಳಿಸುತ್ತಿರುವ ಸಂಪಿಗೆ : ಸುರಗಿ ಪೊರ್ಲೆ ಪೊಸಸಂಪಗೆಯಾ ಅರಲಿಂ ಭಕ್ತಿಯಿನಾತಂ ಪರಮಜಿನೇಶ್ವರನ ಪಾದಮಂ ಪೂಜಿಸಿದಂ (ಧರ್ಮಾಮೃ. ೩-೫೭): ಪೊಗವೆತ್ತಿ ನಿಳ್ಕೆ ಪೊಸಸಂಪಗೆಗೊಂಬಂ ಪಿಡಿದು ಪೂಗಳಂ ತಿಜುವಾ ಪೆಣ್ಬಾಗುಗೊಂಡಳ್ನಡೆ ಬಲ್ಪಿಗೆ ಜಡಿವಃಗಜನ ಪೊಗಿನಿಂಗೋಲ್ವಿಲ್ಲೋಲ್ (ಅದ್ಭುಟ. ೯-೬೦).
[ಪೊಸ + ಸಂಪಗೆ]

**ಪೊಸಸಕ್ಕರೆ, ಹೊಸಸಕ್ಕರೆ** (ನಾ). ಆಗತಾನೆ ತಯಾರಿಸಿದ ಸಕ್ಕರೆ; ತಾಜಾ ಸಕ್ಕರೆ : ಪೊಸಸಕ್ಕರೆ, ಮನಸರಕು (ಕರ್ಣಾ.ಸು. ೯೯ ಕ್ರಿಯೋ): ಪೊಸಸಕ್ಕ[ಪಾಠಾಂ. ರ್ಕ]ರೆಯಂ ನವಮಧುರಸಮಂ ಸಜುನೆಯ್ಮನೆಸೆವ ಕದಳೀಫಲವಮಂ ರಸನೆಯೊಳಿಃದುದನೆನ್ನೊಳ್ಪಿಸಸೀಗಳೆ ನಿನಗೆ ತಂದಪೆಂ ಶಶಿವದನೇ (ವೃ.ಕಾ. ೯-೭೬). **ಹೊಸಸಕ್ಕರೆ:** ಕಾಯ್ದಾಜಿದೆಮ್ಮೆವಾಲೊಳಗೆ ಮಾಂಜಿದಿರಿಸಿ ಹೊಸಸಕ್ಕ[ಪಾಠಾಂ. ಶರ್ಕ]ರೆಯು ಹಾಕಿ ಪರಿಮಳಗಳಂ ಪೊರೆಯಿಕ್ಕಿದುದುವೆ ತುಪ್ಪದ ಪಾಯಸಂ (ಸೂಕಶಕ. ೩-೦೨).
[ಪೊಸ + ಸಕ್ಕರೆ]

**ಪೊಸಸರ** (ನಾ). ಹೊಸ ರಾಗ : ಪೊಸಸರದಲ್ಲಿ ಪಾಡು ಪಿರಿದೀವನ ಕೇಳಿಯೊಳೊಃದು ಸದ್ದುರಂ ಮಿಸುಗಿರೆ ಕಾಮುಧರ್ಮಗುಣವೃತ್ತಿ ಯನಾಳ್ದಿರು (ವೃ.ಕಾ. ೯-೯). [ಪೊಸ + ಸರ]

**ಪೊಸಸಿರಿ** (ನಾ). ೧. ಹೊಸತಾದ ಚೆಲುವು,–ಸೌಂದರ್ಯ : ಕಟ್ಟುಪ್ಪದ ಮನಾಂತು ಮಿಸುಪ ಕೊಸಗಿನ ಚೆಲ್ವೀಂ ಪುಟ್ಟಿಸಿದುದೊ ಪೊಸಸಿರಿಗೆ ಜವಟ್ಟನೆ ಪೂಗಳಯನಿರ್ಪ ನೆರೆಪಾಡದ ಪೊಲ್ (ಕಬ್ಬಿಗಾ. ೦೦೭). ೨. ಅಧಿಕವಾದ ಐಶ್ವರ್ಯ, – ಸಂಪತ್ತು : ಪುಸಿನುಡಿಯು ವಿಷ ವಿಷಾಕದ ಮಸೇದೆ ಮುಖರೋಗವಾದವೋಲಿನಿತಾನುಂ ಬಸವಲ್ಲದುಸಿರ್ವ ರೆಂದುಂ ಪೊಸಸಿರಿಯಿಂ ಪ್ರಮೆವೆತ್ತ ಮಾಯ್ದು ಮನುಷ್ಯರ್ (ಅಂತಂಕೂ. ೩೬೨); ಅರರ ಸುಭದ್ರೆಯು ಕಣ್ಮನಗಳ ಪೊಸಸಿರಿಯೆಯೆಂದವಳು ಚುಂಬಿಪಳು (ಧರ್ಶ. ೪೦-೧೩೩).
[ಪೊಸ + ಸಿರಿ]

**ಪೊಸಸುಗ್ಗಿ** (ನಾ). ಮನೋಹರವಾದ ವಸಂತಕಾಲ : ಇಲ್ಲಿ ಪುಟ್ಟಿ ಪೋಗದು ಪೊಸಸುಗ್ಗಿ ಮಾಗುವಡದಿಲ್ಲಿಯು ಕೋಗಿಲೆ ಬಂದ ಮಾವು ಬೀಯದು ಕುಸುಮಮಾಸ್ತ್ರನಾಜ್ಞೆ ತವದೆಲ್ಲಿಯುಮಿಲ್ಲಿಯು ನಂದನಂಗಳೊಳ್ (ಕಂಶಕಾ. ೯-೨೦) ; ಅನಂಗನ ಬೇಂಟೆಯ ಬಿಂದದಂದದಿಂ ಬರೆ ಪೊಸಸುಗ್ಗಿ ಕೆಯ್ಗಬಿಯೆ ಕಣ್ಣೆಸದಿರ್ದುವು ನಂದನಾಳಿಗಳ್ (ಶಾಂತಿ. ೬-೦೨೪) ; ಒಸಗೆಗಳ ಪ್ಪೆಮುಟ್ಟಿ ಕಣ್ ಬಾಯ್ಗಳಿಂ ಕರೆವ ಪೊಸಸುಗ್ಗಿ ಕಾಲ್ಕೆಟ್ಟಿ ಸುಯಿಲಿಟ್ಟು ಕರೆಯೆ (ಶಾಂಅರ. ೦೨೨-೨೫೭).
[ಪೊಸ + ಸುಗ್ಗಿ]

**ಪೊಸಸುಣ್ಣ, ಹೊಸಸುಣ್ಣ** (ನಾ). ಹಳೆಯದಲ್ಲದ ಸುಣ್ಣ : ಉಪ್ಪಿಲ್ಲ ಣೆಂಗು ಸಾಸವ ತಪ್ಪಿಲ್ಲದ ಪುಣಸು ಸುಂಟಿ ಪೊಸಸುಣ್ಣವಿವಂ ಚಪ್ಪರಿಸಿ ಬಡಿದು ಮೆಯ್ಯಂ ಸೊಪ್ಪಾಗಿರೆ ಮೋದಿ ಪುಸುಪರ್ ನಿರ್ದಯಯಿಂ (ಧರ್ಮಾಮೃ. ೩-೭೧); ಪೊಸಸುಣ್ಣ ಸೂಡುಬಾಡಿರೆ ಬಸಮಬ್ದುದು ಬಟಲ್ದು ನೆಲು ಕಳವಳದಿಂ ಪೊಕ್ಕಿಸಿಪತ್ರುವನದ ಕೂರೆಲೆ ೞಸುಮದ ಕೊನೆ ಕೊಯ್ದು ಕೊಂಬಿದು ಕುಜಿಬಾದಜಿಯಪ್ಪರ್ (ಅಂಪು. ೯-೩೩). **ಹೊಸಸುಣ್ಣ :** ಹೊಸಸುಣ್ಣದುದಕದೊಳು ಮಾವಲದ ತನಿಪಣ್ಣ ಕುಸುಂಗಳನಿರಿಸಿ (ಸೂಕಶಕ. ೩-೯).
[ಪೊಸ + ಸುಣ್ಣ]

**ಪೊಸಸುಸಿಲ್** (ನಾ). ನೂತನ ರತಿಕ್ರೀಡೆ : ಪಿಸುಗುವ ಪೊಸವಸೆ ಯೊಳಸದಳಮೆಸೆಯೆ ಬಯಸಿ ಪೊಸಯಿಸಿದ ಪೊಸಸುಸಿಲ ಮಸಕದ ಬಸದೊಳ್ ಬಸದಾಗಿಯುಮಸಿಯಳೆನಗಸವಸದೊಳೆ ಬೆಸೆದು ಪೋಗಿ (ಅಂಪು. ೯-೦೨ ವ); ಪೊಸಸುಸಿಲೊಳಸಗೆ ರಮಣಂ ಮಿಸುಗುವ ನೆರೆಪೊಲೆಯೊಳಸಿವ ನುಡಿಹತಿಯನದಂ ಮುಸುಕುದೆಬಿದಜಿ ನೋಡುತ್ತ ಸವಸದಿಂ ದಾರಿದಪ್ಪುವರ್ಬಿಚರಿಯರ್ (ರಾಜಶೇ. ೦-೦೨೪); ಇಂತಿರೆ ಪೊಸಸುಸಿಲೊಳ್ ತಮ್ಮೊಂದು ಗೆಯ್ತಕ್ಕೆ ಬಸಪಬ್ದು ಮೆಯ್ಸೋಲ್ತ ಜಪ್ಪನಿಗರಿರಮಂತಿರೆ ಬೀರರಿರವಪ್ಪುದುಂ (ಅಚರಿತ್ರ. ೦೩೬-೦೨).
[ಪೊಸ + ಸುಸಿಲ್$_1$]

**ಪೊಸಾಲ್ ?** (?). (?) : ವಟ್ಟದೋಣ್ ವಜ್ರಾಪುತಾಪಾತಕಸಂಯುಕ್ತ ನಕ್ಕೆ ಪೊಸಾಲ್ಪೋಗೆ ವೃತ್ತಿ ಬ್ರಹ್ಮಕಾಮದು ಏಕಂಬತ್ತಿ ದೊಶಾಮಾಪಿರ ಕನ್ನಾಪುಲನ್ನರಬಿದ ಪಸಲಾನ್ನಿಡಿಸಿದೋರ್ ದರಾ ದಾನ (ಎಕ. VI. ಶೃಂಗೇ. ೯೩-೩ ; ಕು. ೧೦೦೯). [?]

**ಪೊಸೆ$_1$, ಹೊಸೆ** (ಕ್ರಿ). ಪೊಸದು, ಪೊಸೆದು, ಹೊಸದು, ಹೊಸೆದು (ಭೂತಕೃ). ೧. (ಹಾಲು, ಮೊಸರು ಮೊದಲಾದುವನ್ನು) ಕಡೆ ; ಮಥಿಸು : ಪೊಸದೊಡೆ ಪಾಲ್ಗಡಲಂ ಮಾಬ್ದುಸುರರ್ ಪೊಸೆದಲ್ಲಿ ಕಾಳ ಕೂಟಂಕಾರಮಂದಸದಳಮೊಗೆದಂತೊಗೆದುಃವು ಬಸಿಜಂ ನೂಜಿಂದು ಪಿಂಡಮರಾಣಾಕೀರ್ಣಂ (ಕಂಶಕಾ. ೦-೦೩೦) ; ನೀರಂ ಪೊಸೆದುಂ ಬೆಣ್ಣೆಯನಾರಾನುಂ ಪಡೆವರೊಳರೆ (ಸಮುಕ. ೯-೦೨೪) ; ಕೆನೆಯು ತೆಗೆಯದೆ ಕಡೆವ ಕಳಲು ಗೋಳಕವಾಯ್ತು ಕನೆದೆಗೆದು ನೀರಿಡದೆ ಪೊ[ಪಾಠಾಂ. ಪಾ]ಸೆದುದೇ ಮಥಿತವೆಂದೆನಿಸಿತ್ತು (ಸೂಕಶಕ. ೨-೦೩). ೨. ಕಲಕು ; ಕದಡು ; ಆಲೋಡಿಸು : (ಅ). ೩. (ಹೊಟ್ಟೆಯನ್ನು) ಕಿವಿಚು ; ಹಿಸುಕು : ಸಂತತಿಗೆ ಪಿರಿಯ ಮಕ್ಕಳ ನಾಂ ತಡೆಯದೆ ಪಡೆವನೆಂದೊಡೆನ್ನಿಂ ಮುನ್ನಂ ಕೊಂತಿಯೆ ಪಡೆದಳ್ ಗರ್ಭದ ಚಿಂತೆಯದಿನ್ನೇವುದೆಂದು ಬಸಿಜಂ ಪೊಸೆದಳ್ (ಕಂಶಕಾ. ೦-೨೯೯) ; ಬಿಸಿಲ ಕಡುಗಾಯ್ಪು ಭೋಂಕನೆ ಪಸರಿಸೆ ಬಿದಿ ರೊಡೆದು ಸುರಿವ ಬಿಸಿಮುತ್ತುಗಳುಂ ಪೊಸನೀರ್ವನಿಗಳೆಪೆಂದೊದೊಸೆದೀಂಟಲ್ ಮಿಡುಕಿ ಸೋಗೆ ಪೊಸೆದುದು ಬಸಿಜಂ (ಚಾರ್ಶ್ವ. ೯-೬೫) ; ಪೊಸೆದಳೊಡಲು ಕೂಡೆಕೂಡೆ ಸುತಮೋಃಹವಿಂದಸವಳಿದು . . . ಹಲುಬಿದಳಂಬುಜಾಕ್ಷಿ (ಕೃ.ಬಿಚಾ. ೨೦-೨೦). ೪. ತಿಕ್ಕು ; ಉಜ್ಜು ; ತೀಡು : ಕರತಳದಿಂ ಕಣ್ಣಂ ಪೊಸೆಯುತ್ತಮೆಬ್ದು ತಂತಮ್ಮ ತಲೆವೆಸೆಯೊಳಿರ್ದ ಕರವಾಳು ಕೊಂಡು (ಗದಾಯು. ೯-೬೨ ಕ) ; ಜಮದಗ್ನಿಮುನಿ ಮಾಃನಿದು ಪಕ್ಕಿಗಳಂ ಕರತಳದೊಳ್ಪೊಸದು ಕೊಲಲುದ್ಯೋಗಿಸುಪುದುಂ (ಧರ್ಮಾಮೃ. ೨-೨೨೩) ; ಹಾ ಪುತ್ರಯನುತತ್ತಿಕೊಂಡು ಮುಂಡಾಡಿ ಪಸೆಗಾ

ಪಣೆಯನೊಂದಿಸಿ ಪೊಸೆದು ಚೀರ್ದು ಬಹಳಪ್ರಲಾಪದಿನಳಲ್ದಂ (ಕೃಪಿಶಾ. ೦೩-೫೩). ೫. ಉಜ್ಜಿ ಬೆಂಕಿಯನ್ನು ಉತ್ಪತ್ತಿಮಾಡು.—ಉಂಟು ಮಾಡು : ಪೊಸೆವಗ್ನಿಯಿನುಗಿದಿರ್ದಂಕುಸದಿಂದಂಜನದಿನಾ ಪ್ರಲೇಪದಿನಿದ ನಂಜಿಸಲಿಕ್ಕಿದ ಧೂಪದಿನಳ್ಕಿಸುವಾತಂ ಬೆನ್ನ ತಕ್ಕನಾಕನೆ ನೃಪತೀ (ಶಾಂತಿಪು. ೩-೨೩). ೬. (ಹಗ್ಗ, ನೂಲು ಮೊದಲಾದುವುಗಳನ್ನು) ತಿರುಚು ; ಹುರಿಮಾಡು : "ಪೊಸೆ-ರಜ್ಜುಕ್ರಿಯಾಯಾಂ (ಹಗ್ಗ ಹೊಸೆ). ಮಂಥ ದಂಡೇ ಚ (ಕಡೆಗೋಲು)" (ಕರ್ಣಾ) ; ಪುಲ್ಲ ಬೆಂಟೆಯುಂ ಪೊಸೆದು ಕಿಚ್ಚು ಪೊಣ್ಣೆಯ ಕೊಡನುಂ ಬೆಂಟೆಯುಮಂ ಕೊಂಡು ಪೋಗಿ ಭಟಾರರ ಮುಂದಿಟ್ಟು (ಕಣ್ಣಾ. ೦೩೩-೦೦) : ಪರಿವ ಭಂಡಿಯಾ ಕಾಲಿಂ ಕೋವರು ಮಣಲಂ ಸರವಿ ಪೊಸೆವರು ಬೆಟ್ಟುಱ ಪಿತ್ತ್ರಗರವರು ಜವನ ಮಿಸೆಯಂ ಕೀಳುವರು (ಶಾಶಾ. IX-1. ೨೯೬-೦೯ : 1190) : ಪೊಸಪೊಗರ್ ಕೋದಿರ್ಪ ಪೊಳ್ತಿಳೆಯನೆಳೆಬಿಡುವ . ಪೊಸೆದು ನೆಲದೊಳ್ಪುಗಳ ಬಾಳ್ತೆಳ್ಪ ತೊಡವಂ (ಗ್ರಾಮಕ. ೭೦-೦೨೪). ೭. (ತಲೆಗೂದಲು) ತೆಕ್ಕೆಗಟ್ಟಿರು ; ನುಲಿದು ಕೊಂಡಿರು : ನೆತ್ತಿಯೊಳಿಱೆದೆಱೆದಿನಿಸಱಿಯೊತ್ತಿ ಬಟಿಕ್ಕೆಟಿಯ ಪೊಸೆದು ಜಡೆಗೊಂಡಿರ್ದುದ್ವೃತ್ತ ಕುಚಯುಗೆಯ ಕೇಶಪಾನತ್ತ್ರಂ ಪಸರಿಸಿದ ನೆಯ್ದು ಪಸರಿಸಿದದಟಿಂ (ಕುಂಕಶಾ. ೦೨-೦೫೪) ; ಪೊಸೆದ ಕೆಂಡೆಡೆಯುಂ ಪುಲಿದೋಲ ಕಚ್ಚೆಯುಂ (ಕಾಹೂಕ. ೪೯). ೮. (ತಲೆಗೂದಲು ಮೊದಲಾದುವನ್ನು) ನುಲಿ ; ಸುತ್ತು : ಮಂದಾರಮುಖ್ಯ ಮಾದ ಅಲರ್ಗಳಂ ಮುಡಿವ ಕುರುಳಂ ಪೊಸೆದು ಜಡೆಯನಂತಳವಡಿಪರೇ ರತಿಸುಖಂಬಡೆವ ಕಾಲದೊಳ್ ಕಳೆಗೊಂಬರೇ ತಪವನು (ಕಬಪು. ೩೬-೮). ೯. ಸೇರಿರು ; ಕೂಡಿರು ; ಹೊಂದಿರು : ಬೆರಲೊಳ್ ಬೀಣೆಯ ತಂತಿಗಳೊರಸಿದ ಕೆಂಗಲೆಗಳಕ್ಷಮಾಲೆಯೊಳಿಸವಂತಿರೆ ಪೊಸೆಯೆ ಮುತ್ತು ಪವಳಂಬೆರಸಿದ ಪೋಲಾಯ್ತು ಚೆನ್ನತಪಸಿಯ ಕೆಯ್ಯೊಳ್ (ಕುಂಕಶಾ. ೬-೧೦). ೧೦. ಕೂಡಿಸು; ಸೇರಿಸು ; ಬೆರಸು : ಪೊಸೆದಾತ್ಮಜಳದೆ ಬೇಳೆಯ ರಸವಂ ಕಿವಿಯೊಳಗೆ ಪಿಜಿಗೆ ಪೋಗ್ ಕಟ್ಟುಗೆ ವಾಯಸಜಂಘೆಯ ಬೇಳೆಯ ಕಿಱುಕುಸಾಲೆ ಬೇರೊಂದನಲ್ತೆ ಸೂಟಿ್ಜ್ವರಮಾಟಿಗುಂ (ಲೋಕೋಪ. ೯-೨೪). ೧೧. ಹೆಣೆ ; ಕಟ್ಟು ; ರಚಿಸು : ರಘುವಂಶರಾಮಕೃತಿಯೊಳ್ ಪತ್ತೆಂಟು ಪದ್ಯಂಗಳಂ ಪೊಸವಂ (ಕುಂಕುಪೂ. ೦-೩೩). ೧೨. ಉಂಟುಮಾಡು; ಉಂಟಾಗಿಸು : ಶೋಭೆಯುಂ ಪೊಸೆಯುತ್ತಿರ್ದುದು ಮೂಡಲುಂ ಪಡುವಲುಂ ಚಂದ್ರಾರ್ಕಸನ್ಮಂಡಲಂ (ಶಾರಪು. ೫-೬). ೧೩. ಹರಿ ; ಕತ್ತರಿಸು : ತೊಡರಂ ಪೊಸೆದು ಪಱಿವ ಮದಕರಿಯಂತೆ ಪೊಸೆದು ನೋಡರೊಡಂ (ಶಾಂತಿಪು. ೬-೫೦ ಪ); ಆ ನಾಗಪಾಶಮಂ ಜಗತೀನಾಥಂ ಪೊಸೆಯ ಕಟ್ಟುಗಳ್ ಬಿಟ್ಟಿರೆ (ಶಾಂತಿಪು. ೬-೫೪). ೧೪. (ಹೆಜ್ಜೆಯನ್ನು) ಕೀಳು ; ತೆಗೆದಿಡು : ಪೊಸೆಯದೆ ಪಜ್ಜೆಗಳಂ ನಾಲ್ದೆಸೆಯೊಳಮೊಂದೆಂಟು ದೆವಸಮಿರುಳುಂ ಪಗಲುಂ ಮಿಸುಕದೆ ನಿಲೆ (ಸಮಹ. ೧-೦೬). ೧೫. ಹೊಡೆ ; ಬಡಿ : ಇರುಳ್ ಪೊದಲ್ದ ಜಾವಮಪ್ಪನ್ನೆಗಂ ಪೊಸೆಯೆ ಸಸ್ಯಕ್ಕೆ ನಟ್ಟಿರುಳ್ವರೆಗಮಾ ಪಿಶಾಚನಿವಹಕ್ಕೆ . . . ಅಶುಭಮೆಂಗೆ ನಿರ್ಘಾತಮಂ (ಲೋಕೋಪ. ೪-೦೬); ಚಾಟಿಯೊಳ್ ಬಡಿವುತುಂ ಸರಳಿನಿಂ ಪೊಸೆವುತುಂ ಭೂತದಿಂ ಪೊಂಪುತುಂ . . . ಬಳಲಿಸುವರೇನೆಂಬೆನು (ಕಬಪು. ೫೬-೨೬). ೧೬. ಹೊಸಕು; ನಾಶಮಾಡು; ಹಾಳುಮಾಡು : ಅ[ಬಾ]ರ್ಜ್ಯ ಪುರುಷ ಇಱಿದು ಬಸಪಿಱ[ಯದೆ] ಬೀಟ್ತ್ಸ್ವೀರನ್ ತೆಱ[ಜ]ನ ಮೆಚ್ಚದೊಂ ಪಿಸುಣರ ಪೊಸೆವೊ (ಎಂ. XXIV,೦೯೩-೧೨; ಸು.885); ಎಲ್ಲರಂಪುಮಸುತನುಂ ಸುರೇಂದ್ರಸುತನುಂ ಪೊಸೆದೀಗಳೇ ಮುಕ್ಕಿ ತೋಱಿರೇ (ಕುಂಕಶಾ. ೪-೬); ಪೆರ್ಮಾರಿಯನಾವಗಂ ಪೊಸೆಮು ನೀಂ ಮುಕ್ಕೆಂಬುದೇಂ . . . ಬೀರಮೋ (ಕಣ್ಣಾ. ೨೪೦). ೧೭. ಕೊರೆ ; ತೂತು ಮಾಡು : ರಸಮಯಮಂ ಕೃತಿಯಂ ಸೇವಿಸಿ ಏರಸಮನೆಯ್ದೆ ಜೋಡುಮಾಡುವ ವಿಬುಧಪ್ರಸರಂ ಪೊಸವಾವಂ ಸೇವಿಸಿ ಬದಿರಂ ಪೊಸವ ತುಂಬಿಯೊಡನಾಡಿದರೇಂ (ಶಕ್ತಿಪು. ೦-೫೬). **ಹೊಸೆ** : ೧. ವಸುಧೆಯಿಲ್ಲದ ಬೆಳಸು ರಾಜಾನ್ನದ ಹಸರಿಲ್ಲದ ಓಗರ ವೃಷಭ ಮುಟ್ಟದ ಹಯನು ಬೆಣ್ಣೆಯ ಹೊಸವರಿಲ್ಲದೆ ಕಂಡುಂಡೆ (ಅಪಕಂ. ೧೯೫-೬೬೦); ಹೊಸೆದರ್ರೆ ಧರೆ ಗಗನ ನಡುಗಲು ಮಸಗಿ ಮಂದರದಿಂದ ದುಗ್ಧದ ರಸಗಡಲನಾ ದೇವದಾನವರಂದು (ಕುಂಭಕ. ೫-೦೦೫); ಸಸಿಯನೊಕ್ಕಲಿಗನು ಹೊಸಮಾಕೆ ಬೆಣ್ಣೆಯನು ಅಸಗ ಸೀರೆಯನು ಅಱಿವಂತೆ ಸೂಳೆ ತಾ ಹುಸಿವರಱಿದಿಹಳು (ಸರ್ವಜ್ಞ. ೦೯೦೦). ೨. ಮಿಸುಗುವ ಸುಗಂಧವಾಳೆಯ ಹಣ್ಣ ಕತ್ತರಿಸಿ ಹೊಸತುಪ್ಪವುಂ ಕೂಡಿ ಮತ್ತವಾ ಹಾಲೊಳಗೆ ಹೊಸೆದದಂ ಹಾಕಿ ಕದಳೀ [ಪಾಠಾಂ. ನೊಸೆದದಂ ಹಾಕಿ ಕದಳಿಯ, ವಸೆದದಂ ಹಾಕಿ ಕದಳಿಯ, ಪೊಸೆದು ಹಾಕಿದೊಡೆ ಕದಳಿಯ] ಪಕ್ವಫಲಸಾರಪಾಯಸವೆನಿಸಿಕೊಂಬುದು (ಸೂಪಶಾ. ೩-೦೪). ೩. ಸಕಳಸುಖವಿರಹಿತೆಯಪ್ಪ ರತಿದೇವಿ ನಿಂದಿರ್ದು ಬಿಸುಸುಯ್ದು ಬಸಿಱಂ ಹೊಸೆದು ಕೆಯ್ಕತ್ತಿ ದೆಸೆದೆಸೆಯುಂ ನೋಡಿ (೧೦೪. ೬-೬೪ ಪ); ಕಾಳುಮಾಡಿದನೆನಗೆ ಮುನಿಪತಿ ಕೌಳಿಕಾಜಿನಲಾ ಸುಡೀ ಗರ್ಭಾಳಿಗಳನೆಂದಬಲೆ ಹೊಸೆವಳು ಬಸುಱನೊಡೆಮುಱಿದು (ಕುವ್ಯಾಪ. ೪-೪೦); ಪುತ್ರರ್ನ[ರ]ಳಿದವರೆಂದು ದೇವಕಿ ಹೆತ್ತ ಹೊಟ್ಟೆಯ ಹೊಸದು ಶೋಕಿಸಿ ಬಿದ್ದು ಹೊರಳಿದಳು (ಕಾಳ್ಯಶಾ. ೨೧-೪); ಅಯ್ಯೋ ಎಂದು ಭೋರೆಂದು ಗೋಳಿಟ್ಟು ಹೊಟ್ಟೆ ಹೊಸೆದು ಹುಚ್ಚಿದ್ದು ಹೌಹಾರಿ ಹುಯ್ಯಲಿಟ್ಟಳು (ಕಹಂಗ. ೯೬-೨೨). ೪. ವಾಸನೆಯ ಕುಸುಮುವ ಹೊಸೆದು ವಾಸನೆ ಹೋಗಿ ಆ ಸುವಾಸನೆಯೊಲ್ಲಡಗಿತ್ತೆಂಬುದನಱಿದಲ್ಲಿ ಶರಣನ ಶರಣಸ್ಥಲ (ಷೋಶಪೂ. ೦೯೩-೫೯೬); ವಿಷದ ಕ್ರೂರತೆ ಲೋಕವೆಲ್ಲವ ಘಸಣೆಸುತ ಬರಲಾ ಸಮೀರಣ ಹೊಸೆವನಂಗೈತಳದಿ ಕೋಪದಿ ನೋಡಿ ಪಡಿಸಣವ (ಕುಂಭಕ. ೬-೧೯) ; ನಾಗ ಕೈ ಹೊಸೆದ (ಪಠಶಾ. II, ೦೦೨೬). ೫. ಕಾಷ್ಠದೊಳಿಹುವಗ್ನಿ ಹೊಸೆದರೆ ತಾನಿರ್ದ ಕಾಷ್ಠವ ತಾನೆ ಸುಡುವುದು (ಶರತ. ೬೪-೫೨); ಹಸಿಯ ಸಮಿಧೆಯ ತಂದು ಹೊಸೆದರಂಟೇ ಕಿಚ್ಚು (ಸರ್ವಜ್ಞ. ೯೩). ೬. ಮಳಲ ಹೊಸೆದರೆ ಹೊಸೆದಂತಲ್ಲದೆ ಸರವಿಯ ಹಡೆಯಲು ಬಾರದು (೬ಸವ. ೫೫೪); ಹೊರಜಿ ಹೊಸೆವ ತಿರುಹುವ . . . ನೆಱ ಸುಲಿವ ಖಳರ ಕಳಕಳದ ಕೋಳಾಹಳದೊಳಾ ರೌರವಂ ಭಯಂಕರವಾದುದು (ಸಿದ್ಧರಾ. ೬-೨೯); ತಿಣ್ಣವಲೆ ಜೋಡುವಲೆ ಹೊಸೆದಿಕ್ಕಣ್ಣವಲೆ ಚಕ್ರವಲೆ . . . ಪೊಱಗಳು ವಿಂಧ್ಯನ ಕೂಡೆ (ಕಾಳ್ಯಶಾ. ೫-೦೯); ಪುನಃಪುನಃ ನೀರಿನಲ್ಲಿ ಅದ್ದಿ, ಒಣಗಿಸಿ ಅತ್ಯಂತ ತಾಳಿಕೆಯುಳ್ಳದ್ದಾಗುವಂತೆ ಆ ಚರ್ಮವನ್ನು ಹೊಸೆದನು (ಬಂಗಾಹ. ೨೨). ೧೦. ಲೋಕವನು ನಾಕಕ್ಕೆ ಬೆಸೆಯೆ ನಾಕವನು ಲೋಕಕ್ಕೆ ಹೊಸೆಯೆ ಏತಂದೆ ನಾ ಭಕ್ತಿದೇವಿ! (ಕಂಶ್ರಸ. ೫೦-೦). ೧೧. ಕನ್ನಡದ ಆದಿಕವಿ ಪಂಪ ತನ್ನ ಪೋಷಕನಾದ ಅರಿಕೇಸರಿಯನ್ನು ಅರ್ಜುನನಿಗೆ ಅಭಿನ್ನವಾಗಿ ಮಾಡಿ, ನೂತನರೀತಿಯಲ್ಲಿ ಕಾವ್ಯವನ್ನು ಹೊಸೆದುದು ಆತನ ಸಂಶೋಧನೆಯ ಪ್ರಜ್ಞಾಫಲವೆನ್ನಬಹುದು (ಸಂಶೋಧ. ೦೯೬). ೧೫. ಕೊಂಕುಸಗಳಿಂ ಹೊಸೆವ ಚಕ್ರದಿಂದಿಡುವ ಕುರುಪಿಂ ಕೆರೆವ . . . ಕರಗಸದಿ ಕೊಱೆವ ರೌರವದ ನರಕಂ ಭಯಂಕರವಾದುದು (ಸಿದ್ಧರಾ. ೬-೨೯). ೧೮. ನೆರಿಗೆ ಹಿಡಿ ; ಜೋಡಿಸು : ಹೊಸೆದು ಕಟ್ಟಿದ ಮುನ್ನ ಕಚ್ಚೆಯ ಬೆಸುಗೆ ಶಿಖಿಗಳ ಗಂಟು ಮಿಗೆ ಶೋಭಿಸುವ ಜನಿವಾರವು . . . ಎಸೆವ ಹೊಂಬಣ್ಣದ ಶರೀರದಿ ಮಿಸುಪ ವಾಮನರೂಪನಾಂತಾ ವಿಷ್ಣುಮುನಿ ಬಂದ (ಕಾಳ್ಯಶಾ. ೦೯-೨೫). ೧೯. ಕೇದಗೆ, ಸೇವಗೆ ಮುಂತಾದುವುಗಳ ಹಿಟ್ಟನ್ನು ಬೆರಳುಗಳಿಂದ ಹೊರಳಿಸಿ ಎಳೆಯಾಗಿ ಮಾಡು : ಹದನಾಗಿ ನಾರು ಹಱಿವಂತೆ ಕಣಿಕವ ಕುಟ್ಟಿ . . . ಸೇವಗೆಯಂತೆ ಹೊಸೆದು ಸಣ್ಣಕ್ಕಿವಿಟ್ಟನೊಳು ಬೆಣ್ಣೆಯನು ಕಲಸಿ ಅದಕಿಕ್ಕಿ (ಸೂಪಶಾ. ೦-೪೬). ೨೦. (ಆಲಂ) ವ್ಯರ್ಥವಾಗಿಸು : ಪೋಲುಮಾಡು : ನಾಸೇನ್ಯ ತೆಗೆದುಕೊಂಡುಹೋಗಿ ಮೂರೇ ದಿನಗಳಲ್ಲಿ ಮುಸೆದು ಬರುತ್ತೇನೆಂದು

. . . ಒಂದು ವರ್ಷವೆಲ್ಲ ಹೊಸೆಯುತ್ತ ಕುಳಿತೇನು (ಶಾಂಕಾ. ೦೯೨). ೨೧. ದುಡಿ; ಶ್ರಮಿಸು : ಹೊಸೆಯದ ಕೈಯಿಂದ ಕುಸಿದು ಹೋಹುದು ಲೇಸು ಅಸವಮಾನದವಳ ಬದುಕಿಂದ ತಿಂಗಳಲಿ ಹಸಿದಿಹುದೆ ಲೇಸು (ಸರ್ವಜ್ಞ. ೦೬೯೬).

**ಪೊಸೆದು ಮುಕ್ಕು, ಹೊಸೆದು ಮುಕ್ಕು**=ಹೊಸಕಿ ಹಾಕು ; ನಾಶ ಮಾಡು : ಈ ಮಾಜಲುಂದಿದರನೆತ್ತಿನಿಬರುಮನೊರ್ವರ್ಯೆ ಪೊಸೆದು ಮುಕ್ಕುವಂ (ಹಂಕಥಾ. ೩-೦೬ ಪ) ; ಆಳ್ವ್ರಯುಗ್ಮದಿಂದೊರಸುವ ಕೈಗಳಿಂ ಪೊಸೆದು ಮುಕ್ಕುವಗರ್ವಿನ ಕುಂಭಕರ್ಣನೀ ಧರಣಿಗೆ ದಂತ ವಕ್ರನೆನಿಸಿರ್ದ(ರ್ಪ)ದನಾನಜುವೆಂ (ಜಗ. ೦-೬೦) ; ಅನುಜರನಿತ್ತ್ರುಮಂ ಹೊಸೆದು ಮುಕ್ಕಿದೊ ವೃಕಕುಕ್ಷಿ ನಿಂದು ಮತ್ತ್ರನಗಿದಿರಾಗಿ ಬಲ್ದಡಿಗೆಯಂ ಪಿಡಿದಿರ್ದಪನು (ಕುಹಾಚ. ೦೩-೮೯) ; ದೆಸೆಯು ನುಣ್ಣನೆ ನುಂಗಿ ಸೂರ್ಯನ ಹೊಸೆದು ಮುಕ್ಕಿತೋ ರಾಹು (ಕುಶ್ವಥಾ. ೩-೨).

[ದೇ.॥ ತಮಿ. ಪೊಚುಙ್ಕು ; ತುಳು. ಪೊಯಿ; ತೆಲು. ಪೊಸಗು]

**ಪೊಸೆ₂** (ನಾ). ಕಡೆಗೋಲು ; ಮಂತು : "ಪೊಸೆ_ರಜ್ಜುಕ್ರಿಯಾಯಾಂ (ಹಗ್ಗ ಹೊಸೆ), ಮಂಥದಂಡೇ ಚ (ಕಡೆಗೋಲು)" (ಶಬ್ದಮ); "ಪೊಸೆ ಮೊಂದಂ ಕಡೆಯೇಮಂ ಮಂಥಾನಂ" (ಶಕಾ. ೩೩-೦೯೦). [< ಪೊಸೆ₁]

**ಪೊಸೆದು** 'ಪೊಸೆ₁' ಪರಾ.

**ಪೊಸೆಯಿಸು, ಪೊಸಯಿಸು₂** (ಕ್ರಿ). ೧. ಕೂಡು ; ಸೇರು : ಹೊಂದು : ಪೊಸಯಿಸಿ ನಸುಬಿಸುಪೇಜಿದ ಬಿಸಿಲಜೆಯ ಬೆಮರ್ತು ಬಂದು ಬಿಡುವಪೊಲೆನಸುಂ ಪೊಸಮುಗುಳಂ ಪೊತ್ತಿಸಿದುದು ವಸಂತದೂತಿಕೆ (ಲೀಲಾವ. ೯-೬೯). ೨. ರಚಿಸು ; ನಿರ್ಮಿಸು : ವಿಮಾರ್ಗದೊಳಂ ಪೊಸದೇಸಿಯ ನುಡಿಗಳೊಳಂ ಪೊಸ [ಶಾಶಂ. ಸ]ಯಿಪ ಬಲ್ಮೆಗೆ ಚತುರ್ಮುಖಂ ಕವಿರನ್ನಂ (ಗದಾಯು. ೦-೩೯) ; ಪುಷ್ಪಮಾಳಿಕೆಯೆಂಬಳ್ ಪಲತೆಱವಲರ ಪಸವನಂಗಳಂ ಪೊಸೆಯಿಸಿಯುಂ (ಶಾಂತೀಶ್ವ. ೦೩-೨೨೯ ಪ). ೩. ಉಂಟುಮಾಡು ; ಒದಗಿಸು : ಯುವತಿಗೆ ನಿಜವಿಡಿದು ದುಕೂಲವ ನುಡಿಸುವ ದಿವಿಜ ಕನಕನಗಪೇಖಳೆಯಂ ಧವಳಾಭ್ರಮಾಲೆಯುಂ ಸುತ್ತುವ ವಾರಿದಲಕ್ಷ್ಮಿಯೆಸಕಮಂ ಪೊಸೆಯಿಸಿದಳ್ (ಕೃಷ್ಣಪು. ೯-೬೨). ೪. ಮಾಡು ; ನೆರವೇರಿಸು : ಶಿಶುಗೆ ನಯನಾಂಶುದುಗ್ಧಪ್ರಸರದೆ ಜನ್ಮಾಭಿಷೇಕಮಂ ಮುನ್ನೋದಂ ಪೊಸಯಿಸಿ ಸರೋಜದಿಂದರ್ಚಿಸುವಂತಿಂದ್ರಾಣಿ ನೆಗಪಿದಳ್ ಕಂದಳದಿಂ (ಚಂದ್ರಪು. ೦೨-೩೩). ೫. ಪ್ರಕಟಪಡಿಸು ; ತೋರಿಸು ; ಕಾಣಿಸು : ಏಸಂ ಪೇೞ್ವಿಂ ತನ್ನಮಸೂನುವ ಪುಣ್ಯಪ್ರವಾಹಮಂ ಗ್ರಾಹಮಹಾಮೀನಕುಳೀರಾಹಿಗಳಂದೇನುಂ ಪೊಸಯಿಸಿದುದಿಲ್ಲ ನಿಜವಿಷಮತೆಯುಂ (ಚಂದ್ರಪು. ೩-೯೩). **ಪೊಸಯಿಸು₃** : ೧. ವಿಚಿತ್ರಪಾತ್ರಪರಿವರ್ತನಮುಣ್ಮುವ ತೂರ್ಯನಾದದೊಳ್ ಪೊಸಯಿಸೆ . . . ಲೀಲೆ ಕಣ್ಗೆಸವಳವಾಗೆ ಪಾಱುತ ಮಹೀಧರನೆಂಬ ವಿಯಚ್ಚರೇಂದ್ರನಂ ಭೋಂಕನೆ ಕಂಡು (ಆದಿಪು. ೨-೯೧). ೨. ಎಸೆದಿರ್ದೆಯೊಳ್ ಪಳಂಚುವ ಲಧ್ವನಿಯಿಂ ಪೊಸತೊಂದು ರಾಗಮಂ ಪೊಸಯಿಸಿ (ಆದಿಪು. ೨-೬೬) ; ಸತ್ಕವಿಯೊಳ್ ಸಮನಾಗಿ ಮಾರ್ಗಮಂ ಪೊಸಯಿಸಿ ದೇಸಿಯಂ ಪೊಸತು ಮಾಡಿದಳೆಸರ್ಪಳಪೂರ್ವರೂಪದಿಂ (ಹಂಕಥಾ. ೩-೬೪) ; ಮೇಪುಗಾಡಿಂ ಹಕ್ಕಿದಲಿಗೆ ಹರಿಯುಡುವ ಹರಿಣೀಗಣದ ಕಡೆಮಾಯೊಳರೆಮೆಲ್ದುಟ್ಟದೆಳೆಗಱಿಕೆಯೆಸಟ್ಟಿಳಂ ಸೆಳೆದು ತಂದು ಬಯಲೊಳ್ ಬಳ್ಳಿವಸಲೆಯು ಪೊಸಯಿಸಿಯುಂ (ಚಂದ್ರಪು. ೯-೪ ಪ). ೩. ಪೊಸತಳಿರ್ಗಳ ಬಿಜ್ಜಣಿಗೆಯನೆಸೆವಲರ್ಗಳನೊಗೆವ ಘರ್ಮಜಲಮಂ ಪಿಂದಾರ್ಜಿಸಿದುವು ಕುಸುಮರಜಂಗಳ್ ಪೊಸ[ಶಾಶಂ. ಸೊಗ]ಯಿಸಿದುವು ಬಣ್ಣಮಂ ಲತಾಂಗಿಯಾಗಿರ್ಗಳ್ (ಅಂಕು. ೦೦-೬೩) ; ರಸಮೊಸರ್ವನ್ನೆಗಂ ತಗುಳೆ ಪಾಡುವ ಗಾಣರ ಗೇಯಮುಚ್ಚಳಂ ಪೊಸಯಿಸೆ (ಹಂಕಥಾ. ೦೦-೪) ; ಎಸೆವ ಜಿನೇಂದ್ರಚಂದ್ರನ ಸದುತ್ಸವನುಚ್ಛವಿ ಸಾಂದ್ರಚಂದ್ರಿಕಾಪ್ರಸರಮದೀಕ್ಷಣೋತ್ಪಳಕಮುತ್ಸವಮಾರ್ಗಿಗಮಂದಮಂದಮಂ ಪೊಸಯಿಸೆ ಹರ್ಷಸಂಪದಮಂ (ಶರ್ಗಪು. ೦೩-೯೮). ೪. ಪತಿಂವರೆಗೆ ಸೊಯಂಬರಮಂ ಪೊಸಯಿಸಿದಂ ನಿಖಿಲರಾಜಕಂ ನೆರೆಯೆ ಸಾನುಜಂ ಬಲದೇವಂ (ಶಾಂತಿಪು. ೪-೬೯) ; ದಾನವ್ಯಸನಿ ದಶರಥನದೇಂ ಪೊಸಯಿಸಿದನೊ ಚೌಲೋಪನಯನಮಹಿಮೋತ್ಸವಮಂ (ಹಂರಾಮ. ೩-೦೯೨) ; ಶಿಶುಗಳು ಕಾಡೆ ತೋಱೆ ಶಶಿಯಂ ಜಳಕೇಳಿಗಳಂ ವಿನೋದದಿಂ ಪೊಸಯಿಸಿ (ಪುಣ್ಯಾಸ್ರ. ೦೦-೦೨). ೫. ಧೃತವಿಷಮಬಾಣನಂ ಜನಪತಿ ಗೆಲ್ದಪೊಲಾತನಂ ಪ್ರಜಾಪತಿ ಧರಣೀಪತಿ ಕಾಮದೇವನಂ ಗೆಲ್ದು ತಳರದನಿವಾರ್ಯವೀರ್ಯಮಂ ಪೊಸಯಿಸಿದಂ (ಶಾಂತಿಪು. ೩-೩೬) ; ಬೇಗಂ ಕೂರ್ತಂತೆ ಭಕ್ತಿಯಂ ಪೊಸಯಿಪಕಾಲಮಂ ಕಜ್ಜಮಂ ಬಗೆಯುತಿರ್ಪರ್ (ಕುವ. ೦೦-೬೩) ; ದೂರದೊಳೆಯ್ತರೆ ತುಂಬುಮೊಗವ ತೋಱೆ ಭೂರಿಲೀಲೆಗಳ ಪೊಸಯಿಸಿ (ಜಗಂ. ೬-೦೩ ಶಾಂಗಕ್ಕ). ೬. ಹೊಂದಿಸು ; ಕೂಡಿಸು ; ಸೇರಿಸು : ಈ ದೂದವರೆಂಬ[ರ್] ಬೇಟಕಾಱರ ಬೇಟಮೆಂಬ ಲತೆಗಳಡರ್ಪಿರ್ಪಂತಿರ್ದರೆಂತಪ್ಪ ಬೇಟಂಗಳುಮವರ್ ಪೊಸ[ಯಿ]ಸೆ ಪೊಸತಪ್ಪುದು ಕಿಡಿಸೆ ಕಿಡುವುದು (ಹಂಕಥಾ. ೪-೦೦೩ ಪ) ; ಅಲ್ಲಿಯ ಪಯೋಧಿಕರಿಗಳುಮಾಗಳುಮಾಱೆಪರಾದೊಡಮಿನಿಸೆಡೆಯಾಗಿರ್ದ ಸಂಬಂಧಮಂ ನೀನಿರ್ದು ಪೊಸಯಿಸುವುದು (ಶಾಂತಿಪು. ೨-೬೬ ಪ). ೭. ಕಡೆ ; "ಮಥಿಸು" : (ಕಕುಶ. ೪. I. ೬೮). ೮. ಹೂಡು ; ಬಳಸು : ಅಸತ್ಯವಾದವಂ ಪೊಸಯಿಸಿ ಜೀವನಿಲ್ಲ ಮೊಜಿಯಿಲ್ಲಱಿಸಿಲ್ಲ ಪರತ್ರಯಿಲ್ಲೆ ನಲ್ಕಸೆಳೆಯಂತೆ ನಾಲಗೆ ಪೊರಳ್ದುದು ರಾಜಸಭಾಂತರಾಳದೊಳ್ (ಅಂಕು. ೨-೦೦). [ಪೊಸೆ₁ + — ಇಸು₃]

**ಪೊಸ್ತಕ** 'ಪೊತ್ತಗೆ' ನೋ.

**ಪೊಸ್ತಕಗಚ್ಛ, ಪೊಸ್ತಕಗಛ** (ನಾ). [ಜೈನ] ಮುನಿಗಳ ಒಂದು ವರ್ಗ : ಸ್ವಸ್ತಿಶ್ರೀ ಮೂಲಸಂಘದೇಶಿಯಗಣ ಪೊಸ್ತಕಗಚ್ಛದ ಕೊಣ್ಡಕುನ್ದಾನ್ವಯ ಕೊಲ್ಲಾಪುರದ ಸಾಮನ್ತನ ಬಸದಿಯ ಪ್ರತಿಬದ್ಧದ ಶ್ರೀಮಾಘನನ್ದಿಸಿದ್ಧಾನ್ತದೇವರ ಶಿಷ್ಯರು . . . ಕೊಟ್ಟರು (ಎಕ. II, ೩೮೦–೦ ; ಕ್ರಿ. 1200). **ಪೊಸ್ತಕಗಛ** : ಶ್ರೀಮೂಲಸಂಘದೇಸಿಯಗಣ ಪೊಸ್ತಕಗಛ ಕೊಂದಕುಂದಾನ್ವಯದ ಹೆರಗಿನ ಹರಿಶ್ಚಂದ್ರದೇವರ ಪ್ರಿಯಗುಡ್ಡುಗಳಪ್ಪ ತಾತಂಗಿಯ ಪಟ್ಟಣದ ನಖರಂಗಳು ಮಾಡಿಸಿದ ಶ್ರೀಶಾಂತಿನಾಥದೇವರು (ಎಕ. I (R). ೬–೨; 12ನೆಯ ಶತ). [< ಸಂ. ಪುಸ್ತಕ ಗಚ್ಛ]

**ಪೊಸ್ತಕಗಥ** 'ಪೊಸ್ತಕಗಚ್ಛ' ನೋ.

**ಪೊಹಚಿ** 'ಪೌಂಚಿ' ನೋ.

**ಪೊಳ್** (ಸಪೂರೂ). 'ಪೊಳಲ್' ಎಂಬ ನಾಮವಾಚಕಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಪೊಳ್ನುಡಿ', 'ಪೊಳ್ಮರ' ಪರಾ. [<ಪೊಳಲ್]

**ಪೊಳಂಕು, ಪೊಳಕು₁, ಹೊಣಕು, ಹೊಳಕು₁** (ಕ್ರಿ). ೧. ಪ್ರಕಾಶಿಸು; ಮಿಂಚು; ಹೊಳೆ : ನದಿ ಕಣ್ದೆಱೆದಂತೆ ಪೊಳಂಕಿದ ಮೀನಂ ಮೊಸಳೆ ಪಾಯೆ ನರಪತಿಯ ವಿನೋದದ ಗುಪ್ಪ ಸಿಕ್ಕಿ ಪಿಡಿದತ್ತದನಧಿಪತಿ ಜಾಲಗಾಱರಿಂ ತೆಗೆಯಿಸಿದಂ (ಸುಕೋಚ. ೩-೪೮). ೨. ಅಗಿದು ತಿನ್ನು; ಜಗಿ : "ಪೊಳಕು, ಪೊಳಂಕು_ಚರ್ವಣಕ್ರಿಯಾಯಾಂ (ಅಗಿಯು)" (ಶಬ್ದಮ). **ಪೊಳಕು₁** : ೨. ಅರೆಮುಗಿದಿರ್ದ ಕಣ್ ಮುಱಿದ ಮೀಸೆ. . .ಸುಲಿಪಲ್ ತಳತ್ತಳಿಸಿ ತಂಬುಲವಂ ಪೊಳಕುತ್ತೆ ರಾಗದಿಂ ಪ್ರತಕೆಗೆ ಕೊಟ್ಟು ಪಂದಲೆಯ ಗುಂದಲೆಯಾದುದು ಬೀರನಣ್ಮನಾ (ಅರ್ಗಶೀ. ೩-೩೦). ೩. ಚಪ್ಪರಿಸು : ಪನಸಾಮ್ರಾತಕ . . . ದಾಡಿಮಫಲಮ್ರಾತಂಗಳಿಂದಾಗಳುಂ ತನಿಗಂಪಂ ಮೊಗೆದತ್ತಿ ತೀಡುವಲರೊಂದಿಂಬಿಂಗೆ ಪೊಂಗೂರ್ತು ಮೆಲ್ಲನೆ ಬಾಯಂ ಪೊಳಕುತ್ತೆ ನೋಟ್ಟರಮರರ್ ತಾರಾಚಳೋದ್ಯಾನದೊಳ್ (ಅರ್ಗಶೀ. ೨-೬೦). ೪. ಬಾಯೂಡಿಸು ; ನಾಲಗೆ ಹೊರಳಿಸು : ಪುತ್ರಂ ಕಾಯೂಣ್ಕಗಳ್ ಮೂವತ್ತೆರಡುದೋಷಂಗಳಪ್ಪುವಮಾಪುವೆಂದೊಡೆ ಕುದುರೆನಾಲಿಕ್ಕೆ

ನಿಲ್ವುದುಂ . . . ಬಾಯುಂ ಪೊಳಕುತ್ತುಂ ನಿಲ್ವುದುಂ ಎರಡು ಕಯ್ಯುಂ ಪಿಡಿಕಿಸಿ ನಿಲ್ವುದುಂ (ಪಚಾರ. ೩೯೨). ೫. ಚಿಮ್ಮು; ಪುಟಿ : ತಿರಿಪಿಂ ಪೊಳೆದ ಕಾಮನ ಸರಲಂತಿರೆ ಬಂದಲ್ (ಭಕ್ತ್ಯ. ೯.೦೦೬) ; ಅವಗಡಿಸಿ ಪೊಕ್ಕು ಪೊಯ್ದಾಡಿದರ್ ಕೋಡಿದರ್ ನವರುಧಿರಧಾರೆಯೊಳ್ ಮುಳುಕಿದರ್ ಪೊಳಕಿದರ್ (ಚಂಪೂ. ೨೬-೦೮). ೬. ಸೇರು; ಕೂಡಿ ಕೊಳ್ಳು : ಕರ್ಮದ ಬೇರ ಹರಿದರೆ ಪೊಳಕನೀ ಸಂಸಾರಚಿತ್ರಕೆ (ಅಭಾಗ. ೦೦.೨-೦೦). ೭. ನಾಶಮಾಡು ; ಧ್ವಂಸಗೊಳಿಸು : ಪಬನುಡಿ ಪೆತ್ತು ಪೊಲ್ತು ಧರೆಯಂ ತಿರೆಯಂ ಪದೆದೆತ್ತಿ ದೈತ್ಯನಂ ಪೊಳಕಿ ಬಲೀಂದ್ರನಂ ತಗುಳ್ದು ಮಟ್ಟಿಸಿ ದುಷ್ಟನೃಪಾಲವಂಶಮಂ (ಜಗ. ೩-೧೯೩). ಹೊಣಕು : ೮. ಸುಟ್ಟುಹಾಕು ; ಭಸ್ಮಮಾಡು : ಕ್ಷಣಕೆ ಕರ್ಮದ ಸುಟ್ಟು ಶಾತಿ ಶ್ರೀ ಜಿನರಾಜ ಹೊಣಕಿನ್ನ ಪಾಪೇಂಧನವ (ಜ್ಞಾ. ಚ. ೧೩-೧). ೯. ಹೊಡೆ; ಬಡಿ : ಪಾರಳಿಸಿದನಾ ರಥವ ಪಾಂಚಾಲರೆಂಟುಸಾವಿರರಥಿಕರ್ಕೈತರಳ್ಪವರ ದೆಸೆಗಾಗಿ ಹೊಕ್ಕುರವಣಿಸಿ ಪೊಣಕಿದಂ ಪೇರಾಳದಂದದಿಂ ದೆಸೆದೆಸೆಗೆ ಪರಿವಂದದಿ (ಲಕ್ಷ್ಮೀಶ. ೦.೪೦). ಹೊಳಕು₁ : ೧. ಬೆಳಗು ಹೊಳಕಿದ ಬಳಕದಗಿತ್ತಲ್ಲಿ ಕತ್ತಲೆ (ಬಸವೇಶ. ೯-೭೯); ಮುಂಗಾರ ಗಗನಾಂಗಣದ ನಾಟ್ಯಕೆ ಏದ ಮಿಂಚಿನ ಭಣಿತೆಯುಪೊಲಸುರೇಂದ್ರರಥ ಹೊಳಕಿದುದು ಕಣನೊಳಗೆ (ಕೂಡಲ. ೬-೨೦-೫೦). ೫. ನೊರೆಯನುಬ್ಬಿಸುತೇಳ್ವ ರಣದುಬ್ಬರದ ರಕುತದ ಹೊನಲು ಹೊಳಕಿತು [ಶಾಪಾಂ. ಪಾಸಗಿತ್ತ] ಹೊಳಕಿ ಹೊರಳಿದವು ಹೇರಾಳ ಹೆಣದುಂಡುಗಳು ಕಪಿಬಲದ (ಕೂರಣ. ೬-೪೦-೦೧). ೭. ಕುಲಗಿರಿಗಳಲ್ಲಿವನೊಂದು ನಿಮಿಷದಿ ಹೊಳಕಿ ಹೊಳಕಿ ಬಿಡುವನ್ನ ಕುಲಿಶದಂಡವ ಪಿಡಿದೀ ಸಗ್ಗಿಗರ ಜಂಗುಳಿಸುತವೆ ಬಲಿದೊತ್ತ (ಶ್ರೀಪಾಂ. ೭-೫). ೯. ಭೀಮನ ತೊಡಕಿದರು ಹೊಳಕಿವರು ತವಕಿಗರು ತಲ್ಲಣಿಸದೆ (ತುರಂಗ. ೬೯-೨೨). ೧೦. ಝಂಕಿಸು; ಗದರಿಸು : ಅವದಿರ ನಾಡಿನೊಳಗರ್ಧವಂ ಕೊಟ್ಟು ಬಾಳೆಂದು ಧೃತರಾಷ್ಟ್ರ ಹೊಳಕಿ ನುಡಿದನು (ತುರಂಗ. ೬೦.೦೬). ೧೧. ಚಲಿಸು; ಅಲುಗಾಡು : ವ್ಯತ್ಯಮಿನಲ ಹೊಳಲೊಳಗೆ ಹೊಳಕಬಹುದಹಿಪನ ಫಣಾಮಂಡಲ ದೊಡೆದಲುಬಹುದು ಕಾಣೆನು ಗೆಲುವ ಹದನನು ಮಗನೆ ಪದ್ಮವ್ಯೂಹ ದೊಡ್ಡಣೆಯ (ಉಪ್ಪಾರ್ಕ್ರೋ. ೯.೩೬). ೧೨. ಅಲುಗುವಂತೆ ಮಾಡು ; ಅಲುಗಾಡಿಸು: ಕೃತ್ರಿಮದ ಸರ್ಪನ ತೊಲಗಿಸಲು ದುಂದುಭಿಯ ಹೊಯ್ದರೆ ಹೊಳಕಲಕೂಡದೇ (ಕನ್ನರು. ೬-೦೨). ೧೩. ಅತಿಶಯವಾಗು ; ಹೆಚ್ಚು : ಮೆಲುವ ಭೂಪರ ಮನಕೆ ಹೊಸಜಕ್ಕುಳಿತ ಹುಟ್ಟಲು ಬಾಯಿ ಹಪ್ಪವು ಹೊಳಕಲಮ್ಯತವಿದೆಂಬ ಹಾಲುಂಡೆಗಳನೋರಣದಿ ತಲುಗ ನಾರಿ ಯರ್ಕ್ಕೆದ ಬಡಿಸಿತು (ಕೌಶಿಕ. ೨-೬೨). ೧೪. ರಭಸದಿಂದ ಮುಂದುವರಿ; ಮುನ್ನುಗ್ಗು : ಉಲಿವಲಮ್ಮುವರಿಲ್ಲ ಬವರಕೆ ನಿಲುವ ಚೂಣಿಗರಿಲ್ಲ ಮುಂಬಿಗೆ ಹೊಳಕಬಲ್ಲವರಿಲ್ಲ ನಮ್ಮಯ ಬಲದ ನಾಯಕರು (ಉಪ್ಪಾರ್ಕ್ರೋ. ೫೦. ೨೯೦) ; ಅಲ್ಲಿಯ ಗಲಭೆಕಾರರು ಕಪಿಯ ಗೋಪುರಪಂಕವೀಥಿಯಲಿ ಹೊಳಕುವೀ ಕಪಿನಾಯರ ಗಾವಳಿಯ ಗುಮ್ಮಿದರಸ್ತ್ರಶಸ್ತ್ರಾವಳಿಯಲಿ (ಕೂರಣ. ೯-೯ ೨೦) ; ನಳಿನಮಿತ್ರನ ಮೊಮ್ಮಗಂ ಭೀಮನೋಳ್ಮಾದಿ ಗೆಲಿದು ಮಾದ್ರೀಸುತರನೊಟ್ಟೈಸಿ ಮುಂದಕಂ ಹೊಳಕುತಿರಲರ್ಜುನಂ ಕೊಲಲು (ಜೈಮಿನಿ. ೬೬ ಪೂತನ). ೧೫. ಎರಗು ; ಮೇಲೆ ಬೀಳು : ಹಳಚಿದನು ಕಬ್ಬೊಗೆಯ ತೆರದಲಿ ಹೊಳಕಿದನು ಭೇರುಂಡರೂಪಿನಲಿ . . . ಮುಳಿದು ಕೊಂದನು ಕಲಿಘಟೋತ್ಕಚನಮಿತಸೈನಿಕವ (ಕರ್ಣಾಟ. ೨೩-೬೩). [< ಪೊಳ್₁]

Δ **ಪೊಳಂಪು** 'ಪೊಳಪು' ನೋ.

**ಪೊಳಕಾಯಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಗುಳ್ಳಕೆ ಪೊಳ ಕಾಯಿ . . . ಮಹಕಂಚಿ ಮಾತಂಗಿ ಬಕ್ಕಾಯಿ ಎಲ್ಲ ನಾನಾಕದಾ ಕಳ್ಳ ದೇವತೆಗಳಿಲ್ಲದೆ ಒಲಿಸಿವರು (ಬಸವ. ೫೯-೨). [ ? ]

**ಪೊಳಕಿ** (ನಾ). ಒಂದು ಬಗೆಯ ಸಸ್ಯ : ಪೊಳಕಿ—ಸಣ್ಣಗಿಡ; ಬೈಲು ಸೀಮೆಯ ಅಡವಿಯಲ್ಲಿ ಬಹಳ (ಕರ್ನಾಗಿ. ೪೩). [ ? ]

**ಪೊಳಕಿಸು**, ಹೊಳಕಿಸು (ಕ್ರಿ). ೧. ಅಲುಗಾಡಿಸು ; ಹೊರಳಾಡಿಸು : ಕಾಗೆಯಂತೆ ಕಡೆಗಣ್ಣೊಳ್ಳಿ ನೋಡುತ್ತುಂ ಕೀಚುಟ್ಟ ಕುದುರೆಯಂತೆ ಬಾಯುಂ ಪೊಳಕಿಸುತ್ತುಂ (ರಕ್ಕಾಣಿಕ್ಕ. ೫-೧೩೬). ಹೊಳಕಿಸು : ೨. ಮುನ್ನುಗ್ಗುವಂತೆ ಮಾಡು : ಜಪದಿಂದೆ ತದ್ವರೂಥವನಿರದೆ ಸೌಧರಿಯಂ ಸುವಿಲಾಸದಿಂ ಹೊಳಕಿಸಲ್ ಮೇಘವರ್ತ್ಮದೊಳ್ (ಶೀಲಾರಾಸ. ೨೩-೩೩). ೩. ಹೊಳೆ ; ಪ್ರಕಾಶಿಸು : ದಿನಕರನ ಪ್ರಭೆಯಂತೆ ಹೊಳಕಿಸು ತನಮಂಕೋಪದಲಿ . . . ಕರಗಳ ಮುಗಿದನಾ ದ್ವಿಜನು (ಸುಂದರಸ. ೩-೦೩).

[ಪೊಳಕು₁ ( < ಪೊಳಂಕು) + — ಇಸು₁]

**ಪೊಳಕು₁** 'ಪೊಳಂಕು' ನೋ.

**ಪೊಳಕು₂** 'ಪೊಚಕು' ನೋ.

**ಪೊಳಚು**, ಹೊಳಚು (ಕ್ರಿ). ೧. ಕತ್ತರಿಸು ; ತುಂಡರಿಸು : ಒಳೆದ ರದಂ ಕಡಿದಿಕ್ಕಿದ ಸೊಂಡಿಲು ಪೊಳಚಿದ ಕಿವಿ ಕತ್ತರಿಸಿದ ಬಾಲಂ ಗಳಿನಾ ಬಲ್ಲಾನೆಯ ಬವರದ ನೆಲನತಿ ವಿಭ್ರಾಜಿಸಿತು (ಜಗನ್ನಾ. ೬-೯೦). ಹೊಳಚು : ೧. ಮಮಾಳಿದ ಮಲಯುರುಹವೃಕ್ಷಂಗಳಂ ಕಂಡು ಹೊಳಚಿ ತಂದಾ ಸೆಕ್ಕೆಗಳನೊಳಗೊಳಗೆ ಶೋಧಿಸಿ ತನ್ನ ಕಂಬಿಯ ನೆಲಹನಿತ್ತರದಲ್ಲಿ ಸುತ್ತಲು ಸೆಕ್ಕೆ ಬಿಗಿಬಿಗಿದು (ಚೆನ್ನ. ೧೩-೨೫) ; ಬಿಳಿಯುಳ್ಳಿಯ ಸುಲಿದು ಹಿಂದು ಮುಂದಂ ಚಿವುಟಿ ಹೊಳಚಿ ನಡುವಣ ದಿಂಡ ತೆಗೆದು (ಸೂಪಶಾ. ೩.೯). ೨. ಒಡೆ: ಸೀಳು : ಸ್ಫಟಿಕದ ಘಟವ ಹೊಳಚಿದಂತೆ ಒಳಹೊಜ ಗೆನ್ನದೆ ನಿರ್ಮಲ ತೋರುವಂತೆ ಅದಜಿರವು ಸುಚಿತ್ತನಾಗಿ ನಿಂದುದು ನಿರ್ಮಾಯ (ಅಲ್ಲಮ.ಶ. ೦೩೯-೦೬೯) ; ಸತಿಸಹಿತ ವಿರಕರಾಘಾತಕ್ಕೆದಪುವು ಕಠಿತಿಗಳದ ಮರ್ದಿಸಲ್ವೇಳ್ಕೆನುತ ಕರವಿದ್ದ ಹತಿಯಿಂದ ಮಸ್ತಕವ ಹೊಳಚು ವನೊ ಭಾಸ್ಕರನೆನಲ್ಕೆ ವಿರಕಿರಣದಿಂದೆ (ವಂಕಾರಾ. ೩-೬-೨೦). ೩. ಒದೆ: ಆ ರಾಮನಟ್ಟಿಯಂ ನಲವಿನಿಂಮುಂಗುಷ್ಟದಿಂ ಕುಟ್ಟಿ ಹೊಳಚ ಲದು ಪಲವು ದಶಯೋಜನಂ ಪಾರಿ ಪೋಗಲ್ಕೆ (ತುರಂಗ. ೫೯-೩೬). [ ? ]

**ಪೊಳಪು**, ಪೊಳಂಪು, ಪೊಳೆಪು, ಹೊಳವು, ಹೊಳಹು (ನಾ). ೧. ಮೆರುಗು ; ಕಾಂತಿ ; ಪ್ರಕಾಶ : "ತೊಳಗು, ಬೆಳಗು . . . ಹಬೆ, ಪೊಳಪು, ಪೊಣರ್ . . . ಮಸೆ — ಈ ೧೪ ಕಾಂತಿ" (ಳಕಾ. ೫೫-೨೦೨); ಮಡಿದು ತಂದಿಟ್ಟ ಪೊಸನೆಯ್ದಿಲ ಕಾವನಾವಗಂ ಗೆಲ್ದ ರತ್ನಕುಂಡಲಂಗಳ ಪೊಳಪನೊಳಕೊಂಡುತೆ ನಸುನೇಲ್ದ ಕರ್ನಾಟೀಕರ್ಣಪೂರನ ಪಾಲಿಗಳುಂ (ಕಂಪಣಾ. ೨-೩೯ ವ) ; ಪೊಸವಿಸಿಲ ಪೊಳಪಿನಿಂ ನುಣ್ಣನುಜ್ಜಳಿಪ ರನ್ನದೆಳ ವೆಳಗಿನ ಬಳಗದಿಂ ಬಣ್ಣಿಸಿ ಸುರಶರಾಸನಂಗಳನೆಟಲಿಕ್ಕಿನಂತ ನಿಮಿರ್ದ ನಿರ್ಝರಂಗಳುಮನಪ್ಪುಕೆಯ್ದ ಕೇಳೀಪರ್ವತನಿತಂಬಂಗಳೊಳಂ (ಕಾದಂಬ. ೫೨೬) ; ಸುಲಿಪಲ್ಲ ಬೆಳಗುಂ ಕಣ್ಗಳ ಕಾಂತಿಯುಂ ಮುಖದ ಶಾಂತಿಯ ಪೊಳಪುಂ . . . ದಟ್ಟೈಸಿ ಮೆಚಿಯ (ಧರ. ೯-೭೩). ೨. ನಡುಗುವಿಕೆ ; ಅಲ್ಲಾಡುವಿಕೆ: (೬). ೩. ಉಯ್ಯಾಲೆ; ಜೋಕಾಲಿ; ತೂಗುಮಣೆ:(೬). ೪. ಕುದುರೆಯ ಓಟದಲ್ಲಿ ಒಂದು ಬಗೆ : ಪೊಳಪು ಗತಿ ಪೇಡೆ ಜೋಡತಿ ಚಳಕಂ ದೂವಾಳಿಬಡಿಪುದಾಳಿಯರ ಮನಂಗೊಳಿಸಿರೆ ತುರಂಗಗಳ ವಾಹಳಿ ವಾಹಕರಿಂದೆ ಮೆರೆದುದಾ ಪೊಜಪೊಳಲೊಳ್ (ಶ್ರೀಪಾಲ. ೦೬-೦೬).

Δ **ಪೊಳಂಪು** : ೧. ಬೀಜರೂಪದ ಪೂದುಬಿಂಗಲ ಪೊಳಂಪಿನಿಂ (ಪ.ಹಾಸ. ೫-೨೦ ವ). **ಪೊಳೆಪು** : ೧. "ತೊಳಗೆನೆ ಮಿನುಗೆನೆ . . . ಪೊಳೆಪು ಪೊಣರು ಮಸಯೆನೆ ತಳಪಮೆನಲ್ ಕವಿಗಳಿಂದ ಕಾಂತಿಯೆನಿಕ್ಕುಂ" (ಕಶಬ್ದ. ೦೦೦); ತಲದೊಳ್ ತಂಬುಲದೆಲೆಗಳ ಪೊಳಪಮರ್ದಿರೆ ದೇವಕನ್ಯೆ ಪಾತ್ರೊರ್ಮಳ್ ಕೋಮಲಲತೆಯ ನಿಮಿರ್ದ ಕುಡಿಯೊಳ್ ೧೪ ಪಾಯ್ದುತ್ತನಿಸಿ ಸಕಿಗೆ ತಂಬುಲಮಿತ್ತಳ್ (ಅಂಕು. ೭-೧೨) ; ಮೇಲೆ ಬೀಳ್ವ ಸಿಡಿಲಂತೆ ಬಂದೆಜಗುವ

ದುರ್ನಿರೀಕ್ಷತೀಕ್ಷ್ಣಾಯುಧಂಗಳ ಪೊಳಪುಗಳುಂ ಚಕ್ಷುರಿಂದ್ರಿಯಮನನವರತ ಮುಗಿಬಗಿ ಮಾಡುತ್ತಿರೆಯುಂ (ಪಾಶ್ರ. ೧೦-೯೭ ವ). **ಹೊಳಪು** : ೧. ಪುರಹರಪ್ರಸಾದದಿಂದ ರಂಜಿಸಲ್ಕೆ ಗಂಜ್ಜಿಯಾಟ್ಟು ಶರಣಸಂಗದಿಂದೆ ಘಟ್ಟಿಸುತ್ತೆ ಹೊಳಪ[ಶಾಣಂ ಹ]ನೊಪ್ಪವಿಟ್ಟು (ತಿರುಕೊಂ. ದೀ. ೨೩೩-೦೪) : ಬೆಳ್ಳಿಯು ಅಂದವಾದ ಬಿಳೀ ಬಣ್ಣದ ಧಾತು. ಅದಕ್ಕೆ ಹೊಳಪು ಬಹಳ (ಮುಂಬಯಿ. ೪-೦೨೦) ; ಗಾಜನ್ನು ತಯಾರಿಸುವುದು ಹಾಗೂ ಹೊಳಪನ್ನು ಕೊಡುವುದು ಒಂದು ಕೈಗಾರಿಕೆಯಾಗಿತ್ತು (ಕನ್ಮಸ್ತ್ರ. ೩೦೦). **ಹೊಳಹು** : ೧. ಅಪ್ಪುವಿನ ಮಣಿಯ ಷಡುವರ್ಣದ ಟಿಪ್ಪಣದಂತೆ ತೇಜದ ಮಣಿಯ ನವಗುಣದ ಹೊಳಹಿನಂತೆ (ಕೋಳೂರು. ೦೦-೪೦) ; ಕಂಗಳಿನ ಮಿಂಚಿನ ಹೊಳಹಿನಲಿ ನಡೆಗೆಟ್ಟು ನಿಂದರು ಚಿತ್ತವಿಹ್ವಲರು (ಕುಮ್ವಾ.ಭಿ. ೦-೨೫) : ಹಳದಿಯ ಹೆಡೆಯನು ಬಿಚ್ಚೋ ಬೇಗಾ ಹೊಳಹಿನ ಹೊಂದಲೆ ತೂಗೋ ನಾಗಾ (ಕಷ. ೨-೩೦). ೪. ದಾಟುದೀಟು ಹೊಳಹು ಹೊಮ್ಮಚ್ಚುವಡೆ ಮೋಡಿ . . . ವರತರಹವೆಂಬ ನವೀನಗತಿಗಳೊಳು ತನ್ನ ಮನವೆ ಹಯದ ತನುಗತಿಗಳಾದಂತೆ ವಾಹಕವಿನ್ನಾಣಂಗಳಂ ತೋಱುತ (ಕೃಷ್ಣಸ್ತ್ರ. ೬-೩೦ ವ) : ಹೊಳಹು ದೂವಾಳಿಯಲಿ ಪಾರ್ಥನ ಕೆಲಕೆ ಬಿಟ್ಟನು ರಥವ (ಕುಮ್ವಾ.ಕ. ೦೪-೩೫). ೫. ಚೆಲುವು ; ಸೊಗಸು : ಸುಖದು ಸುಖದಲಿ ತನ್ನ ಲೀಲೆಯ ಬೆಳೆಸಬೇಕೆಂದೊಂದು ವೇಷದ ಹೊಳಹಿನಲಿ ಬರುತಿರಲು (ತ್ರಿಕುಂ. ೦೦-೩). ೬. ಸ್ವರೂಪ ; ಲಕ್ಷಣ : ಮೆಯ್ದುಗೆದರಿದಱೊಳಗೆ ಹಸರೆನಗೆಯ್ದು ದೇಶಿನ್ನೈಸಲೇಯೆಂದಯ್ದುಬಾಣವ ಕೊಂಡು ಯಂತ್ರದ ಹೊಳಹಾಳ್ಕಿಸಿದ (ಸಂಕಶ. ೩೦-೩೨); ಪಂಡಿತನು ಪ್ರಹುಡ ತಾನೆಂಬ ಭಾಷೆಗಳಂತೆ ಕುಂಡಲಿಯ ಹೊಳಹ ಕೇಳ್ದರೆ ಕುದಿವನಾತ (ಕನ್ಮಕ. ೨೩-೪). ೭. ರೂಪರೇಷೆ ; ಯೋಜನೆ : ಕನ್ನಡನಾಡಿನ ಚರಿತ್ರೆಯ ಚಿತ್ರಕ್ಕೆ ಅವು ಹೋಳಹನ್ನು ಹಾಕಿ ಕೊಟ್ಟಿವೆ (ಕಪಾಕ. ೩೮); ಹೊಳಲ ಹೊಳಹನು ಹಾಕುವವರಿಗಿದು ತಿಳಿದಿತ್ತೋ ಇಲ್ಲವೋ ನಾನರಿಯೆ. ಕವಿ ಕುಡನಿಂತು (ಕವುಣ್ವ. ೭೬-೦೩): ವ್ಯಕ್ತದ ಚೆಲುವಿನಲ್ಲಿ ಅವ್ಯಕ್ತದ ಹೊಳಹನ್ನು ಬಹುಸುಲಭವಾಗಿ ಗುರುತಿಸುತ್ತದೆ (ಕೌಂದು. ೨೭೦). ೮. [ನಾಟ್ಯ] ಕರಣಗಳಲ್ಲಿ ಒಂದು : ಮತ್ತಂ ದಿಂಡುವಾಂಡಾಸನಂ ದಪ್ಪ ಸರಣ ಒಳಗಭವರಿ ಹೊಳಹು ತಿರಿಪು ಸಮಸೂಚಿ . . . ಲುಂಕಾದಹನಮೆಂಬ ಪಲವುಂ ತೆಱದ ಕರಣಂಗಳಿಂ ವಿಚಿತ್ರಮಪ್ಪ ಚಿತ್ರವಿದ್ಯೆಯಿಂ ಲಾಸ್ಯ ತಾಂಡವಮೆಂಬೆರಡುಂ ತೆಱದ ನೃತ್ಯಭೇದದಿಂದಾಡಿ (ಧರ್ಮಕ. ೨-೨೬ ವ).

**ಹೊಳಪಾಗು** = ಮಳೆ ನಿಂತ ನಂತರ ಬೆಳಕುಂಟಾಗು ; ಮಳೆಯ ಮೋಡವಿಲ್ಲದಾಗು ; ಹೊರವಾಗು : ಹವೆಯ ಸ್ಥಿತಿಯನ್ನೂ ಮಳೆ ಬರುವದನ್ನೂ ಹೊಳವಾಗುವುದನ್ನೂ ಮುಂದಾಗಿ ತಿಳುಕೊಳ್ಳುತ್ತಾರೆ (ಮುಂಬಯಿ. ೩-೯೦). **ಹೊಳಹು ಹಾಕು** = ೧. ಮಿಂಚಿನಂತೆ ಸುಳಿ ; ಸ್ಫುರಿಸು : ತಿರುಗಿ ತಲೆಯಲ್ಲಿ ಹೊಳಹು ಹಾಕಿದ ಸಂಶಯ ಬಾಯಿ ಬಿಡದಾಯಿತು (ಕುಣುಬಾ. ೯೬). ೨. ರೂಪರೇಷೆ ಹಾಕು ; ಯೋಜನೆ ಹೂಡು : ಏನಾದರೂ ಮಾಡಿ ಗುಂಡನನ್ನು ಮತ್ತೆ ಹುರಿದುಂಬಿಸಬೇಕೆಂದು ಅವನು ಹೊಳಹು ಹಾಕಿ . . . ಕೇಳಿದನು (ಕಂಗಕೋ. ೩೦); ಇಬ್ಬರೂ . . . ಹೊಳಹು ಹಾಕಿ ಅತ್ಯಂತ ಉತ್ಸಾಹದಿಂದ ಈ ತುಣುಕುನೆಲದ ಮೇಲೆ ಒಂದು ಉದ್ಯಾನದ ಕಲ್ಪನೆಯನ್ನು ಹಬ್ಬಿಸಿ ಬಿಟ್ಟಿದ್ದಾರೆ (ಜಕ್ಮಕ. ೨೨೯). [ಪೊಳೆ$_1$ + — ಪು$_1$./ಮಲ. ಪುಳಪ್ಪು]

**ಪೊಳಪೇಱು, ಹೊಳಪೇರು** (ಕ್ರಿ). ಕಾಂತಿ ಹೆಚ್ಚಾಗು ; ಕಳೆಯೇರು : ವದನಸುಧಾಮರೀಚಿಯೊಳಣಂ ಪೊಳಪೇಱೆ ವಿಲೋಚನಂಗಳೊಳ್ ಪುದಿದ ವಿಳಾಸವೇಱೆ . . . ನವಯೌವನವೇಱುದುದಾ ಕುಮಾರನೊಳ್ (ಕುಸುಮ. ೩-೦೨೯); ಪೊಸನೀರ ಹೂರದೊಳಗೆ ಮಱಿಮೀನ್ಗಳು ಮಸಗಿ ಮುಂ ಪೊಳೆದಾಡುವಂತೆ ವಿಸುಗುವ ವರಲಾವಣ್ಯಾಂಬುವಲಿ ಕಣ್ಣೆಸೆದುವು ಪೊಳಪೇಱೆ ನಗುತ (ಕಂಶಿ. ೦೦-೩೯). **ಹೊಳಪೇರು** : ಅವನನ್ನು ನೋಡಿದ ಕೂಡಲೆ ಅವಳ ಕಣ್ಣುಗಳು ಹೊಳಪೇರಿದುವು (ಕೂಶಿ).

[ಪೊಳಪು + ಏಱು$_1$ (< ಏಱ್$_1$)]

**ಪೊಳಯಿಸು** 'ಪೊಳೆಯಿಸು' ನೋ.

**ಪೊಳಲ್** 'ಪೊಟಲ್$_1$' ನೋ.

**ಪೊಳಲಿಚ** 'ಪೊಟಲಿಚ' ನೋ.

**ಪೊಳಲು** 'ಪೊಟಲ್' ನೋ.

**ಪೊಳವಳಿಗೆ** 'ಪಳವಳಿಗೆ' ನೋ.

**ಪೊಳವೆ** (ನಾ). ಬಿದಿರಿನ ಸೀಳು; ದೆಬ್ಬೆ : ಒಂದುದಿನ ವಿಟಸಕ್ಕೆ ಹೊರಟ ಕೇತಯ್ಯ ಚಾದದಿಂ ಬಿದಿರನುಂ ಸೋಸಿ ತರುವುದಕೆ ಹೋಗಿ ದಟ್ಟಿಯು ಕರಿದು ಪೊಳವೆ ಸೀಳುತಿರೆ ನಾಗಭೂಷಣ ಗಿರಿಜೆ ನಂದಿಯನ್ನೇರಿ . . . ಬರಲು (ಶರೀ. ೦೬೨-೦೦).

[?./ತಮಿ. ಪೋಲ್ = ಬಿದಿರು ; ಮಲ. ಪೊಳ್ಳ = ಬಿದಿರು]

**ಪೊಳಸು** (ನಾ). ಸಂಬಂಧ ; ಸಂಗ ; ಕೂಟ : ಪೊಳೆವಿನಿದುಟಿಯ ವೈಯಾರಿ ಮೆಪುದಳಿದ ಪಲ್ಲವಿಸಿಯ ಮೋಹನಾಕಾರೆ ಗಿಳಿದೇರನ ಕೈಕಠಾರಿ ನಿನ್ನ ಪೊಳಸಿಗೆ ಪೊಂಚಿಕೊಂಡಿಹಳು ನಾರಿ (ಕುಂಡಕ್ಮ. VI. ೦೬೨೬ ಶೃಂಗಾರ ಸೂಕ್ತೋದಾಹರಣ). [?]

**ಪೊಳಿ** (ನಾ). (?) : ಆ ಸ್ಥಾನಮುಮಂ ಭಳರಿಯೂರಂ ಬನ್ದ ಸಿಳಿಕೆಬ್ಬಾಯುಂ ಚಿಕ್ಕೇಶ್ವರಕ್ಕೆ ಈಶಾನ್ಯದ ಪೊಳಿಯುಂ ಬಳಿಕೆಱೆಯ ಕೀಟೇರಿಯ ಬೇರುಂಗಾಲುಂ ಒಕ್ಕಲೊಳೊನ್ದು ಪೊಱೆಯುಂ ಕೆಯುಂ ಪದಿಕೊರ್ಳಳಂ ಭತ್ತಮುಂ ವಿಾಸಲು ಬಳಿವತ್ತಮುಂ ಸಲ್ವದು (ಎಕ. III, ಕಂಜಕ. ೦೬೩-೦೦ ;977). [?]

**ಪೊಳಿಪೊನ್ ?** (ನಾ). (?) : ಸುರಿಗೆ ಸಮನ್ನುಂ ಪೊಳಿ ಪೊನ್ಗವಿ ಕೊಟ್ಟ ಪುನ್ಗಿಣಲ್ಕಟನಿ ಕೊಟ್ಟಿತ್ತು ಕಡಿಪೊನ್ಬಣ್ಣ್ಮಹಾಪಾತಕ (ಎಕ. XIV. ತಿರುಮ ೨೫೩-೦೨ ; ಶು. ೩೦೦). [?]

**ಪೊಳೆ$_1$, ಹೊಳೆ$_1$** (ಕ್ರಿ). ೧. ಪ್ರಕಾಶಿಸು ; ಥಳಥಳಿಸು : ತುಂಗಗಿರಿಶಿಖರದಿಂದಂ ಲಂಗಿಸಿ ಶೂದ್ರಕನ ಪೊಳೆವ ಸುರಿಗೆಯ ಮೊನೆಯೊಳ್ ಪೊಂಗಿ ಸೊಡಗುರ್ಱಿಡಿಯ ಮೇಲೆ ಪತಂಗಂ ಪಾಯ್ವಂತೆ ಪಾಯ್ದು ಬರ್ದುದು ಸಿಂಗಂ (ಕಾಕ್ಮಕಾ. ೦೦೦೪ ಕಂತ್ರಕ); ಓರಿಯ ಮರುಗಳೆ ಮಾಡಮಾಗೆ ಪೊಳೆವೆಳ ದಳಿಗರ್ಳೆ ಸೆಜ್ಜೆಯಾಗೆ . . . ಪನ್ನಾಲವೆತ್ತಿದ ಬೋನಮಾಗೆ ಸಿರಿಯ ಮಹಿಮೆಯುಂ ಮೆಱೆಯಲೇನಾತರ್ದೊ ಬನಮೊಳಿರ್ಪರವಾ ಪಾಂಡವರಾ (ಕುಂಕಥಾ. ೬-೨೮); ಮಧುದಾತ್ಮಜ ನಿಜರಿಪು ತಲೆಗರೆದಿರ್ದಪನಲ್ಲಿ ನೋಡು ಕೊಳದೊಳಗೆಯೆಂತಿರೆ ಪೊಳೆದು ತೋರ್ಪ ಜಲಚರಪರಿಕರಮುಱಿಪುವು ಶಾಮೆ ದುರ್ಯೋಧನನಂ (ಗದಾಯು. ೬-೯೭); ಪೊಳೆಯುತಿರ್ದುದು ಬಿಸಿಲ್; ಕಂಡಳಿಲ್ಲದನಾಕೆ (ಕಪ್ರಂಗ. ೫೨-೦೪೨೪). ೨. ಕಳೆಯೇರು: ಶೋಭಿಸು; ವಿಜೃಂಭಿಸು: ಬಾಗುತ ಬಲಿಯುತೆ ಪೊಳೆದಿನಿದಾಗುತೆ ದಳವೇಱುತಿಡಿದಿಡಿದು ಹಿಗ್ಗುತೆ ಪಣ್ಣಾಗುತೆ ಕಾಯ್ಗಳ್ ಪೊಱಮಡೆ ಬೀಗುತ್ತುಂ ಬೆಳೆದುವಲ್ಲಿ ಕದಳೀಷಂಡಂ (ಗಿಂಕ. ೨-೩೦). ೩. ಪ್ರತಿಬಿಂಬಿಸು; ಪ್ರತಿಫಲಿಸು: ಸುರುಚಿರ ಸಾಲಭಂಜಿಕೆ ಬೆಮತ್ತುರದೊಳ್ ಪೊಳೆಯುತ್ತಿರಲ್ಕೆ ಮತ್ಸರಿಸಿದಳ್ . . . ಮನೋಹರನನೀಕ್ಷಿಸಲಿತ್ತಪುವಿಲ್ಲ ಹರ್ಷದಿಂದಿರದುಗುತರ್ಪ ಬಾಷ್ಪಮೆನಗೆಂದು ಲತಾಂಗಿಯುಬಲ್ಗು ಬಾಡಿದಳ್ (ಕಾದಂಕಾ. ೩೨). ೪. ಹೊಯ್ದಾಡು; ಅಲುಗಾಡು ; ಚಲಿಸು : "ಪೊಳೆ—ಲುಠನೇ (ಹೊರಳು), ನರ್ತನೇ ಚಂ (ಪೊಱೆ)" (ಕಮುರಾ); ಉನ್ಮತ್ತಚೇಷ್ಟೆಯಿಂದೆರೆಯಂ ತಿಂದ ಮೀನಂತೆ ಪೊಳೆಯುತ್ತುಂ (ಧರ್ಮಾಮೃ. ೩-೦೩೬) ; ನಿಮಿರ್ದುವು ಪೊಳೆದುವೆಳುಂಕಿದುವಮರ್ದುವು ಚುಂಬಿಸಿದುವಪ್ಪಿದುವು ಸಂಭ್ರಮದಿಂ ಸಮದೃಷ್ಟಿಯಾಗಿ ಸಿಗ್ಗಿದುವಮೆಯಿಕ್ಕಲ್ಕಱಿದುವವಳ ಧವಳಕಟಾಕ್ಷಂ (ಕಮುಕ. ೨೨೩ ಪ್ರಯೋ) :

ದೂಱಿದೊಡೆ ನಾಸಾಗ್ರಮನುರ್ಚುವ ನಕ್ಕಿದೊಡೆ ನಾಲಗೆಯೊಳ್ಪಡುವ **ಪೊಳೆ**ದೊಡೆ ಬೆನ್ನೊಳ್ಮೂಡುವ್ವೊರಸಿದೊಡೆ ಬರಿಯಂ ಕೊಱೆವ . . . ಪಲವುಂ ಬಗೆಯ ಗಾಣಂಗಳಂ . . . ಬರ್ಚಿ ಬೀಸಿದಾಗಳ್ (ರಾಜಶೇ. ೩-೦೦೯೪). **೫.** ಅಸ್ಥಿರವಾಗಂ ; ಚಂಚಲವಾಗು : ದಂತಿವಾಹವಂ ದಂತಿವಾಹನನೆಂಟ ಪೆಸರನನ್ವರ್ಥನಂ ಮಾಡಿ ಪೊಳೆಯದೆ ಕಳವಳಿಸದೆ ಮಱುವಿನೊಳ್ ಪೋಗುತ್ತಂ (ಪುಣ್ಯಾಸ್ರ. ೨೩-೯ ೪). **ಹೊಳೆ$_1$:** ೧. ಹೊಳೆವ ಕೆಂಜಡೆಗಳ ಮಣಿ ಮುಕುಟದ ಒಪ್ಪುವ ಸುಲಿಪಲ್ಲ ನಗೆಮೊಗದ . . . ದಿವ್ಯಸ್ವರೂಪವನು ಕಂಡೆ ನಾನು (ಶುಭಾರೇ. ೬. ೩೨-೬೮); ಎಳೆಯ ರವಿರಶ್ಮಿಗಳು ರಕ್ತೋತ್ಪಲದೊಳಗೆ ಹೊಳೆವಂತೆ ಹೊನ್ನರ ಬಳಿದ ಹಿಳುಕನೆ ಕಾಣಲಾದುದು ಭಟನ ಕಾಯದಲಿ (ಕುಮಾರವ್ಯಾ. ೬-೩೦): ಹೊಳೆವ ಕನ್ನಡಿ ಕೈಯೊಳಿರ್ದು ನೋಡದೆ ನೀರ ನೆಳಲಲ್ಲಿ ಮೊಗವ ನೋಳ್ಪಂತೆ (ಚಕಿ. ೦-೦೦೩); ಧಾತುಗಳು ಕಾಜಿನಂತೆ ಹೊಳೆಯುತ್ತವೆ (ಶಿ.ಸಂಪು ೯-೯೨). **೨.** ಇಂತು ನವಮಾಸವಾಕೆಯೊಳಾಗೆ ಸನ್ಮುತಂ ಅಂತಃಸ್ಥಳದೆ ಪುಣ್ಯಶಿಶು ತೊಳಗಿ ಹೊಳೆವುತಂ (ಬಸವ. ೦-೧೨೦). **೪.** ಹೊಳೆವ ಸಿಂಧದ ಜಡಿವ ಚಹಳಾವಳಿಯ ಲಗ್ಗೆಯ ವಿವಿಧವಾದ್ಯದ ಚಳಕಳದ ಕಾಲಾಳ ಬೊಬ್ಬೆಯ ಬಹಳರಭಸದಲಿ . . . ಸಂದಣಿಸಿತತಿರಥರು (ಕುಮಾರವ್ಯಾ. ೬-೨). **೬.** (ಮಾತಿಗೆ) ತಪ್ಪು ; ನುಣುಚಿಕೊಳ್ಳು : ಕಪಟವನು ಬಿಡರಾತ್ಮಬುದ್ಧಿಯೊಳುಪಮೆಗಾಣದೆ ನುಡಿದು ಹೊಳೆವರು ಚಪಲ ಚಿತ್ತದಿ ಮನವ ಮೆಚ್ಚಿಸಿ ಮಾತನಾಡುವರು (ವಚಕ. ೩-೨೯); ಬೊಮ್ಮನೆಮ್ಮೊಡನಾಡಿ ಹೊಳೆದನೇ ಅಟಕಟ ತಮ್ಮ ಭಾಗ್ಯದ ಶರಧಿ ಬತ್ತಿ ಬಯಲಾದುದು (ಕಬಪು. ೯೯-೨೬); ಉದ್ರೇಕದಿಂ ಮುನಿಪರನೊಳಾಡಿ ತಪ್ಪಿದ ಗುರುದ್ರೋಹವೊಂದಚ್ಯುತನೊಳಾಡಿ ಹೊಳೆದ ದೈವದ್ರೋಹಮೆರಡು (ಕೃಬಿಲಾ. ೯-೨). **೭.** ಬೇರೆಯ ಕಡೆಗೆ ತಿರುಗು; ಪಕ್ಕಕ್ಕೆ ಹೊರಳು : ತಳೆದನು ಬಲಭದ್ರ ರಾಮನ ಗದೆಯುರತಳದ [ಗದೆಯೀಟ ತ್ತಳೆದ] ಭೈರವನುಪಟಳಕೆ ಹೊಳೆದು ನೀಲಾಂಬರ ನೇಗಿಲ ಕೊರಲ್ಗಿಕ್ಕಿ ಸೆಳೆದವರ್ ಪೊಯ್ದಾಡಿದರು (ಮೋಹತ. ೩೯-೦೯). **೮.** ವೇಗವಾಗಿ ಹೋಗು ; ಮುನ್ನುಗ್ಗು : ಕಿಲಕಿ ಹೊಳೆದವು ಕಡುಗುದುರೆ ನೆಲನಳುಕೆ ನಡೆದವು ದಂತಿ (ಕುಮಾರವ್ಯಾ. ೦೨-೮). **೯.** ತೋರು ; ಕಾಣು ; ಪ್ರಕಟವಾಗು : ಮನದೊಳಗೆ ವಿಸ್ಮಯರಸಂ ತುಳುಕುತಿದೆಯಿನ್ನ ನೆನಹಿನೊಳು ಶಿವರೂಪು ಹೊಳೆವುತಿದೆ (ಕಬಪು. ೯-೬). **೧೦.** ಸ್ಫುರಿಸು ; ಸ್ಫುಟವಾಗು : ಮಾಡಿದೆನೆಂಬುದು ಮನದಲ್ಲಿ ಹೊಳೆವರೆ ಏಡಿಸಿ ಕಾಡಿತ್ತು ಶಿವನ ಡಂಗುರ (ಬಸವ. ೨೩೯); ಈ ವೇಳೆಗಾಗಲೆ ಮನದೊಳು ಹೊಳೆದಂತೆ ಕನ್ನಡಕವಿತೆಯ ರಚಿಸಿ ತೋರಿದ (ಸಂಕಾಹ. ೨೩-೫); ಇಂತಹ ಒಂದು ಸನ್ನಿವೇಶ ಆ ಹೊತ್ತಿನಲ್ಲಿ ನಡೆಯುವುದು ಹೇಗೆ ಸಾಧ್ಯ ? ಎಂಬುದೂ ಅವರ ವಿವೇಕಕ್ಕೆ ಹೊಳೆಯದೆ ಹೋಯ್ತು (ಕತ್ಯಸ. ೦-೯).

[ದೇ.॥ ತಮಿ. ಪೊಲಿ ; ಮಲ. ಪುಳಿ, ಪುಳಯು ; ತೆಲು. ಪೊಲಯು]

**ಪೊಳ್$_2$**, **ಹೊಳ್$_2$** (ನಾ). ಕಾಂತಿ ; ಹೊಳಪು : "ಬೆಳಗಿನೊಳ್ ಪೊಳೆಯ ನಿಕ್ಕುಂ" (ಸಂಬೀಜ. ೨೮). **ಹೊಳ್$_2$ :** ವಜ್ರದಲ್ಲಿ ಬಟುವಾಗಿ ಕೆಂಪಾಗಿ ಹೊಳೆಯುತೆಯಿರುವನವೆ ಬಿಂದುವು (ಶ್ರೀಗಂ. ೩೬೯-೮). [< ಪೊಳ್$_1$]

**ಪೊಳ್$_3$** 'ಪೊಟ್' ನೋ.

**ಪೊಳಪಿಡು** (ಕ್ರಿ). ಪ್ರಕಾಶಿಸುವಂತೆ ಮಾಡು ; ಹೊಳಪು ಕೊಡು : ವಿಳಸಿತಪುಷ್ಪದೊಂದು ಪೊಳೆಪು ತಳೆದಿರ್ದುದನಿಂದುಲೇಖೆಯುಂ ಪೊಳಪಿಡ ವೇಟ್ಟುದೇ (ಶಗಪ. ೦೦-೮೦೨). [ಪೊಳಪು (< ಪೊಳವು) + ಇಡು$_1$]

**ಪೊಳಪು** 'ಪೊಳಪು,' ನೋ.

**ಪೊಳಪುವಡೆ** (ಕ್ರಿ). ಕಾಂತಿಯನ್ನು ಹೊಂದು ; ತೇಜಸ್ಸನ್ನು ಪಡೆ : ಮುತ್ತುಮೊರ್ಮೆ ಮಿಸುಪೆಸಟ ಪಸರದಿನೆಸೆವ ಪೊಸಪಸೆಯೊಳ್ ಮೆಯ್ಯನೀಡಾಡಿ ಪೊಳಪುವಡೆದ ಪಲ್ಲಡಲ ತೆರೆದುಱುಗಲೊಳ್ ಪವಡಿಸುವ ಸಿರಿಯಂ ಪೋಲ್ತಿರ್ಪಳ್ (ಜ್ಞಾಕಾ. ೩೦೫). [ಪೊಳಪು (< ಪೊಳವು) + ಪಡೆ$_1$]

**ಪೊಳೆಯಿಸು**, **ಪೊಳಯಿಸು**, **ಹೊಳಸು**, **ಹೊಳೆಯಿಸು**, **ಹೊಳಿಸು** (ಕ್ರಿ). ೧. (ನಾಲಗೆಯು ಮಿಂಚುವಂತೆ) ಹೊರಳಿಸು ; ಆಡಿಸು : ನೀವಿವಾಗಳ್ ಪೊಟಲ್ಗೆ ಪೋಪಾಗಳ್ ನಿಮಗೆರಟ್ಟೊಳಂಗನಾಗಂಗಳ್ ಪೆಡೆಗಳನೆತ್ತಿ ನಾಲಗೆಗಳಂ ಪೊಳೆಯಿಸುತ್ತಂ ಬಂದೊಡೆ ನೀಮೊದಱಿಯುವಂ ಬಗ್ಗಿಸಿದೊಡವೃಶ್ಯಂಗಳಾಗಿ ಪೋಕುಂ (ಚಾವುಂ. ೦೦೦-೮). **೨.** (ಮಿಂಚಿನ ಹಾಗೆ) ತಿರುಗುವಂತೆ ಮಾಡು, –ಸುತ್ತಿಸು : ಫೋಟಯ್ಲರ್ ಪೊಳೆಯಿಸೆ ಬಿಸಿಲ್ಗುದುರೆಗಳ್ ಪೊಳೆವಂತೆ ಪೊಳೆವ ಕಡುಗುದುರೆಗಳುಮಂ (ಶಾಂತಿಪು. ೦೦-೩೦ ಪ). **೩.** (ಆಯುಧ ಮೊದಲಾದುವನ್ನು ಮಿಂಚುವ ಹಾಗೆ) ಬೀಸು ; ಝಳಪಿಸು : ಪಲಗೆಗಳಂ ಪೊಳೆಯಿಸಿ ಕಡಿತಲೆಯಂ ಜಡಿದೆಯ್ದುವಣಿಯು ವೀರರನೆಚ್ಚಂ ಪಲಗೆಯುಮುರವುಂ ತೆತ್ತಿಸೆ ತಲೆಯುಂ ಕಡಿತಲೆಯುಮೊಡನೆ ಪಱಿಯೆ ಮುಕುಂದಂ (ಜಗಪು. ೧೨-೧೭) ; ಇಭಪನನಣೆದು ಬಿಟ್ಟಕ್ಕಲೆಂದಿರ್ಪ ವಜ್ರಾಂಕುಶಮುಂ ನಾನಾಪ್ರಕಾರಂ ಪೊಳೆಯೆ ಪೊಳೆ[ಪಾಠಾಂ. ಳೆ]ಯಿಸುತ್ತಿರ್ಪವಂ ದೇವರಾಜಂ (ಜಗಪು. ೦೩-೬೬). **ಪೊಳಯಿಸು :** **೨.** ಚಮ್ಮಟಿಗೆಗಳಿನೊಯ್ಯನೊಯ್ಯನೆ ಮೈವಳಿಗೆ ತಂದೊಡಂಬಡಿಸಿ ಕಡಂಗಿ ನಡೆಯುವ ಪೊಳಯಿಪ ದೂವಾಳಿಪ ಪೊಱವಡಿಪದಿರೇಱುವಡ್ಡಂಬರಿಯುವ ವಾಘೆಯೊಳ್ಸರಿಸಂಗೊಂಡು . . . ಶಾಳಿಹೋತ್ರನನಾಳಿಗೊಳ್ವ ಫೋಟಾಯಿಲರ್ ನೆರೆದು (ರಾಜಶೇ. ೬-೦೦ ಪ) ; ಸುಳಿಸುಳಿದಶ್ವಮನೇಱುತೆ ಪೊಳಯಿಸಿ ಮಿಗೆ ದಂಡೆಗುಡುತಿರ್ದುತೆ ಪೆಱಿಕಾಲ್ಗೊಳಿಸಿ ಪೆಡಂಮೆಟ್ಟುತ್ತಿಪ್ಪಳಿಸುತ್ತೆ ಪಳಂಚಿದ ತುರ್ರಂಗಗಳದಱ್ರಿನೊಳ್ (ರಾಜಶೇ. ೦೩-೮೩). **೩.** ತ್ರಿಜಗದ್ಭೂಷಣ ಮಾದ್ಯದ್ಗಜಮಂ ಬಂದೇಱಿ ಪೊಳ[ಪಾಠಾಂ. ಳೆ]ಯಿಸುತ್ತಂಕುಶಮುಂ ವಿಜಿಗೀಷು ಲಕ್ಷ್ಮಣಂ ಮದಗಜದಡಕಿಲಿದೆನಿಸಿ ಪೊಕ್ಕನೊಡನರಮನೆಯಂ (ಶಂಭಾಪು. ೦೩-೯). **ಹೊಳಸು :** **೨.** ತುರಗಪ್ರಸರವನು ಬೊಳ್ಳಿಸಿ ರಥವನು ದೆಸೆದೆಸೆಗೆ ಹೊಳಿಸಿದನು ಲಾಳಿವಡಿಸಿದ ಮಹಾರಥವ (ಕುಮಾರವ್ಯಾ. ೭-೦೯). **೪.** (ಮಿಂಚಿನಂತೆ) ತಿರುಗು ; ಹೊರಳು : ಹೊಳಸಿದನು ದಿನನಾಥನಾಗಳೆ ಹೊಳೆಯಲಿಟ್ಟಳು ಜನನಿಯಿದ ನೀ ತಿಳಿದ ಕೆಲಸವೆನುತ್ತಲಪ್ಪಿದ ನೆವದು ಕೈ ದಣಿಯೆ (ಕೃಷ್ಣಾಕೃ. ೦೨-೨೬). **ಹೊಳೆಯಿಸು:** **೫.** ಪ್ರಕಾಶಗೊಳಿಸು; ಸ್ಪಷ್ಟಪಡಿಸು: ಆ ತರದ ಕ್ರಮಾಲಂಕಾರವನ್ನು ತೊಡಿಸಿದರೆ ಆ ರಾಣಿಯರ ಕುರೂಪವನ್ನು ಹೊಳೆಯಿಸಿದಂತಾಗುವುದು (ಶಾಕುಂತ. ೯೩); ಅವು ಕಥಾನಕದ ಸ್ಥೂಲಸ್ವರೂಪವನ್ನು ಮಿಂಚಿನಂತೆ ಹೊಳೆಯಿಸಿ ತೋರಿಸಬಹುದಾಗಿತ್ತು (ಕಪು. ೩೩). **ಹೊಳೆಸು :** **೫.** ಗವಿಯೊಳಿದ ಹೊನಲಿನಂತಿವರೆನಗೆ ಹೊಳೆಸುವರು ಗುಡಿಯೊಲ್ಲಿಯನು ತಳೆದ ದೇವಳೆಯ (ಮುದ್ದೇ. ೯೯-೭). **೬.** ತೋರು ; ಸ್ಫುರಿಸು : ತಿಳಿದ ಮಾತೆ ಹೊಳೆಸಿದಂತೆ ಎದೆಯ ಬೀಜ ಬೆಳೆಸಿದಂತೆ (ಅರಳು. ೯೯೭-೬). [ಪೊಳ್$_1$ + –ಇಸು$_3$]

**ಪೊಳೆವಲ್** (ನಾ). ಕಾಂತಿಯುತವಾದ ಹಲ್ಲು ; ಮಿನುಗುವ ಹಲ್ಲು : ನಿಟ್ಟುಸಿಳುಗಂಗಳ ಸನಾಸಿಕದ ಪೊಳೆವಲ್ಲ ನಸುದೋಱುವ ಕಿಱುನಗೆಯ ಕದಪುಗಳ ಕುಂಡಲದ ಚೆಲ್ವಿನಿಂ ಮೆಱೆವ ಸದ್ವದನನಂ . . . ಕಂಡನವನೀಪಾಲನು (ಕೃಬಿಲಾ. ೨-೪೮). [ಪೊಳ್$_1$ + ಪಲ್].

**ಪೊಳೆವಾಳ್** (ನಾ). ಹೊಳೆಯುವ ಕತ್ತಿ, –ಖಡ್ಗ : ಬಳೆದುದು ಕಂದಳಿಖುರಾವಳಿಯುನೆನಲ್ ನೆಗೆದ ತಮ್ಮ ರಜಮಂಬರದೊಳ್ ಬೆಳಗುವ ಕಿಸುಸಂಜೆಮುಗಿಲ್ ಪೊಳೆವಾಳ್[ಪಾಠಾಂ. ಪೊಳೆವಳೆ] ಮಿಂಚೆನಿಸೆ ಕಾದಿದರ್ ಫೋಟಯ್ಲರ್ (ಜಗಪು. ೭-೩೬). [ಪೊಳ್$_1$ + ಬಾಳ್$_3$]

**ಪೊಳ್ತಱ** 'ಪೊಟ್ತಱ್' ನೋ.

**ಪೊಳ್ತಱೆ** 'ಪೊಟ್ತಱ್' ನೋ.

**ಪೊಳ್ತರೆ** 'ಪೊಟ್ತಱ್' ನೋ.

**ಪೊಳ್ತಱ್** 'ಪೊಟ್ತಱ್' ನೋ.

**ಪೊಳ್ತಟ್** 'ಪೊಟ್ಟಟ್' ನೋ.

**ಪೊಳ್ತು** 'ಪೊಟ್ತು' ನೋ.

**ಪೊಳ್ನುಡಿ** (ನಾ). ಮೋಸಗೊಳಿಸುವ ಮಾತು; ನಂಬಲು ಅನರ್ಹವಾದ ಮಾತು: ಪಾದರದ ಕುಂಟಣಿಯಂತೆ ಮಿಂಡನ ಪೊಳ್ನುಡಿಯಂತೆ (ಕಬ್ಬಿಗಕೈ. ೯-೨೩ ಅವ). 'ಪೊಳ್ಳುನುಡಿ' ಪರಾ.
[ಪೊಳ್ (< ಪೊಳ್ಳು) + ನುಡಿ₁]

**ಪೊಳ್ಮರ** (ನಾ). ಜಳ್ಳುಮರ; ಟೊಳ್ಳಾದ ಮರ: ಪೊಳ್ಮರನಂ ಕಿಚ್ಚುಳುರ್ವಂತೆ ದುಃಖಾಗ್ನಿ ತನ್ನಂ ಸುಡೆ ಪ್ರಿಯದತ್ತಸೆಟ್ಟಿ ಪಳಯಿಸಿ ಮೂಱುಪ್ಪುದುಂ (ಕಬ್ಬಿಗಕೈ. ೩-೨೨೬). 'ಪೊಳ್ಳುಮರ' ಪರಾ.
[ಪೊಳ್ (< ಪೊಳ್ಳು) + ಮರ₁]

**ಪೊಳ್ಳಯಿಸು** (ಕ್ರಿ). ನಿಸ್ಸತ್ತ್ವವಾಗು; ಜಳ್ಳಾಗು: ಬೆಳ್ಳುಳ್ಳಿ ಬಿಸಿಲಿಂಗೆ ಪೊಳ್ಳಯಿಸಿ ಹುಡಿವಂತೆ [ಪಾಠಾಂ. ಬೆಳ್ಳುಳ್ಳಿ ಪೊಡೆದರೆ ಹೊಳ್ಳಪ್ಪ ತೆಱನಂತೆ] ಒಳ್ಳೆಯ ಗುರುವಿನುಪದೇಶದಿಂ ಭವದ ಬಳ್ಳಿ ಹಱಿದಹುದು (ಸುಗ್ಗಿ. ೬೨).
[< ಪೊಳ್ಳು + –ಇಸು₁]

**ಪೊಳ್ಳಾಸೆ** (ನಾ). ಬರಿಯ ಆಸೆ; ನಿರರ್ಥಕವಾದ ಬಯಕೆ: ಪೊಳ್ಳಾಸೆಯಿಂದವನ್ ತಿರುಳಾಯ್ಕೆಯಾಯ್ತು, ಆ ಬೀಯೋಷಿಯದ ಬಯಲ ತಣ್ಪೊಳೆ ಅಸೋಷಕನ ದಡವಲ್ಲಿ ಒಳಿಗಾಲವನ್ ಮೊಂಕೆ ಬಿಡಿಸುವನು (ಪಾಂಚ. ೪೦–೬೯೦).
[ಪೊಳ್ಳು + ಆಸೆ₁]

**ಪೊಳ್ಳಿಕ ?** (?). (?) : ಪತ್ತಿದರಪ್ಪುದಾ ಬ್ರಾಹ್ಮಣನ ದೋಶಮುವದನೆಯ್ದುವದು ಸಮಸ್ತ ಪ್ರತಿಕಾಱರು ಪೊಳ್ಳಿಕ ಹೊಲ್ಲಪಕ ಪರಿಹರಿಸಿದಡ ಮಹಾದೋಶ ತಮಗಂ (ಶಾಸ. V. ೯೩-೭; 1113). [ ? ]

**ಪೊಳ್ಳು, ಹೊಳ್ಳು** (ನಾ). ೧. ಹುರುಳಿಲ್ಲದುದು: ಸತ್ತ್ವಹೀನವಾದುದು; ಜೊಳ್ಳು: "ಜಳ್ಳನೆ ಪಾಳನೆ ಜರಡನೆ ಪೊಳ್ಳನೆ ತಾಂ ನಿಃಪ್ರಯೋಜನಾರ್ಥಮುದಕ್ಕುಂ" (ಕಶಬ್ದ. ೨೦೯); ಕ್ರಮವಿಕಲ್ಪನೆಯಿಂ ಗುಣದೋಷಮಂ ಕೀಱಿಕೊಂಡು ಗುಣಮಂ ಕಳಿಗಲ್ಲಿಯ ದೋಷಮಂ ತೋಱಿ ಪಿಂಗಿಸುವವೋಲ್ ಪೊಸ ನೆಲ್ಲಿರೆ ಪೊಳ್ಗಳಂ (ಕಾವ್ಯಾ. ೦–೦೩೦). ☞ ಈ ಪ್ರಯೋಗದಲ್ಲಿ ಶಬ್ದವು ವ್ಯಂಜನಾಂತವಾಗಿದೆ. ಆದರೆ ಜ್ಞಾತಿಶಬ್ದಗಳಲ್ಲಿ ಹೆಚ್ಚಿಗೆ ಸ್ವರಾಂತವೇ ಇರುವುದರಿಂದ ಸ್ವರಾಂತಕ್ಕೇ ಇದನ್ನು ಪ್ರಯೋಗವಾಗಿ ಕೊಡಲಾಗಿದೆ: ಊನಮಿಲ್ಲದೆಸಕಂ ಪೊಳ್ಳಿಲ್ಲದಾಪ್ಪಾರ್ಗ್ಗಮಂಜದ ವಿದ್ಯಾವಮಹೋದಯಂ (ಎಕ. XII. ೨೮೦–೦೮೮; 1077); ತನ್ನ ಪ್ರೇಮವನ್ನೇ ಪೊಳ್ಳೆಂದು ಬಗೆದು ನಿರಾಶನಾದನೋ? (ಜೊತೆ. ೯೨); ನೀನು ಇದು ಪೊಳ್ಳೆಂದು ತಿಳಿಯಬೇಡ (ಪಾಪ. ೯೬). ೨. ಹೊಟ್ಟು; ತೌಡು; ಉಮಿ: ಧಾನ್ಯಮಂ ಕೊಟ್ಟು ಪೊಳ್ಳಂ ಕೊಳ್ಳ ನೆಲೆವಾಟಿ ಬಟ್ಟು ತಿರಿದುಂಬ ಮರುಳಂ ಪೋಲ್ಕುಂ (ಕಬ್ಬಿಗಕೈ. ೦೦–೯೩); ನೀರಸಂ ಶೈಥಿಲ್ಯವರ್ಗಂ ಕಾರಕವಿರಹಿತಂ ಕ್ರಿಯಾಳಂಕಾರಹೀನಮೆನಿಪ್ಪ ಪೊಳ್ಳಂ ತೂಱಿ ಕಳೆದು (ಜಗ. ೦–೦೯). ೩. ಜಳ್ಳುಕಾಳಂ; ತಿರುಳಿಲ್ಲದ ಕಾಳು: ಪೊಳ್ಳುಂ ಬಿತ್ತುಂ ಸಸಿಗಳುಮೊಳ್ಪುದುವೆನಿಸಿರ್ಪವೆಯ್ದೆ ಫಲದೊಳ್ ತೋರ್ಕುಂ ಪೊಳ್ಳಪ್ಪುದು ಪೊಳ್ಳುಂ ಕರವೊಳ್ಪುದುವೆನಿಸಿರ್ದ ಬಿತ್ತು ಧಾನ್ಯಮುಮಕ್ಕುಂ (ಕಬ್ಬಿಗಕೈ. ೩-೦೦೭). ೪. ಪೊಟರೆ; ಡೊಗರು; ಹೋರು: ಪೋಟಾ = ವಿಾಸ ಬಂದ ಹೊನ್ನಂಗಿ ಮರದ ಪೊಳ್ಳುಂ (ಕಾಕೈ. ೨೨೭): ಹಗವಾನಿ ಮಾಲು . . . ಅರಹಿನಬಣ್ಣದ್ದಿರುತ್ತವೆ. ಹಾಂಗು ಕೊಯ್ಕುವದರಲ್ಲಿ ಸಾಪ ಬರುತ್ತದೆ. ಅದಕ್ಕೆ ಗಂಟು ಪೊಳ್ಳು ಮಗ್ಗಿರ ದಾಗುಗಳು ಬಹಳ ಮಾಡಿ ಇರುಪದಿಲ್ಲ (ಮುಂಚಿಕಾ. ೨೦೩). ೫. (ಅಲಂ) ಒಣದರ್ಪ, ಜೋರು: ಕಳ್ಳ, ಸುಳ್ಳಾಡುತೀಯಾ? ನಿನ್ನ ಪೊಳ್ಳುಗುಂಡಲು ನಾವೇನು ಮಕ್ಕಳೆಂದರಿತೆಯಾ ? (ಕಂಪ್ರಕ. ೨೬–೦೬). ೬. ನಿಷ್ಪ್ರಯೋಜಕವಾದುದು: ನುಡಿಗಬ್ಬದ ಗಬ್ಬದುಬ್ಬರದಿಂ ನನೆಕೊನೆವೋಗಿ ಕೊನೆವೆರ್ಚಿನ ಪೂರ್ಚಿನ ಪೊಳ್ಳುಬಳ್ಳು ಪುದುಗಣಂ (ರಾಜಕೈ. ೦೫-೭); ಬಾಯ್ದುದುರೆವಾಯ್ಗ ಕಡಿವಾಣವನ್ನಿಕ್ಕಿಲವೊ ಹಂಬೇಡಿ! ಬಳ್ಳಕ್ಕತಿದ ಪೊಳ್ಳುದಂಬುಕಂ ಸಿಂಗದಿದಿರಿನಲಿ! (ಕಪ್ಪಿಂಗ. ೭೯–೨೫೮). **ಹೊಳ್ಳು**: ೧. ಏೞ ಹೊಡೆಯಲಿಕೆ ಹೊಳ್ಳಹುದು ದೇವಾಸುರಮಹೀತಳವು (ಸಂಕ. ೦೭–೩೬); ಮಂದಿ ಮೆಚ್ಚಲದುವೆ ಹೆಚ್ಚೆ ? ಸುಳ್ಳು ಹೊಳ್ಳು ಆ ಸ್ತುತಿ! (ಅನೀ. ೧೭-೨). ೨. ಒಕ್ಕದ ಮೇಟಿ ಕಿತ್ತಿತ್ತು ಹುಲ್ಲು ಮೇದಗೆ ಹೋಯಿತ್ತು ಹೊಳ್ಳು ಗೂಡು ಬಿದ್ದಿತ್ತು (ಶಂಕರಶಾ. ೦೯೩-೩೩೩); ಹೊಳ್ಳುಗಳ ತೂಱಿದವು ಹಿಡಿಹಿಡಿ ಬಿಲ್ಲ ಸುರಸುರಿ ಶರವನಕಟನ್ನಲ್ಲಿ ಹೊಗುವ್ಯ ಕಂದ (ಕುಮಾರಕ್ರಿ. ೨-೯೬); ಅಜ ಹರಿ ಸುರಾಸುರರೆನಿಪ್ಪ ಹೊಳ್ಳುಗಳ ತೂಱುವ ಗಾಳಿಯಾ ಬಂದನು (ಪಿಕ್ಸ. ೨-೯-೦೯). ೩. ಹುಸಿಯನಾದ ಲಿಂಗವ ಪೂಜಿಸಿದಡೆ ಹೊಳ್ಳ ಬಿತ್ತಿ ಫಲವನರಸುವಂತೆ ಕಾಣಾ (ಬಸವ. ೮. ೩೬–೦೯೦); ಹೊಳ್ಳನು ಹುರಿದವಳನು ಕಾಱಕವನಂತಿದನಡಯೆಂದನು (ಭೋಗಾಂ. ೯-೩೬). ೪. ಇರುಳು ಕಗ್ಗತ್ತಲೆಯೊಳೊಂದುವ ಸರಿವಳೆಗೆ ಸರಿ ಸೇದುಗೊಳುತುಬ್ಬರಿಸಿ ಕೃಷ್ಣನ ನೆನವುತಿದ್ದನು ಪುರದ ಹೊಳ್ಳನಲಿ (ಕುಮಾ. ೦೯–೨೩); ಹುತ್ತಿನೊಳಗಣ ಹೊಳ್ಳು ಹಾವಿಂಗೆತ್ತ ಹೋದೊಡೆ ಸುಸರವಲ್ಲದೆ ಮತ್ತೆ ಮಿಕ್ಕನ ಜೀವದಾಳಕಭೇದ್ಯವಾದಂತೆ (ಕೃಷ್ಣ. ೨೦–೨೯): ೬. ನಿಷ್ಪ್ರಯೋಜಕನಾದವನು; ಕೆಲಸಕ್ಕೆ ಬಾರದವನು: ಕೋಟಿ ಬ್ರಹ್ಮಾಂಡದ ನೆಮಲ್ಲೆನಲಂತವರೊಳಗೊಂದಱ ಕಡೆಗೊಂಟನ ಹಳ್ಳಿಯ ಹೊಳ್ಳುಗಳೊಂಬತ್ತರೊಳೊಬ್ಬನವನು ಬಲ್ಲನೆ ಶಿವನು (ಅಕ್ಷ. ೦–೨೦); ಇಲ್ಲಿ ಬಂದಿದಿರಾಂತು ಸಾಯದೆ ಹೊಳ್ಳುಗುರಾ ಹಾಱುತ್ತಾ ಬಲ್ಲಿದನು ಜಯಪಾಟಿಯೊಳು ಕಡುಹೊಂದಿಸಿದನೊಡನೆ (ಜಕ್ಕ. ೨೦–೯೦); ಹಳ್ಳಿಯ ಹೊಳ್ಳುಗಳ ಲೆಕ್ಕವನೆ (ಪಿಕ್ಸ. ೩–೨–೦೦). 'ಪೊಟ್ಟು' ಪರಾ.

**ಪೊಳ್ಳಾಗು, ಹೊಳ್ಳಾಗು** = ೧. ಸತ್ತ್ವಗುಂದು; ದೃಢತೆಯನ್ನು ಕಳೆದುಕೊಳ್ಳು: ದಿಟ್ಟತನ ಪೊಳ್ಳಾಯ್ತು ಶೌರ್ಯದ ಘಟ್ಟ ಕರಗಿತು (ಕುಮಾರಶೀ. ೯–೬೨); ತಿರುಳಿಲ್ಲದೋಟೆಗಳ ತಿಂತ್ರಿಣೀಫಲದಂತೆ ಗುಳಿಕ ಕರ್ಕೋಟಕಾದಿಗಳೆಡರೊಳ್ಪ್ಪೊಳ್ಳಾದುವಿಱುಹೆಗಳ ಮುತ್ತಿಗೆಗೆ ಕಂಗಟ್ಟುವ (ಕೃಷ್ಣ. ೨೯–೩೫); ವೇದಶಾಸ್ತ್ರಪುರಾಣಗಳು ಸುಳ್ಳಾದುವು; ಜನರು ಪೊಳ್ಳಾದರು; ಭಗವಂತನು ಕಳ್ಳನಾದನು (ಶಿಕ್ಷ. ೯೦). ೨. ಡೊಗರು ಬೀಳು; ಹೋರು ಉಂಟಾಗು: ಮೊದಲಿನ ದೋಣಿಯೊಂದರ ಹೊಳ್ಳಾದ ಮರದ ತುಂಡು (ಕಂಕ್ತ. II. ೬೯೨). ೩. ವ್ಯರ್ಥವಾಗು; ಹಾಳಾಗು; ನಾಶವಾಗಂ: ಮನವೆ ಲಿಂಗ ಲಿಂಗವೇ ಮನವಾದ ಬಳಿಕ ಮಾತು ಕೂತುಗಳೆಲ್ಲ ಹೊಳ್ಳಾ[ಪಾಠಾಂ. ಹೋಳಾ]ದ ಕಾರಣ ಲಿಂಗೈಕ್ಯ ಲಿಂಗೈಕ್ಯವೆ (ಸಿದ್ಧಕ. ೯೨-೨೨೯); ನಿಚ್ಚಲೋದುವ ಪುರಾಣದ ಮಾತಿನ ಮೂಲೆ ಮುಚ್ಚು ನೈಱಾದುವು ಹೋಮನೇಮಂದಾಸಹಸಮಾಧಿಗಳೆಂಬವಲ್ಲ ಹೊಳ್ಳಾದುವು (ಹ್ವರ. ರೀ. ೩೦೭–೩). ೪. ಹುಸಿಯಾಗು; ಸುಳ್ಳಾಗು: ಅನಸೂಯೆ ನುಡಿದ ಪಾರ್ಥನ ಭಾಷೆ ಹೊಳ್ಳಾಗದು ಸುಯೋಧನ ದೇಶವನು ಬಿಳ್ಕೊಂಡೆ ನೆಂದನು ಸೈಂಧವನು ಸಭೆಗೆ (ಕುಮಾರಕ್ರಿ. ೯–೩೦). **ಹೊಳ್ಳು ಮಾಡು** = ನಿಸ್ಸಾರವಾಗಿಸಂ; ನಿಸ್ಸತ್ತ್ವಗೊಳಿಸಂ: ಹಮುಕದಿಂ ಬಲವಲ್ಲದ ಹೊಳ್ಳು ಮಾಡ ಬಗೆವರೆ ಹೇಳೆನಲು (ಜಗ. ೯–೦೦); ಅಲ್ಪಜ್ಞಾನ ಮಾರ್ಗವ ಹೊಳ್ಳು ಮಾಡಿ ವಿಶುದ್ಧಪೂರ್ಣಜ್ಞಾನಮಾರ್ಗದಲಿ ಒಪ್ಪಹಾಗಿತ ಸುಖವ ಬಯಸಲು (ಕೃಷ್ಣ. ೩೩–೦).

[ದೇ. ॥ ತಮಿ. ಪೊಳ್ಳು, ಪೊಳ್, ಪೊಳ್ಳೈ; ಮಲ. ಪೊಳ್ಳು; ಕೋ. ಪೊಳ್ಳು, ಪೊಳ್ಳ, ಪೊಳ್ಳು; ಕೊಡ. ಪೊಳ್ಳ, ಪೊಳ್ಳ; ತೊ. ಪೊಳ್ಳು, ಪೊಳ್ಳ; ತುಳು. ಪೊಳ್ಳೆ; ಪರ್ಜಿ. ಪೊಲ್, ಪೊಲ್ಲು; ಗೊಂಡಿ. ಪೊಲ್ಲಾತು; ಕುಇ. ಪೊಲ್ಗ; ಕುವಿ. ಪೊರ್ಕು]

**ಪೊಳ್ಳುಗಳೆ,** ಪೊಳ್ಳುಗಳೆ (ಕ್ರಿ). ೧. ವ್ಯರ್ಥವಾಗಿಸು; ಸತ್ತ್ವಗುಂದಿಸು: ಅಮಲಧರ್ಮಜನ ಕೀರ್ತಿ . . . ನಾಗೇಂದ್ರ ವರದಾಯುಧವ ಪೊಳ್ಳುಗಳೆದು ಮಥನಾಗೇಂದ್ರಧರನ ಜಾತೆಯ ನಿಲವುಗೆಡಿಸಿ ನೆಱೆ ರಾಜಿಸಿತು ಮೂಜಗದೊಳು (ಕೃ.ಜಿಪ. ೨.೦೨). ೨. ತುಚ್ಛವಾಗಿ ಕಾಣು: ಜರಿ; ಮೂದಲಿಸು: ಸುಧನ್ವ ಮತ್ತೆ ಅವನ ಅಗ್ಗಳಿಕೆಯನ್ನು ಪೊಳ್ಳುಗಳೆದುಡಿದ (ಶರುಸ. ೩೮). **ಹೊಳ್ಳುಗಳೆ:** ೧. ಮಗುಳೆಚ್ಚು ಪುನರಪಿಯೆಚ್ಚು ಕರ್ಣನ ಹೊಳ್ಳುಗಳೆದನು ಪಾರ್ಥ ನಿಮಿಷದಲಿ (ಕುವ್ಯಾಕ. ೨೩-೨೩); ಹಗೆಗೆ ಹೊಳ್ಳುಗಳೆವುದು ಹೃದಯವಂ! (ಶ್ರೀರಾಪಟ. ೩೩೯-೧೯೬). ೨. ಹೊಗಳಿ ಕೆಲವರ ಹೊಳ್ಳುಗಳೆವುತ ನಗುತ ಕೆಲವರನವರ ಮೋಹರ ತೆಗೆದು ಹೋಯಿತು (ಕುವ್ಯಾಕ. ೫-೨); ಎಲ್ಲರನು ನೀ ಜಱಿದು ರ್ಭಾಡಿಸಿ ಹೊಳ್ಳುಗಳೆದೊಡ ನಿನ್ನಲೆನ್ನಲಿ ಹೊಲ್ಲಪೊಳ್ಳಿತನಱಿವ ಮಾತಂತಿರಲಿ ಹೇಳೊಂದ ಬಲ್ಲಿಯಾದೊಡೆ ನೀನು (ಕೃಕುಂ. ೭-೬೦). ೩. ಸುಳ್ಳುಮಾಡು: ಸುಳ್ಳಾಗಿಸು: ನರನ ನುಡಿಯನು ಹೊಳ್ಳುಗಳೆವರೆ ಚರಣದಲಿ ಬೀಳುವವು ನಡೆಯಿಂದಿರುಳು ದ್ರೋಣನ ಮನೆಗೆ ಬಂದನು ಕೌರವರ ರಾಯ (ಕುವ್ಯಾದ್ರೋ. ೬-೩೯). [ಪೊಳ್ಳು + ಕಳೆ₁]

**ಪೊಳ್ಳುಗುಂಭ** (ನಾ). ಬರಿದಾದ ಮಡಕೆ; ಖಾಲಿಯ ಗಡಿಗೆ: ಬಸಿರು ಬಮಲು ಪೊಳ್ಳುಗುಂಭ ಬೇಡೆಗಾಳಿ ಅದರ ತುಂಬ (ಹ್ವಕರ. ೬೯-೯). [ಪೊಳ್ಳು + ಗುಂಭ₂ (< ಗುಂಬ₃)]

**ಪೊಳ್ಳುಗೆಡೆ** (ಕ್ರಿ). ಹುರುಳಿಲ್ಲದ ಮಾತನಾಡು; ಜಳ್ಳು ಮಾತನಾಡು: ಬಡವನೊಳ್ಳಿಯ ಮಾತ ನುಡಿದರಲ್ಲಿಂಬುವವರು ಪೊಡವೀಶ ಪೊಳ್ಳುಗೆಡದರೂ ಕೈವಾರಿ ಕಡುನಗುತಲಿಹರು (ಸರ್ವಜ್ಞ. ೦೨೬೬). [ಪೊಳ್ಳು + ಕೆಡೆ₂]

**ಪೊಳ್ಳುನುಡಿ,** ಹೊಳ್ಳುನುಡಿ (ನಾ). ಹುರುಳಿಲ್ಲದ ಮಾತು; ಕೆಲಸಕ್ಕೆ ಬಾರದ ಮಾತು; ವ್ಯರ್ಥಾಲಾಪ: ಒಳ್ಳಿತೊಳ್ಳಿತು ಮದವಾರಣ ದೊಳಗಾಡು ಕೊಳ್ಳಿಕೊಡೆಯ ಮಾಳ್ಪುದೆಂದು ಪೊಳ್ಳುನುಡಿಯಿಂದೇಕೆ ಪೋಗು (ಶಬಿಸಂ. ೦೭-೦೦೮): ಈ ಪೊಳ್ಳುನುಡಿಗೆ ಮೊದಲ ಮನಸು ನಗುತ್ತಿತ್ತು (ಎಕಸ. ೦೦೭). **ಹೊಳ್ಳುನುಡಿ:** ಸಂಕೇತಕೆ ಹೊಳ್ಳುನುಡಿಗೆ ವಿವೇಕಿಗಳು ಮೆಚ್ಚುವರೆ (ಕುವ್ಯಾಸ. ೨-೯೯); ಹೊಳ್ಳುನುಡಿಗಳನಾಡುತ್ತ ವೃಥಾ ಹೊತ್ತು ಕಳೆಯದೆ ಸಾಮರ್ಥ್ಯವಿದ್ದರೆ ಯುದ್ಧ ಮಾಡಬೇಕು (ರಾಜಸೂ. ೨೨). [ಪೊಳ್ಳು + ನುಡಿ₂]

**ಪೊಳ್ಳುಬೆದರಿಕೆ** (ನಾ). ಸತ್ತ್ವವಿಲ್ಲದ ಬೆದರಿಕೆ; ಸುಳ್ಳುಬೆದರಿಕೆ: ನಿಮ್ಮ ಈ ತವಡು ಕುಟ್ಟೊ ಮಾತು, ಪೊಳ್ಳುಬೆದರಿಕೆ ಕೇಳಲಿಕ್ಕಂತೂ ನನಗ ಸುತರಾಂ ಅವಕಾಶ ಇಲ್ಲ (ಹೂಸಂಪಾ. ೩೩). [ಪೊಳ್ಳು + ಬೆದರಿಕೆ (< ಬೆದಱಿಕೆ)]

**ಪೊಳ್ಳುಮರ** (ನಾ). ಒಳಗೆ ದಿಂಡಿಲ್ಲದ ಮರ; ಟೊಳ್ಳಾದ ಮರ: ಆಗಳ್ ದುರ್ಯೋಧನಂ . . . ತನ್ನೆರ್ದೆಯುಂ ಪೊಳ್ಳುಮರನಂ ಕಿರ್ಚ ಕಿರ್ಚಂತೊಳಗೊಳಗಳುರೆ (ಪಂಪಭಾ. ೨-೬೬ ವ). [ಪೊಳ್ಳು + ಮರ₁]

**ಪೊಳ್ಳುಮಾತು,** ಹೊಳ್ಳುಮಾತು (ನಾ). ಸುಳ್ಳಾದ ಮಾತು, ನಂಬಿಕೆಗೆ ಯೋಗ್ಯವಲ್ಲದ ಮಾತು; ಹುರುಳಿಲ್ಲದ ಮಾತು: ದ್ರೋಹ, ವಂಚನೆ, ಸುಳ್ಳು, ಸೋಗನು ಕಂಡು ಕಂಡೂ ಓದಿದಿದೆ. ಪೊಳ್ಳುಮಾತಿನ ಬುರುಗು ಬಿರಗನು ಕೇಳಿ ಕೇಳಿ ಕುಸಿದಿದೆ (ಹೀರ. ೩೯-೯); ಅದು ಬರಿಯ ಪೊಳ್ಳುಮಾತೆಂಬುದು ಲಲಿತಳಿಗೂ ಗೊತ್ತು (ಹುಬಳು. ೩೦). **ಹೊಳ್ಳುಮಾತು:** ಹೊಳ್ಳುಮಾತಿದು ನೀತಿಯೋ (ಕುವ್ಯಾಶ. ೯-೩೩); ಹೊಳ್ಳುಮಾತಲ್ಲ ಕೇಳಬಲೆ (ಕುರಾಪಂ. ೨೮-೩೬); ಅಳ್ಕೆರ್ದೆಗರನಂಜಿಸುವೊಲು ರಕ್ಕಸ ಹೊಳ್ಳುಮಾತುಗಳಾಡವೇಡ (ಕಂಶ್ರರಾ. ೬-೦೧೯). [ಪೊಳ್ಳು + ಮಾತು₁]

**ಪೊಳ್ವಂದಿ** (ನಾ). ಗಾಯಗೊಂಡ ಹಂದಿ (?); "ಓಡುವ ಹಂದಿ" (ಅಣಾಪ. ೬೪೫): ಜಂತ್ರುದ ಪಂದಿಯ ಬಾಯಂತೆ ಬಿಟ್ಟಿಟಲ್ಲ ಬಾಯುಂ ಬೆರಸು ನಾಲ್ಕುಂ ತಳಮಂ ತೋಱುತ್ತುಂ ಸರಳಿಸಿ ಪಾಯ್ದು ಪೋವ ಪೊಳ್ವಂದಿಯುಂ ಕಂಡು (೮೬ಚಾಪ. ೬-೦೭ ವ). [? + ಪಂದಿ]

**ಪೊಱ,** ಹೊರ₁, ಹೊಱ (ಸಪೂರೂ). 'ಪೊಱಗು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ: 'ಪೊಱಗೋಟೆ', 'ಪೊಱದಡಿ' ಪರಾ. **ಹೊರ₁:** 'ಹೊರದೆಗೆ', 'ಹೊರಗಂಡಿ' ಪರಾ. **ಹೊಱ:** 'ಹೊಱದೆಗೆ', 'ಹೊಱವಳಸು' ಪರಾ. [ < ಪೊಱಗು ]

**ಪೊಱಅಡಿ** (ನಾ). ೧. ಹೆಜ್ಜೆಯ ಮೇಲುಭಾಗ: ಮನುಜಮಾಂಧಾತನ ಪೊಱಅಡಿಗಳ್ ವಿರೋಧಿಭೂಪಾಳರನಡಿಗೆಱಗಿಸಿ ಸಂತೋಷದೊಳುನ್ನತಂಗಳಾದಂತೆ ಕೂರ್ಮೋನ್ನತಂಗಳಾದುವು (ಶಾಂತಪು. ೨-೩೯ ವ): ಅಳವಿಗಟ್ಟಿದುರುನಿತಂಬಸ್ಥಳಭಾರಮನಾಂತ ಕಾಲ್ಗೆ ಪೊಱಅಡಿಗಳೊಳ್ ಲಲಿತತರಾಳಾಕೋಟಿಗಳಂ ತಳೆವುದದೇವಿರಿದೊ ಮದಗಜಾಲಸಗತಿಯಾ (ಕಾವ್ಯಾವ. ೨೯೩); ಪೊಱಅಡಿ. ಒಳಅಟ್ಟಂ. ಪೊಸಱಡಿಕೆ (ಕರ್ಣಾಭಾ. ಕ. ೬೬ ವೃತ್ತಿ). ೨. (ಕಾರ್ಯೋನ್ಮುಖವಾಗಿ) ಮುಂದಕ್ಕೆ ಇಟ್ಟಿರುವ ಹೆಜ್ಜೆ,-ಮುಂದಿಟ್ಟ ಅಡಿ: ಆಗಳ್ ಮದನು ತಳ್ವದೆ ಕೋಲ್ಬಿಲ್ಗಳಂ ಕೊಂಡು ಪೊಱಅಡಿಯೊಳ್ . . . ತನ್ನ ಪುಸಿವಡೆವೆರಸು ತಪೋವನದತ್ತಣ್ಗಯ್ಯರುತುಮಿರ್ದಂ (ಶಂಭೂಪ. ೩೩.೬). [ಪೊಱ ( < ಪೊಱಗು) + ಅಡಿ₁]

**ಪೊಱಂಗುಟ್ಟು,** ಪೊಱಕುಟ್ಟು (ಕ್ರಿ). ಬಹಿರಂಗವಾಗಿ ಹಿಂಸಿಸು, -ನೋಯಿಸು: ಪೆಱಗೆ ಕೇಡುಮಾಡುವತತ್ತ್ವಮುಟಲುವುಮಂ ಮಾಡದುದುಂ ಪೊಱಂಗುಟ್ಟದುದುಂ ನೊಂದು ನುಡಿಯದುದುಂ . . . ಸಾತಾವೇದನೀಯ ದಾಸ್ರವಮಕ್ಕುಂ (ಕಸಾರ. ೯೩). **ಪೊಱಕುಟ್ಟು:** ರಾಗದ್ವೇಷಂಗಳಂ ಪೊಱಕುಟ್ಟ ನುಡಿಯೆ ತನ್ನ ಮರುಳಂ ಮುಟ್ಟಿ ಕಳೆವುದು (ಕಸಾರ. ೯೦೨). [ಪೊಱ (< ಪೊಱಗು) + ಕುಟ್ಟು₁]

**ಪೊಱಂಡ,** ಪೊಱಡ (ನಾ). ಬೆನ್ನಿನ ಮೇಲೆ ಗುಬುಟೆದ್ದು ಬಾಗಿರುವವನು; ಗೂನ: ಗುಜ್ಜನುಂ ಪೊಱಂಡನುಂ ಮುರುಂಡನುಮಾಗಿ ಬರೆ ಕಂಡವರ್ ನಗೆ (ಶಂಶಂ. ೯-೨೩ ವ). **ಪೊಱಡ:** ಹರಭಕ್ತನಿಂದಕಂ . . . ಕುರುಡನಾಗುವ ಕೋಟಿಜನ್ಮದೊಳ್ಬಳಿಕುವ ಪೊಱಡನಾಗುವ ಸಪ್ತಜನ್ಮದೊಳ್ಬಳವನಾಗಿರುವ ಶತಜನ್ಮದೊಳ್ (ಶಶಿಂ. ೦೬-೯). [ಪೊಱಂಡು₂ + -ಅ₇]

**ಪೊಱಂಡಿ** (ನಾ). ಬೆನ್ನಿನ ಮೇಲೆ ಗುಬುಟೆದ್ದು ಬಾಗಿರುವವಳು; ಗೂನಿ: ಕಣ್ಣುರುಡಿಯುಂ ಪೊಱಂಡಿಯುಂ ಕೊಂಟಿಯುಂ ಪೆಟವೆಯುಂ ಕುಷ್ಠಿನಿಯುಂ ಕುಬ್ಜೆಯುಮಪ್ಪ ಮಾಗಳ್ದರೆಬಾರರ್ (ಶಾಂತಿಪು. ೪-೬೬ ವ). [ಪೊಱಂಡ + -ಇ₇]

**ಪೊಱಂಡು₁** 'ಪೊಱಮಡು' ನೋ.

**ಪೊಱಂಡು₂,** ಪೊಱಡು₂, ಹೊಱಟು, ಹೊಱಡು₂ (ನಾ). ಉಬ್ಬಿನಿಂದ ದೇಹದ ಬೆನ್ನು ಮೊದಲಾದ ಭಾಗಗಳಲ್ಲಿ ಉಂಟಾದ ಬಾಗು,-ವಕ್ರತೆ: ಕುಱಿಯ ಪೊಱಂಡಾಗಿರೆಯುಂ ಕುಱಿದಿರೆಯುಂ ಬೆನ್ನನಿಪ್ಪಮುಮಾಬ್ಬುಂ (ಲೋಕೋಪ. ೦೧-೩೬). **ಪೊಱಡು₂:** 'ಮಾಪೊಱಡು' ಪರಾ. **ಹೊಱಟು:** ಹೊಱಟು ಪಾಂಡ್ಯನ ಚಲುವಳಿದು ನೆಱೆ ಹೊಱಟು ನೆಲೆಗೊಂಡಿದ್ದ ಬೆನ್ನಿನ ಹೊಱಟು ಹೋಗಲು ವಿಥ್ಯಯಾಯಿತು ಸಾಯದಿಱಬಹುದೆ ಹೊಱಟ ಬೆನ್ನೆಂತೆಂಬ ನುಡಿಯದು ಧರಗೆ ಕೂನನೆ ನಿಪ್ಪದು ಮಹಿಮೆಸಿ ಸೌಂದರಪಾಂಡ್ಯರಾಯನೆನಲು ಪೆಸರ್ವಡೆದ (ಐಶಪ್ರ. ೩೦-೪೦). **ಹೊಱಡು₂:** "ಗಡು ಎಂದೊಡೆ ಕುಬ್ಜ, ಬೆನ್ನ ಹೊಱಡುಂ" (ರಾಜಶಾ. ೬); ಮಂಡೆಯಲಿ ಕೈಯಿಟ್ಟು ಹೊಱಡೆಡೆಗೊಂಡುದೆಂದಿದಿತ್ತ ವೃದ್ಧರ ಕಂಡು ಬಲ್ಲರು ತನ್ನ ಪೂರ್ವಜರೆಂದನಸುರಾರಿ (ಐಕ.ಗ. ೦೦-೩೭-೩೬); ಹೊಱಡಾಗದಂತೆ ನಾಲ್ಕೊಗ ಜಂತದಲಿ ಹೊಂಗರಡಿಗೆ

ಗಡೆದು ಕರ್ವಣಿಯು ಬರುಡೆಯು ಬಿಗಿದಿಟ್ಟನೆಂಬಂತೆ ಬಲ್ಮೊಲೆಯೆರಡಱ ಮೊಗವು ತೋಱಿದುವು (ಕೋಹಕ. ೨೩-೨೩).

[< ಪೊಱಮಡು./ತೆಲು. ಪೊಱಡು]

**ಪೊಱಂಬೇಱು** (ಕ್ರಿ). (?) : ಕಾನರುಮ ಮೆಚ್ಚುವೊನ್ನನ್ನ ಮೆಚ್ಚದೆ ಪೊಱಮ್ಬೇಱು ಬೊಜಙ್ಗರ (ಶಾಶಾ. IX-i, ೦೩-೯೫ ; ೯೫ಯ ಶ). [?]

**ಪೊಱಕಣ್, ಹೊರಗಣ್ಣು** (ನಾ). ಹೊರಗಿನ ಕಣ್ಣು ; ಬಹಿರ್ಚಕ್ಷು : ಪೊಱಕಣ್ಣಂ [ಪಾಠಾಂ. ಮಡೆಕಣ್ಣಾಳ್] ಮುನ್ನಂ ತಾಂ ಮಱಸಿದ ನೊಸಲೊಂದು ಕಣ್ಣುಮಾಗಳ್ ನೊಸಲಿಂ ಪೊಱಮಟ್ಟಂತಿರೆ (ಶಂಕಚಾ. ೮-೨೩). **ಹೊರಗಣ್ಣು** : ಹೊರಗಣ್ಣಿಗೆ ಕಾಣುವ ಸೃಷ್ಟಿಯು ಮೂಕವಾಗಿದ (ಶಾಬಿ. ೦೯೯). 'ಒಳಗಣ್' ಪರಾ. [ಪೊಱ (< ಪೊಱಗು) + ಕಣ್]

**ಪೊಱಕತ್ತರ, ಹೊಱಕತ್ತರ** (ನಾ). [ಸಂಗೀತ] ವಾದ್ಯಗಳನ್ನು ಬಾರಿಸುವ ಒಂದು ಕ್ರಮ,-ಗತ್ತು; ೯ ಹೆಬ್ಬೆರಳನ್ನುಳಿದು ಇತರ ಬೆರಳುಗಳನ್ನು ವಿರಳವಾಗಿ ಚಾಚಿ ಅಂಗೈಯನ್ನು ಹೊರಮುಖವಾಗಿ ವೇಗವಾಗಿ ತಿರುಗಿಸುತ್ತ, ಒಂದಾದ ಮೇಲೊಂದರಂತೆ ಬೆರಳುಗಳಿಂದ ವಾದ್ಯಮುಖವನ್ನು ಹೊಡೆದು ಶಬ್ದಗಳನ್ನು ಉತ್ಪತ್ತಿಮಾಡುವುದಕ್ಕೆ 'ಕರ್ತರೀ' ಎಂದು ಹೆಸರು. ಒಳಕರ್ತರಿ, ಹೊರಕರ್ತರಿಗಳು ಸಂಗೀತಶಾಸ್ತ್ರಗ್ರಂಥಗಳಲ್ಲಿ ವರ್ಣಿತವಾಗಿಲ್ಲ. ಕನ್ನಡಿಗ ಮದ್ದಳೆಕಾರರು ವಾದನತಂತ್ರದ ಸ್ವಸಮಯದಲ್ಲಿ ಅವುಗಳನ್ನು ನಿರ್ಮಿಸಿಕೊಂಡು ಹೆಸರಿಸಿರಬಹುದು. ಮೇಲೆ ಹೇಳಿರುವ ಕರ್ತರೀವ್ಯಾಪಾರವನ್ನು ಹೆಬ್ಬೆರಳು ಒಳಮುಖವಾಗಿ (ವಾದ್ಯಮುಖದೆಡೆಗೆ) ಚಲಿಸುವಂತೆ ನಡೆಸಿದರೆ ಒಳಕರ್ತರಿ. ಇದಕ್ಕೆ ವಿರುದ್ಧವಾಗಿ ಹೆಬ್ಬೆರಳು ಹೊರಮುಖವಾಗಿ (ವಾದ್ಯಮುಖಕ್ಕೆ ವಿಮುಖವಾಗಿ ಆಚೆಗೆ) ಚಲಿಸುವಂತೆ ಏರ್ಪಡಿಸಿದರೆ ಹೊರಕರ್ತರೀ ಎಂದು ಅರ್ಥ ಮಾಡಬಹುದು : ಅಳಗಂ ಸುಳಿಯಳಗಂ ದೊಟ್ಟಳಮೊಳಕತ್ತರಮುಮೆಸೆವ ಪೊಱ [ಪಾಠಾಂ. ಹೊಱ]ಕತ್ತರವಗ್ಗಳಿಸಿರೆ ನಾನಾಭೇದಂಗಳ ಪಹರಣೆ ತುಡುಕು ಮೋಡಿಯಂ ಬಾಜಿಸಿದಂ (ಧರ್ಮಾಪ. ೨-೨೩). **ಹೊಱಕತ್ತರ** : ಅವುಜಿಗ ನಾವುಜಮುನಳವಡಿಸಿಕೊಂಡು ಝಂಕಾರವಂ ಪೊಯ್ದಳಗ ಸುಳಿಯಳಗ ಬೊಟ್ಟಾಳಂ ಒಳಕತ್ತರ ಹೊಱಕತ್ತರ ವಿಷಮಕತ್ತರಮೆಂಬ ವಿಚಿತ್ರ ವಾದನದ ಬಹುಳಿಕೆಯೊಳ್ವಿಹಿಲನೆನಿಸಿ...ಬಾಜಿಸುತ್ತಿರೆಯುಂ (ಶಾಂತೀಶ್ವ. ೦೬-೬೬ ವ). 'ಒಳಕತ್ತರ' ಪರಾ. [ಪೊಱ (< ಪೊಱಗು) + ಕತ್ತರ$_1$]

**ಪೊಱಕಾಲ್, ಹೊರಕಾಲು, ಹೊಱಕಾಲ್, ಹೊಱಕಾಲು** (ನಾ). ೧. ಕಾಲಿನ ಹೊರಭಾಗ,- ಹೊರಗು : ಕಾಲ ಪೊಱಗು, ಪೊಱಕಾಲ್ (ಶಬ್ದಮ. ೩೯೬). **ಹೊರಕಾಲು** : ೨. ಅಡ್ಡವಾಗಿ ಇಡುವ ಕಾಲು ; ತೊಡರುಗಾಲು : ಓಡುತ್ತಿರುವಾಗ ಕಿಂಚನು 'ಹೊರಕಾಲು' ಕೊಟ್ಟುದರಿಂದ ಶಿವುಗ ನೆಲಕ್ಕೆ ಧೊಪ್ಪನೆ ಕೆಡೆದು (ಸುಚಂ. ೦೦೬). **ಹೊಱಕಾಲ್** : ೩. ಓಡಲು ಸಿದ್ಧವಾದ ಕಾಲು ; ಪಲಾಯನಕ್ಕೆ ಸಿದ್ಧವಾದ ಕಾಲು : 'ಹೊಱಕಾಲ್ಗೊಳು' ಪರಾ. **ಹೊಱಕಾಲು** : ೩. ಹೊಱಕಾಲುಗಳ ಹೋರಟೆ ಕಾಣಲಾದುದು ವರರ ಥಟ್ಟಿನಲಿ (ಕುಮಾರವ್ಯಾ. ೩-೯೨). 'ಒಳಕಾಲು' ಪರಾ.

[ಪೊಱ (< ಪೊಱಗು) + ಕಾಲ್$_1$]

**ಪೊಱಕಾಲ್ಗೊಳ್, ಹೊಱಕಾಲುಗೊಳ್, ಹೊಱಕಾಲ್ಗೊಳು** (ಕ್ರಿ). ೧. ಕಾಲನ್ನು ಎತ್ತಿ ಮುಂದಿಡು : ಮುಂಗಾಲ್ಗಳಂ ನೆಗಹಿ ನಿಲ್ವ ಪಿಂಗಾಲ್ಗಳಂ ಕೀಳ್ತು ದಾಂಟುವ ಪೊಱಕಾಲ್ಗೊಳ್ವ ಮಾರ್ಗಮೆಟ್ಟುವ . . . ಅಶ್ವಂಗಳ್ (ರಾಶೇಕ. ೬-೦೦ ವ). **ಹೊಱಕಾಲುಗೊಳ್** : ೨. (ಹೆದರಿಕೆಯಿಂದ) ಪಲಾಯನ ಮಾಡು; ಓಡಲು ಸಿದ್ಧವಾಗು : ಹೊಟ್ಟನೂಕಿ ವೃಥಾಹವದ ಜಗಜಟ್ಟಿ ನೀ ಹೊಱಕಾಲುಗೊಂಡರೆ ಬಿಟ್ಟನೇ (ಕುಮಾರವ್ಯಾ. ೦೧-೩೯). **ಹೊಱಕಾಲ್ಗೊಳು** : ಬಿಲುಂದೆಗಹಿನಾ ಕರ್ಣಪೂರದ ಹಿಳುಕಿನಾನಿಲಜನಿರಲು ಸಿಂಹದ ಹೊಲನ ಹೊಗುವಿಭದಂತೆ ಪೊಱಕಾಲ್ಗೊಳುತಲಿರೆ ಕಂಡು ತೊಲಗದಿರಿ ತಮ್ಮಂದಿರಿರ . . . ಸುಭಟರು ನೀವೆನುತ ತೆಗೆದೆಚ್ಚನು (ಕುಮಾರವ್ಯಾ. ೦೨-೩೦). [ಪೊಱಕಾಲ್ + ಕೊಳ್$_1$]

**ಪೊಱಕುಳಿ, ಹೊಱಕುಳಿ** (ನಾ). ಬೇರೆಯವರ ಆಶ್ರಯದಲ್ಲಿ ವಾಸಿಸುವ ಸ್ವಭಾವವವನು : ಪೊಱಕುಳಿ [ಪಾಠಾಂ. ಪೋಕುರ್ಳಿ], ಓಡುಕುಳಿ (ಕರ್ಣಾಟ. ಶಬ್ದ. ೨೦೯ ಪ್ರಯೋ). **ಹೊಱಕುಳಿ** : "ವರದಾತಃ, ಪರ್ಯೆಧಿತಃ—ಈ ೨ ಹೊಱಕುಳಿ" (ಹಲಾಯು. ೩೮.೦೯೬).

[ಪೊಱ (< ಪೊಱಗು) + -ಕುಳಿ$_3$]

**ಪೊಱಕೆಯ್, ಪೊಱಕ್ಕೆ, ಪೊಱಗಯ್, ಹೊಱಕಯ್, ಹೊಱಕೆಯ್, ಹೊಱಕ್ಕೆ** (ನಾ). ೧. ಕೈಯ ಹೊರಭಾಗ ; ಮಣಿಕಟ್ಟಿನಿಂದ ಕಿರುಬೆರಳಿನವರೆಗಿರುವ ಕೈಯ ಹೊರಪಾರ್ಶ್ವ : "ಮಣಿಬಂಧನದಿಂದು ಕಿಱುಕುಣಿಕೆವರಂ ಕರಭಮೆಂಬುದಕ್ಕುಂ ಪೊಱಕೆಯ್" (ವಸ್ತುಕೋ. ೬೮-೯) : ಸಂಡೆಯ್ವೊರಲ್ ನಲವಿಂದು ಪೊಱಕೆಯ್ಯೊಳಾಂತು ಮಗುಟ್ದಾರ್ಪಿಂ . . . ಪೊಯ್ವುದು (ಚಕಚ. ೦೨-೬೯). **ಪೊಱಕ್ಕೆ** : ೧. ಕೈದುದುಡುಕಿ ಪಿಡಿದನಂ ನೋಡವಂತಿರ್ದ ಪಾಂಗಿಂ ಪೊಱಕೈಯೊಳ್ ಮೋದಿ ಕಂಸಾನುಜನನಧಿಕನಂ ಕೊಂದು (ಜಗಂ. ೬-೯೯). **ಪೊಱಗಯ್** : ೧. ಮಲಮಂ ಪಿಡಿಕಿಸಿ ಪೊಱಗಯ್ಯನೊರಸಿ ಕರ್ಚಿದ ತೆಱದಿಂ (ಸಮುಕ. ೦೩-೨೬). **ಹೊಱಕಯ್** : ೧. ಸೂತನ ಬಾಯ ಹೊಱಕಯ್ಯಿಂದ ಹೊಯ್ದನು ಹಡಪದವರನು . . . ಕಿವಿದು ಮುಱಿದನು (ಕುಮಾರವ್ಯಾ. ೦೯-೯). **ಹೊಱಕೆಯ್** : ೧. ಪಲ ಹೊಱಕೆಯ್ಯಿಂದ ತಟ್ಟಿ ಮಾತಳೀಶ್ವರನನಿಡೆ ನಗುತ (ಕಂಪು. ೩೬-೬೩). ೨. ಬೇರೆಯ ಕೈ ; ಇನ್ನೊಂದು ಹಸ್ತ : ಬಾಯೊಳುದಕ ಪೊಗದ ಹಾಗೆಕೈಯ್ಯಸದ್ದಂ ಬಾಚಿ ಮೇಣ್ ಹೊಱಕೆಯ್ಯ [ಪಾಠಾಂ. ಪೊಱಕಯ್ಯ]ಲುದಕವನೊಯ್ಯನೊಯ್ಯನವುಂಕಿ ತಿರುಹುವಳು (ರಸಪ್ರ. ೧೩-೦೦). ೩. ಹೊರಗಡೆಗೆ (ಬೀಸಿ) ತೆಗೆದ ಕೈ : ಉಗಿದನುರಗಾಸ್ತ್ರವನು ಹೊಮ್ಮೂಡಿಗೆಯೊಳಗೆ ಹೊಱಕೆ[ಪಾಠಾಂ. ಕ]ಯ್ಯ ಗಾಳಿಗೆ ಹೊಗೆಯ ಹೊದಱಿನ ಹೊರಳಿ ಹಬ್ಬಿತು ಕೂಡೆ ಕಿಡಿಯಿಡುತ (ಕುಮಾರವ್ಯಾ. ೨೩-೯). **ಹೊಱಕ್ಕೆ** : ೧. ಭರದೊಳೊಳಕೈಯಿಂದ ಹೊಱಕ್ಕೆಯಿಂದೆ[ಪಾಠಾಂ. ಕಯ್ಯಿಂದೆ] ಹೊಡೆಹೊಡೆದು (ರಸಪ್ರ. ೨೨-೯೩); ಗದೆಯ ಕೊಂಡಪ್ಪಳಿಸಿದನು ಹೊಱಕೈಯಲರೆದಿಟ್ಟಳಿಸಿದರನೆಡಗಾಲಲೊದೆದನು (ಕುಮಾರವ್ಯಾ. ೦೩-೦೬) : ಸಿಲ್ಲೆನುತ ಹದರಿಕ್ಕಿ ಹೆಡಕನು ಘಲ್ಲಿಸಲು ಹೊಱಕ್ಕೆಯ[ಪಾಠಾಂ.ಕಯ್ಯ]ಲಾಟೆಯ ಪಲ್ಲುದುರೆ ಹೊಯ್ದೆಡದ ಮುಷ್ಟಿಯಲೆಱಗಿದನು ಬದಿಯ (ಕಜೈಭಾ. ೩-೧-೨). 'ಒಳಕೆಯ್' ಪರಾ. [ಪೊಱ (< ಪೊಱಗು) + ಕೆಯ್$_1$]

**ಪೊಱಕ್ಕೆ** 'ಪೊಱಕೆಯ್' ನೋ.

**ಪೊಱಗಡೆ, ಹೊರಕಡೆ, ಹೊರಗಡೆ ಹೊಱಗಡೆ** (ನಾ). ೧. ಹೊರಭಾಗ; ಹೊರಪ್ರದೇಶ : ಅಱಗುಲಿಯಂ ಮುನ್ನಮ್ಮ ಗಱಗಳು ತಱಿದಿಂದ್ರನನಾ ಸಗ್ಗಮನನ್ನೀ ಸಱದಲೆಯಂ ಪೊತ್ತಂಬುಜಜನ್ಮಾಂಡದ ಪೊಱಗಡೆಗಾಗಿ ನುಱಿಯುವಪ್ಪಂದದಿ ಹಾಕದೊಡನಗೇತಱ ದೊಡ್ಡಿತ್ತು (ಶಹುಗ. ೦-೩೩). **ಹೊರಕಡೆ** : ೨. ಕಕ್ಕಸಂ ; ಬಹಿರ್ದೇಶ : (೯). ೩. ಮಲವಿಸರ್ಜನೆ : ಮಗುವಿಗೆ ಹೊರಕಡೆಯಾಗದಿದ್ದರೆ—ಅರ್ಧದಿಂದ ಒಂದು ಚಮಚೆವರೆಗೆ ತುಲಸೀಎಲೆಯ ರಸ ಕುಡಿಸುವುದು (ಶುಕಪ. ೯). ೪. ಭೇದಿ; ವಿರೇಚನ : ಹೊರಕಡೆ ಹೋಗುವುದು ಕಡಿಮೆಯಾಗಲು ಔಷಧ ಕೊಟ್ಟಾಯ್ತು (ಶುಂಗಾಕು. ೦೦೩). **ಹೊರಗಡೆ** : ೧. ಹುಡುಗರೆಲ್ಲ ತರಗತಿಯ ಹೊರಗಡೆಯಲ್ಲೇ ಇದ್ದಾರೆ (ಪ್ರಾ). ೫. ಹೆಂಗಸಿನ ಮುಟ್ಟು,- ರಜೋದರ್ಶನ : ಅವತ್ತು ಹೊರಗಡೆಯಾದ್ದರಿಂದ ಅವಳು ಪೂಜೆಗೆ ಬರಲಿಲ್ಲ (ಪ್ರಾ). (ಗು). ೬. ಹೊರಭಾಗದ: ಹೊರಗಡೆ ಕೋಣೆ

ಯಲ್ಲಿ . . . ಚರ್ಚೆ ನಡೆಯಿತು (ಜನಾ. ೦೬೦)· ೭. ಪರಸ್ಥಳದ ; ಬೇರೆ ಕಡೆಯ : ಹೊರಗಡೆ ಸಂಚಾರ ಹೊರಟರೆ ಬೆಳ್ಳಿತಟ್ಟೆ, ಕ್ರಿಯಾಭಸ್ಮಘಟ್ಟಿ ಇತ್ಯಾದಿಯೊಂದಿಗೇ ಹೊರಡಬೇಕು (ಚುಂ.ಕಾ. ೦೪)· **ಹೊಱಗಡೆ :** ೧. ಮಂದಿರದ ಹೊಱಗ[ಜಾಲಂ. ಕ]ಡೆಯಾಲಾಪಂ ತ್ರಿರಲು (ಸಂಕಶ. ೬-೨೮ ಅರ್ಥಕೋ. ೯) 'ಒಳಗಡ್ಡೆ' ವರಾ. [ಪೊಱ (<ಪೊಱಗು) + ಕಡೆ]

**ಪೊಱಗಣ್** 'ಪೊಱಗು' ವರಾ.

**ಪೊಱಗಣ** 'ಪೊಱಗು' ವರಾ.

**ಪೊಱಗಯ್** 'ಪೊಱಕೆಯ್' ನೋ.

**ಪೊಱಗು,** ಪೊರಗು, ಹೊರಗು, ಹೊಱಗು (ನಾ)· ೧. ಹೊರಗಡೆ : ಹೊರಭಾಗ : ಪೊಸತೆ ಮೊಳೆತ ಧಾನ್ಯಂಗಳನಾ ಧರಣೀಶಂ ಕಿದಱಿಸಿದಂ ನಿರಂತರಂ ರಾಜಗೇಹದೊಳಗಂ ಪೊಱಗಂ (ಆದಿ. ೦೫-೭) ; ಪೊಸತು ಪಡುದಳದು ಪೊಱಗೊಳಗು ಸವಮವನಿಸ್ಸಿವಱೊಳ್ (ಜಾಜ್ಞಾಕ. ೩೬೯)· ೨. ಹೊರತಾದುದು : ಇನಿತುಂ ಪುರಮೇಪುದೊ ಪೌದನಪುರಮೆನ್ನಾಳ್ಕೆ ಗಿಂತು ಪೊಱಗೆನಿಪಾಗಳ್ (ಆದಿ. ೦೯-೨೮) ; ಪೆಟ್ಟಿಯುಗ್ರ್ಗಂ ಪನ್ನಸಿಗಗ್ರ್ಗಂ ಗಾವುಣ್ಡಗಳ್ಗಂ ಬಿಟ್ಟಿ ಕೊಟ್ಟಿಣಂ ಬೀಡುದೆಸಂ ಪೊಱಗು (ಶಾಇಕ. IX-೧, ೭೬-೨೬ ; ೨೫೨)· ೩. ಬಹಿರಂಗ ; ಬಾಹ್ಯ : ಒಳಗಂ ಭೇದಿಸದನ್ನಂ ಚಳಬುದ್ಧಿಗೆ ಪೊಱಗು ಬೆಟ್ಟಿತಾಗಿರ್ಕುಂ . . . ಜನವಚನಂ (ಕಪುಕ. ೩-೨೬)· ೪. ಹೊರತಾದ ವ್ಯಕ್ತಿ : ಇದಂ ಮಹಾಜನಂಗಳ್ ಕಂಡರಪ್ಪೊಡೆ ಸಭಾಜನಕ್ಕಂ ಸಹಪಂಕ್ತಿಗಂ ಪೊಱಗೆಂದು ಸವಯಬಾಹ್ಯನಂ ಮಾಟ್ಟರ್ (ಸಂಕಶಂ. ೦೯೭-೦೬) ; ಈ ನೆಲದೊಳ್ ಪೊಱಗಾರುಮಿಲ್ಲೆನಲ್ ಮನ್ನಿಸಿ (ಮಲ್ಲಿಕೆ. ೯-೦೦೯)· ೫. ಉಳಿದಿರುವುದು ; ಅವಶಿಷ್ಟ : ಅಪಾಜಿತ ನಿತ್ಯ ಪರಂತಪನ ತಪಶ್ಚರಣಮೊಂದೆ ಪೊಱಗೆನೆ ನಿರ್ವೇಗಪರಾಯಣಂ ಮನಂಗೊಂಡು ಪವಿತ್ರಶ್ರಾವಕವ್ರತಂಗಳೊಳೊರ್ದಂ (ಶಾಂತಿಪು. ೦-೮೭)·
**ಪೊರಗು :** ೧. ಒಳ್ಳಿತಂ ಸುಡುವ ಕಿಚ್ಚಂ ಪೊರಗಿನಿಂ ತಣಿಸೆ ಒಳ್ಳಿದರ ನೆಚ್ಚಲಿಸೆ ಹಿಡಿದು ಪಡುಗಿಸುಗುಂ (ಶಾಬೋ. ೬೭-೦೯೦)· **ಹೊರಗು :** ೧. ಹೊರಗಿನ ಕಳ್ಳನನ್ನು ಹಿಡಿಯಬಹುದು, ಒಳಗಿನ ಕಳ್ಳನನ್ನು ಹಿಡಿಯಲಾಗದು (ಗಾದೆ)· **ಹೊಱಗು :** ೧. ಹೇಸುತ ಮಾಂಸಮಂ ಹೊಱಗತ್ತ ನೂಂಕಿ ಶಿವಾಲಯವಿದಪವಿತ್ರವಾಯ್ತೆನುತ ಮತ್ತೆ ಮಿಂದು (ಅಪು.೦೬-೫೯)· ೨. ನಿನ್ನ ಸೌಖ್ಯವರ್ಯಾರ್ಕ್ಕೆ ಹೂದೊಡಿಗೆ ಹೊಱ . . . ನಿನ್ನ ಲೋಚ ನಕ್ಕೆಳಮಿಂಚು ಹೊಱಗು (ಸಂಕಶ. ೦೯-೦೯)· ೩. ಅಭೇದ್ಯಚಿತ್ತ ಕಾತರಂಗೆ ಒಳಗು ಹೊ[ಱ]ಗಿಲ್ಲ (ಅದಿಪ. ೯೯-೦೦೭) ; ಹೊಱಗನೆ ಕೊಯ್ದು ಹೊಱಗನೆ ಪೂಜಿಪವರ ಕಂಡು ನಾಚಿದೆನಯ್ಯ (ಅಕಸಂ. ೯೩-೯೦೭)· ೪. ಹೊಱಗ್ ಹಂಗುರವನವಂ ಹೊಱಗು ಹೊಱಗೇ ಸಭೆಗೆ ಹೊಱಗ್ ಹಂಗುರವನಾವನಾದೊಡಂ ಹೊಱಗೆಮಗೆ (ಬಸವ. ೮೭. ೬೯-೯) ; ಐದು ತಾಪಸವೇಷವನು ಬಿಳ್ದಿದು ಪರವನಿತಾವ್ಯಸನಿಗಳಾದ ಗತಿಯನು ಹೊಱುವ ಪಾಪಕೆ ಹೊಱಗು ತಾವೆಂದ (ಕೊಡಾ. ೩-೯-೦೩)·

**ಪೊಱಗಣ್** = ಹೊರಗಡೆ : ಪೊಱಗಣ್ಗೆ ಸಯ್ದುರಿನೆ ತಾಪೊಳಗಂ ತವೆ ಕೋಡಿ ತಿಂದು ರಕ್ಕಸಿಯರ ಕಂಠ ಕುಂಬಳದ ಮಾಟ್ಕೆಪೊಱಗಾಗಿರ (ಪಂಪಭಾ. ೯-೯೮) ; ಎಲೆಲೆ ಭಕ್ತ ಪೊಱಗಣ್ಗೆ ಟೆಂದಂಡಲೆಯದೇಬಿದಿರುದ್ದಂಡನಿವಂ ಮೊಂಕಿಸುತ್ತ ಹಿಡಿದರ್ ಕರಮಾ (ಅನ್ನಪಿ. ೦೦-೩೭)· **ಪೊಱಗಣ, ಪೊರಗಣ, ಹೊರಗಣ, ಹೊಱಗಣ** = ೧. ಹೊರಭಾಗದ ; ಹೊರಗಡೆಯ : ಒಳಗಂ ದಕ್ಷಿಣಸುಕರದುಷ್ಕರಮಂ ಪೊಱಗಣ ಸುಕರದುಷ್ಕರಭೇದಮಂ . . . ಎಲೆಯೊರ್ವನೆ ಚಾರಿಸಲ್ ಬಲ್ಲಂ (ಎಕ. II, ೦೩೩-೬೬ ; ೫೮೭) ; ಊರಿಂದಂ ಪೊಱಗಣ ಮಯ್ಯೊಕೊಲ್ಲು ಧರ್ಮಕ್ಕಾರಾನುಂ ಪುರಜಸವಿಟ್ಟ ಭೊಱಸಾದಂ (ಶಾಸ್ತ್ರಕೋ. ೩-೦೯) ; ಬಸದಿಯ ಪೊರಗಣ ಪಿತ್ತಿಲ್ಲೋ ನ್ನಿಸಿಮಂ ತೆಮ್ಮಲದೊಳು ಎಣ್ಗೋವೆಡೆ ಎಳೆನೊಮ್ಮಿದಿವ್ಯಯ ಮಗು . . . ಕೊಟ್ಟ ಮಣ್ಣು (ಎಕ. X. ಕೋಲಾರ. ೯೦-೯೦ : ೫೦೩) ; ದರಿಯಾ ಬೀಬಿಯು . . . ಹೊರಗಣ ವರ್ತಮಾನವನ್ನು ತಿಳಿಸುತ್ತ ಇದ್ದಳು (ಶಂಕಿತು. ೨೦೭) ; ಊರ ಹೊಱಗಣ ಮಸಣವಟ್ಟಿಗೆಯೊಳಿರಲೆಂದು ಹಾರೈಸು ತೆಮ್ಮ ಮಯ್ಯುನನೊಲ್ಲದೆ ನಗುತಂದು (ಸಂಕಶ. ೬-೩೫) ; ನಱುಗಬ್ಬಿ ನೊಳಗಣ ರಸವ ಕಾಣದೆ ಪಶು ಹೊಱಗಣೆಲೆಯ ಸವಿಮಾತ (ಶಕಶ. ೦-೦೦೬)· ೨. ಬಾಹ್ಯದ; ಬಹಿರಂಗದ : ಇವೆಲ್ಲ ಹೊಱಗಣ ಮಾತು (ಅಕಶ. ೬೯೦)· **ಪೊಱಗಣಂ** = ಹೊರಗಿನವನು ; ಅನ್ಯ ; ಪರಕೀಯ : ಒಳಗಣಂ, ಪೊಱಗಣಂ, ಮುಂತಣಂ (ಚುಂಡ. ೦೦೦ ಕ್ರ ಹೋ) ; ಅರಿಷಡ್ವರ್ಗವನವ ನೀಶ್ವರನಾಟಲೆಯ ಪೊಱಗಣರಿಗೆ ಜಯಾಂಗನೆ ಪರ್ಬ್ಬೊರೆದವಳೆನೆ ಪರಿಮುವ . . . ರಥಗಳ್ (ಶಾಂತಿಪು. ೦೦-೧೫೯)· **ಪೊಱಗಾಗು, ಹೊರಗಾಗು, ಹೊಱಗಾಗು** = ೧. ಬೇರೆಯಾಗು ; ಹೊರತಾಗು ; ಎರವಾಗು : ಕುವಳಯ ಬಾಂಧವನೆಸವನೆ ಕುವಳಯಮುಮಂ ಬೆಳಗಿ ಕುವಳಯಂ ಪೊಱಗೆನೆ ಪಾಡದವರ ಪೊಱಗಾಗೆ ನಿನಗೀ ಕುವಳಯಪತಿಯೆಂಬ ಪೆಂಪೊತಂಬಡೆ ನೃಪತೀ (ಸಂಕಶಾ. ೯-೩೭) ; ಜೀವಂ ಪೊಱಗಾಗಿ ಪಸ್ಸ್ ಹಮುಮಾರಯ್ಯಂದು ನಿರ್ವೀರ್ಯ ವಾಗಿರೆ (ಶಾಂತಿ. ೩೩-೨೮) ; ಕೊಟ್ಟ ಹೆಣ್ಣು ಕುಲಕ್ಕೆ ಹೊರಗಾದರೂ ಹೆತ್ತೊಡಲಿಗೆ ಅವಳ ಚಿಂತನೆ ತಪ್ಪಿದ್ದೆಂದು ? (ಹೊಸ್ತಿ. ೦೭) ; ಮಲ್ಲೇಶ್ವರ ದೇವರಿಗೆ ಸಿನ್ನಿಹೇಡದಲು ಬಿಟ್ಟ ಭೂಮಿ ಹೊಱಗಾಗಿ ಮೇಲಾದ ಭೂಮಿಯ ಹಡಪವಳು ದಂಡನಾಯಕಂ (ಕಇ. II, ೦೩-೦೩ : ೧೧೫೫) ; ಹೊಗಳಿಕೆಗೆ ಹೊಱಗಾದರ್ಕವರು ವಿಗಡರದಱೊಳಗಿಬ್ಬರೀದಿಂ ಹಗೆಗಳುಳಿದರು ಮಾಂವ ರೆಂದನು ಭಾನುಸುತ (ಕುಮಾವ್ಯ. ೯-೦೩)· ೨. ಮಾಡದೆ ಉಳಿದಿರು,— ಹೊರಗಾಗಿರು : ಪಾರಲ್ಕೀಂ ಜೀವಿತಸಂಧಾರಣಕಿಂ ಗಮನವೊಂದೆ ಪೊಱಗಾಗಿರೆ...ನಮಗಿದು ಕಾರ್ಯಂ (ಶಾಬಂಲಾ. ೬೩೬)· ೩. ಮುಟ್ಟಾಗು; ಋತುವಾಗು ; ಬಹಿಷ್ಠೆಯಾಗು : ಈ ದಿನ ಅವಳು ದೇವಸ್ಥಾನಕ್ಕೆ ಬರುವಂತಿಲ್ಲ, ಹೊರಗಾಗಿದ್ದಾಳೆ (ಜನ)· **ಹೊರಗಲ್ಸ** = ಹೊರಗಿನ ಕೆಲಸಗಳಿಗೆ ಬಳಸುವಂಥದು ; ಮಡಿಯಲ್ಲದುದು : ಆ ಚೊಂಬನ್ನು ಅಡಿಗೆಮನೆಗೆ ತರಬೇಡ, ಅದು ಹೊರಗಲು (ಜನ)· **ಹೊಱಗಣಾಲಿಸು** = ಹೊರಗಡೆಯ ಶಬ್ದವನ್ನು ಆಲಿಸು,—ಕೇಳು : ತಱಗೆಲೆ ಗಱಕೆಂದೊಡೆ ಹೊಱಗನಾಲಿಸುವ (ಅಕಶ. ೩೬೯) ; ಅಡಿಗಡಿಗೆ ಹೊಱಗನಾಲಿಸಿ ಮತ್ತೆ ಮನೆಯೊಡತಿಗಂಜಿ ಕೆಲಸವನು ಮಾಡುತ್ತಿಪ್ಪ ವನಿತೆಗಾದಾಪತ್ತನಾಲಿಸದ ಕಿತ್ತು ದಟ್ಟಿಸುರು (ಶತಕ. ೦೩-೦೦)·

[ದೇ. ೫ ತಮಿ. ಪುಱ, ಪುಱಂ, ಪುಱಕ್ಕು ; ಮಲ. ಪುಱ ; ಕೊಡ. ಪೊರಮ. ಕೋತ. ಪೊರಂಜಿ]

**ಪೊಱಗುಂಡ,** ಹೊಱಗುಂಡ (ನಾ)· ಹೊರಗಿನ ಕೆಲಸವನ್ನು ಮಾಡುವ ಆಳು, —ಸೇವಕ : ಖಂಡಿತಸ್ಮರಭಕ್ತನಳವಿಂಗೆ ಮೆಚ್ಚಿ ಶಶಿಮಂಡಲಾನನೆ ಭಕ್ತಿಯಿಂದೆಱಗಿ ಪಶುಪತಿಗೆ ಗುಂಡುದೊಳ್ಗಾಗಿ ನೀನಿರ್ಪುದಾಂ ನಿನಗೆ ಪೊಱಗುಂಡನಾಗಿರ್ಪೆನೆನುತ (ಚನ್ನಶಾ. ೫-೩೩) ; ನಿನಗೆ ನಾನು ಪೊಱಗುಂಡನಾಗಿ ರುವೆನೆಂದು ಶಿವದೀಕ್ಷೆಯಾ ಪಡೆದು (ಬೈಕಸ್ತಿ. I. ೫೬)· **ಹೊಱಗುಂಡ :** ಈ ವಿಶ್ವಮಂ ಸೃಜಿಸುವಲಿ ಶಂಭುವಿನ ಲೀಲಾವಿಡಂಬನದ ಹೊಱಗುಂಡನಾಗಿರ್ಪು ದಱಿನಾ ವಿಷ್ಣುಗಾದುದು ಕಲತ್ರಾಪ್ತಿ (ಚನ್ನಶಾ. ೦೦ ೫೬)·

[ಪೊಱ (<ಪೊಱಗು) + ಗುಂಡ (ಪ ← ತೆಲು. ಗಂಡ = ಸೇವಕ)]

**ಪೊಱಗೆ,** ಹೊರಗೆ, ಹೊಱಗೆ (ಅ)· ೧. ಹೊರಗಡೆಗೆ ; ಆಚೆಗೆ : ದುರ್ಯೋಧನಂಗಿಂ ಪುಗಲ್ಕಿಡೆ ತ್ರಿಭುವನಂಗಳಿಂ ಪೊಱಗೆ ಮತ್ತೆಲ್ಲಿತ್ತೊ ಬಾಪಾಂತಕಾ (ಸಂಕಶಾ. ೦೩-೬೬) ; ಒಳಗೆ ಬೆಳಗು, ಪೊಱಗೆ ಕತ್ತಲೆ (ಗಾದೆ) ; ಮಹಾವಿಭವದಿಂದಿರುತಿ ಬ್ರಹ್ಮಾಂಡದಿಂ ಪೊಱಗೆ ಶಿವಲೋಕವಂ ನೆನೆದ ಮಾತ್ರದೊಳಾಗಿಸ (ಅಪು. ೦೩-೨೦)· ೨. ಬೇರೆಯಾಗಿ ; ವ್ಯತಿರಿಕ್ತವಾಗಿ : ಅವಱಂ ಪೊಱಗೆ ಮಾಳಾವೃತ್ತ

ದಂಡಕಂಗಳ್ ಮಾತ್ರಾನಿಯಮಸ್ಕಂಧಕಾದಿಜಾತಿಗಳೆಂಬಿವಕ್ಕುಂ (ಛಂದೋಂಬು. ೦-೯೬ ಪ). ೩. ಬಹಿರಂಗವಲ್ಲದ ಬಾಹ್ಯದಲ್ಲಿ: ಅತ್ರಿಯ ಪಣ್ಗಳಂತೆ ಒಳಗಶುದ್ಧನುಂ ಪಟುಫಲದಾತೆ ಪೊಱಗೆ ಸೇವ್ಯನುಂ (ಧರ್ಮಾಮೃ. ೬-೩೨); ಪೊಱಗತುಳಧೃತಿಯನಾಂತಂ ನೆಱೆ ಮನದೊಳ್ ತ... ...ವ ಕುಸುಮಮಾಲೆಯಂ (ಕುಸುಮ. ೦೦-೦೦೪); ಮನೋಜನೆಚ್ಚ ... ಒಂದೊಳನಟ್ಟಿರಲ್ ಪೊಱಗೆ ತೋಱುವ ನುಣ್ಗಱಿಯಂತಿರೊಪ್ಪುಗುಂ (ಕಾಶ್ಯಮ. ೩೯೩). ೪. ಬಳಿಕ; ಅನಂತರ: ಅಂತು ಪೊಱವಟ್ಟು ಪೊಱಗೆ ಅವರೋಧಪ್ರಮದಾಕದಂಬವಿಗಳತ್ಕಾಶ್ಮೀರಸಾರಂ . . . ತೆಂಗೆ ತರಂಗಮಾಲೆ ರತಿಕಂದರ್ಪಂಗೆ ತೀವಿಟ್ಟ ಬಣ್ಣಾವುರಂ ತಾನೆನೆ ಕಣ್ಗೆ ಮಾಡಿದುದು ಕಾಸಾರಂ ಸುಧಾಸಾರವಂ (ಅಜಿತ. ೬-೩೦ ಪ). ಹೊರಗೆ: ೧. ಹೀನಾವಮಾನವಾಗಿ ನೈದು, ಹೊರಗೆ ಕಳುಹಿಸಿದರು (ರಾಘವ. ೬೨); ಅವು ಹಣ್ಣಾದವೆಂದರೆ ಬಿಸಲಿಗೂ ಗಾಳಿಗೂ ಅರಳಿ ಒಳಗಿನ ಹತ್ತಿ ಹೊರಗೆ ಬರುತ್ತದೆ (ಕುಂಬಾರ. ೯-೨೭). ೩. ಈ ವರ್ತಮಾನವನ್ನು ಹೊರಗೆ ಹಬ್ಬಿಸದೆ (ಕುಮಾರಂ. I. ೨೩೨). ಹೊಱಗೆ: ೧. ಭಾಂಡ ಭಾಜನ ಶುದ್ಧವಿಲ್ಲದವರ ಭಕ್ತಿ ಹಂಡದ ಮಡಕೆಯ ಹೊಱಗೆ ತೊಳೆದಂತೆ (ಬಸವ. ೦೦೪); ಇಱಿದು ಚಕ್ರವ್ಯೂಹವನು ಛಿದ್ರಿಸಿಯು ಮಾಡಿ ಕಿರೀಟಿಯಾದಱಿಂ ಹೊಱಗೆ ಹಂಸವ್ಯೂಹದಲಿ ಕೆಣಕಿದನು ಕಾಳೆಗವ (ಕುಮಾರವ್ಯಾ. ೦೦-೦೯); ಹೊಲೆಯ ಹೊಱಗಿಹನೆ ಊರೊಳಗಿಲ್ಲವೆ (ಪುರಂದ. ೦-೦೭೯ ಪಲ್ಲ). ೩. ಒಳಗೆ ಕುಟಿಲ ಹೊಱಗೆ ವಿನಯವಾಗಿ ಭಕ್ತರೆನಿಸಿಕೊಂಬವರ ಬಲ್ಲನೊಲ್ಲನಯ್ಯಾ ಲಿಂಗವು (ಬಸವ. ೯೬); ಹೊಱಗೆ ಶರೀರನಿತ್ಯ ಹಸಿದನೆಂದೆನುತಿರಲು (ಶಿವ.ದೀ. ೩೯-೦೮); ಒಳಗೆ ಕುಜನರು ಹೊಱಗೆ ಧರಣೀವಳೆಯ ಮಾನ್ಯರು (ಕುಮಾರ.ಸ. ೦-೩೪). 'ಒಳಗೆ' ಪರಾ.

ಪೊಱಪೊಱಗೆ, ಹೊಱಹೊಱಗೆ (ದ್ವಿರುಕ್ತಿ): ಪಸರಿಸಿದ ಪಯಃಪೂರದ ಪೊಸವೆಳ್ಪು ನಿಜಾಂಗರುಚಿಯ ಪೊಱಪೊಱಗೆ ಪೊದಟ್ಟಿಸದಿರೆ (ಜಗನ್ನಾ. ೬-೯೨): ಅಡ್ಡಾಯುಧನಿಹತಿಯಿಂ ಹಱಿದಲೆಯವನ ದೇಗುಲದ ಹೊಱಹೊಱಗ ಬಿದ್ದುದು ಖಳನ ತಲೆ (ಜಗನ್ನಾ. ೨೮-೨೬). ಪೊಱಗಿಕ್ಕು, ಹೊಱಗಿಕ್ಕು = ೧. ಹೊರಗಡೆ ಇಡು: ತರುಣಿಯರಾ ವಿಲಾಸಕುಸುಮಾಸ್ತ್ರನಿಕ್ಷಿಸಕಾಮಜಾಮುಂ ತರುಣಮೃಣಾಳಮಂ ತೆಗೆದು ಪೂಗೊಳದಿಂ ಪೊಱಗಿಕ್ಕೆ ದಂದದಿಂ ಕೊರಗಿ (ಪುಷ್ಪ. ೩-೨೯); ಕಡೆದು ಕಲಂಕಿ ಮುನ್ನಖಳವಸ್ತುಗಳಂ ಪೊಱಗಿಕ್ಕಿ ಸಂಪದಂಗಿಡಿಸಿದ ಮೇರು ದೈವದಿನದಿಂದೊಳಗಾಯ್ತೆನಗೆಂದು ಬಂದು ಪಿಲ್ಲಗದಲಮಂಬುರಾಶಿಯುಂ ಮುಳಿದು ಮುತ್ತಿದುದೆಂಬಿನಂ (ಪುಷ್ಪ. ೦೦-೩೩). ೨. ದೂರೀಕರಿಸು; ಬಹಿಷ್ಕರಿಸು; ತ್ಯಜಿಸು: ಮುನ್ನಂ ಪಟ್ಟಿಯರುಮನಾಪ್ತರುಮಂ ಪೊಱಗಿಕ್ಕಿ ಪತಿಗೆ ಹಿತೋಪದೇಶಂಗೆಯ್ಯರ್ (ಶಂಕರಂ. ೦೩೯-೨೦); ಆ ಗುರುಗಳಿಂದೈದುಮಂತ್ರವನಾಗ ಜಪಿಸುತೆ ಚಿತ್ತದೊಳು ಲೇಸಾಗಿ ಜಿನಪದಭಕ್ತಿಯಲ್ಲದೆ ಪೆಱವ ಪೊಱಗಿಕ್ಕಿ (ಜೀವಂ. ೩-೩೩); ಕುಲದ ಬೇರಿಗೆ ನೀನೆ ಗುದ್ದಲಿಗೊಳಲದೇಕೆ ಸುಪುತ್ರನಾಗಿದನಲಘುವಿಪ್ರರು ಕೇಳದಡೆ ಹೊಱಗಿಕ್ಕರೇ ನಿನ್ನ (ಜಗನ್ನಾ. ೩-೩೮). ೩. ಮೇಲಕ್ಕೆ ತಳ್ಳು; ಮೇಲಂ ಮುಖವಾಗಿ ದೂಡು: ನೀರು ಹೊಱಗಿಕ್ಕುವುದು ಮುಱಿಯೇ ಬಾರಿ (ಕುಮಾರ. ೩-೨೬). ಪೊಱಗಿಡು, ಹೊರಗಿಡು, ಹೊಱಗಿಡು = ೧. ಹೊರಗಡೆಯಲ್ಲಿ ಇರಿಸು: ಅಡಗಟ್ಟ ಮಡಕೆಯಂ ಪೊಱಗಿಡುವಂತೆ ಕೊಟನಟ್ಟ ಮಡಕೆಯನೇಕೆ ಹೊಱಗಿಡರ್ (ಧರ್ಮಾಮೃ. ೬-೯೩); ತಮ್ಮಾಯುಷ್ಯ ಭಾಷೆಗಳಂ ಪೊಱಗಿಡುವಂತೆ ಚಪ್ಪರದ ಪೊಱಗೆ ಮೊಲ್ಲನಿಳುಪಿ (ಶಂಕರ. ೩-೩೩); ಮಳೆಯಲ್ಲಿ ಕೊಡೆ ನೆನೆದು ಒದ್ದೆಯಾಗಿದೆ. ಬಿಡಿಸಿ ಹೊರಗಿಡು (ಜನ); ತಂದು ಹೊಱಗಿಟ್ಟು ಕಬ್ಬಿಲರ ಕೈವಿಡಿವನೀವೆಂದ ಪ್ರಸಾದವಿದೆ ಕೊಳ್ಳಿಯೆನಲು (ಸಿದ್ಧರಾ. ೩-೦೩). ೨. ದೂರೀಕರಿಸು: ಮುದಿಯನುಮನ್, ಮಡೆಯನುಮನ್ ನೀನ್ ಎಂಬುದೊರ್ಮೆಯೀ ಪೊಱಗಿಡದ ಮನ್ನಮನ್ (ಅಂತಿಗೂ. ೦೩-೨೭೪): ಬೇಡ, ತಡೆಯದಿರು, ಪೊಱಗಿಡಯನ್ ಎನ್ನ ಮುಂದಿನ ಪಾಡುಮನ್ (ಚಕ್ರಕ. ೩೩-೭೦೭).

[<ಪೊಱಗು]

ಪೊಱಗೋಟೆ, ಹೊರಕೋಟೆ, ಹೊಱಕೋಟೆ (ನಾ). ೧. ಒಳಕೋಟೆಗೆ ಬೇರೆಯಾವ ಸುತ್ತಣ ಕೋಟೆ; ಹೊರಗಿನ ಕೋಟೆ. ೨. ಕೋಟೆಯ ಹೊರಭಾಗ: ನೊಳಂಬಿ ದಡಿಗ ರಾಚಮಲ್ಲ ಮಯ್ಯಾಡಿ ಗುಣ್ಡಿಗೆ × × ವಾಗಿ ಬರುಬಳಿಸಿ ಬಿಟ್ಟಡೆ ಪೊಱಗೋಟೆಯಿಟ್ಟುಟಿವಲ್ಲಿ ಪಲರಾ ಪಯಣದ ಮಱು[ವ]ಕಸೂರಮಾಳ್ಪಡಿರಕಸ ಪನುಜರಾ ದೇವನಱಿದು ಬಿಟ್ಟ (ಕೆಾಇ. IX-i. ೦೩-೬; ೯೦೦). ಹೊರಕೋಟೆ: ೧. ಮುತ್ತಿನ ಒಳಕೋಟೆ ಮುತ್ತಿನ ಹೊರಕೋಟೆ ಮುತ್ತ ಬಿಗಿಸ್ಯಾರ ಹುಲಿಮುಖ (ಜೋಗಿ. ೬೪). ಹೊಱಕೋಟೆ: ೧. ಮುಱಿಯಲಿಱಿದು ಹೊಱಕೋಟೆಯ ಕೊಂಡು ಮತ್ತೂಱುಬಿದರೊಳಗೋಟೆಗಂದು (ಕಂದಬ. ೦೮-೦೩೪). 'ಒಳಕೋಂಟೆ' ಪರಾ. [ಪೊಱ (<ಪೊಱಗು)+ಕೋಟೆ₁ (<ಕೋಂಟೆ)]

ಪೊಱಡ 'ಪೊಱಂಡ' ನೋ.

ಪೊಱಡು₁ 'ಪೊಱಮಡು' ನೋ.

ಪೊಱಡು₂ 'ಪೊಱಂಡು₂' ನೋ.

ಪೊಱತು, ಪೊರತು, ಹೊರತು₁, ಹೊಱತು (ನಾ). ಹೊರಗೆ ಉಳಿದುದು; ಬೇರೆಯಾದುದು; ಪ್ರತ್ಯೇಕವಾದುದು: ಬರತೆಗೆದುದೊ ನೃಪನ ಗುಣೋತ್ಕರಮನೆ ಕಳುಪಲ್ಕೆ ಕಡೆಯ ಬಾಗಿಲ್ವಾಡಂಬರೆಗಂ ಬಂದುದು ಕಾದಂಬರಿ ಪೊಱತಾಗಖಿಳಕನ್ಯಕಾನಿಕುರುಂಬಂ (ಕಾದಂಬ. ೦೭೪). ಪೊರತು: ತಮ್ಮ ಜನಕಸುತೆ ಪೊರತಾಗಿ ಲಂಕಾನಗರಿಯನ್ನು ಕಿನಿಸಿಂದ ಭಸ್ಮಸಾತ್ಕೃತಗೈದನೆಂ ಪ್ರೌಢನೆನುತೊರೆದ ರಾಗಸದೊಳು (ಶಂಕರಾ. ೩-೮೯-೩೮); ಸಂತಾಪವನೀವ ಘೋರತರಕೋಪದಿ ಕೇಳ್ ಪೊರತಾದೆ (ಅನುಕ. ೩೭). ಹೊರತು₁: ಹೊಳೆಯ ತೀರದ ಹಸಿರುಹುಲ್ಲುಹಾಸಿಗೆಯು ಎದೆಯ ಸೆಳೆಯುವುದು ಮನವು ಹೊರತಿಹುದು (ಶಿಶಾಕ. ೦೨-೮); ಕಾಲ ದೇಶದ ಪ್ರಭಾವದಿಂದ ಎಂಥ ಮಹಾಪಿಯಾದರೂ ಹೊರತಾಗಲಾರನು (ಕಮ.೭೪). ಹೊಱತು: ತಂಮ್ಮ ಹಳಿ ಕೆಂಬಿತಿಯನು ದೇವಾಸ ಹೊಱತಾಗಿ (ಎಕ. VII. ಶಿಕಾ. ೯೭-೩; 1218); ಹರಹರಾ ಇನ್ನಾರೂ ತಂಗಿಗೆ ವರನು ಮಾಂಧಿಪಲಯದಪನೀಶ್ವರರು ನೆರೆದಿದ್ದ ರೂಪು ವಿಕ್ರಮವೆರಡು ಹೊಱತಾಗಿ (ಕುಮಾರ. ೦೪-೩೩); ತನಗೆ ನಿರ್ಮೂಲವೆಂಬ ಭಾಗ್ಯದ ಘನತೆಯುಳ್ಳಡೆ ಸಾಕು ಹೊಱತನು ನೆನೆಯಲಾಗದು (ಕೌಶಿಕ. ೩-೨೪).

ಹೊರತು ಪಡಿಸು = ಬೇರೆ ಮಾಡು; ಪ್ರತ್ಯೇಕಿಸು: ಹಿಂದಿನ ಪೀಳಿಗೆಯ ಕತೆಗಳಲ್ಲಿಯ ಸೋಲನ್ನು ಮಾಸ್ತಿಯವರ ಕತೆಗಳನ್ನು ಹೊರತುಪಡಿಸಿಯೇ ಹುಡುಕಬೇಕಾಗುತ್ತದೆ (ಹೊಸ್ತ. ೨೭೮).

[ದೇ.॥ ತಮಿ. ಪುಱತ್ತು]

ಪೊಱತೆಗೆ, ಹೊರತೆಗೆ, ಹೊರದೆಗೆ, ಹೊಱವೆಗೆ (ಕ್ರಿ). ೧. ಇರುವ ಕಡೆಯಿಂದ ಬೇರೆ ಕಡೆಗೆ ಒಯ್ಯು,-ಸಾಗಿಸು: ಸುತರ್ ಚತುರೂಢನಾಗಿರ್ದ ಶ್ರೀವಿಜಯಸುಮುಂ ಕಂಡು ಬೇಗಮಗ್ನಿಕುಂಡದಿನುರ್ವೀಶ್ವರನಂ ಪೊಱತೆಗೆದು (ಶಾಂತಿ. ೬-೩೪ ಪ). ಹೊರತೆಗೆ: ೨. ಬಹಿರಂಗ ಪಡಿಸು; ಪ್ರಕಾಶಪಡಿಸು: ಅರೆಯೊಳು ಬೈತೊಂದು ಚಾರುವಿಗ್ರಹವನು ಪರಶಿಲ್ಪ ಪರಿಭಾವಿಸುತ್ತ . . . ಹೊರತೆಗೆದನು ಮತ್ತೆ (ಇಂಗಾಶ. ೦೭೮-೬೬). ಹೊರದೆಗೆ: ೧. ನೆಕ್ಲದೋವ್ ಚರ್ಮದ ಚೀಲವನ್ನು ಹೊರದೆಗೆದು . . . ನೋಟೊಂದನ್ನು ಕೊಟ್ಟನು (ಪುಸಕು. ೨೬೬). ಹೊಱದೆಗೆ: ೩. ಬೇರೆಯಾಗು; ಹೊರತಾಗು: ಉನ್ನತದ ಸುಖದುಃಖದಲಿ ಸಂಪನ್ನನಾಗದೆ ಹೊಱದೆಗದು ತಾನೇಕನಾಗಿಹುದು . . . ಈ ಭವದ ದಾಂಟುವರೆ (ನಿಜಗ. ೦೦-೩-೦೬). 'ಒಳದೆಗೆ' ಪರಾ. [ಪೊಱ (<ಪೊಱಗು)+ತೆಗೆ₁]

**ಪೊಱಿತೊಲಗು** (ಕ್ರಿ). ೧. ಹೊರಕ್ಕೆ ಹೋಗು. ೨. ಮುಟ್ಟಾಗು ; ಬಹಿಷ್ಠೆಯಾಗು : ಕಾಂತೆಯರು ಪೊಱಿತೊಲಗೆ ಋತುವೆನಿಕು (ಜಂಗಪಾ. ೦೪೯-೯). [ಪೊಱಿ (<ಪೊಱಿಗು) + ತೊಲಗ್ಗು]

**ಪೊಱಿದಡಿ** (ನಾ). ಜಲಾಶಯದ ಆಚೆಯ ದಡ : ತೊಱಿಯ ಪೊಱಿದಡಿಯ ಕರಂಜಕುಂಜದೊಳ್ ಸಂದಣಿಸಿ ನಿಂದು ರೋಮಂಥಲೀಲಾತತ್ಪರತೆಯಿಂದರನಿಮೀಲಿತಾಕ್ಷಂಗಳಾದ ಕಾಡೆರ್ಮೆಯ ಮೊಗದಿನುಗುವ ನೊರೆಯನುರುಳಿಗೊಂಡು ತಂಡದಮಿಯ ಗಿಡುಗಳೊಳ್ ಗುಡಿಗಟ್ಟಿದಂತೆ ತೊಡರ್ದಿಯಾಂ (ಚಂದ್ರಪ್ರ. ೬-೯ ವ). [ಪೊಱಿ (<ಪೊಱಿಗು) + ತಡಿ]

**ಪೊಱಿದೋಂಟ** (ನಾ). (ಊರು, ನಗರ ಮೊದಲಾದುವುಗಳ) ಹೊರಗಡೆಯಿರುವ ತೋಟ,—ಉದ್ಯಾನವನ ; ಹೊರಭಾಗದ ತೋಟ : ಕೋಂಟೆಗಳನೇಱಿದು ಪರಿಪೆಯ ಜಲಂಗಳಂ ದಾಂಟಿ ಕತ್ತಲೆಯೊಳೊರ್ವನೆ ಮಂತ್ರಿ ಪೊಳಲ ಪೊಱಿದೋಂಟದೆಡೆಯೊಳ್ಳಲಸಿದಂಬಿಕಾಭವನಮಂ ಸಾರ್ದನು (ಕೃಷ್ಣರಾ. ೩೦-೫೧).
[ಪೊಱಿ (<ಪೊಱಿಗು) + ತೋಂಟ]

**ಪೊಱಿನೋಟ**, ಹೊರನೋಟ (ನಾ). ಹೊರಗಿನ ನೋಟ; ಬಾಹ್ಯದೃಷ್ಟಿ : ಅಱಿತು ನಿಟ್ಟಿಸ ಗುಂಡುಮಕ್ಕಳಿಂದಱಿಶಯದೆಱಿಕದೊಳಿಸವ ಪೆಣ್ಣಳನು ಪೊಱಿನೋಟದಿಂದ ನೋಡದೆ ಪೋಲನಿಸದೆ ಮಱುಕುವರು ಮನ್ನಿಪುದು (ಹಂಶಿ. ೩-೦೩). **ಹೊರನೋಟ** : ಹೊರನೋಟಕ್ಕೆ ಕಾಣುವ, ಪುನರಾವರ್ತನೆಯೆಂದು ತೋರುವ ಇಲ್ಲಿನ ಕೆಲವು ಭಾಗಗಳಿಗೂ . . . ಭಿನ್ನಾಭಿಪ್ರಾಯಗಳಿವೆ (ಪಸಂಶ. ೨). ' ಒಳನೋಟ ' ಪರಾ.
[ಪೊಱಿ (<ಪೊಱಿಗು) +ನೋಟ]

**ಪೊಱಿಪಚ್ಚ**, ಹೊಱಿಹಚ್ಚ (ನಾ). ೧. ಮೇಲುಹೊದಿಕೆ : ನಿಚ್ಚಲಿ ಕಾರಿರುಳೊಳ್ ಪೊಱಿಪಚ್ಚವನುಟ್ಟಿರ್ದಿಱುಂಕಿ ಕಕ್ಕದೊಳಾ ಪಾಟಚ್ಚರಭಯದಿಂದುಟ್ಟು ಪಟಚ್ಚರಮಂ ಮನೆಗೆ ವಂದು ನಿಂದಂಗಣದೊಳ್ (ಕಾಂತಿಪು. ೬-೬೩). ೨. ಹೊರಗಿನ ವೇಷ ; ಬಾಹ್ಯವೇಷ : ಅಂತಾದೊಡಾಂ ಪುರುಷನಲ್ಲ ನಪುಂಸಕನುಮಱಿಯದವರ್ಗೆ ಪೊಱಿಪೂ[ಪ]ಚ್ಚದ ಶೃಂಗಾರವಂ ಮಱಿದು ಪುರುಷಾಕಾರದೊಳಿರ್ದಂ (ಪುಣ್ಯಾಸ್ರ. ೩-೨೩ ವ). **ಹೊಱಿಹಚ್ಚ** : ೨. ಎನ್ನ ಭಕ್ತನೆಂದೆಂಬರು ಎನ್ನ ಹೊಱಿಹಂಚಿ[ಹಚ್ಚ]ಒಳಬೊಳ್ಳೆತನವನಱಿಯರಾಗಿ (ಬಸವ. ೩೦೩) ; ನಿಮ್ಮ ನಿಜವನಱಿಯದ ಶರಣರು ಹೊಱಿಹಚ್ಚ ಒಳಬೊಳ್ಳೆಪ್ಪೊಲ್ಲರು ಲಿಂಗೈಕ್ಯರು (ಸಕಲೇಶ.ವ. ೫೧೦-೬) ; ಇದಱಿ ವಿಶೇಷವೇನಿದಱಿ ದೊಡ್ಡಿತದೇನೊಳಬೊಳ್ಳೆಯಾದ ವೇಷದ ಬಲುಹೇನಿದಕ್ಕೆ ಹೊಱಿಹಂಚಿಯ[ಹಚ್ಚದ]ಲೇನಹುದು (ಶಕಶ. ೪೩) ; ಶ್ರುತಿಗಳ ಮಾರ್ಗಮೊಂದು ನಡೆಯೊಂದು . . . ನಾಡೆ ಹೊಱಿಹಚ್ಚದ ಭಕ್ತಿಯೊಳಿರ್ಪನಾದ್ವಿಜಂ (ಪ್ರಭು. ೨೬-೦೫). [ಪೊಱಿ (<ಪೊಱಿಗು) +ಪಚ್ಚ]

**ಪೊಱಿಪಾಯ್** ' ಪೊರವಾಯ್ ' ನೋ.

**ಪೊಱಿಪಾಳೆಯ**, ಪೊರವಾಳೆಯ, ಹೊಱಿಪಾಳೆಯ (ನಾ). ಊರ ಹೊರಗಿನ ಸೈನ್ಯದ ಪಾಳೆಯ,—ಬೀಡು : ಕೋಂಟೆಯಂ ಪತ್ತಿ ಪೊಱಿಪಾಳೆಯವನಿಕ್ಕಿಸುತ್ತಿರ್ಪಿನಂ (ಚಂಪು. ೯೨-೦೩). **ಪೊರಪಾಳೆಯ** : ಬಿದಱಿದನಗಸ್ತ್ಯಂ ತ್ರಿಶಂಕು ತಲ್ಲಣಗೊಂಡ ಚದರಿ ಪೊರಪಾಳೆಯಂ ಪಾಳಾಯ್ತು (ಶಂಕಾಪಾ. ೫-೦-೨೩). **ಹೊಱಿಪಾಳೆಯ** : ಕಾಲಾಂತೀರಿಯೊಳಗೆ ಸಂದಣಿಪ ಕಾಲಾಳುಗಳಿಂಯುಧರೆಳೆಗೂ ಪೇಳಲಳವೆ ಹೊಱಿಪಾಳೆಯದರೆಣ್ಣ ಕೀಲಿಸಿ ಕದುಂದಿಱಿದುವು (ಶಂಕರ. ೦೩-೩೨).
[ಪೊಱಿ (<ಪೊಱಿಗು) +ಪಾಳೆಯ]

**ಪೊಱಿಪುರ್ಬು** (ನಾ). ಹುಬ್ಬಿನ ಹೊರಭಾಗ ; ಭ್ರೂಮಧ್ಯ : ಕಣ್ಣ ಪೊಱಿಪುರ್ಬು[ಹಾಗಾಂ. ಬುರ್ಬು]ಗಳ್ಗಂ ನುಣ್ಣನೆ ಭ್ರೂಮಧ್ಯವೆಸರೆ ಹಯಶಾಸ್ತ್ರದೊಳಂ (ಅಶ್ವಶಾ. ೯-೦೬). [ಪೊಱಿ (<ಪೊಱಿಗು) +ಪುರ್ಬು]

**ಪೊಱಿಪೊಣ್ಮು**, ಪೊರಪೊಣ್ಮು, ಹೊರಹೊಮ್ಮು, ಹೊಱಿಹೊಮ್ಮು (ಕ್ರಿ). ೧. ಹೊರಗೆ ಹರಿ : ಹೊರಸೂಸು : ಅಂತು ಮನದೊಳಾದ ಮೋಹರಸಮೆ ಕಣ್ಣಿಂ ತುಳುಂಕುವಂತೆ ಪೊಱಿಪೊಣ್ಮುವ ನಯನಜಲಂಗಳನುತ್ತರೀಯವಲ್ಕಲವಸನೋಪಾಂತದೊಳೊತ್ತುತ್ತುಂ (ಕಂಕಾ. ೬-೨ ವ) ; ನದಿಯಿಂ ಸ್ರವಣಂ ಪೊಱಿಪೊಣ್ಮೆ ಮಿಕ್ಕುಪೊಕ್ಕರಣೆಯ ನಿರ್ಗಳರ್ಕಿ ಪೊಱಿಪೊಣ್ಮೆ ಘನಾಗಮದೊಳ್ ಎನಿಂದಿತಂ (ರಾಜಶೇಖ. ೯-೭೯). ೨. ಕಾಣಿಸಿಕೊಳ್ಳು ; ಪ್ರಕಟವಾಗು ; ವ್ಯಕ್ತವಾಗು : ಗುರುಕರುಣಾರಸಮುದು ಮನದಿಂ ಪೊಱಿಪೊಣ್ಮೆ (ಶಂಕರಾ. ೦೦-೦೨೯) ; ಮನೋನುರಾಗಮ ತನುವಿಂ ಪೊಱಿಪೊಣ್ಮುವಂತೆ ಪುಳಕಗಳಿಂ ಭೋಂಕನೆ ನೆಗೆಯೆ (ಶಾಂತಿಪು. ೩-೩೩): ಎದೆ ಒಡಿದದಂ ಮನವಾರೆ ತಾಳ್ದನವರತಿರುಗ್ಗುಣಮನಂತಮುಖದೆ ಪೊಱಿಪೊಣ್ಮಿದಾತೆ (ಧರ್ಮ. ೦೨-೦೯) . ೩. ಹೊರಗೆಲ್ಲ ಹರಡಂ,–ಆವರಿಸು,–ವ್ಯಾಪಿಸು : ಆಕೆಯ ವಿಲಾಸಹಾಸಮೆ ಪೊಱಿಪೊಣ್ಮಿದಂತೆ ಬೀದಿಬೀದಿಗಳೊಳೆಡೆಗಿಱಿದು ಕೆದಱಿದ ಕುಸುಮರಜಂಗಳುಂ (ಆದಿಪು. ೬-೪೬ ವ) ; ಮುನೀಶನ ಹೃದಾತ್ಮಜ್ಯೋತಿ ಮೆಯ್ಯೆರ್ಚಿ ಪಜ್ಜಳಿಸುತ್ತಂ ಪೊಱಿಪೊಣ್ಮಿತೆಂಬ ತೆಱದಿಂ (ಶಾಂತೀಶ. ೦-೦೨೦) ; ಮಂಜೀರಕದ್ವನಿ ಪಂಚಬಾಣಶರಾಸನಧ್ವನಿಯಂತೆ ವಿಸ್ತಾರದಿಂ ಪೊಱಿಪೊಣ್ಮಲ್ (ಶಕಶ. ೦೨-೩೦) . ೪. ವ್ಯಾಪಕವಾಗಿ ನೆರವೇರು : ರಾಜ್ಯಾಭಿಷೇಕೋತ್ಸವಂ ಪೊಱಿಪೊಣ್ಮುತ್ತಿರೆ ರಾಜ್ಯಮಂ ಕುಡೆ (ಆದಿಪು. ೬-೨೩). ೫. ಹುಟ್ಟು; ಆವಿರ್ಭವಿಸು: ತತ್ಸ್ಥಳಸ್ಥೂಲಭುಜಂಗನಿಶ್ವಸಿತಮಾ ನಗದಿಂ ಪೊಱಿಪೊಣ್ಮೆ ಲೋಲಕಲ್ಲೋಲಪರಂಪರಾಪರಿಗತಂ ಪುದತ್ತು ನಗೋಪಕಂಠದೊಳ್ (ಆಕ್ತು. ೯-೬೩) ; ತುಂಬುವೆಱಿಯಿಂ ಪೊಱಿಪೊಣ್ಮುವ ಜೊನ್ನದಂತೆ (ರಾಜಶೇ. ೦-೯೯) . ೬. ಮೇಲಕ್ಕೆ ಚಿಮ್ಮು; ಪುಟಿ : ಚಟುತತರಂಗಸಂಘಹತಿಯಿಂ ಪೊಱಿಪೊಣ್ಮುವ ಮುತ್ತು ದಿಗ್ವಧೂನಿಕರದ ತೊಟ್ಟ ಮುತ್ತಿನೊಳೊಡಂಬಡೆ (ಜಗಂ. ೦. ೯೯). **ಪೊರಪೊಣ್ಮು** : ೨. ನಲ್ಲೆಯ ಹೃದಯಮಂದಿರದೊಳು ನಲ್ಲನು ಎನಿತನಿತೊಳಪೊಗುತಿಹನು ಪೊರಪೊಣ್ಮುತನಿತನಿತಾಕೆಯ ಕೊಡವೊಲಿ ಸಂಕೋಚದಿಂದೆಂಬವೋಲಿ (ಶಂಪಾತ. ೦೬೬-೨). **ಹೊರಹೊಮ್ಮು** : ೧. ಹೃದಯವು ಅರಳಿ ಪ್ರೇಮಪ್ರವಾಹಮೇ ಹೊರಹೊಮ್ಮಿರುವ ಸಂದರ್ಭವು ರಾಮಾಯಣದಲ್ಲಿ ವರ್ಣಿತವಾಗಿರುವುದು(ಕಣಗಿಟ್ಟು. ೨೬). ೨. ಯಾವಾಗಲೂ ನಗು ಅವರ ಮುಖದಲ್ಲಿ ಹೊರಹೊಮ್ಮುತ್ತಿತ್ತು (ಶಂಕಸು. ೨೯) , ಅವರ . . . ತತ್ತ್ವದರ್ಶನಗಳು ವಿಶಿಷ್ಟ ಗದ್ಯದ ವಚನವಾಗಿ ಹೊರಹೊಮ್ಮಿ ಕನ್ನಡಕ್ಕೆ ಸ್ವಾನುಭವಸಾಹಿತ್ಯದ ಸಂಪತ್ತಿಯನ್ನು ಒದಗಿಸಿದುವು (ಶರಶ. ೩೦) **ಹೊಱಿಹೊಮ್ಮು** : ೨. ನುಡಿವಲ್ಲಿ ಗದ್ಗದಂಗಳು ಹೊಱಿಹೊಮ್ಮಿದಿದ್ದರೆ . . . ಅನು ಡಂಭಕ ಕಾಣಿರೇ (ಬಸವ. ೩೭೯) ; ಕಾಮಾಗ್ನಿಯುಲಿ ಕಾದ ಹೃದಯಸ್ಥಗಳ ಜ್ವಾಲೆ ರೋಮಕೂಪದೆ ಹೊಱಿಹೊಮ್ಮಿ ಧೂಮ ತಳ್ತುದು ಚಿತ್ರಲೇಖೆಯ ವರಮುಖಿಸೋಮಂಗೆ ಸ್ವರ್ಭಾನುವೆನಿಸಿ (ಸೋಕಶ. ೨೬-೩೦). ೩. ಹರಿಯುದರದೊಳಿಹ ಹದಿನಾಲ್ಕುಜಗಗಳ ಪರಿಪರಿಯತುಳವಿಸ್ತಾರ ಹೊಱಿಹೊಮ್ಮಿ ತೋರ್ಪೂಲು ಒಹುಬಗೆ ಪುತ್ಥಳಿ ಮೆಱಿಮಪೋಲಪ್ಪಾಕಾರದಲಿ (ಶಂಕರ. ೭-೯೬). ೪. ಮುಂದೆ ಬರು ; ಹೊರಚಾಚು : ಹುಟ್ಟುದರಿದ್ರಗೆ ಬಹಳಸಂಪದ ಪರೆ ನೆಟ್ಟನೆ ಕೊರ್ಪುವಂದದಲಿ ಕಟ್ಟಾಯತಿ ಪೆತ್ತ ಸತಿಯ ತಳೋದರ ನೆಟ್ಟನೆ ಹೊಱಿಹೊಮ್ಮಿತಾಗ (ರಾಜಶೇ. ೦೬-೩).
[ ಪೊಱಿ (<ಪೊಱಿಗು) + ಪೊಣ್ಮು ]

**ಪೊಱಿಪೊಸಂತಿಲ್** (ನಾ) . ಹೊರಬಾಗಿಲಿನ ಹೊಸ್ತಿಲು ; ಹೊರಗಿನ ಹೊಸ್ತಿಲು : ತುಂಬದ ಗುಂಬಮಂ ಪೊಱಿಪೊಸಂತಿಲ ಪಕ್ಕದೊಳಿಟ್ಟು (ಶಕಶ. ೯-೪೩). [ ಪೊಱಿ (<ಪೊಱಿಗು) + ಪೊಸಂತಿಲ್ ]

**ಪೊಱಿಬಳಸು**, ಹೊಱಿವಳಸು (ನಾ). (ಕೋಟೆಯ) ಹೊರವಲಯ: ಸುತ್ತುಮುತ್ತು : ಲಗ್ಗೆವಱಿ ಮೊಳಗಿದುವು ಕೂಗಿದುವು ತಮತಮಗೆ

ಬೊಗ್ಗು ಹಗ್ಗಾಳೆಗಳ್ ಬಿಡದೆ ನಡೆಗೋಂಟೆಗಳ ಮೊಗ್ಗರಂ ನೂಂಕಿದುವು ಪುರದ ಪೊಱಬಳಸಿನೊಳ್ ಪಡಿಯಟ್ಟಣೆಗಳಿದ್ದುವು (ಶಂಪು ೯೩-೨೯).
**ಹೊಱವಳಸು :** ಹೊಱವಳಸಿನಿಂ ಕುದುರೆ ಅದಱಿಂ ಹೊಱವಳಸಿನಲಿ ಆನೆ ನಿಂದವು (ಜಾಕ್ಮಿಶಾ. ೨೨-೬೬). [ ಪೊಱ (< ಪೊಱಗು) + ಬಳಸು$_{2}$ ]

**ಪೊಱಬಿಗ, ಹೊರಬಿಗ, ಹೊಱಬಿಗ$_{1}$ (ನಾ).** ಹೊರಗಿನವನು; ಸಂಬಂಧ ಪಡದವನು ; ಅನ್ಯ ; ಪರಕೀಯ : ನಂದಿತಾದುದಿನಕುಲದೇಳ್ಗಿ ಭೂವಲಯದೊಳ್ ತನ್ನ ಬಾಣಮಂ ಬಂಜೆಗೈದಪರ ಪೊಱ[ಶಾಪಾಂ. ಲ]ಬಿಗರೆಂದನು (ಕೃಬಿಣ. ೨೦-೫೯); ಏತಕನೆ, ತಾವುವರ್ ಕ್ರೂರಿಗಳ್. ಪೊಱಬಿಗರನುಜಿದವರ್ (ಅಭ್ಯಕ್ಕ. ೪೯-೬೦೯). **ಹೊರಬಿಗ :** ನನ್ನ ಬಾಣವನ್ನು ಬಂಜೆಗೈಯುವುದು ಹೊರಬಿಗರಿಂದ ಸಾಧ್ಯವೇ ? (ಐಚಿ. ೨೨೯).
**ಹೊಱಬಿಗ$_{1}$ :** ಜಾತಿವೃತ್ತಿಗೆ ಹೊಱಬಿಗನು ತಾನಾದೆನಿನ್ನಾದರೆ ಸಲಹ ಬೇಕೆಂಬ ವಿಟರ ನೃಪಾಲನೀಕ್ಷಿಸಿದ (ಕೇಶಂಕ. ೦೬-೬೦) ; ಅರಗಿಣಿ ವಜ್ರ ಪಂಜರದೊಳಗಿರ್ದ ಬಳಿಕ ಅಂಜಲಿಕೇನು ಕಾರಣ ಹೊಱಬಿಗರೆಂಬ ಮಂಜರ ಕೈದುಡುಕುವುದೆ (ಮೋಹಕ. ೪೦-೫೯).
[ಪೊಱಬು$_{2}$ (ಠ—ತವಿ. ಪುಱಮ್ಪು) + — ಇಗ]

**ಪೊಱಬೀಡು** 'ಪೊಱವೀಡು' ನೋ.

**ಪೊಱಮಟ್ಟು** 'ಪೊಱಮಡು' ಪರಾ.

**ಪೊಱಮಡಿಸು, ಹೊರಡಿಸು, ಹೊಱಡಿಸು, ಹೊಱಮಡಿಸು, ಹೊಱವಂಡಿಸು, ಹೊಱವಡಿಸು (ಕ್ರಿ).** ೧. ಹೊರಗೆ ಬರುವಂತೆ ಅಥವಾ ಹೋಗುವಂತೆ ಮಾಡು : ಈಗಳೆ ಪೋಗಿ ಪುಗೊಳನಂ ಮುಂತ್ರಿ ದುರ್ಯೋಧನನಂ ಪೊಱಮಡಿಸಿ ವಗೆಯಂ ಪಱಿಪಡಿವುದು (ಗದಾಯು. ೬-೪೮ ಪ) ; ಪೊಟಲೊಳಗೆ ಪೊಗೆಯನಿಕ್ಕಿ ಪಾವಂ ಪೊಱಮಡಿಸಿ ಕಳ್ದುಕೊಂಡೊಡವೆಯಂ ಕುಡುವೆಂ (ಕಂಪಕಂ. ೦೬೬-೦೬) ; ಒಡಲೊಳಗಣ ವಾಯು ವನಲ್ಲೀಂದವೆ ಪೊಱಮಡಿಸಿದ ಮಾಳ್ಕೆಯೊಳರವಿಂದವಿಶಾಲವಿಲೋಚನೆಯಾ ನಿಡುಸುಯ್ಯುರವೊಪ್ಪಿರ್ದುದು (ಕಡುಕಾ. ೯-೩೦). ೨. ಪಾರುಗಾಣಿಸು ; ಪಾರುಮಾಡು : ಸಂಸರಣಾಂಭೋರಾಶಿಯಿಂದಂ ಪೊಱಮಡಿಸನಗಂ ನೀನೆ ಹಸ್ತಾವಲಂಬಂ (ಅಂತ.೨-೯೯): ದುಸ್ತರಸಂಸಾರಾಬ್ಧಿಯಿಂದಂ ಪೊಱಮಡಿಸುಗೆ ಸದ್ಧರ್ಮದಿಂ ಪುರ್ಯರೆಂದುಂ (ಶುಕಸಪ್ತ. ೦-೩). ೩. ಅಟ್ಟು ; ತಳ್ಳು ; ದೂರೀಕರಿಸು : ಪಡಿಯಱನಿಂದಮೆಱೆಯಿಸಿ ಪೆಡತಲೆಯಂ ಪಿಡಿದು ನೂಂಕುತ್ತರಮನೆಯಿಂದಂ ಪೊಱಮಡಿಸಿಯಟ್ಟೆ ಕಳೆದು (ಚನ್ನ್ಜಾ. ೦೫೬-೬); ಒರ್ವ ಬೆಲೆವೆಣ್ ಕುಟಿಲತ್ವದಿಂದುಳ್ಳೊಡಮೆಯನೋಂದೊಂದು ನೆವವಿಟ್ಟೆಲ್ಲವಂ ಕವರ್ದು ತಿದರಿದ್ರನಂ ಮಾಡಿ ಪೊಱಮಡಿಸಲ್ (ಚನ್ನಟ. ೧೧-೬೬ ಪ). ೪. ಹೊರಕ್ಕೆ ಬರಲು ಸಹಾಯ ಮಾಡು : ಮತ್ತಂ ಮುಂತ್ರ ಕುರುಡ ತವಸಿಗಳ ಕೈಯಂ ಪಿಡಿದುಯ್ದುವರ ಗುಹೆಗಳಂ ಪುಗಪ ಪೊಱಮಡಿಪ ಚಪಳಕಪಿಗಳುಮಂ . . . ನೋಡಿ (ಕಂಕಶಾ. ೦-೦೦೬ ಪ). ೫. ಬೀಳ್ಕೊಡು : ದೂತನಂ ಪೊಱಮಡಿಸಲಾತಂ ಬಂದು . . : ಪೇಟ್ (ಚಿತ್ರಾಕ್ರ. ೩-೩೩ ಪ). **ಹೊರಡಿಸು :** ೧. ಸೇಕಪಾತ್ರಂ, ಸೇಚನಂ—೨ ಹಡಗಿನೊಳಹೊಕ್ಕು ಬರುವ ನೀರನ್ನು ಹೊರಕ್ಕೆ ಹೊರಡಿಸುವ ಪಾತ್ರಕ್ಕೆ ಹೆಸರುಗಳು (ಸಿದ್ಧಾಂತಿ. ೬೦); ಆಗ ಅಮ್ಮನು . . . ಸುಪ್ರಭೆಯನ್ನು ಗದರಿಸಿ ಕೊಠಡಿಯಿಂದ ಹೊರಗೆ ಹೊರಡಿಸಿದಳು (ಮೊಗ್ಗು. ೬೨).
**ಹೊಱಡಿಸು :** ೩. ಧನವಾದೊಡವೆ ಕೈಸೇರುವ ಪರಿಯಂತ ಮನೆ ದೇವರೆಂದುಪಚರಿಸು ಅನಂಗೆಡಲಾತನ ಹೊಱಡಿಸಿ ಮತ್ತೊಬ್ಬ ಧನವುಳ್ಳ ಪುರುಷನ ಕರೆಕೊ (ಕಂಪಕ. ೬-೦೫೦): ಸಟ್ಟೆ ಕಂಡು ಹಾದರವಾಡಿದಳೆಂದು ಹೆಂಡತಿಯ ಹೊಱಡಿಸಿ ಬಿಟ್ಟನು (ಕೃಕಪು. I. ೦೬೨). **ಹೊಱಮಡಿಸು :** ೩.ಛೀ ಛೀ ಛೀ ಹೋಗೆಂದು ಹೊಱಮಡಿಸುವನಮ್ಮ (ಕಕಗಿ. ೦೫೩-೬೭೬ ಪ). **ಹೊಱವಂಡಿಸು :** ೧. ಹೊಯ್ಲುಣ ಮಣ್ಣಾಳಿಕ ಬಲ್ಪಿಂಗೆ ಹೋಗದಿರಲುವಾಯದಿಂ ಹೊಱಪಣ್ಡಿಸಿದ ಸಮಯದೊಳ್ (ಶಾ. IV, ೦೬-೩ ; ೧೧೬೦): ಪೌರಜನವೆತ್ತರಲು ಬಂಡಿಯನೂರ ಹೊಱವಂಡಿ[ಶಾಪಾಂ. ಟ]ಸಿದನು (ಶುಕ್ತಾಸ. ೦೦-೨೯) ; ಬಲ್ಲಿದ ವೀರಭಟರೊತ್ತಾಗಿ ಹೊಱವಂಡಿಸಿದರನಿಲಜನ (ಕೂಠಿಣ. ೩-೮-೨೯). **ಹೊಱವಡಿಸು :** ೧. ಕೋಪಿಸಿನೊಳಿದ್ದವರ ಹೊಱವಡಿಸಿ ಮುಱಿದು ಕಳಿಗಳ ಬಲಿದು ಬಾಗಿಲ ಹೊಱಗೆ ನಿಂದರು (ಶುಕ್ತಾಸ. ೦೬-೪೦) ; ಕೈಕೊಳಿಸಿ ಕಾದಿ ಕುಬೇರನನು ಹೊಱವಡಿಸಿದರು ಪುರವ (ಕೂಠಿಣ. ೦-೮-೨೬).
**ಪೊಱಮಡಿಸಿ ಕಳೆ =** ಹೊರಕ್ಕೆ ಹಾಕು ; ದೂರಮಾಡು ; ಬಹಿಷ್ಕರಿಸು : ಇನ್ನೀ ಧರ್ಮ್ಮವಂ ನಗರಂ ಪ್ರತಿಪಾಳಿಸುವುದು ನೈಷ್ಠಿಕರಲ್ಲದರ ಪೊಱಮಡಿಸಿ ಕಳೆವುದು (ಎಕ. VII, ಶಿಕಾ ೦೨೬-೬೨ ; ೧೦೬೮) ; ಅಂತವರನರಮನೆಯಿಂ ಪೊಱಮಡಿಸಿ ಕಳೆದು ಪರುವಾದಿಯಿಂ ದಾನಸನ್ಮಾನಾದಿಗಳಿಂ ಸಂತೋಷಂಬಡಿಸಿ (ಸುಕು:ಹಾ. ೨-೨೯ ಪ).
[ಪೊಱಮಡು + — ಇಸು$_{1}$]

**ಪೊಱಮಡು, ಪೊರಡು, ಪೊರಮಡು, ಪೊಱಂಡು$_{1}$, ಪೊಱಡು$_{1}$, ಪೊಱವಂಡು, ಪೊಱವಡು, ಹೊರಡು$_{1}$, ಹೊರಮಡು, ಹೊರವಡು, ಹೊರಹೊಂಡು, ಹೊಱಂಡು, ಹೊಱಡು$_{1}$, ಹೊಱವಂಡು, ಹೊಱವಡು (ಕ್ರಿ).** ಪೊಱಮಟ್ಟು$_{1}$, ಹೊಂಟು, ಹೊರಟು$_{1}$, ಹೊರವಟ್ಟು (ಭೂತರೂ). ೧. ಒಂದೆಡೆಯಿಂದ ಬೇರೆಡೆಗೆ ಹೋಗು.— ಚಲಿಸು.— ತೆರಳು : ಎರಡುವ್ವಲದ ವೀರಭಟರ್ಕ್ಕಳೊಟ್ಟು ಪೊಱಮಟ್ಟು (ಎಕ. VIII. ಸೊರಬ. ೦೦-೩; ಸು. ೬೦೦); ಅಕ್ಷಯದಾನಪುಮಕ್ಕೆಂದು ವಸಿ ಪೊಱಮಟ್ಟು ಬಸದಿಗೆ ಪೋಪಾಗಳ್ (ಚನ್ನ್ಶಾ. ೬೯-೨೬) ; ರಾಜಮಂದಿರದಿಂ ಪೊಱಮಟ್ಟು ಬರೆ (ಕಂಕಶಾ. ೯-೬೯ ಪ) ; ಕಾಮದೇವರ್ಗಳ ಕೆಳೆಗುಳಕ್ಕೆ ಪೊಱಮಡಲಕ್ಕುಂ (ಧಾಸಾತ್ರ. ೯೩-೨೨). ೨. ಹೊರಕ್ಕೆ ಬರು ; ಹೊರಬರು : ಅಱಿಪಿದಂ ಗುರುಭಾರ್ಗವನಿಂತೀಯೊಡ್ಡನಿದಂ ಗೆಲಲಾವನುಂ ನೆಱೆಯನುರ್ಕಿನಳುರ್ಕೆಯಿನೊರ್ವಂ ಪೊಕ್ಕೊಡೆ ಪೊಕ್ಕನೆ ಮತ್ತಣಿಂ ಪೊಱಮಡಂ (ಕಂಕಶಾ. ೦೦-೬೬) ; ಒಱೆಯಿಂದುರ್ಚದೆ ನಡುಗುಮ ನೆಱೆದೆಡೆಯಂ ಬಿಟ್ಟವಪಸ್ಕೋಶದಿನಸಿಯಂ ಪೊಱಮಡದೆ ಕೊಂದು ಕೂಗಲ್ ನೆಱೆದುದು ದುರ್ಜನನ ನಿಶಿತರಸನಾಖಡ್ಗಂ (ಸೂಕ್ತಿಸು. ೦-೪೦); ಅರೆದೆಱೆವಬ್ಬದೊಳಿರುತಿರ್ದ ಮುಱಿದುಂಬಿ ಸ್ವರ ಮಾಡಿ ಪೊಱಮಡುವಂತೆ (ಚಶ. ೩-೩೬). ೩. ಹೊರಹೊಮ್ಮು ; ಹೊರಸೂಸು : ಪೊಱಮಟ್ಟಪೊಲಾದುದುಷ್ಣದೀರ್ಘೋಚ್ಛ್ವಾಸಂ (ಅಂತ. ೦೬-೪೬) : ಒಣ್ಣಲರ್ ನಟ್ಟು ಸುಯ್ಯಲ್ ಪೊಱಮಟ್ಟೊಂದೊಂದದನಟ್ಟಿತ್ತಿರೆ (ಕಾದಂಪೂ. ೦೯೨). ೪. (ಮಾತು) ಹೊರಬರು ; (ಧ್ವನಿಯು) ಕೇಳಿ ಬರು; ಕಿವಿಗೆ ಬೀಳು : ಕನಸಿನೊಳವಿಾ ಕಪಿಂಜಲಮುನಿಪದನದೊಳನ್ನಿತಭಾಷೆ ಪೊಱಮಡದು (ಕಾದಂಪೂ. ೬೬೬) ; ತಳ್ಕೈಱಿದ ಪಱೆಯಂತೆ ದನಿ ಪೊಱಮಡದ (ರಕ್ಷೋಕಾವ್ಯ. ೬-೦೬೯) ; ಪೊಱಮಡುವ ನಾಮದರ್ಶರದ ಪೊಯ್ಲಿಂಗೆ ನಡುಗುವಂತೆ ಕೆತ್ತುವ ತುಟಿಯುಂ (ಕಶ್ಯಾಪ. ೪೦೦). ೫. ಹೊರಗೆ ಕಾಣಿಸಿಕೊಳ್ಳು ; ಗೋಚರವಾಗು ; ಆವಿರ್ಭವಿಸು : ಪೊಱಕಣ್ಣಿಂ ಪುಟ್ಟಿಂತಾಂ ಮಱಸಿದ ನೊಸಲೊಂದು ಕಣ್ಣುಮಾಗಳ್ ನೊಸಲಿಂ ಪೊಱಮಟ್ಟಿಂತಿರ ತೋಱಿದನೆಕವೆ ಹರಿಗೆಗೆ ರುದ್ರನಗ್ಗಳಗಣ್ಣಿಂ (ಕಂಪಶಾ. ೬-೨೩). ದೇಹಿ ಕೇಂದ್ರಾಕಾರದಿಂದ ಲಿಂಗಮಧ್ಯದೊಳಭವ ಪೊಱಮಟ್ಟನು (ಶ್ರೀಂಶಪೂ. ೬-೨೬) ; ಪೆಣ್ಮೀನ ಬಸಿಱ ಬಗಿವೆನೆ-ದೆಸುತ ಅಸಿಧಾರೆಯಲಿ ಪೊಲ್ಲರ್ದೆಯ ಬಗಿಯಲಾ ಶಿಶು ಪೊಱಮಟ್ಟುದಾಶ್ಚರ್ಯ (ಮೋಹಕ. ೦೦-೯೦). ೬. (ಸಭೆ, ಸ್ಥಳ, ದೇಶ ಮುಂತಾದುವನ್ನು) ಬಿಟ್ಟು ನಡೆ ; ತೊಲಗು : ಬಾಳ ದಿನೇಶಬಾಬದೊಂದೆಸಕದಿನಾ ದ್ವಿಜನ್ನಸಭೆಯಂ ಪೊಱಮಟ್ಟೊಡೆ ಮಹಾದುಂದದಮುಂ ಪಸದಸದುತ ಕಣ್ಣೆಸೆದು ತೋಱಿದುದಾ ಕದನತ್ರಿನೇತ್ರನಾ

(ಹುಕಹಾ. ೩-೬೦) : ಇನ್ನೆನ್ನಾಳ್ವ ದೇಶದೊಳಿರದೆ ಪೊಱಮಟ್ಟು ಪೋಗೆಂದು ಜಱಿದು ನುಡಿದೊಡೆ (ಧರ್ಮಾಮೃ. ೨-೯೮). ೬. ಬಿಡುಗಡೆ ಹೊಂದು ; ಪಾರಾಗು : ನಿಮ್ಮಡಿ ನೀವಮ್ಮನೀಯುಪಾಯಸ್ಥಳದಿಂ ಪೊಱಮಡುವ ಪಾಯಮಂ ಮಾಡಿದಿರಪ್ಪೊಡೆ ನಿಮ್ಮ ಧರ್ಮದಿಂ ಸುಖುಬಾಳ್ವೆವೆಂಬುದುಂ (ಹುಕಹೆ. ೮೯-೯) ; ಹಾಸಪದಲಿ ಸಂಸಾರಕೂಪದಲಿ ಬಿದ್ದವರು ಅವತ್ತನೀಂದು ಪೊಱಮಡಲು ಗುರುಪದ ಸೋಪಾನವಯ್ಯ (ಶತಕ್ಕ. ೯೩). ಪೊರಡು : ೧. ನಿಲ್ಲದಲ್ಲಿಂದ ರಾಘವ ಪೊರಟು ಮುನಿಯೊಡನೆ . . . ತರಳಿದಂ ಮಿಥಿಲಾಪುರಿಗೆ (ಹಚು. ೨-೯) ; ಅಲ್ಲಿಂದ ಪೊರಟು . . . ಹುಕಾಪಾಥ ಶತವಿಶಟರಾಲಯಂಗಳಂ ಶೋಧಿಸಿದನು (ಬಂಗಾಚಾ. ೫-೩-೯೨) ; ಕೀಳವರುಂ ಕೋಲೂಡಿ ಪೊಱಟರೇಂ ಪೆರ್ವ (ಶಾಉಕೆ. ೦೯೯-೩೨೬). ಪೊಱಮಡು : ೧. ಕಣ್ಣನಾರಾಯಣನ್ ತನ್ನ ಮನೆಯನ್ನಿಱವಿಟ್ಟು ಪುಗುತನ್ನೊಡೆ ಅಱಿದು ಪೊಱಮಟ್ಟು ಪೋತ(೦)ನ್ದು ಕದಿ ತಲೆಯನ್ನಟ್ಟ ನಾಲ್ವರಾನಿಱಿದೊನ್ (ಶಾಇಸ. IX-1, ೩-೫೦ ; ೭೫೮ರ ಕರ) ; ರಣವಧೂವಲ್ಲಭಂ ವಿಜಯಂ ವಿಜಯಕೆಂದು ಪೊರಮಟ್ಟು (ಜ್ಯಾಂಗ. ೬೦-೦೯೯೮); ಪಡೆಯಿಂ ಪೊರಮಡಲ್ ಕಾಲೂರ ಕಣ್ಣಳಿಂ ಪುದಿದ ಬಳಿವಿಡಿದ ಮುದುಮಗನ ಮರವಣಿಗೆ (ಶಾಉಕೆ. ೦೬೦-೩೨೯). ಪೊಱಂಡು$_1$ : ೮. ಹೊರಕ್ಕೆ ಚಾಚು ; ಉಬ್ಬು : ಕುಚಗೊರಲಿಬ್ಬರ್ದೆರ್ ಪೊಱಂಟ ಬೆನ್ ಬಾತ ಬಾಱಿದಂಗಿದ ಜಘನಂ (ಚುತೋಕ. ೨-೩೬). ಪೊಱಡು$_1$ : ೧. ಗಮಿಸಿದನು ಮುನಿಯೊಡನೆ ಹರುಷೋದ್ಗಮದಲಾತನ ಬೆಂಬಳಿಯಲಾಶ್ರಮದಿನಾ ಸೌಮಿತ್ರಿ ಸಹಾಗದಿ ತ್ವರಿತದಿಂ ಪೊಱಟ[ಪಾಠಾಂ. ಕಳುಹಿಸಿಕೊಂಡ ನಾ ನೃಪನ] (ಹುಲಿಹಾ. ೦-೯-೯೨). ೬. ಭೂಕಾಂತ ಬಿಜ್ಜಳನೃಪಾಲಂ ಪುರವಿಹಾರಚಿತ್ತಂ ತನಗೆ ಪುಟ್ಟಲರಮನೆಯನೊಲವಿಂ ಪೊಱಡೆ (ಹುಹ್ಮ. ೦೦-೨). ಪೊಱಮಡು : ೨. ಮುಳ್ಳಿಂ ಸಿವುರುಗಳಂ ನಟ್ಟಲ್ಲಿಯೆ ಪೊಱವಂಡದಿರ್ದು ದಾತೊಡೆ ಮತ್ತಂ ಕಲ್ಲೊತ್ತಿಗರ್ಕರಿದುಗ್ಗದ ಮಳ್ಳಿಸಿ ಯೊಱೆಗಲ್ಲ ಸೀಕಗೆಯ್ಕಲ್ ಮಾಣ್ಗುಂ (ಹುಲೀಕಾಚ. ೯-೦೬೩). ಪೊಱವಡು : ೨. ಒಡಲಿಂದಲಸು ಪೊಱಮಡುವವೊಲು ಪೊಱಮಟ್ಟನಲ್ಲಿಂದ (ಶಾಲ್ಯಶಾ. ೮೬-೨). ೬. ತಳೆದ ಮಣಿಭೂಷಾಗಳೆಲ್ಲವ ಕಳೆದು ದುಪಟನು ಗುರುವಿ ವಳ್ಳಿಗೆ ನೀನ ನುಖಿ ಸಹಿತೆಱಿಗಿ ಪೊ[ಪಾಠಾಂ. ಹೊ]ಱಮಟ್ಟನು ನಿಹಾಲಯುವ (ಹಳಕ. ೯-೯೦). ಹೊರಡು$_1$ : ೧. ಹಿಂದೆ ಆನವೇರಿ ಹನುಮಂತದೇವರು ಹೊರಟು (ಎಕ. VII, ಶಿಕಾ. ೦೦೭-೨೪ ; 1576 ?) ; ಗರ್ವಕ್ಕೆ ತಕ್ಕ ಫಲವನ್ನು ಉಣ್ಣಲು ಸಿದ್ಧನಾಗು. ಹೊರಡು (ಹಾಂಕ. ೮). ೨. ಒಳಗಿನಿಂದ ಹೊಗೆ ಹೊರಡುತ್ತಿದೆ. ಜನ ವಾಸವಾಗಿಲ್ಲ ಎನ್ನುತ್ತೀಯಲ್ಲ (ಹೊಂ). ೪. ಶಕ್ತಿಯಿಲ್ಲದ ಶಬ್ದ ಈತನ ಬಾಯಿಂದ ಹೊರಡವು (ಶಾಹೆಜ. ೦೦೦). ೫. ಬಿತ್ತಿರುವ ಕಾಳಿನ ಮೊಳಕೆ ಹೊರಡಲು ಒಂದು ವಾರ ಬೇಕಾಗುತ್ತದೆ (ಹೊಂ). ೯. (ಕಾರ್ಯವನ್ನು ಮಾಡಲು) ತೊಡಗು,— ಪ್ರಾರಂಭಿಸು : ಮೊದಲು ಹೊರಟದ್ದು ಕನ್ನಡಕಾವ್ಯದಲ್ಲಿ ಸೌಂದರ್ಯ ಸಮೀಕ್ಷೆಗಾಗಿ (ಶಾಂಚಕ. I, ಹೊತಾ ಹಾಹು). ಹೊರಮಡು : ೧. ಪಡಿವೇಳದಾ ಕಿರಿಯನಣ್ಣನ ಹಿಂದೆ ಹೊರಮಟ್ಟನೆಂತಾದೊಡಂ ಕೋಸಲದ ರಾಣಿಯನರಸಲೆಂದು (ಶ್ರೀಹಾಹು. ೫೪೬-೬೯೯). ಹೊರವಡು : ೧. ರಾಮದೇವನು ಬೇಟೆಗೆ ಹೊರವಟ್ಟು ಹಿರಿಯ ಹನ್ದಿಗೆ . . . ತಾಗಿ ಕೊನ್ದು (ಎಕ. IX, ಹೆಂಗಳೂ. ೩೨-೩ ; ಹು. 1080). ಹೊರಹೊಂಡು : ೧. ಆ ದೂತರು ತಮ್ಮೊಡೆಯನಿಗೆ ಅಭಿವಂದನೆಯಂಗೈದು ಹಸಾದವೆಂದು ಹೊರಹೊಂಟು (ಚುಹೋಕ. ೩೬). ಹೊಱಂಡು : ೨. ಕೊಳದಿಂ ಹೊಱಂಟು ಪುರ್ವರಿಯಣ್ಣಾನುತ್ತಮ ಷಡಕ್ಷರಿಯ ಮಂತ್ರಮಂ ಸ್ಮರಿಸುತ್ತ . . . ಪಮಾಂದಳಿರ ಮಂಟಪದಲಿ ಕುಳಿತು (ಹುಹಕು.೬-೨೬). ಹೊಱಡು$_1$ : ೧. ಎಂತು ಪಾವಿಲ್ಲಿಂದ ಹೊಱಡುವ ಯತ್ನವೆಂದಾತದ ಯೋಚನೆಗೈದು (ಕಂಹಹಾ. ೫-೦೩)

೨. ಮಿಕ್ಕ ಕೆಂಗಜಾಗೋಲ್ಗಳೊಡಲ ಹೊಕ್ಕ ಮಾತ್ರದಿ ಹೊಱಟದೆಯಲ್ಲಿ ರಕುತವ ಮುಕ್ಕುಳಿಸಿತು (ಹುಕಹಕ. ೩೩-೩೬). ೪. ಪುರುಷರ ನುಡಿ ಹೊಱಡದ ಮುನ್ನ ಸ್ತ್ರೀಯರು ಹಱಿಸದೆ ಮೇಲಿಕ್ಕುವರು (ಹುಕಹಕ. ೦೦-೦೩). ೮. ಕುಸಿದ ನಡುವಿನ ಹೊಱಟ ಬೆನ್ನಿನ ಬೀಸುಗೈಗಳ ಡೊಂಕಕಾಲುಗಳ (ಶಕಪ್ಪ. ೨೦-೦೦). ಹೊಱವಂಡು : ೧. ಹೃದಯ ದೊಳಗಹನ್ನಕ್ಕರ ಲಿಂಗಪ್ರಾಣ ಹೃದಯದಿಂದ ಹೊಱಯಿಂಕೆ ಹೊಱವಂಟರೆ ಭವಿ (ಅಹಕ. ೦೦-೦೬); ಫಲುಗುಣನ ಕೆತ್ತಿಸಿವವನು ಹೊಯ್ ಹೊಯ್ಮನುತ ಹೊಱವಂಟರತಿರಥರು (ಕುಚಿಹ್ಮಕ್ಕೋ. ೦೦-೦೬) ; ಮಱಿದು ಮುಱಗಿದ ದಾಲಕಿಯ ಬಿಟ್ಟಡವಿಯಲಿ ಹೊಱವಂಟನಾ ವನವ (ಕಳಕ. ೬-೦). ೪. ಸಿಕ್ಕಿದಳಿ ಹೊಱವಂಟಮಟ್ಟಂಗಳ ಬಸುಱಿಱಿರ್ದು (ಚಕಪ್ಪ. ೦೨-೯೬). ಹೊಱವಡು : ೧. ಹೊಸತಿಲ ಪೂಜೆಸಿ ಹೊಱವ[ಪಾಠಾಂ. ಹೊಡವಂ, ಹೊರವಂ]ಟ್ಟು ಹೋಗ ಒಕ್ಕಲಿತಿಯಂತಾಯಿತ್ತೆನ್ನ ಭಕ್ತಿ (ಬಸಕ. ೯೨೨) ; ಕೋಟಿರಥಗಳು ರಣಕೆ ಹೊಱವಡಲು (ಕೌಶಿಚಾ. ೨೦-೬) ; ವಿಲಸಿತರತ್ನಭೂಷಿತನಾಗಿ ಹೊಱಪಟ್ಟ ಕಲಿಗಳ ದೇವ ಕಾಳೆಗಕೆ (ಪ್ರಹಕ. ೯೦-೯). ೪. ಜೀವಿತ × × × ಮಾಱ ಹೊಱವಟ್ಟು ಹೋಹ ಸುಂಕ ಸಹಿತ ಧಾರೆಯನೆಱೆದು ಬಿಟ್ಟರು (ಶಾಇಸ. IX-1, ೦೯೩-೯೩ ; 1079) ; ಜನವು ಹೊಱವಡುತಿರಲು ಪದ್ಮಾವತಿ ನಿರೀಕ್ಷಿಸುತಿರ್ದಳಾ ವಿಟನ (ಹಕಕ. ೩-೨೬). ೬. ಹಿಂದೆ ಪರಸತಿಗಾಗಿ ಹಿಡಿವಡೆದಂದು ಭಂಗಿಸುವಲ್ಲಿ ದೃಗುಜಲಬಿಂದು ಪೊಂದಂ ಹೊಱಪಡದು (ಚಕಪ್ಪ . ೦೯-೩೩).

[ದೇ. ೩ ತಮಿ. ಪುಱಪ್ಪಟು; ಮಲ. ಪುಱಪ್ಪೆಡು]

ಪೋಜಮದಿಲ್ (ನಾ). ಹೊರಗೋಡೆ : ಭೂಗಧಿಪತ ಗೃಹಗಳ ಪೊಱಮದಿಲಂಗಣದ ಮರದ ಕೊನೆಯು ವೇಗೆ . . . ನೋಡಿದರಾ ಪೂಗಣಗೆಱೆದೊಪ್ಪವ ಕುಮಾರನನು (ಹಹುಕ. ೦೦. ೫೦). [ಪೊಱ (< ಪೊಱಗು)+ಮದಿಲ್]

ಪೋಜಮಾಱು$_1$ (ಕ್ರಿ). ಓಡಿ ಹೋಗು ; ಹಿಮ್ಮೆಟ್ಟು ; ಪಲಾಯನ ಮಾಡು : "ಪೊಱಮಾಱು—ಪರಾಯನೇ" (ಕಹುಣ) ; ನಗೆ ಪಗೆವಾಡಿ ಗೋಗ್ರುಹಣದೊಳ್ ಪೊಱಮಾಱಿದ ಬನ್ನಮೊಂದು ನೆಟ್ಟಗೆ ಮನಮಂ ಪಳಂಚಲೆಯೆ (ಹುಕಹಾ. ೦೦-೦೦೦) ; ಜಯಂತಕುಮಾರಮುಖ್ಯರೆಲ್ಲಂದು . . . ಕಾದೆ ಸಸ್ಪಂದಿತಚಿತ್ತನಾಗಿ ಪೊಱಮಾಱಿದನಾರೆಯದುಗ್ರಸೈನಿಕಂ (ಕೀಚಹ್ಯ . ೦೨-೨೦೩); ಪೊಱಮಾಱದೆ ನಾದಿಱಿದು ಸಪ್ತೋದ್ದಾತನ ಬರ್ದಂ (ಹುಕಹ. ೦೨-೯೦).

[ದೇ. ೩ ತಮಿ. ಪುಱಮಾಱು = ಬಲವನ್ನು ಕಳೆದುಕೊಳ್ಳು]

ಪೋಜಮಾಱು$_2$, ಪೊರವಾರ್, ಪೊರವಾರ, ಪೊರವಾರು, ಪೊಱವಾಱ್, ಪೊಱವಾಱು, ಹೊಱವಾಱ್ (ನಾ). ೧. ಬೆನ್ನು ತೋರಿಸುವುದು ; ಸೋತು ಓಡುವುದು ; ಪಲಾಯನ : "ಪೊಱಮಾಱೆಂದು ಬೆನ್ನೀವುದಕ್ಕೆ ಬಡದಿರ್ಪ ನಾಮಂ" (ಕಕ್ಕಕ್ಕ. ೬೮). ೨. ನಿತಂಬ; ಜಘನ. ೧, ೨ : "ಪೊಱ(ರ)ಮಾಱು[ಪಾಠಾಂ. ಱ್]ಯೆಂಬೀ (ಎರಡು) ಶಬ್ದಂ=ಬೆಂಗೊಡುವಲ್ಲಿಯುಂ, ಸ್ತ್ರೀಯರ ಪರಭಾಗದಲ್ಲಿಯುಂ" (ಹುಂರ. ಹು. ಹು); ಆ ನೃಪೋತ್ತಮನೊಳ್ ರಾಗೋತ್ಕಂಠವೆಂಬುದು ತಳಂಗಳೊಳ್ [ವ್ಯ]ತಿಯೆಂಬುದೂರುಸ್ತಂಭದೊಳ್ ಪೊಱಮಾಱೆಂಬುದು ನಿತಂಬಸ್ಥಳದೊಳ್ . . . ಕರಾಳ್ಕುಕ್ಕುಮದಲ್ಲದೆ ಪೆಱವು[ಯು]ಱಿದು ಮಾತ್ರವಿಲ್ಲಾ (ಐಕಗಹು. ೯-೨೪ ಶ). ಪೊರವಾರ್ : ೨. ಚಲನಾಲಸೆಯರ್ ಪೊರವಾರ್ಗಳನೀ ಕಾಮಿನಿಯರಾರ ಸೋಲಿಸದಿರ್ಪರ್ (ಕೃಪ್ಯಾಕೋ. ೨೫೦), ಪೊರವಾರ್ಗಳಂ ಪಿಡಿದ ಹೂಮುಡಿಯು ಪಿಡಿಯಲಿನೆ ಸೆರಗು ದಡದಡಿಸ: ಕಿರಿ ಚಲ್ವೆಯರ್ ಮರೆದು (ಶಾಉಕೆ. ೦೨೯-೨೬೦). ಪೊರವಾರ : ೨. ಸ್ಮೆತರಾಸಿಯಂತೆಸೆವ ಪೊರವಾರದ ಪೊಂಬಾಳೆಗಂಬದಂತೆ ತೋರ್ಪ ಬಿಟ್ಟದೊಡೆಯು . . . ಕೆಂದಾವರೆಗಳಂತೆ ವಿರಾಜಿಪ ಪಾಣಿತಳಂಗಳಂ

ಶೋಭಿಸೆ (ಪಾಂಡವ. ೦-೩-೨೬ ಪ): ನೀಟವಾದ ಕಣ್ಣುಗಳುಳ್ಳವಳಾಗಿ ಒಳ್ಳೇ ಪೊರವಾರಗಳುಳ್ಳವಳಾಗಿ . . . ದ್ರೌಪದಿಯು ಹುಟ್ಟಿದಳು (ಕೃಪಾಅ. ೦೦೨). **ಪೊರವಾರು**: ೨. ಹುಬ್ಬುಲಿ, ಕಿರುಬುಲಿ, ಸುರುಸುರಿಗೆ ಈ ಸೊಪ್ಪುಗಳ ರಸ . . . ಪೊರವಾರಿಗೂ ಹಿಮ್ಮಡಿವರ್ಯಂತವೂ ತೊಡಿಯಲು ಮೂರುದಿನಕ್ಕೆ ಶೀತಜ್ವರಂ ಗುಣವಕ್ಕುಂ (ಸಕಕ್ರ. ೭೧); ಸೋಮರ್ಗಡಿ ಕುಚದ್ವಂದ್ವವೆಸೆವ ಪೊರವಾರುಗಳ ಪೆರ್ಮೆಗೆ ಕೆಂಗರ್ ವಧ್ಯಮಾರುಗಳ್ ದಡದಡಿಸೆ (ಕುಣ್ಣಂಗ. ೨-೧೭). **ಪೊಱವಾಱ್**: ೨. ಕಡು ಮಾಡಿದುವೆವಿವ ಪೊಱವಾಱ ತಿಣ್ಣೆನಿ (ಅಂಕ. ೪-೭ ಪಠ); ನೇಸಱ್, ಎಟ್ಟೆಱ್, ಪೊಱವಾಱ್ (ಕವಿಕ. ೧೮ ಪ್ರಪೂ); ಬೆಲ್ವಿನೊಪ್ಪುವ ದಾಸಿಗೆ ಹಿಂದಾದವೊಂದದಿರುವಂತೆಸೆವ ಪೊಱವಾರ್ಗಳಿಂದೊಪ್ಪುವಾ ಸತಿಯರಾನಂದದಿಂದಲೆಯ್ದಂದರು (ಪಾವಕಾ. ೯-೨೨). **ಪೊಱವಾಱು**: ೨. ನಿತಂಬ ಮುಸುಕಿದ ವಿಪುಳಪೊಱವಾಱು ಪುಳದಗೆತ್ತಿ ಮುಸುಕಿದ ಪದಂ (ಪಕಾ. ೪-೩೪); ಬಿಗಿದ ಮೊಲೆಗಳ ಮೆಱೆವ ಪೊಱವಾಱುಗಳ ಬಿಂಬಾಧರದ . . . ಪದ್ಮಿನಿಯರುಗಳೆಸೆದರು ರಾಜಸಭೆಯೊಳಗೆ (ಕುಮ್ಮಾರಾ. ೬೦೩. ೬-೯೭): ಕೊಡಪೊಱವಾಱ ಭರಕೆ ಪೊಂಬಾಳೆಯೊಡೆ ದಡದಡಿಸೆ (ಕೊತ್ತ. ೦೯-೨೭). **ಹೊಱವಾಱ್**: ೨. ಹೊಱವಾಱಲಿ ಇದ್ದ ಕವಣೆಕಿಗಳೆರಡು ಕುಕುಂದರ (ಪಾಂಡ. ೪).

[<ಪೊಱಮಾಱು₁./ತಮಿ. ಪುಱಮ್ವರು = ದೇಹದ ಒಂದು ಅಂಗ]

**ಪೊಱಮಾಱು₂**, ಹೊರಮಾರು, ಹೊರವಾಱು, ಹೊಱವಾಱು (ನಾ). ೧. ಹೊರಗಿನ ಮಾರಾಟ; ಹೊರಗೆ ಮಾರುವಿಕೆ: ಎಳ ಅಂಚೆ. ಪೊಱವಾಱು, ಪೊಱಅಡಿ (ಶಾಸಬೂ. ೦೯೯ ಅರಾ). **ಹೊರಮಾರು**: ೧. ಒಳಮಾರು (ಆಮದು) ಹೊರಮಾರು (ರಫ್ತು) ಸರಕುಗಳ ಮೇಲೂ ತೆರಿಗೆ ಹಾಕಿತು (ವಿಜ್ಞಾಂಸಂ. ೯೨). **ಹೊರವಾಱು**: ೨. ಹೊರನಾಡಿನಲ್ಲಿ ಮಾರುಟವಾಗುವ ಸರಕುಗಳ ಮೇಲೆ ಹಾಕುವ ಸುಂಕ: ಮಗ್ಗ ಮುದ್ರೆ ಒಳವಾಱು ಹೊರವಾಱು ಮದುವೆ . . . ಮುಂತಾದ ಏನುಳ್ಳ ಸುಂಕ ತಳವಾರಿಕೆಗೆ ಸಲುವ ಅಂಬಲಿ (ಎಕ. VII. ಶಿಕಪೂ. ೭೦-೪೦; 1431); ಸುಂಕ ಪೊಳವಾಱು ಹೊರವಾಱು ಕಂಮಾಱಬದೆಣ್ . . . ಮಾದಜೀಕ ಮುಂತಾದ ಏನುಳ್ಳ ಸಕಲ ಸ್ವಾಮ್ಯವನು ಆಗುಮಡಿ (ಕ್ಕುಕಾ. ೦೯೩೬. ೭೮-೩; 1507). **ಹೊಱವಾಱು**: ೨. ಹೊಱವಾಱು ಉಭಯಮಾರ್ಗ ಒಳವಾಱು ಸ್ಥಲ ಕುಳವಿಸಂಚವಿಲ್ಲಾ ಎಂದು ಕೊಟ್ಟ ಚೀಟು ನಿಮ್ಮ ಕೈಹಾಳೆಯಲ್ಲಿ ಅದೆ (ಸುಂಕಕಾ. ೪. ೬೯೯-೩); ಒಳವಾಱು ಹೊಱವಾಱು ತಳವಾರಿಕೆ ಆಲೆದೆಣ್ (ಎಕ. VIII. ತೀಕಹ. ೦೪೦-೯೯; 1404). 'ಒಳವಾಱು' ಪರಾ. [ಪೊಱ (<ಪೊಱಗು) + ಮಾಱು]

**ಪೊಱಮಿಂಚು**, ಹೊಱಮಿಂಚು (ನಾ). ೧. ಹೊರಗಿನ ಬೆಳಕು,–ಪ್ರಕಾಶ. ೨. ಹೊರಗಿನ ಥಳುಕು,–ಆಕರ್ಷಣೆ,–ಸೌಂದರ್ಯ. ೩. (ಅಲಂ) ಬೂಟಾಟಿಕೆ: 'ಪೊಱಮಿಂಚುಗೆಯ್' ಪರಾ. **ಹೊಱಮಿಂಚು**: ೨. ಜವ್ವನದ ಹೊಱಮಿಂಚಿನಲ್ಲಿ ನಿಮ್ಮ ಕಣ್ಣಿಗೆ ತೋಱುವ ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯ (ಪುತಾರೇ. ೩. ೭೦-೦೬೩); ಹೊಱಮಿಂಚಿ ಹೊಲೆವೆಣ್ಗೆ ಸೋಲ್ವ ತೆಱದಿಂ (ರತ್ನಾಕ. ೯೭). [ಪೊಱ (<ಪೊಱಗು) + ಮಿಂಚು₂]

**ಪೊಱಮಿಂಚುಗೆಯ್** (ಕ್ರಿ). ೧. ಹೊರಗಡೆ ಬೆಳಕನ್ನು ತೋರಿಸು: ಹೊರಗೆ ಪ್ರಕಾಶವನ್ನುಂಟುಮಾಡು. ೨. (ಅಲಂ) ಬೂಟಾಟಿಕೆ ಮಾಡು: ಪೊಱಮಿಂಚುಗೆಯ್ವನಂ ಬಱಿವಾತುಗಾಱನಂ ಕಱಿಬವಂ . . . ತೊಱೆಯುದುದೆಗ್ಗತನವಲ್ತೆ (ರಾಜಶೇ. ೦೦-೯೨). [ಪೊಱಮಿಂಚು + ಕೆಯ್₁]

**ಪೊಱಮುಯ್ಯು** (ನಾ). ಭುಜದ ಹೊರಭಾಗ; ಹೊರಭುಜ: ತಳ್ಪವೆರ್ಗೊಳೆ ಪೊಱಮುಯ್ಯು ಬನ್ನಿತಃವೊರ್ಗೆಯ ನಾ[೦ದಿ]ನವುಂಚ್ಛಪೊಣ್ಮೆ ಕಣ್ಮಲರ್ಗಳಿನೆಚ್ಚು ಪಾಯ್ದುವರಲಂಬುಗಳಂತೆ ವಿರೋಧಿನಾಂಬುಗಳ್ (ಕುಪಾ. ೯-೦೦೬); ಬಳೆದು ಪೊಱಮುಯ್ಯುವರೆಗಂ ತಳೆದು ಕನತ್ಕನಕಪಿಂಗರುಚಿಯುಂ (ಪಾರ್ಪು. ೨೦೧); ಪೊಱಮುಯ್ಯಂ ತಾಗೆ ಬಲ್ಲಂ ತೆಗೆದೆಟ್ಟೆದು ಸರೋಜಾಕ್ಷನೆಚ್ಚಗ್ನಿಬಾಣಂ . . . ಉರಿಪಿದತ್ತಾ ಪುರಂಚಕ್ರಮಂ (ಜಗ. ೦೬-೦೦೬). 'ಒಳಮುಯ್ಯು' ಪರಾ. [ಪೊಱ (<ಪೊಱಗು) + ಮುಯ್ಯು₂ (<ಮುಯ್ಯು)]

**ಪೊಱಮೆಯ್**, ಹೊರಮೈ, ಹೊಱಮೈ (ನಾ). ೧. ಹೊರಭಾಗ; ಹೊರಗಡೆ: ಪೊಱಮೆಯ್ಯ ವೇಷದಿರವೇತೆಱನಾದೊಡಮೇನೊ (ಕಾಪು. ೨-೮೯). **ಹೊರಮೈ**: ೧. ಭೂಮಿಯ ಹೊರಮೈಯ ಬಿರುಕಲುಗಳಲ್ಲಿ ನೀರು ಸೇರಿಕೊಳ್ಳುವುದಷ್ಟೆ (ಪಾಂಶ್ರ. I. ೬೯೩). ೨. ಪುಸ್ತಕ ಮುಂತಾದುವುಗಳ ಮೇಲುಹೊದಿಕೆ; ರಟ್ಟು: ಪುಸ್ತಕದ ಹೊರಮೈ ವರ್ಣ ರಹಿತವಾಗಿರುವುದರಿಂದ, ಗ್ರಂಥವ ಸರಳತೆಯು ಎತ್ತಿ ತೋರಿಸಲ್ಪಡುವುದು (ಕೂಕಸಂ. ೦೯). **ಹೊಱಮೈ**: ೧. ಅದಱ ಬಿಮ್ಮಡಿ ಪ್ಲಕ್ಷದ್ವೀಪವು ಯದಱ ಹೊಱಮೈ ಸ್ವಾದುಜಲವು (ಸಂಕಪ. ೦೦-೯). 'ಒಳಮೆಯ್' ಪರಾ. [ಪೊಱ (<ಪೊಱಗು) + ಮೆಯ್₂]

**ಪೊಱಯಿಂಕೆ**, ಪೊರಯಿಂಕೆ, ಹೊರಯಿಂಕೆ, ಹೊರಯಿಕೆ, ಹೊಱಯಿಂಕೆ, ಹೊಱಯಿಕೆ (ಅ). ಹೊರಗಡೆಗೆ; ಹೊರಕ್ಕೆ: ಕಱಿವಿನಪೆಗಂ ಕುದಿಸಿ ಶಿಂದುಳಿದ ದೇಹಮಂ ಪೊರೆಯಕ್ಕ [ಪೊಱಯಿಂಕೆ] ಬಿಸುಟು (ಇಪಾಕ. ೦೦-೩೭). **ಪೊರಯಿಂಕೆ**: ಈಕೆ ಪುಱುಮಜ್ಜನಂಗೈದು ಧುಂಡಿಪು ಪೊರಯಿಂಕೆ ಬರುತಿರ್ದಳು (ಪಾಂಕಪ. ೪೦-೦೨). **ಹೊರಯಿಂಕೆ**: ಶಿರಃಪೋಲಾನಿ = ತಲೆಯಂ ಕಿವಿಯ ಕೆಳಗಣ ಗಲ್ಲದ ಕೀಲಂ, ಧಾರಯಿತ್ವಾ = ಹಿಡಿದು, ವಿಸರ್ಪಯೇತ್ = ಹೊರಯಿಂಕೆ ಎಳೆಯಬೇಕು (ಪಾಪಕೋ. ೨-೨-೩೭ ಪ). **ಹೊರಯಿಕೆ**: ಮನೆಯ ಬದಱುಗಳನೊಂದೊಂದ ಹೊರಯ[ಯಿಂ]ಕೆ ತೆಗೆಯೆ ಮನೆಯೊಳಗೆ ಬಯಲೊಂದೆ ಕಿಡದೆ ನಿಲುವಂತೆ (ಕೃಕಪ. ೩-೦೭-೯). **ಹೊಱಯಿಂಕೆ**: ಹೃದಯದೊಳಗಿಹನ್ನಕ್ಕರ ಲಿಂಗಪ್ರಾಣ ಹೃದಯದಿಂದ ಹೊಱಯಿಂಕೆ ಹೊಱವಂಟರೆ ಭವಿ (ಅರಪ. ೦೦-೦೬); ಪಟ್ಟಿಗೆಯ ನೀಕ್ಷಿಸುತಂದು ಬೀಸಾಟನತ್ತಿ ಹೊಱಯಿಂಕೆ ಕೋಪಿಸುತೆಂದು (ಕಿಪು. ರೇ. ೦೩-೬); ಭವಿ ನಮ್ಮ ಮನೆಗೇಕೆ ಬಂದೆ ತೊಲತೊಲಗೆಂದು . . . ಮಂದಿ ಮಕ್ಕಳುಗಳುಂ ಹೊಱಯಿಂಕೆ ನೂಲು (ಗುರುಪು. ೬-೯೭). **ಹೊಱಯಿಕೆ**: ತಟ್ಟುಮುಟ್ಟು ಹೊಱಯಿಕೆ ಬಿಸಾಡೆಯುಮ್ಮ (ಶಿವಗೀ. ೦೩೯-೬೯೯ ಪ); ಆ ತಟ್ಟೆಯಂ ದೇಗುಲದ ಹೊಱಯಿಕೆ ಹಾಯಿಕಿದಂ (ಬಸಪು. ೩೪-೦೬); ಕಡು ಸುಖವ ಮಚ್ಚಿದ್ದ ಮನ ಹೊಱವಡಿಸಿ ಹೊಱಯಿಂಕೆ ಧೈರ್ಯದಲಿ ಸುಖಗಡಲೆನಿಪ ಶ್ರೀಕೃಷ್ಣಚರಣಾಬ್ಜದಲಿ ಮನವಿರಿಸಿ ಮಡಿದನು (ಕಪಾಸ. ೦೦-೩೪-೨೬). 'ಒಳಯಿಂಕೆ' ಪರಾ. [ಪೊಱ (<ಪೊಱಗು) + ಇಂಕೆ₁]

**ಪೊಱವಂದು** 'ಪೊಱಮಡು' ನೋ.

**ಪೊಱವಡು** 'ಪೊಱಮಡು' ನೋ.

**ಪೊಱವರ್**, ಹೊರಬರು (ಕ್ರಿ). ೧. ಹೊರಕ್ಕೆ ಬರು: ಪೊಱವಂದು ನಿಂದು ಕೆಳೆಯರ್ಗೆಳೆಂದಿ ತಾಂ ಕಿಱುಮಾಡವೇಱ್ (ಕಕಾ. ೬-೦೯೩). **ಹೊರಬರು**: ೧. ಅವರಾಗಿ ಹೋಗೆಂದು ಹೇಳುವುದಕ್ಕಿಂತ ತಾವಾಗಿಯೇ ಹೊರಬರುವುದು ಮರ್ಯಾದೆಯೆಂದೆಣಿಸಿ . . . ತನ್ನ ಲೆಕ್ಕಪತ್ರಗಳನ್ನು ತೀರಿಸಿಕೊಂಡು ಹೊರಬಂದನು (ಪುರಾಶ. ೦೯೭). ೨. ಪ್ರಕಟವಾಗು; ಪ್ರಕಾಶಗೊಳ್ಳು: ಪತ್ರಪುಸ್ತಕಮಾಲೆಯಲ್ಲಿ ಹೊರಬರುತ್ತಿರುವ ಮತ್ತೊಂದು ಪುಸ್ತಕ ಈ ಗೃಹವಿಜ್ಞಾನ (ಗೃಹ. IV. ಮುನ್ನುಡಿ). [ಪೊಱ (<ಪೊಱಗು) + ಬರ್ (<ವರ್)]

**ಪೊಱವಲಯ**, ಪೊಱವಳಯ, ಹೊರವಲಯ, ಹೊರವಳಯ,

**ಹೊಱವಳಯ** (ನಾ). ಹೊರಗಿನ ಪ್ರದೇಶ : ಹೊರಭಾಗ ; ಹೊರಗಡೆ : ಪೊಱಲ ಪೊಱವಲಯದಲಿ ನಂದನಲಕ್ಷ್ಮಿ ಶೋಭಿಪಳು (ಶಾಕ್ಯ. ೨-೨). **ಪೊಱವಳಯ:** ಇತ್ತ ವಿಶಾಖಭೂತಿಯರಸುಗೆಯ್ಯುತ್ತಿರೆ ಪೊಱಲ ಪೊಱವಳಯದೊಳ್[ಪಾಠಾಂ. ಪೊಱವೊೞಲೊಳ್] . . . ವಿಶ್ವನಂದಿ ಮಾಡಿಸಿದನಂದೊಂದು ನಂದನಮಂ (ಶಾಂತಿಪು. ೬-೩೩ ವ) : ಇಂತೆಸೆವ ಪಟ್ಟಣದ ಪೊಱವಳಯದೊಳ್ ಲತಾಸಂತತಿಗಳಿಂ ಕುಸುಮಶೋಭೆಯಿಂ ತರುಕುಲದ ತಿಂತಿಣಿಗಳಿಂ ಫಲಾನೀಕದಿಂ . . . ಆ ವನಂ ಕಣ್ಗೆಸೆದುದು (ಕಂಪು. ೧೦-೨೦); ಅರ್ಜುನನ ಕಟೀವಿದಾರ್ದುದು ಮಹಾಂಭೋನಿಧಿಯ ಮುಸೞದಿಂ ಪೊಱಲ ಪೊಱವಳಯದುದ್ಯಾನವೀಧಿಗಳೊಳು (ಕೃಷ್ಣಚ. ೧೬-೨೨). **ಹೊರವಲಯ :** ನಗರದ ಹೊರವಲಯ (Suburb. ೩೮೪೬). **ಹೊರವಳಯ :** ವೆಂಕಮ್ಮನ ಸಂಸಾರ ಸಂಕಾಪುರದ ಹೊರವಳಯದ ಮಾರುತೀದೇವಾಲಯದಲ್ಲಿ ಬಹುಕಾಲ ನಡೆಯಿತು ! (ಜಗಾ. ೧೩೭); ಅವರ ಎದುರುಗಡೆ, ಕಲ್ಲಿಗೆಯ ಕಟಕಟೆಯಿಂದ ಆವೃತವಾದ ಹೊರವಳಯದ ಒಂದು ಮೂಲೆಯಲ್ಲಿ ಹೈಮವತಿ (ಎಚ. ೦೨). **ಹೊಱವಳಯ :** ಪುರದ ಹೊಱವಳಯದೊಳು ಧರಣಿಪಂ ಪೋಗುತಂ ಸುರೆಯ ಹರವಿಯ ಮೇಲೆ ಧಸಿತವಿರೆ ಕಂಡು (ಅಜಂ. ೩೨-೩೪) : ನಿಲಿಸಿದರು ಕೈದುಗಳ ಕರಿ ಸಂಕುಲವ . . . ಊರ ಹೊಱವಳಯದಲಿ (ಕೊರಬ. ೬-೧೩-೩).

[ಪೊಱ (<ಪೊಱಗು) + ವಲಯ]

**ಪೊಱವಳಯ** 'ಪೊಱವಲಯ' ನೋ.

**ಪೊಱವಾಯ್, ಪೊಱಪಾಯ್, ಹೊರಹಾಯು** (ಕ್ರಿ). ೧. ಹೊರಕ್ಕೆ ಚಾಚು ; ಹೊರಬರು : ಕಣ್ಗಳ್ ಪೊಱವಾಯ್ವುದು ಕೋಪಶಿಖಿ ಪೊಣ್ಮುತ್ತುಂದನಂ ಕಿಂಕವಾದುವು (ಹಂಪಾಚ. ೯-೧೮): ಬಟ್ಟ ಬಾಯಕ್ಕುಳಿಸಿರ್ದ ಪುಷ್ಪ ಪೊಱವಾಯ್ವುದೆಯರ್ವಿಪ ಪುರ್ವು (ಪರ್ಶ್ವಪು. ೦೫-೩೪); ಮರಣವೇ ಶರಣೆನುತೊಪ್ಪಂದೇ ಕಠಾರಿಯಂ ಚರಿತದಿಂದೆತ್ತಿದಂ ನಿಷ್ಪಗುಪಕಾರಿಯಂ ಇಱಿದುಕೊಂಡಂ ಕರುಳು ಪೊಱಪಾಯಲು[ಪಾಠಾಂ. ಪಾಡಲು] (ಕಥಾ. ೩೦೨-೦೩). **ಪೊಱಪಾಯ್ :** ೧. ಕಣ್ಣುಬ್ಬೆಯು ಗಾಳಿಯಂತೆ ಪೊಱಪಾಯ್ವನಮಟ್ಟಲೆಪೂಯ್ಯೊಡೊರ್ವನಂ (ಸುಕುಮಾ. ೬-೬); ಗಣ್ಪಲ ನೆಱೆಯ ಕಣ್ಪೊಱಪಾಯ್ವನವೊತ್ತು ಪುತ್ತು ಬಾಯ್ಪುಡಿಸದೆ ಮಾಣ್ಪನೆ ಸಮರದೊಳ್ಕಲಿ ಬಿಜ್ಜಲದೇವಭೂಭುಜಂ (ಎಕ. XI, ದಾಡಾ. ೩೮-೨೬ : ಸು. 1160). ೨. ಹೊರಗೆ ಹರಡು,-ವ್ಯಾಪಿಸು : ತನ್ನಕೀರ್ತಿಗಂಗಾ ಪ್ರವಹದಿನುನ್ನ ಪೊಣ್ಮ ಪೊಱಪಾಯ್ದಿರದಾಗಳೆ ನೋಡಿ ನೋಡಿ (ಕುಸುಮಾ. ೦-೦೩). **ಹೊರಹಾಯು :** ೩. ಹಾದುಹೋಗು : ಭೂಭಾಗದ ಮೇಲೆ, ಬಂಗಾಳಾ, ಅಸ್ಸಾಂ, ಮಣಿಪುರ ಮಾರ್ಗವಾಗಿ ಹೊರಹಾಯುವ ಕಾಲುದಾರಿಗಳು ಅನೇಕ ಇದ್ದುವು (ಚಾರಿತ. ೩೩೯).

[ ಪೊಱ(<ಪೊಱಗು) + ಪಾಯ್$_1$ ]

**ಪೊಱವಾೞ್** 'ಪೊಱಮಾೞು$_2$' ನೋ.

**ಪೊಱವಾೞು** 'ಪೊಱಮಾೞು$_2$' ನೋ.

**ಪೊಱವೀಡು, ಪೊಱಬೀಡು, ಹೊಱಬೀಡು** (ನಾ). ಪಟ್ಟಣದ ಹೊರಗಡೆ ಹೂಡುವ ಬಿಡಾರ, -ಶಿಬಿರ, -ಠಾಣ್ಯ: ಅತಿಮನೋಹರವಾದ ವನಿಪತಿಯ ಭವನನಿವೇಶದಿಂದಮುಂದಂಬಡೆದ ಪೊಱವೀಡಂ ಸೋಮಾನ್ವಯ ಪ್ರದೀಪಂ ಪುಗುವಾಗಳ್ (ಶಾಂತಿಪು. ೦೦-೦೯೭ ವ) ; ಗೊಂದವಾಡಿಯ ಪೊಱವೀಡಿನಲ್ ಸುಖದಿಂ ರಾಜ್ಯಂಗೆಯ್ಯುತ್ತಿರೆ (ಎಇ. IV. ೨೦೯-೭; 1072): ಪೊಱವೀಡ ಮಂದಿ ಇರ್ದ್ದೆಡೆಗಳೊಳೆ ಬಿಟ್ಟನ್ (ಅಶ್ವಶಾ. ೩-೯೩). **ಪೊಱಬೀಡು :** ಅಂಧಕಾಸುರಂ ಪೊಱಮಟ್ಟು ಪೊಱಬೀಡನಾಗಿ ಬಿಟ್ಟನು (ಕಂಪು. ೯೭-೩೨). **ಹೊಱಬೀಡು :** ಮುಂದಣ ಪಯಣವ ನಿರ್ಧರಗೈದಾಗ ಬಾದು ಬಿಟ್ಟನು ಹೊಱಬೀಡ (ಕಂಕಚ. ೦೦-೩೯).

**ಪೊಱವೀಡಂ ಬಿಡು, ಹೊಱಬೀಡ ಬಿಡು** = (ಕೋಟೆ, ಪಟ್ಟಣ ಮುಂತಾದುವುಗಳ) ಹೊರಭಾಗದ ಆವರಣದಲ್ಲಿ ಶಿಬಿರವನ್ನು ಹಾಕು,-ಪಾಳೆಯವನ್ನು ಹೂಡು : ಬೆಸವೆಟ್ಟಂ ಭುವನೈಕಮಲ್ಲನು ದಂಡಾದಿತ್ಯಂಗೆ ಕೈಕೊಣ್ಡು ಬನ್ದ ಸಹಾಯಂ ಬನವಾಸೆಯುತ್ತ ಪೊಱವೀಡಂ [ಬಿಟ್ಟು] (ಶಾಇ. XX. ೯೯-೦೭ ; 1076 ?) : ಜಿನೇಂದ್ರಭಕ್ತಸೆಟ್ಟಿ . . . ಜಿನಮಹಾಪೂಜೆಗಳುಮಂ ಮಾಡಿಸಿ ಪೊಱವೀಡಂ ಬಿಟ್ಟು ತನ್ನ ದೇಹಾರದೊಳಿರ್ದ ಬ್ರಹ್ಮಚಾರಿಗೆ ವಂದು (ರಣ್ಣ‌ಸ. ೬-೬೯) ; ಕೂಡೆ ಹೊಱ ವಂಟುದು ಸಮಂತ್ರಕಗೂಡಿ ಸಚಿವ ಪಸಾಯಿತರು ಹೊಱಬೀಡ ಬಿಟ್ಟಿರ್ದು ಮುಂದೆ ಮನ್ನೆಯ ಮಂಡಲೇಶ್ವರರು (ಕೊರಬ. ೨-೩-೫೦) ; ನಱುಸುಯಿಗಂಟೆಗಳು ತುಂಬಿಗಳು ಬಾದು ಹೊಱಬೀಡ ಬಿಟ್ಟವೆ (ಶಬರಶಂ. ೨೯-೯೦).

[ ಪೊಱ (<ಪೊಱಗು) + ಬೀಡು$_2$ ]

**ಪೊಱವೇಱು** (ನಾ). (ಊರಿನ) ಹೊರಗಿನಿಂದ ಬಂದ ಹೇರು : ಪೊಱವೇಱಿಂಗೆಲೆ ನೂಱುಮಂ ಮೆಣಸುಮನ್ನೇಲಕ್ಕಿ ಮುಖ್ಯಂಗಳಂ ನೆಱ ತಾಂ ಸೊಲ್ಲಗೆಯಯ್ಯತನ್ನಡಕೆಯುಂ ಮತ್ತಿಲ್ಲಿ ಮಾಱಿದಡಂ ತೆಱಗೆ (ಎಕ. XI. ದಾಡಾ. ೫೯-೬೨ ; 1280). [<ಪೊಱ$^2$ + ಪೇಱು$_2$]

**ಪೊಱವೊೞಲ್** 'ಪೊಱವೊೞಲ್' ನೋ.

**ಪೊಱವೊಱಸು** (ನಾ). ೧. ಮನೆಯ ಒಳಗೆ ಬರಲು ಅನರ್ಹವೆಂದು ನಂಬಲಾದ ಪಕ್ಷಿ : ಪಾರಿವಾಳ. ೨. (ಆಲಂ) ತಿರಸ್ಕಾರಯೋಗ್ಯವಾದುದು : ವಾತ್ಸ್ಯಾಯನನಂ ಪೊಱವೊಱಸು ಮಾಟ್ಟ ಕಂಡವರಂ ಮೂವಣ್ಣಾಂಬರಿಪ ನವವಾರವಿಳಾಸಿನಿಯರಿರುತಿರ್ಪ ನೆಲೆವನೆಗಳನೊಪ್ಪುವ ಸೂಳೆಗೇರಿ ಸೊಗಯಿಸುತಿರೆ (ಜಗಂ. ೨-೦೯ ವಚ).

[ಪೊಱ (<ಪೊಱಗು) + ಪೊಱಸು]

**ಪೊಱವೊೞಲ್, ಪೊಱವೊಳಲ್, ಹೊಱವೊಳಲು** (ನಾ). ಪಟ್ಟಣದ ಹೊರಭಾಗ : ಮಾಣಿಗಳ್ವೆರಸು ಪೊಱವೊೞಲೊಳ್ ಬಟ್ಟಾಡುತ್ತಿರೆ (ಧರ್ಮಾಮೃ. ೬೩-೨೨); ಅದಱ ಪೊಱವೊೞಲ ವಿಶಾಳಸಕಳಕೃತಕಗಿರಿಗಳಿಂ ಫಳ ಪ್ರಕೀರ್ಣತರುಗಳಿಂ (ಶಂಕರಾ. ೦-೩೯ ರಗಳೆ); ಆ ಪುರದ ಪೊಱವೊೞಲ ವೈಹಾಳಿಯ ಬಯಲಿಂದ್ರೊಳಗೆ (ಗಿರಿಜಾ. ೨-೭೬ ವ). **ಪೊಱವೊಳಲ್ :** ಪೊಱವೊಳಲೊಳೆಪ್ಪಿದಳ್ದ ನವನನ್ದನಬೃನ್ದದಿಂ (ಎಇ. XIII, ೩೩೦-೨೭ ; 929) : ಅಲ್ಲಲ್ಲಿಗೆ ತಿಳಿಗೊಳನುಂ ಮಲ್ಲಿಗೆಯುಂ . . . ನೋಡಲ್ಪೆತ್ತಲುಂ ಪೊಱವೊಳಲೊಳ್ (ಶಾಇ. IX-1. ೨೯೭-೧೭; 1177); ಯಾದವರ ವೃಂದವೊಲವಿಂ ದ್ವಾರಕಾಪುರದ ಪೊಱವೊಳಲೊಳಿರುತ ದೂರ್ವಾಸ ಬರಲು (ಶಾಂಭಪು. ೯-೩೯) : ವಾರ್ದ್ಧರವದುಬ್ಬರದನೂನಸಂಭ್ರಮದಿಂದೆ ಕಲ್ಯಾಣಪಟ್ಟಣದ ಪೊಱವೊಳಲ್ ನೆಱೆ ಮೆಱೆದುದು (ಬಸವ. ೦೦-೩೦). **ಹೊಱವೊಳಲು :** ಹೊಳಲು ಹೊಸ ರೀತಿಯಲಿ ಮಿಗೆ ಕಂಗೊಳಿಸುತಿರ್ಪುದು ಮುನಿಪತಿಗೆ ಹೊಱವ [ಪೊ]ಳಲ ರಮ್ಯೋದ್ಯಾನವೆಸೆದುದು ಚೈತ್ರರಥವಂತೆ (ಕೊರಬ. ೦-೯-೦೦). [ಪೊಱ (< ಪೊಱಗು) + ಪೊೞಲ್]

**ಪೊಱಸಾರು** (ಕ್ರಿ). ಹೊರಗೆ ಹೋಗು ; ಹೊರಗಡೆಗೆ ನಡೆ : ತೆಱಪ ಬಿಡಿ ಪೊಱಸಾರೆನುತ ಪಡಿಯಱ ಸಾರರು ಹೊಂಗಟ್ಟಿಗೆಯ ಒಡಿದುಱ [ಕರದ ಕೋಲ್ಗಳ] ಬಡಿದು ಸಮ್ಮುಖ ಬಡಿಸಿ ನಡಸಿದರು (ಶಾಕ್ಯ. ೩೬-೩೬). 'ಒಳಸಾರ್' ಪರಾ. [ಪೊಱ (<ಪೊಱಗು) + ಸಾರು$_1$ (<ಸಾರ್)]

**ಪೊಱಸು, ಹೊರಸ್ಸು, ಹೊಱಸು** (ನಾ). ೧. ಒಂದು ಬಗೆಯ ಪಾರಿವಾಳ ; ಅಶುಭಸೂಚಕವೆಂದು ನಂಬಲಾದ ಪಕ್ಷಿ. ಇದು ಮನೆಯ ಒಳಗೆ ಬಂದರೆ ಅಮಂಗಳವೆಂಬ ನಂಬಿಕೆಯಿದೆ : ಕೋಂಟೆಯಿಂ ಪೊಱಗಣ ದೆಸೆಯೊಳ್ ವಿದ್ಯುಚ್ಚೋರಭಟಾರರ್ ಪ್ರತಿಮಾಯೋಗು ನಿಂದೊಡೆ ದೇವತೆ ಮುಳಿದು ಪೊಱಸುಗಳನಿವಿರಿಯಾವು ದಂಸ ಮಸಕಂಗಳು ವಿಗುರ್ವಿಸೆ (ವಡ್ಡಾರಾ. ೦೩೯-೦೪); ಜಾಡಿನೊಳ್ ಪೊಱಸಟ್

ವಂತೆ ತಮ್ಮರಸುಗೆಟ್ಟು ಕಟಲ್ದೆರ್ದೆಗೆಟ್ಟು (ಹಂಕಥಾ. ೯-೮೩) ; ಈ "ಪೊಱಸಟಿವಂತೆ-ಪಾರಿವಾಳವು ನಾಶ ಮಾಡುವಂತೆ . . . ಈ ಪದ್ಯದಲ್ಲಿ ರೇಫ ಱಕಾರಗಳ ಮಿಶ್ರಪ್ರಾಸವಿದೆ. ಪಾರಿವಾಳವು ವಿನಾಶ ಕಾರಕಪಕ್ಷಿ ಎಂಬ ನಂಬಿಕೆ ಇತ್ತು; 'ಭರತಾನ್ವಯರಾಜಭವನರಾಜ ಕಪೋತಂ' ಎಂಬ ರನ್ನನ ಪ್ರಯೋಗವನ್ನು ನೋಡಿ" (ಹಂಕಥಾ. ೨೯೯) ; ಪಿಂಗಲಿ ಪೋದಗೆ ಪೊಱಸು ಬಕಂ ಗಿಡಿಗಂ ಗೂಗೆಯಾದಿಯಾದ ಖಗಂ ರಾಜಾಂಗಣದೊಳ್ ಚರಿಸುವೊಡೆ ಸರಂಗೆಯ್ವೊಡೆ ತಡೆಯದಾ ಗೃಹಂ ಪಾಟಕ್ಕುಂ (ಶೋಕೋಕ. ೯-೬೩). **ಹೊರಸು** : ೧. ಗುಬ್ಬಳಿಸಿ ಪಟಪಟನೆ ಹಾರಿ ಬಹ ಹೊರಸುಗಳ ಸಮುದಯಂ (ಕಶ್ಯಾಂಗ. ೩೩-೧೯೯೬) ; ವಾರ್ಧಕ್ಯದ ಹೊರಸು ಅವನ ದೇಹದ ಗೂಡನ್ನು ಹೊಕ್ಕುತ್ತಿದೆ (ಶಾಗಕಾ. ೧೧). **ಹೊಱಸು** : ೧. ಹಂಸೆಯೊಳಗೆ ಹೊಱಸು ಬಂದಿರ್ಪಂತೆ ಬರ್ಪುದುಂ (ಕಬೋಕು. ೬-೨೨೩) ; ನರೆಯೆಂಬ ಹೊಱಸು ಮೊಗಮೆಂಬರಮನೆಯಂ ಪೊಕ್ಕೊಡಂಗನಾಲೋಕನಮೆಂಬರಸಂತಿರ್ದಪಂ (ಹುಕೋಕ. ೨-೧೨) ; ಹರಡೆ ಚಿಲುಮಿಲಿಗನು ಚಲುವೆ ಗಿಜುಗಿರಲೆ ಕಮ್ಮರಿಸಗ ಕೊಟ್ಟಿಲೆ ಹೊಱಸು ಹೊಡೆಗಳೆಂಬ ಪಕ್ಕಿಗಳವಱೊಳೊಪ್ಪಿದವು (ಶಾಕೃಶಾ. ೩-೨೦). ೨. ಮದನಪಕ್ಷಿ. ೩. ತಿತ್ತಿರಿಪಕ್ಷಿ. ೪. ಚಕೋರಪಕ್ಷಿ. ೫. ಹಸುಬನ ಪಕ್ಷಿ. ೬. ಮಂಜುಳವೆಂಬ ಹಕ್ಕಿ: "ಜೀವಂಜೀವಃ, ಕಪಿಂಜಳಃ, ಚಕೋರಃ, ಹಾರೀತಃ, ಮಂಜುಳಃ, ಕಪೋತಃ — ಈ ೬ ಹೊಱಸು " (ಹಲಾಯು. ೯೨-೧೦೦). ೭. (ಅಲಂ) ಕ್ಷುದ್ರನಾದವನು ; ಅಲ್ಪ : ಘಡ ಹೊಱಸೆ ಕೇಳಿಲವೊ ರಾವಣ . . . ನಿನಗಾಂ ಬೊಮ್ಮರಕ್ಕಸನು (ಕೌಶಕಾ. ೧೧-೯೮): ಹೊಱಸೆ ಬೇಗ್ಯಿಯ ಗುಂಡನೆತ್ತಿದ ಗರುವ ಬೇಡವು ನಾನು ಶಿವಿದರೆ ಅಱಿಸಿ ಯೆಲುಗಳನಾಯ್ದು ಸುಡುವಂತಹುದು ನಿನ್ನವರು (ಕೌಶಕಾ. ೨೨-೦೬).

[ದೇ. ತಮಿ. ಪುಱ, ಪುಱಾ, ಪುಱವ, ಪುಱವು; ಮಲ. ಪಿಱಾವು, ಪ್ರಾವು; ತುಳು. ಪುರ; ಗೊಂಡಿ. ಪುರಾಲ್; ಕೊಂಡ. ಪೊರ್ರ್ಯಾರ್ಜು; ಕುರುಖ್. ಪುರಾ; ಮಾಲ್ತೊ. ಪುರೆ]

**ಪೊಱಸುಗೆ** (ನಾ). ( ? ) : ಕಿಱುನೆಲ್ಲಿಯಾಪ್ಪು ನೆಣಮುಲಿ ತೊಱೆನಾಯ್ ಸತ್ತೆಡೆಯು ಮಣ್ ಶುಕಾಸ್ಯಂ ಮಾದ್ಯಂ ಮುಱುದೊಂಡೆಯೆಂಬಿವಂ ಪೆಸರ ಱಿಯದ ಬಾಹುಗಳೊಳೊರಸೆ ಪೊಱಸ(ಸು)ಗೆ ಪೋಕುಂ (ಶೋಕೋಕ. ೯-೨೦೨). [ ? ]

**ಪೊಱಸುತ್ತು** (ಕ್ರಿ). ಹೊರಭಾಗದಿಂದ ಆವರಿಸು ; ಹೊರಗಿನಿಂದ ಸುತ್ತುಗಟ್ಟು : ಉರಿವ ಭಾಸ್ಕರಕೋಟಿತೇಜದೆ ಪೊಱಸುತ್ತಿ ಪರಿವ ಚಕ್ರವ ನಾತಿಗೆಯ್ದು ತುರಿಯದಿಂದೊಳಪೊಕ್ಕು ಕಾಮದೇವನ ಮಗನಿರುವ ಶಯ್ಯಾಗೃಹದೆಡೆಗೆ (ಕೋಹಕ. ೩೦-೧೩).

[ ಪೊಱ (< ಪೊಱಗು)+ಸುತ್ತು$_{1}$ ]

**ಪೊಱಸೂಸು, ಹೊರಸೂಸು, ಹೊಱಸೂಸು** (ಕ್ರಿ). ೧. ಹೊರಕ್ಕೆ ತುಳುಕು ; ಹೊರಚೆಲ್ಲು : ಹಾಲ ಹಳ್ಳಮೋಲಗದ ನಡುವೆ ಮಡು ಗಟ್ಟಿ ಪರಿದು ಪೊಱಸೂಸೆ ಕಂಡು ಬಿಜ್ಜಳಂ ಕೌತುಕಂಗೊಂಡು (ಬಸಪು. ೧೦-೬೬); ಬಾಹುಮೂಲದೆಡೆಗೆ ದಟ್ಟಿ ಪರಿಪರಿದು ಮೊಗಮೊಗ್ಗುಡಿಸೆ ಸರಿಸಕಳವಟ್ಟ ಜಲಧಾರೆ ಪೊಱಸೂಸೆ ಬಯಲಿಗೆ ಬಾಯ ಬಿಟ್ಟು ನಗಿಸುವರಲ್ಲಿ ತೃಷೆಯಿಂದೆ ಬಂದ ಪಥಿಕರ್ಕಳಾ ಬಾಲೆಯರನು (ಕೃರಾಕಾ. ೩-೯). ೨. ಹರಡು; ವ್ಯಾಪಿಸು : ಚಿತ್ರದೊಳ್ ಪಡೆದಮೃತಾಂಶುರೋಟಿ ಪೊಱ ಸೂಸಿ ಪೊಗಟ್ತಿಗೆ ವಂದ ಚಂದವುಂ ಪಡೆದುದು (ಶಶಂ. ೪-೬). ೩. ವ್ಯಕ್ತವಾಗು ; ಪ್ರಕಟವಾಗು ; ಕಾಣಿಸಿಕೊಳ್ಳು: ವಿಲಾಸವ್ಯಾಯ್ದೆಱೆ ನಗೆ ಪೊಱಸೂಸದ ಕಣ್ . . . ಮಾಸರಮಹಾಯ್ತಾವರೊಳಡರ್ದ ಕೊಡಗೂಸುತನಂ (ಚಂದ್ರಪು. ೮-೯೯). ೪. ಪ್ರಕಟಗೊಳಿಸು ; ವ್ಯಕ್ತಪಡಿಸು : ಬಗೆ ಪೊಱಸೂಸದೆ ಕೈಯಂ ಮುಗಿದೊಲವಿಂ ನೋಡಿ ಪೆರ್ಚುತಂ ತಿರಿಸುಳಿಯಂ ಪೊಗಟುತ್ತ (ಕವ್ಯಾಸಾ. ೦೬೨). **ಹೊರಸೂಸು** : ೧. ಕನಕದಾಸರ ಭಕ್ತಿ ತರಂಗಿಣಿ ಅವರ ಕೀರ್ತನೆಗಳಲ್ಲಿ ಹೊರಸೂಸಿ ಹರಿದಿದ್ದಾಳೆ (ಕಪಂ. ೦೬೬). ೨. ಅವು ತಮ್ಮ ಬೆಳಕನ್ನು ಎಲ್ಲಾ ಕಡೆಗಳಲ್ಲೂ ಹೊರಸೂಸುತ್ತಿರುವುವು (ಅಕಾಶ. ೯೯) ; ಸೌಂದರ್ಯ ಸೌರಭ್ಯಗಳನ್ನು ಅನಂತಕಾಲ ದಿಕ್ಕುದಿಕ್ಕಿಗೆ ಹೊರಸೂಸಬೇಕು (ಕಾಗಕ. ೬). ೪. ಹರಿದಾಸರು ಮೆತ್ತನೆಯ ಧ್ವನಿಯಿಂದ ಮಮತೆಯನ್ನು ಹೊರಸೂಸುತ್ತಾ ಕರೆದರು (ಕಾಪೀಂ. ೨೦) ; ಮಾತಿನಿಂದ ಹೊರಬಂದ ನಿಟ್ಟುಸಿರು ಅವನ ಹೃದಯದಲ್ಲಾಗುತ್ತಿದ್ದ ಅಸಹ್ಯವೇದನೆಯನ್ನು ಹೊರಸೂಸುತ್ತಿತ್ತು (ಜುರೀ. ೦೬೦). **ಹೊಱಸೂಸು** : ೧. ಗಂಗೆಯಂ ಹೊತ್ತ ಹರನೊಳ್ ಪುರುಡಿಸಿ ಶಿರೋಮಧ್ಯದೊಳಿರಿಸಿದ ಕುಂತಳ ಕಾಳಿಂದೀನದಿ ಹೊಱಸೂಸುಗುಮೆಂಬಂತೆ (ಬಸಕ. ೨-೨೦); ಮಾಸಿದ ಸೀರೆ ಮಾಸಿಯ ತಿಲಕದ ಹೊಱಸೂಸುವ ಬಾಯ ಜೊಲ್ಲಿಂದ . . . ಮುದಿವೇಶಿಯ್ರ ರೆಡೆಯಾಡುತಿಹರು (ಕಾಪಶ. ೬-೧೯೦). ೨. ಅಸುರದ ಕಬ್ಬೊಗೆಯ ಕವಚದ ಕೇಸುರಿಗಳೊಳಬಿದ್ದುದರಿ ಹೊಱಸೂಸಿ ಹಿಡಿದವು ಹಾವುಗಳ ಬಲು ಹೊವಱ ಹೊರಳಿಗಳ (ಕುವ್ಯಾಆ. ೨೦-೬೦). ೩. ತ್ರಿವಳಿ ಮೃಗರೆಯ ಹೊಕ್ಕುಳ ಗುಣ್ಣು ಹೊಱಸೂಸೆ (ಬಸಕ. ೦-೦೦೬). ೫. ಹರಡುವಂತೆ ಮಾಡು ; ವ್ಯಾಪ್ತಗೊಳಿಸು : ಸಣ್ಣ ನನೆಯೊಳಗಣ ಪರಿಮಳವ ಹೊಱಸೂಸಿ ಇಲ್ಲಂಗಳುಹಿಸಬಲ್ಲುದೇ ವಾಯು (ದೇಂಶ. ೬೩-೦೨೮) .

[ಪೊಱ (< ಪೊಱಗು) + ಸೂಸು$_{1}$]

**ಪೊಱೆಗೆ, ಹೊರಿಗೆ, ಹೊಱೆಗೆ$_{1}$** (ನಾ). ೧. ತಲೆಯ ಮೇಲೆ ಭಾರವನ್ನು ಹೊತ್ತುಕೊಳ್ಳುವಿಕೆ. ೨. ಭಾರ ; ತಲೆಹೊರೆ. ೩. ಹೊಣೆಗಾರಿಕೆ ; ಬಾಧ್ಯತೆ ; ಜವಾಬ್ದಾರಿ : ಮುಂದೆ ನಮಗುರ್ವ ಕೆಲಸದ ಪೊಱೆಗೆಯುಂಟು ನೀನಿಂದುಹಾಸನಸಿಲ್ಲಿಗೀಗಳೊಡಗೊಂಡು ಬಾ (ಕೃರಾಕಾ. ೩೦-೯೨). ೪. ಕೆಲಸ ; ಕಾರ್ಯ ; ವ್ಯವಹಾರ : (೬). ೫. ಅಧಿಕವಾದ ಪ್ರಯತ್ನ; ಪ್ರಯಾಸ: ಮುಱಿವುದಸುರರ ಸೇನೆಯೊರ್ಮೆ ದಿವಿಜರ ದಳಂ ಪೆಱದೆಗೆವುದೊರ್ಮೆ ಪಡಿಬಲಿಸಿ ನೂಂಕುವುದೊರ್ಮೆ ಪೊಱೆಗೆಯಿಂ (ಶಂಪು. ೨೬-೦೯) . **ಹೊರಿಗೆ** : ೧. "ವಹಃ, ವಾಹಃ, ವಹನಂ . . . ಊಢವ್ಯಂ—ಈ ೯ ಹೊರಿಗೆ " (ಶಾಕೃ. ೦೬೦). ೨. ಯಾ ಹೊನ್ನಿಗೆಯೆರಡು ಬೆಳೆಯಲು ಸಹ ವರ್ಷ ೧ಕ್ಕೆ ಐಹ ಅಕ್ಕಿ ಅಂಗಡಿಯ ಹೊರಿಗೆಯ ಐಳ್ಳ ಅಯ್ವತ್ತರ ಲೆಕ್ಕದ ಅಕ್ಕಿ ಮಾಡೆ ೨ (ಎಇ. XX, ೯೪ ೯೪ ; 1556); ಹೊಸ್ಬರಿಗರಿವ ಹೊರಿಗೆಯನು ಬಿಡದೆತ್ತಿಕೊಂಡಾ ಪಸ್ಸುಗಳಿಗಂ . . . ಸಂಭೇದವೆಂಬುದು ತೋರದಂತಹುದು (ಐವೀಕ. ೪-೨೪). ೩. ಪರಿಜನ ಸಾಮಂತ ತಳತಂತ್ರ ಮಾರ್ಬಲದ ಹೊರಿಗೆ ನಿನ್ನದು (ಕುಕ್ಕಾಂಗ. ೯-೪) ; ಹೊರಿಗೆಯನು ನೋಡುವರೆ ರಾಯರಿಗೆರಜನೆಂಬೀ ಬಿರುದು ದುರ್ಗದ ಪಾರೆಯ ಕಾಳಗವೇಕೆ ಗಂಡ ಸೂರ್ಪನೆಂಬವಗೆ (ಕೂಶ್ಕಾಕ. ೨೪೬). ೫. ಎಡಬಲದೊಳೊಬ್ಬರಂ ನಿಲಗೊಡದ ಹೊರಿಗೆಯಿಂದೀರ್ವರೆಬ್ಬಾಡಿದರು ಖಾತಿಯಿಂದ (ಕುರಂಗ. ೬೨-೦೯). **ಹೊಱೆಗೆ$_{1}$** : ೨. ಹಱಿಯ ಹೊಯ್ಲನಲಮಾರಗಿರಿ ತಱತಱಿಸೆ ತೊಳೆದರಸ್ತ್ರ ಶಸ್ತ್ರದ ಹೊಱೆಗೆಯಲಿ ಹೂಳಿದರು ಹೊಗಿಸಿದರಾನೆಕುದುರೆಗಳ (ಕೂಕಾ. ೩-೬-೬) ; ಹೊಱೆಗೆಯ ಶಬದಿನದ್ಯುತಕ್ಷಮಾತ್ನದಿ ಶಾಂತ ಮೆಱೆಯ (ಕಜ್ಞಾಕ ೩-೯೨). ೩. ಹೊಱೆಗೆಯಸಮಷ್ಟೀಯಮಲ್ಲಿಯೆ ಕಾಱುಹತಂಗಿರಲಱಾವ ತಾ ತನ್ನಱವು ಮಱಿದಱಿದೊಗನು ಶಿವಪಗ್ನತೆಯೊಳಿರ್ದಹನೊ (ಬಸಪು. ೩೩-೨೨); ಕದನದ ಹೊಱೆಗ ದೊರೆಗಳ ಮೇಲೆ ಬಿದ್ದುದು (ಕೌಶಕಾ. ೨೦-೦೩); ಮಱುಗಿ ಮಾಡುವುದೇನು ಮುಂದಣ ತೆಱನ ಕಾಬುದೆ ಪೌರುಷಾಂಗದ ಹೊಱೆಗೆ (ಕೂಕಾ. ೬-೨೯-೪೩). ೫. ಹೊಱೆಗೆಯಂ ಹೊಱೆಯ ಹೊತ್ತುಂ ನಡೆದು ಬೇಸತ್ತು (ಬಿಕಂ. ೩೬-೦೬೯) : ಹಱಿಯದರ್ಜುನ ನಿಂದ ಭೀಮನ ನೆಱವಣಿಗೆ ನೋಯಿಸದು ನಕುಲನ ಹೊಱೆಗೆ

ಯೊದಗದು ಸೈರಿಸದು ಸಹದೇವನಾಟೋಪ ಇಱಿವಡಾ ಮಾದ್ರೇಶನನು (ಶಜಾ.ಶ. ೦-೫೦). ೭. ರೀತಿ ; ಕ್ರಮಂ ; ವಿಧಾನ : ಮಲೆತರಸನಂಗಿಸಿ ಕೊಂಬ ಬಲುಮಂತ್ರದ ಹೊಱಿಗೆಗಳನಱಿದು ಭೂವಲಯವನಾಳು ನೀನು (ಜಜೋಹಾಂ. ೨೦-೪೩) ; ಮುಂದಣ ರಾಜಕಾರ್ಯಕ್ಕೆ ಹೊಱಿಗೆ ಯಾವುದು ಪೇಳೆಂ (ಜಜು. ೦೫-೭). ೭. ಹೆಚ್ಚಳ ; ಆಧಿಕ್ಯ ; ಅತಿಶಯ : ಹೊಱಿಸುವಡೆ ದುಷ್ಕೀರ್ತಿ ನಮ್ಮಲಿ ಹೊಱಿಗೆಯಾಯಿತು ನಾಥಿಯಿಂ ಕೆಳೆಗೆಱಿಗುವುದು ಗದೆಯಿಂದ ಸಲ್ಲದು ಶಸ್ತ್ರವಿದ್ಯೆಯಲಿ (ಶಜಾ.ಗ. ೧೦-೩೯); ಮುಱಿದುದಗ್ಗದ ಮಹಿಮೆ ಶೋಕದ ಹೊಱಿಗೆಯಲಿ ಕಾತರಿಸಿ ನಡೆವನು ನೃಪತಿ (ಶಳಕ. ೩-೦೯). ೮. ಫಲ ; ಪರಿಣಾಮ : ಕರೆದು ನುಡಿ ಪಂಬರದ ವಾಣಿಯ ಹೊಱಿಗೆಯನು ನಿಶ್ಚೈಸಿ (ಕೌಶಾ. ೨೯-೨೩); ಇದಱ ಹೊಱಿಗೆಯನಱಿತು ಭೂವರು ವಧಿಸುವರು ಸತ್ಯವರನಲ್ಲದಡದೆ ಪರಿ ಹಾರಾರ್ಥವನು ನಿಶ್ಚಯಿಂದ ನಡಿಸಲಿಕೆ (ಕುಂಠ. ೬-೨೯). ೯. ಶೀಕ್ಷ್ಣವಾದುದು ; ಕಠೋರವಾದುದು ; ಕಠಿನವಾದುದು : ವಾಂಜಿನ ನೆರವಿಯಂತೆಳವವು ಹೊಱಿಗೆಯ ತವಕಘವವರ (ಜಜು. ೨೦-೦೫೦). ೧೦. ನಂಬಿಕೆ ; ವಿಶ್ವಾಸ : ಆಱಿತು ಜಾನಕಿಯಿರ್ದ ಸೆಱೆ ವನಯುವನದೋರ್ವರಜಾಯದಂದದೊಳಾನು ಪೊಕ್ಕು ಮಱೆಯೇನು ನೋಡಿ ಬಂದವೆನೆಂದವನೊಳು ಹೊಱಿಗೆಯ ಮಾತನಾಡಿದನು (ಜಾ.ರಾ. ೦೪-೮೪). ೧೧. ಕ್ಲೇಶ ; ಸಂಕಟ : ನರಕಗಳ ಪರಿವಿಡಿಯ ನೋಡುತಂ ಸಾನಂದ ಬರುತಿರಲು ನುಡಿದ ಯಮನೊಂದು ಮಾತ ನರರೊಳತ್ಯಾಧಮಂ ಪಾಪಿಷ್ಟ ಜೀವಿಗಳು ಹೊಱಿಗೆಯಿಂ ಮುಕ್ತಿಯಹರಾವ ತೆಱದಿಂದೆನಲು (ಅಜಾ. ೧೦-೪೩). ೧೨. ಅಂಚು ; ಎಲ್ಲೆ; ತುದಿ : ಚಂಬಕ ಪಟಹ ಮವುರಿ ಕೊಂಬು ಕೋಳಲಿನಾಡಂಬರ ಬುರುಗು ನಫಿರಿಯ ಇಂಬಿನ ರವ ಪೆಂಟುದಿಕ್ಕಿನ ಹೊಱಿಗೆಯ ಮುಂಬರಿದೊಡನೆ ಪರಿದುದು (ಕೆಂಸ. ೦೦-೨೪). ೧೩. (?): ನಾಯಿಂದರಿಗೆ ತೆಱಿಗೆ ಹೊಱಿಗೆ ಕಾಣಿಕೆ ಕಪ್ಪ ಬಿಟ್ಟಿ ಬಿರಾಡ ಆವುದೂ ಯಿಲ್ಲಯೆಂದು ಕೊಟ್ಟ ನಾಯಿಂದರ ಶಾಸನ (ಶ್ರೀಶಾ. IX-ii, ೬೨೫-೦೩ ; 1647). [< ಪೊಱು]

**ಪೊಱಿಸು**, ಪೊರಿಸು, ಹೊರಿಸು$_1$, ಹೊಱಿಸು (ಕ್ರಿ). ೧. ಭಾರವನ್ನು ಹೊರುವಂತೆ ಮಾಡು ; ಭಾರವನ್ನು ಹೇರು : ಬಲಭದ್ರಂ ದಾಸಿ ಯನೆಱರ್ಬಳಂ ನಿತಾಂತಕ್ರಿಯಮಾಗಲ್ ಕೊಂಡು ಪೊಱಿಸಿದಂ ಬಲ್ಲೊಱೆ ಯಂ (ಕಶು. ೦೨-೦೪೪) ; ಒಸ್ತರಿವ ದನಿಗೇಳುತಾ ಪುರುಷೋತ್ತಮನು ನಂದನು ಬೆರಸಿ ಬರುತೊತ್ತಿನಲಿ ಮಡಿವಳನು ಪೊಱಿಸಿದ ಮಡಿಗಳನು ಕಂಡ (ಶಾ.ಕ. ೨೨-೩೦). **ಪೊರಿಸು** : ೨. (ಅಪವಾದ ಮೊದಲಾದುವನ್ನು) ಹೇರು ; ಆರೋಪಿಸು : ನೀನು ವರನ ತಂದೆಪಕೀರ್ತಿ ಪೊರಿಸಿದೆಲೆ ಮಾಗಲೇ (ಕಂಕ. ೩೨-೧). **ಹೊರಿಸು$_1$** : ೧. ಋಷಿಯು . . . ಮಣಿನಿಕರವಂ ಶಿಷ್ಯನ ಕೈಯೊಳು ಹೊರಿಸಿಕೊಂಡು (ಶೌಗಂ. ೩೦೨-೩) ; ಗೂಡೆಗಳನ್ನು . . . ಕೆಲವರಿಗೆ ತಿಮ್ಮನು ಹೊರಿಸಿಕೊಟ್ಟನು (ಕಂಗಾಳ. ೮೦). ೨. ಇಲ್ಲದ ತಪ್ಪುಗಳನ್ನು ಮೇಲೆ ಹೊರಿಸಿ ಹೇಳುವುದು (ಸಿದ್ಧಾಂತ. ೩೨) ; ಇಲ್ಲದ ಸಲ್ಲದ ಆರೋಪವನ್ನೆಲ್ಲಾ ಅವರ ಮೇಲೆ ಹೊರಿಸುವುದು (ಅಂಹೂ. ೧೩) ; ತಪ್ಪು ಹೊರಿಸಿದರೆ ಒಪ್ಪುವವನ್ಯಾರು ? (ಗಾದೆ) . **ಹೊಱಿಸು** : ೧. ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನವ ಹೊಱಿಯ ಹೊಱಿಸದಿರಯ್ಯಾ (ಬಸವ. ೩೯೩) ; ಹೊಲಲ ಜನದ ಸಮಸ್ತಭುವನಾವಳಿಯ ಭರಭಾರವನು ಹೊಱಿಸಿದನಗ್ನಿದೇವರಿಗೆ (ಕೂರಶಾ. ೩-೬-೩೩) ; ಸೂಳೆಯಿಂದದಿ ಸಡಿವವಳ ತಲೆ ಬೋಳಿಸಿ ಕಸಹೆಡಿಗೆ ಹೊಱಿಸಬೇಕವಳ (ಪುರಂದ. ೨-೦೪-೨). ೨. ಭಂಗವಿಲ್ಲದೆ ಬದ್ಧ ನಿಮ್ಮಯ್ಯಂಗೆ ಹಳಿವನು ಹೊಱಿಸದಿಹ ಮನದಂಗವಣೆ ಯುಂಟಾಗೆ ಮೆಚ್ಚುವೆನು (ಕಜಾ.ದ್ರೋ. ೭೬-೦೪) ; ನಿಮಗೂಣಯವ ಹೊಱಿಸುವನೊ ಕೊಱಿತೆಯ ಹಾಯ್ಸುವನೊ ತನಗೆ (ಕೂರಶಾ. ೩-೩ ೦೨೦). ೩. ನಿರ್ವಹಿಸುವಂತೆ ಮಾಡು ; ವಹಿಸು : ಅರಸಂ ತನ್ನ ಮಗನಲ್ಲಿ ಯಾದೊಡಂ ತನ್ನ ಕುಲದಲ್ಲಿಯಾದೊಡಂ ಆವನೊರ್ವನ ಮೇಲೆ ರಾಜ್ಯ ಭಾರವಂ ಹೊಱಿಸಿಯಹಂ ಕಾನವನೈಶ್ವರ್ಯವನಪಹರಿಸಬೇಕಾಗಿ ಮಾಡಿ ದವಂ (ಕಂಕಕಂ. ೬೪-೧೨). [ಪೊಱು + — ಇಸು]

**ಪೊಱು**, ಪೊರು, ಹೊರು, ಹೊಱು (ಕ್ರಿ). ಪೊತ್ತ$_1$, ಹೊತ್ತ(ಭೂತಕೃ). ಪೊತ್ತು$_1$, ಹೊತ್ತು$_1$ (ಭೂತನ್ಯೂ). ೧. ಭಾರವಾದ ವಸ್ತುವನ್ನು ತಲೆಯ ಮೇಲೆ ಅಥವಾ ಹೆಗಲಿನ ಮೇಲೆ ಇಟ್ಟುಕೊಳ್ಳು.—ಹೊತ್ತು ಕೊಳ್ಳು : "ಪೊಱು — ಶಿರೋಧಾರಣೇ" (ಶಬ್ದಾ), ಬಲದೇವನಂತೆ ಪೆಣನಂ ಪೊತ್ತು ತೊೞಲ್ವ ಕ್ಷೇತ್ರಪಾಲರಿಂ (ಕಾವ್ಯಾ. ೩೨೯ ಕಾರ್ವ್ಯ) ; ಒಡನಂದುಯ್ವುರುಮಂ ನಿಜಾಂಸಯುಗದೊಳ್ ಪೊತ್ತಿತ್ತಿ ತಳ್ಪೊಳ್ದು ಸೀಱುದುವಿಂದುದ್ಬುತ್ತರದಾ ಹಿಡಿಂಬವನಮಂ ಪೊಕ್ಕಂ ಮರುನ್ನಂದನಂ (ಕಂಶಕಾ. ೩-೯) ; ದಿಟ್ಟಂಗಳಂ ಕಿತ್ತು ಪೊತ್ತಿವರನಿಟ್ಟು ಬೆನ್ನಟ್ಟಿದಪೆವು (ಕಂಶು. ೨೦-೩೩). ೨. ತಳೆ; ಧರಿಸು : "ಪೊತ್ತನೆನುತಂ ಅಂತನೆನೆ ಧರಿಸಿದರ್ಥಂ" (ಶಬ್ದ. ೦೩೪); ಸತ್ತ ಪೊತ್ತ ಕಣ್ಣಱಿಯದ ಬೆಳ್ಳನಲ್ಲೆ ನಱಿದಂ ಧವಳಾಕ್ಷಿಯ ನೋಟದಂದದವಂ (ಕಂಶಕಾ. ೪-೬೬) ; ಪೊತ್ತ ಪೂತಳಿರ್ ಬಾಡಿ ಕಱಂಗಿ ಚುಯ್ಯನುತುಮಿರ್ದುವು (ಕಶ್ಯಾ. ೩೦೪) ; ಎಳೆ ವೆಱೆಯ ಪೊತ್ತನ ಕುಮಾರನಂ ತಿನ್ನೆನುತ್ತುರಗಾಸ್ತ್ರದಿಂದೆಚ್ಚನು (ಕಂಶು. ೪೩-೨೨). ೩. ಪಡೆ ; ಹೊಂದು ; ತಾಳು : ಶಿಲೆಯೊಳ್ ತಾಟಿಸಿ ತನ್ನಯ ತಲೆಯಂ ಜರ್ಜರಿತಮಸ್ತಕಂ ಮಡಿದತ್ಯಾಕುಲನೀ ಪರಾಹದೇಹ ಮಾನಲಸದೆ ಪೊತ್ತಿರ್ದು ನಮೆದಪಂ ಧರಣಿಪತೀ (ಅಂಶು. ೩-೦೭); ಕರೆಯಂ ನೆರಮಂ ಪಂಶು ಕಱಿಯಂ ಪೊತ್ತಪ್ಪುದೆಂದು ಸಂಗರಮುಖದೊಳ್ (ಜಾಜ. ೧೪ ಕ್ರದೋ). ೪. ಕೈಗೊಳ್ಳು; ಪರಿಗ್ರಹಿಸು : ಭವವಾರಾಶಿ ನಿಮಗ್ನರಂ ದಯೆ ದಮಂ ದಾನಂ ತಪಂ ಶೀಲಮೆಂಬಿವೆ ಮೆಯ್ಯಾಗಿರೆ ಸಂದ ಧರ್ಮಮೆ ಮಲಂ ಪೊತ್ತಿತ್ತುಗುಂ (ಅಂಶು. ೨ ೬): ಆರೇನಂ ಪೇಳ್ದೊಡಂ ಕೈಮುಗಿದು ಸುಗಿದು ಪೆರ್ಬಿಟ್ಟಿಯುಂ [ಶಾಶಂ. ಕೈಂಕರ್ಯಮಂ] ಪೊತ್ತು ಸಂಸಾರಾರಂಭಂಗೆಯ್ದು (ಕಶ್ಯಕ. ೦೬). ೫. ಸಹಿಸು ; ಅನುಭವಿಸು : ಇನಿವಿರಿದು ಪರಾಭವಂ ಪ್ರಾಕೃತಪುರುಷಂಗಂ ಕಾಪುರುಷಂಗಂ ಪೊತ್ತು ನಿಲ್ವುದರಿದು (ಶಾಂತಿಪು. ೩-೬೬ ಪ). ೬. ವಹಿಸಿಕೊಳ್ಳು : ಸಿಂಗಪೊತ್ತರ ಕಲಿ ನೊಟವ್ವುದಿ ಅರಸರಾ ಪೆರ್ಮನಡಿಗಳ್ಬೆಸಗೆ ಬೆಸಂಬೆತ್ತು ಪೊತ್ತನ್ನು ಪೇಗೆಟ್ಟನ್ನು ಕಾದಿದೊ (ಎಕ. XI, ಶಳ್ಳಕ. ೬-೨ ; ಸು. ೪೧೦ ?): ತಂಗೆವಿರ ಭರಭಾರಕ್ಕಮಡಸಿದ ಬಡತನಕ್ಕಮರ್ಗಮಾಳ್ಕದೆ ನೀಂ ಪೊತ್ತು ನಿತ್ತರಿ ಸುತ್ತುಮಿರ (ಶಾಂತಿಪು. ೯-೬೬ ಪ). **ಪೊರು** : ೧. ದೊಡ್ಡನೊಳಬಗೆಗುದುರೆ ನಳ್ಕೆಹೇರಂ ಪೊತ್ತು ಗೊಡ್ಡದಿಂದಳ್ಕಲದಿ ನಡೆಯುಡಿಯುತಿತ್ತು (ಕಾಂಶಕ. ೩೦-೬೪) ; ಡೆಂಕಣಿಯ ಸಾಲ್ಗಳಂ ಪೊತ್ತು ನತ್ತಿಯೊಳಸಿವ ಕೊತ್ತಳಗಳಿಂದೆ (ಶಶ್ರಾಂಗ. ೩೭-೩೫೭). ೨. ಪರ್ವತೋಘಂ ರಮ್ಯಸುರಚಾಪಮಂ ಪೊತ್ತು ನಭದೊಳ್ ನಡೆಯುವಂತೆ ! (ಶಶ್ರಾಂಗ. ೩೩_೦೪೯೩). ೪. ಪಡಿನೆಲಂ ಪೊತ್ತು ತಾಂ ಧನ್ಯನೆಂದಾ ಕೊಳು ಜುಮ್ಮೆಂದು ಪುಳಕಿಸುವ ಮಾಳ್ಕೆ ಶೀಪಿಸಿದಪ್ಪು (ಶಶ್ರಾಂಗ. ೪೯-೧೧೩) ; ಒಯ್ಯ ಕೇಡಂ ಪೊತ್ತು ಪೆಣ್ ಶರಳ್ಕೆಯು ತೆರಳ (ಕಾಂಶಕ. ೦೪೦-೨೬೪). ೭. ಸತ್ತವರ ಮೇಲೊಲ್ಮೆ ಯಿಂದೊಡೇಂ ಬಾಳ್ದವರ್ ಪೊತ್ತು ಚೆಲ್ವಿನೊಳಿರ ಡೆಗೆಯ್ದು ಮುಗಿಸಿ ಮತ್ತವರ ಬರ್ದಿಲರ ನಾಡಿಗೆನೆ ಕಳುಹುವುದು (ಕಾಂಶಕ. ೦೬೦-೪೦೦). **ಹೊರು** : ೧. ವಿನೀತಃ, ಸಾಧುವಾಹೀ — ಎಳಿವುಲಾಪ್ರಸ ಕುದುರೆಗಳಿಗೂ ಚೆನ್ನಾಗಿ ಹೊರಲುಳ್ಳ ಕುದುರೆಗಳಿಗೂ ಹೆಸರುಗಳು (ಸಿದ್ಧಾಂತ. ೨೯೯); ತನ್ನ ಬೆನ್ನಿನಲಿ ತನ್ನಳ್ಕರೆಯ ಹೊರೆಯ ಹೊತ್ತ ಹೆಮ್ಮೆಗೆ ಹಿಗ್ಗಿ (ಶಶ್ರಾಂಗ. ೦೭-೬೩೩); ಹೊರಬಲ್ಲವನಿಗೆ ಆಳು ಬೇಡ, ಆಡಬಲ್ಲವನಿಗೆ ಹೆಂಡತಿಬೇಡ (ಗಾದೆ). ೫. ಹೊರಬೇಕ್ಕೆ ಕಷ್ಟವ

ಸಹಿಸುವ ತನುವು; ಪರದುಃಖಕೆ ಕೂಗುವ ಮನವು (ಕಂಪ್ರ. ೭-೩). ೭. (ವಕ್ಷ) ವಹಿಸು : ಏನೇನು ಆಗಬೇಕೆಂದಿದೆಯೋ ಅದು ಹಾಗೇ ಆಗಬೇಕಾದದ್ದು ವಿಧಿನಿಯಮ ಎಂಬುದು ಅವರ ಲೆಕ್ಕ. ಅದರಿಂದ ಗಣಪತಿಯನ್ನು ಹೊತ್ತು ಮತ್ತೆ ಹೆಂಡತಿಯಲ್ಲಿ ಅವರು ಮಾತು ಎತ್ತಲಿಲ್ಲ (ಹೊಸಕ್ಷ. ೩೦).

**ಹೊಱು** : ೧. ಜಂಗಮವಮನ್ನವರೆನ್ನವರೆನ್ನವರೆಂಬವರ ಕೆರಹ ಹೊತ್ತಿರ್ಪೆನ್ನನು (ಬಸವ. ೩೬೨) ; ಪೃಥಿವಿ ನೆಗ್ಗಿತು ಹೊತ್ತ ಕಮಠನ ವ್ಯಥೆಯನಾರು ಸುರುವರು (ಕುಮಾ್ಯ್ರ. ೨-೩೦) ; ಅಗಣಿತಲೋಕಾದಿ ಲೋಕಗಳುದರದಿ ಸೊಗಯಿಪ ನಾರಾಯಣನ ಹೆಗಲೊಳು ಹೊತ್ತು ಖೇಚರದೆ ಸಂಚರಿಸುವ ಖಗರಾಜ ಕರುಣಿಪುದೆಮಗೆ (ಪ್ರೋಹಶ. ೦-೧೩). ೨. ಕಕ್ಷಪುಟದಲ್ಲಿ ಕತ್ತುರಿಯ ಹೊಗರೆತ್ತುತಿರೆ ಅಕ್ಷಿಗಳು ಕರುಣಾರಸವಂ ಹೊತ್ತು ಬಳಲುತಿರೆ (ಬಸವ ೦-೦೦೯); ಮಹಾಪ್ರಮಥೋತ್ತಮಪುರಾತನಗಣಾಂಘ್ರಿಗಳಂ ಹೃದಯದಲ್ಲಿ ಹೊತ್ತು (ಬಸಪು. ೫೭-೩೦) ; ಹೊತ್ತ ಜೋಹದ ಜಾಳಿ ಲೇಸಾಯಿತ್ತು ನಿನಗುಪದೇಶವುಂತ್ರವನಿತ್ತವನ ವರ್ತನವದೆಂತುಟೊ (ಕೊರಂಡ. ೯-೯-೯೦). ೩. ತ್ರಿಣಯನನ ಬೆಸನನಾಂ ಪಡೆದೆನೆಂದುಬ್ಬುರ್ತುಂ ಪರವಶೀಭೂತನಾಗುತ್ತೆ ಮಜಹಂ ಹೊತ್ತು ಹರುಷದಿಂ ದೇವಿಯರ್ಗಿತ್ತು (ಬಸರ. ೦-೩೯) ; ಹರಿಹರ ನೆನಿಪ ಪೆಸರ ಹೊತ್ತ ಹರನಂತಕಮದಹರಂ (ಬಸಪು. ೫೯-೯೩) ; ಎತ್ತಿದೆನು ನಾನಾಶರೀರವ ಹೊತ್ತು ಹೊತ್ತಳಲಿದೆನು ಸಲೆ ಬೇಸತ್ತು ನಿನ್ನಯ ಪದವ ಕಾಣದೆ ತೊಳಲಿ ಬಳಲಿದೆನು (ಹಂಸಾ. ೬೦). ೫. ಧನು ಮುಱಿಯೆ ದಿಟ್ಟಾಯ್ಲುತನವೀತನಲಿ ಸಾಕಿನ್ನೆನುತ ಗುರುನಂದನನು ಮುರಿದನು ಹೊಗರು ಮೋಱೆಯ ಹೊತ್ತ ದುಗುಡದಲಿ (ಕುಮಾ್ಯ. ೦೯-೩೦); ಕುಂದು ಕೊಱತೆಯ ಹೊಱುವ ಹೆಣ್ಣೆ ನೀನು (ಕಂಪ್ರ. ೬-೦೬೩). ೮. ಭಾರವಾಗಿರು ; ಹೊರೆಯಾಗಿರು : ಈ ನಾಲಗೆಯ ಸಾಲವನೀಗ ಕೈಯಲಿ ತಿದ್ದಿಕೊಡು ವರೆ ಹೋಗದೇ ಹೊತ್ತಿಹವೆ ಹೇಳೆನುತಚ್ಚನಾ ಭೀಮ (ಕುಮಾ್ಯ. ೨-೦೯). ೯. ಹೇರಿಕೊಳ್ಳು ; ಆರೋಪಿತಗೊಳ್ಳು : ಅದಱಿಂದಾದ ತಪ್ಪನದೆಂತು ಹೊಱುವೆಸು (ಬಸಪು. ೫೯-೩೨) ; ಮನ್ನಣೆಯ ಬಿಲ್ಲ ಗುರುವಿನ ಬಿಂಕ ಬಯಲಾಯ್ತಿಲ್ಲಿಯೆಂಬಪಕೀರ್ತಿ ಹೆಸಱುವುದು ಬಲ್ಲೆನು (ಕುಮಾ್ಯ್ರ. ೦೩-೦೦). ೧೦. ಗರ್ಭದಲ್ಲಿ ಧರಿಸು : ಸತ್ತವಂಗಳಲೇಕೆ ತನ್ನನು ಹೊತ್ತವರು ಹೆತ್ತವರುಗಳು ತಾ ಸತ್ತುಹೋಗುವರಲ್ಲದುಳಿವರೆ (ಹಂಸಾ. ೯೨) ; ಒಂಭತ್ತು ತಿಂಗಳು ಹೊತ್ತ ಮಾತೃಕೆಯು ಪಾದಾಂಭೋರುಹಕಲರ್ಗಱಿದು (ಮೋಹಕ. ೨೯-೯೦). ೧೧. (ಋಣವನ್ನು) ಹೊಂದು : ಮಾಱಿದ ತಲೆಯ ಭಂಡವ ಹೊತ್ತಿರದೆ ಕೈಕೊಳಲಿ ಕರ್ಣಾದಿಗಳು (ಕುಮಾ್ಯ್ರ. ೩-೯). ೧೨. ಸಂಕಲ್ಪ ಮಾಡು ; ಪ್ರತಿಜ್ಞೆ ಮಾಡು : ಹೊತ್ತ ಭಾಷೆಯೊಳೆ ಪರಿಯೊಳೆಂಬತ್ತುಮರುಷಂಗಳು ಶಿವೈಕ್ಯರ ತೊತ್ತುಗೆಲಸಂ ಮಾಡಲು (ಬಸಪು. ೨೭-೬೨).

**ಪೊಱುಪೊಱು**, **ಹೊಱುಹೊಱು** (ದ್ವಿರುಕ್ತಿ) : ಮತ್ತೆ ಒಟ್ಟವ್ವೆಯ ಸುಭಕ್ತಿ ನಿಮಿತ್ತದಿಂ ಚೋಳಗೆ ಮಣ್ಣಂ ಪೊತ್ತು ಪೊತ್ತೊತ್ತಿದ ತಲೆಯ ಕಿಱುಕುಣಿಗಳಿಂದವಲಿ (ಬಸಪು. ೫೯-೫೩) ; ಎತ್ತಿದೆನು ನಾನಾಶರೀರವ ಹೊತ್ತು ಹೊತ್ತಲಸಿದೆನು (ಹಂಸಾ. ೬೦). **ಪೊತ್ತುಕೊಳ್**, **ಹೊತ್ತುಕೊಳ್ಳು** = ತಲೆಯ ಮೇಲೆ ಹೊರು.–ಧರಿಸು : ನಿನ್ನಂ ಪೊತ್ತುಕೊಂಡು ಪೋಪೆನೆನೆ (ಶಾಪುಂಪು. ೭೬); ನಲ್ಲಳ ಪಾದವಮಂ ತಲೆಯೊಳ್ ಪೊತ್ತುಕೊಂಡು (ರಾಜಾಮ್ಮ. ೨-೧೨೯) ; ಹೊತ್ತುಕೊಂಡೊಯ್ದಿಳುಹಿದೆನು ನದಿಯೊತ್ತಿನಲಿ ತಾಂಡವನ ಬಳಿಯಲಿ (ಕೊಕಣ. ೨-೩-೨೬) ; ನೀನು ಭೂಮಿಯನ್ನು ಸ್ವಲ್ಪಕಾಲ ಹೊತ್ತುಕೊಂಡರೆ ಅವನೇ ಹೋಗಿ ಚಿನ್ನದ ಸೇಬುಗಳನ್ನು ತಂದುಕೊಡುವನು (ಮತಕ. ೦೦೦). **ಪೊತ್ತು ತರ್**, **ಹೊತ್ತು ತರು**=ಹೊತ್ತುಕೊಂಡು ಬರು : ತಮ್ಮ ಪೊತ್ತುತಂದಿಪ್ಪೆಯ ಪೂವುಮಂ ಬೇಳದ ಪಣ್ಣುಮಂ ಕನ್ನೆಯ ಮುಂದೆ ಪೊಮ್ದು (ರಾಜಾಮ್ಮ. ೩-೯೩) ; ಅಮಳಾಂಬುಮಂ ತಾಂ ಪೊತ್ತುತಂದು ಸುಗೋಮಯದಿ ಬೆರಸುತ್ತ (ಬಸಪು. ೦೯-೩೯) ; ಹೊರಗೆ ಇರುವ ಕಟ್ಟಿಗೆ ಹೊರೆಯನ್ನು ಹೊತ್ತುತಂದು ಒಳಗೆ ಹಾಕು (ಲೂಶ). **ಹೊತ್ತಾಡು** = ಪುರಸ್ಕರಿಸು (?) : ವಸ್ತುಕ್ರೀವಿದನಾಗಿ ನಿತ್ಯಾನಿತ್ಯವ ಹೊತ್ತಾಡಿ . . . ಮುಕ್ತಿ ನಿಶ್ಚಯವಾದಲ್ಲಿ ಪ್ರಾಣಲಿಂಗಸಂಬಂಧ (ಪ್ರೋಕಶಾ. ೧೨೦-೯೭೦). **ಹೊತ್ತು ಹಾಕು** = ೧. ಕಳುಹಿಸು : ರವಾನಿಸು : ಈ ಕಾಗದ ಪತ್ರಗಳನ್ನು ಬೇಗ ಹೊತ್ತುಹಾಕಬಾರದೇ ? (ಲೂಶ). ೨. (ಶವವನ್ನು ಶ್ಮಶಾನಕ್ಕೆ) ಒಯ್ಯು ; ಸಾಗಿಸು : ಹೊತ್ತು ಹಾಕಲು ಜನ ಸಿಗುವುದಿಲ್ಲ, ಪ್ಯಾನಿಗೆ ಹೇಳಿ ಕಳುಹಿಸು (ಲೂಶ). [ದೇ.॥ ತಮಿ. ಮಲ. ಪೊಱು ; ಕೊಡ. ಪೊರೀ ; ಕೋತ. ಪೊರ್ ; ತೊದ. ಪೀಱ್]

**ಪೊಱುಕೆ** (ನಾ). ಹೊರುವಿಕೆ ; ಧರಿಸುವಿಕೆ : ಕಿಱುಕೆ, ತಿಱುಕೆ, ಪೊಱುಕೆ (ಶಮ್ಮಾಸು. ೩೩೭ ವೃತ್ತಿ). [ ಪೊಱು + – ಕೆ ]

**ಪೊಱೆ**[1], **ಪೊರ್ಱೆ**, **ಹೊರ್ಱೆ**, **ಹೊಱೆ**[1] (ನಾ). ೧. ಒಜ್ಜೆ ; ತೂಕ ; ಭಾರ : ತುಱುಗೆಮೆ ನೀಳ್ದ ಪುರ್ವು ನಿಡುಗಣ್ ಪೊಱೆಯಲ್ಲದೆ ಬಟ್ಟತಪ್ಪ ಬಾಯ್ದೆಱೆ (ಕಂಶಶಾ. ೦-೦೦೬) ; ಆಭರಣದ ಪೊಱೆಯಂ ತಳೆವಾಭರಣಪ್ರಿಯರ ತೆಱದೆ . . . ನಿವ್ಯೋದಿಗರಾಭರಣದ ಪೊಱೆಯನೇಕದಂ ಪೊತ್ತಿರ್ಪರ್ (ಕಾದಂಬ. ೦೦೬); ಅಲಸಪದಕ್ಕಲಕ್ತಕರಸಂ ಪೊಱೆಯೆಂಬನಿತೊಂದು ಚಿತ್ರಮಾ ಲಲನೆಗೆ ದೇವಕೀವನಿತೆಗಾದುದು ನಿರ್ಭರಪೂರ್ಣಗರ್ಭದೊಳ್ (ಜಗ. ೨-೯೯). ೨. ತಲೆ, ಹೆಗಲು, ಗಾಡಿ ಮೊದಲಾದುವುಗಳ ಮೇಲೆ ಇಟ್ಟುಕೊಂಡು ಸಾಗಿಸುವ ಸೌದೆ, ಹುಲ್ಲು ಮೊದಲಾದುವುಗಳ ಕಂತೆ,—ಗಂಟು; ತಲೆಭಾರ : ಪುಳ್ಳಿಯ ಪೊಱೆಯಂ ಪೊತ್ತು (ವಡ್ಡಾರಾ. ೭೭-೨೩); ಅಂತು ಪೊತ್ತು ಪುಲುಪುಳ್ಳಿಯ ಪೊಱೆಯನಿಳುಪಿ ಭೇರಿಯಂ ಪೊಯ್ದು (ರಾಜಾಶ. ೨-೩೯ ವ); ಪುಲಿದೊಗಲು ಪೊಱೆ ಜೇನು ತುಪ್ಪ ಸಳೆಗೆ ಮೋಣದ ಮುದ್ದೆ (ಶಾಣ್ಮಾ. ೦೭-೬). ೩. ದೊಡ್ಡ ಆಕಾರವುಳ್ಳುದು ; ಭಾರವಾದುದು : ಒಂದು ಪೊಱೆ ಜಡೆಯುಮಂ ಪಲಪಂಪವ ಮುದ್ರೆಯುಮನೆಯ್ದೆ ಪೊತ್ತಿನ್ನಂ ಬಾಯೆಂದು . . . ಕರೆಯಾರೆಮ್ಮ ಭಳಾರರ್ (ತೆವಂಪ. ೯-೭೯). ೪. ಹೊಣೆ ; ಜವಾಬ್ದಾರಿ : ಎನ್ನನೋವ ಕಾವ ಪೊಱೆ ತಮ್ಮಡಿಯೊಳೆಂದು ಕಣ್ಣೀರಿಡುವುದುಂ (ರಾಮಾಕ್ಷ. ೬೩-೦೦). ೫. (ಹಣದ) ಗಂಟು : ನಿನ್ನ ಪೊಱೆಗಾರ್ಪವರಿಲ್ಲಾ ದೊಡಮನ್ನ ವಿನಯುಕ್ತಿಲ್ಲಿವರಂ ಪಿಡಿದು ತರಲ್ವೇಟ್ಕುಂ ತನ್ನಿಮೆಂದು ಪೊಱೆಯಂ ಕಳೆದುಕೊಳೆ ಕೊಟ್ಟು ನಡೆದು (ಬಂಹಶ. ೯-೦೦ ವ). ೬. ಆಧಿಕ್ಯ ; ಹೆಚ್ಚಳ : ಮಭವದ ಪೊಱೆಯನಾಂತಿರ್ದರಾತಿಗಳ್ಗಳ್ಳಿ ತನ್ನ ಕುಲವುಮಂ ಚಲವುಮಂ ದೊರೆಯಾಂ ಕಿಡೆ (ಅಂತಿ. ೦೨-೯೬). ೭. ಹೊರೆಯಂತಿರುವ ಮುಡಿ.—ತಲೆಗೂದಲು; ಕೇಶಭಾರ : ಮುಳಿದಾಟಿದೋಪರಳ್ಚಿರ್ದೆ ಮುಗುಳ್ತಿರಿವಂತೆ ಮುಗುಳ್ತು ನಾಣ ಪಾಣೊಳಗು ಸಡಿಲ್ವಿನಂ ಪೊಱೆ ಸಡಿಲ್ದು ಕದಂಪು ಬೆಳರ್ತು ಬಾಡೆ (ಕಾವ್ಯಾ. ೬೨೩).

**ಪೊರ್ಱೆ** : ೧. ಉಡೆಯ ಪೊರೆಯೊಡಲ ಪೊರೆಯಾಗಿ ಬೆಮರೇರೆ (ಕಾಂಪ್ರಶ. ೦೫೦-೩೩೦). ೨. ಕಟ್ಟಿರ್ಪ ಕಾಡಿನುರುವಲ್ಗಳಂ ಪೊರೆಯರಡ ಕಟ್ಟಿ ಕೊಂಡೊಯ್ದರೇ ಪೊಯ್ಯೆ ಕಾಡಂದಂ (ಕಾಂಪ್ರಶ. ೦೨೯-೨೬೩).

**ಹೊರ್ಱೆ** : ೧. ಧರಣಿಯ ಹೊರೆಯೊಳು ತಿಣುಕುವ ಫಣಿ ಮೇಲೆ ಹಾಯಾಗಿ ಹರಿ ಮಲಗಿಹನು (ಅಂಶಾಶ. ೦೦೯-೬); ಅಂತರಾಳದ ರಸಗಳು ನಮ್ಮ ಮನಸ್ಸು ಮತ್ತು ಜೀವನವನ್ನು ಪ್ರಚೋದಿಸಲಾರದೆ ಹೋದರೆ ಆ ಜ್ಞಾನ ನಮಗೊಂದು ಹೊರೆ (ಶಿಕ್ಷರ. ೨೩೬). ೨. ಯದನು ಬಾಣಾರಾವಿ ಕಸಬೇಗ್ರಾಮಾನು ಗ್ರಾಮಗಳ ಆಯ ಬೆಳಿಸಿ ಮದೆ ಹೊರ ಸೂಪೆ ಅಳಿತ್ತಿ ಕಾಳು ಹಳಿಗಳ ವಳಗೆ ಯಿದನ್ತು ಮಾನ್ಯಗಳು (ಎಕ. XI, ಹೊಳಕಾ. ೨೩-೦೨೬; ೧೦೮೬); ಬ್ರಹ್ಮಋಷಿಗಳು . . . ಕುಶಾಸನಗಳಲ್ಲಿ ಕಟ್ಟಿರುವ ಅರಣಿ ಮೊದಲಾದ ಯಜ್ಞ

ಪಾತ್ರೆಗಳ ಹೊರೆಗಳಂ ಪೊತ್ತು (ಶ್ರೀಗಂ. ೩೦೨-೧೧). ೪. ನಾನು ಋಣ ತೀರಿಸುವ ಹೊರೆಯನ್ನು ನಿರ್ವಹಿಸುತ್ತಿರುವೆನು (ಜಾಹುತ್. ೯೦); ಈ ಕೂಸಿನ ಹೊರೆಯೆಲ್ಲಾ ನಿಮ್ಮ ಮ್ಯಾಲ ಒಪ್ಪಿಸೀನಿ (ಕಂಠಡು. ೬); ಬರೀ ಮಾತಿನವ ಹೊರೆ ಹೊತ್ತಾನೇ? (ಗಾರ). ೮. ಗುಂಪು; ರಾಶಿ: ಕರದ ಶೂಲದ ಪೆಣನ ಹೊರೆಗಳ ಸುರೆಯ ಘಟಿಗಳು ಮುಕ್ಕುಳಿಸಿ ಜೋಂಪಿರಿವ ಕಂಗಳ . . . ನರಕಪಾಲದ ಮಾಲೆಗಳ ಸಂಗರದ ತಾಟಕಿಯೆನಿಪ ರಕ್ಕಸಿ ಬಂದಳಾಹವಕೆ (ಅಶಂರ. ೦-೨೦-೨); ಅವರು ನಮಗೆ ಒಂದು ಹೊರೆ ಪುಸ್ತಕ ಗಳನ್ನು ಕೊಟ್ಟರು (ಆರಕು. ೨೦೨). ೯. (ಆಲಂ) ಬೇಡವಾದ ಹೊಣೆ ಅಥವಾ ವ್ಯಕ್ತಿ: ಅವ್ಯಕ್ತ ರೀತಿಯಲ್ಲಿ ತನ್ನನ್ನು ಹೊರೆಯಾಗಿ ಕಾಣುತ್ತಿರು ವಂತೆ ಅವನಿಗೆ ತೋರುತ್ತಿತ್ತು (ಶಂಕ. ೩೦). **ಹೊಱೆ**: ೧. ನಾಗರಾಜ ನುತ್ತಮಾಮಣಿಮಸ್ತಕಕ್ಕೆ ಹೊಱೆ ಹಿಂಗಿದುದು (ಎ.ಕ. XVI. ೪೬-೦೭; 1147); ನಿನ್ನ ಸೌಕುಮಾರ್ಯಕ್ಕೆ ಹೂದೊಡಿಗೆ ಹೊಱೆ ನಿನ್ನ ಮುಖಮಂಡಲಕ್ಕೆ ಶಶಿಮಂಡಲಮುಪ್ಪರಿಶಿಯ ಪಾತ್ರ (ನಂಜರ. ೦೯-೦೭); ಹಸುಳೆಗಮರಾ ಚಲದ ಹೊಱೆ ಸ್ಯರಿಸುವುದೇ ಮಱಹುಲ್ಲೆ ಸಿಂಹದ ಮಸಕದಿರೇ (ಶುಮ್ನಾರೀ. ೩-೬೯); ಕ್ಷಿತಿಗೆ ಬಲುಹೊಱೆಯಾಯ್ತು ಬದುಕುವ ಗತಿಯ ಕಾಣದೆ ಸಕಲದೇವಪ್ರತತಿ ನೆರೆದ್ಯೆತಂದು ಕಂಡುದು ಕಮಲಸಂಭವನ (ಕುಮಾರರಾ. ೦-೬-೪೩). ೨. ಸಾಸಿರ್ವರುಂ ಬಟ್ಟ ಧರ್ಮ್ಮ ಎಲೆಯ ಹೇಱ್ಗೆ ಬೇಳೆ ಹೊಱಿಗೆ ಬೇಳೆ ಹೊತ್ತಳಕ್ಕೆ (ಎ.ಕ. XI-ii, ೦೨೨-೦೨; 1072); ಮಣಿಮಯದ ಮೋಹಳದ ಹಿರಿಯುಬ್ಬಣದ ಸಬಳದ ಶೂಲ ಸುರಗಿಯ ಕಣೆಯ ಹೊಱೆ ಚಾಚಿದವು ಕಟಕಾಚಾರ್ಯನಿದಿರಿನಲಿ (ಕುಮಾರಭಾ. ೦೩-೦೯); ಕರಿಯ ಮದ್ದಿನ ಪೊಟ್ಟಣ ಕಟ್ಟದಂಬಿನ ಹೊಱೆ ಹುರಿಮರಳಿನ ರಾಶಿ ಅರೆದ ಸಾಸವೆಗೂಡ ಕಾದಡವಿಯ ಬಹುಹರವಿಗಳೊಪ್ಪಿದುವಾಗ (ಕಂಶಾ. ೦೦-೦೩೩). ೭. 'ಹೊಱೆದಲೆ' ಪರಾ.

**ಪೊಱೆವೊಱೆ** (ದ್ವಿರುಕ್ತಿ): ನಿನ್ನೀ ಪೊಱೆವೊಱೆಯಬಲ್ಗಳ ಭಾರಕೆ ನಡುಗಿದವೆನೆ (ಐದ್ಯಕ್ರ. ೨೮-೬೦೭). [ದೇ.II ತವಿ. ಪೊಱ್ಯ್; ತುಳು. ಪುದೆ, ಹೊರೆ; ಕೊತ. ಪೊರೆ; ತೊದ. ಪಱ್]

**ಪೊಱೆಕಾಱ**, ಹೊರೆಕಾರ, ಹೊಱೆಕಾಱ, ಹೊಱೆಗಾಱ (ನಾ). ೧. ಹೊರೆಯನ್ನು ಹೊತ್ತಿರುವವನು: ಪೊಱೆಕಾಱನ ಪೊಱೆಯೆಂತಂತೆ (ಶಿತಿಪ. ೩-೩); ಗುಲ್ಮದಂತೊತ್ತುವರ್ ಪೊಱೆಕಾಱನಂತೆ ಬಿಗಿದು ಕಟ್ಟುವರ್ (ರವರ್ಮಕು. ೩-೬೩); ನಿಸಿಯೆಂಬ ಗಜದ ಪುರದ ಪೊಱೆಕಾಱ ನಂದೆಸೆದು ಮಱಿಯ ಸಾರೆ ಸೂರ್ಯ ವಿಷಮಕೋಪದಿ ಚಾರಿವರಿದಂತಾ ತಮ ದಶದಿಕ್ಕು ತುಂಬಿತೇನೆಂದೆ (ಅಶಂತ. ೩-೦೦೩). **ಹೊರೆಕಾರ**: ೧. ದಾರಿಯಲ್ಲಿ ಹೋಗುವ ಒಬ್ಬ ಸೌದೆ ಹೊರೆಕಾರನ ಜೀವನ ಇಷ್ಟು ದುರಂತ ವಾಗಿರಬಹುದೆಂದು ಯಾರಿಗೆ ತೋರಬೇಕು? (ಕತ್ಕಿ. VII. ೪೮). **ಹೊಱೆಕಾಱ**: ೧. "ಭಾರವಾಹ. ಭಾರಿಕ—ಹೊಱೆಕಾಱ" (ಶಾಕಶಾ. ೬). ೨. ಹೊಣೆಯನ್ನು ಹೊತ್ತಿರುವವನು,—ವಹಿಸಿಕೊಂಡಿರುವವನು: ಮತ್ತೀಕೆ ಹುಸಿಯ ಹೊರೆ ಹೊಱೆಕಾಱ ಕರೆದೆಯೆನೆ ತತ್ತ ಸಾಲದ ಭರದೊಳಱಿಯದಾಡಿದ ನುಡಿಗೆ ಹೊತ್ತ ಹುಸಿಯಳಿಯಬೇಕೆಂದೆನಲು ನಿನ್ನ ಕುಲವಳಿದಲ್ಲದಳಿಯದೆನಲು (ಹಕಾ. ೧೦-೨೪); ಕ್ಷಿತಿಯ ಹೊಱೆಕಾಱಂಗೆ ಸೌಖ್ಯಸ್ಥಿತಿಯ ಮಾಡುವೆನಿನ್ನು ಕುರುಭೂಪತಿ ವಿರೋಧಿಯ ವಿಧಿಯನೀಗಳೆ ತೋಱಿಸುವೆನು (ಕುಮಾರಭಾ. ೯-೪). **ಹೊಱೆಗಾಱ**: ೨. ಮೇದಿನಿಯ ಹೊಱೆಗಾಱರೆಲ್ಲರೂ ವೇದಿಸುತ ಚೆಂಡಾಗುತಿರ್ದರು (ಕಂಕಕ. ೯-೬).

[ ಪೊಱೆ + —ಕಾಱ ]

**ಪೊಱೆಗಟ್ಟು**, ಹೊರೆಕಟ್ಟು, ಹೊಱೆಗಟ್ಟು (ಕ್ರಿ). ಹೊರೆಯಾಗಿ ಕಟ್ಟು; ಗಂಟುಕಟ್ಟು: ಅಂತು ಪೊನ್ನಂ ಪೊಱೆಗಟ್ಟಿಕೊಂಡು ಪಾತ್ರಮಾ ಪೊಣೆಸೆಯ ಮರದೊಳ್ ಪೊಕ್ಕಡಂಗಿರ್ಪುದುಂ (ಹುಕಶಾ. ೦೩೩-೮೯); ಪೆರ್ಬಲೆ ಬಿಡುವಾರುಗೋಡುವಲೆಯೆಂಬನಿತಂ ಪೊಱೆಗಟ್ಟಿ ಕಾನನಸ್ಥಲದೊಳಗಲ್ಲು ತೋಹುವಿಡಿದೊಡ್ಡಿದರೆಯ್ದೆ ಪುಳಿಂದನಾಯಕರ್ (ದಕಶ. ೨-೦೦೩). **ಹೊರೆಕಟ್ಟು**: ತೋಟಕ್ಕೆ ಹೋಗಿ ಸೊಗೆಗಳನ್ನು ಆರಿಸಿ ಹೊರೆಕಟ್ಟಿ ಕೊಂಡು ಬೇಗನೆ ಬಂದುಬಿಡು (ಜೂಂ). **ಹೊಱೆಗಟ್ಟು**: ಆ ಹುಲ್ಲ ಒಕ್ಕಿ ಮೆಟ್ಟಿಸಿ ತೂಱುವಾಗ ಹೊಟ್ಟ ಕಳೆದು ಭತ್ತ ನಿಂದು ಹುಲ್ಲು ಹೊಱೆ ಗಟ್ಟಿತ್ತು (ಶೂರಕಶಾ. ೦೯೩-೩೩೩); ಬೆಳೆದ ಛೀಮಾಟವಿಯೆಡೆಯೊಳುಜ್ವಳ ಸುಗಂಧದ್ರವ್ಯಮೂಲಿಕೆಗಳನಱಿ ಹೊಱೆಗಟ್ಟಿ ಹೊತ್ತು ಮಲಾಸಪುರವೆಯ್ದಿ (ಶಾಕ್ಶಾ. ೧೬-೪೦). [ ಪೊಱೆ + ಕಟ್ಟು$_1$ ]

**ಪೊಱೆಯಾಳ್**, ಪೊಱೆಯಾಳು, ಹೊರೆಯಾಳ್, ಹೊಱೆಯಾಳು (ನಾ). ಹೊರೆಯನ್ನು ಹೊರುವ ಆಳು, —ಸೇವಕ: ಪೊಱೆಯಾಳ್ಗೆ ಲೊಟ್ಟೆ ವೇಸರಮೊತ್ತು ಬಂಡಿಗಳ್ಗಿಱಿ ಕನಕಭಾರದಿಂದ್ಯೆದಿದುವು (ಕೃಪಿಶಾ. ೩-೬೩). **ಪೊಱೆಯಾಳು**: ಆಣಿಮುತ್ತಿನ ಕಂಠಮಾಲೆ ಚೌಕುಳಿ ಪೊನ್ನ ಕಾಣಿಕೆ ಪೊಱೆಯಾಳು ಸಹಿತ ಕ್ಷೋಣಿಪ ಮಧುರೆಯ ತಿರುಮಲೇಂದ್ರನ ಸುಪ್ರವೀಣಮಂತ್ರೀಶನೈತಂದ (ಕಂಶಾ. ೨೦-೬೬). **ಹೊರೆಯಾಳ್**: ನಿಯೋಗಿ ಹೂವಯ್ಯ—ಕೆಳದಿ ಶಿವಪ್ಪನಾಯಕನ ರಾಯಭಾರಿ ಹೂವಯ್ಯನ ಪರಿವಾರದವರು ಹೊರೆಯಾಳ್ಗಳು (ಮುಂಶ್ರಕ. ೯-೭). **ಹೊಱೆಯಾಳು**: ಆಗಣಿತದ ಪೆಟ್ಟಗೆಯ ಹೊಱೆಯಾಳುಗಳ ಸಂದಣಿ ನೂಕಿದುದು ಸರಕುಗಳ ಸದಳದ ಭಂಡಿಗಳು ಭಾರಿಸಿದವಿಳೆ ರಘುಡಿಯ (ತೂರರಾ. ೦-೧೩-೦೦).

[ ಪೊಱೆ + ಆಳ್$_3$ ]

**ಪೊಱೆಯಾಳು** 'ಪೊಱೆಯಾಳ್' ನೋ.

**ಪೊಱೆವೊರಕ** (ನಾ). (?): ಸುರಯಿಯ ಬರಿಮುಗುಳ್ಗಳ ಪೊರೆವೊರೆಯೊಳ್ ಪೊಱೆವೊರಕ[ಪಾಠಾಂ. ಪೊರೆವೊರ, ಪೊರೆವೊರೆ]ನಲ್ಲದಲ್ಲುಗುವ ರಜಂಬೊರೆದು ಪರಕಲಿಸಿದಳಿಕುಳಪರಿಕರಮುಮನತನುಶಿಖಿಯ ಕಿಡಿಗಳೆ ಗೆತ್ತಳ್ (ಕಂಶಶಾ. ೩-೩); "ಭಾರವನ್ನು ವಹಿಸುವುದು" (ಕಂಶಶಾ. ಶಬ್ದಕೋಶ); "ಭಾರದ ವ್ಯಾಪ್ತಿ" (ಕಂಶರ. ೦೬೯). [ ? ]

**ಪೊಟಕು**, ಪೊಳಕು$_2$ (ನಾ). ಸಾಮಾನ್ಯವಾದ ಆಕಾರ; ಸಹಜವಾದ ರೂಪು: "ಪೊಟಕು = ಸಾಮಾನ್ಯಾಕೃತಿ" (ಕಮರ. ಶು. ೦); "ಪೊಟಕೆಂದು ಸಾಮಾನ್ಯಾಕೃತಿ" (ಕಕಶಾ. ೩೯-೨೯೨); "ಪೊಟಕೆನೆ ಸಾಮಾನ್ಯಾಕೃತಿ" (ಕಶಕಂ. ೦೯೦); ನೋಟಪ್ಪುದಿಂದಿನ ಮುಂದಿನ ಖಲನ ಪೊಟಕು ಪೆಟಕಪ್ಪನೆಗಂ, ತುರಿಪದೆ ಕಾದಿ ಗೆಲ್ದು ಹಯಮಂ ತಾರದುಱದಿನಾಡೊಡೆ (ರಾಹೂಕ್ಷ. ೦೦೦-೦೬). **ಪೊಳಕು$_2$**: ಕೀಲೊರೆಯೊಳಿರ್ದೊಡಂ ಪೊಳಸೆಯ ದಿಹುದೇ (ಕಾಂಕರ. ೦೨೮-೨೬೦); ಮಂಜಿನೊಟ್ಟಿಲದೊಂದು ಸುಳಿಸುಳಿಗಳಾಗಿ ಪೆಣೆಪೆಣೆದುಕೊಳುತ್ತದರ್ದೇರಿ ಪಲಪಲವು ವಿಷಮಾಕೃತಿಗಳಿಂದೆ ಧುಮ್ಮಿ ಕ್ಕುತೆಲ್ಲ ಪೊಳಕುಗಳಳ್ಗಿ (ಕಂಸಕ. ೩೨-೦೯೩). [ ? ]

**ಪೊಟಿತ್ರೊನ್?** (ನಾ). ಒಬ್ಬಾತನ ಹೆಸರು (?): ಮನ್ನಿರಾವನ್ನನ್ನಿ ಕ್ಕಟ್ಟ ಪೊಟುತ್ರದು ಕಣ್ಡಗವ್ಯದೆ ಕಟನಿಯುಂ ಪಾಱುಂ ಮಗೆತ್ತಾಣಮುಂ ಸರ್ವ್ವಪರಿಹಾರಂ ಕನ್ದಪಕ್ಕೊಡಾದೊರ್ವ್ವಣ್ನಾಮಹಾಪಾತಕಪ್ಪಾಪ್ಪರ್ ಪೊಟ ತ್ರೊನ್ಸೆತ್ರದು (ಎ.ಕ. IX (ಕ). ಹೊಸಕೋ. ೩-೦೫; 900). [ ? ]

**ಪೊಟಿರವ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ರಾಚಮಲ್ಲಪೆರ್ಮ್ಮಾನಡಿ ಪ್ರಿಥುವೀರಾಜ್ಯಂಗೆಯ್ಯೆ ಪೊಟಿರವ ಬೆಸಗೆಯ್ದ ಎನೆ (ಎ.ಕ. XII. ಶಿಶಟೂ. ೪೬-೦; ಸು. 880). [ ? ]

**ಪೊಟಲ್**, ಪೊಳಲ್, ಪೊಳಲು, ಹೊಳಲು$_1$ (ನಾ). ೧. (ಹೆಚ್ಚು ಜನರು ವಾಸಮಾಡುವ) ಊರು; ಪಟ್ಟಣ; ನಗರ: "ಪೊಟಲೆಂದು ನಗರಂ" (ಕಕಶಾ. ೩೯-೨೯೭); ಪೊಟಲ ನಿರ್ಗ್ಗಡಿ ಆಚದೊಳ್ ಎರಡು ದ್ರಮ್ಮ (ಪ್ರಶಂ. ೦೯೩೩. ೨೬-೨೦; 872); ಜಲನಿಧಿಯಂ ಪಾಯ್ದೊರ್ವನೆ ನಿಲಿಕಿ ದಶಾನನನ ಪೊಟಲನಾ ಲಂಕೆಯನಾ ಕುಲಮಿಲ್ಲದಿಱದು ನಿಂದಂ

(ಕಬಿರಾ. ೩-೦೯೧) ; ಪಾಟಲೀಪುತ್ರಮೆಂಬ **ಪೊಟಲ್** (ಸುಕುಮಾ. ೬-೦೬ ವ) ; ಈಗಳಿನ್ ಪಿಂದಾಗಿ ದೇಶ್ಯಮೆನ್. ಪೊಟಲ್ಗೆಲ್ಲ ಸಾಜ ಪೇಟ್ ಪೋಗು (ಅಂಬಿಗೊ. ೯-೬೨). **ಪೊಳಲ್** : ಪೊಳಲ್ ಕುವಳಾಲವಾಗೆ (ಎಕ. VII, ಶಿಕಮೊ. ೯-೩೩ ; 1133). **ಪೊಳಲು** : ಸ್ವಸ್ತಿ ಶ್ರೀಮಾತು ನಾಲ್ಕುಯುಗದ ಪೊಳಲು ಕೋಗಳಿ (ಸೌಇಇ. XI-i, ೮೬-೩೦ ; 1050) ; ಯತಿಪನಾಜ್ಞೆಯಿಂದ ಮದಿರೆಯ್ತಂದು ಪೊಳಲಂ ಸಾರ್ದರು (ಚಕಚ. ೦೨-೩೬) ; ಸರ್ವಸಂಭ್ರಮಾವ ಬೀದುತ್ರಲಾ ಪೊಳಲೊಳು ಮೆರೆಯುತ್ತೆತಂದ (ಕಂಪಂ. ೯-೩೯) ; ನಾವು . . . ದೂರದ ಪೊಳಲಿಗೆ ಯಾತ್ರೆ ಹೊರಟಿದ್ದೇವೆ (ಹಾಹುತ್. ೯೦). **ಹೊಳಲು**[1] : ಹೊಳಲ ಸುಂಕಿಗನಂತೆ ತೊಳಲುತ್ತಿದ್ದನವ್ವ (ಮಾಹಾರೀ. ೨. ೪೩-೦೦೦) ; ಹೊಳಲು ಹೊಸರೀತಿಯಲಿ ಮಿಗೆ ಕಂಗೊಳಿಸುತಿರ್ದುದು (ಕೊರಟಾ. ೦-೯-೦೦) ; ಹೊಳಲುಗಳ ಕಟ್ಟ ದೊರೆಯಾಗು ಸೊನ್ನಲಿಗೆ ಕಳ ಸಾಗಿ ಬೆಳಗಿ ಹೊಸಮಾತಕೆ (ಕನ್ನಡಾ. ೩೦೯).

[ದೇ.॥ ತಮಿ. ಪೊಟಿಲ್ ; ತೆಲು. ಪ್ರೋಲು]

**ಪೊಟಲಬ್ಬೆ** (ನಾ). ಒಬ್ಬಾಕೆಯ ಹೆಸರು : ಪೊಟಲಬ್ಬೆಯ ಕೊಟ್ಟ ಮಣ್ಣಯೊಗ್ಗಳ (ಎಕ. IV, ಎಳಂದೂ. ೨೩-೦೨ ; ಸು. 925?).

[ಪೊಟಲ್ + ಅಬ್ಬೆ[1]]

**ಪೊಟಲಮ್ಮ** (ನಾ). ಒಬ್ಬಾತನ ಹೆಸರು : ಮತ್ತರಸರಾ ಪೊಟಲಮ್ಮನಾ ಮೇಗೆಟ್ಟು (ಎಕ. X, ಶ್ರೀನಿವಾ. ೯೦-೨; ಸು. 900). [ಪೊಟಲ್ + ಅಮ್ಮ[1]]

**ಪೊಟಲಿಗ** (ನಾ). = ಪೊಟಲಿಚ : ಪೊಟಲಿಗಂ, ಕಾಲೂರಿಗಮಿತ್ಯಾದಿ (ಶಾಶಾಭೂ. ೦೬೩ ಪ್ರಯೋ).                [ಪೊಟಲ್ + — ಇಗ]

**ಪೊಟಲಿಚ, ಪೊಳಲಿಚ** (ನಾ). ನಗರದಲ್ಲಿ ಹುಟ್ಟಿದವನು; ಪಟ್ಟಣಿಗ; ನಾಗರಿಕ : "ಪೊಟಲಿಚರ್ ಪೌರಾಭಿಧಾನಂಗಳೊಳ್" (ಕಶಾಂ. ೯೩); ಪೊಟಲಿಂದ್ರಪುರಂ ಕಾಲೂರ್ ಪೊಟಲಿಂದ್ರರ್ ಪೊಟಲ ಮಾನಸರ್ ಕಾಲುರಿಚರ್ ಪೊಟಲಿಚರೆನೆ ಸೊಗಯಿಸುವುದು ಪೊಟಲಿಂ ಕಾಲೂರ್ಗ ಳಿಂದಮಂತಾ ವಿಷಯಂ (ಕಾವ್ಯಾವ. ೩೩೩); ಈ ಪೊಟಲ ಪೆಂಡಿರೆಲ್ಲರಂ ಮರೆದು . . . ಪೊಟಲಿಚರೆಲ್ಲರುಮೊಲ್ಲನುಲಿದು ಮೊರೆಯಿಟ್ಟು (ಅರ್ಜನೇ. ೩-೬ ವ). **ಪೊಳಲಿಚ** : ಮಡಿವಳರ ಕಾಲುರಿಚ ಪೊಳಲಿಚ ದಡಿಗ . . . ಕಂಚುಗಾರರ ಕೇರಿ ಮೆರೆದಿಹವು (ಶಾಶ್ವತಾ. ೨-೯).

[ಪೊಟಲ್ + — ಇಚ]

**ಪೊಟಲೊಡೆಯ** (ನಾ). ಊರಿನ ಯಜಮಾನ ; ನಗರಪತಿ : ತೊಟಲಲಾಲದಟಲನೆಯ್ದಿದ ಪೊಟಲೊಡೆಯನ ಮಗಂ (ವರ್ಧಕ. ೨-೯೯ ವ).

[ಪೊಟಲ್ + ಒಡೆಯ[1]]

**ಪೊಟಲ್ಗಾಪು** (ನಾ). ಊರಿನ ಕಾವಲು; ನಗರರಕ್ಷಣೆ.

**ಪೊಟಲ್ಗಾಪಿನವರ್** = ಊರಿನ ಕಾವಲುಗಾರರು; ನಗರರಕ್ಷಕರು; ತಳವಾರರು : ಪೊಟಲ್ಗಾಪಿನವರ್ ಪೊಡಮಟ್ಟು ಪೇಟ್ದರ್ (ಅದ್ಭುತ. ೯೨-೨೦).                [ಪೊಟಲ್ + ಕಾಪು]

**ಪೊಟಲ್ಜೋರ, ಪೋಳಲ್ಜೋರ, ಪೋಟಲ್ಜೋರ** (ನಾ). ನೊಳಂಬ ರಾಜರಲ್ಲಿ ಒಬ್ಬಾತನ ಹೆಸರು : ಆತನ ಮಗಂ ಪೊಟಲ್ಜೋರದೇವಂ (ಮ್ಯಎಆ. ೦೯೩೨, ೯೮-೩; ಸು. 960); ನೊಳಂಬ್ವರ ಭೀಮಂ ಪುಸಿಗೆಗೆಯ್ದಂ ರಾಜರಾಜಾಶ್ರಯಂ ಶ್ರೀಮತ್ಪೊಟಲ್ಜೋರದೇವಂ (ಸೌಇಇ. IX-i, ೩೦-೩೯; 965). **ಪೋಳಲ್ಜೋರ** : ಪೋಳಲ್ಜೋರನೆಮ ನೊಳಂಬ ಮಹಾಸಾಮಂತನ್ (ಎಕ. XII, ಶಿರಾ. ೯೬-೬; 880). **ಪೋಟಲ್ಜೋರ** : ಶ್ರೀಮಧುಭರ ಪೋಟಲ್ಜೋರಾವನಿಪಂಗಗ್ರಮಹಿಷಿ ಭುವನಾಮ್ಬಿಕೆ (ಎಕ. X, ಮುಳಬಾ. ೩೯-೩; ಸು. 890). ☞ ಈ ಎರಡು ರೂಪಗಳೂ 'ಪೊಟಲ್ಜೋರ' ಎಂಬುದರ ಅಪಲಿಖಿತವಿರಬಹುದು.

[ಪೊಟಲ್[1] + ಚೋರ]

**ಪೊಟಲ್ವೀದಿ** (ನಾ). ಊರಿನ ಕೇರಿ ; ನಗರದ ರಸ್ತೆ ; ಪಟ್ಟಣದ ಬೀದಿ : ಪಗೆಗಳುಮಂ ಪೆಂಡಿರುಮಂ ಮಿಗೆ ಸೋಲಿಪುವವನ ಬೀರಮುಂ ಗಾಡಿಯುಮಾವಗಮಡಸಿ ತಾಗೆ ಕಣೆಯುಂ ಮುಗುಳ್ನಗೆಯುಂ ಮೊನೆ ಯೊಳಂ ಪೊಟಲ್ವೀದಿಯೊಳಂ (ಕಬ್ಬಿಗಾ. ೯೮).

[ಪೊಟಲ್ + ಬೀದಿ]

**ಪೊಟವು** (ನಾ). (?): ಪೊಟವನೆ ಭಾವಿಸದೇಳಿಯುಮಿಟಿಯೆಯುಮಾಗಳ್ ನಖಾಗ್ರಮಾಲಾಗ್ರದಿನೊಂದುಟಿಯುದವಯುವಮನವಯುವಮುಟಿಯದು ಮನಿಸದೆ ಕುಮಾರಿ ನೋಡಿದಳೆನಿಸಂ (ಶಾಂತಿಪು. ೩-೦೦೦).

[ ? ]

**ಪೊಟಿಯೂರ್** (ನಾ). ಒಂದು ಊರಿನ ಹೆಸರು : ಪಡುವಲು ತೊಣ್ಣಾಲದ ಪೊಟಿಯೂರ ಸಂದಿ (ಮ್ಯಆ. ೦೯೨೩, ೧೦೩-೯೯; 634).

[ಪೊಟಿ[1] + ಊರ್]

**ಪೊಟಿ, ಪೊಳೆ, ಹೊಳೆ** (ನಾ). ೧. ನದಿ ; ತೊರೆ ; ಹಳ್ಳ : "ತೊರೆ ಯೊಳ್ ಪೊಟಿಯೆಂದು" (ಕಶಾಂಶ. ೯೨); ನೀರ ಪೊಟಿ ಪಾಡುವೆಡೆ ಹೊಲಗೇರಿ . . . ಎಂಬೆಡೆಗಳೆಂಟಿತಪ್ಪೊಸಲಾಗೇಳಲ್ (ರೋಕೋಶ. ೦೨-೩೩). ೨. ದಾರಿ; ಹಾದಿ; ಮಾರ್ಗ : "ಪೊಟಿ = ಬಟ್ಟೆ, ತೊರೆ (ಹೊಳೆ)" (ಕಮುದ. ಶಂ. ೦) : "ಪಥ ನದಿಗಳೊಳ್ ಪೊಟಿ" (ಕಬ್ಬಿಮಂ. ೦೦೩) : ಆ ನರಿ . . . ಅಗಸರ ಪೊಟಿಯೊಳಾಡುತಿರ್ಪ ಕಟಿತ್ರಿಯಂ ಕಂಡು (ಶಂಕಶಂ. ೨೮೨-೨೦), ಕೊಳದ ತಡಿಯೊಳ್ ಕಾಲ್ಮೊಗಂದೊಳೆವ ಮಾನಸರಂ ಸರೋವರ ಮಂ ಪಾಯ್ವ ಪೊಟಿ ಯಾವುದೆನೆ (ಅರ್ಜನೇ. ೬-೧೯ ವ). **ಪೊಳೆ**[3] : ೧. "ಪೊಳೆಯೆನಲ್ ಹೊಳೆ" (ಕಚಿ. ೬೯) ; ಸಂಗವದ ಸಂಗವೇಶ್ವರ × × × ಯ ಪೊಳೆಗೆ ನೂಱು ಮತ್ತ (ಸೌಇಇ. XI – i, ೦೦೩-೩೬; 1070); ಬಾವಿ ಕೆಱೆ ತೊಱೆ ಕಟ್ಟೆ ಪೊಳೆಗಳಿಂದ . . . ಸೊಗಸ ಬೀಱುವುದು (ಸೌಂದರ್ಯ. ೨-೩), ಉದಕಂ ಪೊಳೆಯಂತೆ ಪರಿಯಲಾದುದು (ಮಹಾಪು. ೮-೦೬). **ಹೊಳೆ**[3] : ೧. ಹೊಳೆಯುಂ ನಡುವಣ ಹುದುವಿನ ಹೊರದ ಮಣ್ಣು (ಮ್ಯಆ. ೦೯೩೩, ೩-೦೩; 1167); ಹೊಳೆಗಳೆಱೆ ಬತ್ತಿದುವು ನಿರ್ಜರ ಜಲವಡಂಗಿದವು (ಕೊರಟಾ. ೦-೩-೦೬); ಪೂವಲ ಹನುಮ ಫಳಿಲನೆ ಖಾನನ ನೇವದೆ ತೆಂಕಣ ಹೊಳೆಯ ತಡಿಯ ಬೀಡ ಬಿಟ್ಟ (ಕಂಪಂ. ೦೨-೦೩); ಹೊಳೆಯಲ್ಲಿ ಹುಣಿಸೆಹಣ್ಣು ತೊಳೆದ ಹಾಗೆ (ಗಾದೆ).

[ದೇ.॥ ತಮಿ. ಪುಟ್ಟಿ; ಮಲ. ಪುಟ; ತುಳು. ಹೊಳೆ; ಕೊಡ. ಪೊಳೆ ]

**ಪೊಟಿಗಟ್ಟು** (ಕ್ರಿ). ನದಿಯಾಗಿರುವಂತೆ ಮಾಡು : ಗಟಿಯಿಸುವ ತಮಂ ಮೂಡಲ್ ಪೊಟಿಗಟ್ಟುವ ಸಂಜೆಗೆಂಪು ಪಡುವಣ್ ಕೈಕೊಂಡೆಟಲೆ ಧರೆಗರ್ಭನಾರಿಯ ತಟಿವಿಡಿದಂತಾಯ್ತು ಗಗನಮಂಡಲಮಿನಿಸುಂ (ಅಜಿತಪು. ೬-೬೨).                [ ಪೊಟಿ[3] + ಕಟ್ಟು[1] ]

**ಪೊಟಿದುಂಗೆ** (ನಾ). ಸುವಾಸನೆಯ ಹುಲ್ಲಿನ ಗೆಡ್ಡೆ ; ಪರಿಮಳ ಯುಕ್ತವಾದ ಹುಲ್ಲುಗಡ್ಡೆ : ಪಚ್ಚನೆ ಬೆಳೆದ ಹರಿತ ಶಾಡ್ವಲಮುಂ ಸುತ್ತಂ ನೀಳ್ದ ಪೊಟಿದುಂಗೆಯ ಜೊಂಪಮುಂ ವಿರಾಜಿಸೆ (ರಾಜಶೇಖ. ೩೦-೨೦).        [ ಪೊಟಿ[3] ? + ತುಂಗೆ[2] (< ತುಂಗ[1]) ]

**ಪೊಟಿಮೆಟ್ಟು, ಹೊಳೆಮೆಟ್ಟು** (ಕ್ರಿ). ಹೊಳೆಯ ನೀರನ್ನು ಪೂಜಿಸು ವುದಕ್ಕಾಗಿ ನೀರಿನಲ್ಲಿ ಇಳಿ; ☞ ಬಾಣಂತಿಯು ಸೂತಿಕಾಗೃಹದಿಂದ ಈಚೆಗೆ ಬರುವ ದಿನ ಹೊಳೆಯ ನೀರಿನ ಬಳಿ ಸ್ನಾನಮಾಡಿ ಗಂಗೆ ಯನ್ನು ಪೂಜಿಸಿ ಬರುವ ಪದ್ಧತಿಯಿತ್ತು, ಹಾಗೂ ಇದೊಂದು ಪವಿತ್ರೀಕರಣವಿಧಿಯಾಗಿತ್ತು : ಇಟಿದೊಡೆ ಕೂರದ ಪೆಂಡಿರ ಕೆಟಗಾದಪೆವೆಂದು ರತ್ನಸೋಪಾನಕದೊಳ್ ಗಟಗಟನಿಟಿಯದೆ ಬಾಣತಿ ಪೊಟಿಮೆಟ್ಟುವ ತೆಱದೆ ಗುಜ್ಜುಮೆಟ್ಟಿದರರೆಬರ್ (ಅಜಿತಪು. ೬-೩೯). **ಹೊಳೆಮೆಟ್ಟು** : ಗಾಳಿಯೆಂಬ ಸುಕುಮಾರನಂ ಪಡೆದು ಸಂಧ್ಯಾವನಿತೆ

ತಿಙ್ಗಳು ೧೪ಕ್ಕೆ ಸಮ್ಬಳ ಎರಡು ವರಹ . . . ಸಲೂದು (ಎಪಿ. XIV. ಶ್ರೀರಂಗ. ೨೬೯-೦೨ ; ಸು. 1535). **ಪೊತ್ತು₄** : ೧. "ಪ್ರಭಾರನೊಳಂ ಪೊತ್ತೆಂದು" (ಶಬ್ದಾಂಶ. ೬೩). ೨. ಆಕೆ ನಿರುತ್ತರೆಯಾಗಿ ಎನ್ನ ದೆಸೆಯ ಮುಳಿಸನುಜಿದಂದಿಂದಿತ್ತಂಗೆ ನಿಂದು ಪೊತ್ತು ಕಾಯ್ದು ಬೇಸಱಿಸಿ ನಿರ್ವಂದ ದಿನಟ್ಟಿ ಕಳೆಯೆ (ಶಾಂತಿಪು. ೬-೬೯ ವ) ; ಮುಗಿಲಂತೆ ಪೊತ್ತಿಗೊಂದು ಬಣ್ಣ ಮಾಗದ (ರಘುಕಾವ್ಯ. ೬-೯೯) ; ಈಸು ಪೊತ್ತೇಕೆ ಪವಡಿಸಿವನೆಂದೆಬ್ಬಿಸಲ್ (ಚಂಪೆ. ೬-೨೩). ೩. ಒಡನೆಯೆ ಚಕ್ರವಾಕಿ ಪೊಸವಾಣತಿ ಕೋಗಿಲೆ ಯಾಱಿಲಿಂದು ಕೇಳ್ಗಡ ಗಿಳಿವೆಣ್ಗೆ ಪೊತ್ತಿನೊಳೆಯ್ದೆ ನವಿಲ್ ಮನೆದೀವಿ ಮಕ್ಕಳಂ ಪಡೆದುದ ನೋಡ (ಅರ್ಜುನ. ೦-೯೪). **ಪೊರ್ತು** : ೨. ಆ ಪೊರ್ತ್ತಿಂ ಕೋಳಿಲಂಗೆಗಳಲಿಗುಂ ಬನದೊಳು (ಎಪಿ. XVI. ೩-೦೩ ; ೯೮೦); ಮೂಱು ಪೊರ್ತ್ತಿಂ ವರಕಾನ್ನಾಸಂಕುಳಂ ಬಂದಿರದೆ (ಎಪಿ. XV. ೧೦-೪೯; 1080). **ಪೊಳ್ತು** : ೧. "ಪೊಳ್ತಿನಲ್ ಸೂರ್ಯನಕ್ಕು" (ಶಶರ. ೭೦); ತೀಡಿತ್ತಲೆವ ತಂಗಾಳಿ . . . ಏರ್ದುದು ಪೊಳ್ತು (ಶಶ್ವಾಂಗ. ೩೬-೦೩೨); ಪೊಳ್ತಿಗೆ ಕಯ್ಯ ಮುಗಿದು (ಕಾಂಬಿರ. ೦೦೬-೨೯೨). ೨. ಮದದಿಂದಂ ಪೊಳ್ತು[ಶಾಶಾಂ. ತ್ತು] ಪೋಗುತ್ತಿರ್ದೆ (ರಕ್ಷಾಶ. ೩೩) ; ಇನಿಸು ಪೊಳ್ತಾದೊಡಂ ಸುಖನಿದ್ರೆಗೆಯ್ವೆನೆಂಬೆನೆ (ಶಶ್ವರಾ. ೬-೬೬) ; ಇಂದೇನೊ ನಿಶಿಪೊಳ್ತಿನೊಳಗಿಂತು ಈ ಕಾಳಿಯವತಾರ ! (ವಚನ. I. ೯೩೦). **ಹೊತ್ತು₆** : ೧. ಬಾನಿನ ನೆತ್ತಿಯನೇರಿತು ಹೊತ್ತು (ಪಂಚಂ. ೦೨-೦೬); ನಿದ್ದೆ ತಿಳಿದಾಗ ಹೊತ್ತು ಏರಿತ್ತು (ಶಾಶಾ. ೨೦೩); ಹೊತ್ತು ಬಂದತ್ತ ಕೊಡೆ ಹಿಡಿ (ಗಾದೆ). ೨. ಅರಸಿಂಗೆ ಎಲ್ಲಾ ಹೊತ್ತು ಹಿತವಂ ನುಡಿವ ಮನುಷ್ಯರ್ ಹಲವರುಂಟು (ಪಂಚತಂ. ೦೦೨-೦೩); ಹೊತ್ತು ಹೋಗದ ಮುನ್ನ ಮೃತ್ಯುವೊಯ್ಯದ ಮುನ್ನ ತೊತ್ತುಗೆಲಸವ ಮಾಡು (ಬಸವ. ೦೭೨); ಸಾಕು ಹೆಱತೆಗೆ ಛಾಯವಡೆದವಿವೇಕಿ ಮೈಮಱೆದಿದ್ದ ಹೊತ್ತಿದು (ಕುಮಾ. ೪. ೦೨-೩೦); ಹೊತ್ತಲ್ಲದ ಹೊತ್ತಿನಲ್ಲಿ ತೊತ್ತು ಮೈ ನೆರೆದಳು (ಗಾದೆ).

**ಪೊತ್ತುಪೊತ್ತು, ಹೊತ್ತುಹೊತ್ತು, ಹೊತ್ತೊತ್ತು** (ದ್ವಿರುಕ್ತಿ) : ಪೊತ್ತುಪೊತ್ತಿಗೆ ಪೋಗಿ ಪೂಡಮುಟ್ಟಿ ನಸು ತಲೆಗುತ್ತಿ ನಾಣ್ಚುತ ನಲವಿನೊಳು (ಹಂಬ. ೪-೯); ಹೊತ್ತುಹೊತ್ತಿಗೆ ಉಣ್ಣಬೇಕು (ಮುಂಬಯಿ. ೪-೩೩); ಹೊತ್ತುಹೊತ್ತಿಗೆ ಅನ್ನ ನೀರನು ಹವಣಿಸಿ ಮಕ್ಕಳ ಗಿಣಿಯಂತೆ ಸಾಕಿ (ಇಂಚಾಶ. ೦೬-೬೭); ಅವುಗಳನ್ನು ಹೊತ್ತೊತ್ತಿಗೆ ಆಡಿಸಿಕೊಂಡು ಬರುತ್ತಿದ್ದನು (ಮುಂಬಯಿ. ೨-೩೪). **ಹೊತ್ತಾಗು** = ತಡವಾಗು ; ವಿಳಂಬವಾಗು : ತುಂಬಾ `ಹೊತ್ತಾಯಿತಲ್ಲವೇ! (ಬಟ್ಟಿಜೀ. ೪೩). **ಹೊತ್ತಿಗೆ ಮುಂಚೆ** = ಸಮಯವಾಗುವುದಕ್ಕೆ ಮೊದಲೆ ; ಬೇಗನೆ : ಅವರು ಹೊತ್ತಿಗೆ ಮುಂಚೆ ಊರು ಸೇರಬೇಕೆಂದು ಬೇಗ ಹೊರಟರು (ರೂಢಿ). **ಹೊತ್ತಿನರಸ** = ಸಮಯದ ಒಡೆಯ ; ಸೂರ್ಯ : ಹೊತ್ತಿನರಸ ನೆತ್ತಿಯ ಮೇಲೆ ಬಂದಾಗ ಕಟ್ಟಿಗೆಯ ಹೊರೆ ಹೊತ್ತು ಮಾರಯ್ಯ ಮನೆಗೆ ಬಂದ (ಶರಣ. ೩೬೯). **ಹೊತ್ತಿನುಲಿ** = ಸಮಯವಾಯಿತೆಂದು ಸೂಚಿಸುವ ಧ್ವನಿ : ಹೊತ್ತಿನುಲಿಯಾಗದೊಡೆ ಆಟ ಮೊದಲಾಗುವುದೆ ಹೊತ್ತು ತೋರ್ಪುದು ಸಾವಿನಾಟಗಳ ಕೊನೆಯಂ (ಕಾಂಬಿರ. ೬೩-೦೬೩). **ಹೊತ್ತು ಕಂತು** = ಸೂರ್ಯ ಮುಳುಗು ; ಸೂರ್ಯಾಸ್ತವಾಗು : ಹೊತ್ತುಕಂತಿ ಎರಡು ಗಳಿಗೆ ಕಳೆದಿತ್ತು (ಶಶ್ವಸ. ೦೯) ; ಹೊತ್ತು ಕಂತಿ ಎರಡುಗಳಿಗೆ ಕೂಡ ಆಗಲಿಲ್ಲವಂತೆ (ಬಟ್ಟಿಜೀ. ೪೯). **ಹೊತ್ತುಗೊತ್ತು** = ವೇಳೆ ಮತ್ತು ಸ್ಥಳ : ಹೊತ್ತಿದ್ದಂತೆ ಹೊತ್ತಿಲ್ಲ. ಹೊತ್ತು ಗೊತ್ತು — ಒಂದೇ ಆಗಿರುವುದೂ ಇಲ್ಲ (ಬಿಡಿವಶಾ. ೨೨೩) ; ನಾವಿರಲು ಹೋಳಿವುದು ಹೊತ್ತು ಗೊತ್ತಿನ ಗತ್ತು ನಾ ಮೈಯಯು ಎನಲು ದಿಕ್ಕಾಲ ಕಡೆ (ಮುಕ್ತಿಕಂ. ೪-೧೮). **ಹೊತ್ತು ತುಂಬು** = ಹೆರಿಗೆಯ ಸಮಯವಾಗು ; ಪ್ರಸವಕಾಲ ಬರು : ಹೊತ್ತು ತುಂಬಿದವಳು ತನ್ನ ನಿತ್ತರಿಸುವ ಬೇನೆಯನಱಿವಳು (ಪೋತಶಾ. ೦೯-೬೩). **ಹೊತ್ತು ನೆತ್ತಿಗೇರು** = ಸೂರ್ಯ ನಟ್ಟನಡುವಿಗೆ ಬರು; ಮಧ್ಯಾಹ್ನವಾಗು : ಹೊತ್ತು ನೆತ್ತಿಗೇರಿದೆ. ಬಿಸಿಲು ಉರಿಯುತ್ತಿದೆ (ಕಳುವು. ೨೩೬) ; ನಾವು . . . ಮರಳಿ ಬರುವ ವೇಳೆಗೆ ಹೊತ್ತು ನೆತ್ತಿಗೇರಿತ್ತು (ಬಟ್ಟಿಜೀ. ೦೫೦). **ಹೊತ್ತು ಬರು** = (ಸಾವು, ಕೇಡು ಇತ್ಯಾದಿಗಳ) ಸಮಯ ಸನ್ನಿಹಿತವಾಗು, ಸಮೀಪಿಸು : ಕೌರವರಿಗೆ ಹೊತ್ತು ಬಂದಿದೆ ; ಅವರು ನಾಯಿನರಿಗಳ ಪಾಲಾಗಿ ಒರಗುತ್ತಾರೆ (ಪತಳಿ. ೨೪೬). **ಹೊತ್ತು ಮಾಡು** = ತಡಮಾಡು ; ವಿಳಂಬಿಸು : ಹೊತ್ತು ಮಾಡಿ ಆಗಬೇಕಾದುದೇನು? ಬಹಳ ದೂರ ಹೋಗಬೇಕು (ದೇಂಬಾ. ೩) ; ಹೊಳೆಯಲ್ಲಿ ಬಹಳ ಹೊತ್ತು ಮಾಡಬೇಡಿ (ಬಟ್ಟಿಜೀ. ೩೪). **ಹೊತ್ತು ಮೀರು** = ಅವಧಿ ತೀರು ; ತಡವಾಗು : ಹೊತ್ತು ಮೀರಿದೆ (ಕಳುವು. ೦೬೨) ; ಹೊತ್ತು ಮೀರಿದರೆ ತೊತ್ತು ಹೆತ್ತವಳಾದಾಳೇ ? (ಗಾದೆ). **ಹೊತ್ತು ಮುಣುಗು, ಹೊತ್ತು ಮುಳುಗು** = ಹೊತ್ತು ಕಂತು : ಹೊತ್ತು ಮುಣಾಗುತ ಬಂತು ಬತ್ತಲೆಯ ಜಗಕೆಲ್ಲ (ಶಸ್ಯಜಾ. ೨೪೯) ; ಸೋಪ್ಪ ಅವ. ಹೊತ್ತು ಮುಳುಗುವಾಗ ಕಳ್ಳು ಕುಡಿದು ಮಲಗಿದವರ ಹೊತ್ತು ಮೂಡುವಾಗಲೇ ಏಳುವವ (ಜನಪು. ೩೪). **ಹೊತ್ತು ಮೂಡು** = ಬೆಳಗಾಗು ; ಸೂರ್ಯೋದಯವಾಗು : ಸೂರಪ್ಪ . . . ಹೊತ್ತು ಮೂಡುವಾಗಲೇ ಏಳುವವ (ಜನಪು. ೩೪). **ಹೊತ್ತು ಸಾಧಿಸು** = ಸಮಯ ಕಾಯು ; ಸಮಯ ಸಾಧಿಸು : ಅವನು ಹೊತ್ತು ಸಾಧಿಸಿಕೊಂಡಿದ್ದು ತನ್ನ ಸೇಡು ತೀರಿಸಿಕೊಂಡ (ರೂಢಿ). **ಹೊತ್ತು ಹಾರು** = (ವೇಗವಾಗಿ) ಸಮಯ ಕಳೆ : ಕನಸಿನ ಭ್ರಮೆಯಲ್ಲಿ ಹೊತ್ತು ಹಾರಿಹೋಗುವುದನ್ನು ಮರೆಯುತ್ತೇನೆ (ಕ್ಷೋಣಿಕ. ೨). **ಹೊತ್ತು ಹುಟ್ಟು** = ಬೆಳಗಾಗು ; ಸೂರ್ಯೋದಯವಾಗು : ಹೊತ್ತು ಹುಟ್ಟುವುದಕ್ಕೆ ಮುನ್ನವೆ ಮಾದಣ್ಣ 'ಸ್ವಂತಮನೆ' ಯ ಮೇಲಿನಂದ ಹೆಂಚುಗಳನ್ನು ಕೊಡಹಿ . . . ಹಾಕುತ್ತಿದ್ದ (ಕಳುವು. ೦೫೨).

[ದೇ. ೩೭೫೩. ಪೊಟುತು, ಪೋಟ್ಟು, ಪೋತು ; ಮಲ. ಪಟುತು. ಪೊಟುತು, ಪೋತು, ಪೋಳ್ ; ತುಳು. ಪೊರ್ತು; ಕೊಡ. ಪೋಲ್ದೀ. ಪೊದೀ ; ಕೊ. ಪೊದ್ದು, ಪೊವ್ದು ; ಕೋಲಾ. ಪೊದ್ ; ನಾಯ್ಕಿ. ಪೊದ್ಡ್ ; ಗೊಂಡಿ. ಪೊರ್ದ್]

**ಪೊಟ್ಟುಗಳೆ, ಪೊತ್ತುಗಳೆ, ಹೊತ್ತುಕಳೆ, ಹೊತ್ತುಗಳೆ** (ಕ್ರಿ). ಕಾಲ ಕಳೆ ; ಸಮಯಹರಣಮಾಡು : ತದ್ರಾಜಹಂಸಂ ನಿರಾಕುಳಮಿಮಾಟಕ್ಕಿಗಳಿಂದೆ ಪೊಟ್ಟುಗಳೆವಂ ಸಂಸಾರಸಾರೋದಯಂ (ಆದಿಪು. ೦-೬೪); ಮುನ್ನಮೊಪ್ಪಿನಿಂ ನೆಗಟ್ದ ಮಹಾಪುರುಷರ ಕಥೆಗಳುಮಂ ತಾಂ ಸ್ಮರಿಸುತ್ತುಂ ಪೊಟ್ಟುಗಳೆಯುತೀ ತೆಱದಿಂದಂ (ರಘುಕಾವ್ಯ. ೩-೨೬೩); ಕವಿಸಂಗೋಷ್ಠಿಯಿನೊರ್ಮೆ ... ಶಸ್ತ್ರವರಾಭ್ಯಾಸದಿನೊರ್ಮೆ ಪೊಟ್ಟುಗಳೆವಂ ವಿಶ್ವಂಭರೋರ್ವೀಶ್ವರಂ (ಕುಸುಮಾ. ೩-೨೪). **ಪೊತ್ತುಗಳೆ** : ಒರ್ಮೆ ಲೀಲಾವಿಲೋಕನದಿಂ ಮಾಣದೆ ಪೋಗಿ ಪೊತ್ತು[ಶಾಶಾಂ. ಟ್ಟು]ಗಳೆವಂ ನಿಚ್ಚಂ (ಸುಕುಮಾ. ೪-೯೦); ಪೊತ್ತುಗ[ಶಾಶಾಂ. ಕ]ಳೆಯದೆ ತನ್ನ ತನುವನೆರಡಾಗಿ ಮಸೆವೆತ್ತ ಕರಪತ್ರದಿಂ ಸೀಳ್ಳುದೆಂದಾಪ್ಲ್ಯಾಟಿಸಿ (ಶ್ರೀಪಾಲ. ೨೬-೩೩). **ಹೊತ್ತುಕಳೆ** : ಹೊತ್ತುಕಳೆಯಲಾರದೆ . . . ಬಟ್ಟೆಯನ್ನು ನೀರಲ್ಲಿ ಅದ್ದಿ ಒಗೆಯಲಾರಂಭಿಸಿದೆ (ಬಟ್ಟಿಜೀ. ೩೩). **ಹೊತ್ತುಗಳೆ** : ಒಬ್ಬನ ಮನೆಯಲ್ಲಿಂದು ಹೊತ್ತುಗಳೆವೆ ಒಬ್ಬನ ಮನೆಯಲಂದಲೊಂದು ಗಳಿಸಿದೆ (ಬಸವ. ೭೪೧); ಹೊತ್ತುಗಳೆಯದೆ ಎನ್ನ ಳಲಹೆಂದ (ಕುಮಾರಕ್ಕೋ. ೪-೯೩); ಆ ಪೆಣ್ಗಳೊಡನೆ ಹೊತ್ತುಗಳೆಯಲೋಸುಗ ಕೇಳದಳಟುವತ್ತುನಾಲುಕು ವಿದ್ಯೆಗಳ (ಮೋಹತ. ೨೬-೩೭). [ಪೊಟ್ಟು + ಕಳೆ]

**ಪೊಟ್ಟುಪೋಗು** (ನಾ). ಕಾಲ ಕಳೆಯುವಿಕೆ ; **ಹೊತ್ತು ಹೋಗುವಿಕೆ** : ಪೊಟ್ಟುಪೋಗಿಂಗಮುಟ್ಟಿಗಮಾಡುವ ತಮ್ಮುತಿರ್ವರುಂ ಪಲಗೆ ಸಾಯಿರ

ಗದ್ಯಾಣದ ಪೊನ್ನೇ ಸಾಲ್ಗುಮಗ್ಗಳಂ ಬೇಡೆಂದು ದುರ್ಯೋಧನಂ . . . ವಾಸಂಗೆಯುಂ ಪೊರಳ್ದಿ (ಪಂಪಭಾ. ೬-೭೦ ವ) ; [ಪೊಟ್ಟುಪೋಗಿಂಗೆ . . . ಪೊನ್ನು]ಯ್ಯಲೇಳ್ . . . ತರಳಾಕ್ಷಿಯಾಡುತುವಿಪರ್ನನಂ (ರಘುಚಂಪು. ೩-೨೭). [ಪೊಟ್ಟು + ಪೋಗು₁]

**ಪೊಟ್ಟು** ‘ಪೊರ್ದು’ ನೋ.

**ಪೊಟ್ಟುಗೆ** ‘ಪೊರ್ದುಗೆ’ ನೋ.

**ಪೊಟ್ಟ** (ನಾ). ಒಂದು ಸ್ಥಳದ ಹೆಸರು : ಪೊಟ್ಟ ವಿನೀತೀಶ್ವರಕ್ಕಂ ಸರ್ವ್ವಪರಿಹಾರಂ ಕೊಟ್ಟರ್ (ಎಕ. IV. ಹುಣಸೂರು. ೩೩-೩ ; 750); ಕವುಂಂಗಬ ಸನ್ನಿಯರ್ಗ್ಗೆ ಪೊಟ್ಟದ ಹಡದೆನನ್ನಾಕರ ಮಗನಯ್ಯಮ್ಮದೆನನ್ನಾಕರ ಮಗಂ . . . ಕೊಟ್ಟವಂಣ್ಣು (ಎಕ. X. ಕೋಲಾರ. ೯೦-೯೯ ; 903). [?]

**ಪೋ₁, ಪೋಗು₁, ಹೋಗು₁** (ಕ್ರಿ). ಪೋದ, ಹೋದ (ಭೂತಕೃ). ಪೋಪ, ಹೋಪ (ಭವಿಕೃ). ೧. ಇರುವ ಕಡೆಯಿಂದ ಬೇರೆಯ ಕಡೆಗೆ ಚಲಿಸು ; ತೆರಳು ; ಮುಂದೆ ನಡೆ ; ಗಮಿಸು : ಎಲೆ ಪಿಙಾಕ್ಷಿ ಪೋ ಪುಟ್ಟಿದ ತೊಲಗು (ಪಂಪಭಾ. ೯-೪೩); ಮಾರ್ಕೊಳ್ಳದೆ ಪೋ ನೀನ್ (ರಘುಚಂಪು. ೨-೦೬೬) ; ನಾಗರಹಾವೆ . . . ಎರಗುವೆ ನಿನಗೆ, ಈಗಲೆ ಹೊರಗೆ ಪೋ ಪೋ ಪೋ (ಪಂಚತ. ೦೫೨). **ಪೋಗು₁** : ೧. "ಪೋಗು—ಗಮನೇ" (ಶಮದ); ಅನ್ನ ಸಯ್ಯನೆ ಪೋಗಿ (ಇಇ. XII, ೦೬-೯೮ : 813) ; ಅರ್ಕಂ ನಡೆ ನೋಡಿ ಪೋಗಲಾಱದೆ ತಡೆಯೆ ಪಗಲ್ ಪಿರಿಯವಪ್ಪುವಾ ಪುರವರದೊಳ್ (ಕಾವ್ಯಾವ. ೦೬೬ ಕೊಡ್ರಶ) ; ನೀಂ ಬಾ ಪೋಪು (ಪಂಪಭಾ. ೦-೬೦); ಬೇಱೊರ್ಗೆ ಪೋದ ನಲ್ಲರ ನೆನೆದು ದೂಱುಸುವ ನೀಱೆಯರ (ಶಬ್ದಮ. ೩೯). ೨. ಸಾಗು ; ಕಳೆ; ದಾಟು : ಪರಿಪಪ್ಪೋ[ಗಿ] × × × ನೆಯ ಪರಿಷ (ಸೌಇಇ. XI-i, ೬-೩ ; 837) ; ಪೋದ ಭವಂಗಳಂ ನೆನೆವಿನಂ (ಅಂಪು. ೩ ೯೬) ; ಎನಗೀ ಜನ್ಮವಿದಿಂತೆ ಬಂಚಿತನದಿಂದಂ ಪೋಕುಮೋ (ಸುಕುಸು. ೯-೦೦೯). ೩. ನಿವಾರಣೆಯಾಗು ; ಪರಿಹಾರವಾಗು : ಆ ದೀನಾನಾಥರ್ಗೆ ವೃದ್ಧ ದ್ವಿಜಮುನಿನಿಕರಕ್ಕಂದೆರ್ದ ಪೋಪಿನಂ ಕಃ ಕೇನಾರ್ಥೀ ಕೋ ದರಿದ್ರಃ ಎನ್ನುತ್ತುಮನಿತುಮಂ ಧರ್ಮಜಂ ಸೂಱೆಗೊಟ್ಟಂ (ಪಂಪಭಾ. ೬-೯೦) ; ಎನಿತೆನಿತು ಛಳಿ ಪೋಗಲನಿತನಿತು ಪಸಿವಡಸೆ (ಇಳೆರ. ದೀ. ೩೪-೦೫). ೪. ನಾಶವಾಗು ; ಸಾಯು : "ಬೀತುದು ಸವೆದುದೆನಲ್ ಪೋದ್ದುದೆಂಬರು" (ಶಶುಶಿ. ೦೬೦); ಈಗಲೋ ಇನ್ನಾವಾಗಲೋ ಈ ತನುವು ಪೋಗದಿರದು (ಜಗಣ. ೯೯). ೫. ಕಾಣದಾಗು : ಉದಿಸಿದ ದಶದಿವಸದ ಶಿಶು ಪೋಪಾಗ ವಿಧಿ ವಿಧಿಯನು ವಿಸಾಱಬಹುದೇ (ಪೋಚಕ. ೯ ೬೬). **ಹೋಗು₁** : ೧. ನಮ್ಮಯ ಗಂಗನ ಪರಿ ಬನ್ದು ಬೆಳ್ಗೆಱೆಯಂ ಕಾನೂರ್ದು ಮನಿಱ್ದು ಹೊ ಗೆ (ಎಕ. XII,ತಿಪಟೂ. ೩೩-೨; ಸು. 880); ಇದಱಿಂದವೊಂದು ಜನನಾ ನಿನಗೆದೊರಕಿತ್ತು ಮುಂದದಿಂದ ಹೋಗಯ್ಯ ಜನನವಂ ನೀ ಹೊತ್ತು (ಏಕರ. ೦-೬೯); ಒಗತನ ಬಿಟ್ಟು ಹೋಹಾಗ ಹಾಲಿಗೆ ಹೆಪ್ಪ ಮೊಗೆದಿಕ್ಕದವರಾರುಂಟು (ವೋಚಕ. ೯-೦೯); ಹೋಗು ಎನ್ನಲಾರದೆ ಹೊಗೆ ಹಾಕಿದರು (ಗಾದೆ). ೨. ಆಯಿತ್ತ ಉದಯವಾನ ಹೋಯಿತ್ತ ಅಸ್ತವಾನ (ಅಪಶಂ. ೦೦-೯೦); ಪರಿಷ ಹೋದಿಂಬಳಿಕ ವಿರೋಧಿಸಂವತ್ಸರದ ಕನ್ನೆಮಾಸ (ಪ್ರುಶಾ. ೦೯೩೩, ೯೦-೦೯; 1177): ಹೋದ ದಿವಸಂಗಳಲಿ ಕಾಳೆಗವಾದುದಂದಿನ ಭೀಷ್ಮರೊಡನೆ ವಿವಾದಕಾರಣ ಬೇಡಿಕೊಳಬೇಕಹುದು ನದೀಸುತನ (ಕುಮಾವ್ಯಾ. ೦-೦೬). ೩. ಇಂದ್ರಿಯದ ಪೂರ್ವಾಶ್ರಯವು ಗುರುವಿನಿಂದ ಹೋಗದು ಅಂಗದಿಂದ ಹೋಗದು ತನ್ನಿಂದಹುದು ತನ್ನಿಂದ ಹೊಹುದು (ಶಶಶ. ೯-೦೯); ಕಾಱುವದ್ದಿಗೆ ಹೋಹುದೇ ಕ್ಷೆಮುಸ ವವನಿಪನ (ಕುಮಾವ್ಯಾ. ೦-೬): ಹೋದುದು ಮನದುಮ್ಮಳವು ಮಧುಸೂದನಗೆ (ಕುಭಾ. ೩೬-೬೯). ೪. ಹಗೆಯರಲಿ ಹತವಾದನೆ ಹಾ . . . ಮೊಗವ ಕಾಣದೆ ಹೋದನೇ ಎನಗೇನು ಗತಿಯೆಂದ (ಕುಮಾವ್ಯಾ. ೯-೨೦); ಪುನರಪಿ ಕಾದ ಕಳಹುವುದು . . . ರಣದಲಿ ನಿನ್ನ ಹಿರಿಯ ಮಗ ಹೋದನೆನಿಸುವೆನು (ಕೌಶಿಕಾ. ೩೬-೨). ೬. ಮರಳು ; ಹಿಮ್ಮೆಟ್ಟು ; ಹಿಂತಿರುಗು : ಬಿಟ್ಟನು . . . ಕೌರವನೃಪತಿ ರಥವನು ಹೊಟ್ಟುಗರ ತೆಗೆ ಹೋಗಹೇಳೆಂದೆಚ್ಚನತಿರಥರ (ಕುಮಾವ್ಯಾ. ೨-೬೦) ; ಕೆಲರು ಹಾಯಿತು ಕೆಲರು ಹೋಯಿತು ಕೆಲವರೋಡಿತು ಕೆಲವರರ್ದ(ಉ)ತು (ಕೌಶಿಕಾ. ೩೨-೨೫), ಹೊಸ ದೋಣಿಯೆಂದು ಜಿ ಹೋಹೆದು ಬೀಡಿಗೆ ಒಮ್ಮೆ ಸಾಹಸವನು ಮಾಡು (ಇಂಡಾಕ. ೬೨-೨೦). ೭. ನಂದು ; ಆರು : ಮಳೆ ಬಂದಾಗ ಹೋಗಿದ್ದ ದೀಪ ಈಗ ಬಂತು (ರೂಢಿ). ೮. ಆಗು ; ಜರುಗು ; ನಡೆ : ನಡ[ವ]ಹಾಲ ಧಾರೆಗು ಸಹ ಅಕ್ಕಿ ಮೂಡೆ ೧೦ ತಿಂಗಳು ತಿಂಗಳು ತಪ್ಪದೆ ತಿಂಗಳಲ್ಲಿ ೧೭ ಹೋಹಾಗ ನಡವ ವಾರ ೧ ಮತ್ತಂ ಇಪ್ಪತ್ತಐದು ೨೫ ಹೋಹಾಗ ನಡವ ವಾರ ೧ ಅಂತು ತಿಂಗಳಲ್ಲಿ ಯೆರಡುವಾರ ಸವುದಾಯ ನಡವುದಕ್ಕೆ ಅಕ್ಕಿ ಮೂಡೆವು ೧೨ (ಎಇ. XX, ೯೯-೯೯ : 1556). ೯. ಸೇರು ; ಕೂಡು ; ಸಂಭೋಗಿಸು : ದಾಸಿಯನು ಹೋಗುವನೆ ಏಸ ಹಸ್ತದು ಕೈಗೆ (ಸರ್ವಜ್ಞ. ೧೬೦೭).

**ಪೋಪೋಗು, ಪೋಪೋಗು, ಹೋಗಹೋಗು, ಹೋಗುಹೋಗು** (ದ್ವಿರುಕ್ತಿ): ಪುಲಿಪುಲಿ ಪಂಪಮ ಪೋಪೋಗು (ಅಂಪು. ೨-೨೬) ; ಕೈವಲ್ಯಂ ಕವಿಗೆಂದ ಶಿವ ಬಂದ ಪರಮಾನ್ನಂ ದಲತ್ರಣ್ಣವಂ ಪೋಪೋಗರ್ ಹಾ ! (ಸಂಪಶ. ೩೦-೦೦೨); ಹೋಗಹೋಗಲು ಕಾಣ್ಕೆ ಮುಂದಣ ಭಾಗದಲಿ ಲಿಂಗವಂ (ಬಸಪು. ೦೬-೪) ; ಹೋಗುಹೋಗ್ಯ ನೀನೆಮಗೆ ಬರಲಾಗದಲ್ಲಿಗೆ (ಬಸಪು. ೩೭-೦೩). **ಪೋಬರವು** = ಹೋಗಿ ಬರುವುದು : ಅರಸನ ಪುಟ್ಟ ದಿಂಬಟೀಯಮಿ ದಿವಿಜಾಳಿಗೆ ಮಾಣ್ದುದಿಲ್ಲ ಪೋಬರವು(ಅಂಪು. ೯-೬೯). **ಹೋಗಗೊಡು** = ಹೋಗಲು ಅನುಮತಿಯನ್ನು ಕೊಡು ; ಹೋಗಬಿಡು : ನನಗೆ ಹೇಳದೆ ಹೋಹಿರಾದರೆ ಹೋಗಗೊ[ಶಾಸಂ. ಗು]ಡನು (ಸಾಳ್ವಭಾ. ೨೦-೦೦) ; ಬೀಳ್ಕೊಡು, ಕಳುಹು, ಅಪ್ಪಣೆ ಕೊಡು, ಹೋಗಗೊಡು (ಕಂಚುಹು. ೮೬). ‘ಪೋಗೊಡು’ ಪರಾ. **ಹೋಗಬಿಡು** = ಹೋಗಗೊಡು : ಹೋಗಬಿಟ್ಟು ಜಾಗವುವ ಹಿಂದೆಯಾಡುವನ ಬಾಯಲಿ ಮುಟ್ಟಿ ಹುಡಿ ಹೊಯ್ಯದೆ ಮಾಣ್ಬನೆ (ಬಸವ. ೪೧೯) ; ಈಗಳಿರ್ದಂತೀ ಪಶುಗಳು ಹೋಗಬಿಡಿ ನೀವು (ಬಸಪು. ೬೦-೨೩) ; ಅರರೆ ನರ ಪ್ರಸರಿಸಿದನೊ ಪ್ರಸರಿಸಿದನೊ ಘಡ ಹೋಗಬಿಡದಿರಿ (ಕುಮಾವ್ಯಾ. ೦೪-೦೩). **ಹೋಗಲಾಡಿಸು** = ೧. ಇಲ್ಲದಂತೆ ಮಾಡು ; ಹೋಗುವಂತೆ ಮಾಡು : ಪರಿಕರ್ಮನ್, ಅಂಗಸಂಸ್ಕಾರಃ—೨ ಶರೀರದ ಕೊಳೀ ಹೋಗಲಾಡಿಸಿ ಸೊಗಸು ಮಾಡುವಿಕೆ (ಸಿದ್ಧಾಂತಿ. ೨೦೩) ; ಎಣ್ಣೆಪಸೆಯಿದ್ದರೆ ಅದನ್ನು ಹೋಗಲಾಡಿಸಲು ಸಾಬೂನನ್ನುಪಯೋಗಿಸಬೇಕು (ಅಡುಗೆ. ೯೩). ೨. ಪರಿಹರಿಸು ; ನಿವಾರಿಸು ; ಕಳೆ : ಅವರವರ ಹೊಡಬಾಳು ಅವರವರೇ ಹೋಗಲಾಡಿಸಿಕೊಳ್ಳಬೇಕು (ಕಂಗಾಳ. ೨೦೯). ೩. ನಾಶಮಾಡು ; ಹಾಳುಮಾಡು : ತಲತಲಾಂತರದಿಂದ ಬಂದಿದ್ದ ಆಸ್ತಿಯನ್ನು ಅತ ಅಲ್ಪಕಾಲದಲ್ಲೇ ಹೋಗಲಾಡಿಸಿಬಿಟ್ಟ (ರೂಢಿ). ೪. ಕೊಲ್ಲು ; ಸಾಯಿಸು : (ಕ). **ಹೋಗಲಾಡು** = ೧. ಹೋಗಗೊಡು : (ಕ). ೨. ಕಳೆದುಕೊಳ್ಳು ; ನೀಗು : (ಕ). ೩. ನಿರರ್ಥಕಗೊಳಿಸು ; ಹುಸಿಮಾಡು : ನಾರದಮುನಿ ಮಹಾರಾಯ ಹೋಗಲಾಡುವನಲ್ಲ ಮಾತ (ಪೋಚಕ. ೩೩-೨೬). **ಹೋಗಲೀಯು** = ಹೋಗಗೊಡು : ಬಂದ ಮನವ ನಾನೆಂತು ನಂಬುವೆನಯ್ಯಾ . . . ಎನ್ನ ತಂದೆ ಕೂಡಲಸಂಗಮದೇವನಲ್ಲಿಗೆ ಹೋಗಲೀಯದಯ್ಯಾ (ಬಸವ. ೩೩). **ಹೋಗಲೀಸು, ಹೋಗಲಿಸು** = ಪೋಗಗೊಡು : ಹೋಪಹೆನೆಂದರೆ ಒಳಕಾವಲವರು ಹೊಱಕಾವಲವರು ಹೋಗಲೀಸರು (ಶಿವಪ. ೯-೨); ಭೀಮಸೇನನು ನಮಗೆದುರಾಗಿ ಬರುತಲಿದಾನೆ ; ಹೋಗಲೀಸದೆ ತಬ್ಬ

ಹಿಡಿದು ಸಂಹರಿಸೋಣ (ಕೃವಾಲೀ. ೦೦೭) ; ದುರ್ಯೋಧನನನ್ನು ಯುದ್ಧಕ್ಕೆ ಹೋಗಲಿಸಬೇಡ (ಕೀಕ್ಕ.ಕ. ೦೫೨). **ಹೋಗಿಬರು, ಹೋಬರು**=೧. ತೆರಳು ; ಹೊರಡು ; ಬೀಳ್ಕೊಳ್ಳು : ವನಚರವೆ ನಾ ಹೋಗಿಬಹನೇ ನಿಮ್ಮನುಜ್ಞೆಯಲಿ (ಕುಮ್ಮಾಕ. ೭-೦೭) ; ನನಗೆ ಅನುಜ್ಞೆಯನ್ನು ಕೊಡು ; ಹೋಗಿ ಬರುವೆನು (ಕಶಕ. ೯೯). ೨. ಹೋಗು ಮತ್ತು ಬರು : ಶ್ರೀಮನ್ತರ ಹರ್ಮ್ಯಕ್ಕೆ ಇರುವೆಯೂ ಹೋಬರಲಾರದಂತೆ ಮುತ್ತಿಗೆಯಿಟ್ಟು ಏತಕ್ಕಾದರೂ ಸನ್ನದ್ಧನಾಗಿರು (ಚಿತ್ರ.ಕ. ೦೬೯-೦೨). **ಹೋಗಿಬಿಡು**=೧. ಇಲ್ಲವಾಗಂ : ಮೃಣಾಳಿನಿಯ ಮೇಲೆ ಪ್ರೀತಿ ಹೋಗಿ ಬಿಟ್ಟಿತೆಂದೂ ತಿಳಿದು ಕೊಂಡಳು (೨೦೬ಪು. ೦೬೦). ೨. ಸಾಯು ; ಮರಣ ಹೊಂದು : ಗಂಡನ ಕಣ್ಣುಮುಂದೆ ಹೋಗಿಬಿಡುವುದು ಹೆಂಗಸಿಗೆ ಪರಮಭಾಗ್ಯ (ಕಕಕಾ. ೯೩) ; ನಮ್ಮ ಚಿಕ್ಕಪ್ಪ ಹೋಗಿ ಬಿಟ್ಟರು (ಮುರುಳು. ೦೭). **ಹೋದ ಜೀವ ಬರು**=ಹೊರಟು ಹೋದ ಪ್ರಾಣ ಮರಳಿ ಬಂದಷ್ಟು ಸಂತೋಷವಾಗು,— ಸಮಾಧಾನವಾಗು : ಕಾಳು ಬಂದು ಎಲ್ಲವನ್ನೂ ಹೇಳಿದ ಮೇಲೆ ಹೋದ ಜೀವ ಬಂದಂತಾಯಿತು (ಗಾಂಯೆಕ. ೬ ಕಥಾಸಾರ) ; ಬಿಸಿಲಿನಲ್ಲಿ ನಡೆದು ಬಂದು ಎಳನೀರು ಕುಡಿದ ಮೇಲೆ ಹೋದ ಜೀವ ಬಂತು (ಕೂಶಿ). **ಹೋದ ಹೊಲಬು**=ನಡೆದು ಬಂದ ದಾರಿ ; ಸಂಪ್ರದಾಯ ; ಪರಂಪರೆ : ಹೋದ ಹೊಲಬಲ್ಲದಟಿಳೊಳಗೆ ದುರ್ಭೇದತಪವೇ ಹೊಗುವುತದೆ ಹೊಲ್ಲಾದವೆಮ್ಮ ಸವಾಧಿ ಸ್ಮರಣೆ ಶಮದಮಾದಿಗಳು (ಕುಮ್ಮಾಅ. ೩-೨೦). ☞ ಈ ಧಾತು ಅನೇಕ ಶಬ್ದಗಳ ಮುಂದೆ ಸೇರಿ ಬೇರೆ ಬೇರೆ ಅರ್ಥಗಳಲ್ಲಿ ಬಳಕೆಯಾಗುತ್ತದೆ.

[ದ್ರಾ. ತಮಿ. ಪೋ, ಪೋಕು, ಪೋಕ್ಕು ; ಮಲ. ಪೋಕ ; ತೆಲು. ಪೋವು]

**ಪೋ₂, ಹೋಗ್ಯು** (ಅ). ಛೀ, ತೆಗೆ, ಬಿಡು ಎಂಬರ್ಥದ ಉದ್ಗಾರ ವಾಚಕಪದ : ಸ್ಮರನಂ ರೂಪಿನೊಳಿಂದ್ರನಂ ವಿಭವದೊಳ್ ಪೋ ಮೆಚ್ಚೆನಾನ್ (ಪಂಪಭಾ. ೯-೩೬) ; ಪೋ ಮಾಣ ಧರ್ಮಜಂ ಗಡ ಭೀಮಂ ಗಡ (ಗದಾಯು. ೯-೦೩) ; ಸತ್ಪಾತ್ರದೊಳ್ ಧನಮಂ ಪೋ ನಲಿವಂದದಿಂ ನಲಿವನೇ ಧನ್ಯಂ ಧನಪ್ರಾಪ್ತಿಯೊಳ್ (ಶಂಪಾಪು. ೬-೦೦೭). **ಹೋಗ್ಯು** : ಜನಪತಿಯ ಕಟ್ಟಳೆಯಿಯಲಿ ರವಿತನುಜನಡ್ಡೈಸಿದನು ಛಡ ಹೋಗೆನುತ ನಾರಾಚದಲಿ ಮುಸುಕಿದನರ್ಜುನಾತ್ಮಜನ (ಕುಮ್ಮಾದ್ರೋ. ೬-೪೪) ; ನಿನ್ನಯ ಜೋಡಿ ಗಾರುಂಟವರ ಕರೆ ಮಾತಾಡುವೆವು ಹೋಗೆನುತ ಗಹಗಹಿಸಿದನು ಕೈ ಹೊಯಿದು (ಅಪಂಗಾ. ೦-೪-೨೨). [< ಪೋ₁]

**ಪೋಂಚಿ** 'ಪೌಂಚಿ' ನೋ.

**ಪೋಂಛಾವಣೆ** (ನಾ). ಸೇರಿಸುವಿಕೆ ; ಕೂಡಿಸುವಿಕೆ ; ಜೋಡಣೆ : ಒಂದಕ್ಕೆ ನಾಲ್ಕುಮಾತುಗಳನ್ನು ಪೋಂಛಾವಣೆ ಮಾಡಿ ತಾನೂ ಅಳುತ್ತ ಕುಳಿತಳು (ಮಹಾಗ. ೨೯೦). [<ಪೌಂಚಾಯಿಸು + — ಅಣೆ]

**ಪೋಂತು, ಪೋತ್ತು, ಪೋತ್ತು, ಹೋತ್ತು, ಹೋತ್ತು** (ನಾ). ಗಂಡು ಮೇಕೆ; ಗಂಡಾಡು : ಪೋಂತಿನ ಮಹೋತ್ರದೊಳುಳ್ಳಿಯನರೆದು ನಸ್ಯಮಂ ಮಾಡೆ ಪಿಂಗುಗುಂ ಗ್ರಹನಿವಹು (ಲೋಕೋಕ. ೦೦-೪೬) ; ಮುನಿನ್ನೊಗೆದಾಡಿನ ಬಸಿಱಿಳ್ ಬಂದುದು ಪೋಂತಿನ ರೂಪಿಂ ಬೆಳೆದು ಬಟಿಕ ಮದೋನ್ಮತ್ತಂ (ಜುಕೋಕ. ೩-೫೩) ; ಸೂಕರದ . . . ಪೋತ್ತಿನ ವಿಗಂಧಬೀಧುರವಿಣ್ಮೂತ್ರಪ್ರಕಾರ ಗಂಧದ ಶ್ವಾನೀಕಂ ಭಯಹಾನಿಶೋಕ ರುಜ್ಮರಣಕರಂ (ಅಕ್ಕಿಂಆ. ೩-೨೦). **ಪೋತ್ತು₁** : 'ತಿಂಡಿಪೋತ' ಪರಾ. **ಪೋತು** : ಪೋತಿನ ಮಹೋತ್ರದೊಳಂ ಪರಿವರ್ಧಿಸಿ ಕುಡಿಸಲುರಗಕಿವಿಷಮಟಿಗುಂ (ಜಕುದ. ೫-೬೨) ; ಪೋತು ಮಂಗಂ ಮೊಲಂ . . . ನೀಡುಂ ವೇಗಂಗಳು ತಾಳ್ದವವು (ಹಾರಾಸ್ಕ. ೯-೦೦-೫೫). **ಹೋತ್ತ** : ಹೋತನ ಕೊಂದು ಹೋಮವ ಬೇಳಿ ಚಾಂಡಾಲರಾಗ ಹೇಳಿತ್ತೇ ವೇದ (ಗಜಾ. ೦೪೬-೦) ; ಯಾತದ ಮೇಲೆ ಹೋತ ಮೇಯುವುದ ಕಂಡೆ (ಪುರಂದ. ೨-೦೨-೨) ; ಮಾರಿಯ ಕಣ್ಣು ಹೋತನ ಮೇಲೆ (ಗಾದೆ). **ಹೋತ್ತು₂** : "ಅಜಃ . . . ಛಾಗಃ, ಛಗಳಕಃ, ಛಗಃ—ಈ ೭ ಹೋತು" (ಶಬಾಯು. ೪೬-೦೨೨) ; ತಲೆ ಬೋಟಿಸಿ ಹೋತಂ [ಪಾಠಾಂ. ಹೊಂತಂ] ಸಿದಿದಲೆಗುಡುವರ್ (ಸಮಕ. ೯-೦೨೦) ; ವೇದಪುರಾಣ ಹೋತಿಂಗೆ ಮಾರಿ (ಬಸವ. ೫೭೨) ; ಹೋತಿನ ಕೊರಳೊಳಗೆ ಮೊಲೆ ಇದ್ದರೇನು (ಪುರಂದ. ೦-೦೪೯ ಪಲ್ಲವಿ).

**ಪೊತ್ತಿಮಕ್ಕಳ್, ಪೊತ್ತಿಸ್ಸಕ್ಕಳ್, ಪೊತ್ತಿರ್ಮಕ್ಕಳ್, ಪೊತ್ತಿರ್ಮಕ್ಕಳು** = ಗಂಡು ಮಕ್ಕಳು (?) : ಇದೊನ್ನೆಡಿಸಿದೊನ್ಪಞ್ಚಮಹಾಪಾತಕನಕ್ಕು ತನ್ನೊಕ್ಕಲುಳ್ ಪೊತ್ತಿಮಕ್ಕಳ್ಪುಟ್ಟದೆ ಕೆಡುಗ (ಎಕ. III, ಕೃಸೂರು. ೫೫-೨೦ ; ಸು. 740) ; ಇದಾನಟುತ್ತೊನ್ಪಞ್ಚಮಹಾಪಾತಕನಾಗಿ ದಿಟ್ಟಗಲುಣ್ಣು ಕೊಟ್ಟತೇದು ಆಟ್ಟುವೆಣ್ಣ ತ್ತಲಪೂಸುವೋನಕ್ಕು ಒಕ್ಕಲುಳೊತ್ತಿಮಕ್ಕಳ್ಪುಟ್ಟದೆ ಕೆಡುಗ (ಎಕ. III, ಪಃ೩೫. ೨೬-೮ ; ಸು. 810) ; ಅದಾನ್ ಆಟಿತ್ತೊನ್ . . . ಸಾಸಿರಕವಿಲೆಯುಮಾನ್ ಕೊನ್ದೋನ್ ಅಪ್ಪೋನೆ ಒಕ್ಕಲುಳ್ ಪೊತ್ತಿನ್‌ಮಕ್ಕಳ್ ಪುಟ್ಟಲ್ಕಮರ್ ಪುಟ್ಟದೊಪ್ಪುವರ್ ಪುಂಗಂ (ಎಕ. IV, ಹೆಗ್ಗಡ. ೮೭-೦೨ ; ಸು. 700) ; ಇವಾನ್ ಕೆಡಿಸಿದೋನುಂ ದೆತ್ತೊನ್ನವರ್ ಪೊತ್ತಿರ್ಮ್ಮಕ್ಕಳ್ ಪುಟ್ಟಗು ವಾರಣಾಸಿಯ ಸಾಸಿರ್ವ್ವರ ಪಾರ್ವ್ವರ ಕೊನ್ದ ಕೊಲೆ ಎಯ್ದಿ × × ಪಞ್ಚಮಹಾಪಾತಕನಕ್ಕು (ಎಕ. III, ತಿರುಮ. ೦೦೫-೬ ; ಸು. ೯೦೦) ; ಪರಿಯಾರಮಾನ್ನೆಡಿಸಿದೊನ್ಪಞ್ಚಮಹಾಪಾತಕನಕ್ಕೆ ಬಾರಣಾಸಿಯನಟಿದ ಪಾಪಮಕ್ಕೆ ಎಟ್ಟಾದೆಟಿ ಎತ್ತುವೊನ್ಗೆ ಬಿತ್ತುಂ ಪೊತ್ತಿರ್ಮ್ಮಕ್ಕಳು ಪುಟ್ಟಾದೆ ಕೆಡುವೊನ್ (ಎಕ. XIV, ತಿರುಮ. ೨೫೬-೦೦ ; ಸು. ೯೦೦). ☞ ಕನ್ನಡದ 'ಪೋಂತು' ಪದವು ಒಂದು ಪ್ರಾಣಿಯ ಗಂಡನ್ನು ಸೂಚಿಸುವ ಹಾಗೆಯೇ ತಮಿ. ಮಲ. 'ಪೋತ್ತು', ತೆಲು. 'ಪೋತು' ಪದಗಳು ಪ್ರಾಣಿ, ಪಕ್ಷಿಗಳ ಗಂಡನ್ನು ಸೂಚಿಸುತ್ತವೆ. ಆದುದರಿಂದ 'ಪೊತ್ತಿಮಕ್ಕಳ್'— ಮುಂತಾದ ರೂಪಗಳು 'ಪೋಂತು' ಪದಕ್ಕೆ ಸಂಬಂಧಪಟ್ಟಿರಬಹುದು. **ಪೋಂತಾನೆಯಂತರ**=ಅಜಗಜಾಂತರ: ಕೇಳ್ದ ಆ ಬಣ್ಣನೆಗೆ ಕಾಣ್ಬ ಈ ಕಾಣಿಕೆಗೆ, ಸಮತೆಯೇಂ ? ಪೋಂತಾನೆಯಂತರಂ (ಶ್ರೀರಾಮಪಾ. ೪೨೦-೪೦).

[ದ್ರಾ. ತಮಿ. ಮಲ. ಪೋತ್ತು ; ಕೊತ. ಪೋತು ; ತೆಲು. ಪೋತು= ಪ್ರಾಣಿ ಅಥವಾ ಪಕ್ಷಿಗಳಲ್ಲಿ ಗಂಡು ; ಕೋಲಾ. ಪೊತ್=ಹುಂಜ ; ನಾಯ್ಕಿ. ಪೋತ್ ; ಪರ್ಜಿ. ಪೋತ್=ಗಂಡುಪಕ್ಷಿ ; ಕೊಂಡ. ಪೋತ್=ಗಂಡುಪ್ರಾಣಿ ; ಕುವಿ. ಪೋತೂ=ಕೆಲವು ಪ್ರಾಣಿಪಕ್ಷಿಗಳಲ್ಲಿ ಗಂಡು]

**ಪೋಕ, ಹೋಕ** (ನಾ). ೧. ತಿರುಗಾಡುವವನು; ಅಲೆದಾಡುವವನು; ಅಲೆಮಾರಿ : ಕಾಪಲರ ಮುಟ್ಟಿ ಕಾಲ್ಗೆಡಿಸಿ ಪೋಕರ ಮಾಡಿ (ಕಕುಕ್ರ. ೯-೦೪-೦೩). ೨. (ಸಮಯವನ್ನು) ಕಳೆಯುವವನು : 'ಪೊತ್ತುಪೋಕ' ಪರಾ. ೩. ನೀಚ ; ದುಷ್ಟ : "ಅವಿವೃತ್ತನೆನೆ ಪೋಕನಕ್ಕು" (ಪುಂಗಣ. ೬೩-೨೫) ; ಪೋಕನಿವನಿವನ ನುಡಿ ಪುಸಿ (ಶಂಕು. ೯-೦೭) ; ಕಾಕರಾಗಲವರು ವಿಷಯ ನೀಕರಾಗಲವರು ಬಹಳ ಪೋಕರಾಗಲವರು (ಸುಸಾಕ. ೬೭-೯) ; ಪೋಕನಿಗೆ ನಾಕ ಸಲ್ಲ ಮೂರ್ಕನಿಗೆ ಸ್ವಪ್ನ ಸಲ್ಲ (ಗಾದೆ). ೪. ಪೋಲಿ ; ತುಂಟ : "ಪೋಕನೆನೆ ತುಂಟಗಭಿಧಾನವು" (ಕಕಕ. ೦೨೭) ; ತಂದೆಯಿದಿರೊಳು ಪುಂಡರ ಪೋಕರ ನಡೆಯೋ (ಛಂಕ. ೨೬-೦೦೯) ; ಮದುವೆ ಯಾಕಾದನಿವನೂ ಪೋಕ ಮುದನು (ಕಂಕ. ೯೩-೨). **ಹೋಕ** : ೧. 'ದಾರಿಹೋಕ' ಪರಾ. [ಪೋ₁+ — ಕ₂]

**ಪೋಕತನ** (ನಾ). ದುಷ್ಟತನ ; ನೀಚತನ : ಎಳೆ ಮರುಳೆ ಪೋಕತನವಿಲ್ಲಿ ಮೆರೆಯಾದು ಮರಳು (ಕುಲಂಗ. ೫೨-೬). [ಪೋಕ+ — ತನ]

**ಪೋಕರಿ, ಪೋಕ್ರಿ** (ನಾ). ೧. ದುಷ್ಟನಡತೆಯುಳ್ಳ ವ್ಯಕ್ತಿ: ನೀಚ ಸ್ವಭಾವದ ವ್ಯಕ್ತಿ : ಆತನು ಆವ ಕೆಟ್ಟ ಕೆಲಸವನ್ನು ಮಾಡುವುದಕ್ಕೂ

ಹೇಸರ ಪೋಕರಿ ಹುಡುಗ (ಶಿಶು. ೬೦) ; ಪೋಕರಿ ಇವರಲ್ಲೊಬ್ಬಳು (ದುಃಖಿ. ೦೫೦). ೨. ತುಂಟ ವ್ಯಕ್ತಿ ; ಉಡಾಳ : ಪೋಲಿ : ನಾನು ಮೊದಲಿನಿಂದಲೂ ಪೋಕರಿಯೆಂಬುದು ಸರಿಯೇ ಸರಿ (ಚಾರಿ. ೦೦); ನಿಮ್ಮ ತಂಗಿಯು ಮಗ ಶುದ್ಧ ಪೋಕರಿ (ಕುಹಾಗ. ೯೬). **ಪೋಕ್ರಿ** : ೧. ಬಹಳ ಪೋಕ್ರಿಯಮ್ಮ. ಪಕ್ಕಾ ಹೆಣ್ಣುಮಾರಳ! (ಹು. ೬೩). ೨. ಅಜ್ಜಿ ಯಾವಾಗಲೂ ನನ್ನನ್ನು ಪೋಕ್ರಿ ಎಂದು ಬೈಯುತ್ತಾಳೆ (ಕತಂಗ. ೯೬) ; ನಿನ್ನನ್ನು ಕಂತ್ರಿಗಳ ಕಣ್ಣುತಪ್ಪಿಸಿ ಸಾಬೀತಿನಲ್ಲಿಟ್ಟುಕೊಳ್ಳುವುದು ತೋಮನಿಗೆ ತುಂಬ ಸುಲಭವಲ್ಲ ಈ ಪೋಕ್ರಿಗಳ ಪಟಲಾಂನಲ್ಲಿ (ಹೊಸಕ್ಷಿ. ೩೦).
[ದೇ. ॥ ತಮಿ. ಪೋಕ್ಕರಿ, ಪೋಕ್ಕಲಿ ; ಮಲ. ಪೋಕ್ಕರಿ ; ತುಳು. ಪೋಕಿ, ಪೋಕರಿ, ಪೋಕುರಿ; ತೆಲು. ಪೋಕಿರಿ]

**ಪೋಕರಿತನ** (ನಾ). ತುಂಟತನ ; ಉಡಾಳತನ : ಅಫಜಲಖಾನನು ಕ್ರೋಧದಿಂದ, ರಹಿಮನ ಪೋಕರಿತನಕ್ಕೆ ತಕ್ಕ ಶಿಕ್ಷೆ ಮಾಡಬೇಕೆಂದು ಕತ್ತಿಯನ್ನೆತ್ತಿದನು (ಕೋಹಿಪು. ೦೬). [ಪೋಕರಿ + – ತನ]

**ಪೋಕವಿದ್ಯೆ** (ನಾ). ದುಷ್ಟವಿದ್ಯೆ ; ನೀಚವಿದ್ಯೆ : ಕಾಕುಮಾತು ಆಡಬೇಡ ಪೋಕವಿದ್ಯೆಗೆ ಹೋಗಬೇಡ (ಗಾದೆ). [ಪೋಕ + ವಿದ್ಯೆ]

**ಪೋಕವೃತ್ತಿ** (ನಾ). ಕೆಟ್ಟಸ್ವಭಾವ ; ನೀಚವೃತ್ತಿ : ಏಕಾದಶಿಯ ಮಾಡಿ ಯತಿಗಳನೊಡನಾಡಿ ಪೋಕವೃತ್ತಿಗಳನೀಡಾಡಿ (ಹಾದಿಬೀ. ೦೩೬.೦೦). [ಪೋಕ + ವೃತ್ತಿ]

**ಪೋಕಳ** (ನಾ). ನಿಜವಲ್ಲದುದು ; ತೋರಿಕೆ ; ಸುಳ್ಳಾದುದು : ಸುಳ್ಳ ನಾಟಕ–ಕಂಪನಿ ತಗೀತೇನಿ, ಅಂತ ಪೋಕಳ ಹುರುಪಿನ್ಯಾಗ ಬೇಡಿದರ ಏನು ಕೆಲಸ ಆಗಬೇಕು? (ಗಂಕೂಯು. ೨೯೩). [← ಮರಾ. ಪೋಕಳ್]

**ಪೋಕಾಟ** (ನಾ). = ಪೋಕತನ : ಮಾನಿನಿಯರೊಳಗೆ ಪೋಕಾಟವೇನಿದು (ಕಪಳ. ೦೯೯-೦). [ಪೋಕ + ಆಟ]

**ಪೋಕಾಟಿಕೆ** (ನಾ). ತುಂಟಾಟ ; ಪುಂಡಾಟಿಕೆ : ನೀತಿಶೀಲನಾದ ವಿಮರ್ಶಾಧಿಕಾರಿಯ ಮೇಲೆ . . . ಅಪವಾದವನ್ನು ಹಾಕುವುದು ತೀರಾ ಪೋಕಾಟಿಕೆಯೆನ್ನಬೇಕು (ಶಾಗ್ಬಿ. ೨೯೬). [ಪೋಕಾಟ + – ಇಕೆ]

**ಪೋಕ್ತ** (ನಾ). ೧. (ಉಕ) ಟಾಕುಠೀಕು ; ಶಿಸ್ತು ; ಠೀವಿ. ೨. ಟಾಕುಠೀಕಾದ ವ್ಯಕ್ತಿ ; ಶಿಸ್ತಾಗಿರುವ ವ್ಯಕ್ತಿ : ಎರಡು ಪೋಲಿಗಳನ್ನು ಬುಡಿಗೆಗೆ ಹಿಡಿದಿದ್ದಾನೆ. ದೊಡ್ಡ ಪೋಕ್ತನಾಗಿ ತಿರುಗುತ್ತಾನೆ (ಕೂಕುರಾ. ೦೩೩) ; ಆಫೀಸರ ಆದ. ಇನ್ನರ ಪೋಕ್ತ ಆಗಬೇಕು ಅನ್ನೂ ಖಬರೇ ಇಲ್ಲಾ (ರೀಕಪ. II, ೨೦೯).

**ಪೋಕ್ತಾಗಿ** = ಆಡಂಬರದಿಂದ ಕೂಡಿ; ಠೀವಿಯಿಂದ ; ಟಾಕುಠೀಕಾಗಿ : ಪಾಸ್ ' ಎಂದು ಪೋಕ್ತಾಗಿ ಎದೆ ತಟ್ಟಿಕೊಳ್ಳುತ್ತ ಗದ್ದಲದಲ್ಲಿ ನುಗ್ಗಿಬಿಡುತ್ತಿದ್ದೆ (ವೃಶಿ. ೯೦೬) ; ಆಕೆ ದಿಟ್ಟತನದಿಂದ ಎದ್ದುನಿಂತು ' ಪೋಕ್ತಾಗಿ ' ಮಾತನಾಡಿದಳು (ಸಮಜೀ. ೬೩೩).
[← ಪಾರ. ಪುಖ್ತ ; ಮರಾ. ಪೋಕ್ತ ]

**ಪೋಕ್ತತನ** (ನಾ), ಗಾಂಭೀರ್ಯ ; ದೊಡ್ಡತನ : ಒಂದು ಪ್ರಸಂಗವು ಮಾತ್ರ . . . ಆಕೆಯ ಹುಡುಗತನವನ್ನು ಕಳೆದು ಪೋಕ್ತತನವನ್ನು ಕಲಿಸಿಕೊಟ್ಟಿತು (ಗಂಕೂಯು. ೨೨೯). [ಪೋಕ್ತ + – ತನ]

**ಪೋಕ್ರಿ** ' ಪೋಕರಿ ' ನೋ.

**ಪೋಗಂಡ** (ನಾ). ೧. ಅಂಗಹೀನ ; ಅಂಗವಿಕಲ : " ವಿಕಲಾಂಗಃ, ಪೋಗಂಡಃ — ಈ ೨ ಅಂಗಹೀನಂ " (ಹಜಾಯು. ೬೯–೨೩೩) ; ಆ ಗಂಡನ ನಚ್ಚಿದ ಕೋಳ್ ಪೋಗಂಡನನಪ್ಪವಂತೆ ಮಾಡಿದ ಬದಿಯಂ ಮಾರ್ಗಂ ಕೊಯ್ಯುಟ್ಟಗೆಯೊಳ್ ಪೋಗೊರಸದೆ ಕಂಡನಾದೊಡೇಂ ಬಟ್ಟಪನೇ (ಧುಕೋಪ. ೨-೬೦). ೨. ವಯಸ್ಸಾಗದ ಬಾಲಕ ; ಪ್ರೌಢನಲ್ಲದವನು. ' [ಸಂ. ]

**ಪೋಗಂಡಿಕೆ** (ನಾ). ತೋರಿಕೆಯ ಶೌರ್ಯ : ಕಳೆದುಹೋದ ಪರಾಕ್ರಮ : ' ನಲ್ಲಪೋಗಂಡಿಕೆ ' ಪರಾ. [ಪೋಗಂಡ + – ಇಕೆ]

**ಪೋಗಟ್ಟು** (ಕ್ರಿ). ಓಡಿಸಂ : ನೆರೆಯೊಳ್ ಸೇರಲು ಪೋರಂಗೈದು ಸತಿ ತಾಂ ಪೋಗಟ್ಟುವಳ್ . . . ತೊಲಗಿರಲ್ ಲಕ್ಷ್ಮೀಕಟಾಕ್ಷೇಕ್ಷಣಾ (ಸೋಮೇಶ. ೩೦). [ಪೋಗು$_1$ (< ಪೋ$_1$) + ಅಟ್ಟು$_1$]

**ಪೋಗತೊಟಿಸ್ ?** (ಕ್ರಿ). (?) : ಚಿದ್ದಯ್ಯನು ಜಕ್ಕಯ್ಯನುಮೆಂಬ ಪಿರಿಯರು ಗುಣ್ಣಮಯ್ಯಂದೋಜಿ ಎಡೆಯಾಮ್ಲತನದಿಂ ರಾಜಗಾಮಿತಂಗೆಯ್ದು ಮೆಣ್ಣೆಯತನದಲೂರನೆನ್ನದೆನ್ನು ಮೂಜುಪರಿಷದುಣ್ಬಾಳಿಯ ಪೋಗತೊಟ್ಟು ಣಾತಮಿಪ್ಪರ್ದಂ (ಸೌಇಇ. IX — 1, ೦೨೩-೦೬ ; 1059). [?]

**ಪೋಗಾಗು** (ನಾ). ಆಗುಹೋಗು ; ಲಾಭ ನಷ್ಟ : ಅಂತವಜ ಪೋಗಾಗುಗಳನೊರೆದೊರೆದು ಸುಸೂತ್ರಂ ತಪ್ಪದಂತೆ ಸೇವುಮೆಗಿಕ್ಕಿ ಬರೆಯಿಸಿ (ಶಕ್ಕಾಕಾ. ೯-೨೯). [ಪೋಗು$_2$ + ಆಗು$_2$]

**ಪೋಗಾಡು**, ಹೋಗಾಡು (ಕ್ರಿ). ೧. ಕಳೆದುಕೊಳ್ಳು; ನಷ್ಟಹೊಂದು ; ನೀಗು : ರಾಜ್ಯವನಿತಂ ಪೋಗಾಡಿದಂ ರಾಕ್ಷಸಂ (ಸೋಮೇಶ. ೯೩) ; ತನ್ನಿರ್ದ ಮನೆಯುಂ ಮಾಜಿಯುಮಳ್ಗೆ ಪೋಗಾಡಿ ತದನಂತರಂ ತನ್ನ ತಾಯಲ್ಲಿರ್ದಂತಪ್ಪ ವಸ್ತುಗಳಂ ಕಟಿಪುವುದೆಂದು ಪೇಟ್ಟಟ್ಟಲ್ (ಪುಣ್ಯಾಸ್ರ. ೯-೦೬ ಪ) : ತಂತಮ್ಮ ತಂದೆಗಳಾರ್ಜಿಸಿದ ಧನಧಾನ್ಯಂಗಳೆಲ್ಲಮಂ ಪೋಗಾಡಿ ಪರಿಕ್ಷೀಣವಾಗಿ (ಧರ್ಮಾ. ೦೬೨). **ಹೋಗಾಡು** : ೧. "ಹೋಗಾಡು (ಹೋಗು + ಆಡು) — ಪ್ರಮಾದತ್ಯಜನೇ" (ಶಮದ) ; ನುಡಿಯಾಲಟಿಯದೆ ಸಕಲರಾಜ್ಯಮಂ ಹೋಗಾಡಿ . . . ನಗೆಗೆಡೆಯಾದ ಪಾತಕ ಹರಿಶ್ಚಂದ್ರ (ಹಕಾ. ೦೨-೯೩) ; ಕದನದಲಿ ಸುತನಿಧಿಯ ಹೋಗಾಡಿದೆ ನಿಜಾನ್ವಯಕಲ್ಪತರುವನು (ಕುಮ್ಯಾಕ. ೦-೯) ; ಇದ್ದುದನು ಹೋಗಾಡಿ . . . ಉದ್ದನ ಮರನ ತುದಿಗೇಱಿ ತಲೆಯೂಱಿ ಬಿದ್ದು ಸತ್ತಂತೆ (ಸರ್ವಜ್ಞ. ೯೩೩). ೨. (ಮಾತಿಗೆ) ತಪ್ಪು ; ಮೀರು : ಒಡಲ ಹಿಡಿದಾಡದಿರು ನುಡಿಯ ಹೋಗಾಡದಿರು (ಸರ್ವಜ್ಞ. ೩೦೦) ; ಮಾತ ಹೋಗಾಡಿ ಬಳಿಕಾ ನೆನೆನೆನೆದು ಕಡೆಯಲ್ಲಿ ಹುಡುಕಾಡುವನೆ ಮೂರ್ಖ (ಏಶಶ. ೯೦). ೩. ಬಿಡು ; ತ್ಯಜಿಸು : ಆಡುವುದು ತತ್ವಜ್ಞರೊಡನೆಡೆಯಾಡುವುದು ತತ್ಸನ್ನಿಧಿಗೆ ಹೋಗಾಡುವುದು ದುಷ್ಕೃತವನು (ಶಿಶಾಗ. ೬–೩–೯೯). ೪. ಇಲ್ಲವಾಗಿಸು ; ನಿವಾರಿಸು : ಮಾಡಿದನು ಮುಖಶತವನದು ಹೋಗಾಡಿ ಶಿಂದ್ರುನನಲ್ಲಿ ತನಗೆಡೆಮಾಡಿತರಮನೆ (ಕುವ್ಯಾರ. ೦೩-೬೯). ೫. ನೆರವೇರಿಸು ; ತೀರಿಸು ; ಪೂರೈಸು : ಬಾಣಹತಿಗೆಯ್ಯಡಿಸಿ ರಾಜ್ಯಶ್ರೀಣಿ ಜರುಗಿತು ಶೌರ್ಯನಗರದ ಪಾಣಿಯರು ಪೊಕ್ಕಱಿದು ಹೋಗಾಡಿದರು ಪತಿರಿಣವ (ಕುವ್ಯಾಕ. ೨೯-೯೨). [ಪೋಗು$_1$ (< ಪೋ$_1$) + ಆಡು$_1$]

**ಪೋಗಿಸು**, ಹೋಗಿಸು (ಕ್ರಿ). ಹೋಗುವಂತೆ ಮಾಡು ; ತೊಲಗಿಸು : ಆ ಗಿರಿತಟದಿಂದವನಂ ಪೋಗಿಸಿ (ಕಬಕಂ. ೨-೦೦೨). **ಹೋಗಿಸು** : " ಜಲಯತಿ = ಬಾಯಾರಿಕೆಯುಂ ಹೋಗಿಸಿದಪುದು " (ಶಾಕ್ಯ. ೨೩೯).
[ಪೋಗು$_1$ ( < ಪೋ$_1$) + – ಇಸು$_3$]

**ಪೋಗು$_1$** ' ಪೋ$_1$ ' ನೋ.

**ಪೋಗು$_2$**, ಹೋಗು$_3$ (ನಾ). ೧. ತೆರಳುವಿಕೆ ; ನಿರ್ಗಮನ : ಆನೆ ಕುದುರೆಗಳುಂ ಮಾನಸರ ಬರುವುಮಂ ಪೋಗುಮಂ ಕಂಡು (ಪಶ್ಚಾರಾ. ೬೯–೨೨) ; ಪುರಜನಗಳೆಲ್ಲಂ ನೆರೆದವರ ಪೋಗಿಂಗೆ ಸೈರಿಸಲಾಱದೆ (ಶಂಕಶಾ. ೬–೦೬ ಪ); ನಿಮ್ಮ ಪೋಗಂ ಪುರಜನಂ ಪೇಟ್ ಕೇಳ್ದು (ಧರ್ಮಾಮೃ. ೦-೯೬). ೨. ಕಳೆದುಹೋಗುವಿಕೆ : ಕೈತಪ್ಪಿಹೋಗುವಿಕೆ : ತನ್ನೊಡಮೆಯ ಪೋಗಿಂಗಮವಳ ಪೋಗಿಂಗಂ ನಿಗ್ಗಡಿ ಬೆನ್ನನಟಿಸಿ ಪೋದಂ (ಶಂರಾಮಾ. ೬-೩೩). ೩. (ಮಲಮೂತ್ರಾದಿಗಳ) ವಿಸರ್ಜನೆ : ಮಲಮೂತ್ರದ ಪೋಗುಂ ಪಾಳ್ಕುಮದುಮೆ ಜಡತೆಯುನೀಗುಂ (ಕಶ್ಯಾಕಾ. ೨-೦೬). ೪.

ಕುಸ್ತಿಯ ಒಂದು ವರಸೆ,—ಪಟ್ಟು : ಕೊಂತವಾರವು ಲಾಟ ಡೊಕ್ಕರ ಪೋಗು ಬಾಣಾ[ಗು]ಗಳೂ . . . ತಳಹತ್ತ ಗಳಹತ್ತಂ ತಾಳಿಲ ವಿಂದಾಣದಲಿ ಹರಿ ಕಾದಿ ಬಳಲಿಸಿದ (ಗಿರಿಜಾ. ೨೨-೬೩). **ಹೋಗು$_2$:** ೫. ಅಳಿವು ; ನಾಶ : ಸಂಸಾರದಾಗುಂ ಬೋ ಸಂಸಾರದ ಹೋಗುಂ ಬೋ (ಬಸವ. ೦೬೮). 'ಆಗುಹೋಗು', 'ಹೋಕು' ಪರಾ.

[<ಪೋ$_1$./ತಮಿ. ಪೋಕ್ಕು ; ಮಲ. ಪೋಕ್ಕು ; ತುಳು. ಪೋಕು ; ಕೊಡ. ಪೋಕ್ =ಮಾರ್ಗ, ರಹಸ್ಯ ; ತೆಲು. ಪೋಕ, ಪೋಕು]

**ಪೋಗುಡು** ' ಪೋಗೊಡು ' ನೋ.

**ಪೋಗುಹ** (ನಾ). ಹೊರಟುಹೋಗುವಿಕೆ ; ಕಳೆದುಹೋಗುವಿಕೆ : ' ಹರೆಯಬೋಗುಹ ' ಪರಾ.

[ಪೋಗು$_1$ (<ಪೋ$_1$) + — ಹ$_2$ (< — ವ$_2$)]

**ಪೋಗೊಡು**, ಪೋಗುಡು (ಕ್ರಿ). ೧. ಹೋಗಲು ಅವಕಾಶ ನೀಡು : ಸಾರಿದರೆ ನೂರಾಗಿ ಹರಿದೋಡುತಿಹನು, ಸೇರಿದರೆ ಸೆರೆವಿಡಿದು ಮರಳಿ ಪೋಗೊಡನು (ಕುಮಾ. ೦೦-೬). **ಪೋಗುಡು :** ೨. ಕಳೆದುಕೊಳ್ಳು ; ನೀಗಿಕೊಳ್ಳು : ಎಳನೆತ್ತರ ಕೂರ್ಪಿಂ ತಲೆಯಂ ಪೋಗುಡುವೀ ನೀಂ ಮರುಳಾಗಾ ! (ಧರ್ಮಾಮೃ. ೯೨-೨೬). [ಪೋಗು$_1$ (<ಪೋ$_1$)+ಕೊಡು$_1$]

**ಪೋಗೊದೆ** (ಕ್ರಿ). ದೂರ ಹೋಗುವಂತೆ ಕಾಲಿನಿಂದ ನೂಕು,–ಒದೆ : ಮಂದಸಿನ ಮುಚ್ಚುಳನುಂಗುಟದಿಂದೆ ಮೀಂಟಿ ಪೋಗೊದೆದು (ಜಗಿ. ೬-೩೦).

[ಪೋಗು$_1$ (<ಪೋ$_1$) + ಒದೆ$_1$]

**ಪೋಗೋಳಿಸು**, ಹೋಗೋಳಿಸಂ (ಕ್ರಿ). ಹೋಗಲು ಬಿಡು ; ಬೀಳ್ಕೊಳ್ಳು; ಕಳುಹಿಸಿ ಕೊಡಂ : ಒಮ್ಮೆಗೆನ್ನಂ ಪೋಗೋಳಿಸು ಮರಳಿ ನಮ್ಮಾ ! (ಕುಮಾ. ೩೨-೨). **ಹೋಗೋಳಿಸು :** ಕೆಳದಿಯರನ್ನು ಮಾಲಿಸುತ್ತಿದ್ದು, ಶಿರಸ್ಸಂಜ್ಞೆಯಿಂದ ಹೋಗೋಳಿಸಿ . . . ಆತನಿಗೆ ಮುಗ್ಧಾಯತ ಪ್ರಾರ್ಥಿಯ ಇದಿರ್ನೋಟವನ್ನೊಡ್ಡಿರುವಳು (ಶಾಂತ್ರಕ. ೦೯೦-೩).

[ ಪೋಗು$_1$ (< ಪೋ$_1$) + ಕೊಳ್$_1$ + — ಇಸು$_3$ ]

**ಪೋಚ** (ನಾ). ಒಬ್ಬಾತನ ಹೆಸರು : ಚಿಂಗಯ್ಯನ ಚಾವಬ್ಬೆಯ ಮಗಂ ಪೋಚನ ಕಲ್ಲ × × × (ಪ್ರ. ಅಂ. ೦೯೯೨. ೨-೬: 973). [?]

**ಪೋಚಬುಕ್ಕು** (ನಾ). ರಸೀತಿ ಪುಸ್ತಕ : ಜೀನಸಗಳು ಬಂದು ದಾಖಲಾದ ಪೋಚಬುಕ್ಕಿನ ಮೇಲಿಂದ ತಪಾಸ ಮಾಡೋಣದರಲ್ಲಿ ಬಹಳೇ ಅಡಚಣೆಯು ಬೀಳುವದು (ಕುಂದಪ್ರಾ. ೯೨).

[ ಪೋಚ್$_6$ (p ← ಮರಾ. ಪೋಂಚ್) + ಬುಕ್ಕು ]

**ಪೋಚಯ್ಯ** (ನಾ). ಒಬ್ಬಾತನ ಹೆಸರು : ದುಗ್ಗಮಾಯ್ಯನ ಮಗ ಪೋಚಯ್ಯ ಬೆಸಗೆಯ್ದಗಲ್ಲ ನಿಜಿಸಿ (ಎಕ. IV. ಹುಣಸೂ. ೬೯-೧೯; 976).

[ ಪೋಚ + ಅಯ್ಯ$_1$ ]

**ಪೋಚಿಗಾಮುಂಡ** (ನಾ). ಒಬ್ಬಾತನ ಹೆಸರು : ಉಪ್ಪವಳ್ಳಿಯ ಪೋಚಿಗಾಮುಂಡ್ನ ವಳಿಯೆಜ ಮುದ್ದ ಮಾಗುಣ್ಡಯೆಜಿಗ (ಎಕ. XV. ಶೀಂಅರು. ೩೦೬-೦೨ ; 971). [ < ಪೋಚ + ಗಾಮುಂಡ ]

**ಪೋಚು$_1$** ' ಪೌಂಚಿ ' ನೋ.

**ಪೋಚು$_2$** ' ಪೋಚಿ$_2$ ' ನೋ.

**ಪೋಚು$_3$** (ನಾ). ಮುಂದೇನಾಗುವುದೆಂದು ಕಾದಿರುವಿಕೆ ; ನಿರೀಕ್ಷೆ : ನೀ ಉಲಕೋಚಿತನ ಮಾಡಿ ನಡುವ ಬಾಯಿ ಹಾಕೀ ! . . . ಒಳ್ಳೇ ಪೋಚಿಲೆ ಕೂತಿರಬೇಕು ನೋಡು (ತಿಮ್ಮಗು. ೬೩). [←ಮರಾ. ಪೋಂಚ್ = ದೂರದೃಷ್ಟಿ]

**ಪೋಚಿ$_1$** ' ಪೌಂಚಿ ' ನೋ.

**ಪೋಚಿ$_2$**, ಪೋಚು$_2$ (ಗು). ಅಲ್ಪವಾದ ; ತುಚ್ಛವಾದ : ಪಾಚಿ ತೆರನಾದ ಪೋಚಿ ಸಂಸಾರದಾಲೋಚನೆ ತೋರುವದು (ವಿಜಾಸು. ೨೦-೨). **ಪೋಚು$_2$ :** ನೀಚಮಾರ್ಗವ ಬಿಡು ಮೋಹಕವಾಗಿದ್ದ ಪೋಚುಮತವ ಸುಡು ನಲಿ ನಲಿದಾಡು (ವಿಜಾಸು. ೩೬-೯). [←ಪಾರ. ಪೂಚ್ ; ಹಿಂ. ಪೋಚ್ ; ಮರಾ. ಪೋಚಟ್ ; ಗುಜ. ಪೋಚಾ]

**ಪೋಟ$_1$** (ನಾ). ೧. ಶರೀರದ ಯಾವುದಾದರೂ ಒಂದು ಭಾಗ ಊನವಾದವನು ; ಪೋಟು ಬಿದ್ದವನು : ಆತಂ ಶಸ್ತ್ರದಿಂ ಗಲ್ಲಮಂ ಪಾಳಿಸಿ ವ್ರಣವೆರಸಿದಕ್ಕಿಯಂ ತೆಗೆದು ಕತ್ತಿಯಿಂದೆತ್ತಿ ತೋರಿಯಿದುದಂ ತಂಡುಲವ್ಯಾಧಿಯೆಂದು ಪೆಸರಿಟ್ಟು . . . ಆ ತಂಡುಲಮಂ ಹೊನಕೆನುಂಗಿ ಕಳೆದನಂದದಿಂದೆನ್ನನೆಲ್ಲರುಂ ಗಲ್ಲಪೋಟನೆಂದು ಪೆಸರನಿಟ್ಟರ್ (ಕರ್ಣಾಕ. ೯-೨೬ ಆ) ; ಅಂದಿನಿಂದ ನನ್ನನ್ನು ಎಲ್ಲರೂ ಗಲ್ಲಪೋಟ ಎಂದು ಕರೆಯುತ್ತಾರೆ (ನಗಗ. ೩). ೨. (ಆಲಂ) ಪುಂಡ ; ಪೋಕರಿ ; ಸ್ವೇಚ್ಛಾಚಾರಿ : ದ್ಯೂತವನಾಡುತ್ತಿಹ ಪೋಟ ಸೂಳೆಯರೊಳೊಲ್ದಿರ್ಪಾಟವಿಂತೆಲ್ಲ ಮುಂ ಸವಿಯಾಗಂತ್ಯದಿ ಕಷ್ಟವೈ (ಸೋಮಶೇಕ. ೨೯). ಭಂಡರಿಗೆ ಬಹುಭಾಷಿಗಳಿಗೆ ಪ್ರಚಂಡರಿಗೆ ಪರಸತಿಯ ಬೇಟೆಯ ಪುಂಡತನದಲಿ ಹೇಡಿರನು ಬಿಟ್ಟಿರ್ಪ ಪೋಟರಿಗೆ . . . ಹೇಳದಿರು ಮಜ್ದೀ ಅನುಭವಾಮೃತವ (ಅಪ್ರಾಕ. ೨-೨) ; ಲೀಲೆಯ ನಾಟಕವಲ್ಲ ಮಾಟಕೂಟವಿದಲ್ಲ ಪೋಟರ ಮಾತಲ್ಲ (ಹಮಂಕ. ೩). [ಪೋಟು (<ಪೋಟ$_1$) + — ಅ$_7$]

**ಪೋಟ$_2$** (ನಾ). ಅಂಜುಕುಳಿ ; ಹೇಡಿ ; ಭೀರು : " ಆ ಪೋಟನೆನೆ ಧುರದೊಳೋಡಿ ಬಹನಲ್ಕು" (ಮಂಗರಾ. ೯೦-೮) ; ಪೋಟರಪ್ಪಜ ಹರಿ ಸುರೇಂದ್ರರಿಗಾಟವಿಕ ದಿತಿಸುತವಿತತಿಗೀ ಕೋಟಿಯಂ ಸಾಧಿಸುವುದಮಗದಂ (ಬಸವ. ೦೬-೦೩). 'ಪೋಡಿ$_1$' ಹೋ. [ಸಂ. ಪೋಟಾ]

**ಪೋಟಕ** (ನಾ). = ಪೋಟ$_1$ ೨ : ಪೋಟಕರು ವೇಶ್ಯಾಂಗನೆಯರೊಡನಾಟದೊಳು ಪಗಲಿರುಳು ಬಾಳುವ (ಹುಕೋಶ. ೬). [<ಪೋಟ$_1$]

**ಪೋಟಖರಾಬು** (ನಾ). ಸಾಗುವಳಿ ಮಾಡಲಾಗದ ಜಮೀನು : ರಸ್ತೆಗಳು ಮತ್ತು ಕಾಲುವೆಗಳ ಮಗ್ಗುಲಾಗಳಲ್ಲಿರುವಂಥಾ ಭೂಮಿಯನ್ನು ಬೇರೆ ನಂಬರು ಮಾಡಬೇಕೆಂದು ಹುಕುಂ ಆದಾಗ ಹಾಗೆ ಮಾಡತಕ್ಕದ್ದು. ಹಾಗಿಲ್ಲದೆಯಿದ್ದರೆ ಪೋಟಖರಾಬಿನಲ್ಲಿ ಸೇರಿಸಬೇಕು (ಕೂಯಿಆ. ೩೨).

[←ಮರಾ. ಪೋಟ್‌ಖರಾಬ್]

**ಪೋಟಗಲ**, ಪೋಟಗಳ (ನಾ). ೧. ಒಂದು ಬಗೆಯ ಲಾಳದ ಕಡ್ಡಿ. ೨. ಒಂದು ಬಗೆಯ ಹುಲ್ಲು ; ಜಂಬುಹುಲ್ಲು ; ಕಾಶತೃಣ. **ಪೋಟಗಳ :** ೧. "ನಡಃ, ಧಮನಃ, ಪೋಟಗಳಃ—೩ ದೇವನಾಳದ ಹೆಸರುಗಳು. ದೇವಲಾಲೀಕಡ್ಡಿಗಳಿಗೂ ಹೆಸರುಗಳು" (ಸಿದ್ಧಾಂತಿ. ೦೩೦). ೨. " ಕಾಶಂ, ಇಕ್ಷುಗಂಧಾ, ಪೋಟಗಳಃ—೩ ಜಂಬುಹುಲ್ಲು " (ಸಿದ್ಧಾಂತಿ. ೧೩೦). [ ಸಂ. ]

**ಪೋಟಗಳ** ' ಪೋಟಗಲ ' ನೋ.

**ಪೋಟಗಿ** ' ಪೋಟಿಗೆ ' ನೋ.

**ಪೋಟತನ** (ನಾ). ಪುಂಡಾಟ ; ಪೋಕರಿತನ : ಮುರಾರಿ ಗೋಪಿಯರಲ್ಲಿ ಹಾದರವಾಡಿ ಸಿಕ್ಕನೆ ಪೋಟತನದಿಂದ (ಬಸವ. ೫೯-೯೦) ; ಪೋಟತನ ನಮ್ಮಲ್ಲಿ ಕೊಂಬುದೆ ಎನುತ ಹರಿಯೆಚ್ಚ (ಕೋಗಳು. ೨೨-೯೦). [ಪೋಟ$_1$+ —ತನ]

**ಪೋಟತೆ** (ನಾ). = ಪೋಟತನ : ಹುಸಿ ಕೊಲೆ ಕಳವು . . . ನುಸುಳು ಘಾತಕವನ್ಯಾಯ ಪೋಟತೆಗಳು ಮಸುಳಿಹವಾ ನಾಡೊಳಗೆ (ಷೋಡಶ. ೦-೩೯).

[ ಪೋಟ$_1$ + — ತೆ$_3$ ]

**ಪೋಟಲೀಸು** 'ಪೋಲ್ಸೀಸು' ನೋ.

**ಪೋಟಾಧ್ಯಾಯ** (ನಾ). (ಆಲಂ) ಸೂಳೆಗಾರಿಕೆ ; ಕಾಮಕ್ರೀಡೆಯ ಪ್ರಕರಣ : ಅಹಹ ಶಿವನೀ ಸೂಳೆಯೊಳ್ನೆರವುದೇತನಗ ಸಹಜಮೆಂತೆವಾಗೆ ಪೋಟಾಧ್ಯಾಯವೆಂದೆನಲು (ಶೀಕ್ಷ. ೯-೦೦-೨೬); ಶಿವಗೃಹದೊಳು ಆವ ಪೋಟಾಧ್ಯಾಯವೆಲೆ ಮುಂಡೆಯೆನೆ (ಶೀಕ್ಷ. ೯-೦-೩೯).

[ಪೋಟ$_1$ + ಅಧ್ಯಾಯ]

**ಪೋಟಾಪೋಟ** (ನಾ). ಸ್ಪರ್ಧೆ ; ಮೇಲಾಟ ; ಪೈಪೋಟಿ : ಮಹಾರಾಜರವರು ಅಧಿಕಾರವನ್ನು ವಹಿಸಿದ ಮೇಲೆ ಪೋಟಾಪೋಟಿಗೆ ಪ್ರಾರಂಭವಾಯಿತು (ಕಾಮಹಂ. ೩೩೯); ಇಬ್ಬರಿಗೂ ಸಂಗೀತದ ಪೋಟಾಪೋಟಿ ಬಿತ್ತು (ಪಟಿಸಾ. ೦೪೭); ಬುದ್ಧಿಬಲಕ್ಕೂ ಬಾಹುಬಲಕ್ಕೂ ನಡೆದ ಪೋಟಾಪೋಟಿಯಲ್ಲಿ ಬಾಹುಬಲಕ್ಕೆ ಪರಾಜಯವುಂಟಾಯಿತು (ಹಾಕಕ್ರ. ೬೯).

[<ಪೋಟ್ಟಿ./ತುಳು. ಪೋಟಾಪೋಟ]

**ಪೋಟಿ₁, ಹೋಟಿ** (ನಾ). ೧. ಈಡು; ಸಮಾನ; ಎಣೆ : ಶಿಲುದೆರೆವೊಳಗೆಳ ಉಳಿಯ, ಪೆಟ್ಟಿ ಇದಕೆ ಸಾಟಿಯೆ? ಪೋಟಿಯೆ? (ಬ್ರಹ್ಮಕಾ. ೩೯-೨). ೨. ಸ್ಪರ್ಧೆ; ಮೇಲಾಟ ; ಹುರುಡು : ಒಂದು ದಿನ ನಗರದ ಜನಗಳನ್ನೆಲ್ಲ ಕರೆದು ಆಯುಧಾಭ್ಯಾಸದ ಪರೀಕ್ಷೆಯನ್ನೂ ಪೋಟಿಯನ್ನೂ ಏರ್ಪಾಡು ಮಾಡಿದರು (ಬ್ರಾಸಪ. ೪೮); ಯಾವ ಗರಡಿಯೋರು ಪೋಟಿ ಹಾಕ್ತಾರೋ! (ಡಮ್ಮಸು. ೧೩). ೩. ಕೂಡಿಸುವುದು ; ಸೇರಿಸುವುದು : (೬). ೪. (ಎರಡು ಭಾಗಗಳು ಸಮವಾಗುವಂತೆ) ಸೇರಿಸುವ ತುಂಡು.– ಚೂರು : ಅದು ಕತ್ತರಿಸಿ ಹೋಗಿತ್ತು. ಪೋಟಿ ಹಾಕಿ ಜೋಡಿಸಿದ್ದಾರೆ (ಲೋಕ). **ಹೋಟಿ** : ೧. "ಸರಿ, ದೊರೆ . . . ಹೋಟಿ, ಸಂಗಡ — ಈ ೧ರ ಸಮಮಾನಕ್ಕೆ ಪೆಸರ್" (ಕಶಸಾ. ೩೬–೨೪೦) ; ದುರ್ವಾರಂಗೆ ಸುಬಾಹು ಪಾಟಿ, ಹರ್ಯಕ್ಷಂಗೆ ನೀಲರತ್ನಂ ಹೋಟಿ(ರಾಜಶಕ್ಕ. ೦೪೪-೨). 'ಹೋಡು' ಪರಾ. [ದೇ.॥ ತಮಿ. ಪೋಟಿ, ಪೋಟ್ಟಿ; ತುಳು. ತೆಲು. ಪೋಟಿ]

**ಪೋಟಿ₂** 'ಪೋಟ್ಟೆ' ನೋ.

**ಪೋಟಿ₃** 'ಪೂಡ್ಡಿ' ನೋ.

**ಪೋಟಿಕೆ** 'ಪೋಟಿಗೆ' ನೋ.

**ಪೋಟಿಗಾರ** (ನಾ). ಪೈಪೋಟಿಗೆ ನಿಂತವನು; ಸ್ಪರ್ಧಾಳು : ಪೋಟಿಗಾರ ಎಂದರೆ ಹೋರಾಟಗಾರ, ಸ್ಪರ್ಧಿ ಎಂದರ್ಥ (ಕಶಕ. ೦೦೬).

[ ಪೋಟಿ₁ + – ಗಾರ (< –ಕಾಱ) ]

**ಪೋಟಿಗೆ, ಪೋಟಗಿ, ಪೋಟಿಕೆ** (ನಾ). (ಉಕ) ಜೀವನಾಂಶ; ವರ್ಷಾಶನ: ಎರಡುನೂರುರೂಪಾಯಿಗಳ ಪೋಟಿಗೆಯನ್ನು ಗೊತ್ತುಮಾಡಿ ಈ ತಾಯಿ ಮಕ್ಕಳನ್ನು ಸಾಗಹಾಕಿದ್ದರು (ಕಂಗಕೋ. ೦೪); ನಿನಗೆ ಪೋಟಿಗೆ ಕೊಡುವುದು ಕಂದಾಯವನ್ನು ಪೂರ್ತಿಯಾಗಿ ವಸೂಲ್ ಮಾಡುವುದಕ್ಕೆ (ಸಾಂಕ್ರ. ೬೦). **ಪೋಟಗಿ** : ನನ್ನ ಪೋಟಗಿ ನನಗ ಚೆಲ್ಲು. ನಿನ್ನ ಮನ್ಯಾಗ ನಾ ನಿಲ್ಲೂದಿಲ್ಲ (ಗಂಪಹಾ. ೨೫೦); ನಿಮಗೆ ಮುಂದೆ ಪೋಟಿಗೇ ಸಿಕ್ಕೀತು (ಕಶಕ. ೦೦೦). **ಪೋಟಿಕೆ** : ಊರ ಕಂದಾಯ ಹೆಚ್ಚಿಸುವುದು ಶ್ಯಾನುಭೋಗನಿಗೆ ಲಾಭಕರವಾಗಿತ್ತು. ಅದರಿಂದ ಅವನ ಪೋಟಿಕೆ ಏರುತ್ತಿದ್ದಿತು (ಗಸಂಪಾ. ೧೧೨).

[←ಮರಾ. 'ಪೋಟಗೀ, ಪೋಟಗೇ]

**ಪೋಟಿಗೆದಾವೆ** (ನಾ). ಜೀವನಾಂಶಕ್ಕಾಗಿ ಮಾಡುವ ದಾವೆ : ಸರಕಾರದ ಮೇಲೆ ಪೋಟಿಗೆದಾವೆ ಮಾಡ್ರಿ (ಹಿಡುಗು. ೬).

[ಪೋಟಿಗೆ + ದಾವೆ₁ (<ದಾವಾ)]

**ಪೋಟಿಬೀಳು** 'ಪೋಟೆಬೀಳು' ನೋ.

**ಪೋಟು** 'ಪೋಟ್ಟೆ' ನೋ.

**ಪೋಟುಗಾರಿಕೆ** (ನಾ). ತುಂಟಾಟ (?) : ನಿಮ್ಮ ಪೋಟುಗಾರಿಕೆಯನ್ನು ಹಾರಿಸಿಬಿಟ್ಟೇನು . . . ಸುಮ್ಮನೆ ಹೋಗಿರಿ (ಕಹಾಕಪಂ. IV. ೦೪).

[ ? ]

**ಪೋಟುಬೀಳು** 'ಪೋಟೆಬೀಳು' ನೋ.

**ಪೋಟೆ₁, ಪೊಟ್ಟೆ, ಪೊಟ್ಟೆ₂, ಪೋಟ್ಟೆ, ಪೋಟು, ಹೊಟ್ಟೆ, ಹೋಟೆ** (ನಾ). ೧. (ಮರದ) ಪೊಟರೆ; ಡೊಗರು: "ಮರದ ಪೋಟೆಯ ಪೆಸರ್" (ಶಂಕೀಶ. ೦೨); ಹುಣಿಸೆಮರದ ಪೋಟೆಯಲ್ಲಿ ದೇಹ ಬೆಂದು ಬೇಯುದುದಕ್ಕಳಲೊ (ಐತ್ಯಸ. ೯೬). ೨. ತೂತು ; ರಂಧ್ರ : 'ಪೋಟೆಬೀಳು' ಪರಾ. ೩. ಪೊಳ್ಳು; ಜಳ್ಳು : ಒಡು ಒಡಕು ಹುರುಳಿ ಪೋಟೆ ಹುರಿವಾಕೆಯ ಕೈಸೊತ್ತು (ಕಶಪ. ೩೩–೩೨೬). 'ಪೋಟೆಗೊಂಬು' ಪರಾ. **ಪೊಟ್ಟೆ** : ೧. ನಮ್ಮ ಪೊರೆವರಾರೆಂದು ಬರಕಂಜಿ ಪೊರಮಡಲಮ್ಮದೆ ಪನ್ನೆರಡುವರುಷಂಬರಂ ಪೊಟ್ಟೆಯೊಳಿರ್ದೆವು (ರಪುರಾ. ೬–೦೩೬). **ಪೊಟ್ಟೆ₂** : ೧. "ಪೊಟ್ಟಲ್ = ಮರದ ಪೊಟ್ಟೆ ; ಪುರಂ" (ಶಮತ. ಶಂ. ೦); ಪೊಳ್ಳು, ಪೊಟ್ಟೆ (ಹೊಟ್ಟೆ), ಪೊದರು (ಹೊದರು), ಪದರು, ಡೊಗರು (ಕಂಪಹಾ. ೬೬). 'ಪೊಟ್ಟೆವೋಗು' ಪರಾ. ೩. ಪೊಟ್ಟೆಯ ನುಡಿಗಳಂತಿರಲಿ ನಾರದ (ಜೋಶಕ. ೦೨–೩೩). **ಪೋಟ್ಟೆ** : ೨. 'ಪೋಟೆಬೀಳು' ಪರಾ. **ಪೋಟು** : ೧. ವನಪಾಲಕರು. . .ಎಲ್ಲವನು ಮಾಮರನ ಪೋಟೊಳಿಯೊಳ್[ಳ]ಹಾಕಲು (ಪಪಹೋ. ೨೨–೦೪). ೨. 'ಪೋಟುಬೀಳು' ಪರಾ. ೪. (ಕರಾ) ಮೈಥುನಕ್ರಿಯೆ. **ಹೊಟ್ಟೆ** : ೨. 'ಹೊಟ್ಟೆ ಹೋಗು' ಪರಾ. **ಹೋಟೆ** : ೧. "ಹೋಟೆ[ಪಾಠಾಂ. ಕೋಟರಂ] ಪತ್ರರೇಖನಿತಂ ನಿಷ್ಕುಟಮಾಕ್ಕುಂ" (ನಾನಾಕ. ೦೪೬) ; ವಟವೃಕ್ಷದ ಘಟದ ಹೋಟೆಯಲ್ಲಿ ತತ್ತಿಯನಿಕ್ಕಿತ್ತೊಂದು ಗಿಣಿ (ಕುಮಗಂ. ೪. ೨೩೬–೪೮) ; ತೋಟದ ಕಬ್ಬಿಂದ ಹೋಟೆಯು ಜೇನಿಂದ. . .ಬಲ್ಲವಳ ಕೂಟವೇ ಲೇಸು (ಸರ್ವಜ್ಞ. ೦೬೦೦). ೨. ಮಣ್ಣ ಹೋ[ಪಾಠಾಂ. ಹೊ]ಟೆ ಮಳೆಗೆ ಮುಚ್ಚುವುದಲ್ಲದೆ ಕಲ್ಲ ಹೋ[ಪಾಠಾಂ. ಹೊ]ಟೆ ಮುಚ್ಚುವುದೆ (ಗುಕ್ತಮಂ.೪. ೨೧೬–೩೬): ಅನಲನ ಸತಿಯು ಬಲದ ಮೂಗಿನ ಹೋಟೆಯಂ. . .ಕೊಯ್ವುತ್ತ (ಐರಾ. ೦೨–೬೦). ೩. ಹೊರಗೆ ನೋಡಿದರೆ ಕೋಟೆ ಒಳಗೆ ನೋಡಿದರೆ ಹೋಟೆ (ಗಾದೆ).

[ದೇ.॥ ತಮಿ. ಪೋಟು ; ಮಲ. ಪೋಡು ; ಕೊಡ. ಪೋಟೆ ; ಕೋಲಾ. ಬೋಟ್]

**ಪೋಟೆ₂** (ನಾ). ೧. ಮೀಸೆ, ದಾಡಿ ಮುಂತಾದ ಪುರುಷಲಕ್ಷಣಗಳುಳ್ಳ ಹೆಂಗಸು ; ಖೋಜಾ : "ಪೋಟಾ—ಸ್ತ್ರೀಪುಂಸಲಕ್ಷಣಾ—ಸ್ತ್ರೀಲಕ್ಷಣವೂ ಪುರುಷಲಕ್ಷಣವೂವುಳ್ಳ ಶಿಖಂಡಿಯಂಥಾವಳ ಹೆಸರು" (ಸಿದ್ಧಾಂತಿ. ೦೬೧). ೨. ನೀರು ಹೊರುವ ಚೇಟಿ.—ಸೇವಕಿ ; ಕುಂಭದಾಸಿ : "ಪೋಟಾ . . . ದಾಸೀ, ಕುಟಹಾರಿಕಾ—ಈ ೫ ತೊತ್ತು" (ಹಂಪಹು. ೬೦–೩೩೬) ; "ನೀರಡಿಕೆ ಪೋಟೆಯನಿಕ್ಕು" (ಮಂಗರಾ. ೯೦–೪). [ಸಂ. ಪೋಟಾ]

**ಪೋಟೆಗೊಂಬು** (ನಾ). ಟೊಳ್ಳು ಕೊಂಬೆ ; ಪೊಳ್ಳಾದ ಟೊಂಗೆ : ಪೋಟೆಗೊಂಬುಗಳ ಪಳಮರದಂತೆ ತಿರುಳಿಲ್ಲದೋಟೆಗಳ ತಿಂತ್ರಿಣೀಫಲದಂತೆ ಗುಳಿಕ ಕರ್ಕೋಟಕಾದಿಗಳೊಡಲ್ಗೊಳ್ಳಾದುವು (ಕೃಪಾಕಾ. ೨೪–೩೩).

[ಪೋಟೆ₁ + ಕೊಂಬು₁]

**ಪೋಟೆಬೀಳು, ಪೋಟಿಬೀಳು, ಪೋಟುಬೀಳು** (ಕ್ರಿ). ತೂತು ಬೀಳು; ರಂಧ್ರವುಂಟಾಗು : ಆಕಾಶ ನೋಡಿ ನೋಡಿ ಅವನ ಕಣ್ಣು ಪೋಟೆಬಿದ್ದು ಹೋಗುತ್ತದೆ (ಹಳ್ಳಿಪಾ. ೩೦). **ಪೋಟಿಬೀಳು** : ಅವನ ತಲೆಯು ಅದರ ಏಣಿನ ಸಲಾಕಿಗಳಿಗೆ ಬಲವಾಗಿ ಬಡಿಯಲು, ಪೋಟಿಬಿದ್ದು ರಕ್ತಸುರಿಯಲಾರಂಭಿಸಿತು (ಅಂಬಿಕ. ೬೦). **ಪೋಟುಬೀಳು** : ಕೆಳಕ್ಕೆ ಬಿದ್ದ ರಭಸಕ್ಕೆ ಅವನ ತಲೆ ಪೋಟುಬಿದ್ದಿದೆ (ಲೋಕ).

[ ಪೋಟೆ₁ + ಬೀಳು₁ (<ಬೀೞ್₁) ]

**ಪೋಟೆಹೋಗು, ಪೊಟ್ಟೆವೋಗು, ಹೊಟ್ಟೆಹೋಗು** (ಕ್ರಿ). ೧.= ಪೋಟೆಬೀಳು : ಕಣ್ಣು ಪೋಟೆಹೋದ ಜಡನಂತೆ (ಕಗ್ಗಸ. III. ೪). **ಪೊಟ್ಟೆವೋಗು** : ೧. ಕೊಂಬೊಣಗಿರ್ದ ಪೊಟ್ಟೆವೋದೊಣಗಿದ ವೃಕ್ಷದಿಂದಱುವುದಾಯೆಡೆಯೊಳ್ ಜಳಮಾಗದೆಂಬುದಂ (ಕೋಶಕೋಶ. ೩–೪) ; ಪೊಟ್ಟೆ[ಪಾಠಾಂ. ಪೋದೆ]ವೋದ ಮರದಂತೆ ಕರಂ ನರೆಯೇಱಿದಿಟ್ಟು ಮುಪ್ಪಡಸದ ಮುನ್ನಮೇಕೆ ಮನುಜರ್ಮಾಱದಿಕ್ಕರೊ ಮೋಹಮಲ್ಲನಂ (ಪುಣ್ಯಕ. ೧೩–೯೯). ೨. ಹೊಪ್ಪಳೆಯುಂಟಾಗು ; ಬೊಬ್ಬೆಯೇಳು ;

ಪುಟ್ಟಿದ ದಿನ ಮೊದಲಾಗಿ ಧರೆಯೊಳಡಿಯಿಟ್ಟಿಱಿಯರು ಬಾಲೆಯರು ಬಟ್ಟೆಯೊಳಗೆ ನಡೆಯಲು ಪಾದತಳಗಳು ಪೊಟ್ಟೆಪೋಪುದು ತಾನಂದೆ (ಅಂಜಿಕ. ೬-೬೩). **ಹೊಟ್ಟೆಹೋಗು** : ೧. ಮಂಜುನಾಥಯ್ಯನವರ ಕಿವಿ ಮರದ್ದಾಗಿದ್ದರೆ ಎಂದೇನೆ ಹೊಟ್ಟೆಹೋಗುತ್ತಿತ್ತು (ಸಂಕಿ. ೦೦). [ ಪೋಟ್ಟೆ$_1$ + ಹೋಗು$_1$ (< ಪೋ$_1$) ]

**ಪೋಟ್ಲೀಸು** 'ಪೋಲ್ಬೀಸು' ನೋ.

**ಪೋಡಣೆ** 'ಪೊಡ್ಡಣ' ನೋ.

**ಪೋಡಿ**$_1$ (ನಾ). ಭಯ ; ಹೆದರಿಕೆ : ಪೂವಿ ಏನು ಮಾಡಿಕೊಳ್ಳುವಳೋ ಎಂದು ನನಗೆ ಪೋಡಿ ಆಗುತ್ತೆ (ಘುಂಜಾ. ೦೯೩) : ಥೂತ್, ಪೋಡಿ ಪುಕ್ಕಲಗಳೇ, ಹುಟ್ಟಿದ ಮನುಷ್ಯ ಸಾಯದೇ ಕೂಡುತ್ತಾನೆಯೇ ? (ಘಾತ. ೬೦). [ದೇ. ೩ ತುಳು. ಪೋಡಿಗೆ ; ಕೊಡ. ಪೋಡಿ]

**ಪೋಡಿ**$_2$ (ನಾ). ೧. ಹಣ್ಣು ಮುಂತಾದುವುಗಳ ಚೂರು, – ತುಂಡು : (೪). ೨. ಅಡಕೆಯ ಚೂರು ; ಚೂರಡಿಕೆ : ಪೋಡಿಭಾಗದ ಬೆಳ್ಳೆಲೆಯ ಮೆಲ್ಲುತ ಸಖಿಗೂಡಿ ಬಂದಳು ದಿವಾಣಕ್ಕೆ (ಸೋಕಕ. ೨೬-೭) ; ಹವರ್ಣಾಗ್ರವನದರ್ದು ಪೋಡಿಯ ಭಾಗ ಬೆಳ್ಳೆಲೆಯ ಸ್ವೀಕರಿಸಿ ಮಾತಾಡಿದಳ್ ಮಂತ್ರಿಜೆಯೊಡನೆ (ಸೋಕಕ. ೨೮-೩೩). ೩. "ಪಟ್ಟೇದಾರನ ಅರಿಕೆಯಿಂದ ಅಥವ ಕೋರ್ಟಿನ ಅಪ್ಪಣೆ ಪ್ರಕಾರ ಮತ್ತ್ಯಾವದಾದರೂ ಕಾರಣದಿಂದ ನಂಬರುಪೊಡೆಯಬೇಕೆಂದು ಅಪ್ಪಣೆಯಾದರೆ ಹಾಗೆ ಪೊಡೆಯಬೇಕು. ಇದಕ್ಕೆ ಪೋಡಿಯೆಂದು ಹೆಸರು" (ಕೂಮಾಲ. ೩೩) . 'ಪೋಡು' ಪರಾ. [< ಪ್ರಾ. ಪೋಡಿ. ಪೋಡೀ]

**ಪೋಡು** (ನಾ). ೧. ಸೀಳುವಿಕೆ; ಕತ್ತರಿಸುವಿಕೆ: 'ಪೋಡುಂಗಾಱ' ಪರಾ. ೨. ಪಾಲು; ವಿಭಾಗ : ಜಮೀನಿನ ಪೋಡು ಮಾಡಿಸಲು ತಾಲ್ಲೂಕುಕಚೇರಿಗೆ ಹೋಗಬೇಕು (ಬೂ). 'ಪೋಡ್' ಪರಾ. [<ಪ್ರಾ. ಪೋಡ್=ಸೀಳು./ತೆಲು. ಪೋಡು=ಜಮೀನಿನ ತುಂಡು]

**ಪೋಡುಂಗಾಱ, ಪೋಡುಗಾಱ** (ನಾ). ಸೌದೆ ಕಡಿಯುವವನು; ಮರ ಕತ್ತರಿಸುವವನು : ನೀಂ ಕೊಂಕಣನಾಡೊಳ್ ತುಂಗಭದ್ರನೆಂಬ ಪೋಡುಂಗಾಱನಯ್ ನೀಂ ಕುಮ್ಮರಿಯಂ ಸುಟ್ಟು ಪೋಗಿ ಪೊಳ್ತಡೆ ಬಂದು ನೋಡುವನ್ನೆಗಂ (ಕಥಾಕೋ. ೧೬೦-೦) ; ಬಳೆದು ಪುದುಂಗೊಳಿಸಿದ ಬದಿರ ಸಿಡುಂಬನೆಡೆಗೊಳೆ ಕಡಿವ ಪೋಡುಂಗಾಱನಂತೆ (ಶಂಕಶಾ. ೦೨-೦೬೭ ಪ). **ಪೋಡುಗಾಱ** : ಒಂದೇ ಕುಠಾರದಿಂದಡವಿಯಂ ಕಡಿವಂತಿರೆ ಪೋಡುಗಾಱನನ್ನೊಂದೆ ಭುಜಾಸಿಯಿಂ ಶಬರಕೋಟಿಯನಿಕ್ಕಿ ಪಿಶಾಚಕೋಟಿಗಾನಂದಮನುಂಟುಮಾಟ್ಪಿಂ (ಶಂಕಾಪೂ. ೪-೪೦). [ಪೋಡು + – ಕಾಱ]

**ಪೋಡುಗಾಱ** 'ಪೋಡುಂಗಾಱ' ನೋ.

**ಪೋಣಪಟ್ಟು** 'ಪೌಣಪಟ' ನೋ.

**ಪೋಣಿಕೆ** 'ಪವಣಿಕೆ' ನೋ.

**ಪೋಣಿಗೆ** 'ಪವಣಿಗೆ' ನೋ.

**ಪೋಣಿಸು** 'ಪವಣಿಸು' ನೋ.

**ಪೋತ**$_1$ 'ಪೋಂತು' ನೋ.

**ಪೋತ**$_2$ (ನಾ). ೧. ಯಾವುದಾದರೂ ಪ್ರಾಣಿಯ ಮರಿ ; ಶಾಬ : ವಿಯೋಗಿಗಣಾಕುಲಿತ ಕುರಂಗಪೋತ ಭಯಕೃತ್ಕಂಠೀರವಂ (ಅಜಿತ. ೬-೯೨); ಪಕ್ಷಂಗಳೆೞಲ್ ಪಟ್ಟನಿತುಂ ಪೋತಂ[ಪಾಠಾಂ. ಪೊತ್ತಂ]ಗಳಂ ವಿಕ್ಷಿಸುತ (ಶಾಂತೀಶ. ೧೧-೯೬); ಕಲ್ಲಿಯಂ ಚಿಕ್ಕನೆ ತೂತುಗೆಯ್ದು ಗಿಳಿಗಳ್ಕರತಂದವು ತಮ್ಮ ಪೋತಮಂ (ಹಮ್ಮೀರ. ೪-೬೨). ೨. ಶಿಶು; ಮಗು : "ಬಾಲಃ, ಪಾಕಃ, ಅರ್ಭಕಃ, ಗರ್ಭಃ,ಪೋತಃ . . . ಡಿಂಬಃ – ಈ ೯ ಮಗುವು" (ಹಲಾಯು. ೦೩-೩೯೮); ಉರುವೈರಾಗ್ಯಂ ಸಾತಿಶಯಮೆನಿಸಿ ಬಳೆಯಲ್ ಪೋತಂ ತದ್ಬಾಲನೈದೆ ಬಳೆಯುತ್ತಿರ್ದಂ (ಅಧ್ಯಾ. ೦೦-೩೪). ೩. ಚಿಕ್ಕ ಹಡಗು; ದೋಣಿ; ನಾವೆ : "ಪೋತವಹಾ ಪ್ರವಹಣಂ ಚೈತ್ರಮನೆ ಹಡಗಕ್ಕು" (ಶಬ್ದಮ. ೧೨೦-೪) ; ಪಲಬರರಸುಗಳ್ . . . ಧರ್ಮ ಪೋತಮ್ಮ ತರನವಧಿಸಂಸಾರವಾರಾಶಿಮಧ್ಯಾಸ್ತ ದಸರ್ವಗ್ರಾಸಿಭೀಮಾಂತಕ ವದನಮಹಾಗರ್ತದೊಳ್ ಮಗ್ನರಾದರ್ (ಅಜಿತ. ೯-೩೮); ಆ ತಡಿಗಿರದೊಯ್ಯಲ್ಕಮ ಪೋತದವೋಲ್ (ಸಮತ. ೭-೩೮); ಪೋತಯಾತ್ರಿಕ ಜನಂ ಪುಗಲೊಲ್ಲದೆ ವಾರ್ಧಿಮಧ್ಯಮಂ (ಎಕ. XI. ದಾವಣ. ೩೩-೩೩; 1164). ೪. ಹತ್ತು ವರ್ಷ ವಯಸ್ಸಿನ ಆನೆಯ ಮರಿ : ಎಸೆದುದು ಬಳಸಿರೆ ಪೋತಕಲಾಪವಲ್ಲಿ ಯೂಥನಾಥಂ (ಕೃಷ್ಣಕೃ. ೩-೬೩). ೫. ಚಿಗುರು. ೬. ಮನೆಯ ನಿವೇಶನ ಅಥವಾ ತಳಪಾಯ. [ಸಂ.]

**ಪೋತಕ** (ನಾ). ೧. ಯಾವುದಾದರೂ ಪ್ರಾಣಿಯ ಮರಿ : ಮನಂ ಬೆರ್ಚದೆ ಸಿಂಹಪೋತಕಮನೋವಲುವೂಱಿಯ ದೋಹಳಂ ಕರಂ ಪೆರ್ಚಿದುದು (ಶಂಕಶಾ. ೦-೦೯೨) , ಮುತ್ತಿನ ಸೂಸಕಂಗಳಂ ಬಾಳವ್ಯಾಳಕಮೆಂದು ಕರ್ದುಕಲ್ ಬಗೆಗುಂ ಕಲಹಂಸಪೋತಕಂ (ಶಂಕಶಾ. ೦-೦೨೭). ೨. ಎಳೆಯ ಗಿಡ; ಸಸಿ : ಚೂತಪೋತಕಂ ನನೆಯಿಂ ರಂಜಿಸುವಂತಿರೆ ತನಯುಂ ರಂಜಿಸಿದಂ (ಜಗ. ೩-೩೯). [ಸಂ.]

**ಪೋತಕಿ** (ನಾ). ಒಂದು ಬಗೆಯ ಸಸ್ಯ; ಬಸಲೆ : "ಪೋತಕಿ ಮುಂಥಗಾಳಿಯೆನೆ ಬಸಲೆಯಕ್ಕು" (ಶಬ್ದಮ. ೪೪-೯೬). [ಸಂ. ಪೋತಕೀ]

**ಪೋತಗ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಚವಡಿಕೆ ಮಾರಿ ಮಸಣಿ . . . ಕೊಲ್ಲುವ ಪೋತಗನು ಕಟ್ಟಿನ ಗಡಿಗೆಮ್ಮ (ಪಾಪು. ೩೬-೨). [ ? ]

**ಪೋತರ್** (ಕ್ರಿ). ೧. ಹೋಗು ; ಗಮಿಸು ; ಸಾಗು : ಅರ್ಕೋದಯ ಭಯವಶದಿಂ ಪಾಱೆ ಪೋತಂದೆಳೊರ್ವಳ್ (ಲೀಲಾವ. ೩-೦೯) ; ಹರಿ ಪೋತಂದಡವಜ್ಜೆಗಳ್ ಬಯಲೊಳಿಲ್ಲಿಂದಿತ್ತವಿನ್ನಿಲ್ಲ (ಜಗ. ೩-೩೦); ಕಲಿ ಅಜ್ಜನ್ನಣ್ಣ ನಾರಾಯಣನ್ ತನ್ನ ಮನೆಯನ್ನಿನ್ನವಿಟ್ಟು ಪುಗುತನ್ನೊಡೆ ಅಱಿವು ಪೂರವಟ್ಟು ಪೋತ(ಂ)ನ್ದು ಕಡಿತಲೆಯಿನ್ದಟ್ಟಿ ನಾಲ್ಕರಾನೆಱಿದೊನ್ (ಕೌಶಾ. IX–೧. ೩-೦೨ ; ೪). ೨. ಹೊರಗೆ ಬರು; ಹೊರಟು ಕೊಳ್ಳು ; ಮುಂಬರು : ಉಸಿರೊತ್ತಿಂ ತಿದಿಯಂತಿರೊತ್ತಿದ ಬಸಿಱ್ ಪೋತಂದ ಕಣ್ ಬಿಟ್ಟ ಬಾಯ್ (ಶಂಕಶಾ. ೦೨-೦೫೦); ಇಡೆ ಕಾಲಂ ಬರಿಸಿಲ್ಕಿ ಪಲ್ಗಿರಿದು ಕಣ್ಪೋತಂದು ಸುಯ್ಯೆಟ್ಟು ಸೀರ್ವಡಿಸುತ್ತಿರ್ದ ಧರಾಮರರ್ ನಡುಗೆ ಬಿಟ್ಟಿಲ್ಲಂ ಶರಣ್ ದೇವ ನಿಮ್ಮಡಿಯೊಂದಿರ್ಪುದಾಂ (ಶಂಖಾ. ೩-೩೯). [ಪೋ$_1$ + ತರ್]

**ಪೋತವಣಿಜ** (ನಾ). ೧. ಹಡಗಿನ ಮೂಲಕ (ದೇಶವಿದೇಶಗಳೊಡನೆ) ವ್ಯಾಪಾರ ಮಾಡುವವನಂ ; ಸಮುದ್ರವ್ಯಾಪಾರಿ : "ಸಾಂಯಾತ್ರಿಕಃ, ಪೋತವಣಿಕ್–ಈ ೨ ಭೈತ್ರದ ವ್ಯವಹಾರಿ" (ಹಲಾಯು. ೦೦೯-೩೩) ; ಪೋತವಣಿಜರ್ತಡಿಗೆಯ್ದು ತೃಷಾವಿಷಾದಮಂ ಕೊಟಿಬೆಯ ನೀರೊಳೀಕಳೆಗುಮೆಂದೊಡೆ (ಜಗ. ೦-೩೭). ೨. ಹಡಗಿನ ವ್ಯಾಪಾರ ಮಾಡುವವನು. [ಸಂ. ಪೋತವಣಿಜ್]

**ಪೋತವಾಹ** (ನಾ). ಹಡಗನ್ನು ನಡೆಸುವವನು ; ನಾವಿಕ ; ಕಲಾಸಿ : "ನಿಯಾಮಕಾಃ, ಪೋತವಾಹಾಃ, ೨ ಹಡಗಿನ ಕಂಭದ ಮೇಲೆಯಿದ್ದು ಹಡಗು ನಡಿಸತಕ್ಕ ಉಪಾಯಗಳನ್ನು ಹೇಳುವವರ ಪೆಸರುಗಳು" (ಸಿದ್ಧಾಂ. ೭೪). [ಸಂ.]

**ಪೋತವಾಹಿ** (ನಾ). = ಪೋತವಾಹ : "ತತ್ಪೋತವಾಹಿ ನಾವಿಕನಕ್ಕುಂ" (ವಸ್ತುಕೋ. ೨೩-೦೦). [ಸಂ. ಪೋತವಾಹಿನ್]

**ಪೋತಾಧಾನ** (ನಾ). ಮರಿಮೀನುಗಳ ಮೊತ್ತ : "ಕ್ಷುದ್ರಾಂಡಃ, ಮತ್ಸ್ಯಸಂಘಾತಃ, ಪೋತಾಧಾನಂ – ಈ ೩ ಕಿಱಿಯ ಮೀನ ಮೊತ್ತಂ" (ಹಲಾಯು. ೦೦೯. ೩೯). [ಸಂ.]

**ಪೋತಿ** 'ಪೌತಿ' ನೋ.

**ಪೋತು** 'ಪೋಂತು' ನೋ.

**ಪೋತುಂಗಲ್ಲು** (ನಾ). ಒಂದು ಸ್ಥಳದ ಹೆಸರು: ತೆಂಙ್ಕಣದೆಸೆ ಗುಡ್ಡೆಗಲ್ಲು . . . ಪಡುವಣದೆಸೆ ಪೋತುಂಗಲ್ಲು ಕೊಮರುಲ ಪಱ್ರು ಕಾಮರ್ಳ್ಗಿಲ ಪುಣಸೆ (ಎಕ. XII. ಸಿರಾ. ೩೬-೩೭ : 878). [ ? ]

**ಪೋತ್ರ** (ನಾ). ೧. ಹಂದಿಯ ಮೂತಿ,—ಮುಸುಡಿ: ದಬ್ಬಣದಂತೆ ನಿಬ್ಬಣವಾದ ಕೂದಲ್ಗಳೊಳ್ ಕೋದ ಪೆಣಂಗಳಿಂ ಪೋತ್ರಮೆಯ್ಯುದೆ ಪಡೆಯುಂ ಪಿಡಿದು ಪೊಡೆಯೊಳ್ತೋಱುವಂತೆಯುಂ . . . ಮೊಗಮನೆತ್ತಿ ಮೆಯ್ಯಂ ನಿಮಿರ್ದುರ್ ಅದಿರದಿದಿರೇಱುವೆಕ್ಕಲವಂದಿಯಂ ಕಂಡು (ಆದಿಪು. ೬-೦೪ ವ) ; ಪೋತ್ರಮನೆತ್ತುತಮತ್ತಲಿತ್ತಲುಂ ಕಿಂದದೆ ನೋಡುಕಾಲಿಸುತೆ ಮಸ್ತಿನ ಕಾಯುದ ಸೊಕ್ಕಿದೆಕ್ಕಲಂ ಗೊಂದಣದೊಳ್ ವಿರಾಜಿಸಲ್ (ಜಾತಕ್ಕ. ೩-೦೩-೨೩). ೨. ನೇಗಿಲಿನ ತುದಿ; ರಂಟೆಯ ಗುಳ: "ಹಂದಿ ನೇಗಿಲ ಮುಖಿಗಳೊಳ್ ಪೋತ್ರವೆಂಬುದು" (ಶಬ್ದಮ. ೦೯೩-೨೩); ಕಡುಗಾಯ್ದ ನೆಲದೊಳುಟ್ಟಂಡೆಡೆವಡೆಯದೆ ಮೇಲೆ ಮೇಲೆ ಪರಿವುದು ಪೋತ್ರಂ (ಜೀವಂಧ. ೮-೨೦೦). ೧, ೨: ಆ ಮಹಾವನಂ . . . ಕ್ಷೇತ್ರಾಕರ್ಷದಂತೆ ಪೋತ್ರಿಪೋತ್ರಾಹತಧರಣಿತಳಮುಂ ಗೃಹೀತಗೋಲಾಂಗೂಲಮುಂ . . . ಆಗಿಯುಂ (ಚಂದ್ರಪು. ೫-೫೨ ವ). ೩. ಪಿಕಾಸಿ; ಗುದ್ದಲಿ. ೪. ಸಿಡಿಲು. ೫. ಹಡಗು; ನೌಕೆ. ೬. ವಸ್ತ್ರ; ಉಡುಪು. [ಸಂ.]

**ಪೋತ್ರಿ** (ನಾ). ೧. ಹಂದಿ; ವರಾಹ: "ಕೋಲಃ, ಕ್ರೋಡಃ, ಸೂಕರಃ, ವರಾಹಃ, ಪೋತ್ರೀ . . . ಕಿರಿಃ—ಈ ೮ ಹಂದಿ" (ಹಲಾಯು. ೩೯-೩೩); ಒಂದು ಪಲ್ವಲಪ್ರಾಂತದೊಳ್ ಕಾಂತಾರಕಳಭಪ್ರಾಯಪೋತ್ರಿಸಂತಾನದೊಳಗೆ . . . ಸೊಗಯಿಸುತ್ತುತ್ಕೇಕರಂ ಸೂಕರಂ (ಚಂದ್ರಪು. ೫-೫೯ ವ); ಆ ಮಾಯಾಪೋತ್ರಿ ಧಾತ್ರೀಭರಮನಲಸಿ ತುಳ್ಕಾಡಿದಂದು (ಕೌಶಿಚ. IV. ೨೩೩-೦೦ : 1380); ಕೌಶಿಕಂ ನಿರ್ಮಿಸಿದ ಪೋತ್ರಿಯಂ ಕಂಡು ಭಟರುಱಿ ಕಿರಳುತೆ . . . ಬೆಂಬತ್ತಿ ಸಿಕ್ಕದೆ ಬಂದು ಮುನಿಯ ಮಱಿಬಿದ್ದುದಾ ಪಂದಿ (ಹರಿಶ. ೩-೨೪). ೨. ನೇಗಿಲು; ರಂಟೆ. ೧, ೨: ಆ ಮಹಾವನಂ . . . ಕ್ಷೇತ್ರಾಕರ್ಷದಂತೆ ಪೋತ್ರಿಪೋತ್ರಾಹತಧರಣಿತಳಮುಂ ಗೃಹೀತಗೋಲಾಂಗೂಲಮುಂ . . . ಆಗಿಯುಂ (ಚಂದ್ರಪು. ೫-೫೨ ವ). [ಸಂ. ಪೋತ್ರಿನ್]

**ಪೋತ್ರಿಪ** (ನಾ). ಹಂದಿಗಳ ಸಮೂಹದ ಮುಂದಾಳು: ಭೂವರನಂದು ತೇರನಡರಲ್ಕೋರ್ವೆತ್ತದಿಂ ಪೋತ್ರಿಪಂ (ಜಾತಕ್ಕ. ೩-೦೩-೯೬). [ಸಂ.]

**ಪೋಥಿ** (ನಾ). ೧. ಪುಸ್ತಕ; ಗ್ರಂಥ. ೨. ಪವಿತ್ರಗ್ರಂಥ; ಧಾರ್ಮಿಕ ಗ್ರಂಥ: ನನ್ನ ಕಾದಂಬರಿ ಏನು, ತುಕಾರಾಮನ ಪೋಥೀ ಅಲ್ಲ (ಬೇಹ. II. ೫); ಒಂದುದಿವಸ ಗಂಗವ್ವ ದೇವರ ಮುಂದೆ ಪೋಥಿ ಹಿಡಿದುಕೊಂಡು ಕುಳಿತಾಗ (ಗಂಗವ್ವಸಾಯಿ. ೨೫೦).
[←ಹಿಂ. ಮರಾ. ಗುಜ. ಪೋಥೀ; ಬಂಗಾಲಿ. ಪುಥೀ; ಸಿಂಧಿ. ಪೋಥೀ, ಪೋಥು./ಪ್ರಾ. ಪೊತ್ಥಯ]

**ಪೋಥೀಭಕ್ತಿ** (ನಾ). ೧. ಪವಿತ್ರಗ್ರಂಥದ ಮೇಲಿರುವ ಶ್ರದ್ಧೆ,—ವಿಶ್ವಾಸ: 'ಪೋಥೀಭಕ್ತಿ'ಯಿಂದಾಗಿ ಉಂಟಾಗುವ ಅ—ಪ್ರಮಾಣಿತ ಶ್ರದ್ಧೆಯು, ಮುಖ್ಯವಾಗಿ, ನಮ್ಮಲ್ಲಿ ಬೆಳೆದು ಬಂದಿರುವ ದ್ವಿಧಾಭಾವದ ಮೂಲಕಾರಣವಾಗಿದೆ (ಕರ್ನಾಟಿ. XV. ಜುಲೈ೫). ೨. (ಅಲಂ) ಮುದ್ರಿತವಿಷಯಗಳ ಮೇಲಿರುವ ಅತಿಶ್ರದ್ಧೆ. [ಪೋಥಿ+ಭಕ್ತಿ]

**ಪೋದ** 'ಪೋ₁' ಪರಾ.

**ಪೋದಗೆ₁** (ನಾ). (ಶುಭಾಶುಭಫಲಗಳನ್ನು ಸೂಚಿಸುವುದೆಂದು ನಂಬಲಾದ) ಒಂದು ಬಗೆಯ ಪಕ್ಷಿ: "ಪೋದಗೆ—ಪೋತಕ" (ಶಬ್ದಕೋ. ೨೮); ಕೋಗಿಲೆ ಚಾದಗೆ ಪೋದಗೆ . . . ಬಲಾಕ ಲಾವುಗೆ ಸೇನಂ (ಶಾಸ್ತ್ರಸಾ. ೦೦೧೯ ಕಾಣ್ಡ೪); ಪಿಂಗಲಿ ಪೋದಗೆ . . . ಗೂಗೆಯಾದಿಯಾದ ಖಗಂ ರಾಜಾಂಗಣದೊಳ್ ಚರಿಸುವೊಡೆ ಸರಂಗೆಯ್ವೊಡೆ ತಡೆಯದಾ ಗೃಹಂ ಪಾಟಕ್ಕಂ (ಲೋಕೋಪ. ೪-೩೩); ನಲಮಿ ಪೋದಗೆಗಳ ಪಿಂಗಲೆಗಳ . . . ದನಿಯಿಂ ಲುಬ್ಧಕರುಲಿಯಲ್ ಖಗವಿತತಿ ಬೆರ್ಚಿ ಪಾಱಿದುವಾಗಳ್ (ಕೃಷ್ಣಪು. ೨೮-೯೭). [<ಸಂ. ಪೋತಕ]

**ಪೋದಗೆ₂** (ನಾ). ಒಂದು ಬಗೆಯ ಸಸ್ಯ; "ಬಸಲೆಗಿಡ" (ಕಕಮ. ೪. II. ೬). [ಸಂ. ಪೋತಕೀ]

**ಪೋದಿಯಮ್ಮ** (ನಾ). ಒಬ್ಬಾತನ ಹೆಸರು: ಈ ಕಲ್ಲಂ ಚಿಕ(೦)ಣ್ಣ × × × ಯಂ ಪೋದಿಯಮ್ಮ ಮಾಡಿಸಿದೋನ್ (ಸೌಇಇ. XI—1. ೦೦-೩೪ ; ೩೬೬). [ಪೋದಿ₀ + ಅಮ್ಮ₁]

**ಪೋದೆ, ಬೋದು₂** (ನಾ). ೧. ಟೊಳ್ಳು; ಪೊಳ್ಳು: 'ಪೋದೆವೋಗು' ಪರಾ. ಬೋದು₂: ೨. ಕಂಡಿ; ತೂತು; ರಂಧ್ರ: ಕೀಟಕವು ಸಣ್ಣದಿದ್ದಾಗ ಎಲೆಗಳಲ್ಲಿ ಬೋದು ಮಾಡುತ್ತದೆ (ಕೀಟಿ. ೯೯). ೩. ಸಣ್ಣ ತಗ್ಗು,—ಹಳ್ಳ: ತೋಟದಲ್ಲಿ ಮೆಣಸಿನ ಗಿಡಗಳನ್ನು ಹಚ್ಚುವದಕ್ಕೆ ಬೋದುಮಾಡಿ . . . ಆ ಬೋದಿನ ತಳದಲ್ಲಿ . . . ಅರಿಷಿಣದ ಬೀಜವನ್ನು ಊರಿ ನೀರು ಬಿಡಬೇಕು ಮತ್ತು ಬೋದು ನೆನೆದು ಹಸಿಯಾದ ಮೇಲೆ ಬೋದಿನ ತಲೆಯ ಮೇಲೆ ಒಂದೂವರೆಮೊಳ ಅಂತರವಾಗಿ ಎರಡೆರಡು ಮೆಣಸಿನ ಅಗಿಗಳನ್ನು ಹಚ್ಚಬೇಕು (ಕೃಷಿಶ್ರ. ೦೫೭). 'ಪೋಟೆ₁' ಪರಾ. [ದೇ. ೩ ತಮಿ. ಪೊತ್ತು, ಪೊತ್ತು]

**ಪೋದೆವೋಗು** (ಕ್ರಿ). (ಒಣಗಿ) ಟೊಳ್ಳಾಗು; ಪೊಳ್ಳುಬೀಳು: ಕೋಡಗದಂತೆ ಶಾಖೆಯೊಳ್ ನಡೆಯದೆ ಪೋದೆ[ಶಾಕಾಂ. ಪೊಟ್ಟೆ]ವೋದ ಮರದಂತೆ ಕರಂ ನರೆಯೇಱದಿಟ್ಟು ಮುಪ್ಪಡಸದ ಮುನ್ನಮೇಕೆ ಮನುಜ ಮರ್ಱಿದಿಕ್ಕರೊ ಮೋಹಮಲ್ಲನಂ (ಮಲ್ಲಿಪು. ೦೩-೯೯).
[ಪೋದೆ + ಪೋಗು₁ ( < ಪೋ₁ ) ]

**ಪೋದೆಸೆ** (ನಾ). ಹೋಗುವ ದಿಕ್ಕು: ನೃಪಾಳನಳವಂ ನಾವಿನ್ನು[ಟೆ] ನ್ನೆಯ್ದು ಬಾಯ್ವಲದಿಂ ಬಣ್ಣಿಸದಿರ್ದ್ದೆ[ಳ]ಣ್ಣ ಚಲಮಂ ಕೊಣ್ಡಾಡಿ ಮಾಟಾಂತು ಮುಂ ತಲೆಸುತ್ತಲ್ನೆಲೆವೋಗಿ ಪೂರ್ದ್ದಲ್ಪಱೀ ಕಾಲೂಱಲ್ನೆಲಂ ಱಿಂಬು[ದೋ]ಗಲಣಂ ಪೋದೆಸೆ ಇಲ್ಲೆನಲ್ಕಳಿದರಾತಿವ್ರಾತಮೇಂ ಪೇಳದೇ (ಕಇಇ. ೨-೨-೯೩; 1058). [ಪೋ₁ + ದೆಸೆ₂]

**ಪೋದೊಱೆ** (ಕ್ರಿ). ಹೋಗಲು ಬಿಡಂ; ಹೋಗಬಿಡಂ: ಈ ಪೊಟ್ಟು ಪೋದೊಱೆದ ಯಜ್ಞೀಯಾಶ್ವದ ಬೆಂಬೞಿವೋಗಿ ನೆರಂಗೊಡುವ ನಾಡೆಱಿಯರ ಕೊಟ್ಟಜಮನೊಟ್ಟಯಿಸಿಯುಂ (ಜಮಿಭಾ. ೯೭-೦).
[ಪೋ₁ + ತೊಱೆ₁]

**ಪೋನಿ** (ನಾ). ಸಣ್ಣ ತಳಿಯ ಕುದುರೆ: ತನ್ನ ತಂದೆಯವರು ಐದನೆಯ ವರ್ಷದಲ್ಲಿಯೇ ಒಂದು ಪೋನಿಯನ್ನು ತಂದುಕೊಟ್ಟಿದ್ದರಷ್ಟೆ (ಜಗತಂ. ೦೦). [←ಇಂ. Pony]

**ಪೋಪ್** (ನಾ). ಕ್ರೈಸ್ತಮತದ ಮಹಾಧ್ಯಕ್ಷನಾದ ರೋಮಿನ ಧರ್ಮಗುರು: ಫ್ರಾನ್ಸಿನ ದೊರೆಯಾದ ಫಿಲಿಪ್ಪನು ಒಂದು ಬಾರಿ ಒಬ್ಬ ಫ್ರೆಂಚನನ್ನು ಪೋಪ್ ಪದವಿಗೆ ಏರಿಸಿದನು (ಜಾಚರಿತ್ರ. III. ೦೦೬೨).
[←ಇಂ. Pop]

**ಪೋಪ** 'ಪೋ₁' ಪರಾ.

**ಪೋಪು₁, ಹೋಹು₁** (ಕ್ರಿ). (ಹತ್ತಿರ) ಹೋಗು: "ಪೋಪು—ಆಸನ್ನಗಮನೇ" (ಶಮಧಾ). ಹೋಹು₁: ಪರಿಸರ್ಯ—ಹತ್ತಿರಿಂದ ಹೋಹದೆ ಇರುಹಂ (ನಾಚರಾ. ೬). [ಪೋ₁ + —ಪು₁]

**ಪೋಪು₂, ಹೋಹು₂** (ನಾ). ರೀತಿ; ಮಾರ್ಗ: ಆದಾ[ಶಾಕಾಂ. ವಾ]

ಗಲೆನ್ನನನುಭವಿಸುವುದಲ್ಲದೆ ಹೇಳಬಾರದಾರಿಗೆಯೂ ನೋಡಯ್ಯಾ ಕಾಣಬಾರದಾತಂಗೆ ಸವಿದೋಱಬಾರದ ಪೋ[ಪಾಠಾಂ. ಫಾ]ವು ನೋಡಯ್ಯಾ (ಉಂಬ. ೨೯-೦೫). **ಹೋಪ್ಪು**: ಮೊಲೆ ಮೂಡಿಯಿದ್ದುದೇ ಹೆಣ್ಣೆಂದು ಪ್ರಮಾಣಿಸಲಿಲ್ಲ. ಕಾಸೆ-ಮೀಸೆ ಕಠಾರಿಯಿದ್ದುದೇ ಗಂಡೆಂದು ಪ್ರಮಾಣಿಸಲಿಲ್ಲ. ಅದು ಜಗದ ಹೋಹು; ಬಲ್ಲವರ ನೀತಿಯಲ್ಲ (ಶವಾಣೀ. ೦೬೦).
[ಪೋ₁ + -ವು₂]

**ಪೋಫಳಿ** (ನಾ). ಅಡಕೆ; ಕ್ರಮುಕ : ಅಡಿಕೆ (ಪೋಫಳಿ)-ಪ್ರಸಿದ್ಧ . . . ಕಾಯಿಯ ಮೇಲಿನ ತೋಟೆಯನ್ನು ಸುಲಿದು ಚಲ್ಲಿ, ಅಡಿಕೆಗಳನ್ನು ಕುದಿಸಿ ಮಾರಾಟಕ್ಕೆ ಒಯ್ಯುವರು (ಶಬಾಗ. ೩೩).
[← ಮರಾ. ಪೋಫಳೀ, ಪೋಫಳ್./ಪ್ರಾ. ಪೋಪ್ಫಲ, ಪೋಪ್ಫಲೀ./ಸಂ. ಪೂಗಫಲ]

**ಪೋಬಟ್ಟೆ**, ಹೋಬಳಿ₁ (ನಾ). ೧. ಹೋದ ದಾರಿ.—ಮಾರ್ಗ : ಸ್ಮರನಸ್ತ್ರಸಮಿತಿಯದು ನಿರ್ಭರಮಂಗಮನುರ್ಚಿ ಪೋಗೆಯುಂ ಪೋಬಟ್ಟೆಯುಂ ದೊರೆಕೊಳಿಸಲಾಗದದಱಿಂ ಶರತತಿಯಲ್ಲೆಂಬುದಿಂತು ನಿರ್ಧರ್ಮಾಪೋಹಂ (ಕರಿರಾ. ೩-೦೯೬); ನೆಱೆದಾಯುಷ್ಯಮೆ ಮಿಟ್ಟುವನಱುವ ತೆಱದಿಂದಮವರ ಪೋಬಟ್ಟೆಯನೆ ಬಂದಱಿಸಿ (ಚಂಶಕು. ೩-೭೪); ಮುನಿದಂತಿರೊರ್ಮೊದಲೆ ಲೋಕಾಂತರಕ್ಕೆ ಪೋದ ನಿಜಜೀವಿತೇಶ್ವರನ ಬಟ್ಟೆಸಲ್ವ ಬವಸೆಯುಂ ಪೋಬಟ್ಟೆಯುಸಱಿಸಿ ಪರಿವಂತೆ ನಿಮಿರ್ವ ಬಿಸುಸುಯ್ಗಳೊಳಂ (ವರ್ಧಪು. ೯-೬೦ ವ). **ಹೋಬಳಿ₁**: ೧. ತಾಯ ಹೋ[ಪಾಠಾಂ. ಹೊಂ]ಬಳಿಯನಾವತ್ಸನಱಿವಂದದಿಂ ಆಯೆಡೆಯೊಳಱಸಿಕೊಳುತಂ ಬಂದು (ವಂಚರ. ೦೦-೬೦); ಮನಮುಮಂ ಕಣ್ಣುಮಂ ಮೃಗದ ಹೋಬಳಿಗಿತ್ತು . . . ಬರುತಿರೆ (ಚಾರ್ಚ.ರ. ದೀ. ೦೨೯-೦೩). ೨. ನಡವಳಿಕೆ; ಆಚರಣೆ; ವ್ಯವಹಾರ : ಬ್ರಹ್ಮ ಅವ್ವೆಯ ಗಂಡನಾದ ವಿಷ್ಣು ಅಕ್ಕನ ಗಂಡನಾದ ರುದ್ರ ಕಿಱುತಂಗಿಯ ಗಂಡನಾದ ಮೂವರ ಹೋ[ಪಾಠಾಂ. ಹೊಲ]ಬಳಿಯಿದೇನು ಚೋದ್ಯ (ವಗಮಾ. ೪. ೭೩೪-೯೯).
[ಪೋ₁ + ಬಟ್ಟೆ₂]

**ಪೋರ್₁**, ಪೋರು₁, ಹೋರ್₁, ಹೋರು₁ (ಕ್ರಿ). ೧. ಸೆಣಸು; ಕಾದಾಡು; ಹೊಡೆದಾಡು : ಕಡುಗಡಿಯವಪ್ಪೆರಡಾನೆಗಳ್ ತಮ್ಮೊಳ್ ಪೋರಲ್[ಪಾಠಾಂ. ಪೆಱ]ಸಾರ್ದು ಪೆಱಪಿಂಗಿ ಪೋದುದುಮಃ . . . ಕಂಡಂ (ವಡ್ಡಾರಾ. ೬೩-೨೩); ಇದು ಭೀಮಂ ದೇವಧಾತ್ರೀಸುತನಿಭದೊಳಿಭಂ ಪೋರ್ವವೊಲ್ಪೊರ್ದ ಠಾಣಂ (ಗದಾಯು. ೩-೨); ಎನ್ನೊಳ್ ಪೋರ್ದಿಡಿದುಂದ್ರುಸಿಂಧುರದ ಕೋಡಿಂದಾದ ಪಲ್ಯಂಕದೊಳ್ . . . ಕೇಳೀತಲ್ಪದೊಳ್ ನಿದ್ರೆಗೆಯ್ (ಶಂರಾಮಾ. ೯-೦೬೬). ೨. ಜಗಳವಾಡು; ಕಚ್ಚಾಡು : ಪುರುಡಿಸಿ ಪೋರದೆ ಪೆಣ್ಗಾತುರಿಸದೆ ಓಸರಿಕ್ಕೆ ಪಂದು ಕೊಲ್ಲದೆ . . . ಸುಟ್ಟೆಪ್ಪವು ಕರಿ ಕೇಸರಿಯೆರಳೆ ಪುಲ್ಲೆ ಮರೆ ಸಾರಂಗಂ (ಅಸಂಪು. ೩-೩೬); ಬೇವ ಪೆಣಕ್ಕೆ ಕೋಪದಿಂ ಪೋರ್ವ ಮಾರುಲ್ಗಳಂ . . . ಈಕ್ಷಿಸಿದಂ ಪ್ರತಿರೂಪಕಶೂದ್ರಕಂ (ಕಾವ್ಯಸಾ. ೩೬೪). ೩. ಘರ್ಷಿಸು; ಮಸೆ; ತಿಕ್ಕಾಡು : ಸಿಡಿಲೊಳೆ ತಳ್ತು ಪೋರ್ವ ಸಿಡಿಲಂತಿರೆ ಬಾಳೊಳೆ ಬಾಳ್ ಪಳಂಚಿ ಮಾರ್ಕಿಡಿವಿಡೆ ನೋಡಲಂಜಿ ದೆಸೆದೇವತೆಗಳ್ ಪೆಱಪಿಂಗೆ (ಶಂಪರಾ. ೧೦-೬೨). ೪. ಸ್ಪರ್ಧಿಸು; ಪೈಪೋಟಿ ಮಾಡು; ಹುರುಡಿಸು : ಈಶ್ವರನೆಟ್ಟಂದದಿದಱಗ್ರದೊಳ್ ನೆಲಸಿ ಚೆಲ್ವಂ ಕಂಡು ತತ್ಕೌತುಕೋದ್ದುರನಾಂದೋಳಿಸಿ ಮಹೋಚ್ಚಿಂದುಗುವ ಗಂಗಾವಾರಿಯೊಳ್ ಪೋರ್ವ ನಿರ್ಝರಧಾರಾತತಿಮಂಡುಮಿಂ ಸೊಗಯಿಸಿತ್ತಾ ಚಿತ್ರಕೂಟಾಚಲಂ (ಕುಸುಪಾ. ೧-೬೮). ೫. ತಿವಿ; ಹಾಯು : ನೀರುಣ್ಬ ಕನಲ್ವ ಪೋರ್ವ ಮೆಲ್ಪೊತ್ತುವ . . . ಗೋರಾಜಿಯ ಲೀಲೆ ಕಣ್ಗೆ ಪಡೆದುದು ಚೆಲ್ವಂ (ಶಂಪ್ರಪು. ೨-೨೬); ನೊಸಲಲೀಂಟೆ ಲೀರದೆ ಕೊಣಕಿಟ್ಟು ಮುರಿದು ಪರಿದು ಓರಿದಪ್ಪ ಪುತ್ರಿಸೊಳೊತ್ತಿ ಪೋರ್ದು . . . ಪೊಱಮಟ್ಟ ಕಾಳರಕ್ಕಸರಂತಿರ್ಪ ಕಾಳ್ಕೋಣಂಗಳಿಂ (ಗಿರ. ೦-೦೨೬ ವ); ತೋರ ಹೋರಿಗಳ ದುರುಕಾರವಂ . . . ಮಾರ್ಮಲೆತು ಪೋರ್ವ ಘನವೃಷಭಶೃಂಗಾರವಂಗೂಡಿ ನಾನಾರವಂ ಕಿವಿಗಳಂ ಪೂರೈಸಿತೇವೇಳ್ವೆನು (ಕಂಪು. ೦೦-೦೭). **ಪೋರು₁**: ೧. ತಗರೆರಡುಂ ತಮ್ಮೊಳ್ ತಾಗಿ ಕಿಡಿಗುಟ್ಟಿದಂತಾಗೆ ಪೋರುತ್ತಿರೆ (ಶಂಕಶಂ. ೬೨-೦೪); ಓರಿದು ರೋಷದಿ ಕಾದಿ ಸತ್ತು ಕೋಳಿಗಳಾಗಿ ಭರದಿಂ ಪೋರುತಲಿರ್ಪವೀಗ (ಶಾಂತೀಶ. ೩-೦೮); ತೊಟ್ಟು ನಿರಹಂಕೃತಿಯ ಕವಚವನು ನೀಂ ಪೋರು ಮುಟ್ಟದಿಳಿಯಿಸಿ ನಿನ್ನ (ಮಂಶುಶ. ೮೦೩). ೨. ತತ್ತ್ವಬಳ[ಪಾಠಾಂ. ಳೆ]ತಾಳಗೊಟ್ಟೆಯೆನುತ್ತಾದಂ ರುಷ್ಟಿಯರೊಡನೆ ಜಡಮತಿಗಳು ಪೋರುತ್ತಿಪ್ಪರ್ (ಕಮಿಶ. ೦೪-೦೭); ಅರುಣವರ್ಣದ ನೀಲವಸನದ ಕಾಂತೆ ಪೋರುತ್ತ ಮರಳಿ ಕಚ್ಯುತ ತನ್ನನೆಳವುದ ನರನು ಕಂಡಡೆ ಕನಸಿನಲಿ ಅವನಿರನು ಬೇಗದಲಳಿವನ್ನೆ (ತತ್ವಸ. ೯-೨೬); ಪುಟ್ಟದ ಮನೆಯೊಳು ಪೋರಿ ಪುರುಳುಗೊಂಬ ದಿಟ್ಟ ಗಂಡುಗಳಂತಿರಲಿ ಕೊಟ್ಟುದಱಿಂದ ತಣಿವ ಕುವರಿಗೆ ಮನಮುಟ್ಟಿ ಕೊಡುವುದು ಕೋವಿದರು (ಹರಿಶ. ೩-೦೧). **ಹೋರ್₁**: ೧. ಕೊಣಕಿಟ್ಟು ಮಹಾರವದಿಂದೆ ಹೋರಲೆಲ್ಟಟ್ಟುವ ಸೊಕ್ಕಿದಾನೆಮಕರಂಗಳನೀಕ್ಷಿಸಿದಂ ಸಮುದ್ರದೊಳ್ (ಸೂತ್ರಸ. ೨-೨೩). ೬. ವಾದಮಾಡು; ವಾದಿಸಂ; ಚರ್ಚಿಮಾಡು : ಹಿಂದಿರ್ವರು ನಾವೆಕ್ಕೆಯೊಳಗೆ ಹೋರ್ವಂದದೆ ಸೋಮಪ್ರಭನ್ಯಪಸಭಿನವಕಂದರ್ಪಂ ಜನಿಸಿದನಾದೊಡೆ (ಅಡುಕ. ೦-೬೭). **ಹೋರು₁**: ೧. ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತು (ಹತಕಾ. ೨-೦೨); ಹೋರಿದರೆ ಹುರುಳಿಲ್ಲೆನುತ ಪರಿವಾರವೊಜಲಿತು (ಕುವ್ಯಾ. ೩-೦೫); ಹೋರುವವ್ವು ಮಲ್ಲರೊಲು ಕಾಲದೊಡನೆ ಕಾಲನೆಮ್ಮುಯದಾಗಿ ಆಗುವನಕ (ಶಿಗೀ. x, ೦). ೨. ಮುಳಿದು ಸ್ವಾಮಿಯರಿಬ್ಬರುಂ ಜೆಡೆಗಳಿಗೆಯೊಡಲಿಗೆ ಹೋ[ಪಾಠಾಂ. ಪೋ]ರಲ್ (ಚಶಪು. ೭೮-೦೦); ತನತನಗೆ ನೃಪತನಕೆ ಹೋರಲಿಕಾಗ ಮಂತ್ರಿಗಳು ವಿನಯದಲಿ ಗಜಬಜವ ಮಾಣಿಸಿ (ಸಂಚಶ. ೦೬-೬೬); ಹರಿ ವಿರಂಚಿಗಳು ತಂತಮ್ಮ ಪೆಂಪಿಗೆ ಹೋರಿ ಹನನಿಡಿ ಮುಡಿಗಾಣಲೆಂದು ಇರದಿಟ್ಟ ಬಟ್ಟೆಗಳೆನಲಿಹಮಾ ಪುರ ಉರುಖಾತಿಪ್ರಾಕಾರ (ಶ್ರೀಶಾಂ. ೦-೭೦). ೪. ವೇದಕ್ಕೆ ಹೋರುವರೆ ವೇದಕ್ಕತೀತ ಶಾಸ್ತ್ರಕ್ಕೆ ಹೋರುವರೆ ಬಳಸಿನವನಲ್ಲ ಪುರಾಣವಲ್ಲಿ ಹೋರುವರೆ ರೂಪಿನವನಲ್ಲ (ಪೋಶವಾ. ೬-೨೦); ಶಾರದೆ ನಿನ್ನೊಳು ವಿದ್ಯಾಕಲೆಗಳಿಂ ಹೋರಿ ಸೋತಂಜಿ ಬಸತಿಯ ಸಾಂದಳಿನೆ ನಿನ್ನ ಜಾಣ್ಮೆಗೆ ಸೋಲದರಾರವನಿಯೊಳು (ಕುಂಶಾಂ. ೨೪-೬೭). ೬. ಹೋರದಿರು ಹೊಗು ಬವರಕೆನಲಸುರಾರಿಯಂಘ್ರಿಯೊಳಿಜಗೆ . . . ತಡುಕಿದನು ಧನುವ (ಕುವ್ಯಾಕ್ರೋ. ೩-೬೩); ಶಾರದೆ ಜಡರತ್ನ ಸಾರದೆ . . . ಇನ್ನು ನೀ ಜಾಜದೆ ಹೋರದೆ ನೇರದಿ ಮಾಡೀ ಕೃತಿಯ (ವಾಗಳು. ಶೀಲಕಾಸಂಪು. ೦೯). ೭. ಕಾಡು; ಪೀಡಿಸು : ಹಾಲುತುಪ್ಪವನು ಕುಡಿದು ಮಱುದಿನ ಯಾಪನಾಳದ ಪುಡಿಪು ಕದಡನು ಕುಡಿಯಲೊಲ್ಲದೆ ಕೆಡಹಿ ಕಳೆವನು ಯಾಳಿ ಯಾಡುತವಳುತ ಹೋರುತಿರೆ (ಸಂಚಶ. ೦೭-೬೩); ಶ್ರಮ ಪರಿಹರಿಸೊದು ಹೋರರೋ ಹೋರರೋ . . . ನಮ್ಮ ಪುರಂದರವಿಠಲನ ಸೇರರೋ ಸೇರರೋ (ಪುರಂದ. ೦-೦೩೪-೩); ಕ್ರೂರರ್ವೆರ ಬಾಧೆ ಹೋರುತಲಿದೆಕೊ ಆರಿಂದ ನಿರ್ವಾಹವಾಗದು (ಜಗನ್ನಾ. ೬೯). ೮. ಕಷ್ಟಪಡು; ಬವಣೆಗೊಳಗಾಗು : ಧರೆ ಧನ ವನಿತೆಯರು ಎನ್ನವರು ತನ್ನವರೆಂದು ಹೋರಿ ಹೋರಿ ಸಾವುತ್ತಿದೆ ಜೀವ (ಏಕಶ. ೩೯-೦೬೪).
[ದೇ.॥ ತಮಿ. ಮಲ. ಪೊರು; ತುಳು. ಪೋರಿ; ಕೊಡ. ಪೋರ್; ತೆಲು. ಪೋರು; ಗದಬ. ಪೋರ್; ಕುಇ. ಪ್ರೂಹ್ಪ]

**ಪೋರ್₂**, ಪೋರು₂, ಹೋರು₂ (ನಾ). ೧. ಕಾಳಗ; **ಹೋರಾಟ**; ಸೆಣಸಾಟ : ಮಾರಿಯೊಳರ್ಕೊಳ್ವರಣ್ಯವಾರಣಂಗಳೊಡನೆ ಭರದಿ ಪೋರ್ಗಂ ಮೊಗಂಬುಗುವ ವೀರ ಪೇರಾನೆಗಳ ತೊಳವಿಗಗಳೊಳಂ (ಶಂಪ್ರಪು. ೩-೭೦ ವ);

ಸ್ವಸ್ತಿಶ್ರೀನಿರ್ಗ್ರುನ್ಥನಾವುಣ್ಣ ತಪಸಿಯ ಪೋರಿಲ್ ಇಭದೆ ಕಾದಿ ಸತ್ತೊಡೆ (ಪ್ರಶಾಂ. ೦೯೫೩. ೦೦೩-೦೩ ; ೩); ಪೋರನ್ ತಿರಿಪಿದ ಸ್ಥೂಸಿಗೆ ಬಟ್ಟರ್, ಕಂಟಿನ ಪೋಡನ್ ಕಾಣ್ಕೆಯ ಬಟ್ಟರ್ (ಅಂತಿಗೂ. ೬-೦೨೮). ೨. ಜಗಳ ; ಕಲಹ ; ಕಾದಾಟ : 'ಪೋರಂಗೈ', 'ಪೋರ್ನುಡಿ' ಪರಾ. ಪೋರ್ರು₂ : ೧. "ಕಾಳಗದೊಳಂ ಬಲದೊಳಂ ಪೋರು" (ಶಬ್ದಮಂ. ೦೦೩). ಹೋರ್ರು₂ : ೨. ತಾಯಿ ಮಕ್ಕಳ ಜಗಳ—ಕೊಟ್ಟು ಕೊಂಡವರ ವಾಗ್ವಾದ—ನಂಟರಿಷ್ಟರ—ಹೋರು ಮುಂತಾದ್ದೇನಾದರು ಉಂಟೆಂದು . . . ವಿಚಾರಿಸಿ ದಂಡಗಳು ತೆರಿಸುವನು (ಕಳಾಮಂ. IV, ೦೨೦).

[< ಪೋರ್₁ ./ತಮಿ. ಮಲ. ಕೋತ. ಪೋರ್ ; ತುಳು. ಪೊರ್ದು ; ತೆಲು. ಕುಇ. ಪೋರು]

**ಪೋರ್₃, ಪೋರ್ರು₃, ಹೋರ್₃, ಹೋರ್ರು₃** (ನಾ). ೧. ತೂತು ; ಬಿಲ; ರಂಧ್ರ: ಮುನಿಪಂ ಚರ್ಯೆಗೆ ಪೋಗುತಿರ್ಪ ಪದದೊಳ್ ವ್ಯೆಯಲ್ಲಿ ಪತ್ತಿರ್ದ ವೃಕ್ಷದ ಪೋರಿಂ ಪೊಱಮಟ್ಟು ಪೋದ ಮಧುಪ ತನ್ನಿಂದೆ ತಾನಾಗಿ ಬರ್ಪನಂ (ಅರ್ಧನೇ. ೦-೯೦) : ಹುಲಿ ಹೊಯ್ದು ಜರಿದ ಹೆಗಲ ಪದೆದು ಕೋಣನಂ ಹೊಯ್ದು ಹೋರ[ಪಾಠಾಂ. ಹೊಡೆದ ಹೋರೆ] ಭೇರುಂಡ ನೆಱಗಿದ ಗಂಟುಗಳ...ಬೆಟ್ಟದ ಬೇಡನಾಯಕರು ನೆರೆದರು (ಹಕಶಾ. ೩-೫); ನೇರ್ಗೋಲ ಪೋರ್ಗಳಾ ನೃಪನಂಗದೊಳ್ಕಾಣಿಸಿದುವು ಜಾಳಂದ್ರದಂತೆ (ಕೃಪಕಶಾ. ೪-೩೫). ಪೋರ್ರು₃ : ೧. "ಕಾಳಗದೊಳಂ ಬಲದೊಳಂ ಪೋರು" (ಶಬ್ದಮಂ. ೦೦೩). ಹೋರ್₃ : ೧. "ಬಿಲಂ=ಹೋರ್" (ಶಾಶಕ್. ೪೭). ಹೋರ್ರು₃ : ೧. ಕಲ್ಲ ಹೋರಿನೊಳಗೊಂದು ಕಿಚ್ಚು ಹುಟ್ಟಿತ್ತ ಕಂಡೆ (ಅಶಶಂ. ೨೭-೦೦೯) ; ಉಪ್ಪು ಮಣಸುಗಳ ಹಿರಿಯ ಮೂಗಿನ ಹೋರು ತುಂಬಲು ಭರದಿ ಬಱಸಿಂದವನು ಸೀತರೆ ಗಿರಿಯ ತೋರದ ಭಟರು ತೞಗೆರೆಯುತೆ ಹುಱುದರು (ಕೌಶಶಾ. ೨೯-೫) : ಹೆಗ್ಗಣಗಳ ಹೋರುಗಳು ಅಲ್ಲಲ್ಲಿ ಮುಚ್ಚಿಕೊಂಡಿದ್ದು, ಅವು ಪಕ್ಕನೆ ಬಾಯ್ದೆರೆದಾಗ ಮನೆಯವರೆಲ್ಲ ಅದರಲ್ಲಿ ಮಾಯವಾಗುವ ಹೆದರಿಕೆಯೂ ಹಲವೆಡೆ ಉಂಟಾಗಿದೆ (ಹುಚ್ಚಶ್ರ. ೦೫).

[ದೇ.॥ ತಮಿ. ಪೋರ್, ಪೋಟ್ಟೈ; ತೆಲು. ಬೊರಿಯ, ಬೊಱಿಯ, ಬೊರ್ರ; ಕೊಂಡ. ಬೊಜ್ಜಿ]

**ಪೋರ** (ನಾ). (ತುಂಟ) ಹುಡುಗ ; ಬಾಲಕ : ಪೋರಂ ನಾಂ ಗೆಯ್ದ ತಪ್ಪೇಂ (ಪ್ರಶೂಪು. ೨-೬೦); ಪೋರ ನಾನೆಂದು ಬಗೆಯದಿರಸುರ (ಕುಪ್ರಾಶಿ. ೬-೨೮) ; ಈ ಪೋರನ ಹಣೆಯಲ್ಲಿ ಏನು ಬರೆದಿದೆಯೋ ಹಾಗೆ ಆಗಲೇ ಬೇಕಲ್ಲ (ಹೊಸಕ್ಕ. ೨೮).

[ದೇ. ॥ ಮಲ. ಪೊಱ = ದಡ್ಡ ; ತುಳು. ಪೋರ, ಪೋರೆ ; ತೆಲು. ಪೋರಡು. /ಮರಾ. ಪೊ.ರ ]

**ಪೋರಗ** (ನಾ). ೧. ಒಂದು ಬಗೆಯ ಆಯುಧ: ಪೊಯೆ ಕಾಳೆಪ್ಪುದಿಂ ಪೋರಗದಿಂದೆ ಪೊಯ್ದುನೆರೆದುಂ ಸರಿಪೋದವು ಲಾಗುಬೇಗದೊಳ್ (ಅನಂಪು. ೦೦-೩೦) ; ಬಾಹುಪೋರಗದೆ ಪೊಯ್ದಂ ಭೂಪನಾ ವೀರನಂ (ಅನಂಪು. ೦೦-೬೨). ೨. ಖಡ್ಗಯುದ್ಧದ ಒಂದು ವರಸೆ,—ಪಟ್ಟಿ: ಚಕತಟ ಪದ್ದಳಂ ಪೋರಗಂ [ಪಾಠಾಂ. ಪೊವಗಂ, ಪಾದಂಗಂ, ಪಾರೆಗಂ]ಗಳೆಂಬಡ್ಡ ಪೊಯಿಲಿಂ ನಿವಾರಿಸುತಿರ್ದರು (ಸೋಮಪುಕ. ೫-೦೫). [?]

**ಪೋರಗಿ** (ನಾ). (ತುಂಟ) ಹುಡುಗಿ ; ಪೋರಿ : ತೋರಣಬಾಗಿಲ, ಸುಮ್ಮನೆ ತೆರೆಯೆ ಪೋರಗಿ (ಕೂಹಿಮೂ. ೦೦೨). [←ಮರಾ. ಪೋರಗೀ]

**ಪೋರಟೆ, ಹೋರಟೆ** (ನಾ). ೧. ಹೋರಾಟ ; ಕಾಳಗ ; ಯುದ್ಧ : ಇಳಿಯೊಡೆತನ ಪೋರಟೆಗಳಿಂ ತಣಿಯದೆ ಪಿತೃದೇವತೆಗಳ ಋಣವನುತ್ತರಿಸದೆ ರಾಯಕುವರರೆಲ್ಲ ರಣಭೂಮಿಯೊಳಡಗಿದರು (ಕರ್ಣಪ್ಪ. ೬-೨೦). ೨. ಜಗಳ ; ಕಚ್ಚಾಟ : ಕೃಷ್ಣಗಜಂಗಳ ಪೋರಟೆಯಿಂದಭಿಲಶಿತವೃಷ್ಟಿಯಾಗದುದಂ . . . ಸೂಚಿಸುಗುಂ (ಪುಣ್ಯಾಸ್ರ. ೯-೦೬ ಪ) : ಪುಸಿಗೆ ಪಿಸುಣ್ಗೆ ಪೋರಟೆಗೆ ಮಾಯೆಗೆ ಹಿಂಸೆಗೆ . . . ಪುಗದಂತಿರೆಲ್ಲರಂ ಪೊಸಯಿಸಿ ಕಾರ್ತವೀರ್ಯನೆಸಕಂಬಡೆದಂ (ಜಕಶಿ. ೩-೦೫). ೩. ಪ್ರೈಪೋಟಿ ; ಹುರುಡು ; ಸ್ಪರ್ಧೆ : 'ಪೋರಟೆವೆಱು' ಪರಾ. ಹೋರಟೆ : ೧. "ಹೋರಟೆಯನೆ ಪೋರ್ಕೆಯು" (ಛಾಶಶ. ೩೯) ; ಹೋರಟೆಗೆ ಬರಹೇಳು ಭರ್ಗನನಿವನ ಪಾಡೇನು (ಕುಮ್ಯಾಶೀ. ೯-೯೨) ; ಹೋರಿದರು ಹರಿ ಜಂಭರಿಬ್ಬರ ಹೋರಟೆಗೆ ಹದಿನೆಂಟುಮಡಿಯೆನೆ (ತೊರವಾ. ೬-೩೨-೯೬) ; ಎನಗೆ ತನಗೆಂದಮರದಾನವಜಗಕೆ ಹೋರಟೆಯಾಯ್ತು (ಅಶಗ. ೬-೯-೩). ೨. ಪುರಾಣವೆಂಬುದು ಪುಂಡರ ಗೋಷ್ಠಿ ತರ್ಕವೆಂಬುದು ತಗರ ಹೋರಟೆ (ಅಶಶಂ. ೦೦೩-೯೬೩) . ೪. ತಿಕ್ಕಾಟ ; ತಾಕಲಾಟ ; ಘರ್ಷಣೆ : ಕಂಬಿಯ ಕಡಿಯಣದ ಕೀಲಣದ ಹೋರಟೆಯ ಧಾರಾ ಧಾರಿಯೊಳ್ ಜೋಳಿಸುವ ಲಾಲಾಜಲಂ ಖುರಹತಿಯಿಂ ನೆಗೆವ ದೂಳ್ಗೆ ಚಳೆಯಂಗುಡೆ (೧೧೦೯. ೬-೫೫ ಪ) ; ಅಳುವ ಶಿಶುವನು ತೆಗೆದು ತೆಕ್ಕೆಯ ಪುಳಕಜಲದಲಿ ನಾದಿ ಹರುಷದ ಬಳಿಯ ಲಜ್ಜೆಯ ಭಯದ ಹೋರಟೆಗಳಲಿ . . . ಗಂಗಾಜಲದೋಳಗೆ ಹಾಯ್ಕಿದಳು ಜನದಪವಾದಭೀತಿಯಲಿ (ಕುಮ್ಯಾಆ. ೩-೨೦); ಪೊಯ್ವಾಡಿ ತಲೆಯಂ ನಿವಾಳಿಸಿದರಾಳ್ದಂಗೆ ಕೈದುಗಳ ಹೋರಟೆಯ ಮಿಣೆಟಲ ರಭಸದಿಂದ (ಕೃಶಾಶಾ. ೨೨-೬). ೫. ವಿವಾದ ; ಚರ್ಚೆ : ಕುಱುಹಿನ ಮಱುವೆಯೊಳಗಿಪ್ಪ ವಸ್ತುವ ಕಾಬ ತೞನಿನ್ನಾವುದೊ ಇಲ್ಲವು ಮಱವೆಯ ಮಾತಲ್ಲದೆ ಬಱಿಯ ಹೋರಟೆಗೆ ಇವರು ಬಲ್ಲವರಲ್ಲವೆಂದ (ವಚನಸಾ. ೬೯-೨೬೦) ; ಆಱು ಬೆಟ್ಟವನೊಬ್ಬ ಹಾಱಬಹುದೆಂದಿಹರೆ ಹಾಱಬಹುದೆಂದು ಎನಬೇಕು ಮೂರ್ಖನೊಡ ಹೋರಟೆಯೆ ಸಲ್ಲ (ಸರ್ವಜ್ಞ. ೦೦೩೨). ೬. ಹೊಡೆತ ; ಪೆಟ್ಟು ; ಆಘಾತ : ಪೂಗಣೆಯ ಹೋರಟೆಗೆ ತರಹರಿಸದಬಲೆ ನೀನೀಗ ನೋಟದ ಹಂಬಲಂ ಬಿಟ್ಟು ಹೃನ್ಮಧ್ಯಕೀ ಗಾಡಿ ಕಾಱನಂ ತಂದು ನೆರೆದಪೆನೆಂದು ಕಣ್ಮುಚ್ಚಿ ಜಾನಿಸಿದೊಡೆ ಈ ಗಲಭೆಯೊಳ ಗಪ್ಪುದೇ (ಕಂಪು. ೦೯-೪೦) ; ಅಯ್ಯೊ ನಾನಾಱಿ ವಿಷಯದ ಹುಯ್ಯಲ ಹೋರಟೆಯ ಹೊಟ್ಟೆಹೊಸ ಕಮ್ಮರಿಯೊಳು ಕಯ್ಯೊಟಿ ಬಿದ್ದೆ (ಕಂಕಕಂ. ೦೦-೩೯). ೭. ಬಿರುಬು ; ರಭಸ ; ವೇಗ : ಅಳಿಕುಲಾಳಕಿ ಬಂದಳೊಬ್ಬಳೆ ಮಳೆಗೆ ಕೈಯೊಡ್ಡಿ ಬಲಿದು ಮೈ ನಡನಡುಗಿ ಹಲುಹಲು ಹಳಚಿ ನೆನೆದಳು ವಾರಿಯಲಿ ತನು ಹಳಹಳಿಸೆ ಬಳಲಿದಳು ಚರಣದ ಹೊನಲ ಹೋರಟೆಗೆ (ಕುಮ್ಯಾಶಿ. ೯-೨೫) ; ಬಿರಿದುದಖುಜಭವಾಂಡವಬ್ಬರ ಧುರದ ಹೋರಟೆಗೆ (ತೊರವಾ. ೪-೨-೩೬). ೮. ಶ್ರಮ ; ಪ್ರಯಾಸ : ಮಿಗ್ಗ ಬೆವಸಾಯವನು ಮಾಡುವ ಹೆಸ್ಗಳದ ಹೋರಟೆಯ ಕಾಣುತಲಕ್ಕಱಿಂದಲಿ ನೋಡಿ (ಕೃಶುಶ. ೦೦-೫). ೯. ಪೀಡೆ ; ಜಂಜಾಟ ; ಹಿಂಸೆ : ಹೊಕ್ಕು ಹೋರಟೆಯೆಲ್ಲವನು ಹೊಯ್ದಿಕ್ಕಿ ಸುಖಸಂಪೂರ್ಣಂತು ನಿಜಪದದಿಕ್ಕಿ ನಿನಗಹುದು (ಕೃಶುಶ. ೦೨-೦೩); ಅಯ್ಯಯ್ಯೊ ಧ್ಯಾನದ ತುಯ್ಯಲುಂಡಾತ್ಮನೊಳುಯ್ಯಲನಾಡಿ ಸುಖಿಸದೆ ಗುಯ್ಯಲೆತ್ತುವರುತೆ ಮುಯ್ಯು ಹೋರಟೆಯೊಳು ಹುಯ್ಯಲನುಂಡೆ ನಾನು (ಶರಶ. ೭೬-೨೬).

[ಪೋರ್₁ + — ಅಟೆ ]

**ಪೋರಟೆವೆಱು** (ಕ್ರಿ). ಸ್ಪರ್ಧೆಹೂಡು ; ಪೈಪೋಟಿ ನಡೆಸು : ಪುರುಡು ಪೋರಟೆವೆತ್ತು ಜೊತ್ತು ಗತಕಂ ಗನ್ನಂ ಕಚಾಕರ್ಷಣಂ . . . ಪಿರಿದುಣ್ಮಲ್ ವಧು ನಲ್ಲನೊಳ್ ನೆರೆವುತಿರ್ದಳ್ಕಾಮಸಾರಂಭದಿಂ (ಕೃಶುಂ. ೨೯-೦೬೦).

[ ಪೋರಟೆ + ಪೆಱು ]

**ಪೋರತನ** (ನಾ). ಹುಡುಗುತನ ; ಹುಡುಗುಬುದ್ಧಿ : ಇಂತಾ ಪೋರತನ ನಾನರಿಯೆ ಬೇಕೆಂದಾ ನನಪನಂತಡವಿ ಬೆನ್ನಿಗೆ ತರಿಸುವುದು ಗುಣವೆ (ರೀವಪು. ೬-೦೨೫). [ ಪೋರ + — ತನ ]

**ಪೋರಾಟ, ಹೋರಾಟ** (ನಾ). ೧. ಕಾಳಗ ; ಯುದ್ಧ ; ಕದನ :

ಘನವೇತರಿಂತು ಭಾವಿಸಿದರು ತಮ್ಮಯ ಮನದೊಳಿಂತಿವರ ಪೋರಾಟ ಘನದುಃಖಹೇತು ತವ್ಮೊಳು ಪರಸ್ಪರ ನೋಳ್ಪ ಜನಕೆ ಪಾಪಾಸ್ಪದವೆಂದು (ಶಾಂತೀಶ. ೩-೧೨). **ಹೋರಾಟ**: ೧. ಅದು ಎಲ್ಲ ರೀತಿಯಿಂದಲೂ ಅಂತಿಮಹೋರಾಟಕ್ಕೆ ಸಿದ್ಧವಾಯಿತು (ಅಶ್ವತ್ಥ. ೦೯೩). ೨. ಜಗಳ; ಕಚ್ಚಾಟ: ಧಾರಿಣೀಶನ ವಾಣಿಯೊಳು ನಿನ್ನ ವಾಣಿಯ ಸೇರಿಸಿ ಪಿತನ ಕೈಯಿಂದ ಧಾರೆಯೆಱಸುವವನು ನಿಮಗಿಬ್ಬರಿಗೆ ಬಂದ ಹೋರಾಟ ಹೊಳೆಯ ಹೋಹಂತೆ (ಛತ್ರ. ೯-೦೨೯). ೩. ವಾದ; ಚರ್ಚೆ: ಮಾತಿನ ಮಾಲೆಯ ಹೆಚ್ಚು ಕುಂದಿನ ಹೋರಾಟವುಳ್ಳನ್ನಕ್ಕರ ಅದ್ವೈತಿಯಲ್ಲ (ಅರಹ. ೩೩-೯೭). ೪. ಒದ್ದಾಟ; ಶ್ರಮ; ಹೆಣಗಾಟ: ಪೇರೇರುಗಳ ಕಿಚ್ಚು ಸಿಡಿತದಿಂ ತಣರುತಿರೆ ಹೋರಾಟ ಬಾಳ್ವೆಯಂ ಬೇಡನ್ನುತಿತ್ತು (ಶಾಂತಿರ. ೦೦೩-೨೦೩); ಆ ಮುಗ್ಧಪ್ರಶ್ನೆಯಲ್ಲಿ ಅವನ ಬದುಕಿನ ಸಮಸ್ಯೆಯೇ ಹುದುಗಿತ್ತು . . . ಈ ವಯಸ್ಸಿಗೇ ಇಂಥ ಹೋರಾಟವೇ (ಹೊಸಕ್ಷಿ. ೩೯).

[ಪೋರ್$_1$ + ಆಟ./ತಮಿ. ಮಲ. ಪೋರಾಟ್ಟಮ್; ತೆಲು. ಪೋರಾಟ]

**ಪೋರಾಣ್ಮ** (ನಾ). ದಂಡನಾಯಕ; ದಳವಾಯಿ: ಪೋದವನಾ ಪೋರಾಣ್ಮನ್. ಪೋದವರಾ ಪೊಣ್ಮಾಳ್ಗಳೆ ಬಾರದೆ ಬಗೆ ಬೆದರುತಿಹುದು (ಶಾರಶಿ. ೦.೦೯). [ಪೋರ್$_1$ + ಆಣ್ಮ (<ಆಳ್ವ)]

**ಪೋರಾಳ್**, ಹೋರಾಳು (ನಾ). ಯುದ್ಧ ಮಾಡುವವನು; ಶೂರ: ಏಷಿಯದ ಸಾಮ್ರಾಜ್ಯಕೇಂದ್ರವೇ! ಓ ಪರ್ಸ್! ಐಶ್ವರ್ಯಭೂಮಿಯೇ, ಪೋರಾಳ ತಾಯ್ ತವರೆ! (ಶಾರಶಿ. ೦೦-೨೬೨). **ಹೋರಾಳು**: ನಿರ್ಧರ ವಾದ ದಿನ ಹೋರಾಳುಗಳು ಬರೀ ಚಡ್ಡಿ ಧರಿಸಿ ನಗುಮುಖದಿಂದ ಅಖಾಡಕ್ಕೆ ಇಳಿಯುತ್ತಾರೆ . . . ಹೋರಾಳುಗಳು ತಮ್ಮ ಇಷ್ಟ ದೇವರನ್ನು ಪ್ರಾರ್ಥಿಸಿದ ಮೇಲೆ, ಕತ್ತಿಗಳನ್ನು ತಾಗಿಸುತ್ತಾರೆ (ಕ್ರಣಜ. II. ೨೬೩). [ಪೋರ್$_1$ + ಆಳ್$_3$]

**ಪೋರಿ$_1$** (ನಾ). (ತುಂಟ) ಹುಡುಗಿ; ಬಾಲಕಿ: ಊರಿಗುಕ್ಕಿಯ ಚಿಂತೆ ಪೋರಿಗೆ ಮದುವೆಯ ತೋರ ಚಿಂತೆ (ಜ್ಞಾನಪ. ೦೯-೬೬); ನಿನ್ನೆ ಹುಟ್ಟಿ ಇಂದು ಕಣ್ಣು ತೆಗೆದ ಪೋರಿ ನೀನು (ಜೀವಕ್ರ. ೦೦೦); ಹಾಡು ಮುಗಿಸಿದ ತಾಯಿಯ ಮುಖವನ್ನೇ ನೋಡಿ ಆ ಪೋರಿ ನಕ್ಕಳು (ರಂಗಪ. ೦೯೬).

[ಪೋರ + — ಇ$_2$./ ತುಳು. ಪೋರಿ; ತೆಲು. ಪೋರಿ, ಪೋಱ]

**ಪೋರಿ$_2$**, ಹೋರಿ (ನಾ). ೧. ಎಳೆಯ ಪ್ರಾಯದ ಬೀಜದ ದನ; ಗಂಡು ಕರು: "ಕಱವೆಳಗಱು ವತ್ಸ ಶಕೃತ್ಕರಿನಾಮಂ ತಿರ್ದಲಾ[ಪ] ಪೋರಿಯೆ ದಮ್ಯಂ" (ಅಭಿಕೋ. ೬೯-೩); ಗೋಮಂಡಳದೊಳೊರ್ವ ಪೋರಿಗಳಾಗಿ ರಾಜಮಂದಿರದ ಸೀಯದಾರದೊಳ್ ಪೊಣರ್ದು (ಶಾಂತಿಪು. ೯-೯೭ ಪ): ಆದೊಡವಂ ಕೊಟ್ಟು ಪಯನಾಮಂ ಕೊಳ್ವಂ ಅವರ್ಕೆ ಪುಟ್ಟಿದ ಪೋರಿಗಳಂ ಕಿರ್ದಿಯಾರಂಬಂಗೆಯ್ದು (ಕಂಪಕಂ. ೦೬೬-೬); ಬಾಲವೃಷಭಯುಗದೊಳ್ ಪೂಡಿರ್ದ ರಥಮನೆಳೆಯ ಪೋ[ಪಾಠಾಂ. ಪಾ]ರಿಯನೇಱಿದ ನೃಪಪುತ್ರನಂ ನೃಪಾಳಂ ಕಂಡು (ಪುಣ್ಯಾಸ್ರ. ೯-೧೫).೨.ಆಡು, ಎಮ್ಮೆ ಮೊದಲಾದವು ಗಳ ಗಂಡುಕರು: ತನ್ನಿಂದಂ ತಾನೋರಂತೆ ಕುದಿದು ಪಾಱುಗುಪ ಸಾರಂಗದ ಪೋರಿಯಂದದವಂ ನೆಱ ಪೊಲ್ಲಂ (ಧರ್ಮಾಮೃ. ೧-೦೩೯); ಜನಕಂ ಯಶೋಧರಂ . . . ವಿಪಾನಾಡಿನ ಪೋರಿ [ಪಾಠಾಂ. ಪೋಂತು] ಪೋಂತು ಕುಕ್ಕುಟವೆನೆ ಪುಟ್ಟಿಯುಮಿಂಗಳಭಯರುಚಿಯಾಗಿರ್ದಂ (ಜ್ಞಕೋಶ. ೯-೫೭). **ಹೋರಿ**: ೧. "ತರ್ಣಕಃ, ವತ್ಸಃ — ಈ ೨ ಹೋ(ಱ)ರಿ" (ಕರಾಮು. ೯೯-೦೦೯); ಸ್ಪಟಿಕದ ಮಧ್ಯದಲ್ಲಿ ಬಹುವರ್ಣದ ಹೋರಿಯ ತೋಱ ಪಿಡಿವವನಂತೆ (ಪೋಲವಾ. ೦೬೦-೧೦೦); ಆ ಪಶುಗಳು ಕಾಮಧೇನುಗಳಾ ಪುರದ ಹೋರಿಗಳು ನಂದಿಯ ರೂಪಿನಂತಹವು (ಅಕಪು. ೯-೩೩): ತರಿಸಿ ಹೋರಿಯು ಗವಿಯು ಗೂಳಿಯ ಬರಿಸಿದನು ಕೆಲಕೆಲವ ಕೃಷಿಕರಿಗಿರಿಸಿದನು ಗೋಲಕ್ಷವಿತ್ತನು ವಿಪ್ರಸಂಕುಲಕೆ (ಕುಪ್ಯಾಅ. ೦೬-೩೭). ೩. ಎತ್ತು; ಬಸವ: ತಳಾರರಕ್ಷಕನಂ ಕನಲವೋರಿಗಳ್ ಪೂಡಿ ಪೆಟ್ಟ ಮೆಟ್ಟಿಪರ್ (ಸುಕುಮಾ. ೬-೩ ಪ); ಹಿಡಿ ಹಿಡಿ ಬಂಡಿಎತ್ತುಗಳ ಬಗಿದ ಬಲುಹೋರಿಯ ಕೊರಳ ಜೊತ್ತಗೆಗಳಂ ಪಱ ಪಱ (ಪಕಪು. ೩೬-೨೬); ಬಂಡಿಯ ಹರಿದು ಸೆಳೆದೆಳೆರಿದನು ತಾ ಬಲುಹುರಿಯ ಹಗ್ಗವ ಹಿಡಿದು ಜಡಿದನು ಹೋರಿ ಕೋಣಗಳ (ಸಂಪಕ. ೨೩-೬೦); ಹೋರಿ ನಡೆಯುದಿದ್ದರೆ ದಾರಿ ಉದ್ದ ಅಂದ ಹಾಗೆ (ಗಾದೆ).

**ಹೋರಿಗರು** = ಗಂಡುಕರು: "ದಮ್ಯಃ, ವತ್ಸತರಃ — ೨ ಹೊರುವ ದಕ್ಕೂ ಯೆಳೆಯುವದಕ್ಕೂ ಉಳುವದಕ್ಕೂ ತಿದ್ದಲ್ಪಟ್ಟ ಹೋರಿಗರು" (ಸಿದ್ಧಾಂತಿ. ೨೯೨).

[ದೇ.II ತುಳು. ಬೋರಿ, ಹೋರಿ; ಕೊಡ. ಪೋರಿ; ಕೋತ. ಪೋಯ್ರ್]

**ಪೋರಿಸು**, ಹೋರಿಸು (ಕ್ರಿ). ೧. ಹೋರಾಡಿಸು; ಯುದ್ಧ ಮಾಡಿಸು: ನೆಗಟ್ದ ಮಲ್ಲರುಮಂ ಪಿಡಿದೊತ್ತಿ ಗೆಲ್ದ ಜೆಟ್ಟಿಗರೆನೆ ಸಂದ ಮಲ್ಲರನೆ ಪೋರಿಸಲುಂ ಪಿರಿದೊಂದು ದೋಹಳಂ ನೆಗಟ್ದುದು ಗರ್ಭದರ್ಭಕನ ದೋರ್ಬಲ ಗರ್ವಮನಂದು ಪೇಟ್ವವೋಲ್ (ಅಪು. ೯-೯೬); ಭೀಮನೆಯ್ದಿ ಭರದಿಂದಂ ಯುದ್ಧಮಂ ಬೇಡಿ ಮಾಗಧನೊಳ್ ಪೋರಿಸುವಲ್ಲಿ ಶಕ್ತಿಕಳೆಯಂ ಭೀಮಂಗೆ ಕೊಟ್ಟದ್ಭುತಪ್ರಧನಾಟೋಪದೆ ಭೀಮನಿಂ ಕೊಲಿಸಿದಂ ಕೃಷ್ಣಂ ಜರಾಸಂಧನಂ (ಜಗ. ೦೬-೬೦). ೨. ಕಾದಾಡಿಸು; ಜಗಳವಾಡಿಸು: ತಗರಂ ಪೋರಿಪ ಬಗೆಯಿಂ ತಗರಂ ವಿನೋದದಿಂದಂ ಪೊರೆದಂ (ಕಂಪಕಂ. ೦೬೯-೦); ಪಟು ವೈರಿನಿರ್ಧೂರ್ತರೆನಿಪ ಜೋದರ್ಕಳುಕುಶವಿಕ್ಕಿ ಪೋರಿಸಿದರಾನೆಗಳನು (ಕಂಪು. ೨೯-೯). ೩. ಹಿಂಸೆಗೆ ಒಳಪಡಿಸು; ಒದ್ದಾಡಿಸು; ಹೆಣಗಿಸು: ಚಾರು ಸುರಾಂಗನಾರತಿಸುಖಾಮೃತಸೇಚನೆಗೊಂದು ಕಾಯಮಂ ಪೋರಿಸಿ ನೋಟ ದೊಳ್ಕೊಡರ್ದು ಶಬ್ದಮನಾಲಿಸಿ ಬೇವ ಬೇವಸಂ ಪೋ ರುಚಿಯಲ್ಲಂ (ಸುಕುಮಾ. ೯-೩೬). **ಹೋರಿಸು**: ೧. ಮಲ್ಲರ ಹೋರಿಸುತ್ತಿಹ ವಗಡ ನೆತ್ತಗಳಾಡಿ ನಲಿವ . . . ರಾಜಪುತ್ರರು ಸೊಗಸಿದರಾ ಬೀದಿಯೊಳಗೆ (ಕೆಂಪಿಅ. ೨-೬೬); ಶ್ರೀರಾಮ ರಾವಣನ ಹೋರಿಸುತ ಲಂಕೆಯನು ಸೂರೆ ಮಾಡಿಸಿದಂತ ಶೂರ್ಪನಖಿಯಂದು . . . ನರಿಯು ನೀನೆಂದು (ಕಂಕ. ೯೩-೯); ಕಂಡವರೆದೆ ನಡುಗುವಂತೆ ಅವರನ್ನು ಹೋರಿಸುವನು (ಕಸಾಜ. ೯೩). ೨. ನಿಮ್ಮ ಮಹಿಪನೊಬ್ಬನೆ ಹಿತವಲ್ಲ ವಹಿಸಿಬಿಟ್ಟೆವಮ್ಮ ಹೋರಿಸುತ ತಾ ನೋಡುತುತ್ಸಹದೊಳಿದ್ದವನೆಂದಲೊಡನೆ (ಕಕಪ. ೦೯-೯೬). ೩. ಅವರವರ ಕೃತಕರ್ಮಸಂಸ್ಕಾರ ಹೋರಿಸುವುದಲಿಸುವುದು ಸಾಖ್ಯಕೆ ಸೇರಿಸುವುದು (ಕುಪ್ಯಾಅ. ೨೦-೦೬). [ಪೋರ್$_1$ + — ಇಸು$_3$]

**ಪೋರು$_1$** 'ಪೋರ್$_1$' ನೋ.

**ಪೋರು$_2$** 'ಪೋರ್$_2$' ನೋ.

**ಪೋರು$_3$** 'ಪೋರ್$_3$' ನೋ.

**ಪೋರುಗೈ** (ಕ್ರಿ). ಜಗಳವಾಡು; ಕಲಹಮಾಡು: ನೆರೆಯೊಳ್ ಸೇರಲು ಪೋರುಗೈದು ಸತಿ ತಾಂ ಪೋಗಟ್ಟುವಳ್ ಸಾಲಿಗರ್ ಕಲುಗುಂಡಂ ತಲೆಗೇ ಱಪರ್ ತೊಲಗಿರಲ್ ಲಕ್ಷ್ಮೀಕಟಾಕ್ಷೇಕ್ಷಣಂ (ಸೋಮೇಶ. ೩೦).

[ಪೋರು$_2$ (< ಪೋರ್$_2$) + ಗೈ (< ಕೆಯ್$_1$)]

**ಪೋರುಗೊಳ್** (ಕ್ರಿ). = ಪೋರುಗೈ: ಪಳಿವವರೊಳು ಪೋರುಗೊಳದೆ ಮುಳುಗಿಯೊಟ್ಟಪರೊಳು ಮೂದಲೆಯನಗದೆ ಒಳುಮೆಂದಿರೊಳ್ಳವಡೆವುದು (ಹಂಪ. ೯-೯೦). [ಪೋರು$_2$ (<ಪೋರ್$_2$) + ಕೊಳ್$_1$]

**ಪೋರೆ**, ಬೋರು$_1$, ಬೋರೆ$_1$ (ನಾ). ೧. ಸಣ್ಣಗುಡ್ಡ; ಮೊರಡಿ: ದಿಬ್ಬ: ಉರಿಗಳಿಂದೋರೆಯಿಂ ಪೋರೆಯಿಂ[ಪಾಠಾಂ. ಉರಿಗಳಿಂದೊರೆ ಗಳಿಂ ಮೊರೆಗಳಿಂ, ಜರಿಗಳಿಂದುರಿಗಳಿಂ ಪೋರೆಯಿಂ]ದಿಡಿದ ಕಮ್ಮರಿಗಳಿಂ ಕಱಿವ ಕೆಂಡದ ಮಳೆಗಳಿಂ ಗಜರ್ವ ಮುರುಳ್ಗಳಿಂ ಶಾಕಿನಿಯರಿಂ ದಾಕಿ ಯಿಂದವಾ ವಥ ಬೆವಡಿಸುವುದು (ಕಂಪು. ೩೬-೨೩); ಲಲನೆಸಹಿತ

ತೆರೞ್ದರು ಮುಂದಕಂ ಗಂಧಮಾದನನೆಂಬ ಗಿರಿಯನ್ನದರ್ೊಗೆರೆಪೋರೆಗಳ ಮುರಿಗಳಂ ಜರಿಗಳಂ ಕೞಿದು (ತುರಂಗ. ೯೪–೨೩). ಬೋರು₁ : ೨. ಏಟು ತಗುಲಿದುದರಿಂದ ಉಂಟಾದ ಬುಗುಟೆ,—ಊತ : ಕಿಟಕಿ ಬಾಗಿಲು ತಾಗಿ ಮಗುವಿನ ಹಣೆ ಮೇಲೆ ಬೋರು ಬಂದಿದೆ (ಜಾ). ಬೋರೆ₁ : ೧. ಕುರುಬನ ಕಟ್ಟೆಗೆ ಮೂಡದಿಕ್ಕಿನ ಬೋರೆ ಮೇಲೆ ಹುಟುಗಲ್ಲು ೧ (ಎಕ. XII, ಶ್ರೀರಂಗ. ೦೪–೦೩೪ ; 1686) ; ಬೆಟ್ಟಕ್ಕಿಂತಲೂ ಚಿಕ್ಕದಾದರೆ ಗುಡ್ಡ, ದಿಣ್ಣೆ, ತಿಟ್ಟು, ಮರಡಿ, ಬೋರೆ, ತೆಂಬ, ತೆವರು ಎಂಬ ಹೆಸರುಗಳು ಬರುತ್ತವೆ (ಕೂಗೋಳ. ೦೧); ರಜವಿದ್ದ ದಿನ ಮಧ್ಯಾಹ್ನ ದನಕಾಯಲು ಬೋರೆಗೆ ಹೋಗುತ್ತಿದ್ದೆ (ಧರ್ಮಶ್ರೀ. ೦೪). ೨. ಕಬ್ಬಂ ಪೊತ್ತಡೆ ಶಿರೋಭಾಗಮೊಱೆದ ಬೋರೆಗಳವೊಲು ಹೊಡದು ರಾವುಗಳು ತಾಗಿದೊರಸಿದ ಮಸಗಿದೊತ್ತಿನ ಮೇಗಣೆಡೆಗಳು (ಚಸಕೃ. ೩೯–೩೯); ಮಕ್ಕಳ ಮಂಡೆ ಬೋರೆ ಹೋಹಂದದಿ ಹಟ್ಟಿ (ಶೀಬಸಂ. ೦೩–೦೦೬); ಹೊತ್ತ ಹೊಱೆಗಳಿಂದ ನೆತ್ತಿ ಬೋರೆಯಾ (ಅಮ.ಸಾಂ. ೬–೩).
[ದೇ॥. ತಮಿ. ಪೊಱೆ₁, ಪೊಱೆ₂; ಮಲ. ಪೊಱ್ಱು; ತುಳು. ಬೋರೆ=ಬೆಟ್ಟದ ತುದಿ]

**ಪೋರ್ಕೞ** (ನಾ). ಯುದ್ಧರಂಗ ; ರಣರಂಗ : ಕಾಳಗದ ಪುಲಿ ತಾನ್, ಕಾಳಗದ ಪುಲಿಗಳನ್ ಪೋರ್ಕೞದೆ ಕೞೆಯಾನ್, ಸಾವಿಗೀಯಾನ್ (ಹಾರಸಿ. ೨೩–೨). [ಪೋರ್₂ + ಕಳ₃]

**ಪೋರ್ಕೞಿ** (ನಾ). ಯುದ್ಧ ; ಕಾಳಗ ; ಹೋರಾಟ : ಈ ಬಗೆಯಲ್ಲಿ ಪೋರ್ಕೞಿ ಮುಂದುವರಿದರೆ ನಾವು ಕಾಳಗದಲ್ಲಿ ಗೆಲುವು ಗಳಿಸುವುದು ಪ್ರಯಾಸ (ಕುಂಹಾ. ೩೩೬). [< ಪೋರ್ಕೞ]

**ಪೋರ್ಕುೞಿ, ಪೊರ್ಕ್ಕುೞಿ, ಪೊರ್ಕುೞಿ, ಹೊರ್ಕ್ಕುೞಿ, ಹೊರ್ಕುೞಿ, ಹೋಕುೞಿ** (ನಾ). ೧. ಯುದ್ಧ ಮಾಡುವವನು; ಹೋರಾಡುವವನಂ : ಕುೞಿ ಪ್ರತ್ಯಯಕ್ಕೆ—ಪೋರ್ಕುೞಿ[ಪಾಠಾಂ. ಪೊರ್ಕುೞಿ, ಪೊಱಕುೞಿ, ಹೋರುಕುೞಿ] ಓಡುಕುೞಿ (ಶಮದ. ೨೦೩ ಪ್ರಯೋ); ಮಾಱ್ಪುದು ಶೀಲವಿಘಾತಂ ಮಾಱ್ಕುೞಿ, ಏವಂ ಅಱ್ಕುೞಿ, ಪೋರ್ಕುೞಿ (ಶಬ್ದಾಮ. ೩೪೩ ಪ್ರಯೋ). ೨. ಕಾಳಗ ; ಯುದ್ಧ; ಹೋರಾಟ : ಪೂವಿನೊಳಂ ಪೋರ್ಕುೞಿ ನವಮಾಗೇವುದೊ (ಕಂಕಾಪೂ. ೧೨–೬೦). ೩. ಜಗಳ; ಕಚ್ಚಾಟ : ಆಗಳಾ ಗಜದ ಪೋರ್ಕುೞಿ[ಪಾಠಾಂ. ಪೊರ್ಕುೞಿ]ಯಿನವಯವದೊಳಲ್ಲಲ್ಲಿಗಳವಟ್ಟ ರದನವಿಘಟ್ಟನರೇಖಾನಿಕಾಯಮುಮಂ . . . ಬೇಱೊಂದು ಚೆಲ್ವನವಟ್ಟೆಸಿ ವೀರರಸಕ್ಕಾಗರಮಾಗೆ (ಜಗಚ. ೬–೩೩ ವ); ಕಡೆಯೊಳ್ ಕೋಣನ ಪೋರ್ಕುೞಿ ಗಿಡುವಿಗೆ ಮಿತ್ತೆಂಬ ತೆಱದೆ (ಸುಕೋಶ. ೩–೬೯). 'ಪೋರ್ಕುೞಿವಕ್ಕಿ' ಪರಾ. ೪. ಪ್ರತಿಭಟನೆ; ವಿರೋಧ ; ಅಡ್ಡಿ : "ತಳ್ವೆಯರ್, ತಡಂಬರೆ, ಪೋರ್ಕುೞಿ . . . ಈ ೨೬ ಪ್ರತಿಹತಕ್ಕೆ ಪೆಸರ್" (ಶಕಸಾ. ೩೯–೨೯೬). ೫. [ಕಾಮಶಾ] (ರತಿಕ್ರೀಡೆಯಲ್ಲಿಯ) ಸೆಣಸಾಟ; ಪ್ರಣಯ ಕಲಹ : ವಸುಧಾವಲ್ಲಭೆ ಮೇಘಕಾಲಮಿಟನೊಳ್ ಸಂಭೋಗಮಂ ಮಾಡೆ ಬಣ್ಣಸರಂ ಪೋರ್ಕುೞಿ[ಪಾಠಾಂ. ಪೊರ್ಕ್ಕು]ಯಿಂದಲೇ ಪಱಿದು ಸೂಸಿತ್ತಲ್ಲದಂದೆ ತ್ರಣಂ ಪೊಸಮುತ್ತಂ ಕಿಸುಗಲ್ಗಳಂ ಕೆದಱಿ ಕಣ್ಗೆಂಬಾದುವೆಂಬಂತ ದೇನೆಸೆದೊಪ್ಪಿರ್ದುವೊ ಸ್ರೂಸಿದಾಲಿವರಲುಂ ತಳ್ತಿಂದ್ರಗೋಪಂಗಳುಂ (ಕಂಕಾಪೂ. ೬. ೧೪೬); ಪೋರ್ಕುೞಿ[ಪಾಠಾಂ. ಪೊರ್ಕುಱು]ಯಿಂದಮೆ ಹಂತಿದಪ್ಪಿ ಕಾಱುಂಬಱಿಯುಂ ತೆರಳ್ದ ಕುರುಳ್ ... ಕೂಟದೊಂದು ಸವಿಯಂ ಬಿಸುಪಾದುವುವೀ ಲತಾಂಗಿಯಾ (ಕಂಪ್ರಕೃ. ೮–೬೨). (ಗು). ೬. ಜಗಳವಾಡುವ ಸ್ವಭಾವದ ; ಕಲಹಶೀಲ : ಸುಣ್ಣದೆಲೆಯನೊತ್ತೆಯಿಟ್ಟು ಮದದಾನೆಯುಮಂ ಮಾಣಿಕಮುಮನೊತ್ತೆವಿಡಿಸಲಟ್ಟುವ ಚಿಕ್ಕ ಪೋರ್ಕುೞಿ ಬೋಜಂಗರುಮಂ . . . ನೋಡಿ (ಕಂಶಠಾ. ೪–೮೬ ವ). ಪೊರ್ಕ್ಕುೞಿ : ೨. ಪೂವಿನೊಳಂ ಪೊರ್ಕ್ಕುೞಿ ಕೇಳಾವಂಗಂ ಪೊಲ್ಲದು (ಉಹಾರ. ೦೨. ೬೬). ೩. 'ಪೊರ್ಕ್ಕುೞಿವಕ್ಕಿ' ಪರಾ. ೫. ಆಲಿಂಗನಂ ಒರಿದುಂ ಪೊರ್ಕ್ಕುೞಿ ಚುಂಬನಂ . . . . ಸತ್ಕಾಮಿನೀಸುರತಕ್ರೀಡೆಯೊಳೊಪ್ಪೆ ಸೌಖ್ಯದೊದವಿಂದಿರ್ದಂ ಮಹೀವಲ್ಲಭಂ (ಶ್ರೀಕೃಚ. ೦೬.೬೬). ೭. ಜಗಳವಾಡುವ ಸ್ವಭಾವದ ಹಕ್ಕಿ; ಕೋಗಿಲೆ : ವರಫಲವನುಂಬ ಪೊರ್ಕ್ಕುೞಿಗಳಂ ಗಿಳಿಗಳಂ . . . ವನವನಂಗಳ್ ಮೆಱೆದುವು (ಕಂಕೃ. ೪೩–೨೩). ಪೊರ್ಕುೞಿ : ೨. ಪೊಣರ್ದ ಕುರುಶ್ರೇಷ್ಠನೊಳ್ ಕಾದುವಾ ಯುದ್ಧದಗುರ್ವಂ ಪೂವಿನೊಳ್ ಪೊರ್ಕು[ಪಾಠಾಂ. ಪೊರ್ಕ್ಕು]ೞಿ ನೆಗಟ್ದವೊಲಾಯ್ತು ಮುರಧ್ವಂಸಿಗಾಗಳ್ (ಜಗಚ. ೬–೯೨). ೩. 'ಪೊರ್ಕುೞಿವಕ್ಕಿ' ಪರಾ. ೪. "ಪೊರ್ಕುೞಿಯು ತಳ್ವೆಯುಂ" (ಕವಿಕಂ. ೦೩೮). ೫. ಆ ತಂತುವಾಯಂ ಮುನ್ನಮೆ ತನ್ನ ಪೆಂಡತಿ ಜೋಡೆಯೆಂದು ಸಂದೇಹಂಬಡುವಾತನವಳ ವಿಪರೀತವೇಷಂ ತನಗೆ ರೋಷಮನೀಯೆ ಸಾಯೆ ಸದೆಬಡಿದು . . . ಕಳ್ಳ ಸೂಳೆನೊಳವಾವಳ ಪೊರ್ಕುೞಿಯೊಳಂ ಬೞಲ್ದು ನಿದ್ರಿತನಪ್ಪುದಂ (ಕಂಕಕಂ. ೬೩–೦). ೮. ಪೆಟ್ಟು; ಹೊಡೆತ : ಸೀರಾಟವಾಡುವ ಗಾಡಿಕಾರ್ತಿಯರ ಘನಜಘನಂಗಳ ಪೆರ್ಮೊಲೆಯ ಪೊರ್ಕುೞಿಯಿಂ ಪಱಿಪಱಿಯಾದ ಪೆರ್ದಱೆಗಳುಮಂ ತಳೆದ ಪೂಗೊಳಂಗಳೊಳಂ (ಕಾರಂಶಾ. ೩೨೬). ಹೊರ್ಕ್ಕುೞಿ : ೨. ಎಲೆ ಪಾತಕಿ ಕಡುಹಂದೆಯು ಕೊಂದು ಹೊರ್ಕ್ಕುೞಿಯು ಗೊಂದಣದೊಳು ಹೊರ್ಕ್ಕು ಬಹುದುಃಖವಡೆವುವಂದಪಹುದೇ ಕಲಿಗಳಿಗೆ (ಶ್ರೀಕಾಂ. ೮–೬೬). 'ಹೊರ್ಕ್ಕುೞಿಗೊಳ್' ಪರಾ. ಹೊರ್ಕುೞಿ : ೨. 'ಹೊರ್ಕುೞಿಸಂ' ಪರಾ. ಹೋಕುೞಿ : ೨. 'ಹೋಕುೞಿಸು' ಪರಾ.

**ಪೋರ್ಕುೞಿಯಾಗು, ಪೊರ್ಕುೞಿಯಾಗು** = ೧. ಯುದ್ಧವಾಗು; ಹೋರಾಟವಾಗು : ಪೋರ್ಕುೞಿಯಾದಡೆ[ಪಾಠಾಂ. ಯಾಡದೆ, ಯೇದಡೆ]ಹರಿಯುಂ ಮಾರ್ಕೊಳ್ಳದೆ ತಗೆದ ಕಯ್ಯ ಬಱಿಯಾನೆ ಬಂದಂ ಸೋರ್ಕಿದಿಭಪತಿಯ ಕಯ್ಯೊಳ್ ಸಿಕ್ಕಿ ತೊಗಲ್ಪಾಪೆಯಂದದಿಂ ಚಾಣೂರಂ (ಅರ್ಧನೇ. ೮–೦೦೩). ೨. ಪ್ರಣಯಕಲಹವುಂಟಾಗು : ಒಡನಲಿವ ನಲ್ಲಳಚ್ಯುತನಡಿಪದ್ಮಗಳಲ್ಲಿ ಕೇಳಿಗೆಳಸಿದಳವನೀಯಡಿಯೊಳ್ ಪೋರ್ಕುೞಿ[ಪಾಠಾಂ. ದನವನೀಯೆಡೆಯೊಳ್ ಪೊರ್ಕುೞಿ]ಯಾಯ್ತೆಂದಡಿಗಡಿಗಾಯೆಡೆಯನೋರ್ವಳೀಕ್ಷಿಸುತಿರ್ದಳ್ (ಜಗಚ. ೩–೨೮); ಒದವಿದಲಂಪು ಪೋಪಿನವನಂಕದ ಬೀಕದ ಪೆರ್ಚು ಪೊಚ್ಚಱಂಗದ ಸಱಿಮಂಡಿಯೊಳ್ ಪೊರಳೆ ಪೊರ್ಕುೞಿಯಾದೊಡೆ (ಸೂಕ್ತಿಸು. ೮ ೪೩೪).

**ಪೋರ್ಕುೞಿಯಾಡು** = ಯುದ್ಧಮಾಡು; ಹೋರಾಡು : ಅಂತು ನೆಟಲೊಳ್ ಪೋರ್ಕುೞಿಯಾಡುವಂತೊರ್ವರೊರ್ವರಂ ಗೆಲಲ್ನೆಱೆಯದಿರೆ ದುರ್ಯೋಧನಂ ಕರಂ ಮುಳಿದು (ಗದಾಯು. ೮–೨೩ ವ); ಕಳದೊಳವರಿರ್ವರುಂ ಪೋರ್ಕುೞಿಯಾಡಲ್ ಧರ್ಮಯುದ್ಧದಿಂದವನಱಿಯಲ್ (ನೇಮಿಪು. ೦೦–೦೨೬). [ಪೋರ್₁ + —ಕುೞಿ₃]

**ಪೋರ್ಕುೞಿಗೊಳ್, ಪೊರ್ಕುೞಿಗೊಳ್, ಹೊರ್ಕ್ಕುೞಿಗೊಳ್** (ಕ್ರಿ). ಹೋರಾಡು ; ಯುದ್ಧಮಾಡು : ಬಂಧುರಭಟರ್ಕಳ್ ಭೂಪನೊಡನೆ ವೈರಂದೆಗೆದು ಭರದೆ ಪೋರ್ಕುೞಿಗೊಳಲ್ ತೊಡಗಿದರ್ (ಅರಾಶ. ೪–೩–೧೬). ಪೊರ್ಕುೞಿಗೊಳ್ : ಎನ್ನೊಳು ಪೊರ್ಕುೞಿಗೊಳ್ವುದೆನುತ ವಿಕ್ರಮೋನ್ನತನಿರ್ದಂದು ನಿಲಲು (ನೇಮಿಸಂ. ೩೦–೯೬). ಹೊರ್ಕ್ಕುೞಿಗೊಳ್ : ತನ್ನೊಳು ಹೊರ್ಕ್ಕುೞಿಗೊಂಡ ಉನ್ನತಮಪ್ಪ ಗಜರತ್ನಮಾಯ್ದುತು ತನ್ನ ತಾನಾ ನೃಪನೆಡೆಗೆ (ಶ್ರೀಕಾಂ. ೧೩–೦೦) ; ಅಂತಕನೊಳಗೆಕ್ಕೆಯೊಳಂ ಹೊರ್ಕ್ಕುೞಿಗೊಳ್ವೆನೆನಿಪ್ಪಕ್ಕತುಳದ ಭಟನಿವಹಂ ನಡೆದುದಿಳಾಧಿಪನಂ ಬಳಸಿ (ಜಯುಕಾ. ೬–೦೮). [ಪೋರ್ಕುೞಿ + ಕೊಳ್₁]

**ಪೋರ್ಕುೞಿಯಿಕ್ಕು, ಪೊರ್ಕುೞಿಯಿಕ್ಕು** (ಕ್ರಿ). ೧. ಹುರುಡಿಸು ; ಸ್ಪರ್ಧಿಸಂ : ಮುಡಿವೊಱೆಯ ವಿಷಯದೆ ಮಱೆಗೆ ವಂದಂಧತಮಸಮಂ ಪೆಱಗಿಕ್ಕಿ ತನ್ನೊಳ್ ಮಲೆವ ಲಲನೆಯರ ವದನವಿಧುಬಿಂಬದೊಳ್ ಕಪೋಳಸಂಭೃತಪ್ರತಿಕೃತಿಚ್ಛದ್ಮದಿಂ ಪೊಕ್ಕು ಪೋರ್ಕು[ಪಾಠಾಂ. ಪೊರ್ಕ್ಕು]ೞಿ

ಯಕ್ಕಿಯುಂ (ಕರ್ಣಾ· ೬-೯೬ ಪ). **ಪೊರ್ಕುಳಿಯಿಕ್ಕು** : ೨. ಜಗಳ ವಾಡು ; ಕಲಹಮಾಡು : ಪೆಱರೊಳು ಪೊರ್ಕುಳಿಯಿಕ್ಕುತ್ತುಂ ಮೆಯ್ಯೊರಿಸುತ್ತುಂ ಬೊಟ್ಟುವರಿಸುತ್ತುಮಿವು ಮೊದಲಾದ ಪೆಱವುಂ ರಾಗದ್ವೇಷಹೇತುಗಳಪ್ಪುವಂ ಮಾಡುತ್ತಿರ್ಪುದುಂ (ಚಾರಿ. ೩೦೩). [ಪೋರ್ಕುಳಿ + ಇಕ್ಕು]

**ಪೋರ್ಕುಳಿವಕ್ಕಿ**, **ಪೊಕ್ಕುಳಿವಕ್ಕಿ**, **ಪೊಕ್ಕುಳಿವಕ್ಕಿ**, **ಪೊರ್ಕುಳಿವಕ್ಕಿ** (ನಾ). ಜಗಳವಾಡುವ ಸ್ವಭಾವದ ಹಕ್ಕಿ; ಕೋಗಿಲೆ : "ಪೋರ್ಕುಳಿ[ಪಾಠಾಂ. ಪೊರ್ಕುಳಿ, ಪೊಕ್ಕುಳ]ವಕ್ಕಿಯೆಂದು ಕೋಗಿಲೆ" (ಶಬ್ದಮ. ಶ. ೫೦); "ಪಡಿಯಱವಕ್ಕಿ, ಪೋರ್ಕುಳಿವಕ್ಕಿ[ಪಾಠಾಂ. ಯವಕ್ಕಿ] . . . ಪರಪುಟ್ಟಂ — ಈ ೫ ಪಿಕಂ" (ಶಬ್ದಾ· ೩೩-೨೦೩). **ಪೊಕ್ಕುಳವಕ್ಕಿ** : "ಪೊಕ್ಕುಳವಕ್ಕಿ[ಪಾಠಾಂ. ಪೊಕ್ಕುಟ್ಟಕ್ಕಿ] . . . ಪಡಿಯಱವಕ್ಕಿ ಕೋಗಿಲೆಯೆನಿಕ್ಕು" (ಕನ್ನಮಂ. ೨೪) ; ಮಧುಸಮಯದೊಳಗೆ ಮಾಮರ ಚಿಗುರಲೆಳದಳಿರ ಕರ್ದುಕಿ ಪೊಕ್ಕುಳವಕ್ಕಿ ಕೊರಳಿಂಚರವಮುದಿಸೆ (ಶಂಕ. II, ೪೫. ಕಮಲಾಪಾರ್ಶ್ವಕಥಾ). **ಪೊಕ್ಕುಳಿವಕ್ಕಿ** : (೬). **ಪೊರ್ಕುಳಿವಕ್ಕಿ** : ಮೇಲಿನ 'ಪೋರ್ಕುಳಿವಕ್ಕಿ' ಉಲ್ಲೇಖದ 'ಶಬ್ದದ' ಪ್ರಯೋಗದ ಪಾಠಾಂತರವನ್ನು ನೋಡಿ. [ಪೋರ್ಕುಳಿ + ಪಕ್ಕಿ]

**ಪೋರ್ಕೆ**, **ಹೋರ್ಕೆ** (ನಾ)· ಹೋರಾಟ ; ಕಾಳಗ : "ಹೋರಟಿಯನೆ ಪೋರ್ಕೆಯು" (ಶಾಕಿ. ೪೪). **ಹೋರ್ಕೆ** : (೬). [ಪೋರ್$_1$ + — ಕೆ]

**ಪೋರ್ಚುಗೀಸ್**, **ಪೊರ್ತುಗೀಜ**, **ಪೋರ್ಚುಗೀಸ** (ನಾ). ೧. ಪೋರ್ಚುಗಲ್ಲಿಗೆ ಸೇರಿದ ವ್ಯಕ್ತಿ ; ಪೋರ್ಚುಗಲ್ಲಿನವನು· ೨. ಪೋರ್ಚುಗಲ್ಲಿನ ಭಾಷೆ : ಪೋರ್ಚುಗಲ್ಲಿನ ಭಾಷೆ ಪೋರ್ಚುಗೀಸ್. ಅದು· . . . ಅನೇಕ ಜರ್ಮನ್ ಮತ್ತು ಸೆಮೆಟಿಕ್ ಶಬ್ದಗಳನ್ನೊಳಗೊಂಡಿದೆ (ಕಾರ್ಣೋ· XI, ೨೫೨). (ಗು). ೩. ಪೋರ್ಚುಗಲ್ಲಿಗೆ ಸೇರಿದ : ಈ ಪೋರ್ಚುಗೀಸ್ ಜನರು ಅನುಮಾನವಾಗದ ರೀತಿಯಲ್ಲಿ ಅವರೊಡನೆ ವರ್ತಿಸಿದರು (ಕೃಪಾಂ. II. ೦೯೯). **ಪೊರ್ತುಗೀಜ** : ೧. ಫ್ರೆಂಚರವೂ ಪೊರ್ತುಗೀಜರವೂ ಕೆಲವು ಪ್ರದೇಶಗಳು ಹಿಂದುಸ್ಥಾನದಲ್ಲಿ ಉಂಟು (ಮುಂಬಯಿ. ೪-೦೦೩)· **ಪೋರ್ಚುಗೀಸ** : ೧. ಒಬ್ಬೊಬ್ಬ ಪೋರ್ಚುಗೀಸ ಐದು ಆರು ಹೆಂಗಸರನ್ನು ಇಟ್ಟುಕೊಳ್ಳುತ್ತಿದ್ದ (ಕೃಪಾಂ. II. ೨೪೦). 'ಪುಡುತ ಕೇಶ' ಪರಾ. [← ಇಂ. Portuguese./ ತೆಲು. ಬುಡುತಕೇಲು]

**ಪೋರ್ಚುಗೀಸ** 'ಪೋರ್ಚುಗೀಸ್' ನೋ.

**ಪೋರ್ತ** (ನಾ). ಹೋರಾಟ ; ಕಾದಾಟ : ವ್ಯಾಳವನಗಜದ ಪೋರ್ತದ ಕೇಳಿಗೆ ವಿಜಯಾರ್ಧಶೈಲಪತಿ ಸವಯಿಸಿ ತಂದೋಳಿಯ ನಿಱಿಸಿದ ಬೆಳ್ಳಿಯ ಲಾಳಾಮಿಂಡಿಗೆಪೊಲಿರ್ಪುವಿದು ಮಡಲ್ಗಳ್ (ಶಾಂತಿಪು. ೨-೦೦೪) ; ಭಾವಿ ಪೊಡಾಂ ಜಟ್ಟಿಯವಂ ಗೋವಳನೆಂದಂದು ದೇವ ಪೋರ್ತದೊ[ಳ] [ಪಾಠಾಂ. ಪೋರ್ತದೊಡ, ಪಾರ್ದೊಡವ,[ಪೋ]ರ್ದೊಡಮ]ವನಸ್ಸಾಮಿವಗೆ ಪರ್ವಂ (ಅರ್ಜುನ. ೬-೬೦)· 'ಪೋರ್ತಂಗೊಳ್' ಪರಾ. [ಪೋರ್$_1$ + — ತ$_2$]

**ಪೋರ್ತಂಗೊಳ್** (ಕ್ರಿ). ಹೋರಾಡು : ಕಾದು : ಆ ಗಜಮಲ್ಲ ನೋಳ್ಪೋರ್ತಂಗೊಂಡುದೆ ಮಲ್ಲಸಿಂಗರಂಗೆಯ್ದಂತಾಗೆ (ಅರ್ಜುನ. ೬-೯೬ ಪ). [ಪೋರ್ತ + ಕೊಳ್$_1$]

**ಪೋರ್ನುಡಿ** (ನಾ)· ಜಗಳದ ಮಾತು ; ಬಯ್ಗುಳ ; ಮೂದಲಿಕೆ : ಪೆಣ್ಣಾಲಗೆಯ ನೋಡ ಮಸೆಗಣೆಯ ಮೊನೆಯಲ್ಲಿ . . . ಮಣ್ಣಾರಿದ ಪೋರ್ನುಡಿಯ ಮಳೆಗರೆದುದೊರ್ಮೆ (ಕಾರ್ಡಿ. ೦೨೯-೨೩೩)· [ಪೋರ್$_2$ + ನುಡಿ$_2$]

**ಪೋರ್ಮೆ** (ನಾ)· ಪ್ರೇಮಕಲಹ : ಅಗಲ್ಪುದ ಕೂರ್ಮೆ ಪೋರ್ಮೆ ಪೊರ್ದುಗೆಯೊಗೆವಿಚ್ಚೆ ಮಚ್ಚು ಎಟರಂ ಕೊಱಚಾಡುವ ಪಾಡು ಗಾವಡಿ ಯೆಂಬಗಣಿತಚೇಷ್ಟೆಗಳ್ ಮೆಱೆದಿರಲ್ ತಱಿಸಲ್ಬುದು ಸೂಳೆವಿದ್ಯೆಯೊಳ್ (ಅಭಿನ. ೬-೨೨). [ಪೋರ್$_2$ + — ಮೆ$_1$]

**ಪೋಲ್$_1$**, **ಪೋಲು$_1$**, **ಹೋಲ್**, **ಹೋಲು$_1$** (ಕ್ರಿ)· **ಪೋತ$_1$** (ಭೂತಕೃ). **ಹೋತ್ತು** (ಭೂತನಕೃ). ಎಣೆಯಾಗು ; ಸಾಟಿಯಾಗು ; ಸದೃಶವಾಗು : "ಪೋಲ್-ಸಾದೃಶ್ಯೇ" (ಶಬ್ದಾ) ; ಕಳ್ಳ ಬೆಳ್ಳಿವಟ್ಟಲ್ ಬಾಯೊಳ್ ಬೆಚ್ಚಂತಿರೆ ಸತಿ ಶಶಿಯಂ ಕಚ್ಚಿ ನೆಲ್ಕಿಟಿದ ರಾಹುವಂ ನೆಱೆ ಪೋಲ್ತಳ್ (ಕಾವ್ಯಾ. ೯೬೬ ಸೂಕ್ತಿ); ಶಚಿಮಹಾದೇವಿಯನೆ ಪೋಲ್ವ ಧಾರಿಣಿಮಹಾದೇವಿಯೆನ್ನ ಕಾಲ್ಗೆಱಗಿ ಪೊಡೆವಟ್ಟಿರ್ದಳ್ (ಪಂಪಾ. ೮೦-೬); ಪಲವು ಪೂಮಾಲೆಗಳಂ ಬಗೆಯಱಿದು ನೀಡುಗುಂ ಮಾಲೆಗಾಱನು ಪೋಲ್ವುದಗ್ರವಾಲ್ಮಮಹೀಜಂ (ಅಂಜ. ೩-೪೬) ; ಪ್ರತಿಬಿಮ್ಮಂ ರೂಪಿನೊಳ್ ಪೋಲ್ಕೆಮ (ಎಕ. VIII. ತಗ ೩೫-೬ ; 1077). **ಪೋಲು$_1$** : ಈ ನೆಲದೊಳಾರುವಂ ಪೋಲದವರಿಂತಿವರು (ತುಳಿ. ಕಿ. ೨೬-೦೩); ಕಾವನ ಪೋಲುವ ಸೋಮವದನನನು ಕೋಮಲಾಂಗಿಯ ಕರತರಲು ಪ್ರೇಮದಿಂ ಮುತ್ತಿನ ಹಾರವನೀವನು (ಕಂಪು. ೬-೯೨) ; ಭುವನ ಮೂಱರೊಳರಸಿದೊಡೆ ನಿನ್ನವನು ಪೋಲುವರಿಲ್ಲ (ಅಂಬಾ. ೦-೩-೦೩). **ಹೋಲ್** : ಗುರುಕಚಭಾರ ನೀಳರತ್ನಂ ನಗೆ ಮಾಣಿಕವಾಗೆ ಹೋಲ್ತಳೀ ನಿರುಪಮಕಾಂತೆ ಸಾನ್ವಲಿ ಶುಧಾಂಶುಕಳಾಶ್ರಿತದುಗ್ಧವಾರ್ಧಿಯಂ (ಎಕ. XVI. ಕಸ್ಸಾ. ೯೬-೬೭, 1160). **ಹೋಲು$_1$** : ಶಬ್ದಿಯಾದಾತ ತರುಗಳ ಹೋತ ನಿಶ್ಶಬ್ದಿಯಾದಾತ ಪಾಷಾಣವ ಹೋತ (ಅರಿಹ. ೦೦೪-೪೯೦); ಎಲವೋ ನಿನ್ನ ಹೋಲುವರಾರು ಬಾಹಿರ ಭುಂಡರವನಿಯಲಿ (ಉಪ್ಪಾ್ವಿದ್ವೋ. ೦೪-೨೮); ಒಂದೂವರೆವರ್ಷದ ಚೀನಿ ತನ್ನ ತಂದೆಯ ಮೈಕಟ್ಟು ಮುಖಭಾವಗಳನ್ನು ಹೋತು ಹುಟ್ಟಿತ್ತು (ಪಂಚಶ. ೯೬). [ದೇ.೩ ತಮಿ. ಪೋಲ್; ಮಲ. ತೆಲು. ಪೋಲು]

**ಪೋಲ್$_2$** ? (ನಾ)· (?) : ಬಲ್ಗಿಚ್ಚ ಪಳಿವ ಲಿಂಗಂ ಮೂಡೆ ಕಣ್ಗಟ್ಟು ಕಾಲ್ಗಣದಾದನಾ ಕಾಳ್ಸೆತಕಳ್ಳುಕಿ ತುಲಿಲ್ದುಂದಿ ನಾಲ್ಮೊಗಂ ತಲೆಗಂಡನೇ ಶಿವನ ಬಲ್ಗಣೆಯ ಪೋಲ್ಗಾವನು (ಭಾವ· ೩-೨೬). [?]

**ಪೋಲ್$_3$** '-ಪೋಲ್' ನೋ.

**ಪೋಲಕ**, **ಪೋಲಕಾ**, **ಪೋಲ್ಕ** (ನಾ). ಒಂದು ಬಗೆಯ ಕುಪ್ಪಸ ;— ರವಿಕೆ : ವತ್ಸಲೆ ಆ ದಿನದ ಪೋಲಕ ಪರಕಾರಗಳನ್ನೇ ಧರಿಸಿದ್ದಳು (ಕೃ.ಪ. ೩೪) ; ಉಷಾನ ತಾಯಿ . . . ಒಗೆದ ಪರಕಾರ — ಪೋಲಕಗಳನ್ನು ತೊಡಿಸಿದ್ದರು (ಕ್ರಾಂತಿ. ೩೦). **ಪೋಲಕಾ** : ನನ್ನ ಪೋಲಕಾದ್ದೇ ಒರಸು (ಹೂಬಿ. ೨೦) ; ನೀ ಮುಂದಿನ ಜನ್ಮಕ್ಕ ಬರೋದರೊಳಗ ಪೋಲಕಾ, ಝುಗಾ ಬಂದಿರತಾವೇಳು. ಕುಬಸದ ಹಂಗ್ಯಾಕ ? (ಹೂಮಾ. ೬೦). **ಪೋಲ್ಕ** : ಪೋಲ್ಕ . . . (ಹೆಂಗಸಿನ) ಗುತ್ತನಾದ (ಸಾ. ಹಣಗೆಯ) ನಡುವಂಗಿ (polka· ೩೦೪೩). [← ಇಂ. Polka· / ಮರಾ. ಪೋಲಕೇ]

**ಪೋಲಕಾ** 'ಪೋಲಕ' ನೋ.

**ಪೋಲಗಟ್ಟು** (ನಾ). (?) : ಕಡೆಯ ಪೆಂಡೆಯ ಗಜ್ಜೆ ಕಣಕಾಲ ಬಾಸಿಂಗ ಮಡೆಯ ಬದ್ದುಗೆಯು ಕಿಗ್ಗಟ್ಟು ಬಿಡೆಯಿಲ್ಲದೆ ಪೋಲಗಟ್ಟಿನ ಬಿಲ್ಲಾಳ ಪಡೆ ನಡೆಯಿತು ದಾಣನೊಡನೆ (ಕೋಟಿ. ೧೦-೦೪) . [?]

**ಪೋಲಿ$_1$** (ನಾ) . ೧. ಉಡಾಳ ; ಪೋಕರಿ : ಊರಿನ ಹಿರಿಯರು ಇವರಿಬ್ಬರು ಶುದ್ಧ ಪೋಲಿಗಳೆಂದು ಭಾವಿಸಿಬಿಟ್ಟರು (ಹೃಷಿಕೇ. ೫೦) ; ನಿನ್ನ ಸಲಿಗೆ, ಬೇಬಿಯ ಪ್ರೀತಿ — ಇವು ಅವನನ್ನು ಪೋಲಿಯನ್ನಾಗಿ ಮಾಡಿದ್ದವು (ಮುಂಗಾರು· ೬) ; ಪೋಲೀಮುಂಡೇದಕ್ಕೆ ತಾಲೀ ಕಟ್ಟಿದರೆ ತಾಲಿ ತಾಲಿ ಪೋಲಿ ಪೋಲಿ (ಗಾದೆ) . 'ಅಪಾಪೋಲಿ' ಪರಾ. ೨. ದುರ್ಮಾರ್ಗದಲ್ಲಿ ವರ್ತಿಸುವವನು ; ನೀತಿಗೆಟ್ಟವನು : ಅವನು ಪೋಲಿ. ಅವನ ಗಳಿಕೆಯು ಮಾರ್ಗ ಸನ್ಮಾರ್ಗವಲ್ಲ (ಕಳ್ಳಕು. ೩೪); ಪೋಲಿಸರೆ, ನಿಮ್ಮ ಹೆಸರಿನಂತೆ ಪೋಲಿಗಳಾಗಿ ವರ್ತಿಸಬೇಡಿರಿ (ಡಂಕು. ೩೫)·

೩. ಅಸಭ್ಯ ; ಲಂಪಟ : ಆ ಪೋಲಿ ನನ್ನ ಕೈಯನ್ನೇ ಒಡಿದುಕೊಂಡು (ಜುಜುಷಾ. ೦೬೬). ೪. ಇಷ್ಟ ಬಂದಂತೆ ವರ್ತಿಸುವಿಕೆ : ಸ್ವೇಚ್ಛಾಚಾರ: ನಿನ್ನ ಹಾಗೆ ನಾವು ಪೋಲಿಪೋಲಿಯಾಗಿ ಅಲೆದುಕೊಂಡಿದ್ದರೆ ಹೇಗಾದೀತು? (೬೦೬೪. ೨೦). ೫. ವ್ಯರ್ಥ : ಹಾಳು : 'ಪೋಲಿಗೈ' ಪರಾ. ೬. ಹಾದರ; "ವ್ಯಭಿಚಾರ" (ಅಸಂವಾ). ೭. ಹೊಣೆಗೇಡಿಯಾದ ಹೆಂಗಸು : "ಪೋಲೀ .... ಕೆಲಸಗಳ್ಳಿ" (ಶಾಕಕ್ಕ. ೯೮). (ಗು). ೮. ಹೊಣೆಗೇಡಿಯಾದ ; ಜವಾಬ್ದಾರಿಯಿಂಲ್ಲದ : ಅವಳ ಚಿಕ್ಕಮ್ಮ . . . ಹೇಗೋ ಕಪ್ಪಪಟ್ಟುಕೊಂಡು ತನ್ನ ಮಕ್ಕಳನ್ನು ಮತ್ತು ಪೋಲಿ ಗಂಡನನ್ನು ಸಾಕುತ್ತಿದ್ದಳು (ಭೂಸಹು. ೯).

ಪೋಲಿದನ = ತೊಂಡುದನ ; ತುಡುಂಗುದನ : ಅವನ ತೋಟಕ್ಕೆ ಪೋಲಿದನ ನುಗ್ಗಿ ಗಿಡಗಳನ್ನೆಲ್ಲಾ ಹಾಳುಮಾಡಿತು (ಜೂಶಿ). ಪೋಲಿಪಟಾಲಂ - ಉಡಾಳರ ಗುಂಪು ; ಪೋಕರಿಗಳ ತಂಡ : ಬಯಲಾಟ, ಪೋಲಿ ಪಟಾಲಂ ಎಂದುಕೊಂಡು ವೀರಭದ್ರ ಬಾಲ್ಯದಲ್ಲೇ ಬೀದಿಬಸವನಾದ (ಬಿಳ್ಳಿಷಾ. ೦೧೨). ಪೋಲಿ ಬೀಳು = ಹೊಣೆಗೇಡಿಯಾಗಂ : ಗಂಡು ಹುಡುಗರು ಪೋಲಿ ಬೀಳದೆ ಅವರವರ ಪಾಡಿಗೆ ಓದಿ ಪ್ಯಾಸ್ ಮಾಡಿ ಸಂಪಾದನೆ ಮಾಡುತ್ತಿದ್ದರೆ ನಮ್ಮ ಜವಾಬ್ದಾರಿ ಇಳಿಯುತಪ್ಪ (ಜುಹಾಗ. ೪೬). ಪೋಲೀ ತಿರುಗು = ಸ್ವೇಚ್ಛೆಯಿಂದ ಅಲೆದಾಡು ; ಮನಬಂದಂತೆ ತಿರುಗು : ಸೌರಜುಟುಂಬದಲ್ಲಿ ಅನೇಕವೇಳೆ ಅತಿವೇಗದೊಡನೆ ಸಂಚರಿಸುತ್ತ ಪೋಲೀ ತಿರುಗುವ ವಿಷಮಗತಿಯುಳ್ಳ ಮಂಡಲಗಳೂ ಉಂಟು (ಜ್ಯೋತಿಶ. ೦೦೯); ನೀನು ಪೋಲೀ ತಿರುಗುವುದನ್ನು ಬಿಟ್ಟು ಯಾವಾಗ ಜವಾಬ್ದಾರಿ ವಹಿಸಿಕೊಳ್ಳುತ್ತಿ ? (ಜೂಶಿ). [ದೇ. II ತಮಿ. ಕೊಡ. ಪೋಲಿ; ತುಳು. ಪೋಲಿ= ಸೂರೆಮಾಡುವ, ಅಸಂಬದ್ಧ ; ತೆಲು. ಪೋಲಿ]

ಪೋಲಿ₂ (ನಾ). ಗೋಧಿಹಿಟ್ಟಿನಿಂದ ಮಾಡುವ ಒಂದು ಬಗೆಯ ಭಕ್ಷ್ಯ: ಪೇಣಿ ಗಾರಿಗೆ ಪೋಲಿ ವಡೆ ಲರಜಿಗಾಯಿ . . . ಮೊದಲಾದ ಬಲು ಸೊಗಸುಳ್ಳ ಪಾಕಂಗಳಂ . . . ದೇವ ನೀನಾರೋಗಿಸೈ (ಜುಲ್ಲಶ. ೩-೬). [ಸಂ. ಪೋಲೀ]

ಪೋಲಿಕಾಜಿ 'ಪೋಲಿಗಾಜಿ' ನೋ.

ಪೋಲಿಗಾರ 'ಪೋಲಿಗಾಜಿ' ನೋ.

ಪೋಲಿಗಾಜಿ, ಪೋಲಿಕಾಜಿ, ಪೋಲಿಗಾರ (ನಾ). ಪೋಕರಿ ; ಉಡಾಳ : ಜಾಲಗಾಜಿನ ಕೈಯ ದೀಹದಂತೆ ಬಾಲೆಯರ ಮನದ ಸೋಲುವೆಯಂತೆ ಇಂತಿವರನಳವಾಡಿ ಸಿಕ್ಕಿಸುವ ಪೋಲಿಗಾಜಿ[ಪಾಠಾಂ. ಪೊಲೆಗಾರ, ಪೊಲ್ಲಗಾರ, ಸೋಲುಗಾಜಿ]ರಿಗೆಲ್ಲಿಯದೋ ಸತ್ಯ (ಸೋಮಶಪಾ. ೬೩-೨೬೯). ಪೋಲಿಕಾಜಿ : ಕ್ಷಯಕಾರಣವೆಂಬ ಪಟ್ಟಣಕ್ಕೆ ಲಯಕಾರಣವೆಂಬ ಅರಸು ಪೋಲಿಕಾಜಿ ಪ್ರಧಾನ ಮದೋನ್ಮತ್ತ ತಳವಾಜಿ (ಸಂಚಲಂ. ೪. ೬೬೩-೫೩). ಪೋಲಿಗಾರ: ಶೀಲರುತ್ತಮರು ನೀವಹುದು ಪೋಲಿಗಾರರಾವು (ಸಮಜುಜು. ೦೬). [ಪೋಲಿ₁ + -ಕಾಜಿ]

ಪೋಲಿಗೈ (ಕ್ರಿ). ನಾಶಮಾಡು ; ವ್ಯರ್ಥಗೊಳಿಸು : ಖೂಳಬಲಿಯು ಬಿಟ್ಟ ಸರಳ ಜಾಲವೆಲ್ಲವಾ ಶೀಲ ನಿರ್ಜರೇಂದ್ರನದನು ಪೋಲಿಗೈದನು (ಸಮಜುಜು. ೬೯). [ಪೋಲಿ₁ + ಗೈ ( < ಕೆಯ್₁)]

ಪೋಲಿತನ (ನಾ). ೧. ಪೋಕರಿತನ ; ಪುಂಡಾಟಿಕೆ : ದೇವಯ್ಯನ ಪೋಲಿತನಕ್ಕಿಂತ ಇದು ಸಹಸ್ರಪಾಲು ಮೇಲು (ಕಂಗಶ. ೨೦೩). ೨. ಹೊಣೆಗೇಡಿತನ ; ಜವಾಬ್ದಾರಿಯಿಲ್ಲದಿರುವಿಕೆ : ಅವನ ಪೋಲಿತನದಿಂದ ಅದಕ್ಕೆ ಪೋಷಣೆಯೇ ಇರಲಿಲ್ಲ (೬೦೬೪. ೧೬೦). [ಪೋಲಿ₁ + -ತನ]

ಪೋಲಿಮೆ 'ಪೋಲ್ಮೆ' ನೋ.

ಪೋಲಿಯೋ (ನಾ). ಮೆದುಳುಬಳ್ಳಿಯೊಳಗಿನ ಬೂದಂದ್ರವ್ಯದ ಉರಿಯೂತ : ಪೋಲಿಯೋ ತಡೆಗಟ್ಟಲು ಲಸಿಕೆಗಳು ದೊರೆಯುತ್ತಿವೆ (೬೦ಡೂ೦. ೬). [P ಇದು ಇಂಗ್ಲಿಷಿನ 'Poliomyelitis' ಎಂಬ ಶಬ್ದದ ಸಂಕ್ಷಿಪ್ತರೂಪ ]

ಪೋಲಿಸು, ಹೋಲಿಸಂ (ಕ್ರಿ). ಒಂದರೊಡನೊಂದನ್ನು ತಾಳಿನೋಡು,- ತುಲನೆಮಾಡು : ಪೋಲಿಸುವೊಡೆ ಪೋಲಿಸಲ್ಕೆ ದೊರೆ ಪೀನೆಯನಾ ಸುರತ ಪ್ರವೀಣೆಯಂ (ಅಂಪು. ೨-೬೬); ಪೆಱಱಾರುವುನಾ ಸತಿಯ ಪೆಮ್ಪಿನೊಳ್ ಪೋಲಿವುದೇ (ಎಕ. II. ೦೬೪-೦೦; ಸು. ೬೬೦); ಸತ್ಯಾಶ್ರಯದೇವನೆ ಪೃಥ್ವೀವಲ್ಲಭಂ ಕಥಾನಾಯಕನಾಗನಿಲಜನೊಳ್ಪೋಲಿಸಿ ಪೇಟ್ದನೀ ಗದಾಯುದ್ಧಮಂ ಮಹಾಕವಿ ರನ್ನಂ (ಗದಾಯು. ೦-೩೦); ಸಿರಿಸದ ಬಾಸಿಗವನೆಂತು ಪೋಲಿಸುವಂ ಸುಂದರಿಯ ಮನೋಜನ ಪಾಶದೊಳೆರಡೆರಡೆ ಪರಲ್ಕೆ ಸಾಲ್ದ ಭುಜವಲ್ಲರಿಯಂ (ಜುಲ್ಲಪು. ೩-೬೯). ಹೋಲಿಸು : ಆ ಕರಿಯಾಕೃತಿಯ ಸೂಕರನ ಹೋಲಿಸಿದರೆ ಆ ಕರಿಯಾಗಲರಿವುದೆ ಭೂನಾಗನಾಕೃತಿಯನು ವ್ಯಾಳೇಶನ ಹೋಲಿಸಿದರೆ ವ್ಯಾಳೇಶನಾಗಲರಿವುದೆ (ಬಸಪು. ೬೨೯); ಹೋಲಿಸು ಪಡೊಪ್ಪುವ ಪಸುರ್ವಟ್ಟಾಲಪಟ್ಟಂಗಳೊ ಚೆಲುವನಹ ಬಾಳೆಯೆಲೆಗಳೊ (ಬಸಪು. ೨೬-೯೦); ಪಾರ್ಥಿವಜಾತಿಯಲಿ ರಣದಿಟ್ಟರುಂಟೇ ನಿಮ್ಮ ಹೋಲಿಸಲು (ಕುವ್ಯಾದ್ರೋ. ೪-೦೦) : ಹೋಲಿಸಿ ನುಡಿದೆ ಸುರಪ ಫಲ್ಗುಣರ ಸಮರವಂ (ಕೈಜಿಚಾ. ೦೬-೫೯). [ಪೋಲ್₁ + -ಇಸು₁]

ಪೋಲೀಸ್ 'ಪೋಲೀಸು' ನೋ.

ಪೋಲೀಸು, ಪೋಲೀಸ್ (ನಾ). ೧. ಸಾರ್ವಜನಿಕರಿಗೆ ಸಂಬಂಧಪಟ್ಟಂತೆ ಶಾಂತಿಪಾಲನೆ, ರಕ್ಷಣೆಗಳನ್ನು ಕೈಗೊಳ್ಳುವ ಸರ್ಕಾರದ ಒಂದು ಖಾತೆ ; ರಕ್ಷಣಾಇಲಾಖೆ : ಇವನು . . . ಗ್ರಾಮದ ಪೋಲೀಸಿನ ಮೇಲಧಿಕಾರಿಯಾಗಿಯೂ ಇರುವನು (ಗ್ರಾಮೂಕ. ೨) ; ಅಂತೂ ಪೋಲೀಸು ನಗರಕ್ಕೊಂದು ನಯನ (ಅವಾಂ. ೩). ಪೋಲೀಸ್ : ೧. ಪೋಲೀಸ್ ಅಧಿಕಾರಿಗಳಿಗೆ ನಾನು ಸಲ್ಲಿಸಿದ್ದ ಪ್ರಪ್ರಥಮ ಸಲಾಂ ಅದು (ಪಾಶೋಧ. ೨೬). ೨. ರಕ್ಷಣಾಇಲಾಖೆಯಲ್ಲಿ ದುಡಿಯುವವನು ; ಪ್ಯಾದೆ : ನೀನು ಮಾತ್ರ ಪ್ರಾಣ ಹೋಗುವ ಪ್ರಸಂಗ ಬಂದರೂ ಪೋಲೀಸ್ ಮಾತ್ರ ಆಗಬ್ಯಾಡ (ಪಾಶೋಧ. ೦೬).

ಪೋಲೀಸರು, ಪೋಲೀಸಿನವರು = ರಕ್ಷಣಾಇಲಾಖೆಗೆ ಸೇರಿದವರು : ನನಗೆ ಶಿಕ್ಷೆಯಾಗುವುದು ಖಂಡಿತವೆಂದೇ ಎಲ್ಲ ಪೋಲೀಸರೂ ಅಭಿಪ್ರಾಯ ಪಡುತ್ತಿದ್ದರು (ಪಾಶೋಧ. ೯೯) ; ಪೋಲೀಸಿನವರು ತಕ್ಷಣ ಅಲ್ಲಿಗೆ ಹೋಗಿ ಕಳ್ಳನನ್ನು ಹಿಡಿಯುತ್ತಾರೆ (ಜಾಪಾತ್ಮ. ೭೦). [← ಇಂ. Police]

ಪೋಲು₁ 'ಪೋಲ್₁' ನೋ.

ಪೋಲು₂, ಹೋಲು₂ (ನಾ). ೧. ಅಪವ್ಯಯ ; ದುಂದುವೆಚ್ಚ: ಜನಕ್ಕೆ ದೇಶಭಾಷೆಯಲ್ಲಿ ಅಭ್ಯಾಸ ನಡೆಯದ ಅಸಹಜತೆ ಪೋಲುಗಳನ್ನು ಪ್ರಧಾನವಾಗಿಯೂ ಆನುಷಂಗಿಕವಾಗಿಯೂ ಠಾಕೂರರು ಕಾಣಿಸಿದ್ದಾರೆ (ಅಶಾರ. I. XII ಮುನ್ನುಡಿ). ೨. ನಾಶ ; ಹಾಳು : ನಾಲ್ವತ್ತುಎಂಟುಯೋಜನದ ಗ್ರಾಮ ಪೋಲಿನ್ನು ಕೇಳು ನಿಸ್ಸೀಮ ಮೇಲೆ ನೀ ಗಳಸಿರ್ದ ಹೇಮ ಮುಂದೆ ಪಾಲಿಸುವರಿಲ್ಲ ಕಲಿಭೀಮ (ಕಕಂ. ೪೨೩-೯) ; ಪೋಲು ಆದ ವಸ್ತು ಹಾಲಿನ ಹಾಗಿದ್ದರೇನು ? (ಗಾದೆ). ಹೋಲು₂: ೩. ವ್ಯರ್ಥವಾದುದು ; ಉಪಯೋಗವಿಲ್ಲದುದು ; ಪೊಳ್ಳು: ಕೋಲ ಬಲುಹುಂಟಾಗೆ ನಾಲಗೆ ಹೋಲ ನುಡಿಯದು [ಪಾಠಾಂ. ಹೋಲುಬಾಜುವುದು, ಹೋಲ ನುಡಿವುದು, ಹೊಲ್ಲ ದೇನಿದು] ಖೂಳ ಕಟಕಿಯ ಮಾತು ಬೇಡೆಂಬಿನಲಿ ಮಾತಾಡು (ಕುವ್ಯಾಕ. ೪-೩೦).

ಪೋಲಾಗು = ೧. ಅಪವ್ಯಯವಾಗು ; ದುಂದುವೆಚ್ಚವಾಗು : ರಾಜ್ಯಕೋಶದ ಅಪಾರದ್ರವ್ಯ ಜೋಗಿ ಜಂಗಮರನ್ನು ಪೋಷಿಸುವುದಕ್ಕಾಗಿ ಪೋಲಾಗುತ್ತಿದೆ (ತುಂಗಳ. ೦೬) ; ಸೊಸೈಟಿಯ ಹಣ ಪೋಲಾದ ಬಗ್ಗೆ

ದೈರಕ್ಷರುಗಳಲ್ಲಿ ಕೆಲವರು ಬಿರುಸಾಗಿ ಚರ್ಚಿಸಿದರು (ಕುಠೀ. ೦೬೦). ೨. ವ್ಯರ್ಥವಾಗು ; ನಿರರ್ಥಕವಾಗು : ಸರಣಾಯಾತರ್ಕ್ಕಳಂ ತಾಳ್ದಿ × × ಧಾತ್ರಿಯಮನ್ಯನೃಪಾಚಾರಕ್ಕೆ ಪೋಲಾಗೆ ವಿಸ್ತರದಿಂ ಪಾಳಿಸೆ ಕೀರ್ತಿಯಂ ಭುವನದೊಳು ಪ್ರಕಾಶನಂ ಮಾಡಿದಂ (ಶಾಸ. XI-i. ೯೬-೦೬ ; 1062) ; ಬಾರೆ ನೀನಾರೆಂದ ನಾನೀಗ ಕೇಳ್ವಾತನೋಗಿದವಳೆಂದರವಳು ಪೋಲಾದ ಮಾತು ನೀನೀಗ ಕೇಳ್ವನ ಪ್ರಾಣಪಾಲಕಿಯಲ್ಲವೆಯೆಂದಾ (ಶಶಿ. ೯೨-೯೦); ಉದಾತ್ತವಾದ ಕಾವ್ಯಗುಣಗಳನ್ನು ಅರಿತು ಮೆಚ್ಚಿಕೊಂಡಿರುವ ನನಗೆ ಅವು ಎಲ್ಲಿ ಪೋಲಾಗಿಬಿಡುತ್ತವೆಯೋ ಎಂಬ ಹೆದರಿಕೆ ತುಂಬಿದೆ (ಅಮಿಳ. ೦೯೯).

**ಪೋಲುಮಾಡು** = ೧. ಅಪವ್ಯಯಮಾಡು ; ದುಂದುವೆಚ್ಚಮಾಡು : ಕಿಸೆಯು ಚಿಲ್ಲರೆಯನು ಪೋಲುಮಾಡುವುದಕೆ ಯಾರಿಗಾದರೂ ಗುರು ಬೇಕೆ (ಜಂಜಾಕ. ೨೩೨-೯೬). ೨. ವ್ಯರ್ಥವಾಗಿಸು ; ನಿರರ್ಥಕಗೊಳಿಸು ; ಹಾಳು ಮಾಡು : ಒಡವೇಲಿ ಅರ್ಧಾನ ಇವರು ಅರಮನೇಲೆ ಇಟ್ಟುಕೊಂಡಿದ್ದಾರೆ . . . ನಮ್ಮ ಅರಮನೆಗೆ ಬರಬೇಕು ಅಂದರೆ ನಾವು ಪೋಲು ಮಾಡಕೇವನ್ನ ತಾರೆ (ಕಳಾ. ೨೩೮) ; ಸಂಸಾರ ನಡೆಸುವುದರಲ್ಲಿ ನೀವು ಯಾವಾಗಲೂ ಹಿಡಿತ. ಒಂದು ಅಕ್ಕಿಕಾಳು ಪೋಲು ಮಾಡುವುದಿಲ್ಲ (ಕುಹಾಗ. ೦೧೨).

**ಪೋಲುಗ** (ನಾ). ದುಂದುವೆಚ್ಚ ಮಾಡುವವನು ; ದುಂದುಗಾರ : ಆನು ಭಕ್ತನಲ್ಲಯ್ಯಾ ಆನು ವೇಷಧಾರಿಯಯ್ಯಾ ಕಾಟುಗ ಕೆತ್ತುಗ ಪೋಲುಗ[ಹಾಲಾಂ. ಹುಲ್ಲುಗ, ಪೊಲ್ಲುಗ]ನೆಂಬುದು ಎನ್ನ ಹೆಸರು (ಬಸವ. ೩೩೩).
[ಪೋಲು$_2$ + — ಗ$_2$]

**ಪೋಲುಮೆ** 'ಪೋಲ್ಮೆ' ನೋ.

**ಪೋಲೋ** (ನಾ). (ಪೂರ್ವದೇಶಗಳಲ್ಲಿ ಮೊದಲು ಬಳಕೆಗೆ ಬಂದ) ಕುದುರೆಯ ಮೇಲೆ ಸವಾರಿ ಮಾಡುತ್ತಾ ಆಡುವ 'ಹಾಕಿ' ಆಟದಂಥ ಒಂದು ಬಗೆಯ ಚೆಂಡಿನ ಆಟ : ಬ್ರಿಟನಿನ ತರುಣರು, ಮುಂದುಕರು ದೋಣಿಯ ಓಟ, ಪೋಲೋ . . . ರಗ್ಬಿ ಮೊದಲಾದ ಹಲವು ಆಟ ಪಂದ್ಯಾಟಗಳಲ್ಲಿ ಮುಂದೊತ್ತಿ ಹೋಗಿರುವರು (ಜಾಂಶ್ರ. II. ೦೦೯೯). [← ಇಂ. Polo]

**ಪೋಲ್ಕ** 'ಪೋಲಕ' ನೋ.

**ಪೋಲ್ಕೆ** (ನಾ). ಸಾದೃಶ್ಯ ; ಸಾಮ್ಯ : ಶೀರ್ಣನಾಳಿಕೇರಪರ್ಣಂಗಳೊಳಂ ಅವರ್ಕೆಯುಂ ಪೋರ್ಕೆಯುಂ ಒಲ್ವಂ ಚೆಲ್ವುಮಾಗೆ ಗೊಜ್ಜಗೆಯ ಮುಗುಳ ಗೆಜ್ಜೆಯುಮಂ . . . ಮನೋಹರಮೆನೆ ಸಮೆದು ತಮತಮಗೆ ಪಸದನಂಗೊಂಡು (ಕಂಠ್ರಪು. ೬-೦೦೩ ಪ) ; ಬದಿರಂ ಕರ್ಬಿನ ಪೋಲ್ಕೆಗೆಂದು ಸವಿವಂತಾಯ್ತನ್ನ ಪುಣ್ಯೋದಯಂ (ಕಾವ್ಯಸಾ. ೩೭೬). 'ಹೋಲಿಕೆ$_1$' ಪರಾ. [ಪೋಲ್$^1_1$ + — ಕೆ. / ತೆಲು. ಪೋಲಿಕ, ಪೋಲಿಕೆ, ಪೋಲ್ಕಿ]

**ಪೋಲ್ಕೆಗೊಳ್** (ಕ್ರಿ). ಸಾದೃಶ್ಯವನ್ನು ಹೊಂದು : ಧರಿಸಿ ಕನಕಾಂಬರಮನಾ ವರವಧುವಾಮೂಲಶಿಖರಪರಿಫುಲ್ಲಸುಮೋತ್ಕರದಿಂದೆ ಪುದಿದ ನವ ಕೇಸರಲತೆಯಂ ಪೋಲ್ಕೆಗೊಂಡದೇನೊಪ್ಪಿದಳೊ (ಪುಹಾಕ. ೩-೬೩).
[ಪೋಲ್ಕೆ + ಕೊಳ್$_1$]

**ಪೋಲ್ಟೀಸು**, ಪೋಟಲೀಸು, ಪೋಟ್ಲೀಸಂ (ನಾ). "ಮೆತುರೊಟ್ಟಿ, ಸೀಮೆಯುಗಸೆ, ಹಿಟ್ಟು, ವೊ.ನ್ನು ಸಾ. ಕುದಿಯುವ ನೀರಿನಲ್ಲಿ ಹಾಕಿ ಮೆತು ಮಾಡಿ ಮಸ್ಲಿನ್ ಬಟ್ಟೆ, ವೊ.ಗಳ ಮೇಲೆ ಹರಡಿ ಹುಣ್ಣು ಅಥವಾ ಉರಿಯೂತದ ಮೇಲಿಟ್ಟು ಕಟ್ಟುವಂಥದು" (Poultice. ೫೦೪೫) : ಹೊಟ್ಟೆಗೆ ಪೋಲ್ಟೀಸು ಕಟ್ಟಿಸಿಕೊಂಡು ರಾಮು ಹಾಸಿಗೆಯ ಮೇಲೆ ಮಲಗಿದ್ದ (ಕಾಅಕ. ೨೬). **ಪೋಟಲೀಸು** : ಅವನಿಗೆ . . . ಕಟ್ಟುವುದಕ್ಕೆ ಪೋಟಲೀಸು ಬೇಯಿಸಿ, ನನ್ನ ಕೈಗೆ ಆಗಿರುವ ಗತಿ ನೋಡು (ಕಲ್ಲಕಾ. ೩೯). **ಪೋಟ್ಲೀಸು** : ಹುಣ್ಣಾದ ಕಾಲಿಗೆ ಜೇಡಿಮಣ್ಣನ್ನಾಗಲೀ ಅಥವಾ ರಾಗಿಹಿಟ್ಟಿನ ಪೋಟ್ಲೀಸನ್ನಾಗಲೀ ೪–೫ ದಿವಸಗಳು ಕಟ್ಟಿದರೆ ನೋವು ಕಡಿಮೆಯಾಗುವುದು (ಗ್ರಾಮಸೀ. ೦೯೩).
[← ಇಂ. Poultice]

**ಪೋಲ್ಮೆ**, ಪೋಲಿಮೆ, ಪೋಲುಮೆ (ನಾ). ೧. ಸಾದೃಶ್ಯ ; ಸಾಮ್ಯ : ರಾಹು ರವಿಯಂ ತುಡುಕುವಂತದರ ಪೋಲ್ಮೆಯಿಂದರಸ ನಿನ್ನಂ ಒಡಿವೆಂ (ಕುಕಂಗ. ೯೯-೧೯). **ಪೋಲಿಮೆ** : ೨. ಒಪ್ಪವಾದುದು ; ಚೊಕ್ಕಟವಾದುದು : ಸಾರಸ್ವತರ . . . ಉಡಿಗೆಗಳು ಶೇಣವೀಜನರಿಗಿಂತ ಪೋಲಿಮೆಯಾಗಿರುತ್ತವೆ (ಕೊಂಗ. ೯೯). **ಪೋಲುಮೆ** : ೧. ಅವುದು ಪೋಲುಮೆಯುಂ ಕೊಡಲ್ಪಡುತ್ತದೆಯೊ ಅದು ಉಪಮಾನಂ (ಕಾವಂ. ೬). 'ಪೋಲ್ವೆ' ಪರಾ. [ಪೋಲ್$^1_1$ + — ಮೆ$_1$ . / ತಮಿ. ಪೋಲಿಮ್ಮೈ]

**ಪೋಲ್ವೆ**, ಹೋಲುವೆ, ಹೋಲ್ವೆ (ನಾ). ೧. ಸಾಮ್ಯ ; ಸಾದೃಶ್ಯ ; ಹೋಲಿಕೆ : "ಪಾಟಿ ಪೋಲ್ವೆ . . . ಸಾಟಿ ಪಾಸಟಿಯೆನಲ್ಕೆ ವತ್ತುಗುಂ" (ಶಬ್ದಾಂ. ೦೯) ; ತದ್ವಿದೇಹಜನಕಾಸ್ವಾಂತಾರ್ಪಿತೋದ್ಯತ್ಪ್ರಮೋದೆಯ ಸೀತೋದೆಯ ಪೋಲ್ವೆಗಿಲ್ಲ ತೂಜಿಗಳ್ ವಿಶ್ವಂಭರಾಭಾಗದೊಳ್ (ಅಪು. ೦-೩೯) ; ಮುತ್ತಿನ ತೋರಣಂ ಗಜದ ನೆತ್ತಿಯ ಮುತ್ತುಗಳೆಲ್ಲ ಪಲ್ಗೆಳೊಳ್ ಪತ್ತಿದ ಪೋಲ್ವೆಯಂ ಪಡೆದ ಗೋಪುರಪಂಚಕಮಾಸ್ಪದಾಗೆ (ಅರ್ಧನೇ. ೦-೬೬) ; ನಿನ್ನೊಂದು ಪಸರ ಪೋಲ್ವೆಯೊಳೆಂದಡಾಮಿಳಂ ತನ್ನ ಪಾತಕಕೋಟಿಯಂ ಪರಿಹರಿಸಿಕೊಂಡಂ (ಕೃಪಾಶ. ೦೩-೬೬). ೨. ಸೊಗಸು; ಸೌಂದರ್ಯ : "ಸೊಗಸುಮುಲುಂವುಂ ವಿಭವಮುದೋಗುಂ ತಾಮದಟುಂದ ಮನೆ ಪೋಲ್ವೆಯೊಳಂ" (ಕಂಠಾ. ೦೩೯). ೩. ಸ್ವರೂಪ ; ಆಕಾರ : ಅಯ್ದುಮಂತ್ರಾಕ್ಷರಂಗಳನಾಹ್ವಾನಂಗೆಯ್ದು ನಿನ್ನ ಬಗೆಗೆ ಬಂದ ಪೋಲ್ವೆಯ ಮಕ್ಕಳಂ ಪಡೆವೆಯೆಂದು ಬೆಸಸಿದೊಡೆ (ಶಂಕಶಾ. ೦-೯೯ ಪ). **ಹೋಲುವೆ**: ೧. ಕೃತಾಂತನ ಹೋಲುವೆಯ ಹೊಸಬಿಗನು ಹೊಕ್ಕನು ಭೀಮಸುರವಣಿ (ಕುಜ್ಞಾತ್ರೋ. ೨-೬೪); ವಜ್ರಮಾಣಿಕ್ಯದ ಹೋಲುವೆಯ ದಂತಪಂಕ್ತಿಯ . . . ಪೆಣ್ಣಕೊಪ್ಪಿದರು ನವರತ್ನಮಾಲೆಗಳ ಪಾಂಗಿನಿಂದ (ಚಾಪಸಂ ೩-೩೯); ಗಡ್ಡವಿರಲಿಲ್ಲ, ಗೆರೆಹೋಲುವೆಯ ಮಿಸೆಯಿತ್ತು (ಕುಪರು. ೦೬೯). **ಹೋಲ್ವೆ** : ೧. ರಕ್ಕಸನು . . . ಎಲವೊ ಗೌರಿಜ ಜನಿಸಿದೀವರಂ ಹೊಕ್ಕೆ ಸಮರದ ನಿನಗೆ ಕಾಣಿಕೆ ಚಕ್ಕುಲಿಗಳಿಲ್ಲದರ ಹೊ[ಹೋ]ಲ್ವೆಯ ಚಕ್ರಮಿದೆ ನೋಡಿದರ ಸವಿಯನುತ್ತ ತೆಗೆದೆಚ್ಚ (ಅಂಬಿಕಾ. ೨೮-೩೩) 'ಪೋಲ್ಮೆ' ಪರಾ. [ಪೋಲ್$^1_1$ + — ವೆ]

**ಪೋಲ್ವೆವೆಡು** (ಕ್ರಿ). ಸಾದೃಶ್ಯವನ್ನು ಪಡೆ ; ಸಾಟಿಯಾಗು : ಖರಕರಬಿಂಬದಿಂ ಕಿರಣಸಂತತಿಗಳ್ ಪೊಱಪೊಣ್ಮಿದವ್ಯವೆಂಬರ ನುಡಿ ಪೋಲ್[ಹಾಕಾಂ. ಲ್]ವೆತ್ತುದೆನೆ ಬಾಣಧಿಯಿಂದಿರದುರ್ಚಿಕೊಂಡು ವಿಸ್ಫುರಿಶರಂಗಳಿಸೆಟನಪಟಿಳ್ ಪೊಳೆವಯ್ದುಶರಂಗಳಂ ಸುರುಳ್ಮುರುಳ್ವಿನಮೆಚ್ಚ (ಶಂಕಶಾ. ೦೩-೬೩). [ಪೋಲ್ವೆ + ಪೆಱು$_1$]

**ಪೋವಣಿಕೆ** 'ಪವಣಿಕೆ' ನೋ.

**ಪೋವಿಡು** (ಕ್ರಿ). ಹೋಗಲು ಬಿಡು : ಅರಿಗಳ್ಗಱಿವಾಗದ ಮುನ್ನವೆ ಕಟ್ಟಿದ ಹಯಮಂ ಪೋವಿಟ್ಟು ಮನೆಗೆ ಪೋಪಂ (ರಾಜಾಕ್ಕ. ೦೩೩-೬)
[ಪೋ$_1$ + ಬಿಡು$_1$]

**ಪೋಶಳ** 'ಪೊಯ್ಸಳ' ನೋ.

Δ**ಪೋಶಟ** 'ಪೊಯ್ಸಳ' ನೋ.

**ಪೋಷ$_1$** 'ಪುಸ್ಯ' ನೋ.

**ಪೋಷ$_2$** (ನಾ). ೧. ಪರಿಪೋಷಣೆ ; ಸಾಕುವುದು. ೨. ಬೆಳವಣಿಗೆ ಅಭಿವೃದ್ಧಿ. [ಸಂ.]

**ಪೋಷಕ** (ಗು). ೧. ಸಲಹುವ ; ಕಾಪಾಡುವ : ಈ ಪ್ರಕಾಶನಕೆ ದೊರೆಯಬಹುದಾದ ವಾರ್ಷಿಕ, ಪ್ರೇರಕ, ಪೋಷಕ ಸದಸ್ಯರ ಸಹಾಯವೆ ಕರಾವಲಂಬನ (ಸಂಶೋಧ. VI. ೫೦೪); ಉಬಾರ ಕಮ್ಮಾರ ಕಾಯಕಗ

ಪೋಷಕ ದೈವತ ಅಭಿಮಾನಿದೇವತೆ 'ಪ್ರಮಿಥ್ಯೂಸ್' ಅನ್ನು ಸ್ಥಳೀಯ ಅಧೀನಿಯರು ಹಿಂದಿನಿಂದ ಪೂಜಿಸುತ್ತಿದ್ದರು (ಅಭ್ರಕ್ರ. I. ೬೦೯೪). (ನಾ). ೨. ಪೂರಕವಾದಂದುದು; ಪಾಲನೆ ಮಾಡುವಂಥದು: ಅವನ ಸಂದೇಶ ಆರ್ಯಸಂಸ್ಕೃತಿಯ ಪೋಷಕ ಎಂಬುದು ಇತಿಹಾಸಕಾರರ ಬಹು ಮತ (ಹುಶ್ವಾರ. ೦೦೩ ೬೦೯೪); ಈ ಮೂರು ಜಾತಿಯ ದ್ರವ್ಯಗಳನ್ನು ರಾಮಾನುಜಗೀತಾಭಾಷ್ಯದಲ್ಲಿ ಧಾರಕ, ಪೋಷಕ, ಭೋಗ್ಯಕ ಎಂದು ಕರೆದಿದೆ (ಹುಕರ. ೩೩೨). ೩. ರಕ್ಷಿಸುವವನು; ಕಾಪಾಡುವವನು: "ಭರ್ತಾ=ಪೋಷಕಃ" (ಶಾಕ್ಕ. ೦೬೯); ಈ ಅಂಶವನ್ನು ಶಿಕ್ಷಣಚಿತಕರರು ಪ್ರತಿಪಾದಿಸಿದಂತೆಲ್ಲ ಪೋಷಕರಲ್ಲೂ ಆ ಬಗ್ಗೆ ಆಸಕ್ತಿ ಹೆಚ್ಚುತ್ತಿದೆ (೩೪೮. ೦೬೪). ೪. ಬೆಳಸುವವನು; ವೃದ್ಧಿಗೊಳಿಸುವವನು. [ಸಂ.]

**ಪೋಷಕಿ** (ನಾ). ಸಲಹುವವಳು; ಪಾಲನೆ ಮಾಡುವವಳು: ಅವಳ ಅಜ್ಜಿಯೇ ಅವಳ ಪೋಷಕಿಯಾಗಿದ್ದಳು (ಕ್ರಹುಕ. ೦೦೨). [ಪೋಷಕ + –ಇ]

**ಪೋಷಣ** (ನಾ). ೧. ರಕ್ಷಣೆ; ಪಾಲನೆ: "ತುಷ, ಹೃಷ–ಪುಷ್ಟೌ, ಪೋಷಣ ದೊಳ್" (ಶಾಕ್ಕ. ೦೯೯); "ಸ್ವರ ವಿಶಿಷ್ಟರ ತೋಷಣ ಪೋಷಣಂಗಳೊಳ್ಳು ಗರಮನ್ನು ಬಣ್ಣಿ(ಣಿ)ಸುವುದೀ ಧರೆ ಪಂಡಿತಪಾರಿಜಾತನಂ ನಾಗನಂ (ಎ.ಕ. XXI. ೦೩-೩೩; ೬೫೦). ೨. ವಿಸ್ತಾರ; ವ್ಯಾಪ್ತಿ: ಸಂಗೀತದ ಸಾಧನ, ನಿರೂಪಣ, ಪೋಷಣ ಎಂಗಿಲಾಗಿ ಅಭಿರುಚಿ ಮತ್ತು ಪ್ರವೃತ್ತಿಗಳಲ್ಲಿ ಆಗಿರುವ ಬದಲಾವಣೆಗಳು ಗಮನಾರ್ಹ (ಹುಕರ. ೩೪೨). [ಸಂ.]

**ಪೋಷಣೆ** (ನಾ). ರಕ್ಷಣೆ; ಪೋಷಿಸುವಿಕೆ: ಸರಿಯಾದ ಪೋಷಣೆಗೆ ಬೇಕಾದ ಮುಖ್ಯ ವಸ್ತುಗಳು ಜೀವಸತ್ತ್ವಗಳು (ಕಂಕೋ. XI. ೩೬೪).[ಸಂ. ಪೋಷಣ]

**ಪೋಷಾಕ** 'ಪೋಷಾಕು' ನೋ.

**ಪೋಷಾಕು, ಪೋಷಾಕ** (ನಾ). ಉಡುಪು; ಉಡುಗೆ; ತೊಡುಗೆ: ಸ್ವಯಂಸೇವಕನ ಪೋಷಾಕಿನಲ್ಲಿಯೇ ಇರುವುದರಿಂದ ಇವರ ಬಟ್ಟೆಬರೆಗಳಿಗೆ ಹೆಚ್ಚು ವೆಚ್ಚವಿಲ್ಲ (ಸಿಹಾಕ. ೯೭); ಅವರು ಪೋಷಾಕನ್ನು ಗುರುತಿಸುತ್ತಾರೆ, ಮನುಷ್ಯರನ್ನು ಗುರುತಿಸುವುದಿಲ್ಲ (ಶಿಂರ. II. ೨೬೨). ಪೋಷಾಕ: ಆತನು ತನ್ನ ಸೂಪರಿಂಟೆಂಡೆಂಟ ಪದವಿಯ ಪೋಷಾಕವನ್ನೇ ಧರಿಸಿದ್ದ ನೆಂದು ಬೇರೆ ಹೇಳಬೇಕಾದ್ದಿಲ್ಲ (ಹಿಧಿಕ್ಕ. ೯೩).

[← ಪಾರ. ಹಿಂ. ಪೋಶಾಕ್; ಮರಾ. ಪೋಷಾಕ್, ಪೋಷಾಖ್, ಪೋಷಾಗ್, ಪೋಶಾಕ್, ಪೋಶಾಖ್, ಪೋಶಾಗ್]

**ಪೋಷಿತ** (ಗು). ೧. ಸಲಹಿದ; ಕಾಪಾಡಿದ. ೨. ಬೆಳೆಸಿದ; ವೃದ್ಧಿ ಪಡಿಸಿದ. [ಸಂ.]

**ಪೋಷಿಸು** (ಕ್ರಿ). ೧. ಸಲಹು; ಕಾಪಾಡು; ಸಾಕು: ಭಾವಶಿವದೇವ ಕೀರ್ತಿಯ ಮಾಣಿಯಂ ಕೈಕೊಣ್ಡು ಪೋಷಿಸಿ (ಶಾಸ. XI–1. ೬೪-೦೭; ೧೦೫೩); ವಿಷಪಿಕ್ಕಿದವಗೆ ಷಡ್ರಸವನುಣಸಲುಬೇಕು ದ್ವೇಷ ಮಾಡಿದವನ ಪೋಷಿಸಲು ಬೇಕು (ಪುರಂದ. ೨-೬೩-೦); ಗಿಳಿಯ ಮರಿಯನು ತಂದು ಪಂಜರದೊಳಗೆ ಪೋಷಿಸಿ ಕಲಿಸಿ ನುಡಿಗಳನು ಲಾಲಿಸಿ ಕೇಳ್ವ ಪರಿಣತ ರಂತೆ (ಕಂಹಾ. ೨೦). ೨. ಪುಷ್ಟೀಕರಿಸು; ಸಮರ್ಥನೆ ಮಾಡು: ಜಗತ್ತಿನ ಇನ್ನೂ ಇತರ ಒಂದೆರಡು ಭಾಷೆಗಳಲ್ಲಿ ಈ ಪರಿವರ್ತನೆಯನ್ನು ಪೋಷಿಸುವ ಆಧಾರಗಳು ಇವೆ (ಕ್ರಾಶಿಶಿ. ೩೩೩); ಒಂದೊಂದು ಸಂಪ್ರದಾಯ ದವರೂ ವೇದ ಪುರಾಣಗಳಿಗೆ ತಮ್ಮ ತಮ್ಮ ಧರ್ಮಕ್ಕೆ ಅನುಕೂಲವಾಗು ವಂತೆ ವ್ಯಾಖ್ಯಾನ ಮಾಡಿ ತಮ್ಮ ತಮ್ಮ ವಾದಗಳನ್ನು ಪೋಷಿಸಿಕೊಂಡಿದ್ದಾರೆ (ಹುಕರ. ೨೯೪). ೩. ಅಭಿವೃದ್ಧಿ ಮಾಡು; ಬೆಳಸು: ಮೂಳರಂ ಪಾಳಿಸಿಯುಂ ಕೋಶಮಂ ಪೋಷಿಸಿಯುಂ ಇಂತು ಸಾಮ್ರಾಜ್ಯಮಂ ನಿಷ್ಕಂಟಕಮುಂ ನಿರಾತಂಕಮುಮಂ ನಿಜಾಯತ್ತಮುಮಮನಿಸಿದಂ (ಕಂಕ್ರಪು. ೨-೬೦); ಕಾವ್ಯದಲ್ಲಿ ವರ್ಣನೆ ಯಾವ ರೀತಿಯಲ್ಲಿ ಬಂದರೆ ತನ್ನ ಸೊಗಸನ್ನೂ ಕಾವ್ಯದ ಸೊಗಸನ್ನೂ ಒಟ್ಟಿಗೆ ಪೋಷಿಸುವುದೆಂಬುದಕ್ಕೆ ಇದೊಂದು ಉತ್ತಮ ನಿದರ್ಶನ (ಸಶಾಶೋ. ೦೦೨). [ಪೋಷಣ + – ಇಸು]

**ಪೋಷ್ಯ** (ಗು). ೧. ಪಾಲಿಸಬೇಕಾದ; ಸಲಹಬೇಕಾದ; ಸಾಕಲು ಅರ್ಹವಾದ: 'ಪೋಷ್ಯವರ್ಗ' ಪದಾ. (ನಾ). ೨. ಪಾಲಿಸುವಿಕೆ; ಪೋಷಣೆ: "ಪೌಷಣಂ . . . ಪೋಷ್ಯಂ, ಪೌಷ್ಯಂ, ಪೋಷಿತವ್ಯಂ – ಈ ೭ ಹೊರೆತಂ" (ಶಾಕ್ಕ. ೦೯೭). [ಸಂ.]

**ಪೋಷ್ಯವರ್ಗ** (ನಾ). ರಕ್ಷಿಸಬೇಕಾದ ಬಂಧುಜನರು; ೯ ತಾಯಿ, ತಂದೆ, ಗಂಡ, ಪತ್ನಿ, ಆಶ್ರಯದಲ್ಲಿರುವವನು, ಮಕ್ಕಳು, ಅಭ್ಯಾಗತ, ಅತಿಥಿ ಮತ್ತು ಅಗ್ನಿ–ಈ ಒಂಬತ್ತು ಜನ ಪೋಷ್ಯ ವರ್ಗಕ್ಕೆ ಸೇರಿದವರು. ಇಲ್ಲಿಯ ಹೆಸರುಗಳು ಮತ್ತು ಸಂಖ್ಯೆಗಳ ಬಗ್ಗೆ ಭಿನ್ನಾಭಿಪ್ರಾಯಗಳಿವೆ: ಕಡಲ ತಡಿಯೆಯ್ದೆ ನೆಲನಂ ಪಡೆದರ್ ಭವದೀಯ ಪುತ್ರರುಳ್ಳಿವಿಗಳೊಳ್ ಪಡೆದುದು ಬಂಧುಜನಂ ನಿಮ್ಮಡಿ ಗಾವೇಂ ಪೋಷ್ಯವರ್ಗದಿಂದಂ ಪೊಱಗೇ (ಆಂಪು. ೯-೯೪); ಕಾಮಂದರವರ ಪೋಷ್ಯವರ್ಗಕ್ಕೂ ಬಂಧುವರ್ಗಕ್ಕೂ ಸೇರಿದ ಜನರು ಹೊರತು ಉಳಿದ ಇಲಾಖೆಗಳ ನೌಕರರು ೯೬೮೭ ಮಂದಿ ಇದ್ದರು (ಶಿಶಾಶಂ. II. ೦೬೬). [ಸಂ.]

**ಪೋಸ**, ಪಾಸ್ಯ, ಹೋಸ, ಹೌಸ[1] (ನಾ). [ಜೈನ] ಕತ್ತಲೆಯಾಗುವುದಕ್ಕೆ ಮೊದಲು ಆಹಾರ ಸ್ವೀಕಾರ ಮಾಡುವ ವ್ರತ, – ನಿಯಮ: ಅಚ್ಯುತ. . . ಅವರ ಮನೆಗೆ ಊಟಕ್ಕೆ ಹೋದ. ನಾಗರಾಜನಿಗೆ 'ಪೋಸ' ವಲ್ಲವೇ! (ಶುಂಗಹು. ೯೦). ಪಾಸ್ಯ: ನಾವು ಜೈನರು. ಕತ್ತಲೆಗೆ ಮುಂಚೆ ಊಟ; ನಾವು ಪಾಸದವರು (ಹಸುಳ. ೩೩). ಹೋಸ: ಸ್ಥೂಳಸೂಕ್ಷ್ಮಂ ಗಳಪ್ಪ ಪ್ರಾಣಿಗಳು ರಾತ್ರಿಯೊಳನ್ನಪಾನಾದಿಗಳಂ ಪೊರ್ದಿದೊಡೆ ಪಿಂಗಿಸ ಲ್ವಾರದಪ್ಪುದಱಿಂದನ್ನಪಾನಖಾದ್ಯಲೇಹ್ಯಂಗಳಪ್ಪ ಚತುರ್ವಿಧಾಹಾರಮಂ ರಾತ್ರಿಯೊಳು ನವಶುದ್ಧಿಯಿಂ ಪರಿಹರಿಸುವುದು ಹೋಸಮೆಂಬಾಚಿನೆಯಂತು ವ್ರತಮಕ್ಕುಂ (ಕಶಾರ. ೩೦೭); ಉತ್ತಮಗೋಷ್ಠಿಯೊಳಿರುತಿರೆ ಹೋಸದ ಹೊತ್ತಾಗಲೂಟವಾಯ್ತೊಡನೆ (ಚರಿತ. ೩೭-೯೦); ಶರಧಿಗೆ ರವಿ ಸಾರುತಿರೆ ಕಂಡು ಹೋಸಕೆ ಸರಸಿಜಮುಖಿ ಪೋಪೆನೆನಲು (ಶಪಣ. ೯-೬೦). ಹೌಸ[1]: ತಾಂ ಹೌಸಕ್ಕೆ ಬೇಗೆಳ್ದು ವರಮನೆಯ ಪುಗಲಿತ್ತ ಸೂರ್ಯಂ. . . ಪಶ್ಚಿಮಾಂಬುಧಿಯ ಸಾರಿದಂ (ಶ್ರೀಲಪು. ೯-೦೩೪).

[←ತುಳು. ಪೋಸ = ಸೂರ್ಯಾಸ್ತ, ಸಂಜೆ; ಪೋಸದಾಯೆ = ಸೂರ್ಯಾಸ್ತಕ್ಕೆ ಮೊದಲು ಆಹಾರವನ್ನು ಸ್ವೀಕರಿಸುವ ವ್ರತ]

**ಪೋಸಳ** 'ಪೊಯ್ಸಳ' ನೋ.

△**ಪೋಸಟ** 'ಪೊಯ್ಸಳ' ನೋ.

**ಪೋಸ್ಟ** 'ಪೋಸ್ಟು' ನೋ.

**ಪೋಸ್ಟು**, ಪೋಸ್ಟ (ನಾ). ೧. ಅಂಚೆವ್ಯವಹಾರವನ್ನು ನಡೆಸುವ ಕಚೇರಿ; ಟಪಾಲುಕಚೇರಿ: ಕಾಗದಗಳನ್ನು ತಂದು ಹಂಚುವುದು ಪೋಸ್ಟಿನ ಕೆಲಸ (ಹಿಪಾತ್ಕ. ೬೦). ೨. ಅಂಚೆಯ ಮೂಲಕ ಬಂದಿರುವ ಅಥವಾ ಕಳುಹಿಸಲಿರುವ ಪತ್ರ ಮುಂತಾದುವು; ಟಪಾಲು: ಆ ದಿನ ಪೋಸ್ಟಿನಲ್ಲಿ ವಾಚೊಂದು ನನಗೆ ಧರ್ಮಾರ್ಥವಾಗಿ ಪಾರ್ಸಲ್ ಆಗಿ ಬಂದಿತ್ತು (ಶುಂಗಣಮು. ೦೪). ಪೋಸ್ಟ: ೨. ಅಂಚೆಯವನು 'ಪೋಸ್ಟ' ಎಂದ ಕೂಡಲೇ ಬಾಗಿಲಿನ ಕಡೆಗೆ ಓಡಿದ (ಕೂಹ).

ಪೋಸ್ಟ್‌ಕಾರ್ಡು=(ಅಂಚೆಯ ಮೂಲಕ ರವಾನಿಸುವ, ಗೊತ್ತಾದ ಅಳತೆಯ) ರಟ್ಟುಕಾಗದ: ಪೋಸ್ಟ್‌ಕಾರ್ಡನ್ನು ಮರೆಯದಂತೆ ಟಪಾಲಿಗೆ ಹಾಕು (ಕೂಹ). ಪೋಸ್ಟ್‌ಬಾಕ್ಸು=ಅಂಚೆಯನ್ನು ಹಾಕುವ ಡಬ್ಬಿ; ಟಪಾಲುಪೆಟ್ಟಿಗೆ: ಪೋಸ್ಟ್‌ಮ್ಯಾನ್ ಬಂದು ಪೋಸ್ಟ್‌ಬಾಕ್ಸಿನಲ್ಲಿದ್ದ ಕಾಗದಗಳನ್ನೆಲ್ಲಾ ತೆಗೆದುಕೊಂಡು ಪೊರಟನು (ಕೂಹ). ಪೋಸ್ಟ್

ಮಾಸ್ಟರು — ಅಂಚೆಕಚೇರಿಯ ಯಜಮಾನ : ಅವರು ಈ ವಿಭಾಗಕ್ಕೆ ಹೊಸ ಪೋಸ್ಟ್‌ಮಾಸ್ಟರರಾಗಿ ಬಂದಿದ್ದಾರೆ (ಶಂಕ). ಪೋಸ್ಟಾಫೀಸು = ಅಂಚೆಯ ವ್ಯವಹಾರಗಳನ್ನು ನಡೆಸುವ ಕಚೇರಿ; ಟಪಾಲು ಕಚೇರಿ : ಪೋಸ್ಟಾಫೀಸಿನ ಹತ್ತಿರವೇ ನಮ್ಮ ಮನೆ ಇದೆ (ಶಂಕ). [←ಇಂ. Post]

**ಪೋಸ್ತು** (ನಾ). ಗಸಗಸೆ; ಅಫೀಮಿನ ಕಾಳು : ಖುರಾಸಾನಿಪೋಮ, ಪೋಸ್ತು, ಸೈಂಧವಲವಣ . . . ಇಷ್ಟನ್ನೂ ಸಮಚೂರ್ಣ ಮಾಡಿ . . . ಒಂದು ಗುಳಿಗೆಯನ್ನು ಅನುಪಾನವರಿತು ತೆಗೆದುಕೊಂಡರೆ ರಕ್ತಗ್ರಹಣೀ, ಹೊಟ್ಟೆನುಲಿ, ಸಂಗ್ರಹಣಿ ಸಹ ನಿಲ್ಲುವುವು (ಸಕವ್ಯ. ಹಾ. ೯೬೪).

[← ಪಾರ. ಪೋಸ್ತ್ ; ಹಿಂ. ಪೋಸ್ತ್, ಪೋಸ್ತಾ]

**ಪೋಹಚಿ** 'ಪೌಂಚಿ' ನೋ.

**ಪೋಹಣಿಗೆ** 'ಪವಣಿಗೆ' ನೋ.

**ಪೋಹಣಿಸು** 'ಪವಣಿಸು' ನೋ.

**ಪೋಳ್$_1$** 'ಪೋಟ್$_1$' ನೋ.

**ಪೋಳ್$_2$** 'ಪೋಟ್$_2$' ನೋ.

**ಪೋಳ** (ನಾ). ಯೋಧ; ಸೈನಿಕ (?) : ಪೋಳರ್ ಪೊಣ[ರ್ದಮ] ಟ್ಟಿಜಿ ಸೂ[ಳ]ಜಾಜಿವಲ್ಲಿ ಸಿಡಿದ ಬಾಳಡಿ ಬಾನೊಳ್ ಕೀಲಿಸಿರೆ ಬಳ್ಳಿ ಮಿಂಚುಗಳಾಳಾಳಿ[ಗ]ಮಡರಿ ಪೊಳೆವ ತೆಜಿನಂ ಪೋಲ್ಕುಂ (ವರ್ಧಮಾ. ೯-೬೩).

[ ? ]

**ಪೋಳರೆ** (ನಾ). ಬಿರುಕು ಬಿಟ್ಟಿರುವ ಬಂಡೆ ; ಸೀಳಿದ ಬಂಡೆ : ಪೋಳರೆಗೆ ಏರಿಯೋಡ ತಾಟ ಪೊಳ್ಳಲ್ಲದಾ ಬೋಳ ಕೈಗಾಯ್ದುನೆನಲೀ ಬೋಳನಾಳಿದಂ (ಕಾಂಚಿವಿ. ೦೩೬-೨೯೯).

[ ಪೋಳ್$_2$ (< ಪೋಟ್$_2$) + ಅರೆ$_2$ (< ಅಚಿ$_4$) ]

**ಪೋಳಲ್** 'ಪೋಟಲ್' ನೋ.

**ಪೋಳಲ್ಬೋರ** 'ಪೊಟಲ್ಬೋರ' ನೋ.

**ಪೋಳಿ** (ನಾ). ಗುಂಪು; ಪಂಗಡ; ಬಣ : ಅವನ ದಾಯಾದಿಮತ್ಸರವನ್ನು ತೀರಿಸಿಕೊಳ್ಳಲು ದಾರಿಯೊಂದನ್ನು ಹುಡುಕುತ್ತಿದ್ದ. ಊರಿನಲ್ಲಿ ಅವನು ಒಂದು ಪೋಳಿಯನ್ನು ಕಟ್ಟಿದ (ಮುಳ್ಳಿ.ಕಾ. ೦೯೩). [<ಸಂ. ಪೋಲ]

**ಪೋಳಿಗೆ$_1$**, ಹೋಳಿಗೆ$_1$ (ನಾ). ೧. ಕಣಕವನ್ನು ಹಪ್ಪಳದಂತೆ ಲಟ್ಟಿಸಿ ಹೂರಣವನ್ನಿಟ್ಟು ಮತ್ತೆ ಲಟ್ಟಿಸಿ ಹಂಚಿನ ಮೇಲೆ ಎಣ್ಣೆ ಸವರಿ ಬೇಯಿಸುವ ಒಂದು ಬಗೆಯ ಸಿಹಿತಿಂಡಿ ; ಒಬ್ಬಟ್ಟು : "ಪೋಳಿಗೆ— ಪೋಲಿಕಾ = ಹೋಳಿಗೆ" (ಕನ್ನಡ. ೨೬); ಪೂರಿಗೆಯಿಡ್ಡಲಿಗೆ ಪೋಳಿಗೆ [ಪಾಠಾಂ. ಸೋದಿಗೆ, ಸೊಂಡಿಗೆ] . . . ಮೊದಲಾಗೊಡೆಯ ಪದಿನೆಂಟುಂ ತೆಜದ ಭಕ್ಷ್ಯರೂಪಂಗಳುಮಂ ನಾನಾಪ್ರಕಾರದ ಪಾನಂಗಳುಮಂ ಭಟ್ಟಾರರ್ಗೆ ಬಡ್ಡಿಸಿ (ಕನ್ನಾ.ಕಾ. ೭೪-೦೩); ಡಾಕಿನಿಯರ ಕೈಯ ಪೋಳಿಗೆ ಯಂತೆ ರಕ್ಕಸಿಯರ ಮನೆಯ ಬೆಲ್ಲದಂತೆ (ರಣರಾಕ್ಷ. ೦೩-೦೫೬). ೨. (ಹೋಳಿಗೆ ಮುಂತಾದ ಭಕ್ಷ್ಯಗಳನ್ನು ತಯಾರಿಸಲು ಬಳಸುವ) ಕಣಕವನ್ನು ಲಟ್ಟಿಸಿ ಮಾಡಿದ ಹಪ್ಪಳ : ಅರೆದಿಂಬಾಗಿರೆ ಬೆಂದ ಪೋಳಿಗೆಗಳಂ ತಚ್ಚೂರ್ಣಪಂಚಾಂಶಮಾಗಿರೆ ಖರ್ಜೂರಮನಲ್ಲದಂದೆಜದ ವಣ್ಣಂ ದ್ರಾಕ್ಷೆಯುಂ ಮತ್ತೆ ಶರ್ಕರೆಯಂ ಪೊಯ್ದು . . . ಖಂಡಲಡ್ಡುಗೆಗಳಂ ಮಾಟ್ಕಿಂದಮಿಮ್ಮಾ ಮಾಟ್ಕೆಯಿಂ (ಲೋಕೋಪ. ೮-೦೪). **ಹೋಳಿಗೆ$_1$** : ೧. ಸೊಗಯಿಪ ಘೃತಪೂರಂ ಹೋಳಿಗೆ ಮಂಡಗೆ . . . ಪೂರಿಗೆ ಮೊದಲಾಗಿರ್ದ ಪಲವು ಭಕ್ಷ್ಯಮನಾಗಳ್ ಆಜ್ಯಯುತಮಪ್ಪವಂ ಮೆಲ್ದು (ರಚರಾಜ್ಯ. ೦-೦೯೬); ಸೂರ್ಕಾನೆದಿಂಬಂಗಾಡೆ ಹೋಳಿಗೆಯೆಂಬಂತೆ (ಅರ್ಧನೇ. ೬-೬೩ ಪ); ಸಮಸ್ತ ಬ್ರಾಹ್ಮಣಸವಾದವು ಹೋಳಿಗೆಯುಂಡಿತು (ಹಮ್ಮಿ.ಬ. ೦೩); ನೆರೆಮನೇ ಹೋಳಿಗೆಗೆ ತುಪ್ಪಾ ಕಾಯಿಸಿದ ಹಾಗೆ (ಗಾದೆ). ೨. ಬೆಂದ ಎಳೆಲೆಯ ಹಿಟ್ಟನೀಹಿಯಾಜಾಸಿ ಹಲವು ಚದರದ ಹಸುರು ಗಾಯ ತೆಜದಿನುತ್ತರಿಸಿಕೊಂಡು . . . ಧೂಪವನಿಡುವುದು ಅದಜೊಳಗೆ ಬೆಂದ ಎಳೆಲೆಯ ಹೋಳಿಗೆಯ ಹೋಳನೊದವಿಸಿದ ಬಳಿಕ ಪೂಗ್ಗರಣೆಯಂ ಮಾಡುವುದು (ಸೂಪಶಾ. ೬-೯). 'ಪುಲ್ಲಿಗೆ$_2$' ಪರಾ.

ಹೋಳಿಗೆ ತುಪ್ಪದಾಗ ಬೀಳು = (ಆಲಂ) ಕೆಲಸವು ಕೈಗೂಡು : ಹೋಟು ಗಿಂಟು ಎಲ್ಲಾ ಮುಗಿದು ಹೋಳಿಗೆ ತುಪ್ಪದಾಗ ಬೀಳುವ ಹೊತ್ತು ಬಂದಿದೆ (ಜಾನಪೋಲ. ೨೩೨). **ಹೋಳಿಗೆಯ ನೈವೇದ್ಯ** = (ಆಲಂ) ಹೊಡೆತ ; ಪೆಟ್ಟು : ಕೊಡುತ್ತೀರೋ ಇಲ್ಲವೇ ಎಲ್ಲರಿಗೂ ಹೋಳಿಗೆಯ ನೈವೇದ್ಯವಾಗಬೇಕೋ ? (ಅಂಗಚೋ. ೩). [< ಸಂ. ಪೋಲಿಕಾ]

**ಪೋಳಿಗೆ$_2$**, ಹೋಳಿಗೆ$_2$ (ನಾ). ಹೊಪ್ಪಳೆ ; ಬೊಕ್ಕೆ : ಸ್ಫಟಿಕ, ಪೋಳಿಗೆ, ಸ್ಫಟಿಕ, ಪಳಿಕು (ಕನ್ನಡ. ೦೧೦ ಪ್ರತಿ). **ಹೋಳಿಗೆ$_2$** : "ಹೋಳಿಗೆಯೆಂದು ಸ್ಫೋಟಕಂ" (ಶಬ್ದಮ. ೬೩-೪೬೯); ಸ್ಫೋಟಕ ಶಬ್ದಕ್ಕಾದ ಹೋಳಿಗೆಯೆಂಬುದುಂ, ಲಂಪಟ ಶಬ್ದಕ್ಕಾದ ಲಂಬಳಮೆಂಬುದುಂ ಜಟಕ್ಕೆ ಸಂದೇಹಂ (ಶಬರ. ೨೨ ವೃತ್ತಿ), ಬಸವಳಿದಂಗ ಹೋಳಿಗೆ ಮೂ[ಪಾಠಾಂ. ಮೂ]ಡುವ ಕಾಲ್ಬೀಸುವಾಂತು ತೀಡುವ ಸುಯ್ಯುಬ್ಬೆ ಗೊಂಡೊಡಲಿಂದವೆ ಪಾಡಳಿದನು ಸುಕುಮಾರ (ಸುಕಾಂ. ೯-೩೩). 'ಹೋಳಿಗೆಮಡೆ' ಪರಾ. [ < ಸಂ. ಪೋಟಕ, ಸ್ಫೋಟಕ ]

**ಪೋಳಿಸು** 'ಪೋಟಿಸು' ನೋ.

**ಪೋಳ್ಕು$_1$** 'ಪೋಟ್$_1$' ನೋ.

**ಪೋಳ್ಕು$_2$** 'ಪೋಟ್$_2$' ನೋ.

**ಪೋಳ್ಗಳೆ**, ಹೋಳುಗಳೆ (ಕ್ರಿ). ೧. ತುಂಡುಮಾಡು ; ಕತ್ತರಿಸಿ ಹಾಕು ; ಕಡಿ : ಹರಿಗಳು . . . ಪಿಗೆ ಪೋಳ್ಗಳೆಯಲೆರಗಿದವಮವು ಮಸ್ತಕವ (೦೦೦. ೯೨-೬೪). **ಹೋಳುಗಳೆ** : ೧. ಹೋಳುಗಳೆದನು ಸುಭಟ ನಿಟ್ಟೆಲು ಮೂಳೆಯನು (ಕುಮಾರವ್ಯಾ. ೦೩-೯೦) ; ಕರಾಳಕುಜವನು ಮುಸಲ ಹತಿಯಲಿ ಹೋಳುಗಳೆದನು (ಜೈಮಿ. ೦೦-೩೭-೦೪) . ೨. ನಾಶಮಾಡು ; ಧ್ವಂಸಗೊಳಿಸು : ಆಯುಷ್ಯವನು ರವಿ ಹೋಳುಗಳೆಯನೆ ಹುಮರಾಜ್ಮುಖರಾದವರನು (ಜೈಮಿ. ೨-೨-೩). ೩. ನಾಶವಾಗು ; ಧ್ವಂಸವಾಗು : ಕಾಳಗದೋಳರಡುದಳದಲ್ಲಿ ವಂದಕ್ಷೋಣಿ ಹೋಳುಗಳೆದುದು ಮೂರುಸಂಜೆ ಯೊಳು (ಕುರಂಗ. ೩೭-೦). ೪. ಛಿದ್ರವಾಗು ; ತುಂಡಾಗು : ಸೀಳಿ ಬಿದ್ದಿದ್ದವು ಮದೇಭಘಟಾಳಿ ಘೋಟಕನಿಕರ ನೆಲದಲಿ ಹೋಳುಗಳೆದಿರ್ದವು (ಕೊಡಿಡ. ೩-೬-೦೩). [ಪೋಳ್$_2$ (<ಪೋಟ್$_2$) + ಕಳೆ$_1$]

**ಪೋಳ್ಗುಟ್ಟು**, ಹೋಳುಗುಟ್ಟು (ಕ್ರಿ) . ತುಂಡಾಗುವಂತೆ ಹೊಡೆ ; ಸೀಳು : ಇದು ತಮಸ್ತೋಬ ಪರ್ವತವ ಪೋಳ್ಗುಟ್ಟುವತಿಭದಾರಂ (ಶಾಸ. II, ೯೯೯ ಕಟುಕಾಹಾರಾಯಕ್ಷರಾಜ). **ಹೋಳುಗುಟ್ಟು** : ಬೆಟ್ಟಿಯ ಮದ್ರಕವಾಟವ ನೃಪ ಹೋಳುಗುಟ್ಟಿದಬ್ಬನು ನಿಮಿಷದೊಳು (ಜೈಮಿ. ೨೯-೬೨).

[ಪೋಳ್$_2$ (< ಪೋಟ್$_2$) + ಕುಟ್ಟು$_1$]

**ಪೋಳ್ಗೆಯ್** (ಕ್ರಿ). ಸೀಳು ; ಹೋಳುಮಾಡು : ನಿಮ್ಮುವಂ ಸೀಳಿ ಪೋಳ್ಗೆಯ್ದು ಕುದಿಸುತ್ತಿಹರು (ಶಬರ. ೯-೩೦).

[ಪೋಳ್$_2$ (< ಪೋಟ್$_2$) + ಕೆಯ್$_1$]

**ಪೋಳ್ದಟ್ಟೆ** (ನಾ). (ವೀಳ್ಯದೆಲೆ ಹಾಗೂ) ಚೂರಡಕೆಯನ್ನು ಇಟ್ಟಿರುವ ತಟ್ಟೆ : ಫಣಿವಲ್ಲಿಯ ಪರ್ಣ ಸ್ವರ್ಣವರ್ಣದಿ ಕೀಪಣಿಸಿರ್ದ ಕತ್ತುರಿಯ ಮಣಿಯೆನಲುರ್ದಿದ ಪೋಳ್ದಟ್ಟೆಯ ನಿಟ್ಟೆಸೆದರ್ ತಳಿಗೆಂಬ ನಳಿ (ಜಗನ್ನಾ. ೩೦-೩೩). [ಪೋಳ್$_2$ (<ಪೋಟ್$_2$) + ತಟ್ಟೆ]

**ಪೋಳ್ದುಂಬು** (ಕ್ರಿ). ಅಡಕೆಯ ಹೋಳನ್ನು ತುಂಬು : ಕೋಮಲವದೆದ ಬಂದುಗವಾಯ್ದು ಪೋಳ್ದುಂದಿ ಭ್ರಾಮಕವಡೆದು ಚುಂಬಿಸಿದ (ಶೂಚಕ. ೦೩-೩೮). [ಪೋಳ್$_2$ (<ಪೋಟ್$_2$) + ತುಂಬು$_1$]

**ಪೋಟ್$_1$**, ಪೋಳ್$_1$, ಪೋಳ್ಕು$_1$, ಹೋಳ್, ಹೋಳ್ಕು (ಕ್ರಿ). ೧.

ಕತ್ತರಿಸು ; ತುಂಡುಮಾಡು : "ಪೋಟ್_ವಿದಾರಣೇ. ಖಂಡೇ ಚ. ವಿರಚನಾರ್ಥೇ ಚ (ವಿರ್ಪಡಿಸು)" (ಶಮಂದ) ; ಅಚ್ಚಗೊಂಡದೊಳಗುರ್ವಿಸೆ ಸೀಳಿಸಿ ಮೂಣದಿಕ್ಕೆ ಪೋಟ್ದುರ್ವಗಿ ಮಾಡಿ ತಾಳಿಸೆ ಸುರುಳ್ಕಿನೆಗಂ ನೆಜಿ ಸಾಯಂ (ಶಾಂತಿಪು. ೭-೯೩) ; ಎನ್ನನೊಡೆದ ನಿನ್ನ ಕಾಲ್ಗಳನೆನ್ನ ಮಕ್ಕಳು ಮಾನುವೊಂದಾಗಿಯುಮೇನಾಗಿಯುಂ ಸೀಳ್ದು ಪೋಟ್ದು ತಿಂಬೆವು (ಸುಕುಮಾ. ೩-೬೪) ; ಎಟ್ಟಟ್ಟ ಪೆಣ್ಗಳನ್ ಪೋಟ್ದುನ್ (ಅಕ್ಕಾ. ೩-೯೩). ೨. ಎರಡು ಭಾಗ ಮಾಡು; ಸೀಳು : ಪುಲಿ ಬಂದು ಪಾಯ್ದು ಬಸಿಱು ಪೋಟ್ದು ನೆತ್ತರಂ ಕುಡಿದು ತಗಲೆಯಂ ಪೊಟ್ದು ತಿಂಬಾಗಳ್ (ವಡ್ಡಾ. ೯೬-೧೯); ಚಲದಿಂ ಕೃಷ್ಣೆಯ ಕೇಶಮಂ ಪಿಡಿದ ನಿನ್ನಿಂದಾದಬಲ್ ನಿನ್ನುರಸ್ಥಲಮಂ ಪೋಟಿದೆ ಪೋಪುದಲ್ತು (ಪಂಪಭಾ. ೧೨-೦೯೩); ನಸುನೆನೆದೊಯ್ಯನುಳ್ಳಲರೆ ಪೋಟ್ದಲೆ ಕಂಪದೆ ಕೂಡೆ ಕಂಪಿನಿಂ ರಸವೊಸರ್ವಂತಿರೊಕ್ಕ ನಱುಂಬು ಲಕಂ ಕುರುಳಿಂ ಕಟಲ್ದು ಬಿರ್ದೆಸೆವಲಗಂ ಮದಾಳಿ ಮೊರೆದೆರ್ದೆಜಿಗುತ್ತಿರೆ (ಅಜಿತಪು. ೩-೦೬). ೩. ಸೀಳಿಹೋಗು ; ಬಿರಿ : ನಡುವೆನೊಡೆದಿರ್ಬಗಿಯಾಗಿ ಪೋಟ್ದು ನೀರೇಱದ ನಾಳಿಪುಕ್ಕೊಡದು ಸೌಳಿನೆ ಸೀಳ್ದುದು ದೋಣಿಪೋಪಿನಂ (ಸುಕುಮಾ. ೫-೦೬); ಬಱುಕ್ಕಿಯ್ಯಂ ನೆತ್ತಿ ಪೋಟ್ಬಂತಿರೆ ಪೊಡೆಯಲ್ (ಚಕಳು. ೯-೩೮) ; ಪೋಟ್ದುಂ ಬಲ್ಗಿರಿಗಳಂದು ಪಡುಪ್ರಹತಿಯಿಂ (ಶಬ್ದಾಸು. ೧೬೩ ವೃತ್ತಿ). ೪. ಒಡೆ : ಪುಡಿಪುಡಿಮಾಡು ; ಹುಡಿಗುಟ್ಟು : ಪೊದೆದಡ್ಡಾನಶ್ಶಲೇನ್ನಪಾನ್ಪೋಟ್ದು (ಎಕ. II, ೦೨೦ ; ಸು. 700); ತಿರ್ಱಲ್ದಾಡುವೆನೋ ಕುಲಾದ್ರಿಚಯಮಂ . . . ಬ್ರಹ್ಮಾಂಡದಮಂ ಪೋಟ್ಟಿನೋ (ಪಂಪ. ೭-೩೪). ೫. ನಾಶಮಾಡು ; ಧ್ವಂಸಮಾಡು : ನಿಜಾಯುದ್ಧಬಾಲದಿಂದಿಟ್ಟನನೇಕದುರ್ಗಚಯಮಂ ಪೋಟ್ಟಂ ರಿಪು ವ್ರಾತಮಂ (ಚಕಂ. ೩-೯). **ಪೋಲ್₁**: ೧. ಬಡೆನೀಶಾ ನಿಮ್ಮ ಪಾದಾಬ್ಜಮ ನೆಲೆಲೆ ಬಿಡಂ ಸೀಳ್ದೊಡಂ ಪೋಳ್ದೊಡಂ (ರಕ್ಷಾಶ. ೯೮) ; ಓರಂತೆ ಹತ ನೊಲಿದು ತನ್ನ ಧಾಳಾಕ್ಷಿಯಿಂ ಕೋರಕಿಡಿಯಂ ಬಿಡಲಾಕ್ಷಣಂ ರುಧಿರಮಂ ಪೀರಿ ಮುರಿದಜನ ಶಿರಮಂ ಪೋಳ್ದುದು (ಕವಿಪು. ೧೬-೩೩) ; ಓರಿಯ ಪಾಪಂ ಪಿಡಿದ ಕರಿಯಂ ಸೀಳ್ದ ಸಿಂಹಮಂ ಪೋಳ್ದ ಶರಭಮಂ ಮಾಲಾ ಕಾರದಿಂ ಸಾಲ್ಗೊಂಡೆತ್ತಿ ನಭೋಮಂಡಳಕ ಜಿಗಿದೊಗೆದು ನೆಗೆವ ಭೇರುಂಡಂ ಗಳಿಂ (ದಾಪಿಪ. ೫-೫೫ ವ). ೨. ವೈರಿವೀರಾವನೀಶ್ವರವಕ್ಷಸ್ಥಳಮಂ ಸ್ವಖಡ್ಗ ನಖರವ್ಯಾಘಾತದಿಂ ಪೋಳ್ದು (ಪ್ರಕಂ. ೦೯೩೯, ೦.೦೬ ; 1174) ; ಜಾತಿಜಾಯಿಲಂಗಳಂ . . . ಉಂಗುಟದಿಂ ಧಾಳ್ಗುಂಬರಂ ಪೋಳ್ದೆತ್ತಿ ತನಗಿದಿರಂ ಕಾಣದೆ ಹೆಕ್ಕಳದಿಂ ಕೆಕ್ಕಳಿಸಿ ನೋಡುವರ್ಪ್ಪುಲಂಗಳುಮಂ (ಪಂಚರ. ೦೬-೦೮). ೪. ಸೀಳ್ದಿನಿಳೆಯಂ ಕೀಳ್ದಿನದ್ರಿಗಳನರ್ಣಮಂ ತೋಳ್ದಿನೇಳಬ್ಧಿಯಂ ಪೋಳ್ದಿನಿದಿರಾದರಂ . . . ಬ್ರಹ್ಮಾಂಡಮಂ ಪೋಳ್ದೆಂ (ಕವಿಪು. ೩೦-೦೦).
**ಪೋಳು₁** : ೨. ಸುರಹೊನ್ನೆಯ ಜಿನನಂ ಸೀಳುತ್ತಂ ಅರುಹ ಪ್ರತಿಮೆಯುನುಱಿ ಪೋ[ಪಾಠಾಂ. ಹೋ]ಳುತ್ತಂ (ಅಠಕ. ೫. ೧೪೯-೨೯) ; ಮೃತ್ಯುಂಜಯಂ ಗಜಾಸುರನ ಪೋಳುವ ತೆಱದಿ ನೆತ್ತಿಯಂ ಸೀಳ್ದು (ಶಾಶಕ. ೦೬-೬೯). **ಹೋಳ್** : ೧. ಬಳಗಳೆವ ಹೋಳ್ವ ಸೀಳ್ವಾಜಿಸುವ ನೆಜಿ ಸುಲಿವ ಖಳರ ಕಳಕಳದ ಕೋಳಾಹಳದೊಳಾ ರೌರವಂ ಭಯಂಕರವಾದುದು (ಸಿದ್ಧರಾ. ೮-೨೯). **ಹೋಳು₁** : ೧. " ಹೋಳು . . . ತುಂಡುಮಾಡು " (ಗಿಂಣಾಪು. ೩೩೯). ೪. ಎಳುಕಡಲೊಡಲೆಡೆಯಲಡಗಿರ್ದ ಶೈಲಮು ಹೋಳು ವರು ವಡಬಶಿಖಿ ತಣ್ಣಿತನೆ ಕೋಪಮಂ ತಾಳುವರು (ಸಿದ್ಧರಾ. ೦-೨೦); ಅದರ 'ರೂಕ್ಷಶಿಖರಾಗ್ರಮನ್ . . . ಮಿಂಚುರಿಯ ಪೊಯ್ಲುಂದೆ' ಹೋಳುವಾಗ ತೂರುವಾಗ ಅದು ಭೂಗರ್ಭದಾಳಕ್ಕೆ ಉರುಳುವುದು (ಐಷ್ಕೃಕೃ ' iv. ಶ್ರಾವಿಕತ ಷಟ್ಕಾಕ್ಕೆ). ೫. ಎನ್ನ ಜನ್ಮದ ಕೋಳಮಂ ಹೋಳಿದನೆನುತ ಸಲ್ಲೀಲೆ ಸದ್ಭಾವ ದಲಿ ನುತಿಸಿದ ದೇಶಿಕೋತ್ತಮನನು (ಪಟ್ಟುಕು. ೨-೩೩) ; ಸಚರಾಚರಂಗಳ ಜಾಲವನು . . . ಅವನಾಜ್ಞೆಯಲಿ ಹೋಳುವನು ಹಣಗಿಚ್ಚನಲಿ ಹರನು (ಪಂಗಿ. ೬-೩-೨೩). ೬. ನಾಶವಾಗು ; ಹಾಳಾಗು : ಅಳು ನಗುವನು ಸಪಜ ನೆಚ್ಚಿ ಬಾಳುವೆಯ ಹೋಳುವೆಮು ? (ಕಠಾಶ. ೬೦-೦೦).

[ದೇ. ‖ತಮಿ. ಪೋಟ್; ತೆಲು. ಪೋಂಚು; ಪರ್ಜಿ. ಪೋಟ್]

**ಪೋಟ್₂**, ಪೋಳ್₂, ಪೋಳು₂, ಹೋಳು₂ (ನಾ). ೧. ತುಂಡರಿಸಿದ ಭಾಗ ; ಚೂರು ; ತುಂಡು : ಕರ್ಪೂರಸಮ್ಮಿಶ್ರಮಪ್ಪ ನೆಲವತ್ತಿಯಡಕೆಯ ಪೋಟ್ಗಳುಮಂ . . . ಬ್ರಹ್ಮಯ್ಯಂಗೆ ಕೊಟ್ಟು (ವಡ್ಡಾ. ೭೬-೨೩) ; ನೀ [ಪಾಠಾಂ. ಸೀ]ಳ್ದ ಮಾವಿನ ಪೋಟಂದದ ಕಣ್ಗೆ ಬಾಷ್ಪಜಲಮಂ ಚಿತ್ತಕ್ಕೆ ಸಂತಾಪಮಂ ನಿಸಗಂ ಮಾಡಿದನಾವನಾತನೆ ವಲಂ ಗಂಧೇಭವಿದ್ಯಾಧರಂ (ಪಂಪಭಾ. ೪-೬೪); ಒಂದು ಪೋಟನಿತಱೊಳಿರ್ದುದೊಂದು ಕಡಿ ಪೀಠ ದೊಳಿರ್ದುದು (ಸಮಸ. ೯-೮). **ಪೋಳ್₂**: ೧. ಸಿರವೊಡೆದೊಡೇ ನಾಯ್ತು ಸರಸಿರುಹಸಂಭವಂ ಧುರದರಿವ್ರನೆ ಬಿರಿದ ಮಸ್ತಕದ ಪೋಳ್ಗಳಂ ವರಚತುರ್ವದನಂಗಳಂ ಮಾಡಿಕೊಂಡು . . . ಹರಿಗೆ ಮಾಱಾಂತು (ಕವಿಪು. ೦೬-೯೦); ಆ ಕುಮುದ್ವತಿ ನರೇಂದ್ರಮಸ್ತ್ರದ ಪೋಳ್ಗಳನೊಂದು ಗೂಡಿ ಪಿಡಿದು (ಕೃ ಐಚಾ. ೨೬-೬೬); ಪರಿಮಳವರದ ಪೂಗೀಫಲದ ಪೋಳ್ಗಳ . . . ಸರಸವಾಡುತಲೀಯಲು (ಅಪಂಚಾ. ೦-೩-೫೦). ೨. ಬಿರುಕು ; ಸೀಳು : 'ಪೋಳರೆ' ಪರಾ. ೩. ಅಡಕೆಯ ಚೂರು : ಚುಂಬಿಸ ಲಾಣ್ಮನ ಬಾಯೊಳು ಪೋಳ್ಗಳ ತುಂಬಿದರೆಗಳಿಗೆಯೊಳು (ಪೋಠಕ. ೩೨-೦೦). ' ಪೋಳ್ದುಂಬು ' ಪರಾ. **ಪೋಳು₂** : ೧. ಉಡಿದು ಬಿದ್ದಿದೆ ಮಣಿಮೇಖಲೆ ಸಿಡಿಲುಱಿ ಹೊಡೆದ ರೋಹಣಪರ್ವತದ ನಿಡುಗಲ್ಲ ಪೋಳಂತೆ (ಶುಠಾಪಾಂ. ೩೯-೯೨). **ಹೋಳು₂** : ೧. ಎತ್ತಿದವುಭುತ ಕೋಪದಲಿ ಹಿಡಿದೊತ್ತಿ ಸೀಳಲು ಹೋಳು ನಿಮಿಷಕೆ ಹತ್ತಿ ಮೂಡಲಿಸುತ್ತ ಬರುತಿರೆ ಭೀಮ ಬೆಱಗಾದ (ಕುಮ್ಮಾಸ. ೬೦೩. ೨-೦೪೦); ರಕುತದ ಜಗಿಯ ಜೋರಿನಲೆಸೆದವಾ ಹೋಳೆರಡು ರಕ್ಕಸಿಯ (ಕೊರಠಾ. ೫-೦ ೨೩); ವೈರಿ ಸುಭಟನ ಗದೆಯ ಗದೆಯಲಿ ಹೊಯ್ದು ನುಗ್ಗೊತ್ತಿದನು ಸಾವಿರಹೋಳೆನಲು ಬಿದ್ದುದು ಧರಿತ್ರಿಯಲಿ (ಐಠಾಗ. ೦೦-೩೯-೦೬). ೩. ಹೋಳು ಬೆಲ್ಲದ ಕರ್ಪೂರಗಳ ತಿಂಬ ಗಯ್ಯಾಳರ ತಹುದೆಚ್ಚರಿಯ (ಕುಠಾಪಾಂ. ೨೯-೯೯) ; ತಿಳಿದು ನೋಡಲು ಮಧ್ಯರಾತ್ರಿಯನೊಂದರಗಳಿಗೆಯ ಮಾಡಿ ಕತ್ತುರಿಯ ಗುಂಗೆ ಸೇರಿದ ಹೋಳ ಕಾಂತನ ಎರಹಸ್ತನೊಳಿಕ್ಕಿ ಕೊಟ್ಟಳಿತ್ತಲಿ (ಕೋಠಕ. ೦೬-೩೬).

**ಪೋಳ್ಮಾಡು**, ಹೋಳು ಮಾಡು, **ಹೋಳ್ಮಾಡು** = ೧. ಸೀಳು ; ಸಿಗಿ : ಇಡುಗಟ್ಟಿಗೆಯೊಳಿಟ್ಟು ಬಿಡದೆ ಗರಗಸದಲ್ಲಿ ನಡುನೆತ್ತಿಗಳನಂದು ಪೋಳ್ಮಾಡುವಾಗಳದರ್ಱ ಬಿಡಿಸುವರ ಸತಿಸುತರು (ಗುರುಬೋ. ೦-೬೦) ; ಹುಡುಗನು ಕೋಪದಿಂದ ಗೊಂಬೆಯನ್ನು ಎಸೆದು ಎರಡಾಗಿ ಹೋಳು ಮಾಡಿ ಬಿಟ್ಟನು (ಆಧು). ೨. ಒಡೆದು ಹಾಕು ; ಪುಡಿ ಮಾಡು : ವಿಜಯಾರ್ಧಶೈಲದೊಳಿಕ್ಕಿದ ಪಡಿಯಾ ನಾಳೆ ಹೋಳ್ಮಾಡಿ ಬಡುವೆನೊಣಗಿದ ಬರಹಾಳೆಯನೊಡೆಯ ಹೊಯ್ಯಂತೆ (ಕಠಕ. ೨೯-೫). **ಪೋಟಾಗು**, **ಹೋಳಾಗು** = ೧. ಸೀಳಂ ; ಬಿರಿ : ಪೋಟಾದತ್ತನ್ನ ಹೃದಯಮೆಂದು ಲಲಿತಾಂಗಿ (ಉಲ್ಕಟಿ. ೭-೬೯) ; ನಾಗನಿವಾಸಮೆಂಬ ಮರಂ ಶಶಕಂ ಮೃಗವೇದೆನುತ್ತೆ ಪೋಟಾಗಿರಿತಿರ್ಪುದೇನದು ವಿಚಾರಿಸಿ ನೋಡು ಪಡಿಂದುಮಂಡಲಾ (ಕಠಾಠಕ. ೦-೩೬); ಹಿಳಿದ ಲೋಹದ ಸೀಸಕಂಗಳ ಬಲಿಸಿದರು ಹೋಳಾದ ಕವಚವ ಹೊಲಿಸಿದರು (ಕುಮ್ಮಾಠ. ೫-೩೬). ೨. ಚೂರಾಗು ; ತುಂಡಾಗು : ಇಳೆಗವನ ತಲೆಯನು ಬಿಳಿಕ್ಕಿದನ ಕವಿಲ ಸಾವಿರಹೋಳಹುದು (ಕುಮ್ಮಾರಿಸ್ಯ. ೦೯-೯೦) ; ಎರಡು ಹೋಳಾಗಿ ಬಾಳೆಯ ಕಾಯ ಸಂಬಳಿಸಿ . . . ಸಂಭಾರಮಂ ತುಂಬಿ (ಸೂಠಕಾ. ೯-೬೨). **ಹೋಳಡಕೆ** = ತುಂಡಂಮಾಡಿದ ಅಡಕೆ; ಅಡಿಕೆಯ ಚೂರು: ಹೋಳಡಕೆ ಬಿಱ ಎಲೆ ನೀಪ ಕೆಂಪ್ಪಿರಿ ಕೊಪ್ಪಿರಿ (ಪಾಶತ. ೦೬೩)

[ < ಪೋಟ್$_1$. / ತಮಿ. ಪೋಟ್ ; ಮಲ. ಪೊಳಿ, ಪೊಳುಕ್ಕ; ತುಳು. ಪೂಳು ]

**ಪೋಟ್$_3$, ಹೋಟ್** (ನಾ). ೧. ಮರದ ಪೊಟರೆ ; ಡೊಗರು : ಕಳ್ಳರಂತೆಗೆಯ್ವೆವೆಂದೊಡಂಬಟ್ಟು ಕಳ್ಳಲ್ಲಿಯೆಲ್ಲಮೆಂಟನೆಯ ಭಾಗಮಂ ಮರದ ಪೋಟಿೊ[ಹಾಕಾಂ. ಪೊಟಲೊ, ಪೊಳೊ]ಳಿಟ್ಟು ದಿವಸಕ್ಕಂ ಪೋಪರ್ (ಕರ್ಣಾ.ಕಾ. ೨೦-೬); ಪೆರ್ಮರಂಗಳ ಪೋಟ್ಗಳೊಳಗಣಿಂದಮೊಗೆದ ಕೇಸುರಿಗಳ ಬಳಗದಂತೆ (ಹಂಕಕಾ. ೦೦-೬೦ ವ): ಪೋಟ್ಗಳೆಡೆಯಲ್ಲಿ ಕವಲ್ಗಳ ಯಲ್ಲಿ ಸುತ್ತಲುಂ ಗಿಳಿಗಳ ಹಿಂಡುಗಳ್ ನೆರೆದು ಕೂಡಿಯುಮಲ್ಲಿ ಸಹಸ್ರಪಮಂ ನಿರಾಕುಳಮನುರಾಗದಿಂ ಪಲವುದೇಶದೊಳಿರ್ಪುವು ಬಂದು ಭೂಪತೀ (ಜಾದಂಪೂ. ೧೨೬). ೨. ಪೊಳ್ಳು; ಜಳ್ಳು: ‘ಪೋಟ್ಮರ’ ಪರಾ. **ಹೋಟಿಸ್**: ೧. “ಕೋಟರವಾಗಿ ಕೂಟವೊನೆ ಹೋಟಕಕ್ಕೃ [ಹಾಕಾಂ. ಪೊಟಲಕಕ್ಕೃ]” (ಬುಂಗರಾ. ೬೨-೩). ‘ಪೋಟ್$_1$’ ಪರಾ.

[ದೇ.ಶ ತಮಿ. ಪುಟ್ಟು, ಪೊಳ್ಳು]

**ಪೋಟಿಲ್, ಪೋಳಲ್, ಹೊಳಲು$_1$** (ನಾ). ಮರದ ಡೊಗರು; ಪೊಟರೆ; ಕೋಟರ: “ಕೋಟರಃಹ್ನಯಂ ತಾಂ ಪೋಟಲ್” (ಪದ್ಮಕೋ. ೬೦-೩); ಪೋಟಲ ಪಾವಡರೆ . . . ಮರದ ಮೊದಲೊಳ್ ಬೇಟಲ್ ನಿಲ್ವಂತೆ ನಿಶ್ಚಲಂ ಮುನಿ ನಿಂದಂ (ಶಾಂತಿಪು. ೯-೦೦೬); ಬಸಿಱನಪ್ಪಿದ ಮಱಿಗಳುಂ ಹೊತ್ತು ಸಾಲ್ಗೊಂಡು ಮರದ ಪೋಟಲ್ಗೆ ಸಾರ್ದುವು ಕೋಡಗದ ಹಿಂಡು (ಅನಂಪು. ೯-೦೬ ಕಗಳ); ಪೋಟಲೊಳಗಿರ್ದ ದುಷ್ಟ ವ್ಯಾಳಂ ಮುಳಿದೆನ್ನ ಕೈಯನೌಡಲ್ (ದಶಕು. ೨ ೦೦೦). **ಪೋಳಲ್**: ಪೋಳಲೊಳಗಣ ಬಾಲವಿಹಂಗಂಗಳನೆಱಂಕೆಯೊಳಱಂಕಿಕೊಂಡು ಪಾಱ ಲನುವಾಗಿ ತೂಱಲ್ಗೊಂಬಿನೊಳಿರ್ಪ ವಿಹಂಗಸಂಕುಳದಿಂದತಿಸೌಂದರ್ಯಮಂ . . . ಒಳಕೊಂಡಿರ್ಪುದು (೧೦೪. ೦-೦೨೯ ಕ). **ಹೊಳಲು$_1$**: ಪ್ರಳಯ ಫಣಿಮುಣಲ ಹೊಳಲೊಳಗೆ ಕೈಯ ನೀಡಿ ದಾಡೆಯುಂ ಮುಱಿಯ ಬಡಿವಂತೆ (ಹಕಾ. ೯-೦೦): ಬೆರಣಿಯ ಶಿಖಿಯುಂ ಹುಣಿಸೆಯ ಹೊಳ ಲೊಳಗಿಕ್ಕುತ ಕ್ಷಣದೊಳ್ಪೊಕ್ಕೀದನಸುವನಾ ಮಹರಾಜಂ (ಪಕ್ಷಕಾ. ೩-೩೯).

[ಪೋಟ್$_3$ + — ಅಲ್$_3$./ತಮಿ. ಪೊಳ್ಳಲ್, ಪುಟಲ್]

**ಪೋಟಲ್ಗೋರ** ‘ಪೊಟಲ್ಗೋರ’ ನೋ.

**ಪೋಟಿಸು, ಪೋಳಿಸು, ಹೋಳಿಸು** (ಕ್ರಿ). ೧. ಚೂರು ಮಾಡು : ತುಂಡು ಮಾಡು : ಈಗಳೆ ಕೊಂದು ಪೋಟಿಸಿ ತಾಳಿಸಿ ಗಮ್ಮನೆ ನಿಮ್ಮ ನೆಮ್ಮ ಮಾಲಿನಿಯರ್ಗೆ ಬಲಿಗಃಡುವೆಂ (ಜಕೂಶ್ಯ. ೦೦೨-೯). **ಪೋಳಿಸು**: ೧. ಕಂಡನಾ ಸಮಯದೊಳ್ ಕಮಲಜಂ ಪರಕರದೆ ಖಂಡಿಸಿದ ತನ್ನುತ್ತ ಮಾಂಗಮಂ ರುಧಿರಜಲಮುಂಡು ಪೋಳಿಸಿದ ನಯನಾಗ್ನಿಯಂ ಪೊಗಳುತಿಹ ಸಕಲವೃಂದಾರಕರನು (ಕಂಪು. ೦೬-೦೬). **ಹೋಳಿಸು**: ೨. ಎರಡಾಗಿ ಭಾಗಮಾಡು : ಸೀಳು : ನರಗ ಕೊಟ್ಟನು ಹೋಳಿಸಿದ ಕರ್ಪೂರದ ವೀಳೆಯವ (ಕುಮಾರ್ರಾ. ೦೦-೬೬) ; ನಾರು ಬಲಿಯದ ಹುಣಸೆಕಾಯ ಮಾವಿನಕಾಯನಾರೈದು ಕೆತ್ತಿ ಕಿಱಿದಾಗಿ ಹೋಳಿಸಿ (ಸೂಪಶಾ. ೬-೦೦). ೩. ಮುರಿಯುವಂತೆ ಮಾಡು ; ಒಡೆಯುವಂತೆ ಮಾಡು : ರದನದಿ ಹೋಳಿಸುವ ಖಾತಿಯಲಿ ನಾನಾವಿಧದ ಕೊಲೆಗಳಲಿ ಕಾಲನೊಗಡಿಸಿ ಕೊಲುವ ಮದಗಜಜಾಲಗಳೊಳಾರೋಹಕರು ಕೆಂಗೋಲ ಮಳೆಗಱೆ ದಾರಿದರು ನೃಪಸೇನೆಯೆರಡಱಲಿ (ಕುಮಾರ. ೯.೬೩).

[ಪೋಟ್$_3$ + — ಇಸು$_3$]

**ಪೋಟ್ಗಡಿ, ಹೋಳುಗಡಿ** (ಕ್ರಿ). ಚೂರಾಗುವಂತೆ ಕತ್ತರಿಸು,– ತುಂಡರಿಸು : ‘ಪೋಟ್ಗಡಿವೋಗು’ ಪರಾ. **ಹೋಳುಗಡಿ** : ಹೋಳುಗಡಿದನು ಹತ್ತುಮಿಱಿದ ಜೋಲುತಿರ್ದುದು ಕರುಳು ಪನಸಗೆ (ಶಾಂತ. ೨೯-೯೯). [ಪೋಟ್$_3$ + ಕಡಿ$_3$]

**ಪೋಟ್ಗಡಿವೋಗು** (ಕ್ರಿ). ಚೂರಾಗುವಂತೆ ಕತ್ತರಿಸಿ ಹೋಗು ; ಛಿದ್ರ ವಾಗು : ಅಂದು ಚಂಡಿಕೆಯ ಕೂರ್ವಾಳಿಂ ಪೋಟ್ಗಡಿವೋದ ಮಹಿಷಾಸುರನ ಬಿರಿವೊಡೆಯಿಂ ಸುರಿದ ದಂಡೆಗರುಳ್ಗೆ ಪಾಸಟಿಯಪ್ಪ ಅರೆಜರಿದ ಜಾದಿನ ಕೋಡುಮಟ್ಟನೊತ್ತಗೊಂಡು ಸಿಂಧೂರವಿಲಿಪ್ತಮದಸಿಂಧುರಗಂಡಮಂಡಲ ದೊಂದು ಪಾಂಗಿನಿಂ ತೋರ್ಪ ತಟ್ಟಲಿಂ (ರಾಜಶೇ. ೬೨-೦೯).

[ಪೋಟ್ಗಡಿ + ಪೋಗು$_1$ (< ಪೋ$_1$)]

**ಪೋಟ್ಗಿದಱ್** (ಕ್ರಿ). ಹೋಳಾಗು ; ಬಿರಿ : ಬೇಗಿ ಬೆಳೆಮು ಕೆಂಬಿತ್ತು ಗಳಿಂ ಪೋಟ್ಗಿದರ್ದಿರೆ ದಾಳಿಂಬದ ತಾಟ್ಗಳ್ ನಿಟ್ಟಪರ ದಿಟ್ಟಗಿಟ್ಟಳ ಮೆಸೆಗುಂ (ಕರ್ಣಾಟ. ೦೯೩ ಪ್ರಾ.ಕಾ.). [ಪೋಟ್$_3$ + ಕೆದಱ್]

**ಪೋಟ್ಮರ** (ನಾ). ಟೊಳ್ಳಾದ ಮರ ; ಜಳ್ಳಾಗಿರುವ ಮರ : ಅಲ್ಲಿ ತನ್ನಂ ಕಾಣಲೊಡನಿರ್ಮಡಿಸಿದ ಶೋಕದಾವಾನಲನೆರ್ದೆಯೊಳ್ ಪೋಟ್ಮರದ ಕಿರ್ಚಿನಂತಳುರೆ ತಳಮಳಗಾಗಿ (ಶಾಂತಿಪು. ೦-೯೯ ವ); ಪಟುಗಟ್ಟಿದಟಲ ಕಿರ್ಚ ಪೋಟ್ಮ [ಹಾಕಾಂ. ಪೊಳ್ಮ]ರದ ಕಿರ್ಚಿನಂತೊಳಗೊಳಗಳುರೆ (ಅರ್ಥನೀ. ೬-೦೨ ಕ). [ಪೋಟ್$_3$ + ಮರ$_1$]

**ಪೌಂಚಾಯಿಸು** (ಕ್ರಿ). ೧. ಸೇರುವಂತೆ ಮಾಡು ; ತಲುಪಿಸು : ವೀರ ರಾಜೇಂದ್ರವಡೆಯಾರವರು ಸರಕಾರದ ಫೌಜಿಗೆ ರಸದು ವಗೈರೆ ಸಾಮಾನು ಪೌಂಚಾಯಿಸಿ ಕುಂಪನಿ ಕೆಲಸಕ್ಕಾಗಿ ಮೆಹನತ್ತು ಮಾಡಿದರಿಂದಾ (ರಾಜೇಂದ್ರ. ೨೬೦). ೨. ನ್ಯಾಯವಿರುದ್ಧವಾದ ಬೋಧನೆಯನ್ನು ಮಾಡು : (*).

[ಪೌಂಚ್$_0$ (p ← ಹಿಂ. ಪಹುಂಚಾನಾ) + — ಇಸು$_3$ ]

**ಪೌಂಚಿ, ಪವುಂಚಿ, ಪೊಹಚಿ, ಪೋಂಚಿ, ಪೋಚು$_1$, ಪೋಚಿ$_1$, ಪೋಹಚಿ, ಪೌಚಿ** (ನಾ). ಮುಂಗೈಗೆ ತೊಡುವ ಒಂದು ಬಗೆಯ ಆಭರಣ : “ಆವಾಪಕಃ, ಪಾರಿಹಾರ್ಯಃ— ೨ ಸೂಡಗವೆಂಬ ಕಡಗ, ಚೂಡಾಲುಂ, ಪೌಂಚಿ . . . ಮುಂತಾದ ಹಸ್ತಾಭರಣ” (ಶಬ್ದಾರ್ಥ. ೨೦೦); ಓಲೆ ಮೂಗುತಿ ಕೊಪ್ಪು ಮೇಲೆ ರನ್ನದ ಕುಸುಮ ಕೀಲು ಚಿಂತಾ ಪೌಂಚಿ ಕಡಗ ಹೊನ್ನಬಳೆಯು (ಕರೀ. ೦೩೯-೯); ಮುಂಗೈಯಲ್ಲಿರುವ ರತ್ನ ಖಚಿತವಾದ ಪಟ್ಟಿಕಡಗ, ಅದರ ಮೇಲೆ ಮುದ್ದಾದ ಪೌಂಚಿ (ಕುಪ್ಪ. ೯೦). **ಪವುಂಚಿ** : (*). **ಪೊಹಚಿ** : ಕೈಯೊಳಗಿನ ಆರುತೊಲೆಯ ಪೊಹಚಿ ಕಳೆದನು (ಕುಂಬಾಯ. ೯-೦೯೬). **ಪೋಂಚಿ** : “ಪಾರಿಹಾರ್ಯ—ಮುಂಗೈ ಆಭರಣ; ಪೋಂಚಿ” (ಗಂಗಾಕು. ೨೦೬). **ಪೋಚು$_1$** : ಮುಂಗೈಗೆ ಕಟ್ಟಿದ ಪೋಚು, ಬೆರಳಿಗೆ ಹಾಕಿದ ಉಂಗುರಗಳು (ಅಕೋಳ. ೬). **ಪೋಚಿ$_1$** : ಮುತ್ತಿನ ಪೋಚಿಯು ಕೈಯ್ಯಾಗ . . . ಹೂವಿನ ಜರದಂಗಿ ರವಿಶಂಕರ ತೊಟ್ಟಿಹನು (ಸಿದ್ಧಪು. ೦೯-೯೨); ಒಂದು ಕೈಯ ಮುಂಗೈಯಲ್ಲಿ ರಿಸ್ಟ್‌ವಾಚು, ಇನ್ನೊಂದು ಕೈಯಲ್ಲಿ ಪೋಚಿ . . . ಧರಿಸಿದ್ದನು (ಸಪೋ. ೯೩). **ಪೋಹಚಿ**: ಕೈಯೊಳಗಿದ್ದ ರತ್ನಜಡಿತ ಪೋಹಚಿಯನ್ನು ಕೊಟ್ಟು ಅವರನ್ನು ಹಾದಿಗೆ ಹಚ್ಚಿದನು (ಕುಂಬಾರ. ೦೦೩). **ಪೌಚಿ** : ಕೈಗಳಿಗೆ ಹಾಕಿದ ಚಿನ್ನದ ಪಾಚಿ ತಿರುವುತ್ತಾ ಅಕ್ಕಿಗೆ ನರಸಮ್ಮ ‘. . . ಬೆಳಗ್ಗೆ ಬಸ್ತೀನಿ ಅಂತ ಹೇಳೂ ಅಂದ್ರು’ ಎಂದಳು (ಸರಸ್ಮ. ೦೩).

[←ಹಿಂ. ಪಹುಂಚಿ ; ಮರಾ. ಪೋಹಂಚೀ, ಪೋಂಚೀ, ಪೌಂಚೀ./ ತಮಿ. ಪೋಞ್ಚಿ ; ತುಳು. ಪೌಂಚಿ, ಪವಚಿ ; ತೆಲು. ಪೋಂಚಿ]

**ಪೌಂಡರೀಕ** (ಗು). ೧. ಕಮಲಗಳಿಗೆ ಸಂಬಂಧಿಸಿದ. ೨. ಕಮಲ ಗಳಿಂದ ರಚಿತವಾದ. (ನಾ). ೩. ಒಂದು ಬಗೆಯ ಕುಷ್ಠರೋಗ. ೪. ಹನ್ನೊಂದು ದಿನಗಳವರೆಗೆ ಮಾಡುವ ಸೋಮಯಾಗ : ವಾಜಪೇಯ ಪೌಂಡರೀಕಾದಿ ಮಹಾಕ್ರತುಗಳಂ ನಿತ್ಯೇಷ್ಟಿ ಕಾಮ್ಯೇಷ್ಟಿ ಮೊದಲಾದವುಗಳಂ . . . ಕ್ಷತ್ರಿಯನಾದೊಡೆ ಅಧಿಕೃತಮಾಗಿ ಮಾಳ್ಪುದು (ಪರೀಕ. ೧೯೦). [ಸಂ.]

**ಪೌಂಡರ್ಯ** (ನಾ). (ಕಣ್ಣಿನ ರೋಗಗಳಿಗೆ ಔಷಧಿಯಾಗಿ ಬಳಸುವ)

ಬಿಳಿನೈದಿಲೆಯ ಗಡ್ಡೆ: "ಪ್ರಪೌಂಡರೀಕಂ, ಪೌಂಡರ್ಯಂ—೨ ಪುಂಡರೀಕ ನೆಂಬುವ ಗ್ರಂಥದ್ರವ್ಯದ ಹೆಸರುಗಳು . . . ಇದು ಬಿಳೀನೈದಿಲೆಗಡ್ಡೆ" (ಸಿದ್ಧೌಷಿ. ೦೯೦). [ಸಂ.]

**ಪೌಂಡಿಮನೆ** (ನಾ). ತೊಂಡುದನಗಳನ್ನು ಹಿಡಿದು ಕೂಡುವ ಸ್ಥಳ; ಕೊಂಡವಾಡ: ರಾಮಯ್ಯನು ತನ್ನ ತೋಟದಲ್ಲಿ ಮೇಯುತ್ತಿದ್ದ ತೊಂಡುದನವನ್ನು ಹಿಡಿದು ಪೌಂಡಿಮನೆಗೆ ಹಾಕಿದನು (ಲೂಹ). [< ಪೌಂಡು + ಮನೆ]

**ಪೌಂಡು** (ನಾ). ೧. ರೋಮನ್ ಪದ್ಧತಿಯ ತೂಕದ ಒಂದು ಏಕಮಾನ: ಒಂದುದಿನಕ್ಕೆ ೨೦ ಪೌಂಡು ಒಣಮೇವಿನ ಈಡುಣಿಸು ತಿನ್ನುವುದಕ್ಕೆ ೮೦ ಪೌಂಡು ನೀರು ಬೇಕೆಂದು ತಿಳಿದುಬಂದಿದೆ (ಗೋಣ್ಣಾ ಶ. ೩೬). ೨. ಇಪ್ಪತ್ತು ಷಿಲಿಂಗುಗಳ ಬೆಲೆಯುಳ್ಳ ಒಂದು ನಾಣ್ಯ: ಬ್ರಿಟಿಷರ ಒಂದು ಬೆಳ್ಳಿಯ ನಾಣ್ಯ (= ೧/೨೦ ಪೌಂಡು) (Shilling-ಶಿಲಿಂಗ್); ಮೊದಲಿನ ನಾಲ್ಕು ವರುಷಗಳಲ್ಲಿ ಒಂಬೈನೂರು ಪೌಂಡುಗಳ ಸಾಲವು ನಮ್ಮ ಆಫೀಸಿಗೆ ಬಿದ್ದಿತು (ಶಂಕಪ. ೨೦೯). ೩. = ಪೌಂಡಿಮನೆ: ಸದರಿ ಡಿಸ್ಟ್ರಿಕ್ಟ್‌ಮ್ಯಾಜಿಸ್ಟ್ರೇಟರುಗಳು ಪೌಂಡಿನಲ್ಲಿ ಕೂಡುವ ದನ ಕರುಗಳಿಗೆ ನೀರು, ಮೇವು ಕೊಡುವ ಏರ್ಪಾಟನ್ನು ಮಾಡುವರು (ಗ್ರಾಮಾಶ. ೦೧೯). [← ಇಂ. Pound]

**ಪೌಂಡ್ರ** (ನಾ). ೧. ಒಂದು ಬಗೆಯ ಕಬ್ಬು; ಪಟ್ಟೆಗಳಿರುವ ಬಿಳಿಯ ಕಬ್ಬು. ೨. ಭೀಮನ ಶಂಖ. ೩. ಆಯಾ ಮತೀಯ ಲಾಂಛನವಾಗಿ ಧರಿಸುವ ತಿಲಕ, ಬೊಟ್ಟು ಮುಂತಾದ ಗುರುತು. ೪. ಒಂದು ದೇಶ ಮತ್ತು ಆ ದೇಶದ ಜನ. [ಸಂ.]

**ಪೌಂಡ್ರಕ** (ನಾ). ೧. ಒಂದು ಬಗೆಯ ಕಬ್ಬು. ೨. ಭೀಮನ ಶಂಖ: ಹಳಚಲನುವಾಯುಭಯಸೇನಾಜಲಧಿ ಕಳಕಳ ಮಿಗಲು ಮಾರುತಿ ಮೊಳಗಿದನು ಪೌಂಡ್ರಕವ ಭೂಪನನಂತವಿಜಯವನು (ಕುಮ್ಮಾಶೀ. ೬-೦). ೩. ಪುಂಡ್ರವಂಶದ ವಸುದೇವನೆಂಬ ರಾಜನ ಮಗ: ಪೌಂಡ್ರಕ ನನಂದೀತ ಕೊಂದನು ಹಂಸ ಡಿಬ ರನೀತನೊರಸಿದನರಸ ಚಿತ್ರ್ಯಸು (ಕುಮ್ಮಾಉ. ೯-೩೯). ಪುಂಡ್ರವಂಶದ ವಸುದೇವನೆಂಬ ರಾಜನ ಮಗನಾದ ಇವನು ವಸುದೇವಪುತ್ರ ಶ್ರೀಕೃಷ್ಣನಂತೆಯೇ ಕೀರ್ತಿವಂತನಾಗಬೇಕೆಂಬ ದುರಾಸೆಯಿಂದ ಶ್ರೀಕೃಷ್ಣನಂತೆಯೇ ಶಂಖಚಕ್ರಗಳನ್ನು ಧರಿಸಿದ್ದು, ಶ್ರೀಕೃಷ್ಣನ ಮೇಲೆ ಯುದ್ಧಕ್ಕೆ ಹೋಗಿ ಸೋತು ಹತನಾದನು. ೪. ಪೌಂಡ್ರಕದೇಶದ ಜನ. [ಸಂ.]

**ಪೌಗಂಡ** (ಗು). ೧. ಹುಡುಗುತನದ; ಬಾಲಿಶ. (ನಾ). ೨. ಐದರಿಂದ ಹದಿನಾರುವರ್ಷಗಳೊಳಗಿನ ವಯಸ್ಸು; ಬಾಲ್ಯ. ೩. ಹುಡುಗ; ಬಾಲಕ: ಕಷ್ಟಿಸಿದಿರಲ್ಲ ನಾವು ಹುಟ್ಟಿದಂದಿಂದಿಗೆ ನೀವು ದುಃಖಸಂಸಕ್ತವಾಗಿ ಹೋದ ಕಷ್ಟಬಡಿಸಿದನು ನಿಮ್ಮ ದಿಷ್ಟ್ಯಾ ಹತನಾದ ನಮ್ಮ ಪುಟ್ಟ ಪೌಗಂಡ ಕೈಶೋರತನದಿ (ಕೃಸಅ. ೬೩-೨೬). [ಸಂ.]

**ಪೌಚಿ** 'ಪೌಂಚಿ' ನೋ.

**ಪೌಜಿಕ್ಕು** (ಕ್ರಿ). ಸೇನೆಯನ್ನು ಸಿದ್ಧಪಡಿಸು; ದಂಡನ್ನು ಸಜ್ಜುಗೊಳಿಸು: ಮುಂತಿದಬಲದಿ ಪೌಜಿಕ್ಕಿದ ಚಂದ್ರವಸಂತಮಂದಾನಿಲಾದಿಗಳು ಪಂತದ ಬಿನ್ನಹವನು ಮಾಡಿದರು ರತಿಕಾಂತಂಗೆ ಕೈ ಮುಗಿದೊಡನೆ (ಕೋಹಕ. ೬-೨೦). [ಪೌಜು (<ಫೌಜು) + ಇಕ್ಕು]

**ಪೌಜು** 'ಫೌಜು' ನೋ.

**ಪೌಜುಗಂದಾಯ** (ನಾ). ಸೇನೆಯ ಸಲುವಾಗಿ ಹಾಕುವ ತೆರಿಗೆ,—ಕರ: ಪೂರ್ವದಿಂದ ನಡೆದುಬರುತ್ತಿರುವ ದೇವದಾಯ ಬ್ರಹ್ಮದಾಯ . . . ರಕ್ತಕೊಡಗೆ ಮುಂತಾದುವೇನೂ ಹೆಚ್ಚು ಕಡಿಮೆಯಾಗದಂತೆಯೂ ಆವೊಂದು ಈ ಪೌಜುಗಂದಾಯಕ್ಕೆ ಒಳಸೇರದಂತೆಯೂ ನಮ್ಮ ಕರಣಿಕರು ಎಚ್ಚರಿಸ್ತಿರಬೇಕು (ಐಚಿಗಂ. ೩೬-೨೪). [ಪೌಜು (<ಫೌಜು) + ಕಂದಾಯ]

**ಪೌಜುದಾರ** 'ಫೌಜುದಾರ' ನೋ.

**ಪೌಜುದಾರಿ** 'ಫೌಜುದಾರಿ' ನೋ.

**ಪೌಜೊಡೆ** (ಕ್ರಿ). ಸೈನ್ಯವನ್ನು ಭೇದಿಸು,—ಚೆದರಿಸು: ಪೌಜೊಡೆಯದೆ ಪೊಜಗೆ ನಿಂದು ಪುಯಿಲೊಳ್ ಪೊಲಂಬುಗೆಟ್ಟುದಂ ನಟ್ಟಿಸಿಯೊಡಿಪೋದರ ಪೆಂಡಿರೋಲೆಯುಟ್ಟಿದುದು (ಕಳವಂ. ೯೨-೦೬). [ಪೌಜು(<ಫೌಜು) + ಒಡೆ₁]

**ಪೌಜೊಡ್ಡು** (ಕ್ರಿ). ಪಡೆಯನ್ನು ಎದುರಿಸು; ಸೇನೆಯನ್ನು ಒಡ್ಡು: ದುರುಳರಕ್ಕಸ ಜಂಭನಾಜ್ಞೆಯಿಂ ದಾನವರ ಬಲವಿಲ್ಲದೆ ಪೌಜೊಡ್ಡಿತು (ಕಂಕು. ೯೬-೩). [ಪೌಜು (<ಫೌಜು) + ಒಡ್ಡು₁]

**ಪೌಡರ್** 'ಪೌಡರು' ನೋ.

**ಪೌಡರು, ಪೌಡರ್** (ನಾ). ಮುಖ ಮತ್ತು ದೇಹಕಾಂತಿಯನ್ನು ಹೆಚ್ಚಿಸಿ ಆಹ್ಲಾದಕರವಾಗಿರುವಂತೆ ಮಾಡುವ ಸುಗಂಧಯುಕ್ತವಾದ ಪುಡಿ: ನಿನಗೇಕೆ ಬಣ್ಣ ಪೌಡರುಗಳ ಅಳಿಯಾಸೆ ಸಹಜಾಧರಾಮೆ ನೀನೆಸೆ (ಕಂಶ್ರಜೀ. ೯೬-೬೨); ಒಳಗಡೆ ಕನ್ನಡಿ, ಪೌಡರು, ತುಟಿಯ ಕೆಂಬಣ್ಣ . . . ಇವಿಷ್ಟಿವೆ (ಕೃವಾಳ. ೦೨). **ಪೌಡರ್**: ಸ್ನೋ, ಪೌಡರ್ ಬಳದುಕೊಂಡು . . . ರೇಸ್ ಕುದುರೆಯಂತೆ ನಡೆಯುವುದು ಅವಳಿಗಿನ್ನೂ ಬಂದಿರಲಿಲ್ಲ (ಕುಂಳಾತ. ೯). [← ಇಂ. Powder]

**ಪೌಣಪಟ, ಪೋಣಪಟ್ಟು** (ನಾ). ನಾಲ್ಕನೆಯ ಮೂರು ಭಾಗ; ಮುಕ್ಕಾಲು ಭಾಗ: ಎಷ್ಟು ಕಿಮ್ಮತ್ತಿಯ ಮಾಲು ರವಾನೆ ಮಾಡಲ್ಪಟ್ಟಿ ದಿಯೋ ಅದಕ್ಕಿಂತ ಕಡಿಮೆ ಬೆಲೆಯು ಅಂದರೆ ಪೌಣಪಟ್ಟು (೩/೪) ಅಥವಾ ಅದಕ್ಕೂ ಕಡಿಮೆ ಬೆಲೆಯ ಹುಂಡಿಗಳು ಇರಬೇಕಾಗುತ್ತವೆ (ಹುಂಡಿವ್ಯಾ. ೨೬೨). **ಪೋಣಪಟ್ಟು**: ಯಾವದು ಕಥೆ ವಜನ ಇದ್ದೀತು ಅದರ ಸೂಶೀ ಮಣಾ ಮಾಡಬೇಕು, ಅಂದರೆ ಅದರ ಪೋಣಪಟ್ಟು ಮಾಡಬೇಕು (ಹುಂಡಿವ್ಯಾ. ೦೬೨). [← ಮರಾ. ಪಾಊಣ್‌ಪಾಟಾ]

**ಪೌಣಿಗೆ** 'ಪವಣಿಗೆ' ನೋ.

**ಪೌಣೆ** 'ಪಾವುಣ' ನೋ.

**ಪೌತವ** (ನಾ). ಒಂದು ಬಗೆಯ ಅಳತೆ: "ಪೌತವ_ವಲ ಕರ್ಷಾದಿ ಗಳಿಂದಳೆವ ಅಳತೆ" (ಶಾಶಂ. ೩). [ಸಂ.]

**ಪೌತಿ, ಪವುತಿ, ಪೋತಿ, ಪೋತಿ** (ನಾ). ಸಾವು; ಮರಣ: ಪೌತಿಯಾದ ಒಬ್ಬ ಮನುಷ್ಯನಿಗೆ ಉಂಟುಮಾಡಿದ ಕೆಡಕುಗಳಿಗೋಸ್ಕರ ದಾವಾಮಾಡುವ ದಕ್ಕೂ ಮಾಡಲ್ಪಡುವುದಕ್ಕೂ . . . ಒಂದು ವರ್ಷ (ಗ್ರಾಮಾಶ. ೦೬೨). **ಪವುತಿ**: (೬). **ಪೋತಿ**: ಪುತಳಾಬಾಯಿ ಕಾಲರಾ ಬಂದು ಪೋತಿ ಆದಳು (ಗ್ರಾಮಾಹು. ೦೩೦). **ಪೋತಿ**: ಎದೀ ಬಡಕೊಂಡು ನಾನಾ ಪೋತಿ ಆದಾ ಅಂತ ಶಪ್ಪತ್ ಮಾಡಿ ಹೇಳತೀನಿ ರಾವಸಾಹೇಬ (ಗ್ರಾಮಾಹು. ೦೨೬). [← ಅರ. ಹಿಂ. ಮರಾ. ಫೌತ್]

**ಪೌತಿತಃಖ್ತೆ** (ನಾ). ಸತ್ತ ವ್ಯಕ್ತಿಯ ವಾರಸುದಾರರು ಮತ್ತು ಅವರ ಹಕ್ಕಿನ ವಿವರಣೆಗಳನ್ನು ಒಳಗೊಂಡ ಪಟ್ಟಿ: ಪೌತಿತಃಖ್ತೆ ಕೊಡದಿರುವುದು, ಕೊಟ್ಟರೂ ಅದನ್ನು ಯಾರು ಬಂದು ವಿಚಾರಿಸಿದರೂ, ಪೌತಿ ಆದವರನ್ನು ಬಿಟ್ಟು ಬೇರೆ ಯಾರನ್ನು ಕೇಳಿದರೂ, ಅದು ಪತ್ತೆ ಆಗದಿರುವುದು—ಇವು ನನ್ನೂರ ಶಾನುಭೋಗರ ಕಿತಾಪತಿಗಳು (ನನ್ನೂರು. ೦೯೬). [ಪೌತಿ + ತಃಖ್ತೆ (<ತಖ್ತೆ)]

**ಪೌತ್ರ** (ಗು). ೧. ಮಕ್ಕಳಿಗೆ ಸಂಬಂಧಿಸಿದ. (ನಾ). ೨. ಮಗನ ಅಥವಾ ಮಗಳ ಮಗ; ಮೊಮ್ಮಗ: "ದೌಹಿತ್ರಃ, ನಪ್ತಾ—ಈ ೨ (ಮ)ಗಳ ಮಗಂ; ಪೌತ್ರನುಂ ಅಹು" (ಕಶಾಜು. ೯೬-೩೬೦); ಅಂಗಮನ ಧನ ರಾಜ್ಯ ಪುತ್ರ ಪೌತ್ರ ಕಳತ್ರ ಮುಖ್ಯಸ್ವಸ್ವೈಶ್ವರ್ಯವ ಹಿಂಗದೇ ಕೊಡದೆ ಹಿಮ್ಮೆಟ್ಟಿದಡೆ ಎನ್ನ ವ್ರತ ಭಂಗವಾದೀತು (ಶ್ರೀಕಶಾ. ೦೯-೯);

ಅರ್ಜುನನು ಆ ಸೈನ್ಯಗಳಲ್ಲಿ ಪಿತೃಗಳು, ಪಿತಾಮಹರು . . . ಪೌತ್ರರು, ಸ್ನೇಹಿತರು, ಶ್ವಶುರರು, ಆಪ್ತರು ಇವರನ್ನು ನೋಡಿದನು (ಭಾಕಥ್ಯ. ೦೦೨). [ಸಂ.]

**ಪೌತ್ರಕ** (ನಾ). = ಪೌತ್ರ ೨ : ಎಲ್ಲಿ ಪೌತ್ರಕ, ಎಲ್ಲಿಗೆ ಹೊರಟು ಹೋದೆ? (ಶಾಕಟ. ೩೯). [ಸಂ.]

**ಪೌತ್ರಿ** (ನಾ). ಮಗನ ಅಥವಾ ಮಗಳ ಮಗಳು; ಮೊಮ್ಮಗಳು: "ನಪ್ತ್ರೀ, ಪೌತ್ರೀ—೨ ಸುತಾತ್ಮಜಾ—ಮಗನ ಮಗಳ ಹೆಸರುಗಳು. ಮಗಳ ಮಗಳಿಗೂ ಹೆಸರು. ಮೊಮ್ಮಗಳು, ಮೊಮ್ಮಗನು" (ಸಿದ್ಧಾಂತಿ. ೦೩೩). [ಸಂ. ಪೌತ್ರೀ]

**ಪೌತ್ರಿಕ** (ಗು). ೧. ಮಗ ಅಥವಾ ಮೊಮ್ಮಗನಿಗೆ ಸಂಬಂಧಿಸಿದ. (ನಾ). ೨. ಮಗಳ ಮಗ. [ಸಂ.]

**ಪೌದ್ಗಲಿಕ** (ಗು). ೧. ಭೌತವಸ್ತುವಿಗೆ ಸಂಬಂಧಿಸಿದ; ಭೌತಿಕ ವಿಷಯಂದ. ೨. ಸ್ವಾರ್ಥ: ದ. (ನಾ). ೩. [ಜೈನ] ಅಜೀವತತ್ತ್ವಗಳಲ್ಲಿ ಒಂದಾದ ಪುದ್ಗಲದಿಂದ ಜನ್ಮವಾದುದು; ಪುದ್ಗಲಕ್ಕೆ ಸಂಬಂಧಿಸಿದುದು: ನೆಳಲುಂ ಕತ್ತಲೆಗಳು ಪೌದ್ಗಲಿಕಗಳೆಂದು ಹೇಳಿದುದು ನ್ಯಾಯ ಮತಕ್ಕೆ ವಿರೋಧವಾದುದು (ಕೃಕಠ. ೦). [ಸಂ.]

**ಪೌನಃಪುನ್ಯ** (ನಾ). ಮತ್ತೆ ಮತ್ತೆ ಆಗುವಿಕೆ; ಪುನರಾವರ್ತನೆ. [ಸಂ.]

**ಪೌನರುಕ್ತ್ಯ** (ನಾ). [ಕಾವ್ಯಮೀ] ವಾಕ್ಯದೋಷಗಳಲ್ಲಿ ಒಂದು; ಹೇಳಿದಂದನ್ನೇ ಹೇಳುವುದು; ಪುನರುಕ್ತಿ: ಕರಿಕಳಭಮನೆ ಶಿರಶ್ಶೇಖರಮನೆ ನವಪುಷ್ಪಮಾಲೆಯನೆ . . . ಪೌನರುಕ್ತ್ಯಮಾಗದು ವಿಶೇಷ ಸಂಭಾವನೆಯೊಳ್ (ಕಾವ್ಯಾವ. ೯೬೨). [ಸಂ.]

**ಪೌನರ್ಭವ** (ನಾ). ಪುನರ್ವಿವಾಹಿತೆಯಲ್ಲಿ ಹುಟ್ಟಿದವನು; ಎರಡನೆಯ ಮದುವೆಯಾದವಳಲ್ಲಿ ಹುಟ್ಟಿದವನು. [ಸಂ.]

**ಪೌನು** 'ಪವನು' ನೋ.

**ಪೌಮುದ್ದಿಬೋಯ** (ನಾ). ಒಬ್ಬಾತನ ಹೆಸರು: ಪೌಮುದ್ದಿಬೋಯಕ್ಕ ಕಣ್ಣಿಲ್ಲಕಗೋತ್ರ ದೇವಶರ್ಮ್ಮಣ (ಇಅ. VII, ೦೩೩-೩೬; ೦೩೩). [?]

**ಪೌರ** (ಗು). ೧. ನಗರಕ್ಕೆ ಸಂಬಂಧಿಸಿದ: 'ಪೌರಕಾರ್ಯ', 'ಪೌರಜನ' ಪರಾ. ೨. ಪೂರ್ವದಿಕ್ಕಿನಲ್ಲಿರುವ. ೩. ಪೂರ್ವದೇಶದ. ೪. ಪೂರ್ವಕಾಲದ. (ನಾ). ೫. ನಗರದಲ್ಲಿ ವಾಸಿಸುವವನು; ಪಟ್ಟಣಿಗ. ೬. ನಾಗರಿಕನ ಹಕ್ಕುಬಾಧ್ಯತೆಗಳನ್ನು ಪಡೆದವನು; ನಾಗರಿಕ: ಗುರುಶ್ರೇಣಿಯವರಿಗೆ, ವಿಪ್ರರಿಗೆ, ಪೌರರಿಗೆ . . . ಅವರವರ ಅಂತಸ್ತು, ಅಧಿಕಾರ, ಗೌರವಗಳಿಗೆ ತಕ್ಕಂತೆ ಸುಖಾಸನಗಳನ್ನು ಹಾಕಲಾಗಿತ್ತು (ಶಾಂತಲಾ. ೦೬). ೭. ಪುರ; ಪಟ್ಟಣ; ನಗರ: ಪೌರವಿನಿರ್ಗತಿಯಾಗಿ ಮನೋರಥಮನೆ ಕಣ್ಬು ತೆಜದಿನಿದಿರೊಳ್ ಕಂಡಳ್ ನಾರದನಂ (ಜಗಹ. ೦೦-೨೩). ೮. ಒಂದು ಬಗೆಯ ಸಂವಾಸನೆಯ ಹುಲ್ಲು: "ಕತೃಣಂ, ಪೌರಂ . . . ರೌಹಿಷಂ—೬ ಕಾಚೀಹುಲ್ಲು" (ಸಿದ್ಧಾಂತಿ. ೦೫೦). [ಸಂ.]

**ಪೌರಂದರ** (ಗು). ೧. ಇಂದ್ರನಿಗೆ ಸಂಬಂಧಿಸಿದ,-ಸೇರಿದ. (ನಾ). ೨. ಇಂದ್ರ: ಭೈರವರಾಜನ ಧೈರ್ಯಮ ನೋಡಲೆಂದಾರ್ಯಮರಾಜಾಗ್ನಿನೇತ್ರ ಪೌರಂದರಗೆ ಪೇಳೆ (ಕೃಕಠ. ೬-೦೬೬). ೩. ಇಂದ್ರಾಸ್ತ್ರ: ಎನಗೆ ವಿದ್ಯಾಧನವು ಧನಮಪ್ಪುದಱಿಂ ದಿವ್ಯಾಸ್ತ್ರಂಗಳು ದಯೆಗೆಯ್ವುದೆನೆ ವಾರುಣ ವಾಯವ್ಯಾಗ್ನೇಯ ಪೌ[ಶಾತಾಂ. ಪು]ರಂದರಾದಿ ಪ್ರಧಾನಾಸ್ತ್ರಂಗಳು ಕುಡೆ ಕೊಂಡು (ಸಂಕಠಾ. ೨-೯೬ ವ). [ಸಂ.]

**ಪೌರಕ** (ನಾ). ನಾಗರಿಕ: ಅಬ್ಬಾಸಿ ಖಲೀಫರೆಲ್ಲರೂ ಪೌರಕ (ಪಾಂಬ್ಲಿ) ಮತ್ತು ಸೈನಿಕ ಮುಖ್ಯಾಧಿಕಾರಗಳಿಗೆಲ್ಲಾ ಪಾರಸೀಕರನ್ನೇ ನೇಮಿಸುತ್ತಿದ್ದರು (ಇಸ್ಲಾಂಸಂ. ೯೩). [< ಸಂ. ಪೌರಿಕ]

**ಪೌರಕಾರ್ಯ** (ನಾ). ಪ್ರಜೆಗಳ ಕೆಲಸ; ಸಾರ್ವಜನಿಕ ಕಾರ್ಯ: ಎಲೆ ವೇತ್ರವತಿ . . . ನಡಸಿದ ಪೌರಕಾರ್ಯವನ್ನು ಪತ್ರಿಕಾಮುಖದಿಂದ ತಿಳಿಸುವಂತೆ ನಾವು ಹೇಳಿದವೆಂದು ಮಂತ್ರಿಗೆ ತಿಳಿಸು (ಶಾಕುಂತ. ೩೩-೦೦). [ಸಂ.]

**ಪೌರಜನ** (ನಾ). ಪುರದ ಜನ; ನಾಗರಿಕ ವರ್ಗ; ಜನತೆ: ವಿಸ್ಮಿತಾಶೇಷ ಪೌರಜನವಿಲೋಕ್ಯಮಾನಾನೂನನಯನನಾಗಿರ್ದು (ಚಂದ್ರಪ್ರ. ೬-೦೬ ವ); ನೆಱೆ ನಿನ್ನ ನಂಬಿ ನಚ್ಚಿರ್ದ ಪರಿವಾರಮುಂ ಮಱೆದಯೋ . . . ಪೇಳು ಪೇಸಱುಗುಲದ ಎಂದೆಂದು ನುಡಿನುಡಿದು ಮಿಡುಮಿಡನೆ ಮಿಡುಕಿತ್ತು ಪೌರಜನವು (ಜಕಚ. ೯-೩); ಪೌರಜನವೆಲ್ಲ ತೆರಳು ಬೀಡಿಯನೂರ ಹೊಱ ವಂಡಿಸಿದನು (ಕುಮಾ. ೦೦-೨೯). [ಸಂ.]

**ಪೌರತ್ವ** (ನಾ). ಪಟ್ಟಣಿಗನ ಸ್ಥಾನಮಾನ: ಪೌರತ್ವ, ಸರ್ಕಾರ, ಸಂವಿಧಾನ ಮುಂತಾದ ವಿಷಯಗಳನ್ನು ಕುರಿತ ಅಧ್ಯಯನಕ್ಷೇತ್ರ (ಸಿವಿಕ್ಸ್) (ಕಹಿಕೋ. XI. ೨೩೩). [ಸಂ.]

**ಪೌರಧರ್ಮ** (ನಾ). ೧. ಪ್ರಜೆಯಂ ಪಾಲಿಸಬೇಕಾದ ಕರ್ತವ್ಯ; ಪ್ರಜಾನೀತಿ. ೨. ಪ್ರಜೆಯ ಹಕ್ಕುಬಾಧ್ಯತೆಗಳನ್ನೂ ಕರ್ತವ್ಯಗಳನ್ನೂ ಕುರಿತ ಶಾಸ್ತ್ರ: ಪೌರಧರ್ಮವನ್ನು ಕಲಿತರೂ ಸತ್ಪ್ರಜಾಜೀವನವನ್ನು ಅವರಲ್ಲಿ ಅಭ್ಯಾಸಕ್ಕೆ ತರುತ್ತಿಲ್ಲ (ಶಿಕ್ಷ. ೦೩೦). [ಸಂ.]

**ಪೌರನೀತಿ** (ನಾ). ೧. ನಾಗರಿಕನು ಪಾಲಿಸಬೇಕಾದ ಕಟ್ಟಳೆ. ೨. ಪೌರರ ಹಕ್ಕುಬಾಧ್ಯತೆ, ಕರ್ತವ್ಯ ಮೊದಲಾದುವನ್ನು ವಿವರಿಸುವ ಶಾಸ್ತ್ರ: ಈಚೆಗೆ ಪ್ರಜಾಧರ್ಮ, ಪೌರನೀತಿ ಮುಂತಾದ ಹೆಸರುಗಳಿಂದ ಇದನ್ನೊಂದು ವ್ಯಾಸಂಗವಿಷಯವಾಗಿ ಪಠ್ಯಕ್ರಮದಲ್ಲೂ ಸೇರಿಸಲಾಗಿದೆ (ಕಹಿಕೋ. XI. ೨೩೩). [ಸಂ.]

**ಪೌರಲೋಕ** (ನಾ). ಪೌರಜನ; ಪ್ರಜಾಸಮೂಹ: ಪ್ರಭುವಿಂ ಮತ್ತಾಸ್ವಾಮಿ ಹಾವಳದ ಪೆಱಿರೆನುತುಂ ನೋಡೆ ತತ್ಪೌರಲೋಕಂ ವಿಭು ಸದ್ಮಂಗಂಡು ಬಂದಂ ಜನಪಮಯುಸರಸ್ಸಾರಕೇಳೀಮರಾಳಂ (ಚಂದ್ರಪ್ರ. ೬-೦೩೮). [ಸಂ.]

**ಪೌರವ** (ಗು). ೧. ಪುರುವಿಗೆ ಸಂಬಂಧಿಸಿದ. (ನಾ). ೨. ಉತ್ತರ ಭಾರತದ ಒಂದು ದೇಶ ಮತ್ತು ಅಲ್ಲಿಯ ಜನತೆ. ೩. ಪುರುವಂಶದವನು; ಕ್ಷತ್ರಿಯಂ; ಉತ್ಕೃಷ್ಟಮಪ್ಪ ಸರ್ವಾರ್ಥಸಿದ್ಧಿಯಿಂ ಬಂದು ದಱಿಂ ಪೌರವನುಂ . . . ವಿಶ್ವಕರ್ಮವಿಧಾನದಿಂ ಶ್ರೇಷ್ಠನುಮೆನಿಸಿ (ಶಾಪುಂಪು. ೩೩). ೪. ಪುರುರಾಜನ ಮಗ. [ಸಂ.]

**ಪೌರವಧು** (ನಾ). ಪಟ್ಟಣದ ಹೆಂಗಸು: ಸೌರಭಕುಸುಮವಿಹಾರಂ ಪೌರವಧೂಶ್ವಸಿತ ಪದ್ಮಗಂಧವಿಚಾರಂ . . . ಸುಱಿವುದಲ್ಲಿ ಚಾರು ಸಮೀರಂ (ಜಗಹ. ೨-೨೩). [ಸಂ. ಪೌರವಧೂ]

**ಪೌರಸಂಸ್ಥೆ** (ನಾ). ಸ್ಥಳೀಯ ಆಡಳಿತಾಧಿಕಾರವುಳ್ಳ ಸಂಸ್ಥೆ; ನಗರಸಭೆ; ಮುನಿಸಿಪಾಲಿಟಿ: ಪೌರಸಂಸ್ಥೆಯ ಒಡೆತನಕ್ಕೆ, ಆಡಳಿತಕ್ಕೆ, ಒಳಪಡಿಸು (Municipalize ಇಂಕಹ). [ಪೌರ + ಸಂಸ್ಥೆ]

**ಪೌರಸಭೆ** (ನಾ). = ಪೌರಸಂಸ್ಥೆ: ಆ ಹಿರಿಯ ಕಲಾವಿದನನ್ನು ನಗರದ ಜನತೆಯ ಪರವಾಗಿ ಪೌರಸಭೆಯು ಸನ್ಮಾನಿಸಿತು (ಕಾಅ). [ಪೌರ + ಸಭೆ]

**ಪೌರಸ್ತ್ಯ** (ಗು). ೧. ಪೂರ್ವದಿಕ್ಕಿನಲ್ಲಿ ಇರುವ: ಪೂರ್ವಭಾಗಕ್ಕೆ ಸೇರಿದ: ಆ ದಂಡನಾಯಕಂ ಪೌರಸ್ತ್ಯರಾಜನ್ಯಕಸಾಧನಪದನಾಗಿ ಮುಂದಂ ನಡೆಯೆ (ಶಾಂತಿಪು. ೦೦-೦೫೬ ವ); ಪಾಶ್ಚಾತ್ಯಸಂಸ್ಕೃತಿಯು ಭಾರತ ವರ್ಷದಲ್ಲಿ ತೋರಿಕೊಂಡ ಕಾಲದಿಂದ, ಪೌರಸ್ತ್ಯ ಪಾಶ್ಚಾತ್ಯ ಸಂಸ್ಕೃತಿಗಳ ಪರಸ್ಪರ ಘರ್ಷಣೆಯು ಆರಂಭವಾಯಿತು (ಶಾಕಡ. ೩೩೩). ೨. ಪೂರ್ವ

ದೇಶದಲ್ಲಿ ಹುಟ್ಟಿದ. ೩. ಎಲ್ಲಕ್ಕೂ ಮುಂದಿರುವ ; ಮುಂಭಾಗದಲ್ಲಿರುವ. ೪. ಮೊದಲನೆಯ. (ನಾ). ೫. ಮೊದಲನೆಯದು : "ಆದಿಃ, ಪೂರ್ವಃ, ಪೌರಸ್ತ್ಯಃ, ಪ್ರಥಮಃ, ಆದ್ಯಃ —೫ ಮೊದಲನೇದರ ಹೆಸರುಗಳು" (ಶಬ್ದಾಂಶ. ೩೪೪). [ಸಂ.]

**ಪೌರಸ್ತ್ರೀ** (ನಾ). = ಪೌರವಧು : ಪೌರಸ್ತ್ರೀನಯನಪ್ರಭಾಸಹಚರಂ ಹಾರಾಂಶುಮಿಶ್ರೀರ್ಣವಕ್ಷೋರಂಗಸ್ಥಲದೊಳ್ ರಸಾಭಿನಯಮಂ ತೋರ್ಪವೋಲ್ ನೈಗಂ . . . ಬರ್ಪೀ ಮಹಾಧೀರರ್ ಕಾಲ್ಗಡಿಯೊಳ್ ನೃಪಾವಸಥದಿಂ ಬರ್ಪಂದಮಾವಂದದೋ (ಕಂಠೀಕ್ಷು. ೬-೧೮೦). [ಸಂ.]

**ಪೌರಾಂಗನೆ** (ನಾ). = ಪೌರವಧು : ಪೌರಾಂಗನಾವಶೀಕರಣಚೂರ್ಣ ಮಾದುದು ಬಳೆಭಧೂಳೀಚಯಂ (ಕಂಪು. ೧೧-೦೨). [ಸಂ. ಪೌರಾಂಗನಾ]

**ಪೌರಾಣ** (ಗು). ೧. ಹಿಂದಿನ ; ಪೂರ್ವ : ತಾಯೆ ಬಾ ಗಾಂಧಾರಿ ಮನದಲಿ ನೋಯದಿರು ಪೌರಾಣಜನ್ಮದ ದಾಯಭಾಗದ ಭೋಗ ಭಂಗಿಸ ಲೆಳಸಲೇಕಿನ್ನು (ಕುಮ್ಯಾ.ಗ. ೦೨-೩). ೨. ಪುರಾಣಗಳಿಗೆ ಸಂಬಂಧಿಸಿದ. (ನಾ). ೩. ಹಳೆಯದು ; ಪ್ರಾಚೀನವಾದುದು : "ವಿಲಸತ್ಪೌರಾಣ ಮೆಂದೀ ದ್ವಿತಯ ಚಿರಪುನಿಸಿಕ್ಕುಂ" (ಜಾಪಾಳ. ೦೬೩). ೪. ಹದಿನೆಂಟು ಮಹಾಪುರಾಣ ಹಾಗೂ ಉಪಪುರಾಣಗಳಲ್ಲಿ ಒಂದು : "ಕಡುದೀರ್ಘಂ ಜರತಂಗಳಾದಿಕಥೆಯುಂ ಪೌರಾಣ ಶಬ್ದಂ" (ಜಾಪಾಳ. ೦೩೪) ; ಪೌರಾಣಮಂ ಕಲಿವ ಜಪಸಮಾಧಿಯೊಳಿಪ್ಪ . . . ಕಂದಮೂಲಫಲಮಂ ತಪ್ಪ ಚಾರುಮುನಿಪುತ್ರರ್ಗೆ ವಂದಿಸುತ ಬಂದಿದಿರೊಳೊಂದು ಕೊಳನಂ ಕಂಡನು (ಕಕಾ. ೩-೩೩) ; ಜ್ಞಾನವೃದ್ಧರು ವಿಪ್ರರಲ್ಲಿ ಸನ್ಮಾನನೀಯರ್ಶೌರ್ಯವೃದ್ಧರು ಮಾನವೇಂದ್ರರೊಳಧಿಕವಿದು ಪೌರಾಣಸಿದ್ಧವಲೆ (ಕುಮ್ಯಾ.ಶ. ೬-೩೦). ೫. ಪ್ರಾಚೀನವಾದ ಚರಿತ್ರೆಯನ್ನು ಹೊಂದಿದ ಕಾವ್ಯಪ್ರಕಾರ : ಮಹಾಕ್ಷೇತ್ರದೊಡೆಯಂ ವಿರೂಪಾಕ್ಷನೇ ಪೇಳಿಸಿದೊಡ ಸವಿನುಡಿಗಳಿಂದೀ ಚೆನ್ನಬಸವಪೌರಾಣಮಂ ಪೇಳ್ದನಧಿಕೋತ್ಸವದೊಳು (ಚಬಪು. ೦-೩೦). [ಸಂ.]

**ಪೌರಾಣಿ** (ನಾ). ಪುರಾಣವನ್ನು ಹೇಳುವವನು; ಪೌರಾಣಿಕ : ಬಸವನ ಕರುಣದೊಳಂತಾತ ಮುಕ್ತಿಸಂತಸನಾದನಿದು ಪುಸಿಯಲ್ಲ ಪಸುಧೀಶ ಮಹಾದೇವರಾಯ ಕೇಳೆನುತಲಂದುಸುರಿದ ಪರಮಪೌರಾಣಿ (ಪ್ರಭುಲಿ. ೨-೬೯) ; ಇರಲು ಶ್ರೀಕೃಷ್ಣರಾಯನು ಬಂದು ಪೌರಾಣಿ ಪರಿ ಯೋಗ್ಯಾಸನದಿ ಕುಳ್ಳಿರಿಸಲು (ಜಜಮು. ೦೦-೭). [ಸಂ. ಪೌರಾಣೀ]

**ಪೌರಾಣಿಕ** (ಗು). ೧. ಹಳೆಯ ಕಾಲಕ್ಕೆ ಸೇರಿದ ; ಹಿಂದಿನ ಕಾಲದ : ವಸ್ತುತಃ ತಂದೆಯವರು ಒಂದು ವೇಳೆ ತುಂಟ ರೇಗಿ ಹೋಗಿ ಜರ್ಪ ಮಾಡದೆ ಬಿಟ್ಟಿದ್ದರೆ . . . ಈ ಪೌರಾಣಿಕ ಪುತ್ಥಳಿಯ ಜೊತೆಗೆ ನನ್ನ ಮದುವೆ ಆಗಿಹೋಗುತ್ತಿತ್ತು (ಅಕ್ಕಳ. ೪೭೩). ೨. ಪುರಾಣಗಳಿಗೆ ಸಂಬಂಧಿಸಿದ. (ನಾ). ೩. ಪುರಾಣಗಳಿಗೆ ಸಂಬಂಧಿಸಿದುದು : ಆಂಡಯ್ಯನ ಕಾವ್ಯದ ಕಥೆ ಪೌರಾಣಿಕ, ತಿಮ್ಮಪ್ಪಯ್ಯನವರ 'ಸೊಬಗಿನ ಬಳ್ಳಿ'ಯ ಕಥೆಯೂ ಪೌರಾಣಿಕ (ಕಾಂ.ಜೀ. ಹುಟ್ಟು.೩. ೯); ನಾಟಕದ ವಸ್ತು ಪೌರಾಣಿಕವಾಗಿದ್ದರೆ ನಮ್ಮ ಹಿಂದಿನವರ ಜೀವನವನ್ನು ಚಿತ್ರಿಸಿ ನಮ್ಮ ಧರ್ಮ, ಸಂಸ್ಕೃತಿ, ಸಾಹಿತ್ಯ, ಕಲೆ ಇವುಗಳಲ್ಲಿ ಅಭಿಮಾನ ಹುಟ್ಟಿಸುತ್ತವೆ (ಕನ್ನಡ. ೩೯). ೪. ಪುರಾಣಗಳನ್ನು ಓದಿ ಚೆನ್ನಾಗಿ ತಿಳಿದು ಕೊಂಡಿರುವವನು ; ಪುರಾಣಿಕ; ಪೌರಾಣಿಕರ್ಕಳಂದು ಮಹಾರಾಜಂಗುಂದು ಬಿನ್ನವಿಸಿದರ್ ಕುವರಂ ಸೂರಿಪುರಾಣಾರ್ಥಂಗಳನಾರಯ್ದುವಧರಿಪ ವಿಮಲಬೋಧಾಬಲವಂ (ಶಕರಿ. ೯-೦೦೯). [ಸಂ.]

**ಪೌರಾತನ** (ಗು). ಪ್ರಾಚೀನವಾದುದಕ್ಕೆ ಸಂಬಂಧಿಸಿದ : ಕಾಲನನು ಮಾಜುವವರಾರು ಪೌರಾತನಕೃತದುಷ್ಕೃತ್ಯವನು ಗೆಲುವಾತನಿಲ್ಲ (ಕುಮ್ಯಾಕೃಭೀ. ೬-೩೩). [ಸಂ.]

**ಪೌರುಷ** (ಗು). ೧. ಪುರುಷನಿಗೆ ಸಂಬಂಧಿಸಿದ. ೨. ವೀರ್ಯವತ್ತಾದ ; ಗಂಡುತನದ. (ನಾ). ೩. ಪೌರುಷತ್ವ ; ಗಂಡುಸುತನ. ೪. ಶೌರ್ಯ; ಕೆಚ್ಚು ; ಪರಾಕ್ರಮ : "ಪ್ರತಾಪಃ, ಪೌರುಷಂ . . . ಪರಾಕ್ರಮಃ —ಈ ೫ ಪರಾಕ್ರಮಂ" (ಕಬಾಷು. ೦೨೦-೩೦); ಆ ನೃಪನ ಪೌರುಷಮೇಂ ಪೊಗಟಲ್ಕೆವೇಟ್ಕುಮೇ (ಗಾದಂಪು. ೦೩): ಅರಾದೊಡಮೆಚ್ಚಿವರ್ಕನ್ನಾರತ್ನಮನೆಚ್ಚಿದೂಡೆಯಮೆಂಬರೆ ಕುಡುವೆಂತಾರಾಮನೊಳೇಗಂಡೈ ಪೌರುಷಮಂ ತಕ್ಕುದಚ್ಚಿದು ನೆಗಟಲ್ವೇಡಾ (ಕಂಠೀಕ್ಷು. ೫-೫೦); ಕೋಪಪ್ರದರ್ಶನಂ ಪೌರುಷಕೆ ಕುರುಹೆಂದು ಬೆದರಿ ಕಂಬನಿಗರೆದು, ಸೋಲ್ದೊಪ್ಪೆಮ್ಮ ಗೆಲ್ಲಲಾಕೆ! (ಶಸ್ತ್ರಾಂಗ. ೨೩-೬೬೩). ೫. ಮನುಷ್ಯಪ್ರಯತ್ನ,—ಸಾಹಸ : ದೈವಬಲವೇ ಬಲವು ಪೌರುಷವೇನುದು (ಕೌಶಿಕ. ೨೬-೯); ದೈವದ ಹಾಗು ಪೌರುಷದ ಅತ್ಯುತ್ಕೃಷ್ಟ ಸಿದ್ಧಾಂತದಿಂದ ಸಮಾಜವು ದೂಷಿತವಾದಷ್ಟು ಮತ್ತಾವುದರಿಂದಲೂ ದೂಷಿತವಾಗಲಾರದು (ಕ್ರಂಹಿ. ೩೨). 'ಪೌರುಷವಾದಿ' ಪರಾ. ೬. ಒಬ್ಬ ಮನುಷ್ಯನು ಹೊರಬಹುದಾದಷ್ಟು ಹೊರೆ, —ಭಾರ. ೭. ಸುಮಾರು ಐದರಿಂದ ಆರು ಅಡಿಯವರೆಗಿನ ಎತ್ತರ ; ಒಂದಾಳೆತ್ತರ; ಪುರುಷಪ್ರಮಾಣ : "ಆಳೆತಯಲ್ಲಿಯುಂ ಪೌರುಷಮೆಂಬುದು" (ಕಬಾಷು. ೦೩೯-೦೯). [ಸಂ.]

**ಪೌರುಷವಂತ** (ನಾ). ಶಕ್ತಿವಂತ ; ಪರಾಕ್ರಮಿ : ಆ ಸ್ಫುರದ್ರೂಪಿಯೂ ಪೌರುಷವಂತನೂ ಆದ ರಾಜಕುಮಾರನನ್ನು ನೋಡಿ ಅರಸನ ಸಿಟ್ಟು ಇಳಿಯಿತು (ಬುಕಿ. ೪೭). [ಸಂ. ಪೌರುಷವತ್]

**ಪೌರುಷವಾದಿ** (ನಾ). ಪುರುಷಪ್ರಯತ್ನವನ್ನು ಸಮರ್ಥಿಸುವವನು : ಪೌರುಷದ ಯಾವುದೇ ಸಿದ್ಧಾಂತವು ದೈವವನ್ನು ಸುಳ್ಳೆಂದು ಸಿದ್ಧಮಾಡಿದರೆ, ಪೌರುಷವೂ ಕೂಡ ಕಳೆಗುಂದುತ್ತದೆ ಎಂಬುದು ಎಷ್ಟೋ ಪೌರುಷವಾದಿಗಳಿಗೆ ಲಕ್ಷ್ಯಕ್ಕೆ ಬರುವುದಿಲ್ಲ (ಕ್ರಂಹಿ. ೩೦). [ಸಂ. ಪೌರುಷವಾದಿನ್]

**ಪೌರುಷಾಂಗ** (ನಾ). ಶೌರ್ಯದಿಂದ ಕೂಡಿದುದು : ಛೀ ತಿ ಮನದಲಿ ಪೌರುಷಾಂಗದ ಮಾತು ಮುಖದಲಿ ಮುರಿವು ಕಾಲಲಿ (ಕುಮ್ಯಾಕೃಭೀ. ೦೩-೨೩). [ಸಂ.]

**ಪೌರುಷೇಯ** (ಗು). ೧. ಮನುಷ್ಯನಿಗೆ ಸಂಬಂಧಿಸಿದ. ೨. ಮನುಷ್ಯನಿಂದ ಮಾಡಲ್ಪಟ್ಟ; ಪುರುಷಕೃತವಾದ : 'ಜೀವನ' ಶಬ್ದವನ್ನು ನಾನು ಮೂರು ತೆರನಾಗಿ ಕಾಣುತ್ತಿರುವೆನು. ಅದು ಹೀಗೆ : (೧). ಪ್ರಾಕೃತಿಕ ಜೀವನ. (೨). ಪೌರುಷೇಯ ಜೀವನ. (೩). ಸಿದ್ಧ ದೈವೀ ಜೀವನ (ಕ್ರಂಹಿ. ೦. ಕೀಚಕನ ಕಳುಳು). (ನಾ). ೩. ಮನುಷ್ಯನಿಂದ ನಿರ್ಮಾಣವಾದುದು ; ಮನುಷ್ಯ ಕಾರ್ಯ : ಪುರುಷಕೃತವಾಕ್ಯಾರ್ಥ ಸಾಕ್ಷಾತ್ಕಾರವೇ ಆಪ್ತಿ. ವಾಕ್ಯಾರ್ಥವನ್ನು ನೋಡದೆ ಇರುವವನು ಆಪ್ತನಲ್ಲ. ಹಾಗಾದರೆ ವೇದ ಪೌರುಷೇಯವಾಗುವುದು (ಕಂಪೂಜಾ. ೦೧೧). ೪. ಜನಸಮೂಹ ; ಜನರ ಗುಂಪು. ೫. ಪುರುಷವಧೆ. [ಸಂ.]

**ಪೌರುಸ** (ನಾ). ಶಕ್ತಿ ; ಪೌರುಷ : "ಪೌರುಸ—ಪೌರುಷ" (ಶಬ್ದಕೋ. ೨೭); ಷಕಾರಕ್ಕೆ ಆಮಿಷ—ಆಮಿಸ . . . ಪೌರುಷ—ಪೌರುಸ (ಶಬುದ. ೨೩೩ ಕ್ರಮೋ); ಕಂಠೀರವನರಸೇಂದ್ರನ ಮತ್ತ ಪೌರುಸವ ಪೊಗಳುತ ಸಂತೋಷದ ದೆಸೆದೆಸೆಯ ಜನರು ಯಾತ್ರೆಗಂತರಿಸದೆ ತೆರಳಿದರು (ಕಂಠೀಪ. ೦೩-೬೯). [ < ಸಂ. ಪೌರುಷ ]

**ಪೌರುಳಚ್** (ನಾ). ಒಂದು ಊರಿನ ಹೆಸರು : ಅನ್ದರಿಯ ಆಲನ್ದೂರ ಪೌರುಳಚ್ ಅ ಪೆನ್ನ್ಗರಾದ್ಯನೇಕಸವುರಪುಖಮುಖಾಹುತ . . . ಪೂರ್ಬ್ಬದತ್ತ ಈಶಾನ್ಯದಿಶಾ ಅಪಕ್ಷೇತ್ರಮ್ (ಎಕ. V. ೦೩೯-೩ : ೩೧೨). [ ? ]

**ಪೌರೋಗವ** (ನಾ). ಅರಮನೆಯ (ವಿಶೇಷವಾಗಿ ಪಾಕಶಾಲೆಯ)

ಮೇಲ್ವಿಚಾರಕ,—ಅಧಿಕಾರಿ : "ಪೌರೋಗವಃ, ಸೂದಾಧ್ಯಕ್ಷಃ—ಈ ೨ ಬಾಣಸುವೆಗ್ಗಡೆ" (ಹಲಾಯು. ೬೦-೨೭೭) ; "ಪೌರೋಗವಂ ಸೂಪಕಾರರ ಕರ್ತನಕ್ಕು" (ಮಂಗರಾ. ೫೦-೯). [ಸಂ.]

**ಪೌರೋಭಾಗ್ಯ** (ನಾ). ದೋಷವನ್ನು ಎತ್ತಿ ಹೇಳುವುದು ; ಛಿದ್ರಾನ್ವೇಷಣ : ಪೌರೋಭಾಗ್ಯವ್ಯಪೇತಮನಸ್ಕರಕ್ಕರಿಗರಧಿಕಪ್ರಜ್ಞರ್ ಕೆಯ್ಕೊಂಡು ತಿರ್ದುಗೆ ದೋಷವಂ (ಕಾವ್ಯಾ.ಶ. ೯೬೩). [ಸಂ.]

**ಪೌರೋಹಿತ** (ಗು). ೧. ಪುರೋಹಿತನಿಗೆ ಸಂಬಂಧಿಸಿದ. (ನಾ). ೨. ವೇದೋಕ್ತ ವಿಧಿಗಳನ್ನು ಮಾಡಿಸುವವನು ; ಪುರೋಹಿತ : "ಪೌರೋಹಿತಂ ದಂಡನಾಥಂ . . . ತಳವಾಜಿನೇಬವರು ಭೂರವುಣರಲ್ಲಿ ವಿನಿಯೋಗಮುಂ ತಾಳ್ದು ಪದಿನೆಣ್ಬರ್ ಪ್ರಧಾನರನಿಕುಂ" (ಮಂಗರಾ. ೬೦-೦೦) ; ಚಂಡದೈವಜ್ಞನನಧೀಗುಣಮಂಡನನ ಬಹುಶಾಸ್ತ್ರಪಠಣನ ಪಂಡಿತನ ಪೌರೋಹಿತನ ಮಾಡುವುದು (ಕಾವ್ಯಾ.ಉ. ೩-೬೬). [ಸಂ.]

**ಪೌರೋಹಿತ್ಯ** (ನಾ). ೧. ಪುರೋಹಿತನ ಕೆಲಸ,—ವೃತ್ತಿ : ಹರಿ ಪೌರೋಹಿತ್ಯವಂ ತಾಳ್ದೆ ರಾಗಿಸಿ ಶಕ್ರಾಂಗನೆ ದಾದಿಯಾಗೆ...ಜನಂಗಳೆದು ದಂತಾ ನಾಮಕರ್ಮೋತ್ಸವಂ (ಕಾಂತಿ.ಪು. ೦೦-೬೮) ; ಪೌರೋಹಿತ್ಯಾಧಿಕಾರ ಪ್ರಮುಖರಿರದೆ ಬಂದುಂ . . . ದೋಷಂ ಪಾರುತ್ತಂ ಪೋಕುಮೆಂದಾಡುತಂ (ಜಾ.ಚಕ್ರ. ೩-೯-೨೪) : ಸಾವಿರ್ಪ ಆದಾಯ . . . ಕಳೆದ ಹದಿನೆಂಟು ವರ್ಷಗಳಿಂದ ಪೌರೋಹಿತ್ಯದ ಮೂಲಕ ಅವನಿಗೊದಗುತ್ತಿತ್ತು (ಪುಠರು. ೦೯೦). ೨. (ಆಲಂ) ಮುಂದಾಳುತನ : ವ್ಯರ್ಥಪ್ರೇಮದ ವೇದನೆಯ ಪೌರೋಹಿತ್ಯವನ್ನೇ ಶರಶ್ಚಂದ್ರರು ವಹಿಸಿದ್ದಾರೆ (ಶಾರಹ. ೦) ; ಯಾವುದೇ ಒಂದು ಶಾಸ್ತ್ರದ ಅಭ್ಯಾಸದ ವಿಷಯವಾಗಿ ಯಾರೂ ಪೌರೋಹಿತ್ಯ ವಹಿಸುವ ಕಾರಣವಿಲ್ಲ (ಭಾ.ಚಾ.ಕಾ. ೦೯). [ಸಂ.]

**ಪೌರ್ಣಮಾಸ** (ನಾ). ೧. ಹುಣ್ಣಿಮೆಗೆ ಸಂಬಂಧಿಸಿದುದು. ೨. ಹುಣ್ಣಿಮೆ. ೩. ಹುಣ್ಣಿಮೆಯ ದಿನ ಆಚರಿಸುವ ಒಂದು ವ್ರತ. [ಸಂ.]

**ಪೌರ್ಣಮಾಸಿ** (ನಾ). ಪೂರ್ಣಚಂದ್ರನಿರುವ ದಿನ ; ಹುಣ್ಣಿಮೆ : "ಚಂದ್ರಂ ನೆಟ್ಟನೆ ನೆಟಿದು ಬಂಬದಿಂ ಪೂರ್ಣನಾಗೆ ರಾಕಾಖ್ಯೆ ಪೌರ್ಣಮಾಸಿ ಯದಕ್ಕುಂ" (ಶಬ್ದ.ಕೋ. ೦೬-೯) ; ಅನ್ನೆಗಮಾಷಾಢಪೌರ್ಣಮಾಸೀವಾಸರ ಸಾಯಂತನಸಮಯದೊಳ್ ಪರಭಾಗಂಬಡೆದು (ಅಂಪು. ೬-೩೦).
[ಸಂ. ಪೌರ್ಣಮಾಸೀ]

**ಪೌರ್ಣಮಾಸೆ** (ನಾ). =ಪೌರ್ಣಮಾಸಿ : ಸಕವರುಸಂ ಸಾಸಿರದ ನೂಱ ಯಪ್ಪತ್ತನೆಯ ಕೀಲಕಸಂವತ್ಸರದ ಜೇಷ್ಠಸುಧಪೌರ್ಣ್ಣಮಾಸೆ ಸೋಮವಾರ ಸೋಮಗ್ರಹಣದಂದು (ಶಾಪ್ತ. XX. ೨೦೩—೦೭ ; 1248).
[<ಸಂ. ಪೌರ್ಣಮಾಸೀ]

**ಪೌರ್ಣಮಿ** (ನಾ). =ಪೌರ್ಣಮಾಸಿ : ಪಾಡಿಯ ಮೊದಲು ಪೌರ್ಣಮಿಯು ದಮಾವಾಸ್ಯೆ ಕಡೆ ಮಾಡಿ ರವಿಯಾದಿವಾರಂಗಳಕ್ರಮಶ್ವಿನಿಯದಾದಿನಕ್ಷತ್ರ ಪಾಕ್ರಮಂ (ಮಂಗರಾ. ೨೦-೪) ; ಕಂದದೆಂದುಂ ದಿನದಿನಕೆ ಕಳೆಗುಂದದೆಂದುಂ ರಾಹುಬಾಧೆಯೊಳೊಂದದೆಂದುಂ ಪೌರ್ಣಮಿಯು ದಿನದಂದು ಶರದಿಂದು (ಅಕಪು. ೯-೨೮) ; ಸುತನೆ ನೀ ಪೌರ್ಣಮಿಯು ದಿನದಲಿ ಸತಿಯು ಹೊದ್ದಲು ಬೇಡ (ಜೀಮಂತ. ೩-೦೦). [ಸಂ. ಪೌರ್ಣಮಿ]

**ಪೌರ್ಣಮಿಯಾದಿನ** (ನಾ). ಹುಣ್ಣಿಮೆಯ ದಿನ,—ತಿಥಿ : ಕೈಲಾಸಪರ್ವತದ ಸಿದ್ಧಕೂಟದೊಳ್ ಪೌಷ್ಯಮಾಸದ ಪೌರ್ಣಮಿಯಾದಿನದಂದು ಪಲ್ಯಂಕಾಸನದಿಂದಂ ಯೋಗನಿರೋಧದೊಳ್ ಪೂರ್ವಾಭಿಮುಖನಾಗಿರ್ದಂ (ಅದಿಪು. ೦೬-೯೦೭) ; ಕಾರ್ತಿಕಮಾಸದ ಪೌರ್ಣಮಿಯಾದಿನದೊಳ್ ಸುಕುಮಾರನ ಮೋಹಬಂಧದ ಬಳ್ಳವಳ್ಳಿಯು ತೊಡರ್ಪಂ ಪಱಿಪಡೆ ಬಿಡಿಸುಮಂತ ಯೋಗ ವಿಡಿಸಿ (ಸುಕು:ಚ. ೦೦-೪೯ ವ). [ಸಂ.]

**ಪೌರ್ಣೆಮ** (ನಾ). ಔದುಂಬರ, ವೈಪಾಸಕ, ಪ್ರಕ್ಷಾಳಿಕ ಮತ್ತು ಪೌರ್ಣೆಮ ಎಂಬ ನಾಲ್ಕು ಪ್ರಕಾರದ ಮುನಿಗಳಲ್ಲಿ ಒಬ್ಬ : ಪಂಚಾಗ್ನಿಮಧ್ಯದಲ್ಲಿ ಏಕಪಾದಸ್ಥಿತಿ ಮೊದಲಾದವೞಿಂದುಗ್ರತಪಸ್ಸನಾಚರಿ ಸುವಾತನಾಗಿ ಔದುಂಬರ ವೈಪಾಸಕ ಪ್ರಕ್ಷಾಳಿಕ [ಶಾಕಾಂ. ಲಿನಿ] ಪೌರ್ಣೆ [ಶಾಕಾಂ. ಣರ್ಗ] ಮನೆಂದು ಚತುರ್ವಿಧಮಾಗಿರ್ಪಾತನೇ ವಾನಪ್ರಸ್ಥನಪ್ಪಂ (ಶಬ್ದಾಶ. ೦೨೬). [ಸಂ.]

**ಪೌರ್ಣೆಮೆ** (ನಾ). ಪೂರ್ಣಚಂದ್ರನು ಮೂಡುವ ದಿನ ; ಹುಣ್ಣಿಮೆ : ಆ ಪಕ್ಷಂಗಳೊಳಗೆ . . . ಚಂದ್ರನಧಿದೇವತೆಯಾದ ಪೌರ್ಣೆಮ[ಶಾಕಾಂ. ಣರ್ಮಿ] ಎಂಬ ಶುಭಾಶುಭರೂಪಮಾದ ಹದಿನೈದು ತಿಥಿಗಳುಳ್ಳುದೇ ಶುದ್ಧವೆನಿಪ ಶುಕ್ಲಪಕ್ಷ (ಶಬ್ದಾಶ. ೨೬೨). [ಸಂ. ಪೌರ್ಣಮಾ]

**ಪೌರ್ವಾತ್ಯ** (ಗು). ೧. ಪೂರ್ವಭಾಗಕ್ಕೆ ಸೇರಿದ ; ಪೂರ್ವದಿಕ್ಕಿನ : 'ದಾಕ್ಷಿಣಾತ್ಯ' ಎಂಬುದನ್ನು ಅನುಕರಿಸಿ, 'ಪೌರ್ವಾತ್ಯ', 'ಪಾಶ್ಚಿಮಾತ್ಯ' ಎಂಬ ಶಬ್ದಗಳು ರೂಢಿಗೆ ಬಂದಿದೆ (ಸಂ.ಕೋಶ. ೯೬). (ನಾ). ೨. ಪೂರ್ವದೇಶದ ನಿವಾಸಿ : ಅವಳು ಗಂಡನ ವಿಷಯದಲ್ಲಿ ಪೌರ್ವಾತ್ಯರಂತೆ ವಿಧೇಯಳಾದ ಕೂಲಿಯಾಗಿರಬೇಕು (ಕುಠಿಕ. ೨೨). ☞ ಇದಂ 'ದಾಕ್ಷಿಣಾತ್ಯ' ಮುಂತಾದ ದಿಕ್ಸೂಚಕಶಬ್ದಗಳ ರೂಪಸಾಮ್ಯದಿಂದ ಆಗಿದೆ.
[<ಸಂ. ಪೂರ್ವ]

**ಪೌರ್ವಾಪರ್ಯ** (ನಾ). ಅನುಕ್ರಮ ; ಆನುಪೂರ್ವಿ ; ಪರಿವಿಡಿ : ಕದಂಬರಾಜರ ಪೌರ್ವಾಪರ್ಯ (order of succession) ಆಳಿಕೆಯ ಕಾಲಗಳನ್ನು ತೋರಿಸುವ ವಂಶವೃಕ್ಷವನ್ನು ವಾಚಕರ ಸೌಕರ್ಯಕ್ಕಾಗಿ ಕೊಟ್ಟಿದೆ (ಕದಾಂಇ. ೦೫). [ಸಂ.]

**ಪೌರ್ವಾಹ್ಣಿಕ** (ಗು). ೧. ಪೂರ್ವಾಹ್ಣದಲ್ಲಿ ಮಾಡಬೇಕಾದ. ೨. ಮಧ್ಯಾಹ್ನಕ್ಕೆ ಮುಂಚಿನ. (ನಾ). ೩. ಮಧ್ಯಾಹ್ನಪೂರ್ವದಲ್ಲಿ ಮಾಡುವ ನಿತ್ಯವಿಧಿ: ಆಚಾರ್ಯರು ಊರಿಗೆ ಹೋಗಬೇಕಾಗಿದ್ದುದರಿಂದ ಪೌರ್ವಾಹ್ಣಿಕಗಳನ್ನು ದಿನಕ್ಕಿಂತ ಬೇಗನೆ ಮುಗಿಸಿದರು (ಕೂಂ). [ಸಂ.]

**ಪೌಲಸ್ತ್ಯ** (ಗು). ೧. ಪುಲಸ್ತ್ಯಮುನಿಗೆ ಸಂಬಂಧಿಸಿದ. (ನಾ). ೨. ಪುಲಸ್ತ್ಯವಂಶದವನು. ೩. ಕುಬೇರ : "ಐಲಬಿಳಃ, ಪೌಲಸ್ತ್ಯಃ . . . ಪುಣ್ಯಜನೇಶ್ವರಃ—ಈ ೧೭ ಕುಬೇರನ ಪೆಸರ್" (ಹಲಾಯು. ೦೯-೬೮) ; ಇವ ನಿರುತಿ ಉದಕಪತಿಯುವನನಿಲ ಪೌಲಸ್ತ್ಯನೀಶಾನ್ಯನೀ ಸಮಸ್ತರನು ನೋಡು (ಪ್ರಭುಶಾ. ೦೦-೯೬). ೪. ರಾವಣ : ಪೌಲಸ್ತ್ಯನ ಲಂಕಾಪುರ ಮನುರಿಪಿದಂ . . . ಹನುಮಂತಂ (ಶಂಕಾಕು. ೦೦-೦೬೦) ; ಪೌಲಸ್ತ್ಯ ! ಆಲಿಸು, ಬಲ್ಲೆನದೆ. ಇದು ಮೊದಲ್ಗೊಂಡು ತಪಸಂ ತಪಿಸ್ಸೆ (ಶಕ್ಕು.ಶ. ೨೯-೪). [ಸಂ.]

**ಪೌಲಿ, ಪೌಳಿ** (ನಾ). ೧. ಒಂದು ಬಗೆಯ ಹೋಳಿಗೆ. ೨. ರೊಟ್ಟಿ : "ಪೌಲಿ=ಹೋಳಿಗೆ, ೨. ರೊಟ್ಟಿ" (ಗಂಗಾಕು. ೨೦೬). **ಪೌಳಿ** : ೩. ಉಸಲಿ ; ಗುಗ್ಗರಿ : "ಅಪಕ್ವಂ, ಪೌಳಿ, ಅಭ್ಯೂಷಃ—೩ ಉಸಲಿಯ ಹೆಸರುಗಳು, ಗುಗ್ಗರಿ" (ಸಿದ್ಧಾಂತಿ. ೨೬೮). [ಸಂ. ಪೌಲಿ, ಪೌಳೀ]

**ಪೌಲೋಮ** (ನಾ). ೧. ಪುಲೋಮೆಯ ಮಕ್ಕಳು ; ಒಂದು ರಾಕ್ಷಸವರ್ಗ: ನಿವಾತಕವಚ ಕಾಳಕೇಯ ಪೌಲೋಮ ತಳ ತಾಲುಕರೆಂಬಱುವತ್ತು ಕೋಟಿರಕ್ಕಸರನೆನಗೆ ಗೆಲ್ದೀಯರ್ವೇಟ್ಟುಂ (ಶಂಭಾ. ೯-೨೭ ವ). ೨. ಇಂದ್ರ. [ಸಂ.]

**ಪೌಲೋಮಿ, ಪೌಳೋಮಿ** (ನಾ). ೧. ಪುಲೋಮನೆಂಬ ಅಸುರನ ಮಗಳು ; ಇಂದ್ರನ ಪತ್ನಿ ; ಶಚೀದೇವಿ : "ಇಂದ್ರಾಣೀ, ಪೌಲೋಮಿಃ, ಶಚೀ—ಈ ೩ ಇಂದ್ರನ ಸ್ತ್ರೀಯ ಪೆಸರ್" (ಹಲಾಯು. ೦೦-೩೩) ; ಮುನ್ನೊಂದು ಸಮಯದೊಳ್ ಪೌಲೋಮಿ ತಾಳಮಧುವಂ ಬಯಸಿ . . . ಪುರಂದರಪುರಸ್ಸರಂ ಬಂದು ಹೃದ್ಯಮಪ್ಪ ಮದ್ಯಮಂ ಕೇಳಿವಟ್ಟ ಲೋಳೆಱೆದು ಉಡಿಯಲುಜ್ಜುಗಂಗೈವುದುಂ (ಶಗಂ. ೯-೪೯ ವ). ೨. ಭೃಗು

ಋಷಿಯ ಹೆಂಡತಿ. ಪೌಲೋಮಿ : ೧. ನೇಮಿನಾಥಂಗೆ ಸುರಯೂಥನಾಥಂ ಸರ್ವಾಂಗಪ್ರಣತನಾಗಿ . . . ಪೌಲೋಮಿಯದತ್ತ ದಿವ್ಯಾರ್ಚನಾನಿಚಯದಿನರ್ಚಿಸಿ (ನೇಮಿಪು. ೧೩–೯೯ ವ). [ಸಂ. ಪೌಲೋಮೀ]

**ಪೌಲೋಮೀಪತಿ, ಪೌಲೋಮೀಪತಿ** (ನಾ). ಶಚೀದೇವಿಯ ಗಂಡ ; ಇಂದ್ರ : ಶ್ರೀಮಜ್ಜಿನಮಜ್ಜನದ ಮಹಾವಾಹಿಮಾತಿಶಯಮನದಳಂ ಪೊಗಟಲ್ ಪೌಲೋಮೀಪತಿಗಲ್ಲದೆ ಪೆಱರ್ಗೇಮಾತದು (ಆದಿಪು. ೩–೦). **ಪೌಲೋಮೀಪತಿ** : ಪೌಲೋಮೀಪತಿ ತನ್ನ ದಿವ್ಯಜ್ಞಾನದೊಳ್ ನೋಡಿ ಚಕ್ರಿಯುಂ ವಿಕ್ರಮಾರ್ಜುನನುಮಪ್ಪುದನಱಿದು (ಪಂಪಭಾ. ೩–೯೩ ವ). [ಸಂ.]

**ಪೌವಗೆ** 'ಪವ್ವಗೆ' ನೋ.

**ಪೌವನೆ** 'ಪವ್ವನೆ' ನೋ.

**ಪೌವನೆವೋಗು** (ಕ್ರಿ). ಬೆದರು ; ಭಯಪಡು : ತನ್ನ ನಮ್ಬಿದ ಸುದತೀಕದಮ್ಬದೆರ್ದೆ ಪೌವನೆವೋಗಿರೆ (ಎಕ. II, ೨೪೦–೨೫ ; ಸು. 1176).

[ ಪೌವನೆ (<ಪವ್ವನೆ) + ಪೋಗು₁ (<ಪೋ₁) ]

**ಪೌಷ** (ನಾ). ೧. ಪುಷ್ಯಮಾಸ : "ಪೌಷಃ, ತೃಷಃ, ಸಹಸ್ಯಃ—೩ ಪುಷ್ಯಮಾಸದ ಹೆಸರುಗಳು" (ಸಿದ್ಧಾಂತಿ. ೩೯). ೨. ಹಬ್ಬ ; ಉತ್ಸವ. ೩. ಕಾಳಗ ; ಯುದ್ಧ. [ಸಂ.]

**ಪೌಷಿ** (ನಾ). ೧. ಪುಷ್ಯನಕ್ಷತ್ರದಿಂದೊಡಗೂಡಿದ ಹುಣ್ಣಿಮೆಯ ರಾತ್ರಿ : "ಪೌಷೀ, ಪುಷ್ಯಯುಕ್ತಾ—ಪುಷ್ಯನಕ್ಷತ್ರದಿಂದೊಡಗೂಡಿದ ಪೌರ್ಣಮಾಸೀ ಹುಣ್ಣಿಮೆಯ ಹೆಸರು" (ಸಿದ್ಧಾಂತಿ. ೩೯). ೨. ಪುಷ್ಯಮಾಸದ ಹುಣ್ಣಿಮೆ. [ ಸಂ. ಪೌಷೀ ]

**ಪೌಷ್ಕರ** (ನಾ). ನೈದಿಲೆಗೆಡ್ಡೆ : "ಪೌಷ್ಕರಂ, ಕಾಶ್ಮೀರಂ, ಪದ್ಮಪತ್ರಂ . . . ತಾವರೇಗಡ್ಡೆ" (ಸಿದ್ಧಾಂತಿ. ೧೧೩). [ಸಂ.]

**ಪೌಷ್ಟಿಕ** (ಗು). ೧. ಶಕ್ತಿಯನ್ನು ಕೊಡುವ ; ಪುಷ್ಟಿದಾಯಕವಾದ : ಅಡುಗೆಯು ಕಲೆಯಲ್ಲಿ ಅವಳು ಪರಿಣತಳಾಗಿದ್ದು ದೊರೆಯುವ ವಸ್ತುಗಳಿಂದಷ್ಟೇ ರುಚಿಕರವಾದ ಮತ್ತು ಪೌಷ್ಟಿಕ ಅಡುಗೆಯನ್ನು ಮಾಡಲು ಬಲ್ಲವಳಿರಬೇಕು (ಅಡುಗೆ. ೩೬). (ನಾ). ೨. ಶಕ್ತಿಯನ್ನು ಕೊಡುವಂಥದು ; ಪುಷ್ಟಿದಾಯಕವಾದ ವಸ್ತು : ಶ್ರೀಖಂಡವು ಪೌಷ್ಟಿಕ. ವೀರ್ಯವರ್ಧಕ (ಅಡ್ಡಾಂಗ. ೦೨೦–೩೩); ಫಲಹಾರವಸ್ತುಗಳು ಕಟ್ಟಲು ಸುಲಭವಾಗಿಯೂ ಪೌಷ್ಟಿಕ ಹಾಗೂ ರುಚಿಕರವಾಗಿಯೂ ಇರಬೇಕು (ಅಡುಗೆ. ೩೦); ಸತ್ವಹೀನವನ್ನು ಸತ್ವಸಂಪುಷ್ಟವನ್ನಾಗಿ ಮಾರ್ಪಡಿಸಬಲ್ಲುದು ಈ ಆಧ್ಯಾತ್ಮ ಪೌಷ್ಟಿಕ (ಕಾವ್ಯಕು. ೨೯). ೩. ವ್ಯವಹಾರದಲ್ಲಿ ಜಯವೇ ಮೊದಲಾದ ಇಷ್ಟಪ್ರಾಪ್ತಿಗಾಗಿ ಮಾಡುವ ಒಂದು ಕರ್ಮ : ಶಾಂತಿಕಪೌಷ್ಟಿಕಕ್ರಿಯಾಕುಶಲನುಂ ಧರ್ಮಕಾರ್ಯದಿಕುಶಲನುಮಪ್ಪ ಬುದ್ಧಿಸಾಗರನೆಂಬ ಪುರೋಹಿತರತ್ನಮುಂ (ಆದಿಪು. ೦೦–೩ ವ). ೪. ನೀರಿನ ಧಾರೆಯೆರೆದು ಮಾಡುವ ದಾನ. [ಸಂ.]

**ಪೌಷ್ಟಿಕಕರ್ಮ** (ನಾ). = ಪೌಷ್ಟಿಕ ೩ : ಪಂಡಿತಪ್ರಿಯ ಶಾಂತಿಪೌಷ್ಟಿಕಕರ್ಮದೀಕ್ಷಿತನ ಚಂಡದೈವಜ್ಞನ . . . ಪೌರೋಹಿತನ ಮಾಡುವುದು (ಅಭಿಜ್ಞಾ. ೩–೮೩) ; ರೋಗ ಪಾಸಿಯಾಗುವುದಕ್ಕೆ ಮಾಡುವ ಭೇಷಜಕರ್ಮಗಳು . . . ಪ್ರಾಯಶ್ಚಿತ್ತರೂಪವಾದ ಶಾಂತಿಕರ್ಮಗಳು, ಕೆಲಸ ಕಾರ್ಯಗಳಲ್ಲಿ ಜಯವಾಗಲೆಂದು ಪೌಷ್ಟಿಕಕರ್ಮಗಳು (ಭಾರತ. ೨೭).

[ ಸಂ. ಪೌಷ್ಟಿಕಕರ್ಮನ್ ]

**ಪೌಷ್ಟಿಕತೆ** (ನಾ). ಪುಷ್ಟಿಯನ್ನುಂಟುಮಾಡುವ ಅಂಶ; ಪುಷ್ಟಿದಾಯಕತ್ವ : ತರಕಾರಿಗಳಲ್ಲಿರುವ ಜೀವಾತುಗಳು ಮತ್ತು ಪೌಷ್ಟಿಕತೆಯು ನಷ್ಟವಾಗದಂತೆ ಅವುಗಳನ್ನು ಎಷ್ಟು ಬೇಗನೆ ಬೇಯಿಸಿ ತೆಗೆಯುತ್ತೀರೋ ಅಷ್ಟು ಒಳ್ಳೆಯದು (ಅಡುಗೆ. ೨೮). [ ಸಂ. ಪೌಷ್ಟಿಕತಾ ]

**ಪೌಷ್ಪಕ** (ನಾ). ಹಿತ್ತಾಳೆಯ ಭಸ್ಮದಿಂದ ತಯಾರಿಸಿದ ಒಂದು ಬಗೆಯ ಕಣ್ಣುಕಪ್ಪು ; ಕುಸುಮಾಂಜನ : "ರೀತಿಪುಷ್ಪಂ, ಪುಷ್ಪಕೇತುಃ, ಪೌಷ್ಪಕಂ, ಕುಸುಮಾಂಜನಂ—೪ ಕುಸುಮಾಂಜನದ ಹೆಸರು" (ಸಿದ್ಧಾಂತಿ. ೩೦೩). [ ಸಂ. ]

**ಪೌಷ್ಯ** (ಗು). ೧. ಪುಷ್ಯಮಾಸಕ್ಕೆ ಸಂಬಂಧಿಸಿದ. (ನಾ). ೨. ಪುಷ್ಯಮಾಸ. [ಸಂ.]

**ಪೌಷ್ಯಮಾಸ** (ನಾ). ಪುಷ್ಯಮಾಸ : ಕೈಲಾಸಪರ್ವತದ ಸಿದ್ಧಕೂಟದೊಳ್ ಪೌಷ್ಯಮಾಸದ ಪೌರ್ಣಮಾದಿನದಂದು ಪಲ್ಯಂಕಾಸನದಿಂದಂ ಯೋಗನಿರೋಧದೊಳ್ ಪೂರ್ವಾಭಿಮುಖನಾಗಿರ್ದಂ (ಆದಿಪು. ೦೬–೪೦ ವ). [ಸಂ.]

**ಪೌಸರ** (ನಾ). ಗುಂಪು; ಸಮೂಹ : ಸಿಡಿಹಿನಿಂ ನೋಡಿ ಪಕ್ಕವ ಬಿದಿರ್ದುದೆದಱುತ್ತ ನಡುಗೊಂಬನೇಱ ಸುಸ್ವರಗಳಿಂ ಧ್ವನಿಗೆಯ್ವ ಪಡಿಯಾಜುಂಕಿತ ಪಕ್ಕಿ ಪೌಸರದೋಹಮಿಂತು ಸಂತಸದೊಳುಂ ವನದೊಳು (ಕೃಕುಪು. ೩–೦೯).

[< ಪಸರ]

**ಪೌಳಿ₁**, **ಪಉಳಿ**, **ಪವಲ್ಯ**, **ಪವಳಿ**, **ಪವುಳಿ** (ನಾ). ೧. ಸುತ್ತುಗೋಡೆ ; ಪ್ರಾಕಾರ : ಭಕ್ತನ ದೇಹವೇ ತ್ರಿಕೂಟದ ಶಿವಾಲಯ . . . ಶಿವಾಚಾರವೆ ಪೌಳಿ (ಚನ್ನಬ. ೬. ೦೯೯–೩೪೦) ; ನಿಂದು ನಿಂದು ನಿಲುಕಿ ನಿಲುಕಿ ಕೈಗುಂದಿ ನೋಡುತ ದೆಸೆದೆಸೆಯನಾನುದ್ವೇಗದುಳಿದುಳಿದು ಪೌಳಿಯ ಎಡೆಗೆ ನಸುಸಾರ್ದು (ಜಾತಿ. ೨೬–೪೦) ; ರಾಯನ ರಾಣಿಯ ಪೌಳಿಯು ಹಿಂದದೆ ಬಲು ಬಟ್ಟಬಯಲು (ಕಂಠೀರಾ. ೪೦–೦); ಸುತ್ತೇಳ ಪೌಳಿ ಮನೆಯುವಳಿ ನನ ಚೆಲುವೆ ಸುತ್ತಿ ಬರಕೀನಿ ದನಿ ತೋರಿ (ಜಾನ. ೦೦೦); ಶಾಲೆಯ ಸಮೀಪದ ದೇವಸ್ಥಾನದ ಪೌಳಿಯಲ್ಲಿ ಕಟ್ಟಿದ ಚಿಕ್ಕ ಕೋಣೆಯೊಂದನ್ನು ಹಿಡಿದು ತಾವೇ ಕೈ ಬಾಯಿ ಸುಟ್ಟುಕೊಂಡಿದ್ದರು (ಜೀವನ. ೩). ೨. ಅಂಕಣ; ಆವಾರ; ಆವರಣ : ಬ್ರಹ್ಮಪುರಿಯ [ದೇವಾಲ್ಯದ]ಪೌಳಿಯ ಎ(ೞ)ಳದ ೨೫ ಹಸ್ತದಗಲದ ನಿವೇಶನಮಂ ಪೌಳಿವಿಡಿದು ತೆಂಕ್ಯದೆಸೆಯ[ಲು? ಕೊ]ಟ್ಟರು (ಎಕ. XIX. ೨೫–೩೫; 1245): ಮಧ್ಯದ ಪೌಳಿಯೊಳಿಸುವುದಾ ನೃಪಗೆ ತಕ್ಕಧ್ಯಯನದ ದೀರ್ಘಶಾಲೆ (ಶಿಶಿಕ. ೦೬–೩); ಅಪ್ಪರವರಿಗೆ ದೇವಾಲಯದ ಪೌಳಿಯಲ್ಲಿ ವಿಶ್ರಮಿಸಿಕೊಳ್ಳುವ ಕೃಪೆ ಮಾಡಬೇಕು (ಹುಂಜಾ. ೦೨೩). **ಪಉಳಿ** : ೧. ಪತು [ವಲು]ಉ[ಪ್ಪ]೦ಗ[ಟಾ]ಗಿಲು ತೆಂಕಲು ದೇವರ ಗು[ಡಿ ಪ]ಉಳಿ ಮೇರೆ (ತೌಳವ. IV. ೨೯೭–೨೨ : 1557). **ಪವಲ್ಯ** : ೧. ಸ್ವಯಂಭುದೇವರಿಗೆ ಕಪಂಬಟ್ಟು ಈ ಪವಲ್ಯವ ಮಾಡಿಸಿದಂ (ಎಕ. III. ಶ್ರೀರಂಗ. ೩೯–೭; 1126). **ಪವಳಿ** : ೧. ದೇವಸ್ಥಾನದ ಸುತ್ತಲೂ ನಾಲ್ಕುಕಡೆಗೆ ದೊಡ್ಡ ಪವಳಿಯಿದೆ (ಗಂಗಾಸಾ. ೩); ಕೌಶಲ್ಯದ ಕಲ್ಲು ಪವಳಿ ಕುಸುರಿನ ಮಾದ್ವಾರ್ಕದು (ಸಿದ್ಧಕೃ. ೨೬–೩). ೨. ಅರಮನೆಗೆ ಹೊಂದಿ ಇದ್ದ 'ಪವಳಿ' ಯಲ್ಲಿ ಒಂದು ಸಣ್ಣ ಉದ್ಯಾನವನ್ನು ಮಾಡಿಕೊಂಡಿದ್ದಾಳೆ (ಕಾಂಡಾಣ್ಯ. ೯೯). **ಪವುಳಿ** : ೧. ಯಾ ದೇವರ ದೇವಾಲ್ಯದ ಕಳಸ ನಿಟ್ಬರ್ಣ ಪವುಳಿ ಬಾಗಿಲುಮಾಡ . . . ಯಾ ಕಟದ ಮರಿಯಾದೆಯ ಪಡಿ ನಡವುದು (ಎಕ. VI. ಕಡೂರು. ೯೯–೬೩: 1201); ಪುಂಡರೆಲ್ಲರ ಕೂಡಿಕೊಂಡು . . . ಪವಳಿಯ ಹೊಜೆಗೆ ಮುಂಕೊಂಡಾಡು ತಿರ್ದನುಬ್ಬಿನೊಳು (ಕುಂಜಾಂ. ೩೯–೩೦) : ಪವುಳಿ ಉಪ್ಪರಿಗೆ ಚಿನ್ನದ ಪಂಚಕಳಸವು ವಿವರ ಚಿತ್ರದ ಚಂದ್ರಶಾಲೆ (ಐಕಕ. ೦–೬೩).

[< ಪ್ರಾ. ಪಉಲಿ=ರಾಜಮಾರ್ಗ; ಹೆಬ್ಬಾಗಿಲು./ಹಿಂ. ಪೌಲೀ, ಪೌರೀ; ಮರಾ. ಪೌಳೀ]

**ಪೌಳಿ₂** 'ಪೌಲಿ' ನೋ.

**ಪೌಳಿಂದಿನಿ** (ನಾ). ಬೇಡರ ಹೆಂಗಸು; ಶಬರಿ : ಚಂದನದಿಂದೆ ಮಾಡಿದೊರಲೊಳ್ ಬದಿರಕ್ಕಿಯನೆಯ್ದೆ ಪೊಯ್ದು ಚೆಲ್ವೊಂದಿದ ದಂತದೊಂದೊನಕೆಯಿಂ ಏಡಿದೊಳ್ಟಳಿಸುತ್ತುಮಿರ್ದ ಪೌಳಿಂದಿನಿ . . . ಬಲ್ಲ

ಬಲ್ಲಹನೆ ಸೂಎಯ ಸೂವಿ ದಲೇದು ಪಾಡಿದಳ್ (ಶಾರಕ್ಕ. ೦೦-೦೦೨).
[< ಸಂ. ಪುಲಿಂದೀ]

**ಪೌಳಿಗವಾಕ್ಷ** (ನಾ). ಗೋಡೆಯ ಮೇಲ್ಭಾಗದಲ್ಲಿ ಕೊರೆದ ಕಿಂಡಿ.– ಗವಾಕ್ಷಿ: ಪಶ್ಚಿಮದ್ವಾರವೆಂಬ ನಿಜದ್ವಾರವಟ್ಟವಂ ಮಾಡಿ ಸಪ್ತವ್ಯಸನ ಪಂಚೇಂದ್ರಿಯಂಗಳೆಂಬ ಪೌಳಿಗವಾಕ್ಷಿಯನಿಕ್ಕಿ (ಚೂಕ್ಕಸಂ. ೩೦೬-೨೬).
[ಪೌಳಿ₁ + ಗವಾಕ್ಷಿ₁]

**ಪೌಳಿಗೋಡೆ** (ನಾ). ಪ್ರಾಕಾರದ ಗೋಡೆ; ಸುತ್ತುಗೋಡೆ: ವೃಕ್ಷಗಳ ಸಹಾಯದಿಂದ ಪೌಳಿಗೋಡೆಯನ್ನು ಹಾರಿ ಹೋಗು (ಚಾಜಿ. ೪೬); ಗರ್ಭಗುಡಿಯ ಸುತ್ತ ಕಲ್ಲಿನ ಪೌಳಿಗೋಡೆ ಇರುತ್ತದೆ (ಕೃಪಾ. II. ೩೦೬); ದೂರದಲ್ಲಿ ಒಂದು ದೇವಸ್ಥಾನದ ಪೌಳಿಗೋಡೆಗಳು ಕಾಣಿಸಿದುವು (ಕಂಗಾಸ್ಮ. ೩೦೬).
[ಪೌಳಿ₁ + ಗೋಡೆ]

**ಪೌಳೋಮಿ** ‘ ಪೌಲೋಮಿ ’ ನೋ.

**ಪೌಳೋಮೀಪತಿ** ‘ ಪೌಲೋಮೀಪತಿ ’ ನೋ.

**ಪ್ಯಾದೆ, ಪೇದೆ** (ನಾ). ೧. ಕಾಲಾಳು; ಕಾಲ್ನಡೆಯ ಭಟ: ಕುದುರೆ ೫೦೦ ಪ್ಯಾದೆ ೬೫೦ ಸಹಾ ಭರ್ತಿ ಮಾಡಿ (ಕೃಚ. ೨೦); ಟೀಪುಸುಲ್ತಾನರು ತಮ್ಮ ಕಡೆ ಅಹಶಾಂ ಪ್ಯಾದೇರಿಗೆ ತಯಾರುಮಾಡಿ . . . ಕಳುಹಿದಲ್ಲಿ (ಕಾಕೇಂತ್ರ. ೪೨). ೨. ಪೋಲೀಸು ದಳದ ಕೆಳದರ್ಜೆಯ ಸೇವಕ: ಅವನು ನಮ್ಮೂರಿನ ಪೋಲೀಸ್ ಠಾಣೆಯಲ್ಲಿ ಪ್ಯಾದೆಯಾಗಿದ್ದಾನೆ (ರೂಶಿ). ೩. ಸೇವಕ; ಆಳು; ಜವಾನ: ನಿನ್ನ ಏನೇ ಎನಿಸಿಕೊಂಡಪಳು ಇಂದೊಡತಿ, ತಾನೆಂದಿನಂತೆಯೇ ಪ್ಯಾದೆ (ಗೌಪುಲ್ಲ. ೦೯); ಕಾಲದ ಪ್ಯಾದೆ ಅವನ ಖ್ಯಾತಿಯ ಎಲ್ಲೆಯ ಗೂಟಗಳನ್ನು ಕೀಳುವುದಕ್ಕೆ ಬಂದಾಗ ಸಮಾಲೋಚಕನು ಈ ತಮಾಷೆಯನ್ನು ನೋಡಲು ಕಾಯಲಾಗುವುದಿಲ್ಲ (ಶಂಕರ. II. ೨೯೩). ೪. ಚದುರಂಗದಾಟದಲ್ಲಿ ಕನಿಷ್ಠ ನಡೆಯ ಕಾಯಿ: ಸ್ವಲ್ಪ ಕಾಳು ಅವಲ್ಲ ಆಟ, ಧೊರೆಗೆ ಷಹ ಕೊಟ್ಟರೆ ಆ ಪ್ಯಾದೇಗೆ ದೇವರೇ ಗತಿ (ದುಂಕಿ. ೪); ಪ್ಯಾದೆಯನ್ನು ತೆಗೆದು ದೊರೆಗೆ ಶಹಾ ಕೊಡು (ರೂಶಿ). **ಪೇದೆ**: ೧. ರಾಣಿಯು ಕೋಟೆಯ ಮಹಲಿನಲ್ಲಿಯೇ ತನ್ನ ಸಖಿಯರು, ಸಿಪಾಯಿಗಳು ಮತ್ತು ಪೇದೆಗಳೊಂದಿಗೆ ವಾಸಿಸುತ್ತಿದ್ದಳು (ಝಾಂಶಿ. ೦೨೬). ೨. ಎಕ್ಸೈಜ್ಇನ್ಸ್ಪೆಕ್ಟರು ನಾಲ್ವರು ಪೇದೆಗಳೊಡನೆ ಹಠಾತ್ತನೆ ಪಟೇಲ ತಿಮ್ಮೇಗೌಡನ ತೋಟಕ್ಕೆ ಪೂರ್ವಭಾವಿಯಾಗಿ ಸುದ್ದಿ ಕೊಡದೆ ದಾಳಿ ಇಟ್ಟಾಗ . . . ಅ ಭಂಗಿಯ ಗಿಡವನ್ನು ಅವರಿಗೆ ತೋರಿಸಿದ (ಊರುಕೆ. ೬೩), ಪೇದೆಯ ಕೆಲಸದಿಂದ ಮುಕ್ತನಾದರೆ ಸಾಕಾಗಿತ್ತು ನನಗೆ (ಶಾಶೋ. ೦೦೨). ೩. ಏನು ಶಾಲೆಯ ಮಾಸ್ತರನೂ ನಾನೇ ಪೇದೆಯೂ ನಾನೇ ಎಂದು ತಿಳಿದಿರಾ? (ಕಿರಾಣ. ೦೪೬); ಒಬ್ಬ ಸಭ್ಯಗೃಹಸ್ಥನು ಪೇದೆಗಳ ಮುಂದಾಳುವಿನೊಟ್ಟಿಗೆ ದ್ರಾಕ್ಷಾರಸ ಕುಡಿಯುವುದು! ನಾಚಿಕೆಗೇಡು! (ಹೋಕು. ೯೦).
[← ಪಾರ. ಪಿಯಾದಾ; ಹಿಂ. ಮರಾ. ಪ್ಯಾದಾ]

**ಪ್ಯಾದೆಮಾತು, ಪೇದೆಮಾತು** (ನಾ). ೧. "(ಚದುರಂಗದಲ್ಲಿ ಎದುರಾಳಿಯ ದೊರೆಯ ಚಲನೆಗೆ ಅವಕಾಶವಿಲ್ಲವೆಂದು ಹೇಳುವ ಮಾತು) . . . ಪ್ಯಾದೆ ಮಾತು" (Check—mate ಕಂಕಶಿ). ೨. (ಅಲಂ) ಸಂಪೂರ್ಣ ಪರಾಭವ; ಪೂರಾ ಸೋಲು: ಇದು ಒಳ್ಳೇ ‘ ಪ್ಯಾದೆ ಮಾತು ’ ಆಯಿತೆಂದು ಮರುದಿನ ಪುನಃ ಯಾತ್ರೆ ಹೊರಟದ್ದೇ! (ಶ್ರೀಕಶ. ೦೦೪); ಸುಬೇದಾರರ ಪ್ಯಾದೇಮಾತಿನ ಕಥೆಯನ್ನು . . . ಹೇಳುತ್ತೇನೆ (ಸಣ್ಣಕ.-v, ೦೩). **ಪೇದೆಮಾತು**: ೧. ಇದು ಪಾರ್ಥನ ವೀರತ್ವಕ್ಕೆ ಚದುರಂಗದಾಟದೊಳಗಿನ ಕೊನೆಯ ಶಹ – ಪೇದೆಮಾತೇ – ಅಲ್ಲವೇ? (ಕರುಕ. ೬ ಕೃಷ್ಣಾಶಶಿ).

**ಪ್ಯಾದೆಮಾತು ಮಾಡು** = ಸೋಲಿಸು; ಪರಾಭವಗೊಳಿಸು: ನಿರ್ವಾಲಿಯ ಖಂಡಿತವಾಗಿಯೂ ಔರಂಗಜೇಬನನ್ನು ಸೋಲಿಸಿದಳು; ಪ್ಯಾದೆಮಾತು ಮಾಡಿ ಕೂರಿಸಿದಳು (ಕಂಕಕು. ೨೩೪).
[← ಮರಾ. ಪ್ಯಾದಮಾತ್, ಪ್ಯಾದೇಮಾತ್]

**ಪ್ಯಾರಾ** (ನಾ). ಗ್ರಂಥ, ಲೇಖನ ಮೊದಲಾದುವುಗಳಲ್ಲಿ ಮೊದಲನೆಯ ಪಂಕ್ತಿಯನ್ನು ಒಳಚಾಚಿ ಪ್ರಾರಂಭಿಸುವ ವಾಕ್ಯವೃಂದ: ರಿಜಿಸ್ಟರಿಗೆ ದಾಖಲಾಗಿಲ್ಲದಿದ್ದರೂ ಕಾಣದೆ ಗೈರ್‌ಹಾಜರಾದರೆ ಒನೇ ಪ್ಯಾರಾದಲ್ಲಿರುವ ಮೆಮೊರಾಂಡಂನ ಮೂಲಕ ಸ್ಟೇಷನ್‌ಹೌಸ್ ಆಫೀಸರವರಿಗೆ ತಿಳಿಸತಕ್ಕದ್ದು (ಗ್ರಾಪೂಕ. ೯೬); ಬಾಹ್ಯಪರೀಕ್ಷೆಯ ವರದಿ ನಾಲ್ಕು ಪುಟಗಳಷ್ಟಿದ್ದು, ಇಪ್ಪತ್ತೇಳು ಪ್ಯಾರಾಗಳನ್ನೊಳಗೊಂಡಿತ್ತು (ಪುಪರು. ೬೬).
[ಪ ಇದು ಇಂಗ್ಲಿಷಿನ ‘Paragraph’ ಎಂಬುದರ ಸಂಕ್ಷಿಪ್ತರೂಪ]

**ಪ್ಯಾಲೆ** ‘ ಪೇಲೆ ’ ನೋ.

**ಪ್ರ—**(ಉಪ). ೧. ಮುಂಭಾಗದ, ಮುಂದಿನ, ಮುಂದೆ ಇರುವ ಎಂಬರ್ಥಗಳಲ್ಲಿ ಸಂಸ್ಕೃತಧಾತುಗಳಿಗೆ ಸೇರುವ ಒಂದು ಉಪಸರ್ಗ. ೨. ಬಹಳ, ತುಂಬ, ಅತಿಶಯವಾದ ಎಂಬರ್ಥಗಳಲ್ಲಿ ಸಂಸ್ಕೃತ ಗುಣವಾಚಕಗಳಿಗೆ ಸೇರುವ ಒಂದು ಉಪಸರ್ಗ. ೩. ಪ್ರಾರಂಭ, ಆಧಿಕ್ಯ, ಸೌಂದರ್ಯ, ಶ್ರೇಷ್ಠತೆ ಎಂಬಂಥ ಅನೇಕ ವಿಶೇಷಾರ್ಥಗಳಲ್ಲಿ ಸಂಸ್ಕೃತನಾಮಪದಗಳಿಗೆ ಸೇರುವ ಒಂದು ಉಪಸರ್ಗ.
[ಸಂ.]

**ಪ್ರಕಂದ** (ನಾ). ದೊಡ್ಡಗಾತ್ರದ ಗಡ್ಡೆ: ಆನೆಹುಲ್ಲು ಅಥವಾ ದಪ್ಪನೇಪಿಯರ್‌ಹುಲ್ಲು . . . ಇದಕ್ಕೆ ತೆವಳು ಆಕಾರದ ಪ್ರಕಂದಗಳಿವೆ (ಕಂವಿಕೋ. I, ೬೯೩).
[ಸಂ.]

**ಪ್ರಕಂಪ** (ನಾ). ೧. ಅತಿಯಾಗಿ ನಡುಗುವಿಕೆ. – ಅದುರುವಿಕೆ. ೨. ಹೆಚ್ಚಾದ ನಡುಕ. –ಕಂಪನ: ರಮಣೀಹೃದಯದಲ್ಲಿ ನಾಯಕಸಂಸ್ಪರ್ಶಜನಿತ ಪ್ರಕಂಪದಂತೆ, ನದೀವಕ್ಷದಲ್ಲಿ ತರಂಗ ಏಳಲು ಮೊದಲಾಯಿತು (ಕಂಕಕು. ೦೬೪). ೩. ಒಂದು ನರಕದ ಹೆಸರು: ಏಳರಾಳಪ್ರಕಂಪ ಪದ್ಮ ಸುವಕ್ತ್ರ ಕಾಲವೆಂಬೈದು ಮಂತ್ರಿನರಕಂಗಳಿಂ ಕೂಡಿ ಅಘೋರವೆಂಬರಸುನರಕವಿಹುದು (ಚಿವೇ. ೦೫೨). ೪. [ನಾಟ್ಯ] ಐದು ವಕ್ಷೋಭೇದಗಳಲ್ಲಿ ಒಂದು; ಪ "ಎಡೆಬಿಡದೆ ನಿಟ್ಟುಸಿರು ಬಿಡುವುದು. [ಎಡೆಬಿಡದೆ ಎದೆಯನ್ನು ಮೇಲಕ್ಕೆ ಚಲಿಸುವುದು.] ಹೆದರಿಕೆ, ನಗುವುದು, ಶ್ರಮ, ಶ್ವಾಸ, ಕಾಸರೋಗ, ಬಿಕ್ಕಲು, ಅಳುವುದು ಇವುಗಳನ್ನು ಅಭಿನಯಿಸುವಾಗ" (ಶಾಸ್ತ್ರಂ. ೨೩೬ ಗದ್ಯಾನುವಾದ): ಸಮಮಾಭುಗ್ನಂ ನಿರ್ಭುಗ್ನಮುಮತಿವಿಲಸತ್ಪ್ರಕಂಪಮುಮುದ್ವಾಹಿತಮುಂ ಕ್ರಮದಿಂ ವಕ್ಷೋಭೇದಂ ಸಮನಿಸುಗುಂ ನೃತ್ತದಲ್ಲಿ (ಶಾಸ್ತ್ರಂ. ೨.೬೩).
[ಸಂ.]

**ಪ್ರಕಂಪನ** (ಗು). ೧. ರಭಸವಾಗಿ ನಡುಗುತ್ತಿರುವ. (ನಾ). ೨. ಅತಿಯಾದ ನಡುಕ. ೩. ಗಾಳಿ; ವಾಯು. ೪. ನಡುಗಿಸುವವನು. ೩, ೪: ಪ್ರಕಂಪನಜೀವಪ್ರಕಂಪನನಪ್ಪನಗೆ ಗೋಪಾಲಯುಕ್ತನೊಳ್ ಭೇದಮಾಯುಕ್ತಮುಂ . . . ಅಪ್ಪುದು (ಕಗಂ. ೩-೬೦ ವ). ೫. ಒಂದು ನರಕದ ಹೆಸರು. ೬. [ಕಾವ್ಯಮೀ] ಎಂಟು ಬಗೆಯ ಸಾತ್ವಿಕಭಾವಗಳಲ್ಲಿ ಒಂದು; ನಡುಗುವುದು: ಸ್ವೇದಂ ವೈವರ್ಣ್ಯಂ ಸ್ವರಭೇದಂ ರೋಮಾಂಚನಂ ಪ್ರಕಂಪನಮಶ್ರೂದ್ಭೇದಂ ಸ್ತಂಭಂ ಲಯವೆಂದಾದುವಿವೆಂಟುಂ ರಸಕ್ಕೆ ಸಾತ್ವಿಕಭಾವಂ (ಕಾವ್ಯಾವ. ೬೯೬).
[ಸಂ.]

**ಪ್ರಕಂಪಿತ** (ಗು). ೧. ಹೆಚ್ಚಾಗಿ ನಡುಗಿಸಲ್ಪಟ್ಟ: ಅತುಳೋತ್ತಾಲತಿಮಿಂಗಿಳಪ್ರಬಳಪಕ್ಷೋದ್ಭೂತವಾತ ಪ್ರಕಂಪಿತಕುತ್ಕೀಲಸಮಗ್ರದುರ್ಗ್ರಹಘನಗ್ರಾಸಗ್ರಹವ್ಯಗ್ರ . . . ಕೋಲಾಹಲಕಲ್ಪಕಾಲಪ್ರಸ್ಪರ್ಧಿಯಂ ವಾರ್ಧಿಯಂ (ಕಾಕ್ಯಸಾ. ೬೩). ೨. ನಡುಗಿದ; ಅಲ್ಲಾಡಿದ: ನಿಬಿಡಪ್ರಕಂಪಿತಕುಚಚ್ಯುತಕಂಕುಮರೇಣು ತಮ್ಮ ಕೇಸಡಿಗಳ ಕೆಂಪು ಕೆಂದಳಿರ

ಸಾಲಿಡೆ ಸಂಚರಿರ್ಪರ್ಲತಾಂಗಿಯರ್ (ರಾಜಶೇ. ೬-೬). [ಸಂ.]

**ಪ್ರಕಟ** (ಗು). ೧. ವ್ಯಕ್ತವಾದ ; ಹೊರಹೊಮ್ಮಿದ ; ಸ್ಪಷ್ಟವಾದ : ಪ್ರಕಟಾಟೋಪದೆ ಪೊಯ್ದು ಪೊಯ್ದು ಶಿಲೆಯೊಳ್ ವೃಕ್ಷಂಗಳೊಳ್ ವೋದಿ ವೋದಿ (ಗದಾಯು. ೩-೦೩) ; ಪ್ರಕಟಯಶರ್ಗುಣನಿಧಿಗಳ್ . . . ಗುಣಧರಭಟ್ಟಾರಕರೆ . . . ಎಮಗಭಿವಂದ್ಯರ್ (ಧರ್ಮಾಮೃ. ೦-೦೦) ; ಪ್ರಕಟಾನೇಕವಿಚಿತ್ರವಸ್ತುಗಳ ಜನ್ಮಸ್ಥಾನಕಂ ತಾಂ ವಸಂತಕಮೆಂಬಾ ವಿಷಯಂ ಮದೀಯ ವಿಷಯಂ (ಕುಸುಮಾ. ೦೫-೬೬). ೨. ಪ್ರಸಿದ್ಧವಾದ: ಪ್ರಕಟಾಂಗಿಕ ವಾಚಿಕ ಸಾತ್ವಿಕ ಮಹಾರ್ಯಂಗಳೆಂಬ ನಾಲ್ಕಭಿನಯಮುಮಂ ಸಕಲಪರೀಷಹವೆನೆ ರಂಜಕಮಾದುವು ರಂಗಮಧ್ಯದೊಳ್ (ಅಜಿತ. ೩-೯). ೩. ಕಣ್ಣಿಗೆ ಕಾಣುವ ; ಪ್ರತ್ಯಕ್ಷ. (ನಾ). ೪. ಸ್ಪಷ್ಟತೆ ; ನಿಚ್ಚಳತೆ : "ವಿಶದಂ, ಪ್ರಕಟಂ, ಸ್ಪಷ್ಟಂ, ಪ್ರಕಾಶಂ, ಸ್ಫುಟಂ — ಈ ೫ ಅಜುಯಲ್ಪರ್ಪು(ಹು)ದು" (ಹಲಾಯು. ೦೨೪-೬೭). ೫. ಬಹಿರಂಗವಾದುದು ; ಸರ್ವವಿದಿತವಾದುದು : ಪ್ರಕಟಮುಮಪ್ಪಂತಿರೆ ಜಾತಕರ್ಮದೊಸಗೆಯುಮನೊಸೆದು ಮಾಡಿಸೆ (ಶಾಂತಿಪು. ೦೦-೬೭). ೬. ಪ್ರಸಿದ್ಧನಾದವನು; ಕೀರ್ತಿಶಾಲಿ : ಪ್ರಕಟರ್ ನೀತಿವಿದರ್ ನೃಪರ್ (ಕೃಷ್ಣ. ೦೩-೯೯). ೭. ಬಹಿರಂಗವಾದ ಸ್ಥಳ; ಸಾರ್ವಜನಿಕ ಪ್ರದೇಶ : ಅರಸಿದರು ಸೀತೆಯಂ . . . ಸೋವಿದರ್ ಗೂಢಮಂ ; ಸೋವಿದರ್ ಪ್ರಕಟದಿಂ (ಶ್ರೀರಾಮಾ. ೩೬೩-೦೦೫). ೮. ವಿಚಾರ ; ವಿವರ ; ಸಂಗತಿ : ಸಕಲಲೋಕಾತ್ಮಾಭಿರಾಮ ನೀನರಿಯದಿಹ ಪ್ರಕಟವೊಂದಿಲ್ಲ (ಶಶಿಶೋ. ೯-೦೯).

**ಪ್ರಕಟಂ ಮಾಡು** = ಸ್ಪಷ್ಟಪಡಿಸು: ವ್ಯಕ್ತಗೊಳಿಸು: ಪರಭಾಗಭಾವವಿಲಸದ್ವರ್ಣಕ್ರಮಾವೃತ್ತಿಯುಂ ಪ್ರಕಟಂ ಮಾಡಿರೆ (ಶಬಿಸಾ. ೦-೦೫೦) ; ಘ್ರಾಣೇಂದ್ರಿಯೌತ್ಸುಕ್ಯಮಂ ಪ್ರಕಟಂ ಮಾಡಿ ನೃಪಂಗಲಂಪುವಡೆದತ್ತಂ ಭೋಜಗಂಧಾಸವಂ (ಅಂಶು. ೯-೬೯). **ಪ್ರಕಟವಾಗು** = ೧. ಹೊರಕ್ಕೆ ಬರು ; ಗೋಚರಿಸು ; ಮೈದೋರು : ಒಂದು ಅರಳಿಮರವಾಗಿಯೂ ಮತ್ತೊಂದು ಆಲದ ಮರವಾಗಿಯೂ ಪ್ರಕಟವಾಗುತ್ತವೆ (ಜೀವಾತ್ಮ. ೦೬೪). ೨. ವ್ಯಕ್ತವಾಗು ; ಅರಿವಿಗೆ ಬರು : ನಾವು ಮೌನದಿಂದಿದ್ದರೆ ನಮ್ಮ ದಡ್ಡತನವು ಒಂದು ವೇಳೆ ಜನರಲ್ಲಿ ಪ್ರಕಟವಾಗದೆ ಇರಬಹುದು (ಮುಂಬಯಿ. ೪-೬೯); ಪ್ರಕಟವಾದರೂ ಅಗಡುತನ ಬಿಡಲಿಲ್ಲ (ಗಾಂಧಿ). ೩. (ಲೇಖನ, ಪುಸ್ತಕ ಮುಂತಾದುವು) ಮುದ್ರಣ ಹೊಂದಿ ಹೊರಬರು ; ಪ್ರಕಾಶಗೊಳ್ಳು ; ಅಚ್ಚಾಗು : ಭಗವದ್ಗೀತೆಯನ್ನು ಕುರಿತು ಬರೆದ ದಿವಂಗತ ಆರ್. ಡಿ. ರಾನಡೆಯವರ ಗ್ರಂಥ ಇತ್ತೀಚೆಗೆ ಪ್ರಕಟವಾಗಿದ (ಧರ್ಮಗಾ. ೦೯೪). [ಸಂ.]

**ಪ್ರಕಟಂ** (ಅ). ಎಲ್ಲರಿಗೂ ತಿಳಿದಿರುವಂತೆ ; ಬಹಿರಂಗವಾಗಿ : ಪ್ರಕಟಂ ಲೋಕೋತ್ತರಲೌಕಿಕಪರಿಣತಿ ಪುನ್ನಿಗಂಗೆ ಶಾಂತೀಶ್ವರರಾಮಕಥಾ ಪ್ರಶಸ್ತಿಯಿಂದಾದ ಕೃತಿಗಳಿಂ [ಕೃತಿಯುಂಗಂಗಳ]ನ್ನವುಮೊಳವೇ (ಶಾಂತಿಪು. ೦೨-೬೩) ; ಪ್ರಕಟಂ ವಾರಿಧಿವೇಳೆ ವಾರ್ಧಿಗೆ ಜಲೌಘಸ್ಪರ್ಧೆಯೊಳ್ ಬಾಧ್ಯಬಾಧಕಭಾವಂ ನೆಗಟಲ್ಕೆ ನಿಲ್ವ ತೆಱದಿಂದೆ (ಜಗಾ. ೦-೬೦) ; ಪ್ರಕಟಂ ತಾಂ ಹಾಸ್ಯರಸಪ್ರಕಾರಮದು ಮಾಱುಱುತೆಱದಿನೆಸೆಗುಂ (ಶೃಂಗಾರ. ೦-೬೯). [ಸಂ.]

**ಪ್ರಕಟಂಬೆಱು** (ಕ್ರಿ). ೧. ಸ್ಪಷ್ಟವಾಗು : ಪ್ರಕಟಂಬೆತ್ತಾಭಿಘಾತಂಬಡದು ಬಿಡದೆ ಶಮ್ಮಂ ಕ್ಷಮಾವೃತ್ತಿಯಿಂ ತಾಳ್ದಿ (ಕುಸುಮಾ. ೦-೯೩). ೨. ಹೆಸರುವಾಸಿಯಾಗು ; ಪ್ರಸಿದ್ಧವಾಗು : ಪ್ರಕಟಂಬೆತ್ತಿರ್ಪ ಪೊಂಗೋಂಟೆಯು ತೆನೆಯೆಸಪ್ಪುಗಳ್ . . . ತಾನೆನಲ್ಕೊಪ್ಪುಗುಂ (ರಾಜಶೇ. ೦-೨೩). [ಪ್ರಕಟ + ಪೆಱು]

**ಪ್ರಕಟಿಗೈ** (ಕ್ರಿ). ಸ್ಪಷ್ಟಪಡಿಸು; ವ್ಯಕ್ತಗೊಳಿಸು: ಅಲ್ಪವಿವು ಸಾಮಾನ್ಯವೆನೆ ಪ್ರಕಟಗೈಯುತ್ತ ತಮ್ಮತುಲಸುಖದುಃಖವೀವ ಶಕ್ತಿ (ಮುಕಿರಿ. ೯೯-೩). [ಪ್ರಕಟ + ಕೈ$_{1}$ (< ಕೆಯ್$_{1}$)]

**ಪ್ರಕಟಗೊಳಿಸು** (ಕ್ರಿ). = ಪ್ರಕಟಗೈ : "ಆಕಾರಃ, ಇಂಗಃ, ಇಂಗಿತಂ—೩ ಅಭಿಪ್ರಾಯವನ್ನು ಪ್ರಕಟಗೊಳಿಸುವ ಚೇಷ್ಟೆಯ ಹೆಸರುಗಳು" (ನಿಘಂ. ೩೬೦). [ಪ್ರಕಟ + ಕೊಳ್$_{1}$ + — ಇಸು$_{1}$]

**ಪ್ರಕಟಗೊಳ್ಳು** (ಕ್ರಿ). ಸ್ಪಷ್ಟವಾಗು ; ವ್ಯಕ್ತವಾಗು : ಈ ದುಷ್ಟರು ಮಾಡಿದ್ದ ಭ್ರಷ್ಟಾಚಾರಗಳೆಲ್ಲ ಈಗ ಒಂದೊಂದಾಗಿ ಪ್ರಕಟಗೊಳ್ಳುತ್ತಿವೆ (ರೂಢಿ). [ಪ್ರಕಟ + ಕೊಳ್ಳು$_{1}$ (< ಕೊಳ್$_{1}$)]

**ಪ್ರಕಟಣಾಲಯ** (ನಾ). ಪುಸ್ತಕ ಮುಂತಾದುವುಗಳನ್ನು ಮುದ್ರಿಸಿ ಪ್ರಕಾಶಪಡಿಸುವ ಕಾರ್ಯಾಲಯ : ಇಂದು ವಿವಿಧ ಪ್ರಕಟಣಾಲಯಗಳಲ್ಲಿ ಮುದ್ರಣವಾಗಿರುವ ರಾಮಾಯಣದ ಎಲ್ಲ ಪ್ರತಿಗಳಲ್ಲಿಯೂ . . . ೨೪ ಸಾವಿರ ಶ್ಲೋಕಗಳೇ ಕಾಣಬರುತ್ತವೆ (ವಾಲ್ಮೀ. ೬). [< ಸಂ. ಪ್ರಕಟನಾಲಯ]

**ಪ್ರಕಟಣೆ** (ನಾ). ೧. ಗ್ರಂಥ ಮುಂತಾದುವುಗಳನ್ನು ಮುದ್ರಿಸುವುದು,—ಪ್ರಕಾಶಪಡಿಸುವುದು : ಎಲ್ಲಕ್ಕಿಂತ ಮೊದಲು ಆಗಬೇಕಾಗಿರುವುದು ನಾಲ್ಕೂ ಶೂನ್ಯಸಂಪಾದನೆಗಳ ಪ್ರಕಟಣೆ (ಶೂನ್ಯಸಂ. ೦೯೬). ೨. ಯಾವುದಾದರೊಂದು ವಿಷಯವನ್ನು ಸಾರ್ವಜನಿಕರಿಗೆ ತಿಳಿಯಪಡಿಸಲು ಸರ್ಕಾರ ಅಥವಾ ಸಂಘಸಂಸ್ಥೆಗಳು ಹೊರಡಿಸುವ ತಿಳಿವಳಿಕೆಯ ಪತ್ರ ; ಘೋಷಣೆ : ಭೂಮಿಯ ಹಿಡುವಳಿಯ ಬಗ್ಗೆ ಸರ್ಕಾರವು ಒಂದು ಪ್ರಕಟಣೆಯನ್ನು ಹೊರಡಿಸಿದೆ (ರೂಢಿ). [< ಸಂ. ಪ್ರಕಟನ]

**ಪ್ರಕಟನ** (ನಾ). ೧. = ಪ್ರಕಟಣೆ ೧ : ನನ್ನ ಕಾವ್ಯ ಸದ್ಯದಲ್ಲೆ ಪ್ರಕಟನಕ್ಕೆ ಸಿದ್ಧವಾಗುತ್ತದೆ (ರೂಢಿ). ೨. = ಪ್ರಕಟಣೆ ೨ : ಮನೆಗಂದಾಯದ ವಿಷಯದಲ್ಲಿ ಸರ್ಕಾರಿ ಪ್ರಕಟನವೊಂದು ಇಂದು ಹೊರಬಿದ್ದಿದೆ (ರೂಢಿ). [ಸಂ.]

**ಪ್ರಕಟನೆ** (ನಾ). ೧. = ಪ್ರಕಟಣೆ ೧ : ಕನ್ನಡಸಾಹಿತ್ಯಪರಿಷತ್ತು ಉತ್ತಮಗ್ರಂಥಗಳ ಪ್ರಕಟನೆಯನ್ನು ಕೈಗೊಂಡಿದೆ (ರೂಢಿ). ೨. = ಪ್ರಕಟಣೆ ೨ : ರದ್ದಾದ ಸ್ಥಳಗಳಿಗೆ ಪುನರ್ವಣೆ ಚುನಾವಣೆ ನಡೆಯಲಿದೆ ಎಂದು ನಗರಸಭೆಯ ಅಧ್ಯಕ್ಷ ಶಿವಾಜಿರಾವರ ಪ್ರಕಟನೆ ಹೊರಬಿದ್ದಿತ್ತು (ಅಶಾಂ. ೨೬೧) ; ಮಕ್ಕಳ ಜೀವನದಲ್ಲಿ ಪರಿಣಾಮಕಾರಿಯಾಗುವಂತೆ ಶಿಕ್ಷಣ ನೀಡುವ ಸಂಘಸಂಸ್ಥೆಗಳಲ್ಲಿ . . . ಜಾಹೀರಾತು, ಪ್ರಕಟನೆ, ವಸ್ತುಪ್ರದರ್ಶನ . . . ಮುಂತಾದುವು ಪ್ರಧಾನವಾದವು (ಶಿಕ್ಷಣ. ೩೩). [ಸಂ. ಪ್ರಕಟನ]

**ಪ್ರಕಟಿತ** (ಗು). ೧. ಗೋಚರವಾದ ; ವ್ಯಕ್ತಗೊಂಡ : ಪ್ರಕಟಿತವಿಳಾಸನಧಿರಾಜಕುಮಾರಂ ನಳಿನಕೇತು ಕಂಡವರಂ (ಶಾಂತಿಪು. ೯-೦೦). ೨. ಪ್ರಸಿದ್ಧವಾದ ; ಜನಜನಿತವಾದ : ಪ್ರಕಟಿತಜನಪ್ರವಚನಪ್ರಕಾರದೊಳ್ ಸಾರಘೋರಸಂಸಾರಂ . . . ಪಂಚವಿಧಂ (ಸಮಯಪ. ೬-೬). (ನಾ). ೩. ಪ್ರಕಟಗೊಳ್ಳುವಂಥದು ; ಬಹಿರಂಗವಾಗುವಂಥದು : ಕರುಳ ಕಲೆ ಪ್ರಕಟಿತವುಂಟೆ . . . ದೇವಾ (ಅಕವ. ೬೨೩). ೪. ಪ್ರಸಿದ್ಧವಾದುದು : ಸುಕುಮಾರತರಾಕ್ಷರಪದನಿಕರವಿಶಿಷ್ಟಪ್ರಯೋಗಗತಮಪ್ಪುದದಾ ಸುಕುಮಾರವೆಂಬುದಕ್ಕುಂ ಪ್ರಕಟಿತಮದಱಾ ಪ್ರಯೋಗವಿಮಾ ತೆಱನಕ್ಕುಂ (ಕಬಿಸಾ. ೨-೬೦). [ಸಂ.]

**ಪ್ರಕಟಿತೋಕ್ತಿ** (ನಾ). ಸ್ಪಷ್ಟಪಡಿಸಲ್ಪಟ್ಟ ಮಾತು,—ವಚನ : ಪ್ರಕಟಿತೋಕ್ತಿ ವಿವಿಕ್ತಕಳಾಕಳಾಪಕ[ನು]ಪಾಹಿತಸಾಹಿತ್ಯವಿದ್ಯೆಯೊಳ್ (ಕಬಿಸಾ. ೩ ೨೦೬). [ಸಂ.]

**ಪ್ರಕಟಿಸು** (ಕ್ರಿ). ೧. ಪ್ರದರ್ಶಿಸು; ತೋರ್ಪಡಿಸು: ಇವಱಿಂ ಸಮ್ಯಗ್ದರ್ಶನಮುಮವಶ್ಯಮುಜ್ಜ್ವಳಿಕುಂ . . . ಅಂತದು ಕವಲ್ತು ಸಮ್ಯಕ್ಚಾರಿತ್ರಮುಂ

ಪ್ರಕಟಸುಗಂ (ಅಂಕ್ಷಿ. ೩-೩೯) ; ಸಕಲಸಾಮರ್ಥ್ಯಮಂ ಪ್ರಟಿಸುವ ಸಭೆಯೊಳಗೆ ಕುಲ್ಯಿರ್ದ ಸೌಂದರನ ಯಾವನಮುಮಂ ಕಂಡು (ಶಂಖಕ. ೩-೬೮); ಭೂಷಣಖಚಿತವಮೌಕ್ತಿಕಮರೀಚಿ ಪಗಲೊಳು ಜೊನ್ನಮಂ ಪ್ರಕಟಿಸೆ (ಶಂಕ್ಷಿ. ೬-೪). ೨. ಗ್ರಂಥ ಮೊದಲಾದಂವನ್ನು ಪ್ರಕಾಶಿಸು.—ಹೊರತರು: ಕೆಲವು ವಾರಪತ್ರಿಕೆ, ಮಾಸಪತ್ರಿಕೆಗಳಲ್ಲಿ ತನ್ನ ಲೇಖನಗಳನ್ನು ಪ್ರಕಟಿಸಿ ಪ್ರಭಾವಿ ಬರಹಗಾರ ಎಂದು ಎನಿಸಿಕೊಂಡಿದ್ದು ರಂಗಣ್ಣನವರಿಗೆ ಧೈರ್ಯ ತಂದುಕೊಟ್ಟಿತು (ಅಶಾ. ೧೦) ; ಪಠ್ಯಪುಸ್ತಕವನ್ನು ಸರ್ಕಾರವೇ ಪ್ರಕಟಿಸಲಿ (ಶಿಕ್ಷ. ೬೪೯). ೩. ಸರ್ವವಿದಿತವಾಗುವಂತೆ ಮಾಡು : ತಿಳಿಯಪಡಿಸು : ಅತ್ತಿಮಬ್ಬೆ . . . ದಾನಂ ಪೂಜೆ ಶೀಲಮುಪವಾಸಮೆಂಬಿವಂ ಪ್ರಕಟಿಸಿದಳ್ (ಅಜಿತ. ೧-೩೨). ೪. ಉಂಟಾಗು; ಹುಟ್ಟು; ಉದ್ಭವಿಸು: ವಾತ್ಸವ ನೆನೆದೆನೊ ಪಶಿಯೊಳಕಟು ಪ್ರಕಟಿಸಿತೆ ದುಷ್ಕರ್ಮಫಲವೆನಗೆ (ಕೊರಕಾ. ೩-೩-೬೪). [ ಪ್ರಕಟನ + — ಇಸು೩ ]

**ಪ್ರಕಟೀಕರಣ** (ನಾ). ಪ್ರಕಾಶಪಡಿಸುವುದು ; ವ್ಯಕ್ತಪಡಿಸುವುದು : ತೀರ್ಥಾಖ್ಯಾನಮೆಂಬುದು ದುರಿತವಿನಾಶಕಾಂಕ್ಷಿಗಳ್ ಸಂಸಾರಸಮುದ್ರಮನೀಸಲೆಂದು ಜಿನಪತಿಮುಖಕಮಲವಿನಿರ್ಗತಧರ್ಮಸಂತತಿಯಂ ಪ್ರಕಟೀಕರಣಂಗೆಯ್ವುದು (ಶಾಪುಂಪು. ೦೩). [ ಸಂ. ]

**ಪ್ರಕಟೀಕೃತ** (ಗು). ಪ್ರಸಿದ್ಧವಾದ : ಪರಿಗ್ರಹೀತ ಸಮ್ಯಗ್ದರ್ಶನ ಪ್ರಕಟೀಕೃತ ಕ್ಷಾಯಿಕ ಸಮ್ಯಗ್ದೃಷ್ಟಿಗಳುಮಾಗಿ ಬಂದು (ಶಾಪುಂಪು. ೧೦) ; ಪ್ರಕಟೀಕೃತ ನಿರ್ಮಲವಿನುತಕೀರ್ತಿಯಂ ಪುಣ್ಯಮೂರ್ತಿಯಂ ಬಾಲನಂ ಸುಕುಮಾರನೆಂದು ಪೆಸರಿಟ್ಟು ಕಾಂತೆ ತನಯಂಗೆ ಪಾಮಕರಣಂಗೆಯ್ದಾಳ್ (ಸುಕುಮಾ. ೧೦-೫೬) ; ಅದು . . . ಪ್ರಕಟೀಕೃತ ರಾಜಲೀಲೊ ದಯಮಲ್ತು (ಚಂದ್ರಪ್ರ. ೪-೪೨ ವ). [ಸಂ.]

**ಪ್ರಕರ** (ನಾ). ೧. ಗುಂಪು ; ಸಮೂಹ : “ ನಿಕರಂ . . . ಪ್ರಕರಮಾನೀಕಂ ಗಣಂ ಸಮಿತಿ ಸಮುದಯಂ ಪ್ರತತಿ ಸಂತತಿ ಸಮೂಹಂ ” (ಚುಂಗಣಾ. ೦೨೬-೦) ; ಶುಕ ಶಾರಿಕಾದಿ ವಿಹಗಪ್ರಕರಂ ಮುಂ ಕೇಳ್ದ ವಚನಮಂ ನುಡಿವುದು (ಕಾರಂಪು. ೬೪) : ಪ್ರಕರಾಂದೋಳಕಿರೀಟಪ್ರಕರಂ . . . ಆಗಿಂತು ಕರಂ ಮೆಚ್ಚುತ್ತಿರ್ದುದು ಸಲಸಭಾಜನಮುದಾ ಕುಮಾರನ ಮತಿಯಂ (ಕುಸುಮಾ. ೬-೩೨); ವಿಕಳ ದುರ್ಯೋಧನನು ನಿಗಮಪ್ರಕರಮೌಳಿಯ ಮಾಳಿಯತ್ತಲು ಸಾರ್ದು ಮಂಡಿಸಿದ (ಕುವ್ಯಾ. ಉ. ೦-೨೪). ೨. ಹೂಗೊಂಚಲು; ಪುಷ್ಪಗುಚ್ಛ. ೩. ಒಂದು ಬಗೆಯ ಸಂಗಂಧವಸ್ತು; ಅಗುರು. ೪. ನೆರವು; ಸಹಾಯ. ೫. ಬಳಕೆ; ಉಪಯೋಗ. ೬. ಗೌರವ. [ಸಂ.]

**ಪ್ರಕರಣ** (ನಾ). ೧. ಚೆನ್ನಾಗಿ ಮಾಡುವುದು. ೨. ಚೆನ್ನಾಗಿ ನಡೆಸಿಕೊಡುವುದು. ೩. ವಿವರಣೆ : ವ್ಯಾಖ್ಯಾನ. ೪. ಪ್ರಸ್ತಾವ: ಉಲ್ಲೇಖ : ಗಾಂಧೀಜಿಯವರ ಆತ್ಮಚರಿತ್ರೆಯಲ್ಲಿ ಅಗಸನ ಪ್ರಕರಣವೂ ಇದೆ (ದೇಶಕ್ಕ. ೩೪). ೫. ಸಂದರ್ಭ ; ಸನ್ನಿವೇಶ : ದಯವಿಟ್ಟು ಪ್ರಕರಣಕ್ಕೆ ಸಂಬಂಧಪಟ್ಟ ವಿಷಯವನ್ನು ಮಾತ್ರ ಕುರಿತು ಚರ್ಚೆಮಾಡಬೇಕಾಗಿ ವಿನಂತಿ (ಬಳಕೆ). ೬. ಯಾವುದಾದರೊಂದು ನಿರ್ದಿಷ್ಟ ವಿಷಯವನ್ನು ಪ್ರತಿಪಾದಿಸುವ ಅಥವಾ ವಿವರಿಸುವ ಗ್ರಂಥಭಾಗ; ಅಧ್ಯಾಯ : ಆತನ ರಾಜನೀತಿಯೂ ಅಷ್ಟಾಗಿ ಯಶಸ್ವಿಯಾಗಲಿಲ್ಲವೆಂದೂ ಹಿಂದಿನ ಪ್ರಕರಣದಲ್ಲಿ ತಿಳಿಸಲಾಗಿದೆಯಷ್ಟೆ (ಕೃಪಿಇ. ೦೦); ಭಗವದ್ಗೀತೆಯನ್ನು ಕುರಿತು ಬರೆದ . . . ಗ್ರಂಥ ಇತ್ತೀಚೆಗೆ ಪ್ರಕಟವಾಗಿದೆ. ‘ ಟಿಳಕರ ಗೀತಾರ್ಥ ’ವನ್ನು ಕುರಿತು ಒಂದು ಪ್ರಕರಣ ಅದರಲ್ಲಿದೆ (ರಮೇಶಾ. ೦೪೪). ೭. (ಅಹಿತಕರವಾದ) ಘಟನೆ ; ಹಗರಣ : ರಮಾನ ಹಿಂದೂ ಮುಂದೂ ಓಡಾಡುತ್ತಿದ್ದವರಿಗೆ ಕಡಮೆ ಇರಲಿಲ್ಲ. ಪ್ರಕರಣಗಳಾದುವು: ರಮಾ ಬೇಸತ್ತು ಅಧ್ಯಯನವನ್ನೇ ಬಿಟ್ಟು ಕೊಟ್ಟಳು (ಅಶ್ವತ್ಥ. ೩೪) ; ಊರಿನ ಘಟಿಂಗರ ಸಂಗಡ “ ಪ್ರಕರಣ ” ಮಾಡಿ ಇವಳು ಮನೆಗೆ ಬಂದು ಇಲ್ಲದ ಹಗರಣ ಮಾಡಿದರೆ ನಾವು ಹೆದರಿ ಮಲಗಲೇ? ರಾತ್ರಿ ಹೆರವರ ಮನೆಗೆ ಹೋಗಬೇಕು (ಬಾಳಕಾಡಾ. ೩೨). ೮. ಅವಕಾಶ; ಆಸ್ಪದ : ಯಾವುದೋ ಪ್ರಕರಣ ಬಂತು. ದಬಾಯಿಸಿದಿಟ್ಟಿ (ಬಳಕೆ). ೯. ಪೀಠಿಕೆ : ಮುನ್ನುಡಿ ; ಉಪಕ್ರಮ. ೧೦. [ಕಾವ್ಯಮೀ] ದಶರೂಪಕಗಳಲ್ಲಿ ಒಂದು ; ಕಾಲ್ಪನಿಕಕಥಾಂಶವನ್ನು ಹೊಂದಿರುವ, ಧೀರಶಾಂತನಾಯಕನುಳ್ಳ, ಇತರ ಲಕ್ಷಣಗಳಲ್ಲಿ ನಾಟಕವನ್ನು ಹೋಲುವ (ಮೃಚ್ಛಕಟಿಕ, ಮಾಲತೀಮಾಧವ ಮುಂತಾದ) ದೃಶ್ಯಕಾವ್ಯ : ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರವೀಥಿ, ಅಂಕ, ಈಹಾಮೃಗ ಎಂದು ರೂಪಕಗಳು ಹತ್ತು ವಿಧ (ಸಂಪಾಟ. ೨೯) : ಪ್ರಕರಣ. ಉದಾ:—ಮೃಚ್ಛಕಟಿಕಾ, ಮಾಲತೀಮಾಧವ (ಕೃಶಿಇ. ೨೦೪). ೧೧. [ತತ್ತ್ವಶಾ] ಪ್ರಮೇಯವನ್ನು ವಿಮರ್ಶಿಸುವ ವಾಕ್ಯಸಮೂಹ: ಪ್ರಕರಣವೆಂದರೆ ಯಾವುದಾದರೂ ಒಂದು ಪ್ರಮೇಯವನ್ನು ನಿರೂಪಿಸಲು ಹೊರಟ ವಾಕ್ಯಸಮೂಹ (ಶಾಕತ್ತ್ವ. ೨೬). ೧೨. [ನ್ಯಾಯಶಾ] ಒಂದು ನಾನಾರ್ಥವಾಚಕವಾದ ಪದಕ್ಕೆ ನಿಷ್ಕೃಷ್ಟವಾದ ಅರ್ಥವನ್ನು ಗೊತ್ತುಮಾಡಲು ಇರುವ ಸಂದರ್ಭ : ‘ಸೈಂಧವ ಬೇಕು’ ಎಂದು ಊಟಮಾಡುವ ಸಂದರ್ಭದಲ್ಲಿ ಹೇಳಿದರೆ ‘ಉಪ್ಪು, ಕುದುರೆ’ ಎಂಬ ಎರಡು ಅರ್ಥವುಳ್ಳ ‘ಸೈಂಧವ’ ಪದವು ಸಂದರ್ಭದಿಂದ ‘ಉಪ್ಪು’ ಎಂಬ ಅರ್ಥವನ್ನು ಮಾತ್ರ ಕೊಡುತ್ತದೆ: ಆತ್ಮಶಬ್ದವು . . . ಪ್ರಕರಣ, ಉಪಪದ ಮುಂತಾದ ಯಾವುದಾದರೊಂದು ಕಾರಣವಿದ್ದ ಹೊರತು ಅದು ಇಂಥ ಅರ್ಥದಲ್ಲಿಯೇ ಪ್ರಯುಕ್ತವಾಗಿದೆಯೆಂದು ತೀರ್ಮಾನ ಮಾಡುವುದಾಗಲಾರದು (ಬೃಹ್ಯ. ೧೩). [ಸಂ.]

**ಪ್ರಕರಣೆ** (ನಾ). = ಪ್ರಕರಣ ೧೦ : ನಾಟಕೆಯಲ್ಲಿ ವರ್ತಕಾದಿಗಳು ನಾಯಕರಾಗಿಯೂ ನಾಯಕನ ವಂಶದಲ್ಲಿ ಹುಟ್ಟಿದವಳೇ ನಾಯಿಕೆಯಾಗಿಯೂ ಇದ್ದರೆ ಅದೇ ಪ್ರಕರಣೆ (ಸಂಪಾಟ. ೩೩). [ಸಂ. ಪ್ರಕರಣೀ]

**ಪ್ರಕರಿ** (ನಾ). [ಕಾವ್ಯಮೀ] ದೃಶ್ಯಕಾವ್ಯಗಳಲ್ಲಿ ಬರುವ ದೃಶ್ಯವನ್ನು ರಮಣೀಯವನ್ನಾಗಿ ಮಾಡಲು ಸಾಧಕವಾದ ಐದು ಅರ್ಥಪ್ರಕೃತಿಗಳಲ್ಲಿ ನಾಲ್ಕನೆಯದು ; ಮುಂದೆ ಬರುವ ಘಟನೆಗೆ ಪೂರಕವಾಗಿರುವಂತೆ ನಾಟಕದಲ್ಲಿ ಅಳವಡಿಸಿರುವ ಪ್ರಾಸಂಗಿಕವೃತ್ತಾಂತ : ಪ್ರಾಸಂಗೀವೆಂದರೆ, ಮುಖ್ಯಕಥೆಗೆ ಅಂಗವಾಗಿ ಮಧ್ಯೆ ಬರತಕ್ಕ ಕಥೆ . . . ಪ್ರಾಸಂಗಿಕವು ದೊಡ್ಡದಾಗಿದ್ದರೆ ಅದಕ್ಕೆ ‘ಪತಾಕಾ’ ಎಂದೂ ಸ್ವಲ್ಪವಾಗಿದ್ದರೆ . . . ‘ಪ್ರಕರೀ’ಯೆಂದೂ ಹೆಸರು (ಕೃಶಿಇ. ೨೦೩). [ಸಂ. ಪ್ರಕರೀ]

**ಪ್ರಕರೀನಾಯಕ** (ನಾ). [ಕಾವ್ಯಮೀ] ನಾಟಕಾದಿಗಳ ಮಧ್ಯೆ ಬರುವ ಪ್ರಸಂಗದ ಪ್ರಧಾನವ್ಯಕ್ತಿ : ನಾಯಕ, ಪ್ರತಿನಾಯಕ, ಪತಾಕಾನಾಯಕ, ಪ್ರಕರೀನಾಯಕ, ಹೀಗೆ ಬೇರೆಬೇರೆ ಪಾತ್ರಗಳಲ್ಲಿ ಬೇರೆಬೇರೆ ರಸಗಳಿರುವಂತೆ (ಕೃಷ್ಣಾಕೋ. ೦೬೩ ಅಶಿ). [ಸಂ.]

**ಪ್ರಕರ್ಷ** (ಗು). ೧. ಶ್ರೇಷ್ಠವಾದ : ಅದು . . . ಪ್ರಕರ್ಷಾನೇಕ ವರ್ಷಾನುಗತಮಾಗಿಯುಂ ಅಚಿವಳಾಚರಣಪರಿಣತಮಲ್ತು (ಚಂದ್ರಪ್ರ. ೪-೪೨ ವ). (ನಾ). ೨. ಶ್ರೇಷ್ಠತೆ: ಅತಿಶಯತೆ. ೩. ಉತ್ಕರ್ಷ ; ಆಧಿಕ್ಯ ; ಹೆಚ್ಚಳ : ಸತ್ಕಮೆಂಬುದು ಅತ್ಯಂತ ಪ್ರಕರ್ಷದಿಂ ಲೋಭನ ಸ್ವಭಾವಮಂ ನಿವೃತ್ತಿಗೆಯ್ದು ನಡೆವುದು (ಧರ್ಮಾಮೃ. ೬-೩೨೮); ಕರವೊಸೆದು ನೋಡಿ ದಶಕಂಧರನಂ ಹರ್ಷಪ್ರಕರ್ಷದಿಂದೆನ್ನಂ ಖೇಚರಪತಿಗೆ ಕೊಟ್ಟನಾಂ ದಶಶಿರನ ಬೆಸಂಬಿಡದು ತಾಗಿದೆಂ ಲಕ್ಷ್ಮಣನಂ (ಕಂಪರಾಮಾ. ೦೪-೬೭): ಎಲೆ ಕೃಷ್ಣ ನಿನ್ನ ರೂಪಮಂ ಸ್ವಪ್ನಮಪ್ರತಿಷ್ಠೆಯಂ ಪ್ರಭಾವಪ್ರಕರ್ಷಮಂ

. . . ನೋಡಲ್ ನೀಂ ಪರದ್ರವ್ಯತತಿಳಾಸ್ವರೂಪವಾಗಿ ತೋರ್ಪೆ (ಜಾಂ. ೪-೬೧ ಪ) ; ಆಮ್ನಾಯಿಕೆಯಲ್ಲಿ ವಿಕಟಬಂಧದ ಪ್ರೇರ್ಪವೂ ಉಂಟು (ಕೃಷ್ಣಾಕೋ. ೦೯೩). ೪. ಶಕ್ತಿ ; ಬಲ. [ಸಂ.]

**ಪ್ರಕಲಿತ, ಪ್ರಕಳಿತ** (ಗು). ೧. ಚೆನ್ನಾಗಿ ಸೇರಿಕೊಂಡಿರುವ,–ಕೂಡಿಕೊಂಡಿರುವ : ಪರಮಮಹೇಶ್ವರಚರಣವಾರಿರುಹರೇಣುಪ್ರಕಲಿತವಿಭಾಸ್ವರಲಲಾಟನನಭವಭಕ್ತಿಸ್ಥಳಕಿರೀಟನನು ... ಕೊಂಡಾಡಿ (ಬಸವ. ೧೬–೬೯). ೨. ಜೋಡಿಸಿದ ; ಸೇರಿಸಿದ. **ಪ್ರಕಳಿತ** : (ನಾ). ೩. ವಾಸಕ್ಕೆ ಉಪಯುಕ್ತವಾದ ಸಾಮಗ್ರಿಗಳಿಂದ ಸುಸಜ್ಜಿತವಾದುದು : ಪೂರೊಳಗೆ ಗುರುಗಳಿಗಿರಲು ಪ್ರಕಳಿತವಪ್ಪ ಮನೆ ೧ ಯನ್ನಿನಿತುಮಂ ಸರ್ವ್ವಬಾಧ ಪರಿಹಾರವಾಗಿ ಬಿಟ್ಟರು (ಎಪಿಗ್ರಾ. IX-೧, ೨೫೬–೨೬ ; 1147). [ಸಂ.]

**ಪ್ರಕಳಿತ** 'ಪ್ರಕಲಿತ' ನೋ.

**ಪ್ರಕಾಂಡ** (ಗು). ೧. ದೊಡ್ಡದಾದ ; ಭಾರಿಯಾದ ; ಬೃಹದಾಕಾರವುಳ್ಳ : ಅವುಗಳ ಹಿಂದೆ ಐನೂರು ಪ್ರಕಾಂಡ ದೇಹವುಳ್ಳ ಮಹಾಬಲವುಳ್ಳ ಆನೆಗಳು ಗಂಭೀರವಾದ ನಡಿಗೆಯಿಂದ ಬಂದು ಪ್ರಾಸಾದಕ್ಕೆ ಎಳಭಾಗದಲ್ಲಿ ನಿಂತವು (ಕೋಟಿಜಾ. ೯೫) ; ಅವರಿಬ್ಬರಿಗೂ ಹಿಂಬದಿಯು ರಕ್ಷೆಯಾಗಿಸ್ತು ಆ ಪ್ರಕಾಂಡ ವೃಕ್ಷದ ದಿಂಡು (ಜುಲಿಯ. ೨೪೪). ೨. ಶ್ರೇಷ್ಠವಾದ ; ಉತ್ತಮವಾದ ; ಅತಿಶಯವಾದ. (ನಾ). ೩. ದೊಡ್ಡದು ; ಬೃಹತ್ತಾದುದು : ಸ್ನಾನ, ವ್ರತ, ಉಪವಾಸಗಳ ಅಕರ್ಮಕಾಂಡವು ಪ್ರಕಾಂಡವಾಗಿ ಬೆಳೆಯುದಿದ್ದರೆ ಅವರು ಬದುಕುವ ಬಗೆ ಹೇಗೆ ! (ಇತ್ಯ. ೬೬೬) ೪. ಉತ್ತಮವಾದುದು : ಒಳ್ಳೆಯದು. ೫. ಒಳ್ಳೆಯವನು ; ಉತ್ತಮನಾದವನು : "ಪ್ರಕಾಂಡಃ, ಉದ್ಗಃ—ಈ ೨ ಒಳ್ಳಿದಂ" (ಹಲಾಯು. ೩೨–೨೨೩). ೬. (ಉತ್ತರಪದವಾಗಿ ಬಂದಾಗ) ತನ್ನ ಜಾತಿಯಲ್ಲಿ ಅಥವಾ ವರ್ಗದಲ್ಲಿ ಬಹಳ ಮೇಲಾದವನು, —ಶ್ರೇಷ್ಠನಾದವನು : ಪರ್ವತಶರಮುಂ ಖಂಡಿಸಿದನಕಾಂಡತಟತ್ಕಾಂಡಾಭವವಿಪ್ರಕಾಂಡಕಾಂಡದ ಕೃಷ್ಣಂ (ಜಗನ್ನಾ. ೦೪–೬೭) ; ಸರ್ವಜ್ಞನು ಕನ್ನಡಿಗರ 'ತಿರುವಳ್ಳುವರ್' ಎಂದರು ಪಂಡಿತಪ್ರಕಾಂಡ ಎ. ಆರ್. ಕೃಷ್ಣಶಾಸ್ತ್ರಿಗಳು (ಜನಪ. ೬೬೦). ೭. ಮರದಲ್ಲಿ ಬೇರಿನಿಂದ ಕೊಂಬೆಯವರೆಗೆ ಇರುವ ಭಾಗ ; ಕಾಂಡ : "ಮರದ ಹನೆ (ಪಣೆ?)ಯಿಂ ಕೆಟಗೆ ಪ್ರಕಾಂಡಮೆಂಬುದು" (ಹಲಾಯು. ೩೦–೨೪೮). ೮. ಕೊಂಬೆ ; ಗೆಲ್ಲು ; ರೆಂಬೆ : "ಆ ಮರನ ಕವಲೊತ್ತು ಪ್ರಕಾಂಡಮೆನಿಸಿಕ್ಕು" (ಶಬ್ದಮಣಿ. ೩೨–೩). ೯. ಒಂದು ಬಗೆಯ ಸರ. ೧೦. ಮೊಳಕ್ಕೆಯ ಮೇಲುಭಾಗ : "ಪ್ರಕಾಂಡಮೆಂಬುದು ಮೊ(ಬ)ಣಕ್ಕೆಯಿಂದ ಮೇಗಣ ಭಾಗ" (ಹಲಾಯು. ೬೬–೬೬೯) ; "ಆ ಮೊಬಕ್ಕೆಯ ಮೇಲು ಪ್ರಕಾಂಡಮೆನಿಸಿಕ್ಕು" (ಶಬ್ದಮಣಿ. ೬೫–೯). ೧೧. ತಾವರೆಯ ದಂಟು ; ಮೃಣಾಳ. ೧೨. ಕೈಬೆರಳು. ೧೩. ಕಾಲದ ಒಂದು ಗಣನೆ. ೧೪. ಕಿರಣ. ೧೫. ಒಂದು ಬಗೆಯ ಮರ : "ಕಿರಣ ಮೃಣಾಳ ಕಾಲ ತರುಭೇದ ಕರಾಂಗುಳಿಗಳ್ ಪ್ರಕಾಂಡಮಕ್ಕು" (ಅಭಿಧಾನ. ೬೦). [ಸಂ.]

**ಪ್ರಕಾಂಡಕ** (ಗು). ೧. ಶ್ರೇಷ್ಠವಾದ. (ನಾ). ೨. ರೆಂಬೆ ; ಟೊಂಗೆ. ೩. ಒಂದು ಬಗೆಯ ಸರ ; "ಮಧ್ಯದಲ್ಲಿ ಕ್ರಮವಾಗಿ ದೊಡ್ಡ ಐದು ಮುತ್ತುಗಳಿರುವ ಹಾರ" (ಅಂಶು. ೬೦೬ಕ) : ಪ್ರತ್ಯೇಕಶೀರ್ಷಕೋಪಶೀರ್ಷಕಾವಘಾಟಕಪ್ರಕಾಂಡಕತರಲತರಬಂಧೋಪವದಮಚಕಸಮೋತಂಗಳಾಗಿ (ಅಂಶು. ೬-೩೪ ಪ). [ಸಂ.]

**ಪ್ರಕಾಮ** (ನಾ). ೧. ಹೆಚ್ಚಾದ ಅಪೇಕ್ಷೆ ; ಅತ್ಯಾಸೆ. ೨. ಹೆಚ್ಚಾದ ವಿಷಯಾಭಿಲಾಷೆ ; ಭೋಗಾಸಕ್ತಿ. ೩. ಆನಂದ ; ಹಿಗ್ಗು. [ಸಂ.]

**ಪ್ರಕಾಮಂ** (ಅ). ೧. ಅಧಿಕವಾಗಿ ; ಹೇರಳವಾಗಿ ; ಯಥೇಚ್ಛವಾಗಿ : "ಕಾಮಂ, ಪ್ರಕಾಮಂ, ಪರ್ಯಾಪ್ತಂ, ನಿತಾಂತಂ, ಭೃಶಂ, ಅತ್ಯರ್ಥಂ, ಅತಿಮಾರ್ಯಾದಂ, ಅತಿವೇಳಂ—ಈ ೮ ಹಿರಿದಾಗಿರ್ದುದು" (ಹಲಾಯು. ೦೦೪–೩೩) : ಸಂತಮಿರೆಂದು ಪೂಣ್ದು ಕಾಮಂ ಪ್ರಕಾಮಂ ತನ್ನ ಪುಸಿವಡೆ ಪೆರಸು ತಪೋವನದತ್ತ ಸ್ವೈರತಾತುವಿರ್ದಂ (ರಾಮಾಶ್ವ. ೩೩–೦೬). ೨. ಇಷ್ಟಬಂದಂತೆ ; ಸ್ವೇಚ್ಛೆಯಾಗಿ. ೩. ಸಂತೋಷವಾಗಿ. ೪. ತೃಪ್ತಿಯಾಗುವಂತೆ. [ಸಂ.]

**ಪ್ರಕಾರ** (ನಾ). ೧. ರೀತಿ ; ವಿಧಾನ ; ಬಗೆ : ಸುಕುಮಾರನೆಂಬ ಪೆಸರೀ ಸುಕುಮಾರಂಗೀ ಸಮಸ್ತಧಾರಿಣಿಯೊಳ್ ಸಾರ್ಥಕಮಾದುದೆಂದು ನಾನಾಪ್ರಕಾರದಿಂದಂ ಪ್ರಶಂಸೆಗೆಯ್ವಂ ಭೂಪಂ (ಸುಕುಮಾ. ೦೦–೩೬) ; ಲ್ಯೂಸಿ ಭಾರತದಲ್ಲಿ ಕಾಣದ ಒಂದು ನವೀನಪ್ರಕಾರವನ್ನು ವಿವರಿಸುತ್ತಾಳೆ (ಸಮಾಜ. ೦೬ ೬೬೪). ೨. ಸಮಾನತೆ ; ಸಾಮ್ಯ ; ಸಾದೃಶ್ಯ : "ಪ್ರಕಾರಃ—೧. ಬೇರೆಯಾಗಿರುವಿಕೆ. ೨. ಹೋಲ್ಕೆ" (ಸಿದ್ಧಾಂ. ೪೦೨) ; ಅಂತಿಂತಂತೆಂತೆಂಬಿವು ತಾಂ ಪ್ರಕಾರಕಾರ್ಥಂಗಳ್ (ಶಬ್ದ. ೩೨೦). ೩. ವಿಶಿಷ್ಟತೆ ; ವೈಶಿಷ್ಟ್ಯ. ೪. ಭೇದ ; ವ್ಯತ್ಯಾಸ. ೫. [ತತ್ತ್ವಶಾ] ಗುಣವಿಶಿಷ್ಟವಾದ ವಸ್ತುವಿನ ಗುಣ,—ಧರ್ಮ : ಈ ಜಗತ್ತು ಪರಮಾತ್ಮನಿಗೆ ಶರೀರವಾಗಿ ಅಥವಾ ಪ್ರಕಾರವಾಗಿರುವುದರಿಂದ ಉಬ್ಬರ–ಇಳಿತಗಳು, ಸುಖ–ದುಃಖಗಳು . . . ನಡೆಯುತ್ತ ಇದ್ದರೂ ಪರಮಾತ್ಮನಿಗೆ ಲೇಪವಿಲ್ಲ (ಭಾರತ. ೨೬೦). [ಸಂ.]

**ಪ್ರಕಾರವಾಚಕ** (ನಾ). [ವ್ಯಾಕ] ನಾಮಪದದ ಬಗೆಗಳಲ್ಲಿ ಒಂದು : ಇಂಥದು ಇಂಥವನು ಎಂಬ ಶಬ್ದಗಳು ನಾವು ಹೆಸರು ಹೇಳುವ ವಸ್ತುವಿನ ಗುಣ ಯಾವುದೇ ಆಗಿರಲಿ, ಅದರ ಪ್ರಕಾರವನ್ನು (ಎಂದರೆ ರೀತಿಯನ್ನು) ಹೇಳುತ್ತವೆ. ಅಂಥದು ಎಂಬ ಶಬ್ದವೂ ಇದೇ ಬಗೆಯ ಗುಣವಾಚಕ. (ಇವನ್ನು ಪ್ರಕಾರವಾಚಕಗಳೆಂದು ಕರೆಯುವುದುಂಟು) (ಕನ್ನಡ. ೨೬). [ಸಂ.]

**ಪ್ರಕಾರಾಂತರ** (ನಾ). ೧. ಬೇರೆ ರೀತಿ ; ಬೇರೆ ವಿಧಾನ : "ಆವರೆ ನಿಮಗೆ ಮನಸ್ಸಿಲ್ಲದಿದ್ದರೆ ತೋದರ ತೆಗೆದುಕೊಳ್ಳಬೇಕಾಗಿಲ್ಲ" ಎಂದವಳು ಪ್ರಕಾರಾಂತರವಾಗಿ ಮಹಿತು ಕೂಡಿಸಿದಳು (ಭುವನ. ೨೨೦). ೨. ಪ್ರತ್ಯೇಕ ; ಅನ್ಯ : ಆಂಜನೇಯನೂ ಅವನ ಕಡೆಯ ಲಕ್ಷಗಟ್ಟಲೆ ವಾನರರೆಲ್ಲರೂ . . . ಮಾನವರೆ ಹೊರತು ಪ್ರಕಾರಾಂತರವಾಗಿರಲಾರರು (ಭಾರತ. ೮೪). [ಸಂ.]

**ಪ್ರಕಾರ್ಯ** (ನಾ). ಕೆಲಸ ; ಕೃತ್ಯ : ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದಾದರೂ ವಿಧಿಯಿಂದ . . . ಯಾವುವಾದರೂ ಪ್ರಕಾರ್ಯಗಳನ್ನು ರಾಷ್ಟ್ರಪತಿಯವರಿಗೆ ವರ್ಗಾಯಿಸುವಂತೆ ಭಾವಿಸತಕ್ಕುದಲ್ಲ (ಭಾರಾಸ. ೨೬). [ಸಂ.]

**ಪ್ರಕಾಶ** (ಗು). ೧. ಹೊಳೆಯುವ ; ಪ್ರಕಾಶಿಸುವ. ೨. ಕಣ್ಣಿಗೆ ಕಾಣುವ ; ತೋರುವ. ೩. ಸ್ಫುಟವಾದ ; ನಿಚ್ಚಳವಾದ. ೪. ಹೆಸರುವಾಸಿಯಾದ ; ಪ್ರಸಿದ್ಧವಾದ. ೫. ಬಹಿರಂಗವಾದ. ೬. ಅರಳಿದ. (ನಾ). ೭. ಬೆಳಕು ; ಹೊಳಪು ; ಕಾಂತಿ : ದೇವಿ ನೀಂ . . . ಪ್ರಕಾಶ ಗರ್ಭಪ್ರಭೆಯಂತೆಯುಂ . . . ಮಹತ್ತ್ವಮಂ ಪಡೆದೆ (ಜಗನ್ನಾ. ೨–೯೬೮). ೮. ಬಿಸಿಲು ; ಸೂರ್ಯಾತಪ : "ಪ್ರಕಾಶಃ, ದ್ಯೋತಃ, ಆತಪಃ—೩ ಬಿಸಿಲಿನ ಹೆಸರು" (ಸಿದ್ಧಾಂ. ೩೩). ೯. ಕಣ್ಣಿಗೆ ಕಾಣುವುದು ; ತೋರುವುದು : "ವಿಶದಃ, ಪ್ರಕಟಂ, ಸ್ಪಷ್ಟಂ, ಪ್ರಕಾಶಂ, ಸ್ಫುಟಂ—೫ ಅಬಿಯಲ್ಪರ್ಪು(ಹು)ದು" (ಹಲಾಯು. ೦೨೪–೬೬) ; ಲೋಕದಲ್ಲಿ ಸಕಲವಸ್ತುಗಳಲ್ಲೂ ಅಸ್ತಿತ್ವ, ಪ್ರಕಾಶ, ಇಷ್ಟತ್ವ, ನಾಮ, ರೂಪ—ಈ ೫ ಅಂಶಗಳು ವ್ಯವಹರಿಸಲ್ಪಡುವುವು (ಹಿಂದೂಸಾ. ೨೨೨) ; ಅನಂತರ ನವೀನ ನಾಗರಿಕತೆಯೊಂದರ ಇರವು ಪ್ರಕಾಶಕ್ಕೆ ಬಂದಿತು

(ಧ್ವಾಲೋ. ೨೨). ೧೦. ಕೀರ್ತಿ: ಪ್ರಸಿದ್ಧಿ. ೧೧. ಸಾಟಿ: ಸಮಾನ: "ಸದೃಕ್ . . . ಪ್ರಕಾಶಂ, ಪ್ರತಿಮಂ, ಪ್ರಕಾರಂ, ತುಲ್ಯಂ, ಸಮಂ, ಸನ್ನಿಭಂ—ಈ ೧೧ ಸರಿ" (ಕರಾಯು. ೦೬೫–೯). ೧೨. ಬಯಲು. ೧೩. ಗ್ರಂಥದ ಪರಿಚ್ಛೇದ. ೧೪. ಅರಿವು; ಜ್ಞಾನ. ೧೫. ಒಂದು ಬಗೆಯ ಲೋಹ; ಕಂಚು. ೧೬. [ನಾಟ್ಯ] ಎಲ್ಲರಿಗೂ ಕೇಳಿಸುವಂತೆ ಪಾತ್ರಗಳು ಹೇಳುವ ಮಾತು: ✻ ಅಭಿನಯಕಾಲದಲ್ಲಿ ಪಾತ್ರಗಳು ಮನಸ್ಸಿನಲ್ಲಿ ಹೇಳುವ ಮಾತು (ಸ್ವಗತ, ಆತ್ಮಗತ), ಎಲ್ಲರಿಗೂ ಕೇಳುವಂಥದು (ಸರ್ವಶ್ರಾವ್ಯ, ಪ್ರಕಾಶ), ಕೆಲವರಿಗೆ ಮಾತ್ರ ಕೇಳಿಸಬೇಕಾದುದು (ನಿಯತಶ್ರಾವ್ಯ)—ಎಂಬ ಮೂರು ಬಗೆಯ ಕಥಾಂಶ(ವಾಕ್ಯ)ಗಳಿವೆ: ದೇವಿ . . . (ಪ್ರಕಾಶವಾಗಿ, ವಾಸುದೇವನಂ ನೋಡಿ) . . . ಅಲ್ಲಿಂದಂ ಪೋಪಂ (ಚಿತ್ರಗೋ. ೩೬); ರಾಜಂ . . . (ಪ್ರಕಾಶವಾಗಿ) ಎಲೌ ಪೂಜ್ಯರೆ . . . ನಾನು ಆಶ್ರಮವಾಸಿಗಳ ನಿರ್ವಿಘ್ನವಾದ ಕ್ರಿಯೆಯನ್ನು ತಿಳಿಯುವುದಕ್ಕೆ ಈ ಧರ್ಮಾರಣ್ಯಕ್ಕೆ ಬಂದಿರುವೆನು (ಶಾಕುಂತ. ೦೩–೦೪); ಪ್ರಕಾಶ—ಎಲ್ಲರೂ ಕೇಳಬಹುದಾದದ್ದು (ಶ್ರಾವ್ಯ) (ಸಂಶಾಟ. ೦೨). ೧೭. [ಜೈನ] ಭಿನ್ನವಾದ ಬಾಹ್ಯಪದಾರ್ಥಗಳ ಜ್ಞಾನ,–ಅರಿವು: ಪ್ರಕಾಶವೆಂದರೆ ವ್ಯವಹಾರಕ್ಕೆ ಬೇಕಾದ ಯೋಗ್ಯತೆ . . . ಜ್ಞಾನಕ್ಕೆ ವಿಚಿತ್ರಶಕ್ತಿಯೂ ವಿಚಿತ್ರವೇಗವೂ ಇರುವುದರಿಂದ ಅಂತರ ಬಾಹ್ಯವಸ್ತುಗಳ ಸಂಬಂಧವೇ ಪ್ರಕಾಶವೆಂದು ತಿಳಿಯಬೇಕು (ಹಿಂದಸಾ. ೬೩). ೧೮. [ಶೈವ] ಪರಮಶಿವನಲ್ಲಿರುವ ಒಂದು ಅಸಾಧಾರಣಧರ್ಮ: ಪರಮಶಿವನೇ ಎಲ್ಲಾ ಸೃಷ್ಟಿಗೂ ಕಾರಣನಾದವನು . . . ಪ್ರಕಾಶ ವಿಮರ್ಶಮಯನು. ಪ್ರಕಾಶವೆಂದರೆ ತನ್ನ ಶಕ್ತಿಪ್ರಸಾರ (ಶಾರದ. ೨೦೦). [ಸಂ.]

**ಪ್ರಕಾಶಕ** (ಗು). ೧. ಬೆಳಕು ಬೀರುವ; ಹೊಳೆಯುವ: ದೀಪದ ಪ್ರಕಾಶಕಶಕ್ತಿಯನ್ನು (illuminating Power) ತಿಳಿಯಬೇಕಾದರೆ . . . ಅವುಗಳಿಂದುಂಟಾದ ಪ್ರಕಾಶಸಾಂದ್ರತೆಗಳನ್ನು ಹೋಲಿಸಬೇಕು (ಭೌತಿ. ೦೫೭). ೨. ಬಹಿರಂಗಗೊಳಿಸುವ; ಹೊರಗೆಡಹುವ. ೩. ವ್ಯಕ್ತಪಡಿಸುವ. ೪. ವಿಶದೀಕರಿಸುವ. ೫. ಹೆಸರುವಾಸಿಯಾದ; ಪ್ರಸಿದ್ಧವಾದ. (ನಾ). ೬. ಸೂರ್ಯ. ೭. ಗ್ರಂಥಗಳನ್ನು ಪ್ರಕಟಿಸುವವನು: ಕ್ರಮೇಣ ಪ್ರಕಾಶನೋದ್ಯಮದ ಮೂರು ಮುಖಗಳಾದ ಮುದ್ರಕ, ಪ್ರಕಾಶಕ, ಪುಸ್ತಕವ್ಯಾಪಾರಿ ಬೇರೆ ಬೇರೆಯಾದರು (ಕಸಾಕೋ. XI. ೩೦೬). ೮. ವ್ಯಾಖ್ಯಾನಕಾರ. ೯. ಸಂಶೋಧಕ. ೧೦. ಒಂದು ಬಗೆಯ ಖನಿಜ; ರಂಜಕ: ಸುಣ್ಣ, ಕಬ್ಬಿಣ, ಪ್ರಕಾಶಕ ಮುಂತಾದ ಖನಿಜಗಳು . . . ಎಲುವು, ಕೂದಲು ಮುಂತಾದ ಅವಯವಗಳನ್ನು ಪೋಷಿಸುತ್ತದೆ (ಋುಂಶರು. ೫–೦೬೩). [ಸಂ.]

**ಪ್ರಕಾಶಗೊಳಿಸು** (ಕ್ರಿ). ೧. ಬೆಳಕುಂಟಾಗುವಂತೆ ಮಾಡು: ಅವಳು ದೀಪದ ಕುಡಿಯನ್ನು ಮುಂದೂಡಿ ಪ್ರಕಾಶಗೊಳಿಸಿದಳು (ಕಜಿ). ೨. ಹೊರಹೊಮ್ಮಿಸು: ಪ್ರಬೋಧನಂ, ಅನುಬೋಧಃ–೨ ಸುಗಂಧದ್ರವ್ಯಗಳಲ್ಲಿ ಅಡಗಿಕೊಂಡಿರುವ ಪರಿಮಳಾದಿಗಳನ್ನು ಪ್ರಕಾಶಗೊಳಿಸುವ ತೈಲಾದ್ಯುತ್ತೇಜಕ ಸಾಮಗ್ರಿಯ ಹೆಸರು (ಸಿದ್ಧಾಂತಿ. ೨೦೬).
[ಪ್ರಕಾಶ + ಕೊಳ್$_1$ + — ಇಸು$_3$]

**ಪ್ರಕಾಶಗೊಳ್ಳು** (ಕ್ರಿ). ೧. ಬೆಳಕಾಗು: ಹಿಂದೆ ಮೈಸೂರು ಮಹಾರಾಜರು ಸಿಂಹಾಸನವನ್ನು ಏರುತ್ತಿದ್ದಂತೆಯೇ ಇಡೀ ಅರಮನೆಯು ವಿದ್ಯುದ್ದೀಪಗಳಿಂದ ಪ್ರಕಾಶಗೊಳ್ಳುತ್ತಿತ್ತು (ಜಿ). ೨. ಬಹಿರಂಗವಾಗು; ಎಲ್ಲರಿಗೂ ತಿಳಿಯುವಂತಾಗು: ಅವನ ಭ್ರಷ್ಟಾಚಾರಗಳೆಲ್ಲ ಈಗ ಪ್ರಕಾಶಗೊಳ್ಳುತ್ತಿವೆ (ಜಿ). [ಪ್ರಕಾಶ + ಕೊಳ್ಳು$_1$ (<ಕೊಳ್$_1$)]

**ಪ್ರಕಾಶನ** (ನಾ). ೧. ಹೊಳೆಯುವಿಕೆ; ಪ್ರಕಾಶಿಸುವಿಕೆ: ಆದಿತ್ಯನು ಸಕಲ ಜಗತ್ತನ್ನೂ ತನ್ನ ಪ್ರಕಾಶನಾದಿಕರ್ಮಗಳಿಂದ ಸರ್ವತ್ರ ನೋಡುತ್ತಾನೆ (ಋಗ್ವೇ. ೨೬೭). ೨. ಗ್ರಂಥ, ಪತ್ರಿಕೆ ಮುಂತಾದುವುಗಳ ಪ್ರಕಟನೆ: ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗ ತನ್ನದೇ ಆದ ಪ್ರಕಾಶನ ಉದ್ಯಮವನ್ನು ನಿರ್ವಹಿಸುತ್ತಿದೆ (ಕಸಾಕೋ. XI. ೩೦೯); ಈ ಸುಲಭಸಾಹಿತ್ಯದ ದಿನಗಳಲ್ಲಿ, ಪ್ರಕಾಶನಕಾರ್ಯದಲ್ಲಿ ಧ್ಯೇಯವಾದಿತ್ವವೆಂದರೆ ಅದೊಂದು ಮರೀಚಿಕೆಯಾಗಿದೆ (ಕಸಾಕೋ. VI. ಪ್ರಕಾಶಕರ ಜುತಿ). ೩. ಪುಸ್ತಕ ಮೊದಲಾದುವನ್ನು ಪ್ರಕಟಿಸುವ ಸಂಸ್ಥೆ: ಭಾರತೀಯಜ್ಞಾನಪೀಠ ಪ್ರಕಾಶನವು ಅನೇಕ ಪಾಂಡಿತ್ಯಪೂರ್ಣಗ್ರಂಥಗಳನ್ನು ಪ್ರಕಟಿಸಿದೆ (ಕಜಿ). [ಸಂ.]

**ಪ್ರಕಾಶಪಡಿಸು** (ಕ್ರಿ). ಹೊರಗೆಡಹು: ಬಹಿರಂಗಗೊಳಿಸು: ಭಾರತದ ಇತಿಹಾಸ ಮಹಾಪುರುಷರ ಆವಿರ್ಭಾವವನ್ನು ಪ್ರಕಾಶಪಡಿಸುತ್ತಿದೆ (ಹುಕ್ಕಾರ. ೦೦೫ ೩೯೦೯); ಅಗತ್ಯಕಾಲ ಪ್ರಾಪ್ತವಾದಾಗ ದೇವತೆಗಳು ತಮ್ಮಿಂದ ರಕ್ಷಿತವಾದ ರಹಸ್ಯವನ್ನು ಲೋಕಕ್ಕೆ ಪ್ರಕಾಶಪಡಿಸುತ್ತಾರೆ (ಕಹಂಶಾ. ೬).
[ಪ್ರಕಾಶ + ಪಡಿಸು]

**ಪ್ರಕಾಶಿತ** (ಗು). ೧. ಪ್ರಕಾಶಗೊಳಿಸಿದ; ಬೆಳಗಿಸಿದ. ೨. ಪ್ರಸಿದ್ಧಪಡಿಸಿದ. ೩. ಪ್ರಕಾಶಗೊಂಡ. ೪. ಬಹಿರಂಗವಾದ; ಎಲ್ಲರಿಗೂ ತಿಳಿದ. ೫. ತೋರಿಸಿದ: ಪ್ರದರ್ಶಿಸಿದ. [ಸಂ.]

**ಪ್ರಕಾಶಿಸು** (ಕ್ರಿ). ೧. ಹೊಳೆ; ಬೆಳಗು: ಕನೋತಿ, ಕನುತೇ= ಪ್ರಕಾಶಿಸಿದಪಂ (ಶಾಕಶ. ೨೯೦). ೨. ವ್ಯಕ್ತವಾಗು; ಪ್ರಕಟವಾಗು: ಸ್ಫುರತ್=ಪ್ರಕಾಶಿಸುವ, ಅನುಕೃತಿಗಂ—ಅನುಕರಣಶಬ್ದಕ್ಕೆಯುಂ (ಕಶಶ. ೬೦ ೩೯೪); ನಿನ್ನಲ್ಲಿ ಪ್ರಶ್ನಾರೂಪವಾಗಿ, ನನ್ನಲ್ಲಿ ಉತ್ತರರೂಪವಾಗಿ ಪ್ರಕಾಶಿಸುವುವಲ್ಲವೂ ಒಂದೇ ಶಕ್ತಿಯ ಕ್ರಿಯೆ (ಕಹಂಶಾ. ೯೯).
[ಪ್ರಕಾಶನ + — ಇಸು$_3$]

**ಪ್ರಕೀರ್ಣ** (ಗು). ೧. ತುಂಬಿದ; ಕಿಕ್ಕಿರಿದ: ಅದಟ ಪೊಲಪೊಲ ವಿತಾಳ ಕನಕಕೃತಕಗಿರಿಗಳಿಂ ಫಳಪ್ರಕೀರ್ಣತರುಗಳಿಂ (ಕಂಶಭಾ.೦–೩೬ ೮೧೪); ಮರುದುದ್ಧೂತಪಯಃಪ್ರಕೀರ್ಣಕಣಲಾಜಂ ಮೇಲೆ ಸಾಲಿಟ್ಟು (ರಾಜಶೇ. ೦೦–೬೨). ೨. ಹರಡಿಕೊಂಡಿರುವ; ಕ್ರಮವಾಗಿರದ; ಅಸ್ತವ್ಯಸ್ತಗೊಂಡ. ೩. ಮಿಶ್ರಗೊಳಿಸಿದ; ಬೆರಸಿದ. ೪. ನಾನಾವಿಷಯಗಳನ್ನು ಸೇರಿಸಿ ರಚಿಸಿದ. ೫. ಎಸೆದ. ೬. ಸಂಬಂಧವಿಲ್ಲದ; ಅಸಂಗತವಾದ. ೭. ಸಡಿಲವಾದ; ವಿರಳವಾದ. ೮. ಅಲ್ಲಾಡುತ್ತಿರುವ; ಅಲುಗಾಡುತ್ತಿರುವ. (ನಾ). ೯. ತುಂಬಿರುವಿಕೆ; ಭರ್ತಿಯಾಗಿರುವಿಕೆ: ಎಸೆವ ಕೇತನಾನೀಕಪ್ರಕೀರ್ಣದೊಳಾತು ತೋಱುವ (ಶಶಕ. ೬–೨೦). ೧೦. (ವಸ್ತುವು) ತುಂಬಿಕೊಂಡಿರುವುದು; ವ್ಯಾಪ್ತವಾಗಿರುವುದು: ವಿಚಿತ್ರಜಿನೇಂದ್ರಪ್ರತಿಕೃತಿಪ್ರಕೀರ್ಣಮುಂ . . . ಆಗಿ . . . ಪೆಂಪಿಂದಗುಂದಲೆಯಾಗಿರ್ದುದು ದೇವದಂಪತಿರತಿಶ್ರೀಸುಂದರಂ ಮಂದರಂ (ಆದಿಪು. ೦–೪೯ ವ). ೧೧. ಹೊಂದಾಣಿಕೆಯಿಲ್ಲದ ವಿವಿಧ ವಿಷಯಗಳಿಂದ ಕೂಡಿದ ಗ್ರಂಥಭಾಗ: ವ್ಯವಹಾರಕಾಂಡದಲ್ಲಿ . . . ಸ್ತ್ರೀಸಂಗ್ರಹಣ, ಪ್ರಕೀರ್ಣ ಎಂಬ ೨೫ ಪ್ರಕರಣಗಳಿವೆ (ಶಾರದ. ೬೨): ೧೯ನೆಯ ಭಾಗ. ಪ್ರಕೀರ್ಣ (ಶಾರಾಕ. ೨೦೪). [ಸಂ.]

**ಪ್ರಕೀರ್ಣಕ** (ಗು). ೧. ಹರಡಿಕೊಂಡಿರುವ; ಚೆಲ್ಲಾಪಿಲ್ಲಿಯಾಗಿರುವ. (ನಾ). ೨. ಮುಖ್ಯವಿಷಯಗಳನ್ನು ಹೇಳಿದ ಮೇಲೆ ಉಳಿದಿರುವ ಭಿನ್ನವಾದ ಸಣ್ಣಸಣ್ಣ ವಿಷಯಗಳು ಮತ್ತು ಅವುಗಳನ್ನು ವಿವರಿಸುವ ಗ್ರಂಥಭಾಗ; ಸಂಕೀರ್ಣಪ್ರಕರಣ: ಮುನ್ನ ಪೇೞ್ದೆಯುಂ ಪೇೞ್ದರ್ಥಂಗಳಂ ವಿಶ್ಲೇಷಿಸಿ ಪೇೞ್ವುದು ಪ್ರಕೀರ್ಣಕಮೆಂಬುದು ತಾತ್ಪರ್ಯಂ (ಲೀಲಾವ. ೩೦–೦). ೩. (ದೇವರು, ರಾಜ ಮೊದಲಾದವರಿಗೆ ಬೀಸುವ) ಚಾಮರ: "ಚಾಮರಂ, ಪ್ರಕೀರ್ಣಕಂ—ಈ ೨ ಸೀಗುರಿ" (ಕರಾಯು.

೬೦-೨೬೯) ; "ಸುತ್ತ ಕೆದಱುವ ಚಾಮರಂ ಪ್ರಕೀರ್ಣಕವಕ್ಕುಂ" (ಶಾಂತಿಪು. ೬೬-೯). ೪. [ಜೈನ] ಪ್ರಮಾಣಗಳಲ್ಲಿ ಒಂದು : ಭಾಗಂಬೋಗದೆ ಉಬ್ಬೆದಕ್ಕರಂಗಳೆಲ್ಲಂ ಪ್ರಕೀರ್ಣಕ ಪ್ರಮಾಣವಕ್ಕುಂ (ಕಶ್ಯ.ಕ್ರ. ೬೬). ೫. ಪ್ರಮಾಣಗ್ರಂಥಭಾಗಗಳಲ್ಲಿ ಒಂದು : ಕೇವಲ ಒಂದೇ ಸಭೆಯಲ್ಲಿ ಬರೆಯಲ್ಪಟ್ಟ—ಇನ್ನೊಂದು ಸಭೆಯಿಂದ ಆ ವಿಷಯಕ್ಕೆ ಉಲ್ಲೇಖ ಸಿಕ್ಕದೆ ಹೋಗುವ—ಸಿದ್ಧಾಂತಗಳನ್ನು 'ಪ್ರಕೀರ್ಣಕ'ಗಳಲ್ಲಿ ಉಲ್ಲೇಖಿಸಿದರು (ಕೈಪಶ. ೧೬೬). ೬. ಒಂದು ನರಕದ ಹೆಸರು : ಆ ಬಿಲಂಗಳುಮಿಂದ್ರಕ ಶ್ರೇಢೀಬದ್ಧಪ್ರಕೀರ್ಣಕಂಗಳೆಂದು ಮೂಱುತೆಱನಕ್ಕುಂ (ಅಕ್ಕೆ. ೩-೬೩ ಕ) ; ಆ ನರಕಬಿಲಂಗಳೆಲ್ಲಮೆಣ್ಬತ್ತುನಾಲ್ಕುಲಕ್ಷವರಿಪ್ರಮಾಣವಾಗಿಯುಮಿಂದ್ರಕ ಶ್ರೇಣೀಬದ್ಧಪ್ರಕೀರ್ಣಕಂಗಳೆಂದು ಮೂಱುತೆಱನಕ್ಕುಂ (ಸುಕುಮಾ. ೧೦-೯೦ ಕ). ೭. ಮೂರುಬಗೆಯ ವಿಮಾನಗಳಲ್ಲಿ ಒಂದು ; ಶ್ರೇಣೀಬದ್ಧ ವಿಮಾನಗಳ ಮಧ್ಯದಲ್ಲಿ, ಹೂವನ್ನು ಎರಚಿದಂತೆ ಚೆಲ್ಲಾಪಿಲ್ಲಿ ಯಾಗಿರುವ ವಿಮಾನ : ಅಲ್ಲಿ ಸ್ವರ್ಗಮೆಂಬನಂ ಸೌಧರ್ಮೇಶಾನಾದಿಗಳ ವರವಿಮಾನಂಗಳಿಂದ್ರಕಶ್ರೇಣೀಬದ್ಧಪ್ರಕೀರ್ಣಕಂಗಳೆಂದು ಮೂಱೆಱಂ (ಚಂದ್ರಪ್ರ. ೩-೩೨ ಕ). ೮. ದೇವತೆಗಳ ಒಂದು ವರ್ಗ ; ಗ್ರಾಮಾಂತರ ಹಾಗೂ ಪಟ್ಟಣಗಳಲ್ಲಿ ಪ್ರಜೆಗಳಂತೆ ವಾಸಿಸುವ ವರ್ಗ : ಸೈನಿಕ ದೇವತೆಗಳು ಅನೀಕರೆನಿಸುವರು. ಪ್ರಜೆಗಳಂತಿರುವವರು ಪ್ರಕೀರ್ಣಕರು (ಕೈಪಶ. ೪೯). ೯. ಜ್ಯೋತಿರ್ಲೋಕದ ಜ್ಯೋತಿಗಳಲ್ಲಿ ಒಂದು ಭೇದ: ಮಧ್ಯಮಲೋಕಪ್ರತಿಬದ್ಧಮಪ್ಪ ಚಂದ್ರಾದಿತ್ಯಗ್ರಹನಕ್ಷತ್ರ ತಾರಕಾ ಪ್ರಕೀರ್ಣಕವಿಕಲ್ಪಜ್ಯೋತಿರ್ಗಣಾಲಂಕೃತಮಾಗಿರ್ದ ದಶೋತ್ತರಶತ ಯೋಜನವಿಸ್ತಾರಬಹಳತೆಯೊಳಂ (ಅಕ್ಕೆ. ೧೦-೨೨ ವ). [ಸಂ.]

**ಪ್ರಕೀರ್ತನ** (ನಾ). ೧. ಸಾರುವುದು ; ತಿಳಿಯಪಡಿಸುವುದು. ೨. ಹೊಗಳಿಕೆ ; ಕೊಂಡಾಟ. [ಸಂ.]

**ಪ್ರಕೀರ್ತಿತ** (ಗು). ೧. ಸಾರಿದ ; ಘೋಷಿಸಿದ. ೨. ಪ್ರಸಿದ್ಧಪಡಿಸಿದ. (ನಾ). ೩. ಹೊಗಳಿಕೆಗೆ ಪಾತ್ರವಾದುದು : ಖ್ಯಾತಿಹೊಂದಿದುದು: ನಾನಾಹೆಸರುಗಳಿಂದ ಪ್ರಕೀರ್ತಿತವಾಗಿರುವ ಎರಡನೆಯ ಯುಗವು ಅತ್ಯಂತ ಚಿತ್ತಾಕರ್ಷಕವಾಗಿರುತ್ತದೆ (ಕೂಕ್ಕಳು. ೦ ಹಿಕ್ಕಿಲೆ). [ಸಂ.]

**ಪ್ರಕೀರ್ಯ** (ಗು). ೧. ಎರಚಿದ ; ಚೆಲ್ಲಾಪಿಲ್ಲಿಯಾಗಿರುವ. (ನಾ). ೨. ಒಂದು ಬಗೆಯ ಗಿಡ; ತವಸಿ : "ಪ್ರಕೀರ್ಯಃ, ಪೂತಿಕರಜಃ, ಪೂತಿಕಃ, ಕಲಿಕಾರಕಃ—೪ ತಪಸೀಗಿಡದ ಹೆಸರುಗಳು" (ಸಿದ್ಧಾಂತಿ. ೬೨೩). [ಸಂ.]

**ಪ್ರಕುಪಿತ** (ಗು). ೧. ಹೆಚ್ಚಾಗಿ ಕೋಪಗೊಂಡ ; ಕೆರಳಿದ : ಪ್ರಕುಪಿತ ಮೃಗಪತಿ ಶಿಶುಸನ್ನಿಕಾಶರತಿವಿಕಟಭೀಷಣಭ್ರೂಭಂಗರ್ ನಕುಲ ಸಹ ದೇವರ್ (ಪಂಪಭಾ. ೭-೮): ಅಟಕಟ ನೊಂದವಳೆತ್ತಿರೆ ಸುಕುಮಾರಿಯನೆನು ತುಮಿನಿತು ಕೋಂಕಿಂ ನುಡಿದಂ ಪ್ರಕುಪಿತ [ಪಾಠಾಂ. ಪ್ರಕಟಿತ, ಪ್ರಕುಟಿಲ] ಚಿತ್ತಂ ಭೂನಾಯಕಂ (ಜಿತೂಕೂಚ ೨-೬೮). (ನಾ). ೨. ಹೆಚ್ಚಾದ ಕೋಪ : ಪ್ರಕುಪಿತದಿಂ ತೆಗೆದಿಸೆ ಮಸ್ತಕವಂ ಕರಿ ನೊಂದು ತಿರುಗೆ (ಗಿರಿಳ. ೦-೦೦೦). [ಸಂ.]

**ಪ್ರಕೃತ** (ಗು). ೧. ಚೆನ್ನಾಗಿ ಮಾಡಿದ,—ನೆರವೇರಿಸಿದ. ೨. ಪ್ರಾರಂಭಿಸಿದ; ಉಪಕ್ರಮಿಸಿದ; ತೊಡಗಿದ. ೩. ಪ್ರಕರಣಕ್ಕೆ ಸಂಬಂಧಿಸಿದ: ಸಂದರ್ಭಾನುಸಾರವಾದ: ಪ್ರಸ್ತುತ ; ಪ್ರಕೃತ ಸ್ವದ್ರವ್ಯಕ್ಷೇತ್ರಕಾಲ ಭಾವಾಶ್ರಯಂಗಳಿಂ ಪುದ್ಗಲವೃತ್ತಕಮಂ ಮರ್ಯಾದಾಪೂರ್ವಕಮಱಿ ಪುದದವಧಿಯೆಂಬ ಪೆಸರ್ವಡೆದಿರ್ಕುಂ (ಚಂದ್ರಪ್ರ. ೦೯-೩೪). ೪. ಮುಖ್ಯವಾದ ; ಪ್ರಧಾನವಾದ. ೫. ಬದಲಾವಣೆ ಹೊಂದದಿರುವ : ಸ್ವಾಭಾವಿಕವಾದ. (ನಾ). ೬. ಈಗಿನ ಪ್ರಕರಣ : ಸದ್ಯದ ವಿಷಯ : ಈಗ ಪ್ರಕೃತಕ್ಕೆ ಸಂಬಂಧಿಸಿದಂತೆ ಮಾತನಾಡೋಣ (ಬೂ೦). ೭. ನಿಜ : ಸತ್ಯ. ೮. [ಕಾವ್ಯಮೀ] ಉಪಮಾಲಂಕಾರದಲ್ಲಿ ಹೋಲಿಸಲ್ಪಡುವ ವಸ್ತು; ಮುಖ, ರಾಜ ಮೊದಲಾದುವು: ವರ್ಣ್ಯ: ಉಪಮೇಯ. [ಸಂ.]

**ಪ್ರಕೃತತ್ವ** (ಅ). ಸದ್ಯಕ್ಕೆ; ಈಗ್ಗೆ ಸಂಬಂಧಿಸಿದಂತೆ : ವಿವಿಧದೇಶಗಳ ನಾಣ್ಯಗಳ ಪರಸ್ಪರಬಾಂಧವ್ಯ 'ಪ್ರಕೃತ' ಹೇಗಿದೆಯೆಂದು ಈ ಕೆಳಗೆ ಕೊಟ್ಟಿದೆ (ಅರ್ಥಶಾ. III. ೦೩೩೩). [ಸಂ.]

**ಪ್ರಕೃತತುಲ್ಯಯೋಗಿತೆ** (ನಾ). [ಕಾವ್ಯಮೀ] ವರ್ಣಿತವಾದ ಹಲವಾರು ವಸ್ತುಗಳಿಗೆ ಗುಣರೂಪವಾದ ಅಥವಾ ಕ್ರಿಯಾರೂಪವಾದ ಒಂದೇ ಧರ್ಮವನ್ನು ಅನ್ವಯಿಸಿ ವರ್ಣಿಸುವುದು : ವರ್ಣ್ಯಂಗಳಾದನೇಕ ವಸ್ತುಗಳೊಳ್ ಗುಣಕ್ರಿಯಾರೂಪೈಕಧರ್ಮಾನ್ವಯಮಂ ಪೇಳೆ ಪ್ರಕೃತ ತುಲ್ಯಯೋಗಿತೆಯೆಂದುಂ ಅವರ್ಣ್ಯಂಗಳಾದನೇಕವಸ್ತುಗಳೊಳ್ ಅದಂ ಪೇಳೆ ಅಪ್ರಕೃತತುಲ್ಯಯೋಗಿತೆಯೆಂದುಂ ತುಲ್ಯಯೋಗಿತಾಲಂಕಾರ ಮಿರ್ತೆರಂ (ಶಶಶ. ೬೮ ವೃತ್ತಿ). [ಸಂ. ಪ್ರಕೃತತುಲ್ಯಯೋಗಿತಾ]

**ಪ್ರಕೃತಿ** (ನಾ). ೧. ಯಾವುದಾದರೂ ಒಂದು ವಸ್ತುವಿನ ಅಥವಾ ಪ್ರಾಣಿಯ ನಿಜಸ್ವರೂಪ,—ಮೂಲಸ್ವರೂಪ : ಅರಸನಾತನ ಮನುಷ್ಯಾತೀತಮಪ್ಪ ಪ್ರಕೃತಿಯಂ ಕಂಡು (ಶಾಂತಿಪು. ೬-೦೨೬ ಕ) ; ಧರಣಿಯಿಂದುದ್ಭವಿಸಿತೋಷಧಿಯೋಷಧಿಗಳಿಂದವತರಣಮನ್ನಾದಿಪುರುಷ ಪ್ರಕೃತಿ ವಿಕೃತಿಗಳ್ (ಚಾವ್ಯಾಗಿ. ೬೦೩. ೯-೬) ; ಪ್ರಕೃತಿ ವಿಕೃತಿಗಳೆಲ್ಲದೆಂದು . . . ಅಖಂಡೇಶ್ವರಾ ನಿಮ್ಮ ನಿಲವಱಿಯದೆ ಅನಂತಕಾಲವಿರ್ದರಂದು (ಅಖಂಡೇ. ೨-೯). ೨. ಪ್ರತಿಯೊಬ್ಬ ವ್ಯಕ್ತಿ ಅಥವಾ ಪ್ರತಿಯೊಂದು ವಸ್ತುವಿನ ಸಹಜಗುಣ,—ಸ್ವಭಾವ,—ಮನೋಧರ್ಮ : ಇರದೊಯ್ವುದಾ ತನ್ನಿಚ್ಛೆಗೆ ಪರಯುವ್ವನದಂದು ಪುರುಷನಂ ಪ್ರಕೃತಿ (ನಾಗಂಪು. ೩೪೩); ಪ್ರಕೃತಿ ಪ್ರೋದ್ಭವಮಲ್ಲು ಜೈನರುಸರ್ವಂತಾರಯ್ಯೆ ಲೋಕಂ ಸಕರ್ತೃಕಮೆಂಬಾ ಮತಮಂ ನಿರಾಕರಿಪರೋರ್ (ಶಾಕ್ಕಿಗು. ೯-೬೬) ; ಈ ದೃಷ್ಟಿಯಿಂದ ನನ್ನ ಮತ್ತು ಅವರ ಪ್ರಕೃತಿಗಳು ಭಿನ್ನಭಿನ್ನವಾಗಿರಬಹುದು (ಜೀವಾತ್ಮ. ೯೮). ೩. ಸತ್ತ್ವ, ರಜಸ್ಸು ಮತ್ತು ತಮಸ್ಸು ಎಂಬ ಮೂರುಬಗೆಯ ಮೂಲಗುಣಗಳು. ೪. ಪಂಚಭೂತಗಳು. ೫. ಮಾನವನಿಂದ ನಿರ್ಮಿತವಾಗದ ಸೃಷ್ಟಿ ; ನೈಸರ್ಗಿಕಸೃಷ್ಟಿ : ಪ್ರಕೃತಿಯ ಪ್ರಭಾವವನ್ನೂ ಅದು ಎಷ್ಟು ಮುಖ್ಯವೆಂಬುದನ್ನೂ ಮೇಲೆ ಕೊಟ್ಟ ಉದಾಹರಣೆಗಳು ನಿಮಗೆ ತಿಳಿಸುತ್ತವೆ (ಕೂಚಿ. ೦೯೦) ; ವಿಶ್ವದ ಚಟುವಟಿಕೆಗಳೆಲ್ಲ ಪ್ರಕೃತಿಯ ಆಜ್ಞೆಯ ಮೇರೆಗೆ ಸಾಗುತ್ತವೆ (ಧರ್ಮಸಾ. ೦೩೨). ೬. ಜನನೇಂದ್ರಿಯ : "ಪ್ರಕೃತಿಯೊಳು ಶೈವಮೂರ್ತಿಯೊಳು ಲಿಂಗವಕ್ಕುಂ" (ಶಂಗರಾ. ೦೩೦-೩೦). ೭. ಮಂತ್ರಿ ; ಸಚಿವ : ಅರಸನನುಮತದಿನೊಂದು ಯಕ್ಷಪ್ರತಿಮೆಯುಂ ಮಾಡಿ ಪೌರ್ದುಸಪುರಾಧಿಪತ್ಯಮಂ ಪ್ರಕೃತಿಗಳೆಲ್ಲಮಿರ್ದು ಕೊಟ್ಟೊಡೆ (ಚಾಪುತ್ರ. ೦೬೮). ೮. ಪುರಜನ ; ಪ್ರಜಾವರ್ಗ : ಆಗಳಾ ಕಲಸ್ಕೃತವಿಕೃತಿಯಿಂ ಪ್ರಕೃತಿಕ್ಷೋಭವಾಗೆ (ಜಗಂ. ೬-೬೦ ಕ); ನೀವ್ ಕೇಳಿ ಪೌರಪ್ರಕೃತಿಗಳು ಕರಿತುರಗವಾಹಕರು (ಶಶಾಗ. ೦೦-೪೦.೨೬); ಪ್ರಕೃತಿಹಿತಾರ್ಥಂ ಕ್ಷಿತಿಪಾಲಕರುದ್ಯೋಗಿಸುಗೆ (ಶಾಕುಂತ. ೦೦೭.೦೯೮). ೯. ಹೆಂಗಸು ; ಸ್ತ್ರೀ. ೧೦. ಕಾರ್ಯ. ೧೧. ಕಾರಣ : "ಪತ್ತನಜನಂಗಳೊಳು ಕಾರ್ಯದೊಳು ಕಾರಣದೊಳುತ್ತಮದ ಸಚಿವನೊಳು ಸತ್ವಾದಿ ಗುಣದಿಮಪ್ಪ ಚಿತ್ತದೊಳು ನಿಜದೊಳು ಸ್ವರೂಪದೊಳು ಪ್ರಕೃತಿಯೆಂದೆಂಬಾಭಿಧಾನವಕ್ಕುಂ" (ಶಂಗರಾ. ೦೯೬. ೩೬). ೧೨. ಶಿಲ್ಪಿ ಮೊದಲಾದ ಕುಶಲಕರ್ಮಿಗಳು : "ಶಿಲ್ಪೀ, ಕಾರುಃ, ಪ್ರಕೃತಿಃ, —ಈ ೩ ಪಂಚಕಾರುಕರ್" (ಹಲಾಯು. ೬೬-೯೩೯). ೧೩. ನಿಜ : ಸತ್ಯ. ೧೪. ನಿಯಮ : ನಿಬಂಧನೆ ; ಕಟ್ಟಳೆ. ೧೫. ಕೋಪ, ದುಃಖ ಮೊದಲಾದ ಮನೋಭಾವನೆಗಳನ್ನು ಹತೋಟಿಯಲ್ಲಿಟ್ಟು

ಕೊಳ್ಳುವುದು. ೧೬. ಕಂದಾಯ ; ತೆರಿಗೆ : (ಪ್ರ). ೧೭. ಮುಖ್ಯವಾದುದು ; ಶ್ರೇಷ್ಠವಾದುದು : "ಪ್ರಕೃತಿಯಲ್ಲಿಯುಂ ಪ್ರಧಾನಮೆಂಬುದು" (ಚಂಡಶು. ೦೪೩-೦೬). ೧೮. ಆದಿ ಮತ್ತು ಅಂತ್ಯ. ೧೯. ಬಿಡುವುದು ; ತ್ಯಾಗ. ೨೦. ನಡತೆ ; ನಡವಳಿಕೆ. ೨೧. ಸಮೂಹ : "ನಿಜದೊಳ್ ಕಾರಣದೊಳ್ ಗುಣತ್ರಯದೊಳುಂ ಸಪ್ತಾಂಗದೊಳ್ ಚಿತ್ರದೊಳ್ ವ್ರಜದೊಳ್ ಕಾರ್ಯದೊಳಾದಿಯಂತ್ಯದೊಳೆ ಛಂದೋಭೇದದೊಳ್ ಸ್ತ್ರೀಯರೊಳ್ ತ್ಯಜದೊಳ್ ತನ್ನ ಸ್ವರೂಪದೊಳ್ ಜನರೊಳುಂ ಚಾರಿತ್ರದೊಳ್ ಮುಖ್ಯದೊಳ್ ರಜದೊಳ್ಪ್ರಾಂ ಪ್ರಕೃತ್ಯಾಖ್ಯೆ" (ನಾನಾರ. ೧೧೨). ೨೨. [ವೈದ್ಯಶಾ] ಶರೀರಸ್ಥಿತಿ ; ದೇಹಧರ್ಮ : ಪ್ರಕೃತಿಯೆಂತೆಂದೊಡೆ — ವಾತಪ್ರಕೃತಿ, ಪಿತ್ತಪ್ರಕೃತಿ, ಶ್ಲೇಷ್ಮಪ್ರಕೃತಿ, ಮಿಶ್ರಪ್ರಕೃತಿ ಎಂದು ಪ್ರಕೃತಿಯು ನಾಲ್ಕು ತೆರನಾಗಿರುವುದು (ಖಗೇಂ. ೦೬) ; ಜೋಳದ ನುಚ್ಚು ತಿಂದರೆ ಪ್ರಕೃತಿ ಮತ್ತಷ್ಟು ಕೆಡುತ್ತದೆ (ಕ್ರಜಿ. ೬) ; ಸಾಹೇಬರ ಪ್ರಕೃತಿ ಮಜಭೂತ ಇದ್ದರೂ ಸೊರಗಿರುವರೆಂಬ ಸುಳ್ಳು ಸಾಂತ್ವನವನ್ನು ಕೊಡುತರೆ ನಿಂತರೆ ಗಾಯತ್ರಿ ಮಾಡಿಕೊಂಡವು (ಬೀಸಕ. II. ೨೩೪). ೨೩. [ವ್ಯಾಕ] ನಾಮಪದ ಕ್ರಿಯಾಪದಗಳಲ್ಲಿ ಪ್ರತ್ಯಯಾಂಶವನ್ನು ಬೇರ್ಪಡಿಸಿದರೆ ಉಳಿಯುವ ಮೂಲರೂಪ ; ಪ್ರಾತಿಪದಿಕ: ಪ್ರಕೃತಿಗಳಂ ಧಾತ್ವರ್ಥದ ವಿಕಲ್ಪದಿಂದ ಬಿದು ಸಮಜಿಕೊಳ್ವುದು (ಶಾಬ್ದಾ.ಶ. ೪೧೦) ; ಪದದರ್ಥಮಂ ವಿಭಾಗಿಸುವುದರಿಂದೆ ವಿಭಕ್ತಿಯಂತದಂ ಪ್ರತ್ಯಯಮೆಂಬುದು ತತ್ಪ್ರತ್ಯಯದಿಂ ಪೂರ್ವದೊಳಿರ್ಪುದಂ ಪ್ರಕೃತಿ (ಕವಿರ. ೩೮) ; ಒಂದು ಶಬ್ದದ ಮೂಲರೂಪಕ್ಕೆ 'ಪ್ರಕೃತಿ' ಎಂದು ಹೆಸರು (ಕ್ವಿಬಿ. ೦೪). ೨೪. [ಛಂದ] ಇಪ್ಪತ್ತಾರು ಬಗೆಯ ವರ್ಣಛಂದಸ್ಸುಗಳಲ್ಲಿ ಇಪ್ಪತ್ತೊಂದನೆಯದು ; ಪ್ರತಿಸಾಲಿನಲ್ಲಿಯೂ ಇಪ್ಪತ್ತೊಂದು ಅಕ್ಷರಗಳಿರುವ ಒಂದು ಛಂದಸ್ಸು : "ಅತಿಧೃತಿ ಕೃತಿ ಪ್ರಕೃತಿಯಾಕೃತಿ ವಿಕೃತಿ . . . ಉತ್ಕೃತಿಗಳೆಂದಿನಿಪ್ಪತ್ತಾಱು ಛಂದಂಗಳಕ್ಕುಂ" (ಛಂಗೆಮ. ೦೦೬-೦೪) ; ಅಲ್ಲಿ ಉಕ್ತ ಅತ್ಯುಕ್ತ . . . ಪ್ರಕೃತಿ ಆಕೃತಿ ವಿಕೃತಿ ಸಂಕೃತಿ ಅಭಿಕೃತಿ ಉತ್ಕೃತಿ ಎಂದಿಪ್ಪತ್ತಾಱು ಛಂದಂಗಳಕ್ಕುಂ (ಛಂದೋಂಬು. ೦-೧೬ ಪ). ೨೫. [ತತ್ತ್ವಶಾ] ಸಾಂಖ್ಯಮತದಂತೆ ಪ್ರಪಂಚಕ್ಕೆ ಮೂಲಕಾರಣವಾದ, ಸತ್ತ್ವ, ರಜಸ್ಸು ಮತ್ತು ತಮೋಗುಣಗಳ ಸಾಮ್ಯಾವಸ್ಥೆ ; ಇಪ್ಪತ್ತುನಾಲ್ಕು ತತ್ತ್ವಗಳಲ್ಲಿ ಮೊದಲನೆಯದು ; ಪುರುಷನಿಂದ ಭಿನ್ನವಾದುದು : ಆ ಪ್ರಕೃತಿ ಪುರುಷರ ವರ್ಗಗಳೊಂದೆಡೆಯೊಳುಂ ಸ್ವಾತಂತ್ರ್ಯಮುಂ ಕಾರಣತ್ವಮುಮಿಲ್ಲೆಂದು ಪೇಳ್ವುದುಗುಂ (ಚತುಶಂ. ೬-೨೦ ಪ) ; ಪ್ರಕೃತಿಯು ಇನ್ನೊಂದನ್ನು ಹುಟ್ಟಿಸುತ್ತದೆಯೇ ಹೊರತು ತಾನು ಯಾವುದರಿಂದಲೂ ಹುಟ್ಟಿದ್ದಲ್ಲ . . . ಈ ಪ್ರಕೃತಿಯ ಮೇಲೆ ಪ್ರಭುವಾದ ಈಶ್ವರನೊಬ್ಬನಿಲ್ಲ (ಭಾರದ.೦೨೬). ೨೬. [ವೇದಾಂತ] ಭಗವಂತನ ಮಾಯಾಶಕ್ತಿ ; ಮೂಲಾಜ್ಞಾನ, ಮಾಯೆ, ಅವಿದ್ಯೆ ಮೊದಲಾದ ಶಬ್ದಗಳಿಂದ ಹೇಳುವ ಪ್ರಪಂಚದ ಪೂರ್ವಸ್ಥಿತಿ : ಇಹದಲ್ಲಿ ಸುಖಿ ಪರದಲ್ಲಿ ಪರಿಣಾಮಿ ಎಂಬರು ಅದು ಹುಸಿ ನಿಲ್ಲು ಇಹದಲ್ಲಿ ದುಃಖಿ ಪರದಲ್ಲಿ ಪ್ರಕೃತಿ ಎಂದೆ (ಕೋಲಶಾ. ೦೪-೬೪) ; ಮೂಲಪ್ರಕೃತಿ ಒಂದರಲಿ ವಿಸ್ತರಿಸೆ ಬ್ರಹ್ಮಾಂಡತಂಡಗಳೆತ್ತಲೆತ್ತಲು ತೋರುತಿಹವು (ಜ್ಞಾಸಿಂ. ೨೬-೩) ; ಈ ಶಕ್ತಿ ಶಿವನಿಗಧೀನವಾಗಿ ಅವನಲ್ಲಿ ಗುಣವನಿಸಿರುವುದು. ಅವನ ಇಚ್ಛೆಯಂತೆ ಪ್ರಪಂಚಾಕಾರವಾಗಿ ಪರಿಣಮಿಸಿದಾಗ ಅದೇ ಶಕ್ತಿ ಸ್ವತಂತ್ರದ್ರವ್ಯವಾಗಿ ಪ್ರಕೃತಿಯೆನಿಸುವುದು (ಶಿಪ್ರ.ತ. ೩೬). ೨೭. [ದ್ವೈತ] ಜೀವನನ್ನೂ ಪರಮಾತ್ಮನನ್ನೂ ಮುಚ್ಚಿಕೊಂಡಿರುವ ಆವರಣ : ಮೇಲೆ ಹೇಳಿದ ಮೋಡಶಕಳೆಗಳುಳ್ಳ ಲಿಂಗಶರೀರಕ್ಕೂ ಅನಿರುದ್ಧಶರೀರಕ್ಕೂ ಮಧ್ಯದಲ್ಲಿ ಜೀವಾಚ್ಛಾದಿಕವೆಂತಲೂ ಪರಮಾಚ್ಛಾದಿಕವೆಂತಲೂ . . . ದುಷ್ಟವಾದ ಎರಡು ಪ್ರಕೃತಿಗಳು ಸೇರಿಕೊಂಡಿರುವವು (ಹರಿಕ. ೪-೦೪ ಶಾಸ್ತ್ರರ್ಥ). ೨೮. [ಜೈನ] ಆತ್ಮನಿಗೆ ಅಜ್ಞಾನ ಮುಂತಾದ ಫಲವನ್ನು ಉಂಟುಮಾಡಿಕೊಡುವುದು ; ಜೀವನಿಗೆ ವರ್ತಮಾನ ಮತ್ತು ಭವಿಷ್ಯತ್ಕಾಲಗಳಲ್ಲಿ ಫಲವನ್ನು ಕೊಡುವ ಕರ್ಮಸ್ಕಂಧ : ತದುಪಾಂತಸಮಯದೊಳನ್ಯತರವೇದನೀಯು . . . ನೀಚೈರ್ಗೋತ್ರಂಗಳೆಂಬೆಪ್ಪತ್ತೆರಡುಂ ಪ್ರಕೃತಿಗಳಂ ದೂರೀಕೃತಂ ಮಾಡಿ (ಶಂರಾಶಾ. ೦೬-೫೦ ಪ) ; ಪ್ರಕೃತಿಗಳೊಳ್ ಸಮ್ಯಕ್ತ್ವಪ್ರಕೃತಿಯ ತಲೆದೋಱೆ . . . ಉದಯಿಸಿತಾಗಜೇಂದ್ರನೊಳ್ ಸಮ್ಯಕ್ತ್ವಂ (ಪಾರ್ಶ್ವಪು. ೫-೯೩). ೨೯. ಆತ್ಮನ ಗುಣಕ್ಕೆ ಘಾತಕವಾದ ಕರ್ಮ ; ಘಾತಿಕರ್ಮ : ಜ್ಞಾನಾವರಣಮುಂ ದರ್ಶನಾವರಣಮುಂ ಮೋಹನೀಯಮುಮಂತರಾಯಮುಮೆಂಬೀ ನಾಲ್ಕುಂ ಪ್ರಕೃತಿಗಳು ಘಾತಿಗಳಪ್ಪುವು (ಗೊಮ್ಮಸಾ. ೨-೨). ೩೦. [ರಾಜನೀ] ಸ್ವಾಮಿ, ಅಮಾತ್ಯ, ಸುಹೃತ್ತು, ಕೋಶ, ಬಲ, ರಾಷ್ಟ್ರ ಮತ್ತು ದುರ್ಗ ಎಂಬ ರಾಜನ ಏಳುಬಗೆಯ ರಾಜ್ಯಾಂಗಗಳು : ಈ ರಾಜ್ಯಾಂಗಗಳೇ ಪ್ರಕೃತಿಗಳು (ಸಿಲ್ಯಾಂಶಿ. ೨೩೪). ೩೧. [ಸಂಗೀತ] ಧ್ವನಿವ್ಯತ್ಯಾಸ ಹೊಂದದಿರುವ ಸ್ವರ ; ಮೂಲಸ್ವರ : ಪ್ರಕೃತಿ ಮತ್ತು ವಿಕೃತಿಸ್ವರಸ್ಥಾನಗಳ ಮತ್ತು ಅವುಗಳ ಧ್ವನಿಭೇದಗಳನ್ನು ವೀಣಾವಾದ್ಯದ ಮೊದಲ ಹನ್ನೆರಡು ಮೆಟ್ಟಿಲುಗಳು . . . ಪರಿಚಯ ಮಾಡಿಕೊಡುತ್ತವೆ (ಸಂಗೀತ. ೦೬). [ಸಂ.]

**ಪ್ರಕೃತಿಚಿಕಿತ್ಸೆ** (ನಾ). ಗಾಳಿ, ನೀರು, ಬೆಳಕು, ಮಣ್ಣು ಮೊದಲಾದ ನೈಸರ್ಗಿಕ ವಸ್ತುಗಳಿಂದ ರೋಗಗಳಿಗೆ ಮಾಡುವ ಚಿಕಿತ್ಸೆ : ಬೆಳಕಿಗೆ ಸಂಬಂಧಪಟ್ಟ ಈ ಚಿಕಿತ್ಸೆಯು ಪ್ರಕೃತಿಚಿಕಿತ್ಸೆ (Naturo Therapy)ಯ ಒಂದು ಶಾಖೆ (ಅಶಕ. X. ಮುಖ್ಯ.೩). [ಸಂ. ಪ್ರಕೃತಿಚಿಕಿತ್ಸಾ]

**ಪ್ರಕೃತಿಬಂಧ** (ನಾ). [ಜೈನ] ಜ್ಞಾನಾವರಣಾದಿ ಅಷ್ಟವಿಧಕರ್ಮಗಳಂ ತಮಗೆ ಅನುಗುಣವಾದ ಪುದ್ಗಲದ್ರವ್ಯವನ್ನು ಸ್ವೀಕರಿಸುವುದು ; ಕರ್ಮಸಂಬಂಧವೆಂಬ ಬಂಧದಲ್ಲಿ ಒಂದು : ಮೂಲಪ್ರಕೃತಿಗಳೆಂಟುಮಂ ಬಾದರಸ್ವರೂಪದಿಂ ನೂಱ ನಾಲ್ವತ್ತೆಂಟು ವಿಕಲ್ಪಮಾದುತ್ತರಪ್ರಕೃತಿಗಳು ಮನೊಳಕೊಂಡನುಬಂಧಿಸುವ ಬಂಧಂ ಪ್ರಕೃತಿಬಂಧಮೆಂಬುದಕ್ಕುಂ (ಶಬ್ದಾಮಾ. ೬-೨೬ ಪ); ಕರ್ಮಸಂಬಂಧವೆಂಬ ಬಂಧವು ಪ್ರಕೃತಿ, ಸ್ಥಿತಿ, ಅನುಭಾಗ, ಪ್ರದೇಶವೆಂದು ನಾಲ್ಕುವಿಧ. ಕರ್ಮಾಣುಗಳ ಸ್ವಭಾವದಿಂದ ಉಂಟಾಗುವ ಬಂಧವು ಪ್ರಕೃತಿಬಂಧ (ಜೀವಕಾ. ೬೪). [ಸಂ.]

**ಪ್ರಕೃತಿಭಾವ** (ನಾ). ೧. ಯಾವುದಾದರೊಂದು ವಸ್ತುವಿನ ಸ್ವಾಭಾವಿಕ ಸ್ಥಿತಿ,—ಸ್ವರೂಪ : ಲಿಂಗದೇಹಿಯು ಅಂಗದಲ್ಲಿ ತೋಱುವ ತೋಱಿಕೆ ಬೇಱೊಂದು ಪ್ರಕೃತಿಭಾವದಲ್ಲಿ ಕಂಡರೆ ಲಿಂಗದಂಗವಾದುದಕ್ಕೆ ಅದೆ ದೂರ (ಶಿತಿಗೋ. ೦೨-೪೪). ೨. [ವ್ಯಾಕ] ಸ್ವರಕ್ಕೆ ಸ್ವರ ಪರವಾದ ಸಂದರ್ಭವಿದ್ದು ಸಂಧಿಯಾಗದೆ ಇರುವುದು : ಸ್ವರಕ್ಕೆ ಸ್ವರ ಪರವಾದಾಗ ಕೆಲವು ವೇಳೆ ಸಂಧಿಯಾಗುವುದಿಲ್ಲ. ಇದಕ್ಕೆ ಪ್ರಕೃತಿಭಾವವೆಂದು ಹೆಸರು (ಕ್ವಿಬಿ. ೯). [ಸಂ.]

**ಪ್ರಕೃತಿಶಾಸ್ತ್ರ** (ನಾ). ಪ್ರಕೃತಿಯ ರಹಸ್ಯ, ನಿಯಮ ಮೊದಲಾದುವುಗಳನ್ನು ನಿರೂಪಿಸುವ ಶಾಸ್ತ್ರ ; ಭೌತಿಕಶಾಸ್ತ್ರ : ಪ್ರಕೃತಿಶಾಸ್ತ್ರವೆಂದರೆ ಕೇವಲ ಮಂತ್ರಾತ್ಮಕವಾದ ಪ್ರಕೃತಿನಿಯಮಜ್ಞಾನವಲ್ಲ (ಜುಶ್ಯಾಕಿ. ೩೪ ಬೀಳಿ). [ಸಂ.]

**ಪ್ರಕೃತಿಸೌಂದರ್ಯ** (ನಾ). ನಿಸರ್ಗದ ಚೆಲುವು; ನೈಸರ್ಗಿಕ ಸೌಂದರ್ಯ: ರೊಮ್ಯಾಂಟಿಕ್ ಕವಿಗಳೇ ಪ್ರಕೃತಿಸೌಂದರ್ಯವನ್ನನುಭವಿಸುವ ಭಾವುಕಶಕ್ತಿಯ ಮಹತ್ವವನ್ನು ತೋರಿಸಿಕೊಟ್ಟರು (ಜುಶ್ಯಾಕಿ ೩೨ ಬೀಳಿ). [ಸಂ.]

**ಪ್ರಕೃತಿಸ್ಥ** (ನಾ). ಮೊದಲಿನ ಪರಿಸ್ಥಿತಿಗೆ ಹೊಂದಿಕೊಂಡಿರುವಂಥದು : ಒಂದು ಪಕ್ಷದ ಸರ್ವಾಧಿಕಾರದಿಂದ ಜನತೆ ಪ್ರಕೃತಿಸ್ಥವಾಗಿರಲು ಆಗಲಾರದು (ಶಿಬಂಧ. I. ೦೦೦). [ಸಂ.]

**ಪ್ರಕೃತಿಸ್ವರ** (ನಾ). ೧. [ವ್ಯಾಕ] ಶಬ್ದದ ಮೂಲರೂಪಕ್ಕೆ ಸಂಬಂಧಿಸಿದ ಅಂತ್ಯದ ಸ್ವರಾಕ್ಷರ : ಸ್ವರಮಿದಿರೊಳಿರೆ ವಿಭಕ್ತಿಸ್ವರಕೇ ಪ್ರಕೃತಿಸ್ವರಕ್ಕ ಮಕ್ಕುಂ ಲೋಪಂ (ಶಮದ. ೩೨). ೨. ಅ, ಇ, ಉ, ಎ ಎಂಬ ಹ್ರಸ್ವ ಸ್ವರಗಳು : ಕ್ರಿ. ಶ. ೧೬೫೫ರಲ್ಲಿದ್ದ ಸಿದ್ಧನಂಜೇಶನೆಂಬ ವೀರಶೈವಕವಿ . . . ಹ್ರಸ್ವಸ್ವರಗಳನ್ನು "ಪ್ರಕೃತಿಸ್ವರ"ಗಳೆಂದೂ ದೀರ್ಘಸ್ವರಗಳನ್ನು "ವಿಕೃತಿಸ್ವರ"ಗಳೆಂದೂ ಹೆಸರಿಸಿದ್ದಾನೆ (ಸಂಕೋಶ. ೦೬). ೩. [ಸಂಗೀತ] ಸಪ್ತಸ್ವರಗಳಲ್ಲಿ ಯಾವ ಧ್ವನಿಭೇದವನ್ನೂ ಹೊಂದದೆ ಇರುವ ಷಡ್ಜ ಮತ್ತು ಪಂಚಮ : ಷಡ್ಜ ಮತ್ತು ಪಂಚಮಗಳು ಯಾವಾಗಲೂ ನಿರ್ದಿಷ್ಟ ಶ್ರುತಿಗಳನ್ನೇ ಪಡೆದು ಮತ್ತಾವ ಧ್ವನಿಭೇದವನ್ನೂ ಹೊಂದದೆ ಇರುವುದರಿಂದ ಇವೆರಡೂ ಪ್ರಕೃತಿಸ್ವರಗಳೆನಿಸಿಕೊಂಡಿವೆ (ಸಂಗೀಕೋ. ೦೩). [ಸಂ.]

**ಪ್ರಕೃಷ್ಟ** (ಗು). ೧. ಹೆಚ್ಚಾಗಿ ಎಳೆದ,—ಸೆಳೆದ. ೨. ದೀರ್ಘವಾದ; ನೀಳವಾದ. ೩. ಶ್ರೇಷ್ಠವಾದ; ಉತ್ಕೃಷ್ಟವಾದ : ಸಕಲಸುಹೃದ್ವರ್ಗಂಬೆರಸನುಭವಿಸುಗೆ ದುರ್ಗಂ ವರ್ಗತ್ರಯಪ್ರಕೃಷ್ಟೋದಯಮಂ (ಕಂತಕಂ. ೪೦೦-೨೩). ೪. ಪ್ರಧಾನವಾದ; ಮುಖ್ಯವಾದ. ೫. ಹೆಚ್ಚಾದ; ಅಧಿಕವಾದ : ಅಪಾಕೃತಪ್ರಕೃಷ್ಟಾಷ್ಟಲೋಕಪಾಲಪರಿಪಾಲಿತ ಸಾಹಸನುಂ . . . ಅಪ್ಪ ಸ್ತಿಮಿತಸಾಗರವಹೀವಲ್ಲಭಂಗೆ (ಶಾಂತಿಪು. ೦-೬೦ ಪ). ೬. ಬಲವಾದ; ಶಕ್ತಿಯುತವಾದ. (ನಾ). ೭. ಶ್ರೇಷ್ಠವಾದುದು; ಉತ್ಕೃಷ್ಟವಾದುದು : ಅಪ್ರಿಯವಾದದ್ದನ್ನು ತಪ್ಪಿಸಿಕೊಂಡು ಹೋದರೆ ನಡೆಯುವುದಿಲ್ಲ; ಅದನ್ನು ತಳ್ಳಿ ಹೋಗುವುದೇ ಪ್ರಕೃಷ್ಟವಾದ ದಾರಿ (ಶಿಬಂಧ. II. ೦೩೩). ೮. ಮುಖ್ಯವಾದುದು : ಪ್ರಕೃತಿ ಶಬ್ದಕ್ಕೆ ಅರ್ಥ ಪ್ರಕೃಷ್ಟವಾದ ಕೃತಿಯೆಂದು (ಕಾರಧ. ೦೦೩). [ಸಂ.]

**ಪ್ರಕೋಪ** (ನಾ). ೧. ಕೋಪಾಟೋಪ; ರೋಷಾವೇಶ : ರಾಹು ತಾಂ ದಿನಕರನಂ ಪ್ರತಾಪಭರನಂ ವಿಳಸತ್ಕರನಂ ಪ್ರಕೋಪದುರ್ವಿನೊಳೆ ನುಂಗುವಂ (ಜೀಧಸಂ. ೩೨-೬); ಕಣ್ಣೀರ ಪೆರ್ಪೊನಲಿಂ ನಂದಿಸಿದಳ್ಪ್ರಕೋಪಶಿಖಿಯುಂ ಪಾಯ್ದುಪ್ಪದಳ್ಲಲನಂ (ಧಾಚರಿ. ೦೦-೦೩೩). ೨. [ವೈದ್ಯಶಾ] ಆಧಿಕ್ಯ; ಅತಿರೇಕ : ವಾತಾದಿಗಳಿಗೆ ಸಂಚಯವೂ ಪ್ರಕೋಪವೂ ಶಾಂತಿಯೂ ಇರುವುವು (ಸಳಸ್ಯ. ೦೩). [ಸಂ.]

**ಪ್ರಕೋಪಿಸು** (ಕ್ರಿ). ೧. ಹೆಚ್ಚಿಸು; ಉತ್ತೇಜಿಸು; ಅಧಿಕಗೊಳಿಸು : ಅವನ ಮನಸ್ಸಿನಲ್ಲಿ ಸುಳಿದಾಡುತ್ತಿದ್ದ ಅವನ ಆಸೆಯನ್ನು ಪ್ರಕೋಪಿಸುತ್ತಿದ್ದ ವ್ಯಕ್ತಿಯೆಂದರೆ ಶಾಂತಾಳೊಬ್ಬಳೇ (ಕೃಶಜಾಪ. ೯೬). ೨. [ವೈದ್ಯಶಾ] ಹೆಚ್ಚಾಗು; ಉಲ್ಬಣವಾಗು : ಪ್ರಕೋಪಿಸಿದ ವಾತಾದಿ ದೋಷಗಳಿಂದ . . . ಮೂಲವ್ಯಾಧಿ ಮೂರು ಪ್ರಕಾರವಾಗಿ ಅಪಾನದ್ವಾರದ ಮೂರು ನರಗಳ ಮೂಲದಲ್ಲಿ ಕಾಣಿಸಿಕೊಂಬುದು (ಸಳಸ್ಯ. ೨೮೬).
[ಪ್ರಕೋಪ+—ಇಸು]

**ಪ್ರಕೋಷ್ಠ** (ನಾ). ೧. ಮೊಳಕೈಯಿಂದ ಮಣಿಕಟ್ಟಿನ ವರೆಗಿನ ಭಾಗ: "ಪ್ರಕೋಷ್ಠಮೆಂಬುದು ಮುಂಗೆಯ್" (ಶಲಾಯು. ೬೮-೩೬೯); ವೃತ್ತಘನಪ್ರಕೋಷ್ಠಯುಗಳಂ ಮೇಲಾದ ಮಾಣಿಕ್ಯಕಂಕಣದಿಂ . . . ಅಲಂಕೃತನಾಗಿಯುಂ (ಶಾಂತಿಪು. ೦೦-೩೬); ಸರಸೀರುಹನಾಳಮನಾವರಿಸಿದ ಶೈವಾಲಮನೆ ಪರಿದ್ರುತ್ತಮಯಸ್ಫುರಿತಕಟಕಂ ಪ್ರಕೋಷ್ಠದೊಳರುಣಾಧರೆ ತೊಳಗಿ ಬೆಳಗದಿರ್ಪುದಿದೇನೋ (ಶಂದ್ರಪ್ರಭ. ೩-೩೬). ೨. ನಾಲ್ಕು ಪಕ್ಕಗಳಲ್ಲಿಯೂ ಕಟ್ಟಡಗಳಿಂದ ಸಂತ್ತುವರಿದ ಅಂಗಳ; ಹಜಾರ; ತೊಟ್ಟಿ : "ಕಕ್ಷಾಂತರಂ, ಪ್ರಕೋಷ್ಠಂ—ಈ ೨ ನೆಲೆ" (ಶಲಾಯು. ೩೦-೨೬೯); "ಕಕ್ಷಾಂತರಂ ಪ್ರಕೋಷ್ಠಂ ಮನೆಯ ನಿಲುವದು" (ಶುಂಗರಂ. ೬೦-೦೯). [ಸಂ.]

**ಪ್ರಕ್ರಮ** (ನಾ). ೧. ಮುಂದೆ ಹೆಜ್ಜೆಯಿಡುವುದು; ಮುಂದಕ್ಕೆ ಹೋಗುವಿಕೆ. ೨. ಹೆಜ್ಜೆ. ೩. ಒಂದು ಹೆಜ್ಜೆಯಷ್ಟು ದೂರ; ದಾಪು. ೪. (ಕಾರ್ಯದ) ಪ್ರಾರಂಭ; ಉಪಕ್ರಮ : "ಪ್ರಕ್ರಮಃ, ಉಪಕ್ರಮಃ—೨ ಕೆಲಸಕ್ಕೆ ಮೊದಲುಮಾಡುವಿಕೆ" (ಸಿದ್ಧಾಂತಿ. ೩೬೯); ಜನ್ಮೋತ್ಸವಪ್ರಕ್ರಮಮೆಂದಾನುದನೃತ್ಯಪ್ರಮುದಮನಧಿಕಂ ಮಾಡಿ (ಅಂಕು. ೬-೦೨೬); ಅಮಿತಗುಣವರ್ಣನಪ್ರಕ್ರಮಕ್ಕೆ ಸಲೆ ನಾಣ್ಚಿ ತಲೆಯನೆಱಗಿದ ಸುಜನೋತ್ತಮರಂತೆ ಭರದಿನೆಱಗಿದುವಮೇಯಪರಿಪಕ್ವಗಂಧಶಾಲಿವನಂಗಳ್ (ಶಾಂತಿಪು. ೧-೩೯). ೫. ವಿಧಾನ; ಕ್ರಮ : ರೀತಿ : ಪುರಾಣಗಳಿಗೆ ಯಾವೊಂದು ತರ್ಕಪ್ರತಿಷ್ಠಿತವಾದ ದಾರ್ಶನಿಕಪ್ರಕ್ರಮದೊಡನಾಗಲಿ ಅಥವಾ ಯಾವೊಂದು ಪಾಂಥಿಕಧರ್ಮದೊಡನಾಗಲಿ ತಾದಾತ್ಮ್ಯವಿಲ್ಲ (ತತ್ತ್ವಪ್ರಾ. ೦೨೧). [ಸಂ.]

**ಪ್ರಕ್ರಯ** (ನಾ). ಬೆಲೆ : "ಪ್ರಕ್ರಯಃ, ಕ್ಲಿಪ್ತಕಃ—ಈ ೨ ಬೆಲೆ" (ಶಲಾಯು. ೯೪-೪೦೯). [ಸಂ.]

**ಪ್ರಕ್ರಿಯೆ** (ನಾ). ೧. ಪ್ರಕಾರ; ವಿಧಾನ; ರೀತಿ : ಇದುವರೆಗೆ ತೋರಿಸಲಾದ 'ಧ್ವನಿ' ಮತ್ತು 'ಗುಣೀಭೂತವ್ಯಂಗ್ಯ' ಇವುಗಳ ಪ್ರಕ್ರಿಯೆಗೆ ಇನ್ನೂ ಒಂದು ಫಲವಿದೆ (ಧ್ವನ್ಯಾಲೋ. ೨೩೯). ೨. ಕಾರ್ಯವಿಧಾನ : ವಿಧಿದ್ವಾರಾ ಏರ್ಪಟ್ಟಿರತಕ್ಕ ಪ್ರಕ್ರಿಯೆಯನ್ನು ಬಿಟ್ಟು ಮತ್ತಾವ ರೀತಿಯಲ್ಲಿಯೂ ಯಾವನೊಬ್ಬನಿಗೂ ಪ್ರಾಣಹಾನಿಯಾಗುವಂತೆ ಅಥವಾ ದೈಹಿಕಸ್ವಾಧೀನತೆಯಿಲ್ಲದಂತೆ ಮಾಡತಕ್ಕುದಲ್ಲ (ಭಾರಾವ. ೦೨). ೩. ಬದಲಾವಣೆ; ಪರಿವರ್ತನೆ : ಏಕಕಾಲಿಕವಾಗಿ ಒಂದೇ ರೀತಿ ಪ್ರಕ್ರಿಯೆಯನ್ನು ತೋರಿಸುವ ಮನಸ್ಸುಗಳಿಗೆ ಏನೆನ್ನಬೇಕು? (ದೂರಸ. ೩೬). ೪. ಶಾಸ್ತ್ರೋಕ್ತವಾದ ಕರ್ಮಾಚರಣೆ; ವಿಧಿ : ಸಾಂಖ್ಯಶಾಸ್ತ್ರದ ಕೆಲವು ಪ್ರಕ್ರಿಯೆಗಳು ವೇದಗಳಲ್ಲಿ ದೃಗ್ಗೋಚರಿಸುವುದರಿಂದ ಅದು ಸಿದ್ಧವಾಗುತ್ತದೆ (ಕಾರಧ. ೦೨೩). ೫. ಉನ್ನತಸ್ಥಾನ : "ಪ್ರಕ್ರಿಯಾ, ಅಧಿಕಾರಃ—೨ ಅಧಿಕಾರದ ಹೆಸರು. ನಿರ್ವಹಿಸತಕ್ಕ ಕೆಲಸಕ್ಕೂ ಪ್ರಜೆಗಳ ಕಾರ್ಯನಿರ್ವಾಹಕ್ಕೂ ಅಧಿಕಾರನಿರ್ವಾಹಕ್ಕೂ ಹೆಸರು" (ಸಿದ್ಧಾಂತಿ. ೨೪೪). ೬. ಪುಸ್ತಕದ ಒಂದು ಪರಿಚ್ಛೇದ. ೭. ಹಕ್ಕು; ಸ್ವಾಮ್ಯ. ೮. ಸೌಕರ್ಯ. ೯. [ವ್ಯಾಕ] ಶಬ್ದನಿಷ್ಪತ್ತಿಯಲ್ಲಿ ನಡೆಯುವ ಶಾಸ್ತ್ರೋಕ್ತವಾದ ಕ್ರಮ : ಕೊಂದಂ, ಬೆಂದಂ ಎಂಬ ಕ್ರಿಯಾಪದಗಳ ಪ್ರಕ್ರಿಯೆಯನ್ನು ಬರೆಯಿರಿ (ಕೂಶ). [ಸಂ. ಪ್ರಕ್ರಿಯಾ]

**ಪ್ರಕ್ವಾಣ** (ನಾ). ವೀಣೆಯ ಧ್ವನಿ : "ಪ್ರಕ್ವಾಣಃ, ಪ್ರಕ್ವಣಃ, ಅನುಕ್ವಣಃ ಇತ್ಯಾದಿಗಳು ವೀಣೆಯ ಧ್ವನಿಗೆ ಹೆಸರುಗಳು" (ಸಿದ್ಧಾಂತಿ. ೩೬). [ಸಂ.]

**ಪ್ರಕ್ಷಾಲನ, ಪ್ರಕ್ಷಾಳನ** (ನಾ). ೧. ನೀರಿನಿಂದ ತೊಳೆಯುವುದು,—ಶುದ್ಧಿಗೊಳಿಸುವುದು : ಉಚ್ಚಾಸನಮಂ ಕೊಟ್ಟು ಪ್ರಾಸುಕೋದಕಂಗಳಿಂ ಪಾದಪ್ರಕ್ಷಾಲನಂಗೆಯ್ದು (ಶಚಾರ. ೪೦೮). ೨. ಚೊಕ್ಕಟಗೊಳಿಸುವುದು; ಶುದ್ಧಮಾಡುವುದು. ೩. ಸ್ನಾನಮಾಡುವುದು. ೪. ತೊಳೆಯಲು ಉಪಯೋಗಿಸುವ ನೀರು. **ಪ್ರಕ್ಷಾಳನ** : ೧. ಅಂತು ನೃಪತಿ ವ್ಯಗ್ರನಾಗಿ ಮುಖಪ್ರಕ್ಷಾಳನಾರ್ಥಂ ಪೇರಡವಿಯೊಳಂಜಲಿಯಿಂ ಜಲಮಂ ತಂದು (ಕಾದಂಪೂ. ೬೦೧); ಕೆಳಗಿಳಿದು, ತಣ್ಣನೆಯ ನೀರಿನಲ್ಲಿ ಮುಖಪ್ರಕ್ಷಾಳನ, ಪಾದಪ್ರಕ್ಷಾಳನಗಳನ್ನು ಮಾಡಿ (ಶಾಂಕಲ. ೨೯೬). 'ಪ್ರಕ್ಷಾಲನಂಗೆಯ್' ಪರಾ. [ಸಂ.]

**ಪ್ರಕ್ಷಾಲನಂಗೆಯ್, ಪ್ರಕ್ಷಾಳನಂಗೆಯ್** (ಕ್ರಿ). ನೀರಿನಿಂದ ತೊಳೆ,—ಶುದ್ಧಿಗೊಳಿಸು : ಸ್ತುತಿಸುತಂ ಸಾಷ್ಟಾಂಗದಲಿ ನಮಿಸುತ ಗುರುಶ್ರೀಚರಣಯುಗಮಂ ರತಿ ವಿಗಲ್ ಪ್ರಕ್ಷಾಲನಂಗೆಯ್ದು (ಜಪು. ೩೯-೩).

**ಪ್ರಕ್ಷಾಳನಂಗೆಯ್ :** ಇದಿರ್ಗೊಂಡುದ್ದದರೋಳ್ ಅಲಿಕ್ಕಿ ಚರಣಪ್ರಕ್ಷಾಳನಂಗೆಯ್ದು ಸನ್ಮದದಿಂದರ್ಚಿಸಿ ಭಕ್ತಿಯಿಂದೆ ಪೊಡೆವಟ್ಟಾಗಳ್ (ಶಬಶಂಪು. ೪-೨೨) ; ಮುದದೊಳಿದ್ದು ಶರೀರಧರ್ಮವಂ ಚರಿಸಿ ಕರಪದಮುಖ ಪ್ರಕ್ಷಾಳನಂಗೆಯ್ದು (ಶಕಶಾ. ೪-೩೯). [ಪ್ರಕ್ಷಾಲನ+ಗೆಯ್₁]

**ಪ್ರಕ್ಷಾಲಿತ,** ಪ್ರಕ್ಷಾಳಿತ (ಗು). ೧. ನೀರಿನಿಂದ ತೊಳೆದ,–ಶುದ್ಧಿಗೊಳಿಸಿದ : ಆ ಮರುದೇವಿಮಹಾದೇವಿ ಚತುರ್ಥಸ್ನಾನದೊಳ್ ಕಲ್ಪದ್ರುಮದುಕೂಲವಸನೆಯುಮಾರ್ಜಿತ ದಶನವಮಯೂಖಜಲಪ್ರಕ್ಷಾಳಿ[ತಾಂ. ೪]ತ ದಶನವಸನೆಯುಂ . . . ಆಗಿ (ಆಂಪು. ೬-೨೬ ವ). (ನಾ). ೨. ನೀರಿನಿಂದ ತೊಳೆದುದು,–ಶುದ್ಧಿಗೊಳಿಸಿದುದು. **ಪ್ರಕ್ಷಾಳಿತ :** ೨. "ನಿರ್ಣಿಕ್ತಂ, ಪ್ರಕ್ಷಾಳಿತಂ, ಧೌತಂ—ಈ ೩ ತೊಳೆಯಲ್ಪಟ್ಟುದು" (ಶಬಾಮ. ೬೮-೨೩೪). ೩. ತೊಳೆದುಬಿಡುವಿಕೆ ; ತಳ್ಳಿಹಾಕುವಿಕೆ ; ಕೊಚ್ಚಿಸಿ ಬಿಡುವಿಕೆ : ಮಹೀದೀ ಕಲಿಕಲ್ಮಷಮನಾನಿಂತಿರ್ದು ಸನ್ಮಾರ್ಗಪದ್ಧತಿಯಂ ಹಾಸ್ಯರಸಪ್ರವಾಹಭರದಿಂ ಪ್ರಕ್ಷಾಳಿತಂ ಮಾಡುಟ್ಟಿನೇ (ಶಂಂಶಪ. ೬-೯೧). [ಸಂ.]

**ಪ್ರಕ್ಷಾಲಿಸು,** ಪ್ರಕ್ಷಾಳಿಸು (ಕ್ರಿ). ೧. ನೀರಿನಿಂದ ತೊಳೆ,–ಶುದ್ಧಿಗೊಳಿಸು: ಸೂಕ್ಷ್ಮಪರಮಾರ್ಥತತ್ತ್ವಭಾವನಾಜಲದಿಂ ಪ್ರಕ್ಷಾಲಿಸಿ ಕಟ್ಟಿದ ಸೆರೆಯೊಳು ನಸುಗಂಪಿನಂತೆ (ಚಾಕ್ರಿಶೀ. ೦೦೩-೪) ; ಆಳಿಯರ್ ಗಂಧೋದಕಹೂಜೆಯಿಂದೆ ಪ್ರಕ್ಷಾಲಿಸಿದರ್ ಪದಯುಗವ (ಮೋಹತ. ೨೬-೩೩). **ಪ್ರಕ್ಷಾಳಿಸು :** ೧. ಭಟಾರರ ಕಾಲಂ ಮಹಾದೇವಿ ನೀರ್ವೊಯ್ಯೆ ಅರಸು ತಾನೆ ಪ್ರಕ್ಷಾಳಿಸಿ [ಶಾಶಾಂ. ೮ಚಿದ] (ವಡ್ಡಾರಾ. ೬೮-೪) ; ಪುಣ್ಯಜಲದಿಂ ಪ್ರಕ್ಷಾಳಿಸುವಂತೆ ಶಾಂತದೃಷ್ಟಿಗಳಿಂದೆನ್ನಂ ಮುನ್ನಂ ಕಂಡಜೀವನುತೆ . . . ನೋಡಿ (ಕಾದಂಪೂ. ೨೬೨) ; ಜಿನಮುನಿಗಳ್ಗೆ ಆಹಾರಮಂ ಕುಡುವುದುಂ . . . ಪಾದಯುಗಳವಂ ಗುಣಾನುರಾಗದಿಂ ತನ್ನೆರಡುತೊಡೆಯ ಮೇಲಿಟ್ಟೊತ್ತುವುದುಂ ಒರಸುವುದುಂ ಪ್ರಕ್ಷಾಳಿಸುವುದುಂ ಮತ್ತಂ ಪೆಱವು ವ್ಯಾಪಾರಂಗಳಂ ವ್ಯಯಾವೃತ್ಯಮೆಂಬುದು (ಶಾಶಾ. ೩೦೬). ೨. (ಆಲಂ) ಅಪಮಾನ ಮಾಡು ; ಹೀನಾಯಗೊಳಿಸು : ಅವರ ಹತ್ತಿರ ಹೋದರೆ ಚೆನ್ನಾಗಿ ಪ್ರಕ್ಷಾಳಿಸಿ ಕಳುಹಿಸುತ್ತಾರೆ (ಜಾಬ). [ಪ್ರಕ್ಷಾಲನ + – ಇಸು₁]

**ಪ್ರಕ್ಷಾಳನ** 'ಪ್ರಕ್ಷಾಲನ' ನೋ.

**ಪ್ರಕ್ಷಾಳನಂಗೆಯ್** 'ಪ್ರಕ್ಷಾಲನಂಗೆಯ್' ನೋ.

**ಪ್ರಕ್ಷಾಳನೆ** (ನಾ). ೧. = ಪ್ರಕ್ಷಾಲನ ೧. ೨. (ಆಲಂ) ಅವಮಾನ ; ಮಾನಹಾನಿ : ಆತ ಅಲ್ಲಿಗೆ ಹೋಗಿ ಚೆನ್ನಾಗಿ ಪ್ರಕ್ಷಾಳನೆ ಮಾಡಿಸಿಕೊಂಡು ಬಂದ (ಜಾಬ). [ಸಂ. ಪ್ರಕ್ಷಾಲನ]

**ಪ್ರಕ್ಷಾಳಿತ** 'ಪ್ರಕ್ಷಾಲಿತ' ನೋ.

**ಪ್ರಕ್ಷಾಳಿಸು** 'ಪ್ರಕ್ಷಾಲಿಸು' ನೋ.

**ಪ್ರಕ್ಷಿಪ್ತ,** (ಗು). ೧. ಎಸೆದ; ತೂರಿದ. ೨. ಒಳಕ್ಕೆ ಹಾಕಿದ; ಒಳಗೆ ಸೇರಿಸಿದ. (ನಾ). ೩. ಗ್ರಂಥದಲ್ಲಿ ಕವಿಯು ಬರೆಯದೆ ಇದ್ದುದನ್ನು ಇತರರು ಅನಂತರ ಸೇರಿಸಿದ ಭಾಗ : ಈ ಕೊನೆಯ ಮಾತು ಪ್ರಕ್ಷಿಪ್ತವೆಂದು ಸಿದ್ಧವಾದರೆ ಮಾತು ಬೇರೆ (ಕಶಾಚ. ೩೩) ; ಜಯದ್ರಥನು ದ್ರೌಪದಿಯನ್ನು ಹೊತ್ತುಕೊಂಡು ಹೋದ ವೃತ್ತಾಂತವೇ ಪ್ರಕ್ಷಿಪ್ತ (ಶಕಶಾ. ೪೧೩). [ಸಂ.]

**ಪ್ರಕ್ಷಿಪ್ತಪಾಠ** (ನಾ).=ಪ್ರಕ್ಷಿಪ್ತ ೩ : ಗಂಗನ ಪ್ರತಿಗಳಲ್ಲಿ . . . ಸಂಕ್ಷಿಪ್ತ ಮತ್ತು ಪ್ರಕ್ಷಿಪ್ತಪಾಠಗಳೆರಡೂ ವಿದಿತವಾಗುತ್ತವೆ (ಶಬಶಾಂ. ೪೦). [ಸಂ.]

**ಪ್ರಕ್ಷೀಣ** (ಗು). ೧. ತುಂಬ ಕುಗ್ಗಿದ,—ಕಡಮೆಯಾದ. ೨. ಸೊರಗಿದ; ಕೃಶವಾದ. ೩. ನಷ್ಟವಾದ ; ನಾಶವಾದ : ತಮೋವಪ್ರಾಪ್ರಕ್ಷಯೋಪಶಮಂ ಪ್ರಕ್ಷೀಣಾವರಣಂ ಮಾ ಪ್ರತಿನಿಯತಂ ಪ್ರತ್ಯಕ್ಷಮೆಂಬೀ ವ್ಯುತ್ಪತ್ತಿಯಿಂ ಪರಾಯತ್ತಮಲ್ತೆಂಬುದರ್ಥಂ (ಶಕ್ತ್ಯ. ೩೪). [ಸಂ.]

**ಪ್ರಕ್ಷುಬ್ಧ** (ಗು). ೧. ಅಲ್ಲೋಲಕಲ್ಲೋಲವಾದ ; ಕದಡಿದ : ವಿಸ್ತೃತ ವಕ್ರೋದರಭಾಗಘೂರ್ಣಿತಮತಪ್ರಕ್ಷುಬ್ಧಕಲ್ಲೋಲಕಲ್ಪಿತಕೋಲಾಹಲಕಲ್ಪಕಾಲರಭಸಪ್ರಸ್ಪರ್ಧಿಯಂ ವಾರ್ಧಿಯಂ (ಕಾಕ್ಶಾ. ೬೫). ೨. ನೆಮ್ಮದಿಯಿಲ್ಲದ ; ಶಾಂತಿಯನ್ನು ಕಳೆದುಕೊಂಡ : ಆಕೆಯ ಬುದ್ಧಿಯ ಶಕಲವೊಂದು . . . ಆಕೆಯ ಪ್ರಕ್ಷುಬ್ಧಚಿತ್ತಕ್ಕೆ ಸಮಾಧಾನ ಹೇಳಿತು (ಕಕಂಶಾ. ೦೨). ೩. ಗೊಂದಲಗೊಂಡಿರುವ : ದೇಶದಲ್ಲಿ ಪ್ರಕ್ಷುಬ್ಧಪರಿಸ್ಥಿತಿಯುಂಟಾದಾಗ ಜನರು ಭೇದಭಾವ ಮರೆತು ಒಂದಾಗಬೇಕು (ಜಾಬ). [ಸಂ.]

**ಪ್ರಕ್ಷುಭಿತ** (ಗು). ೧. = ಪ್ರಕ್ಷುಬ್ಧ ೧ : ನಾನಾನಾಜಲಚರನಿಕರಾಸ್ಫಾಳನ ಪ್ರೋಚ್ಚಲತ್ತ್ವಚ್ಛದನಚ್ಛನ್ನಚ್ಛಟಾಪ್ರಕ್ಷುಭಿತಲಹರಿಕಾಸ್ಫಾರರೌದ್ರಂ ಸಮುದ್ರಂ (ಕಾವ್ಯಾಸಾ. ೭೪). ೨.=ಪ್ರಕ್ಷುಬ್ಧ ೨: ಶಂಬರನಾಗಸ್ಥಾನಮಂ ಪ್ರಕ್ಷುಭಿತ ಬಹುಜನಧ್ವಾನವಂ ಪೊಕ್ಕಂ . . . ರಾಜಹಂಸಂ (ಸುಕುಮಾ. ೩-೬೨). [ಸಂ.]

**ಪ್ರಕ್ಷೇಪ** (ನಾ). ೧. ಎಸೆಯುವುದು ; ತೂರುವುದು. ೨. ಇಡುವುದು; ಇರಿಸುವುದು. ೩. ಮೂಲಗ್ರಂಥದಲ್ಲಿ ಇಲ್ಲದುದನ್ನು ಹೊಸದಾಗಿ ಸೇರಿಸುವಿಕೆ ಮತ್ತು ಹಾಗೆ ಸೇರಿಸಿದ ಅಂಶ : ಇಂತಹ ಪ್ರಕ್ಷೇಪಗಳು ಕೆಲವೊಮ್ಮೆ ಸನ್ನಿವೇಶದ ಪ್ರಭಾವವನ್ನು ಹೆಚ್ಚಿಸಿರುವುದೂ ಉಂಟು (ಕಸಶ. VII ಮುನ್ನುಡಿ) ; ಕುಮಾರವ್ಯಾಸಭಾರತವು ವ್ಯಾಸಭಾರತವನ್ನು ಎಷ್ಟು ಮಟ್ಟಿಗೆ ಅನುಸರಿಸಿದೆ . . . ಎರಡೂ ಭಾರತಗಳಲ್ಲಿ ಅನೇಕ ಪ್ರಕ್ಷೇಪಗಳಾಗಿವೆ (ಕಶಾಚ. ೨೪೬). [ಸಂ.]

**ಪ್ರಕ್ಷೇಪಕ** (ನಾ). ೧. ಎಸೆಯುವವನು. ೨. ಇರಿಸುವವನು. ೩. ಮೂಲಗ್ರಂಥದಲ್ಲಿ ಇಲ್ಲದುದನ್ನು ಹೊಸದಾಗಿ ಸೇರಿಸುವವನು: ಒಂದು ವೇಳೆ ವಾಸ್ತವವಾಗಿ ಹಾಗಾಗದಿದ್ದರೂ ಪ್ರಕ್ಷೇಪಕರು ಹಾಗೆ ಭಾವಿಸಿಕೊಂಡದ್ದೂ ತಮ್ಮ ಚಪಲವನ್ನು ತೀರಿಸಿಕೊಂಡದ್ದೂ ಸತ್ಯ! (ಕಸಶ. VII ಮುನ್ನುಡಿ). ೪. ದೂರವಾಣಿ ಅಥವಾ ದೂರಲೇಖಕ ಸಲಕರಣೆಗಳಲ್ಲಿ ಸುದ್ದಿಗಳನ್ನು ಬಿತ್ತರಿಸುವ ಸಾಧನ ; ರೇಡಿಯೋ ನಿಸ್ತಂತುತರಂಗಗಳನ್ನು ಕಳುಹಿಸುವ ಯಂತ್ರಸಲಕರಣೆ : ೧೯೩೩ಕ್ಕೆ ಮುಂಚೆ ಬೊಂಬಾಯಿ ಮತ್ತು ಕಲ್ಕತ್ತನಗರಗಳಲ್ಲಿ ೧೫ ಕಿಲೋವ್ಯಾಟ್ ಸಾಮರ್ಥ್ಯದ ಎರಡು ಪ್ರಕ್ಷೇಪಕಗಳು (Transmitters) ಇದ್ದುವು (ಕಿರ್ವಿಶಾ. ೫೦೨). [ಸಂ.]

**ಪ್ರಕ್ಷೇಪಕಾರ** (ನಾ). ಮೂಲಗ್ರಂಥದಲ್ಲಿ ಮೊದಲು ಇಲ್ಲದ ಅಂಶವನ್ನು ಹೊಸದಾಗಿ ಸೇರಿಸುವವನು : ಈ ಒಂದು ಪ್ರಸಂಗವನ್ನು ಕುರಿತು ಪ್ರಕ್ಷೇಪಕಾರರ ಬುದ್ಧಿ ಎಷ್ಟು ವೈವಿಧ್ಯಮಯವಾಗಿ ಕೆಲಸ ಮಾಡಿದೆ (ಶಂಶೀ. ೦೯೨). [ಸಂ.]

**ಪ್ರಕ್ಷೇಪಣ** (ನಾ). ಸರಿಸುವುದು : ಭೂಪಾಲಂಗವಟಯಿಸಿದುದಾ ಪೂಗೊಳದೊಳ್ಚಿತ್ರಕಾಂಡಪಟೀಪ್ರಕ್ಷೇಪಣವಿಳಾಸವಂ ತತ್ಸೋಪಾನೋಕ್ಷ್ಮಾನವಣಿ ಮಯೂಖವಿತಾನಂ (ಪುಷ್ಪಕೆ. ೬-೦೦೪). [ಸಂ.]

**ಪ್ರಕ್ಷೇಪಿತ** (ನಾ). ೧. ಎಸೆದುದು ; ಬಿಸಾಡಿದುದು. ೨. ಇಟ್ಟುದು; ಇರಿಸಿದುದು. [ಸಂ.]

**ಪ್ರಕ್ಷೇಪಿಸು** (ಕ್ರಿ). ಮೂಲಗ್ರಂಥದಲ್ಲಿ ಇಲ್ಲದುದನ್ನು ಹೊಸದಾಗಿ ಸೇರಿಸು : ಅರ್ಥಸೌಲಭ್ಯಕ್ಕಾಗಿ ಅರ್ಥವಾಗುವಂತಹ ಪಾಠಾಂತರಗಳನ್ನು ಕಲ್ಪಿಸಿ, ಅಲ್ಲಲ್ಲಿ ಮೂಲಧಾಟಿಗೆ ಭಂಗ ಬರದಂತೆ ತಮ್ಮ ಸ್ವಂತರಚನೆಗಳನ್ನು ಪ್ರಕ್ಷೇಪಿಸಿಬಿಟ್ಟಿರುವುದೂ ಉಂಟು (ಕಸಶ. VII ಮುನ್ನುಡಿ). [ಪ್ರಕ್ಷೇಪ + – ಇಸು₁]

**ಪ್ರಕ್ಷೋಭೆ** (ನಾ). ೧. ಅಲ್ಲೋಲಕಲ್ಲೋಲ ; ಪ್ರಕ್ಷುಬ್ಧತೆ : ಅಗುರ್ವುವೆತ್ತುದಂ ತ್ರೈಲೋಕ್ಯಕಂಟಕವೆಂಬಾನೆಯನೇಱಿ ಪ್ರಳಯಪ್ರಕ್ಷೋಭಮಾದಂತೆ ಮುಳಿದು ಬರೆ (ಶಂರಾಮಾ. ೦೩-೦೩೬ ವ). ೨. ಗೊಂದಲ ; ತಳಮಳ : ಆಕಾಶಂ ಮೇಗೆ ಕವಿದವೂದು ಗಾಳಿಯೆ ನಂಜಾದುದು ಎಂಬ ಸಕಲಪ್ರಕ್ಷೋಭದೊಳ್ ವಿಹ್ವಳರಾಗಿರ್ದ ನಿರಯಜರಸೆಯ್ದು (ಶಾಂತಿ. ೬-೯೪ ವ) ; ಬನ್ನಿಮಿನ್ನುಮಱಸುವವೆಂದು ಪುರಪ್ರ[ಕ್ಷೋ]ಭಮಾಗೆ ಪುರದೊಳಗೆ ತೊಟಲ್ದಱಸುತ್ತುಂ (ಸುಕುಚ. ೦೨-೨೦ ವ). [ಸಂ.]

**ಪ್ರಕ್ಷೋಭಿಸು** (ಕ್ರಿ). ಅಲ್ಲೋಲಕಲ್ಲೋಲವುಂಟಾಗು ; ಪ್ರಕ್ಷುಬ್ಧಗೊಳ್ಳು : ಬಾಹಾಗದಾಯುಧವಿಕ್ಷೇಪವಿಜೃಂಭಣಭ್ರಮಣದಿಂ ಪ್ರಕ್ಷೋಭಿಸಲ್ ಯುದ್ಧಕೇಳಿಧುರೀಣರ್ . . . ಪೊಯ್ದರ್ ಗದಾದಂಡದಿಂ (ಜಗಂ. ೯-೬೩).

[ಪ್ರಕ್ಷೋಭೆ + – ಇಸು₁]

**ಪ್ರಕ್ಷ್ವೇಡನ** (ನಾ). ೧. ಗದ್ದಲ ; ಗಜಬಿಜಿ. ೨. ಕಬ್ಬಿಣದ ಬಾಣ : "ಪ್ರಕ್ಷ್ವೇಡನಃ, ನಾರಾಚಃ—೨ ನಾರಸದ ಹೆಸರುಗಳು" (ಸಿದ್ಧಾಂತಿ. ೨೬೪).

[ ಸಂ. ]

**ಪ್ರಖರ** (ಗು). ೧. ಬಹಳ ಬಿಸಿಯಾದ ; ಚುರುಕಾದ. ೨. ತೀಕ್ಷ್ಣವಾದ ; ಕಟುವಾದ. (ನಾ). ೩. ಬಹಳ ಬಿಸಿಯಾದಂದು; ಚುರುಕಾದಂದು : ಸೂರ್ಯನ ಪ್ರಖರವಾದ ಕಿರಣಗಳು ಒಳಗೆ ತೂರಿಬರದಂತೆ ತಕ್ಕ ಪ್ರಮಾಣದ ಗಾಜಿನ ಕಿಟಕಿಗಳು . . . ಹಚ್ಚಿರಬೇಕು (ಗ್ರಂಶಾಂ. ೬) ; ಸೂರ್ಯನು ಒಳ್ಳೆ ಪ್ರಖರವಾಗಿ . . . ಬಿಸಿಯಾದ ಕಿರಣಗಳನ್ನು ಅವನ ಮೇಲೆ ಬಿಡುತ್ತಿದ್ದನು (ಮಲಿಪಾ. ೦೦೦). ೪. ನಾಯಿ. ೫. ಹೇಸರಗತ್ತೆ.

[ ಸಂ. ]

**ಪ್ರಖರತೆ** (ನಾ). ೧. ತೀಕ್ಷ್ಣತೆ : ಮಾಯಾದೇವಿಯು ಆ ಭೇದಕಕಣ್ಣುಗಳ ಪ್ರಖರತೆಯನ್ನು ಸಹಿಸಲಾರದಾದಳು (ಬುದ್ಧಚ. ೯). ೨. ಕಾವು; ಬಿಸುಪು : ಅವನ ಆತ್ಮವಿಶ್ವಾಸದಲ್ಲಿ ಒಂದು ಪ್ರಖರತೆಯಿತ್ತು (ಸಮಜ. ೪೦೯). [ಸಂ. ಪ್ರಖರತಾ]

**ಪ್ರಖೇಣ** (ನಾ). ಒಂದು ಬಗೆಯ ಮರ ; ಕದಂಬವೃಕ್ಷ : ಷಟ್ಪದೇಷ್ಟ . . . ಪ್ರಖೇಣ . . . ನೀರುಕಡವಾಲ (ಹಸುಹೊ. ೪೬). [ ಸಂ. ]

**ಪ್ರಖ್ಯ** (ಗು). ೧. ಕಾಣುವ ; ಸ್ಫುಟವಾದ. ೨. ಹೋಲುವ ; ಸಮಾನವಾದ : ಪರಮೇಷ್ಠಿಪ್ರಖ್ಯವಿಪ್ರಪ್ರತತಿಗಳಿಳಾಪ್ರಖ್ಯಶೂದ್ರಾಳಿಯಿಂ ಖೇಚರಕಾಂತಪ್ರಖ್ಯರಪ್ಪ ವಣಿಜರಿಂ ಇನಜಪ್ರಖ್ಯ ಕೊಯ್ಯಾಳ್ಗಳಿಂ . . . ಅರಸಿಯ ಕೆರೆ ಭೂಭಾಗದೊಳ್ ಶೋಭಿಸಿಕುರ್ಗೆ (ಶ್ರುಕಾಶಿ. ೦೯೨೬, ೦೦-೯೩ ; 1189). ೩. ಪ್ರಖ್ಯಾತ ; ಶ್ರೇಷ್ಠ : ಇಳಾಪ್ರಖ್ಯಶೂದ್ರಾಳಿಯಿಂ . . . ಶೋಭಿಸಿಕುರ್ಗೆ (ಶ್ರುಕಾ ೦೯೨೬. ೦೦-೯೩ ; 1189). (ನಾ). ೪. ಸಮಾನವಾದುದು : "ಸದೃಕ್, ಸಮಾಸಂ, ಸದೃಶಂ, ಸದೃಕ್ಷಂ, ಪ್ರಖ್ಯಂ . . . ಸನ್ನಿಭಂ—ಈ ೧೧ ಸರಿ" (ಕರಾಜ:೨. ೦೦೩-೯). [ಸಂ. ಪ್ರಖ್ಯಾ]

**ಪ್ರಖ್ಯಾತ** (ಗು). ೧. ಹೆಸರುವಾಸಿಯಾದ ; ಪ್ರಸಿದ್ಧವಾದ : ಪ್ರಖ್ಯಾತ ಕವಿಯಾದ ಮುದ್ದಣನ ಬರವಣಿಗೆ ಬಹು ರಮ್ಯವಾಗಿದೆ (ಲೋಕ). ೨. ಮಾನ್ಯತೆಯುಳ್ಳ ; ಅಂಗೀಕೃತವಾದ. (ನಾ). ೩. ಹೆಸರುವಾಸಿಯಾದುದು ; ಪ್ರಸಿದ್ಧವಾದುದು : ಕನ್ನಡಸಾಹಿತ್ಯದಲ್ಲಿ ಕುಮಾರವ್ಯಾಸ ಭಾರತವು ಪ್ರಖ್ಯಾತವಾಗಿದೆ (ಲೋಕ). ೪. ಪ್ರಸಿದ್ಧನಾದವನು ; ಕೀರ್ತಿವಂತ. ೫. ಎಲ್ಲರಿಗೂ ತಿಳಿದುದು ; ಸರ್ವವಿದಿತ ; ಬಹಿರಂಗ : ಲೆಕ್ಕದಲ್ಲಿ ಲೋಟವಾಹರಿಗೇಕೆ ಅಜಾತನ ಸುದ್ದಿ ಪ್ರಖ್ಯಾತದಲ್ಲಿ ನೀತಿಯ ಹೇಳಿಹನೆಂದು ದೇಶದಲ್ಲಿ ಸುಳಿವವರಿಗೇಕೆ ಪರದೋಷನಾಶನದ ಸುದ್ದಿ (ಕೋಣಮಾ. ೦೨-೪೪). ೬. [ಕಾವ್ಯವಿ] ರೂಪಕಗಳಲ್ಲಿನ ಮೂರು ಬಗೆಯ ಕಥಾಂಶಗಳಲ್ಲಿ ಒಂದು ; ರಾಮಾಯಣ, ಭಾರತ ಮೊದಲಾದ ಪ್ರಾಚೀನಗ್ರಂಥಗಳಲ್ಲಿ ನಿರೂಪಿಸಿರುವ ಕಥೆ : ಈ ಮೂರು ವಿಧವಾದ ವಸ್ತುವೂ "ಪ್ರಖ್ಯಾತ" ಎಂದರೆ—ರಾಮಾಯಣ, ಭಾರತ, ಕಥಾಸರಿತ್ಸಾಗರ ಮುಂತಾದ ಗ್ರಂಥಗಳಲ್ಲಿ ಬಂದು—ಪ್ರಸಿದ್ಧವಾಗಿರಬಹುದು (ಕೃಶಿಚ. ೨೦೩) ; ನಾಟಕ—ಇದರ ವಸ್ತು ಪ್ರಖ್ಯಾತ (ಸಂಹಾಲ. ೨೯).

[ಸಂ.]

**ಪ್ರಖ್ಯಾತಿ** (ನಾ). ೧. ಯಶಸ್ಸು ; ಕೀರ್ತಿ : ಪ್ರಖ್ಯಾತಿ ಹೊಂದಿ ಅಪಖ್ಯಾತಿ ಪಟ್ಟ (ಗಾದೆ). 'ಪ್ರಖ್ಯಾತಿವೆಱು' ಪರಾ. ೨ ಹೊಗಳಿಕೆ ; ಸ್ತುತಿ. ೩. ಅರಿವು ; ತಿಳಿವಳಿಕೆ. [ಸಂ.]

**ಪ್ರಖ್ಯಾತಿವೆಱು** (ಕ್ರಿ). ಹೆಸರುವಾಸಿಯಾಗು ; ಪ್ರಸಿದ್ಧಿ ಹೊಂದು : ಸಂತತಜನಸವನೋದ್ಯತ್ಪಯೋಧಾರೆಯಿಂ ಮಾಡಿ ಕರಂ ಪ್ರಖ್ಯಾತಿವೆತ್ತಂ ನೃಪತವಯನನೇಕಾಂತವಿದ್ಯಾವಿನೋದಂ (ಕಂದ್ರಕು. ೯-೮೪)

[ ಪ್ರಖ್ಯಾತಿ + ಪೆಱು₁ ]

**ಪ್ರಖ್ಯಾಪನ** (ನಾ). ಪ್ರಸಿದ್ಧಪಡಿಸುವುದು ; ಎಲ್ಲರಿಗೂ ತಿಳಿಯಪಡಿಸುವುದು : ಆದನ್ನು ರಾಷ್ಟ್ರಪತಿಯವರು ಪ್ರಖ್ಯಾಪನ ಮಾಡಿದಾಗ, ಅದು ಅಂಥ ರಾಜ್ಯಕ್ಷೇತ್ರಕ್ಕೆ ಅನ್ವಯಿಸುವಂಥ ಸಂಸತ್ತಿನ ಒಂದು ಅಧಿನಿಯಮದಂತೆಯೇ . . . ಪ್ರಭಾವ ಉಳ್ಳದ್ದಾಗಿ ಇರತಕ್ಕದ್ದು (ಭಾರಾಸ. ೦೩೬). [ಸಂ.]

**ಪ್ರಖ್ಯೆ** (ನಾ). ೧. ಗ್ರಹಣಶಕ್ತಿ : ಪಂಪನು . . . ಮಹಾಪ್ರತಿಭೆಗೆ ಮಾತ್ರ ಸಹಜವಾದ ಪ್ರಖ್ಯೆಯಿಂದ ಕತೆಯನ್ನು ನಡೆಸಿಕೊಂಡು ಹೋಗುತ್ತಾನೆ (ಕಹಾಸ. ೪೬). ೨. ಕೀರ್ತಿ ; ಪ್ರಸಿದ್ಧಿ ; ಪ್ರಖ್ಯಾತಿ.

[ ಸಂ. ಪ್ರಖ್ಯಾ ]

**ಪ್ರಗಂಡ** (ನಾ). ಮೊಳಕೈಯಿಂದ ಹೆಗಲಿನ ವರೆಗಿನ ತೋಳಿನ ಭಾಗ : "ಪ್ರಗಂಡಃ . . . ಅಸ್ಕೋಪರಿ, ಮೊಳಕೈಗಿಂತಲೂ ಮೇಲೆ ಕಂಕಳವರೆಗೂ ಮೇಲುತೋಳಿನ ಪೆಸರು" (ಸಿದ್ಧಾಂತಿ. ೦೯೨). [ಸಂ.]

**ಪ್ರಗಣಿತ** (ಗು). ೧. ಎಣಿಸಿದ : ಗುಣಿಸಿದ. ೨. ಗಮನಿಸಿದ : ಬಗೆದು ಮೇಣ್ ಪರಮಧರ್ಮಮನರ್ಥಿಯಿನನ್ವಯಪ್ರಗ(ಣಿ)ಣಿತಾಭ್ಯುದಯಮೋಕ್ಷಸುಖಾಶ್ರಯಹೇತುವಂ ನೆಗಟ್ಟಿ (ಕಂರಾ. ೩-೨೨೩) ; ನಿಗುರ್ವ ಚೌಕಾಳವೆಂಬ ಶಾರಿರ ಸುಗುಱಿಯಿಂದನುಬದ್ಧಗೂಡಿ ಪ್ರಗಣಿತಾಳತಿಯೆಸೆಯೆ ಸಂಧಿಸಿ ಗಮಕಸಪ್ತಕವು (ಬಸವ. ೦೯-೦೦). (ನಾ). ೩. ಅತಿಶಯತೆ : ಕನಕಾಂಚೀನಿನದಪ್ರಗಣಿತಮಗಲ್ದ ನಲ್ಲಳ ಜಗನವಿದೆನ್ನೆರ್ದೆಯನೆಂತು ಪೊಕ್ಕಿಪುವುದೋ (ಕಂಕಥಾ. ೪-೬೩). [ಸಂ.]

**ಪ್ರಗತ** (ಗು). ೧. ಮುಂದುವರಿದ : ಇಂದಿನ ಪ್ರಗತ ದೇಶಗಳು ಬಟ್ಟೆಯನ್ನೂ ಅರಿಯದ ಕಾಲದಲ್ಲಿ ಭರತಖಂಡವು ಜ್ಞಾನವಿಜ್ಞಾನದ ಶಿಖರದಲ್ಲಿ ಇದ್ದಿತು (ಕರ್ನಾಟ. XIV ಮುನ್ನುಡಿ). ೨. ಅಪರೂಪವಾದ ; ವಿರಳವಾದ : ಲೋಕೋತ್ತರವಾದ : ಸಕಲಜನವಿನುತನಂ . . . ಪ್ರಗತಗುಣಗಣನನರಿಬಲವಿಘಟನನಂ ಕಂಡನಣುಪನಾ ರಾಘವನಂ (ಕಂರಾ. ೨-೨೬). ೩. ಹೆಚ್ಚಾಗಿ ಬಳಕೆಯಲ್ಲಿರುವ,—ವ್ಯವಹಾರದಲ್ಲಿರುವ : ಮಧ್ಯಮೋತ್ತಮಪುರುಷಪ್ರಗತಬಹೂಕ್ತಿಯೊಳಿಮಾವೆಂದೊಗೆತರ್ಕುಗಂ (ಶಮದ. ೨೨೯).

[ಸಂ.]

**ಪ್ರಗತಿ** (ನಾ). ಏಳಿಗೆ ; ಮುನ್ನಡೆ ; ಪುರೋಭಿವೃದ್ಧಿ : ಇತರ ಕಾರ್ಯಕ್ಷೇತ್ರಗಳಲ್ಲಿಯೂ ದೇಶವು ಪ್ರಗತಿಯನ್ನು ಹೊಂದಿತು (ಪ್ರಭಾಸ್ತು. ೨೦); ಅಡಿಗೆಯು ಅನಾಗರಿಕಸ್ಥಿತಿಯಿಂದ ಮನುಷ್ಯನು ಹೊಂದಿದ ಪ್ರಗತಿಯ ಸೂಚಿಕೆ (ಅಡುಗೆ. ೬೮). [ಸಂ.]

**ಪ್ರಗತಿಪಥ** (ನಾ). ಏಳಿಗೆಯ ಹಾದಿ ; ಅಭಿವೃದ್ಧಿಯ ಮಾರ್ಗ : ಜೀವನ ಹಿಂದಿನದಕ್ಕಿಂತ ನವೀನವೂ ಉತ್ತಮವೂ ಆಗಿ ಪ್ರಗತಿಪಥದಲ್ಲಿ ಸಾಗುತ್ತಿದೆ (ಶಿಕ್ಷದ. ೧). [ಸಂ.]

**ಪ್ರಗತಿಪರ** (ಗು). ೧. ಏಳಿಗೆಯಲ್ಲಿ ಆಸಕ್ತಿಯುಳ್ಳ : ಪ್ರಗತಿಶೀಲ :

ಅದು ಪ್ರಗತಿಪರ ವಿಚಾರಶೀಲರ ಸಂಘವಾಗಿತ್ತು (ಕಂಕೋ. I. ೦೩೬). (ನಾ). ೨. ಏಳಿಗೆಯಲ್ಲಿ ಆಸಕ್ತಿಯುಳ್ಳವನು : ಬೇ ಪ್ರಗತಿಪರನಾದ ವ್ಯಕ್ತಿ. ಪ್ರಕೃತಶತಮಾನದ ಉತ್ತರಾರ್ಧದ ಪ್ರಾರಂಭದಲ್ಲಿ ಪ್ರಚಾರ ದಲ್ಲಿದ್ದ ಪ್ರಗತಿಪರಸಂಪ್ರದಾಯ ಅತ್ಯಂತ ಪವಿತ್ರವಾದದ್ದೆಂದು ಅವನ ಪರಿಗಣಿಸಿದ್ದನು (ಪ್ರಜು. ೩೬೬). [ಸಂ.]

**ಪ್ರಗತಿವಾದಿ** (ನಾ). (ಹಳೆಯ ಕಂದಾಚಾರಕ್ಕೆ ಶರಣಾಗದೆ) ಯಾವು ದಾದರೊಂದು ಕ್ಷೇತ್ರದಲ್ಲಿ ಸುಧಾರಣೆಯನ್ನು ಮಾಡಬೇಕೆಂದು ವಾದಿಸುವ ವ್ಯಕ್ತಿ : ನಾನು ಪ್ರಗತಿವಾದಿಯೋ ಅಲ್ಲವೋ ನನಗೆ ಗೊತ್ತಿಲ್ಲ (ಪ್ರಸಂ. ೨೨೪) ; ಅತಿತ್ವರಿತದಲ್ಲಿ ಸುಧಾರಣೆಯನ್ನು ಬಯಸುವ ಪ್ರಗತಿ ವಾದಿಗಳನ್ನು ಗುರುತಿಸಬಹುದು (ಜಾಕಕ. ೨೫). [ಸಂ. ಪ್ರಗತಿವಾದಿನ್]

**ಪ್ರಗತಿಶೀಲ** (ಗು). ೧. = ಪ್ರಗತಿಪರ ೧ : ಭಾರತದ ಇತರ ಭಾಷೆಗಳಲ್ಲಿ ನವ್ಯಕವಿಗಳು ಹಾಗು ಪ್ರಗತಿಶೀಲಪಂಥಗಳವರು ನಡೆಸುತ್ತಿರುವ ಚಳವಳಿ ಗಳನ್ನು ಗಮನಿಸಬೇಕಾದುದು ಅಗತ್ಯ (ಕಂಕೋ. I, ೦೩೩). (ನಾ). ೨. ದೀನದಲಿತರನ್ನು ಕುರಿತು ಕೃತಿರಚನೆ ಮಾಡಬೇಕೆಂಬ ತತ್ತ್ವವನ್ನು ಅನುಸರಿಸಿ ಬರೆದ ಸಾಹಿತ್ಯ : ಪ್ರಗತಿಶೀಲಲೇಖಕರು ಸಾಹಿತ್ಯಕ್ಕೆ ಹೆಚ್ಚಿನ ವಸ್ತುವೈವಿಧ್ಯ, ವಿಸ್ತಾರಗಳನ್ನು ತಂದರು (ಕಂಕೋ. XI. ೩೦೬) ; ಇತರ ಸಾಹಿತಿಗಳ ಸಾಹಿತ್ಯಸೃಷ್ಟಿಯನ್ನು ೧. ಅನುಭಾವಿಸಾಹಿತ್ಯ— ರಹಸ್ಯವಾದ . . . ೩. ಪ್ರಗತಿಶೀಲ, ೪. ನವ್ಯಕಾವ್ಯ ಅಥವಾ ಪ್ರಯೋಗ ವಾದ ಎಂದು ವಿಭಾಗಿಸಬಹುದಾಗಿದೆ (ಶಾಕಕ. ೯೭೬). ೩. ದೀನದಲಿತ ರನ್ನು ಕುರಿತು ಕೃತಿರಚನೆ ಮಾಡಬೇಕೆಂದು ಹುಟ್ಟಿಕೊಂಡ ಲೇಖಕರ ಒಳಗದ ಸದಸ್ಯ : ಬಡವರು, ಕಾರ್ಮಿಕರು, ಕೂಲಿಕಾರರು ಮೊದಲಾದ ವರ ಬದುಕಿನ ನೋವುನಲಿವುಗಳಿಗೆ ಅಭಿವ್ಯಕ್ತಿ ನೀಡಿ ಪ್ರಗತಿಶೀಲರು ಕನ್ನಡಸಾಹಿತ್ಯಕ್ಕೆ ಹೊಸ ಆಯಾಮಗಳನ್ನಿತ್ತರು (ಕಂಕೋ. XI. ೩೦೭). [ಸಂ.]

**ಪ್ರಗಲ್ಭ** (ಗು). ೧. ಪ್ರತಿಭೆಯಿಂದ ಕೂಡಿದ. ೨. ಧೈರ್ಯದಿಂದ ಕೂಡಿದ ; ಕೆಚ್ಚುಳ್ಳ. ೩. ಚೆನ್ನಾಗಿ ಬೆಳೆದಿರುವ. ೪. ಪಾಂಡಿತ್ಯ ಪೂರ್ಣವಾದ ; ಪ್ರೌಢವಾದ : ನೃಪನಂ ಜಾಣ್ಗೊಂಡ ನಿಜಪ್ರಗಲ್ಭ ವಚನದೆ ನುಡಿದರ್ (ಶಾರಂಗ. ೬೬೦). (ನಾ). ೫. ಧೈರ್ಯಶಾಲಿ ; ದಿಟ್ಟ. ೬. ಪ್ರೌಢ ; ಪ್ರವೀಣ ; ನಿಪುಣ : "ಪ್ರಗಲ್ಭಃ, ಪ್ರೌಢಃ—ಈ ೨ ಪ್ರೌಢರು" (ಕಣಾಘು. ೬೯-೨೬೨) ; ನೆಗಟ್ದಿರೆ ಪುಣ್ಯಾಹ ಸ್ವರಂ . . . ಪುಗಿಲೆಟ್ದುಂ ವಿವಿಧಾಸ್ತ್ರಪ್ರಗಲ್ಭರಂ ತನ್ನ ಚಟ್ಟರಂ ಕಳಶಭವಂ (ಕಂಕಥಾ. ೨-೬೯) ; ಬಹುಶ್ರುತನುಂ ಅತಿಪ್ರಗಲ್ಭನುಂ . . . ಆಚಾರ್ಯನಪ್ಪಂ (ಅಚ್ಚ. ೦೦-೨ ಕ). ೭. ಚುರುಕಾದ ಬುದ್ಧಿಯುಳ್ಳ ವನು ; ಪ್ರತಿಭಾವಂತ : "ಪ್ರಗಲ್ಭಃ, ಪ್ರತಿಭಾನ್ವಿತಃ—೨ ಆಗಾಗ್ಗೆ ಹೊಸಹೊಸದಾಗಿ ಪ್ರಕಾಶಿಸುವ ಪ್ರಜ್ಞೆಯುಳ್ಳವನ ಹೆಸರು" (ನಿಘಂಟಿ. ೩೨೯). [ಸಂ.]

**ಪ್ರಗಲ್ಭತೆ** (ನಾ). ೧. ಧೈರ್ಯ ; ಕೆಚ್ಚು. ೨. ಆಳವಾದ ತಿಳಿವಳಿಕೆ ; ಪಾಂಡಿತ್ಯ : "ಪ್ರತಿಪತ್ತಿಃ, ಪ್ರಗಲ್ಭತಾ — ಈ ೨ ಅಱಿವುದು" (ಕಣಾಘು. ೦೨೬-೯೯) ; ಪ್ರಗಲ್ಭತೆಯನಾಯ್ದುವೋಲ್ ಬೆಳಗುವುಗಳಂ ಗಾಳಿ ದುಂಬಿಗಳ್ ಬಗೆದು ಮೊಲ್ಲೆ ಮಲ್ಲಿಗೆಯ ಮಾಲೆ ಮಲ್ಪಿಂಗೆ ವಾಯ್ತ್ರಗೆತ್ತೆಱಗೆ (೦೦ಚಾಕ. ೦೩-೯೭). ೩. ಪ್ರೌಢಿಮೆ ; ನೈಪುಣ್ಯ : ಆ ಕೃತಿ ಮುನ್ನಂ ಚಿಲ್ವಿಂಗಾಕರಮೆನಿಸಿರ್ದು ಮತ್ತೆ ಕನ್ನಡಿಸಿತ್ತಿನ್ನೀ ಕವಿತೆಯಿಂ ಪ್ರಗಲ್ಭತೆಯಾ ಕಾದಂಬರಿಯ ಸೊಬಗದೇನಚ್ಚರಿಯೋ (ಕಾದಂಪೂ. ೬). [ಸಂ. ಪ್ರಗಲ್ಭತಾ]

**ಪ್ರಗಲ್ಭೆ** (ನಾ). ೧. ದಿಟ್ಟ ಹೆಂಗಸು. ೨. ಪ್ರೌಢವಯಸ್ಸಿನ ಮಹಿಳೆ. ೩. ಗಯ್ಯಾಳಿ : ಗಟವಾಣಿ. ೪. [ಕಾವ್ಯಮೀ] ಯೌವನದ ಅನುಭವದ ಪರಿಣಾಮವಾಗಿ ಭಾವಪರವಶತೆಯುಳ್ಳವಳು : ಅನುರಕ್ತೆ ಸರಸತರವಾನಿನಿ ಪರಿಚಿತೆಯಖಿಳವಿಷಯನಿಶ್ಚಿತಮತಿ ಕಾಮಿನಿಯೆನಿಸಿದಾಕೆ ಕವಿಕಾಮನ ಮತದಿಂ ಪ್ರಗಲ್ಭೆಯೆನೆ ಪೆಸರ್ವಡೆಗುಂ (ಶೃಂಗಾರ೮-೩-೩೩) : ಮತಿಯನುಳ್ಳ ವೈಶಿಕಕ್ಕೆ ಗತಿಯನಿಸುವ ಮಾತಿನಿಂದೆ ರತಿಗೆ ತಪ್ಪದಂತೆ ರತಿಯನ್ನೆದೆ ಬೆಳೆಯುವ ಚತುರಂಚೈಗೆಯ್ವ ಅಕ್ಕರತಿಶಯವನೆ ಗೆಲ್ವ ಪಲವು ಕೃತಕವಂಚನೆವಳೇ ಪ್ರಗಲ್ಭೆ (೩೪೪. ೩-೦೨). [ಸಂ. ಪ್ರಗಲ್ಭಾ]

**ಪ್ರಗಾಢ** (ಗು). ತೀವ್ರವಾದ ; ಗಾಢವಾದ : ಇತರರ ಮೇಲೆ ಕೂಡ ಪ್ರಗಾಢ ಪ್ರಭಾವವನ್ನು ಬೀರುವ ದುಷ್ಪ್ರವೃತ್ತಿ ನೆಗೆದಿಗೆ ಇದೆ (ದೀಕಕ್ಕ. ೦೪). [ಸಂ.]

**ಪ್ರಗಾಥ** (ನಾ). ೧. [ಛಂದ] ಮಿಶ್ರಛಂದಸ್ಸುಗಳಿಂದಾದ ಒಂದು ಬಗೆಯ ವೈದಿಕಛಂದಸ್ಸು : ೮ ಮತ್ತು ೧೨ ಅಕ್ಷರಗಳ ಪಾದಗಳನ್ನು ಬೆರಸಿ ನಾಲ್ಕುಪಾದದ ವೃತ್ತವನ್ನು ಏಳರ ವರೆಗೆ ವಿಸ್ತರಿಸಿ ಪ್ರಗಾಥಗಳನ್ನು ವೈದಿಕಕವಿಗಳು ರಚಿಸಿರುತ್ತಾರೆ (ಛಂದಿಕಾ. ೦೦೪) ; ವೈದಿಕಛಂದಸ್ಸಿನಲ್ಲಿ ಗಾಯತ್ರಿ, ಅನುಷ್ಟುಭ್, ತ್ರಿಷ್ಟುಭ್, ಜಗತೀ, ಪ್ರಗಾಥ ಹೀಗೆ ಐದು ಮುಖ್ಯ ಪ್ರಕಾರಗಳೆಂದು ತೋರುತ್ತದೆ (ಛಂದೋಅ. ೯೭). ೨. ಆಧುನಿಕ ಕವಿಗಳು ರಚಿಸುವ, ಸಾಮಾನ್ಯವಾಗಿ ದೀರ್ಘವಾದಗಳಿರುವ, ಘನವಾದ ವಸ್ತುವನ್ನು ಕುರಿತು ಸಂಬೋಧನಪರವಾದ ಒಂದು ಕವಿತೆಯ ಪ್ರಕಾರ : ಇಂಗ್ಲೀಷಿನ ಮುಖಾಂತರ ಕನ್ನಡಕಾವ್ಯಕ್ಷೇತ್ರದಲ್ಲಿ ಸುಳಿದು ಬಂದ ಛಂದೋರೂಪಗಳಲ್ಲಿ ಪ್ರಗಾಥವು ಒಂದು . . . ಪ್ರಗಾಥವು ಭಾವಗೀತದ ಒಂದು ಪ್ರಕಾರ (ಛಂಕೋಅ. ೩೦೬) ; ಕನ್ನಡದಲ್ಲಿ ಅನೇಕ ಕವಿಗಳು ಪ್ರಗಾಥಗಳನ್ನು ಬರೆದಿದ್ದಾರೆ (ಕಂಕೋ. XI. ೩೦೬). [ಸಂ.]

**ಪ್ರಗೀತ** (ಗು). ೧. ಹಾಡಿದ. (ನಾ). ೨. ಹಾಡು; ಗೀತೆ. ೩. ಕೊಂಡಾಟಕ್ಕೆ ಪಾತ್ರನಾದವನು ; ಪ್ರಸಿದ್ಧ : ಮೊನೆಗಾಱರು ಪ್ರಗೀತರನಿಂಬಾಗಿರೆ ಚೌಪಳಿಗೆಗಳೊಳ್ ಕುಳ್ಳಿರಿಸಿದರೊಡನೆಸೆಯೆ ನೆರೆದ ಪುರಜನಸಹಿತಂ (ಕಂಕಥಾ. ೨-೬೭). ೪. ಹ್ರಸ್ವಸ್ವರವನ್ನು ದೀರ್ಘಸ್ವರ ದಂತೆ ಹೇಳುವುದು : ಸಾಮಗಾನದಂತೆ ಎಳೆದು ಹೇಳುವುದು "ಪ್ರಗೀತ" ವೆನಿಸುವುದು (ಸಂಕೋಅ. ೦೨೦). [ಸಂ.]

**ಪ್ರಗೀತಿ** (ನಾ). ೧. ಪ್ರಶಂಸೆಯ ಉಲ್ಲೇಖ : ಮಿಗೆ ಕನ್ನಡಗಬ್ಬಂಗ ಳೊಳಗಣಿತಗುಣಗದ್ಯಪದ್ಯಸಮ್ಮಿಶ್ರಿತಮಂ ನಿಗದಿಸುವರ್ಗದ್ಯಕಥಾಪ್ರಗೀತಿ ಯಿಂ ತಚ್ಚಿರಂತನಾಚಾರ್ಯರ್ಕಳ್ (ಕಜಾ. ೦-೨೬). ೨. [ಛಂದ] ಸಂಸ್ಕೃತದ ಒಂದು ಬಗೆಯ ಛಂದಸ್ಸು. [ಸಂ.]

**ಪ್ರಗುಣ** (ಗು). ೧. ಪ್ರಶಸ್ತವಾದ ಗುಣಗಳಿಂದ ಪರಿಪೂರ್ಣವಾದ.— ಶ್ರೇಷ್ಠವಾದ : ಬಗೆದು ಮಾರ್ಗದ್ವಿತಯಗತಿಗಳಂ ಪ್ರಗುಣಗುಣಗಣೋ ದಯರ್ಕಳೆ . . . ಬೆರಸಿ ಪೇಟ್ಗೆ ರಸವಿಶೇಷದೊಳ್ (ಕಜಾ. ೨-೯೪) ; ತರಪೇಟ್ ಕೇಯೂರಹಾರಪ್ರಗುಣಮಣಿವಿಭೂಷಾವಿಶೇಷಂಗಳಂ (ಅಚ್ಚ. ೩-೬೪). ೨. ನೇರವಾಗಿರುವ ; ವಕ್ರವಲ್ಲದ : "ಪ್ರಗುಣಮೞಿಂಬಿಲು ರಿಜು ಸರಲಂ" (ಅಸ್ತುಕೋ. ೦೦೪-೩೬). [ಸಂ.]

**ಪ್ರಗ್ರಹ** (ನಾ). ೧. ಬಿಗಿಯಾಗಿ ಹಿಡಿದುಕೊಳ್ಳುವಿಕೆ. ೨. ತೆಗೆದು ಕೊಳ್ಳುವಿಕೆ ; ಸ್ವೀಕರಿಸುವಿಕೆ. ೩. (ಇಂದ್ರಿಯಗಳ) ಹತೋಟಿ ; ನಿಗ್ರಹ. ೪. ಹಗ್ಗ ; ರಜ್ಜು : "ಆ ಹಗ್ಗದಲ್ಲಿಯುಂ ಪ್ರಗ್ರಹ ಮೆಂಬುದು" (ಕಣಾಘು. ೦೩೪-೦೪). ೫. ಕುದುರೆಯ ಕಡಿವಾಣ : ನಾನಾರತ್ನಕೂಟಾಂಶುಜಾಲದಿನಾಶಾವಧುಗಿತ್ತು ಚಿತ್ರಪಟಮಂ ಚೈತ್ಯಾ ಲಯಂ ಮತ್ತಮಿತ್ತುದು ಸಪ್ತಾಶ್ವನ ಸಪ್ತಸಪ್ತಿಗೆ ಸಮಗ್ರ ಪ್ರಗ್ರಹಾಶಂಕೆಯಿಂ (ಕಂಕಾಪು. ೯-೦೨೪). ೬. ಸೆರೆ ಸಿಕ್ಕವನು ; ಬಂದಿ ; ಸೆರೆಯಾಳು : "ಪ್ರಗ್ರಹಃ, ಗ್ರಾಹಕಃ, ವಂದೀ—ಈ ೩ ಬಂದಿ"

(ಹಲಾಯು. ೬೩೩-೬೪). ೭. ಸೆರೆಹಿಡಿಯುವಿಕೆ : ದಸ್ತಗಿರಿ ಮಾಡುವುದು : "ಗ್ರಾಹಕಂ ಪ್ರಗ್ರಹವೆನಲ್ಬಂದಿವಿಡಿಹವಕ್ಕು" (ಶಬ್ದಮ. ೧೩೬-೯೦). ೮. ಕಿರಣ : ಕದಿರು : "ಉಸ್ರಃ . . . ಪ್ರಗ್ರಹಃ. ಉಪಧೃತಿಃ . . . ಗೌಃ—ಈ ೩೨ ರಶ್ಮಿಗಳ ಪೆಸರ್" (ಹಲಾಯು. ೬-೩೪) : "ಪ್ರಗ್ರಹಂ ದೀಪ್ತಿ . . . ಪ್ರದ್ಯೋತವಮಾ ರಶ್ಮಿ" (ಶಬ್ದಮ. ೧೦-೩). ೯. ತೂಕವು ಏರುಪೇರಾಗದಿರಲು ತಕ್ಕಡಿಯ ಮಧ್ಯದಲ್ಲಿ ಕಟ್ಟಿರುವ ದಾರ: "ಪ್ರಗ್ರಾಹಃ, ಪ್ರಗ್ರಹಃ—೨ ತ್ರಾಸಿನ ದಾರ, ಕುದುರೆ ಮುಂತಾದುವನ್ನು ಕಟ್ಟುವ ಹಗ್ಗ" (ಶಿಲ್ಪಾಂತಿ. ೪೨೮). ೧೦. ಮುಖಂಡ : ನಾಯಕ : ಅಂತು ಪ್ರಥಮನಾಕನಾಯಕ ಪ್ರಗ್ರಹಾಮರರ್ ಬಂದು ಷೋಡಶತೀರ್ಥಕರಪಾದಪಯೋಜಂಗಳ್ಗವನತವಣಿಮಕುಟರಾಗಿ ಪಂಚಾರಕಕೃತ್ಯದೊಳ್ ನೆಗಟ್ (ಶಾಂತಿಪು. ೧೦-೯೪ ಪ). ೧೧. ತೋಳು ; ಭುಜ. ೧೨. ದಯೆ ; ಅನುಗ್ರಹ. ೧೩. ವಿಷ್ಣು. ೧೪. ಚಿನ್ನ. [ಸಂ.]

**ಪ್ರಗ್ರಾಹ** (ನಾ). ೧. ತೆಗೆದುಕೊಳ್ಳುವುದು. ೨. ತಕ್ಕಡಿಯ ಮಧ್ಯದಲ್ಲಿರುವ ದಾರ. ೩. ಕುದುರೆಯ ಕಡಿವಾಣ. ೪. ಕುದುರೆಯನ್ನು ಕಟ್ಟುವ ಹಗ್ಗ : "ಪ್ರಗ್ರಾಹಃ, ಪ್ರಗ್ರಹಃ—೨ ತ್ರಾಸಿನ ದಾರ, ಕುದುರೆ ಮುಂತಾದುವನ್ನು ಕಟ್ಟುವ ಹಗ್ಗ" (ಶಿಲ್ಪಾಂತಿ. ೪೨೮). [ಸಂ.]

**ಪ್ರಘಟ್ಟ** (ನಾ). ೧. ಸಂದರ್ಭ ; ಸನ್ನಿವೇಶ ; ಪ್ರಸಂಗ : ಅನಿತೊಂದು ಮಹಾಪ್ರಘಟ್ಟದೊಳಗ್ರಪೂಜೆಯಂ ನಾರಾಯಣಂಗೆ ಕೊಟ್ಟು (ಪಂಪಭಾ. ೬-೬೩ ಪ). ೨. ಸಂಗತಿ ; ವಿಷಯ : ಕಪಿತ್ಥತರುವಂ ನೆಲದೊಳಿಕ್ಕಿ ಮಗುಳ್ದು ಬಪ್ಪುದುಮಾ ಪ್ರಘಟ್ಟಮಂ ವಿಶಾಖಭೂತಿಭೂಪಾಳಂ ಕೇಳ್ದು (ವರ್ಧಮಾ. ೨-೩೩ ಪ). [ಸಂ.]

**ಪ್ರಘಟ್ಟಕ** (ನಾ). ೧. = ಪ್ರಘಟ್ಟ ೧ : ಇನಿತೊಂದುಗ್ರರಣಪ್ರಘಟ್ಟಕದೊಳ್ ಭಾರಾಪಹಾರಂ ಧರಾಂಗನೆಗೀಯುರ್ವರಿನಾದುದಾಯ್ತು (ಪಂಪಭಾ. ೧೪-೧೧); ಚೋಳಕರ ಪ್ರಘಟ್ಟಕದಿಂ ಕೆಟ್ಟ ಸಮ್ಯನ್ನಿಧಿಯಂ ಪುನರ್ಭ್ಯರಣಂ ಮಾಡಿ (ಎಕ. XV, ೬೪-೧೬; 1060) ; ನಲ್ಲನೊಲ್ಲದೆ ಪೋದೀ ವಿರಹಪ್ರಘಟ್ಟಕದೊಳ್ ನೈಪಥ್ಯಮುಂ ಪಥ್ಯಮೇ (ಪಂಪ್ರಪು. ೬-೬೪). ೨. ವಿಧಿ ; ಆಜ್ಞೆ ; ನಿಯಮ ೩. ಬೋಧನೆ; ಉಪದೇಶ. [ಸಂ.]

**ಪ್ರಘಟ್ಟನ** (ನಾ). ೧. = ಪ್ರಘಟ್ಟ ೧ : ಐವರ್ ಮಂತ್ರಿಗಳು ಬಂದು ಮೇಘವರ್ಣಂ ಈ ಪ್ರಘಟ್ಟನಕ್ಕೇಗೆಯ್ವಮೆಂದು ಪೇಟ್ ಮಂತ್ರಿಗಳಿಂತೆಂದರ್ (ಪಂಪಶಂ. ೨೦೪-೨) ; ಅಂತು ಮೂವರುಂ ಪ್ರೀತಿಮತಿಕನ್ಯಾಸ್ವಯಂವರ ಪ್ರಘಟ್ಟನದೆ ಜಿನರೂಪಮಂ ತಳೆದು (ಶಾಂತಿಪು. ೨-೬ ಪ). ೨. ವಿಧಿ ; ನಿಯಮ. [ಸಂ.]

**ಪ್ರಘಣ** (ನಾ). ೧. ಮನೆಯ ಮುಂದಿನ ಅಂಗಳ : ಮೊಗಸಾಲೆ : "ಪ್ರಘಣಃ, ಪ್ರಘಾಣಃ, ಅಳಿಂದಕಃ—ಈ ೩ ಮೊಗಸಾಲೆ" (ಹಲಾಯು. ೩೦-೧೪೪); ಆ ಪದಿನಾಱುಂ ನಾಟ್ಯಗೃಹದ ಪ್ರಘಣಂಗಳೊಳಿರ್ಕುಂ ಧೂಪಘಟಂಗಳ್ (ಪುಲ್ಲಪು. ೧೪-೧೪೪). ೨. ನೆಲಗಟ್ಟು : ಅಂತು ನಿಜ ಮುಖ ಪ್ರತಿಬಿಂಬಕದಂಬದಿಂ ಮರಕತಪ್ರಘಣದೊಳ್ ಪದ್ಮಪುಷ್ಪೋಪಹಾರಮಂ ವಿರಚಿಸಿ (ಪಂಪ್ರಪು. ೧೦-೨೪ ಪ) ; ತಾರಾಪಂಕ್ತಿ ಮಾರ್ಪೊಳೆಯ ಮನಂಗೊಳಿಪ ತಿಳಿಗೊಳಂಗಳ ತೆಱನಂ ತಳೆದುವು ಬಲಿಗೆದಱಿದ ವಿಚಕಿಳ ದಲರಿಂ ನೀಲಮಣಿಮಯಪ್ರಘಣಂಗಳ್ (ಪುಷ್ಪಪು. ೪-೩೪). ೩. ಕಬ್ಬಿಣದ ಹಾರೆ. ೪. ತಾಮ್ರದ ಪಾತ್ರೆ. [ಸಂ.]

**ಪ್ರಘಾಟ** (ನಾ). ಗುಂಪು : ಸಮೂಹ : ಆದಡೆಲೆ ಪವಮಾನಸುತ ನೀನಾದರಿಸು ನಡೆ ನೃಪತಿಯನು ನಾ ಕಾದುವೆನು ಕೌರವರ ಸಕಲಬಲ ಪ್ರಘಾಟದಲಿ (ಕುಮಾವ್ಯಾ. ೦೪-೩೪). [<ಸಂ. ಪ್ರಘಟಾ]

**ಪ್ರಘಾಣ** (ನಾ) ೧. = ಪ್ರಘಣ ೧ : "ಪ್ರಘಣಃ, ಪ್ರಘಾಣಃ, ಅಳಿಂದಕಃ—ಈ ೩ ಮೊಗಸಾಲೆ" (ಹಲಾಯು. ೩೦-೧೪೪). ೨. ಮರದ ಕವಲು : "ಪ್ರಘಾಣಃ, ಸ್ಕಂಧಂ—ಈ ೨ ಮರದ ಪಣೆ" (ಹಲಾಯು. ೩೦-೨೮); "ಮರದ ಕವಲು ಪ್ರಘಾಣಂ ಸ್ಕಂಧಮಕ್ಕುಂ" (ಶಬ್ದಮ. ೩೨-೩). [ಸಂ.]

**ಪ್ರಘಾತ** (ನಾ.) ೧. ಕಾಳಗ; ಯುದ್ಧ : "ಸಂಗ್ರಾಮಃ . . . ಪ್ರಘಾತಃ. ಜನ್ಯಂ, ಅಭಿಸಂಪಾತಃ, ಸಮ್ಮರ್ದಃ, ವಿಗ್ರಹಃ—ಈ ೩೫ ಕಾಳಗಂ" (ಹಲಾಯು. ೬೩-೩೦೦). ೨. ಕೊಲೆ : ವಧೆ. ೩. ಕಡಿಯುವುದು; ಭೇದ: ಸಮ್ಯಕ್ತ್ವಂ . . . ಸಾವಯ್ಯೋವಿರ್ಗೀಜಪ್ರಘಾತಂ ರಜನಿಘುರತರಾಗಂ ಮಹದ್ಬ್ರಹ್ಮಚರ್ಯಂ (ಶಾಂತಿಪು. ೬-೩೦). ೪. ಕೆಡುಕು; ಅಪಾಯ: ಜಾನಕಿಬಾಯಿಯರು ತಮ್ಮ ಸತೀತ್ವವನ್ನು ನಿಧಿಯನ್ನು ಕಾಯುವ ಘಟಸರ್ಪದಂತೆ ಕಾಯ್ದುಕೊಂಡು ಬಂದಿದ್ದರು. ಈ ಸತೀತ್ವದ ಮೇಲೆ ಪ್ರಘಾತ ಬರುವ ಸನ್ನಿವೇಶಗಳು ಸಂಭವಿಸಿದ್ದಿಲ್ಲ ನಿಜ (ಸಮಾಜ. ೨೨೬). [ಸಂ.]

**ಪ್ರಘೋಷಣ** (ನಾ). ದೊಡ್ಡ ಧ್ವನಿ; ಉದ್ಘೋಷಣೆ : ವಿನುತಶಿವವಿದ್ಯಾಗಮದಿ ಸಂಜನಿತ ಸಾನುಭವಪ್ರಘೋಷಾಪನವರತಮುಂ ಬಸವರಸನರ ಮನೆಯೊಳೇಂ ಪೇಳ್ವೆ (ಬಸಪು. ೩೬-೬೪). [ಸಂ.]

**ಪ್ರಚಂಡ** (ಗು). ೧. ಬಹಳ ಉಗ್ರವಾದ: ತೀಕ್ಷ್ಣವಾದ. ೨. ಕ್ರೂರವಾದ ; ಭಯಂಕರವಾದ : ಮತ್ತೇಭವಧಪ್ರಚಂಡಯಮದಂಡಮದೇಂ ಮಾಣ್ಬುದೆ ಪಿಟೀಲಿಕಾವಧುವಿಧಿಯಂ (ಜಗ. ೨-೩೪). ೩. ಶಕ್ತಿಯುತವಾದ; ಬಲದಿಂದ ಕೂಡಿದ : ಮಹಾಸಾಮನ್ತಪ್ರಚಣ್ಡದಣ್ಡ[ನಾ]ಥ ಶ್ರೀಮತು ಬಯ್ಸರೊಳ್ಗಣ್ಡರೆಬ್ಬರಸರ್ (ಸೌಇಇ. XX. ೨೨-೦೨; 1027) ; ಸೇಳರಾಜ್ಯಕಂಟಕೋತ್ಪಾಟನಪ್ರಚಣ್ಡದೋರ್ದಣ್ಡನುಂ (ಕಇಇ. ೫-೨-೦೪೪; 1058). (ನಾ). ೪. ಭಯಂಕರವಾದುದು : ಸಿಂಹವು . . . ಪ್ರಚಂಡವಾದ ಗರ್ಜನೆ ಮಾಡುವುದು (ಪಂಚತಂ. ೪-೨೦೬) : ಬಹುಶಃ ಬಹು ಪ್ರಚಂಡವಾದ ಮತ್ತು ಅಪೂರ್ವವಾದ ಪದ್ಧತಿಯಲ್ಲಿ ನಾನು ಆರಂಭಿಸಿದ್ದೇನೆಂದು ತೋರುತ್ತದೆ (ಕೀಚಕ. ೩೪). ೫. ನಿಪುಣ ; ಪ್ರಗಲ್ಭ : ಅಜಂತಾ ಚಿತ್ರಗಳನ್ನು ನಿರ್ಮಿಸಿದ ಕಲಾವಿದರು ಕಲಾಕೌಶಲ್ಯದಲ್ಲಿ ಪ್ರಚಂಡರಾಗಿದ್ದರು (ಕಾಕದ. ೩೨೩). ೬. ಪರಾಕ್ರಮಿ : ಈ ವಜ್ರಾವರ್ತಕೋದಂಡಮನವಯವದಿಂದೇಱಿಸಲ್ ಸಾಲ್ವ ದೋರ್ದಂಡಾವಷ್ಟಂಭಪ್ರಚಂಡಂ ಜನಕಜೆಗೆ ವರಂ ಬರ್ಪುದು (ಪಂಪರಾ. ೩-೬೬). ೭. ಅಸಾಮಾನ್ಯನಾದವನು ; ಅಸಾಧಾರಣ ವ್ಯಕ್ತಿ : ಅವರ ಕಡೆಯ ಮಗ ಬಲು ಪ್ರಚಂಡ. ಎಲ್ಲ ತರಗತಿಗಳಲ್ಲೂ ಅವನೇ ಮೊದಲಿಗ (ಕಪಿ). ೮. ಒಂದು ನರಕದ ಹೆಸರು : ಉಗ್ರ ವ್ಯಕಾಸ್ಯ ಗ್ರಾಹ ಕುಂಭಿ ನಕ್ರವೆಂಬ್ಬದು ಮುಂತ್ರ ನರಕಂಗಳಿಂದೊಡಗೂಡಿ ಪ್ರಚಂಡವೆಂಬರಸುನರಕವಿಹುದು (ಅಪೀಳ: ೦೮೦).

**ಪ್ರಚಂಡದಂಡನಾಯಕ**=ಒಂದು ಬಿರುದು : ಮಹಾಪ್ರಚಣ್ಡದಣ್ಡನಾಯಕಂ . . . ಶಂಕರಕಿಂಕರಂ ನಾಮಾದಿ ಸಮಸ್ತಪ್ರಶಸ್ತಿಸಹಿತಂ ಶ್ರೀಮದ್ದಣ್ಡನಾಯಕರೀಶ್ವರ ಭಟ್ಟರ್ಗ್ಗೆ (ಸೌಇಇ. XX. ೪೬-೨೦; 1072). [ಸಂ.]

**ಪ್ರಚಂಡಿ** (ನಾ). ಬೆದೆ ಬಂದ ಹಸು. —ಆವು "ಪ್ರ[ಪಾಠಾ. ಅ]ಚಂಡೀ, ಸುರತಾ—ಈ ೨ ಬೆದೆಯಾವು" (ಹಲಾಯು. ೪೩-೦೦೩) ; "ಪ್ರಚಂಡಿಯೆನೆ ಬೆದೆಯಾಕಳೆಂದೆನಿಕ್ಕುಂ" (ಶಬ್ದಮ. ೩೩-೩). [ಸಂ. ಪ್ರಚಂಡೀ]

**ಪ್ರಚಂಡೆ** (ನಾ). ೧. ಬುದ್ಧಿವಂತೆ ; ನಿಪುಣೆ : ನೀನು ಬಿಡಪ್ಪ. ಕೆಲವು ವಿಷಯಗಳಲ್ಲಿ ಪ್ರಚಂಡೆ (ದೂಕಟ್ಟ. ೬). ೨. ಮೊಂಡುಸ್ವಭಾವದವಳು : ಹಟಮಾರಿ : ಅವರೇನೆಂದೊಡಮೇಗೆಯ್ದೊಡಮುಸಿರದಿರಲಾರ್ಪರಪ್ಪೊಡೆ ಪೋಗಿಮಲ್ಲದಾಗಳ್ ಪೋಗಲ್ವೇಡೆಂದೊಡಾ ಪ್ರಚಂಡೆ ಇಂತೆಂದಳ್ (ಪಂಪಶಂ. ೦೩೬-೭). [ಸಂ. ಪ್ರಚಂಡಾ]

**ಪ್ರಚಕ್ರ** (ನಾ). ೧. ಆಕ್ರಮಣಕ್ಕಾಗಿ ಸೈನ್ಯವು ಪಾಳೆಯದಿಂದ ಹೊರಡು

ವುದು : "ಪ್ರಚಕ್ರಂ. ಚಲತಾರ್ಥಕಂ—ದಂಡು ಠಾಣ್ಯದ ಸ್ಥಳ ಬಿಟ್ಟು ಹೊರಟದ್ದಕ್ಕೆ ಹೆಸರು" (ಸಿದ್ಧಾಂತಿ. ೨೬೬). ೨. ಚಲನೆಯಲ್ಲಿರುವ ಸೈನ್ಯ. [ಸಂ.]

**ಪ್ರಚಯ** (ನಾ). ೧. ಒಟ್ಟುಗೂಡಿಸುವಿಕೆ ; ಕಲೆಹಾಕುವಿಕೆ. ೨. ಗುಂಪು ; ಸಮೂಹ : ಸಕಲಸಾಧುವ್ರತಪ್ರಚಯಮೆಂಬ ಪಿಕಾವಳಿಯೆಂಬ ಸದ್ವಚಃಶುಕಕುಳಮೆಂಬ ವೆಚ್ಚಿಸಿದ ಗಾಯಕ ಸತ್ಪ್ರತಿಹಾರವೃತ್ತಪಾಠಕ ತತಿಗಿತ್ತು . . . ಜೀವಿತಮಂ ಮದನಂ ಬಸಂತದೊಳ್ (ಶಾಂತಿಪು. ೬-೧೨೯) : ಕೊಳಲ್ಯುಚಿತಮದಲ್ಲ [ ಲ್ತು ] ವಿನೇಯಪ್ರಚಯಕ್ಯುಪಭೋಗ ಭೋಗಪರಿವಿತಗತಿಯೊಳ್ (ಧರ್ಮಾಮೃ. ೬-೧೬) ; ಉಮೇಶನ ಮುಂದೆ ಮಲುಹಣನೀಕ್ಷಿಸುತ ಕಾಂತಾಕಚಪ್ರಚಯ ಎಂದೆನುತಲಿ (ಬಸವ. ೯೨-೩೮). ೩. ವೃದ್ಧಿ: ಅಭ್ಯುದಯ; ಏಳಿಗೆ: ದಿನಪೇಂದುಪ್ರಚಯಾದ್ರಿಯಿಂದೆ . . . ಮೇರೆಯಾಗೆ ತಳೆದಂ ಭೂಚಕ್ರಮಂ ಭೂಭುಜಂ (ರಾಜಶೇ. ೩೦೦). ೪. ವೇದಗಳ ಉಚ್ಚಾರಣೆಯಲ್ಲಿ ಒಂದಂ ಬಗೆಯ ಸ್ವರವಿಶೇಷ : ಆ ಬ್ರಾಹ್ಮಣಂ ಬ್ರಹ್ಮಸಭೆಯ ಮುಂದೆ ಉದಾತ್ತಅನುದಾತ್ತಸ್ವರಿತ ಪ್ರಚಯವೆಂಬ ಚತುಸ್ಸ್ವರಂಗಳಿಂ . . . ನಾಲ್ಕು ವೇದಂಗಳಿಂ ಮಂತ್ರವನುಚ್ಚರಿಸೆ (ಕಶ್ಯಪ. ೨-೧೩೦ ವ); ಹರಿಯೆ ಪಂಚಾಶದ್ವರಣಸುಸ್ವರ ಉದಾತ್ತಾನುದಾತ್ತಪ್ರಚಯಸ್ವರಿತಸಂಧಿವಿಸರ್ಗಬಿಂದುಗಳೊಳಗೆ ತದ್ವಾಚ್ಯ (ಕಸಾರ. ೯-೧) ; ವೇದದಲ್ಲಿ ಹೇಳಲ್ಪಡುವ ಉದಾತ್ತಾನುದಾತ್ತಸ್ವರಿತ ಪ್ರಚಯಗಳೆಂಬ ಸ್ವರಗಳು . . . ಅರ್ಥಜ್ಞಾನಕ್ಕೆ ಉಪಯೋಗವಿಲ್ಲವೆಂದು ನಿರ್ಣಯಿಸಿದ್ದಾರೆ (ಹಿಂದೂಸಾ. ೧೯೯). ೫. [ತತ್ತ್ವಶಾ] ಪರಿಮಾಣವನ್ನುಂಟುಮಾಡುವ ಒಂದು ಸಂಯೋಗ ; ಶಿಥಿಲಸಂಯೋಗ : ಅನಿತ್ಯವಸ್ತುವಿನ ಪರಿಮಾಣವು ಸಂಖ್ಯೆಯಿಂದಲೂ ಪರಿಮಾಣದಿಂದಲೂ ಪ್ರಚಯದಿಂದಲೂ ಹುಟ್ಟುವುದು . . . ಶಿಥಿಲವಾದ ಸಂಯೋಗಕ್ಕೆ ಪ್ರಚಯ ಎಂದು ಹೆಸರು. ಉದಾ· ಹತ್ತಿ (ಭಾರತೀ. ೨೯೯). [ಸಂ.]

**ಪ್ರಚರ** (ನಾ). ೧. ಹೋಗುವಿಕೆ; ಗಮನ: ಕುಪ್ರತರ್ಕಿಗನಾವನಾದಡೆ ಭೂಪ್ರಚರನಾಗೆಯ್ದು ತಿರಿತಿಂಬ ಪ್ರಸಿದ್ಧನಶುದ್ಧನಲ್ಲದೆ ಭಕ್ತನೆಂತಹನು (ಬಸವ. ೯೩-೬೨). ೨. ಜಡವಲ್ಲದುದು ; ಚೈತನ್ಯವುಳ್ಳ ಪ್ರಾಣಿ : ಹರಿಯ ನಾಭಿಸರೋಜದೊಳಗವತರಿಸಿಯಚರಪ್ರಚರಗಳ ವಿಸ್ತರಿಸಿ . . . ರಾಜಿಪ ವರಚತುರ್ಮುಖ ಪಾಲಿಪುದು (ಅಕಂಠ. ೧-೧-೩). ೩. ಆಚರಣೆ ; ನಡವಳಿಕೆ ; ಪದ್ಧತಿ. ೪. ದಾರಿ ; ಮಾರ್ಗ. [ಸಂ.]

**ಪ್ರಚರಿಸು** (ಕ್ರಿ)· ಸಂಚರಿಸು ; ಪ್ರಯಾಣ ಮಾಡು: ಭರತಖಂಡವನು ಪ್ರಚರಿಸಿ ಕೀರ್ತಿ ಪಡೆದು (ಶಿವಾಕ್ಷ. ೬೯-೫). [ಪ್ರಚರ + –ಇಸು]

**ಪ್ರಚರ್ಯ** (ನಾ). ಹೋಗುವುದು; ಗಮನ: ಮಹಿತವೀರೋದಗ್ರಭಕ್ತಿ ಸ್ಪೃಹದಿನೊಮ್ಮೆ ಪ್ರಾಣಮಂ ಕುಡಬಹುದು ಜಂಗಮದೊಳು ನಿಜಪ್ರಾಣ ಪ್ರಚರ್ಯ[ಕಾಕಂ· ರಿಯ]ದಲಿ ಸಹಜವಾಗಲೆಹಂಗೆ ಸಂಧಿಸಬಹುದು (ಬಸವ. ೩೬-೫೬). [ಸಂ. ಪ್ರಚರ್ಯಾ]

**ಪ್ರಚಲ**, ಪ್ರಚಳ (ಗು). ೧. ಅಲುಗಾಡುವ : ನಡುಗುವ. ೨. ಬಳಕೆಯ ; ರೂಢಿಯ. (ನಾ). ೩. ಚಂಚಲವಾದುದು ; ಸ್ಥಿರವಲ್ಲದುದು ; ಅಸ್ಥಿರ. **ಪ್ರಚಳ** : ೩. "ಲೋಲಂ, ಚಪಳಂ, ಚಟುಳಂ, ಪ್ರಚಳಂ, ತರಳಂ . . . ಸಂಚಳಂ—ಈ ೧೦ ಸಂಚಳಂ" (ಹಲಾಯು. ೧೦೫-೧೧). [ಸಂ.]

**ಪ್ರಚಲನ** (ನಾ). ೧. ಹೆಚ್ಚಾಗಿ ನಡುಗುವುದು. — ಕಂಪಿಸುವುದು. ೨. ಬಳಕೆ ; ಚಲಾವಣೆ. ೩. ಹಿಂಜರಿತ; ಪಲಾಯನ. ೪. [ವಿಜ್ಞಾನ] "(ಕಣಗಳ ಚಲನೆಯಿಂದಾಗುವ) ಶಾಖದ ಅಥವಾ ವಿದ್ಯುತ್ತಿನ ಪ್ರಸರಣ ; ಪ್ರಚಲನ" (Convection· ೩೦೯೫). [ಸಂ.]

**ಪ್ರಚಲಾಕ**, ಪ್ರಚಳಾಕ (ನಾ). ನವಿಲುಗರಿ ; ಪಿಂಛ : "ಪ್ರಚಲಾಕಂ ಬರ್ಹಂ" (ಚತುರ್ಕೋ. ೯೨-೧೨). **ಪ್ರಚಳಾಕ** : "ಪ್ರಚಳಾಕಃ, ಶಿಖಂಡಃ —ಈ ೨ ಹೀಲಿ" (ಹಲಾಯು. ೯೦-೯೦): "ಪ್ರಚಳಾಕಂ ಶಿಖಂಡಮೆನೆ ಹೀಲಿ" (ಮಂಗರಾ· ೫೦-೩). [ಸಂ.]

**ಪ್ರಚಲಾಕಿ** (ನಾ). ಪಿಂಛವನ್ನುಳ್ಳದು ; ನವಿಲು : "ಪ್ರಚಲಾಕಿ ಮಯೂರಂ" (ಚತುರ್ಕೋ. ೯೨-೧೨) ; "ಕೇಕೀ, ಶಿಖೀ, ಶಿಖಂಡೀ, ಪ್ರಚಲಾಕೀ . . . ಶ್ಯಾಮಕಂಠ(ಃ)—ಈ ೧೦ ನವಿಲ್" (ಹಲಾಯು. ೯೦-೯೯). [ಸಂ. ಪ್ರಚಲಾಕಿನ್]

**ಪ್ರಚಲಾಪ್ರಚಲೆ**, ಪ್ರಚಳಾಪ್ರಚಳೆ (ನಾ). [ಜೈನ] ನಿದ್ರೆಯ ಒಂದು ಭೇದ; ಪದೇಪದೇ ತೂಕಡಿಸುವುದು. ಜೊಲ್ಲು ಸುರಿಸುವುದು ಮೊದಲಾದ ಲಕ್ಷಣಗಳುಳ್ಳ ನಿದ್ರಾಭೇದ : ಪೂರ್ವೋಕ್ತ ವಿಧಾನ ದಿನಂತಮುಹೂರ್ತದಿಂ ನಿದ್ರಾನಿದ್ರಾಪ್ರಚಲಾಪ್ರಚಲಾಸ್ತ್ಯಾನಗೃದ್ಧಿ ನರಕಗತಿ . . . ಸೂಕ್ಷ್ಮಂಗಳೆಂಬ ಪದಿನಾಱುಂ ಕರ್ಮಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು· ೧೧-೧೪ ವ); ಕೇವಲದರ್ಶನಾವರಣೀಯಂ ನಿದ್ರಾನಿದ್ರಾ ನಿದ್ರಾಪ್ರಚಲಾಪ್ರಚಲಾಪ್ರಚಲಾಸ್ತ್ಯಾನಗೃದ್ಧಿಭೇದದಿಂ ನವವಿಧ ಭೇದಮಪ್ಪ ದರ್ಶನಾವರಣೀಯಮುಮಂ (ಸುಕುಮಾರ. ೩-೩೯ ವ). **ಪ್ರಚಳಾಪ್ರಚಳೆ** : ಅಂತರ್ಮುಹೂರ್ತದಿಂ ನಿದ್ರಾನಿದ್ರಾಪ್ರಚಳಾಪ್ರಚಳಾಸ್ತ್ಯಾನಗೃದ್ಧಿನರಕಗತಿ . . . ಸೂಕ್ಷ್ಮಂ[ಗಳೆಂಬ]ಷೋಡಶಕರ್ಮಪ್ರಕೃತಿಗೆ ವಿಳಯಂ ಮಾಡಿ (ಶಾಂತಿಪು. ೧೧-೧೧೧ ವ). [ಸಂ. ಪ್ರಚಲಾಪ್ರಚಲಾ]

**ಪ್ರಚಲಾಯಿತ** (ನಾ). ತೂಕಡಿಸುವವನು: "ಘೂರ್ಣಿತಃ, ಪ್ರಚಲಾಯಿತಃ — ೨ ತೂಕಡಿಕೆಯಿಂದ ತಲೆತಿರುಗಿ ಬೀಳುವವನ ಹೆಸರು" (ಸಿದ್ಧಾಂತಿ. ೩೩೦). [ಸಂ.]

**ಪ್ರಚಲಿತ**, ಪ್ರಚಳಿತ (ಗು). ೧. ಅಲುಗಾಡಿದ; ಕ್ಷೋಭೆಗೊಂಡ. ೨. ಚಲಿಸುವ. ೩. ಅಲೆದಾಡುತ್ತಿರುವ. ೪. ಮುಂದುವರಿದ; ಮುನ್ನಡೆದ. ೫. ಇಂದಿನ; ಪ್ರಸಕ್ತ; ಸದ್ಯದ: ಪ್ರಸಿದ್ಧವಿಜ್ಞಾನಿಗಳ ಅಭಿಪ್ರಾಯಗಳನ್ನು ಉಲ್ಲೇಖಿಸುವುದರ ಮೂಲಕ ಪ್ರಚಲಿತ ಸಮಸ್ಯೆಗಳಿಗೆ ಪರಿಹಾರ ಸೂಚಿಸಿದೆ (ಪ್ರಾಚೀ. v. ಮುನ್ನುಡಿ). ೬. ಬಳಕೆಯಲ್ಲಿರುವ. (ನಾ). ೭. ಆಚರಣೆಯಲ್ಲಿರುವುದು ; ಚಾಲ್ತಿ ; ಬಳಕೆ : ಎಲ್ಲರಿಗೂ ತಿಳಿದಿರುವಂತೆ ಮೂಷಕನಿಯಂತ್ರಣಕ್ಕೆ ಪ್ರಚಲಿತವಾದ ವಿಧಾನ ಮೂರು (ಕೀಟಶಾ. ೯೬); ತಮ್ಮ ಭಾಗದಲ್ಲಿ ಪ್ರಚಲಿತವಿಲ್ಲದ ಹೊಸ ಅಡುಗೆಗಳನ್ನು ಮಾಡಲು ಪ್ರಯತ್ನಿಸುವ ಗೃಹಿಣಿಯರು ಕಡಿಮೆ (ಅಡುಗೆ. ೯೨). **ಪ್ರಚಳಿತ** : ೪. ಮತ್ತಂ ಸಸಂಭ್ರಮಪ್ರಚಳಿತ ಸಮದ ಗಜಘಟಾ ಘಂಟಾರವಂಗಳಿಂದು . . . ಅಗುರ್ವಾಗೆ (ಶಂಖಪು. ೯-೧೧೪ವ). [ಸಂ.]

**ಪ್ರಚಲೆ** (ನಾ). [ಜೈನ] ಒಂಬತ್ತು ವಿಧವಾದ ದರ್ಶನಾವರಣೀಯ ಕರ್ಮಗಳಲ್ಲಿ ಒಂದಂ ; ನಿದ್ರೆ, ನಿದ್ರಾನಿದ್ರೆ, ಪ್ರಚಲೆ, ಪ್ರಚಲಾಪ್ರಚಲೆ, ಸ್ತ್ಯಾನಗೃದ್ಧಿ ಎಂಬ ಐದು ಬಗೆಯ ನಿದ್ರೆಗಳಲ್ಲಿ ಒಂದು: ಶೋಕ, ಶ್ರಮ, ಮದ ಮೊದಲಾದ ಕಾರಣಗಳಿಂದ ಉಂಟಾಗಿ ಕುಳಿತುಕೊಂಡೇ ಕಣ್ಣು ಮತ್ತು ದೇಹಗಳಲ್ಲಿ ವಿಕ್ರಿಯೆಯನ್ನು ಉಂಟುಮಾಡುವ ಹಾಗೂ ದೇಹವನ್ನು ತೂಗಾಡುವಂತೆ ಮಾಡುವ ನಿದ್ರೆ : ಚಕ್ಷುರ್ದರ್ಶನಾವರಣೀಯಮಚಕ್ಷುರ್ದರ್ಶನಾವರಣೀಯಮವಧಿದರ್ಶನಾವರಣೀಯಂ ಕೇವಲದರ್ಶನಾವರಣೀಯಂ ನಿದ್ರಾನಿದ್ರಾನಿದ್ರಾಪ್ರಚಲಾಪ್ರಚಲಾಪ್ರಚಲಾಸ್ತ್ಯಾನಗೃದ್ಧಿಭೇದದಿಂ ನವವಿಧಭೇದಮಪ್ಪ ದರ್ಶನಾವರಣೀಯಮುಮಂ (ಸುಕುಮಾ. ೩-೩೯ ವ) ; ಅಳಿಯಲಾಗದ ಕರ್ಮ ಜರಿವುತಿರಲು ಬಾಣ ಕೊಳಲು ನಿದ್ರಾಪ್ರಚಲೆಗಳು (ಧರ್ಮಾ. ೧೨-೫೬). [ ಸಂ· ಪ್ರಚಲ ]

**ಪ್ರಚಳ** 'ಪ್ರಚಲ' ನೋ.

**ಪ್ರಚಳಾಕ** 'ಪ್ರಚಲಾಕ' ನೋ.

**ಪ್ರಚಳಾಪ್ರಚಳೆ** 'ಪ್ರಚಲಾಪ್ರಚಲೆ' ನೋ.

**ಪ್ರಚಳಿತ** 'ಪ್ರಚಲಿತ' ನೋ.

**ಪ್ರಚಾರ** (ನಾ). ೧. ಎಲ್ಲ ಕಡೆಗಳಲ್ಲೂ ಇರುವಂಥದು; ಬಳಕೆಯಲ್ಲಿರುವಂಥದು: ಯೋಗಂಗಳು ಜಗತ್ತಿನೊಳಗಣಿತಗಳುಂಟದರಿನೊಳ್ಳಿವೆಯ ಯೋಗಂಗಳೆ ಪ್ರಚಾರವು ಮುಖ್ಯವೆನಿಸುವುವು (ಗಗಶಾ. ೦೦-೦೬). ೨. ಸಾರ್ವಜನಿಕರ ಗಮನವನ್ನು ಸೆಳೆಯಲು ಮಾಡುವ ಬಹಿರಂಗ ಪ್ರಕಟಣೆ: ಹುಚ್ಚು ಪ್ರಚಾರವಿಲ್ಲದುದರಿಂದ ಅಂದಿನ ಕಾರ್ಯಕ್ರಮಕ್ಕೆ ತುಂಬಾ ಜನ ಬಂದಿರಲಿಲ್ಲ (ಬಾ). ೩. ಜನಬಳಕೆ; ವ್ಯವಹಾರ; ಚಾಲ್ತಿ: ಯಹೂದ್ಯರು ಮುಸಲ್ಮಾನರು ಮತ್ತು ಕ್ರಿಸ್ತರು ಇವರ ವಿನಹ ಉಳಿದ ಎಲ್ಲಾ ಜನಾಂಗದವರಲ್ಲೂ ಈ ಸಿದ್ಧಾಂತ ಪ್ರಚಾರದಲ್ಲಿತ್ತು (ಜಚಾಕ್ಕ. ೦೬೯); ಅಕ್ಷರವೆಂದರೆ ವರ್ಣ ಎಂಬ ಅರ್ಥವೇ ಇಂದಿಗೂ ಪ್ರಚಾರದಲ್ಲಿ ನಿಂತಿತು (ಧ್ರಾಹಿ. ೯೩). ೪. ಚಲಾವಣೆ; ಬಳಕೆ: ಆಣೆ ಕಾಸುಗಳ ಪ್ರಚಾರ ಈಗ ಇಲ್ಲ (ಬಾ); ದಕ್ಷಿಣಭಾರತದಲ್ಲಿ ರಾಗಿ ಹೆಚ್ಚು ಪ್ರಚಾರದಲ್ಲಿದೆ (ಬಾ). ೫. ಪದ್ಧತಿ; ರೂಢಿ; ಸಂಪ್ರದಾಯ. ೬. ನಡತೆ; ವರ್ತನೆ; ಚರ್ಯೆ. ೭. ನಡೆಯುವುದು; ತಿರುಗಾಟ; ಸಂಚಾರ: ವಿಮಾನಧ್ವಜವನಳವಡಿಸಿ ವಿದ್ಯುತ್ಪ್ರಚಾರಮಂ ಗೆಲ್ವ ಹಯಮಂ ಪೂಡಿ ... ಬಂದನಾಹವಕೆ ನಲಿದು (ಕೃಶಿಚಾ. ೭-೩೬); ಮುಳ್ಗಳಂಘ್ರಿಯಂ ಬಾರಿಪುದೆಂದು ಬಟ್ಟುದೆ ಮದದ್ವಿರದಂ ಗಹನಪ್ರಚಾರಮಂ (ಶಾಚೇ. ೦೩-೦೯).

ಪ್ರಚಾರ ಮಾಡು=ಎಲ್ಲರಿಗೂ ತಿಳಿಯಪಡಿಸು; ಪ್ರಸಿದ್ಧಪಡಿಸು: ಬುದ್ಧನ ತತ್ತ್ವಗಳನ್ನು ಪ್ರಚಾರ ಮಾಡಲು ಆತನ ಅನುಯಾಯಿಗಳು ದೇಶ ವಿದೇಶಗಳಲ್ಲೆಲ್ಲಾ ಸಂಚಾರ ಮಾಡಿದರು (ಬಾ). [ಸಂ.]

**ಪ್ರಚಾರಕ** (ನಾ). ಎಲ್ಲರಿಗೂ ತಿಳಿಯುವಂತೆ ಮಾಡುವವನು; ಪ್ರಚಾರ ಮಾಡುವವನು: ಜೈಮಿನೀಯಮೀಮಾಂಸಾಶಾಸ್ತ್ರಕ್ಕೆ ಪ್ರಮುಖ ಪ್ರಚಾರಕನು ಕುಮಾರಿಲಭಟ್ಟ (ಶಾಇದ. ೦೨೯); ಫ್ರಾನ್ಸಿಸ್ ಜೇವಿಯರ್ ಎಂಬಾತ ಭಾರತಕ್ಕೆ ಬಂದ ಜೆಸ್ಯೂಟ್ ಪ್ರಚಾರಕರಲ್ಲಿ ಮೊದಲನೆಯವ (ಕಶಕೋ. V, ೩೦೩). [ಸಂ.]

**ಪ್ರಚಾರಕಾರ್ಯ** (ನಾ). ಯಾವುದಾದರೊಂದು ವಿಷಯವನ್ನು ಸಾರ್ವಜನಿಕವಾಗಿ ತಿಳಿಯಪಡಿಸುವುದು: ಅವರು ಘೋಷಣೆಗಳನ್ನು ಪ್ರಕಟಿಸಿದರು; ಗಿರಣಿಗಳಲ್ಲಿ ಪ್ರಚಾರಕಾರ್ಯ ಕೈಗೊಂಡರು (ಪುಶಕ. ೨೯೦); ದಕ್ಷಿಣಭಾರತದಲ್ಲಿ ಕ್ರೈಸ್ತಧರ್ಮದ ಪ್ರಚಾರಕಾರ್ಯ ಮೂರೂ ಸಮುದ್ರತೀರಗಳ ರೇವುಗಳಲ್ಲಿ ಆರಂಭವಾಯಿತು (ಕಶಕೋ. V, ೩೦೫). [ಸಂ.]

**ಪ್ರಚಾರಗೊಳಿಸು** (ಕ್ರಿ). ಎಲ್ಲರಿಗೂ ತಿಳಿಯುವಂತೆ ಮಾಡು: ಪ್ರಸಿದ್ಧಪಡಿಸು: ಭಿಕ್ಷುಗಳು ... ಬುದ್ಧನ ತರುವಾಯವೂ ಅವನ ಉಪದೇಶವನ್ನು ಪ್ರಚಾರಗೊಳಿಸುತ್ತ ನಡೆದರು (ಶಾಲಕೃ. I, ೩೦೬).

[ಪ್ರಚಾರ + ಕೊಳ್₁ + – ಇಸು₃]

**ಪ್ರಚಾರತೆ** (ನಾ). ಹರಡುವಿಕೆ; ವಿಸ್ತರಿಸುವಿಕೆ: ಆಸ್ಯಬಿಂಬಿಲ್ಲ ಭಾಸುರನೇತ್ರದ್ವಿತಯಪ್ರಚಾರತೆಗೆ ಬೆನ್ನಿಂಬಿಲ್ಲ ಧಮ್ಮಿಲ್ಲಬಂಧುರಸೀಮಾ ವಳಯಕ್ಕೆ (ಗಿಂಕ. ೪-೩೬). [ಸಂ. ಪ್ರಚಾರತಾ]

**ಪ್ರಚಾರಮಾಧ್ಯಮ** (ನಾ). ದೇಶದ ರಾಜಕೀಯ. ಕಲೆ, ಕ್ರೀಡೆ ಮುಂತಾದುವುಗಳ ಬಗ್ಗೆ ಸಾರ್ವಜನಿಕರಲ್ಲಿ ಅರಿವನ್ನು ಮೂಡಿಸಲು ಬಳಸುವ ರೇಡಿಯೋ, ದೂರದರ್ಶನ, ಚಲನಚಿತ್ರ ಮುಂತಾದ ಸಾಧನ: ಇಪ್ಪತ್ತನೆಯ ಶತಮಾನದ ಅಗಾಧವೈಜ್ಞಾನಿಕ ತಾಂತ್ರಿಕ ಬೆಳವಣಿಗೆಯ ಫಲವಾಗಿ ಪ್ರಚಾರಮಾಧ್ಯಮಗಳು ವೈವಿಧ್ಯಮಯವೂ ... ವಿಶ್ವರೂಪಿಗಳೂ ಆಗಿವೆ (ಕಶಕೋ. XI, ೩೦೯). [ಸಂ.]

**ಪ್ರಚಾರಸಾಧನ** (ನಾ). = ಪ್ರಚಾರಮಾಧ್ಯಮ: ಅತ್ಯಂತಸಂಕೀರ್ಣವಾದ, ಅಗಾಧಪ್ರಚಾರಸಾಧನಗಳಿಂದ ಕೂಡಿದ ಇಂದಿನ ಸಮಾಜದಲ್ಲಿ ಈ ವ್ಯತ್ಯಾಸವನ್ನು ಗುರುತಿಸುವುದು ಕಷ್ಟವಾಗುತ್ತದೆ (ಕಶಕೋ. XI, ೩೦೯). [ಸಂ.]

**ಪ್ರಚಿಂತೆ** (ನಾ). ಆಲೋಚನೆ; ವಿಮರ್ಶೆ: ಅಚಂದ್ರಾರ್ಕಸ್ಥಾಯಿಯಾಗಿ ××× ಸಲ್ವನ್ನಿರೆ ಪ್ರಚಿಂತೆಯಂ ಮಾಡಿ ಪರಿರಕ್ಷಿಸಲುವೇಳ್ಕುಂ (ಶಾಇ. XX. ೦೦೦-೪೬; 1140). [ಸಂ. ಪ್ರಚಿಂತಾ]

**ಪ್ರಚುರ** (ಗು). ೧. ಹೆಚ್ಚಾದ; ಅತಿಶಯವಾದ; ಮಹತ್ತರವಾದ: ಪ್ರಚುರಕಲಾನ್ವಿತರ್ . . . ದೋಷಾಪಚಯಪ್ರಕಾಶರೆನೆ ಬಾಲಚಂದ್ರದೇವಪ್ರಭಾವವೇನಚ್ಚರಿಯೋ (ಪಂಕ್ಷ. ೦-೨೦); ಸ್ತುತಿಗೆಯ್ವಂ . . . ಚತುರೋಕ್ತಿಪ್ರಚುರಾರ್ಥಕಾವ್ಯಜನಿತೋರ್ವೀಹರ್ಷನಂ ಹರ್ಷನಂ (ಜಚು. ೦-೬). ೨. ಹೆಸರುವಾಸಿಯಾದ; ಪ್ರಸಿದ್ಧವಾದ: ಎಸೆಗುಂ ವೃಂದಾವನಂ ಕೀರಕೇಕಿಮರಾಳವ್ರಜದಾ ವನಂ ಪ್ರಚುರಕಾಳಿಂದೀವನಂ ಪಾವನಂ (ಜಗಪ. ೩-೬೩). (ನಾ). ೩. ಹೆಚ್ಚಳ; ಆಧಿಕ್ಯ; ಹೇರಳ: "ಪ್ರಾಜ್ಯಂ, ಭೂರಿ, ಪ್ರಭೂತಂ, ಪ್ರಚುರಂ . . . ಅದಭ್ರಂ—ಈ ೧೮ ಪೊಕ್ಕಳಂ" (ಹಲಾಯು. ೦೦೩-೦೬). ೪. ಗಾಢವಾದುದು; ತೀವ್ರವಾದುದು: ಕವಿಯಲ್ಲಿ ಪ್ರಚುರವಾಗಿರುವುದು ಮುಕ್ತಿಯ ಆಸೆ (ಶಾಕ್ಯಕು. ೦). ೫. ಪ್ರಚಾರದಲ್ಲಿರುವುದು; ವ್ಯವಹಾರದಲ್ಲಿರುವುದು; ಚಾಲ್ತಿಯಲ್ಲಿರುವುದು: ಸಿಲ್ವಿಯಸ್–ಫೀಬಿಯರ ಪ್ರಣಯ ಇಂಗ್ಲೆಂಡಿನಲ್ಲಿ ಆಗ ಪ್ರಚುರವಾಗಿದ್ದ ಪಾಸ್ಟೊರಲ್ ಕವನಗಳಲ್ಲಿ ಕಾಣುವಂಥ ಪ್ರೇಮ (ಶೇಕ್ಸ್ಪಿ. ೩೩೦); ಭಾರತದಲ್ಲಿ ಪ್ರಚುರವಾದ ಜೈನ ಮತ್ತು ಬೌದ್ಧಧರ್ಮಗಳೆರಡು ಈ ಲೋಕಸೌಂದರ್ಯಕ್ಕಾಗಲೀ ಆ ಕೇವಲ ಪರಮತತ್ತ್ವಸೌಂದರ್ಯರೂಪಿ ಎಂಬ ಭಾವನೆಗಾಗಲೀ ಗಮನಕೊಟ್ಟಂತೆ ತೋರುವುದಿಲ್ಲ (ಸೌಂದಕ. ೦೦೬). ೬. ಕಳ್ಳ; ಚೋರ. [ಸಂ.]

**ಪ್ರಚುರಂ** (ಅ). ಹೆಚ್ಚಾಗಿ; ಬಹಳ ಮಟ್ಟಿಗೆ: ಪ್ರಚುರಂ ಪತ್ತೊಳಗಾಗೆ ರಂಧ್ರವನೆ ಕೈಗೊಂಡೆಂಟನೀಗೇಟ ಬಟ್ಟು . . . ಬಂದಬೆಳ್ ನಿಲ್ಲದಾ ವಚನಬ್ರಹ್ಮದೆ ಮುಕ್ತಿಯೇ (ಶೋಮೇಕ. ೦೦೦); ಪ್ರವಿಲೋಮಕ್ರಿಯೆಗದು ವೆಂದವೆಂದು ಬಂದಿರ್ದುಮುದುಗಮುವುಗಂ ಪ್ರಚುರಂ (ಕಮುದ. ೨೯೯).

[< ಪ್ರಚುರ]

**ಪ್ರಚುರಗೊಳಿಸು** (ಕ್ರಿ). ಪ್ರಸಾರ ಮಾಡು; ಬಿತ್ತರಿಸು: ಆಕಾಶವಾಣಿಯವರು ಈ ಕೃತಿಯನ್ನು . . . ತಜ್ಞಕಲಾವಿದರ ಮೂಲಕ ಬಾನುಲಿಯಲ್ಲಿ ಪ್ರಚುರಗೊಳಿಸಿದ್ದಾರೆ (ಗೋಕಾಜ. X, ೩೮೯).

[ಪ್ರಚುರ + ಕೊಳು (< ಕೊಳ್₁) + – ಇಸು₃]

**ಪ್ರಚುರಗೊಳ್ಳು** (ಕ್ರಿ). ಹರಡು; ವ್ಯಾಪಿಸು; ಪ್ರಚಾರವಾಗು: ಭಾರತೀಯ ವೇದಾಂತ ಮತ್ತು ಅದರ ಪರಿಣಾಮವಾಗಿ ಪ್ರಚುರಗೊಂಡ ಧರ್ಮಗಳೆಲ್ಲವೂ . . . ಒಂದು ಅಂತರಿಕಸೂತ್ರವನ್ನು ರಚಿಸಿವೆ (ಸೌಂದಕ. ೦೦೬). [ಪ್ರಚುರ + ಕೊಳ್ಳು₁ (< ಕೊಳ್₁)]

**ಪ್ರಚುರತೆ** (ನಾ). ಹೆಚ್ಚಳ; ಆಧಿಕ್ಯ; ಅತಿಶಯ: ವಾಚ್ಯವಾಚಕ ವಿಶೇಷ್ಯವಿಶೇಷಣಲಕ್ಷ್ಯಲಕ್ಷಣಪ್ರಚುರತೆ ಕಾಳಿದಾಸನನುಮನೇಳಿಸಿಹೆ ಕೃತಿ ನಾಗವರ್ಮನಾ (ರಾಕೋಚಾ. ೦-೬); ಉಪವಾಸಪ್ರಚುರತೆಯಿಂ ಪಪು ಗಿಡಿಗಿಡಿಜಂತ್ರಮಾದುದು (ಸುಕುಮಾ. ೪-೪); ಮತ್ತ್ರಮಚ ವಿಪರ್ಯಯ ಪ್ರಕೃತಿಯೆ ಬವರಿಸುಗುಮುದೀಚ್ಯಮಾರ್ಗದೊಳ್ ಪ್ರಚುರತೆಯಿಂ (ಕಾವ್ಯಾ. ೩೨೦). [ಸಂ. ಪ್ರಚುರತಾ]

**ಪ್ರಚುರದುಗ್ಧೆ** (ನಾ). ಹೆಚ್ಚಾಗಿ ಹಾಲು ಕರೆಯುವ ಹಸು: "ದ್ರೋಣದುಘಾ, ಪ್ರಚುರದುಗ್ಧಾ—ಈ ೨ ಕೊಡವಾಲ್ ಕಱೆವಾವು" (ಹಲಾಯು. ೪೩-೦೦೬). [ಸಂ. ಪ್ರಚುರದುಗ್ಧಾ]

**ಪ್ರಚುರಪಡಿಸು** (ಕ್ರಿ). ಪ್ರಚಾರ ಮಾಡು ; ಹರಡುವಂತೆ ಮಾಡು ; ಪ್ರಸಿದ್ಧಪಡಿಸು : ಆಕಿಡೆಮಿಯಾಸಿಯನ್ ಫ್ರಿಡ್ಸ್ ಎಂಬುವನು ಭೂಮಿ ಮತ್ತಿತರ ಗ್ರಹಗಳ ಮೂಲದ ವಿಷಯವಾಗಿ ಒಂದು ಸಿದ್ಧಾಂತವನ್ನು ಪ್ರಚುರಪಡಿಸಲು ಆರಂಭಿಸಿದನು (ಕೂಹುಟ್ಟು. ೩೨); ಒಳ್ಳೆಯ ರಸರೂಪಕಗಳನ್ನು ಬರೆದು ಬರೆಸಿ ಆಡಿ ಆಡಿಸಿ ಪ್ರಚುರಪಡಿಸಬೇಕು (ಕಾಪಿಕಾ. ೬೮). [ ಪ್ರಚುರ+ಪಡಿಸು]

**ಪ್ರಚೇತ** (ನಾ). ಎಂಟುಜನ ದಿಕ್ಪಾಲಕರಲ್ಲಿ ಒಬ್ಬ; ಪಶ್ಚಿಮದಿಕ್ಕಿನ ಅಧಿಪತಿ ; ವರುಣ : "ವರುಣಃ, ಯಾದಸಾಂನಾಥಃ, ಪಾಶಪಾಣಿಃ, ಪ್ರಚೇ(ತಸ್)ತಾಃ, ಜಲಾಧಿದೈವತಂ, ಪ್ರತ್ಯಗಾಶಾಪತಿಃ — ಈ ೬ (ಪ್ರಾಹುರ್ಬುಧಾ) ವರುಣನ ಪೆಸರ್" (ಕರಾಹು. ೦೩–೭೪) ; ತನ್ನೊಳ್ ಸಮುದ್ರಾಧಿಪತಿತ್ವಂ ಸಂದ ಪಾಶಾನ್ವಿತನುರುಮಕರಾರೂಢನೀತಂ ಪ್ರಚೇತಂ (ಜಗ. ೦೩–೬೦). [ ಸಂ. ಪ್ರಚೇತಸ್ ]

**ಪ್ರಚೇತಸ** (ನಾ). ೧. = ಪ್ರಚೇತ : "ವರುಣಂ ಪಶ್ಚಿಮದಿಕ್ಪತಿ . . . [ವಾರಿರಾಶಿ]ನಿಳಯಂ ಪ್ರಚೇತಸಂ ಪೆಸರಿಂದಂ" (ವಸ್ತುಕೋ. ೬–೯೩). ೨. ವಾಲ್ಮೀಕಿಯ ತಂದೆ : ವೇದಗಳು . . . ಪ್ರಚೇತಸನ ಮಗನಾದ ವಾಲ್ಮೀಕಿಯಿಂದ ರಾಮಾಯಣದ ರೂಪದಲ್ಲಿ . . . ಅವತರಿಸಿದವು (೮೦೮ಕ. ೯೩). [ಸಂ. ಪ್ರಚೇತಸ್]

**ಪ್ರಚೋದಕ** (ಗು). ೧. ಪ್ರೇರಿಸುವ ; ಪ್ರೇರಣೆ ಮಾಡುವ : ಇದಕ್ಕೆ ಪ್ರಚೋದಕಶಕ್ತಿ ಆ ಹುಟ್ಟುಗುಣದಲ್ಲೇ ಇದೆ (ಶಿಕ್ಷಣ. ೪೦೩). (ನಾ). ೨. ಪ್ರೇರಿಸುವುದು ; ಪ್ರೇರಣೆ ಮಾಡುವುದು : ನಮ್ಮ ಮುನ್ನಡೆಗ ಜೀವನದ ಚೇತೋರಘುರಿಗಳು ಪ್ರಚೋದಕಗಳಾದರ ತತ್ತ್ವದೃಷ್ಟಿ ಮಾರ್ಗದರ್ಶನ ನೀಡುತ್ತದೆ (ಶಿಕ್ಷಣ. ೬೬೬). [ಸಂ.]

**ಪ್ರಚೋದನ** (ನಾ). ೧. ಪ್ರೇರಿಸುವುದು ; ಪ್ರೇರಣೆ : 'ಪ್ರಚೋದನಗೊಳಿಸು' ಪರಾ. ೨. ಹೇಳುವುದು. ೩. ಕಳುಹಿಸುವುದು. ೪. ವಿಧಿಸುವುದು ; ನಿಯಮಿಸುವುದು. [ಸಂ.]

**ಪ್ರಚೋದನಗೊಳಿಸು** (ಕ್ರಿ). ಪ್ರೇರಿಸು ; ಉತ್ತೇಜನಗೊಳಿಸು ; ಹುರಿದುಂಬಿಸು : ನಮ್ಮ ಬುದ್ಧಿಯನ್ನು ಪ್ರಚೋದನಗೊಳಿಸು — ಎಂಬುದೇ ಇವರ ಬೇಡಿಕೆ, ಪ್ರಾರ್ಥನೆ (ಭಾರತ. ೪೬೦). [ಪ್ರಚೋದನ + ಕೊಳು (< ಕೊಳ್$_1$) + — ಇಸು$_3$]

**ಪ್ರಚೋದನಿ** (ನಾ). ಒಂದು ಬಗೆಯ ಗಿಡ ; ಹೆಗ್ಗುಳ್ಳ : "ನಿದಿಗ್ಧಿಕಾ, ಸ್ಪೃಶೀ, ವ್ಯಾಘ್ರೀ, ಬೃಹತೀ, ಕಂಟಕಾರಿಕಾ, ಪ್ರಚೋದನೀ . . . ರಾಷ್ಟ್ರಿಕಾ — ೧೦ ಹೆಗ್ಗುಳ್ಳದ ಹೆಸರು" (ಸಿದ್ಧಾಂತಿ. ೦೩೩). [ಸಂ. ಪ್ರಚೋದನೀ]

**ಪ್ರಚೋದನೆ** (ನಾ). = ಪ್ರಚೋದನ ೧ : ಪ್ರತಿಯೊಂದು ಮನೋವ್ಯಾಪಾರಕ್ಕೂ ಒಂದೊಂದು ಪ್ರಚೋದನೆ ಅಗತ್ಯ (ಶಿಕ್ಷಣ. ೪೦೪) ; 'ಬೇಕು' ಎನ್ನುವುದು ಪ್ರಯತ್ನಕ್ಕೆ ಪ್ರಚೋದನೆ (ಕಕಂಪಾ. ೩೩). [ ಸಂ. ಪ್ರಚೋದನ ]

**ಪ್ರಚೋದಿತ** (ಗು). ೧. ಪ್ರೇರಣೆ ಹೊಂದಿದ. (ನಾ). ೨. ಪ್ರೇರಣೆ ಹೊಂದಿದುದು : ಕಲೋಪಾಸನೆ ಪ್ರಚೋದಿತವಾಗಿ ಕಲಾವಿದರೂ ಆಗಬಹುದು (ಶಿಕ್ಷಣ. ೨೪೭). ೩. ಮುಂದಕ್ಕೆ ಅಟ್ಟಿದುದು, — ಹೊಡೆದುದು. ೪. ಚಿತಾವಣೆ ಹೊಂದಿದುದು. [ಸಂ. ]

**ಪ್ರಚೋದಿಸು** (ಕ್ರಿ). ೧. ಪ್ರೇರಣೆ ಮಾಡು ; ಪ್ರೇರಿಸು : ಗಾಯತ್ರಿಯನೆ ಪರಮಮಂತ್ರವೆಂದಾರ್ಯರ್ ಧೀಯಂ ಪ್ರಚೋದಿಸೆಂದನುದಿನದಿ ಬೇಡಿದರು (ಮಂಕುತಿ. ೫೪೬) ; ಎಲ್ಲ ತರಂಗಮಾನಗಳು . . . ಸಮನಾಗಿ ಪ್ರಚೋದಿಸುವುದಿಲ್ಲ (ಕಲಿಕ. ೩೪) ; ಸೌಂದರ್ಯ ಪ್ರಚೋದಿಸುವುದು ಒಂದು ನಿರ್ದಿಷ್ಟವಾದ ಭಾವವನ್ನು (ಸೌಂದರ್ಯ. ೭೪). ೨. ಹೆಚ್ಚಿಸು ; ಅಭಿವೃದ್ಧಿಗೊಳಿಸು ; ಉದ್ಬೋಧಿಸು : ಅವರ ವಿವೇಚನೆಯನ್ನು ಪ್ರಚೋದಿಸಿ ಉಚಿತವೆನಿಸುವ ಮಾರ್ಗ ಅರಿವಾಗುವಂತೆ ಮಾಡಬೇಕು (ಶಿಕ್ಷಣ. ೦೦೪). [ ಪ್ರಚೋದನ + — ಇಸು$_3$ ]

**ಪ್ರಚ್ಛದ** (ನಾ). ೧. ಹೊದಿಕೆ; ಮೇಲುಹೊದಿಕೆ. ೨. ಹಾಸುಗೆ ಮೊದಲಾದುವುಗಳ ಮೇಲೆ ಹಾಸುವ ಬಟ್ಟೆ; ಹಾಸುಗೆಯ ಹೊದಿಕೆ : "ಪ್ರಚ್ಛದಃ, ಉತ್ತರಚ್ಛದಃ — ಈ ೨ ಹಚ್ಚಡದಿಗೆ" (ಕರಾಹು. ೩೦–೦೫೩); ಶಯ್ಯಾಶ್ರಿತಸಿತಮೃದುಲಪ್ರಚ್ಛದಚ್ಛನ್ನಶಯ್ಯಾತಲದೊಳ್ . . . ಶೂದ್ರಕನೃಪತಿ ಸಂಹಾಸೀನನಾಗಿರ್ದನಾಗಳ್ (ಕಾದಂಸಂ. ೯೦) ; ಹಂಸಾಂಸೋಪಧಾನಪ್ರಧಾನಮೃದುಪ್ರಚ್ಛದತಲ್ಪದೊಳ್ ನೆಲಸಿದಂ ಸಾಹಿತ್ಯವಿದ್ಯಾಧರಂ (ಮಲ್ಲಿಪು. ೯–೦೩೪). [ ಸಂ. ]

**ಪ್ರಚ್ಛದಪಟ** (ನಾ). ೧. = ಪ್ರಚ್ಛದ ೧. ೨. = ಪ್ರಚ್ಛದ ೨ : "ನಿಚೋಳಃ, ಪ್ರಚ್ಛದಪಟಃ — ೨ ಮೇಲುಹಾಸಿಗೆ. ಹಾಸಿಗೆ ಮೇಲೆ ಹಾಸುವ ನಾರುಬಟ್ಟೆ" (ಸಿದ್ಧಾಂತಿ. ೨೦೪). [ಸಂ.]

**ಪ್ರಚ್ಛನೆ** (ನಾ). ೧. ಪ್ರಶ್ನೆಯನ್ನು ಕೇಳುವುದು; ಪ್ರಶ್ನಿಸುವುದು. ೨. [ಜೈನ] ವಾಚನೆ, ಪ್ರಚ್ಛನೆ, ಅನುಪ್ರೇಕ್ಷೆ, ಚಿಂತನೆ ಮತ್ತು ಧರ್ಮೋಪದೇಶಗಳೆಂಬ ಸ್ವಾಧ್ಯಾಯದ ಐದು ಭೇದಗಳಲ್ಲಿ ಎರಡನೆಯದು ; (ತಿಳಿಯಬೇಕಾದ ವಿಷಯದಲ್ಲಿ ಸಂಶಯವನ್ನು ಪರಿಹರಿಸಿಕೊಳ್ಳಲು ಹಾಗೂ ನಿಷ್ಕೃಷ್ಟಜ್ಞಾನವನ್ನು ಪಡೆಯಲು) ತಿಳಿದವರನ್ನು ಕೇಳುವುದು : ತನಗೆ ಸಂದೇಹಮಾದುದಂ ಪೆರರ ಬೆಸಗೊಳ್ವುದುಂ ಪ್ರಚ್ಛನೆಯೆಂಬುದು (ಶ್ರಾವಕಾ. ೯೯). [ಸಂ. ಪ್ರಚ್ಛನಾ]

**ಪ್ರಚ್ಛನ್ನ** (ಗು). ೧. ಮುಚ್ಚಿರುವ; ಹೊದಿಸಿರುವ : ನೀಲವಸನಪ್ರಚ್ಛನ್ನಪರ್ಯಂಕಮಂಡಳದೊಳ್ . . . ಕುಳ್ಳಿರ್ದ ಕೋಮಳೆಯುಂ ದೂರದೆ ನೋಡಿ ಕಂಡನರಸಂ ಕಾದಂಬರೀದೇವಿಯುಂ (ಕಾದಂಸಂ. ೦೦೦೩). ೨. ವೇಷಾಂತರದ ; ಛದ್ಮವೇಷದ : ವಿವಿಧವೇಷವಿಧ್ಯಾಶಾರದಪ್ರಚ್ಛನ್ನಪ್ರಣಿಧಿಗಳಂ ಪ್ರಯೋಗಿಸಿಯುಂ (ಚಂದ್ರಪ್ರ. ೨–೬೧) ; ಕಲಿಯುಗದ ಪ್ರಚ್ಛನ್ನ ಅಲ್ಕಿ ಸತ್ಯಾಗ್ರಹಿ ! (ಕಾಂಕಪ. ೨೦–೦೭). (ನಾ). ೩. ಗೋಪ್ಯ; ರಹಸ್ಯ; ಗುಟ್ಟು : "ರಹಃ, ಪ್ರಚ್ಛನ್ನಂ . . . ರಹಸ್ಯಂ, ಗುಹ್ಯಂ — ಈ ೯ ಏಕಾಂತಂ" (ಕರಾಹು. ೦೦೭–೨೩) ; ಪ್ರಚ್ಛನ್ನಮಪ್ಪೆಡೆಯೊಳ್ ವ್ಯಾತಕಸೆಜ್ಜೆಯೊಳಿರ್ದು ಸಂನ್ಯಸನಂಗೆಯ್ದು (ವಡ್ಡಾರಾ. ೨೯೦) ; ಬೆನ್ನೊಳೆ ಪೋದಂ . . . ಅರಸಂ ಪ್ರಚ್ಛನ್ನದಿಂ (ಹುಕೋಶ. ೨–೯೮). ೪. ಕಣ್ಣಿಗೆ ಕಾಣದಿರುವವನು; ಅಗೋಚರ; ಪರಮಾತ್ಮ : ಸ್ವೇಚ್ಛಾಶೀಲನ ಪ್ರಚ್ಛನ್ನನ . . ನುತಿಪೆಂ (ಉದ್ಭಟ. ೬–೦). ೫. ರಹಸ್ಯವಾದ ದ್ವಾರ ; ಒಳಬಾಗಿಲು : "ಪ್ರಚ್ಛನ್ನಂ, ಅಂತರ್ದ್ವಾರಂ — ೨ ಒಳಬಾಗಿಲ ಹೆಸರು, ರಹಸ್ಯವಾದ ಬಾಗಿಲು" (ಸಿದ್ಧಾಂತಿ. ೦೦೨). ೬. ನಡುನಡುವೆ ಕಂಡಿಗಳುಳ್ಳ ಅಡ್ಡಪಟ್ಟಿಗಳ ಚೌಕಟ್ಟು; ಜಾಲಂದ್ರ. ೭. ಬಂದೂಕು ಮೊದಲಾದುವುಗಳಿಂದ ಹೊಡೆಯುವುದಕ್ಕಾಗಿ ಅಥವಾ ಗಾಳಿ ಬೆಳಕು ಬರುವುದಕ್ಕಾಗಿ ಗೋಡೆಯಲ್ಲಿ ಮಾಡಿರುವ ಕಿರಿದಾದ ಉದ್ದ ಕಂಡಿ. ೮. ತಪ್ಪಿಸಿಕೊಂಡು ಹೋಗಲು ಅನುಕೂಲವಾಗುವಂತೆ ಕೋಟೆ ಮೊದಲಾದುವುಗಳಲ್ಲಿ ಮಾಡಿರುವ ಕಂಡಿ. [ಸಂ.]

**ಪ್ರಚ್ಛನ್ನತೆ** (ನಾ). ಮುಚ್ಚುವುದು ; ಮರೆಮಾಚುವುದು : ಸಂಭಾಷಣೆಯ ವಿಮರ್ಶಾತ್ಮಕಪರಿಶೀಲನೆಯಲ್ಲಿ ಸಹಜವಾದ ಮತ್ತು ಒಮ್ಮೊಮ್ಮೆ ಉದ್ದೇಶಪೂರ್ವಕ ಪ್ರಚ್ಛನ್ನತೆಯ ಅಗತ್ಯಗಳಿಗೆ ಅವಕಾಶ ಕೊಡಬೇಕಾಗುವುದು (ಸಾಹಿತ್ಯ. ೧೯೩). [ಸಂ. ಪ್ರಚ್ಛನ್ನತಾ]

**ಪ್ರಚ್ಛನ್ನವೇಷ** (ನಾ). ವೇಷಾಂತರ ; ಮಾರುವೇಷ : ಕದ್ದೋಡಿ ಬಂದು ಪ್ರಚ್ಛನ್ನವೇಷದಿ ಕಳ್ಳರಲ್ಲಿರಲು ಭೂತಿಲಕನೃಪತಿ ಒಡಿತರಿಸಿ ಕೇಳೆ (ಗುರುಕಾ. ೬–೬೨). [ಸಂ.]

**ಪ್ರಚ್ಛರ್ದಿಕೆ** (ನಾ). ೧. ವಾಂತಿ; ಕಾರಿಕೆ ; ವಮನ: "ಪ್ರಚ್ಛರ್ದಿಕಾ, ವಮಿಃ, ವವಮಥುಃ — ೩ ಕಕ್ಕುರೋಗ, ವಾಂತಿ, ವಮನ" (ಸಿಗ್ಗಾಂ. ೦೪೪). ೨. ವಾಂತಿ ಮಾಡಿಸುವ ಔಷಧಿ. [ಸಂ. ಪ್ರಚ್ಛರ್ದಿಕಾ]

**ಪ್ರಚ್ಛಾದನ** (ನಾ). ೧. ಮುಚ್ಚಿಡುವುದು; ಕಾಣದಂತೆ ಮಾಡುವುದು : ಸ್ವಗುಣಪ್ರಚ್ಛಾದನಮನ್ಯಗುಣಾವಿಷ್ಕರಣಂ . . . ಉಚ್ಚೈರ್ಗೋತ್ರದಾಸ್ರವ ಮಕ್ಕುಂ (ಸುಕುಸೂ. ೬-೨೮). ೨. ಹೊದೆಯುವ ವಸ್ತ್ರ; ಉತ್ತರೀಯ. [ಸಂ.]

**ಪ್ರಚ್ಛಾದಿತ** (ಗು). ೧. ಹೊದಿಸಿದ; ಆಚ್ಛಾದಿಸಿದ. ೨. ಬಚ್ಚಿಟ್ಟ; ಮರೆಮಾಡಿದ. [ಸಂ.]

**ಪ್ರಚ್ಛಾದಿಸು** (ಕ್ರಿ). ಮುಚ್ಚು; ಮರೆಮಾಡು : ರಾಹುವಿನ ವಿಮಾನಂ . . . ಚಂದ್ರವಿಮಾನಮಂ ಪ್ರಚ್ಛಾದಿಸಿ ಪಕ್ಕಾಸಕ್ಕೊಮ್ಮೆ ಪುಣ್ಣಮಿಯ ಕಡೆಯೊಳು ಸೋಮಗ್ರಹಣಮಕ್ಕುಂ (ತ್ರಿಕಣ. ೯೦). [ಪ್ರಚ್ಛಾದನ+ —ಇಸು]

**ಪ್ರಜ** (ನಾ). ೧. ಹುಟ್ಟು; ಜನ್ಮ; ಉತ್ಪತ್ತಿ. ೨. ಸಂತತಿ; ಸಂತಾನ. ೩. ಒಂದು ಸಂತತಿಗೆ ಸೇರಿದ ವ್ಯಕ್ತಿ; ವಂಶಜ. ೪. ಮನುಷ್ಯ ಜಾತಿ; ಮಾನವಕುಲ. ೫. ಸೃಷ್ಟಿಯಾದ ಯಾವುದೇ ಜೀವಿ. ೬. ಒಂದು ದೇಶದಲ್ಲಿ ವಾಸಿಸುವ ಜನ; ಪ್ರಜೆ : ಸ್ವಜಿಸಿದಳು ಭೂವನಿತೆ ರಾಜನ ಪ್ರಜರ ಹಿತ ಸಾಧಿಸಲು ವಿಧವಿಧರಜತಮೌಕ್ತಿಕ ಹೇಮರತ್ನಗಳನ್ನು ಮೋದದಲಿ (ಕಶುವಂ. ೬-೨೭); ನಾನು ನಾಳೆ ನಿಮ್ಮ ಕಚೇರಿಯಲ್ಲಿ ಬಂದು ಕುಳಿತುಕೊಳ್ಳುವೆ . . . ಎಲ್ಲ ಪ್ರಜರಿಗೂ ತಿಳಿಸು (ಹೋಚಿ. ೪). ೭. ವೀರ್ಯ; ರೇತಸ್ಸು. [ಸಂ. ಪ್ರಜಾ]

**ಪ್ರಜನ** (ಗು). ೧. ಸೃಷ್ಟಿಸುವ; ಉತ್ಪತ್ತಿಮಾಡುವ. (ನಾ). ೨. ಹುಟ್ಟುವುದು; ಜನಿಸುವುದು. ೩. ಹುಟ್ಟಿಸುವುದು; ಉತ್ಪತ್ತಿ ಮಾಡುವುದು. ೪. ಗರ್ಭಧಾರಣೆ ಮಾಡುವುದು. ೫. ಪಶುಗಳಿಗೆ ಗರ್ಭಧಾರಣೆ ಮಾಡಿಸುವುದು,— ಹೋರಿ ಕೊಡುವುದು:"ಪ್ರಜನಃ, ಉಪಸರಃ — ೨ ದನಗಳ ಮೇಲೆ ಗೂಳಿಗಳು ಹಾರುವ ಸಮಯ" (ಸಿಗ್ಗಾಂ. ೩೭೪). 'ಉಪಸರ' ಹೋ. ೬. ಉತ್ಪತ್ತಿಗೆ ಕಾರಣ ವಾದುದು; ಜನನಹೇತು. ೭. ಜನನೇಂದ್ರಿಯ. [ಸಂ.]

**ಪ್ರಜನನ** (ಗು). ೧. ಹುಟ್ಟಿಸುವ ; ಸೃಷ್ಟಿಮಾಡುವ : ಭೂಮಿತಾಯ್ಗೆ ಪ್ರಜನನಚಾಪಲ್ಯ (ಶ್ರೀಂಕಗ. ೯೪-೬); ನಿರ್ಜೀವಿಗಳಲ್ಲಿ ಪ್ರಜನನಕ್ರಿಯೆ ಇಲ್ಲ (ಕಶಕೋ. XI. ೩೨೦). (ನಾ). ೨. ಹುಟ್ಟುವಿಕೆ ; ಜನನ. ೩. ಹುಟ್ಟಿಸುವುದು; ಉತ್ಪತ್ತಿಮಾಡುವುದು : ಜೀವಿಗಳು ನಿರ್ಜೀವಿಗಳಿಗಿಂತ ಭಿನ್ನವಾಗಿರುವುದಕ್ಕೆ ಪ್ರಜನನ ಕೂಡ ಒಂದು ಕಾರಣ (ಕಶಕೋ. XI. ೩೨೦). ೪. ಗರ್ಭಧಾರಣೆ ಮಾಡುವುದು. ೫. ಪಶುಗಳ ಗರ್ಭಧಾರಣೆ. ೬. ಹೆರುವುದು; ಹಡೆಯುವುದು. ೭. ಸಂತಾನ; ಸಂತತಿ. ೮. ಜನನೇಂದ್ರಿಯ. ೯. ವೀರ್ಯ ; ರೇತಸ್ಸು. [ಸಂ.].

**ಪ್ರಜವ** (ನಾ). ಹೆಚ್ಚಾದ ವೇಗ,—ಚುರುಕು: ನಿಜರಾಜ್ಯದೊಳುತ್ಪತ್ತಿಯ ನಿಜಮಂ ಕಣಿತ್ಮೆ ಭೂಪ ಮನಮಂ ಮಾಡಲ್ ಪ್ರಜವದೆ ಲೇಖಕಜನ ಕಾಗದಮಂ ಬಟ್ಟೆಯಲಿ ಕಟ್ಟಿ ಪೊತ್ತರ್ ಮೆಗಲೊಳ್ (ಕರ್ಣಾಕ. ೩೪). [ಸಂ.]

**ಪ್ರಜಾತ** (ಗು). ಹುಟ್ಟಿದ; ಜನಿಸಿದ ; ಉತ್ಪನ್ನವಾದ : ಪಾತಕವ್ರಾತ ಪ್ರಜಾತನಿಕೇತನಂಗಳು ತುಡುಗುಣಿಗಳು ನಿಘಾತಕವರ್ಮಕ್ರಿಯೆಗಳವಿಚಾರಿಗಳು ಕೋಪಿಗಳು (ಜಸು. ೯೦-೩೩). [ಸಂ.]

**ಪ್ರಜಾತಂತ್ರ** (ನಾ). ಪ್ರಜೆಗಳೇ ಪರಮಾಧಿಕಾರವನ್ನು ಹೊಂದಿರುವ ಆಡಳಿತ ; ಪ್ರಜಾಪ್ರಭುತ್ವ: ಪ್ರಾಕರಣವು ನಿರಂಕುಶಪ್ರಭುವಿನ ಶಾಸನ ವಲ್ಲ. ಅದು ಧರ್ಮಸೂಕ್ಷ್ಮ ಪ್ರಜಾತಂತ್ರ ಜನತೆಯ ರಾಜ್ಯಸಂವಿಧಾನ (ಸಂಕೋಲ. ೮೩). [ಸಂ.]

**ಪ್ರಜಾತೆ** (ನಾ). ಬಾಣಂತಿ ; ಪ್ರಸೂತೆ : "ಜಾತಂ ಪ್ರಜಾತಂ ಪ್ರಸೂತೆಯೆನೆ ಬಾಣಂತಿಯಕ್ಕು" (ಮಂಗರಾ. ೯೦-೬). [ಸಂ. ಪ್ರಜಾತಾ]

**ಪ್ರಜಾಧರ್ಮ** (ನಾ). ೧. ಒಂದು ದೇಶದ ಪ್ರಜೆಗಳು ಅನುಸರಿಸ ಬೇಕಾದ ನಡವಳಿಕೆ,—ಕರ್ತವ್ಯ : ಕುಲಧರ್ಮವೆಂದರೆ ಒಂದು ಕುಲ ದವರು ಮಾತ್ರ ಅನುಸರಿಸುವ ಸಂಪ್ರದಾಯವು ಅಥವಾ ಪದ್ಧತಿಯು. ರಾಜಧರ್ಮ ಪ್ರಜಾಧರ್ಮ ಇತ್ಯಾದಿಗಳಲ್ಲಿ ಕರ್ತವ್ಯವೆಂದರ್ಥವು (ಅಮಿಲಿ. ೦೦). ೨. ಪ್ರಜೆಗಳಿಗೆ ಸಂಬಂಧಿಸಿದ ಹಕ್ಕು, ಕರ್ತವ್ಯ ಮೊದಲಾದ ವಿಷಯಗಳನ್ನು ಒಳಗೊಂಡಿರುವ ಶಾಸ್ತ್ರ; ಪೌರನೀತಿ : "ಪ್ರಜೆಯ ಹಕ್ಕು — ಬಾಧ್ಯತೆಗಳನ್ನೂ ಕರ್ತವ್ಯಗಳನ್ನೂ ಕುರಿತ ಶಾಸ್ತ್ರ; ಪ್ರಜಾಧರ್ಮ; ಪ್ರಜಾನೀತಿ" (civics. ೩೦೬೪). [ಸಂ.]

**ಪ್ರಜಾಧಿಪ** (ನಾ). ಪ್ರಜೆಗಳ ಒಡೆಯ ; ಅರಸಂ ; ರಾಜ : "ನೃಪತಿ ರಾಟ್ ರಾಜಂ ನರಾಮರಂ ಪಾರ್ಥಿವಂ ಭೂಪತಿ ಮೂರ್ಧಾಭಿಷಿಕ್ತಂ ಕ್ಷತ್ರಿಯಂ ಪ್ರಜಾಧಿಪನೆನಲ್ಕರಸಕ್ಕು" (ಮಂಗರಾ. ೬೮-೧). [ಸಂ.]

**ಪ್ರಜಾಧಿಪತ್ಯ** (ನಾ). ಪ್ರಜೆಗಳ ಪರಮಾಧಿಕಾರದಿಂದ ನಡೆಯುವ ಆಡಳಿತ ; ಪ್ರಜಾಪ್ರಭುತ್ವ: ಪ್ರಪಂಚದ ಅತ್ಯಂತ ಪುರಾತನ ಚಕ್ರಾಧಿ ಪತ್ಯಗಳಲ್ಲಿ ಒಂದಾದ ಚೀನಾ ೧೯೧೨ರಲ್ಲಿ ಪ್ರಜಾಧಿಪತ್ಯವಾಯಿತು (ಕೃಪಪ. ೪೦೭). [ಸಂ.]

**ಪ್ರಜಾನೀತಿ** (ನಾ). = ಪ್ರಜಾಧರ್ಮ ೨: "ಪ್ರಜೆಯ ಹಕ್ಕುಬಾಧ್ಯತೆ ಗಳನ್ನೂ ಕರ್ತವ್ಯಗಳನ್ನೂ ಕುರಿತ ಶಾಸ್ತ್ರ : ಪ್ರಜಾಧರ್ಮ; ಪ್ರಜಾನೀತಿ" (civics. ೩೦೬೪). [ಸಂ.]

**ಪ್ರಜಾನುರಾಗ** (ನಾ). ಪ್ರಜೆಗಳ ಪ್ರೀತಿಗೆ ಪಾತ್ರನಾದವನು : ಅತಿಪ್ರವರ್ಧನಪ್ರಜಾನುರಾಗನುಮತಿಪ್ರಬಲರಣರಾಮನುಮೆನಿಸಿದ ರಣ ರಂಗಸಿಂಹನು . . . ಪುಟ್ಟಿದಂ (ಸಗಾಯು. ೨-೭ ವ). [ಸಂ.]

**ಪ್ರಜಾಪಕ್ಷೀಯ** (ನಾ). ಪ್ರಜಾಪಕ್ಷಪಾತಿಯಾದ ವ್ಯಕ್ತಿ ; ಪ್ರಜೆಗಳ ಹಿತಚಿಂತಕನಾದವನು : ಮಂತ್ರಿಯಾದವನು ನಿಜವಾಗಿ ಪ್ರಜಾ ಪಕ್ಷೀಯನಾಗಿದ್ದಲ್ಲಿ ಅವನ ಮೇಲುಸ್ತುವಾರಿ ಒಹುಮಟ್ಟಿಗೆ ಸಹಾಯಕಾರಿ ಯಾಗುತ್ತದೆ (ರಾಕೃಣ. ೩೪೭). [ಸಂ].

**ಪ್ರಜಾಪತಿ** (ನಾ). ೧. ಪ್ರಜೆಗಳನ್ನು ಸೃಷ್ಟಿಮಾಡುವವನು ; ಸೃಷ್ಟಿಕರ್ತ ; ಪರಮಾತ್ಮ. ೨. ಬ್ರಹ್ಮ : "ಬ್ರಹ್ಮಾ . . . ಪ್ರಜಾಪತಿಃ, ಪಿತಾಮಹಃ, ಜಗತ್ಕರ್ತಾ, ವಿಶ್ವಾತ್ಮಾ, ಕಮಲಾಸನಃ — ಈ ೨೦ ಬ್ರಹ್ಮನ ಪೆಸರ್" (ಹಲಾಯು. ೨-೭); ಪ್ರಜಾಪತಿಯ ರೂಪ ನಿರ್ಮಾಣಕೌಶಲಮುಮಂ . . . ನೀನುಂ ಕಾಣ್ಬೆಯೆಂದೇತಾನುಮಿಲ್ಲಿ ಗೊಡಗೊಂಡು ಬಂದೆಂ (ಕಾದಂಸಾ. ೯೧); ಅಪ್ರತಿಮಪ್ರಜಾಪತಿಸಮಾನ ನೆನೆನ್ನ ಮಗಳ್ಗೀನಾನುಮುಪಾಯದ ಮಾಯೆಯಿಂ ವ್ರತಮನಾಗ್ರಹ ದಿಂದಮೆ ನೀಮಿಂತೀವುದಿದಾವುದು ಸಮ್ಮದಂ. (ಸುಕುಸೂ. ೭-೪೯). ೩. ವಿಷ್ಣು. ೪. ಪ್ರಜಾಸೃಷ್ಟಿಗಾಗಿ ಬ್ರಹ್ಮನಿಂದ ಮೊದಲು ಸೃಷ್ಟಿ ಹೊಂದಿದ ಹತ್ತುಜನ ಸೃಷ್ಟಿಕರ್ತರು ; ಬ್ರಹ್ಮನ ಮಾನಸ ಪುತ್ರರು ; ೯ ಮರೀಚಿ, ಅತ್ರಿ, ಅಂಗಿರಸ್ಸು, ಪುಲಸ್ತ್ಯ, ಪುಲಹ, ಕ್ರತು, ಪ್ರಚೇತಸ, ವಸಿಷ್ಠ, ಭೃಗು ಮತ್ತು ನಾರದ—ಇವರು ದಶಪ್ರಜಾಪತಿಗಳು. ಈ ವಿವರಣೆಯ ಬಗೆಗೆ ಭಿನ್ನಾಭಿಪ್ರಾಯವೂ ಇದೆ. ಬ್ರಹ್ಮ, ಸ್ಥಾಣು, ಮನು, ದಕ್ಷ, ಭೃಗು, ಧರ್ಮ, ಯಮ, ಮರೀಚಿ, ಅಂಗಿರಸ್ಸು, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ, ಪರಮೇಷ್ಠಿ, ವಿವಸ್ವಾನ್, ಸೋಮ, ಕರ್ದಮ, ಕ್ರೋಧ, ಅರ್ವಾಕ್ ಮತ್ತು ಕ್ರೀತ—ಈ ಇಪ್ಪತ್ತೊಂದು ಜನ ಪ್ರಜಾಪತಿಗಳೆಂದು ಮಹಾಭಾರತದ ಮೋಕ್ಷಧರ್ಮಪ್ರಕರಣದಲ್ಲಿ ಹೇಳಿದೆ. ೫. ವಿಶ್ವಕರ್ಮ. ೬. ಸೂರ್ಯ. ೭. ಅಗ್ನಿ.

೮. ಇಂದ್ರ. ೯. ಮನಂ. ೧೦. ಪ್ರಜೆಗಳ ಒಡೆಯ; ಅರಸ; ರಾಜ: "ರಾಜಾ, ರಾಜನ್ಯಃ, ರಾಟ್, ಪ್ರಜಾಪತಿಃ . . . ಲೋಕಪಾಲಃ—ಈ ೧೨ ಅರಸು" (ಶಬ್ದಮ. ೬೮-೨೬೭). ೧೧. ಅಳಿಯ; ಜಾಮಾತ. ೧೨. ತಂದೆ; ಜನಕ. ೧೩. ಒಂದು ಯಾಗದ ಹೆಸರು. ೧೪. ಹಿಂದೂಕಾಲಮಾನದ ಅರುವತ್ತು ಸಂವತ್ಸರಗಳಲ್ಲಿ ಒಂದು. ೧೫. ಪುರುಷನ ಜನನೇಂದ್ರಿಯ; ಶಿಶ್ನ: ಯಿ ದರ್ಮುಕಿ ಅಳುಪಿದವ ಕತ್ತೆ ಪ್ರಜಾಪತಿಗೆ ಅಳುಪಿದಾಗೆ (ಶ್ರೀಎ. ೦೯೩೦. ೨೫-೨೦ ; ೧೬೬೬). [ಸಂ.]

**ಪ್ರಜಾಪತಿತ್ವ** (ನಾ). ಅರಸುತನ; ರಾಜತ್ವ: ಕುಲಧ್ವಜ ಬೆಸಸು ನಿನ್ನವೊಲೀ ಪ್ರಜಾಪತಿತ್ವಕ್ಕೆ ಮುನ್ನ ನೋಂತರುಮೊಳರೇ (ಅಂತ. ೬-೬೬). [ಸಂ.]

**ಪ್ರಜಾಪತಿಯೋಗ** (ನಾ). [ಜ್ಯೋತಿ] ಶುಭಕಾರ್ಯಗಳಿಗೆ ಪ್ರಶಸ್ತವಾದ ಇಪ್ಪತ್ತೇಳುಯೋಗಗಳಲ್ಲಿ ಇಪ್ಪತ್ತೈದನೆಯ ಬ್ರಹ್ಮವೆಂಬ ಯೋಗ; ಬ್ರಹ್ಮಜ್ಞಾನೋತ್ಪತ್ತಿಗೆ ಸೂಕ್ತವಾದ ಕಾಲ: ಕೃತ ಭವ್ಯೋತ್ಸವ ವಾಘಶುದ್ಧದಶಮಿಪೂರ್ಣಾಹಯುಕ್ತಂ ಪ್ರಜಾಪತಿಯೋಗಂ ಬೆರೆದಂದು . . . ಆದುದಂದಜಿತತೀರ್ಥೇಶಾಬ್ಧುಮಿತ್ರೋದಯಂ (ಅಜಿತ. ೩-೨೨). [ಸಂ.]

**ಪ್ರಜಾಪತಿವ್ರತ** (ನಾ). ಪ್ರಾಜಾಪತ್ಯ, ಸೌಮ್ಯ, ಆಗ್ನೇಯ ಮತ್ತು ವೈಶ್ವದೇವ ಎಂಬ ನಾಲ್ಕು ವೇದವ್ರತಗಳಲ್ಲಿ ಒಂದು; ಪ್ರಾಜಾಪತ್ಯವ್ರತ: ಪ್ರಜಾಪತಿವ್ರತವೇ ಮುಂತಾದವುಗಳನ್ನು ಬಿಟ್ಟರೆ ಏಕ್ಕ ಕಡೆಗಳಲ್ಲೆಲ್ಲ ಪ್ರತಿಷೇಧಕ್ಕೆ ಇದೇ ಅರ್ಥವು ಎಂದು ನಮ್ಮ ಅಭಿಪ್ರಾಯ (ಧ್ಯಕ್ಯಾ. ೬೩). [ಸಂ.]

**ಪ್ರಜಾಪಾಲನ** (ನಾ). ಪ್ರಜೆಗಳನ್ನು ಕಾಪಾಡುವುದು: ಕ್ಷತ್ರಿಯಜಾತಿಗೆ ಸತ್ಯತ್ಯಾಗಪ್ರಜಾಪಾಲನಶರಣಾಗತರಕ್ಷಣಪ್ರಹರಣಕ್ಷಮಾದಿಗುಣಾಚರಣಮುಮಂ . . . ನಿಜಿಸಿ (ಅಂತ. ೬-೭೩ ವ). [ಸಂ.]

**ಪ್ರಜಾಪಾಲನೆ** (ನಾ). = ಪ್ರಜಾಪಾಲನ: ಹಿಂದಿನ ಕಾಲದಲ್ಲಿ ಪ್ರಜಾಪಾಲನೆಯೇ ರಾಜನ ಮುಖ್ಯಕರ್ತವ್ಯವಾಗಿದ್ದಿತು (ಊಶಿ). [ಸಂ. ಪ್ರಜಾಪಾಲನ]

**ಪ್ರಜಾಪ್ರತಿನಿಧಿ** (ನಾ). ಪ್ರಜೆಗಳಿರುವ ಆಡಳಿತಾಧಿಕಾರವನ್ನು ನಿರ್ವಹಿಸುವುದಕ್ಕಾಗಿ ಮತದಾನದ ಮೂಲಕ ಆರಿಸಿ ಬಂದ ಮುಂದಾಳು: ಪ್ರಜಾಪ್ರತಿನಿಧಿಗಳಾದ ದೇಶಪ್ರಮುಖರು ಸಮರ್ಥರೂ ಯೋಗ್ಯರೂ ಆಗಿರಬೇಕೆಂಬುದು ಸ್ವತಃ ಸಿದ್ಧವಾದ ಸಂಗತಿ (ರಾಜ್ಯಶಾ. ೨೬೦). [ಸಂ.]

**ಪ್ರಜಾಪ್ರತಿನಿಧಿಸಭೆ** (ನಾ). (ರಾಜ್ಯದ ಆಡಳಿತವಿಚಾರಗಳಲ್ಲಿ ಸಲಹೆ ಕೊಡಲು ನೇಮಿತರಾದ) ಚುನಾಯಿತ ಪ್ರತಿನಿಧಿಗಳ ಸಭೆ: ಪ್ರಜಾಪ್ರತಿನಿಧಿಸಭೆ, ನ್ಯಾಯವಿಧಾಯಕಸಭೆ ಮುಂತಾದ ಸಂಸ್ಥೆಗಳಲ್ಲಿ 'ಮೆಂಬರು' ಗಳಾಗಿರುವವರು ಮತ್ತು ಹಾಗೆ ಸದಸ್ಯರುಗಳಾಗಲು ಬಯಸುವವರು (ಸಾಹಿತ. ೯೬). [ಪ್ರಜಾಪ್ರತಿನಿಧಿ + ಸಭೆ]

**ಪ್ರಜಾಪ್ರಭುತ್ವ** (ನಾ). = ಪ್ರಜಾಧಿಪತ್ಯ: ಆಧುನಿಕ ಪ್ರಜಾಪ್ರಭುತ್ವವು, ರಾಜ್ಯದ ವಿಶಾಲತೆಯ ಕಾರಣದಿಂದ, ಪ್ರತಿನಿಧಿಪ್ರಭುತ್ವವನ್ನು ಒಪ್ಪಲೇಬೇಕಾಯಿತು (ರಾಜಕ. ೪): ಪ್ರಜಾಪ್ರಭುತ್ವವು ಇಂದಿನ ಜಗತ್ತಿನಲ್ಲಿ ಪ್ರಚಲಿತವಾದ ಒಂದು ನಿಯಂತ್ರಣ ಪದ್ಧತಿಯಾಗಿದೆ (ಪತ್ರಿಕಾ. ೦೭). [ಸಂ.]

**ಪ್ರಜಾವತಿ** (ನಾ). ೧. ಮಕ್ಕಳುಳ್ಳವಳು. ೨. ತಾಯಿ; ಜನನಿ. ೩. ಸಹೋದರನ ಹೆಂಡತಿ; ನಾದಿನಿ: "ಪ್ರಜಾವತೀ, ಭ್ರಾತೃವಧೂಃ—ಈ ೨ ನಾಮ[ದಿ]ನಿ" (ಶಬ್ದಮ. ೬೩-೩೩೦); "ನಾದಿನಿ ಪ್ರಜಾಪತಿಯಕ್ಕು" (ಮಂಗರಾ. ೬೨-೦೨). [ಸಂ. ಪ್ರಜಾವತೀ]

**ಪ್ರಜಾಲ** (ನಾ). ದೊಡ್ಡ ಗುಂಪು,—ಸಮೂಹ: ಭಾಳಾಕ್ಷನಂ ಸ್ತುತಿಸಿಯೊಲಿಸನ್ನಸಮಯಪ್ರಜಾಲವುಂ ಗೆಲಿದ ಹಂಪೆಯ ಹರೀಶ್ವರಂ (ರಾಶತ. ೦-೦೬). [ಸಂ.]

**ಪ್ರಜಾಸಂಬಂಧಾಂತರ** (ನಾ). [ಜೈನ] ಜೈನಬ್ರಾಹ್ಮಣನಿಗಿರಬೇಕಾದ ಹತ್ತು ಬಗೆಯ ಅಧಿಕಾರಗಳಲ್ಲಿ ಒಂದು; ಜೈನಗ್ರಂಥವಾದ ಉಪಾಸನಾಧ್ಯಯನ ಸೂತ್ರದಲ್ಲೂ ಸಂಸ್ಕೃತ ಭಾಷೆಯಲ್ಲಿರುವ ಆದಿಪುರಾಣದಲ್ಲೂ ಹತ್ತುಬಗೆಯ ಅಧಿಕಾರಗಳನ್ನು ಜೈನಬ್ರಾಹ್ಮಣನಿಗೆ ಉಪದೇಶ ಮಾಡಲಾಗಿದೆ. ೧. ಅತಿಬಾಲವಿದ್ಯೆ—ಬ್ರಾಹ್ಮಣನು ಬಾಲ್ಯದಿಂದಲೆ ಯಾವ ವಿದ್ಯೆಯನ್ನು ಕಲಿಯಲು ಪ್ರಯತ್ನ ಮಾಡಿ ಸಾಧಿಸಿದನೊ ಆ ವಿದ್ಯೆ. ೨. ಕುಲಾವಧಿ—ಕುಲಾಚಾರವನ್ನು ರಕ್ಷಿಸುವುದು. ೩. ವರ್ಣೋತ್ತಮತ್ವ—ಇತರ ವರ್ಣದವರಿಗಿಂತ ತಾನು ಮೇಲೆನಿಸಿರುವುದು. ೪. ಪಾತ್ರತ್ವ—ಗುಣಾಧಿಕನಾಗಿರುವುದರಿಂದ ದಾನಮಾನಾದಿಗಳಿಗೆ ಸತ್ಪಾತ್ರನಾಗಿರುವಿಕೆ. ೫. ಸೃಷ್ಟ್ಯಧಿಕಾರಿತೆ—ತೀರ್ಥಂಕರರಿಂದ ಜನ್ಮ ತಾಳಿ ಪ್ರಾಚೀನಕಾಲದಿಂದಲೂ ಬಂದಿರುವ ಧರ್ಮವನ್ನೇ ಪ್ರಚಾರಮಾಡುವುದು. ೬. ವ್ಯವಹಾರೇಶಿತ್ವ—ಜೈನಧರ್ಮಾವಲಂಬಿಗಳಾದವರಿಗೆ ಪ್ರಾಯಶ್ಚಿತ್ತ ಮೊದಲಾದ ವ್ಯವಹಾರಗಳನ್ನು ಜೈನಸಂಪ್ರದಾಯಾನುಸಾರವಾಗಿ ನಿರ್ವಹಿಸುವ ಹೊಣೆಗಾರಿಕೆ,—ಸ್ವಾತಂತ್ರ್ಯ. ೭. ಅವಧ್ಯತ್ವ—ಸಾಮಾನ್ಯವಾಗಿ ಯಾವ ಪ್ರಾಣಿಗಳನ್ನೂ ಕೊಲ್ಲಬಾರದು. ವಿಶೇಷವಾಗಿ ಬ್ರಾಹ್ಮಣನನ್ನಂತೂ ಕೊಲ್ಲಲೇಬಾರದು. ಅವನು ವಧೆಗೆ ಯೋಗ್ಯನಲ್ಲ, ಅವಧ್ಯ. ೮. ಅದಂಡ್ಯತ್ವ—ಬ್ರಾಹ್ಮಣನು ದಂಡನೆಗೆ ಅರ್ಹನಲ್ಲ, ಶಿಕ್ಷಾರ್ಹನಲ್ಲ. ೯. ಮಾನಾರ್ಹತೆ—ಬ್ರಾಹ್ಮಣನು ಎಲ್ಲರ ಮನ್ನಣೆಗೂ ಪಾತ್ರನಾದವನು. ಎಲ್ಲರೂ ಅವನನ್ನು ಗೌರವಿಸಬೇಕು. ೧೦. ಪ್ರಜಾಸಂಬಂಧಾಂತರ—ಹೇಗೆ ಸಿದ್ಧರಸವು ತನ್ನೊಡನೆ ಸಂಬಂಧ ಹೊಂದಿದ ಲೋಹಗಳನ್ನೆಲ್ಲಾ ಚಿನ್ನವನ್ನಾಗಿ ಮಾಡುವುದೋ ಹಾಗೆ ತನ್ನ ಸಂಗವನ್ನು ಮಾಡಲು ಬಂದ ಎಲ್ಲರನ್ನೂ ತನ್ನಂತೆಯೇ ಒಳ್ಳೆಯವರನ್ನಾಗಿ ಮಾಡಿ, ತಾನು ಮಾತ್ರ ತನ್ನತನವನ್ನು ಉಳಿಸಿಕೊಂಡಿರುವಿಕೆ: ಅತಿಬಾಲವಿದ್ಯಾಕುಲಾವಧಿವರ್ಣೋತ್ತಮತ್ವ ಪಾತ್ರತ್ವ ಸೃಷ್ಟ್ಯಧಿಕಾರ ವ್ಯವಹಾರೇಶಿತ್ವಾವಧ್ಯತ್ವಾದಂಡ್ಯತ್ವ ಮಾನಾರ್ಹತ್ವ ಪ್ರಜಾಸಂಬಂಧಾಂತರಮೆಂಬ ಪತ್ತುಮಧಿಕಾರಂಗಳುಮನಱಿಪಿ (ಅಂತ. ೦೩-೦೬೩); ದಶಾಧಿಕಾರಮುಪಾಸಕಾಧ್ಯಯನದೊಳ್ಪೇಳ್ದುದವಾವುವೆಂದಡೆ ಅತಿಬಾಳವಿದ್ಯೆಯುಂ . . . ಪ್ರಜಾಸಂಬಂಧಾಂತರ [ಪಾಠಾಂ. ಪ್ರಜಾಸಂಬಂಧತ್ವ]ಮುಮೆಂದು ದಶವಿಧಮುಮಕ್ಕುಂ (ಚಾವುಂಪು. ೨೩೬). [ಸಂ.]

**ಪ್ರಜಾಸತ್ತೆ** (ನಾ). = ಪ್ರಜಾಧಿಪತ್ಯ: ಪಟೇಲಸಾಹೇಬರು . . . ಪ್ರಜಾಸತ್ತೆಯ ಈ ಕಾಲದಲ್ಲಿ ಪ್ರಜರ ಬೇಡಿಕೆಗೆ ಗೌರವ ಕೊಟ್ಟು . . . ನಮ್ಮ ಪ್ರಾಂತವನ್ನು ಕೊಡಬೇಕು (ಹರ್ಡೇಕರ. ೦೦೨); ನಿಜವಾದ ಪ್ರಜಾಸತ್ತೆಯ (Democratic) ಸಮಾಜವು ಏರ್ಪಡಬೇಕಾದರೆ . . . ಸಹಕಾರಬುದ್ಧಿಯಿಂದ ವರ್ತಿಸುವುದು ಹೆಚ್ಚಬೇಕು (ಧ್ರುಹಾತಿ. ೦೯೨). [ಸಂ. ಪ್ರಜಾಸತ್ತಾ]

**ಪ್ರಜಾಸರ್ಕಾರ** (ನಾ). = ಪ್ರಜಾಧಿಪತ್ಯ: ಭಾರತವು . . . ಪ್ರಜಾಸರ್ಕಾರಪದ್ಧತಿಯನ್ನೂ ಗ್ರಾಮಾಡಳಿತವ್ಯವಸ್ಥೆಯ ಮೂಲಕ ನಮಗೆ ಕೃಪೆ ಮಾಡಿದ ನಮ್ಮ ತಾಯಿ (ಕಾರಂ. ೩೬೩). [ಸಂ. (ಪ್ರಜಾ+ಸರ್ಕಾರ)]

**ಪ್ರಜಾಸ್ವಾತಂತ್ರ್ಯ** (ನಾ). ಮಾನವನ ಆಜನ್ಮಸಿದ್ಧವಾದ ಹಾಗೂ ಮೂಲಭೂತವಾದ ಸ್ವಾತಂತ್ರ್ಯ: ಒಂದು ಸ್ವತಂತ್ರರಾಷ್ಟ್ರದಲ್ಲಿ ಜನರಿಗಿರುವ ಪರಮಾಧಿಕಾರ: ಒಂದು ದೇಶದ ಪ್ರಜಾಸ್ವಾತಂತ್ರ್ಯಗಳ ನಿರಾಕರಣೆಯೆಂದರೆ ಅಲ್ಲಿ ನಿರಂಕುಶಆಡಳಿತವಿದೆಯೆಂದೇ ಪರಿಗಣಿಸಲಾಗುತ್ತದೆ (ಕರ್ಪೋ. XI. ೩೩೦). [ಸಂ.]

**ಪ್ರಜಾಹಿತ** (ನಾ). ಜನರ ಕ್ಷೇಮ,—ಸೌಖ್ಯ : ಪ್ರಜಾಹಿತವೂ ಮತ್ತು ಧರ್ಮಸಹಿಷ್ಣುತೆಯೂ ಈತನಲ್ಲಿ ನೆಲೆಸಿತ್ತು (ಕೋಕಂಬ. ೨೯) ; ಪತ್ರಿಕೆ . . . ಪ್ರಜಾಹಿತಸಾಧನಸಾಧ್ಯೆಯದಿಂದ ಸಮಾಜದಲ್ಲೊಂದು ಅಪೂರ್ವಸ್ಥಾನಮರ್ಯಾದೆಯನ್ನು ಕಲ್ಪಿಸಿಕೊಂಡಿರುತ್ತದೆ (ಕಕೋ. I. ೦೧೬). [ಸಂ.]

**ಪ್ರಜೆ** (ನಾ). ೧. ಹುಟ್ಟು ; ಜನ್ಮ ; ಉತ್ಪತ್ತಿ. ೨. ಸಂತತಿ : ಸಂತಾನ. ೩. ಒಂದು ಸಂತತಿಗೆ ಸೇರಿದ ವ್ಯಕ್ತಿ ; ವಂಶಜ. ೪. ಮನುಷ್ಯ ಜಾತಿ : ಮಾನವಕುಲ. ೫. ಸೃಷ್ಟಿಯಾದ ಯಾವುದೇ ಜೀವಿ. ೬. ಒಂದು ದೇಶದಲ್ಲಿರುವ ಜನ ; ಒಂದು ಆಧಿಪತ್ಯಕ್ಕೆ ಸೇರಿದ ಜನವರ್ಗ : "ಲೋಕಂ ಬಹುತ್ವಂ ಜನಂ ಪ್ರಜೆಗೆ ಪೆಸರಕ್ಕು" (ಶಬ್ದಮ. ೩೬-೨) ; ಪ್ರಜೆಯೆಲ್ಲಂ ಕ್ಷೇಮದಿಂದಿರ್ದುದು (ಕಾರಣ. ೨೩೯) ; ರಾಜ್ಯವೆಂದರೆ ಕೆಲವು ಮೂಲನಿಬಂಧನೆಗಳಿಗೆ ಅನುಸಾರವಾಗಿ ಒಟ್ಟುಗೂಡಿಕೊಂಡು ಬದುಕಲು ಒಡಂಬಟ್ಟಿರುವ ಜನರ ಸಂಘ . . . ಹಾಗೆ ಒಡಂಬಟ್ಟಿರುವ ಜನಕ್ಕೆ ರಾಜ್ಯಭಾಷೆಯಲ್ಲಿ "ಪ್ರಜೆ" ಎಂದು ಹೆಸರು (ರಾಜ್ಯಶಾ. ೪೩). ೭. ವೀರ್ಯ ; ರೇತಸ್ಸು. [ಸಂ. ಪ್ರಜಾ]

**ಪ್ರಜೇಶ** (ನಾ). ೧. = ಪ್ರಜಾಪತಿ ೪: 'ನವಪ್ರಜೇಶ' ಪರಾ. ೨. ರಾಜ ; ದೊರೆ. [ಸಂ.]

**ಪ್ರಜೇಶ್ವರ** (ನಾ). ೧. ಪ್ರಜೆಗಳ ಒಡೆಯ ; ರಾಜ. ೨.=ಪ್ರಜಾಪತಿ ೪: ಇಂದು ಕಮಳಭವ ಪ್ರಜೇಶ್ವರರೊಂದು ಮೂರುತಿ ವಿಷ್ಣು ಮನುಗಳು ಸಂದ ಪಾರ್ಥಿವಲೋಕಪಾಲಕರೊಂದು ಮೂರ್ತಿಯದು (ಜೈಮಿ. ೩-೬೮). ೩. ಮರೀಚಿಪುತ್ರನಾದ ಕಶ್ಯಪಪ್ರಜಾಪತಿ ; ೯ ಪ್ರಜಾಪತಿಗಳ ಸಾಲಿನಲ್ಲಿ ಕಶ್ಯಪನಿಗೆ ಗಣನೆಯಿಲ್ಲವಾದರೂ ದೇವತೆಗಳು ರಾಕ್ಷಸರೇ ಮೊದಲಾದ ದೇವಯೋನಿಗಳ ಜನಕನಾದುದರಿಂದ ಇವನಿಗೂ ಈ ಹೆಸರು ಸಲ್ಲುತ್ತದೆ : ಸರಸಿಜಭವನಿಂ ಪುಟ್ಟಿದ ಮರೀಚಿ ಗಣುಗಂ ಪ್ರಜೇಶ್ವರಂ . . . ಚಂಪಂ ಸಕಿವೇರಸು ತಪವನೀ ಪರ್ವತದೊಳ್ (ಕಾಸಂ. ೦೦೮-೦೭೨). [ಸಂ.]

**ಪ್ರಜೈತ್ರ** (ನಾ). ಹೆಚ್ಚಾದ ಗೆಲುವನ್ನು ಪಡೆದವನು; ಅತಿಪರಾಕ್ರಮಿ: ವಿನುತನಿಸ್ಸ್ವಹನಿರಾತಂಕ ಸಂಸ್ಕೃತಿಲಕಾಸಂಕುಲಗುಣಪ್ರಜೈತ್ರಂ (ರಾಶಿಕ. ೦೯-೯೦). [ಸಂ.]

**ಪ್ರಜೋತ್ಪತ್ತಿ** (ನಾ). ಹಿಂದೂಕಾಲಮಾನದ ಅರುವತ್ತು ಸಂವತ್ಸರಗಳಲ್ಲಿ ಐದನೆಯದು : ಶ್ರೀಮತು ಪ್ರಜೋತ್ಪತ್ತಿಸಂವತ್ಸರದ ಮಾರ್ಗಶಿರ ಬ ೭ ಸೋ (ಎಶಿ. V. ಕೇಆರು. ೦೪೨-೦ ; 1211 ?). [ಸಂ.]

**ಪ್ರಜ್ಞ** (ಗು). ೧. ಬಹಳ ವಿಷಯಗಳನ್ನು ತಿಳಿದುಕೊಂಡಿರುವ ; ವಿದ್ವಾಂಸನಾದ: ಮಾತಿಗಾರ್ಜುನು ನೆಸಹುಗಳಿಗೆಯತೀತನಪ್ಪ ಮಹಾನುಭಾವ ಪ್ರಜ್ಞಮಾನಸನು (ಜಕಪು. ೬-೦೨). ೨. ಬುದ್ಧಿವಂತನಾದ ; ತಿಳಿವಳಿಕೆಯುಳ್ಳ. (ನಾ). ೩. ಬಹಳ ವಿಷಯಗಳನ್ನು ತಿಳಿದುಕೊಂಡಿರುವವನು ; ವಿದ್ವಾಂಸ ; ಪಂಡಿತ : ಬಹುಶ್ರುತನ ಮಂತ್ರನಿಶ್ಚಯಮುಮಂ ... ಪ್ರಜ್ಞರುಂ ನಿರ್ಮತ್ಸರರುಂ ... ಸಚಿವ ಸಮೂಹಂ ಮೆಚ್ಚಿ (ಶಾಂತಿಪು. ೨-೭೦ ವ); ಪ್ರಜ್ಞಾರ್ಗಮುಮಂ ಲೋಕಜ್ಞರ್ಗಂ ವನಿತನುಸಿರ್ಪುದೆಗ್ಗು (ಅಜಪು. ೩-೨). ೪. ಬುದ್ಧಿವಂತ. [ಸಂ.]

**ಪ್ರಜ್ಞಪ್ತ** (ಗು). ೧. ಗೊತ್ತುಪಡಿಸಿದ ; ವಿಧಿಸಿದ. (ನಾ). ೨. ಚೆನ್ನಾಗಿ ಬೋಧಿಸುವುದು ; ತಿಳಿವಳಿಕೆಯನ್ನು ನೀಡುವುದು. ೩. [ಬೌದ್ಧ] ಕ್ರಮವಾಗಿರುವುದು ; ಕ್ರಮಬದ್ಧವಾಗಿರುವುದು : ಮಿಲಿಂದ ಪ್ರಶ್ನೆಯು ಪಿಟಕಗಳಷ್ಟೇ ಪ್ರಜ್ಞಪ್ತವಾದ ಪ್ರಮಾಣಗ್ರಂಥವಾಗಿತ್ತು (ಬುದ್ಧಕ. ಬಂಗಂ. ೦೦). [ಸಂ.]

**ಪ್ರಜ್ಞಪ್ತಿ** (ನಾ). ೧. ಅರಿವು ; ಜ್ಞಾನ ; ಪ್ರಜ್ಞೆ. ೨. ಬುದ್ಧಿ. ೩. ತಿಳಿಸುವುದು ; ಕಲಿಸುವುದು. ೪. [ಜೈನ] ಒಬ್ಬ ದೇವತೆಯ ಹೆಸರು : ವಿದ್ಯಾದೇವಿ. [ಸಂ.]

**ಪ್ರಜ್ಞಪ್ತಿವಿದ್ಯೆ** (ನಾ). [ಜೈನ] ಒಂದು ಬಗೆಯ ವಿದ್ಯೆ : ಅವರ್ಗಂ ಪ್ರಜ್ಞಪ್ತಿವಿದ್ಯೆ ಮೊದಲಾಗಿ ಕುಲಜಾತಿಸಾಧಿತವಿದ್ಯೆಗಳ್ ಪಲವುಂ ಬೆಸಕೆಯ್ವುವು (ಆದಿಪು. ೯-೦೨೦ ವ) ; ಅಂತು ಪ್ರಜ್ಞಪ್ತಿವಿದ್ಯಾಲಾಭಾಂತರಾಯಮುಮಂ ಮಾಡಲ್ (ಶಾಂತಿಪು. ೯-೫ ವ) ; ಅಂತು ನಡನಡ ನಡಗುತ್ತುಮಾಂ ವಿಜಯಿಯೆಂಬೆಂ ಪ್ರಜ್ಞಪ್ತಿವಿದ್ಯೆಯಿಂ ಕಿಱಿಯಳೆಂ (ಕಂಚಾಕಚ. ೦೯-೩೬ ವ). [ಸಂ. ಪ್ರಜ್ಞಪ್ತಿ ವಿದ್ಯಾ]

**ಪ್ರಜ್ಞಾಗ್ರಾಹಿತ್ವ** (ನಾ). ಸಂಪೂರ್ಣಾರ್ಥವನ್ನು ಸ್ವೋಪಜ್ಞವಾಗಿ (ಅಂತರಂಗದ ಚೇತನದಿಂದ) ಕಂಡುಕೊಳ್ಳುವುದು : ಒಂದು ಉತ್ತಮರೂಪಕವು ಭಿನ್ನವಸ್ತುಗಳಲ್ಲಿರುವ ಸಾದೃಶ್ಯದ ಪ್ರಜ್ಞಾಗ್ರಾಹಿತ್ವ (Intutive Perception)ವನ್ನು ಸೂಚಿಸುತ್ತದೆ (ಅಂಕಾ. ೧೨೬). [ಸಂ.]

**ಪ್ರಜ್ಞಾತೀತ** (ನಾ). ಬುದ್ಧಿಗೆ ಮೀರಿದುದು ; ಊಹೆಗೆ ನಿಲುಕದಿರುವುದು : ಅಂಥ ಪ್ರೇಮ ಪ್ರಜ್ಞಾತೀತವಾಗಿ ಅಂತರ್ಜ್ಞಾನಪ್ರೇರಿತವಾಗಿರುತ್ತದೆ (ತ್ರಿಕಟು. ೭೩). [ಸಂ.]

**ಪ್ರಜ್ಞಾನ** (ನಾ). ೧. ಹೆಚ್ಚಾದ ತಿಳಿವಳಿಕೆ ; ಅಧಿಕವಾದ ಜ್ಞಾನ : ಈ ಪ್ರಜ್ಞಾನಕ್ಕಾಗಿ, ವಿಶುದ್ಧಬುದ್ಧಿಗಾಗಿ ಮೂಲತಃ ಬೇಕಾದದ್ದು ಅಂತರಂಗದ ಒಂದು ಸುಸಂಬದ್ಧತೆ. (ಏಕಾವ. ೨೦) ; ದುರಾಚಾರದಿಂದ ನಿವೃತ್ತನಾಗದವನೂ ಶಾಂತನಲ್ಲದವನೂ ಸಮಾಹಿತನಲ್ಲದವನೂ ಮನಶ್ಶಾಂತಿಯಿಲ್ಲದವನೂ ಪ್ರಜ್ಞಾನದಿಂದ ಇವನನ್ನು ಪಡೆಯಲಾರರು (ಕಠಪ್ರಾ. ೬೩). ೨. ವಿಚಾರ ಮಾಡುವ ಶಕ್ತಿ ; ವಿವೇಚನೆ. ೩. ಚೈತನ್ಯ. ೪. ತಿಳಿದವನು ; ಬುದ್ಧಿವಂತ. ೫. ಗುರುತು ; ಅಭಿಜ್ಞಾನ : "ಪ್ರಜ್ಞಾನಂ—೧. ಶುದ್ಧಬುದ್ಧಿ, ಗುರ್ತು ೨" (ಸಿದ್ಧಾಂತಿ. ೪೦೩). [ಸಂ.]

**ಪ್ರಜ್ಞಾನಿ** (ಗು). ೧. ಬಹಳ ಬುದ್ಧಿವಂತನಾದ. ೨. ವಿಶೇಷ ಜ್ಞಾನಿಯಾದ : ಪ್ರಜ್ಞಾನಿ ರಾಮಚಂದ್ರಂ . . . ನಿಂದನಚಲಂ ಧನುಷ್ಪಾಣಿ ಬಾಣಧಿ ನಿಮಿರೆ ಬೆನ್ನಿನಲಿ ! (ಶ್ರೀರಾಮಪಟ್ಟಾ. ೬೯೦-೩೪೩). [ಸಂ. ಪ್ರಜ್ಞಾನಿನ್]

**ಪ್ರಜ್ಞಾಪಾರಮಿತೆ** (ನಾ). [ಬೌದ್ಧ] ಅತ್ಯಂತ ಶ್ರೇಷ್ಠವಾದ ಜ್ಞಾನ,—ತಿಳಿವಳಿಕೆ : ಈ ಸಾಕ್ಷಾತ್ಕಾರವೆಂಬ ಭಾವನೆಯು ವೇದಾಂತಿಗಳ ಶ್ರವಣ, ಮನನ, ನಿದಿಧ್ಯಾಸಗಳಂತೆ ಶ್ರುತಿಮಯೀ, ಚಿಂತಾಮಯೀ, ಭಾವನಾಮಯೀ ಎಂಬ ಕ್ರಮದಿಂದ ಪ್ರಜ್ಞಾಪಾರಮಿತಾ ಎಂಬ ನಾಮಧೇಯದಿಂದ ಪ್ರಸಿದ್ಧವಾಗಿರುವುದು (ಹಿಂತಾ. ೯೦). [ಸಂ. ಪ್ರಜ್ಞಾಪಾರಮಿತಾ]

**ಪ್ರಜ್ಞಾವಂತ** (ನಾ). ಅರಿವುಳ್ಳವನು ; ಜ್ಞಾನಿ : ಅಶಾಶ್ವತಸುಖವನ್ನು ಕೊಡುವ ಈ ಯಾವ ವರವೂ ಆ ಪ್ರಜ್ಞಾವಂತನಾದ ಬಾಲಕನಿಗೆ ಬೇಡವಾಯಿತು (ಮುಕ್ಕಾಕ. ೨ ೬:೩೪); ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ ಆಧ್ಯಾತ್ಮಿಕವಿಚಾರಗಳು . . . ಸರ್ವಕಾಲದ ಪ್ರಜ್ಞಾವಂತರಾದ ಮಾನವರ ಧ್ಯಾನಚಿಂತನೆಗಳಿಗೆ ಮುಗಿಯದ ತತ್ವಸಂಪತ್ತನ್ನು ಒದಗಿಸಿಕೊಡುತ್ತಿವೆ (ಕಾರಿವ. ೬೩). [ಸಂ. ಪ್ರಜ್ಞಾವತ್]

**ಪ್ರಜ್ಞಾವಾದ** (ನಾ). (ಅಲಂ) ತಾನು ಬುದ್ಧಿವಂತನೆಂದು ಭಾವಿಸಿ ಆಡುವ ಮಾತು : 'ಪ್ರಜ್ಞಾವಾದವನ್ನೇ ಆಡುತ್ತಿರದೆ, ಜಿಜ್ಞಾಸೆ ಮಾಡಿ . . . ಇಲ್ಲಿಯೇ ಮುಕ್ತಿಯನ್ನು ಪಡೆಯಬೇಕು (ಕೆಚಾ. ೦೯೪). [ಸಂ.]

**ಪ್ರಜ್ಞಾವಾದಿ** (ನಾ). (ಅಲಂ) ತಾನು ಬುದ್ಧಿವಂತನೆಂದು ಭಾವಿಸಿ ಮಾತುಗಳನ್ನಾಡುವವನು : ಅಲ್ಲದ ಕೆಲಸದಲ್ಲಿ ಅವರು ಸಲ್ಲದ ರೀತಿ

ಯಲ್ಲಿ ಕೈಯಿಕ್ಕುತ್ತಿರುವರೆಂದು ಗೊಣಗುಟ್ಟುವ ಪ್ರಜ್ಞಾವಾದಿಗಳೂ ವಿಪುಲರಾಗಿದ್ದಾರೆ (ಚಿಕಾಕುಂ. ೩೯); ಪ್ರಜ್ಞಾವಾದಿಯಾಗಿದ್ದೀಯಾಗಲಿ ಪ್ರಜ್ಞಾವಿದನಾಗಿಲ್ಲ (ಛಾರಿಕ. ೦೦೩). [ಸಂ. ಪ್ರಜ್ಞಾವಾದಿನ್]

**ಪ್ರಜ್ಞಾಶೂನ್ಯ** (ನಾ). ೧. ಬುದ್ಧಿಗೇಡಿ; ಅಜ್ಞ. ೨. ಮೈಮನಸ್ಸುಗಳ ಮೇಲೆ ಅರಿವು ಇಲ್ಲದ ವ್ಯಕ್ತಿ; ಮೂರ್ಛಾವಸ್ಥೆಯಲ್ಲಿರುವವನು: ರಸ್ತೆಯ ಅಪಘಾತದಲ್ಲಿ ಪ್ರಜ್ಞಾಶೂನ್ಯನಾದವನನ್ನು ಆಸ್ಪತ್ರೆಗೆ ಸಾಗಿಸಿದರು (ಲೂಕ). [ಸಂ.]

**ಪ್ರಜ್ಞಾಸ್ತ್ರ** (ನಾ). ಮೂರ್ಛೆಗೊಂಡವರನ್ನು ಎಚ್ಚರಗೊಳಿಸುವ ಒಂದು ಬಗೆಯ ಮಂತ್ರಾಸ್ತ್ರ: ವಿಭೀಷಣನು ಬಂದು ಅವರನ್ನು ಪ್ರಜ್ಞಾಸ್ತ್ರದಿಂದ ಎಚ್ಚರಗೊಳಿಸಿದನು (ಚಕಥಾ. ೯೦೦). [ಸಂ].

**ಪ್ರಜ್ಞಾಹೀನ** (ನಾ). ೧.=ಪ್ರಜ್ಞಾಶೂನ್ಯ ೧. ೨.=ಪ್ರಜ್ಞಾಶೂನ್ಯ ೨: ತೀವ್ರವಾದ ಜ್ವರದಿಂದ ಅವನು ಪ್ರಜ್ಞಾಹೀನನಾಗಿದ್ದಾನೆ (ಲೂಕ). [ಸಂ.]

**ಪ್ರಜ್ಞಾಹೀನತೆ** (ನಾ). ೧. ಬುದ್ಧಿಯಿಲ್ಲದಿರುವಿಕೆ; ದಡ್ಡತನ; ಅಜ್ಞತೆ: ಪ್ರಜ್ಞಾಹೀನತೆಯಿಂದ ಮೆಜಿಸಿದ ಸಂಬಂಧ ನೀ[ಉ] ಮಾಡಿದ ಶಿಕ್ಷೆಗಳಿಗೊಳಗಾಗಿ . . . ನಾಲು ನೂರು ಜನಸಮಯಕ್ಕೆ . . . ಸಲ್ಲವೆಂದು ಕೊಟ್ಟ ಜಯಪತ್ರಿಕೆ (ಎಪಿಇ. XX. ೩೯೦-೯: 1688). ೨. ಮೈಮನಸ್ಸುಗಳ ಮೇಲೆ ಅರಿವು ಇಲ್ಲದ ಸ್ಥಿತಿ; ಮೂರ್ಛಾವಸ್ಥೆ. [ಸಂ. ಪ್ರಜ್ಞಾಹೀನತಾ]

**ಪ್ರಜ್ಞು** (ನಾ). ಕಿಸುಗಾಲು ಹಾಕುವವನು: "ಪ್ರಜ್ಞುಃ, ಪ್ರಗತ ಜಾನುಕಃ, ಒಂದಕ್ಕೊಂದು ದೂರವಾಗಿ ಅಗಲವಾದ ಮೊಳಕಾಲುಗಳುಳ್ಳವನ ಹೆಸರು, ಕಿಸುಗಾಲವನು" (ಸಿದ್ಧಾಂತಿ.೦೪೦). [ಸಂ.]

**ಪ್ರಜ್ಞೆ** (ನಾ). ೧. ತಿಳಿವಳಿಕೆ; ಅರಿವು; ಬುದ್ಧಿ: "ಸಂಖ್ಯಾ ರುಚಿಮತಿ ಪ್ರಜ್ಞೆ ಮೇಧೆ ಸಂವಿತ್ತುಮುಪಲಬ್ಧಿಯೆನೆ ಬುದ್ಧಿಯಕ್ಕುಂ" (ಮಂಗರಾ. ೬೬-೨); ಮಾಯವಾದತ್ತುಳಿದುದನಿತುಮುಂ ಪ್ರಜ್ಞೆಯಿಂ ಜಗುಳ್ದು ಬಯಲುವೊಂದಿ (ಶ್ರೀಣಾಚಾ. ೦೭-೪೪೩); ಓದುಗನ ಪ್ರಜ್ಞೆಯಲ್ಲಿ ಮೂಲದರ್ಶನವನ್ನು ಸ್ಫುರಿಸಲೆಂದೇ ಕಲಾಕೃತಿಯಲ್ಲಿ ಇಂತಹ ಬಗೆಬಗೆಯ ಹೊಂಚನ್ನು ಹಾಕಿರುತ್ತದೆ (ಕವಿಕಾ. ೦ ಪೀಠಿಕೆ). ೨. ಪ್ರತಿಭೆ. ೩. ವಿವೇಕ; ವಿವೇಚನೆ. ೪. ಪೂರ್ವಸಂಸ್ಕಾರ; ವಾಸನೆ. ೫. ಭಾವನೆ; ಚಿತ್ತವೃತ್ತಿ. ೬. ಮೈ, ಮನಸ್ಸುಗಳ ಮೇಲಿನ ಎಚ್ಚರ,– ಅರಿವು: ಅಪಘಾತದಲ್ಲಿ ತಲೆಗೆ ಏಟು ಬಿದ್ದು ಅವನಿಗೆ ಪ್ರಜ್ಞೆ ತಪ್ಪಿದೆ (ಲೂಕ). ೭. ಒಂದು ನಿರ್ದಿಷ್ಟವಾದ ಶಕ್ತಿ. ೮. ಸರಸ್ವತಿ. ೯. ತಿಳಿವಳಿಕೆಯುಳ್ಳ ಹೆಂಗಸು. ೧೦. [ಬೌದ್ಧ] ಬೌದ್ಧರ ಪ್ರಧಾನದೇವತೆ; ತಾರಾದೇವಿ: ಈ ಶಾಸನದಲ್ಲಿ ತಾರಾಭಗವತಿಯನ್ನು 'ಪ್ರಜ್ಞಾ' ಎಂದೂ 'ಬೋಧಿಸ್ವರೂಪ' ಎಂದೂ ಕರೆದಿರುವುದರ ಔಚಿತ್ಯವನ್ನು ಕಾಣಬಹುದು (ಕಶಾಅ. ೬೨೨). ೧೧. ಪಾರಮಾರ್ಥಿಕವಾದ ಜ್ಞಾನ. [ಸಂ. ಪ್ರಜ್ಞಾ]

**ಪ್ರಜ್ವಲ, ಪ್ರಜ್ವಳ** (ಗು). ೧. ಚೆನ್ನಾಗಿ ಉರಿಯುವ; ಧಗಧಗಿಸುವ. ೨. ಹೆಚ್ಚಾಗಿ ಪ್ರಕಾಶಿಸುವ. (ನಾ). ೩. ಚೆನ್ನಾಗಿ ಉರಿಯುವುದು; ಧಗಧಗಿಸುವುದು. ೪. ಹೆಚ್ಚಾಗಿ ಪ್ರಕಾಶಿಸುವುದು; ಉಜ್ವಲವಾಗಿರುವುದು. ೫. ಬೆಳಕು; ಪ್ರಕಾಶ; ದೀಪ್ತಿ. ೬. [ಜೈನ] ಒಂದು ನರಕಬಿಲದ ಹೆಸರು: ವಾಲುಕಾ ಪ್ರಭೆಯೊಳ್ ತಪ್ತತಪಿತ ತಪನ ತಾಪನ ವಿತಾನ ಉಜ್ವಲ ಪ್ರಜ್ವಲ . . . ಪ್ರಕೀರ್ಣಕವಿಕಲ್ಪದಿಂ ಪಂಚದಶಲಕ್ಷಬಿಲಂಗಳಪ್ಪುವು (ತತ್ತ್ವಸೂ. ೦೨೦). **ಪ್ರಜ್ವಳ**: ೩. ಪ್ರಜ್ವಳಮಾಯ್ತು ಪಚ್ಚ ಹಿಮಗಂಧೋದ್ಗಾರಿಯಾಯ್ತೊಂದು ಗಾಳಿ (ಕೃಷ್ಣಕು. ೦೦-೩). [ಸಂ.]

**ಪ್ರಜ್ವಲನ** (ನಾ). ೧. ಚೆನ್ನಾಗಿ ಉರಿಯುವುದು,– ಜ್ವಲಿಸುವುದು. ೨. ಪ್ರಕಾಶಿಸುವುದು. [ಸಂ.]

**ಪ್ರಜ್ವಲಿತ** (ಗು). ೧. ಹೆಚ್ಚಾಗಿ ಉರಿಯುವ,– ಜ್ವಲಿಸುವ. ೨. ಪ್ರಕಾಶಿಸುವ; ಉಜ್ವಲವಾದ: ಪರಮಜ್ಞಾನ ಪ್ರಕಾಶಜ್ಞಾನ ಪ್ರಜ್ವಲಿತಜ್ಞಾನ ಪ್ರಭಾಮಜ್ಞಾನ (ಅಕಬಶೂ.೪. ೦೫೬-೨೦೦). (ನಾ). ೩. ಪ್ರಕಾಶಿಸುವುದು; ಉಜ್ವಲವಾಗಿರುವುದು: ಸವಿತೃವಿನ ತೇಜಸ್ಸು ಪ್ರಜ್ವಲಿತವಾಗಿದೆ (ಹುಚ್ಚಾಕ. ೨೬೯). [ಸಂ.]

**ಪ್ರಜ್ವಲಿಸು, ಪ್ರಜ್ವಳಿಸು** (ಕ್ರಿ). ೧. (ಬೆಂಕಿಯು) ಚೆನ್ನಾಗಿ ಉರಿ; ಧಗಧಗಿಸು: ಆ ಅಸ್ತ್ರವು ಖಾಂಡವವನಮಂ ದಹಿಸುವ ಅಗ್ನಿಯಂತೆ ಪ್ರಜ್ವಲಿಸುತ ಬಾಪದಿಂ ಹೊರದುತ್ತಿರಲು (ತತ್ವಾಂ೦.೨೪೬-೬); ಕಳೆದ ನೆನಪಿನ ಒಡಲು ಅಗ್ನಿಕುಂಡವದಿಹುದು ಪ್ರಜ್ವಲಿಸಬಹುದೊಮ್ಮೆ ಬೂದಿ ಹಾರಿ (ಚಿಚಾತ. ೩೯-೯); ಘೃತದ ಧಾರೆಗಳು ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುತ್ತವೆ (ಹುಚ್ಚಾಕ. ೨೦೦). ೨. ಹೊಳೆ; ಪ್ರಕಾಶಿಸು: ಬಾಲಾರ್ಕನಂತೆ ಪ್ರಜ್ವಲಿಸುವ ರತ್ನದ ಬೆಳಗಂ ಕಂಡು ಕಳಕಳರವಮಂ ಮಾಡುವುದಂ (ಕರ್ಣಾಮ್ನು. ೬-೯೬); ನಾಸಿಕಾಗ್ರಭ್ರೂನಿಟಿಲಮಧ್ಯದೊಳ್ ಪ್ರಜ್ವಲಿಸಿ ಬೆಳಗುವ ಸ್ವಯಂಪ್ರಕಾಶಲಿಂಗಕ್ಕೆ . . . ಅಷ್ಟವಿಧಾರ್ಚನೆಯಿಂದರ್ಚಿಸಿ (ಅರಥ. ೨೬-೬೪); ಪ್ರಜ್ವಲಿಸುತ್ತಿರುವ ಆ ನೀಲೀವರ್ಣಜಾಲದಲ್ಲಿ ಪವಪಕಳಾದಲು ಆ ಊರ್ಮಿಳೆ (ಚೂಗು. ೪೩). ೩. (ದೀಪವು) ಹೆಚ್ಚು ಬೆಳಕನ್ನು ಬೀರುತ್ತಾ ಉರಿ,– ಪ್ರಕಾಶಮಾನವಾಗಿ ಬೆಳಗು: ಕಲಬಲದ ದೀವಿಗೆಗಳುಂ ಪ್ರಜ್ವಲಿಸದಿದ್ದುವೊ (ಐಕಥ. ೯೬-೦೭). ೪. ಕಳೆಯೇರು; ಕಾಂತಿಯುಕ್ತವಾಗು: ಹುಸಿನಗೆಯಿಂದ ವದನವು ಪ್ರಜ್ವಲಿಸಿತು (ಕೆಂಗಾಳ. ೦೨೨). ೫. (ಅಲಂ) ಉಲ್ಬಣವಾಗು; ಕ್ಷೋಭೆಗೊಳಗಾಗು: ಜನರಲ್ಲಿ ಕ್ರಾಂತಿಯ ಬೇಗೆ ಕುದಿಯುತ್ತಿತ್ತು. ಅದು ಯಾವ ಗಳಿಗೆಯಲ್ಲಿ ಯಾವ ರೂಪದಿಂದ ಹೊರಬಿದ್ದು ಪ್ರಜ್ವಲಿಸುವುದೋ ಎಂಬ ಭೀತಿ ಎಲ್ಲರಲ್ಲಿಯೂ ಇದ್ದಿತು (ರಾಜಪ. ೪೬). **ಪ್ರಜ್ವಳಿಸು**: ೬. ಪ್ರಕಾಶಗೊಳಿಸು; ಪ್ರಸಿದ್ಧಪಡಿಸು: ವೀರಲಕ್ಷ್ಮೀನಿವಾಸಂ ಧರಣೀಸಂಕೀರ್ತ್ತಿಯಂ ಪ್ರಜ್ವಳಿಸಿದ ವಿನಯಾದಿತ್ಯನಾದಿತ್ಯತೇಜಂ (ಎಕ. V. ಅರಸೀ. ೦೬೬-೪; ಸು. 1060). [ಪ್ರಜ್ವಲನ+–ಇಸು]

**ಪ್ರಜ್ವಲ್ಯ** (ನಾ). ಹೊಳಪು; ಕಾಂತಿ; ಪ್ರಕಾಶ: ವಿಚಿತ್ರಕನಕಪ್ರಜ್ವಲ್ಯ ದಿಸ್ಸಿಕ್ಕುದಾನ್ ಸಾಸಿರ್ವ್ವರಪೂಜಿದನ್ನುಯೆ ಅವರ್ ಸ್ವರ್ಗ್ಗಾಗ್ರ ಮಾನೇಖಿದಾರ್ (ಎಕ. II. ೨೬-೨; ಸು. 700). [ಸಂ.]

**ಪ್ರಜ್ವಳ** 'ಪ್ರಜ್ವಲ' ನೋ.

**ಪ್ರಜ್ವಳಿಸು** 'ಪ್ರಜ್ವಲಿಸು' ನೋ.

**ಪ್ರಡೀನ** (ನಾ). (ಪಕ್ಷಿ ಮುಂತಾದುವು) ಹಾರುವಿಕೆ: "ಉಡ್ಡೀನಂ ಪ್ರಡೀನಂ ಪಕ್ಷಿಗಳ ಗತಿಯಕ್ಕು" (ಮಂಗರಾ. ೩೦-೨). [ಸಂ.]

**ಪ್ರಣತ** (ಗು). ೧. ಬಾಗಿರುವ; ಬಗ್ಗಿರುವ. ೨. ಎರಗುತ್ತಿರುವ; ನಮಸ್ಕರಿಸುತ್ತಿರುವ: ಪ್ರಣತರಿಪುನೃಪತಿಚೂಡಾಮಣಿರಂಜಿತಪಾದಸರಿಸತ್ವಗುಣೈಕಾಗ್ರಣಿಗಾ ನೃಪಂಗೆ ಮನದೊಳ್ ತೃಣವಲ್ಲವುಬಾದುದಾವಗಂ ಸ್ತ್ರೈಣಸುಖಂ (ಕಾದಂಪೂ. ೦೯); ಪ್ರಣತಕ್ಷತ್ರಿಯಪುತ್ರರಂ ಸಚಿವರಂ . . . ರಾಗದಿಂ ಕಟಿಪಿದಂ ಶ್ರೀರಾಜಕಂಠೀರವಂ (ಕೃಷ್ಣಕು. ೬-೨೦). ೩. ವಿಧೇಯವಾದ; ವಿನೀತವಾದ. ೪. ಚಾತುರ್ಯದಿಂದ ಕೂಡಿದ; ಬುದ್ಧಿಯುಳ್ಳ. (ನಾ). ೫. ನಮಸ್ಕರಿಸಿದವನು: ರಾಜೇಂದ್ರಚಂದ್ರ . . . ಮಾತಾಪಿತೃಗಳಲ್ಲಿಗೆ ವಂದು ತತ್ಪಾದಪ್ರಣತನಾಗಿ ಕದೀಯಾಶೀರ್ವಾದಶತಸಹಸ್ರಂಗಳಂ ತಲೆಯೊಳಾಂತು (ಕಾದಂಪೂ. ೬೦೩). ೬. ವಿನೀತ; ವಿಧೇಯ: ಪ್ರಣತನಿಚಯಚೇತಶ್ಚಾತಕಕ್ಕೀಗೆ ಬೇಗಂ ತಣಿಮಂ. . .ಗಣಧರವಿಭುದತ್ತಂ (ಕಂತ್ರಕು. ೦-೬); ಪ್ರಣತನಿಕುರುಂಬ

ರಕ್ಷಾಮಣಿಯನಿಪಾ ನಾಯನಾರವಮಾಹೇಶಂಗಂ ಗಣಪದವನಿತ್ತು ಮೆಚ್ಚಿದತಿ ಗುಣನಿಧಿ ಸೋಮೇಶನೊಲ್ದು ಪಾಲಿಕೆ ನಮ್ಮಂ (ಶ್ರೀಶೃಂ. ೦೩-೦). ೭. ಚತುರ ; ಬುದ್ಧಿವಂತ. [ಸಂ.]

**ಪ್ರಣತಾರಾತಿ** (ನಾ). ನಮಸ್ಕರಿಸುತ್ತಿರುವ ಶತ್ರುರಾಜರನ್ನುಳ್ಳವನು; ಪರಾಕ್ರಮಿ : ಪ್ರಣತಾರಾತಿ ಧ ನು ಗ: ಕ ಣ ಕಿಣೀಕೃತೋದ್ಧೃತ್ತಕೋಷ್ಠ ನನುಪಮಧೈರ್ಯಂ . . . ಎನೆ ನೆಗಟ್ದ ನೃಪಂ (ಕೂಶಕಂ. ೩೦೮-೩೦೨). [ ಸಂ. ]

**ಪ್ರಣತಾರಿ** (ನಾ). = ಪ್ರಣತಾರಾತಿ: ಪ್ರಣತಾರಿ[ಘ]ಟಿತಮುಕ್ತಾ [ಮಣಿಗಣಮು]ತ್ತಂಸದಿಂ ಕಟಲ್ವುದರೆ ಸಭಾಂಗಣಮೊಪ್ಪೆ (೪೦ಠಾ. ೩-೦೬೦); ಈಯೊಳ್ಗುಣಮುಂ ಕಲಿತನಮುಮಿವೇಂ ಪ್ರಣತಾರೀ ಸೂತಸುತನೊಳೊಡವುಟ್ಟುಗುಮೋ (ಕಂಕಠಾ. ೦೨-೯೬). [ಸಂ.]

**ಪ್ರಣತಿ₁** 'ಪಣತೆ' ನೋ.

**ಪ್ರಣತಿ₂** (ನಾ). ೧. ಬಗ್ಗುವಿಕೆ ; ಬಾಗುವಿಕೆ. ೨. ನಮಸ್ಕಾರ; ವಂದನೆ : "ಪ್ರಣಿಪಾತಮನುನಯಾ ಪ್ರಣತಿಯೆಂದನೆ ಸಂತವಣೆಯಕ್ಕುಂ" (ಶಬ್ದಮ. ೦೩೯-೩೩) ; ಕಲಶೋದ್ಧಾರಮಂತ್ರಪೂರ್ವಕಂ ಪ್ರಣತಿ [ಪಾಠಾಂ. ವ.ಯ]ಪ್ರಸ್ತಾವನಾಪುರಸ್ಸರಂ ಮಾಡಿ ಪ್ರಥಮಕಲ್ಪೇಶ್ವರನುಮಿಶಾನೇಂದ್ರ ನುಮತ್ರಿಕೊಳೆ (ಆದಿಪು. ೬-೬೦ ವ); ವೃದ್ಧಸೇವೆ ಯಾನಂ ತ್ರಿಜಗದ್ಗುರು ಪ್ರಣತಿಯೆಂಬಿವನಾಗಳುಮೊಂದೆ ಕೀಲ ದಲ್ ಜಂತ್ರದ ಪಾಪೆಯಂತೊಡ ನೊಡರ್ಚುವನಿಂದ್ರನುಮಾ ಪ್ರತೀಂದ್ರನುಂ (ಶಾಂತಿಪು ೬-೦೦೦); ನೆರೆದ ಶರಣ ಗಣಂಗಳ ಶ್ರೀಪಾದಂಗಳಿಗೆ ಪ್ರಣತಿಗಳನ್ನು ಸಮರ್ಪಿಸಿ ಶರಣದಂಪತಿಗಳು . . . ನಿರ್ವಯಲನೈದಿದರು (ಮೋಳಿತಾ. ೬೩ ಕ್ರ ಶ್ರ ಪಾ). ೩. ವಿನಯ : ನಮ್ರತೆ. [ ಸಂ. ]

**ಪ್ರಣತೆ** ' ಪಣತೆ ' ನೋ.

**ಪ್ರಣಮ** (ನಾ). ವೇದಮಂತ್ರಗಳ ಆರಂಭದಲ್ಲಿ ಸೇರಿಸುವ ಪವಿತ್ರವಾದ ಬೀಜಾಕ್ಷರ; ಓಂಕಾರ · ಪ್ರಣವ : ಇಂತಪ್ಪ ಮಹಾಪ್ರಣಮಂ ಗಳೇ ಬಸವಣ್ಣನಾಗಿ ಆ ಬಸವಣ್ಣನೆ ಮಹಾಪ್ರಣಮಂಗಳಾಗಿ ತನ್ನ ಮಠಕ್ಕೆ ತಾನೆ ಬಂದು ಭಕ್ತಿವಸ್ತುವನಿತ್ತಡೆ (ಮೋಳಿಪು. ೨೦-೬೦); ಪ್ರಣ ಮೋಚಿತಕಲಶೋದ್ಧಾರಣಮಂತ್ರದಿನಿಂದ್ರರಿರ್ವರುಂ ಕಲಶೋದ್ಧಾರಣಮಂ ಸ್ವಚಿತ್ತವಸತಿಗೆ ಮಣಿಕಲಶಮನಿಡುವ ತೆಜದೆ ಮಾಡಿದರೊಲವಿಂ (ಪಾರ್ಶ್ವಪು. ೦೪-೬೩); ಆ ಸಿಂಹಾಸನದಗ್ರದಲ್ಲಿ ಗುಣತ್ರಯಾತೀತನಾದ ಪ್ರಣಮದರ್ಥವಾದ . . . ಮಹೇಶ್ವರನೊಪ್ಪುತ್ತಿರಲಾಗಿ (ಕೈರಷ. I. ೦೭). [ < ಸಂ. ಪ್ರಣವ ]

**ಪ್ರಣಮನ** (ನಾ). ನಮಸ್ಕಾರ; ವಂದನೆ: ಗಣಧರಾದಿ ಮುನಿ ಸಮುದಾಯಕ್ಕೆ ಅಭ್ಯುತ್ಥಾನಮುಂ ಅಭಿಮುಖಗಮನಮುಂ ಅಂಜಲಿ ಕರಣಮುಂ ಪ್ರಣಮನಮುಂ . . . ಪರೋಕ್ಷೋಪಚಾರವಿನಯಮಕ್ಕುಂ (ಕತ್ವಸ್ರ. ೩೯೩). [ ಸಂ. ]

**ಪ್ರಣಮಪಂಚಾಕ್ಷರಿ** (ನಾ). ಓಂಕಾರವೆಂಬ ಬೀಜಾಕ್ಷರದಿಂದ ಕೂಡಿದ ಪಂಚಾಕ್ಷರೀಮಂತ್ರ; ಓನಮಃಶಿವಾಯ ಎಂಬ ಮಂತ್ರ: ಪ್ರಣಮ[ಪಾಠಾಂ. ವ] ಪಂಚಾಕ್ಷರಿಯ ಜಪಿಸಿಹೆನೆಂದು ತನುವ ಮಜೆದು ನಿಜಮುಗ್ಧಾದೆನಯ್ಯ (೦೦ಗಪ. ೪. ೭೮-೬೩). [ಪ್ರಣಮ + ಪಂಚಾಕ್ಷರಿ ]

**ಪ್ರಣಮಮೂಲ** (ನಾ). ಓಂಕಾರವನ್ನೆ ತಳಹದಿಯಾಗಿ ಹೊಂದಿ ಪ್ರತಿಪಾದಿತನಾಗುವವನು ; ಪರಮಾತ್ಮ : ತ್ರಿಪುರಕೋಲಾಹಲ ಪ್ರಣಮಮೂಲ (ಶೀಕೃತು. ೬-೦೩-೦). [ಪ್ರಣಮ + ಮೂಲ]

**ಪ್ರಣಯ** (ನಾ). ೧. ಸ್ತ್ರೀಪುರುಷರಲ್ಲಿ ಪರಸ್ಪರವಾಗಿರುವ ನಲ್ಮೆ ; ಗಂಡು ಹೆಣ್ಣಿನ ಅನುರಾಗ : ಅವತಂಸೋತ್ಪಲತಾಡನಂ . . . ತರಳಿತ ತಾಮ್ರಾಧರಂ ಚಕ್ರಿಗಿತ್ತುಮಲಂಪಂ ಪ್ರಣಯಪ್ರಕೋಪಸುರತಪ್ರಾರಂಭ ದೊಳ್ ಕಾಂತೆಯಾ (ಆದಿಪು. ೦೨-೪೭); ಪ್ರಣಯದಿನಾದ ಹೋರಟೆಯೆ ಹೋರಟೆ ಮಾಣ್ದೊಡೆ ಕೂಟದೊಳ್ ಮನಂ ತಣಿಯುದದೊಂದು ಕೋಟಲೆಯೆ (ಚಂದ್ರಪು. ೬-೩೪); ಸೆಣಸುವ ಮಹೀಶರಮೌಳಿಮಣಿಕಿರಣ ಓಲಗಿಸಿತು ಪ್ರಣಯದಮರೀಬಾಲೆಯರ ಪದನಖವನು (ಕುವ್ಯಾಆ. ४-३). ೨. ವಿನಯ; ವಿಧೇಯತೆ: ದೇವಿ ನೀಂ . . . ಪ್ರಣಯಗರ್ಭಭಕ್ತಿ ಯುತೆಯುಂ . . . ಮಹತ್ತ್ವಮಂ ಪಡೆದೆಯೆಂದಮರಸಮುದಯಂ . . . ಸ್ತುತಿಗೆಯ್ದು ಪೋಗೆ (ಜಗು. ೨-೯೬ ವ). ೩. ದಯೆ; ಕರುಣೆ; ಕನಿಕರ. ೪. ಬೇಡಿಕೆ: "ಪ್ರಣಯಃ . . . ನಂಬಿಕೆ, ಯಾಚನೆ, ಪ್ರೇಮ" (ನಿಘಂ೦ಶಿ. ೪೦೯). ೫. ಸಂತೋಷ ; ಆನಂದ : ಕಳರ್ದಂದುಗ್ರರಣಾಗ್ರಹಪ್ರಣಯ ದಿಂದಾಗಳ್ ಕುರುಕ್ಷೇತ್ರಮಂ ಕಳವೇಟ್ದು (ಕಂಕಪಾ. ೧-೭೪) ; ಘೋಪತಿಗಮ ಮರಪತಿಗಂ ಪ್ರಣಯಪ್ರದಮಪ್ಪ ಪಿರಿಯ ಸಿರಿಯಂ ದೇವರ್ ತೃಣಮಾತ್ರ ಮಾಗಿ ಬಗೆವೊಡಮಣುಗುಣರಿದನೆಮ್ಮವಾದಿಗರ್ತಾಳ್ದುವರೇ (ಶಾಬ್ದಿಕ. ೪-೯೧); ಪ್ರಣಯಾಲಂಬವಿಧಾಯನರ್ತನವಿಧಂ ಕರ್ಣಾಮೃತಂ ಘರ್ಘರೀ ಕ್ವಣಿತಂ (ಅಜಿತಪು. ೩-೯೬). ೬. ಗಾಢವಾದ ಆಪ್ತತೆ, –ಸ್ನೇಹ: ಗುಣಮಿದು ದೋಷವಿದೆಂಬೀ ಗಣನೆಯನೆತ್ತಱಿಗುಮಶ್ರುತಪ್ರಕೃತಿಜನಂ ತೃಣಸಸ್ಯಘಾಸವಿಷಯಪ್ರಣಯಂ ಸಮಪ್ರಕೃತಿಯಪ್ಪವೋಲ್ ಮೃಗಗಣ ದೊಳ್ (೪೦ಠಾ. ೦-೬); ಪ್ರಣಯಮಿದನನ್ಯಸಾಧಾರಣಮೆನಿಪ ಭವತ್ಪ್ರಸಾದ ಮೆಂಬ ಮೃತದಿನಾಂ ತಣಿದೆಂ (ಆದಿಪು.೪-೩೦). ೭. ವಾತ್ಸಲ್ಯ; ಮಮತೆ: ಪ್ರಣಯಪಚೋವಿಲಾಸಮಣಪಲ್ಲು ದಿಟಕ್ಕೆ ಮಿಱಿಂಪಂದು ದಕ್ಷಿಣ ಭುಜಮಲ್ತೆ ನೀನೆನಗೆ (ಚಂದ್ರಪು. ४-೦೪); ತರುಣಿ ಕಾರಂದೀಶ್ವರಂ ಪಾತ್ರೆಯಂ ಪ್ರಣಯದಿನೀಳ್ದುಕೊಳ್ಳುತ್ತುಂ ಫಣಿಕಟಕಂ ಸವಿದು ಪುಲ್ಲಿಯಂ ಬಟ್ಟಲನಂಗಣಕಿಟ್ಟಂ (ವೃಷಾ. ೨೨-೦೪). ೮. ದೇವರು, ಗುರುಹಿರಿಯರಲ್ಲಿ ತೋರುವ ಅತಿಶಯವಾದ ಗೌರವ ; ಭಕ್ತಿ : ಪ್ರಣಯಂ ಕೈಮಿಗೆ . . . ಪೊಡೆವಟ್ಟಂ ರಾಜರಾಜಚೈರೋಮಣಿ ವಿಶ್ವಂಭರನಾ ತ್ರಿಲೋಕವಿಭು ವಿಶ್ವೇಶಂಗೆ ಸದ್ಭಕ್ತಿಯಿಂ (ಕುಸುಮಾ. ೦೩-೦೪೪); ಪ್ರಣಯಂ ಕೆಯ್ಗಣ್ಮಿರಲ್ ಕಣ್ಮಲರೊಳಲಸದಾನಂದವಾರ್ಬಿಂದುಗಳ್ ಸಂದಣಿಸಲ್ ಸೌರಂಭದಿಂ ವಂದಿಸಿ ಮುನಿಪತಿಯಂ (ಧರ್ಮಪಾ. ४-೦೨೨). ೯. ಮನಸ್ಸು ನಿರ್ಮಲವಾಗಿರುವುದು: '' ಪ್ರಸಾದಂ ಪ್ರಣಯಂ '' (ಶಬ್ದಕೋ. ೦೦೩-೦೭); ''ಪ್ರಣಯಂ ಪ್ರಸಾದವೆನೆ ತಿಳಿವಕ್ಕು'' (ಶಬ್ದಮ. ೮೩೯-೩೩). ೧೦. ಮುಂದಾಳು; ಮುಖಂಡ; ನಾಯಕ. ೧೧. ಮಾರ್ಗದರ್ಶನ ; ನೇತೃತ್ವ. ೧೨. ಮುಕ್ತಿ : ಮೋಕ್ಷ. [ಸಂ.]

**ಪ್ರಣಯಕಲಹ** (ನಾ). (ಪ್ರೇಮಿಗಳು) ಪ್ರೀತಿಗಾಗಿ ಮಾಡುವ ಹುಸಿಜಗಳ : ಒಂದೆಡೆಯೊಳೊರ್ವಂ ಪ್ರಣಯಕಲಹಕಲುಷಿತೆಯಾದ ವಲ್ಲಭೆಯ ನಿರ್ಭರಪ್ರೇಮಭರದಿನೆಱಗಿದ ನಿಜಸಖನ ಸೌಭಾಗ್ಯಮನೆ ಕೊಂಡು ಕೊನೆದು (ಪುಲ್ಲಿಪು. ೬-೬೫); ಪರವೆಗೆ ನಂಬಿಗೆ ಪಲವುಕಾಲದಗಲ್ಕೆ ಪಯನಾಗಿ ಪ್ರಣಯಕಲಹಂ ಕಾಲೂಱೆ (ಪಂಪರ. ೦೭-೯೩). [ಸಂ.]

**ಪ್ರಣಯಕೇಲಿ, ಪ್ರಣಯಕೇಳಿ** (ನಾ). ಶೃಂಗಾರದ ಕ್ರೀಡೆ ; ಸುರತ ; ಸಂಭೋಗ: ಅದು ಪ್ರಣಯಕೇಲಿಯಲ್ಲ ಪ್ರಾಣಕಲಹ! (ಪುಂಚಿಪು. ೯೭). **ಪ್ರಣಯಕೇಳಿ:** ದೇವಕೀದೇವಿ . . . ಬಹುವಿಧಪ್ರಣಯಕೇಳೀಕಳಾವಿಡಂಬ ಸಂಭೋಗಸುಖಸುಧಾರಸತೃಪ್ತಿಯಿಂ ಸುಖಸುಪ್ತೆಯಾಗಿರ್ಪನಂ (ಜಗು. ೨-೩೯ ವ). [ಸಂ.]

**ಪ್ರಣಯಕೇಳಿ** 'ಪ್ರಣಯಕೇಲಿ' ನೋ.

**ಪ್ರಣಯಚೇಷ್ಟೆ** (ನಾ). (ಪ್ರೇಮಿಗಳು) ಪ್ರೀತಿಯಲ್ಲಿ ಮಾಡುವ ಆಂಗಿಕವಾದ ಚಲನವಲನ ಮುಂತಾದುವು: ಅವನ ವಿದ್ಯತ್ಪ್ರಕಾಶನವೂ, ವಿಧವೆಯೂ ದಾಸಿಯೂ ಆದ ಅಶ್ವನಿಯೊಡನೆ ಪ್ರಣಯಚೇಷ್ಟೆಯೂ ತುಂಬ ಆಭಾಸವಾಗಿವೆ ( ಬಂಕಿಮ. ೦೫೫ ); ಆಗಾಗ್ಗೆ ತನ್ನ ದೃಷ್ಟಿಪಥಕ್ಕೆ

ಬೀಳುತ್ತಿದ್ದ ಪುರುಷರ ಪ್ರಣಯಚೇಷ್ಟೆಗಳಿಂದ ಅವಳ ಹೃದಯ ತಲ್ಲಣಿಸುತ್ತಿತ್ತು (ಕೃಕಹ. ೧೮೬). [ಸಂ. ಪ್ರಣಯ ಚೇಷ್ಟಾ]

**ಪ್ರಣಯದೌತ್ಯ** (ನಾ). ಒಬ್ಬರ ಅನುರಾಗವನ್ನು ಮತ್ತೊಬ್ಬರಿಗೆ ತಿಳಿಸುವ ಮಧ್ಯಸ್ಥಿಕೆ,–ದೂತಭಾವ : ದಮಯಂತಿಯ ಬಗೆಗೆ ತನಗಿದ್ದ ಪ್ರೀತಿಯನ್ನೂ ಅವರಿಗಾಗಿ ಬದಿಗೊತ್ತಿ ಅವರ ಪರವಾಗಿ ಪ್ರಣಯದೌತ್ಯವನ್ನು ವಹಿಸುವಂಥ ಮನಃಸ್ಥೈರ್ಯ ಅವನಲ್ಲಿದೆ (ಹಂಸ. ೦೦೮). [ಸಂ.]

**ಪ್ರಣಯಪ್ರಸಂಗ** (ನಾ). ಪ್ರೇಮದ ಘಟನೆ : ಕತ್ತಲೆಯಲ್ಲಿ ಹಳ್ಳಿಯ ದಾರಿಯಲ್ಲಿ ಪ್ರಣಯಪ್ರಸಂಗ ನಡೆಯುತ್ತದೆ ಎಂಬ ಕಲ್ಪನೆಯೂ ಅವರಿಗಿರಲಿಲ್ಲ (ಚಕ್ರಸ. ೦೬೮). [ಸಂ.]

**ಪ್ರಣಯಭಿಕ್ಷೆ** (ನಾ). ಪ್ರೇಮವನ್ನು ನೀಡುವುದು : ಪ್ರೀತಿಯ ದಾನ : ವೀರ ಅರ್ಜುನದೇವ, ಅವಂಚಿತೆಯಾದಡಂ ನಿನ್ನ ಪ್ರೇಯಸಿ ನಾನು ಪ್ರಣಯಭಿಕ್ಷೆಯ ಬೇಡಿ ಬಂದೆ ನಾಂ (ಚಿತ್ರಾಂಗ. ೨೮-೬೪೦). [ಸಂ. ಪ್ರಣಯಭಿಕ್ಷಾ]

**ಪ್ರಣಯಾಲಂಬಿನಿ** (ನಾ). ವಾತ್ಸಲ್ಯವನ್ನು ಹೊಂದಿರುವವಳು; ಮಮತೆಯುಳ್ಳವಳು : ಪ್ರಣಯಾಲಂಬಿನಿಯಂತೆ ಪುತ್ರನ ಯಶೋದಾ ಕಾರದಿಂ ಬಂದು (ಜಗ. ೩-೨೯). [ಸಂ. ಪ್ರಣಯಾಲಂಬಿನೀ]

**ಪ್ರಣಯಿ** (ಗು). ೧. ಪ್ರೀತಿಯಿಂದಿರುವ ; ಅನುರಕ್ತನಾದ : ಪ್ರಣಯಿಃ ಜನಕ್ಕೆ ಕಾಮನಸಿತೋತ್ಪಲವರ್ಣ್ಣನವನ್ (ಎಶ. XI, ಚಿತ್ರದು. ೯೩-೩; ಸು. ೩೦೦ ೧). ೨. ವಿಶ್ವಾಸಪಾತ್ರನಾದ. ೩. ಮಮತೆಯುಳ್ಳ. (ನಾ). ೪. ಪ್ರೀತಿಯುಳ್ಳವನು ; ನಲ್ಲ ; ಕಾಂತ : ಉಪಮೆಗಳಲ್ಲಿ ಸುಂದರವಾದ ಯುವಕ. ಸುಂದರಳಾದ ಯುವತಿ, ಪ್ರಣಯಿ, ಪ್ರಣಯಿನಿ–ಇತ್ಯಾದಿ ಮಾತುಗಳು ಬರುತ್ತವೆ (ಸೌಂದಸ. ೦೦೦). ೫. ಗಂಡ : ಪತಿ : "ಪ್ರಭು ಪರಿವೃಢನೀಶಂ . . . ವಲ್ಲಭಂ ಪ್ರಿಯಂ ಪ್ರಣಯಿ ಕಾಂತನಿಷ್ಟಂ ದಯಿತಂ" (ಅಸ್ತುಕೋ. ೯೯-೯). [ಸಂ. ಪ್ರಣಯಿನ್]

**ಪ್ರಣಯಿನಿ** (ನಾ). ಪ್ರೀತಿಯುಳ್ಳವಳು ; ನಲ್ಲೆ ; ಕಾಂತೆ : ಪ್ರಣಯಿನ್ಯಾಸಕ್ತಿಯುಕ್ತಂ ಗಗನಗಹನಸದ್ಯುಕ್ತಿಯವ್ಯಕ್ತಮಲ್ತೇ (ಹಂಪ್ರತು. ೦-೬೯) ; ತನ್ನ ಪ್ರಣಯಿನಿಯ ವಿಷಯದಲ್ಲಿ 'ಈತಿಯು ಯೋಗ್ಯನಾದ ವರನಿಲ್ಲದೆ ಶೋಚನೀಯಳಾಗಿರುವಳು' ಎಂದು ಹೇಳುವುದು ಅಸಂಭವ (ಕೃಷ್ಣಾಕೋ. ೨೨೨) : ಉಪಮೆಗಳಲ್ಲಿ . . . ಪ್ರಣಯಿ, ಪ್ರಣಯಿನಿ ಇತ್ಯಾದಿ ಮಾತುಗಳು ಬರುತ್ತವೆ (ಸೌಂದಸ. ೦೦೦). ೨. ಹೆಂಡತಿ ; ಪತ್ನಿ. [ಸಂ. ಪ್ರಣಯಿನೀ]

**ಪ್ರಣವ** (ನಾ). ೧. ವೇದಮಂತ್ರಗಳ ಪ್ರಾರಂಭದಲ್ಲಿ ಸೇರಿಸುವ ಪವಿತ್ರವಾದ ಬೀಜಾಕ್ಷರ : ಓಂಕಾರ ; ಈ ಓಂಕಾರಕ್ಕೆ ಪ್ರಣವ ಅಥವಾ ಏಕಾಕ್ಷರ ಎಂಬ ಹೆಸರೂ ಇದೆ. ಓಂಕಾರದಲ್ಲಿ 'ಅ' 'ಉ' ಮತ್ತು 'ಮ್' ಎಂಬ ಮೂರು ಅಕ್ಷರಗಳ ಸಮ್ಮಿಲನವಿದೆ. 'ಅ' ಎನ್ನುವುದು ವೈಶ್ವಾನರ, 'ಉ' ಎನ್ನುವುದು ತೈಜಸ, 'ಮ್' ಎಂಬುದು ಪ್ರಜ್ಞ–ಇವುಗಳ ಸಮ್ಮಿಲನದಿಂದ ಓಂಕಾರ ಉಂಟಾಗುತ್ತದೆ ಎಂದು ನಂಬಲಾಗಿದೆ. ಬರಬರುತ್ತ ಇದು ಬ್ರಹ್ಮ, ವಿಷ್ಣು, ಮಹೇಶ್ವರರ ಕೂಟವನ್ನು ತಿಳಿಸುತ್ತದೆ: "ಓಂಕಾರಃ, ಪ್ರಣವಃ (ಪ್ಲೋಕ್ಷಃ)—ಈ ೨ ಓಂಕಾರಕ್ಕೆ ಪೆಸರ್" (ಚಠಾಯು. ೬-೮) ; ಪ್ರಣವೋಚ್ಚಾರಣಪೂರ್ವಪ್ರಣೀತನಾಂದೀಸ್ತವಂಗಳಂ . . . ಗಂಭೀರಪ್ರಣಾದದಿಂದೋದಿದರ್ ಮರುದ್ಗಣರಮಣರ್ (ಶರಕ್ಕೆ. ೦೯-೨೨); ಅಕಾರವೇ ನಾದ ಉಕಾರವೇ ಬಿಂದು ಮಕಾರವೇ ಕಳೆ ಇಂತೀ ತ್ರಿವಿಧಕ್ಕೆ ತಾಯಿ ಚಿತ್ತು ಇಂತೀ ನಾಲ್ಕು ಒಂದಾದಲ್ಲಿ ಓಂಕಾರವೆಂಬ ಪ್ರಣವ ಉತ್ಪತ್ತಿಯಾಯಿತ್ತು ಆ ಓಂಕಾರವೆಂಬ ಪ್ರಣವವೇ ಅಖಂಡಪರಿಪೂರ್ಣಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗ ನೋಡಾ (ಸಿದ್ಧೇಶ. ೦೦-೩೩); ಅಣುರೇಣು ಮಂದ್ಯದ ಪ್ರಣವದ ಬೀಜವನು ಅಣುವಿನೊಳಗಣುವೆಂದರಿದ ಮಹಾತ್ಮನು ಪ್ರಣಯ ತಾನಕ್ಕು (ಸರ್ವಜ್ಞ. ೩೦೩). ೨. ಒಂದಂ ಬಗೆಯ ವಾದ್ಯ. ೩. ಪರಮಾತ್ಮ : ಭಗವಂತ. ೪. ನವೀನವಾದುದು : 'ಪ್ರಣವೋತ್ಥ' ಪರಾ. [ಸಂ.]

**ಪ್ರಣವನ್ಯಾಸ** (ನಾ). ವೈದಿಕಮಂತ್ರಗಳನ್ನು ಪಠನಮಾಡುವುದಕ್ಕೆ ಮುಂಚೆ ಓಂಕಾರವನ್ನು ಉಚ್ಚರಿಸುವುದು : ಪ್ರತ್ಯೇಕಾಂಗುಳಿಗಳಲ್ಲಿಯೂ ಸಮುಚ್ಚೀಕರಿಸಿ ಪ್ರಣವನ್ಯಾಸಮಂ ಮಾಡುವುದು (ಅಶೀಳ. ೩೩). [ಸಂ.]

**ಪ್ರಣವಬೀಜ** (ನಾ). ಪ್ರಣವವೆಂಬ ಬೀಜಾಕ್ಷರ : ಓಂಕಾರ : ವಿಶ್ವಮಯನಾಗಿ ವಿಶ್ವಾಸಕ್ಕೆ ಒಡಲಾಗಿ ಪ್ರಣವಬೀಜವಾಗಿ ಉತ್ಪತ್ತಿ ಸ್ಥಿತಿ ಲಯಕ್ಕೆ ಕರ್ತರ ಕೊಟ್ಟು . . . ನಿನ್ನ ಲೀಲೆಗೆ ನೀನೇ ಹುಗಾದೆಯಲ್ಲಾ (ಕೋಶಮ. ೩೦-೨೦೦). [ಸಂ.]

**ಪ್ರಣವಮಂತ್ರ** (ನಾ). ಓಂಕಾರರೂಪವಾದ ಮಂತ್ರ : ಪಂಚಬ್ರಹ್ಮವ ಕಡಿಸಿತ್ತು ಪ್ರಣವಮಂತ್ರವನೀಡಾಡಿತ್ತಲ್ಲಾ . . . ಕೂಡಲಸಂಗಯ್ಯನ ಭಕ್ತಿಗಜ ಹೋ (ಬಸವ. ೬೯೮). [ಸಂ.]

**ಪ್ರಣವಸ್ವರೂಪ** (ನಾ). ಓಂಕಾರಸ್ವರೂಪನಾದವನು : ಪರಮಾತ್ಮ: ನಿಮ್ಮ ಮಹಿಮೆಯ ಪ್ರಣವಸ್ವರೂಪಂಗಲ್ಲದೆ ಕಾಣಲಾರಿಗೆಯೂ ಬಾರದಯ್ಯಾ (ಚಾಸ. ೯೦೩) ; ಎಲೆ ಅಯ್ಯಾ ಎಲೆ ಅಯ್ಯಾ ಪ್ರಣವಸ್ವರೂಪ ಬಸವಾ (ಶಿಲಶ. ೪. ೯-೦೩). [ಸಂ.]

**ಪ್ರಣವೋತ್ಥ** (ಗು). ೧. ಓಂಕಾರದಿಂದ ಹೊರಟ. ೨. ನವೀನತೆಯಿಂದ ಉಂಟಾದ. ೧, ೨ : ಪ್ರಣವೋತ್ಥ ಶ್ರುತಿಮಧುರಕ್ವಣಿತಂ ದ್ವಿಜಮುಖ್ಯವೃತ್ತಿ ಕೃಷ್ಣರುಚಿತ್ವಂ ಪೆಣೆದಿರೆ ಪುರೋಹಿತಬ್ರಾಹ್ಮಣನನಿಸಿ ದುದಿತನು ನೃಪತಿಗೀ ಪರಪುಷ್ಟಂ (ಹಂಪ್ರತು. ೬-೮೮). [ಸಂ.]

**ಪ್ರಣಷ್ಟ** (ಗು). ೧. ನಾಶಮಾಡಿದ: ಪರಿಹರಿಸಿದ: ಪ್ರಣಷ್ಟಪ್ರಮಾದ ಪ್ರಕೃಷ್ಟಪ್ರಮೋದ ಪ್ರಧೃಷ್ಟದ್ಗಧಸ್ತೇ ನಮಸ್ತೇ ನಮಸ್ತೇ (ಅಕ್ಕ. ೬-೦೩ ಟ). ೨. ನಾಶಹೊಂದಿದ. [ಸಂ.]

**ಪ್ರಣಾದ** (ನಾ). ೧. ದೊಡ್ಡ ನಾದ, –ಶಬ್ದ : ಪಟಹಪ್ರಣಾದಮಂ ಘನರವಮೆಂದೆ ನರ್ತಿಸುವ ಕೇಕಿಗಳಂ ಕಡುರಯ್ಯಮಪ್ಪ ಹಸ್ತಿನಪುರಮಂ ಜಿತೇಂದ್ರಪುರಮಂ ಪರಮೇಶ್ವರರಾಗಳೆಯ್ದಿದರ್ (ಹಂಪಾ. ೪-೩); ಆಗಡೆ ಪೊಣ್ಮತ್ತಲ್ಲಿ ಮಧ್ಯಂದಿನಸಮಯಸಮುದ್ಘೋತಶಂಖಪ್ರಣಾದಂ (ಗಾದಂತ. ೩೩); ಘಟಿಕಾಭೇರೀ ಭೂರಿಪ್ರಣಾದಮೊಗೆದತ್ತಾದಂ (ಹಂಪ್ರತು. ೮೦೭). ೨. ಗಟ್ಟಿಯಾದ ಕೂಗು ; ಗರ್ಜನೆ. ೩. ಆರ್ತನಾದ. ೪. [ಕಾಮಶಾ] ಸಂಭೋಗಸಮಯದ ಸೀತ್ಕಾರ: ಮಣಿತ: "ಪ್ರಣಾದಃ–೧–ಅನುರಾಗಜಃ–ಅನುರಾಗದ ದೆಸೆಯಿಂದ ಹುಟ್ಟಿದ ಶಬ್ದ" (ಸಿದ್ಧಾಂತ. ೩೨). [ಸಂ.]

**ಪ್ರಣಾಮ** (ನಾ). ೧. ಬಗ್ಗುವುದು: ಬಾಗುವುದು. ೨. ನಮಸ್ಕಾರ; ವಂದನೆ : ಕಾಯದಿಗ್ಬಂಧ ಪ್ರಣಾಮ ವಿಧೇಯವರ್ಜನೆ ಯೋಗಸಿದ್ಧಿ ನಿಕಾಯ ನಾಲ್ಕಱ ಇಂದ್ರಿಯಸ್ಥಿತಿಗತಿಯನಾರೈದು . . . ನಿಶ್ಚಯಿಸಬೇಹುದು (ಕುಮಾ. ೪-೩೪)); ಮನೆಯವರಿಗೆಲ್ಲ ನನ್ನ ಪ್ರಣಾಮಗಳು (ಸಂಚಯ. ೦೨೮). ೩. ಸಾಷ್ಟಾಂಗನಮಸ್ಕಾರ. [ಸಂ.]

**ಪ್ರಣಾಯ್ಯ** (ನಾ). ೧. ಪ್ರೀತಿಪಾತ್ರನಾದವನು ; ಪ್ರಿಯ. ೨. ಪ್ರಾಮಾಣಿಕ : ಋಜುಬುದ್ಧಿಯುಳ್ಳವನು. ೩. ಯೋಗ್ಯನಾದವನು; ಅರ್ಹನಾದವನು. ೪. ಇಷ್ಟವಾಗದವನು; ಬೇಡವಾಗಿರುವವನು: "ಅಕ್ಷಿಗತಃ, ದ್ವೇಷ್ಯಃ, ಪ್ರಣಾಯ್ಯಃ, ಅಸಮ್ಮತಃ—ಈ ೪ ಅನಿಷ್ಟಂ" (ಚಠಾಯು. ೬೦-೨೦೦). ೫. ಐಹಿಕವಿಷಯಗಳಲ್ಲಿ

ಆಸಕ್ತಿಯಿಲ್ಲದವನು; ವಿರಕ್ತ. ೬. ಬಿಡಬೇಕಾದುದು; ತ್ಯಾಜ್ಯ. [ಸಂ.]

**ಪ್ರಣಾಲ**, ಪ್ರಣಾಳ (ನಾ). ನೀರಂ ಮುಂತಾದುವು ಹರಿಯುವ ಮಾರ್ಗ; ನೀರಿನ ದೋಣಿ: 'ಜಲಪ್ರಣಾಲ' ವರಾ. **ಪ್ರಣಾಳ**: ತ್ರಿಭುವನಪ್ರಾಸಾದರಮ್ಯಪ್ರಣಾಳದವೊಲ್ ಕಣ್ಗೆಸೆವಿಂದುಮಂಡಲದಿನೇಂ ಗಂಗಾಪ್ರವಾಹಂಗಳಟ್ಟಿದುವೋ (ಶಾಂತೀಶ್ವ. ೬೬೯): ಸುಟಿಪಳವೆಂದಿರ ಕಡೆಗಣ್ಣಟಿಯುಂ ಪಸರಿಸುವ ಬೆಳಗು ಬೆಳದಿಂಗಳ ಪೊಂಪುಟಿಯೆಂದು ಸುರಿವುವದಟಿರೊಳ್ ಮಟಿಯಿಲ್ಲದೆಯುಂ ಪ್ರಣಾಳಕಶಶಿಕಾಂತಂಗಳ್ (ಚಂದ್ರಪ್ರ. ೬-೯೭). [ಸಂ.]

**ಪ್ರಣಾಲಿ**, ಪ್ರಣಾಳಿ (ನಾ). ೧. = ಪ್ರಣಾಲ. ೨. ಅವಿಚ್ಛಿನ್ನವಾಗಿ ಮುಂದುವರಿಯುವುದು; ಅನುಕ್ರಮ; ಸರಣಿ: ತನ್ನ ಹೃದಯೇಶ್ವರಿ ಯನನ್ಯಕಾವುರುಷರಿಂ ಪೊರೆವ ಹರಕ್ಕವಾರೂಪಿಯೇಂ ಚಾಪವಾತ್ರವು ಪೇಳಾ? ಶಿವೇಚ್ಛಾಪ್ರಣಾಲಿಯೆ ದಿಟಂ! (ಶ್ರೀರಾಮಾಯ. ೬೪-೨೦೯); ಈ ವರೆಗೆ ನಾವು ಪಾಶ್ಚಾತ್ಯಶಾಸ್ತ್ರಗಳನ್ನೆಲ್ಲ ಹೇಗೆ ವೈಜ್ಞಾನಿಕ, ಐತಿಹಾಸಿಕ ಮತ್ತು ಯುಕ್ತಿ ಮೂಲಕ ಪ್ರಣಾಲಿಗಳ ಮೂಲಕ ಪರಿಶೀಲಿಸುತ್ತಾ ಬರುವೆವೊ ಹಾಗೆ ನಮ್ಮ ಶಾಸ್ತ್ರಗಳನ್ನು ಮಾಡುತ್ತಿಲ್ಲ (ಕಿರಂಲ. I. ೩೬೦). **ಪ್ರಣಾಳಿ** ೧. "ಪ್ರಣಾಳೀ, ಜಲಪದ್ಧತಿ — ಈ ೨ ಹರಿನಾಳಿ" (ಚಂಜಾಯು. ೦೦೩-೬೬); ಎರಡುಂ ತಟವಳಿವಿಳಿತು ಸರೋವರಂ ಸುರಿವ ಮದಜಲಂ ನದಿಯನೆ ಪುಷ್ಕರ ವರಕರಪ್ರಣಾಳೀಪರಿಕಲಿತಂ ನೀಳಗಿರಿಗೆ ಕರಿ ದೊರೆಯನಿಕುಂ (ಕಾವ್ಯಾಶ್ಯ. ೪-೦೨೪). [ಸಂ. ಪ್ರಣಾಲೀ]

**ಪ್ರಣಾಲಿಕೆ**, ಪ್ರಣಾಳಿಕೆ (ನಾ). ೧. = ಪ್ರಣಾಲ. ೨. = ಪ್ರಣಾಲಿ ೨. ೩. ಅಭಿಪ್ರಾಯಗಳನ್ನು ಪ್ರಚುರಪಡಿಸಲು ಉಪಯೋಗಿಸುವ ಮಾಧ್ಯಮ: ಸಾಹಿತ್ಯದ ವಿವಿಧಪ್ರಕಾರಗಳು ತನ್ನ ಸಾಮಾಜಿಕತೆಯ ಹೊರಹೊಮ್ಮುವಿಕೆಗಾಗಿ ಅವನು ತೆರೆದ ಹಲವು ಪ್ರಣಾಲಿಕೆಗಳೆಂದೂ . . . ಪರಿಗಣಿಸಬೇಕು (ಸಾಹಿತ್ಯ. ೬). **ಪ್ರಣಾಳಿಕೆ**: ೩. ಈ ದಿವ್ಯ ಸಂದೇಶ ಉಪನಿಷತ್ತು, ಗೀತಾ, ಬ್ರಹ್ಮಸೂತ್ರ . . . ಇತ್ಯಾದಿ ನಾನಾ ಪ್ರಣಾಳಿಕೆಗಳ ಮೂಲಕ ಅವಿಚ್ಛಿನ್ನವಾಗಿ ಪ್ರವಹಿಸಿ . . . ತನ್ನ ಪ್ರಭಾವ ವನ್ನು ಬೀರಿದೆ (ಮುಕ್ತಾಕ. ೮೩ ೩೮೪). ೪. ತತ್ತ್ವ, ರಾಜನೀತಿ, ಸಾಹಿತ್ಯ ಮುಂತಾದುವುಗಳಲ್ಲಿ ಯಾವುದೊಂದರ ರೀತಿನೀತಿಗಳನ್ನು ಪಟ್ಟಿಮಾಡಿ ಪ್ರಚುರಪಡಿಸುವ ಘೋಷಣೆಯ ಬರಹ. — ಹೇಳಿಕೆ: ವಿಶ್ವಸಂಸ್ಥೆಯು ಸರ್ವತೋಮುಖ ಉದ್ದೇಶಗಳನ್ನೂ ಮೂಲಭೂತತತ್ತ್ವ ಗಳನ್ನೂ ಪ್ರಣಾಳಿಕೆಯಲ್ಲಿ (Charter) ವಿವರಿಸಲಾಗಿದೆ (ಶಿಂಶಿಂ. ೦೩); ಶಾಲೆಯ ಕಾರ್ಯಕ್ರಮಗಳ ಪ್ರಣಾಳಿಕೆ, ಶಾಲೆಯ ವಾರ್ಷಿಕ ವರದಿ, ಶಾಲೆಯ ಪತ್ರಿಕೆ — ಮುಂತಾದುವನ್ನು ಪೋಷಕರಿಗೂ ಬೋಧಕರಿಗೂ ಹಂಚುವುದು ಅಗತ್ಯ (ಶಿಕ್ಷಣ. ೩೨೦). [ಸಂ. ಪ್ರಣಾಲಿಕಾ]

**ಪ್ರಣಾಶ** (ನಾ). ೧. ಹಾಳಾಗುವುದು; ಇಲ್ಲದಂತಾಗುವುದು: ಈ ಪ್ರಣಾಶದಿಂದ ಪಾರಾದ ಒಂದೇ ಒಂದು ಗ್ರಂಥವೆಂದರೆ ಈಶ್ವರಕೃಷ್ಣನ "ಸಾಂಖ್ಯಕಾರಿಕೆ" (ಕಕ್ಕಶ್ಯಾ. ೨೫೯). ೨. ಸಾವು; ಮರಣ: ಅದು ಬುದ್ಧಿ ನಾಶದವರೆಗೂ ಹೋಯಿತು. ಆದರೆ ಅದಕ್ಕೆ ಸಕಾಲದಲ್ಲಿ ತಕ್ಕ ಪ್ರತೀಕಾರ, ಚಿಕಿತ್ಸೆ ನಡೆದದ್ದರಿಂದ ಅದು ಅವಳ ಪ್ರಣಾಶದಲ್ಲಿ ಪರಿಣಮಿಸಲಿಲ್ಲ (ಬಂಕಿಮ. ೨೦೯). [ಸಂ.]

**ಪ್ರಣಾಳ** 'ಪ್ರಣಾಲ' ನೋ.

**ಪ್ರಣಾಳಿ** 'ಪ್ರಣಾಲಿ' ನೋ.

**ಪ್ರಣಾಳಿಕೆ** 'ಪ್ರಣಾಲಿಕೆ' ನೋ.

**ಪ್ರಣಿತೆ** 'ಪಣಿತೆ' ನೋ.

**ಪ್ರಣಿಧಾನ** (ನಾ). ೧. ಸರಿಯಾಗಿ ಇಡುವುದು. — ಇರಿಸುವುದು. ೨. ಅಧಿಕವಾದ ಪ್ರಯತ್ನ. — ಸಾಹಸ. ೩. ಕಣ್ಣು ಅಥವಾ ಬುದ್ಧಿಯನ್ನು ಒಂದು ಕಡೆ ನೆಲೆಗೊಳಿಸುವುದು. ೪. ತಪಸ್ಸು: ಧ್ಯಾನ; ಸಮಾಧಿ: "ಪ್ರಣಿಧಾನಂ, ಸಮಾಧಾನಂ, ಸಮಾಧಿಃ — ಈ ೩ ಸಮಾಧಿಯ ಪೆಸರ್" (ಚಂಜಾಯು. ೨೦-೦೨೪); ಪತಂಜಲಿಯ ಪುನರ್ಜನ್ಮಗಳ ಬಂಧದಿಂದ ಮುಕ್ತಿಗೆ ಒಯ್ಯುವ ಜ್ಞಾನಕ್ಕೆ ಭಕ್ತಿಪೂರ್ವಕ ವಾದ ಈಶ್ವರಪ್ರಣಿಧಾನವೊಂದೇ ಮಾರ್ಗವೆಂದು ಹೇಳುವುದಿಲ್ಲ (ಕಕ್ಕಶ್ಯಾ. ೨೬೯). ೫. (ದೇವರಿಗಾಗಿ) ಎಲ್ಲ ಕರ್ಮಫಲಗಳನ್ನು ತ್ಯಾಗ ಮಾಡುವಿಕೆ: ಪ್ರಣಿಧಾನವೆಂದರೆ ಈಶ್ವರನನ್ನು ಕುರಿತು ನಿರಪೇಕ್ಷವಾದ, ನಿಷ್ಕಲಂಕವಾದ ಪೂಜೆ (ಕರ್ಮಸ. ೨೨). ೬. ಭಕ್ತಿ. [ಸಂ.]

**ಪ್ರಣಿಧಿ** (ನಾ). ೧. ಗೂಢಚಾರನಾಗಿರುವಿಕೆ; ಬೇಹಂಗಾರಿಕೆ. ೨. ಬೇಹುಗಾರ; ಗುಪ್ತಚಾರ; ಗೂಢಚಾರ: "ಪ್ರಣಿಧಿ, ಗುಪ್ತ ಪುರುಷಃ — ಈ ೨ ಗುಪ್ತಪೇರಿಗಳ್" (ಚಂಜಾಯು. ೬೦-೨೬೦); ಇತ್ತ ದುರ್ಯೋಧನನ ಗೂಢಪ್ರಣಿಧಿಗಳಾ ಮಾತಂ ಜಲಕ್ಕನೆಟಿದು (ಪಂಪಭಾ. ೬-೮೨ ವ); ವಿವಿಧವೇಷವಿದ್ಯಾವಿಶಾರದಪ್ರಚ್ಛನ್ನಪ್ರಣಿಧಿಗಳಂ ಪ್ರಯೋಗಿಸಿಯುಂ . . . ಸಾಮ್ರಾಜ್ಯಮುಂ ನಿಷ್ಕಂಟಕಮುಂ ನಿರಾತಂಕಮುಂ ನಿಜಾಯತ್ತಮುಮೆನಿಸಿದಂ (ಚಂದ್ರಪ್ರ. ೨-೬೦). ೩. ರಾಯಭಾರಿ: "ಒಂದು ದೇಶದ ರಾಜನಿಗಾಗಲಿ ರಾಜ್ಯಕ್ಕಾಗಲಿ ಪ್ರತಿನಿಧಿಯಾಗಿ ಪರ ರಾಜ್ಯದಲ್ಲಿ ಸಾರ್ವಕಾಲಿಕವಾಗಿರುವ ನಿಯೋಗಿ; ಪ್ರಣಿಧಿ; ರಾಜದೂತ; ನಿಯೋಗಿ" (Ambassador. ಇಂಕಿ). ೪. ಬೇಡಿಕೆ; ಪ್ರಾರ್ಥನೆ: "ಪ್ರಣಿಧಿಃ — ಪ್ರಾರ್ಥನೆ, ಬೇಹಿನ ಗೂಢಚಾರ" (ನಿಘಂಟು. ೩೯೬). ೫. ಆನೆಯ ಅನುಚರ: ಆನೆಯನ್ನು ಪಳಗಿಸಿ ಹತೋಟಿ ಮಾಡು ವವನು: ನಯನಿಪುಣಸೂತ್ರಧಾರರ್ ನಿಯಮಿಸುವರ್ ಭದ್ರಪುಂದಮ್ಯಗ ಸಂಕೀರ್ಣನ್ಯಯದ ನೃಪಕರಿಗಳಂ ಪ್ರಣಿಧಿಯೊಡಂಬಡಿಸೆ ಸಕಳಶಿಕ್ಷೆ ಕಣ್ಗೋಪಾವಿನಂ (ಕುಸ್ವಪ್ರ. ೨-೩೬). ೬. ಗಮನ; ಎಚ್ಚರಿಕೆ; ಅವಧಾನ. [ಸಂ.]

**ಪ್ರಣಿಪತ್ತಿ** (ನಾ). = ಪ್ರಣಿಪಾತ ೧: ಇತ್ತಲೀ ಬಸವಣ್ಣನಿಂ ಪ್ರಣಿಪತ್ತಿಯುಂ ಕೈಗೊಳುತ ಕೂರ್ತು (ಬಸವ. ೨೨-೬). [ಸಂ.]

**ಪ್ರಣಿಪಾತ** (ನಾ). ೧. ನಮಸ್ಕರಿಸುವುದು; ನಮಸ್ಕಾರ: ಬರ್ದುಂಕಿ ದೊರೆಯ ಪಿರಿಯನ ಮುನಿಸೆಂಬುದು ಪ್ರಣಿಪಾತಪ್ರತೀಕಾರಮೆಂದಜೆ ದರಸನ ದಂಡನಾಯಂಗೆ ಶರಣಾಗತರಾಗಿ ನಿಜಶಿರಸ್ತ್ರಾಣಪರಾಯಣರಾದರ್ (ಶಾಂತೀಶ್ವ. ೦೦-೨೧ ವ); ತಮ್ಮ ಮಗನಂತಿರುವ ನನಗೆ ಸಾಷ್ಟಾಂಗಪ್ರಣಿಪಾತ ಮಾಡುವುದುಂಟೇ ಎಲ್ಲಿಯಾದರು! (ಗೌರಾಂಗ. ೩೨). ೨. ಕಾಲಿಗೆ ಬಿದ್ದು ಶರಣಾಗತನಾಗುವುದು. [ಸಂ.]

**ಪ್ರಣಿಹಿತ** (ಗು). ೧. ಇರಿಸಿದ; ಸ್ಥಾಪಿಸಿದ: ಪ್ರಣಿಹಿತಕಲಶಾವಳಿ ಕಿಂಕಿಣಿಯೊಳ್ ಪೊಜಿಮಡುವ ಪುಗುವ ಜನದುಲಿಯುಲಿಯೊಳ್ ತೋಣ ಯಾಗೆ . . . ಗೋಪುರಂ ಸೊಗಯಿಸುಗುಂ (ಕುಸ್ವಪ್ರ. ೨-೬೬). ೨. ಕೊಟ್ಟ; ನೀಡಿದ. ೩. ಸೇರಿಸಿದ; ಕೂಡಿಸಿದ: ಗುಣದೋಷಾದಿಗಳಿಂದನುಗುಣ ಮಾಗಿರೆ ಪೇಟ್ದು ತದನುಸದೃಶದಿನೋದಂ ಪ್ರಣಿಹಿತನಿದರ್ಶನ ಕ್ರಮದಿಂ ಸುವುದಕ್ಕುಂ ನಿದರ್ಶನಾಲಂಕಾರಂ (ಶಬ್ದಾ. ೨-೦೯೦). ೪. ಪಡೆದ; ಹೊಂದಿದ. ೫. ಒದಗಿದ; ಪ್ರಾಪ್ತವಾದ. ೬. ಸಾವಧಾನವಾದ ಮನಸ್ಸುಳ್ಳ. (ನಾ). ೭. ಇರಿಸಿದುದು. ೮. ಕೊಟ್ಟುದು; ನೀಡಿದುದು. ೯. ಒದಗಿದುದು; ಪ್ರಾಪ್ತವಾದುದು: "ಪ್ರಾಪ್ತಂ, ಪ್ರಣಿಹಿತಂ — ೨ ಹೊಂದಲ್ಪಟ್ಟುದು" (ನಿಘಂಟು. ೩೯೬). ೧೦. ಒಂದು ವಿಷಯದ ಮೇಲೆ ಚಿತ್ತೈಕಾಗ್ರತೆಯನ್ನು ಹೊಂದಿರುವುದು. — ಅವಧಾನವನ್ನು ಹೊಂದಿರುವುದು. [ಸಂ.]

**ಪ್ರಣೇತ** (ಗು). ೧. ಮುಂದಕ್ಕೆ ಒಯ್ದ. ೨. ಮಾರ್ಗದರ್ಶನ

ಮಾಡಿದ; ನಿರ್ದೇಶಿಸಿದ : ಆ ರಾಮಾಯುತಿಪತಿ ಪರಮಾಗಮಪ್ರಣೀತ ಮಾರ್ಗದಿಂ . . . ಗುಪ್ತಿಗಳಂ ಪಾಲಿಸಿ ಪಂಚಮಹಾವ್ರತಲೀಲೆಯಿನೆಸವಂ (ಶಂಖಪು. ೦೬-೭೬ ಶ); ಪ್ರಣೀತವೇದಾಗಮಶಾಸ್ತ್ರಸಂಕುಳೇ . . . ಗುಣಾಭಿರಾಮೇ ಜಯ ಸರ್ವಮಂಗಳೇ (ಪ್ರಹ. ೨೦-೩೬). ೩. ಕೊಟ್ಟ; ನೀಡಿದ. ೪. ಆಗುಮಾಡಿದ; ನೆರವೇರಿಸಿದ; ಸಾಧಿಸಿದ. ೫. ರಚಿತವಾದ; ನಿರ್ಮಿತವಾದ: ಮಹಾಕವೀಶ್ವರಕೃತಿ ಶಾಸ್ತ್ರಾಂತರಸ್ಮಾರತೆ ನಿರ್ಮಿಸಂತರಮಸ್ಮತ್ಪ್ರಣೀತ ಜಾತಕಕೃತಿಯೊಳ್ (ಜಾತಕ. ೦-೩). (ನಾ). ೬. ಹೇಳಿದುದು ; ನಿರ್ದೇಶಿಸಿದುದು : ಇಂಡಿಯಾದೇಶದಲ್ಲಿರುವ ಹಲವಾರು ಗಮನಾರ್ಹವಾದ ಪದ್ಧತಿಗಳಲ್ಲಿ ಪುರಾತನ ಋಷಿಗಳಿಂದ ಪ್ರಣೀತವಾದ ಒಂದು ಪದ್ಧತಿ ಇದೆ (ಪ್ರಜಾ. I. ೧೮); ಟಿಳಕರ ಪೌರುಷ-ಪ್ರಕೃತಿ . . . ಸರ್ವರಿಗೆ ಉಪದೇಶಿಸಲು ಯೋಗ್ಯವಾದ ಕರ್ಮಯೋಗರೂಪವನ್ನು ತಾಳಿ ಅವರ ಮುಖದಿಂದ ಪ್ರಣೀತವಾಯಿತು (ಕರ್ಮಜಾ. ೦೧೨). ೭. ಬರೆದುದು; ರಚಿತವಾದುದಂ : ಬಹುಕಾಲದ ಹಿಂದೆ ಪ್ರಣೀತವಾಗಿ ಈಗಲೂ ನಮ್ಮಿಂದ ಆದರಿಸಲ್ಪಡುತ್ತಿರುವ ಕಾವ್ಯಗಳೆಲ್ಲವೂ ಈ ಅಲೌಕಿಕ ಆಲೋಕದಿಂದ ತುಂಬಿವೆ (ಕಾವ್ಯಕು. ೬೯). ೮. ರುಚಿಯಾಗಿ ತಯಾರಿಸಿದ ಅಡುಗೆ; ರಸಪಾಕ : " ಪ್ರಣೀತಂ, ಉಪಸಂಪನ್ನಂ-೨ ಪಾಕದಿಂದಲೂ ರಸದಿಂದಲೂ ಯುಕ್ತವಾಗಿ ಶಾಕಾದಿ ಸಮಗ್ರವಾದ ಅಡಿಗೆ ; ರುಚಿಯಾಗಿ ಅಟ್ಟಲ್ಪಟ್ಟ ಅಡಿಗೆ " (ಸಿದ್ಧಾಂತಿ. ೩೬೭). ೯. ಮಂತ್ರಸಂಸ್ಕಾರವನ್ನು ಹೊಂದಿದ ಅಗ್ನಿ : " ಕಿಚ್ಚುಂ ಪ್ರಣೀತಮಕ್ಕುಂ " (ಶಬ್ದಮ. ೬೬-೦೩) ; " ಪ್ರಣೀತಃ, ಸಂಸ್ಕೃತಃ—ಮಂತ್ರದಿಂದ ಸಂಸ್ಕರಿಸಲ್ಪಟ್ಟು ಹುತನಾದ ಅಗ್ನಿಗೆ ಹೆಸರು " (ಸಿದ್ಧಾಂತಿ. ೨೦೧). [ಸಂ.]

**ಪ್ರಣೀತೆ** (ನಾ). ಯಜ್ಞ, ಯಾಗ, ಹೋಮಗಳಲ್ಲಿ ಬಳಸುವ ಒಂದು ಬಗೆಯ ಪಾತ್ರೆ; ಯಜ್ಞಪಾತ್ರೆ. [ಸಂ. ಪ್ರಣೀತಾ]

**ಪ್ರಣುತ** (ಗು). ೧. ಹೊಗಳಿದ; ಕೊಂಡಾಡಿದ. ೨. ಹೆಸರಾಂತ; ಪ್ರಸಿದ್ಧವಾದ : ಪ್ರಣುತಪದಾಂತರಿಂ(ಕರಣಮಂತರದೆ ತಾಣದೊಳಾದೊಡಂ ಮಹಾಗುಣಮನೆ ತರ್ಕಂ (ಶಬ್ದಾ. ೦-೦೨೨) ; ಪ್ರಣುತಜನಚರಿತಮಂ ಲಕ್ಷಣಮಿಲ್ಲದೆ ಕುಕವಿ ಕಬ್ಬದೊಳ್ಕಟ್ಟಿ . . . ಅಪ್ಪುದೆ ಶುಭದಂ (ಅರ್ಧನೇ. ೦-೩೦); ಪ್ರಣುತ ಶ್ರುತಿಗಳ್ ನಾಲ್ಕು (ವಿಷ್ಣು. ಪು. ೩-೬-೦೧೯).
[ಸಂ.]

**ಪ್ರಣುತಿ** (ನಾ). ಅತಿಶಯವಾದ ಹೊಗಳಿಕೆ; ವಿಶೇಷವಾದ ಸ್ತೋತ್ರ; ಶಿವಶರಣರಂ ಕಂಡುಕಂಡುಬ್ಬಿ ವಿನತನಾಗಿ ಪ್ರಣುತಿಯಂ ಪುಗೆ ಮನಮೊಸೆದೊಸೆದು ಹಾಡಿಹಾಡಿ (ಬಸವ. ೩೫-೩). [ಸಂ.]

**ಪ್ರಣುತಿಸು** (ಕ್ರಿ). ಅತಿಶಯವಾಗಿ ಹೊಗಳು ; ಬಹಳವಾಗಿ ಸ್ತೋತ್ರಮಾಡು : ಪ್ರಣವಮಂತ್ರಾಗಮದ ಕಳೆಗಳೊ ಪ್ರಣುತಿಸಲ್ಕಿಂತೊಪ್ಪುವಾ ಕಲಧೌತಶೈಲದಲಿ (ಚಾಪು. ೦-೩೯); ಭಕ್ತಿಯಲಿ ಪ್ರಣುತಿಸಲು ಶರ್ವಾಣಿ ರತಿಯರಿಗೆಣೆಯೆನಿಪ ಸುಂದರಿಗೆ ಮಿಕ್ಕಿನ ಚಾಗುಸತಿಯರು ಸುಯಿ ಲೋಕದೊಳು (ಶಿವತ. ೦-೩೪) [ಪ್ರಣುತಿ+—ಸು]

**ಪ್ರಣುತೆ** 'ಪಣಿತೆ' ನೋ.

**ಪ್ರಣೂತ** (ಗು) ೧. ವಿಶೇಷವಾಗಿ ಹೊಗಳಿದ.—ಪ್ರಶಂಸೆ ಮಾಡಿದ. ೨. ಪ್ರಸಿದ್ಧವಾದ ; ಹೆಸರುವಾಸಿಯಾದ : ವ್ಯಾಸಮುನಿಪ್ರಣೂ[ತಾಶಂ. ನೇ]ತಕೃತಿಯಂ ಸಲೆ ಮೆಚ್ಚು . . . ನಾಡೊಳಜನಾದನೊ ಮೆಚ್ಚು ಕವಿತಾಗುಣಾರ್ಣವಂ (ಶಂಖಪು. ೦೯-೩೨) ; ಮನ್ವಾದಿಪುರಾಣಮುನಿಗಣಪ್ರಣೂತಶ್ರುತಿವಿಹಿತ ವಿಶುದ್ಧಮಾರ್ಗನುಂ . . . ಧರಾಮರಾಗ್ರಗಣ್ಯನುಮಾಗಿ . . . ದುರ್ಗಮಯ್ಯಂ ನೆಗಟ್ಟಂ (ಶಂಖಕಂ. ೬-೦೦); ಪರಮಾನಂತಗುಣಪ್ರಣೂತಪರಿನಿರ್ವಾಣೋರ್ವಿಯಂ . . . ಭಕ್ತಿಯಿನಂದು ವಂದಿಸಲ್ (ಸುಕುಮಾ. ೮-೬೩). (ನಾ). ೩. ಹೆಚ್ಚಾಗಿ ಹೊಗಳಿದುದು ; ವಿಶೇಷವಾಗಿ ಪ್ರಶಂಸಿತವಾದುದು. ೪. ಪ್ರಸಿದ್ಧವಾದುದು; ಹೆಸರುವಾಸಿಯಾದುದು : ಆ ಮಹಾವನಂ . . . ನಾಕಿನಿಳಯದಂತೆ ಅನೂನಾಪ್ಸರೋಗಣಪ್ರಣೂತಮುಮುತರ್ಕ್ಯಗೋಚರಮುಂ (ಶಂಖಪು. ೩-೩೨ ಶ). ೫. ವಿಶೇಷವಾಗಿ ಹೊಗಳಿಕೆಯನ್ನು ಹೊಂದಿದವನು,— ಪ್ರಶಂಸಿತನಾದವನು : ಈತನತ್ಯಂತವಿದ್ವಜ್ಜನಸಂದೋಹಪ್ರಣೂತಂ ಪರಮಜಿನಮತಾಂಭೋಜನೀರಾಜಹಂಸಂ (ಸುಕುಮಾ. ೦-೯೯).
[ ಸಂ. ]

**ಪ್ರಣೇತಾರ** (ನಾ). ೧. (ಉತ್ತಮನಾದ) ನಾಯಕ,—ಮುಂದಾಳು: ಪ್ರಣೇತಾರನು ಇಲ್ಲದಿದ್ದರೆ ಮಹತ್ತಮವಾದ ಸೈನ್ಯವಾದರೂ ಯುದ್ಧದಲ್ಲಿ ಭಗ್ನವಾಗುವುದು (ಕೌಟ್ಟ. ೦೬೩). ೨. (ಗ್ರಂಥವನ್ನು) ರಚಿಸುವವನು; ಕರ್ತೃ. [ಸಂ. ಪ್ರಣೇತೃ]

**ಪ್ರಣೇತೃ** (ನಾ). ೧. ನಾಯಕ; ಮುಂದಾಳಂ. ೨. ಬೋಧಿಸುವವನು; ಗುರು. ೩. =ಪ್ರಣೇತಾರ ೨ : ನಮಗೆ ಈಗ ಉಪಲಬ್ಧವಾಗಿರುವ ವೇದಾಗಮಗಳಲ್ಲಿಯ ಪ್ರವರ್ತಕರಾಗಲಿ ಅನುವಾದಕರಾಗಲಿ ಪ್ರಣೇತೃಗಳಲ್ಲ (ಕಾಲದ. ೭೨). [ಸಂ.]

**ಪ್ರಣೇಯ** (ನಾ). ೧. ವಿನಯವಂತ; ವಿನೀತ. ೨. ವಶೀಕರಣವಿಧಾನದಿಂದ ವಶವರ್ತಿಯಾಗಿರುವವನು : "ವಶ್ಯಃ, ಪ್ರಣೇಯಃ, ೨ ಔಷಧಾದಿಗಳಿಂದ ವಶ್ಯನಾದವನ ಹೆಸರು" (ಸಿದ್ಧಾಂತಿ. ೩೨೧). [ಸಂ.]

**ಪ್ರತತ** (ಗು). ಹರಡಿರುವ; ವಿಸ್ತಾರವಾದ; ವ್ಯಾಪ್ತವಾದ. [ಸಂ.]

**ಪ್ರತತಿ** (ನಾ). ೧. ಗಂಪು ; ಸಮೂಹ : ನಾಗಭೂಷಣಪ್ರತತಿನಾಗರಖಂಡಮಪೂರ್ವಮಪ್ಪ ಪುನ್ನಾಗದ ಬಾಸಿಗಂ (ಶಂಖಪು. ೯-೦೬) ; ಭುವನದೊಳು ಧರ್ಮಗುಣಪ್ರತತಿಗೆ ನೆಲೆಯಾಗಿ ಮಹಾಸತಿ ಮೋಚಲದೇವಿ ಸನ್ನತಂ ಸೊಗಯಿಸುಗುಂ (ಎಕ. V, ಶಂಖಾ. ೦೯-೩೯; ೧೦೯೮); ಅವದಿರ ನಿಬರು ಕ್ಷಿತಿಸುರರ ಕೊಂದಮೊಳಭೂಷಪ್ರತತಿಯನು ಕೊಂಡೊಯ್ದರು (ಕುಮಾವ್ಯ. ೦೭-೦೩). ೨. ಬಳ್ಳಿ; ಲತೆ: "ಲತೆ ಪ್ರತಾನನಿ ಪ್ರತತಿ ವಲ್ಲರಿ ವಲ್ಲಿ ವೀರುದೆನೆ ಬಳ್ಳಿಯೆನಿಕುಂ" (ಶಬ್ದಮ. ೩೨-೯). [ಸಂ.]

**ಪ್ರತನ** (ನಾ). ಹಳೆಯದುಂ ; ಪ್ರಾಚೀನವಾದುದು : "ಪುರಾಣಃ, ಪ್ರತನಃ, ಪ್ರತ್ನಃ, ಪುರಾತನಃ, ಚಿರಂತನಃ—೫ ಹಳೇದು, ಬಹುಕಾಲದ್ದು" (ಸಿದ್ಧಾಂತಿ. ೩೯೩). [ಸಂ.]

**ಪ್ರತಪನ** (ನಾ). ೧. ಹೆಚ್ಚಾಗಿ ಬಿಸಿಮಾಡುವುದು,—ಕಾಯಿಸುವುದು. ೨. (ಅಲಂ) ಕ್ಲೇಶಕ್ಕೀಡುಮಾಡುವುದು ; ಸಂಕಟಪಡಿಸುವುದು : ಸ್ವರೂಪಪ್ರತಪನಲಕ್ಷಣನಿಶ್ಚಯತಪಶ್ಚರಣಹೇತುಭೂತಾನಶನಾದಿ ದ್ವಾದಶವಿಧಾನುಷ್ಠಾನಂ ತಪಮೆಂಬುದಕ್ಕುಂ (ಕರ್ಣಾಕ. ೨೮೮). [ಸಂ.]

**ಪ್ರತರ** (ಗು). ೧. ಹೆಚ್ಚಾದ; ಅಧಿಕವಾದ: ಅತಿತೂರ್ಯಚ್ಚಕ್ರರೋಚಿರ್ವಲಯವಿಳಸನ ನನ್ನ[ವೋ]ನ್ಮೀರತ್ನಪ್ರತರಾಭೀಷುಪ್ರಕಾಶಂ ಬೆಳಗೆ (ಧರ್ಮಪು. ೯-೫೩). ೨. ವಿಸ್ತಾರವಾದ: ದಂಡಕವಾಟ ಪ್ರತರಲೋಕಪೂರಣಕ್ರಿಯೆಗಳಂ ಪ್ರತಿಸಮಯಂ ಪ್ರಯೋಗಿಸಿ (ಶಂಖಪು. ೦೬-೭೯ ಶ). 'ಪ್ರತರಕ್ರಿಯೆ' ಪರಾ. [ಸಂ.]

**ಪ್ರತರಕ್ರಿಯೆ** (ನಾ). [ ಜೈನ ] ಪರಿನಿರ್ವಾಣಕಾಲದಲ್ಲಿ ಒದಗುವ ಅವಸ್ಥಾವಿಶೇಷ; ಆತ್ಮವು ವಿಸ್ತಾರವಾಗಿ ವ್ಯಾಪಿಸುವುದು : ಲೋಕಾಕಾಶವ್ಯಾಪಕಕವಾಟಕ್ರಿಯೆಯುಂ ನೆಱಿ ತದನಂತರಸಮಯದೊಳ್ ವಾತವಲಯಮುಂಟಾಯೆ ಜೀವಪ್ರದೇಶಂಗಳಿಂ ಲೋಕಪ್ರದೇಶಮಂ ಪರ್ವಿನಿರ್ವರ್ತಿತ ಪ್ರತರಕ್ರಿಯಾವಿಶೇಷಂ (ಆದಿಪು. ೦೬-೯೯ ಶ) ; "ಪ್ರತರಕ್ರಿಯೆ—ಪ್ರತರಾವಸ್ಥೆಯಲ್ಲಿ ಲೋಕದ ಅಸಂಖ್ಯಾತಭಾಗಗಳು ಕೇವಲಿಯ ಪ್ರತರಾಕಾರದ ಆತ್ಮಪ್ರದೇಶಗಳಿಂದ ವ್ಯಾಪ್ತವಾಗುತ್ತವೆ" (ಆದಿಪು. ಶಬ್ದ ಪಾಂಡಿತ್ಯ ಕಲ್ಪನೆ). [ಸಂ. ಪ್ರತರಕ್ರಿಯಾ]

**ಪ್ರತರಾಂಗುಲ** (ನಾ). [ಜೈನ] ಒಂದು ಚದರಳತೆ; ಸೂಚ್ಯಂಗುಲದ ವರ್ಗ : ತದ್ಭಾಗಹಾರಮುಂ ಯಥಾಕ್ರಮದಿಂ ಪ್ರತರಾಂಗುಲಸಂಖ್ಯೇಯ ಭಾಗಮುಮಕ್ಕುಂ (ತತ್ತ್ವಸೂ. ೨೦); ಕಾಲಪ್ರಮಾಣದಲ್ಲಿ ವಿವರಿಸಿದ ಆದ್ಧಾಪಲ್ಯದಲ್ಲಿ ಬರುವ ಸಂಖ್ಯೆಯೊಳಗೆ ಅರ್ಧಮಾಡಿ, ಒಂದರಿಂದ ಇನ್ನೊಂದು ಗುಣಿಸಿದರೆ ಸೂಚ್ಯಂಗುಲದ ಪ್ರಮಾಣ ಬರುತ್ತದೆ. ಸೂಚ್ಯಂಗುಲದ ವರ್ಗಕ್ಕೆ ಪ್ರತರಾಂಗುಲವೆಂದೂ ಘನಕ್ಕೆ ಘನಾಂಗುಲ ವೆಂದೂ ಹೇಳುವರು (ತ್ರಿಲೋ. ೩೦೬). [ ಸಂ. ]

**ಪ್ರತರೆ** (ನಾ).=ಪ್ರತರಕ್ರಿಯೆ : ನೀರು ಪಸಿವಂತೆ ಪ್ರತರೆಯ ಪರಮನು ಮಾಡಲು ಕೊಟ್ಟರ್ವರ್ಗಿಂದವಾಳ್ವುದು (ಜ್ಞಾ.ಶಕ. ೯೭-೯೬).
[ಸಂ. ಪ್ರತರ]

**ಪ್ರತಲ**, ಪ್ರತಳ (ನಾ). ೧. ಬೆರಳುಗಳನ್ನು ನೀಡಿ ಅಗಲಿಸಿರುವ ಅಂಗೈ : "ಚಪೇಟಃ, ಪ್ರತಲಃ, ಪ್ರಹಸ್ತಃ – ಕಿ ವಿಸ್ತೃತಾಂಗುಳೌ– ಚಾಚಲ್ಪಟ್ಟ ಬೆರಳುಗಳುಳ್ಳ ಅಂಗೈ ಹೆಸರುಗಳು" (ಸಿದ್ಧಾಂ.ಕೌ. ೦೯೩). ೨. ಸಪ್ತಪಾತಾಳಲೋಕಗಳಲ್ಲಿ ಒಂದು. ಪ್ರತಳ : ೧. ಬೆರಲುಂ ತಳಮುಂ ಬೆರಸಿದೊಡೆ ಪ್ರತಳಮೆಂಬುದು ಅದನೆ ತಳಮುಮೆಂಬುದು (ಶಬ್ದಾನು. ೯೯-೨೯೩). [ಸಂ.]

**ಪ್ರತಳ** 'ಪ್ರತಲ' ನೋ.

**ಪ್ರತಾನ** (ನಾ). ೧. ಕವಲುಕವಲಾಗಿ ಹರಡುವುದು ; ಶಾಖೋಪ ಶಾಖೆಗಳಾಗಿ ವಿಸ್ತರಿಸುವುದು. ೨. ಗುಂಪು ; ಸಮೂಹ : ಮಣಿಗಣಾತ್ತ ಮರೀಚಿಲತಾಪ್ರತಾನಸಂವಲಯಿತ ವಿದ್ರುಮದ್ರುಮವಿಳಾಸ ವಿಶೇಷಿತಬಾಡವಾನಳಾವಿಳಜಳಮಂ ಮನಂ ಬಯಸಿ ನೋಡಿದರ್ನವಮಂ ಗುಣಾರ್ಣವಂ (ಪಂಪಭಾ. ೪-೨೮); ಲಸದುಪ್ಯಕ್ಕೀರಪಾರಾವತಶಿಖಿಹರಿಣೀ ಹಂಸಶಾರೀಪ್ರತಾನಂ (ಜಾತಕ. ೬-೯೦). ೩. ಬಳ್ಳಿಯ ಕುಡಿ; ಸಣ್ಣ ಹಂಬು : 'ಪ್ರತಾನಿನಿ' ಪರಾ. ೪. (ನೆಲದಲ್ಲಿಯೇ ಹಬ್ಬುವ) ಬಳ್ಳಿ; ಹಂಬು. [ಸಂ.]

**ಪ್ರತಾನಿನಿ** (ನಾ). ಬಳ್ಳಿ; ಹಂಬು; ಲತೆ : "ಲತಾ, ಪ್ರತಾನಿನೀ, ವಲ್ಲೀ, ಪ್ರತತೀ, ಪ್ರತತಿಃ – ಈ ೫ ಬಳ್ಳಿ" (ಶಬ್ದಾನು. ೩೦-೨೬).
[ಸಂ. ಪ್ರತಾನಿನೀ]

**ಪ್ರತಾಪ** (ನಾ). ೧. ಬಿಸಿಲು; ಕಾವು; ಉಷ್ಣ : ದಿವಸ್ಪತಿಗೆ ಪ್ರತಾಪಮಂ . . . ಕೊಟ್ಟು ಗುರುಮೂರ್ತಿ ಪಂಪಾಪತಿವಿರೂಪಾಕ್ಷ ನೆಮಗಿಷ್ಟಸಿದ್ಧಿಯಂ ಮಾಳ್ಕೆ (ಹರಿಶ. ೦-೨). ೨. ಬಿಸಿಲು. ೩. ಬೆಳಕು; ಪ್ರಕಾಶ. ೪. ಶಕ್ತಿ; ಬಲ; ಪರಾಕ್ರಮ :"ಪ್ರತಾಪಃ, ಪೌರುಷಂ, ತೇಜಃ, ವಿಕ್ರಮಃ, ಪರಾಕ್ರಮಃ– ಈ ೫ ಪರಾಕ್ರಮಂ" (ಶಬ್ದಾನು. ೦೨೭-೩೬); ಪತಿವಿಯೋಗ [ಹದ್ಯಗ್ನಿನಿತಾ] ಹೃದಯಂಗಳೊಳಾವಗಮುರಿವುದು ಕಡುಪಿ ನೊಳಾ ನೃಪಪ್ರತಾಪಜ್ವಲನಂ (ಕಾದಂಪೂ. ೦೯); ರಣರಂಗಭೈರವನುಭಯ ಬಳಗುಭುಟಕೀರ್ತ್ತಿತಪ್ರತಾಪಂ ವೈರಿಸಂತಾಪಂ (ಶಾಸಾ. XX.೯೬-೩೯; 1072). ೧, ೪: ಉಚ್ಚಂಡಪ್ರತಾಪೋದಯಮರಿಕುಮುದಾಭೋಗವಿಧ್ವಂಸಿಯಾಗಿ ರ್ಪಿನಂ . . . ಒಳ್ಪಂ ಪೆತ್ತುದಾತ್ತಂ ಬೆಳಗುಗೆ ಜಗಮಂ ಗೋಪ ಮಾರ್ತಾಂಡದೇವಂ (ಜಗಂ. ೦-೪). ೫. ತೇಜಸ್ಸು ; ಪ್ರಭಾವ ; ವರ್ಚಸ್ಸು : "ಪ್ರತಾಪಃ, ಪ್ರಭಾವಃ –೨ . . . ಪ್ರಭುಕಳೆ ಯಾಮದೋ ಅದರ ಹೆಸರು" (ಸಿದ್ಧಾಂ.ಕೌ. ೨೯೦). ೬. ಕೀರ್ತಿ; ಯಶಸ್ಸು. ೭. ಹಿಂದಿನ ಕಾಲದಲ್ಲಿ ಚಲಾವಣೆಯಲ್ಲಿದ್ದ ಒಂದು ನಾಣ್ಯ: ಪ್ರತಾಪದ ಲೆಕ್ಕ . . . ಪ್ರತಾಪಕೆ ಪಣವು ಬಾಣಂ ಪ್ರತಾಪಕಂ ಧರಣವೆರಡು ಚೌಲ ನಾಲ್ಕುಂ (ಕೃಷ್ಣಾ. ಅಮು. I, ೩); ಆರು ವರುಷಾವಧಿಯ ಪಂಚಪರ್ವಗಳ ಮಹೋ ತ್ಸಾಹಕ್ಕೆ ಪ್ರತಾಪ ಇಪತ್ತುಂ ಬೆಲ್ಲಪತ್ರ ಹುವ ತಹದಕೆ ಪ್ರತಾಪ ಹನೆರಡು (ಎಕ. XI. ಚೋಳಾ. ೩೦-೦೭; 1366); ರಾಮಟಂಕೀನಾಣ್ಯವು ಕಟ್ಟೋಟಿ ನಾಲ್ಕು ತೊಲಿ ಇರುತ್ತಿತ್ತು. ಅದರ ಅರ್ಧದ ನಾಣ್ಯಕ್ಕೆ ಪ್ರತಾಪವೆನ್ನುವರು (ಕರ್ನಾ. ೨೬೦). ಈ ಸಂಸ್ಕೃತಕೋಶಗಳಲ್ಲಿ ಈ ಅರ್ಥವಿಲ್ಲ. ಆದರೆ ಮರಾಠಿಕೋಶದಲ್ಲಿ, ಧಾರವಾಡದ ಕಡೆ ಪ್ರಚಾರದಲ್ಲಿರುವ ಎರಡು ರೂಪಾಯಿ ಬೆಲೆಯ ಒಂದು ನಾಣ್ಯ, ಅರ್ಧಹೊನ್ನು ಎಂಬರ್ಥದ ಸಂಸ್ಕೃತಶಬ್ದ ಎಂದು ಹೇಳಿದೆ. **ಪ್ರತಾಪಗದ್ಯಾಣ**=ಪ್ರತಾಪ ೭ : ಸೀಮೆ ಸಣ ಪ್ರತಾಪಗದ್ಯಾಣ ೧೦ (ಶಾಸಾ. IX – II. ೯೬೦–೦೯; 1665). **ಪ್ರತಾಪಚಕ್ರವರ್ತಿ** = ಪರಾಕ್ರಮಿ ಯಾಮ ಹಾಗೂ ಪ್ರಭಾವಶಾಲಿಯಾದ ಸಾರ್ವಭೌಮ; ಹೊಯ್ಸಳ ವೀರಬಲ್ಲಾಳನ ಒಂದು ಬಿರುದು : ಸಮಸ್ತಭುವನಾಶ್ರಯಂ ಯಾದವನಾರಾಯಣಂ ಪ್ರತಾಪಚಕ್ರವರ್ತಿ ವೀರಬಲ್ಲಾಳದೇವರ ಬೆಸ (ಕಾ. IV. ೬-೦ ; 1204). **ಪ್ರತಾಪಜನಾರ್ದನ** = ಪರಾಕ್ರಮದಲ್ಲಿ ಹಾಗೂ ಪ್ರಭಾವದಲ್ಲಿ ನಾರಾಯಣನಂತೆ ಇರುವವನು ; ಚಾಲುಕ್ಯ ವಿಜಯಾದಿತ್ಯದೇವನ ಒಂದು ಬಿರುದು : ವೈರಿಮದಮರ್ದ್ದನ ಪ್ರತಾಪ ಜನಾರ್ದ್ದನನುಚಿತವಾಕ್ಯ ವಿಷ್ಣುವರ್ಧನಮಹಾರಾಜವಿಜಯಾದಿತ್ಯದೇವರ್ . . .ಆಳುತ್ತಮಿರೆ (ಎಕ. XI. ಚಿತ್ರದು. ೯೬-೬; 1067). **ಪ್ರತಾಪಲಂಕೇಶ್ವರ** = ೧. ಪರಾಕ್ರಮದಲ್ಲಿ ರಾವಣನಂತಿರುವವನು; ಶತ್ರುಗಳಿಗೆ ಭಯ ವನ್ನುಂಟುಮಾಡುವ ಪರಾಕ್ರಮವುಳ್ಳವನು; ಕಳಚುರ್ಯವಂಶದ ರಾಜರ ಒಂದು ಬಿರುದು : ಕಲಿಗಳಂಕುಶಂ ಗಜಸಾಮನ್ತಶರಣಾಗತ ವಜ್ರಪಂಜರಂ ಪ್ರತಾಪಲಂಕೇಶ್ವರಂ (ಕಾ. II. ೦೦–೦೦ ; 1092); ಮಾರ್ತಂಡಪ್ರತಾಪಲಂಕೇಶ್ವರ ರಿಪುಮದನಮಹೇಶ್ವರ (ಕಾಶಿ. ೬೯–೦೨–೦೯; 1170). ೨. [ವೈದ್ಯಶಾ] ಒಂದು ಬಗೆಯ ಗುಳಿಗೆ, – ಮಾತ್ರೆ : ಪ್ರತಾಪಲಂಕೇಶ್ವರ-ಶಂಖಪಾಷಾಣ . . . ಸಾಸಿವೆಪ್ರಮಾಣ ಗುಳಿಗೆಯಂ ಮಾಡಿ ಸಮಜ್ವರಕ್ಕೆ ಜೀರಿಗೆ ಸಕ್ಕರೆಯಲ್ಲಿ ಕೊಡುವುದು (ಖಗೇಂ.ಕೌ. ೩೬).
[ ಸಂ. ]

**ಪ್ರತಾಪವಂತ** (ನಾ). ಪ್ರಭಾವಶಾಲಿ; ತೇಜಸ್ವಿ: ಪ್ರತಾಪವಂತಂ ಕಲಿಗೀತ ತಕ್ಕವಂ (ಗೋಳಾಖ್ಯಾ. ೦೬–೦೨). [ ಸಂ. ಪ್ರತಾಪವತ್ ]

**ಪ್ರತಾಪವರಾಳಿ** (ನಾ). [ಸಂಗೀತ] ಒಂದು ರಾಗದ ಹೆಸರು : ಶೋಕವರಾಳಿ . . . ಪ್ರತಾಪವರಾಳಿ . . . ನಾಗವರಾಳಿಯೆಂಬ ವರಾಳೀ ಸಪ್ತಕವೇ ಶುದ್ಧವರಾಳಿಗೆ ವಿಶ್ರಂಗಳು (ಸಂಗೀ. ೨೩೩).
[ ಸಂ. ಪ್ರತಾಪವರಾಳೀ ]

**ಪ್ರತಾಪಶಾಲಿ** (ಗು). ೧. ಪರಾಕ್ರಮವುಳ್ಳವ ; ಶೂರ : ಮಹೇಂದ್ರನು ನೊಳಂಬವಂಶದಲ್ಲೇ ಅತೀಪ್ರತಾಪಶಾಲಿ ರಾಜನಾಗಿ ಮೆರೆದಿದ್ದಾನೆ (ಕೋಲಾ. ೩೩). (ನಾ) . ೨. ಶೂರನಾದವನು ; ವೀರ.
[ ಸಂ. ಪ್ರತಾಪಶಾಲಿನ್ ]

**ಪ್ರತಾಪಸ** (ನಾ). ಬಿಳಿ ಎಕ್ಕದ ಗಿಡ : " ಅಲರ್ಕಃ , ಪ್ರತಾಪಸಃ– ೨ . . . ಶ್ವೇತಾರ್ಕ–ಬಿಳಿಯ ಎಕ್ಕೆ " (ಸಿದ್ಧಾಂ.ಕೌ. ೩೩೦). [ ಸಂ. ]

**ಪ್ರತಾಪಿ** (ನಾ). = ಪ್ರತಾಪಶಾಲಿ ೨ : ದಾರುಣಕೋಪಂ ಪ್ರತಾಪಿ ಸಾಹಸಭೀಮಂ (ಗಜಾಂಕು. ೬-೮). [ ಸಂ. ಪ್ರತಾಪಿನ್ ]

**ಪ್ರತಾಪೋದಯ** (ನಾ). ೧. ಪರಾಕ್ರಮದ ಏಳಿಗೆ ; ಶೌರ್ಯೋ ನ್ನತಿ : ವೀರನಾರಾಯಣನಪ್ರತಿಶಯಧಟಳಂ ನಮಗೀಗತಕೀರ್ತಿತೋಪಸ್ಥಿತ ಪ್ರತಾಪೋದಯಮಂ (ಕಾಶಿ. ೦–೨). ೨. ಶೌರ್ಯೋನ್ನತಿಯನ್ನು ಹೊಂದಿದವನ.; ಅತಿಪರಾಕ್ರಮಿ : ಪದ್ಮರಾಜನರಿದುಷ್ಪ್ರಾಪಪ್ರತಾ ಪೋದಯಂ (ಕೃಷ್ಣಕೃ. ೩–೦೮). [ ಸಂ. ]

**ಪ್ರತಾಪೋಷ್ಣ** (ನಾ). ಪರಾಕ್ರಮದ ಕಾವು; ಶೌರ್ಯದ ತೀಕ್ಷ್ಣತೆ: ಉಲುಕಕ್ರಮಾಯಾತ ಪ್ರತಾಪೋಷ್ಣಮಂ ಪತ್ತುವಿಡುವರಾತಿಗಳ ಸಂಖ್ಯೆಯೊಳಂ (ಅಂಕು. ೦೯–೦೯ ಪ). [ ಸಂ. ]

**ಪ್ರತಾರಕ** (ನಾ). ಮೋಸಗಾರ; ವಂಚಕ : ಈ ವಿಷಯದಲ್ಲಿ ನನಗೆ ಪುತ್ರಪ್ರತಾರಕನೆಂದರೂ ಸರಿ. ಮಗನ ಅವಿವೇಕಕ್ಕೆ ತಡೆ ಹಾಕಲೇಬೇಕು (ಕೂಕಿ. ೯೦). [ಸಂ.]

**ಪ್ರತಾರಣ** (ನಾ). ೧. ಮೋಸ; ವಂಚನೆ : ವಾರಣಾವತಂ ಸಂದ ಸಭಾಪ್ರತಾರಣಕೆ ಕಾರಣಮಂದಜಿವರ್ಗೆ ಬೇಡಿದರ್ ಸಂಧಿಗೆಯಲ್ಲೆ ಬೇಡಿದರೆ ಪಾಂಡುತನೂಭವರಯ್ದುಬಾಡಮಂ (ಕಜಾಪು. ೩-೨೦). ೨. ಮೋಸಗೊಳಿಸುವಂಥದು; ವಂಚಿಸುವಂಥದು: ಕೋಪವೆಂಬುದೆ ಸಾಧು ಸಂಗಪ್ರತಾರಣಂ ಕೋಪವೆಂಬುದೆ ಸಕಲಸನ್ಮಾರ್ಗದಾರಣಂ ಚಿತ್ತ ವೈಕಲ್ಯಕರಣಂ (ಕಂಣಾ. ೨-೯-೦೬). ೩. ಹೊಳೆ ದಾಟಿಸುವುದು. ೧, ೩ : ಪ್ರತಾರಣಂ ನಾವೆಯೊಳ್ . . . ಮಹಾಮಾತ್ರಪ್ರವರ್ತನಂ ಘೃಣೆಯೊಳಲ್ಲದಿಲ್ಲಮಲ್ಲಿಯುಂ (ಶಂಶ್ರಪು. ೩-೯ ಪ). [ಸಂ.]

**ಪ್ರತಾರಿಸು** (ಕ್ರಿ). ಮೋಸಗೊಳಿಸು ; ವಂಚನೆ ಮಾಡು : ಕಾಮಿನೀತತಿ ವಿಲಾಸಾಪಾಂಗದಿಂದಂ ಪ್ರತಾರಿಸದಃಕಾಗಿರಲಾತ್ಮವಂತನೆನಿಸೆಂದುಂ ರಾಜ್ಯ ವಿದ್ಯಾಧರಾ (ಅರುಪು. ೩೬). [ಪ್ರತಾರಣ+-ಇಸು]

**ಪ್ರತಿ** (ನಾ). ೧. ಸರಿ; ಸಾಟಿ; ಸಮಾನ : "ಸದೃಶಂ ಸರಿ ಪ್ರತಿ ಸದೃಕ್ಷಂ ಪ್ರಕಾಶಂ ಸಮಾನಮೆನೆ ಪಾಸಟಿಗೆ ನಾಮಮಕ್ಕುಂ" (ಕಬಂಗಿ. ೦೨೭-೮). ೨. ಸಮಾನವಾದುದು ; ಸಾಟಿಯಾದುದು : ನಿಮ್ಮ ಪುರಾಣಕ್ಕೆ ಪ್ರತಿಯಿಲ್ಲಾ ಕೂಡಲಸಂಗಮದೇವಾ (ಬಸವ. ೩೭); ಬೆಂಮ್ಮನ ಸತಿಯು ಸೊಬಗಂತಿರಲಿಯೂ ಬಾಲಕಿಯ ರೂಪಿಂಗೆ ಪ್ರತಿಯು ಕಾಣೆನು (ಕುಮಾ. ೨-೦೦). ೩. ಸಮಾನನಾದ ವ್ಯಕ್ತಿ; ಸರಿಸಾಟಿಯಾದ ವ್ಯಕ್ತಿ : ಪ್ರತಿ ತನಗಿಲ್ಲ ಸಲ್ಲಲಿತರೂಪದಿನೀ ತ್ರಿಜಗಂಗಳಂಗನಾತತಿಯೊಳದೊಂದೆ ತಾಂ ಪ್ರತಿ ನಿಜಪ್ರತಿಮಾನಂ (ಶಾಂತೀಶ್ವ. ೯-೨೧೫). ೪. ಎದುರು; ವಿರೋಧ : ನನ್ನಿಂದ ಏನಾದರೂ ಆಗತಕ್ಕ ಕಾರ್ಯವಿದ್ದರೆ ನಾನು ಸಿದ್ಧನಾಗಿದ್ದೇನೆ. ನಿಮ್ಮ ಮಾತಿಗೆ ಪ್ರತಿಯುಂಟೆ ? (ಶ್ರೀಕಾಪು. ೦೦೯). ೫. ಒಂದಕ್ಕೆ ಬದಲಾಗಿ ಇನ್ನೊಂದನ್ನು ಕೊಡುವುದು; ಮುಯ್ಯಿ : "ಪ್ರತಿಯು ತನಂ ಪ್ರತಿ ಪ್ರತಿಕೃತಿಯೆಸಲ್ಕೆ ಮುಯಿ" (ಕಬಂಗಿ. ೦೩೮-೩೬). ೬. ಎದುರಾದುದು; ವಿರುದ್ಧವಾದುದು : ಅವನ ಶೀರ್ವಾನಕ್ಕೆ ಪ್ರತಿ ಯಾವುದೂ ಇಲ್ಲ (ಕೂಕಿ). ೭. ಒಂದಕ್ಕೆ ಬದಲಾಗಿ ಇರುವ ಇನ್ನೊಂದು: 'ಪ್ರತಿನಿಧಾನ', 'ಪ್ರತಿನಿಧಿ' ಮರಾ. ೮. ಒಂದೊಂದು: ಪ್ರತಿಗೃಹಕುಂಕುಮಚ್ಛಟೆಗಳಿಂ ಪ್ರತಿಮಂದಿರರಂಗವಲ್ಲಿಯಿಂ ಪ್ರತಿನಿಲಯ ಪ್ರರೂಢಮಣಿತೋರಣದಿಂ ಪ್ರತಿಸದ್ಮವಾದ್ಯದಿಂ ಪ್ರತಿಭವನೋತ್ಸವ ಧ್ವಜದಿನಾ ಪೊಬಲೊಪ್ಪಿರೆ (ಜಗಂ. ೦೨-೩೯); ವರ್ಷಕ್ಕೆ ಮೂರರಿಂದ ಆರು ಸಲ ಇಲಿ ಬಾಣಂತಿಯಾಗುತ್ತದೆ. ಪ್ರತಿ ಹೆರಿಗೆಯಲ್ಲಿ ಆರರಿಂದ ಹತ್ತು ಮಕ್ಕಳು (ಬೀಕಿಸ್ಮ. ೧೩). ೯. ಒಬ್ಬೊಬ್ಬ : ಪ್ರತಿ ಮನುಷ್ಯನಿಗೂ ತನ್ನ ಕರ್ತವ್ಯ, ಜವಾಬ್ದಾರಿಗಳ ಅರಿವಿರಬೇಕು (ಕೂಕಿ). ೧೦. ದರ್ಜೆ; ಮಟ್ಟ : ಕೂಲಿಕಾರರು ಕಡಿಮೆ ಪ್ರತಿಯ ಒಕ್ಕಲಿಗರಿಗಿಂತ ವಾಡಿಕೆಯಾಗಿ ಹೆಚ್ಚು ಸುಖದಿಂದ ಇದ್ದಾರೆಂದು ಹೇಳಬಹುದು (ಕಹಾಗೆ. ೨೩೬); ಭೌತಿಕಶಾಸ್ತ್ರಗಳಿಗಿಂತ ಆಧ್ಯಾತ್ಮಿಕಶಾಸ್ತ್ರಗಳು ಗೂಢವೆನಿಸುವುವೆಂಬುದು ನಿಜ. ಆದರೆ ಅಷ್ಟು ಮಾತ್ರದಿಂದಲೇ ಅವು ಕಡಿಮೆ ಪ್ರತಿಯವು ಎಂದು ನಿರ್ಧರಿಸ ಲಾಗುವುದಿಲ್ಲ (ತ್ರಿಶಂಕ. ೦೦೬). ೧೧. ಒಂದು ಮೂಲಗ್ರಂಥದ ನಕಲು : ವರಾಹಮಿಹಿರನ ಬೃಹತ್‌ಸಂಹಿತೆಯಲ್ಲಿ, ಅದರ ಕೆಲವು ಪ್ರತಿ ಗಳಲ್ಲಿ ಮಾತ್ರ—ದ್ರವಿಡ ಪದಕ್ಕೆ ಬದಲು ದ್ರಮಿಡ ಎಂಬ ಅನುನಾಸಿಕದ ಉಚ್ಚಾರ ಪಡೆದ ಪದವಿದೆ (ದ್ರಾಶಿಶಿ. ೦೦೯); ನಾಡಿದ್ದಿನ ಹೊತ್ತಿಗೆ ನನಗೆ ಇದರ ಪ್ರತಿ ಬೇಕು (ಕೂಕಿ. ೯).

**ಪ್ರತಿ ನಿಲ್ಲು**=ವಿರುದ್ಧವಾಗಿ ನಿಲ್ಲು : ಆ ದುಷ್ಟನಿಗೆ ಪ್ರತಿನಿಲ್ಲುವವರು ಆ ಊರಿನಲ್ಲಿ ಯಾರೂ ಇಲ್ಲ (ಕೂಕಿ). **ಪ್ರತಿ ಮಾಡಿಸು**=ಮೂಲಕೃತಿ ಯನ್ನು ಯಥಾವತ್ತಾಗಿ ಬರೆಸು,—ನಕಲು ಮಾಡಿಸು : ಅತ್ತಿಮಬ್ಬೆ . . . ಅಚ್ಚಕನ್ನಡಕೃತಿಗಳಲ್ಲಿ ಒಂದೊಂದನ್ನೂ ಸಹಸ್ರಸಹಸ್ರವಾಗಿ ಪ್ರತಿ ಮಾಡಿಸಿದಳು (ದಾಕಶಿ. ೦೬೯). **ಪ್ರತಿ ಮಾಡು**=ಮೂಲಕೃತಿಯನ್ನು ಯಥಾವತ್ತಾಗಿ ಬರೆ,—ನಕಲು ಮಾಡು : ಹರಿಶಂಕರಾಖ್ಯನು ಶಿಷ್ಯ ಸನ್ಮಿತ್ರನು ಪ್ರತಿ ಮಾಡಿದನು ಕೃತಿಯಿದನು (ಶಂಣಾಕ. ೨೯೯-೦೦೯). **ಪ್ರತಿಯಿಡು**=ಸಮಾನನಾದ ವ್ಯಕ್ತಿಯನ್ನು ಹುಡುಕು: ಪ್ರತಿಯಿಡಲು ಬಾರದ ಮಹಾಗರ್ವಿತಹೃದಯನಂ ಕಪಟನಂ . . . ಸ್ವೈರಿಸಿ (ಶಸಪು. ೨೩-೯೦). **ಪ್ರತಿಯೆತ್ತು**=ಪ್ರತಿ ಮಾಡು : ಪುಸ್ತಕಭಂಡಾರಕ್ಕೆ ಹೋಗಿ ಈ ಪುಸ್ತಕದ ಭಾಗವನ್ನು ಪ್ರತಿಯೆತ್ತಿಕೊಂಡು ಬಂದೆ (ಕೂಕಿ).

[ಇ ಸಂಸ್ಕೃತದಲ್ಲಿ ಇದೊಂದು ಉಪಸರ್ಗಾವ್ಯಯ. 'ಪ್ರತಿಗಾನು', 'ಪ್ರತಿಮಾತು', 'ಪ್ರತಿಯೊಂದು', 'ಪ್ರತಿಯೊಬ್ಬ' ಮುಂತಾದುವುಗಳಲ್ಲಿ ಯಂತೆ ನಾಮಪ್ರಕೃತಿ ಮತ್ತು ಧಾತುಗಳೊಡನೆ ಸೇರಿದಾಗ ಬೇರೆಬೇರೆ ಅರ್ಥಗಳನ್ನು ಕೊಡುತ್ತದೆ]

**ಪ್ರತಿಕಂಟ** (ನಾ). ಪ್ರತಿಯೊಂದು ಬರಹ,—ಬರವಣಿಗೆ : ನಿರತಿಶಯೋನ್ನ ತಮತಿ ಭಾಸ್ಕರ ಸರಸಕವೀಂದ್ರರಚಿತಶಾಸನಮಂ ಚಿತ್ರರದಿಂ ಪ್ರತಿಕಂಟಂ ಸಾಕ್ಷರನಿಳಯಂ ತಿದ್ದಿ ಭಾಸ್ಕರಯ್ಯಂ ಬರೆದಂ (ಎಕ. ೦೯-೦-೯೩ : 1127). [ಸಂ.]

**ಪ್ರತಿಕಕ್ಷಿ** (ನಾ). ಎದುರಾಳಿ ; ಪ್ರತಿಸ್ಪರ್ಧಿ ; ವಿರೋಧಿ : ಮಣಿಗೆ ಒಬ್ಬ ಪ್ರತಿಕಕ್ಷಿ ಸಿಕ್ಕಿದ (ಸ್ವಾಬಿಸ್ಮೃ. ೦೬) ; ನಮ್ಮ ದಿನಗಳು ಕಳೆದ ಮೇಲೆ ಲಕ್ಷ್ಮಿಯು ಸಂತಾನ ತನ್ನದೆಂದು ಸಿಂಹಾಸನಕ್ಕೆ ಹೊಡೆದಾಡಿದರೆ ? ದೇಶದಲ್ಲಿ ಕಕ್ಷಿ ಪ್ರತಿಕಕ್ಷಿಗಳು ಎದ್ದರೆ ? (ಶಾಂಕಂ. ೨೫೦). [ಪ್ರತಿ+ಕಕ್ಷಿ]

**ಪ್ರತಿಕರ್ಮ** (ನಾ). ೧. ಪ್ರತ್ಯುಪಕಾರ ಮಾಡುವುದು ; ಪ್ರತಿಫಲ ನೀಡುವುದು. ೨. ಸೇಡು ತೀರಿಸಿಕೊಳ್ಳುವಿಕೆ ; ಪ್ರತೀಕಾರ. ೩. ವಿರೋಧ; ಪ್ರತಿಭಟನೆ. ೪. ಅಲಂಕಾರ ಮಾಡಿಕೊಳ್ಳುವುದು; ಸಿಂಗರಿಸಿಕೊಳ್ಳುವುದು : "ಆಕಲ್ಪಃ, ಮಂಡನಂ, ವೇಷಃ, ಪ್ರತಿಕರ್ಮ, ಪ್ರಸಾಧನಂ—ಈ ೫ ಶೃಂಗಾರಂಗೆಯ್ದುದು" (ಕಚಾಪು. ೬೯-೩೬೫). [ಸಂ. ಪ್ರತಿಕರ್ಮನ್]

**ಪ್ರತಿಕಾಯ** (ನಾ). (ಒಂದು ವಸ್ತು ಅಥವಾ ವ್ಯಕ್ತಿಯನ್ನು ಹೋಲುವ ಲೋಹ, ಶಿಲೆ ಮುಂತಾದುವುಗಳ) ಪ್ರತಿಮೆ ; ಪ್ರತಿ ರೂಪ : "ಪ್ರತಿಬಿಂಬಂ, ಪ್ರತಿರೂಪಂ . . . ಪ್ರತಿಕಾಯಂ . . . ಪ್ರತಿ ಚ್ಛಾಯಂ—ಈ ೯ ಪ್ರತಿಬಿಂಬದ ಪೆಸರ್" (ಚಾಪು. ೨೦-೦೬೦). [ಸಂ.]

**ಪ್ರತಿಕಾರ** (ನಾ). ಗ್ರಂಥದ ಪ್ರತಿಗಳನ್ನು ಬರೆದು ಸಿದ್ಧಪಡಿಸು ವವನು : ಪ್ರತಿಕಾರರ ಮತ್ತು ತಿದ್ದುಗಾರರ ಹೆಸರುಗಳೂ ಇಂದಿಗೂ ಇರುವುದನ್ನು ನೋಡಬಹುದು (ಕಕ್ಷಸಂ. ೨೦) ; ಓಲೆಗರಿಯ ಪ್ರತಿಕಾರರಿಗೆ ಬರಹಗಾರರೆಂದು ಕರೆಯುತ್ತಿದ್ದರು (ದ್ರಾಶಿಶಿ. ೩೯). [ಪ್ರತಿ+-ಕಾರ (<-ಕಾರ)]

**ಪ್ರತಿಕಾರ್ಯ** (ನಾ). ೧. ಮಾಡಿದಂದಕ್ಕೆ ಪ್ರತಿಯಾಗಿ ಮಾಡುವುದು ; ಪ್ರತಿಕ್ರಿಯೆ : ಹತದೇಹ ಹತಭುಜದ್ವಯ . . . ಹತಕೃತ್ಯಪ್ರತಿಕಾರದಮೊಬು ದುಂಟೇ ಗತಿಯಿಂ ಸಾಧಿಸುವುದಲ್ತೆ ತಾಂ ಪ್ರತಿಕಾರಂ (ಗದಾಯು. ೯-೨೩) ; ಪ್ರತಿಕಾರೋಪಾಯಮೇನಿಲ್ಲಿಗೆ ನುಡಿಯಿಂ (ಜಗಂ. ೬-೬೨). ೨. ಪರಿಹಾರ; ನಿವಾರಣೆ. ೩. [ವೈದ್ಯಶಾ] ರೋಗಪರಿಹಾರಕ್ಕೆ ಮಾಡುವ ಚಿಕಿತ್ಸೆ : 'ಪ್ರತೀಕಾರ' ಮರಾ. [ಸಂ.]

**ಪ್ರತಿಕೂಲ** (ಗು). ೧. ದಡಕ್ಕೆ ಎದುರಾದ. ೨. ಅನುಕೂಲವಲ್ಲದ ; ವ್ಯತಿರಿಕ್ತವಾದ ; ವಿರುದ್ಧವಾದ : ಪ್ರತಿಕೂಲಾನಿಲದಿಂ ಪತಾಕೆ ಮಗು ಟೆಂಬಂತಾಗೆ ಕೈಸನ್ನೆಯಿಂ . . . ಸಾರ್ಥದಿಂದುದು . . . ಪುಷ್ಪಕವಿಮಾನಂ

ದಂಡಕಾರಣ್ಯಮಂ (ಶಂರಾಕಶ. ೯-೬೩) ; ಪ್ರತಿಕೂಲಕವರ್ಗಮೋಘಂ ಪ್ರತಿಸಮಯಮನಂತಗುಣವಿಶೋಧಿಮಹಾಮಾರುತನಿಂ ಕಿಡೆ (ಶಾಕ್ಮ್ಯೆತ. ೩-೯೯) ; ಛಾಳಲಿಪಿಗಳ ಲೆಕ್ಕವನು ಪ್ರತಿಕೂಲವಿಧಿ ಪಲ್ಲಟಿಸಿ ಬರೆದಡೆ ಹೇಳ ಫಲವೇನು (ಉತ್ವ್ಯಗ. ೩-೨೯). (ನಾ). ೩. ಎದುರಂ ದಡ ; ಆಚೆಯ ದಡ. ೪. ಅನುಕೂಲವಲ್ಲದುದು ; ವ್ಯತಿರಿಕ್ತವಾದುದು ; ವಿರುದ್ಧವಾದುದು : "ಪ್ರತಿಕೂಲಂ, ಪ್ರತಿಲೋಮಂ, ಪ್ರತೀಪಂ, ಪ್ರಸವ್ಯಂ—ಈ ೪ ಪ್ರತಿಕೂಲಂ" (ಹಲಾಯು. ೦೨೨-೩೮) ; ಇಲ್ಲಿ ಕೊಟ್ಟ ಸಂಗತಿಗಳು ಇತಿಹಾಸಕ್ಕೆ ಪ್ರತಿಕೂಲವಿಲ್ಲ (ಕಶಾಇ. ೬೦). ೩, ೪ : ನಿಟ್ಟಿಸೆ ಕುಮುದ ಮೇಟಾಗಿಯುಂ ಕುಮುದವಿಲ್ಲಲ್ಲಿ ಪ್ರತಿಕೂಲಮುಂಟಾಗಿಯುಂ ಹೆಸರಿಡಲು ಪ್ರತಿಕೂಲವಿಲ್ಲಲ್ಲಿ (ಪಲಾ. ೩-೯೨). [ಸಂ.]

**ಪ್ರತಿಕೂಲತೆ** (ನಾ). ವ್ಯತಿರಿಕ್ತವಾಗಿರುವಿಕೆ ; ವಿರುದ್ಧವಾಗಿರುವಿಕೆ: ಅವಳ ಪ್ರತಿಕೂಲತೆಯನು ಅಂತರಿಸದೆಲ್ಲಮಂ ಪೇಳ್ದೊಡೆ (ಕೃಟಲಾ. ೦೦-೨೩). [ಸಂ. ಪ್ರತಿಕೂಲತಾ]

**ಪ್ರತಿಕೂಲದೈವ** (ನಾ). ೧. ವಿರುದ್ಧವಾದ ವಿಧಿ ; ದುರದೃಷ್ಟ : ಆಕೆಯು ಪ್ರತಿಕೂಲದೈವವಶಮನಾರ್ಥವಾಗಿ ಸೋಮತೀರ್ಥಕ್ಕೆ ಈಗ ತಾನೆ ಹೋಗಿರುವರು (ಶಾಕುಂತ. ೬-೦೦). ೨. ದುರದೃಷ್ಟಶಾಲಿ ; ದುರ್ದೈವಿ : ಪ್ರತಿಕೂಲದೈವನ್ನ ನೀಂ ಪ್ರತಿನೃಪರನುಕೂಲದೈವರ್ (ಗದಾಯು. ೩-೯೩): ಪ್ರತಿಕೂಲದೈವಮಾಗಾರು ಸಹಾಯಕರು ತಂದೆಯು ತಾಯಿಯ ಮಗನೆ (ಇಂಶಾತ. ೦೬೩-೩). [ಸಂ.]

**ಪ್ರತಿಕೂಲವರ್ಣ** (ನಾ). [ಕಾವ್ಯಮೀ] ಕಾವ್ಯಗಳಲ್ಲಿ ಬರಬಹುದಾದ ವಾಕ್ಯದೋಷಗಳಲ್ಲಿ ಒಂದು ; ರಸೋಚಿತವಲ್ಲದ ಅಕ್ಷರಗಳಿಂದ ಕೂಡಿರುವುದು ; ☞ ಶೃಂಗಾರ, ಕರುಣ, ಶಾಂತರಸಗಳನ್ನು ಪ್ರತಿಪಾದಿಸುವಾಗ ಮೃದುವಾದ ವರ್ಣಗಳೂ ರೌದ್ರ, ವೀರ, ಬೀಭತ್ಸರಸಗಳನ್ನು ಪ್ರತಿಪಾದಿಸುವಾಗ ಕಠೋರವಾದ ಅಕ್ಷರಗಳೂ ದೀರ್ಘಸಮಾಸವೂ ಇರಬೇಕೆಂಬ ನಿಯಮವಿದೆ. ಇದಕ್ಕೆ ವಿರುದ್ಧವಾಗಿರುವ ವರ್ಣಗಳಿಂದ ಕೂಡಿದ ವಾಕ್ಯವು ಪ್ರತಿಕೂಲವರ್ಣದೋಷವುಳ್ಳದಾಗುವುದು : ಪ್ರತಿಕೂಲವರ್ಣ—ಪ್ರಸಕ್ತವಾದ ರಸಕ್ಕೆ ಅನುಗುಣವಲ್ಲದ ಅಕ್ಷರಗಳಿರುವುದು (ಕೃಶಿ. ೨೨೯). [ಸಂ.]

**ಪ್ರತಿಕೂಲೋಕ್ತಿ** (ನಾ). ಅನುಕೂಲವಲ್ಲದ ನುಡಿ ; ವಿರುದ್ಧವಾದ ಮಾತು,—ವಚನ : ಪ್ರತಿಕೂಲೋಕ್ತಿಗಳೆನ್ನ ಮಾತುಗಳಿವಜ್ಞರ್ಗಂ ವಿವೇಕಾನ್ವಿತರ್ಗತಿಪಥ್ಯಂಗಳೆನಿಕ್ಕುಂ (ಶಾಕ್ಮ್ಯೆತ. ೨-೬೯). [ಸಂ.]

**ಪ್ರತಿಕೃತ** (ಗು). ೧. ಪ್ರತಿಯಾಗಿ ಮಾಡಿದ ; ಪ್ರತಿಫಲ ನೀಡಿದ. ೨. ಪ್ರತೀಕಾರ ಮಾಡಿದ ; ಸೇಡು ತೀರಿಸಿದ. ೩. ಪರಿಹರಿಸಿದ ; ನಿವಾರಿಸಿದ. ೪. [ವೈದ್ಯಶಾ] (ರೋಗ ಮುಂತಾದುವುಗಳಲ್ಲಿ) ಚಿಕಿತ್ಸೆ ಮಾಡಿದ. (ನಾ). ೫. ಅಡ್ಡಿ ; ಅಡಚಣೆ ; ವಿರೋಧ. ೬. ಪ್ರತಿಬಿಂಬ ; ಪ್ರತಿರೂಪ : "ಪ್ರತಿಬಿಂಬಂ, ಪ್ರತಿರೂಪಂ, ಪ್ರತಿಮಾನಂ, ಪ್ರತಿಕೃತಂ . . . ಪ್ರತಿಚ್ಛಾಯಂ—ಈ ೯ ಪ್ರತಿಬಿಂಬದ ಪೆಸರ್" (ಹಲಾಯು. ೨೦-೦೩೦). [ಸಂ.]

**ಪ್ರತಿಕೃತಿ** (ನಾ). ೧. ಪ್ರತಿಮೆ ; ವಿಗ್ರಹ : ಅಂತು ತನ್ನ ಮಾಡಿಸಿದ ಚೈತ್ಯಾಲಯಂಗಳೊಳ್ ಆದಿಭಟ್ಟಾರಕರಾದಿಯಾಗಿ ಭವಿಷ್ಯತ್ತೀರ್ಥಕರ ಪ್ರತಿಕೃತಿಗಳಂ ಪಂಚರತ್ನಮಯಂಗಳಂ ಮಾಡಿಸಿ (ಆಪು. ೦೬-೦ ವ) : ಅತಿಶಯ ಪಂಚರುಚಿಪ್ರತಿಕೃತಿಹರಿತಂ ತಾಮ್ರಕೃಷ್ಣನೀಲಸಿತಶ್ರೀಧೃತಮಾಗಿ ಸೂಯಿಯಾಣದ ವಿತಾನವಮಂ ಪೋಲ್ತುದು (ಶಾಂತಿಪು. ೦೦-೨೨). ೨. ಪ್ರತಿಬಿಂಬ ; ಪ್ರತಿಚಿತ್ರ : "ಆ ಪ್ರತಿಕೃತಿ ಪ್ರತಿಕಾಯಮಾ ಪ್ರತಿಪ್ರಾಣರುಂದೆನಲದುಂ ಪ್ರತಿಯಪ್ಪ ರೂಪೆನಿಕ್ಕುಂ" (ಮುಂಗಾ. ೬-೨೮) ; ಮುಗ್ಧದ ನೀಂ ಪ್ರತಿಕೃತಿಯ ವಲಂ ಪೊನ್ನೊಡವೆ ನನ್ನ ಸೀತಾಸ್ಥಿತಿಗೆ! (ಶ್ರೀರಾಮಾ. ೨೯೩-೨೮೦) : ಸುಭಾಷಿಣಿಯೂ ಅವಳ ಗಂಡ ರಮಣಬಾಬುವೂ ವಿಷವೃಕ್ಷದ ಕಮಲಮಣಿ ಶ್ರೀಶರ ಪ್ರತಿಕೃತಿಗಳು (ಬಂಕಿಮ. ೦೨೩). ೩. ಸದೃಶವಾದುದು ; ಸಮಾನವಾದುದು. ೪. ಒಂದಂ ಕೆಲಸದಿಂದ ಉಂಟಾಗುವ ಪರಿಣಾಮ,— ಪ್ರತಿಕ್ರಿಯೆ : ಸ್ಮೃತಿಶಕ್ತಿಯು ಸಾಲುಸಾಲಾಗಿ ನೆನಪುಗಳನ್ನೂ ಮಾನಸಿಕ ಪ್ರತಿಕೃತಿಗಳನ್ನೂ ತಂದೊದಗಿಸುತ್ತದೆ (ಪಶ್ಯಾ. ೦೨೦). ೫. ಪ್ರತಿಭಟನೆ ; ವಿರೋಧ. ೬. ಒಂದು ಕಾರ್ಯಕ್ಕೆ ಪ್ರತಿಯಾಗಿ ಮಾಡುವ ಕಾರ್ಯ ; ಮುಯ್ಯಿ : "ಪ್ರತಿಯಾತನಂ ಪ್ರತಿ ಪ್ರತಿಕೃತಿಯೆನಪ್ಪ ಮುಯ್ಯಿ" (ಶಬ್ದಮ. ೦೬೩-೩೩). [ಸಂ.]

**ಪ್ರತಿಕೃತಿಸು** (ಕ್ರಿ). ಪ್ರತಿಬಿಂಬಿಸು ; ಪ್ರತಿಫಲಿಸು : ಅದೊ ನದಿಯ ನೀರ್ ಮಿರುಗುತ್ತಿರೆ ಪಾದರಸದೊಲ್, ಪ್ರತಿಕೃತಿಸಿ ದಿವಾಕೀರ್ತಿಯಂ! (ಶ್ರೀರಾಮಾ. ೨೦೨-೨೨೦). [ಪ್ರತಿಕೃತಿ+—ಇಸು]

**ಪ್ರತಿಕೃಷ್ಟ** (ನಾ). ೧. ಹಿಂದಕ್ಕೆ ಎಳೆದುದು ; ಹಿಮ್ಮೆಟ್ಟಿಸಿದುದು. ೨. ಕಡೆಗಣಿಸಿದಂದು ; ತಿರಸ್ಕೃತವಾದುದು. ೩. ನೀಚ ; ಅಧಮ : "ನಿಕೃಷ್ಟಃ, ಪ್ರತಿಕೃಷ್ಟಃ . . . ಗರ್ಹ್ಯಃ ಅಣಕಃ, ೧೩ ಜಾತ್ಯಾಚಾರಗುಣಾದಿಗಳಿಂದ ಕಡಿಮೆಯಾದಂಥಾ ಅಧಮನ ಪೆಸರುಗಳು" (ಸಿದ್ಧಾಂತ. ೩೩೭). [ಸಂ.]

**ಪ್ರತಿಕ್ರಮಣ** : (ನಾ). ೧. ಮುಂದಕ್ಕೆ ಹೋಗುವುದು. ೨. [ಜೈನ] ಸಾಧುಗಳಿಗೆ ಹೇಳಿರುವ ಇಪ್ಪತ್ತೆಂಟು ಮೂಲಗುಣಗಳಲ್ಲಿ ಒಂದು ; ಪ್ರಮಾದದಿಂದ ಮಾಡಿದ ಪಾಪಗಳನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಗುರುಗಳ ಸನ್ನಿಧಿಗೆ ಬಂದು ಪಶ್ಚಾತ್ತಾಪಪೂರ್ವಕವಾಗಿ ಒಪ್ಪಿಕೊಳ್ಳುವುದು : ಪರಮಾಲೋಚನದೊಳ್ ಪ್ರತಿಕ್ರಮಣದೊಳ್ . . . ಶುದ್ಧಿ ತಳ್ತಿರೆ ದೋಷಪ್ರತಿಕಾರಸಾರತಪಮಂ ತತ್ತಾಪಸಂ ತಾಳ್ದಿದಂ (ಸುಕುಮಾ. ೯-೦೩). 'ಪಡಿಕಮಣ' ಪರಾ. ☞ ಬೌದ್ಧರಲ್ಲೂ ಈ ತಪ್ಪೊಪ್ಪಿಗೆಯ ಪ್ರಾಯಶ್ಚಿತ್ತವಿದೆ. [ಸಂ.]

**ಪ್ರತಿಕ್ರಿಯೆ** (ನಾ). ೧. ಒಂದು ಕ್ರಿಯೆಯಿಂದ ಉಂಟಾಗುವ (ಒಳ್ಳೆಯ ಅಥವಾ ಕೆಟ್ಟ) ಪರಿಣಾಮ : ಅವನ ಈ ಹೆದರಿಕೆಯು ಆ ಹತ್ತೆಂಟು ದಿನಗಳು ಮಾತ್ರ ಸ್ವಲ್ಪ ಪ್ರತಿಕ್ರಿಯೆಯನ್ನುಂಟು ಮಾಡಿದ್ದರೂ ಅದರಿಂದ ಶಾಶ್ವತವಾದ ಯಾವ ಉಪಯೋಗವೂ ಉಂಟಾಗಲಿಲ್ಲ (ಜಕಸ. ೦೦೬). ೨. ವಿರುದ್ಧವಾದ ಕಾರ್ಯ,— ಕೆಲಸ : ಓದುವುದನ್ನು ಮಾಡಲೇಕೂಡದೆಂದು ಡಾಕ್ಟರರು ವಿಧಿಸಿದ್ದರು. ಅದರ ಪ್ರತಿಕ್ರಿಯೆಯೆಂದು ಆಕೆ ಆ ಅವಧಿಯಲ್ಲಿ . . . ಒಂದು ನಾಟಕವನ್ನೂ ಬರೆದಿದ್ದಳು (ಪ್ರಬಂಧ.೬೪); ಮೋನಪ್ಪನಾಯ್ಕರು ಅಂಗಡಿ ಬಿಟ್ಟು ಹೋದದ್ದೇ ಅವರೊಡನೆ ಆದ ಚರ್ಚೆಗೆ ಪ್ರತಿಕ್ರಿಯೆ ಸುರುವಾಗಿತ್ತು (ಮೂರುದಾ. ೨೩೦). ೩. ಸೇಡು ತೀರಿಸಿಕೊಳ್ಳುವಿಕೆ; ಪ್ರತೀಕಾರ. ೪. ವಿರೋಧ; ಪ್ರತಿಭಟನೆ. ೫. [ವೈದ್ಯಶಾ] ರೋಗನಿವಾರಣೋಪಾಯ ; ಚಿಕಿತ್ಸೆ : "ಚಿಕಿತ್ಸಾ, ರುಕ್ಪ್ರತಿಕ್ರಿಯಾ—ರೋಗಕ್ಕೆ ಶಾಮಕವಾಗಿ ಔಷಧಾದಿ ಪ್ರತಿಕ್ರಿಯೆಗಳನ್ನು ಮಾಡುವಿಕೆ" (ಸಿದ್ಧಾಂತ. ೦೬೨); ರಾಜಕೀಯದ ಸಹಜವಿಷಕ್ಕೆ ಸತ್ಯಾಗ್ರಹದ ಸಹಜ ಅಮೃತವನ್ನು ಬಿಟ್ಟರೆ ಬೇರೆ ಪ್ರತಿಕ್ರಿಯೆ ಇಲ್ಲವೆಂದು ಹೇಳುತ್ತಾರೆ (ಗಾಬಿಕ. ೦೪). [ಸಂ. ಪ್ರತಿಕ್ರಿಯಾ]

**ಪ್ರತಿಕ್ಷಣಂ** (ಅ). ಪ್ರತಿಯೊಂದು ಕ್ಷಣದಲ್ಲೂ ; ಕ್ಷಣಕ್ಷಣದಲ್ಲೂ ; ಮತ್ತೆ ಮತ್ತೆ: "ಪ್ರತಿಕ್ಷಣಂ, ಅಭೀಕ್ಷ್ಣಂ, ಭೂಯಃ, ಅಸಕೃತ್, ಮುಹುಃ— ಈ ೫ ಮಗುಟೆ ಮಗುಟೆ" (ಹಲಾಯು. ೬೦-೩೯) ; ಪ್ರತಿಕ್ಷಣಂ ವಿಶರಾರುಗಳ್ ಚಿತ್ತಕ್ಷಣಂಗಳ್ ಪೂರ್ವಾಪೂರ್ವಚಿತ್ತವಿಶೇಷಪ್ರಭವಂಗಳ್ ಪ್ರಬಂಧದಿಂದಂ ಪ್ರವರ್ತಿಸುವುವು (ಶಾಂತಿಪು. ೬-೦೯೨ ವ). [ಸಂ.]

**ಪ್ರತಿಕ್ಷಿಪ್ತ** (ಗು). ೧. ತಿರಸ್ಕಾರ ಹೊಂದಿದ ; ನಿರಾಕೃತವಾದ.

೨. ಆಕ್ಷೇಪಣೆಯನ್ನು ಹೊಂದಿದ; ನಿಂದಿತವಾದ. ೩. ವಿರೋಧಕ್ಕೆ ಒಳಗಾದ; ಪ್ರತಿಭಟನೆ ಹೊಂದಿದ. ೪. ಪರಿಹಾರವಾದ; ನಿವಾರಣೆಯಾದ. ೫. ಕಳುಹಿಸಿದ; ರವಾನಿಸಿದ. (ನ). ೬. ತಿರಸ್ಕರಿಸಿದುದು; ನಿರಾಕೃತವಾದುದು: "ಪ್ರ(ತ್ಯಾ)ಖ್ಯಾತಂ, ಪ್ರತಿಕ್ಷಿಪ್ತಂ, ಪ್ರತ್ಯಾದಿಷ್ಟಂ, ನಿರಾಕೃತಂ ... ಪರಿಹೃತಂ— ಈ ೭ ಪರಿಹರಿಸಲ್ಪಟ್ಟುದು" (ಶಬ್ದಮ. ೦೦೬-೭೯). ೭. ಆಕ್ಷೇಪಣೆಯನ್ನು ಹೊಂದಿದವನು; ನಿಂದಿತನಾದವನು: "ಅಧಿಕ್ಷಿಪ್ತಃ, ಪ್ರತಿಕ್ಷಿಪ್ತಃ —೨ ಆಕ್ಷೇಪಿಸಲ್ಪಟ್ಟವನ ಪೆಸರುಗಳು" (ಸಿದ್ಧಾಂತ. ೩೩೯). ೮. (ಇನ್ನೊಬ್ಬರು) ಕಳುಹಿಸಿದವನು; ಪ್ರೇಷಿತ. ೯. ನಿರಾಕರಣೆ: "ನಿರಾಕೃತಿ ಪ್ರತಿಕ್ಷಿಪ್ತವೆನಲು" (ಚೂಡಾಮ. ೩೫೬-೯). [ಸಂ.]

**ಪ್ರತಿಕ್ಷೇತ್ರ** (ನಾ). ಒಂದು ಭೂಮಿಯನ್ನು ಕೊಟ್ಟು ಅದರ ಬದಲಾಗಿ ತೆಗೆದುಕೊಂಡ ಭೂಮಿ, ಹೊಲ, ಗದ್ದೆ ಮೊದಲಾದುವು; ವಿನಿಮಯವಾಗಿ ತೆಗೆದುಕೊಂಡ ಭೂಮಿ: ಆಚಾರ್ಯ್ಯ ಅಪ್ಪಯ್ಯನು ಮಗ ರಂಗಯ್ಯನು ಅಳಿಯ ಕಸವದೇವನು ತಂಮ ಇತಿಕೆಜ್ಜೆಯಂ ಕೊಟು ಹಿರಿಯಕೆಜ್ಜೆಯ ಕೆಳಗಣ ೯ಡೆಯ ಗದ್ದೆ ನಾಗುಸಲಗೆಯಂ ಪ್ರತಿಕ್ಷೇತ್ರವಂ ಕೊಂಡರು (ಎಕ. ೪, ನಾಸಕ.೦೩೦-೩೨; 1156 ?). [ಸಂ.]

**ಪ್ರತಿಗಾಣು** (ಕ್ರಿ). ಬೇರೊಬ್ಬರನ್ನು ಕಾಣು; ಮತ್ತೊಬ್ಬರನ್ನು ನೋಡು: ಯತಿಗಳೊಳು ನಿನ್ನಂಥವರುಗಳ ಪ್ರತಿಗಾಣೆನು ಈ ಕ್ಷಿತಿಯೊಳಗೆ ಯತಿರಾಯ (ಜಗನ್ನಾ. ೯೩). [ಪ್ರತಿ + ಕಾಣು (< ಕಾಣ್)]

**ಪ್ರತಿಗಾಮಿ** (ಗು). ೧. ಎದುರಾಗಿ ಹೋಗುವ; ವಿರುದ್ಧವಾಗಿ ಹೋಗುವ. ೨. (ಸಂಘ, ಸರ್ಕಾರ, ರಾಜಕೀಯಪಕ್ಷ ಮೊದಲಾದುವುಗಳಲ್ಲಿ) ವಿರುದ್ಧಾಭಿಪ್ರಾಯವನ್ನು ಹೊಂದಿರುವ; ಆಡಳಿತಕ್ರಮದ ರೀತಿನೀತಿಗಳನ್ನು ವಿರೋಧಿಸುವ: ೧೯೧೧ರಲ್ಲಿ ವಿದೇಶೀಯ ಬ್ಯಾಂಕರ ಜನ ಪ್ರತಿಗಾಮಿ ನಾಯಕನಾದ ಯುವಾನ್-ಶಿ-ಕೈ ಎಂಬವನಿಗೆ ೨೫೦ ಲಕ್ಷ ಪವನಿನ ಸಾಲ ಕೊಟ್ಟಿತು (ಚೀನಾ. ೦೯). (ನಾ). ೩. ದೇಶದ ಪ್ರಗತಿಗೆ ವಿರುದ್ಧವಾದುದು; ರಾಷ್ಟ್ರದ ಕಲ್ಯಾಣಕ್ಕೆ ವ್ಯತಿರಿಕ್ತವಾದುದು: ವಿಜ್ಞಾನ ಯುಗವಾಗಲೂ ಪ್ರಗತಿಮುಖವಾದುದು. ಧನದ ವಾಣಿಜ್ಯ ಪ್ರತಿಗಾಮಿಯಾದುದು (ಧನಶಾ. ೩೯); ತನ್ನ ಹಿತವನ್ನೇ ಸ್ವಾರ್ಥವನ್ನೇ ಅದು ಮೊದಲು ಗಮನಿಸತೊಡಗುತ್ತದೆ. ಅಂದಿನಿಂದ ಅದೇ ವರ್ಗವು ಪ್ರಗತಿವಿರೋಧಿಯಾಗುತ್ತದೆ, ಪ್ರತಿಗಾಮಿಯಾಗುತ್ತದೆ (ಜನತಾ. ೯೯). ೪. ವಿರುದ್ಧಪಕ್ಷಕ್ಕೆ ಸೇರಿದವನು; ಪ್ರತಿಪಕ್ಷಕ್ಕೆ ಸೇರಿದವನು: ಕೈಲಾಸದಲ್ಲಿ ಕಮ್ಯೂನಿಸ್ಟರನ್ನು ಕಂಡು ಪುರೋಗಾಮಿಗಳಂತೆಯೇ ಪ್ರತಿಗಾಮಿಗಳೂ ಹೌಹಾರಬಹುದು (ಕೈಲಾಸ ೦ ಮುನ್ನುಡಿ). [ಸಂ. ಪ್ರತಿಗಾಮಿನ್]

**ಪ್ರತಿಗಾಮಿಪಕ್ಷ** (ನಾ). ಒಂದು ಪಕ್ಷವು ಪ್ರಗತಿಪರವೆಂದು ಭಾವಿಸಿರುವ ತತ್ತ್ವಕ್ಕೆ ವಿರುದ್ಧವಾದ ಪಕ್ಷ; ವಿರೋಧ ಪಕ್ಷ: ಸಂಪ್ರದಾಯಬದ್ಧವಾದ ಪ್ರತಿಗಾಮಿಪಕ್ಷದ ಪತ್ರಿಕೆಯೊಂದರಲ್ಲಿ ಕಳೆದ ಹನ್ನೆರಡು ತಿಂಗಳಿಂದ ಪ್ರಕಟವಾಗುತ್ತಿದ್ದ ಅಭಿಪ್ರಾಯವನ್ನವನು ಓದಿದ್ದನು (ಕುಕಟು. ೨೫೯). [< ಸಂ. ಪ್ರತಿಗಾಮಿಪಕ್ಷ]

**ಪ್ರತಿಗೈ** (ಕ್ರಿ). ಪ್ರತಿಕ್ರಿಯೆಯನ್ನು ತೋರಿಸು._ವ್ಯಕ್ತಪಡಿಸು: ಮೆಲ್ಲಿಸಿ ನಾನಾರವಕ್ಕೆ ಪ್ರತಿಗೈವವಂ ಚರ್ಮಣಂ ವಾಗ್ಮಿಯಕ್ಕುಂ (ಜಂಗಮ. ೦೦೬-೦೩). [ಪ್ರತಿ + ಗೈ (< ಕೆಯ್₁)]

**ಪ್ರತಿಗ್ರಹ** (ನಾ). ೧. ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ ಮತ್ತು ಪ್ರತಿಗ್ರಹಗಳೆಂಬ ಬ್ರಾಹ್ಮಣನ ಷಟ್ಕರ್ಮಗಳಲ್ಲಿ ಒಂದು; ದಾನವನ್ನು ತೆಗೆದುಕೊಳ್ಳುವುದು,_ಸ್ವೀಕರಿಸುವುದು: ಅಂತು ಭವಿಷ್ಯದ್ವಿಜನ್ಮವರ್ಣಕ್ಕೆ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹ ಯಜನ ಯಾಜನ ವಿಶಿಷ್ಟವೃತ್ತಿಯುಮಂ ... ನಿಜಮಿಸಿ (ಆಪು. ೬-೭೩ ವ); ಎಮಗಂ ಪ್ರತಿಗ್ರಹ ಸಲ್ಲದು (ಶಕಾಗ. ೬-೬೬); ಕ್ಷತ್ರವೈಶ್ಯಾದಿಗಳು ಕೊಡುವರು ಶತ್ರುಪ್ರತಿಗ್ರಹ ಯೋಗ್ಯಮಲ (ಉಪ್ಪಾ. ೬-೦೬). ೨. ಮತ್ತೊಬ್ಬರು ಕೊಟ್ಟುದನ್ನು ತೆಗೆದುಕೊಳ್ಳುವುದು._ಸ್ವೀಕರಿಸುವುದು: ಪ್ರಾಚೀನ ಕಾಲದಲ್ಲಿ ... ಪ್ರತಿಗ್ರಹಕ್ಕೇ ಪ್ರಾಶಸ್ತ್ಯವಿರಲಿಲ್ಲ (ಅರ್ಥಶಾ. ೯೩). ೩. ದಾನ; ಕೊಡುಗೆ. ೪. ದಾನವನ್ನು ಸ್ವೀಕರಿಸುವವನು. ೫. (ಒಬ್ಬ ವ್ಯಕ್ತಿಯನ್ನು) ಸ್ನೇಹಪೂರ್ವಕವಾಗಿ ಅಥವಾ ಕನಿಕರದಿಂದ ಬರಮಾಡಿಕೊಳ್ಳುವುದು. ೬. ಸೈನ್ಯದ ಹಿಂಭಾಗ: "ಪಡೆಯ ಹಿಂದಣ ಮಯ್ಯಲ್ಲಿಯುಂ ಪ್ರತಿಗ್ರಹವೆಂಬುದು" (ಶಬ್ದಮ. ೦೩೩-೬). ೭. ಉಗುಳುವ ಪಾತ್ರೆ; ಪೀಕದಾನಿ: 'ಪ್ರತಿಗ್ರಾಹ' ಪದಾ. [ಸಂ.]

**ಪ್ರತಿಗ್ರಹಿಸು** (ಕ್ರಿ). ೧. ದಾನವಾಗಿ ತೆಗೆದುಕೊಳ್ಳು: ಮುಕ್ತಿಕಿರಲ್ಲೆರ್ ಕೊಳಗ ಮತ್ತವಿರ್ಬಳ್ಳ ರನ್ನವುಂ ಪೊನ್ನ ಹೇಱಂ ಚಿನ್ನಾಕಳಂ ಪ್ರತಿಗ್ರಹಿಸಿ ರಾವಣನಂ ವರಸಿ ಬಿಟ್ಟಿಂದರ್ (ರಾಮಾಕ. ೦೬೬-೦೩). ೨. ಒಪ್ಪಿಕೊಳ್ಳು; ಅಂಗೀಕರಿಸು: ಆ ರಾಜ ಋಷಿವಾಕ್ಯವಂ ಕೇಳಿ ಹಾಗೆ ಆಗಲಿ ಎಂದು ಪ್ರತಿಗ್ರಹಿಸಿದನು (ಕಳನೂ. ೨೯೨-೬). ೩. ಬರಮಾಡಿಕೊಳ್ಳು; ಸ್ವೀಕರಿಸು: ಗರ್ಭಿಣಿಯಾದ ಶುಕಿಯನ್ನು ಧರ್ಮಾಚರಣಾರ್ಥವಾಗಿ ಪ್ರತಿಗ್ರಹಿಸುವುದು (ಶಾಲಂಕ. ೩೩-೯). [ಸಂ. ಪ್ರತಿಗ್ರಹಣ + —ಇಸು₁]

**ಪ್ರತಿಗ್ರಾಹ** (ನಾ). ಉಗುಳುವ ಪಾತ್ರೆ; ಪಡಿಗ; ಪೀಕದಾನಿ: "ಪ್ರತಿಗ್ರಾಹಃ, ಪತದ್ಗ್ರಹಃ — ೨ ಪಡಿಗದ ಪೆಸರು" (ಸಿದ್ಧಾಂತ. ೨೦೦). [ಸಂ.]

**ಪ್ರತಿಗ್ರಾಹಕ** (ನಾ). ಅಂಗೀಕರಿಸುವವನು: ಪ್ರಾಣಲಿಂಗಪ್ರತಿಗ್ರಾಹಕನಾದ ಬಳಿಕ ಲಿಂಗವಿರಹಿತವಾಗಿ ನಡೆವ ಪರಿಯನ್ನೆಂತೊ (ಬಸವ. ೭೬೬). [ಸಂ.]

**ಪ್ರತಿಘ** (ನಾ) ೧. ನಿರಾಕರಣೆ: ತಿರಸ್ಕಾರ. ೨. ಪ್ರತಿಭಟನೆ; ವಿರೋಧ. ೩. ಪರಸ್ಪರ ಹೊಡೆದಾಟ, – ಕದನ. ೪. ಸಿಟ್ಟು; ಕೋಪ; ಕ್ರೋಧ: "ಕೋಪಃ, ಕ್ರೋಧಃ, ಅಮರ್ಷಃ, ರೋಷಃ, ಪ್ರತಿಘಃ —ಈ ೫ ಮುನಿಸು" (ಶಬ್ದಮ.೩೯-೨೦೬); ಆಸ್ಯದಿಂ ಪ್ರತಿಘದೊಳೊತ್ತಿ ಬೀಸುವುದದೊಂದು ಮದದ್ವಿರದಂ ಮಹಾಹಿಯಂ (ಜಗ. ೦೬-೬). ೫. ಶತ್ರು; ವೈರಿ. [ಸಂ.]

**ಪ್ರತಿಘಾತ** (ನಾ). ೧. ನಿರಾಕರಣೆ; ತಿರಸ್ಕಾರ. ೨. ವಿರೋಧ; ಪ್ರತಿಭಟನೆ. ೩. ಹೊಡೆತಕ್ಕೆ ಪ್ರತಿಯಾಗಿ ಹೊಡೆಯುವುದು: "ಪ್ರತಿಘಾತೇ — ಮಗುಳ್ಚಿ ಹೊಡೆವಲ್ಲಿ" (ಶಬ್ದ. ೦೫೦); ಪ್ರತಿಘಾತ ಪ್ರಕಟಾಸ್ತ್ರಶಸ್ತ್ರಚಯದಿಂ ದೈತೇಯಸಾಮಂತರದ್ಭುತಮಾಯಾಮಯ ಶಕ್ತಿಯಂ ಕೆಡಿಸಿ ಧುವಾನಕ್ಕೆ ಬಂದಾಹವಪ್ರತಿಮಲ್ಲಂ ... ಕ್ರೋಧಾನಳಂಗಿತ್ತನಾಹುತಿಯಂ (ಅಜಿತ. ೦೯-೦೦); ಪ್ರತಿಘಾತಾಯತರೋಲಂಬಂಗಳ ರಭಣಜಂಕಾರಚಣ್ಡಕ್ಷಕಾಪತಿ ... ರಮ್ಯಮಾಯ್ತು (ಸೂಕ್ತಿಸು. ೦೯-೬೦). ೪. ಸಂಘರ್ಷ; ತಿಕ್ಕಾಟ: ಸಾವಿರಾರು ವರ್ಷಗಳಿಂದ ಭಾರತಕ್ಕೆ ನಾನಾ ಸಂಸ್ಕೃತಿಗಳು ಹರಿಯುತ್ತಿವೆ. ಕೆಲವು ತೀಕ್ಷ್ಣವಾದ ಪ್ರತಿಘಾತವನ್ನೂ ಉಂಟುಮಾಡಲು ಯತ್ನಿಸಿದವು (ಮುನ್ನಾರಿ. ೦೨೨ ಶಿಕ್ಷಣ). ೫. ಹೊಡೆತ; ಏಟು: ನಡುಗೆ ಧರಾತಲಂ ಕದಳಿಕಾಪರಿಘಪ್ರತಿಘಾತದಿಂ (ಕೂಕಾಮ. ೦೩-೬೩). ೬. ಹೊಡೆತದಿಂದ ತಪ್ಪಿಸಿಕೊಳ್ಳುವುದು. ೭. ಹಾಳುಮಾಡುವುದು; ನಾಶಪಡಿಸುವುದು. ೮. [ಗಣಿತ] ಒಂದು ಬಗೆಯ ಗಣನಾಪದ್ಧತಿ; ಲಘುಗಣಕ; ಲೆಕ್ಕಾಚಾರ ಮಾಡುವುದನ್ನು ಸುಲಭಗೊಳಿಸಲು ಗುಣಾಕಾರ ಭಾಗಾಕಾರಗಳಿಗೆ ಬದಲಾಗಿ ಸಂಕಲನ ವ್ಯವಕಲನವನ್ನೂ, ಸಂಖ್ಯಾಘಾತ ಮತ್ತು ಘಾತಮೂಲವನ್ನೂ ಕಂಡುಹಿಡಿ

ಯುವುದಕ್ಕೆ ಬದಲಾಗಿ ಗುಣಾಕಾರ ಭಾಗಾಕಾರಗಳನ್ನೂ ಉಪಯೋಗಿಸುವಂತೆ ಕೋಷ್ಟಕವನ್ನು ರಚಿಸಿರುವ ಗಣನಾಸೌಲಭ್ಯಪದ್ಧತಿ : ಎರಡು ಬಹುಮುಖ್ಯವಾದ ಹೊಸ ಭಾವನೆಗಳು ಮೂಡಿದುವು . . . ಎರಡನೆಯದು, ಅಂಕಗಣಿತ ಬೀಜಗಣಿತಗಳೆರಡಕ್ಕೂ ವಿಶೇಷ ಉಪಯೋಗವಾದ Logarithms ("ಪ್ರತಿಘಾತಗಳು") ಎಂಬ ಭಾವನೆ (ಗಣಿತ. ೦೦೩). [ಸಂ.]

**ಪ್ರತಿಘಾತಕೋಷ್ಟಕ** (ನಾ). [ಗಣಿತ] ಲಘುಗಣಕದ ಪಟ್ಟಿ : ಪ್ರತಿಘಾತಕೋಷ್ಟಕಗಳೂ (tables of logarithms), ಕೊಟ್ಟ ಪ್ರತಿಘಾತವುಳ್ಳ ಸಂಖ್ಯೆಯ ಕೋಷ್ಟಕಗಳೂ . . . ಇದ್ದರೆ, ಇವುಗಳ ಸಹಾಯದಿಂದ ಅಂಕಗಣಿತದ ಪರಿಕರ್ಮಗಳು ಎಷ್ಟು ಸುಲಭವಾಗುತ್ತವೆ ಎಂಬುದನ್ನು ಉದಾಹರಿಸೋಣ (ಗಣಿತ. ೦೦೩). [ಪ್ರತಿಘಾತ+ಕೋಷ್ಟಕ]

**ಪ್ರತಿಘಾತನ** (ನಾ). ಕೊಲ್ಲುವಿಕೆ ; ವಧೆ : "ಪ್ರಮಾಪಣಂ, ನಿಬರ್ಹಣಂ . . . ವಿಶಸನಂ, ಮಾರಣಂ, ಪ್ರತಿಘಾತನಂ . . . ವಧಃ—ಈ ೩೦ ಕೊಲ್ಲುವುದಕ್ಕೆ ಹೆಸರುಗಳು ; ಸಂಹಾರ ಮಾಡುವಿಕೆ" (ಶಿದ್ಯಾಂತಿ. ೨೬೨). [ಸಂ.]

**ಪ್ರತಿಘೋಷ** (ನಾ). ಮಾರ್ದನಿ ; ಪ್ರತಿಧ್ವನಿ : ಕುವರನ ಬಾಹಾಸ್ಫಾಲನರವಮುರ್ದಿಸೆಯಗಿದು ಪಾಡಿ ಬಿಡದೊದದುತ್ತಿರ್ದವೊಲಾದುದು ತದ್ಗಹ್ವರನಿಪಹಪ್ರಭವಾತಿಭೀಷಣಂ ಪ್ರತಿಘೋಷಂ (ಶಂಕ್ರತ್. ೩-೬೬). [ಸಂ.]

**ಪ್ರತಿಚಿತ್ರ** (ನಾ). ಮೂಲಚಿತ್ರದ ಪ್ರತಿಕೃತಿ : ಅವರು ರ್‍ಯಾಫೇಲ್, ಮೈಕೇಲ್ಎಂಜೆಲೊ . . . ಅವರ ಪ್ರತಿಬಿಂಬಗಳಾಗಿದ್ದರೆ ಜಗತ್ತು ಮೂಲಕೃತಿಗಳಿಗೆ ಗೌರವವೀಯುತ್ತಿತ್ತೇ ವಿನಾ ಪ್ರತಿಚಿತ್ರಗಳಿಗಲ್ಲ (ಕಾಳಿ. ೩೬೦). [ಸಂ.]

**ಪ್ರತಿಚ್ಛಂದ** (ನಾ). ೧. ಒಂದರಂತೆ ಮತ್ತೊಂದು ಇರುವುದು; ಪ್ರತಿಬಿಂಬ : "ಪ್ರತಿಬಿಂಬಂ, ಪ್ರತಿರೂಪಂ, ಪ್ರತಿಮಾನಂ, ಪ್ರತಿಕೃತಂ, ಪ್ರತಿಚ್ಛಂದಂ . . . ಪ್ರತಿಚ್ಛಾಯಂ—ಈ ೯ ಪ್ರತಿಬಿಂಬದ ಪೆಸರ್" (ಹಲಾಯು. ೨೦-೦೪೦) ; ಶ್ರೀಮತಿಯಂ ಒರಸಿಯೊಳ್ ಕಳಾಭಿನೂತಚಂದ್ರಪ್ರತಿಚ್ಛಂದಂ ಚಂದ್ರನೆಂಬೊಂ ಮಗನಂ ಪಡೆದು ಸಂತಸದಿಂದಿರ್ಪಿನಂ (ಶಾಂತಿ. ೬-೨೦ ವ). ೨. ವಿಗ್ರಹ; ಪ್ರತಿಮೆ. ೩. ಪ್ರತಿನಿಧಿ. [ಸಂ.]

**ಪ್ರತಿಚ್ಛಂದತೆ** (ನಾ). ಸಮಾನವಾಗಿರುವಿಕೆ; ಪ್ರತಿರೂಪವಾಗಿರುವಿಕೆ: ಮುನೀಂದ್ರಕಳಾಪಕ್ಕೆ ನಿಮಿರ್ಚಿದಂ ಪ್ರತಿಚ್ಛಂದತೆಯಂ (ಶಾಂತಿ. ೯-೦೦೪). [ಸಂ. ಪ್ರತಿಚ್ಛಂದತಾ]

**ಪ್ರತಿಚ್ಛನ್ನ** (ಗು). ೧. ಮುಚ್ಚಿದ; ಹೊದಿಸಿದ. ೨. ಮುಚ್ಚಿಟ್ಟ; ಅಡಗಿಸಿದ ; ಮರೆಮಾಡಿದ. ೩. ಆವರಿಸಿದ ; ಆಕ್ರಮಿಸಿದ. ೪. (ಉಡುಪನ್ನು) ಧರಿಸಿದ; ತೊಟ್ಟ. [ಸಂ.]

**ಪ್ರತಿಚ್ಛಾಯ** (ನಾ). ೧.—ಪ್ರತಿಚ್ಛಾಯೆ ೧ : "ಪ್ರತಿಬಿಂಬ, ಪ್ರತಿರೂಪಂ . . . ಪ್ರತಿಯಾತನಂ, ಪ್ರತಿಚ್ಛಾಯಂ — ಈ ೯ ಪ್ರತಿಬಿಂಬದ ಪೆಸರ್" (ಹಲಾಯು. ೨೦-೦೪೦). ೨.—ಪ್ರತಿಚ್ಛಾಯೆ ೨: "ಪ್ರತಿಬಿಂಬಮೂ ಪ್ರತಿಚ್ಛಾಯಮೂ ಪ್ರತಿನಿಧಿ . . . ಪ್ರತಿಪ್ರಾಣಮೆಂದೆನಲದುಂ ಪ್ರತಿಯಪ್ಪ ರೂಪೆನಿಕ್ಕುಂ" (ಶಬ್ದಮ. ೬-೨೮). [ಸಂ. ಪ್ರತಿಚ್ಛಾಯಾ]

**ಪ್ರತಿಚ್ಛಾಯೆ** (ನಾ). ೧.—ಪ್ರತಿಬಿಂಬ ೧: ಮಂಗಳಮಯಂ ನೋಡಿದಂ ವಿಷದ ಪರಳಮಂ ನೋಡಲದಜ್ಜೊಳ್ ಪ್ರತಿಚ್ಛಾಯೆ ತೋಱುತ್ತುಮಿರೆ (ಜಗ. ೦-೨೯). ೨. ಒಂದರಂತೆಯೇ ಒಂದು ಇರುವ ಆಕೃತಿ ; ಪ್ರತಿರೂಪ. ೩. ವಿಗ್ರಹ ; ಪ್ರತಿಮೆ : "ಪ್ರತಿಮಾನಂ . . . ಪ್ರತಿಚ್ಛಾಯಾ, ಪ್ರತಿಕೃತಿ, ಅರ್ಚಾ, ಪ್ರತಿನಿಧಿ—೮ ವಿಷ್ಣು ಮೊದಲಾದವರ ಆಕಾರಗಳಿಗೆ ಸಮನಾಗಿ ಶಿಲಾದಿಗಳಿಂದ ಮಾಡಿದ ಪ್ರತಿಮೆ ಹೆಸರು" (ಶಿದ್ಯಾಂತಿ. ೩೦೬). [ಸಂ. ಪ್ರತಿಚ್ಛಾಯಾ]

**ಪ್ರತಿಜಾಗರ** (ನಾ). ಎಚ್ಚರಿಕೆಯಿಂದ ಇರುವುದು ; ಗಮನವಿಟ್ಟಿರುವುದು : "ಅವೇಕ್ಷಾ, ಪ್ರತಿಜಾಗರಃ—ಈ ಎರಡು ಎಚ್ಚತ್ತಿರ್ಪುದು" (ಹಲಾಯು. ೦೨೯-೯೬). [ಸಂ.]

**ಪ್ರತಿಜ್ಞಾಜಯ** (ನಾ). ಶಪಥವನ್ನು ಈಡೇರಿಸಿಕೊಳ್ಳುವುದು.—ಸಾಧಿಸುವುದು : ನಯನಿಕ್ಷೇಪಪ್ರಮಾಣಂಗಳೊಳೆ ಪಡೆದನೈಕಾಂತಸಿದ್ಧಿಪ್ರತಿಜ್ಞಾಜಯಮಂ (ಶಂಕ್ರತ್. ೧-೪). [ಸಂ].

**ಪ್ರತಿಜ್ಞಾತ** (ನಾ). ೧. ಒಪ್ಪಿಕೊಂಡುದು ; ಅಂಗೀಕರಿಸಿದುದು. ೨. ವಾಗ್ದಾನ; ಭಾಷೆ. ೩. ಪ್ರತಿಜ್ಞೆ; ಶಪಥ. ೪. ಶಪಥ ಮಾಡಿದಂದು ; ಪ್ರತಿಜ್ಞೆ ಮಾಡಿದಂದು : "ಊರೀಕೃತಂ, ಉರರೀಕೃತಂ, ಅಂಗೀಕೃತಂ, ಆಶ್ರುತಂ,ಪ್ರತಿಜ್ಞಾತಂ . . . ಉಪಗತಂ—ಈ ೧೧ ಅಂಗೀಕರಿಸಲ್ಪಟ್ಟದ್ದು, ಒಪ್ಪಿಕೊಳ್ಳಲ್ಪಟ್ಟದ್ದು, ಪ್ರತಿಜ್ಞೆ ಮಾಡಿ ನುಡಿಯಲ್ಪಟ್ಟದ್ದು" (ಶಿದ್ಯಾಂತಿ. ೩೩೨). [ಸಂ.]

**ಪ್ರತಿಜ್ಞಾನ** (ನಾ). ೧. ಒಪ್ಪಿಕೊಳ್ಳುವುದು; ಒಪ್ಪಿಗೆ ; ಅಂಗೀಕಾರ: "ಸಂವಿತ್, ಆಗೂಃ, ಪ್ರತಿಜ್ಞಾನಂ . . . ಸಮಾಧಿಃ—೧೧ ಅಂಗೀಕಾರದ ಹೆಸರುಗಳು" (ಶಿದ್ಯಾಂತಿ. ೪೩). ೨. ಭರವಸೆ ; ವಾಗ್ದಾನ. ೩. ಪ್ರತಿಜ್ಞೆ; ಶಪಥ. [ಸಂ.]

**ಪ್ರತಿಜ್ಞಾಪತ್ರಿಕೆ** (ನಾ). [ರಾಜನೀ] ಚುನಾವಣೆಯ ಸಮಯದಲ್ಲಿ ರಾಜಕೀಯಪಕ್ಷಗಳು ತಾವು ಅಧಿಕಾರಕ್ಕೆ ಬಂದರೆ ಈಡೇರಿಸುವುದಾಗಿ ತಿಳಿಸುವ ಸೌಕರ್ಯಗಳ ಭರವಸೆಯ ಪಟ್ಟಿ : ಅನೇಕ ಮಂದಿ ಅಭ್ಯರ್ಥಿಗಳ ವಾಗ್ದತ್ತಗಳಲ್ಲಿ ಸಮಾನವಾಗಿರುವ ಅಂಶಗಳನ್ನು ಕಲೆಹಾಕಿದರೆ ಅದು ಒಂದು ನೂತನ ರಾಜಕೀಯಪಕ್ಷಕ್ಕೆ ಮೂಲಸೂತ್ರಸಂಗ್ರಹವಾಗುತ್ತದೆ. ಇಂಥ ಆದರ್ಶನಿರೂಪಣೆಯೇ (ಮ್ಯಾನಿಫೆಸ್ಟೊ) ಪಕ್ಷದ ಪ್ರತಿಜ್ಞಾಪತ್ರಿಕೆ (ರಾಜ್ಯಶಾ. ೬೮). [ಸಂ. ಪ್ರತಿಜ್ಞಾಪತ್ರಿಕಾ]

**ಪ್ರತಿಜ್ಞಾಭಾರ** (ನಾ). ಶಪಥದ ಹೊಣೆಗಾರಿಕೆಯನ್ನು ಹೊತ್ತವನು; ಪ್ರತಿಜ್ಞೆ ಮಾಡಿದವನು : ಕುರುರಾಜನಿರ್ವ್ಯಾಜನಿಬಿಡೋರುದ್ವಯಭಂಗಪ್ರತಿಜ್ಞಾಭಾರನುಂ . . . ಸಾಹಸಾಂಕನುಮೆನಿಸಿದ ಭೀಮಸೇನಂ (ಗದಾಯು. ೨-೦ ವ). [ಸಂ.]

**ಪ್ರತಿಜ್ಞಾರೂಢ** (ನಾ). ಶಪಥವನ್ನು ಕೈಗೊಂಡವನು ; ಪ್ರತಿಜ್ಞೆ ಮಾಡಿದವನು : ಅಚಲಿತಪ್ರತಿಜ್ಞಾರೂಢನಾದ ಗಾಂಗೇಯನನೇಗೆಯ್ದುಮೊಡಂಬಡಿಸಲಾಱಿದೆ (ಪಂಪಭಾ. ೦-೯೯ ವ) ; ಭೀಮಸೇನನಂತು ಆರೂಢಕೋಪನುಂ ಪ್ರತಿಜ್ಞಾರೂಢನುಮಾಗಿ (ಗದಾಯು. ೨-೦ ವ) ; ಅತಿಪ್ರತಿಜ್ಞಾರೂಢನುಂ ರಥಾರೂಢನುಮಾಗಿ . . . ವಂದಂ . . . ಸುವರ್ಣನಾಭಂ (ಶಂಕ್ರತ್. ೦೦-೯೦ ವ). [ಸಂ.]

**ಪ್ರತಿಜ್ಞಾವಚನ** (ನಾ). ೧. ಶಪಥದ ಮಾತು. ೨. [ರಾಜನೀ] ರಾಷ್ಟ್ರಪತಿ, ಮುಖ್ಯಮಂತ್ರಿ ಮೊದಲಾದವರು ತಮ್ಮ ಹುದ್ದೆಯನ್ನು ವಹಿಸಿಕೊಳ್ಳುವುದಕ್ಕೆ ಪೂರ್ವಭಾವಿಯಾಗಿ ನಿಯಮಪೂರ್ವಕವಾಗಿ ಮಾಡಬೇಕಾದ ಪ್ರತಿಜ್ಞೆ : ಪ್ರತಿಯೊಬ್ಬರೂ ರಾಷ್ಟ್ರಪತಿಯವರೂ . . . ತಮ್ಮ ಪದಗ್ರಹಣ ಮಾಡುವುದಕ್ಕೆ ಪೂರ್ವಭಾವಿಯಾಗಿ . . . ಕೆಳಗೆ ಕಂಡ ಪ್ರಪತ್ರದ ಮೇರೆಗೆ ಪ್ರಮಾಣವಚನ ಅಥವಾ ಪ್ರತಿಜ್ಞಾವಚನ ಸ್ವೀಕಾರ ಮಾಡತಕ್ಕುದು (ಶಾಂಗಾಶ. ೩೦). [ಸಂ.]

**ಪ್ರತಿಜ್ಞಾವಾಕ್ಯ** (ನಾ.) [ತರ್ಕಶಾ] ಶಾಸ್ತ್ರಗಳಲ್ಲಿ ವಾದ ಮಾಡುವಾಗ ಸ್ವಸಿದ್ಧಾಂತವನ್ನು ಪ್ರತಿಪಾದಿಸುವ ವಾಕ್ಯ.—ಮಾತು : ಬಳಿಕ ಆಯನುಮಾನಪ್ರಮಾಣಕ್ಕೆ ಪ್ರತಿಜ್ಞೆ ಹೇತು ದೃಷ್ಟಾಂತಗಳೆಂಬ ಅಂಗತ್ರಯ ಮುಂಟದಱೊಳು ಪರ ಪ್ರತಿಪತ್ತ್ಯರ್ಥವಾಗಿ ಪ್ರಯೋಗಿಸುವಾಗ ಪರ್ವತ ವಗ್ನಿವುಳ್ಳದ್ದೆಂಬುವುದೇ ಪ್ರತಿಜ್ಞಾವಾಕ್ಯವು (ಜಿನೇ. ೦೮). [ಸಂ.]

**ಪ್ರತಿಜ್ಞಾಸ್ಥಾಪನ** (ನಾ). ಮಾಡಿದ ಶಪಥವನ್ನು ಈಡೇರಿಸುವಿಕೆ :

ಕೋಪ ಕುಡಿಯಿಡಲೀ ವೃಕೋದರನಾವನಿತ ನುಡಿದನು ಪ್ರತಿಜ್ಞಾಸ್ಥಾಪನಕೆ ಬಳಿಕೇನ ಮಾಡುವುದೆಂದನಸುರಾರಿ (ಕುಭಾ.ಗ. ೬-೩೪). [ಸಂ.]

**ಪ್ರತಿಜ್ಞೆ** (ನಾ). ೧. ಒಪ್ಪಿಗೆ ; ಅಂಗೀಕಾರ ; ಸಮ್ಮತಿ. ೨. ಕ್ರಮಬದ್ಧವಾದ ಘೋಷಣೆ. ೩. (ವಿವಾಹ ಮುಂತಾದ ಸಂದರ್ಭಗಳಲ್ಲಿ) ಮಾಡುವ ವಾಗ್ದಾನ; ನಿಶ್ಚಿತಾರ್ಥ. ೪. ಶಪಥ; ಪ್ರೋಕ್ತ: "ಆಗೂಃ, ಸಂಗರಃ, ಸಂಧಾ, ಪ್ರತಿಶ್ರವಃ, ಸುಶ್ರವಃ, ಪ್ರತಿಜ್ಞಾ—ಈ ೬ ಪ್ರತಿಜ್ಞೆ" (ಕಅಚಿಚು. ೦೦೬-೪೦) ; ಪೆಣ್ಣ ಪ್ರತಿಜ್ಞೆಯಂ ನೆನೆವೆಯೊ ನೆನೆಯೆಯೊ (ಕಪ್ಪಾ.ಗಾ. ೦೨೩-೬) ; ನೀನಂ ನಿನ್ನ ಪ್ರತಿಜ್ಞೆಯಂ ನೆಱಪಿದೆಯಾನುಮೆನ್ನ ಪ್ರತಿಜ್ಞೆಯಂ ನೆಱಪುವೆಂ (ಶಂಕಚಾ. ೦೨-೦೫೩ ಪ). ೫. [ನ್ಯಾಯಶಾ] ಹಿಂದಿನ ಕಾಲದಲ್ಲಿ ನ್ಯಾಯಾಲಯಂಗಳಲ್ಲಿ ಫಿರ್ಯಾದಿಯು ನ್ಯಾಯ ಪಡೆಯಲು ನ್ಯಾಯಾಲಯಕ್ಕೆ ಸಲ್ಲಿಸುತ್ತಿದ್ದ ದೂರು; ಫಿರ್ಯಾದು: ಪ್ರತಿಯೊಂದು ವ್ಯವಹಾರವೂ ನಾಲ್ಕು ಹಂತಗಳನ್ನು ಹೊಂದಬೇಕಾಗಿತ್ತು. ಅವು ಕ್ರಮವಾಗಿ ಪ್ರತಿಜ್ಞಾ (Complaint), ಉತ್ತರ (Written Statement), ಸಂಶಯಹೇತುಪರಾಮರ್ಶ (Weighing of evidence) ಮತ್ತು ನಿರ್ಣಯಪ್ರಮಾಣ (Final Conclusion) ಎಂದು ವಿಭಾಗಿಸಲ್ಪಟ್ಟಿದ್ದವು (ಭಾರತ. ೩೬). ೬. [ತರ್ಕಶಾ] ಅನುಮಾನಪ್ರಮಾಣದಲ್ಲಿ ಪ್ರಯೋಗಿಸುವ ಪ್ರತಿಜ್ಞಾ, ಹೇತು, ಉದಾಹರಣ, ಉಪನಯ ಮತ್ತು ನಿರ್ಗಮನ ಎಂಬ ಪಂಚಾವಯವಗಳಲ್ಲಿ ಮೊದಲನೆಯದು ; ಸಾಧಿಸಬೇಕೆಂದಿರುವ ವಿಷಯವನ್ನು ತಿಳಿಸುವುದು; ಸಾಧ್ಯನಿರ್ದೇಶ: ನ್ಯಾಯವಾಕ್ಯಗಳಾದ ಪ್ರತಿಜ್ಞಾಹೇತೂದಾಹರಣೋಪನಯನಿಗಮನಗಳಲ್ಲಿ ಐದೂ ಅವಶ್ಯಕವಿಲ್ಲ (ಹಿಂದಶಾ. ೨೦೨) ; ಪರಾರ್ಥಾನುಮಾನವು ಪ್ರತಿಜ್ಞಾ . . . ನಿಗಮನ ಎಂಬ ಐದು ಅಂಗವುಳ್ಳದ್ದು (ಭಾತತ್ತ್ವ. ೨೬೩). [ಸಂ. ಪ್ರತಿಜ್ಞಾ]

**ಪ್ರತಿಜ್ಞೆಗೆಯ್**, ಪ್ರತಿಜ್ಞೆಗೈ (ಕ್ರಿ). ಶಪಥ ಮಾಡು ; ಪ್ರತಿಜ್ಞೆ ಮಾಡು: ಇರ್ವರುಮೋರೊರ್ವರಂ ಮೊದಲಿಸಿ ಪ್ರತಿಜ್ಞೆಗೆಯ್ದು (ಕಪ್ಪಾ.ಗಾ. ೦೨೯-೦೨); ಗಂಗಾಸುತಂ ಪೃಥಾಸುತರಂ ಗೆಲ್ವೊಡೆ ತವಕೆ ಪೋಪೆಂ . . . ಎಂದು ಕರ್ಣಂ ಪ್ರತಿಜ್ಞೆಗೆಯ್ದುದಂ (ಶಂಕಚಾ. ೦೦-೨೨ ಪ). **ಪ್ರತಿಜ್ಞೆಗೈ** : ಹಯಮೇಧವಿಧಿಯಂ ತನಗೆ ಸೂಚಿಸೆ ಪ್ರತಿಜ್ಞೆಗೈದಂ ಭೀಮನದಕಶ್ವಮಂ ತಾದು ಕುಡುವೆನೆಂದು (ಕೈಜಾಭಾ. ೨-೩೩). [ಪ್ರತಿಜ್ಞೆ + ಕೆಯ್$_1$]

**ಪ್ರತಿಜ್ಞೆಗೈ** 'ಪ್ರತಿಜ್ಞೆಗೆಯ್' ನೋ.

**ಪ್ರತಿಜ್ಯೋತಿ** (ನಾ). ಒಂದು ದೀಪದಿಂದ ಹಚ್ಚಿಸಿದ ಮತ್ತೊಂದು ದೀಪ : ದೀಪ ಒಂದಱಲ್ಲಿ ಉದ್ಭಸಿ ಪ್ರತಿಜ್ಯೋತಿ ಪ್ರಮಾಣಿಸಿದಾಗವೇ ಪ್ರಾಣಲಿಂಗಿಯ ಪ್ರಾಣಲಿಂಗಸ್ಥಲ (ಶೂನ್ಯಸಂ. ೦೯೬-೩೩೦). [ಸಂ. ಪ್ರತಿಜ್ಯೋತಿಸ್]

**ಪ್ರತಿಟಿ** 'ಪದಿಟಿ' ನೋ.

**ಪ್ರತಿಟಿಗೆಯ್** 'ಪದಿಟಿಗೆಯ್' ನೋ.

**ಪ್ರತಿಟ್ಟೆಗೆಯಿಸು** 'ಪದಿಪ್ಪೆಗೆಯ್ಸು' ನೋ.

**ಪ್ರತಿತೂನಿ** (ನಾ). ಒಂದು ಬಗೆಯ ವಾಯುರೋಗ : ಅಪಾನಪ್ರದೇಶದಿಂದ ಪಕ್ವಾಶಯಕ್ಕೆ ಮೇಲು ಮುಖವಾಗಿ ಹಾಯುವ ವೇದನೆಯನ್ನುಂಟುಮಾಡುವ ವಾಯು ಪ್ರತಿತೂನಿ ಎನಿಸಿಕೊಂಬುದು (ಕೈದ್ಯಶಾ. I, ೩೨೩). 'ತುವ್ನಿ' ಪರಾ. [< ಸಂ. ಪ್ರತಿತೂಣಿ./ತಲು. ಪ್ರತಿತೂಣಿ]

**ಪ್ರತಿದಿನ** (ನಾ). ೧. ಪ್ರತಿನಿತ್ಯ : ಪ್ರತಿದಿವಸ : ಆತ್ಮಪತಿಸೇವೆಯಂ ಪ್ರತಿದಿನದೊಳಲಸದೆ ನೆಗಳ್ದೊಡೆ ಸತಿಯರ್ಗೆ ಕೀರ್ತಿ ಸುಗತಿಗಳಪ್ಪುವಿಹಪರದೊಳು (ಕೈಜಾಭಾ. ೩-೬೨) ; ಪ್ರತಿದಿನದೊಳವಿಾ ಪರಿಯೆಸಗುತಿರೆ ಯುಪಕ್ರಾಂತಮೇಕಮುಖಸಂಹೃತಿಯಾಗಿ ಪೂರ್ತಿಯಿಲ್ಲದನಿತಱಿಂ ಪೂಸಲೆ ವೇಳ್ಕುಮಿನ್ನೆಂತಾನುಂ (ಧರ್ಮಕ. ೯-೨೬). [ಸಂ.]

**ಪ್ರತಿದಿನಂ** (ಅ). ಪ್ರತಿನಿತ್ಯದಲ್ಲೂ ; ನಿತ್ಯವೂ : ಪ್ರತಿದಿನಮಭ್ಯಾಸಚಮತ್ಕೃತಿಯಂ . . . ಮಾಡುತುತ್ತುಮಿರ್ಪನಾ ಕಂದರ್ಪಂ (ಕುಸುಮಾ. ೬-೬೩) : ಪ್ರತಿದಿನಮಿಮಾ ತೆಱದಿಂ ಸನ್ನುತಮಹಿಮಂ . . . ಮೃಗಯಾವಿನೋದಮಂ ತಳೆದೆಸೆದಂ (ಕೃಷಾ. ೨೨-೯೦). [ಸಂ.]

**ಪ್ರತಿದಿವಸ** (ನಾ).—ಪ್ರತಿದಿನ : ಅವನು ಪ್ರತಿದಿವಸವೂ ಒಂದೊಂದು ಮೈಲಿ ದೂರವನ್ನು ನಡೆಯುತ್ತಾನೆ (ಕೂತಿ). [ಸಂ.]

**ಪ್ರತಿದಿವಸಂ** (ಅ).—ಪ್ರತಿದಿನಂ : ಆ ಕೂಟಾಷ್ಟಕದೊಳ್ ಪ್ರತಿದಿವಸಂ ರವಿಯಿಪ ದೇವತೆಗಳ್ ಸುಪ್ರಣಿಧಿ . . . ಸುತಸುಸ್ಥಿತೆ ಸುಪ್ರಬುದ್ಧೆ ಚಿತ್ರಿಕೆಯೆಂಬಳ್ (ಶಾಂತಿಪು. ೯-೦೬೬). [ಸಂ.]

**ಪ್ರತಿದೇಯ** (ನಾ). ೧. ಹಿಂದಕ್ಕೆ ಕೊಡಬೇಕಾದುದು ; ಮರುಪಾವತಿ ಮಾಡಬೇಕಾದುದು. ೨. ಒತ್ತೆಯಿಟ್ಟ ವಸ್ತು ; ಗಿರವಿಯಿಟ್ಟ ಪದಾರ್ಥ. ೩. ಕೊಂಡ ಮೇಲೆ ಪುನಃ ಹಿಂತಿರುಗಿಸಿದ ವಸ್ತು. [ಸಂ.]

**ಪ್ರತಿದೋಱು** (ಕ್ರಿ). ೧. (ಮಾಡಿದ ಉಪಕಾರ ಅಥವಾ ಅಪಕಾರಕ್ಕೆ) ಪ್ರತಿಯಾಗಿ ಮಾಡಿ ತೋರಿಸು : ದುರುಳನರನಂ ಕೊಲುವುದಿಂತೇನರಿದ ಮೊದಲಿಸಿದ ಬಳಿಕ್ಕೀ ಧರಣಿಯೊಳ್ ಪ್ರತಿದೋಱದಿದ್ದಡೆ ಪಥವಿದಲ್ಲಲ್ಲ (ಜಕಪು. ೯೯-೦೩). ೨. ಹೋಲಿಸು; ಪಡಿಯಿಡು : ರತಿಯೂರ್ವಶಿ ರಂಭೆ ಮೇನಕೆಯರ ನೆಱ ಪ್ರತಿದೋಱಲಿವಳ ಚೆಲ್ವಿಕೆಗೆ ಮತಿಗೆ ಮಾಗಲ್ಕಕೆ ಚದುರತೆಗೆಣೆಯಲ್ಲ (ಶಂಶಾ. ೯-೦೬). [ಪ್ರತಿ + ತೋಱು]

**ಪ್ರತಿದ್ವಂದ್ವಿ** (ನಾ). ಹಗೆ ; ವಿರೋಧಿ; ಶತ್ರು : ಇಂತಹ ಪ್ರಬಲಪ್ರತಿದ್ವಂದ್ವಿಯನ್ನು ಜಯಿಸಿದರಲ್ಲವೇ ನನ್ನ ಹೆಸರು ಉಳಿಯುವುದು (ರಾಜಕ. ೩೨). [ಸಂ. ಪ್ರತಿದ್ವಂದ್ವಿನ್]

**ಪ್ರತಿಧ್ವನಿ** (ನಾ). ಶಬ್ದ ತರಂಗಗಳ ಪ್ರತಿಫಲನದಿಂದ ಉಂಟಾಗುವ ಮರುದನಿ,—ಪಡಿನುಡಿ.—ಹೊಳಲು : ನೃಪನೀತಿಶಾಸ್ತ್ರಮಂ ನೀನ ಪೂರ್ವಮಂ ನುಡಿಯೆ ನುಡಿಯೆ ಮತ್ತದನನುವರ್ಣಪನ ನುಡಿಗಳ್ ಪ್ರತಿಧ್ವನಿಯ ಪೋಲ್ಕೆಗಳ್ ನಿನ್ನ ನುಡಿಗೆ ಸಮನಾದವುವೇ (ಶಾಂತಿಪು. ೨-೩೬); ನಿಧಾನವಾಗಿ ಕಾಡಿನಲ್ಲಿ ಧ್ವನಿಯಾಗುತ್ತಾ ವಾಕ್ಯೆ ಪ್ರತಿಧ್ವನಿಯಾಗುತ್ತಾ ದೂರದೂರದಲ್ಲಿ ಆ ಧ್ವನಿ ಸುರುಳಿಸುರುಳಿಯಾಗಿ ಕೇಳಿಸಿತು (ಸುಶಿಣ. ೦೦೦); ಪ್ರತಿಫಲಿತವಾದ ಶಬ್ದವು ಮೂಲದಿಂದ ಬಂದ ಶಬ್ದದಿಂದ ಪ್ರತ್ಯೇಕವಾಗಿ ಕೇಳಿದರೆ ಅದಕ್ಕೆ ಪ್ರತಿಧ್ವನಿ (Echo) ಯೆಂದು ಹೆಸರು (ಭೌತಶಾ. ೦೯೬). [ಸಂ.]

**ಪ್ರತಿಧ್ವನಿತ** (ಗು). ೧. ಮಾರ್ದನಿಗೊಂಡ. ೨. ಮಾರ್ದನಿಯಂತಿರುವ: ಪಾಶ್ಚಾತ್ಯರ ವಿಸ್ತ ಪ್ರತಿಧ್ವನಿತ ಅಭಿಪ್ರಾಯಗಳಂತೆ ಈಅಭಿಪ್ರಾಯವೂ ತಪ್ಪಾದುದು (ಭಾರತ. ೩೬೦). [ಸಂ.]

**ಪ್ರತಿಧ್ವನಿಸು** (ಕ್ರಿ). ೧. ಪ್ರತಿಧ್ವನಿಯನ್ನುಂಟುಮಾಡು ; ಮಾರ್ದನಿಯನ್ನು ಕೊಡು; ಹೊಳಲುಕೊಡು: ಕಾಲೇಜಿನ ಕುರಿತಾದ ಮಾತುಕತೆ ಇಡೀ ಮನೆಯಲ್ಲಿ ಪ್ರತಿಧ್ವನಿಸಿತೋ ಎಂಬಂತೆ ಶ್ರೀಧರನಿಗೆ ವಸಂತರಾಯರಿಂದ ಕರೆ ಬಂತು (ಬಾಳ್ವೆ. ೯೩); ಕೇರಿಯ ಗೋಡೆಗೋಡೆಯಲ್ಲೂ ಆ ಮನೆಯ ಬಗ್ಗೆ ಪಿಸುಮಾತಿನ ಗುಲ್ಲು ಪ್ರತಿಧ್ವನಿಸುತ್ತಿದೆ (ಶಕ್ತಿಕ. ೦೫೯). ೨. ಮೂಡು ; ಉಂಟಾಗು : ಮಕ್ಕಳ ಸಂತೋಷ ತಾಯಿಯ ಎದೆಯಲ್ಲೂ ಅಸ್ಪಷ್ಟವಾಗಿ ಪ್ರತಿಧ್ವನಿಸದಿರಲಿಲ್ಲ (ಕಂಗಕ. ೦೩೬). ೩. ಇನ್ನೊಬ್ಬರು ಹೇಳಿದುದನ್ನು ಮತ್ತೊಮ್ಮೆ ಹೇಳು ; ಇನ್ನೊಬ್ಬರ ಮಾತನ್ನು ಪುನರುಚ್ಚರಿಸು : 'ಗ್ರೀನ'ರು ಪುನರ್ಜನ್ಮವನ್ನು ಕುರಿತು ಬೈಬಲ್ಲಿನ ಒಂದು ಮಾತನ್ನು ಓದಲು . . . ಜನಕ್ಕೆ ಹೇಳಿದರು. ಈ ಸಂಗತಿ ಭಗವದ್ಗೀತೆಯ ಕೆಳಗಿನ ಮಾತನ್ನು ಪ್ರತಿಧ್ವನಿಸುತ್ತದೆ (ಧರ್ಮಶಾ. ೦೯೬). [ಪ್ರತಿಧ್ವನಿ + — ಇಸು$_1$]

**ಪ್ರತಿಧ್ವಾನ** (ನಾ). = ಪ್ರತಿಧ್ವನಿ : ಯುವತಿಯರೋರೊರ್ವರ ತಲೆನವಿರಂ ತಲೆನವಿರೊಳಡಸಿ ಕಟ್ಟುತ್ತಂ ಮೋದುವುದುಂ ದ್ವಿಗುಣಿಸಿದುದು ಹಾರವಂ ಪ್ರತಿಧ್ವಾನದಿಂ ಜಿನೇಂದ್ರಾಲಯದೊಳ್ (ಶಂರಾಚ. ೦೪-೦೦೦). [ಸಂ.]

**ಪ್ರತಿನಾದ** (ನಾ). = ಪ್ರತಿಧ್ವನಿ : ಭೂಚರಖೇಚರವಂದನಾಸಂದರರವ ಪ್ರತಿನಾದಮುಂ. . . ಕರವೊಪ್ಪೆ (ಶಾಂತಿಪು. ೦೨-೦೪ ಪ). [ಸಂ.]

**ಪ್ರತಿನಾದಿತ** (ನಾ). ಪ್ರತಿಧ್ವನಿಯುಳ್ಳದು ; ಮಾರ್ದನಿಗೊಂಡಿರುವುದು : ದುಮುಕುತಿದೆ ಆ ತಪೋವನದ ಸೀಮೆಯೊಳೊಂದು ನಿರ್ಝರಿಣಿ . . . ಘೋಷದೋಂಕೃತಿಗೆ ಪರ್ವತಾರಣ್ಯಮಂ ಪ್ರತಿನಾದಿತಂ ಮಾಡಿ (ಶ್ರೀರಾಮಾ.೦೩೨-೨೦೬). [ಸಂ.]

**ಪ್ರತಿನಾಮ** (ನಾ). ಒಂದು ಊರು ಅಥವಾ ಒಬ್ಬ ವ್ಯಕ್ತಿಗೆ ಇಟ್ಟಿರುವ ಮತ್ತೊಂದು ಹೆಸರು ; ಅಡ್ಡಹೆಸರು : ವರದನದೀತೀರದ ಪದಿರಾಪುರ ಗ್ರಾಮ ೧ಕ್ಕೆ ಪ್ರತಿನಾಮವಾದ ನಾರಸಿಂಹಪುರವೆಂಬ ಸರ್ವಮಾ(ಂ)ನ್ಯದ ಅಗ್ರಹಾರದಲ್ಲಿ (ಶಾಶಾ. XX. ೨೪೦-೨೦; 1571); ಎಚಿಗಂಗನ ಶಿವಮಾರನ ಮಾಂಡಲಿಕನೋ ಆ ಪ್ರತಿನಾಮವುಳ್ಳ ಶಿವಮಾರನೋ ಎಂಬುದಾದರೂ ಸ್ಪಷ್ಟವಿಲ್ಲ (ಕರ್ನಾಟ. ೦೫೩). [ಸಂ. ಪ್ರತಿನಾಮನ್]

**ಪ್ರತಿನಾಯಕ** (ನಾ). [ಕಾವ್ಯಮೀ] ಕಾವ್ಯ ನಾಟಕಾದಿಗಳಲ್ಲಿ ಕಥಾನಾಯಕನನ್ನು ವಿರೋಧಿಸುವ ಅಥವಾ ನಾಯಕನು ಪಡೆಯಲಿರುವ ಫಲಪ್ರಾಪ್ತಿಗಾಗಿ ಸ್ಪರ್ಧಿಸುವ ಪುರುಷಪಾತ್ರ : ದುರ್ಯೋಧನನು ಮಹಾಭಾರತದಲ್ಲಿ ಪ್ರತಿನಾಯಕ (ರೂಢಿ). [ಸಂ.]

**ಪ್ರತಿನಾಯಿಕೆ** (ನಾ). [ಕಾವ್ಯಮೀ] ಕಾವ್ಯ ನಾಟಕಾದಿಗಳಲ್ಲಿ ಕಥಾನಾಯಿಕೆಯನ್ನು ವಿರೋಧಿಸುವ ಅಥವಾ ನಾಯಿಕೆಯು ಪಡೆಯಲಿರುವ ಫಲಪ್ರಾಪ್ತಿಗಾಗಿ ಸ್ಪರ್ಧಿಸುವ ಸ್ತ್ರೀಪಾತ್ರ : ನಾಯಿಕೆ ಅಸಿಲತೆ ನಾಯಕ ಭೂಪತಿ ಧುರವೆ ಅಂತಃಪುರ ಕೇಳು ಸಮ್ಮುಖಿಯಾದರು ವೈರಿವಾಹಿನಿ ಪ್ರತಿನಾಯಿಕೆ ಮೊಗದಿರುಹಿದಳು (ಜಿಂಶಾಚ. ೦೪೩-೦೦). [ಸಂ. ಪ್ರತಿನಾಯಿಕಾ]

**ಪ್ರತಿನಾರಾಯಣ** (ನಾ). [ಜೈನ] ಅರುವತ್ತುಮೂವರು ಶಲಾಕಾಪುರುಷರಲ್ಲಿ ಒಂದು ವರ್ಗಕ್ಕೆ ಸೇರಿದವನು; ನಾರಾಯಣನ ಪ್ರತಿನಾಯಕ; ಪ್ರತಿವಾಸುದೇವ; ೯ ಅಶ್ವಗ್ರೀವ, ತಾರಕ, ಮೇರಕ, ನಿಶುಂಭ, ಮಧುಕೈಟಭ, ಬಲಿ, ಪ್ರಹರಣ, ರಾವಣ ಮತ್ತು ಜರಾಸಂಧ ಎಂದು ಇವರು ಒಂಬತ್ತು ಜನ ಇರುವರು. [ಸಂ.]

**ಪ್ರತಿನಿತ್ಯ**[1] (ನಾ). ಪ್ರತಿದಿವಸ; ಎಲ್ಲಾ ದಿವಸ : ಸುತ್ತಮುತ್ತ ಎಲ್ಲಿ ನೋಡಿದರೂ ಪ್ರತಿನಿತ್ಯವೂ ಯಾವುದೋ ಒಂದು ಅಕ್ರಮ. . . ಅವರ ಕಣ್ಣಿಗೆ ಬೀಳುತ್ತಿರುತ್ತದೆ (ಜಾಕ್ಯಾಗ. ೨೪೩). [ಸಂ.]

**ಪ್ರತಿನಿತ್ಯ**[2] (ಅ). ಪ್ರತಿದಿನವೂ; ಎಲ್ಲಾ ದಿವಸವೂ : ಅವರು ಪ್ರತಿನಿತ್ಯ ನಮ್ಮ ಮನೆಗೆ ಬರುತ್ತಾರೆ (ರೂಢಿ). [ಸಂ. ಪ್ರತಿನಿತ್ಯಂ]

**ಪ್ರತಿನಿಧಾನ** (ನಾ). ಒಂದಕ್ಕೆ ಬದಲಾಗಿ ಮತ್ತೊಂದನ್ನು ಇರಿಸುವುದು : ನುತಸಂಪ್ರದಾನರೂಢಂ ಚತುರ್ಥಿಯದು . . . ಪ್ರತಿನಿಧಾನದೊಳವಿಷ್ಮದೊಳಂ (ಶಮದ. ೦೩೦) ; ಪ್ರತಿನಿಧಾನದೊಳಂ=ಪ್ರತಿನಿಧಿಯಲ್ಲಿಯುಂ (ಶಮದ. ೦೩೦ ಟೀಕು). [ಸಂ.]

**ಪ್ರತಿನಿಧಿ** (ನಾ) .೧. ಪ್ರತಿಬಿಂಬ; ಪ್ರತಿರೂಪ : "ಪ್ರತಿಬಿಂಬಂ. ಪ್ರತಿರೂಪಂ . . . ಪ್ರತಿನಿಧಿಃ, ಪ್ರತಿಯಾತನಂ, ಪ್ರತಿಚ್ಛಾಯಂ – ಈ ೯ ಪ್ರತಿಬಿಂಬದ ಪೆಸರ್" (ಹಲಾಯು. ೨೦-೦೩೦). ೨. ಒಂದಕ್ಕೆ ಬದಲಾಗಿರುವಂಥದು. ೩. ಒಂದು ರಾಷ್ಟ್ರದ ಅಥವಾ ರಾಜನ ಪರವಾಗಿ ಅಧಿಕಾರವನ್ನು ನಿರ್ವಹಿಸುವ ಅಧಿಕಾರಿ : ಆವೇದನ ಪತ್ರವನ್ನು ತತ್ಕಾಲದಲ್ಲಿ ತಾನು ವಾಸ ಮಾಡುತ್ತಿರುವ ದೇಶದಲ್ಲಿರುವ ಭಾರತದ ರಾಜ್ಯವ್ಯವಹಾರ ಅಥವಾ ವಾಣಿಜ್ಯವ್ಯವಹಾರ ಪ್ರತಿನಿಧಿಗೆ . . . ಕೊಟ್ಟು ಆ ಪ್ರತಿನಿಧಿಯಿಂದ ತನ್ನ ಹೆಸರನ್ನು ರಿಜಿಸ್ಟರು ಮಾಡಿಸಿಕೊಂಡಿದ್ದ ಪಕ್ಷದಲ್ಲಿ ಆತನು ಭಾರತದ ನಾಗರಿಕನೆಂಬುದಾಗಿ ಭಾವಿಸತಕ್ಕುದು (ಭಾರಾಸ. ೬). ೪. ಒಂದು ಸಂಸ್ಥೆ ಅಥವಾ ವ್ಯಕ್ತಿಯ ಪರವಾಗಿ ವ್ಯವಹಾರ ನಡೆಸುವವನು : ತಾವು ತಯಾರು ಮಾಡಿದ ಪದಾರ್ಥಗಳನ್ನೆಲ್ಲ . . . ಸ್ವತಂತ್ರವಾಗಿಯೂ ತಮ್ಮ ಪ್ರತಿನಿಧಿಗಳ ಮೂಲಕವೂ ಮಾರಿಸಿ, ಬಂದ ಲಾಭವನ್ನು ತಾವೇ ಹಂಚಿಕೊಳ್ಳುವುದು (ಹಾಶಿತ್ರ.೦೬೩). ೫. ಜಾಮೀನು. [ಸಂ.]

**ಪ್ರತಿನಿಧಿತ್ವ** (ನಾ). (ವಿಧಾನಸಭೆ ಮೊದಲಾದುವುಗಳ) ಪ್ರತಿನಿಧಿಯಾಗಿರುವಿಕೆ ; ಚುನಾಯಿತ ಸದಸ್ಯತ್ವ : ವಿಧಾನಮಂಡಲಗಳಲ್ಲಿಯ ಅಥವಾ ಸಂಸತ್ತಿನಲ್ಲಿಯ ಪ್ರತಿನಿಧಿತ್ವದ ವಿಚಾರವಾದ ಉಪಬಂಧಗಳೂ ಸೇರಿ . . . ಅಡಕವಾಗಿರಬಹುದು (ಭಾರಾಸ.೩). [ಸಂ.]

**ಪ್ರತಿನಿಧಿಸು** (ಕ್ರಿ). ೧. (ವ್ಯಕ್ತಿ, ಭಾವನೆ, ನಿರೂಪಣೆ ಮುಂತಾದ ವಿಚಾರಗಳಲ್ಲಿ) ಒಂದರ ಬದಲು ಮತ್ತೊಂದು ಇರು : ವಿಭೀಷಣ, ಆಂಜನೇಯ - ಮೊದಲಾದ ಪಾತ್ರಗಳನ್ನು ಪ್ರತಿನಿಧಿಸುವವರ ವಾಕ್ಚಾತುರ್ಯ, ಕಳಿತಲ್ಲೇ ಅವರು ಮಾಡುವ ಅಭಿನಯ . . . ಇವುಗಳನ್ನು ನೋಡಿ, ಕೇಳಿ ಮೋಹಗೊಂಡು (ಯಕ್ಷಗಾ. ೦೬); ಚೌಗಾಲದಲ್ಲಿ ಈ ಜಟಿಯಾ ನೃತ್ಯವನ್ನಾಡುತ್ತಾರೆ. ಪ್ರೇಮವನ್ನು ಪ್ರತಿನಿಧಿಸುವುದೇ ಇದರ ತತ್ವ (ಭಾರಜಾ. ೬೬); ಮೇಳದವರು . . . ಪ್ರಕೃತಿಯ ಪರಿತಾಪವನ್ನು ಪ್ರತಿನಿಧಿಸುತ್ತಾರೆ, ಪ್ರತಿಧ್ವನಿಸುತ್ತಾರೆ (ಅತ್ಯಕ್ರ.XXXI ಪಾಟೀಲರ ಸಮುಚ್ಚ). ೨. ತಿಳಿಸು; ಸ್ಪಷ್ಟಪಡಿಸು; ಅಭಿವ್ಯಕ್ತಗೊಳಿಸು: ಅನುಭವ, ಭಾವನೆ, ಸನ್ನಿವೇಶ, ಸಂಬಂಧ, ಅನುಮೇಯ, ನಿರ್ಣಯ ಇತ್ಯಾದಿ ಅಂಶಗಳನ್ನು ಸರಿಯಾದ ಪಾರಿಭಾಷಿಕಪದಗಳಿಂದ ಪ್ರತಿನಿಧಿಸಬೇಕು (ತಿಳಿದ. VI. ಮುನ್ನುಡಿ). ೩. ಒಬ್ಬರ ಪರವಾಗಿ ಕಾರ್ಯವನ್ನು ನಿರ್ವಹಿಸು ; ಪ್ರತಿನಿಧಿಯಾಗಿರು : ನಾನು ಮನವಿದಾರನನ್ನು ಪ್ರತಿನಿಧಿಸುತ್ತೇನೆ (ರೂಢಿ). [ಪ್ರತಿನಿಧಿ + –ಇಸು]

**ಪ್ರತಿನಿಯತ** (ಗು). ೧. ಮೊದಲೇ ಗೊತ್ತು ಮಾಡಿದ,–ತೀರ್ಮಾನಿಸಿದ. ೨. ವ್ಯತ್ಯಾಸವಾಗದಿರುವ ; ಬದಲಾಗದ : ನಿಗೂಢಚತುರ್ಥಂ ಪ್ರತಿನಿಯತಗತಪ್ರತ್ಯಾಗತಂ ದಲೆಂದಿಂತು ಪೆಜಿವುಮುಸ್ಯಂ ಚಿತ್ರಂ (ಕಾವ್ಯಾಶ. ೩೬೬); ಪ್ರತಿನಿಯತಸ್ಥಾಯಿಭಾವವಿವು ತಾಮಕ್ಕುಂ (ಕಾವ್ಯಾಶ. ೬೪೪). [ಸಂ.]

**ಪ್ರತಿನಿರ್ಯಾತನ** (ನಾ). ೧. ನ್ಯಾಸವನ್ನು ಅದರ ಯಜಮಾನನಿಗೆ ಮರಳಿ ಒಪ್ಪಿಸುವುದು. ೨. ಸೇಡು ತೀರಿಸಿಕೊಳ್ಳುವುದು : "ಪ್ರತಿನಿರ್ಯಾತನವೆಂಬುದು ಮುಯ್ಯಂ ಮಗುಳ್ಚುವುದು" (ಹಲಾಯು. ೦೨೬-೮೦). ೩. ಉಪಕಾರಕ್ಕೆ ಪ್ರತ್ಯುಪಕಾರ ಮಾಡುವುದು.[ಸಂ.]

**ಪ್ರತಿನೃಪ** (ನಾ). ಎದುರಾಳಿಯಾದ ಅರಸು; ಶತ್ರುರಾಜ : ಪ್ರತಿಕೂಲದೈವನ್ನೆ ನೀಂ ಪ್ರತಿನೃಪರನುಕೂಲದೈವರ್ (ಗದಾಯು. ೩-೪೩). [ಸಂ.]

**ಪ್ರತಿಪಕ್ಷ** (ನಾ). ೧. ಶತ್ರುಪಕ್ಷ: ವೈರಿವರ್ಗ : ಪ್ರತಿಪಕ್ಷಕ್ಷೋಣಿಪಾಳಪ್ರಕರಹೃದಯಶೂಲೋಪಮಸ್ಥೂಳಶಾತಾಯತಕುಂತನ್ಯಸ್ತಹಸ್ತಂ . . . ಈ ಸೈನ್ಯಮಾಂಧ್ರಾ (ಜಾಕ್ಕಾರ್ತಿ. ೦೦-೩೩); ಪ್ರತಿಪಕ್ಷೋರ್ವೀಶವಂಶಕ್ಷಿತಿರುಹತತಿಯುಂ ಕಿಟ್ಟು ಬೇರಿಂದೆ (ಕೃಷ್ಣಪ.೬-೨೪); ಪ್ರತಿಪಕ್ಷಕ್ಷತ್ರಿಯ ಪ್ರಾಕ್ತನನಿಖಿಳಧರಾಕೋಶಸೇನಾಚಯಸ್ವೀಕೃತನುದ್ಯದ್ಧಾರ್ಮಿಕಂ . . . ಋತುಪರ್ಣಂ (ಪಳತಂ. ೬೩೬). ೨. ಹಗೆ; ಶತ್ರು : "ಅಭಿಯಾತಿಃ, ಅರಾತಿಃ, ಅಮಿತ್ರಂ, ರಿಪುಃ, ಪ್ರತಿಪಕ್ಷಃ . . . ದ್ವಿಷತ್ –ಈ ೨೪ ಹಗೆ" (ಹಲಾಯು. ೬೩-೩೦೦) : ಪ್ರತಿಪಕ್ಷಮುಂಟೆ ಲಂಕಾಪತಿಗಣುಮಂ ರಾವಣಂಗಿದಿರ್ಚುವನೆ (ಶಂರಾಚ. ೦೦-೦೩೮) ; ಕೋಪನಪ್ರತಿಪಕ್ಷಗುಲನಿರ್ವಾಪಣೈಕಸಮರ್ಥ ಎನುತಭಿರೂಪನನು ಹೊಗ

ಳಿದರು ವಂದಿಗಳು (ಶುಬ್ಬ್ಯಾಗ. ೬-೨೯). ೩. ವಿಧಾನಸಭೆ, ಚುನಾವಣೆ, ಚರ್ಚಾಕೂಟ, ಮೊದಲಾದಂವುಗಳಲ್ಲಿ ಇರುವ ವಿರೋಧ ಪಕ್ಷ; ಒಂದು ಪಕ್ಷದವರು ಹೇಳಿದ ಅಭಿಪ್ರಾಯವನ್ನು ಖಂಡಿಸುವ ಮತ್ತೊಂದು ಪಕ್ಷ: ಪ್ರತಿಪಕ್ಷದಲ್ಲಿ ಆವನು ಬಹಳ ಚೆನ್ನಾಗಿ ಮಾತನಾಡಿದನು (ಲೂಕಿ). [ಸಂ.]

**ಪ್ರತಿಪಕ್ಷಿ** (ನಾ). ವಿರೋಧಪಕ್ಷದವನು; ವೈರಿ; ಶತ್ರು: ಇಬ್ಬರೂ ಪ್ರತಿಪಕ್ಷಿಗಳು ಈ ವಿಚಾರದಲ್ಲಿ ತಾಕಲಾಟದಲ್ಲಿದ್ದಾರೆ (ಜುಬ್ಬಾ. ೦೧೯); ಅರ್ಜುನನಿಗೆ ಕರ್ಣನು ಪ್ರತಿಪಕ್ಷಿಯರಬಹುದು (ಸಾಹಿಂ. ೩೦). [ಸಂ. ಪ್ರತಿಪಕ್ಷಿನ್]

**ಪ್ರತಿಪತ್ತಿ** (ನಾ). ೧. ಪಡೆಯುವುದು; ಪ್ರಾಪ್ತಿ. ೨. ಅರಿವು; ಜ್ಞಾನ; ತಿಳಿವಳಿಕೆ: ಬಹುತ್ವನಿರ್ದೇಶಂ ವ್ಯಾಖ್ಯಾತಭೇದಪ್ರತಿಪತ್ತ್ಯರ್ಥ ಮಾಡುದು (ಶಶಕ್ಯ. ೨೩೨). ೩. ನಿರ್ಣಯ; ನಿರ್ಧಾರ. ೪. ಜಾಣ್ಮೆ; ಬುದ್ಧಿಮತ್ತೆ: "ಪ್ರತಿಪತ್ತಿಃ, ಪ್ರಗಲ್ಭತಾ — ಈ ೨ ಅಚಾಯುವುದು" (ಹಣಾಯು. ೧೨೬-೯೪). ೫. ಪ್ರತಿಭೆ. ೬. ಒಪ್ಪಿಗೆ; ಸಮ್ಮತಿ. ೭. ಕಾರ್ಯವನ್ನು ಕೈಗೊಳ್ಳುವುದು; ಕಾರ್ಯ ನಿರ್ವಹಣೆ. ೮. ನಡವಳಿಕೆ; ಪ್ರವೃತ್ತಿ. ೯. ಗೌರವ; ಮನ್ನಣೆ; ಮರ್ಯಾದೆ: ಅವರ ದಾಯಿಗಂ ಶಾಸ್ತ್ರಂಗಳಂ ಬಲ್ಲೊಂಗಂ ಮಂತ್ರಿ ಪದವಿಯಂ ಬಾಬುಮಂ ಪ್ರತಿಪತ್ತಿಯುಮಂ ಕೊಟ್ಟುದಂ ಕೇಳ್ದವರು ಮುಬ್ಬೆಗಂಬಟ್ಟು (ವಡ್ಡಾರಾ. ೨-೨೩): ಸದೀತನೂಜ ಭಾರದ್ವಾಜ ಕೃಪಾದಿಗಳ್ಗೆರಸಿರ್ದಂದು ಯಥೋಚಿತಪ್ರತಿಪತ್ತಿಗಳಿಂದಯ್ವರುಮಂ ಸಬಿಡಾಲಿಂಗನಂಗೆಯ್ದು (ಪಂಪಭಾ. ೪-೩೭); ನಿತ್ಯ ಪರೀಕ್ಷಣಸ್ಥಳವಿಪರ್ಯಯ ಪ್ರತಿಪತ್ತಿ ದಾನಂಗಳಿಂ ನಿಯೋಗಿಗಳಂ ಕಾವುದುಘೆರ್ ಮಾಡಿಯುಂ (ಪಂಪ್ರಭು. ೨-೬೧). ೧೦. ಸ್ಥಾನ; ಅಧಿಕಾರ: ಪ್ರತಿಪತ್ತಿಯ ವ್ಯೆಮೆಯು ನಾನತಿಶಯಿಸಲು ಕರೆಯೆ ಕೇಳಿ ಸಿಂಹಾಸನದೌಸ್ಥಿತಿಯುಟೀಯ ರೇಜಗಾತ್ರ ಪ್ರತಿಪತ್ತಿಯನಿತ್ತನೊಸೆದು ಜಯಸಿಂಹನೃಪಂ (ಶುರೀ. ೦-೯); ಭೂಮಂಡಲದಲ್ಲಿ ಸಮಸ್ತ ರಾಜಕುಲಗಳೊಳಗೆ ಧನ ಮಾನ ಪ್ರತಿಪತ್ತಿಗಳಲ್ಲಿ ನಮ್ಮ ಕುಲವು ಶ್ರೇಷ್ಠವಾಗಿರುವುದು (ರತ್ನಕ. ೨೩). ೧೧. ಕೀರ್ತಿ; ಯಶಸ್ಸು. ೧೨. ದಿಟ್ಟತನ; ಧೈರ್ಯ. ೧೩. ಉಪಾಯ; ಯುಕ್ತಿ. ೧೪. "ಯಜ್ಞದಲ್ಲಿ ಉಳಿದಿರುವುದನ್ನೆಲ್ಲ ವಿನಿಯೋಗಿಸುವುದು" (ಪ:ಹಾಅ. ೧೧೭ ಅಹಿ). ಪ್ರತಿಪತ್ತಿಕರ್ಮ' ಪರಾ. [ಸಂ.]

**ಪ್ರತಿಪತ್ತಿಕರ್ಮ** (ನಾ). ಯಜ್ಞ ಯಾಗಾದಿಗಳಲ್ಲಿ ಮಾಡುವ ಒಂದು ಕ್ರಿಯೆ; P ಹೋಮ ಮಾಡಿದ ಮೇಲೆ ಉಳಿದಿರುವ ದ್ರವ್ಯವನ್ನು ಮತ್ತಾವ ವಿಧದಿಂದಲೂ ಅಪವಿತ್ರವಾಗದಂತೆ ಅಗ್ನಿಗೆ ಹಾಕುವುದು, ಪೂಜೆ ಮಾಡಿ ವಿಸರ್ಜನೆ ಮಾಡಿದ ಗಣಪತಿಪ್ರತಿಮೆ ಮೊದಲಾದುವನ್ನು ಜಲದಲ್ಲಿ ವಿಸರ್ಜಿಸುವುದು ಮುಂತಾದುವು ಪ್ರತಿಪತ್ತಿಕರ್ಮವೆನಿಸಿಕೊಳ್ಳುತ್ತವೆ: ವಿಶ್ವಾಮಿತ್ರನು ವಿಶ್ವಜಿದ್ಯಜ್ಞವನ್ನು ಸಂಕಲ್ಪ ಮಾಡಿ, ತ್ರಿಶಂಕುವಿನ ಸೋಮಯಾಗದ ಅವಭೃತವನ್ನು ನೆರವೇರಿಸಿದನು. ಪ್ರತಿಪತ್ತಿಕರ್ಮವೂ ನಡೆಯಿತು (ಶುಹಾಅ. ೦೦೭). [ಸಂ. ಪ್ರತಿಪತ್ತಿಕರ್ಮನ್]

**ಪ್ರತಿಪತ್ತಿಮೂಢೆ** (ನಾ). ಏನಂ ಮಾಡಬೇಕೆಂದು ತಿಳಿಯಲಾರದವಳು; ದಿಕ್ಕು ತೋಚದಿರುವವಳು; ದಿಙ್ಮೂಢೆ: ಪ್ರತಿಪತ್ತಿಮೂಢೆಯೆನಿಸಿರ್ದ ತರುಣಿಯುಂ ಗುರುಜನಕ್ಕೆ ಪೊಡವಡಿಪುದುಂ (ಕಾದಂಬ. ೬೧೧). [ಸಂ. ಪ್ರತಿಪತ್ತಿಮೂಢಾ (ಪ್ರತಿಪತ್ತಿ + ಮೂಢ + —)]

**ಪ್ರತಿಪತ್ತಿವಿಧಿ** (ನಾ). [ಅದ್ವೈತ] ಮೋಕ್ಷಕ್ಕಾಗಿ ಜ್ಞಾನವನ್ನು ಸಂಪಾದಿಸು ಎಂದು ನೇಮಿಸುವುದು: ಇದರಲ್ಲಿ ಧ್ಯಾನನಿಯೋಗವಾದ, ನಿಷ್ಪ್ರಪಂಚೀಕರಣನಿಯೋಗವಾದ ಇವೇ ಮೊದಲಾದ ಪ್ರಭೇದಗಳಿರುವುವು. ಇವುಗಳಿಗೆಲ್ಲಾ ಒಟ್ಟು ಪ್ರತಿಪತ್ತಿವಿಧಿಯೆಂದು ಹೆಸರು (ಶಿಂದೂಂ. ೩೩೩). [ಸಂ.]

**ಪ್ರತಿಪತ್ತಿಶಾಲಿ** (ನಾ). ಗೌರವಾರ್ಹನಾದವನು; ಸನ್ಮಾನ್ಯ: ನಮ್ಮ ನಡುವೆ ಇದ್ದ ವಿಪುಲಸಂಪತ್ತಿಶಾಲಿಯಾದ ಮತ್ತು ಪ್ರತಿಪತ್ತಿಶಾಲಿಯಾದ ಒಬ್ಬ ಗೃಹಸ್ಥರು ವರ್ತಮಾನಪತ್ರ ಓದುತ್ತಿದ್ದರು (ಚಿತ್ರ. ೧೩೦). [ಸಂ. ಪ್ರತಿಪತ್ತಿಶಾಲಿನ್]

**ಪ್ರತಿಪತ್ತು** (ನಾ). ೧. ಚಾಂದ್ರಮಾನದ ತಿಂಗಳುಗಳಲ್ಲಿ ಬರುವ ಎರಡು ಪಕ್ಷಗಳ ಮೊದಲನೆಯ ದಿನ; ಪಾಡ್ಯ: "ಪಕ್ಷತಿಃ, ಪ್ರತಿಪತ್‌—೨ ಪಾಡ್ಯದ ಹೆಸರುಗಳು" (ಶಿಶ್ಯಾಂಅ. ೩೯). ೨. ಬುದ್ಧಿ: "ಬುದ್ಧಿಃ, ಮನೀಷಾ . . . ಪ್ರತಿಪತ್‌, ಜ್ಞಪ್ತಿಃ, ಚೇತನಾ — ೧೪ ಬುದ್ಧಿಯ ಹೆಸರುಗಳು" (ಶಿಶ್ಯಾಂಅ. ೯೯). ೩. ಮುಂದಕ್ಕೆ ಹೋಗುವುದು; ಮುಂದುವರಿಯುವುದು. ೪. ಹತ್ತಿರಕ್ಕೆ ಹೋಗುವುದು; ಸಮೀಪಿಸುವುದು. ೫. ಒಳಹೊಗುವಿಕೆ; ಪ್ರವೇಶ. ೬. ಮೊದಲು ಮಾಡುವುದು; ಪ್ರಾರಂಭ. ೭. ಅಂತಸ್ತು; ಪದವಿ; ಸ್ಥಾನ. ೮. ಒಳ್ಳೆಯ ಹೆಂಗಸರ ಗುಂಪು: "ಆಸನ್ನಮುಂ ಪಾಡ್ಯ ಸದ್ಮನಿತಾ ಸಂಚಯಮಿಂತಿವೆಯ್ದೆ ಪ್ರತಿಪತ್ಪ್ರಖ್ಯಾನಮುಂ" (ಹಾಕಿ. ೦೬೪). [ಸಂ. ಪ್ರತಿಪದ್]

**ಪ್ರತಿಪತ್ನಿ** (ನಾ). ಸವತಿ; ಸವತ್ನಿ: ಕ್ಷಿತಿನಾಥಾಂಗವಿಲೋಕಿತೆಯರ್ ಶ್ರೀಯೊರ್ವಳಾ ಜಯಶ್ರೀಯೊರ್ವಳ್ ಪ್ರತಿಪತ್ನಿಯರ್ಗೊಳರೆನಿಸಲ್ಕಶರ್ಕ್ಯ ನೇಪಥ್ಯಮಂವರ್ಗದೇಂ ಸೊಗಯಿಸಿತೋ (ಶಾಂತಿಪು. ೦-೭೯). [ಸಂ.]

**ಪ್ರತಿಪತ್ರ** (ನಾ). ಒಂದು ಪತ್ರದ ಪ್ರತಿ,—ನಕಲು: ವಿನಿಮಯ ಪತ್ರಗಳು ಚೆಕ್ಕುಗಳು . . . ಋಣಪತ್ರಗಳು ಪ್ರತಿಪತ್ರಗಳು ಮತ್ತು ಸಲಿಕೆಗಳು ಇವುಗಳ ವಿಷಯದಲ್ಲಿ ಮುದ್ರಾಂಕಶುಲ್ಕದ ದರಗಳು (ಕಾಲಿಂಚ. ೨೩೬). [ಸಂ.]

**ಪ್ರತಿಪದ** (ನಾ). ೧. ಒಂದು ಪದದ ಸಮಾನಾರ್ಥಕವಾದ ಪದ; ಪರ್ಯಾಯಪದ: ಅಗ್ನಿ, ವಾಯು, ಸೂರ್ಯ ಎಂಬ ಪದಗಳಿಗೆ ಪ್ರತಿಪದಗಳನ್ನು ಬರೆಯಿರಿ (ಲೂಕಿ). ೨. ಪ್ರತಿಯೊಂದು ಪದ: ಇಲ್ಲಿ ಕೊಟ್ಟಿರುವ ಪ್ರತಿಪದಕ್ಕೂ ಅರ್ಥ ಬರೆಯಿರಿ (ಲೂಕಿ). [ಸಂ.]

**ಪ್ರತಿಪದಿ** (ನಾ). ೧. ಪಾಡ್ಯ; ಪ್ರತಿಪದೆ. ೨. ಮನ್ನಣೆ; ಗೌರವ. ೩. ವಿರೋಧವಾಗಿ ಹೋಗುವಿಕೆ. ೪. ಕೆಳವಂಟ್ಟ; ಅವನತಿ: "ಪಾಡ್ಯಮುಂ ಮನ್ನಣೆಯುಂ ಕೆಟ್ಟೆಂಬಿವುಂ ತಾಂ ಪ್ರತಿಪದಿಯೆನಿಕು" (ಶಾಅಕ. ೦೩೬). [ಸಂ. ಪ್ರತಿಪದೀ]

**ಪ್ರತಿಪದೆ** (ನಾ). = ಪ್ರತಿಪತ್ತು ೧: ದೀಪಾವಳಿಯಲ್ಲಿ ಬಲಿಪ್ರತಿಪದೆಯಂದ (ಕಾಶಾಸಾ. ೭೩); ಶಾಲಿವಾಹನಶಕದ ವರ್ಷ ಚೈತ್ರಶುದ್ಧಪ್ರತಿಪದೆಯಿಂದ ಆರಂಭವಾಗುತ್ತಿದೆ (ಗ್ರಾಹ್ಯ. ೩೭). [ಸಂ. ಪ್ರತಿಪದಾ]

**ಪ್ರತಿಪದ್ದಿನ** (ನಾ). ಪಾಡ್ಯ: ವಿತತಾಷಾಢದ ಬಹುಳಪ್ರತಿಪದ್ದಿನದಂದು ಕೀರ್ತಿ ನೆಗಟ್ಟೊರೆ (ಅಂಕಿ. ೬-೬೬); ನುತಮಾರ್ಗಶಿರದ ಶುದ್ಧಪ್ರತಿಪದ್ದಿನದ ಪರಯಾಮದೊಳ್ (ಪುಕ್ಕತು. ೦೩-೨೦೩). [ಸಂ.]

**ಪ್ರತಿಪನ್ನ** (ಗು). ೧. ಸಮೀಪಿಸಿದ; ಹತ್ತಿರಕ್ಕೆ ಬಂದ. ೨. ಪಡೆದ; ಹೊಂದಿದ. ೩. ಮಾಡಿದ; ನಿರ್ವಹಿಸಿದ; ನೆರವೇರಿಸಿದ: ಪ್ರತಿಪನ್ನಯಜ್ಞ ವಿಳಾಸನೊಪ್ಪಿದನಿಂದ್ರವಿಭವದಲಿ (ಶುಬ್ಬ್ಯಾಶ. ೦೦-೬). ೪. ಒಪ್ಪಿದ; ಸ್ವೀಕೃತವಾದ. ೫. ತಿಳಿದ: ಅರಿತ. ೬. ಪ್ರಾರಂಭಿಸಿದ; ತೊಡಗಿದ. ೭. ಗೆದ್ದ; ಜಯಿಸಿದ. (ನಾ). ೮. ಒಪ್ಪಿಗೆಯಾದುದು; ಸ್ವೀಕೃತವಾದುದು: ಎನಗಂ ತಾಂ ಪ್ರತಿಪನ್ನಮೆಂಬ ಬಗೆಯುಂ ಕಾನಂತುಪಾದೇಯಮೋ (ಪಂಪ್ರಭು. ೮-೬೮). ೯. ತಿಳಿದುದು; ಅರಿತುದು: "ಬುದ್ಧಂ, ಬುಧಿತಂ, ಮನಿತಂ, ವಿದಿತಂ, ಪ್ರತಿಪನ್ನಂ,

ಅವಸಿತಂ, ಅವಗತಂ—ಎ ತಿಳಿಯಲ್ಪಟ್ಟುದು (ಶಬ್ದಾಂಶ. ೪೩೨). ೧೦. ಗೆದ್ದುದು ; ಜಯಿಸಿದುದಂ.

**ಪ್ರತಿಪನ್ನಮಂದರ** = (ದೃಢತೆಯಲ್ಲಿ) ಮಂದರಪರ್ವತವನ್ನು ಮೀರಿದವನು ; ಒಂದು ಬಿರುದು : ಗಣ್ಡರ ಗಣ್ಡಂ ವೈರಿಭೇರುಣ್ಡಂ ಪ್ರತಿಪನ್ನಮಂದರಂ ಶರಣಾಗತವಜ್ರಪಂಜರಂ ಶ್ರೀಮತ್‌ಶಾನ್ತಿವರ್ಮ್ಮರಸರ ವಂಶಾವತಾರಮೆಂತೆಂದೊಡೆ (ಶಾಶಾಇ. XX. ೦೬-೯ ; ೯೫೦) ; ವಿಬುಧವರ ದಾಯಕಂ × × × ಪ್ರತಿಪನ್ನಮಂದರಂ ವಾಣಸ್ಯನ್ನಯಪುರಂದರಂ . . . ಮಧುವರಸಂ (ಕಶಾ. ೬-೩-೨೬೨ ; ೧೦೬೨). **ಪ್ರತಿಪನ್ನಮೇರು** = (ದೃಢತೆಯಲ್ಲಿ) ಮೇರುಪರ್ವತವನ್ನು ಜಯಿಸಿದವನು ; ಒಂದು ಬಿರುದು : ಶರಣಾಗತವಜ್ರಪಂಜರಂ ಪ್ರತಿಪನ್ನಮೇರು ನಾಮಾದಿ ಸಮಸ್ತ ಪ್ರಶಸ್ತಿಸಹಿತಂ (ಶಾಶಾಇ. XX. ೩೬-೯ ; ೧೦೬೦). [ಸಂ.]

**ಪ್ರತಿಪನ್ನತೆ** (ನಾ). ವಿವೇಕ ; ವಿವೇಚನೆ : ಇನ್ನು ಧೃತರಾಷ್ಟ್ರಾವನೀಶನು ತನ್ನ ಮಕ್ಕಳ ಬಾಂಧವಪ್ರತಿಪನ್ನತೆಯ ನೆಚ್ಚಿ ಕಾಬನೆಂದನು ಧರ್ಮಸುತ ನಗುತ (ಕುಭಾ.ಶಾ. ೨-೩೬). [ಸಂ. ಪ್ರತಿಪನ್ನತಾ]

**ಪ್ರತಿಪನ್ನಿಕೆ** (ನಾ). =ಪ್ರತಿಪನ್ನತೆ: 'ಪ್ರತಿಪನ್ನಿಕೆಗಿಡು' ಪರಾ. [ಪ್ರತಿಪನ್ನ + — ಇಕೆ]

**ಪ್ರತಿಪನ್ನಿಕೆಗಿಡು** (ಕ್ರಿ). ವಿವೇಚನೆಯನ್ನು ಕಳೆದುಕೊಳ್ಳು; ವಿವೇಕ ಶೂನ್ಯವಾಗು : ಮುಳಿಗುಂ ಪ್ರತಿಪನ್ನಿಕೆಗಿಡೆ ದಶರಥಸುತನಾ ವಿಭು ಮುಳಿದವಂಗೆ ಜವನುಂ ಮುಳಿಗುಂ (ಪಂಪಾಭಾ. ೧೦-೯೬).

[ಪ್ರತಿಪನ್ನಿಕೆ+ಕಿಡು (<ಕೆಡು₁)]

**ಪ್ರತಿಪಾಕ** (ನಾ). [ವೈದ್ಯಶಾ] ಬೇಯಿಸದ ಹಸಿರಸಗಳ ಮಿಶ್ರಣ: "ವಿಷಧಂ ಬೇಯಲು ಕಷಾಯಮಾಸಿಕ್ಕು ಹಸಿ ಬೆರಸೆ ಪ್ರತಿಪಾಕಮಕ್ಕುಂ" (ಕುಂಗಶಾ. ೦೦೩-೬); ಕಿರುಗಡಸಿಗೆ ಸಮೂಲವಂ ಕಷಾಯವಿಕ್ಕಿ ಶುಂಠಿ ೪ ವರಹ ತೂಕ ಪ್ರತಿಪಾಕವಂ ಕೂಡಿ ಕೊಡಲು ಗ್ರಹಿಣೀರೋಗಂ ಗುಣಮಕ್ಕುಂ (ಶಕಶ. ೩೩೬). [ಸಂ.]

**ಪ್ರತಿಪಾತಿ** (ನಾ). ಎದುರು ಬೀಳುವವನು; ವಿರೋಧಿ: ಸ್ವಾಮಿಗಳ್ ಕಷಾಯೋದಯದಿಂ ಎಲ್ಲಿಯಾನುಂ ಹೀಯಮಾನಚಾರಿತ್ರೋದಯರಪ್ಪ ದಱಿಂ ಋಜುಮತಿಮನಃಪರ್ಯಾಯಂ ಪ್ರತಿಪಾತಿಯಕ್ಕುಂ (ಚಿತ್ರ್ಯ. ೬೦).

[ಸಂ. ಪ್ರತಿಪಾತಿನ್]

**ಪ್ರತಿಪಾದಕ** (ಗು). ೧. ಹೇಳುವ; ವಿವರಿಸುವ. ೨. ಬೋಧಿಸುವ; ತಿಳಿಸುವ. ೩. ಸಮರ್ಥಿಸುವ; ದೃಢಪಡಿಸುವ. (ನಾ). ೪. ಹೇಳುವವನು; ವಿವರಿಸುವವನು. ೫. ಬೋಧಿಸುವವನು; ಬೋಧಕ. ೬. ಸಮರ್ಥಿಸುವವನು; ಸಾಧಿಸುವವನು: ಕಾಶ್ಮೀರ ದೇಶದ ಅಭಿನವಗುಪ್ತನೆ (ಹತ್ತನೆಯ ಶತಮಾನ) ಕಾಶ್ಮೀರದೇಶದ ಪ್ರಖ್ಯಾತವಿದ್ವಾಂಸ ಮತ್ತು ತತ್ತ್ವಜ್ಞಾನಿ. ಅವನೇ ಈ ಸಿದ್ಧಾಂತದ ಪ್ರಮುಖಪ್ರತಿಪಾದಕ (ಕಶ್ಯಪ್ರಾ. ೬೦೪). [ಸಂ.]

**ಪ್ರತಿಪಾದನ** (ನಾ). ೧. ನೀಡುವಿಕೆ; ದಾನ: "ತ್ಯಾಗಃ, ವಿಹಾಪಿತಂ, ದಾನಂ . . . ಪ್ರತಿಪಾದನಂ . . . ಸತ್ಪಾತ್ರದಲ್ಲಿ ಶಾಸ್ತ್ರೋಕ್ತಪ್ರಕಾರ ತಾನಾಗಿ ಕೊಡುವಿಕೆ, ತನ್ನ ಒಡವೆಯನ್ನು ಪುಣ್ಯಕ್ಕಾಗಿ ಮತ್ತೊಬ್ಬರಿಗೆ ಕೊಟ್ಟು ತನ್ನ ಸ್ವತ್ವಸಂಬಂಧವನ್ನು ಬಿಡುವಿಕೆ" (ಶಬ್ದಾಂಶ. ೨೨೨). ೨. ಹೇಳುವುದು ; ವಿವರಿಸುವುದು. ೩. ಉಪದೇಶಿಸುವುದು; ಬೋಧಿಸುವುದು. ೪. ಪ್ರಚುರಪಡಿಸುವುದು ; ಪ್ರಸಿದ್ಧ ಪಡಿಸುವುದು. ೫. ಪ್ರಮಾಣಗಳಿಂದ ಸಿದ್ಧಪಡಿಸುವುದು. ದೃಢಪಡಿಸುವುದು; ೬. ಉತ್ಪಾದಿಸುವುದು. [ಸಂ.]

**ಪ್ರತಿಪಾದನೆ** (ನಾ). ೧. ವಿವರಣೆ; ನಿರ್ವಚನ: ಅದರ ನಿರೂಪಣೆಯು ಕೆಲವು ಪ್ರಸಿದ್ಧವಾದ ಅಲಂಕಾರವಿಶೇಷಗಳ ಪ್ರತಿಪಾದನೆಗೆ ಯಾವ ಬಗೆಯಿಂದಲೂ ಸಮಾನವಲ್ಲವೆಂಬುದೂ ಮನದಟ್ಟಾಗುವುದು (ಧ್ವನ್ಯಾಲೋ. ೩೯): ಈ ಪ್ರತಿಪಾದನೆ ಕನ್ನಡನುಡಿಯ ಅಭಿಮಾನಿಗಳಿಗೆ ಸಮ್ಮೋಹ ರಮಣೀಯವಾಗಿ ತೋರಿದರೂ . . . ಇನ್ನೂ ನಿಷ್ಕರ್ಷೆ ಮಾಡಬೇಕಾಗಿದೆ (ಶ್ರಾಬಾ. ೨೩); ಗಹನವಾದ ವಿಷಯದ ಪ್ರತಿಪಾದನೆಯಾಗಬೇಕಾಗಿದ್ದರೂ ಸರಳವೂ ಆಕರ್ಷಣೀಯವೂ ಆದ ಶೈಲಿ ಮಕ್ಕಳ ಬೇಸರವನ್ನು ಕಡಮೆ ಮಾಡೀತು (ಶಿಕ್ಷಣ. ೩೬೯). ೨. ಪ್ರಮಾಣಗಳಿಂದ ಸಿದ್ಧಪಡಿಸಿದುದು; ಸಿದ್ಧಾಂತ: ಇವನ ಪ್ರತಿಪಾದನೆಯಂತೆ ಜಗತ್ತಿನ ಉಪಾದಾನ ಕಾರಣ (Material Cause) "ಅಪ್" ತತ್ತ್ವ (ಪುರ್ವಾರ. ೬ ೩೮೦೪).

[ಸಂ. ಪ್ರತಿಪಾದನ]

**ಪ್ರತಿಪಾದಿತ** (ಗು). ೧. ವಿವರಣೆಯನ್ನು ಹೊಂದಿದ,—ಒಳಗೊಂಡ. ೨. ತಿಳಿಸಿದ; ಹೇಳಿದ. ೩. ಸ್ಥಿರಪಡಿಸಿದ; ಸಮರ್ಥನೆಯನ್ನು ಹೊಂದಿದ. (ನಾ). ೪. ಹೇಳಿದುದು; ವಿವರಿಸಿದುದು: ಪ್ರತಿಪಾದಿತವಾಗಿರುವ ವಿಷಯ ಮಕ್ಕಳಿಗೆ ಆಸಕ್ತಿ ಹುಟ್ಟಿಸುವಂತಿರಬೇಕು (ಶಿಕ್ಷಣ. ೬೪೯). [ಸಂ.]

**ಪ್ರತಿಪಾದಿಸು** (ಕ್ರಿ). ೧. ವಿವರಿಸು; ಹೇಳು: ಬೃಹದಾರಣ್ಯಕಶ್ರುತಿಯು ಪರಶಿವನ ಮೂರ್ತ, ಅಮೂರ್ತರೂಪಗಳೆರಡನ್ನೂ ಪ್ರತಿಪಾದಿಸುತ್ತದೆ (ಶಿತ್ರ.ಅ. ೨೩); ವಿಷಯವನ್ನು ಪ್ರತಿಪಾದಿಸುವಾಗ ಲೇಖಕರ ವೈಯಕ್ತಿಕ ಅಭಿಪ್ರಾಯಗಳನ್ನು . . . ಸ್ಪಷ್ಟಪಡುವಂತೆ ಮಾಡಬೇಕು (ಶಿಕ್ಷಣ. ೨೬೦). ೨. ಬೋಧಿಸು; ಉಪದೇಶಿಸು: ಧರ್ಮಾನುಧರ್ಮವಂ ಪ್ರತಿಪಾದಿಪ . . . ತಥಾಗತಂ(ಕೃಶಾಇ. ೬೩-೪೦೩): ಪುರಾಣಗಳು ಕೂಡ ಭಕ್ತಿಮಾರ್ಗವನ್ನೇ ಪ್ರತಿಪಾದಿಸಿರುವುವು (ಕಸಂಇ. ೦೦); ಚೈತನ್ಯರು ಪ್ರತಿಪಾದಿಸಿದ ತತ್ತ್ವಗಳ ಮೇಲೆ ನಿಂತ ವೈಷ್ಣವಸಂಪ್ರದಾಯವೇ ಇಂದು ಮಣಿಪುರದಲ್ಲಿ ಸಜೀವತ್ವವನ್ನು ಪಡೆದಿದೆ ಎನ್ನಬಹುದು (ಭಾರತ. ೯೩). ೩. ಪ್ರಚಾರ ಮಾಡು; ಪ್ರಸಿದ್ಧಪಡಿಸು: ಪ್ರೌಢವಿವಾಹ, ವಿಧವಾವಿವಾಹ . . . ಮೊದಲಾದ ವಿಷಯಗಳನ್ನು ಪ್ರತಿಪಾದಿಸುವ ಈ ಧರ್ಮವು ಬಂಗಾಲದ ಈ ವಿಚಾರವಂತರನ್ನು ಆಕರ್ಷಿಸಿತು (ರಬೀಂಶಾ. ೬೩). ೪. ದೃಢಪಡಿಸು; ಸಮರ್ಥಿಸು; ಸಾಧಿಸು : ವಿಮರ್ಶೆ ಮಾಡುವ ಅಧಿಕಾರ ಎಲ್ಲರಿಗೂ ಇದೆಯೆಂದು ನಾನು ಮೊದಲಿಂದ ಪ್ರತಿಪಾದಿಸಿದ್ದೇನೆ (ಸಮೀಕ್ಷೆ. ೦೨೩೩).

[ಪ್ರತಿಪಾದನ + —ಇಸು₁]

**ಪ್ರತಿಪಾದುಕ** (ನಾ). ಮಂಚ ಮೊದಲಾದುವನ್ನು ಇಡುವುದಕ್ಕಾಗಿ ಮಾಡಿದ ಎತ್ತರದ ಪೀಠ,—ವೇದಿಕೆ: ಅನೇಕರತ್ನರಚಿತಪ್ರತಿಪಾದುಕ ವಿನ್ಯಸ್ತಕಾಂಚನಮಂಚೋಪಶೋಭಿತದೊಳ್ . . . ನಿದ್ರಾರಸವಶಗತ ರಾಗಿರ್ದರ್ (ಅಂಕು. ೫-೨೨ ಪ). [ಸಂ. ಪ್ರತಿಪಾದುಕಂ]

**ಪ್ರತಿಪಾದ್ಯ** (ಗು). ೧. ವಿವರಣೆ ಹೊಂದುವ,—ಹೇಳುವ : ಗ್ರಂಥಾರಂಭದಲ್ಲಿ ಮಂಗಳಾಚರಣಾದಿಗಳು ಮಾಡಬೇಕಾದರೆ ಅದಕ್ಕೆ ಅರ್ಹರಾದ ದೇವತೆಗಳು ಎರಡು ವಿಧ. ಗ್ರಂಥ ಪ್ರತಿಪಾದ್ಯದೇವತೆ; ಇಷ್ಟದೇವತೆ (ಕಶಾರ. ೦.೦ ಪತಿಕಾರ). ೨. ಸಮರ್ಥನೆ ಹೊಂದುವ. (ನಾ). ೩. ಉಪಯೋಗಿಸಲು ಅರ್ಹವಾದುದು ; ಪ್ರಯೋಗಿಸಲು ಯೋಗ್ಯವಾದುದು : ಪ್ರತಿಪಾದ್ಯಮುತ್ತಮಿತ್ವಂ ಮತಿವಂತರಿನೆಯ್ದೆ ಪೂರ್ವಕಾಲಕ್ರಿಯೆಗೆ (ಶಬ್ದ. ೨೩೬). ೪. ವರ್ಣನೆ ಹೊಂದುವಂಥದು; ವಿವರಿಸುವಂಥದು : ಸಕಲಜ್ಞ ಪ್ರತಿಪಾದ್ಯಮಪ್ಪ ಭುವನಂ ದೇಶಂ . . . ಇವೆಂಟೆನಿಕ್ಕುಂ (ಪುಲ್ಲಿ. ೦ ೩೯). ೫. [ಕಾವ್ಯಮೀ] ವ್ಯಕ್ತಿಯು ಮಾತಿನಿಂದ ಹೇಳಬೇಕೆಂದಿರುವ ಅರ್ಥ : 'ಪ್ರತಿಪಾದ್ಯ' ವಾದರೋ ಹೇಳುವವನ ಅರ್ಥಪ್ರತಿಪಾದನೇಚ್ಛೆಗೆ ಲಕ್ಷ್ಯವಾದ ಅರ್ಥ; (ಶಬ್ದವಲ್ಲ). ಆ ಅರ್ಥವೂ ಎರಡು ವಿಧ : (೧) 'ವಾಚ್ಯ' ವಸ್ತು (೨) 'ವ್ಯಂಗ್ಯ' (ಧ್ವನ್ಯಾಲೋ. ೨೦೩). [ಸಂ.]

**ಪ್ರತಿಪಾನ** (ನಾ). ೧. ಕುಡಿಯುವುದು. ೨. ಕುಡಿಯುವ ನೀರು. ೩. [ಅಶ್ವಶಾ] ಕುದುರೆಗಳಿಗೆ ಕುಡಿಸುವ ಬಲವರ್ಧಕಪಾನೀಯ : ಪ್ರತಿಪಾನಮೆಂಬುದಾಱುಂ ಋತುಗಳೊಳಂ ಬೇಱೆವೇಱೆ ದಿವ್ಯೌಷಧಸಂಯುತ ದೊಳ್ ಕುಡುಗುಂ (ಅಶ್ವಶಾ. ೬-೩೮): ಮಾಗಧತೈಲಂ ಸೈಂಧವನಾಗರ ಸುರದಾರುಗಳ್ ಸುರಾಪಾನದ ಸಂಯೋಗದೊಳಶ್ವಂಗಳ್ಗೆ ಘನಾಗಮ ದೊಳ್ ಕೊಡೆ ಮನೋಹರಂ ಪ್ರತಿಪಾನಂ (ಅಶ್ವಶಾ. ೬-೪೬). [ಸಂ.]

**ಪ್ರತಿಪಾನಕ** (ನಾ). = ಪ್ರತಿಪಾನ ೩ : ಒಪ್ಪಲಿ ಸಿಂಧೂತ್ಥಂ ಸದಗುಪ್ಪೆ [ಯು] ಮುಂಚಾಗ್ನಿ ನಾಗರಂ ಮಾಸಿತದಿಂದೊಪ್ಪುವ ಕಳ್ ಪ್ರತಿಪಾನಕ ಮಪ್ಪುದು ತುರಗಕ್ಕೆ ಮರುಷಋತುವರ್ತಕದೊಳ್ (ಅಶ್ವಶಾ. ೬-೪೭). [ಸಂ.]

**ಪ್ರತಿಪಾಪ** (ನಾ). ಒಂದು ಪಾಪಕ್ಕೆ ಬದಲಾಗಿ ಮಾಡುವ ಅಥವಾ ಮಾಡಿಸುವ ಮತ್ತೊಂದು ಪಾಪ : ಅವನ ತೊಡೆಯಡಗನೆ ಕೆಟ್ಟಲ್ಲದ ಮಂಗಿಕ್ಕುವರೇಂ ಪೊಲ್ಲದುದೋ ಮಾಂಸಸೇವನಪ್ರತಿಪಾಪಂ (ಶಾಂತಿ. ೬-೯೬). [ಸಂ.]

**ಪ್ರತಿಪಾಲ** (ನಾ). ಕಾಪಾಡುವವನು ; ಸಂರಕ್ಷಿಸುವವನು ; ರಕ್ಷಕ : ಪುರಾರಿಯ ದೇಗುಲಕ್ಕೆ ವರೆಯ್ದಿ ತಚ್ಚರಣಾಗತಪ್ರತಿಪಾಲನು ಕಾಣುತ್ತ ಪೊಡಮಂಟು (ಬಸವ. ೨೮-೪೬). [ಸಂ.]

**ಪ್ರತಿಪಾಲನ** (ನಾ). ೧. ಕಾಪಾಡುವುದು ; ರಕ್ಷಿಸುವುದು. ೨. ಪೋಷಿಸುವುದು ; ಪೋಷಣೆ. [ಸಂ.]

**ಪ್ರತಿಪಾಲನೆ** (ನಾ). = ಪ್ರತಿಪಾಲನ ೧ : ಕೋಲಾರಜಿಲ್ಲೆಯ ಎರಡು ಶಾಸನಗಳಲ್ಲಿ . . . ಬಿರನೊಳಂಬ ಅಣ್ಣಿಗನು ' ದುಷ್ಟನಿಗ್ರಹಶಿಷ್ಟಪ್ರತಿ ಪಾಲನೆ 'ಯನ್ನು ಮಾಡಿ ರಾಜ್ಯವನ್ನು ಆಳುತ್ತಿದ್ದನೆಂದು ಹೇಳಿದೆ (ನೊಳಂಬ. ೪೦). [ಸಂ. ಪ್ರತಿಪಾಲನ]

**ಪ್ರತಿಪಾಲಿತ** (ಗು). ಕಾಪಾಡಿದ ; ರಕ್ಷಿತವಾದ : ಅನಂತಭೋಗನಿಲಯಂ ಪ್ರತಿಪಾಲಿತಧರ್ಮಚಕ್ರನಬ್ಜಾಯತನೇತ್ರನಾದಿಪುರುಷಂ . . . ಈಗೆಮಗೆ ಮಂಗಳಕಾರಣಮುತ್ಸವಂಗಳಂ (ಗದಾಯು. ೧-೧). [ಸಂ.]

**ಪ್ರತಿಪಾಲಿಸು**, ಪ್ರತಿಪಾಳಿಸು (ಕ್ರಿ) ೧. ಕಾಪಾಡು ; ರಕ್ಷಿಸು : ಎಲ್ಲಾ ಋಷಿಸಮುದಾಯಮುಮಂ ಪ್ರತಿಪಾಲಿಸಲ್ಕೆ ಸಮರ್ಥರಾಗಿರ್ಪನ್ನೆಗಂ ಗೋವರ್ಧನಭಟ್ಟಾರರ್ ಸಮಾಧಿಮರಣದಿಂದಂ . . . ದೇವಲೋಕಕ್ಕೆ ಪೋದರ್ (ವಡ್ಡಾರಾ. ೬೪-೨೬) ; ನೆಲನಂ ಪ್ರತಿಪಾಲಿಸಿ ಧರ್ಮಸೂನು ಸುಖ ದಿರ್ದಂ ರಿಪುಬಳತಿಮಿರಭಾನು (ಪಂಪಭಾ. ೪-೧೧) ; ಮಹಾಮಂಡಳೇಶ್ವರ ಪದವಿಯನಲಂಕರಿಸಿ ಮಹೀಮಂಡಲಮಂ ಪ್ರತಿಪಾಲಿಸಿ . . . ಸಾಮ್ರಾಜ್ಯ ಲಕ್ಷ್ಮಿಯಂ ತಾಳ್ದಿ (ಅಜಿತ. ೪-೬ ವ). ೨. ನಡೆಸು ; ನೆರವೇರಿಸು : ಅರಸುಗಳವಿಚಾರದಿಂದಾರಾನುಮಂ ಕೊಲಲುಂ ಕಿಡಿಸಲುಮೆಂದಿರ್ದರಲ್ಲದೆ ಮಂತ್ರಿಗಳಿಚ್ಛೆಯಂ ಪ್ರತಿಪಾಲಿಸರ್ (ಕಾದಂಬ. ೧೩೬-೩); ಪೊಲ್ಲರೊಳ್ಕೆಳೆ ಗೊಳ್ಳದಿರ್ಪುದು ಶಿಷ್ಟರೊಳ್ ವಿನಯಮಂ ಪ್ರತಿಪಾಲಿಸಿರ್ಪುದು (ಧರ್ಮಾಮೃ. ೩-೧೧೧). ೩. ಯಥಾಸ್ಥಿತಿಯಾಗಿರುವಂತೆ ನೋಡಿಕೊಳ್ಳು ; ಲೋಪ ಬರದಂತೆ ಆಸಕ್ತಿವಹಿಸು : ಸೋದರರಣ್ಬರುಂ ಪಸುಗೆಯಂ ಪ್ರತಿ ಪಾಲಿಸಿ ಲೋಕಪಾಲರೇತಾದರರದಿಂದೆ ಬೆಚ್ಚು ಬೆಸಕೆಯ್ಯೆ (ಅರ್ಜುನ. ೪-೧೫೦); ಈ ಧರ್ಮ್ಮಮಂ ಸಾಸಿರ್ವ್ವರು ತಪ್ಪದೆ ಪ್ರತಿಪಾಲಿಸುವದು (ಇಅ. IV. ೨೬೬-೬೬ : 1184). **ಪ್ರತಿಪಾಳಿಸು** : ೧. ಪಲವುಂ ಋದ್ಧಿಗಳಿಂ ಕೂಡಿ ದೊರೆಲ್ಲಾ ಋಷಿಸಮುದಾಯಮುಮಂ ಪ್ರತಿಪಾಳಿಸುತ್ತಂ (ವಡ್ಡಾರಾ. ೬೩-೩): ಕ್ಷಿತಿಯಂ ನಯವಿಕ್ರಮದಿಂ ಪ್ರತಿಪಾಳಿಸಿ ಪಡೆದು ಗೋತ್ರನಿಸ್ತಾರಕನಂ ಸುತನಂ (ವರ್ಧಮಾ. ೨-೩೪). ೩. ಪೋಂಟೆ ಋಣ್ಣುಗ ದೇವರ್ಗ್ಗೆ ಇನ್ತೀ ಧರ್ಮ್ಮಮಂ ಪ್ರತಿಪಾಳಿಸಿದವರ್ . . . ಪತ್ತು [ಸಾ]ಸಿರ ಕಬಿಳೆಯಂ ದಾನಂಗೊಟ್ಟ ಫಳಮಕ್ಕುಂ (ಸೌಇಇ. XI-I. ೨೨-೪೦ : 897) ; ಆ ನೆಲನ ದೇಪರ್ಗ್ಗೆ ಧಾರೆಯೆಱೆದು ಕೊಟ್ಟು ತಮ್ಮ ಧರ್ಮ್ಮಂ ಮಾಡಿ ಪ್ರತಿ ಪಾಳಿಸಿದರ್ (ಸೌಇಇ. XX. ೨೦-೩೩ ; 1019) ; ಇನ್ತು ಬಿಟ್ಟ ದತ್ತಿಯಂ ಪ್ರತಿಪಾಳಿಸಿದ ಮಹಾಪುರುಷಂಗೆ . . . ದಾನಂಗೊಟ್ಟ ಫಳಮನೆಯ್ದುವಂ (ಎಕ. VIII. ತೀರ್ಥ. ೩೬-೩೪ : 1116). [ಪ್ರತಿಪಾಲನ + – ಇಸು₁]

**ಪ್ರತಿಪಾಳಿಸು** 'ಪ್ರತಿಪಾಲಿಸು' ನೋ.

**ಪ್ರತಿಪೂಜೆ** (ನಾ). ಗೌರವ ; ಮರ್ಯಾದೆ : ವಸುಧೆಯೊಳು ಮುನ್ನ ಪ್ರತಿಷ್ಠಿಸಿದ ಲಿಂಗಗಳಿಗೆಸಗದಿರು ಪ್ರತಿಪೂಜೆಯನ್ನು ಶ್ರೀವೀರಶೈವಾಚಾರಕದು ಹಾನಿಯು (ಶಶಿಪೋ. ೧೪-೪೨). [ಸಂ. ಪ್ರತಿಪೂಜಾ]

**ಪ್ರತಿಪ್ರಾಣ** (ನಾ). ಪ್ರತಿಬಿಂಬ: "ಪ್ರತಿಬಿಂಬಂ...ಪ್ರತಿಪ್ರಾಣಮೆಂದೆನಲದುಂ ಪ್ರತಿಯಪ್ಪ ರೂಪೆನಿಕ್ಕುಂ" (ಮುಂಗಾಟ. ೬-೨೬). [ಸಂ.]

**ಪ್ರತಿಫಲ** (ನಾ). ೧. ಮಾಡಿದ ಕೆಲಸಕ್ಕೆ ಪ್ರತಿಯಾಗಿ ದೊರಕುವ ಫಲ, –ಪ್ರಯೋಜನ : ಸಾಮಾನುಗಳನ್ನು ಕೊಂಡುಕೊಳ್ಳುವಾಗ ನೀವು ಕೊಡುವ ಬೆಲೆಗೆ ಸರಿಯಾದ ಪ್ರತಿಫಲ ಸಿಗಬೇಕಾದರೆ . . . ದೂರದೃಷ್ಟಿ ಯಿರಬೇಕು (ಅರ್ಥಶಾ. ೧೬೪); ಯಾವ ಕೆಲಸಕ್ಕೂ ಪ್ರತಿಫಲವನ್ನು ಅಪೇಕ್ಷಿಸು ತ್ತೇವೆ. ಪ್ರತಿಫಲ ಬಾರದಿದ್ದಲ್ಲಿ ಮರುಗುತ್ತೇವೆ (ಧರ್ಮಾ. ೧೩೩); ತೋಟಗಾರರಿಗೆ ಸಲ್ಲುತ್ತಿದ್ದ ಪ್ರತಿಫಲ ವಿಧವಿಧವಾದುವು (ಕಾಸಗ. ೩೬). ೨. ಪ್ರತಿಬಿಂಬ ; ಪಡಿನೆಳಲು. ೩. ಪ್ರತ್ಯುಪಕಾರ. [ಸಂ.]

**ಪ್ರತಿಫಲನ** (ನಾ). ೧. ಪ್ರತಿಬಿಂಬ; ಪಡಿನೆಳಲು : ಪರಶಿವನು . . . ಅಧಿಕಭಾವವನ್ನು ಹೊಂದಿದ ಸ್ವಪ್ರಕಾಶತ್ವದಲ್ಲಿ ಪ್ರತಿಫಲನರೂಪದಿಂದ ಸ್ಫುರಿಸಿ ಲಿಂಗವೆನಿಸಿದನು (ಕಾರಣ. ೨೩೩); ಮಯೂರದ ಗರಿಗಳ ಪ್ರತಿ ಫಲನವು ಅವನ ಮೇಲೆ ಬಿದ್ದುದರಿಂದ ಮಯೂರವರ್ಮನೆಂದೂ ಬಿರುದಾಂಕಿತನಾದನು (ಕುಳುವಾ. ೬೦೪). ೨. ಪ್ರತಿಬಿಂಬಿಸುವುದು. ೩. ಪ್ರತಿಫಲ. [ಸಂ.]

**ಪ್ರತಿಫಲಿತ**, ಪ್ರತಿಫಳಿತ (ಗು). ೧. ಪ್ರತಿಫಲಿಸಿದ ; ಪ್ರತಿಬಿಂಬಿತವಾದ. ೨. ಪ್ರತಿಫಲವನ್ನುಂಟುಮಾಡಿದ ; ಪರಿಣಾಮ ಬೀರಿದ: ಜಲಧಿಯುಲಿ ಘೋಷದನದಲಿ . . . ಸಿಲುಕಿವಡೆ ಬಿಡಿಸುವವಲೇ ಪ್ರತಿಫಲಿತ ಪೂರ್ವಾದತ್ತಪುಣ್ಯಾವಳಿಗಳೆಂಬುದು ತನ್ನೊಳಾದುದು (ಕುಮ್ಮಾಗ. ೪-೨೩). (ನಾ). ೩. ಪ್ರತಿಬಿಂಬಿತವಾದುದು : ಕನ್ನಡಿಯಂತಹ ಪ್ರತಿಫಲನ ಕಾರಕವಾದ ಮೇಲ್ಮೈಯಿಂದ ಒಂದು ನಿಯಮವನ್ನನುಸರಿಸಿ ಪ್ರತಿಫಲಿತ ವಾದರೆ ಅಂತಹ ಮೇಲ್ಮೈಯು ನಮಗೆ ಗೋಚರವಾಗುವುದಿಲ್ಲ (ಕೌತು. ೦೩೪). **ಪ್ರತಿಫಳಿತ** : ೧. ಲಲನಾನಿಕಾಯನಿವಳಿತ ನೀರಾಜನ ದೀಪಕಳಿಕಾಪ್ರತಿಫಳಿತಮೌಳಿಮಾಣಿಕ್ಯನುಂ (ಚಂದ್ರಪ್ರ. ೮-೨೪ ವ). [ಸಂ.]

**ಪ್ರತಿಫಲಿಸು** (ಕ್ರಿ). ೧. ಪ್ರತಿಬಿಂಬಿಸು : ನಲಕೂಬರನು. . . ದೂರದರ್ಶಕ ವೆಂಬ ಕನ್ನಡಿಯೊಳ್ ಪ್ರತಿಫಲಿಸಿದ ದಿಕ್ಪಾಲಕಪುರಂಗಳನೀಕ್ಷಿಸುತ್ತಲು (ಸೌಗಂಧಿ. ೩೦೮-೬); ಈ ಎಲ್ಲ ವಸ್ತುಗಳಲ್ಲಿ ಬೆಳಕನ್ನು ಕೊಡುವ ಶಕ್ತಿ ಇಲ್ಲವಿದ್ದರೂ ಬೆಳಕನ್ನು ಪ್ರತಿಫಲಿಸುವ ಶಕ್ತಿ ಇದೆಯಷ್ಟೆ (ಶಾಂತ್ರ. II, ೬೬೩). ೨. ಪರಿಣಾಮವಾಗಿ ಬರು,–ಆವಿರ್ಭವಿಸು : ಅತಿಮಥನಿಸಿದರೆ ಶ್ರೀಗಂಧದೊಳು ಕಿಚ್ಚು ಪ್ರತಿಫಲಿಸುವುದಲ್ತೆ (ಶಶಿ. ೧೪-೯೬); ಅವನ ಧ್ವನಿಯಲ್ಲಿ ಅಷ್ಟೊಂದು ಹೊತ್ತಿನವರೆವಿಗೂ ಮನೆಗೆ ಹೋಗದೆ ಇರಬೇಕಲ್ಲಾ ಎಂಬ ಜುಗುಪ್ಸೆಯು ಪ್ರತಿಫಲಿಸಿತು (ಮೂಗ್ನು. ೩೪). [ಪ್ರತಿಫಲನ್ + – ಇಸು₃]

**ಪ್ರತಿಫಳಿತ** 'ಪ್ರತಿಫಲಿತ' ನೋ.

**ಪ್ರತಿಬಂದಿ₁** (ನಾ). ವಿರೋಧವಾದುದು ; ಪ್ರತಿಯಾದುದು : ನಾನು ಹೇಳಿದ್ದಕ್ಕೆಲ್ಲ ಪ್ರತಿಬಂದಿಯಾಗಿಯೇ ಉತ್ತರ ಕೊಡುತ್ತೀಯಲ್ಲ (ರೂಢಿ). [ಸಂ. ಪ್ರತಿಬಂದೀ]

**ಪ್ರತಿಬಂದಿ₂** (ನಾ). ಮೋಜಣಿ ; ಸರ್ವೆ; ಚಕ್ಕುಬಂದಿ : ಯಾವತ್ತು

ಧೂಮಿಯಷ್ಟು ಅಂದು ಪ್ರತಿಬಂದಿಯ ದರಗಳನ್ನು ಗೊತ್ತುಮಾಡಿದ ಬಳಿಕ ಪೂಜ್ಯ ಸರಕಾರಿ ಕಂದಾಯದಲ್ಲಿ ಶೇಕಡಾ ಮೂವತ್ತರಂತೆ ಸರಕಾರಕ್ಕೆ ಕಟಸಾಕು ಬಂತು (ಕಥಾಗ. ೬೬). [ಪ್ರತಿ + < ಬಂದು]

**ಪ್ರತಿಬಂಧ** (ನಾ). ೧. ತಡೆ; ಅಡಚಣೆ; ಅಡ್ಡಿ: "ವಿಷ್ಕಂಭಃ, ಪ್ರತಿಬಂಧಃ— ಈ ೨ ತಗುವುದು" (ಹಲಾಯು. ೦೩೬-೪೦). ೨. ಸಂಬಂಧವನ್ನು ಹೊಂದುವುದು. [ಸಂ.]

**ಪ್ರತಿಬಂಧಕ** (ಗು). ೧. ಅಡ್ಡಿಯನ್ನುಂಟುಮಾಡುವ; ಅಡಚಣೆಯನ್ನುಂಟುಮಾಡುವ: ದೇವತಾಕಾರ್ಯಕ್ಕೆ ಪ್ರತಿಬಂಧಕವಾಕ್ಯಗಳನ್ನು ಹೇಳಬೇಡಿ (೬೬೨). (ನಾ). ೨. ಅಡ್ಡಿಯಾಗಿರುವುದು; ಅಡಚಣೆಯಾಗಿರುವುದು: ಸುತಜನ್ಮಕ್ಕಂ ಪಿಂದುಂ ಪ್ರತಿಬಂ[ಧಕಂ. ದೋ] ಷಮೊಂದು ಪೂರ್ವಜನ್ಮಾಂತರಸಂಗತಮುಂಟು (ಜಕ್ಕೃ. ೬-೭೭). ೩. ಅಡ್ಡಿ; ಅಡಚಣೆ; ತಡೆ: ಧರ್ಮಚಿಂತನೆಗೆ ಪ್ರಬಲವಾದ ಪ್ರತಿಬಂಧಕಗಳಾದವು ಇವೆ (ಅಧ್ಯಾ. ೩); ಈ ಅಹಂಕಾರ ವಿಶ್ವಸಾಮರಸ್ಯದರ್ಶನಕ್ಕೆ ಪ್ರತಿಬಂಧಕವಾಯಿತು (ಮಾಸ್ಕೃ. ೬೨ ೩೬೫). ೪. ಅಡ್ಡಿಪಡಿಸುವವನು; ತಡೆಗಟ್ಟುವವನು: ಅಂಥತೆಯುನೇನೆಂದೆನ್ನೆ ಪ್ರತಿಬಂಧಕರು ಜೋಡಿಸಲು ಪಯದಧಿಸಂಧಿಯಲಿ ಓವರಿಸಿ ಸಂವರಿಸಿದನು ಸೈನಿಕವ (ಜತ್ಮ. ೨೨-೨). ೫. [ನ್ಯಾಯಶಾ] ಕಾರ್ಯವು ನಿಂತುಹೋಗುವುದಕ್ಕೆ ಕಾರಣವಾದುದು: ಪ್ರತಿಬಂಧಕವೆಂದರೆ ಸಾಮಗ್ರಿಯೆಂಬ ಕಾರಣಸಮುದಾಯಕ್ಕೆ ನ್ಯೂನತೆಯನ್ನುಂಟುಮಾಡುವುದು. ಅದೇ ಸಾಮಗ್ರೀವಕಲ್ಯವು. ಅದನ್ನುಂಟುಮಾಡುವುದು ಪ್ರತಿಬಂಧಕ (ಸಿದ್ಧಾ. ೦೬೦). [ಸಂ.]

**ಪ್ರತಿಬಂಧಕಾಜ್ಞೆ** (ನಾ). [ರಾಜನೀ] ಜನರು ಗುಂಪುಗೂಡುವುದರಿಂದ ಶಾಂತಿಭಂಗವಾಗುವುದೆಂದು ನಿರ್ಧಾರವಾದಾಗ (ನಾಲ್ಕು ಜನರಿಗಿಂತ ಹೆಚ್ಚು ಜನರು ಒಟ್ಟಿಗೆ ಸೇರಬಾರದು, ಮೆರವಣಿಗೆ ನಡೆಸಬಾರದು ಮೊದಲಾದ) ನಿರ್ಬಂಧಗಳನ್ನು ವಿಧಿಸುವ ರಕ್ಷಣಾಧಿಕಾರಿಗಳ ಅಪ್ಪಣೆ; ಭಾರತಶಾಸನದ ೫೭, ೧೪೪ ಮೊದಲಾದ ವಿಧಿಗಳ ಚಲಾವಣೆ: ತುರ್ತುಪರಿಸ್ಥಿತಿಯಲ್ಲಿ ಹಾರಿಗೊಳಿಸಿದ ಪ್ರತಿಬಂಧಕಾಜ್ಞೆಯನ್ನು ಮೀರಿ ನಡೆದವರನ್ನು ದಸ್ತಗಿರಿ ಮಾಡಲಾಗುವುದು (೬೬೨). 'ನಿಷೇಧಾಜ್ಞೆ' ಪರಾ. [ಪ್ರತಿಬಂಧಕ + ಆಜ್ಞೆ]

**ಪ್ರತಿಬಂಧನ** (ನಾ). ೧. ಕಟ್ಟಿ ಹಾಕುವುದು. ೨. ತಡೆಯುವುದು; ಅಡ್ಡಿಪಡಿಸುವುದು. ೩. ಸೆರೆ; ಬಂಧನ. [ಸಂ.]

**ಪ್ರತಿಬಂಧಪಡಿಸು** (ಕ್ರಿ). ಅಡ್ಡಿಪಡಿಸು; ತಡೆ: ಎಲ್ಲೆ ಸೂಚಕನೆ, ಎಲ್ಲವನ್ನೂ ಕ್ರಮವಾಗಿ ಹೇಳಲಿ. ಅಷ್ಟರೊಳಗೆ ಇವನನ್ನು ಪ್ರತಿಬಂಧಪಡಿಸಬೇಡ (ಶಾಕುಂತ. ೬೩-೦೬). [ಪ್ರತಿಬಂಧ + ಪಡಿಸು]

**ಪ್ರತಿಬಂಧಿನಿ** (ನಾ). ಪ್ರತಿಸ್ಪರ್ಧಿಯಾದಂದು: ಕಟ್ಟಿದ ಕಂಠಿಕಗ ಮೆಟ್ಟಿದಡ್ಡುಗೊಡೆಗಂ ದಯೆಗೆಯ್ದು ಯುವರಾಜಲಕ್ಷ್ಮಿಗಂ ಪ್ರತಿಬಂಧಿ[ನಿ:ಪಾ. ಬದ್ಧಿ]ನಿಯನೆನಿಸಿದ ಮಧುಮಥನೋಪಾಲನ ವಕ್ಷಃಸ್ಥಲದ ಕಂಠಿಕೆಯುಂ... ಮಾಧವೀಲಕ್ಷ್ಮಿಯುಮಂ ತನಗಮರೆ (ಕಾಂತಿಪು. ೬-೨೩ ಪ). [ಸಂ. ಪ್ರತಿಬಂಧಿನೀ]

**ಪ್ರತಿಬಂಧಿಸು** (ಕ್ರಿ). = ಪ್ರತಿಬಂಧಪಡಿಸು: ಅವನ ಈ ಸುತ್ತಾಟವನ್ನು ... ಅವಳು ಎಂದೂ ಪ್ರತಿಬಂಧಿಸುತ್ತಿರಲಿಲ್ಲ (ಕಂಗೆಟ್ಟ. ೩೬); ನಿನ್ನ ದೀರ್ಘಜೀವನದ ಗುಟ್ಟೇನು? ನೆಗಡಿಯನ್ನು ಹೇಗೆ ಪ್ರತಿಬಂಧಿಸಿದಿ? (ದೀರ್ಘ. ೦೦). [ಪ್ರತಿಬಂಧನ + – ಇಸು]

**ಪ್ರತಿಬದ್ಧ** (ಗು). ೧. ಕೂಡಿಕೊಂಡಿರುವ; ಸೇರಿದ: ಪೂರ್ವವಿದೇಹದ ... ವತ್ಸಕಾವತೀವಿಷಯಪ್ರತಿಬದ್ಧಪ್ರಭಾವತೀಪುರಿಯೊಳ್ (ಆದಿಪು. ೬-೨೬ ಪ); ಹಾ ಮನಃಪ್ರಿಯ ಪುಂಡರೀಕ ಜನ್ಮಾಂತರಾವಿಸ್ಮೃತಮದನರಾಗ ... ಎಂದುದ್ಗತಶೋಕೆಯಾಗಿ (ಕಾದಂಬ. ೬೦೯). (ನಾ). ೨. ಕೂಡಿಕೊಂಡಿರುವುದು; ಸೇರಿರುವುದು; ಸಂಬಂಧಿಸಿದುದು: ಇಂತೀ ಕಥೆಗಳೆಲ್ಲಂ ಗುರುದತ್ತಭಟಾರರ ಕಥೆಗೆ ಪ್ರತಿಬದ್ಧಂಗಳ್ (ವಡ್ಡಾರಾ. ೦೬೨-೨೦); ಹಾರಲತೆಯಂತೆ ಕಂಠಯೋಗ್ಯಮುಮಂ ಗ್ರಹಪಂಕ್ತಿಯಂತೆ ಧ್ರುವಪ್ರತಿಬದ್ಧಮುಮಂ ... ಅಪ್ಪ ಗೀತೆಯುಂ ವೀಣೆಯುಂ ಬಾಜಿಸುತ್ತಿರ್ದಳ್ (ಕಾದಂಬ. ೬೬೮); ಈ ಮಧ್ಯಮಲೋಕದ ಪ್ರತಿಬದ್ಧಮಾಗಿ ಚಿತ್ರೆಯೆಂಬ ನೆಲದಿಂ ಮೇಗೆ ... ತಾರಾಗಣವಿಮಾನಂಗಳಿರ್ಕುಂ (ಸುಕುಮಾ. ೦೦-೫೯). ೩. ಅಡ್ಡಿಪಡಿಸಿದುದು; ಪ್ರತಿಭಟನೆಯನ್ನು ಹೊಂದಿದುದು. ೪. ಬಂಧಿಸಿದುದು; ಬಂಧನಕ್ಕೊಳಗಾದುದು. ೫. ಚಿನ್ನ ಮೊದಲಾದ ಲೋಹಗಳಲ್ಲಿ ಕುಂದಣಿಸಿರುವುದು, —ಮೆಟ್ಟಿರುವುದು. ೬. ನಿರಾಶೆಗೊಂಡವನು; ಹತಾಶ: "ಮನೋಹತಃ ಪ್ರತಿಹತಃ, ಪ್ರತಿಬದ್ಧಃ, ಹತಃ— ೪ ಮನಸ್ಸಿನ ಉತ್ಸಾಹವು ತಪ್ಪಿದವನ ಹೆಸರು" (ಸಿದ್ಧಾಂತಿ. ೬೬೪). [ಸಂ.]

**ಪ್ರತಿಬಲ** (ನಾ). ೧. ಶತ್ರುವಿಗೆ ಸಮಾನವಾದ ಬಲವುಳ್ಳವನು,— ಸಾಮರ್ಥ್ಯವುಳ್ಳವನು. ೨. ಸಮರ್ಥ; ಶಕ್ತ. ೩. ಶತ್ರುಸೈನ್ಯ; ಪರಬಲ. ೪. ಹಗೆ; ಅರಿ; ಶತ್ರು: ಅಸಹಾಯನೆ ನಿಂ ಪ್ರತಿನೃಪರ ಸಹಾಯರ್ವಿಂ ಪ್ರತಿಬಲನದರ್ಚಿಂದನರ್ಥಕಂ ವಾಕ್ಯಾರ್ಥಂ (ಗದಾಯು. ೬-೯೩). [ಸಂ.]

**ಪ್ರತಿಬಿಂಬ** (ನಾ). ೧. ನೀರು, ಕನ್ನಡಿ ಮೊದಲಾದುವುಗಳಲ್ಲಿ ತೋರುವ ವಸ್ತುವಿನ ಪಡಿನೆಳಲು, –ಪ್ರತಿಚ್ಛಾಯೆ: "ಮಾರ್ಪೊಳೆದುದು ಪಡಿನೆಳಲೆಂಗಳ್ಕುಂ ಬುಧರಿಂ ಪ್ರತಿಬಿಂಬ" (ಶಬ್ದಮ. ೨೪೩); ರತ್ನಸ್ತ್ರೀ ಪ್ರತಿಕೃತಿಯೊಳರ್ಕಬಿಂಬಪ್ರತಿಬಿಂಬಂ ನೆಲಸಿ ಪೀಡೆಯಂ ಮಾಡುಗುಮೇ (ಕಾಂತಿಪು. ೯-೨೦೯); ಪ್ರತಿಬಿಂಬದ ನೆವದಿಂ ವನತತಿಶೈಲಗ್ರಹನಿಕಾಯತಾರಾಂಕ ಜಗತ್ತ್ರಿತಯಮನಬ್ಧೋದರನಾಕೃತಿಯಂ ತನ್ನೊಳಗೆ ತಳೆದು ಶಿಗೊಳ ನೆಸೆಗುಂ (ಕಾದಂಬ. ೬೬೮). ೨. ಮೂಲಾಕೃತಿಗೆ ಸದೃಶವಾದ ರೂಪ, ವಿಗ್ರಹ, ಪ್ರತಿಮೆ, ಚಿತ್ರ ಮುಂತಾದುವು: "ಪ್ರತಿಬಿಂಬಮಾ ಪ್ರತಿಚ್ಛಾಯಂ ... ಪ್ರತಿಪ್ರಾಣಮೆಂದೆನಲದುಂ ಪ್ರತಿಯಪ್ಪ ರೂಪನಿಕ್ಕುಂ" (ಶಬ್ದಮಣಿ. ೬-೨೮); ನಿರ್ಮಲಪ್ರತಿಬಿಂಬ ಕಾಣಿಸಿತಾದಿನಾರಾಯಣನ ಮೂರುತಿಯ ಅಂಬುಜಾಸನೆ ಕೌಸಲೆಯ ಗರ್ಭಾಂಬುನಿಧಿಯಲಿ (ತೊರೆರಾ. ೬-೪); ಪರಮಾತ್ಮನ ಪ್ರತಿಬಿಂಬ ಅಥವಾ ಸಾದೃಶ್ಯಕ್ಕೆ "ಪ್ರತಿಮಾ" ಎಂಬ ಶಬ್ದವನ್ನು ಭಾರತೀಯರು ಉಪಯೋಗಿಸುತ್ತಾರೆ (ಭಾರತ. ೨೦೪). ೩. [ದ್ವೈತ] ಇಪ್ಪತ್ತು ಬಗೆಯ ದ್ರವ್ಯಗಳಲ್ಲಿ ಒಂದು; ಉಪಾದಾನ ಕಾರಣವಾಗಿರುವುದು: ಪರಮಾತ್ಮ, ಲಕ್ಷ್ಮಿ ... ವಾಸನಾ, ಪ್ರತಿಬಿಂಬ ಎಂದು ದ್ರವ್ಯಗಳು ಇಪ್ಪತ್ತು (ಸಿದ್ಧಾ. ೬೬೩). [ಸಂ.]

**ಪ್ರತಿಬಿಂಬಕಲ್ಪ** (ನಾ). [ಕಾವ್ಯಮೀ] ಪೂರ್ವಕವಿಗಳು ಹೇಳಿರುವ ವಿಷಯವನ್ನು ತನ್ನ ಕೃತಿಯಲ್ಲಿ ಅಳವಡಿಸಿಕೊಳ್ಳುವ ಮೂರು ಬಗೆಗಳಲ್ಲಿ ಒಂದು; ಹಿಂದಿನ ಕವಿಗಳ ಕಾವ್ಯಾರ್ಥವನ್ನು ಬೇರೆ ಮಾತುಗಳಲ್ಲಿ ತನ್ನ ಕೃತಿಯಲ್ಲಿ ವರ್ಣಿಸುವುದು: ಹೋಲಿಕೆಗಳನ್ನು ಆನಂದವರ್ಧನನು "ಪ್ರತಿಬಿಂಬಕಲ್ಪ", "ಆಲೇಖ್ಯಪ್ರಖ್ಯ", "ಸಮಾನದೇಹಿಕಲ್ಪ" ಎಂದು ಮೂರು ಬಗೆಯಾಗಿ ವಿಂಗಡಿಸುತ್ತಾನೆ... "ಪ್ರತಿಬಿಂಬಕಲ್ಪ" ಎಂಬುದರ ಹೆಸರೇ ಸೂಚಿಸಿರುವಂತೆ, ಅದರ ತಿರುಳೆಲ್ಲವೂ ಪರರಿಯದು. ಮಾತಿನ ಹೊದಿಕೆ ಮಾತ್ರ ಇವನದು (ಭಾರತೀ. ೦೯೭). [ಸಂ.]

**ಪ್ರತಿಬಿಂಬಚೈತನ್ಯ** (ನಾ). [ಅದ್ವೈತ] ಜೀವಿಯ ಅಂತಃಕರಣದಲ್ಲಿ ಮೂಡಿರುವ ಪರಮಾತ್ಮ; ಶುದ್ಧಚೈತನ್ಯ: ಅಧಿಷ್ಠಾನಚೈತನ್ಯವು ಪ್ರತಿಬಿಂಬಚೈತನ್ಯವೂ ಯೊಯೆರಡು ಕೂಡಿ ಯಾತ್ಮರನು (ಜ್ಞಾನಸ. ೨-೬). [ಸಂ.]

**ಪ್ರತಿಬಿಂಬನ** (ನಾ). ೧. =ಪ್ರತಿಬಿಂಬ ೧. ೨. ಹೋಲಿಕೆ ; ಸಾದೃಶ್ಯ: ಎಣೆ: ಎಲ್ಲಕ್ಕೂ ಹೆಚ್ಚಿನ ಪ್ರತಿಬಿಂಬನ ಸ್ವಾಮಿ ದಾಸರ ಹಿಮಾಲಯ ಯಾತ್ರೆಯನ್ನು ವರ್ಣಿಸುವ ೧೪೩ನೆಯ ಪ್ರಕರಣದಲ್ಲಿ ದೊರೆಯುತ್ತದೆ (ಸಮಾಜ. ೩೩ ಹೀಠಿ). [ಸಂ.]

**ಪ್ರತಿಬಿಂಬಿತ** (ಗು). ೧. ಪಡಿಮೂಡಿದ; ಪ್ರತಿಫಲಿತವಾಗಿರುವ : ಅನರ್ಘರತ್ನಮಣಿಮಕುಟಕಿರೀಟಮಯೂಖಮಾಲಿಕಾಪರಿಚಿತಪ್ರಭಾಕದಂಬಕ ಪ್ರತಿಬಿಂಬಿತವಿಮಾನಭಿತ್ತಿವಿತಾನಂ (ಶಾಂತಿಪು. ೬-೧೩ ಪ). (ನಾ). ೨. ಪಡಿಮೂಡಿದುದು; ಪ್ರಕಾಶಿತವಾದುದು: ಭರತನು . . . ನುಡಿಯುವ ಮಾತುಗಳಲ್ಲಿ ಸನಾತನಹಿಂದೂಧರ್ಮದ ಸಾರವೇ ಪ್ರತಿಬಿಂಬಿತವಾಗಿದೆ (ಭಾರತ. ೯೪೬). [ಸಂ.]

**ಪ್ರತಿಬಿಂಬಿಸು** (ಕ್ರಿ). ೧. ಪಡಿಮೂಡು ; ಪ್ರತಿಫಲಿತವಾಗು : ಚಂದ್ರಾಪೀಡನಂ . . . ಅಂಗನಾಜನಘನಸ್ತನದೊಳ್ ಪ್ರತಿಬಿಂಬಿಸುತ್ತಿರಲ್ ಪುರುಡಿಸಿದಳ್ (ಕಾದಂಬ. ೩೨); ಅಂಬುವನೆಳ್ವಾಗಳ್ ಪ್ರತಿಬಿಂಬಿಸೆ ಕೆಯ್ನಾರೊಳವಳ ವದನಂ ಪಥಿಕಂ ನಂಬಿ ನಲಿದೀಂಟಿದಂ (೧೦೪. ೪-೩೬); ಪೊಂಬಣ್ಣದಿಹ ಜಡೆಯು ಬಂಬರೊಳ್ ಥಳಥಳಿಸುವಂಬರಾಪಗೆಯು ವಿಮಲಾಂಬುವೊಳ್ ನೋಡೆ ಪ್ರತಿಬಿಂಬಿಸುವ ಚೆಲ್ವುವಡೆದಂಬು ಜಾರಿಯ ಕಲೆಯ ತುಂಬಿ (ಶಶಿಪು. ೧೯-೧). ೨. ಪಡಿಮೂಡಿಸು; ಪ್ರತಿಫಲಿತವಾಗುವಂತೆ ಮಾಡು: ಎಂದೋ ನಿರ್ಮಿಸಿದ ಪಠ್ಯವಸ್ತು ಪ್ರಗತಿಪಥದಲ್ಲಿ ಮುಂದುವರಿಯುತ್ತಿರುವ ಜೀವನವನ್ನು ಪ್ರತಿಬಿಂಬಿಸ ಲಾರದು (ಶಿಕ್ಷಣ. ೧೩೩). [ಪ್ರತಿಬಿಂಬನ + -ಇಸು]

**ಪ್ರತಿಬುದ್ಧ** (ಗು). ೧. ಎಚ್ಚತ್ತಿರುವ; ಎಚ್ಚರಗೊಂಡಿರುವ. ೨. ಪ್ರಜ್ಞೆಯಿಂದ ಕೂಡಿದ; ಜ್ಞಾನೋದಯವಾದ. ೩. ಅರಳಿದ; ವಿಕಸಿತವಾದ. ೪. ಪ್ರಕಾಶಪಡಿಸಿದ; ಪ್ರಸಿದ್ಧಪಡಿಸಿದ. (ನಾ). ೫. ಅರಳಿದುದು; ವಿಕಸಿತವಾದುದು: ಪ್ರತಿಬುದ್ಧಂ ತೃಣಮುಖಮುಚಿತ ತಾರಕಂ ತುಂಬಿವೆರಸಿದಂಬುಜಮೆಂಬೀ ದ್ವಿತಯಮುಮೋರೊಂದಂ ಪೋಲ್ತು ತೋಱಿ ಗತನಿದ್ರನಾಗು ನೀಂ ಜಿನಚಂದ್ರಾ (ಶಾಂತಿಪು. ೩-೯೭). ೬. ಗಮನಿಸಿದುದು; ಗುರುತಿಸಿದುದು. ೭. ಪ್ರಸಿದ್ಧವಾದುದು; ಹೆಸರಾದುದು. ೮. ಮೂರ್ಛೆಯಿಂದ ಎಚ್ಚತ್ತಿರುವವನು; ಪ್ರಜ್ಞೆಯಿಂದ ಕೂಡಿದವನು. ೯. ಪ್ರಜ್ಞಾವಂತ; ಬುದ್ಧಿವಂತ: ಪ್ರತಿಬುದ್ಧರಂ ಕುಱಿತ್ತೀ ಸ್ಥಿತಿಯಿಂದಂ ಕಿಱಿದು ಮಾರ್ಗಸೂಚನೆಗೆಯ್ದಂ ಮತಿವಂತರಱಿದು ಪೇಳ್ವುದು ವಿತರ್ಕದಿಂ ಮತ್ತಮುಕ್ತಶೇಷಮನಿದ ಱೊಳ್ (ಕಾವ್ಯಾವ. ೯೦೨). [ಸಂ.]

**ಪ್ರತಿಬೋಧಕ** (ನಾ). ೧. ನಿದ್ದೆಯಿಂದ ಎಚ್ಚರಗೊಳಿಸುವವನು. ೨. ಬೋಧಿಸುವವನು ; ಉಪದೇಶಿಸುವವನು : ಇಂದ್ರಕದಂಬ ಪ್ರತಿಬೋಧಕರ್ . . . ತಮ್ಮ ನೆಲೆಯಿಂ ಲೋಕಾಂತಿಕರ್ ಬರ್ಪುದುಂ (ಶಾಂತಿಪು. ೧೦-೯೨). [ಸಂ.]

**ಪ್ರತಿಬೋಧನ** (ನಾ). ೧. ಬೋಧಿಸುವಿಕೆ ; ತಿಳಿಸುವಿಕೆ; ಅರಿವುಂಟು ಮಾಡುವಿಕೆ: ಮುನಿಪತಿ ನಿಮ್ಮಿಂ ಪ್ರತಿಬೋಧನಮಿಂದಾದತ್ತು (ಸುಕುಮಾ. ೧೨-೦೯). ೨. ಅರಿವು; ಜ್ಞಾನ. [ಸಂ.]

**ಪ್ರತಿಬೋಧಿಸು** (ಕ್ರಿ). ತಿಳಿವಳಿಕೆಯನ್ನುಂಟುಮಾಡು; ಜ್ಞಾನೋದಯ ವಾಗುವಂತೆ ಮಾಡು : ಅವರ್ಪ್ರತಿಬೋಧಿಸಿ ಪೊಗಳೊಡಂ ಪರಿನಿಷ್ಕ್ರಮಣಕಲ್ಯಾಣೋತ್ಸವೋತ್ಸುಕರಾಗಿರಲ್ (ಅಜಿಪು. ೯-೬೩ ಪ); ಅವರ್ ತನ್ನಂ ಪ್ರತಿಬೋಧಿಸಿ ಮೂದಲಿಸಿ ನುಡಿಯಲೊಡಂ (ಆದಿಪು. ೬-೩೯ ಪ) ; ಮುನ್ನಿನ ಭವದೊಳ್ ತನ್ನಂ ಪ್ರತಿಬೋಧಿಸಿ ಮಹಾಪುರುಷನಪ್ಪುದನಱಿದು (ಸುಕುಮಾ. ೬-೨ ಪ). [ಪ್ರತಿಬೋಧನ + -ಇಸು]

**ಪ್ರತಿಭಟ** (ನಾ). ೧. ಹುರುಡಿಸುವವನು; ಪ್ರತಿಸ್ಪರ್ಧಿ. ೨. ಶತ್ರುಪಕ್ಷದ ಸೈನಿಕ; ಎದುರಾಳಿ : ಎಲವೊ ಸಾರಥಿಯಾಗು ನಡೆ . . . ಕೊಲುವೆನೀ ಪ್ರತಿಭಟನಿಕಾಯವ ನಿನ್ನ ಸಾಕ್ಷಿಯಲಿ (ಕುಮಾ.ಭಾ. ೬-೩೦); ಬೇಗದಿಂ ಪ್ರತಿಭಟನ ಶಿರವನಿಳುಹು (ಕೃಷ್ಣಜಾ. ೬೪-೩೭). [ಸಂ.]

**ಪ್ರತಿಭಟನೆ** (ನಾ). ಎದುರಿಸುವಿಕೆ ; ವಿರೋಧಿಸುವಿಕೆ : ಇದು ತನ್ನ ಮಗನಾದವನಿಗೂ ಅಗಬಾರದೆಂದು ಅವನು ಯೋಚಿಸುತ್ತಿರುವುದೇ ಅವನ ಪ್ರತಿಭಟನೆಗೆ ಕಾರಣವಾಗಿತ್ತು (ಕಂಗಳೋ. ೦೯೬); ರಚನೆ, ಪ್ರತಿಭಟನೆ, ಹೋರಾಟ, ಪರಾಜಯ, ಸಂಗ್ರಹಾಸಕ್ತಿ—ಇವು ಸನ್ನಿವೇಶಗಳಿಗೆ ಪ್ರತಿಕ್ರಿಯಾತ್ಮಕವಾದವು (ಶಿಕ್ಷಣ. ೩೩). [ಸಂ. ಪ್ರತಿಭಟನ]

**ಪ್ರತಿಭಟಿಸು** (ಕ್ರಿ). ಎದುರಿಸು ; ವಿರೋಧಿಸು : ಮುಂದೆ ನಿಂತ ಕಾಮನನ್ನು ಪ್ರತಿಭಟಿಸುವ ಧೈರ್ಯ ಈಶ್ವರನಿಗಿಲ್ಲ (ಶಾಕಿಸ. ೦೯೯); ಘಟ್ಟಿವಾಳಯ್ಯ . . . ಸಂಪ್ರದಾಯವನ್ನು ಪ್ರತಿಭಟಿಸಿ ನಿಂತ ವ್ಯಕ್ತಿ (ಕೂಕ್ಕಳು. ೦೨೭). [ಸಂ. ಪ್ರತಿಭಟನ + -ಇಸು]

**ಪ್ರತಿಭಾನ** (ನಾ). ೧. ಬೆಳಕು ; ಕಾಂತಿ; ಪ್ರಕಾಶ. ೨. ಅರಿವು; ಜ್ಞಾನ; ತಿಳಿವಳಿಕೆ. ೩. ಹೊಸಹೊಸ ವಿಷಯಗಳು ಹೊಳೆಯುವಂತೆ ಮಾಡುವ ಚೈತನ್ಯ ; ಪ್ರತಿಭೆ : ಪ್ರತಿಭಾನಂ ಕಾವ್ಯವಿದ್ಯಾಪ್ರಚಯವಂಚಯಂ . . . ಕವಿತೆಗೆ ನಿಯತಂ ಕಾರಣಂ (ಕಾವ್ಯಾವ. ೪೨೪); ಹಳೆಯ ಶಬ್ದಗಳೆಂದು ಮೂಲೆಗಿಟ್ಟು ನಮ್ಮ ಪ್ರತಿಭಾನಶಕ್ತಿಯನ್ನು ಮಂಕು ಗೊಳಿಸುವುದೇಕೆ ? (ಮೋಂಜಪು. ೦೫೦ ಪ್ರಸ್ತಾ.ಪಠ). ೪. ಸಮಯಚಿತ್ತತೆ. ೫. ದಿಟ್ಟತನ; ಧೈರ್ಯ. [ಸಂ.]

**ಪ್ರತಿಭಾನ್ವಿತ** (ಗು). ೧. ಪ್ರಕಾಶದಿಂದ ಕೂಡಿದ. ೨. ತಿಳಿವಳಿಕೆಯುಳ್ಳ. ೩. ಹೊಸಹೊಸ ವಿಷಯಗಳು ಸ್ಫುರಿಸುವ ಚೈತನ್ಯವುಳ್ಳ; ಪ್ರತಿಭೆಯಿಂದ ಕೂಡಿದ : ಪ್ರತಿಭಾನ್ವಿತವ್ಯಕ್ತಿಗಳಿಗೆ ಸರಿಯಾದ ಅವಕಾಶ ಸಿಕ್ಕಿದರೆ ಒಳ್ಳೆಯ ಕಾರ್ಯಗಳಾಗುತ್ತವೆ (ರೂಪ). (ನಾ). ೪. ಹೊಸಹೊಸ ವಿಷಯಗಳು ಸ್ಫುರಿಸುವ ಚೈತನ್ಯವುಳ್ಳವನು ; ಪ್ರತಿಭಾವಂತ; ಧೀಮಂತ: "ಪ್ರಗಲ್ಭ:, ಪ್ರತಿಭಾನ್ವಿತ:– ೨ ಆಗಾಗ್ಗೆ ಹೊಸ ಹೊಸದಾಗಿ ಪ್ರಕಾಶಿಸುವ ಪ್ರಜ್ಞೆಯುಳ್ಳವನ ಪೆಸರು" (ಸಿದ್ಧಾಂತ. ೩೬೯). ೫. ಧೈರ್ಯಶಾಲಿ. [ಸಂ.]

**ಪ್ರತಿಭಾವಂತ** (ಗು). ೧.=ಪ್ರತಿಭಾನ್ವಿತ ೩ : ನೀನು ಶಿಕ್ಷಕನನ್ನು ಅನುಸರಿಸಲು ಅವನೇನಂಥ ಪ್ರತಿಭಾವಂತವಿದ್ಯಾರ್ಥಿಯೇ ? (ಶಾಕಿಮ. ೯೨); ಪಾಶ್ಚಾತ್ಯವೈಜ್ಞಾನಿಕಸಂಸಿದ್ಧಿಗಳು . . . ಭಾರತೀಯ ಪ್ರತಿಭಾವಂತ ತರುಣರನ್ನು ಆಕರ್ಷಿಸಿದವು (ಪುಸ್ತಾಕ. ೦೦೭ ಹೀಠಿ). (ನಾ). ೨. =ಪ್ರತಿಭಾನ್ವಿತ ೪ : ನಿಜವಾದ ಪ್ರತಿಭಾವಂತನ ಸೃಷ್ಟಿ ಎಲ್ಲವೂ ಸೌಂದರ್ಯವಾಗುತ್ತದೆ (ಶಾಂತಸ. ೬೦). [ಸಂ. ಪ್ರತಿಭಾವತ್]

**ಪ್ರತಿಭಾವತ್ವ** (ನಾ). ಪ್ರತಿಭೆಯನ್ನು ಹೊಂದಿರುವಿಕೆ : ಪ್ರತಿಭಾವತ್ವಮುಮಕೃತಕಚತುರತೆಯುಂ . . . ತರ್ಕಂ ಪ್ರತೀತಿಯುಂ ವಾಗ್ವಿದಗ್ಧತಾ ನಿಪುಣತೆಯೊಳ್ (ಕಬಿರಾ. ೦-೦೦). [ಸಂ.]

**ಪ್ರತಿಭಾವನೆ** (ನಾ). ಬೇರೆಯ ಭಾವನೆ,– ಅಭಿಪ್ರಾಯ : ನೆವದ ತಪವಲ್ಲದಲೆ ಮತ್ತಿನ್ನವಗೆ ಪ್ರತಿಭಾವನೆಗಳಿಲ್ಲವೆ ತವಗೆ ತಾ ದೇವಾಗಿ ಪಡೆದನು ಕೇವಲಜ್ಞಾನ (ಜೈಕೃ. ೦೨-೫೦). [ಸಂ. ಪ್ರತಿಭಾವನ]

**ಪ್ರತಿಭಾಶಾಲಿ** (ನಾ). = ಪ್ರತಿಭಾನ್ವಿತ ೪: ಸ್ಕಾಟ್ ಎಡಿಸನ್ ಇವರು ಬಾಲ್ಯದಲ್ಲಿ ಮಂಕುದಿಣ್ಣೆಗಳಾಗಿದ್ದರು. ಅನಂತರ ಪ್ರತಿಭಾಶಾಲಿಗಳೆನಿಸಿದರು (ಶಿಕ್ಷಣ. ೬೦೩); ಪ್ರತಿಭಾಶಾಲಿಯಾದ ಈ ಲೇಖಕ ಆ ವೇಳೆಗಾಗಲೇ ಕೆಲವು ಧ್ವನಿತತ್ತ್ವಗಳನ್ನು ಕುರಿತು ಪ್ರಸ್ತಾಪಿಸುತ್ತಾನೆ (ಧ್ವಾಹಿ. ೦೩ ಪಿಠಿಕೆ). [ ಸಂ. ಪ್ರತಿಭಾಶಾಲಿನ್ ]

**ಪ್ರತಿಭೂ** (ನಾ). ಹೊಣೆಗಾರ ; ಜಾಮೀನುದಾರ :"ಪ್ರತಿಭೂ:, ಲಗ್ನಕ: – ಈ ೨ ಹೊಣೆ(ಗಾಱು)" (ಶಬ್ದಮ. ೬೨-೨೨೩); ಪ್ರತವು

ಸುಸ್ಥಿರವಾಗೆ ನಿನ್ನೊಳು ವ್ಯತಿವಡೆಯದರ ಸುದತಿಯರು ನಿಶ್ಚಿತದಿ ನಿನಗಾಗುವವರು ನಾನೀ ವಿಷಯದೊಳ್ ಪ್ರತಿಭೂ (ಶಾಶಂಚ. ೧೦-೬೩). [ಸಂ.]

**ಪ್ರತಿಭೂತ್ವ** (ನಾ). ಹೊಣೆಗಾರಿಕೆ; ಜವಾಬ್ದಾರಿ: ನನಗಪ್ಸರೆಯರ್ಕ ಕೆಳ್ ಅವರಿಂ ಫಲಮಿಲ್ಲಾಗೆ ಬಿಟ್ಟಂ ತ್ವತ್ಪ್ರತಿಭೂತ್ವಮಂ (ಶಾಶಂಚ. ೦೨-೦೩). [ಸಂ.]

**ಪ್ರತಿಭೆ** (ನಾ). ೧. ಹೊಳವು; ಕಾಂತಿ; ಪ್ರಕಾಶ "ಪ್ರತಿಭೆ" ಎಂಬ ಶಬ್ದದ ಅಕ್ಷರಾರ್ಥ "ಹೊಳಹು" (ಕಾಲಕಾ. ೦೬೨). ೨. ಪ್ರತಿಬಿಂಬ. ೩. ಬುದ್ಧಿಶಕ್ತಿ; ಜ್ಞಾನಬಲ; ಪ್ರತಿಭೆಗೆ ಫಲವಜಿವಿನ ಗತಿ ಗತಿಗೆ ಫಲಂ ವಿಷಯವಿರತಿ (ಪ್ರಕ್ರಿ. ೦೩-೩೯); ಶಿವಾಜಿಯ ಪುತ್ರನಾದ ಶಂಭುವಿಗೆ ತಂದೆಯ ಪ್ರತಿಭೆಯಾಗಲಿ ನೀತಿಶಕ್ತಿಯಾಗಲಿ ಇರಲಿಲ್ಲ (ಹುಳ್ಳಾಸ. ೦೦೩ ಶೀಂ೩೬); ಅವನ ಪ್ರತಿಭೆಗೈ ಪಾಂಡಿತ್ಯಕ್ಕೆ ದೊರೆತ ಬಹುಮಾನ, ಪ್ರಮಾಣಪತ್ರಗಳಿಗಂತೂ ಲೆಕ್ಕವಿಲ್ಲ (ಹೊಕ್ಕ. ೩೭). ೪. ಕವಿಯು ಕಾವ್ಯವನ್ನು ಬರೆಯಲು ಪ್ರಧಾನಸಹಾಯಕವಾದ, ಹೊಸಹೊಸ ಭಾವನೆಗಳನ್ನು ಮೂಡಿಸುವ ಒಂದು ಬಗೆಯ ಪ್ರಜ್ಞೆಯ ಅಥವಾ ಭಾವನೆಯ ಶಕ್ತಿವಿಶೇಷ: ಪ್ರತಿಭೆ ನಿಸರ್ಗಮುಂಟು ಕಿಱಿದೋದುಗಳೊಳ್ ಕಿಱಿದುಂಟು ಬಲ್ಮೆ (ಗದಾಯು. ೦-೫೦); ಪ್ರತಿಭೆಯುಮಭ್ಯಾಸಮುಂ ವಿದ್ವತ್ಸೇವೆಯುಂ ಕಾವ್ಯಪರಿಚಯಮುಂ ಕವಿತೆಗೆ ಕಾರಣಂ (ಕವಿದ. ೦೧೯ ಪ್ರಯೋ); ಶಬ್ದಸಮೂಹ, ಅರ್ಥಸಂಪತ್ತು, ಅಲಂಕಾರವೈಚಿತ್ರ್ಯ, ಉಕ್ತಿಕ್ರಮ ಮುಂತಾದವು ಮನಸ್ಸಿನಲ್ಲಿ ಪ್ರತಿಫಲಿಸುವಂತೆ ಮಾಡತಕ್ಕದ್ದೇ ಪ್ರತಿಭೆ ಎಂದು ರಾಜಶೇಖರನೂ ಹೇಳಿದ್ದಾನೆ (ಕೃಶಿಪ. ೦೬೪ ೩೩೬). ೫. ದಿಟ್ಟತನ; ಧೈರ್ಯ. ೬. [ಯೋಗ] ಸಮಾಧಿಗೆ ಪ್ರತಿಬಂಧಕವಾಗಿರುವ ಕೇವಲ ಲೌಕಿಕಸಿದ್ಧಿ: ಮತಿಯುತನೆ ಪ್ರತಿಭಾಶ್ರವಣವೇಣತಿಶಯದ ವಾರ್ತಾದರುಶನಗಳು ... ಬ್ರಹ್ಮಾಭ್ಯಾಸಕಾಲವಲಂತರಾಯಗಳು (ಅಮ್ಮಕ. ೬-೯೯): "ಪ್ರತಿಭಾ - ಪ್ರತಿಭಾದ್ವಾಸರ್ವಂ" ಎಂಬ ಯೋಗಸೂತ್ರದಂತೆ ಪ್ರತಿಭೆಯೆಂಬ ಶಕ್ತಿಯಿಂದ ಎಲ್ಲಾ ತಿಳಿವಳಿಕೆಯೂ ಆಗುವುದು ... ಯೋಗಸೂತ್ರದಂತೆ ಇವು ಸಮಾಧಿಗೆ ಅಡ್ಡಿಗಳು. ವ್ಯವಹಾರದಲ್ಲಿ ಸಿದ್ಧಿಗಳು (ಅಮ್ಮಕ. ೬-೯೯ ಟೀಕೆ). [ಸಂ. ಪ್ರತಿಭಾ]

**ಪ್ರತಿಭೋಗ** (ನಾ). ಸುಖಾನುಭವ; ಉಪಭೋಗ: ರತಿಕಾಮದಂಪತಿಗಳಿಂದೆ ಸಮರಿಲ್ಲೆಂದು ಕ್ಷಿತಿಯೊಳಗೆ ಸಾರುತಿರೆ ರೂಪು ಗುಣಯವ್ವನ ಪ್ರತಿಭೋಗವೈಶ್ವರ್ಯದೊಳೊಂದು ಕೊರತೆಯಿಲ್ಲ (ಸಪಮೋ. ೬-೨೩). [ಸಂ.]

**ಪ್ರತಿಮ** (ಗು). ೧. ಸಾಟಿಯಾದ; ಸಮಾನವಾದ: ಅಮೃತಾಂಭೋರಾಶಿಪೂರಪ್ರತಿಮನಿಜತಪಸ್ಸಂಚಯಂ ಪರ್ವಿತೋ ಲೋಕಮಂ (ಕಾದಂಪೂ. ೬೩೯). 'ಅಪ್ರತಿಮ' ಹೋ. (ನಾ). ೨. ಸಮಾನವಾದುದು; ಸದೃಶವಾದುದು: "ಸದೃಕ್ ... ಪ್ರತಿಮಂ, ಪ್ರಕಾರಂ, ತುಲ್ಯಂ, ಸಮಂ, ಸನ್ನಿಭಂ—ಈ ೧೧ ಸರಿ" (ಹಲಾಯು.೦೦೩-೯). ೩. ಸಮಾನನಾದವನು; ಸಾಟಿಯಾದವನು: ಅಖಂಡಭೂಮಂಡಲೈಕಪತಿ ದಕ್ಷಿಣದೊಳ್ ಸುಖಿವರಸುಗೆಯ್ಯೆ ಕುರುಕುಲಶಿಖಾಮಣಿ ಪ್ರತಿಮನಾಗಿ ನೃಪನ ಪ್ರತಿಮಂ (ಕಾಂತಿಶಿ. ೯-೦೫೦); ಪಾಂಡವಪ್ರತಿಮನಲ್ಲನೆ ಮಂಡಲಸಾಮಿ ಲೋಕದೊಳ್ (ಎಕ. IV. ನಾಗಮಂ. ೯೭-೩೩; 1199); ಗೋದಾವರಿಯ ವಿಂದರರ್ಘ್ಯಮೆತ್ತಿದರಿನಗೆ, ವಂಶಾಧಿದೇವತಾಪ್ರತಿಮನಿಗೆ (ಶ್ರೀರಾಪ. ೨೨೯-೩೦). ೪. ಸಮಾಸದ ಕೊನೆಯಲ್ಲಿ ಸದೃಶವಾದ, ಸಮಾನವಾದ ಎಂಬರ್ಥದಲ್ಲಿ ಸೇರುವ ಶಬ್ದ. [ಸಂ.]

**ಪ್ರತಿಮಧ್ಯಮ** (ನಾ). [ಸಂಗೀತ] ಶುದ್ಧಮಧ್ಯಮ ಮತ್ತು ಪ್ರತಿಮಧ್ಯಮ ಎಂಬ ಮಧ್ಯಮಸ್ವರದ ಭೇದಗಳಲ್ಲಿ ಒಂದು: ಉನ್ನತ ಶ್ರುತಿ ಸಂಖ್ಯೆಯ ಮಧ್ಯಮಸ್ವರ: ಆಲಾಪನೆಯಲ್ಲಿ ಪ್ರತಿಮಧ್ಯಮವನ್ನು ಅಂಶಸ್ವರವನ್ನಾಗಿ ತೆಗೆದುಕೊಂಡು, ಅದರ ಸುತ್ತ ಇಬ್ಬರೂ ರಾಗದ ಸೊಬಗಿನ ಚಿತ್ರಾರವನ್ನು ಸುಂದರವಾಗಿ ಹೆಣೆದರು (ಸಂಗೀತ.೦೦೦). [ಸಂ.]

**ಪ್ರತಿಮಲ್ಲ** (ನಾ). ಎದುರಾಳಿಯಾದ ಜಟ್ಟಿ: ಪ್ರತಿಮಲ್ಲರ್ ಗಿರಿಕಲ್ಪನೆಂದಿತರರೆಲ್ಲರ್ ಬಾಲನೆಂದು ... ಕೌಕ್ಷಿಸರ್ (ಜಗಪು. ೬-೫೬). [ಸಂ.]

**ಪ್ರತಿಮಾತಂತ್ರ** (ನಾ). ಕವಿಯು ಪ್ರಯೋಗಿಸುವ ರೂಪಕವಿಧಾನ: ಈ ಪ್ರತಿಮಾತಂತ್ರವನ್ನು ತಿಳಿದು ಅರ್ಥ ಮಾಡಿಕೊಳ್ಳುವ ರೂಢಿಯಿದ್ದವರಿಗೆ ಇದರಿಂದ ಹೆಚ್ಚಿನ ಆನಂದವಾಗುತ್ತದೆ (ಪಶ್ಚಿಕಾ. ೪೮). [ಸಂ.]

**ಪ್ರತಿಮಾತು** (ನಾ). ಮಾತಿಗೆ ಬದಲಾಗಿ ಆಡುವ ಮಾತು; ಎದುರು ಮಾತು: ಯಶೋದೆ ಪ್ರತಿಮಾತು ಹೇಳಲಿಲ್ಲ (ಯಶಸ್ವಿ. ೨೨೪); ಹಾಗಾದರೆ ಯೇಸುವನ್ನು ಏನು ಮಾಡಲಿ ಎಂದು ಆತನು ಕೇಳಿದ ಪ್ರತಿಮಾತಿಗೆ, ಅವನನ್ನು ಶಿಲುಬೆಗೆ ಹಾಕು! ಎಂದು ಅವರು ಮೊರೆಯಿಯೂ ಕೋಲಾಹಲಿಸಿದರು (ಗೂಕೊಕಾ. VII. ಮುಸ್ಸು೩). [ಪ್ರತಿ+ಮಾತು]

**ಪ್ರತಿಮಾನ** (ನಾ). ೧. ಹೋಲಿಕೆ; ಸಾದೃಶ್ಯ. ೨. ಸದೃಶವಾದುದು; ಸಮಾನವಾದುದು: ಅರವಿಂದಾಸ್ಯೆಯ ನೊಸಲ ಸಮಾನಂ ನಿರುಪಮ ಮರ್ಧೇಂದುಪ್ರತಿಮಾನಂ (ಸುಕುಮಾ. ೩-೩೦ ಕಗಳ): ರೌದ್ರರಸ ಕುಂಭಂ ಕುಂಭಮುಚ್ಚೈಶ್ರಿಲಾಪ್ರತಿಮಾನಂ ಪ್ರತಿಮಾನಂ ... ನಾಗಾರಿಚ್ಛದಾಕಾರದಿಂ ಶ್ರುತಿಗಳ್ ವಿಶ್ರುತಿ ಮಾಜಿ ಬೀಱಿದವುದೀ ಸ್ತಂಬೇರಮಂ ಬೀರಮಂ (ಜಗಪು. ೬-೩೦). ೩. ಪ್ರತಿಬಿಂಬ; ಪ್ರತಿಕೃತಿ: "ಪ್ರತಿಬಿಂಬಂ ... ಪ್ರತಿಮಾನಂ, ಪ್ರತಿಕೃತಂ—ಈ ೯ ಪ್ರತಿಬಿಂಬದ ಪೆಸರ್" (ಹಲಾಯು. ೨೦-೦೩೦): ಪ್ರತಿ ತನಗಿಲ್ಲ ಸಲ್ಲಲಿತರೂಪದಿನೀ ತ್ರಿಜಗಂಗಳಂಗನಾ ತತಿಯೊಳಿದೊಂದೆ ತಾಂ ಪ್ರತಿ ನಿಜಪ್ರತಿಮಾನಂ (ಕಾಂತೀಶ್ಮ. ೯-೨೪೩). ೪. ಒಂದು ಆಕಾರಕ್ಕೆ ಸಮಾನವಾಗಿರುವ ಪ್ರತಿಮೆ, ವಿಗ್ರಹ, ಚಿತ್ರ ಮೊದಲಾದುವು: "ಪ್ರತಿಮಾನಂ, ಪ್ರತಿಬಿಂಬಂ ... ಪ್ರತಿನಿಧಿ—೮ ವಿಷ್ಣು ಮೊದಲಾದವರ ಆಕಾರಗಳಿಗೆ ಸಮನಾಗಿ ಶಿಲಾದಿಗಳಿಂದ ಮಾಡಿದ ಪ್ರತಿಮೆ ಹೆಸರು" (ಸಿದ್ಧಾಂತ. ೩೦೭). ೫. ಸಮಾನನಾದ ವ್ಯಕ್ತಿ; ಸರಿಸಾಟಿಯಾದ ಮನುಷ್ಯ: ಪ್ರತಿಮಾನಂ ಶರವಿದ್ಯೆಯೊಳ್ ತರರ್ ತನಗಿಲ್ಲೆನಿಪ್ಪನಲ್ಲಿ ಕುರಂಗಂ (ಕಾರ್ಕಶಿಪು. ೦೬-೬೧). ೬. ಆನೆಯ ಎರಡು ದಂತಗಳ ಮಧ್ಯಪ್ರವೇಶ, —ಕುಂಭಸ್ಥಳದ ಕೆಳಭಾಗ: "ದಂತವೆರಡಱ ನಡು ಪ್ರತಿಮಾನಮಕ್ಕುಂ" (ಶಬಗಲಾ. ೪೬-೩); ರೌದ್ರರಸಕುಂಭಂ ಕುಂಭಮುಚ್ಚೈಶ್ರಿಲಾಪ್ರತಿಮಾನಂ ಪ್ರತಿಮಾನಂ ... ನಾಗಾರಿಚ್ಛದಾಕಾರದಿಂ ಶ್ರುತಿಗಳ್ ವಿಶ್ರುತಿಮಾಜಿಬೀಱಿದವುದೀ ಸ್ತಂಬೇರಮಂ ಬೀರಮಂ (ಜಗಪು. ೬-೩೦); ಏನ ಹೇಳುವೆ ಗಜಘಟಾಪ್ರತಿಮಾನದಲಿ ಕೋದಂಬುಗಳು ಹಿಂಡಾನೆಗಳನೇಳಂಟನೊದೆದೋಡಿದವು ವಂ[ಪೇ] ಚಕವ (ಕುಪ್ಪಾಕ. ೩-೧೩); ಕೊಳದೊಳೆ ಕಿಳ್ತು ಪಂಕರುಹಮಂ ಪ್ರತಿಮಾನದೊಳೊಟ್ಟಿಕೊಂಡು ... ಕರೇಣುವಿರ್ದೆಡೆಗದೇಂ ತಳರ್ದತ್ತೊ ಮದಾಂಧಸಿಂಧುರಂ (ಕಪಿಪಂ. ೩-೪೨). [ಸಂ.]

**ಪ್ರತಿಮಾನಿಷ್ಠ** (ಗು). ೧. ನಿರ್ದಿಷ್ಟವಾದ ಕಲ್ಪನಾಚಿತ್ರಗಳ ಮೂಲಕ ಭಾವವನ್ನು ಸ್ಪಷ್ಟಪಡಿಸುವ: ಪ್ರತಿಮಾನಿಷ್ಠ ಆಂಗ್ಲಕವನಗಳಲ್ಲಿಯೂ ಇಂಥ ಪ್ರತೀಕಗಳ ಆರಾಧನೆ ನಡೆದಿತ್ತು (ಪಶ್ಚಿಕಾ. ೩೨). 'ಪ್ರತಿಮಾನಿಷ್ಠ ಕವಿ' ಪರಾ. (ನಾ). ೨. ನಿರ್ದಿಷ್ಟವಾದ ಕಲ್ಪನಾಚಿತ್ರಗಳ ಮೂಲಕ ಭಾವವನ್ನು ಸ್ಪಷ್ಟಪಡಿಸುವುದು: 'ಜಾರ್ಜಿಯನ್', 'ಪ್ರತಿಮಾನಿಷ್ಠ' (Imagist) ಮೊದಲಾದ ಶತಮಾನದ ಆದಿಯಲ್ಲಿಯ ಸಣ್ಣಪುಟ್ಟ ಸಾಹಿತ್ಯಕಚಳುವಳಿಗಳು ನವ್ಯಮಾರ್ಗದಲ್ಲಿಯೇ ಲಯವಾಗಿ ಸಫಲವಾದವು (ಪಶ್ಚಿಕಾ. ೨೭). [ಸಂ.]

**ಪ್ರತಿಮಾನಿಷ್ಠಕವಿ** (ನಾ). ನಿರ್ದಿಷ್ಟವಾದ ಕಲ್ಪನಾಚಿತ್ರಗಳ ಮೂಲಕ

ಭಾವವನ್ನು ಸ್ಪಷ್ಟವಾಗಿ ವ್ಯಕ್ತಪಡಿಸಬೇಕೆಂಬ ಆಧುನಿಕಮಾರ್ಗದ ಕವಿ: ಪ್ರತಿಮಾನಿಷ್ಠಕವಿ (Imagist-poet)ಯು ಸಮರ್ಥಿಸುವ ಏರೀತವೂ ತೂಕವೂ ಎಚ್. ಡಿ. ಎಂಬ ಕವಯಿತ್ರಿಯ ಕೃತಿಗಳಲ್ಲಿ ಉತ್ತಮವಾಗಿ ಕಾಣುತ್ತವೆ (ಗೂಕು. ಗು. ೦೦೯). [ಸಂ.]

**ಪ್ರತಿಮಾಭಾಷಣ** (ನಾ). ವಿಗ್ರಹ, ಪ್ರತಿಮೆ ಮೊದಲಾದುವು ಗಳೊಂದಿಗೆ ಮಾತನಾಡುವುದು; ತಂತ್ರವಾರ್ತಿಕ ಮುಂತಾದ ಗ್ರಂಥ ಗಳಲ್ಲಿ ಹೇಳಿರುವ ಒಂದು ಬಗೆಯ ಕುತ್ಸಿತಸಿದ್ಧಿ: ಪಾಷಂಡಿಸಹವಾಸ, ಪಾಷಾಣಪಾಟನ, ಪ್ರತಿಮಾಭಾಷಣ, ವೃಕ್ಷಶೋಷಣ ಮೊದಲಾದ ಕಪಟ ಕುತ್ಸಿತಸಿದ್ಧಿಗಳಿಂದ ಸಾಧುಜನವಂಚನೆ ಮೊದಲಾದುವುಗಳು . . . ಗ್ರಂಥ ಗಳಲ್ಲಿ ವಿಸ್ತರಿಸಲ್ಪಟ್ಟಿರುತ್ತದೆ (ಹಿಂದಸಾ. ೦೩೨). [ಸಂ.]

**ಪ್ರತಿಮಾಭೋಗ** (ನಾ). (?) : ಪ್ರಾಣಾಪಾನಸಮಯದೊಳು ಅನಾದ್ಯನು ಸ್ಯೂತ ಸುಕೃತ ದುಷ್ಕೃತವಿಪಾಕ ವೈಚಿತ್ರ್ಯಾನುಸಾರವಾಗಿ ಚರಮವೃತ್ತಿ ಯೊಳಗಾವ ಭಾವವು ಸ್ಫುರಿಸುವುದೋ ಅಂತಾ ಜನ್ಮ ಪ್ರಾಪ್ತಿಯಹುದೆಂದು ನರಭೋಗ ಶಿಲಾಭೋಗ ಪ್ರತಿಮಾಭೋಗ . . . ದ್ರವ್ಯಭೋಗಾದಿಗಳ ವೈಚಿತ್ರ್ಯಮುಳ್ಳ ಲೋಕದೃಷ್ಟಾಂತಗಳಿಂ (ಶಿಪಟಿ. ೦೯೯). [ಸಂ.]

**ಪ್ರತಿಮಾಮಾನ** (ನಾ). ಪ್ರತಿಮೆಯ ಅಳತೆ,—ಪ್ರಮಾಣ : ಪ್ರತಿಮೆ ಗಳನ್ನು ಮಾಡಲಿಚ್ಛಿಸುವವರು ಪ್ರತಿಮಾಮಾನಲಕ್ಷಣವನ್ನು . . . ಅರಿ ತಿರಲೇಬೇಕು (ಭಾರತ. ೩೦೬). [ಸಂ.]

**ಪ್ರತಿಮಾಯೋಗ** (ನಾ). [ಜೈನ] ಒಂದು ಬಗೆಯ ತಪಸ್ಸು ; P "ಆಹಾರತ್ಯಾಗ ಮಾಡಿ ಒಂದು ವರ್ಷದವರೆಗೆ ಒಂದೇ ಸ್ಥಳದಲ್ಲಿ ನಿಂತುಕೊಂಡು ತಪ ಮಾಡುವುದು. ಅದರೊಳಗೆ ಅಭ್ರಾವ ಕಾಶಯೋಗ, ಆತಾಪನಯೋಗ, ವರ್ಷಾಯೋಗವೆಂದು ಮೂರು ಭೇದಗಳಿವೆ" (ಅಂಕ್ಷ. ಕೃತಪಾರಿಭಾಷಿಕ ಶಬ್ದಕೋಶ. ೬೪) : ಅಂತು ಜೈನ ದೀಕ್ಷೆಯಂ ಕೈಕೊಂಡು . . . ಏಕವಿಹಾರಿಯಾಗಿ ಸಂವತ್ಸರಾವಧಿವರಂ ಪ್ರತಿಮಾಯೋಗದೊಳ್ ನಿಲೆ (ಆರಾಕ. ೦೪-೦೩೯ ವ) ; ತಪಶ್ಚರಣಪರಾಯಣ ರಾಗಿ ಕೈಲಾಸಾಚಲದೊಳ್ ಅಚಲಿತಪ್ರತಿಮಾಯೋಗದೊಳಿರ್ದು (ಸುಕುಮಾ. ೦೨-೬೩ ವ) ; ಪ್ರತಿಮಾಯೋಗನಿಯುಕ್ತರೆಂಟುದಿವಸಂ ಕೈಯೆತ್ತಿಮೆಂದಿರ್ದರ್ (ಹಂಪಾಕು. ೦೦-೩೯). [ಸಂ.]

**ಪ್ರತಿಮಾಯೋಗಿ** (ನಾ). ಪ್ರತಿಮಾಯೋಗದಲ್ಲಿ ನಿರತನಾದವನು : ಇಡೀ ಮೈಯ್ಯೇ ಸ್ತಬ್ಧವಾಗಿ ನೋಟಕರಿಗೊಂದು ಪ್ರತಿಮಾಯೋಗಿಯಾಗಿ ಭಾಸವಾದನವನು (ಶೀಲಹಿ. ೩೬). [ಸಂ. ಪ್ರತಿಮಾಯೋಗಿನ್]

**ಪ್ರತಿಮಾರೂಪ** (ನಾ). = ಪ್ರತಿಮಾಯೋಗ : ಪ್ರತಿಮಾರೂಪವಮಪ್ಪಾತಿ ಪ್ರತಿರೂಪದ ಗರ್ವಪರ್ವತಾರೂಢತೆಯಂ ಶತಖಂಡಂ ಮಾಡಿದುವು (ಶಾಂತಿಪು. ೦೨-೬೨). [ಸಂ.]

**ಪ್ರತಿಮಾರೋಹಣ** (ನಾ). ದೇವತಾಪ್ರತಿಮೆಗಳನ್ನು ಪೀಠಗಳಲ್ಲಿ ಪ್ರತಿಷ್ಠಿಸುವುದು; ವಿಗ್ರಹಪ್ರತಿಷ್ಠೆ : ವ್ರತ, ದೀಕ್ಷಾವಿಧಿ, ಕುಂಡಮಂಡಳ ವಿಧಾನ, ಲಿಂಗಪೀಠಕ್ರಮ, ಪ್ರತಿಮಾರೋಹಣ . . . ಇಂತಹ ಆಗಮೋಕ್ತ ವಿದ್ಯಾವಳಿಗಳನ್ನು ಅರಿತವರಾಗಿದ್ದರಂತೆ (ಕರ್ನಾಸಂ. ೨೨೬). [ಸಂ.]

**ಪ್ರತಿಮಾಲಕ್ಷಣ** (ನಾ). ೧. ಪ್ರತಿಮೆಗಳ ಸ್ವರೂಪ ; ವಿಗ್ರಹಗಳ ಲಕ್ಷಣ. ೨. ಪ್ರತಿಮೆಗಳ ಸ್ವರೂಪವನ್ನು ವಿವರಿಸುವ ಆಗಮ ಶಾಸ್ತ್ರದ ಒಂದು ಪ್ರಕರಣ : ಆಗಮಶಾಸ್ತ್ರದ ಪ್ರತಿಮಾಲಕ್ಷಣದಲ್ಲಿ ಎಲ್ಲಾ ಮೂರ್ತಿಗಳ ಲಕ್ಷಣವನ್ನೂ ಹೃದಯಂಗಮವಾಗಿ ವರ್ಣಿಸಿದ್ದಾರೆ (ಭಾರತ. ೬೬). [ಸಂ.]

**ಪ್ರತಿಮಾವಿಧಾನ** (ನಾ). ಆನಂದಾತಿಶಯವನ್ನುಂಟುಮಾಡುವ ಪ್ರತಿಮೆ ಗಳನ್ನು ಕಾವ್ಯದಲ್ಲಿ ಉಪಯೋಗ ಮಾಡುವ ರೀತಿ; ರಸ ಭಾವ ಗಳೆರಡನ್ನೂ ಹೊಂದಿಸುವ ಒಂದು ಕಾವ್ಯರಚನಾಕ್ರಮ : ವರಕವಿಯ ಕಾವ್ಯಸತ್ಯೆಯೊಳಾತ್ಮರಸಸತ್ವಮಂ ಪ್ರಕಟಿಸುವನೀ ಬ್ರಹ್ಮನನ್ಯವಿಧದಿಂದೆಮ್ಮ ಮರ್ತ್ಯಪೃಥಿವೀತತ್ತ್ವದೊಳ್ . . . ಪ್ರತಿಮಾವಿಧಾನದಿಂ ರಸಋಷಿ ಪ್ರತಿಭಾನಮಾತ್ರಸಂವೇದ್ಯಮಂ (ಶ್ರೀರಾಮಾ. ೩೬-೬) ; ಆ ಕತೆಗಳ ಭಾಷೆ ಯಲ್ಲಿಯ ಆಕ್ರೋಶ ಮತ್ತು ಪ್ರತಿಮಾವಿಧಾನದ ಜಟಿಲತೆಗಳು ಈ ತಪ್ಪು ತಿಳುವಳಿಕೆಯ ಸೂಕ್ಷ್ಮತೆಯನ್ನು ಮರೆಸಿಬಿಡುತ್ತವೆ (ಹೊಸಕ. ೨೦೬). [ಸಂ.]

**ಪ್ರತಿಮಾಶಾಸ್ತ್ರ** (ನಾ). ಪ್ರತಿಮೆ, ವಿಗ್ರಹಗಳ ರಚನಾಕ್ರಮವನ್ನು ಕುರಿತು ಬರೆದಿರುವ ಶಾಸ್ತ್ರ : (Iconology. ೩೦೯೩.). [ಸಂ.]

**ಪ್ರತಿಮಾಶಿಲ್ಪ** (ನಾ). ೧. ಪ್ರತಿಮೆಗಳನ್ನು ರಚಿಸುವ ಕಲೆ. ೨. ಒಂದು ವಿಷಯವನ್ನು (ಕಲ್ಲು, ಕಾಗದ, ಬಟ್ಟೆ ಮುಂತಾದುವುಗಳ ಮೇಲೆ) ಚಿತ್ರಗಳ ವಿನ್ಯಾಸದಿಂದ ತಿಳಿಸುವುದು : "ಒಂದು ವಿಷಯವನ್ನು ಚಿತ್ರಗಳಿಂದ, ರೇಖನಗಳಿಂದ, ಉದಾಹರಿಸುವುದು : ಚಿತ್ರೋದಾಹರಣೆ; ಪ್ರತಿಮಾಶಿಲ್ಪ" (Iconography. ೩೦೯೩). [ಸಂ.]

**ಪ್ರತಿಮಾಸೃಷ್ಟಿ** (ನಾ). = ಪ್ರತಿಮಾವಿಧಾನ : ಅರ್ಥವನ್ನೆಲ್ಲ ಪ್ರತಿಮಾ ಸೃಷ್ಟಿಯಲ್ಲಿ ಬಚ್ಚಿಡಲು ನವ್ಯಕವಿಯು ಹವಣಿಸುವಂತೆ ನಮಗೆ ತೋರು ತ್ತದೆ (ಪಶ್ಚಿಮ. ೯೯). [ಸಂ.]

**ಪ್ರತಿಮಿತ** (ನಾ). ೧. ಅನುಕರಿಸಿದುದು; ಅನುಕರಣೆ ಮಾಡಿದುದು. ೨. ಹೋಲಿಸಿದುದು; ತುಲನೆಮಾಡಿದುದು. ೩. ಪ್ರತಿಬಿಂಬಿತ ವಾದುದು. ೪. ಸ್ಥಾಪಿತವಾದುದು. ೫. ವ್ಯಕ್ತಿಯ ಆಕಾರದಲ್ಲಿ ನಿರ್ಮಿಸಿದ ಪ್ರತಿಮೆ : ಪಂಚಧ್ಯಾನಿಬುದ್ಧರು . . . ಸಾಮಾನ್ಯವಾಗಿ ಪ್ರತ್ಯೇಕವಾಗಿ ಮೂರ್ತೀಕೃತರಾಗುವುದಿಲ್ಲ. ಎಲ್ಲರೂ ಒಂದೆಡೆ ಪ್ರತಿ ಮಿತರಾಗುವರು (ಭಾರತ. ೩೦೧). [ಸಂ.]

**ಪ್ರತಿಮಿಸು** (ಕ್ರಿ). (ಕಣ್ಣಿಗೆ ಕಟ್ಟುವಂತೆ) ಚಿತ್ರೀಕರಿಸು; ರೂಪಿಸು : ಕುವೆಂಪು ಅವರು 'ಈ ಚೈತನ್ಯದ ಚಿರನಿಧಿ'ಯನ್ನು 'ಕಲಾಸುಂದರಿ'ಯಾಗಿ ಪ್ರತಿಮಿಸಿದ್ದಾರೆ (ಶಾಂದಸ. ೩೭).; ಭರತೇಶವೈಭವದಲ್ಲಿ ಅಲ್ಲಲ್ಲಿ ಕವಿಗೆ ಸಂಪ್ರದಾಯದತ್ತವಾದ ಭರತನ ಕಥೆಗೂ ತಾನು ಪ್ರತಿಮಿಸಲಿರುವ ದರ್ಶನಕ್ಕೆ ಪಾತ್ರವಾಗಿರುವ ಭರತನ ಕಥೆಗೂ ಉದ್ದಕ್ಕೂ ಒದಗಿರುವ ಎಷ್ಟೋ ಸಂದಿಗ್ಧತೆಗಳೂ ಆಭಾಸಗಳೂ ನಿವಾರಣೆಯಾಗಬಹುದಾಗಿತ್ತು (ಹಂಪೀ. ೦೩೩). [ಪ್ರತಿಮೆ + —ಇಸು]

**ಪ್ರತಿಮುಕ್ತ** (ಗು). ೧. ಬಿಡುಗಡೆ ಹೊಂದಿದ. ೨. ಧರಿಸಿದ; ತೊಟ್ಟ. ೩. ಬಂಧಿಸಿದ. ೪. ಹಿಂತಿರುಗಿದ; ಹಿಂದಕ್ಕೆ ಹೋದ. ೫. (ಯುದ್ಧದ) ಆಯುಧ ಹಾಗೂ ಉಡುಪುಗಳನ್ನು ತೊಟ್ಟು ಸಜ್ಜಾದ,—ಸನ್ನದ್ಧವಾದ. ೬. ಎಸೆದ; ಒಗೆದ. (ನಾ). ೭. ಬಿಡುಗಡೆ ಹೊಂದಿದುದು. ೮. ಉಡುಪುಗಳನ್ನು ಹಾಕಿ ಕೊಂಡವನು; ಪೋಷಾಕು ತೊಟ್ಟವನು : "ಆಮುಕ್ತಃ, ಪ್ರತಿಮುಕ್ತಃ, ಪಿನದ್ಧಃ, ಅಪಿನದ್ಧಃ—ಬಟ್ಟೆಗಳನ್ನು ತೊಟ್ಟುಬಿಟ್ಟು ಕಟ್ಟಿಕೊಂಡವನ ಹೆಸರುಗಳು" (ಶಿವ್ಯಾಕ. ೨೩೩). ೯. (ಯುದ್ಧಕ್ಕಾಗಿ) ಆಯುಧ ಹಾಗೂ ಉಡುಪುಗಳಿಂದ ಸಜ್ಜಾದವನು. [ಸಂ.]

**ಪ್ರತಿಮುಖ** (ನಾ). ೧. ಎದುರುಮುಖವನ್ನು ಹೊಂದಿರುವುದು; ಅಭಿಮುಖವಾಗಿರುವುದು. ೨. ಎದುರುಗಡೆ; ಮುಂಭಾಗ : ದೂರದೊಳಂ ಪ್ರತಿಮುಖಾವಲೋಕನದೊಳಂ ವೀಪ್ಸೆಯೊಳಂ . . .' ಚಪಳತೆಯೊಳಂ ಪದಮನೆರಡು ನುಡಿಯುಚ್ಚರಿಪುದು (ಶಬ್ದ. ೦೯೩ ವೃತ್ತಿ); ಉಗ್ರಭಾಷೆಯದೇಕೆ ಶಿವಶಿವ ವಿಗ್ರಹಪ್ರತಿಮುಖದ ವಿಷಮಾವಗ್ರಹ ದಲಿದು ಬಂದು ಹೋಗದೆ ಭರತಸಂತಾನ (ಕುಮ್ಮಾಸ. ೦೬-೩೨). ೩. ಹತ್ತಿರ; ಸಮೀಪ. ೪. [ಕಾವ್ಯಮೀ] ನಾಟಕಾದಿ ದೃಶ್ಯ ಕಾವ್ಯಗಳ ವಸ್ತುನಿರೂಪಣೆಯಲ್ಲಿ ಹೇಳಿರುವ ಐದು ಬಗೆಯ ಸಂಧಿ ಗಳಲ್ಲಿ ಎರಡನೆಯದು; ಕಾಣಿಸಿಕೊಂಡು ಮರೆಯಾದಂತಿರುವ

ಮೂಲಕಥಾಂಶವನ್ನು ಹೊರಪಡಿಸುವುದು : ಸವಸಂದ ಮುಖಂ ಪ್ರತಿಮುಖಮವಮರ್ಶಂ ಗರ್ಭವಂತೆ ನಿರ್ವಹಣಮೆನಿಪ್ಪುವವೆಯ್ದು ಸಂಧಿಯಕ್ಕುಂ (ಕಾವ್ಯಾ. ೯೬೬); ಮೇಲೆ ಹೇಳಿದ ಐದು 'ಅರ್ಥಪ್ರಕೃತಿ'ಗಳೂ ಐದು ಅವಸ್ಥೆಗಳೂ ಕ್ರಮವಾಗಿ ಸೇರಿದರೆ ವಸ್ತುವಿನಲ್ಲಿ ಮುಖ, ಪ್ರತಿಮುಖ, ಗರ್ಭ, ಅವಮರ್ಶ, ಉಪಸಂಹೃತಿ (ನಿರ್ವಹಣ) 'ಸಂಧಿ'ಗಳೆಂಬ ಐದು ವಿಭಾಗಗಳಾಗುತ್ತವೆ (ಸಂಸಾಟಿ. ೦೬). [ಸಂ.]

**ಪ್ರತಿಮುಖರ** (ನಾ). ನಾಯಕ; ಮುಂದಾಳು : ತದ್ವೇತ್ರಹಸ್ತಪ್ರತಿಮುಖರ ಪ್ರೌಢಗ್ರತಾಭೀಳಭೂಷಂ . . . ಸಭಾವಾಸವಕ್ತ್ರಂ (೧೧೪. ೩-೪). [ಸಂ.]

**ಪ್ರತಿಮೆ** (ನಾ). ೧. ಮರ, ಲೋಹ ಮೊದಲಾದುವುಗಳಿಂದ ಮಾಡಿದ ಮೂರ್ತಿ; ವಿಗ್ರಹ, ಬೊಂಬೆ ಮೊದಲಾದುವು: "ಅರ್ಚಾ, ಪ್ರತಿಮಾ- ಈ ೨ ಪ್ರತಿಮೆಯ ಪೆಸರ್" (ಕರಾಭು. ೨೨.೦೪೦); ಅರಸನುವಿರ್ದ್ದರು ಮನೆರಡು ಕಾಯ್ದು ಕರ್ಬೊನ್ನ ಪ್ರತಿಮೆಗಳನಪ್ಪವೇಟಿಪ್ಪಂದು ತಳಾಱಂಗೆ ಬೆಸವೇಟ್ಟೊಡಂ (ವಡ್ಡಾರಾ. ೨೧-೨೦); ಪ್ರತಿಮೆಗಳುಟ್ಟುವು ಮೊಟಗಿದುದತಿರಭಸದೆ ಧಾತ್ರಿ (ಶಂಕರಾ. ೧-೦೩೨); ಕೃಷ್ಣ ಶಿಶುಪಾಲರ ಮಹಾಸಂಗ್ರಾಮ ಮಧ್ಯದೊಳು . . . ಮಿಡುಕಿದವು ಪ್ರತಿಮೆಗಳು (ಕುವ್ಯಾಸ. ೦೦-೬೦). ೨. ಒಂದರಂತೆ ಒಂದು ಇರುವುದು ; ಹೋಲಿಕೆ ; ಸಾದೃಶ್ಯ. ೩. ಪ್ರತಿಫಲನ ಹೊಂದಿದ ಆಕೃತಿ ; ಪ್ರತಿಬಿಂಬ ; ಪ್ರತಿಚ್ಛಾಯೆ. ೪. ಸ್ವರೂಪ ; ಆಕೃತಿ : ತನ್ನ ನಾಯಕನ ವಿರಹದಿಂ ಚಿತ್ರದೊಳು ಅವನ ಪ್ರತಿಮೆಯಂ ನೋಡುವುದು ಒಂದು (ಕಾಮಶಾ. ೨೯೬). ೫. ಆನೆಯ ದಂತಗಳ ಮಧ್ಯಪ್ರದೇಶ. ೬. ಆಧುನಿಕ ಸಾಹಿತ್ಯದಲ್ಲಿ ಲೇಖಕನು ಮನಸ್ಸಿನ ಭಾವನೆಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುವ ರೂಪ, ಚಿತ್ರ ಇತ್ಯಾದಿ : ತೀರ ವಾಸ್ತವಿಕವಾದ ಪ್ರತಿಮೆಗಳಲ್ಲಿ ಐಂದ್ರಿಯಕ ಅನುಭವವು ಮನದಟ್ಟಾಗುವಂತೆ ಕವಿಯು ಮಾಡುತ್ತಾನೆ (ಪಶ್ಚಿಕಾ. ೩೨); ಭಾಷೆ ಹಾಗೂ ಪ್ರತಿಮೆಗಳ ಧ್ವನಿಪೂರ್ಣವಾದ ನಿರ್ವಹಣ ತೀರ ಖಚಿತವಾಗಿ ಈ ಕತೆಗಳಲ್ಲಾಗಿದೆ (ಹೊಸಕ್ತ. ೨೬೦) ; ತವಿಳರಿಗೆ ಕದಂಬಮರ ಸಂಗ್ರಾಮವಿಜಯದ ಪ್ರತಿಮೆಯಾಗಿ ಅಡಿಗಡಿಗೆ ಕಾಣಿಸಿಕೊಳ್ಳುತ್ತದೆ (ಪಮಹೊ. ೯೬). ☞ ಇದು ಇಂಗ್ಲಿಷಿನ 'Image' ಎಂಬ ಪದದ ಅರ್ಥಾನುವಾದ. ೭. [ಜೈನ] ಶ್ರಾವಕನು ಸಾಧಿಸಬೇಕಾದ ಆಧ್ಯಾತ್ಮಿಕೋನ್ನತಿಯ ಸಾಧನೆಯ ಕ್ರಮವಾದ ಮೆಟ್ಟಿಲು.–ನೆಲೆ: ☞ "ಪರಿಸ್ಥಿತಿ, ಅನುಕೂಲ, ಶಾರೀರಿಕ ಮತ್ತು ಮಾನಸಿಕವೃತ್ತಿಗಳಿಗೆ ಅನುಸರಿಸಿ ಶ್ರಾವಕಧರ್ಮದಲ್ಲಿ ರೂಪಿಸಿರುವ ಹನ್ನೊಂದು ನೆಲೆಗಳು" (ಕೃಶಕೋ. ೦೩೪). ಇವುಗಳಲ್ಲಿ ಶ್ರಾವಕರು ಹಿಂದಿನ ಪ್ರತಿಮೆಗಳಲ್ಲಿನ ಆಚಾರಗಳನ್ನು ಮುಂದಿನ ಪ್ರತಿಮೆಗಳಲ್ಲಿಯೂ ನಡೆಸಬೇಕಾಗುತ್ತದೆ. ೧. ದರ್ಶನಪ್ರತಿಮೆ–ಮದ್ಯ, ಮಾಂಸ, ಮಧು ಇವುಗಳ ತ್ಯಾಗ. ೨. ವ್ರತಪ್ರತಿಮೆ–ಅಣುವ್ರತ, ಗುಣವ್ರತ, ಶಿಕ್ಷಾವ್ರತಗಳನ್ನು ಸ್ವೀಕರಿಸುವುದು. ೩. ಸಾಮಾಯಿಕ–ಮುಂಜಾನೆ, ಮಧ್ಯಾಹ್ನ ಮತ್ತು ಸಂಜೆಯಲ್ಲಿ ಸಾಮಾಯಿಕ ಮಾಡುವುದು. ೪. ಪ್ರೋಷಧೋಪವಾಸ–ಅಷ್ಟಮಿ, ಚತುರ್ದಶಿ ದಿವಸಗಳಲ್ಲಿ ಉಪವಾಸ ಮಾಡುವುದು. ೫. ಸಚಿತ್ತತ್ಯಾಗ – ಕಾಯಿಪಲ್ಯ, ಹೂವು ಮುಂತಾದುವುಗಳನ್ನು ಉಪಯೋಗಿಸದಿರುವುದು. ೬. ರಾತ್ರಿಭೋಜನತ್ಯಾಗ–ರಾತ್ರಿಯಲ್ಲಿ ಊಟ ಮಾಡದಿರುವುದು. ೭. ಬ್ರಹ್ಮಚರ್ಯ–ಅವಿವಾಹಿತನಾಗಿರುವುದು. ೮. ಆರಂಭತ್ಯಾಗ–ಕೃಷಿ, ವಾಣಿಜ್ಯ ಮುಂತಾದ ಹಿಂಸಾತ್ಮಕವ್ಯಾಪಾರಗಳನ್ನು ಮಾಡದಿರುವುದು. ೯. ಪರಿಗ್ರಹತ್ಯಾಗ–ಮನೆ ಮಾರು, ಧನಧಾನ್ಯಗಳ ಮೇಲಿನ ಪ್ರೀತಿಯ ತ್ಯಾಗ. ೧೦. ಅನುಮತಿತ್ಯಾಗ–ಆರಂಭ, ಪರಿಗ್ರಹ, ವಿವಾಹ ಮುಂತಾದ ಕಾರ್ಯಗಳಲ್ಲಿ ಅನ್ಯರಿಗೆ ಸಮ್ಮತಿ ಕೊಡದಿರುವುದು. ೧೧. ಉದ್ದಿಷ್ಟಾಹಾರತ್ಯಾಗ–ತಮ್ಮ ದೆಸೆಯಿಂದಲೇ ಮಾಡಿದ ಆಹಾರವನ್ನು ತ್ಯಾಗಮಾಡುವುದು : ಕ್ರಿಯಾದೇವತಾಯೆಂಬುದು ಛತ್ರತ್ರಯಮುಂ ಚಕ್ರತ್ರಯಮುಮಂ ಅಗ್ನಿತ್ರಯಮುಂ ಪ್ರತಿಮೆಯುಮೆಂದಿಂತು ದಶವಿಧಮಕ್ಕುಮಿವು ಶಾಂತಿಹೇತುಗಳ್ (ಚಾವುಂಪು. ೨೨೨) ; ಅಜ್ಜಣನ್ದಿಭಟಾರರ್ ಪ್ರತಿಮೆ ಮಾಡಿದಾರ್ (ಎಇ. IV. ೧೧೦-೯; ೪) ; ನೈಷ್ಠಿಕಶ್ರಾವಕರಲ್ಲಿ ಹನ್ನೊಂದು ತರಗತಿಗಳುಂಟು. ಈ ತರಗತಿಗಳಲ್ಲಿ ತೇರ್ಗಡೆ ಹೊಂದುತ್ತ ಮುಂದೆ ಸಾಗಿದಂತೆ, ಶ್ರಾವಕನು ತನ್ನ ಆಧ್ಯಾತ್ಮಿಕ ಉನ್ನತಿಯನ್ನು ಮಾಡಿಕೊಂಡಂತಾಗುವುದು. ಈ ಹನ್ನೊಂದು ತರಗತಿಗಳಿಗೆ ಜೈನಪರಿಭಾಷೆಯಲ್ಲಿ "ಪ್ರತಿಮೆ"ಗಳೆಂದು ಕರೆಯುವರು (ಕೃಶಕ. ೯೬೬). 'ಏಕಾದಶನಿಳಯ' ಪರಾ. [ಸಂ. ಪ್ರತಿಮಾ]

**ಪ್ರತಿಯತ್ನ** (ನಾ). ೧. ಒಂದು ಪ್ರಯತ್ನಕ್ಕೆ ಪ್ರತಿಯಾಗಿ ಮಾಡುವ ಮತ್ತೊಂದು ಪ್ರಯತ್ನ ; ಪ್ರತಿಕ್ರಿಯೆ : ಯತ್ನ ಪ್ರತಿಯತ್ನಗಳು ಒಂದಕ್ಕೊಂದಕ್ಕೆ ಸಮನಾಗಿ ಮತ್ತು ವಿರುದ್ಧವಾಗಿ ಇರುವುವು (ಶಾಕಪ್ರ. ೬೯). ೨. ಪ್ರಯತ್ನ; ಉದ್ಯಮ. ೩. ಸೇಡು ತೀರಿಸಿಕೊಳ್ಳುವುದು ; ಪ್ರತೀಕಾರ. ೪. ಅಭಿಲಾಷೆ ; ಅಪೇಕ್ಷೆ. ೫. ಸೆರೆಹಿಡಿಯುವುದು ; ಬಂಧಿಸುವುದು : "ಪ್ರತಿಯತ್ನಃ–೧. ಅಭಿಲಾಷ, ೨. ಸೆರೆಹಿಡಿಯುವಿಕೆ" (ಸಿದ್ಧಾಂತಿ. ೪೦೦). ೬. ವಿರೋಧ ; ಪ್ರತಿಭಟನೆ. [ಸಂ.]

**ಪ್ರತಿಯಾತನ** (ನಾ). ೧. ಸೇಡು; ಮುಯ್ಯಿ : "ಪ್ರತಿಯಾತನಂ ಪ್ರತಿಪ್ರತಿಕೃತಿಯೆನಲ್ಕೆ ಮುಯಿ" (ಶುಂಗಾ. ೦೩೬-೬೬). ೨. ಪ್ರತಿರೂಪ ; ಪ್ರತಿಬಿಂಬ : "ಪ್ರತಿಬಿಂಬಂ, ಪ್ರತಿರೂಪು . . . ಪ್ರತಿಯಾತನಂ, ಪ್ರತಿಚ್ಛಾಯಂ– ಈ ೯ ಪ್ರತಿಬಿಂಬದ ಪೆಸರ್" (ಕರಾಭು. ೨೦-೦೪೦). [ಸಂ.]

**ಪ್ರತಿಯಾತನೆ** (ನಾ). ೧.=ಪ್ರತಿಯಾತನ ೨ : "ಪ್ರತಿಬಿಂಬಂ . . . ಪ್ರತಿಯಾತನಾ ಪ್ರತಿಚ್ಛಂದಮಾ ಪ್ರತಿಕೃತಿ ಪ್ರತಿಕಾಯಮಾ ಪ್ರತಿಪ್ರಾಣಮೆಂದೆನಲದುಂ ಪ್ರತಿಯಪ್ಪ ರೂಪೆನಿಕ್ಕುಂ" (ಶುಂಗಾ. ೬-೨೬). ೨. ವಿಗ್ರಹ, ಪ್ರತಿಮೆ, ಚಿತ್ರ ಮುಂತಾದ ಪ್ರತಿಕೃತಿ : "ಪ್ರತಿಮಾನಂ, ಪ್ರತಿಬಿಂಬಂ, ಪ್ರತಿಮಾ, ಪ್ರತಿಯಾತನಾ . . . ಪ್ರತಿನಿಧಿಃ- ರ ವಿಷ್ಣು ಮೊದಲಾದವರ ಆಕಾರಗಳಿಗೆ ಸಮನಾಗಿ ಶಿಲಾದಿಗಳಿಂದ ಮಾಡಿದ ಪ್ರತಿಮೆ ಹೆಸರು" (ಸಿದ್ಧಾಂತಿ. ೩೦೬). [ಸಂ. ಪ್ರತಿಯಾತನಾ]

**ಪ್ರತಿಯಿಕ್ಕು** (ಕ್ರಿ). ಒಂದು ವಸ್ತುವಿನ ಸ್ಥಾನಕ್ಕೆ ಮತ್ತೊಂದನ್ನು ಇಡು ; ಒಂದರ ಸ್ಥಾನದಲ್ಲಿ ಮತ್ತೊಂದನ್ನು ಭರ್ತಿಮಾಡು : ಅಱಿಯದ ದಕ್ಷನ ಶಿರಮಂ ತಱಿಯಲು ಶಿವಪಿತ್ತ ನೇಮವಂ ನೆನೆದಾಗಳ್ ಕಱಿದಲೆಯಂ ಪ್ರತಿಯಿಕ್ಕುತ ಭರದಿಂ ವೀರೇಶನಿತ್ತ ಪ್ರಾಣವನವಗಂ (ಚಕ್ಷಾ. ೬-೯೯). [ಪ್ರತಿ + ಇಕ್ಕು]

**ಪ್ರತಿಯಿಡು** (ಕ್ರಿ). ೧. ಹೋಲಿಸು : ಪ್ರತಿಯಿಡಲು ಬಾರದ ಮಹಾಗರ್ವಿತಹೃದಯನು ಕಪಟನು . . . ಸ್ವೈರಿಸಿ (ಐಚಕ್ಷ. ೨೩-೪೦). ೨. ತಿರುಗಿ ಬರೆ; ಬೇರೆಯಾಗಿ ಬರೆ: ಬೆಸಗೊಂಡಿರ್ದುದಯಕ್ಕೆ ಪೂರ್ವಗದಿತ ವ್ಯಾಪಾರಮಂ ಕೂಡಿ ಯೋಜಿಸಿ ನಾಲ್ಕುಂ ಪ್ರತಿಯಿಟ್ಟು (ಜಾತಕ. ೨೪-೨೬). ೩. (ತೂಗಲು) ಪಡಿಯಿಡು ; ಬೆಲೆಕಟ್ಟು : ಬಾಪನ ನಿರತಂ ತಂದಾವಗಮೊಂದೆಸೆಯೊಳಿಟ್ಟು ತಂನಂ ಪ್ರತಿಯಿಟ್ಟು ವೀರರೊಡನೆ ತೂಗಿದೊಡೋವದ ವೀರಕ್ಕೆ ಮಾಧವಂ ಗೆಲೆವಂದಂ (ಶ್ರೀಶಾ. IX-i, ೨೪೯-೯೬ ; 1147). [ಪ್ರತಿ + ಇಡು₁]

**ಪ್ರತಿಯಿನ** (ನಾ). ಅಂತರಿಕ್ಷದಲ್ಲಿ ಎರಡನೆಯ ಸೂರ್ಯನಂತೆ ಕಾಣಿಸುವ ಒಂದು ಉತ್ಪಾತ : ಜಗತಿಯೊಡೆಯನು ಶಿರಸುವಿಲ್ಲದ

ಬಿಗಿದ ಹೆಣನಂ ಕಂಡಸುದಯಾದ್ರಿಗೆ ತರಣಿ ಬಪ ಸಮಯದಲಿ ಪ್ರತಿಯಿನಸುವಯಿಸಿವನು (ಜಸೆಪು. ೬೨-೧೨). 'ಪ್ರತಿಸೂರ್ಯ' ಪರಾ. [ಸಂ.]

**ಪ್ರತಿಯೋಗ** (ನಾ). ೧. ವಿರೋಧ; ಪ್ರತಿಭಟನೆ. ೨. ಸಹಯೋಗ; ಸಹಕಾರ. ೩. ಪ್ರತೀಕಾರ. ೪. ರೋಗವನ್ನು ನಿವಾರಿಸುವ ಮದ್ದು; ಪರಿಹಾರೌಷಧ. [ಸಂ.]

**ಪ್ರತಿಯೋಗಿ** (ಗು). ೧. ವಿರೋಧಿಸುವ; ಸ್ಪರ್ಧಿಸುವ. (ನಾ). ೨. ಸರಿಸಮಾನವಾದುದು; ಈಡಾದುದು : ಹನ್ನೊಂದನೆಯ ಶತಾಬ್ದದಲ್ಲಿ ಹೂಗ್ಲಿಯು ನೂತನವಾದ ಸೌಷ್ಠವದಿಂದ ಸಪ್ತಗ್ರಾಮಕ್ಕೆ ಪ್ರತಿಯೋಗಿ ನಗರವಾಗಿತ್ತು (ಕಥಾಕುಂ. ೫೬). ೩. ಎದುರಾಳಿ; ವಿರೋಧಿ. ೪. ಬೇರೆಯಾಗಿರುವುದು ; ಭಿನ್ನವಾಗಿರುವುದು : ಇಲ್ಲಿ ಈಶ, ಜೀವ, ಜಡ ಎಂದು ಮೂರೇ ಪ್ರತಿಯೋಗಿಗಳು (ಹಿಂದಸಾ. ೨೬೨). ೫. [ನ್ಯಾಯ] ಯಾವ ವಸ್ತುವಿನ ಅಭಾವವನ್ನು ಹೇಳಬೇಕೋ ಆ ಪದಾರ್ಥ ; ಅಭಾವಕ್ಕೆ ಪಕ್ಕಾದ ವಸ್ತು : ಅನ್ಯೋನ್ಯಾಭಾವ ವೆಂಬ ಭೇದಪದಾರ್ಥವು ಪ್ರತಿಯೋಗಿಭೇದದಿಂದ ಬೇರೆ ಬೇರೆಯಾಗಿ ಘಟಭೇದ, ಪಟಭೇದ ಎಂದು ವಿಭಿನ್ನಗಳಾಗಿದ್ದರೂ ಆಶ್ರಯಭೇದದಿಂದ ಬೇರೆ ಬೇರೆಯಲ್ಲವೆಂದು ಇತರರ ಅಭಿಪ್ರಾಯವು (ಹಿಂದಸಾ. ೨೬೦). [ಸಂ. ಪ್ರತಿಯೋಗಿನ್]

**ಪ್ರತಿರಕ್ಷಣ** (ನಾ). ೧. ಕಾಪಾಡುವುದು; ರಕ್ಷಣೆ. ೨. [ರಾಜನೀ] ಅಪಾಯವೊದಗದಂತೆ ನೋಡಿಕೊಳ್ಳುವುದು ; ಅಪಾಯದ ದೆಸೆ ಯಿಂದ ರಕ್ಷಿಸುವುದು : ನಾನು. . . ಭಾರತಸಂವಿಧಾನದ ಮತ್ತು ವಿಧಿಯ ಪರಿರಕ್ಷಣ, ಸಂರಕ್ಷಣ ಮತ್ತು ಪ್ರತಿರಕ್ಷಣ ಮಾಡುತ್ತೇನೆಂದೂ. . . ಪ್ರತಿಜ್ಞೆ ಮಾಡುತ್ತೇನೆ (ಬಾರಾಸ. ೩೦). [ಸಂ.]

**ಪ್ರತಿರಕ್ಷಣೆ** (ನಾ). ೧. = ಪ್ರತಿರಕ್ಷಣ ೧. ೨. ನ್ಯಾಯಾಲಯ ಮುಂತಾದ ಕಡೆಗಳಲ್ಲಿ ಅಪರಾಧವು ಹೊರಿಸಲ್ಪಟ್ಟರೆ ತಾನು ನಿರ್ದೋಷಿಯೆಂದು ಸಾಧಿಸುವಿಕೆ : ಅವನಿಗೆ ವಿರೋಧವಾಗಿ ಹೂಡ ಲಾದ ಕಾನೂನುಸಂಬಂಧವಾದ ವ್ಯವಹರಣೆಗಳಲ್ಲಿ ಪ್ರತಿರಕ್ಷಣೆ ಮಾಡಿ ಕೊಳ್ಳುವುದಕ್ಕಾಗಿ. . . ಪರಾಮರ್ಶನ ನಡೆಯತಕ್ಕುದು (ಭಾರಾಸ. ೦೮೬). [ಸಂ. ಪ್ರತಿರಕ್ಷಣ]

**ಪ್ರತಿರಕ್ಷೆ** (ನಾ). ೧. = ಪ್ರತಿರಕ್ಷಣ ೧ : ನನಗೆ ತಿಳಿದ ಮಟ್ಟಿಗೆ ಪ್ರತಿ ರಕ್ಷೆಯ ಸನ್ನಾಹವನ್ನು ಪೂರೈಸಿ ಹಾಸಿಗೆಯನ್ನು ಆಶ್ರಯಿಸಿದೆನು (ಶಂಟಿಟು. ೪೪). ೨.=ಪ್ರತಿರಕ್ಷಣೆ ೨ : ಬಂದೀಕರಣ ಮಾಡಿದ ಯಾವ ವ್ಯಕ್ತಿ ಯನ್ನೂ. . . ಆ ವ್ಯಕ್ತಿಯು ತನಗೆ ಇಷ್ಟವುಳ್ಳ ಲಾಯರ ಪರಾಮರ್ಶೆ ವನ್ನು ಕೇಳುವ ಮತ್ತು ಆತನಿಂದ ಪ್ರತಿರಕ್ಷೆ ಪಡೆಯುವ ಅಧಿಕಾರವು ಆ ವ್ಯಕ್ತಿಗಿಲ್ಲದಂತೆ ಮಾಡತಕ್ಕುದಲ್ಲ (ಭಾರಾಸ. ೦೨). [ಸಂ. ಪ್ರತಿರಕ್ಷಾ]

**ಪ್ರತಿರಣನೆ** (ನಾ). ಪ್ರತಿಧ್ವನಿ; ಅನುರಣನ : ಮೃದಂಗವನ್ನು ಸರಿಯಾಗಿ ತಯಾರಿಸಿದ್ದರೆ, ಅದರ ನಾದಭಾಗವು ಒಂದೇ ಸಮನಾದ . . . ಪ್ರತಿರಣನ ಗೊಳ್ಳುವ ತುಂಬುನಾದವನ್ನು ಕೊಡುತ್ತದೆಂದೂ ಅವರು ಚೆನ್ನಾಗಿ ಬಲ್ಲರು (ಸಂಗೀತ. ೦೧೨). [ಸಂ. ಪ್ರತಿರಣನ]

**ಪ್ರತಿರಣಿತ** (ನಾ). ಮಾರ್ದನಿಗೊಂಡುದು; ಪ್ರತಿಧ್ವನಿತವಾದುದು : ಮಹಾಧ್ವಾನಮಸುರನಚಿರಿಂದುರ್ಕಿ ರೋದಿಸಿತು, ಗಗನಗಿರಿವನಗುಹಾ ಮುಖಂಗಳಿಂ ಪ್ರತಿರಣಿತಮಾಗಿ ! (ಶ್ರೀರಾಪಟಾ. ೨೪೭-೨೬೯). [ಸಂ.]

**ಪ್ರತಿರವ** (ನಾ). ಪ್ರತಿಧ್ವನಿ : ಬಂಹಿಮವನ್ನಂದರಕಂದರಪ್ರತಿರವಂ ಕೂಟಕ್ಕೆ ಮೆಯ್ಗೊಡ್ಡೆ ಪಂಚಮಮಾರ್ಗಲ್ಯದೋಳಿಂದ್ರಗಾಯಕರದೇನಿಂಬಿಂ ನರ್ಚುಬೆತ್ತರೋ (ಚಂಪುಕಿಪು. ೦೨-೬೩). [ಸಂ.]

**ಪ್ರತಿರವಂಗುಡು** (ಕ್ರಿ). ಮಾರ್ದನಿಯನ್ನು ಕೊಡು ; ಪ್ರತಿಧ್ವನಿಸು : ಉರುತರಪರ್ವತಂ ಪ್ರತಿರವಂಗುಡೆ. . . ಜವದಿನೇಳ್ತರುತಿರ್ದುದು ಸೊರ್ಕಿ ದೆಕ್ಕಲಂ (ಶಂಶಂ. ೯-೩). [ಪ್ರತಿರವ + ಕುಡು$_1$ (<ಕೊಡು$_1$)]

**ಪ್ರತಿರಹಿತ** (ಗು). ೧. ಎದುರಿಲ್ಲದ; ಸಾಟಿಯಿಲ್ಲದ : ಯೋಗವಂ ಕೊಡುವ ದೇವಿಗಂ ಪ್ರತಿರಹಿತಯೋಗಿಗಳ ಗುರುರೂಪನಂ. . . ನಮೋ ನಮೋಯೆಂದೆನು (ಏಕ್ರಕೃ. ೨-೨-೩೪). (ನಾ). ೨. ಸಾಟಿಯಿಲ್ಲದವನು; ಅಸದೃಶನಾದವನು : ಪ್ರತಿರಹಿತ ನುತವಿಹಿತ . . . ಶರಣಾಗು ಗುರುಮೂರ್ತಿ ಪಂಪಾಪುರಾಧೀಶ್ವರ (ಹಶಕಾ. ೦.೩). [ಸಂ.]

**ಪ್ರತಿರೂಪ** (ಗು). ೧. ತದ್ರೂಪವಾದ ; ಸದೃಶವಾದ : ನಿರಂತರಂ ಪಾರ್ವ ಪುರಾಣರಾಕ್ಷಸರನೀಕ್ಷಿಸಿದಂ ಪ್ರತಿರೂಪಶೂದ್ರಕು (ಕಾವ್ಯಸಾ. ೩೩೯). (ನಾ). ೨. ಪ್ರತಿಮೆ ; ವಿಗ್ರಹ : ಅಂತು ತಾಮ್ರನಮಯಗುಹ್ಯ ೯ಪ್ರತಿರೂಪಂ ಕಿಚ್ಚಿಂಗೆ ತೋಱದರಗು ಕರಗುವಂತೆ ಕರಗಿ ಪೊನಲ್ವರಿಯೆ (ಶಾಂತಿಪು. ೬-೨೯ ವ) ; ನೆನೆದ ಘಳಿಗೆಯೊಳಾತ ಕಟ್ಟುಕ್ಕಿನಲಿ ಸರ್ವಾವಯ ವವನು ಸಂಜನಿಸಿದನು ಪ್ರತಿರೂಪವನು ಪವಮಾನನಂದನನ (ಕುವ್ಯಾಗ. ೦೧-೬೬). ೩. ಪ್ರತಿಬಿಂಬ : "ಪ್ರತಿಬಿಂಬಂ, ಪ್ರತಿರೂಪಂ. . . ಪ್ರತಿಚ್ಛಾಯಂ – ಈ ೯ ಪ್ರತಿಬಿಂಬದ ಪೆಸರ್" (ಕರಾಚು. ೨೦-೦೬೦). ೪. ತದ್ರೂಪವಾಗಿ ಇರುವುದು; ತದ್ವತ್ತಾಗಿರುವುದು : ಪ್ರತಿಮಾ ರೂಪಮಘಾತಿಪ್ರತಿರೂಪದ ಗರ್ವಪರ್ವತಾರೂಢತೆಯಂ ಶತಖಂಡಂ ಮಾಡಿದುವು (ಶಾಂತಿಪು. ೦೨-೩೨); ಅಳು ಸೂಳೆಯು ನಾಯಿ ಕೋಳಿ ಜೋಯಿಸ ವೈದ್ಯ ಗೂಳಿಯು ತಗರು ಪ್ರತಿರೂಪ ಕಂಡರೆ ಕಾಳಗವೆಂದ (ಸರ್ವಜ್ಞ. ೦೫೯೬). [ಸಂ.]

**ಪ್ರತಿರೂಪು** (ನಾ). ಪ್ರತಿಬಿಂಬ : ಅಂಬುರುಹದೊಳಾ ಪ್ರತಿರೂಪು ಕರಂ ಬಿಂಬಿಸೆ ಕಣ್ಗೆಡ್ಡಂಬಡೆದುದು (ಜಯನೃ. ೦-೪೩). [<ಸಂ. ಪ್ರತಿರೂಪ]

**ಪ್ರತಿರೋಧ** (ಗು). ೧. ತಡೆಯುವ; ನಿರೋಧಿಸುವ : ನೀವು ನಿಮ್ಮ ಘ್ರಾಣೇಂದ್ರಿಯವನ್ನು ಚಳಿಗೂ, ಕಾವಿಗೂ ಬೀಳದಂತೆ ಮಾಡಿ ಮಾಡಿ ಅದರ ಪ್ರತಿರೋಧಶಕ್ತಿಯನ್ನೇ ಕಳೆದಿದ್ದೀರಿ (ಬೀಸ್ಯ. ೯). (ನಾ). ೨. ವಿರೋಧ; ಪ್ರತಿಭಟನೆ. ೩. ಅಡಚಣೆ; ಅಡ್ಡಿ; ತಡೆ. ೪. ಎದುರಾಳಿ; ವಿರೋಧಿ. ೫. ಆಕ್ರಮಣ. ೬. ತಿರಸ್ಕಾರ. ೭. ಕಳ್ಳತನ ; ಚೌರ್ಯ. [ಸಂ.]

**ಪ್ರತಿರೋಧಕ** (ಗು). ೧. ತಡೆಯುವ ; ಅಡ್ಡಿಪಡಿಸುವ. (ನಾ). ೨. ತಡೆ ; ಅಡ್ಡಿ ; ಅಡಚಣೆ. ೩. ಎದುರಾಳಿ ; ವಿರೋಧಿ. ೪. ತಡೆಯುವವನು; ಅಡ್ಡಿಪಡಿಸುವವನು. ೫. ಕಳ್ಳ; ದರೋಡೆ ಕೋರ: "ಏಕಾಗಾರಿಕಃ, ತಸ್ಕರಃ, ದಸ್ಯುಃ, ಪ್ರತಿರೋಧಕಃ . . . ಸ್ತೇನಃ — ಈ ೧೦ ಕಳ್ಳಂ" (ಕರಾಚು. ೩೬-೦೮೩). [ಸಂ.]

**ಪ್ರತಿರೋಧಿ** (ನಾ). ಕಳ್ಳ; ದರೋಡೆಕೋರ : "ಚೋರಃ, ಏಕಾಗಾರಿಕಃ, . . . ಪ್ರತಿರೋಧಿಃ, ಪರಾಸ್ಕಂದೀ, ಪಾಟಚ್ಚರಃ, ಮಲಿಮ್ಲುಚಃ – ೧೦ ಕಳ್ಳನ ಪೆಸರುಗಳು" (ಸಿದ್ಧಾಂತಿ. ೪೦೯). [ಸಂ. ಪ್ರತಿರೋಧಿನ್]

**ಪ್ರತಿರೋಧಿಸು** (ಕ್ರಿ). ತಡೆ ; ಅಡ್ಡಿಪಡಿಸು : ಪ್ರತಿರೋಧಿಸಿ ವಜ್ರದ ಪರ್ವತುಗಳೆನಿತಾನುಮಿರ್ದೊಡವನಸವಯವದಿಂ ಸ್ವತನುವೆ ಭೇದಿಸಲಾರ್ಪ ಪ್ರತಿಘಾತದಿನಾದಮೆಸೆದನಿಂದ್ರಪ್ರತಿಮಂ (ಶಂಪ್ರಪು. ೦೯-೩೩). [ಸಂ. ಪ್ರತಿರೋಧನ + –ಇಸು$_1$]

**ಪ್ರತಿಲಿಪಿ** (ನಾ). ಮೂಲದಾಖಲೆಯ ನಕಲು : ಅಂಥ ವರದಿಯು ತಲಪಿದ ತರುವಾಯ ರಾಷ್ಟ್ರಪತಿಯವರು, ಅದರ ಒಂದು ಪ್ರತಿಲಿಪಿ ಯನ್ನೂ . . . ಸಂಸತ್ತಿನ ಪ್ರತಿಯೊಂದು ಸದನದ ಸಮಕ್ಷಮ ಇರಿಸುವಂತೆ ಏರ್ಪಡಿಸತಕ್ಕುದು (ಭಾರಾಸ. ೦೬೬). [ಸಂ.]

**ಪ್ರತಿಲೇಖನ** (ನಾ). ೧.=ಪ್ರತಿಲಿಪಿ. ೨. [ಜೈನ] ಪ್ರತಿನಿತ್ಯವೂ ಭೂ ಶುದ್ಧಿ, ಉಪಕರಣಗಳ ಶುದ್ಧಿ ಮುಂತಾದುವನ್ನು ಮಾಡುವುದು:

ಪ್ರತಿಲೇಖನದೊಳನಾಲೋಕಿತಮನಾಚಿತಮೆಂದು ಪಲವು ಕಣ್ಬಡೆದವೊಲಾ ಯತಿಪತಿಯ ದಯಾಧ್ವಜಮೇನತಿಶಯಮಾದತ್ತೊ ಮೇದುರಂ ಮಾಯೂರಂ (ಧರ್ಮಾ. ೧೦-೦೩೫) : ನೋಡದೆ ಪ್ರತಿಲೇಖನವನು ಮಾಡದೆ ಕೂಡಿ ಪೂಜೋಪಕರಣವ ರೂಢಿಯೊಳಿಡುವುದು ತೆಗೆವುದು ಮೆಂಬಿದು ನೋಡಲು ಗೃಹಣಾತಿಚಾರ (ಧ್ಯಾರಣ. ೦೦-೩೦೯). [ಸಂ.]

**ಪ್ರತಿಲೇಖನೆ** (ನಾ). = ಪ್ರತಿಲೇಖನ ೨ : ನೋಡದೆ ಪ್ರತಿಲೇಖ[ಶಾಸ. ಪ]ನೆಯುಂ ಮಾಡದೆ ಮಾಡಗಿಡುವ ಕೊಳ್ವ ಪಾಸುವುದುಂ ಕೊಂಡಾಡದುದುಂ ನೆನೆಯದುದುಂ ಕೇಡಿನಿತುಂ ಪ್ರೋಷಧೋಪವಾಸವ್ರತದೊಳ್ (ಸುಕುಚ. ೬-೨೩). [ಸಂ. ಪ್ರತಿಲೇಖನ]

**ಪ್ರತಿಲೇಖಿಸು** (ಕ್ರಿ). [ಜೈನ] ಪ್ರತಿನಿತ್ಯವೂ ಭೂಶುದ್ಧಿ, ಉಪಕರಣಗಳ ಶುದ್ಧಿ ಮುಂತಾದುವನ್ನು ಮಾಡು : ನೋಡದೆ ಪ್ರತಿಲೇಖಿಸದೆ ಮೂತ್ರ ಪುರೀಷಂಗಳಂ ಕಳೆವ ಅಪ್ರತ್ಯವೇಕ್ಷಿತಾಪ್ರಮಾರ್ಜಿತೋತ್ಸರ್ಗಮುಂ ನೋಡದೆ ಪ್ರತಿಲೇಖಿಸದೆ ಜಿನ್ನಯಾರ್ಹದಾಚಾರ್ಯಾದಿ ಪೂಜೋಪಕರಣಂಗಳುಮಂ . . . ಕೊಳ್ವ ಅಪ್ರತ್ಯವೇಕ್ಷಿತಾಪ್ರಮಾರ್ಜಿತಾದಾನಮುಂ (ಕಸ್ತ್ಯಕ್ರ. ೨೮೩) ; ನೋಡದೆ ಪ್ರತಿಲೇಖಿಸದೆ ಪೂಜೋಪಕರಣಂಗಳಂ ಕೊಳ್ವ ಅಪ್ರತ್ಯವೇಕ್ಷಿತಾಪ್ರಮಾರ್ಜಿತಾದಾನಮುಂ . . . ಇವಯ್ದುಂ ಪ್ರೋಷಧೋಪವಾಸದತಿಚಾರಮಕ್ಕುಂ (ಕಸಾರ. ೩೦೬) ; ಹಾಸಿಕೆಯನು ಹಾಸಿಕೊಂಬಲ್ಲಿ ತೆಗೆದಿಡುವಾ ಸಮಯದಿ ಠಾವ ನೋಡಿ ಲೇಸಾಗಿ ಪ್ರತಿಲೇಖಿಸದಿರಿಸುವುದದು ಸಂಸ್ತರಣವೆಯೆಂಬ ದೋಷ (ಧ್ಯಾರಣ. ೦೦-೩೨೦). [ಪ್ರತಿಲೇಖನ + —ಇಸು]

**ಪ್ರತಿಲೋಮ** (ಗು). ೧. ಯಥಾಕ್ರಮವಲ್ಲದ ; ನಿಯಮಕ್ಕೆ ವಿರುದ್ಧವಾದ: 'ಪ್ರತಿಲೋಮವಿವಾಹ' ಪರಾ. ೨. ನಿಮ್ನವರ್ಗದ. (ನಾ). ೩. ನಿಯಮವಿರುದ್ಧವಾದುದು ; ಯಥಾಕ್ರಮವಲ್ಲದುದು: "ಪ್ರತಿಕೂಲಂ, ಪ್ರತಿಲೋಮಂ, ಪ್ರತೀಪಂ, ಪ್ರಸವ್ಯಂ — ಈ ೪ ಪ್ರತಿಕೂಲಂ" (ಹಲಾಯು. ೦೨೨-೩೮) ; ವಾಯುವು ಊರ್ಧ್ವಮುಖವಾಗಿ ಶ್ಲೇಷ್ಮವನ್ನು ಪ್ರತಿಲೋಮವಾಗಿ ಶಿರಸ್ಸಿಗೈದಿಸಿ ತಮಕವೆಂಬ ಶ್ವಾಸವನ್ನುಂಟುಮಾಡುವುದು (ಸಕಪ್ಪ. ೨೨೯) ; ಪ್ರಾಯೋಗಿಕವಿಜ್ಞಾನವು ಪ್ರತಿಲೋಮವಾಗಿ ಬೆಳೆದಿದೆ (ಶಿಲ್ಪವಾ. ೦೨೯). ೪. ಹಿಂದೂಜನಾಂಗದಲ್ಲಿರುವ ನಾಲ್ಕು ವರ್ಣಗಳಲ್ಲಿ ಮೇಲುವರ್ಣದ ಹೆಣ್ಣನ್ನು ಕೀಳುವರ್ಣದ ಗಂಡಿಗೆ ಕೊಟ್ಟು ಮಾಡುವ ಮದುವೆ : 'ಅನುಲೋಮ' ಸಲ್ಲುವುದು ; 'ಪ್ರತಿಲೋಮ' ಶಾಸ್ತ್ರಕ್ಕೆ ವಿರೋಧ (ವ್ಯಾಸಶಿ. ೨೮); ಈ ವಿವಾಹಗಳೇ ಅನುಲೋಮ ಪ್ರತಿಲೋಮಗಳೆಂದು ಹೆಸರು ಪಡೆದಿರತಕ್ಕವು (ಛಾತ್ರ. ೬೮). [ಸಂ.]

**ಪ್ರತಿಲೋಮಕ್ರಿಯೆ** (ನಾ). ವಿಪರೀತವಾದ ಕಾರ್ಯ ; ವಿರುದ್ಧವಾದ ಕೆಲಸ : ಭಾಗಾಹಾರವು ಗುಣಾಕಾರದ ಪ್ರತಿಲೋಮಕ್ರಿಯೆ (ಇನ್‌ವರ್ಸ್ ಪ್ರೋಸೆಸ್) (ಕಶಿಕೋ. I, ೯). [ಸಂ. ಪ್ರತಿಲೋಮಕ್ರಿಯಾ]

**ಪ್ರತಿಲೋಮಜ** (ನಾ). ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣಗಳಲ್ಲಿ ಮೇಲುವರ್ಣದ ಹೆಣ್ಣಿನಲ್ಲಿ ಕೀಳುವರ್ಣದ ಗಂಡಿನಿಂದ ಹುಟ್ಟಿದವನು. [ಸಂ.]

**ಪ್ರತಿಲೋಮವಿವಾಹ** (ನಾ). = ಪ್ರತಿಲೋಮ ೪ : ಪ್ರತಿಲೋಮವಿವಾಹಗಳು ಎಂದೂ ಅಷ್ಟು ಮನ್ನಣೆಯನ್ನು ಪಡೆಯಲಿಲ್ಲ (ಕಜಾಕೂ. ೦೦೬); ಹಿಂದೆ ಅನುಲೋಮವಿವಾಹಗಳು ಜಾರಿಯಲ್ಲಿದ್ದು ಪ್ರತಿಲೋಮವಿವಾಹಗಳು ನಿಷಿದ್ಧವಾಗಿದ್ದವು (ಭಾರತ. ೩೩). [ಸಂ.]

**ಪ್ರತಿವಸ್ತೂಪಮಾಲಂಕಾರ** (ನಾ). = ಪ್ರತಿವಸ್ತೂಪಮೆ : ಉಪಮಾನೋಪಮೇಯವಾಕ್ಯಂಗಳೊಳ್ ಒಂದೇ ಸಾಧಾರಣಧರ್ಮವಾಗಿ ಬೇಜ಼ೆ ಬೇಜ಼ೆ ಪೇೞ್ದೊಡೆ ಪ್ರತಿವಸ್ತೂಪಮಾಲಂಕಾರಂ (ಶಬ್ದ. ೯೦ ವೃತ್ತಿ) ; ಪೂರ್ವಾರ್ಧ್ಯ ವರ್ಣ್ಯಪರವಾದ ವಾಕ್ಯಗಳು ಪ್ರತ್ಯೇಕ ಪ್ರತ್ಯೇಕವಾಗಿದ್ದು ಅವುಗಳಲ್ಲಿ ಸಮಾನಧರ್ಮವೂ ಪ್ರತ್ಯೇಕ ಪ್ರತ್ಯೇಕವಾಗಿ ಉಕ್ತವಾಗಿದ್ದರೆ ಪ್ರತಿವಸ್ತೂಪಮಾಲಂಕಾರವಾಗುವುದು (ಕೃಬಿಎ. ೨೬೦). [ಸಂ.]

**ಪ್ರತಿವಸ್ತೂಪಮೆ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು : ಯಾವುದಾದರೂ ಒಂದು ವಸ್ತುವನ್ನು ಕುರಿತು ಹೇಳಿ ಅದಕ್ಕೆ ಸಮಾನವಾದ ಧರ್ಮವುಳ್ಳ ಇನ್ನೊಂದು ವಸ್ತುವನ್ನು (ಪ್ರತಿವಸ್ತುವನ್ನು) ತಿಳಿಸುವುದರ ಮೂಲಕ ಅವುಗಳ ನಡುವಣ ಸಾಮ್ಯವು ಪ್ರತೀತವಾಗುವಂತೆ ವರ್ಣಿಸುವುದು : ಪ್ರತಿವಸ್ತೂಪಮಾಲಂಕೃತಮಿಂತಕ್ಕುಂ ಧರಾಧಿಪಾ ನಿನ್ನನ್ನಂ ವಿಶ್ರುತಯಶನಿಲಯ ತಾರಾಪತಿ ದಿನಕರಸದೃಶತೇಜನೆಂಬುದುಮುಂಟೇ (ಪ್ರತಿವಸ್ತೂಪಮೆ) (ಕಶಿಶಿ. ೩-೯೯) ; ಪ್ರತಿವಸ್ತೂಪಮೆಗೆ — ನಿನ್ನನ್ನನೊರ್ವನುಂ ಸಂಪನ್ನಗುಣಂ ಪುಟ್ಟಲರಿಯನಿನ್ನುಂ ಮುನ್ನುಂ ಸನ್ನುತನಮೇರುಭೂರುಹದನ್ನವು ಪಜಿತಾಮರನುಮೇಂ ಪುಟ್ಟುಗುಮೇ (ಕಾವ್ಯಾವ. ೩೬೬) ; ಉಪಮಾನೋಪಮೇಯ ಪರವಾಕ್ಯಂಗಳೊಳ್ಸಮಾನಧರ್ಮವೊಂದಾಗಿರೆಯದು ಪ್ರತಿವಸ್ತೂಪಮೆಯೆನಿಪುದು (ಅಕ್ರಶಿ. ೬೦-೬೬). [ಸಂ. ಪ್ರತಿವಸ್ತೂಪಮಾ]

**ಪ್ರತಿವಾದ** (ನಾ). ೧. ಒಂದು ಹೇಳಿಕೆಗೆ ವಿರುದ್ಧವಾದ ಹೇಳಿಕೆ ; ಒಂದು ಅಭಿಪ್ರಾಯವನ್ನು ಖಂಡಿಸಿ ಹೇಳುವ ಮಾತು : ಶ್ರುತಿಮೂಲವಾಗಿರಲಿಲ್ಲ ನೋಡೆನ್ನ ಪ್ರತಿಜ್ಞೆಯನೆಲ್ಲರುಂ ಪ್ರತಿವಾದಮೊಂದನಲಾಗದಿದನಿಂತು (ಬಸವು. ೩೯-೩೯). ೨. ಪ್ರತ್ಯುತ್ತರ : "ಪ್ರತಿವಾದಃ — ಪಡಿನುಡಿ" (ಶಾಕಶ್ಯ. ೦೩೧) ೩. ನ್ಯಾಯಾಲಯ, ಆಯೋಗ ಮೊದಲಾದ ಕಡೆ ಕಕ್ಷಿದಾರನ ಕಡೆಯ ನ್ಯಾಯವಾದಿಯ ವಾದಕ್ಕೆ ಪ್ರತಿಕಕ್ಷಿಯ ವಕೀಲನು ಕೊಡುವ ಎದುರುತ್ತರ : ಅವನು ತನ್ನ ಪ್ರತಿವಾದ ಮುಗಿಸಿದ ನಂತರ ಪ್ರತ್ಯುತ್ತರ ನೀಡುವ ಸಲುವಾಗಿ ಸರ್ಕಾರಿವಕೀಲ ನಿಂತನು (ಪುಸರು. ೯೩). [ಸಂ.]

**ಪ್ರತಿವಾದಿ** (ನಾ). ೧. ತನ್ನ ಸಿದ್ಧಾಂತವು ಸರಿಯೆಂದು ವಾದಿಸುತ್ತಿರುವವನಿಗೆ ವಿರುದ್ಧವಾಗಿ ಅದು ಸರಿಯಲ್ಲವೆಂದು ವಾದಿಸುವವನು; ವಾದಿಯ ಮತವನ್ನು ಖಂಡಿಸುವವನು, —ಆಕ್ಷೇಪಿಸುವವನು: ಶತಪಾತಿವೆರಸು ಮೂವರುಂ ಪ್ರತಿವಾದಿಗಳಪ್ರತಿಹತಪ್ರತಿಭೆಯಿನ ಪಗತಪ್ರತಿಭರ್ಮಾಡಿ (ಆದಿಪು. ೨-೦೮ ವ); ಕಂಡಲ್ಲದಬಿಯೆನೆಂಬರ್ ಎಂಬ ನಾಣ್ನುಡಿಯುಂ ಪೋಲ್ಕುಮೆಂಬುದುಂ ಪ್ರತಿವಾದಿ ನಿರುತ್ತರನಾಗಿ ಪಕ್ಷಪರಿತ್ಯಾಗಂ ನಿಗ್ರಹಸ್ಥಾನವೆಂಬುದಱಿಂ ನಿಗ್ರಹಸ್ಥಾನಮನೆಯ್ದುಯುವಿರದೆ . . . ಸುಗತಮತಮಂ ಪಿಡಿದು (ಶಾಂತಿಪು. ೯—೦೯೦ ವ); ವಾದವೆಂಬ ವಿಚಾರ ಗುರು ಶಿಷ್ಯರುಗಳಿಗೂ ವಾದಿ ಪ್ರತಿವಾದಿಗಳಿಗೂ ನಡೆಯುವುದು (ಹಿಂರಶಾ. ೦೦೬). ೨. ವಿರುದ್ಧವಾಗಿ ಮಾತನಾಡುವವನು; ವಿರೋಧಿಸುವವನು; ಅಸಮ್ಮತಿಯನ್ನು ಸೂಚಿಸುವವನು : ಗಾಬರಿಗೊಳಬೇಡ ನಾಚಿಕೆಯನು ಬಿಡು ಪ್ರತಿವಾದಿಯನು ಕಡೆಗಣಿಸು (ಇಂಶಾಶ. ೦೬೬-೬೬); ಸುಸಂಬದ್ಧ ವ್ಯವಸ್ಥೆಯನ್ನು ತೋರಿಸಿ ಈ ಸೂಚಿಯನ್ನು ಒಣ್ಣಿಸುವ ಪ್ರತಿವಾದಿಗಳೂ ಇದ್ದಾರೆ (ಗ್ರಂಥಾಂ ೩೯). ೩. ನ್ಯಾಯಾಲಯ, ಆಯೋಗ ಮೊದಲಾದ ನ್ಯಾಯನಿರ್ಣಯಸ್ಥಾನಗಳಲ್ಲಿ ಬೇರೊಬ್ಬನಿಂದ ಆರೋಪವನ್ನು ಹೊಂದಿರುವವನು ; ಆರೋಪಿತ : ವಾದಿ ಮತ್ತು ಪ್ರತಿವಾದಿಗಳು ಸಂಕಟದಿಂದ ಸುತ್ತಾಡುತ್ತಿದ್ದರು (ಪುಸರು. ೨೩) ; ವಾದಿಯು ತನ್ನ ದಾವಾ ಅರ್ಜಿಯಲ್ಲಿ ಅಂಥಾ ಮನುಷ್ಯನನ್ನು ನೇಮಿಸಿದ್ದರೆ, ಪ್ರತಿವಾದಿಯು ಸಹ ಒಬ್ಬನನ್ನು ನೇಮಿಸಬೇಕೆಂದು ಸಮನ್ ಮೂಲಕ ಆತನಿಗೆ ತಿಳಿಸತಕ್ಕದ್ದು (ಗ್ರಾಮಕೂಶ. ೦೬). [ಸಂ. ಪ್ರತಿವಾದಿನ್]

**ಪ್ರತಿವಾದಿಸು** (ಕ್ರಿ). ೧. ಎದುರಿಸಿ ಮಾತನಾಡು ; ವಿರುದ್ಧವಾಗಿ ಮಾತನಾಡು : ಕೆಡೆನುಡಿಯುವ ಅನ್ಯರ ಪ್ರತಿವಾದಿಸದಿದ್ದರೆ ಏನ

ಮಹಡನಯ್ಯಾ ಲಿಂಗವು (ಶಶಿ. ೨೩೬). ೨. ಒಬ್ಬನ ಸಿದ್ಧಾಂತವನ್ನು ಖಂಡಿಸಿ ಮಾತನಾಡು ; ಒಬ್ಬನು ಪ್ರತಿಪಾದಿಸುವ ವಿಷಯವನ್ನು ಒಪ್ಪದೆ ನಿರಾಕರಿಸು : ಮತಮತಾಂತರಗಳ ಸಂಘರ್ಷಣದ ಯುಗದಲ್ಲಿ . . . ಒಬ್ಬನು ಒಂದನ್ನು ಕುರಿತು ವಾದಿಸುವುದು ಮತ್ತೊಬ್ಬನು ಅದನ್ನು ಪ್ರತಿವಾದಿಸುವುದು ... ಎಲ್ಲ ಮತಗಳಲ್ಲಿಯೂ ಕಂಡುಬರುವ ವಿಷಯ (ಶಾಹಿಸ. ೦೯೬); ಶೂನ್ಯವಾದಿಗಳಾದ ಬೌದ್ಧರು 'ಸರ್ವಂ ಶೂನ್ಯಂ' ಎಂದು ವಾದಿಸಿದರೆ ಸಾಂಖ್ಯರು 'ಸರ್ವಂ ಸತ್ಯಂ' ಎಂದು ಪ್ರತಿವಾದಿಸುತ್ತಾರೆ (ಶಾರಿಡ. ೦೨೩). [ಪ್ರತಿವಾದ +— ಇಸು೧]

**ಪ್ರತಿವಾಸುದೇವ** (ನಾ). =ಪ್ರತಿನಾರಾಯಣ: ತನ್ನಿವಾಸಿಗಳ ದೇಹಾಯುಃ ಪ್ರಮಾಣಾಂಗಳುಮಂ ಸುಖದುಃಖಾದಿಗಳುಮಂ ತೀರ್ಥಕರ ಚಕ್ರಧರ ಬಲದೇವ ವಾಸುದೇವ ಪ್ರತಿವಾಸುದೇವ ಕಥಾಸಂಬಂಧಮುಮಂ ನಿರ್ಣಯಂ ಮಾಡಿದಾಗಳ್ (ಅಂಕಿ. ೦೦-೬೩ ಕ); ಬಲದೇವರುಂ ನಂದಿಪ್ರಮುಖನವವಾಸುದೇವರುಂ ಶ್ರೀಕಂಠಪ್ರಮುಖನವಪ್ರತಿವಾಸುದೇವರುಂ ಅಪ್ಪರ್ (ಕಶ್ಯ.ಶ್ರ. ೦೯೯). [ಸಂ.]

**ಪ್ರತಿವಿತರ್ಕಿತ** (ಗು). ಚೆನ್ನಾಗಿ ಚರ್ಚಿಸಿದ, — ವಿಚಾರ ಮಾಡಿದ : ಪ್ರತಿವಿತರ್ಕಿತ ಲಕ್ಷಣಾಲಕ್ಷ್ಯ[ನಾ]ಶ್ರಿತಮಹಾನೃಪತುಂಗಸಭಾಸದಂ (ಕವಿರಾ. ೩-೨೦೯). [ಸಂ.]

**ಪ್ರತಿವಿದ್ಯೆ** (ನಾ). [ಜೈನ]ಮಾಯೆಯಿಂದ ಏನನ್ನಾದರೂ ಸೃಷ್ಟಿಸುವ ವಿದ್ಯೆಗೆ ವಿರುದ್ಧವಾಗಿ ಅದನ್ನೆಲ್ಲ ನಾಶಪಡಿಸುವ ವಿದ್ಯೆ : ಪ್ರತಿವಿದ್ಯೆಯನಾಕೆ ಕುಲಕ್ಷತಿಯುಂ ಪತಿಗಪ್ಪ ಹಾನಿಯುಂ ಬಗೆಯದೆ ದುರ್ಮತಿ ಕೊಟ್ಟಳ್ (ಶಂಠಾಕಾ. ೦೦-೦೯೩). [ಸಂ. ಪ್ರತಿವಿದ್ಯಾ]

**ಪ್ರತಿವಿಷ** (ನಾ). ವಿಷವನ್ನು ಪರಿಹರಿಸುವ ವಿಷ : ಪ್ರತಿವಿಷಮಗ್ನಿಗಗ್ನಿ ವಿಷಕಂ ವಿಷಮೆಂಬವೊಲಾ ನಿಶಾಚರಂಗತಿಬಲರೀ ನಿಶಾಟರಿವರಕ್ಕೆ (ರಂಕಭಾ. ೦೨-೯). [ಸಂ.]

**ಪ್ರತಿವಿಷೆ** (ನಾ). ಒಂದು ಬಗೆಯ ಗಂದಿಗೆಪದಾರ್ಥ; ಅತಿಬಜೆ : "ವಿಶ್ವಾ, ವಿಷಾ, ಪ್ರತಿವಿಷಾ . . . ಮಹೌಷಧಂ—೮ ಅತಿಬಜೆ ಹೆಸರು ; ಗ್ರಂಥೀದ್ರವ್ಯವಿಶೇಷವು" (ಸಿದ್ಧ್ಯಂಕಿ. ೦೩೯). [ಸಂ. ಪ್ರತಿವಿಷಾ]

**ಪ್ರತಿವಿಹೀನ** (ನಾ). ಸಮಾನವಿಲ್ಲದುದು; ಅಸದೃಶವಾದುದು : ಚಲುವಿನಿಂ ತ್ರೈಲೋಕ್ಯದೊಳು ಪ್ರತಿವಿಹೀನವೆನಿಸಿರ್ಪ ಕೀರ್ತ್ಯಾಳಾಪ ದಿಂದಯೋಧ್ಯಾಪುರದ ದುರ್ಗವಿಂತೆಸೆದುದೇವಣ್ಣಿಸುವೆನು (ಜಕಶಾ. ೦೦-೩೩). [ಸಂ.]

**ಪ್ರತಿವೀರ** (ನಾ). ಎದುರಿಸುವ ಶೂರ : ಈಷಣತ್ರಯದೂರ . . . ರೋಷಣಪ್ರತಿವೀರ ರಣವಿಜೀಷಾಧಿಕಶೂರ (ಐಕಕ್ಕು. ೨೦-೬೬). [ಸಂ.]

**ಪ್ರತಿವೆರಸು** (ಕ್ರಿ). ಒಂದಕ್ಕೆ ಬದಲಾಗಿ ಮತ್ತೊಂದನ್ನು ಸೇರಿಸು ; ಪ್ರತಿವಸ್ತುವನ್ನು ಬೆರಸು : ನೆವದೊಳೆಡೆಯಾಡಿಸುತ ತವೆ ಸಖಿಸುಡಿಯಿಸುತ ಕವಿದಿರಲು ಒಗಿದ ಚಿನ್ನವನು ಪ್ರತಿವೆರಸಿ ತವಕದಲಿ ತೆಗೆವ (ಸರಸ್ವ. ೮೯೦೬). [ಪ್ರತಿ+ಬೆರಸು೧ (<ಬೆರೆಯಿಸು)]

**ಪ್ರತಿವೆಱು** (ಕ್ರಿ). ಬೇರೊಂದು ಆಕಾರವನ್ನು ಪಡೆ ; ರೂಪಾಂತರವನ್ನು ಹೊಂದು : ಶ್ರುತಿ ಶಾಸ್ತ್ರಾಗಮಮುಪನಿಷತ್ಪುರಾಣ ಪ್ರತಿವೆತ್ತು ಹರಿಮು ನಿಟ್ಟಿಸಲು ಅತಿಥಿಕುತಿಯುಲಿ ಬಂದಂತೆ ರಂಜಿಸಿತು ಗೋಮತಿನದಿ ದ್ವಾರಕಾಪುರದಿ (ಸೋಹಕ. ೨-೩೬). [ಪ್ರತಿ+ಪೆಱು೧]

**ಪ್ರತಿವ್ಯೂಹ** (ನಾ). ಶತ್ರುಗಳು ಒಡ್ಡಿರುವ ಸೇನಾರಚನೆಗೆ ಪ್ರತಿಯಾಗಿ ಒಡ್ಡುವ ಸೇನಾರಚನೆ : ಎಲೈ ದುರ್ವಿಧಿಯೆ, ನಿನ್ನ ವ್ಯೂಹಕೆ ಪ್ರತಿವ್ಯೂಹವಂ ಒಡ್ಡದಿರೆ ನಷ್ಟಬುದ್ಧಿಯೆ ನಾ ಬಿಟಂ, ದುಷ್ಟಬುದ್ಧಿಯಲ್ತು ! (ರಂಪ್ರಶ. ೬೨-೨೬); ಪಾಂಡವರು ತಮ್ಮ ಎಡೆ ಅರ್ಧಚಂದ್ರಾಕಾರದ ಪ್ರತಿವ್ಯೂಹವನ್ನು ರಚಿಸಿದರು (ಶಶಿನಾ. ೨೬೦). [ಸಂ.]

**ಪ್ರತಿಶಾಸನ** (ನಾ). ೧. ಭೃತ್ಯನಿಗೆ ಕಾರ್ಯಗಳನ್ನು ನಿಯಮಿಸುವುದು.- ಆಜ್ಞಾಪಿಸುವುದು : "ಪ್ರತಿಶಾಸನಂ ... ಭೃತ್ಯರನ್ನು ಕರೆದು ಹೀಗೆ ಮಾಡು ಎಂಬದಾಗಿ ಆಜ್ಞಾಪಿಸುವುದು" (ಸಿದ್ಧ್ಯಂಕಿ. ೬೬೮). ೨. ಮೂಲಶಾಸನದ ಇನ್ನೊಂದಂ ಪ್ರತಿ : ಆ ಶಾಸನಂ ಸ್ಫುಟಿತವಾಗಲು . . . ಧಾಂಪೂರ್ವ್ವಕಮ್ಮಾಡಿ ಪ್ರತಿಶಾಸನಮಂ ಕೊಟ್ಟರು (ಶಾಶಾಇ. XI - i, ೩೦-೩೩ : 1138). ೩. ಚಾಲ್ತಿಯಲ್ಲಿರುವ ಆಜ್ಞೆ, ಕಾನೂನು ಮುಂತಾದುವನ್ನು ತಡೆ ಹಿಡಿಯುವುದು. [ಸಂ.]

**ಪ್ರತಿಶ್ಯಾಯ** (ನಾ). ಒಂದು ಬಗೆಯ ಮೂಗಿನ ರೋಗ ; ಪೀನಸ : "ಪ್ರತಿಶ್ಯಾಯಃ, ಪೀನಸಃ—೨ ಪೀನಸರೋಗದ ಹೆಸರುಗಳು" (ಸಿದ್ಧ್ಯಂಕಿ. ೦೮೩). [ಸಂ.]

**ಪ್ರತಿಶ್ರಯ** (ನಾ). ೧. ಆಶ್ರಯ ; ಆಸರೆ. ೨. ಸಹಾಯ ; ಸಹಕಾರ. ೩. ಬಡವರಿಗೆ ಅನ್ನದಾನ ಮಾಡುವ ಸ್ಥಳ ; ಛತ್ರ; ಧರ್ಮಶಾಲೆ : "ಸತ್ರಶಾಲಾ, ಪ್ರತಿಶ್ರಯಃ—ಈ ೨ ಸತ್ರದ ಮನೆ" (ಶಠಾಯು. ೩೦-೦೯೨). ೪. ಮನೆ; ಗೃಹ. ೫. ಸಭೆ : "ಪ್ರತಿಶ್ರಯಃ—ಸಭೆ ಇರತಕ್ಕ ಸ್ಥಳ, ಮನೆ" (ಸಿದ್ಧ್ಯಂಕಿ. ೧೦೦). ೬. ಯಜ್ಞಶಾಲೆ. ೭. ಜೈನಮಠ. ೮. ಒಪ್ಪಿಗೆ ; ಅಂಗೀಕಾರ. [ಸಂ.]

**ಪ್ರತಿಶ್ರವ** (ನಾ). ೧. ಪ್ರತಿಧ್ವನಿ. ೨. ಭಾಷೆ ; ಪ್ರತಿಜ್ಞೆ : "ಆಗೂಃ, ಸಂಗರಃ, ಸಂಧಾ, ಪ್ರತಿಶ್ರವಃ, ಸಂಶ್ರವಃ, ಪ್ರತಿಜ್ಞಾ—ಈ ೬ ಪ್ರತಿಜ್ಞೆ" (ಶಠಾಯು. ೦೦೬-೩೦). ೩. ಒಪ್ಪಿಗೆ ; ಸಮ್ಮತಿ. [ಸಂ.]

**ಪ್ರತಿಷಿದ್ಧ** (ನಾ). ೧. ತಡೆದುದು ; ನಿಷೇಧಿತವಾದುದು: ಯಾರೊಬ್ಬರೆ ಆಗಲಿ . . . ಸಂಸತ್ತಿನ ದ್ವಾರಾ ರಚಿತವಾದ ಯಾವುದಾದರೂ ವಿಧಿಯ ಉಪಬಂಧಗಳಿಂದ ತಾವು ಹಾಗೆ ಮಾಡಕೂಡದೆಂದು ಪ್ರತಿಷಿದ್ಧವಾಗಿರುವುದು ಅವರಿಗೆ ತಿಳಿದಿದ್ದೂ ಅವರು ಆದರ ಸದಸ್ಯಸ್ಥಾನದಲ್ಲಿ ಕುಳಿತರೆ . . . ದಂಡದ್ರವ್ಯವನ್ನು ಕೊಡಲು ಬದ್ಧರಾಗಿರತಕ್ಕುದು (ಭಾಶಾಶ. ೩೦). ೨. ತಿರಸ್ಕೃತವಾದುದು. [ಸಂ.]

**ಪ್ರತಿಷೇಧ** (ನಾ). ೧. ಅಡ್ಡಿ ; ತಡೆ ; ನಿಷೇಧ: ಪ್ರತಿಪದಾರ್ಥತತ್ತ್ವಭೇದದೊಳ್ ಪ್ರತಿಷೇಧಮಂ ನೆಗಳ್ದುಮನಿತೆ ಮಾಟ್ಕೆಯಿಂದತಿಶಯಾಕ್ಷೇಪಗಣಾನು ಸ್ಮೃತಿಗತ (ಕವಿರಾ. ೩-೦೦೮) ; ಕುರುಪಿತಾಮಹಂ ಸಂಜಯನಂ ಧೃತರಾಷ್ಟ್ರನಲ್ಲಿಗೆ ಸಂಧಾನವಾರ್ತೆಯಂ ಸಮಕೊಳಿಸುವಂತನಾಗತಬಾಧಾಪ್ರತಿಷೇಧಂ ಮಾಡುವಂತಟ್ಟಿ (ಪಂಪಭಾ. ೮೩-೬೦ ಕ) ; ಸಂಭಾವನಾರ್ಥದಲ್ಲಿ ಮಧ್ಯಮಪುರುಷದ ರೂಪಗಳು ಕೆಲವು ವೇಳೆ 'ಈ ಕೆಲಸವನ್ನು ಮಾಡಬೇಡ' ಎಂಬ ಪ್ರತಿಷೇಧದ ಅರ್ಥವನ್ನೂ ಕೊಡುತ್ತವೆ (ಕುಕ್ಕು. ೯೬). ೨. ಇಲ್ಲವೆಂದು ಹೇಳುವುದು ; ನಿಷೇಧಿಸುವುದು : ಜೀವನಿಲ್ಲೆಂಬನಿನ್ನ ಪ್ರತಿಷೇಧೋಕ್ತಿಯಿಂದಮೆ ಜೀವಸಿದ್ಧಿ ಹೇಳಾಸಾಧ್ಯಂ (ಕಾಹ೩ ೬-೦೫೯ ಕ). ೩. ವಿರುದ್ಧವಾದ ಮಾತು ; ವ್ಯತಿರಿಕ್ತವಾದ ನುಡಿ. ೪. [ಕಾವ್ಯಮೀ] ಅರ್ಥಾಲಂಕಾರದ ಒಂದು ಭೇದ ; ಪ್ರಸಿದ್ಧವಾದ ವಿಷಯವನ್ನು ಇಲ್ಲವೆನ್ನುವುದು : ಖ್ಯಾತ ನಿಷೇಧದ ಕೀರ್ತನಂ . . . ಪ್ರತಿಷೇಧಂ(ಕಶಕ. ೦೦೬-೩೦೬). ೫. [ವ್ಯಾಕ] ನಿಷೇಧಾರ್ಥ: ಪುದಿಯದು ಲೋಪಂ ಪ್ರತಿಷೇಧದೊಳ್(ಕಹುಕ. ೯೬). ೬. [ರಾಜನೀ] ನಿಷೇಧಾಜ್ಞೆ ; ಪ್ರತಿಬಂಧಕಾಜ್ಞೆ : ಉಚ್ಚತಮನ್ಯಾಯಾಲಯದವರು ಆಯಾ ಸಂದರ್ಭದಲ್ಲಿ ಉಚಿತವಾಗಿರಬಹುದಾದಂತ ೧. ಬಂದೀಪ್ರತ್ಯಕ್ಷೀಕರಣ, ೨. ಪರಮಾದೇಶ, ೩. ಪ್ರತಿಷೇಧ, ೪. ಅಧಿಕಾರಪೃಚ್ಛಾ . . . ಅಥವಾ ನಿರೂಪವಲೇಖವನ್ನಾಗಲಿ ನಾದರು ಮಾಡಲು ಶಕ್ತರಾಗಿ ಇರತಕ್ಕದು (ಭಾಶಾಶ. ೦೯). [ಸಂ.]

**ಪ್ರತಿಷೇಧಕ್ರಿಯೆ** (ನಾ). [ವ್ಯಾಕ] ನಿಷೇಧಾರ್ಥವನ್ನು ತಿಳಿಸುವ ಕ್ರಿಯಾಪದ : ಪರಿಭಾಷಿಸೆ ಕಾಲತ್ರಯಪರಿಣಾಮಿಗಳೆನಿಸಿ ನೆಗಳ್ದ

ಮೂಱುಂ ಕ್ರಿಯೆಯೊಳ್ ನಿರುತಂ ಪ್ರತಿಷೇಧಕ್ರಿಯೆ ಬರೆ ಭೂತಾರ್ಥ ದೊಳೆ ಸಲ್ವುದೆಂಬರ್ ಪಿರಿಯರ್ (ಶಮ. ೨೨೨). [ಸಂ. ಪ್ರತಿಷೇಧಕ್ರಿಯಾ]

**ಪ್ರತಿಷೇಧವಾದ** (ನಾ). [ಅದ್ವೈತ] ಮೋಕ್ಷದಶೆಯಲ್ಲಿ ಆತ್ಮವ್ಯತಿರಿಕ್ತವಾದ ಯಾವುದೂ ಇರುವುದಿಲ್ಲವೆಂದು ಪ್ರತಿಪಾದಿಸುವುದು : ಈ ಮಾರ್ಗದಲ್ಲಿ ಬಹುಕಾಲ ಪರಿಶ್ರಮಪಟ್ಟವರು ಮೂರನೆಯ ಸೋಪಾನವೆಂಬ ಸುಷುಪ್ತ್ಯವಸ್ಥಾಸದೃಶವಾದ ಪರಮಾರ್ಥಾವಸ್ಥೆಗೆ ಉತ್ತಮಾಧಿಕಾರಕ್ಕೆ ಅರ್ಹರಾಗುವರು. ಇದೇ ಪ್ರತಿಷೇಧವಾದ, ಪರಮಾರ್ಥವಾದ (ಹಿಂದಣ. ೦೯೨). [ಸಂ.]

**ಪ್ರತಿಷೇಧಾಲಂಕಾರ** (ನಾ). =ಪ್ರತಿಷೇಧ ೪ : ಪ್ರಸಿದ್ಧಮಾದ ನಿಷೇಧಮಂ ಬಣ್ಣಿಸಲ್ ಪ್ರತಿಷೇಧಾಲಂಕಾರಂ (ಅಚ. ೦೦೬-೭೦೮ ವೃತ್ತಿ). [ಸಂ.]

**ಪ್ರತಿಷೇಧಿಸು** (ಕ್ರಿ). ತಡೆ ; ನಿರೋಧಿಸು : ಯೇಸುವೆ . . . ಬಂದಿಗಳಿಗೆಲ್ಲ ಸ್ವಾತಂತ್ರ್ಯ ನೀಡುವ ಸಲುವಾಗಿ ತಾನು ಬಂದಿದ್ದುದಾಗಿ ತಿಳಿಸಿ, ಹಿಂಸಾಕಾರ್ಯವನ್ನೆಲ್ಲ ಪ್ರತಿಷೇಧಿಸಿದ್ದನು (ಕ್ರಿಪು. ೦೬೯).
[ಪ್ರತಿಷೇಧ + — ಇಸು₁]

**ಪ್ರತಿಷ್ಟಂಭ** (ನಾ). ಅಡ್ಡಿ ; ಅಡಚಣೆ ; ನಿರೋಧ : "ಪ್ರತಿಬಂಧಃ ಪ್ರತಿಷ್ಟಂಭಃ — ೨ ಕಾರ್ಯವಿಘಾತವು" (ಸಿದ್ಧಾಂಶಿ. ೩೩೩). [ಸಂ.]

**ಪ್ರತಿಷ್ಠಾಕರಣ** (ನಾ). ದೇವತಾವಿಗ್ರಹದ ಪ್ರತಿಷ್ಠಾಪನೆಯನ್ನು ಮಾಡುವುದು : ಪ್ರತಿಷ್ಠಾಕರಣ, ಯಂತ್ರೋದ್ಧಾರಣ . . . ಮೊದಲಾದ ವಿವರಣಗಳು . . . ಪಾಂಚರಾತ್ರಾಗಮದಲ್ಲಿಯೂ ಸುಂದರವಾಗಿ ಚಿತ್ರಿತವಾಗಿವೆ (ಭಾರತ. ೬೬). [ಸಂ.]

**ಪ್ರತಿಷ್ಠಾನ** (ನಾ). ೧. ತಳಪಾಯ. ೨. ನಿವೇಶನ. ೩. ವೇದಿಕೆ. ೪. ಯಾವುದಾದರೊಂದು ಸತ್ಕಾರ್ಯವು ನಡೆಯಲೆಂದು ನಿಧಿಯನ್ನು ಸ್ಥಾಪಿಸುವುದು, .. ನೆಲೆನಿಲ್ಲುವಂತೆ ಮಾಡುವುದು. ೫. ದತ್ತಿಸ್ಥಾಪನೆಯನ್ನು ನೋಡಿಕೊಳ್ಳಲು ಇರುವ ಸಂಸ್ಥೆ ಅಥವಾ ವ್ಯವಸ್ಥೆ : ನನಗೆ ನ್ಯೂಯಾರ್ಕಿನ ರಾಕಿಫೆಲರ್ ಪ್ರತಿಷ್ಠಾನದವರ (The Rockefeller Foundation) ಒಂದು ವಿಶೇಷವೇತನ . . . ದೊರೆಯಿತು (ಕಂಟಿರು. vii, ೮೦೪). ೬. ಚಂದ್ರವಂಶದ ಮೊದಲಿನ ದೊರೆಗಳ ರಾಜಧಾನಿಯಾಗಿದ್ದ ಗಂಗಾತೀರದಲ್ಲಿನ ಒಂದು ನಗರ. ೭. ಶಾಲಿವಾಹನನ ರಾಜಧಾನಿಯಾಗಿದ್ದ ಪೈಠಣ. [ಸಂ.]

**ಪ್ರತಿಷ್ಠಾಪಕ** (ನಾ). ಸ್ಥಾಪಿಸುವವನು ; ನೆಲೆಗೊಳಿಸುವವನು : 'ಧರ್ಮಪ್ರತಿಷ್ಠಾಪಕ' ಪರಾ. [ಸಂ].

**ಪ್ರತಿಷ್ಠಾಪನ** (ನಾ). ನೆಲೆಗೊಳಿಸುವುದು ; ಸ್ಥಾಪಿಸುವುದು : ವಿಶುಧವೈದಿಕಾದ್ವೈತಸಿದ್ಧಾಂತಪ್ರತಿಷ್ಠಾಪನ ಶಿವಗುರುಭಕ್ತಿಪರಾಯಣರಾದ ಕೆಳದಿ ವೆಂಕಟಪ್ಪನಾಯಕರು . . . ಪುತ್ರರಾದ ವೀರಭದ್ರನಾಯಕರು (ಕ್ಕಾಂ. ೦೯೪೪, ೯೭–೯ ; 1641). [ಸಂ.]

**ಪ್ರತಿಷ್ಠಾಪನಾಸಮಿತಿ** (ನಾ). [ಜೈನ] ಸಾಧಕರ ಇಪ್ಪತ್ತೆಂಟು ಮೂಲಗುಣಗಳಲ್ಲಿ ಹೇಳಿರುವ ಪಂಚಸಮಿತಿಗಳಲ್ಲಿ ಒಂದು ; ಉತ್ಸರ್ಗಸಮಿತಿ : ಈ ಅವಸ್ಥೆಯಲ್ಲಿದ್ದ ಸಾಧುಗಳಿಗೆ ಇಪ್ಪತ್ತೆಂಟು ಮೂಲಗುಣಗಳನ್ನು ಹೇಳಿದ್ದಾರೆ. (೧). ಅಹಿಂಸೆ . . . (೧೦). ಪ್ರತಿಷ್ಠಾಪನಾಸಮಿತಿ (ಜೀವರಹಿತಸ್ವಚ್ಛಭೂಮಿಯಲ್ಲಿ ಮಲಮೂತ್ರ ವಿಸರ್ಜಿಸುವುದು) ಈ ಗುಣಗಳಿಂದ ಸಾಧಕನು ತನ್ನ ಆಧ್ಯಾತ್ಮಸಾಧನೆಯಲ್ಲಿ ಪ್ರಗತಿಯನ್ನು ಹೊಂದುವನು (ಕೃಶಕ. ೯೯೬). [ಸಂ.]

**ಪ್ರತಿಷ್ಠಾಪನೆ** (ನಾ). ದೇವತಾವಿಗ್ರಹವನ್ನು ಶಾಸ್ತ್ರೋಕ್ತವಾಗಿ ಸ್ಥಾಪಿಸುವುದು : ಪ್ರತಿಷ್ಠಾಪನೆಗೆ ಪೂರ್ವಭಾವಿಯಾದ ವಿಧಿಗಳೆಲ್ಲ ಸಾಂಗವಾಗಿ ನಡೆದುವು (ಶಾಂತಲಾ ೧೨೯); ಭಗವಾನ್ ಶಾಂತಿನಾಥಸ್ವಾಮಿಯವರ ಪ್ರತಿಷ್ಠಾಪನೆಯು ನನಪಿಗಾಗಿ . . . ಒಂದು ಪುಸ್ತಕವನ್ನು ಪ್ರಕಟಿಸಬೇಕೆಂದು ಹಿರಿಯರು ಸಲಹೆ ಇತ್ತರು (ಸಿದ್ಧಾಂತ. II.೮೦೪). [ಸಂ. ಪ್ರತಿಷ್ಠಾಪನ]

**ಪ್ರತಿಷ್ಠಾಪನೆಗೊಳ್ಳು** (ಕ್ರಿ). ನೆಲಸು ; ಸ್ಥಿರವಾಗಿರು : ಅವಳ ಹೃದಯದಲ್ಲಿ ಪತಿಪ್ರೇಮ ಅಧಿಷ್ಠಾನಗೊಂಡಿದ್ದಂತೆಯೇ ಭ್ರಾತೃಪ್ರೇಮವೂ ಪ್ರತಿಷ್ಠಾಪನೆಗೊಂಡಿತ್ತು (ಕ್ರಿಸರು. ೯೬೦).
[ಪ್ರತಿಷ್ಠಾಪನೆ + ಕೊಳ್ಳು₁ ( < ಕೊಳ್₁ )]

**ಪ್ರತಿಷ್ಠಾಪಿಸು** (ಕ್ರಿ). ೧. ನೆಲೆಗೊಳಿಸು ; ಸ್ಥಾಪಿಸು : ನೊಳಂಬರ ಪ್ರಭುತ್ವವನ್ನು ಪುನಃ ಪ್ರತಿಷ್ಠಾಪಿಸಿದ ನೊಳಂಬಾಧಿರಾಜ ಮಹೇಂದ್ರನು, ಒಂದನೆಯ ಮಹೇಂದ್ರನಂತೆ ಮಹತ್ವಾಕಾಂಕ್ಷೆಯುಳ್ಳ ದೊರೆಯಾಗಿದ್ದನು (ಕೋಲಂ. ೩೦). ೨. ದೇವತಾವಿಗ್ರಹವನ್ನು ಪ್ರತಿಷ್ಠೆ ಮಾಡು : ಚಾವುಂಡರಾಯನು ಬಾಹುಬಲಿವಿಗ್ರಹವನ್ನು . . . ವಿಂಧ್ಯಗಿರಿಯ ಮೇಲೆಯೇ ಏಕೆ ಪ್ರತಿಷ್ಠಾಪಿಸಿದನೆಂಬುದನ್ನು ತಿಳಿಸಲು ಹಳೆಯ ಕಥೆಗಳಿವೆ (ಸಮಾಲೋ. ೨೬೦). [ಪ್ರತಿಷ್ಠಾಪನ + — ಇಸು₁]

**ಪ್ರತಿಷ್ಠಿತ** (ಗು). ೧. ನೆಲೆಗೊಂಡಿರುವ ; ಸ್ಥಿರವಾಗಿರುವ ; ಶಾಶ್ವತ : ನಿಜರೂಪವಿಜಿತಮಕರಧ್ವಜನಖಿಳದಿಶಾಂತರಪ್ರತಿಷ್ಠಿತಕೀರ್ತಿಧ್ವಜನದನಾಳ್ವಂ ಧರಣೀಧ್ವಜನೆಂಬಂ ಖೇಚರೇಂದ್ರಂ (ಕಂರ್‍ತ್ರ. ೬–೬). ೨. ಇರಿಸಿದ ; ಸ್ಥಾಪಿಸಿದ : ಆ ಜಂಬೂದ್ವೀಪದ ನಟ್ಟನಡುವೆ . . . ವೀರಾಬರತ್ನಶಿಲಾತಳಪ್ರತಿಷ್ಠಿತಭಗವಜ್ಜನ್ಮಾಭಿಷೇಕಸಿಂಹಾಸನಾಲಂಕೃತಮುಮಾಗಿ (ಆದಿಪು. ೦-೯೯ ವ). ೩. (ದೇವತಾಮೂರ್ತಿಗಳ ವಿಷಯದಲ್ಲಿ) ಶಾಸ್ತ್ರೋಕ್ತವಿಧಾನದಿಂದ ಪ್ರತಿಷ್ಠೆಮಾಡಿದ,– ಸ್ಥಾಪನೆಮಾಡಿದ. (ನಾ). ೪. ಯಾವುದಾದರೊಂದು ಪದವಿ ಅಥವಾ ಸ್ಥಾನದಲ್ಲಿ ಇರುವವನು,–ಅಧಿಕಾರವನ್ನು ನಿರ್ವಹಿಸುವಂತೆ ನೆಲೆಗೊಂಡವನು : ಅಂತು ಯುವರಾಜಪದವೀಪ್ರತಿಷ್ಠಿತಂ ಮಾಡಿ (ಮಲ್ಲಿಪು. ೯–೦೯೩ ವ). ೫. ದೃಢವಾದ ಪಾಂಡಿತ್ಯವುಳ್ಳವನು : ಮತ್ತಂ ತುಂಬುರ ಕೌಶಿಕರೊಲ್ ಪಾಡುಂಗಾಱಿಕೆಯೊಳಾಂ ಪ್ರತಿಷ್ಠಿತನಪ್ಪಂತೆ ಬಟ್ಟೆದೋಱಿಸ್ಸೆ (ಅದ್ಭುತ. ೨೦ ೦೪). ೬. ಹೆಸರುವಾಸಿಯಾದವನು ; ಕೀರ್ತಿವಂತ ; ಗೌರವಾನ್ವಿತ ವ್ಯಕ್ತಿ : ಅಮಳತತ್ವವಿಮರ್ಶಗೋಷ್ಠೀವಾಗ್ಗ್ರವಿಷ್ಯಮುಕ್ತಪ್ರತಿಷ್ಠಿತನು (ಚಕ್ರ. ೨೦-೯); ಪ್ರತಿಷ್ಠಿತರಾದ ದೇಸಾಯರ ಮನೆಗೆ ಪ್ರತಿಷ್ಠಿತರಾದ ಆಚಾರ್ಯರು ಹೆಣ್ಣು ಕೊಟ್ಟರು (ಸಮಾಲೋ. ೯೬). ೭. ಶ್ರೇಷ್ಠವಾದುದು ; ಉತ್ತಮವಾದುದು : ಧರ್ಮವೇ ಸರ್ವಪ್ರತಿಷ್ಠಿತ ಧರ್ಮವೆಂಬುದು ಪರಮಪದವಾ ಧರ್ಮವನು ಬಟ್ಟಿಹುದು ಬದುಕಲ್ಲ (ಕೃಷ್ಣಾ. ೯–೩೯). ೮. ಸ್ಥಾಪನೆ ಹೊಂದಿದವನು; ಪ್ರತಿಷ್ಠಾಪಿತನಾದವನು : ಸರಸರನೆ ಸೌರಾಷ್ಟ್ರನಾಥನು ಪಿರಿಯ ಕಣಜವನೊಡೆದುಕೊಳುತಂ ಕರವೆಸೆದು ಧರೆಯೊಳ್ ಪ್ರತಿಷ್ಠಿತನಾದನೆಂದು (ಬಸವ. ೩೩–೨೬). [ಸಂ.]

**ಪ್ರತಿಷ್ಠಿಸು** (ಕ್ರಿ). ೧. ನೆಲೆಗೊಳಿಸು ; ಸ್ಥಾಪಿಸು; ಸ್ಥಿರಪಡಿಸು : ಕನ್ನೆಯಿಲ್ಲದೆ ಗಡ ಪೋಗನೆಂದು ಕಡೆಯೊಳ್ ನುಡಿದಾ ನುಡಿಯಂ ಪ್ರತಿಷ್ಠಿಸಲ್ ಪದೆದೊಡೆ ಪೋಗು ನಿನ್ನ ಪತಿಯಂ ಬರವೇಳ್ (ಕಂಪ್ರಕ್ರ. ೬–೨೯) ; ಪರವಾದವಮಂ ತಿರಸ್ಕರಿಸುತೆ ಶಿವಾಧಿಕ್ಯಮಂ ಪ್ರತಿಷ್ಠಿಸುತೆ (ಶವ್ಯ೩.೩–೬) ; ಪೊಸತಪ್ಪ ವೀರಕೈವಾರರವಂ ಪ್ರತಿಷ್ಠಿಸಿ . . . ನಿಜಪದವನು ಒಸದೀಪನೌ ನಿನ್ನ ಗರ್ಭದರ್ಭಕನುದಯಿಪೊಸಗೆಯು ಸಕಲಗಣಾಱಿಪ್ಪ (ಬಸವ. ೯–೩). ೨. (ದೇವರ ವಿಗ್ರಹವನ್ನು) ಪ್ರತಿಷ್ಠೆ ಮಾಡು ; ಸ್ಥಾಪನೆ ಮಾಡು : ಆ ದೈತ್ಯಂ . . . ಈ ಮಹೇಂದ್ರನ ಮಕುಟಪೀಠದೊಳ್ ನಿಜಾಚ್ಚಾದೇವತೆಯುಮಂ ಪ್ರತಿಷ್ಠಿಪಿಯುಂ (ಜಗಂ. ೦೦-೬೦ ವ); ಒಡನೆ ಗುಡ್ಡಾದೇವಿಗಳಾಪಲ್ಲಿಗೆ ಪೋಗಿ ಪ್ರೌಢಮೂರ್ತಿಯಂ ಪ್ರತಿಷ್ಠಿಸಿ ಪರರ ಸಮಯಮಂ ಜಱಿದು ಭಂಗಿಸಿ (ಚಂಪು. ೩೩ ೯೯). [ಪ್ರತಿಷ್ಠೆ + —ಇಸು₁]

**ಪ್ರತಿಷ್ಠೆ** (ನಾ). ೧. ಇರುವಿಕೆ; ಸ್ಥಿತಿ. ೨. ಉನ್ನತಸ್ಥಾನ, -ಸ್ಥಿತಿ : ಕೃಷ್ಣ ನಿನ್ನ ರೂಪವಂ ಸೌಖ್ಯವಪ್ರತಿಷ್ಠೆಯಂ . . . ನೋಡಲ್ ನೀಂ ಪರದೈವತಕಳಾಸ್ವರೂಪನಾಗಿ ತೋರ್ಪೆ (ಜಗ. ೪-೭೭ ವ). ೩. ಭದ್ರವಾಗಿರುವಿಕೆ; ಸ್ಥಿರತೆ. ೪. ಸ್ಥಾಪನೆ ಮಾಡುವುದು; ಸ್ಥಾಪಿಸುವುದು. ೫. ದೇವತಾವಿಗ್ರಹಗಳನ್ನು ಶಾಸ್ತ್ರೋಕ್ತವಾಗಿ ಸ್ಥಾಪಿಸುವುದು : ತಮ್ಮಯ್ಯನ ಹೆಸರಲು ಚೋಳೇಶ್ವರದೇವರೆಂದು ಪ್ರತಿಷ್ಠೆಯಂ ಮಾಡಿ (ಎಕ. XII. ತಿಪಟೂ. ೬೦-೪೯ ; 1162). ; ಪಂಡಿತರೂ ಆಗವಿಕರೂ ಸೇರಿ ಶುಭದಿನ ಶುಭಮುಹೂರ್ತವನ್ನು ಪ್ರತಿಷ್ಠೆಗೆ ನಿಶ್ಚಯಿಸಿದರು (ಜಾಂತಳಾ. ೦೨೪). ೬. ಕೀರ್ತಿ; ಪ್ರಸಿದ್ಧಿ : ಗೌರವವೂ ಪ್ರತಿಷ್ಠೆ ಅಧಿಕಾರಗಳೂ ಕೆಲಸಕ್ಕೆ ಬಾರದ ವಸ್ತುಗಳೆಂದು ಅವನಿಗೆ ಬಹಳ ಕಾಲದಿಂದಲೂ ಗೊತ್ತಾಗಿದ್ದಿತು (ಸುಕಿಣ. ೫). ೭. ಗೌರವ; ಹಿರಿಮೆ; ಮರ್ಯಾದೆ: ವಸಿಷ್ಠನು ಯಾವ ದಿಕ್ಕಿನಲ್ಲಿ ಜನ್ಮವನ್ನೆಂದಿ ಪ್ರತಿಷ್ಠೆಯನ್ನೂ ಧರ್ಮವನ್ನೂ ಪಡೆದನೋ (ಕೃಷಾಅ. ೦೭೬). ೮. ರಾಜನೇ ಮೊದಲಾದವರನ್ನು ಪಟ್ಟಕ್ಕೇರಿಸುವುದು; -ಅಧಿಕಾರಕ್ಕೆ ತರುವುದು. ೯. (ಅಲಂ) ಜಂಭ; ಅಹಂಕಾರ : ಹೀಗೆ ನಾನಾ ವಿಧವಾಗಿ ಪ್ರತಿಷ್ಠೆಯನ್ನು ಕೊಚ್ಚಿಕೊಳ್ಳುತಾ ನನ್ನನ್ನು ಸದ್ದೆ ಮಾಡದೆ ಇರುವವರು (ಕೀಚಕಾ. XV. ೦೭). ೧೦. [ಛಂದ] ವರ್ಣಛಂದಸ್ಸಿನಲ್ಲಿರುವ ಇಪ್ಪತ್ತಾರು ಛಂದಸ್ಸುಗಳಲ್ಲಿ ನಾಲ್ಕನೆಯದು ; ಪ್ರತಿಪಾದದಲ್ಲೂ ನಾಲ್ಕು ಅಕ್ಷರಗಳಿರುವ ನಾಲ್ಕುಸಾಲಿನ ವೃತ್ತ: ಅಲ್ಲಿ ಉಕ್ತೆ ಅತ್ಯುಕ್ತೆ ಮಧ್ಯೆ ಪ್ರತಿಷ್ಠೆ . . . ಉತ್ಕೃತಿ ಎಂದಿಪ್ಪತ್ತಾರು ಛಂದಂಗಳಕ್ಕುಂ (ಛಂದೋಂಬು. ೦-೯೬ ವ); ಳನೆಯ ಪ್ರತಿಷ್ಠೆಯೆಂಬ ಛಂದಸ್ಸಿನ ಪ್ರತಿಪಾದದಲ್ಲಿಯೂ ಭಗಣ ಮತ್ತು ಒಂದು ಗುರುವುಳ್ಳ ಪದ್ಯವು ಸೌಂದರವೃತ್ತವೆನಿಸುವುದು (ಕೃಶಿಪ. ೭೬). ೧೧. [ಶೈವ] ನಿಯಂತಿ, ವಿದ್ಯಾ, ಪ್ರತಿಷ್ಠಾ, ಶಾಂತಿ ಮತ್ತು ಶಾಂತ್ಯತೀತ ಗಳೆಂಬ ಪರಮೇಶ್ವರನ ಐದು ಕಲೆಗಳಲ್ಲಿ ಒಂದು : ಷಡ್ಗುಣೈಶ್ವರ್ಯಸಂಪನ್ನನಾದ ಪರಮೇಶ್ವರನು _ನಿಯತಿ, ವಿದ್ಯಾ, ಪ್ರತಿಷ್ಠಾ, ಶಾಂತಿ, ಶಾಂತ್ಯತೀತಗಳೆಂಬ ಐದು ಕಲೆಗಳಿಗಾಶ್ರಯವಾದ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ ಮುಖಗಳಿಂದ . . . ಪಂಚಕೃತ್ಯಗಳನ್ನು . . . ಪಂಚಮೂರ್ತಿಗಳಿಂದ ನೆರವೇರಿಸುತ್ತ ಭಕ್ತಾನುಗ್ರಹ ಮಾಡುತ್ತಾನೆಂಬುದು ಶೈವಾಗಮದ ಸಿದ್ಧಾಂತ (ಶಾಕಿಪ. ೬೪). ೧೨. [ವೀಶೈ] ಸ್ಥಾವರಲಿಂಗ : ಆಕಾಶದ ಸೂರ್ಯ ಹಲವು ಕುಂಭದಲ್ಲಿ ತೋರುವ ತೆರ ಮಾಡಿಡಡೆ ಪ್ರತಿಷ್ಠೆ ಅಲ್ಲಾಡದೆ ಸ್ವಯಂಭು (ಮೋಳಿಗೆಯ. ೦೦-೯೧).

ಪ್ರತಿಷ್ಠೆಯ ಮಾಡು = ಸ್ಥಾಪನೆ ಮಾಡು ; ನೆಲೆಗೊಳಿಸು ; ಸ್ಥಿರಪಡಿಸು : ಶರೀರಂಗಳು ಅನಂತ ಆತ್ಮನೊಬ್ಬನೇ . . . ಇನ್ನು ಆವ ಠಾವಿನಲ್ಲಿ ನಿಮ್ಮ ಕುಲವ ಪ್ರತಿಷ್ಠೆಯ ಮಾಡಿ ತೋರುವಿರೋ (ಸಕಲಪ. ೦೭೭-೬೨೯). [ಸಂ. ಪ್ರತಿಷ್ಠಾ]

**ಪ್ರತಿಷ್ಠೆಗೆಯ್** (ಕ್ರಿ). (ದೇವತಾವಿಗ್ರಹ ಮುಂತಾದುವನ್ನು) ಸ್ಥಾಪಿಸು : ನುಗುನಾಡ ಒಚಿಯ ಬೆಳೆತೂರ ಒಡೆದು ಬಿಟ್ಟು ಭೂಮಿ ಲಪ್ಪುಮಾಗಿ ಕೊಟ್ಟು ದೇಗುಲವಂ ಮಾಡಿಸಿ ಕಟ್ಟು ಪಟ್ಟಲಿಂಗವಂ ಪ್ರತಿಷ್ಠೆಗೆಯ್ದು (ಎಕ. IV. ಹಗ್ಗ. ೦೬-೭; ೫ಶಮ ೫೫).

[ಪ್ರತಿಷ್ಠೆ + ಕೆಯ್$_1$]

**ಪ್ರತಿಸಂಧಿ** (ನಾ). ೧. ಮತ್ತೆ ಸೇರುವುದು. -ಒಟ್ಟುಗೂಡುವುದು. ೨. ಮರುಹುಟ್ಟು ; ಪುನರ್ಜನ್ಮ : 'ಪ್ರತಿಸಂಧಿಸು' ಪರಾ. ೩. ವಿರಾಮ ; ನಿಲುಗಡೆ. ೪. ಎರಡು ಯುಗಗಳ ನಡುವಿನ ಸಂಕ್ರಮಣಕಾಲ; ಮನ್ವಂತರ. [ಸಂ.]

**ಪ್ರತಿಸಂಧಿಸು** (ಕ್ರಿ). ೧. ಮತ್ತೆ ಸೇರು, -ಕೂಡು ; ಪುನರ್ಮಿಲನ ಹೊಂದು. ೨. ಮತ್ತೆ ಹುಟ್ಟು; ಪುನರ್ಜನ್ಮವನ್ನು ಪಡೆ : ಕ್ಲೇಶದಿಂದ ಕೂಡಿದವರು ಪ್ರತಿಸಂಧಿಸುವರು, ಕ್ಲೇಶದಿಂದ ಕೂಡದವರು ಪ್ರತಿಸಂಧಿಸುವುದಿಲ್ಲ (ಬುದ್ಧಪ. ಬಿಂದು. ೯೩). [ಪ್ರತಿಸಂಧಿ + -ಇಸು$_1$]

**ಪ್ರತಿಸಮಯಂ** (ಅ). ಎಲ್ಲಾ ಕಾಲದಲ್ಲೂ ; ಯಾವಾಗಲೂ ; ಸರ್ವದಾ : ಪ್ರತಿಸಮಯಮನಂತಗುಣಶಕ್ತಿಖಚಿತೈಕಪರಿಣಾಮನಿವೃತ್ತಿಕರಣಕ್ಷಪಕನಾಗಿ (ಅರಿಷ್ಟ. ೦೦-೦೯ ವ) ; ದಂಡಕವಾಟಲೋಕಪೂರಣಾಪ್ರತರಕ್ರಿಯೆಗಳೊಳಂ ಪ್ರತಿಸಮಯಂ ಪ್ರಯೋಗಿಸಿ (ಮಲ್ಲಿಪು. ೦೯-೨೫೬) [ಸಂ.]

**ಪ್ರತಿಸರ** (ನಾ). ೧. ರಕ್ಷೆಗಾಗಿ ಕೈ ಅಥವಾ ಕುತ್ತಿಗೆಗೆ ಕಟ್ಟುವ ಮಂತ್ರಿಸಿದ ದಾರ; ತಾಯಿತಿ; ಯಂತ್ರ. ೨. ವಿವಾಹ ಮೊದಲಾದ ಶುಭಕಾರ್ಯಗಳಲ್ಲಿ ಕೈಗೆ ಕಟ್ಟುವ ಅಭಿಮಂತ್ರಿಸಿರುವ ದಾರ; ಕಂಕಣ ; ☞ ಶುಭಕಾರ್ಯಗಳಲ್ಲಿ ಅರಿಶಿನದ ದಾರಕ್ಕೆ ಕೊನೆಯನ್ನು ಕಟ್ಟಿ ಶಾಸ್ತ್ರೋಕ್ತವಾದ ವಿಧಾನದಿಂದ ಪೂಜಿಸಿ ವೇದಮಂತ್ರಗಳಿಂದ ಅಭಿಮಂತ್ರಿಸಿ ಹೆಂಗಸರ ಎಡಮಣಿಕಟ್ಟಿಗೆ ಹಾಗೂ ಗಂಡಸರ ಬಲಮಣಿಕಟ್ಟಿಗೆ ಕಟ್ಟುವ ಸಂಪ್ರದಾಯವಿದೆ : "ಕಂಕಣಂ, ಹಸ್ತಸೂತ್ರಂ, ಪ್ರತಿಸರಂ_ಈ ೩ ನೂಲ ಕಂಕಣಾ" (ಕರಾಪು. ೯೨-೧೦೧). ೩. ಬಳೆ ; ಕಡಗ : "ಪ್ರತಿಸರು ಬಳೆಯುಕ್ಕು" (ಮಂಗರಾ. ೦೦೦-೨೬). ೪. ಮಾಲೆ ; ಹೂವಿನ ಸರ. ೫. ಸೇವಕ; ಆಳು. ೬. ಸೈನ್ಯದ "ಹಿಂಭಾಗ : ''ಪ್ರತಿಸರಃ — ಸೈನ್ಯದ ಹಿಂಭಾಗ" (ಸಿಜ್ಞಾಂತಿ. ೧೦೧). [ಸಂ.]

**ಪ್ರತಿಸರ್ಗ** (ನಾ). ೧. ಪ್ರಥಮಸೃಷ್ಟಿಕರ್ತನಾದ ಬ್ರಹ್ಮನ ಸೃಷ್ಟಿಗೆ ಸಮಾನವಾಗಿ ಮನು, ದಕ್ಷ ಮೊದಲಾದ ಪ್ರಜಾಪತಿಗಳು ಮಾಡಿದ ಸೃಷ್ಟಿ ; ಪ್ರತಿಸೃಷ್ಟಿ ; ☞ ಇದರ ವರ್ಣನೆ ಪುರಾಣದ ಪಂಚಲಕ್ಷಣಗಳಲ್ಲಿ ಒಂದು. ಬ್ರಹ್ಮನು ಸೃಷ್ಟಿಸಿದ ಮನು ಮಾನವರೇ ಮೊದಲಾದವರನ್ನೂ ದಕ್ಷನು ಪಿತೃಗಣವನ್ನೂ ಮರೀಚಿಯು ಕಶ್ಯಪನನ್ನೂ ಸೃಷ್ಟಿಸಿದರು. ೨. ಪ್ರಳಯ; ನಾಶ. ೩. ಪ್ರತಿಯೊಂದು ಸರ್ಗ. [ಸಂ.]

**ಪ್ರತಿಸಾರಣ** (ನಾ). ೧. ಹಿಂದಕ್ಕೆ ಹೋಗುವಂತೆ ಮಾಡುವುದು : ಉತ್ತರತುದಿಗಳನ್ನೇ ಅಥವಾ ದಕ್ಷಿಣತುದಿಗಳನ್ನೇ ಒಂದಕ್ಕೊಂದು ಹೊಂದಿಸಿದರೆ ಅವು ಒಂದರಿಂದೊಂದು ಹಿಂದಕ್ಕೆ ಸರಿಯುತ್ತವೆ. ಈ ಧರ್ಮಕ್ಕೆ ಪ್ರತಿಸಾರಣವೆಂಬ ಹೆಸರು (ಕಾಂತ. ೩-೨೨೬). ೨. ಗಾಯಕ್ಕೆ ಮಾಡುವ ಚಿಕಿತ್ಸೆ. ೩. ಗಾಯಕ್ಕೆ ಮುಲಾಮು ಹಚ್ಚುವ ಸಾಧನ. [ಸಂ.]

**ಪ್ರತಿಸೀರೆ** (ನಾ). (ನಾಟಕಾದಿಗಳಲ್ಲಿ ಉಪಯೋಗಿಸುವ) ಬಟ್ಟೆಯ ತೆರೆ ; ಪರದೆ : "ಅಪಟೀ, ಕಾಂಡಪಟಃ, ಪ್ರತಿಸೀರಾ, ಯವನಿಕಾ, ತಿರಸ್ಕರಿಣೀ _ ಈ (೫)ತೆರೆ" (ಕರಾಪು. ೬೨-೨೩೪). [ಸಂ. ಪ್ರತಿಸೀರಾ]

**ಪ್ರತಿಸೂರ್ಯ** (ನಾ). ೧.= ಪ್ರತಿಯಿನ : ಪ್ರತಿಸೂರ್ಯಂ ಸೂರ್ಯನಿಂದಂ ಬಡಗಲೊಗೆಯೆ ವೃಷ್ಟಿಪ್ರದಂ (ಲೋಕೋಪ. ೪-೩೭) ; ಪ್ರತಿಸೂರ್ಯಂ ಪಿಂಗಿದಾದಿತ್ಯನೊ ಘನತಿಮಿರಂ ಪಿಂಗಿದೊಂದಿಂದುವೋ . . . ಎಂಬಂತೆ . . . ಶೋಭಾನ್ವಿತನಾಗಿರ್ದಂ ನಳಂ (ಕಳಾಪ. ೪೦೫). ೨. ಸೂರ್ಯನಿಗೆ ಸಮಾನನಾಗಿರುವವನು; ಮತ್ತೊಬ್ಬ ಸೂರ್ಯ: ಅರ್ಕ ಬಾಂಧವರೊಳಂ ಬೆಳಗುತಿರೆ ಪ್ರತಿಸೂರ್ಯಯತ್ನಂದಲಿ ಬಂದನೊ (ಶಬರೋ. ೨೭-೫೨). ೩. ಒಂದು ಬಗೆಯ ಓತಿಕೇತ; ಗೋಸುಂಬೆ: "ಪ್ರತಿಸೂರ್ಯಃ, ಶಯಾನಕಃ_ಈ ೨ ಗೋಸುಂಬೆ" (ಕರಾಪು. ೩೯-೬೦). [ಸಂ.]

**ಪ್ರತಿಸೃಷ್ಟಿ** (ನಾ). ೧. = ಪ್ರತಿಸರ್ಗ ೧. ೨. (ಆಲಂ) ಹಿಂದಿನಿಂದಲೂ ಬಂದಿರುವ ಯಾವುದಾದರೂ ವೇಷ, ಭೂಷಣ, ಪದ್ಧತಿಗಳಿಗೆ ಪ್ರತಿಯಾಗಿ ಮತ್ತೊಂದನ್ನು ಕಲ್ಪಿಸುವುದು: ಈಗಿನ ಅದ್ಭುತಕಲಾಕೃತಿಗಳನ್ನು ನೋಡಿ ಅವನ್ನು ವಿಶ್ವಾಮಿತ್ರಸೃಷ್ಟಿಯೆಂದು ಕರೆಯುವ ರೂಢಿ ಈಗಲೂ ಇದೆ. ಇಂತಹ ಪ್ರತಿಸೃಷ್ಟಿಯ ರಚನೆಗೆ ಆಧಾರವಾದ ವಿಜ್ಞಾನವು ಪ್ರತ್ಯಕ್ಷಾದಿ ಪ್ರಮಾಣಗಳಿಂದಲೇ ಸಾಧ್ಯ (ಜೀಜಾಕ್ಕ. ೨೨); ಈ ಎಲ್ಲ ಸೌಂದರ್ಯದ ಪ್ರತಿಸೃಷ್ಟಿಯನ್ನು—ನಿರೂಪಣೆಯನ್ನು—ಕಲೋಪಾಸಕನು ತನ್ನ ಕೃತಿಯಲ್ಲಿ ಮಾಡುತ್ತಾನೆ (ಪಶ್ಚಿಕಾ. ೬೯). [ಸಂ.]

**ಪ್ರತಿಸ್ಪಂದನ** (ನಾ). ಕಾವ್ಯ ಮುಂತಾದ ಕಲೆಗಳಲ್ಲಿ ಅಭಿವ್ಯಕ್ತವಾಗಿರುವ ಭಾವಗಳಿಗೆ ಅನುಕೂಲಕರವಾದ, ವಿಮರ್ಶಕನ ಮನಸ್ಸಿನಲ್ಲಿ ಹೊಳೆಯುವ ಭಾವನೆ: ಎಷ್ಟೋ ವೇಳೆ ಕುಮಾರವ್ಯಾಸನ ಕಾವ್ಯಸೃಷ್ಟಿಗೆ ಅನೇಕರು ಪ್ರತಿಸ್ಪಂದನ ಮಾಡಲಾರರು (ಕುಶಿ). [ಸಂ.]

**ಪ್ರತಿಸ್ಪಂದಿಸು** (ಕ್ರಿ). ಮೆಚ್ಚಿ, ಪ್ರತಿಕ್ರಿಯೆಯನ್ನು ತೋರಿಸು: ಕುಮಾರವ್ಯಾಸಭಾರತದಂಥ ಕಾವ್ಯಗಳಿಗೆ ಪ್ರತಿಸ್ಪಂದಿಸುವುದು ವಿಮರ್ಶಕನಿಗೆ ಹಿರಿಮೆಯನ್ನು ತರುತ್ತದೆ (ಕುಶಿ). [ಪ್ರತಿಸ್ಪಂದನ + -ಇಸು]

**ಪ್ರತಿಸ್ಪರ್ಧಿ** (ನಾ). ೧. ಒಬ್ಬನು ಸಾಧಿಸಲಿರುವ ಗುರಿಯನ್ನು ಸಾಧಿಸಲು ಪೈಪೋಟಿಮಾಡುವ ವ್ಯಕ್ತಿ; ಪ್ರತಿದ್ವಂದ್ವಿ: ಸ್ಥಳಗಳ ಭರತಿಯ ಕಾಲಕ್ಕೆ ಅವಳು ನನಗೆ ಪ್ರತಿಸ್ಪರ್ಧಿಯಾಗಿ ಬರುವಳೆಂದು ನಾನು ಎಣಿಸಿರಲಿಲ್ಲ (ಕೀಡುಂಕ. ೨೬೬); ಮಹಾವೈದ್ಯನಾಥ ಅಯ್ಯರ್ ಅವರು ...ಪರಮೇಶ್ವರಭಾಗವತರಿಗೆ ಸರಿಯಾದ, ಸಮನಾದ ಪ್ರತಿಸ್ಪರ್ಧಿ (ಸಂಗೀತ. ೯೬). ೨. ಎದುರಾಳಿ; ವಿರೋಧಿ: ಪ್ರತಿಸ್ಪರ್ಧಿವೀರ ಆಲಾಪಮಂ ಗೈವಂತೆ ಬೆಸಗೊಂಡಳೊರ್ಬಾಗಿ ಆಟವಿಕಸ್ತ್ರೀಯವೋಲ್ (ಕಶ್ಯಾಂಗ. ೨-೩೩೩); ಹಿಮಶ್ರೀಲವು ಜ್ಯೂಪಿಟರ್ ತನ್ನ ಪ್ರತಿಸ್ಪರ್ಧಿಯನ್ನು ಶಿಕ್ಷಿಸಲು ನಿರ್ಮಿಸಿದ ಕಾರಾಗೃಹವೆಂಬುದು ಬಹುಸೀಮಿತ ದೃಷ್ಟಿಯಲ್ಲಿ ಮಾತ್ರ ನಿಜ (ಜ್ಞಪ್ರ. XXIV, ೩೬೪); ಈ ಎರಡೂ ಕೋಟೆಗಳು ಪ್ರತಿಸ್ಪರ್ಧಿಗಳಾಗಿ ಮತ್ಸರವನ್ನೇ ಕಾರುತ್ತಿದ್ದುವು (ಕುಗರೂ. ೦೬೪). [ಸಂ. ಪ್ರತಿಸ್ಪರ್ಧಿನ್]

**ಪ್ರತಿಹತ** (ಗು). ೧. ಹಿಂದಿರುಗಿ ಹೊಡೆಯಿಸಿಕೊಂಡ; ಪ್ರತಿಯಾಗಿ ಹೊಡೆತ ತಿಂದ. ೨. ಗಾಯಗೊಂಡ. ೩. ಹಿಂದಕ್ಕೆ ಅಟ್ಟಿದ; ಹಿಮ್ಮೆಟ್ಟಿಸಿದ. ೪. ಪ್ರತಿಭಟನೆಯನ್ನು ಹೊಂದಿದ; ಎದುರಿಸಿದ. ೫. ಸೋತ; ಸೋಲನ್ನು ಹೊಂದಿದ. ೬. ಕೆಳಕ್ಕೆ ಬಿದ್ದ; ಪತಿತ. ೭. ನಿರಾಶೆಗೊಂಡ; ಆಸೆಯನ್ನು ತೊರೆದ. ೮. ಅಡ್ಡಿಪಡಿಸಿದ; ಪ್ರತಿರೋಧವನ್ನು ಹೊಂದಿದ: ಬಂಗಾಳದಲ್ಲಿ ಅತೃಪ್ತಿಲಕ್ಷಣ ಅತ್ಯಂತ ಪ್ರಬಲವಾಗಿ ಕಂಡುಬರುತ್ತಿರುವುದರ ಏಕಮಾತ್ರಕಾರಣ ನಮ್ಮ ಪ್ರತಿಹತಗಮನ (ಜಿಬಾರ. II, ೦೧೦). ೯. ಇನ್ನೊಬ್ಬರ ದ್ವೇಷಕ್ಕೊಳಗಾದ. ೧೦. ಹೋಗಲಾಡಿಸಿದ; ನಾಶಪಡಿಸಿದ. (ನಾ). ೧೧. ಸೋತುದಂ; ಪರಾಭವಗೊಂಡುದಂ: ಪ್ರತಿಹತಮಾದುದಾ ಪರಶುರಾಮನಿಗಾ ರಘುರಾಮನಾ ಸರಿತ್ಪತಿ ಶುಪರಂಕರಾಮನಿನದೇಂ ಕಟೀಮಾದುದೊ ಮಾಣಿಸುಸೂಟಿಗಳು (ಗದಾಯು. ೦.೨೯). ೧೨. ಅಡ್ಡಿಪಡಿಸುವುದು; ತಡೆಯುವುದು: "ಪಟೀಹತ ಪ್ರತಿಹತಮಪಕ್ಕಾ" (ಶಬಳಂ. ೨೯೩). ೧೩. ನಿರಾಶನಾದವನು: "ಮನೋಹತಃ, ಪ್ರತಿಹತಃ, ಪ್ರತಿಬದ್ಧಃ, ಹತಃ —ಳ ಮನಸ್ಸಿನ ಉತ್ಸಾಹವು ತಪ್ಪಿದವನ ಹೆಸರು, ಮನಗೆಟ್ಟವನು" (ಶಿಕ್ಷಾಂಶಿ. ೩೩೪). [ಸಂ.]

**ಪ್ರತಿಹರ್ತೃ** (ನಾ). ೧. ಹೊಡೆಯುವವನಿಗೆ ಪ್ರತಿಯಾಗಿ ಹೊಡೆಯುವವನು. ೨. ಪರಿಹರಿಸುವವನು; ನಿವಾರಿಸುವವನು. ೩. ಯಾಗಗಳಲ್ಲಿ ಭಾಗವಹಿಸುವ ಹದಿನಾರುಜನ ಋತ್ವಿಜರಲ್ಲಿ ಒಬ್ಬ; ಉದ್ಗಾತೃವಿಗೆ ಸಹಾಯಕನಾಗಿರುವವನು: ಯಥಾವಿಹಿತವಾಗಿ ಮಂತ್ರಮಂತ್ರಾರ್ಥಗಳೆಂಬಲ್ಲಿ ನೈಷ್ಠಿಕರಾದ...ಪ್ರತಿಹರ್ತೃ... ಆಗ್ನೀಧ್ರಪ್ರಮುಖ ಋತ್ವಿಕ್ಸಂಪತ್ತಿಯಿಂದಲೂ (ಶವೀಳ. ೦೩೯); ಪ್ರತಿಹಾರದ ದೇವತೆ ಯಾವುದು? ಎಂಬ ಪ್ರತಿಹರ್ತೃವಿನ ಪ್ರಶ್ನೆಗೆ ಅನ್ನವೆಂದೂ ಚಾಕ್ರಾಯಣನು ಉತ್ತರವನ್ನು ಕೊಟ್ಟಿರುತ್ತಾನೆ (ಛಾಂದ್ಯಕಾ. ೦೯೬ ಅಡಿಟಿ). ☞ ಬ್ರಹ್ಮ, ಉದ್ಗಾತೃ, ಹೋತೃ, ಅಧ್ವರ್ಯು, ಬ್ರಾಹ್ಮಣಾಚ್ಛಂಸಿ, ಪ್ರಸ್ತೋತೃ, ಮೈತ್ರಾವರುಣ, ಪ್ರತಿಪ್ರಸ್ಥಾತೃ, ಪೋತೃ, ಪ್ರತಿಹರ್ತೃ, ಅಚ್ಛಾವಾಕ, ನೇಷ್ಟೃ, ಆಗ್ನೀಧ್ರ, ಸಂಬ್ರಹ್ಮಣ್ಯ, ಗ್ರಾವಸ್ತೋತೃ ಮತ್ತು ಉನ್ನೇತೃ ಎಂಬ ಹದಿನಾರು ಜನರು ಯಾಗದಲ್ಲಿ ಭಾಗವಹಿಸುವ ಋತ್ವಿಜರು. [ಸಂ.]

**ಪ್ರತಿಹಸ್ತ** (ನಾ). ಒಬ್ಬನಿಗೆ ಪ್ರತಿಯಾಗಿ ಇರುವವನು; ಪ್ರತಿನಿಧಿ: "ಪಟೀಯತ್ರ[ಪಾಠಾಂ. ಪಟೀಹಸ್ತ]ನೆಂದು ಪ್ರತಿಹಸ್ತಂ" (ಶಶಾ. ೬೬-೬೩೬); ಈ ಧರ್ಮಮಂ ನಿಮ್ಮ ಪ್ರತಿಹಸ್ತನಾಗಿ [ಮಾ]ಡಿಸಿದ ರಾಜರಕ್ಷಿತಂ ಧರ್ಮಮೆಂಬುದುಂ (ಶಾಶಾ. XX, ೦೦೧-೧೬; 1140). [ಸಂ.]

**ಪ್ರತಿಹಾರ** (ನಾ). ೧. ಬಾಗಿಲು; ದ್ವಾರ: "ದ್ವಾರದಲ್ಲಿಯುಂ ಪ್ರತಿಹಾರವೆಂಬುದು" (ಹಲಾಯು. ೧೬-೦೨); ಪ್ರತಿಹಾರನೇತ್ರ ಪುತ್ರಿಕಮಂತಿವಿಪುಳಕವಾಟಪಕ್ಷಮೆಸೆವುದು ರಾಜಾಯತನಕ್ಕೆ ನೊಸಲ ಕಣ್ಣೆನಿಸಿ, ತೇಜಮಂ ತಟಿಯೆ ಮೆಟಿವ ಪೂರ್ವದ್ವಾರಂ (ಪರ್ಣಪ್ರ. ೦-೬೬). ೨. ಬಾಗಿಲು ಕಾಯುವವನು; ಪಡಿಯರ ದ್ವಾರಪಾಲಕ: "ಪಡಿಯಱನೆನೆ ಪ್ರತಿಹಾರನುಂ" (ಶಬಳಂ. ೦೫೯); ತನ್ನ ಬೆಸನನೆ ಪಾರ್ದು ಲಲಾಟತಟಘಟಿತಮುಕುಳಿತಕರಕಮಳನಾಗಿರ್ದ ಮ ಹಾ ಪ್ರ ತಿ ಹಾ ರ ನ ಪೊಗಮುಂ ನೋಡಿ (ಶಂಕರಾ. ೯-೮೦ ವ); ಪ್ರತಿಹಾರನು ತಾನೆ ಚಂಚಚ್ಚಮರಕುಹಧರಂ ತಾನೆ ಪೀಠಾರ್ಚನಾಪ್ರಸ್ತುತಿಯುಕ್ತಂ ತಾನೆ (ಶಂಪ್ರಶ್ರೀ. ೦೫-೦೨೨). ೩. ಗಾರುಡಿಗ; ಐಂದ್ರಜಾಲಿಕ. ೪. ಕಣ್ಕಟ್ಟುವಿದ್ಯೆ; ಇಂದ್ರಜಾಲ. ೫. ಸಾಮಗಾನದ ಒಂದು ಅಂಗ; ಉದ್ಗೀಥ, ಪ್ರಸ್ತಾವ, ಹಿಂಗಿರ, ಪ್ರತಿಹಾರ, ನಿಧನವೆಂಬ ೫ ಪ್ರಕಾರವಾಗಿ ಸಾಮಗಾನವು ಭಾಗಿಸಲ್ಪಟ್ಟಿರುವುದು (ಹಶಾರ. ೬-೦೯ ತಾತ್ಪರ್ಯ); ಪ್ರತಿಹಾರದ ದೇವತೆ ಯಾವುದು? ಎಂಬ ಪ್ರತಿಹರ್ತೃವಿನ ಪ್ರಶ್ನೆಗೆ ಅನ್ನವೆಂದೂ ಚಾಕ್ರಾಯಣನು ಉತ್ತರವನ್ನು ಕೊಟ್ಟಿರುತ್ತಾನೆ (ಛಾಂದ್ಯಕಾ. ೦೯೬ ಅಡಿಟಿ). ೬. [ದ್ವೈತ] ವಿಷ್ಣು, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧರೆಂಬ ಪರಮಾತ್ಮನ ಐದು ವ್ಯೂಹಗಳಲ್ಲಿ ಒಂದು; ಅನಿರುದ್ಧ: ಒಂದೊಂದು ಕಾರ್ಯದಲ್ಲಿಯೂ ಈ ಜಗತ್ತನ್ನು ಪ್ರತಿಹರಣ ಮಾಡುವುದರಿಂದಲೂ ಮೂರ್ತಿಗಳನ್ನು ಪ್ರತಿಹರಣಮಾಡುವುದರಿಂದಲೂ ಪ್ರತಿಹಾರನೆಂದು ಅನಿರುದ್ಧನೆಂದು ಹೆಸರು (ಹಶಾರ. ೬-೦೯ ತಾತ್ಪರ್ಯ). [ಸಂ.]

**ಪ್ರತಿಹಾರಕ** (ನಾ). ೧. ಬಾಗಿಲು ಕಾಯುವವನು; ದ್ವಾರಪಾಲಕ: ಪ್ರತಿಹಾರಕರುಂ ಗೋಪುರಚತುಷ್ಟಯಮುಂ ಪುದಿದ ಶಾಳಮುಂ ಪೂರ್ವೋಕ್ತಸ್ಥಿತಿಯುಂ ಕಣ್ಗಂ ಬಗೆಗಂ ಪ್ರತೀತಿಯಂ ಪಡೆವು ಪಡೆದುಪಧಿಕೋತ್ಸವಮಂ (ಪುಣ್ಯಾಶ್ರ. ೦೯-೧೩೩); ಪಸರಿಸಿದತ್ತು . . . ಮಹಾಪ್ರತಿಹಾರಕಸ್ವನಂ (ಶಾರಕ್ರ. ೦೬-೨೨). ೨. ಗಾರುಡಿಗ. [ಸಂ.]

**ಪ್ರತಿಹಾರಿ** (ನಾ). ರಾಜನ ಹದಿನೆಂಟು ಬಗೆಯ ಪರಿವಾರದವರಲ್ಲಿ ಒಬ್ಬ; ದ್ವಾರಪಾಲಕ: "ಪುರೋಹಿತಂ . . . ಪ್ರತಿಹಾರಿಯುಂತಸ್ಥಿತಂ ದ್ವಾರಪಾಲಂ ಕರಣಿಕಂ ದಂಡಪಾಣಿ ಕೋಠಾರಿ ಯುವರಾಜನಾ ತಳವಾಜನೆಂಬಿವರು ಭೂರಮಣರಲ್ಲಿ ವಿನಿಯೋಗಮಂ ತಾಳ್ದು ಪದಿನೆಣ್ಬರ್ ಪ್ರಧಾನರೆನಿಕುಂ" (ಮಂಗರಾ. ೮೦-೦೦). ☞ ಈ ಪ್ರಯೋಗದಲ್ಲಿ ಪ್ರತಿಹಾರಿ, ದ್ವಾರಪಾಲ ಎಂಬ ಎರಡೂ ಸೇರಿರುವುದು ವಿಚಾರಯೋಗ್ಯ. [ಸಂ. ಪ್ರತಿಹಾರಿನ್]

**ಪ್ರತಿಹಾಸ** (ನಾ). ೧. ಇನ್ನೊಬ್ಬರ ನಗುವಿಗೆ ಪ್ರತಿಯಾಗಿ ನಗುವುದು. ೨. ಕಣಗಿಲೆ ಗಿಡ; ಪದ್ಮ ೪ : "ಪ್ರತಿಹಾಸಃ, ಶತಪ್ರಾಸಃ, ಚಂಡಾತಃ, ಹಯಮಾರಕಃ, ಕರವೀರಃ — ೫ ಗನ್ನೇರಳೆ, ಕಣಗಿಲಗಿಡದ ಹೆಸರು" (ಸಿದ್ಧಾಂ.ಶಿ. ೮೪೯). [ಸಂ.]

**ಪ್ರತಿಹಿಂಸೆ** (ನಾ). ಒಬ್ಬನು ಮಾಡಿದ ಹಿಂಸೆಗೆ ಪ್ರತಿಯಾಗಿ ಹಿಂಸೆ ಮಾಡುವ ಪ್ರವೃತ್ತಿ : ಸೇಡಿನ ಬುದ್ಧಿ : ಹೃದಯದೊಳಗೆ ಮನೋಹರನ ಬಗೆಗೆ ಭೀಷಣಪ್ರತಿಹಿಂಸೆ ಇದ್ದಿತು (ಕೊಳಕಾ. ೩೧).
[ಸಂ. ಪ್ರತಿಹಿಂಸಾ]

**ಪ್ರತೀಂದ್ರ** (ನಾ). [ಜೈನ] ಇಂದ್ರನಿಗಿಂತ ಸ್ವಲ್ಪ ಕೆಳಮಟ್ಟದ ಇಂದ್ರ; ಇತರ ದೇವತೆಗಳಿಗಿಂತಲೂ ಹೆಚ್ಚಾದ ಅಣಿಮಾದಿ ಗುಣಗಳನ್ನು ಪಡೆದಿರುವ ದೇವಯೋನಿವಿಶೇಷ; ಈ ನಾಲ್ಕು ಪ್ರಕಾರದ ದೇವವರ್ಗಗಳಲ್ಲಿಯೂ ಇಂದ್ರನ ಕೆಳಗೆ ಪ್ರತೀಂದ್ರರಿರುತ್ತಾರೆ. ಭವನವಾಸಿ ದೇವರುಗಳಲ್ಲಿ ಇಪ್ಪತ್ತುಜನ ಇಂದ್ರರೂ ಇಪ್ಪತ್ತುಜನ ಪ್ರತೀಂದ್ರರೂ ಇರುತ್ತಾರೆ. ವ್ಯಂತರದೇವರುಗಳಲ್ಲಿ ಹದಿನಾರು ಜನ ಇಂದ್ರರೂ ಹದಿನಾರು ಜನ ಪ್ರತೀಂದ್ರರೂ ಇರುತ್ತಾರೆ. ಜ್ಯೋತಿರ್ದೇವರುಗಳಲ್ಲಿ ಚಂದ್ರನು ಇಂದ್ರನಾದರೆ ಸೂರ್ಯನು ಪ್ರತೀಂದ್ರ. ಕಲ್ಪವಾಸಿಗಳಲ್ಲಿ ಹನ್ನೆರಡು ಜನ ಇಂದ್ರರೂ ಹನ್ನೆರಡು ಜನ ಪ್ರತೀಂದ್ರರೂ ಇರುತ್ತಾರೆ : ಕೇಶವನುಮಾತ್ಮೀಯಗುರುವಿಯೋಗದೊಳ್ ಪರಿತ್ಯಕ್ತಸಕಲರಾಜ್ಯಪರಿಚ್ಛೇದಂ ಪ್ರವ್ರಜ್ಯಾಪದವಿಯೊಳ್ ಪರಿತಕ್ತ್ಯನುಮಾ[illegible] ಅಚ್ಯುತಕಲ್ಪದೊಳ್ ಪ್ರತೀಂದ್ರನಾದಂ (ಆಪು. ೬-೦೨ ವ); ಕೇಶವನ[illegible] [illegible]ಗದೊಳು ದೀಕ್ಷೆಯಂ ಕೈಕೊಂಡಲ್ಲಿಯು ಪ್ರತೀಂದ್ರನಾದೊಂ ([illegible]). [ಸಂ.]

**ಪ್ರತೀಕ** (ಗು). ೧. ಪ್ರತಿಕೂಲವಾದ; ವಿರುದ್ಧವಾದ; ವ್ಯತಿರಿಕ್ತವಾದ. ೨. ತಲೆಕೆಳಗಾದ; ವಿಲೋಮವಾದ. (ನಾ). ೩. ಭಾಗ; ಅಂಶ; ಪಾಲು. ೪. ಅಂಗ; ಅವಯವ: "ಅಂಗಂ, ಪ್ರತೀಕಃ, ಅವಯವಃ, ಅಪಘನಃ — ೪ ಕೈ ಕಾಲು ಮುಂತಾದ ಅಂಗಗಳ ಹೆಸರುಗಳು" (ಸಿದ್ಧಾಂ.ಶಿ. ೦೬೯). ೫. ಗುರುತು ; ಚಿಹ್ನೆ ; ಸಂಕೇತ : ಧೂಮಪ್ರತೀಕದಿಂ ರಾಮನಂ ಭಾವಿಸಿರೆ ಬಂದು ಮುಟ್ಟಿತ್ತೋಡಮಾ ಪಾರಮಂ (ಕ್ರೀರಾಮಾ. ೦೬೩-೨೭೩); ಬಿಳಿವರ್ಣವು ಯಾವಾಗಲೂ ಪರಿಶುದ್ಧತೆಗೆ ಪ್ರತೀಕವಾಗಿರುವುದು (ಹೇಮಂತ. ೬೦). ೬. ಪ್ರತಿಕೃತಿ ; ಪ್ರತಿರೂಪ : ದಾಂಪತ್ಯಜೀವನವು. . . ಸಮರಸವಾಗಿ ಬೆಳೆದುಕೊಂಡು ಬಂದ ಅಂತಃಕರಣ ಪ್ರವೃತ್ತಿಗಳ ಏಕೀಭೂತವಾದ ಪ್ರತೀಕವೆಂಬುದನ್ನು ರಾಮನು ನಮಗೆ ಕಲಿಸಿ ಕೊಟ್ಟಿದ್ದಾನೆ (ವಾಲ್ಮೀಕಿ. ೦೦೩) ; ಮಾತು ಅಂತರಂಗದ ಪ್ರತೀಕ (ಹೊಸಕ್ಷಿ. ೪೩). ೭. ಒಂದಕ್ಕೆ ಬದಲಾಗಿ ಇರುವಂಥದು ; ಪ್ರತಿನಿಧಿಯಾಗಿರುವುದು ; ಯಾವುದನ್ನು ಯಾವುದರ ಸ್ಥಾನದಲ್ಲಿ ಉಪಾಸ್ಯವೆಂದು ಹೇಳಿದೆಯೋ ಅದು ಅದರ ಪ್ರತೀಕವು (ಶ್ರೀಕೃಷ್ಣಾ. ೨೦೦) ; ಪ್ರತಿಯೊಂದು ಊರಿಗೂ ಚಾವಡಿಯೊಂದು ಬೇಕೇಬೇಕು. ಸಾರ್ವಭೌಮಸರಕಾರದ ಪ್ರತೀಕವದು (ಗ್ರಾಮಗು. ೧). ೮. ಆಕೃತಿ ; ಸ್ವರೂಪ ; ಆಕಾರ : 'ಪ್ರತೀಕಂಗೊಳ್ಳು' ಪರಾ. [ಸಂ.]

**ಪ್ರತೀಕಂಗೊಳ್ಳು** (ಕ್ರಿ). ಆಕೃತಿಯು ಕಣ್ಣಿಗೆ ಕಟ್ಟಿದಂತಾಗು ; ಮೂರ್ತಿವತ್ತಾಗು : ಇಂತೆಲ್ಲವಮಂ ಪ್ರತೀಕಂಗೊಳ್ಳಲೊರ್ದಿನಂ ಹೊಳೆಯ ನುಣ್ಮಳಲ ಬೆಣ್ಣೆಯ ದಿಣ್ಣೆ ಮೇಲಿರ್ದು, ಸೀತೆ ತಾಂ ಪತಿ ಮೈದುನರ ಕೂಡೆ ಮಾತಾಡುತಿರ (ಶ್ರೀರಾಮಾ. ೦೬೬-೯೬).
[ ಪ್ರತೀಕ + ಕೊಳ್ಳು$_1$ ( < ಕೊಳ್$_1$ ) ]

**ಪ್ರತೀಕವಾದ** (ನಾ). ೧. ಸಾಹಿತ್ಯದಲ್ಲಿ ಸಂಕೇತಗಳ ಮೂಲಕ ವಿಷಯನಿರೂಪಣೆ ಮಾಡಬೇಕೆಂಬ ವಾದ ; ಈ ಕಾವ್ಯಗಳಲ್ಲಿ ಒಂದು ಪದದ ಅಥವಾ ವಾಕ್ಯದ ಅರ್ಥಕ್ಕೆ ಪ್ರತಿಯಾಗಿ ಬೇರೊಂದು ಸಾಂಕೇತಿಕಪದವನ್ನಾಗಲೀ ವಾಕ್ಯವನ್ನಾಗಲೀ ಪ್ರಯೋಗಿಸುವ ವಿಧಾನ ; ಅಂತರಾರ್ಥವುಳ್ಳಂತೆ ಬರೆಯುವ ತತ್ತ್ವ : 'ಸಿಂಬಾಲಿಜಂ' ಅಂದರೆ ಪ್ರತೀಕವಾದವೇ 'ಐಡಿಯಾಲಿಜಂ' ಅಂದರೆ ಆದರ್ಶವಾದ ಎಂಬ ಮಾತನ್ನು ತಂದೆ . . . ನನ್ನೆದುರಿಗೆ ಚರ್ಚಿಸಿದ್ದಾರೆ (ಇಕ್ಕಳ. ೯೬೪). [ಸಂ.]

**ಪ್ರತೀಕಾರ** (ನಾ). ೧. ಪರಿಹಾರ ; ನಿವಾರಣೆ : ಪುರುಪರಮೇಶ್ವರತನೂಭವರ ಯುದ್ಧಾಡಂಬರೋಪಸರ್ಗದೊಳಮಾಕುಲವ್ಯಾಕುಲರಾಗಿ ತತ್ಪ್ರಶಮನಪ್ರತೀಕಾರಮಾಗೆ ನಾಕಲೋಕಸುಂದರಿಯರೊಡನೆ ಅನಿಮೇಷರ್, . . . ಸರ್ವಜ್ಞಬಿಂಬಾವಳಿಗೆ ಪರಸಿದರ್ (ಆಪು. ೧೪-೦೩೩ ವ); ಬರ್ದುಕಿ ದೊರುಂ ಓರಿಯನ ಮುನಿಸಂಬುದು ಪ್ರಣಿಪಾತಪ್ರತೀಕಾರಮೆಂದು ಜಾದರಸನ ದಂಡನಾಯಕಂಗೆ ಶರಣಾಗತರಾಗಿ ನಿಜಶಿರಸ್ತ್ರಾಣಪರಾಯಣರಾದರ್ (ಶಾಂತಿಪು. ೦೦-೨೯ ವ). ೨. ಅಪಕಾರಕ್ಕೆ ಪ್ರತಿಯಾಗಿ ಅಪಕಾರ ಮಾಡುವುದು ; ಸೇಡು ತೀರಿಸಿಕೊಳ್ಳುವುದು : "ವೈರಶುದ್ಧಿಃ, ಪ್ರತೀಕಾರಃ, ವೈರ ನಿರ್ಯಾತನಂ — ೩ ಹಗೆ ತೀರಿಸಿಕೊಳ್ಳುವುದರ ಹೆಸರು" (ಸಿದ್ಧಾಂ.ಶಿ. ೫೬೦) ; ನಂಜರಾಜನು . . . ಕೃಷ್ಣಪ್ಪನಾಯಕನ ಮೇಲೆ ಪ್ರತೀಕಾರವನ್ನು ಮಾಡುವುದಾಗಿ ಸಂಕಲ್ಪಮಾಡಿದನು (ಶ್ರೀರಾಜು. ೦೦೬). ೩. [ವೈದ್ಯಶಾ] ರೋಗ ಪರಿಹಾರಕ್ಕಾಗಿ ಮಾಡುವ ಚಿಕಿತ್ಸೆ ; ರೋಗನಿವಾರಣೋಪಾಯ : ಸ್ಥಾವರವಿಷ, ಜಂಗಮವಿಷ, ಕುಷ್ಠ . . . ಮುಂತಾದ ರೋಗಗಳು ಕಾಣಿಸಿದಲ್ಲಿಯೇ ಜಾಪ್ಯ ಮಾಡದೆ ಶೀಘ್ರದಲ್ಲಿಯೇ ಪ್ರತೀಕಾರವಂ ಮಾಡಬೇಕು (ಚಕಿತ್ಸಾ. ೨೨). [ಸಂ.]

**ಪ್ರತೀಕಾರಸಂಧಿ** (ನಾ). [ರಾಜನೀ] ಹದಿನಾರಂಬಗೆಯ ಸಂಧಿಗಳಲ್ಲಿ ಒಂದು ; ಒಬ್ಬ ರಾಜನು ಮಾಡಿದ ಉಪಕಾರಕ್ಕೆ ಪ್ರತಿಯಾಗಿ ಉಪಕಾರ ಮಾಡುವೆನೆಂಬ ಒಪ್ಪಂದ : ಪರಸ್ಪರೋಪಕಾರಂಗೆಯ್ವುದು ಪ್ರತೀಕಾರಸಂಧಿಯೆಂಬುದಕ್ಕುಂ (ಕಂಠೀರ. ೨೨೦-೨೨). 'ಸಂಧಿ' ಪರಾ. [ಸಂ.]

**ಪ್ರತೀಕಾಲಂಬನ** (ನಾ). ೧. ದೇವತೆಯ ಪ್ರತಿಮೆ, ಸಾಲಿಗ್ರಾಮಶಿಲೆ ಮೊದಲಾದುವುಗಳನ್ನು ಉಪಾಸ್ಯದೇವತೆಯೆಂದು ನಂಬಿ ಪೂಜಿಸುವುದು. ೨. [ದ್ವೈತ] ತನ್ನ ಶರೀರದಲ್ಲಿಯೇ ಭಗವಂತನನ್ನು ಕಾಣುವವನು : ತೃಣ, ಕ್ರಿಮಿ, ಪಶು, ಮನುಷ್ಯೋತ್ತಮರು, ಚಕ್ರವರ್ತಿಗಳು, ಮನುಷ್ಯ, ಗಂಧರ್ವರೆಂಬ ಏಳುವಿಧ ಜೀವರು ನಿರಂತರವನಿಸುವರು . . . ಇವರಿಗೆ ಪ್ರತೀಕಾಲಂಬನರೆಂತಲೂ ಮತ್ತೊಂದು ಹೆಸರು. ಪ್ರತೀಕವೆಂದರೆ ತನ್ನ ಶರೀರವು. ತನ್ನ ಶರೀರದಲ್ಲಿ ಹರಿಯನ್ನು ಅಪರೋಕ್ಷದಲ್ಲಿ ಕಾಣುವವರಾದುದರಿಂದ ಪ್ರತೀಕಾಲಂಬನರೆಂದು ಹೆಸರು (ತತ್ತ್ವ. ೨೩-೬ ತಾತ್ಪರ್ಯ). [ಸಂ.]

**ಪ್ರತೀಕಾಶ** (ನಾ). ೧. ಪ್ರತಿಬಿಂಬ. ೨. ಕಾಣ್ಕೆ ; ನೋಟ. ೩. (ಸಮಾಸದ ಉತ್ತರಪದವಾಗಿ ಬಂದಾಗ) ಸಮಾನವಾದುದು : ಸದೃಶವಾದದು : "ನಿಭಃ, ಸಂಕಾಶಃ, ನೀಕಾಶಃ, ಪ್ರತೀಕಾಶಃ, ಉಪಮಾ . . . ಸಮಾಸದಲ್ಲಿ ತುದಿಪದಗಳಾಗಿಯೇ ಸಮಾನವಸ್ತುವಿನ ಹೆಸರಾಗುವುವು" (ಸಿದ್ಧಾಂ.ಶಿ. ೬೦೭). [ಸಂ.]

**ಪ್ರತೀಕ್ಷಣ** (ನಾ). ಎದುರುನೋಡುವುದು ; ನಿರೀಕ್ಷಣೆ : ಅತಿಪುರಸ್ಸರವಿದಿರ್ಗೊಂಡು ತತ್ಕ್ರಿಯಾಪರಿಸಮಾಪ್ತಿಪ್ರತೀಕ್ಷಣಪರನಪ್ಪಂ ಗುರುಭಕ್ತಿಪೂರ್ವಕಂ ಬಂದಿಸಿ (ಆಪು. ೨-೩೩ ವ). [ಸಂ.]

**ಪ್ರತೀಕ್ಷಿಸು** (ಕ್ರಿ). ಎದುರು ನೋಡು ; ಕಾಯು ; ನಿರೀಕ್ಷಿಸು ; ಸೌಗಂಧಿಕಾದೇವಿಯು ಬರುವುದಂ ಪ್ರತೀಕ್ಷಿಸುತ್ತಿರಲು (ಶಾಗಂಧಿ. ೨೦೯-೬):

**ಪ್ರದೇಶನಿ** (ನಾ). ತೋರುಬೆರಳು ; ತರ್ಜನಿ. [ಸಂ. ಪ್ರದೇಶನೀ]

**ಪ್ರದೇಶಬಂಧ** (ನಾ). [ಜೈನ] ಬಂಧನವನ್ನು ಹೊಂದಿರುವ ಕರ್ಮಗಳ ಸಂಖ್ಯೆಯ ನಿರ್ಣಯ : ಒದವಿದ ಕರ್ಮದ ಶಕ್ತಿಯೆ ವಿದಿತಮದನುಭಾಗ ಬಂಧಮಕ್ಕುಂ ಬಹುಭೇದದಿನಾದ ಜೀವ ಕರ್ಮ ಪ್ರದೇಶಯೋಗಂ ಪ್ರದೇಶ ಬಂಧಮೆನಿಪ್ಪುಂ (ಕಂದ್ರಪು. ೦೬-೨೫) ; ಜೀವನಿಗೆ ಫಲಪ್ರದಾನಾವಸ್ಥೆಯಲ್ಲಿರುವ ಪುಣ್ಯ ಪಾಪವೆಂಬ ಕರ್ಮದ ಅಣುಗಳು ಜೀವದೊಡನೆ ಸೇರುತ್ತವೆ, ಬೆರೆಯುತ್ತವೆ. ಇದಕ್ಕೆ ಪ್ರದೇಶಬಂಧವೆಂದು ಹೆಸರು (ಹಿಂರಚಾ. ೬೪). [ಸಂ.]

**ಪ್ರದೇಶಸಂಹರಣ** (ನಾ). [ಜೈನ] ಜೀವಪ್ರದೇಶದ ಸಂಕೋಚ,- ಆಕುಂಚನ ; ಕಾರ್ಮಣಶರೀರದಲ್ಲಿರುವುದರಿಂದ ಆ ಶರೀರಕ್ಕೆ ಅನುಸಾರವಾಗಿ ಚಿಕ್ಕದು ಅಥವಾ ದೊಡ್ಡದಾಗುವ ಜೀವದ ಸ್ಥಿತಿ : ಕರ್ಮವಶದಿಂ ಅಣು ಮಹಚ್ಛರೀರಂಗಳು ಕೊಳುತಿರ್ದು ತದ್ವಶದಿಂ ಪ್ರದೇಶಸಂಹರಣವಿಸರ್ಪಣಸ್ವಭಾವಸಮನ್ವಿತಜೀವಕ್ಕೆ ತಾವತ್ಪ್ರಮಾಣ ಮಪ್ಪುದಱಿಂ ಅಸಂಖ್ಯೇಯಭಾಗಾದಿಗಳಲ್ಲಿ ವೃತ್ತಿವಿರುದ್ಧಮಲ್ತು (ಕಕ್ಕ್ರ.ಕ್ರ. ೨೩೬). [ಸಂ.]

**ಪ್ರದೇಶಸೌಷ್ಠವ** (ನಾ). ಕಲಾಕೃತಿಯ ಅವಯವಗಳ ಸೌಂದರ್ಯ,- ಸೌಷ್ಠವ : ಇದು ಭೂಮಾಪನರೂಪದು ಲೆಪ್ಪದ ರೂಪೆನಲಿಂತುಮಱಿಯಲರಿದೆನೆ ಬಗೆಗೊಂಡುದು ನಡೆವ ನುಡಿವ ತೆಱದಿಂ ಪ್ರದೇಶಸೌಷ್ಠವಮಂದೇಂ ವಿಚಿತ್ರಮೊ ಚಿತ್ರಂ (ಕಂಡಾಂಪು. ೬-೨೬). [ಸಂ.]

**ಪ್ರದೇಶಿನಿ** (ನಾ). ೧. ತೋರುಬೆರಳು ; ತರ್ಜನಿ : "ಪ್ರದೇಶಿನೀ— ಹೆಬ್ಬೆಟ್ಟಿನ ವತ್ತುಬೆರಳು" (ಸಿದ್ಧಾಂತಿ. ೧೯೬) ; ದರಸ್ಮಿತೆಯಾಗಿ, ಕುಳಿತು ಅಭೀಕ್ಷಿಸುತ್ತಾ ಪ್ರದೇಶಿನಿಯನ್ನು ನೀಡಿ (ಮಂತ್ರಕ. ೯೮-೨೫). ೨. ಕಾಲಿನ ಹೆಬ್ಬೆರಳ ಪಕ್ಕದ ಬೆರಳು : ಎಡದ ಕಾಲ ಹೆಬ್ಬೆರಳ ಬಳಿಯ ಕೊಂಚ ಉದ್ದವಾದ ಬೆರಳು ಪ್ರದೇಶಿನಿ (ಕಾಮಚಾ. ೪೩೩). ೩. [ಸಾಮುದ್ರಿ] ಒಂದು ರೇಖೆ : ಆವ ಪುರುಷನ ಪ್ರದೇಶಿನಿಯೆಂಬ ರೇಖೆ ಆವಾತನು ಕುಳ್ಳನು ಕುಟಿಲವಾಗಿರೆ ಡೊಂಕಾಗಿರೆ ಆತನು ಭೋಗವಿಲ್ಲದಾತನು (ಸಾಮುಂ. ೬-೦೭). [ಸಂ. ಪ್ರದೇಶಿನೀ]

**ಪ್ರದೋಷ** (ನಾ). ೧. ತಪ್ಪು ; ಪಾಪ ; ಅಪರಾಧ. ೨. ರಾತ್ರಿಯ ಮೊದಲನೆಯ ಭಾಗ ; ಮುಚ್ಚಂಜೆ : "ಬೈಗಿನ ಪೊಳ್ತು ಸಾಯಮೆಂಬುದು – ಮುನ್ನಿರುಳಂ ಪ್ರದೋಷಮೆಂಬುದು" (ಹಲಾಯು. ೦೪-೦೦೧) ; ಕಡೆಗೆ ಒಮ್ಮಿಂದೊಮ್ಮೆ ಪ್ರದೋಷದ ಕತ್ತಲೆಯು ಬಂದು ಕಪ್ಪಾದ ಜಲದ ಮೇಲೆ ಹರಡಿಕೊಂಡಿತು (ಕಪಾಕುಂ. ೦೩). ೩. ಶುಕ್ಲ ಮತ್ತು ಕೃಷ್ಣ ಪಕ್ಷಗಳಲ್ಲಿ ಸಾಯಂಕಾಲಕ್ಕೆ ತ್ರಯೋದಶಿ ಬರುವ ದಿನ : ತರುವಾಯ ಪ್ರದೋಷ ಬಂತು. ಸಾಯಂಕಾಲದಲ್ಲಿ ಎಂದಿನಂತೆ ಸರಸ್ವತೀಪೂಜೆ ಮೊದಲಾದ್ದು ಜರುಗಿತು (ಮಾಮಚ. ೩೪). ೪. [ಜೈನ] ಮೋಕ್ಷಕ್ಕೆ ಕಾರಣವಾದ ತತ್ತ್ವಜ್ಞಾನವನ್ನು ಉಪದೇಶಿಸುವಾಗ ಅಥವಾ ಅದರ ಗುಣಗಾನ ಮಾಡುವಾಗ ಏನನ್ನೂ ಮಾತನಾಡದಿರುವಿಕೆ: ಪ್ರದೋಷ (ಪರರ ಜ್ಞಾನವನ್ನು ಹೊಗಳದೆ ಮೌನವನ್ನು ಧರಿಸುವುದು) (ಕೃಷ.೬೩). ೫. ಜ್ಞಾನಾವರಣಕರ್ಮದ ಬಂಧಕ್ಕೆ ಕಾರಣವಾದ ಭಾವ; ಮನಸ್ಸಿನ ದ್ವೇಷಭಾವ : ತತ್—ಆ ಜ್ಞಾನದರ್ಶನಂಗಳೊಳಪ್ಪ, ಪ್ರದೋಷ— ಮಾಳಿಸುಂ (ಕಕ್ಕ್ರ.ಕ್ರ. ೨೩೯). [ಸಂ.]

**ಪ್ರದೋಷಕಾಲ** (ನಾ). ೧. ರಾತ್ರಿಯ ಪ್ರಾರಂಭಕಾಲ; ಸಾಯಂಕಾಲ: ಆ ಘನಸಮಯಂ . . . ಪ್ರದೋಷಕಾಲದಂತೆ ನೀಲಕಂಠತಾಂಡವಾಡಂಬರಮುಂ . . . ಎನಿಸಿರ್ದುದು (ಡಾಶೀ. ೬-೦೦೬ ಪ) : ಸರ್ವಭೂಷಣರು ಅಂದಿನ ಪ್ರದೋಷಕಾಲದ ಪೂಜೆಗೆ ಕುಳಿತುಕೊಳ್ಳುತ್ತಾರೆ (ಶಿಶ. ೬೬೩) : ನನ್ನ ಚಿತ್ರವಂತೂ ಗೂಡು ಕಳೆದುಕೊಂಡು ಗುಬ್ಬಳಿಸುವ ಗುಬ್ಬಚ್ಚಿಯ ಹಾಗೆ, ಪ್ರದೋಷಕಾಲದಲ್ಲಿ . . . ಹಾರಾಡಿ ಸುತ್ತುತ್ತಿತ್ತು (ಇಕ್ಕಿ. ೦೩೬). ೨. ಬಹಳ ದೋಷಯುಕ್ತವಾದ ಕಾಲ ; ಬಹಳ ಪಾಪಕೃತ್ಯಗಳು ನಡೆಯುವ ಕಾಲ. ೧,೨ : ಓರಿದುಂ ಪ್ರದೋಷಕಾಲಂ ಬರೆ ಮಯ್ಗರೆದಂ ಪ್ರಭಾಕರಂ ವಾರಿಧಿಯೊಳ್ ಧರೆಯೊಳ್ಪ್ರದೋಷಕಾಲದೊಳಿರದಾರ್ವರೆ ಹೂಣ್ಮವಂತರೀ ಏರಿಣಿಯೊಳ್ (ಅಚಿಪು. ೬-೨೦). [ಸಂ.]

**ಪ್ರದೋಷಪೂಜೆ** (ನಾ). ಸಾಯಂಕಾಲದಲ್ಲಿ ಮಾಡುವ ಪೂಜೆ : ಈಗ ಪ್ರದೋಷಪೂಜಾದಿಗಳನ್ನು ಮುಗಿಸಿ ಧ್ಯಾನಮಗ್ನನಾಗಿದ್ದಾಗ ನಿನ್ನ ಪೂರ್ವಾಪರವೆಲ್ಲವೂ ತಿಳಿಯಿತು ! (ಹಚುಕೂ. ೬೦). [ಸಂ. ಪ್ರದೋಷಪೂಜಾ]

**ಪ್ರದೋಷವ್ರತ** (ನಾ). ಪ್ರತಿಪಕ್ಷದಲ್ಲೂ ಸಾಯಂಕಾಲದಲ್ಲಿ ತ್ರಯೋದಶಿ ಇರುವ ದಿನ ಮಾಡುವ ಒಂದು ಪವಿತ್ರವಾದ ವ್ರತ ; ● ಹಗಲು ಉಪವಾಸವಿದ್ದು ಸಾಯಂಕಾಲ ಸ್ನಾನ ಮಾಡಿ ಮಡಿಯುಟ್ಟು, ಕಲ್ಪೋಕ್ತಕ್ರಮದಿಂದ ಆಚರಿಸುವ ಶಿವಪೂಜೆ ಮತ್ತು ರುದ್ರಾಭಿಷೇಕ ಹಾಗೂ ಸಹಸ್ರನಾಮಾರ್ಚನೆ. ಇವುಗಳಿಂದ ಬಡತನವು ಪರಿಹಾರವಾಗುತ್ತದೆಯೆಂಬ ನಂಬಿಕೆಯಿದೆ: ಪ್ರದೋಷ ವ್ರತವನ್ನು ಮಾಡಲು ಆರಂಭಿಸಿದ ಮೇಲೆ ಅವನಿಗೆ ಅದೃಷ್ಟ ಒದಗಿ ಬಂತು (ಜೂಂ). [ಸಂ.]

**ಪ್ರದ್ಯುತಿ** (ನಾ). ಹೆಚ್ಚಾದ ಹೊಳಪು,-ಪ್ರಕಾಶ : ಕೌಸ್ತುಭಪ್ರದ್ಯುತಿ ಬೀಱುತ್ತಿರ್ಪನಂ ಶಾಶ್ವತನವತರಿಸಿರ್ದಂ . . . ವಾಸುದೇವಂ (ಆಪು. ೨-೦೦೦); ವಿಳಸತ್ಸಂಧ್ಯಾರುಣ ಪ್ರದ್ಯುತಿಗೆ ರುಧಿರವಿಭ್ರಾಂತಿಯಿಂ ಬಗ್ಗವಿಂಡವ್ವಳಿಕುಂ (ಡಾಶೀ. ೬-೨೦). [ಸಂ.]

**ಪ್ರದ್ಯುಮ್ನ** (ನಾ). ೧. ಹೆಚ್ಚಾದ ಶಕ್ತಿಯುಳ್ಳವನು ; ಬಹು ಸಮರ್ಥನಾದವನು. ೨. ಕೃಷ್ಣನ ಮಗ; ಮನ್ಮಥ ; ಕಾಮ : "ಪ್ರದ್ಯುಮ್ನಃ. ಮಕರಧ್ವಜಃ . . . ಮನೋಭವಃ—ಈ ೨೮ ಕಾಮದೇವನ ಪೆಸರ್" (ಹಲಾಯು. ೬-೩೩) ; ಉಳಿದ ಪ್ರದ್ಯುಮ್ನ ಗದ ಸಾಂಬನನಿರುದ್ಧ ನಿಶಠಶಠ ನಕ್ರೂರ ಸಾತ್ಯಕಿ ಪ್ರಮುಖಯಾದವರೆಮ್ಮ ಕೂಡೆ ಬರಲಿ (ಕೃಬಾಚಾ. ೬-೨). ೩. [ವಿಶಿಷ್ಟಾ]ವ್ಯೂಹರೂಪನಾದ ನಾರಾಯಣನ ನಾಲ್ಕು ವ್ಯೂಹಗಳಲ್ಲಿ ಒಂದು ; ●ನಾರಾಯಣನಂ ಪರ, ವ್ಯೂಹ, ವಿಭವ, ಅಂತರ್ಯಾಮಿ, ಮತ್ತು ಅರ್ಚಾವತಾರ ಎಂಬ ಐದು ಪ್ರಕಾರ ಉಳ್ಳವನಾಗಿದ್ದಾನೆ. ವ್ಯೂಹ ಎಂದರೆ ಪರನೇ ಉಪಾಸನೆಗೋಸ್ಕರವೂ ಜಗತ್ಸೃಷ್ಟಿ ಮೊದಲಾದುವುಗಳಿಗೋಸ್ಕರವೂ ವಾಸುದೇವ ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ಭೇದವನ್ನು ಹೊಂದುವ ರೂಪ. ಪ್ರದ್ಯುಮ್ನನು ಐಶ್ವರ್ಯ ಮತ್ತು ವೀರ್ಯದಿಂದ ಪರಿಪೂರ್ಣನಾಗಿರುತ್ತಾನೆ : ವ್ಯೂಹ ಎಂದರೆ . . . ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ಭೇದವನ್ನು ಹೊಂದುವ ರೂಪ (ದಾಕಕ್ಕ. ೬೬೯). [ಸಂ.]

**ಪ್ರದ್ಯುಮ್ನಗೋತ್ರ** (ನಾ). ೧. ಪ್ರಸಿದ್ಧವಾದ ವಂಶಕ್ಕೆ ಸೇರಿದವನು. ೨. ಮನ್ಮಥಸಮಾನನಾದವನು. ೧, ೨ : ವಿಳಸತ್ಕಾಂತಾಧರಸುಧಾ ಪ್ರದ್ಯುಮ್ನಗೋತ್ರಂ ರಮೋತ್ಸವಧಾಮಂ ಸುಮನೋವಿನಿರ್ಮಿತ ಸುಧಮ್ಮರ್ಗಂ ತಾನೆನಲ್ಕೀ ಸುಕೇಶವಪುತ್ರಂಗೆಸಮಾಚಿರಾಜವಿಭುವಿಂಗೊಪ್ಪಿ ಪುದೇಂ ಚೋದ್ಯಮೋ (ಎಕ. VI, ಕಡೂರು. ೬೬-೪೬: 1179). [ಸಂ.]

**ಪ್ರದ್ಯೋಗ** (ನಾ). ಹೆಚ್ಚಾದ ಪ್ರಯತ್ನ ; ಮಹಾಪ್ರಯತ್ನ: ಶಕ್ತಿ ಸಾಧಕನಿಂತು ರೌದ್ರವಿದ್ಯಾಶಕ್ತಿಯಂ ಸಾಧಿಪ ಪ್ರದ್ಯೋಗದೊಳ್ ಯೋಗಿಯಾಗಿರಲು (ಶ್ರೀಲಾಪು. ೬೦೭-೨೪೬). [ಸಂ.]

**ಪ್ರದ್ಯೋತ** (ನಾ). ೧. ಕಿರಣ ; ರಶ್ಮಿ : "ರೋಚಿಃ. ಶೋಚಿಃ. ಅಭೀಶುಃ. ಪ್ರದ್ಯೋತಃ . . . ಗೌಃ—ಈ ೩೨ ರಶ್ಮಿಗಳ ಪೆಸರ್" (ಹಲಾಯು. ೬-೪೯) ;

ಅಂತು ಕನಕಶಾಂತಿಮುನಿರಾಜು ಕೇವಲಬೋಧಪ್ರದ್ಯೋತಕ್ಕಾದಿತ್ಯನಾಗೆ (ಶಾಂತಿಪು. ೯.೨೩ ಪ); ವಿಕ್ರಮಾಂಕಂ ಸೋಮಪ್ರದ್ಯೋತಕೀರ್ತಿ ಪ್ರಕಟಿತದಶ ದಿಗ್ಭಿತ್ತಿ (ಎಕ. VIII, ಸೊರಬ. ೨೬೩-೩೭; 1070). ೨. ಕಾಂತಿ; ಪ್ರಕಾಶ; ತೇಜಸ್ಸು: ದಿನಲಕ್ಷ್ಮೀಕಾಂತೆ . . . ಎಯ್ದುವಲ್ಲಿ ಕಾಲಿಂ ನವಮಣಿ ಮಯಮಂಜೀರಕಂ ನುಣ್ಚುತಂ ಶೀವಿ ನಿಜಪ್ರದ್ಯೋತದಿಂ ಪಶ್ಚಿಮಶಿಖರಿ ಶಿರೋಭಾಗದೊಳ್ ಬಿಟ್ಟುದೆಂಬಂತಿನಬಿಂಬಂ ರಂಜಿಸಿತ್ತಸ್ತಮಯಸಮಯ ದೊಳ್ ಮುಕ್ತಮಾದಾವಲಂಬಂ (ಕಾಠಂಪು. ೩೦೬); ಕಾಂತಾಕಪೋಲೇಂದು ನವಪ್ರದ್ಯೋತಮಂ ಮುಂ ತಳೆಯೆ ಹಿಮಕರಂ ಪಿಂತೆ (ರಾಜಶೇ. ೯-೪೪). [ಸಂ.]

**ಪ್ರದ್ಯೋತನ** (ನಾ). ಸೂರ್ಯ; ರವಿ: "ಆದಿತ್ಯಃ, ಸವಿತಾ, ಸಹಸ್ರ ಕಿರಣಃ, ಪ್ರದ್ಯೋತನಃ . . . ತ್ರಯಿತಾಸನುಃ –ಈ ೪೭ ಆದಿತ್ಯನ ಪೆಸರ್" (ಹಲಾಯು. ೬-೩೩). [ಸಂ.]

**ಪ್ರದ್ಯೋತಿ** (ನಾ). ಬೆಳಕು; ಕಾಂತಿ; ಪ್ರಕಾಶ: ತಳಿರ್ದೊಂಗಲ್ ಪುದಿದಂದದಿಂದಿರೆ ತಳಪ್ರದ್ಯೋತಿಯಿಂದುದ್ಗಮೋಜ್ವಲದಾಮಂ ತದುದಾರ ಸೌರಭಚಯಂ ಸುಯ್ಗಂಪಿನಿಂದಾವಗಂ ದಳವೆ ಜುತ್ತಿರೆ (ಚಂದ್ರಪ್ರ. ೦-೧೩೨). [ಸಂ. ಪ್ರದ್ಯೋತಿಸ್]

**ಪ್ರದ್ರಾವ** (ನಾ). ೧. ಓಡುವುದು; ವೇಗವಾದ ಚಲನೆ. ೨. ಹಿಂಜರಿದು ಓಡಿಹೋಗುವಿಕೆ; ಪಲಾಯನ: "ಪ್ರದ್ರಾವಃ . . . ಅಪಯಾನಂ-ರ ಪಲಾಯನವಾಗುವುವಕ್ಕೆ ಹೆಸರು, ತಪ್ಪಿಸಿಕೊಂಡು ಓಡಿ ಹೋಗುವಿಕೆ" (ಸಿದ್ಧಾಂತಿ. ೨೮೦). [ಸಂ.]

**ಪ್ರಧನ** (ನಾ). ೧. ಕಾಳಗ; ಯುದ್ಧ; ಸಮರ: ಸಮುಧೀರಸ್ತಶಸ್ತ್ರಬಲ ದೊಳ್ ದೃಢಕಾಯದೊಳತ್ಯುದಗ್ರವಿಕ್ರಮದೊಳನಂತವೀರ್ಯದೊಳನೇಕ ವಿಧಪ್ರಧನಂಗಳೊಳ್ (ಚಂದ್ರಪ್ರ. ೦೪-೦೩೬). ೨. ಯುದ್ಧದಲ್ಲಿ ಸೂರೆ ಮಾಡಿದ ಲೂಟಿ.-ಕೊಳ್ಳೆ. ೩. ಹರಿದು ಹಾಕುವುದು. ೪. ಹಾಳು ಮಾಡುವುದು; ನಾಶಮಾಡುವುದು. ೫. ಧನವಂತ; ಐಶ್ವರ್ಯ ವಂತ. ೬. ಒಂದು ನರಕದ ಹೆಸರು: ಪ್ರಧ[ಧ]ನ . . . ಬಾಧೆಯಿಂ ಬೈದು ಮಂತ್ರಿನರಕಂಗಳಿಂ ಕೂಡಿ ಅಘೋರಮೆಂಬರಸುನರಕವಿಹುದು (ವಿವೇಕ.೦೭೯). [ಸಂ.]

**ಪ್ರಧಾನ** (ಗು). ೧. ಪ್ರಮುಖವಾದ; ಮುಖ್ಯವಾದ: ಪ್ರಧಾನ ಪುರುಷಾರ್ಥಾಕ್ರಸಿತಂಗಳಪ್ಪ ಪುರಂಗಳುಮಂ (ಆದಿಪು. ೬-೩೩ ಪ). ೨. ಶ್ರೇಷ್ಠ ವಾದ; ಉತ್ಕೃಷ್ಟವಾದ: (೬). (ನಾ). ೩. ಮುಖ್ಯವಾದುದು; ಪ್ರಮುಖವಾದುದು: "ಅಗ್ರ್ಯಂ, ಪ್ರಧಾನಂ, ಪ್ರಮುಖಂ, ಪುರೋಗಂ, ಮುಖ್ಯಂ. . . ಅಗ್ರಣೀಃ _ ಈ ೧೩ ಮುಖ್ಯಂ" (ಹಲಾಯು. ೦೦೩-೩); ಅಖಿಲಮಂತ್ರಿಮಂಡಳಿಕಪ್ರಧಾನನುಮಪ್ಪ ಕುಮಾರಪಾಲಿತನೆಂಬ ಮಂತ್ರಿಮುಖ್ಯನನಿಂತೆಂದಂ (ಕಾಠಂಪು. ೬೨); ಮಾನವಇತಿಹಾಸದಲ್ಲಿ ನದಿ ಗಳ ಪಾತ್ರ ಬಹು ಪ್ರಧಾನವಾದುದು (ಸಪಠ. ೦೫). ೪. ಮುಖ್ಯವಾದ ನಿಯಮ: ವಚನಗಳನ್ನು ವಿಧಿನಿಷೇಧ ಅರ್ಥವಾದಗಳೆಂದೂ ಪ್ರಧಾನ ಲಿಂಗಗಳೆಂದೂ, ಮುಖ್ಯ ಗೌಣಗಳೆಂದೂ, ಗುರುಲಘುಗಳೆಂದೂ ಸಾಮಾನ್ಯ ವಿಶೇಷಗಳೆಂದೂ, ವಿಂಗಡಿಸಿಕೊಂಡು ನಡೆಯಬೇಕು (ಆರ್ಥರ. ೩೪). ೫. [ವೇದಾಂತ] ಜಗತ್ತಿಗೆ ಮೂಲಕಾರಣವೆಂದು ಹೇಳಲಾಗಿರುವ ಪ್ರಕೃತಿ; ಮೂಲಪ್ರಕೃತಿ; ಸತ್ತ್ವ, ರಜಸ್ಸು ಮತ್ತು ತಮಸ್ಸು— ಮೂರು ಗುಣಗಳುಳ್ಳ ಪ್ರಕೃತಿ; ಈ ಸಾಂಖ್ಯರೇ ಮೊದಲಾದ ಅನೇಕ ದಾರ್ಶನಿಕರು ಪ್ರಧಾನ ಅಥವಾ ಪ್ರಕೃತಿಯನ್ನು ತಾವು ಗಣಿಸಿರುವ ಇಪ್ಪತ್ತೈದು ತತ್ತ್ವಗಳಲ್ಲಿ ಮೊದಲನೆಯದು ಹಾಗೂ ಮುಖ್ಯವಾದುದು ಎಂದು ಹೇಳಿದ್ದಾರೆ. ಪ್ರಧಾನ ೧, ಮಹತ್ತತ್ತ್ವ ೧, ಅಹಂಕಾರತತ್ತ್ವ ೧, ಭೂತತನ್ಮಾತ್ರೆಗಳು ೫, ಮಹಾಭೂತ ಗಳು ೫, ಇಂದ್ರಿಯಗಳು ೧೧, ಪುರುಷ ೧–ಹೀಗೆ ಇಪ್ಪತ್ತೈದು ತತ್ತ್ವಗಳು ಉಕ್ತವಾಗಿವೆ: "ಪ್ರಕೃತಿಯಲ್ಲಿಯುಂ ಪ್ರಧಾನಮೆಂಬುದು" (ಹಲಾಯು. ೦೩೩-೧೩); ಅಚೇತನವಾದ ಪ್ರಧಾನದಿಂದಾಗಲಿ, ಅಣುಗಳಿಂದಾ ಗಲಿ ... ಜಗತ್ತಿನ ಉತ್ಪತ್ತಿಯೇ ಮುಂತಾದದ್ದು ಆಗಿರಬಹುದೆಂದಿಟ್ಟು ಕೊಳ್ಳುವುದಕ್ಕೆ ಆಗಲಾರದು (ಬ್ರಹ್ಮಸೂ. ೨೦). ೬. ಪರಮಾತ್ಮ; ದೇವರು. ೭. ಬುದ್ಧಿ; ಪ್ರಜ್ಞೆ: "ಪ್ರಧಾನಂ, ಪರಮಾತ್ಮ, ಬುದ್ಧಿ, ಮೂಲಪ್ರಕೃತಿ, ಪ್ರಧಾನಿ, ಮುಖ್ಯನಾದವನು, ಸಾಂಖ್ಯ ಜಗತ್ಕಾರಣ" (ಸಿದ್ಧಾಂತಿ. ೪೦೩). ೮. ರಾಜನಿಗೆ ಮುಖ್ಯಸಹಾಯಕನಾದ ಹಿರಿಯ ಅಧಿಕಾರಿ; ಮಹಾಮಾತ್ರ: "ಮಹಾಮಾತ್ರಃ, ಪ್ರಧಾನಂ-೨ ಅರಸನ ಬಳಿಯಲ್ಲಿ ಅಧಿಕಾರಿಗಳಾದ 'ದೊಡ್ಡಮನುಷ್ಯರಿಗೆ ಹೆಸರುಗಳು, ದಳವಾಯಿ ಮುಂತಾದವರಿಗೂ ಹೆಸರುಗಳು" (ಸಿದ್ಧಾಂತಿ. ೨೩೬); ಮಂಡಲಿಕಮಹಾಸಾಮಂತ ಮಂತ್ರಿಪ್ರಧಾನಪುರೋಹಿತಾಂತರ್ವಂಶಿಕಾದಿ ಪರಿವಾರಪರಿವೃತಂ (ಆದಿಪು. ೨-೩ ಪ); ಪಿರಿಯರಸಿ ಕಂಚಲಮಹಾದೇವಿಯರ ಸವಿಷಾಪದಲ್ . . . ಸಮಸ್ತಪ್ರಧಾನವೆಲ್ಲರುಮಿರೆ (ಸೌಇಇ. XX, ೯೩-೩೦; 1072). 'ಅಷ್ಟಾದಶಪ್ರಧಾನ' ಪರಾ. ೯. ಒಂದು ಬಗೆಯ ಆಭರಣ: ಅಶ್ವರತ್ನದ ಆಭರಣದ ಲೆಖ್ಖ . . . ೫ ಹಿಡಕಿ ೪ ಪ್ರಧಾನ ೧ ಭಾಲೆ (ಎಕ. XIV, ಪಂಪಪ. ೨೯೩, ಪುಟ ೧೯೩; 1847). ೧೦. ಒಳ್ಳೆಯ ಕುಲದಲ್ಲಿ ಹುಟ್ಟಿದವನು; ಸದ್ವಂಶಜ. ೧೧. ಒಳ್ಳೆಯ ನಡತೆ: "ಮಂತ್ರಿ ಸತ್ಕುಲಜಂ ಸಚ್ಚರಿತಂಗಳೆಂಬಿವು ಪ್ರಧಾನಾಖ್ಯಂ" (ನಾನಾರ. ೦೬೦). ೧೨. [ವ್ಯಾಕ] ಸಮಾಸದಲ್ಲಿ ಪ್ರಧಾನವಾದ ಅರ್ಥವನ್ನು ಕೊಡುವ ಪದ. [ಸಂ.]

**ಪ್ರಧಾನಕ್ರಿಯೆ** (ನಾ). [ವ್ಯಾಕ] ವಾಕ್ಯದಲ್ಲಿರುವ ಮುಖ್ಯವಾದ ಕ್ರಿಯಾ ಪದ: ಕಾದುತ್ತುಂ ಬಂದಂ . . . ಕಡೆದೊಡೆ ಪಾಲ್ಗಡಲ್ ವಿವಿಧವಸ್ತು ವನೀಯದೆ . . . ಮೊದಲನೆಯ ವಾಕ್ಯದಲ್ಲಿ 'ಬರುವುದೂ' ಎರಡನೆಯ ವಾಕ್ಯದಲ್ಲಿ 'ಈವುದೂ' ಪ್ರಧಾನಕ್ರಿಯೆಗಳು (ಕ್ರಶಿಪ. ೪೪). [ಸಂ. ಪ್ರಧಾನಕ್ರಿಯಾ]

**ಪ್ರಧಾನತೆ** (ನಾ). ಪ್ರಾಮುಖ್ಯತೆ: ಹೊನ್ನಿನ ಪ್ರಧಾನತೆಯಿಂದ ಹಂಜೇರು ಅಥವಾ ಹೇಮಾವತಿ ಎಂಬ ಹೆಸರು ಈ ಪಟ್ಟಣಕ್ಕೆ ಬಂದಿರಬಹು ದೆಂಬುದು ಊಹೆ (ಕೋಲಂಪ. ೬೬). [ಸಂ. ಪ್ರಧಾನತಾ]

**ಪ್ರಧಾನಮಂತ್ರಿ** (ನಾ). ೧. ಮುಖ್ಯಸಚಿವ; ಮೊದಲ ಸಚಿವ; ಪ್ರಧಾನ ಅಮಾತ್ಯ: ನಿಜಪ್ರಿಯಪ್ರಧಾನಮಂತ್ರಿಮತಿವರನೊಳಂ . . . ಆಲೋಚಿಸಿ (ಆದಿಪು. ೪-೬೯ ಪ): ಅರಸು ಪ್ರಧಾನಮಂತ್ರಿ ಆನೆ ಸೇನೆ ಪ್ರಜೆ ಪರಿವಾರವೆಲ್ಲವೂ ಸತ್ತು ಅರಸಿನ ಅರಸುತನ ಕೆಟ್ಟಿತ್ತು ನೋಡು (ಸಿದ್ಧೇಶ. ೧೯೯-೩೩೦). ೨. ಸಂಸದೀಯವ್ಯವಸ್ಥೆಯುಳ್ಳ ದೇಶಗಳ ಸರ್ಕಾರದ ಕಾರ್ಯಾಂಗದ ಪ್ರಮುಖವ್ಯಕ್ತಿ; ರಾಷ್ಟ್ರದ ಮುಖ್ಯ ಮಂತ್ರಿ: ಜವಹರಲಾಲರು ಭಾರತದೇಶದ ಪ್ರಧಾನಮಂತ್ರಿಗಳು ಆದರು (ಕಕಪ. ೩-೪೪). [ಸಂ. ಪ್ರಧಾನಮಂತ್ರಿನ್]

**ಪ್ರಧಾನಶ್ರೇಷ್ಠಿ** (ನಾ). ಪ್ರಮುಖನಾದ ವರ್ತಕ; ಮುಖ್ಯ ವ್ಯಾಪಾರಿ: ಪ್ರಧಾನಶ್ರೇಷ್ಠಿ ಧನಮಿತ್ರನೊಳಮಾಲೋಚಿಸಿ (ಆದಿಪು. ೪-೬೯ ಪ). [ಸಂ.ಪ್ರಧಾನಶ್ರೇಷ್ಠಿನ್]

**ಪ್ರಧಾನಿ** (ನಾ). ೧.=ಪ್ರಧಾನಮಂತ್ರಿ ೧: ಜೈನಪಂಡಿತನಿಗೆ ಪ್ರಧಾನೀ ಕೆಲಸ ಕೊಟ್ಟು (ಕುಮಾರಯ. ೪-೪೦). ೨. = ಪ್ರಧಾನಮಂತ್ರಿ ೨: ಆ ಸಮಾರಂಭದ ಉದ್ಘಾಟನೆಯನ್ನು ಪ್ರಧಾನಿಯವರು ನೆರವೇರಿಸಿದವರು (ಕೂಪ). [ಪ್ರಧಾನ + — ಇ]

**ಪ್ರಧಾನಿಕೆ** (ನಾ). ಪ್ರಧಾನಮಂತ್ರಿಯ ಪದವಿ; ಪ್ರಧಾನಿಯ ಅಧಿಕಾರ: ತಪ್ಪದೊಪ್ಪಿಸಿ ಹೋಗು ಸಾಕಿನ್ನೊಪ್ಪದಿಂ ಭಂಡಾರದೊಡೆ

ತನಮುಂ ಪ್ರಧಾನಿಕೆಯುಂ (ಜಿತ್ತ. ೧೧-೭). [ ಪ್ರಧಾನ + — ಇಕೆ ]

**ಪ್ರಧಾನಿತಿ** (ನಾ). ಪ್ರಧಾನನುಂತ್ರಿಯ ಹೆಂಡತಿ : ಅರಸನ ಪೆಂಡತಿ, ಅರಸಿತಿ, ಏವು ಪ್ರಧಾನಿತಿ, ತಳವಱಿತಿ (ಕಬ್ಬಿಗ. ೧೪೧ ಶ್ರಯೋ). [ ಪ್ರಧಾನ + — ಇತ್ತಿ ( < — ಇತ್ತಿ ) ]

**ಪ್ರಧಿ** (ನಾ). ೧. ಚಕ್ರದ ಅಂಚು ; ಗಾಲಿಯ ಸುತ್ತು,-ಪರಿಧಿ : "ಚಕ್ರಧಾರಾ, ಪ್ರಧಿಃ, ನೇಮಿಃ — ಈ ೩ ನೆತ್ತಿವಟ್ಟಗೆ" (ಹಲಾಯು. ೬೩-೨೯೩). ೨. ಬಾವಿಯ ರಾಟೆ : "ಅಂಧುಃ, ಕೂಪಃ — ಈ ೨ ಬಾವಿ, ಪ್ರಧಿಃ, ನೇಮಿಃ (ಅದಱ ಱಾಟ) " (ಹಲಾಯು. ೧೦೩-೬೨). [ ಸಂ. ]

**ಪ್ರಧ್ವಂಸ** (ನಾ). ಸಂಪೂರ್ಣ ನಾಶ : ನೃಸಿಂಹನನಿಪ್ಪಾಕೃತಿಯಿಂ ಹಿರಣ್ಯಕಶಿಪು ಪ್ರಧ್ವಂಸವಂ ಮಾಡಿದ್ಯೆ (ಜಗಿ. ೧-೩೯); ಖಳಕವರ್ಗಾಷ್ಟವಿಧೋಗ್ರ ಕಟಕಕಳಪ್ರಧ್ವಂಸದಿಂದಂ ನಿರ್ಭಾಳರುಂ . . . ತಾವಾಗಿ (ಜೀವಸಂ. ೨-೨). [ ಸಂ. ]

**ಪ್ರಧ್ವಂಸನ** (ನಾ). ೧. ಸಂಪೂರ್ಣನಾಶ ಮಾಡುವಿಕೆ ; ಪೂರ್ತಿ ಹಾಳುಮಾಡುವಿಕೆ : ಅಘಕುಲಪ್ರಧ್ವಂಸನೋಪಾಯುವಂ ಬಗೆಯುತ್ತುಂ (ಸುಕುಮಾ. ೧-೩); ಆಚಾರ್ಯರ್ ತಾಮುಮಗೀವರಕ್ಕೆ ದುರಿತಪ್ರಧ್ವಂಸನೋಪಾಯವುಂ (ಜೀವಸಂ. ೧-೩). ೨. ಹಾಳು ಮಾಡುವವನು. [ ಸಂ. ]

**ಪ್ರಧ್ವಂಸಾಭಾವ** (ನಾ.) [ದ್ವೈತ] ನಾಲ್ಕು ಬಗೆಯ ಅಭಾವಗಳಲ್ಲಿ ಒಂದು; ವಿನಾಶ ಹೊಂದುವ ಅಭಾವ : ಪುಟ್ಟದ ಘಟನೊಡದ ಬಳಿಕ್ಕಿನ್ನಿಲ್ಲವೆಂಬುದೇ ಪ್ರಧ್ವಂಸಾಭಾವವೆನಿಸುವುದು (ಐವಳ. ೨೩); ಈ ಅಭಾವವೆಂಬುದು ಪ್ರಾಗಭಾವ, ಪ್ರಧ್ವಂಸಾಭಾವ, ಅತ್ಯಂತಾಭಾವ, ಅನ್ಯೋನ್ಯಾಭಾವವೆಂದು ನಾಲ್ಕು ಪ್ರಕಾರ (ಹಿಂದಕಾ. ೧೬೯). [ಸಂ.]

**ಪ್ರಧ್ವಾನ** (ನಾ). ದೊಡ್ಡ ಶಬ್ದ,-ಧ್ವನಿ,-ಮೊಳಗು: ವನಧಿಪ್ರಧ್ವಾನದಿಂ ಮಂಗಳಪಟಹರವಂ ಪೆರ್ಚೆ (ಶಂಕರಾ. ೧೯-೧೮); ನಿನ್ನೊಳ್ಗನ್ನಗಳ ನಾಲೋಳವುದಾಳಿ ಮಂದ್ರಮಧುರಪ್ರಧ್ವಾನದಿಂ ಪಾಡಿದಳ್ (ಎಕ. VIII, ಸಾಗರ. ೧೧೯-೪೦ : 1042); ಪಟುಪ್ರಧ್ವಾನವುಂ ಬೀಱಿದುವು ಕಹಳೆಗಳ್ (ರಾಜಶೇ. ೬-೧೭). [ಸಂ.]

**ಪ್ರನವ** (ಗು). ತೀರ ಹೊಸ ; ಬಹಳ ನವೀನವಾದ : ಮನುಸಿನ ಮಾತಿದು ಮನದಂತಾದರೆ ಪ್ರನವಸುವುಂಗಲೆಯಾಗುವೆನು (ಶಲ್ಲ. ೩೦-೩). [ಸಂ. (ಪ್ರ+ನವ). / P ವ್ಯಾಕರಣದ ನಿಯಮದ ಪ್ರಕಾರ ಇದು ಅಶುದ್ಧ ರೂಪ]

**ಪ್ರನಾಳ** (ನಾ). ರಾಸಾಯನಿಕಪರೀಕ್ಷೆಯ ಪ್ರಯೋಗ ಮುಂತಾದುವುಗಳಲ್ಲಿ ಬಳಸುವ ಗಾಜಿನ ಕೊಳವೆ : ಹೀಲಿಯಂ ತುಂಬಿದ ಪ್ರನಾಳವನ್ನು ಹೀಲಿಯಂ ಪಾತ್ರೆಯ ಮೇಲೆ ಹಿಡಿದಾಗ ಪ್ರನಾಳದ ಹೀಲಿಯಂ ಗೋಡೆಯ ಅಂಚಿನಲ್ಲಿ ಹರಿದು ಪಾತ್ರೆಗೆ ಬೀಳುತ್ತದೆ (ಕಂಕೋ. I, ೨೩೩). [ಸಂ. ಪ್ರನಾಲ]

**ಪ್ರನಾಳಶಿಶು** (ನಾ). ಭ್ರೂಣವನ್ನು ವೈಜ್ಞಾನಿಕವಾಗಿ ಗಾಜಿನ ಪಾತ್ರೆಯಲ್ಲಿ ಮೊದಲು ವೃದ್ಧಿ ಪಡಿಸಿ, ನಂತರ ತಾಯಿಯ ಗರ್ಭದ ಮೂಲಕ ಜನಿಸುವಂತೆ ಮಾಡುವ ಶಿಶು, [ಸಂ. ಪ್ರನಾಲಶಿಶು. / P ಇದು ಇಂಗ್ಲಿಷಿನ 'Test-tube baby' ಎನ್ನುವುದರ ಅನುವಾದ]

**ಪ್ರಪಂಚ** (ನಾ). ೧. ಹರವು ; ವಿಸ್ತಾರ : "ವ್ಯಾಸಃ, ಪ್ರಪಂಚಃ, ವಿಸ್ತಾರಃ— ಈ ೩ ಹಿರಿದು ಮಾಡುಹ" (ಹಲಾಯು. ೦೨೬-೯೧); ಪ್ರಪಂಚ ವೇದರೆ ವಿಸ್ತಾರ (ಕಬ್ಬಿ.ಧಿ. ೩೩). ೨. ಜಗತ್ತು ; ವಿಶ್ವ; ಲೋಕ : ಪ್ರಪಂಚವು ಮುಳುಗಿಹೋದರೂ ಅದನ್ನು ಮತ್ತೊಬ್ಬರಿಗೆ ಕೊಟ್ಟಾನೇ ? (ಕಲಿಕೆ. ೨೩) ; ಕಲಿಯ ಪ್ರಪಂಚದೊಳಿಂತೆನಗವರಾದಿಗುರುವಾಗಿ ತೆರೆದರು ಹಾದಿ (ಶಂಕಾಶ. ೧೦-೪೧). ೩. ಲೌಕಿಕವಾದ ಬಾಳು; ಸಂಸಾರ: ಬಿಡೆಯಲಾ ನಿನ್ನ ಪ್ರಪಂಚವ ನಾನು ನನ್ನೊಡಹುಟ್ಟಿದವರೆಂದ ಮೇಲೆ ಕಡುಬೇಗ ಕರೆಸುವೆನೆನ್ನದೆ ನೀನಿದ ನುಡಿವರೆ (ಭಕಿ. ೩೯-೦೩೯); ತಿಂಗಳಿಗೆ ಒಟ್ಟು ನೂರಾ ಐವತ್ತು ಸಂಬಳ, ಪ್ರಪಂಚ ಸಾಗುವುದು ಬಿಗಿ (ಕುಂಹಿ. ೨೭) : ಪ್ರಪಂಚ ಬಿಡುತ್ತೇನೆಂದು ಪಂಚಮಹಾಪಾಪ ಹೊಂದಿಕೊಂಡ (ಗಾದೆ). ೪. ಮೋಸ ; ವಂಚನೆ. ೫. ಸಮೂಹ ; ಮೊತ್ತ ; ಗುಂಪು : ಅದೇ ವಾನರಪ್ರಪಂಚ. ಆ ಪ್ರಪಂಚದಿಂದ ಪ್ರಾರಂಭವಾಗುವ ದೃಶ್ಯಗಳು ವೀರ ರಸಕ್ಕೆ ಎಡೆಗೊಡುತ್ತವೆ (ಭಾರತ. ೯೯). ೬. ವರ್ತಮಾನ ; ಸಂಗತಿ : ಅಬ್ಜದಳಾಕ್ಷಿ ಪೇಟ ಸಾಮಾನ್ಯಮೆ ಬಗೆಯ ಭವತ್ಕ್ಲೇಶಪಾಶಪ್ರಪಂಚಂ (ಶಂಕರಾ. ೦೨-೧೩೭); ನಾಗಶರ್ಮನಾ ಪ್ರಪಂಚಮೆಲ್ಲಮಂ ತಳಾಱನಂ ಬೆಸಗೊಂಡು (ಸುಕುಮಾ. ೬-೩೩ವ) ; ಕಂಸಕೃತಾಪಚಾರಮಂ ತತ್ಪ್ರಪಂಚಮನಱಿಪೆ (ಜಗಿ. ೩-೩ ವ) . ೭. ವಿವಿಧತೆ; ವೈವಿಧ್ಯ; ಭಿನ್ನತೆ; ವೈಚಿತ್ರ್ಯ. ೮. ವಿಭಜನೆ ; ವಿಶ್ಲೇಷಣೆ. ೯. ಆವಿರ್ಭಾವ; ತೋರಿಕೆ. [ಸಂ.]

**ಪ್ರಪಂಚಜ್ಞಾನ** (ನಾ) . ಲೌಕಿಕಜ್ಞಾನ ; ವ್ಯವಹಾರಜ್ಞಾನ : ದೇವರು ನಿಮಗೆ ವಿವೇಕ ಕೊಟ್ಟಿದ್ದಾನೆ. ಪ್ರಪಂಚಜ್ಞಾನವಿದೆ (ದೇವಹಂ. ೬೨). [ ಸಂ. ]

**ಪ್ರಪಂಚತೆ** (ನಾ). ಮೋಸ ; ವಂಚನೆ : ಸತಿಯರಲ್ಲಿಯ ಪ್ರಪಂಚತೆಯ ನೆಲ್ಲವನು ಕಾಣುತ . . . ಕ್ಷಿತಿಯೊಡೆತನವ ಬಟ್ಟಸಿತೇಗದಿಂದ ವಿರತಿದಾಳಿ ಪೋದೊಲಿದಲ್ಲ (ಮೋಕ್ಷಮಾ. ೩-೧೯). [ಸಂ. ಪ್ರಪಂಚತಾ]

**ಪ್ರಪಂಚನ** (ನಾ). ಹರಡುವುದು ; ವಿಸ್ತರಿಸುವುದು ; ಅರಳುವುದು : ಅವಿತಪ್ರಪಂಚನಾಕುಂಚನಾವರ್ತನಕ್ರಮವೆ ವಿಶ್ವಚರಿತ್ರ (ಮುಂಕುಳ. ೯೦). [ಸಂ.]

**ಪ್ರಪಂಚಿ** (ನಾ). ೧. ಸಂಸಾರದಲ್ಲಿ ಆಸಕ್ತನಾದವನು ; ಲೌಕಿಕವ್ಯಕ್ತಿ. ೨. ಮೋಸಗಾರ ; ವಂಚಕ : ತನು ಮನ ಧನದಲ್ಲಿ ವಂಚನೆಯುಳ್ಳ ಪ್ರಪಂಚಿಯ ಮನೆಯ ಕೂಳು ಶುನಕನ ಬಾಯ ಎಲುವ ಪ್ರತಿಶುನಕ ತಿಂದಂತೆ (ದೇದಾವ. ೩೦-೩೩); ನುಡಿದು ಹುಸಿವ ನಡೆದು ತಪ್ಪುವ ಪ್ರಪಂಚಿಯನೊಲ್ಲ ಕೂಡಲಸಂಗಮದೇವ (ಬಸವ. ೨೩೭). ೩. ವ್ಯವಹಾರಕುಶಲನಾದವನು. [ಸಂ. ಪ್ರಪಂಚಿನ್]

**ಪ್ರಪಂಚಿಸು** (ಕ್ರಿ). ವಿವರಿಸು ; ವಿಸ್ತಾರವಾಗಿ ತಿಳಿಸು : ಕ್ರಿಯಾಕವರ್ಗಮೆಂಬುದು ಅರ್ಹತ್ಸಿದ್ಧಾಚಾರ್ಯಬಹುಶ್ರುತಸಾಧುಪೂಜಾಕ್ರಿಯೆಯಂ ಪ್ರಪಂಚಿಸುಗುಂ (ಕಪ್ಪೆ ಶ್ರ. ೬೩); ಇಂತು ಪಂಚಾಶ್ಚರ್ಯಮಂ ಪ್ರಪಂಚಿಸುತ್ತುಮಿರೆ (ಶಾಂತಿ. ೬-೨೦ವ) ; ಸಂಧಿ . . . ಅವ್ಯಯಮೆಂಬಷ್ಟು ಪ್ರಕಾರಮಂ ಪ್ರಪಂಚಿಸುವ ವ್ಯಾಕರಣದೋಷಮಿಲ್ಲದೆ (ಶಿವಳೆ. ೨೨೬). [ಪ್ರಪಂಚ+ — ಇಸು]

**ಪ್ರಪಂಚು** (ನಾ). ೧. ವ್ಯಾಪ್ತಿ; ವಿಸ್ತಾರ: ಸಂಚುವ ಸತೀಜನದೊಳಂಗಭವ ಕೇಳೀಪ್ರಪಂಚುವರನೊಳ್ಪಮನಿಸಿ (ಕೃಶಿಚಾ. ೨೬-೧೧). ೨. ಲೌಕಿಕವಾದ ಬದುಕಂ ; ಸಂಸಾರ : ಪ್ರಪಂಚಿನ ಡಂಬಿನಲಿ ಎನ್ನನೊಂದು ರೂಹು ಮಾಡಿ ನೀವಿರಿಸಿದಿರಿ (ಬಸವ.೨೯). 'ಪ್ರಪಂಚುಜೀವಿ' ಪರಾ. ೩. ಮೋಸ; ವಂಚನೆ : ಸಟೆಯಿಲ್ಲದಂತೆ ಪ್ರಪಂಚುವಿಲ್ಲದಂತೆ ವ್ಯಶಿಕವಿಲ್ಲದಂತೆ ನಡಸಯ್ಯಾ ಲಿಂಗತಂದೆ (ಬಸವ. ೩೧) ; ಪ್ರಪಂಚಿಲ್ಲದುದಱ ತೂಗಿದಾ ಬಯಲ ಲಿಂಗಣನ ಚರಣಾಂಬುಜಕ್ಕೆ ಶರಣು (ಅಕಂ. ೩೯-೬೬): ಸವಿನೋಟದೊಳ್ಸಂಚು ನಗೆಯೊಳ್ ಪ್ರಪಂಚು . . . ಗಣಿಕೆಯರ ತಂದುಮಾ ತೆಱದ ಚೆಲ್ವಂ ಪಡೆದುದು (ಕೃಶಿಚಾ. ೬-೩೯). ೪. ಮಾಯೆ ; ಮೋಹ : ಮಣ್ಣು ದೇಹ ಹೊನ್ನು ಪ್ರಾಣ ಹೆಣ್ಣು ಸರ್ವಪ್ರಪಂಚು (ಸೋಲಮಾ. ೪೩-೦೬೮) ; ಪ್ರಾಣಲಿಂಗವಾದ ಶರಣಂಗೆ ಪ್ರಪಂಚಿನ ಕುಱುಹಿಲ್ಲ (ಅಖಂಡ.

೧೦೬-೪೪). ೫. ಜೀವಿ ; ಬದುಕುವ ವ್ಯಕ್ತಿ (?) : ಕುಸುಮಬಾಣ ಪ್ರಪಂಚುಗಳ್ ಶಿರಹಸ್ಯದಿಂದೊಸೆದು ತಮ್ಮ ಪವಲ್ಲಭರನಗಲ್ದು ಮನೆಗೆಯ್ದಿ ಪೋಪ ಜಾರೆಯರೆಸೆದರು (ಅಕೋಪು. ೪-೬೬). 'ಪರಪಂಚ' ಪಠಾ. [<ಸಂ. ಪ್ರಪಂಚ]

**ಪ್ರಪಂಚುಜೀವಿ** (ನಾ). ಲೌಕಿಕಜಗತ್ತಿನಲ್ಲಿ ಆಸಕ್ತಿ ಇರುವವನು ; ಲೌಕಿಕವ್ಯಕ್ತಿ : ಜೀವನೋಪಾಯಕ್ಕೆ ಪರಮಾರ್ಥವನು ಅಲ್ಲ ಎಂಬ ಪ್ರಪಂಚುಜೀವಿಗಳ ಮೆಚ್ಚನು ಕಾಣಾ (ಸಿದ್ಧೇವ. ೩೬-೧೬೫). [ಪ್ರಪಂಚು + ಜೀವಿ₁]

**ಪ್ರಪಂಚುಭಾವ** (ನಾ). ಇಹಲೋಕದ ಆಸಕ್ತಿ ; ಲೌಕಿಕಭಾವ : ಈ ಹೊನ್ನು ಹೆಣ್ಣು ಮಣ್ಣು ಎಂಬವು ಪ್ರಾಣಂಗೆ ಪ್ರಪಂಚುಭಾವವೆಂದರಿದು (ಸಿದ್ಧೇವ. ೯೪-೨೯೫). [ಪ್ರಪಂಚು + ಭಾವ₂]

**ಪ್ರಪತ್ತಿ** (ನಾ). ೧. ಮರೆಹೊಗುವಿಕೆ ; ಆಶ್ರಯಿಸುವುದು : ರಿಪುಜಯ ಕಾರಣಶರಮಂ ಪ್ರಪತ್ತಿಯಿಂ ಪಡೆವಂ (ಕಲಕಂ. ೨-೦೦೬). ೨. [ವಿಶಿಷ್ಟಾ] ಮೋಕ್ಷಸಾಧನೆಯ ಮಾರ್ಗಗಳಲ್ಲಿ ಒಂದು ಬಗೆ ; ಶರಣಾಗತಿ ; ೀ ಆಳ್ವಾರರ ಕಾಲದಲ್ಲಿ ಆರಂಭವಾದ ಈ ಸಂಪ್ರದಾಯಕ್ಕೆ ಶ್ರೀವೈಷ್ಣವರಲ್ಲಿ ಒಂದು ವಿಶಿಷ್ಟಸ್ಥಾನವಿದೆ : ಜೀವಸಾಮಾನ್ಯವೂ ಪ್ರಪತ್ತಿ ಎಂಬ ಮಾರ್ಗದಿಂದ ಆಯಾ ಜನ್ಮದಲ್ಲೇ ಮೋಕ್ಷವನ್ನು ಹೊಂದ ಬಹುದು (ಹಂದಶಾ. ೨೬೦) ; ಈ ಪ್ರಪತ್ತಿಯು ಆರ್ತಪ್ರಪತ್ತಿ, ದೃಪ್ತ ಪ್ರಪತ್ತಿ ಎಂದು ಎರಡು ಬಗೆಯಾಗಿರುತ್ತದೆ (ಹಾಕರ. ೨೬೪). [ಸಂ.]

**ಪ್ರಪತ್ತಿಮಾರ್ಗ** (ನಾ). ಶರಣಾಗತಿಯ ಮಾರ್ಗ : ರಾಮಾನುಜರಿಂದ ಪ್ರಪತ್ತಿಮಾರ್ಗಕ್ಕೆ (ಭಕ್ತಿಪಂಥಕ್ಕೆ) ದೊರೆತ ಪುರಸ್ಕಾರದಿಂದಾಗಿ ಹಾಗೂ . . . ರಾಜಾಶ್ರಯದಿಂದಾಗಿ, ಅನೇಕರು ಈ ಭಕ್ತಿಪಥವನ್ನು ಹಿಡಿದರು (ಕರ್ಣಾ೪. ೬೩) ; ಇವೆಲ್ಲಕ್ಕಿಂತಲೂ ಪ್ರಪತ್ತಿಮಾರ್ಗವು ಶ್ರೇಷ್ಠತಮವಾದ ಮಾರ್ಗವೆಂಬುದನ್ನೂ ಶ್ರೀಚಿಕ್ಕದೇವರಾಜರ ಬಿನ್ನಪದಲ್ಲಿ ಹೀಗೆ ವರ್ಣಿಸಿದ್ದಾರೆ (ಶಾಂಕಜ. ೩೯). [ಸಂ.]

**ಪ್ರಪತ್ರ** (ನಾ). ಅರ್ಜಿಯ ನಮೂನೆ ; ಅಭ್ಯರ್ಥಿಪತ್ರದ ನಮೂನೆ : ಭಾರತಸರ್ಕಾರದಿಂದ ವಿಧಾಯಕವಾದ ಪ್ರಪತ್ರದಲ್ಲಿ ಅಥವಾ ರೀತಿಯಲ್ಲಿ ಆವೇದನಪತ್ರವನ್ನು. . .ರಿಜಿಸ್ಟರು ಮಾಡಿಸಿಕೊಂಡಿದ್ದ ಪಕ್ಷದಲ್ಲಿ ಆತನು ಭಾರತದ ನಾಗರಿಕನೆಂಬುದಾಗಿ ಭಾವಿಸತಕ್ಕುದು (ಭಾರಾಪ. ೬). [ಸಂ.]

**ಪ್ರಪದ** (ನಾ). ೧. ಪಾದದ ಅಗ್ರಭಾಗ.—ಮುಂಭಾಗ ; ಕಾಲಿನ ತುದಿ : "ಪಾದಾಗ್ರಮಂತದಕ್ಕು ಪ್ರಪದಂ" (ಚತುಕೋ. ೬೬-೩) : ವಸುಧೆ ಪದತಳದಲ್ಲಿ ಪ್ರಪದದಲಿ ಶಕ್ರನಜನೆಸೆವ ಜಂಘೆಯಲಿ (ಹೇಕ್ಕಕು. ೦-೬-೦೨) ; ಪೋಗಿ ಚರಣಂಗಳಿಗೆ ನಮಿಸಿ ಬರುವೆನಗ್ರಜಮೆರಸಿ ಪ್ರಪದಾಕಲಂಕನೆನಿಸಿ ಪರಿಪೂರ್ಣದಯೆಯಿಂದ ಪಾಲಿಸುವುದು ( ಶಂಕಾರಾ. ೨-೨೯-೨೬ ). ೨. ಹೆಬ್ಬೆರಳಿನ ತುದಿ. [ಸಂ.]

**ಪ್ರಪದ್ಯ** (ನಾ). ಉತ್ಕೃಷ್ಟವಾದ ಕಾವ್ಯ : ಸಕಲವಿಬುಧಹೃದ್ಯಂ ಸಮಂತ್ರೀ ಪ್ರಪದ್ಯಂ (ಜಗಂ. ೦-೨೨). [ಸಂ.]

**ಪ್ರಪನ್ನ** (ನಾ). ಮರೆಹೊಕ್ಕವನು ; ಶರಣಾಗತನಾದವನು : ಪ್ರಪನ್ನ ರಪ್ಪವರ್ಗೆ ಸಕಲಸಾಂಸಾರಿಕದುಃಖನಿವೃತ್ತಿ (ಗೀತಗೋ. ೩೪-೩ ಟಿ) ; ಪ್ರಪನ್ನನು ಸರ್ವಸಂಗಪರಿತ್ಯಾಗ ಮಾಡಿ ಅನನ್ಯಗತಿಕನಾಗಿ, ಭಗವಂತನನ್ನು ಆಶ್ರಯಿಸಿದವನು (ಭಾಕಕ್ಕ. ೬೬೦). [ಸಂ.]

**ಪ್ರಪನ್ನತ್ವ** (ನಾ). ಶರಣಾಗತಿ. [ಸಂ.]

**ಪ್ರಪನ್ನೆ** (ನಾ). ಹೊಂದಿದವಳು ; ಪಡೆದವಳು : ಅಪರಾಜಿತಪ್ರಸಾದ ಪ್ರಪನ್ನೆಯಾ ಕನ್ನೆ (ಶಾಂತಿಪು. ೪-೬೩) ; ಬಾಯುಬ್ಬಿದು ಪಳಮಿಸುತ್ತಂ ಮೂರ್ಛಾಪ್ರಪನ್ನೆಯಾಗಿ (ಶಾದಂಕಾ. ೬೪೦). [ಸಂ. ಪ್ರಪನ್ನಾ]

**ಪ್ರಪಾಂಗನೆ** (ನಾ). ಪಥಿಕರಿಗೆ ನೀರು ಕೊಡುವ ಅರವಟ್ಟಿಗೆಯಲ್ಲಿರುವ ಹೆಂಗಸು : ಲಾವಣ್ಯತೋಯಮನಾಲೋಕನಮಾತ್ರದಿಂ ಪಾಚಿದು ಪಾಂಥಶ್ರೇಣಿ ನೀರಟ್ಕೆಯುಂ ಶ್ರಮಮುಂ ತೀರಮೆಯ್ಯು ಪ್ರಪಾಂಗನೆಯರಂ ಕಣ್ಗಾಪ್ಪುವಾ ದೇಶದೊಳ್ (ಶಂಕಾಪು. ೦-೦೦೩). [ಸಂ. ಪ್ರಪಾಂಗನಾ]

**ಪ್ರಪಾಂಥ** (ನಾ). ಪ್ರಯಾಣಿಕ ; ದಾರಿಹೋಕ : ಪುಷ್ಪಚಾಪಾಸ್ತ್ರಟಂಕಾರ ರವೋದ್ಭಿನ್ನಪ್ರಪಾಂಥಪ್ರಕರಹೃದಯರಕ್ತಾಂಬುಗಳ್ ಕೂಡೆ ಮಾರ್ಗಾಂತರ ದೊಳ್ ಸೂಸುತ್ತಿರಲ್ ಬಂದುದು ಶಿಶಿರನೃಪೋದ್ಧತ್ಯಕಾಂತಂ ವಸಂತಂ (ಕಾದಂಪು. ೬೨೦). [ಸಂ.]

**ಪ್ರಪಾಕಳಾಪ** (ನಾ). ಅರವಟ್ಟಿಗೆಯ ಕೆಲಸ : ನಿರುಪಮ ಪ್ರಪಾಕಳಾಪ ಪ್ರಕಾಂಡಮಂಡಪಂಗಳಲ್ಲಿ (ಚಾರಿತ್ರ. ೧-೯೯ ಟ). [ಸಂ. ಪ್ರಪಾಕಲಾಪ]

**ಪ್ರಪಾಠಕ** (ನಾ). ಗ್ರಂಥದ ಒಂದು ಭಾಗ ; ಅಧ್ಯಾಯ, ಪ್ರಕರಣ, ಸಂಧಿ ಇತ್ಯಾದಿ : ಛಾಂದೋಗ್ಯದ ಎಂಟನೆಯ ಪ್ರಪಾಠಕದಲ್ಲಿ ಇಂದ್ರ ವಿರೋಚನನ ಉಪಾಖ್ಯಾನವು ಬಂದಿದೆ (ಶಂಕರ. ೪೦). [ಸಂ.]

**ಪ್ರಪಾಣ** (ನಾ). ಕುದುರೆಯ ಮೇಲ್ತುಟಿಯ ಒಳಭಾಗ : ಮೇಗಣ ತುಟಿಯ ಮುಂದುಗಡೆ ಪ್ರಪಾಣ (ಅಶ್ವಶಾ. ೩೯-೧೨). [<ಸಂ. ಪ್ರಪಾಣ]

**ಪ್ರಪಾತ** (ನಾ). ೧. ಕಡಿದಾದ ಕೊರಕಲು ; ಕಣಿವೆ : ವಿಜಯಾರ್ಧ ಪರ್ವತದ ಕಾಂಡಕಪ್ರಪಾತಗುಹೆಗಭಿಮುಖನಾಗಿ (ಶಾಂತಿಪು. ೦೦-೬೬ ಟ). ೨. ತಡಸಲು ; ಜಲಪಾತ. ೩. ಆಕ್ರಮಣ ; ಮುತ್ತಿಗೆ ; ದಾಳಿ : "ಅವಸ್ಕಂದಃ, ಪ್ರಪಾತಃ—ಈ ಎರಡು ದಾಟಿ" (ಹಲಾಯು. ೬೪-೨೯೬) : ಪವನಪ್ರಪಾತಚಲಿತಕಲ್ಲೋಲಮಾಲೆಯಿಂ (ರಾಜಶೇ. ೨-೬ ವ). ೪. ದಂಡೆ : ತೀರ ; ದಡ : "ತೀರಂ, ಕೂಲಂ, ತಟಂ, ಕಚ್ಛಃ, ಪ್ರಪಾತಃ, ರೋಧಃ—ಈ ಆರು ತೊರೆಯ ತಡಿ" (ಹಲಾಯು. ೧೦೦-೪೩) ; ಹಿಮ ವತ್ಪರ್ವತದ ಸಿಂಧುಪ್ರಪಾತಮನೆಯ್ದಿ (ಆದಿಪು. ೦೩-೬೬ ವ). [ಸಂ.]

**ಪ್ರಪಾನ** (ನಾ). ೧. ಕುಡಿಯುವುದು. ೨. = ಪ್ರಪಾಣ : ಉತ್ತರದೋಷ್ಠದ ನಡುವದು ಬಿತ್ತರಿಪ ಪ್ರಪಾನವೆಂಬ ಪೆಸರಾ ಪ್ರಪಾನ ದುತ್ತರಪ್ರೋಥಮಾದಕ್ಕುಂ (ಅಶ್ವಶಾ. ೯-೦೨). [ಸಂ.]

**ಪ್ರಪಾಪಾಲಿಕೆ** (ನಾ). ನೀರನ್ನು ಒದಗಿಸುವವಳು ; ಅರವಟ್ಟಿಗೆಯನ್ನು ನಡೆಸುವವಳಂ : ಕೆಯ್ವೊಲಗಾವ ಪಾಮರಿಯರುಂ ಮಾರ್ಗಪ್ರಪಾಪಾಲಿಕಾ ಜನಮುಂ . . . ಪುರವರವ್ಯಾವರ್ಣನಕ್ಕಾಸ್ಪದು (ಸೂಕ್ತಿಸು. ೪-೦) ; ಅಷ್ಟರಲ್ಲಿ ಸಮೀಪದ ಅರವಂಟಿಗೆಯ ಪ್ರಪಾಪಾಲಿಕೆ ಅಲ್ಲಿಗೆ ಬಂದು . . . ಹರಿವಾಣವನ್ನು ಎದುರಿಗಿಟ್ಟಳು (ದೂರೀಜಾ. ೦೨೯ ). [ಸಂ. ಪ್ರಪಾಪಾಲಿಕಾ]

**ಪ್ರಪಾಪ್ರಣಯಿನಿ** (ನಾ). = ಪ್ರಪಾಂಗನೆ : ಪಾಂಥರ್ . . . ದಿಟ್ಟಿ ಗಳಿಂದೀಂಟುವರಾ ಪ್ರಪಾಪ್ರಣಯಿನೀಲಾವಣ್ಯನೀರಂಗಳು (ಮಲ್ಲಿಪು. ೨-೨೪); ಜಳಪಾನಚ್ಛಳದಿಂ ಪ್ರಪಾಪ್ರಣಯಿನೀಶೃಂಗಾರಲೀಲಾಸುಧಾಜಳಮಂ ಕಣ್ಗಳಿನೀಂಟಿ (ಚಂದ್ರಪ್ರ. ೦-೯೪). [ಸಂ. ಪ್ರಪಾಪ್ರಣಯಿನೀ]

**ಪ್ರಪಾಪ್ರಮದೆ** (ನಾ). = ಪ್ರಪಾಂಗನೆ : ಕುಡಿನೀರೆತ್ತುವವೋರ್ ಪ್ರಪಾ ಪ್ರಮದೆಯರ್ ಸತ್ರಂಗಳೊಳ್ (ಅಪಂಪು. ೧-೬೪). [ಸಂ. ಪ್ರಪಾಪ್ರಮದಾ]

**ಪ್ರಪಾಮಂಟಪ** (ನಾ). ಪಥಿಕರಿಗೆ ನೀರನ್ನು ಒದಗಿಸುವ ಸ್ಥಳ ; ಅರವಟ್ಟಿಗೆ : ಕಣ್ಗೊಳಿಸುಂ ನಾನಾಲತಾಂತಪ್ರಸರಸುರಯುತಂಗಳ್ ಪ್ರಪಾಮಂಟಪಂಗಳ್ (ರಾಜಶೇ. ೨-೨೦). [<ಸಂ. ಪ್ರಪಾಮಂಡಪ]

**ಪ್ರಪಾವಧು** (ನಾ). = ಪ್ರಪಾಂಗನೆ : ಏಂ ವ್ಯಾಧವಧುಗಳೋ ಮೇಣ್ ಪ್ರಪಾವಧುಗಳೋ (ಶಬ್ದಾಶಾ. ೬-೪). [ಸಂ.]

**ಪ್ರಪಾಶಾಲೆ** (ನಾ). = ಪ್ರಪಾಮಂಟಪ : ಜಳಧಾರೆ ಕಂಗೊಳಿಸು ತಿರ್ಪುದಧ್ವಶ್ರಮಂಗಳನಾಂತು ಬಂದ ಪಥಿಕರ್ಕಳೀಂಟುವ ಸಮಯ ದೊಳ್ಪ್ರಪಾಶಾಲೆಗಳೊಳು ( ಕೃಬಂಶಾ. ೩-೦೦ ). [ಸಂ. ಪ್ರಪಾಶಾಲಾ]

**ಪ್ರಪಾಸದನ** (ನಾ). = ಪ್ರಪಾಮಂಟಪ : ಇದು ಕಾಮೋನ್ಮಾದ ಪಾನ ಪ್ರಪಾಸದನಂ . . . ಎನೆ ಚೆಲ್ವಾದತ್ತು ಚಂದ್ರಾತಪಂ (ಮಲ್ಲಿಪು. ೬-೬೩). [ಸಂ.]

**ಪ್ರಪಿತಾಮಹ** (ನಾ). ತಂದೆಯ ತಂದೆಯ ತಂದೆ ; ತಾತನ ತಂದೆ ; ಮುತ್ತಜ್ಜ : ಭಕ್ತಾಂಗನೆಯ ಸುತನಹ ಸದ್ಭಕ್ತಂಗೆ ಪಿತನು ಗುರು ಪಿತಾಮಹನ ಜಂಗಮು ಪ್ರಪಿತಾಮಹನು ಮಹಾಲಿಂಗ ಉಂಟು ಕೇಳಿರಣ್ಣಾ (ಅಂಕಿ.ಕ. ೩೨-೫೮) ; ಪಿತೃ, ಪಿತಾಮಹ, ಪ್ರಪಿತಾಮಹ ರೆಂಬ ಮೂರು ವಿಧ ಪಿತೃಗಳಿಗೆ ಅಧಿಪತಿಗಳು ವಸುಗುಣ, ರುದ್ರಗಣ, ಆದಿತ್ಯಗಣ ಎಂಬ ಮೂರು ಗಣಗಳು (ಧರ್ಮಕ. ೧೯-೦ ತಾತ್ಪರ್ಯ). [ಸಂ.]

**ಪ್ರಪಿತಾಮಹಿ** (ನಾ). ತಂದೆಯ ತಂದೆಯ ತಾಯಿ ; ತಾತನ ತಾಯಿ ; ಮುತ್ತಜ್ಜಿ. [ಸಂ. ಪ್ರಪಿತಾಮಹೀ]

**ಪ್ರಪುನಾಟ** (ನಾ). ಒಂದು ಬಗೆಯ ಸಸ್ಯ ; ಚಗಚೆ : "ಏಡಗಜಃ, ಪ್ರಪುನಾಟಃ, ದದ್ರುಘ್ನಃ, ಚಕ್ರಮರ್ದನಃ – ಈ ೪ ತಗ(ಚೆ)ಟೆ" (ಕರ್ಣಾಟು. ೦೦೦-೯೬೩). [ಸಂ.]

**ಪ್ರಪುನ್ನಾಟ** (ನಾ). = ಪ್ರಪುನಾಟ : "ಪ್ರಪುನ್ನಾಟಮದೇಡಗಜಂ" (ವಸ್ತುಕೋ. ೩೬-೨೦). [ಸಂ.]

**ಪ್ರಪುನ್ನಾಡ** (ನಾ). = ಪ್ರಪುನ್ನಾಟ.

**ಪ್ರಪೂರ** (ನಾ). ಅತಿಶಯವಾದ ಪ್ರವಾಹ ; ದೊಡ್ಡ ಪ್ರವಾಹ : ಚಕ್ರೋರವ್ರಜಕೆ ಶಾಂತಿರಸದ ಪ್ರವಾಹಪ್ರಪೂರವೆನೆ ನವರಸೋದಯಮಯ ಮೆನಿಸಿದ ಹಿಮಕರನೆಸೆದಿರುತ್ತಿರ್ದನು (ಧರ್ಮನಾ. ೬-೮೩). [ಸಂ.]

**ಪ್ರಪೂರಿತ** (ಗು). ತುಂಬಿದ ; ಭರ್ತಿಯಾದ : ಅಖಿಳಕಳಾಪ್ರಪೂರಿತ ಹೃದಯ ಭೀಮಕವಿ ಪ್ರಣೀತಾಭ್ಯುದಯ ಬಸವಪುರಾಣಕಥೆಯೊಳು ನಾಲ್ಕನೆಯ ಕಾಂಡ (ಬಸಪು. ೨೭-೬೦). [ಸಂ.]

**ಪ್ರಪೂರ್ಣ** (ಗು). ೧. ತುಂಬಿದ ; ಭರ್ತಿಯಾದ ; ಇಡಿಕಿರಿದ : ಪ್ರಪೂರ್ಣಸಪ್ರಸುರೋಟಿಕನದಂಕುಶಕೃತದೀರ್ಘ ಪ್ರಣೂತಕೋಪನಂ (ಶಾಂತಿಪು. ೦೦-೯೭೩); ಪರಿಗ್ರಹಸಂಗತಿಯಾ ಸುಧಾಮಯವ್ಯಾಪ್ತಿಯಾ ಪ್ರಪೂರ್ಣವಲಯಾಕೃತಿಯಾಗಳದೆತ್ತಪೋದುದು (ಚಂದ್ರಪ್ರಪು. ೯-೬). ೨. ಪೂರ್ತಿಯಾದ ; ಪೂರ್ಣಗೊಂಡ. (ನಾ). ೩. ಪೂರ್ತಿಯಾದುದು ; ತುಂಬಿದುದು : "ಭರಿತಂ ಪ್ರಪೂರ್ಣಮಾಚಿತನಿಚಿತಮಾಕುಲಂ ಪರಿಕೀರ್ಣ ಮಾಖ್ಯದನವೊನಲು ಸಂದಣೆಯಕ್ಕು" (ಮಂಗರಾ. ೦೨೬-೯). [ಸಂ.]

**ಪ್ರಪೂರ್ತಿ** (ನಾ). ತುಂಬಿರುವಿಕೆ ; ಭರ್ತಿಯಾಗಿರುವಿಕೆ : ಅವಿರಳಿತ ತೇಜಃಪ್ರಪೂರ್ತಿ ಸಮಸ್ತ ವಿಸ್ಫೂರ್ತಿ (ಬಸಕಥ. ೯೬-೦೦). [ಸಂ.]

**ಪ್ರಪೆ** (ನಾ). ಪಥಿಕರಿಗೆ ನೀರು, ಪಾನಕ ಮೊದಲಾದುವನ್ನು ಕೊಡುವ ಗೃಹ ; ಅರವಟ್ಟಿಗೆ : "ಪ್ರಪೆಯೆಂಬುದಱಿಗೆ ಪಾನೀಯ ಶಾಲೆ" (ವಸ್ತುಕೋ. ೯೬-೨೦): ಉಪವನತಟಾಕಪ್ರತಿಷ್ಠೆ ದೇವಾಲಯ ಪ್ರಪೆಗಳ . . . ಸುಕೃತಂಗಳಾದವುವು ಜೈವಿನಿಭಾರತದೊಳೊಂದು ವರ್ಣಮಂ ಪ್ರೀತಿಯಿಂ ಕೇಳ್ದವರ್ಗೆ (ಜೈಮಿಭಾ. ೩೯-೯೩). [ಸಂ. ಪ್ರಪಾ]

**ಪ್ರಪೌಂಡರೀಕ** (ನಾ). ಒಂದು ಬಗೆಯ ಔಷಧೀಸಸ್ಯ; ಬಿಳಿನೈದಿಲೆಗಡ್ಡೆ : ಪ್ರಪೌಂಡರೀಕ . . . ಚಂಗಲನೀರಕೋಷ್ಠ, ಇವಿಷ್ಟನು ಸಮಾಂಶವಾಗಿ ನೀರಲ್ಲಿ ಅರೆದು ಲೇಪನಂಗೈಯಲು ವಾತದಿಂದ ಉಂಟಾದ ಉಪದಂಶ ಶಮನವಹುದು (ವೃದ್ಧತಾ. II. ೦೬೬). [ಸಂ.]

**ಪ್ರಪೌತ್ರ** (ನಾ). ಮಗನ ಮಗನ ಮಗ; ಮೊಮ್ಮಗನ ಮಗ ; ಮರಿಮಗ. [ಸಂ.].

**ಪ್ರಪ್ರಥಮ** (ಗು). ಮೊತ್ತ ಮೊದಲ ; ಅತ್ಯಂತ ಆದಿಯ : ಕೇವಲ ಮಾರ್ಗದರ್ಶಕವಾಗಿ ತೋರಿದರೂ, ಅದಕ್ಕೆ ಪ್ರಪ್ರಥಮ ಪ್ರಾಮುಖ್ಯತೆ ಯನ್ನು ನೀಡಬೇಕೆಂಬುದಾಗಿ ... ಪ್ರತಿಪಾದಿಸಿದೆ (ಪುಸರು. ೨೦೩). [ಸಂ.]

**ಪ್ರಫುಲ್ಲ** (ಗು). ೧. ಅರಳಿದ ; ವಿಕಸಿತವಾದ. ೨. ಪ್ರಸನ್ನವಾದ : ಎಲ್ಲರೂ ಪ್ರಫುಲ್ಲ ಮಾನಸರಾಗಿದ್ದರು (ಕಮಲ. ೦೩೩) ; ಗಂಗರಾಜರು ಪ್ರಫುಲ್ಲವದನರಾಗಿ . . . ವೀರಪ್ರತಿಜ್ಞೆ ಮಾಡಿದರು (ಶಾಂತಲಾ. ೦೧೬). (ನಾ). ೩. ಅರಳಿದುದು : "ಪ್ರಫುಲ್ಲಂ ಫುಲ್ಲಃ" (ವಸ್ತುಕೋ. ೦೦೩-೯೦). ೪. ಪ್ರಸನ್ನವಾದುದು : ಜವಾನನೊಬ್ಬ ಮೂರು ರೂಬಲ್ ಹಣ ತಂದಾಗ ಅವಳ ಮುಖ ಪ್ರಫುಲ್ಲವಾಯಿತು (ಪುನರು. ೦೩೬). [ಸಂ.]

**ಪ್ರಫುಲ್ಲಿಸು** (ಕ್ರಿ). ಅರಳಿಸು ; ವಿಕಾಸವಾಗುವಂತೆ ಮಾಡು : ನಡೆ, ವಿನಾಯಕ, ಪ್ರಫುಲ್ಲಿಸು ರಘೂತ್ತಮಮನೋಂಬುಜದಿ ಅಭವಸಂಜ್ಞಾನ ಮಹದಿಚ್ಛೆಯಂ (ಸಟಾರೋ. ೨೦೯). [ಪ್ರಫುಲ್ಲ + – ಇಸು]

**ಪ್ರಬಂಧ** (ನಾ). ೧. ಬಾಂಧವ್ಯ ; ಕಟ್ಟು. ೨. ವ್ಯವಸ್ಥೆ ; ಏರ್ಪಾಡು: ಸಂಸ್ಥಾನದ ಪ್ರಬಂಧವನ್ನು ಮಾಡಿದಳು (ಬಿಯಾಣ್ಯ. ೯೩). ೩. ನಿರಂತರತೆ: ಎಡೆಬಿಡದಿರುವಿಕೆ ; ಪರಂಪರೆ : ಪೂರ್ವಾಪೂರ್ವ ಚಿತ್ರವಿಶೇಷ ಪ್ರಭವಂಗಳ್ ಪ್ರಬಂಧದಿಂದಂ ಪ್ರವರ್ತಿಸುವುವು (ಶಾಂತಿಪು. ೭-೧೯೨ ವ) ; ಈ ಮಹೋತ್ಪಾತ ಪ್ರಬಂಧ ವಿರಾಮಕರ್ಮವ ಬೆಸಸಿಯೆನೆ (ಕುವ್ಯಾಸ. ೦೦-೨೬). ೪. ಕಾವ್ಯ ಗ್ರಂಥ : ವರ್ಣಕಂ ಕತೆಯೊಳೊಡಂಬಡಂ ಪಡೆಯೆ ಪೇಟಿಕ್ಸೊಡೆ ಪಂಪನೆ ಪೇಟ್ಗುಮೆಂದು ಪಂಡಿತರೆ ತಗುಳ್ದು ಬಿಚ್ಚಟಿಸಿ ಪೇಟಲೊಡರ್ಚಿದೆನೀ ಪ್ರಬಂಧಮಂ (ಪಂಭಾ. ೦-೦೦) ; ಕವಿಗಿನಿದಾಗೆ ನಿಚ್ಚ ಪೊಸತಾಗೆ . . . ಪೇಟಲೊಡರ್ಚಿದೆನೀ ಪ್ರಬಂಧಮಂ (ರಂರೋಂಬ. ೦-೦೦). ೫. ಆಧುನಿಕ ಗದ್ಯಸಾಹಿತ್ಯದ ಒಂದು ಪ್ರಕಾರ ; ನಿಬಂಧ ; ಇದು ಇಂಗ್ಲಿಷಿನ 'Essay' ಎಂಬ ಶಬ್ದಕ್ಕೆ ಸಮಾನಾರ್ಥಕವಾದ ಶಬ್ದ : ಈ ಸಂಕಲನದೊಳಗಿನ ಕೆಲವು ಪ್ರಬಂಧಗಳು ಸ್ವತಂತ್ರ ಹಾಗೂ ಕೆಲವು ಅನುವಾದಗಳಾಗಿರುವುವು (ಕೃಚಂಂರ. ಹೃದ್ಗತ. ೪). ೬. ಸಂಗೀತಕ್ಕೆ ಅಳವಟ್ಟ (ಆಧ್ಯಾತ್ಮಿಕ ವಿಚಾರವುಳ್ಳ) ಸಾಹಿತ್ಯರಚನೆ : ಸ್ವರ, ರಾಗ ಮತ್ತು ತಾಳಯುಕ್ತವಾಗಿ, ಅನೇಕ ಭಾಗಗಳನ್ನೊಳಗೊಂಡ ಭಗವದ್ವಿಷಯಕ ಸಾಹಿತ್ಯವುಳ್ಳ ಯಾವ ರಚನೆಗೂ ಪ್ರಬಂಧವೆಂಬ ಹೆಸರು ಅನ್ವಯಿಸುತ್ತದೆ . . . ಅಷ್ಟಪದಿಗಳು ಪ್ರಬಂಧವೂ ಹೌದು (ಸಂಗೀತಂ. ೬೩). ೭. (ತಮಿಳುದೇಶದ ವೈಷ್ಣವಭಕ್ತರು ರಚಿಸಿದ, ವೇದಾಂತ ತತ್ವಗಳನ್ನೊಳಗೊಂಡ) ಕೃತಿ ; ಆಳ್ವಾರುಗಳ ರಚನೆ : ಶ್ರೀವೈಷ್ಣವ ಪ್ರಬಂಧಗಳಿಗೆ ದ್ರಾವಿಡವೇದವೆಂಬ ಪೂಜ್ಯನಾಮಕರಣವಾದುದು (ಕಕಶಂ. ೨೩); ಆಳ್ವಾರುಗಳು ಮುಖ್ಯವಾಗಿ ಹನ್ನೆರಡು ಜನರು. ಇವರುಗಳ ತಮಿಳುಪ್ರಬಂಧಗಳು ನಾಲ್ಕು ಸಾವಿರ ಪದ್ಯಗಳನ್ನೊಳ ಗೊಂಡಿವೆ (ಕಾರಪ. ೨೩೭). 'ದ್ರಾವಿಡಪ್ರಬಂಧ', 'ದ್ರಾವಿಡವೇದ' ಪರಾ. [ಸಂ.]

**ಪ್ರಬಂಧಧ್ವನಿ** (ನಾ). [ಕಾವ್ಯಮೀ] ಸುಲಭವಾಗಿ ಅರ್ಥಮಾಡಿಕೊಳ್ಳ ಬಹುದಾದ ಒಟ್ಟು ಕಾವ್ಯದ ಧ್ವನಿವಿಶೇಷ : ಸುಲಭವಾಗಿ ಗ್ರಹಿಸುವುದಕ್ಕಾಗಿ ಕ್ಲೇಶವಿಲ್ಲದೆ ವಿಚಾರ ಮಾಡುವುದಕ್ಕಾಗಿ . . . ಕಾವ್ಯದಿಂದ ಒಂದು ಧ್ವನಿ ಹೊರಡುತ್ತದೆ ; ಇದನ್ನೇ ಪ್ರಬಂಧಧ್ವನಿಯೆಂದು ಕರೆಯುವುದು (ಕಾರಮೀ. ೩೦೩). [ಸಂ.]

**ಪ್ರಬಂಧಲಿಪಿ** (ನಾ). ಒಂದು ಬಗೆಯ ಲಿಪಿ : ವ್ಯಾಗಲಿಪಿ ಪ್ರಬಂಧಲಿಪಿ ರಗಣಲಿಪಿ . . . ಮಿಾ ಅಗಣಿತ ಲಿಪಿಗಳ ನೋಡಲಱಿಯದೆ ಬಿಜ್ಜಳರಾಯನ ಸಭೆಯೊಳು ಕಳಕಳಗೊಳುತಿದ್ದರು ವಿದ್ವಾಂಸರುಗಳೆಲ್ಲ (ಭಾಸ್ಕರ. ೭೬-೬). [ಸಂ.]

**ಪ್ರಬರ್ಹ** (ಗು). ೧. ಉತ್ಕೃಷ್ಟವಾದ ; ಶ್ರೇಷ್ಠವಾದ. (ನಾ). ೨. ಮುಖ್ಯವಾದುದು ; ಪ್ರಧಾನವಾದುದು ; ಉತ್ತಮವಾದುದು ; "ಪ್ರಮುಖಂ ಪ್ರಬರ್ಹಂ" (ವಸ್ತುಕೋ. ೯೯ ೨) ; "ಅಗ್ರೇಸರಂ ಪ್ರಬರ್ಹಂ ಪ್ರಮುಖಮಾ ಪ್ರವರಮುಗ್ರಗಣ್ಯಮುತ್ತಮಂ ಸತ್ತಮಂ

ಗ್ರಾಮಣೀಯೆನಲು ಮುಖ್ಯಕ್ಕೆ ನಾಮಂ" (ಶಬ್ದಮ. ೦೨೭-೪). [ಸಂ.]

**ಪ್ರಬಲ**, ಪ್ರಬಳ (ಗು). ೧. ಹೆಚ್ಚು ಶಕ್ತಿಯುತವಾದ ; ಬಹಳ ಬಲವಾದ : ಪ್ರಬಲಶುಂಡಾಲವಿಭುವಂ ತನ್ನಿ (ಚಪು. ೩೭-೩೩); ಅಂತಃಕರಣದ ಪ್ರಬಲ ಸ್ವಭಾವದಂತೆ ವಸ್ತುಸ್ವಭಾವವೂ ವ್ಯಕ್ತವಾಗು ವುದು (ಹಿಂದಾ. ೬೨). ೨. ತೀವ್ರವಾದ ; ತೀಕ್ಷ್ಣವಾದ. ೩. ಮುಖ್ಯ ವಾದ ; ಪ್ರಧಾನವಾದ. ೪. ವಿನಾಶಕಾರಕ ; ಹಾನಿಕರವಾದ. ೫. ತುಂಬಿದ ; ಸಮೃದ್ಧಿಯಾದ. (ನಾ). ೬. ಬಹಳ ಶಕ್ತಿಶಾಲಿ; ಗಟ್ಟಿಗ : ಪ್ರಬಲನಬಲನವೊಲಂತಾ ಶಬರು ಬೀಟಿಕ್ಕೊಂಡು (ಶಂರಾಚ. ೪-೭೩). ೭. ಚಿಗುರು ; ಪಲ್ಲವ. ಪ್ರಬಳ : ೧. ಅತುಳೋತ್ಕಾಲ ತಿಮಿಂಗಿಳಪ್ರಬಳಪಕ್ಷೋದ್ಧೂತವಾತಪ್ರಕಂಪಿತ . . . ವಾರ್ಧಿಯಂ (ಕಾವ್ಯಸಾ. ೭೩). ೬. ಆದಿರ್ಪುದೆ ಪ್ರಬಳಂ ಬಳನಂ (ಜಗಂ. ೦೭-೩೩). [ಸಂ.]

**ಪ್ರಬಲಿ** (ನಾ). ಪ್ರಬಲನಾದವನು ; ಹೆಚ್ಚು ಶಕ್ತಿಶಾಲಿ ; ಗಟ್ಟಿಗ : ಯಾವ ಬಲಿಯೋಳುವನೋ, ಎಂತು ತುಳಿಯಲು ಬೇಕೋ ಯಾವನೋ ಪ್ರಬಲಿ (ಬ್ರಹ್ಮಕಾ. ೨೨-೩). [ಸಂ. ಪ್ರಬಲಿನ್]

**ಪ್ರಬಲಿತ** (ಗು). ಬಲಗೊಂಡ ; ಶಕ್ತಿಶಾಲಿಯಾದ : ನಿನ್ನ ಮಹಿಮೆಯು ಪ್ರಬಲಿತೋತ್ಪನ್ನ ನಿಜಗುರುಭಕ್ತಿಯುತ ಮಹಿಮೋನ್ನತಿಕೆಯನದಾರು ಬಲ್ಲರು (ಬಸವ. ೬೪-೬೭). [ಸಂ.]

**ಪ್ರಬಲಿಸು** (ಕ್ರಿ). ಬೆಳೆ ; ವೃದ್ಧಿಯಾಗು ; ಹೆಚ್ಚಾಗು : ಇನ್ನು ಮುಂದೆ ಕಾವ್ಯಗಳಲ್ಲಿ ಹೊಸಗನ್ನಡವು ಇನ್ನೂ ಪ್ರಬಲಿಸುವ ಚಿಹ್ನೆ ಗಳಿವೆ (ಕನಾಶೋ. ೦೭೨) ; ನೆಗಡಿ ಅಜೀರ್ಣದಿಂದ ಪ್ರಬಲಿಸುತ್ತದೆ (ಸಂಟಾ. ೩೮). [ಪ್ರಬಲ + — ಇಸು]

**ಪ್ರಬಲೆ** (ನಾ). ಶಕ್ತಿವಂತೆ ; ಸಮರ್ಥೆ : ಶ್ರೀಪಾದಪ್ರಕ್ಷಾಳನಂ ಮಾಡಿ ವಾದೋದಕದಿಂ ಪ್ರಬಲೆಯಾಗಿ . . . ಬಬ್ಬನೆ ಬರಿಧರಲ್ವ ಶಿವದೇವಿ ಯರು ಕಂಡು (ಸಂಕರ. ೦೨-೦೦೪). [ಸಂ. ಪ್ರಬಲಾ]

**ಪ್ರಬಳ** 'ಪ್ರಬಲ' ನೋ.

**ಪ್ರಬಾಲ** (ನಾ). ೧. ಮರ ಗಿಡ ಬಳ್ಳಿಗಳಲ್ಲಿ ಹೊಸದಾಗಿ ಹುಟ್ಟಿದ ಎಲೆ ; ಚಿಗುರು. ೨. ಹವಳ. ೩. ಕೊಳಲಿನ ತುದಿ. [ಸಂ.]

**ಪ್ರಬುದ್ಧ** (ಗು). ೧. ಎಚ್ಚರಗೊಂಡ ; ಎದ್ದ. ೨. ಅರಿವಿಗೆ ಬಂದ ; ತಿಳಿದ. ೩. ಸಂಪೂರ್ಣವಾಗಿ ಅರಳಿದ, — ವಿಕಾಸವಾದ. ೪. ಪ್ರೌಢವಾದ : ಪ್ರಬುದ್ಧ ಭಾಷಣಗಳಿಂದ ವ್ಯಕ್ತಿಗಳು ವಿಷಯವರಂಪರೆ ಯನ್ನಾಗಲಿ . . . ಅರಿತುಕೊಳ್ಳಲಾರರು (ಶಿಕ್ಷಕ. ೨೬೬). (ನಾ). ೫. ಜ್ಞಾನಿ ; ವಿದ್ವಾಂಸ ; ಪ್ರೌಢ : "ಧೀರಃ . . . ಪ್ರಬುದ್ಧಃ . . . ಮತಿಮಾನ್ — ಈ ೨೮ ವಿದ್ವಾಂಸರ್" (ಹಲಾಯು. ೩೩-೦೭೭) ; ಅವರು ವಿಷಯವನ್ನು ಪ್ರಬುದ್ಧರ ವಿಚಾರದೃಷ್ಟಿಯಿಂದ ತರ್ಕಸಮ್ಮತವಾಗಿ ಬರೆದಿರುತ್ತಾರೆ (ಶಿಕ್ಷಕ. ೨೬೬). [ಸಂ.]

**ಪ್ರಬೋಧ** (ನಾ). ೧. ಎಚ್ಚರಗೊಳ್ಳುವುದು ; ಜಾಗ್ರತವಾಗುವುದು : ಚೇಷ್ಟಿಸಲೀಯವು ನಿದ್ರೆಯವೋಲ್ ನಿಸದಂ ನರರಂ ಪ್ರಬೋಧ ಮಪ್ಪನ್ನೆವರಂ (ಶಂಪ್ರಪು. ೨-೩೪). ೨. ಅನುಗ್ರಹ : ಪ್ರಬೋಧವೆಂದರೆ ಅನುಗ್ರಹ (ಹಿಂದಾ. ೬೦). ೩. ಜ್ಞಾನ ; ತಿಳಿವು ; ಪಾಂಡಿತ್ಯ : ಇನಿತಾಗವರ್ಥವಿಲ್ಲಿನಿತುಪರಂ ಪ್ರಬೋಧಮಣಮಿಲ್ಲ (ಅಜಪು. ೦೨-೩೩). ೪. ಎಚ್ಚರಿಸುವವನು : "ಕೀರ್ತಿಪ ನರಂ ವಂದಿ ವೈತಾಳಿಕಂ ಮಾಗಧಂ ಸೂತಂ ಪ್ರಬೋಧನಕ್ಕುಂ" (ಶಬ್ದಮ. ೬೦-೪). [ಸಂ.]

**ಪ್ರಬೋಧಕ** (ಗು). ೧. ಜಾಗೃತಿಯನನ್ನುಂಟುಮಾಡುವ ; ತಿಳಿವಳಿಕೆ ಯನ್ನುಂಟುಮಾಡುವ : ಶ್ರೀ ಕೃಷ್ಣಶಾಸ್ತ್ರಿಗಳು ಈಗ ನಾಲ್ಕು ಐದು ದಶಕಗಳಿಂದಲೂ ಕನ್ನಡದ ಪ್ರಬೋಧಶಕ್ತಿಗಳಲ್ಲಿ ಪ್ರಮುಖವಾದ ಪ್ರಬೋಧಕಶಕ್ತಿಯಾಗಿ ಕೆಲಸ ಮಾಡಿದರು (ಸಂಭಾವ. x ಮುನ್ನುಡಿ). (ನಾ). ೨. ತಿಳಿವಳಿಕೆಯನ್ನುಂಟುಮಾಡುವವನು. ೩. = ಪ್ರಬೋಧ ೪ : "ವೈತಾಳಿಕ ಪ್ರಬೋಧಕ ಸೂತ ಸ್ತುತಿಪಾಠಕಾಖ್ಯೆ ವಂದಿಯೊಳಕ್ಕು" (ಚನ್ನಕೋ. ೩೩-೬೭). [ಸಂ.]

**ಪ್ರಬೋಧನ** (ನಾ). ೧. ಎಚ್ಚರಗೊಳ್ಳುವಿಕೆ ; ಜಾಗೃತಿ : ಮುಕುಳನ ನಿಮಿಷಾಳನಂಗಳ್ ವಿಕಾಸಹಾಸಪ್ರಬೋಧನೋನ್ಮೇಷಂಗಳ್ ಪ್ರಕಟಿಸು ಗುವೈಕ್ಯಮಂ (ಕಾವ್ಯಾವ. ೪೦೪). ೨. ತಿಳಿವು ; ಜ್ಞಾನ. ೩. ಬೋಧಿ ಸುವುದು. ೪. ಸುವಾಸನೆಯನ್ನು ಉದ್ದೀಪನಗೊಳಿಸುವುದು : "ಸ್ಥಾಪಕಂ ಪ್ರಬೋಧನಮಕ್ಕುಂ" (ಚನ್ನಕೋ. ೬೬-೪). [ಸಂ.]

**ಪ್ರಬೋಧಿತ** (ಗು). ೧. ಜಾಗ್ರತಗೊಂಡ : ನಿಜಪ್ರಮೋದಪ್ರಬೋಧಿತ ನಿಜದಿವ್ಯಪರಿಮಲಾಮೋದಿತ ದಿಗಂಗನಾಮುಖಂಗಳಪ್ಪ ಸುಗಂಧದ್ರವ್ಯಗಳಂ ಪೂಸಿ (ಅದಿಪು. ೬-೦೦೬ ವ) ; ಪ್ರಥಮಕಲ್ಪಾಮರೇಂದ್ರಂ ಸಾಂದ್ರಭಕ್ತಿ ಪ್ರಬೋಧಿತಾಶಯಕುಶೇಶಯನಾ ಗುಣಗಣಮಣಿಭೂಷಣಾಂಗೆ ದಿವಿಜೇಂದ್ರ ಲೋಕೋತ್ತಮಭೂಷಣಂಗಳಂ ತುಡಿಸೆ (ಶಾಂತಿಪು. ೦೦-೩೭ ವ). (ನಾ). ೨. [ಕಾಮಶಾ] ಒಂದು ಬಗೆಯ ರತಿಬಂಧ : ಪುರುಷನ ತಿಕದ ಕೆಳಗೆ ಮೊಳಕಾಲನಿಕ್ಕಿ ಒತ್ತಿ ಪುರುಷಾಯಿತಂಗೈದು ಅಲ್ಲಾ ಪುರುಷನ ಕಟಿಯನ್ನು ವಿತತಭಾವದಿಂ ಕುಳ್ಳಿರ್ದು ಕಾಲ ನೀಡಿ ಕೀಲ ತಪ್ಪದ ಹಾಗೆ ಕೊಡಿದಡೆ ಪ್ರಬೋಧಿತಮೆಂಬ ಕರಣಂ (ಕಾಮಶಾ. ೨೩೪). [ಸಂ.]

**ಪ್ರಭಂಜನ** (ನಾ). ೧. ಚೂರು ಮಾಡುವುದು ; ಪುಡಿ ಮಾಡುವುದು. ೨. ಗಾಳಿ ; ವಾಯು : "ಪವನಃ . . . ಪ್ರಭಂಜನಃ . . . ಮಹಾಬಲಃ — ಈ ೨೦ ಗಾಳಿಯ ಪೆಸರ್" (ಹಲಾಯು. ೦೪-೭೩) ; ನಿಜರಾಜಸದನಸರಸೀ ಸರೋಜರಜಮನಟ್ಟಿಕೊಂಡು ಸುಟಿವ ಸುಪ್ರಭಾತಪ್ರಭಂಜನನುಂ (ಶಂರಾಚ. ೩-೮೦ ವ) ; ಬೀಸಿದುದಸದೃಶಸೋಷ್ಣಪ್ರಭಂಜನಂ ಬೇಸಗೆಯೊಳ್ (ರಾಜಶೇ. ೩-೩೨). ೩. ಗಾಳಿಯ ಅಧಿದೇವತೆ ; ವಾಯುದೇವ ; ಮೃಗ ವಾಹನಂ ಪ್ರಭಂಜನಂ (ಜಗಂ. ೦೩-೭೦) ; ನೀನೆ ಅನಂತಂ, ನೀನೆ ಹವ್ಯ ವಾಹಂ, ಪ್ರಭಂಜನಂ ನೀನೆ (ಅದ್ಭುತ. ೬-೨೩). 'ಪ್ರಭಂಜನ ಸಂತ' ವರಾ. ೪. ನಾಲ್ಕು ಬಗೆಯ ಜೀವಸಂಬಂಧವಾಯುಗಳಲ್ಲಿ ಒಂದು : ವೈರಂಭ ಮುಖ್ಯ ಪ್ರಭಂಜನ ಅಂತರ್ಯಾಮಿಸೌಂಜ್ಞೆಯುಳ್ಳ ನಾಲ್ಕು ಜೀವಸಂಬಂಧವಾದ ವಾಯುಗಳೇ ಮಾನಸಾದ್ಯಂತಃಕರಣ ಚೇಷ್ಟಾ ಕಾರಣಂಗಳಾಗಿರ್ಕುಂ (ಶಿವೇಶ. ೩೪). ೫. ಬಿರುಸಾಗಿ ಬೀಸುವ ಗಾಳಿ ; ಬಿರುಗಾಳಿ : ಯುಗಾಂತಪ್ರಭಂಜನನೀರಾವತಚಕ್ರದಂತೆ ತಿರಿವಂತಾಳ್ಗಂ (ಅಜಪು. ೨-೩) ; ಶ್ರೀಮಹಿತನಹಿತಸಕಲ ಮಹೀಮಹಿತಪಯೋಧರಪ್ರಭಂಜನನಂ (ಸುಕುಮಾ. ೨-೧). ೬. ಧ್ವಂಸಮಾಡಿದವನು ; ನಾಶಕ : ಪ್ರಭಂಜನಸಖ ಪ್ರಭಾವಪ್ರಭಂಜನನಪ್ಪನಗೆ ಕುಲಹೀನವನಿತಾಸ್ತನ್ಯೋಪಪುಷ್ಪನೊಳನು ಬಂಧಿಕೆಯಾತಿಕಷ್ಟಮುಂ (ಜಗಂ. ೩-೭೧ ವ). [ಸಂ.]

**ಪ್ರಭಂಜನಪ್ರದರ** (ನಾ). ಒಂದು ಬಗೆಯ ಅಸ್ತ್ರ ; ವಾಯವ್ಯಾಸ್ತ್ರ : ಆ ಪ್ರಭಂಜನಪ್ರದರಂ ಮೇಘಮಾರ್ಗದೊಳೆ ಮೇಘಬಾಣಮಂ ಪ್ರತಿ ಹತಂ ಮಾಡೆ (ಜಗಂ. ೦೩-೦೦೩ ವ). [ಸಂ.]

**ಪ್ರಭಂಜನಪ್ರಿಯ** (ನಾ). ಗಾಳಿಯನ್ನು ಪ್ರೀತಿಸುವವನು ; ಅಗ್ನಿ : ಪ್ರಭಂಜನಪ್ರಿಯನತಿನಿಷ್ಠುರಜಿಹ್ವಂ (ಶಂಪ್ರಪು. ೦-೪೨). [ಸಂ.]

**ಪ್ರಭಂಜನಸಖ** (ನಾ). = ಪ್ರಭಂಜನಪ್ರಿಯ : ಪ್ರಭಂಜನಸಖಪ್ರಭಾವ ಪ್ರಭಂಜನನಪ್ಪನಗೆ ಕುಲಹೀನವನಿತಾಸ್ತನ್ಯೋಪಪುಷ್ಪನೊಳನುಬಂಧಿಕೆಯತಿ ಕಷ್ಟಮುಂ (ಜಗಂ. ೩-೭೧ ವ). [ಸಂ.]

**ಪ್ರಭಂಜನಸುತ** (ನಾ). ವಾಯುಪುತ್ರ ; ಭೀಮ : ಕುರುರಾಜಾನುಜರಂ ಪ್ರಭಂಜನಸುತಂ ಕೊಂದಿಕ್ಕುಗುಂ (ಗದಾಯು. ೩-೩೮). [ಸಂ.]

**ಪ್ರಭಗ್ನ** (ಗು). ಹೆಚ್ಚಾಗಿ ಮುರಿದ ; ಚೂರುಚೂರಾದ : ಗಜದಂತಾ ಕಾರಂಗಳ್ ಗಜದಂತಾದ್ರಿಗಳಿವಲ್ತೆ ತೋರ್ಪುವು ಮಧುಮಪ್ರಜಪರಿವಾರಿತ

ಮಾದ್ಯದ್ಗಜಕಟಕರ್ವಣಪ್ರಭಗ್ನಚಂದನತರುಗಳ್ (ಅಂಕು. ೨-೨೬). [ಸಂ.]

**ಪ್ರಭವ** (ಗು). ೧. ಉತ್ತಮವಾದ ; ವೈಶಿಷ್ಟ್ಯಪೂರ್ಣವಾದ. ೨. ಉಂಟಾದ ; ಹುಟ್ಟಿದ : ಎಸಗುಂ...ಮತ್ತಾಳಿಪರಭೃತಪ್ರಭವರವಂ (ಅಂಕು. ៩-೧೦) ; ಸಂಗಳಿಸದೆ ತನಯನ ಲೀಲಾವಿಳೋಕನಪ್ರಭವಸೌಖ್ಯಮಾ ದಂಪತಿಯೊಳ್ (ಚಂದ್ರಕು. ೩-೯೦). ೩. ಉತ್ಪತ್ತಿ ಸ್ಥಾನ ; ಉಗಮಸ್ಥಾನ : ಅನೇಕಲಕ್ಷಣಗುಣಪ್ರಭವಂ ಮೃದಪಾದವಾದ ವಾಕ್ಯಾಸುಭಗಂ ಕಳಾಕಳಿತವೆಂಬ ನೆಗಟ್ತೆಯನಾಳ್ದ ಕಬ್ಬಮಂ... ಈವುದು (ಶಂಕರಾ. ೧-೯). ೪. ಹುಟ್ಟು; ಉತ್ಪತ್ತಿ : ಅಭಿಮತಕ್ರೀಡಾವಿನೋದದರಭಸದಲಿ ದಿನ ಸವೆಯೆ ಗರ್ಭಪ್ರಭವವಾಯ್ತು (ಕುಮ್ಮಾ. ೧೪-೦೦). ೫. ಮೂಲಕಾರಣ ; ಮುಖ್ಯ ಕಾರಣ. ೬. ಬಲ ; ಪರಾಕ್ರಮ. ೭. ಅರುವತ್ತು ಸಂವತ್ಸರಗಳಲ್ಲಿ ಮೊದಲನೆಯದು: ಆ ವರುಷವೇ ಪ್ರಭವ ... ಅಕ್ಷಯವೆಂದಱವತ್ತು ತೆಱನಾಗಿಹುದು (ಎಣೀಕ. ೩೨೦); ನಿನ್ನ ಹೆಸರಿಳದು ನೀರಾದುದಾ ಪ್ರಭವಂ (ಗಿರಿಜಾ. ೩೬-೦). ೮. ನದಿಯ ಉಗಮಸ್ಥಾನ. ೯. ವಿಷ್ಣುವಿನ ಹೆಸರು. ೧೦. ಏಳಿಗೆ ; ಅಭಿವೃದ್ಧಿ. ೧೧. (?): ಪ್ರಭವಂ ನೀಳಘನಾಘನಂ ಸಮವಸ್ಪತ್ಕುರ್ವೀತಳಂ . . . ನವಮೇಘಕಾಲಮೆನೆ ಬಂದಂ ದೇವದೇವಂ ಸ್ವಯಂಪ್ರಭನುದ್ಯನ್ನಿಜಾತಕಂ ಕಚಿಯುತುಂ ಧರ್ಮಾಮೃತಾಸಾರಮಂ (ಚಂದ್ರಕು. ೬-೩). [ಸಂ.]

**ಪ್ರಭವಿಷ್ಣು** (ಗು). ೧. ಸರ್ವೋತ್ಕೃಷ್ಟವಾದ. ೨. ಬಲಿಷ್ಠವಾದ ; ಬಲಶಾಲಿಯಾದ. (ನಾ). ೩. ಒಡೆಯ ; ಸ್ವಾಮಿ : ಭೂಪರ್ ಕಪ್ಪಮಂ ತರ್ಪರುದ್ಧತವೃತ್ತಪ್ರಭವಿಷ್ಣುಸಿಂಹಳನದೆಂದುಂ ತೆತ್ತನಲ್ತು (ರಾಜಶೇ. ೬-೩೩). [ಸಂ.]

**ಪ್ರಭವಿಸು** (ಕ್ರಿ). ೧. ಹುಟ್ಟು ; ಜನಿಸು : ಅಭಯಕರವರದಪುತ್ರಂ ಪ್ರಭವಿಸಲೊಡನೀಶಭಕ್ತಿಪಂಕಜಮಿತ್ರಂ ಶುಭಮಯವಾದುದು ಭೂಮಿ (ಹಮ್ಮಿ.೨-೨೩) ; ರೂಪಿಸಿದ ಷಟ್ಖಾಂಡಗಳ ಶುಕರೂಪ ತದನಂತರದಿ ಜಂಬೂದ್ವೀಪದೊಳು ಪ್ರಭವಿಸಲು ಉತ್ತರಕಾಂಡಕಥನವನು ಶ್ರೀಪತಿಯು ತಾ ಪೇಳ್ವೆನೆಂದು ನಿರೂಪಿಸಲು (ಬಾಕ್ಯ. ೦-೦೪). ೨. ಉಂಟಾಗು ; ಸಮನಿಸು ; ಘಟಿಸು : ಪ್ರಭವಿಸಿದುದು ಭಾನುಗೆ ಚಿತ್ರಭಾನುವೆಸರೀಗಳೆನಿಸಿ...ನಭದೊಳೆಸೆದಂ ಕೃಷ್ಣಂ (ಜಗ. ೦೪-೯೯) ; ಸಭೆಯೊಳು ಕುಳಿತಾಗ ನಾಲ್ಕೆಂಟು ವಚನ ದುರ್ಲಭವಾಗಿಹವು ಭಾವ ನಿನಗೆ ಅಭಿಮುಖವಡೆದೀಗ ವಚನಸುಲಭನಾಗಿ ಪ್ರಭವಿಸಿದಂದದಿದೇನು (ಶಶಕ. ೯-೦೦೯) ; ಮುಂತಿವರ್ಗಾ ಕ್ರೂರಾಸದ್ರಾಜನಿಂದೇಂ ಪ್ರಭವಿಕುಮೊ (ದಿವ್ಯಸೂ. ೦೪-೦೩). ೩. ರಚಿಸು ; ಉಂಟುಮಾಡು : ದೇವಿಯ ರೂಪವಿದ್ದುಮಂ ಪ್ರಭವಿಸುವಲ್ಲಿ ಬಿಟ್ಟ ವರಮಾಣಾಗಳಿಂ ಸಮೆದಂ ಸುಧಾಬ್ಧಿಯಿಂ (ಶಾಪಕು. ೨-೩೦) ; ಶುಭಲಗ್ನವಜಿದು ಮಂಗಲವ ಪ್ರಭವಿಸಿದನು (ಶಶಕ. ೯೩-೦೦೬). [ಪ್ರಭವ + —ಇಸು]

**ಪ್ರಭಾಕರ** (ನಾ). ೧. ಬೆಳಕನ್ನುಂಟುಮಾಡುವವನು: ಅಹಿತತಮೋಪಹುದನುಜಸಂಹೃತಿಶಕ್ತಿಧರಂ ಪ್ರಭಾಕರಂ (ರಾಜಶೇ. ೧-೬). ೨. ಇನ ; ಸೂರ್ಯ : "ಆದಿತ್ಯಃ, ಸವಿತಾ...ಪ್ರಭಾಕರಃ...ತ್ರಯಾತನುಃ—ಈ ೪೭ ಆದಿತ್ಯನ ಪೆಸರ್" (ಕರ್ಣಾಟ. ೬-೩೬). ೩. ಚಂದ್ರ. ೪. ಅಗ್ನಿ. ೫. ಸಮುದ್ರ. [ಸಂ.]

**ಪ್ರಭಾಕರದಾಸ** (ನಾ). ಒಬ್ಬಾತನ ಹೆಸರು : ಶ್ರೀ ಪ್ರಭಾಕರದಾಸನ್ (ಮೈ.ಆಂ. ೦೪೯, ೨೧-೦ ; ಸು. ೩೫೬ಹು.೬೩). [ಸಂ.]

**ಪ್ರಭಾಗ** (ನಾ). ವಿಭಾಗ : ದ್ವೀಪ ಸಮುದ್ರಂಗಳ್ ಕಲ್ಪವೃಕ್ಷವನಾಕೀರ್ಣಂ ಭಾಗಿಗಳಾಗಿ ಪುಟ್ಟಿ ಜಘನ್ಯಭೋಗಭೂಮಿಪ್ರಭಾಗಂಗಳಾಗಿರ್ಕುಂ (ಸುಕುಮಾ. ೦೦-೩೯ ವ). [ಸಂ.]

**ಪ್ರಭಾಚಕ್ರ** (ನಾ). ಬೆಳಕಿನ ವರ್ತುಲ ; ಪ್ರಕಾಶದ ವೃತ್ತ : ಚಕ್ರರತ್ನಮೊದೆಯಲ್ಕು ಚಕ್ರಿಗಾನುಮಲ್ತೆ ದೋಶ್ಚಕ್ರಮೆಂದು ಬಂದು ಮುಂದೆ ನಿಲ್ವ ಮಾಟಕ್ಕೆಯಿಂ ಪ್ರಭಾಚಕ್ರಮೆಸೆಯೆ (ಅಂಕು. ೦೨-೩೩). [ಸಂ.]

**ಪ್ರಭಾತ್‌ಫೇರಿ** 'ಪ್ರಭಾತಫೇರಿ' ನೋ.

**ಪ್ರಭಾತ** (ನಾ). ೧. ಬೆಳಗು ; ಪ್ರಾತಃಕಾಲ ; ಉದಯಕಾಲ : "ಕಾಲ್ಯಂ . . .ಪ್ರಭಾತಂ. . .ವ್ಯುಷ್ಟಂ—ಈ ೧೦ ಸಮುಟ್ತಿ(ಡೆ)ಱ" (ಕರ್ಣಾಟು. ೦೯-೦೦೦); ಪ್ರಭಾತಪಟಹಧ್ವನಿಗಳ್ ದೆಸೆದೆಸೆಯೊಳೆಸೆಯೆಯುಂ (ಅಂಕು. ೬-೨೬ ವ) ; ಪುಷ್ಪಪ್ರಭಾತದೊಳ್ ಕ್ರೌಂಚಪಕ್ಷಿಯ ಪಂಕ್ತಿ ನೆರೆದು...ದನಿಸಂತೆಗೈವಂತೆ ಪೋಲ್! (ಶ್ರೀರಾಮಪಟಾ. ೯೦-೩೩೯). ೨. [ ಛಂದ ] ಒಂದಂ ವೃತ್ತದ ಹೆಸರು ; ಹದಿಮೂರು ಅಕ್ಷರಗಳ ಒಂದು ವೃತ್ತ : ನ ಜ ಜ ರ ಗಂ ಮಾ ಱ ಯ ಲ್ ಪ್ರಭಾತವೃತ್ತಂ (ಛಂದೋ. ೬೨). [ಸಂ.]

**ಪ್ರಭಾತಕಾಲ** (ನಾ). ಬೆಳಗಿನ ಹೊತ್ತು; ಉದಯಕಾಲ : "ಪೊಟ್ರಱ ಯೆಂದೆನಲ್ ಪ್ರಭಾತಕಾಲಂ" (ಅಭಿಧಾ. ೬೯). [ಸಂ.]

**ಪ್ರಭಾತಫೇರಿ, ಪ್ರಭಾತ್‌ಫೇರಿ** (ನಾ). ೧. ಯಾವುದಾದರೂ ಧಾರ್ಮಿಕ ಅಥವಾ ಅನ್ಯ ಉತ್ಸವಗಳ ಆಚರಣೆಯ ಅಂಗವಾಗಿ ಮಾಡುವ ಪ್ರಾತಃಕಾಲದ ಸಾಮೂಹಿಕ ಮೆರವಣಿಗೆ : ಮುಂಜಾವಿನ ನಾಲ್ಕು ಗಂಟೆಯಿಂದಲೇ ಪ್ರಭಾತಫೇರಿಗೆ ಪ್ರಾರಂಭ (ಕ್ರಾಂತಿ. ೯೬) ; ಪ್ರಭಾತಫೇರಿಯನ್ನು ಪೋಲೀಸರು ಲಾಠಿಪ್ರಯೋಗ ಮಾಡಿ ಚದುರಿಸಿದರು (ಕರಿಗಿ. ೦೩೯)

**ಪ್ರಭಾತ್‌ಫೇರಿ** : ೨. ಬೆಳಗಿನ ಜಾವದಲ್ಲಿ ಮಾಡುವ ತಿರುಗಾಟ,— ಸುತ್ತಾಟ : ಪ್ರಭಾತ್‌ಫೇರಿ—ಉದಯಕಾಲದಲ್ಲಿ ಹಾಕುವ ಸುತ್ತು (ಪಮ್ಮಸು. ೦೨೬). [←ಹಿಂ. ಪ್ರಭಾತ್‌ಫೇರೀ]

**ಪ್ರಭಾತವಿಧಿ** (ನಾ). ಬೆಳಗಿನ ಹೊತ್ತು ಆಚರಿಸುವ ನಿಯಮ : ಪ್ರಾತರ್ವಿಧಿ : ವಾಸರೆಯ ತುದಿಗೈದಿ, ಪ್ರಭಾತವಿಧಿಗಳಂ ಪೂರಯಿಸಿ . . .ಕುಳಿತರ್ಕೆ (ಶ್ರೀರಾಮಪಟಾ. ೨೬೩-೦೨). [ಸಂ.]

**ಪ್ರಭಾಮಂಡಲ, ಪ್ರಭಾಮಂಡಳ** (ನಾ). ೧. ಬೆಳಕಿನ ವರ್ತುಲ ; ತೇಜೋವಲಯ. ೨. [ಜೈನ] ಜನಕರಾಜನ ಮಗ : ಸೀತೆಯ ಸೋದರ. ೧. ೨: ಪ್ರಭಾಮಂಡಲನ ಮಂಡಲಾಗ್ರಮಂ ಚಂದ್ರಹಾಸಪ್ರಭಾಮಂಡಲದಿಂ ಹತಪ್ರಭಾಮಂಡಲಂ ಮಾಡಲುಂ ನಳನ ಕೋಪಾನಲನಂ ಖಡ್ಗಧಾರಾಜಲದಿಂ ನಂದಿಸಲುಂ. . .ಉತ್ಕಂಠನಾಗಿ (ಪಂಪರಾಮಾ. ೦೪-೦೩೩ ವ). ೩. ಪರಿವೇಷ ; ಪ್ರಭಾವಳಿ : ರಾಜವಂಶೀಯರ ಚಿತ್ರಗಳನ್ನು ಪ್ರಭಾಮಂಡಲ (Halo) ಮತ್ತಿತರ ಅರಸೊತ್ತಿಗೆಯ ಕುರುಹುಗಳ ಸಹಿತವಾಗಿ ಬರೆಯುತ್ತಿದ್ದರು (ಚಿತ್ರಕ. ೩೦). **ಪ್ರಭಾಮಂಡಳ** : ೧. ಇಂಬಾದುದು ಕಯ್ಯ ಚಾಮರ ಚಳತ್ಪಾಂಡುಪ್ರಭಾಮಂಡಳಂ (ಶಬ್ದಕು. ೦೦-೨೯). [ಸಂ.]

**ಪ್ರಭಾಮಂಡಳ** 'ಪ್ರಭಾಮಂಡಲ' ನೋ.

**ಪ್ರಭಾವ** (ನಾ). ೧. ಬಲ ; ಪರಾಕ್ರಮ : ಪ್ರಭಾವಪ್ರಕಟೀಕೃತಕದಂಬಕುಳಾಂಬರಪ್ರಚಣ್ಡಮಾರ್ತ್ತಂಡಂ (ಶಾಸನ. XX. ೯೦-೩ ; 1068). ೨. ಘನತೆ; ಹಿರಿಮೆ : ಸಿದ್ಧಪುರುಷರ ಆತ್ಮಪ್ರಭಾವದಿಂದ ಅವರ ವಾಕ್ಕಿಗೆ ಅನಂತವಾದ ಪ್ರಭಾವವಿದೆ (ಶಾಕಟ. ೦೩೯). ೩. ಪ್ರಾಬಲ್ಯ ; ಮಾಹಾತ್ಮ್ಯ ; ಮಹಿಮೆ : ಮಾನವನು ಮಹಾದೇವನ ಅಂಶನೇ ಆಗಿದ್ದರೂ, ಮಾಯಾಶಕ್ತಿಯ ಪ್ರಭಾವದಿಂದ ತನ್ನ ಜ್ಞಾನಕ್ರಿಯೆಗಳ ಪ್ರಾಬಲ್ಯವನ್ನು ಕಳೆದುಕೊಂಡಿರುವನು (ಶಿವಾ.ಅ. ೦). ೪. ಅತಿಮಾನುಷಶಕ್ತಿ : ಶ್ರೀಮಾಸೇನಪ್ರರಮಪ್ರಭಾವರಿಖಿಯರ್ ಕಟ್ಟಿಪ್ಪಿನಾಮಟ್ಟದುಳ್ಳಿಸಂಗಂಗಳ ಪೇಟ್ದ ಸಿದ್ಧಸಮಯನ್ನಪ್ಪಾದೆ ನೋಂಪು (ಎಕ. II. ೨೭-೦ ; ಸು. 700). ೫. ತೇಜಸ್ಸು ;

ವರ್ಚಸ್ಸು : ದೇವಿ ನೀಂ ... ಪ್ರಭಾವಗರ್ಭಶಕ್ತಿಯಂತೆಯುಂ . . . ಮಹತ್ವಮಂ ಪಡೆದೆ (ಜಗ. ೩-೯೬ ವ); ದೇಶದ ಪ್ರತಿಷ್ಠೆ ಪ್ರಭಾವಗಳನ್ನು ಹೆಚ್ಚಿಸಲಿಕ್ಕಾಗಿ ಹೋರಾಡಿದ ಆ ನಾಯಕರಿಗೆ ನಾವು ಎಷ್ಟು ಋಣಿಗಳೋ! (ಸಂಗೀತ. III, ೮ ಮುಖ).

ಪ್ರಭಾವ ಬೀರು = ಪರಿಣಾಮವನ್ನುಂಟುಮಾಡು : ಸರಸಮ್ಮ ಪಕ್ಕದ ಮನೆಗೆ ಬಂದ ಮೇಲೆ . . . ನನ್ನ ಮೇಲೆ ತುಂಬಾ ಪ್ರಭಾವ ಬೀರಿ ಬಿಟ್ಟಿದ್ದಾರೆ (ಕಥಾಸಂ. ೮೩). [ಸಂ.]

**ಪ್ರಭಾವಕಾರಿ** (ನಾ). ವರ್ಚಸ್ಸನ್ನುಂಟು ಮಾಡುವಂಥದು ; ಪರಿಣಾಮ ಕಾರಿಯಾದುದು : ಭೂತ್ಮಾತ್ಮಸಂಬಂಧವಾದ ಸ್ಪೆನ್ಸರ್‌ನ ಅಭಿಪ್ರಾಯ ಗಳು ಅವನ ಮನಸ್ಸಿನ ಮೇಲೆ ತುಂಬ ಪ್ರಭಾವಕಾರಿಯಾದುವು (ಪುತರು. ೫೪). [ಸಂ. ಪ್ರಭಾವಕಾರಿನ್]

**ಪ್ರಭಾವತೆ** (ನಾ). ಘನತೆ ; ಹಿರಿಮೆ : ಕವಿಕಾವ್ಯಪ್ರಕಟಪ್ರಭಾವವು ನದಂ ಕೀಳ್ಪಟ್ಟಿಗಂ ಗುಪ್ತಿಗೈದವರಾತ್ಮೀಯಕೃತಿಪ್ರಭಾವತೆಯನಾದಂ ತೋರ್ಪವೋಲ್ (ರಾಜಶೇ. ೬-೯೯). [ಸಂ. ಪ್ರಭಾವತಾ]

**ಪ್ರಭಾವನೆ** (ನಾ). ೧. ಭಾವನೆ: ಆ ಪ್ರವರರಿಗೆ ಬಿನ್ನವಿಸಿಯವರ ಪ್ರಸನ್ನವನಾ ಜ್ಞೆಯಂ ಕರುಣಾಪ್ರಭಾವನೆಯುಂ ಪಡೆದು ತಾ ಮತ್ತೆ ವಂದಿಸುತ (ಶಶಿ. ೪೮-೬೩). ೨. [ಜೈನ] ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಕೊನೆಯದು : "ಜೈನಧರ್ಮದ ಪ್ರಭಾವವನ್ನು ಬೆಳಗುವುದು" (ಕೃಷಕೋ. ೦೭೭) : ಸಮ್ಯಗ್ದರ್ಶನಜ್ಞಾನಚಾರಿತ್ರರತ್ನತ್ರಯಪ್ರಭಾವ ದಿಂದಾತ್ಮಪ್ರಕಾಶಂಗೆಯ್ವುದು ಪ್ರಭಾವನೆ (ಕಾವ್ಯಂಶ. ೫೧೦) : ಪುಣ್ಯ ಕಥಾಶ್ರವಣಸಂಭಾವನೆಯೊಳಂ ಜಿನಪೂಜಾಪ್ರಭಾವನೆಯೊಳಂ (ಶಂಕ್ರಪು. ೪-೭೭ ವ). 'ಮಾರ್ಗಪ್ರಭಾವನೆ' ಪರಾ. [ಸಂ. ಪ್ರಭಾವನಾ]

**ಪ್ರಭಾವಮುದ್ರೆ** (ನಾ). ವರ್ಚಸ್ಸಿನ ಮುದ್ರೆ, – ಪರಿಣಾಮ : ಪ್ರತಿ ಯೊಬ್ಬರಲ್ಲಿಯೂ ಸ್ವಪ್ರತಿಷ್ಠೆಯ ಮತ್ತು ಶ್ರೀಮಂತಿಕೆಯ ಪ್ರಭಾವ ಮುದ್ರೆ ಎದ್ದು ಕಾಣುತ್ತಿತ್ತು (ಪುತರು. ೪೭೭). [ಸಂ. ಪ್ರಭಾವಮುದ್ರಾ]

**ಪ್ರಭಾವಲಯ** (ನಾ). ೧. ಬೆಳಕಿನ ವರ್ತುಲ ; ವೃತ್ತಾಕಾರವಾದ ಬೆಳಕು : (ಸೂರ್ಯನ ಅಥವಾ ಚಂದ್ರನ ಸುತ್ತಲೂ ಕಾಣುವ ಕಿರಿದಾದ) ಪ್ರಭಾವಲಯ (Corona. ೩೦೫೩). ೨. (ಆಲಂ) ತೇಜೋವಲಯ ; ಸೊಗಸಂ : ನಾಯಕಪಾತ್ರಕ್ಕೆ ರಸಭಾವಗಳ ಪ್ರಭಾವಲಯವನ್ನು ಕಟ್ಟುವವು. (ಸಹಣಿಗ. ೨ ಪಾತಾಂದರ್ಶ). [ಸಂ.]

**ಪ್ರಭಾವಲ್ಲಭ** (ನಾ). ಬೆಳಕಿನ ಒಡೆಯ ; ಸೂರ್ಯ : ಸುಕವಿವ್ಯಂದ ಸ್ತೋತ್ರಪಾತ್ರಂ ಷಡಕ್ಷರಿದೇವಂ ಸರಸಪ್ರಬಂಧಸುಭಗಾಂಭೋಜಪ್ರಭಾ ವಲ್ಲಭಂ (ರಾಜಶೇ. ೦-೬೮). [ಸಂ.]

**ಪ್ರಭಾವಶಾಲಿ** (ಗು). ೧. ವರ್ಚಸ್ವಿಯಾದ : ಪ್ರಭಾವವನ್ನು ಬೀರುವ : ಅರ್ಜಿಸಮಿತಿಯ ಪ್ರಭಾವಶಾಲೀ ವ್ಯಕ್ತಿಯೊಬ್ಬನ ಹೆಸರಿಗೆ ಮತ್ತೊಂದು ಪತ್ರ ಬರೆದು . . . ಕೊಟ್ಟನು (ಪುತರು ೩೩೪). (ನಾ). ೨. ಶಕ್ತಿಯುತವಾದುದು; ಪರಿಣಾಮಕಾರಿಯಾದುದು : ಬರೆಹ ಕ್ಕಿಂತ ಮಾತೇ ಹೆಚ್ಚು ಪ್ರಭಾವಶಾಲಿಯಾದುದಲ್ಲವೇ ? (ವಾಕ್ಸೌಂ. ೫೫೭): ಕೊಪರ್ನಿಕಸ್ ಮತ್ತು ನ್ಯೂಟನ್ನರ ಕಾಲಗಳಲ್ಲಿ ನಡೆದ ಸಂಶೋಧನೆಗಳಷ್ಟು ಪ್ರಭಾವಶಾಲಿಗಳಾಗಲಿಲ್ಲ (ಮುಕ್ತಾಕ. ೩೩ ಶೀರ್ಷಿ). ೩. ವರ್ಚಸ್ವಿಯಾದ ವ್ಯಕ್ತಿ; ಪ್ರಭಾವವನ್ನು ಬೀರುವವನು : ಆತ ತುಂಬಾ ಪ್ರಭಾವಶಾಲಿ. ನಮ್ಮ ಕೆಲಸಕ್ಕೆ ಅವನು ಸಹಾಯ ಮಾಡಬಹುದು (ರೂಢಿ).

[ಸಂ. ಪ್ರಭಾವಶಾಲಿನ್]

**ಪ್ರಭಾವಳಿ** (ನಾ). ವಿಗ್ರಹದ ಶಿರೋಭಾಗದಲ್ಲಿ ಅಳವಡಿಸುವ ವರ್ತುಳಾಕಾರದ ಒಂದು ಅಲಂಕಾರಸಾಧನ : ಶ್ರೀಆದಿತೀರ್ಥೇಶ್ವರ ರಿಂಗೆ ಮಾಡಿಸ್ದ ಲೋಹದ ಪ್ರಭಾವಳಿಗೆ ಆ ಸಮಸ್ತಜನಂಗಳಿಗೆ ಮಂಗಳ ಮಹಾಶ್ರೀ (ಪ್ಕ್ಎಂ. ೦೯೪೪, ೪೪-೨; 1583); ಉಮಾಮಹೇಶ್ವರನ ಮೇಲೆ ಕೆತ್ತಿರುವ ಪ್ರಭಾವಳಿಯು ಅತ್ಯಂತ ಸುಂದರವಾದ ಬಳ್ಳಿಯಿಂದ ಕೂಡಿದಂತೆ ಕೆತ್ತಲ್ಪಟ್ಟಿದೆ (ಶಾಶಿಶ. ೫೦೨). [ಸಂ. ಪ್ರಭಾವಲಿ]

**ಪ್ರಭಾವಳೆ**, ಪ್ರಭಾಳೆ (ನಾ). = ಪ್ರಭಾವಳಿ : ಇದರಲ್ಲಿ ತರಹೇವಾರಿ ಉತ್ಸವಗಳಿರುತ್ತವೆ. ಪ್ರಭಾವಳೆ, ಶೇಷ, ಗರುಡ, ಪುಷ್ಪಮಂಟಪ ಇತ್ಯಾದಿ (ಗಸುಪಾ. ೩೩). **ಪ್ರಭಾಳೆ** : ನವರತ್ನ [ಖಚಿತ]ವಾದ ಚಿಂನದ ಪ್ರಭಾಳೆಯನೂ ಸಮರ್ಪಿಸಿ (ಸೌಇಇ. IX – ii, ೪೯೯-೩೭; 1518).

[< ಪ್ರಭಾವಳಿ./ ಮರಾ. ಪ್ರಭಾವಳ, ಪ್ರಭಾಳ]

**ಪ್ರಭಾವಿ** (ಗು). ೧. ವರ್ಚಸ್ಸಿನಿಂದ ಕೂಡಿದ; ಪರಿಣಾಮಕಾರಿಯಾದ: ತನ್ನ ಲೇಖನಗಳನ್ನು ಪ್ರಕಟಿಸಿ ಪ್ರಭಾವಿ ಬರಹಗಾರ ಎಂದು ಎನಿಸಿ ಕೊಂಡಿದ್ದು ರಂಗಣ್ಣನವರಿಗೆ ಧೈರ್ಯ ತಂದುಕೊಟ್ಟಿತು (ಅಶಹ. ೦೦). (ನಾ). ೨. ವರ್ಚಸ್ವಿಯಾದಂದು : ಅಷ್ಟು ಪ್ರಭಾವಿಯಾಗಿತ್ತು ಮಹಾದೇವಯ್ಯನವರ ಉಜ್ವಲವ್ಯಕ್ತಿತ್ವ (ರಂಗಜೋ. ೦೭೦). ೩. ಪ್ರಭಾವ ಬೀರಬಲ್ಲವನು : ಎಲ್ಲ ಅಂಗಗಳಲ್ಲಿಯೂ ಜೈನರೇ ಪ್ರಭಾವಿ ಗಳಾಗಿದ್ದ ಕಾಲವು ಮುಗಿದುಹೋಗಿತ್ತು (ಶಾಚಿಶ. ೦೩೩).

[ಸಂ. ಪ್ರಭಾವಿನ್]

**ಪ್ರಭಾವಿತ** (ನಾ). ವರ್ಚಸ್ಸಿಗೊಳಗಾದವನು: ಅವರ ಮುಗ್ಧ ನಡೆನುಡಿ ಗಳಿಂದ ಪ್ರಭಾವಿತರಾದವರು . . . ನಿಜವಾಗಿ ಧನ್ಯರು (ಶಿವ್ಯದ. ೭೭೬) ; ಅವಳ ಸೊಬಗಿನಿಂದ ಅವನು ಪ್ರಭಾವಿತನಾದನು (ಯೋಧರು. ೦೦).

[ ಸಂ. ]

**ಪ್ರಭಾವಿಸು** (ಕ್ರಿ). ೧. ಬೆಳಗಂ ; ಪ್ರಕಾಶಪಡಿಸಂ : ಮನೋರಥಮ ಪುಟ್ಟುವ ವಾಳ್ಕೆಯಿನೊಲ್ದು ಪುಟ್ಟಿ ವಂಶಾಂಬರವಂ ಪ್ರಭಾವಿಸಿದನ ಪ್ರತಿಮಪ್ರಬಲಪ್ರತಾಪವೀರಾಂಬುಧಿ ಪದ್ಮದೇವನ್ (ಸೌಇಇ. IX-i, ೨೭೭-೨೦; 1184). ೨. ಹೊಮ್ಮಿಸು ; ಪ್ರಕಟಪಡಿಸಂ : ಸಾಕ್ಷಾತ್ಸರಸ್ವತಿ ತಾನೆಂಬಿನಮೇಂ ಪ್ರಭಾವಿಸಿದಳೋ ನಾನಾಕಳಾಪವಮಂ (ಸುಕುಮಾ. ೬-೩೩); ನೋಂಪಿಯೊಳಾದ ಮಹಾಮಹಿಮೆಯಂ ಪ್ರಭಾವಿಸುತ್ತಂ ನಾನಾಜನ ಜಾಲಂಗಳಂ (ಸೇವೆ) ಮಾಡುತ್ತಂ (ಮುಡಿಕ್ಕ. III, ೫೫೦ ನಮಿಂಡಿಶಂಕರ ಕೋಂಗ). [ಪ್ರಭಾವ + – ಇಸು]

ಪ್ರಭಾಳೆ 'ಪ್ರಭಾವಳೆ' ನೋ.

**ಪ್ರಭಿನ್ನ** (ಗು). ೧. ಒಡೆದ; ಚೂರುಚೂರಾದ : ನೆಗೆದ ಚಾತುರ್ದಂತ ಬಲಜಲಧರರಭಸಂ ಪ್ರಭಿನ್ನ ಬ್ರಹ್ಮಾಂಡಾಖಂಡಶಂಕೆಯಂ ಪುಟ್ಟಿಸೆ (ಶಾಂತಿಪು. ೩-೦೦೦ ವ) : ರುಚಿತೀರ್ಥಧ್ವಾನ್ತಸಂಘಾತಪ್ರಭಿನ್ನಘನಭಾನವೇ (ಸೌಇಇ. XX, ೪೬-೨; 1072). ೨. ಅರಳಿದ : ಬಾಸಣಿಸಿದುದುತ್ಕಟ ಕುಸುಮಾಸವಸೌರಭದೆ ದೆಸೆಗಳೊಡನಳೀಂಳಿವಂ ವಾಸವವನಿತಾವದನಾ ಬ್ಜಾಸವಸೇಕಪ್ರಭಿನ್ನಮುಕುಲಂ ವಕುಲಂ (ಅಂಜಿ. ೬-೯೭). (ನಾ). ೩. ಮದವೇರಿದ ಆನೆ ; ಮದ್ದಾನೆ : "ಲಗ್ನಃ, ಪ್ರಭಿನ್ನಃ, ಮತ್ತಃ —ಈ ೩ ಮದದಾನೆ" (ಕರಿಂಜು. ೩೭-೭೭). [ ಸಂ. ]

**ಪ್ರಭು** (ನಾ). ೧. ರಾಜ; ಅರಸು; ಒಡೆಯ: "ಆರ್ಯಃ, ಪರಿವೃಢಃ, ಸ್ವಾಮಿ, ಪ್ರಭುಃ . . . ಅಧಿಪತಿಃ- ಈ ೧೦ ಒಡೆಯಂ" (ಕರಿಂಜು. ೫೭-೦೯೯); ಪ್ರಭುಗಳ್ ಭಯದೊಡನೆ ಕೂಡಿ ಚಿಂತಿಪರಾಗಳ್ (ಹದ್ಯಾರ. ೨-೨೫): ವೈದ್ಯಗ್ರಂಥವನ್ನು ಬರೆದಾತನು ಕಳಲೆಯ ಪ್ರಭುವಾದ ವೀರ ರಾಜನು (ಕಕಪ್ರ. V. ಪ್ರಸ್ತಾವನೆ). ೨. ಬಸವಣ್ಣನ ಸಮಕಾಲೀನ ನಾಗಿದ್ದ ಶರಣನೊಬ್ಬನ ಹೆಸರು ; ಅಲ್ಲಮ : ಸಿದ್ಧರಾಮನ ಪುರಕೆ ಪ್ರಭು ಬಾದ (ಪ್ರಭುಲಿ. ೧೧-೩). ೩. ಒಬ್ಬಾತನ ಹೆಸರು : ಇದಜ ಮುನ್ದೆ ಕೊಣ್ಡಶರ್ಲಕುಪ್ಪ ಕೀರ್ತ್ತಿವರ್ಮ ಗೋಸಾಸಿಯ ನಿಜಿಸಿದು ಕೀರ್ತ್ತನ ದಿಶಾಪಾಲಸ್ಕಲಿಖಿತಂ ಪ್ರಭುನಾಮಂ (ಎಇ. XXI, ೩೪-೦೪; 761).

**ಪ್ರಭುಗಳಂಬಳಿ** = ರಾಜನು ಬಿಟ್ಟ ಮಾನ್ಯ : ಮಹಾಜನಂ ಪ್ರಭುಗಳಂಬಳಿಯುಮಂ ದೇವರಂಬಳಿಯುಮಂ ಸರ್ವ್ವಬಾಧಾಪರಿಹಾರವಾಗಿ ಕಾದೂಡುವರು (ಹಾಂರೇಡ್. ೩-೨೨: 1047). [ಸಂ.]

**ಪ್ರಭುಗೊಡಗೆ** (ನಾ). ರಾಜನು ಕೊಟ್ಟ ಕೊಡುಗೆಯ ಭೂಮಿ : ಪ್ರಭುಗೊಡಗೆ ಗಲುಡುಗಳೂ ಗ್ರಾಮದ ಸೇನಬೋವನ ಕೊಡಗಿ ಮುನ್ನಾದ ಮಾನ್ಯಗಳನೂ ಸರ್ವಮಾನ್ಯವಾಗಿ ಬಿಟ್ಟು (ಎಕ. XIV. ಶ್ರೀರಂಗ. ೦೯೯-೨೦; 1563). [ಪ್ರಭು + ಕೊಡಗೆ (<ಕೊಡಂಗೆಯ್ಯ್)]

**ಪ್ರಭುತೆ** (ನಾ). ಪ್ರಭುವಾಗಿರುವಿಕೆ; ರಾಜನ ಅಧಿಕಾರ; ಪ್ರಭುತ್ವ: ಗಭೀರದೊಳ್ ಗರಿಮೆಯೊಳೂರ್ಜಿತಪ್ರಭುತೆಯೊಳ್ . . . ನಿನಗಾರ್ ದೊರೆ ಮಾನವರೀ ಧರಿತ್ರಿಯೊಳ್ (ಕೃಕೃ. ೧-೮೦); ಪ್ರಭುತೆಯ ತೆರನಂತೆ ಜನರನು ಸೆಳೆವಳು (ಶಂಕಾಶ. ೦೦೬-೨೦). [ಸಂ. ಪ್ರಭುತಾ]

**ಪ್ರಭುತ್ರಿಕೆ** (ನಾ). = ಪ್ರಭುತ್ವ : ಅಸಗೋಡ ಪಲ್ಲವಸಾವಂತನು ಉಚ್ಚಂಗಿ ಮಾರಾವತ್ತಱೊಳು ತಂನ ಪ್ರಭುತ್ರಿಕೆಯ ಕೂಚಿಗೋಳದ ಮೂಲಸ್ಥಾನ ಕಲಿದೇವ ××× ನಿವೇದ್ಯಕ್ಕಂ . . . ಬಿಟ್ಟ ದತ್ತಿ (ಸೌಇಇ. IX-i. ೩೩೯-೨೨; 1222). [< ಪ್ರಭುತ್ವ + — ಇಕೆ]

**ಪ್ರಭುತ್ವ** (ನಾ). ಒಡೆತನ; ಅಧಿಕಾರ : ಆರ ನೆಗಟ್ಟಿಯುಂ ಬಲಮುಮಾಯತಿಯುಂ ಚಲಮುಂ ಪ್ರಭುತ್ವಮುಂ ದೂರದೊಳಿರ್ದು ನೋಡೆ ಸೊಗಯಿಪ್ಪುದು ಬೆಟ್ಟದ ಗುಣ್ಪಿನಂತೆ (ಕಾವ್ಯಸಾ. ೯೩೪); ಪ್ರಭುತ್ವಗಳು —ಇವು . . . ರಾಜಾಧೀನಪ್ರಭುತ್ವವೆಂತಲೂ . . . ಪ್ರಜಾಧೀನ ಪ್ರಭುತ್ವವೆಂತಲೂ ಎರಡು ವಿಧವು (ಭೂಗೋಳ. ೦೯). [ಸಂ.]

**ಪ್ರಭುಮಾಣಿ** (ನಾ). ಒಬ್ಬಾತನ ಹೆಸರು : ಶ್ರೀಪ್ರಭುಮಾಣಿ ಪರಮಸುಭಗನ್ ಪಗೆವರ ಗಂಧಾಸ್ತಿ ಪಾರ್ಶ್ವರ ಇಟ್ಟಿ (ಎಕ. XVI. ಮರ್ಕ. ೦೦೬-೦: ೩ಶಿಹು ೩ಶ). [ಪ್ರಭು + ಮಾಣ್ಕೆ]

**ಪ್ರಭುವಶಿತ** (ನಾ). ಅರಸನ ಅಂಕಿತಕ್ಕೆ ಒಳಪಟ್ಟುದು ; ರಾಜನ ಅಧೀನಕ್ಕೊಳಗಾದಂದು : ನಾವು ಎಲ್ಲರನ್ನೂ ಜಯಿಸಿ ರಾಜ್ಯಗಳನ್ನು ಕಟ್ಟಿಕೊಂಡು ಕಳಲೆಯನ್ನು ಮಾತ್ರ ಅವನಿಗೆ ಪ್ರಭುವಶಿತವಾಗಿ ಕೊಟ್ಟು ಇದ್ದೆವು (ಕಾಮವಂ. ೯೬); 'ಪ್ರಭುವಶಿತವಾದ ಕಟ್ಟುಂಬಳಿ' ಎಂಬ ಒಕ್ಕಣೆಯಿದೆ (ಮಂಕ್ರಕ. ೦೬-೨). [ಸಂ. ಪ್ರಭುವಲಿತ]

**ಪ್ರಭುಶಕ್ತಿ** (ನಾ). [ರಾಜನೀ] ಮಂತ್ರಶಕ್ತಿ, ಪ್ರಭುಶಕ್ತಿ ಮತ್ತು ಉತ್ಸಾಹಶಕ್ತಿಗಳೆಂಬ ಮೂರು ಶಕ್ತಿಗಳಲ್ಲಿ ಒಂದು ; ರಾಜನ ಅಧಿಕಾರದಿಂದ ಬರುವ ಶಕ್ತಿ; ಕೋಶಬಲ ಮತ್ತು ದಂಡಿಸುವ ಶಕ್ತಿ—ಇವುಗಳಿಂದ ಬರುವ ತೇಜಸ್ಸು—ವರ್ಚಸ್ಸು ; ಆಳುವ ಶಕ್ತಿ: ಉತ್ತಮಪ್ರಭುಶಕ್ತಿಯುಕ್ತ ಜಿನೇಂದ್ರಶಾಸನಭಕ್ತ (ಎಕ. VII. ಶಿಕಾ. ೨೦೯-೦೯; 918) ; ಪ್ರಭುಶಕ್ತಿ ಶಕ್ತಿ ನಿರ್ಮಳ ಮಣಿಭೂಷಣಂ ಫಣಿವಿಭೂಷಣವಾಗೆ ನೆಗಟ್ತೆಯಂ ಪುದುಗೊಳಿಸಿದನೀಶ್ವರಂ ನೆಗಟ್ದುದಾರಮಹೇಶ್ವರನೆಗೆ ಭೋಗಮಂ (ಶಂಶಳಾ. ೦-೨); ರಾಜಕೀಯವ್ಯವಸ್ಥೆಗಳು ಪ್ರಭುಶಕ್ತಿ ಇರುವವರ ಅಭಿಪ್ರಾಯಗಳಿಗೆ ಸರಿಯಾಗಿ ರೂಪಾಂತರಗಳನ್ನು ಪಡೆಯುತ್ತವೆ (ಭಾರತ. ೨೨೦). 'ಉತ್ಸಾಹಶಕ್ತಿ' ಪರಾ. [ಸಂ.]

**ಪ್ರಭುಸಮ್ಮಿತ** (ನಾ). [ಕಾವ್ಯಮೀ] ಪ್ರಭುಸಮ್ಮಿತ, ಮಿತ್ರಸಮ್ಮಿತ ಮತ್ತು ಕಾಂತಾಸಮ್ಮಿತವೆಂಬ ಮೂರು ಬಗೆಯ ಸಮ್ಮಿತಗಳಲ್ಲಿ ಒಂದು ; ನಮಗೆ ಪ್ರಿಯವಾಗಿರಲಿ ಇಲ್ಲದಿರಲಿ ರಾಜಶಾಸನದಂತೆ ಅವುಗಳನ್ನು ಅನುಸರಿಸಿ ನಡೆಯಬೇಕಾದುದು : ಅಲಂಕಾರಿಕರು ಗ್ರಂಥರಾಶಿಯನ್ನು ಉಪದೇಶದೃಷ್ಟಿಯಿಂದ ಪ್ರಭುಸಮ್ಮಿತ, ಮಿತ್ರಸಮ್ಮಿತ, ಕಾಂತಾಸಮ್ಮಿತ ಎಂದು ಮತ್ತೊಂದು ಪ್ರಕಾರವಾಗಿ ಮೂರು ಭಾಗ ಮಾಡುವರು. "ಹೀಗೆ ಮಾಡಬೇಕು, ಹೀಗೆ ಮಾಡಕೂಡದು" ಎಂದು ಕರ್ತವ್ಯಾಕರ್ತವ್ಯಗಳನ್ನು ವಿಧಿಸುವ ಮತ್ತು ನಿಷೇಧಿಸುವ ವೇದಶಾಸ್ತ್ರಾದಿಗಳು ಪ್ರಭುಸಮ್ಮಿತ (ಕೃಶಿ. ೦೬೬ ೩೨೦); ವಿಧಿ-ನಿಷೇಧಗಳನ್ನು ಪ್ರಭುಸಮ್ಮಿತವಾಗಿ ನಿರೂಪಿಸುವ ವೇದಗಳಲ್ಲಿ ಶ್ರದ್ಧೆಯಿಟ್ಟು ಪ್ರವರ್ತಿಸುವುದೇ ಪ್ರಸ್ತುತವಾಗಿತ್ತು (ಶಾಕರ. ೦೨೦). [ಸಂ.]

**ಪ್ರಭೂತ** (ಗು). ೧. ಸಮೃದ್ಧವಾದ ; ಹೆಚ್ಚಾದ ; ಅಧಿಕವಾದ : ಆ ವಿವಿಧಪ್ರಭೂತಭುವನಸ್ತುತಸಾರಸಮಸ್ತವಸ್ತುವಂ ತೀವಿದ ಭಂಡಿಯೊಳ್ . . . ಸಂಜೀವಕ ನಂದಕಾಖ್ಯ ವೃಷಭಂಗಳನಿಂಬೆನೆ ಪೂಡಿ (ಪಂಚತಂ. ೨೩ ೯). ೨. ಹುಟ್ಟಿದ ; ಉಂಟಾದ : ಪುರಾಣಕವಿಪ್ರಭುಪ್ರಯೋಗಾವಿಳಸದ್ಗುಣೋದಯಮನಾಯ್ದುವೞಿಂ ಸಮೆದೊಂದು ಕಾವ್ಯದಿಂ ಶ್ರೀವಿಜಯಪ್ರಭೂತಮುದದಮಂ ತನಗಾಗಿಸಿದೊಂ ಕವೀಶ್ವರಂ (ಕವಿರಾ. ೨-೦೩೩); ಅಭಿಮನ್ಯುಮರಣವಾರ್ತಾಪ್ರಭೂತಶೋಕಾಗ್ನಿ ಧರ್ಮತನಯನನಿರದಂದಭಿಭವಿಸಿ ತನ್ನನಳುರ್ದಂತೆ ಭಾಸ್ಕರಂ ಕಂಕವಾದನಸ್ತಾಚಲದೊಳ್ (ಪಂಪಭಾ. ೦೦-೦೦೬). ೩. ಪಕ್ವವಾದ ; ಬಲಿತ. (ನಾ). ೪. ಹೆಚ್ಚಳ ; ಆಧಿಕ್ಯ: "ಪ್ರಾಜ್ಯಂ, ಭೂರಿ, ಪ್ರಭೂತಂ . . . ಅದಭ್ರಂ-ಈ ೧೧ ಮೊಕ್ಕಳಂ" (ಶಬ್ದಮ. ೦೦೬-೦೬) ; ಜನಸಾಧಾರಣವೆಂದರೆ, ಒಂದು ದೊಡ್ಡ ಜೀವವನ್ನು ಸೂಚಿಸುತ್ತದೆ ; ಸ್ವಭಾವವಾಗಿ ಅದರ ಅವಶ್ಯಕತೆ ಪ್ರಬಲ ಮತ್ತು ಪ್ರಭೂತ (ಪಿಂತ. II, ೧೯೬). ೫. ಶ್ರೇಷ್ಠವಾದುದು. ೬. ಒಬ್ಬ ವ್ಯಕ್ತಿಯು ಸತ್ತ ನಂತರದ ಹತ್ತನೆಯ ದಿನ ಕೊಡಲಾಗುವ ಮೊಸರನ್ನದ ಬಲಿ : (ಶ್ರ). [ಸಂ.]

**ಪ್ರಭೂತಿ** (ನಾ). ಸಮೃದ್ಧವಾದುದು ; ವಿಪುಲವಾಗಿರುವಿಕೆ : "ಬಹುಳಂ ಪ್ರಭೂತಂ ಪ್ರಭೂತಿ [ಶಾಶಾಂ. ೧] ಬಹುಪುಷ್ಕಳಂ ಪುಷ್ಕಮನೆ ಮೊತ್ತಮುಕ್ಕುಂ" (ಮಂಗರಾ. ೦೨೯-೬); ಶೈಲಸಾಗರಧರಾಶಾಚಕ್ರವಾಳಾಂಬರಂ ಪರಮಶ್ರೀವಿಜಯ ಪ್ರಭೂತಿಜಯಶ [೦] . . . ಪರಮಾನಂದಿತ ಲೋಕಮೊಪ್ಪೆ ನೆಲೆಗೊಳ್ಗಾಚಂದ್ರತಾರಂಬರಂ (ಕವಿರಾ. ೩-೨೨೦). [ಸಂ.]

**ಪ್ರಭೃತಿ₁** (ನಾ). ೧. ತೂಕವುಳ್ಳುದು ; ಶ್ರೇಷ್ಠವಾದುದು ; ಉತ್ತಮವಾದಂದು : ಭಾಸ್ವದ್ಗುಣಯುತಕಪಿಲಾದ್ಯ ಪ್ರಭೂತಾವನೀಪಾವನರೂಪ ಶ್ರೀವಿಭೂತಿಪ್ರಭೃತಿಯನುಱಿ ಪತ್ತೂರ್ವಕಂ ಲೇಪನಂಗೈದು (ರಾಜಕೀ. ೦೩-೯೬). ೨. ತೂಕದ ವ್ಯಕ್ತಿ; ಶ್ರೇಷ್ಠಪುರುಷ ; ಶ್ರೇಷ್ಠವ್ಯಕ್ತಿ : ಕೊಳಗಾಲದ ವೀರಣ್ಣಶೆಟ್ಟಿ, ಅಣ್ಣಯ್ಯಶಾಸ್ತ್ರಿ ಪ್ರಭೃತಿಗಳೆಲ್ಲಾ ಯೋಚಿಸಿ (ಹೃದಶ. ೯೬); ಆಧಾರಗ್ರಂಥಗಳಲ್ಲಿ ನಮೂದಿಸಲ್ಪಟ್ಟ ಕೆಲವು ಹೆಸರುಗಳನ್ನು . . . ನಮ್ಮ ತುಳುನಾಡಿಗೆ ಹೊಂದಿಸಿಕೊಳ್ಳುವ ಪ್ರಯತ್ನವನ್ನು ನಮ್ಮ ನಾಡಿನ ಪ್ರಭೃತಿಗಳು ಮಾಡಿದ್ದಾರೆ (ತುಳುಇ. ೦೬). [<ಸಂ. ಭೃತಿ=ಭಾರವಾದುದನ್ನು ಹೊತ್ತುಕೊಂಡಿರುವುದು]

**ಪ್ರಭೃತಿ₂** (ಅ). ಮೊದಲಾಗಿ; ಮೊದಲುಗೊಂಡು ; ಪ್ರಾರಂಭಿಸಿ : ಸಿದ್ಧಾಯತನ ಪ್ರಭೃತಿ ನವಕೂಟಂಗಳೊಳಂ ನೆಱೆದು (ಆದಿಪು. ೧-೬೨ ವ) ; ಯಾಚಕ ವಾಚಕ ನರ್ತನ ಕಥಕ ವೃನ್ದಪಾಠಕ ಪ್ರಭೃತಿ ಸಮಸ್ತಜನಕ್ಕಂ ಬೇಡಿದುದಂ ಕೊಟ್ಟು (ಸುಕುಮಾ. ೬-೨೫ ವ). [ಸಂ.]

**ಪ್ರಭೆ** (ನಾ). ೧. ಕಾಂತಿ; ಪ್ರಕಾಶ : "ವರ್ಚಃ . . . ಪ್ರಭಾ, ರಶ್ಮಿಃ —ಈ ೧೧ ದೀಪ್ತಿ" (ಶಬ್ದಮ. ೦೨-೬೫); ಪ್ರಭೆಯಿಂ ಚಿಂತಾಮಣಿ ಕಲ್ಪಭೂರುಹಂ ಪುಷ್ಪಮಂಜರಿಯಿನೆಸೆವವೊಲಾ ತ್ರಿಭುವನಭೂಷಣನೆಸೆದಂ (ಅರ್ಜುನ. ೯-೩೯) ; ಆ ಚಿತ್ರಿನ ಪ್ರಭೆಯಲ್ಲಿ ಶರಣನುದಯಿಸಿದನು (ಸಿದ್ಧೇಶ. ೦೬-೯೩). ೨. ರಶ್ಮಿ ; ಕಿರಣ . "ರೋಚಿಃ . . . ದ್ಯುತಿಃ, ಪ್ರಭಾ . . .ಗೌಃ — ಈ ೩೨ ರಶ್ಮಿಗಳ ಪೆಸರ್" (ಶಬ್ದಮ. ೬-೫೮).

**ಪ್ರಭಾಪ್ರಭಾವನ್ಯಾಯ**=ದೀಪ ಮತ್ತು ಅದರ ಪ್ರಕಾಶ ಎರಡೂ ಒಂದೇ ಎಂಬ ನ್ಯಾಯ: ಪ್ರಭಾಪ್ರಭಾವನ್ಯಾಯದಂತೆ ಈ ವಿಶ್ವವು ಈಶ್ವರನಿಗೆ ಶರೀರವಾಗಿದೆ (ಶಾರದಾ. ೨೬೬). [ಸಂ. ಪ್ರಭಾ]

**ಪ್ರಭೆವೆಱು** (ಕ್ರಿ). ಪ್ರಕಾಶವನ್ನು ಹೊಂದು; ತೇಜಸ್ಸನ್ನು ಪಡೆ;

ಅತುಳಿತಪ್ರಭವೆತ್ತು ಸುತನೀ ಗತಿಯೋಳೀಶಧ್ಯಾನತತ್ಪರಮತಿಯೊಳಿರ್ದನು ತಾಯ ಬಸುಱಿಂ ವತ್ಸರತ್ರಯವು (ಬಸವ. ೩-೦೨). [ಪ್ರಭ+ಪೆಱು₁]

**ಪ್ರಭೇದ** (ನಾ). ೧. ಒಡೆಯುವಿಕೆ; ಮುರಿಯುವಿಕೆ. ೨. ವಿಭಾಗ. ೩. ಪ್ರಕಾರ; ರೀತಿ; ವಿಧ: ರಘಟೆಗಳ (ತೆಲುಗು-ರಗಡ) ಪ್ರಭೇದಗಳನ್ನು ತಿಳಿಸುವ . . . ಈ ಎರಡು ಪದ್ಯಗಳು ಪ್ರಕ್ಷಿಪ್ತಗಳಾಗಿ ಕಾಣುತ್ತವೆ (ಕೃಶಿಶಾ. ೦೩೩). ೪. ವ್ಯತ್ಯಾಸ; ಭೇದ: ಇಂತೀ ಅಂಗ ಪ್ರಾಣಂಗಳಲ್ಲಿಯೂ ಲಿಂಗವೇ ಎಡೆಕಡೆ ಇಲ್ಲದಿರ್ದ ಪ್ರಭೇದ [ಶಾಕಾಂ. ಭೇಧ]ವನು ಅಱಿದಾತನೇ ಸರ್ವಾಂಗಲಿಂಗಿ (ಸಿದ್ಧೇವ. ೦೦೬-೩೩೮). [ಸಂ.]

**ಪ್ರಭೇದಕ** (ನಾ). ಭೇದಿಸುವವನು; (ಇಂಗಿತವನ್ನು) ಅರಿಯುವವನು: ಪರರಿಂಗಿತಾಕಾರಪ್ರಭೇದಕನ ಮನ್ನಣೆಗೆ ಬೆಱೆಯದನನು . . . ಪಡಿಹಾಱಿಕನ ಮಾಡುವುದು (ಕಾವ್ಯಾ. ೩-೮೧). [ಸಂ.]

**ಪ್ರಭ್ರಷ್ಟಕ** (ನಾ). ತಲೆಯಲ್ಲಿ ಧರಿಸಿದ ಹೂಮಾಲೆ: "ಚಂಡಿಕೆಯಲ್ಲಿ ಮುಡಿದ ಹೂ ಪ್ರಭ್ರಷ್ಟಕವೆಂಬುದು" (ಶಬ್ದಮ. ೯೦-೩೧೧). [ಸಂ.]

**ಪ್ರಮಂಥ** (ನಾ). ಅಗ್ನಿಯನ್ನುಂಟುಮಾಡಲು ಬಳಸುವ ಮರದ ತುಂಡು; ಅರಣಿ: ಮನುಷ್ಯ ಬಿದಿರುಜಾತಿಯ ಕಾಷ್ಠದ ಮತ್ತನೆ ಮರದಲ್ಲಿ 'ಪ್ರಮಂಥ'ದಿಂದ (ಅರಣಿಯಿಂದ) . . . ಮಥಿಸಿದಾಗ ಬೆಂಕಿಯಡಗಿದೆ ಯೆಂದು ತಿಳಿಯುತ್ತಾನೆ (ಐತ್ರ. V ೩೧೪). [ಸಂ.]

**ಪ್ರಮತ್ತ** (ಗು). ೧. ಸೊಕ್ಕುವ; ಮದವೇರುವ: ಸೌಂದರ್ಯದಿಂದ ಪ್ರಮತ್ತವಾಗುವ ಚೇತನ ಶಿವದ ನೆನಹಿನಲ್ಲಿ ನಾಂದು ಹಗುರವಾಗಲಿ (ಶ್ರೀಂಡ. ೧೦೮). ೨. ಅಜಾಗರೂಕವಾದ; ಎಚ್ಚರಗೇಡಿಯಾದ. (ನಾ). ೩. [ಜೈನ] ಆತ್ಮನ ಎರಡು ಅವಸ್ಥೆಗಳಲ್ಲಿ ಒಂದು; P "ಅಶುದ್ಧಾತ್ಮನಲ್ಲಿ ಕೆಳತರಗತಿಯ ಆರು ಗುಣಸ್ಥಾನಗಳಲ್ಲಿ ಕಾಣ ಬರುವ ಪರಿಣಾಮ" (ಕೃಶಕೋ. ೦೬೭): ಅಂತರ್ಮುಹೂರ್ತಕಾಲಂ ಪ್ರಮತ್ತಾಪ್ರಮತ್ತಪರಾವರ್ತನಸಹಸ್ರಂಗೆಯ್ದು (ಅಂತು. ೦೦-೦೪ ವ); [ಮತ್ತಂ]ಮಂತರ್ಮುಹೂರ್ತಕಾಲಂ ಪ್ರಮತ್ತಾಪ್ರಮತ್ತ ಪರಿವೃತ್ತಿ . . . ಪ್ರವೃತ್ತಕರಣಕ್ಷಪಕನಾಗಿ (ಶಾಂತಿಪು. ೦೦-೦೦೦ ವ). 'ಅಪ್ರಮತ್ತ'ಪರಾ. [ಸಂ.]

**ಪ್ರಮತ್ತತೆ** (ನಾ). ಸೊಕ್ಕುವಿಕೆ; ಅಮಲೇರುವಿಕೆ: ಈ ಲಲನೆಯರ ಸೌಂದರ್ಯಾನುಭವದಲ್ಲಿ ಒಂದು ರೀತಿಯ ಪ್ರಮತ್ತತೆ ಮೊದಮೊದಲಿಗೆ ಕಂಡುಬಂದರೂ (ಹುಕೀ. ೮). [ಸಂ. ಪ್ರಮತ್ತತಾ]

**ಪ್ರಮತ್ತಯೋಗ** (ನಾ). [ಜೈನ] "ಕಷಾಯಕ್ಕೆ ಅಧೀನವಾಗಿ ಅಸತ್ಯವನ್ನಾಡುವುದು" (ಕೃಶಕೋ. ೦೬೩): ಉಮಾಸ್ವಾಮಿಯವರು 'ತತ್ತ್ವಾರ್ಥ ಸೂತ್ರ'ದಲ್ಲಿ 'ಪ್ರಮತ್ತಯೋಗದಿಂದ ಪ್ರಾಣದ ನಾಶವಾಗುವುದೇ ಹಿಂಸೆ' ಎಂದು ಪ್ರತಿಪಾದಿಸುತ್ತಾರೆ (ಕೃಶಕ. ೨೩೦). [ಸಂ.]

**ಪ್ರಮತ್ತಸಂಯುತ** (ನಾ). [ಜೈನ]ಪ್ರಮತ್ತಗುಣಗಳಿಂದ ಕೂಡಿದವನು: ಸಂಜ್ವಲನಕಷಾಯ . . . ದುಃಸ್ವಪ್ನಾದಿ ವ್ಯಕ್ತಾವ್ಯಕ್ತ ಪ್ರಮಾದಂಗಳೊಳು ವರ್ತಿಸುವ ತಪಸ್ವಿಯಾರನೆಯ ಗುಣಸ್ಥಾನವರ್ತಿ ಪ್ರಮತ್ತಸಂಯುತನಕ್ಕುಂ (ಕ್ಷ್ಯಕಶ. ೩೬-೦೪). [ಸಂ.]

**ಪ್ರಮುತ್ತಿ** (ನಾ). =ಪ್ರಮಾದಿ ೨: × × × ವಹಳನ ಪ್ರಮುತ್ತಿ ಸಂವತ್ಸರದ ಕಾರ್ತಿಕ ಬಹಿ ಸೋಲುದೊಡ ತಂಮಣ್ಣಗೆ ನಿಂದ ವೀರಗಲ್ಲು (ಪ್ರಶಂ. ೦೪೯೩, ೦೬-೨; 1399). [< ಪ್ರಮಾದಿ ?]

**ಪ್ರಮಥ** (ನಾ). ಶಿವನ ಪರಿವಾರವರ್ಗದಲ್ಲಿ ಒಬ್ಬ: "ಆತನ ಗಣಂಗಳಂ ಪ್ರಮಥರೆಂಬುದು" (ಶಬ್ದಮ. ೯-೦೪); ಎಲ್ಲಿ ನೋಡಿದಡಲ್ಲಿ ಮನವಳಿಸಿದರೆ ಆಣೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ (ಬಸವ. ೪೧೩); ಜ್ಯೋತಿಯಿಂದ ಜ್ಯೋತಿ ಉದಯಿಸಿದಂತೆ ಉದಯಿಸಿದ ಶುದ್ಧಚಿದ್ರೂಪರಪ್ಪ ಪ್ರಮಥರು (ಸಿದ್ಧೇವ. ೨೦. ೩೩). [ಸಂ.]

**ಪ್ರಮಥಗಣ** (ನಾ). ಶಿವನ ಪರಿವಾರ; ಶಿವಗಣ; ಪ್ರಮಥರ ಸಮೂಹ: ಕಲ್ಯಾಣಕ್ಕೆ ಪ್ರಮಥಗಣಂಗಳ ರುದ್ರಗಣಂಗಳ ಅಮರಗಣಂಗಳ . . . ತಂದು ನರಹಿದಾತ ನಮ್ಮ ಬಸವಯ್ಯನು (ಶೀಂಶ. ೪. ೩-೧); ಘನತರ ಪ್ರಮಥಗಣರೊಡನೆ ತಾಂಡವಮನೆಸಗುವನು (ಏಕ್ಕ. ೨-೦-೩೭). [ಸಂ.]

**ಪ್ರಮಥತ್ವ** (ನಾ). ಶಿವಗಣದ ಪದವಿ: ಕಾಲಕಾಲಂ ಮೆಚ್ಚಿ ಕರುಣಾಲೋಲದಿಂ ಪ್ರಮಥತ್ವಮುಂ ಕೊಡೆ (ಬಸತ. ೨೬-೪೬). [ಸಂ.]

**ಪ್ರಮಥನ** (ನಾ). ೧. ಕಡೆಯುವಿಕೆ; ಮಥಿಸುವಿಕೆ: ಸುಪ್ರಸನ್ನರು ನೀವು ನಿಮ್ಮುಭಯಪ್ರಕಟತರ ವಚನಪೀಯೂಷಪ್ರಮಥನಾಭಾವದಿಂದೀ ಶಿವಗಣಾವಳಿಯು . . . ವರ್ಧಿಸಿತು (ಬಸತ. ೩೬-೯೬). ೨. ಪೀಡಿಸುವಿಕೆ; ಹಿಂಸಿಸುವುದು. ೩. ಕೊಲೆ; ವಧೆ. [ಸಂ.]

**ಪ್ರಮಥನಾಥ** (ನಾ). ೧. ಪ್ರಮಥರ ಒಡೆಯ; ಈಶ್ವರ: ಬರುತಿರ್ದನಾ ಪ್ರಮಥನಾಥಂ (ಏಕ್ಕ. ೨-೩-೦೬). ೨. ಗಣಪತಿ: (೬). [ಸಂ.]

**ಪ್ರಮದ** (ಗು). ೧. ಮತ್ತೇರಿದ ; ಸೊಕ್ಕಿದ : 'ಪ್ರಮದಾಳಿ' ಪರಾ. ೨. ಎಚ್ಚರಗೇಡಿಯಾದ. (ನಾ). ೩. ಸಂತೋಷ ; ಆನಂದ : "ಪ್ರಮೋದಃ, ಪ್ರಮದಃ . . . ಸುಖಂ—ಈ ೧೩ ಸುಖದ ಪೆಸರ್" (ಶಬ್ದಮ. ೨೦-೦೨೬) ; ಆನಂದನೃತ್ಯಪ್ರಮದಮನಧಿಕಂ ಮಾಡಿ (ಅಪು. ೬-೦೨೮) ; ಧರ್ಮಾರ್ಜನಕಂ ಸನ್ಮಾರ್ಗವಿದ್ಯೋತನಂ ಪ್ರಮದಾಪೂರಿತ ವಿಚಿತ್ರಚಕ್ರನಜಡಂ ನಿತ್ಯೋದಯಭ್ರಾಜಿ ಲೋಕಮನೆಲ್ಲಂ ಬೆಳಗುತ್ತಿರ್ಕ್ಕೆ (ಎಕ. VI. ಕಡೂರು. ೩೩-೩೮,1172). ೪. ದತ್ತೂರ. ೫. ಕಾಲಿನ ಹರಡು. [ಸಂ.]

**ಪ್ರಮದಂಬೆಱು** (ಕ್ರಿ). ಆನಂದವನ್ನು ಹೊಂದು : ಪ್ರಮದಂಬೆತ್ತ ಚಕೋರದಂಪತಿಯ ಪೋಲ್ (ಕುಸುಮ. ೪. ೩೯). [ಪ್ರಮದ + ಪೆಱು₁]

**ಪ್ರಮದವನ** (ನಾ). ರಾಜನ ಅಂತಃಪುರದ ಸ್ತ್ರೀಯರ ವಿಹಾರಕ್ಕಾಗಿರುವ ಉದ್ಯಾನವನ: "ಅರಸರುಂ ಅರಸಿಯರುಂ ಕೂಡಿಹ ಬನಮಂ ಪ್ರಮದವನಮೆಂಬುದು" (ಶಬ್ದಮ. ೩೬-೭೦); ಅಂತಃಪುರಪ್ರಮದವನ ಪ್ರವಿಷ್ಟನಾಗಿ (ಅಪು. ೬-೪೦೫); ತರಳೆಕೆವೆರಸು ಪ್ರಮದವನಪಕ್ಷದ್ವಾರದಿಂ ಪೊಱಮಟ್ಟು ಪೋಗುತ್ತಂ (ಕಾದಂಪೂ. ೯೯೨). [ಸಂ.]

**ಪ್ರಮದಾಳಿ** (ನಾ). ೧. ಮದಿಸಿದ ದುಂಬಿ ; ಸೊಕ್ಕಿದ ಭ್ರಮರ. ೨. ಸ್ತ್ರೀಯರ ಸಮೂಹ; ಹೆಂಗಸರ ಗುಂಪು: ೧, ೨: ಆ ಮಂಟಪಂ ಮಧುಸಮಯದಂತೆ ಪೋಲ್ತುಮದಾಳಿ ಸಂಮನೋಜ್ಞಮುಂ (ರಾಜಶೇ. ೬-೬೨). [ಸಂ. ಪ್ರಮದಾಲಿ (ಪ್ರಮದಾ + ಆಳಿ (=ಆಲಿ) ; ಪ್ರಮದ+ಅಳಿ (=ಅಲಿ)]

**ಪ್ರಮದೆ** (ನಾ). ೧.ಹೆಂಗಸು ; ಸ್ತ್ರೀ: "ರಾಮಾ . . . ಪ್ರಮದಾ, ರಮಣಿ . . . ಯುವತಿಃ —ಈ ೨೮ ಸ್ತ್ರೀಯರ್" (ಶಬ್ದಮ. ೭೪ ೩೦೪). ೨. ತರುಣಿ ; ಯುವತಿ ವಿಳಾಸವಿಪುಮಸಿಂಹಾಸನಾಸೀನನುಂ ಪ್ರಮದಾಹಸ್ತವಿನ್ಯಸ್ತಚಾಮರಕ್ರಮಕಮಳನುಂ (ಶಂಕಶ. ೯-೨೬೭) ; ಪ್ರಮದೆಯರಂ ಮನೋಭವನೆ ಸೂಱೆಗೊಳ್ಳಪನಗ್ನಿಬಾಣದಿಂ (ಶಂಕ್ರಪು. ೬-೦೩೩). ೩. ಸುಂದರಿ. ೪. ಹೆಂಡತಿ; ಪತ್ನಿ. [ಸಂ. ಪ್ರಮದಾ]

**ಪ್ರಮದೋದ್ಯಾನ** (ನಾ). =ಪ್ರಮದವನ ; ಪ್ರಮದೋದ್ಯಾನದೊಳಾವ ನಿರ್ಜನವನಂ ಕೊಂಡಿಕ್ಕಂ (ಶಂಕಮ. ೦೦-೦೦೬). [ಸಂ.]

**ಪ್ರಮದೋನ್ಮತ್ತ** (ನಾ). ಅತಿಶಯವಾಗಿ ಮತ್ತೇರಿದವನು ; ಮದೋನ್ಮತ್ತನಾದವನು : ಮತ್ತನತಿಶ್ರಾಂತನು ಪ್ರಮದೋನ್ಮತ್ತನತಿ ಕುಪಿತಾನನನು . . . ಇಂತೀ ಹತ್ತುಜನವಾಗ ಧರ್ಮದ ತತ್ತ್ವಮಣಿಗಳ ನಱಿಯರ್ (ಕಾವ್ಯಾ. ೩-೩೬). [ಸಂ.]

**ಪ್ರಮಯೆ** (ನಾ). ೧. ಮರಣ ; ಸಾವು. ೨. ಕೊಲ್ಲುವುದು ; ಕೊಲೆ:

"ಮಾರಣಂ . . . ಪ್ರಮಯಾ, ಹಿಂಸಾ . . . ಸಂಜ್ಞಪನಂ—ಈ ೨೧ ಕೊಲೆ" (ಶಬ್ದಾನು. ೬೩-೩೭). ೩. ನಾಶ; ಅಳಿವು. [ಸಂ. ಪ್ರಮಯ]

**ಪ್ರಮಾಣ** (ನಾ). ೧. (ಎತ್ತರ, ಉದ್ದ ಮತ್ತು ಅಗಲ ಇತ್ಯಾದಿಗಳ) ಅಳತೆ: "ಪ್ರಮಾಣ ಪವಣೆಂದಕ್ಕುಂ" (ಶಬ್ದಮ. ೨೫೦); ಪಾತ್ರ್ಯದ ಭೂಮಿಯ ನಿವೇಶನದ ಪ್ರಮಾಣವನ್ನನೆ (ಎಪಿ. XX. ೬-೦೬; 1012); ತಾರಕಾಯ ಪ್ರಮಾಣ ಗುಳಿಗೆಯಂ ಮಾಡಿ (ಕಶಕ್ಕ. ೩೧೩). ೨. ಎರಡು ಮೊತ್ತಗಳಿಗಿರುವ ಪರಸ್ಪರ ಭಾಜ್ಯ, ಭಾಜಕಸಂಬಂಧ: ಗಾತ್ರವು ಯಾವ ಪ್ರಮಾಣ (Ratio)ದಲ್ಲಿ ಹೆಚ್ಚುವುದೋ . . . ಒತ್ತಡವು ಅದೇ ಪ್ರಮಾಣದಲ್ಲಿ ಹೆಚ್ಚುತ್ತದೆ(ಭೌತಶಾ. ೨೧೪). ೩. ಮರ್ಯಾದೆ. ೪. ಯಥಾರ್ಥಜ್ಞಾನ; ಸತ್ಯ: ಪ್ರಮಾಣವುಂ ಜ್ಞಾನಮೆಂಬುದು (ಕಸೂಪ್ತ. ೩೦); ದೂರತ್ವ ಸೂಕ್ಷ್ಮತ್ವ ಮೊದಲಾದ ವಿಷಯದೋಷಗಳು, ಕಾಚಕಾಮಲ ಅನವಧಾನ ನಿದ್ರಾ ಮೊದಲಾದ ಕರಣದೋಷಗಳು ಇಲ್ಲದಿರುವಾಗ, ಬರುವಂಥ ಜ್ಞಾನವು ಪ್ರಮಾಣವು (ಹಿಂದಶಾ. ೦೬೪). ೫. ವಿಧಿ; ನಿಯಮ. ೬. ಕಾರಣ; ಹೇತು: ಜ್ಞಾನೋತ್ಪತ್ತಿ, ವ್ಯಾಪಾರಾಶ್ರಯದ ಅಸಾಧಾರಣ ಹೇತುವೇ ಪ್ರಮಾಣವೆನ್ನಿಸಿಕೊಂಬುದು (ಏಡಳಿ. ೦೬). ೭. ವಸ್ತುವಿನ ಯಥಾರ್ಥಜ್ಞಾನವನ್ನು ಕೊಡುವ ಸಾಧನ; ಆಧಾರ; ಸಾಕ್ಷಿ; ರುಜುವಾತು: ಸದ್ಗುರುವಿನ ವಚನ ಪ್ರಮಾಣವೇ ಅಲ್ಲ (ಸಿದ್ಧೇಶ. ೨೦-೩೩); ಪರಮಾತ್ಮಸ್ವರೂಪವನ್ನು ತಿಳಿಸಲು ಶ್ರುತಿಗಿಂತಲೂ ಅಧಿಕವಾದ ಪ್ರಮಾಣವನ್ನು ನಾವು ಕಾಣಲಾರೆವು (ಶಕ್ತಿ.ಶಿ. ೨೩). ೮. ಶಾಸ್ತ್ರ; ಆಗಮ. ೯. ಅಧಿಕೃತವಾಗಿ ತೀರ್ಮಾನ ಹೇಳುವವನು; ತೀರ್ಪುಗಾರ. ೧೦. ಅವಧಿ; ಗಡುವು: ಯಶೋಭದ್ರೆಯು ಬೇಡಿದ ಮೋನದ ದಿವಸದ ಪ್ರಮಾಣಾವಸಾನದೊಳ್ . . . ಸುಕುಮಾರ ಸ್ವಾಮಿ ಕೇಳ್ದು ಜಾತಿಸ್ಮರನಾಗಿ (ವಡ್ಡಾರಾ. ೨೮-೬). ೧೧. [ಯೋಗ] ಐದು ಬಗೆಯ ಚಿತ್ತವೃತ್ತಿಗಳಲ್ಲಿ ಒಂದು: ಪ್ರಮಾಣ, ವಿಪರ್ಯಯ ವಿಕಲ್ಪ, ನಿದ್ರೆ ಸ್ಮೃತಿ—ಈ ಐದೂ ಅಂತಃಕರಣ ವೃತ್ತಿಗಳು (ಭಾರದ. ೦೨೭); ಅಬಾಧಿತವಾದ ಚಿತ್ತವೃತ್ತಿಗೆ ಪ್ರಮಾಣವೆಂದು ಹೆಸರು (ಹಿಂದಶಾ. ೦೦೪). ೧೨. [ನ್ಯಾಯಶಾ] ಹದಿನಾರು ಪದಾರ್ಥಗಳಲ್ಲಿ ಒಂದು: ನ್ಯಾಯದರ್ಶನದಲ್ಲಿ ಪ್ರಮಾಣ, ಪ್ರಮೇಯ, ಸಂಶಯ, ಪ್ರಯೋಜನ . . . ನಿಗ್ರಹಸ್ಥಾನ ಎಂದು ಹದಿನಾರು ಪದಾರ್ಥಗಳನ್ನು ನಿರೂಪಿಸಿರುವರು (ಹಿಂದಶಾ. ೧೦೨). 'ಪ್ರಮಾಣಶಾಸ್ತ್ರ' ಪರಾ. ೧೩. ಸನ್ನಿಧಿ; ಸಮೀಪ: "ಸಮಸ್ತಾನ ಮಂಜುಳಮುಂ ಕಾರಣ ನಿತ್ಯಶಾಸ್ತ್ರ ತಟ ಸತ್ಯಂ ಕೊಟಮುಂ ಧರ್ಮಮುಂ ವಿಳನುಂ ಸನ್ನಿಧಿಯುಂ ಪ್ರಮಾಣಮೆನಿಕುಂ" (ನಾನಾರ. ೦೯೦).

ಪ್ರಮಾಣ ಮಾಡು = (ಸಾಕ್ಷಿಯ ಎದುರು) ಆಣೆ ಮಾಡು: ಪ್ರಮಾಣ ಮಾಡಿಸಬೇಕಾದರೆ ಇದನ್ನು ಮುಟ್ಟಿ ಪ್ರಮಾಣ ಮಾಡಬೇಕು (ಪಕ್ಷೂರು. ೦೦); ಅವರು ದೇವಸ್ಥಾನಕ್ಕೆ ಹೋಗಿ ಅಲ್ಲಿ ಪ್ರಮಾಣ ಮಾಡಬೇಕು (ಕೃಪಾಶ. II. ೯೭೮). ಪ್ರಮಾಣವಾಗಿ ಹೇಳು = ಆಣೆ ಮಾಡಿ ಹೇಳು: ಸುಳ್ಳು ಹೇಳಬೇಡ, ಪ್ರಮಾಣವಾಗಿ ಹೇಳು (ರೂಢಿ). [ಸಂ.]

**ಪ್ರಮಾಣಗ್ರಂಥ** (ನಾ). ಆಧಾರಗ್ರಂಥ; ಅಧಿಕೃತವಾದ ಗ್ರಂಥ: ಕೆಲವೊಂದು ಪ್ರಮಾಣಗ್ರಂಥಗಳ ಕೊರತೆಯನ್ನು ಇಂದು ನಾವು ಅನುಭವಿಸುತ್ತಿದ್ದೇವೆ (ಪದ್ಮಕಾ. ೬); ಈ ದಿಶೆಯಲ್ಲಿ ನಾವು ಅನೇಕ ಪ್ರಮಾಣ ಗ್ರಂಥಗಳನ್ನು ನಿರೀಕ್ಷಿಸಬಹುದು (ಪ್ರಾಶಿಶಿ. ೩ ಹಿನ್ನುಡಿ). [ಸಂ.]

**ಪ್ರಮಾಣತೆ** (ನಾ). ಅಧಿಕಾರ; ಪ್ರಭುತ್ವ: ಸರ್ವಜ್ಞಪ್ರಮಾಣತೆಯಿಂ ತತ್ಪ್ರಮಾಣಕಾಗಮದೊಳ್ ಪೇಟ್ದುದೆಲ್ಲಂ ಅವಶ್ಯಂ ತಪ್ಪುವುದಲ್ಲೆಂದು (ಆಚಾರ. ೬-೨೫ ವ). [ಸಂ. ಪ್ರಮಾಣತಾ]

**ಪ್ರಮಾಣನ** (ನಾ). ೧. ದೃಢೀಕರಿಸುವಿಕೆ; ಸಮರ್ಥನೆ: ರಚಿತವಾದ ರಾಜ್ಯದ ಯಾವುದಾದರೂ ವಿಧಿಯನ್ನು . . . ಅವರು ಅದನ್ನು ಪ್ರಮಾಣನ ಮಾಡುವುದಕ್ಕಾಗಿ ಒಪ್ಪಿಸಬಹುದು (ಭಾರಾಪ. ೧೯). ೨. = ಪ್ರಮಾಣಪತ್ರ ೧: ಅದರ ಮೇಲೆ ಲೋಕಸಭೆಯ ಅಧ್ಯಕ್ಷರವರ ಹಸ್ತಾಕ್ಷರ ಸಹಿತವಾಗಿ ಪ್ರಮಾಣನವು ಲಿಖಿತವಾಗಿರತಕ್ಕುದು (ಭಾರಾಪ. ೩೬). [ಸಂ.]

**ಪ್ರಮಾಣನಿರ್ಮಾಣ** (ನಾ). [ಜೈನ] ಸ್ಥಾನನಿರ್ಮಾಣ, ಪ್ರಮಾಣನಿರ್ಮಾಣವೆಂಬ ಎರಡು ಬಗೆಯ ನಿರ್ಮಾಣನಾಮಕರ್ಮಗಳಲ್ಲಿ ಒಂದು; ಯೋಗ್ಯಪ್ರಮಾಣದಲ್ಲಿ ಇಂದ್ರಿಯಗಳನ್ನು ರಚಿಸುವಂಥದು: ನಿರ್ಮಾಣಂ ತದ್ವಿವಿಧಂ ಸ್ಥಾನನಿರ್ಮಾಣಂ ಪ್ರಮಾಣನಿರ್ಮಾಣಂ (ಗೊಮ್ಮಟಸಾ. ೬-೪). [ಸಂ.]

**ಪ್ರಮಾಣಪತ್ರ** (ನಾ). ೧. ವಿಷಯವನ್ನು ರುಜುವಾತು ಪಡಿಸಲು ಲಿಖಿತದ ಮೂಲಕ ಸಮರ್ಥಿಸಿಕೊಳ್ಳುವ ಪತ್ರ; ದೃಢೀಕರಣಪತ್ರ; ಆಧಾರಪತ್ರ: ಕಮಂಡಲಮುಂ ಪ್ರಮಾಣಪತ್ರಮುಂ ಸಹಿತ ಬಂದು ನಂಬಿಯಣ್ಣನ ಸಿಂಹಾಸನದ ಮುಂದೆ ನಿಲೆ (ಶಾಂಶಿ. ೬-೬೬); ಆಸ್ಪತ್ರೆಯಿಂದ ಪ್ರಮಾಣಪತ್ರವನ್ನು ಪಡೆದು ಹೆಂಡತಿಯ ಪರವಾಗಿ ತಾನೇ ಅರ್ಜಿಯನ್ನು ಬರೆದು (ಶಾಂಕಥ. ೩೦೦). ೨. ಅರ್ಹತಾಪತ್ರ; ಯೋಗ್ಯತಾಪತ್ರ: ಅವನ ಪ್ರತಿಭೆಗೆ ಪಾಂಡಿತ್ಯಕ್ಕೆ ದೊರೆತ ಬಹುಮಾನ, ಪ್ರಮಾಣಪತ್ರಗಳ ಗಂತೂ ಲೆಕ್ಕವಿಲ್ಲ (ಹೊಸಕ್ಕ. ೩೭). [ಸಂ.]

**ಪ್ರಮಾಣಪುರುಷ** (ನಾ). ೧. ಯಾರ ನಿರ್ಧಾರದಲ್ಲಿ ನಂಬಿಕೆಯುಂಟಾಗುವುದೊ ಅಂಥ ಪಾಂಡಿತ್ಯದ ಅಧಿಕಾರವುಳ್ಳ ವ್ಯಕ್ತಿ; ಆಧಾರವಾಗಿರಬಲ್ಲ ವ್ಯಕ್ತಿ: ಕೇಶಿರಾಜನು ತನ್ನ ವ್ಯಾಕರಣಗ್ರಂಥದಲ್ಲಿ 'ಸುಮಾರ್ಗಮಿದಱೊಳೆ ಲಕ್ಷ್ಯಂ' ಎಂದು ಹೇಳಿದ ಪ್ರಮಾಣಪುರುಷರಲ್ಲಿ ಗುಣನಂದಿಯನ್ನು ಹೆಸರಿಸಿದ್ದಾನೆ (ಕಶಾಕ. ೪೪). ೨. ನ್ಯಾಯಾಧಿಕಾರಿ; ನ್ಯಾಯಾಧೀಶ; ತೀರ್ಪುಗಾರ. [ಸಂ.]

**ಪ್ರಮಾಣಪೂರಣ** (ನಾ). ಪರಿಮಾಣವನ್ನು ಸೂಚಿಸುವಿಕೆ; ವರ್ಗೀಕರಣ: ಅನಿಯ ಪ್ರತ್ಯಯಮನಿತಿನಿತೆನಿತೆಂಬ ಲಸತ್ಪ್ರಮಾಣಪೂರಣದೊಳ್ ನೆಟ್ಟನೆ ಸಂಖ್ಯಾಪೂರಣದೊಳ್ ಜನಿಯಿಪುದು ಮಯೆಂಬುದಿಟ್ಟೆಮೆಣಿಸುವ ಸೂಟಿಗೊಳ್ (ಕಮದ. ೨೦೭). [ಸಂ.]

**ಪ್ರಮಾಣವಚನ** (ನಾ). (ಅಧಿಕಾರ ಸ್ವೀಕಾರದ ಪ್ರಾರಂಭದಲ್ಲಿ ಮಾಡುವ) ಪ್ರತಿಜ್ಞೆ; ಆಣೆ: ಈ ಕೆಳಗೆ ಕಂಡ ಪ್ರಪತ್ರದ ಮೇರೆಗೆ ಪ್ರಮಾಣವಚನ ಅಥವಾ ಪ್ರತಿಜ್ಞಾವಚನ ಸ್ವೀಕಾರ ಮಾಡತಕ್ಕುದು (ಭಾರಾಪ.೩೦); ವಧುಗಳಿಬ್ಬರೂ ಹೆಜ್ಜೆ ಹೆಜ್ಜೆಗೂ ನಿಂತು ಅಗ್ನಿ, ಸದಸ್ಯರುಗಳ ಎದುರಿಗೆ ಪ್ರಮಾಣವಚನಗಳನ್ನಿತ್ತರು (ಶಾಂತಲಾ. ೧೦೪). [ಸಂ.]

**ಪ್ರಮಾಣವಾಕ್ಯ** (ನಾ). ಆಧಾರಸಹಿತವಾದ ವಾಕ್ಯ; ಅಧಿಕಾರವಾಣಿ: ತಾನಾಡಿದುದು ಪ್ರಮಾಣವಾಕ್ಯ. ಅದಕ್ಕೆ ಯಾರೂ ಇದಿರಾಡಬಾರದು (ಶಶಾಂಕ. ೯೦). [ಸಂ.]

**ಪ್ರಮಾಣವಾಚಕ** (ನಾ). [ವ್ಯಾಕ] ಅನಿತು, ಇನಿತು, ಎನಿತು ಇತ್ಯಾದಿ ಪರಿಮಾಣವನ್ನು ಸೂಚಿಸುವ ಶಬ್ದ: 'ಪ್ರಮಾಣ ಸೂಚಕ' ಪರಾ. [ಸಂ.]

**ಪ್ರಮಾಣಶಾಸ್ತ್ರ** (ನಾ). ಸಾಕ್ಷಿ, ಆಧಾರಗಳಿಂದ ಪರೀಕ್ಷೆ ಮಾಡುವ ಶಾಸ್ತ್ರ; ನ್ಯಾಯಶಾಸ್ತ್ರ: ವೈಶೇಷಿಕವನ್ನು ಪ್ರಮೇಯಶಾಸ್ತ್ರವೆಂದೂ ನ್ಯಾಯವನ್ನು ಪ್ರಮಾಣಶಾಸ್ತ್ರವೆಂದೂ ಪರಿಗ್ರಹಿಸಿ ಒಂದು ಶಾಸ್ತ್ರವಾಗಿ ಪರಿಷ್ಕರಿಸಿರುವರು (ಹಿಂದಶಾ. ೦೦೦). [ಸಂ.]

**ಪ್ರಮಾಣಶ್ರುತಿ** (ನಾ). [ಸಂಗೀತ] ಶ್ರುತಿಯ ಪರಿಕೆಯ ಮೂರು ಹಂತಗಳಲ್ಲಿ ಒಂದು; ಶ್ರುತಿಯಲ್ಲಿರುವ ಪ್ರಮಾಣಶ್ರುತಿ, ನ್ಯೂನ ಶ್ರುತಿ ಮತ್ತು ಪೂರ್ಣಶ್ರುತಿ ಎಂಬ ಮೂರು ಬಗೆಯ

ಪ್ರಮಾಣಾಂತರಗಳಲ್ಲಿ ಒಂದು : ಈ ಪ್ರಮಾಣಾಂತರಗಳು ಕ್ರಮವಾಗಿ ಏರಿಕೆಯ ಕ್ರಮದಲ್ಲಿವೆ. ಇವುಗಳಲ್ಲಿ ಮೊದಲ ಹಂತ 'ಪ್ರಮಾಣಶ್ರುತಿ' (ಸಂಗೀತಂ.೯). [ಸಂ.]

**ಪ್ರಮಾಣಸಪ್ತಭಂಗಿ** (ನಾ). [ಜೈನ] ಪ್ರಮಾಣಸಪ್ತಭಂಗಿ ಮತ್ತು ನಯಸಪ್ತಭಂಗಿ ಎಂಬ ಎರಡು ಬಗೆಯ ಸಪ್ತಭಂಗಿಗಳಲ್ಲಿ ಒಂದು : "ಪ್ರಮಾಣಸಪ್ತಭಂಗಿಯೆಂದರೆ—ಒಂದು ಧರ್ಮವನ್ನು ತಿಳಿಸುವುದರ ಮೂಲಕ ನಿಯಮವಾಗಿ ಆ ಧರ್ಮದೊಡನೆ ಎಲ್ಲ ಧರ್ಮ ಸ್ವರೂಪವಾದ ವಸ್ತುವನ್ನು ಬೋಧಿಸತಕ್ಕ ವಾಕ್ಯ ಎಂದರ್ಥ" (ಧಾತತ್ತ್ವ. ೨೯೬). 'ನಯಸಪ್ತಭಂಗಿ' ಪರಾ. [ಸಂ.]

**ಪ್ರಮಾಣಸಿದ್ಧ** (ನಾ). ಆಧಾರಗಳಿಂದ ಸಾಧಿಸಿದುದು ; ದೃಢೀಕರಿಸಿದುದು : ಆದಱಿಂದವಾತ್ಮವಚನಂ ಪ್ರಮಾಣಸಿದ್ಧಂಗಳಾಗಿ ಪದಾರ್ಥಂಗಳೆಲ್ಲಂ ಪ್ರತ್ಯಕ್ಷಂಗಳಲ್ಲದುವಿಲ್ಲ (ಶಾಂತಿಪು. ೦೯-೧೦೭). [ಸಂ.]

**ಪ್ರಮಾಣಸೂಚಕ** (ನಾ). ಪರಿಮಾಣವನ್ನು ಸೂಚಿಸುವಂಥದು ; ಅಳತೆಯನ್ನು ತೋರಿಸುವಂಥದು : ಅನಿತಿನಿತುಯೆನಿತೆನೆ ಪ್ರಮಾಣಸೂಚಕವಾಕ್ಯಂ (ಶಬ್ದಸ್ಮೃ. ೬೦). [ಸಂ.]

**ಪ್ರಮಾಣಸ್ವೀಕಾರ** (ನಾ). (ಅಧಿಕಾರಸ್ವೀಕಾರದ ಪ್ರಾರಂಭದಲ್ಲಿ) ಪ್ರತಿಜ್ಞೆಯನ್ನು ಕೈಗೊಳ್ಳುವುದು : ಈ ದಿನ ಮಂತ್ರಿಗಳ ಪ್ರಮಾಣಸ್ವೀಕಾರ ಕಾರ್ಯಕ್ರಮವಿದೆ (ಆಡು). [ಸಂ.]

**ಪ್ರಮಾಣಾಲಂಕಾರ** (ನಾ). [ಕಾವ್ಯಮೀ] ಅನುಮಾನ, ಪ್ರತ್ಯಕ್ಷ ಮೊದಲಾದುವುಗಳನ್ನು ಬಳಸಿ ಮಾಡಿದ ಕಾವ್ಯಾಲಂಕಾರ : ರಸವದಾದಿ ಏಳು ಅಲಂಕಾರಗಳೂ, ಪ್ರತ್ಯಕ್ಷಾದಿ ಎಂಟು 'ಪ್ರಮಾಣಾಲಂಕಾರ'ಗಳೂ ವಸ್ತುತಃ ಅಲಂಕಾರಗಳೇ ಅಲ್ಲ (ಕೃವಿಪ. ೨೫೦). [ಸಂ.]

**ಪ್ರಮಾಣಿಕ₁** (ನಾ). [ಛಂದ] ಅನುಷ್ಟುಪ್ ಛಂದಸ್ಸಿನ ಒಂದು ವೃತ್ತದ ಹೆಸರು : ಜರಂಲಗಂ 'ಪ್ರಮಾಣಿಕೇ' (ಕೃವಿಪ. ೬೯). [ಸಂ. ಪ್ರಮಾಣಿಕಾ]

**ಪ್ರಮಾಣಿಕ₂** (ನಾ). ೧. ಅಳತೆಯಾಗಿರುವಿಕೆ. ೨. ಆಧಾರವನ್ನೊದಗಿಸುವಿಕೆ. ೩. ಒಂದು ಅಳತೆ; ಮೊಳ : "ಅಳಿವ ಮೊಟನು ಪ್ರಮಾಣಿಕಮೆನಿಸ್ಕು" (ಮಂಗರಾ. ೯೩-೯). [ಸಂ.]

**ಪ್ರಮಾಣಿಸು** (ಕ್ರಿ). ೧. ಅಳೆ ; ತೂಕ ಮಾಡು : ಎಲ್ಲಾ ಲೋಕವುಂ ಪದಿನಾಲ್ಕು ರಜ್ಜುವೆಂದು ಪ್ರಮಾಣಿಸುವುದಾಗದು (ಶಾಸ್ತ್ರಸಾ. ೧೦೦೦-೩). ೨. ಆಧಾರಸಮೇತವಾಗಿ ಪರೀಕ್ಷಿಸಂ; ಪರಿಶೀಲಿಸಂ : ಪ್ರತ್ಯಕ್ಷಮಿರೆ ಪ್ರಮಾಣಿಸಿ ನೋಡಬೇಕೆಂಬುದತ್ಯಧಿಕ ನೀತಿಶಾಸ್ತ್ರಮದು (ತಂಪು. ೯-೨೬); ಇದನ್ನು ಪ್ರಯೋಗಪರೀಕ್ಷೆಯಿಂದ ಪ್ರಮಾಣಿಸಿ ನೋಡಿರುವೆನು (ವಿಜ್ಞಾನ. ೨೯) ; ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡು (ಗಾದೆ). ೩. ಅರಿ ; ತಿಳಿ : ಕೃಷಿಯ ಮಾಡುವಾಗ ಪಶುಪತಿಗೆಂದೇ ಪ್ರಮಾಣಿಸಿ . . . ಮಾಡುತಿಪ್ಪ ಭಕ್ತನ ಅಂಗಳವೇ ವಾರಣಾಸಿ (ಸೋಂಪು. ೦೩-೩೭). ೪. ರುಜುವಾತು ಮಾಡು : ಶಿವಂ ಶಿವಂಕರನೆಂಬುದಂ ಪ್ರಮಾಣಿಸಿ ತನ್ನಿಗಮಭಕ್ತಿಯಂ ಉರ್ವಿಯೊಳ್ ಪ್ರಕಟೀಕರಿಪೆನು (ಶಬ್ದರಾ. ೧-೯) ; ಈ ಮಾತನ್ನು ಅವಳು ಪ್ರಮಾಣಿಸಿ ಕೊಡದೆ ಬಿಡತಕ್ಕವಳಲ್ಲ (ಇಕ್ಷ್ವಾ. ೨೫೦). [ಪ್ರಮಾಣ + — ಇಸ್ತು]

**ಪ್ರಮಾಣು** (ನಾ). ೧. ಅಳತೆ ; ಪ್ರಮಾಣ : ನಾಯಕವಾಡಿಗಳು ಪೂರ್ವ ಭೊ × ಹಾನುಭವಿಸಿ ಬಹ ಹುಟ್ಟುವಳಿ × ಕು ಪ್ರಮಾಣು ಹೊಂನು (ಎಕ. VII. ಶಿಕಪು. ೭೧-೨೬ ; 1431) ; ಯ ಪ್ರಮಾಣಿನ ಉಂಬಳಿಯ ಸರ್ವಮಾನ್ಯದ ಗ್ರಾಮವನೂ ನಡಸಿ ಬಾರದೆ ಆರೊಬ್ಬರು ಅಳುಪಿದರೆ ವಾರಣಾಸಿಯಲಿ ತಮ್ಮ ತನ್ನೆ ತಾಯನೂ ಗೋವು ಬ್ರಾಂಹ್ಮರನು ಕೊಂನ್ದ ಪಾಪಕೆ ಹೋಹರು (ಎಕ. XIV. ಗುಂಡ್ಲುಪೇ. ೦೩೨-೧೯ ; 1540). ೨. ಸಾಕ್ಷಿ ; ಆಧಾರ : ಆಚಾರವೇ ಸ್ವರ್ಗ ಅನಾಚಾರವೇ ನರಕ ಕೂಡಲಸಂಗಮದೇವಾ ನೀವೆ ಪ್ರಮಾಣು (ಬಸವ. ೨೪೯) ; ಭೃತ್ಯಾಪರಾಧ ಸ್ವಾಮಿನೋ ದಂಡ ಕೂಡಲಸಂಗಮದೇವಾ ನೀವೇ ಪ್ರಮಾಣು (ಬಸವ. ೬೯೦). [<ಸಂ. ಪ್ರಮಾಣ]

**ಪ್ರಮಾತ** (ನಾ). [ತರ್ಕಶಾ] ಯಥಾರ್ಥಜ್ಞಾನವನ್ನು ಉಂಟು ಮಾಡುವವನು ; ನಿಶ್ಚಿತಜ್ಞಾನವನ್ನು ಕೊಡುವವನು : ಪ್ರಮಾಣವೆಂದರೆ ಪ್ರಮೆಗೆ ಸಾಧನ, ಪ್ರಮೆಯೆಂದರೆ ಯಥಾರ್ಥಜ್ಞಾನ, ಇದಕ್ಕೆ ಆಶ್ರಯನಾಗಿರುವವನು ಪ್ರಮಾತ (ಹಿಂದೂಧಾ. ೦೩೨). [ಸಂ. ಪ್ರಮಾತೃ]

**ಪ್ರಮಾತೃ** (ನಾ). = ಪ್ರಮಾತ: ಅಱಿಯಲ್ಪಡುವದನೀನಱಿ ಸುಪ್ರಮೇಯಾಖ್ಯವಱಿವಾತನಾ ಪ್ರಮಾತೃವೆನಿಕ್ಕು (ಶರಕೋ. ೩-೦೭-೯) ; ಪ್ರಮಾತೃ ಎಂದರೆ ಸರಿಯಾದ ತಿಳಿವಳಿಕೆಯನ್ನು ಸಂಪಾದಿಸುವುದಕ್ಕೆ ಪ್ರಮಾಣಗಳನ್ನು ಉಪಯೋಗಿಸುವವನು (ಕೃಷ್ಣಶಾ. ೨-೨೩). [ಸಂ.]

**ಪ್ರಮಾತೃತ್ವ** (ನಾ). ಯಥಾರ್ಥಜ್ಞಾನದ ಅರಿವನ್ನು ಹೊಂದಿರುವ ಸ್ಥಿತಿ : ಇದಿಷ್ಟೂ ಆಗದಿದ್ದರೆ ಯಾವುದರ ಸೋಂಕೂ ಇಲ್ಲದ [ಅಸಂಗನ್ನ] ಆತ್ಮನಿಗೆ ಪ್ರಮಾತೃತ್ವವು ಕೂಡುವುದಿಲ್ಲ (ಕೃಷ್ಣಶಾ. ೩). [ಸಂ.]

**ಪ್ರಮಾಥಿ** (ಗು). ೧. ಕಲಕಂವ ; ಕದಡುವ. ೨. ಒಡೆಯುವ ; ಸೀಳುವ. ೩. ದುಃಖ ಕೊಡುವ ; ಸಂಕಟವನ್ನುಂಟು ಮಾಡುವ. ೪. ಕೊಲ್ಲುವ; ವಧಿಸುವ. (ನಾ). ೫. ಕೊಲ್ಲುವವನು; ನಾಶಪಡಿಸುವವನು. [ಸಂ. ಪ್ರಮಾಥಿನ್]

**ಪ್ರಮಾದ** (ನಾ). ೧. ಅಲಕ್ಷ್ಯ; ಅನಾದರ. ೨. ಗಮನವಿಲ್ಲದಿರುವಿಕೆ; ಅಜಾಗರೂಕತೆ; ಎಚ್ಚರಗೇಡಿತನ : "ಪ್ರಮಾದಃ, ಅನವಧಾನಂ— ಈ ೨ ಮಾಱಿಹು" (ಹಲಾಯು. ೦೨೯-೬೯); "ಅನವಧಾನಮಾ ಪ್ರಮಾದ ಮೆನಲ್ಕೆ ಮೈಮಱೆಹು" (ಮಂಗರಾ. ೦೩೬-೩೯). ೩. ಹುಚ್ಚು ; ಉನ್ಮಾದ. ೪. ತಪ್ಪು ; ದೋಷ ; ಅಪರಾಧ : ಧರ್ಮಾರ್ಥಂಗಳಿಂಗೆ ಕಾಮಂ ಪ್ರತಿಕೂಲಮಾ ಕಾಮಮಂ ನಿಲಿಸುವಡೆ ಪಿರಿದುಂ ಪ್ರಮಾದಮಂಗ್ರಾಹ್ಯಮ ವಿಶ್ವಾಸಂ (ಪುರಾಪು. ೦-೩೮ ವ); ಆ ರಾಮಾಯುತಿಪತಿ... ಗುಪ್ತಿಗಳಂ ಪಾಲಿಸಿ ಪಂಚಮಹಾವ್ರತಲೀಲೆಯಿನೆಸೆದಂ ಪ್ರಮಾದಮಿಲ್ಲೆಂಬಿನೆಗಂ (ಸಂಗಾಮಾ. ೦೬-೩೯); ಏನೋ ಪ್ರಮಾದವಾಯಿತು ನನ್ನಿಂದ ಎಂಬ ಭಯವಾಗಿ ನೆಟ್ಟಗೆ ಮನೆಗೆ ಹೋದೆ (ಮೂಗಿಳ್ಳ. ೦೦). ೫. ಕೇಡು; ಕಂ; ಅಪಾಯಂ; ಆಪತ್ತು : ರಾಮಲಕ್ಷ್ಮಣರ ದೆಸೆಯಿಂ ಕೂಸುಗಳ್ಗೆ ಪ್ರಮಾದಮಕ್ಕುಂ (ಕುರಾಮಾ. ೦೬-೯ ವ); ಪರಮ ಪರಮಾ ನಂಬಲಾಱೆನು ಕೊರಳ ಗರಳವದಿನಿತಿನಿತು ಪೊತ್ತರಿಸಿ ನಿಮ್ಮುದರದೊಳಗೀಲ್ದಡತಿಪ್ರಮಾದವಲ (ಬಸವಪು. ೦೬-೦೩); ಉಚ್ಚೃಂಹಿತನಾದಮಮರಪ್ರಮಾದಮಮುನ್ನತಕರಂ ಭೀಕರಂ . . . ಎನಲ್ಕಾ ಮುಷ್ಪಗಜದದ್ಭುತಾಕೃತಿಯ ಬಣ್ಣಿಸುವೊಡಹಿಪತಿಗೆ ಸಾಧ್ಯಮಲ್ತು (ತಂಪು. ೨೩-೬). ೬. [ಜೈನ] ಸ್ತ್ರೀಕಥೆ, ಭೋಜನಕಥೆ, ರಾಷ್ಟ್ರಕಥೆ, ಅವನೀಪಾಲಕಥೆ ಎಂಬ ನಾಲ್ಕು ವಿಕಥೆಗಳು, ಕ್ರೋಧ, ಮಾನ, ಮಾಯೆ, ಲೋಭ ಎಂಬ ನಾಲ್ಕು ಬಗೆಯ ಕಷಾಯಗಳು, ಸ್ಪರ್ಶೇಂದ್ರಿಯ, ರಸನೇಂದ್ರಿಯ, ಘ್ರಾಣೇಂದ್ರಿಯ, ಚಕ್ಷುರಿಂದ್ರಿಯ, ಕರ್ಣೇಂದ್ರಿಯ ಎಂಬ ಐದು ಇಂದ್ರಿಯಗಳು, ನಿದ್ರೆ ಮತ್ತು ಸ್ನೇಹ—ಹೀಗೆ ಹದಿನೈದು ಬಗೆಯ ದೋಷಗಳು: ಹದಿನೈದುತೆಜವ ಪ್ರಮಾದದಿಂ ಚೆಲ್ವಾದ ವಿದಿತ ಹುಲಿಯ ಮುಖಗಳನು ತುದಿಮೊದಲಾಗಿ ಬಣ್ಣಿಸುವೊತೆಮಗೆ ತೋಱಿದಧಮಮತಿಗೆ ಗೋಚರವೆ (ಕೃಷ್ಣರಾ. ೪-೯೩). 'ಪಂಚದಶಪ್ರಮಾದ' ಪರಾ. ೭. ಜೀವನಿಗೆ ಉಂಟಾಗುವ ಮಿಥ್ಯಾದರ್ಶನ, ಅವಿರತಿ, ಪ್ರಮಾದ, ಕಷಾಯ

ಮತ್ತು ಯೋಗಗಳೆಂಬ ಐದು ವಿಧವಾದ ಸಂಸಾರಸ್ವರೂಪ ಭೇದಕ್ಕೆ ಬಂಧಹೇತುವಾಗಿರುವಂಥದ್ದರಲ್ಲಿ ಒಂದು : ಭಾವಶುದ್ಧಿ ಮೊದಲಾದ ಎಂಟು ಶುದ್ಧಿಗಳು ಹಾಗೂ ದಶಧರ್ಮಗಳಲ್ಲಿ ಉಂಟಾಗುವ ಉತ್ಸಾಹರಾಹಿತ್ಯ : ಮಿಥ್ಯಾದರ್ಶನಾವಿರತಿಪ್ರಮಾದ ಕಷಾಯಯೋಗೋಪಾರ್ಜಿತಜ್ಞಾನಾವರಣೀಯಾದಿ ಕರ್ಮಂಗಳ್ ಸಂಸಾರಕಾರಣಂಗಳಪ್ಪ ಬಂಧನಬದ್ಧದ್ರವ್ಯಭಾವಕರ್ಮವಿಗಮದಿನತಂನ ಜ್ಞಾನಾದಿ ನಿಜರೂಪವಂ ಪಡೆವುದು ಮುಕ್ತಿ (ಅಂಪು. ೦೦-೩೩ ವ) ; ಮಿಥ್ಯಾದರ್ಶನಾವಿರತಿಪ್ರಮಾದಕಷಾಯಯೋಗಂಗಳೆಂಬ ಬಂಧಹೇತುಗಳಂ ಪರಿಹರಿಸುತ್ತಂ (ಅಪು. ೬-೯ ವ) ; ಮಿಥ್ಯಾದರ್ಶನ ಅವಿರತಿಪ್ರಮಾದ ಕಷಾಯ ಯೋಗಗಳು ಬಂಧಹೇತುಗಳು (ಹಿಂದಪಾ. ೯೯). ೮. ಆತ್ಮಾಕಾರವಾಗದೆ ಸ್ತಬ್ಧವಾಗಿದ್ದ ಮನಸ್ಸನ್ನು ಆತ್ಮಾಕಾರವಾಗಿ ಮಾಡುವುದಕ್ಕೆ ಉಂಟಾಗುವ ಹತ್ತುಬಗೆಯ ವಿಘ್ನಗಳಲ್ಲಿ ಒಂದು ; ಆಲಸ್ಯ, ರೋಗ, ದುಃಖತ್ರಯಗಳು (ಶರೀರದಲ್ಲಿ ಹುಟ್ಟಿದ ಆಧ್ಯಾತ್ಮಿಕ, ಇತರ ಪ್ರಾಣಿಗಳಿಂದುಂಟಾಗುವ ಆಧಿಭೌತಿಕ, ಪಂಚಭೂತಗಳಿಂದುಂಟಾಗುವ ಆಧಿದೈವಿಕ) ಸಂಶಯ, ಪ್ರಮಾದ (ತಪ್ಪು), ಅನವಸ್ಥೆ (ದೃಢವಾಗಿಲ್ಲದಿರುವಿಕೆ ಅಥವಾ ಒಂದಕ್ಕೊಂದು ಕಾರಣವಾಗುತ್ತ ಕೊನೆಯಿಲ್ಲದಿರುವಿಕೆ), ಅದು ಎಂದರೆ ತನಗಿಂತ ಭಿನ್ನವಾದುದು ತತ್ತ್ವವೆನ್ನುವುದು, ಒಂದೇ ಮನಸ್ಸಿನಿಂದ ವಿಷಯಚಿಂತನೆ, ದರ್ಶನಭ್ರಾಂತಿ (ಭ್ರಾಂತಿದರ್ಶನ ಎಂದರೆ ಬೇರೆ ತಿಳಿಯುವುದು), ಅಶ್ರದ್ಧೆ—ಹೀಗೆ ಹತ್ತು ಬಗೆಯ ವಿಘ್ನಗಳಿವೆ : ತನಯ ಕೀಳಾಲಸ್ಯರೋಗಗಳನುಗಡ ದುಃಖತ್ರಯಂಗಳು ಮನದಲುದಿಸಿದ ಸಂಶಯಪ್ರಮಾದಗಳು . . . ದರುಶನಭ್ರಾಂತಿಯಶ್ರದ್ಧೆಗಳು ವಿಘ್ನಗಳು (ಅನು.ಕ. ೬-೯೯). [ಸಂ.]

**ಪ್ರಮಾದಚರಿತ** (ನಾ). [ಜೈನ] ಅಪಧ್ಯಾನ, ಪಾಪೋಪದೇಶ, ಪ್ರಮಾದಚರಿತ, ಹಿಂಸಾಪ್ರದಾನ ಮತ್ತು ಅಶುಭಶ್ರುತಿ ಎಂಬ ಐದು ಬಗೆಯ ಅನರ್ಥದಂಡಗಳಲ್ಲಿ ಒಂದು; ಅವಶ್ಯವಿಲ್ಲದೆ ನೆಲವನ್ನು ಅಗೆಯುವುದು, ಗಿಡಗಳನ್ನು ಕಡಿಯುವುದು ಇವೇ ಮುಂತಾದ ಅನ್ಯರಿಗೆ ಹಾನಿಯನ್ನು ಉಂಟುಮಾಡುವಂಥ ಕಾರ್ಯ : ಅಪಧ್ಯಾನಂ ಪಾಪೋಪದೇಶಂ ಪ್ರಮಾದಚರಿತಂ ಹಿಂಸಾಪ್ರದಾನಮಶುಭಶ್ರುತಿಯೆಂದು ನಿರರ್ಥಕಪಾಪಹೇತುಭೂತಾನರ್ಥದಂಡಂ ಐದುತೆಱಂ (ಕಕ್ತ್ರ. ೨೬೬). [ಸಂ.]

**ಪ್ರಮಾದಚರ್ಯೆ** (ನಾ). = ಪ್ರಮಾದಚರಿತ : ಪಾಪೋಪದೇಶ, ಹಿಂಸಾದಾನ, ಅಪಧ್ಯಾನ, ದುಃಶ್ರುತಿ ಮತ್ತು ಪ್ರಮಾದಚರ್ಯಾ—ಹೀಗೆ ಐದು ಅನರ್ಥದಂಡದ ಭೇದಗಳೆಂದು ಗಣಧರ ಮೊದಲಾದವರು ಹೇಳಿದ್ದಾರೆ (ಪ್ರವಚಾ. ೦೩೩-೩೩ ಅರ್ಥ); ಪ್ರಮಾದಚರ್ಯೆ:—ಅವಶ್ಯವಿಲ್ಲದೆ ನೆಲವನ್ನು ಅಗೆಯುವುದು . . . ಬೆಂಕಿಯನ್ನು ಉರಿಸುವುದು ಮೊದಲಾದ ಕೆಲಸಗಳನ್ನು ಮಾಡಬಾರದು (ಶ್ರಸಕಿ. ೪೬೯). [ಸಂ. ಪ್ರಮಾದಚರ್ಯಾ]

**ಪ್ರಮಾದಫಲಕ** (ನಾ). ಜಲಪ್ರಯಾಣದಲ್ಲಿ ಅಪಾಯ ಸಂಭವಿಸಿದಾಗ ಜೀವವನ್ನು ರಕ್ಷಿಸುವಂಥ ಹಲಗೆ; "ಹಡಗಿನಲ್ಲಿ ಸಮುದ್ರಪ್ರಯಾಣ ಮಾಡುವಂದು ಯಾವುದಾದರೂ 'ಪ್ರಮಾದ' ಸಂಭವಿಸಿ, ಹಡಗು ಒಡೆದು, ಪ್ರಯಾಣಿಕರು ನೀರುಪಾಲಾಗಬೇಕಾದ ಅಪಾಯಸಂಭವವು ಒದಗಿದಾಗ, ಜೀವವನ್ನು ಸಂರಕ್ಷಿಸಿಕೊಳ್ಳಲು ಉಪಯೋಗಿಸುವ ಫಲಕ (ಹಲಗೆ)" (ಶಾಂಪು. ೨-೩೬ ಟಿಪ್ಪಣಿ): ಪತ್ತಿ ಪ್ರಮಾದಫಲಕಮನತ್ಯುಗ್ರಗ್ರಾಹನಿವಹಸಂಕ್ಷೋಭಿತದೊಳ್ ಮತ್ತೀ ರತ್ನಾಕರದೊಳ್ ಪುತ್ರಿಕೆಯನೆ ಬಟ್ಟನಿಂತು ದಾಟ್ಟುವುದೆ ಚೋದ್ಯಂ (ಶಾಂಪು. ೨-೩೬). 'ಪ್ರಮಾದವಲಗೆ' ನೋಡಿ. [ಸಂ.]

**ಪ್ರಮಾದವಲಗೆ** (ನಾ). = ಪ್ರಮಾದಫಲಕ : ಯಮನೆಂಬ ಸೋರೆ ಮೊಗಂ ಬುದು ಮುಳುಗಿಸಲ್ಪನ್ನ ಜಳಧಿಯೊಳ್ ದೇಹಬಹಿತ್ರಮದೊಡೆಯೆ ಜೈನಮೆಂಬಾ ಪ್ರಮಾದವಲಗೆಯುನೆ ಪಿಡಿಯದವನಡಿಗಿಟ್ಟಗುಂ (ಕಮುಕ. ೦೩-೬೩); ಕಂಡಿದೇನಸದುದ್ಯಮಂ ನಿಲ್ಲಿಮೆಂದಲ್ಲಿ ಸೆಱೆಗೆಯ್ದು ಪ್ರಮಾದವಲಗೆಯನಿತಿವೇಗದಿಂ ತಂದು ಸಾರ್ಚಿ ಚಿತ್ತರದತ್ತನೇಱೆ ನೂಂಕುವುದುಂ (ಕಬುಪು. ೯-೬೯ ವ). [ಪ್ರಮಾದ + ಪಲಗೆ]

**ಪ್ರಮಾದಿ** (ಗು). ೧. ಅಲಕ್ಷ್ಯದಿಂದ ಕೂಡಿರುವ; ಗಮನವಿಲ್ಲದ. ೨. ಪಾನಮತ್ತನಾದ; ಅಮಲೇರಿದ. (ನಾ). ೩. ಮರುಳ; ಹುಚ್ಚ : ಅಮರಗುರುವಾಣಿ ಮದಿರಾಪ್ರಮತ್ತ ವಾಣೀಸಮಾನಮುನ್ಮತ್ತವಚಃಸಮುದಂತಲ್ಲದೊಡಂತೀ ಪ್ರಮಾದಿ ಚಾರ್ವಾಕನೆಂಬ ಪೆಸರಂ ಪಡೆಗುಂ (ಶಾಂತಿಪು. ೯-೦೬೭); ಭೈತ್ರಮನೇಱಿದರ್ ಸಡಿಲ್ದ ಬಂಧಂಗಳು ಬಿಗಿಯದಿರ್ದೊಡಂ ಅಱಿವನೊಳಕೊಂಡವರ್ ಪ್ರಮಾದಿಗಳಾಗದಿರ್ದೊಡಂ ಅವರ್ ಸಮುದ್ರದೊಳಗಬ್ಬ(ದೇವ)ರ್ ಇವರ್ ಸಂಸಾರಸಮುದ್ರದೊಳಗೆಟ್ಟರ್ ಎಂಬುದೇ ವಿಸ್ಮಯಮೆ (ಕಲಪಂ.೦೩೩-೦೦೫). ೪. ಅರುವತ್ತು ಸಂವತ್ಸರಗಳಲ್ಲಿ ಹದಿಮೂರನೆಯ ಸಂವತ್ಸರದ ಹೆಸರು : ಅ. ವರುಷವೇ ಪ್ರಭವ ವಿಭವ ಶುಕ್ಲ ಪ್ರಮೋದೂತ . . . ಪ್ರಮಾದಿ [ಪಾಠಾಂ. ಥಿ] ವಿಕ್ರಮ . . . ಕ್ರೋಧನ ಅಕ್ಷಯವೆಂದಱುವತ್ತುತೆಱನಾಗಿಹುದು (ಶಿಷ್ಠಕ. ೩೨೨). ೩. ೪ : ಮನೆ ಸಲೆ ಹೇವಿಳಂಬಿ . . . ವ್ಯಯನನೆ ಕರಂ ಪ್ರಮಾಥ[ದಿ] ನಿಜವಲ್ಲಭೆ ದುರ್ಮುಖಿಯೆಂದೊಡನ್ನ ಪಂಪಿನ ವಿಭವಂ ಪ್ಲವಂಗದ ಪೋಲ್ಪಾದುದು ಮನ್ಮಥಚಿತ್ರಭಾನುವಿಂ (ಸೂಕ್ತಿಸು. ೯-೪೩೬). [ಸಂ. ಪ್ರಮಾದಿನ್]

**ಪ್ರಮಾಪಣ** (ನಾ). ಕೊಲೆ; ವಧೆ: "ಮಾರಣಂ, ನಿಶರಣಂ . . . ಪ್ರಶಮನಂ, ಪ್ರಮಾಪಣಂ, ವರ್ಜನಂ . . . ಹಿಂಸಾ, ಸಂಜ್ಞಪನಂ—ಈ ೨೧ ಕೊಲೆ" (ಪಲಾಯು.೬೬-೩೬೩); "ವಿಶಸನಂ ಸೂದನಂ ಮಾರಣಂ ಘಾತನಂ . . . ಪ್ರಮಾಪಣಂ ಕೊಲೆಗೆ ನಾಮಂ" (ಶಬ್ದಗರ. ೮೯-೪೯). [ಸಂ.]

**ಪ್ರಮಾರ್ಜನ** (ನಾ). ೧. ತೊಳೆಯುವಿಕೆ; ಶುಚಿಗೊಳಿಸುವಿಕೆ. ೨. ಒರಸುವುದು; ತೊಡೆಯುವಿಕೆ. ೩. ನಿವಾರಣೆ; ಪ್ರಾಯಶ್ಚಿತ್ತ : "ಪ್ರಾಯಶ್ಚಿತ್ತ, ಪ್ರಮಾರ್ಜನ" (Atonement. ಶಾಂಶ. ೬). [ಸಂ.]

**ಪ್ರಮಾರ್ಜಿತ** (ಗು). ೧. ಒರಸಿದ. ೨. ನಿವಾರಿಸಿದ; ಹೋಗಲಾಡಿಸಿದ: "ವ್ಯಸ್ತಂ ಪ್ರಮಾರ್ಜಿತಂ" (ಚತ್ತುಕೋ. ೦೦೬-೫೦). [ಸಂ.]

**ಪ್ರಮಾಳೆ** (ನಾ). (?) : ಯಿ ಧರ್ಮ್ಮ ಪ್ರಮಾಳೆ ಹಲಡಣ ಹುವಾಳ ಯಿ ಧರ್ಮ್ಮವಂನು ಅರು ವುಂಬರು ಅರಿ ಎಂದರೆ ದಕ್ಷಿಣವಾರಣಾಸಿಯಲಿ ಕಪಿಲೆಯ ಕೊನ್ದ ಪಾಪಕೆ ಹೋಹರು (ಎಕ XIV. ತಿರುಮ. ೫೯೩-೬: ?). [?]

**ಪ್ರಮಿತ** (ಗು). ೧. ಪ್ರಮಾಣಕ್ಕೆ ತಕ್ಕ; ಅಳತೆಗೆ ಒಳಪಟ್ಟ : ಸಪ್ತಸಾಗರಪ್ರಮಿತಜೀವಿತನುಂ ಲಬ್ಧಾವಧಿಲೋಚನನುಮಾಗಿ (ಆಪು. ೨-೦೯ ವ). ೨. ಚೆನ್ನಾಗಿ ತಿಳಿದ, — ಗ್ರಹಿಸಿದ. ೨. ಮಿತಿಗೆ ಒಳಪಟ್ಟ; ಪರಿಮಿತವಾದ : ಅಡಗೀತನ ಕೋಪಮನು ಪಿಡಿದೊಡಲಿನ ಸುರನ ಕಾಣುತಡೆಯಲಿ ಮಿಡುಕಿನಂಶಾಂಶು [ಪಾಠಾಂ. ಶ] ಪ್ರಮಿತದಸುವಱೆ ಗುಡದಂತೆ (ಕುಂಪಾ. ೬-೨೮-೩೨). ೪. ಎಲ್ಲರಿಗೂ ತಿಳಿದಿರುವ; ಪ್ರಸಿದ್ಧವಾದ : ಭಕ್ತೋಪದಂಶಘೃತಸಿತಾಸಹಯಹೃದ್ಯದಿಂ ವರ್ತಿತಾರತ್ನಪ್ರಮಿತದೀಪ್ರದೀಪದಿಂ (ಅಂದ್ರಪು. ೬-೦೦೦ ಕಗೆ). (ನಾ). ೫. ಅಳತೆಯುಳ್ಳದು : ನಿವಿರ್ದ ಚತುರ್ದಶರಜ್ಜುಪ್ರಮಾಣವಿರ್ದಪುದು ಸಪ್ತಧೋಲೋಕಂ ಮಧ್ಯಮಲೋಕಮೂರ್ಧ್ವಲೋಕಂ ಕ್ರಮದಿಂ ತ್ರಸನಾಳಿ ಮೇಕರಜ್ಜುಪ್ರಮಿತಂ (ಆಪು. ೬-೩೬). ೬. ಮಿತಿಗೆ ಒಳಪಟ್ಟುದು; ಪರಿಮಿತವಾದುದು : ಅದೆಂದರೆ—ಜೀವನ, ವಿಷಯ ಮತ್ತು ಭಾವ

ಗಳೊಡನೆ ಸ್ಫುಟವೂ ಪ್ರಮಿತವೂ ಆದ ರೀತಿಯಿಂದ ವ್ಯವಹರಿಸುವುದು (ಶಬ್ದಮ. ೦೦೭). ೭. [ಸಂಗೀತ] ಇಪ್ಪತ್ತೆರಡು ಶ್ರುತಿಗಮಕಗಳಲ್ಲಿ ಒಂದು : ಸ್ಫುರಿತ ಪ್ರಮಿತ ದೀರ್ಘ. . . ಕೋಮಲವೆಂಬ ಇಪ್ಪತ್ತೆರಡೇ ಶ್ರುತಿಗಮಕಗಳೆಂತಲುಂ (ಶಿವತ. ೨೩೨). 'ಶ್ರುತಿ' ಪರಾ. [ಸಂ.]

**ಪ್ರಮಿತಾಕ್ಷರ₁** (ನಾ). [ಛಂದ] ಜಗತೀಛಂದಸ್ಸಿನಲ್ಲಿ ಪ್ರತಿಯೊಂದು ಸಾಲಿನಲ್ಲಿಯೂ ಹನ್ನೆರಡು ಅಕ್ಷರಗಳಿರುವ ಒಂದು ಅಕ್ಷರವೃತ್ತದ ಹೆಸರು: ೧೨ನೆಯ ಜಗತಿಯಲ್ಲಿ . . . ಪ್ರಮಿತಾಕ್ಷರಂ ಸಜಸಸಂಗಳಿರಲ್ (ಛಂದೋಂ. ೯೦). [ಸಂ. ಪ್ರಮಿತಾಕ್ಷರಾ]

**ಪ್ರಮಿತಾಕ್ಷರ₂** (ನಾ). ಮಿತವಾದ ಮಾತು ; ಮಿತಭಾಷಣ: ಕಮನೀಯವಿಭ್ರಮಗುಣಾನ್ವಿತೆಯರ್ ಪ್ರಮಿತಾಕ್ಷರಾಭರಣಭೂಷಿತೆಯರ್ ತಮಗೂರ್ಗೆವೋಪ ಬಾಲಜಾಂಗನೆಯರ್ ಕಮಲೋದರಂಗೆ ಪಡೆದರ್ ಮುದಮಂ (ಕಾವ್ಯಾವ. ೬೨). [ಸಂ.]

**ಪ್ರಮಿತಿ** (ನಾ). ೧. ಅಳತೆ; ಪ್ರಮಾಣ : ಒಸೆದಬುಧಿಂಗಳ್ವರಂ ಪಂಚರತ್ನೋತ್ಕರದಿಂ ಸಾರ್ಧ ತ್ರಿಕೋಟಿಪ್ರಮಿತಿಯ ಮಾಟಿಯಂ ಪಣ್ಣಿದಂ ಲೋಕಪಾಳಂ (ಶಾಂತೀಶ್ವ. ೯-೦೬೨). ೨. [ವೇದಾಂತ] (ಪ್ರತ್ಯಕ್ಷಾದಿ ಪ್ರಮಾಣಗಳಿಂದ ಉಂಟಾದ) ನಿಶ್ಚಿತಜ್ಞಾನ ; ಸರಿಯಾದ ತಿಳಿವು ; ಯಥಾರ್ಥಜ್ಞಾನ : "ಪ್ರಮಿತಿಃ, ಪ್ರಮಾ—೨ ನಿಜವಾಗಿ ತಿಳಿಯುವಿಕೆ : ಯಥಾರ್ಥಜ್ಞಾನ, ಪ್ರಮಾಣಜನ್ಯಜ್ಞಾನ, ಯಥಾರ್ಥಾನುಭವ" (ಸಿದ್ಧಾಂತ. ೩೩೬); ಪ್ರಮೆ ಎಂದರೆ ಸರಿಯಾದ ಅನುಭವ. ಇದನ್ನು ಪ್ರಮಿತಿ ಎಂದೂ ಕರೆಯುವರು (ಬ್ರಹ್ಮಸೂ. ೨-೨೩). ೩. ಯಥಾರ್ಥಜ್ಞಾನವನ್ನುಂಟು ಮಾಡುವ ಉಪಾಯ; ಪ್ರಮಾಣ. [ಸಂ.]

**ಪ್ರಮೀತ** (ಗು). ೧. ಮರಣ ಹೊಂದಿದ ; ಸತ್ತ. (ನಾ). ೨. ಯಜ್ಞದಲ್ಲಿ ಬಲಿ ಕೊಟ್ಟ ಪಶು : "ಪ್ರಮೀತಃ, ಉಪಸಂಪನ್ನಃ, ಪ್ರೋಕ್ಷಿತಃ—೩ನ್ನು, ಹತೇ_ಯಜ್ಞದಲ್ಲಿ ಕೊಲ್ಲಲ್ಪಟ್ಟ ಪಶು ಮುಂತಾದವುಗಳ ಹೆಸರುಗಳು" (ಸಿದ್ಧಾಂತ. ೨೨೦). ೩. ಸತ್ತವನು ; ಮರಣ ಹೊಂದಿದವನು: "ಪರಾಸುಃ, ಉಪಸಂಪನ್ನಃ, ಪ್ರಮೀತಃ, ಸಂಸ್ಥಿತಃ, ಮೃತಃ—ಈ ೫ ಸತ್ತಾತಂ" (ಹಲಾಯು. ೦೦೪-೭). [ಸಂ.]

**ಪ್ರಮೀಲೆ,** ಪ್ರಮೀಳೆ (ನಾ). ೧. ಯಾವ ಕೆಲಸದಲ್ಲೂ ಉತ್ಸಾಹವಿಲ್ಲದಿರುವುದು ; ಆಲಸ್ಯ ; ಜಡತೆ. ೨. (ಆಲಸ್ಯದಿಂದುಂಟಾಗುವ) ತೂಕಡಿಕೆ; ಮಂಪರು; ನಿದ್ರಾಪರತೆ : "ತಂದ್ರೀ, ಪ್ರಮೀಲಾ—೨ ಆಲಸ್ಯದಿಂದ ಕಣ್ಣು ಮುಚ್ಚಿ ಮೈಮರೆತು ಗುರುಕಿಡುತ ಬರುವ ಗಾಢನಿದ್ರೆಗೆ ಹೆಸರುಗಳು. ತೂಕಡಿಕೆ ಎಂದು ಕೆಲವರನ್ನುವರು" (ಸಿದ್ಧಾಂತ. ೭೦). ೩. ಒಂದು ಸ್ತ್ರೀರಾಜ್ಯದ ರಾಣಿಯ ಹೆಸರು ; ಯುಧಿಷ್ಠಿರನ ಅಶ್ವಮೇಧಯಾಗದ ಕುದುರೆಯನ್ನು ಕಟ್ಟಿ ಹಾಕಿ, ಅರ್ಜುನನೊಡನೆ 'ಯುದ್ಧ ಮಾಡು ಇಲ್ಲವೇ ವರಿಸು' ಎಂದು ಪಂಥ ಹೂಡಿ ಅರ್ಜುನನನ್ನು ವರಿಸಿದವಳು : ಆ ಪ್ರಮೀಲೆ ಪಾರ್ಥನ ಮೇಲೆ ಕಣೆಗಳಿದಳು (ಕೈಮಿನಿ. ೦೬-೦೩). ಪ್ರಮೀಳೆ : ೩. ಎಸೆವ ಭದ್ರಾಸನವನಿಳಿದು ಸಂಗ್ರಾಮಕ್ಕೆ ಪೊಱಮಟ್ಟಳು ಪ್ರಮೀಳೆ (ಕೈಮಿನಿ. ೦೬-೨); ಪೆಣ್ಣುದಳವೈದೆ ಜೋಡಿಸಿತು ಪಾರ್ಥನ ಸಮರಕಾ ಪ್ರಮೀಳೆಯ ಸುತ್ತಲು (ಕೈಮಿನಿ. ೦೬-೩). ೪. (ಆಲಂ) ಗಂಡುಬೀರಿ; ದಿಟ್ಟೆ : "ಸಿಥಿಯಾದೇಶದಲ್ಲಿದ್ದರೆಂದು ಪ್ರಸಿದ್ಧಿಯಾಗಿರುವ ಸ್ತ್ರೀಯೋಧ ಜಾತಿ. ವೀರಸ್ತ್ರೀ, ವೀರಕನ್ಯೆ; ರಣಶೂರಳಾದ ಹೆಂಗಸು; ಪ್ರಮೀಳೆ. ಗಂಡುಬೀರಿ" (Amazon. ಇಂಕಿಂ).

**ಪ್ರಮೀಳಾರಾಜ್ಯ**—೧. ಹೆಂಗಸರೇ ಆಡಳಿತವನ್ನು ನಡೆಸುವಂಥ ಪ್ರದೇಶ. ೨. ಕೇವಲ ಹೆಂಗಸರು ಮಾತ್ರ ಇರುವ ಪ್ರದೇಶ. [ಸಂ. ಪ್ರಮೀಲಾ]

**ಪ್ರಮೀಳೆ** 'ಪ್ರಮೀಲೆ' ನೋ.

**ಪ್ರಮುಕ್ತ** (ಗು). ೧. ಸಡಿಲಗೊಳಿಸಿದ; ಸಡಿಲಮಾಡಿದ. ೨. ಬಂಧನದಿಂದ ಬಿಡುಗಡೆಹೊಂದಿದ. ೩. (ಬಾಣದಂತೆ) ಎಸೆದ; ಪ್ರಯೋಗಿಸಿದ : ಹೂಂಕೃತಿ ಬಿಲ್ಲಾಳರ ಗುಣಠಂಕೃತಿ ಚಾಪಪ್ರಮು [ಪಾಠಾಂ. ಯು]ಕ್ತಶರನಿಕರಮಹಾಭೀಂಕೃತಿ ನೋಳ್ಪಮರರ್ಗೆ ಭಯಂಕೃತಿಗೆಯ್ದುದು ತದೀಯ ರಣಭೂತಳದೊಳ್ (ರಾಜಶೇ. ೩-೪೩). [ಸಂ.]

**ಪ್ರಮುಖ** (ಗು). ೧. ಮುಂಭಾಗದಲ್ಲಿರುವ; ಸಮ್ಮುಖದ; ಎದುರಿನ. ೨. ಮುಖ್ಯವಾದ; ಪ್ರಧಾನವಾದ : ಬಡಗಭಾಷೆ ಕನ್ನಡದ ಒಂದು ಪ್ರಮುಖ ಶಾಖೆ (ದ್ರಾವಿಡ. ೦೪೩). ೩. ಮೊದಲಾದ; ಮುಂತಾದ : ಸಿದ್ದಿಸೆಟ್ಟಿ ಸೋಭನಯ್ಯ ಮಲ್ಲಯ್ಯಸೆಟ್ಟಿ ಅಣ್ಣಮ್ಮನಿನ್ತಿವರ್ಪ್ರಮುಖವಾಗಿ ತಂಬುಲಿಗ ಸಾಸಿರ್ವ್ವರುಂ ಅಯ್ನೂರ್ವ್ವರುಂ ಪೋಗಿ (ಶಾಸನ. IX-i, ೬೬-೦೦ ; ೯೯೧) ; ಮತ್ತಮನೇಕಪನಸಜಂಬೀರನಾರಿಕೇಳಸಹಕಾರಕದಳೀಪ್ರಮುಖಫಲಿತಭೂಜರಾಜಿಗಳ್ (ಪುಷ್ಪದ. ೩-೯೭ ವ). (ನಾ). ೪. ಶ್ರೇಷ್ಠನಾದುದು; ಮುಖ್ಯವಾದುದು; ಪ್ರಧಾನವಾದುದು : "ಅಗ್ರಂ ಪ್ರಧಾನಂ . . . ಪ್ರಮುಖಮಾ ಪ್ರವರಂ . . . ಗ್ರಾಮಣೀಯೆನಲು ಮುಖ್ಯಕ್ಕೆ ನಾಮಂ" (ಮಂಗರಾ. ೦೨೭-೪). ೫. ಮುಖಂಡ ; ಮುಖ್ಯಸ್ಥ : "ಅಗ್ರ್ಯಂ, ಪ್ರಧಾನಂ, ಪ್ರಮುಖಂ, ಪುರೋಗಂ . . . ಅಗ್ರಣೀ—ಈ ೧೩ ಮುಖ್ಯಂ" (ಹಲಾಯು. ೦೩೩-೩). ೬. ಒಂದು ನರಕದ ಹೆಸರು : ಕುಂಭೀಪಾಕ ಸುಪಾಕ ಪ್ರಮುಖದಾರುಣ ಅಂಗಾರಕವೆಂಬೈದು ಮಂತ್ರಿನರಕಂಗಳಿಂ ಸೇರಿ ತರಳತರವೆಂಬರಸುನರಕವಿಹುದು (ಶಿವತ. ೦೯೦). ೭. ಗುಂಪು ; ಸಮೂಹ. [ಸಂ.]

**ಪ್ರಮುಖಕರಣ** (ನಾ). ಲೆಕ್ಕದ ಮುಖ್ಯಾಧಿಕಾರಿ; ಪ್ರಧಾನಕರಣಿಕ : ಪ್ರಭುಮಂತ್ರೋತ್ಸಾಹಶಕ್ತಿತ್ರಯಸಂಪನ್ನರಪ್ಪ ಶ್ರೀಮತ್ಪೆರ್ಗ್ಗಡೆ ನಾರಣಯ್ಯ ಪ್ರಮುಖಕರಣಂ ಬನವಾಸಿ ಪನ್ನಿರ್ಚ್ಛಾಸಿರಕ್ಕಂ ಪೆರ್ಗ್ಗಡೆತನಂಗೆಯ್ಯೆ (ಶಾಸನ. XX, ೩೩-೭; 1055). [ಸಂ.]

**ಪ್ರಮುಗ್ಧ** (ಗು). ೧. ಮೈಮೇಲೆ ಪ್ರಜ್ಞೆ ಇಲ್ಲದ ; ಎಚ್ಚರವಿಲ್ಲದ. ೨. ಮನೋಹರವಾದ. [ಸಂ.]

**ಪ್ರಮುದ** (ನಾ). ಅತಿಯಾದ ಸಂತೋಷ,_ಆನಂದ : ಕರಮೆಸೆವಾದಿ ನಂದಿಯನು ಪ್ರಮುದ[ಪಾಠಾಂ. ಮಥ]ಚಿತ್ತದಿ ನೋಡಿ (ಬಸವ. ೨-೭). [ಸಂ. ಪ್ರಮುದ್]

**ಪ್ರಮುದಿತ** (ಗು). ೧. ಸಂತೋಷ ಹೊಂದಿದ ; ಆನಂದಪಟ್ಟ : ಅಮರನದೀಪ್ರವಾಹದೊಳಗಿಂದೊಗೆತರ್ಪ ವಿಶಾಲಪುಣ್ಯಮೋ ಪ್ರಮುದಿತಶೈವಕೀರ್ತಿ ಬರುತಿರ್ದಪುದೋ ಎನೆ ಬಂದನಳ್ಕಱಿಂ (ಗಿರಿಜಾ. ೪-೩೭). ೨. ಆನಂದವನ್ನುಂಟುಮಾಡುವ ; ಸಂತೋಷದಾಯಕವಾದ : ಪ್ರಮುದಿತಭವ್ಯಮಂ ಸುಕವಿಸಂಕುಳಸೇವ್ಯಮಂ . . . ಜಿನಾನ್ವಯಕ್ರಮಯುತಕಾವ್ಯಮಂ ನೆಱೆಯೆ ನಿರ್ಮಿಸಿ (ಚಂದ್ರಪ್ರ. ೧೭-೯೨). ೩. (ಆಲಂ) ಅರಳಿದ ; ಬಿರಿದ : ಪ್ರಮುದಿತ ಕಂಕೇಲ್ಲಿಯವೋಲ್ ಪ್ರಮದಾಪದಜತುರಸಾಂಕಿತಂ ಸರಸೀವಿಭ್ರಮದಂತೆ ನೀರಜಸ್ತೋಮವಾಗಿ ರಾಜಿಪ್ಪುದು ಪುರದ ವೀಧಿಯೂಥಂ (ಕುಸುಮಾ. ೨-೯೩). ೪. ವ್ಯಾಪ್ತವಾದ : ಅಮರಗಣಯುಗ್ಮದಿಂ ಮುಂದಮರ್ದೆಯುಂ ಶಿಖಿಗಣಂ ಬರಲ್ ದಂಡಕದಾ ಪ್ರಮುದಿತಲಕ್ಷಣಮಕ್ಕುಂ (ಛಂದೋಂಬು. ೩-೨೪); ಕ್ರಮದಿಂದೆ ಸಂಧಿ ನಾಮಂ ಸಮಾಸಮಾ ತದ್ಧಿತಂ ಪೊದಱ್ದಾಖ್ಯಾತಂ ಪ್ರಮುದಿತಧಾತು ಮಪಭ್ರಂಶಮವ್ಯಯಂ ಸಂಧಿ ಶಬ್ದಮಣಿದರ್ಪಣದೊಳ್ (ಶಮದ. ೧). (ನಾ). ೫. ಸಂತೋಷಪಟ್ಟವನು ; ಆನಂದಪಟ್ಟವನು: "ಹೃಷ್ಟಃ, ಮತ್ತಃ ತೃಪ್ತಃ, ಪ್ರಹ್ಲನಃ, ಪ್ರಮುದಿತಃ, ಪ್ರೀತಃ—೬ ಸಂತೋಷಪಟ್ಟವನು" (ಸಿದ್ಧಾಂತ. ೩೩೦). [ಸಂ.]

**ಪ್ರಮುಷ್ಟ** (ಗು). ೧. ಉಜ್ಜಿದ ; ತಿಕ್ಕಿದ. ೨. ಲೇಪಿಸಿದ ; ಬಳಿದ : ಘನಸಾರಚಂದನಸಾರಪ್ರಮುಷ್ಟ ಕರತಳನುಮಂಗೀಕೃತಕಸ್ತೂರಿಕಾವಿಲೇಪನನುಂ (ಅರ್ಜು. ೧೦-೨೬ ವ). ೩. ಸಾಣೆ ಹಿಡಿದ ; ಮೆರುಗು ಕೊಟ್ಟ. [ಸಂ.]

**ಪ್ರಮೆ** (ನಾ). ೧. ಅಳತೆ ; ಪರಿಮಾಣ ; ಪ್ರಮಾಣ. ೨. [ತರ್ಕಶಾ] ಸರಿಯಾದ ತಿಳಿವಳಿಕೆ ; ನಿಶ್ಚಿತಜ್ಞಾನ ; ಪ್ರಮಿತಿ ; ☞ ಇದರಲ್ಲಿ ಸಾಕ್ಷಾತ್ಕಾರ, ಅನುಮಿತಿ, ಉಪಮಿತಿ ಮತ್ತು ಶಾಬ್ದಬೋಧವೆಂಬುದಾಗಿ ನಾಲ್ಕು ಪ್ರಕಾರಗಳು ಇವೆ : "ಪ್ರಮಿತಿಃ, ಪ್ರಮಾ—೨ ನಿಜವಾಗಿ ತಿಳಿಯುವಿಕೆ, ಯಥಾರ್ಥಜ್ಞಾನ" (ಸಿದ್ಧಾಂತ. ೩೩೬); ಪ್ರಮೆ ಎಂದರೆ ಸರಿಯಾದ ಅನುಭವ. ಇದನ್ನು ಪ್ರಮಿತಿ ಎಂದೂ ಕರೆಯುವರು (ಭ್ರಿಕ್ಷಾ. ೨-೨೫); ಪ್ರಮೆ, ಬುದ್ಧಿ ಉಪಲಬ್ಧಿ ಮೊದಲಾದ ಪದಗಳಿಂದ ಹೇಳಲ್ಪಡುವ ಜ್ಞಾನವೆಂಬುದು ಸೂಕ್ಷ್ಮವಾದ ಅತೀಂದ್ರಿಯವಾದ ಕ್ರಿಯೆ (ಹಿಂದಶಾ. ೦೬೩).

[ಸಂ. ಪ್ರಮಾಣ]

**ಪ್ರಮೇಯ** (ಗು). ೧. ಅಳೆಯಬಹುದಾದ ; ಅಳೆಯಲು ಶಕ್ಯವಾದ. ೨. ಸೂಕ್ಷ್ಮವಾಗಿ ಪರೀಕ್ಷಿಸಬೇಕಾದ ; ವಿವೇಚಿಸಬೇಕಾದ. (ನಾ). ೩. ಪ್ರಸಂಗ ; ಸನ್ನಿವೇಶ ; ಸಂದರ್ಭ : ನೀನು ದಿನಾ ಸಕಾಲದಲ್ಲಿ ಊಟ ತಿಂಡಿ ಇಲ್ಲದೆ ರೈಲಿನಲ್ಲಿ ತಿರುಗಿ ಹೋಗಿ ಓಡೋ ಪ್ರಮೇಯ ವೇನು ? (ಶಂಕವ್ಯ. ೬೯); ಇವರು ನಮ್ಮ ಗುಂಪನ್ನು ಬಿಟ್ಟು ಬೇರೆಯಾಗ ಬೇಕಾಗಿದ್ದ ಪ್ರಮೇಯವೇನಿತ್ತು? (ಹಸುಹೂ. ೦೬೩); ನಿಮ್ಮನ್ನೆಲ್ಲ ಇಲ್ಲಿಗೆ ಬರಮಾಡಿಕೊಳ್ಳುವ ಪ್ರಮೇಯವಾದರೂ ಏನಿದ್ದಿತು ? (ಕಾಂಕಲ. ೦೯). ೪. [ತರ್ಕಶಾ] (ಮುಖ್ಯವಾದ) ವಿಷಯ ; ತತ್ತ್ವ; ಸಿದ್ಧಾಂತ : ಮಂತ್ರ, ಬ್ರಾಹ್ಮಣ ಮುಂತಾದವುಗಳ ಕರ್ಮಸಿದ್ಧಾಂತವನ್ನೇ ಆಧಾರವಾಗಿಟ್ಟುಕೊಂಡು ಕರ್ಮದಿಂದ ಜ್ಞಾನಪ್ರಾಪ್ತಿಯೆಂಬ ಪ್ರಮೇಯದ ಮೇಲೆ ಉಂಟಾದದ್ದು ಪೂರ್ವಮೀಮಾಂಸೆ (ಭಾರತ. ೦೪೦); ಈ ಬಗೆಯ ಹೇರಳವಾದ ದೃಷ್ಟಾಂತಗಳಿಂದ ಅತ್ಯಂತಗಹನವಾದ ಪ್ರಮೇಯವನ್ನೂ ತಿಳಿಹೇಳುವುದರಲ್ಲಿ ರಂಗನಾಥಕವಿ ಬಹುಮಟ್ಟಿಗೆ ಯಶಸ್ವಿಯಾಗಿದ್ದಾನೆ (ಕವಾಕ. ೩೦೨). ೫. [ರೇಖಾಗ] ತರ್ಕಸರಣಿಯ ಮೂಲಕ ಸಿದ್ಧಪಡಿಸಬೇಕಾದ ವಿಷಯ ; ರೇಖಾಗಣಿತದಲ್ಲಿ ಸಾಧನೀಯ ತತ್ತ್ವ,—ನಿಯಮ : ಯೂಕ್ಲಿಡ್ (Euclid)ಬರೆದ ರೇಖಾಗಣಿತವಲ್ಲಿನ ಪ್ರಮೇಯಗಳನ್ನೂ ಸಾಧನೆಗಳನ್ನೂ ನೋಡಿದರೆ ಅವುಗಳನ್ನು ಕಂಡುಹಿಡಿದವರು ಯಾರು, ಈ ಪ್ರಮೇಯಗಳನ್ನು ಊಹಿಸಿದುದು ಹೇಗೆ ಎಂಬುದು ಸ್ವಲ್ಪವೂ ತಿಳಿಯುವುದಿಲ್ಲ (ಕಾಶಾ. ೩೩); ರೇಖಾಗಣಿತದಲ್ಲಿ ಹೆಚ್ಚಿನ ಪರಿಜ್ಞಾನವೂ ಅಭ್ಯಾಸವೂ ಆಗುವಂತೆ ಪ್ರಮೇಯಗಳನ್ನೂ ರಚನೆಗಳನ್ನೂ ಸೇರಿಸಬೇಕು (ಶಿಕ್ಷರ. ೦೬೩). ೬. [ತತ್ತ್ವಶಾ] ಯಥಾರ್ಥಜ್ಞಾನದಿಂದ ತಿಳಿಯಲಾಗುವ ವಸ್ತು ; ನಿಶ್ಚಿತಜ್ಞಾನದಿಂದ ಗ್ರಹಿಸುವ ವಿಷಯ,—ತತ್ತ್ವವಿಚಾರ: ಪ್ರಮಾಣವೆಂದರೆ ಪ್ರಮೆಗೆ ಸಾಧನ. ಪ್ರಮೆಯೆಂದರೆ ಯಥಾರ್ಥಜ್ಞಾನ. ಇದಕ್ಕೆ ಆಶ್ರಯನಾಗಿರುವವನು ಪ್ರಮಾತೃ. ವಿಷಯವಾಗಿರುವುದು ಪ್ರಮೇಯ (ಹಿಂದಶಾ. ೦೩೩); ಪ್ರಮೇಯ:—ಯಥಾರ್ಥಜ್ಞಾನದಿಂದ ತಿಳಿಯಲ್ಪಡುವ ವಸ್ತು (ಭಾತತ್ತ್ವ. ೧೬೩). ೭. [ನ್ಯಾಯಶಾ] ಆತ್ಮ, ಶರೀರ, ಇಂದ್ರಿಯ, ಅರ್ಥ, ಬುದ್ಧಿ, ಮನಸ್ಸು, ಪ್ರವೃತ್ತಿ, ದೋಷ, ಪ್ರೇತ್ಯಭಾವ, ಫಲ, ದುಃಖ ಮತ್ತು ಅಪವರ್ಗವೆಂಬ ಹನ್ನೆರಡು ವಿಧವಾದ ವಿಷಯ : ನ್ಯಾಯಶಾಸ್ತ್ರದಲ್ಲಿ ಹೇಗೆಂದರೆ —ಆತ್ಮ ಶರೀರ . . . ಅಪವರ್ಗವೆಂದು ಹನ್ನೆರಡು ವಿಧವಾಗಿ ಪ್ರಮೇಯವನ್ನು ಒಂಬತ್ತನೆಯ ಸೂತ್ರದಲ್ಲಿ ವಿಭಾಗ ಮಾಡಿರುವರು (ಹಿಂದಶಾ. ೧೧೩). ೮. ಆತ್ಮಾನಾತ್ಮ ವಿವೇಕಕ್ಕೆ ಬೇಕಾದ ಪ್ರಮಾಣ, ಪ್ರಮೇಯಂ, ಸಂಶಯಂ, ಪ್ರಯೋಜನ, ದೃಷ್ಟಾಂತ, ಸಿದ್ಧಾಂತ, ಅವಯವ, ತರ್ಕ, ನಿರ್ಣಯ, ವಾದ, ಜಲ್ಪ, ವಿತಂಡಾ, ಹೇತ್ವಾಭಾಸ, ಛಲ, ಜಾತಿ ಮತ್ತು ನಿಗ್ರಹಸ್ಥಾನ ಎಂಬ ಹದಿನಾರು ಬಗೆಯ ಪದಾರ್ಥಗಳಲ್ಲಿ ಒಂದು: ಗೌತಮೋಕ್ತನ್ಯಾಯವು ಪ್ರಮಾಣ ಪ್ರಮೇಯ ಸಂಶಯ . . . ನಿಗ್ರಹಸ್ಥಾನಗಳೆಂಬ ಷೋಡಶಪದಾರ್ಥಂಗಳಂ ನಿರೂಪಿಸುತ್ತಲೀ ಪ್ರಪಂಚಕ್ಕೆ ಪರಮೇಶ್ವರಕರ್ತೃಕಮಂ ನಿಶ್ಚಯಿಸುವುದು (ಅವೀಳ.೧೫) ; ನ್ಯಾಯದರ್ಶನದಲ್ಲಿ ಪ್ರಮಾಣ ಪ್ರಮೇಯ ಸಂಶಯ . . . ನಿಗ್ರಹಸ್ಥಾನ ಎಂದು ಹದಿನಾರುಪದಾರ್ಥಗಳನ್ನು ನಿರೂಪಿಸಿರುವರು (ಹಿಂದಶಾ. ೧೧೨). [ಸಂ.]

**ಪ್ರಮೇಹ** (ನಾ). ೧. ಮೂತ್ರಕೋಶದಲ್ಲಿ ಕಲ್ಲು ಉಂಟಾಗುವ ಒಂದು ಬಗೆಯ ರೋಗ ; ಶಿಲಾಮೇಹ : "ಅಶ್ಮರಿಯೆನೆ ಪ್ರಮೇಹ ಮಕ್ಕು" (ಕುಂಗಣ. ೦೧೧-೪); ಎಲೆಹುರಿಯ ಬೇರು ಹಳೇನೀರಿಂ ಕುಡಿಯೆ ಪ್ರಮೇಹಂ ಕಿಃಗುಂ. ಕಲ್ಲು ಒಡೆದು ಬೀಳ್ಗುಂ (ಅನ್ನಪಿ. ೦೪೪) ; ಚಿಲ್ಲದ ಬೀಜದ ಗಂಧವನ್ನು ತೆಗೆದು ಅದಕ್ಕೆ ಸ್ವಲ್ಪ ಶ್ರೀಗಂಧ ಹಾಕಿ ತೆಗೆದುಕೊಂಡರೆ ಪ್ರಮೇಹದ ಕಲ್ಲು ಬೀಳುತ್ತದೆ (ಸಕವ್ಯ. ಶಂ. ೪೪೩). ೨. (ಶುಕ್ರಧಾತುವು ಯಾವಾಗಲೂ ಸ್ರವಿಸುವುದು ಮತ್ತು ಮಧುಮೇಹ ಇತ್ಯಾದಿ ಯಾವುದಾದರೂ) ಮೂತ್ರರೋಗ. ೩. ಗುಹ್ಯಪ್ರದೇಶದಲ್ಲಿ ಉಂಟಾಗುವ ವ್ರಣರೋಗ ; ಭಗಂದರ. [ಸಂ].

**ಪ್ರಮೋದ** (ನಾ). ೧. ಸಂತೋಷ ; ಆನಂದ: "ಪ್ರಮೋದಃ, ಪ್ರಮುದಃ, ಹರ್ಷಃ . . . ಶಂ, ಸುಖಂ—ಈ ೧೩ ಸುಖದ ಪೆಸರ್" (ಹಲಾಯು. ೨೦-೦೨೩); ಜಲಪಾಲಂಗೆ ಪ್ರಮೋದಮಾಗೆ ರಾಗಿಸಿ ಪಲಕಾಲಕ್ಕನ್ನ ಪಗೆಯೊಳಗಾದಂ ಬನ್ನಿಮೆಂಬುದುಂ (ಶಂಕಶಂ. ೨೮೦-೮): ಮೇದಿನೀದೇವಿಗತಿಪ್ರಮೋದಮಂ ಪಡೆದು ಕಟ್ಟಿಪಿ (ಜಗಂ. ೦-೩೪ ವ). ೨. ಸುಗಂಧ ; ಸುವಾಸನೆ. ೩. ಅರುವತ್ತು ಸಂವತ್ಸರಗಳಲ್ಲಿ ನಾಲ್ಕನೆಯ ಸಂವತ್ಸರದ ಹೆಸರು : ಆ ವರುಷವೇ ಪ್ರಭವ ವಿಭವ ಶುಕ್ಲ ಪ್ರಮೋದ [ಶಾಶಂ. ಪ್ರಮಾದಿತ, ಪ್ರಮಾದೌತ, ಪ್ರಮೋದೂತ] . . . ಕ್ರೋಧನ ಅಕ್ಷಯವೆಂದಱವತ್ತು ತೆಱನಾಗಿಹುದು (ಅವೀಳ. ೩೨೦). ೪. [ಯೋಗ] ಸಾಂಖ್ಯದರ್ಶನದ ಶಾಸ್ತ್ರಾಭ್ಯಾಸ, ಶಾಸ್ತ್ರಜ್ಞಾನವಿಚಾರ, ಗುರುಶಿಷ್ಯಸಹವಾಸ, ಸದಾಮುದಿತ, ವಿವೇಕಖ್ಯಾತಿ, ಪ್ರಮೋದ, ಮುದಿತ ಮತ್ತು ಮೋದಮಾನಗಳೆಂಬ ಎಂಟು ಸಿದ್ಧಿಗಳಲ್ಲಿ ಒಂದು; ಪ್ರತ್ಯಯಸರ್ಗದ ಒಂದು ಭಾಗ : ಶಾಸ್ತ್ರಾಭ್ಯಾಸ . . . ಪ್ರಮೋದ ಮುದಿತ ಮೋದಮಾನಗಳೆಂಬುವು ಅಷ್ಟಸಿದ್ಧಿಗಳು(ಹಿಂದಶಾ. ೬೯). [ ಸಂ. ]

**ಪ್ರಮೋದಿತ** (ಗು). ೧. ಸಂತೋಷಗೊಂಡ ; ಹರ್ಷ ಹೊಂದಿದ. ೨. ಸುಗಂಧಗೊಳಿಸಿದ ; ಪರಿಮಳವುಂಟುಮಾಡಿದ. [ಸಂ.]

**ಪ್ರಮೋದೂತ** (ನಾ). = ಪ್ರಮೋದ ೩ : ಪ್ರಮೋದೂತ ಸಂವತ್ಸರದ ಮಾರ್ಗಶಿರ ಬ ೧ ಲೂ ಶ್ರೀಮತು ಕೆಳದಿ ಚೆಂನ್ನಮಾಜಿಯವರು ದೊಡ್ಡ ಚೆಂನಪ್ಪಯಗೆ ಬರಶಿ ಕಳುಹಿದ ಪ್ರಯೋಜನ (ಮೈಶಾಂ. ೦೪೩೪, ೬-೭; 1690). [☞'ಪ್ರಮೋದ' ಎಂಬ ಹೆಸರಿನ ಸಂವತ್ಸರದ ರೂಪಾಂತರವಾಗಿ ಈ ಶಬ್ದರೂಪವು ಪ್ರಚಾರದಲ್ಲಿದೆ]

**ಪ್ರಯತ** (ಗು). ೧. ಶುದ್ಧವಾದ; ಪವಿತ್ರವಾದ. ೨. ನಮ್ರವಾದ ; ವಿನೀತವಾದ. ೩. ಇಂದ್ರಿಯಗಳನ್ನು ಅಧೀನದಲ್ಲಿಟ್ಟುಕೊಂಡ ; ಜಿತೇಂದ್ರಿಯನಾದ. (ನಾ). ೪. ಶುದ್ಧವಾದುದು ; ಶುಚಿ ; ಪವಿತ್ರತೆ : " ಪ್ರಯತಃ, ಅನುಚ್ಛಿಷ್ಟಃ - ಈ ೨ ಶುಚಿ " (ಹಲಾಯು. ೬೬-೨೪೬); ಕ್ಷಯವ್ಯಜನಂ ಜನಸಮಯಂ ಸ್ವಯರಹಿತಂ ಹಿತವಚಃ ಪ್ರಿಯಂ ಪ್ರಿಯಧರ್ಮಂ ಪ್ರಯತಯುತಂ ಸದ್ವಿನಯಂ ನಯವಾಕ್ಪ್ರಸರಂ

ಸರಸ್ವತೀಮುಖಮುಕುರಂ (ಶಬ್ದಾನು. ೦–೩೦). ೫. ಪವಿತ್ರನಾದವನು ; ಪರಿಶುದ್ಧನಾದವನು : "ಪವಿತ್ರಃ, ಪ್ರಯತಃ, ಪೂತಃ–ಪವಿತ್ರನಾದವನ ಹೆಸರುಗಳು. ಪರಿಶುದ್ಧನು" (ಶಿಕ್ಷಾಕೋ. ೨೨೬). [ಸಂ.]

**ಪ್ರಯತ್ನ** (ನಾ). ೧. ಉದ್ಯಮ ; ಉದ್ದೇಶ ; ಯತ್ನ : ಪ್ರಯತ್ನ ಮಲ್ಲದ ಗುರುತ್ವಕ್ಕೆ– ಎಮ್ಮ ತಂದೆಗಳ್ (ಜಗದ. ೦೦೨ ಕೃಷ್ಣ); ಚಂದ್ರವಿಗೊ ಮಂಗಳಗ್ರಹಕ್ಕೊ ವಲಸೆ ಹೋಗುವ ಪ್ರಯತ್ನ . . . ಕಾಣುತ್ತದೆ (ಜೀವ್ಯ. ೯೬) ; ಸಮಂಜಸವಾದ ಉತ್ತರ ಹೇಳುವ ಹತ್ತಾರು ಪ್ರಯತ್ನಗಳು ನಡೆದಿವೆ (ಭ್ರಾಂತಿ. ೨೦). ೨. ಹೆಚ್ಚು ಶ್ರಮ ; ಬಹುಶ್ರಮ : ಪಕ್ಷಿಯರ ದೆಸೆಯಿಂದೆ ಮಡಿದಿರ್ದ ಪಾರ್ಥಂ ಪ್ರಯತ್ನದಿಂ ವಿಜಸುತಂ ತಂದ ಸಂಜೀವಕದ ರತ್ನದಿಂ ಕೃಷ್ಣಪ್ರಸಾದದಿಂ ಜೀವಿಸಿದನು (ಕೃಷ್ಣಜೈ. ೨೯ ೩೦೩೩). ೩. ತೊಂದರೆ ; ಕಷ್ಟ. ೪. "ಒಂದು ಭಾಗವು ಇನ್ನೊಂದರ ಮೇಲೆ ಪ್ರಯೋಗಿಸುವ ಬಲವನ್ನು ಆ ಭಾಗದ ಖಂಡವಿಸ್ತಾರದಿಂದ (Area of cross section) ಭಾಗಿಸಿದರೆ ಬರುವ ಲಬ್ಧಕ್ಕೆ ಪ್ರಯತ್ನವೆಂದು ಹೆಸರು" (ಭೌತಿ. ೦೦೬).

**ಪ್ರಯತ್ನಪಡು**–ಯತ್ನ ಮಾಡು : ಎಷ್ಟು ಪ್ರಯತ್ನಪಟ್ಟರೂ ನಮ್ಮಿಂದ ಅವುಗಳನ್ನು ತೆರೆಯಲಾಗಲಿಲ್ಲ (ಶ್ರೀಕೃ. ೯೯); ಮುಂದೆ ನಡೆಯ ಬೇಕೆಂದು ಎಷ್ಟು ಹೆಚ್ಚಾಗಿ ಪ್ರಯತ್ನ ಪಟ್ಟರೆ, ಅವು ಅಷ್ಟು . . . ಹಿಂದಕ್ಕೆ ಎಳೆಯಲು ಪ್ರಾರಂಭ ಮಾಡುವುವು (ಶಂಕರಾಸ್ತ್ರ. ೯೬). **ಪ್ರಯತ್ನ ಮಾಡು**– ಯತ್ನ ಮಾಡು ; ಉದ್ಯೋಗಿಸು : ತಾವು ಅಭ್ಯಾಸ ಮಾಡಿದ ಪುಸ್ತಕ ಯಾವುದೆಂದಾಗಲಿ, ಅದರ ವಿವರಗಳನ್ನಾಗಲಿ ಅವರು ತಿಳಿಸುವ ಪ್ರಯತ್ನ ಮಾಡಿಲ್ಲ (ಕೀಲಕ್ಕ. ೩೬) ; ಮುಂದೆ ಪ್ರಯತ್ನ ಮಾಡುವುದಾದರೂ ಏಕೆ (ಶ್ರೀಕೃ. ೩೭). [ಸಂ.]

**ಪ್ರಯತ್ನಿಸು** (ಕ್ರಿ). ಯತ್ನ ಮಾಡು : ರತ್ನಪರೀಕ್ಷೆ ಗಜಾಶ್ವಪರೀಕ್ಷೆ ಪ್ರಯುತ್ನಿಸೆ ಬಾಹ್ಯವಿಜ್ಞಾನ ರತ್ನತ್ರಯರೂಪನಾತ್ಮನೆಂದರಿವುದು ನೂತ್ನಾಂತರಂಗವಿಜ್ಞಾನ (ಕಪ. ೨–೦೯): ಭಾರತದೇಶವು ಬಡಜನರ ಜೀವನಸ್ಥಿತಿಗಳನ್ನು ಸುಧಾರಿಸುವುದಕ್ಕಾಗಿ ಪ್ರಯತ್ನಿಸುತ್ತಿದೆ (ಅರ್ಥಶಾ. ೩೦); ಅವಳಾದರೂ ಮಾಧವಿಯ ಪಾಲಿನ ನೃತ್ಯಗಾನಗಳನ್ನು ಕಲಿಸೋಣವೆಂದು ಎಣಿಸಿ ಪ್ರಯತ್ನಿಸಿದಳು (ಚಿಗುರ್ಮ. ೯೬). [ಪ್ರಯತ್ನ + –ಇಸು]

**ಪ್ರಯಸ್ತ** (ನಾ). ಸಂಬಾರ ಪದಾರ್ಥ, ಒಗ್ಗರಣೆ ಮುಂತಾದುವುಗಳನ್ನು ಹಾಕಿ ಸಂಸ್ಕರಿಸಿದ ವ್ಯಂಜನ,–ಅಡುಗೆ : "ಪ್ರಯಸ್ತಂ, ಸುಸಂಸ್ಕೃತಂ–ಉದ್ದಿನಬೇಳೆ, ಕಡಲೆ, ಸಾಸುವೆ, ಜೀರಿಗೆ, ಮೆಣಸಿನಕಾಯಿ, ತುಪ್ಪ ಮುಂತಾದವುಗಳಿಂದ ವಗ್ಗರಿಸಿ ಹಿಂಗು, ಕರಿಬೇವು ಮುಂತಾದ ಪರಿಮಳಗಳಿಂ ಕಲ್ಪಿಸಿದ ರುಚಿಯಾದ ಪದಾರ್ಥಗಳು" (ಶಿಕ್ಷಾಕೋ. ೨೯೬). [ಸಂ.]

**ಪ್ರಯಾಗ** (ನಾ). ೧. ಯಜ್ಞ; ಯಾಗ. ೨. ಯಜ್ಞ ಮಾಡುವ ಸ್ಥಳ; ಯಾಗಭೂಮಿ. ೩. ಈಗಿನ ಅಲಹಾಬಾದ್ ಬಳಿಯ ಒಂದು ಪುಣ್ಯ ಕ್ಷೇತ್ರ : ಗಂಗೆ, ಯಮುನೆ ಮತ್ತು (ಗುಪ್ತಗಾಮಿನಿಯಾದ) ಸರಸ್ವತಿ ನದಿಗಳ ಸಂಗಮ ಸ್ಥಳ ; ಬ್ರಹ್ಮನು ಈ ಪ್ರದೇಶದಲ್ಲಿ ಅನೇಕ ಯಾಗಗಳನ್ನು ಮಾಡಿದ ಕಾರಣ ಇದಕ್ಕೆ ಪ್ರಯಾಗವೆಂಬ ಹೆಸರು ಬಂದಿತೆಂಬ ನಂಬಿಕೆಯಿದೆ : ಅಸುರವಾರ್ದನನ ದೆಸೆದಿಂ ಪ್ರಯಾಗದೊಳ್ಪಿಡುವೆಮೇ ಶಿರವಂ ಬಿಡದೆ ಗಾಸಿಯಾಗದಿರು (ಕೃಷ್ಣಜೈ. ೫೫–೨೦) ; ಇನ್ನು ಮೂರು ದಿನಗಳಲ್ಲಿ ಕಾಶಿ, ಹರಿದ್ವಾರ, ಗಯಾ, ಪ್ರಯಾಗ ಮೊದಲಾದ ಮಹಾಮಹಾಕ್ಷೇತ್ರಗಳಿಗೆ ಹೊರಡಬೇಕಾದೀತು! (ಮೂಕ. ೯೩). ೪. ಇಂದ್ರ. ೫. ಕುದುರೆ. [ಸಂ.]

**ಪ್ರಯಾಗ** (ನಾ). = ಪ್ರಪಹಾಗ ೩ : ಶ್ರೀಪರ್ವತದೊಳಂ ಪ್ರಯಾಗೆಯೊಳಂ ಬಾಣರಾಸಿಯೊಳಂ ಕುರುಕ್ಷೇತ್ರದೊಳಂ ಹತ್ತು ಸಾಸಿರ ಕವಿಲೆಯುಮಂ ಹತ್ತು ಸಾವಿರ ವೇದಪಾರಗರುಮಂ ಕೊಂದ ಬ್ರಹ್ಮಹತಿಯಕ್ಕು (ಕಳಿ. ೦೦೬–೨೨–೬೨ : 1078) , ಇನ್ನೀ ಧರ್ಮ್ಮವನಾವನೋರ್ವ್ವ ಪ್ರತಿಪಾಳಿಸಿದಂಗೆ ಗಂಗೆ ವಾರಣಾಸಿ ಗುರುಕ್ಷೇತ್ರ ಪ್ರಯಾಗೆಯಲು ಸಾಸಿರ್ವ್ವ ಬ್ರಾಹ್ಮಣರ್ಗ್ಗೆ ಸಾಸಿರ ಕವಿಲೆಯ ದಾನಂಗೆಯ್ದ ಫಲವಕ್ಕು (ಎಕ. XII, ತಿಪಟೂ. ೬೦–೯೭ : 1162). [ಸಂ.]

**ಪ್ರಯಾಣ** (ನಾ). ೧. ಪಯಣ ; ಸಂಚಾರ ; ಯಾತ್ರೆ : "ಯಾತ್ರಾ, ಪ್ರಯಾಣಂ, ಪ್ರಸ್ಥಾನಂ–ಈ ೩ ಪಯಣಂ" (ಕಣಾಟಾ. ೬೯–೨೮೮) ; ನಂದಗೋಪಂ . . . ಕತಿಪಯಪ್ರಯಾಣಂಗಳಿಂ ಪೋಗಿ (ಜಗ. ೬–೩೬ ೪); ಪ್ರಯಾಣ ಅಲೆದಾಟ ಮೊದಲಾದುವುಗಳ ಆಯಾಸದಿಂದ ನಿದ್ರೆಯೇನೋ ತಡವಿಲ್ಲದೆ ಬಂದಿತು (ಹಂಚಿಟು. ೯೯). ೩. ಯುಂದ್ಧಕ್ಕೆ ಹೊರಡುವಿಕೆ ; ಆಕ್ರಮಣ ; ಧಾಳಿ. ೪. (ಪ್ರಪಂಚದಿಂದ) ನಿರ್ಗಮನ ; ಸಾವು. ೫. [ಸಂಗೀತ]ಗಾಯಕನು ಹಾಡುವಾಗ ಅದಕ್ಕನುಗುಣವಾಗಿ ಮಾಡುವ ಮೈಯ ಚಲನವಲನ ; ಒಂದು ಬಗೆಯ ದೋಷ : ಕಂಪಿತ . . . ಪ್ರಯಾಣ [ಹಾಕಾಂ. ಣು] . . . ತಾಲವಿಹೀನವೆಂಬ ಪದಿನೈದು ಸ್ವರದೂಷಣಂ ಪೊರ್ದದೆ ಪಾಡಿ ಮೋಹಿಸುವ ಗಾಯಕರಿಂ (ಶಿಕಲ. ೦೯೦). 'ಪ್ರಸಾರ' ಪಠಾ.

**ಪ್ರಯಾಣ ಮಾಡು**–೧. ಸಂಚಾರ ಮಾಡು : ಆಗುಂಬೆಯಲ್ಲಿ ಎರಡು ದಿನ ತಂಗಿದ್ದು ಮುಂದಕ್ಕೆ ಪ್ರಯಾಣ ಮಾಡುತ್ತಾರೆ (ಹಸುಹೂ. ೨೯೬). ೨. ಸಾಯು ; ಮರಣ ಹೊಂದು. [ಸಂ.]

**ಪ್ರಯಾಣಿಕ** (ನಾ). ಸಂಚಾರ ಮಾಡುವವನು; ಪಯಣಿಗ ; ಪ್ರವಾಸಿ: ನನಗಂತೂ, ಬಹುದೂರ ಎಲ್ಲೋ ಹೋಗಿ ಊರಿಗೆ ಹಿಂತಿರುಗಿದ ಪ್ರಯಾಣಿಕನಂತೆ ಆಗಿತ್ತು (ಜಾಕಿಮ. ೨) ; ಸೋಮೇಶ್ವರದ ಮೂಲಕ ಹಾದು ಹೋಗುವ ಪ್ರಯಾಣಿಕರ ಸಂಖ್ಯೆ ಹೆಚ್ಚು (ಹಸುಹೂ. ೨೪೦). [ಸಂ.]

**ಪ್ರಯಾತ** (ಗು). ೧. ಹೊರಟಿರುವ : ಹೋಗುವ. ಆಯಾತಪ್ರಯಾತಾಂಗನಾನಿಕರರೋದ್ಯಚ್ಚರಣಾಂಶುಪಲ್ಲವಿತಂ . . . ರಾಜಗೇಹಾಜಿರಂ (ಶಂದ್ರಪ್ರ. ೦–೩೦). ೨. ಹೊಂದಿರುವ. ಪಡೆದಿರುವ : (ನಾ). ೩. ಪ್ರಯಾಣ ; ಸಂಚಾರ. ೪. ಪ್ರಪಾತ ; ಕೊಳ್ಳ. [ಸಂ.]

**ಪ್ರಯಾಮ** (ನಾ). ೧. (ಆಹಾರಧಾನ್ಯ, ನೀರು ಮೊದಲಾದುವುಗಳ) ಕೊರತೆ. ೨. ಆಹಾರಧಾನ್ಯಗಳ ಕೊರತೆಯಿಂದಾಗಿ ಕೊಳ್ಳುವವರಲ್ಲಿ ಉಂಟಾಗುವ ಪೈಪೋಟಿ. ೩. ಕ್ಷಾಮ ; ಬರ. [ಸಂ.]

**ಪ್ರಯಾಸ** (ನಾ). ೧. ಶ್ರಮ; ಆಯಾಸ: ಕಾದಂಬರಿಯುಂ ಪ್ರಯಾಸದಿಂದ ನಾಲ್ಕಡಿಯಿಟ್ಟು . . . ಮಂಹಾಶ್ವೇತೆಯನ್ನು ಕಂಠಾಲಿಂಗನ ಮಾಡಿಕೊಳ್ಳಲಾಗಿ (ಕಕಾಕ. ೩೬). ೨. ಕಷ್ಟ ; ತೊಂದರೆ : ಅಕ್ಷರ ಕಲಿಯುವುದು ಹೆಚ್ಚಿನ ಪ್ರಯಾಸವಾಗಬಾರದು (ಪ್ರಾಶಿಕ. ೬೩). ೩. ಅನುಭವ ; ಪರಿಶ್ರಮ : ಧನುರ್ವಿದ್ಯಾಪ್ರಯಾಸಗಳಲ್ಲಿ ಕೃತಯುಗದಲ್ಲಿ ತಾನು ಸಮರ್ಥನು (ಜಕ್ಕಣ. ೦–೬೯–೬).

**ಪ್ರಯಾಸ ಪಡು**–ಕಷ್ಟಪಡು; ಶ್ರಮಪಡು : ಆ ವಿವಾಹವನ್ನು ನಿಲ್ಲಿಸಲು ನನ್ನ ತಾಯಿ ಎಷ್ಟೋ ಪ್ರಯಾಸ ಪಟ್ಟಳು (ಶ್ರೀಕಾಕ. ೨೬) ; ಪ್ರಯಾಸ ಪಟ್ಟು ಮೇಲೆದ್ದರು (ಹಸುಹೂ. ೩೩೬). [ಸಂ.]

**ಪ್ರಯುಕ್ತ1** (ಗು). ೧. ಕೂಡಿದ ; ಹೊಂದಿಕೊಂಡ ; ಸೇರಿದ. ೨. ಜೋಡಿಸಿದ ; ಸೇರಿಸಿದ. (ನಾ). ೩. ಕೂಡಿದಂದು ; ಹೊಂದಿಕೆ : "ಯುತವನ್ವಿತಂ ಸಂಹಿತಂ ಸಮನ್ವಿತಮುಚಿತಮಾ ಪ್ರಯುಕ್ತಂ . . . ಕೂಡಲ್ಕೆ ನಾಮಂ" (ಕಂಗರಾ. ೦೩೦–೦೬). ೪. ಕಾರಣ ; ಹೇತು ; ನಿಮಿತ್ತ : ಈ ಪರಿಯೊಳತ್ಕಂತಧರ್ಮಕಳಾಪರೂಪವಿಳಾಸದಿಂ ಲೋಕೋಪಕಾರಾರ್ಥಪ್ರಯುಕ್ತನಿರೂಢಿಯಲಿ ಮೆಟಿದು (ಚಸ. ೨–೬);

ಅದರ ಪ್ರಯುಕ್ತವಾಗಿ ಕೆಲವು ವಾಸಸ್ಥಳಗಳು ನೀರಿನಲ್ಲಿ ಮುಳುಗಡೆ ಆಗುವ ಸಂಭವವಿದ್ದಿತು (ಶಾಸ್ತ್ರಿ. ೬೩). [ಸಂ.]

**ಪ್ರಯುಕ್ತ್ಯ** (ಅ). ಕಾರಣದಿಂದ ; ಸಂಬಂಧವಾಗಿ ; ಸಲುವಾಗಿ : ಈ ಪ್ರಯುಕ್ತ ನಂದವನಕ್ಕಾಗಿ ಭೂಮಿಯನ್ನು ದಾನ ಮಾಡಿದ ಸಂಗತಿಯನ್ನು ಕೊಂಗುನಾಡಿನ ಶಾಸನವೊಂದು ತಿಳಿಸುತ್ತದೆ (ಶಾಸನ. ೩೩). [ <ಪ್ರಯುಕ್ತ್ಯ ]

**ಪ್ರಯುಕ್ತಿ** (ನಾ). ೧. ಬಳಕೆ ; ಪ್ರಯೋಗ ; ಉಪಯೋಗ : ಇಂತು ವರ್ತಿಸುತಿರ್ಪುದಿದು ನಿಶ್ಚಿಂತಗುರುಭಕ್ತಿಪ್ರಯುಕ್ತಿಯದೆಂತುಮಲ್ಲದು ದರನಿಮಿತ್ತಕ್ಕೆ ಭಾಷೆಯಂ ನೀಗಿ (ಬಸವ. ೬೫-೦೭) ೨. ಕಾರಣ ; ಹೇತು ; ನಿಮಿತ್ತ ; ಉದ್ದೇಶ : ಧಾತ್ರಿಯೊಳಗಾ ಅಯ್ಯನ ಮಹಿಮಚರಿತ್ರಮಂ ಕೇಳಲ್ಕೆ ತಾನತಿಚಿತ್ರವತಿಶಯಶೀಲಸಂಬಂಧಪ್ರಯುಕ್ತಿಯಲಿ . . . ಗೃಹಚರರನೆಲ್ಲಂ ಶಿವಸಹಿತರಂ ಮಾಡಿ (ಬಸವ.೬೦-೦೩). [ಸಂ.]

**ಪ್ರಯುತ** (ಗು). ೧. ಕೂಡಿದ ; ಸೇರಿದ ; ಹೊಂದಿಕೊಂಡ : ಮಡಿವಾಳ ಮಾಚಯ್ಯಂ ಶಿವಗಣಾಳೋಲನಿವೀರವ್ರತಾಚಾರ ಪ್ರಯುತಚ [ಪಾಠಾಂ. ತಾಯಾ]ರ್ಯ ಕಾಲಕರ್ಮವಿರಹಿತನು (ಬಸವ. ೨೦-೩). ೨. ಕೂಡಿಲ್ಲದ ; ಸೇರಿಲ್ಲದ ; ಬೇರೆಯಾದ. (ನಾ). ೩. ಒಂದು ಸಂಖ್ಯೆ ; ಹತ್ತು ಲಕ್ಷ : ಅಂಕೆಗಳ ಶ್ರೇಣಿ ಹದಿನೆಂಟರ ವರೆಗೂ ಹೋಗುತ್ತದೆ . . . ಸಹಸ್ರಂ, ಅಯುತ, ಲಕ್ಷ, ಪ್ರಯುತ, ಕೋಟಿ (ಶ್ರಪಾ. I, ೩೩). [ಸಂ.]

**ಪ್ರಯೋಕ್ತೃ** (ನಾ). ೧. ಉಪಯೋಗಿಸುವವನು ; ಬಳಸುವವನು. ೨. ನಡೆಸುವವನು ; ನಿರ್ದೇಶಿಸುವವನು : ಭೇದೋಪಾಯದ ಸಾಧನೆಯಲ್ಲಿ ಮುಖ್ಯವಾಗಿ ಬೇಕಾದವು ಪ್ರಯೋಕ್ತೃವಿನ ಬುದ್ಧಿ, ಕಾರ್ಯನಿರ್ವಾಹದಲ್ಲಿನ ಗುಟ್ಟು (ಸಂಪಾ. ೮೭). ೩. ಬಡ್ಡಿಯ ಮೇಲೆ ಹಣ ಸಾಲ ಕೊಡುವವನು. ೪. ಬಾಣ ಹೊಡೆಯುವವನು ; ಬಾಣಪ್ರಯೋಗ ಮಾಡುವವನು. [ಸಂ.]

**ಪ್ರಯೋಗ** (ನಾ). ೧. ಒಂದಾಗಿ ಸೇರುವುದು ; ಜೊತೆಯಾಗಿರುವಿಕೆ; ಒಟ್ಟಿಗೆ ಸೇರುವುದು. ೨. (ಶಬ್ದ, ವಾಕ್ಯ ಇತ್ಯಾದಿಗಳ) ಬಳಕೆ ; ಉಪಯೋಗ : ತಮಿಳು ಮತ್ತು ಕನ್ನಡ ಭಾಷೆಯಲ್ಲಿ ಈ ಪದದ ಪ್ರಯೋಗಗಳು ಇಂತಿವೆ (ದ್ರಾಭಾ. ೩೩) ; ಭಾಷೆಯ ಪ್ರಯೋಗದಿಂದ ಅಭಿವ್ಯಕ್ತವಾಗುವ ಅಥವಾ ಜನಿಸುವ ಎಲ್ಲಾ ವಿಷಯಗಳು (ಅಂಕಾ. ೦೦೧). ೩. ಉದಾಹರಣೆ ; ನಿದರ್ಶನ ; ದೃಷ್ಟಾಂತ : ಡಕಾರಕ್ಕಾದೇಶವಮಾದ ಜಟಕ್ಕೆ ಪ್ರಯೋಗಂ, ಕಾಡುಂಚ್ಚು – ಕಾಂಚ್ಚು (ಶಮದ. ೦೯ ಪ್ರಯೋ.). ೪. ಆರಂಭ ; ಪ್ರಾರಂಭ. ೫. ಅಪ್ಪಣೆ ; ಆಜ್ಞೆ : "ಆ ಪ್ರಯೋಗಂ ಶಾಸನಂ ವೇಟ್ಬುದಕೆ ಪೆಸರೆನಿಕ್ಕುಂ" (ಕುಂಗಾ. ೦೩೦-೦೮). ೬. ಹಂಚಿಕೆ ; ಯೋಜನೆ. ೭. ಕಾರ್ಯ ; ಕೆಲಸ : ಮಿಂಚು ಮಿಂಚಿದಡೆ ಮಿಂಚಿನಲುಳ್ಳ ಪ್ರಯೋಗವನಾಕ್ಷಣವೆ ಪ್ರಯೋಗಿಸಬೇಕು (ಕಕ್ಕ. ೬. ೩೬೬-೦೨೧೬). ೮. ಧಾರ್ಮಿಕಕರ್ಮಗಳನ್ನು ಮಾಡಿಸುವ ಕ್ರಮ,— ನಿಯಮಾಚರಣೆಯ ರೀತಿ ; ಕರ್ಮಕಾರ್ಯವಿಧಾನ. ೯. ಬಿಡುವುದಂ ; ಎಸೆಯುವುದು ; ಹೊಡೆತ : 'ಬಾಣಪ್ರಯೋಗ' ಪದಾ. ೧೦. ನಾಟಕ ಅಥವಾ ನೃತ್ಯ ಇತ್ಯಾದಿ ಪ್ರದರ್ಶನ : ನೃತ್ತ— ಸಂಗೀತಗಳಿಂದೊಡಗೂಡಿದ ಪ್ರಯೋಗವೇ ನಾಟಕದ ಕೊನೆಯ ಹೂವ ಎಂದು ನಾವು ತಿಳಿಯಬಹುದು (ನಾಕಲ. ೩೬). ೧೧. ಪರೀಕ್ಷೆ ಮಾಡಿ ನೋಡುವಿಕೆ ; ಪರಿಶೀಲನಾಕಾರ್ಯ : ಅದು ಸಾಧನ ದೂಷಣ ಪ್ರಯೋಗಾನ್ಯಥಾನುಪಪತ್ತಿಯಿಂ ಬಹಿರರ್ಥಸಿದ್ಧಿಯಕ್ಕುಂ (ಅಕ. ೨-೦೦ ಕ) ; ಬೇರೆಬೇರೆ ವಿಜ್ಞಾನಭಾಗಗಳು ತಮ್ಮದೇ ಆದ ದಾರಿಗಳನ್ನು ಹಿಡಿದು ಬೆಳೆಯುತ್ತಿದ್ದರೂ ಅವುಗಳಿಗೆಲ್ಲಾ ಸಾಮಾನ್ಯವಾದ ಒಂದು ಮಾರ್ಗವುಂಟು. ಊಹೆ, ಪ್ರಯೋಗ, ಸಾಧನೆ, ನಿದರ್ಶನ ಇವುಗಳೇ ಈ ಮಾರ್ಗದ ಬೇರೆ ಬೇರೆ ಘಟ್ಟಗಳು (ಭೌತ. ೬). ೧೨. ಫಲ ; ಪರಿಣಾಮ. ೧೩. ಉಪಕರಣ ; ಸಾಧನ. ೧೪. ಬಡ್ಡಿಗೆ ಸಾಲ ಕೊಡುವಿಕೆ. [ಸಂ.]

**ಪ್ರಯೋಗಶಾಲೆ** (ನಾ). ತತ್ತ್ವಗಳ ಸತ್ಯವನ್ನು ಅರಿಯಲು ನಡೆಸುವ ಪರಿಶೀಲನಾಕಾರ್ಯದ ಮಂದಿರ,—ಶಾಲೆ : ಪ್ರಯೋಗಶಾಲೆಯಲ್ಲಿ ಆಹಾರದಿಂದ ರಂಜಕವನ್ನು ಬೇರ್ಪಡಿಸಿ ಅದನ್ನು ಇಲಿಗಳಿಗೆ ಕೊಟ್ಟರೆ, ಆಹಾರದಲ್ಲಿ ರಂಜಕದ ನ್ಯೂನತೆ ಕಂಡುಬರುತ್ತದೆ (ಗೃಹಾ. ೨೦). [ಸಂ. ಪ್ರಯೋಗಶಾಲಾ]

**ಪ್ರಯೋಗಸಿದ್ಧಿ** (ನಾ). ಪ್ರದರ್ಶನದಿಂದ ಬರುವ ಅನುಭವ,— ಪಡೆಯುವ ಸಿದ್ಧಿ : ಇಂಥ ನಾಟಕಗೃಹದೊಳಗೆ ಪ್ರಯೋಗಸಿದ್ಧಿಯನ್ನು ಪಡೆದ ನಾಟಕವು ರಂಗಭೂಮಿಯ ಮೇಲೆ ರಸದ ಸುರಿಮಳೆಯನ್ನು ಸುರಿಸೀತು (ಶ್ರಪಾ. ೩೯). [ಸಂ.]

**ಪ್ರಯೋಗಿಸು** (ಕ್ರಿ). ೧. ಬಳಸು ; ಉಪಯೋಗಿಸು : ವಿದಿತಾರ್ಥ ವಿಪರ್ಯಾಸಾಸ್ಪದಮೆ ದಲಾಕ್ಷೇಪಮೆಂಬಲಂಕಾರಂ ಮತ್ತದಱ ವಿಶೇಷ ವಿಭಾಗಮನುದಾಹರಣಮಾರ್ಗದಿಂ ಪ್ರಯೋಗಿಸಿ ತೋರ್ಪೆಂ (ಕವಿರಾ. ೩-೯೯) ; ಘಟ್ಟಾಪರರವಧಿಜ್ಞಾನಮಂ ಪ್ರಯೋಗಿಸಿ ಇಂತೆಂದು ಪೇಳ್ದರ್ (ಕಬ್ಬಿಗ. ೦೨-೨೮) ; ಕಾರ್ಯವನಜಾವಾತನು ಮೊದಲಲ್ಲಿ ಸಾಮವನೆ ಪ್ರಯೋಗಿಸುವುದು (ಕುಕಪಂ. ೦೬೬-೦೩) ; ಮಾರ್ಗವಿದರ್ ಸಂಪ್ಲಯೊಳಂ ಭೋರ್ಗರೆವನುಕೃತಿಯೊಳಂ ಪ್ರಯೋಗಿಸುತಿರ್ಪರ್ (ಶಮದ. ೦೧). ೨. (ಅಸ್ತ್ರ ಶಸ್ತ್ರಾದಿಗಳನ್ನು) ಬಿಡು ; ಎಸೆ ; ಹೊಡೆ : ಕಾಲದೇಶವನ್ನರಿತು ಶತ್ರುಗಳ ಮೇಲೆ ಪ್ರಯೋಗಿಸುತ . . . ಯಶೋವಂತನಾಗು (ಶಿಗಂ. ೨೩೦-೦೩) ; ಕಾಮನು ಪ್ರಯೋಗಿಸಿದ ಕುಸುಮ ಬಾಣಗಳಿಂದ ಈಶ್ವರನು ಅರೆಮೆಣ್ಣಾಗುವನು (ಪಾಟಕ. ೦೩೨). ೩. ಹರಿಸಂ; ಹಾಯಿಸು ; ಪ್ರವಹಿಸುವಂತೆ ಮಾಡು : ಬಿತ್ತುವ ಮುನ್ನ ಬೀಜಗಳ ಮೇಲೆ ವಿದ್ಯುತ್ತನ್ನು ಪ್ರಯೋಗಿಸುತ್ತೇವೆ (ಅಂಡು. ೦೦೦). [ಪ್ರಯೋಗ + — ಇಸು]

**ಪ್ರಯೋಜಕ** (ಗು). ೧. ಉಪಯುಕ್ತವಾದ ; ಅಗತ್ಯವಾದ ; ಪ್ರಯೋಜನಕಾರಿಯಾದ : ನಿರ್ಮಾಪಕಶಾಸ್ತ್ರಗಳಾದರೋ ಜ್ಞಾನವನ್ನು ಪ್ರಯೋಜಕ ಮತ್ತು ಸುಂದರ ವಸ್ತುಗಳ ನಿರ್ಮಾಣಕ್ಕೆ ಉಪಯೋಗಿಸುತ್ತವೆ (ಅಂಕಾ. ೦೦ ೩೦೮). (ನಾ). ೨. ಉಪಯುಕ್ತವಾದುದು : ರಾಜಕೀಯದೃಷ್ಟಿಯಿಂದ ಮಾತ್ರ ಪಾಶ್ಚಾತ್ಯಕ ಅದರಲ್ಲೂ ಆಂಗ್ಲರ ರಾಜ್ಯಸ್ಥಾಪನೆ ಭರತಖಂಡಕ್ಕೆ ಬಹಳ ಪ್ರಯೋಜಕವಾಯಿತು (ಮುಕ್ತ. ೦೦೩ ೩೦೮). ೩. ಉಪಯುಕ್ತನಾದವನು : (ಅ). [ಸಂ.]

**ಪ್ರಯೋಜನ** (ನಾ). ೧. ಬಳಕೆ ; ಉಪಯೋಗ ; ಪ್ರಯೋಗ : ಸಂಧಿವಿಷಯಂ—ಸಂಧಿಪ್ರಯೋಜನಂ (ಶಮದ ೬. ೩೦ ವೃತ್ತಿ). ೨. ಬೇಕಾಗಿರುವಿಕೆ ; ಅಗತ್ಯ ; ಆವಶ್ಯಕತೆ : ಹಸನಾದ ಕರೆಭೂಮಿಯಲ್ಲಿ ವರ್ಷವರ್ಷ ಕಟಿ ಹೊಡೆಯುವ ಪ್ರಯೋಜನವಿಲ್ಲ (ಕೃಷಿ. ೩೩). ೩. ಲಾಭ ; ನಫೆ : ಲೋಕದಲ್ಲಿ ಯಾರಿಗೆ ಯಾವುದು ಇಷ್ಟವೋ ಅದೇ ಅವರಿಗೆ ಪ್ರಯೋಜನ (ಅಹಾ. ೬೯); ಮಾತಲಿಯು ಈ ನನ್ನ ಪ್ರಯೋಜನವು ಇಂದ್ರನಿಗೆ ತಿಳಿಯಲಿಲ್ಲವಲ್ಲಾ (ಶಾಕುಂ. ೦೦೦-೩೩). ೪. ಉದ್ದೇಶ: ಗುರಿ : ಕೆಳದಿ ಚೆಂನ್ನಮ್ಮಾಜಿಯವರು ದೊಡ್ಡ ಚೆಂನಪ್ಪಯಗೆ ಬರೆಸಿ ಕಳುಹಿಸಿದ ಪ್ರಯೋಜನ (ಕ್ಷುಅಂ. ೦೯೩೧; ೯-೨; ೧೦೦೦). ೫. ಸಮಾರಾಧನೆ; ಅನ್ನಸಂತರ್ಪಣೆ : ಒಂದಾನೊಂದು ದಿವಸ ಊರೊಳಗೆ ಲಿಂಗವಂತರು ದೊಡ್ಡ ಪ್ರಯೋಜನವನ್ನು ಮಾಡಿರಲಾಗಿ (ಕಥಾಗಿ. ೬೩೦).

೬. [ನ್ಯಾಯಶಾ]ಪದಿನಾರು ಬಗೆಯ ಪದಾರ್ಥಗಳಲ್ಲಿ ಒಂದು : ನ್ಯಾಯದರ್ಶನದಲ್ಲಿ ಪ್ರಮಾಣ ಪ್ರಮೇಯ ಸಂಶಯ ಪ್ರಯೋಜನ. . . ನಿಗ್ರಹಸ್ಥಾನ ಎಂದು ಹದಿನಾರು ಪದಾರ್ಥಗಳನ್ನು ನಿರೂಪಿಸಿರುವರು (ಹಿಂದಶಾ. ೦೦೨). [ಸಂ.]

**ಪ್ರಯೋಜನಕಾರಿ** (ಗು). ೧. ಉಪಯೋಗಕರವಾದ. (ನಾ). ೨. ಉಪಯೋಗಕರವಾದುದು ; ಉಪಯುಕ್ತವಾದುದು : ಸಲಕರಣೆಗಳು ಸರಳರೀತಿಯವುಗಳಾಗಿದ್ದು ಪ್ರಯೋಜನಕಾರಿಯೂ ಆಗಿರಬೇಕು (ಶಿಶುಗ್ರಾ. ೩೨): ಈ ಪೀಠಿಕೆ ಅನುಬಂಧಗಳು ಅತ್ಯಂತ ಆವಶ್ಯಕವಾದುವೂ ಪ್ರಯೋಜನಕಾರಿಗಳೂ ಆಗಿವೆ (ಅಂಕಾ. X ಮುನ್ನುಡಿ).
[ಸಂ. ಪ್ರಯೋಜನಕಾರಿನ್]

**ಪ್ರಯೋಜನವಸ್ತು** (ನಾ). ಬಳಕೆಯ ವಸ್ತು; ಉಪಯೋಗಿಸುವ ಪದಾರ್ಥ : ಪ್ರಯೋಜನವಸ್ತುವಿನೊಳ್ ಕರ್ತ್ರವಿವಕ್ಷೆಯಾಗೆ ಇಸುವಕ್ಕುಂ (ಶಮದ. ೨೪೦ ವೃತ್ತಿ). [ಸಂ.]

**ಪ್ರಯೋಜ್ಯ** (ಗು). ೧. ಬಳಸಬಹುದಾದ ; ಉಪಯೋಗಿಸಲರ್ಹವಾದ. ೨. ಬಿಟ್ಟ ; ಪ್ರಯೋಗಿಸಿದ ; ಎಸೆದ. (ನಾ). ೩. ಬಳಸಬಹುದಾದಂದು ; ಉಪಯುಕ್ತವಾದುದಂ : ವಿದ್ಯಾಧರಶ್ರೇಣಿಯ ಪರಿಭಾಷೆಗಳ್ ನಿನ್ನವಾಗದೆ ಸಾವಂ ಪ್ರಿಯಜನಪ್ರಯೋಜ್ಯಂ ಅಲ್ಲದೆಡೆಯೊಳನ್ಯತ್ರವಿಳಸಿತಂ (ಶಾಂತಿಪು. ೩-೯೬ ವ). ೪. ಆಳು ; ಸೇವಕ. ೫. ಬಡ್ಡಿಗೆ ಕೊಟ್ಟ ಹಣ ; ಮೂಲಧನ ; ಅಸಲು. [ಸಂ.]

**ಪ್ರರತ್ನ** (ನಾ). ಶ್ರೇಷ್ಠವಾದ ರತ್ನ : ಭೂಭುಜನಿಕರಕಿರೀಟಪ್ರರತ್ನಪ್ರಭೂಪನತಾಂತಪ್ರದ್ಯೋತ ನೂತ್ನೋದಕಜನಿತಪದಾಂಭೋಜಂ (ಗಿಂಕ. ೩-೨). [ಸಂ.]

**ಪ್ರರೂಢ** (ಗು). ೧. ಪೂರ್ತಿಯಾಗಿ ಬೆಳೆದ; ಚೆನ್ನಾಗಿ ವೃದ್ಧಿಯಾದ : ಆ ಶೈಶವಪ್ರಭೃತಿಪ್ರರೂಢನಿರ್ಭರಪ್ರೇಮರಸರುಮನೇಕಾರ್ಥಶಾಸ್ತ್ರಪ್ರಯೋಗಕುಶಲರುಂ (ಅಂಕಿ. ೦-೮೦ ವ); ಪ್ರರೂಢಯೌವನಮನೋಹರನುಂ ಕವಚಹರನುಂ ಆದ ನಿಜತನೂಜನಂ ನೋಡಿ (ತಂತ್ರಕಿ. ೨-೬೬). ೨. ಹೆಚ್ಚಾದ; ಅಧಿಕವಾದ : ಬರಿಸಿ ಕ್ಷಿತಿಪತಿಯಂ ಸಯ್ತಿರಿಸಿ ಪ್ರಿಯಕುಶಲವಾರ್ತೆಯಂ ಬೆಸಗೊಂಡು ಸ್ಥಿರಮಿರ್ದು ಪ್ರಭು ನುಡಿಯೆ ಪ್ರರೂಢಮುದನಾದನಾತನೆಂಬುದು ದೂಪ್ಯಂ (ಕಶಾ. ೨-೬). (ನಾ). ೩. ಹೊಟ್ಟೆ; ಜಠರ. [ಸಂ.]

**ಪ್ರರೂಪಣ** (ನಾ). ಚೆನ್ನಾಗಿ ರೂಪಿಸುವಿಕೆ; ಉತ್ತಮವಾದ ನಿರೂಪಣೆ: ನಿರೂಪಿತಾವನಿ ಮನುಷ್ಯಸ್ಥಿತಿ ಪ್ರರೂಪಣಾರ್ಥಂ ಉತ್ತರಸೂತ್ರಾವತಾರಂ (ಕತ್ತ್ವಸ್ರ. ೦೬೩). [ಸಂ.]

**ಪ್ರರೂಪಿತ** (ನಾ). ಹೇಳಿಕೆ; ನಿರೂಪಿತವಾದುದು : ನಿರತಿಶಯಾಲಂಕಾರಪ್ರರೂಪಿತಂಗಳ್ಪುರಾಣಕವಿವಿದಿತಂಗಳ್ (ಕಶಾ. ೨-೦); ಕರ್ಮಕಾಂಡಬಂಧೋದಯ ಸತ್ವಯುಕ್ತಸ್ತವಂ ಮಹಾಧಿಕಾರಂ ಪ್ರರೂಪಿತವಾದುದು (ಗೂಮ್ಮಶಾ. ೯೬-೦೦). [ಸಂ.]

**ಪ್ರರೂಪಿಸು** (ಕ್ರಿ). ಹೇಳು; ನಿರೂಪಿಸು : ಸ್ಥಾನಸಮುತ್ಕೀರ್ತನಮೇನುನಿಮಿತ್ತಂ ಬಂದುದೆಂದೊಡೆ ಮುನ್ನಂ ಪ್ರಕೃತಿ ಸಮುತ್ಕೀರ್ತನದಿಂದ ಮಾವುವು ಕೆಲವು ಪ್ರಕೃತಿಗಳು ಪ್ರರೂಪಿಸಲ್ಪಟ್ಟುವವಕ್ಕೆ ಬಂಧಮೇನು ಕ್ರಮದಿಂದಮಕ್ಕುಮೋ ಮೇಣಕ್ರಮದಿಂದಮಕ್ಕುಮೋಯೆಂದಿಂತು ಪ್ರಶ್ನೆ ಮಾಗುತ್ತಿರಲು (ಗೂಮ್ಮಶಾ. ೦೦೩-೮). [ಪ್ರರೂಪಣ + —ಇಸು]

**ಪ್ರರೋಚನ** (ನಾ). ೧. ರುಚಿ ಹುಟ್ಟಿಸುವುದು; ಪ್ರೋತ್ಸಾಹಿಸುವುದು. ೨. [ನಾಟ್ಯ] (ನರ್ತಕಿಯ ರಂಗಪ್ರವೇಶದ ಮೂಲಕ ಪ್ರೇಕ್ಷಕರಲ್ಲಿ) ಅಭಿರುಚಿಯನ್ನುಂಟು ಮಾಡುವುದು.- ಆಸಕ್ತಿಯನ್ನು ಕೆರಳಿಸುವುದು: ವಿಚಿತ್ರಸುರಸೂತ್ರಧಾರನಪ್ಸರಃಪಾತ್ರೀ ಪ್ರವೇಶಪ್ರದೇಶಪ್ರರೋಚನಾನಂತರಂ ಪುಷ್ಪಾಂಜಲಿವಿಕ್ಷೇಪಂಗೆಯ್ಯೆ (ಶಾಂತಿಪು. ೬-೩೦ ವ). [ಸಂ.]

**ಪ್ರರೋಚನೆ** (ನಾ). = ಪ್ರರೋಚನ ೨ : ಸಚಿವೋತ್ತಮರೊಳ್ ರಾಜನೀತಿಶಾಸ್ತ್ರನಾಟಕಪ್ರಾರಂಭಕ್ಕೆ ಸೂತ್ರಧಾರನಾಗಿ ತತ್ಪೂರ್ವರಂಗಪ್ರಸಂಗಕ್ಕೆ ಪ್ರರೋಚನೆಯಪ್ಪ ಪ್ರಥಮಪಾತನಿಕೆಯುಂ ಪ್ರಸ್ತುತಂ ಮಾಡಿ (ಶಾಂತಿಪು. ೨-೩೦ ವ). [ಸಂ. ಪ್ರರೋಚನ]

**ಪ್ರರೋಹ** (ನಾ). ೧. ಮೊಳೆಯುವಿಕೆ ; ಅಂಕುರಿಸುವಿಕೆ. ೨. ಮೊಳಕೆ ; ಅಂಕುರ : ಬಲದೇವ ವಾಸುದೇವರ್ . . . ಸುಖದ್ರುಮಪ್ರರೋಹದಂತೆಯುಂ . . .ಪ್ರವರ್ಧಮಾನವಾಗೆ ಸುಖಮಿರ್ಪನ್ನೆಗಂ (ಶಾಂತಿಪು. ೦-೮೦ ವ) ; ಪೆಜತೇಂ ಸತ್ಯಪ್ರರೋಹಂ ತುಜುಗಿದಪುದು (ಕಾದಂಪೂ. ೨೩೪) ; ಕಣ್ಮರಲರೆಮುಚ್ಚಿ ಕಂಡು ಕೊಣಕಿಟ್ಟಪುದಲ್ಲಿಗೆ ಗೋರಿಗೊಂಡದೊಂದೆರಳೆಯನಲ್ಲಿರುಳ್ ಶಶಿ ತೊಡರ್ಚುವನಾತ್ಮವಟಪ್ರರೋಹದೊಳ್ (ಕಂದ್ರಕಿ. ೦-೦೨೪). [ಸಂ.]

**ಪ್ರರೋಹಣ** (ನಾ). = ಪ್ರರೋಹ ೧ : ನಿಖಿಲಶರೀರಪ್ರರೋಹಣಬೀಜಭೂತಕಾರ್ಮಣಶರೀರಂ ಕರ್ಮಮೆನೆ ಪಡುಗುಂ (ತತ್ತ್ವಸೂ. ೯೯). [ಸಂ.]

**ಪ್ರಲಂಪಟ** (ನಾ). ಅತಿ ಲಂಪಟ ; ಬಹಳ ಕಾಮುಕನಾದವನು : ದೇವಪರನಾರಿಪ್ರಲಂಪಟ ದನುಜಪಾಲಕನೆ . . . ಬಾಲೆಂದನುರಪಾತಕರೋವಿಕೈವಾರಿಸಲು ಮುಂದೆಯ್ತಂದ ದಶಕಂಠ (ಕೌಶಿಂ. ೨೦-೨೨). [ಸಂ.]

**ಪ್ರಲಂಬ**, ಪ್ರಳಂಬ (ಗು). ೧. ತೂಗುಬಿದ್ದ ; ಇಳಿಬಿದ್ದ ; ಜೋತಾಡುವ : ಪ್ರಲಂಬಕರ್ಣಾಭರಣಮಕರಿಕಾಪಿತಾಡ್ಯಮಾನ ಕಪೋಲಫಲಕಂ (ಶಾಂತಿಪು. ೬-೦೩ ವ); ನೀಲದ ನೆಲಗಟ್ಟಂ ಮಣಿಧೂಳೀಸಾಳಂ ಪ್ರಲಂಬಪಲ್ಲವ ಮೆಸೆಗುಂ (ಅರ್ಜನೀ. ೨-೬೨). ೨. ಉದ್ದವಾದ; ದೊಡ್ಡದಾದ : ಕಂಬಳಿಹುಳು . . .ಹೊಟ್ಟೆಯ ಕೆಳಗೆ ೨-೮ ಜೊತೆ ಹೊಟ್ಟೆಯ ಪ್ರಲಂಬ ಮಾಂಸಲಕೀಲುಗಳಿಲ್ಲದ ಬದಲುಕಾಲುಗಳಿವೆ (ಕೀಟಚಿ. ೦೫). (ನಾ). ೩. ಇಳಿಬಿದ್ದಿರುವ ಸರ; ಜೋಮಾಲೆ: ಅತಿತರಲಮುಕ್ತಾಮಣಿಪ್ರಲಂಬಂಗಳಿಂದಂ . . . ಅನುಕ್ರಮಂದಪ್ರದರ್ಶಿಸಿ(ಅಂಕಿ. ೨-೩೨ ವ) ೪. ಕೊಂಬೆ; ರೆಂಬೆ. ೫. ಹಾರ; ಮಾಲೆ. ೬. ಸೌತೆಕಾಯಿ. ೭. ಒಂದು ಬಗೆಯ ಲೋಹ; ತವರ. ೮. ಪದ್ಯ; ಗಾಥೆ. ೯. ಸ್ತನ. ೧೦. ಬಲರಾಮನು ಕೊಂದ ಒಬ್ಬ ರಾಕ್ಷಸನ ಹೆಸರು : 'ಪ್ರಲಂಬಘ್ನ' ಪರಾ. ಪ್ರಳಂಬ : ೧೧. ಆಧಿಕ್ಯ; ಅತಿಶಯ. ೧೦, ೧೧: ನಿಸ್ಸೀಮ ನಿಕಾಮಬಾಹುಸಾಹಸಾಡಂಬರಪ್ರಳಂಬನೆಂಬ ಪ್ರಳಂಬನುಮಂ . . . ಕರೆದು (ಹಗಿಂ. ೩-೨೨ವ). [ಸಂ.]

**ಪ್ರಲಂಬಘ್ನ** (ನಾ). ಪ್ರಲಂಬನೆಂಬ ರಾಕ್ಷಸನನ್ನು ಕೊಂದವನು; ಬಲರಾಮ : "ಬಲದೇವಃ . . . ಪ್ರಲಂಬಘ್ನಃ . . . ಹಲಾಯುಧಃ-ಈ ೧೮ ಬಲದೇವನ ಪೆಸರ್" (ಹಲಾಯು. ೬-೨೫); ವಿಘ್ನದಾಯಕ ಶ್ರೇಷ್ಠನೆರ್ದೆಗೇಡಿಯ ಪ್ರಲಂಬಘ್ನ ತಾನೊಡಗೊಂಡು ಬಂದು ವಿಘ್ನವಿಲ್ಲದೆ ಮನೆದುಂಬಿಸಬೇಕೆಂದು ಲಗ್ನದ ಪೇಳ್ದನನುಜಗೆ (ವಾಣಿಪಕ. ೦೫-೦೩). [ಸಂ.]

**ಪ್ರಲಗ್ನಕ** (ನಾ). ಜವಾಬ್ದಾರಿಯನ್ನು ಹೊತ್ತವನು; ಹೊಣೆಗಾರ: "ಪ್ರತಿಭೂ ಪ್ರಲಗ್ನಕಂ ಹೊಣೆಗಾಜಸಕ್ಕು" (ಶಬ್ದಗಣ. ೭೦-೧೬). [ಸಂ.]

**ಪ್ರಲಪನ**(ನಾ). ೧. ಮಾತನಾಡುವುದು; ಸಂಭಾಷಣೆ. ೨. ಪ್ರಯೋಜನವಿಲ್ಲದ ಮಾತು; ಅಸಂಬದ್ಧಪ್ರಲಾಪ. ೩. ಅಳುವಿಕೆ ; ರೋದನ. [ಸಂ.]

**ಪ್ರಲಪಿತ** (ಗು). ೧. ಮಾತನಾಡಿದ; ಹೇಳಿದ. ೨. ಗಳಹಿದ: ಪರಟಿದ. (ನಾ). ೩. ಮಾತನಾಡುವುದು. ೪. ಪ್ರಯೋಜನವಿಲ್ಲದ ಮಾತು; ಹರಟೆ. ೫. ಅಳು; ರೋದನ. [ಸಂ.]

**ಪ್ರಲಪಿಸು** (ಕ್ರಿ). ೧. ಮಾತನಾಡು. ೨. ಗಳಹು; ಹರಟೆ ಹೊಡೆ. ೩. ಅಳು; ರೋದಿಸು: ಇಂತು ಪ್ರಲಪಿಸುವ ರಾಘವಸರ್ಥಾಂಗಿಯಿರವಂ ಕಂಡು (ರಾಮಾಶ್ವ. ೩೯-೦೩); ಅವಳು ಯಾವ ಮೂಲೆಯಲ್ಲಿ ಕುಳಿತು ನಾದಿನಿಗಾಗಿ ಪ್ರಲಪಿಸುತ್ತಿದ್ದಾಳೋ (ಮುಂಗಾನ. ೨೦೮). [ಪ್ರಲಪನ + — ಇಸ್ತು]

**ಪ್ರಲಯ, ಪ್ರಳಯ** (ನಾ). ೧. ನಾಶ; ನಿರ್ಮೂಲನ: ಸುಭಟಜನ ಚಮತ್ಕಾರಿ ತೇಜೋಮಹಾರ್ವಾನಲಮುಗ್ರಾರಾತಿವರ್ಗಪ್ರಲಯಕರವು ದೊಂದೆಯ್ದು ತಾಳ್ದಿತ್ತಗುರ್ವಂ (ಅಂತ್ಯ. ೧೩-೯೩). ೨. ಕಲ್ಪದ ಕೊನೆಯಲ್ಲಿ ಉಂಟಾಗುವ ಪ್ರಪಂಚದ ನಾಶ,-ಅಳಿವು; ☞ ಇದರಲ್ಲಿ ನಿತ್ಯಪ್ರಲಯ, ಪ್ರಾಕೃತಪ್ರಲಯ, ನೈಮಿತ್ತಿಕ ಪ್ರಲಯ ಮತ್ತು ಆತ್ಯಂತಿಕಪ್ರಲಯ ಎಂಬ ನಾಲ್ಕು ವಿಧಗಳಿವೆ. (೧) ನಿತ್ಯಪ್ರಲಯ–ಸುಷುಪ್ತಿ (ನಿದ್ರೆ). ಆಗ ಪ್ರಾಣಿಗಳ ಸಮಸ್ತ ಶಕ್ತಿಯೂ ಅಡಗಿ ಹೋಗಿರುತ್ತದೆ. (೨) ಪ್ರಾಕೃತಪ್ರಲಯ–ಈಗಿರುವ ಬ್ರಹ್ಮನ ಅವಧಿ ಮುಗಿದ ನಂತರ ಪ್ರಕೃತಿಯೆಂಬ ಮಾಯೆಯಲ್ಲಿ ಆ ಬ್ರಹ್ಮನೊಡನೆ ಆಗುವ ಇಡೀ ಬ್ರಹ್ಮಾಂಡವಿನಾಶ. (೩) ನೈಮಿತ್ತಿಕ ಪ್ರಲಯ–ಚತುರ್ಯುಗಸಹಸ್ರಪರಿಮಿತವಾದ ಕಾಲವು ಬ್ರಹ್ಮನಿಗೆ ಒಂದು ದಿನವಾಗುತ್ತದೆ. ಆ ಕಾಲಮಾನದ ಕೊನೆಯಲ್ಲಿ ಮೂರು ಲೋಕಗಳೂ ನಾಶವಾಗುತ್ತವೆ. (೪) ಆತ್ಯಂತಿಕಪ್ರಲಯ–ಪ್ರತಿ ಜೀವನಿಗೂ ಬ್ರಹ್ಮಜ್ಞಾನದಿಂದ ಉಂಟಾಗುವ ಪರಬ್ರಹ್ಮೈಕ್ಯ: ಪ್ರಲಯೋಗ್ರಜ್ವಾಲೆಯಂ ತಾಳನೆ ಗಣವರನೊರ್ವಂ ಲಲಾಟಾಕ್ಷಿಯೊಳ್ (ವೃತಾ. ೨೯-೦೬೨); ಪ್ರಪಂಚದ ಸಂಹಾರವೇ ಪ್ರಲಯ (ಹಿಂದಣ. ೨೬೪). ೩. ಸಾವು; ಮರಣ. ೪. ಮೂರ್ಛೆ; ವಿಸ್ಮೃತಿ. ೫. ಓಂ ಎಂಬ ಮಂತ್ರಾಕ್ಷರ; ಓಂಕಾರ. ೬. ಲಯ; ಐಕ್ಯ. ೭. [ಕಾವ್ಯಮೀ] ಸ್ತಂಭ, ಸ್ವೇದ, ರೋಮಾಂಚ, ಸ್ವರಭಂಗ, ವೇಪಥು, ವೈವರ್ಣ್ಯ, ಅಶ್ರು ಮತ್ತು ಪ್ರಲಯ ಗಳೆಂಬ ಎಂಟು ವಿಧವಾದ ಸಾತ್ವಿಕಭಾವಗಳಲ್ಲಿ ಒಂದು; ಮೂರ್ಛೆ; ಪ್ರಜ್ಞೆ ಕಳೆದುಕೊಳ್ಳುವುದು: ಸ್ತಂಭ, ಪ್ರಲಯ, ರೋಮಾಂಚ, ಸ್ವೇದ, ವೈವರ್ಣ್ಯ, ವೇಪಥು, ಅಶ್ರು, ವೈಸ್ವರ್ಯ–ಈ ಎಂಟು [ಸಾತ್ತ್ವಿಕ ಭಾವಗಳಾಗಿವೆ]. ಅವುಗಳಲ್ಲಿ ಪ್ರಜ್ಞೆ ಕಳೆದುಕೊಳ್ಳುವುದು 'ಪ್ರಲಯ' (ದಶರೂ. ೦೯೯). **ಪ್ರಳಯ:** ೨. ಪ್ರಳಯದುರಿ ಕಾಳಕೂಟದ ಗುಳಿಗೆ ಪುರಾಂತಕ ಲಲಾಟನೇತ್ರಾನಳನೊಂದಳವಿಗಮುಗ್ಗಳಮಮರ್ಗಳ ಮುಳಿಸುಗಳುಂ ಮುಳಿದು ತುಡುವ ದಿವ್ಯೇಷುಗಳುಂ (ಶಂಕರಾ. ೩-೩೩); ಪ್ರಳಯಕ್ಕೆ ಹೊಙಗು ಕಲಿಕಾಲ ಹೊಗದಂತಕನ ಸುಳಿವವಟೊಳಿಲ್ಲ (ಹಕಾ. ೬-೩೯). ೩. "ಪಂಚತಾ, ಕಾಲಧರ್ಮಃ, ದಿಷ್ಟಾಂತಃ, ಪ್ರಳಯಃ . . . ೧೦ ಸಾಯುವುದಕ್ಕೆ ಹೆಸರುಗಳು, ಮರಣ" (ಸಿದ್ಧಾಂತಿ. ೨೬೩). ೭. ಕಾರುಣ್ಯಂ ಹಾಸ್ಯಂ ಶೃಂಗಾರಮಿವಿನಿತಟೊಳಮಕ್ಕೆ ವೈದರ್ಭಿ ಮನೋಹಾರಿ ಪ್ರಳಯಾದ್ಭುತರಸ ವೀರರಸಂಗಳ್ಗೆ ಪಾಂಚಾಳಿಕೆಯಂ (ಕಾವ್ಯಾಕ. ೭೪೪); ಸ್ತಂಭ . . . ಪ್ರಳಯಂಗಳುಮಪ್ಪವಿಧ ಸಾತ್ವಿಕಭಾವಗಳಿಂ (ಶವೇಶ. ೨೨೩). [ಸಂ.]

**ಪ್ರಲಯಕಾಲ, ಪ್ರಳಯಂಕಾಲ** (ನಾ). ಪ್ರಪಂಚದ ವಿನಾಶದ ಕಾಲ; ಜಗತ್ತಿನ ಕೊನೆಗಾಲ. **ಪ್ರಳಯಕಾಲ:** "ಸಂವರ್ತಃ, ಪರಿವರ್ತಃ : . . ಮಹಾಪ್ರಳಯಃ–ಈ ಪ್ರಳಯಕಾಲಂ" (ಹಲಾಯು. ೨೦-೦೧೬); ಬಱಯ ಬಱಸಿಡಿಲ್ಗಳಿತ್ತ್ತಲುಂ ತುಱಗಿತಶ್ರೃತ್ತಲುಂ ಪ್ರಳಯಕಾಲದ ಮೇಘಮಱುಗುತಿವೆ (ಕೃಪಿಣಾ. ೯-೧೧). [ಸಂ.]

**ಪ್ರಲಯಭೈರವ** (ನಾ). ಪ್ರಳಯಕಾಲದ ರುದ್ರ; ಮಹಾರುದ್ರ: ಪ್ರಲಯಭೈರವನೆಂಬ ಬಿರುದು ಅವನಿಯ ಮೇಲೆ ನೆಲೆಗೊಳಿಸಿ (ಕುಕಂದ. ೦-೨೦೬-೩). [ಸಂ.]

**ಪ್ರಲಯಾಗ್ನಿ, ಪ್ರಳಯಾಗ್ನಿ** (ನಾ). ಪ್ರಪಂಚದ ಲಯಕಾಲದಲ್ಲಿ ಏಳುವ ಬೆಂಕಿ; ಪ್ರಳಯಕಾಲದ ಬೆಂಕಿ: ಬಂದ ತತ್ವಲ[ಪಾಠಾಂ. ಳ]ಯಾಗ್ನಿಯೊಲು ಜಗದಂದಮಂ ಮಾಡುತ್ತ (ಬಸಕೃ. ೩೯-೩೩); ಪ್ರಲಯಾಗ್ನಿ ಪೊತ್ತಿ ಲೋಕಂ ದಹಿಸುತಿರೆ (ಶ್ರೀರಾಮಾ. ೦೦೯-೦೨೦). **ಪ್ರಳಯಾಗ್ನಿ:** ಪ್ರಳಯಾಗ್ನಿಯಾದುದೋ ನಿಜಬಳದಳವಂ ತೋಱಲಗ್ನಿ ಬಳಿದೊಡವಿದುದೋ (ಶಂಹಂ. ೦೦-೪೦). [ಸಂ.]

**ಪ್ರಲಾಪ, ಪ್ರಳಾಪ** (ನಾ). ೧. ಮಾತನಾಡುವಿಕೆ; ಸಂಭಾಷಣೆ: ಅದೊಂದು ವ್ಯರ್ಥಪ್ರಲಾಪವೆಂದು ಆಕ್ಷೇಪಕರ ಅಭಿಪ್ರಾಯ (ಜೀವಾಕ್ಯ. ೦೦೨). ೨. ಅಸಂಬದ್ಧವಾದ ಮಾತು; ಹರಟೆ: "ಪ್ರಲಾಪಃ, ಅನರ್ಥಕಂ, ವಚಃ — ಪ್ರಯೋಜನವಿಲ್ಲದ ಮಾತಿಗೆ ಪೆಸರು" (ಸಿದ್ಧಾಂತಿ. ೩೪); ಮೆದುಳಿನ ಕಸರತ್ತಿನಿಂದ ಬರುವ ಭಾಗ್ಯವಾದರೂ ಏನು? ಎಂಬ ಪ್ರಶ್ನೆ ಮೂರ್ಖರ ಪ್ರಲಾಪ (ಜೀವಾಕ್ಯ. ೬). ೩. ಅಳು; ರೋದನ: ಇವಳ ಪ್ರಲಾಪವನ್ನು ನೆರೆಮನೆಯಲ್ಲಿದ್ದ ಕುಂತೀದೇವಿಯು ಕೇಳಿ . . . ಎಂದಳು (ಶೀತಿಹಂ. XII, ೨೦); ಯುದ್ಧದಲ್ಲಿ ಮೃತರಾದವರ ಸಂಬಂಧಿಗಳಾದ ಸ್ತ್ರೀಯರ ಪ್ರಲಾಪ (ಶಾರದ. ೯೯). ೪. ರೋಗಿಯು (ಸನ್ನಿಪಾತದಿಂದ) ಬಡಬಡಿಸುವುದು; (ಜ್ವರವು ಅತಿ ಹೆಚ್ಚಾದಾಗ ರೋಗಿಯು) ವ್ಯರ್ಥವಾದ ಮಾತುಗಳನ್ನಾಡುವುದು: ನಡುಕ, ಪ್ರಲಾಪ, ದಾಹ, ಮೈನೋವು (ವೈದ್ಯಸಾ. I. ೬೩); ಅಳಲೆಕಾಯಿ, ಪರ್ಪಾಟಕ . . . ಕಷಾಯ ಹಾಕಿ, ಶೋಧಿಸಿ ದ್ರಾಕ್ಷಿ ಹಣ್ಣು ಕೊಡಲು, ಪ್ರಲಾಪ, ಮೂರ್ಛೆ . . . ಪೈತ್ಯಜ್ವರ ಮಾಣುವುವು (ಸಕಲ್ಯ. ೮೨). 'ಪ್ರಲಾಪಸನ್ನಿಪಾತ' ಪರಾ. **ಪ್ರಳಾಪ:** ೨. "ಪ್ರಳಾಪವೆಂಬುದು ಬಱುವಾತು" (ಹಲಾಯು. ೨೯-೦೯೯). ೩. ಜೀಯ ನಿಮ್ಮಡಿಗಳಿಗೆ ಗುರು ಗಾಂಗೇಯ ವಿದುರಾದಿಗಳು ಹೇಳಿದ ಜೋಯಿಸವ ಕೈಕೊಂಡಿರೇ ನಮ್ಮ ಪ್ರಳಾಪದಲಿ (ಕುಮ್ಯಾಗ. ೩-೩೯); ಅಳದವರಳು ತಿರ್ದರು ರತಿಕಾಂತನ ಹಳವಳಿಸುವ ಪ್ರಳಾಪದಲಿ (ಮೋಹತ. ೬-೨೩). ೪. ತೆಗಟು ಕುಡಿಯಿಸುಗೆ ಶಿವೆ ಕಳವಿಗೆ ಬಾಳಂ ಕಕ್ಕ ಮುಸ್ತೆ ಕರ್ಕಟಕಂ ಮುಟ್ಟಿಗೆಯೆಂಬಿವನಿತುಮಂ ಪೈತ್ರಿಗಜ್ವರಂ ದಾಹಮುಂ ಪ್ರಳಾಪಮುಮಱಿಗುಂ (ಕಲ್ಯಾಕಾ. ೯-೦೬). [ಸಂ].

**ಪ್ರಲಾಪಂಗೆಯ್** (ಕ್ರಿ). ಅಳು; ರೋದಿಸು: ಬಡವರ ನಂಟನಾವಡೆ ದಯಾಪರನಾವಡೆ . . . ಮನೋರಮನಾವಡೆ ಪೇಟಲಾಗದೇ ಎಂದು ಪ್ರಲಾಪಂಗೆಯ್ದು (ಅಆಕೃ. ೩-೦೨೦ ವ); ಅಂತು ಕಾಲಪ್ರಾಪ್ತನಪ್ಪುದುಂ ಲಕ್ಷ್ಮಣನಂತಃಪುರಪುರಂಧ್ರಿಯರ್ ಕಂಡತಿಪ್ರಲಾಪಂಗೆಯ್ಯುದುಂ (ಶಂಕರಾ. ೦೩-೯೯ ವ). [ಪ್ರಲಾಪ + ಕೆಯ್ಯ್]

**ಪ್ರಲಾಪಸನ್ನಿಪಾತ, ಪ್ರಳಾಪಸನ್ನಿಪಾತ** (ನಾ). = ಪ್ರಲಾಪ ೪: ಗಂಧಿಕತಗರ, ಹಿರಿಮದ್ದು . . . ಕಾಸಿ ಕೊಡಿಸಲು ಪ್ರಲಾಪಸನ್ನಿಪಾತ ಮಾಣ್ಗುಂ (ವೈದ್ಯಸಾ. I, ೬೬). **ಪ್ರಳಾಪಸನ್ನಿಪಾತ:** ಮೈಯಲ್ಲಿ ನಡುಕ, ಪ್ರಳಾಪ, ದಾಹ . . . ಇವೆಲ್ಲವು ಉಂಟಾದುದೆ ಪ್ರಳಾಪಸನ್ನಿಪಾತವೆಂದರಿವುದು (ಸಕಲ್ಯ. ೦೬೩). [ಸಂ.]

**ಪ್ರಲಾಪಿಸು, ಪ್ರಳಾಪಿಸು** (ಕ್ರಿ). ೧. ಮಾತನಾಡು: (*). ೨. ವ್ಯರ್ಥವಾದ ಮಾತನಾಡು; ಹರಟು: (*). ೩. ಅಳು; ರೋದಿಸು: ಪರಮನೀ ಬಾರಿಗೆ ಬದುಕಿದಡೆ ಮರಣವಿಲ್ಲೆನ್ನಂದಿಗೆಂದಿಗೆ ನಿರುತವೆನುತಂ ರುದ್ರಪಶುಪತಿ ಶಾಂ ಪ್ರಲಾ[ಪಾಠಾಂ. ಳಾ]ಪಿಸುತ (ಬಸಪು. ೦೩-೬); ನನ್ನ ಕಂದಾ! ಹಾಹಾ! ಎಂದು ಪ್ರಲಾಪಿಸಿ ಮೂರ್ಛೆ ಹೋದನು (ಶೀತಿಹಂ. I. ೨೩). **ಪ್ರಳಾಪಿಸು:** ೩. ಕಂದರ್ಪನ ದೇಹ ಹತವಾಗೆ . . . ರತಿ ದುಃಖದಿಂದ ಪ್ರಳಾಪಿಸುತಿರಲು (ಮೋಹತ. ೬-೩). [ಪ್ರಲಾಪ+ — ಇಸ್ತು]

**ಪ್ರಲೀನ** (ಗು). ೧. ಕರಗಿದ ; ಲೀನವಾದ. ೨. ಹಾಳಾದ ; ನಾಶವಾದ. (ನಾ). ೩. ಲೀನವಾದವನು ; ಐಕ್ಯ ಹೊಂದಿದವನು : ಜಂಗಮಪ್ರಾಣಪ್ರಲೀನಾ ಜಂಗಮಪ್ರಾಣಪ್ರದಾನಾ (ಏಕಪ್ರ. ೩೩-೦೨). [ಸಂ.]

**ಪ್ರಲೋಕಿತ** (ನಾ). [ನಾಟ್ಯ] ಕಣ್ಣುಗುಡ್ಡೆಗಳ ಎಂಟು ಬಗೆಯ ಚಲನೆಗಳಲ್ಲಿ ಒಂದು : ಕಣ್ಣು ಅಲಿಗಳ ೮ ಚಲನೆಗಳಿವೆ . . . ೧. ಸಮ . . . ೬. ಪ್ರಲೋಕಿತ (ಅಭಾಕ್ಕ. ೯೩). [ಸಂ.]

**ಪ್ರಲೋಭನ** (ನಾ). ಆಸೆ ಹುಟ್ಟಿಸುವುದು ; ಮರುಳು ಮಾಡುವುದು ; ಆಮಿಷ : ಸೀತಾಪ್ರಲೋಭನಂ ದೀಪಿಸುವ ಮಾಳ್ಕೆಯಿಂ . . . ತೋರಿದತ್ತೊಮ್ಮೆ (ಶ್ರೀರಾಮಾ. ೨೪೩-೦೧೩) ; ನೀನು ನಾನಾ ವಿಧದ ಪ್ರಲೋಭನವನ್ನು ಬೀರಿ ನನ್ನನ್ನು ನನ್ನ ಬಾಲವಿಧವಾವದದಿಂದ ಚ್ಯುತಿಗೊಳಿಸಿದೆ (ಅಂಕಿ. ೦೬). [ಸಂ.]

**ಪ್ರಲೋಭನೆ** (ನಾ). = ಪ್ರಲೋಭನ : ಚಿತ್ತೈಕಾಗ್ರತೆಯನ್ನು ಭಂಗಗೊಳಿಸುವಂಥ ಪ್ರಲೋಭನೆಗಳಾವುವೂ ಅಲ್ಲಿಲ್ಲದುದರಿಂದ, ಅವನು ಆ ಜಾಗವನ್ನಾರಿಸಿಕೊಂಡಿದ್ದನು (ಕೃಷು. ೩೯) ; ನೀತಿತತ್ವಗಳಿಗೂ ಪ್ರಾಪಂಚಿಕ ಪ್ರಲೋಭನೆಗಳಿಗೂ ನಡುವಣ ಘರ್ಷಣೆ . . . ಪ್ರತಿಪಾದಿತವಾಗಿದೆ (ಕಾಪೊ. I, ೬೯೯). [ಸಂ. ಪ್ರಲೋಭನ]

**ಪ್ರವಕ್ತೃ** (ನಾ). ವಿವರಿಸಿ ಹೇಳುವವನು ; ಪ್ರವಚನಕಾರ ; ವಾಗ್ಮಿ : ಶ್ರುದ್ಧಾಳುವೆಂದೋ . . . ಪ್ರವಕ್ತೃವಚನ ಪಾರಾವಾರಾವಗಾಹನ ಪರಿಣತಮತಿವಿಶೇಷನುಂ (ಚಾಪುಂಪು. ೬) ; ಉಪನಿಷತ್ತಿನ ಪ್ರವಕ್ತೃಗಳು ಋಷಿಗಳು (ಚಾರಿವ. ೩೭). [ಸಂ.]

**ಪ್ರವಚ** (ನಾ). ೧. ದೊಡ್ಡ ಧ್ವನಿ ; ಭಾರಿ ಶಬ್ದ : "ಕಂಚುಕಂ ಮರ್ಮರ ವರ್ಮ ಚರ್ಮ ಕುಟಜಾ ಪ್ರವಚಂ ಕವಚಾಭಿಧಾನಕಂ" (ಅಭಿಕೆ. ೯೮). ೨. ಸಾರುವಿಕೆ ; ಘೋಷಣೆ : (?). [ಸಂ.]

**ಪ್ರವಚನ** (ನಾ). ೧. ಮಾತು ; ನುಡಿ. ೨. ವಿವರಣೆ ; ವ್ಯಾಖ್ಯಾನ : ನಾನೇನು ವಿದ್ಯಾರ್ಥಿಯ ತಮ್ಮ ಪ್ರವಚನಕ್ಕೆ ? (ಚಂದ್ರಕ. ೯೧) ; ಪಾಠ ಪ್ರವಚನಗಳು ನಡೆಯುತ್ತಿರುವಾಗ ಉಪಾಧ್ಯಾಯರ ಕೊರಲಿನೊಂದಿಗೆ ತಮ್ಮದನ್ನೂ ಸೇರಿಸುತ್ತವೆ (ಹಕುಹೊ. ೦೩೬). ೩. ಒಳ್ಳೆಯ ಮಾತು ; ಉತ್ತಮವಾದ ಮಾತಂ. ೪. [ಜೈನ] "ವೀತರಾಗ ಸರ್ವಜ್ಞರಾದ ಆಪ್ತರ ದ್ವಾದಶಾಂಗರೂಪ ಜಿನವಾಣಿ ; ವ್ಯಾಖ್ಯಾನ, ವಿವರಣೆ" (ಶೈಶಕೋ. ೦೬೬) : ಪ್ರಕಟಿತಜಿನಪ್ರವಚನಪ್ರಕಾರದೊಳ್ (ಸುಕುಸುಮ. ೬-೬) ; ಪ್ರವಚನಪರಿಪಠನಕ್ಷಮತೆ ವಾಣಿಯುಂ ತೀರ್ಥಯಾನದಕ್ಷತೆ ಪದಮುಂ ಕಿವಿಯುಂ ಜಿನವರಚರಿತಶ್ರವಣಪಟುತೆ ಓಂಗದನ್ನವಾರ್ಜಿಪೆನಜನುಂ (ಚಂದ್ರಪ್ರ. ೯-೦೩). [ಸಂ.]

**ಪ್ರವಚನಕಾರ** (ನಾ). ಧಾರ್ಮಿಕ ವಿಷಯಗಳನ್ನು ವಿವರಿಸುವವನು,— ವ್ಯಾಖ್ಯಾನ ಮಾಡುವವನು : ಇದರಲ್ಲಿ ಛಾಂದೋಗ್ಯರ ಪ್ರವಚನಕಾರರು...ಆತ್ಮವಾದದ ಮಹಿಮೆಯನ್ನು ಬಹಳ ಸುಂದರವಾಗಿ ವರ್ಣಿಸಿದ್ದಾರೆ (ಚಾರಿವ. ೯೦) ; ಜೈನತತ್ವವನ್ನು ಪ್ರವಚನಕಾರನಂತೆ ವಿವರಿಸಿ, ಕೀರ್ತನಕಾರನಂತೆ ಕಥೆಯಿಂದ ಅದನ್ನು ಉದಾಹರಿಸಿ ಹೇಳುವ ರೀತಿ ಪ್ರೌಢಕಾವ್ಯಮಾರ್ಗದಲ್ಲಿ ಹೊಸದಾಗಿದೆ (ಕಸಾಕ. ೦೯೬). [ಸಂ.]

**ಪ್ರವಚನಭಕ್ತಿ** (ನಾ). [ಜೈನ] ನಾಮಕರ್ಮದ ಹದಿನಾರು ಭಾವನೆಗಳಲ್ಲಿ ಒಂದು ; ಅರ್ಹಂತರ ಅಥವಾ ಆಗಮಗಳ ಮೇಲಿರುವ ಭಕ್ತಿ : ಪ್ರವಚನಭಕ್ತಿ :— ಅರ್ಹದ್ಭಟ್ಟಾರಕರುಂ ಆಚಾರ್ಯರುಂ ಉಪಾಧ್ಯಾಯರುಂ ಆಗಮಮುಮಂ ಎಂದಿವರ್ಗೊಳಪ್ಪ ಭಕ್ತಿಯುಂ (ಕಶ್ಯಕ್ರ. ೨೬೩). [ಸಂ.]

**ಪ್ರವಚನವತ್ಸಲತ್ವ** (ನಾ). = ಪ್ರವಚನಭಕ್ತಿ : ದರ್ಶನವಿಶುದ್ಧಿ... ಮಾರ್ಗಪ್ರಭಾವನಾಪ್ರವಚನವತ್ಸಲ [ಚಾಂ. ೮]ತ್ವಮೆಂಬ ಷೋಡಶಭಾವನೆಗಳೊಳ್ (ಚಾಪುಂಪು. ೨೮) ; ಪ್ರವಚನವತ್ಸಲತ್ವಮಿತಿ—ಚಾತುರ್ವರ್ಣ್ಯದೊಳಪ್ಪ ವಾತ್ಸಲ್ಯಮುಂ (ಕಶ್ಯಕ್ರ. ೨೬೩). [ಸಂ.]

**ಪ್ರವಣ** (ಗು). ೧. ಇಳಿಜಾರಾದ. ೨. ಬಾಗಿದ ; ಬಗ್ಗಿರುವ. ೩. ಆಸಕ್ತವಾದ ; ತತ್ಪರವಾದ ; ಮಗ್ನವಾದ : ಗುರುಶಿಕ್ಷೆಶಿಕ್ಷಾಗ್ನಿವಸಂಘಪ್ರವಣಗುಣತಪೋನಿಷ್ಠಿತಾನೀತಸಾಧೂತ್ಕರದೊಳ್... ಕೈಕೊಂಡು ಪರ್ಯಕ್ಷಿಯಂ (ಸುಕುಸುಮ. ೯-೦೬) ; ಪ್ರಣವಧ್ಯಾನಪ್ರವಣಪದ್ಮಾಸನಸ್ಥರ್ಗೆ (ಶ್ರೀಶಕ್ಕ. ೨೨). ೪. ನಮ್ರನಾದ ; ವಿನೀತನಾದ : ಪ್ರವಣ ಮಂಡಿತ ತಪೋಭರಮಂಡಿತಚಿಂತನಾ (ಹಾಲಾಸ್ಯ. ೧-೦೦-೨೩). (ನಾ). ೫. ಆಸಕ್ತನಾದವನು ; ತತ್ಪರನಾದವನು : ಪ್ರವಣನೆಂದರೆ ಆಸಕ್ತಿಯುಳ್ಳವನು (ಹೊಕುಗ. ೬೬). ೬. ಆಸಕ್ತಿ ; ತತ್ಪರತೆ : ಆವೊಂ ವಾದಿ ಕಥಾತ್ರಯಪ್ರವಣದೊಳ್ ವಿದ್ವಜ್ಜನಂ ಮೆಚ್ಚೆ ವಿದ್ಯಾವಷ್ಟಂಭಮನವ್ವಳಿಯ್ಯು... ತ್ರೈವಿದ್ಯಶ್ರುತಕೀರ್ತಿದಿವ್ಯಮುನಿವೊಲ್ ವಿಖ್ಯಾತಿಯಂ ತಾಳ್ದಿದಂ (ಕಂಠಮಾ. ೦-೨೯). ೭. ವಿನೀತ ; ನಮ್ರನಾದವನು : "ಪ್ರವಣಃ, ಪ್ರಹ್ವಃ—ಈ ೨ ವಿನೀತಂ" (ಹಲಾಯು. ೩೬-೦೯೬) ; ರಿಪುಗೆ ಮಾರಿ ಪಗೆವರ ಗಣ್ಡಂ ಪ್ರವಣಂಗಂ ಚಕ್ಕಿಗನತಿಧವಳಯಸಂ (ಕ್ಶಾಇ. XX. ೨೯-೩೦ ; 1034). ೮. ಪ್ರಸಿದ್ಧನಾದವನು ; ಕೀರ್ತಿಶಾಲಿ : ಪ್ರವಣನೊಳ್—ಪ್ರಸಿದ್ಧವಾದವನಲ್ಲಿ (ಕಕುಶ. ೨೦೯ ಟಿಆ). ೯. ನಾಲ್ಕು ದಾರಿಗಳು ಕೂಡುವ ಸ್ಥಳ ; ಚೌಕ : "ಪ್ರವಣಃ—೧. ಕ್ರಮದಿಂದ ವಾಟವಾಗಿ ಇಳಿಯತಕ್ಕ ನೆಲ, ಬೊಗ್ಗಿದವನು, ಈ ೨ ಕ್ಕೂ ಪೆಸರು, ನಾಲ್ಕು ಬೀದಿಗಳೂ ಸೇರಿದ ಚೌಕಕ್ಕೆ ಪೆಸರಾದಾಗ" (ಸಿದ್ಧಾಂತಿ. ೩೦೯). [ಸಂ.]

**ಪ್ರವಣತೆ** (ನಾ). ತತ್ಪರತೆ ; ಆಸಕ್ತಿ : ಮರಾಠ ಸರದಾರರ ವೀರವೃತ್ತಿಯೂ, ಸಾಹಸ ಪ್ರವಣತೆಯೂ, ಲಾವಣಿಕಾರರ ರಸಿಕವೃತ್ತಿಯೂ ಮಹಾರಾಷ್ಟ್ರಮನೋಧರ್ಮದ ಕಟ್ಟಿನ ಘಟಕಗಳಾಗಿವೆ (ಜುಜಾಪಿ. ೨೯) ; ಆಯಾ ಮಾರ್ಗದಲ್ಲಿ ಹೆಚ್ಚಿನ ಪ್ರವಣತೆ ಇದ್ದವರನ್ನು ಆಯಾ ಅಂಕಿತಗಳಿಂದ ಕರೆದುದಾಗಿರಬೇಕು (ಕನ್ನ೨. ೦೭). [ಸಂ. ಪ್ರವಣತಾ]

**ಪ್ರವತೆ** (ನಾ). ಒಂದು ಬಗೆಯ ಸಸ್ಯ : "ಪ್ರವತಾ— ಕೋಟುಕುಟುಮ" (೬೩ಧ. ೯೯). [?]

**ಪ್ರವಯಣ** (ನಾ). ರಥದ ಕುದುರೆ ಮೊದಲಾದುವನ್ನು ನಡೆಸಲು ಉಪಯೋಗಿಸುವ ಕೋಲು,—ಚಾವಟಿ,—ಮೊಸೆಗೋಲು. [ಸಂ.]

**ಪ್ರವಯಸ್ಕ** (ನಾ). ೧. ತುಂಬ ವಯಸ್ಸಾದವನು ; ಅತಿವೃದ್ಧ. ೨. ಶಕ್ತಿವಂತನಾದವನು : ಮೂಜಿನೆಯ ವಕ್ತ್ಯವೆಂಬೊಂ ಪ್ರವಯಸ್ಕನುಂ ವಪುಷ್ಮಂತನುಂ . . . ಚಾರಿತ್ರವಂತನುಮೆಂದಷ್ಟಗುಣಸಮನ್ವಿತನಕ್ಕುಂ, ಅಲ್ಲಿ ಪ್ರವಯಸ್ಕನೆಂಬೊಂ ಅತಿವೃದ್ಧನುಮತಿಬಾಳಕನುಮಲ್ಲದೆ ಸಮತಿಕ್ರಾಂತ ದಶವರ್ಷನುಮತಿಕ್ರಾಂತಸಪ್ತತಿಸಂವತ್ಸರನುಮಕ್ಕುಂ (ಚಾಪುಂಪು. ೩). [ಸಂ.]

**ಪ್ರವರ** (ಗು). ೧. ಶ್ರೇಷ್ಠವಾದ ; ಉತ್ತಮವಾದ ; ಮುಖ್ಯವಾದ : ಪ್ರವರನೃಪಕುಮಾರಾತ್ತೋದಯಾ[ದಿ] ಪ್ರಮೋದಾಸವಸಮುದಿತಸೇನಾ ರಾತಿವೃತ್ತಾಂತವೃತ್ತಂ (ಕಂಠಾ. ೩-೨೦೨) ; ನವ್ಯೊಳಗೊರ್ವನಂ . . . ಪ್ರವರವಿಹಂಗಮಕುಳಚಕ್ರವರ್ತಿಪಟ್ಟಕ್ಕೆ ಯೋಗ್ಯನಂ ಮಾಡಿ (ಪಂಚತಂ. ೨೨೩-೫). ೨. ಹಿರಿಯ ; ಜ್ಯೇಷ್ಠ. (ನಾ). ೩. ಪ್ರಮುಖ ವ್ಯಕ್ತಿ ; ಪ್ರಧಾನವ್ಯಕ್ತಿ : "ಅಗ್ರ್ಯಂ . . . ಪ್ರವರಂ . . . ಅಗ್ರಣೀ —ಈ ೧೩ ಮುಖ್ಯಂ" (ಹಲಾಯು. ೧೧೮-೫) ; ಕವಿ ಗಮಕಿ ವಾದಿ ವಾಗ್ಮಿಪ್ರವರರ್ ಗುಣವರ್ಮನೊಳ್ ಸಮಂಬರ್ಪರಾರ್ (ಪುಷ್ಪದ. ೦-೬೯) ; ಅಪ್ರತಿಮ ಶಿವಗುಣಕುಲಕೆ ದಂಡಪ್ರಣಾಮವನಾಚರಿಸಿ . . . ಆ ಪ್ರವರರಿಗೆ

ಬಿನ್ನವಿಸಿ (ಐಸ್ತು. ೯೬-೬೪). ೪. ಪೀಳಿಗೆ ; ವಂಶ : ಅವರು ಪಿತ್ರಾರ್ಜಿತದ ರಾಜ್ಯಪ್ರವರಪಾತ್ರರು (ಕುಣ್ಣಾ.ಕ. ೦೨-೦೯) ; ನಿನಗೆ ಸಂಧ್ಯಾವಂದನೆ ಬರುವುದೇ ? ನಿನ್ನ ಪ್ರವರವೇನು ಹೇಳುವಿಯಾ (೪೬೮. ೩೯೦). ೫. ಸಂತತಿಯ ಮೂಲಪುರುಷರ ವರ್ಗ. ೬. ಕುಲದ ಪೂರ್ವಿಕ ; ವಂಶದ ಮೊಲಪುರುಷ ; ಪೂರ್ವಜ. ೭. ನಲವತ್ತೆರಡು ಗೋತ್ರಗಳಲ್ಲಿ ಯಾವುದಾದರೂ ಒಂದು. ೮. ಸಂತಾನ ; ಸಂತತಿ. ೯. ಒಂದು ಬಗೆಯ ಸಸ್ಯ : "ಪ್ರವರ—ತ್ರಿಫಲಿ, ಕುಸ್ತುಂಬರಿ, ಲಾಮಂಚ[ಲಾಮಚ]" (೬ಕಥ. ೯೯). ೧೦. (ಅಲಂ) ಅನವಶ್ಯಕವಾದ ವಿವರಣೆ : ತನ್ನ ಪ್ರವರವನ್ನು ಶುರು ಮಾಡುವ ಲಕ್ಷಣಗಳನ್ನು ತೋರಿಸಿದ (ಕುಪೋಶಂ. ೧೦೦). ೧೧. [ಛಂದ] ಅಕ್ಷರಛಂದಸ್ಸಿನಲ್ಲಿ ಮೂರನೆಯ ಛಂದಸ್ಸಾದ ಮಧ್ಯೆಯಲ್ಲಿ ಒಂದು ಭೇದದ ಹೆಸರು : ಪವನೋದ್ಭವದಿಂ ಪ್ರವರಂ ಪ್ರವರೇ (ಛಂದೋಂಬು. ೨-೩೬). [ಸಂ.]

ಪ್ರವರಶೈವ (ನಾ). ೧. ಶೈವಧರ್ಮದ ಆರು ಬಗೆಗಳಲ್ಲಿ ಒಂದು : ಆದಿಶೈವ ಮಹಾಶೈವ ಅನುಶೈವ ಅಂತರ (ಅವಾಂತರ) ಶೈವ ಪ್ರವರಶೈವ ಅಂತ್ಯಶೈವ ಎಂಬ ಈ ಆಱು ಶೈವದ ನೀತಿಯಲ್ಲ (ಸಿದ್ಧೇಶ. ೯-೪). ೨. (ಸೂಕ್ಷ್ಮಾಗಮದ ಪ್ರಕಾರ) ಶೈವಧರ್ಮದ ಏಳು ಬಗೆಗಳಲ್ಲಿ ಒಂದು : ಅನಾದಿಶೈವ ಆದಿಶೈವ ಮಹಾಶೈವ ಅನುಶೈವ ಅವಾಂತರಶೈವ ಪ್ರವರಶೈವ ಅಂತರಶೈವವೆಂಬವೇ ಸಪ್ತಶೈವಂಗಳವಱಲ್ಲಿ . . . ಶಿವದೀಕ್ಷಾಯುಕ್ತರಾದ ಅಂಭಷ್ಠ ಕುಲಾಲಾದಿಗಳೇ ಪ್ರವರಶೈವರು (೬ಕೀಶ. ೬೭). [...]

ಪ್ರವರಾಕ್ಷರ (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಹನ್ನೆರಡನೆಯ ಛಂದಸ್ಸಾದ ಜಗತಿಯಲ್ಲಿ ಒಂದು ಪ್ರಭೇದ : ಪವಮಾನಮರ್ಕವರುತದ್ವಯ ಸಂತವಿರಾಮಮೆಂಬಿನೆಗವಾಱನೆಯೊಳ್ ಕವಿರಾಜಹಂಸ ಮತದಿಂ ಜಗದೊಳ್ ಪ್ರವರಾ[ಕಾಕಾಂ. ವಿತಾ]ಕ್ಷರಾಹ್ವಯಮನೋದಬಲೇ (ಛಂದೋಂಬು. ೨-೦೩೩). [ಸಂ.]

ಪ್ರವರೆ (ನಾ). ಶ್ರೇಷ್ಠಳಾದವಳು : ಪವನೋದ್ಭವದಿಂ ಪ್ರವರಂ ಪ್ರವರೇ (ಛಂದೋಂಬು. ೨-೩೬). [ಸಂ. ಪ್ರವರಾ]

ಪ್ರವರ್ತ (ಗು). ತೊಡಗಿದ ; ವ್ಯವಹರಿಸಿದ : ಪೊಗಳಂ ತವೆ ಕೊಯ್ಯುಂಧರಣೀಭಾಗದೊಡೆಯನನಂತು ಕಾಣುತನಾಗಕಾತೀತಪ್ರವರ್ತಜ್ಞಾನನಿಧಿಯಾಗಿ (ಐಸ್ತು. ೯೬-೬). [ಸಂ.]

ಪ್ರವರ್ತಕ (ಗು). ೧. ಕಾರ್ಯದಲ್ಲಿ ತೊಡಗುವಂತೆ ಮಾಡುವ,—ತೊಡಗಿಸುವ. ೨. (ದುಷ್ಕಾರ್ಯಕ್ಕೆ) ಪುಸಲಾಯಿಸುವ ; ಚಿತಾವಣೆ ಮಾಡುವ : 'ಪ್ರವರ್ತಕಿ' ಪರಾ. (ನಾ). ೩. ಕೆಲಸದಲ್ಲಿ ತೊಡಗಿರುವುದು ; ಪ್ರವೃತ್ತಿ : ಪುಣ್ಯ ಪಾಪ ಸ್ವರ್ಗ ನರಕ ಬಂಧ ಮೋಕ್ಷ ಪ್ರವರ್ತಕ ನಿವರ್ತಕ ಆದಿಯಾದ ಕರ್ಮಭುಮಿ (೬ಕ್ಕಕ. ೯. ೩೬೨-೦೨೩೦). ೪. ಮೂಲಪುರುಷ ; ಮೊದಲಿಗ : ಈ ಭವಕ್ಕೆಂಟನೆಯ ಭವದೊಳ್ ಭರತದೊಳ್ ನೀನಾದಿತೀರ್ಥಪ್ರವರ್ತಕನಾದಂದೀ ಶ್ರೀಮತಿ ದಾನತೀರ್ಥಪ್ರವರ್ತಕಂ ಶ್ರೇಯಾಂಸನಕ್ಕುಂ (ಆದಿಪು. ೩-೦೪ ವ) ; ಭವಕರ್ಮ ಸಂಸ್ಕಾರಪ್ರವರ್ತಕನು (ಐಸ್ತು. ೩೩-೦೯). ೫. ಸ್ಥಾಪಕ ; ಸ್ಥಾಪನೆ ಮಾಡಿದವನು ; ಸಂಸ್ಥೆ, ಮತ, ಸಿದ್ಧಾಂತ ಮೊದಲಾದುವುಗಳನ್ನು ಪ್ರಾರಂಭಿಸಿದವನು : ಡಿಥಿರಾಂಬ್ ಎಂಬ ಸಾಮೂಹಿಕಗೀತಗಳ ರಚನಕಾರರೇ ರುದ್ರನಾಟಕದ ಪ್ರವರ್ತಕರಾದರು (೩೦೯ಕಾ. ೨೦). ೬. ನಿರ್ಣಯಕಾರ ; ನ್ಯಾಯನಿರ್ಣಯ ಮಾಡುವವನು. [ಸಂ.]

ಪ್ರವರ್ತಕಿ (ನಾ). ದಂಬೋಧನೆ ಮಾಡುವ ವ್ಯಕ್ತಿ : ನರ್ತಕಿಯು ಪಾಪಿತೆಯು ಪರ್ಣವಿಕ್ರಯಿಯ ಪ್ರವರ್ತಕಿಯ ದಾಸಿಯ . . . ಒಡನಾಡಿ ದೊಡೆ ಬಾಲೆಯರ್ತವೆ ದುರಾಚಾರಮಂ ಕಲಿವರು (ಕೃಏಕಾ. ೩-೩೭). [ಸಂ. ಪ್ರವರ್ತಕೀ]

ಪ್ರವರ್ತನ (ನಾ). ೧. ಮುನ್ನಡೆ ; ಮುಂದುವರಿಯುವಿಕೆ : ನರಕಂ ತುರಗನಿಕುರುಂಬ ಕೀಲಾಲಕಲ್ಲೋಲಪ್ರವರ್ತನಾನೇಕನದನದೀಪ್ರವಾಹ ಬಾಹುಳ್ಯದುಸ್ತರಾವರ್ತ ರಣಮಾರ್ಗಮುಂ (ಪಂಪಭಾ. ೦೪-೩೦ ವ) ; ಜಘನ್ಯ ಭೋಗಭೂಮಿಪ್ರವರ್ತನಮರಡು ಕೋಟಿ ಕೋಟಿ ಸಾಗರೋಪಮದ ಕಡೆಯ ಪಲ್ಯೋಪಮದೆಂಟನೆಯ ಭಾಗಮುಳಿಯೆ (ಪುಣ್ಯಾಸ್ರ. ೦-೬೮ ಶ್ರೀ). ೨. ತೊಡಗುವುದು : ಪಂಚಾಣುವ್ರತಾದಿಪ್ರವರ್ತನಸ್ವಭಾವಸಂಯಮಮುಂ (ಆದಿಪು. ೦೩-೦೪ ವ). ೩. ಚಟುವಟಿಕೆ ; ಕಾರ್ಯಶೀಲತೆ. ೪. ನಡತೆ ; ನಡವಳಿಕೆ : ದ್ವಿಜಮಾರ್ಗವನೆ ದಿಟವಾಗಿ ನೀ ಹಿಡಿದಾಡಿದಡೆಯುಮಾಗದೀ ಕರ್ಮಕ್ರಿಯಾಚಾರಪ್ರವರ್ತನವು (ಐಸ್ತು. ೬-೬೯). ೫. ರೀತಿ ; ಕ್ರಮ. [ಸಂ.]

ಪ್ರವರ್ತನೆ (ನಾ). = ಪ್ರವರ್ತನ ೧ : ಸರ್ವಜಗದ ಜೀವದ ಪ್ರವರ್ತನೆಯ ಚಾರಿತ್ರಂಗಳ ನೆನಹುಮಾತ್ರದಿಂದ ಶಿವನು ಒಂದೇ ವೇಳೆಯಲ್ಲಿ ನಿರ್ಮಿಸಿದನು (೬ಕ್ಕತ. ೪. ೦೫೦-೩೬೦) ; ಹಿಂದಣ ಕಾಲ ಪ್ರವರ್ತನೆಯಿಂದೆ ಸಜ್ಜನಭಕ್ತಿಯೊಳು ಬಳಸಂದು ನಿಶ್ಚಲಭಾವದಿಂದಾಚರಿಸುತಿರು (ಐಸ್ತು. ೯-೬೦). [ಸಂ. ಪ್ರವರ್ತನ]

ಪ್ರವರ್ತಿ (ಗು). ೧. ಮುನ್ನಡೆವ ; ಕ್ರಮಿಸುವ. ೨. ಕ್ರಿಯಾಶೀಲವಾಗಿರುವ. ೩. ವ್ಯಾಪ್ತವಾದ ; ವಿಸ್ತಾರವಾದ. (ನಾ). ೪. ತೊಡಗುವವನು ; ಅನುಸರಿಸುವವನು : ಯಮ ನಿಯಮಯೋಗ ವ್ರತಾಯತಶಮದಮಾಶ್ರಯಸುಚರಿತನುತ್ತಮ ಶಿವಾಚಾರ ಪ್ರವರ್ತಿನಿರಸ್ತ ಸಕಲಾರ್ಥಿ (ಐಸ್ತು. ೦೯-೩). [ಸಂ. ಪ್ರವರ್ತಿನ್]

ಪ್ರವರ್ತಿತ (ಗು). ೧. ಮುನ್ನಡೆಸಿದ ; ಸಾಗಿಸಿದ : ಮುಂತ್ರಿಮುಖ್ಯರುಂ ಪುರಾತನಚಕ್ರವರ್ತಿಪ್ರವರ್ತಿತಮಾರ್ಗಮಿದೆಂದು ಕಾಕಿಣೀರತ್ನದಿಂದಲ್ಲಿ ಮುನ್ನಿರ್ದೊಂದು ಪ್ರಶಸ್ತಿಯಂ ಪರಾಮೃಷ್ಟಂ ಮಾಡಿ (ಪಾಂತಿಪು. ೧೦-೬೪ ವ). ೨. ತೊಡಗಿದ : ನಿತ್ಯಪ್ರವರ್ತಿತದಯದಾನಧರ್ಮ್ಮೋದ್ಯೋಗಿನಿ (ಎಪಿಕ. XX. ೯೬-೦೦ ; 1078). ೩. ಹಬ್ಬಿದ ; ವ್ಯಾಪ್ತವಾದ : ಸೌಭಾಗ್ಯನಿಧಾನದೀಪವರ್ತಿ ಸಕಲದಿಗನ್ತರಪ್ರವರ್ತಿತಕೀರ್ತಿ (ಎಪಿಕ. XX. ೯೬-೦೯ ; 1072). [ಸಂ.]

ಪ್ರವರ್ತಿಸು (ಕ್ರಿ). ೧. ವರ್ತಿಸು ; ವ್ಯವಹರಿಸು : ಪ್ರತಿಕ್ಷಣಂ ವಿಶಾರರುಗಳ್ ಚಿತ್ರಲಕ್ಷಣಂಗಳ್ ಪೂರ್ವಾಪೂರ್ವ ಚಿತ್ರವಿಶೇಷಪ್ರಭವಂಗಳ್ ಪ್ರಬಂಧದಿಂದಂ ಪ್ರವರ್ತಿಸುವುವು (ಶಾಂತಿಪು.೬-೦೯೨ ವ) ; ಶೋಷಣೆ ದೋಹನೆ ಸ್ಥಾಪನೆ ಚಾಲನೆ ಕಳಾಪಮಂ ಮಾಡಿ ತ್ರಿದೋಷಾದಿಗಳಂ ಪ್ರವರ್ತಿಸಲೀಯದೆ (ಅಜಿತ. ೨೯-೬೭) ; ಕಷ್ಟಮಂ ಮಾಳ್ಪಾ ಜಗಜ್ಜೈತ್ರು ಮನಸಿಜ ಭೃಷ್ಟನಂ ಗೆಲ್ದವೋಲ್ ಶೈವಮಂ ತತ್ತಸ್ಸನ್ನಿಷ್ಠೆ ತಲ್ಲೋಕಂಗಳೊಳ್ ಪ್ರವರ್ತಿಸಲೀಶನರಸುಗೆಯ್ವುತ್ತಿರ್ದನು (೬ಶಪು. ೨೯-೯೩). ೨. (ಕಾಲವು) ನಡೆ ; ಸಾಗು : ವ್ಯಯಮೆಮ್ಬ ಸ[೦]ವತ್ಸರಂ ಪ್ರವರ್ತ್ತಿಸೆ (ಅಕ. XII. ೨೦೯-೦೩ ; 814) ; ಶಕವರ್ಷಮೆಣ್ಣೂಱಱ ಅಯ್ದನೆಯ ವರ್ಷಂ ಪ್ರವರ್ತ್ತಿಸುತ್ತಿರೆ (ಎ. XXI. ೩೩-೩ ; 883) ; ತ್ರಿಸಾಗರೋಪಮ ಕೋಟಾಕೋಟಿಯ್ದಿತಿಯಿಂ ಪ್ರವರ್ತಿಸುವಂದಾ ಕಾಲದ ಮನುಷ್ಯರು ಚಾಪಿಪಾಕರನಿರ್ಮಳಶರೀರರುಂ (ಕಾಪುಂಪು. ೯). ೩. ಆರಂಭವಾಗು : ಪ್ರಾರಂಭವಾಗು : ಒದಗು ದಿನ್ನುಂ ಮುರಾರಿಯ ಸಮರಮರ್ಜುನನ ಕದನಂ ಪ್ರವರ್ತಿಸದು (ಕೃಏಕಾ. ೦೦-೩೨). ೪. ಆಚರಿಸು ; ಅನುಸರಿಸು : ಪರಮೇಶ್ವರ ಧರ್ಮಪ್ರಭಾವನೆಯಂ ಪ್ರತಿದಿನಂ ಪ್ರವರ್ತಿಸಿಯುಂ (ಆಶಪು. ೦೨-೯) ; ಭಕ್ತಗೋಷ್ಠಿಸುಸಂಗತಿಯೊಳು ಬಸವನುಂ ತಾವುಂ ಪ್ರವರ್ತಿಸಲು (ಬಸಪು. ೬೦-೨). [ಪ್ರವರ್ತನ+ —ಇಸು]

ಪ್ರವರ್ಧ (ಗು). ಬೆಳೆಯುವ : ಅಮಿತಸಂಸೃತಿಜೀವಘಟಚಕ್ರಮಲ ಕರ್ಮಬಲಪ್ರವರ್ಧಭ್ರಮಣವೊಡಗೂಡಲ್ಕೆ (ಐಸ್ತು. ೨೦-೨೯). [ಸಂ.]

**ಪ್ರವರ್ಧತೆ** (ನಾ). ಬೆಳವಣಿಗೆ : ಬಳಿಕಾ ಗರ್ಭದೊಳಗೆ ಮೂಱು ಪೊಱಗೆ ಮೂಱು ವರ್ತಿಸುವಹಾಯತೆ ಅಸ್ತಿತೆ ವಿಪರಿಣತೆ ಪ್ರ[ಪಾಠಾಂ.ವಿ] ವರ್ಧತೆ ಅಪಕ್ಷೀಯತೆ ವಿನಶ್ಯತೆ ಎಂಬ ಷಡ್ಭಾವವಿಕಾರವಮುಳ್ಳುತನನಿಸಿ (ಖವೀಳ-೨೩೭). [ಸಂ. ಪ್ರವರ್ಧತಾ]

**ಪ್ರವರ್ಧನ** (ಗು). ೧. ವೃದ್ಧಿಪಡಿಸುವ ; ಹೆಚ್ಚಿಸುವ : ಬಸವನೆಂಬ ಪ್ರಮಥನೊರ್ವಂ ನಿಶಿತಸದ್ಭಕ್ತಿಪ್ರವರ್ಧನಕಾರಣಾರ್ಥದಲಿ ವಸುಮತಿಗೆ ಬಂದಿದ್ದಪನು (ಚಚಿ. ೨೦-೨೯). ೨. ಬೆಳೆಯುವ ; ವರ್ಧಿಸುವ : ಅತಿ ಪ್ರವರ್ಧನಪ್ರಜಾನುರಾಗನುಮತಿಪ್ರಬಲರಣರಾಮನುಮೆನಿಸಿದ ರಣರಂಗ ಸಿಂಹನಿಂ (ಗದಾಯು.೨-೭ ಪ). (ನಾ). ೩. ಬೆಳವಣಿಗೆ ; ವೃದ್ಧಿ : ವಿಶ್ವಯಶಃಪ್ರವರ್ಧನವಮಂ ಆಟಾಮ್ಲವರ್ಧನವಮಂ ನೋಂತಳ್ (ಸುಕುಮಾ.೯-೦೯). [ಸಂ.]

**ಪ್ರವರ್ಧಮಾನ** (ಗು). ೧. ಅಭಿವೃದ್ಧಿ ಹೊಂದುತ್ತಿರುವ ; ಏಳಿಗೆ ಹೊಂದುತ್ತಿರುವ : ಬಲದೇವ ವಾಸುದೇವರ್ . . . ಮಾತಾಪಿತೃಗಳನುರಾಗದೊಡನೆ ಪ್ರಮೋದಪ್ರವರ್ಧಮಾನವಾಗೆ ಸುಖಮಿರ್ಪನ್ನೆಗಂ (ಶಾಂತಿಪು. ೦-೯೦ ಪ). ೨. ಬೆಳೆಯುತ್ತಿರುವ. [ಸಂ.]

**ಪ್ರವರ್ಧಿತ** (ಗು). ಬೆಳೆದ ; ವೃದ್ಧಿಯಾದ : ಮೋದದಿಂ ಜಾಬಾಲ ಕೈವಲ್ಯಾದಿ ಶಾಖೆಗಳೊಳ್ ಪ್ರವರ್ಧಿತವಾದ ಭಸ್ಮೈಶ್ವರ್ಯಪದವಿ ಸಮಗ್ರವಾಯ್ತೆನೆ (ಬಸಪು.೯೩-೬೩). [ಸಂ.]

**ಪ್ರವರ್ಧಿಸು** (ಕ್ರಿ). ಬೆಳೆ; ವೃದ್ಧಿಯಾಗು : (೧). [ಪ್ರವರ್ಧನ+–ಇಸು]

**ಪ್ರವಲ್ಹಿಕೆ** (ನಾ). ಒಗಟು ; ಸಮಸ್ಯೆ : "ಒಗಟೆಯದು ಪ್ರಹೇಳಿಕೆ ಪ್ರವಲ್ಹಿಕೆ [ಪಾಠಾಂ. ಪ್ರವಲ್ಲಿಕೆ, ಪ್ರವಷ್ಹಿಕೆ] ಯುಂ" (ಮಂಗರಾ. ೨೭-೭); ಉಲ್ಲಸಿತ ಪ್ರವಲ್ಹಿ [ಲ್ಹಿ] ಕಾಪಾನಗಾನಾದಿ ವಿವಿಧವಿನೋದವಿಧಾಯಿಬಾಳಿಕಾಲೋಲಲೋಚನಮರೀಚಿಪುಂಜವಿಸರದಿಂ ಕುಸುಮಿತಮಾಗೆಯುಂ (ಪರ್ಶಪು. ೬-೯೯ ಪ). 'ಪ್ರಹೇಳಿಕೆ' ಪರಾ. [ಸಂ. ಪ್ರವಲ್ಹಿಕಾ]

**ಪ್ರವಹ** (ಗು). ೧. ಮುಂದಕ್ಕೆ ಹೋಗುವ ; ಹರಿಯುವ ; ಪ್ರವಹಿಸುವ. (ನಾ). ೨. ಹೊರಗೆ ಹೊರಡುವುದು : "ಪ್ರವಹಃ, ಬಹಿರ್ಗಮನಂ – ಗೃಹಾದಿಗಳಿಂದ ಈಚೆಗೆ ಬರುವಿಕೆ, ಹೊರಕ್ಕೆ ಹೊರಡುವಿಕೆ" (ನಿಘಂ.೦ಚಿ. ೩೬೦). ೩. ಗಾಳಿ; ವಾಯು. ೪. ವಾಯುಂದೇವ : ಗಣಪ ಮಿತ್ರರು ಸಪ್ತಋಷಿಗಳು ವಹ್ನಿ ನಾರದ ವರುಣನು ಇನಜಗೆ ಸಮ ಚಂದ್ರಸೂರ್ಯರು ಮನುಸುತೆಯು ಹೆಚ್ಚು ಪ್ರವಹನು (ಭುರಂದ. ೦-೦೩೦-೩). [ಸಂ.]

**ಪ್ರವಹಣ** (ನಾ). ೧. ಓಟ; ಹರಿವು : "ಪ್ರವಹಣಂ, ಡಯನಂ – ಈ ೨ ರಥದ ಹರಿ" (ಹಲಾಯು. ೬೩-೨೯೦); ಇವುಗಳ ಯೋಗದಿಂದ ಈ ಪ್ರಜ್ಞಾ ಪ್ರವಹಣತಂತ್ರಗಳೂ ಸಮ್ಯಕ್ಕಾಗುತ್ತವೆ (ಅಸ್ಯಕು.-೩೨). ೨. ಹಡಗು ; ಜಹಜು : "ಪೋತಃ, ಪ್ರವಹಣಃ–ಈ ೨ ಬೈತ್ರಂ" (ಹಲಾಯು. ೦೦೬-೩೩). ೩. ತೆರೆಯಿರುವ ಮೇನೆ ; ಅಂದಣ : "ಕರ್ಣೀರಥಃ, ಪ್ರವಹಣಂ, ಡಯನಂ – ೩ ಮನುಷ್ಯರು ಹೊರುವ ವಿಮಾನದ ಹೆಸರು, ಡೋಲಿಗೂ ಹೆಸರು" (ನಿಘಂ.೦ಚಿ.೨೩೨). [ಸಂ.]

**ಪ್ರವಹಿಸು** (ಕ್ರಿ). (ನೀರು) ಮುಂದೆ ಸಾಗು : ವಸುಮತಿಯೊಳು ಶುಭ್ರಸಂಕಾಶದಿಂ ಪ್ರವಹಿಸುತಿರ್ದಳಾ ಪುಣ್ಯಗಂಗೆ (ಪೋಶಸ. ೬-೩೯); ವನಮಧ್ಯದೊಳ್ ಪ್ರವಹಿಸುತ್ತಲಿರುವ ನದಿ (ಹರಿಶಂ. ೨೯೯-೯); ಮೆಯ್‌ಸಿರಿಗೆ ಷೋಡಶವಸಂತವೀಚಿಯನೊತ್ತಿ ಪ್ರವಹಿಸಿತು ಕಾಲನದಿ ರಾಮ ಲಕ್ಷ್ಮಣಭರತಶತ್ರುಘ್ನಜೀವನದಿ (ಶ್ರೀರಾಮಾ. ೨೯-೨).
[ಪ್ರವಹ + – ಇಸು]

**ಪ್ರವಳ** (ಗು). ವೇಗವಾಗಿ ಚಲಿಸುವ ; ರಭಸವಾಗಿ ಚಲಿಸುವ : ಪ್ರವಳ ಕರಿ ಮಕರ ಘೂತ್ಕಾರವಾತದಿಂದುದ್ಭವೊಗೆವ ಜಲಬಿಂದುಗಳಿಂ ದಿವದೊಳೆ ತಾರಕಿತಂ ಮಾಡುವುದು ನಭೋಭಾಗವಂ ತದಂಭಃಪೂರಂ (ಕಂದ್ರಪ್ರಿ. ೦೦-೯೯). [ಸಂ. ಪ್ರವಲ]

**ಪ್ರವಾಣಿ** (ನಾ). ನೆಯ್ಗೆಯವರ ಲಾಳಿ ; ಹಾಸಂಎಳೆಗಳ ನಡುವೆ ಹೊಕ್ಕುಎಳೆಗಳನ್ನು ಹಾಯಿಸುವ ಲಾಳಿ. [ಸಂ.]

**ಪ್ರವಾದ** (ನಾ). ೧. ಶಬ್ದವನ್ನು ಮಾಡುವುದು. ೨. ಹೇಳುವುದು; ಹೇಳಿಕೆ : 'ಪ್ರವಾದಿಸು' ಪರಾ. ೩. ಸಂದಿಗ್ಧ ; ಸಮಾಚಾರ : ಅವರು ಮಹಮ್ಮದನಿಗೆ ಭೂತವು ಹಿಡಿದಿದೆಯೆಂದು ಪ್ರವಾದವನ್ನೆಬ್ಬಿಸಿ ಹರಡತೊಡಗಿದರು (ಕೈಗಂಅ. ೨೨) ; ಅವನನ್ನು ಕಾಳಗುದ್ದನೆಂದು ಪ್ರತಿ ನಾಮಧೇಯದಿಂದ ಕರೆಯುತ್ತಿದ್ದರೆಂದೂ ಪ್ರವಾದವಿತ್ತು (ಕೋಚಿಪಿಪೂ.೯೯). ೪. ಜನರ ಆಡುಮಾತು ; ವದಂತಿ ; ಗಾಳಿಸುದ್ದಿ : ಇಲ್ಲಿ ವಿಶೇಷವಾಗಿ ಮಹತ್ತು ನಡೆಯುವುದೆಂದು ಪ್ರವಾದವಿದೆ (ತಾಪವಾ. ೯೬); ನಿಂತು ಕೊಂಡೇ ಮತದ ಬೋದು ಹಾಗೂ ತೊಲೆಗಳ ಮೇಲೆ ಬರೆಯುತ್ತಿದ್ದನೆಂಬ ಪ್ರವಾದವಿದೆ (ಕರಕ. ೬೮೦). [ಸಂ.]

**ಪ್ರವಾದಿ** (ನಾ). ೧. ಶಬ್ದವನ್ನು ಮಾಡುವುದು. ೨. ಮಾತನಾಡುವುದು. ೩. (ದೇವರ ಪ್ರತಿನಿಧಿಯಾಗಿ) ಪ್ರಚಾರ ಮಾಡುವವನು, ಬೋಧಕ : ಸರ್ವಜ್ಞ ಪಂಡಿತರ ಕವಿಯಲ್ಲ, ಪಾಮರರ ಪ್ರವಾದಿ (ಕರಕ. ೬೬೦) ; ಅದಕ್ಕೆ ಸಾಧುಗಳು, ಸಂತರು, ಪ್ರವಾದಿಗಳು . . . ಉತ್ತರ ಕೊಡುತ್ತ ಬಂದಿದ್ದಾರೆ (ರಮಣಾ .೦). [ಸಂ. ಪ್ರವಾದಿನ್]

**ಪ್ರವಾದಿಸು** (ಕ್ರಿ). ದೈವಿಕವಾದ ಮಾತುಗಳನ್ನು ಹೇಳು,–ವಿವರಿಸು. [ಪ್ರವಾದ + –ಇಸು]

**ಪ್ರವಾರಣ** (ನಾ). ೧. ಕೇಳಿದುದನ್ನು ಕೊಡುವುದು ; ಬಯಸಿದುದನ್ನೆಲ್ಲ ಪೂರೈಸುವ ದಾನ ; ಮಹಾದಾನ : "ಪ್ರವಾರಣವೆಂಬುದು ಮಹಾದಾನಂ" (ಹಲಾಯು. ೦೨೭-೬೯). ೨. ಫಲಾಭಿಲಾಷೆಯಿಂದ ಮಾಡುವ ದಾನ ; ಕಾಮ್ಯದಾನ : "ಪ್ರವಾರಣಂ – ಕಾಮ್ಯದಾನಂ, ಫಲಾಪೇಕ್ಷೆಯಿಂದ ಕೊಡುವದಕ್ಕೆ ಪೆಸರು" (ನಿಘಂ.೦ಚಿ. ೩೩೩). [ಸಂ.]

**ಪ್ರವಾಲ, ಪ್ರವಾಳ** (ನಾ). ೧. ಚಿಗುರು ; ಪಲ್ಲವ : "ಪಲ್ಲವಾಂಕುರವಮ ಪ್ರವಾಳ[ಪಾಠಾಂ. ಳ]ಮೆನಲು ಎಳೆಯ ಕೊನರಕ್ಕುಂ" (ಮಂಗರಾ. ೩೨-೯). ೨. ಹವಳ ; ವಿದ್ರುಮ : "ಪವಳಂ ಪ್ರವಾಲಂ[ಪಾಠಾಂ ಳಂ] ಕಪೋತಾಂಘ್ರಿ ವಿದ್ರುಮಂ ಹವಳಮಕ್ಕು" (ಮಂಗರಾ. ೯೩-೯೦) ೩. ವೀಣೆಯ ದಂಡ : ಮೂರುಸ್ಥಾಯಿಗಳಲ್ಲಿ (ಸ್ವರ)ಶುದ್ಧಿಗಾಗಿ ಇದರ ಪ್ರವಾಲವು ಸ್ವಲ್ಪ ಉದ್ದವಾಗಿರುತ್ತದೆ (ಕಕುಶ್ರ. ೧). **ಪ್ರವಾಳ:** ೧. "ಪ್ರವಾಳಃ, ಪಲ್ಲವಾಂಕುರಃ—ಈ ೨ ಮರದ ಕೊನರ್" (ಹಲಾಯು. ೩೦-೩೦) ; ಲೋಧ್ರ ಲವಂಗಪ್ರಕರ ಪ್ರವಾಳರುಚಿರಂ . . . ಕಣ್ಗೊಳಿಸುಗುಂ ಬುಷ್ಪಾಶ್ರಮೋಪಾಂತದೊಳ್ (ಕಾದಂಪೂ. ೨೦೩); ಕಾಂತಾ ಕಟಾಳಿಪ್ರಚಯದೊಳಬಳಾಳಿ ಪ್ರವಾಳಾಘದೋಳ್ . . . ತಾನಿರ್ದನಾ ಸ್ಥಾನದೊಳತುಳ ವನಸ್ಪರ್ಧಿಯೊಳ್ಪುವಸಂತಂ (ರಾಜಶೇ. ೯-೩೭). ೨. ಕಣ್ಗೆಸೆವುದು ಲಹರೀಲೋಳಬಾಳಪ್ರವಾಳ (ಎಕ. VIII, ಸೊರಬ. ೩೨೮-೮ ; 1178) ; ಭಾಳಾಕ್ಷದ್ಯುತಿ ಬಾಡವಾಗ್ನಿಗೆ ಜಟಾಜೂಟಂ ಪ್ರವಾಳಕ್ಕೆ ಸಪ್ರಾಳಂಕಾರಮದಾಹಿಕೋಟಿಗೆ . . . ಎಣೆಯಾಗಲು (ಕಾಸಕ. ೬೩-೩ ; 1179) ; ವದನಂ ಚಂದ್ರನಿಭಂ ವಿಲೋಚನಯುಗಂ ಪಂಕೇಜಪತ್ರಪ್ರಭಂ ರದನಂ ವಜ್ರಸಮಂ ಪ್ರವಾಳಸದೃಶಂ ದಂತಚ್ಛದಂ . . . ಭೂಪಾಳನಾ (ರಾಜಶೇ. ೩-೬). ೧, ೨ : ಕೃತಿಯಿಂತಿದಕ್ಕೆ ಮೊದಲಾವುದೆಂದೆನೆ ಪತಿವ್ರತೆಯಂತೆ ಕಾಂತಾನುಕೂಲದಿಂ, ಕೌರವಕ್ಷಿತಿವರನ ಸೇನೆಯಂತಾ ದ್ರೌಣಿಯಿಂ ವೃಕ್ಷದಂತಾ ಪ್ರವಾಳದಿಂದ . . . ಒಪ್ಪಿತು ಸಮುದ್ರಂ (ಶಾಶಕಂ. ೦-೨೩). ೩. "ಪ್ರವಾಳಃ, ವೀಣಾದಂಡಃ — ವೀಣೆಯ ದಂಡಿಗೆಕೋಲಿನ ಹೆಸರು" (ನಿಘಂ.೦ಚಿ. ೩೯); ಬೀಣೆಯಂ ಮಿಡಿದು

ನೋಡಿ ತಂತಿಯೊಳ್ ತನುರೋಮಮಂ ಸೋರೆಯೊಳ್ ಶಲ್ಕಮಂ ಪ್ರವಾಳದೊಳ್ ಪಾಷಾಣಮಂ ತೋಱೆ ಕುಡುವೊಡೆ ನಿರ್ದೋಷಮಪ್ಪ ವೀಣೆಯಂ ಕುಡಮೆನೆ (ಅರ್ಧನೇ. ೬-೦೯ ವ). ೪. ಕೂದಲು. ೫. ಹಸಿರು ಬಣ್ಣ. ೬. ಕೆಂಪು ಬಣ್ಣ: "ಎಳೆದಳಿರುಂ ರೋಮ ನೇಗಿಲ ಈಟು ಪಚ್ಚೆ ವಿಪಚಿ ಬಾಲುಂ ಪವಳಂ ಸಲೆ ಕೆಂಪಿದೆಂಟು ನಾಮಂ ಚಲುವಿಂ ರಾಜಿಪ ಪ್ರವಾಳಶಬ್ದಂ" (ಶಾಪಾಕಂ. ೩೭). [ಸಂ.]

ಪ್ರವಾಸ (ನಾ). ೧. ಪರಸ್ಥಳಕ್ಕೆ ಹೊರಟು ಬರುವುದು; ಪರಸ್ಥಳದ ಪ್ರಯಾಣ,—ಸಂಚಾರ: ತನ್ನೊಡವುಟ್ಟಿದರ್ಗಾದ ಪ್ರವಾಸಾಯಾಸಂಗಳ್ಗಂ ದೆಸೆಗಂ ಮನ್ಮು ಮಿಕ್ಕು ಬರೆ (ಶಂಕಚ. ೩-೮೦ ವ): ಹಿಂದೆ ಯಾರಣ್ಯಪ್ರವಾಸದಿ ಬಂದ ದೂರ್ವಾಸಾದಿ ಋಷಿಗಳಿಗಂದು ತೃಪ್ತಿಯ ನೆಸಗಲೋಸುಗ (ಗಗಕಾ. ೦೬-೯೮); ಬಲು ಚೆನ್ನಾಗಿದೆ, ನಿಮ್ಮ ಪ್ರವಾಸದ ಏರ್ಪಾಟು! (ಹಸುಹೊ. ೩೨೭). ೨. [ಕಾವ್ಯಮೀ] ವಿಪ್ರಲಂಭಶೃಂಗಾರದ ಪೂರ್ವಾನುರಾಗ, ಮಾನ, ಪ್ರವಾಸ ಮತ್ತು ಕರುಣಾತ್ಮಕವೆಂಬ ನಾಲ್ಕು ಬಗೆಗಳಲ್ಲಿ ಒಂದು; ನಲ್ಲನು ಸಂಚಾರದಲ್ಲಿರುವುದು: ಇನಿಯನಗಲ್ದು ಪೋಗಿ ಪರದೇಶದೊಳಿರ್ದಪನಾನುಮಿಲ್ಲಿ ಮಾವಿನ ತಳಿರ್ವಾಸಿನೊಳ್ ಪೊರಳುತಿರ್ದಪೆನಾಗಳುಮಿಂತೆ ನೀನುಮೆನ್ನನೆ ನಡೆ ನೋಡುತುಂ ನಘದೊಳಿರ್ದಪೆಯುಪ್ಪುದಱಿಂದೆ ನಿನ್ನನಾನನುಪಿವೆನೆನ್ನ ಮೆಯ್ ಬಡವೊ ನಲ್ಲನ ಮೆಯ್ ಬಡವೋ ನಿಶಾಕರಾ—ಇದು ಪ್ರವಾಸಂ (ಕಾವ್ಯಾವ. ೬೦೭): ಪೂರ್ವಾನುರಾಗ ಮಾನಾಖ್ಯ ಪ್ರವಾಸ ಕರುಣಾತ್ಮಕವೆಂಬ ವಿಯೋಗಚತುಷ್ಪಯವಿಶಿಷ್ಟರಿಂ ಪ್ರಚ್ಛನ್ನ ಪ್ರಕಾಶ ವಿಪ್ರಲಂಭ ವಿದಗ್ಧರಿಂ (ಅವೇಳ. ೦೯೯). [ಸಂ.]

ಪ್ರವಾಸಕಥನ (ನಾ). ದೇಶ, ವಿದೇಶಗಳಲ್ಲಿ ಮಾಡಿದ ಪ್ರವಾಸವನ್ನು ಕುರಿತ ವಿವರಣಾತ್ಮಕವಾದ ನಿರೂಪಣೆ: ತನ್ನ ಪ್ರವಾಸಕಥನವನ್ನು ಬರೆದಿಟ್ಟು ಎಂಬತ್ತೆಂಟನೆಯ ವಯಸ್ಸಿನಲ್ಲಿ ಇಹಲೋಕಯಾತ್ರೆ ಮುಗಿಸಿದನು (ಪ್ರಪಾಇ. I. ೦೩೯). [ಸಂ.]

ಪ್ರವಾಸನ (ನಾ). ೧. ಪರಸ್ಥಳಕ್ಕೆ ಕಳುಹಿಸುವುದು; ಊರಿನಿಂದ ಹೊರಗೆ ಕಳುಹಿಸುವುದು. ೨. ದೇಶಭ್ರಷ್ಟನನ್ನಾಗಿ ಮಾಡುವುದು; ಗಡೀಪಾರು ಮಾಡುವುದು. ೩. ಕೊಲ್ಲುವಿಕೆ; ವಧೆ: "ಮಾರಣಂ . . . ಪ್ರವಾಸನಂ . . . ಸಂಜ್ಞಪನಂ—ಈ ೨೧ ಕೊಲೆ" (ಹಲಾಯು. ೭೯-೩೨೩); ಪ್ರವಾಸನಕ್ಕೆ (ಕೊಂದು ಹಾಕುವುದಕ್ಕೆ) ನಾನೊಪ್ಪುವುದಿಲ್ಲ (ಕಶಾಕುಂ. ೦೦೦). [ಸಂ.]

ಪ್ರವಾಸಪತ್ರ (ನಾ). (ಒಬ್ಬನು ಒಂದು ದೇಶದಲ್ಲಿ ಪ್ರಯಾಣ ಮಾಡಲು ಮತ್ತು ಹಾಗೆ ಮಾಡುವಾಗ ತಕ್ಕ ಸಂರಕ್ಷಣೆ ಪಡೆಯುವ ಹಕ್ಕನ್ನು ಹೊಂದಿರಲು ಆ ದೇಶದ ನಿಯುಕ್ತಾಧಿಕಾರಿಯು ಕೊಡುವ) ಪ್ರವಾಸಾಧಿಕಾರಪತ್ರ; ರಹದಾರಿ: "ಪ್ರವಾಸದ ರಹದಾರಿ; ಪ್ರವಾಸಪತ್ರ; ಪಾಸ್‌ಪೋರ್ಟ್" (Pass—port. ಕತ್ರಿಶಿ. ೬೦); ಸಾಮಾನುಗಳನ್ನು ತೂಕ ಹಾಕಿಸುವುದು, ಪ್ರವಾಸಪತ್ರ ("ಪಾಸ್‌ಪೋರ್ಟ್") "ವೀಸಾ" ಮೊದಲಾದುವುಗಳನ್ನು ತನಿಖೆ ಮಾಡಿಸುವುದು . . . ಇದರಲ್ಲಿ ವೇಳೆ ಹಾಗೂ ಹೀಗೂ ಕಳೆಯಿತು (ಸಂಟರು. ೯೯). [ಸಂ.]

ಪ್ರವಾಸಮಂದಿರ (ನಾ). ಯಾತ್ರಿಕರು ಇಳಿದುಕೊಳ್ಳಲು ಮಾಡಿರುವ ವಸತಿ: ಅವರು ಪ್ರವಾಸಮಂದಿರದಲ್ಲಿ ಇಳಿದುಕೊಂಡರು (ಕಕಪು. ೩-೩೩). [ಸಂ.]

ಪ್ರವಾಸಸಾಹಿತ್ಯ (ನಾ). ಪ್ರವಾಸಕಥನದ ಬರವಣಿಗೆ: ನಮ್ಮಲ್ಲಿ ಪ್ರವಾಸ ಸಾಹಿತ್ಯ ಬಂದುದು ಈಚೆಗೆ (ರೂಶಿ). [ಸಂ.]

ಪ್ರವಾಸಿ (ನಾ). ಪ್ರವಾಸ ಮಾಡುವವನು; ಯಾತ್ರಿಕ: ತಾನು ಕಂಡ ಪ್ರವಾಸಿಗಳನ್ನೂ ನಾವಿಕರನ್ನೂ ವಿಚಾರಿಸಿ ತಾನೆ ರಚಿಸಿದ ಆತನ ಗ್ರಂಥವು ಪ್ರತ್ಯಕ್ಷತಃ ತೀರ ನಿರ್ದುಷ್ಟವೂ ಅಲ್ಲ . . . ನಿಷ್ಪಕ್ಷವೂ ಅಲ್ಲ (ಪ್ರಾಶಿಂ. ೬೦); ನಮ್ಮ ದೇಶಕ್ಕೆ ಬಂದು ಹೋದ ಪ್ರವಾಸಿಗಳ . . . ಕಥನಗಳನ್ನು ಹೇಳಿದ್ದಾಗಿದೆ (ಪ್ರಪಾಇ. II. vii ಕೃತ್ಯಾವಿಕ). [ಸಂ.]

ಪ್ರವಾಸಿಕೇಂದ್ರ (ನಾ). ಪ್ರವಾಸಿಗಳ ಆಕರ್ಷಣೆಯ ಮುಖ್ಯಸ್ಥಳ: ನಂದಿಬೆಟ್ಟ ಪ್ರವಾಸಿಕೇಂದ್ರವಾಗಿದೆ (ರೂಶಿ). [ಸಂ.]

ಪ್ರವಾಸಿಗ (ನಾ). = ಪ್ರವಾಸಿ: ಆ ವೃದ್ಧಿಯುಲು ಎಣ್ಬರ್ ಪ್ರವಾಸಿಗರುಣ್ಬ ಸತ್ರಕ್ಕೆ ಕೊಟ್ಟ ಮೊದಲ್ ಗದ್ಯಾಣಮಿಪ್ಪತ್ತಯ್ದು (ಕರ್ನಾಇ. XI-i, ೯೨-೩೯; 1054); ಹದಿಮೂಱು ಕಮ್ಮ ಗರ್ದ್ದೆಯುಂ ಬಂದ ಪ್ರವಾಸಿಗರುಣ್ಬಂತಾಗಿ ಆಚಂದ್ರಾರ್ಕಸ್ಥಾಯಿ ಮಾಡಿ (ಕಶಾ. IV. ೨೮-೨೦; 1054); ದೇಸಿಗ ಪ್ರವಾಸಿಗಳ ಆಹಾರದಾನಕ್ಕೆ ಬಿಟ್ಟ ಸತ್ರಂ (ಎಕ. VII. ಶಿಕಾಂ. ೦೯-೦೪; 1080). [ಪ್ರವಾಸ + —ಇಗ]

ಪ್ರವಾಸಿಬಂಗಲೆ (ನಾ). = ಪ್ರವಾಸಮಂದಿರ: ಪ್ರವಾಸಿಬಂಗಲೆಯ ಆಳುಗಳು ಕಾಫಿ ತಂದರು (ಹಸುಹೊ. ೩೬೨). [ಪ್ರವಾಸಿ + ಬಂಗಲೆ]

ಪ್ರವಾಸಿಮಂದಿರ (ನಾ). = ಪ್ರವಾಸಮಂದಿರ: ಆ ಊರಿಗೆ ಒಂದು ಮೈಲಿ ದೂರದಲ್ಲಿ ಲಕ್ಷಣವಾದ ಪ್ರವಾಸಿಮಂದಿರವಿದೆ (ಕಂಚಿಚು. ೪೭); ಹರ್ಷವರ್ಧನ . . . ದೇಶದಲ್ಲೆಲ್ಲ ಪ್ರವಾಸಿಮಂದಿರಗಳನ್ನೂ, ಬೌದ್ಧ ಸಂಘಾರಾಮಗಳನ್ನೂ ನಿರ್ಮಿಸಿದ್ದಾನೆ (ಪ್ರಪಾಇ. I. ೨೨೨). [ಸಂ.]

ಪ್ರವಾಸೋದ್ಯಮ (ನಾ). ದೇಶ ವಿದೇಶಗಳ ಜೀವನಪದ್ಧತಿ, ಸಂಸ್ಕೃತಿ, ನಾಗರಿಕತೆಗಳನ್ನು ಅರಿಯಲು ಅಥವಾ ವಿಹಾರಾರ್ಥವಾಗಿ, ಪ್ರೇಕ್ಷಣೀಯಸ್ಥಳಗಳಿಗೆ ಪ್ರವಾಸ ಮಾಡುವ ಜನರಿಗೆ ಅನುಕೂಲಗಳನ್ನು ಒದಗಿಸುವ, ಸಂಚಾರಕ್ಕೆ ಸಂಬಂಧಿಸಿದ ವ್ಯವಸ್ಥಿತವಾದ ಏರ್ಪಾಟು: ಅಭಿವೃದ್ಧಿಶೀಲದೇಶಗಳಲ್ಲಿ ಪ್ರವಾಸೋದ್ಯಮಕ್ಕೆ ಸರ್ಕಾರದಿಂದ ಹೆಚ್ಚು ಪ್ರೋತ್ಸಾಹ ದೊರೆಯಬೇಕು (ರೂಶಿ). [ಸಂ.]

ಪ್ರವಾಹ (ನಾ). ೧. ಹರಿಯುವಿಕೆ; ಪ್ರವಹಿಸುವಿಕೆ: "ಓಘಃ, ಪ್ರವಾಹಃ . . . ರಯಃ —ಈ ೬ ತೊಱೆಯ ಹರಿಹಂ" (ಹಲಾಯು. ೦೦೦-೯೭); ನವರೌಪ್ಯಕುಂಭಮೋ ನಾಕತರಂಗಿಣೀಪ್ರವಾಹದೊಳದೆ ಕಾಣಲಾದಪುದೆನಲ್ . . . ಪೊಳೆಯುತಿರ್ದುದು ಚಂಡಮರೀಚಿಮಂಡಲಂ (ಜಗು. ೯-೭೦). ೨. ದಂಡೆಯ ನೈಸರ್ಗಿಕಮಿತಿಯನ್ನು ಅತಿಕ್ರಮಿಸಿ ಹರಿಯುವ ಹೊನಲು; ನೆರೆ: ದಕ್ಷಿಣದ ನದಿಗಳು ಆಳದಲ್ಲಿ ಹರಿಯುವುದರಿಂದ ಪ್ರವಾಹದ ಅಪಾಯವೇನೋ ಕಡಿಮೆ (ಕಶಿ. ೨೫). ೩. ಎಡೆ ಬಿಡದಿರುವಿಕೆ; ಅವಿಚ್ಛಿನ್ನವಾದ ಮುನ್ನಡೆ: "ಪ್ರವಾಹಃ, ಪ್ರವೃತ್ತಿಃ—ಅವಿಚ್ಛಿನ್ನವಾಗಿ ಹರಿಯುವ ನೀರು ಮುಂತಾದವುಗಳ ಪರಂಪರೆ, ಪ್ರಸರಿಸುತ್ತಾ ಇರುವುದು" (ಸಿಕ್ಯಾಂಶಿ. ೩೬೦). ೪. ಒಂದು ನರಕದ ಹೆಸರು: ನಾದಪ್ರವಾಹ ರುಕ್ತಸುಪ್ರವಾಹ ಮೇಷವೆಂಬೈದು ಮುಂತ್ರಿನರಕಂಗಳ ಮಧ್ಯದಲ್ಲಿ ಚಂಡವೇಂಬರಸುನರಕವಿಹುದು (ಅವೇಳ. ೦೩೨). [ಸಂ.]

ಪ್ರವಾಹಿ (ನಾ). ಹರಿಯುವಂತಹುದು; ದ್ರವ: ಘನ, ಪ್ರವಾಹಿ, ವಾಯುರೂಪ ಈ ಮೂರು ರೂಪಗಳಿಂದ ಪದಾರ್ಥಗಳು ಕಣ್ಣಿಗೆ ಬೀಳುತ್ತವೆ (ಮುಂಬಶಿ. ೫-೩೦). [ಸಂ. ಪ್ರವಾಹಿನ್]

ಪ್ರವಾಹಿಕೆ (ನಾ). ಅತಿಸಾರದಲ್ಲಿ ಒಂದು ವಿಧ: ವಾಯುವಿನಿಂದ ಮಲ ಶ್ಲೇಷ್ಮ ರಕ್ತಂಗಳು ಕಲಸಾಗುತ್ತಿರಲಾಗಿ ಮಲವಿಲ್ಲದೆ ನೊರೆಸಹಿತ ಬರೀ ನೀರೇ ಸುರಿವುದು ಅದು ಪ್ರವಾಹಿಕೆ ಎನಿಸಿಕೊಂಬುದು. ಭಾಷೆಯಲ್ಲಿ ಇದನೇ ನೀರಕೊಂಬು ಎಂಬರು. ಅದಕ್ಕೆ ಎಳ್ಳ, ತುಪ್ಪ, ಮೊಸರು, ಜೇನುತುಪ್ಪ, ಶುಂಠಿ, ಖಂಡಸಕ್ಕರೆ, ಇಷ್ಟನೂ ಸಮಾಂಶವಾಗಿ ಕೂಡಿಸಿ ಕೊಡಲು ಆ ಕ್ಷಣದಲ್ಲಿ ಪ್ರವಾಹಿಕೆ ಪರಿಹರವಹದು (ವೈದ್ಯಸಾ. I. ೨೨೩). [ಸಂ. ಪ್ರವಾಹಿಕಾ]

**ಪ್ರವಾಹಿನಿ** (ನಾ). ನದಿ : ಮಹಾಪ್ರವಾಹಿನೀಸಲಿಲಸಮ್ಮಿಶ್ರಕರ್ಪೂರದಳ ಬಹುಳಕಾಂತಿದಂತುರಿತ ಚಂದ್ರಕಾಂತಕಲಶಂಗಳಿಂ . . . ಮನಂಗೊಳಿಪ ದೇವಪೂಜಾಗೃಹಮಂ ಪೊಕ್ಕು (ಹಂಗಾಪು. ೦೨-೨೪). [ಸಂ. ಪ್ರವಾಹಿನೀ]

**ಪ್ರವಾಹಿಸು** (ಕ್ರಿ). ಹರಿ ; ಪ್ರವಹಿಸಂ : ಪರಮನದಿ ಕಟ್ಟನೆ ಕರಗ ಮೇಣ್ಪ್ರವಾಹಿಸುತ್ತಿಯಿಯನೆ ಗಂಗೆ ಕಂಗೊಳಿಸಿತು (ಪದ್ಮರಾ. ೦೩-೩೦) ; ಅಡಿಗಡಿಗೆ ಹತ್ತುಸಾವಿರಲಕ್ಷಕೋಟಿಗಿಮ್ಮಡಿಯಾಗಿ ಪೆರ್ಚಿ ಪ್ರವಾಹಿಸಿ . . . ಜಲಮಯವಾಗಲು (ಚಾಪು. ೪೬-೨೬) ; ಕಾವೇರಿಯು . . . ಪ್ರವಾಹಿಸಲು (ಕಾವ. ೨೩-೩೦). [ಪ್ರವಾಹ + —ಇಸು]

**ಪ್ರವಾಳ** ' ಪ್ರವಾಲ ' ನೋ.

**ಪ್ರವಾಳಮಣಿ** (ನಾ). ೧. ಒಂದು ಬಗೆಯ ರತ್ನ : ಹವಳ. ೨. [ಕಾಮಶಾ] ಒಂದು ವಿಧವಾದ ದಂತಕ್ಷತ : ರಾಗೋಪಗೂಢ ಅಂಕುಲಯಾನಕ ಪ್ರವಾಳಮಣಿ . . . ವರಾಹಚರ್ವಿತಮೆಂಬಷ್ಟವಿಧ ರದನಕ್ಷತ ಲಾಕ್ಷಣಿಕಂ (ಚಿಲೇ. ೦೬೯) ; ಆ ಎಡಗಲ್ಲದಲ್ಲಿ ಪಲ್ಲು ತುಟಿಯ ಎರಡರ ಕೇಷಯೋಗದಿಂ ಅಡಿಗಡಿಗೆ ಒಂದೇ ಠಾವಿನಲ್ಲಿ ದಂತಕ್ಷತ ಮಾಡುತ್ತಿರಲು ಅಭ್ಯಾಸಸಾಧನೆಯಿಂ ಪ್ರವಾಳಮಣಿ ಎಂಬುದಹುದು (ಕಾಮಶಾ. ೩೨೯). [ಸಂ. ಪ್ರವಾಲಮಣಿ]

**ಪ್ರವಿಕಸಿತ** (ಗು). ಚೆನ್ನಾಗಿ ಅರಳಿರುವ : ವಿಕಾಸವಾದ : ಪ್ರವಿಕಸಿತಾಂಬುಜವನಮಂ ಸವಿಶೇಷಂ ಪೋಲ್ಗುಮೆಂಗೆ ವಾಕ್ಯೋಪಮೆಯಂ (ಕವಿರಾ. ೩-೬೨). [ಸಂ.]

**ಪ್ರವಿಖ್ಯಾತಿ** (ನಾ). ಬಹಳ ಪ್ರಸಿದ್ಧಿ ; ಅತಿಖ್ಯಾತಿ : "ವಿಶ್ರಾವಃ, ಪ್ರವಿಖ್ಯಾತಿಃ—೨ ಅಧಿಕವಾದ ಪ್ರಸಿದ್ಧಿ, ಹೆಚ್ಚಾದ ಹೆಸರುವಾಸಿ" (ಅಭ್ಯಾಂಟಿ. ೩೬೩). [ಸಂ.]

**ಪ್ರವಿಘಟನ** (ನಾ). ಸೀಳಂವುದು : ಕುಟಿಲಪರಸಮುಯಕ್ರಿಯಾಪ್ರವಿಘಟನ ಧೇವರ ದಾಸಗಳ ತತ್ಪಮುಕರಸ್ಥಳಘಟಿತಮಾಗಿ ಪೃಥವಿಸುತಮಿರಲು (ಆಪು. ೩೦-೬೨). [ಸಂ.]

**ಪ್ರವಿಚಾರ** (ನಾ). ೧. ಗೌರವ. ೨. ಬಗೆ ; ರೀತಿ. ೩. [ಜೈನ] ಇಂದ್ರಿಯಸುಖಾನುಭವ : 'ಕಾಯಪ್ರವಿಚಾರ', 'ಪ್ರವೀಚಾರ' ಪರಾ. [ಸಂ.]

**ಪ್ರವಿತತ** (ಗು). ಹರಡಿದ ; ವ್ಯಾಪ್ತವಾದ : ಪ್ರವಿತತ ಪುಣ್ಯೋದಯದಿಂ ಭುವನಸ್ತುತಸುಕೃತಿಯೆನಿಪ ಕುವಳಯಕಮಳೋತ್ಸವಕರ ವೆಣೀ ಸ್ವಾಮಿಗೆ ಸುವಿಧಿಮೆಸರ್ ಪುಷ್ಪದಂತವೆಸರನ್ವರ್ಥಂ (ಪುಷ್ಪ. ೦೨-೩೩) ; ಭವಭವದಂಘ್ರಿಸ್ಮರಣಮಿದವಿರತವಿರ್ಕೆಮಗೆ ವಿನ್ನ ಗಣಮುಂ ನೀನುಂ ಪ್ರವಿತತಸುಖಮಿರ್ಪುದು (ಧ್ಯಕಂ. ೯-೬೩). [ಸಂ.]

**ಪ್ರವಿದಾರಣ** (ನಾ). ೧. ಸೀಳಂವಿಕೆ ; ಒಡೆಯುವುದು. ೨. ಕಾಳಗ ; ಯುದ್ಧ : "ಸಂಗ್ರಾಮಃ . . . ಪ್ರವಿದಾರಣಂ . . . ವಿಗ್ರಹಃ —೩೩ ಕಾಳೆಗಂ" (ಹಲಾಯು. ೬೩-೨೯೯). [ಸಂ.]

**ಪ್ರವಿದಿತ** (ಗು). ಚೆನ್ನಾಗಿ ತಿಳಿದ : ಪ್ರಸಿದ್ಧವಾದ : ಇವು ಕಾಳಿಂಗಾಭಿಧೇಯಪ್ರವಿದಿತವಿವು ಕಾಂಭೋಜ ಬಾಹ್ಲೀಕದೇಶೋದ್ಭವಮಶ್ವಂ ರಾಶಿಯಾಗಿರ್ದಪುವು (ಅಜಿಂಪು. ೬೨೩) ; ಪ್ರವಿದಿತಕೌಶಿಕಪಾದಂ ದಿವಿಜಾಶಾಶಿಖರಿ ಶಿಖರಶೇಖರನಾದಂ (ಹಂಪಂ. ೬೦-೦೯). [ಸಂ.]

**ಪ್ರವಿನಾಶನ** (ನಾ). ಸಂಪೂರ್ಣವಾದ ನಾಶ : ಘನಮಿಥ್ಯಾತ್ವದವಾನಳ ಶಿಖಿದಗ್ಧಜೀವಕ್ಕೆ ದೃಷ್ಟಿಮೋಹಪ್ರವಿನಾಶನೆಯಿಲ್ಲದಂದು ಪುಟ್ಟದು ಮನದೊಳ್ ಸ್ವವರೋಕ್ಷಸಾಧನಂ ಸಮ್ಯಕ್ತ್ವಂ (ಅಪು. ೩-೩೨). [ಸಂ.]

**ಪ್ರವಿಪುಳ** (ಗು). ಹೆಚ್ಚಾದ ; ಬಹಳವಾದ : ಪ್ರವಿಪುಳಲಕ್ಷ್ಮೀನಂದಸಂ . . . ಪ್ರಾಪ್ತಮಹಾಜ್ಞಾನಮುಪ್ಪದಜಿಂದವಾಪ ಭವದಾಜ್ಞೆಪೊಲಿದಟ ಕವಕವೇದಿಕೆಯಸೆಗುಂ (ಚಾರ್ಗಿ. ೯-೬). [ಸಂ. ಪ್ರವಿಪುಲ]

**ಪ್ರವಿಭಕ್ತ** (ಗು). ಬೇರೆಯಾದ ; ಪ್ರತ್ಯೇಕವಾದ : ಅವಟ ವಿಪರ್ಯಯವೃತ್ತಿ ಪ್ರವಿಭಕ್ತವಿಕಲ್ಪಮಕ್ಕುಮುತ್ತರಮಾರ್ಗಂ (ಕವಿರಾ. ೨-೫೩). [ಸಂ.]

**ಪ್ರವಿಭಗ್ನ** (ಗು). ಚೆನ್ನಾಗಿ ಮುರಿದ ; ಬಹಳವಾಗಿ ತುಂಡಾದ : ಅದು ಮದದಂತಿದಂತಮುಸುಲ ಪ್ರವಿಭಗ್ನಮಹಾಮಹೀರುಹಾಸ್ಪದಂ (ಹಂಪಾ. ೩-೦೦). [ಸಂ.]

**ಪ್ರವಿಭಾಗ** (ನಾ). ಭಾಗ ; ಪಾಲು : ಎಸೆದಿರೆ ಲೋಕವಿಭಾಗಪ್ರಸರಪ್ರವಿಭಾಗಮುಂ ಸವಿಸ್ತರಮಭಿವರ್ಣಿಸಲಸದಳಂ (ಸಮಶಾ. ೦೦-೯೦) ; ಯೋಗಂ ಪಲವುಮಲಂಕೃತಿಗಾಗಿರೆ ಸಂಕ್ಷೇಪಮೆಂಬುದನ್ವರ್ಥಗತಂ ಯೋಗಮುಮಂಗಾಂಗಪ್ರವಿಭಾಗಂ ಸಮಕ್ಷಕಮೆಂದೆರಟ್ಟಿಜನಕ್ಕಂ (ಶಬ್ದಾ. ೬೬೦). [ಸಂ.]

**ಪ್ರವಿಭಾಸಿ** (ನಾ). ಬಹಳವಾಗಿ ಪ್ರಕಾಶಿಸುತ್ತಿರುವವನು ; ತೇಜಸ್ವಿ : ಗಂಧೇಭಕಂಧರಬಂಧಪ್ರವಿಭಾಸಿಯಪ್ಪರಿಗನಂ ಕಾಣುತ್ತೆ ಕಣ್ಸೋಲ್ತು (ಹಂಪಾ. ೯-೩೮). [ಸಂ. ಪ್ರವಿಭಾಸಿನ್]

**ಪ್ರವಿಮಲ, ಪ್ರವಿಮಳ** (ಗು). ೧. ಬಹಳ ಪರಿಶುದ್ಧವಾದ, —ನಿರ್ಮಲವಾದ : ಪ್ರವಿಮಲಮತಿಗನಿತುಂ ರಾಜವಿದ್ಯೆಗಳ್ ನೆಱೆಯುವಮಲಕೀರ್ತಿಗೆ ದಶದಿಗ್ವಿವರಂ ನೆಱೆಯುವು (ಶಾಂತಿಪು. ೨-೩) ; ಪ್ರವಿಮಲರುಚಿಬಿಂಬಂ ವರ್ಧಿತೋದ್ಯನ್ನನೋಜಂ . . . ಮೂಡಿದಂ ಪೂರ್ಣರಾಜಂ (ಅಭ್ಯಟಿ. ೦೦-೦೯). ಪ್ರವಿಮಳ : ೧. ಪ್ರವಿಮಳಜಿನಶಾಸನದಿಂ ಪವಿತ್ರಮೆನೆ ಮಾಡಿ (ಸಮಶ. ೦-೯೯). (ನಾ). ೨. ಬಹಳ ಪವಿತ್ರನಾದವನು : ಪ್ರವಿಮಳನಶಿಸ್ವತಂತ್ರಂ ಭವವ್ಯತಿಸಂಸಾರಕರ್ಮರಹಿತಂ (ಧ್ಯಕಂ. ೩೫-೬೬). [ಸಂ.]

**ಪ್ರವಿಮಳ** ' ಪ್ರವಿಮಲ ' ನೋ.

**ಪ್ರವಿರಳ** (ಗು). ೧. ಅಪರೂಪವಾದ ; ದುರ್ಲಭವಾದ : ಶ್ರೇಷ್ಠವಾದ : ' ಪ್ರವಿರಳಮಣಿ ' ಪರಾ. [ಸಂ. ಪ್ರವಿರಲ]

**ಪ್ರವಿರಳಮಣಿ** (ನಾ). ಅತ್ಯಂತ ದುರ್ಲಭವಾದ ಮಣಿ ; ಅಪರೂಪವಾದ ರತ್ನ : ಪ್ರವಿರಳಮಣಿಯಿರೆ ವರ್ಣಿಯನವಿರಳಗುಣಸಹಜಕವಿಯ ಕಾವ್ಯಮದಿರೆ ಬಲ್ಲವರಿತರಕಾವ್ಯಮಂ ಮಾಡುವನ್ನರಾರ್ ಕರ್ಣಹೃದಯನವಭೂಷಣಮಂ (ಚಾರ್ಗಿ. ೦-೬೬). [ಸಂ. ಪ್ರವಿರಲಮಣಿ]

**ಪ್ರವಿಲಿಪ್ತ** (ಗು). ಅಂಟಿಕೊಂಡ ; ಅಂಟಿದ : ದಿವಿಜೇಂದ್ರವನಿತೆ ದೇವಾಂಗವಸ್ತ್ರದಿಂ ತೊಡೆದಳು ಜನಾರ್ಧಕದೇಹಪ್ರವಿಲಿಪ್ತಸ್ನಪನಪಯೋಲವಮಂ ನೀರಂಜಿಪಂತೆ ರತ್ನಮನಾಗಳ್ (ಪುಷ್ಪ. ೦೩-೩). [ಸಂ.]

**ಪ್ರವಿಲೀನ** (ನಾ). ಲೀನಗೊಳಿಸುವುದು ; ಒಳಸೇರುವಂತೆ ಮಾಡುವುದು : ದಿನಕರಮುದಯಗಿರಿಶಿಖರವಿಶೇಷಭೂಷಣಂ ತಮೋರಿಪುಬಳಮುಂ ಪ್ರವಿಲೀನಂ ಕೂಡಿದವವಯವದೊಳ್ ತಾರಾವಿತಾನವೀಜಮುನಟ್ಟಿದಂ (ಶಾಂಪು. ೩-೩೬). [ಸಂ.]

**ಪ್ರವಿಲೋಮ** (ನಾ). ವಿರುದ್ಧಕ್ರಮ ; ಪ್ರತಿಷೇಧ : 'ಪ್ರವಿಲೋಮಕ್ರಿಯೆ' ಪರಾ. [ಸಂ.]

**ಪ್ರವಿಲೋಮಕ್ರಿಯೆ** (ನಾ). [ವ್ಯಾಕ] ವಿರುದ್ಧಕ್ರಿಯೆ ; ಪ್ರತಿಷೇಧಕ್ರಿಯೆ ; ನಿಷೇಧಕ್ರಿಯೆ : ಅವಧಾರಿತಿಕರ್ಮವದುಳ್ಳಾತುವಿನ ಈಕಾರಕ್ಕಣತ್ವಮಂಬುದಗೆ ಟುಕಾರಂ ಪ್ರವಿಲೋಮಕ್ರಿಯೆಗಮುಪೆಂದಪೆಂದು ಬಂದಿರ್ಪುದುಗಮುಪುಗಂ ಪ್ರಚುರಂ (ಶಮಶ. ೨೯೯). 'ವಿಲೋಮಕ್ರಿಯೆ' ಪರಾ. [ಸಂ. ಪ್ರವಿಲೋಮಕ್ರಿಯಾ]

**ಪ್ರವಿವೇಕ** (ನಾ). ೧. ಅತಿಶಯವಾದ ಜ್ಞಾನ, —ವಿವೇಕ : ಲೋಕವ್ಯವಹಾರಮುಖ್ಯಸಕಲಕಲಾಕುಶಲರಾದರು ಧನುಃಪ್ರವಿವೇಕನಿಪುಣರನಱಸುತ್ತಿದ್ದನು ಮತ್ತೆ ಗಾಂಗೇಯ (ಕುಮಾವ್ಯಾ. ೬-೨೦). ೨. ಪೂರ್ಣವಾದ ಏಕಾಂತ. [ಸಂ.]

**ಪ್ರವಿಷ್ಟ** (ಗು). ೧. ಪ್ರವೇಶಿಸಿದ ; ಒಳಗೆ ಹೋದ. (ನಾ). ೨. ಒಳಗಿರುವುದು ; ಸೇರಿರುವುದು : ರಾಜಧಾನಿ ಉದ್ಯಾನವನೊಳು ಪ್ರವಿಷ್ಟಂ ವಂಶಸವುಂದ್ರದ ಶ್ರೀವತ್ಸಾಧೂರೆ (ಶಾಂ. ೦೩-೩-೨೩; ೧೧೩೬). ೩. ತಲ್ಲೀನನಾದವನು: ರಾಮಭಟ್ಟಾರಕರೆಂತುಮುಪ್ಪರಿತಚಿತ್ತದಿಂ ಶುಕ್ಲಧ್ಯಾನಪ್ರವಿಷ್ಟರಾಗಿ (ಶಂಶಾಮಾ. ೦೩-೬೬ ಕ). [ಸಂ.]

**ಪ್ರವೀಚರಣ** (ನಾ). = ಪ್ರವಿಚಾರ ೩ : ಒಯ್ಯದೆ ಪೊಯ್ಯದೊಂದು ಪುರುಡಪ್ಪದ ಚುಂಬಿಸದಿಂತು ದೇವಿಯರ್ ಮೆಯ್ಯಳವಾರೆ ಕೂಡಿಸದ ಕೂಟದ ಸಂತಸಮಂದಿವಲ್ಲವಾರಯ್ಯ ಮನಃಪ್ರವೀಚರಣದಿಂ ಸಮಸಂದು ಚತಾರ್ಥವೃತ್ತಿ ತಳ್ಪೊಯ್ಯ ಮನೋಜಕೇಳಿಗವಾರಂ ತಣದಂ ಸುರತೋಪ ಭೋಗದೊಳ್ (ಚಂದ್ರಪ್ರ. ೯-೩೩). ☛ ಇದಂ ಛಂದಸ್ಸಿಗಾಗಿ ಮಾಡಿ ಕೊಂಡ ರೂಪ. [< ಸಂ. ಪ್ರವಿಚರಣ]

**ಪ್ರವೀಚಾರ** (ನಾ). = ಪ್ರವಿಚಾರ ೩ ; ☛ ಕಾಯಪ್ರವೀಚಾರವೂ ಸೇರಿದಂತೆ ಸ್ಪರ್ಶಪ್ರವೀಚಾರ, ರೂಪಪ್ರವೀಚಾರ, ಶಬ್ದ ಪ್ರವೀಚಾರ, ಮನಃಪ್ರವೀಚಾರಗಳೆಂದು ಪ್ರವೀಚಾರಗಳು ಐದು ಬಗೆ. ಇವುಗಳಲ್ಲಿ ಕಾಯಪ್ರವೀಚಾರವು ಈಶಾನಕಲ್ಪದವರೆಗೂ ಇರುತ್ತದೆ. ಇಲ್ಲಿನ ದೇವತೆಗಳು ಮನುಷ್ಯರಂತೆ ಸ್ತ್ರೀವಿಷಯ ಸುಖವನ್ನು ಅನುಭವಿಸುವರು. ಮುಂದೆ ಸನತ್ಕುಮಾರ, ಮಾಹೇಂದ್ರಕಲ್ಪಗಳ ದೇವತೆಗಳು ದೇವಾಂಗನೆಯರ ಸ್ಪರ್ಶಮಾತ್ರ ದಿಂದಲೇ ಇಂದ್ರಿಯಜನಿತಸುಖವನ್ನು ಹೊಂದುವರು. ಬ್ರಹ್ಮ ಬ್ರಹ್ಮೋತ್ತರ, ಲಾಂತವ, ಕಾಪಿಷ್ಠಕಲ್ಪಗಳ ದೇವತೆಗಳು, ದಿವ್ಯಾಂಗನೆಯರ ಶೃಂಗಾರವಿಲಾಸದ ವೇಷಗಳ ಅವಲೋಕನ ಮಾತ್ರದಿಂದಲೇ ಇಂದ್ರಿಯಜನಿತಸುಖವನ್ನು ಹೊಂದುವರು, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರಕಲ್ಪಗಳ ದೇವತೆಗಳು ದೇವವನಿತೆಯರ ಮಧುರಸಂಗೀತ, ಮೃದುಲಲಿತವಾದ ನಗು ಹಾಗೂ ಭೂಷಣಗಳ ಧ್ವನಿಯ ಶ್ರವಣಮಾತ್ರದಿಂದಲೇ ಇಂದ್ರಿಯ ಜನಿತಸುಖವನ್ನು ಹೊಂದುವರು. ಆನತ, ಪ್ರಾಣತ, ಆರಣ, ಅಚ್ಯುತಕಲ್ಪಗಳ ದೇವತೆಗಳು ಸುರಾಂಗನೆಯರನ್ನು ಹೊಂದುವ ಮನಃಸಂಕಲ್ಪಮಾತ್ರದಿಂದಲೇ ಇಂದ್ರಿಯಜನಿತಸುಖವನ್ನು ಹೊಂದುವರು: ಪ್ರವೀಚಾರಮೆಂಬುದು ವೇದನಾಪ್ರತೀಕಾರಂ (ತತ್ತ್ವಸೂ. ೦೬೨); ಪುರುಷಂ ತನ್ನೊಳ್ಕೊಡರ್ಚಿಸಿರ್ದ ವಿಳಸದ್ರೂಪಪ್ರವೀಚಾರ ಮುಂ ಸುರಲೋಕಸ್ಥಿತಿ ದೇಹದೊಂದನಿಸಿದತ್ತಾ ಕಾಂತೆಗಾ ಗರ್ಭದೊಳ್ (ಚಂದ್ರಪ್ರ. ೦೬-೨೯). 'ಕಾಯಪ್ರವೀಚಾರ' ಪರಾ. [< ಸಂ. ಪ್ರವಿಚಾರ]

**ಪ್ರವೀಣ** (ನಾ). ೧. ಕುಶಲ; ಪರಿಣತ ; ನಿಪುಣ : "ಚತುರಃ . . . ಪ್ರವೀಣಃ — ಈ ೧೧ ಬಲ್ಲವಂ" (ಕರ್ನಾಟು. ೩೩-೦೬೦); ದಿವಸೇಂದ್ರಂ ಕನ್ನೆಯೊಳ್ ಕೂಡಿರೆ ಲಿಪಿಗಣಿತಾಲೇಖ್ಯಕಾವ್ಯಪ್ರವೀಣಂ (ಜಾತ. ೦೭-೦೩); ಅವನು ಕಂದುಕಾಗಮ (A kind of Polo) ಎಂಬ ಆಟದಲ್ಲಿ ಪ್ರವೀಣ ನಾಗಿದ್ದನೆಂದು ಉಲ್ಲೇಖಿಸಿದೆ (ಜಾಚಿತ. ೦೨); ಸಸ್ಯಶಾಸ್ತ್ರದ ಪರಿಚಯವಿಲ್ಲದ ವರು ಈ ಕಾರ್ಯವನ್ನು . . . ಓಷಸಸ್ಯಸಂಗ್ರಹಾಲಯಗಳಿಗೆ ಕಳುಹಿಸಿ, ಅಲ್ಲಿರುವ ಪ್ರವೀಣರಿಂದ ಮಾಡಿಸಬಹುದು (ಹಸುಹೊ. ೦೩೭). ೨. ಒಬ್ಬ ದೇವತೆಯ ಹೆಸರು : ಮಕರಧ್ವಜ ನಳಕೂಬರ ಜಯಂತ ಅನಿರುದ್ಧ ಕೂಚಿಮಾರ ಪಾಂಚಾಲ ಪಲ್ಲವ ಪ್ರವೀಣಾದಿ ದೇವಮಿಟರುಂ (ಅಜಿತ. ೦೭೦). [ಸಂ.]

**ಪ್ರವೀಣತೆ** (ನಾ). ನಿಪುಣತೆ ; ಪರಿಣತಿ : ಬರೆಹ ವಾಚನ ಗಣಿತ ಶಬ್ದಾರ್ಥರಸ ಭಾವೋಕ್ತಿ ಪ್ರವೀಣತೆ ಭರತ ಛಂದೋವ್ಯಾಕರಣ . . . ಕಲೆಗಳು ಸ್ಮರಿಸಲೊಡನೆ ಮುಖೋದ್ಗತಂ ಬಸವಂಗೆ (ಬಸಪು. ೩-೯೨). [ ಸಂ. ಪ್ರವೀಣತಾ ]

**ಪ್ರವೀಣೆ** (ನಾ). ಪರಿಣತೆ ; ನಿಪುಣೆ : ತನ್ನೊಳೆಂತು ಪೋಲಿಸುವೊಡ ಪೋಲಿಸಲ್ಕೆ ದೊರೆ ವೀಣೆಯನಾ ಸುರತಪ್ರವೀಣೆಯುಂ (ಆದಿಪು. ೩-೬೬); ಅವಳು ಸಂಗೀತದಲ್ಲಿ ಪ್ರವೀಣೆ (ಒಂ). [ಸಂ. ಪ್ರವೀಣಾ]

**ಪ್ರವೀರ** (ಗು). ೧. ಪರಾಕ್ರಮಶಾಲಿಯಾದ : 'ಪ್ರವೀರಪುರುಷ' ಪರಾ. (ನಾ). ೨. ಶೂರ ; ವೀರ ; ಪರಾಕ್ರಮಿ : ನಿಸ್ಸಹಾಯ ಸಾಹಸೋತ್ಕೀರ್ಣ ಮಹಾಹವಾರ್ಣವ ಪ್ರವೀರಪ್ರಾರಬ್ಧ ರಥಚಕ್ರ ಸಮುದ್ಘಟಕಥೆಗಳನ ಕೇಳಲುಂ (ಆದಿಪು. ೬-೩೮); ಬಗೆಯದೆ ದಾನವಾಧಿಪನ ದೋರ್ಬಲಮುಂ ಖಚರಪ್ರವೀರರಂ ಬಗೆಯದೆ (ಶಂತಾಮಾ. ೦೦-೦೩೯). ೩. ಶ್ರೇಷ್ಠಪುರುಷ ; ಉತ್ತಮಪುರುಷ. [ಸಂ.]

**ಪ್ರವೀರಪುರುಷ** (ನಾ). ಪರಾಕ್ರಮಿಯಾದವನು ; ವೀರಪುರುಷ : ವಿವಿಧಾಯುಧಪೂರ್ಣಂಗಳ್ ಪ್ರವೀರಪುರುಷಪ್ರಯುಕ್ತಂಗಳ್ . . . ರಥಂಗಳ್ (ಆದಿಪು. ೦೦-೩೨). [ಸಂ.]

**ಪ್ರವುಡ**, **ಪವುಡ**, **ಪ್ರಹುಡ** (ನಾ). ೧. ನಿಪುಣ; ಪ್ರೌಢ: ಗವುಡನೊಳು ಹಗೆತನವು ಕಿವುಡನೊಳು ಏಕಾಂತ ಪ್ರವುಡನೊಳು ಮೂಢನುಪದೇಶ ಹುಸಿದದ್ದು ತವುಡು ತಿಂದಂತೆ (ಸರ್ವಜ್ಞ. ೦೩೯೨). ೨. [ಕಾಮಶಾ] ರತಿ ಶಾಸ್ತ್ರದಲ್ಲಿ ಚತುರನಾದವನು : ಕೂಡಬಲ್ಲಂಗೆ ದಂದ್ರಮಂ ಪ್ರವುಢ [ಡ]ಗಂ ಮೂಢಾಂಗನಾರಾಧಮಂ . . . ನೀಡುವಂ ಸುಡು ಪಾಪಿಷ್ಠನ ದೊಪ್ಮನಂ (ಸೋಮೇಶ. ೩೩). ಪವುಡ : ೧. "ಪವುಡ (ಪಹುಡ) — ಪ್ರೌಢ—ಬಲ್ಲಿದ" (ಅಭಿಕೋ. ೨೩). ಪ್ರಹುಡ : ೨. ಪುರುಷಪ್ರಹುಡನು ಯಾವನೆಂದರೆ ಸುರಸ ನಡವಳಿಯಿಂದ ತಿಳಿವರು (ಕಲ್ಯಾಣ. ೯-೦೯). [ <ಸಂ. ಪ್ರೌಢ ]

**ಪ್ರವುಡೆ** (ನಾ). ೧. ಚತುರೆ ; ಪರಿಣತೆ : ದವುಡ ಹೇಗಟಿ ಮಲಹರಿಯ ಹಾಡಿಸಿಕೊಂಬ ಪ್ರವುಡೆಯರಿರ್ದರು (ಸೋಮೇಶ. ೨೦-೩೯). ೨. [ಕಾಮಶಾ] ರತಿಶಾಸ್ತ್ರನಿಪುಣೆ ; ವಿದಗ್ಧೆ : ಪ್ರವುಡೆ ಬಲುಬುದ್ಧಿ ಪೇಳಲು ಬಾಲೆ ಯುಂದಾಯುಭುಜವಾಗೆ ಹಿಗ್ಗಿ (ಶಂಕರ. ೬-೦೯೩). [< ಸಂ ಪ್ರೌಢಾ]

**ಪ್ರವೃತ್ತ** (ಗು). ೧. ತೊಡಗಿದ ; ಪ್ರವರ್ತಿಸಿದ. (ನಾ). ೨. ಪ್ರವ ರ್ತಿತವಾದುದು : ಎಲ್ಲಿದಳೊ ಭಾನುಮತಿ . . . ಎಲ್ಲಿತ್ತೊ ಗೀತವಾದ್ಯಂ ಸಲ್ಲಲಿತವಧೂಜನಪ್ರವೃತ್ತಂ ನೃತ್ಯಂ (ಗದಾಯು. ೩-೯೩). ೩. ಉಪ ಯೋಗವಾದುದು : ದ್ರಾವಿಡ ಎಂಬ ಈ ಹೆಸರು ಹಳೆಯದಾದರೂ ಈಗಿನ ಅರ್ಥದಲ್ಲಿ ಅದು ಹೊಸದೇ. ಈ ಶಬ್ದ ಮಹಾಭಾರತದಲ್ಲಿ ಒಂದು ಪ್ರಾಂತದ ಹೆಸರಾಗಿ ಪ್ರವೃತ್ತವಾಗಿದೆ (ಕಮ್ಮಟ. ೦೩). ೪. ತೊಡಗಿ ದವನು ; ಆರಂಭಿಸಿದವನು : ಅಸಮರಸವತ್ತಾಂಡವಾರಂಭಣಕ್ಕಾರ ಭಟೀವೃತ್ತಪ್ರವೃತ್ತಂ ಸುರಪರಿವೃಢನೊಲ್ದಾಡಿದಂ ಭಕ್ತಿಯಿಂದಂ (ಶಾಂತಿಪು. ೦೦-೬೨) ; ವಿವೇಕಹೀನರಂತೆ ಆತ್ಮಘಾತಕ್ಕೆ ಪ್ರವೃತ್ತನಾಗಬೇಡ (ಕೃಕಕ್ಕ. ೯). [ಸಂ.]

**ಪ್ರವೃತ್ತಿ** (ನಾ). ೧. ನಡೆ ; ಓಟ ; ಹರಿವು ; ಗತಿ. ೨. ಪ್ರಾರಂಭ ; ಉಪಕ್ರಮ. ೩. (ಐಹಿಕಜೀವನದಲ್ಲಿ ತೋರುವ) ಆಸಕ್ತಿ. — ಅಭಿಲಾಷೆ : ಇಂತೀ ಪ್ರಕಾರದಿಂ ಷಟ್ಸ್ಥಲಬ್ರಹ್ಮವು ನಿರಂತರಂ ಸೃಷ್ಟಿ ಮಾರ್ಗದೊಳುಂ ಪ್ರವೃತ್ತಿಮುಖಮಂ ತಳೆವುತ್ತೈಕ್ಯಾದಿಭಕ್ತಾಂತ ವಾಗಿಪ್ಪುದದುವೆ ಸಂಕ್ಷೇಪದಿಂದ (ಅತಿಶಂ. ೩೦-೨೨): ವೇದಾಂತವು ಬರಿಯ ಸನ್ಯಾಸವನ್ನು ಬೋಧಿಸುವುದಿಲ್ಲ. ಪ್ರವೃತ್ತಿ — ನಿವೃತ್ತಿಗಳ ಸಾಮ ರಸ್ಯವನ್ನು ಸೂಚಿಸಿ . . . ಎಚ್ಚರ ಮಾಡಿಕೊಡುತ್ತದೆ (ಧರ್ಮಗಾ. ೩೨) ; ಅದರ ಮಹಿಮೆ ನಮ್ಮ ದಿನದಿನದ ಪ್ರತಿಯೊಂದು ವ್ಯಾಪಾರದಲ್ಲೂ ಪ್ರತಿಯೊಂದು ಕ್ರಿಯೆಯಲ್ಲೂ ಪ್ರತಿಯೊಂದು ಪ್ರವೃತ್ತಿಯಲ್ಲೂ ತೋರಿ ಬರಬೇಕು (ಜಾಚಿತ್ರ. ೩೦). ೪. ಬಳಕೆ ; ಅಭ್ಯಾಸ ; ಉಪಯೋಗ : ಮೃಗಪಶುಶಕುನಿಗಣಂಗಳೊಳಗಣಿತನಿಜಜಾತಿಜನಿತ ಭಾಷೆಗಳೆಂದುಂ

ಪೆಗಟ್ಟಂತಿರೆ ನರಕೊಳಮಪ್ರುಗಲ್ಪವಚನಪ್ರವೃತ್ತಿ ನೆಗಟ್ಟುಂ ಸಹಜಂ (ಕಬಿಜಾ. ೦-೭). ೫. ವ್ಯವಹರಿಸುವುದು ; ವ್ಯವಹಾರ : ಜ್ಞಾನ ಹುಟ್ಟಿದ ಮೇಲೆ ಮನುಷ್ಯನು ಪ್ರವರ್ತಿಸುತ್ತಾನೆ. ಪ್ರವೃತ್ತಿ ಸಫಲವಾದರೆ ಜ್ಞಾನ ಸರಿಯಾದುದೆಂದೂ . . . ತಿಳಿಯುವನು (ಹಿಂದಣಾ. ೦೬೬). ೬. ಗುಣ ; ಸ್ವಭಾವ : ಶಕ್ತಿಯ ಪ್ರವೃತ್ತಿಯೆನಿಸಿತ್ತು (ವಚ. ೦೦); ವೃತ್ತಿಯಿಂದ ಅಂಬಿಗನಾದರೂ ಪ್ರವೃತ್ತಿಯಿಂದ ಕ್ಷತ್ರಿಯನೆಂಬಂತೆ ಇದ್ದಾನೆ ಅಂಬಿಗರ ಚೌಡಯ್ಯ (ವಚ. ೯೭೨). ೭. ಸಂದ್ದಿ ; ವಾರ್ತೆ ; ಸಮಾಚಾರ : "ವಾರ್ತಾ, ಉದಂತಃ, ಪ್ರವೃತ್ತಿಃ , ವೃತ್ತಾಂತಃ –ಈ ೪ ವಾರ್ತೆ" (ಕಠಾಯು. ೨೯–೦೯೫). ೮. ಭೇದಿ ; ವಿರೇಚನ : ಸೂರ್ಯನಿಗೆ ಅಭಿಮುಖ ವಾಗಿ ಇದ್ದ ಕಗ್ಗಲೀ ಕೊನರು ಒಂದು ಹಿಡಿಯನ್ನು ಮೂರು ಉಗುನಿಯ ಎಲೆಯಲ್ಲಿ ಪೊಟ್ಟಣಂಗಟ್ಟಿ . . . ಮೂರನೆಯ ದಿನ ೯ ಗುಳಿಗೆಯ ಕೊಡಲು ಪ್ರವೃತ್ತಿ ನಿಲ್ಲುವುದು (ಸಕ್ಕ. ೩೫೩); ಅತಿಸಾರವೆಂದರೆ ಒಮ್ಮಿಂದೊಮ್ಮೆಲೇ ಹೊಟ್ಟೆ ಜಾಡಿಸುವ ರೋಗವು. ಇದಕ್ಕೆ ದಕ್ಷಿಣ ದೇಶದಲ್ಲಿ ಭೇದಿ – ಪ್ರವೃತ್ತಿ — ರೋಗವೆಂದೂ ಹೇಳುವರು (ಗೃಚಿಕ್ಸ. ೫೬). 'ಕಾಲಪ್ರವೃತ್ತಿ' ಪರಾ. ೯. ನೀರು ಮೊದಲಾದ ದ್ರವ ಪದಾರ್ಥದ ಹೊನಲು ; ಪ್ರವಾಹ : "ಪ್ರವಾಹಃ, ಪ್ರವೃತ್ತಿಃ, –ಅವಿಚ್ಛಿನ್ನವಾಗಿ ಹರಿಯುವ ನೀರು ಮುಂತಾದುವುಗಳ ಪರಂಪರೆ, ಪ್ರುಸರಿಸುತ್ತಾ ಇರುವುದು" (ಸಿದ್ಧಾಂತಿ. ೩೬೦). ೧೦. [ನಾಟ್ಯ] "ಪಾತ್ರ ಮತ್ತು ದೇಶಭೇದಗಳನ್ನು ಅನುಸರಿಸಿ ನಟರು ಉಪಯೋಗಿಸುವ ಭಾಷಾವೇಷಭೂಷಣಭೇದಗಳಿಗೆ ಪ್ರವೃತ್ತಿಯೆಂದು ಹೆಸರು" (ಕೃಶಾ. ೨೦೦) : ಪಾತ್ರಭೇದ ದೇಶಭೇದಗಳನ್ನು ಅನುಸರಿಸಿ ಅವುಗಳಿಗೆ ಉಚಿತವಾಗುವಂತೆ, ನಟರು ಉಪಯೋಗಿಸುವ ಭಾಷೆ, ವೇಷ ಭೂಷ ಮುಂತಾದವುಗಳ ಭೇದಗಳು 'ಪ್ರವೃತ್ತಿ'ಗಳೆನ್ನಿಸಿಕೊಳ್ಳುತ್ತವೆ (ಹಂಕಾಟ. ೮೪). ೧೧. [ನ್ಯಾಯಶಾ] ನ್ಯಾಯಶಾಸ್ತ್ರದಲ್ಲಿ ವಿಭಾಗ ಮಾಡಿರುವ ಹನ್ನೆರಡುವಿಧವಾದ ಪ್ರಮೇಯಗಳಲ್ಲಿ ಒಂದು: ನ್ಯಾಯಶಾಸ್ತ್ರದಲ್ಲಿ ಹೇಗೆಂದರೆ – ಆತ್ಮ ಶರೀರ ಇಂದ್ರಿಯ ಅರ್ಥ ಬುದ್ಧಿ ಮನಸ್ಸು ಪ್ರವೃತ್ತಿ ಅಪವರ್ಗವೆಂದು ಹನ್ನೆರಡು ವಿಧವಾಗಿ ಪ್ರಮೇಯವನ್ನು ಒಂಬತ್ತನೆಯ ಸೂತ್ರದಲ್ಲಿ ವಿಭಾಗ ಮಾಡಿರುವರು . . . ಪ್ರವೃತ್ತಿಯೆಂಬುದು ಪುಣ್ಯ ಪಾಪಗಳು (ಹಿಂದಣಾ. ೦೦೫). ೧೨. [ತರ್ಕಶಾ] ಕರ್ಮ ; ಕ್ರಿಯೆ ; ನಡವಳಿಕೆ : ಅವು ಮೇಲ್ಕಂಡ ಶುಭಾಶುಭರೂಪವಾದ ಹತ್ತುಹತ್ತು ಕರ್ಮಗಳಿಂದ ಹುಟ್ಟುನುವು. ಈ ಕರ್ಮಗಳಿಗೆ ಪ್ರವೃತ್ತಿಯೆಂದು ಹೆಸರು (ಹಿಂದಣಾ. ೦೨೨). [ಸಂ.]

**ಪ್ರವೃತ್ತಿಮಾರ್ಗ** (ನಾ). [ವೇದಾಂತ] ಪರಲೋಕಸಾಧನೆಯ ಎರಡು ಮಾರ್ಗಗಳಲ್ಲಿ ಒಂದು; ◆ ಸಾಧಕನು ಪ್ರಪಂಚವ್ಯವಹಾರವನ್ನು ಬಿಡದೆ ದೇವತಾರಾಧನೆ, ಜಪ ಇತ್ಯಾದಿ ಪುಣ್ಯಕರ್ಮಗಳನ್ನು ಮಾಡಿ, ಆ ಪುಣ್ಯದಿಂದ ಪರಲೋಕಸಾಧನೆಗೆ ಪ್ರಯತ್ನಿಸುವುದು : ಅದು ಪ್ರವೃತ್ತಿಮಾರ್ಗ ನಿವೃತ್ತಿಮಾರ್ಗವೆಂದೆರಡುಬಗೆಯಾಗಿಪ್ಪುದು (ವಿವೇಕ. ೯೯) ; ನಿವೃತ್ತಿಮಾರ್ಗಕ್ಕಿಂತ, ಪ್ರವೃತ್ತಿಮಾರ್ಗವನ್ನು ಅನುಸರಿಸುವುದು ಅಗತ್ಯ (ಛಾಕದ. ೯೬೦); ದಾಸರದು ಮುಖ್ಯವಾಗಿ ನಿವೃತ್ತಿಮಾರ್ಗ, ಗೀತಾಂಜಲಿಯ ಕವಿಯದು ಪ್ರವೃತ್ತಿಮಾರ್ಗ (ದಕರ್ಣಾ. ೬೯). [ಸಂ.]

**ಪ್ರವೃದ್ಧ** (ಗು). ೧. ಬೆಳೆದ; ವೃದ್ಧಿಯಾದ. ೨. ಹೆಚ್ಚಾದ ; ಅಧಿಕವಾದ: ಪ್ರವೃದ್ಧಪಟಹಸ್ವನಂ ಮಧುರಗೀತಗಾನಂ ವಲಂ ಸುವೃದ್ಧ ಜನಮಂಗಳೋಕ್ತಿ ನೆಗಟ್ಟಂತು (ಜಗು. ೦೬–೭೦). ೩. ಅಹಂಕಾರವನ್ನುಳ್ಳ; ಗರ್ವಿತವಾದ. (ನಾ). ೪. ಬೆಳೆದುದಂ ; ವೃದ್ಧಿಯಾದಂದು : "ಪ್ರವೃದ್ಧಂ, ಪ್ರೌಢಂ, ಏಧಿತಂ–೩ ಬೆಳೆದಂಥಾದ್ದು" (ಸಿದ್ಧಾಂತಿ. ೩೯೬). ೫. [ನಾಟ್ಯ] ನಿಃಶ್ವಾಸದ ಭೇದಗಳಲ್ಲಿ ಒಂದು; ◆ "ಶಬ್ದವಾಗುವಂತೆ ಜೋರಾಗಿ ಬಾಯಿಂದ ಉಸಂರು ಬಿಡುವುದು. ವ್ಯಾಧಿ ಮೊದಲಾದ ವುಗಳಲ್ಲಿ ಇದನ್ನು ವಿನಿಯೋಗಿಸಬೇಕು" (ಠಾಸ್ಯರಂ. ಗದ್ಯಾನುವಾದ. ೨೬೬): ಓರಿದುಂ ಸ್ವಸ್ಥಂ ಸಂಚಲಮುರುಪ್ರವೃದ್ಧ ನಿರಸ್ತಿಯುಮುಲ್ಲಾಸಿತಮುಂ ಸ್ಥಿರದ ವಿಮುಕ್ತಂ ವಿವೃತಂ ತರುಣೇ ಪ್ರುಸೃತಮುಮಿವಿಂತು ಕೋಹಳನ ಮತಂ (ಠಾಸ್ಯರಂ. ೩–೬೬). [ಸಂ.]

**ಪ್ರವೃದ್ಧಿ** (ನಾ). ಬೆಳವಣಿಗೆ; ವೃದ್ಧಿ. [ಸಂ.]

**ಪ್ರವೇಕ** (ಗು). ೧. ಶ್ರೇಷ್ಠವಾದ; ಉತ್ಕೃಷ್ಟವಾದ. (ನಾ). ೨. ಒಳ್ಳೆಯದಂ; ಒಳ್ಳಿತು: "ಪ್ರಾಗ್ರ್ಯಂ, ಪ್ರಾಗ್ರಹರಂ, ಪ್ರವೇಕಂ . . . ಪೇಶಲಂ—ಈ ೨೯ ಒಳ್ಳಿತು" (ಹಠಾಯು. ೦೦೯–೪). ೩. ಶ್ರೇಷ್ಠನಾದವನು: ಧವಳಯಶಂ ತ್ರೈವಿದ್ಯಪ್ರವೇಕರಮಳಿನಚರಿತ್ರರೆನೆ ಸಂದಂ ಭೂಭುವನಕ್ಕೆ ಚಂದ್ರಿಕಾವಾದಿವಂಶದೊಳ್ ನೆಗಟ್ಟ ಧರ್ಮಸೇನಾಚಾರ್ಯರ್ (ಶಾಪುಂಕ್ತಿ-೩); ನರ್ಮಸಚಿವಪ್ರಧಾನಪ್ರಕೃತಿಪುರುಷಪ್ರವೇಕಪರಿವೃತಂ ಪ್ರಜಾಪತಿಮಹ ರಾಜನಾಸ್ಥಾನಭೂಮಿಯೊಳಿಪ್ಪುದುಂ (ವರ್ಧಮಾ. ೩–೨೩ ವ) ; ಕಿವಿಗಳೊಳ್ ಪೀಯೂಷಮಂ ಪಿಂಡಲುರ್ವರೆಯೊಳ್ ಸಂದ ಕವಿಪ್ರವೇಕರೆ ವಲಂ ಬಲ್ಲರ್ ಪೆಜರ್ ಬಲ್ಲರೇ (ಅಜಿತಾ. ೦–೦೩). [ಸಂ.]

**ಪ್ರವೇಣಿ** (ನಾ). ೧. ಹೆಣೆದ ಕೂದಲು; ಜಡೆ: "ವೇಣೀ, ಪ್ರವಣೀ . . . ಹೆಣೆದ ಜಡೆಯ ಹೆಸರುಗಳು" (ಗುರುಬಾ. ೨೬೦). ೨. (ಗಂಡನು ಊರಿನಲ್ಲಿ ಲ್ಲದಾಗ ಸತಿಯರು ಹಾಕಿಕೊಳ್ಳುತ್ತಿದ್ದ) ತಲೆಗಂಟು ; ಮಂಡಿ. ೩. ಆನೆಯ ಮೇಲೆ ಹಾಕುವ ಗೌಸಂ: "ಅಸ್ತರಣಮಾ ಪ್ರವೇಣಿಯೆನೆ ಗವಸಣಿಗೆಯಕ್ಕು" (ಶಬ್ದಗಾ. ೬೦–೦೬). [ಸಂ. ಪ್ರವೇಣೀ]

**ಪ್ರವೇಶ** (ನಾ). ೧. ಒಳಕ್ಕೆ ಹೋಗುವುದು; ಒಳಹೊಗುವಿಕೆ : ಅಲ್ಲಿ ಸಾಮಾನ್ಯವಾಗಿ ಯಾರಿಗೂ ಪ್ರವೇಶವಿಲ್ಲ (ಕಕಾ. ೦೭೬); ದ್ರಾವಿಡ ಭಾಷೆಗಳಲ್ಲಿ ಕರ್ಮಣಿಪ್ರಯೋಗವಿಲ್ಲದಿದ್ದರೂ ಅಲ್ಲಲ್ಲಿ ಇಂದಿಗೂ ಹೇಗೂ ಬಾಯಿಮಾತಿನಿಂದ ಬರವಣಿಗೆಯವರೆಗೂ ಪ್ರವೇಶ ಗಿಟ್ಟಿಸಿಕೊಂಡಿವೆ (ದ್ರಾಶಿ. ೩೦೦). ೨. ಪ್ರಾರಂಭ; ಮೊದಲು. ೩. ಶಾಸ್ತ್ರಗ್ರಂಥಗಳ ತಿಳಿವಳಿಕೆಗಾಗಿ ಬರೆದಿರುವ ಪರಿಚಯಭಾಗ. ೪. ಬಾಗಿಲು ; ದ್ವಾರ. ೫. [ನಾಟ್ಯ]ಕಣ್ಣುಗುಡ್ಡೆಯ ಚಲನೆಯಲ್ಲಿ ಒಂದು ಬಗೆ; ◆ "ಅಲಿಯನ್ನು ರೆಪ್ಪೆಯೊಳಕ್ಕೆ ಸೇರಿಸುವುದು" (ಠಾಸ್ಯರಂ. ಗದ್ಯಾನುವಾದ. ೨೬೪) : ಭ್ರಮಣ, ವಲನ, ಪಾತ, ಚಲನ, ಪ್ರವೇಶ, ವಿವರ್ತ, ಸಮುದ್ವೃತ್ತ, ನಿಷ್ಕ್ರಾಮ, ಪ್ರಾಕೃತ–ಈ ಒಂಬತ್ತು[ಸ್ವನಿಷ್ಠ]ಅಲಿಯ ಭೇದಂಗಳ್ (ಠಾಸ್ಯರಂ. ೩–೩೪ ವ) ; ಗೆಳೆಗೊಂಡ ತಾರೆಯದು ತಾಂ ನಳಿನಾಕ್ಷೀ ಕೇಳ್ ಪ್ರವೇಶಮೆಂದೆನಿಸಿರ್ಕುಂ (ಠಾಸ್ಯರಂ. ೩–೩೬). ೬. [ಕಾವ್ಯಮೀ]ರಂಗದ ಮೇಲೆ ಬರುವುದು; ರಂಗಪ್ರವೇಶ. ೭. = ಪ್ರವೇಶಕ : 'ಪ್ರವೇಶ', 'ಪ್ರವೇಶಕ' ಎಂಬೆರಡೂ ಹೆಸರುಗಳು ಬಳಕೆ ಯಲ್ಲಿವೆ (ದಕರೂ. ೬೦). [ಸಂ.]

**ಪ್ರವೇಶಂಗೆಯ್** (ಕ್ರಿ). ಒಳಕ್ಕೆ ಹೋಗು; ಪ್ರವೇಶಿಸು : ನೃಪಂ . . . ಮಡಿಯ ಕೇಳ್ದು ಚಿತ್ರಭಾನುಪ್ರವೇಶಂಗೆಯ್ದಳೆಂದು ಶತಪತ್ರಲೋಚನೆ ಪತಿವ್ರತೆಯಾಗಿ (ಕೃಬಿಬಾ. ೨೬–೦೩). [ಪ್ರವೇಶ+ಗೆಯ್ (<ಕೆಯ್[1])]

**ಪ್ರವೇಶಕ** (ನಾ). [ಕಾವ್ಯಮೀ] ದೃಶ್ಯಕಾವ್ಯಗಳಲ್ಲಿ ಬರುವ ಐದು ಬಗೆಯ ಸೂಚನೆಯ ಸಾಧನೆಗಳಲ್ಲಿ ಒಂದು; ಐದು ವಿಧವಾದ ಅರ್ಥೋಪಕ್ಷೇಪಕಗಳಲ್ಲಿ ಒಂದು; ಹಿಂದೆ ನಡೆದ ಮತ್ತು ಮುಂದೆ ನಡೆಯಲಿರುವ ಕಥೆಯ ವಸ್ತುವನ್ನು ನೀಚಪಾತ್ರಗಳ ಮೂಲಕ ಸೂಚಿಸುವುದು; ◆ ಇದಕ್ಕೆ ಮೊದಲನೆಯ ಅಂಕದಲ್ಲಿ ಅವಕಾಶವಿಲ್ಲ: ಉದಾತ್ತವಲ್ಲದ ಮಾತುಗಳು [ಮತ್ತು] ನೀಚಪಾತ್ರಗಳಿಂದ, ಎರಡು ಅಂಕಗಳ ನಡುವೆ, ಯೋಜಿತವಾಗುವ 'ಪ್ರವೇಶ[ಕ]'ವು ಅದರಂತೆಯೇ [ಎಂದರೆ, ವಿಷ್ಕಂಭದಂತೆಯೇ] ಉಳಿದ [ಹಿಂದುಮುಂದಿನ] ವಿಷಯಗಳನ್ನು

ಸೂಚಿಸುವುದು (ಶಕರೊ. ೬೧); ಹಿಂದೆ ನಡೆದ ಮತ್ತು ಮುಂದೆ ನಡೆಯುವ ಕಥಾಂಶಗಳನ್ನು ಬರಿಯ ನೀಚಪಾತ್ರಗಳಿಂದಲೇ ಸೂಚಿಸುವುದು. ಇದು ಎರಡು ಅಂಕಗಳ ಮಧ್ಯದಲ್ಲಿಯೇ ಬರುತ್ತದೆ (ಎಂದರೆ, 'ವಿಷ್ಕಂಭ'ವು ನಾಟಕದ ಮೊದಲಲ್ಲಿಯೇ ಬರಬಹುದು ; ಪ್ರವೇಶಕವು ಹಾಗೆ ಬರುವುದಿಲ್ಲ. ಒಂದು ಅಂಕವು ಮುಗಿದು ಮತ್ತೊಂದು ಅಂಕವು ಆರಂಭವಾಗುವುದ ಕ್ಕಿಂತ ಮುಂಚೆ ಬರತಕ್ಕದ್ದು (ಕ್ಕಶಿ. ೫೦೬) ; ಪ್ರವೇಶಕ ನಡೆದು ಹೋದ ಕಥಾಂಶವನ್ನು ಬರಿಯ ನೀಚಪಾತ್ರಗಳಿಂದಲೇ ಸೂಚಿಸುವುದು (ಸಂನಾಟ. ೦೩). [ಸಂ.]

**ಪ್ರವೇಶದ್ವಾರ** (ನಾ). ಹೆಬ್ಬಾಗಿಲು; ಮಹಾದ್ವಾರ; ತಲೆಬಾಗಿಲು: ಪ್ರವೇಶದ್ವಾರದ ಹಿಂದಿದ್ದ ಕೋಣೆ ದೊಡ್ಡದಾಗಿದ್ದು ಕಮಾನುಚಾವಣಿ ಯಿಂದ ಕೂಡಿತ್ತು (ಕುವರು. ೦೫೩). [ಸಂ.]

**ಪ್ರವೇಶಪತ್ರ** (ನಾ). ಒಂದು ದೇಶವನ್ನು ಪ್ರವೇಶಿಸಲು ಕೊಡುವ ಅಪ್ಪಣೆಯ ಪತ್ರ; ರಹದಾರಿ: "ಪ್ರವೇಶಪತ್ರ" (Visa. ಶಕ್ರಿಶಿ. ೮೬). [ಸಂ.]

**ಪ್ರವೇಶಪರೀಕ್ಷೆ** (ನಾ). ೧. ಯಾವುದಾದರೂ ಉದ್ಯೋಗಕ್ಕೆ ಅಥವಾ ಉನ್ನತವಿದ್ಯಾಭ್ಯಾಸಕ್ಕೆ ಅರ್ಹತೆಯನ್ನು ಪರೀಕ್ಷಿಸಲು ನಡೆಸುವ ಪರೀಕ್ಷೆ: ವಿಶ್ವವಿದ್ಯಾನಿಲಯದ ಪ್ರವೇಶಪರೀಕ್ಷೆಯಲ್ಲಿ ಮೊದಲನೇ ತರಗತಿ ಯನ್ನು ದೊರಕಿಸಿದ ಶ್ರೇಯಸ್ಸು ನರೇಂದ್ರನದು (ರಭುಣಾ. ೪೬). [ಸಂ. ಪ್ರವೇಶಪರೀಕ್ಷಾ]

**ಪ್ರವೇಶಿಸು** (ಕ್ರಿ). ೧. ಒಳಕ್ಕೆ ಹೋಗು ; ಒಳಸೇರು : ಹಿಡಿಯ ಪೋಪುದರಿಂದ ಮುನ್ನವೆ ಮೃಡನ ಹೊಜಗೊಮ್ಮಾಜು ಸೀರೆಯ ಕಡೆ ಸೆರಂಗಿರೆ ಲಿಂಗದೊಳಗಾತಂ ಪ್ರವೇಶಿಸಿದ (ಬಸಪು. ೩೩-೪೯); ಪರಮರ್ಷಿ ನಾರದಂ ತನಗೊರೆದು ಕೂಡೆ ತಾನುರಿಯೊಳ್ಪ್ರವೇಶಿಸಿದನೆನೆ (ಕೃಶಿಂಕಾ. ೩-೬೨). ೨. ರಂಗದ ಮೇಲೆ ಬರು; ರಂಗಪ್ರವೇಶ ಮಾಡು : ಕೃಷ್ಣನು ಬಾಲಕನಾಗಿ ಗೊಲ್ಲರ ಹುಡುಗರೊಂದಿಗೆ ಪ್ರವೇಶಿಸುವುದನ್ನು ನಾವು ಕಾಣುತ್ತೇವೆ (ಕಾರಣಾ. ೨೬). [ ಪ್ರವೇಶ + — ಇಸು ]

**ಪ್ರವೇಷ್ಟ** (ನಾ). ೧. ತೋಳು ; ಬಾಹು ; ಭುಜ : "ದೋಃ, ಪ್ರವೇಷ್ಟಃ, ಭುಜಃ, ಬಾಹುಃ, ಭುಜಾ — ಈ ೫ ತೋಳ್" (ಹಲಾಯು. ೬೬-೩೬೬). ೨. ಕೈಯ ಹರಡು ; ಮಣಿಕಟ್ಟು. ೩. (ಮಾವುತನು ಕುಳಿತುಕೊಳ್ಳುವ) ಆನೆಯ ಬೆನ್ನಿನ ಮೇಲಿನ ಮಾಂಸಲವಾದ ಪ್ರದೇಶ. ೪. ಆನೆಯ ದಂತದ ಮೇಲ್ಭಾಗ. ೫. ಆನೆಗೆ ಹೊಡಿಸುವ ಗೌಸಂ. [ಸಂ.]

**ಪ್ರವೇಷ್ಟನ** (ನಾ). ಮುಸುಕು; ಆಚ್ಛಾದನೆ: 'ಪ್ರವೇಷ್ಟಿಸು' ಪರಾ. [ಸಂ.]

**ಪ್ರವೇಷ್ಟಿಸು** (ಕ್ರಿ). ಆವರಿಸು ; ಮುಸುಕು : ಕುಸುಮದಿಂದ ಕಾಯಿ ಕಾಯಿಂದ ಹಣ್ಣು ಇಂತೆಲ್ಲಕ್ಕೂ ಮೂಲ ಬುಡ ಒಂದೇ ಭೂಮಿ ಅಲ್ಲಿ ಗಿಡ ನಿಂದು ಪ್ರವೇಷ್ಟಿಸಿಕೊಂಡಿರ್ಪಂತೆ (ಕೋಟಿಶು. ೨೪೬-೭೪೪); ಮತ್ತ ಹಂಕಾರವಂ ಬಳಸಿಕೊಂಡಿರ್ಪುದು ಮಹತ್ತಾ ಮಹತ್ತನವ್ಯಕ್ತಂ ಪ್ರವೇಷ್ಟಿಸಿ ರ್ದತ್ತು (ಕಶಿಪು. ೦೫-೬). [ಪ್ರವೇಷ್ಟನ + — ಇಸು]

**ಪ್ರವ್ಯಕ್ತ** (ಗು). ೧. ಸ್ಫುಟವಾದ; ಸ್ಪಷ್ಟವಾದ. (ನಾ). ೨. ಪ್ರಕಟ ವಾದುದು ; ವೇದ್ಯವಾದುದು : "ಸ್ಪಷ್ಟಂ, ಸ್ಫುಟಂ, ಪ್ರವ್ಯಕ್ತಂ, ಉಲ್ಬಣಂ — ಪ್ರಕಟವಾದದ್ದು" (ಸಿದ್ಧಾಂತಿ. ೪೪೪); ಸೂಕ್ತಂ ಭವ್ಯಜನ ಪ್ರವ್ಯಕ್ತಂ ಜೈನಾಗಮೋಕ್ತಮಿಂ ನಿನಗೆ ಮದೀಯೋಕ್ತಮಿದೆರ್ದೆಯೊಳ್ ನೆಲಸುಗೆ (ಅಂಪು. ೩-೭೦). [ಸಂ.]

**ಪ್ರವ್ರಜನ** (ನಾ). ೧. ಸಂಚಾರ ; ಪ್ರವಾಸ ; ಪ್ರಯಾಣ: ಅವನು . . . ಮುಂಚಿತವಾಗಿ ಆ ರೀತಿ ಪ್ರವ್ರಜನ ಮಾಡಿ ಬಂದಿದ್ದು, ತಾನು ಪ್ರವ್ರಜನ ಮಾಡಿ ಬಂದ ತಾರೀಖಿನಿಂದ ಭಾರತರಾಜ್ಯ ಕ್ಷೇತ್ರದಲ್ಲಿ ಸಾಮಾನ್ಯವಾಗಿ ನಿವಾಸಿಸುತ್ತಿದ್ದ ಸಂದರ್ಭದಲ್ಲಿ . . . ಭಾರತದ ನಾಗರಿಕನೆಂಬುದಾಗಿ ಭಾವಿಸಲ್ಪಡತಕ್ಕದು (ಭಾರಾಶ. ೪). ೨. ಸಂನ್ಯಾಸ ಸ್ವೀಕಾರ : 'ಪ್ರವ್ರಜಿಸು' ಪರಾ. [ಸಂ.]

**ಪ್ರವ್ರಜಿತ** (ಗು). ೧. (ದೇಶದಲ್ಲಿ) ತಿರುಗಾಡುವ; ಸಂಚರಿಸುವ. (ನಾ). ೨. ಮುನಿ; ಸಂನ್ಯಾಸಿ. ೩. ಬೌದ್ಧ ಅಥವಾ ಜೈನ ಭಿಕ್ಷು: "ಮುನಿಃ . . . ಪ್ರವ್ರಜಿತಃ, ಶ್ವೇತವಾಸಾಃ, ಸಂಯತಃ — ಈ ೯ ಸವಣರ ಪೆಸರ್" (ಹಲಾಯು. ೩೬-೦೪೧); ಕ್ಷಿತಿಯ ನಯವಿಕ್ರಮದಿಂ ಪ್ರತಿ ಪಾಳಿಸಿ ಪಡೆದು ಗೋತ್ರವಿಸ್ತಾರಕನಂ ಸುತನಂ ಬಟಿಕ್ಕಮೆವಿಸ್ಮಾ ಸ್ಥಿತಿಯಿಂ ಪ್ರವ್ರಜಿತಮಪ್ಪುದುಚಿತಂ ಮಗನೇ (ವರ್ಧಚತು. ೨-೬೯); ಹೀನಮುಂಭಯ ಮನರ್ಥಕರಮನಾರ್ಯಂ ಗಡಾ! ಪ್ರವ್ರಜಿತರಿಗೆ ಸಲ್ಲವು (ನೃಶಾಂ. ೬೪-೩೩೬). ೪. ಸಂನ್ಯಾಸ : ದ್ವಿಜಕುಲನೆನಿಸುವನೀ ಪ್ರವ್ರಜಿತದೊಳೆಸಗಿದೊಡೆ ದೋಷಮುಂಟು (ಸುಕುಮಾ. ೬-೭೦). [ಸಂ.]

**ಪ್ರವ್ರಜಿಸು** (ಕ್ರಿ). ಸಂನ್ಯಾಸವನ್ನು ಸ್ವೀಕರಿಸು : ಮೊದಲು ಒಂದು ಸಾಮಾಜಿಕಬಂಧಕ್ಕೆ ಒಳಗಾಗದೆ ವಿರಕ್ತಿಯನ್ನು ಹೊಂದಲು ಅಸಾಧ್ಯ ಎನ್ನುತ್ತಾನೆ ತಂದೆ; ಆದರೆ ಮಗ ಭ್ರಾಂತಿನಿರಸನವಾದ ಕ್ಷಣದಲ್ಲೇ ಪ್ರವ್ರಜಿಸಬೇಕು . . . ಎಂದೇ ವಾದಿಸುತ್ತಾನೆ (ಶಶ್ಯಾ. ೮೭). [ಪ್ರವ್ರಜನ + — ಇಸು]

**ಪ್ರವ್ರಜ್ಯ** (ನಾ). (ದೇಶವಿದೇಶಗಳಲ್ಲಿ ಸಂಚರಿಸುವ) ಸಂನ್ಯಾಸದೀಕ್ಷೆ : ಮೊದಲೊಳ್ ದೇವರ ದಯೆಗೆಯ್ದುದಲ್ತೆ ಯುವರಾಜಪದವಿಯೆನಗೀಗಳು ಮಭ್ಯುದಯಕರಪ್ರವ್ರಜ್ಯದ ಪದವಿಯ ಯುವರಾಜಪದವಿಯಂ ದಯೆ ಗೆಯಿಸಿಂ (ಅಂಪು. ೦೪-೦೬೮); ಮಹಾಪ್ರಜಾಪತಿ ಗೌತಮಿಯು ಐನೂರು ಶಾಕ್ಯರನ್ನು ಜೊತೆಗೊಂಡು ಹೊರಟು ಪ್ರವ್ರಜ್ಯವನ್ನು ಬೇಡಿ, ಪ್ರವ್ರಜ್ಯವನ್ನೂ ಉಪಸಂಪದೆಯನ್ನೂ ಪಡೆದಳು (ಬಿಂಧ್ಯಶ. ೦೦). [ಸಂ. ಪ್ರವ್ರಜ್ಯಾ]

**ಪ್ರವ್ರಜ್ಯಪದವಿ** (ನಾ). ಸಂನ್ಯಾಸದೀಕ್ಷೆ : ಕೇಶವನುಮಾತ್ಮೀಯಗುರು ವಿಯೋಗದೊಳ್ ಪರಿತ್ಯಕ್ತಸಕಲರಾಜ್ಯಪರಿಚ್ಛೇದಂ ಪ್ರವ್ರಜ್ಯಪದವಿಯೊಳ್ ಪರಿತ್ಯಕ್ತನುಮಾಗಿ ತದಚ್ಯುತಕಲ್ಪದೊಳ್ ಪ್ರತೀಂದ್ರನಾದಂ (ಅಂಪು. ೬-೦೨ ಪ). [ಸಂ.]

**ಪ್ರವ್ರಜ್ಯೆ** (ನಾ). ಸಂನ್ಯಾಸದೀಕ್ಷೆ : "ಪರಿವ್ರಜ್ಯಾ, ವ್ರತಾದಾನಂ, ಪ್ರವ್ರಜ್ಯಾ, ಗತಿಃ — ಈ ೪ ತಪಂಬಡುಹ" (ಹಲಾಯು. ೦೨೬-೧೦). [ಸಂ. ಪ್ರವ್ರಜ್ಯಾ]

**ಪ್ರವ್ರಾಜ್ಯ** (ನಾ). = ಪ್ರವ್ರಜ್ಯ : ವರಸೇನಮುನಿಯಲ್ಲಿ ಪರಮ ಪ್ರವ್ರಾಜ್ಯವ ಎಳೆದಿಂದವೆ ತಾ ಧರಿಸಿ (ಜ್ಞಾನಚ. ೨೯-೬೩). [< ಸಂ. ಪ್ರವ್ರಾಜ್]

**ಪ್ರಶಂಸಕ** (ನಾ). ಹೊಗಳುವವನು. [ಸಂ.]

**ಪ್ರಶಂಸಾಪತ್ರ** (ನಾ). ಮೆಚ್ಚುಗೆಯ ಪತ್ರ: ರಾಯರು . . . ಪ್ರಶಂಸಾ ಪತ್ರಗಳನ್ನು ತೋರಿಸಿದರು (ರಾಯಳ. ೪). [ಸಂ.]

**ಪ್ರಶಂಸಿಸು** (ಕ್ರಿ). ಹೊಗಳು; ಕೊಂಡಾಡು; ಸ್ತುತಿಸು : ಸರಕಾರವು ಸಹ ಅವರನ್ನು ಕೊಂಡಾಡಿ ಅವರ ಕಾರ್ಯನಿರ್ವಾಹಕಶಕ್ತಿಯನ್ನು ಪ್ರಶಂಸಿಸಿತು (ರಾಜಶ. ೩೬); ಅವನ ಸ್ವಾಮಿನಿಷ್ಠೆಯನ್ನು ಪ್ರಶಂಸಿಸುವನು (ಸಂಕಶ. ೩೬); ದಾಸರು ರಾಜಕೀಯವನ್ನು ಸಮಯೋಚಿತವಾಗಿ ಟೀಕಿಸುತ್ತಲೂ ಪ್ರಶಂಸಿ ಸುತ್ತಲೂ ಇದ್ದರು (ಅರುಕ್ಕ. ೬). [ಪ್ರಶಂಸೆ + — ಇಸು]

**ಪ್ರಶಂಸೆ** (ನಾ). ೧. ಹೊಗಳಿಕೆ ; ಕೊಂಡಾಟ ; ಸ್ತುತಿ : "ಅರ್ಥ ವಾದಃ, ಪ್ರಶಂಸಾ . . . ವರ್ಣನಂ (ನಾ) – ಈ ೧೦ ಸ್ತುತಿಯ ನಾಮಂ" (ಹಲಾಯು. ೨೪-೧೪೪); ಸುಕುಮಾರನೆಂಬ ಪೆಸರೀ ಸುಕುಮಾರಂಗೀ ಸಮಸ್ತ

ಧಾರಿಣಿಯೊಳ್ ಸಾರ್ಥಕಮಾದುದೆಂದು . . . ಪ್ರಶಂಸೆಗೆಯ್ದಂ (ಸುಕುಮಾ. ೧೦–೩೮): ತಮ್ಮ ಬಾಯಲ್ಲಿ ತಮ್ಮ ಪ್ರಶಂಸೆ ಹೇಳಿಕೊಳ್ಳಬಾರದು (ಶುಂಠಿಯ. ೯-೩೯). ೨. ಕೀರ್ತಿ ; ಪ್ರಸಿದ್ಧಿ. [ಸಂ. ಪ್ರಶಂಸಾ]

**ಪ್ರಶಂಸೋಪಮೆ** (ನಾ). [ಕಾವ್ಯಮೀ] ಉಪಮಾಲಂಕಾರಗಳಲ್ಲಿ ಒಂದು : ಅಮೃತಧರಂ ಶಿಶಿರಕರಂ ಕಮಳಂ ಜಗದೇಕಪಾವನೀಯಶ್ರೀಕಂ ಕಮನವಳ್‌ಳೊಳ್ ನಿನ್ನ ಮೊಗಂ ಕ್ರಮದೆಂಬುದನಱಿವುದಾ ಪ್ರಶಂಸೋಪಮೆ ಯಂ (ಕಾವ್ಯಾ. ೩-೩೯). [ಸಂ. ಪ್ರಶಂಸೋಪಮಾ]

**ಪ್ರಶಮ** (ನಾ). ೧. ಶಾಂತತೆ; ಸಮಾಧಾನ; ಪ್ರಶಾಂತಿ : ಶಾಂತಿದಾಂತಿ ಪ್ರಶಮದಯಯುತಕಾಂತನೇಕಾಂತ್ಯಕಥಕ್ಕನಿಶಾಂತಂ (ಬಸವ. ೯೯–೩). ೨. ಉಪಶಮನ ; ತಣಿವು. ೩. [ಕಾವ್ಯಮೀ] ತಗ್ಗುವುದು ; ಇಳಿ ಯುವುದು : ವ್ಯಭಿಚಾರಿಭಾವಗಳಿಗೆ "ಉದಯ", "ಸ್ಥಿತಿ", "ಪ್ರಶಮ" ಎಂಬ ಮೂರು ಅವಸ್ಥೆಗಳುಂಟು (ಶೃಙ್ಗಾರ. ೩೯); ಏಕೆಂದರೆ ವೀರವು ಅಭಿಮಾನಮಯವಾದುದೆಂದು ವ್ಯವಸ್ಥಿತವಾಗಿದೆ ; ಇದಾದರೋ ಅಹಂಕಾರದ ಪ್ರಶಮವೆಂಬ ಒಂದೇ ಸ್ವರೂಪವನ್ನುಳ್ಳುದು (ಶೃಙ್ಗಾರ. ೦೪೬). [ಸಂ.]

**ಪ್ರಶಮನ** (ನಾ). ೧. = ಪ್ರಶಮ ೨ : ಅತಂಗೆ ತದುಕ್ತಿ ಶಶಿಖಿಶಿಖಾಕಳಾಪ ಪ್ರಶಮನದರ್ಶನದಿಂದೊಂದು ತಿಂಗಳಾಯುಷ್ಯಂ (ಅಂತ್ಯ. ೨-೯೩ ಪ). ೨. ನಿವಾರಣೆ ; ಪರಿಹಾರ; ಉಪಶಮನ: ದುಸ್ಸ್ವಪ್ನಫಲಪ್ರಶಮನಾರ್ಥಂ ಚೈತ್ಯಾಲಯ ಪೂಜೆಗೆ ಕಾಂತವತಿಯುಂ ರತಿವೇಗೆಯುಂ . . . ಪರಿಜನಂ ಬೆರಸು ಬಂದು (ಅನ್ತ್ಯ. ೬೬). ೩. (ತೊಂದರೆ ಮುಂತಾದುವು ಗಳನ್ನು) ನಿವಾರಣೆ ಮಾಡುವುದು ; ಪರಿಹರಿಸುವುದು. ೪. ನಾಶ ಮಾಡುವುದು ; ಅಡಗಿಸುವುದು. ೫. ಪಾತ್ರರಾದವರಿಗೆ ಮಾಡುವ ದಾನ. ೬. ರಕ್ಷಿಸುವುದು; ರಕ್ಷಣೆ ಮಾಡುವುದು. ೭. ರೋಗವನ್ನು ಹತೋಟಿಗೆ ತರುವುದು,–ಗುಣಪಡಿಸುವುದು. ೮. ಕೊಲೆ; ಸಂಹಾರ : "ಮಾರಣಂ . . . ಪ್ರಶಮನಂ . . . ಸಂಜ್ಞಪನಂ –ಈ ೨೧ ಕೊಲೆ" (ಶಬ್ದಮ. ೬೮–೩೨೯). [ಸಂ.]

**ಪ್ರಶಮಾವಸ್ಥೆ** (ನಾ). ಉಪಶಮನದ ಸ್ಥಿತಿ : ಪ್ರಣಯಕೋಪನಪ್ರಶ ಮಾವಸ್ಥೆ ಆಸ್ವಾದ್ಯವಾದ್ದರಿಂದ 'ಭಾವಪ್ರಶಮ' (ಶೃಙ್ಗಾರ. ೩೯). [ಸಂ. ಪ್ರಶಮಾವಸ್ಥಾ]

**ಪ್ರಶಮಿತ** (ಗು). ೧. ಉಪಶಮನ ಹೊಂದಿದ ; ಆರಿದ ; ಶಾಂತವಾದ : ಪ್ರಚಂಡಕೋಪಪಾವಕಪ್ರಶಮಿತಶೋಕರಸನುಂ . . . ಆಗಿ (ಪಂಪಭಾ. ೦೦–೦೦೬ ಪ). ೨. ನಿಗ್ರಹಗೊಂಡ : ನವೋದಯದೊಳವಾ ಪ್ರಶಮಿತತಮ ನೊಳಾ ನೆಱೆದುದು ಶಿಶುತೆಯೊಳಂ ನಾಡೆ ರೂಢಿವೆತ್ತ ವಿವೇಕಂ (ಚಂದ್ರಪ್ರ. ೩-೦೯). (ನಾ). ೩. ಶಾಂತನಾದವನು : ಆಂಡಯ್ಯನ ಕಾಮದೇವನು . . . ಕೋಪಾವಿಷ್ಟನಾಗಿದ್ದರೂ ಪ್ರಶಮಿತನಾಗಿ ಗದಗದನೆ ನಡುಗುತ್ತ ವಂದನೆಯನ್ನರ್ಪಿಸುವನು (ಹಾ.ಓ.ಸ. ೦೪೨). [ಸಂ.]

**ಪ್ರಶಮಿಸು** (ಕ್ರಿ). ೧. ಉಪಶಮನವಾಗು : ಪ್ರಶಮಿಸುಗುಂ ಲಕ್ಷ್ಮೀ ಧರನ ಶಕ್ತಿಯಿಂದಾದ ಬಾಧೆ (ಪಂಪರಾಮಾ. ೦೯–೬೦). ೨. ಕ್ಷೋಭೆಯಿಲ್ಲ ದಿರು ; ಸ್ಥಿರವಾಗು : ವಿಶದಯಶಧರ್ಮಮಷ್ಟಾದಶಕೋಟ್ಯನುಕೋಟಿ ಸಾಗರೋಪಮಕಾಲಂ ಪ್ರಶಮಿಸಿ ನಿಂದುದದಂ ನೀಂ ವಿಶದಂ ಮಾಟ್ಪುದು ಜಗದ್ವಿಶೇಷಸುಖಾ (ಅಂತ್ಯ. ೯-೬೩). ೩. ನಾಶವಾಗು : ಬೆಸಸುಮಿದನನ್ನ ಮನದೊಂದು ಸಂಶಯಂ ಪತ್ತುವಿಡುವಿನಂ ವ್ಯಾಮೋಹಂ ಪ್ರಶಮಿಸುವಿನ ಮೊಂಬುದುಮಂದೆಸೆದುದು ವಾಕ್ಪಸರಮಾಗಳಾ ಯತಿಪತಿಯಾ (ಸುಕುಮಾ. ೩.೬); ಪ್ರಶಮಿಸಿದ ಮೋಹನೀಯಪ್ರಶಾಂತಿಯಿಂ ಸೂಕ್ಷ್ಮಸಾಂಪರಾಯ ಕ್ಷಪಕೋಪಶಮಕಸಂಯುತನಾದಂ ದಶಮಗುಣಸ್ಥಾನವರ್ತಿ ಮುನಿಮುಖ ತಿಲಕಂ (ಅಜಿತ. ೯-೩೯). ೪. ನಿಗ್ರಹವಾಗು ; ಹತೋಟಿಗೆಬರು ; ನಿವಾರಣೆಯಾಗು : ಮೋದಕದಿಂ ಮಧು ಪೀಲಿಯ ಬೂದಿಕಣಾಚೂರ್ಣ ಮೆಂಬಿವಂ ತಿನೆ ರುಜೆಯಿಂದಾದಿರ್ಕುಟುಮೂರ್ಧ್ವಶ್ವಾಸೋದಯಮುಂ ಕಂಠರೋಗಮುಂ ಪ್ರಶಮಿಸುಗುಂ (ಗೋವೈದ. ೯–೩೨) ; ಬಿಸು(ಸಿ ನೀರೊಳ್ ಕುಡೆ ವಾತಂ ಪ್ರಶಮಿಸುಗುಂ (ಅಶ್ವಶಾ. ೬-೯೬).

[ಪ್ರಶಮನ + –ಇಸು]

**ಪ್ರಶಮೆ** (ನಾ). = ಪ್ರಶಮ ೧ : ನಿಮಗಭ್ಯುದಯಮೆ ತಾಮೆಮಗೆ ನಿತ್ಯ ಕರ್ಮಾನುಷ್ಠಾನದ ಪ್ರಶಮೆಯಪ್ಪುದೆಂದಕಿಮುದದಿಂದಭ್ಯುದಯವಾಗೆ ಪರಸಲ್ಕಂದೆ (ಅಜಿತ. ೦೪-೩೨). [ಸಂ. ಪ್ರಶಮ]

**ಪ್ರಶಸ್ತ** (ಗು). ೧. ಹೊಗಳಿದ ; ಕೊಂಡಾಡಿದ. ೨. ಉತ್ತಮವಾದ ; ಶ್ರೇಷ್ಠವಾದ : ಅಕ್ರೀಯಗ್ಯಹಾಭ್ಯಂತರಪ್ರಶಸ್ತಪ್ರದೇಶಂಗಳೊಳಂ ಪ್ರಶಸ್ತಮೃತ್ತಿಕಾವಿರಚಿತೋನ್ನತವೇದೀತಲಾ ಷ್ಟ ಮ ಹಾ ಪ್ರಾ ತಿ ಹಾ ರ್ಯ ಸಮನ್ವಿತಜಗತ್ಪೂಜ್ಯಪೂಜಕಾರ್ಹತ್ಪ್ರತಿಮೆಗಳ ನಿಜಾಸ (ಅಂತ್ಯ. ೦೩–೦೬ ಪ). ೩. (ಗ್ರಹ, ತಾರೆಗಳಂತೆ) ಮಂಗಳಕರವಾದ ; ಶುಭಕರವಾದ : ಪ್ರಶಸ್ತಲಗ್ನದೊಳಾತ್ಮೀಯಸ್ಥಾಯಿಯಪ್ಪ ಶಿಬಿರಮಹಾರಾಜನನು ಚಿ ತ ಪ್ರ ತಿ ಪತ್ತಿಗಳಿಂ ಕಂಡು (ಸುಕುಮಾ. ೨-೭೩ ಪ). (ನಾ). ೪. ಉತ್ತಮವಾದುದು; ಶ್ರೇಷ್ಠವಾದುದು: "ಪ್ರಶಸ್ತಂ, ಸಂಸ್ಕೃತಂ–ಈ ೨ ಲೇಸು ಮಾಟ್ಪುದು" (ಶಬ್ದಮ. ೦೩೯–೮೬); ಆಹಾ ! ತುಂಬಾ ಪ್ರಶಸ್ತವಾಗಿ (ರಾಘವಮು. ೯೦). ೫. ಚೆಲುವಾದುದು ; ಸುಂದರವಾದುದು: "ಕಮನೀಯಮುಭರಾಮಂ. . . ಪ್ರಶಸ್ತಂ ವರಂ ರಮ್ಯಣೀಯಂ" (ಕಬ್ಬಿಗರ. ೦೩೬–೨). ೬. ಮಂಗಳ ವನ್ನು ನುಡಿಯುವವನು ; ಶುಭ ನುಡಿಯುವವನು : "ಪ್ರಶುತಂ ಪ್ರಶಸ್ತನೆನೆ ಗೆರೆ ನುಡಿವವಂ" (ಕಬ್ಬಿಗರ. ೬೦-೦೬). ೭. [ಸಂಗೀತ] ನೂರೆಂಟು ತಾಳಗಳಲ್ಲಿ ಒಂದು: ಧ್ರುವ . . .ಪ್ರಶಸ್ತ . . . ಜಯಾಳ ಮೆಂಬಿವು ಮೊದಲಾದ ನೂಱೆಂಟು ತಾಳಂಗಳಂ (ವಿವೇಕ. ೩೩೯). [ಸಂ.]

**ಪ್ರಶಸ್ತಕಾಲ** (ನಾ). ಶುಭಸಮಯ ; ಒಳ್ಳೆಯ ಕಾಲ : ಅವರ ಮದುವೆ ಪ್ರಶಸ್ತಕಾಲದಲ್ಲಿ ನೆರವೇರಿತು (ಆಧು). [ಸಂ.]

**ಪ್ರಶಸ್ತಮುಹೂರ್ತ** (ನಾ). = ಪ್ರಶಸ್ತಕಾಲ : ವಧೂವರರಿರ್ವರುಮಂ ಮೌಹೂರ್ತಿಕಗಣನಿರೂಪಿತಪ್ರಶಸ್ತಮುಹೂರ್ತದೊಳ್ . . . ಮುಂದಿಟ್ಟು ತಂದು (ಅಂತ್ಯ. ೯-೯೬ ಪ). [ಸಂ.]

**ಪ್ರಶಸ್ತಿ** (ನಾ). ೧. ಹೊಗಳಿಕೆ ; ಪ್ರಶಂಸೆ : ದರ್ಶನ ವರ್ಣನೆ ದರ್ಶನ ಪ್ರಶಸ್ತಿ (ಗಿಳಿ. ೯–೦೨೦) ; ಕನ್ನಡಸಾಹಿತ್ಯದಲ್ಲಿ ಕಬ್ಬಿಗರ ಕಾವಕ್ಕೆ ಅಷ್ಟೊಂದು ಪ್ರಶಸ್ತಿ ! (ಶಾಹಿಸ. ೦೦೬). ೨. ಹೊಗಳಿಕೆ ಯನ್ನೊಳಗೊಂಡ ಶಾಸನ : ಕಾಕಿಣರತ್ನದಿಂದಲ್ಲಿ ಮುನ್ನಿರ್ದು ದೊಂದು ಪ್ರಶಸ್ತಿಯಂ ಪರಾಮೃಷ್ಟಂ ಮಾಡಿ (ಶಾಂತಿಪು. ೧೦–೬೩ ಪ). ೩. ಗೌರವಸೂಚಕವಾದ ಪದವಿ ; ಬಿರುದು : ಸಮನೆನಿಸುವ[ರ್] ಪ್ರಶಸ್ತಿಕ್ರಮದೊಳ್ ಸ್ವಸ್ತಿಸಮಧಿಗತ ಪಂಚ[ಮಹಾ]ಮಹಾಸಾಮಂತ ರೆನಲ್ ಸಮನೆನಿಪರೆ ಗುಣದೊಳರಿಗನೊಳ್ ಸಾಮಂತರ್ (ಪಂಪಭಾ. ೦-೯೯); ಅಯ್ಯನ ಗಂಧವಾರಣಂ ನಾಮಾದಿ ಸಮಸ್ತಪ್ರಶಸ್ತಿಸಹಿತಂ (ಕಜಿ. ೦-೦-೯; 1092)- ೪. ಉತ್ಕೃಷ್ಟತೆ ; ಶ್ರೇಷ್ಠತೆ. ೫. ಪ್ರಚಾರ ; ಪ್ರಸಾರ ; ಹರಡುವಿಕೆ. ೬. ಮಾರ್ಗದರ್ಶನ ; ನಿರ್ದೇಶನ. ೭. ಕಲ್ಯಾಣ ; ಶ್ರೇಯಸ್ಸು. [ಸಂ.]

**ಪ್ರಶಸ್ತಿಪತ್ರ** (ನಾ). ಪ್ರಶಂಸೆಯನ್ನು ಸೂಚಿಸುವ ಪತ್ರ; ಯೋಗ್ಯತಾ ಪತ್ರ : "ಪ್ರಮಾಣಪತ್ರ, ಯೋಗ್ಯತಾಪತ್ರ, ಪ್ರಶಸ್ತಿಪತ್ರ" (Certificate. ಪಶ್ರಿ. ೦೯). [ಸಂ.]

**ಪ್ರಶಸ್ತಿಲೇಖನ** (ನಾ). ಹೊಗಳಿಕೆಯ ಬರಹದ ಶಾಸನ : ಪ್ರೇಂಪೋ ಲಿತಮನಸಿಜವಿಜಯಪ್ರಶಸ್ತಿಲೇಖನೋಚಿತತ್ವದ ಶ್ರೀತಾಳಿಕಮುಮಪ್ಪ ಪೇಲಾವನದೊಳಾಪಾಸಿತವಿಜಯಕಟಕನಾಗಿ (ಅಂತ್ಯ. ೦೩–೩ ಪ). [ಸಂ.]

**ಪ್ರಶಾಂತ** (ಗು). ೧. ಸದ್ದು ಗದ್ದಲವಿಲ್ಲದ ; ನಿಃಶಬ್ದವಾದ : ಆ ಪ್ರಭಾಮಯವಾದ ಪ್ರಶಾಂತನಿಶಿಯಲ್ಲಿ . . . ಗಾನಮಾಧುರ್ಯದಲ್ಲಿ ಮಗ್ನನಾದ ಖಾನನು ಎಲ್ಲವನ್ನೂ ಮರೆತಿದ್ದಾನೆ (ಚಿಂತ. ೩೩). ೨. ತಾಳ್ಮೆಯಿಂದ ಕೂಡಿದ ; ಶಾಂತವಾಗಿರುವ. (ನಾ). ೩. ಶಾಂತತೆ : ಪ್ರಸನ್ನಗಂಭೀರತರೋಕ್ತಿಯಿಂ ಪ್ರಕಟಮಕ್ಕೆ ರಸಂ ಸತತಂ ಪ್ರಶಾಂತದಿಂ (ಕಾಪಾ. ೨-೯೯). ೪. ಶಾಂತನಾಗಿರುವವನು ; ಸಮಾಧಾನಿ : ತಂದೆ ಅಪ್ಪರ ಮಟ್ಟಿಗೆ ಪ್ರಶಾಂತರಾದುದನ್ನು ಕಂಡು ರಾಮಯ್ಯನಿಗೆ ಆಶ್ಚರ್ಯವಾಯಿತು (ಗಾಪೂಟು. ೬೬೯). [ಸಂ.]

**ಪ್ರಶಾಂತಿ** (ನಾ). ೧. ಸದ್ದುಗದ್ದಲವಿಲ್ಲದುದು ; ಪ್ರಶಾಂತವಾದುದು. ೨. ಶಾಂತತೆ ; ಸಮಾಧಾನ : ಭೂಪಾಟೋಪಂ ಬರ್ಪುದೆ ವೃಜಿನವಿಲೋಪ ಜಿನೇಂದ್ರಪ್ರಶಾಂತಿಯೊರೆಗಂ ದೊರೆಗಂ (ಶಾಂತಿಪು. ೦೦-೯೯). ೩. [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು ; ಆ ವಂಶೋದ್ಧಾರಕನಾದ ಮಗನನ್ನು ಪಡೆದು, ಅವನು ಸಮರ್ಥನಾದ ಮೇಲೆ ಸಂಸಾರವನ್ನು ಅವನಿಗೆ ವಹಿಸಿ ತಾನು ಸಂಸಾರದಿಂದ ನಿವೃತ್ತನಾಗುವುದು ; ವೈರಾಗ್ಯವೃತ್ತಿ: ಪ್ರಶಾಂತಿಯುಂ ಸ್ವಗೃಹತ್ಯಾಗಮುಂ . . . ಅಪ್ಪುಯ್ಯತ್ತು ಮೂಱು ಗರ್ಭಾನ್ವಯಕ್ರಿಯೆಯೊಳ್ (ಚಾಪುಂ ಕ. ೨೦೨). 'ದೀಕ್ಷೆ' ಪರಾ. [ಸಂ.]

**ಪ್ರಶಾಸನ** (ನಾ). ಆಳುವುದು ; ಆಡಳಿತ : ಸಂಘಕಾರ್ಯಗಳ ಪ್ರಶಾಸನಸಂಬಂಧವಾಗಿ . . . ರಾಷ್ಟ್ರಪತಿಯವರು ತಮಗೆ ಒದಗಿಸಬೇಕೆಂದು ಕೋರುವಂಥ ಸಂಗತಿಗಳನ್ನು ಅವರಿಗೆ ಒದಗಿಸುವುದೂ . . . ಪ್ರಧಾನಮಂತ್ರಿಯವರ ಕರ್ತವ್ಯವಾಗಿರತಕ್ಕುದು (ಭಾರಾಸ. ೬೯). [ಸಂ.]

**ಪ್ರಶಿಕ್ಷಣ** (ನಾ). ೧. ಉಚ್ಚ ಶಿಕ್ಷಣ. ೨. ಬೇರೆ ಬೇರೆ ವೃತ್ತಿಗಳಿಗಾಗಿ ನೀಡುವ ತರಬೇತಿ ; ವೃತ್ತಿಶಿಕ್ಷಣ : ಕೆಲವು ಸ್ಥಳಗಳಲ್ಲಿ ಪ್ರಶಿಕ್ಷಣ ಹಾಗೂ ಸಂಶೋಧನಕೇಂದ್ರಗಳನ್ನು ತೆರೆಯಲಾಗಿದೆ (ಕಶಕೋ. I.೬೪). [ಸಂ.]

**ಪ್ರಶಿಷ್ಯ** (ನಾ). ಶಿಷ್ಯನ ಶಿಷ್ಯ : ವಿದ್ಯಾರ್ಥಿಯ ವಿದ್ಯಾರ್ಥಿ : ಪ್ರತಿಯೊಬ್ಬ ದೊಡ್ಡ ಅಧ್ಯಾಪಕನಿಗೂ ಈ ಪಂಗಡದ ಶಿಷ್ಯ ಪ್ರಶಿಷ್ಯರ ಸಂಖ್ಯೆಯೇ ಅಧಿಕ (ಕಚಾ. IV ೬೯೪); ಅಭಿನವಗುಪ್ತನು (೯೬೦ ಕ್ರಿ. ಶ.) ಉತ್ಪಲಾಚಾರ್ಯನ ಪ್ರಶಿಷ್ಯನು (ಕನ್ನಕ್ರಾ. ೯೦೯). [ಸಂ.]

**ಪ್ರಶ್ನ** (ನಾ). ಕೇಳುವಿಕೆ ; ಪ್ರಶ್ನೆ : "ಪ್ರಶ್ನಃ, ಅನುಯೋಗಃ—ಈ ಬೆಸಗೊಳುಹ" (ಹಲಾಪು. ೨೫-೦೫೩). [ಸಂ.]

**ಪ್ರಶ್ನಕಾರ** (ನಾ). ಪ್ರಶ್ನೆಯನ್ನು ಕೇಳುವವನು : "ಪ್ರಶ್ನೆ ಕೇಳುವವನು ; ಪ್ರಶ್ನಕಾರ" (Querist. ೩೦೯೬). [ಸಂ.]

**ಪ್ರಶ್ನಚಿಹ್ನೆ** (ನಾ). ಪ್ರಶ್ನೆಯನ್ನು ಸೂಚಿಸಲು ಹಾಕುವ ಗುರುತು : ಪ್ರಶ್ನಾರ್ಥಕವಾಕ್ಯದ ಕೊನೆಯಲ್ಲಿ ಪ್ರಶ್ನಚಿಹ್ನೆಯನ್ನು ಹಾಕಬೇಕು (ಬಳಕೆ). [ಸಂ. ಪ್ರಶ್ನಚಿಹ್ನ]

**ಪ್ರಶ್ನಲಗ್ನ** (ನಾ). [ಜ್ಯೋತಿ] ಜೋಯಿಸರಿಗೆ ಪ್ರಶ್ನೆಯನ್ನು ಹಾಕುವ ಕಾಲ,—ಲಗ್ನ: ರವಿಜಂ ಮೇಣ್ ಬುಧನಕ್ಕೆ ಕೇಂದ್ರಗೃಹದೊಳ್ ನಿಂದಂದು ಮೇಣ್ ಪ್ರಶ್ನಲಗ್ನವನಾಳೋಕಿಸೆ (ಚಾಕಿ. ೫-೦) [ಸಂ].

**ಪ್ರಶ್ನವ್ಯಾಕರಣ** (ನಾ). = ಪ್ರಶ್ನವ್ಯಾಕರಣಾಂಗ : ಆಚಾರಮುಂ . . . ಅನುತ್ತರೋಪಪಾದಿಕದಶಮುಂ ಪ್ರಶ್ನವ್ಯಾಕರಣಮುಂ . . . ಎಂದು ಅಂಗಪ್ರವಿಷ್ಟಭೇದದಿಂ ದ್ವಾದಶವಿಕಲ್ಪಮುಂ ಅಕ್ಕುಂ (ಕನ್ನಕ್ರಿ. ೫೬) ; ಆಚಾರ, ಸೂತ್ರಕೃತ, ಸ್ಥಾನ, ಸಮವಾಯ, ವ್ಯಾಖ್ಯಾಪ್ರಜ್ಞಪ್ತಿ . . . ಪ್ರಶ್ನವ್ಯಾಕರಣ, ವಿಪಾಕಸೂತ್ರ, ದೃಷ್ಟಿವಾದ ಎಂಬುವು ಹನ್ನೆರಡು ಅಂಗಗಳು (ಭಾಕನ್ನ. ೨೨೬) ; ಅಂಗಶ್ರುತಜ್ಞಾನವು ಆಚಾರ . . . ಪ್ರಶ್ನವ್ಯಾಕರಣ, ವಿಪಾಕಸೂತ್ರ, ದೃಷ್ಟಿವಾದ ಎಂದು ಹನ್ನೆರಡು ಬಗೆಯಾಗಿದೆ (ಕೈಶರ. ೦೦೪). [ಸಂ.]

**ಪ್ರಶ್ನವ್ಯಾಕರಣಾಂಗ** (ನಾ). [ಜೈನ] ಅಂಗಶ್ರುತಜ್ಞಾನದ ಹನ್ನೆರಡು ಬಗೆಗಳಲ್ಲಿ ಒಂದು ; ಆಕ್ಷೇಪಣೀಯ, ವಿಕ್ಷೇಪಣೀಯ, ಸಂವೇದನೀಯ, ನಿರ್ವೇದನೀಯವೆಂಬ ನಾಲ್ಕು ಬಗೆಯ ಧರ್ಮಕಥೆಗಳ ವರ್ಣನೆ ; ಅನೇಕ ಪ್ರಶ್ನೆಗಳಿಗೆ ಉತ್ತರ ಹೇಳುವ ರೀತಿ ; "ಶ್ರುತಾಂಗಗಳಲ್ಲಿ ಒಂದು—ಪ್ರಾಣಿಗಳ ಸುಖದುಃಖಗಳ ಸಂಬಂಧವಾದ ಪ್ರಶ್ನೆಗಳಿಗೆ ಉತ್ತರ ಕೊಡುವ ರೀತಿ. ಇದು ತೊಂಬತ್ತಮೂರು ಲಕ್ಷದ ಹದಿನಾರುಸಾವಿರಪದಗಳುಳ್ಳ ಶಾಸ್ತ್ರ" (ಕೈಸಕೋ. ೦೬೯) ; ಪ್ರಶ್ನವ್ಯಾಕರಣಾಂಗ (ಪ್ರಶ್ನೆ ಮಾಡುವುದು, ವ್ಯಾಕರಣವಿವರವುಳ್ಳದು) (ಕೈಪಪ. ೯೯೯) ; ಆಚಾರಾಂಗ, ಸೂತ್ರಕೃತಾಂಗ, ಸ್ಥಾನಾಂಗ, ಸಮವಾಯಾಂಗ, ವ್ಯಾಖ್ಯಾಪ್ರಜ್ಞಪ್ತ್ಯಂಗ, ಜ್ಞಾತೃಕಥಾಂಗ, ಉಪಾಸಕಾಧ್ಯಯನಾಂಗ, ಅಂತಕೃದ್ದಶಾಂಗ, ಔಪಪಾದಕದಶಾಂಗ, ಪ್ರಶ್ನವ್ಯಾಕರಣಾಂಗ, ವಿಪಾಕಸೂತ್ರಾಂಗ, ದೃಷ್ಟಿವಾದಾಂಗಗಳೆಂಬ ಹನ್ನೆರಡು ಅಂಗಗಳಿವೆ (ಚಾರಸ. ೦೬೪). 'ದ್ವಾದಶಾಂಗ' ಪರಾ. [ಸಂ.]

**ಪ್ರಶ್ನಾರ್ಥಕ** (ಗು). ಪ್ರಶ್ನೆಯಿಂದ ಕೂಡಿದ ; ಪ್ರಶ್ನೆಯ ಅರ್ಥವುಳ್ಳ: ಅವಳು ಪ್ರಶ್ನಾರ್ಥಕ ದೃಷ್ಟಿಯಿಂದ ಮಾಸ್ತರರ ಕಡೆಗೆ ನೋಡತೊಡಗಿದಳು (ರಂಗಲೋ. ೦೦೩) ; ಈ ಕೆಳಗಿನ ವಾಕ್ಯಗಳಲ್ಲಿ ಪ್ರಶ್ನಾರ್ಥಕ ವಾಕ್ಯ ಯಾವುದು ? (ಬಳಕೆ). [ಸಂ.]

**ಪ್ರಶ್ನಾರ್ಥಕಸರ್ವನಾಮ** (ನಾ). [ವ್ಯಾಕ] ಪ್ರಶ್ನೆಯನ್ನು ಕೇಳುವಾಗ ಉಪಯೋಗಿಸುವ ಸರ್ವನಾಮಗಳಲ್ಲಿ ಒಂದು : ಯಾರು, ಯಾವುದು, ಏನು ಮುಂತಾದ ಸರ್ವನಾಮಗಳು ಪ್ರಶ್ನೆಗೆ ವಿಷಯವಾಗಿರುವ ಪದಾರ್ಥಗಳನ್ನು ಸೂಚಿಸುತ್ತವೆ. ಇವು ಪ್ರಶ್ನಾರ್ಥಕಸರ್ವನಾಮಗಳು (ಮರ್ಕ್ಯಪು. ೩೦). [ಸಂ. ಪ್ರಶ್ನಾರ್ಥಕಸರ್ವನಾಮನ್]

**ಪ್ರಶ್ನಾವಳಿ** (ನಾ). ಪ್ರಶ್ನೆಗಳ ಪಟ್ಟಿ,—ಯಾದಿ: "(ನಿರ್ದಿಷ್ಟರೂಪಕ್ಕೆ ಳಿಸಿದ) ಪ್ರಶ್ನಾವಳಿ" (Questionary. ೩೦೯೩). [ಸಂ. ಪ್ರಶ್ನಾವಲಿ]

**ಪ್ರಶ್ನಿಸು** (ಕ್ರಿ). ೧. ಕೇಳು ; ಪ್ರಶ್ನೆ ಹಾಕು : ನಾನು ಪುನಃ ಪ್ರಶ್ನಿಸುವುದರಲ್ಲಿ ಸುಬ್ಬಾವಧಾನಿಗಳು ಮನೆಯೊಳಕ್ಕೆ ಹೊರಟರು (ಕಂಗಾಳ್ಯ. ೦೩೩) : ಪ್ರಶ್ನಿಸಿದ ದಿವಿಜೇಂದ್ರಸೂನುವಿಗೆ ತರುಣಿಯೆಂದಳ್ ನಗುತೆ (ಹನ್ನಾಂಗ. ೪೬-೦೫೯). ೨. ವಿರೋಧಿಸು ; ಪ್ರತಿಭಟಿಸು : ಕೇಂದ್ರದ ತೀರ್ಮಾನವನ್ನು ಪ್ರಾಂತಸರ್ಕಾರವು ಪ್ರಶ್ನಿಸಿತು (ಬಳಕೆ). [ಪ್ರಶ್ನ + — ಇಸು]

**ಪ್ರಶ್ನೆ** (ನಾ). ೧. ಕೇಳುವುದು ; ಪೃಚ್ಛೆ : ಬೋಧಾಯನಸ್ಮೃತಿ— ಇದು ಸೂತ್ರರೂಪದಲ್ಲಿದೆ. ನಾಲ್ಕು ಪ್ರಶ್ನೆಗಳು, ೮೦೭ ಅಧ್ಯಾಯಗಳಿವೆ (ಕಾರದ. ೬೬) ; ನಮ್ಮ ಪ್ರಶ್ನೆಗಳೇ ಯಾರಿಗೂ ಅರ್ಥವಾಗಲಿಲ್ಲ (ಹಸುಹೂ. ೨೬೮). ೨. ಸಂಶಯ ; ಸಂದೇಹ : ಆ ಮಾತುಗಳು ಯಾವ ಭಾಷೆಯ ಮಾತುಗಳು ಎಂಬುದೇ ಮುಖ್ಯ ಪ್ರಶ್ನೆ (ಧ್ರಾಬಿ. ೬೮).

**ಪ್ರಶ್ನೆ ಮಾಡು** = ಕೇಳು ; ಪ್ರಶ್ನಿಸು : ನಚಿಕೇತ ಮೌನವಾಗಿ ಕುಳಿತು ಏನೋ ವಿಚಾರಿಸಿ, ಬಳಿಕ ಪ್ರಶ್ನೆ ಮಾಡಿದ (ಕಕಂಕಾ. ೦೫೨). **ಪ್ರಶ್ನೆ ಹಾಕು** = ಪ್ರಶ್ನೆ ಮಾಡು : ಉಪಾಧ್ಯಾಯರು ವಿದ್ಯಾರ್ಥಿಗಳಿಗೆ ಪ್ರಶ್ನೆ ಹಾಕಿದರು (ಬಳಕೆ). [ಸಂ. ಪ್ರಶ್ನ]

**ಪ್ರಶ್ನೆಕೇಳು** 'ಪ್ರಶ್ನೆಗೇಳು' ನೋ.

**ಪ್ರಶ್ನೆಗೇಳು, ಪ್ರಶ್ನೆಕೇಳು** (ಕ್ರಿ). ೧. ಪ್ರಶ್ನಿಸು ; ಕೇಳು. ೨. (ಭವಿಷ್ಯವನ್ನು ತಿಳಿಯಲು) ಜ್ಯೋತಿಷಿಯ ಬಳಿ ಶಕುನವನ್ನು ಕೇಳು : ನಾಟಕವಲ್ಲದೆ[ವೆ]ನರರಂತೆ ನಕ್ಷತ್ರಪಾಠರ ಪ್ರಶ್ನೆಗೇಳುವುದು ಕೀಟಕರೇನ ಬಲ್ಲರು ಕೃಷ್ಣ ನಿನಗೆ ಚುನ್ನಾಟ ಬೇಡ (ಕೋಹಕ. ೦೫-೬೦). **ಪ್ರಶ್ನೆ ಕೇಳು:**

೧. ಪ್ರಶ್ನೆಕೇಳುವುದಕ್ಕಾಗಿ ಎದ್ದು ನಿಂತಳು (ಹಸುಹೂ. ೩೩೭).
[ಪ್ರಶ್ನೆ + ಕೇಳು (< ಕೇಳ್)]

**ಪ್ರಶ್ನೋಪನಿಷತ್ತು** (ನಾ). (ಆರು ಪ್ರಶ್ನೆಗಳು ಮತ್ತು ಆರು ಉತ್ತರಗಳನ್ನು ಒಳಗೊಂಡ) ಒಂದು ಉಪನಿಷತ್ತಿನ ಹೆಸರು : ಪ್ರಶ್ನೋಪನಿಷತ್ತು, ಅಥರ್ವವೇದದ ಪೈಪ್ಪಲಾದಶಾಖೆಗೆ ಸೇರಿದೆ. ಇದರಲ್ಲಿ ಸುಕೇಶಾ, ಸತ್ಯಕಾಮ, ಸೌರ್ಯಾಯಣಿ, ಅಶ್ವಲಾಯನ, ಭಾರ್ಗವ, ಕಬಂಧಿ — ಈ ಆರು ಮಂದಿ ಕೇಳಿದ ಆರು ಪ್ರಶ್ನೆಗಳಿಗೆ ಪೈಪ್ಪಲಾದರು ಉತ್ತರ ಕೊಟ್ಟಿದ್ದಾರೆ. ಇದರಲ್ಲಿ ಪ್ರಾಣವಿದ್ಯೆ, ತನ್ಮಾತ್ರೆಗಳು, ಮಹಾಭೂತಗಳು, ದಶೇಂದ್ರಿಯಗಳು — ಮೊದಲಾದ ವಿಚಾರಗಳಿವೆ. ಸಾಂಖ್ಯದರ್ಶನದ ಮೂಲಸಿದ್ಧಾಂತಗಳು ಇದರಲ್ಲಿವೆ (ಭಾರತ ೩೬.). [< ಸಂ. ಪ್ರಶ್ನೋಪನಿಷದ್]

**ಪ್ರಶ್ರಯ** (ನಾ). ವಿಧೇಯತೆ ; ನಮ್ರತೆ ; ವಿನಯ : ಉಡುಗಿ ಪಿಂಛಚ್ಛತ್ರಮಂ ಪ್ರಶ್ರಯೋದಾರವೇಷೋಚಿತರರ್ಘ್ಯಹಸ್ತರಿದಿರಂ ಬಂದರ್ ಭಯಭ್ರಾಂತಿಯಿಂ (ಆದಿಪು. ೧೨-೩೩) ; ತನ್ಮುನೀಂದ್ರಪಾದಪಾರ್ಶ್ವದೊಳ್ ಮುಕುಳಿತಕರಸರೋಜನುಂ ಪ್ರಶ್ರಯಾವನತಶಿರಸ್ಸರೋಜನುಮಾಗಿ ಕುಳ್ಳಿರ್ದು (ಶಂಪ್ರಪು. ೩-೭೦ ವ). [ಸಂ.]

**ಪ್ರಶ್ರಿತ** (ನಾ). ೧. ವಿನಯ ; ನಮ್ರತೆ : ಸಂಜೆವೂಜೆಯಾರತಿ ಗೆಲವಾಗಿ ನಡೆದಿರೆ ನಾ ಪ್ರಶ್ರಿತವನು ಮರೆತು. . .ಬೆನಕನ ಬಣ್ಣನೆಯೊಳು ಬೇಡಲು (ಗಣೇಶ. ೦೯-೩೩೩). ೨. ವಿನೀತನಾದವನಂ ; ನಮ್ರನಾದವನು : "ನಿಭೃತಃ, ವಿನೀತಃ, ಪ್ರಶ್ರಿತಃ — ೩ ಶಿಕ್ಷಿಸಲ್ಪಟ್ಟವನ ಹೆಸರು" (ನಿಘಂಶಿ. ೩೨೯). [ಸಂ.]

**ಪ್ರಶ್ವಾಸ** (ನಾ). ಉಸಿರಾಟ : ಹೆಚ್ಚು ಗವುನಿಸಿ ಕಿವಿಗೊಟ್ಟು ಕೇಳಿದನು; ನಿಶ್ವಾಸ ಪ್ರಶ್ವಾಸದ ಶಬ್ದವು ಕೇಳಿತು (ಕಪಾಕುಂ ೯೦) ; ಪ್ರಾಣಶಕ್ತಿಯಿಂದ ನಡೆಯುವುದು ಕೇವಲ ಶ್ವಾಸ ಪ್ರಶ್ವಾಸಗಳೇ ಅಲ್ಲ (ಜೀವಾತ್ಮ. ೧೩೨). [ಸಂ.]

**ಪ್ರಷ್ಠ** (ಗು). ೧. ಮುಂಭಾಗದಲ್ಲಿ ನಿಲ್ಲುವ ; ಮುಂದಿರುವ. ೨. ಮುಖ್ಯವಾದ ; ಪ್ರಧಾನವಾದ. (ನಾ). ೩. ನಾಯಕ; ಮುಂದಾಳು. ೪. ಮುಂದುಗಡೆಯಲ್ಲಿ ಹೋಗುವ ಸೇವಕ : "ಪುರೋಗಃ, ಅಗ್ರೇಸರಃ, ಪ್ರಷ್ಠಃ ... ಪುರೋಗಾಮಿ—೭ ಮುಂದುಗಡೆ ನಡೆಯುವ ಊಳಿಗದವನು" (ಶಿಘಂಶಿ. ೨೫೬). [ಸಂ.]

**ಪ್ರಷ್ಠೌಹಿ** (ನಾ). ಮೊದಲನೆಯ ಸಲ ಗರ್ಭವಾದ ಹಸು: "ಪ್ರಷ್ಠೌಹೀ, ಗರ್ಭಿಣೀ—ಈ ೨ ತೆನೆಯಾವು" (ಹಲಾಯು. ೯೩-೦೦೯) ; "ತೆನೆ ನಿಲಲು ಪ್ರಷ್ಠೌಹಿ [ಶಾಕಂ. ಸ್ವಲೂಹಿ]ಯದು" (ಮಂಗರಾ. ೫೯-೩). [ಸಂ. ಪ್ರಷ್ಠೌಹೀ]

**ಪ್ರಸಂಗ** (ನಾ). ೧. ಸೇರಿಕೆ ; ಕೂಟ : ಹರಗಣಂಗಳನೆಗ್ಗ ಹಿಡಿದನೆಹಿರಿಯರುಗಳಂ ನಾಚಿಸಿದೆನೇ ಶರಣಜನತತ್ವಾನುಭವಗೋಷ್ಠೀಪ್ರಸಂಗದಲಿ (ಚಸಪು. ೯೩-೦೩). ೨. ಸಂಪರ್ಕ; ಸಹವಾಸ ; ಸಂಬಂಧ : ತನ್ನ ಪರಿಚಾರಕಜನದ ವಧೂಜನದ ಪ್ರಸಂಗಮನಲ್ಲದುಟಿದ ಜನದ ಸೋಂಕುಮುಪ್ರಸಂಗವುಮುವಂ ಎಂತುಂಟೆಂದಱಿದವನಲ್ಲಂ (ಸುಕುಮಾ. ೦೦-೩೫ ವ) ; ಮಹಾಲಿಂಗದ ಪ್ರಸಂಗಿಯಾಗಿಪ್ಪಾತನಂಗವೆನಗೆ ಮಂಗಳತರಂಗ ಆತನ ಪ್ರಸಂಗದಲ್ಲಿರಿಸಾ ಉರಿಲಿಂಗದೇವ (ಚಶಸಂ. ೨೩೭-೯೦). ೩. ಸಂದರ್ಭ ; ಘಟನೆ ; ಸನ್ನಿವೇಶ : ದಿವಿಜೇಂದ್ರುಂಗಾದುದು ಗೀತವಾದ್ಯನೃತ್ಯಪ್ರಸಂಗಮುಚಿತನ ಕೆಲದೊಳ್ (ಅಜಪು. ೩-೮೩); ಬಲ್ಲವರ ಬೆಸಗೊಂಡರೆ ಎನ್ನ ಬಿಮ್ಮು ಕೆಟ್ಟಹುದೆಂದು ಮೆಲ್ಲನೆ ಪ್ರಸಂಗದಿಂದ ತಿಳಿದು ನೋಡುವೆ (ಬಸವ. ೬೬೬) ; ದೇಶಾಧಿಪತಿ ಹರಿಶ್ಚಂದ್ರರಾಯನ ಸತ್ಯ ವಾಸವನ ಸಭೆಯೊಳಗೆ ನೆಗಳ್ದ ಪ್ರಸಂಗದಿಂ ಕೌಶಿಕ ವಶಿಷ್ಠಮುನಿಗಳಿಗೆ ಘನತರದ ಸಂವಾದಮಂ ಮಾಡಿತಂದು (ಹಕಾ. ೦ ಸೂಚನೆ). ೪. ವಾದ; ವಿವಾದ: ಅನುಭಾವ ಅನುಭಾವವೆಂದೆಂಬಿರಿ...ಅನುಭಾವ ಬಂದ ಬಂದಲ್ಲಿ ಪ್ರಸಂಗ [ಶಾಕಂ. ಅನುಭಾವ]ವ ಮಾಡುವ ಪಾತಕರ ತೋಱಿದಿರಯ್ಯಾ (ಕನ್ನಶ. ೮. ೩೯೮-೬೯೦) ; ಇನ್ನೊಂದು ಪ್ರಸಂಗದಲ್ಲಿ ಅಲ್ಲಸು ತನ್ನ ಅಭಿಪ್ರಾಯಗಳನ್ನು ಇತರರು ಖಂಡಿಸಿದಾಗ ಅವರ ವಾದವನ್ನು ಒಪ್ಪಿಕೊಳ್ಳುತ್ತಾನೆ (ಕೂವ್ಯಕು. ೦೪೯) ; ತಗಲಾದರೂ ಈ ಪ್ರಸಂಗವನ್ನು ಇಲ್ಲಿಗೇ ಮುಕ್ತಾಯ ಮಾಡುವುದು ನಿಮ್ಮ ಕೈಲೇ ಇದೆ (ಹಸುಹೂ. ೦೫೯). ೫. ವಾರ್ತೆ ; ಸುದ್ದಿ : ನಿನ್ನ ಪ್ರಸಂಗವನ್ನು ಇವನಿಗೆ ಬಹು ಬಗೆಯಲ್ಲಿ ಹೇಳಿದ್ದೇನೆ (ವತಕಾ. ೩೭). ೬. (ಕರಾ) ಯಕ್ಷಗಾನಕ್ಕಾಗಿ ರಾಮಾಯಣ, ಭಾರತ, ಭಾಗವತ ಮುಂತಾದುವುಗಳಿಂದ ಆರಿಸಿಕೊಂಡ ಕಥಾವಸ್ತು, ಕಥಾನಕ ಮತ್ತು ಅವುಗಳಿಂದ ಆಡುವ ನಾಟಕರೂಪ : ಬಾಲ್ಯದಲ್ಲಿ ಈತನ ಪ್ರಸಂಗಗಳನ್ನು ಓದಿ ಹಾಡಿ ಕನ್ನಡ ಸಾರವನ್ನು ಹೀರಿದುದರಿಂದಲೇ ತೊರವೆರಾಮಾಯಣ—ಗದುಗಿನ ಭಾರತಗಳನ್ನು ಓದಬೇಕೆಂಬ ಆಸೆ ನನಗಾಯಿತು (ಕಾರ್ಣಸು. V ಮುನ್ನುಡಿ); ಆಟದವರು ಒಂದು ರಾತ್ರಿಯಲ್ಲಿ ಎರಡು ಮೂರು ಬೇರೆ ಬೇರೆ ಪ್ರಸಂಗಗಳನ್ನು ಆಡಿ ಮುಗಿಸಿದರೂ ಮುಗಿಸಬಹುದು (ಯುಕ್ಷಶ. ೩೯); ಇಂದಿನ ಬಯಲಾಟದಲ್ಲಿ ಯಾವ ಪ್ರಸಂಗವನ್ನು ಆಡಿ ತೋರಿಸಲಿರುವರು ? (೯೭ಪು. ೬-೭೨).

ಪ್ರಸಂಗವಾಡು=೧. ಸಲ್ಲಾಪಿಸು ; ಸಂಭಾಷಿಸು ; ಆ ಕಪಿಂಜಲನು ನನ್ನ ಕೂಡೆ ಪ್ರಸಂಗವಾಡುತ್ತ ಇದ್ದಲ್ಲಿಯೆ ಆ ಪುಂಡರೀಕನು ನನ್ನ ಸಮೀಪಕ್ಕೆ ಬಂದು (ವಕಾ. ೨೦). ೨. ಲೋಕಾಭಿರಾಮವಾಗಿ ಮಾತನಾಡು. [ಸಂ.]

**ಪ್ರಸಂಗಕಾರ** (ನಾ). ಯಕ್ಷಗಾನ ಅಥವಾ ಬಯಲಾಟದ ನಾಟಕಗಳನ್ನು ರಚಿಸುವವನು; ಭಾಗವತ : ನಮ್ಮ ಪ್ರಸಂಗಕಾರರು ಗದುಗಿನ ಭಾರತದಿಂದಲೋ, ಜೈಮಿನಿಭಾರತದಿಂದಲೋ ... ಹೆಚ್ಚಾಗಿ ಕಥೆಗಳನ್ನು ಆರಿಸಿಕೊಂಡರು (ಯುಕ್ಷಶ. ೩೮). [ಸಂ.]

**ಪ್ರಸಂಗತ** (ಗು). ಕೂಡಿದ ; ಸೇರಿದ : ಗಂಗಾತರಂಗಪ್ರಸಂಗತಜಟಾಪಟಲಮಂಗಳಾತ್ಮಕ ಭಕ್ತಸಂಘಮಂ ರಕ್ಷಿಪುದು (ಚಂಪು. ೩೫-೦). [ಸಂ.]

**ಪ್ರಸಂಗತಿ** (ನಾ). ಕೂಟ; ಸೇರುವೆ; ಐಕ್ಯ : ವರಕರತಳಸ್ಪರ್ಶನಂ ವಿಸ್ತರಿಸುವಡೆ ತಾಂ ಪರುಷವೇದಿಗಳಿರವಘನನಂಘ್ರಿಪ್ರಸಂಗತಿ ಮುಕ್ತಿಗಾಗರವು (ಬಸಪು. ೩೦-೦೯). [ಸಂ.]

**ಪ್ರಸಂಗಾವಧಾನ** (ನಾ). ಸಂದರ್ಭೋಚಿತವಾದ ಉಪಾಯಗಳನ್ನು ತಿಳಿದಿರುವುದು ; ಪ್ರತ್ಯುತ್ಪನ್ನಮತಿ : ಗಂಡಾಂತರ ಬಂದಾಗ ಧೈರ್ಯಗೊಂಡು, ಅದನ್ನು ದಾಟಿ ಹೋಗತಕ್ಕ ಹಂಚಿಕೆಗಳನ್ನು ನೋಡಿಕೊಳ್ಳುವ ಗುಣಕ್ಕೆ ಪ್ರಸಂಗಾವಧಾನ ಅನ್ನುತ್ತಾರೆ (ಮುಂಬಯಿ. ೯-೬೨) ; ಪ್ರಸಂಗಾವಧಾನ ಚೆನ್ನಾಗಿ ಸಾಧಿಸಿತು (ಸ್ವಶಿಕ್ಷ. ೨೯೦). [ಸಂ.]

**ಪ್ರಸಂಗಿ** (ಗು). ೧. ಸೇರಿದ; ಸಂಬಂಧಿಸಿದ. ೨. ಅವಲಂಬಿಸಿದ. ೩. ಪ್ರಾಸಂಗಿಕವಾದ. ೪. ಎರಡನೆಯ ದರ್ಜೆಯ. (ನಾ). ೫. ವಾದಿಸುವವನು; ಚರ್ಚೆ ಮಾಡುವವನು : (೪). ೬. ಸಂಬಂಧವಿರುವವನು; ಸಂಬಂಧ ಹೊಂದಿದವನು : ಮಂಗಳಮಯಲಿಂಗವ ಮನ ಹಿಂಗದೆ ಸುಸಂಗಿಯಾಗಿ ಮಹಾಲಿಂಗದ ಪ್ರಸಂಗಿಯಾಗಿಪ್ಪಾತನಂಗವೆನಗೆ ಮಂಗಳತರಂಗ (ವಶಸಂ. ೨೩೭-೯೦). [ಸಂ. ಪ್ರಸಂಗಿನ್]

**ಪ್ರಸಂಗಿಸು** (ಕ್ರಿ). ೧. ವ್ಯಾಖ್ಯಾನ ಮಾಡು : ಶಬ್ದಸಮುದ್ರವ ಹೊಕ್ಕೊಂದು ಪದಕೆ ನೂಱಪ್ಪ ಪ್ರಸಂಗಿಸಬಹುದು (ಶರಕ. ೨-೯೦). ೨. ಮಾತನಾಡು; ಸಲ್ಲಾಪಿಸು : ತಂಗೀ ನೀ ಕೇಳು ಸಮಸ್ತಚಿತ್ರಂಗಳ ಭಂಗಿಸಿಬಿಟ್ಟೆ ನಿನ್ನೆರ್ದೆಗೆ ಅಂಗೀಕೃತ ಪ್ರಾಣಕಾಂತನಾರೆಂದು ಪ್ರಸಂಗಿಸಿದಳು ನಸುನಗುತೆ (ವೋಹತ. ೩೦ - ೨೦); ಆ ಗೌತಮೇಂದ್ರನ

ಯೇಕೋರಾಮ್ಯಯನವರು ಕುಳ್ಳಿರಿಸಿಕೊಂಡು ಆತನ ಕೂಡೆ ಪ್ರಸಂಗಿಸುತಿರ್ದರು (ಒಲ್ಮಿಕು. ೦೦೩-೬). ೩. ಪ್ರಸ್ತಾಪಿಸಂ : ಪಂಪ ಮೊದಲಾದವರು ಬಗೆಬಗೆಯ ರಗಳೆಗಳನ್ನುಪಯೋಗಿಸಿದ್ದರೂ ಅವುಗಳನ್ನು ಕುರಿತು ಅವನು ಪ್ರಸಂಗಿಸಿಲ್ಲ (ನಶಾರೋ. ೦೬೬). [ಪ್ರಸಂಗ + —ಇಸು]

**ಪ್ರಸಕ್ತ** (ಗುಂ). ೧. ಕೂಡಿದ; ಸೇರಿದ. ೨. ಅಂಟಿರುವ. ೩. ಎಡೆಬಿಡದ; ನಿರಂತರವಾದ. ೪. ಪಡೆದ; ಹೊಂದಿದ. ೫. ಐಹಿಕದಲ್ಲಿ ಆಸಕ್ತವಾದ; ಪ್ರಾಪಂಚಿಕವಾದ. ೬. ವಿವರಗೊಳಿಸಿದ. (ನಾ). ೭. ಆಸಕ್ತಿಯಿಂದ ಮಾತನಾಡುವವನು; ಚಿತ್ತಾಕರ್ಷಕವಾಗಿ ಸಂಭಾಷಿಸುವವನು: "ಪ್ರಸಕ್ತಃ, ಪ್ರಸೃತಃಈ— ೨ ಗೆಲೆ ನುಡಿವವಂ" (ಹಲಾಯು. ೬೦-೨೦೯). [ಸಂ.]

**ಪ್ರಸಕ್ತಿ** (ನಾ.) ೧. ಕೂಡಿರುವುದು; ಸೇರಿಕೆ; ಹೊಂದಿಕೆ. ೨. ತೊಡಗಿರುವುದಂ; ಪ್ರವರ್ತನೆ. ೩. ಪ್ರಸಂಗ; ಪ್ರಸ್ತಾಪ : ಆ ಪ್ರಸಕ್ತಿಗೆ ಹೋಗದೆ, ಭಾಮಹ ದಂಡಿಗಳ ಕಾಲವು ಕ್ರಿ.ಶ. ಏಳನೆಯ ಶತಮಾನವಾಗಿರಬಹುದೆಂದೂ... ಹೇಳಿ ಮುಗಿಸುವುದು ವಾಸಿ(ಛಾಕಿಚಿ. ೨೬); ಶೂನ್ಯಸಂಪಾದನೆಯಲ್ಲಿ ಅನೇಕ ಧಾರ್ಮಿಕತತ್ವಗಳ... ಪ್ರಸಕ್ತಿ ಬರುತ್ತದೆ (ಶೂನ್ಯಕು. ೦೨೯). ೪. ಸಂದರ್ಭ; ಅವಕಾಶ: ಅವರಿಗೆ ನನ್ನಿಂದ ನಿರಾಶೆಯಾಗುವ ಪ್ರಸಕ್ತಿಯು ಇರುತ್ತಿದ್ದಿಲ್ಲ (ಗಾಳಿಕ. ೦೩೯). ೫. ಸತತ ಪ್ರಯತ್ನ. ೬. ಲಾಭ. [ಸಂ.]

**ಪ್ರಸನ್ನ** (ಗು.) ೧. ತಿಳಿಯಾದ ; ಸ್ವಚ್ಛವಾದ ; ಕಶ್ಮಲವಿಲ್ಲದಿರುವ: ಲಲಿತಾಲಂಕರಣಪ್ರಸನ್ನರಸವದ್ಗೇಯಂಗಳೊಳ್ ಮೂಡುತುಂ ಮುಟುಗುತ್ತುಂ (ಅಂಕ್ರ. ೧-೯೯). ೨. ಸ್ವಸ್ಥವಾದ; ಶಾಂತವಾದ. ೩. ಸಂತುಷ್ಟವಾದ; ಸಂಪ್ರೀತವಾದ. ೪. ಕೃಪೆಯುಳ್ಳ; ದಯೆಯಿಂದ ಕೂಡಿದ. (ನಾ). ೫. ತಿಳಿಯಾದುದು; ಸ್ವಚ್ಛವಾದುದು : "ಪ್ರಸನ್ನಃ, ಅಚ್ಛಃ — ೨ ನಿರ್ಮಲವಾದ ವಸ್ತುವಿನ ಹೆಸರುಗಳು"(ಸಿದ್ಧಾಂತಿ. ೯೦). ೬. ತೃಪ್ತಿ; ಸಂತುಷ್ಟಿ : ಇನ್ನೆಯ್ದು ನಿಮ್ಮರಮನೆಗೆಂದರವರು ಪ್ರಸನ್ನದೆ ನಿಳೆಯ್ದುದರೊಡನೆ (ಶರಶ. ೪೯-೬೬); ನೀರು . . .ಪೂಜೆಗೊಂಡು ಪ್ರಸನ್ನವಾಗುವುದಿಲ್ಲ (ಶರ್ಮೋ೧.೦೦-೬). ೭. (ಅಲಂ ) ಸಾಕ್ಷಾತ್ಕಾರ ; ಎದುರಿಗೆ ಬರುವುದು; ಪ್ರತ್ಯಕ್ಷ : ಅನ್ನೆಗವಿಭಾಶಂ ಪ್ರಸನ್ನನಾದಂ ತರುಣೀಪ್ರಸನ್ನಮಾದಂತಕವ್ವೆರಿಯುಂ ನಿರೀಕ್ಷಿಸುತ್ತೆ (ಕಾಕೃಟ. ೬೨-೯೬). ೮. [ಕಾವ್ಯಮೀ] ಕಾವ್ಯದ ಹತ್ತು ಗುಣಗಳಲ್ಲಿ ಒಂದು ; ಮೃದುತ್ವ ; ಮಾರ್ದವತೆ ; ಕೋಮಲತೆ : ಲೋಕಪ್ರತೀತ ಸುಭಗವಿವೇಕಾಳಾಪಂ ಪ್ರಸನ್ನಮದುವಿಂತಕ್ಕುಂ (ಕಹಿಣಾ. ೨-೬೬) ; ಕರಮಸ್ಪಾಕ್ಷರಮುಚಿತಾಕ್ಷರಮಮಲಂಬಪ್ರಸನ್ನಮತಿಮಧುರಮಲಂಕರಣಯುತಮೆನಿಸಿ (ಶಂಕೋಂಶು. ೦-೯) ; ಪ್ರಸನ್ನ (=ಮೃದುವಾದ ಶಬ್ದಗಳಿಂದಲೇ ಈ ಅರ್ಥದ ಓಜಸ್ಸನ್ನು ಸಂಪಾದಿಸಬಹುದು(ಕೃಷ್ಣಾಕೋ. ೬೨). ೫. ೮ : ವಿಳಸಿತಮಪ್ಪಳಂಕರಣಶಾಸ್ತ್ರದವೊಲ್ದೆಸೆಗಳ್ಪ್ರಸನ್ನಮಂ ತಳೆದು ಪೊದಟ್ದುವಾ ರುಚ್ಚಕಭೂಷೆಯದೊಲ್ನೆಲೆಗೊಂಡು ಕಂಠದೊಳ್ ಪೊಳೆವ ಪಯಃಪ್ರವಾಹಮಯಮಾಯ್ತು ನದೀತತಿ ಸತ್ಕವೀಂದ್ರಸುಜ್ಜಳಕವಿತೋಕ್ತಿವೊಲ್ಮೃದುಪದನ್ಯಸನೋಚಿತಮಾಯ್ತು ಳಾತಳಂ (ಶಾಂತೀಶ್ವ. ೦೨-೬೬). [ಸಂ.]

**ಪ್ರಸನ್ನತೆ** (ನಾ). ೧. ಶುದ್ಧವಾಗಿರುವುದು ; ಸ್ವಚ್ಛತೆ; ನೈರ್ಮಲ್ಯ : ಪಂಪಾಂಬಿಕೆ ಮದೀಯ ಮತಿಗೀಗೆ ಪ್ರಸನ್ನತೆಯನುತ್ಸವದೊಳು (ಶಕಣ. ೦-೬). ೨. ತೃಪ್ತಿ; ಸಂತುಷ್ಟಿ : ಪ್ರಸನ್ನತೆಯನಾಂತುವಾ ಪದದೊಳಾಸೆಗಳ್ (ಶರ್ಗಕ್ರ. ೩೦-೬೯); ಇಳಿವಯಸ್ಸಾದರೂ ... ಮುಖದಲ್ಲಿ ಪ್ರಸನ್ನತೆ ಅರಳಿತು (ಸಚಹ. ೩೨). [ಸಂ. ಪ್ರಸನ್ನತಾ]

**ಪ್ರಸನ್ನಭಾವ** (ನಾ). ೧. ನಿರ್ಮಲವಾದ ಸ್ಥಿತಿ. ೨. ಸಂತೋಷದ ಮನಸ್ಸ್ಥಿತಿ; ಸಂತುಷ್ಟದ ಭಾವ : ಮುಖದ ಪ್ರಸನ್ನಭಾವದಿಂದಲೂ ಆಶೀರ್ವದಿಸುತ್ತ ಪ್ರಕಟನಾದ, ಯಜ್ಞೇಶ್ವರನನ್ನು ಕಾಣುತ್ತಿದ್ದ ಹಾಗೇ ಬಾಧ್ಯೋಗಮುನಿಗಳು ... ನಮಸ್ಕರಿಸಿದರು (ಶಕಂಶಾ. ೩). ೧, ೨ : ಪ್ರಸನ್ನಭಾವಂ ಜಲದೊಳಂ ಜನದೊಳಮಾದ ಶರತ್ಸಮಯದೊಳ್ (ಜಗಂ. ೯-೬೩ ಶ). [ಸಂ.]

**ಪ್ರಸನ್ನಮನ** (ನಾ). ಸಂತೋಷಗೊಂಡವನು; ಸಂತುಷ್ಟನಾದವನು: ಭರತೇಶ್ವರಂ ಪ್ರಸನ್ನಮನನಾಗಿ ವೃಷಭಸೇನಾದ್ಯನುಪಮಪರ್ಯಂತ ಗಣಧರದೇವತರಿತಾರ್ಕರ್ಣನಮನ ತನಗೆ ಕರ್ಣಪೂರಂ ಮಾಡಿ (ಆದಿಪು. ೦೩-೯೬ ವ). [ಸಂ. ಪ್ರಸನ್ನಮನಸ್]

**ಪ್ರಸನ್ನವದನ** (ನಾ.) ೧. ಅನುಗ್ರಹಿಸಂಮಂತಿರುವ ಮುಖ; ಪ್ರಸನ್ನವಾದ ಮುಖ. ೨. ಮುಖದಲ್ಲಿ ಪ್ರಸನ್ನತೆಯುಳ್ಳವನು : ನೀಂ ದರಸ್ಮಿತಪ್ರಸನ್ನವದನನಪ್ಪ ಕಾರ್ಯರ್ಮನೇ ಕರಣೀಯಮೆಂದು ಮಹೇಂದ್ರ ಮಹಿಮಂ ಮಾಣ್ದು (ಜಗಂ. ೯-೬೯ ವ); ರಾಯರು ಪ್ರಸನ್ನವದನರಾಗಿದ್ದರು (ಶಂಕಹು. ೦೨೩). [ಸಂ.]

**ಪ್ರಸನ್ನೆ** (ನಾ). ೧. ಸಂತೋಷಗೊಂಡವಳು. ೨. ಅನುಗ್ರಹಿಸುವ ಮನಸ್ಸುಳ್ಳವಳು. ೩. ಅಮಲು ಬರಿಸುವ ವಸ್ತು; ಹೆಂಡ; ಮದ್ಯ: "ಆಸವಃ ... ಪ್ರಸನ್ನಾ... ಮಧು—ಈ ೨೪ ಕಳ್ಳು" (ಹಲಾಯು. ೩೩-೦೬೩). ೪. [ಸಂಗೀತ] ನಿಷಾದಸ್ವರದಿಂದ ಉತ್ಪತ್ತಿಯಾಗುವ ಎರಡು ಶ್ರುತಿಗಳಲ್ಲಿ ಒಂದು : ಪ್ರಸನ್ನೆ ಸರ್ವವ್ಯಾಪಿಯೆಂಬೆರಡು ನಿಷಾದಸ್ವರದಿಂದುತ್ಪತ್ತಿಯಾದವು (ಶಿವಳಿ. ೨೩೨). [ಸಂ. ಪ್ರಸನ್ನಾ]

**ಪ್ರಸಭ** (ನಾ). ಒತ್ತಾಯ; ಬಲವಂತ : "ಹಠಃ, ಪ್ರಸಭಂ — ಈ ೨ ಬಲುಹು (ಬಲ್ಪು)" (ಹಲಾಯು. ೦೨೩-೬೯). [ಸಂ.]

**ಪ್ರಸರ** (ನಾ). ೧. ಹರಡುವುದು; ವಿಸ್ತರಣೆ. ೨. ಹರಹು; ವಿಸ್ತಾರ : ತಪಶ್ಚರಣಪರಾಯಣನಾದಂ ಪ್ರತಿಮನುಂ ಪ್ರಕಾಪ ಪ್ರಸರಪ್ರಕಟಪಟುವಾಗಿ ಪಲವುಕಾಲಮರಸುಗೆಯ್ದು (ಶಂಶಕಾ. ೦-೬೩ ವ). ೩. ವೇಗ; ರಭಸ : "ರಂಹಃ . . . ಪ್ರಸರಃ . . . ವಾಜಃ—ಈ ೮ ಕುದಿರೆಯ ವೇಗಂ" (ಹಲಾಯು. ೬೬-೨೯೯). ೪. ಪ್ರವಾಹ: ಝರಿ. ೫. ಮುನ್ನಡೆಯುವುದು. ೬. ಹೆಚ್ಚಳ; ಆಧಿಕ್ಯ : ಓಲಗಕ್ಕೆ ಪದಪಿಂ ಬಂದಿರ್ದ ಕಾಂತಾಜನೋತ್ಕರರತ್ನಾಭರಣಪ್ರಭಾಪ್ರಸರವಾದಂ ತಳ್ತು . . . ನಡೆದಂ ಭೂಪಾಲವಿದ್ಯಾಧರಂ (ಕಾದಂಪೂ. ೦೦೦೦). ೭. ಪ್ರಭಾವ. ೮. ಗುಂಪು; ಸಮೂಹ : ದೆಸೆದೆಸೆಗೋಡಿದನ್ನಕರಿದಿಕ್ಕರಿಯಾದುದರಾತಿಭೂಭುಜಪ್ರಸರಮೆ ದಿಕ್ಕತಿ ಪ್ರಸರಮಾದುದು (ಗದಾಯು. ೦-೩೩); ವಿಲಸತ್ಪುಷ್ಕರಶೀಕರಪ್ರಸರದಿಂ ಸೇಸಿಕ್ಕುತಿರ್ಪಂತೆ . . . ಉದ್ಧಮೊಂಗಲ್ಮಮಂ ತಳೆದೊರ್ಪಿರ್ದುರ್ದನೇಜಾದಂ ದ್ವಿರದಮಂ ವಾಳೀಭವಜ್ರಾಂಕುಶಂ (ಪುಕ್ರಕ್ರ. ೩-೦೫); ಬಸವರಾಜಂ ಮುಗ್ಧಭಕ್ತಪ್ರಸರದುತ್ತಮಕಥೆಗಳಂ ಸಲೆ ಪಸರಿಸಿದನಾ ಚನ್ನಬಸವಂ ಕೊರ್ತರ್ ಕೇಳುತಿರೆ (ಚಾಕ್ರ. ೦೬-೦೦೬). ೯. ಒಲುಮೆ; ಪ್ರೀತಿ. ೧೦. ಕದನ; ಕಾಳಗ. ೧೧. ಕಬ್ಬಿಣದ ಬಾಣ. ೧೨. ನಾಶ. ೧೩. ಅವಕಾಶ. [ಸಂ.]

**ಪ್ರಸರಣ** (ನಾ). ೧. ಹರಡುವಿಕೆ; ವಿಸ್ತರಣೆ; ಪ್ರಸಾರ : "ಪ್ರಸ[ಶಾಕಂ. ಸಾ]ರಣ ಸಮೂಹಂಗಳೊಳ್ ಪಸರು" (ಕರ್ನಾ. ೦೦೯); ಭಾವನಾಪ್ರಸರಣವೇ ಸಾಹಿತ್ಯದ ಮುಖ್ಯಕಲಸ (ಕಾಕೃಕು. ೬೨). ೨. ಸೈನ್ಯವು ಮುಂತಾದುದಂ,-ವ್ಯಾಪಿಸುವುದು : "ಆಸಾರಃ, ಪ್ರಸರಣಂ—ಎಲ್ಲ ಕಡೆಗಳಲ್ಲಿಯೂ ಸೇನೆ ವ್ಯಾಪಿಸುವಿಕೆ, ಮುತ್ತಿಕೊಳ್ಳುವಿಕೆ" (ಸಿದ್ಧಾಂತಿ. ೨೬೬). [ಸಂ.]

**ಪ್ರಸರಣೆ** (ನಾ). = ಪ್ರಸರಣ ೧ : ಹಣ ಪ್ರಸರಣೆಯಲ್ಲಿರಬೇಕಾ

ದಂತೆ ಏನ್ದೆ ಪ್ರಚಾರದಲ್ಲಿರಬೇಕು (ಹೊಸಕ್ಷ. ೪೦) : ಕೀಟಗಳ ಮೊಟ್ಟೆಗಳಲ್ಲಿ ಉಸಿರಾಟ ಪ್ರಸರಣೆಯಿಂದ (diffusion); ಸೂಕ್ಷ್ಮರಂಧ್ರದ (Micro pyle) ಮೂಲಕ ಅನಿಲಗಳ ಬದಲಾವಣೆ (ಕೀಟಶ. ೩೭). [ಸಂ. ಪ್ರಸರಣ]

**ಪ್ರಸರಿಸು** (ಕ್ರಿ). ಹರಡಂ; ವ್ಯಾಪಿಸಂ; ಹಬ್ಬು : ಪ್ರಸರಿಸಿದುನ್ನತ ತಿಮಿರಪ್ರಸರದೊಳೆಡೆಸಿಲ್ಕಿ ಮಿಱುಪ ಕಿಸುಸಂಜೆಯವೋಲ್ ಮಿಸುಗುವ ಬೈತಲೆವಟ್ಟೆಯೊಲೆಸೆದುದು ಸಿಂದೂರರೇಖೆ ತದ್ಬಾಲಿಕೆಯಾ (ಉದ್ಭಟ. ೩-೪೩) ; ಇತಿಹಾಸ ಪುರಾಣಗಳು, ಅತ್ಯುತ್ಕೃಷ್ಟ ಮಹಾಕಾವ್ಯಗಳು, ಶಿಲ್ಪಕಲೆಗಳು ಇವುಗಳ ಮೂಲಕ ಧರ್ಮಸಂದೇಶ ಸರ್ವತ್ರ ಪ್ರಸರಿಸುವಂತಾಯಿತು (ಹುಕ್ಕಾರಿ. ೧೦೭ ಟೀಕೆ). [ಪ್ರಸರ + -ಇಸ್ಸು]

**ಪ್ರಸರ್ಪಿತ** (ಗು). ೧. ಹರಡಿದ; ವ್ಯಾಪ್ತವಾದ. (ನಾ). ೨. [ನಾಟ್ಯ] ನೂರೆಂಟು ಬಗೆಯ ಕರಣಗಳಲ್ಲಿ ಒಂದು; ☞ "ಒಂದು ಕೈಯನ್ನು ರೇಚಿತ ಮಾಡಿ, ಆ ಪಾರ್ಶ್ವದ ಚರಣದಿಂದ ನೆಲವನ್ನು ಉಜ್ಜುತ್ತ ನಡೆದು ಇನ್ನೊಂದು ಪಾರ್ಶ್ವದ ಕೈಯನ್ನು ಲತಾ ಹಸ್ತದಲ್ಲಿ . . . ಹಿಡಿದು, ಕಾಲನ್ನು ಎತ್ತೆತ್ತಿ ಇಡುವುದು" (ಅಭಿನಯ. ಗದ್ಯಾನುವಾದ ೩೦೨) : ಕರಮದುವೆ ರೇಚಿತಂಬೆತ್ತಿರಲಾ ಪದ ವಿಳೆಯನುದ್ಘರ್ಷತವೆ ನಡೆಯೆ ಲತಾಕರವಾಗೆ ಹಸ್ತಮೊಂದಾಚರಿಸುತ್ತಂ ನೆಗೆಯೆ ಕೇಳ ಪ್ರಸರ್ಪಿತಕರಣಂ (ಅಭಿನಯ. ೪-೧೯೩). [ಸಂ.]

**ಪ್ರಸವ** (ನಾ). ೧. ಹಡೆಯುವುದು; ಹೆರಿಗೆ; ಪ್ರಸೂತಿ : ಪ್ರಸವ ಪರಿಕ್ಷಾಮವಾಂಡುಮೂರ್ತಿಯಪ್ಪ ವಿಳಾಸವತೀಮಹಾದೇವಿಯುತ್ಸಂಗ ದೊಳ್ . . . ಬಾಲಕನಾದವೊಪ್ಪಿದಂ (ಕಾದಂಸಂ. ೪೦೩); ಕೊನೆಯ ಎರಡು ದಿನದ ಕ್ಷೋಭೆಯನ್ನು ಸಹಿಸಲಾರದೆ ಪ್ರಸವ ಸ್ವಲ್ಪ ಮುಂದಾಗಿ ಆಗಿರಬೇಕು (ಚಕರಾ. ೨೦೩). ೨. ಹುಟ್ಟುವಿಕೆ; ಜನನ; ಜನ್ಮ : ಅವಗಂ ತ್ರಿಭುವನಪ್ರಸವಕ್ಕದು ಭೂಮಿಯೆಂಬ ಪೆಂಪೊದವಿರೆ ಪೆರ್ಮೆಯಿಂ ವಿದಿಸೆಯೆಂಬುದು ನಟ್ಟನ ರಾಜಧಾನಿಯಾದುದು . . . ಮಾಳವಮಧ್ಯ ದೇಶದೊಳ್ (ಕಾದಂಪೂ. ೦೩). ೩. ಮೂಲ; ಆಕರ; ಉತ್ಪತ್ತಿಸ್ಥಾನ. ೪. ಹೂವು; ಪುಷ್ಪ: "ಪುಷ್ಪಂ, ಪ್ರಸವಃ . . . ಸುಮನಸ್—ಈ ೫ ಪೂವಿನ ಪೆಸರ್" (ಹಲಾಯು. ೩೦-೩೨); ಅರವಿಂದೋತ್ಪಲಮಲ್ಲಿಕಾಪ್ರಸವಸೌರಭ್ಯಂ ಗಳಂ ಪೇಱಿ ಬರ್ಪೆಲರುಂ (ಸುಕುಮಾ. ೪-೪೪); ಕಂಪಿಡಿದ ಸುರದ್ರುಮ ಪ್ರಸವ[ಹಾಕಾಂ. ರ]ದಂತೆ ಪರಾಪರಮುಕ್ತಿಯಂತೆ ಸಂಗಡಿಸಿದ ಕಾಮ ಧೇನುವಿನವೋಲ್ ಗಿರಿರಾಜತನೂಜೆಯೊಪ್ಪಿದಳ್ (ಗಿರಿಜಾ. ೩-೪೮). ೫. ಹಣ್ಣು ; ಫಲ : "ಪ್ರಸವಃ—ಹುಟ್ಟುಹಾಕುವಿಕೆ, ಹಣ್ಣು, ಹುವ್ವು, ಹೆರುವಿಕೆ" (ಸಿದ್ಧಾಂತಿ. ೪೨೦). ೬. ಸಹಾಯ; ಅನುಕೂಲ. ೭. ಸಂತಾನ; ಸಂತತಿ. ೮. ಸೋಮರಸವನ್ನು ಹೊರತೆಗೆಯುವುದು. ೯. ಮುನ್ನಡೆಯುವುದು. ೧೦. ಪ್ರವಾಹ; ಹೊನಲು. ೧೧. ಉತ್ಸಾಹ; ಸಡಗರ. ೧೨. ಕಟ್ಟಳೆ ಮಾಡುವುದು. ೧೩. ಲಾಭ.

**ಪ್ರಸವಮಾಗು**, **ಪ್ರಸವವಾಗು** = ಹೆರಿಗೆಯಾಗಂ : ತೋಟಿಯ ಬಡಗ ಹಱಿದ ಬೇರಂ ನೀರಲ್ಲಿ ಅರೆದು ಯೋನಿಯಿಂದಿಳಿಯ ಪೂಸಲು ಪ್ರಸವ ಮಾಗುವುದು (ವೈದ್ಯಸಾ. ೦೦೭) ; ವೈದ್ಯರಿಂದ ಪರೀಕ್ಷೆ ಮಾಡಿಸಿಕೊಂಡು ಹೆರಿಗೆಯ ಸಮಯದಲ್ಲಿ ಯಾವ ತೊಡಕೂ ಇಲ್ಲದೆ ಸುಖವಾಗಿ ಪ್ರಸವ ವಾಗುವುದೆಂದು ಆಶ್ವಾಸ ಪಡೆಯಬೇಕು (ಗೃಹಶಾ. ೦೦೨). [ಸಂ.]

**ಪ್ರಸವಕಾಲ** (ನಾ). ಹೆರಿಗೆಯ ಕಾಲ; ಹಡೆಯುವ ಸಮಯಂ : ತತ್ಸಂಪೂರ್ಣ ಗೇಹದಿನತ್ತಲ್ ನಿಲೆ ಚಂದ್ರಮಂ ಪ್ರಸವಕಾಲಂ ಕಾಂತೆಗಂತಾ ದಿನಂ (ಜಾತಕ. ೩-೦೬). [ಸಂ.]

**ಪ್ರಸವದಿನ** (ನಾ). ಹೆರಿಗೆಯ ದಿನ; ಪ್ರಸೂತಿದಿನ : ಸ್ತ್ರೀ ಪೂರ್ಣಗರ್ಭಿಣಿ; ಪ್ರಸವದಿನದಲ್ಲಿ ಎಷ್ಟು ಹೊತ್ತಿಗೆ ಜನನವಾಗುತ್ತದೆ? (ಜಾತಕ. ೩-೦೯ ಟೀಕೆ). [ಸಂ.]

**ಪ್ರಸವನಕ್ಷತ್ರ** (ನಾ). [ಜ್ಯೋತಿ] ಮಗು ಹುಟ್ಟಿದ ಕಾಲದಲ್ಲಿ ಪ್ರಧಾನ ವಾಗಿರುವ ನಕ್ಷತ್ರ ; ಜಾತಕನ ನಕ್ಷತ್ರ; ಜನ್ಮತಾರೆ : ಆಧಾನ ಅಥವಾ ಪ್ರಶ್ನಕಾಲದ ಚಂದ್ರಸ್ಫುಟದಿಂದ ಪ್ರಸವನಕ್ಷತ್ರವನ್ನೂ ತಿಳಿಯಬಹುದು (ಜಾತಕ. ೩-೦೯ ಟೀಕೆ). [ಸಂ.]

**ಪ್ರಸವಬಂಧ** (ನಾ). ಹೂವಿನ ತೊಟ್ಟು.—ಕಾವು : "ಪ್ರಸವಬಂಧಂ ವೃಂತಮನೆ ಪೂದೊಡಂಬೆಗಳ ಪೆಸರಕ್ಕು" (ಚಂಗರಾ. ೩೩-೩). [ಸಂ.]

**ಪ್ರಸವಬಂಧನ** (ನಾ). = ಪ್ರಸವಬಂಧ : "ವೃಂತಂ, ಪ್ರಸವಬಂಧನಂ_ ಈ ೨ ಹೂವಿನ ತೊಡಂಬೆ" (ಹಲಾಯು. ೩೦-೩೦). [ಸಂ.]

**ಪ್ರಸವವೇದನೆ** (ನಾ). ಹೆರಿಗೆಯ ಕಾಲದ ನೋವು, —ಯಾತನೆ : ಬೆಳಗ್ಗೆ ಶುರುವಾದ ಪ್ರಸವವೇದನೆ ರಾತ್ರಿಯಾಗಿ ಮತ್ತೆ ಬೆಳಗಾದರೂ ಮುಗಿಯಲಿಲ್ಲ (ಅನಾಥ. ೨೦೬). [ಸಂ. ಪ್ರಸವವೇದನ]

**ಪ್ರಸವವೇಧೆ** (ನಾ). = ಪ್ರಸವವೇದನೆ : ಸಮುದ್ರಾಂಬೆ ತಾಂ ದ್ವಿಪ ಪ್ರಸವವೇಧೆಯಿಂದೊಯ್ಯನುತ್ತರಿಸಿ (ಕ್ರೀಚಾರಿತ. ೦೬೩-೩೬೩). [ಸಂ. ಪ್ರಸವವೇಧ]

**ಪ್ರಸವಶಾಸ್ತ್ರ** (ನಾ). ಹೆರಿಗೆಯ ವಿಷಯಕ್ಕೆ ಸಂಬಂಧಿಸಿದ ಶಾಸ್ತ್ರ : ಪ್ರಸವಶಾಸ್ತ್ರದ ವ್ಯಾಸಂಗ ಮುಗಿದ ನಂತರ ಅವಳು ಕ್ರಾಂತಿಸಮ್ಮೇಲನದ ಜನರೊಂದಿಗೆ ಸಂಬಂಧ ಬೆಳಸಿದಳು (ಕ್ರಿಪಕ. ೨೪೦). [ಸಂ.]

**ಪ್ರಸವಶಾಸ್ತ್ರಜ್ಞ** (ನಾ). ಹೆರಿಗೆಯ ಶಾಸ್ತ್ರವನ್ನು ತಿಳಿದವನು: ಗರ್ಭದ ಚಲನೆಗಳ ಮುಹಾಂತರ ಕಾರ್ಯಕಾರಿಯಾಗುವಂತೆ ಕಾಣುವ ಭಗವಂತನ ಆಂತರಿಕ ಇಕ್ಕುಳಗಳು, ಆಧುನಿಕ ಪ್ರಸವಶಾಸ್ತ್ರಜ್ಞರ ಬಾಹ್ಯ ಇಕ್ಕುಳಗಳು— ಇವುಗಳಲ್ಲಿಯ ವಿರೋಧವನ್ನು ಕಾಣಿಸಲಾಗಿದೆ (ಕಲಶ. ೦೩೪). [ಸಂ.]

**ಪ್ರಸವಸಮಯ** (ನಾ). = ಪ್ರಸವಕಾಲ : ಪ್ರಸವಸಮಯದೊಳಾದಾ ಪತ್ತಂ . . . ಉಣ್ಬುದಂ (ಕಾವ್ಯಾವ. ೩೦೩); ಪ್ರಸವಸಮಯಮನೆ ಪಾರ್ದಿರ್ದಸುರಂ ಬಂದೆನ್ನ ಶಿಶುವನುಯ್ಯುದುಗೆಟ್ಟೇ ಬಸಿಱೊಳ್ ಕರಗಿಸೆ ಪಡೆದಂ ಪೊಸತಪ್ಪುದವಟಲಂ (ಜಗಂ. ೨-೬೩); ತನ್ಮಹಾದೇವಿಯ ಪರಿಪೂರ್ಣ ಪ್ರಸವಸಮಯಂ ಮಾರ್ಗಶಿರ ಬಹುಳದಶಮಿಯಾಗೆ (ಪುಷ್ಪಪು. ೦೦-೦೪). [ಸಂ.]

**ಪ್ರಸವಾಂಗ** (ನಾ). [ಜೈನ] ಹತ್ತು ಬಗೆಯ ಕಲ್ಪಕುಜಗಳಲ್ಲಿ ಒಂದು; ಹೂಮಾಲೆಗಳನ್ನು ಒದಗಿಸುವ ಕಲ್ಪವೃಕ್ಷ : ವಸನಾಂಗಾತೋದ್ಯಾಂಗ ಪ್ರಸವಾಂಗ ಜ್ಯೋತಿರಂಗ ದೀಪಾಂಗಾನ್ನಾಂಗ ಸುರಾಂಗ ಭಾಜನಾಂಗಾ ವಸಥಾಂಗ ವಿಭೂಷಣಾಂಗ ದಶಕಲ್ಪಕುಜಂ (ಚಂದ್ರಪ್ರ. ೩-೩೪). [ಸಂ.]

**ಪ್ರಸವಾಗಾರ** (ನಾ). ಹೆರಿಗೆಮನೆ; ಸೂತಿಕಾಗೃಹ : ಪ್ರಸವಾಗಾರದಂತೆ ನಿಷಿದ್ಧಾನ್ಯಪ್ರವೇಶಮುಂ ರಾಜಭವನದಂತೆ ಕೃತರಕ್ಷಾವಿಧಿಯುಂ. . .ಅಪ್ಪ ತಮಿಸ್ರಗುಹೆಯನೆಯ್ದಿದಾಗಳ್ (ಆದಿಪು. ೦೩-೪೩ ವ). [ಸಂ.]

**ಪ್ರಸವಾಲಯ** (ನಾ). = ಪ್ರಸವಾಗಾರ : ಪ್ರಸವಾಲಯದೊಳ್ ಜಗತೀ ಪ್ರಸವಾಭಾರಕ್ಕೆ ಕಿಟ್ಟು ಕಿಲದೊಳ್ಪರ್ಚಿರ್ದಸಿಲತೆಗೆ ಕಾಳಬಜ್ಜರಿವೆಸ ರಾಯ್ತೆಂದಿಂಗೆ ಕೃಷ್ಣನಂಗಚ್ಛವಿಯಿಂ (ಅಜಿತಪು. ೦೨-೬೩). [ಸಂ.]

**ಪ್ರಸವಿತ** (ಗು). ಹೂವು ಬಿಟ್ಟ ; ಪುಷ್ಪಿತವಾದ : ಸುರದ್ರುಮ ಪಂಕುರಿತ ಪಲ್ಲವಿತ ಕೋರಕಿತ ಪ್ರಸವಿತ ಫಲಿತ ಪರಂಪರದಾ ವಿವರದಿಂ ಪರ್ಧಿಸಿತೆನುತ (ಜಗಪು. ೩೩-೪೪).

[☞ ಇದು 'ಪಲ್ಲವಿತ', 'ಕೋರಕಿತ' ಮುಂತಾದ ಸಂಸ್ಕೃತಶಬ್ದಗಳ ರೂಪಸಾಮ್ಯದಿಂದ ಮಾಡಿಕೊಂಡ ಶಬ್ದವಿರಬಹುದು]

**ಪ್ರಸವಿತೃ** (ನಾ). ಜನ್ಮ ಕೊಡುವವನು; ತಂದೆ. [ಸಂ.]

**ಪ್ರಸವಿಸು** (ಕ್ರಿ). ಹೆರು; ಹಡೆ : ಭೂಮಿಯ ರಾಕ್ಷಸಸೇನೆಯಂ ಪ್ರಸವಿ ಸಿತೊ (ಕೌಗಂಧಿ. ೨೬೬-೨). [ಪ್ರಸವ + -ಇಸ್ಸು]

**ಪ್ರಸವೋತ್ಸವ** (ನಾ). ಹೆರಿಗೆಯಾದಾಗ ಮಾಡುವ ಸಮಾರಂಭ ;

ಜನ್ಮೋತ್ಸವ : ಮಹತ್ತರದಿಕ್ಕುಮಾರಿಯರೆಣ್ಬರುಮಂ ಪ್ರಸವೋತ್ಸವೋತ್ಸವದೊಳ್ ತುಂಗಭ್ಯಂಗಾರುಗಳಂ ಪೊತ್ತು ನಡೆಯಲಿಂದ್ರಂ ಬೆಸಸಿದಂ (ಶಾಂತಿಪು. ೯-೦೬೪೫); ಮೂಡಿದ ಶೀತದೀಧಿತಿಗೆ ಕಾಲಪಿತಂ ಪ್ರಸವೋತ್ಸವಂಗಳಂ ಮಾಡುವ ಮಾಳ್ಕೆಯಿಂ . . . ಮಾಡಿದನಳ್ಕರಿಂದೆ ಗಿರಿರಾಜನಜಾತೆಗೆ ಜಾತಕರ್ಮಮಂ (ಗಿರಿಜಾ. ೩-೩೬). [ಸಂ.]

**ಪ್ರಸವ್ಯ** (ಗು). ೧. ಎಡಗಡೆಗೆ ತಿರುಗಿದ. ೨. ಪ್ರತಿಕೂಲವಾದ; ವಿರುದ್ಧವಾದ. ೩. ಅನುಕೂಲವಾದ. (ನಾ). ೪. ವಿರುದ್ಧವಾದುದು ; ಪ್ರತಿಕೂಲವಾದುದು : "ಪ್ರತಿಕೂಲಂ, ಪ್ರತಿಲೋಮಂ, ಪ್ರತೀಪಂ, ಪ್ರಸವ್ಯಂ—ಈ ೪ ಪ್ರತಿಕೂಲಂ" (ಹಲಾಯು. ೦೨೨-೩೬). [ಸಂ.]

**ಪ್ರಸಸ್ತಿ** (ನಾ). ಗೌರವಸೂಚಕವಾದ ಪದವಿ ; ಬಿರುದು : ಪಾರ್ವತೀವಲ್ಲಭಚರಣಸರಸೀರುಹಭೃಂಗಂ ಮಹಾಮಹಿಮೋತ್ತುಂಗಂ ನಾಮಾದಿ ಸಮಸ್ತಪ್ರಸಸ್ತಿಸಹಿತಂ (ಸೌಇಇ. XX. ೯೬-೩೫; 1072) : ಅಂಗೀರಸಂವತ್ಸರದ ಫಾಲ್ಗುಣ ಸು ೧ ಆ ಸ್ವಸ್ತಿಸಮಸ್ತಪ್ರಸಸ್ತಿಸಹಿತಂ ಪೊಡೆರಹಳಿಯ ಬೇಚಗವುಡನ ಮಗ ಕೇತಗವುಡನು . . . ಎತಿಸಿದ ಬೀರಗಲು (ಎಕ. II. ೪೦೫-೨;1273). [ಓ ಇದು 'ಪ್ರಶಸ್ತಿ' ಎಂಬುದರ ಅಪಲಿಖಿತ]

**ಪ್ರಸಹ** (ಗು). ೧. ಸ್ಥಿರವಾದ; ಶಾಶ್ವತವಾದ : ಅಸಹಾಯಸಾಹಸವಿನೋದಿ ವಿವಿಕ್ತಚಿತ್ರಪ್ರಸಹ[ಶಾಂ. ವ]ಪ್ರಕಾಶಿತಮಹೋದಯತತ್ತ್ವಸತ್ತ್ವಂ ವ್ಯಸನವ್ಯಪೇತ[ನು]ಪನೀತಕಲಾಕಲಾಪಂ ಶಶಿಖಂಡನಿರ್ಮಲಯಶೋವಿವಿಧಾವತಂಸಂ (ಶಬರಾ. ೩-೨೨೯). (ನಾ). ೨. ಸಹನೆ; ತಾಳ್ಮೆ. ೩. ಮಾಂಸಾಹಾರಿಯಾದ ಪಕ್ಷಿ ಅಥವಾ ಪ್ರಾಣಿ. [ಸಂ.]

**ಪ್ರಸಹ್ಯ** (ಗು). ೧. ಬಲವಂತದ; ಒತ್ತಾಯದ. (ನಾ). ೨. ಒತ್ತಾಯ; ಬಲಾತ್ಕಾರ : "ಪ್ರಸಹ್ಯಂ — ೧. ಹಠಾರ್ಥಕಂ — ಬಲಾತ್ಕಾರವು" (ನಿಘಂಟು. ೪೬೪). [ಸಂ.]

**ಪ್ರಸಾದ** (ನಾ). ೧. ಅನುಗ್ರಹ; ಕೃಪೆ : ಕುಲಮುದ್ದ ನೀನೀ ಕಯ್ಯ ಪೊಕ್ಕು ಕಾದೆನ್ನು ಬೆಸಸೆ ಪ್ರಸಾದಮೆನ್ದಯ್ದಿ ಕಿಟ್ಟಿ ಕಾದಿ (ಎಕ.VIII. ಸೊರಬ. ೦೦-೬, ಸು; 800) ; ಪದ್ಮಲದೇವಿ ರಾಜಸುತಮಿರ್ಪ್ಪಳು ಹುಳ್ಳರಾಜಾನ್ತರಂಗಮರಾಳಂ ರಮಿಯಿಪ್ಪ ಪದ್ಮಿನಿಯವೊಲು ನಿತ್ಯಪ್ರಸಾದಾಸ್ಪದಂ (ಎಕ.II. ೩೪೬-೦೨; ಸು. 1165); ಈ ಶಾಸನದಲ್ಲಿ ವಿಕ್ರಮಾದಿತ್ಯನು ಪಲ್ಲವರನ್ನು ನಿರ್ಮೂಲ ಮಾಡಿದ್ದನೆಂದೂ ಅವನ ಪ್ರಸಾದದಿಂದ ಜಯಸಿಂಹವರ್ಮನಿಗೆ ರಾಜ್ಯ ಸಿಕ್ಕಿತೆಂದೂ ಬರೆದಿದೆ (ಕರ್ನಾಶಾ-೬೮). ೨. ಶಾಂತಿ; ಸಮಾಧಾನ; ಸ್ವಾಸ್ಥ್ಯ : ಕೋಪಪ್ರಸಾದಮಂ ತದ್ಭೂಪತಿ ದುಷ್ಟರೊಳದುಷ್ಟರೊಳ್ ತಳೆದಂ (ಚಂದ್ರಕೃ. ೨-೬೨). ೩. ಸ್ಪಷ್ಟಗೊಳಿಸುವುದು; ತಿಳಿಯುವಂತೆ ಹೇಳುವುದು: "ಪ್ರಸಾದಃ, ಪ್ರಣಯಃ—ಈ ೨ ತಿಳಿ(ಪು)ಹುವುದು" (ಹಲಾಯು. ೦೨೬-೮೮). ೪. ನೈರ್ಮಲ್ಯ ; ಪರಿಶುದ್ಧತೆ. ೫. ದೇವರಿಗೆ ಅಥವಾ ಗುರುವಿಗೆ ನಿವೇದಿಸಿ ಅನುಗ್ರಹರೂಪವಾಗಿ ಪಡೆಯುವ ಆಹಾರ; ನೈವೇದ್ಯ ಮಾಡಿದ ಪದಾರ್ಥ : 'ತೀರ್ಥ ಕುಡಿದರೆ ಥಂಡಿ ; ಪ್ರಸಾದ ತಿಂದರೆ ಅಜೀರ್ಣ' ಎನ್ನುವಂತಹ ನಾಜೂಕಾದ ಪ್ರಕೃತಿ (ಮೂಕರು. ೪೯); ಪ್ರತಿ ದಿನ ಪುರಾಣ ಮುಗಿದ ಬಳಿಕ ಅವನು ಪ್ರಸಾದ ಹಂಚುವಾಗಲೂ ತಿಮ್ಮಿಯನ್ನು ಕಾಣುತ್ತಿರಲಿಲ್ಲ (ಜೀವನಂ.೩೦) ; ದಾಸಿ ಅಲ್ಲಿ ತಂದಿಟ್ಟಿದ್ದ ಚಿನ್ನದ ಹರಿವಾಣದಲ್ಲಿ ತಾವು ತಂದಿದ್ದ ತೀರ್ಥ ಪ್ರಸಾದಗಳನ್ನಿಟ್ಟರು (ಕೃತ್ತಿಕೂ.೨೯). ೬. ರುಚಿಕರವಾದ ಆಹಾರ. ೭. ಅನ್ನ : ಮಠದ ಸಂತರ್ಪಣೆಯಲ್ಲಿ ಅನ್ನವನ್ನು ಬಡಿಸುವಾಗ, 'ಪ್ರಸಾದ ಬೇಕೆ?' ಎಂದು ಕೇಳುತ್ತಾರೆ (ರೂಢಿ). ೮. (ಅಲಂ) ಹೊಡೆತ; ಏಟು; ಪೆಟ್ಟು : ಘನವಾದ ಪ್ರಸಾದ ಪಡೆದು ಮೂರು ತಿಂಗಳು ಆಸ್ಪತ್ರೆಯಲ್ಲಿ ಮಲಗಿ ಮೊನ್ನೆ ಮೊನ್ನೆ ಡ್ಯೂಟಿಗೆ ಬಂದಿದ್ದ (ಸಂಗಬ. ೦೦೩) ; ಕಾಲಿನ ಬೆರಳಿಗೆ ಅರಿವೆ ಸುತ್ತಿಕೊಂಡದ್ದು ಕಾಣಿಸಿತು. "ಇದೇನು ಮಹಾರಾಯ ?" ಎಂದು ಪ್ರಶ್ನಿಸಿದೆ. "ನಿನ್ನೆಯ ಪ್ರಸಾದ, ಮೂರು ಮೂರು ಸಾರಿ ಒಲ ಹೆಬ್ಬೆರಳಿಗೆ ಬೇರು ಬಡಿದು ಇಷ್ಟು ಬಾತು ಕೊಂಡಿವೆ . . . ಎಂಬ ಉತ್ತರ ಬಂದಿತು (ಮೂರುಕಥೆ. ೬೦). ೯. [ವೀಶೈ] ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರಗಳೆಂಬ ಅಷ್ಟಾವರಣಗಳಲ್ಲಿ ಒಂದು; ಗುರು, ಲಿಂಗ, ಜಂಗಮಕ್ಕೆ ಎಡೆಮಾಡಿ ಅವರಿಂದ ಅನುಗ್ರಹವಾಗಿ ಬಂದುದೆಂದು ಸ್ವೀಕರಿಸುವ ಭೋಜ್ಯಪದಾರ್ಥ : ಗಂಡ ಕೊಂಬುದು ಪಾದೋದಕಪ್ರಸಾದ ಹೆಂಡತಿ ಕೊಂಬುದು ಸುರೆ ಮಾಂಸ (ಬಸವ.೦೦೯); ಮೋಹದ ಮುನಿಸು ಮನದೊಳ್ ತೀವಿ ಪ್ರಣಯಕಲಹಂ ಬಲಿದು ಪ್ರಸಾದಮನೊಲ್ಲದೆ ಬಸವಂ ಮುಸುಂಕಿಟ್ಟು . . . ಪಟ್ಟದರಿರೆ (ಬಸರ.೯-೯೩); ಜೀವನು ಗಡಿಗೆಯಿಂದ ನೀರನ್ನು ತರುವಾಗ ಆ ನೀರು ಪದಾರ್ಥ; ಶಿವ ನಿರ್ಗಿತವಾದ ಮೇಲೆ, ಅವನಿಗೆ ಅದು ಪ್ರಸಾದ (ಕೃ.ಪಿ.೩೬). ೧೦. [ಕಾವ್ಯಮೀ] ಕಾವ್ಯದ ಹತ್ತು ಅರ್ಥಗುಣಗಳಲ್ಲಿ ಒಂದು; ಸುಲಭವಾಗಿ ತಿಳಿಯುವಂಥ ಕಾವ್ಯರಚನಾಶೈಲಿ; ಸ್ಫುಟವಾದ ಶೈಲಿ; ಓ "ಓಜಸ್ಸು (ಬಿಗಿಯಾದ ರಚನೆ) ಮತ್ತು ಶೈಥಿಲ್ಯ (ಬಿಗಿಯಿಲ್ಲದ ರಚನೆ) ಇವುಗಳ ಬೆರಕೆ" (ಕೃಶಿ.೨೩೩): ಅಸಮಸ್ತಪದನ್ಯಾಸಂ ಪ್ರಸಾದಮಾಧುರ್ಯ ಗುಣಸಮಗ್ರಮುದಾರಂ ರಸಭಾವಭಾವಿತೋಕ್ತಿಪ್ರಸರಂ ವೈದರ್ಭರೀತಿಯೆನೆ ಪೆಸರ್ವಡೆಗುಂ (ಕಾವ್ಯಾವ. ೬೮೨); ಪ್ರಸಾದ ಎಂದರೆ ಕಿವಿಗೆ ಬೀಳುತ್ತಿದ್ದ ಹಾಗೆಯೇ ಕ್ಲೇಶವಿಲ್ಲದೆ ವಾಚ್ಯಾರ್ಥವನ್ನು ಸಮರ್ಪಿಸುವ ಶಕ್ತಿ (ಭಾರತೀಯ. ೬೨). [ಸಂ.]

**ಪ್ರಸಾದಂಗೆಯ್** (ಕ್ರಿ). (ಅನುಗ್ರಹ ಅಥವಾ ಪ್ರಸನ್ನತೆಯನ್ನು ಪಡೆಯುವ ಉದ್ದೇಶದಿಂದ) ದಾನವಾಗಿ ಕೊಡು: ಪರಮಕೂಳರ್ಮ್ಮಗನ್ದಿರರ್ಕೇಸಿಗಳಾಣತ್ತಿ ಆಗ ಪಳ್ಳಿಟ್ಟಿಟ್ಟು ಪ್ರಸಾದಂಗೆಯ್ದಾರ್ (ಎಕ. III. ತಿರುಕು. ೦-೯; 726) ; ರಣವಿಕ್ರಮರಸರ್ಪ್ಪಾಡಾಳೆ ರಸಪ್ಪಮೇ ನೋಸ್ತು ಪ್ರಸಾದಂಗೆಯ್ದರ್ (ಎಕ.XVI. ಗುಬ್ಬಿ. ೭೩-೯೬;733) ; ಈ ಊರನ್ನ ಸರ್ವ್ವಬಾಧಾಪರಿಹಾರಮಾಗೆ ಪ್ರಸಾದಂಗೆಯ (ಸೌಇಇ. IX-i, ೪೬-೩; ಶಕರು ೪೪). [ಪ್ರಸಾದ+ಕೆಯ್[1]]

**ಪ್ರಸಾದಕರ್ಮ** (ನಾ). [ವೀಶೈ] ಶುಭ, ಅಶುಭ, ಜ್ಞಾನ, ಪ್ರಸಾದಗಳೆಂಬ ನಾಲ್ಕು ಬಗೆಯ ಕರ್ಮಗಳಲ್ಲಿ ಒಂದು ; ಶಿವನ ಅನುಗ್ರಹವನ್ನು ಪಡೆಯುವ ಕಾರ್ಯ: ಕರ್ಮ ಅಶುಭಕರ್ಮವು, ಶುಭಕರ್ಮ, ಜ್ಞಾನಕರ್ಮ, ಪ್ರಸಾದಕರ್ಮವೆಂದು ನಾಲ್ಕು ತೆರನಾಗಿರುವುದು . . . ಪಾಪ ಪುಣ್ಯ ಜ್ಞಾನಗಳು ಮೂರನ್ನು ಬಿಟ್ಟು, ಶಿವಪ್ರಸಾದವನ್ನು ಸಂಪಾದಿಸಿದರೆ, ಆ ಪ್ರಸಾದಕರ್ಮದಿಂದ ಭಕ್ತಿಯು ಲಭಿಸುವುದು (ಶಿವಾನುಭ.೦೩೦). [ಸಂ. ಪ್ರಸಾದಕರ್ಮನ್]

**ಪ್ರಸಾದಕಾಯ** (ನಾ). [ವೀಶೈ] ಲಿಂಗಪೂಜೆಯ ನಂತರ ಮಂತ್ರೋಂದು ಪೂಜೆಗೆ ಪ್ರಾರಂಭಿಸುವ ತನಕದ ಅವಧಿಯಲ್ಲಿ ಶಿವಭಕ್ತನ ದೇಹವು ಪಡೆಯುವ ಹೆಸರು : ಕೂಡಲಸಂಗಮದೇವನೊಲಿಸ ಬಂದ ಪ್ರಸಾದಕಾಯವು ಕೆಡಿಸಲಾಗದು (ಬಸವ. ೬೯) ; ಪ್ರಸಾದಕಾಯವಾದ ಬಳಿಕ ಸರ್ವಾಂಗ ಉತ್ತಮಾಂಗ (ಚನ್ನವ.೪-೩೨೩-೧೨೬೪); ಭಕ್ತನು ತನ್ನ ಭಕ್ತಿ ಪ್ರಭಾವದಿಂದ ಪೂಜಾದಿಯಿಂದ ಪೂಜಾಂತದವರೆಗೂ ಪದಾರ್ಥಕಾಯನಾಗಿರುವನು ಮತ್ತು ಪೂಜಾಂತದಿಂದ ಪೂಜಾದಿಯವರೆಗೂ ಪ್ರಸಾದಕಾಯನಾಗಿರುವನು (ಶಿವಾನುಭ.೦೦೦೪). [ಸಂ.]

**ಪ್ರಸಾದತ್ರಯ** (ನಾ). [ ವೀಶೈ] ಗುರು, ಲಿಂಗ, ಜಂಗಮಗಳಿಗೆ ಸಮರ್ಪಿಸಿ ಪಡೆಯುವ ಶುದ್ಧ, ಸಿದ್ಧ, ಪ್ರಸಿದ್ಧಗಳೆಂಬ ಮೂರು ಬಗೆಯ ಪ್ರಸಾದಗಳು : "ಪ್ರಸಾದತ್ರಯ—ಶುದ್ಧ, ಸಿದ್ಧ, ಪ್ರಸಿದ್ಧ" (ಕರಣ. ೨೯-೭). 'ತ್ರಿವಿಧಪ್ರಸಾದ' ಪರಾ. [ಸಂ.]

**ಪ್ರಸಾದದ್ರೋಹ** (ನಾ). [ವೀಶೈ] ಪಂಚಮಹಾಪಾತಕಗಳಲ್ಲಿ ಒಂದು; ಗುರುಪ್ರಸಾದಕ್ಕೆ ಸರಿಯಾಗಿ ನಡೆದುಕೊಳ್ಳದಿರುವುದು : ಗುರು ಕಾರುಣ್ಯವ ಪಡೆದ ಭಕ್ತನು ಹಿಂದಣ ಪೂರ್ವಾಶ್ರಯವ ಬೆರಸಿದರೆ ಗುರು ದ್ರೋಹ ಲಿಂಗದ್ರೋಹ ಜಂಗಮದ್ರೋಹ ಆಚಾರದ್ರೋಹ ಪ್ರಸಾದ ದ್ರೋಹ ಇಂತೀ ಪಂಚಮಹಾಪಾತಕಂಗಳು ಭಕ್ತಂಗಲ್ಲದೆ ಭವಿಗೆಲ್ಲಿಯದೊ (ಬಸವ.೬೬೬). [ಸಂ.]

**ಪ್ರಸಾದನ** (ನಾ). ೧. ಶುದ್ಧಪಡಿಸುವಿಕೆ ; ಸ್ವಚ್ಛತೆಗೊಳಿಸುವುದು. ೨. ಸಮಾಧಾನಪಡಿಸುವುದು ; ಸಂತೈಸುವುದು. ೩. ಸಂತೋಷ ಗೊಳಿಸುವುದು : ಇಲ್ಲಿ ಕೋಪ ಪ್ರಸಾದನಪರವಾದ 'ಚಾಟು' ವ್ಯಂಗ್ಯ ಎನ್ನಬಹುದು (ಧ್ವನ್ಯಾಲೋ. ೦೬ ಅವ). ೪. ಉಪಚಾರ ಮಾಡುವುದು ; ಸೇವೆ ; ಶುಶ್ರೂಷೆ: "ವರಿವಸ್ಯಾ . . . ಪ್ರಸಾದನಃ, ಆರಾಧನಃ, ಉಪಚಾರಃ—ಈ ೧೧ ಬೆಸಕೆಯ್ಯುದರ್ಕೆ ಪೆಸರ್" (ಹಲಾಯು. ೨೦-೦೨೯). [ಸಂ.]

**ಪ್ರಸಾದಭಕ್ತ** (ನಾ). [ವೀಶೈ] ದೈವಾನುಗ್ರಹಕ್ಕೆ ಪೂರ್ಣಪಾತ್ರ ನಾದವನು ; ಪರಮಶರಣ: ಶಿವಾಶಿವಾ ಪ್ರಸಾದಭಕ್ತರ ತೋಱಿ ಸಯ್ಯಾ ಹರಹರಾ ಪ್ರಸಾದವೇ ಪ್ರಾಣ[ಣ]ವಾಗಿರ್ಪ ಪರಮಭಕ್ತರ ತೋಱಿಸಯ್ಯಾ (ಅಣಂಕೀ.೦೬೦-೨೦). [ಸಂ.]

**ಪ್ರಸಾದಲಿಂಗ** (ನಾ). [ವೀಶೈ] ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳೆಂಬ ಆರು ವಿಧ ವಾದ ಲಿಂಗಗಳಲ್ಲಿ ಒಂದು : ಪ್ರಸಾದಲಿಂಗವುಳ್ಳನ್ನಕ್ಕರ ಪ್ರಾಣಲಿಂಗ ವೆಂಬ ವಾರ್ತೆ ಭಂಗ ನೋಡಾ (ಅವಶಂ. ೨೩೩-೦೦೩೩); ಪರಂಜ್ಯೋತಿ ಸ್ವರೂಪ, ಸತ್ಯ, ಅಖಂಡ, ಇಂದ್ರಿಯಗೋಚರ, ಅಮೃತಸ್ವರೂಪ ಜಗತ್ಪರಿಣಾಮಕಾರಣವೂ ಆಗಿ, ಪರಾಶಕ್ತಿಯುಕ್ತವೂ ಸಾದಾಖ್ಯ ತತ್ತ್ವಾಶ್ರಯವೂ ಉಪಾಧಿರಹಿತವೂ ಜ್ಞಾನಗಮ್ಯವೂ ಆಗಿರುವ ಲಿಂಗವನ್ನೇ ಪ್ರಸಾದಲಿಂಗವೆಂದು ಹೇಳುತ್ತಾರೆ (ಶಿವಾಸೂ. ೯೦-೨೯ ಅವ). [ಸಂ.]

**ಪ್ರಸಾದವಿಕಾರಿ** (ನಾ). [ವೀಶೈ]ಅನುಗ್ರಹದ ಅಭಿಮಾನಕ್ಕೆ ಒಳಗಾದ ವನು : ಲಿಂಗವಿಕಾರಿಗೆ ಅಂಗವಿಕಾರವೆಂಬುದಿಲ್ಲ ಜಂಗಮವಿಕಾರಿಗೆ ಧನ ವಿಕಾರವೆಂಬುದಿಲ್ಲ ಪ್ರಸಾದವಿಕಾರಿಗೆ ಮನವಿಕಾರವೆಂಬುದಿಲ್ಲ (ಬಸವ.೬೯೩). [ಸಂ. ಪ್ರಸಾದವಿಕಾರಿನ್]

**ಪ್ರಸಾದವಿನಿಯೋಗ** (ನಾ). ಪ್ರಸಾದವನ್ನು ಹಂಚುವುದು; ಚರವು ಹಂಚುವುದು : ವಿರೂಪಾಕ್ಷನಿಗೆ ಮಹಾಮಂಗಳಾರತಿ ಬಹುವಿಜೃಂಭಣೆ ಯಿಂದ ನಡೆಯುತ್ತಿದೆ. ಮುಂದೆ—ಮಂತ್ರಪುಷ್ಪ ; ರಾಜಾಶೀರ್ವಾದ ; ಪ್ರಸಾದವಿನಿಯೋಗ (ಹಂಪೆಯಾತ್ರೆ. ೩೭). [ಸಂ.]

**ಪ್ರಸಾದಶರೀರಿ** (ನಾ). [ವೀಶೈ] ಭಸ್ಮ ಮೊದಲಾದುವುಗಳನ್ನು ದೇಹದ ಮೇಲೆ ಧರಿಸಿಕೊಂಡಿರುವವನು : ಅನುರಕ್ತಿಸಲು ಸದ್ಯ ಪ್ರಸಾದಶರೀರಿಯಂ ಮಾಡಿ ತ್ರಿಕರಣಪ್ರಾಣಸದ್ವಿದ್ಯೋಕ್ತಿಗಳನಳವಡಿಸಿ (ಬಸವ. ೯೯-೪೪). [ಸಂ. ಪ್ರಸಾದಶರೀರಿನ್]

**ಪ್ರಸಾದಸೇವನೆ** (ನಾ). [ವೀಶೈ] ಗುರು, ಲಿಂಗ, ಜಂಗಮಾದಿಗಳಿಗೆ ಅರ್ಪಿಸಿ ಅನುಗ್ರಹವಾಗಿ ಪಡೆದುದನ್ನು ತಿನ್ನುವುದು,—ಸೇವಿಸು ವುದು : ಸದ್ಗುರುಶಂಭುಸೋಮೇಶ್ವರನ ಭಜಿಸಿ ಪ್ರಸಾದಸೇವನೆಯ ಮಾಡದಿರಲಘೋರನರಕ (ಶಿವಗೀ. ೯೬-೨೦೬). [ಸಂ. ಪ್ರಸಾದಸೇವನ]

**ಪ್ರಸಾದಿ** (ನಾ). ೧. ಶುದ್ಧಗೊಳಿಸುವುದು. ೨. ಸಮಾಧಾನ ಗೊಳಿಸುವುದು ; ಸಂತೈಸುವುದು. ೩. ಸಂತೋಷಗೊಳಿಸು ವುದು ; ಹರ್ಷವನ್ನುಂಟುಮಾಡುವುದು. ೪. [ವೀಶೈ] ಪ್ರತಿ ಯೊಂದು ಭೋಗವಸ್ತುವನ್ನೂ ಮೊದಲು ಲಿಂಗಕ್ಕೆ ಅರ್ಪಿಸಿ, ಆಮೇಲೆ ಅದನ್ನು ಭಕ್ತಿಪೂರ್ವಕವಾಗಿ ಪ್ರಸಾದರೂಪವಲ್ಲಿ ಸ್ವೀಕರಿಸುವವನು : ಪರಸ್ತ್ರೀಯ ಪರರರ್ಥದಾಸೆ ಬಿಡದನ್ನಕ್ಕ ಪ್ರಸಾದಿ ಯೆಂತೆಂಬೆನಯ್ಯಾ (ಬಸವ. ೩೦೧) ; ರುದ್ರಪಶುಪತಿ ಮಂತ್ರವಾದಿ ಜಗದ್ರಮಣ ನಿಮ್ಮ ಪ್ರಸಾದಿ . . . ಚೇರಮಮಹೇಶನು ನಿಮ್ಮ ದಳವಾಯಿ (ಬಸವ. ೯-೯೩) ; ಪ್ರತಿಯೊಂದು ಇಂದ್ರಿಯದ ಮುಖದಿಂದಲೂ ತಾನು ಅನುಭವಿಸುವ ಪದಾರ್ಥಗಳನ್ನು ಮೊದಲು, ಲಿಂಗಕ್ಕೆ ಸಮರ್ಪಿಸಿ, ಬಳಿಕ ಅರ್ಪಿತಪದಾರ್ಥವನ್ನು ಅವಧಾನಭಕ್ತಿಪೂರ್ವಕವಾಗಿ . . . ಪರಿಗ್ರಹಿಸುತ್ತಿರುವುದೇ ಪ್ರಸಾದಿಯ ಲಕ್ಷಣ (ಶಿವಾಸೂ. ೩೪). ೫. ಷಟ್ಸ್ಥಲ ಗಳಲ್ಲಿ ಒಂದು ; ಮೂರನೆಯ ಸ್ಥಲ : ಈ ಭಕ್ತಿಮಾರ್ಗವನ್ನು ಅನುಸರಿಸುತ್ತಾ ಹೋದರೆ ಕ್ರಮವಾಗಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಆಧ್ಯಾತ್ಮಿಕಸ್ಥಾನಗಳನ್ನು ಹೊಂದುತ್ತಾನೆ (ಭಾರದ. ೨೦೬). [ಸಂ. ಪ್ರಸಾದಿನ್]

**ಪ್ರಸಾದಿತ** (ಗು). ೧. ತಿಳಿಯಾದ ; ಪರಿಶುದ್ಧವಾದ. ೨. ತೃಪ್ತಿ ಗೊಂಡ ; ಸಮಾಧಾನ ಹೊಂದಿದ. ೩. ಅನುಗ್ರಹಕ್ಕೊಳಗಾದ ; ಕೃಪೆ ಹೊಂದಿದ : ಕರುಮಾಡದ ಮುಂದಣ ಮಣಿಮಯಪ್ರಘಣದೊಳ್ ಕತಿಪಯಪ್ರಸಾದಿತ ಪರಿವಾರಪರಿವೃತಪಾದಪೀಠನುಂ . . . ಆಗಿ (ಚಂದ್ರಪ್ರ. ೯-೨೯ ವ). ೪. ಪ್ರಸಾದವನ್ನು ಪಡೆದ : (೬). (ನಾ). ೫. ಬಹು ಮಾನ : ಬಳುವಳಿ : (೬). [ಸಂ.]

**ಪ್ರಸಾದಿಸು** (ಕ್ರಿ). ಅನುಗ್ರಹ ಮಾಡು ; ದಯಪಾಲಿಸು ; ನೀಡು : ಪದವಿಗಳು ಗಿದವಿಗಳವೇತಕೆ ಮದನಹರ ನಿಮ್ಮಾಚಲಭಕ್ತಿ ಸುಪದವಿಯು ಕೃಪೆಯಿಂ ಪ್ರಸಾದಿಸಿ ಸಲುಹು (ಬಸವ.೨-೨೯). [ಪ್ರಸಾದ+-ಇಸು]

**ಪ್ರಸಾದಿಸ್ಥಲ** (ನಾ). [ವೀಶೈ] ಷಟ್ಸ್ಥಲಗಳಲ್ಲಿ ಒಂದು ; ಮೂರ ನೆಯ ಸ್ಥಲ : ಪ್ರಸಾದಿಸ್ಥಲ ತ್ರಿವಿಧ ಅರ್ಪಿತಪ್ರಸಾದಿ ಅವಧಾನ ಪ್ರಸಾದಿ ಪರಿಣಾಮಪ್ರಸಾದಿ (ತನ್ನವ -೬. ೯೬-೦೦೧) ; ಚರಲಿಂಗಗತವಾದ ಇಚ್ಛಾಶಕ್ತಿಯಿಂದ ಜ್ಯೋತಿರ್ಮಯ ಸುಶೋಭನಶಿವಲಿಂಗವು ಜನಿಸಿತು, ಅದರ ಉಪಾಸನೆಗಾಗಿ ಪ್ರಸಾದಿಸ್ಥಲವುಂಟಾದುದು (ಶಿವಾಸು. ೯೪). [ಸಂ.]

**ಪ್ರಸಾದೋಕ್ತಿ** (ನಾ). ೧. ಅನುಗ್ರಹಿಸುವ ಮಾತು,– ನುಡಿ. ೨. ಸಮಾಧಾನದ ಮಾತು ; ಸಂತೈಸುವ ನುಡಿ : ವನರುಹಗರ್ಭ ಪ್ರಸಾದೋಕ್ತಿಯಂ ಕೇಳ್ದನಿತಾನುಂ ಗದ್ಗದತ್ವಂ ನೆಗಟೆ ವಸುಮತೀಕಾಂತೆ ಯಿಂತೆಂದಳಾನಾಗಳ್ (ಜಗಂ. ೧-೨೯). [ಸಂ.]

**ಪ್ರಸಾಧಕ** (ಗು). ೧. ಶುದ್ಧಗೊಳಿಸುವ : ಸ್ವಚ್ಛಮಾಡುವ. ೨. ಅಲಂಕರಿಸುವ. (ನಾ). ೩. ಅಲಂಕರಿಸುವವನು. [ಸಂ.]

**ಪ್ರಸಾಧನ** (ನಾ). ೧. ಸಿಂಗರಿಸುವುದು ; ಅಲಂಕರಿಸುವುದು : "ಆಕಲ್ಪಃ . . .ಪ್ರಸಾಧನಂ—ಈ ೫ ಶೃಂಗಾರಂಗೆಯ್ವುದು" (ಹಲಾಯು. ೯೯-೬೯೩). ೨. ಅಲಂಕಾರ ; ಶೃಂಗಾರ : ಪ್ರಸಾಧನವಿರಹಿತೆಯುಂ ನಿರಾನಂದಜನೋಪೇತೆಯುಂ . . . ಆಗಿರ್ದ ತನ್ನನ್ನಯ ರಾಜಧಾನಿ ಯನನುಜಸಮೇತನಪರಾಜಿತನೆಯ್ದೆ ವಂದು (ಶಾಂತಿಪು. ೦-೯೩ ವ) ; ಮಾಲತಿ ಸ್ನಾನ, ಪ್ರಸಾಧನ ತೀರಿಸಿ ಇವರಿದ್ದಲ್ಲಿಗೆ ಬಂದಳು (ವಾತ್ಸಲ್ಯ. ೨೬). ೩. ಒಡವೆ ; ಆಭರಣ : ತನು ತನುವಾದ ಗರ್ಭಿಣಿಗೆ ತತ್ಸಮಯೋಚಿತ ಮಂಗಳಪ್ರಸಾಧನಮೆಸೆದತ್ತು ಕಪ್ಪುರದ ಕಂಠಿಕೆ . . . ಪೂವಿನ ಪೆಂಡುಗಂಕಣಂ (ಶಂಕರಾಮಾ. ೩-೦೦೬). [ಸಂ.]

**ಪ್ರಸಾಧನಕರಣ** (ನಾ). ಅಲಂಕರಿಸುವ ಕೆಲಸ ; ಶೃಂಗಾರಕಾರ್ಯ : ಅಂತಃಪುರಕಾಂತೆಯರುಂ ಶಶಿಪ್ರಭಾಪ್ರಸಾಧನಕರಣನಿರತೆಯರಾಗಿ . . . ಪೊಸದುಗುಲಮಂ ನಿಱಿವಿಡಿದುಡಿಸಿಯುಂ (ಚಂದ್ರಪ್ರ. ೬-೬೩ ವ). [ಸಂ.]

**ಪ್ರಸಾಧನಿ** (ನಾ). ಬಾಚಣಿಗೆ ; ಹಣಿಗೆ : "ಪ್ರಸಾಧನೀ ಕಂಕತಿಕಾಶಬ್ದಗಳು ಬಾಚಣಿಗೆಯ ಹೆಸರುಗಳು" (ಗುರುಬಾ. ೨೯೩). [ಸಂ. ಪ್ರಸಾಧನೀ]

**ಪ್ರಸಾಧಿತ** (ಗು). ೧. ಅಲಂಕರಿಸಿದ; ಸಿಂಗರಿಸಿದ : ತೀರ್ಥಕರಕುಮಾರಂಗೆ ಸೌಧರ್ಮೇಂದ್ರಂ ಪ್ರಸಾಧಿತ ವಿಷ್ಟಪತ್ರಿತಯನಪ್ಪುದನಱದು ಪ್ರಸಾಧನ ಪ್ರಾರಂಭಂಗೆಯ್ಯೆ (ಶಾಂತಿ. ೧೦-೩೬ ವ). (ನಾ). ೨. ಅಲಂಕಾರ ಗೊಂಡವನು ; ಸಿಂಗರಿಸಿಕೊಂಡವನು : ಸುರರಾಜಸಮರ್ಪಿತ್ರಸಂತಾನ ಕುಸುಮದಾಮಾಂಬರಭೂಷಣಪ್ರಸಾಧಿತಂ ಪುರುದೇವಂ ಮೃಗೇಂದ್ರ ವಿಷ್ಟರದೊಳಿರೆ (ಆದಿ. ೮-೭೦ ವ). [ಸಂ.]

**ಪ್ರಸಾರ** (ನಾ). ೧. ಹರಡುವಿಕೆ ; ಹಬ್ಬುವಿಕೆ ; ವ್ಯಾಪ್ತಿ : ಆರ್ಯಸಂಸ್ಕೃತಿಯ ಪ್ರಸಾರವನ್ನು ಪ್ರಭಾವಯುತವನ್ನಾಗಿ ಮಾಡಲು ಇತಿಹಾಸ ಪುರಾಣಗಳ ಪರಿಷ್ಕರಣ ಬಹುಮಟ್ಟಿಗೆ ನಡೆಯಿತು (ಪುರಾ. ೦೦೬ ೬೦೬೪); ಜನಪದಕಥೆಗಳ ಪ್ರಸಾರ (Diffusion)ದ ದೃಷ್ಟಿಯಿಂದ ಕಿನ್ನರಕಥೆಗಳು ತುಂಬ ಮಹತ್ವದವಾಗಿವೆ (ಸುವರ್ಣ. ೨೩). ೨. ವ್ಯಾಪಾರದ ಮಳಿಗೆ; ಅಂಗಡಿ. ೩. [ಸಂಗೀತ] ಗಾಯಕನ ದೋಷಗಳಲ್ಲಿ ಒಂದು : ಗಾಯಕ ದೋಷಗಳು ೧. ಸಂದಷ್ಟ – ಹಲ್ಲು ಕಚ್ಚಿ ಹಾಡುವವನು . . . ೧೬. ಪ್ರಸಾರ – ಅಮಯವಗಳ ಚೇಷ್ಟೆಗೂಡಿ ಹಾಡುವವನು (ಸಂಗೀತಂ. ೦೦೩).

ಪ್ರಸಾರ ಮಾಡು = ಹರಡುವಂತೆ ಮಾಡು ; ಬಿತ್ತರಿಸಂ : ಅಂದಂದು ಭವ್ಯವಾದ ಸಂಗೀತವನ್ನು ಪ್ರಸಾರ ಮಾಡುತ್ತ ಸಹಸ್ರಪ್ರಮೈಲಿಗಳ ವಿಷಯಗಳನ್ನು ಅಂದಂದೇ ಹರಡುತ್ತಿರುವ ರೇಡಿಯೋ (ಕಿಸ್ತದ. ೬). [ಸಂ.]

**ಪ್ರಸಾರಣ** (ನಾ). ೧. ಹರಡುವಿಕೆ ; ಹಬ್ಬುವುದು : ಈತನ ಹೆಸರಿನಲ್ಲಿರುವ ತರಂಗಗಳೇ (Hertzian waves) ಆಮೇಲೆ ರೇಡಿಯೋ ಪ್ರಸಾರಣದಲ್ಲಿ ಉಪಯೋಗವಾದವು (ಶಿಲ್ಪಾ. ೦೦೬). ೨. (ಬಟ್ಟೆ ಮುಂತಾದಂವುಗಳ) ಮಡಿಕೆಯನ್ನು ಬಿಚ್ಚಿ ಹರಡುವುದು. [ಸಂ.]

**ಪ್ರಸಾರಣೆ** (ನಾ). ಒಂದು ಬಗೆಯ ಬಳ್ಳಿ; ಹೆಸರಣೆ ; ಮುಳ್ಳಗೆಸೆ : "ಸಾರಣೀ, ಪ್ರಸಾರಣೀ, ಕಟುಂಭರಾ, ರಾಜಬಲಾ, ಭದ್ರಬಲಾ – ಶಿ ಕಿರಿಯ ಹಸಾರಣೀಗಿಡ, ಸಾರಣೀಗಿಡ" (ನಿಘಂಟು. ೦೦೬); ಗೊತೆಮೊಗರು ಚಿಟ್ಟು, ಪ್ರಸಾರಣಿ, ಹೆಸರಣೆ ಹಸರಾಣಿ (ಸಸ್ಯ. ೧೦೦). [ಸಂ. ಪ್ರಸಾರಣೀ]

**ಪ್ರಸಾರಾಂಗ** (ನಾ). (ವಿಶ್ವವಿದ್ಯಾನಿಲಯಗಳಲ್ಲಿ ವಿಶೇಷವಾಗಿ) ಸಾಹಿತ್ಯ ಮತ್ತು ಸಂಸ್ಕೃತಿಯ ಪ್ರಸಾರಕ್ಕಾಗಿ ಇರುವ ವಿಭಾಗ : ವಿಶ್ವವಿದ್ಯಾನಿಲಯದ ಪ್ರಕಟನ ಹಾಗೂ ಪ್ರಸಾರಾಂಗದ ಮುಖ್ಯಾಧಿಕಾರಿಗಳು (ಮುನ್ನುಡಿ. v ಹೊರಟ ಪುಟ). [ಸಂ.]

**ಪ್ರಸಾರಿಣಿ** (ನಾ). = ಪ್ರಸಾರಣೆ : "ರಾಜಬಲಾ_ಮಹಾಬಲಿ, ಪ್ರಸಾರಿಣಿ" (೬ಶಧಿ. ೦೩೬). [ಸಂ. ಪ್ರಸಾರಿಣೀ]

**ಪ್ರಸಾರಿತ** (ಗು). ೧. ಹರಡಿದ ; ಹಬ್ಬಿದ : ಕುಟ್ಮಳಿತವದನಂ ಸ್ನಿಗ್ಧಾಲೋಕಂ ಪ್ರಸಾರಿತ ಕಜ್ಜಲಂ . . . ತಳೆದಂ ಚಲ್ವಂ ಲಂಬಾಳಕಂ ನೃಪ ಬಾಲಕಂ (ಪುಲ್ಲಿ. ೬-೧೩೦). ೨. (ಬಟ್ಟೆಯ ಮಡಿಕೆಯನ್ನು ಬಿಚ್ಚಿ) ಮಾರಾಟಕ್ಕೆ ಇಟ್ಟ. (ನಾ). ೩. [ನಾಟ್ಯ] ಸ್ಥಾನಕಗಳಲ್ಲಿ ಒಂದು ಬಗೆ ; ೭ "ಕಾಲುಗಳನ್ನು ನೀಡಿ ಒಂದು ಕೈಯನ್ನು ತಲೆದಿಂಬಾಗಿ ಇರಿಸುವುದು. ಸುಖವಾಗಿ ನಿದ್ರಿಸುವುದನ್ನು ಅಭಿನಯಿಸುವಾಗ ಇದನ್ನು ವಿನಿಯೋಗಿಸಬೇಕು" (ಭಾಸ್ಕರಂ. ಗದ್ಯಾನುವಾದ. ೩೩೩) : ಸಮ, ಆಕುಂಚಿತ, ಪ್ರಸಾರಿತ, ವಿವರ್ತಿತ, ಉದ್ವಾಹಿತ, ನತ ಈ ಆಱು ಮಲಗಿರ್ದ ಸ್ಥಾನಕಂಗಳ್ (ಭಾಸ್ಕರಂ. ೬-೦೨ ವ). [ಸಂ.]

**ಪ್ರಸಾರಿಸು** (ಕ್ರಿ). ಹರಡು ; ಹಬ್ಬಿಸು ; ಬಿತ್ತರಿಸಂ : ತನಿಸೊಬಗಂ ಪ್ರಸಾರಿಸಿ ಸಮಂಚಿತಕೃತವಮರು ನಿವಿರ್ಚಿ ಮಂಡನ ಕೆಳೆಯರ್ಕಳೊಳ್ ಬಱದೆ ಮೆಚ್ಚಿದಪೊಲ್ಪಥೆಯಂ ನಿವಿರ್ಚಿ (ಉದ್ಭಟ. ೦೦-೬೦); ತತ್ಪ್ರದೇಶಗತ ಶಕ್ತಿಯಂ ಬುದ್ಧಿಯಿಂದಂ ಪ್ರಸಾರಿಸಿ (ಗೂಢಾಪು. ೯೬-೩).

[ಪ್ರಸಾರ + – ಇಸು]

**ಪ್ರಸಿತ** (ಗು). ೧. ಬಿಗಿದ ; ಕಟ್ಟಿದ ; ಬಂಧಿಸಿದ. ೨. ತೊಡಗಿದ ; ಆಸಕ್ತಿ ಹೊಂದಿದ; ಮಗ್ನವಾದ : ಸದಮಲಪ್ರಚುರವಿಶ್ರುತಪರಮಭಕ್ತ ಗಣಪದಸರೋರುಹಸಾಂದ್ರಮಕರಂದಪಾನಸಮ್ಮುದಿತಚಂಚಚ್ಚಂಚರೀಕನವರತ ಪಂಚಾಕ್ಷರೀಪ್ರಸಿತಹೃದಯಂ (ಅರಾತ. ೦-೦-೦೦೩). (ನಾ). ೩. ಆಸಕ್ತಿಯುಳ್ಳ ವ್ಯಕ್ತಿ ; ಆಸಕ್ತನಾದವನು : "ತತ್ಪರಃ, ಪ್ರಸಿತಃ, ಆಸಕ್ತಃ -೩ ಒಂದು ಪದಾರ್ಥದಲ್ಲಿ ತಗಲಿದ ಮನಸ್ಸುಳ್ಳವನ ಪೆಸರುಗಳು" (ನಿಘಂಟು. ೩೨೪). ೪. ಕೀವು. [ಸಂ.]

**ಪ್ರಸಿದ್ಧ** (ಗು). ೧. ಎಲ್ಲರಿಗೂ ತಿಳಿದ ; ಹೆಸರುವಾಸಿಯಾದ : ವಿಂಬಲ್‌ಡನ್ ಮೊದಲಾದ ಪ್ರಸಿದ್ಧ ಕ್ರೀಡಾಕ್ಷೇತ್ರಗಳು . . . ಸುತ್ತಲಿನ ನಿಸರ್ಗಮಯ ಸುಂದರತಮ ಪ್ರದೇಶಗಳು ; ಇವನ್ನೆಲ್ಲ ನೋಡಿ (ಸಪುಜ ೬೦೨).(ನಾ). ೨. ಎಲ್ಲರಿಗೂ ತಿಳಿದುದು; ಹೆಸರುವಾಸಿಯಾದುದು. ಶೇಷಪಂಡಿತರ ಕೈಗುಣ ಸುತ್ತಮುತ್ತಲೆಲ್ಲ ಬಹಳ ಪ್ರಸಿದ್ಧ (ಅಪಾ. ೨೬). ೩. ಕೀರ್ತಿಶಾಲಿಯಾದವನು; ಪ್ರಖ್ಯಾತ: ಜೈನಸಾಹಿತ್ಯದಲ್ಲಿ ಕುಣಿಕನೆಂದೂ, ಬೌದ್ಧಸಾಹಿತ್ಯದಲ್ಲಿ ಅಜಾತಶತ್ರುವೆಂದೂ ಪ್ರಸಿದ್ಧನಾದ ಮಗಧರಾಜನು ಚೇಟಕನ ಮೊಮ್ಮಗನು (ಶಾರದ. ೦೬೩). ೪. [ವೀರಶೈ] ಶುದ್ಧ, ಸಿದ್ಧ, ಪ್ರಸಿದ್ಧಗಳೆಂಬ ಮೂರು ಬಗೆಯ ಪ್ರಸಾದಗಳಲ್ಲಿ ಒಂದು ; ಜಂಗಮರು ಸ್ವೀಕರಿಸಿ ಉಳಿದಂದು : ಶುದ್ಧವ ಗುರುವಿಂಗೆ ಕೊಟ್ಟು ಶುದ್ಧವಾಯಿತ್ತೆಂಬೆನಯ್ಯಾ ಸಿದ್ಧವ ಲಿಂಗಕ್ಕೆ ಕೊಟ್ಟು ಸಿದ್ಧವಾಯಿತ್ತೆಂಬೆನಯ್ಯಾ ಪ್ರಸಿದ್ಧವ ಜಂಗಮಕ್ಕೆ ಕೊಟ್ಟು ಪ್ರಸಿದ್ಧವಾಯಿತ್ತೆಂಬೆನಯ್ಯಾ (ಬಸವ. ೭೮೩) ; ವರಲಿಂಗಮುಖಸಮರ್ಪಿತ ಶುದ್ಧವೆನಿಸುವುದು ಚರಲಿಂಗ ಕರ್ಪಿಸಿದುದು ಪರಮಸಿದ್ಧಂ ನಾಡೆ ಗುರುಭುಕ್ತಶೇಷದಿಂ ಧರಿಸಿ ಪ್ರಸಿದ್ಧ ಮೆಂಬಿನಿತುಮಂ ನಿಯಮದಿಂದಿರದೆ ಕೊಂಬರ ವಿವರಮಂ ಪೇಳ್ವೆಂ (ಶಿಶಿಲಂ. ೯೬-೦೩); ಜಂಗಮಭುಕ್ತಶೇಷವೇ ಪ್ರಸಿದ್ಧಮೆನಿಸುವುದು (ಶವೇಕ. ೨೩).

ಪ್ರಸಿದ್ಧವಾಗು = ಎಲ್ಲರಿಗೂ ತಿಳಿದಿರು ; ಖ್ಯಾತವಾಗು : ಚಹಾ ವ್ಯಾಪಾರದಲ್ಲಿ ಬಹಳ ಪ್ರಸಿದ್ಧವಾದವು (ಮುಂಬಯಿ. ೪-೦೩೪); ಅರಿಸ್ಟಾಟಲನು . . . ಪ್ರಸಿದ್ಧವಾದ ರುದ್ರನಾಟಕದ ಲಕ್ಷಣವನ್ನು ರಚಿಸಿದ್ದಾನೆ (ಕಿಂಕರ. ೬೨). [ಸಂ.]

**ಪ್ರಸಿದ್ಧತೆ** (ನಾ). ಕೀರ್ತಿ ; ಪ್ರಖ್ಯಾತಿ : ಈ ವಿನುತ ಸಿತಕೀರ್ತಿಯಿಾ ಸದ್ಭಾವಶುದ್ಧತೆಯಿಾ ಪ್ರಸಿದ್ಧತೆಯಿಾ ವಿಬುಧಸನ್ಮಾನತೆಯು ನಿಮಗೀಯ ಹಂಕ್ತಿಯೆ ಇಂದು ನೀವೆನ್ನರಿ ಪರಸದಡೆ ಕುಂದುವುದೆ ಇನಿತಾಯುವದು (ಬಸವ. ೯೬-೧೦). [ಸಂ. ಪ್ರಸಿದ್ಧತಾ]

**ಪ್ರಸಿದ್ಧಾಂತ** (ನಾ). [ವೀರಶೈ] ಅತಿಶ್ರೇಷ್ಠವಾದ ಅರಿವು ; ಪರಮತತ್ತ್ವ: ಗುರುಸ್ಥಲವೆ ವೇದಾಂತ ಲಿಂಗಸ್ಥಲವೆ ಸಿದ್ಧಾಂತ ಜಂಗಮಸ್ಥಲವೆ ಪ್ರಸಿದ್ಧಾಂತ (ಸೋಲಿನಪು. ೦೩೬-೩೯೬). [ಸಂ.]

**ಪ್ರಸಿದ್ಧಾನ** (ನಾ). ಕೀರ್ತಿ ; ಪ್ರಸಿದ್ಧಿ ; ಪ್ರಖ್ಯಾತಿ: ಪ್ರಸಿದ್ಧಾನಮಂ ಪಡೆದ ಪರಾರ್ಥಮಂ ಶಾಶ್ವತಮೆಂಬುದನುಕ್ತಸಿದ್ಧಮಲ್ಲದಂದಭಿಧಾನಂ ನಿರರ್ಥಕರಮುಮಾಧಾರರಹಿತಮುಮಕ್ಕುಂ (ಶಾಂತಿ. ೬-೦೩೬ ವ). [?]

**ಪ್ರಸಿದ್ಧಿ** (ನಾ). ೧. ಹೆಸರುವಾಸಿ; ಖ್ಯಾತಿ; ಕೀರ್ತಿ: ಮಧ್ವಾಚಾರ್ಯರೆಂಬ ನಾಮಪ್ರಸಿದ್ಧಿಯನು ಪಡೆದನುದಿನದಿ (ಪುರಂದ. ೪-೩೬-೩); ಪಾರ್ಸಿಜನಗಳ ಭಾಷೆಯು ಹಿಂದಿನ ಕಾಲದಲ್ಲಿ ಝುಂಡ್ (ಅಥವಾ ಅವೆಸ್ತಾ) ಎಂದು ಪ್ರಸಿದ್ಧಿ ಪಡೆದಿತ್ತು (ಶಾಕಗ ೯೬೪) ; ನಮ್ಮ ಆಸುಪಾಸಿನ ಜನಕ್ಕೆಲ್ಲ ಅವರ ಹೆಸರು ಗೊತ್ತಿತ್ತು. ಅಷ್ಟು ಪ್ರಸಿದ್ಧಿಯದೆ (ಕುಲಕ. ೨೬). ೨. ಕಾರ್ಯ ಕೈಗೂಡುವುದು ; ಕಾರ್ಯಸಿದ್ಧಿ. [ಸಂ.]

**ಪ್ರಸಿದ್ಧಿಸು** (ಕ್ರಿ). ಎಲ್ಲರಿಗೂ ತಿಳಿಯುವಂತೆ ಮಾಡು ; ಪ್ರಕಟಪಡಿಸು; ಬಹಿರಂಗಪಡಿಸು: ೧೯೧೦ರಲ್ಲಿ ಪ್ರಕಟವಾಗಿದ್ದ ಒಂದು ಪುಸ್ತಕವನ್ನು. . . ೧೯೨೭ರಲ್ಲಿ ಸೂಕ್ತ ಬದಲಾವಣೆಗಳೊಂದಿಗೆ ಮತ್ತೆ ಪ್ರಸಿದ್ಧಿಸಿದೆನು

(ಜಸ್ಮ್ಯ. ೯೦) : ನಿಮ್ಮ ದೇಶಸೇವೆಯನ್ನು ಪ್ರಸಿದ್ಧಿಸುವ ಸಲುವಾಗಿಯೇ ಹೊರಟಿದ್ದೇನೆ (ರೇಕು. ೩೩) ; ಇಂದಿನ ಪತ್ರದಲ್ಲಿ ನಿನ್ನೆ ಅದೃಶ್ಯರಾದ ಜನರ ಹೆಸರುಗಳು ಪ್ರಸಿದ್ಧಿಸಲ್ಪಟ್ಟಿರುತ್ತವೆ (ಶೃಕಸ್. ೦೬೧). [ಪ್ರಸಿದ್ಧ + –ಇಸು]

**ಪ್ರಸುಪ್ತ** (ಗು). ೧. ನಿದ್ರಿಸುತ್ತಿರುವ. (ನಾ). ೨. ನಿದ್ರಿಸಿದವನು : ಶಯ್ಯಾಗೃಹಕ್ಕೆ ಬಿಜಯಂಗೆಯ್ದು ದುಕೂಲಪ್ರಚ್ಛದಾಚ್ಛಾದಿತವಿಶಾಲಹಂಸತೂಲತಲ್ಪತಲದೊಳ್ ಸುಖಪ್ರಸುಪ್ತನಿರೆ (ಹಂಚಾಪು. ೦೦-೧೬೩ ವ). [ಸಂ.]

**ಪ್ರಸೂಚಕ** (ಗು). ೧. ತಿಳಿಸುವ ; ಹೇಳುವ ; ಸೂಚಿಸುವ. (ನಾ). ೨. ತಿಳಿಸುವ ವಸ್ತು ; ಸೂಚಿಸುವಂಥದು : ಮುಂಚೆ ಬಂದ ಜಳದಾಗಮಪ್ರಸೂಚಕಂಗಳಪ್ಪ ಲಿವರಲ್ಗಳಿಂದಂ ಸರೋಜವನದಿಂ ಶಾಳಿವನಕ್ಕೆ ಪರಿವ ಪರಿಕಾಲ್ಗಳಿಂ ನೆರೆದು (ಸುಕುಮಾ. ೦೦-೩೬ ವ). [ಸಂ.]

**ಪ್ರಸೂತ** (ಗು). ೧. ಹುಟ್ಟಿದ ; ಜನಿಸಿದ ; ಜನ್ಮ ತಾಳಿದ : ಪ್ರಸೂತಭೂತಾಳಿನಗಾಗಸಂಕುಳಂ ವಸಂತಲಕ್ಷ್ಮೀಚಿರಭೃತ್ತರುವ್ರಜಂ ಲಸತ್ಸುರಾಧೀಶಭಯಂಕರಪ್ರಭಾಪ್ರಸನ್ನಶೈಲಾವಳಿಯಲ್ಲಿ ರಂಜಿಸುಂ (ಶೃಷು. ೦೦-೩೨). (ನಾ). ೨. ಹುಟ್ಟಿದವನು; ಜನ್ಮ ತಾಳಿದವನು: ದಿವಸಕರನಕ್ಕಿಳಾಸಂಭವನಕ್ಕಿರೆ ನಾಲ್ಕುಟೊಳ್ ದಶಸ್ಥಾನಕದೊಳ್ ರವಿಸುತನಿರೆ ಶೂಲದೊಳಿಕ್ಕುವರಾ ಲಗ್ನಪ್ರಸೂತನಂ ಪಾತಕನಂ (ಜಾತಕ. ೨೩-೭) ; ಕನಸಿನೊಳಪ್ಪೊಡಂ ಭಯದ ಲೋಭದ ಮಾತು ಮನುಪ್ರಸೂತರೊಳ್ ಜನಿಯಿಸದು (ಹಂಚಾಪು. ೮-೦೯). ೩. ಹಡೆಯುವಿಕೆ ; ಹೆರಿಗೆ : ತುಂಬಿಯಂ ಪ್ರೀತಿಯೊಳಪ್ಪಿ ಗರ್ಭಿಣಿಯದಾಯ್ತು ಸರೋರುಹಮುತ್ಪಲಂ ಪ್ರಸೂತಾತುರೆಯಾಗಿ ಪೆತ್ತುದೆಳೆಯಂ (೧೦ಳ. ೪-೦೦೨). ೪. ಹೂವು ; ಪುಷ್ಪ. [ಸಂ.]

**ಪ್ರಸೂತಿ** (ನಾ). ೧. ಹಡೆಯುವಿಕೆ; ಹೆರಿಗೆ: ಉತ್ತರಣಿಯ ಬೇರಂ ಯೋನಿಯೊಳಗೆ ಇಕ್ಕೆ ಪ್ರಸೂತಿಯಕ್ಕು (ಲವ್ವಿ. ೬೩). ೨. ಮಗು : "ಸೂನುಃ . . . ಪ್ರಸೂತಿಃ . . . ಅಪತ್ಯಂ—ಈ ೧೨ ಮಗುವು" (ಹಲಾಯು. ೯೨-೩೯೩) ; ಒತು ಮೂಡುವ ಲಿಂಗವಂತರ ಭಾತಿಗಳು ಶಿವಭಕ್ತಿಬೀಜಕೆ ಪಾತಿಗಳು ಪರಮಾರ್ಥನಿಜಯೋಗಪ್ರಸೂತಿಗಳು (ಬಸವ. ೩೬-೯೭). [ಸಂ.]

**ಪ್ರಸೂತಿಕರ್ಮ** (ನಾ). ಮಗು ಹುಟ್ಟಿದಾಗ ಅದಕ್ಕೆ ಮಾಡುವ ಒಂದು ವಿಧಿ; ಜಾತಕರ್ಮ : ಎಲ್ಲ ಪ್ರಸೂತಿಕರ್ಮವ ತೀರ್ಚಿ ಕೊಟ್ಟಲ ಸಮುಲ್ಲಾಸದಿಂ ಕಟ್ಟಿ (ಪಪುಪು. ೨೨-೨೯). [ಸಂ. ಪ್ರಸೂತಿಕರ್ಮನ್]

**ಪ್ರಸೂತಿಕಾಗೃಹ** (ನಾ). ಹೆರಿಗೆಯ ಮನೆ: ಪ್ರಸೂತಿಕಾಗೃಹನಿಹಿತನಿಖಿಳಜನಮುಮಂ . . . ಮನಮೊಸೆದು ಮನ್ನಿಸಿ (ಪೃಶ್ನಿಕ. ೪-೩೯ ವ). [ಸಂ.]

**ಪ್ರಸೂತಿಕೆ** (ನಾ). ೧. ಮಗುವನ್ನು ಹೆತ್ತಿರುವವಳು : ಬಾಣಂತಿ. ೨. ಹೆರಿಗೆ : ಅಭೂತಪೂರ್ವವಾದ ಪ್ರಸೂತಿಕಾಕೌತುಕವಮನಾತ್ಮೀಯಾಪ್ತಗುಪ್ತವಾಕ್ಯದಿಂ ಕೇಳ್ದು (ಜಗಿಪು. ೩-೦ ವ). [ಸಂ. ಪ್ರಸೂತಿಕಾ]

**ಪ್ರಸೂತಿಕ್ರಿಯೆ** (ನಾ). = ಪ್ರಸೂತಿಕರ್ಮ : ಪ್ರಸೂತಿಕ್ರಿಯಾಪರಿಣತಾಂತಃಪುರಪರಿಚರಾತಿ ಸಂತಾನಾನಿರಂತರತಮುಂ (ಚಂದ್ರಪ್ರ. ೩-೯೭ ವ). [ಸಂ. ಪ್ರಸೂತಿಕ್ರಿಯಾ]

**ಪ್ರಸೂತಿಗೃಹ** (ನಾ). = ಪ್ರಸೂತಿಕಾ ಗೃಹ : ಮರುದೇವೀವಿಳಸತ್ಪ್ರಸೂತಿಗೃಹಮಂ . . . ಪೊಕ್ಕು (ಆಪು. ೭-೯೯); ಹುಟ್ಟಿದ ಕೂಸೂ ಒಮ್ಮೆ ಪ್ರಸೂತಿಗೃಹದಿಂದ ಹೊರಗೆ ಬಂದಿತೆಂದರೆ ಅದಕ್ಕೆ ತಾಯಿ ಮೋರೆ ತಿರುಗಿ ಕಾಣುವ ಹಾಗಿರಲಿಲ್ಲ (ಸಕುಜೀ. ೪೯೯). [ಸಂ.]

**ಪ್ರಸೂತಿವೈರಾಗ್ಯ** (ನಾ). ಹೆರಿಗೆಯ ನೋವನ್ನು ತಾಳಲಾರದೆ, ತಾತ್ಕಾಲಿಕವಾಗಿ ಉಂಟಾಗುವ ವೈರಾಗ್ಯ: ಮಗುವಿನ ಮುದ್ದುಮುಖ ನೋಡಿದ ಕೂಡಲೆ ಅರ್ಧಗಂಟೆಯ ಹಿಂದೆ ಉಂಟಾಗಿದ್ದ ಪ್ರಸೂತಿವೈರಾಗ್ಯ ಎಲ್ಲಿಗೆ ಓಡಿತೋ ! (ಕಪಿ). [ಸಂ.]

**ಪ್ರಸೂತೆ** (ನಾ). ೧. ಮಗುವನ್ನು ಹೆತ್ತವಳು : ಬಾಣಂತಿ. ೨. ಹೆಣ್ಣುಕುದುರೆ : "ಅರ್ವಶೀ . . . ಪ್ರಸೂತಾ, ವಾಜಿನೀ—ಈ ೫ ಘೋಟಿಗೆ" (ಹಲಾಯು. ೬೨-೨೬೮). [ಸಂ. ಪ್ರಸೂತಾ]

**ಪ್ರಸೂನ** (ಗು). ೧. ಹುಟ್ಟಿದ ; ಉತ್ಪತ್ತಿಯಾದ. (ನಾ). ೨. ಹುಟ್ಟು; ಉತ್ಪತ್ತಿ. ೩. ಹೂವು ; ಪುಷ್ಪ : ನನೆಯ ಕೊನೆಯ ತಳಿರ ಮುಗುಳ ವನಲತಾನಿಕುಂಜದಿಂ ಪ್ರಸೂನರಜದ ಪುಂಜದಿಂ (ಹಂಸಪ್ರ. ೦-೩೬ ರಗಳೆ) ; ಅತುಳಸ್ವಚ್ಛಾಂಬುವಿಂ ಮಜ್ಜನಕೆಱೆದು ನವೀನಪ್ರಸೂನಪ್ರತಾನದ್ಯುತಿಸುತ್ತಲ್ (ರಕ್ಷಾಶ. ೬೪) ; ಹಗಲಿರುಳು ನಿನ್ನೊಡನೆ ನಲಿದಾಡಿದೀ-ದೀನಕಾನನಪ್ರಸೂನಮಂ, ಹೇ ಕಾಂತ, ಮರೆಯದಿರು (ಚಿತ್ರಾಂಗ. ೪೬-೦೨೩೪). ೪. ಮೊಗ್ಗು. ೫. ಹಣ್ಣು ; ಫಲ. [ಸಂ.]

**ಪ್ರಸೂನಕ** (ನಾ). ಹೂವು ; ಪುಷ್ಪ : "ಪುಷ್ಪಂ . . . ಪ್ರಸೂನಕಂ, ಸುಮನಸ್—ಈ ೫ ಪೂವಿನ ಪೆಸರ್" (ಹಲಾಯು. ೩೦-೩೨). [ಸಂ.]

**ಪ್ರಸೂನಾಯುಧ** (ನಾ). ೧. (ಮನ್ಮಥನ) ಹೂವಿನ ಬಾಣ : ಉಪೇಶ್ವರನೊಳ್ ನೆರವಟ್ಟಿಱಂ ಪ್ರಸೂನಾಯುಧತಾಪತಪ್ತೆ . . . ನಿಜಾಲಯದಿಂ ಪೊಱಮಟ್ಟಳ್ (ಹಂಸಕಂ. ೬೪-೭). ೨. ಹೂವಿನ ಬಾಣವನ್ನುಳ್ಳವನು ; ಕಾಮ. [ಸಂ.]

**ಪ್ರಸೂನಾಸ್ತ್ರ** (ನಾ). ೧. ಹೂವಿನ ಬಾಣ ; ಕುಸುಮಾಸ್ತ್ರ : ಮಾನಾಂಕನು ಬಲುಮಾನದಿ ತನ್ನ ಪ್ರಸೂನಾಸ್ತ್ರ [ಪಾಠಾಂ. ಯುಧ] ಗಳನು ತೊಡರ್ಚೆ ಮಾನನಿಧಿಯ ಪರಿವಾರವನಿಸಲು ಸುಮ್ಮಾನವಳಿದರತಿರಥರು (ಶ್ರೀಭೂಪಾ. ೨೦-೨೫೦). ೨. = ಪ್ರಸೂನಾಯುಧ ೨. [ಸಂ.]

**ಪ್ರಸೃತ** (ಗು). ೧. ಮುಂದೆ ನಡೆದ ; ಗಮಿಸಿದ. ೨. ಹರಡಿದ ; ವಿಸ್ತರಿಸಿದ. (ನಾ). ೩. ಒಳ್ಳೆಯ ಮಾತನಾಡುವವನು ; ವಿನಯಶಾಲಿ: "ಪ್ರಸಕ್ತಃ, ಪ್ರಸೃತಃ—ಈ ೨ ಗೆಲೆ ನುಡಿವವಂ" (ಹಲಾಯು. ೬೦೯-೨೦೯). ೪. ಉತ್ಸಾಹವುಳ್ಳವನು : "ಪ್ರತೂರ್ಣಃ, ತ್ವರಿತಃ, ತೂರ್ಣಃ, ಉತ್ಸುಕಃ, ಪ್ರಸೃತಃ—ಈ ೫ ಚೆಟ್ಟರಿಗಂ" (ಹಲಾಯು. ೩೬-೦೯೬). ೫. ಬೊಗಸೆ ; ಅರ್ಧಾಂಜಲಿ. ೬. [ಗಣಿತ] ಒಂದು ಅಳತೆ ; ಎರಡು ಪಲಗಳ ಪ್ರಮಾಣ : ಅಳತೆ ವಿವರಾ ಭತ್ತ ನಾಲ್ಕಕೆ ಪಂದಂ ಕಾಣ್ಗಮೆನಿಪುದದು ಮತ್ತೆ ಪಂಚಕಕೊಂದು ಪಣ ಮಕ್ಕುಮಾ ಪಣ ಮೂವತ್ತೆನಿಸಲದು ನಿಷ್ಕ ನಿಷ್ಕತ್ರಯಕ್ಕೆ ಕರುವ ದ್ವಾದಶಕ್ಕೆ ಮಾಗಧಪ್ರಮಣೆ ಬಿತ್ತರಿಸದರೆರಡ ಕೂಡಲು ಪ್ರಸೃತಮೆನಿಪುದದು (ಶಾಸ್ತ್ರ. ೬೯-೬). ೭. [ನಾಟ್ಯ] ನಿಃಶ್ವಾಸದ ಭೇದಗಳಲ್ಲಿ ಒಂದು ; ಉ. "ಮಲಗಿರುವಾಗ ಶಬ್ದ ಮಾಡುತ್ತ ಬಾಯಿಂದ ಉಸಿರು ಬಿಡುವುದು" (ಶಾಸ್ತ್ರಂ. ಗದ್ಯಾನುವಾದ. ೨೬೬) : ಸ್ವಸ್ಥ, ಚಲ . . . ಪ್ರಸೃತ—ಈ ಒಂಬತ್ತೂ ಕೋಹಳನ ಮತದಂತೆ ಗಾಳಿಯ ಭೇದಂಗಳ್ (ಶಾಸ್ತ್ರಂ. ೩-೬೦ ವ). ೮. ರೆಪ್ಪೆಯ ಒಂಬತ್ತು ವಿಧವಾದ ಚಲನೆಗಳಲ್ಲಿ ಒಂದು; ಉ. "ರೆಪ್ಪೆಗಳನ್ನು ವಿಶಾಲವಾಗಿ ತೆರೆಯುವುದು" (ಶಾಸ್ತ್ರಂ. ಗದ್ಯಾನುವಾದ. ೨೬೩) : ಪ್ರಸೃತ, ಕುಂಚಿತ . . . ಸಮ—ಈ ಒಂಬತ್ತು ಎವೆಯ ಭೇದಂಗಳ್ (ಶಾಸ್ತ್ರಂ. ೩-೪೯ ವ). ೯. "ಕಾಲ್ಬೆರಳುಗಳನ್ನು ಚಲಿಸದೆ ನೀಡುವುದು" (ಶಾಸ್ತ್ರಂ. ಗದ್ಯಾನುವಾದ. ೨೬೩) ; ಅಧಃಕ್ಷಿಪ್ತ . . . ಪ್ರಸೃತ, ಸಂಲಗ್ನ—ಈ ಐದು ಚರಣಾಂಗುಲಿಯ ಭೇದಂಗಳ್ (ಶಾಸ್ತ್ರಂ. ೩-೦೦೫ ವ). ೧೦. ಕೈಬೆರಳುಗಳ ಏಳು ವಿಧವಾದ ಚಲನೆಗಳಲ್ಲಿ ಒಂದು: ಸಂಯುತ . . . ಪ್ರಸೃತ—ಈ ಏಳು ಹಸ್ತಾಂಗುಲಿಯ ಭೇದಂಗಳ್ (ಶಾಸ್ತ್ರಂ. ೩-೧೧೩ ವ). [ಸಂ.]

**ಪ್ರಸೃತಕರಣ** (ನಾ). [ಕಾಮಶಾ] ರತಿಬಂಧಗಳಲ್ಲಿ ಒಂದು : ಸಲೆ ಮಗುಳ್ದೊಜಗದ ಲಲನೆಯಿನೆಯನ ಪೆಗಲೊಳಗೆ ಕಾಲಿಟ್ಟಿರ್ತೊಡೆಯ ಅಲರ್ವಸಿಯೊಳಗಿಟ್ಟೊಲವಿಂ ರತಿಗಗ್ಗಲಿಸಲುದೇ ಪ್ರಸೃ[ಕಾಕಾಂ. ಸ್ತ. ಸ್ತ್ರು]ತಕರಣಂ (ಅವಹ. ೯-೨೯). [ಸಂ.]

**ಪ್ರಸೃತಿ** (ನಾ). ೧. ಮುನ್ನಡೆ ; ಪ್ರಗತಿ ; ಬೆಳವಣಿಗೆ. ೨. ಬೊಗಸೆ ; ಅರ್ಧಾಂಜಲಿ : "ಅಂಗುಳಿ ಮಡಿದ ಕುಡಿತೆಯುಂ ಪ್ರಸೃತಿಯೆಂಬುದು" (ಶಬ್ದಾನು. ೮೮-೩೬೩). ೩. [ಗಣಿತ] ಒಂದು ಅಳತೆ ; ಎರಡು ಪಲಗಳ ಪ್ರಮಾಣ : ಶಿವನ ನೈವೇದ್ಯದಳತೆಯ ಗಣನೆಗಳ ಪೇಳುವೆವು ನೆಲ್ಲಳಿಂ ನೂಱುಯಿರ್ಪತ್ತು ಐದೆಂಬುದವನಿಯೊಳು ಶುಕ್ತಿ . . . ಸಾವಿರ ದೆಂಟುನೂರ್ನಲ್ ಪ್ರಸೃತಿಯೆನಿಸುವವು (ಬಸವ್ಕೃತಿ. ೬-೧೦-೬೦). [ಸಂ.]

**ಪ್ರಸೃತೆ** (ನಾ). ಮೊಳಕಾಲು ; ಜಂಘೆ : "ಪ್ರಸೃತಾ, ಜಂಘಾ—ಈ ೨ ಕಿಱುದೊಡೆ" (ಶಬ್ದಾನು. ೬೩-೩೬೦). [ಸಂ. ಪ್ರಸೃತಾ]

**ಪ್ರಸೇಕ** (ನಾ). ಮೂಗು ಅಥವಾ ಬಾಯಿಯಿಂದ ಸುರಿಯುವ ನೀರಿನ ಸ್ರಾವ : ವಮನಯೋಗ್ಯರು — ಮಂದಾಗ್ನಿಯುವರು . . . ಪ್ರಸೇಕ ರೋಗದವರು, ಶ್ವಾಸರೋಗದವರು (ಕಳಶ್ಯ. ೨೫). [ಸಂ.]

**ಪ್ರಸೇವ** (ನಾ). ೧. ಬಿದಿರಿನಿಂದ ಹೆಣೆದ ತಟ್ಟೆ ಅಥವಾ ಮಂಕರಿ : "ಸ್ಯೂತಃ, ಪ್ರಸೇವಃ . . . ೨ ಬಿದುರುತಟ್ಟೆಗಳು, ಮಕ್ಕರಿಗೆಳಿಗೂ ಹೆಸರು" (ಸಿದ್ಧಾಂತಿ. ೩೮೩). ೨. ವೀಣೆಯ ಬುರುಡೆ. [ಸಂ.]

**ಪ್ರಸೇವಕ** (ನಾ). ವೀಣೆಯ ಬುರುಡೆ : "ಪ್ರಸೇವಕಃ . . . ವೀಣೆಯ ಹೆರಳಿನ ಹೆಸರುಗಳು" (ಸಿದ್ಧಾಂತಿ. ೩೯). [ಸಂ.]

**ಪ್ರಸ್ಖಲಿತ** (ಗು). ಎಡವಿದ; ಮುಗ್ಗುರಿಸಿದ : ವಿದ್ಯುತ್ಕೇಶವಿದ್ಯಾಧರಂ ತ್ವರಿತಪ್ರಸ್ಖಲಿತಪ್ರಯಾಣರಭಸಂ ಶುದ್ಧಾಂತಕಾಂತಾಜನಂ ಬೆರಸುತ್ಕಂಪಿತ ನೋಡಿ ದಿವ್ಯಮುನಿಪಾದಾಂಭೋಜಮಂ ಪೊರ್ದಿದಂ (ಶಂಕರಾಪ. ೧೦-೧೦೯). [ಸಂ.]

**ಪ್ರಸ್ತ** (ನಾ). ೧. ಅವಕಾಶ ; ಸಂದರ್ಭ ; ಸಮಯ : ಎಱಗುವುದಕೆ ಪ್ರಸ್ತವೆನು ತನ್ನಯ ಹಂಗು ಕಿಱಿದುಂಟೆ ನನಗಯ್ಯನಂದು ಒಪಿಟಿ ಕೊಟ್ಟುಂಬಳಿಯಲ್ಲಿ ನಾನಿಹೆನು (ಛಠ. ೯೯-೩೬) ; ಪ್ರಸ್ತಕ್ಕೆ ನುಡಿದಿಹರೆ ಬೆಸ್ತಂತೆ ಇರಬೇಕು ಪ್ರಸ್ತವ ತಪ್ಪಿ ನುಡಿದಿಹರೆ ನಡು ಬೆನ್ನನಸ್ತಿ ಮುಱಿ ದಂತೆ (ಸರ್ವಜ್ಞ. ೦೩೩೯). ೨. ಶುಭಕಾರ್ಯ ; ಮಂಗಳಕಾರ್ಯ : ನೆರೆಹೊರೆಮನೆಯಲ್ಲಿ ಪ್ರಸ್ತವಾಗಲು ಆಗ ಕರೆಯದೆ ಪೋಗಿನ್ನು ಹಾಳು ಹರಟೆ ಬಱಗೆಟ್ಟು ನೂಱಾಱು ಸುದ್ದಿ ಹೇಳುತ ಅವನ ಹಿರಿಯ ಮಗನಂತೆ ಉದರವ ಪೊರೆದೆ ಮನವೆ (ಹರಿಚಂದ. ೯-೩೨-೯); ದೀನನಾದನೆಗೊಂದು ಕವಡೆಯು ಪಾಣೆಯೊಳಗಿಲ್ಲವರ್ಗೆ ಸರಿಯಾಗಾನು ಪ್ರಸ್ತವ ಮಾಡಬಲ್ಲೆನೆ (ಅಕ್ಷರಾ. ೦೬-೧೦). ೩. ಗರ್ಭಾಧಾನದ ಶುಭಕಾರ್ಯ ; ನಿಷೇಕ ; ಒಸಗೆ : ಲಗ್ನ ಮುಗಿದ ಮೇಲೆ ಪ್ರಸ್ತವೂ ರಾಘಪ್ಪನ ಮನೆಯಲ್ಲಿಯೆ ಆಗಬೇಕಾಗಿತ್ತು (ಗಂಪಹಾಮು. ೦೩೪).

ಪ್ರಸ್ತದ ಊಟ = ಶುಭಸಮಾರಂಭದ ಔತಣ,—ಭೋಜನ : ಪ್ರಸ್ತದ ಊಟದಲ್ಲಿ ಹೆಂಗಳೆಯರು ಬಡಿಸುವಾಗ (ಸಪಾಕೀ. ೯ ಬೀಳಿ) ; ಪ್ರಸ್ತದ ಊಟಕ್ಕೆ ಹೋಗಿ ಸ್ವಸ್ಥವಿಲ್ಲದೆ ಬಿದ್ದ (ಗಾದೆ).

[< ಸಂ.ಪ್ರಸ್ತುತ./ಮರಾ. ಪ್ರಸ್ತ ; ತುಳು. ಪ್ರಸ್ತ]

**ಪ್ರಸ್ತರ** (ನಾ). ೧. ಹೂವು, ಎಲೆ ಮೊದಲಾದುವುಗಳಿಂದ ನಿರ್ಮಿಸಿದ ಹಾಸುಗೆ. ೨. ಹಾಸುಗೆ ; ಶಯ್ಯೆ. ೩. ಸಮತಲವಾದ ಪ್ರದೇಶ; ಬಯಲು. ೪. ಕಲ್ಲು ; ಶಿಲೆ : "ಶಿಲಾ . . . ಪ್ರಸ್ತರಃ, ದೃಷತ್ —ಈ ೭ ಕಲ್ಲ ಪೆಸರ್" (ಶಬ್ದಾನು. ೨೮-೦೯); ಸುರೆಯಿಂ ಸೊರ್ಕೆ ಸುರರ್ಗೆರ್ವೀರುಹಕಿಸಲಯದಿಂ ರಾಗಮಂ ಕೌಸ್ತುಭಪ್ರಸ್ತರದಿಂ ನೈಷ್ಠುರ್ಯಮಂ . . . ತಾಳ್ದಿ (ಕಾದಂಬ. ೩೩೬); ಅಹಲ್ಯಾದೇವಿ ಶಿಲೆಯಾಗಿ ಧರಿಸಿದಳು ನಿಜತನುವನಾ ಪ್ರಸ್ತರವಿದೀಗಾ ಸತಿಗೆನುತ ಹತ್ತಿರಕೆ ಬರೆ ರಾಮಾಂಘ್ರಿರಜಾಪಾವರಿಸಿತಾ ಶಿಲೆಯ (ಕೌಶಿಕಾ. ೦-೦೨-೦೬). [ಸಂ].

**ಪ್ರಸ್ತರಣ** (ನಾ). ೧. ಹರಡುವುದು; ಹಾಸುವುದು. ೨. ಹಾಸುಗೆ; ಶಯ್ಯೆ : ತಮಾಳದಳಪ್ರಸ್ತರಣಂ ಲತಾಂಗಿ ಮಳಯಕ್ರೀಡಾಚಳಂ ನೀನುವಿಷಾ ಮದನಾಕಾರನುಮಲ್ಲಿ ನಿಚ್ಚಲುಮಿರಿಂ ಕೇಳೀವಿನೋದಂಗಳಂ (ಕಾಂತಿಕೃ. ೩-೦೯೨). ೩. ಪೀಠ ; ಆಸನ. [ಸಂ.]

**ಪ್ರಸ್ತರಭವನ** (ನಾ). ಕಲ್ಲಿನಿಂದ ಕಟ್ಟಿದ ಮನೆ ; ಶಿಲಾಭವನ : ಹೇಯೋಪಾದೇಯತತ್ವಮನಱಿಪಿ ಮತ್ತಮಿವರ್ಕಾಧಾರಭೂತಜಗತ್ತ್ರಯಾಂತಸ್ಥಿತೈಕೋನಪಂಚಾಶನ್ನರಕ ಪ್ರಸ್ತರ [ಕಾಕಾಂ.ಪ್ರಸಾರ] ಭವನವ್ಯಂತರಾವಾಸಾಸಂಖ್ಯಾತದ್ವೀಪಾಬ್ಧಿತ್ರಿಷಷ್ಟಿಸ್ವರ್ಗಪಟಲಂಗಳುಮಂ ವಿಸ್ತರಿಸಿ (ಅಂತೃ. ೦೦-೩೬೪). [ಸಂ.]

**ಪ್ರಸ್ತರಿಸು** (ಕ್ರಿ). ೧. ಹರಡು ; ವಿಸ್ತರಿಸು. ೨. [ಛಂದ] ಲಘು ಮತ್ತು ಗುರುಗಳನ್ನು ಗುರುತಿಸು ; ಪ್ರಸ್ತಾರ ಹಾಕು : ಎರಡುಂ ಮೂಱುಂ ನಾಲ್ಕುಂ ಗುರುವಿಂ ಪ್ರಸ್ತರಿಸಲಂಬುನಿಧಿಗಜ[ಕಾಕಾಂ. ಪ್ರಸ್ತಾರವಾಗಿಯುಂ ಜಗ] ಧರಣೀಶ್ವರಗಣವೊಗೆಗುಂ (ಛಂದೋಂಬು. ೩-೨೧೦); ಪಾದ ಈಗಿರುವಂತೆಯೇ ಪ್ರಸ್ತರಿಸಿದರೆ ಧರೆ, ಗೆ, ಲ್ಲಂ ಎಂಬ ಕೊನೆಯ ಗಣವೂ ವಿಷ್ಣುವೇ ಆಗುತ್ತದೆ (ಸಮಾಲೋ. ೨೨೯).

[ಪ್ರಸ್ತರಣ + —ಇಸು]

**ಪ್ರಸ್ತಾಪ** (ನಾ). ೧. ಯಾವುದಾದರೊಂದು ವಿಷಯಂದ ಅಥವಾ ಮಾತಿನ ಪ್ರಾರಂಭ : "ಪ್ರಸ್ತಾಪ—ಪ್ರಸ್ತಾವ= ಮಾತೆತ್ತುವಿಕೆ" (ತತ್ವಕೋ. ೨೭); ಮಗುವಿನ ವಿದ್ಯಾಭ್ಯಾಸ ಪೂರ್ಣವಾಗುವವರೆಗೂ ದಯವಿಟ್ಟು ಈ ಪ್ರಸ್ತಾಪ ಬೇಡ (ಕಾಂತಣ. ೧೧). ೨. ವಿಷಯ; ಸಂಗತಿ : ಅದೇ ಪ್ರಸ್ತಾಪ ಹೇಳಬೇಕು ಎಂದು ಇಲ್ಲಿಗೆ ಬಂದೆ (ತ್ಯಾಗಮ. ೯೯). ೩. ಸಂದರ್ಭ; ಅವಕಾಶ ; ಸಮಯ : ನಾಟಕದ ಒಂದು ಪಾತ್ರವಾದ ಶ್ಯಾಮಲಾ ಕುಮಾರಿಯ ವಿವಾಹದ ಪ್ರಸ್ತಾಪ (ಬೀರಯೋ. xii, ಅನುವಾದಕರ ಬಿನ್ನಹ) ; ಪ್ರಸ್ತಾಪಕ್ಕೆ ಬಾರದ ಗಾದೆ ಪ್ರಸ್ತಕ್ಕೆ ಆಗದ ಏಜ್ಜಾಯ (ಗಾದೆ).

<ಸಂ. ಪ್ರಸ್ತಾವ]

**ಪ್ರಸ್ತಾಪಿಸು** (ಕ್ರಿ). ಮಾತಿನಲ್ಲಿ ವಿಚಾರವನ್ನು ಪ್ರಾರಂಭಿಸು ; ಮಾತು ಎತ್ತು : ಬೊಮ್ಮರಸಪಂಡಿತರ ಯೋಗ್ಯತೆಯ ವಿಚಾರವನ್ನು ಪ್ರಸ್ತಾಪಿಸಿದರು (ಕಂಗಾಳ್ಳಿ. ೬೦); ಶಾಲೆಯು ಆರಂಭವಾಗುವ ತನಕ ಗೋವಿಂದಶಾಸ್ತ್ರರು ಮೇರಿಯೊಡನೆ ವಿಷಯ ಪ್ರಸ್ತಾಪಿಸಲಿಲ್ಲ (ಕಾಪೇಂ. ೯೯); ಇಲ್ಲದ ಧೈರ್ಯ ತಂದುಕೊಂಡು ಶ್ರೀಧರ ಮಾಲತಿಗೆ ಅಪ್ರಿಯವಾದ ವಿಚಾರವನ್ನೇ ಮತ್ತೆ ಪ್ರಸ್ತಾಪಿಸಿದ್ದ (ಪಾಶ್ಚ್ಯ. ೦೬೯).

[ಪ್ರಸ್ತಾಪ + —ಇಸು]

**ಪ್ರಸ್ತಾರ** (ನಾ). ೧. ಹರಡುವುದು ; ವ್ಯಾಪಿಸುವುದು. ೨. ಹಾಸುಗೆ; ಶಯ್ಯೆ. ೩. ಸಮತಲವಾದ ಭೂಮಿ,—ಪ್ರದೇಶ ; ಬಯಲು. ೪. (ದಟ್ಟವಾದ) ಕಾಡು ; (ಗಹನವಾದ) ಅರಣ್ಯ. ೫. [ಛಂದ] ವೃತ್ತದ ಪ್ರತಿಸಾಲಿನಲ್ಲಿಯೂ ಗುರುಲಘುಗಳನ್ನು ಗುರುತಿಸಿ ಬಳಿಕ ಅಕ್ಷರ ಗಣಗಳನ್ನು ಕಂಡುಹಿಡಿದು ವೃತ್ತವು ಯಾವ ಛಂದಸ್ಸಿಗೆ ಸೇರಿದುದು ಎಂಬುದನ್ನು ಕಂಡುಹಿಡಿಯುವ ಕ್ರಮ : ಮಿಗಿಲಾಗಲಧ್ವಯೋಗಂ ನೆಗಟ್ಟಪದೇಶದೊಳಪರಿಮಿತಂ ಪ್ರಸ್ತಾರಂ (ಛಂದೋಂಬು. ೬-೨೩೩). ೬. ಒಂದು ಛಂದಸ್ಸಿನಲ್ಲಿ ಎಷ್ಟು ವೃತ್ತಗಳಾಗಬಹುದು ಎಂಬುದನ್ನು ಕಂಡುಹಿಡಿಯುವ ಕ್ರಮ : ಉಕ್ತ ಮೊದಲಾದ ಆಯಾ ಛಂದಸ್ಸಿನ ಅಕ್ಷರಗಳ ಸಂಖ್ಯೆಯಷ್ಟು ಗುರುಗಳನ್ನು ಮೊದಲು ಸಾಲಾಗಿ ಬರೆದು . . . ಮುಂದುಮುಂದಕ್ಕೆ ಇಪ್ಪತ್ತಾರರವರೆಗೂ ಆಯಾಸ್ಥಾನದಲ್ಲಿ ಗುರು ಲಘುಗಳು ಅದರ ಹಿಂದಿನ ಸ್ಥಾನಕ್ಕಿಂತ ದ್ವಿಗುಣವಾಗಿರು

ವಂತೆ ಕಡೆಗೆ ಎಲ್ಲವೂ ಲಘುಗಳಾಗುವವರೆಗೆ ಗುರು ಲಘುಗಳನ್ನು ಸಾಲು ಸಾಲಾಗಿ ಬರೆಯುವುದು. ಇದಕ್ಕೆ ಪ್ರಸ್ತಾರವೆಂದು ಹೆಸರು (ಛಂಶಿ. ೯೦). ೭. [ಸಂಗೀತ] ತಾಳಾಂಗದ ವಿಸ್ತರಣೆ: ತಾಳಕ್ಕೆ ಹತ್ತು ಪ್ರಾಣಗಳುಂಟು; ಕ್ರಮವಾಗಿ ಅವು—೧. ಕಾಲ . . . ೧೦. ಪ್ರಸ್ತಾರ (ಸಂಗೀಶಂ. ೩೮); ಪ್ರಸ್ತಾರ: ಪ್ರಸ್ತರಿಸುವುದು ಎಂದರೆ ವಿಶದವಾಗಿ ಕಾಣುವಂತೆ ಹರಡುವುದು ಅಥವಾ ವಿಸ್ತರಿಸುವುದು. ಒಂದು ತಾಳಾಂಗವನ್ನು ವಿಸ್ತರಿಸುವುದು ಎಂದರೆ ಅದರಲ್ಲಿ ಬರುವ ಉಪಾಂಗಗಳೂ ಗೋಚರವಾಗುವಂತೆ ವಿಂಗಡಿಸುವುದು (ಸಂಗೀಶಂ. ೩೮).

**ಪ್ರಸ್ತಾರ ಹಾಕು** = ಲಘು, ಗುರುಗಳನ್ನು ಗುರುತಿಸು: ಸಾಂಗತ್ಯದ ಲಕ್ಷಣಗಳನ್ನು ಹೀಗೆ ಪ್ರಸ್ತಾರ ಹಾಕಿ ಇದು ಸಾಂಗತ್ಯವೆನ್ನುವುದು . . . ಅಸ್ಥಿಪಂಜರವನ್ನು ತೋರಿಸಿ ಇವನು ಮನುಷ್ಯ ಎಂದಂತೆ ಆಗುತ್ತದೆ (ಅಂಶಾಶ. V ೩೦೪). [ಸಂ.]

**ಪ್ರಸ್ತಾರಿಸು** (ಕ್ರಿ). [ಛಂದ] ಲಘು ಗುರುಗಳನ್ನು ಗುರುತಿಸು: ಗುರುವೊಂದಂ ಲಘುವೊಂದನೆಂಟುವರೆಗಂ ಪ್ರಸ್ತಾರಿಸು (ಛಂದೋಂಬು. ೦-೯೦). [ಪ್ರಸ್ತಾರ + — ಇಸು]

**ಪ್ರಸ್ತಾವ** (ನಾ). ೧. ಉಪಕ್ರಮ: ಆರಂಭ; ಪ್ರಾರಂಭ. ೨. ಪ್ರಸಂಗ; ಸಂದರ್ಭ: ಅಂತು ಧನುರ್ಧರಾಗ್ರಗಣ್ಯನಾಗಿರ್ದೊಂದು ದಿವಸಂ ತನ್ನ ತೊಡೆಯ ಮೇಲೆ ತಲೆಯನಿಟ್ಟು ಪರಶುರಾಮಂ ಮಱೆದೊಱಗಿದಾ ಪ್ರಸ್ತಾವದೊಳ್ (ಜಂಶಥ. ೦-೦೦೯ ವ); ಸಂನ್ಯಸನದಿಂ ಪರತ್ರೆಯಂ ಸಾಧಿಸುವೆನೆಂದು ಪರಮಾಗಮಭಾವನೆಯಿಂದಿರ್ಪನ್ನೆಗಮಾ ಪ್ರಸ್ತಾವದೊಳ್ (ಜಂರಾಮ. ೦೩-೬೯ ವ); ಹರ್ಷಚಿತ್ತರಾದಾ ತವಸಿಗಳುಂ ವರ್ಣಾಶ್ರಮಧರ್ಮಂಗಳಂ ರಾಘವಂಗೆ ನಿರವಿಸುತುಮಿರ್ದರ್ ಆ ಪ್ರಸ್ತಾವದೊಳ್ (ರಾಮಾಶ್ವ. ೦೬-೦೯). [ಸಂ.]

**ಪ್ರಸ್ತಾವನೆ** (ನಾ). ೧. ಪ್ರಾರಂಭ; ಉಪಕ್ರಮಂ. ೨. ವಿಷಯ; ಸಮಾಚಾರ: ದೇವಾರಣ್ಯಂ ದೇವರ ದೇವನ ಮನಕಿಂಬನೀಯೆ ತನ್ನಂದನದೊಳ್ ದೇವರ್ ಸಿವಿಗೆಯನಾ ಪ್ರಸ್ತಾವನೆಯುಂ ಕಟಿಪದಿಬಿಪ ಪುಣಸ್ಥಳದೊಳ್ (ಶಾಂತಿಪು. ೬-೦೩೩). ೩. ವಿಚಾರಸೂಚನೆ; ವಿಷಯಮಂಡನೆ; ಪೀಠಿಕೆ: ಅಂಥ ದೋಷಾರೋಪವನ್ನು ಮಂಡಿಸುವ ಪ್ರಸ್ತಾವನೆಯು ಲಿಖಿತಮೂಲಕವಾದ ಒಂದು ಸಂಕಲ್ಪದಲ್ಲಿ ಉಲ್ಲಿಖಿತವಾಗಿ ನಮೂದಾಗಿದ್ದು (ಕಾರಾಶ. ೩೦); ಮುಂದಿನ ಮಾತಿನ ಪ್ರಸ್ತಾವನೆಯನ್ನು ಮಾಡುತ್ತ . . . ಕೇಳಿದ (ಅಕೋಳ. ೫೦). ೪. ಪುಸ್ತಕದ ಪೀಠಿಕೆ: ಉಪೋದ್ಘಾತ: ವಿಷಯ ನಿರ್ಣಯಿಸುವಾಗ ಗ್ರಂಥದ ಶಿರೋನಾಮ, ಮುನ್ನುಡಿ, ಪ್ರಸ್ತಾವನೆ, ಪರಿವಿಡಿ . . . ಇತ್ಯಾದಿಗಳನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಾನೆ (ಗ್ರಂಥಾಂ. ೦೬). ೫. [ಕಾವ್ಯಮೀ] ನಾಟಕ (ರೂಪಕ)ಗಳ ಪ್ರಾರಂಭದಲ್ಲಿ ನಟಿ, ವಿದೂಷಕ ಅಥವಾ ಪಾರಿಪಾರ್ಶ್ವಕನು ಸೂತ್ರಧಾರನೊಡನೆ ಕಲೆತು ಮಾತನಾಡುವುದು; ನಟಿ, ಸೂತ್ರಧಾರರು ತಮ್ಮ ಸ್ವಂತವ್ಯವಹಾರದಿಂದ ನಾಟಕದ ಕಥಾವಸ್ತುವನ್ನು ಸೂಚಿಸಿ ಮುಂದಿನ ಪಾತ್ರಪ್ರವೇಶವನ್ನು ಸೂಚಿಸುವುದು: ಆಮುಖ: ಸೂತ್ರಧಾರನು ಈ ಮಂಗಳಶ್ಲೋಕವನ್ನು ಹೇಳಿ . . . ಹೊರಟು ಹೋಗುವನು. ಅನಂತರ ಕಥೆಯು ಆರಂಭವಾಗುವುದು. ಇಲ್ಲಿಯವರೆಗೆ 'ಆಮುಖ' ಅಥವಾ 'ಪ್ರಸ್ತಾವನೆ' ಎಂದು ಹೆಸರು (ಛಂಶಿ. ೨೦೩). [ಸಂ. ಪ್ರಸ್ತಾವನಾ]

**ಪ್ರಸ್ತಾವಿತ** (ಗು). ೧. ಪ್ರಾರಂಭವಾದ; ತೊಡಗಿದ. ೨. ಹೊರಸೂಸಿದ; ಸೂಸಿದ: ವ್ಯೋಮಮುಮಂ ತೀವಿದುದು ತತ್ಕರಪ್ರಸ್ತಾವಿತ ಮಂದಾರಪಾರಿಜಾತಾಸಾರಂ (ಚಂದ್ರಪು. ೬-೯೦). [ಸಂ.]

**ಪ್ರಸ್ತಾವಿಸು** (ಕ್ರಿ). = ಪ್ರಸ್ತಾಪಿಸು: ಲೌಕಿಕದೃಷ್ಟಿಗೆ ಕೂಡ ಈ ಭಾಷೆಯಲ್ಲಿ ಗೋಚರವಾಗುವ ಇನ್ನೊಂದು ಅಮರತ್ವವನ್ನು ಇಲ್ಲಿ ಸ್ವಲ್ಪ ಮಟ್ಟಿಗೆ ಪ್ರಸ್ತಾವಿಸಬೇಕೆನ್ನಿಸುತ್ತದೆ (ಸಮಾರೋ. ೧೨೯). [ಪ್ರಸ್ತಾವ + — ಇಸು]

**ಪ್ರಸ್ತುತ** (ಗು). ೧. ಹೊಗಳಿದ; ಪ್ರಶಂಸಿಸಿದ. ೨. ಸಿದ್ಧವಾದ; ತಯಾರಾದ: ಸನ್ಮಾರ್ಗನಾಟಕಾರಂಭಪ್ರಸ್ತುತಪವಿತ್ರಸೂತ್ರಧಾರನೆ ಮುಂದೆ ನಿಂದು ಪುಷ್ಪಾಂಜಳಿಯಂ ಕೆದಱಿ (ಶಾಂತಿಪು. ೦೦-೩೦ ವ). ೩. ಸೇರಿದ; ಸಮೀಪಿಸಿದ. ೪. ತತ್ಕಾಲದ; ಸದ್ಯದ; ಈಗಿನ: ಪ್ರಸ್ತುತ ಪ್ರಸಂಗದಲ್ಲಿ ಅವನ ವಾಗ್ವೈಖರಿಯನ್ನು ಕತ್ತರಿಸಿ ಒಗೆಯಲು ನನ್ನ ಬತ್ತಳಿಕೆಯಲ್ಲಿ ಅಸ್ತ್ರವಿಲ್ಲ (ದೀಕವ್ಯ. ೩೪); ಪ್ರಶ್ನೆಗಳಿಗೆ . . . ಉತ್ತರವೇಯುತ್ತವೆಯೇ ಎಂಬುದನ್ನು ತಿಳಿಯುವ ಕುತೂಹಲವೇ ಪ್ರಸ್ತುತ ಅಧ್ಯಯನದ ಉದ್ದೇಶ (ಕಾಸಗ. ೪ ಮುಮ್ನುಡಿ). ೫. ಸಂದರ್ಭೋಚಿತವಾದ: ಭೃಂಗಿನಾಟ್ಯಸ್ವನಂ ಪ್ರಸ್ತುತನಾನಾವಾದ್ಯಘೋಷಂಬೆರಸಿ ಬಳೆದುದೆತ್ತೆತ್ತಲುಂ ಪರ್ಬಿತಾಗಳ್ (ರಾಜಶೇ. ೦೯-೦೬೪). (ನಾ). ೬. ಸಂದರ್ಭ; ಪರಿಸ್ಥಿತಿ: ಅವಳುಕ್ತಿವಕ್ರಿಮಕ್ಕೆ ಸೂಕ್ತಿರತ್ನಾಕರಂ ಮನದೊಳ್ ಮೆಚ್ಚಿ ಮತ್ತೊರ್ವನಾ ಪ್ರಸ್ತುತಕ್ಕಿಂತೆಂದಂ (ಚಂದ್ರಪು. ೬-೭೯ ವ). ೭. ಸಂದರ್ಭಕ್ಕೆ ತಕ್ಕುದು; ಸಂದರ್ಭೋಚಿತವಾದುದು: ಪ್ರಸ್ತುತವಲ್ಲದುದನೆ ಮಿಗೆ ವಿಸ್ತಾರಿಸಿ ನೆಗಱ್ದೆ ಪೇೞ್ದೊಡಕ್ಕುಂ ಮತ್ತಪ್ರಸ್ತುತಮೆಂಬುದಳಂಕೃತಿ (ಕಾರಾ. ೩-೦೩೮). ೮. ಅಗತ್ಯ; ಆವಶ್ಯಕತೆ: ಪ್ರಸ್ತುತವೆಂಬಾಗ ಹೇರಳದ ಹರುಗೋಲ ವದಗಿಸಿ ಕೊಟು (ಎಕ. VI. ತಿಪವೂ. ೩-೦೦; 1671); ಆವ ಕಡೆಯಿಂದ ಬೞೆಮಾಡಿದಿರಿ ನಿಮ್ಮಿಂದಲಾದ ಪ್ರಸ್ತುತಮಿಹುದು (ಪಪಮೋ. ೫-೭); ವಿಧಿನಿಷೇಧಗಳನ್ನು ಪ್ರಭುಸಮ್ಮಿತವಾಗಿ ನಿರೂಪಿಸುವ ವೇದಗಳಲ್ಲಿ ಶ್ರದ್ಧೆಯಿಟ್ಟು ಪ್ರವರ್ತಿಸುವುದೇ ಪ್ರಸ್ತುತವಾಗಿತ್ತು (ಶಾರದ. ೦೩೦). ೯. [ಸಂಗೀತ] ಶ್ರುತಿಗಮಕಗಳಲ್ಲಿ ಒಂದು ಬಗೆ: ಸ್ಫುರಿತ . . . ಪ್ರಸ್ತುತ . . . ಕೋಮಲವೆಂಬ ಯಿಪ್ಪತ್ತೆರಡೇ ಶ್ರುತಿಗಮಕಂಗಳು (ಶಿವೇಶ. ೨೩೩). [ಸಂ.]

**ಪ್ರಸ್ತುತಕಾಲ** (ನಾ). ಯೋಗ್ಯವಾದ ಕಾಲ; ತಕ್ಕ ಸಮಯ: ಜನನಪ್ರಸ್ತುತಕಾಲದೊಳ್ ಸ್ವಭವನದ್ರೇಕ್ಕಾಣ ವರ್ಗೋತ್ತಮಾಂಶ ನವಾಂಶೋಪಗತ ಸಕೃದ್ದ್ವಿಗುಣಮಂ . . . ಈಗುಂ (ಜಾತತಿ. ೬-೩). [ಸಂ.]

**ಪ್ರಸ್ತುತಮತಿ** (ನಾ). ಸಂದರ್ಭದ ಅರಿವಿರುವವನು: ಪ್ರಸ್ತುತಮತಿಯಾದ ಜನಮೇಜಯನಿಗೆ ತಟಕ್ಕನೆ ರಾಮಾಯಣದ ಆ ಕಥೆಯನು ಕೇಳುವ ಹಂಬಲ ಮೂಡುತ್ತದೆ (ಜಂಶೀ. ೦೨೯). [ಸಂ.]

**ಪ್ರಸ್ತುತಾಂಕುರ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು; ಒಂದು ಪ್ರಸ್ತುತ ವಿಷಯದ ವರ್ಣನೆಯಲ್ಲಿ ಮತ್ತೊಂದು ಪ್ರಸ್ತುತವಾದ ವಿಚಾರವು ಹೊರಹೊಮ್ಮುವುದು: ವರಪ್ರಸ್ತುತದೊಳು ಪ್ರಸ್ತುತವು ತೋರಲು ಉರೆ ಪ್ರಸ್ತುತಾಂಕುರವು (ಕುಶಂ. ೬೦). [ಸಂ.]

**ಪ್ರಸ್ತುತ್ಯ** (ಗು). ೧. ಹೊಗಳಿದ; ಕೀರ್ತಿಸಿದ: ಕಥೆಯುಂ ತದಾದಿಪುರುಷಪ್ರಸ್ತುತ್ಯಜನ್ಮಾಳಿಬಂಧುರಮೆಂದಂದೆ ಮದೀಯ ವಾಗ್ವಿಭವವಿನ್ಯಾಸಂ ಬಲಂಬೆತ್ತುದು (ಆದಿಪು. ೦-೨೫). (ನಾ). ೨. ಹೊಗಳಿಕೆಗೆ ಪಾತ್ರನಾದವನು; ಕೀರ್ತಿಶಾಲಿ: ಶ್ರೀವೀರನಾರಾಯಣಂ ವಿಸ್ತಾರೋಜ್ವಳಕೀರ್ತ್ತಿಸೌಯ್ಯ್ರನಿಳಯಂ . . . ದಾಯಾದಕೋಳಾಹಳಂ ಪ್ರಸ್ತುತ್ಯಂ ನಯನಾಭಿನನ್ದನೆಸೆದಂ ಶ್ರೀವೀರಭೂಪಾಳಕಂ (ಎಕ. VIII. ಷಾರ. ೯೬-೭: 1060); ಆಸ್ತೇಯಮಹಾವ್ರತಮಂ ಸಲಿಸಿಂ ಪ್ರಸ್ತುತ್ಯರೆನಿಪ್ಪವರಂ ನಿಲಿಸಿಂ (ಜೀವಸಂ. ೦೬೪-೩೨ ಟಳ). [ಸಂ.]

**ಪ್ರಸ್ಥ** (ಗು). ೧. ಮುನ್ನಡೆಯುವ; ಗಮಿಸುವ. ೨. ಇರುವ; ನೆಲಸುವ: 'ವನಪ್ರಸ್ಥ' ನೋ . (ನಾ). ೩. ಹೋಗಿ ಬರುವಿಕೆ; ಓಡಾಟ: ಅವರ ದೃಷ್ಟಿಯಲ್ಲಿ ಕುಡಚಿಯ ಸ್ಥಾನ ಇನ್ನಷ್ಟು ಉನ್ನತವಾಯಿತು. ಅವರ ಮನೆಯಲ್ಲಿ ಅವನ ಪ್ರಸ್ಥವು ವಿಶೇಷವಾಗಿ ಬೆಳೆಯಿತು (ತಮುಕೀ. ೯೩೨); ಮಹಾರಾಜರ ದರ್ಬಾರದಲ್ಲಿ ಅವನ ಪ್ರಸ್ಥ ಚನ್ನಾಗಿ ಬೆಳೆಯಿತು (ಗ್ರಾಮಾಯ. ೯೬೦). ೪. ಬೆಟ್ಟದ ಮೇಲಿನ ಸಮತಲಭೂಮಿ; ಸಾನು; ತಪ್ಪಲು: "ನಿತಂಬಃ, ಕಟಕಃ, ಸಾನುಃ, ಪ್ರಸ್ಥಃ, ತಟಂ, ಭೃಗುಃ– ಈ ೬ ತಪ್ಪಲ್" (ಹಲಾಯು. ೨೭–೧೨); ರಜತಾದ್ರಿಪ್ರಸ್ಥವೇದಿಕಾವಕಾಶಂ ಬಿಡಿದು . . . ಪಡುವಣ ಮ್ಲೇಚ್ಛಖಂಡಮಂ ಮೂವಳಸು ಬಳಸಿ ಸಾಧಿಸಿ (ಶಾಂತಿಪು. ೧೧–೯೨ ವ). ೫. ಬೆಟ್ಟದ ತುದಿ,—ಅಗ್ರಭಾಗ. ೬. ಹಿರಿಮೆ; ಔನ್ನತ್ಯ: ಬ್ರಾಹ್ಮಣ, ಬೌದ್ಧ ಹಾಗೂ ಜೈನಸಂಪ್ರದಾಯಗಳಲ್ಲಿ ಆಗ ತಮ್ಮ ತಮ್ಮ ಪ್ರಸ್ಥ ಬೆಳಸಿಕೊಳ್ಳುವ ಒಳಸಂಚುಗಳು ನಡೆದಿದ್ದುದು ಈ ಐತಿಹ್ಯಗಳಿಂದ ಸ್ಪಷ್ಟವಾಗುತ್ತಿದೆ (ಕರ್ನಾಟ. ೦೬೭). ೭. ವಂಶೂವತ್ತೆರಡು ಪಲಗಳ ಒಂದು ಅಳತೆ: ಮೃದ್ವಗ್ನಿಯಿಂದ ಪಾಕ ಮಾಡಿ ಶೋಧಿಸಿ ಆ ಘೃತದಲ್ಲಿ ದ್ರಾಕ್ಷಿ ಒಂದು ಪ್ರಸ್ಥ ಹಾಕಬೇಕು (ಕಲ್ಯ. ಹಂ. ೯೩೦). ೮. ಒಂದು ಕೊಳಗ ಅಥವಾ ಬಳ್ಳ; ಎಂಟು ಸೇರು: "ಬಳ್ಳದಲ್ಲಿ ಯುಂ ಪ್ರಸ್ಥಮೆಂಬುದು" (ಹಲಾಯು. ೦೩೩–೧೩); ಯಿದ್ದ ಪ್ರಸ್ಥಕ್ಕೆ ವಸು (ಚತು)ಸಾಸಿರ ? ತಿಪ್ಪಿದ ಕೊಳಗಕ್ಕೆ ಲಕ್ಷಗೂಡಿತ್ತೆರಡುಂ ಸಾಸಿರ ಬುದ್ಧಿಯ ಖಂಡುಗವೊಂದಕೆ ನಿರ್ಧರ ಮೂವತ್ತ ಎಂಟುಲಕ್ಷಸಾಸಿರ ಕಾಳಂ (ವೃವಹಾ. ಆಸುಂಆರ. ೦–೨); ಒಂದು ಸೊಲ್ಲಿಗೆಯೇ ನೀಟುಂಜವದು ನಾಲ್ಕು ಗಲೊಂದು ಟಿಡುಬವದು ನಾಲ್ಕಾಗಲೊಂದು ಪ್ರಸ್ಥವಾ ಪ್ರಸ್ಥವೆರಡಾಗ ಲೊಂದು ವಾಹ (ಏವೀಕ. ೬). [ಸಂ.]

**ಪ್ರಸ್ಥಪುಷ್ಪ** (ನಾ). ಸಂಪಾಸನೆಯ ಎಲೆಗಳುಳ್ಳ ಒಂದು ಬಗೆಯ ಪತ್ರೆ; ಮರುಗ: "ಸಮೀರಣಃ, ಮರುವಕಃ, ಪ್ರಸ್ಥಪುಷ್ಪಃ, ಫಣಿಜ್ಜಕಃ, ಜಂಬೀರಃ – ೫ ಮಗುವ, ಮರುಗದ ಹೆಸರು" (ನಿಘಂಟು. ೦೩೦). [ಸಂ.]

**ಪ್ರಸ್ಥಭೂಮಿ** (ನಾ). ಎತ್ತರವಾದ ಸಮತಲಭೂಮಿ: ವಿಶಾಲವಾಗಿ ಮೇಲ್ಮಟ್ಟ ಸಮವಾಗಿರುವ ಎತ್ತರ ಪ್ರದೇಶಕ್ಕೆ ಪ್ರಸ್ಥಭೂಮಿ ಎಂದು ಹೆಸರು (ಭೂಪರಿ. ೦೩೩); ಸಾಮಾನ್ಯವಾಗಿ ನದಿಯ ಬಯಲುಗಳು, ತೀರ ಪ್ರದೇಶಗಳು, ಪ್ರಸ್ಥಭೂಮಿಗಳೆಂದು ವಿಭಾಗ ಮಾಡಿದ್ದಾಗ್ಯೂ ಈ ದೇಶವು . . . ಭಿನ್ನಭಿನ್ನವಾಗಿಲ್ಲ (ಶಾಇತ್ರ. ೩) ; ಚೋಟಾನಾಗಪುರದ ಬಳಿಯ ಪ್ರಸ್ಥಭೂಮಿಯ ಹರವು (ಭ್ರಾ.ಭಿ. ೯೩೬). [ಸಂ.]

**ಪ್ರಸ್ಥಾನ** (ನಾ). ೧. ಪ್ರಯಾಣ; ಯಾತ್ರೆ; ಸಂಚಾರ: "ಯಾತ್ರಾ, ಪ್ರಯಾಣಂ, ಪ್ರಸ್ಥಾನಂ—ಈ ೩ ಪಯಣಂ" (ಹಲಾಯು. ೭೯–೨೯೬); ಹರಿಗಂಗುತ್ಸಾಹದಿಂ ಪಟ್ಟಬಂಧನಮಂ ಮಾಡುವಮಿಂದೆ ಹಸ್ತಿನಪುರ ಪ್ರಸ್ಥಾನಮಂ ಮಾಡುವಂ (ಪಂಪಭಾ. ೦೯–೦೦) ; ಭೀಮಂಗೆ ನೀಂ ಪಟ್ಟಬಂಧನಮಂ ಮಾಟ್ಟುದರ್ಕೆ ಹಸ್ತಿನಪುರಪ್ರಸ್ಥಾನಮಂ ಮಾಡುವಂ (ಗದಾಯು. ೦೦–೨೦) ; ಇನ್ನು ತಮ್ಮ ಮುಂದಿನ ಪ್ರಸ್ಥಾನದ ದಿನವನ್ನು ಅವರು ನಿರ್ಣಯಿಸಬೇಕಾಗಿತ್ತು (ಪಂಶಪ್ಪ. ೯೬೬). ೨. ಶತ್ರುಗಳನ್ನು ನಿಗ್ರಹಿಸಲು ಮಾಡುವ ಪ್ರಯಾಣ ; ದಂಡ ಯಾತ್ರೆ : ಪಳಿಕಿನ ಶಿಲಾಪಟ್ಟಂ ಪ್ರಸ್ಥಾನದೊಳ್ ವಿಜಯದ್ವಿಪಾವಳಿಯ ದರಿಗೊಂಡುದ್ದೇಶಂ ಚಕ್ರವರ್ತಿಯ ನಾಮದಗ್ಗಳದ ಸಿರಿಯುಂ ಪೋಲ್ವನ್ನಂ (ಶಾಂತಿಪು. ೦೦–೦೬) ; ತನ್ನ ವಜೀರನಿಗೆ ಆ ಮಂತ್ರಿಯು ತಕ್ಕ ಸತ್ಕಾರ ಮಾಡೆಂದು ಶಾಸನವಿರಿಸಿ ತಾನು ಪ್ರಸ್ಥಾನದ ಸಿದ್ಧತೆ ಮಾಡತೊಡಗಿದನು (ಕಗದ್ಯ. ೦೩). ೩. [ನಾಟ್ಯ] ಹದಿನೆಂಟು ಬಗೆಯ ಉಪರೂಪಕಗಳಲ್ಲಿ ಒಂದು; ಕೆಳವರ್ಗದ ನಾಟಕಗಳಲ್ಲಿ ಒಂದುಂ : ಉಪರೂಪಕಗಳು—೧. ನಾಟಿಕಾ . . . ೬. ಪ್ರಸ್ಥಾನ (ಸಂನಾಟ. ೩೨). [ಸಂ.]

**ಪ್ರಸ್ಥಾನಂಗೆಯ್** (ಕ್ರಿ). ಪ್ರಯಾಣ ಮಾಡು; ಯಾತ್ರೆ ಹೋಗು : ಆ ಸ್ಥಳದೊಳನ್ನೆಗಂ ದೇವಸ್ಥಪತಿ ನಿಜಾಜ್ಞೆಯಿಂದೆ ನಿರ್ಮಿಸುಗುಂ ರತ್ನ ಸ್ಥಗಿತಮೆನಲ್ ಪುರಮಂ ಪ್ರಸ್ಥಾನಂಗೆಯ್ಗ್ಗ ತಡೆಯದಲ್ಲಿಗೆ ಕಟಕಂ (ಅಗಂ. ೯–೨೩). [ಪ್ರಸ್ಥಾನ + ಕೆಯ್$_1$]

**ಪ್ರಸ್ಥಾನತೂರ್ಯ** (ನಾ). ಪ್ರಯಾಣ ಹೊರಡುವಾಗ ಮಾಡುವ ವಾದ್ಯಘೋಷ: ಅನಂತರಂ ವಸಂತವನಕೇಳೀಪ್ರಸ್ಥಾನತೂರ್ಯಂಗಳಂ ಪೊಯ್ಸಿದಾಗಳ್ (ಚಂದ್ರಪು. ೬–೬೬ ವ). [ಸಂ.]

**ಪ್ರಸ್ಥಾನತ್ರಯ** (ನಾ). ಬ್ರಹ್ಮಸೂತ್ರ, ಉಪನಿಷತ್ತುಗಳು ಮತ್ತು ಭಗವದ್ಗೀತೆಗಳೆಂಬ ಮೂರು ಪ್ರಮಾಣಗ್ರಂಥಗಳು : ಬ್ರಹ್ಮಸೂತ್ರ ಗಳು, ಉಪನಿಷತ್ತುಗಳು, ಭಗವದ್ಗೀತೆ ಎಂಬವು ಇಂದಿಗೂ ಪ್ರಸ್ಥಾನ ತ್ರಯಗಳೆಂದು ಪ್ರಸಿದ್ಧ (ಶಾಇತ್ರ. ೨೬೦) ; ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆ – ಈ ಮೂರೂ ಪ್ರಸ್ಥಾನತ್ರಯವೆಂದು ಹೆಸರು ಪಡೆದು ವೈದಿಕಧರ್ಮಕ್ಕೆ ಅತಿಪ್ರಮಾಣಗ್ರಂಥಗಳೆಂದು ನಿರ್ಧರಿತವಾಗಿದೆ (ಶಾಕರ. ೧೦೯). [ಸಂ.]

**ಪ್ರಸ್ಥಾನತ್ರಯಿ** (ನಾ). = ಪ್ರಸ್ಥಾನತ್ರಯ : ಕರ್ಮಮಾರ್ಗವೇ ಶ್ರೇಷ್ಠ ವೆಂದು ಪ್ರಸ್ಥಾನತ್ರಯಿಗಳಲ್ಲಿ ಒಂದಾದ ಗೀತೆಯೂ ಹೇಳಿದೆ (ಕಲಾಪ. ೦೦೦) ; ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆ- ಪ್ರಸ್ಥಾನತ್ರಯಿಗೆ ಟೀಕೆ ಬರೆಯದೆ ಆಚಾರ್ಯರಿಗೆ ಪ್ರಧಾನ್ಯ ದೊರೆಯುತ್ತಿರಲಿಲ್ಲ (ಕರ್ನಾಟ. ೩೦). [ಸಂ. ಪ್ರಸ್ಥಾನತ್ರಯೀ]

**ಪ್ರಸ್ಥಾನಪಾಂಶು** (ನಾ). (ರಥದ) ಚಲನೆಯಿಂದ ಉಂಟಾದ ಧೂಳು : ದಿನನಾಥರಥಪ್ರಸ್ಥಾನಪಾಂಶುಪಿನಿಸಿ ದಿಶಾಸ್ಥಗಿತಂ ರಂಜಿಸುತ್ತು ಸಂಧ್ಯಾ ರಾಗಂ (ಮಲ್ಲಿಪು. ೬–೧೦೩). [ಸಂ.]

**ಪ್ರಸ್ಥಾನಭೇರಿ** (ನಾ). ೧. ದಿಗ್ವಿಜಯಕ್ಕಾಗಿ ಕೈಗೊಂಡ ದಂಡಯಾತ್ರೆ ಗಳಲ್ಲಿ ಮಾಡುವ ವಾದ್ಯಘೋಷ : ವಿಜಯೋದ್ಯೋಗವನೆತ್ತಿಕೊಣ್ಣು ಪ್ರಸ್ಥಾನಭೇರಿಯಂ ಪೊಯ್ಸಿದುದು (ಶಾಇ. XX. ೯೯–೦೩ : 1076 ?) : ಅಪ್ಪುದಿಗ್ಭಿತ್ತಿಯುಂ ಧೀಂಕಿಟ್ಟತ್ತು ರಘುಪ್ರವೀರವಿಜಯಪ್ರಸ್ಥಾನಭೇರೀರವಂ (ಪಂಪರಾಮಾ. ೦೨–೦೭) ; ಮಗಧರಾಜಂ ಪ್ರಸ್ಥಾನಭೇರಿಯಂ ಪೊಯ್ಸೆಂದು ಸೇನಾಗ್ರಣಿಗೆ ಬೆಸಸಿದಾಗಳ್ (ಜಗಂ. ೬–೩೯ ವ). [ಸಂ. ಪ್ರಸ್ಥಾನಭೇರೀ]

**ಪ್ರಸ್ಥಾನಮಂಗಳ** (ನಾ). ಪ್ರಯಾಣಕ್ಕೆ ಹೊರಡುವ ಮೊದಲು ಮಾಡುವ ಮಂಗಳಕಾರ್ಯ : ಎಲೆ ಸಖಿ, ಏಳು ಏಳು ! ಶಕುಂತಳೆಯ ಪ್ರಸ್ಥಾನಮಂಗಳವನ್ನು ನೆರವೇರಿಸೋಣ (ಶಾಕುಂತ. ೯೯–೩೩). [ಸಂ. ಪ್ರಸ್ಥಾನಮಂಗಲ]

**ಪ್ರಸ್ಥಾನಶಿಬಿರ** (ನಾ). ಪ್ರಯಾಣಕಾಲದಲ್ಲಿ ತಂಗಲು ಏರ್ಪಡಿಸುವ ಬಿಡಾರ, – ವಿಶ್ರಾಂತಿಸ್ಥಳ : ಗೃಹಮಹತ್ತರಂ ಮುನ್ನಮೆ ಸಮೆದುದಂ ಪ್ರಸ್ಥಾನಶಿಬಿರಮಂ ಪೊಕ್ಕು (ಚಂದ್ರಪು. ೦೦–೧೭ ವ) ; ಆ ಪ್ರಸ್ಥಾನಶಿಬಿರದಿಂದಂ ತೆಳರ್ದಾಗಳ್ (ಜಾರಶ್ರ. ೦೦–೩೩ ವ). [ಸಂ.]

**ಪ್ರಸ್ಥಾಪಿಸು** (ಕ್ರಿ). ಪ್ರಚಾರಕ್ಕೆ ತರು ; ಪ್ರಚಲಿತಗೊಳಿಸು : ಸ್ವಾಮಿ ವಿವೇಕಾನಂದರು ಭಾರತೀಯ ಆಧ್ಯಾತ್ಮದ ಮೌಲ್ಯಗಳನ್ನು ಸಪ್ತಸಾಗರಗಳಾಚೆಯಲ್ಲಿ ಪ್ರಸ್ಥಾಪಿಸಿದರು (ಪ್ರಜಂರ. ೭೦) ; ಒಬ್ಬರಿಗೊಬ್ಬರು ತಮ್ಮ ಮತವೇ ಶ್ರೇಷ್ಠವೆಂದು ಪ್ರಸ್ಥಾಪಿಸಲು ಹೆಣಗುತ್ತಿದ್ದರು (ಶಾಹಿಕ. ೦೩೩). [ಸಂ. ಪ್ರಸ್ಥಾಪನ + –ಇಸು]

**ಪ್ರಸ್ಥಿತಿ** (ನಾ). ಮುನ್ನಡೆಯುವುದು ; ಸಂಚಾರ ; ಗಮನ. [ಸಂ.]

**ಪ್ರಸ್ಪರ್ಧಿ** (ಗು). ೧. ಪೈಪೋಟಿ ಮಾಡುವ ; ಸ್ಪರ್ಧಿಸುವ : ನೀಹಾರ ಪ್ರಸ್ಪರ್ಧಿ ಚಂಚಚ್ಚಮರಜಕಲಹಂಸಾಸ್ಪದಂ (ಅಂಪು. ೦೦–೦೯) ; ಮದನ ಪ್ರಸ್ಪರ್ಧಿಸೌಂದರ್ಯದೆ ನೃಪಸುತೆಯಂ ಸತ್ಕಳಾಜಾಳಚಾತುರ್ಯದೆ . . . ಎಜಗಿಸಿ (ಚಂದ್ರಪು. ೩–೦೩೯). (ನಾ). ೨. ಎದುರಾಳಿಯಾದುದು ; ಪ್ರತಿ

ಸ್ಪರ್ಧಿಯಾದುದಂ: ಪ್ರಕ್ಷುಬ್ಧಕಲ್ಲೋಲಕಲ್ಪಿತಕೋಲಾಹಲಕಲ್ಪಕಾಲರಭಸಪ್ರಸ್ಪರ್ಧಿಯಂ ವಾರ್ಧಿಯುಂ (ಕಾವ್ಯಸಾ. ೬೩). [ಸಂ. ಪ್ರಸ್ಪರ್ಧಿನ್]

**ಪ್ರಸ್ಫಾರ** (ಗು). ೧. ಹೊಳೆಯುವ : ಲೋಕೈಕಭೀಕರಮಾಟಂದುದು ನೀಲಮೇಘನಿಕಟಪ್ರಸ್ಫಾರದಂಭೋಳಿವೊಲ್ (ಕಥಾಪಾಪ. ೦೪-೦೭೪). ೨. ಉಬ್ಬಿದ; ಊದಿದ ; ಹಿಗ್ಗಿದ. ೩. ಅಹಂಕಾರವುಳ್ಳ. [ಸಂ.]

**ಪ್ರಸ್ಫುಟ** (ಗು). ೧. ಅರಳಿದ ; ವಿಕಾಸವಾದ. ೨. ಪ್ರಕಟವಾದ. ೩. ಸ್ಪಷ್ಟವಾದ ; ವ್ಯಕ್ತವಾದ. ೪. ಹೊಳೆಯುವ; ಪ್ರಕಾಶಿಸುವ ; ಬೆಳಗುವ : ವಿನುತಶ್ವೇತಾತಪತ್ರಾವಳಿಯರುಣಮಣಿಪ್ರಸ್ಫುಟೋತ್ತುಂಗಸಿಂಹಾಸನಮಂ . . . ತಂದರ್ (ಶಂಕಕಂ. ೨೨೩-೦೬) ; ಚೀನಚೇಲಾವೃತಮಧ್ಯಂ ಮಾಕ್ತಿಕಪ್ರಸ್ಫುಟಮಕುಟನುದಂಚಿತ್ಸುವರ್ಣೋರುವೇತ್ರಾಂಚಿತಹಸ್ತಂ ನಿಂದು ಕಣ್ಗೊಪ್ಪಿದಂ (ರಾಜಶೇ. ೦೯-೦೩೨). [ಸಂ.]

**ಪ್ರಸ್ಫುಟಿಸು** (ಕ್ರಿ). ವ್ಯಕ್ತವಾಗು ; ಪ್ರಕಟವಾಗು : ಈಶ್ವರಪ್ರಕೃತಿರೂಪಂ ಪ್ರಸ್ಫುಟಿಯಿಸೆಯಡೆಯ ಸತ್ಯಶಿವಸುಂದರದ ಸಚ್ಚಿದಾನಂದಸ್ವರೂಪಂ (ಶುರಚೀ. ೩೪-೦೦). [ಪ್ರಸ್ಫುಟ + — ಇಸು]

**ಪ್ರಸ್ಫುರಿತ**(ಗು). ೧. ನಡುಗುವ ; ಅದುರುವ; ಚಂಚಲವಾದ: ಪ್ರಸ್ಫುರಿತದಶನವಸನನುಮಾಗಿ (ಶಂಪ್ರಕೃ. ೭-೦೦೦ ಅ). ೨. ಹೊಳೆಯುವ ; ಪ್ರಕಾಶಿಸುವ : ಹೇಮಪ್ರಭಾಪ್ರಸ್ಫುರಿತ ಗಿರಿಶಚಂಚಜ್ಜಟಾಜಾಲಜೂಟವ್ಯೋಮಪ್ರೋದ್ಯಾಸಿಚಂದ್ರಂ ತ್ರಿಭುವನಜನಕಾನಂದಮಂ ಮಾಡುಗೆಂದುದು (ಕಾಶಂಪೂ. ೧); ಒಡಗೋಡು ಬಂವತತ್ಕಂತವಿಭವದಲಿ ಇರಿಸಿ ಕೃಷ್ಣಾಜಿನಕುಶಾಪ್ರಸ್ಫುರಿತಪೀಠದೊಳರ್ಘ್ಯವಾದ್ಯಾದ್ಯುರುಸಪರ್ಯಗಳಿಂದ ಸತ್ಕರಿಸಿದರು ಮುನಿವರನ (ತಿಪ್ಪುಕ್ರಿ. ೩-೬೩). ೩. ಚೆದರಿಸಿದ ; ಚೆಲ್ಲಾಪಿಲ್ಲಿ ಮಾಡಿದ: ಯುವತೀಸಂತಾನ ನಾನಾಚಲದಳಕಲಸಲ್ಲಾಸ್ಯಲೀಲಾಪ್ರಬದ್ಧಂ ವಿವಿಧಾಗಾರಾಂಗಣಪ್ರಸ್ಫುರಿತಕೃತಕಕಾಸಾರವಾನೀಯಭಂಗೋದ್ಯವಬಿಂದುವ್ರಾತಶೀತಾವರಣನೊಲವಿನಿಂ ತೀಡಿದಂ (೧೦೦೪. ೪-೦೦೯) ; ಕರಿ ಕೇಸರಿಯಂ ಕೆಣಕಿದ ಪರಿಯಿಂ ಪರುಟವಿಸದಿರ್ ಮದಾಂಧತೆಯಿಂದಾಂತರಿಬಲಬಲಾಹಕಪ್ರಸ್ಫುರಿತಮಹಾನಿಲನೊಳ್ (ಶಶಿಕಂ. ೪-೨೯). [ಸಂ.]

**ಪ್ರಸ್ಫುರಿಸು** (ಕ್ರಿ). ಶೋಭಿಸು ; ಪ್ರಕಾಶಿಸು : ಅವರ ಮನದಜ್ಞಾನಮಂ ಬಿಡಿಸಿ ಸಹಜವೆನಿಸುವವೇ ವಿಶೇಷವೆಂದೀರೈದುಭುಜಗಳಂ ತವೆ ಪಂಚಮುಖತ್ರಿಲೋಚನಗಳಂ ತೋಱಿ ಪ್ರಸ್ಫುರಿಸುತ್ತಲಿರ್ದನಯ್ಯಂ (ಗುರುಕಾ. ೩-೪). [ಪ್ರಸ್ಫುರಣ + — ಇಸು]

**ಪ್ರಸ್ಫೋಟನ** (ನಾ). ೧. ಅರಳುವಿಕೆ ; ವಿಕಸನ. ೨. ಬಿರಿಯುವುದು ; ಒಡೆಯುವುದು. ೩. ಕೇರುವುದು; ತೂರುವುದು. ೪. ಕೇರುವ ಸಾಧನ ; ಮೊರ : "ಪ್ರಸ್ಫೋಟನಂ, ಶೂರ್ಪ— ೨ ಮೊರ" (ಸಿದ್ಧಾಂಕಿ. ೨೫೦). [ಸಂ].

**ಪ್ರಸ್ಕಂದ** (ನಾ). ೧. ಸ್ರವಿಸುವುದು ; ಸೋರುವುದು; ಸ್ರಾವ. ೨. ಸ್ರವಿಸುವ ದ್ರವ ಕರಕಂಡಾತಕ್ಕೆ ಪುಟ್ಟಿದರ್ಬುಜಮೆನಿಸೆ ಲೀಲಾಂಬುಜಂ ತುಂಬಿ ಬಿಂಬಾಧರರಾಗಂ ಸೂಸಿತೆಂಬಂದದೊಳೆ ಪೊಳೆಯೆ ಕೆಂಬಲ್ಲಗೊಳ್ಗೆಂಪು ಪಾದಾಂಬುರುಹಪ್ರಸ್ಕಂದವೊಕ್ಕಂತಿರೆ (ರಾಜಶೇ. ೬-೩೨). [ಸಂ.]

**ಪ್ರಸ್ಕಂದಿ** (ಗು). ಸಂರಿಯುವ : ಅವಿರಳಪ್ರಸ್ಕಂದಿಬಾಷ್ಪೋದಕಾನನನಾ ಕಾನನದೊಳ್ತೊಟಲ್ದು ರಘುರಾಮಂ ಸೀದೆವಟ್ಟಿರ್ಪುದುಂ(ಶಂರಾಪತಾ. ೯-೦೨೦). [ಸಂ. ಪ್ರಸ್ಕಂದಿನ್]

**ಪ್ರಸ್ರವ** (ಗು). ೧. ಹರಿಯುವ ; ಸ್ರವಿಸುವ. (ನಾ). ೨. ಪ್ರವಾಹ. ೩. ಬೆಟ್ಟದ ಝರಿ ; ಅಬ್ಬಿ. ೪. ಮೂತ್ರ. [ಸಂ.]

**ಪ್ರಸ್ರವಣ** (ನಾ). ೧. ಬೆಟ್ಟದ ಝರಿ; ಒಜ್ಜರ; ಅಬ್ಬಿ: "ಒಜಿತೆವೊಜ್ಜರಪ್ರಸ್ರವಣಮನಿಕಂ" (ಶುಂಗಲಾ. ೦೨೪-೦೩) ; ಪರ್ವತ ಪ್ರಾಂತಾದ ಎತ್ತರವಾದ ಪ್ರದೇಶದಿಂದ ಜಿನುಗಿ ರಿದು ಬರುವ ನೀರು ಪ್ರಸ್ರವಹಣವು (ಆರ್ಹೊ. ೦೬೬). ೨. ಜಲಪಾತ : ವಿವಿಧಗುಲ್ಮನಿಕುಂಜದಲಿ . . . ಪವನನಿಸ್ವನಪರ್ಣರವಪ್ರಸ್ರವಣಧಾರಾಧ್ವಾನಖಗಮೃಗನಿವಹನಿನದದಲಚಿಸಿ ನೋಡಿದರಿವರು ಜಾನಕಿಯ (ತೊರಾ. ೩-೦೦-೬೨) ; ಪ್ರಸ್ರವಣಸ್ಥಾನವು ಪ್ರಸ್ರವಣಗಳಿರುವ ಗಿರಿದುರ್ಗಪ್ರದೇಶದ ನಿವಾಸಿಗಳಿಗಲ್ಲದೆ ಮೈದಾನದಲ್ಲಿರುವವರಿಗಲ್ಲ (ಆರ್ಹೊ. ೩೦). ೩. ನೆಲದೊಳಗಿಂದ ಉಕ್ಕಿ ಬರುವ ನೀರು; ಬುಗ್ಗೆ ; ತಲಪರಿಗೆ ; ಊಟೆ. ೪. ಬೆವರು ; ಸ್ವೇದ. ೫. ಮೂತ್ರವಿಸರ್ಜನೆ. [ಸಂ.]

**ಪ್ರಸ್ರಾವ** (ನಾ). ೧. ಹರಿಯುವಿಕೆ ; ಸ್ರವಿಸುವಿಕೆ. ೨. ಮೂತ್ರ : "ಮೂತ್ರಂ, ಪ್ರಸ್ರಾವಃ— ೨ ಮೂತ್ರದ ಹೆಸರುಗಳು" (ಸಿದ್ಧಾಂಕಿ. ೦೬೬). [ಸಂ.]

**ಪ್ರಸ್ವಾಪನ** (ನಾ). ೧. ನಿದ್ರಿಸುವಂತೆ ಮಾಡುವುದು; ನಿದ್ರೆಯನ್ನುಂಟುಮಾಡುವುದು. ೨. ಜೃಂಭಕ, ಪ್ರಸ್ವಾಪನ, ಅಪ್ರತಿಹತ, ನಿಶ್ಶೇಷೀಕರಣ, ಜೀವಗ್ರಾಹಗಳೆಂಬ ಐದು ಬಗೆಯ ಮಂತ್ರಗಳಲ್ಲಿ ಒಂದು ; ಎದುರಾಳಿಗೆ ನಿದ್ರೆಯನ್ನುಂಟುಮಾಡುವ ಒಂದು ಮಂತ್ರ: ಜೃಂಭಕ ಪ್ರಸ್ವಾಪನ ಅಪ್ರತಿಹತ . . . ಎಂಬ ಪಂಚಶಕ್ತಿಯ ಮಂತ್ರಗಳಂ (ಶಿವೀಳ. ೫೦). [ಸಂ.]

**ಪ್ರಸ್ವಿನ್ನ** (ಗು). ಚೆನ್ನಾಗಿ ಬೆವತಿರುವ : ದೀನಂ ವಿವರ್ಣವದನಂ ಕೃಶಂ ದಿಂಡುರುಳಿ, ಪ್ರಸ್ವಿನ್ನಚೀರವಲ್ಕಲಜಟಾಜಟಿಲನಂ ಕಷ್ಟದಿಂ ಗುರುತಿಸಿ (ಶ್ರೀರಾಪಾ. ೦೬೪ ೩೨೬). [ಸಂ.]

**ಪ್ರಸ್ವೇದ** (ನಾ). ೧. ಅತಿಯಾದ ಬೆವರು : ಆಮರಣಮುಸ್ನಾನವ್ರತಮಂ ತಾಳ್ದಿದನುಂ ರವಿಕಿರಣಪ್ರತಾಪಜನಿತಪ್ರಸ್ವೇದಾಕುಲಪವನಾನೀತಪಾಂಶುನಿಚಯನುಂ . . . ಅಪ್ಪ ಜಿನಮುನಿಗೆ ಮಲಪರೀಷಹಜಯಂ ಅಱಿಯೆಪಡುಗುಂ (ಶತ್ನ್ಯಕ್ರಿ. ೩೩೬). ೨. ಆನೆ. [ಸಂ.]

**ಪ್ರಹತ** (ಗು). ೧. ಹೊಡೆದ ; ಬಾಜಿಸಿದ : ಮೌಹೂರ್ತಿಕಗಣನಿರೂಪಿತಪ್ರಶಸ್ತಮುಹೂರ್ತದೊಳತಿಪ್ರಮೋದನಿರ್ಭರಪ್ರಣಯಪ್ರಹತಮಂಗಳಪಟಹರವಂಗಳುಂ . . . ಅಂತಃಪುರಜನಾಶೀರ್ವಾದಕೋಳಾಹಳವುಂ ಮಸೆಯೆ (ಆದಿಪು. ೪-೯೬ ವ). ೨. (ಚಪ್ಪಾಳೆಯಂತೆ) ತಟ್ಟಿದ : ತಾಳತತ್ಪರ ಶಿಶುನರ್ತನ ಪ್ರಹತಕಂಣರಥುಂಕೃತಹಸ್ತತೂರ್ಯಸುಂದರರವದಿಂದದಂ ಮಱಿಸಿದಳ್ ಗಡ ಮುಗ್ಧೆಯದೇಂ ವಿದಗ್ಧೆಯೋ (ಕಾಂತಿಪು. ೬-೬೩). ೩. ಹೊಡೆತ ತಿಂದ ; ಗಾಯಗೊಂಡ. ೪. ಸೋತ ; ಅಪಜಯ ಹೊಂದಿದ. ೫. ಹರಡಿದ; ವಿಸ್ತಾರಗೊಂಡ. ೬. ಅರಿತ; ತಿಳಿದಿರುವ. (ನಾ). ೭. ತಿಳಿದವನು ; ಪ್ರಾಜ್ಞ ; ಜ್ಞಾನಿ : "ವ್ಯುತ್ಪನ್ನಃ, ಪ್ರಹತಃ, ಕ್ಷುಣ್ಣಃ, ಸಂಸ್ಕೃತಃ — ಈ ೪ ಪಂಡಿತಂ" (ಕರಾಯು. ೩೬-೦೯೬). [ಸಂ.]

**ಪ್ರಹತಿ** (ನಾ). ಹೊಡೆತ ; ಏಟು ; ಪೆಟ್ಟು : ನೀಂ ಕರಲ್ಗೆ ವೋಣ್ಪ ಹತಿಯನಾನದೆಯ್ದುವೆಯದೆಂತೆಲೆ ತೀರ್ಚದೆ ನಿನ್ನನಿರ್ಪನೇ (ರಾಜಶೇ. ೬-೪೦). [ಸಂ.]

**ಪ್ರಹತಿಸು** (ಕ್ರಿ). ೧. ಹೊಡೆ ; ಏಟು ಕೊಡು ; ಪೆಟ್ಟು ಹಾಕು. ೨. ನಾಶ ಮಾಡು : ಶರತ್ಕಾಲದವೊಲ್ ಪ್ರಹತಿಸುಗೆ ಸಮುಗ್ರಪಂಕಮಂ ಸುಜನೌಘಂ (ಶಾರಪು. ೦-೩೦). [ಪ್ರಹತ + — ಇಸು]

**ಪ್ರಹರ** (ನಾ). ೧. ಹೊಡೆತ ; ಏಟು ; ಪೆಟ್ಟು ; 'ಪ್ರಹರಿಸು' ಪರಾ. ೨. ನಿವಾರಣೆ ; ನಾಶ : ದುಸ್ತರಜ್ಞಾನಪ್ರಪಂಚತಮಸ್ತತಿಪ್ರಹರಾರ್ಥದತ್ತಪ್ರಸ್ತುತಜ್ಞಾನ (ಬಸವು. ೬-೪೯). ೩. ಒಂದು ದಿವಸದ ಎಂಟನೆಯ ಭಾಗ ; ಜಾವ ; ಯಾಮ : "ಪ್ರಹರಃ, ಯಾಮಃ — ಈ ೨ ಜಾವಂ" (ಕರಾಯು. ೦೮-೦೦೬) ; ಎರಡನೆಯ ಪ್ರಹರದ

ರಕ್ಷಕರು ಬರುವುದರೊಳಗಾಗಿ ಇವರು ತಮ್ಮ ಕಾರ್ಯಸಾಧನೆ ಮಾಡಿಕೊಳ್ಳಬೇಕಾಗಿತ್ತು (ಕಾಂಕರಾ.೨೨೬); ಜೈಲಿನಲ್ಲಿ . . . ಎಂಟೂ ಪ್ರಹರ ಮತ್ತು ಅರವತ್ತ ನಾಲ್ಕುಗಳಿಗೆಯಲ್ಲೂ ಹೃದಯದಲ್ಲಿ ಅಂಕಿತವಾದ ನಿನ್ನ ಮೂರ್ತಿಯ ದರ್ಶನ ಮಾಡುತ್ತಲೇ ಇದ್ದೆ (ಶ್ರೀಕಾಶ. ೦೬೩). [ಸಂ.]

**ಪ್ರಹರಣ** (ನಾ). ೧. ಹೊಡೆತ ; ಏಟು ; ಪೆಟ್ಟು : ರಣಾಂಗಣದಂತೆ ಚಮೂರಚಿತಪ್ರಹರಣವಿಶೀರ್ಣರೂಪವಮುಂ (ಚಂದ್ರಪ್ರ. ೩-೩೨ ವ). ೨. ಗದಾಯುದ್ಧದ ಒಂದು ವರಸೆ : ವಿಳಂಬಿತಮಾಂಚಿತಮಾಸ್ಫೋಟಿತ ಮಾಕ್ಷಿಪ್ತಮುದ್ಭ್ರಾಮಿತಂ ದಿಗ್ಭ್ರಾಮಿತಮುಚಿತವಿರುದ್ಧಮಚಿಂತ್ಯಮು ಮೆಂಬೆಂಟುಂತೆಱದ ಪ್ರಹರಣಂಗಳೊಳಂ ಅತಿಪರಿಚಿತರಾಗಿ(ಗದಾಯು. ೬-೦೮). ೩. ಯಾವುದಾದರೊಂದು ವಾದ್ಯದ ಬಾಜನೆ, –ವಾದನ : ಪ್ರಹರಣ ಮಿಂಪಂ ಪಡೆದಿರೆ ಸುರವಧು ಮೃದಂಗಮಂ ಬಾಜಿಸಿದಳ್ (ಚಂದ್ರಪ್ರ. ೦೦-೦೬೩). ೪. ಎಸೆಯುವುದು ; ಬಿಸಾಡುವುದು. ೫. ಆಕ್ರಮಣ : ಕ್ಷತ್ರಿಯಜಾತಿಗೆ ಸತ್ಯ ತ್ಯಾಗ ಪ್ರಜಾಪಾಲನ ಶರಣಾಗತ ರಕ್ಷಣಪ್ರಹರಣಕ್ಷಮಾದಿ ಗುಣಾಚರಣಮುಮಂ . . . ನಿಜಿಸಿ (ಅಂತ್ಯ. ೬-೭೩ ವ). ೬. ನಿವಾರಿಸುವುದು ; ತೆಗೆದುಹಾಕುವುದು. ೭. ಆಯುಧ; ಶಸ್ತ್ರ : "ಹೇತಿಃ , ಶಸ್ತ್ರಂ, ಪ್ರಹರಣಂ, ಆಯುಧಂ, ಅಸ್ತ್ರಂ–ಈ ೫ ಕೆಯ್ದು" (ಹಲಾಯು. ೭೬-೩೦೬). ೮. ಕಾಳಗ; ಯುದ್ಧ: "ಸಂಗ್ರಾಮಃ . . . ಪ್ರಹರಣಂ . . . ವಿಗ್ರಹಃ–ಈ ೩೫ ಕಾಳೆಗಂ " (ಹಲಾಯು. ೭೩- ೨೯೯); ಅರವಿಂದಬಾಂಧವತನೂಜನ ಮಹಾಪ್ರಹರಣಹತಿಯೊಳ್ ಯಮನಂದನನ ನೆಃವುಮನಾತ್ಮೀಯಬಲದ ನಾಯಕರ ಸಾವು ಮನಱಿದು (ಪಂಪಭಾ. ೦೨-೦೨೦ ವ). [ಸಂ.]

**ಪ್ರಹರಣಕಲಿಕ** (ನಾ). [ಛಂದ] ಪಾದವೊಂದಕ್ಕೆ ಹದಿನಾಲ್ಕು ಅಕ್ಷರಗಳನ್ನುಳ್ಳ, ಪ್ರತಿಸಾಲಿನಲ್ಲಿಯೂ ನನಭನಲಗವೆಂಬ ಗಣಗಳೂ ಒಂದು ಲಘು ಮತ್ತು ಒಂದು ಗುರುವೂ ಇರುವ, ಶಕ್ವರೀ ಛಂದಸ್ಸಿನ ಒಂದು ವೃತ್ತ : ನನಭನಲಗಮೆಂಬಿವು ಗಣನಿವಹಂ ಜನಿಯಿಸಿ ಯತಿ ನಿಲ್ವಿರೆ ಹಯತತಿಯೊಳ್ ನಿನಗಿದನಱಿವಂತಿರೆ ವಿರಚಿಸಿದೆಂ ವನರುಹವದನೇ ಪ್ರಹರಣಕಲಿಕಂ [ಪಾಠಾಂ. ತಂ] (ಛಂದೋಂಬು.೨-೦೯೭). [ಸಂ. ಪ್ರಹರಣಕಲಿಕಾ]

**ಪ್ರಹರಣಶ್ರಮ** (ನಾ) ೧. ಇತರರನ್ನು ಹೊಡೆದು ಆಯಾಸ ಪಡಿಸುವುದು, –ನೋಯಿಸುವುದು. ೨. ಆಯುಧಗಳಿಂದ ಮಾಡುವ ವ್ಯಾಯಾಮ ; ಶಸ್ತ್ರಾಭ್ಯಾಸ . ೧, ೨ : ಪ್ರಹರಣಶ್ರಮಂ ಖುರಳಿಯೊಳ್ ಮುಖರತೆ ಪುರ್ರ್ರುತ್ಪ್ರ್ವಿಯೊಳ್ . . . ಅಲ್ಲದಿಲ್ಲಮೆಲ್ಲಿಯುಂ (ಚಂದ್ರಪ್ರ. ೩-೯ ವ). [ಸಂ.]

**ಪ್ರಹರಣೆ** (ನಾ). = ಪ್ರಹರಣ ೧ : ಅತ್ಯುಕ್ಕತ್ವಂ—ಅರ್ಕೆ-–ಎರ್ಕೆ... ಪ್ರಹರಣ—ಪ್ರಹರಣೆ (ಶಮದ. ೨೭೬ ಪ್ರಯೋ). [ಸಂ. ಪ್ರಹರಣ]

**ಪ್ರಹರಿ** (ನಾ). (ಸರದಿಯಂತೆ) ಕಾಯುವವನು ; ಕಾವಲುಗಾರ : ನವಕುಮಾರನು. . .ಕಪಾಲಕುಂಡಲೆಗೆ ಸಲುವಾಗಿ ಒಬ್ಬ ದಾಸಿಯನ್ನೂ ಒಬ್ಬ ಪ್ರಹರಿಯನ್ನೂ. . . .ಕಳುಹಿದನು (ಕಪಾಕುಂ. ४೦). [ಸಂ. ಪ್ರಹರಿನ್]

**ಪ್ರಹರಿಣಿ** (ನಾ). [ಜೈನ] ಮಂತ್ರದ ಸಹಾಯದಿಂದ ಪೆಟ್ಟು ಕೊಡುವ ಒಂದು ವಿದ್ಯೆ : ಪ್ರಮೋಹಿನಿ ಪ್ರಹರಿ [ಪಾಠಾಂ. ರ]ಣಿ ಸಂಕ್ರಮಣ. . . ಆಭೋಗಿನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಚಾಪುಂಪು. ೧೯೩). [ಸಂ. ಪ್ರಹರಿಣೀ]

**ಪ್ರಹರಿಸು** (ಕ್ರಿ). ೧. ಹೊಡೆ ; ಏಟು ಹಾಕು : ಸ್ವಾಧೀನವಾಗದಿದ್ದರೆ ಶೂಲಗಳಿಂ ಪ್ರಹರಿಸುತ (ಚೌಗಂಧಿ.೨೧೨-೩) ; ಅವರು ಅವನನ್ನೂ ಅವನ ಕುದುರೆಯನ್ನೂ ದೊಣ್ಣೆಯಿಂದ ಪ್ರಹರಿಸುತ್ತಿದ್ದರು (ಮರೆಪಾ. ೦೬೩). ೨. ನಾಶಪಡಿಸು ; ನಾಶ ಮಾಡು : ಮಹಿಸು ಕೆಲಭಾರಗಳ ; ಸಹಿಸು ಕೆಲನೋವುಗಳ ಪ್ರಹರಿಸರಿಗಳನಿತುಯುಕ್ತಗಳನರಿತು (ಹಂಸಾಳಿ. ೧೦೯). [ಪ್ರಹರ + – ಇಸು]

**ಪ್ರಹರ್ಷ** (ನಾ). ಅತಿಶಯವಾದ ಆನಂದ ; ಸಂತೋಷ. [ಸಂ.]

**ಪ್ರಹರ್ಷಣ** (ನಾ). ೧. ಬುಧಗ್ರಹ. ೨. ಅತಿಶಯವಾದ ಆನಂದ , –ಸಂತೋಷ. ೩. ಅತಿಶಯವಾದ ಸಂತೋಷವನ್ನುಂಟು ಮಾಡುವುದು. ೪. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು; ☛ ಇದು ೧. ಯತ್ನವಿಲ್ಲದೆ ಅಪೇಕ್ಷಿತ ಫಲಸಿದ್ಧಿ. ೨. ಅಪೇಕ್ಷಿತಕ್ಕಿಂತಲೂ ಅಧಿಕ ಫಲಸಿದ್ಧಿ. ೩. ಫಲಸಿದ್ಧಿಗಾಗಿ ಉಪಾಯವನ್ನು ಹುಡುಕುವ ಪ್ರಯತ್ನದಿಂದಲೇ ಫಲಪ್ರಾಪ್ತಿ–ಎಂದು ಮೂರು ವಿಧ : ಮನದಲ್ಲಿ ಘನೇಚ್ಛೆ ಪ್ರಯಾಸವಿಲ್ಲದಲೆ ಅನುಕೂಲವಾಗೆ ಪ್ರಹರ್ಷಣಾ ಇನಿಯನಲ್ಲಿಹ ದೂತಿಕೆಯನು ಧ್ಯಾನವ ಮಾಡೆ ವಿನಯದಿ ಬಂದಳು ತಾನೇ (ಕುವಲ. ೦೨೩-೦); ಮನದಲ್ಲಿಚ್ಛೆಯು ಪ್ರಯತ್ನ ಮಾಡದೆ ಸಿದ್ಧವಾದಡೆ ಪ್ರಹರ್ಷಣವೆನಿಸುವುದು (ಕುವಲ. ೦೨೩-೦ಟಿಪ್ಪಣಿ). ೫. [ಛಂದ] ಪಾದವೊಂದಕ್ಕೆ ಹದಿಮೂರು ಅಕ್ಷರಗಳನ್ನುಳ್ಳ, ಪ್ರತಿಸಾಲಿನಲ್ಲಿಯೂ ಮನಜರಗ ಗಣಗಳೂ ಒಂದು ಗುರುವೂ ಇರುವ, ಅತಿಜಗತಿಛಂದಸ್ಸಿನ ಒಂದು ವೃತ್ತ : ಕಣ್ಗೊಪ್ಪಲ್ ಮನಜರಗಂ ಪ್ರಹರ್ಷಣಂ ತಾಂ (ಛಂಶಾ. ೬೨). [ಸಂ.]

**ಪ್ರಹಸನ** (ನಾ). ೧. ಬಹಳವಾದ ನಗು ; ಅತಿಯಾದ ನಗೆ ; ಅಟ್ಟಹಾಸ. ೨. ನಗಿಸುವುದು: ನೃಪಸೇವನಾಪ್ರಹಸನಪ್ರಾವೀಣ್ಯಮುಂ ಬುದ್ಧಿವರ್ಧನಮುಂ ಮಾಸರಮಲ್ಲುಮ್ಯಂದವದಶೋಕಾರೋಹಗೇಹಂಗಳೊಳ್ (ಪಾಕಅ. ६-೨೩). ೩. [ಕಾವ್ಯಮೀ] ಹತ್ತು ಬಗೆಯ ರೂಪಕಗಳಲ್ಲಿ ಒಂದು ವಿಧ ; ಕೆಳವರ್ಗದ ನಾಟಕಗಳಲ್ಲಿ ಒಂದು ; ಆಧುನಿಕಸಾಹಿತ್ಯದ ಹಾಸ್ಯನಾಟಕ ; ☛ ಇದು ಇಂಗ್ಲಿಷಿನ 'Farce' ಎಂಬುದರ ಅನುವಾದ : ಪ್ರಹಸನ _ ಇದರ ವಸ್ತು ಕಲ್ಪಿತ ಮತ್ತು ಕೀಳುಜನರ ಚರಿತ್ರೆ ; ಹಾಸ್ಯಪ್ರಧಾನ ರಸ ; ಸಂಧಿ, ಸಂಧ್ಯಂಗ, ಲಾಸ್ಯಾಂಗ,ಅಂಕ ಇವು ಭಾಣದಲ್ಲಿರುವಂತೆಯೇ ; ವೀಥ್ಯಂಗಗಳು ಇರುವುದೂ ಉಂಟು ಇಲ್ಲದ್ದೂ ಉಂಟು ಆರಭಟೀವೃತ್ತಿಯಾಗಲಿ , ವಿಷ್ಕಂಭಕ ಪ್ರವೇಶಕಗಳಾಗಲಿ ಇಲ್ಲ (ಸಂಪಾಶಿ. ೩೦) ; ನಾಟಕ, ಪ್ರಕರಣ, ಭಾಣ ಪ್ರಹಸನ. . . ಈಹಾಮೃಗ ಎಂಬುದಾಗಿ (೧೦) ದಶರೂಪಕಗಳಿರುವುವು (ಕಾಕಶ. ९४९). [ಸಂ.]

**ಪ್ರಹಸನಶೀಲ** (ನಾ). ನಗುವ ಸ್ವಭಾವದವನು : ತುಹಿನಾಂಶು ಕೂಡಿರೆ ಝಷಗೃಹದೊಳ್ ಬುಧ ಜೀವ ಶುಕ್ರರೀಕ್ಷಿಸುವೊಡಮ ಪ್ರಹಸನಶೀಲಂ (ಜಾತಕ. ೨೦-೦೨). [ಸಂ.]

**ಪ್ರಹಸಿತ** (ಗು). ೧. ನಗುವ ; ಹರ್ಷಿಸುವ ; ಆನಂದಿಸುವ. ೨. ನಗುವಿನಿಂದ ಕೂಡಿದ : ಪ್ರಹಸಿತವದನನಾಗಿ ಪೇಚರರೆಂದೆರಲೆಗಳಂ ನಿಪಾತಿಸಲ್ಕೆನಗೆ ವಿದ್ಯೆಯುಂ ದೇಟುಮೆ ಎಂದೊಲ್ಲದೆ (ಶಬ್ದಾ. ೬೦-೬) ; ಕಿಂಚಿತ್ಪ್ರಹಸಿತಾನನವನಜನಾಗುತ (ಅಶಪ್ರ. ९೩-೬೩). [ಸಂ.]

**ಪ್ರಹಸ್ತ** (ನಾ). ೧. ಚಾಚಿದ ಕೈ; ನೀಡಿದ ಹಸ್ತ : ಅಂತು ಸಮುಚಿದ ಸಂಗ್ರಾಮರಂಗದೊಳ್ ವರಸ್ತರವಿರೋಧಕ್ರೋಧವಿಕ್ಷೇಪಹರ್ಷಿತಮಾರ್ಗ ಪ್ರಹಸ್ತಪ್ರಾಸಾಧಿತಘೋರಸಂಗ್ರಾಮರುಂ (ಪಂಪಭಾ. ೦೩-೪೨ ವ). ೨. ಒಬ್ಬ ರಾಕ್ಷಸನ ಹೆಸರು ; ರಾವಣನ ಮಂತ್ರಿಗಳಲ್ಲಿ ಒಬ್ಬ: ಅರೆಮಗಿದಿರ್ಚುವರ್ ಸಮರಾರಂಭಕ್ಕಾಮೆ ಮುಖ್ಯನಾಯಕರೆನುತ್ತಾರಂ ಮುನ್ನಂ ಸೆರಗಂ ಪಾರದೆ ಹಸ್ತಪ್ರಹಸ್ತರುಱದೊಡ್ಡಿರ್ದರ್ (ಪಂಪರಾಮಾ. ೦೩-೦೨). [ಸಂ.]

**ಪ್ರಹಾರ** (ನಾ). ೧. ಹೊಡೆಯುವಿಕೆ ; ಪೆಟ್ಟು ಕೊಡುವುದು. ೨. ಹೊಡೆತ ; ಏಟು ; ಪೆಟ್ಟು : ಅನ್ಯಶರಪ್ರಹಾರಜರ್ಜರಿತಶರೀರನಾಗಿ (ಗದಾಯು.-೯-೩೩) ; ನಖಪ್ರಹಾರಭರದಿಂದ್ಯೆದಾಱಿ. . . ಏಣಶ್ರೇಣಿಯಂ ವಾಯ್ದು ಕೊಂದುದು (ಭುಕ್ಕ.ಕೃ. ೩-೭೧), ಭೀಮ. . .ಮೇಲಾಳ ಮುಱಿದನು ವಿವಿಧಶಸ್ತ್ರಾಸ್ತ್ರಪ್ರಹಾರದಲಿ (ಕುಮಾ.ಭಾ. ೧೦-೦೬). [ಸಂ.]

**ಪ್ರಹಾರತ್ರಯ** (ನಾ). [ಸಂಗೀತ] ಸಮ, ವಿಷಮ ಮತ್ತು ಸಮ ವಿಷಮಗಳೆಂಬ ಮೂರು ಬಗೆಯ ವಾದ್ಯಬಾಜನಗಳು : ಸಮ ಪ್ರಹಾರ ವಿಷಮಪ್ರಹಾರ ಸಮವಿಷಮಪ್ರಹಾರಮೆಂಬ ಪ್ರಹಾರತ್ರಯ ದೊಳಂ (ಅಕ.ಕೃ. ೩-೩೨ ವ). [ಸಂ.]

**ಪ್ರಹಾರಿ** (ನಾ). ನಾಶಪಡಿಸುವವನು; ಪರಾಕ್ರಮಿ : ಸೂರ್ವಕಪ್ರಹರ ಪ್ರಹಾರಿಗೆ ದರ್ಪಿತ ತ್ರಿಪುರೇಂದ್ರನಾಗ್ನಿಗಪರ್ವತಿಪ್ರಣುತ ಪ್ರಭಾವಮಯ ದಿವ್ಯದೇಹಂಗೆ. . . ಅರ್ಪಿಸುವೆನಿಂದುಗ್ರಗರಳವ (ಬಸಕು. ೩೬-೯೧). [ಸಂ. ಪ್ರಹಾರಿನ್]

**ಪ್ರಹಾರಿಸು** (ಕ್ರಿ). ಹೊಡೆ; ಏಟು ಕೊಡು; ಪೆಟ್ಟು ಹಾಕು : ನಾನಾ ಯುದ್ಧಂಗಳಿಂದಂ ಪ್ರಹಾರಿಸುವ ಸುಭಟಾನೀಕದಬ್ಬರದ. . .ಅನೂನಸಂಭ್ರಮ ದಿಂದೆ ಕಲ್ಯಾಣಪಟ್ಟಣದ ಪೊಱವೊಳಲ್ ಮೆಱೆದುದು (ಕಂಪು. ೧೧-೭೧); ಖುರದಿಂ ಪ್ರಹಾರಿಸಲ್ ಸೀಳ್ದುದಮ ಸಕ್ಕಸಮಮಾಗಿ (ಕಂಪು. ೯೯-೨೩). [ಪ್ರಹಾರ + — ಇಸು]

**ಪ್ರಹಿ** (ನಾ). ಬಾವಿ : "ಅಂಧುಃ, ಪ್ರಹಿಃ, ಕೂಪಃ, ಉದಪಾನಂ – ೪ ಸೇದುವ ಭಾವಿಯ ಹೆಸರುಗಳು'' (ಸಿಕ್ಕಾ.ಶಿ. ೮೩). [ಸಂ.]

**ಪ್ರಹಿತ** (ಗು). ೧. ಇಟ್ಟ; ಇರಿಸಿದ : ಏಕಿಲ ಭರದೆ ಪಡಲ್ವಟ್ಟು ಗೇಣಾಗಿ ಪಾಂಥರ್ತೊಡೆ ತೋಳ್ಗಳ್ಕೂಡೆ ಜಾನುಪ್ರಹಿತಶಿರರದೇಸಿರ್ದರೋ ಶೀತ ಭೀತರ್ (ಶಾಶಿ. ೯-೨೨). ೨. ಕಳುಹಿಸಿದ : ಅಮರಾಧಿಪಪ್ರಹಿತ ಸುರತರುಪ್ರಸೂನಗ್ರಥಿತಸುರಭಿದಾಮದುಕೂಲಾಂಬರಮಣಿಭೂಷಸುರಭಿ ವಿಲೇಪನಪ್ರಮುಖಭೋಗೋಪಭೋಗಂಗಳೊಳಂ (ಅಂಕು. ೬-೩ ವ). ೩. (ಬಾಣದಂತೆ) ಬಿಟ್ಟ; ಪ್ರಯೋಗಿಸಿದ. [ಸಂ.]

**ಪ್ರಹುಡ** 'ಪ್ರವುಡ' ನೋ.

**ಪ್ರಹುಡಿ** (ನಾ). ನೈಪುಣ್ಯ; ಪಾಂಡಿತ್ಯ ; ಪ್ರೌಢಿ : ಕಂಡೆವೈ ಕೌಣಪನ ಸಾಹಸತಂಡವನು ಪುಸಿಯಲ್ಲ ಪ್ರಥಮದಿ ಚಂಡ ಚಾಮುಂಡರಿಗೆ ನಮ್ಮಿಂದ ಳಿಯದುದ್ಗಡದಖಂಡವರಗಳಸಿತ್ರಿಂಸ್ನೇನಂಡಿಸಿಕೆ ಮಾರ್ಗವನು ಬಿಡುವದೆ ಪಂಡಿತತ್ವದ ಪ್ರಹುಡಿ (೬೦೬೩ಾ. ೦೭-೬೩). [<ಸಂ. ಪ್ರೌಢಿ]

**ಪ್ರಹುಡಿಕಾಱ** (ನಾ). ನೈಪುಣ್ಯವುಳ್ಳವನು ; ನಿಪುಣ : ಲೆತ್ತ ಪಗಡೆ ಜೂಜು ಪ್ರಹುಡಿಕಾಱರೊಳುಬ್ಬಿ ಚಿತ್ರವಿಭ್ರಮಿತರಾಗಿಹರು [ಶಾಶಾಂ. ಜಕ್ಕಿ॥ಲಿ ಪಗಡೆಯನಾಡುತಿರಲು. ಓರ್ವ ಚಿತ್ರಭ್ರಮನಾಗುತಿಂತು] (ಅಶ್ವ.ಊ. ೬-೬೩). [ಪ್ರಹುಡಿ + — ಕಾಱ]

**ಪ್ರಹುಡಿಕೆ** (ನಾ). = ಪ್ರಹುಡಿ : ಯೋಗ್ಯವಯೋಗ್ಯವರಿಯದಲೆ ಮಾಡುವರು ಪ್ರಹುಡಿಕೆಯ [ಯೆ] (ಚಿಕ್ಕ.ಕೃ. ೬೨-೯೦). [ಪ್ರಹುಡ (<ಪ್ರವುಡ) + — ಇಕೆ]

**ಪ್ರಹುಡು** (ನಾ). ನೈಪುಣ್ಯ; ಪ್ರೌಢಿಮೆ : ಆನೆಗಳು ವೃಷಭಾದಿ ಠೆಕ್ಕೆಯ ನಾನುವರೆ ಅವರೀಗ ಕುಲಗೆಟ್ಟೇನು ಪ್ರಹುಡೆನಲಕ್ಕು (ಚಿಕ್ಕ.ಕೃ. ೬೨-೩೩). [ಪ್ರಹುಡ (<ಪ್ರವುಡ) + — ಉ]

**ಪ್ರಹೃತಿ** (ನಾ). ಅಳಿವು; ಲಯ; ನಾಶ : ಆತಂ ನಿಮಗಭೇದ್ಯನಾತನಿಂದೀ ಜಗದ್ವ್ಯಾಪ್ತದುತ್ಪತ್ತಿಸ್ಥಿತಿಪ್ರಹೃತಿಗಳ್ ನಡೆಗುಂ (ಶಬ್ದಮ.ಶಾ. ೦೦-೨೫೨). [ಸಂ.]

**ಪ್ರಹೃಷ್ಟ** (ಗು). ಸಂತುಷ್ಟವಾದ ; ಆನಂದಿತ: ಓರ್ವ ಪುರುಷಂ ಪ್ರಹೃಷ್ಟವದನಂ ತ್ವರಿತಗತಿಯಿಂ ಬಂದು (ಕಾದಂಪೂ. ೯೨೩). [ಸಂ.]

**ಪ್ರಹೇಯ** (ನಾ). ಅತ್ಯಂತ ಹೇಯವಾದುದು : ಈಯೊಡಲಂ ಬಿಡಿ ದಾವಂ ಸಾಯದೆ ಪುಟ್ಟದೆ ಸಮಸ್ತಪಾಪಾಯಾಸಕ್ಕಾಯತನಮಾಗದಿರ್ಕುಂ ಶ್ರೇಯೋರ್ಥಿಜನ ಪ್ರಹೇಯಮಿದೆ ದಲ್ ಮೊದಲೊಳ್ (ಶಾಶಾಕ. ೨೩೯). [ಸಂ.]

**ಪ್ರಹೇಲಿಕೆ**, ಪ್ರಹೇಳಿಕೆ (ನಾ). ಗೂಢಾರ್ಥವುಳ್ಳ ಮಾತು; ಒಗಟು; ಸಮಸ್ಯೆ : "ಒಗಟೆಯದು ಪ್ರಹೇಲಿ[ಶಾಶಾಂ.೪]ಕೆ ಪ್ರವಲ್ಹಿಕೆ" (ಹುಂಗಣ. ೨೬-೭). **ಪ್ರಹೇಳಿಕೆ** : "ಪ್ರವ(ಲ್ಹೀ)ಲ್ಹಿಕಾ, ಪ್ರಹೇಳಿಕಾ—ಈ ೨ ಒಗಂಟಿ" (ಹಲಾಯು. ೨೫-೦೩೧): ರಸವತ್ಕಾವ್ಯಕಥಾಪ್ರಹೇಳಿಕೆಗಳಂ ಪೇಱುತ್ತುಂ. . . ಓಲಗಿಪ್ಪರವನೀಭೃತ್ಕಾಂತೆಯಂ ಕಾಂತೆಯರ್ (ಕುಸುಮ. ೩-೦೯); ಮಣಿಮಯಮಂಟಪದ ಮತ್ತವಾರಣದೊಳ್ವಲಂಗಿ ತನ್ನೋಪಂಗೆ ಜಾಣಂ ಪ್ರಹೇಳಿಕೆಯಂ ಪೇಳ್ವೊಡೆ (ಶ್ರೀಕೃಪಿ. ೨೯-೦೭೧ ವ); "ಕಾಯವೆ ಮೂರು ಕಾಲಾರು ಮಸ್ತಕ ನವ ಬಾಯಿ ಒಂಬತ್ತು ಬಾಲೆರಡು ಕೈಗಳು ನಾಲ್ಕು ಕಂಗಳ ರವೆ ಹದಿನೆಂಟು ಮೈಯಿಕ್ಕಿ ನಾನೆರಗುವೆನು" ಎಂಬ ಪ್ರಹೇಳಿಕೆಯೂ ಅನೇಕ ಪ್ರತಿಗಳಲ್ಲಿ ಕಂಡುಬರುತ್ತದೆ (ಕುಮಾಶಾಂ. ೯೧). ■ ದಂಡಿಯ ಕಾವ್ಯಾದರ್ಶದಲ್ಲಿ ಸಮಾಗತಾ, ವಂಚಿತಾ, ವ್ಯುತ್ಕ್ರಾಂತಾ, ಪ್ರಮುಷಿತಾ, ಸಮಾನರೂಪಾ, ಪರುಷಾ, ಸಂಖ್ಯಾತಾ, ಪ್ರಕಲ್ಪಿತಾ, ನಾಮಾಂತರಿತಾ, ನಿಭೃತಾ, ಸಮಾನ ಶಬ್ದಾ, ಸಂಮೂಢಾ, ಪರಿಹಾರಿಕಾ, ಏಕಚ್ಛನ್ನಾ, ಉಭಯಚ್ಛನ್ನಾ ಮತ್ತು ಸಂಕೀರ್ಣಾ ಎಂಬ ಹದಿನಾರು ಬಗೆಯ ಪ್ರಹೇಲಿಕೆಗಳು ವಿವರಿಸಲ್ಪಟ್ಟಿವೆ. [ಸಂ.ಪ್ರಹೇಲಿಕಾ]

**ಪ್ರಹೇಳಿಕೆ** 'ಪ್ರಹೇಲಿಕೆ' ನೋ.

**ಪ್ರಹ್ಲಾದ** (ನಾ). ೧. ಅಧಿಕವಾದ ಸಂತೋಷ ; ಅತಿಶಯವಾದ ಆನಂದ : ಪರಮತತ್ತ್ವಪರಿಚಿತಗುರುಜನಮನಃಪ್ರಹ್ಲಾದಜನಕನುಂ (ಕಂಪ್ರಕೃ. ೪-೬೦ ವ). ೨. ಅವ್ಯಕ್ತವಾದ ಶಬ್ದ. ೩. ಹಿರಣ್ಯಕಶಿಪು ಎಂಬ ಅಸುರನ ಮಗ : ಈತ ತಾ ಪ್ರಹ್ಲಾದವೇಪನು (ಸಂಪಕ. ೬-೩೦); ಓಂ ನಮಶ್ಶಿವ ಎಂಬ ವರ್ಣಗಳ ತೇದು ತೇದವ ಬರಸಿ ಮಿಗೆ ಪ್ರಹ್ಲಾದ ನೀನೇ ಬರೆಯೆನಲು ಮಧುಸೂದನನ ನಾಮಗಳನೊಂದೊಂದಾಗಿ ವಿರಚಿಸಿದ (ಕೃಷ್ಣಾಕ. ೬-೦). [ಸಂ.]

**ಪ್ರಹ್ವ** (ಗು). ೧. ನಮ್ರನಾದ; ವಿನೀತನಾದ. (ನಾ). ೨. ಬಾಗಿದ ವನು; ವಿನೀತನಾದವನು : "ಪ್ರವಣಃ, ಪ್ರಹ್ವಃ—ಈ ೨ ವಿನೀತಂ" (ಹಲಾಯು. ೩೬-೦೯೭). [ಸಂ.]

**ಪ್ರಳಂಬ** 'ಪ್ರಲಂಬ' ನೋ.

**ಪ್ರಳಯ** 'ಪ್ರಲಯ' ನೋ.

**ಪ್ರಳಯಕರ** (ನಾ). ವಿನಾಶಕಾರಿಯಾದಂದಂ : ಸುಭಟಜನಚಮತ್ಕಾರಿ ತೇಜೋಮಹೌರ್ವಾನಲಮುಗ್ರಾರಾತಿವರ್ಗಪ್ರಳ[ ಶಾ ಶಾ ೦.ಲ ]ಯೇರಮ ದೊಂದೆಯ್ದೆತ್ತಾಳ್ದತ್ತಗುರ್ವಂ (ಅಂಪು.೦೩-೯೩). [ಸಂ.ಪ್ರಲಯಕರ]

**ಪ್ರಳಯಕಾಲ** 'ಪ್ರಲಯಕಾಲ' ನೋ.

**ಪ್ರಳಯಗತ** (ಗು). ೧. ನಾಶ ಹೊಂದಿದ ; ನಾಶವಾದ. (ನಾ). ೨. ನಾಶವಾದ ವ್ಯಕ್ತಿ : ಕೃತಯುಗಕ್ಕೆ ಅರಸು ಶೂಲಿ . . . ಆ ಶೂಲಿ ಆಚಾರ್ಯನಾದ. . . ಇಷ್ಟವ ಹಂಚಿಕೊಂಡರು ದೃಷ್ಟವ ಕಾಬುದಕ್ಕೆ ಮಾಟವನರಿಸಿ ಪ್ರಳಯಗತರಾದರಯ್ಯಾ (ಪಾಲ್ಕುಕೃ. ೯-೦೦). [ಸಂ. ಪ್ರಲಯಗತ]

**ಪ್ರಳಯಗಲೂರ** ? (ನಾ). ಒಂದು ಬಗೆಯ ಚಿನ್ನದ ನಾಣ್ಯ : ಬಂಗಾರದ ನಾಣ್ಯಗಳು ವಿಶೇಷವಾಗಿದ್ದವು, ಯಾವವೆಂದರೆ—೧ ಗಬರು . . . ಧಾರವಾಡ ೧ ಪ್ರಳಯಗಲೂರ ೧ ಪಾಪನಾಯಕಿಹೊನ್ನು (ಐತ್ಯಶಾ. ೦೦೯). [?]

**ಪ್ರಳಯತಿಮಿರ** (ನಾ). ವಿನಾಶಕಾಲದಲ್ಲಿ ಕವಿಯುವ ಕತ್ತಲು ; ಮಹಾಂಧಕಾರ : ಪ್ರಳಯತಿಮಿರದ ಬೀಜ ನೀಲಾಚಳದ ಸಾಯುಜ್ಯವೊ ನಭೋಮಂಡಲದೊಳದನೇವೊಗಳುವೆನು ಮಸಗಿತು ತಮಸ್ತೋಮ (ಶಿವಾನ್ಕರ್ತ್ರಿ. ೧೩-೨೮). [ಸಂ. ಪ್ರಲಯತಿಮಿರ]

**ಪ್ರಳಯಪಯೋಧಿ** (ನಾ). ವಿನಾಶಕಾಲದಲ್ಲಿ ಉಕ್ಕಿ ಜಗತ್ತನ್ನು ನಾಶ ಮಾಡುವ ಸಮುದ್ರ : ಪ್ರಳಯಪಯೋಧಿವೋಲಳುರ್ದು ಪೆಂಕಳಿಗೊಂಡ ಮದೇಭವೈರಿವೋಲ್ ಕೆಳರ್ದು . . . ತಾಗಿದಂ (ಕಂಶಕಾ. ೧೦-೧೦೩). [ಸಂ. ಪ್ರಲಯಪಯೋಧಿ]

**ಪ್ರಳಯವಹ್ನಿ** (ನಾ). = ಪ್ರಲಯಾಗ್ನಿ : ಪ್ರಳಯವಹ್ನಿ ತಪವೊತ್ತುದೋ ಫಾಳಲೋಚನನ ಕೋಪ ಕಡುಗಿ ಮುನಿಯಾಯ್ತೊ ಪೇಳೆನೆ ಕಣ್ಣ ಕಡೆ ತೋರಗಿಡಿಗೆದರೆ . . . ವಿಶ್ವಾಮಿತ್ರನುರವಣಿಸಿ ಬಂದನು (ಹಕಾ. ೬-೦). [ಸಂ. ಪ್ರಲಯವಹ್ನಿ]

**ಪ್ರಳಯಾಗ್ನಿ** ‘ ಪ್ರಲಯಾಗ್ನಿ ’ ನೋ.

**ಪ್ರಳಯಾತೀತ** (ನಾ). ವಿನಾಶವನ್ನು ಮೀರಿದವನು ; ನಾಶವಾಗದ ವನು : ಪ್ರಳಯಾತೀತ ಶರಣಸನ್ನಿಹಿತ ನಮ್ಮ ಅಖಂಡೇಶ್ವರ (ಅಖಂಡೇ. ೧೦೩-೬೦). [ಸಂ. ಪ್ರಲಯಾತೀತ]

**ಪ್ರಳಯಾನಿಳ** (ನಾ). ಪ್ರಳಯಕಾಲದಲ್ಲಿ ಬೀಸುವ ಬಿರುಗಾಳಿ : ಪ್ರಳಯಾನಿಳನಿಂ ಕನಕಾಚಳಮೆಂತು ತರಳದಂತೆ ದರ್ಶನಶುದ್ಧಂ ಚಳಿಯಿ ಸಲರಿಯಂ ಕುಮತಂಗಳಿನಾಪ್ತಪದಾರ್ಥವಲ್ಲಿ ದೃಢನಪ್ಪುದರಿಂ (ಸಮುಶ. ೪-೦೩೩). [ಸಂ. ಪ್ರಲಯಾನಿಲ]

**ಪ್ರಳಾಪ** ‘ ಪ್ರಲಾಪ ’ ನೋ.

**ಪ್ರಳಾಪಸನ್ನಿ** (ನಾ). = ಪ್ರಲಾಪ ೪ : ಇವು ಮುಂತಾದ ಚಿಕಿತ್ಸೆಗಳು ಪ್ರಯೋಗಿಸಲು ಪ್ರಳಾಪಸನ್ನಿ ಪರಿಹರವಹುದು (ಸಳವೈ. ೦೬೬). [ಪ್ರಳಾಪ (=ಪ್ರಲಾಪ) + ಸನ್ನಿ]

**ಪ್ರಳಾಪಸನ್ನಿಪಾತ** ‘ ಪ್ರಲಾಪಸನ್ನಿಪಾತ ’ ನೋ.

**ಪ್ರಳಾಪಿಸು** ‘ ಪ್ರಲಾಪಿಸು ’ ನೋ.

**ಪ್ರಾಂಗಣ** (ನಾ). ಅಂಗಳ ; ಅಂಗಣ : “ಅಜಿರಂ, ಪ್ರಾಂಗಣಂ – ಈ ೨ ಅಂಗಣಂ” (ಹಲಾಯು. ೩೦-೧೪೪) ; ಶ್ರೀದೇವಂ ವಿಮಾನೋಪಾಂತಸ್ಥಿತಿ ಯೊಳ್ ಜಿನನಿಲಯಪ್ರಾಂಗಣದೊಳ್ . . . ತ್ರಿಲೋಕತಿಲಕಂಗೆ ಮಹಾ ಮಹಮಂ ಪೊಣರ್ಚಿದಂ (ಶಾಂತಿಪು. ೭-೨೪ ವ) ; ವಿಸರುಹವದನೆಯರ ನೂಪುರಂಗಳ ದನಿಯಿಂ . . . ಅಳಿಗಳ ರಸಿತಂ ದ್ವಿಗುಣಿಸಿತು ನೃಪಗೃಹ ಪ್ರಾಂಗಣದೊಳ್ (ಕುಸ್ಮಪು. ೪-೩೩) ; ಊಟ ಮುಗಿದ ಮೇಲೆ ಮಠದ ಪ್ರಾಂಗಣದಲ್ಲಿ ತಂಪಾದ ಸಿಮೆಂಟುನೆಲದ ಮೇಲೆ ಕೂತ ಬ್ರಾಹ್ಮಣರ ನಡುವೆ (ಸಂಸ್ಕಾರ. ೯೦). [ಸಂ.]

**ಪ್ರಾಂಚಿತ** (ಗು). ೧. ಮನೋಹರವಾದ. (ನಾ). ೨. ಮನೋಹರ ವಾದುದು ; ರಮಣೀಯವಾದುದು : ಕಾಂಚನದಂತೆ ರಮ್ಯತರಮಪ್ಪ ಜಿನಾಧಿಪಮೂರ್ತಿ ಸತ್ಸಭಾಸಂಚಯ ಮಧ್ಯವರ್ತಿಯೆನಿಸಿರ್ದು ಸುರೇಂದ್ರ ಮದೇಭಮಸ್ತದೊಳ್ ಪ್ರಾಂಚಿತವಾಗಿ ತಾಂ ಪೊಳೆಯುತಿರ್ದುದು . . . ಚಂದ್ರನಂದದಿಂ (ಶಾರಪು. ೭-೯೦) ; ವಿತತಾನೇಕ ಪದಾವಭಾಸಿ ಹರಿನಾಗ ಪ್ರಾಂಚಿತಂ ಖಡ್ಗಿಮಂಡಿತಮುತ್ಕೀರ್ಣವರಾಹವಾಸಮಬಲಾಂಚದ್ಧೀವರೌ ಘಾಶ್ರಿತಂ (ವೃಷಪು. ೦೦-೩೦). ೩. ಗೌರವಾರ್ಹವಾದುದು: ಅದು ಪಂಚಾ ಕ್ಷರದಂತೆವೋಲ್ಪ್ರಣವರ್ಣಪ್ರಾಂಚಿತಂ ಭಸ್ಮದಂತುದಿತಶ್ರೀಕರಲಕ್ಷಣಪ್ರಕ ಟಿತಂ (ವೃಷಪು. ೨೬-೪೪). [ಸಂ.]

**ಪ್ರಾಂಜಲ, ಪ್ರಾಂಜಳ** (ಗು). ೧. ಮನೋಹರವಾದ ; ಸುಂದರ ವಾದ : ಭಕ್ತಿರಸಾರ್ದ್ರಚಿತ್ತಯುತಹೃದ್ರಾಜೀವಸಂಪೂರ್ಣಸಂಕಾಶಂ ಪ್ರಾಂಜಲ[ಶಾಕಾಂ. ಕಾಶಪ್ರಜ್ವಲ]ಮೂರ್ತಿಕೀರ್ತಿಭರಿತಂ ಶ್ರೀಮಾದಿರಾಜಾಹ್ವಯಂ (೧೧೪. ೦-೩೬). ೨. ಸರಳವಾದ; ನೇರವಾದ.

**ಪ್ರಾಂಜಳ** (ನಾ). ೩. ಗೌರವಾರ್ಹ ವ್ಯಕ್ತಿ ; ಪೂಜ್ಯನಾದವನಂ : ಶಾಂಭವಭಕ್ತಿಪ್ರಾಂಜಳಭೂಮಹಿತಮಹಿಮರೇಳ್ತಂದರಾನಂದದಿಂದಂ (ವೃಷಪು. ೩-೪೩).

**ಪ್ರಾಂಜಲವಾಗು** = ಸರಳವಾಗು ; ನೇರವಾಗು : ಇಷ್ಟದೇವತೆಯ ಇದಿರಿನಲ್ಲಿ ಭಕ್ತಿನಮ್ರವಾದ ಪ್ರಾಂಜಲವಾದ ಅಂತರಂಗನಿರೀಕ್ಷಣೆ (ಕನಾಶ. ೦೬೯) ; ಅವರಲ್ಲಿ ನನಗಿರುವ ಭಕ್ತಿಯನ್ನು ಪ್ರಾಂಜಲವಾಗಿ ಈ ರೀತಿ ಅರ್ಪಿಸಿಕೊಂಡಿದ್ದೇನೆ (ಗಾಳಿಪ. ೬೯) ; ತಾವು ಕಂಡುಂಡ ಬಾಳನ್ನು ಪ್ರಾಂಜಲವಾಗಿಯಾದರೂ ಪರಿಣಾಮಕಾರಕವಾಗಿ ಇಲ್ಲಿ ಕೊಟ್ಟಿದ್ದಾರೆ (ಸಾಸಮಾ. ೦೬೮). [ಸಂ.]

**ಪ್ರಾಂಜಲತೆ** (ನಾ). ಸರಳತೆ : ಥಂಡಿ ನೆಗಡಿ ಆದಾಗ ಕುಡೀತಿರತೀನಿ ನಾನೆ ಒಮ್ಮೊಮ್ಮೆ ಎಂದು ಆಚಾರ್ಯರು ತಮ್ಮ ಪ್ರಾಂಜಲತೆಯನ್ನಷ್ಟು ತೋರಿಸಿದರು (ಸಮುಖಿ. ೩೯೮). [ಸಂ. ಪ್ರಾಂಜಲತಾ]

**ಪ್ರಾಂಜಲಿ** (ಗು). ೧. ಕೈಮುಗಿದಿರುವ : ಅಂಜನದಿಂ ಪುದಿದ ತಮಃ ಪುಂಜಂ ಕಿಡೆ ಸೂಕ್ಷ್ಮದೃಷ್ಟಿ ಸಮನಿಸುವವೊಲಾ ಪ್ರಾಂಜಲಿ ವಿಬುದ್ಧಮತಿಗೆ ನಿರಂಜನನಿಂದಾದುದಮಳದೃಷ್ಟಿವಿಕಾಸಂ (ಧರ್ಮಾಮೃ. ೦೪-೦೬). (ನಾ). ೨. ಹಸ್ತಗಳ ಜೋಡಣೆ ; ಅಂಜಲಿ. [ಸಂ.]

**ಪ್ರಾಂಜಳ** ‘ ಪ್ರಾಂಜಲ ’ ನೋ.

**ಪ್ರಾಂತ** (ನಾ). ೧. ದಡ ; ಅಂಚು. ೨. ಮೇರೆ ; ಗಡಿ ; ಸೀಮೆ. ೩. ತುದಿ ; ಮೊನೆ. ೪. ಪಕ್ಕ ; ಪಾರ್ಶ್ವ. ೫. ಎಡೆ ; ಸ್ಥಳ ; ಪ್ರದೇಶ : ಆಕಾಶದ ಪ್ರಾಂತದಿಂದ ಭಯಂಕರವಾದ ವೇಗದಿಂದ ಗಾಳಿಯು ಗರ್ಜಿಸಿಕೊಂಡೆದ್ದುದು ಕೇಳಿಸಿತು (ದೇವೀಕಾ. ೦೩೦). ೬. ರಾಜ್ಯ; ನಾಡು : ಆ ಪ್ರಾಂತಗಳೊಳಗಿಂದ ಸಹ ಬದಕು ಬಹಳ ಬರಬೇಕೆಂದು ನಮ್ಮ ಅಪೇಕ್ಷೆ (ಮುಂಬಕ್ತಾ. ೬ ಕೃಷ್ಣಾ ಶಪ) ; ಹೊಗೆಸೊಪ್ಪಿನ ಕಾರ್ಖಾನೆ ಗಳು ಮದ್ರಾಸು, ಬರ್ಮಾ ಮುಂತಾದ ಪ್ರಾಂತಗಳಲ್ಲಿಯೂ ಅನೇಕ ಭಾಗಗಳಲ್ಲಿ ಸಕ್ಕರೆ ಕಾರ್ಖಾನೆಗಳೂ ಇವೆ (ಭೂಶಿಶ. ೨೯೬). [ಸಂ.]

**ಪ್ರಾಂತಭೇದ** (ನಾ). ೧. ನಾಡುಗಳಲ್ಲಿರುವ ವ್ಯತ್ಯಾಸ, – ಅಂತರ : ಈಗ ಪ್ರಯಾಣ ಸೌಕರ್ಯಗಳೂ ವ್ಯವಹಾರಸಾಧನಗಳೂ ಹೆಚ್ಚಾಗಿರುವುದ ರಿಂದ ದೂರವಾಗಲಿ ಪ್ರಾಂತಭೇದಗಳಾಗಲಿ ಪರ್ವತ ನದಿಗಳಾಗಲಿ ಪ್ರಾಂತ ಭೇದಕ್ಕೆ ಅಷ್ಟು ಮುಖ್ಯ ಕಾರಣಗಳಾಗಿಲ್ಲ (ಕೃಪಿಪ. ೨೪೯). ೨. ಒಂದು ಭಾಷೆಯನ್ನು ಆಡುವ ನಾಡಿನಲ್ಲಿಯೇ ಪ್ರತ್ಯೇಕವಾಗಿ ಕಂಡು ಬರುವ ವ್ಯತ್ಯಾಸ : ಈಗ ಕನ್ನಡದಲ್ಲಿ ಧಾರ್ವಾಡದ ಕನ್ನಡ, ಮೈಸೂರು ಕನ್ನಡ, ಮಂಗಳೂರು ಕನ್ನಡ ಎಂದು ಮೂರು ಪ್ರಾಂತಭೇದಗಳಿವೆ (ಕೃಪಿಪ. ೨೪೯). [ಸಂ.]

**ಪ್ರಾಂತರ** (ನಾ). ೧. ಎರಡು ಊರಿನ ಮಧ್ಯಪ್ರದೇಶ ; ಎಡೆಯ ನಾಡು : “ಎರಡೂರೆಡೆಯು(ಂ) ನಿಡುಮಾಳ(ವು)ಂ ಪ್ರಾಂತರಮೆಂಬುದು” (ಹಲಾಯು. ೪೩-೦೦೬). ೨. ಬಹಳ ದೂರ ನಡೆಯಬೇಕಾದ ದಾರಿ. ೩. ಬಹಳ ದೂರ ಮರ, ನೆರಳು, ನೀರು ಯಾವುದೂ ಇಲ್ಲದ ದಾರಿ ೪. ಕಾಡು; ಅರಣ್ಯ : ಆಕಾಶ, ಪ್ರಾಂತರ, ಸಮುದ್ರ, ಸರ್ವತ್ರನಿಶ್ಶಬ್ದ – ಅವಿರತವಾಗಿ ಕಲ್ಲೋಲವಾಗಿದ್ದ ಸಮುದ್ರ ಗರ್ಜನೆ (ಕಹಾಕಿಂ. ೦೨). [ಸಂ.]

**ಪ್ರಾಂತರಕ್ಷಕ** (ನಾ). ಗಡಿಯನ್ನು ಕಾಯುವವನು ; ಸೀಮಾರಕ್ಷಕ : ಪ್ರಾಂತರಕ್ಷಕರಿಗೆ ‘ಸದ್ಯದಲ್ಲಿಯೇ ಯವನಸಾಮ್ರಾಟನಿಂದ ಕೆಲವು ಜನ ದೂತರು ಬರುತ್ತಾರೆ ; ಅವರಿಗೆ ಅಡ್ಡಿಪಡಿಸಬೇಡಿ ! ’ ಎಂದು ತಿಳಿಸಿ ದ್ದನು (ಚಂಶಿಮು. ೨೦೩). [ಸಂ.]

**ಪ್ರಾಂತಲೋಪ** (ನಾ). [ವ್ಯಾಕ]ಅಂತ್ಯಾಕ್ಷರದ ಲೋಪ : ಸಾಸಿರಮಿಕ

ಮುಂದೊತ್ತಿ ಸಮಾಸದೊಳಕ್ಕುಂ ಪಯುನ್ನದರ್ಕೆ ಯಥೋಕ್ತಂ ಶಾಸಿಸುವರ್ ನೂಜಿರ್ಕಂ ಸಾಸಿರಕಂ ಪ್ರಾಂತಲೋಪಮುಂ ಕೆಲವೆಡೆಯೊಳ್ (ಶಾಬ್ದಾ.ಶ. ೨೭೪). [ಸಂ.]

**ಪ್ರಾಂತು** (ನಾ). = ಪ್ರಾಂತ ೬ : ಇಲ್ಲಿ ಕರ್ನಾಟಕ ಪ್ರಾಂತಿನ ವೈಕಿ ಬೆಳಗಾಂವಿ ಎಂಬಲ್ಲಿಯ ತುಪ್ಪ ಬಹಳ ಉತ್ತಮವೆಂದು ತಿಳಿಯುತ್ತಾರೆ (ಹುಂಬಪ್ಪಾ. ೩೬). [<ಸಂ. ಪ್ರಾಂತ]

**ಪ್ರಾಂತ್ಯ** (ನಾ). = ಪ್ರಾಂತ ೬ : ಡಾನ್‌ಕಾಸಕ್ ಪ್ರಾಂತ್ಯದಲ್ಲಿ ಆಗಲೇ ಅವನ ಕುದುರೆಯ ಗಾಡಿಯನ್ನು ಎತ್ತಿನ ಗಾಡಿಗೆ ಬದಲಾಯಿಸಿಯಾಗಿದ್ದಿತು (ಪುರಿವಾ. ೧೭); ನನ್ನ ಅಜ್ಜಂದಿರಾದ ಏಕಾಂಬರಮುದಲಿಯಾರರು ಈ ಪ್ರಾಂತ್ಯವನ್ನು ಆಳುತ್ತಿದ್ದ ನವಾಬರಲ್ಲಿ, ದಿವಾನಗಿರಿ ನಡೆಸಿ ತುಂಬಾ ಆಸ್ತಿ ಮಾಡಿದರು (ಕ್ರತಾಶ. ೦) ; ಪ್ರಾಂತ್ಯ ಸೇರಿದರೂ ಭ್ರಾಂತಿ ಬಿಡಲಿಲ್ಲ (ಗಾದೆ). [ < ಪ್ರಾಂತ]

**ಪ್ರಾಂಶು** (ಗು). ೧. ಎತ್ತರವಾದ; ಉನ್ನತವಾದ: ಸಾಲಪ್ರಾಂಶು ವಿಶಾಲಲೋಲನಯನಂ . . . ಗಂಗಾತ್ಮಜನ್ಮಂ ಜಯಶ್ರೀಲೋಲುಂ ಜಮದಗ್ನಿ ರಾಮಮುನಿಯೊಳ್ ಕಲ್ತಂ ಧರ್ಮವಿದ್ಯೆಯುಂ (ಕಂಶಿಕಾ. ೧-೩೮). ೨. ಉದ್ದವಾದ ; ನೀಳವಾದ : ರಾಜತ್ಕಳಕಂಠನಿಸ್ವನೆ ಕಳಾಪಪ್ರಾಂಶು ಧಮ್ಮಿಲ್ಲೆಯೆಂಬ ನಿಜಾಕಾರಮನುಂಟುಮಾಡಿ (ಸುಕುಚಿತಾ. ೯-೩೯) (ನಾ). ೩. ಉದ್ದವಾಗಿರುವುದು : "ಪ್ರಾಂಶು, ಉಚ್ಚಂ, ಉನ್ನತಂ, ತುಂಗಂ, ಉದಗ್ರಂ_ಈ ೫ ಉದ್ದಿತು" (ಹಲಾಯು. ೦೨೯-೩೬); ಪುರನಾರೀನಯನಾಂಚಳಸ್ಮಿತಲಸದ್ಬಿಂಬಾಧರಪ್ರಾಂಶು ಸ್ವವರಿದೊಂದಾಗಿ ಕಳಿಂದಜಾಮರನದೀ ಶೋಣಾಪಗಾಪಾರಿಗಳ್ಬೆರಸಿರ್ದಂದಮನಾನೆ . . . ಚಾಮರವ್ರಂದಂ ನೆಗೆವಲ್ಲಿ ಪಾಱುವ ಮರಾಳವ್ರಾತದಂತೊಪ್ಪುಗುಂ (ವೃಶಂ. ೩-೦೨). ೪. ಎತ್ತರವಾಗಿರುವ ವ್ಯಕ್ತಿ : ರೋಧೋವಳಯಮಲ್ಲಮವಿರಳ ಬಹಳಪ್ರಾಂಶುಪ್ರಕರಮಯಮಾಗೆಯುಂ (ಕರ್ಣಚರಿ. ೯-೩೦ ವ) ; ವನಿತಾರತ್ನಂ ದಲಾ ಕೋಮಲೆ ಜನಕಜೆ ರಾಮಂ ದಲಾ ಬರ್ಪ ನೀಹಾರನಗೇಂದ್ರಪ್ರಾಂಶು (ಕಂಠಾಪಮಾ. ೭-೯೩). [ಸಂ.]

**ಪ್ರಾಂಶುಪಾಲ** (ನಾ). ಉನ್ನತಶಿಕ್ಷಣಸಂಸ್ಥೆಯ ಮುಖ್ಯಸ್ಥ ; ಪ್ರಿನ್ಸಿಪಾಲ್ : ಅವರು ಧಾರವಾಡದ ಕಾಲೇಜೊಂದರಲ್ಲಿ ಪ್ರಾಂಶುಪಾಲರಾಗಿದ್ದಾರೆ (ಆಡು). [ಈ ಬಳಕೆಯಲ್ಲಿರುವ ಈ ಶಬ್ದವು ಸಂಸ್ಕೃತದಲ್ಲಿ ಈ ಅರ್ಥದಲ್ಲಿ ವ್ಯುತ್ಪನ್ನವಾಗುವುದಿಲ್ಲ. ಇಂಗ್ಲಿಷಿನ 'ಪ್ರಿನ್ಸಿಪಾಲ್' ಎಂಬ ಶಬ್ದಕ್ಕೆ ರೂಪ ಸಾಮ್ಯವಿರುವುದರಿಂದ ಇದಕ್ಕೆ ಪ್ರಯೋಗಾರ್ಹತೆಯಿದೆ]

**ಪ್ರಾಂಸರಿನೋಟು** 'ಪ್ರಾಮಿಂಸರಿನೋಟು' ನೋ.

**ಪ್ರಾಕಟ** (ನಾ). ಎಲ್ಲರಿಗೂ ತಿಳಿದುದು; ಪ್ರಕಟವಾದುದು : ಅಭ್ಯುದಯಪರಮನಿಃಶ್ರೇಯುಸಮುಂ ಪ್ರಾಕಟಮಕ್ಕುಂ ವಿದಿತಾನೇಕ ಕವೀಶಪ್ರಯೋಗವದಪದ್ಧತಿಯೊಳ್ (ಶಬ್ದಾ. ೦-೦೯) ; ಕೇಕರಪಿಂಗವಿಳೋಕನಮುಗ್ರಂ ಪ್ರಾಕಟಕಟಕಟ ದಶನಸಮಗ್ರಂ (ಕರ್ಣಚರಿ. ೦೩-೨೦ ಕಗಳ); ಪ್ರಾಕಟದೆ ಹೊಳೆವ ಪೂರ್ಣಮಿಯ ಚಂದ್ರನವೋಲನೇಕರೂಪಾಗಿ (ಪ್ರಕೃತಿ. ೨-೯-೩೪). [ < ಪ್ರಕಟ]

**ಪ್ರಾಕಟ್ಯ** (ನಾ). ಹೊರಗೆ ಕಾಣುವಿಕೆ : ಪ್ರಕಟವಾಗುವಿಕೆ : ಪ್ರಕಾಶವೆಂದರೆ ವ್ಯವಹಾರಕ್ಕೆ ಬೇಕಾದ ಯೋಗ್ಯತೆ. ಇದನ್ನು ತಾರ್ಕಿಕರು ವಿಷಯತ್ತ ಎನ್ನುವರು. ಮೀಮಾಂಸಕರು ಪ್ರಾಕಟ್ಯವೆನ್ನುವರು (ಹಿಂದಣ. ೯೩); ಜ್ಞಾನದಿಂದ ಉತ್ಪನ್ನವಾಗಿ, ಜ್ಞಾನಕ್ಕೆ ವಿಷಯವಾದ ವಸ್ತುವಿನಲ್ಲಿ ಪ್ರಾಕಟ್ಯವೆಂಬ ಧರ್ಮ ಕಾಣಿಸಿಕೊಳ್ಳುತ್ತದೆ (ತತ್ವಶಾ. ೨೬೪). [ಸಂ.]

**ಪ್ರಾಕಾಮ್ಯ** (ನಾ). ೧. ತನ್ನ ಇಷ್ಟಕ್ಕೆ ಅನುಸಾರವಾಗಿ ನಡೆಯುವ ಸ್ವಾತಂತ್ರ್ಯ ; ಇಚ್ಛಾಸ್ವಾತಂತ್ರ್ಯ. ೨. ವಿಧೇಯವಾಗಿಲ್ಲದಿರುವಿಕೆ ; ಸ್ವೇಚ್ಛೆ. ೩. ಶಿವನ ಎಂಟು ಬಗೆಯ ಸಿದ್ಧಿಗಳಲ್ಲಿ ಒಂದು ; ಆರನೆಯ ಸಿದ್ಧಿ ; ಶಕ್ತಿ, ಸೌಂದರ್ಯ, ಆಯುಸ್ಸು, ಮಹಿಮೆ, ಮತ್ತು ಕಾಂತಿಗಳನ್ನು ಉಂಟುಮಾಡುವ ಸಿದ್ಧಿ : ಅಣಿಮಾ . . . ಪ್ರಾಕಾಮ್ಯ . . . ಕಾಮರೂಪಿತ್ವಾದಿ ಭೇದದಿಂ ಕ್ರಿಯಾಗೋಚರರ್ದ್ಧಿ ಬಹುವಿಧ(ಕತ್ತ್ವಶ್ರ. ೦೬೯); ಸ್ವೇಚ್ಛೆಯಿಂದಾಕಾಶಗಮನಾದಿ ಸರ್ವಸಿದ್ಧಿಯೇ ಪ್ರಾಕಾಮ್ಯವೆನಿಸುವದು ಸ್ವಶರೀರಪ್ರಕಾಶದಿಂ ಸರ್ವಾರ್ಥಂಗಳಂ ಬೆಳಗುವ ತನಪಾದೊಡಂ ಪ್ರಾಕಾಮ್ಯಮಕ್ಕುಂ (ಶಿಪೀಳ. ೨೯೦); ಪ್ರಾಕಾಮ್ಯಸಿದ್ಧಿಯ ತಿಳಿಮು ಪರರಿಗೆ ಕೊಡುವ ವಿವರವ, ಬಲುಬಲವು ಬಲುಸುಂದರಾಯುಷು ಬಲುಮಹಿಮೆ ಬಲುಕಳೆಯುಯೆಂಬವನೊಲಿವುಯಾವುದೆಯಿದುವೆ ಪ್ರಾಕಾಮ್ಯನಿವ ಸಿದ್ಧ್ಯಂದ (ಪ್ರಾಕಶಿಂ. ೨೦-೯೯); ಐಶ್ವರ್ಯವು ಅಣಿಮಾ, ಲಘಿಮಾ, ಗರಿಮಾ, ಮಹಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ ಎಂದು ಎಂಟು ವಿಧ (ಶಾಶತ್ತ್ವ. ೩೨೯). [ಸಂ.]

**ಪ್ರಾಕಾರ** (ನಾ). ೧. ಬೇಲಿ. ೨. ಸುತ್ತಲೂ ಕಟ್ಟಿರುವ ಗೋಡೆ; ಸುತ್ತುಗೋಡೆ ; ಪೌಳಿ: "ವಪ್ರಂ, ಸಾಲ (೦):, ಪ್ರಾಕಾರಃ-ಈ ೩ ಕೋಂಟೆ" (ಹಲಾಯು. ೯೯-೧೩೩); ಎನಗೀ ಪ್ರಾಕಾರವಿಭೇದನಮಾವುದೊ ಗಹನಂ (ಕಂಠಾಪಮಾ. ೦೦-೩೯); ದೊಡ್ಡ ದೇವಾಲಯಗಳಲ್ಲಿ ಇಂತಹ ದ್ವಾರಗಳೂ ಗೋಪುರಗಳೂ ಪ್ರಾಕಾರದ ನಾಲ್ಕು ದಿಕ್ಕುಗಳಲ್ಲಿಯೂ ಇರುವುದುಂಟು (ಶಿಲ್ಪಶಾಸ್ತ್ರ. ೩೯). [ ಸಂ. ]

**ಪ್ರಾಕು$_1$, ಪ್ರಾಕ್ಕು$_1$** (ಗು). ೧. ಹಿಂದಿನ; ಪೂರ್ವಕಾಲದ. (ನಾ). ೨. ಹಿಂದಿನ ಕಾಲ ; ಪೂರ್ವಕಾಲ : "ಅದಿಃ . . . ಪ್ರಾಕ್, ಪುರಃ-ಈ ೭ ಮುನ್ನಂ" (ಹಲಾಯು. ೧೦೭-೨೨); ದಾರಿಯ ಎರಡು ಸಾಲುಗಳಲ್ಲೂ ಪ್ರಾಕಿನಲ್ಲಿ ನಟ್ಟಿದ್ದ ಈ ಧೂಪದ ಮರಗಳು (ಸ್ವಕ್ಷ್ಮಪೂ. ೯೯); ಭಾರೀ ಪುರಾತನವಾದ ಮನೆ ಇದು, ಪ್ರಾಕಿನ ಕಟ್ಟೋಣ ಬೇರೆ (ಕಂಠಾಶು. ೬೦). ೩. ಮೂಡಲು; ಪೂರ್ವದಿಕ್ಕು: "ಪ್ರಾಚೀನಂ, ಪ್ರಾಕ್-ಈ ೨ ಮೂಡಲಾದುದು" (ಹಲಾಯು. ೧೭-೦೦೩); "ಪ್ರಾಕ್ ಪುರವೋದನುಗ್ರಹಿಸೆ ಪೂರ್ವಕ್ಕೆ ಪೆಸರಕ್ಕು" (ಹುಂಗಣ. ೧೨೭-೪). **ಪ್ರಾಕ್ಕು:** ೨. ಜೋಕೆಯೊಳ್ಳಿದು ಕ್ರಯವನು ಪೇಳ್ವುದಲ್ಲದೊಡೆ ಪ್ರಾಕ್ಕಿನೊಳ್ಪೇಳುತಿಹ ಪದ್ಮರಾಗದ ಪರಿಯೊಳೀ ಕತೆಯೊಳುದು ಪೇಳ್ವುದು (ರತ್ನಶಾ. ೦೯-೯).

**ಪ್ರಾಕಿನ ಬಾಕಿ** =ಹಳೆಯ ಬಾಕಿ; ಬಹಳ ಹಿಂದಿನ ಸಾಲ : ಕೊನೆಗೆ ಪ್ರಾಕಿನ ಬಾಕಿ ಹಣ ಖಂಡಣೆ ಸಹಾ ೩ ಲಕ್ಷರೂಪಾಯಿ ಮೇಲೆ ಚುಕಾಯಿಸಿ (ಹೈದ. ೯೩). **ಪ್ರಾಕಿನವ** = ಹಿಂದಿನ ಕಾಲದವನು ; ಪುರಾತನ ವ್ಯಕ್ತಿ : ನಮ್ಮ ಎಳಚಿತ್ತಾಯರು ಹೇಳಿದರು—ನೀನು ಈ ಊರಿಗೇನೆ ಪ್ರಾಕಿನವನೆಂದು; ವಯಸ್ಸಾದವನೆಂದು (ಜಾಬ. ೯೩). [<ಸಂ. ಪ್ರಾಚ್]

**ಪ್ರಾಕು$_2$, ಪ್ರಾಕ್ಕು$_2$** (ಅ). ಹಿಂದೆ; ಮೊದಲು; ಯಿದಕ್ಕೆ ನೀಉ ಪ್ರಾಕು ಕೊಡುವ ಗುತ್ತಿಗೆ ರೊಕ್ಕ ಬಿಟ್ಟು ಬಿರಾಡು ಕ್ರಯಾದಾಯ × × × ವೆಚ್ಚ ಬಿರಾಡ ಗಲುಡ ಸೇನಬೋವ ಆಯಗಾರಿಗೆ ಕೊಡುವ ಉಪ್ಪು ಸಹಾ ಎನಿಸಿ ಸರ್ವಮಾನ್ಯದ ಶಿಲಾಶಾಸನ (ಎಕ. XI. ಮೊಳಕಾ. ೯-೦೦; 1551); ಎಜಿದಿಮ್ಮ ರಾಜಯ್ಯಗೆ ಪುಣ್ಯವಾಗಬೇಕೆನ್ದು ಪ್ರಾಕು ತೆಱುವ ರೊಕವನೂ ಸರ್ವಮಾನವಾಗಿ ಬಿಟೆಉ (ಎಕ. XI. ಹಿಂದುಸ. ೯೦-೦೬; 1556 ?); ಪ್ರಾಕು ರೈತರು ಮಾಡಿದ್ದ ಭೂಮಿಯಲ್ಲಿ ಪೌತಿ ಪರಾರಿ ಆದವರ ಪಾಳು ಭೂಮಿಯು . . . ಸಾಗುವಳಿ ಮಾಡಬೇಕು (ಹುಕುಮ. II. ೬೦). **ಪ್ರಾಕ್ಕು$_3$.**

**ಪ್ರಾಕ್ಕು ಮುತ್ತೈಯ್ದೆ** = ಹಿಂದೆ ಮುತ್ತೈದೆಯಾಗಿದ್ದವಳು ; ವಿಧವೆ : (೪). [< ಸಂ. ಪ್ರಾಕ್]

**ಪ್ರಾಕುಪ್ರಮಾಣ** (ನಾ). ಪುರಾತನಕಾಲದ ಪ್ರಮಾಣ : ಗುತ್ತಿಗೆಪ್ರಾಕು ಪ್ರಮಾಣನು . . . ಸೋಮೇಶ್ವರದೇವರ ಭಂಡಾರಕ್ಕೆ ಮಾಸಗದಿಯಾಗಿ ಸಲಿಸುವಿರಿ (ಮೈಕಂ. ೦೯೯೭. ೨೯-೦೩; 1530). [ಪ್ರಾಕು$_1$+ಪ್ರಮಾಣ]

**ಪ್ರಾಕೃತ** (ಗು). ೧. ನೈಸರ್ಗಿಕವಾದ; ಸಹಜವಾದ: ಮೊದಲು ಸ್ತ್ರೀಯು ಯಾವ ಸೌಂದರ್ಯದಿಂದ ಸೃಷ್ಟಿಕರ್ತನಿಂದ ಸೃಷ್ಟಳಾಗಿ ಈಚೆಗೆ ಬಂದಳೋ ಅಂತಹ ಪ್ರಾಕೃತ ಗಂಭೀರಸೌಂದರ್ಯದ ಸ್ತ್ರೀಯನ್ನು ನೀವು ನೋಡಬೇಕು (ಸುಶಿಹಾ. ೦೬೩); ಪ್ರಾಕೃತಘಟನೆಗಳ್ಗೆ ಪ್ರಕೃತಿಕಾರಣದಂತೆ ದೇವಕಾರಣ ಮಿರ್ಪುದೆಂದು ಗುರು ಕಲಿಸಿದನ್ ನನಗೆ (ಶ್ರೀಣಾಪಿಷ. ೩೬-೪೯). ೨. ಸಾಮಾನ್ಯವಾದ; ಸಾಧಾರಣವಾದ. ೩. ಒರಟಾದ; ಅಸಂಸ್ಕೃತವಾದ; ಅಸಭ್ಯವಾದ. (ನಾ). ೪. ಸಾಮಾನ್ಯವಾದುದು; ಸಾಧಾರಣವಾದುದು: ಈಕೆಯ ರೂಪಿನ ಪರಿಯಂ ಕೋಕನದಜನಂದು ಕಂಡೊಡಂತಾ ಗೌರೀ ಶ್ರೀಕಾಂತೆಯರಾಕೃತಿಯಂ ಪ್ರಾಕೃತಮೆನೆ ಮಾಡನೆನಿಸಿ ರುಕ್ಮಿಣಿಯೆಸೆಗುಂ (ಜಗಅ. ೦೦-೯೯). ೫. ಸಾಮಾನ್ಯನಾದವನು; ನಾಡಾಡಿ; ಪಾಮರ: ಪ್ರಾಕೃತನಲ್ಲನೀ ದಶರಥಾಗ್ರುತನೂಭವಂ (ಹಂಡಾಪಿಷ. ೩-೬೨); ಅರಿಯನೀ ಲಕ್ಷ್ಮಣನು ಮಾಯಾನಿರಾಗೆಯಾಕೃತಿಯಾದ ಸೀತೆಯು ತೆರನ ವಂಚಿಪನೀತನನು ಪ್ರಾಕೃತನ ತೆರದಂತೆ (ಅಾಪಿಷ. ೩-೯-೨), ನೀನು ಭಾವಿಸುವನಿತ್ತು ಗಾಲವನು ಪ್ರಾಕೃತನೆ? (ಕಂಕೃಸ. ೦೩). ೬. ಪ್ರಕೃತಿತತ್ತ್ವವಾದಿ; ನಿಸರ್ಗವಾದಿ: ಶಾಸ್ತ್ರವನ್ನು ನಂಬದೆ ಕೇವಲ ಜಗತ್ತನ್ನು ನೋಡಿ ಸಿದ್ಧಾಂತಗಳನ್ನು ಕಲ್ಪಿಸತಕ್ಕ ಪ್ರಾಕೃತರು ಮತ್ತು ಚಾರ್ವಾಕರು ನಾಲ್ಕು ತತ್ತ್ವಗಳನ್ನು ಮಾತ್ರ ನಂಬುತ್ತಾರೆ (ಜೀವಾಕೃ. ೦೬). ೭. ಯಾಗದ ಪಶು; ಯಜ್ಞಪಶು: "ಯಾಗಕೆಯ್ದಿರ್ದ ಪಶುವು ಪ್ರಾಕೃತವೆನಿಸು" (ಹುಂಗಣ. ೬೬-೦೯). ೮. ಆರ್ಯಭಾಷಾ ವರ್ಗದ ಪ್ರಾಚೀನಭಾರತದ ದೇಶಭಾಷೆಗಳು ಮತ್ತು ಆ ಭಾಷೆಗಳಲ್ಲಿ ಯಾವುದಾದರೊಂದು: ಸಂಸ್ಕೃತಂ ಪ್ರಾಕೃತಂ ಅಪಭ್ರಂಶಿಕಂ ಪೈಶಾಚೀಕಮೆಂಬ ಮೂಱುವರ ಭಾಷೆಗಳೊಳ್ ಪುಟ್ಟುವುವೆಲ್ಲಂ ಸರ್ವವಿಷಯಭಾಷಾಜಾತಿಗಳಕ್ಕುಂ (ಶಂರೋಂಬು. ೦-೯೬ ಪ); ಸಂಸ್ಕೃತ ಪ್ರಾಕೃತ ಅಪಭ್ರಂಶ ಪೈಶಾಚಿಕಾದಿ ಭಾಷಾಭೇದದಿಂ ಪೇಳ್ವ ಲಾಕ್ಷಣಿಕರಪ್ಪ ಕವೀಶ್ವರರಿಂ (ಶವೀಳ. ೦೫೦). ೯. ಕ್ಷುದ್ರಮಂತ್ರಗಳಲ್ಲಿ ಒಂದು ಬಗೆ: ದ್ರಾವಿಡ, ವೈಕೃತ, ಪ್ರಾಕೃತ ಇತ್ಯಾದಿ ಕ್ಷುದ್ರಮಂತ್ರಂಗಳು . . . ತಿಳಿದಿರಲಕ್ಕುಂ (ಶವೀಳ. ೫೦). ೧೦. ನಿತ್ಯ, ನೈಮಿತ್ತಿಕ, ಪ್ರಾಕೃತ ಮತ್ತು ಆತ್ಯಂತಿಕಗಳೆಂಬ ನಾಲ್ಕುವಿಧ ಪ್ರಳಯಗಳಲ್ಲಿ ಒಂದು; ಪ್ರಕೃತಿಯ ನಾಶರೂಪವಾದ ಪ್ರಳಯ: ಪ್ರಲಯವು, ನಿತ್ಯ, ಪ್ರಾಕೃತ, ನೈಮಿತ್ತಿಕ, ಆತ್ಯಂತಿಕ ಎಂದು ನಾಲ್ಕು ವಿಧ . . . ಪ್ರಾಕೃತ ಪ್ರಲಯವೆಂದರೆ ಪ್ರಕೃತಿಯೆಂಬ ಮಾಯೆಯಲ್ಲಿ ಬ್ರಹ್ಮನೊಡನೆ ಬ್ರಹ್ಮಾಂಡ ವಿನಾಶ (ಹಿಂದಾ. ೦೯೩). ೧೧. [ಯೋಗ]ಪ್ರಾಣಾಯಾಮದ ಪ್ರಾಕೃತ, ವೈಕೃತ, ಕೇವಲಕುಂಭಕಗಳೆಂಬ ಮೂರು ಪ್ರಕಾರಗಳಲ್ಲಿ ಒಂದು: ಪ್ರಾಕೃತ ವೈಕೃತಮಾದ ದ್ವಿವಿಧರೇಚಕ ಪೂರಕ ಕುಂಭಕ ಉತ್ಕರ್ಷ ಅಪಕರ್ಷ ಶೂನ್ಯ ಉತ್ಕ್ರಾಂತಿ ಎಂಬ ಸಪ್ತ ಪ್ರಾಣಾಯಾಮಲಕ್ಷಣಂಗಳಂ (ಶವೀಳ. ೦೩೩); ಪ್ರಾಕೃತಪ್ರಾಣಾಯಾಮವೆಂದು ವೈಕೃತಪ್ರಾಣಾಯಾಮವೆಂದು ಆ ಎರಡಱಿಂ ಪೊಱತಾದ ಕೇವಲಕುಂಭಕವೆಂದು ಮೂಱು ಪ್ರಕಾರವಾಗಿ ಪ್ರಾಕೃತ ಪರ್ದದೆಂತೆನೆ ದಿನವೊಂದಕ್ಕೆ ಇಪ್ಪತ್ತೊಂದುಸಾವಿರದ ಆಱುನೂಱು ಹಂಸ ಹಂಸವೆಂದುಚ್ಚರಿಸುವ ಅಹಂಕಾರಾತ್ಮಕವಾದ ಜೀವಜಪವೇ ಪ್ರಾಕೃತ ಪ್ರಾಣಾಯಾಮವೆನಿಸುವುದು (ಶಿಹಂಕೇ. ೨೦೬-೩೯). ೧೨. [ನಾಟ್ಯ] ಕಣ್ಣುಗುಡ್ಡೆಯ ಒಂಬತ್ತು ವಿಧವಾದ ಚಲನೆಗಳಲ್ಲಿ ಒಂದು; ಕಣ್ಣುಗುಡ್ಡೆಯ ಸ್ವಾಭಾವಿಕಚಲನೆ; "ಅಲಿಗಳು ಸ್ವಭಾವವಾಗಿರುವುದು . . . ಪ್ರಾಕೃತವನ್ನು ಅದ್ಭುತರಸ ಮತ್ತು ಆವೇಶಗಳಲ್ಲೂ ವಿನಿಯೋಗಿಸಬೇಕು" (ಡಾಸ್ಕೃಕಂ. ಗದ್ಯಾನುವಾದ. ೨೬೯); ಭ್ರಮಣಂ ವಲನಂ ಪಾತಂ . . . ಸಮುದ್ವೃತ್ತಂ ನಿಷ್ಕ್ರಾಮಂ ಅಮಿತಪ್ರಾಕೃತಗಳಾಲಿಯೊಂಬತ್ತಕ್ಕುಂ (ಡಾಸ್ಕೃಕಂ. ೩-೩೯). [ಸಂ.]

**ಪ್ರಾಕೃತಕಾವ್ಯ** (ನಾ). ಪ್ರಾಕೃತಭಾಷೆಗಳಲ್ಲಿ ರಚಿತವಾಗಿರುವ ಕಾವ್ಯ: ಆನಂದವರ್ಧನನ ಕಾಲದಲ್ಲಿ ಪ್ರಾಕೃತಕಾವ್ಯಕ್ಕೆ ಇನ್ನೂ ಹೆಚ್ಚಾದ ಮನ್ನಣೆಯಿತ್ತು (ಕೃಷ್ಣಾಲೋ. XI ಮುನ್ನುಡಿ). [ಸಂ.]

**ಪ್ರಾಕೃತಜನ** (ನಾ). ಪಾಮರಜನ; ನಾಡಾಡಿಜನ: ವಲಂ ವಿಷಯಾಸಕ್ತಿಯೊಳಾಯಾಸ್ಯಕನಿರತರಾಗಿರ್ಪ ಪ್ರಾಕೃತಜನಂಗಳ ಗಮನಮೇ ಸಮಸ್ತವೇದಿಗೆ ಹೃದಯಂಗಮಮಪ್ಪಾಗದು (ಶಾಂತಿಕು. ೯-೦೦೩ ಪ). [ಸಂ.]

**ಪ್ರಾಕೃತಪುರುಷ** (ನಾ). ಸಾಮಾನ್ಯಮನುಷ್ಯ; ನಾಡಾಡಿ; ಪಾಮರ: ಮೊಗಮಂ ನೋಡುತ್ತುಮಿನಿವಿಂದು ಪರಾಭವಂ ಪ್ರಾಕೃತಪುರುಷಂಗಂ ಕಾಪುರುಷಂಗಂ ಪೊತ್ತು ನಿಲ್ಲುದರಿದು (ಶಾಂತಿಕು. ೩-೬೬ ಪ). [ಸಂ.]

**ಪ್ರಾಕೃತಭಾಷೆ** (ನಾ). = ಪ್ರಾಕೃತ ೮: ಪ್ರಾಕೃತಭಾಷೆಗೆ ಸಂಸ್ಕೃತವೇ ಮೂಲವಾಗಿ (ಪ್ರಕೃತಿಯಾಗಿ)ರುವುದು. ಇದು ಸಂಸ್ಕೃತದಿಂದ ಹುಟ್ಟಿದುದೆಂದಾಗಲಿ, ಸಂಸ್ಕೃತದಿಂದ ಬಂದಿತೆಂದಾಗಲಿ . . . ಈ ಭಾಷೆಗೆ ಪ್ರಾಕೃತಭಾಷೆಯೆಂದು ಹೆಸರು ಬಂದಿದೆ (ಶಾಕಕ. ೯೩೬). [ಸಂ. ಪ್ರಾಕೃತಭಾಷಾ]

**ಪ್ರಾಕೃತಾಸ್ತ್ರ** (ನಾ). ಸಾಮಾನ್ಯವಾದ ಬಾಣ — ಅಸ್ತ್ರ: ಪ್ರಾಕೃತಾಸ್ತ್ರನಿಕರಂಗಳಿನಂತಾ ಭೀಕರರ್ ಕರಮ ಕಾದೆ ಬಟ್ಟೆ ಕ್ಕೆಪ್ರಾಕೃತಾಸ್ತ್ರನಿಧಿಯಂ ತೆಗೆದಂ ಶೌರ್ಯಾಕರಂ ಪೆಗಟ್ಟಿ ಮಾಗಧಭೂಪಂ (ಕೇಚಂಪು. ೦೨-೨೫೦). [ಸಂ.]

**ಪ್ರಾಕೃತಿಕ** (ಗು). ಪ್ರಕೃತಿಗೆ ಸಂಬಂಧಿಸಿದ; ಸ್ವಾಭಾವಿಕವಾದ; ನೈಸರ್ಗಿಕವಾದ: ಪ್ರಾಣ ಮೊದಲಾದುವು ಪ್ರಕೃತಿಯಿಂದ ಸಿದ್ಧಿಸಿದುವು. ಇವಕ್ಕೆ ಪ್ರಾಕೃತಿಕ ಎಂದು ಹೆಸರು (ಶಾಕಕ್ಕ. ೮೩೬); ಬೆಂಗೂರಿನ ಪ್ರಾಕೃತಿಕಸ್ವರೂಪ ಅಂಥದು (ದಾಬಚಾ. ೦). [ಸಂ.]

**ಪ್ರಾಕ್ಕು₁** 'ಪ್ರಾಕ್ಕು₁' ನೋ.

**ಪ್ರಾಕ್ಕು₂** 'ಪ್ರಾಕ್ಕು₂' ನೋ.

**ಪ್ರಾಕ್ತನ** (ಗು). ೧. ಹಿಂದಿನ; ಪೂರ್ವದ: ಪ್ರಾಕ್ತನಜನ್ಮವಿದ್ಯೆಗಳ್ ಬಂದನಿತುಂ ನೆಲಸಿದವು ಸಕಲವಿದ್ಯಾನಿಧಿಯೊಳ್ (ಆಪು. ೩-೬೮); ಪ್ರಾಕ್ತನಪುಣ್ಯಪ್ರಾಪ್ತಿಯಿಂದಾ ಬಯಕೆ ಸಮನಿಸಿತುಂ ಚಾತವೇದಂ (ಸುಕ್ಷಿಪು. ೯-೨೯); ಮನದೊಳೆನಗೀಶ ಮತ್ಪ್ರಾಕ್ತನಜನ್ಮಾವಳಿಯನೆಯ್ದೆ ಕೇಳ್ವಟ್ಟು ಕರಂ ಜನಿಯಿಸಿದಪ್ಪುದು (ಶಿಂದ್ರಪು. ೩-೬). (ನಾ). ೨. ಅತಿ ಹಿಂದಿನ ಕಾಲ; ಪೂರ್ವಕಾಲ: ವ್ಯಕ್ತವಾಗಿಹ ಶಬ್ದವುದಿಸದು ಪ್ರಾಕ್ತನದ ಜನ್ಮದಲಿ ಪುಣ್ಯದ ಶಕ್ತಿಯಿಲ್ಲದಿರೆ ಪುದಕಾರ್ಯವು ದುರ್ಲಕ್ಷ್ಯವೆಂದೆನಲು (ಶವೀಳ. ೩-೩೦); ಪ್ರಾಕ್ತನವೇ ಹೊಸ ಹಾಗೆ ನೂತನವಿದು ರಮ್ಯವಾಗಿ (ಕಾವ್ಯಾ. ೯೬-೦೩). ೩. ಹಿಂದಿನ ಕಾಲದ ವಿದ್ವಾಂಸ: ವರ್ಗದಕ್ಕರಂಗಳ್ ನಾಲ್ಕುಂ ಶಾಂತಮಿರೆ ಪೇಟ್ಟ ತಾಣದೊಳಂತಕ್ಕುಂ ಪ್ರಾಕ್ತನೋಕ್ತವರ್ಗಪ್ರಾಸಂ (ಶಂರೋಂಬು. ೦-೯೬ ೩೩ಪ). ೪. ಹಣೆಯ ಬರೆಹ; ವಿಧಿ; ಅದೃಷ್ಟ: ಪ್ರಾಕ್ತನದಲ್ಲಿ ಸುಖವನ್ನು ನೋಡದೆ ಕಷ್ಟವನ್ನೇ ಅನುಭವಿಸಬೇಕೆಂದಿದ್ದರೆ ಅದಕ್ಕೆ ನಾನಾದರೂ ಏನು ಮಾಡಲಿ? (ಶಕಮೀ. ೦೫). [ಸಂ.]

**ಪ್ರಾಕ್ತನವಿಮರ್ಶಕ** (ನಾ). ಪ್ರಾಚೀನಕಾಲದ ವಿಷಯವನ್ನು ಪರಿಶೀಲಿಸುವವನು, ಅಭ್ಯಾಸ ಮಾಡುವವನು: ಇದು ಕೃಷ್ಣಾ-ಗೋದಾವರೀನದಿಗಳ ನಡುವಣ ಆಂಧ್ರಶಿಲ್ಪಿಯೊಬ್ಬನ ಕೈಕೆಲಸವೆಂದು ಪ್ರಾಕ್ತನ ವಿಮರ್ಶಕರ ನಿರ್ಣಯ (ಶಕಶ. ೩೩೯). [ಸಂ.]

**ಪ್ರಾಕ್ತನಶಾಸ್ತ್ರ** (ನಾ). ಪ್ರಾಚೀನಅವಶೇಷಗಳ ಶೋಧನೆಗೆ ಸಂಬಂಧಿಸಿದ ಶಾಸ್ತ್ರ: ಅವನು ಅಧ್ಯಾಸಕ್ಕೆ ಪ್ರಾಕ್ತನಶಾಸ್ತ್ರವನ್ನು ಮುಖ್ಯವಿಷಯವಾಗಿ ಆರಿಸಿಕೊಂಡನು (ರೂಢಿ). [ಸಂ.]

**ಪ್ರಾಕ್ತನಶೋಧಕ** (ನಾ). ಪ್ರಾಚೀನಅವಶೇಷಗಳನ್ನು ಶೋಧಿಸುವವನು: ಪ್ರಾಕ್ತನಶೋಧಕನ ಕೆಲಸ ಬಹಳ ಕಷ್ಟಕರವಾದುದು (ರೂಢಿ). [ಸಂ.]

**ಪ್ರಾಕ್ತನಶೋಧನೆ** (ನಾ). ಪ್ರಾಚೀನ ಅವಶೇಷಗಳನ್ನು ಅನ್ವೇಷಿಸುವುದು : ರಾಷ್ಟ್ರೀಯಮಹತ್ತ್ವವುಳ್ಳವೆಂದು ಸಂಸತ್ತಿನಿಂದ ವಿಧಿದ್ವಾರಾ ಘೋಷಿತವಾದ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಅಭಿಲೇಖಗಳು ಮತ್ತು ಪ್ರಾಕ್ತನಶೋಧನೆಯ ನಿವೇಶನಗಳು ಮತ್ತು ಅವಶೇಷಗಳು (ಕಾಂಡಂಸ. ೨೬೪). [ಸಂ.]

**ಪ್ರಾಕ್ಪ್ರಣೇತ** (ನಾ) ಐದು ಬಗೆಯ ಭಿಕ್ಷೆಗಳಲ್ಲಿ ಒಂದು ; ತಂಗಳು : ಮಾಧೂ[ಧು]ಕರ ಅಸಂಕ್ಲುಪ್ತ ಪ್ರಾಕ್ಪ್ರಣೀ[ಣೀ]ತ ಅಯಾಚಿತ ತಾತ್ಕಾಲಿಕವೆಂಬ ಪಂಚವಿಧಭಿಕ್ಷಂಗಳನಾದೊಡಂ . . . ಭೋಜನಗೈದು (ಏಕೋ. ೦೨೯). [ಸಂ.]

**ಪ್ರಾಗಲ್ಭ್ಯ** (ನಾ). ೧. ದಿಟ್ಟತನ ; ಧೈರ್ಯ : ಅತಿಕಠೋರಶರೀರವಪ್ಪ ಸುಕುಮಾರಪ್ರಕೃತಿಯಪ್ಪ ನಾರೀಜನಕೆ ಪ್ರಾಗಲ್ಭ್ಯಂ ದೊರೆಕೊಳ್ವುವುದಲ್ಲ (ಕಾದಂಬ. ೬೦೩). ೨. ಜಂಬ ; ಹೆಮ್ಮೆ ; ಅಹಂಕಾರ. ೩. ಪ್ರಾವೀಣ್ಯ ; ನಿಪುಣತೆ ; ಕೌಶಲ : ಸುಹೃದ್ಬಲಕಂ ಮಾರ್ವಲಕಂ ಗುಣಾರ್ಣವ ಶರಪ್ರಾಗಲ್ಭ್ಯಮಂ ತೋಱುವಂ (ಪಂಪಭಾ. ೩-೩೩) ; ಚಿತ್ರಕನ ಚಿತ್ರವಿದ್ಯಾಪ್ರಾಗಲ್ಭ್ಯಮಂ ಪ್ರತ್ಯೇಕವಮವಲೋಕಿಸಿ (ಸುಕು. ೩-೧೩); ಹೀಗೆ ಉಚಿತವಾದ ಪದವೈತ್ರಿಯಿಂದಲೂ ರೀತಿಯಿಂದಲೂ ಚಿಂತನೆಯ ಪ್ರಾಗಲ್ಭ್ಯದಿಂದಲೂ ನವ್ಯರಸಸ್ಯಂದಿಯಾದ ಭಾವನೆ (ಕಾವ್ಯಕು. ೪೬). ೪. ಪ್ರವೀಣ; ನಿಪುಣ : ಅಪ್ರತಿಹತಪ್ರಾಗಲ್ಭ್ಯರೀಗಳ್ ಪೃಥಾಸುತರ್ (ಪಂಪಭಾ. ೬-೯೭). [ಸಂ.]

**ಪ್ರಾಗವಸ್ಥೆ** (ನಾ). ಹಿಂದಿನ ಸ್ಥಿತಿ; ಪೂರ್ವದ ಅವಸ್ಥೆ : ಪ್ರಧಾನವೂ ಜಗತ್ತಿನ ಪ್ರಾಗವಸ್ಥೆ ಅತ್ಯಾಕೃತವೂ ಪ್ರಾಗವಸ್ಥೆ (ಭೃಹ್ಮಸಾ. ೩೬೦). [ಸಂ. ಪ್ರಾಗವಸ್ಥಾ]

**ಪ್ರಾಗೈತಿಹಾಸಿಕ** (ಗು). ಇತಿಹಾಸಕ್ಕೂ ಪೂರ್ವಕಾಲದ : ಜನಪದ ಸಾಹಿತ್ಯವು ಪ್ರಾಗೈತಿಹಾಸಿಕಜೀವನದ ಪರಂಪರಾಗತಸಂಗತಿಯಾಗಿದೆ (ಕನ್ನಡ. IV. ಕೃಷ್ಣಾಪತ) : ಆಗ ಹಳೆಗಾಲದ ಪ್ರಾಗೈತಿಹಾಸಿಕಜನರ ಪಂಶೀಲನೆಯೂ . . . ಅಗತ್ಯವಾಗಿ ಕಂಡು ಬಂತು (ಕುಲಾವ. ೯). [ಸಂ.]

**ಪ್ರಾಗ್ಜನ್ಮ** (ನಾ). ಹಿಂದಿನ ಹುಟ್ಟು; ಪೂರ್ವಜನ್ಮ: ಪ್ರಾಗ್ಜನ್ಮಕಥಾವಳಿಯೆಲ್ಲಮಂ ಬಗೆದು ನೋವೆನಗಾದುದು (ಆದಿಪು. ೩-೩೩) ; ಮಿಗೆ ಮತಂಗನು ಮತ್ತೆ ಪ್ರಾಗ್ಜನ್ಮಗಳ ಕರ್ಮವಿಶೇಷದಿಂದಱಿಕೆಗಳನ್ನುಳ್ಳವ ತಿಳಿವ ತಿರ್ಯಗ್ಜಾತಿಭಾಷೆಗಳ (ತಿಪ್ಪು. ೨-೩). [ಸಂ.]

**ಪ್ರಾಗ್ಭವ** (ನಾ). ೧. ಮೂಡಲಲ್ಲಿ ಹುಟ್ಟಿದುದು ; ಪೂರ್ವದಲ್ಲಿ ಅವತರಿಸಿದುದು : " ಪ್ರಾಚೀನಂ, ಪ್ರಾಗ್ಭವಂ-ಮೂಡಲಲ್ಲಿ ಹುಟ್ಟಿದ್ದು" (ಸಿದ್ಧಾಂತ. ೨೬). ೨. ಹಿಂದಿನ ಜನ್ಮ,-ಹುಟ್ಟು. [ಸಂ.]

**ಪ್ರಾಗ್ಭಾರತೀಯ** (ಗು). ಭಾರತದ ಚರಿತ್ರೆಗೆ ಹಿಂದಿನ : ಹರಪ್ಪ ಸಂಸ್ಕೃತಿ ಅಥವಾ ಪ್ರಾಗ್ಭಾರತೀಯಸಂಸ್ಕೃತಿ (ಪ್ರೋಟೋ-ಇಂಡಿಕ್) ಆಕಸ್ಮಿಕವಾಗಿ ಬೆಳಕಿಗೆ ಬಂದಿತು (ಭಾರತ. ೯). [ಸಂ.]

**ಪ್ರಾಗ್ರ** (ಗು). ೧. ಎತ್ತರವಾದ ; ಉನ್ನತವಾದ. (ನಾ). ೨. ತುತ್ತತುದಿ. ೩. ಮುಖ್ಯನಾದವನು; ಪ್ರಮುಖ : ಉಗ್ರತಪದಿಂದೆಯತುಳ ಸಮಗ್ರೈಯನಭವಂಗೆ ವಧುವೆನಿಪ್ಪಳನಾನಮ್ಮಗ್ರುದೆ ಪಡೆವೆಂ ಕುಧರಪ್ರಾಗ್ರನ ಕಳಿಪೆಂದು ಮೇನೆ ನುಡಿವವಸರದೊಳ್ (ಗಿರಿಜಾ. ೩-೬). [ಸಂ.]

**ಪ್ರಾಗ್ರೂಪ** (ನಾ). ೧. ಹಿಂದಿನ ಆಕಾರ; ಪೂರ್ವರೂಪ. ೨. ರೋಗವು ವ್ಯಕ್ತವಾಗುವ ಮೊದಲು ತೋರುವ ರೋಗಲಕ್ಷಣ : ಪ್ರಾಗ್ರೂಪವೆಂಬುದು ರೋಗ ಹುಟ್ಟುವ ಮೊದಲೇ ಅವ್ಯಕ್ತವಾದ ಲಕ್ಷಣ (ವೈದ್ಯಶಾ. I. ೨೫); ಪ್ರಾಗ್ರೂಪ ಎಂದರೆ ರೋಗ ಹುಟ್ಟುವುದಕ್ಕೆ ಮೊದಲೇ ಉಂಟಾದ ಅವ್ಯಕ್ತವಾದ ರೋಗಲಕ್ಷಣ (ಶಲ್ಯ. ೨೦). [ಸಂ.]

**ಪ್ರಾಗ್ವಂಶ** (ನಾ). ಹೋಮದ್ರವ್ಯವಿರುವ ಗೃಹಕ್ಕೆ ಪೂರ್ವಭಾಗದಲ್ಲಿರುವ, ಯಜಮಾನ ಮತ್ತು ಋತ್ವಿಕ್ಕುಗಳು ಇರುವ ಗೃಹ ; ಯಜ್ಞಶಾಲೆಯ ಒಂದು ಭಾಗ : "ಪ್ರಾಗ್ವಂಶಃ . . . ಹವಿಸ್ಸೆಂಬ ಹೋಮದ್ರವ್ಯವಿರುವ ಮನೆಗಿಂತಲೂ ಮೂಡಲಲ್ಲಿ ಯಜಮಾನ ಮೊದಲಾದವರಿಗಿರುವುದಕ್ಕೆ ನಿರ್ಮಿಸಿದ ಮನೆಗೆ ಹೆಸರು" (ಸಿದ್ಧಾಂತ. ೨೦೬) ; ಮಯಂ ವಿಸ್ಮಯಮಾಗೆ ಮಾಡಿದ ಸಭಾವಿಸ್ತಾರಮಂ . . . ಯಾಗಿಜೀವ ಯಜನಪ್ರಾಗ್ವಂಶವಕ್ಷೀವಿಚಿತ್ರಮಹಾಶಾಲೆಗಳಂ (ಜಗನ್ನಾ. ೦೬-೩) ; ಈ ಜನವಳಯದೊಳು ಪ್ರಾಗ್ವಂಶದಲಿ ಪರಿವೀಳಿತವಾಯ್ತು ಸದಸ್ಯ ಋತ್ವಿಜರ ವಿಧಾನದಲಿ (ಜಮಿನಿ. ೭-೩೦). [ಸಂ.]

**ಪ್ರಾಗ್ವಾಸನೆ** (ನಾ). ಹಿಂದಿನ ಜನ್ಮದ ಸ್ವಭಾವಗಳ ಕೋರಿಕೆ : ಮತ್ತೆ ಪ್ರಾಗ್ವಾಸನೆಯ ಪೆಸರಿನ ಸುತ್ತುವಳ್ಳಿಯ ಮೆಟ್ಟಿರದೆ ಮೈವತ್ತುತಿಹ ಸಂಕಲ್ಪ ಚಿಗುರಿಗೆ ಜುಟ್ಟು ತಗಲಿಸದೇ (ಗಣಕಾ. ೦೬-೧೯). [ಸಂ. ಪ್ರಾಗ್ವಾಸನಾ]

**ಪ್ರಾಗ್ವೈಭವ** (ನಾ). ಹಿಂದಿನ ಕಾಲದ ವೈಭವ : ಯುಟಿಯುತ್ತಿದೆ ಪಾಪಾಜಾದಿ ಪ್ರಾಗ್ವೈಭವ ಜೀವ (ಕರುಣ್ಯಾ. ೭೦-೦). [ಸಂ.]

**ಪ್ರಾಘಾರ**(ನಾ). ೧. ಸೋರುವಿಕೆ; ಒಸರುವಿಕೆ: "ಶ್ಚ್ಯೋತಃ, ಪ್ರಾಘಾರಃ -೨ ಸೋರಿಹೋಗುವಿಕೆ, ಸೋರುವಿಕೆ" (ಸಿದ್ಧಾಂತ. ೩೪೪). ೨. ಹೋಮದಲ್ಲಿ ಅಗ್ನಿಗೆ ಮಾಡುವ ಆಜ್ಯಾಹುತಿ. [ಸಂ.]

**ಪ್ರಾಘುಣಕ** (ನಾ). ಆಮಂತ್ರಣವನ್ನು ಪಡೆದು ಅಥವಾ ಪಡೆಯದೆ ಮನೆಗೆ ಬರುವ ಗೌರವಸ್ಥ ; ಅತಿಥಿ ಅಥವಾ ಅಭ್ಯಾಗತ : " ಅತಿಥಿಯಾಗಂತು ಪ್ರಾಘುಣಕನೆನೆ ಬರ್ದಿನಂ " (ಮಂಗರಾ. ೭೦-೦೬). [ಸಂ.]

**ಪ್ರಾಙ್ಮುಖ** (ಗು). ೧. ಪೂರ್ವದಿಕ್ಕಿಗೆ ಮುಖ ಮಾಡಿಕೊಂಡಿರುವ; ಪೂರ್ವಾಭಿಮುಖವಾದ : ಮಹಾಪಥಗಮನವ್ರವಾಸವ್ರತವ ಒಡಿದ ಮಲಚರಿತರು ಮನವ ಬಲಿದಿಹ ಗಾಢಧೈರ್ಯದಲಿ ಅಮರಶ್ರವನ್ನೀತಟಕೆ ನಿರ್ಗಮಿಸಿ ಪ್ರಾಙ್ಮುಖವರ್ತನದಿನುತ್ತಮವೆನಿಪ ನಿಜಯೋಗಬಲದಲಿ ನಡೆದರಲ್ಲಿಂದ (ತಿಮ್ಮ. ೦-೨೬). (ನಾ). ೨. ಪೂರ್ವಾಭಿಮುಖವಾಗಿರುವುದು : ಮುನ್ನಮೆ ನಿಜಾಸಿದ ಮಣಿಮಕುಟತೋನ್ನತಹರಿಪೀಠದೋಳ್ ಜಗತ್ಪತಿಯ ಮಾನೋನ್ನತನಂ ಪ್ರಾಙ್ಮುಖದಿಂದುನ್ನತಸುರಮಾಲಿರಾಲಿತಾಂಘ್ರಿದ್ವಯನಂ ಇರಿಸಿ (ಆದಿಪು. ೬-೩೮). [ಸಂ.]

**ಪ್ರಾಚಾರ್ಯ** (ನಾ). ಮುಖ್ಯ ಉಪಾಧ್ಯಾಯ; ಪ್ರಮುಖ ಗುರು : ಹಂಜೇರುಪಟ್ಟಣ ಒಂದು ಮಹಾಘಟಿಕಾಸ್ಥಾನವಾಗಿತ್ತು . . . ಅನಂತಶಿವದೇವರು ಎಂಬ ಗುರು ಅದರ ಪ್ರಾಚಾರ್ಯರಾಗಿದ್ದರು (ಶೋಕಂಬ. ೭೭); ಪ್ರಾಚಾರ್ಯ ಪರಾಂಜಪೆಯವರ ಕಡೆಗೆ ಹೋದಾಗ ಅವನ ವಿಷಯವನ್ನೆಲ್ಲ ಜ್ಞಾಪಕಕ್ಕೆ ತಂದುಕೊಂಡು ಅವರು ನರಹರಿಗೆ ನಗುತ್ತ ನುಡಿದಿದ್ದರು (ಸಮುಜ. ೦೨೨೪). [ಸಂ.]

**ಪ್ರಾಚಿಕೆ** (ನಾ). ೧. ಒಂದು ಬಗೆಯ ಪಕ್ಷಿ; ಗಿಡುಗ; ಡೇಗೆ : " ಪ್ರಾಚಿಕೆ ವಿಷಮತ್ತಿಡನಂ ಶ್ಯೇನಮೆನೆ ಗಿಡುಗನಕ್ಕುಂ " (ಮಂಗರಾ. ೩೨-೬). ೨. ಕಾಡುನೊಣ. ೩. ಸೊಳ್ಳೆ. [ಸಂ. ಪ್ರಾಚಿಕಾ]

**ಪ್ರಾಚೀನ** (ಗು). ೧. ಪೂರ್ವದಿಕ್ಕಿನಲ್ಲಿರುವ. ೨. ಹಳೆಯ; ಹಿಂದಿನ; ಪುರಾತನಕಾಲದ : ಸತ್ಯಕ್ಕೇ ಅಂತಿಮವಿಜಯ ಸುನಿಶ್ಚಿತ . . . ಎಂದು ಪ್ರಾಚೀನಮುನಿಪುಂಗವರು ಹೇಳಿದರು (ರವೀಂದ್ರ. ೩); ಪ್ರಾಚೀನ ಆಸ್ಟ್ರೇಲಿಯನರೇ ಭಾರತದ ಮೂಲನಿವಾಸಿಗಳೆನ್ನಬಹುದು (ದ್ರಾವಿಡ. ೨೯). (ನಾ). ೩. ಹಳೆಯದು; ಪುರಾತನವಾದುದು : ದಕ್ಷಿಣಭಾರತದಲ್ಲಿ ಚಿತ್ರಕಲೆ ಸಾಕಷ್ಟು ಪ್ರಾಚೀನವಾದುದೇ ಆಗಿದೆ (ಭಾರತ. ೩೨೬); 'ವಿಂಧ್ಯಗಿರಿ' ಎಂಬ ಹೆಸರು ಎಷ್ಟು ಪ್ರಾಚೀನವೋ ತಿಳಿಯದು (ಸಂಶೋಧ. ೭೭). ೪. ಮೂಡಲಿಗೆ ಸೇರಿದುದು; ಪೂರ್ವಕ್ಕೆ ಸಂಬಂಧಿಸಿದುದು : "ಪ್ರಾಚೀನಂ, ಪ್ರಾಕ್-ಈ ೨ ಮೂಡಲುಂಟದುದು" (ಶಬ್ದಮ. ೦೬-೧೧೩).

೫. — ಪ್ರಾಚೀನಕರ್ಮ : ನಮ್ಮ ಪ್ರಾಚೀನಕ್ಕೆ ಯಾರು ಹೊಣೆ ರಂಗಮ್ಮ (ಪಾಟು. ೦೦೬); ಹೇಗೆ ಪ್ರಾಚೀನದಲ್ಲಿ ಬರೆದಿದೆ ಹಾಗೆ ಇರಬೇಕು ಸಂಸಾರದಲ್ಲಿ (ಹೀಟ.ಕೊ. ೯೬). ೬. — ಪ್ರಾಚೀನಾವೀತ : "ಜನ್ನಿವಾರವ ನೆಡದೊಡಲು ಪ್ರಾಚೀನಂ" (ಪುಟಗರ. ೬೬-೪). ೭. ಬೇಲಿ; ಗೋಡೆ; ಪೌಳಿ : "ಪ್ರಾಚೀನಂ . . . ಊರ ಸುತ್ತಲೂ ಹಾಕಿರುವ ಬೇಲೀ ಮುಂತಾದ ತಡೆಗಳ ಹೆಸರುಗಳು" (ಸಿದ್ಧಾಂತ. ೯೯). ೮. ಹಳಬ; ಮುದುಕ; ವೃದ್ಧ : ಅವರೆಲ್ಲೂಟ್ಟ ವೃದ್ಧನೂ ಒಬ್ಬ ಯುವಕನೂ . . . ಎಚ್ಚರವಾಗಿದ್ದರು. ಪ್ರಾಚೀನನು ಯುವಾಪುರುಷನ ಸಂಗಡ ಮಾತಾಡುತ್ತಿದ್ದನು (ಕಥಾಕು. ೦). 'ಅರ್ವಾಚೀನ' ಪರಾ. [ಸಂ.]

ಪ್ರಾಚೀನಕರ್ಮ (ನಾ). ಪೂರ್ವಜನ್ಮಗಳಲ್ಲಿ ಮಾಡಿದ ಪಾಪಕರ್ಮ ಮತ್ತು ಅದರ ಫಲ : ಪ್ರಾಚೀನಕರ್ಮವು ಬಿಡಲರಿಯದು (ಪುರಂದ. ೯-೦೬ ಕಲ್ಯಾ). [ಸಂ. ಪ್ರಾಚೀನಕರ್ಮನ್]

ಪ್ರಾಚೀನಕಾಲ (ನಾ). ಹಿಂದಿನ ಕಾಲ : ನಮ್ಮ ದೇಶದಲ್ಲಿ ಬಹಳ ಪ್ರಾಚೀನಕಾಲದಿಂದ ಅರಳೆಯ ನೂತು ಬಟ್ಟೆಗಳನ್ನು ಮಾಡುವ ರೀತಿಯು ಜನರಿಗೆ ಗೊತ್ತುಂಟು (ಕುಂಬಾರು. ೯-೨೯); ಈ ಸಾಹಿತ್ಯದ ಸಮಗ್ರವಾದ ಇತಿಹಾಸವನ್ನು ಪ್ರಾಚೀನಕಾಲದ ಯಾರೂ ಬರೆಯಲಿಲ್ಲ (ಅಂಕಾ. ೨೦೬). [ಸಂ.]

ಪ್ರಾಚೀನತೆ (ನಾ). ಹಳೆಯದಾಗಿರುವಿಕೆ : ಭಾರತದಲ್ಲಿ ಮೂರ್ತಿಶಿಲ್ಪದ ಪ್ರಾಚೀನತೆಯನ್ನು ಸಮರ್ಥಿಸಲು ನಮಗೆ ಅನೇಕ ಗ್ರಂಥಗಳ ಆಧಾರ ದೊರೆತಿದೆ (ಭಾರತ. ೩೦೯); ದ್ರಾವಿಡಭಾಷೆಗಳ ಉಗಮ ವಿಕಾಸ ವರ್ಗೀಕರಣ ಅವುಗಳ ಪ್ರಾಚೀನತೆ . . . ಇವೇ ಮೊದಲಾದ ಅನೇಕ ವಿಷಯಗಳನ್ನೊಳಗೊಂಡಿದೆ (ಪ್ರಾ.ಶಿ. ೪. ಮುಮ್ಮು). [ಸಂ. ಪ್ರಾಚೀನತಾ]

ಪ್ರಾಚೀನಪಾಠ (ನಾ). ಹಸ್ತಪ್ರತಿಗಳಲ್ಲಿ ತುಂಬಾ ಹಳೆಯದಾದ ಪ್ರತಿಯ ಪಾಠ : ಇದು ಪ್ರಾಚೀನಪಾಠವೂ (Antiquarian's text) ಆಗಿರದೆ ವಿಮರ್ಶನಪಾಠವೂ (Critic's text) ಆಗಿರದೆ ಎರಡರ ಮಧ್ಯದ ಒಡಂಬಡಿಕೆಯಾಗಿರುತ್ತದೆ (ಭಾರತ. ೮೫). [ಸಂ.]

ಪ್ರಾಚೀನಬರ್ಹಿ (ನಾ). ಇಂದ್ರ; ಈ ನೂರು ಯಜ್ಞಗಳನ್ನು ಮಾಡಿರುವುದರಿಂದ ಹಿಂದೆ ಬಹುಕಾಲ ಅಗ್ನಿಯ ಮುಂದೆ ಕುಳಿತಿದ್ದವನು: "ಇಂದ್ರಃ . . . ಪ್ರಾಚೀನಬರ್ಹಿಃ . . . ಮೇಘವಾಹನಃ — ಈ ೩೯— ದೇವೇಂದ್ರನ ಪೆಸರ್" (ಕರಾಟು. ೦೦-೩೨); ಪ್ರಾಚೀನಬರ್ಹಿರುಪಮಂ ಪ್ರಾಚೀಹರಿದಭಿಮುಖಂ ಮರುದ್ಧತಕೇತುಕೋಟಿತರ್ಜಿತರಿಪುಚಳಿತಾಚಳ ಸ್ವಾಭಗಜಾಧಿರೂಢನಧೀಶಂ (ಶಾಂತಿ. ೦೦-೦೯); ಪ್ರಾಚೀನಬರ್ಹಿ [ಸಕಲ]ಚರಾಚರಂ ಗುರುಸವನ[ದ] ಸಮಯದೊಳಾ [ಹೇವಾ]ಚಳಮ ಬೇವಸಂ ಕಾಳೋಚಿತಗತಿ ನೆಗಟ್ ಬಹುವಿಧಂ ನರ್ತಿಸುಗುಂ (ಕರ್ಣಾಮಾ. ೦೨-೯೯); ಆ ಮೇರುಪರ್ವತಂ . . . ಪ್ರಾಚೀನಬರ್ಹಿಯಂತೆ ನವಖಂಡ ಗೋತ್ರಾವಲಂಬಿಯುಂ (ಕಶಾಶ. ೦-೬೨ ಕ). [ಸಂ. ಪ್ರಾಚೀನಬರ್ಹಿಸ್]

ಪ್ರಾಚೀನವಾಸನೆ (ನಾ). = ಪ್ರಾಗ್ವಾಸನೆ : ತ್ರಿಗುಣವಾದ ಅಂತಃಕರಣದಲ್ಲೂ ಪ್ರಾಚೀನವಾಸನೆಯೆಂಬ ಕರ್ಮಾಧೀನವಾಗಿ ಆಯಾ ಕಾಲದಲ್ಲಿ ಒಂದೊಂದು ಗುಣವು ಉತ್ಕಟವಾಗಿ ಪ್ರಬಲವಾಗುವುದು (ಹಿಂದಾ. ೬೦). [ಸಂ. ಪ್ರಾಚೀನವಾಸನಾ]

ಪ್ರಾಚೀನಾವೀತ (ನಾ). ಎಡತೋಳಿನ ಕೆಳಗಡೆಯೂ ಬಲಭುಜದ ಮೇಲೆಯೂ ಬರುವಂತೆ ಧರಿಸುವ ಯಜ್ಞೋಪವೀತ ; ಈ ಪಿತೃಕಾರ್ಯಗಳಲ್ಲಿ ಮಾತ್ರ ಹೀಗೆ ಧರಿಸುತ್ತಾರೆ : "ಜನ್ನಿವಾರಮಂ . . . ಎಡದೊಡುವುದು ಪ್ರಾಚೀನಾವೀತಮೆಂಬುದು" (ಕರಾಟು. ೬೬-೨೬೩). [ಸಂ.]

ಪ್ರಾಚೀನಾವೀತಿ (ಗು). ಜನಿವಾರವನ್ನು ಎಡತೋಳಿನ ಕೆಳಗಡೆಯೂ ಬಲಭುಜದ ಮೇಲೆಯೂ ಬರುವಂತೆ ಧರಿಸಿರುವ. [ಸಂ. ಪ್ರಾಚೀನಾವೀತಿನ್]

ಪ್ರಾಚೀನೆ (ನಾ). ಒಂದು ವಿಧವಾದ ಮೂಲಿಕೆ ; ಆಗಳುಶುಂಠಿ : "ಪ್ರಾಚೀನಾ, ವನತಿಕ್ತಕಾ . . . ಅಗರುಶೊಂಠಿ, ಅಗಳುಶೊಂಠಿ" (ಸಿದ್ಧಾಂತ. ೦೪೦). [ಸಂ. ಪ್ರಾಚೀನಾ]

ಪ್ರಾಚೀರ (ನಾ). ಸುತ್ತುಗೋಡೆ; ಪೌಳಿ: ಅಲ್ಲಿ ಕೊಂಚದೂರ ಹೋಗಿ ನೋಡಲಾಗಿ, ಒಬ್ಬ ಹೆಂಗುಸು ತಮ್ಮ ಮನೆಯ ಪ್ರಾಚೀರ(ಮನೆಯ ಬಹಿರಾವರಣದ ಗೋಡೆ)ವನ್ನು ಅವಲಂಬಿಸಿಕೊಂಡು ಹೊರಗೆ ಏನನ್ನೋ ನೋಡುತ್ತಿದ್ದಳು (ಶಿಕಾಶ. ೨೯); ಸೌಭಾಗ್ಯಮಂದಿರದ ಪ್ರಾಚೀರದ ಮೇಲೆ ಮುಳ್ಳಿನ ಸಲಾಕಿಗಳು ಒತ್ತೊತ್ತಾಗಿ ನಡಲ್ಪಟ್ಟಿರುವುವು (ಕಶ್ಮಶ. ೦೨೬). [ಸಂ.]

ಪ್ರಾಚುರ (ನಾ). ಅಧಿಕವಾಗಿರುವಿಕೆ ; ಸಮೃದ್ಧಿಯಾಗಿರುವಿಕೆ : ಖೇಚರರುಯಿಡೆಗೆಯ್ದು ತಮ್ಮಯ ಪಥಶ್ರಮವಿಮೋಚನಂಗೆಯ್ದು ಪೋಗಲಿಮಂದು ರಚಿಸಿದ್ದ ಪ್ರಾಚುರದ ವೈಜಯಂತಿಗಳು ಕರಮೆಸೆದವಾ. ಪುರದ ಕೇರಿಗಳ ನಡುವೆ (ಗುಕುಪಾ. ೦-೨೯). [< ಸಂ. ಪ್ರಚುರ]

ಪ್ರಾಚುರ್ಯ (ನಾ). ಹೆಚ್ಚಾಗಿರುವುದು ; ಅಧಿಕವಾಗಿರುವುದು ; ಸಮೃದ್ಧಿ : ಪ್ರಾಚುರ್ಯಾತಿಶಯಂ ಪೊದಟ್ಟಮಳಪಟ್ಟಿಂಶದ್ಗುಣಶ್ರೇಣಿ ಪಂಚಾಚಾರಂ ಸುತಪಃಪರೀಷಹಜಯಂ . . . ಸಪ್ತರ್ಧಿಸಂಪನ್ನರ ಪ್ರಾಚಾರ್ಯರ್ ನಮಗೀಗೆ ನಿರ್ಮಳತ್ರಿವೇತ್ರಾಚಾರಸಂಪತ್ತಿಯಂ (ಶಾಂತೀಶ್ವ. ೦-೩); ಪ್ರಾಚುರ್ಯಸಮ್ಯಗ್ಧವಲಕೀರ್ತಿಯುಷ್ಮತ್ಪ್ರಭಾಚಾರುತರಕಟಾಕ್ಷ ಪ್ರಭಾವದೆ ದಲಾ ವಾಚಾಲವಾದಿಯಂ ಗೆಲ್ದು ಬರ್ಪಂ (ಶಬ್ದಗಾ. ೯-೨೬); ಕನ್ನಡ ಭಾಷೆಯು ಸಂಸ್ಕೃತಜನ್ಯವೆಂದು ಕರೆಯಲ್ಪಡಲು ಪ್ರಮುಖವಾದ ಕಾರಣವೆಂದರೆ ಈ ಭಾಷೆಯ ಕೋಶದಲ್ಲಿ ಕಂಡುಬರುವ ಸಂಸ್ಕೃತಶಬ್ದಗಳ ಪ್ರಾಚುರ್ಯವೆಂದೇ ಹೇಳಬೇಕು (ಭಾಶಾಶ. ೯೬). [ಸಂ.]

ಪ್ರಾಚೇತಸ (ನಾ). ೧. ವಾಲ್ಮೀಕಿ : "ಪ್ರಾಚೇತಸಃ, ವಾಲ್ಮೀಕಿಃ, ಮೈತ್ರಾವರುಣಃ—(ಈ ೩) ವಾಲ್ಮೀಕಿ" (ಕರಾಟು. ೬೬-೨೬೮); ಕುಶ ಲವರಿಗಿಬರಿಹದನು ಪ್ರಾಚೇತಸನಗಸ್ತ್ಯನು ರಾಮಚಂದ್ರಗೆ ಬೆಸಸಿದುತ್ತರ ರಾಮಕಥೆಯನು ಸಾಂಗವಾಗಿರಲು (ಜೈಶ್ಮ. ೨ ಸೂಕ್ಷ); ಭೂಜಾತೆ ಪ್ರಾಚೇತಸನೊಲ್ಗಿನಾಪಿಂ ಪುಷ್ಪಾಶ್ರಮದೊಳ್ಜನಂ (ರಾಶಾಶ್ವ. ೯೯-೦೦). ೨. [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು; "ಶತಭಿಷೆ" (ಶಾಕಶ. ಕಾ. ೩). [ಸಂ.]

ಪ್ರಾಚ್ಯ (ಗು). ೧. ಎದುರಿಗಿರುವ ; ಸಮ್ಮುಖದ ; ಮುಂದಿನ. ೨. ಹಳೆಯದಾದ; ಪುರಾತನವಾದ. ೩. ಮೂಡಲು ದಿಕ್ಕಿನ; ಪೂರ್ವದಲ್ಲಿರುವ : ಪ್ರಾಚೀನಕಾಲದಲ್ಲಿ ಚೈನ, ಭಾರತ ಮುಂತಾದ ಪ್ರಾಚ್ಯದೇಶಗಳಲ್ಲಿ ಈ ಬೆಳವಣಿಗೆ ಮೊದಲು ಆರಂಭವಾಯಿತು (ಶಿಶ್ಲಶ. ೬೩). (ನಾ). ೪. ಪೂರ್ವದಿಕ್ಕಿನಲ್ಲಿರುವ ದೇಶ : 'ದೂರಪ್ರಾಚ್ಯ' ಪರಾ. [ಸಂ.]

ಪ್ರಾಚ್ಯತೆ (ನಾ). = ಪ್ರಾಚೀನತೆ : ಈ ಕಲೆಯು ಸುಮಾರು ಇನ್ನೂರು ವರ್ಷಗಳ ಪ್ರಾಚ್ಯತೆಯುಳ್ಳದಿರಬಹುದು ಎಂಬ ಊಹೆಯಿಂದ ತೃಪ್ತನಾಗಿದ್ದೆ (ಪುಸ್ತಕ. ೦೦). [ಸಂ. ಪ್ರಾಚ್ಯತಾ]

ಪ್ರಾಚ್ಯವೃತ್ತಿ (ನಾ). [ಛಂದ] ಮಾತ್ರಾಛಂದಸ್ಸಿನಲ್ಲಿರುವ ಒಂದು ವೃತ್ತ; ವೈತಾಲೀಯದಲ್ಲಿ ಒಂದು ಭೇದ: ಔಪಚ್ಛಂದಸಿಕಂ ಮೊದಲಾಗೆ ವೈತಾಳಿಯುಂ ಉದೀಚ್ಯವೃತ್ತಿಯುಂ ಪ್ರಾಚ್ಯವೃತ್ತಿಯುಮಪರಾಂತಿಕೆಯುಮೆಂದು ಮಾತ್ರಾಗಣಂಗಳಿಂ ವೈತಾಳೀಗಳ್ ಬೇಱಿವೇಱಿ ಪೆಸರ್ವಡೆಗುಂ (ಛಂದೋಂಬು. ೩-೨೨೦ ಕ). [ಸಂ.]

ಪ್ರಾಚ್ಯಶೈಲ (ನಾ). ಮೂಡಲ ಗಿರಿ; ಪೂರ್ವಾಚಲ: ಮನುವಂಶಪ್ರಾಚ್ಯಶೈಲದ್ಯುಮಣಿ ಜನಿಯಿಸಿದಂ ಚಕ್ರವರ್ತಿಪ್ರಧಾನಂ (ಅಂಕೃ. ೯-೬೯). [ಸಂ.]

**ಪ್ರಾಚ್ಯಶೋಧನೆ** (ನಾ). – ಪ್ರಾಕ್ತನಶೋಧನೆ : ಪ್ರಾಚ್ಯಶೋಧನೆಯನ್ನು ವೈಜ್ಞಾನಿಕವಾಗಿ ನಡೆಸಬೇಕಾದರೆ ಬಹಳ ಹಣವು ಬೇಕಾಗುತ್ತದೆ (ಕೂಶ). [ಸಂ. ಪ್ರಾಚ್ಯಶೋಧನ]

**ಪ್ರಾಜನ** (ನಾ). ಚಾವಟಿ ; ಚಾಟಿಕೋಲು ; ಬಾರುಕೋಲು : "ಪ್ರತೋದಃ, ಪ್ರಾಜನಂ, ತೋತ್ರಂ – ಈ ೩ ಮುಳುಹುಗೋಲ್" (ಹಲಾಯು. ೯೯–೨೨೩); "ತೋತ್ರಮುಚು ಕೋಲಲುಕ್ಕು ಪ್ರಾಜನಂ ಮುಳುಹು" (ಶಬ್ದಮ. ೦೦೯–೨). [ಸಂ.]

**ಪ್ರಾಜಾಪತ್ಯ** (ಗು). ೧. ಪ್ರಜಾಪತಿಗೆ ಸೇರಿದ. – ಬ್ರಹ್ಮನಿಗೆ ಸಂಬಂಧಿಸಿದ. (ನಾ). ೨. ಬ್ರಾಹ್ಮ, ಪ್ರಾಜಾಪತ್ಯ, ಆರ್ಷ, ದೈವ, ಗಾಂಧರ್ವ, ಆಸುರ, ರಾಕ್ಷಸ ಮತ್ತು ಪೈಶಾಚಗಳೆಂಬ ಎಂಟು ವಿಧವಾದ ಮದುವೆಗಳಲ್ಲಿ ಒಂದು; ವರನಿಂದ ತೆರ, ಕಾಣಿಕೆ ಮುಂತಾದುವನ್ನು ತೆಗೆದುಕೊಳ್ಳದೆ, ಇಬ್ಬರೂ ಧರ್ಮಕಾರ್ಯಗಳನ್ನು ಆಚರಿಸುತ್ತ ಸಂತೋಷವಾಗಿ ಬಾಳುತ್ತಿರಬೇಕೆಂದು ಹಾರೈಸಿ ಕನ್ಯಾಪ್ರದಾನ ಮಾಡುವುದು. ೩. ಗಂಗಾ ಮತ್ತು ಯಮುನಾ ನದಿಗಳು ಸಂಗಮಗೊಳ್ಳುವ ಸ್ಥಳ; ಪ್ರಯಾಗ. ೪. ವಿಷ್ಣು. ೫. ಒಂದು ಬಗೆಯ ತಪಸ್ಸು. ೬. ಪಿತೃಗಳ ಲೋಕ; ಪಿತೃಲೋಕ. ೭. ಸಂನ್ಯಾಸಾಶ್ರಮವನ್ನು ಸ್ವೀಕರಿಸುವ ಮೊದಲು ತನ್ನ ಸ್ವತ್ತೆಲ್ಲವನ್ನೂ ಇತರರಿಗೆ ದಾನ ಮಾಡುವಿಕೆ. ೮. ರೋಹಿಣೀನಕ್ಷತ್ರ. ೯. (ರಾಜನ) ಅಧಿಕಾರ; ಆಳ್ವಿಕೆ : ಪಶ್ಚಿಮದೇಶಗಳ ಪ್ರಾಜಾಪತ್ಯ ಇಂಥಲ್ಲಿ ಕ್ರಮೇಣ ಶಿಥಿಲವಾಗುತ್ತಿದೆ (ಚಿಸಂ. ೦೯). ೧೦. ಶಿಲ್ಪಶಾಸ್ತ್ರದ ಹಸ್ತಪ್ರಮಾಣಗಳಲ್ಲಿ ಒಂದು : ಈ ಪ್ರಕಾರದಿಂದಂಗುಲಿಗಳ ಭೇದವನಱುವುದಿನ್ನು ಹಸ್ತಭೇದವೆಂತೆನೆ ಪೂರ್ವೋಕ್ತಮಾನಾಂಗುಲವಿಪ್ಪತ್ತು ನಾಲ್ಕಾಗಲೊಂದು ಕಿಷ್ಕುಹಸ್ತವೆನಿಸುವುದು ಅದು ಇಪ್ಪತ್ತೈದಾದೊಡೆ ಪ್ರಾಜಾಪತ್ಯಹಸ್ತವೆನಿಸುಗು (ಖವೀಳ. ೨೧೦). [ಸಂ.]

**ಪ್ರಾಜಾಪತ್ಯಕೃಚ್ಛ್ರ** (ಗು). ಹೆಚ್ಚಾದ ಕಾಯಕ್ಲೇಶದಿಂದ ನಿರ್ವಹಿಸಬೇಕಾದ ಒಂದು ಬಗೆಯ ತಪಸ್ಸು : ದೋಷಪರಿಹಾರಾರ್ಥವಾಗಿ ಶರೀರಬಾಧಾತ್ಮಕತ್ವದಿಂ ಮಹಾಕಷ್ಟಂಗಳಾದ ತಪ್ತಕೃಚ್ಛ್ರ ಪ್ರಾಜಾಪತ್ಯಕೃಚ್ಛ್ರ . . . ಯಾವಕಕೃಚ್ಛ್ರಾದಿ ಕೃಚ್ಛ್ರಂಗಳಂ ಪಕ್ಷ ಮಾಸಾದಿಗಳಲ್ಲಿ ಅನ್ನಮಂ ಬೆಟ್ಟಿಸಿ ತಗ್ಗಿಸಿಕೊಂಬುದು (ಖವೀಳ. ೦೨೨). [ಸಂ.]

**ಪ್ರಾಜ್ಞ** (ನಾ). ೧. ಜಾಣ ; ಬುದ್ಧಿವಂತ; ಪಂಡಿತ : "ಧೀರಃ . . . ಪ್ರಾಜ್ಞಃ . . . ಮತಿಮಾನ್ – ಈ ೨೮ ವಿದ್ವಾಂಸರ್" (ಹಲಾಯು. ೩೩–೦೭೭); ದಿವಿಜೇಜ್ಯಂ ನಿಲೆ ಜನ್ಮಲಗ್ನಗೃಹದೊಳ್ ಪ್ರಾಜ್ಞಂ (ಜಾತಕ. ೦೩–೦೦); ಲೋಭಮೀ ವೇಗ್ಗಳದ ನಿರ್ಬಂಧನವು ಪ್ರಾಜ್ಞರಿಗುಚಿತವಲ್ಲೆಂದ (ಭಾಪ್ರಾ. ೯–೯); ರಾಮನೇನೊಂದುಮಂ ನುಡಿಯಲಾರದೆ ನೋಡುತಿರ್ದನ್ ಮನೋಜ್ಞನಂ, ವಾನರಮತಾಪ್ರಾಜ್ಞನಂ! (ಶ್ರೀರಾಮಾ. ೨೪೯–೦೨೭). ೨. ಪರಮಾತ್ಮ. ೩. [ತತ್ತ್ವಶಾ] ಆತ್ಮನ ಒಂದು ಅವಸ್ಥೆ; ಕಾರಣಶರೀರದಲ್ಲಿದ್ದು ಸುಷುಪ್ತ್ಯಾವಸ್ಥೆಯನ್ನು ಅನುಭವಿಸುವ ಜೀವ : ಕಾರಣಶರೀರದಲ್ಲಿರುವ ಜೀವನಿಗೆ ಪ್ರಾಜ್ಞನೆಂದೂ, ಪರಮಾತ್ಮನೆಂದೂ... ಹೇಳುವರು (ಶಿವಾಸೂ. ೯೯); ಈ ವಿಧದವಸ್ಥೆಯಲಿ ಹೊಳೆಯುವ ಜೀವನನಿಸುತ ವಿಶ್ವ, ತೈಜಸನೊಳಿ ಪ್ರಾಜ್ಞನೆನಿಪ್ಪ ಪೆಸರನು ತಳೆದು ತೋಱುವನು (ಅಮೃತ. ೯–೦೨) ; ಒಬ್ಬನೇ ಪರಮಾತ್ಮನು ವಿಶ್ವ, ತೈಜಸ, ಪ್ರಾಜ್ಞ ಎಂಬ ರೂಪಗಳಿಂದ ಜಾಗ್ರುತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳನ್ನು ಜೀವರಿಗೆ ಕೊಡುವನೆಂದು ತಾತ್ಪರ್ಯ (ಹರಿಕ. ೬–೦೯ ಟೀಕು). [ಸಂ.]

**ಪ್ರಾಜ್ಞಕ** (ನಾ). = ಪ್ರಾಜ್ಞ ೩ : ನಿತ್ಯಂ ಸಕಲಾತ್ಮಂ ಸೂತ್ರವೈಶ್ವಾನರರಧಿಗತವಿಶ್ವಾತ್ಮನುಂ ತೈಜಸಂ ಪ್ರಾಜ್ಞಕನಾದಂ (ಕಂಕಂ. ೩–೩೩). [ಸಂ.]

**ಪ್ರಾಜ್ಞಮತಿ** (ನಾ). ಬುದ್ಧಿವಂತ ; ಪಂಡಿತ : ಪ್ರಾಜ್ಞಮತಿ ಭರತನುರಿಯುಕ್ಕಿದನ್ (ಶ್ರೀರಾಮಾ. ೦೨೦–೨೨೩). [ಸಂ.]

**ಪ್ರಾಜ್ಞೆ** (ನಾ). ೧. ತಿಳಿದವಳು; ಪಂಡಿತೆ : "ಪ್ರಾಜ್ಞೀ, ಪ್ರಜ್ಞಾ – ೨ ಲೌಕಿಕವ್ಯವಹಾರದಲ್ಲಿ ಜಾಣೆಯಾದವಳು" (ಸಿದ್ಧಾಂತಿ. ೦೭೦). ೨. ಪಂಡಿತನ ಪತ್ನಿ. [ಸಂ. ಪ್ರಾಜ್ಞೀ]

**ಪ್ರಾಜ್ಞೆ** (ನಾ). ೧. ಅರಿವು ; ಬುದ್ಧಿ ; ತಿಳಿವಳಿಕೆ : ಆಗಲೇನಾಯ್ತಾಗ ಕಾಂಬೆವು ಯೋಗಪುರುಷನ ನಿಲೆಯನೆಂದೆನುತಾಗಲೇ ಹೊತ್ತಿಕ್ಕಿ ಪ್ರಜ್ವಲಿಸಿದುದು ಪ್ರಾಜ್ಞೆಯಲಿ (ಶಿವಾಗ. ೯–೭–೩೯). ೨. = ಪ್ರಾಜ್ಞೆ ೧ : "ಪ್ರಾಜ್ಞಾ, ಧೀಮತೀ—೨ ಬಹಳ ಬುದ್ಧಿಯುಳ್ಳವಳು" (ಸಿದ್ಧಾಂತಿ. ೦೭೦). [ಸಂ. ಪ್ರಾಜ್ಞಾ]

**ಪ್ರಾಜ್ಯ** (ಗು). ೧. ಬಹಳವಾದ; ಅತಿಶಯವಾದ. ೨. ಉತ್ತಮವಾದ; ಶ್ರೇಷ್ಠವಾದ : ಹಿತಪುರೋಹಿತ ಪ್ರಾಜ್ಯಾಜ್ಯಾಹುತಿಹುತಹುತವಹಸಮುಜ್ಜ್ವಲರೊಳ್ (ಜಂಕಶಾ. ೩–೭೫ ಕ) ; ಪರಪೀಡಾಮುಖಿದುಷ್ಟದುರ್ಜನನೀಕಾಯಾತಂಕದಿಂ... ಮೇಣಜೀರ್ಣಭಯದಿಂ ಪ್ರಾಜ್ಯಾನ್ನಮೇಂ ತ್ಯಾಜ್ಯಮೇ (ಜಿಂಕೃಷಿ. ೦–೯೩). (ನಾ). ೩. ಬಹಳವಾದುದು ; ಹೆಚ್ಚಾದುದು : "ಪ್ರಾಜ್ಯಂ ... ಅದಭ್ರಂ—ಈ ೧೮ ಮೊಕ್ಕಳಂ" (ಹಲಾಯು. ೦೦೬–೦೭). ೪. ಉತ್ತಮವಾದುದು ; ಶ್ರೇಷ್ಠವಾದುದು : ನಿನಗಿಂ ತ್ಯಾಜ್ಯಂ ಪರಿಗ್ರಹಂ ದಲ್ ಪ್ರಾಜ್ಯಂ ತಪಮದುವೆ ಪಾಲ್ಯಮಾ ಕೈವಲ್ಯಂ (ಅಜಿತ. ೬–೭೭) ; ಪೂಜ್ಯರುಮೇಣ್ ಪೆಟ್ಟಿಸುಗೆದಪ್ಪುವಂ ಪುರುಷಾರ್ಥಸಂಗ್ರಹ ಪ್ರಾಜ್ಯ [ಪಾಠಾಂ. ಪ್ರಾಜ, ಪೂಜ್ಯ] ಮಿದೆನ್ನದಾಂ ಪಿರಿದುಮೊಲ್ಲದೊಡಂಬಡ (ಧರ್ಮಪ. ೨–೩೨). [ಸಂ.]

**ಪ್ರಾಡ್ವಿವಾಕ** (ನಾ). (ನ್ಯಾಯಾಲಯದ) ವ್ಯವಹಾರಗಳನ್ನು ತೀರ್ಮಾನಿಸುವ ಅಧಿಕಾರಿ : ನ್ಯಾಯಾಧಿಪತಿ : "ಪ್ರಾಡ್ವಿವಾಕಃ... ನ್ಯಾಯಾಧ್ಯಕ್ಷಃ — ಈ ೪ ನ್ಯಾಯಾಧ್ಯಕ್ಷಂ" (ಹಲಾಯು. ೭೦–೨೬೩) ; ವಿಳಸತ್ಸುಂದರನೆಯ್ದೆ ಮಾತುಳತೆಯಿಂದಿಂದಂದು ದಾಯಾದ್ಯರಂ ಬಳಿಸಂದಾಡಿಸುತೆಂದಿನಂತೆ ದಯೆಯಿಂ ಕಾಪಾಡುತಂ ಬಾಲನಂ ಮಿಳಿತಜ್ಞಾತಿಗಳೀ ತೆಱಂ ಜಗದೊಳೆಂದಾ ಪ್ರಾಡ್ವಿವಾಕ [ಪಾಠಾಂ. ಪ್ರೌಢಿವಾಕ್ಯ]ರ್ಗೆ ತಾಂ ಜ್ವಳನಾಕ್ಷಂ ನುಡಿಯಲ್ (ಜಾಲಾಕ್ಷ. ೩–೭–೩೯); ಒಡನೆಯೆ ಈ ಊರಿನ ಪ್ರಾಡ್ವಿವಾಕನ ಹತ್ತಿರ ಶರ್ಮನ ಮೇಲೆ ಅಭಿಯೋಗವನ್ನು ತಂದು ನಮ್ಮ ಹುಡುಗಿಯನ್ನು ನಾವು ಸ್ವಾಧೀನ ಮಾಡಿಕೊಳ್ಳಬೇಕು (ಅಭಿಜ್ಞಾ. ೨೭೭). [ಸಂ.]

**ಪ್ರಾಣ** (ನಾ). ೧. ಉಸಿರಾಟ. ೨. ಗಾಳಿ; ಉಸಿರು ; ವಾಯು : 'ಪ್ರಾಣ' ಎಂದರೆ 'ಉಸಿರು' ಎಂದು ಅರ್ಥ (ಪಾರ್ಶ್ವಮ. ೧೯). ೩. ಪ್ರತಿಯೊಂದು ಜೀವಿಯಲ್ಲೂ ಇರುವ ಚೈತನ್ಯವಸ್ತು ; ಜೀವ : "ಅಸವಃ, ಜೀವಿತಂ, ಪ್ರಾಣಾಃ, ಜೀವಃ, ಜೀವಾ— ಈ ೫ ಪ್ರಾಣದ ಪೆಸರ್" (ಹಲಾಯು. ೨೨–೦೩೪) ; ಎನ್ನೊಡಲ್ಗೆ ನೀಂ ಪ್ರಾಣಮುಮೋಘಮುಪ್ಪುದಱಿನೋಪನೆ ನಿನ್ನನಗಲ್ವಗಲ್ಕೆಯುಂ ಪ್ರಾಣದಗಲ್ಕೆಯುಂ ಸಮನದಕ್ಕೆ ವಿಯೋಗಮನೆಂತು ಸೈರಿಪೆಂ (ಆದಿಪು. ೦೨–೩೫); ಪ್ರಾಣದಿನಧಿಕಮೆನಗೆ ನೀ ಪ್ರಾಣಮಣಂ ತೃಣಮೆಗೆತ್ತು ನವೆಯುತ್ತು ನೀ ಕ್ಷೋಣಿಗೆ ನಿನ್ನ ವಿಯೋಗಮನೇಕ್ಷಣ ಎನಿತು ಸೈರಿಸದ ಕಾರಣದಿಂ (ಪಾರ್ಶ್ವಪು. ೩–೨೪). ೪. ಅನ್ನ; ಆಹಾರ : "ಬಾಹ್ಯ—ಪ್ರಾಣ, ಅನ್ನ" (ಓಕರಿ. ೦೦೬). ೫. ಬಲ ; ಶಕ್ತಿ : "ಪ್ರಾಣಃ, ಸ್ಥಾಮ, ಬಲಂ . . . ಸಹಃ—ಈ ೮ ಬಲ್ಪು (ಬಲುಹು)" (ಹಲಾಯು). ೦೨೦—೭೮). ೬. ಶರೀರದೊಳಗಿರುವ ಪ್ರಾಣ, ಅಪಾನ, ಸಮಾನ, ಉದಾನ ಮತ್ತು ವ್ಯಾನಗಳೆಂಬ ಐದು ಬಗೆಯ ವಾಯುಗಳಲ್ಲಿ ಒಂದು : ಪ್ರಾಣಾದಿ ವಾಯುಗಳು — ಪ್ರಾಣ, ಅಪಾನ, ಸಮಾನ,

ಉದಾನ, ವ್ಯಾನ (ಅಷ್ಟಾಂ. ೩-೩೨ ಟೀಕು); ಸಮುದಾಯದಿಂದ ಪ್ರಾಣಾಪಾನ ವ್ಯಾನೋದಾನ ಸಮಾನಗಳೆಂಬ ಪಂಚಪ್ರಾಣಗಳು ಹುಟ್ಟುವುವು (ಹಿಂದಾ. ೦೯೬). ೭. ಪರಮಾತ್ಮ; ಈಶ್ವರ: ಪ್ರಾಣನೂ ಪರಮನೂ ಕಾಣದಲೆ ಒಳಗಿರಲು ಮಾಣದೆ ಸಿರಿಯ ಹಿಡಿದದಕೆ ಮೂರ್ಖಿ ತಾ ಪ್ರಾಣಾತ್ಮನೆಂಬ (ಸರ್ವಜ್ಞ. ೨೦೬); ಪ್ರ+ಅ+ಣ=ಪ್ರಾಣ, ಎಂದು ಪರಮಾತ್ಮನಿಗೆ ಹೆಸರು (ಹರಿ. ೬-೨೯ ತಾತ್ಪರ್ಯ). ೮. ಒಂದು ಬಗೆಯ ಸಸ್ಯ; ಬಾಣಂತಿಬೋಳ: "ಬೋಲಃ, ಗಂಧರಸಃ, ಪ್ರಾಣಃ . . . ರಸಃ— ೬ ಬೋಳದ ಹೆಸರುಗಳು, ಬಾಣಂತೀಬಾಳ್" (ಸಿದ್ಧೌಷಧಿ. ೩೦೬). ೯. ಪ್ರೀತಿಪಾತ್ರ ವ್ಯಕ್ತಿ ಅಥವಾ ವಸ್ತು: ಹೊಳ್ಳರೇ ಹೇಳುತ್ತಿದ್ದರು ಹೆಂಡತಿಗೆ ನಾನೆಂದರೆ ಪ್ರಾಣ ಎಂದು (ಶಲ್ಯತ. ೦೨೬); ಅವನಿಗೆ ಚಕ್ಕುಲಿ ಯೆಂದರೆ ಪ್ರಾಣ (ಲೂಢಿ).

ಪ್ರಾಣ ಕಳೆದುಕೊಳ್ಳು=ಜೀವ ತೆಗೆದುಕೊಳ್ಳು: ಹೆಂಗಸು, ಪಾಪ! ಕಾಲು ಜಾರಿ ಬಿದ್ದು ಸತ್ತಿರಬೇಕು. ಆಕೆಯ ತಮ್ಮಂದಿರಾದ ಈ ರಾಜರು ಆ ದುಃಖದಿಂದ ತಾವೂ ದುಮುಕಿ ಪ್ರಾಣ ಕಳೆದುಕೊಂಡರು (ಕಾಂತಿಕಾ. ೩೦೦); ನಾನೆಲ್ಲಿ ಪ್ರಾಣ ಕಳೆದುಕೊಂಡು ಬಿಟ್ಟೆನೋ ಎಂದು ಅಜ್ಜ ಎಷ್ಟು ಗೋಳಿಡುತ್ತಾರೋ? (ಮುಕಿಷು. ೭೦೦). ಪ್ರಾಣಕ್ಕೆ ಬರು=(ಆಲಂ)ವಿಪರೀತ ಕಷ್ಟವಾಗು: ಈ ಬಿಸಿಲಲ್ಲಿ ಎರಡು ಮೈಲು ನಡೆದರೆ ನಮಗೇ ಪ್ರಾಣಕ್ಕೆ ಬರುತ್ತದೆ (ತಿಮಿಶ. ೦೭೬). ಪ್ರಾಣಪ್ರಯತ್ನಮಾಡು=(ಆಲಂ) ಬಹಳ ಕಷ್ಟಪಡು: ದಂಡಿಗೆ ಬೇಕಾದ ಸಾಮಾನು ಸರಂಜಾಮು ಪ್ರಾಣಪ್ರಯತ್ನ ಮಾಡಿ ತರಿಸಿಕೊಟ್ಟು (ರಾಣೀಜಂಗ್ರ. ೪೯). ಪ್ರಾಣ ಹಿಂಡು = (ಆಲಂ) ಅತಿಶಯವಾಗಿ ಕಾಡು; ಬಹಳ ತೊಂದರೆ ಕೊಡು: ಹೆಂಡತಿ ಪ್ರಾಣ ಹಿಂಡುತಿ (ಪುರಂದ. ೩-೨೦೦-೪). ಪ್ರಾಣ ಹಿಡಿ=(ಆಲಂ) ಜೀವಧಾರಣೆ ಮಾಡು; ಬದುಕಿರು: ಅರೆಹೊಟ್ಟೆ ತುಂಬಿಸಿಕೊಂಡಾದರೂ ಪ್ರಾಣ ಹಿಡಿದರು (ಮುಕ್ತಿಷು. ೬). ಪ್ರಾಣ ಹೋಗು=ಜೀವ ಹೋಗು: ಪ್ರಾಣ ಹೋಗಲು ಮುಖ್ಯಬಂಧ್ಯಳು ಜಾಣೆ ಕರೆದರು ಬಾರಳು (ಪುರಂದ. ೩-೨೦೦-೪); ಪ್ರಾಣ ಹೋಗುವ ಆಸನ್ನವಾದ ಕಾಲದಲ್ಲಿ . . . ಕಪಾಲಕುಂಡಲೆಯ ಕಂಠದಿಂದ ಅಂತಹ ಸ್ವರವು ಹುಟ್ಟುವುದೆಂದಾರು ಬಲ್ಲವರಾಗಿದ್ದರು (ಕಪಾಕುಂ. ೦೩೦). [ಸಂ.]

**ಪ್ರಾಣಂಬಡೆ** (ಕ್ರಿ). ಜೀವವನ್ನು ಪಡೆ: ವೀರಭಕ್ತಿಯೊಳಟ್ಟಿಯಲಿ ತಲೆ ಸೇರಿಸಲು ಪ್ರಾಣಂಬಡೆ [ದಾಣಿಂ. ಪಡೆ]ದನು (ಬಸವ. ೪೪-೦೩). [ಪ್ರಾಣ + ಪಡೆ$_1$]

**ಪ್ರಾಣಂಬೊಯ್** (ಕ್ರಿ). ಜೀವ ತುಂಬು; ಜೀವಂತವಾಗಿಸು: ಪ್ರಾಣಂಬೊಯ್ದನೊ ಚಿತ್ರಿಸುತ್ತುಮವಳಂ ಸೌಂದರ್ಯಸಾರಂಗಳಿಂ (ಕಾಳಿಂಜಕ. ೨೩-೪೪). 'ಜೀವಂಬೊಯ್' ಪರಾ. [ಪ್ರಾಣ+ಪೊಯ್$_1$]

**ಪ್ರಾಣಕಂಟಕ** (ನಾ). ೧. ಜೀವಕ್ಕೆ ಉಂಟಾಗುವ ಅಪಾಯ; ಪ್ರಾಣಕ್ಕೆ ಆಗುವ ಆಘಾತ: ಪ್ರಾಣಕಂಟಕವಾಗುವ ಭಯಂಕರ ಕಾಯಿಲೆ ಅದು (ಲೂಢಿ). ೨. ಜೀವಕ್ಕೆ ಅಪಾಯವನ್ನುಂಟುಮಾಡುವವನು; ಪ್ರಾಣ ತೆಗೆಯುವವನು; ಕೊಲೆಗಡುಕ: ಆ ಪ್ರಾಣಕಂಟಕನಿಂದ ಕೊನೆಗೂ ಅವರಿಗೆ ಬಿಡುಗಡೆ ಸಿಗಲಿಲ್ಲ (ಲೂಢಿ). [ಸಂ.]

**ಪ್ರಾಣಕಾಂತ** (ನಾ). ಜೀವಕ್ಕೆ ಸಮನಾದವನು; ಪ್ರಿಯವ್ಯಕ್ತಿ; ಪತಿ: ಕಾಣದಿರಲಾಜಿ ಪ್ರಾಣಕಾಂತನ ವೇಣುನಾದನ ತೋಱಿಸೆ (ಪುರಂದ. ೩-೦೩೬ ಪಲ್ಲವಿ); ಪ್ರಾಣಕಾಂತಾ ಲಾಲಿಸಿನ್ನಾ ಕ್ಷೋಣಿಪನೀ ಪರಿಯೊಳ್ ನಿನ್ನಾ ಕಾಣೇ ಸಲಹಿರಲ್ಕೆ ಪಿತಸಮಾನನವನ ಕಾವುದೈಸೆ (ರತ್ನಾಕ. ೦೪). [ಸಂ.]

**ಪ್ರಾಣಕಾಂತೆ** (ನಾ). ಜೀವಕ್ಕೆ ಸಮನಾದವಳು; ಪ್ರಿಯೆ; ಪತ್ನಿ: ನನ್ನ ಪ್ರಾಣಕಾಂತೆಯಿಂದ ಉಪಭೋಗಿಸಲ್ಪಟ್ಟ ಈ ಲತಾಮಂಟಪದಲ್ಲಿಯೇ ಒಂದು ಮುಹೂರ್ತನಿಲ್ಲುವೆನು (ಶಾಕುಂತ. ೪೩-೦೦). [ಸಂ. ಪ್ರಾಣಕಾಂತಾ]

**ಪ್ರಾಣಕೊಡು** (ಕ್ರಿ). ೧. (ಇನ್ನೊಬ್ಬರ ಪ್ರಯೋಜನಕ್ಕಾಗಿ) ಜೀವ ಕೊಡು; ಬಲಿಯಾಗು: ನೀನು ನನಗಾಗಿ ಪ್ರಾಣಕೊಡಲು ನಿಜವಾಗಿಯೂ ಸಿದ್ಧನಿದ್ದೀಯಾ? (ಶಿಶಾ. ೬೬). ೨. (ಆಲಂ) ಯಾವುದಾದರೂ ಕಾರಣಕ್ಕಾಗಿ ಸರ್ವಸ್ವವನ್ನೂ ತ್ಯಜಿಸು: ಪ್ರಾಣ ಕೊಟ್ಟಾದರೂ ಹಿಡಿದಿರುವ ಕೆಲಸವನ್ನು ಪೂರೈಸುತ್ತೇನೆ (ಲೂಢಿ). [ಪ್ರಾಣ + ಕೊಡು$_1$]

**ಪ್ರಾಣಗುಣ** (ನಾ). ಜೀವದ ಸ್ವಭಾವ; ಪ್ರಾಣದ ಗುಣ: ಅಂತರಂಗದಲ್ಲಿ ಸುಳಿದಾಡುವ ತನುಗುಣಾದಿಗಳ ಮನಗುಣಾದಿಗಳ ಪ್ರಾಣಗುಣಾದಿಗಳ ಕಳೆದಲ್ಲಿ ಶರಣರಹರೆ (ಅವಚನ. ೯೦-೪೦೪). 'ತನುಗುಣ' ಪರಾ. [ಸಂ.]

**ಪ್ರಾಣಗೇಡಿ** (ನಾ). ಜೀವವನ್ನು ತೆಗೆಯುವವನು; ಪ್ರಾಣಘಾತಕ: ಪ್ರಾಣಗೇಡಿಯ ಮಾಡಿದರು ಪಾಲಕನೀ ಧರೆಗೆ (ಶಿಭಾಗ. ೪-೧೦-೦೪). [ಪ್ರಾಣ + ಕೇಡಿ$_1$]

**ಪ್ರಾಣಘಾತಕ** (ಗು). ೧. ಜೀವಕ್ಕೆ ಹಾನಿಯನ್ನುಂಟುಮಾಡುವ: ಇವರು ಪ್ರಾಣಘಾತಕ ಗಾಯ ಹೊಂದಿ ಸರಕಾರೀ ರುಗ್ಣಾಲಯದಲ್ಲಿ ವಾಸವಾಗಿರುವರು (ಕ್ಷೋಭು. ೦೯೨). (ನಾ). ೨. ಜೀವವನ್ನು ತೆಗೆಯುವುದು; ಕೊಲೆ; ಪ್ರಾಣವಧೆ: ಇರುಳು ಹಗಲೆನ್ನದೆ ಪ್ರಾಣಘಾತಕವ ಮಾಡಿದ ಬೇಡನ ಕೈಲಾಸಕೊಯ್ದೆಯಯ್ಯಾ (ಬಸವ. ೬೫). ೩. ಜೀವವನ್ನು ತೆಗೆಯುವವನು; ಕೊಲೆಗಡುಕ: ಇವನಂತಹ ಪ್ರಾಣಘಾತಕರು ಅವರ ವಂಶದಲ್ಲಿ ಯಾರೂ ಇರಲಿಲ್ಲ (ಲೂಢಿ). [ಸಂ.]

**ಪ್ರಾಣತ** (ನಾ). [ಜೈನ] ಹದಿನಾರು ಸ್ವರ್ಗಗಳಲ್ಲಿ ಒಂದು; ಊರ್ಧ್ವಲೋಕದಲ್ಲಿರುವ ಸೌಧರ್ಮ, ಈಶಾನ, ಸನತ್ಕುಮಾರ, ಮಾಹೇಂದ್ರ, ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಆನತ, ಪ್ರಾಣತ, ಆರಣ ಮತ್ತು ಅಚ್ಯುತಗಳೆಂಬವು ಹದಿನಾರು ಸ್ವರ್ಗಗಳು. ಇವುಗಳಿಗೆ ಕಲ್ಪಗಳೆಂದೂ ಹೆಸರಿದೆ. ಈ ಎಲ್ಲದರ ಗುಂಪಿಗೂ ಕಲ್ಪವೆಂಬ ಹೆಸರಿದೆ: ಅತಿಬಲಕೃತ್ಯಂ ಗತಜೀವಿತನಾಗೆ ಮಹಾಬಲಂ ಮಹಾವ್ರತದಿಂದನ್ನಿಕಮಂತಿ ಸಮಾಧಿಗುಪ್ತವ್ರತಿಯುಪದೇಶದೊಳೆ ಪುಟ್ಟಿದಂ ಪ್ರಾಣತದೊಳ್ (ಆದಿಪು. ೩-೬೬); ಅನತ ಪ್ರಾಣತ ಆರಣಾಚ್ಯುತ ಕಲ್ಪಸಂಭವ ದೇವರ್ (ಚನ್ನ.ಕ್ರ. ೦೩೨). [ಸಂ.]

**ಪ್ರಾಣತಕಲ್ಪ** (ನಾ). = ಪ್ರಾಣತ: ಆರಾಧನಾವಿಧಿಯಿಂ ಪ್ರಾಣತಕಲ್ಪದೊಳ್ ಪ್ರಾಣತವಿಮಾನದೊಳ್ ಪ್ರಾಣತೇಂದ್ರನಾಗಿ . . . ಸುಖವಿರ್ಪನಂ (ಶಾಂತಿಪು. ೨೬೬); ಪ್ರಾಣತಕಲ್ಪದೊಳತುಳಪ್ರಾಣತಸುರರಾಜನಾಗಿ . . . ಸುಖಮಿರ್ದಂ (ಪುಷ್ಪದ. ೪-೦೦). [ಸಂ.]

**ಪ್ರಾಣತೆಗೆ** (ಕ್ರಿ). ಜೀವವಿಲ್ಲದಂತೆ ಮಾಡು; ಜೀವ ಕಳೆ; ಕೊಲ್ಲು: ಪ್ರಾಣ ತೆಗೆಯುತ್ತೇನೆ ಎಂದು ಬೆದರಿಕೆ ಹಾಕುವುದೆ? (ಬೀಚಿಕು. ೦೩೬).

ಪ್ರಾಣ ತೆಗೆದುಕೊಳ್ಳು = ಆತ್ಮಹತ್ಯೆ ಮಾಡಿಕೊಳ್ಳು; ಜೀವವಿಲ್ಲದಂತೆ ಮಾಡಿಕೊಳ್ಳು: ಧಾರೆಯ ದಿನವೇ ಹಳ್ಳಕ್ಕೆ ಹಾರಿ ಪ್ರಾಣ ತೆಗೆದುಕೊಂಡ ಸುದ್ದಿ ಕಿವಿಗೆ ಬಿದ್ದಿದ್ದೇ ತಡ . . . ಪ್ರಜ್ಞೆ ತಪ್ಪಿ ಕಣ್ಣು ಮುಚ್ಚಿದವರು ಮತ್ತೆ ಕಣ್ಣು ತೆರೆಯಲೇ ಇಲ್ಲವಂತೆ (ಮುಕಿಷು. ೦೩೬). [ಪ್ರಾಣ + ತೆಗೆ$_1$]

**ಪ್ರಾಣತ್ಯಾಗ** (ನಾ). ೧. ಜೀವವನ್ನು ಬಿಡುವುದು; ಪ್ರಾಣವನ್ನು ತ್ಯಜಿಸುವುದು; ಆತ್ಮಹತ್ಯೆ: ಯಾವುದಾದರೂ ಪುಣ್ಯಕ್ಷೇತ್ರದ ಕೆರೆ ಹಾರಿ ಪ್ರಾಣತ್ಯಾಗ ಮಾಡುವುದೇ ಒಳ್ಳೆಯದೆಂಬ ಯೋಚನೆಯೂ ಒಮ್ಮೆ ಮನಸ್ಸನ್ನು ಹದಗೆಡಿಸಿತು (ಶಲ್ಯತ. ೦೩೦). ೨. ಸಾವು; ಮರಣ:

ಭೋಗಿವಿಷಂಬೋಲ್ಪ್ರಾಣತ್ಯಾಗವಪ್ಪಾಗಿಸುಗುವಮಳಕೃತಿವಧುಗಿನಿತುಂ (ಶಬರ. ೬-೬೦). [ಸಂ.]

**ಪ್ರಾಣದಾನ** (ನಾ). ೧. ಜೀವವನ್ನು ಉಳಿಸುವುದು; ಪ್ರಾಣಾಪಾಯದಿಂದ ಕಾಪಾಡುವುದು : ಒಡೆಯನಟ್ಟಿದ ದಂಡು ಮೇಲ್ವರಿದಡೆ ತೆರಳ್ದೋಡುವುದು ವೀರವೆ ಕಡಗಿ ಬಂದು ಪ್ರಾಣದಾನವನೊಮ್ಮೆಯುಂ ಬೇಡಿ (ಜಕಥ. ೪೬-೩೦); ಪ್ರಾಣದಾನದ ಹಿರಿವೆ ತಾಂ ಪ್ರಾಣಮಯಕೆ (ಅಂಗ. ೩೬-೯). ೨. (ಅಲಂ) ಅಧಿಕಾರ ಅಥವಾ ಅವಕಾಶವನ್ನು ಉಳಿಸಿ ಕೊಡುವುದು : ಹಲವಾರು ಬಾರಿ ಅವನು ತಪ್ಪು ಮಾಡಿ ಸಿಕ್ಕಿಬಿದ್ದಿದ್ದರೂ ಅವನ ಹೆಂಡತಿ ಮಕ್ಕಳ ಮುಖ ನೋಡಿ ಸಾಹೇಬರು ಅವನಿಗೆ ಪ್ರಾಣದಾನ ನೀಡಿದ್ದಾರೆ (ಜನ). [ಸಂ.]

**ಪ್ರಾಣದೇವರು** (ನಾ). [ದ್ವೈತ] ಜೀವಕ್ಕೆ ಒಡೆಯನಾದವನು; ವಾಯುಪುತ್ರನಾದ ಮಾರುತಿ : ಹೀಗೆಯೆ ಪ್ರಾಣದೇವರಲ್ಲಿ ಪರಮಾತ್ಮನಿದ್ದರೂ ಮುಖ್ಯಪ್ರಾಣರೂಪಿಯಾಗಿಯೇ ತೋರುತ್ತಿರುವನು (ಹರಿ. ೪-೦೬ ಟಿಪ್ಪಣಿ). [ಪ್ರಾಣ + ದೇವರು]

**ಪ್ರಾಣಧರ್ಮ** (ನಾ). ಜೀವದ ರೀತಿ-ನೀತಿ : ಅನಲಯೋಗದೊಳನ್ನವನು ಜೀರ್ಣಿಸುತ ಮೇಲಲ್ಲಿಂದ ತನುವಂ ದಿನದಿ ಚೇಷ್ಟಿಸಿ ಧರಿಸಿಹುದೆ ಕೇಳ್ ಪ್ರಾಣಧರ್ಮವದು (ಗಣಕಾ. ೬-೬೩). [ಸಂ.]

**ಪ್ರಾಣಧಾರಣೆ** (ನಾ). ಜೀವವನ್ನು ಹಿಡಿದಿರುವುದು; ಬದುಕಿರುವುದಂ : ಪ್ರಾಣಧಾರಣೆಗೆ ಬೇಕಾದಷ್ಟು ವೆಚ್ಚ ಮಾಡಿ ಮಿಕ್ಕದುದನ್ನು ಸಹಾಯಹೀನರಾದ ಹೆಂಗಸರ ಸೇವಾರ್ಥವಾಗಿ ದಾನ ಮಾಡುವೆನು (ಕಾಳಸಂ. ೦೬೦). [ಸಂ. ಪ್ರಾಣಧಾರಣ]

**ಪ್ರಾಣನ** (ನಾ). ೧. ಕಂಠ; ಕುತ್ತಿಗೆ. ೨. ನೀರು; ಜಲ. ೩. ಬದುಕಿಸುವುದು; ಜೀವವನ್ನು ಉಳಿಸುವುದು : ಜಾಯಾವಿಯೋಗದಿಂ ದುಃಖಿತನಾಗಿಯುಮ್ಮನ್ನ ತಂದೆ ಪುತ್ರಸ್ನೇಹದಿಂದಳವಿಗಟಿದ ಹೃದಯಶೋಕಮನಡಂಗಿರ್ದು ಪ್ರಾಣನಪ್ರಯತ್ನತತ್ಪರನಾಗಿ (ಕಾದಂಪೂ. ೦೬೪). [ಸಂ.]

**ಪ್ರಾಣನಷ್ಟ** (ನಾ). ಜೀವ ಹೋಗುವುದು; ಸಾವು; ಮರಣ : ಬಸ್ಸು ಅಪಘಾತಕ್ಕೊಳಗಾದರೂ ಹೆಚ್ಚು ಪ್ರಾಣನಷ್ಟವಾಗಲಿಲ್ಲ (ಜನ). [ಸಂ.]

**ಪ್ರಾಣನಾಥ** (ನಾ). ೧. ಗಂಡ; ಪತಿ : ಮತ್ತೊಂದೆಡೆಯೊರ್ವಳ್ ಅತ್ಮೀಯಪ್ರಾಣನಾಥನಗಲ್ಕೆಯಂ ಸೈರಿಸಲಾರದೆ (ಅಜಪು. ೦೨-೪೯). ೨. ಯಮ. ೩. ಜೀವದ ಒಡೆಯ; ಶಿವ : ಎನ್ನ ಭಾವದ ಕೊನೆಯ ಮೊನೆಯ ಮೇಲೆ ಮನೆಯ ಮಾಡಿಕೊಂಡಿಪ್ಪೆಯಯ್ಯಾ ಕೂಡಲಸಂಗಮದೇವಾ ನೀನೆನ್ನ ಪ್ರಾಣನಾಥನಾಗಿ (ಬಸವ. ೬೦೨); ಕೇಳು ಕೇಳಯ್ಯಾ ಪ್ರಾಣನಾಥನೆ ಎನ್ನ ಪ್ರಾಣಪೂಜೆಯ ಬಗೆಯ ಬಣ್ಣಿಸುತಿರ್ಪೆನು (ಅಪಂಕೇ. ೨೪೦-೯೬). [ಸಂ.]

**ಪ್ರಾಣನಾಥೆ** (ನಾ). ಹೆಂಡತಿ; ಪತ್ನಿ : ಸಾಸಿವಿದಿರ್ದ ಕರಪತ್ರಮುಕೊಡಿಸಿದಂ ಪ್ರಾಣನಾಥೆಯ ಕೈಯೊಳು (ಕೈವಲ್ಯ. ೨೬-೬೦). [ಪ್ರಾಣನಾಥ + – ಎ]

**ಪ್ರಾಣನಾಶಕ** (ಗು). ಸಾವನ್ನುಂಟುಮಾಡುವ; ಜೀವ ಕಳೆಯುವ : ಗಿಡಗಳಿಗೆ ಹಾಕಲು ತಂದಿರುವ ಆ ಪ್ರಾಣನಾಶಕದ್ರವ್ಯವನ್ನು ಮಕ್ಕಳ ಕೈಗೆ ಸಿಗುವಂತೆ ಇಡಬೇಡ (ಜನ). [ಸಂ.]

**ಪ್ರಾಣಪಂಚಕ** (ನಾ). ಶರೀರದೊಳಗಿರುವ ಪ್ರಾಣ, ಅಪಾನ, ಸಮಾನ, ಉದಾನ ಮತ್ತು ವ್ಯಾನಗಳೆಂಬ ಐದು ಬಗೆಯ ಪ್ರಾಣವಾಯುಗಳು : ಸುಜ್ಞಾನಜೀ ಇದು ಪ್ರಾಣಪಂಚಕನಿರ್ಗಮ ಸಾಮಾನ್ಯ ವ್ಯಾನವು ಗರ್ಭವೂ ದಾನವು ಅಪಾನವು ಪ್ರಾಣಗಳುಯೆಂದ (ಜ್ಞಾನಸಿಂ. ೩-೨೪). 'ಪಂಚಪ್ರಾಣ' ಪರಾ. [ಸಂ.]

**ಪ್ರಾಣಪಣ** (ನಾ). ಜೀವವನ್ನೇ ಒಡ್ಡುವುದಂ; ಪ್ರಾಣವನ್ನೇ ಪಣವಾಗಿಡುವುದಂ : ಪ್ರಾಣಪಣ[ಜಗಂ. ಪಥ, ಪದ]ವಿದು ನಿಖಿಳವಿದ್ಯದ ಜಾಣತನವಿದು ವಿನಯವೆಂದಿದು ಕೇಣವಿಲ್ಲದೆ ನೆರವಿ ನೆಟೆ ಹೊಗಳಿತು ಧನಂಜಯನ (ಕುಮ್ಯಾಆ. ೬-೯೬). [ಸಂ.]

**ಪ್ರಾಣಪತಿ** (ನಾ). = ಪ್ರಾಣನಾಥ ೧ : ಮಧುರೆಯಲಿ ಬಿಲ್ಲ ಹಬ್ಬವ ಪುಟ್ಟಿಸಿ ಕುಟಿಲದಲಿಯಮ್ಮ ಪ್ರಾಣಪತಿಯ ಕರೆಸಿದ ಸುದತಿಯರ ಮನದಳಲು ತಟ್ಟದಿಹುದೆ ನಮ್ಮ ಎದೆಗಿಚ್ಚು ಕಂಸನ ತಲೆಗೆ ಮೂಡದಲಿಯನುತ (ಕೃರಾಕ. ೪-೦೦೦-೧೪). [ಸಂ.]

**ಪ್ರಾಣಪದ** (ನಾ). ಜೀವಕ್ಕೆ ಸಮವಾಗಿ ಪ್ರೀತಿಸುವ ವಸ್ತು; ಅತಿ ಪ್ರಿಯವಸ್ತು : ಧರೆಯೊಳೆಲ್ಲಂ ಸ್ವಾತಿವರುಷಂ ಸುರಿಯಲೆಂತಹ ಹನಿಗಳಿಗೆ ಏ ವರಿಯೊಳಂ ಕಜಿಗೊಳ್ವದಂತಾಗದಟ ವರ ದೇಜಿ ನಿರತವದಜಿಂ ಪ್ರಾಣಪದವಾದಿರವಿಗಲ್ಲದೆ ಬಾಯಿದೆಜಿಯದು ಕರಮಸೆವ ಸಿಂಪೊಂದು ನೆನೆವುತಮಿಹುದು ಮಳೆಗಳಿಗೆ (ಜಕಥ. ೩೦-೨೪). [ಸಂ.]

**ಪ್ರಾಣಪದಕ** (ನಾ). ಬದುಕಿನಲ್ಲಿ ಪ್ರಿಯವಾದ ವಸ್ತು : ಓದಿಗಿಂತಲೂ ಕ್ರಿಕೆಟ್ ಆಟ ಅವನ ಪ್ರಾಣಪದಕವಾಗಿತ್ತು (ಜನ). [ಸಂ.]

**ಪ್ರಾಣಪರಿಚ್ಛೇದ** (ನಾ). ಜೀವ ಬಿಡುವುದಂ; ಪ್ರಾಣ ಕಳೆದುಕೊಳ್ಳುವುದಂ : 'ಪ್ರಾಣಪರಿಚ್ಛೇದಂಗೆಯ್' ಪರಾ. [ಸಂ.]

**ಪ್ರಾಣಪರಿಚ್ಛೇದಂಗೆಯ್** (ಕ್ರಿ). ಜೀವ ಬಿಡು; ಪ್ರಾಣ ಕಳೆದುಕೊಳ್ಳು : "ಪ್ರಾಣಪರಿಚ್ಛೇದಂಗೆಯ್ದವನಂ ಆಯಶ್ಶೂಳಿಕನೆಂಬುದು" (ಶಬ್ದಾನು.೬೦-೨೦೬). [ಪ್ರಾಣಪರಿಚ್ಛೇದ + ಕೆಯ್$_1$]

**ಪ್ರಾಣಪವನ** (ನಾ). ಜೀವದ ಉಸಿರು; ಪ್ರಾಣವಾಯುಂ : ಪ್ರಾಣಪವನನ ಬೀಡು ಬಿಟ್ಟುದು ಗೋಣನಲಿ (ಕುಮ್ಯಾ.೪.೦೯-೯೬). [ಸಂ.]

**ಪ್ರಾಣಪೂಜೆ** (ನಾ). ಪರಮಾತ್ಮನ ಅರ್ಚನೆ; ದೇವರ ಪೂಜೆ : ಕೇಳು ಕೇಳಯ್ಯಾ ಪ್ರಾಣನಾಥನೆ ಎನ್ನ ಪ್ರಾಣಪೂಜೆಯ ಬಗೆಯ ಬಣ್ಣಿಸುತಿರ್ಪೆನು (ಅಪಂಕೇ. ೨೪೦-೯೬). [ಸಂ. ಪ್ರಾಣಪೂಜಾ]

**ಪ್ರಾಣಪ್ರತಿಷ್ಠಾಪನೆ** (ನಾ). ೧. ವಿಧಿಪೂರ್ವಕವಾಗಿ ಪ್ರಾಣವನ್ನು ಆವಾಹನೆ ಮಾಡಿ ವಿಗ್ರಹವನ್ನು ಪ್ರತಿಷ್ಠಿಸುವ ಪೂಜೆಯ ಒಂದು ಅಂಗ; ವಿಗ್ರಹದಲ್ಲಿ ದೇವತ್ವವನ್ನು ಆವಾಹಿಸುವುದು. ೨. ಜೀವ ತುಂಬುವುದು; ಜೀವಂತಗೊಳಿಸುವುದು : ಘಟನೆಗಳನ್ನು ಸನ್ನಿವೇಶಗಳನ್ನು ಕಲ್ಪಿಸಿಕೊಂಡು ಅವುಗಳಲ್ಲಿ ಪ್ರಾಣಪ್ರತಿಷ್ಠಾಪನೆ ಮಾಡಿ . . . ಅವು ಜೀವಿಸುವಂತೆ ಮಾಡಿಕೊಳ್ಳಬೇಕು (ಸಂಶೋಧ. ೬೨). [ಸಂ. ಪ್ರಾಣಪ್ರತಿಷ್ಠಾಪನ]

**ಪ್ರಾಣಪ್ರತಿಷ್ಠೆ** (ನಾ). = ಪ್ರಾಣಪ್ರತಿಷ್ಠಾಪನೆ ೧ : ಶಾಸ್ತ್ರೋಕ್ತವಾಗಿ ನಿರ್ಮಿತವಾದ ಪ್ರತಿಮೆಯಲ್ಲಿ ನಿರ್ದಿಷ್ಟದೇವತೆಯನ್ನು ಆವಾಹನೆ ಮಾಡುತ್ತಾರೆ. ಈ ವಿಧಿಗೆ 'ಪ್ರಾಣಪ್ರತಿಷ್ಠಾ' ಎಂದು ಹೆಸರು (ಶಾಕರ. ೩೦೬); ಮೂಲಬೇರದ ಸ್ಥಾಪನೆಯಾದ ಮೇಲೆ ಪ್ರಾಣಪ್ರತಿಷ್ಠಾ ನೇತ್ರೋನ್ಮೀಲನಾದಿ ಕರ್ಮಗಳನ್ನು ವಿಧಿವತ್ತಾಗಿ ಮಾಡಿ (ಹೊಯ್ಸಳಾ. ೦೯). [ಸಂ. ಪ್ರಾಣಪ್ರತಿಷ್ಠಾ]

**ಪ್ರಾಣಪ್ರಿಯ** (ಗು). ಜೀವಕ್ಕೆ ಸಮವಾದ; ಬಹಳವಾಗಿ ಪ್ರೀತಿಸುವ : ಬಗೆಯಂ ಪ್ರಾಣಪ್ರಿಯಸ್ತ್ರೀಜನತನಯಧನವ್ರಾತದೊಳ್ ಮಾಡದಾರ್ತಾರ್ಜಿಗೆ ಬಂದೊಡನ್ನೆಲೆ ವೇಟ್ಟಂಗರನಿಕಷದೊಳಿಮ್ಮಂದವಂ ನೀನೆ ಕಾಣ್ಬೈ (ಅಜಪು. ೦೯-೬೨); ಪ್ರಾಣಪ್ರಿಯಾಣ್ಮನಂ ಕಾಣದಿರ ಪೊತ್ತುವುದು ಹರಣದುರಿ (ಶಕ್ತ್ಯಂಗ. ೩೩-೦೫೦೩). [ಸಂ.]

**ಪ್ರಾಣಪ್ರಿಯೆ** (ನಾ). ಹೆಂಡತಿ; ಪತ್ನಿ : ಪ್ರಾಣಪ್ರಿಯೆಯಿಲ್ಲದೆ ನೀಪ್ರಾಣಮದೆಂತುಂಟ್ಬದೀಗಳೀಯೊಡಲಹಿತಪ್ರಾಣಾನಿಲನಿಂದೆನ್ನ ಕೃಪಾಣಾಹಿಯನೂಡಿ ಬಟಿಕಮಾನುಂಡಪ್ಪಂ (ಅಪಂಪು. ೦೦-೬೬). [ಸಂ. ಪ್ರಾಣಪ್ರಿಯಾ]

**ಪ್ರಾಣಬಾಧೆ** (ನಾ). ಜೀವ ಹೋಗುವ ಸ್ಥಿತಿಯಲ್ಲಿ ಆಗುವ ತೊಂದರೆ ; ಪ್ರಾಣ ಹೋಗುವಾಗ ಆಗುವ ಹಿಂಸೆ : ಅವರು ಪ್ರಾಣಬಾಧೆ ತಡೆಯಲಾರದೆ ಬಹಳ ನರಳಾಡುತ್ತಿದ್ದರು (ಬೂತಿ). [ಸಂ. ಪ್ರಾಣಬಾಧಾ]

**ಪ್ರಾಣಬಿಡು** (ಕ್ರಿ). ೧. ಸಾಯು; ಮರಣವನ್ನು ಹೊಂದು : ಶುಕ್ಲ ಶೋಣಿತಶರೀರ . . . ಪ್ರಾಣಬಿಟ್ಟರೆ ದುರ್ಗಂಧ ನಾಱುವುದು (ಶ್ರೀಂಠ. ೩-೪೬-೨); ಹೆತ್ತ ತಾಯಿ ದುಸ್ಸಹ ಸವಾಚಾರವನ್ನು ಕೇಳಿ ಪ್ರಾಣಬಿಟ್ಟರು (ಹಾಂಕಾ. ೦೬೦); ಫಕೀರನು ಪ್ರಾಣಬಿಟ್ಟಿದ್ದಾನೆ ಎಂದು ಹೇಳಿದರು (ಬಾಂಕ್. ೨೯೭). ೨. (ಅಲಂ) ಅತ್ಯಂತ ಕಷ್ಟಪಡು ; ಶ್ರಮಿಸು : ಇಷ್ಟು ಪ್ರಾಣಬಿಟ್ಟರಲ್ಲ ನೀವು, ಕೊನೆಗೂ ಒಂದು ಕುಂಟುಪಂಕ್ತಿ ಬರೆದೇ ಹೋದರು ಅವರು (ಹುಗಿಹು. ೩೪೭). [ಪ್ರಾಣ + ಬಿಡು[1]]

**ಪ್ರಾಣಭಯ** (ನಾ). ಜೀವಕ್ಕೆ ಉಂಟಾಗುವ ಅಪಾಯದ ಅಂಜಿಕೆ ; ಪ್ರಾಣದ ಹೆದರಿಕೆ : ನಿಮ್ಮ ಪ್ರಸಾದದಿಂ ಪ್ರಾಣಭಯಂ ಪಿಂಗಿದುದು (ರಘೂನ್ಮ. ೦೨-೦೬೩) ; ಪ್ರಾಣಭಯ ತನ್ನಂತೆ ಸಕಲಪ್ರಾಣಿಗಳಿಗುಂಟು (ಶಿಪ್ಮ. ೯-೩೦). [ಸಂ.]

**ಪ್ರಾಣಮಯಕೋಶ** (ನಾ). ಜೀವವನ್ನು ಆವರಿಸಿಕೊಂಡಿರುವ ಐದು ಬಗೆಯ ಆವರಣಗಳಲ್ಲಿ ಒಂದು: ಸೂಕ್ಷ್ಮತನುವಿನಲ್ಲಿ ಪ್ರಾಣವಾಯುತನುಂ ಕರ್ಮೇಂದ್ರಿಯಂಗಳುಂ ಕೂಡಿ ಪ್ರಾಣಮಯಕೋಶವೆನಿಸುವುದು (ವಿವೇ. ೯೦) ; ಪಂಚಪ್ರಾಣವು ಕರ್ಮೇಂದ್ರಿಯವು ಕೂಡಿ ಪ್ರಾಣಮಯ ಕೋಶವೆಂದು ಹೇಳಲ್ಪಡುವುದು (ಜಸ್ಮ. ೦೩-೦೦) ; ದೇಹದಲ್ಲಿ ಪೂರ್ಣಬಲ ವನ್ನು ಕೊಡತಕ್ಕ ಇಂದ್ರಿಯಗಳನ್ನು ಪ್ರೇರಿಸತಕ್ಕ ವಾಯುವೇ ಪ್ರಾಣಮಯಕೋಶ (ಅವಾತ್ಮ. ೦೫೦). 'ಕೋಶಪಂಚಕ' ಪರಾ. [ಸಂ.]

**ಪ್ರಾಣಮಿತ್ರ** (ನಾ). ಜೀವಕ್ಕಿಂತಲೂ ಅತಿಶಯವಾದ ಸ್ನೇಹವನ್ನು ಹೊಂದಿರುವವನು ; ಪ್ರಾಣಸಖ : ಪ್ರಾಣಮಿತ್ರನೆನಿಪ್ಪ ಭಕ್ತಪ್ರಾಣನಂ ಬಸವಣ್ಣನನಗಲ್ದಿಂತೇಣಧರಧರನಲ್ಲಿಗೆಂತುಟೆ ಹೋಗಬಹುದಯ್ಯಾ (ಬಸಪು. ೩೭-೩೨) ; ಅವರಿಬ್ಬರೂ . . . ಪ್ರಾಣಮಿತ್ರರು (ಪುಶರು. ೩೬೦). [ಸಂ.]

**ಪ್ರಾಣಯಾತನೆ** (ನಾ). = ಪ್ರಾಣಬಾಧೆ : ಕೃಷ್ಣನನ್ನು ನೋಡುತ್ತ, ಪ್ರಾಣಯಾತನೆಯನ್ನೂ ಲಕ್ಷಿಸದೆ. . ನವ್ಮೊಡನೆಯೆಲ್ಲಾ ಋಜುಮಾರ್ಗದಲ್ಲಿ ಯುದ್ಧಮಾಡಿದರೆ ಖಂಡಿತವಾಗಿಯೂ ನಿಮಗೆ ವಿಜಯವಾಗುತ್ತಿರಲಿಲ್ಲ ಎಂದನು (ಕಕಾಶಾ. ೩೦೯). [ಸಂ. ಪ್ರಾಣಯಾತನಾ]

**ಪ್ರಾಣರಕ್ಷಣೆ** (ನಾ). ಜೀವವನ್ನು ಕಾಪಾಡಿಕೊಳ್ಳುವುದು : ಅಂತು ಮಯ್ಯುಱಿಯದಿರ್ದನಂ ಕಂಡು ಭಯಂಗೊಂಡುಪದೇಶಕ್ಕೆಡೆಯಿಲ್ಲದೆ ಪ್ರಾಣ ರಕ್ಷಣೋಪಾಯಮನಾದೊಡಂ ಮಾಟಪ್ಪೆನೆಂದಲ್ಲಿಂದ ಮ ಟ್ಟ ಚ್ಛೋ ದ ಸರೋವರಮಂ ಪೊಕ್ಕು (ಕಾದಂಕೂ. ೬೩೩) ; ಸುಲ್ತಾನನನ್ನು ನಗರದಿಂದ ಚಿತ್ರದುರ್ಗದ ಕೋಟೆಗೆ ಹೋಗಿ ಪ್ರಾಣರಕ್ಷಣೆ ಮಾಡಿಕೊಳ್ಳುವಂತೆ ಮಾಡಿದ್ದೇನೆ (ಬಾಂಕ್. ೦೫೩). [ಸಂ. ಪ್ರಾಣರಕ್ಷಣ]

**ಪ್ರಾಣಲಿಂಗ** (ನಾ). ೧. ಪರಮಾತ್ಮ ; ಶಿವ : "ಶಿವ ಃ = ಪ್ರಾಣಲಿಂಗ" (ಕಾಶಕ್. ೦೬೨). ೨. [ಶೈವ] ಐದು ಬಗೆಯ ಲಿಂಗಗಳಲ್ಲಿ ಒಂದು : ಶೈವಸಿದ್ಧಾಂತಸಮ್ಮತವಾದ ಪಂಚಲಿಂಗಾರ್ಚನದೊಳು ಸ್ವಯಂಭುಲಿಂಗ ಬಾಣಲಿಂಗ ಚರಲಿಂಗ ಸಂಕೀರ್ಣಲಿಂಗ ಪ್ರಾಣಲಿಂಗವೆಂಬೈದಱೊಳಗೆ ತಮ್ಮ ತಮ್ಮ ಶಕ್ತ್ಯನುಸಾರವಾಗಿ ಅರ್ಚನತತ್ಪರರಾಗಬೇಕೆಂದು ನಿಶ್ಚಯಿಸ ಲಕ್ಕುಂ (ವಿವೇ. ೦೦೨). ೩. [ವೀಶೈ] ಇಷ್ಟಲಿಂಗ, ಭಾವಲಿಂಗ ಮತ್ತು ಪ್ರಾಣಲಿಂಗಗಳೆಂಬ ಮೂರು ಬಗೆಯ ಲಿಂಗಗಳಲ್ಲಿ ಒಂದು; ದೇಹಗುಣವ್ಯಾಪ್ತಿಯನ್ನು ಬಿಟ್ಟು ಶಿವಸ್ವರೂಪದಲ್ಲಿ ಮನಸ್ಸು ಲೀನವಾಗುವ ಒಂದು ಸ್ಥಿತಿ : ಪ್ರಾಣಲಿಂಗವು ಸಕಲ ನಿಷ್ಕಲರೂಪ ವಾಗಿದ್ದು, ಮನಸ್ಸಿನಿಂದ ಗ್ರಹಿಸತಕ್ಕುದಾಗಿರುವುದು (ಶಿವಾಸೂ. ೩೩) ; ಇಷ್ಟಲಿಂಗ ಪ್ರಾಣಲಿಂಗ ತೃಪ್ತಿಲಿಂಗವೆಂದು ಶಿವಲಿಂಗತ್ರಯಭೇದಂಗಳವು ಗಳಲ್ಲಿ ದೇಹಗುಣವ್ಯಾಪ್ತಿಯಂ ಬಿಟ್ಟು ಶಿವಲಿಂಗಸ್ವರೂಪದಲ್ಲಿ ಮನವು ಮುಟ್ಟಿಹುದೇ ಪ್ರಾಣಲಿಂಗವೆನಿಸುವುದು (ವಿವೇ. ೦೨೩). [ಸಂ.]

**ಪ್ರಾಣಲಿಂಗಿ** (ನಾ). [ವೀಶೈ] ಷಟ್‌ಸ್ಥಲಗಳಲ್ಲಿ ನಾಲ್ಕನೆಯ ಹಂತವಾದ ಪ್ರಾಣಲಿಂಗಸ್ಥಲವನ್ನು ತಲುಪಿರುವವನು ; ನಾನಂ, ನನ್ನದು ಎಂಬ ಮೋಹವನ್ನು ತೊರೆದು ಸರ್ವವನ್ನೂ ಲಿಂಗಮಯವೆಂದು ಭಾವಿಸುವವನಂ: ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣನೈಕ್ಯನು ಮೆಲ್ಲಮೆಲ್ಲನೆ ಆದಹೆನ್ನೆಂಬನ್ನಬರ ನಾನೇನು ವಜ್ರದೇಹಿಯೆ (ಬಸವ. ೬೯೬); ನಾನು ನನ್ನದೆಂಬ ಭ್ರಮಾಜನ್ಯವಾದ ಮೋಹವನ್ನು ತ್ಯಜಿಸಿ ಇದೆಲ್ಲವೂ ಲಿಂಗಮಯವಾದುದೆಂದು ತಿಳಿದು ತದೇಕಯತ್ತ ಮಾನಸನಾಗಿರುವುದೇ ಪ್ರಾಣಲಿಂಗಿಯ ಸ್ವರೂಪವು (ಶಿವಾಸೂ. ೩೪) ; ಎನ್ನ ಸಿದ್ಧರಾಮನಂತೆ ಶುದ್ಧ ಪ್ರಾಣಲಿಂಗಿಯೆಂದೆನಿಸಯ್ಯ (ಅಬಂಡೀ. ೭೩-೪೩). [ಸಂ. ಪ್ರಾಣಲಿಂಗಿನ್]

**ಪ್ರಾಣಲಿಂಗಿಸ್ಥಲ** (ನಾ). [ವೀಶೈ] ವೀರಶೈವಮತದಲ್ಲಿ ಸಾಧನೆಯ ಷಟ್‌ಸ್ಥಲಮಾರ್ಗದ ನಾಲ್ಕನೆಯ ಸೋಪಾನ,— ಹಂತ; ಷಟ್‌ಸ್ಥಲ ಗಳಲ್ಲಿ ಒಂದು : ಅನಿಲಾಂಗದಲ್ಲಿ ಮನೋಹಸ್ತದಿಂದ ಚರಲಿಂಗಾರ್ಚನ ಯುಕ್ತವಾದುದೇ ಪ್ರಾಣಲಿಂಗಿಸ್ಥಲ (ಶಿವಾಸೂ. ೯೭) ; ಪ್ರಾಣಲಿಂಗಿಸ್ಥಲ . . . ಅಂಗಲಿಂಗಿಸ್ಥಲ ಈ ಐದು ಪ್ರಾಣಲಿಂಗಿಸ್ಥಲಂಗಳು (ಅಬಂಡೀ. ೨೩೦-೦೪೯). [ಸಂ.]

**ಪ್ರಾಣವಂಚಕ** (ನಾ). (ತನ್ನ) ಜೀವಕ್ಕೆ ವಂಚನೆ ಮಾಡಿಕೊಳ್ಳು ವವನಂ : ಮೊದಲಿಸಲುಂ ಪ್ರಾಣವಂಚಕನಾದವಂಗಂ ಲಿಂಗಭಕ್ತಿ ಸುಮೇ ಧಿಸದು ಧನವಂಚಕಂಗೆ ಸುಸಾಧ್ಯವಾಗದದು ಆದಿಜಂಗಮಭಕ್ತಿ (ಬಸಪು. ೩೪-೦೪). [ಸಂ.]

**ಪ್ರಾಣವಧೆ** (ನಾ). ಕೊಲ್ಲುವುದು : ಪ್ರಾಣಹಾನಿ : ಜಿನಚಂದ್ರದೇವಂ ನಡೆಯೆ ಧರ್ಮಚಕ್ರಂ ಮುಂದೆ ನಡೆಯೆ ನಡೆವ ನಾಲ್ಕುಂ ದೆಸೆಗಳೊಳಂ ನೂಱುಯೋಜನಪ್ರಮಾಣಾಂತರದೊಳಾವ ಜೀವಕ್ಕಂ ಪಸಿವು ಪಸವುಂ ಪ್ರಾಣವಧೆಯುಮಾಗದಿರೆಯುಂ (ಕಾಂತಿಪು. ೦೨-೦೪ ವ) ; ಶಾಸ್ತ್ರ ಘನ ವಂಬೆನೆ ಕರ್ಮವ ಭಜಸುತ್ತಿದೆ ವೇದ ಘನವಂಬೆನೆ ಪ್ರಾಣವಧ [ಶಾಕಾಂ. ವೇಧ] ಯ ಹೇಳುತ್ತಿದೆ (ಬಸವ. ೨೦೬). [ಸಂ. ಪ್ರಾಣವಧ]

**ಪ್ರಾಣವಲ್ಲಭ** (ನಾ). ೧. ಪ್ರೀತಿಪಾತ್ರ ವ್ಯಕ್ತಿ : ಬಿಡದೆ ಪೊಗೆ ಸುತ್ತೆ ತೋಳಂ ಸಡಲಿಸದಾ ಪ್ರಾಣವಲ್ಲಭರ್ ಪ್ರಾಣಮನಂದೊಡೆಗಳೆದರೋವ ರೋವರೊಳೊಡಸಾಯಲ್ಪಡೆದರಿನ್ನವೇಂ ಸ್ವಪೊಳವೇ (ಅಂಪು. ೩-೨೪). ೨. ಗಂಡ ; ಪತಿ : ಹಾ ಮದೀಯ ಪ್ರಾಣವಲ್ಲಭನೆ . . . ಎಮ್ಮ ದೃಷ್ಟಿಗೆ ದೂರವಾದ್ಯೆ (ಕೌಶಾ. ೩೭-೭). [ಸಂ.]

**ಪ್ರಾಣವಲ್ಲಭೆ** (ನಾ). ಹೆಂಡತಿ ; ಪತ್ನಿ: ಪೊಲ್ಲಮೆಯೊಳ್ ತೀವಿರ್ದ ಗೃಹಸ್ಥರಲ್ಲಂ ಕಣ್ಣಿವೆ ಮಱೆಯಾದೊಡೆ ಬಾಟದನಿತಂ ಮಾಟ್ಟ ಸ್ನೇಹದ ಪ್ರಾಣವಲ್ಲಭೆಯುಮಂ ದೋಷಂಗೆಯ್ದಳೆಂಬುದಂ ಕೇಳ್ದನಿತಱೊಳೆ ಪೊಱ ಮಡಿಸಿ ಕಳೆವರ್ (ಜೀವಸಂ. ೩೪-೦೪೮) ; ಶಕುಂತಲೆ . . . ತಾನು ಹೃದ ಯೇಶ್ವರನ ಪ್ರಾಣವಲ್ಲಭೆಯಾಗಿ, ರಾಣಿಯಾಗಿ ಬಾಳಿ ಸುಖಿಸುವೆನೆಂದಾಶಿಸಿದಳು (ರಘೂನಾ. ೭೦). [ಸಂ. ಪ್ರಾಣವಲ್ಲಭಾ]

**ಪ್ರಾಣವಾಯು** (ನಾ). ೧. ಜೀವನಾಧಾರವಾದ ಗಾಳಿ ; ಆಮ್ಲಜನಕ : ಪ್ರಾಣವಾಯುಗಳವರು ಸುಭಟಶ್ರೇಣಿದೇಹಕೆ ನಿನ್ನ ತನು ವಿಕಪ್ರಾಣವದ ಱಿಂದಾಯ್ತು ಪರಿಭವವು (ಕುಪ್ಪಾಭಾ. ೨೦-೦೨) ; ಶ್ಲೇಷ್ಮದಿಂದ ತಡೆಯಲ್ಪಟ್ಟ ಪ್ರಾಣವಾಯುವು ಅನ್ನಜೆ, ಯಮಳೆ, ಗಂಭೀರೆ, ಕ್ಷುದ್ರೆ, ಮಹತೆ ಎಂಬೈದು ಪ್ರಕಾರದಿಂದ ಬಿಕ್ಕುಳನ್ನುಂಟುಮಾಡುವುದು (ಚಿಕಿತ್ಸ. ೨೫೦). ೨. [ಯೋಗ] ಪ್ರಾಣವೆಂಬ ಹೆಸರುಳ್ಳ ವಾಯು : ರೇಚಕ ಪೂರಕ ಕುಂಭಕ ರೂಪಿಂದೆ ಚೇಷ್ಟಿಸುವುದೊಂದು ಪ್ರಾಣವಾಯು (ಭಸ್ಮಶ. ೩೩-೦೩). [ಸಂ.]

**ಪ್ರಾಣವಿಯೋಗ** (ನಾ). ಜೀವವು ಶರೀರದಿಂದ ಬೇರೆಯಾಗುವುದು; ಸಾವು; ಮರಣ: ಚೈತ್ರವೃಕ್ಷದೊಳು ಪಂಚನಮಸ್ಕಾರಮನುಚ್ಚರಿಸುತ್ತಂ ಪ್ರಾಣವಿಯೋಗಮಾಗೆ (ಶಾಂತೀ. ೦೬); ಪಾಪದ ನವೆದಾಮಿಳಗೊಳಿದು ಪ್ರಾಣವಿಯೋಗಕಾಲದಲಿ ಕಾಯ್ದುವನು ನೀ (ಹಂಪಾ. ೪೩); ಕೈನಾಡಿಯನ್ನು ಹಿಡಿದು ನೋಡಿದನು; ನಾಡಿಯ ಗತಿಯು ಕಾಣಲಿಲ್ಲ, ಪ್ರಾಣವಿಯೋಗವಾಗಿದ್ದಿತೇ? (ಶಕುಂ. ೯೦). [ಸಂ.]

**ಪ್ರಾಣಸಂಕಟ** (ನಾ). ೧. ಸಾಯುವಾಗ ಉಂಟಾಗುವ ನೋವು; ಪ್ರಾಣಬಾಧೆ: ಗಡ್ಡಂ ಮೀಸೆಗಳು ಬೇಯಲು ಸಮೀಪದ ಗಡಿಗೆ ಬಾವಿಗಳೊಳಗೆ ಧುಮ್ಮಿಕ್ಕುವರು ತಮ್ಮಯ ಪ್ರಾಣಸಂಕಟಕೆ (ಬಸವ. ೩೬-೩೯); ಬೆಕ್ಕಿಗೆ ಚೆಲ್ಲಾಟ ಇಲಿಗೆ ಪ್ರಾಣಸಂಕಟ (ಗಾದೆ). ೨. (ಆಲಂ) ಅತ್ಯಂತ ಹಿಂಸೆ; ವೇದನೆ: ಶರಿ ಕೊಳೆಗಳಿಂದುಂಟಾಗುವ ವಿಷಾಣುತೆ, ಒಡ್ಡಸಾದಯಿಂದಾಗಿ ಪ್ರಾಣಸಂಕಟ ಇವುಗಳಿಂದ ಕೂಡಿದ ಅನಾರೋಗ್ಯಕರವಾದ ಅಡುಗೆಮನೆಗಳಿಂದಾಗಿ ಎಷ್ಟು ಮಂದಿ ಸ್ತ್ರೀಯರು ತಮ್ಮ ಆರೋಗ್ಯವನ್ನು ಕಳೆದುಕೊಂಡಿಲ್ಲ? (ಅಡುಗೆ. ೨೦). [ಸಂ.]

**ಪ್ರಾಣಸಂಯಮ** (ನಾ). ೧. ಉಸಿರಾಟವನ್ನು ಹತೋಟಿಯಲ್ಲಿಡುವುದು. ೨. [ಜೈನ] ಷಟ್ಕಾಯಂಜೀವಗಳ ವಧೆ ಮಾಡದಿರುವುದು: ಅಭ್ಯಂತರಂ ಬಾಹ್ಯಮೆಂಬೆರಡುಂ ತೆಱದ ಪರಿಗ್ರಹಮನೀಡಾಡಿ ಪ್ರಾಣಸಂಯಮಮಿಂದ್ರಿಯಸಂಯಮಮೆಂಬೆರಡುಂ ತೆಱದ ಸಂಯಮಮುಮಂ ತಾಳ್ದಿ (ಜೀವಸಂ. ೧೧-೦ ಪ). 'ಇಂದ್ರಿಯಸಂಯಮ' ಪರಾ. [ಸಂ.]

**ಪ್ರಾಣಸಖಿ** (ನಾ). ಜೀವಕ್ಕೆ ಸಮವಾದ ಗೆಳತಿ: ಅತ್ಯಂತ ಪ್ರಿಯಳಾದವಳು: ಕ್ಷಮಿಸು ನೀಂ ಪ್ರಾಣಸಖೀ ರಮಣೀ ರಾಕೇಂದುಮುಖೀ (ಶಾಕುಂತ. ೦೦೦ ಅಂಕದ). [ಸಂ. ಪ್ರಾಣಸಖೀ]

**ಪ್ರಾಣಸಮೆ** (ನಾ). ೧. ಜೀವಕ್ಕೆ ಸಮನಾದವಳು; ಪ್ರಾಣಪ್ರಿಯೆ: ಪ್ರಾಣಸಮೆ ಹೃದಯದಿಂ ಮತ್ಪ್ರಾಣದೊಳೊಡಗೂಡಿ ಪೋಗಲಾಗೆಂದೆನ್ನಂ ಮಾಣಿಸವೋಲ್ ಕಯ್ ಸುಮನೋಬಾಣಾಗ್ನಿಸ್ಫುರಿತಹೃದಯದೊಳ್ ಸೊಗಯಿಸುಗುಂ (ಕಾದಂಪೂ. ೧೦೩). ೨. ಹೆಂಡತಿ; ಪತ್ನಿ.

[ಸಂ. ಪ್ರಾಣಸಮಾ]

**ಪ್ರಾಣಸ್ಥಾನ** (ನಾ). ಜೀವವಿರುವ ಸ್ಥಳ; ಹೃದಯ: ವಾತಾದಿದೋಷಗಳು ... ಅತ್ಯಂತಬಲವುಳ್ಳುದಾಗಿ ಪ್ರಾಣಸ್ಥಾನವಾದ ಹೃದಯವನ್ನಾಶ್ರಯಿಸಿ ಸನ್ನ್ಯಾಸವೆಂಬ ರೋಗವನ್ನುಂಟುಮಾಡುವುದು (ಸಕಕ್ಕ. ೨೮೦).

[ಸಂ.]

**ಪ್ರಾಣಸ್ನೇಹಿತ** (ನಾ). ಜೀವಕ್ಕೆ ಸಮನಾದ ಗೆಳೆಯ; ಪ್ರಿಯಮಿತ್ರ: ನಾವು ಧನಿಕರಲ್ಲದಿದ್ದರೂ ಪ್ರಾಣಸ್ನೇಹಿತರನ್ನು ಹೇಗೆ ಆದರಿಸಬೇಕೆಂದು ನಮಗೆ ಗೊತ್ತು (ಕುಲಶಾ. ೦೨೪); ಪ್ರಾಣಸ್ನೇಹಿತನಾದರೂ ಮೀನಿನ ಬುಟ್ಟಿಗೆ ಕೈಹಾಕಬೇಡ (ಗಾದೆ). [ಸಂ.]

**ಪ್ರಾಣಸ್ವರೂಪ** (ನಾ). ಜೀವದ ರೂಪದಲ್ಲಿರುವವನು; ಪ್ರಾಣಪ್ರಿಯ: ಪತಿಯನಗೆ ಪ್ರಾಣಸ್ವರೂಪನಾಗಿದ್ದಾನೆ (ಕಾಗುಂ. ೦೨೦). [ಸಂ.]

**ಪ್ರಾಣಹತಿ** (ನಾ). ಮರಣ; ಸಾವು: ಸಹಜಾಶುಚಿದೇಹಂ ಪ್ರಾಣ[ಪಾಶಾಂ. ೮]ಹತಿ ಪ್ರಾರಂಭಮಂದು ಮನಿತಾರತಿನಿಸ್ಪೃಹನಾಗಿ ತೊಱೆದು ನೆಗೞ್ದಂ ಗೃಹಸ್ಥರೊಳ್ ಬ್ರಹ್ಮಚಾರಿಯೋಟನೆಯಾತಂ (ಸುಕುಮಚ. ೬-೩೨).

[ಸಂ.]

**ಪ್ರಾಣಹತ್ಯೆ** (ನಾ). ಕೊಲ್ಲುವುದು; ಸಾಯಿಸುವುದು: ಬಿರಡಿಗಳನ್ನು ತಾನು ಕೊಲ್ಲುವುದಿಲ್ಲವೆಂತಲೂ ಇಸ್ತ್ರಿಯ ಬಾಯಿಗೆ ಸಿಕ್ಕು ಅವು ತಾವೆ ಪ್ರಾಣಹತ್ಯೆ ಮಾಡಿಕೊಳ್ಳುತ್ತವೆಂತಲೂ ಅಗಸನು ಹೇಳುತ್ತಾನೆ (ದಳಕಕ್ಕ. ೬೨); ಪ್ರಾಣಹತ್ಯೆಗೆ ಪ್ರವೃತ್ತವಾಗಲು, ನಿನಗೊದಗಿದ ವಿಪತ್ತು ಯಾವುದು? (ಕೃಕಕ್ಕ. ೬). [ಸಂ. ಪ್ರಾಣಹತ್ಯಾ]

**ಪ್ರಾಣಹರ** (ಗು). ೧. ಜೀವವನ್ನು ತೆಗೆಯುವ; ಕೊಲ್ಲುವ. (ನಾ). ೨. ಜೀವವನ್ನು ತೆಗೆಯುವಂಥದು; ಸಾಯಿಸಂವಂಥದು: "ಕ್ಷ್ವೇಳಃ ಗರಳಂ, ವಿಷಂ—೩ ಸಾಮಾನ್ಯವಾಗಿ ಸಕಲ ವಿಷಗಳಿಗೂ ಹೆಸರುಗಳು, ಅಂದರೆ ಪ್ರಾಣಹರವಾದ ಪಿತ್ತನಂಜು" (ಸಿದ್ಧಾಂತಿ. ೬೩). [ಸಂ.]

**ಪ್ರಾಣಾಂತಿಕ** (ಗು). ೧. ಮರಣವು ಸಮೀಪಿಸಿದ; ಸಾವು ಸಮೀಪಕ್ಕೆ ಬಂದ: ಪ್ರಾಣಾಂತಿಕ ಸಂಕಟವು ದೊಡ್ಡದಲ್ಲವೆ? (ಕೃಕಕ್ಕ. ೬೪). (ನಾ). ೨. ಸಾವು; ಮರಣ. [ಸಂ.]

**ಪ್ರಾಣಾತಿಪಾತ** (ನಾ). ೧. ಕೊಲ್ಲುವಿಕೆ; ಸಾಯಿಸುವಿಕೆ. ೨. [ಜೈನ] ಇಪ್ಪತ್ತೈದು ಕ್ರಿಯೆಗಳಲ್ಲಿ ಒಂದು; ಆಯುಸ್ಸು, ಇಂದ್ರಿಯ, ಪ್ರಾಣಗಳ ವಿಯೋಗದಿಂದಾಗುವ ಕ್ರಿಯೆ: ಪಂಚವಿಂಶತಿಕ್ರಿಯೆಗಳು ೧ ಸಮ್ಯಕ್ತ್ವಕ್ರಿಯೆ ... ೧೧ ಪ್ರಾಣಾತಿಪಾತ (ಆಯುಸ್ಸು, ಇಂದ್ರಿಯಶಕ್ತಿ, ಪ್ರಾಣ ಇವುಗಳ ವಿಯೋಗಕ್ರಿಯೆ) (ಕೃಕಕ. ೬೩). 'ಪಂಚವಿಂಶತಿಕ್ರಿಯೆ' ಪರಾ. [ಸಂ.]

**ಪ್ರಾಣಾಪಹರಣ** (ನಾ). ಜೀವವನ್ನು ತೆಗೆದುಕೊಂಡು ಹೋಗುವುದು; ಸಂಹಾರ; ಕೊಲ್ಲುವುದು: ಪ್ರಾಣಾಪಹರಣದ ದುರುದ್ದೇಶದಿಂದ ಅವಳು ಪ್ರೇರಿತಳಾಗಿದ್ದಳೆಂಬುದಕ್ಕೆ ಸಾಕಷ್ಟು ರುಜುವಾತಿಲ್ಲ (ಕುಸಕು. ೨೦೪).

[ಸಂ.]

**ಪ್ರಾಣಾಪಾಯ** (ನಾ). ಜೀವಕ್ಕೆ ಉಂಟಾಗುವ ತೊಂದರೆ,—ಅಪಾಯ: ಪ್ರಾಣಾಪಾಯದ ಭೀತಿ ಇಲ್ಲವೆಂದು ಹರ್ಷ ತಾಳಿದರು (ಕುಂತಿಕೂ. ೨೬); ತಾನು ಪ್ರಾಣಾಪಾಯದಿಂದ ಪಾರುಗಾಣಬಹುದೆಂಬ ಆಶೆ ಜನಿಸಿತು (ಕೃಕಕ್ಕ. ೪).

[ಸಂ.]

**ಪ್ರಾಣಾಯಾಮ** (ನಾ). [ಯೋಗ] ಪ್ರಾಣವಾಯುವನ್ನು ಒಂದು ಕ್ರಮದಲ್ಲಿ ವ್ಯವಸ್ಥೆಗೊಳಿಸುವುದು: ವಿಪ್ರೋತ್ತಮರನುಮತದಿಂ ಪ್ರಾಣಾಯಾಮಮಂ ಮಂತ್ರಿಸಿ (ಗುಣ. ೧೧-೯೬ ವ); ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿಗಳೆಂಬ ಅಷ್ಟಾಂಗ ಯೋಗದೊಳಗೆ (ಅಂಶೀ. ೨೦೪_೩೩). [ಸಂ.]

**ಪ್ರಾಣಾರ್ಪಣೆ** (ನಾ). ಜೀವವನ್ನು ಅರ್ಪಿಸುವುದು; ಸಾಯುವುದು: ದೇಶದ ಸಲುವಾಗಿ ಹಠಾತ್ ಪ್ರಾಣಾರ್ಪಣೆ ಮಾಡುವುದು ಅತ್ಯಂತ ಅವಶ್ಯಕ (ಇಕ್ಕಕ. ೪); ದಂಬನ ಕಾಲುಬುಡದಲ್ಲಿ ಹೋಗಿ ತನ್ನ ಪ್ರಾಣಾರ್ಪಣೆ ಮಾಡಿತು—ಬಾಡು (ದಂಪಾ. ೦೦೬). [ಸಂ. ಪ್ರಾಣಾರ್ಪಣ]

**ಪ್ರಾಣಾವಧಿ** (ನಾ). ಜೀವಿತದ ಅವಧಿ; ಸಾಯುವವರೆಗಿನ ಕಾಲ: ಪ್ರಾಣಾವಧಿಯು ರಿಪುಗಳಂ ನುತಿಗೆ ರಕ್ಷಿಪ ಧುರೀಣಯನ್ನವಗುಣಗಳಂ ಹರಿಸು (ಜಕ್ಕಿ. ೩-೬-೦). [ಸಂ.]

**ಪ್ರಾಣಾಹುತಿ** (ನಾ). ೧. ಜೀವದ ಬಲಿ; ಸಾವು; ಮರಣ: ಗಾಳದ ತುದಿಯೊಳಿಪ್ಪ ಭೂನಾಗನಂ ಕಂಡು ಪ್ರಾಣಾಹುತಿಯೆಂದು ಸವಿವ ಮೀನಿನಂತೆ (ಕವಳ. ೬೯-೩). ೨. ಊಟಕ್ಕೆ ಮೊದಲು ಪಂಚಪ್ರಾಣಗಳ ಹೆಸರಿನಿಂದ ಇಡುವ ಅನ್ನದ ಬಲಿ: ರಾಯರು ಪ್ರಾಣಾಹುತಿ ಯನ್ನಿಟ್ಟು ಊಟವನ್ನು ಪ್ರಾರಂಭಿಸಿದರು (ದೂತಿ). [ಸಂ.]

**ಪ್ರಾಣಿ** (ನಾ). ೧. ಜೀವವನ್ನು ಹೊಂದಿರುವಂಥದು; ಜೀವಿ. ೨. ಮೃಗ; ಪಶು: ಅಲ್ಲಿ ನಾನಾಜಾತಿಯ ಪ್ರಾಣಿಗಳು ಇದ್ದವು (ಕಕಪು. ೨-೨೭); ಮನುಷ್ಯಶಿಶು ಇತರ ಪ್ರಾಣಿಗಳ ಶಿಶುಗಳಿಗಿಂತ ದುರ್ಬಲ (ಕರ್ನಾಟಿ. ೦೭೪). ೩. ಮನುಷ್ಯ; ಮಾನವ: ಬೇಡಲು ಹುಟ್ಟಿದ ಪ್ರಾಣಿಗೆ ಬೇಡಲು ವಿಧಿಯೇ ಸೂಳೆಗೆ ಹುಟ್ಟಿದ ಪ್ರಾಣಿಗೆ ನಿಜಗುಣ ಸಜ್ಜನವಪ್ಪುದೆ (ಬಸವ. ೦೨೮); ಪಂಥ ಬೇಡಿ ಪ್ರಾಣಿಗಳಿರಾ ಸಂತತ ಹರಿದಾಸರಾಗಿ (ಪುರಂದರ. ೩-೦೦೩ ಕಲ್ಯಾ). [ಸಂ. ಪ್ರಾಣಿನ್]

**ಪ್ರಾಣದ್ಯೂತ** (ನಾ). ೧. ಯುದ್ಧ ; ಕಾಳಗ : " ಯುದ್ಧದಲ್ಲಿಯುಂ ಪ್ರಾಣದ್ಯೂತಮೆಂಬುದು" (ಶಠಾಡು. ೦೩೧–೪). ೨. ಹುಂಜ, ಟಗರು ಮೊದಲಾದ ಪ್ರಾಣಿಗಳ ಮೇಲೆ ಪಣವಿಟ್ಟು ನಡೆಸುವ ಕಾಳಗ : "ಪ್ರಾಣಿದ್ಯೂತಂ, ಸಮಾಹ್ವಯಃ—೨ ಕೋಳಿ ಮೊದಲಾದ ಜಂತುಗಳ ಪಂದ್ಯದ ಹೆಸರುಗಳು " (ಸಿದ್ಧಾಂತಿ. ೬೨೦). [ಸಂ.]

**ಪ್ರಾಣಧರ್ಮ** (ನಾ). ಜೀವಿಗಳು ಬದುಕಿರಲು ಕೈಗೊಳ್ಳುವ ಕಾರ್ಯ: ಪ್ರಾಣಧರ್ಮ ಎಂಬಲ್ಲಿ ಜೀವಿಗಳಲ್ಲಿ ಪ್ರಾಣರಕ್ಷಣ ಅಥವಾ ಪ್ರಾಣಧಾರಣಕ್ಕಾಗಿ ಸ್ವಾಭಾವಿಕವಾಗಿ ನಡೆಯುವ ಕಾರ್ಯಗಳು (ಅಧ್ಯಾಕ. ೦೦). [ಸಂ.]

**ಪ್ರಾಣವಧೆ** (ನಾ). ಪ್ರಾಣಿಗಳನ್ನು ಕೊಲ್ಲುವುದು : ಪ್ರಾಣರಕ್ಷಣಮೆ ಪರಮಧರ್ಮಂ ಪ್ರಾಣವಧೆಯೆ ಪರಮಪಾತಕವೆಂಬುದರಿಂ ಪ್ರಾಣವಧೆಗೆಯ್ಯಲಾಗದು (ಶಂಕರ. ೬೦_೨೦) ; ಪ್ರಾಣವಧೆ . . . ಸುಳ್ಳಾಡುವುದು ಎಂಬ ನಾಲ್ಕು ಕೆಟ್ಟಕೆಲಸಗಳನ್ನು ಅವನು ನೀಗುವವನು (ಬುದ್ಧಕ. ೦೬೮). [ಸಂ. ಪ್ರಾಣವಧ]

**ಪ್ರಾಣವಧೆಗೆಯ್** (ಕ್ರಿ). ಜೀವಿಗಳನ್ನು ಕೊಲ್ಲು ; ಪ್ರಾಣಿಗಳನ್ನು ವಧಿಸು : ವಿಧಿಪೂರ್ವಕಂ ಪ್ರಾಣವಧೆಗೆಯ್ವುದಲ್ಲದೆ ವೃಥಾ ವಧೆಗೆಯ್ವುದಿಲ್ಲ (ಶಂಕರ. ೬೨–೦೦). [ಪ್ರಾಣವಧೆ + ಕೆಯ್$_1$]

**ಪ್ರಾಣಿಶಾಸ್ತ್ರ** (ನಾ). ಪ್ರಾಣಿಗಳ ಜೀವನಕ್ಕೆ ಸಂಬಂಧಿಸಿದ ಶಾಸ್ತ್ರ; ಪ್ರಾಣಿಗಳನ್ನು ಕುರಿತ ಶಾಸ್ತ್ರ : ಭೌತಶಾಸ್ತ್ರ (Physics) ರಸಾಯನಶಾಸ್ತ್ರ (Chemistry) ಸಸ್ಯಶಾಸ್ತ್ರ (Botany) ಪ್ರಾಣಿಶಾಸ್ತ್ರ (Zoology) . . . ಬೇರೆಬೇರೆಯಾದವು (ಶ್ರೀಕ. ೦೨) ; ನಾನು ಆ ಕಾಲದಲ್ಲಿ ಪ್ರಕೃತಿಶಾಸ್ತ್ರ, ವನಸ್ಪತಿಶಾಸ್ತ್ರ, ಪ್ರಾಣಿಶಾಸ್ತ್ರಗಳನ್ನು ಅವರಿಂದ ಕಲಿತೆನು (ಬುಕಸ. ೨೨). [ಸಂ.]

**ಪ್ರಾಣಿಶಾಸ್ತ್ರಜ್ಞ** (ನಾ). ಪ್ರಾಣಿಶಾಸ್ತ್ರವನ್ನು ತಿಳಿದವನು : ಪ್ರಾಣಿಶಾಸ್ತ್ರಜ್ಞರ ಪರಿಶೋಧನೆಗಳಿಂದ ಹೊರಪಡುವ ವಿಷಯಗಳನ್ನು ಶಾಸ್ತ್ರೀಯವಾಗಿ ವಿಂಗಡಿಸುವುದು ವರ್ಗೀಕರಣದ ಮೊದಲನೆಯ ಮಜಲು (ಪ್ರಾಣಿಶಾ. ೦೨). [ಸಂ.]

**ಪ್ರಾಣಿಸಂಗ್ರಹಾಲಯ** (ನಾ). ಸಾರ್ವಜನಿಕರ ಪ್ರದರ್ಶನಕ್ಕಾಗಿ ವಿಸ್ತಾರವಾದ ಪ್ರದೇಶದಲ್ಲಿ ಕಾಡುಮೃಗಗಳನ್ನು ಕೂಡಿಟ್ಟಿರುವ ಸ್ಥಳ ; ಮೃಗಾಲಯ ; ಪಾಸಬಂಗಲೆ : ಮನುಷ್ಯನೆಂಬ ಒಂದು ಪ್ರಾಣಿಯೂ ಇದೆ. ಆದರೆ ಅವನಿಗೆ ಪ್ರಾಣಿಸಂಗ್ರಹಾಲಯ ಕಟ್ಟಿ ಪ್ರದರ್ಶಿಸುವ ಬುದ್ಧಿ ಇದೆ (ಅಕಾ. ೨೪೨). [ಸಂ.]

**ಪ್ರಾಣಿಸು** (ಕ್ರಿ). ಬದುಕುವಂತೆ ಮಾಡು ; ಬದುಕಿಸು : ಗೋಣ ಕೊಯ್ದರೆ ನೆನೆಯಲಾ ಹರಿಯನ್ನ ಪ್ರಾಣಿಸುವ (ಸಂಳಕ. ೬–೭೦). [ಪ್ರಾಣ + — ಇಸು]

**ಪ್ರಾಣಿಹಿಂಸೆ** (ನಾ). ಪ್ರಾಣಿಗಳನ್ನು ಕೊಲ್ಲುವಿಕೆ ; ಪ್ರಾಣವಧೆ; ಜೀವಹಿಂಸೆ : ಯಮ ತನ್ನ ಪುರದಿ ಸಾಜಿಂದನು . . . ಪ್ರಾಣಿಹಿಂಸೆಯ ಮಾಳ್ಪ ಬ್ರಹ್ಮಹತ್ಯಗಾಜಿರ ಎಳೆದು ತನ್ನಿರೋ ಎಂದು (ಕ್ರೀಂರ. ೨–೦೨೩–೨); ಕೆಲವು ನಿರೂಪಕರು ಪ್ರಾಣಿಹಿಂಸೆ ತ್ಯಾಗ ಮಾಡಿದರು (ಹಿಂದಣ. ೦೪). 'ಜೀವಹಿಂಸೆ' ಪರ್ಯಾ. [ಸಂ.. ಪ್ರಾಣಿಹಿಂಸಾ]

**ಪ್ರಾಣೇಶ** (ನಾ). ೧. ಗಂಡ ; ಪತಿ : ಪ್ರಾಣೇಶನ ಬರವಿಂಗಿವು ಮಾಣದೆ ಕೆತ್ತಿದಪುವೆಡದ ಕಣ್ಣುಂ ತೋಳುಂ ಪ್ರಾಣೇಶನ ಬರವಿಲ್ಲಂ (ಜಗು. ೦೦–೩೩); ಬರ್ಹಿವಧು ಶಾಂ ಪ್ರಾಣಭಯದಿಂದೆ ಪ್ರಾಣೇಶನಂ ಮರಣಮುಖನಂ ಬಿಟ್ಟು . . . ಪಾರಿದವುದು (ಕಣ್ಣಾಂಗ. ೫೪–೦೪೦). ೨. ಪರಮಾತ್ಮ : ಈಶ ಸರ್ವೇಶ ಪ್ರಾಣೇಶ ನೀಂ ರಕ್ಷಿಪುದು (ರಂಜ್ಞಸೋ. ೪–೦೪); ಇತ್ತಲೀ ಪ್ರಾಣೇಶನಿದ್ದ ನಿಮಿತ್ತದಲಿ ಪಶುಗಳು ಬೆಳೆದ ಹೊಲದತ್ತ ತೆಗೆಯಲು (ಜಕ್ಕ. ೬೦–೨೩). ೩. ಯಮ : ಪ್ರಾಣೇಶಂ ಬರ್ಪಮನ್ನನುಯ್ಕಲ ಮೋಘಂ (ಜಗು. ೦೦–೩೩). ೪. ಗಾಳಿಯ ಅಧಿದೇವತೆ ; ವಾಯು. [ಸಂ.]

**ಪ್ರಾಣೇಶ್ವರ** (ನಾ). = ಪ್ರಾಣೇಶ ೧ : ಒರ್ವಳ್ ನಿಜಪ್ರಾಣೇಶ್ವರನನೆಂತುಂ ತನ್ನೊಳಳವಡಿಸಲಾಜದೆ ನಿಜಪ್ರಿಯಸಖಿಗಿಂತೆಂದಳ್ (ಆದಿಪು. ೦೨–೩೩ ಪ); ಪ್ರಾಣೇಶ್ವರನೊಳ್ ಮನ್ನಣೆಗಾಣೆಗೆ ಗೋಸನೆಗೆ ಸೂಟ ಪಾಟಿಗೆ ನಮ್ಮೊಳ್ಮಾಣದೆ ಮಚ್ಚರಿಪಂತಿರೆ ಹೂಣಿಸಿ ಮುಂಚಲ್ಕೆವೇಟ್ಕುಮೊರ್ವರಿನೊರ್ವರ್ (ಅಜಿತ. ೦೨–೦೩). [ಸಂ.]

**ಪ್ರಾಣೇಶ್ವರರಸ** (ನಾ). [ವೈದ್ಯಶಾ] ಪ್ರಾಣವಾಯುವು ಶ್ಲೇಷ್ಮವನ್ನು ಕತ್ತರಿಸಿ ಶ್ವಾಸ ನಿಶ್ವಾಸಗಳು ನೇರ್ಪಡುವಂತೆ ಮಾಡುವ ಒಂದು ಬಗೆಯ ಔಷಧಿ : ಶ್ವಾಸ ಬಿಕ್ಕುಳುಗಳೆಂಬ ಎರಡು ರೋಗಕ್ಕೂ ಪ್ರಾಣೇಶ್ವರರಸವ ಕೊಡುವುದೆಂದು ಅಶ್ವಿನೀದೇವತೆಗಳ್ಮನುಮ ವಚಿಸಿರ್ಪರು (ಕಕ್ಕ. ೨೯೦). [ಸಂ.]

**ಪ್ರಾಣೇಶ್ವರಿ** (ನಾ). ೧. ಹೆಂಡತಿ ; ಪತ್ನಿ : ಆತನ ಪ್ರಾಣೇಶ್ವರಿ ವಜ್ರಮಾಲಿನಿ ಕಂಡು (ಶಾಂತಿಪು. ೯–೯೬ ಪ); ದಿಲ್ಲೀಶ್ವರನ ಪ್ರಾಣೇಶ್ವರಿಯಾಗಲು ಯೋಗ್ಯೆಯಾದವಳು (ಕಜಾಕಾ. ೬೬). ೨. ನಲ್ಲೆ; ಪ್ರೇಯಸಿ : ಒರ್ವಂ ತನ್ನ ಪ್ರಾಣೇಶ್ವರಿಯ ಮೊಗಮಂ ನೋಡಿ (ಆದಿಪು. ೦೨–೦೩ ಪ). [ಸಂ. ಪ್ರಾಣೇಶ್ವರೀ]

**ಪ್ರಾಣೋಪ** (ನಾ). ಜೀವಕ್ಕೆ ಸಮವಾದವನು ; ಗಂಡ : ಪೋಪುದುಚಿತವಲ್ಲ ಜೀಯ ಕೇಳ್ ದೈತ್ಯಚಮೂಪನ ಮಹದೈಶ್ವರ್ಯ ನೀ ಪರಿಗ್ರಹಿಸಿಕೊಂಡಿಹುದೆಂದು ರತಿಯ ಪ್ರಾಣೋಪಗೆ ಖಳಮಂತ್ರಿ ನುಡಿದ (ತೋಚಕ. ೦೩–೯); ಅಂದು ಭ್ರಮಿಸುವರೆ ಸ್ತ್ರೀಯು ಪ್ರಾಣೋಪಂಗೆ ಉತ್ತರಮನೀಯ (ಚಚಚೋ. ೯–೦೪). [ಸಂ.]

**ಪ್ರಾಣೋಪಕಾರ** (ನಾ). ಜೀವವನ್ನು ಉಳಿಸುವುದು ; ಕೊಲೆಯಂನ್ನು ತಪ್ಪಿಸುವುದಂ : ನಿಮ್ಮಡಿ ನೀಮೆನಗೆ ಪ್ರಾಣೋಪಕಾರಮಂ ಗೆಯ್ದಿರ್ (ಶಂಕರ. ೦೦೦–೩) ; ಪ್ರಾಣೋಪಕಾರಮಂ ಕಲ್ಯಾಣಮನೆನಗಿತ್ತು ದೇವ ಕಣಯುದ ನಿಮ್ಮಾ ತ್ರಾಣ ಪ್ರವೀಣ ಪರಮಪ್ರಾಣ ಹಿತಾಚರಣಾಪತರ ಸಾಧಾರಣಮೇ (ಶಂಶಾಕು. ೭–೬೬). [ಸಂ.]

**ಪ್ರಾತ** (ನಾ). ಬೆಳಗು ; ಪ್ರಭಾತಸಮಯ : ವಸಂತಪ್ರಾತದಲ್ಲಿ ಬಿರಿದು ಅರಳುತ್ತಿರುವ ಗುಲಾಬಿಯಂತೆ ಇರುವ ಮುಖ (ಶಂಪ್ರಾತ್ಯ. ೩೩). [<ಸಂ. ಪ್ರಾತರ್]

**ಪ್ರಾತಃಕಾಲ** (ನಾ). ಬೆಳಗಿನ ಹೊತ್ತು ; ಹೊತ್ತಾರೆ : ಪ್ರಾತಃಕಾಲದಲ್ಲಿ ಅಗ್ರೋದಕವ ತಂದು ಲಿಂಗದನುವನರಿದು ಪಾದೋದಕವ ತಪ್ಪದೆ ಕೊಂಬುದು (ಚಕ್ಷ.ವ.೪. ೦೦೫–೨೬೩) ; ಅವ್ಯಯಸಮಾಸಕ್ಕೆ—ಅಂತರ್ಮುಖ . . . ಪುನಃಪಾಕ, ಪ್ರಾತಃಕಾಲ (ಕಶಬ್ದ.೮೦ ಪ್ರಯೋ). [ಸಂ.]

**ಪ್ರಾತಃಸವನ** (ನಾ). ಬೆಳಗಿನ ಸಮಯದಲ್ಲಿ ಸೋಮರಸವನ್ನು ಅಗ್ನಿಗೆ ಆಹುತಿ ಮಾಡುವುದು : ಪ್ರಾತಃಸವನ ಮಧ್ಯಂದಿನವು ಸಾಯುಮಸವನಗಳು ವಸುರುದ್ರ ಆದಿತ್ಯರೊಳು ರಾಜಿಸುವ . . . ಮೂರ್ತಿತ್ರಯವ ಚಿಂತಿಸಿ ದಿವಸವೆಂಬಾಹುತಿಗಳಿಂದರ್ಚಿಸುತ ಸುಖಿಸುತಿರು (ಹರಿಕ. ೦೨–೪೯). [ಸಂ.]

**ಪ್ರಾತಃಸ್ನಾನ** (ನಾ). ಬೆಳಗಿನ ಹೊತ್ತು ಮಾಡುವ ಸ್ನಾನ : ಹೇಗೆ ಉದ್ಧಾರ ಮಾಡ್ಪನು ಶ್ರೀಹರಿ . . . ಮರೆತು ಪ್ರಾತಃಸ್ನಾನ ಮಾಡದೆ ಮನೆಮನೆ ತಿರುಗಾಗಿ ಬೆಸಗೊಂಡು ತಿಂಬವನ (ಪುರಂದ. ೦–೦೩೩–೦); ಪ್ರಾತಃಸ್ನಾನವ ಮಾಡಿ ರಕ್ಕಸರಾಯ ಭೂತೇಶನ ಪಾದಯುಗವ ಶ್ವೇತಾಬ್ಜದಿಂದರ್ಚಿಸಿ ದಾನವಬುಧಪ್ರಾತಕೆ ಕೊಟ್ಟನುತ್ಸವದಿ (ತೋಚಕ. ೦೦–೫೦). [ಸಂ.]

**ಪ್ರಾತಃಸ್ಮರಣೀಯ** (ಗು). ೧. ಬೆಳಗಿನ ಹೊತ್ತು ಪ್ರಪ್ರಥಮವಾಗಿ

ಸ್ಮರಿಸಲು ಯೋಗ್ಯವಾದ : ವಿಜ್ಞಾನಾಸಕ್ತಿಯಿರುವವರೆಲ್ಲರಿಗೂ ಪ್ರಾತಃಸ್ಮರಣೀಯನಾದ ಮೈಕೇಲ್ ಫ್ಯಾರಡೆ (ಪ್ರಬಸ. XIV ಪ್ರಾರಂಭ). (ನಾ). ೨. ಲೋಕಕಲ್ಯಾಣವನ್ನು ಸಾಧಿಸಿರುವ, ದೇವತೆಗಳ ಸಾಲಿನಲ್ಲಿ ನೆನೆಯಲು ಯೋಗ್ಯನಾದ ವ್ಯಕ್ತಿ : ಇಂತಹ ಪ್ರಾತಃಸ್ಮರಣೀಯರಾದ ನಿರೀಹಪುರುಷರು ನಮ್ಮ ದೇಶದಲ್ಲಿರುವುದೇ ನಮ್ಮ ಭಾಗ್ಯೋದಯವು (ಚಿತ್ರಸಿ. ೦೨೬). [ಸಂ.]

**ಪ್ರಾತರಾಶ** (ನಾ). ಬೆಳಗಿನ ಊಟ ; ಪ್ರಾತಃಕಾಲದ ಭೋಜನ : ಭಿಲ್ಲನು ಇವರನ್ನು ನೋಡಿ ಪ್ರಾತರಾಶ(ಬೆಳಗಿನ ಭೋಜನ)ವು ಎಷ್ಟು ಹೊತ್ತಿಗೆ ಸಿದ್ಧವಾಗುವುದೆಂದು ಕೇಳಿದನು (ಚಿತ್ರಸಿ. ೩೪). [ಸಂ.]

**ಪ್ರಾತರ್ವಿಧಿ** (ನಾ). ಪ್ರಾತಃಕಾಲದಲ್ಲಿ ಮಾಡಬೇಕಾದ ದೇಹಶೌಚ, ಸಂಧ್ಯಾವಂದನಾದಿ ಕಾರ್ಯಗಳು ; ಬೆಳಗಿನ ಕರ್ತವ್ಯ : ಮರುದಿನ ಬೆಳಗ್ಗೆ ಕೃಷ್ಣನು ತನ್ನ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಸಿದ್ಧನಾಗಲು . . . ತಿಳಿಸಿದರು (ವಚಕಾ. ೨೫೦); ದಾಣಸಿಗರೂ . . . ಹತ್ತಿರದ ಹಳ್ಳಕೆ ಹೋಗಿ ಪ್ರಾತರ್ವಿಧಿಗಳನ್ನೆಲ್ಲ ಮುಗಿಸಿಕೊಂಡು ಬಂದದ್ದಾಯಿತು (ಕಂಪಕು. ೨೪). [ಸಂ.]

**ಪ್ರಾತಿಕೂಲ್ಯ** (ನಾ). ವಿರೋಧ ; ಪ್ರತಿಕೂಲ : ನಾನು ಇನ್ನು ಮುಂದೆ ತಮಗೆ ಅನುಕೂಲ್ಯವನ್ನೇ ಮಾಡುತ್ತೇನೆ. ಪ್ರಾತಿಕೂಲ್ಯವನ್ನು ಮಾಡುವುದಿಲ್ಲ (ಹಿಂದಿಮಾ. ೨೬೩). [ಸಂ.]

**ಪ್ರಾತಿನಿಧಿಕ** (ಗು). ೧. ಪ್ರತಿನಿಧಿಸುವ : ಇದು ನವೀನಪ್ರಜ್ಞೆಯಲ್ಲಿ ಬರೆದ ಶ್ರೇಷ್ಠಕೃತಿಗಳ ಪ್ರಾತಿನಿಧಿಕಸಂಗ್ರಹವೇನಲ್ಲ (ಹೊಸಕ್ಕಿ. ೨೪೬) ; ಕರುಣರಸಾಸ್ವಾದನೆಯೂ ಶೃಂಗಾರಾದಿ ರಸಗಳ ಆಸ್ವಾದನೆಯಂತೆಯೇ ಸುಖಾತ್ಮಕವಾಗಿರುತ್ತದೆ ಎಂಬುದು ಭಾರತೀಯ ಕಾವ್ಯಮೀಮಾಂಸೆಯ ಪ್ರಾತಿನಿಧಿಕ ಅಭಿಪ್ರಾಯ (ಕ್ರೀತ್ರಕ್ರಿ. ೫೦). (ನಾ). ೨. ಪ್ರತಿನಿಧಿಸಂವಂತಹುದು : ಅದೃಷ್ಟವಶಾತ್ ಗ್ರೀಕ್ ದುರಂತನಾಟಕದಲ್ಲಿ ಹೆಚ್ಚು ವಿಪುಲವಾದ ಮತ್ತು ಪ್ರಾತಿನಿಧಿಕವಾದ ಕೃತಿಸಮೂಹ ಉಳಿದು ಬಂದಿದೆ (ಜಾಚಿತ್ರ. ೨೨೬). [ಸಂ.]

**ಪ್ರಾತಿನಿಧ್ಯ** (ನಾ). ಒಬ್ಬರ ಪ್ರತಿಯಾಗಿ ಅಧಿಕಾರವನ್ನು ವಹಿಸಿಕೊಡಿರುವುದು ; ಪ್ರತಿನಿಧಿತ್ವ : ಪ್ರೊ. ರೈಟ್ . . . ಪ್ರಾತಿನಿಧ್ಯ ದೊರಕಿಸಿಕೊಡುವದಾಗಿ ಸಮ್ಮೇಳನದ ಅಧಿಕಾರಿಗಳಿಗೆ ಪತ್ರ ಬರೆದು (ಕರ್ಮಜಾ. ೯೬). [ಸಂ.]

**ಪ್ರಾತಿಪದಿಕ** (ನಾ). [ವ್ಯಾಕ] ವಿಭಕ್ತಿಯ ಪ್ರಕಾರ ಸಿದ್ಧವಾದ ನಾಮಪದದ ಮೂಲರೂಪ : ಪ್ರಾತಿಪದಿಕಂಬೊಲಾತನಧಾತುಕನವಿಭಕ್ತಿಭೂಷಿತಂ ನಿಯತಕಾರ್ಥೋಪೇತಂ ನಿಶ್ಚಿತನಾಮಖ್ಯಾತಂ ತಾಂ ಪ್ರತ್ಯಯಾರ್ಹನಾದಂ ದಿವಿಜಂ (ಜಿಲಾತ್ರ. ೩-೨೪) ; ಸುಪ್ಪ್ರತ್ಯಯಕ್ಕೂ ಸ್ತ್ರೀಪ್ರತ್ಯಯಕ್ಕೂ ಪ್ರಕೃತಿಯಾದದ್ದು ಲಿಂಗವು ; ಈ ಲಿಂಗಕ್ಕೆ ಸಂಸ್ಕೃತ ವ್ಯಾಕರಣದಲ್ಲಿ ಪ್ರಾತಿಪದಿಕವೆಂದು ಹೆಸರು (ಹೊಸಗ. ೯). [ಸಂ.]

**ಪ್ರಾತಿಭ** (ಗು). ೧. ಪ್ರತಿಭೆಯಿಂದ ಕೂಡಿದ : 'ಪದಪದದಕ್ಕರಕ್ಕರದ ವಾಕ್ಯದ ವಾಕ್ಯದ' ಪರಿಪರಿಗಳನ್ನು ಉಜ್ಜಿ, ಬಿಚ್ಚಿ, ಬಿಡಿಸಿ ನೋಡುವ ಸೂಕ್ಷ್ಮದರ್ಶಕವಾದ ಸಹೃದಯತೆಯ ಪ್ರಾತಿಭನೇತ್ರ ಬೇಕು (ಜಾಚಿತ್ರ. ೮೩). (ನಾ). ೨. ಹೊಸಹೊಸದಾಗಿ ವಿಷಯಗಳು ಹೊಳೆಯುವ ಬುದ್ಧಿ ; ಪ್ರತಿಭೆ. ೩. [ತರ್ಕಶಾ] ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ, ಅನುಪಲಬ್ಧಿ, ಸಂಭವ, ಐತಿಹ್ಯ, ಲಿಪಿ, ಲೋಕಪ್ರಸಿದ್ಧಿ, ಚೇಷ್ಟೆ ಮತ್ತು ಪ್ರಾತಿಭಗಳೆಂಬ ಹನ್ನೆರಡು ಬಗೆಯ ಪ್ರಮಾಣಗಳಲ್ಲಿ ಒಂದು : ಪ್ರಮಾಣವು ಪ್ರತ್ಯಕ್ಷ . . . ಚೇಷ್ಟೆ, ಪ್ರಾತಿಭ ಎಂದು ಹನ್ನೆರಡು ವಿಧವೆಂದು ಕೆಲವರು ಹೇಳುತ್ತಾರೆ (ಹಿಂದಿಮಾ. ೦೩೩). [ಸಂ.]

**ಪ್ರಾತಿಭಾವ್ಯ** (ನಾ). ಹೊಣೆಗಾರಿಕೆ ಜಾಮೀನು : ಈಡು. [ಸಂ.]

**ಪ್ರಾತಿಭಾಸಿಕ** (ಗು). ೧. ತೋರಿಕೆಗೆ ಮಾತ್ರ ಕಾಣುವ ; ವಾಸ್ತವವಲ್ಲದ : ಕವಿಯು ಪ್ರಾತಿಭಾಸಿಕ ಅನುಭವದಿಂದ ನಾವು ಜೀವನದ ಸ್ವಾರಸ್ಯವನ್ನು ಕಂಡುಕೊಳ್ಳುತ್ತೇವೆ (ಜಾನಪ್ರಾ. ೩೯). (ನಾ). ೨. ಭ್ರಮೆಯ ತತ್ಕಾಲದಲ್ಲಿ ಮಾತ್ರ ಸತ್ಯವೆನಿಸುವ ತೋರಿಕೆ ; ಈ ಕಪ್ಪೆಚಿಪ್ಪಿನಲ್ಲಿ ಬೆಳ್ಳಿಯಿದೆಯೆಂಬ ಜ್ಞಾನವು ಪ್ರಾತಿಭಾಸಿಕವೆನಿಸುವುದು : ಪಾರಮಾರ್ಥಿಕ ವ್ಯಾವಹಾರಿಕ ಪ್ರಾತಿಭಾಸಿಕ ತುಚ್ಛವೆಂದು ಪದಾರ್ಥಗಳು ನಾಲ್ಕಾಗಿ ತಿಳಿಯಲಕ್ಕುಂ ಅವುಗಳೊಳು ರಜ್ಜುಭುಜಂಗ ಶುಕ್ತಿಕಾರಜತ ಮರುಮರೀಚಿಕಾದಿಗಳೇ ಪ್ರಾತಿಭಾಸಿಕಗಳು (ಅವೇಕ. ೨೦) : ಅನಿರ್ವಾಚ್ಯವು ವ್ಯಾವಹಾರಿಕ, ಪ್ರಾತಿಭಾಸಿಕ ಎಂದು ಎರಡು ವಿಧ. ವ್ಯಾವಹಾರಿಕವು ಗವಾದಿಗಳು, ಪ್ರಾತಿಭಾಸಿಕವು ಭ್ರಾಂತಿಯಲ್ಲಿ ತೋರಿ ಬರುವ ರಜ್ಜುಸರ್ಪಾದಿಗಳು (ಹಿಂದಿಮಾ. ೦೯೯). [ಸಂ.]

**ಪ್ರಾತಿವೇಶ್ಯ** (ನಾ). ೧. ಪಕ್ಕದ ಮನೆಯ ವ್ಯಕ್ತಿ ; ನೆರೆ. ೨. ಒಂದೇ ಮನೆಯ ಬೇರೆ ಭಾಗದಲ್ಲಿ ವಾಸಮಾಡುವ ವ್ಯಕ್ತಿ : ಸ್ತ್ರೀಯಿದ್ದ ಮನೆಯು ಬಿಟ್ಟು ಕೆಲದ ಮನೆಯೊಳಿರ್ಪನಂ ಪಾರ್ಶ್ವಸ್ಥನೆಂಬುದು ಇದ್ದ ಮನೆಯೊಳಿರ್ಪುದು ಪ್ರಾತಿವೇಶ್ಯನೆಂಬುದು (ಕಾಸುಜಾ. ೨೮೨). [ಸಂ.]

**ಪ್ರಾತಿಶಾಖ್ಯ** (ನಾ). ವೇದದ ಪ್ರತಿಯೊಂದು ಶಾಖೆಗೂ ಇರುವ ವ್ಯಾಕರಣ : ನ್ಯಾಯ ವೈಶೇಷಿಕ . . . ಪ್ರಾತಿಶಾಖ್ಯ ಕಲ್ಪ ಹೋರಾ ದೋಹಳ ಧರ್ಮ ವೇದಾಂತ ಸಿದ್ಧಾಂತಗಳಲ್ಲಿ ಪ್ರಮಾಣಪ್ರಮೇಯೋಪನ್ಯಾಸ ದೃಷ್ಟಾಂತ ಸಮನ್ವಯಾದಿ ಸದ್ಯುಕ್ತಿ ನಿರೂಪಕರಾದ ವಾದಿಗಳಿಂ (ಅವೇಕ. ೨೨೬). [ಸಂ. ಪ್ರಾತಿಶಾಖ್ಯ]

**ಪ್ರಾತಿಹಾರಕ** (ನಾ). ಯಕ್ಷಿಣಿ ಮಾಡುವವನು : ಮಾಟಗಾರ ; ಗಾರುಡಿಗ : "ಮಾಯಾಕಾರಃ, ಪ್ರಾತಿಹಾರಕಃ – ೨ ಮಾಯೆ ಮಾಡುವವನ ಹೆಸರುಗಳು" (ಸಿದ್ಧಾಂತಿ. ೩೦೦). [ಸಂ.]

**ಪ್ರಾತಿಹಾರ್ಯ** (ನಾ). ೧. ಗಾರುಡಿ ; ಯಕ್ಷಿಣಿ. ೨. [ಜೈನ] ಕೇವಲಜ್ಞಾನವನ್ನು ಪಡೆದ ತೀರ್ಥಂಕರನಿಗೆ ಒದಗುವ ಅಶೋಕ ವೃಕ್ಷ, ದಿವ್ಯಪುಷ್ಪವೃಷ್ಟಿ, ದಿವ್ಯಧ್ವನಿ, ಚಾಮರ, ಆಸನ, ಭಾಮಂಡಲ, ದೇವದುಂದುಭಿ ಮತ್ತು ಆತಪತ್ರಗಳೆಂಬ ಎಂಟು ವಿಧದ ಸಂಪತ್ತು : ಪುರುಪರಮೇಶ್ವರನಂದನ ದೊರೆಕೊಳಸುಗೆ ನಿನಗೆ ತಡೆಯದಾ ಪುರುಪರಮೇಶ್ವರನ ನಿರತಿಶಯಗುಣಪರಿಕರಮುಂ ತತ್ಪ್ರಾತಿಹಾರ್ಯಮುಂ ಮಂಗಳಮುಂ (ಆದಿಪು. ೦೨-೩೩) ; ಯತಿಪಂ . . . ಚೈತ್ಯಕ್ಷಿತಿಜಾತಪ್ರಾಂತದೇಶಸ್ಥಿತ ಕನಕಮಯಪ್ರಾತಿಹಾರ್ಯಾಷ್ಟಕಾರ್ಹತ್ಪ್ರತಿಬಿಂಬಭ್ರಾಂತಿಯಂ ಮಾಡಿದಂ (ಕಂಪ್ರತ್ರಿ. ೨-೬೨). [ಸಂ.]

**ಪ್ರಾತ್ಯಕ್ಷಿಕ** (ಗು). ೧. ತನ್ನ ಕಣ್ಣುಗಳಿಂದಲೇ ನೋಡಿದ ; ಪ್ರತ್ಯಕ್ಷವಾಗಿ ನೋಡಿದ. (ನಾ). ೨. ಕಣ್ಣಾರೆ ನೋಡಿದುದು : ಪ್ರತಿತಾಳೆಯು ಕೇವಲ ಮಾನಸಿಕವಾಗಿರದೆ ಪ್ರಾತ್ಯಕ್ಷಿಕವಾಗಿರಬೇಕು (ಕ್ರಶಂರ. ೩೩). [ಸಂ.]

**ಪ್ರಾತ್ಯಯಿಕ** (ಗು). ೧. ಬೇರೆಯಾದ ; ಪ್ರತ್ಯೇಕವಾದ : ಪ್ರಾತ್ಯಯಿಕ ಸೀಮೆ ಸೀಮೆಗೆ ಶಿಲಾಶಾಸನವ ಬರಸಿ (ಕೆಶಾಚ. XX. ೨೬೯-೦೫ ; 1547). (ನಾ). ೨. ಸಾಲಗಾರನಿಗೆ ಜಾಮೀನಾಗಿ ನಿಲ್ಲುವವನು : ಜಾಮೀನ್‌ದಾರ. [ಸಂ.]

**ಪ್ರಾತ್ಯಯಿಕಿ** (ನಾ). [ಜೈನ] ಇಪ್ಪತ್ತೈದು ಕ್ರಿಯೆಗಳಲ್ಲಿ ಒಂದು ; ಭೋಗ್ಯವಸ್ತುಗಳನ್ನು ಸಂಗ್ರಹಿಸುವುದು : ಪಂಚವಿಂಶತಿಕ್ರಿಯೆಗಳು –೧. ಸಮ್ಯಕ್ತ್ವಕ್ರಿಯೆ . . . ೧೩. ಪ್ರಾತ್ಯಯಿಕಿ (ಭೋಗ್ಯವಸ್ತುಸಂಗ್ರಹ), ೧೪. ಸಮಂತಾನುಪಾತ (ಪ್ರಾಣಿಗಳು ವಾಸಿಸುವಲ್ಲಿ ಮಲ

ಮೂತ್ರತ್ಯಾಗ) (ಕೈಶಕ. ೬೩). 'ಪಂಚವಿಂಶತಿಕ್ರಿಯೆ' ಪರಾ. [ಸಂ. ಪ್ರಾತ್ಯಯಿಕೀ]

**ಪ್ರಾಥಮಿಕ** (ಗು). ೧. ಮೊದಲನೆಯ ; ಪ್ರಾರಂಭದ : ಪ್ರಾಥಮಿಕ ಪಾಠ್ಯನೆಯ ತರಗತಿಯೊಳು ಕಿರಿಯವನೋದುತಲಿಹನು (೩೦೫೫. ೩೬-೬೬). (ನಾ). ೨. ಮೊದಲನೆಯದು ; ಪ್ರಾರಂಭದ ಹಂತಕ್ಕೆ ಸೇರಿದುದು : ಈ ಅಕ್ಷರಸಂಜ್ಞೆಗಳ ಸರಿಯಾದ ಪರಿಜ್ಞಾನವೇ ಭಾಷಾಭ್ಯಾಸಕ್ಕೆ ಪ್ರಾಥಮಿಕವೆನಿಸುವ ಸಾಧನವೆಂದು ವೈಯಾಕರಣರು ಹೇಳುತ್ತಾರೆ (ಸಂಕೋಶ. ೦). ೩. ಮೊದಲನೆಯವನು : ತದಾಗಮದರ್ಥೋಕ್ತಿ ಪದಾರ್ಥಮೆಂದು ನಿಶ್ಚಯಿಪ ಪರಮದರುಶನಾನಂತವಂ ಪ್ರಾಥಮಿಕಂ (ಸುಕುಸು. ೬-೨೬). [ಸಂ.]

**ಪ್ರಾಥಮಿಕವಿದ್ಯಾಭ್ಯಾಸ** (ನಾ). ಆರಂಭದ ವಿದ್ಯಾಭ್ಯಾಸ : ಲಚ್ಚನು ಈ ನಡುವೆ ತನ್ನ ಪ್ರಾಥಮಿಕವಿದ್ಯಾಭ್ಯಾಸವನ್ನು ಮುಂದುವರಿಸಿದನು (ಸುಕಸು. ೦೯೯). [ಸಂ.]

**ಪ್ರಾಥಮಿಕಶಾಲೆ** (ನಾ). ಪ್ರಾರಂಭದ ಶಿಕ್ಷಣವನ್ನು ನೀಡುವ ಶಾಲೆ ; ಪ್ರೈಮರಿಸ್ಕೂಲು: ಬೆಂಗಳೂರಿನ ಹತ್ತಾರು ಪ್ರಾಥಮಿಕಶಾಲೆಗಳ ಬಳಿಗೂ ರಾಯರು ಹೋಗಿ ನಿಂತಿದ್ದರು (ಕಂಕಸು. ೦೩೦). [ಸಂ. ಪ್ರಾಥಮಿಕಶಾಲಾ]

**ಪ್ರಾಥಮಿಕಶಿಕ್ಷಣ** (ನಾ). = ಪ್ರಾಥಮಿಕವಿದ್ಯಾಭ್ಯಾಸ : ಎಲ್ಲರೂ ಪ್ರಾಥಮಿಕಶಿಕ್ಷಣವನ್ನು ಪಡೆಯುವಂತಾದರೆ ಅವರು ಮುಂದೆ ತಮ್ಮ ಅಭಿರುಚಿ ಆಸಕ್ತಿಗಳನ್ನು ಬೆಳೆಸಿಕೊಂಡು ಸಮಾಜಕ್ಕೆ ತಮ್ಮ ವಿಶಿಷ್ಟಕಾಣಿಕೆಯನ್ನು ಸಲ್ಲಿಸಲು ಅವಕಾಶವಾಗುತ್ತದೆ (ಕಿಶ್ವರ. ೦೬೩). [ಸಂ.]

**ಪ್ರಾದಕ್ಷಿಣ** (ನಾ). ಬಲಗಡೆಯಿಂದ ಸುತ್ತು ಹಾಕುವುದು; ಪ್ರದಕ್ಷಿಣೆ : ಕೂಡೆ ಪ್ರಾದಕ್ಷಿಣವ ಬಂದಡಿಮಾಡಿ ಕಾಯವ ನೀಡಿ ಕರಣಗಳ ಬೇಡಿಕೊಂಡನು ಗುರುವ ಭವಗಳು ಬೇಡವೆನಗೆನುತ (ಗಗಕಾ. ೨-೨೦). [<ಸಂ. ಪ್ರಾದಕ್ಷಿಣ್ಯ]

**ಪ್ರಾದುರ್ಭವಿಸು** (ಕ್ರಿ). ಕಾಣಿಸಿಕೊಳ್ಳು ; ಹುಟ್ಟು ; ಆವಿರ್ಭವಿಸು : ವೇದವು ವ್ಯರ್ಥ, ವೇದವು ಅನರ್ಥ ಎನ್ನುವ ನಾಸ್ತಿಕವಾದ ಆಸ್ತಿಕರಲ್ಲಿಯೇ ಪ್ರಾದುರ್ಭವಿಸಿದಾಗ ವೇದಾರ್ಥನಿರ್ಣಯಕ್ರಮವನ್ನು ಮೀಮಾಂಸಾಕಾರರು ಕೈಗೊಂಡರು (ಶಾಕಿರ. ೦೨೬). [ಪ್ರಾದುರ್ಭಾವ + —ಇಸು]

**ಪ್ರಾದುರ್ಭಾವ** (ನಾ). ಕಣ್ಣಿಗೆ ಕಾಣಿಸಿಕೊಳ್ಳುವುದು ; ಗೋಚರಿಸುವುದು; ಆವಿರ್ಭಾವ: ಕಾರ್ಯಸಿದ್ಧಿ ಪ್ರಾದುರ್ಭಾವಕ್ಕೆ ವಿಘ್ನಂ ಪಲವೊಳವಱಿಯಲ್ಪ[ರ್]ಮೇ ಬಾರದು (ಸಂಕಕಾ. ೬-೩೦); ಅಂತು ಗರ್ಭನಿರ್ಭರ ಪ್ರಾದುರ್ಭಾವಮಾಗಿ ನವಮಾಸಂ ತೀವೆ (ಜಗಂ. ೨-೯೬ ವ). [ಸಂ.]

**ಪ್ರಾದೇಶ** (ನಾ). ೧. ನೀಡಿದ ಹೆಬ್ಬೆರಳು ಮತ್ತು ತೋರುಬೆರಳುಗಳ ನಡುವಿನ ಅಳತೆ: "ಪ್ರಾದೇಶಮೆಂಬುದು ಒಟ್ಟೋಟು" (ಶಬಾಸು. ೬೯-೩೯೯); ಚಂದ್ರಾಪೀಡಂ ಅಂತರದನೇಱಿ ದಿವ್ಯವಾಜಿಯ ಮಹಾಜವಮಂ ಕಂಡು ಭುವನತ್ರಯಮಂ ಪ್ರಾದೇಶಮಾತ್ರಮಾಗಿ ಬಗೆದು (ಕಾದಂಪೂ. ೯೬೩). ೨. ಪ್ರದೇಶ; ಸ್ಥಳ. [ಸಂ.]

**ಪ್ರಾದೇಶನ** (ನಾ). ಕಾಣಿಕೆ ; ಕೊಡುಗೆ : "ತ್ಯಾಗಃ . . . ಪ್ರತಿಪಾದನಂ, ಪ್ರಾದೇಶನಂ, ಅಂಹತಿಃ – ೧೩ ಕೊಡುವುದಕ್ಕೆ ಹೆಸರುಗಳು" (ಸಿದ್ಧಾಂತಿ. ೨೨೨). [ಸಂ.]

**ಪ್ರಾದೇಶಿಕ** (ಗು). ೧. ಒಂದು ಪ್ರದೇಶಕ್ಕೆ ಸೇರಿದ,–ಸಂಬಂಧಿಸಿದ: 'ಪ್ರಾದೇಶಿಕಭಾಷೆ' ಪರಾ. (ನಾ). ೨. ಒಂದು ಪ್ರದೇಶಕ್ಕೆ ಸೇರಿದುದು, –ಸಂಬಂಧಿಸಿದುದು: ಪ್ರಾದೇಶಿಕವಾಗಿ ಇತರ ಮೌಲ್ಯಗಳನ್ನು ಅವಲಂಬಿಸಿರುವ ಕೌಶಲ್ಯವಾಗಿಯೇ ಉಳಿದುಕೊಂಡಿದೆ(ಕಿಶ್ವರ. ೩೩೦). ೩. ಒಂದು ಪ್ರದೇಶಕ್ಕೆ ಸೇರಿದವನು : ದ್ಯಾವಾಪೃಥಿವೀಮಾರ್ಗದಿಂ ಪ್ರಾದೇಶಿಕಂ ಪೊಣರ್ಗೆ ನೆಱೆವಂ (ಜಗಂ. ೦೭-೩). [ಸಂ.]

**ಪ್ರಾದೇಶಿಕಭಾಷೆ** (ನಾ). ಒಂದು ಪ್ರದೇಶಕ್ಕೆ ಸೀಮಿತವಾದ ನುಡಿ; ಸ್ಥಳೀಯಭಾಷೆ : ಇಲ್ಲಿ ನಮಗೆ ಪ್ರಾದೇಶಿಕಭಾಷೆಯ ತೊಂದರೆ ಬೇರೆ (ಹೇಕುಂಕ. ೩೨೯). [ಸಂ. ಪ್ರಾದೇಶಿಕಭಾಷಾ]

**ಪ್ರಾದೇಶಿಕಸೈನ್ಯ** (ನಾ). ಬೇರೆ ಬೇರೆ ಪ್ರಾಂತ್ಯಗಳಲ್ಲಿ ಶಾಂತಿರಕ್ಷಣೆಗಾಗಿ ವ್ಯವಸ್ಥೆ ಮಾಡಿರುವ (ಕೇಂದ್ರದ) ಸೈನ್ಯ: "ದೇಶರಕ್ಷಣೆಗೆ ಪ್ರಾಂತವಾರಾಗಿ ವ್ಯವಸ್ಥೆ ಮಾಡಿದ ಸೈನ್ಯ: ಪ್ರಾದೇಶಿಕಸೈನ್ಯ" (Territorial army. ಇಂಕಕ). [ಸಂ.]

**ಪ್ರಾದೋಷಿಕ** (ಗು). ೧. ಸಾಯಂಸಂಧ್ಯೆಗೆ ಸಂಬಂಧಿಸಿದ. (ನಾ). ೨. [ಜೈನ] ಇಪ್ಪತ್ತೈದುಂ ಕ್ರಿಯೆಗಳಲ್ಲಿ ಒಂದು; ಕೋಪಾವೇಶದಲ್ಲಿ ಇತರರನ್ನು ತಿರಸ್ಕಾರ ಅಥವಾ ನಿಂದೆಗೆ ಗುರಿಮಾಡುವುದು : ಪಂಚವಿಂಶತಿಕ್ರಿಯೆಗಳು :–೧ ಸಮ್ಯಕ್ತ್ವಕ್ರಿಯೆ . . . ೬. ಪ್ರಾದೋಷಿಕ (ಕ್ರೋಧಾವೇಶದಲ್ಲಾಗುವ ಪ್ರಮಾದ) (ಕೈಶಕ. ೬೩). 'ಪಂಚವಿಂಶತಿಕ್ರಿಯೆ' ಪರಾ. [ಸಂ.]

**ಪ್ರಾಧಾನ್ಯ** (ನಾ). ಪ್ರಧಾನತೆ ; ಪ್ರಾಮುಖ್ಯ : ಟಳಕರು . . . ಕರ್ಮಯೋಗಕ್ಕೇನೇ ಹೆಚ್ಚು ಪ್ರಾಧಾನ್ಯವಿತ್ತಿರಬಹುದು (ಕರ್ಮಶಾ. ೦೩೯); ಯುರೋಪುಖಂಡದಲ್ಲಿ ಅವನ ಪ್ರಾಧಾನ್ಯವು ತಗ್ಗುತ್ತಿರುವಂತೆ ಕಂಡರೂ... ಅವನ ಮಹತ್ವವು ನವಜೀವನವನ್ನು ಪಡೆಯಲಾರಂಭಿಸಿದೆ (ಅಂಕ. ೨). [ಸಂ.]

**ಪ್ರಾಧಾನ್ಯತೆ** (ನಾ).–ಪ್ರಾಧಾನ್ಯ : ನಿನಗೆ ವಯಸ್ಸು ಎಷ್ಟೇ ಆಗಿರಲಿ, ಅದರ ಪ್ರಾಧಾನ್ಯತೆಯಿಲ್ಲ (ಹೇಕುಂಕ. ೩೩೮). ☞ ಇದು ವ್ಯಾಕರಣಬದ್ಧರೂಪವಲ್ಲ. [ಪ್ರಾಧಾನ್ಯ + —ತೆ]

**ಪ್ರಾಧಿಕಾರ** (ನಾ). ೧. ವಿಶೇಷವಾದ ಅಧಿಕಾರ; ಹೆಚ್ಚಿನ ಅಧಿಕಾರ: ಪರಂತು ಪಾಕಿಸ್ಥಾನದ ಈಗಿನ ರಾಜ್ಯಕ್ಷೇತ್ರಕ್ಕೆ ಪ್ರವಚನಮಾಡಿದ್ದು ಮತ್ತೆ ಭಾರತದಲ್ಲಿ ನೆಲಸುವುದಕ್ಕಾಗಿ ಅಥವಾ ಖಾಯಮಾಗಿ ಭಾರತಕ್ಕೇ ಹಿಂತಿರುಗುವುದಕ್ಕಾಗಿ ಯಾವುದಾದರೂ ವಿಧಿಯಿಂದ ಅಥವಾ ಯಾವುದಾದರೂ ವಿಧಿಯ ಪ್ರಾಧಿಕಾರದ ಮೇರೆಗೆ ಕೊಡಲಾದ ಅನುಜ್ಞೆ (ಕಾಂಣಶ. ೩). ೨. ವಿಶೇಷವಾದ ಅಧಿಕಾರವನ್ನು ಕೊಟ್ಟು ಸ್ಥಾಪಿಸಿರುವ ಸರಕಾರದ ಒಂದು ಸಂಸ್ಥೆ ಅಥವಾ ವ್ಯವಸ್ಥೆ : ಕರ್ನಾಟಕ ಸರಕಾರವು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವನ್ನು ಸ್ಥಾಪಿಸಿದೆ (ಲೂ). [ಸಂ.]

**ಪ್ರಾಧಿಕಾರಿ** (ನಾ). ಹೆಚ್ಚಿನ ಅಧಿಕಾರವುಳ್ಳವನು ; ವಿಶೇಷ ಅಧಿಕಾರಿ : ಉಚ್ಚತಮ ನ್ಯಾಯಾಲಯದ ನ್ಯಾಯಾಧೀಶ ಪದಧಾರಣೆ ಮಾಡಿದ್ದವರು ಯಾರೊಬ್ಬರೇ ಆಗಲಿ . . . ಯಾವುದೇ ಪ್ರಾಧಿಕಾರಿಯ ಸಮಕ್ಷಮ ವಕೀಲತ್ತನ್ನಾಗಲಿ ಕಾರ್ಯವನ್ನಾಗಲಿ ನಡೆಯಿಸತಕ್ಕದ್ದಲ್ಲ (ಭಾರಾಶ. ೬೮). [ಸಂ. ಪ್ರಾಧಿಕಾರಿನ್]

**ಪ್ರಾಧ್ಯಾಪಕ** (ನಾ). ಪ್ರಧಾನ ಅಧ್ಯಾಪಕ; ಮುಖ್ಯೋಪಾಧ್ಯಾಯ : ವಿದ್ಯಾಲಯಗಳಲ್ಲೂ ಸಹ ಪ್ರಾಧ್ಯಾಪಕರು . . . ಪ್ರಮಾಣ ಮಾಡಬೇಕಾಯಿತು (ಪುಶ್ಕಾಕ. ೦೭ ೬೦೬೪); ಮುಂದೆ ವಿಶ್ವವಿದ್ಯಾನಿಲಯದಲ್ಲಿ ಆತ ಹಿರಿಯ ಪ್ರಾಧ್ಯಾಪಕನಾಗಿ ತಮಗೆ ಗೌರವ ತರಬೇಕೆಂಬ ಬಯಕೆ ಅವರಿಗಿತ್ತು (ಕಂಗಶ. ೦೨೦). [ಸಂ.]

**ಪ್ರಾಧ್ವ** (ಗು). ೧. ದೂರದ; ದೂರದಲ್ಲಿರುವ. ೨. ಬಗ್ಗಿದ ; ಬಾಗಿರುವ. ೩. ಕಟ್ಟಿದ; ನಿರ್ಮಿಸಿದ. ೪. ಅನುಕೂಲಕರವಾದ ; ಸಹಾಯಕವಾದ. ೫. ಪ್ರಯಾಣ ಮಾಡುತ್ತಿರುವ. (ನಾ). ೬. ಸಾಗಿಸುವ ಸಾಧನ ; ವಾಹನ. ೭. ಪ್ರಾರಂಭ ; ಉಪಕ್ರಮ. ೮. ದೂರದ ಪ್ರಯಾಣ. ೯. ಕಟ್ಟುವಿಕೆ ; ಬಂಧನ. ೧೦. ಗೇಲಿ ; ತಮಾಷೆ ; ಹಾಸ್ಯ. [ಸಂ.]

**ಪ್ರಾಪಂಚಿಕ** (ಗು). ೧. ಪ್ರಪಂಚಕ್ಕೆ ಸಂಬಂಧಿಸಿದ. ೨. ಲೋಕ

ವ್ಯವಹಾರದ; ಲೌಕಿಕವಾದ; ಐಹಿಕ : ಅವಳ ಜೀವನ ಪ್ರಾಪಂಚಿಕ ಭೋಗವಿಲಾಸಗಳಿಗೆ ಮಾರುಹೋಯಿತು (ಕೃಪಾ. ೩೭೦). (ನಾ). ೩. ಲೋಕವ್ಯವಹಾರ ; ಲೌಕಿಕತೆ : ಪ್ರಾಪಂಚಿಕವನಱಿಯದೆ ಪರಮ ಧರ್ಮಂ ಚಮತ್ಕೃತಿಯಿಂದೆ ಕಿನ್ನರವೀಣೆಯಂ ಪಿಡಿದು. . . ಕೇಳಿಸಲು (ಜಕಪು. ೨೬–೩). ೪. ಲೋಕವ್ಯವಹಾರವನ್ನು ಬಲ್ಲ ವ್ಯಕ್ತಿ; ಲೌಕಿಕ ವ್ಯಕ್ತಿ : ಗುರುಗೋವಿಂದಭಟ್ಟರು ಪ್ರಾಪಂಚಿಕರು (ಕೀಶ. ೩೯ ಕೆಲವು ಜನರು); ನಾನೊಳ್ಳೆಯ ಪ್ರಾಪಂಚಿಕಳು. ನನ್ನ ಸಂಗ್ರಾಹಕಬುದ್ಧಿಯೂ ಆಶ್ಚರ್ಯಕರವಾದದ್ದು (ಸ್ವ್ರ. ೩೦೯). [ಸಂ.]

**ಪ್ರಾಪಕ** (ಗು). ೧. ಪಡೆಯುವ; ಹೊಂದುವ. (ನಾ). ೨. ಪಡೆದಂದು; ಹೊಂದಿದುದು : ನಿರತಿಶಯನಿಜಾನಂದಸುಧಾರಸಸ್ಯಂದಿ ಚಿನ್ಮಯನಿಜಾತ್ಮಸ್ವರೂಪಪ್ರಾಪಕವಾಂ (ಜಾತಕ. ೫೦–೩೦೨ ಕ). ೩. ಪಡೆದವನು; ಹೊಂದಿದವನು : ಪಾಪಪುಣ್ಯಗಳು ಬರಲಾಪವೇ ನಿನ್ನುಳಿದು ಪ್ರಾಪಕನು ನೀನು ಇರಲಾಗಿ (ಕಕು. ೨೦೨). [ಸಂ.]

**ಪ್ರಾಪಣ** (ನಾ). ೧. ಹೊರೆದುವುದು; ಪಡೆಯುವುದಂ. ೨. ತೆಗೆದುಕೊಳ್ಳುವುದು ; ಸ್ವೀಕರಿಸುವುದು : ನಿಮ್ನುಟಕ್ಷೇತ್ರದೊಳ್ ಪುಟ್ಟುವ ಜೀವಕ್ಕೆ ನಿಮ್ನುಟಕ್ಷೇತ್ರಾನುಪೂರ್ವ್ಯನುಶ್ರೇಣ್ಯಜಗತ್ಯಭಾವಂ ನಿಮ್ನುಟಕ್ಷೇತ್ರ ಪ್ರಾಪಣನಿಮಿತ್ತಂ ತ್ರಿವಿಗ್ರಹಗತಿಯಕ್ಕುಂ (ಜತ್ವಕ್ರ. ೦೦೦): ಮತ್ತಮುತ್ಪಾದಿತ ಘ್ರಾಣೇಂದ್ರಿಯಪ್ರಾಪಣಂಗಳಪ್ಪ ಗಂಧಾಪಣಂಗಳೊಳ್ (ಜಂತ್ರಪು. ೦–೦೨೯) ೩. ಸ್ಪಷ್ಟಪಡಿಸುವುದು; ಸ್ಪಷ್ಟೀಕರಣ; ವಿವರಣೆ. [ಸಂ.]

**ಪ್ರಾಪಣಿಕ** (ನಾ). ವ್ಯಾಪಾರ ಮಾಡುವವನು; ವ್ಯಾಪಾರಿ; ವರ್ತಕ : "ಪಣ್ಯಾಜೀವಃ, ವಣಿಕ್, ಪ್ರಾಪಣಿಕಃ, ನೈಗಮಃ, ನೈದೇಹಃ – ಈ ೫ ಹರದಂ" (ಜಶಾಯು. ೯೩–೪೦೭). [ಸಂ.]

**ಪ್ರಾಪನ್ನ** (ನಾ). ಮರೆಹೊಕ್ಕವನು ; ಶರಣಾಗತ : ಎನ್ನ ಪಾಲಿಸಿ ದಂದದಿ ಸಕಲ ಪ್ರಾಪನ್ನರ ಸಲಹೊ (ಜಾದಾ. ೦೬). [<ಸಂ. ಪ್ರಪನ್ನ]

**ಪ್ರಾಪ್ತ** (ಗು). ೧. ಪಡೆದ; ದೊರೆತ ; ಲಬ್ಧವಾದ : ಶ್ರೀಷೇಣ ಭೂಪತಿ . . . ಪ್ರಾಪ್ತಸಪ್ತಪರಮಸ್ಥಾನನಾದಂ (ಜಂದ್ರಪು. ೪–೨೪ ಕ). ೨. ಯೋಗ್ಯವಾದ; ತಕ್ಕ : 'ಪ್ರಾಪ್ತವಯಸ್ಕ' ಪರಾ. (ನಾ). ೩. ದೊರೆತುದಂ ; ಲಾಭ ; ಲಬ್ಧ : ಒಂದು ಮುಗಿಯುವುದರೊಳಗೆ ಇನ್ನೊಂದು ಪ್ರಾಪ್ತ (ಜಾಂಕಾ. ೨೪೪). ೪. ಯೋಗ್ಯವಾದುದು; ತಕ್ಕುದು : "ಯುಕ್ತಂ, ಉಚಿತಂ, ನ್ಯಾಯಂ, ಪ್ರಾಪ್ತಂ, ಔಪಯಿಕಂ – ಈ ೬ ಉಚಿತಂ" (ಜಶಾಯು. ೦೨೩–೬೦). ೫. ತಿಳಿದವನು; ಪಂಡಿತ : "ಸೂರಿ, ಮೇಧಾವಿ. . . ಪ್ರಾಪ್ತಂ, ವಿಶಾರದಂ. . . ವಿದ್ವಾಂಸನೆನಿಸಿಕ್ಕು" (ಜುಂಗಾಪ. ೬೬೨). [ಸಂ.]

**ಪ್ರಾಪ್ತವಯಸ್ಕ** (ನಾ). ಯೋಗ್ಯವಾದ ವಯಸ್ಸನ್ನು ಮುಟ್ಟಿದವನು; ಪ್ರೌಢ : ಅವನು ಪ್ರಾಪ್ತವಯಸ್ಕನಾದನು (ಕೃಪಾ. ೬೦) ; ಈ ಕಾಯಿಲೆ ಹೆಚ್ಚಾಗಿ ಮಕ್ಕಳಿಗೆ ಮತ್ತು ಪ್ರಾಪ್ತವಯಸ್ಕರಿಗೆ ಬರುತ್ತದೆ (ಕಂಟೋ. ೬೯). [ಸಂ.]

**ಪ್ರಾಪ್ತಿ** (ನಾ). ೧. ಪಡೆಯುವಿಕೆ ; ಹೊಂದುವಿಕೆ. ೨. ಸೇರುವಿಕೆ ; ತಲುಪುವಿಕೆ. ೩. ದೊರಕಿದುದು ; ಲಭ್ಯವಾದುದು ; ಲಾಭ : ಪ್ರಾಪ್ತಿಯನಸಕಟಿಯಲುವುಪ್ರಾಪ್ತಿಯನಾಗಿಸಲುವಾಗದದಱಿಂ ದೋಷಾವಾಪ್ತಿಯನೇಂ ನಿಮ್ಮನ್ನರ್ ಸುಪ್ತರವೋಲ್ಮೋಹಮೂರ್ಛೆಯಿಂ ತಾಳ್ದುವರೇ (ಜಂಜಾಪು. ೬–೦೨೦). ೪. ಸುದೈವ ; ಅದೃಷ್ಟ: ಪ್ರಾಪ್ತಿ ಇಲ್ಲದ್ದಕ್ಕೆ ಬಾಯಿ ಬಿಟ್ಟರೆ ಬರುತ್ತದೆಯೆ ? (ಶ್ರೀಕಳ. ೦೨೯). ೫. ಸಾಧ್ಯವಾದುದು; ಶಕ್ಯವಾದುದು : ಕಂತುಹರನ ಸಮಾನವೆನಿಪ ಮಹಂತರುಗಳಂತರವನಱಿಸಲು ಪ್ರಾಪ್ತಿಯೇ ನಿನಗ (ಜಕಪು. ೦೨–೦೧). ೬. [ಯೋಗ] ಎಂಟು ಬಗೆಯ ಸಿದ್ಧಿಗಳಲ್ಲಿ ಒಂದು ; ಯಾವುದನ್ನು ಬೇಕಾದರೂ ಪಡೆಯುವ ಶಕ್ತಿ: ಮಹರ್ಧಿಕದೇವರಾಗಿ ಅಣಿಮಾ ಮಹಿಮಾ ಲಘಿಮಾ ಪ್ರಾಪ್ತಿ ಪ್ರಾಕಾಮ್ಯ ವಿಶಿತ್ವ ಪಶಿತ್ವ ಕಾಮರೂಪಿತ್ವಮೆಂದೀ ಅಷ್ಟಗುಣೈಶ್ವರ್ಯಂಗಳೊಳ್ ಕೂಡಿ (ಕಪ್ಪಾ. ೯೬–೩). [ಸಂ.]

**ಪ್ರಾಪ್ತಿಸು** (ಕ್ರಿ). ಉಂಟಾಗು ; ಒದಗು ; ಲಭಿಸು : ಇಕ್ಕುವ ಶೂಲ ಪ್ರಾಪ್ತಿಸಲಿ . . . ಮತ್ತೆಯೂ ಲಿಂಗಾರಾಧನೆಯ ಮಾಡುವೆ (ಬಸವ. ೬೦೩); ಮಾತಂಗಸಂಗತಮಿತ್ರದೋಷವು ಪ್ರಾಪ್ತಿಸುವುದು (ಬಸವ. ೬೦–೦೦) : ಮಳೆ ಹುಟ್ಟಿ, ನೀರ ಒರತೆ ಪ್ರಾಪ್ತಿಸಿ, ಬಿಟ್ಟದ ಮಗ್ಗುಲುಗಳು ಎಷ್ಟೋ ಕಡೆಗಳಲ್ಲಿ ಜರಿದು, ಹೀಗೆ ಕುಸಿದು ಮುಕ್ಕಾಗೊಂಡಿದ್ದವು (ಕುಂಜಕಾ. ೩೦೩).

[ಪ್ರಾಪ್ತಿ + – ಇಸು]

**ಪ್ರಾಪ್ತ್ಯಾಶೆ** (ನಾ). [ಕಾವ್ಯಮೀ] ನಾಟಕದ ಕಥಾಸಂವಿಧಾನದಲ್ಲಿ ಇರುವ ಆರಂಭ, ಯತ್ನ, ಪ್ರಾಪ್ತ್ಯಾಶಾ, ನಿಯತಾಪ್ತಿ ಮತ್ತು ಫಲಾಗಮಗಳೆಂಬ ಐದು ಹಂತಗಳಲ್ಲಿ ಮೂರನೆಯದು ; ಫಲವನ್ನು ಪಡೆಯುವ ಆಸೆಯನ್ನು ಸೂಚಿಸುವ ಅಂಕ : ಪ್ರಾಪ್ತ್ಯಾಶೆ ಸಾಧನೋಪಾಯಗಳೂ ಅವುಗಳಿಗೆ ಅಡಚಣೆಗಳೂ ಇರುವುದರಿಂದ ಫಲಪ್ರಾಪ್ತಿ ಆದರೂ ಆಗಬಹುದೆಂಬ ಸಂಭವ (ಕೃಬಿ. ೨೦೬). [ಸಂ. ಪ್ರಾಪ್ತ್ಯಾಶಾ]

**ಪ್ರಾಪ್ಯ** (ಗು). ೧. ಪಡೆಯಬಹುದಾದ ; ಹೊಂದಲು ಯೋಗ್ಯವಾದ. (ನಾ). ೨. ಪಡೆಯಬಹುದಾದುದು : ಪ್ರಾಪ್ಯವೆಂದು ಪ್ರಿಯ್ದರ್ ಪಡುವುದು (ಕಬುದ. ೦೨೬ ವೃತ್ತಿ). (ನಾ). ೩. ದೊರೆಯುವವನು ; ಲಭಿಸುವವನು : ಹಾಲು ಮೊಸರಂದದ ವಿಕಾರ್ಯನು ಕೇಳು ಸ್ವರ್ಗದ ಪೋಲು ಪ್ರಾಪ್ಯನು (ಅಪ್ಯಕ. ೬–೨೦). [ಸಂ.]

**ಪ್ರಾಬಲ್ಯ** (ನಾ). ೧. ಹೆಚ್ಚಳ ; ಆಧಿಕ್ಯ : ಈ ರೋಗದ ಪ್ರಾಬಲ್ಯವನ್ನು ತಡೆಯದೇಕಾದರೆ . . . ಮರಿಗಳ ಬೆಳವಣಿಗೆಗೆ ನೆರವಾಗುವ ಸನ್ನಿವೇಶಗಳನ್ನು ಹತೋಟಿಯಲ್ಲಿಡಬೇಕು (ಪ್ರಾಶಿಕಾ. ೦೬೨). ೨. ಸಾಮರ್ಥ್ಯ ; ಪ್ರಭಾವ : ವಿಶೇಷವಾಗಿ ಕಲಿಯ ಪ್ರಾಬಲ್ಯದಿಂದ ಈಗ ಇಂತಹ ಕಾರ್ಯಕ್ಕಾರೂ ಸಹಕಾರಿಗಳಾಗುವುದಿಲ್ಲ (ಕಹಾಳುಂ. ೦೦೬). ೩. ಏಳಿಗೆ ; ಅಭ್ಯುದಯಂ : ಉತ್ತರಖಂಡದಲ್ಲಿ ಅಲ್ಲಲ್ಲಿ ತುರುಷ್ಕರ ಪ್ರಾಬಲ್ಯವಿದ್ದಿತೆಂಬುದು ನಿಜ (ಶ್ರೀರಾಯು. ೦೩೯). [ಸಂ.]

**ಪ್ರಾಬೋಧಿಕ** (ನಾ). ೧. ಬೆಳಗಿನ ಕಾಲ ; ಮುಂಜಾವು ; ಪ್ರಾತಃಕಾಲ. ೨. ರಾಜನನ್ನು ಉದಯಕಾಲದಲ್ಲಿ ಎಬ್ಬಿಸಲು ಹೊಗಳಿ ಹಾಡುವ ಸ್ತುತಿಪಾಠಕ. [ಸಂ.]

**ಪ್ರಾಭಂಜನ** (ನಾ). ಗಾಳಿ ; ವಾಯು : ಕಂಜವೃಜಿನಘನನಿರ್ಧೂತ ಪ್ರಾಭಂಜನ ಕಂಜಾಂಬಕ ಪೂಜಿತಪದಕಂಜಮುನಿನುತ ಧನಂಜಯನಯನ ಧನಂಜಯವರದ ಜಯ (ಕಾದ್ಯಕೀ. ೬೯–೨೨). [<ಪ್ರಭಂಜನ]

**ಪ್ರಾಭವ** (ನಾ). ಅತಿಶಯತೆ ; ಹೆಚ್ಚುಗಾರಿಕೆ ; ಮೇಲ್ಮೆ : ಇಂತಿದು ವಿಸ್ತಾರಿತ ಕಾಮಹೋಮಹುತ ಭುಕ್ಪ್ರಜ್ವಾಲೆಯೋ ಎಂಬ ಸಂಪದಮಂ ಬೀಱಿದುದಿಂದ್ರದಿಗ್ವಿವರದೊಳ್ ಚಂದ್ರದ್ಯುತಿಪ್ರಾಭವಂ (೧೦ಕ. ೪–೯೯); ಎವಗೆ ರಚಿಸಿತು ರಾಜ್ಯವಿಭ್ರಂಶವನು ತತ್ಸುಕೃತೋದಯ ಪ್ರಾಭವವೆ ತಿರುಗಿಸಿತೆಂದು ನಯದಲಿ ಧರ್ಮಸುತ ನುಡಿದ (ಕುಮ್ಯಾಗ. ೧೦–೯೯). [ಸಂ.]

**ಪ್ರಾಭಾಕರ** (ಗು). ೧. ಪೂರ್ವಮೀಮಾಂಸಾಪ್ರಚಾರಕನಾದ ಪ್ರಭಾಕರನಿಗೆ ಸಂಬಂಧಿಸಿದ : ಧರ್ಮವೆಂಬುದು ಸುಖಕ್ಕೆ ಸಾಧನೆಯೆಂಬುದು ಭಾಟ್ಟಮತವಾದರೆ ಧರ್ಮವೇ ಈ ಪುರುಷಾರ್ಥವೆಂಬುದು ಪ್ರಾಭಾಕರ ಮತ (ಕಾಕರ. ೦೨೯). (ನಾ). ೨. ಪ್ರಭಾಕರನಂ ಬೋಧಿಸಿದ ಮತ. ೩. ಪೂರ್ವಮೀಮಾಂಸಾ ಪ್ರಚಾರಕನಾದ ಪ್ರಭಾಕರನ ಮತದ ಅನುಯಾಯಿ : ಚಾರ್ವಾಕ ಬೌದ್ಧ ಸಾಂಖ್ಯರಖರ್ವ ಪ್ರಾಭಾಕರರ್ . . .

ಉರ್ವೀಶನ ಸಭೆಯೊಳಿರ್ದರತಿಮುದದಿಂ (ಬಾಲಕೃ. ೬-೧೨) ; ಪ್ರಾತಿಜ್ಞಾನದಲ್ಲಿಯೂ ಆತ್ಮನು ಪ್ರತ್ಯಕ್ಷನಾಗಿರುವನು ಎಂದು ಪ್ರಾಭಾಕರರು ತಿಳಿಯುವರು (ಭಾತತ್ತ್ವ. ४೦೩). [ಸಂ.]

**ಪ್ರಾಭಾತ** (ನಾ). ಬೆಳಗಿನ ಕಾಲ ; ಪ್ರಾತಃಕಾಲ : ಕುಂಕುಮದ ತೀರ್ಥದೊಳ್ ಮಿಂದೇಳ್ವ ಫಾಲ್ಗುಣ ಪ್ರಾಭಾತರವಿಯಂತೆ ಮೆರೆದುದು ವದನಮಂಡಲಂ (ಶ್ರೀರಾಮಪು. ೦೩-೩೩೯). [ಸಂ.]

**ಪ್ರಾಭಾತಿಕ** (ಗು). ಬೆಳಗಿನ : ಪ್ರಾತಃಕಾಲದ : ಸಕಲ ಪ್ರಾಭಾತಿಕ ಕ್ರಿಯೆಯಂ ನಿರ್ವರ್ತಿಸಿ (ಅಂತ್ಯ. ೦೩-೨೦ ಪ) ; ಅಂತು ಬಿಂಕಿಸುತಿರ್ದಿರುಳಂ ಕಳೆದು ಬೆಳಗವ್ವುದುಂ ಕೃತಪ್ರಾಭಾತಿಕ ನಿಯಮನಾಗಿ ಮಹಾಶ್ವೇತೆಯು ಮಘಮರ್ಷಣನಿಯಮಜಪಂಗಳಂ ಮಾಡುತಿರ್ದಳ್ (ಕಾದಂಸಂ. ४೯೬). [ಸಂ.]

**ಪ್ರಾಭೃತ** (ನಾ). ೧. ರಾಜ, ದೇವತೆ ಮೊದಲಾದ ಹಿರಿಯರ ಸಂದರ್ಶನಕ್ಕೆ ಹೋದಾಗ ಕೊಡುವ ಕಾಣಿಕೆ, — ನಜರು : "ಪ್ರಾಭೃತಂ . . . ಉಪದಾ— ೬ ರಾಜದರ್ಶನಾರ್ಥವಾಗಿ ತರತಕ್ಕ ಕಾಣಿಕೆ, ನಜರ್ ಮುಂತಾದಕ್ಕೆ ಪೆಸರು" (ಸಿದ್ಧಾಂತ. ೨೯೩); ನಿಜೋಚಿತ ಸ್ಥಾನದೊಳ್ಕಿದಾಸನದೊಳ್ ಕುಳ್ಳಿರ್ಪುದುಮನಂತರಮರಸನಾ ಪ್ರಾಭೃತಂ ಕೋಶಾಧ್ಯಕ್ಷರಿಂ ಕೈಕೊಳಲ್ವೇಳ್ದು (ಪರ್ವಪು. ೩-೩೬ ಪ) ; ಪ್ರಾಭೃತತ್ರಯಗಳನುರ್ವಿ ಸೋಂಕದೆ ತರಲು (ಜಾಗಳು. ೦-४). ೨. ಕಾರ್ಯವನ್ನು ಸಾಧಿಸುವ ಉದ್ದೇಶದಿಂದ ನ್ಯಾಯವಿರುದ್ಧವಾಗಿ ಕೊಡುವ ಹಣ ; ಲಂಚ ; ರುಷುವತ್ತು. [ಸಂ.]

**ಪ್ರಾಮಾಣಿಕ** (ಗು). ೧. ಅಳತೆಗೆ ಸಿಕ್ಕಿದ ; ಪ್ರಮಾಣದ. ೨. ಆಧಾರದಿಂದ ಸಾಬೀತು ಪಡಿಸಿದ ; ಪ್ರಮಾಣದಿಂದ ಸಿದ್ಧವಾದ. ೩. ವಿಶ್ವಾಸಾರ್ಹವಾದ ; ನಂಬಿಕೆಗೆ ಅರ್ಹವಾದ. (ನಾ). ४. ವಿಶ್ವಾಸಾರ್ಹವಾದುದು : ಅವರ ಈ ವಿಧಾನಕ್ಕೆ ಪ್ರಾಮಾಣಿಕವಾದ ಯಾವ ಆಧಾರವೂ ಇಲ್ಲ (ಅಂಕಾ. ೬). ೫. ನಂಬಿಕೆಗೆ ಅರ್ಹನಾದವನು ; ನಂಬಿಕಸ್ಥ : ನೀನು ಪ್ರಾಮಾಣಿಕನಾಗಿದ್ದೆ (ಕಂಪು. ೦೩४); ಇದನ್ನು ಪ್ರಾಮಾಣಿಕರಾದವರು ಒಪ್ಪದಿರಲು ಸಾಧ್ಯವಿಲ್ಲ (ರಾಜ್ಯಶಾ. ೦೦). [ಸಂ.]

**ಪ್ರಾಮಾಣಿಕತನ** (ನಾ). ನಂಬಿಕೆಗೆ ಅರ್ಹವಾಗಿರುವಿಕೆ : ಅವನ ಪ್ರಾಮಾಣಿಕತನವನ್ನು ಪರೀಕ್ಷಿಸಿ ನೋಡಬೇಕೆಂಬ ಲವಲವಿಕೆ ಅವನಲ್ಲಿ ಹುಟ್ಟಿತು (ಮುಂಜಿಯು. ४-३೦) ; ಸಂಪಾದಕರ ಪ್ರಾಮಾಣಿಕತನಕ್ಕೆ ಮೆಚ್ಚಿ, ಒಳನೋಡಿದೆ (ಹುಕ್ಕು.ಹು. ३३). [ಪ್ರಾಮಾಣಿಕ + — ತನ]

**ಪ್ರಾಮಾಣಿಕತೆ** (ನಾ). = ಪ್ರಾಮಾಣಿಕತನ : ಕೃತ್ರಿಮರಾಹಿತ್ಯ ಪ್ರಾಮಾಣಿಕತೆಗಳಿಗೆ ಹೆಸರಾಗಿದ್ದ ಅವನು ಮತತ್ಯಾಗದ ವಿಷಯವನ್ನು ಗೆಳೆಯರಿಗೆ ತಿಳಿಸಿದ್ದನು (ಕ್ರಿಪರು. ३६२) ; ಪ್ರಾಮಾಣಿಕತೆ ಎನ್ನುವ ಮಾತೇ ಇಲ್ಲ ನಿಮ್ಮ ಜಾತಕದಲ್ಲಿ (ಕಂಗಲ. ೬೬). [ಸಂ. ಪ್ರಾಮಾಣಿಕತಾ]

**ಪ್ರಾಮಾಣ್ಯ** (ನಾ). ೧. ಆಧಾರ ; ಪುರಾವೆ ; ಸಾಕ್ಷಿ : ಜನ ಗೆಳೆಸ ಬಯಸುವ ಅಪೂರ್ವಗುಣ ಬರಿಯ ಹೊಸತನವಲ್ಲ, ಪ್ರಾಮಾಣ್ಯ ಮಾತ್ರ (ಸಾಹಿಪ್ರ. ೦೨) ; ಜ್ಞಾನಸ್ವರೂಪದಲ್ಲಿರುವ ಪ್ರಾಮಾಣ್ಯ, ಸಂಶಯ, ಸಂಭಾವನಾ ಮೊದಲಾದ ಅಂಶಗಳು ಸಾಕ್ಷಿಸ್ವರೂಪೇಂದ್ರಿಯಕ್ಕೆ ಗೋಚರಗಳಾಗುವುವು (ಹಿಂದೂತ. ३೯೬). ೨. ಆಧಾರಭೂತವಾದುದು; ಸಮರ್ಥನೆ ಮಾಡುವ ಪ್ರಮಾಣ : ಬಹು ಹಿಂದಿನಿಂದ ಭಗವದ್ಗೀತೆಗೆ ಸಾಕಷ್ಟು ಪ್ರಾಧಾನ್ಯವೂ ಪ್ರಾಮಾಣ್ಯವೂ ಇತ್ತು (ಭಾರದ. ೦೦೯). ೩. ಅಳತೆ ; ಪ್ರಮಾಣ : (*). [ಸಂ.]

**ಪ್ರಾಮಿಸರಿನೋಟು**, ಪರಮೇಶ್ವರಿನೋಟು, ಪರಮೇಸೂರನೋಟು, ಪ್ರಾಂಸರಿನೋಟು (ನಾ). ಒಂದು ಗೊತ್ತಾದ ಮೊಬಲಗನ್ನು ಒಬ್ಬ ಗೊತ್ತಾದ ವ್ಯಕ್ತಿಗೆ ಅಥವಾ ಆ ಪತ್ರ ತಂದವನಿಗೆ ಒಂದು ಗೊತ್ತಾದ ದಿನ ಅಥವಾ ಯಾವಾಗ ಕೇಳಿದರೆ ಆವಾಗ ಪಾವತಿಮಾಡುವುದಕ್ಕಾಗಿ ವಾಗ್ದಾನ ಮಾಡಿ ರುಜು ಹಾಕಿಕೊಟ್ಟ (ಸಾಲ) ಪತ್ರ ; ವಾಗ್ದಾನ ಪತ್ರ ; ಪ್ರೋನೋಟು : ಬೇಕಾದರೆ ಪ್ರಾಮಿಸರಿನೋಟು ಬರೆದು ಕೊಡುತ್ತೇನೆ (ಸೋಹಿಸ. ३९); ಸಾಹುಕಾರರು ತಾಳುವ ಹಾಗಿದ್ದರೆ ಒಂದು ಪ್ರಾಮಿಸರಿ ನೋಟನ್ನು (ವಾಗ್ದಾನದ ಸಾಲಪತ್ರ) ಬರೆದುಕೊಟ್ಟು ಮುಂದಕ್ಕೆ ತೀರಿಸುವೆವೆನ್ನಬಹುದು (ಹಣಶ್ರ. ೯೭). **ಪರಮೇಶ್ವರಿನೋಟು** : ನೀನು ಸರಳ ಮನುಷ್ಯನೆಂಬುದು ಊರೊಳಗೆ ಯಾರಿಗೇನು ಗೊತ್ತಿಲ್ಲವೆ ? . . . ನೆನಪಿಗೆಂದು ಪರಮೇಶ್ವರಿನೋಟು ಬರೆದುಕೊಡು (ಎಚಚ. ६೯). **ಪರಮೇಸೂರನೋಟು** : ಪರಮೇಸೂರನೋಟು ಬರಕೊಟ್ಟು ತಗೊಂಡು ಹೋಗು (ಜಾನಪ. ४೮). **ಪ್ರಾಂಸರಿನೋಟು** : ಸಾಲ ಪಡೆಯಲು ಪ್ರಾಂಸರಿನೋಟು ಬರೆದುಕೊಟ್ಟಿದ್ದಾರೆ (ರೂಢಿ).

[←ಇಂ. Promissorynote./ ತುಳು. ಪ್ರಮೇಸ್ರಿನೋಟು]

**ಪ್ರಾಮುಖ್ಯ** (ನಾ). ಮುಖ್ಯವಾಗಿರುವಿಕೆ; ಪ್ರಧಾನತೆ ; ಮಹತ್ತ್ವ : ಧರೆಯಲ್ಲಿ ಸೊಗಸಾದ ಮಾಳಿಗೆ ಮನೆಗಳಿರಲಿ . . . ಕೊರತೆಯೇಂ ತನ್ನದೇ ಪ್ರಾಮುಖ್ಯವೆಂದು ? (ಕುಂಕ್ಕು. ೦४-೦). [ಸಂ.]

**ಪ್ರಾಮುಖ್ಯತೆ** (ನಾ). ಪ್ರಮುಖವಾಗಿರುವುದು : ಈ ದೃಷ್ಟಿಯನ್ನವಳು ತ್ಯಜಿಸಿದ್ದರೆ ಅವಳ ಜೀವನದ ಪ್ರಾಮುಖ್ಯತೆಯ ಕುಂಠಿತವಾಗುತ್ತಿತ್ತು (ಕ್ರಿಪರು. ೦४೯) ; ಜ್ಞಾನದ ಪ್ರಾಮುಖ್ಯತೆ ವಿಷಯವಾಗಿ ಹೋರಾಡಿದ ಶ್ರೀ ಶಂಕರಾಚಾರ್ಯರು ಪ್ರಚಂಡಬೌದ್ಧಿಕಕರ್ಮವಾದಿಗಳಾಗಿದ್ದರು (ಧರ್ಮಸಾ. ೦३೦). [ಪ್ರಾಮುಖ್ಯ + — ತೆ]

**ಪ್ರಾಯ** (ನಾ). ೧. ಜೀವ ಹೋಗುವಿಕೆ ; ಮರಣ. ೨. ಪ್ರಾಣತ್ಯಾಗಕ್ಕಾಗಿ ಮಾಡುವ ಉಪವಾಸ. —ಆಹಾರತ್ಯಾಗ : "ಪ್ರಾಯಃ, ಭೋಜನತ್ಯಾಗಃ, ಸನ್ನ್ಯಾಸಃ, ಅನಶನಂ_ಈ ४ ಕಡೆಗಾಲದ ಅನಶನಂ" (ಹಲಾಯು. ೦३३-६३). ೩. ತಾರುಣ್ಯ ; ಹರೆಯ; ಯೌವನ : "ಯೌವನಂ _ಪ್ರಾಯಂ" (ಕಾಶ್ಯ. ೦६४) ; ಪ್ರಾಯದ ಪೆಂಪೆ ಪೆಂಪೆಮಗೆ (ಹಂಸಚಾ. ०४-०६) ; ಪ್ರಾಯದ ಮಿಂಡರಿಂದೆ ಗಳಿರ್ದ ಧನಂಗಳನಾಗಳುಂ . . . ತೃಪ್ತಿಯನಾಗಿಸುತ್ತೆ (ಹಾಲಾಸ್ಯ. ३-४-००). ४. ವಯಸ್ಸು : ಕ್ರಮಕ್ರಮದಿಂ ಸುಖದಿಂ ಬೆಳೆದು ಮುಂಜಿಗಟ್ಟುವ ಪ್ರಾಯಮಾದೊಡೆ . . . ಮುಂಜಿಬಂಧನಕ್ರಿಯೆಯಂ ಮಾಡಿ (ವಡ್ಡಾರಾ. ६३-२०) ; ಪ್ರಾಯಂ ಕೂಸಾದೊಡಭಿಪ್ರಾಯಂ ಕೂಸಕ್ಕುಮೆ (ಕಪುರ. ३९३ ಪ್ರಯೋ) ; ನರಸಿಂಹನಿಗೆ ಈಗ ಹದಿನೆಂಟು ವರ್ಷ ಪ್ರಾಯವಾಗಿತ್ತು (ಪುಕಪು. ०६३). ೫. ಸಮಾಸಾಂತ್ಯಗಳಲ್ಲಿ ಸಮಾನವಾದುದು ಎಂಬರ್ಥದಲ್ಲಿ ಸೇರುವ ಶಬ್ದ : ಅನಂತ . . . ಅವಘಡಪ್ರಾಯವಾದ ಅಪವಾದಗಳು ಬಂದರೂ ಅಕ್ಕರ ಅಕ್ಕಸ ತಾಳದೆ ಸಮುದ್ರನಾಥನಂತೆ ಎಲ್ಲವನ್ನೂ ಒಡಲಿನಲ್ಲಿ ನುಂಗಿಕೊಂಡು ಸಾಗಹತ್ತಿದ್ದ (ಜೀವಾಶ. ३९).

**ಪ್ರಾಯಕ್ಕೆ ಬರು**=೧. ವಯಸ್ಸಿಗೆ ಬರು; ಪ್ರೌಢವಾಗು: ಅನೇಕ ಜೀವಿಗಳು ಪ್ರಾಯಕ್ಕೆ ಬರುವ ಮೊದಲೇ ನಾಶವಾಗುತ್ತವೆ (ಜೀಟಿಕ. ०). ೨. ಮೈನೆರೆ ; ಪುಷ್ಪವತಿಯಾಗು; ದೊಡ್ಡವಳಾಗು : ನಾನು ಪ್ರಾಯಕ್ಕೆ ಬಂದ ಹೊಸದು ; ಆಗ ಒಂದು ದಿನ ಪರಾಶರಋಷಿಯು ಯಮುನಾನದಿಯನ್ನು ದಾಟಬೇಕಾಯಿತು (ಕಕಕು. ೭); ಅವಳು ಪ್ರಾಯಕ್ಕೆ ಬಂದ ಕೂಡಲೆ ದುರಾಚಾರಿಯಾದ್ದರಿಂದ ಅವಳನ್ನು ಯಾರೂ ವರಿಸಲಿಲ್ಲ (ಸ್ತ್ರೀಂಬ. ३०६). **ಪ್ರಾಯ ತುಂಬು**=ಬಾಲ್ಯಾವಸ್ಥೆ ಕಳೆದು ಯೌವನ ಬರು; ತಾರುಣ್ಯವನ್ನು ಹೊಂದು : ನಾರಾಯಣಶಾಸ್ತ್ರರ ಹಿರಿಮಗು, ಮೆಟ್ರಿಕ್‌ನಲ್ಲಿದ್ದವ, ಪ್ರಾಯ ತುಂಬಿದ ಮಗು, ಕೇಶವ ಹೋದನಂತೆ ವಿಷಮಜ್ವರದಿಂದ (ಮುಗಿಯು. ३९६); ಪ್ರಾಯ ತುಂಬಿರಲು

ಪಾತ್ರೆ ತುಂಬಿರಲಿ, ಬರಿದು ಭ್ರಾಂತಿ ಏಕೆ ? (ಹಳು. ೦೦೯-೯). ಪ್ರಾಯ ಬರು = ಪ್ರಾಯ ತಂಬಂ : ಪುರುವಿಗೆ ಪ್ರಾಯ ಬಂತು (ಶೀಕಿಹಂ. I, ೨೦೯); ಶಾಲೆಗೆ ಸೇರಿದ್ದು ತಡ, ಪಾಸಾದುದು ಮೆಲ್ಲಗೆ ಹೊರತು. ಈಗಾಗಲೇ ಪ್ರಾಯ ಬಂದಿದೆ (ಮುಂಗಿಯು. ೫೭). ಪ್ರಾಯ ಮೀರು = ವಯಸ್ಸಾಗು ; ವಯಸ್ಸು ಕಳೆ: ಇಬ್ಬರೂ ಸುಮಾರು ಐವತ್ತು ವರ್ಷ ಪ್ರಾಯ ಮೀರಿದವರು (ಮಹಹ. ೫೦೯). ಪ್ರಾಯ ಸಲ್ಲು = ವಯಸ್ಸಾಗು: ನಿನಗೆ ಪ್ರಾಯ ಸಂದಿತಲ್ಲ ; ನಾಳೆ ಯಾರು ನಿನ್ನ ನಂತರ ಗುರಿಕಾರನೆಂದು ಯೋಚಿಸಿದ್ದೀಯಾ ? (ಕುಕಿಕಿ. ೬೬). ಪ್ರಾಯ ಹೋಗು = ಪ್ರಾಯ ಸಲ್ಲು: ಪ್ರಾಯ ಹೋದರೂ ಪ್ರಯಾಸ ಬಿಡದು (ಗಾದೆ). [ಸಂ.]

**ಪ್ರಾಯಃ** (ಅ). ಬಹುಮಟ್ಟಿಗೆ ; ಬಹುಪಾಲು : ಆತ್ಮನಿರುವ ಕಡೆ ಗಳೆಲ್ಲೆಲ್ಲಾ ಈ ಚಿಹ್ನೆಗಳು ಪ್ರಾಯಃ ಕಂಡುಬರುತ್ತವೆಯೆಂದು ಅದರ ಅಭಿಪ್ರಾಯ (ಜೀಣತ್ತ. ೫೯). [ಸಂ. ಪ್ರಾಯಸ್]

**ಪ್ರಾಯತ** (ನಾ). ಇಂದ್ರಿಯಂಗಳನ್ನು ಹತೋಟಿಯಲ್ಲಿಟ್ಟು ಕೊಂಡಿರುವ ವ್ಯಕ್ತಿ ; ಸಂಯಮಿ : ಮಿಥಿಲೆಯಲಿ ಮುನ್ನೊಬ್ಬ ವೇಶಿಯ ಕಥೆಯ ಪೇಳುವೆ ಕೇಳು ಭೂಪತಿ ಮಥಿಸುವಳು ಪ್ರಾಯತರ ಮನಗಳನಧಿಕಚೆಲುವಿನಲಿ(ಜೈಭಾಗ. ೦೦-೦೫-೦); ಏಕಪತ್ನೀವ್ರತಂ ಪ್ರಾಯತಂ ಕೋವಾಲಂ (ಕೃಖಣ. ೦೦-೯೦). [.< ಪ್ರಯತ]

**ಪ್ರಾಯತೆ** (ನಾ). ಇಂದ್ರಿಯಂವನ್ನು ಹತೋಟಿಯಲ್ಲಿ ಇಟ್ಟುಕೊಂಡಿರುವವಳು; ಇಂದ್ರಿಯಂಲಾಲಸೆಯಿಲ್ಲದವಳು: ಆ ರಾಜ್ಯದೊಳ್ ಬಚೆಯ ನಾರಿಯರ್ ಪ್ರಾಯತೆಯರಾಗಿ . . . ಸ್ತ್ರೀಯೋರ್ವರಸಾಗಿರಲ್ಕವಳ ಕೆಳಗಾಗಿ ಬದುಕುವರ್ (ಕೃಖಣ. ೦೫-೪೨). [ಸಂ. ಪ್ರಾಯತ + -ಎ]

**ಪ್ರಾಯಶಃ** (ಅ). ೧. ಬಹುಮಟ್ಟಿಗೆ; ಬಹುಪಾಲು; ಬಹುಶಃ: ನೊಳಂಬ ರಾಜ್ಯವನ್ನು ಪೂರ್ಣವಾಗಿ ಗಂಗಮಾರಸಿಂಹನು ಆಕ್ರಮಿಸಿಕೊಂಡಿದ್ದರಿಂದ . . . ಪ್ರಾಯಶಃ ಅವರೆಲ್ಲರೂ ತಮ್ಮ ರಾಜ್ಯವನ್ನು ಬಿಟ್ಟು ತಲೆಮರೆಸಿ ಕೊಂಡು ಹೋದಂತೆ ತೋರುತ್ತದೆ (ಮೊಳಂಬ. ೯೬); ಪ್ರಾಯಶಃ ನಾನು ಕಾಸರಗೋಡಿನಿಂದ ಹಿಂದಿರುಗುವುದಿಲ್ಲ (ಜಂಟೀಣ. ೬). ೨. ಸಾಮಾನ್ಯವಾಗಿ: ಪ್ರಾಯಶಃ ಎಲ್ಲಾ ಪ್ರಾಚೀನ ನಾಟಕಕಾರರ ವಿಷಯದಲ್ಲಿಯೂ ಇದನ್ನೇ ಹೇಳಬಹುದು (ಅಂಶಾ. ೭೬). [ಸಂ. ಪ್ರಾಯಶಸ್]

**ಪ್ರಾಯಶ್ಚಿತ್ತ** (ನಾ). ೧. ಮಾಡಿದ ತಪ್ಪಿಗಾಗಿ ವ್ಯಥೆ ಪಟ್ಟು ಪರಿಹಾರ ಮಾಡಿಕೊಳ್ಳುವ ಕರ್ಮ; ವಿಧಿ: ಈ ನಾಯನೀಡಾಡಿ ಪ್ರಾಯಶ್ಚಿತ್ತವಂ ಕೈಕೊಳ್ಳಿರಿ (ಶಂಕಶಂ. ೦೪೭-೦೯); ಕುಲಮದಕ್ಕೆ ಹೋರಿ ಜಂಗಮಭೇದವ ಮಾಡುವೆ ಫಲವೇನು ನಿತ್ಯಲಿಂಗಾರ್ಚನೆ ಪ್ರಾಯಶ್ಚಿತ್ತ (ಬಸವ. ೫೯೯); ನಾನು ಪ್ರಾಯಶ್ಚಿತ್ತ ಮಾಡಿಕೊಳ್ಳುವುದಿಲ್ಲ (ಮುತಾಪಿ. ೫೨); ಪಾಪಕ್ಕೆ ತಕ್ಕ ಪಾಪೋಸು, ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ (ಗಾದೆ). ೨. [ಜೈನ] ಅಭ್ಯಂತರತಪಗಳಲ್ಲಿ ಒಂದು ; ಪ್ರಮಾದದೋಷಗಳ ಪರಿಹಾರಕ್ಕಾಗಿ ಆಲೋಚನೆ ಮೊದಲಾದ ಚಿತ್ತಶೋಧಕಕ್ರಿಯೆಗಳಲ್ಲಿ ಮನಸ್ಸು ಪ್ರವೃತ್ತವಾಗುವುದು: ಅಭ್ಯಂತರತಪಷಟ್ಕದೊಳಂ ಪ್ರಾಯಶ್ಚಿತ್ತವಿನಯವೈಯಾವೃತಸ್ವಾಧ್ಯಾಯಧ್ಯಾನವ್ಯುತ್ಸರ್ಗಂಗಳಂ ಕೈಕೊಂಡು (ಆದಿಪು. ೩-೩೩ ವ). [ಸಂ.]

**ಪ್ರಾಯಶ್ಚಿತ್ತಕರ್ಮ** (ನಾ). ನಿತ್ಯ, ನೈಮಿತ್ತಿಕ, ಪ್ರಾಯಶ್ಚಿತ್ತ, ಕಾಮ್ಯ ಮತ್ತು ನಿರ್ಮಲಗಳೆಂಬ ಐದು ಬಗೆಯ ಕರ್ಮಗಳಲ್ಲಿ ಒಂದು; ತಾನು ಮಾಡಿದ ತಪ್ಪಿನ ಪರಿಹಾರಕ್ರಿಯೆಯಾಗಿ ಮಾಡುವ ಕರ್ಮ: ಕರ್ಮವಾದೊಡೆ ನಿತ್ಯ ನೈಮಿತ್ತಿಕ ಪ್ರಾಯಶ್ಚಿತ್ತ ಕಾಮ್ಯ ನಿರ್ಮಲ ವೆಂದು ಪಂಚವಿಧಂ (ಶಿವೇಳ. ೦೫೯); ಜ್ಞಾತಾಜ್ಞಾತ ಪಾಪಕ ಪರಿಹಾರದ್ದೆಶೆಯಿಂದ ಮಾಡುವುದೇ ಪ್ರಾಯಶ್ಚಿತ್ತಕರ್ಮವು (ಶಿಗಮು. ೦-೯-೦). [ಸಂ. ಪ್ರಾಯಶ್ಚಿತ್ತಕರ್ಮನ್]

**ಪ್ರಾಯಸ್ಥ** (ನಾ). ವಯಸ್ಸಿಗೆ ಬಂದವನು ; ತರುಣ : ಒಬ್ಬ ಪ್ರಾಯಸ್ಥನ ಸಮತೂಕಆಹಾರವೆಂದರೆ . . . ಜೀವಾತುಗಳು ಸಾಕಷ್ಟು ಪ್ರಮಾಣದಲ್ಲಿ ಇರುವುದು ಅಗತ್ಯ (ಆಹುಸಾ. ೬೦) ; ಪ್ರಾಯಸ್ಥನಾದರೂ ಪ್ರಾಚೀನ ಬಿಡಲಿಲ್ಲ (ಗಾದೆ). [ಸಂ.]

**ಪ್ರಾಯಸ್ಥೆ** (ನಾ). ವಯಸ್ಸಿಗೆ ಬಂದವಳು ; ತರುಣಿ : (೬). [ಪ್ರಾಯಸ್ಥ + -ಎ]

**ಪ್ರಾಯಿಕ** (ನಾ). ಸಾಮಾನ್ಯವಾದುದು: ನಾಮಪದಗಳೇ ಮುಂತಾದುವಲ್ಲಿ . . . ವ್ಯಂಜಕತ್ವವಿರುವುದನ್ನು ಮಹಾಕವಿಗಳ ಪ್ರಬಂಧಗಳಲ್ಲಿ ಪ್ರಾಯಿಕವಾಗಿ ನೋಡಬಹುದು (ಕೃಷ್ಣಾಲೋ. ೦೫೬) ; ಹಿಂದಿನ ಸಾಹಿತಿಗಳು ಬಾಯಿ ಮಾತಿನಲ್ಲಾಗಲಿ, ಬರವಣಿಗೆಯಲ್ಲಾಗಲಿ ಪ್ರಾಯಿಕವಾಗಿ ನನಗೆ ಪ್ರೋತ್ಸಾಹ ಕೊಡಲಿಲ್ಲ (ಹಿಂದಿಶ. II, ೪). [ಸಂ.]

**ಪ್ರಾಯೋಗಿಕ** (ಗು). ೧. ಪರೀಕ್ಷೆಯ ಮೂಲಕ ಮಾಡಿ ತೋರಿಸುವ ; ಪ್ರಯೋಗದ ಮೂಲಕ ಸಿದ್ಧಪಡಿಸುವ : ಫ್ಯಾರಡೆ ಅತ್ಯುತ್ತಮ ವರ್ಗದ ಪ್ರಾಯೋಗಿಕ ವಿಜ್ಞಾನಿ (ಶಿಣಸ. XV. ಜಿಷಾತಿದರ್ಶಿ). (ನಾ). ೨. ಪ್ರಯೋಗದಿಂದ ಕೂಡಿರುವುದು : ವಿಷಯಗಳನ್ನು ಪ್ರಾಯೋಗಿಕವಾಗಿ ಉಪಯೋಗಿಸಿಕೊಳ್ಳುವ ರೀತಿ . . . ಅಲ್ಲಿರಬೇಕು (ಶಿಕ್ಷಕ. ೨೮೨). ೩. ಪ್ರಯೋಗವನ್ನು ಮಾಡಿ ತೋರಿಸುವವನು : ಶುದ್ಧವಿಜ್ಞಾನಿಗೆ ಇಷ್ಟವಿರಲಿ, ಇಲ್ಲದಿರಲಿ, ಅವನ ತಮಾರ್ಜಿತವಾದ ಜ್ಞಾನವನ್ನು ಪ್ರಾಯೋಗಿಕನು ಬಳಸಿಕೊಳ್ಳದೆ ವಿಧಿಯಿಲ್ಲ (ಶಿಂಪ್ರಕಾ. ೯೨). ೪. [ಜೈನ] ಅಭಾಷಾತ್ಮಕವಾದ ಶಬ್ದಭೇದ, ಪ್ರಯೋಗಜನ್ಯವಾದ ವೀಣಾದಿಗಳ ತತಶಬ್ದ, ಡೋಲು ಮೊದಲಾದುವುಗಳ ವಿತತಶಬ್ದ, ತಾಳ ಮೊದಲಾದುವುಗಳ ಘನಶಬ್ದ ಮತ್ತು ಕೊಳಲು ಮೊದಲಾದುವುಗಳ ಸುಶಿರಶಬ್ದ : ಶಬ್ದವು ಪ್ರಾಯೋಗಿಕ, ವೈಸ್ರಸಿಕ (ಸ್ವಾಭಾವಿಕ) ಎಂದು ಎರಡು ವಿಧವಾಗಿದೆ (ಕೃಪರ. ೩೬). [ಸಂ.]

**ಪ್ರಾಯೋಗಿಕವಿಮರ್ಶೆ** (ನಾ). ವಿಮರ್ಶೆಯಲ್ಲಿ ಕಾವ್ಯಾರ್ಥವಿಶ್ಲೇಷಣೆಯನ್ನು ಅನುಸರಿಸಿ ರಚಿಸಿರುವ ಪ್ರಯೋಗಾತ್ಮಕ ಬರಹ ; P ಇದು ಇಂಗ್ಲಿಷಿನ 'practical criticism' ಎಂಬುದರ ಅನುವಾದ : ನಮ್ಮ ಕಾವ್ಯಮೀಮಾಂಸೆಯ ಕೂಲಂಕಷವಾದ ಪರಿಜ್ಞಾನವನ್ನು ಪಡೆದು ಅದರ ಬೆಳಕಿನಲ್ಲಿ ಪ್ರಾಯೋಗಿಕವಿಮರ್ಶೆಯನ್ನು ಬೆಳೆಸಬೇಕು (ಅಂಕಮ. IX. ಮುನ್ನುಡಿ). [ಸಂ. ಪ್ರಾಯೋಗಿಕ ವಿಮರ್ಶ]

**ಪ್ರಾಯೋಗ್ಯತಾಲಬ್ಧಿ** (ನಾ). [ಜೈನ] ಕಾಲಲಬ್ಧಿ, ಕರಣಲಬ್ಧಿ, ಉಪಶಮಲಬ್ಧಿ, ಕ್ಷಯೋಪಶಮಲಬ್ಧಿ ಮತ್ತು ಪ್ರಾಯೋಗ್ಯತಾ ಲಬ್ಧಿಗಳೆಂಬ ಐದು ಬಗೆಯ ಲಬ್ಧಿಗಳಲ್ಲಿ ಒಂದು ; ಕರ್ಮವು ಕ್ರಮಕ್ರಮವಾಗಿ ಕಡಮೆಯಾಗುವ ಪ್ರಾಪ್ತಿ : ಕಾಲಲಬ್ಧಿ ಕರಣಲಬ್ಧಿ ಉಪಶಮಲಬ್ಧಿ ಕ್ಷಯೋಪಶಮಲಬ್ಧಿ ಪ್ರಾಯೋಗ್ಯತಾಲಬ್ಧಿಯೆಂಬ ಲಬ್ಧಿಪಂಚಕಮುಮಂ (ಸುಕುಚ. ೩-೩೯ ವ); ಭವ್ಯಾಭವ್ಯಸಾಮಾನ್ಯಂ ಪ್ರಾಯೋಗ್ಯತಾಲಬ್ಧಿಯಕ್ಕುಂ (ಕತ್ಯಕ್ರ. ೬೦). [ಸಂ.]

**ಪ್ರಾಯೋಜಿತ** (ಗು). ಯಾವುದಾದರೂ ಒಂದು ಕೆಲಸದ ಖರ್ಚಿನ ಜವಾಬ್ದಾರಿಯನ್ನು ಹೊತ್ತಿರುವ.

ಪ್ರಾಯೋಜಿತ ಕಾರ್ಯಕ್ರಮ = (ಜಾಹಿರಾತಿನ ಪ್ರಚಾರಕ್ಕಾಗಿ) ಹಣ ಕೊಟ್ಟು ಪ್ರಚುರಪಡಿಸುವ ಕಾರ್ಯಕ್ರಮ : ಟಿ.ವಿ.ಯಲ್ಲಿ ಈಗೀಗ ಪ್ರಾಯೋಜಿತ ಕಾರ್ಯಕ್ರಮಗಳು ಚೆನ್ನಾಗಿರುತ್ತವೆ (ಲೋಕ). [ಸಂ.]

**ಪ್ರಾಯೋಪಗಮನ** (ನಾ). [ಜೈನ] ಉಪವಾಸದಿಂದ ಮರಣ ಹೊಂದುವ ವ್ರತ ; P ಏಕಾಂಗಿಯಾಗಿ, ನಿರಾಹಾರಿಯಾಗಿ ನಿಶ್ಚಲನಾಗಿ ನಿಂತು ತಪಸ್ಸು ಮಾಡುವುದು : ದ್ವಾದಶವಿಧಪ್ಪ ತಪದೊಳ್

ನೆಗಟ್ಟು ಪ್ರಾಯೋಪಗಮನದಿಂ ಸಂನ್ಯಸನಂಗೆಯ್ದು ಕರ್ಮಕ್ಷಯಂಗೆಯ್ದು ಮೋಕ್ಷಕ್ಕೆ ಪೋದ . . . ಸುಕುಮಾರಸ್ವಾಮಿಯ ಕಥೆಯಂ ಪೇಳ್ವೆಂ (ವಡ್ಡಾರಾ. ೦-೦೦) ; ಚತುರ್ವಿಧಾರಾಧನಾಪೂರ್ವಕಂ ವಿಹಿತಪ್ರಾಯೋಪಗಮನವಿಧಾನನಾಗಿ (ಚಂದ್ರಪ್ರ. ೦೦-೨೩ ವ). [ಸಂ.]

**ಪ್ರಾಯೋಪವೇಶ** (ನಾ). = ಪ್ರಾಯೋಪಗಮನ : ಮುನಿರಾಜಂ . . . ಅಳ್ಕದಾಚಾಮ್ಲವರ್ಧನಮಂ ತಪ್ಪದೆ ನೋಂತು ತಪ್ಪತನುವಂ ಪ್ರಾಯೋಪವೇಶಕ್ಕೆ ತಂದು (ಶಾಂತಿಪು. ೬-೬೪) ; ನಾನು ಪ್ರಾಯೋಪವೇಶ ಮಾಡಿ ಈ ಪ್ರಾಣತ್ಯಾಗಮಾಡಲು ನೀನು ಸಮ್ಮತಿಸಬೇಕು (ಪ್ರಾಣೇಶಂ. ೦೦೩). [ಸಂ.]

**ಪ್ರಾರಂಭ** (ನಾ). ೧. ಮೊದಲು ಮಾಡುವಿಕೆ; ಉಪಕ್ರಮ; ಆರಂಭ : ಶ್ರೀಮನ್ ವಿನಾಯಕ್ಕಧೀಶಂ . . . ಕಲಾಶಾಲಿಧೈರ್ಯಂ ಕ್ಷೇಮಪ್ರಾರಂಭವಂ ಮಾಳ್ಕೆಮಗತಿದಯಿಯಿಂ (ಜಾರಾಶ್ಯ. ೦-೦-೦) ; ಸಂಗರ ಪ್ರಾರಂಭಸಮಯತೂರ್ಯಧ್ವನಿಗೆ ವೇಗಮುದ್ವೇಗದಿಂ ರೋಷದಿಂ ಪೋಪದಿ ಸಂಧಿಸಿತುಭಯಬಲಂ (ಕಬ್ಬಿಗಂಗ. ೬೨-೨೨೪೭). ೨. ಕೆಲಸ ; ಕಾರ್ಯ : ಸಕಲಕ್ಷತ್ರಿಯಮೋಹದಿಂ ನಿಜಭುಜಪ್ರಾರಂಭದಿಂ ಪೋಗೆ ತಾಗಿ ಕಲರ್ ನೊಂದೊಡೆ (ಚಂಶಕಾ. ೧-೬೪). ೩. [ಜೈನ] ಇಪ್ಪತ್ತೈದು ಕ್ರಿಯೆಗಳಲ್ಲಿ ಒಂದು ; ಛೇದನಭೇದನಾದಿ ಕ್ರಿಯೆಗಳಲ್ಲಿ ತಾನು ಪ್ರವೃತ್ತನಾಗುವುದು ಅಥವಾ ಅನ್ಯರನ್ನು ಪ್ರವರ್ತಿಸಿ ಆನಂದಪಡುವುದು : ಪಂಚವಿಂಶತಿಕ್ರಿಯೆಗಳು ೧. ಸಮ್ಯಕ್ತ್ವಕ್ರಿಯೆ . . . ೨೧. ಪ್ರಾರಂಭ (ಸ್ವಕೃತ - ಪರಕೃತಭೇದನ ಛೇದನಗಳಲ್ಲಿ ಹರ್ಷ) (ಕೈಶಠ. ೬೪). 'ಪಂಚವಿಂಶತಿಕ್ರಿಯೆ' ಪರಾ. [ಸಂ.]

**ಪ್ರಾರಂಭಿಗ** (ನಾ). ಮೊದಲು ಮಾಡುವವನು ; ಆರಂಭಿಸುವವನು ; ಮೊದಲಿಗ : ಸಮುಶುದ್ಧಸ್ಫುಟಮಪ್ಪುದೊಂದು ಸುತಿಯಂ ಪ್ರಾರಂಭಿಗಂ ಮಾಡೆ (ಶಾಂತಿಪು. ೦೦-೬೩). [ಪ್ರಾರಂಭ + — ಇಗ]

**ಪ್ರಾರಂಭಿಸು** (ಕ್ರಿ). ಮೊದಲು ಮಾಡು ; ಆರಂಭಿಸು : ವಿದ್ಯುಚ್ಛಕ್ತಿಯನ್ನು ಉರವಲಾಗಿ ಬಳಸಲು ಹೆಚ್ಚು ಹೆಚ್ಚು ಜನರು ಪ್ರಾರಂಭಿಸುತ್ತಿರುವುದರಿಂದ ಇಲ್ಲಿ ಅದರ ಕುರಿತು ಒಂದೆರಡು ಮಾತುಗಳು ಅನವಶ್ಯವಾಗಲಾರವು (ಅಡುಗ. ೦೬) ; ಜಾನಕಮ್ಮನವರೇ ಊಟದ ಮಧ್ಯದಲ್ಲಿ ಮಾತಿಗೆ ಪ್ರಾರಂಭಿಸಿದರು (ಕೂಶಾಶ. ೦೩೬). [ಪ್ರಾರಂಭ + — ಇಸು]

**ಪ್ರಾರಂಭೋತ್ಸವ** (ನಾ). (ಸಂಘ, ಸಂಸ್ಥೆ ಮೊದಲಾದುವುಗಳನ್ನು ವಿಧ್ಯುಕ್ತವಾಗಿ) ಆರಂಭಿಸುವಾಗ ನಡೆಸುವ ಸಮಾರಂಭ ; ಆರಂಭೋತ್ಸವ : ದೇವಯ್ಯಗೌಡರ ಮತಾಂತರವನ್ನು . . . ಮೇಗರವಳ್ಳಿಯ ಮಿಷನ್‌ಸ್ಕೂಲಿನ ಪ್ರಾರಂಭೋತ್ಸವ ನಡೆಸಲು ಬಂದಾಗ ತಾವೆ ಖುದ್ದಾಗಿ ನಡೆಸಿಕೊಡುತ್ತಾರೆ (ಮಲೆಗ. ೬೨) ; ಸರಕಾರಸ್ಕೂಲಿನ ಪ್ರಾರಂಭೋತ್ಸವಕ್ಕೆ ತಾವೇ ದಯಮಾಡಿಸಬೇಕು (ಕಗಂಳ. ೨೬೩). [ಸಂ.]

**ಪ್ರಾರಬುದ** (ನಾ). ಹಿಂದೆ ಮಾಡಿದ ಕರ್ಮ : ಸ್ತುತ್ಯನ್ನಹುದೆಂದಾಡಿ ಪ್ರಾರಬುದಿದೇನೆನಗೆ ಹತ್ತಿಕೊಂಡುದು ಜೀಯ ವಿವರಿಸು (ಹರಕು. ೦೬-೬೪). [< ಸಂ. ಪ್ರಾರಬ್ಧ]

**ಪ್ರಾರಬ್ಧ** (ಗು). ೧. ಮೊದಲು ಮಾಡಿದ ; ಆರಂಭಿಸಿದ. (ನಾ). ೨. ಹಿಂದೆ ಮಾಡಿದ ಪಾಪದ ಫಲ ; ಕರ್ಮ ; ವಿಧಿ : ಪ್ರಾರಬ್ಧ ಪ್ರಯತ್ನಗಳ ತಾರತಮ್ಯವನಿಲ್ಲಿ ಹೇಳಿಹೆ ಕೇಳರಯ್ಯಾ ಪ್ರಯತ್ನದ ಹೆಚ್ಚು ಕುಂದಿನಂತೆ ಇಂದಾಗಲಿ ಮುಂದಾಗಲಿ ಪ್ರಾರಬ್ಧವು ಫಲಪದವನೀವುದು (ಕನ್ನವ.ಕ. ೪೩-೦೦೬) ; ಊರು ಬಿಟ್ಟು ಬೇಜೂರಿಗೆ ಹೋದರೆ ಪ್ರಾರಬ್ಧವು ಬೇಜಾರದೀತೆ (ಪುರಂದ. ೦-೦೩೭-೦) ; ತನ್ನ ಪಿತೃಗಳು ನರಕದಲ್ಲಿರುವುದನ್ನು ತಿಳಿದು ಉದ್ದಾಲಕನು ಪ್ರಾರಬ್ಧವನ್ನು ಬರೆದಂತೆ ವಿಧಿಯನ್ನೇ ಕೇಳುವೆನೆಂದು ಬ್ರಹ್ಮನ ಬಳಿಗೆ ಹೋದನು (ಕಥಾಕ. ೨೬೩). ೩. (ಆಲಂ) (ಪಾಪದಂತೆ) ಹಿಂಬಾಲಿಸುವ ವ್ಯಕ್ತಿ : ಎಲ್ಲಿಲ್ಲದ ಪ್ರಾರಬ್ಧಗಳು ಎಂದುಕೊಂಡು ಕೊಂಚ ಬೇಗ ಪಾಠ ಮುಗಿಸಿ ಮನೆಗೆ ಹೊರಟು ನಿಂತರು (ಕಾವೇರಿ. ೦೦). [ಸಂ.]

**ಪ್ರಾರಬ್ಧಕರ್ಮ** (ನಾ). ಹಿಂದೆ ಮಾಡಿದ ಕರ್ಮ : ಪಂಡಿತನಾಗಲಿ ಮೂರ್ಖನಾಗಲಿ ಸಂಚಿತಕರ್ಮ ಉಂಡಲ್ಲದೆ ಬಿಡದು ಪ್ರಾರಬ್ಧಕರ್ಮ ಭೋಗಿಸಿದಲ್ಲದೆ ಹೋಗದು (ಏಕತ. ೬೭೩) ; ಪ್ರಾರಬ್ಧಕರ್ಮವದುಂಡು ತೀರುವುದು (ಗಗಚಾ. ೨೨-೬೦). [ಸಂ. ಪ್ರಾರಬ್ಧಕರ್ಮನ್]

**ಪ್ರಾರ್ಥನ** (ನಾ). ಬೇಡಿಕೊಳ್ಳುವುದು ; ಮೊರೆಯಿಡುವುದು : 'ಪ್ರಾರ್ಥನಂಗೆಯ್' ಪರಾ. [ಸಂ.]

**ಪ್ರಾರ್ಥನಂಗೆಯ್** (ಕ್ರಿ). ಬೇಡು ; ಮೊರೆಯಿಡು : ಅನಘಂ ತ್ರೈಲೋಕ್ಯಚೂಡಾಮಣಿ ವರಮುಹಿಮಂ ಚಿತ್ರವೃತ್ತಿಸ್ಥಿರಾಢ್ಯಂ ಘನವೇದಾಭೇದ್ಯಚೋದ್ಯಪ್ರಭುವಿಭು ಶಿವನಂ ಪ್ರಾರ್ಥನಂಗೆಯ್ಯೆ (ಚಂಶಿಕೈ. ೨-೮೬). [ಪ್ರಾರ್ಥನ + ಕೆಯ್[1]]

**ಪ್ರಾರ್ಥನಾಪತ್ರ** (ನಾ). ಬೇಡಿಕೆಯ ಪತ್ರ ; ಮನವಿ : ಪಂಥಾಭಿಮಾನಿಗಳ ಪ್ರಾರ್ಥನಾಪತ್ರವನ್ನು ಚಕ್ರವರ್ತಿಗೆ ನೇರವಾಗಿ ತಲುಪಿಸುವಂತೆ ನೆಕ್ಕಿದೋವ್ ಅವನನ್ನು ಕೇಳಿಕೊಂಡಿದ್ದನು (ಪುನರು. ೬೬೬). [ಸಂ.]

**ಪ್ರಾರ್ಥನೆ** (ನಾ). ೧. ಬೇಡುವುದು ; ಕೋರಿಕೆ : "ಅಧ್ಯೇಷಣಾ . . . ಪ್ರಾರ್ಥನಾ, ಅರ್ಥನಾ — ಈ ೬ ಬೇಡುಹ" (ಕರ್ನಾಟು. ೫೬-೨೦೩) ; ಸಿಂಹವು ಇಲ್ಲಿಯ ಪ್ರಾರ್ಥನೆಯನ್ನು ಕೇಳಿ . . . ಪಂಜರದೊಳಗಿಂದ ಬಿಟ್ಟುಬಿಟ್ಟಿತು (ಮುಂಬರು. ೪-೬೬). ೨. ಆಸೆ ; ಬಯಕೆ ; ಇಚ್ಛೆ. ೩. ದೇವರಲ್ಲಿ ಬೇಡಿಕೊಳ್ಳುವುದು ; ಭಗವಂತನಲ್ಲಿ ಮೊರೆಯಿಡುವುದು : ನಾನಾಭಾಷೆಗಳಲ್ಲಿ ಮನುಷ್ಯರು ಅವನ (ದೇವರ) ಪ್ರಾರ್ಥನೆ ಮಾಡುತ್ತಾರೆ (ಮುಂಬರು. ೪-೦೬೦). ೪. ದೇವರನ್ನು ಕುರಿತ ಸ್ತುತಿಪರವಾದ ಹಾಡು ; ಸ್ತೋತ್ರ : "ಅಲಿಗಳಿಂದ ನಮ್ಮನ್ನು ರಕ್ಷಿಸಿ" ಎಂಬ ಒಂದು ಪ್ರಾರ್ಥನೆ ವೇದದಲ್ಲಿ ಇದೆಯಂತೆ (ರೇಶಕ್ಕ. ೪೬) ; ಸಭೆಯು ವಿನಾಯಕನ ಪ್ರಾರ್ಥನೆಯಿಂದ ಆರಂಭವಾಯಿತು (ಕಶಿ). [ಸಂ. ಪ್ರಾರ್ಥನಾ]

**ಪ್ರಾರ್ಥಿತ** (ಗು). ೧. ಬೇಡಿದ ; ಯಾಚಿಸಿದ. ೨. ಇಚ್ಛಿಸಿದ ; ಬಯಸಿದ : ಪ್ರಾರ್ಥಿತ ತ್ರಿವಿಧೈಕಭಕ್ತಿ ಸುಖಾರ್ಥಿಗಳನಾ ತ್ರಿವಿಧಭಕ್ತಿ ಸವರ್ಧಸುಖತರಶರಧಿಯಲಿ ನೆಚಿಯಿದ್ದಿ ನೆಚಿಯಿದ್ದಿ (ಏಕಪ್ರ. ೬-೨೬). (ನಾ). ೩. ಬೇಡಿದುದು : ಇದೆ ಸಾರಂ ಸ್ವರ್ಗಲೋಕಕ್ಕಿದೆ ಸುರಸಮಿತಿ ಪ್ರಾರ್ಥಿತಂ (ಶಾಂತಿಪು. ೬-೨೪). [ಸಂ.]

**ಪ್ರಾರ್ಥಿಸು** (ಕ್ರಿ). ಬೇಡು ; ಕೇಳಿಕೊಳ್ಳು ; ಯಾಚಿಸು : ಅಸುರಾಂತಕನುಂ ತಾನುಮೊಂತಾನುಂ ಪ್ರಾರ್ಥಿಸಿದೊಡೊಡಂಬಟ್ಟಜಾತಶತ್ರುಗೆ ಪೊಡೆವಟ್ಟು (ಚಂಶಕಾ. ೦೨-೦೩೪ ವ) ; ಈ ಕೋಮಳೆಯಂ ಪ್ರಾರ್ಥಿಸಿದೊಡೆ ನಿಷ್ಫಲಮಾಗದು (ಕಾದಂಪೂ. ೬೬೩) ; ಸುರಕ್ಷಿತವಾಗಿ ತಲುಪಲಿ ಎಂದು ದೇವರಿಗೆ ಪ್ರಾರ್ಥಿಸಿದರೆಂದು ಕಾಣುತ್ತದೆ (ಕಂಗಾಶ್ಯ. ೩೦). [ಪ್ರಾರ್ಥನ + — ಇಸು]

**ಪ್ರಾಲಂಬ** (ಗು). ೧. ನೇತಾಡುವ ; ಜೋಲಾಡುವ : ಪ್ರಾಲಂಬರತ್ನಾಭ್ರಗುಚ್ಛಸಂದೋಹದಿಂ . . . ಎಸೆದು ತೋರ್ಪಳಂ . . . ಕಂಡ ಸುರ್ವೀಶ್ವರಂ (ಕಾದಂಉ. ೨೬೧ ಕಳ). (ನಾ). ೨. ಕಂಠದಿಂದ ಎದೆಯಂವರೆಗೆ ಇಳಿಬಿದ್ದಿರುವ ಉದ್ದವಾದ ಹಾರ : "ಪ್ರಾಲಂಬಂ . . . ಕತ್ತಿನಿಂದ ಎದೆಯ ಮೇಲೆ ನೆಟ್ಟಗೆ ಜೋಲಾಡುವಂತೆ ಹಾಕಿಕೊಂಡ ಹುವ್ವಿನ ಹಾರ ; ಪುಷ್ಪಮಾಲಿಕೆ" (ನಿಘಂಟಿ. ೨೦೦). [ಸಂ.]

**ಪ್ರಾಲಂಬಕ** (ನಾ). = ಪ್ರಾಲಂಬ ೨ : "ಕೊರಲೊಳಿಕ್ಕಿದ ಹೂವಿನ ಮಾಲೆ ಪ್ರಾಲಂಬಕಮೆಂಬುದು" (ಕರ್ನಾಟು. ೯೦-೪೦೦). [ಸಂ.]

**ಪ್ರಾಲಂಬಿಕೆ** (ನಾ). ಚಿನ್ನದ ಸರ ; ಸುವರ್ಣಹಾರ : "ಪ್ರಾಲಂಬಿಕಾ

. . .ಭಂಗಾರದಿಂದಲೆ ರಚಿಸಲ್ಪಟ್ಟ ಕಂಠಹಾರ, ಕಂಠಿ:ಸರ, ಚಂದ್ರಹಾರ, ಗೋಧಿಸರ ಮುಂತಾದದ್ದು" (ಸಿದ್ಧಾಂತಿ. ೦೯೯). [ಸಂ. ಪ್ರಾಲಂಬಿಕಾ].

**ಪ್ರಾಲೇಯ, ಪ್ರಾಳೇಯ** (ನಾ). ೧. ಹಿಮ ; ಮಂಜು : "ಪ್ರಾಲೇಯ ಶಿಶಿರಂ ತುಷಾರಂ ನೀಹಾರ . . . ಹಿಮಮೆನಿಕ್ಕುಂ" (ಕುಂಗಣಾ. ೦೩೦-೦) ; ನಿಯತಪ್ರಾಲೇಯದೀಪ್ತಿದ್ಯುಮಣಿಭಗಣದೀಪೋಜ್ವಲಾಕೃತಿವಾತ್ಸೋದಯಮಪ್ಪಾಕಾಶಮಂಬಾಗಸವಳಕನನಂತೈಕಸಂಶುದ್ಧಸಿದ್ಧಾಲಯದೊಳ್ ಸಾಮರ್ಥ್ಯದಿಂ ಮುಟ್ಟದೆ ನತಭುವನಸರ್ನಿದ್ಧರೇಜಿರ್ದ ಪೀಠತ್ರಯಮಂಬಂತಿರ್ಪುದು (ಅರಣ್ಯ. ೦-೩೩) ; ಪ್ರಾಲೇಯಂ ಬಯಲಾಗೆ ದೈತ್ಯಮರಿವ್ಯಥನು ಕುಲಶೈಲಗಳೊಳಿಡಲು (ಶ್ರೀಕುಪು. ೬-೩೨). ೨. ಪಚ್ಚಕರ್ಪೂರ: "ಪ್ರಾಲೇಯಮೆನಲು ಘನಸಾರಮೆನೆ ಪಚ್ಚ" (ಕುಂಗಣಾ. ೯೯-೨೨). ಪ್ರಾಳೇಯ : ೧. "ಪ್ರಾಳೇಯಂ . . . ನೀಹಾರಃ— ಈ ೮ ಮಂಜು" (ಶಬ್ದಮ. ೦೦೬-೨೩). [ಸಂ.]

**ಪ್ರಾಲೇಯಕರ** (ನಾ). ೧. ತಂಪಾದ ಕಿರಣಗಳುಳ್ಳವನು : ಚಂದ್ರ ; ಶೀತಕರ : ಎರಳೆ ಮೊಲ ಮತ್ತಾಲವೆಂದು ಪ್ರಾಲೇಯಕರನುರದೊಳೊಪ್ಪುವ ಕಳಂಕಕ್ಕೆ ಪೆಸರಿಡುವರು (ರಾಜಶೇ. ೬-೦೯) ; ಪೂರ್ಣಪ್ರಾಲೇಯಕರಬಿಂಬಸಮವಕ್ತ್ರಮುಡಲನೀಲಾಲಕಂ (ಶಬರಶಂ. ೦-೬೪). ೨. ಕರ್ಪೂರ. [ಸಂ.]

**ಪ್ರಾಲೇಯಾಂಶು** (ನಾ). ೧. ಚಂದ್ರ : ಪ್ರಾಲೇಯಾಂಶುವಿಭೂಷಿತಂ (ಶಾಲಂಪು. ೨೯೩) ; ಕಾಲಪ್ರಾಲೇಭವಂಚಾನನ . . . ಚಿಂತಾರಹಿತ ಚಿದಖಿತಾನಂದ ನಿರ್ದ್ವಂದ್ವ ಪೂರ್ಣಪ್ರಾಲೇಯಾಂಶುಪ್ರಭಾಪಸ್ಫುರಿತನುತಯಶೋಭಾಸಿ ಮಾದಾರ್ಯವರ್ಯಾ (ಸ್ವತಂ. ೬೨-೨೮). ೨. ಕರ್ಪೂರ. [ಸಂ.]

**ಪ್ರಾಲೇಯಾದ್ರಿ** (ನಾ). ಹಿಮದಿಂದ ಕೂಡಿರುವ ಪರ್ವತ; ಹಿಮಾಚಲ: ಪ್ರಾಲೇಯಾದ್ರಿನವಪ್ರಸೂನಭರದುರಂ ಗಂಗಾಸರಿಲ್ಲೋಲ . . . ಮಾರುತಂ (ಶಾಪ್ತಾ.ಕ. ೪೯೬). [ಸಂ.]

**ಪ್ರಾವರಣ** (ನಾ). ಹೊದೆಯುವ ವಸ್ತ್ರ ; ಉತ್ತರೀಯ : "ಪ್ರಾವರಣಂ . . . ಉತ್ತರೀಯಂ — ಈ ೪ ಮೇಲುದು" (ಶಬ್ದಮ. ೯೦-೩೯೨) ; ಕ್ಷೌಮದುಕೂಲಾದಿ ದಿವ್ಯವಸನವಿವಿಧಪ್ರಾವರಣವಿಶೇಷಂಗಳುಂ (ಅರಪು. ೦೩-೩ ಪ) ; ಗಾಂಡೀವಿ ಮುಕ್ತಕಳಂಬಕಂಡಪ್ರಾವರಣದಲಿ ಮುಸುಕಿದನು ಗುರುನಂದನನ ರಥವ (ಕುಪ್ಪಾಶ. ೦೯-೦೬). [ಸಂ.]

**ಪ್ರಾವರಣಾಂಶುಕ** (ನಾ). = ಪ್ರಾವರಣ : ಬೈತಿಟ್ಟು ಕಾಟಿಟ್ಟನೋ ನೀಳಪ್ರಾವರಣಾಂಶುಕಾಂತರದೊಳಂಭೋಜೋದ್ಭವಂ ನನ್ನಿಯಂಬಾಳಾವಕ್ಕೆಡೆಯಾಗಿ ಮೂಜಗಮದೇನೊಪ್ಪಿತ್ತೊ ಪೆರ್ಮರ್ಬಿನಿಂ (ಅಕಂ. ೬-೦೨). [ಸಂ.]

**ಪ್ರಾವಾರ** (ನಾ). = ಪ್ರಾವರಣ : "ಪ್ರಾವಾರಃ . . . ಉತ್ತರೀಯಂ — ೫ ಉತ್ತರೀಯದ ಹೆಸರು. ಮೈ ಮೇಲೆ ಹೊದ್ದಿರುವ ವಸ್ತ್ರ" (ಸಿದ್ಧಾಂತಿ. ೨೦೯). [ಸಂ.]

**ಪ್ರಾವಿಡೆಂಟ್‌ಫಂಡು** (ನಾ). ಭವಿಷ್ಯಕ್ಷೇಮನಿಧಿ ; ಭವಿಷ್ಯನಿಧಿ : ವಿಮೆ ಕಂಪನಿಗಳೂ ಪ್ರಾವಿಡೆಂಟ್‌ಫಂಡು ಏರ್ಪಾಡೂ ಹೀಗೆಯೇ ಸರಕಾರಿ ಅಥವಾ ಸಹಕಾರಿ ಆಡಳಿತದಲ್ಲಿರಬಹುದು (ಅಶಾಸ್ತ್ರ. ೦೯೬). [← ಇಂ. Provident fund]

**ಪ್ರಾವಿರ್ಭೂತ** (ನಾ). ಕಾಣಿಸಿಕೊಂಡವನು ; ಆವಿರ್ಭೂತನಾದವನು: ದ್ವಾವಿಂಶತಿಪಾರಾವಾರಾವಧಿಗಟಿದುಯ್ದು ನಾರಣಾಚ್ಯುತಕಲ್ಪಪ್ರಾವಿರ್ಭೂತರನೆಂದಂದಾವಡೆಯುಂ ಜವನ ಧಾಟಿ ಮುಟ್ಟದುದುಂಟೇ (ಶುಭ್ರಪು. ೦೩-೦೦೬). [ಸಂ.]

**ಪ್ರಾವೀಣ್ಯ** (ನಾ). ಜಾಣ್ಮೆ ; ಪ್ರವೀಣತೆ : ನೃಪಸೇವನಾಪ್ರಹಸನಪ್ರಾವೀಣ್ಯಮುಂ ಬುದ್ಧಿವರ್ಧನಮುಂ ಮಾಸರಮಕ್ಕುಮೈಂದವದಶೋಕಾರೋಹಗೇಹಂಗಳೊಳ್ (ಶಾಕಶ. ೯-೨೩) ; ಆಯಾ ವಿಷಯದಲ್ಲಿ ಪ್ರಾವೀಣ್ಯ ಪಡೆದಿರುವ ಉಪಾಧ್ಯಾಯರು ಮಾರ್ಗದರ್ಶನ ಮಾಡಲು ಕಾದಿರುತ್ತಾರೆ (ಶಿಕ್ಷಣ. ೬೯೩). [ಸಂ.]

**ಪ್ರಾವೀಣ್ಯತೆ** (ನಾ). = ಪ್ರಾವೀಣ್ಯ : ಮಧುವಿದ್ಯಾಸಂಪನ್ನರೂ ಲಲಿತಕಲೆಗಳಲ್ಲಿ ಪ್ರಾವೀಣ್ಯತೆ ಪಡೆದವರೂ ಎಂದು ಕೇಳಿರುವ ನಮಗೆ ನಿಮ್ಮಲ್ಲಿ ಒಂದು ಬೇಡಿಕೆಯಿದೆ (ಹೇಮಂತ. ೪೪೪). [ಪ್ರಾವೀಣ್ಯ + –ತೆ]

**ಪ್ರಾವೃಟ** (ನಾ). ಒಂದು ಬಗೆಯ ಸಸ್ಯ : "ಪ್ರಾವೃ(ಷ)ಟಃ—ಕಡವ" (ಓಷಧಿ. ೯೬). [ಸಂ.]

**ಪ್ರಾವೃಟ್ಕಾಲ** (ನಾ). ಮಳೆಗಾಲ; ಕಾರ್ಗಾಲ : ಪ್ರಾವೃಟ್ಕಾಲದೊಳಡಸಿ ಮಹಾವರ್ತದ ಮಟಿಗಳೋಘಮೋಘಂ ಕೊಳೆ (ಆಪು. ೦೨-೨). [ಸಂ.]

**ಪ್ರಾವೃತ** (ಗು). ೧. ಬಳಸಿದ ; ಸುತ್ತುವರಿದ : ಎನಗೆ ವಿದ್ಯಾಕಾಂಕ್ಷೆಯತ್ತೊಂದಿದ ಜ್ಞಾನಪ್ರಾವೃತಮಾಯೆಯಿಂದೆ ತಪಮಂ ಕೈಕೊಳ್ಳುದೆತ್ತ (ಸುಕಸೂ. ೩-೯೨) ; ಖಟ್ಟ್ವಾನಿಕಾಯಪ್ರಾವೃತೋದ್ಯನ್ಮಣಿಮಯಶಿಬಿಕಾರೂಢ ಮಾದೇವಿಯಲ್ಲಿ (ಚಂದ್ರಪು.೬-೯೬). (ನಾ). ೨. ಹೊದೆಯುವ ಬಟ್ಟೆ.–ವಸ್ತ್ರ : "ನಿವೀತಂ, ಪ್ರಾವೃತಂ–ಹೊದಿಯುವ ಬಟ್ಟೆ, ಅಂಗವಸ್ತ್ರ" (ಸಿದ್ಧಾಂತಿ. ೨೦೩). ೩. [ನಾಟ್ಯ] ದೇಶೀಯ ಆಕಾಶಚಾರಿಗಳಲ್ಲಿ ಒಂದು ಬಗೆ ; ❡ "ಪಾದವನ್ನು ಮುಂದಂಮರಿಸಿ [ಸಂಕೊಂಚಿಸಿ] ಮನೋಹರವಾಗಿ ಮೇಲಕ್ಕೆ ಎತ್ತುವುದು" (ಶಾಸ್ತ್ರಂ. ೩೩೩ ಗದ್ಯಾನುವಾದ) ; ಮಿಗೆ ವೇಷ್ಟನಮುದ್ವೇಷ್ಟಂ ನೆಗಳ್ದೆ ಸವ್ಯತೈಕ್ಷ್ಮೆಪಮೊಸೆವ ವೃಷ್ಟೋತ್ಕ್ಷೇಪಂ ಬಗೆವಡೆದ ಸೂಚಿವಿದ್ಧಂ ನೆಗೆವೊಗದೊಳೆ ಪ್ರಾವೃತಾಖ್ಯಮು ಲ್ಲೋಲಮುಮಿಂ (ಶಾಸ್ತ್ರಂ. ೬-೦೬). [ಸಂ.]

**ಪ್ರಾವೃಷ** (ನಾ). ೧. ಮಳೆಗಾಲ ; ಕಾರ್ಗಾಲ : ಅನುರಾಗಾಂತಂ ಮಸಂತಪ್ರಿಯನ ವಿರಹದೊಳ್ ಗ್ರೀಷ್ಮತಾಪಜ್ವರಂ ಮೇದಿನಿಗಾದಂ ಪುಟ್ಟಿ ಮೇಲೇಂ ತಳೆದುದೊ ಮಟಿಯಂ ಪ್ರಾವೃಷಂ (ಅರಣ್ಯ. ೩-೦೦೨). ೨. ಒಂದು ಬಗೆಯ ಮರ; ಅರಳಿ : "ಪ್ರಾವೃಷಃ–ಅರಳಿ" (ಓಷಧಿ. ೯೬). [ಸಂ.]

**ಪ್ರಾವೃಷೇಣ್ಯ** (ಗು). ಮಳೆಗಾಲಕ್ಕೆ ಸಂಬಂಧಿಸಿದ ; ಮಳೆಗಾಲದ : ಚಾಮೀಕರಕಳಶಮೆ ಕುರುಭೂಮಿಗೆ ತಾಂ ನೇಲೆ ಮಾಡಮಂ ಬಳಸಿ ನಭಶ್ಯಾಮಂ ನಂದನವನಮಭಿರಾಮು ಘನಪ್ರಾವೃಷೇಣ್ಯಪಟಲಮಿನಿಟಿಕಂ (ಶಾಂತಿಪು. ೯-೦೯೦.) [ಸಂ.]

**ಪ್ರಾವೃಷ್ಯ** (ನಾ). ೧. ಒಂದು ಬಗೆಯ ಮರ ; ಕೊಡಸಿಗೆ. ೨. ಒಂದು ಬಗೆಯ ಮರ ; ಕದಂಬವೃಕ್ಷ : "ಪ್ರಾವೃಷ್ಯಃ – ವಿಟಂಕ, ಕಡವ, ಕೊಡಸಿಗ" (ಓಷಧಿ. ೯೬). ೩. ಒಂದು ಬಗೆಯ ರತ್ನ ; ವೈಡೂರ್ಯ : "ಪ್ರಾವೃಷ್ಯಂ–ವೈಢೂರ್ಯ" (ಓಷಧಿ. ೯೬). [ಸಂ.]

**ಪ್ರಾಶನ** (ನಾ). ೧. ರುಚಿ ನೋಡುವುದು ; ಸೇವಿಸುವುದು : ಬಿಸಿದು ನೆತ್ತರ ಕಾಸು ಖಂಡಗಳ ಕೆಂಯ್ಯು ಶೋಧಿಸುತಲಾ ಪ್ರಿಥಾಸನ ಪ್ರಾಶನಗಳ ಮಾಡಿಸು ಪಾರ್ವತಿಗೆ (ಶಂಕ್ಷಪು. ೩-೩-೯) ; ಘಾಟುನೀರನ್ನು ತೀರ್ಥದಂತೆ ಪ್ರಾಶನ ಮಾಡಿದೆ (ಸಂಬಿಕು. ೩೯). ೨. ತಿನ್ನುವಂತೆ ಮಾಡುವುದು; ತಿನ್ನಿಸುವುದು: 'ಅನ್ನಪ್ರಾಶನ' ಪರಾ. ೩. ಆಹಾರ. [ಸಂ.]

**ಪ್ರಾಶಸ್ತ್ಯ** (ನಾ). ೧. ಸರ್ವೋತ್ಕೃಷ್ಟವಾಗಿರುವಿಕೆ ; ಶ್ರೇಷ್ಠವಾಗಿರುವಿಕೆ : ಪ್ರಾಧಾನ್ಯ : ಅಂತೇ ಶ್ಲಕ್ಷ್ಣಕಕ್ಷೇತ್ರಕ್ಕೆ ಇಲ್ಲಿ ಪ್ರಾಶಸ್ತ್ಯವಿದೆ (ಸವಜೀ. ೦೨ ಶೀಕಳ) ; ಸೂರ್ಯನು ಕೃತ್ತಿಕಾನಕ್ಷತ್ರದಲ್ಲಿದ್ದಾಗ ವಸಂತಕಾಲ ಆಗ ಆರಂಭವಾಗುತ್ತಿದ್ದುದರಿಂದ ಕೃತ್ತಿಕಾನಕ್ಷತ್ರಕ್ಕೆ ಅಷ್ಟೊಂದು ಪ್ರಾಶಸ್ತ್ಯ ಬಂದಿತ್ತು (ನಕ್ಷತ್ರ. ೯). ೨. ಕೀರ್ತಿ ; ಪ್ರಸಿದ್ಧಿ. [ಸಂ.]

**ಪ್ರಾಶಿತ** (ಗು). ೧. ತಿಂದ ; ಸೇವಿಸಿದ. (ನಾ). ೨. ತಿನ್ನುವಿಕೆ. ೩. ಪಿತೃಗಳಿಗೆ ನೀಡುವ ತರ್ಪಣ, ಪಿಂಡ ಮುಂತಾದುವು. [ಸಂ.]

**ಪ್ರಾಶ್ನಿಕ** (ಗು). ೧. ಪ್ರಶ್ನೆಗಳಿಂದ ಕೂಡಿರುವ. (ನಾ). ೨. ಪ್ರಶ್ನಿಸುವವನು ; ಪರೀಕ್ಷಿಸುವವನು : ಸಭಾಪತಿಯಾಗಿರ್ದ ಮಹಾಬಳನುಮಂ ಪ್ರಾಶ್ನಿಕರಾಗಿರ್ದ ವಿದ್ವಜ್ಜನಮುಮಂ ಸಭಾಜನಮುಮಂ ಶಿಳಿಪಿ (ಅಜಿತ. ೨-೦೦ ಶ) ; ಆತನುಂ ಪ್ರಾಶ್ನಿಕರಾಗಿರ್ದ ವಿಶ್ವಾವಸು ತುಂಬುರ ನಾರದರ್ಕಳನ್ನರಪ್ಪ ಗಂಧರ್ವನಿವುಣಾಚಾರ್ಯರೆಲ್ಲವೊಂದೆ ಸರದೊಳ್ ಪೊಗಟ್ (ಶಾಂಪು. ೨-೩೨ ಶ). ೩. ನ್ಯಾಯವನ್ನು ನಿರ್ಣಯಿಸುವವನು ; ತೀರ್ಪುಗಾರ. [ಸಂ.]

**ಪ್ರಾಶ್ಯ** (ಗು). ೧. ತಿನ್ನುವ ; ಸೇವಿಸುವ. (ನಾ). ೨. ಆಹಾರ. [ಸಂ.]

**ಪ್ರಾಸ** (ನಾ). ೧. ಎಸೆಯುವುದು ; ಎಸೆತ. ೨. ಒಂದು ಬಗೆಯ ಆಯುಧ ; ಕೊಂತ : "ಪ್ರಾಸಃ, ಕುಂತಃ—ಈ ೨ ಕುಂತಂ" (ಹಲಾಯು. ೬೮-೩೦) ; ಉದ್ವೀಚಿಮರುಮರೀಚಿನಿಚಯಚಂಚಲೋದ್ದಾಮಬಲಬಹುಲನಿಷ್ಕವಚಪ್ರಾಸಪಾಣಿ . . . ಅಸಿತಭುಜಗಶಿಶುತರಳತರವಾರಿಖಡ್ಗಖೇಟಕವ್ಯಗ್ರಕರದ್ವಯೋದ್ದಾಮಪದಾತಿಬಹಳಮಿದು ಲಾಟಬಲಂ (ಅಜಿತ. ೦೩-೯೩ ಶ) : ಪ್ರಾಸ ಪಟ್ಟಿಸ ಪರಿಘ ಬಾಣ ಶರಾಸನಾದಿ ಸಮಸಶಸ್ತ್ರವಿಲಾಸವಿಭವದಲೇಚಾದನು ರಣವಾದ್ಯರಭಸದಲಿ (ಕುಲಶಾ. ೬-೨೯-೨೨). ೩. [ಛಂದ] ಪದ್ಯದ ನಿಯತಸ್ಥಳಗಳಲ್ಲಿ ಬರುವ ನಿಯತಾಕ್ಷರ ; ☞ ಪದ್ಯದ ಪ್ರತಿ ಪಾದದ ಆದಿಯಲ್ಲಿ ಮೊದಲ ಎರಡು ಸ್ವರಗಳ ನಡುವೆ ಒಂದೇ ವಿಧವಾದ ವ್ಯಂಜನವಿರುವುದು. ಇದು ಹರಿ, ಕರಿ, ವೃಷಭ, ತುರಗ, ಶರಭ ಮತ್ತು ಅಜ ಎಂದು ಆರು ವಿಧ : ನುತಶಬ್ದಾಲಂಕಾರದೊಳತಿಶಯಮಿಾ ಕನ್ನಡಕ್ಕೆ ಸತತಂ ಪ್ರಾಸಂ (ಕಾಶಾ. ೨-೩೦) : ಪ್ರಾಸವಿಲ್ಲದ ಪದವ ಶಾಸು ಹಾಡಿದರೇನು (ಸರ್ವಜ್ಞ. ೦೨೦೯) ; ಪ್ರಾಸದ ದೃಷ್ಟಿಯಿಂದ ಕನ್ನಡಛಂದಕ್ಕೆ ವೈಶಿಷ್ಟ್ಯ ಉಂಟೇ ಉಂಟು (ಛಂದೋವಿ. ೩೦). 'ಅನುಪ್ರಾಸ' ನೋಡಿ. [ಸಂ.]

**ಪ್ರಾಸಂಗ** (ನಾ). ಎರಡು ಎತ್ತುಗಳನ್ನು ಆರಿಗೆ ಹೂಡುವ ನೊಗ : "ಪ್ರಾಸಂಗಃ . . . ಕಲಿಯಾರ ನೊಗ" (ಸಿದ್ಧಾಂತಿ. ೨೩೪). [ಸಂ.]

**ಪ್ರಾಸಂಗಿಕ** (ಗು). ೧. ಸನ್ನಿವೇಶಕ್ಕೆ ಸಂಬಂಧಿಸಿದ. (ನಾ). ೨. ಸನ್ನಿವೇಶಕ್ಕೆ ಸಂಬಂಧಿಸಿದುದು ; ಪ್ರಸಂಗಕ್ಕೆ ಹೊಂದಿರುವಂತಹುದು : ಜೀವನದ ಅತ್ಯಂತ ಮೂಲಭೂತವಾದ . . . ವಿಷಯಗಳನ್ನು ತೀರ ಪ್ರಾಸಂಗಿಕವೆನ್ನಬಹುದಾದ ಮಾತುಕತೆಗಳಲ್ಲಿ, ಘಟನೆಗಳಲ್ಲಿ ನಿರೂಪಿಸಲಾಗಿದೆ (ಕೂಕ್ಕೆ. ೨೮೬). ೩. [ಕಾವ್ಯಮಿಾ] ನಾಟಕದ ಕಥೆಯಲ್ಲಿರುವ ಎರಡು ವಿಧಗಳಲ್ಲಿ ಒಂದು ; ಸಂದರ್ಭಕ್ಕೆ ಹೊಂದಿಕೊಂಡಂತೆ ಸೇರಿ ಬರುವ ಉಪಕಥೆ : ಪ್ರಾಸಂಗಿಕವೆಂದರೆ, ಮುಖ್ಯಕಥೆಗೆ ಅಂಗವಾಗಿ ಮಧ್ಯೆ ಬರತಕ್ಕ ಕಥೆ (ಕೃಶಿಪ. ೨೦೩).

**ಪ್ರಾಸಂಗಿಕವಾಗಿ** = (ಮಾತುಕತೆಯಾಗುತ್ತಿರುವ) ವಿಷಯಕ್ಕೆ ಸಂಬಂಧಿಸಿದಂತೆ ; ಸಾಂದರ್ಭಿಕವಾಗಿ : ಅರ್ಥವ್ಯಂಜಕತ್ವ ಪ್ರಾಸಂಗಿಕವಾಗಿ ಅಲ್ಲಿ ಬರುತ್ತದೆ (ಕೃಕ್ಯಾಲೋ. ೦೦೬) ; ಪಾಠದಲ್ಲಿ ಕಲಿಯುವ ಅಂಶಗಳನ್ನೇ ಅಲ್ಲದೆ ಕಲಿಯುವ ಉತ್ತಮಕ್ರಮವನ್ನೂ ಪ್ರಾಸಂಗಿಕವಾಗಿ ಮಕ್ಕಳಲ್ಲಿ ಬೆಳಸಬೇಕು (ಶಿಕ್ಷಣ. ೪೪೬). [ಸಂ.]

**ಪ್ರಾಸಂಗ್ಯ** (ನಾ). ನೊಗ ಕಟ್ಟಿ ಪಳಗಿಸಬೇಕಾದ ಎತ್ತು : "ಯುಗ್ಯಃ, ಪ್ರಾಸಂಗ್ಯಃ, ಶಾಕಟಃ— ಈ ೩ . . . ನೊಗವನ್ನು ಹೊರುವ ಎತ್ತು" (ಸಿದ್ಧಾಂತಿ. ೨೪೬). [ಸಂ.]

**ಪ್ರಾಸಕ** (ನಾ). ೧. ಈಟಿಯಂತೆ ಚೂಪಾದ ತುದಿಯುಳ್ಳ ಒಂದು ಬಗೆಯ ಸಾಧನ ; ☞ ಮಾಂಸವನ್ನು ಈ ಸಾಧನದಲ್ಲಿ ಚುಚ್ಚಿ ಬೆಂಕಿಯಲ್ಲಿ ಬೇಯಿಸುವ ಕ್ರಮ ಈಗಲೂ ಇದೆ. ೨. ಈಟಿ. ೩. (ಕೆಂಡದ ಮೇಲಿಟ್ಟು) ಬೇಯಿಸಿದುದು : ಪ್ರಾಸ[ಶಾಂಪು. ಸು]ಕವ ಮಾಡಿ ಬದನೆಯ ಕಾಯ್ಗಳಂ ಕಿವುಚಿ ಸಾಸುವೆಯುನಿಕ್ಕಿ ಸಮತಳಗೊಡುವುದೊಂದು ತೆಱ ಸೂಸಲುಂ ತಳಿದು ವೊಗ್ಗರಣೆಯುಂ ಮಾಡುವು[ದ]ದೊಂದು ತೆಱ (ಸೂಶಾ. ೪-೨೬). ೪. ಬೇಯಿಸಿದ ತಿನಿಸು : ಸಂಡಿಗೆ ಸಂಭಾರ ಗಡಲೆ ಪ್ರಾಸಕ ಕುಕ್ಕುಟಾಂಡವನವಲಕ್ಕಿಗಳನು ದುಂಡರಳ್ಗಡಲೆ ಭಕ್ಷ್ಯಗಳ ಬಡ್ಡಿಸಿಕೊಳುತುಂಡರು ನೆಱ ಸೊಕ್ಕುವನಕ (ಮೋಹತ. ೦೮-೯೬). [ಸಂ.]

**ಪ್ರಾಸಾಕ್ಷರ** (ನಾ). [ಛಂದ] ಪ್ರಾಸವಾಗಿ ಬರುವ ಅಕ್ಷರ : ಒಂದೇ ಪಾದದಲ್ಲಿಯಾಗಲಿ, ಅನೇಕ ಪಾದಗಳಲ್ಲಿಯಾಗಲಿ ; ಪಾದದ ಆದಿ ಮಧ್ಯಗಳಲ್ಲಿಯಾಗಲಿ, ಮಧ್ಯಾಂತಗಳಲ್ಲಿಯಾಗಲಿ, ಆದ್ಯಂತಗಳಲ್ಲಿಯಾಗಲೀ ; ಪ್ರಾಸಾಕ್ಷರವು ಒಂದೇ ಆಗಲಿ, ಅನೇಕವಾಗಲಿ-ಈ ರೀತಿ ಯಥೇಷ್ಟವಾಗಿರುವುದು (ಕೃಶಿಪ. ೯೬) : ಕನ್ನಡಜಾನಪದಕವಿವರನಾದ ಸರ್ವಜ್ಞನು ಪ್ರಾಸಾಕ್ಷರಕ್ಕೆ ಕೊಟ್ಟಿರುವ ಮಹತ್ವವನ್ನು ಈ ತ್ರಿಪದಿಯಲ್ಲಿ ಕಾಣಬಹುದು (ಸಂಶೋಧ. ೦೨೩). [ಸಂ.]

**ಪ್ರಾಸಾದ₁** (ನಾ). [ವೀಶೈ] ಪ್ರಸಾದ : ವಿನಯದಿಂ ಗುರುವಿಗೆ ಸಮರ್ಪಿಸಿ ಘನದ ಲಿಂಗ ಸಮರ್ಥಮಂ ಮತ್ತನಘಜಂಗಮಭಕ್ತಿಯುಂ ಪ್ರಾಸಾದಮಂ ಪಡೆದು (ಬಸಪು. ೩೯-೦೬). [ < ಸಂ. ಪ್ರಸಾದ ]

**ಪ್ರಾಸಾದ₂** (ನಾ). ೧ (ಕಲ್ಲು, ಇಟ್ಟಿಗೆ ಮೊದಲಾದುವುಗಳಿಂದ ಕಟ್ಟಿದ) ಮಹಡಿಯ ಮನೆ, ಕರುಮಾಡ, ಅರಮನೆ, ದೇವಾಲಯ ಮುಂತಾದವು : "ಇಟ್ಟಿಗೆ ಮೊದಲಾದವಱಂ ಮಾಡಿದರಮನೆ ದೇಗುಲಂಗಳಂ ಪ್ರಾಸಾದವೆಂಬುದು" (ಹಲಾಯು. ೪೯-೦೩೪) ; ಗೈರಿಕದಿ ಮುಕ್ತಾಫಲದಿ ಸಮೆದ ಕಲಶಂಗಳೊರಣೆವ ಪ್ರಾಸಾದ ಸೌಧ ಹರ್ಮ್ಯಂಗಳಿಂದೆಸೆದುದಾ ದ್ವಾರಾವತಿ (ಅಜಾಶ. ೨-೩). ೨. ಮೇಲಿನ ಅಂತಸ್ತು : ಉಪ್ಪರಿಗೆ ; ಮಹಡಿ : ನಿನಗೆ ಮುಕ್ತಿಪ್ರಾಸಾದಮನಡರಲಿವುವೆ ಸೋಪಾನಂಗಳ್ (ಆದಿಪು. ೩-೬೦) ; ಕನ್ಯಾಂತಃಪುರಪ್ರಾಸಾದಮನೇಱ (ಕಾದಂಪೂ. ೬೮೪). ೩. [ಜೈನ] ಚೈತ್ಯಾಗಾರ, ಬಸದಿ ಮುಂತಾದುವು; ☞ ಸ್ವರ್ಗದಲ್ಲಿ ವೈರಾಜ, ಪುಷ್ಪಕ, ಕೈಲಾಸ, ಮಣಿಕ, ತ್ರಿವಿಷ್ಟಪಗಳೆಂಬ ಐದು ಮಹಾಪ್ರಾಸಾದಗಳು ಮತ್ತು ಭೂಮಿಯ ಮೇಲೆ ಸ್ವಸ್ತಿಕ, ವರ್ಧಮಾನ, ನಂದ್ಯಾವರ್ತ, ಸರ್ವತೋಭದ್ರ, ವಲಭಿಚ್ಛಂದ ಎಂಬ ಐದು ಪ್ರಾಸಾದಗಳು ಇವೆಯೆಂದು ಜೈನರು ನಂಬುತ್ತಾರೆ : ಪ್ರಾಸಾದಾನ್ತರಮಾನ್ಯಚಿತ್ರಕನಕಪ್ರಜ್ವಲ್ಯದಿವ್ಯಕ್ಯದಾನ್ಸಾಸಿಪ್ವ್ಯರ ಪೂಜೆದನ್ದುಯ ಅವಸ್ವರ್ಗಾಗ್ರಗ್ರಪವಾನೇಜರಿದಾರ್ (ಎಕ. II. ೨೬-೨ ; ಕು. 700) ; ಪ್ರಾಸಾದಾಂತರದಿಂದಮುಯ್ದು ಜಿನಚೈತ್ಯಾಗಾರವೊಂದಿಂತೆ ವಿನ್ಯಾಸಂ ನಾಡೆ ಬೆಡಂಗುವೆತ್ತಿರೆ . . . ತದ್ಭೂಮಿ ಕಣ್ಗೊಪ್ಪುಗುಂ (ಶಂತ್ರಪು. ೦೩-೨೨). [ಸಂ.]

**ಪ್ರಾಸಾದಿ** (ನಾ). [ವೀಶೈ] ತಾನು ಅನುಭವಿಸುವ ಪ್ರತಿಯೊಂದು ಪದಾರ್ಥವನ್ನು ಮೊದಲು ಲಿಂಗಕ್ಕೆ ಅರ್ಪಿಸಿ, ಅರ್ಪಿತಪದಾರ್ಥವನ್ನು ಭಕ್ತಿಪೂರ್ವಕವಾಗಿ ಪ್ರಸಾದರೂಪದಲ್ಲಿ ಸ್ವೀಕಾರ ಮಾಡುವವನು ; ಷಟ್ಸ್ಥಲಗಳಲ್ಲಿ ಮೂರನೆಯ ಹಂತವಾದ ಪ್ರಸಾದಿಸ್ಥಲವನ್ನು ತಲುಪಿದವನು ; ಪ್ರಸಾದಿ : ಪ್ರಾಸಾದಿಗೆ ಪ್ರಸಾದಸ್ಥಲ (ಶೂನ್ಯಸಂ. ೪೩-೦೭೬) ; ಲಿಂಗನಿಷ್ಠೆ ಮೊದಲಾದ ಸ್ಥಳಗಳ ಪರಿಜ್ಞಾನದಿಂದ ಆ ಆಚರಣವುಳ್ಳ ಸಮಸ್ತಪಾಪಪರಿಹಾರ ಮಾಡಿಕೊಂಡ ಮಾಹೇಶ್ವರನು ಮನೋನ್ಯರ್ಮಲ್ಯಸಂಬಂಧದಿಂದ 'ಪ್ರಾಸಾದಿ' ಎನಿಸುವನು (ಶಾಶಪ್ರ. ೩೬೬). [<ಸಂ. ಪ್ರಸಾದಿನ್]

**ಪ್ರಾಸಾದಿಕ** (ಗು). ೧. ಅನುಗ್ರಹಿಸುವ ; ಪ್ರಸನ್ನವಾದ : ಜಗತ್ತಿನಲ್ಲಿ ಇಂದಿನವರೆಗೆ ಶ್ರೇಷ್ಠರಾದ ಕವಿಗಳು 'ಆವೇಶ', 'ಪ್ರಾಸಾದಿಕವಾಣಿ' ಮೊದಲಾದವುಗಳ ಗೊಡವೆಗೆ ಹೋಗದೆ . . . ಅನುಪಮಸೌಂದರ್ಯವನ್ನು ನಿರ್ಮಿಸಿರುವರು (ಗೊಹ್ಮಗು. ೩೩). ೨. ರಮ್ಯವಾದ; ಸುಂದರವಾದ. [ಸಂ.]

**ಪ್ರಾಸಾಭಾಸ** (ನಾ). ಪ್ರಾಸದಂತೆ ತೋರುವುದು ; ಪ್ರಾಸದ ಹಾಗಿರುವುದು : ಪ್ರಾಸಾನುಪ್ರಾಸಾಂತಪ್ರಾಸಂಗಳ್ಮೊದಲಾಗಿ ಅತಿಶಯಂಗಳ್ಪ್ರಾಸಾಭಾಸಂಗಳಟಿದ ಮಾರ್ಗಂ (ಕಷಾ. ೨-೯೩). [ಸಂ.]

**ಪ್ರಾಸಿಕ** (ನಾ). ಈಟಿಯನ್ನು ಹಿಡಿದಿರುವವನು : "ಪ್ರಾಸಿಕಃ, ಕೌಂತಿಕಃ – ಈ ೨ ಈಟಿಯೇ ಆಯುಧವಾಗಿ ಉಳ್ಳವನು, ಸಬಳಿಗನು" (ಸಿದ್ಧಾಂತಿ. ೨೩೭). [ಸಂ.]

**ಪ್ರಾಸು** (ನಾ). = ಪ್ರಾಸ ೩ : ಸನೇವು = ಪ್ರಾಸು (ಕಶುಕ. ೯. ೧೯ ಟೀಕು) ; ಪದ ತಪ್ಪಿದರೆ ಪ್ರಾಸು ತಪ್ಪೀತೆ ? (ಗಾದೆ). [<ಸಂ. ಪ್ರಾಸ]

**ಪ್ರಾಸುಕ** (ಗು). ೧. ಹುಳುಬೀಳದ; ಶುದ್ಧವಾದ : ಕಾಯಿಸಿ ಸೋಸಿದ ಸ್ವಚ್ಛನೀರು (ಪ್ರಾಸುಕ ಜಲ) (ಕೃಕಕ. ೬೩). (ನಾ). ೨. ಹುಳು ಬೀಳದುದು ; ಶುದ್ಧವಾದುದು : ಭಟಾರಾ ಪ್ರಾಸುಕಮಪ್ಪ ನೀರಂ ಪೊಟ್ಟದೊಳ್ ಬಂದುದಂ ಕುಡಿದು ನಿಮ್ಮ ಸೇದೆಯನಾಱಿಸಿಂ (ವಡ್ಡಾ. ೧೦೩-೩೦). [<ಪ್ರಾ. ಫಾಸುಅ, ಫಾಸುಗ]

**ಪ್ರಾಸುಕಾಹಾರ** (ನಾ). ಹುಳುಬೀಳದ ಆಹಾರ ; ಶುದ್ಧವಾದ ಆಹಾರ: ಜ್ಞಾನಸಂಯಮತಪೋನಿಮಿತ್ತಮಾಗಿ ಪರಕೃತಪ್ರಶಸ್ತಪ್ರಾಸುಕಾಹಾರಮಂ ರಾಗದ್ವೇಷಮಿಲ್ಲದುಂಬುದುಂ (ಕಸೊಪ್ಪ. ೨೯೩). [ಪ್ರಾಸುಕ + ಆಹಾರ]

**ಪ್ರಾಸ್ತಾವಿಕ** (ಗು). ೧. ಸಾಂದರ್ಭಿಕವಾದ; ಸಮಯಕ್ಕೆ ತಕ್ಕುದಾದ: ಅವನು ಉಚ್ಚಸ್ವರದಿಂದ ಮಿಕ್ಕ ಸಭಿಕರನ್ನು ಕುರಿತು ಪ್ರಾಸ್ತಾವಿಕ ಭಾಷಣ ಮಾಡಿದನು (ಅಂಶಿ. ೦೬೩). (ನಾ). ೨. ಸಮಯೋಚಿತವಾದುದು ; ಸಂದರ್ಭೋಚಿತವಾದುದು : ಈಗ ನಡೆಯುತ್ತಿರುವ ನಾಡ ಹಬ್ಬದ . . . ಸಮಾರಂಭದಲ್ಲಿ ಪ್ರಾಸ್ತಾವಿಕವಾದ ನಾಲ್ಕು ಮಾತುಗಳನ್ನು ಹೇಳಬೇಕೆಂದು ನನಗೆ ಕರೆ ಬಂದಾಗ ಮನಸ್ಸಿನಲ್ಲಿ ಮೊದಲು ಮೂಡಿದ ಭಾವಗಳೆಂದರೆ ಆಶ್ಚರ್ಯ ಮತ್ತು ಅಧೈರ್ಯ (ಕಮಾಲೋ. ೦೨೬.) [ಸಂ.]

**ಪ್ರಾಹ್ಣ** (ನಾ). ದಿನದ ಮೊದಲನೆಯ ಭಾಗ; ಬೆಳಗ್ಗೆ ; ಪ್ರಾತಃಕಾಲ. [ಸಂ.]

**ಪ್ರಾಲೇಯ** 'ಪ್ರಾಲೇಯ' ನೋ.

**ಪ್ರಾಲೇಯಾಚಲ, ಪ್ರಾಲೇಯಾಚಳ** (ನಾ). ಹಿಮದಿಂದ ಕೂಡಿದ ಬೆಟ್ಟ; ಹಿಮಗಿರಿ ; ಹಿಮಾಲಯ : ಪ್ರಸ್ಫುರತ್ಪ್ರಾಲೇಯಾಚಲವಿತಾನದ ಪ್ಪೊಲಿಳಾಧ್ಯಾನ್ನಾಥಂ (ಕಂಕಶಾ. ೦೯-೩೩). ಪ್ರಾಲೇಯಾಚಳ : ಪೊಗಪೆಟ್ಟು ಪ್ರಸನ್ನಕಶಿಪಯಪ್ರಯಾಣಂಗಳಿಂ ಪ್ರಾಲೇಯಾಚಳಮಧ್ಯಮಕೂಟಮನೆಯ್ದೆವರ್ಪುದುಂ (ಶಾಂತಿಪು. ೧೧–೭೬ ವ). [ಸಂ. ಪ್ರಾಲೇಯಾಚಲ]

**ಪ್ರಾಲೇಯಾಚಳ** 'ಪ್ರಾಲೇಯಾಚಲ' ನೋ.

**ಪ್ರಿತುವಿ** 'ಪೃಥುವಿ'ನೋ.

**ಪ್ರಿಥಿವಿಸಾಗರ** (ನಾ). ಒಬ್ಬಾತನ ಹೆಸರು : ಶ್ರೀಪ್ರಿಥಿವಿಸಾಗರನ್ ಪಟ್ಟಂಗಟ್ಟಿಸಿ (ಎಕ. IX. ೦೯-೦ ; ಕು. ೩೦೦). [P ಇದು 'ಪೃಥ್ವೀಸಾಗರ'ಎಂಬುದರ ಅಪಲಿಖಿತ]

**ಪ್ರಿಥುವಿ** 'ಪೃಥುವಿ' ನೋ.

**ಪ್ರಿನ್ಸಿಪಾಲ್** (ನಾ). ಉನ್ನತಶಿಕ್ಷಣಸಂಸ್ಥೆಯ ಮುಖ್ಯಸ್ಥ : ಪಾಠಶಾಲೆಗಳಲ್ಲೂ ವಿದ್ಯಾಶಿಕ್ಷಣಾದಿ . . . ಕೆಲಸಗಳನ್ನು ನೋಡಿಕೊಂಡಿರಲು ಪ್ರಿನ್ಸಿಪಾಲ್ ಎಂದೊಬ್ಬ ಅಧಿಕಾರಿಯನ್ನು ನಿಯಮಿಸಿದ್ದರು (ಶಂರು. ೩೩). [←ಇಂ. Principal]

**ಪ್ರಿಯ** (ಗು). ೧. ಅಕ್ಕರೆಯ ; ಪ್ರೀತಿಪಾತ್ರವಾದ ; ನಲ್ಮೆಯ. ೨. ಪದಾರ್ಥಗಳ ವಿಷಯದಲ್ಲಿ ಬೆಲೆ ಅಧಿಕವಾಗಿರುವ; ತುಟ್ಟಿಯ. (ನಾ). ೩. ಅಕ್ಕರೆ ; ಪ್ರೀತಿ; ವಾತ್ಸಲ್ಯ: ಪ್ರಿಯದಿಂದೆ ಮಹಾಕಾಳಾಹ್ವಯನೀಶಂ ನೆಲಸೆ ನಗರಿಯೊಂದಧಿಕಖ್ಯಾತಿಯಿನೆಸೆದು ತೋರ್ಪುದು (ಶಾಕಂಕ. ೨೧೦) ; ಕಿರಿದುಂ ಪ್ರಿಯದಿಂದಮೆ ಮುಂ ಪೆತ್ತವರಿರವಂ ಪೋಲ್ವುದು ಪುಟ್ಟಿದ ಶಿಶು (ಜಯಾ. ೩-೩೬). ೪. ಹಿತವಾದುದು ; ಇಷ್ಟವಾದುದು : ಪ್ರಿಯಮಾದುದು ಧರ್ಮಂ ವೃಥ್ವಿಯ ಸೂನುವಿನಿಂದ ಧರ್ಮಮಂತದು ತಾನಪ್ರಿಯಮಾಯ್ತು ತನಗೆ (ಪರ್ವತಾ. ೬-೩೩). ೫. ಒಳ್ಳೆಯದು; ಶುಭವಾದಂದು: "ಪ್ರಾಗ್ರ್ಯಂ . . . ಪ್ರಿಯಂ . . . ಪೇಶಲಂ–ಈ ೨೯ ಒಳ್ಳಿತು" (ಕರಾಯು. ೦೩೯-೯). ೬. ಪ್ರೀತಿಪಾತ್ರನಾದವನು ; ನಲ್ಲ : "ವಲ್ಲಭಃ, ದಯಿತಃ, ಪ್ರಿಯಃ – ಈ ೩ ಕೂರ್ಪವಂ" (ಕರಾಯು. ೬೦–೨೦೨) ; ಆ ಜಯವರ್ಧುಗನಂತವೀರ್ಯಂ ಪ್ರಿಯನಾದೊಂ (ಶಾಂತಿಪು. ೪-೯೬). ೭. ಬೇಕಾದ ವ್ಯಕ್ತಿ ; ಆಪ್ತ ; ಆತ್ಮೀಯ : ನಿನ್ನಪೋಲೆನಗಾರ್ತನುಂ ಪ್ರಿಯಂ (ಶ್ರೀರಾಪು. ೩೩-೦೬೦). ೮. ಬೆಲೆಯೇರಿಕೆ ; ತುಟ್ಟಿ : ಬಹಳ ಪ್ರಿಯವಾದ ಕಾಲದಲ್ಲಿ ಧಾನ್ಯವನ್ನೆಲ್ಲಾ ಮಾರಿ ನಾಲ್ಕುರು ತಿಂಗಳು ಪೂರ್ತಿ ತಮಗೆ ಬೇಕಾದಷ್ಟು ಇಟ್ಟುಕೊಂಡಿರುವರು (ಕೃಶಿಕ್ಷ. ೯೩) ; ಎಂಥೆಂಥ ಪ್ರಿಯದ ಮಾಲುಗಳನ್ನು . . . ಕಡಿಮೆ ಬೆಲೆಗೆ ಕೊಂಡ ಸಾಹಸ ಹೇಳಿಯಾಯಿತು (ಶುರಕು. ೯೨). [ಸಂ.]

**ಪ್ರಿಯಂಕರಿ** (ನಾ). ಒಂದು ಬಗೆಯ ಸಸ್ಯ ; ಹೆಗ್ಗುಳ್ಳ : "ಪ್ರಿಯಂಕರೀ– ಹಬ್ಬಾಲೆ, ಬಿಳಿಯ ನೆಲಗುಳ್ಳ" (೬ಶಧ. ೯೯). [ಸಂ. ಪ್ರಿಯಂಕರೀ]

**ಪ್ರಿಯಂಗು** (ನಾ). ೧. ಒಂದು ಬಗೆಯ ಸಸ್ಯ ; ನವಣೆ : "ಪ್ರಿಯಂಗುಃ, ಕಂಗು : – ಈ ೨ ನವಣೆ" (ಕರಾಯು. ೯೩-೪೨೬) ; ಅಭಿನವಪ್ರಿಯಂಗುಶ್ಯಾಮಾಂಗಮರ್ಧಚಂದ್ರಬುದ್ಬುದವ್ಯಾಕೀರ್ಣಾತ್ರಿಶೂಲಕರಾಲವಿಶಾಲವೇತ್ರಪೇಟಕಂ (ಆದಿಪು. ೦೩-೯೩ ವ). ೨. ಒಂದು ಬಗೆಯ ಮರ : ಮಾಡಿದ ವೈವಾಹಕದಿಂ ಪ್ರಿಯಂಗುಫಲಮುಕ್ಕಂ (ರೋಕೋಕ. ೬-೪೨) ; ರತಿಪ್ರಿಯನಂ ಪ್ರಿಯಂಗು ತನ್ನಲರ್ಗಣೆಯುಂ ಜಗತ್ತ್ರಯಮುಮಂ ಗೆಲಿಸಿತ್ತು (ಜಗಂ. ೧೯-೬). ೩. ಒಂದು ಬಗೆಯ ಬಳ್ಳಿ : "ಶ್ಯಾಮಾವಲ್ಲೀ – ಪ್ರಿಯಂಗು" ೬ಶಧ. ೦೬೯). [ಸಂ.]

**ಪ್ರಿಯಂನುಡಿ** (ಕ್ರಿ). ಹಿತವಾದುದನ್ನು ಹೇಳು ; ಇಷ್ಟವಾದುದನ್ನು ತಿಳಿಸು: ಸಂಸ್ಕೃತದ ನಿತ್ಯಬಿಂದುಗೆ–ಗುಣಂಗೊಂಡಂ . . . ಪ್ರಿಯಂನುಡಿದಂ, ಧನಂಬಡೆದಂ (ಶಮದ. ೦೬೬ ವೃತ್ತಿ). [ಪ್ರಿಯ+ನುಡಿ₁]

**ಪ್ರಿಯಂಬಡಿಸು** (ಕ್ರಿ). ಹಿತವನ್ನುಂಟುಮಾಡು ; ತೃಪ್ತಿಪಡಿಸು : ಘನತರೋತ್ಸುಕಚಿತ್ತದಿಂ ಮೇದಿನಿಯೊರಸಲಭಿವಂದಿಸುತ ತಾನನುನಯೋಚಿತ ಸತ್ಕ್ರಿಯಾದಿಗಳಿಂ ಪ್ರಿಯಂಬಡಿಸಿ (ಬಸಕು. ೨೮-೬). [ಪ್ರಿಯ + ಪಡಿಸು]

**ಪ್ರಿಯಂವದ** (ನಾ). ೧. ಇಷ್ಟವಾದುದನ್ನು ಹೇಳುವುದು ; ಹಿತವಾದುದನ್ನು ನುಡಿಯುವುದು. ೨. ಇಷ್ಟವಾದುದನ್ನು ಹೇಳುವವನು ; ಹಿತವಾದುದನ್ನು ನುಡಿಯುವವನು : "ಶ್ಲಕ್ಷ್ಣಃ, ಪ್ರಿಯಂವದಃ –೨ ಪ್ರಿಯವನ್ನು ನುಡಿಯುವವನ ಪೆಸರುಗಳು" (ಸಿದ್ಧಾಂತಿ. ೩೩೨). [ಸಂ.]

**ಪ್ರಿಯಕ** (ನಾ). ೧. ಮೈಮೇಲೆ ಚುಕ್ಕೆಗಳುಳ್ಳ ಒಂದು ಬಗೆಯ ಜಿಂಕೆ; ಚಿಗರೆ. ೨. ಒಂದು ಬಗೆಯ ಮರ; ಹೊನ್ನೆ: "ಪೀತಸಾಲಕಃ . . . ಪ್ರಿಯಕಃ, ಜೀವಕಃ –೬ ಹೊನ್ನೇಮರದ ಹೆಸರುಗಳು" (ಸಿದ್ಧಾಂತಿ. ೦೨೨) ; ಪ್ರಿಯಾಳ ಪ್ರಿಯಕ ಕುರವಕಾಶೋಕ . . . ಭೂರ್ಜಾವಕೀರ್ಣಾಂ

(ಅಠಕಟ. ೩-೩೩). ೩. ಒಂದು ಬಗೆಯ ಮರ; ಈಚಲು: "ನೀಪಃ, ಪ್ರಿಯಕಃ, ಕದಂಬಃ, ಹಲಪ್ರಿಯಃ – ೪ ಕಡಹದ ಗಿಡದ ಹೆಸರುಗಳು, ಈಚಲ ಗಿಡದಲ್ಲಿ ಉತ್ಪತ್ತಿಯಾತಿ" (ಸಿದ್ಧಾಂತಿ. ೬೫೦). ೪. ಒಂದು ಬಗೆಯ ಗಿಡ : ಪ್ರಿಯಂಗು : "ಪ್ರಿಯಕಃ-ಕಡವ, ಹೊನ್ನೆ, ಪ್ರಿಯಂಗು" (೬೫೦. ೯೮). [ಸಂ.]

**ಪ್ರಿಯಕರ** (ಗು). ೧. ಪ್ರೀತಿಯನ್ನುಂಟುಮಾಡುವ ; ಅಕ್ಕರೆಯನ್ನು ತೋರುವ. ೨. ಪ್ರೀತಿಗೆ ಪಾತ್ರವಾದ. (ನಾ). ೩. ಪ್ರೀತಿಯನ್ನುಂಟುಮಾಡುವುದಂ; ಅಕ್ಕರೆಯುಳ್ಳುದು : ಅವನಿಗೆ ತನ್ನ ತಾಯಿಯ ಜೀವ ನೂರು ಬಲೀಂದ್ರ ಹೋತಗಳ ಜೀವಕ್ಕಿಂತಲೂ ಹೆಚ್ಚು ಪ್ರಿಯಕರವ ಗಿತ್ತು (ಕಾಪೂರು. ೩೬೬). ೪. ಪ್ರೀತಿಯನ್ನು ತೋರುವವನು; ಪ್ರೇಮವುಳ್ಳವನು : ವಿಧುವಿಂದಂ ವಿಬುಧೋತ್ಕರಪ್ರಿಯಕರಂ ತೀವ್ರಾಂಶುವಿಂದಂ ಪ್ರತಾಪಧನಂ ದಳತ್ಪದ್ಮದಿಂದಧಿಕಶ್ರೀನಿಳಯಂ ಸುಪುತ್ರನೊಗೆತರ್ಕುಂ (ಪುಷ್ಕಕ್ಕಿ. ೩-೦೨೨). ೫. ನಲ್ಲ; ಪ್ರೇಮಿಂ : ಆಕೆ ತನ್ನ ಪ್ರಿಯಕರನಿಗೊಂದು, 'ಕೊನೆಯ ಪತ್ರ' ಬರೆದಿಟ್ಟು 'ಆತ್ಮಹತ್ಯೆ' ಮಾಡಿಕೊಳ್ಳುತ್ತಾಳೆ (ದೂಕಹಂ. ೩೯). [ಸಂ. ]

**ಪ್ರಿಯಕಾರಿಣಿ** (ನಾ). ಪ್ರೀತಿಗೆ ಕಾರಣಳಾದವಳು ; ಪ್ರಿಯೆ : ಪ್ರಿಯಕಾರಿಣಿ ಭುವನಜನಪ್ರಿಯಕಾರಿಣಿ ನೆಗಟ್ಟೆ (ವರ್ಧಮಾ. ೧೧-೨೩). [ಸಂ. ಪ್ರಿಯಕಾರಿಣೀ]

**ಪ್ರಿಯಕಾವೇರಿ** (ನಾ). ಒಂದು ಬಗೆಯ ಚಿನ್ನದ ನಾಣ್ಯ : ದುರ್ಗವು ಕೈವಶವಾದ ಮೇಲೆ ಈ ದೊರೆಯ ಬೊಕ್ಕಸದಲ್ಲಿದ್ದು ಹಗೆಗಳ ಕೈಗೆ ಸಿಕ್ಕಿದ ನಾಣ್ಯಗಳ ವಿವರ . . . ೧. ಗಬರು, ೧. ಪ್ರಿಯಕಾವೇರಿ (ಐಕ್ಯತಾ. ೦೦೩). [?]

**ಪ್ರಿಯಗಳ್ಳ** (ನಾ). ಪ್ರೀತಿಯನ್ನು ಪಡೆದವನು; ಒಂದು ಬಿರುದು : ಅಮ್ಮನ ಗಂಧವಾರಣಂ ಪಡೆಮೆಚ್ಚೆಗಂಡಂ ಪ್ರಿಯಗಳ್ಳಂ[ಪಾಠಾಂ. ಪ್ರಗಳ್ಳಂ] ಗುಣನಿಧಿಗುಣಾರ್ಣವಂ (ಶಂಕಕಾ. ೦-೦೯೮ ವ): "ಪ್ರಿಯಳನ್ನು ಅಪಹರಿಸಿದವನು, ಅರ್ಜುನ ಸುಭದ್ರೆಯನ್ನು ಅಪಹರಿಸಿದಂತೆ" (ಶಂಪ್ರೋ. ೩೩). 'ಗುಣಗಳ್ಳ' ಪರಾ. [ಪ್ರಿಯ + ಕಳ್ಳ$_1$]

**ಪ್ರಿಯಜನ** (ನಾ). ಆತ್ಮೀಯಜನ; ಆಪ್ತೇಷ್ಟರು : ಈ ವಿದ್ಯಾಧರ ಶ್ರೇಣಿಯ ಪರಿಭಾಷೆಗಳ್ ನಿನ್ನವಾಗದೆ ಸಾವಂ ಪ್ರಿಯಜನಪ್ರಯೋಜ್ಯಂ ಅಲ್ಲದೆಡೆಯೊಳುನ್ನತ್ರವಿಳಸಿತಂ (ಶಾಂತಿಪು. ೩-೬೬೩); ಪ್ರಿಯಜನದಿನಲ್ಲದಾಱು ಗುವೆ ಯುವತಿಯು ವಿರಹಶಿಖಿ ಸಪೇಕ್ಷೃತಶಿರಕ್ರಿಯಯಿಂ (ವರ್ಧಪು. ೬-೬೩). [ಸಂ.]

**ಪ್ರಿಯಜೀವ** (ನಾ). ಒಂದು ಬಗೆಯ ಮರ : "ಪ್ರಿಯಜೀವಃ— ಹೆಮ್ಮರ" (೬೫೦. ೯೯). [ಸಂ.]

**ಪ್ರಿಯತಮ** (ನಾ). ೧. ಅತಿಹಿತವಾದುದಂ ; ಅತ್ಯಂತ ಪ್ರೇಮವುಳ್ಳುದು : ಪ್ರಿಯತಮ[ಮಂ] ತಾಳ್ದಿದರಯನಮಯರೇಕಾದ ಕಾಂಗವಂ ನಕ್ಷತ್ರ[೦] ಜಯಪಾಳಮಹಾಮುನಿ ಪಾಂಡುಯತಿ ಧ್ರುವಸೇನಸೂರಿ ಕಂಸಾ[ಚಾ]ರ್ಯರ್ (ವರ್ಧಮಾ. ೦೬-೩೯). ೨. ಪ್ರಿಯನಾದವನು; ನಲ್ಲ : ವಿರಹದಿಂ ಪ್ರಿಯತಮಸಮಾಗಮಪ್ರತ್ಯಾಶೆ ಹೃದಯಮಂ ಬೇಯಿಸಲ್ಕೆ (ಚಿತ್ರಾಂಗ. ೩೩-೦೫೦೦). ೩. ಅತ್ಯಂತ ಹಿತವಾದವನು; ಆಪ್ತ : ಪ್ರಿಯತಮನೆನಗು ರತ್ನತ್ರಯದೊಳೆ ನಿನ್ನಡಿಗೆ ತಡೆಯದೆಱಗಿಸು ಭುವನತ್ರಯಮಂ (ಚಿತ್ರಪು. ೬-೭೯); ಅನೀತನಂ ಸಕ್ಕಿರಿಯಾನಲನಿಂ ಸುಟ್ಟಿನುಮಿಲ್ಲ ಮತ್ಪ್ರಿಯತಮಂ ಕರ್ಣಂಗಿದೇಂ ಕೂರ್ತನೋ (ಗದಾಯು. ೩-೪೦). [ಸಂ.]

**ಪ್ರಿಯತಮೆ** (ನಾ). ಪ್ರಿಯಳಾದವಳು; ನಲ್ಲೆ: "ನಲ್ಲಳನಿಯಳೋಪಳು ಕಾದಲೆಯೆನಲ್ಕೆ ಮನದನ್ನೆಯೆಂದೊಡಂ ಪ್ರಿಯತಮೆಗೆ ನಾಮಮಕ್ಕುಂ" (ಕಬ್ಬಿಪಂ. ೬೩); ಪ್ರಿಯತಮೆಯನಗಲ್ದ ಶರೀರಿಯ ಜೀವನಮೇವುದೆಂದು ಮರಣಮನಾಂ ನಿಶ್ಚಯಮಂ ಮಾಡುವ ಪದದೊಳ್ (ಚಕಳು. ೯-೯೬). [ಸಂ. ಪ್ರಿಯತಮಾ]

**ಪ್ರಿಯಮಿತ್ರ** (ನಾ). ಬಹಳ ಪ್ರಿಯನಾದವನು ; ಪ್ರಾಣಮಿತ್ರ : ಪ್ರಿಯಮಿತ್ರನೆನಗೆ ಕಮಲಪ್ರಿಯನಂದನನವನನನ್ನ ಪಕ್ಕದೆ ತೇಜಸ್ವಿಯನಂ ತಾಡಿದನಾ ಕಳಶಯೋನಿ ನೆಗಟ್ಟೆಂದ್ರಸುತನೀನೇಗುಂದಿದನೋ (ಗದಾಯು. ೨-೧೯) ; ಪ್ರಿಯಮಿತ್ರ ಚಕ್ರವರ್ತಿಯ ಭಯದಿಂದುಗಿದರಿಕದಂಬದಂ ತಂಬುರುಹಪ್ರಿಯಬಿಂಬಂ ತೇಜದಳರ್ಕೆಯ ಬಿಸುಪಂ ಬಿಸುಟು ಮಗುಟ್ಟು ತೋಱಿದುದಾಗಳ್ (ವರ್ಧಮಾ. ೯-೫೦). [ಸಂ.]

**ಪ್ರಿಯವಚ** (ನಾ). ಪ್ರೀತಿಯ ಮಾತು ; ನಲ್ನುಡಿ : ಪ್ರಿಯವಚದಂತೆ ಪುಣ್ಯಾತಿಯಂತೆ ಸುಧಾಕರನಂತೆ...ಹಂಪೆಯ ಹರಿದೇವನನ್ನತಕ್ಯತಿಪ್ರಸರಂ ಭುವನೈಕಭಾಸುರಂ (ಗಿರಿ. ೦-೦೮). [ಸಂ.]

**ಪ್ರಿಯವಚನ** (ನಾ). = ಪ್ರಿಯವಚ : "ಚಟು(ಃ), ಚಾಟು(ಃ)—ಪ್ರಿಯವಚನಂ" (ಹರಾಯು. ೨೪-೦೯೩); ಪ್ರಿಯವಚನಂಗಳಿಂ ಓರೆದು ಕೆಯ್ಮಿಗಿದು (ಧರ್ಮಾಪಾ. ೦-೯೦). [ಸಂ.]

**ಪ್ರಿಯವತಿ** (ನಾ). ಒಂದು ಬಗೆಯ ಸಸ್ಯ : " ಪ್ರಿಯವತೀ—ಹೊನಗನ್ನೆ" (೬೫೦. ೯೯). [ಸಂ. ಪ್ರಿಯವತೀ]

**ಪ್ರಿಯವನಿತೆ** (ನಾ). ಪ್ರೀತಿಪಾತ್ರಳಾದ ಸ್ತ್ರೀ ; ನಲ್ಲೆ : ಪ್ರಿಯವನಿತಾಚರನೊಗೆದಂ ಪ್ರಿಯತನಯಂ ಕೇಶವಾಂಕನಾದನಿದೇಂ ವಿಸ್ಮಯಕರಮೊ (ಅಂಪು. ೬-೩); ಪ್ರಿಯವನಿತಾಘನಸ್ತನದಿಚುಂಬನೊಳ್ . . . ಒಳಪೊಕ್ಕು ಕಾಮುಕಜನಂ ಬರ್ದುಕಿರ್ದುದು ಬಂದ ಮಾಗಿಯೊಳ್ (ಶಾಂತೀಶ್ವ. ೧೨-೮೬). [ಸಂ. ಪ್ರಿಯವನಿತಾ]

**ಪ್ರಿಯವಲ್ಲಿ** (ನಾ). ಒಂದು ಬಗೆಯ ಸಸ್ಯ : "ಪ್ರಿಯವಲ್ಲೀ— ಪ್ರಿಯಂಗು" (೬೫೦. ೯೯). [ಸಂ. ಪ್ರಿಯವಲ್ಲೀ]

**ಪ್ರಿಯವಾದಿನಿ** (ನಾ). ಹೆಣ್ಣು ಗಿಳಿ : "ಪ್ರಿಯವಾದಿನೀ—ಹೆಣ್ಣು ಗಿಳಿ" (೬೫೦. ೯೯). [ಸಂ. ಪ್ರಿಯವಾದಿನೀ]

**ಪ್ರಿಯವಾರ್ತೆ** (ನಾ). ಸಂತೋಷದ ಸುದ್ದಿ : ಈ ಪ್ರಿಯವಾರ್ತೆಯನ್ನು ನಾವು ತಿಳಿಸಲೇಬೇಕು (ಕಾಳಂತ. ೦೦೩-೮). [ಸಂ. ಪ್ರಿಯವಾರ್ತಾ]

**ಪ್ರಿಯಶೈಲ** (ನಾ). ಕಲ್ಲಿನ ಮೇಲೆ ಬೆಳೆಯುವ ಪಾಚಿ ; ಕಲ್ಲುಹೂವು : "ಪ್ರಿಯಶೈಲಂ—ಕಲ್ಲ ಹೂ" (೬೫೦. ೯೯). [ಸಂ.]

**ಪ್ರಿಯಸಂಭಾಷಣ** (ನಾ). ಹಿತವಾದ ಸಲ್ಲಾಪ,—ಸಂವಾದ : ಪ್ರಿಯಸಂಭಾಷಣಸಹಿತಂ ಬಯಸಿದುದಂ ಪರಿಜನಕ್ಕೆ ಸಾಲ್ಪಿನಮಿತ್ತ ಪ್ರಿಯಮಂ ಪುಟ್ಟಿಸಿದಂ ಸುರಭಿಯೊಳೇನೌದಾರ್ಯನಿಧಿಯೊ ಜನಕನರೇಂದ್ರಂ (ಶಂಪಾಮಾ. ೩-೪೦); ಪ್ರಿಯಸಂಭಾಷಣದಿಂದಾತನಂ ಸಂತೋಷಂಬಡಿಸುತ್ತುಂ (ಕಾರಪು. ೦೦-೦೯ ವ). [ಸಂ.]

**ಪ್ರಿಯಸಖ** (ನಾ). ೧. = ಪ್ರಿಯಮಿತ್ರ : ಒರ್ವನೆ ಪೋಗಿ ಕಾನ್ಕೆಯಿಂ ಭೋಂಕನೆ ಮಾಟಪ್ಪಿಂ ಪ್ರಿಯಸಖಂಗೆ ಸಂತಸದೊದವಂ (ಕಾದಂಬ. ೯೩೩); ಪ್ರಿಯಸಖನಿಂತೆನೆ ಸಲಿಲಾಶಯಕ್ಕೆ ತದ್ರಾಜಹಂಸನೊಯ್ಯನೆ ಮುದಿತಾಶಯನಾಗಳ್ ನಡೆದಂ (ಲೀಲಾವ. ೩-೩೯). ೨. ಖದಿರವೃಕ್ಷ. [ಸಂ.]

**ಪ್ರಿಯಸಖಿ** (ನಾ). ಪ್ರೀತಿಪಾತ್ರಳಾದ ಗೆಳತಿ,—ಸ್ನೇಹಿತೆ : ಮದೀಯ ಪ್ರಿಯಸಖಿಯ ಕೊರ್ಮೆಯ ತೊಡರ್ಪಂ ಪಱಿದು (ಕಾದಂಬ. ೩೯೩) ; ಯಾಮಿನೀಪ್ರಿಯಸಖಿಯೆ, ಹೇ ಸ್ವಪ್ನಕಾಮಿನಿಯೆ, ಲಲನೆಯಾತ್ಮದೊಳಾವ ಕಮನೀಯನಾಕಮಂ ಕಟ್ಟುತಿಹೆ (ಚಿತ್ರಾಂಗ. ೩-೩೩). [ಸಂ. ಪ್ರಿಯಸಖೀ]

**ಪ್ರಿಯಸ್ರಾಹೆ** (ನಾ). ಒಂದು ಬಗೆಯ ನಾಣ್ಯ (?) : ಪರಿವರ್ತ್ಯನಕ್ಕೆ ಸಲುವ ಪ್ರಿಯಸ್ರಾಹೆ ನಿಜಗಟವರಹ ಗದ್ಯಾಣ ಗ ೩೦ (ಎಪಿಕಂ. ೦೯೩೦. ೦೦-೦೬; 1585). [?]

**ಪ್ರಿಯಾಂಬು** (ನಾ.) ಮಾವಿನ ಮರ: "ಪ್ರಿಯಾಂಬುಃ —ಮಾವು" (ಓಶಬ್ದ. ೯೮). [ಸಂ.]

**ಪ್ರಿಯಾಲ, ಪ್ರಿಯಾಳ** (ನಾ). ಒಂದು ಬಗೆಯ ಸಸ್ಯ: "ರಾಜಾದನಂ, ಪ್ರಿಯಾಲಃ, ಸನ್ನಕದ್ರುಃ, ಧನುಃಪಟಃ —ಮೊರಟೀಗಿಡ, ಮೊರಟೇಗಿಡ" (ಸಿದ್ಧಾಂತಿ. ೦೦೯). ಪ್ರಿಯಾಳ: "ಪ್ರಿಯಾಳಂ_ಚಾರುಬೀಜ" (ಓಶಬ್ದ. ೯೮). [ಸಂ.]

**ಪ್ರಿಯಾಳ** 'ಪ್ರಿಯಾಲ' ನೋ.

**ಪ್ರಿಯೆ** (ನಾ). ೧. ಪ್ರೀತಿಪಾತ್ರಳಾದವಳು; ನಲ್ಲೆ: "ನಲ್ಲಳೆ ನಲ್ಲಂದನುನಯದಿಂ ಪ್ರಿಯೆ'' (ಶಬಿಕಂ. ೦೬೩); ಪ್ರಿಯೆ ತನಗೆಂಬುದಂ ಬಗೆಯದೆನ್ನವನಂ ಪೆಱಗಿಕ್ಕಿ ಪೋಗಿ ಸಂಜೆಯೊಳನುರಕ್ತನಾಗಿ ನೆರೆದಿರ್ದಪಂ (ಮಲ್ಲಿಪು. ೬-೦೯): ಪ್ರಿಯೆ ಎಗೆ ನೋಡಿ ತನ್ನ ಪೊಸವೇಷಮುಮಕ್ಕಟ ಪೊಳ್ಳುಪೋದುದನ್ನೆಯಮನದೆಂತು ಸೈರಿಪಂ . . . ಎನುತ್ತೆ (ಕೃಷ್ಣಚ. ೦೬-೬೯). ೨. ಪ್ರೀತಿ; ವಾತ್ಸಲ್ಯ; ಅಕ್ಕರೆ: ನಿನಗೆ ಪ್ರಿಯೆ ಯಿಂದಿತ್ತ ಜ್ಞಾನಾಂಜನದ ಬೀಜವನಿನ್ನು ಸದ್ಭಾವನದ ಸಜ್ಜನಭೂಮಿಯಲಿ ನೀ ಬಿತ್ತಿ ಪರಸುಖದ ಫಸವಳೆಯನನುಗೈದು ಜನಪಾವನರಿಗುಣಬಡಿಸು (ಗಗಶಾ. ೦೭-೯೬). ೩. ಹೆಂಗಸು; ಸ್ತ್ರೀ. ೪. ಸಣ್ಣ ಏಲಕ್ಕಿ. ೫. ಸಮಾಚಾರ; ವಾರ್ತೆ. ೬. ಮಾದಕಪಾನೀಯ. ೭. ಒಂದು ಬಗೆಯ ಮಲ್ಲಿಗೆ. [ಸಂ. ಪ್ರಿಯಾ]

**ಪ್ರಿಯೋದ್ಭವ** (ನಾ). [ಜೈನ] ಐವತ್ತುಮೂರುಂ ಗರ್ಭಾನ್ವಯಂ ಕ್ರಿಯೆಂಗಳಲ್ಲಿ ಒಂದುಂ; ಗರ್ಭಿಣಿಯು ಹೆತ್ತ ಮೇಲೆ ಮಾಡಬೇಕಾದ ಕರ್ಮ; ಜಾತಕರ್ಮ: ಆಧಾನ ಪ್ರೀತಿ ಸುಪ್ರೀತಿ ಧೃತಿ ಮೋದ ಪ್ರಿಯೋದ್ಭವ ನಾಮಕರ್ಮ ಬಹಿರ್ಯಾನ . . . ನಿರ್ವೃತಿಯೆಂಬಯ್ವತ್ತು ಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೦೫-೦೫ ವ). [ಸಂ.]

**ಪ್ರೀಣನ** (ನಾ). ೧. ಸಂತೋಷಗೊಳಿಸುವಿಕೆ; ಆನಂದಪಡಿಸುವಿಕೆ: "ತರ್ಪಣಂ, ಪ್ರೀಣನಂ, ಅವನಂ—೩ ತೃಪ್ತಿ ಹೊಂದಿಸುವಿಕೆ'' (ಸಿದ್ಧಾಂತಿ. ೩೩೩); ಬುಧಜನಪ್ರೀಣನಾಗ್ರೇಸರಗ್ರಾಮಣಿಯಾದಂ (ಆದಿಪು. ೦೨-೦೫). ೨. ತೃಪ್ತಿಗೊಳಿಸಲ್ಪಡುವಂತಹುದು: ಪ್ರೀಣನಮಾದುದು ಮುನಿಗೀರ್ವಾಣ ಮುಖಾಂಬುಜಮನದರ್ದಿರಲ್ ಶೈಶವದೊಳ್ ವಾಣೀವಧು ನಿಜಸದ ನಿಶ್ರೇಣಿಯುಪೊಲ್ ಶ್ರುತದ ಠವಣೆಕೋಲ ವಿಳಾಸಂ (ಅನಂಪು. ೩-೩೦). ೩. ಅನ್ನ: "ಪ್ರೀಣನಃ—ಅನ್ನ" (ಓಶಬ್ದ. ೦೦೦). [ಸಂ.]

**ಪ್ರೀಣನಕರ** (ಗು). ೧. ಪ್ರೀತಿಯನ್ನುಂಟುಮಾಡುವ; ಆನಂದಕರವಾದ. (ನಾ). ೨. ಆನಂದಕರವಾದುದು: ಪ್ರಾಣಿಹಿತಮಂ ಏನೇಯುಪ್ರೀಣನಕರಮುಂ ಆದಿಪುರಾಣಮನಪರಿಮಿತಭಕ್ತಿಯಿಂ ವಿರಚಿಸುವೆಂ (ಆದಿಪು. ೦-೭೨); ಜಾಣಿನ ಚೆಡಂಗು ವಿಬುಧಪ್ರೀಣನಕರಮೆನಿಸಿ ನೇರ್ಪು ನೇರ್ಪೊಡೆ ಪೇಟ್ಪಂ (ಸುಕುಮಚ. ೦-೩೯). [ಸಂ.]

**ಪ್ರೀಣಿತ** (ಗು). ಸಂತೋಷಗೊಳಿಸಿದ: ಆನಂದಪಡಿಸಿದ: ಪರಮಂ ಪ್ರೀಣಿತಪಸ್ತುಸ್ವರೂಪಮಂ ನವಪದಾರ್ಥಮುಂ ನಂಬುಗೆಯುಂ ಪರಿಭಾವಿಸಿದಂ ಯೋಗೀಶ್ವರನಾಜ್ಞಾನಿಚಯಮಂ ಶುಭಧ್ಯಾನಪರಂ (ಮಲ್ಲಿಪು. ೦೯-೬೦). [ಸಂ.]

**ಪ್ರೀತ** (ಗು). ೧. ತೃಪ್ತಿಹೊಂದಿದ; ತಣಿದ. ೨. ಸಂತೋಷಗೊಂಡ; ಹರ್ಷಗೊಂಡ. (ನಾ). ೩. ತೃಪ್ತಿ ಹೊಂದಿದವನು; ಸಂತುಷ್ಟನಾದವನು: ಈತನೆಮ್ಮಯ ಬಂಧು ಕೃತವಮಾಳಸುರನು ವಿನೀತನು ನಿನ್ನ ಸೇವೆಯೊಳು ಪ್ರೀತನು (ಕಠಚ. ೨೯-೦೦೦). ೪. ಸಂತೋಷಗೊಂಡವನು; ಹರ್ಷಿತನಾದವನು: "ಹೃಷ್ಟಃ . . . ಪ್ರಮುದಿತ, ಪ್ರೀತಃ—೬ ಸಂತೋಷಪಟ್ಟವನು'' (ಸಿದ್ಧಾಂತಿ. ೩೩೦); ಭಂಗಿ ಭಾಷಿತದಿನಾತನಂ ಪ್ರೀತನಂ ಮಾಡಿ (ಭುಕ್ತಿಪು. ೬-೯೯ ವ). ೫. ಪ್ರಿಯನಾದವನು: ನವಿಲುಗರಿಯ ನವನೀತಚೋರನಾಬಾಲವೃದ್ಧಪ್ರೀತ (ಕಂಠುಬು. ೩೯-೮). [ಸಂ.]

**ಪ್ರೀತಿ** (ನಾ). ೧. ಸುಖ; ಸಂತೋಷ; ಆನಂದ: "ಪ್ರಮೋದಃ, ಪ್ರಮುದಃ, ಹರ್ಷಃ, ಪ್ರೀತಿಃ . . . ಸುಖಂ—ಈ ೧೩ ಸುಖದ ಹೆಸರ್" (ಕರಾಹು. ೩೦-೦೨೩); ಪ್ರೀತಿಮಿಗೆ ಶಂಖಪಟಹವಿನೂತೋದ್ದುರ ಸಿಂಹಘಂಟಿಕಾನಿಸ್ವನಸಂಕೇತದೆ . . . ವೈಮಾನಿಕಾಮರರ್ನೆರೆತಂದರ್ (ಸುಕುಮಚ. ೬-೬೯). ೨. ಗೆಳೆತನ; ಸ್ನೇಹ: "ಸಖ್ಯಂ . . . ಪ್ರೀತಿಃ . . . ಸಭಾಜನಂ—ಈ ೯ ಕೆಳೆ" (ಕರಾಹು. ೦೦೭-೨೦); ರುಕ್ಮಿಣಿಯ ಮುಂದೆ ನ್ನೊಂದು ಸೌಭಾಗ್ಯಮಂ ಪರಿಹಾಸಂಗೆಯ್ಯುತಿರ್ಪ ನಾರದನ ಮಾತಂ ಪ್ರೀತಿಯಿಂ ಕೇಳ್ದು (ಜಗಹ. ೦೨-೦೦೩). ಜಗನ್ನಾಥನು . . . ಸ್ವಲ್ಪ ಕಾಲದಲ್ಲಿಯೇ ಯಜಮಾನನ ಪ್ರೀತಿಯನ್ನು ಸಂಪಾದಿಸಿದನು (ಕಮಂಠಹು. ೯-೩೦). ೩. ಅನುರಾಗ; ಒಲವು; ಪ್ರೇಮ: ತನ್ನ ಪ್ರೀತಿಯ ಸಮಸ್ಯೆಯನ್ನು ತನ್ನಿಂದ ಸಹ ಬಚ್ಚಿಡಲು ಪ್ರಯತ್ನಿಸುವ ನರಹರಿ ಅದನ್ನು ಪಾಟಣಕರನೆದುರಿಗೆ ಬಿಚ್ಚುವದು ಹೇಗೆ ಸಾಧ್ಯ? (ಸಮುಶೀ. ೨೩೨). ೪. [ಜ್ಯೋತಿ] ಇಪ್ಪತ್ತೇಳು ಬಗೆಯ ಯೋಗಗಳಲ್ಲಿ ಎರಡನೆಯದು: ಪ್ರೀತಿಯೋಗಕೆ ವೀರ ೨೪ ಗಳಿಗೆ ಮೇಲೆ ತ್ಯಾಜ್ಯ (ಶಾಸ್ತ್ರಸಿ. ೬೦-೩); ವಿಷ್ಕಂಭ ಪ್ರೀತಿ . . . ವೈಧೃತಿಗಳೆಂಬಿಪ್ಪತ್ತೇಳುಯೋಗಂಗಳುಂ (ಶಿವತ. ೩೨೦). ೫. [ಜೈನ] ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದುಂ; ಗರ್ಭವತಿಯಾದ ಮೂರನೆಯ ತಿಂಗಳಲ್ಲಿ ಮಾಡುವ ಜನಪೂಜೆ: ಆಧಾನ ಪ್ರೀತಿ ಸುಪ್ರೀತಿ . . . ನಿರ್ವೃತಿಯೆಂಬಯ್ವತ್ತುಮೂಱು . . . ಗರ್ಭಾನ್ವಯಕ್ರಿಯೆಗಳುಂ (ಆದಿಪು. ೦೫-೦೫ ವ); ಆದಾನಮುಂ ಪ್ರೀತಿಯುಂ . . . ಅಗ್ರನಿವೃತ್ತಿಯುಮೆಂದಾಧಾನಾದಿ ನಿರ್ವಾಣ ಪರ್ಯಂತಮಪ್ಪಯ್ವತ್ತುಮೂಱು ಗರ್ಭಾನ್ವಯಕ್ರಿಯೆಯೊಳ್ (ಚಾವುಂಪು. ೨೦೨). [ಸಂ.]

**ಪ್ರೀತಿಂಕರವಿಮಾನ** (ನಾ). [ಜೈನ] ಒಂದು ಸ್ವರ್ಗದ ಹೆಸರು: ಸಿಂಹಚಂದ್ರಚಾರಣರುಂ . . . ಊರ್ಧ್ವಗ್ರೈವೇಯಕದೊಳ್ ಪ್ರೀತಿಂಕರ ವಿಮಾನದೊಳ್ ಅಹಮಿಂದ್ರನಾದೊಂ (ಚಾವುಂಪು. ೦೩೯). [ಸಂ.]

**ಪ್ರೀತಿಪಾತ್ರ** (ನಾ). ಪ್ರಿಯವಾದ ವ್ಯಕ್ತಿ: ಜಾತೆ, ಪತಿಗೆ ಪ್ರೀತಿಪಾತ್ರಳಾಗು! (ಚಾಚಂಕ. ೩೦-೦೩); ಉದಿಪುರಿ ಪ್ರಧಾನಮಹಿಷಿಯಲ್ಲದಿದ್ದರೂ ಅತ್ಯಂತ ಪ್ರೀತಿಪಾತ್ರಳಾದ ಮಹಿಷಿ (ಬಂಕಿಸು. ೨೯೩). [ಸಂ.]

**ಪ್ರೀತಿಬಡು** 'ಪ್ರೀತಿವಡು' ನೋ.

**ಪ್ರೀತಿಭೂಮಿ** (ನಾ). (ಅಲಂ) ಪ್ರೇಮಕ್ಕೆ ಪಾತ್ರಳಾದ ಹೆಂಗಸು; ಪತ್ನಿ: ಹಿರಣ್ಯಪುರಮನಾಳ್ವ ಗರುಡವೇಗಂಗಂ ತದ್ವಿಯ ಪ್ರೀತಿಭೂಮಿ ಪ್ರೀತಿಷೇಣಗಂ ಮಕ್ಕಳಿಂದ್ರತಿಲಕನುಂ ನಭಸ್ತಿಲಕನುಂ (ಚಾಚಂಪು. ೯-೯೯ ವ). [ಸಂ.]

**ಪ್ರೀತಿವಡು, ಪ್ರೀತಿಬಡು** (ಕ್ರಿ). ೧. ಅಕ್ಕರೆಯನ್ನು ತೋರಿಸು; ಪ್ರೀತಿಸು: ಆ ಯತಿನಾಯಕನೊಂದು ಸಾರಮೇಯಶಿಶುವಂ ಕಂಡು ಪ್ರೀತಿವಟ್ಟು (ಕಂತಕಂ. ೨೬೦-೦೯); ಅಲ್ಲಿರ್ದನನೆ ಪ್ರೀತಿವಟ್ಟಂಗಳ್ಕ್ಕು ಮಿಸುಪ ನಾಮಂ (ಕಥಾಕೃ. ೬೯). ಪ್ರೀತಿಬಡು: ೨. ಇಚ್ಛಿಸು; ಬಯಸು: ಅನಂಗಸೌಂದರಿಯಾ ಪದಕದ ಮೇಲೆ ಪ್ರೀತಿಬಟ್ಟು . . . ತಂದೀವುದೆಂದು ಲಲ್ಲೆಗೈದು ಪ್ರಾರ್ಥಿಸುವುದುಂ (ಧರ್ಮಾಮೃ. ೨-೦೦೬). [ಪ್ರೀತಿ + ಪಡು]

**ಪ್ರೀತಿಸು** (ಕ್ರಿ). ಅಕ್ಕರೆಯನ್ನು ತೋರು: ಅವರುಗಳು ನನ್ನನ್ನು ಪ್ರೀತಿಸುತ್ತಿದ್ದುದಲ್ಲದೆ ಗೌರವದಿಂದಲೂ ವರ್ತಿಸುತ್ತಿದ್ದರು (ಕಂಗಾಳ್ಕೆ. ೯೬); ನನ್ನ ಕಕ್ಕನು ನನ್ನನ್ನು ಬಹಳವಾಗಿ ಪ್ರೀತಿಸುತ್ತಿದ್ದನು (ಕೃಕಶ್ಕೆ. ೯೬). [ಪ್ರೀತಿ + — ಇಸು]

**ಪ್ರೀಯ** (ನಾ). ಅಕ್ಕರೆ; ಪ್ರೀತಿ: ಪ್ರೀಯದೆ ಬಂದು ನಿನ್ನ ಮನಮೊಲ್ದಲ

ರೋಳಿಗಳಿಂ ವಿಚಿತ್ರಶೋಭಾಯುತಭೂಷಣಪ್ರಸರವಂ ಸಮದು (ಶಾಂತೀಶ್ವ. ೧೦-೫೮). [<ಸಂ. ಪ್ರಿಯ]

**ಪ್ರೇಂಖ** (ನಾ). ೧. ಉಯ್ಯಾಲೆ. ೨. ನಾಟ್ಯ ; ನೃತ್ಯ : "ಉಯ್ಯಲೊಳು ನೃತ್ಯದೊಳು ಪ್ರೇಂಖಮಕ್ಕುಂ" (ಕುಂಗಕಾ. ೦೩೬-೬೩). ೩. ಹೊಳವು ; ಪ್ರಕಾಶ: "ನೃತ್ಯ ಮಾಯ್ಯಲುಂ ಪೊಳಪಿವು ಪ್ರೇಂಖ ಶಬ್ದ" (ಶಾಹಾರ. ೦೫೦). [ಸಂ.]

**ಪ್ರೇಂಖಣ** (ನಾ). ೧. ತೂಗಾಟ ; ತೂಗಾಡುವುದು. ೨. ಉಯ್ಯಾಲೆ. ೩. ಒಂದು ಬಗೆಯ ಪುರ : ಜಾಯಿಕಾಯಿ, ಪ್ರೇಂಖಣ, ತಾಳೀಸಪತ್ರೆ . . . ಜೇನುತುಪ್ಪದಲ್ಲಿ ಸೇವಿಸಲು ಅಶ್ಮರೀ, ಮೂತ್ರಕೃಚ್ಛ್ರ, ಗರ್ಭವಾತ ಸಹ ಮಾಣುವುವು (ಕಕ್ಕ. ಕಂ. ೪೭೪). ೪. [ನಾಟ್ಯ] ಹದಿನೆಂಟು ಬಗೆಯ ಉಪರೂಪಕಗಳಲ್ಲಿ ಒಂದು ; ಸೂತ್ರಧಾರನಿಲ್ಲದ ಏಕಾಂಕ ನಾಟಕ : ನಾಟಿಕಾ . . . ೯ ಪ್ರೇಂಖಣ . . . ೧೮ ಭಾಣಿಕಾ—ಎಂದು ಉಪರೂಪಕಗಳು ಹದಿನೆಂಟು ವಿಧ (ಸಂಶಾಟಿ. ೩.೨). [ಸಂ.]

**ಪ್ರೇಂಖಿತ** (ಗು). ೧. ಅಲ್ಲಾಡುವ; ತೂಗಾಡುವ : ಮಣಿಪ್ರಭಾ ಪ್ರೇಂಖಿತ ರಥ್ಯಾಮಂಡನಮಂ ಕಂಡಂ (ಶಾಂತಿಪು. ೬೦೨); ಪ್ರೇಂಖಿತ ಶಂಖಸಮುದಾಯಮೆ ಬೆಳ್ದಾವರೆಗಳಾಗೆಯುಂ (ಜಗು. ೦೯-೯೯ ಕ). (ನಾ). ೨. ತೂಗಾಟ; ಅಲ್ಲಾಡುವುದು : "ಪ್ರೇಂಖೋಳಿತಂ, ತರಳಿತಂ, ಪ್ರೇಂಖಿತಂ, ಲುಳಿತಂ—ಈ ೪ ಅಲ್ಲಾಡುವುದು" (ಕಜಾಯು. ೦೩೩-೬೦). ೩. ಉಯ್ಯಾಲೆ. [ಸಂ.]

**ಪ್ರೇಂಖೋಲ** (ನಾ). ೧. ಅಲ್ಲಾಡುವಿಕೆ ; ತೂಗಾಟ ; ಒಲೆದಾಟ : ಉದ್ವೀಚಿಮರುಮರೀಚಿನಿಚಯಚಂಚಲೋದ್ದಾಮಬಲಬಹುಲನಿಷ್ಮವಿಪಾಸಪಣಿವಾರಾಶ್ಚಿಕಮುಗ್ರವುಂಖ ಪ್ರೇಂಖೋಲಾನೇಕನೇತ್ರಪಟ್ಟಿಕಾ . . . ಲಾಟಬಲಂ (ಅಂಪು. ೦೩-೯೫ ಕ). ೨. [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : ಸಲೆ ಡೋಲ ಪಾದಚಾರಿಯೆನೊಲವಿಂದಂ ಮಾಡೆ ಪದದ ಮತ್ತೊಂದು [ಪದಂ] ಕಲದಿಂದೆ ನೆಗೆದು ತಿರುಗಲ್ ಲಲನೇ ಪ್ರೇಂಖೋಲ ಕರಣಮೆಂದೆನಿಸಿರ್ಕುಂ (ಚಾಸ್ಕಂ. ೯-೦೧೦). [ಸಂ.]

**ಪ್ರೇಂಖೋಲನ**, ಪ್ರೇಂಖೋಳನ (ನಾ). ೧. ಒಲೆತ ; ತೂಗಾಟ ; ಒಲೆದಾಟ: "ಪ್ರೇಂಖೋಲ[ಶಾಹಾಂ. ೪]ನಂದೋಳನಮೆನಲದೊಲಹಿಂಗಕ್ಕು" (ಹುಂಗಣ. ೦೩೩-೬೯). ೨. ತೂಗುಮಣೆ ; ಉಯ್ಯಾಲೆ ; ಜೋಕಾಲಿ. ಪ್ರೇಂಖೋಳನ : ೧. "ಡೋಳಾ, ಪ್ರೇಂಖೋಳನಂ, ಪ್ರೇಂಖಾ—ಈ ೩ ಅಲ್ಲಾಟಂ" (ಹಜಾಯು. ೦೩೩-೬೮); ಆಗಳ್ ಪ್ರೇಂಖೋಳನವಿಳಾಸದಿಂದಾ ಸರಮಂ ಲೀಲಾಸರಮನುತ್ತರಿಸುವಂತುತ್ತರಿಸಿ (ಶಂಕ್ರತು. ೩-೪೫೫). [ಸಂ.]

**ಪ್ರೇಂಖೋಲಿತ**, ಪ್ರೇಂಖೋಳಿತ (ಗು). ೧. ಅಲ್ಲಾಡುವ; ತೂಗಾಡುವ: ಅತಿಪ್ರಚುರಚಲದವನಿಪಾಲ ಸಂಚಲಚ್ಚಾಮರಮರುತ್‌ಪ್ರೇಂಖೋಲಿ [ಶಾಹಾಂ. ೪]ತಾಧರಣಾಷಿಚಿತ್ರನೇತ್ರವೈಜಯಂತಿಕಾಂಚಲನುಂ . . . ನಡೆಯ (ಅಂಪು. ೦೨-೬೦ ಕ). (ನಾ). ೨. [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು ; "ಒಂದು ಕಾಲಿನಿಂದ ಡೋಲಪಾದಚಾರಿಯನ್ನು ಮಾಡಿ ಇನ್ನೊಂದು ಕಾಲಿನಿಂದ ನೆಗೆದು ಸುತ್ತುವುದು" (ಚಾಸ್ಕಂ. ೩೦೦ ಗದ್ಯಾನುವಾದ): ಪ್ರೇಂಖೋಲಿತ ಸಲೆ ಡೋಲಪಾದಚಾರಿಯ ನೊಲವಿಂದಂ ಮಾಡೆ ಪದದ ಮತ್ತೊಂದು [ಪದಂ] ಕಲದಿಂದೆ ನೆಗೆದು ತಿರುಗಲ್ ಲಲನೇ ಪ್ರೇಂಖೋಲಕರಣಮೆಂದೆನಿಸಿರ್ಕುಂ (ಚಾಸ್ಕಂ. ೯-೦೨೮). ಪ್ರೇಂಖೋಳಿತ : ೩. [ಕಾಮಶಾ] ಸಂಭೋಗದಲ್ಲಿ ಒಂದು ಬಗೆ : ಪಟ್ಟಿಹಿನೆಯನ ತಿಗಂ ಮುಟ್ಟಿ ಸತಿ ಮೊಳಕಾಲನಿಟ್ಟೊಮ್ಮೆಯೊಮ್ಮೆ ಕಟಿಯುನೆ ಕಾಲ್ಗಳಿಂ ಮೆಟ್ಟಿ ಕಿಬ್ಬರಿಗಳನೆ ತಟ್ಟಿ ಮರ್ಮಾಂಗಳಂ ಮುಟ್ಟಿ ರಮಿಸಲ್ಕದೇ ಪ್ರೇಂಖೋಳಿತಂ (ಜಪಚ. ೦೦-೦೦). [ಸಂ.]

**ಪ್ರೇಂಖೋಳನ** 'ಪ್ರೇಂಖೋಲನ' ನೋ.

**ಪ್ರೇಂಖೋಳಿತ** 'ಪ್ರೇಂಖೋಲಿತ' ನೋ.

**ಪ್ರೇಕ್ಷಕ** (ನಾ). (ನಾಟಕ, ಸಿನಿಮಾ, ನೃತ್ಯ ಮೊದಲಾದುವುಗಳನ್ನು) ನೋಡುವವನು; ನೋಟಕ : ಆಯಾ ಶ್ರೇಣಿಯ ಪ್ರೇಕ್ಷಕರಿಗೆ ತಕ್ಕ ಹಾಗೆ ಬೇರೆ ಬೇರೆಯ ಸ್ಥಲವು ಏರ್ಪಟ್ಟಿತು (ಅಭಿ.ಕ. ೬೦). [ಸಂ.]

**ಪ್ರೇಕ್ಷಣ** (ನಾ). ೧. ಕಣ್ಣು. ೨. ನೋಡುವಿಕೆ ; ನೋಟ : "ಪ್ರೇಕ್ಷಣಕೆ ವೆಕ್ಕಣಂ ನೋಟಂ" (ಕಬ್ಬಿಗ. ೫೮); ಪ್ರೇಕ್ಷಣ – ವೆಕ್ಕಣ (ಶಬ್ದಮ. ೫೩ ಪ್ರಯೋ). ೩. ಪ್ರದರ್ಶನ; ದೃಶ್ಯ. ೪. ಒಂದು ಬಗೆಯ ನೃತ್ಯ ಪ್ರದರ್ಶನ : ಪ್ರೇಕ್ಷಣಮಂ ಮುಂದದಿಂ ಬಂದೀಕ್ಷಿಪ ವಿಟತತಿಯ ಕಣ್ಗೆ ಬಲೆಯೆನಿಸಿದ ಕಂಜಾಕ್ಷಿಯರಿರೆ ಪಲರಲ್ಲಿ ವಿವಕ್ಷಿತನಾ ಚಾರುದತ್ತನಧಿವೀಕ್ಷಿಸಿದಂ (ಶೀಬಾಪು. ೧-೯೬). [ಸಂ.]

**ಪ್ರೇಕ್ಷಣೀಯ** (ಗು). ನೋಡಲು ಅರ್ಹವಾದ ; ನೋಡಬೇಕಾದ ; ರಮ್ಯವಾದ : ಆ ದಿನವನ್ನೆಲ್ಲ . . . ಮುಂಬಯಿಯಲ್ಲಿಯ ಪ್ರೇಕ್ಷಣೀಯ ಸ್ಥಳಗಳನ್ನು ನೋಡುವುದರಲ್ಲಿ ಅವರು ಕಳೆದರು (ಸಹುಜ. ೦೦೫೯). [ಸಂ.]

**ಪ್ರೇಕ್ಷಾಗಾರ** (ನಾ). ನಾಟಕ ಮುಂತಾದುವುಗಳ ಪ್ರದರ್ಶನಸ್ಥಳ : ಅಲ್ಲಿ ಪ್ರೇಕ್ಷಾಗಾರವನ್ನು ಕಟ್ಟಿಸಿ ಅದರಲ್ಲಿ ರಾಜನೂ ಅರಮನೆಯ ಹೆಂಗಸರೂ ಕುಳಿತುಕೊಳ್ಳುವುದಕ್ಕೆ ಮಂಚಗಳನ್ನು ರಚಿಸಿದನು (ಪಕಾ. ೨೨) ; ಪ್ರೇಕ್ಷಾಗಾರವು ಚಿತ್ರವಿಚಿತ್ರವಾದ ಶಿಲ್ಪಕಾರ್ಯದಿಂದಲೂ ನಾನಾವರ್ಣದ ಮಣಿಗಳಿಂದಲೂ ಶೋಭಿಸುತ್ತಿದ್ದಿತು (ಅಭಿ.ಕ. ೬೦). [ಸಂ.]

**ಪ್ರೇಕ್ಷಾಗೃಹ** (ನಾ). = ಪ್ರೇಕ್ಷಾಗಾರ : ವರ್ಧಮಾನಮಂಬೀಕ್ಷಣಪ್ರಿಯ ಪ್ರೇಕ್ಷಾಗೃಹಮುಂ (ಅಂಪು. ೦೫-೬೫); "ಪ್ರೇಕ್ಷಾಗೃಹ" ವನ್ನು ಹೇಗೆ ಕಟ್ಟಬೇಕು ? (ಶಾಶಕಾ. ೦೩). [ಸಂ.]

**ಪ್ರೇಕ್ಷಾಸದನ** (ನಾ). = ಪ್ರೇಕ್ಷಾಗಾರ : ವರ್ಧಮಾನಾಭಿಧಾನ ಪ್ರೇಕ್ಷಾಸದನಂಗಳಿಂದಂ (ಶಾಂತಿಪು. ೦೦-೯೪ ಕ). [ಸಂ.]

**ಪ್ರೇಕ್ಷೆ** (ನಾ). ೧. ನೋಡುವುದು; ನೋಟ; ದರ್ಶನ : ನಕ್ಷತ್ರಮಂಡಲದಿನಾಚೆಯಿಂದೊಂದು ದನಿ ವಕ್ಷೋಗುಹಾಂತರದಿನೊಂದು ದನಿಯಿಂತೀ ಸಾಕ್ಷಿದ್ವಯವು ನಿನ್ನೊಳೊಂದುಗೂಡಿದೊಡದೇ ಪ್ರೇಕ್ಷೆ ಪರಬೊಮ್ಮನದು (ಮಂಕುಕ. ೬೦). ೨. ಪ್ರದರ್ಶನ; ದೃಶ್ಯ. ೩. ಬುದ್ಧಿ; ಚಾತುರ್ಯ; ಜಾಣ್ಮೆ : "ಪ್ರೇಕ್ಷಾ . . . ಉಪಲಬ್ಧಿಃ—ಈ ೧೩ ಬುದ್ಧಿ" (ಹಜಾಯು. ೫೫-೦೬೯). [ಸಂ. ಪ್ರೇಕ್ಷಾ]

**ಪ್ರೇತ** (ನಾ). ೧. ಜೀವವಿಲ್ಲದ ದೇಹ ; ಹೆಣ; ಶವ: "ಪ್ರೇತಃ, ಪರೇತಃ, ಕುಣಪಃ, ಶವಃ—ಈ ೪ ಪೆ(ಹೆ)ಣಂ" (ಹಜಾಯು. ೦೦೯-೩); ಬಿಡದಟ್ಟಿ ಬಂಧುಜನದೊಟ್ಟುಡಿಯದ ಕಣ್ಣೀರ ಪೂರಮಾ ಪ್ರೇತಮಂತೊಳೆಗಡಿಸದೆ ಸುಡುವುದು (ಕುಕಹಾ. ೨-೨೮); ಮಗುವನ್ನು . . . ಸ್ಮಶಾನದವರೆಗೆ ಹೆಂಡತಿಯು ಪ್ರೇತದ ಜೊತೆಗೆ, ಅದನ್ನು ತಾನೇ ಒಯ್ದಳು (ಗಂಚೂಹು. ೨೬೦). ೨. ಪಿಶಾಚಿ; ದೆವ್ವ; ವ್ಯಂತರ : "ಪ್ರೇತಃ . . . ನರಕಯಾತನೆ ಪಡುವ ಪ್ರಾಣಿ, ಸತ್ತು ಹೋಗಿ ಸಂಸ್ಕಾರವಿಲ್ಲದೆಯಿರುವವನು" (ಸಿದ್ಧಾಂತಿ. ೩೬೯) ; ಬಿಡದೆ ಬಸಿವೇಱುಗಳ ರಕುತದ ಕಡಲಾ ಕಡಲನು ಕಲಕಿ ಈಗೆಯ ಗಡಣ ನಾಯ್ನರಿ ಹದ್ದು ಭೂತ ಪ್ರೇತ ಪಿಶಾಚದಣಿಯ (ಕೌರವ. ೩೫-೦೦). ೩. ದೇಹವನ್ನು ಅಗಲಿದ ಜೀವ : ಎಷ್ಟೋ ದಿನಗಳ ಹಿಂದೆಯೇ ಗತಿಸಿ ಹೋದ ಕುಮಾರಿಯ ಪ್ರೇತವು ಇಂದು ನಿನ್ನೊಡನೆ ಮಾತನಾಡುತ್ತಿದೆ (ಅರ್ಧರಾತ. ೯೬). ೪. ಪಿತೃದೇವತೆ.

[ಸಂ.]

**ಪ್ರೇತಕ** (ಗು). ಹೆಣಕ್ಕೆ ಸಂಬಂಧಿಸಿದ : ಶಿವನ ಪಾದಾಂಬುವಂ ಧರಿಸಿದ ಮಾನವಂ ತವೆ ಸೂತಕ ಪ್ರೇತಕಾದ್ಯಶೌಚಂಗಳೊಳಗವಿರತಂ ವರ್ತಿಸುತ್ತಿರ್ದೊಡಂ ನೋಡವನೆ ಅಣಿಯರಂ ಶುದ್ಧಂ (ಅಶಾ. ೦-೩-೦೦). [ಸಂ.]

**ಪ್ರೇತಕರ್ಮ** (ನಾ). ಸತ್ತವನ ದೇಹಕ್ಕೆ ಮಾಡುವ ಸಂಸ್ಕಾರ; ಅಂತ್ಯ

ಕ್ರಿಯೆ; ಶವಸಂಸ್ಕಾರ : ಆದೊಡಂ ಪ್ರೇತಕರ್ಮಂಗಳೊಳ್, ಓ ವಾಸುದೇವಾ—ನಿನ್ನನೆಮ್ಮೊಳ್ ಕೂಡೆ ಅಳ್ಕುವೆನ್ (ಅಕ್ಷ್ಮಾ. ೯೬–೬೭೦). [ಸಂ. ಪ್ರೇತಕರ್ಮನ್]

**ಪ್ರೇತಕಳೆ** (ನಾ). ಲವಲವಿಕೆ ಇಲ್ಲದಿರುವ ಸ್ಥಿತಿ ; ತುಂಬ ಮಂಕಾಗಿರುವಿಕೆ: ಮಾಡಿದ ತಪ್ಪಿನಿಂದಾಗಿ ಅವನ ಮುಖದಲ್ಲಿ ಪ್ರೇತಕಳೆ ಹರಿಯುತ್ತಿತ್ತು (ರೂಢಿ). [ಸಂ. ಪ್ರೇತಕಲಾ]

**ಪ್ರೇತಕಾರ್ಯ** (ನಾ). =ಪ್ರೇತಕರ್ಮ : ಧೀರಮತಿ ಪಾರ್ಥಿವಕುಮಾರ. ತಡೆ ಶೋಕವಂ; ಪ್ರೇತಕಾರ್ಯವನೆಸಗಿ ಒತ್ತಗೆ. ಕಳುಹಾತನಂ ಲೋಕದುತ್ತಮಗತಿಗೆ (ಶ್ರೀರಾಮಾ. ೧೦೭–೦೫೩). [ಸಂ.]

**ಪ್ರೇತಗಾಹು** (ನಾ). ಹೆಣಗಳನ್ನು ಸುಡುವ ಸ್ಥಳವನ್ನು ಕಾಯುವಿಕೆ; ಸುಡುಗಾಡಿನ ಕಾವಲು : ವರವಾರಣಾಸಿಮಧ್ಯವೆ ಲಾಳದೇಶವಚ್ಚರಿಯ ಕಾಶೀಪುರವಯೋಧ್ಯೆ ಶ್ಮಶಾನಧರೆಯರಮನೆ ಪ್ರೇತಗಾಹಿನ ತವಗ ಮಣೆ ಪೀಠ (ಹಕಾ. ೦೦–೯೬). [ಪ್ರೇತ+ಕಾಹು$_1$ (< ಕಾಪು )]

**ಪ್ರೇತತರ್ಪಣ** (ನಾ). ಸತ್ತವರಿಗೆ ಅರ್ಪಿಸುವ ತರ್ಪಣ : "ಪ್ರೇತತರ್ಪಣಮನೆ ನಿವಾಪವೆಂದೆನೆ ಕರ್ಮದಾ ತಿಲೋದಕವಮಕ್ಕು" (ಮಂಗರಾ. ೦೦೬–೯). [ಸಂ.]

**ಪ್ರೇತನಾಥ** (ನಾ). ಯಮ : ಶ್ವೇತಮುನಿಯಂ ಕಾಯ್ದು ತನ್ನ ನಿಶಾತಶೂಲದೊಳಿಟ್ಟನುಗ್ರನು ಪ್ರೇತನಾಥನ ವಕ್ಷಮಂ (ಐಪಕ್ಷ. ೯೦–೨೯). [ಸಂ.]

**ಪ್ರೇತಪತಿ** (ನಾ). = ಪ್ರೇತನಾಥ : "ಶಮನಃ, ಸಮವರ್ತೀ, ಪ್ರೇತಪತಿಃ . . . ಶ್ರಾದ್ಧದೇವಃ— ಈ ೧೬ ಜಮನ ಪೆಸರ್" (ಹಲಾಯು. ೦೩–೭೦); ಭೂತಳದೊಳಾ ಗೋವಧಾದೋಷಿಗಳ್ಗೆ ಯಾ ಪಾತಕಂ ನಾನಾಪ್ರಕಾರದಿಂ ಬಡದೆ ಯಾ ಪ್ರೇತಪತಿಯಾಜ್ಞೆಯಿಂ ನರಕದಿಂ ಬೇವುತಿರ್ಪರು ಮಹಾಪ್ರಳಯತನಕಾ ( ಶೀಕೃತಿ. ೯–೨–೦೩ ) ; ಪ್ರೇತಪತಿಯಿದಿರೊಳಂದೀ ಭೂತಳಸುರನಸುವನೊಯ್ದು ತೋಱಲು (ವಸ್ತಾ. ೯–೦೦೭ ). [ಸಂ.]

**ಪ್ರೇತಪೀಡೆ** (ನಾ). ದೆವ್ವದ ಕಾಟ : ನೆಮ್ಮದಿಯಿಂದಿರುವಾಗ ಈ ಪ್ರೇತಪೀಡೆ ಬೇರೆ ( ಕರ್ಮಸ. ೦೫೦ ). [ಸಂ. ಪ್ರೇತ ಪೀಡಾ]

**ಪ್ರೇತಬಲಿ** (ನಾ). ಉತ್ತರಕ್ರಿಯೆ ಮಾಡುವಾಗ ಪ್ರೇತಕ್ಕೆ ಅರ್ಪಿಸುವ ಪಿಂಡ : (೯). [ಸಂ.]

**ಪ್ರೇತಭೂಮಿ** (ನಾ). ಸುಡುಗಾಡು ; ಶ್ಮಶಾನ : ಏನು ಗೂಗೆಯ ಕೂಗಿನಿತು ಕರ್ಕಶ, ಏಕಾರ! ಸುತ್ತಲಿಹ ಪ್ರೇತಭೂಮಿಯ ಮಹಿಮೆಯಿರಬೇಕು! ( ಕಂಠ್ರಸ. ೦೦೦–೨೬ ). [ಸಂ.]

**ಪ್ರೇತಯಾತ್ರೆ** (ನಾ). ಶ್ಮಶಾನಯಾತ್ರೆ : ತಾವಿಂದು ಗುರುಮಹಾರಾಜರ ಪ್ರೇತಯಾತ್ರೆಯನ್ನೇ ನೋಡುತ್ತಿರುವದೆಂದು ಅನಿಸಿಬಿಟ್ಟಿತ್ತು ಅವರಿಗೆ ( ಸ್ಮೃತಿ. ೪೫೦ ). [ ಸಂ. ಪ್ರೇತಯಾತ್ರಾ]

**ಪ್ರೇತವನ** (ನಾ). = ಪ್ರೇತಭೂಮಿ : ಪ್ರೇತವನದೊಳಗೆ ಬೆಳೆದ ಹೂವಾರ ಮುಡಿಹಕ್ಕೆ ಯೋಗ್ಯಂ (ಹಕಾ. ೭–೦೬). [ಸಂ.]

**ಪ್ರೇತವಿದ್ಯೆ** (ನಾ). "ಸತ್ತವರೊಂದಿಗೆ ವ್ಯವಹಾರ ನಡೆಸಿ ಭವಿಷ್ಯ ಹೇಳುವ ವಿದ್ಯೆ: ಪ್ರೇತವಿದ್ಯೆ; ಕಣ್ಕಟ್ಟು; ಯಕ್ಷಿಣಿ ; ಇಂದ್ರಜಾಲ" (Necromancy. ೩೦೪೮). [ ಸಂ. ಪ್ರೇತವಿದ್ಯಾ ]

**ಪ್ರೇತಸಂಸ್ಕಾರ** (ನಾ). = ಪ್ರೇತಕರ್ಮ : ಬೇರೆ ರೀತಿಯ ಸೂಕ್ತಗಳೂ ಕೆಲವು ಋಗ್ವೇದಸಂಹಿತೆಯಲ್ಲಿ ಸೇರಿಕೊಂಡಿವೆ. ಇವುಗಳಲ್ಲಿ . . . ಕೆಲವು ವಿವಾಹಕ್ಕೆ ಮತ್ತು ಪ್ರೇತಸಂಸ್ಕಾರಕ್ಕೆ ಸಂಬಂಧಪಟ್ಟವು ( ಭಾರತ. ೨೩ ): ಹೆಂಡತಿಯ ಹಾಗು ಮಗನ ಪ್ರೇತಸಂಸ್ಕಾರವನ್ನು ರಾಘಪ್ಪ...ಮಾಡಿಸಿದನು (ಗಂಕೂಡು. ೨೮೦). [ಸಂ.]

**ಪ್ರೇತಸೂತಕ** (ನಾ). ಐದು ಬಗೆಯ ಸೂತಕಗಳಲ್ಲಿ ಒಂದು ; ಸತ್ತ ವ್ಯಕ್ತಿಯ ಸಂಬಂಧದಿಂದ ಉಂಟಾಗುವ ಸೂತಕ ; ಮರಣಸೂತಕ : ಪ್ರೇತಸೂತಕ ಜಾತಿಸೂತಕ ಜಾತವಿರಹಿತನಾಗಿ ದಿವಿಜವ್ರಾತದೊಳು ತಾನುತ್ತಮನಾಂಗವುದಾಯ್ತು ಸರ್ವಾಂಗ (ಐಪಕ್ಷ. ೧೮–೯೯); ಜಾತಿಸೂತಕ ಪ್ರೇತಸೂತಕ ಜನನಸೂತಕ ಉಚ್ಛಿಷ್ಟಸೂತಕ ರಜಸ್ಸೂತಕವೆಂಬ ಪಂಚಸೂತಕಂಗಳ ಕಳೆದು (ಅಷಂಶೀ. ೯೭–೯೦). [ಸಂ.]

**ಪ್ರೇತಾಂಗಳ** (ನಾ). = ಪ್ರೇತಭೂಮಿ : ಎಳೆಯ ರವಿರಶ್ಮಿಯಲಿ ಪ್ರೇತಾಂಗಳದ ಧೂಮಜ್ವಾಲೆಯಲಿ . . . ಆಯುಷವಿಂದು ಹೋಗದೆ ದಿನದಿನದೊಳು (ಕುವೆಂ ,ಶಾ. ೩–೩೬). [ಪ್ರೇತ + ಅಂಗಳ$_2$]

**ಪ್ರೇತಾರಾಧನೆ** (ನಾ). ಭೂತಗಳಿಗೆ ಮಾಡುವ ಪೂಜೆ ; ಆರಾಧನೆ : ಕಲೆ, ಮಾಟ , ಪ್ರೇತಾರಾಧನೆ—ಇವು ಇದೇ ಕಾಲದಲ್ಲಿ ಪ್ರಾರಂಭವಾದವು (ಶಿಲ್ಪಶಾ. ೨೦). [ಸಂ. ಪ್ರೇತಾರಾಧನಾ]

**ಪ್ರೇತಾವಾಸ** (ನಾ). =ಪ್ರೇತಭೂಮಿ: ಭೂತಪತಿಯೊಗೆವುದುಂ ತನ್ನಾತೆವಲಂ ಮಡಿದಳಕ್ಕುಮಲ್ಲದೊಡಾತಂ ಪ್ರೇತಾವಾಸದೊಳಾಡುವ ಭೂತಂಗಳ ಕೂಡೆ ವಿಹರಣಂಗೆಯ್ಯುವನೆ (ಕೃಕಾ. ೯–೦೦೨). [ಸಂ.]

**ಪ್ರೇತಿ** (ನಾ). ೧. ಸಾವು ; ಮರಣ. ೨. ಬೇರೆಯಾಗುವುದು ; ಅಗಲುವುದು. ೩. ವಿರುದ್ಧವಾದಂದು ; ಪ್ರತಿಕೂಲವಾದುದಂ : ನಾನು ಏತಿ ಅಂದರೆ ಅವರು ಪ್ರೇತಿ (ಶಂತುರ್ಗದ. ೯೯). 'ಏತಿಪ್ರೇತಿ'ಪರಾ. ☞ 'ಪ್ರೇತಿ'ಯೆಂಬುದಂ ಏತಿಪ್ರೇತಿ ಎಂಬ ಕೂಡುನಂಡಿಯಲ್ಲಿಯೂ ಕೆಲವೊಮ್ಮೆ ಬಿಡಿಯಾಗಿಯೂ ಪ್ರಯೋಗವಾಗುತ್ತದೆ. [ಸಂ.]

**ಪ್ರೇಮ** (ನಾ). ೧. ಒಲವು ; ಪ್ರೀತಿ : ಪ್ರೇಮದೊಳೆ ತನ್ನ ಬೆನ್ನನೆ ಧೂಮಪ್ರಭೆ ನಾರಕತ್ವಮೆಟ್ಟಿಂದವೊಲ್ (ಶಾರ್ಕ್ರಕೃ. ೬–೦೦೩). ೨. ಅನುರಾಗ ; ಪ್ರಣಯ : ಪ್ರೇಮರಸಾಮೃತಾಂಬಧಿಯ ಮೇರೆಯ ತಾನೆನೆ (ಶಾಂತೀಶ್ವ. ೦೦–೯೬). ೩. ಅಕ್ಕರೆ ; ವಾತ್ಸಲ್ಯ : ಪ್ರೇಮದ ಧರ್ಮೋದ್ಭವನಾ ಭೀಮಂಗಾ ಸತಿಯೊಳಂತು ಪರಿಣಯನಮನುದ್ದಾಮಯಶನಂದು ಮಾಡಿ (ಪೀಲಾಪು. ೯–೬೩); ಪ್ರೇಮವೆ ನಿಖಿಲಪೂಜೆಯಾಯ್ತು (ಶ್ರೀರಾಮಾ. ೦೭–೯೯೩). ೪. ಸಂತೋಷ ; ಆನಂದ. ೫. [ಛಂದ] ಒಂದೊಂದು ಪಾದದಲ್ಲಿಯಂಊ ಒಂದು ಭಗಣ, ಒಂದು ಲಘು ಮತ್ತು ಒಂದು ಗುರುವೂ ಇರುವ ವೃತ್ತ : ಸೋಮ ಹರಿಯುಂ ಕಾಮಹರನುಂ ತಾಮಿರೆ ಪೆಸರ್ ಪ್ರೇಮಂ (ಛಂದೋಂಬು. ೨–೬೨). ೬. ಪ್ರತಿಸಾಲಿನಲ್ಲಿಯೂ ನಾಲ್ಕು ಗುರುಗಳುಳ್ಳ ಒಂದು ವೃತ್ತ ; ಪ್ರತಿಷ್ಠಾಛಂದಸ್ಸಿನಲ್ಲಿ ಒಂದು ವೃತ್ತ : ಪ್ರೇಮಂ ಗಗಗ ಗಂ (ಛಂದೋಂಬು. ೬. ೨–೬೫). [ಸಂ. ಪ್ರೇಮನ್]

**ಪ್ರೇಮಂಗೈ** (ಕ್ರಿ). ಪ್ರೀತಿಸು ; ಒಲವುದೋರು : ಪ್ರೇಮಿ ಪ್ರಿಯಂ ಸಹಚರಂ ಪರಾಯಣನೆನಲ್ ಪ್ರೇಮಂಗೈವ[ಶಾಕಟಾ. ಪ್ರೇಮಂಗೈವ] ನೆನಿಕ್ಕು (ಮಂಗರಾ. ೬೦–೮). [ಪ್ರೇಮ + ಕೈ$_{01}$ (< ಕೆಯ್$_1$) ]

**ಪ್ರೇಮಕಥೆ** (ನಾ). ಪ್ರಣಯದ ಕಥೆ : ಶಾಕುಂತಲವು ದುಷ್ಯಂತ ಶಕುಂತಲೆಯರ ಪ್ರೇಮಕಥೆ (ಧರ್ಮಶಾ. ೬೬). [ಸಂ. ಪ್ರೇಮಕಥಾ]

**ಪ್ರೇಮಕಲಹ** (ನಾ). ಪ್ರೀತಿಯ ಹುಸಿಜಗಳ : ಈ ಮಾತಿನಿಂದ ನಮ್ಮಲ್ಲಿ ಸ್ವಲ್ಪ ಪ್ರೇಮಕಲಹವಾಗಿ ಅಕ್ಕಿ ತರಬೇಕೆಂದು ಹೇಳಿ ಅವರನ್ನು ಸಾಗಹಾಕಿದೆ (ಸ್ಮೃತಿ. ೧೨೯). [ಸಂ.]

**ಪ್ರೇಮಗೀತ** (ನಾ). ಪ್ರೀತಿಯನ್ನು ವಸ್ತುವಾಗಿಟ್ಟುಕೊಂಡಿರುವ ಹಾಡು ; ಪ್ರಣಯಗೀತೆ : ಠಾಕೂರರ ಪ್ರೇಮಗೀತಗಳ ಸಮುಚ್ಚಯ 'ತೋಟಗಾರ' (ರವೀಶಾ. ೩೯) ; ಬುದ್ಧಿಪ್ರಧಾನತೆಯು ವಿದ್ವತ್ ಪ್ರಚುರವಾಗದೆ ಬರಿ ಜೀವನದೃಷ್ಟಿಯ ಒಂದು ಅಂಗವಾಗಿ ಬರುವುದನ್ನು ವಿಡಂಬನಗೀತಗಳಲ್ಲಿಯೂ ಪ್ರೇಮಗೀತಗಳಲ್ಲಿಯೂ ಬೇರೆ ಭಾವಗೀತಗಳಲ್ಲಿಯೂ ನಾವು ಕಾಣುತ್ತೇವೆ (ನವ್ಯಕಾ. ೩೦). [ಸಂ.]

**ಪ್ರೇಮಪಾತ್ರ** (ನಾ). ಪ್ರೀತಿಗೆ ಪಾತ್ರವಾದ ವ್ಯಕ್ತಿ : ಸೌ. ರಾಧಾದೇವಿ ಯವರು ಕೃಷ್ಣರಾಯರ ಪ್ರೇಮಪಾತ್ರರಿರುವರೆಂಬ ಸಂಗತಿಯು ನಿಜವೇ ಹೇಗೆ? (ಸ್ತ್ರೀಧರ್ಮ. ೦೪೯). [ಸಂ.]

**ಪ್ರೇಮಭಂಗ** (ನಾ). ಪ್ರಣಯಕ್ಕೆ ಅಡ್ಡಿಯುಂಟಾಗುವುದು : ಪ್ರೇಮ ಭಂಗವು ಅನೇಕಸಾರಿ ತೆರತೆರನಾದ ಉನ್ಮಾದಗಳಲ್ಲಿ ಪರ್ಯವಸಾನವಾಗು ತ್ತದೆ (ಕಾವ್ಯರು. ೨೬೬) ; ಪ್ರೇಮಭಂಗದಿಂದಾದ ಒಂದು ಆತ್ಮಹತ್ಯೆಯ ವಿಷಯವನ್ನು . . . ಚರ್ಚಿಸುತ್ತಿದ್ದಳು (ಜಯಂತ. ೨೬೩). [ಸಂ.]

**ಪ್ರೇಮಲ, ಪ್ರೇಮಳ** (ಗು). ಪ್ರೀತಿಯಿಂದ ಕೂಡಿದ ; ಪ್ರೇಮಪೂರಿತ ವಾದ : ಕವಿತೆಯಿಂದ ನಾವು ಬಯಸುವುದೇನನ್ನು ? ನಿರ್ಲಿಪ್ತವೂ ಜ್ಞಾದೀಪ್ತವೂ ಪ್ರೇಮಲವೂ ಆದ ಚಿತ್ತದ ಸಂಸರ್ಗವನ್ನು (ಕಾವ್ಯಕು. ೩೬); ಇವನು . . . ಸಾಕಷ್ಟು ಸುಂದರ, ಹಣವಂತ ; ಪ್ರೇಮಲಸ್ವಭಾವದ ವ್ಯಕ್ತಿ (ಶೀರ್ಷ್ಗಂ. ೦೬). ಪ್ರೇಮಳ : ನನ್ನಲ್ಲಿ ಏನಾದರೂ ಒಳ್ಳೆಯ ಗುಣ, ಏನಾದರೂ ಪ್ರೇಮಳಸ್ವಭಾವ ಇದ್ದುದಾದರೆ ಅದರ ಶ್ರೇಯಸ್ಸು ಮಾತೃನಿಷ್ಠ ಸಹೋದರನಿಗೂ . . . ಸಲ್ಲುತ್ತದೆ (ಶ್ರಾಕುಕಾ. ೩೬). [ಸಂ.]

**ಪ್ರೇಮಲೆ** (ನಾ). ಪ್ರೀತಿಪಾತ್ರಳಾದವಳು : ಸ್ವಪ್ನರೋಹಿಣಿ ಪ್ರೇಮ ಚಂದ್ರಗೆ ಲಕ್ಷರೂಪಿಣಿ ಪ್ರೇಮಲೆ (ಷಷ್ಠಿಸ. ೦೧-೦೨). [ಸಂ. ಪ್ರೇಮಲಾ]

**ಪ್ರೇಮವಿವಾಹ** (ನಾ). ಗಂಡು, ಹೆಣ್ಣು ಪರಸ್ಪರ ಪ್ರೀತಿಯಿಂದ ಒಪ್ಪಿ ಮಾಡಿಕೊಳ್ಳುವ ಮದುವೆ : ತಮ್ಮ ಈ ಪ್ರೇಮವಿವಾಹಕ್ಕೆ ತನ್ನ ತಾಯಿಯೂ ಒಪ್ಪಿದ್ದಾಳೆ ಎಂಬ ಆನಂದದ ಸುದ್ದಿಯನ್ನಷ್ಟೇ ತಿಳಿಸಿದಳು (ಆಕೋರೀ. ೦೦೦). [ಸಂ.]

**ಪ್ರೇಮಳ** 'ಪ್ರೇಮಲ'ನೋ.

**ಪ್ರೇಮಾನುಬಂಧ** (ನಾ). ಅನುರಾಗಬಂಧನ : ಭವವಾರ್ಧಿಪ್ರತಿಮುಗ್ನ ಜೀವನಿವಹಂ ಪ್ರೇಮಾನುಬಂಧಾ ಮನೋಭವರಾಗಾಶಯಮಂ ನಿಮಿರ್ವ ಭವಸಂತಾನಂಗಳೊಳ್ ಕೂರ್ವ ಕೂಡುವ ತ[ಬ್ಬಿ]ರ್ವ ಬಯಕ್ಕೆಯಂ ಬಯಸುಗುಂ (ಶಾಂತಿಪು. ೯-೬). [ಸಂ.]

**ಪ್ರೇಮಾಲೋಕನ** (ನಾ). ಪ್ರೀತಿಯಿಂದ ನೋಡುವುದು ; ಅನುರಾಗ ದೃಷ್ಟಿ : ಪ್ರೇಮಾಲೋಕನಸುಮನೋದಾಮದೆ ಬರೆತೆಗೆಯೆ ಭೂಭುಜಂ ನಿಜತನುದಿವ್ಯಾಮೋದಂ ಬಳಸೆ ಲತಾಕೋಮಳೆ ಕುಳ್ಳಿರ್ದಳೊಡನೆ ಹೇಮಾಸನದೊಳ್ (ಮಲ್ಲಿಪು. ೯-೭೦). [ಸಂ.]

**ಪ್ರೇಮಿ** (ನಾ). ಪ್ರೀತಿಸುವ ವ್ಯಕ್ತಿ ; ಪ್ರಣಯಿ : "ಪ್ರೇಮಿ ಪ್ರಿಯಂ ಸಹಚರಂ ಪರಾಯಣನೆನಲ್ ಪ್ರೇಮಗ್ಗೈವನೆನಿಕ್ಕು" (ಶಬ್ದಮಣಿ. ೬೬-೬) ; ಮತ್ತೆ ಮರುದಿನ ಮುಂಜಾನೆ ಭೆಟ್ಟಿಯೆಂದು ಪ್ರೇಮಿಗಳಿಬ್ಬರೂ ಅಗಲಿದರು (ಸವಾಜೀ. ೯೦೬). [ಸಂ. ಪ್ರೇಮಿನ್]

**ಪ್ರೇಮಿಸು** (ಕ್ರಿ). ಪ್ರೀತಿಸು ; ಒಲವುದೋರು : ನೀನೆಂದೆಂದಿಗೂ ಪ್ರೇಮಿಸುತ್ತಿರು ಅವಳೆಂದೆಂದಿಗೂ ಸುಂದರಿಯಾಗಿರಲಿ (ಶಾರಜಾ. ೬೬). [ಪ್ರೇಮ + — ಇಸು]

**ಪ್ರೇಮೋನ್ಮಾದ** (ನಾ). ಹುಚ್ಚುಪ್ರೀತಿ ; ಪ್ರೇಮದ ಉದ್ವೇಗ : ಪ್ರೇಮೋನ್ಮಾದ, ಪ್ರಣಯಕೋಪ, ವಿರಹತಾಪ. . .ಎಲ್ಲವನ್ನೂ ಕಲಾವಿದ ನಿರೂಪಿಸಿದ (ಶಾರದ. ೩೬೦). [ಸಂ.]

**ಪ್ರೇಯ** (ನಾ). ೧. ಸುಖ ; ಕ್ಷೇಮ : ನಿಮ್ಮ ಜೀವನವು ಪ್ರೇಯ ಮೇಣ್ ಶ್ರೇಯಕ್ಕಾಗಿ ! (ಕರುಣ್ಹಾ. ೭೭-೦೪). ೨. [ಕಾವ್ಯಮೀ] ಅಲಂಕಾರಗಳಲ್ಲಿ ಒಂದು ; ಪ್ರೀತಿಪರವಾದ ಮಾತುಗಳಿಂದ ಕೂಡಿದ ಬರಹವೇ ಪ್ರೇಮವೆಂಬ ಅಲಂಕಾರದಿಂದ ಕೂಡಿರುವುದು: ಪ್ರೇಯಂ, ಪ್ರಿಯತರವಚನಾಖ್ಯೇಯಮಹಂಕಾರಿಗಿರಿಮಮೂರ್ಜಸ್ವಿ ಶುಭಪ್ರಾಯಾರ್ಥಾಶಂಸಾಭಿಪ್ರಾಯಮಲಂಕಾರಮಾಶಿಯೆಂಬರ್ ಕೆಲಬರ್ (ಕಾವ್ಯಾವ. ೬೬೨) ; 'ರಸವತ್', 'ಪ್ರೇಯ', 'ಊರ್ಜಸ್ವಿ', 'ಸಮಾಹಿತ'. —ಈ ಅಲಂಕಾರಗಳಲ್ಲಿ ರಸಾದಿಗಳಿಗೆ ಅಂಗತ್ವವುಂಟು (ಕೃಷ್ಣಾರೋ. ೬೦). [ಸಂ. ಪ್ರೇಯಸ್]

**ಪ್ರೇಯಸಿ** (ನಾ). ಪ್ರೀತಿಪಾತ್ರಳಾದವಳು ; ನಲ್ಲೆ : ಸುದತೀ ಸದ್ರೂಪವಮಂ ತಾಳ್ದಿದ ವನಜಭವಪ್ರೇಯಸೀನಾಮಮಂ ತಾಳ್ದಿದ . . . ವಾಕ್ಸುಂದರಿ ಪರಮವಚೋವೃದ್ಧಿಯಂ ಮಾಡುಗೆಮ್ಮೊಳ್ (ಸುಕುಮಾ. ೦-೬) ; ಪ್ರೇಯಸಿ ಬಂದು ನಿನ್ನ ಮನಮೊಲ್ದರಲೋಳಿಗಳಿಂ ವಿಚಿತ್ರಶೋಭಾಯತಪ್ರಸರಮಂ ಸಮೆದು (ಕಸುಮಾ. ೩-೬೬) ; ಆದಿದೇವ 'ರಾಗರಸಿಕ, ಈತನ ರಸಿಕತೆಗೆ ಮೆರುಗು ಕೊಡಲು ಯಶಸ್ವತಿ ಹಾಗೂ ಸುನಂದೆಯರು ಪ್ರೇಯಸಿಯರಾಗಿ ಬಂದರು (ದಾನಶಂ. ೦೬). [ಸಂ. ಪ್ರೇಯಸೀ]

**ಪ್ರೇಯಸ್ಸು** (ನಾ). ಸುಖ ; ಕ್ಷೇಮ : ಇದೇ ಶ್ರೇಯಸ್ಸಿನ ದಾರಿ, ಪ್ರೇಯಸ್ಸಿನ ದಾರಿಯೂ ಹೌದು (ರಾಷ್ಟ್ರೋಕ. ೨೦೬) ; ಅಪಾರಸಂಪತ್ತನ್ನು ಗಳಿಸಿಯೂ ಪ್ರೇಯಸ್ಸಿಗಿಂತ ಶ್ರೇಯಸ್ಸೇ ಮುಖ್ಯವೆಂದು ಭಾರತವು ಸಾರಿತು (ಭಾರದ. ೩೦೬). [ಸಂ. ಪ್ರೇಯಸ್]

**ಪ್ರೇರಕ** (ಗು). ೧. ಉತ್ತೇಜನಗೊಳಿಸುವ ; ಪ್ರಚೋದಿಸುವ. (ನಾ). ೨. ಉತ್ತೇಜನಗೊಳಿಸುವುದು ; ಪ್ರಚೋದನೆ : ಭಾರ್ಯರಿಂದೊಡಗೂಡಿ ಕಾರಣಕಾರ್ಯವಸ್ತುಗಳಲ್ಲಿ ಪ್ರೇರಕಪ್ರೇಯ ರೂಪಗಳಿಂದೆ ಪಟತಂತುಗಳವೊಲಿದ್ದು . . . ಈತನ ವಿಹಾರವು ಗೋಚರ ವುದೇನೋ (ಹಸಾರ. ೩-೯) : ಹಿಂದೆ ಸೃಷ್ಟಿಕ್ರಿಯೆಗೆ ಪ್ರೇರಕವಾಗಿರುವ ಶಕ್ತಿ ಒಂದು ಯುಗಧರ್ಮ (ಶಾವಗೀ. ೯). ೩. ಕಾರ್ಯದಲ್ಲಿ ತೊಡಗಿಸು ವವನು ; ಪ್ರಚೋದಕ : ಪ್ರೇರಕಂ ನೀಂ ಬರಲು ಸಾಕ್ಷಿಯಂತೀ ತಂದೆ (ಕಂಠೀರ. ೬-೦೩೩) ; ವ್ಯಾಸಮಹರ್ಷಿ ಭರತಖಂಡದ ಐಕ್ಯ ಮತ್ತು ಸಂಘಟನೆಗೆ ಪ್ರೇರಕನಾದನು (ಪುಣ್ಯಾಕ. ೦೦೨ ಶೀರ್ಷಿಕೆ). [ಸಂ.]

**ಪ್ರೇರಕಶಕ್ತಿ** (ನಾ). ಉತ್ತೇಜನಗೊಳಿಸುವ ಶಕ್ತಿ ; ಪ್ರಚೋದಿಸುವ ಚೈತನ್ಯ : ಈ ಎರಡು ವಿರುದ್ಧಪಂಥಗಳಿಗೂ ಪ್ರೇರಕಶಕ್ತಿಯೊಂದೇ ಎಂಬುದು ವಿಚಿತ್ರಸಂಗತಿ. ಈ ಪ್ರೇರಕಶಕ್ತಿ ಅರಿಸ್ಟಾಟಲ್ಲನ ಸಿದ್ಧಾಂತ (ಪುಣ್ಯಾಕ. ೦೦ ಶೀರ್ಷಿಕೆ) ; ಹಿಂದಿನ ಪ್ರೇರಕಶಕ್ತಿಯಾಗಲೀ . . . ಉದಾರ ಮನೋಭಾವವಾಗಲೀ ಈಗ ಉಳಿದಿರಲಿಲ್ಲ (ಕೃಷಕು. ೦೯). [ಸಂ.]

**ಪ್ರೇರಣ** (ನಾ). ೧. ಒಂದು ಕಾರ್ಯದಲ್ಲಿ ಪ್ರವರ್ತಿಸುವಂತೆ ಮಾಡುವುದು ; ಕಾರ್ಯಮಗ್ನನಾಗಲು ಪ್ರಚೋದಿಸುವುದು : ಭಕ್ತಿಪ್ರಿಯಾಪ್ರೇರಣದಿಂ ತದ್ವರ್ಣನೋಪಕ್ರಮದೊಳೆಸಗಿದೆಂ ಭ್ರಾಂತನೆಂ (ಕಂಠೀರ. ೦-೬೪). ೨. [ವ್ಯಾಕ] "ಪ್ರೇರಣ ಎಂದರೆ ಇನ್ನೊಬ್ಬನಿಂದ ಕೆಲಸ ಮಾಡಿಸುವುದು ಎಂದು ಅರ್ಥ" (ಹುಕ್ಕೇಕು. ೦೩೦). [ಸಂ.]

**ಪ್ರೇರಣಾರ್ಥ** (ನಾ).[ವ್ಯಾಕ] ಇನ್ನೊಬ್ಬರಿಂದ ಕೆಲಸ ಮಾಡಿಸುವುದನ್ನು ತಿಳಿಸುವುದು : ಎಲ್ಲ ಧಾತುಗಳಿಗೂ ಪ್ರೇರಣಾರ್ಥದಲ್ಲಿ — ಇಸು ಪ್ರತ್ಯಯ ಸೇರಿ ಹೊಸ ಧಾತುಗಳಾಗುತ್ತವೆ (ಹುಕ್ಕೇಕು. ೦೩೦) ; ಪ್ರೇರಣಾರ್ಥದ ಇಸು ಪ್ರತ್ಯಯದ ಮೇಲೆ ಮತ್ತೆ ಪ್ರೇರಣಾರ್ಥದಲ್ಲಿ ಇಸು ಪರವಾದರೆ ಪೂರ್ವದ ಇಸುವಿಗೆ ಲೋಪವಾಗುವುದು (ಕೃಶಾ. ೬೦). [ಸಂ.]

**ಪ್ರೇರಣಿಸು** (ಕ್ರಿ). ಉತ್ಸಾಹಗೊಳಿಸು ; ಪ್ರಚೋದಿಸು : ಜಾಜು ದೋಚಿ ನಿಂದು ಬಣ್ಣಿಕೆ ನಿನ್ನ ಕಳುಹಿ ಪ್ರೇರಣಿಸುತಿದ್ದನು ಭಾವು ನೋಡ (ಭಕ. ೯೮-೯೦). [ಪ್ರೇರಣ + — ಇಸು]

**ಪ್ರೇರಣೆ** (ನಾ). ಒಂದು ಕಾರ್ಯದಲ್ಲಿ ಪ್ರವರ್ತಿಸುವಂತೆ ಮಾಡು ವುದು ; ಪ್ರಚೋದನೆ : ಅರಣ್ಯದ ಭೂತ ಭೇತಾಳವಡೆ ಸುತ್ತಿ ಮುತ್ತಿ ಬೊಬ್ಬಿಟ್ಟು ಝಂಕಿಸಿದುವಾ ಕಾಶಿಕನ ಪ್ರೇರಣೆಯೊಳು (ಹಕಾ. ೯-೯೩); ಅಜೇಯವಾದ ಪ್ರಕೃತಿಗೆ ಎದುರಾಗಿ, ಅದಕ್ಕೆ ಸೋತು,

ದಾಸನಾಗಿ ಅದರ ಪ್ರೇರಣೆಯಂತೆ ವರ್ತಿಸುವುದರ ಬದಲು . . . ಅದರೊಡನೆ ಸಹಕರಿಸುವುದು ಒಳಿತಾದ ಮಾರ್ಗ (ಧಾರ್ಮಿ. ೦೦೩). [ಸಂ. ಪ್ರೇರಣ]

**ಪ್ರೇರಿತ** (ಗು). ೧. ಉತ್ತೇಜನಗೊಂಡ ; ಪ್ರಚೋದನೆಗೊಳಗಾದ : ಪೌರವನಾಂತರಾಳದೊಳಗೊರ್ವ ವಸಂತವಿಲಾಸಕೌತುಕಪ್ರೇರಿತಮಾನಸಂ ತೊಳಗುತಿರ್ದು (ಕಂದ್ರ.ಪು. ೩-೬೯). (ನಾ). ೨. ಪ್ರಚೋದಿತವಾದುದು; ಹುರುಪುಗೊಂಡುದು : ಕಾಗದವನ್ನು ಕೈಗಳು ಯಂತ್ರಶಕ್ತಿಯಿಂದ ಪ್ರೇರಿತವಾದಂತೆ ಮಡಚಿ ಮುದ್ದೆ ಮಾಡಿದ್ದವು (ಕುಕಾ. ೪೮). ೩. ಪ್ರಚೋದನೆಗೊಂಡ ವ್ಯಕ್ತಿ; ಹುರುಪುಗೊಂಡ ವ್ಯಕ್ತಿ: ತದ್ಭ್ರೂವಿಕ್ಷೇಪಣಪ್ರೇರಿತಂ ಮೇಘನಾದನಾದರದಿಂ ಬಂದು (ರಾಜಶೇ. ೬-೪೦ ವ) ; ವಾಜಶ್ರವಸರಿಂದ ಪ್ರೇರಿತನಾಗಿ ನಾನು ಇಲ್ಲಿಗೆ ಬಂದಿಲ್ಲ (ಕಠಂಶಾ. ೭). ೪. ರಾಯಭಾರಿ. [ಸಂ.]

**ಪ್ರೇರಿಸು** (ಕ್ರಿ). ಪ್ರಚೋದಿಸು ; ಹುರುಪುಗೊಳಿಸು : ಯಾತ್ರೆಗವನೀತಳಪತಿಯಂ ಪ್ರೇರಿಸಿತ್ತು ಪುಗಿಲೊಳ್ ಶರದಂ (ಶಾಂತಿ. ೦೦-೦೪೦) ; ಇಸುವನ್ನೀ ಮನಮಂ ಪ್ರೇರಿಸುವಿತನನಖಿಳಲೋಕಗುರುವಂ . . . ಇಸುವಸಮಾಸ್ತ್ರರ್ ಜಲಧಿವಸನವಸುಧೆಯೊಳುಂಟೇ (೧೦ಳ. ೬-೨೯). ಅವರೀರ್ವರೂ ಗಜಾರೋಹಣವಂ ಮಾಡಿ ಗಜವಂ ಪ್ರೇರಿಸಲು ಆ ಗಜವು . . . ತೆರಳುತ್ತ (ಶಾಗಂ. ೪೦೨-೨೦). [ಪ್ರೇರಣೆ+—ಇಸು₃]

**ಪ್ರೇರೇಪಕ** (ಗು). ಹುರುಪುಗೊಳಿಸುವ : ಪ್ರಚೋದಿಸುವ. [< ಪ್ರೇರಕ]

**ಪ್ರೇರೇಪಣೆ** (ನಾ). = ಪ್ರೇರಣೆ : ಅವಳು ಪ್ರೇರೇಪಣೆ ಮಾಡದಿದ್ದರೆ ಕೈಕೆಗೆ ದುರ್ಬುದ್ಧಿ ಹುಟ್ಟುತ್ತಲೇ ಇರಲಿಲ್ಲ (ಧಾರ್ಮ. ೯೨) ; ಇಷ್ಟು ಸುಲಭವಾಗಿ ನಮಗೆ ಅಷ್ಟು ಪುಣ್ಯ ಪ್ರಾಪ್ತಿಯಾಗಬೇಕೆಂದೇ ಈ ಕಡೆ ಬರಲು ಪ್ರೇರೇಪಣೆ ಮಾಡಿದಿ ? (ಕಠಂಶಾ. ೩೭). [<ಪ್ರೇರಣೆ]

**ಪ್ರೇರೇಪಿತ** (ನಾ). ಪ್ರಚೋದಿತನಾದವನು ; ಪ್ರೇರಣೆಗೊಂಡವನು : ಸರ್ವಶುಭಾಕಾಂಕ್ಷೆಯಿಂದ ಪ್ರೇರೇಪಿತನಾಗಿ ಆಡುತ್ತಿದ್ದೇನೆ (ಕಠಂಶಾ. ೦೩೦). [< ಪ್ರೇರಿತ]

**ಪ್ರೇರೇಪಿಸು** (ಕ್ರಿ). = ಪ್ರೇರಿಸು : ಅವನ ಕಡೆಯವರು ಜನಗಳನ್ನು ಪ್ರೇರೇಪಿಸುತ್ತಿದ್ದಾರೋ ಏನೋ (ಕಂಗಾಳ್ಕ. ೩೭೦) ; ಕೇಶವಣ್ಣನೇ ಈ ಬಣ್ಣದ ಸೀರೆಯನ್ನು ಕೊಂಡುಕೊಳ್ಳಲು ಪ್ರೇರೇಪಿಸಿದ್ದು (ಪವಶೀ. ೬). [< ಪ್ರೇರಿಸು]

**ಪ್ರೇಷಕ** (ನಾ). ೧. ಕಳಿಸುವುದು ; ರವಾನಿಸುವುದು. ೨. ಕಳುಹಿಸುವ ಸಾಧನ : ಟೆಲಿಫೋನ್ ಪದ್ಧತಿಯಲ್ಲಿ ಎರಡು ಮುಖ್ಯ ಭಾಗಗಳಿವೆ. ಮೊದಲನೆಯದನ್ನು ಪ್ರೇಷಕವೆಂದೂ ಎರಡನೆಯದನ್ನು ಗ್ರಾಹಕವೆಂದೂ ಕರೆಯುತ್ತಾರೆ (ಶಿಕ್ಷಾ.ಶಿ. ೩೦). [ಸಂ.]

**ಪ್ರೇಷಣ** (ನಾ). ೧. (ದೂತನನ್ನು) ಕಳುಹಿಸುವುದು ; ರವಾನಿಸುವುದು. ೨. ಪ್ರಚೋದಿಸುವುದು. ೩. [ಜೈನ] ದೇಶವ್ರತಾತಿಚಾರದ ಪ್ರೇಕ್ಷಣ, ಶಬ್ದ, ಆನಯನ, ರೂಪಾಭಿವ್ಯಕ್ತಿ, ಪುದ್ಗಲಕ್ಷೇಪಗಳೆಂಬ ಐದು ವಿಧಗಳಲ್ಲಿ ಒಂದು ; P "ಎಲ್ಲೆಯ ಹೊರಕ್ಕೆ ಹೋಗಿ ನಿರ್ದಿಷ್ಟಕಾರ್ಯವನ್ನು ಮಾಡಿಕೊಂಡು ಬರುವಂತೆ ಹೇಳುವುದು" (ಕೃಪಕೋ. ೧೬೨) : ಕಪಟದೊಳೇಂ ಪ್ರೇಷಣಶಬ್ದಪುದ್ಗಲಕ್ಷೇಪಸಮುದಿತಾನಯನಂ ತಾವಪಚಾರಂಗಳ್ ರೂಪಾನುಪಾತಮುಂ ಪ್ರವಿತತ ದೇಶನಿಯಮವ್ರತದೊಳ್ (ಸುಕುಮಾ. ೬-೦೯) : ತನ್ನ ಸೀಮೆಯೊಳಿರ್ದು ದಾಸಿ ದಾಸರನ್ನು ಕಳುಹಿ ಲೇಸಾಗಿ ಕೆಲಸವ ಮಾಡಿಸುತ್ತಿರ್ಪುದು ಪ್ರೇಷಣವೆಂಬತಿಚಾರ (ದ್ವಾದಶಾ. ೦೧-೩೦೩). [ಸಂ.]

**ಪ್ರೇಷಿತ** (ಗು). ೧. ಕಳುಹಿಸಿದ ; ರವಾನಿಸಿದ : ಅಜಿತಂಜಯಮಹಾರಾಜಂ . . . ಪ್ರೇಷಿತಾಶೇಷಪ್ರಕೃತಿಸಮೇತಸಚಿವಸಂದೋಹಸಂದರ್ಶನಾರ್ಥಂ . . . ಅಖಿಳಪ್ರಧಾನಪರಿವಾರಪರಿಕೃತನುಮಾಗಿರೆ (ಕಂದ್ರ.ಪು. ೩-೨ ವ); ಸೇನಾಪತಿಪ್ರೇಷಿತಪ್ರೇಷ್ಯಜನದೆ ಬಟ್ಟೆಸಂದು (ಪುಷ್ಪ.ಶಿ. ೩-೦೦೦ ವ). ೨. ಆಜ್ಞಾಪಿಸಿದ ; ನಿರ್ದೇಶಿಸಿದ. (ನಾ). ೩. ಕಳುಹಿಸಲ್ಪಟ್ಟವನು ; ದೂತ : ಪತಿವೋಹಿ ಮಂತ್ರಿಪಂ ರಾಜಶೇಖರಪ್ರೇಷಿತನಲ್ಲಿಗೇಳ್ತಂದು ನಿಜವಿನಯದಿಂ ಮೆಚ್ಚಿದು (ರಾಜಶೇ. ೬-೯೭ ವ). [ಸಂ.]

**ಪ್ರೇಷ್ಯ** (ಗು). ೧. ಕಳುಹಿಸಿದ ; ರವಾನಿಸಿದ. (ನಾ). ೨. ಕಳುಹಿಸಲ್ಪಟ್ಟವನು; ದೂತ : ತತ್ಸಮಯದೊಳ್ ಸೇನಾಪತಿಪ್ರೇಷಿತಪ್ರೇಷ್ಯಜನದೆ ಬಟ್ಟೆಸಂದು (ಪುಷ್ಪ.ಶಿ. ೩-೦೦೦ ವ). ೩. ಸೇವಕ; ಜವಾನ. ೪. ಕೂಲಿ ಕೆಲಸ ಮಾಡುವವನು; ಕೂಲಿಗಾರ : "ಪ್ರೇಷ್ಯಃ, ಪ್ರತಿಸ್ಕಂದಃ— ಈ ೨ ಕೂಲಿಕಾರ" (ಹಲಾಯು. ೬೧-೨೦೪). [ಸಂ.]

**ಪ್ರೊಫೆಸರ್** (ನಾ). ಪ್ರಾಧ್ಯಾಪಕ; ಹಿರಿಯ ಅಧ್ಯಾಪಕ: ಹೌದು ಪ್ರೊಫೆಸರ್, ನನ್ನ ಪ್ರಯೋಗದಲ್ಲಿ ನಾನು ಜಾಗರೂಕನಾಗಿಯೆ ಇದ್ದೇನೆ (ಹೊಸಶ್ಚಿ. ೦೨). [← ಇಂ. Professor]

**ಪ್ರೋಕ್ತ** (ಗು). ೧. ಹೇಳಿದ ; ಪ್ರಕಟಿಸಿದ ; ತಿಳಿಸಿದ : ಇನ್ನದಕ್ಕೇಬಾರದುವೆಲ್ಲಂ ವ್ಯಕ್ತಂ ನ್ಯಾಯವಿರುದ್ಧಂ ಪ್ರೋಕ್ತಮಹಾದೋಷಮಂತುವೇಟಲ್ಕೆಂತುಂ (ಶಬ್ದಾ. ೦-೦೦೬); ಮಹಾಸ್ಕಾಂದಪುರಾಣಪ್ರೋಕ್ತಕಾಶಿಯೊಳು ಮಣಿಕರ್ಣಿಕೆಯೊಳು ಧನ್ಯರಹರಿಲ್ಲಿಯವಗಾಹನಂ (ಹರಿಶಾ. ೩-೭೭). (ನಾ). ೨. ತಿಳಿಸಿದುದು ; ಹೇಳಿಕೆ : ನಿನ್ನ ಸುತನಂ ಪಿಡಿದ ಸಿಂಹಮುಂಟೆ ಅಪ್ರಸಿದ್ಧ ಪ್ರೋಕ್ತವಿದು (ಕೃಮಿಶಾ. ೨೬-೩೩). ೩. ಒಂದು ಬಗೆಯ ಸಸ್ಯ: "ಪ್ರೋಕ್ತಃ— ಬಿಳುವಾಲಿ" (೬ಶಧಿ. ೦೦೩). [ಸಂ.]

**ಪ್ರೋಕ್ತಿ** (ನಾ). ಹೇಳಿಕೆ: ಆವ ನೀತಿಯಿದಾವ ಧರ್ಮವಿದಾವ ಶಾಸ್ತ್ರಪ್ರೋಕ್ತಿ ಭುವನದೊಳಾವ ಭಕ್ತಿಯಿದೆಂತು ಸೈರಿಸಬಹುದು ಹೇಳಯ್ಯ (ಅಸಪು. ೩೩-೩೭). [ಸಂ.]

**ಪ್ರೋಕ್ಷಣ** (ನಾ). ೧. (ನೀರು, ತೀರ್ಥ ಮೊದಲಾದುವುಗಳನ್ನು) ಸಿಂಪಡಿಸುವಿಕೆ; ಚಿಮುಕಿಸುವಿಕೆ. ೨. ಯಜ್ಞಪಶುವನ್ನು ಪರಿಶುದ್ಧಗೊಳಿಸಲು ತೀರ್ಥವನ್ನು ಚಿಮುಕಿಸಿ ವಧೆಮಾಡುವುದು : "ಪರಂಪರಾಕಂ, ಶಪನಂ, ಪ್ರೋಕ್ಷಣಂ . . . ಯಜ್ಞದಲ್ಲಿ ವೇದೋಕ್ತಪ್ರಕಾರವಾಗಿ ಮಾಡುವ ಪಶುವಿಶಸನವೆಂಬ ಶ್ರೌತಪಶುವಧೆ'' (ಸಿದ್ಧಾಂತಿ. ೨೨೦). ೩. ಊಟ ಮಾಡುವುದಕ್ಕೆ ಮುಂಚೆ ಎಲೆಗೆ ಬಡಿಸಿದ ಭೋಜನಪದಾರ್ಥಗಳ ಮೇಲೆ ನೀರನ್ನು ಚಿಮುಕಿಸಿ ಶುದ್ಧಿಗೊಳಿಸುವಿಕೆ. [ಸಂ.]

**ಪ್ರೋಕ್ಷಣೆ** (ನಾ). ೧. = ಪ್ರೋಕ್ಷಣ ೧: ಪ್ರೋಕ್ಷಣೆ ಮಾಡಿದರೆ ಪ್ರಹುಡನಾದಾನೆ? (ಗಾದೆ). ೨. = ಪ್ರೋಕ್ಷಣ ೩ : ಆಚಾರ್ಯರು ಪ್ರೋಕ್ಷಣೆ ಮಾಡಿ ಊಟವನ್ನು ಪ್ರಾರಂಭಿಸಿದರು (ರೂಢಿ). [ಸಂ. ಪ್ರೋಕ್ಷಣ]

**ಪ್ರೋಕ್ಷಿತ** (ಗು). ೧. ಪ್ರೋಕ್ಷಣೆ ಮಾಡಿ ಶುದ್ಧಗೊಳಿಸಿದ; ನೀರು ಚಿಮುಕಿಸಿ ಶುದ್ಧವಾದ. (ನಾ). ೨. ಯಜ್ಞದ ಬಲಿಪಶು : "ಪ್ರವಿಘಾತಃ, ಉಪಸಂಪನ್ನಃ, ಪ್ರೋಕ್ಷಿತಃ . . . ಯಜ್ಞದಲ್ಲಿ ಕೊಲ್ಲಲ್ಪಡುವ ಪಶು ಮುಂತಾದವುಗಳ ಹೆಸರುಗಳು'' (ಸಿದ್ಧಾಂತಿ. ೨೨೦). [ಸಂ.]

**ಪ್ರೋಕ್ಷಿಸು** (ಕ್ರಿ). ಸಿಂಪಡಿಸು; ಚಿಮುಕಿಸು: ಕಮಂಡಲೂದಕದಿಂದೆ ಮುನಿವರಂ ಪ್ರೋಕ್ಷಿಸಿದೊಡುರಗೇತಲ್ಪದೊಳುಪ್ಪವಡಿಸುವಬ್ಜಾಕ್ಷನೀತಂ ತಪ್ಪದೆಂಬಂತೆ ಕಣ್ದೆರೆದು ವಾಲ್ಮೀಕಿಗಭಿನಮಿಸಲು (ಕೃಮಿಶಾ. ೨೧-೩೦); ಹಿಮಾಲಯನು ಆ ಮುನಿಯನ್ನು ಬಹಳವಾಗಿ ಸನ್ಮಾನಿಸಿ . . . ಪಾದಪ್ರಕ್ಷಾಲನ ಮಾಡಿ ಚರಣತೀರ್ಥವನ್ನು ಮನೆ ತುಂಬ ಪ್ರೋಕ್ಷಿಸಿದನು (ತುಳಸೀ. ೨೦). [ಪ್ರೋಕ್ಷಣ +—ಇಸು₃]

**ಪ್ರೋಚ್ಚಂಡ** (ಗು). ೧. ಅತಿಭಯಾನಕವಾದ: ವೀರಲಕ್ಷ್ಮೀಸದನ ಪ್ರೋಚ್ಚಂಡ ದೋರ್ವಂಡನಂ . . . ಇರ್ವಂ (ಕುಸ್ಮೃತಿ. ೨-೯೬). ೨. ಅಧಿಕವಾದ ; ಹೆಚ್ಚಾದ. (ನಾ). ೩. ಹೆಚ್ಚು ; ಅಧಿಕ : ನನಗೆ ಪ್ರೋಚ್ಚಂಡವಾದ ಭರತಿ ಬಹುಶಃ ನಸುಕಿನಲ್ಲಿಯು ಬರುವುದು (ಗಾಳಿಶ. ೦೬೯). [ಸಂ.]

**ಪ್ರೋಚ್ಛಲಿತ** (ಗು). ಮೇಲಕ್ಕೆ ಚಲಿಸಿದ; ನೆಗೆದ: ಜನಜನ್ಮೋತ್ಸವದೊಳ್ ವೇದಿನಿಗಿರಿಸಿದ ಕಾಂಚನಧ್ವಜಸ್ತಂಭಮಿದೆಂಬಿನೆಗಂ ಸೊಗಯಿಸಿದುದು ಮೇರುನಗಂ ಪ್ರೋಚ್ಛಲಿತದುಗ್ಧಪೂರದುಕೂಲಂ (ಚಂದ್ರಪ್ರ. ೦೨-೦೬೬).
[ಸಂ. ಪ್ರೋಚ್ಛಲಿತ]

**ಪ್ರೋಜ್ವಲ** (ಗು). ೧. ತೀಕ್ಷ್ಣವಾಗಿ ಉರಿಯುವ; ಪ್ರಜ್ವಲಿಸುವ. (ನಾ). ೨. ದೊಡ್ಡ ಬೆಂಕಿ; ಮಹಾಜ್ವಾಲೆ : ಮುಂದೆ ಸಂಭವಿಸಿತ್ತು . . . ಗಾಂಗೇಯದ್ರೋಣಾದಿ ಕರ್ಣದುರ್ಯೋಧನರ ಜೀವಕಾನನ ದಹನಪ್ರೋಜ್ವಲಂ (ಕತ್ಯಾಂಗ. ೬೯-೦೯೯೭). [ಸಂ.]

**ಪ್ರೋಜ್ವಲಿಸು** (ಕ್ರಿ). ಬಹಳವಾಗಿ ಉರಿ; ಪ್ರಜ್ವಲಿಸು: ಪ್ರೋಜ್ವಲಿಸಿದುದು ಕೋಪನಜ್ವಾಲೆ ಭೂಮಿಪಗೆ (ಶ್ರೀರಾಮ. ೨-೯೮೬) ; ರಾಗಾರುಣಜ್ವಾಲೆ ಪ್ರೋಜ್ವಲಿಸುವೊಲ್ ಉಗ್ರದಾವಾಗ್ನಿ ತರುನಿಚಯಮಂ ಕೊಂಡುರಿಯು ವಂತೆ ಪೊತ್ತಿದುದು ಚಿತ್ರಾಂಗಿಯಂ ಪ್ರಣಯಪ್ರಲಯಶಿಖಿ (ಚಿತ್ರಾಂಗ. ೯೦-೦೦೦೦). [ಪ್ರೋಜ್ವಲ + —ಇಸು]

**ಪ್ರೋಜ್ಝಿತ** (ಗು). ಬಿಟ್ಟ; ತ್ಯಜಿಸಿದ: 'ಪ್ರೋಜ್ಝಿತಚಾಪ' ಪರಾ. [ಸಂ.]

**ಪ್ರೋಜ್ಝಿತಚಾಪ** (ನಾ). (ಯುದ್ಧದಲ್ಲಿ) ಬಿಲ್ಲನ್ನು ಬಳಸುವುದನ್ನು ಬಿಟ್ಟವನು; ಧನುಸ್ಸನ್ನು ತ್ಯಜಿಸಿದವನು: ಗುರುವಂ ಪ್ರೋಜ್ಝಿತ ಚಾಪನಂ ಪುಸಿದು ಕೊಂದು (ಗದಾಯು. ೩-೩೩). [ಸಂ.]

**ಪ್ರೋಡ್ಡೀಣ** (ನಾ). ಹಾರುವುದು; ನೆಗೆತ: ಉಡ್ಡೀಣ ಪ್ರೋಡ್ಡೀಣದಿಂದ ಪೊಳೆಪೊಳೆದು (ಶಬರ. ೨೨-೯). [<ಸಂ. ಪ್ರೋಡ್ಡೀನ]

**ಪ್ರೋಡ್ಡೀನ** (ಗು). ಹಾರಿದ; ನೆಗೆದ; ಮೇಲೆದ್ದ : ಉಚ್ಛ್ವಾಸಖಿನ್ನ ಶ್ರವಮುಂ ಪ್ರೋಡ್ಡೀನದೀನಶ್ರುಮದೊಳೊಗೆದ ರೋಮಾಂಚಮು ಶೀತವಾತಸ್ತಿಮಿತೋಪಸ್ಪರ್ಶರೋಮಾಂಚದೊಳ್ ಬೆರಸಿದಲ್ ಕನ್ನೆಗೀಕ್ಷನ್ನಂದಂ (ಅಗ್ಗಳ. ೩-೨೨) ; ಗಂಭೀರಸ್ಫಾರವೇಳಾಬಹಳಪರಿವೃತೋಲ್ಲೋಲ ಕಲ್ಲೋಲಮಾಲಾರಂಭಪ್ರೋಡ್ಡೀನಫೇನ . . . ಘನಘೋರಾವರೌದ್ರಂ ಸಮುದ್ರಂ (ಕಾವ್ಯಾ. ೬೩). [ಸಂ.]

**ಪ್ರೋತ** (ಗು). ೧. ಹೆಣೆದ ; ಹೊಲಿದ. ೨. ಕೂಡಿಸಿದ ; ಜೋಡಿಸಿದ. ೩. ಉಂದಣಿಸಿದ ; ಮೆಟ್ಟಿದ : ಶ್ರೀಧರಾಧಿಪ ಭೋಜರಾಜ ಮಕುಟಪ್ರೋತಾಶ್ಮರಶ್ಮಿಜ್ವಟಾಚ್ಛಾಯಾಕುಂಕುಮವಂಕಲಿಪ್ತ (ಎಪಿ. II. ೯೯-೬೨ ; ಶು. 1100). ೪. ಕಟ್ಟಿದ ; ಬಂಧಿಸಿದ. ೫. ಚುಚ್ಚಿದ. ೬. ನೆಯ್ಗೆಯಲ್ಲಿ ಅಡ್ಡಡ್ಡವಾಗಿ ಜೋಡಿಸಿದ. (ನಾ). ೭. ನೆಯ್ದ ಬಟ್ಟೆ : 'ಓತಪ್ರೋತ' ಪರಾ. [ಸು.]

**ಪ್ರೋತ್ಕರ** (ನಾ). ಗುಂಪು; ಸಮೂಹ : ಗಿರಿಪತಿಯಂ ಮೇನೆಯು ನಾದದಿಂ ಜೀಳ್ಕೊಟ್ಟು ಮಕುಟರತ್ನಪ್ರಕರಸ್ಫುರಿತಪ್ರದ್ಯೋತಪ್ರೋತ್ಕರ ವಿಳಸಿತವಳ್ಳಿಯದೊಳಗೆ ಶಿವನೆಸೆದಿರ್ದಂ (ಗಿರಿಜಾ. ೦೦-೦೦೬). [ಸಂ.]

**ಪ್ರೋತ್ಕಲಿತ** (ಗು). ಮೇಲೆದ್ದ ; ಹಾರಿದ : ನಕ್ರಚಕ್ರಸ್ಫುರದುರು ತರಯಾದಶ್ಚರಾಧ್ಮಾಸಿತ ಪ್ರೋತ್ಕಲಿತಾಂಭಃಕುಂಭಿಕುಂಭೋನ್ನದರಸ ವಿಲಸತ್ಕ್ಷೋಭರೌದ್ರಂ ಸಮುದ್ರಂ (ಶಂಕರಶ. ೦೩೦-೬). [ಸಂ.]

**ಪ್ರೋತ್ತುಂಗ** (ಗು). ಬಹಳ ಎತ್ತರವಾದ ; ಬಹು ಉನ್ನತವಾದ : ವರರತ್ನಕನಕಮುಮವಿಸ್ಫುರಿತ ಪ್ರೋತ್ತುಂಗತೋರಣಪ್ರಾಕಾರಂ (ಸುಕುಮಾ. ೯ ೬೩) ; ಆತ್ಮಭವಪ್ರೋತ್ತುಂಗ ಮೂರ್ಧಾಗ್ರದೊಳಿಟಾವಲೊಡಂ (ಚಂದ್ರಪ್ರ. ೨ ೫೬). [ಸಂ.]

**ಪ್ರೋತ್ಥಾನ** (ಗು). ೧. ಮೇಲಕ್ಕೆ ಎತ್ತುವ ; ಮೇಲೆತ್ತುವ. ೨. ಉದ್ಧರಿಸುವ : ಪಾವಕಂಗೆ ಸುಯೋಗಿಗಳಿಗೆ ಮಹಾವ್ಯಥುಲವುಣ್ಮು ಗಳುಂಟಾ ಪಾವಕರು ನಿಜನಿರ್ಜರಪ್ರೋತ್ಥಾನಶಕ್ತಿಯುಲಿ ದೀಪಿಸುವರು (ಶಿವ್ಯಾಂಕಾ. ೩-೭೬). [ಸಂ.]

**ಪ್ರೋತ್ಪಾಟನ** (ನಾ). ಉತ್ಪಾಟನ ; ನಾಶ : ತ × × × ತ ಪ್ರೋತ್ಪಾಟನ ಪಟುವನಿಪ್ಪ ನಾಚುಗಿಭೂವ ಜಗವೆಲ್ಲಂ ಕಡುಪಿಂಗೆ ಕಂಟಕಿಪಿನಂ [ವೆ] × × × (ಕೌಶಾ. XV. ೯೨-೬ ; ಶು. 12ನೆಯ ಶ). [ಸಂ.]

**ಪ್ರೋತ್ಕ್ಷಿಹಿತ** (ಗು). ಚೆನ್ನಾಗಿ ಮುಚ್ಚಿದ,-ಮರೆಮಾಡಿದ : ವಿನಿಧೂತ ಧಾತ್ರಿರಜಃಪ್ರೋತ್ಕ್ಷಿಹಿತಾಂಗಂ . . . ಅಂಭೋವಾಹಮಂಭೋದಸಿಂಧುರ ಮಂ ಪಾಯ್ದು ಪಳಂಚಿ ಪೊಯ್ದುದು ರುಚಜ್ಜಂರ್ಝಾಮರುತ್ಕುಂಜರು (ರಾಜಶೇ. ೯-೦೦೬). [ಸಂ.]

**ಪ್ರೋತ್ಫುಲ್ಲ** (ಗು). ೧. ಚೆನ್ನಾಗಿ ಅರಳಿದ,-ಬಿರಿದ. ೨. ವಿಶಾಲವಾದ : ಮೇಚಕಕನ್ನರಾಮರಯುಗಂ ನಾನಾವಿನೋದೇಗಳಂ ಮದನಾವೇಶಕರಂಗಳಂ ಸಲಿಸುತಂ ಪ್ರೋತ್ಫುಲ್ಲ ಚಂಚಲ್ಲಕಾಸ್ಪದದೊಳ್ . . . ತಳ್ತಿರೆ ಕಾಮ ರಾಗಮುಯವಾಯ್ಮೇನೀ ನಗಂ ರಯ್ಯಮೋ (ಅಂಜ. ೯-೦೦೬). (ನಾ). ೩. ಚೆನ್ನಾಗಿ ಬಿರಿದುದು,-ಅರಳಿದಂದು : ಓರ್ವಂ ದ್ವಿಜವ್ರವರು ಮೌಕ್ತಿಕಮಾಲಿಕಾವಲಯಮಂ ಪ್ರೋತ್ಫುಲ್ಲಮಂ ಪುಂಡರೀಕವನಂದಲ್ಲೆ ಮನೋರಮಾಂಕತಳದೊಳ್ ತಂದಿಕ್ಕಿದಂ ಸ್ವಪ್ನದೊಳ್ (ಕಾದಂಬ. ೩೬೩). [ಸಂ.]

**ಪ್ರೋತ್ಸಾಹ** (ನಾ). ೧. ಬಹಳವಾದ ಉತ್ಸಾಹ,-ಹುರುಪು. ೨. ಉತ್ತೇಜನ ; ಪ್ರಚೋದನೆ : ರಾಜಮಹಾರಾಜರು ಮತ್ತು ಮಹಾ ಮಂಡಲೀಕರು ಘಟಿಕಾಸ್ಥಾನಗಳಿಗೆ ಹಚ್ಚಿನ ಪ್ರೋತ್ಸಾಹವನ್ನು ಕೊಡು ತ್ತಿದ್ದರು (ಶಾಸನ. ೬೭). [ಸಂ.]

**ಪ್ರೋತ್ಸಾಹಕ** (ನಾ). ಹುರಿದುಂಬಿಸುವವನು ; ಉತ್ತೇಜನ ಕೊಡುವವನು : ಎಲೋ, ಪ್ರೋತ್ಸಾಹಕನೆ ಕೆಗೆ ನಮ್ಮ ಪ್ರಥು ಭೇಟಿ ಯಲ್ಲಿ ವಿಮುಖನಾದನು (ಶಾಕುಂತ. ೨೩-೦). [ಸಂ.]

**ಪ್ರೋತ್ಸಾಹಗೊಳಿಸು** (ಕ್ರಿ). ಹುರಿದುಂಬಿಸು; ಉತ್ತೇಜಿಸು : ತುಂಬಾ ನಿರಾಶೆಗೊಂಡಿದ್ದ ಅವನನ್ನು ಅವನ ಮಾಸ್ತರರು ಪ್ರೋತ್ಸಾಹಗೊಳಿಸಿದರು (ಆಡು). [ಪ್ರೋತ್ಸಾಹ + ಕೊಳ್$_{1}$ + —ಇಸು]

**ಪ್ರೋತ್ಸಾಹಗೊಳ್ಳು** (ಕ್ರಿ). ಉತ್ತೇಜನಗೊಳ್ಳು ; ಉತ್ತೇಜನವನ್ನು ಪಡೆ: ಸಾಹಿತ್ಯರಚನೆಗಳನ್ನು ಬರೆಗೆ . . . ಕೊಳ್ಳುವ—ಕೊಡುವ, ಪ್ರೋತ್ಸಾ ಹಿಸುವ—ಪ್ರೋತ್ಸಾಹಗೊಳ್ಳುವ . . . ಈ ಕಾರ್ಯಕ್ಕೆ ಉದಾರಚರಿತರು ನೆರವು ನೀಡಬೇಕಾಗಿ ಪ್ರಾರ್ಥನೆ (ಸಂಕೋಶ. vii ಅಂಕ).
[ಪ್ರೋತ್ಸಾಹ + ಕೊಳ್ಳು$_{1}$ (<ಕೊಳ್$_{1}$)]

**ಪ್ರೋತ್ಸಾಹಿಸು** (ಕ್ರಿ). ಹುರಿದುಂಬಿಸು ; ಉತ್ತೇಜಿಸು : ಯಾ ಸ್ಥಳ ವನ್ನಾಕ್ರಮಿಸಿ ಪಟ್ಟಣವಂ ಕಟ್ಟಿ ಉಪಾಯದಿಂದ ಪ್ರೋತ್ಸಾಹಿಸುತ ಯದ ರಿಂದ ಬೇಕಾದ ವಸ್ತುಗಳಂ ಪಡದು ಸುಖದಿಂದಿರಬಹುದು (ಸ್ಕಾಂಗಂ. ೯೦೬-೯) ; ಮನಸ್ಸಿಗೆ ಹಿತವೆನಿಸುವ ಸಾಮೂಹಿಕ ಅಭ್ಯಾಸಗಳನ್ನು ಆಚರಿಸಲು ಪ್ರೋತ್ಸಾಹಿಸಬೇಕು (ಶಿಕ್ಷಣ. ೩೦೦). [ಪ್ರೋತ್ಸಾಹ+ —ಇಸು]

**ಪ್ರೋಥ** (ಗು). ೧. ಪ್ರಸಿದ್ಧವಾದ. ೨. ಇಟ್ಟ ; ಇರಿಸಿದ. (ನಾ). ೩. ಕುದುರೆಯ ಮೂಗಿನ ಹೊಳ್ಳೆ : ಕೆತ್ತುತ್ತ ಮತ್ಯಂತವಿಸ್ಫುರಿತ ಪ್ರೋಥಮನೋರ್ಮೆಯುಂ . . . ಇರ್ದತ್ತುದಾತ್ತಂ ಹಯಂ (ಮಲ್ಲಿಕಾ. ೯-೩೩) ; ಆ ಪ್ರಧಾನಮತ್ತರಪ್ರೋಥಮದಕ್ಕುಂ ಬಿತ್ತರ ಪ್ರೋಥದರಡುಕೆಲದ ನಾಸಾಪುಟಮುಂ ಪ್ರೋಥದ ಕಣ್ಣಡೆ ಘೋಣಮದು (ಅಶ್ವಶಾ. ೯-೦೩). ೪. ಟೊಂಕ ; ಸೊಂಟ. ೫. ಪ್ರಯಾಣಿಕ ; ಪಯಣಿಗ. [ಸಂ.]

**ಪ್ರೋದ್ಗತ** (ಗು). ೧. ಮುಂದಕ್ಕೆ ಚಾಚಿಕೊಂಡಿರುವ : ಸ್ಫುರದೀಪ

ತ್ಪ್ರೋದ್ಗತೋರೋರುಹವಮುಕುಳೆಯರುನ್ನತ್ತಹಂಸೀಕ್ವಣನ್ನೂಪುರೆಯರ್ . . . ಪೂಡೆವಟ್ಟೆಯ್ದೆವಂದಿರ್ದರಾಗಳ್ (ಆದಿಪು. ೬-೩೬). ೨. ಹೊರಹೊಮ್ಮಿದ : ವೇತ್ರಹಸ್ತಪ್ರತಿಮುಖರ ಪ್ರೋದ್ಗತಾಭೀಳಘೋಷಂ (ಗಂಳ. ೩-೪). [ಸಂ.]

**ಪ್ರೋದ್ಗಮ** (ನಾ). ಉಂಟುಮಾಡುವಂಥದು : ಒದಗಿಸುವಂಥದು : ಚಂಡಾಂಶುಬಿಂಬಕ್ಕವಮೆಯ ರಜನೀಪ್ರೋದ್ಗಮಂ . . . ತಾನೆಂಬಿನಂ ಬಂದುದು ತಟಪ್ಪಾಲವಂಭೋದಕಾಲಂ (ಶಾಂತೀಶ. ೩೭೯). [ಸಂ.]

**ಪ್ರೋದ್ದಂಡ** (ಗು). ಬಹಳ ಕಠಿಣವಾದ ; ಅತ್ಯುಗ್ರವಾದ : ಮಂಡಿತೋರುಜಟಾಭಟಪ್ರೋದ್ದಂಡಹತಿಯಿಂದಂಬುರುಹಗರ್ಭಾಂಡಕಟಕಟಾಹಮೊಡೆಯಲು (ಜಗಪು. ೧೭-೧೪). [ಸಂ.]

**ಪ್ರೋದ್ದಾನ** (ನಾ). ಸುರಿಯುತ್ತಿರುವ ಮದಜಲ ; ಸೂಸುವ ಮದೋದಕ : ಕ್ಷಿತಿಚಕ್ರಂ ಗತಿಚಕ್ರಗಂಧಗಳಿತ ಪ್ರೋದ್ದಾನಜಂಭಾಳಶೋಭಿತಂ (ಪುಣ್ಯಾಸ್ರ. ೦-೪೦) ; ಭ್ರಮದ್ಭೃಂಗಸಂಗಪ್ರಥಿತಪ್ರೋದ್ದಾನಧಾರಾಘಟಿತಕಟತಟಂ . . . ಘನನಿನದಮದೇಂ ಬಂದುದೋ ದಂತಿಜಾಳಂ (ಶಾಕರ್ಣ. ೦೩-೭೭). [ಸಂ.]

**ಪ್ರೋದ್ದಾಮ** (ಗು). ೧. ಅಪರಿಮಿತವಾದ ; ಹೆಚ್ಚಾದ : ಸಮದಾನೇಕಪವಂ ಮಹಾಭಯದವಂ ಪ್ರೋದ್ದಾಮ ಜಂಬೂಕದಂಬವಮನಭ್ರಂಕಷಕೂಟಮಂ . . . ಎಯ್ದಿದಂ ಸಕಲಕಾಕಾನೀಕಲಕ್ಷ್ಮೀಶ್ವರಂ (ಶಂಕಶಂ. ೨೩೬-೦೨) ; ಆ ಮಹಾವಜ್ರಾಯತ ಪ್ರೋದ್ದಾಮದಾಯಸಭೀಮತನುನಿರ್ಮಾಮವೆನೆ ನುಗ್ಗಾಗಿ ಬಿದ್ದುದು ನೃಪನ ತಕ್ಕೆಯಲಿ (ಶಬ್ದಾಗ. ೧೦-೩೯). ೨. ಶ್ರೇಷ್ಠವಾದ ; ಹಿರಿದಾದ ; ಅತಿಶಯವಾದ : ಸಕಲಕ್ಷತ್ರಮಣಿಪೂಜ್ಯನಮಳಚರಿತ್ರಂ ಪ್ರೋದ್ದಾಮಸೋಮವಂಶಲಲಾಮಂ (ಶಂಶಥ. ೦-೬೦). (ನಾ). ೩. ಶ್ರೇಷ್ಠವಾದುದು : ರಮಣೀಯಂ . . . ವಿಲಸತ್ಕಾಮ್ಯಂ ಮಹೀಚಕ್ರದೊಳ್ ಸುಮನೋಮಾಲ್ಯದ ಪೊಲ್ ಸುನಾಯಕಗುಣಪ್ರೋದ್ದಾಮಮಾಗಿರ್ದಡುತ್ತಮಪುಣ್ಯಾಧಿಕಕಂಠಭೂಷಣಮದಕ್ಕುಂ (ಧಾರಪು. ೦-೯೦). [ಸಂ.]

**ಪ್ರೋದ್ಧೂತ** (ಗು). ಮೇಲೇಳುತ್ತಿರುವ : ಇಂತಿದೆ ತೋಟಿತ್ತುಮದಾಂಧಸ್ಸೈರಿಭಮಿರಪ್ರೋದ್ಧೂತರೇಣುಮೃಜಂ[ಶಾಶಾಂ. ಮಮಾಂತಸ್ಸೈರಿಭಕರಪ್ರೋದ್ಧೃತರೇಣುಪುಂಜಂ] (ಶಾರದಪು. ೦೩೩). [ಸಂ.]

**ಪ್ರೋದ್ಭವ** (ಗು). ೧. ಹುಟ್ಟಿದ ; ಜನ್ಮ ತಾಳಿದ. (ನಾ). ೨. ಹುಟ್ಟಿದವನು ; ಜನ್ಮ ತಾಳಿದವನು : 'ಘಟಪ್ರೋದ್ಭವ' ಪರಾ. [ಸಂ.]

**ಪ್ರೋದ್ಭಾಸಿ** (ಗು). ೧. ವಿಶೇಷವಾಗಿ ಹೊಳೆಯುವ,—ಪ್ರಕಾಶಿಸುವ : ಗೋಪಣನ್ನಿದಿಗಿಭಪ್ರೋದ್ಭಾಸಿಗನ್ನದ್ವಿಪಂ (ಎಳ. II, ೬೮-೯೭ ; ಸು. 1100); ರತ್ನಪ್ರಭಾಪೋಜ್ಜೃಂಭಿತಪ್ರೋದ್ಭಾಸಿವೀಚೀನಿಚಯಘನಘನಾರಾವರಾವ್ರಂ ಸಮುದ್ರಂ (ಕಾವ್ಯಸಾ. ೬೭). ೨. ವಿಶೇಷವಾಗಿ ಹೊಳೆಯುವಂಥದು : ರತ್ನಮಯಪ್ರಸಿದ್ಧಶಿಬಿರಾಲಂಕಾರ ಸಿದ್ಧಾಲಯಾಸ್ಪದವಂ ಖೇಚರ ಚಕ್ರವರ್ತಿವಿಭವಪ್ರೋದ್ಭಾಸಿಯಂ ಮೆಚ್ಚಿ ನೋಡಿದನಾ ಭೂಚರಚಕ್ರವರ್ತಿ (ಆತಪು. ೯-೨೦). [ಸಂ.]

**ಪ್ರೋದ್ಭೂತ** (ಗು). ೧. ಹುಟ್ಟಿದ ; ಆವಿರ್ಭವಿಸಿದ : ಎನ್ನೀಕಾವ್ಯಕ್ಕೆ . . . ಭೃಂಗಾವಳೀಸಂಪನ್ನಪ್ರೋದ್ಭೂತಘುಂಕಾರಿತರವಮುದಿತಾನಂದವೇಶಂ ಗಣೇಶಂ (ಗಂಳ. ೦-೩). (ನಾ). ೨. ಹುಟ್ಟಿದುದು ; ಮೂಡಿದುದು : ಮಾತೇನುದ್ಭಾತದೋಷಪ್ರಕರರಹಿತನೆನಿಪನಾಪ್ತಂ ತದಾಪ್ತಾನನಪ್ರೋದ್ಭೂತಂ (ಸುಕುಮಾ. ೩-೩೯). [ಸಂ.]

**ಪ್ರೋದ್ಭೇದ** (ಗು). ೧. ಒಡೆದ ; ಮುರಿದ. ೨. ಹೊರಹೊಮ್ಮಿದ ; ಹೊರಬಂದ : ಪುಳಕಪ್ರೋದ್ಭೇದಘರ್ಮೋದಕವಿಸರವಮೊತ್ತಂಬದಿಂತಾಗಿಯುಂ (ಆದಿಪು. ೯-೩೦). (ನಾ). ೨. ಮುರಿಯುವಿಕೆ ; ಮುರಿತ : ಮಾದ್ಯದ್ಗಜಗಂಡಭಿತ್ತಿಕಷಣಪ್ರೋದ್ಭೇದದಿಂ ಸಾರ್ದು ಬಂದಿದಿರೊಳ್ ಕೂಡುವುದಿಲ್ಲಿ ಚಂದನರಸಂ ಕೆಂಬೊನ್ನ ಟಂಕಂಗಳೊಳ್ (ಶಂಶಥ. ೯-೨೨). [ಸಂ.]

**ಪ್ರೋದ್ವೃತ್ತ** (ನಾ). ಅತಿಶಯವಾಗಿ ಸೊಕ್ಕಿದವನು ; ಉನ್ಮತ್ತನಾದವನು : ಅಣ್ಮಿ ತಾಗಿದರಂ ಸೀಳ್ದು ಕೆಲಂಬರಂ ಕೆಲಬರಂ ಪ್ರೋದ್ವೃತ್ತರಂ ದೈತ್ಯರಂ ತುದಿಗಾಲಂ ಪಿಡಿದೆತ್ತಿ ಪೊಯ್ದು ನೆಲದೊಳ್ ಕೊಂದಂ ಮರುನ್ನಂದನಂ (ಶಂರಾಮಾ. ೨೦-೦೯೩). [ಸಂ.]

**ಪ್ರೋನೋಟು** (ನಾ). ಸಾಲಗಾರನು ಸಾಲಿಗನಿಗೆ ಬರೆದು ಕೊಟ್ಟ ಕರಾರುಪತ್ರ; ಪ್ರಾಮಿಸರಿನೋಟು : ಪ್ರೋನೋಟಿನ ವಾಯಿದೆ ಮುಗಿಯುತ್ತ ಬಂತಲ್ಲ ಎಂಬ ವಿಚಾರವೂ ಹೊಳೆಯುತ್ತದೆ (ಸ್ವಸ್ವಹೂ. ೦೯೭) ; ನೀವು . . . ಪ್ರೋನೋಟು ಬರಕೊಟ್ಟು ನಮ್ಮಿಂದ ಪಡಕೊಂಡ ಹಣ . . . ಕೊಟ್ಟಿಲ್ಲ (ಕುರುಕಾ. ೩).

[ಇದು 'Promissory note' ಎಂಬುದರ ಸಂಕ್ಷಿಪ್ತರೂಪ]

**ಪ್ರೋನ್ನತ** (ಗು). ಬಹಳ ಎತ್ತರವಾದ,—ಉನ್ನತವಾದ : ತನ್ನನೊರ್ಲ್ದು ತ್ರಿಲೋಕಶ್ರೀಯೆಲ್ಲಂ ಪೊರ್ದಿದಂತೆನೊಸೆದನೊ ಮನದೊಳ್ ಸೂಕ್ತಿಕರ್ಣಾವತಂಸಂ ಶ್ರೇಯಾಂಸಂ ಪ್ರೋನ್ನತಾಂಸಂ (ಆದಿಪು. ೯-೦೩೨) ; ತತ್ಸಭಾಮಧ್ಯದೊಳ್ ತದ್ವಿದರೆಲ್ಲಂ ಕೀರ್ತಿಸುತ್ತಿರ್ಪುದುಮದನೆ ಮನಂಗೊಂಡು ಚಿತ್ರೋದಿತಾನಂದದಿನಿರ್ದಂ ಪ್ರೋನ್ನತಾಂಸಂ (ಸುಕುಮಾ. ೨-೭೩). [ಸಂ.]

**ಪ್ರೋನ್ನತಿ** (ನಾ). ೧. ಬಹಳ ಎತ್ತರ. ೨. ಹಿರಿಮೆ ; ಶ್ರೇಷ್ಠತೆ : ಇನ್ನಟಿಯಲ್ಕೆ ಬರ್ಪುದೆಲೆ ಧೂರ್ತಕಿರಾತ ಭವತ್ಪರಾಕ್ರಮಪ್ರೋ[ಶಾಶಾಂ. ದು]ನ್ನತಿಯೆಳ್ಳರಂ (ಶಂಶಂ. ೯-೦೦೬). [ಸಂ.]

**ಪ್ರೋನ್ಮತ್ತ** (ಗು). ಬಹಳವಾಗಿ ಕೊಬ್ಬಿದ ; ಸೊಕ್ಕಿದ : ಪ್ರೋನ್ಮತ್ತವೈರಿಭಕೇಸರಿಸಿಂಗಂ ಪತಿಯೆಂದೊಡುನ್ನತಿಯನಿನ್ನೇವಣ್ಣಿಪೆಂ. ದುರ್ಗನಾ (ಶಂಕಶಂ. ೦೨-೩) ; ವಿಚಾರಿಪೊಡೆನ್ನವೋಲಿತರನೃಪನಿಂತಾವೊಂ ಪ್ರೋನ್ಮತ್ತವೃತ್ತಿಯನಿರ್ದವಂ (ಶಂಪ್ರಶ್ನ. ೨-೯೦). [ಸಂ.]

**ಪ್ರೋನ್ಮಿಳಿತ** (ಗು). ಕೂಡಿರುವ ; ಸೇರಿರುವ : ಪ್ರಬಲಜಲಚರಾನೀಕಗಂಭೀರಭೀಮೋಜ್ವಳರಾವಪ್ರೋದ್ಭೂತಪ್ರೋನ್ಮಿಳಿತ ಘುಳುಘುಳುಧ್ವಾನಮುಂಭೋನಿಧಾನಂ (ಗಂಳ. ೦-೯೬). [ಸಂ. ಪ್ರೋನ್ಮಿಲಿತ]

**ಪ್ರೋಷಧ** (ನಾ). [ಜೈನ] ಉಪವಾಸದ ಹಿಂದಿನ ದಿನ ಮತ್ತು ಮರುದಿನ ಒಪ್ಪತ್ತು ಮಾತ್ರ ಊಟ ಮಾಡುವ ಒಂದು ಬಗೆಯ ಉಪವಾಸವ್ರತ ; ಉಪವಾಸವು ಸಾಧ್ಯವಾಗದೆ ಹೋದರೆ ಕೇವಲ ನೀರನ್ನು ಕುಡಿದು ಇರಬಹುದು. ಅದಕ್ಕೂ ಅಸಮರ್ಥರಾದವರು ಒಂದು ಹೊತ್ತು ಶುದ್ಧ ಸಾತ್ವಿಕ ಹಗುರು ಅನ್ನವನ್ನು ಸ್ವೀಕರಿಸಬಹುದು. ಅಷ್ಟಮಿ, ಚತುರ್ದಶಿ ದಿನಗಳಲ್ಲಿ ಉಪವಾಸವನ್ನು ಮಾಡಬೇಕೆನ್ನುವವರು ಮುಂಚಿನ ದಿನ ಮಧ್ಯಾಹ್ನ ಊಟ ಮಾಡಿದೊಡನೆಯೇ ಮರುದಿವಸ ಉಪವಾಸದ ಪ್ರತಿಜ್ಞೆಯನ್ನು ಮಾಡಬೇಕು. ಆಗಿನಿಂದಲೇ ತನ್ನ ಮನೆತನದ ಎಲ್ಲ ಕೆಲಸಗಳನ್ನು ಬಿಟ್ಟು ಏಕಾಂತಸ್ಥಳಕ್ಕೆ ಹೋಗಿ ಧ್ಯಾನ ಸ್ವಾಧ್ಯಾಯಗಳನ್ನು ಮಾಡುವುದರಲ್ಲಿ ತೊಡಗಬೇಕು. ಈ ರೀತಿ ಇರುಳು ಹಾಗೂ ಅಷ್ಟಮಿ, ಚತುರ್ದಶಿಗಳ ಪೂರ್ಣ ಹಗಲು ಮತ್ತು ಇರುಳುಗಳನ್ನು ಕಳೆಯಬೇಕು. ಆಮೇಲೆ ಮರುದಿನ ಮಧ್ಯಾಹ್ನದಲ್ಲಿ ಅತಿಥಿಗೆ ಮೊದಲು ಊಟ ಹಾಕಿ ತಾನು ಅನಾಸಕ್ತವೃತ್ತಿಯಿಂದ ಊಟ ಮುಗಿಸಬೇಕು. ಈ ಉಪವಾಸವು ಕೇವಲ ಹೊಟ್ಟೆಗಾಗಿ ಮಾತ್ರ

ವಲ್ಲ. ಆ ಅವಧಿಯಲ್ಲಿ ಪಂಚೇಂದ್ರಿಯಗಳೂ ಉಪವಾಸದಲ್ಲಿರಬೇಕು. ಇಂದ್ರಿಯಗಳು ಸ್ವಾದಿಷ್ಟಭೋಜನ, ಸುಂದರಸ್ತ್ರೀ, ಸುಗಂಧದ್ರವ್ಯ, ಇಂಪಾದ ಸಂಗೀತದ ಕಲ್ಪನೆಯಲ್ಲಿ ಸಹ ಇರಬಾರದು : ಸಂಯಮಿಗಳ್ಗತ್ಯುತ್ಕೃಷ್ಟದಿಂ ದಾನವನಿತಿಮುದದಾರ್ಶೀವುದುಂ ಪ್ರೋಷಧಪ್ರಕ್ರಮದಿಂ ಪರ್ವಂಗಳು ನೋಂಪುದುಂ. . .. ಶಿಕ್ಷಾಬ್ರತಂಗಳ್ (ಸುಕುಮಾ. ೬-೧೦೦). [ಸಂ.]

**ಪ್ರೋಷಧೋಪವಾಸ** (ನಾ). = ಪ್ರೋಷಧ : ನೋಡದದೆ ಪ್ರತಿಲೇಪನೆಯುಂ ಮಾಡದೆ ಮಡಗಿಡುವ ಕೊಳ್ವ ಪಾಸುವುದುಂ. ಕೊಂಡಾಡದುದುಂ ನೆನೆಯದುದುಂ ಕೇಡಿನಿತುಂ ಪ್ರೋಷಧೋಪವಾಸವ್ರತದೊಳ್ (ಸುಕುಮಾ. ೬-೨೩) ; ಪ್ರೋಷಧೋಪವಾಸಕ್ಕೈದತಿಚಾರವಿದೋಷವನುಳಿದನವರತ ಲೇಸಾಗಿ ನಡೆವರು ಷೋಡಶಸ್ವರ್ಗನಿವಾಸಿಗಳಹರತಿಮುದದಿಂ (ದ್ವಾರಕಾ. ೦೦-೬೨೩) ; ಪ್ರತಿಯೊಂದು ಅಷ್ಟಮಿ, ಚತುರ್ದಶಿತಿಥಿಗಳಲ್ಲಿ ಮನ, ವಚನ, ಕಾಯಗಳ ಸ್ಥಿರತ್ವವನ್ನು ಸಾಧಿಸುವುದಕ್ಕಾಗಿ ನಾಲ್ಕೂಪ್ರಕಾರದ ಆಹಾರವನ್ನು ತ್ಯಾಗಮಾಡಿ ಉಪವಾಸವನ್ನು ಆಚರಿಸುವುದು (ಜೈಶಕ. ೪೬೯). [ಸಂ.]

**ಪ್ರೋಷಧೋಪವಾಸಿ** (ನಾ). [ಜೈನ] ಪ್ರೋಷಧೋಪವಾಸವನ್ನು ಮಾಡುತ್ತಿರುವವನು ; ಪ್ರೋಷಧವ್ರತವನ್ನು ಕೈಗೊಂಡಿರುವವನು: ಪರಮನಿರಂಜನ ನಿಜಪರಮಾತ್ಮನನರಿದು ಲೇಸಾಗಿ ಧ್ಯಾನಿಸುತ ತಱುಸಂದಿಂತು ನೆಗಳುತಿಪ್ಪಾತನು ಉಱುವ ಪ್ರೋಷಧೋಪವಾಸಿ (ದ್ವಾರಕಾ. ೦೧-೬೩೩) ; ಪ್ರೋಷಧೋಪವಾಸಿ :— ಅಷ್ಟಮಿ, ಚತುರ್ದಶಿ ತಿಥಿಗಳಲ್ಲಿ ಮನ, ವಚನ, ಕಾಯಗಳ ಸ್ಥಿರತ್ವವನ್ನು ಸಾಧಿಸುವುದಕ್ಕಾಗಿ ಉಪವಾಸವನ್ನು ಮಾಡುವವನು (ಧಾಶರ. ೦೪೯). [ಸಂ. ಪ್ರೋಷಧೋಪವಾಸಿನ್]

**ಪ್ರೋಷಿತ** (ಗು). ಪ್ರಯಾಣದಲ್ಲಿರುವ ; ಪ್ರವಾಸದಲ್ಲಿರುವ. [ಸಂ.]

**ಪ್ರೋಷಿತಭರ್ತೃಕೆ** (ನಾ). [ಕಾವ್ಯಮೀ] ಎಂಟು ಜನ ನಾಯಿಕೆಯರಲ್ಲಿ ಒಬ್ಬಳು ; ವಿದೇಶಕ್ಕೆ ಹೋಗಿರುವವನ ಪತ್ನಿ : ಪ್ರೋಷಿತಭರ್ತೃಕೆ ನಾಯಿಕೆಯಾಗಿರುವಾಗ ಪ್ರವಾಸವಿಪ್ರಲಂಭ (ರಸ್ವಾಓೀ. ೬೩).

[ಸಂ. ಪ್ರೋಷಿತಭರ್ತೃಕಾ]

**ಪ್ರೋಷ್ಠ** (ನಾ). ೧. ಎತ್ತು ; ವೃಷಭ. ೨. ಕಾಲುಗಳುಳ್ಳ ಮಣೆ. ೩. ಒಂದು ಬಗೆಯ ಮೀನು. ೪. [ಕಾಮಶಾ] ರತಿಬಂಧಗಳಲ್ಲಿ ಒಂದು ಬಗೆ : ಮೆಲ್ಲನೆ ಮಲಗಿರ್ದವಳು ತನ್ನೆರಡು ಪಾದಂಗಳಂ ಮೇಲಕ್ಕೆಯತ್ತಿ ತೋರಣಕಂಭದಾಕಾರಂಗೆಯ್ದು ತನ್ನ ಕಾಲ್ಗಳಂ ತಿರುವುತ ಕೂಡಿದರೆ ಪ್ರೋಷ್ಠ[ಪಾಠಾಂ. ಷ್ಠ]ಮೆಂಬ ಕರಣಂ (ಕಾಮಶಾ. ೨೪೩). [ಸಂ.]

**ಪ್ರೋಷ್ಠಪದ** (ನಾ). ೧. [ಜ್ಯೋತಿ] ಪೂರ್ವಾಭಾದ್ರಾ, ಉತ್ತರಾಭಾದ್ರಾ ಎಂಬ ಎರಡು ನಕ್ಷತ್ರಗಳು. ೨. ಚಾಂದ್ರಮಾನದಲ್ಲಿನ ಮೂರು ವಂತ್ತು ನಾಲ್ಕನೆಯ ನಕ್ಷತ್ರಗಳಿಗೆ ಸಂಬಂಧಿಸಿದ ತಿಂಗಳು ; ಭಾದ್ರಪದಮಾಸ. [ಸಂ.]

**ಪ್ರೋಷ್ಠಿ** (ನಾ). ಹೆಣ್ಣುಮೀನು : "ಪ್ರೋಷ್ಠಿಯೆನೆ ಶಫರಿಯೆಂದೆನೆ ಹೆಣ್ಣುಮೀನಕ್ಕು" (ಮಂಗರಾ. ೨೨೦-೬). [ಸಂ. ಪ್ರೋಷ್ಠೀ]

**ಪ್ರೋಹ** (ನಾ). ಆನೆಯ ಕಾಲು : ಸುಸಂಘಟಿತಪ್ರೋಹಫಲೀಹಸ್ತಗಾತ್ರನುಂ ಪರಿಪೂರ್ಣಶಿಷ್ಟಪಾರ್ಷ್ಣಿಯುಂ . . . ಅಪ್ಪ ವಿಜಯಪರ್ವತಗಜೇಂದ್ರಂ ಬಂದು (ಆದಿಪು. ೦೨-೩೬ ವ). [ಸಂ.]

**ಪ್ರೌಢ** (ಗು). ೧. ಚೆನ್ನಾಗಿ ಬೆಳೆದ; ವೃದ್ಧಿಯಾದ : ಪ್ರೌಢವಿಲಾಸಿನೀಮನಸಿಜಂ. . . ಶ್ರೀಧರಂ (ಜಾತಿಕ. ೦-೩). ೨. ಗಾಢವಾದ; ಸಾಂದ್ರ. ೩. ವೇಗವುಳ್ಳ; ರಭಸವಾದ. ೪. ಪಾಂಡಿತ್ಯದಿಂದ ಕೂಡಿದ; ಬುದ್ಧಿವಂತಿಕೆಯ. ೫. ಮದುವೆಯಾದ; ವಿವಾಹ ಮಾಡಿಕೊಂಡ. (ನಾ). ೬. ಪಾಂಡಿತ್ಯದಿಂದ ಕೂಡಿರುವುದು; ವಿದ್ವತ್ಪೂರ್ಣವಾಗಿರುವುದು : ಶಾಸನಗಳ ಭಾಷೆ, ವ್ಯಾಕರಣ, ಛಂದಸ್ಸು ಇವು ಪ್ರೌಢವಾಗಿವೆ (ಶಾಶಿಸ. ೦೩). ೭. ವಯಸ್ಸಿಗೆ ಬಂದವನು ; ಪ್ರಾಯಸ್ಥ : ನೀನು ಇನ್ನೂ ಸಣ್ಣವನು. ಸ್ವತಂತ್ರನಾಗಿ ನಡೆಯಶಕ್ಕಷ್ಟು ಪ್ರೌಢನಾಗಿಲ್ಲ (ಪಂಜಾಂಶಿಮು. ೪-೩೮). ೮. ಪಂಡಿತ; ಪ್ರಗಲ್ಭ : ನಿಮ್ಮಯ ಸಭೆಯೊಳಿಪ್ಪ ಪ್ರೌಢರ ವಿಚಾರಿಸಿ ತಾವೆ ಪೇಳ್ವರು (ಕೌಶಿಕಾ. ೨-೨೮); ಒರ್ವ ವಿಟನಿದಿರ್ವಂದು ಮತ್ತೇಭಗಾಮಿನಿ ಭೃಂಗನೀಲಕುಂತಳೆ ಪನ್ನಗಾಭಸುಂದರವೇಣಿ ಬೆದಱಬೇಡನುತ ತಕ್ಕೈಸಿದನದೇಂ ಪ್ರೌಢನೋ (ಕೃಪಿಚಾ. ೨೬-೪).

[ಸಂ.]

**ಪ್ರೌಢತೆ** (ನಾ). ಜಾಣ್ಮೆ; ನೈಪುಣ್ಯ; ಪ್ರಾವೀಣ್ಯ : ದುರ್ಧರಸಮರಜಯಪ್ರೌಢತಾರೂಢದೋಶ್ಶೌರ್ಯದೆ ಶೂರಾರಾತಿಸಂದೋಹವನೆಱಗಿ (ಶಂರಕೃ. ೩-೦೪೯) ; ತುಳುಂಕಿದರಂಬುಮಂ ನಿಜಪ್ರೌಢತೆಯಿಂದವೊಲ್ದು ವಿಸಟಂಬರಿದಾಡಿದರ್. . .ಲಲಿತಾಂಗಿಯರ್ (ಜಜ್ಞಾಕ. ೪-೫೩).

[ಸಂ. ಪ್ರೌಢತಾ]

**ಪ್ರೌಢವತ್ಸೆ** (ನಾ). ಅನೇಕ ಕರುಗಳನ್ನು ಹಾಕಿರುವ ಹಸು : "ಬಷ್ಕಯಣೀ, ಪ್ರೌಢವತ್ಸಾ—ಈ ೨ ಕಡೆಗುಂದಿ" (ಹಜಾಮು. ೪೫-೦೦೩).

[ಸಂ. ಪ್ರೌಢವತ್ಸಾ]

**ಪ್ರೌಢವಯಸ್ಕ** (ನಾ). ವಯಸ್ಸಿಗೆ ಬಂದವನು : ಪುಲಿಕೇಶಿ ಸಾಯುವಾಗ ಅಂದರೆ ಸುಮಾರು ೬೪೨ರಲ್ಲಿ ವಿಕ್ರಮಾದಿತ್ಯನು ಪ್ರೌಢವಯಸ್ಕನಾಗಿರಬೇಕು (ಕರ್ನಾಇ. ೬೬). [ಸಂ.]

**ಪ್ರೌಢವಿದ್ಯಾಭ್ಯಾಸ** (ನಾ). ೧. ಹೆಚ್ಚಿನ ತಿಳಿವಳಿಕೆಯನ್ನು ನೀಡುವ ಶಿಕ್ಷಣ : ಇದ್ದ ಊರಿನಲ್ಲಿ ಪ್ರೌಢಶಾಲೆಯಿಲ್ಲವಾದ್ದರಿಂದ ಮಗನನ್ನು ಪ್ರೌಢವಿದ್ಯಾಭ್ಯಾಸಕ್ಕಾಗಿ ಬೇರೆ ಊರಿಗೆ ಕಳುಹಿಸಬೇಕಾಯಿತು (ಆಡು). ೨. (ವಿಶ್ವವಿದ್ಯಾನಿಲಯದ ಮಟ್ಟದ) ಉನ್ನತಶಿಕ್ಷಣ : ಎಷ್ಟೇ ಕಷ್ಟವಾದರೂ ಸರಿ, ಮಗನಿಗೆ ಪ್ರೌಢವಿದ್ಯಾಭ್ಯಾಸ ಮಾಡಿಸಬೇಕೆಂಬ ಅವನ ಹಟ ಸಾರ್ಥಕವಾಯಿತು (ಆಡು). [ಸಂ.]

**ಪ್ರೌಢವಿವಾಹ** (ನಾ). ವಯಸ್ಸಿಗೆ ಬಂದ ವಧೂವರರ ವಿವಾಹ : ಪ್ರೌಢವಿವಾಹ, ವಿಧವಾವಿವಾಹ . . . ವಿಚಾರವಂತರನ್ನು ಆಕರ್ಷಿಸಿತು (ಧರ್ಮಜಾ. ೬೩). 'ಬಾಲ್ಯವಿವಾಹ' ಪರಾ. [ಸಂ.]

**ಪ್ರೌಢಶಾಲೆ** (ನಾ). ಹೆಚ್ಚಿನ ವಿದ್ಯಾಭ್ಯಾಸವನ್ನು ನೀಡುವ ಶಾಲೆ ; ಹೈಸ್ಕೂಲು : ತೀರ್ಥಹಳ್ಳಿಗೆ ಮುಂದೆ ತಂದೆ ಕರೆತಂದರು ಪ್ರೌಢಶಾಲೆಗೆ ಸೇರಿಸಿದರು (ಇಂಕಾಶ. ೦೪-೩೯) ; ಮಾಧ್ಯಮಿಕಶಾಲೆ ಸೆಕೆಂಡರೀಶಿಕ್ಷಣದ ಒಂದು ಅಂಗ ಮಾತ್ರವಾದ್ದರಿಂದ ಅದು ಪ್ರೌಢಶಾಲೆಯ ಕಡೆ ಕೈ ತೋರಿಸಲೇಬೇಕು (ಶಿಕ್ಷದ. ೦೪೦). 'ಪ್ರಾಥಮಿಕಶಾಲೆ' ಪರಾ.

[ಸಂ. ಪ್ರೌಢಶಾಲಾ]

**ಪ್ರೌಢಶಿಕ್ಷಣ** (ನಾ). ೧. = ಪ್ರೌಢವಿದ್ಯಾಭ್ಯಾಸ ೧: ಶಿಕ್ಷಣ ವ್ಯವಸ್ಥೆಯನ್ನು ಕೆಳಗಿನ ನಕ್ಷೆಯ ಮೂಲಕ ವಿವರಿಸಬಹುದು: ಪ್ರಾಥಮಿಕ ಶಿಕ್ಷಣ→ ಪ್ರೌಢಶಿಕ್ಷಣ → ವಿಶ್ವವಿದ್ಯಾನಿಲಯದ ಶಿಕ್ಷಣ (ಶಿಕ್ಷದ. ೦೪೨). ೨. = ಪ್ರೌಢವಿದ್ಯಾಭ್ಯಾಸ ೨: ಇದ್ದ ಊರಿನಲ್ಲಿಯೇ ಕಾಲೇಜು ಬಂದುದರಿಂದ ಅವನ ಮಗನ ಪ್ರೌಢಶಿಕ್ಷಣಕ್ಕೆ ಸುಲಭವಾಯಿತು (ಆಡು). [ಸಂ.]

**ಪ್ರೌಢಿ** (ನಾ). ೧. ಬಲಿಯುವಿಕೆ; ಪಕ್ವವಾಗುವಿಕೆ. ೨. ಚತುರತೆ; ಜಾಣ್ಮೆ; ನಿಪುಣತೆ : "ಪ್ರೌಢಿಃ — ಜಾಣತನಂ" (ಅಕಶ್ಯ. ೦೬೦); ಆಚಾರ್ಯರ್ಕಳ್ಮಂ ನಿಯಮಿಸುಗೆ ನಿಜಾನುಗ್ರಹಪ್ರೌಢಿಯಿಂದಂ (ಪುಕೃಶ್ರ. ೧-೩); ಪ್ರೌಢಿಯಲ್ಲಿದು ಕೇಳಿ ಬಲ್ಲವು ರೂಢಿಯಲಿ ಸಮಬಲರು ಭೀಮಸಗಾಢದಲಿ ಬಲಭದ್ರ ಕೀಚಕ ಶಲ್ಯರೆಂಬುವರು (ಕುಮ್ಯಾಶಿ. ४-೯). ೩. ಸೊಕ್ಕು; ಗರ್ವ. ೪. ಧೈರ್ಯ; ಎದೆಗಾರಿಕೆ. ೫. ಸಾಹಸ; ಶೌರ್ಯ. ೬. [ಕಾವ್ಯಮೀ] ಅರ್ಥಗುಣಗಳಲ್ಲಿ ಒಂದು ; ದೀರ್ಘ

ಸಮಾಸವನ್ನು ರಚಿಸುವ ಅಥವಾ ಸಮಾಸದ ಅರ್ಥವನ್ನು ಸರಳವಾದ ಮತ್ತು ವಿರಳ ಶಬ್ದಗಳಲ್ಲಿ ನಿರೂಪಿಸುವ ಬರಹದ ಗುಣ : ಅರ್ಥಗುಣಗಳಲ್ಲಿ ಓಜಸ್ಸು (ಅಥವಾ ಪ್ರೌಢಿಯು) ಮೊದಲು ನಾಲ್ಕು ಭೇದಗಳು ಕೇವಲ ವೈಚಿತ್ರ್ಯ ಮಾತ್ರ (ಶ್ವಾಜಾ. ೨೬೯). [ಸಂ.]

**ಪ್ರೌಢಿಮೆ** (ನಾ). ೧. ಜಾಣ್ಮೆ; ಚಾತುರ್ಯ; ನೈಪುಣ್ಯ : ಯಾವನೋ ನಿಪುಣನಾದ ಕಲಾವಿದನು ವರ್ಷಗಟ್ಟಲೆ ದುಡಿದು ಅದರಲ್ಲಿ ತನ್ನ ಕಲಾಪ್ರೌಢಿಮೆಯನ್ನು ಛಟ್ಟ ಇಳಿಸಿದ್ದನು (ಕಂಐತು. ೮). ೨. ಅತಿಶಯವಾದ ಕೌಶಲ್ಯ : ಅದು... ಗ್ರೀಕರ ರುದ್ರನಾಟಕದ ಪ್ರೌಢಿಮೆಯನ್ನೂ ಗಾಂಭೀರ್ಯವನ್ನೂ ಗಳಿಸಿತು (ಅಂಕಾ. ೬೬). [ಪ್ರೌಢಿ+—ಮೆ]

**ಪ್ರೌಢಿವೆಱು** (ಕ್ರಿ). ನೈಪುಣ್ಯವನ್ನು ಹೊಂದು ; ಪ್ರೌಢಿಮೆಯನ್ನು ಪಡೆ : ಸಮಗ್ರತರಶಿಕ್ಷಾನುಗ್ರಹ ಪ್ರೌಢಿವೆತ್ತನವರ್ಕೆ ದಯೆಗೆಯ್ದು ರಕ್ಕೆ ದಯೆಯಿಂ ಭವ್ಯಾಳಿಗೆ (ಕಂಐತು. ೧-೩). [ಪ್ರೌಢಿ + ಪೆಱು]

**ಪ್ರೌಢೆ** (ನಾ). ೧. ತಾರುಣ್ಯಾವಸ್ಥೆಯನ್ನು ವಿಾರಿದ ಹೆಂಗಸು; ಮಧ್ಯಮ ವಯಸ್ಸಿನವಳು : ಐದುವರ್ಷಪರ್ಯಂತರ ಕೂಟವಾಗಿ ಮೂವತ್ತುವರ್ಷ ಪರ್ಯಂತ ಪ್ರೌಢೆ ಎನಿಸಿಕೊಂಬಳು (ಕಕ್ಕೆ. ೬೦). ೨. ತಿಳಿದವಳು; ಪ್ರಾಜ್ಞೆ : ಅತಿಪ್ರೌಢೆಯನುಜ ಕಳದಿ (ಜಗು. ೨-೬೬ ಕ); ನಾನು ನಿನಗೀಗ ಚಿಕ್ಕವಳು. ಹುಡುಗಿಯೂ ಅಲ್ಲ. ಪ್ರೌಢೆ ಮೊದಲೇ ಅಲ್ಲ (ಶಾಂಕಾ. ೬೬). ೩. [ಕಾವ್ಯವಿದ್ಯಾ] ಬಾಲೆ, ಮುಗ್ಧೆ, ವಿದಗ್ಧೆ ಮತ್ತು ಪ್ರಗಲ್ಭೆಯರೆಂಬ ನಾಯಿಕೆಯರ ನಾಲ್ಕು ಭೇದಗಳಲ್ಲಿ ಮೂರನೆಯ ವರ್ಗಕ್ಕೆ ಸೇರಿದವಳು ; ವಿದಗ್ಧೆ : ವಯಸುವಿಭೇದದಿಂ ಬಾಲೆ ಯೌವನೆ ಪ್ರೌಢೆ ಲೋಲ್ಯೆಯೆಂದಿಂತು ಧಾತ್ರಿಯೊಳಪ್ಪನಾಲ್ಕುಕಾಂತೆಯರ್ (ಶುಲು. ೬-೦). [ಸಂ. ಪ್ರೌಢಾ]

**ಪ್ರೌಢೋಕ್ತಿ** (ನಾ). =ಪ್ರೌಢಿ ೬ : ಪರಕಾರ್ಯೋತ್ಕರ್ಷಕ್ಕೆ ತಾಂ ಕಾರಣವಾಗದಿರೆಯುರೆ ಕಾರಣವಾಗೆ ಪ್ರೌಢೋಕ್ತಿ (ಕುಟಾ. ೬೫೦); ವಿಷಯವನ್ನಿಲ್ಲಿ ಕವಿಯ ಪ್ರೌಢೋಕ್ತಿಯಿಂದ ಅರ್ಥೋತರಕ್ಕೆ ವ್ಯಂಜಕವಾಗಿದೆ (ಶ್ವಾಧ್ಯಾರೋ. ೦೨೨). [ಸಂ.]

**ಪ್ಲಕ್ಷ** (ನಾ). ೧. ಒಂದು ಬಗೆಯ ಮರ : ಬಸರಿ : "ಪತ್ತಿಗುದಿ ಪ್ಲಕ್ಷ ಮಕ್ಕುಂ" (ಕುಂಗಣ. ೬೬-೦೯). ೨. ಅತ್ತಿಮರ. ೩. ಆಲದ ಮರ. ಬರ್ವಾ ಪಥದೊಳಿಸೆದುದುದ್ದಂಡಶಾಖಾಕದಂಬೋಜ್ವಳಪರ್ಣೋದೀರ್ಣಶುಂಭತ್ಫಳಕುಳವಿಳಸಚ್ಛಾಯಕಂ ಪ್ಲಕ್ಷವೃಕ್ಷಂ (ಶ್ವಜು. ೨೦-೦೬). ೪. ನೆರಳು ; ಛಾಯೆ : "ಪ್ಲಕ್ಷಿ—ಛಾಯಯಾಂ, ನೆಳಲೊಳ್" (ಕಾಕ್ಕ. ೦೦೬). ೫. ಭೂಮಿಯ ಸಪ್ತದ್ವೀಪಗಳಲ್ಲಿ ಒಂದರ ಹೆಸರು. [ಸಂ.]

**ಪ್ಲವ** (ಗು). ೧. ತೇಲುವ. ೨. ಹಾರುವ; ನೆಗೆಯುವ. ೩. ಉತ್ತಮವಾದ ; ಶ್ರೇಷ್ಠವಾದ. (ನಾ). ೪. ತೇಲುವಿಕೆ. ೫. ಹಾರುವಿಕೆ ; ನೆಗೆತ. ೬. ಪ್ರವಾಹ; ಹರಿವು : ನಿರ್ಝರಪೂರಮಾಗಿಯುಮತ್ತಿಗ್ಗಾಶ್ರುಧಾರಾಜಲಪ್ಲವಮುಂ ಬಾರಿಸಲೆಂತುಮಾಜವಲಂ ಕಾಲೋರಗಗ್ರಸ್ತನಂ (ಅಕ್ಷ. ೩-೬೯) ; ಅವಳಸಿಯ ಬಾಸೆಯಿಂದೀ ನವಯೌವನವನದ ಲತೆಯ ಲಾವಣ್ಯಜಳಪ್ಲವಮನೊಳಕೊಳ್ವುದೆಂದಾಳವಾಳಮನೆ ನಿಮ್ನನಾಭಿಮಂಡಲಮೆಸೆಗುಂ (ಬುಂಪ್ರ. ೩-೬೨) ; ವರನೊತ್ತಿದ ಘುಸೃಣರಸಂ ಗುರುಕುಚತಟನಗಧಾತು ನಿರ್ಝರಪ್ಲವಮೀಳಂತಿರೆ ನಸುಳ್ಳೈತರ ತಳ್ತೀಂ ಕರಮೆಸೆದುದೊ ಬಾಸವಳ್ಳಿ ತಳಿರೇಟದವೋಲ್ (ಗಾಕೀ. ೦೦-೯೬). ೭. ನೀರಿನ ಮೇಲೆ ತೇಲುವ ಸಾಧನ : ತೆಪ್ಪ, ದೋಣಿ, ಮೊದಲಾದವು : "ತಳ್ಪಂ. ಉಡುಪಃ, ಪ್ಲವಃ—ಈ ೩ ತೆಪ್ಪಂ" (ಕರಾಘು. ೦೦೦-೯೯). ೮. ಕಪ್ಪೆ. ೯. ಕೋತಿ. ೧೦. ಚಂಡಾಲ ; ಹೊಲೆಯ. ೧೧. ಒಂದು ಬಗೆಯ ನೀರು ಹಕ್ಕಿ : ಕೃಕರಕರೇಟು ಕುಕ್ಕುಟ . . . ಕಂಕವರ್ತಕ ಕುರರೀಪ್ಲವಪ್ರಕರದಿಂದೆ ವಿರಾಜಿಕುಮಾಮ್ನಕಂ ವನಂ (ಹಪ್ಪಿ. ೯-೬೨); ಆಗಳ್ ಸಮುದ್ರಂಗಳೆಯುದ್ಧತಿರ್ಥವೆಂತನೆ ... ನೊರಗಳ್ ಸದ್ದುದ್ದುಭಿದಂಗಳ್ ಗಜ ತುರಗ ನರರ್ ಕುಕ್ಕುಟಂಗಳ್ ಪ್ಲವಂಗಳ್ ನೆರೆದೆತ್ತಂ ತುಂಬಿ ಘೋಷಂ ಪೊರೆದೊರೆಯೆ ದಿಶಾಭಾಗಮುಂ ಬಂದವಾಗಳ್ (ಶಾಂಪು. ೦-೦೦-೩೦). ೧೨. ಅರವತ್ತು ಸಂವತ್ಸರಗಳಲ್ಲಿ ಮೂವತ್ತೈದನೆಯ ಸಂವತ್ಸರ : ಪ್ರಭವ. . . ಶಾರ್ವರಿ ಪ್ಲವ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ಅಜೀಳ. ೨೬೬). [ಸಂ.]

**ಪ್ಲವಂಗ** (ನಾ). ೧. ಕೋತಿ ; ಮಂಗ : "ಬಲೀಮುಖಃ, ಮರ್ಕಟಕಃ, ವನೌಕಾಃ, ಪ್ಲವಂಗಮಃ, (ಪ್ಲವಂಗಃ), ಪ್ಲವಗಃ . . . ವಾನರಃ— ಈ ೧೧ ಕೋಡಗಂ" (ಕರಾಘು. ೩೯-೬೬) ; ನೆತ್ತರ ಹೊರದಲಿ ಹೋಹ ಪ್ಲವಂಗಕ್ಕವಧಿಯಿಲ್ಲ (ಕೊರಾ. ೬-೩೩-೯೯). ೨. ಕಪ್ಪೆ : "ಮಂಡೂಕಃ . . . ಪ್ಲವಂಗಃ—ಈ ೮ ಕಪ್ಪೆ" (ಕರಾಘು. ೦೦೯-೯೦). ೩. ಒಂದು ಬಗೆಯ ಜಿಂಕೆ. ೪. ಅಂಜೂರ ವೃಕ್ಷ. ೫. ಅರವತ್ತು ಸಂವತ್ಸರಗಳಲ್ಲಿ ನಲವತ್ತೊಂದನೆಯ ಸಂವತ್ಸರ : ಆ ವರ್ಷವೇ ಪ್ರಭವ . . . ಪ್ಲವಂಗ ಕೀಲಕ . . . ಅಕ್ಷಯವೆಂದಱುವತ್ತುತೆಱನಾಗಿಹುದು (ಅಜೀಳ. ೨೬೬). ೧. ೫ : ಮನೆ ಸಲೆ ಹೇವಿಳಂಬಿ ಸಹಕಾರಿ ವಿಕಾರಿ . . . ನಿಜವಲ್ಲಭೆ ದುರ್ಮುಖಿಯಿಂದೊಡನ್ನ ಪಂಚಿನ ವಿಭವಂ ಪ್ಲವಂಗದವೊಲಾದುದು ಮನ್ಮಥಚಿತ್ರಭಾನುವಿಂ (ಸೂಕ್ತಿಸು. ೯-೪೬೩); ಸೌಮ್ಯ ಶ್ರೀಮುಖಿಂ ಪ್ರಭವ ಶುಕ್ಲಾನಂದನಿವನಿರಲ್ಕೆ ಕೃತಕಂ ಪ್ಲವಂಗದುರ್ಮುಖಿಯಿಂ ವಿಕಾರಿಯಂ ಪ್ರತಿದಿನಂ ಕರೆಯೊಬೆಯೆಂದು 'ಸಂವತ್ಸರಮನತಿಶಯಂ ಪೇಳ್ವಂತೆ ರೌದ್ರಿರಕ್ತಾಕ್ಷಿ ತಾಯಂ ಮಗಳ್ ಕೋಪಿಸಿದಳು (ಕಾಕ್ಷ. ೦೦-೯೦). ೬. ಕುದುರೆ ; ಅಶ್ವ : "ತುರಂಗಂ ಕಪಿ ಭೇಕಂಗಳೆಂತು ಪ್ಲವಂಗಮುಕ್ಕುಂ" (ಶಾಶಾ. ೯೬). [ಸಂ.]

**ಪ್ಲವಂಗಮ** (ನಾ). ೧. = ಪ್ಲವಂಗ ೧ : "ಬಲೀಮುಖಃ ... ಪ್ಲವಂಗಮಃ . . . ವಾನರಃ — ಈ ೧೧ ಕೋಡಗಂ" (ಕರಾಘು. ೩೯-೬೬). ೨. ಕಪ್ಪೆ : "ಮಂಡೂಕಃ ... ಪ್ಲವಂಗಮಃ , ಪ್ಲವಂಗಃ —ಈ ೮ ಕಪ್ಪೆ" (ಕರಾಘು. ೦೦೯-೯೦). [ಸಂ.]

**ಪ್ಲವಂಗವಿದ್ಯೆ** (ನಾ). [ಜೈನ] ವಿದ್ಯೆಗಳಲ್ಲಿ ಒಂದು ; ಮರ್ಕಟವೇಷವನ್ನು ತಾಳುವ ವಿದ್ಯೆ : ಅಣುಮಂ ಪ್ಲವಂಗವಿದ್ಯೆಯಿಂ ಕಪಿಮೂರ್ತಿಯಂ ಕೈಕೊಂಡು ಕಾಪಿನವರ್ಗೆಲ್ಲಂ ಮಹಾನಿದ್ರೆಯಂ ಮಾಡೆ (ಶಾಪುಂಪು. ೪೦೬). [ಸಂ. ಪ್ಲವಂಗವಿದ್ಯಾ]

**ಪ್ಲವಕ** (ನಾ). ೧. ತೇಲುವವನು : "ಪ್ಲವಕಃ, ಪ್ಲವಮಾನಃ —ಈ ೨ ತೇಲ್ವಂ" (ಕಾಕ್ಕ. ೦೩೬). ೨. ಕಪ್ಪೆ. ೩. ಡೊಂಬ. ೪. ಚಂಡಾಲ. ೫. ಕೋತಿ ; ಮಂಗ. [ಸಂ.]

**ಪ್ಲವಗ** (ನಾ). ೧. = ಪ್ಲವಂಗ ೧ : "ಬಲೀಮುಖಃ . . . ಪ್ಲವಗಃ . . . ವಾನರಃ — ಈ ೧೧ ಕೋಡಗಂ" (ಕರಾಘು. ೩೯-೬೬) ; ನವರಸರಸಿಕಂ ಸುಮನಸ್ಸವನೀಯಮೆನಿಪ್ಪ ಕಾವ್ಯದತಿಶಯಮಂ ದುಃಕವಿಯಱಿಯನೆಂದು ಜಱಿಯ ಪ್ಲವಗಕ್ಕೇವಾಟ್ಟಿ ಪಾರಿಜಾತಪ್ರಸವಕಂ (ಕರ್ಣಾಪಾ. ೦-೩೬). ೨. ಕಪ್ಪೆ ; ಮಂಡೂಕ : "ಮಂಡೂಕಃ, ಪ್ಲವಗಃ . . . ಪ್ಲವಂಗಃ—ಈ ೮ ಕಪ್ಪೆ" (ಕರಾಘು. ೦೦೯-೯೦) ; ಪ್ಲವಗಪ್ಲುತದಿಂ ಚಾರಣನಿವಹಂ ಚಾರಣಗಣಂಗಳಂ ತಾಗೆ ವಯಃಪ್ಲವದೊಳಗೆ ಮುಟ್ಟಿ ಪಾರಿಪ್ಲವನೇತ್ರೆಯರಮರಕಾಂತೆಯರ್ ಸೊಗಯಿಸಿದರ್ (ಅಕ್ಷ. ೯-೬೦). ೩. ಒಂದು ಬಗೆಯ ನೀರು ಹಕ್ಕಿ; ನೀರುಕೋಳಿ. ೪. ಸೂರ್ಯನ ಸಾರಥಿ ; ಅರುಣ. [ಸಂ.]

**ಪ್ಲವಗಕೇತು** (ನಾ). ಕಪಿಯನ್ನು ಧ್ವಜದಲ್ಲಿ ಉಳ್ಳವನು; ಕಪಿಧ್ವಜ:

ಅವಿತಚತುರಂಗಸೇನಾಸಮನ್ವಿತರ್ ಪ್ಲವಗಕೇತುಗಳ್ಮಾರುತಮಾರ್ಗಮಂ ನೆಳಸಿ ಬಳಸಿ ನಡೆದರ್ (ಶಂರಾಶಾ. ೦೬-೨೬). [ಸಂ.]

**ಪ್ಲವನ** (ನಾ). ೧. ತೇಲುವುದು : "ಪ್ಲವನಂ, ಪ್ಲವನೀಯಂ—ಈ ೨ ತೇಲ್ಕೆ" (ಶಾಶಸ್. ೦೨೮). ೨. ಮೀಹ ; ಸ್ನಾನ. ೩. ಕುಪ್ಪಳಿಸುವುದು; ನೆಗೆತ. ೪. ಪ್ರವಾಹ ; ನೆರೆ : ಉದ್ಗತನಿರ್ಝರಪ್ಲವನದಿಂ ಗಂಗಾಸರಿತ್ಪೂರಮಂ ನಗುವಂತುನ್ನತಿವೆತ್ತ ಕಲ್ಪತರುಸಾನೂದ್ಯಾನದಿಂ ಮೇರುವಂ ನಗುವಂತೊಪ್ಪುವುದಂ ವಸಂತ ಗಿರಿಯಂ ಕಂಡಂ ಮಹೀಮಂಡನಂ (ಶಂರಾಶಾ. ೨-೦೬). ೫. ಇಳುಕಲು ; ಇಳಿಜಾರು. ೬. ಕುದುರೆಯ ನಡಗೆಗಳಲ್ಲಿ ಒಂದು ಬಗೆ. [ಸಂ.]

**ಪ್ಲವಿಸು** (ಕ್ರಿ). ಹರಿ ; ಪ್ರವಹಿಸು : ಪ್ಲವಿಸುತ್ತಸೀಮರೋದನಮತ್ತ್ಯಲುಂ ! ರಣಂ ವಿಂದತ್ತು ಕರೆವ ಕಂಬನಿಮಳೆಯ ತೀರ್ಥದಲಿ ! (ಆತ್ಮಾಂಗ. ೬೮-೨೪೨೩). [ಪ್ಲವನ + —ಇಸು]

**ಪ್ಲಾಂಟೇಷನ್** (ನಾ). ಹತ್ತಿ, ಹೊಗೆಸೊಪ್ಪು, ಕಾಫಿ, ಟೀ ಮೊದಲಾದ ಗಿಡಗಳ ತೋಟ : ಪಬ್ಲಿಕ್‌ರಸ್ತೆಗಳ ಉದ್ಯಾನ ತೋಟಗಳ ಪ್ಲಾಂಟೇಷನ್‌ಗಳ ನಾಲಾಗಳ . . . ಸ್ವಾಧೀನಗಾರರು (ಗ್ರಾಮಶಾ. ೦೦೬); ಅಲ್ಲಿಯ ಪ್ಲಾಂಟೇಷನ್ ಕೃಷಿಯ ಹೊಲಗಳ ವಿಸ್ತಾರ ಸ್ವಾಭಾವಿಕವಾಗಿ ದೊಡ್ಡದೇ ಇರುತ್ತದೆ (ಆಶಸಂ. ೪೮). [← ಇಂ. Plantation]

**ಪ್ಲಾಟಿನಂ** (ನಾ). ಒಂದು ಬಗೆಯ ಲೋಹ ; "ಅಸಂಮಿಶ್ರಿತ ಆಮ್ಲಗಳಿಂದ ಕ್ಷಯಿಸದ, ಬಹಳ ತೀವ್ರಶಾಖದಲ್ಲಿ ಮಾತ್ರ ಕರಗುವ, ತಗಡಾಗಿ ಬಡಿಯಲೂ ತಂತಿಯೆಳೆಯಲೂ ಆಗುವ, ಭಾರವಾದ, ಒಂದು ಬಿಳಿಯ ಲೋಹ" (Platinum. ೨೦೪೮) : ಈಗ ನಮಗೆ ಗೊತ್ತಿರುವ ಧಾತುಗಳಲ್ಲಿ ಪ್ಲಾಟಿನಮ್ ಎಂಬ ಧಾತುವಿನ ಹೊರತು ಚಿನ್ನದಷ್ಟು ಭಾರವುಳ್ಳ ಧಾತುವು ಎರಡನೆಯದಿಲ್ಲ (ಮುಂಬಯಿ. ೪-೦೦೨). [← ಇಂ. Platinum]

**ಪ್ಲಾವ** (ನಾ). ೧. ಹರಿಯುವುದು. ೨. ಹಾರಂವಿಕೆ ; ನೆಗೆತ. ೩. ಉಕ್ಕಿ ಹರಿಯುವುದು ; ದಡ ಮೀರಿ ಹರಿಯುವುದು. [ಸಂ.]

**ಪ್ಲಾವಕ** (ಗು). ತೇಲುವ : ಕೃತಿ ವರ್ತಮಾನದಲ್ಲಿ ಜನ್ಮವೆತ್ತಿದರೂ ಅದರ ಸೆಳೆತಕ್ಕೆ ಸಿಕ್ಕಿಕೊಳ್ಳದೆ ಸಂತತ ವರ್ತಮಾನಕ್ಕಿರುತ್ತದೆ. ತನ್ನಲ್ಲಿ ತುಂಬಿಕೊಂಡಿರುವ ಸಲವಿನ ಪ್ಲಾವಕಶಕ್ತಿಯಿಂದ (ಕಾವ್ಯಕು. ೦೦). [ಸಂ.]

**ಪ್ಲಾವನ** (ನಾ). ೧. ಮೇರೆ ಮೀರಿ ಹರಿಯುವುದು ; ದಡ ಮೀರಿ ಹರಿಯುವುದು. ೨. ನೆರೆ ; ಪ್ರವಾಹ. ೩. ಸ್ನಾನ : ಶೋಷಣ ದಾಹನ ಪ್ಲಾವನಗಳೆಂಬ ಮಾಜುಕ್ರಿಯೆಗಳಂ (ಶಿವೇಶ. ೦೦೩). ೪. ತೇಲುವವನು : ಅಲಘುಪ್ರಸಾದಾಮೃತಪ್ಲಾವನರ್ಗೆ ಮತ್ತೊಲವಿನಿಂ ಪ್ಲಾವನಕ್ರಿಯೆಗೆಯ್ಮರೇಕೆ (ಅಶಾಶ. ೦-೦೧-೨೦). [ಸಂ.]

**ಪ್ಲಾವಿತ** (ನಾ). ಆವೃತವಾಗುವಿಕೆ : ಕಾಳಿಯ ಪೂಜಾಸ್ಥಾನವು ನರಮಾಂಸರಕ್ತದಿಂದ ಪ್ಲಾವಿತವಾಗುವುದೆಂಬುದನ್ನು . . . ಅವಳ ಹೃದಯವು ಸಹಿಸಲಾರದಾಗಿದ್ದಿತು (ಕಪಾಕು. ೦೨೪). [ಸಂ.]

**ಪ್ಲಾಸ್ಟಿಕ್ಕು** (ನಾ). ರಬ್ಬರಿನಂತೆ ಮೃದುವಾಗಿರುವ ವಸ್ತು ; ಒಂದು ಬಗೆಯ ಮೇಣ : ಪ್ಲಾಸ್ಟಿಕ್ಕು ಗೋಬಿಯನಾಟಕ ತಂದಳು (ಕಂದ್ರಶೀ. ೬-೩೨). [← ಇಂ. Plastic]

**ಪ್ಲೀಡರು** (ನಾ). ನ್ಯಾಯವಾದಿ ; ವಕೀಲ : ಒಬ್ಬ ಅಡ್ವೋಕೇಟ್ ಯಾ ಪ್ಲೀಡರ್ ಖರ್ಚುಗಳನ್ನು ಫಲಾನೆ ಕಾಲದಲ್ಲಿ ಕೊಡುವಂತೆ ಕಂಡೀಷನ್ನಾಗಿ ಯಾವ ಕರಾರೂ ಮಾಡಲ್ಪಡದೆ ಇದ್ದರೆ ಆ ಖರ್ಚಿನ ಬಗ್ಗೆ ಅಡ್ವೋಕೇಟ್ ಯಾ ಪ್ಲೀಡರಿಂದ ಮೂರು ವರ್ಷಗಳು (ಗ್ರಾಮಶಾ. ೦೬೭). [← ಇಂ. Pleader]

**ಪ್ಲೀಹ** (ನಾ). ೧. ಹೊಟ್ಟೆಯ ಎಡಭಾಗದಲ್ಲಿ ಇರುವ ಮಾಂಸಗ್ರಂಥಿ ; ಗುಲ್ಮ ; ತೊರಳೆ : ಮುಂದೆ ಅವು ಪ್ಲೀಹಕ್ಕೆ ಹೋಗಿ, ಅಲ್ಲಿ ಈ ಸತ್ತ ಕಣಗಳನ್ನು ಒಟ್ಟಿಸಿ ಬರುವುವು (ಶಾಂಶ್ರ. I. ೩೦೬); ಹಾಗಾದರೆ ಈ 'ನಾಗಸೇನ' ಎಂಬುದು ಉಗುರೇ ? ಹಲ್ಲೆ ? . . . ಮೂತ್ರಕೋಶವೆ ? ಪ್ಲೀಹವೇ ? (ಬುದ್ಧಕ್ರ. ಏಂಂಂಂ. ೩೪). ೨. ಗುಲ್ಮರೋಗ : ಬಿಸರುಹಸಖನಿರೆ ಮಕರದೊಳಸದ್ಗ್ರಹದ್ವಿತಯಮಿರೆ ನಿಶಾನಾಥಂಗಿರ್ದೆಸೆಯೊಳ್ ಮನುಜಂ ಪ್ಲೀಹ ಶ್ವಸನ ಕ್ಷಯ ಗುಲ್ಮ ವಿದ್ರಧಿವ್ಯಾಧಿಯುತಂ (ಜಾತಕ. ೨೦-೦೩); ತಾಳೀಸಪತ್ರೆ ೧ ತೊಲ . . . ಚೂರ್ಣವಂ ಮಾಡಿ ಸಕ್ಕರೆವೆರಸಿ ಸೇವಿಸೆ . . . ಪ್ಲೀಹ, ಎದೆನೋವು . . . ಮಾಣ್ಗುಂ (ಸಕಕ್ಕ. ೨೦೩). [ಸಂ.]

**ಪ್ಲೀಹಾಪಹೆ** (ನಾ). ಒಂದು ಬಗೆಯ ಮರ : "ಪ್ಲೀಹಾಪಹಾ—ದೇವದಾರು" (ಓಶಿರ. ೦೦೦). [?]

**ಪ್ಲುತ** (ಗು). ೧. ತೇಲುತ್ತಿರುವ. ೨. ಕುಪ್ಪಳಿಸುವ ; ನೆಗೆಯುವ ; ಹಾರುವ : ಪ್ಲುತ ಲೀಲಾಮೃಗಾಳಿಮಂ ಶುಕಪಿಕವ್ಯಾಹಾರಸಂಪಾದಿತ ಪ್ರತಿನಾದೋದಯಮುಮಂ . . . ಪೊಸ್ಕಂ ಮಹೀವಲ್ಲಭಂ (ಅಂಅಪ. ೪-೦೬). ೩. ಮುಳುಗಿದ ; ಲೀನವಾದ. (ನಾ). ೪. [ಅಶ್ವಶಾ] ಕುದುರೆಯ ಐದು ಬಗೆಯ ನಡಗೆಗಳಲ್ಲಿ ಒಂದು; ಕುಪ್ಪಳಿಸುತ್ತ ನಡೆಯುವುದು: ಆಸ್ಕಂದಿತ ರೇಚಿತ ಧೌರಿತ ವಲ್ಗಿತ ಪ್ಲುತಮೆಂಬೈದುಂ ತೆಱದ ನಡೆಯಂ ಬೆಡಂಗುವಡೆದ ವಟ್ಟದ ವಾರುವವರ್ಗಂ (ಶಾರಕು. ೦೩-೨೦೭); ಕುಪ್ಪಳಿಸಿ ಕುಪ್ಪಳಿಸಿ ಹಾರಿ ಓಡುವುದು ಪ್ಲುತವೆನಿಸಿಕೊಂಬುವುದು (ಅಶ್ವಶಾ. ೨೩-೬). ೫. [ಛಂದ] ಉಚ್ಚಾರಣೆಯಲ್ಲಿ ಮೂರು ಮಾತ್ರೆಗಳ ಕಾಲವನ್ನು ತೆಗೆದುಕೊಳ್ಳುವ ಅಕ್ಷರ ; ದೀರ್ಘಕ್ಕಿಂತಲೂ ಸ್ವಲ್ಪ ಕಾಲಾವಕಾಶವನ್ನು ಹೆಚ್ಚಿಗೆ ತೆಗೆದುಕೊಳ್ಳುವ ಅಕ್ಷರ ; ತ್ರಿಮಾತ್ರಕ : ಮಾತ್ರಾತ್ರಯ ಪರಿಗತಮಪ್ಪುದೆ ವಲಂ ಪ್ಲುತಂ (ಕಾವ್ಯಾವ. ೦೦); ಹ್ರಸ್ವಮದೇಕಮಾತ್ರಕಂ ದೀರ್ಘಮುಭಯಮಾತ್ರಂ ತ್ರಿಮಾತ್ರಕಂ ಪ್ಲುತಮಕ್ಕುಂ (ಕಮರ. ೦೦); ಪ್ಲುತಕ್ಕೆ ಮಾತ್ರ ಮೂರು. ಆದರೆ ಛಂದೋದೃಷ್ಟಿಯಲ್ಲಿ . . . ಪ್ಲುತವನ್ನು ಗುರುವಾಗಿಯೇ ಗುಣಿಸಿದ್ದಾರೆ (ಸಂಕೋರ. ೦೦೩). ೬. [ಸಂಗೀತ] ತಾಳದ ಆರು ಅಂಗಗಳಲ್ಲಿ ಒಂದು; ಲಘುವಿನ ಮೂರರಷ್ಟು ಅಕ್ಷರಕಾಲವನ್ನು ಹೊಂದಿರುವುದು : ತಾಳಕ್ಕೆ ಬರುವ ಅವಯವಗಳಿಗೆ ಅಂಗಗಳು ಎಂದು ಹೆಸರು. ಅನುದ್ರುತ, ದ್ರುತ, ಲಘು, ಗುರು, ಪ್ಲುತ ಮತ್ತು ಕಾಕಪಾದ ಇವೇ ಷಡಂಗಗಳು . . . ಲಘುವಿನ ಮೂರರಷ್ಟು ಅಕ್ಷರಕಾಲವನ್ನು ಪ್ಲುತವೂ ಲಘುವಿನ ನಾಲ್ಕರಷ್ಟು ಅಕ್ಷರಕಾಲವನ್ನು ಕಾಕಪಾದವೂ ಹೊಂದುತ್ತವೆ (ಸಂಗೀಶಂ. ೩೪). [ಸಂ.]

**ಪ್ಲುಷ್ಟ** (ಗು). ೧. ಸುಟ್ಟ ; ಕರಿಕಾದ. (ನಾ). ೨. ಸುಟ್ಟುದು ; ಕರಿಕು : ದೀರ್ಘೋಷ್ಣಫೂತ್ಕಾರಂಗೆಯ್ದು ನಾಗರಾಜಚಕ್ರದಿಂ ಪ್ಲುಷ್ಟಮಾದ ಸಪ್ತಸಾಗರಸಲಿಲದೊಳ್ ಮಲಮಲನೆ ಮಱುಗುವ ಜಲವಿಚರಚಕ್ರದಿಂ (ಗದಾಯು. ೬-೨೦). [ಸಂ.]

**ಪ್ಲೇಗು** (ನಾ). ಜ್ವರ, ಬಲಹೀನತೆಗಳುಂಟಾಗಿ ಕೈಕಾಲುಸಂದುಗಳಲ್ಲಿ ಗಡ್ಡೆಯೆದ್ದು ಬಾಧಿಸುವ ಒಂದು ಬಗೆಯ ಅಂಟುರೋಗ ; ಮಾರಿರೋಗ : ಪ್ಲೇಗನೆ ಪೋಗಿಸು ಮಾರಿಯೇ (ಪ್ರಸೂಪು. ೨-೯೩) ; ಪ್ಲೇಗು ಮುಖ್ಯವಾಗಿ ಪ್ರಾಣಿಸಂಬಂಧ ರೋಗ (ಕಂಕೋ. XI. ೩೩೩). [← ಇಂ. Plague]

**ಪ್ಲೇಟು** (ನಾ). ತಟ್ಟೆ ; ತಾಟು . ರಾಮಣ್ಣ ಉಟ್ಟಿಟ್ಟಿಗೆ ಮುಹೂರ್ತ ಮಾಡಬೇಕೆಂದು ಪ್ಲೇಟನ್ನು ಮುಂದಕ್ಕೆ ಎಳೆದುಕೊಂಡ (ಮೂರಾಬಿ. ೪೨) ; ಬೋಂಡಾದ ಪ್ಲೇಟುಗಳನ್ನು ಮೇಜಿನ ಮೇಲಿಡುತ್ತ ವಾಣಿ ಹೇಳಿದನು (ಕಂದುಬಿ. ೪೨). [← ಇಂ. Plate]

**ಪ್ಲೋಷ** (ಗು). ೧. ಸುಡುವ ; ದಹಿಸುವ : ಸದ್ಯಸ್ಸಂತಾಪಿತಲೋಹ

ಫತ್ರಿಕಾಪರಿರಂಭಸುಧಮವ್ಲೋಷಗಲಜ್ಞಾಂಗಲಗಲ ದ್ರು ಧಿ ರವಿ ಚ ಲ ದ ಸ್ಥಿ ನಿರ್ಯನ್ಮಹ್ವಾ ಶುಷ್ಮಕ್ಕಂಠ . . . ಆಕ್ರಂದತ್ಸ್ವರಪರಿಗತರ್ ಸ್ಪರಿಸ ಡಾಜಿದೆ ತಡದಡಿಸಿ (ಅಜಿ. ೩-೬೭ ಪ). (ನಾ). ೨. ಸುಡುವಿಕೆ ; ದಹಿಸುವಿಕೆ. ೩. ನಾಶ ; ಧ್ವಂಸ : ದ್ವಿಟ್ಪುರವ್ಲೋಷ[ಹಾಣಾಂ. ಧ್ವಂಸ] ರಕಕ್ರೋಧಂ . . . ರಕ್ಷಿಸುಗೆ (ಜಗಹ. ೦-೩). [ಸಂ.]

**ಫ** (ನಾ). ೧. ಕನ್ನಡವರ್ಣಮಾಲೆಯ ನಲವತ್ತೆರಡನೆಯ ಅಕ್ಷರ. ೨. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : "ಖಫಪರಮ ದೆರಡಕ್ಕು" (ಜಗಣಿ. ೦೦೪-೦೨).

**ಫಂಜಿಕೆ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಬೇರು ; ಗಂಟುಭಾರಂಗಿ. 'ಹಂಜಿಕೆ' ಪಠಾ. [ಸಂ. ಫಂಜಿಕಾ]

**ಫಂಟ** 'ಪಂಟು' ನೋ.

**ಫಂಟತನ** (ನಾ). ಮೋಸಗಾರಿಕೆ ; ವಂಚಕತನ : ಇದೆಲ್ಲಾ ಫಂಟತನದ ಮಾತು ಬಿಟ್ಟುಬಿಡು (ಗ್ರಾಮಾಯ. ೨೦೨). [ಫಂಟ (<ಪಂಟು) + — ತನ]

**ಫಕತ** 'ಪಕತ್' ನೋ.

**ಫಕಫಕ** (ನಾ). ಒಂದು ಅನುಕರಣ ಶಬ್ದ : 'ರಾತ್ರಿ' ಗಳಲ್ಲಿ ಕರಂಟು ಆಗೀಗ ಫಕಫಕ ಮಾಡುವದು (ಕಂಡು. ೧೫ ಶಾನ್ಕುಶಾಕು).

**ಫಕೀರ್** 'ಪಕೀರ' ನೋ.

**ಫಕೀರ** 'ಪಕೀರ' ನೋ.

**ಫಕ್ಕಡ** 'ಫಾಕಡ' ನೋ.

**ಫಕ್ಕನೆ** (ಅ). ಇದ್ದಕ್ಕಿದ್ದಂತೆ ; ಒಮ್ಮೆಲೆ : ಗಂಗೆಯೊಳು ಕೋಣನ ಹಾಗೆ ಮೈಗಟ್ಟು ಫಕ್ಕನೇ ಮುಳುಗಿ (ಜಕಜ. I. ೩೩೩); ಫಕ್ಕನೆ ವಸಂತ ದುರುಫರ್ಮದೊಳು ದಾಕ್ಷಿಣ್ಯಮೊಕ್ಕಂಸಲೆಳೆಗಾಳಿಯುರ ಬಿಡದೆ ಸುಳಿವಂತೆ (ಹರಿಕು. ೬-೩); ಇನಿಯನ ಮುಖ ಅರಳಿತು ಫಕ್ಕನೆ(ಕಂದು೩.೦೭).

[ಫಕ್$_0$ + — ಅನೆ$_1$]

**ಫಕ್ಕಿ** (ನಾ). ರೀತಿ ; ರೂಢಿ ; ಪದ್ಧತಿ : ಇದು "ಸುರು ಹಚ್ಚು" ಎಂಬ ಉತ್ತರಕರ್ನಾಟಕದ ಫಕ್ಕಿಯನ್ನು ಹೋಲುತ್ತದೆಯಲ್ಲವೆ ? (ಕುಮಾಸಾಂ. ೩೯೯); ಮಾತಿನ ಫಕ್ಕಿಯಂತೆಯೇ ಪಂಪನು ಅನೇಕ ನಾಣ್ನುಡಿಗಳನ್ನು ಜೀವಂತವಾಗಿ ಪ್ರಯೋಗಿಸಿದ್ದಾನೆ (ಸುವರ್ಣ. ೦೦೦).

[ಸಂ. ಫಕ್ಕೀ./ತೆಲು. ಫಕ್ಕಿ]

**ಫಕ್ತ** 'ಪಕತ್' ನೋ.

**ಫಜೀತಿ, ಪಜೀತಿ**(ನಾ). ತೊಂದರೆ ; ಇಕ್ಕಟ್ಟು ; ಕಷ್ಟ ; ಗೋಳು : ಬಂದ ಮೇಲೆ ಅವನ ಫಜೀತಿ ಎಷ್ಟಂತ ಹೇಳಲಿ ? (ಮುಂಬಯಿ. ೦೯೯); ನೆಕ್ಕವು ಮೂಗಿನೊಳಕ್ಕೆ ಹೋದುದೇ ತಡ ಬುಳುಬುಳುಗುಟ್ಟಿ ಅಸಾಧ್ಯ ಫಜೀತಿ ಮಾಡಿಬಿಟ್ಟಿತು (ಆಕಹು. ೩೭); ನಾನದನ್ನು ತಂದೆಯವರಿಗೆ ತೋರಿಸುವ ಫಜೀತಿಯೇ ಇರುವುದಿಲ್ಲ (ಶಾರಿಯ. ೯೧). ಪಜೀತಿ: ಇದರಿಂದ ಎಷ್ಟೋ ಸಲ ತಿಂಗಳ ಕೊನೆಯ ದಿನಗಳಲ್ಲಿ ಪಜೀತಿಯಾಗುತ್ತಿತ್ತು (ಶಂಕ್ಕ. ೯೬); ಅವನ್ನು ಮುಟ್ಟಿಕೊಂಡು ದಿನಕ್ಕೆರಡು ಸ್ನಾನ ಮಾಡುವ ಪಜೀತಿ ಬೇಡ (ಸ್ವಕ್ಕಹೊ. ೭).

**ಫಜೀತಿ ಪಡು** = ಕಷ್ಟಕ್ಕೆ ಒಳಗಾಗು ; ಸಂಕಟದಲ್ಲಿ ಸಿಲುಕು: ಫಜೀತಿ ಪಡಲಿ . . . ಅವರದೇ ತಪ್ಪು (ಸಾಚಿ. ೦೮). ಫಜೀತಿ ಬೀಳು = ಫಜೀತಿ ಪಡು : ನೀವು ಯಾಕೆ ಕಟ್ಟಿಕೊಂಡು, ಬಿಟ್ಟುಕೊಂಡು, ಕರೆದು ಕಳಿಸಿ ಫಜೀತಿ ಬೀಳಬೇಕು (ಜಾಳಹೊ. ೬). ಫಜೀತಿ ಮಾಡು = ಗೋಳಾಡಿಸು ; ತೊಂದರೆಪಡಿಸು ; ಪೀಡಿಸು : ಅವರನ್ನು ಸುತ್ತುಗಟ್ಟಿ ಫಜೀತಿ ಮಾಡುವದೇ ನನಗೊಂದು ಹಬ್ಬವಾಗಿತ್ತು (ಪೋಂಬು. ೩) ; ಕಳ್ಳರು ವರ್ತಕನ ಮೇಲೆ ಬಿದ್ದು ಹೊಡದು ಫಜೀತಿ ಮಾಡಿ ಹಣದ ಚೀಲ ಕಿತ್ತುಕೊಂಡು ಹೋದರು (ಕಥಾಸಂ. IV. ೦೯).

[←ಅರ .ಹಿಂ. ಫಜೀಹತ್; ಮರಾ. ಫಜೀತೀ]

**ಫಟ್** (ನಾ). ಒಂದು ಅನುಕರಣ ಪದ: ಕಂಚುಕಿ ಫಟ್ಟೆಂದು ಪೂಡವೋಲ್ಲಿಗ್ಗಿ ಕೇಳಿದರ್ (ಕಜಪು. ೯೭-೩೩) ; ಒಮ್ಮೆ ಫಟ್ ಎಂದು ಸಿಡಿದು ಬಿಗಿಯಿತೋ, ಆಯಿತು (ಜೀಕಕ್ಕ.೯೬).

**ಫಟಕ** 'ಪಟಕ' ನೋ.

**ಫಟಕಿ, ಫಟಾಕಿ, ಫಟಿಕಿ, ಫಟಿಕೆ** (ನಾ). ಬೆತ್ತ ಅಥವಾ ಚರ್ಮದ ಚಾಪಟಿಯಿಂದ ಕೊಡುವ ಏಟು,—ಹೊಡೆತ : ಪಹರೇಕರಿಯವರ ಕಡೆಯಿಂದ ಐವತ್ತು ಫಟಕಿಗಳನ್ನು ಹೊಡಿಸಿದಳು (ಪುಂಶುಕ.೦೯೦). ಫಟಾಕಿ: 'ಫಟಾಕಿಶಿಕ್ಷೆ' ಪಠಾ. ಫಟಿಕಿ : ದಂಡ, ಫಟಿಕಿ, ಹದ್ದುಪಾರು . . . ಇವೇ ಮೊದಲಾದವುಗಳು ಶಿಕ್ಷೆಯ ವಿಧಾನಗಳಾಗಿದ್ದುವು (ಹಿಂದು೨.೬೨). ಫಟಿಕೆ : ಸರಕಾರದವರು ಅವನಿಗೆ ಬೆನ್ನ ಮೇಲೆ ಫಟಿಕೇ ಹೊಡೆಯುವ ಶಿಕ್ಷೆಯನ್ನು ನಿರ್ಣಯಿಸಿದರು (ಮುಂಬಯಿ.೩-೯೩). [← ಮರಾ. ಫಟಕಾ]

**ಫಟಕಿಶಿಕ್ಷೆ, ಫಟಾಕಿಶಿಕ್ಷೆ** (ನಾ). ಬೆತ್ತ ಅಥವಾ ಚಾಪಟಿಯಿಂದ ಹೊಡೆಯುವ ಶಿಕ್ಷೆ : ಕಾಯದೆಯನ್ನು ಧಿಕ್ಕರಿಸಿದ ಸಂ. ಆ ತಪ್ಪಿಗೆ ಫಟಕಿಶಿಕ್ಷೆಯ ಪ್ರಾಯಶ್ಚಿತ್ತವನ್ನುಂಡ (ಎಲಗ್ಗ.೨೭); ಫಟಕೀಶಿಕ್ಷೆ ಕೊಡಿಸಿದನೇ ? . . . ಈ ಸೇಡು ತೀರಿಸಿಕೊಳ್ಳದೆ ಬಿಡುವನೆ ? (ಕುಂ೦೯.೯). ಫಟಾಕಿಶಿಕ್ಷೆ : ದೇವರು ಕೊಟ್ಟ 'ಫಟಾಕಿ'ಶಿಕ್ಷೆಯ ದಾರನ್ನು ಮೈಮೇಲೆ ಮೂಡಿಸಿಕೊಂಡಂತೆ ಕೊನ್ನಿನ ವರ್ಧಂತಿ ವರ್ತುಲವನ್ನು ಬೆನ್ನ ಮೇಲೆ ಕಟ್ಟಿಕೊಂಡು ಅವರು ಬಾಳುವದು ಹೇಗೆ ? (ಕಪುಹ.೩೦೬). [ಫಟಕಿ + ಶಿಕ್ಷೆ]

**ಫಟಾಕಿ** 'ಫಟಕಿ' ನೋ.

**ಫಟಾಕಿಶಿಕ್ಷೆ** 'ಫಟಕಿಶಿಕ್ಷೆ' ನೋ.

**ಫಟಾಕ್ಷಿ** 'ಪಟಾಕಿ' ನೋ.

**ಫಟಿಂಗ, ಪಟಿಂಗ** (ನಾ). ೧. ಪೋಕರಿ ; ಉಡಾಳ : ಸಕ್ಕರ ಇದ್ದಲ್ಲಿ ಇರುವೆಗಳು ಮುಕ್ಕುರುವವು; ಗಾಂಜಾ ಇದ್ದಲ್ಲಿ ಫಟಿಂಗರು ನೆರೆಯುವರು (ಜಯಂಕ.೦೬೯); ದಡ್ಡನಾಗಿ ಸಂಭಾವಿತನೆಂದೆನಿಸಿಕೊಳ್ಳುವುದಕ್ಕಿಂತ, ಜ್ಞಾನಿಯಾಗಿ ಫಟಿಂಗನಾಗಿ ಉಳಿಯುವುದೇ ಮೇಲು (ವಾಕ್ಯಂ. ೩೦೫). ೨. ತಂಟೆಕೋರ ; ತುಂಟ : ನಾವು ದಿಟದ ಶೀಲವಂತರೆಂದು ನುಡಿದುಕೊಂಬ ಫಟಿಂಗ ಧಂಡರ ವಿಧಿ ಎಂತಾಯಿತ್ತೆಂದರೆ ಹೆಂಡದ ಮಡಕೆಗೆ ವಿಭೂತಿಮಂಡಲವ ಬರೆದಂತಾಯಿತ್ತು (ಅಜಾಕಶೀ. ೨೯೨-೬೦); ನೀನು ಮಾಡಿದ್ದು ಫಟಿಂಗರ ಕೆಲಸ; ಇದು ಸರಿಯಲ್ಲ (ಅಜಾಕ. ೦೦೯). ಪಟಿಂಗ : ೨. ಈ ನಾಸ್ತಿಕ ಪಟಿಂಗ ಎಲ್ಲಿದ್ದಾನೆ (ವಗಹೂ.೨೯೬) ; ಅವನು ಶುದ್ಧ ಪಟಿಂಗ (ಕಕಿಲಾ. II, ೦೨೬೩); ಮತ್ತೆ ವಟ್ಟಂಗ ಹೊಡಿತಾನೆ ಪಟಿಂಗ, ಬಾಯಿಗೆ ಬಂದ್ಹಾಂಗೆ (ಮರಿಮ.೨೮೯).

[←ಮರಾ. ಫಟಿಂಗ]

**ಫಟಿಂಗತನ, ಪಟಿಂಗತನ** (ನಾ). ತುಂಟತನ ; ಚೇಷ್ಟೆ ; ತಂಟೆ : ಈಗೆಂಥ ಫಟಿಂಗತನ ಮಾಡಹತ್ತಿದಿರಿ ? (ಕಚಾಕ.೬೩). ಪಟಿಂಗತನ : ಈಗ ನಿಮ್ಮ ಮುಂದೆ ತುರುಕರ ಪಟಿಂಗತನ ನಡೆಯುವುದಿಲ್ಲ (ಗುರುದಾ. ೦೭).

[ಫಟಿಂಗ + — ತನ]

**ಫಟಿಂಗಿ** (ನಾ). ತುಂಟಿ ; ತಂಟೆಕೋರಿ : ಲೇ ಪದ್ದೀ, ಫಟಿಂಗೀ, ಸುಳ್ಳುಕೋರೀ (ಪಕಿಲಾ. I,೩೦೭). [ಫಟಿಂಗ + — ಇ$_2$]

**ಫಟಿಕಿ** 'ಫಟಕಿ' ನೋ.

**ಫಟಿಕೆ** 'ಫಟಕಿ' ನೋ.

**ಫಟೆ** (ನಾ). ನಾಗರಹಾವಿನ ಹೆಡೆ : "ಫಣಃ ಫಣಾ,ಫಟಾ — ಈ ೩ ಹಾವಿನ ಹೆಡೆ" (ಹಲಾಯು ೦೦೩-೦೯). [ಸಂ. ಫಟಾ]

**ಫಡ್ಡ$_1$, ಪಡ್ಡ** (ನಾ). (ಜೋಳ, ಕಬ್ಬು ಮೊದಲಾದುವುಗಳ) ಬೆಳೆದು ನಿಂತ ಪೈರು ; ಎತ್ತರವಾದ ಬೆಳೆ : ಅಕ್ಕನ ಊರಾಗ ಮಕ್ಕಿಯ ಫಡದಾಗ ಗಕ್ಕನೆ ಬಾರೂ ಮಳಿರಾಜ (ಹಳ್ಳಿಯ. ೦೯೩); ಕಾಯಿಪಲ್ಲೆಗಳ ಮಡಿ

ಗಳಾಗಲಿ . . . ಕಬ್ಬು ಬಾಳೆಗಳ ಫಡಗಳಾಗಲಿ ಅಬಾಧಿತವಾಗಿದ್ದು ಸಸಿ ಬಳ್ಳಿಗಿಡಗಳೆಲ್ಲ ಪ್ರಫುಲ್ಲಿತವಾಗಿ ತೋರಿ ದೇಸಾಯರ ಮನಸ್ಸಿಗೆ ಆನಂದವನ್ನಿತ್ತವು (ಕೋಳಕು. ೬೩); ತೋಟದಲ್ಲಿಯ ಬಾಳೀ ಫಡವನ್ನೆಲ್ಲ ಒಂದು ರಾತ್ರಿ ಕಡಿದು ಹಾಕಿವರು (ಮವಕ. ೨೦). ಫಡ$_1$ : ಕಬ್ಬಿನ ಫಡದಲ್ಲಿ ಕಬ್ಬು ಕಡಿದು ರವದೆ ಸವರಿ ಹೊರೆಕಟ್ಟುವ ಕೆಲಸದಲ್ಲಿ ನಿರತನಾಗಿದ್ದ ರಾಮು (ಜೀಂಡಿ. ೪೬); ಭೀಮಪ್ಪ . . . ತೋಟದಲ್ಲಿ ನುಗ್ಗಿ ಅಲ್ಲಿದ್ದ ಗೊಂಜಾಳಿನ ಫಡದಲ್ಲಿಯ ತೆನೆ ಕೊಯ್ದುದ್ದಲ್ಲದೆ, ಮೆಣಸಿನ ಕಾಯಿಯನ್ನು ಹರಿದು . . . ಹಾಕಿದ (ಮನಶಿ. ೮). [← ಹಿಂ. ಮರಾ. ಫಡ]

**ಫಡ$_2$** (ಅ). ತಿರಸ್ಕಾರ ಹಾಗೂ ಕೋಪಗಳನ್ನು ಸೂಚಿಸುವ ಒಂದು ಪದ : ಸಾರುಸಾರಭಿಮನ್ಯು ಫಡ ಇನ್ನಾರ ಬಸುಜಿನು ಹೊಗುವೆ (ಕುಮ್ವಾದ್ರೋ. ೩-೩೨); ಗರ್ಜಿಸಿ ಕೋಪದಿಂ ಖೂಳ ಫಡ ಹೋಗೆನುತೆ ಶಪಿಸುವನಿತರ್ಜಿತೊಳೀಶನೊಲಿದು ನಿಜದಿಂದಿರ್ದನು (ಕಶಕೃ. ೩೬-೯).

**ಫಡಫಡ$_2$** (ದ್ವಿರುಕ್ತಿ) : ಫಡಫಡಾನಿರುತಿರಲು ರಾಯನ ಹಿಡಿವವನ ಹೆಸರೇನು (ಕುಮ್ವಾದ್ರೋ. ೨-೩೩); ಫಡಫಡೆಲೊ ದುರ್ಮಾರ್ಗ ಮುನ್ನಿನ ನುಡಿಗಳನು ನುಡಿ (ಅನಂಕಾ. ೦-೩-೬೩).

**ಫಡಕು** 'ಪಡಕು'$_2$ ನೋ.

**ಫಡಗಳ್ಳಿ** (ನಾ). (ಉಕ) ಪಾಪಾಸುಗಳ್ಳಿ; ಮುಳ್ಳುಗಳ್ಳಿ: ಹೋಗಲಿ ಊರೊಳಗಿನ ಫಡಗಳ್ಳಿ ಹೋಯಿತೆಂಗು ತಿಳಿಯಿರಿ (ಹೊಂಮು. ೬೩); ದಾರಿಯಲ್ಲಿ ಬಳಸಿ ನಿಂತ ಫಡಗಳ್ಳಿಯನ್ನು ನಾವು ಕಿತ್ತುಹಾಕಿ ಸುಗಮವಾದ ದಾರಿ ಮಾಡಬೇಕು (ಹಮ್ಮಿ. ೬೯). [ಫಡಂ + ಕಳ್ಳಿ$_2$]

**ಫಡಣೀಸ** 'ಫಡನವೀಸ' ನೋ.

**ಫಡನವೀಸ, ಫಡಣೀಸ, ಫಡನೀಸ** (ನಾ). ಸರಕಾರಿ ಲೆಕ್ಕಪತ್ರಗಳ ಮುಖ್ಯಾಧಿಕಾರಿ; ಮುಖ್ಯದಫ್ತರದಾರ: ಹರಿಮಹಾದೇವಭಾನುವನ್ನು ತನ್ನ ಫಡನವೀಸನನ್ನೂ ಮಾಡಿಕೊಂಡನು (ಕಂಸಂ. ೬೯). **ಫಡಣೀಸ** : ಪೇಂಡಶೆಯವರ ಕಾಲದ ಒಬ್ಬ ಫಡಣೀಸರು ಫಂಡರಪುರದಲ್ಲಿದ್ದರು (ಸ್ವಾ.ಕಿತ. ೨೪೬). **ಫಡನೀಸ** : ತನ್ನ ಮುಖ್ಯ ಫಡನೀಸನಾದ ಖ್ವಾಜಾಶಹಾ ಮನಸೂರನನ್ನು ತನ್ನ ಸಂಗಡಲೆ ಒಯ್ದನು (ಅಕ್ಬರ. ೬೩).
[← ಪಾರ. ಫರ್ದನವೀಸ್; ಹಿಂ. ಮರಾ. ಫಡನವೀಸ್, ಫಡನೀಸ್]

**ಫಡನೀಸ** 'ಫಡನವೀಸ' ನೋ.

**ಫಡಪೋಶಿ** 'ಪಡಪೋಸಿ' ನೋ.

**ಫಡಪೋಶಿತನ** (ನಾ). ಅಲಕ್ಷ್ಯ; ಅಜಾಗರೂಕತೆ : ರಾಘಪ್ಪ . . . ಫಡಪೋಶಿತನದಿಂದ ಹೇಳಿ ದೇಸಾಯರತ್ತ ನೋಡುತ್ತ ಹುಚ್ಚುನಗೆ ನಕ್ಕು, 'ನಾ ಬರತೇನಿ' ಅನ್ನುತ್ತ ಎದ್ದನು (ಗಂಮಾಯ. ೨೪೨). [ಫಡಪೋಶಿ (< ಪಡಪೋಸಿ) + – ತನ]

**ಫಡಪೋಸಿ** 'ಪಡಪೋಸಿ' ನೋ.

**ಫಡಫಡ$_1$** (ಅ). ಒಂದು ಅನುಕರಣ ಶಬ್ದ: ಫಡಫಡ ಪಾಯಿಸೆ [ಯ್ವೆ]ರ್ದ ನಡನಡುಗುವ ತನು . . . ಆದೊಡೆ ಬಿಡೆ ನಂಬುಗೆ ಕೂರ್ತಳೆಂದು ಕೂಟದ ಪಥದೊಳ್ (ಮರಕಿ. ೦೦-೫೬).

**ಫಡಫಡ$_2$** 'ಫಡ$_2$' ಪರಾ.

**ಫಡಫಡಾಟ** (ನಾ). ಫಡಫಡ ಎಂಬ ಸದ್ದು: ದಿನ ಹೋದ ಮನುಷ್ಯರ ಬಳಿಯ ಪರದೆಸು ಫಡಫಡಾಟ ಸಾಕು (ಕಂದುಟಿ. ೯೨). [ಫಡಫಡ$_1$ + ಆಟ]

**ಫಡಫಡಿಸು** (ಕ್ರಿ). ಫಡಫಡ ಎಂದು ಸದ್ದು ಮಾಡು: ಹಿನ್ನೆಲೆಗೆ ಕ್ರೌಂಚವು ರೆಕ್ಕೆ ಫಡಫಡಿಸಿ ನರಳುವ ಸದ್ದು (ಕ್ರೌಂಚಪ. ೩೨-೨೨); ಹಕ್ಕಿಗಳು ಫಡಫಡಿಸುತ್ತ ಹಾರಾಡಿ ಮತ್ತೆ ಕುಳಿತವು (ದಂಗಾತ. ೨೬). [ಫಡಫಡ$_1$ + – ಇಸು$_3$]

**ಫಡಾಳಿ** 'ಪಡಾಳಿ$_2$' ನೋ.

**ಫಡಿ** 'ಪಡಿ$_3$' ನೋ.

**ಫಡಿಕೆ** 'ಪಡಿಕೆ$_3$' ನೋ.

**ಫಡ್ಚ, ಪಡಚ, ಪಡಿಚ, ಪಡ್ಚ** (ನಾ). ೧. ನಿರ್ನಾಮ; ನಾಶ; ಧ್ವಂಸ : ಬೇಲಿ ಮುಟ್ಟಿದರೆ ಶೋಕ್ ಹೊಡೆದು ಆಸಾಮಿಯೇ ಫಡ್ಚ! (ಕಗುಕ. ೦೯೨). **ಪಡಚ** : ೧. ಬಿರುಗಾಳಿ ಬಡೀತದಲ್ಲಾ ಅಂತ ಏಕ್‌ದಂ ನಿಲ್ಲಿಸುವುದಕ್ಕೆ ಹೊರಟರೆ, ನಮ್ಮ ಪ್ರಾಣವೇ ಪಡಚ (ಕಂಗೂಂ. ೦೯೨). ೨. ಸಾಲ ಮೊದಲಾದ ವ್ಯವಹಾರಗಳನ್ನು ಮುಗಿಸುವುದು ; ಫೈಸಲಾತಿ : (೩). **ಪಡಿಚ** : ೩. (ಪದಾರ್ಥಗಳನ್ನು) ನಿಶ್ಶೇಷವಾಗಿ ಬಳಸುವಿಕೆ,–ಫೈಸಲು ಮಾಡುವಿಕೆ : (೩). **ಪಡ್ಚ** : ೧. ಕನಿಷ್ಠ ಒಂದು ವರ್ಷದ, ಮನೆಯ ಸಾಮಾನು ದಾಸ್ತಾನು ಇರಿಸಿಕೊಳ್ಳದಿದ್ದರೆ, ನಾವು ಪಡ್ಚವೇ ಸರಿ (ಮುಗಿಯು. ೩೬೩) ; ಪಡ್ಚ ಆಯಿತು. ನನ್ನ ಅಮ್ಮನ ಹಾಗೆ . . . ನೀವೂ ಹೇಳುತ್ತೀರಲ್ಲಾ ? (ಕಾಕುಂಡ. ೨೪೦).

ಪಡ್ಚ ಮಾಡು, ಪಡಚಾ ಮಾಡು = ನಾಶಮಾಡು ; ನಿರ್ನಾಮಗೊಳಿಸು : ಅದರ ಪ್ರಾಣ ತೆಗೆಯಲಿಕ್ಕೆ ಹೋದರ ನಾಳೆ ಊರಿಗೆ ಊರನ್ನೇ ಅದು ತಿಂದು ಪಡ್ಚ ಮಾಡೀತು (ಕರಾಶ. ೩೨) ; ಒಬ್ಬೊಬ್ಬ ಕಾಫರ್‌ನನ್ನೂ ಹಿಡಿದು, ಗಂಟಲನೊತ್ತಿ ಪಡಚಾ ಮಾಡಿಬಿಡುತ್ತಿದ್ದೆ (ಅಶಾಂತಿ. ೧೮೦). [←ಮರಾ. ಫಡಚ್ಯಾ. ಫಡಛ್ಯಾ. ಫಡಶಾ. ತುಳು. ಫಡ್ಚ. ಫಡಿಚ, ಪಡಚ, ಪಡಿಚ, ಪಡಿಚಿ, ಪಡ್ಚ]

**ಫಡ್ಡಳಿ** 'ಪಡ್ಡಳಿ$_1$' ನೋ.

**ಫಣ$_1$** 'ಪಣವು$_1$' ನೋ.

**ಫಣ$_2$** 'ಬಣ್ಣ' ನೋ.

**ಫಣ$_3$** (ನಾ). ಹಾವಿನ ಹೆಡೆ : "ಫಣಃ, ಫಣಾ, ಫಟಾ — ಈ ೩ ಹಾವಿನ ಹೆಡೆ" (ಹಲಾಯು. ೦೦೩-೦೯) ; ಫಣಮಯ್ದಂ ಪಡೆದಂ ತನಗೆಣೆವಡೆದಂ ಶೇಷನುರ್ವಿಯಂ ತಾಳ್ದನೆನಲ್ . . . ಕಣ್ಬೊಣರಂ ತಣಿಪಿದುದು ಭುಜಯುಗಂ ರಘುಸುತನಾ (ಕಂರಾಪು. ೦೨-೦೪) ; ಫಣವ ಮೆಟ್ಟಿ ಬಾಲವ ಕೈಯಲಿ ಪಿಡಿದು ಫಳಫಳಿಸುತ್ತಾತ ನಾಟ್ಯವನಾಡೆ (ತುರಂದ. ೨-೦೦೩-೨) ; ಸಹಸ್ರಫಣಗಳುಳ್ಳ ಶೇಷನೇ ವಿಶ್ವದ ಸ್ವಾಮಿಯಾದ ಲಕ್ಷ್ಮಣನಿರುವನು (ಕುಳಸಿ. ೦೯೮). [ಸಂ.]

**ಫಣಕಟ್ಟು** 'ಪಣಕಟ್ಟು$_2$' ನೋ.

**ಫಣಗೆಲಸ** (ನಾ). ಒಂದು ಪಂಗಡಕ್ಕೆ ಸೇರಿದ ಕೆಲಸ : ಗಾಣದವರ ಕೆಲಸ : ತೇಲಿಗರ ಮಗ ನಾನು ಫಣಗೆಲಸವ ಬಲ್ಲೆಯಂಬಲಿ ನೀಡಿ ಸಲಹೆನೆ ಸುದ್ದಿ ಕೇಳುತ ಕರದು ತಂದನು ಮನೆಗೆ ಕಲುಶೆಟ್ಟಿ (ಶೀವಕಾ. ೨-೨೩). [ಫಣ$_2$ (<ಬಣ್ಣ) + ಕೆಲಸ]

**ಫಣಪರ** (ನಾ). [ಜ್ಯೋತಿ] ಲಗ್ನದಿಂದ ಎರಡು, ಐದು, ಎಂಟು ಮತ್ತು ಹನ್ನೊಂದನೆಯ ಸ್ಥಾನಗಳ ಸಂಜ್ಞೆ, — ಸಂಕೇತ : ಉದಯದಶಾಸ್ತಮಯ ಚತುರ್ಥದೆಡೆಗೆ ಕೇಂದ್ರಂ ಚತುಷ್ಟಯಂ ಕಂಟಕವೆಂಬುದು ಸಂಜ್ಞೆ ತತ್ಪರಂ ತಾನದು ಫಣಪರಮುದಟಿ ಪರಮುದಾಪೋಕ್ಲೀಬಂ (ಜಾತತಿ. ೦-೩೬). [ಸಂ. ?]

**ಫಣಭೃತ್ತು** (ನಾ). ೧. ಹೆಡೆಯುಳ್ಳುದು ; ನಾಗರಹಾವು. ೨. ಹಾವು : "ವಿಷಧರಃ . . . ಫಣಭೃತ್ . . ಭುಜಂಗಮಃ — ಈ ೨೫ ಪಾವಿನ ಪೆಸರ್" (ಕಲಾಯು. ೧೦೩-೦೬). [ಸಂ. ಫಣಭೃತ್]

**ಫಣಮಣಿ** (ನಾ). ಹಾವಿನ ಹೆಡೆಯಲ್ಲಿರುವ ರತ್ನ : ಚೂಡಾಮಣಿಗೆಣೆಗೆ ಚಕ್ರಪದದೊಳ್ ಫಣಮಣಿ ಪುನರುಕ್ತಿ ಪಾಂಡ್ಯಪತಿಗಾಯ್ತಾಗಳ್ (ಶಾಂತಿಪು. ೧೧-೪). [ಸಂ.]

**ಫಣಸ್ತ** (ನಾ). ಗುಂಪು; ವರ್ಗ; ಪಣಕಟ್ಟು: ಈಯುಂಭಯಪೇಟೆ ಸೆಟ್ಟಿ ವರ್ತಕರು ಮುಂತಾದ ಸಕಲ ಫಣಸ್ತರಿಂದ ಕುಳ ೧ಕ್ಕೆ ×× ಅಡ್ಡ ಮಾಡೆ×ವೆ ೧ ಕ್ಕೆ ೧ ಮಂದು ಹಣ . . . ಕೊಡುವ ಪ್ರಕಾರ ಸರ್ವಜನ ಸಮ್ಮತಿಯಿಂದ ದಾನಪತ್ರ ಬರಸಿಕೊಟ್ಟು (ಎಕ. IX. ಹೊಸಕೋ. ೦೦೩-೦೩; ೧೬೬೩). [ಫ್ಣ (<ಬಣ್ಣ) + – ಸ್ತ]

**ಫಣಾಧರ** (ನಾ). = ಫಣಭೃತ್ತು ೨: "ಫಣಾಧರನಕ್ಷಿಕರ್ಣಂ . . . ವ್ಯಾಳನೆನಲು ಸರ್ಪಂಗೆ ನಾಮಂ" (ಚುಂಗಿಡಾ. ೦೦೬-೦). [ಸಂ.]

**ಫಣಾಪತಿ** (ನಾ). ಸರ್ಪಗಳ ಒಡೆಯ; ಆದಿಶೇಷ: ಅದು . . . ಬಹುವಿಷಧರದಿಂದೊಡವಿದ ಮಹತ್ವದಿಂದಿಟ್ಟಪುದು ಧನಪತಿ ದಿವಿಜ ಪತಿ ಫಣಾಪತಿಪುರಮಂ (ಕೃಕೃತಿ. ೨-೩೬). [ಸಂ.]

**ಫಣಾಮಣಿ** (ನಾ). = ಫಣಮಣಿ: ಧರೆ ಫಣಮಂಬೆನೆ ನಾಗೇಂದ್ರನ ಫಣಾಮಣಿಯು ಮೇಲಡಗಿತ್ತು (ಐಸಿಹ. ೩೬೬); ಫಣಿಯ ಫಣಾಮಣಿಯುಂ ವಾರಣರದಮುಂ . . . ಅತಿಕೃಪಣನ ಪಣಮುಂ ಬಾಟಲ್ಕೆ ಸಾರವಾರು ಮನೆಂದುಂ (ಅಆಚಾ. ೦-೯೯). [ಸಂ.]

**ಫಣಾರತ್ನ** (ನಾ). = ಫಣಮಣಿ: ದೀಪದೊಳ್ ಪನ್ನಗಪತಿಯ ಫಣಾರತ್ನದೀಪಂ ವಿತಾನಾವಳಿಯೊಳ್ ದಿವ್ಯಂ ವಿತಾನಂ ತುಱುಗಿದುವವು ರೇಂದ್ರಾರ್ಚನಕ್ಕೆ (ಆದಿಪು. ೦೩-೨), ಫಣಿಪತಿಯ ಫಣಾರತ್ನಮುಮಂ ರನ್ನನ ಕೃತಿರತ್ನಮುಮಂ ಪೇೞ್ ಪರೀಕ್ಷಿಪಂಗೆಂಟೆರ್ದೆಯೇ (ಗದಾಯು. ೦-೪೪): ನಾನಾಫಣಾರತ್ನಮೊಪ್ಪಿರೆ ಬಂದಂ ಮಾೞಿಯಂ ನಿವಾರಿಸಲನಂತಂಗುಂದ ನಂತೋರಗಂ (ಜಗಾ. ೩-೯). [ಸಂ.]

**ಫಣಿ** (ನಾ). ೧. ಹೆಡೆಯುಳ್ಳ ಹಾವು; ಸರ್ಪ: "ಉರಗಂ ಭೋಗಿ ಸರೀಸೃಪಂ ಫಣಿ ಭುಜಂಗಂ ಚಕ್ರಿ ದರ್ವೀಕರಂ" (ಶಬ್ದಕೋ. ೦೯-೬); ಫಣಿ ಗರುಡಾಂಗದ ಪಚ್ಚೆಯ ಮಣಿಯಂ ಕಂಡಂತೆ (ಹಂಪಾಶಾ. ೪-೦೬); ಹುತ್ತಿನಿಂ ಫಣಿವೆರಸಿ ಕಡೆಯೆ ಕಂಡು (ಜಕಣ. ೦೩-೬೦); ಗರುಡ ಮೆಟ್ಟಿದ ಫಣಿಯ ಪೋಲ್ . . . ದುರುಳದಾನವ ಮಾಸುತಿ ಜಿಂತಿಸಿ ಮಾಗನಾಗಿರಲು (ಕೌಶಾ. ೩೬-೨). ೨. ಆಶ್ಲೇಷ ನಕ್ಷತ್ರದ ಅಭಿಮಾನಿದೇವತೆ; ನಾಗ: ಸ್ವಾತಿ ಫಣಿ ಭರಣಿ ಶತಭಿಷ ಭೂತೇಶಂ ಜ್ಯೇಷ್ಠೆ ಮುಂಟೆ ಕಱೆದೊಡೆ ಮಾೞೆ ಧಾತ್ರೀತಳಕ ನೆಱೆಯೆ ಕಱೆಯದು (ಜ್ಯೋತಿಷ. ೧೦೬). ೩. ರಾಹು ೪. (ಆಲಂ) ಬೆನ್ನಿನ ಮೇಲಾಗುವ ಒಂದು ಬಗೆಯ ಕುರು; ಸರ್ಪಹುಣ್ಣು: ಬೆನ್ನ ಫಳಿ' (ಣಿ)ಗೆ ಎನ್ನ ಕೇಳಬೇಡ ಅಂಗಾಲ ಹುಣ್ಣಿಗೆ ಎನ್ನ ಕೇಳಬೇಡ . . . ಮಿಕ್ಕಾದ ವ್ಯಾಧಿಗೆ ನಾನರಸು (ಶರಣ. ೦೨೬-೩೪೪). ೫. [ಗಣಿತ] ಮೂವತ್ತುಮೂರು ಅಂಕೆಗಳುಳ್ಳ ಒಂದಂ ದೊಡ್ಡ ಸಂಖ್ಯೆ: ಎಕ್ಕಂ ದಾಹಂ . . . ಫಣಿ ಮಹಾಫಣಿ ಕ್ರತು ಮಹಾಕ್ರತು ಸಾಗರ ಮಹಾಸಾಗರ ಪರಿಮಿತ ಮಹಾಪರಿಮಿತ — ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೬); ಎಕ್ಕಂ ದಾಹಂ . . . ಫಣಿ ಮಹಾಫಣಿ ಕ್ರತುಮಹಾಕ್ರತುವೆಂಬಿವೇ [೪] ಉಗ್ಗಡಣೆಗಳು (ಶಪೇಕ. ೬). [ಸಂ. ಫಣಿನ್]

**ಫಣ್ಕೆ** 'ಫಳ್ಕೆ' ನೋ.

**ಫಣಿಕಟಕ** (ನಾ). ಹಾವುಗಳನ್ನೇ ಕಡಗವಾಗಿ ಉಳ್ಳವನು; ಶಿವ: "ವಿರೂಪಾಕ್ಷಂ ವ್ಯಾಡಂ ಧೂರ್ಜಟಿ ಫಣಿಕಟಕಂ ವಾಮದೇವಂ ವೃಷಾಂಕಂ" (ಶಬ್ದಕೋ. ೩-೦೩); ಚಣಮರಾಳಿಕಗುಮನೆ ಬಂದರು ಫಣಿಕಟಕನಲ್ಲಿರ್ದ ಮಣಿಕಂಣಕರಾಂಬುಜೆ ಬಂದಳು (ಐಸಿಹ. ೩೦-೦೦); ಆಂ ಪೋಗಿ ಫಣಿಕಟಕ ನಂಘ್ರಿಗೆಯರಗಲವರು ಮುತ್ತೈದೆಯಾಗೆಂದು ಪರಕೆಯನಿಯ್ಯಲು (ಪಪಮೋ. ೬-೩೬). [ಸಂ.]

**ಫಣಿಕುಂಡಲ** (ನಾ). ಹಾವಿನಿಂದಾದ ಕಿವಿಯ ಆಭರಣ: ಮೂಡಿದನು . . . ಫಣಿಕುಂಡಲದ ಪಂಚಮುಖದ ವಿಶ್ವನಾಥಂ (ಹಕಣ. ೦೩-೦೯). [ಸಂ.]

**ಫಣಿಕೇತನ** (ನಾ). ಹಾವಿನ ಚಿಹ್ನೆಯ ಧ್ವಜವುಳ್ಳವನು; ದುರ್ಯೋಧನ: ಖತಿಯ ಹಿಡಿದನು ಶೌರಿ ಮಣಿಯದ ಮತಗುಡದ ಫಣಿಕೇತನನ ಕಂಡು (ಕುಭಾಉ. ೯-೩೬). [ಸಂ.]

**ಫಣಿಗೃಹ** (ನಾ). ಹಾವುಗಳ ನೆಲೆ; ಹುತ್ತ: ಸುಖನಿಧಿ ಕಂಠೀರವವಿಷ್ಟರ ದಿನಧಿಕನಮರಾಲಯದಿಂ ಧೀರಂ ಫಣಿಗೃಹದಿಂದಂ ವೀರಂ (ಶಾಂತಿಪು. ೯-೨೦೦). [ಸಂ.]

**ಫಣಿಗೇಹ** (ನಾ). = ಫಣಿಗೃಹ: ಫಣಿಫಣಾಸ್ಫುರಿತಮಣಿದೀಪಿಕಾವ್ಯೂಹಮಂ ಕ್ವಣಿತಮಣಿಕಿಂಕಿಣೀನಿನದಫಣಿಗೇಹಮಂ . . . ನೋಡಿ (ಅಂಕಿ. ೬-೨೬ ಕಗಳ). [ಸಂ.]

**ಫಣಿಜ್ಜಕ** (ನಾ). ತುಳಸಿ, ಪುದಿನ ಮೊದಲಾದ ಸಸ್ಯಜಾತಿಗೆ ಸೇರಿದ ಗಿಡ; ಬಿಳಿಮರುಗದ ಗಿಡ: "ಫಣಿಜ್ಜಕ—ಬಿಳೇಮರುಗದ ಗಿಡ" (ಗಂಗಾಪು. ೬.). [ಸಂ.]

**ಫಣಿತಲ್ಪ** (ನಾ). ಹಾವನ್ನೇ ಹಾಸುಗೆಯನ್ನಾಗಿ ಮಾಡಿಕೊಂಡವನು; ವಿಷ್ಣು: ಅಪ್ಪ ಬಾ ಫಣಿತಲ್ಪ ಬಾ . . . ಮಱಿಯಾನೆ ಬಾ ಮಾಣಿಕ್ಯ ಬಾ (ಕೌಶಾ. ೦-೬೩). [ಸಂ.]

**ಫಣಿತಿ** (ನಾ). ಮಾತು; ವಾಕ್ಕು: ವಿತತಕಲಾತತಿಯೊಳ್ ಪರಿಣತಿಯಂ ಸೂಚಿಸುವ ಸರಸಫಣಿತಿಗಳಂ ಸಂಗತಮಾಗೆ ನುಡಿದೊಡಂ ದುರ್ಗತರವು ಕಾನನದ ಜೊನ್ನದಂತಿರೆ ವಿಫಲಂ (ಶಿಶಾಸಂ. II, ೩೩೬). [ಸಂ.]

**ಫಣಿಧರ** (ನಾ). ಹಾವನ್ನು ಧರಿಸಿದವನು; ಶಿವ: ಫಣಿಧರನಿಂ ಪಡೆದಂ ಗಡ ಪಣೆಗಣ್ಣಂ (ವೃತ್ತವಿ. ೦೩-೯೦). [ಸಂ.]

**ಫಣಿನಾಯಕ** (ನಾ). ಸರ್ಪಗಳ ಒಡೆಯ: ದಿವಿಜನೋ ಫಣಿನಾಯಕನೋ ಮನೋಭವನಿವಂ ಕರಮೊಪ್ಪಿದಂ (ಕಹಿ. ೦-೨೯೦); ನಿಜಾಂಗರುಚಿಯೊಳ್ . . . ಫಣಿನಾಯಕಂ ಕರಂ ಸೊಗಯಿಸಿದಂ (ಅಂಕಿ. ೯-೦೦೦). [ಸಂ.]

**ಫಣಿನಿ** (ನಾ). ಹೆಣ್ಣು ಹಾವು; ನಾಗಕನ್ಯೆ: ಕಾಲು ಸೋಂಕಿದ ಫಣವುಳ್ಳ ಫಣಿನಿಯು ಫಣವನೆತ್ತಿಕೊಂಡು ನಿಲ್ಲುವಂತೆ ಉನ್ಮಾದಿನಿಯಾದಾ ಯವನಿಯು ಮಸ್ತಕವನೆತ್ತಿಕೊಂಡು ನಿಂತು '. . . ನೀನೆನ್ನವನೇ ಆಗಿರುವೆ' ಎಂದಳು (ಕಪಾಕಂ. ೯೦). [ಸಂ. ಫಣಿನೀ]

**ಫಣಿನಿಲಯ** (ನಾ). = ಫಣಿಗೃಹ: ಫಣಿನಿಲಯಂ ಪರೀಕ್ಷಿಸುವೊಡಾಲದ ಮೂಡಣ ಮಯ್ಯೊಳಾಗೆ ತೆಂಕಣದೆಸೆಯುತ್ತಲಯ್ದುಪುರುಷಂಬರೆಗಂ ನೆಱೆ ತೋಡುಗುಪ್ಪುನೀರ್ (ಜೋಕೋಕ. ೩-೩೦). [ಸಂ.]

**ಫಣಿಪ** (ನಾ). ೧. ಹಾವುಗಳ ಒಡೆಯ; ಆದಿಶೇಷ: ಪೊಡವಿಯುಂ ಬಗಿವ ಫಣಿಪನನುಗಿವ ಜಲಧಿಯಂ ಕಾಡಿವ . . . ಕಡುಗಲಿಗಳು (ಜಕಣ. ೦-೯೬). ೨. ಸರ್ಪಲೋಕದ ಒಡೆಯ: ಧಾತ್ರಿಪ ಫಣಿಪರ ಖೇಚರಪ ತ್ರಿದಶಪರೆಯ್ದೆ ವಿಶ್ವಕರ್ಮಂ ಬರೆದಂ ಚಿತ್ರಪಟವಂ ದಲೆನೆ ಭುವನ ತ್ರಿತಯ ಕಾಣಲಾದುದಭವನ ಸಭೆಯೊಳ್ (ಶಾಂತಿಪು. ೯-೬೯). [ಸಂ.]

**ಫಣಿಪತಿ** (ನಾ). = ಫಣಿಪ ೧: ಫಣಿಪತಿಯ ಫಣಾರತ್ನಮುಮಂ ರನ್ನನ ಕೃತಿರತ್ನಮುಮಂ ಪೇೞ್ ಪರೀಕ್ಷಿಪಂಗೆಂಟೆರ್ದೆಯೇ (ಗದಾಯು. ೦-೪೪); ಜನನ ವಿಧಿಗಳ ಕೋಟಲೆಯನೆಣಿಸುವಡೆ ತಾಂ ಫಣಿಪತಿಗೆ ಹವಣಲ್ಲ (ಐಸಿಹ. ೩೦-೬೩); ತಲೆಪೊಱೆಯ ತೂಕದಲ್ಲಿ ಫಣಿಪತಿ ಬಳುಕತೊಡಗಿದ (ಕುಭಾಉ. ೦೦-೦೩). [ಸಂ.]

**ಫಣಿಪತಿಕೇತನ** (ನಾ). = ಫಣಿಕೇತನ: ಫಣಿಪತಿಕೇತನಧೂಮಕೇತುವುಂ ಪಾಂಡವಬಾಲಪ್ರದೀಪನುಂ . . . ಎನಿಸಿದ ಭೀಮಸೇನಂ (ಗದಾಯು. ೨-೦ ವ). [ಸಂ.]

**ಫಣಿಪತಿತಲ್ಪ** (ನಾ). = ಫಣಿತಲ್ಪ: ಪಡೆದ ವೈಭವದೇಳಿಗೆಯಲಿ ಪಾಲ್ಗಡಲ ನಡುವಸೆವ ಫಣಿಪತಿತಲ್ಪನಂ . . . ಮೆಚ್ಚಿಸುವ ಬೆಡಗುವಡೆಪ ಸೋಲಿ ಸುವ ವೇಶ್ಯಾಂಗನೆಯರೆಸೆದಿರ್ದರು (ಐಕ್ಷಕ. ೨-೦೩). [ಸಂ.]

**ಫಣೆಪಾಶ** (ನಾ). [ಕಾಮಶಾ] ರತಿಬಂಧಗಳಲ್ಲಿ ಒಂದು ; (ಹಾವುಗಳಂತೆ ಹೆಣೆದುಕೊಳ್ಳುವ) ಒಂದು ಬಗೆಯ ಆಲಿಂಗನ ; ನಾಗಬಂಧ : ಕೃತಬಂಧುರಿತಕ್ರೀಡಾಮತದೆ ತಗುಳ್ದಬಲೆ ತನ್ನ ಜಾನುದ್ವಯನಿರ್ಗತ ಹಸ್ತದ್ವಿತಯವ್ಯಾಪೃತೆಯಂ ನೆಗಳ್ದೊಂದೆ ಕಾಂತನೊಳ್ ಫಣಿಪಾಶಂ (ಮನ್ಮಥ. ೦೯-೨೯); ಮೆಲ್ಲನೆ ಮಲಗಿರ್ದವಳಂ . . . ತನ್ನೆರಡು ಕೈಗಳಂ ಮೊಳಕಾಲ ಕೆಳಗಿಕ್ಕಿಯಿರಲಾಗಿ ಪುರುಷ ತನ್ನೆರಡು ಕೈಗಳಂ ಅವಳ ಕೈಗಳಂ ಮಲಕಿಕ್ಕಿ ಮೊಳಕ್ಕೆವಳಗಿಕ್ಕಿ ಕೊರಳಂ ತಕ್ಕಿಸಿ ರಮಿಸಲ್ಕೆ ಫಣಿಪಾಶಮೆಂಬ ಕರಣಂ (ಕಾಮಶಾ. ೨೩೬). 'ನಾಗಪಾಶಕರಣ' ಪರಾ. [ಸಂ.]

**ಫಣಿಪೇಂದ್ರ** (ನಾ). = ಫಣಿಪ ೧ : ಮಂದರಗಿರಿಯಾದುದು ಗಡ ಧನು ಫಣಿಪೇಂದ್ರನು ಹೆದೆಯಾದ ಗಡ ಸಂದ ಮುಕುಂದನಾದನು ಬಾಣವೆಂಬುದು ಸಂದೇಹವೇನಲ್ಲದಿಹುದೆ (ಕೃಷ್ಣಕಾ. ೩-೨೬). [ಸಂ.]

**ಫಣಿಭುಕ್ಕು** (ನಾ). ೧. ಸಣ್ಣ ಹಾವುಗಳನ್ನು ತಿಂದು ಬದುಕುವ ಒಂದು ಬಗೆಯ ದೊಡ್ಡ ಹಾವು : "ಫಣಿಭುಗ್ರಾಜಫಣೆಯನಲ್ಕರವಾವು" (ಮುಂಗಣ. ೦೦೬-೩). ೨. ನವಿಲು. ೩. ಗರುಡ. [ಸಂ. ಫಣಿಭುಜ್]

**ಫಣಿಭೋಗ** (ನಾ). ಹಾವಿನ ಸುರುಳಿ, – ಮಂಡಲ : ಅಡವಿಯಲಿ ಫಣಿಭೋಗದಲಿ ಬಿಗಿವಡೆದು ಬಳಲಿದ ಭೀಮಸೇನನ ಬಿಡಿಸಿದನು ಯಮಸೂನು ಧರ್ಮಕಥಾಪ್ರಸಂಗದಲಿ (ಕುಮ್ಮ.ಶ. ೦೩ ಸೂಚನೆ). [ಸಂ.]

**ಫಣಿಯಾಲ** 'ಪಣಿಯಾಲ' ನೋ.

**ಫಣಿರಾಜ** (ನಾ). = ಫಣಿಪ ೧ : ಫಣಿರಾಜಂ ಬಾರಿಯಿಟ್ಟಿಟ್ಟಿದೊಡನುದಿನಂ ಬರ್ಪ ಸರ್ಪಂಗಳಂ ಬಲ್ಪಿಂಗೆ ತಾರ್ಕ್ಷ್ಯಂ ಭಕ್ಷಿಸುತ್ತುಂ ಮಳಯಗಿರಿಯೊಳಿರ್ಪಂ (ಕಾವ್ಯಾ.ಕ. ೯೦೦) ; ಫಣಿರಾಜನಂ ಶುಚಿಚೂಡನಿಕ್ಕಿದನೊಂದು ಬೆರಳಿಗೆ ಮುದ್ರಿಕೆಯ ತೆಱದಿ (ಚಕ್ರಿ. ೫೯-೩೩). [ಸಂ. ಫಣಿರಾಜನ್]

**ಫಣಿರಾಜಕೇತನ** (ನಾ). = ಫಣಿಕೇತನ : ಕಮಲಾಕರದಿಂ ಪೊಱಮಟ್ಟ ನಾಗಳಂ ಭುಜಯುಗತೋರಣಾಯಿತಗದಾಪರಿಘಂ ಫಣಿರಾಜಕೇತನಂ (ಗದಾಯು. ೬-೨೬). [ಸಂ.]

**ಫಣಿರಾಜನಂದನೆ** (ನಾ). ಸರ್ಪರಾಜನ ಮಗಳು; ಆದಿಶೇಷನ ಮಗಳು: ಫಣಿರಾಜನಂದನೆಯುಲೂಪಿ . . . ಮೂರ್ಛಿತರಾಗಿ ಸಮರಧಾರಿಣಿಯೊಳು ದೊರೆಗಳಂ ತರಿಸಿ ಮಂತ್ರೌಷಧಿಗಳಿಂದೆ ಪಾಲಿಸುತಿರ್ದಳು (ಜೈಮಿನಿ. ೨೩-೯). [ಸಂ. ಫಣಿರಾಜನಂದನಾ]

**ಫಣಿರಾಜಶಯನ** (ನಾ). = ಫಣಿತಲ್ಪ: ಸರಸಿರುಹನಯನ ಫಣಿರಾಜಶಯನ . . . ವರಕೌಸ್ತುಭಾಭರಣ ಸಲಹು (ಜೈಮಿನಿ. ೨-೫೦). [ಸಂ.]

**ಫಣಿರ್ಜಕ** (ನಾ). = ಫಣಿಜ್ಜಕ : "ಫಣಿರ್ಜಕಂ ಮರು ಮರುವಕಂ" (ಕನ್ನಕೋ. ೩೭-೨೩); "ಮರು ಮರುವಕಂ ಫಣಿರ್ಜಕವಕ್ಕುಂ" (ಮುಂಗಣ. ೩೯-೨೬). [ಸಂ.]

**ಫಣಿಲೋಕ** (ನಾ). ಸರ್ಪಲೋಕ; ನಾಗಲೋಕ: ಅನಿಮಿಷಲೋಕಮುಂ ವಿಬುಧರಿಂ ಫಣಿಲೋಕಮನುಗ್ರನಾಗಸಾಧನದಿಂ . . . ಅದೇನನುಕರಿಸಿತ್ತೊ ರಾಜಭವನಂ (ಶಾಂತಿ. ೩-೦೨); ಗಗನಪತಿತನ ನಾಭಿ ದಶದಿಕ್ಕುಗಳು ಕಿವಿ ಫಣಿಲೋಕ ವಿಮಲಾಂಘ್ರಿಗಳು ಧ್ರುವನಿಂ ಮೇಲುಭಾಗ ಮ್ರುಹಾಂತಕನ ಮುಕುಟ (ಕುಮ್ಮ.ಕ. ೯-೨೩). [ಸಂ.]

**ಫಣಿವೇಣಿ** (ನಾ). ಹಾವಿನಂತೆ ಜಡೆಯುಳ್ಳವಳು ; ನಾಗವೇಣಿ : ರಕ್ಷಿಸು ವಿನುತ ಗೀರ್ವಾಣಿ ಫಣಿವೇಣಿ ಶರ್ವಾಣಿ ಶಿವನ ರಾಣಿ (ಆದ್ಯಕೀ. ೩-೯); ಅಜನ ಪಟ್ಟದ ರಾಣಿ ವರದೆ ಕಲ್ಯಾಣಿ ಫಣಿವೇಣಿ ವಾಣಿ . . . ಸುಮತಿಯು ತಾಯೆನಗೆ (ಜೈಮಿನಿ. ೦-೪). [ಸಂ. ಫಣಿವೇಣೀ]

**ಫಣಿಶಯನ** (ನಾ). = ಫಣಿತಲ್ಪ : ರಕ್ಷಿಪುದೀ ಕಾಳಿಯ ಫಣೀಂದ್ರನಂ ಫಣಿಶಯನಾ (ಜಗ. ೩-೦೦೯). [ಸಂ.]

**ಫಣಿಶಾಯಿ** (ನಾ). = ಫಣಿತಲ್ಪ: ದಯೆ ಮಾಡಿ ಸಲಹಯ್ಯ . . . ಫಣಿಶಾಯಿ ಅವಗುಣವ ನೋಡದೇ ಚರಣಸ್ಮರಣೆಯ ಮಾಡುವಂಥ ಭಕುತಿಯನಿತ್ತು (ಕೃಷ್ಣ. ವಾ. ೨೦-೯೯-೧). [ಸಂ. ಫಣಿಶಾಯಿನ್]

**ಫಣೀಂದ್ರ** (ನಾ). ೧. ಹಾವು ; ಸರ್ಪ : ಫಣೀಂದ್ರವೃಂದಂ . . . ಒಪ್ಪಿತ್ತು ಶ್ರೀನೇತ್ರನುತ್ತುಂಗಸಭಾಂತರಾಳದೊಳ್ (ಉದ್ಭಟ. ೦೨-೦೨೯). ೨. = ಫಣಿಪ ೧ : ಮತ್ತಹಸ್ತಿಗಳ ಮಸ್ತಕದಿಂ ಬಿದಿರಿಂ ಫಣೀಂದ್ರೋತ್ತಮಾಂಗದಿಂ . . . ಒಕ್ಕೆಳವುತ್ತನಾಯುತ್ತುಮಿರ್ಪ ಶಬರಪ್ರಿಯಕಾಮಿನಿಯರ್ಕಳಂ (ಕಾವ್ಯಾ.ಕ. ೦೦೯); ಅವಧರಿಸಲೆ ಫಣೀಂದ್ರ ಭೂಮಂಡಲದ ರಾಯರೊಳ್ಪಾಂಡುಸುತ ಕೌರವರ್ಗಾದುದಾಹವಂ (ಜೈಮಿನಿ. ೨೯-೦೬). [ಸಂ.]

**ಫಣೆ₁** 'ಪಣೆ' ನೋ.

**ಫಣೆ₂** (ನಾ). ಹಾವಿನ ಹೆಡೆ; ಫಣ : "ಫಣಾ. ಫಣಾ. ಫಟಾ— ಈ ೩ ಹಾವಿನ ಹೆಡೆ" (ಹಲಾಯು. ೦೦೩-೦೯). [ಸಂ. ಫಣಾ]

**ಫಣೆಕಟ್ಟು** 'ಪಣೆಗಟ್ಟು' ನೋ.

**ಫಣೆಗಣ್ಣು** 'ಪಣೆಗಣ್' ನೋ.

**ಫಣೇರಪೆಟ್ಟಿಗೆ** (ನಾ). ಬಾಚಣಿಗೆ, ಕುಂಕುಮದ ಭರಣಿ, ಕನ್ನಡಿ ಮೊದಲಾದುವನ್ನು ಇಡುವ ಪೆಟ್ಟಿಗೆ: ಅಳಿಯತನದಲ್ಲಿ . . . ಬೇಕಾದರೆ ಒಂದು ಫಣೇರಪೆಟ್ಟಿಗೆಯನ್ನೇ ಬೇಡಲು ನಿನ್ನ ಮಗನಿಗೆ ಹೇಳು (ರಾಮಾಶ್ವ. ೩೩).

[ಫಣೇರಂ (ಪ್ರಾ ←ಮರಾ. ಫಣೇರೇ=ಕನ್ನಡಿ, ಬಾಚಣಿಗೆ ಮೊದಲಾದುವನ್ನಿಡುವ ಚೀಲ) + ಪೆಟ್ಟಿಗೆ]

**ಫಣ್ಯಾಕಲ್ಪ** (ನಾ). ಹಾವುಗಳನ್ನೇ ಆಭರಣವಾಗುಳ್ಳವನು ; ಶಿವ : ಲುಪ್ತಾಘನ ಫಣ್ಯಾಕಲ್ಪನ ನತಫಣಿತಲ್ಪನ . . . ಸನ್ನುತಿಪೆಂ (ಉದ್ಭಟೀ. ೯-೦). [ಸಂ.]

**ಫತ್ತೆ** (ನಾ). ಗೆಲವು; ವಿಜಯ : ಇಂಗ್ರೇಜಸರಕಾರಕ್ಕೆ ಫತ್ತೆ ಆದ ಸಂತೋಷದ ಬಗ್ಗೆ ಮಡಿಕೇರಿ ಕೋಟೆಯಲ್ಲಿ ಇಪ್ಪತ್ತೊಂದು ಫಿರಂಗಿ ಹಾರಿಸಿದರು (ರಾಜೇಂದ್ರ. ೦೬೨).

[← ಅರ. ಹಿಂ. ಫತಹ್; ಮರಾ. ಫತೇ, ಫತ್ತೇ]

**ಫತ್ತೆಮಾರಿ**, ಪತ್ತೇಮಾರಿ, ಫತ್ತೇಮಾರಿ (ನಾ). ಒಂದು ಬಗೆಯ ದೊಡ್ಡ ನಾವೆ,—ದೋಣಿ : ಎಲ್ಲಕ್ಕೂ ದೊಡ್ಡನಾವೆಗೆ ಫತ್ತೆಮಾರಿಯೆಂದೆನ್ನುವರು (ಕಥಾಗ. ೩೦೬); ಈ ದೇಶದ ವ್ಯಾಪಾರಸ್ಥರು ಫತ್ತೆಮಾರಿಗಳಲ್ಲಿಯೂ ಬಗಲಗಳಲ್ಲಿಯೂ ಸರಕುಗಳನ್ನು ತುಂಬಿಕೊಂಡು . . . ಸಮುದ್ರಪ್ರಯಾಣ ಮಾಡುತ್ತಿದ್ದರು (ಮುಂಬಯಿ. ೩-೦೦೬). **ಪತ್ತೇಮಾರಿ:** ಆ ದಳವಾಯಿಗೂ ಆ ಐದುಸಾವಿರ ಕುದುರೆಗಳಿಗೂ ಪತ್ತೇಮಾರಿ ಮೇಲೆ ಹಾಕಿಸಿ . . . ಕುಂಬಳೆಕೊಲ್ಲೂಕಿನಲ್ಲಿ ಇಳಿಸಿಬಿಟ್ಟರು (ರಾಜೇಂದ್ರ. ೦೨). **ಫತ್ತೇಮಾರಿ :** ಫತ್ತೇಮಾರಿಯಲ್ಲಿ ೧೫೦ರಿಂದ ೫೦೦ ಟನ್ನಿನ ವರೆಗೆ ಮಾಲು ಹೇರುವರು (ಕಥಾಗ. ೩೦೬). [←ಮರಾ. ಫತ್ತೇಮಾರೀ, ಫತೇಮಾರಿ]

**ಫತ್ತೇಮಾರಿ** 'ಫತ್ತೆಮಾರಿ' ನೋ.

**ಫನ** (ನಾ). ಸಂಪೂರ್ಣ ಹಾಳು ; ಸರ್ವನಾಶ : ಅವನ್ನ ಸ್ವಲ್ಪ ನಮ್ಮ ಬಲಗ್ಹಾಕ್ಕೊಂಡ್ರೆ? . . . ರಾಮಣ್ಣೋರ ಕಡೆ ಕೇಸ್ನ ಫನ ಮಾಡ್ಬಿಡಬಹುದು (೬೩ಕ. ೨೦); ಮನೆ ಅಥವಾ ಹೋಟೇಲಿನ ಹಿಂಬದಿಯ ಜಗುಲಿಯಲ್ಲಿ ಅದರ ಫನಾ ನಡೆಯುತ್ತದೆ (ಕಥಕ. ೦೦೩).

[←ಅರ. ಹಿಂ. ಫನಾ; ಮರಾ. ಫನಾ, ಫನ್ನಾ]

**ಫರ** (ನಾ). ಗುರಾಣಿ; ಢಾಲು. [ಸಂ.]

**ಫರಂಗಿ** 'ಫಿರಂಗಿ' ನೋ.

**ಫರಂಗಿಮಣೆ**, ಪರಂಗಿಮಣೆ (ನಾ). ತಪ್ಪು ಮಾಡಿದವನನ್ನು ಕುರ್ಚಿಯ ಆಕಾರದಲ್ಲಿ ಕೂರಿಸುವ ಒಂದುಬಗೆಯ ಶಿಕ್ಷೆ; ಕುರ್ಚಿ ಕೂರಿಸುವುದು:

ಏತ ಹಾಕುವುದು. ಫರಂಗಿಮಣೆಯಲ್ಲಿ ಕುಳಿತುಕೊಳ್ಳುವುದು ಮೊದಲಾದ ಬಗೆಗಳ ಒಂದೊಂದು ಭಯಂಕರಶಿಕ್ಷೆಯನ್ನನುಭವಿಸಿದವರು ಮತ್ತೊಮ್ಮೆ ಓದಿಗೆ ಕಳ್ಳಮನಸ್ಸನ್ನು ಮಾಡುತ್ತಿರಲಿಲ್ಲ (ಕುಕುಜೀ. ೬೬), ಕೋದಂಡ, ಫರಂಗಿಮಣೆ—ಇವುಗಳ ಶಿಕ್ಷೆಯೊಂದಿಗೆ . . . ಯಕ್ಷಗಾನಗಳನ್ನು ಅಲ್ಲಿ ಹೇಳಿಕೊಡುತ್ತಿದ್ದರು (ಕುಕುಜೀ. ೦೬). ಪರಂಗಿಮಣೆ : ಆ ದಿನ ಅವನನ್ನು ಅಧ್ಯಾಪಕರು ಪರಂಗಿಮಣೆ ನಿಲ್ಲಿಸಿದ್ದರು (ಅಜಾಕ. ೦೪೪) ; ಪರಂಗಿಮಣೆ, ಉಟ್ಬೈಗಳಿಗಾಗಿ . . . ನಮ್ಮ ಶಾಲೆ ಇತ್ತಂತೆ (ಕುಜೀಮಂ. ೩೬).

[← ತುಳು. ಪರಂಗಿಮಣೆ]

**ಫರಕ** 'ಫರಕು' ನೋ.

**ಫರಕು, ಫರಕ** (ನಾ). ಹೆಚ್ಚುಕಡಮೆ; ವ್ಯತ್ಯಾಸ; ಭೇದ ; ಅಂತರ : ಅದಕ್ಕೂ ಭೀಮಸೇನಾಚಾರ್ಯ ಕೊಟ್ಟ ಕುಂಡಲೀಗೂ ತುಸು ಫರಕು ಅದ (ಕಪುಜೀ. ೨೩೪). **ಫರಕ** : ಮೂರುರೂಪಾಯಿಯು ಬದಲಿ ಈಗ ಒಂದು ಒಂದುವರೆ ರೂಪಾಯಿಯ ಫರಕವನ್ನು ತೋರುತ್ತದೆ (ಮುಂಬಪ್ಪಾ. ೨೬೪).     [←ಅರ. ಫರ್ಕ್; ಹಿಂ. ಮರಾ. ಫರಕ್]

**ಫರಜು, ಫರ್ಜು** (ನಾ). [ಸಂಗೀತ] ಒಂದು ರಾಗದ ಹೆಸರು : ಚಿಂತಾಮಣಿ . . . ಫರಜು ಮುಂತಾದ ಕಷ್ಟರಾಗಗಳಲ್ಲಿ ಕೃತಿರಚನೆ ಮಾಡಿ ಶಾಸ್ತ್ರಿಗಳು . . . ಮಾರ್ಗದರ್ಶಕರಾಗಿದ್ದಾರೆ (ಸಂಗೀತಂ. ೨೪೪) ; ಹಿಂದಿನವರು ಹಾಡುತ್ತಿದ್ದ ಧಾಟಿಗಳು—ಫರಜು, ಕಾಪಿ, ಖಮಾಚು, ಮಧ್ಯಮಾವತಿ, ಆನಂದಭೈರವಿಯಂಥ ರಾಗಗಳಿಂದ ಕೂಡಿದ್ದುವು (ಕಾಶಗೀ. ೦೦೬). **ಫರ್ಜು** : ರಾಗ ಫರ್ಜು, ಆದಿತಾಳ (ಕಪಕು. ೦೮).

[←ಹಿಂ. ಪರಜ್, ಫರ್ಜ್; ಮರಾ. ಪರಜ್]

**ಫರದೆ** 'ಪರದೆ' ನೋ.

**ಫರಫರೆ** (ನಾ). ಮಂಟಪ ಮೊದಲಾದುವುಗಳಲ್ಲಿ ಅಲಂಕಾರಕ್ಕಾಗಿ ಕಟ್ಟುವ ತೆಳುವಾದ ಕಾಗದಗಳ ತೋರಣ : ಅವರಿಂದಲೇ ಕಾಗದದ ಫರಫರೆಗಳನ್ನು ದೊರಕಿಸಿದಳು (ಗಂಕಜಾಯಿ. ೦೩೨).     [?]

**ಫರಮಾನಾ** 'ಫರ್ಮಾನಾ' ನೋ.

**ಫರಮಾನು** 'ಫರ್ಮಾನು' ನೋ.

**ಫರಮಾಯಿಶಿ** 'ಫರಮಾಯಿಷಿ' ನೋ.

**ಫರಮಾಯಿಷಿ, ಪರಮಾಯಿಷಿ, ಪರಮಾಶಿ, ಫರಮಾಯಿಶಿ, ಫರಮಾಶಿ** (ಗು). ೧. ಅಪ್ಪಣೆಯಂತೆ ಸಿದ್ಧಪಡಿಸಿದ ; ಹೇಳಿ ಮಾಡಿಸಿದ. ೨. ಅತ್ಯುತ್ತಮವಾದ ; ಸೊಗಸಾದ ; ಉತ್ಕೃಷ್ಟವಾದ : ಸರ್ಕಾರಕ್ಕೆ ಫರಮಾಯಿಷಿ ಜನಿಸಿ ಮುಂತಾದುದನ್ನು ಕಳುಹಿಸತಕ್ಕ ವಿಷಯ (ಕುಜಾಪಂ. ೫. ೩೬). **ಪರಮಾಯಿಷಿ** : ೨. ಪ್ರಮೀಳೆ . . . ಪರಮಾಯಿಷಿ ಉಪ್ಪಿಟ್ಟಿಗೆ ಬಾಯಲ್ಲಿ ನೀರೂರಿಸಿಕೊಂಡು ಹಾರಿಹೋದಳು (ಕೂಪುಕ. ೦೨). (ನಾ). ೩. ಇಷ್ಟವಾದುದು : ಭೈರಾಗಿಗೆ ಅವನ ಸಂಗೀತ ತುಂಬ ಪರಮಾಯಿಷಿ ! (ಕುಠಕ. ೬೪). **ಪರಮಾಶಿ** : ೨. ಓಹೋ, ಇದೇಯೊ ನಿನ್ನ ಪರಮಾಶಿ ಮೀನು ? (ಕಗುಂ. ೧೫) ; ನಾಗಪ್ಪಯ್ಯನಿಗೂ ಸುಬ್ಬಣ್ಣವೈದ್ಯರಿಗೂ ಪರಮಾಶಿ ಜೋಡಿಯಂತೆ (ಸ್ವಕೃಕೂ. ೬೬). ೪. ಸೊಗಸಾದುದು ; ಶ್ರೇಷ್ಠವಾದುದು : ನಸ್ಯ ಒಳ್ಳೆಯ ಪರಮಾಶಿಯದು (ಕೃಕರ್ಣ. ೯೬). **ಫರಮಾಯಿಶಿ** : ೨. ನಮ್ಮ ಮಾವ ಊರಿನಿಂದ ಫರಮಾಯಿಶಿ ಮಾವಿನ ಹಣ್ಣುಗಳನ್ನು ತಂದಿದ್ದಾರೆ (ಕೂಹಿ). **ಫರಮಾಶಿ** : ೨. ಫರಮಾಶಿ ನಂಟುತನ (ಸ್ವಕೃಕೂ. ೨೨೦).

[ ←ಪಾರ. ಹಿಂ. ಫರ್ಮಾಇಶೀ ; ಮರಾ. ಫರಮಾಶೀ, ಫರಮಾಸೀ, ಫರ್ಮಾಶೀ, ಫರ್ಮಾಸೀ]

**ಫರಮಾಯಿಸು** 'ಫರ್ಮಾಯಿಸು' ನೋ.

**ಫರಮಾಶಿ** 'ಫರಮಾಯಿಷಿ' ನೋ.

**ಫರಮೀನು** (ನಾ). ಒಂದು ಬಗೆಯ ದೀಪ (?) : ಇಲಾಲುಗಳು, ಫರಮೀನುಗಳು, ಅದಕ್ಕೆ ಬತ್ತಿ ಎಣ್ಣೆ ಸಹಾ . . . ಕಳುಹಿಸಬೇಕೆಂದು ಅಪ್ಪಣೆಯಾಯಿತು (ಕೂಪುಜಾ. ೬೨).     [?]

**ಫರವಾನೆ** 'ಪರವಾನೆ' ನೋ.

**ಫರಶಿ** 'ಫರಸಿ' ನೋ.

**ಫರಶಿಕಲ್ಲು** 'ಫರಸುಗಲ್ಲು' ನೋ.

**ಫರಸಿ, ಫರಶಿ, ಫರಸು** (ನಾ). ೧. ಗಾರೆಯಿಂದ ಅಥವಾ ಹಾಸುಗಲ್ಲುಗಳಿಂದ ಸಿದ್ಧಪಡಿಸಿದ ನೆಲ : ನಾನು ಫರಸಿಯ ಮೇಲೆಯೆ ಕಂಬಳಿ ಹಾಸಿಕೊಂಡು ಮಲಗುತ್ತೇನೆ (ಜಾಕಅ. ೯೩). ೨. ನೆಲಗಟ್ಟಿಗೆ ಉಪಯೋಗಿಸುವ ಹಾಸಂಗಲ್ಲು : ಕಲ್ಲಿನ ಫರಸಿ ಹಾಕಿ ಸಿದ್ಧಗೊಳಿಸಿದ ದೊಡ್ಡ ಪಡಸಾಲೆ (ಕೀಕಪಮು. ೦೨). **ಫರಶಿ** : ೨. ೫೩ ಪೂಜಹರಿಗಳು (ಪಾವರೆಗಳು) ೫೪ ಫರಶಿಗಳು (ಕುಂಪ್ಪಾ. ೦೦೨). 'ಫರಶಿಕಲ್ಲು' ಪರಾ. **ಫರಸು** : ೧. ಗೋಡೆಗಳಿಗೆ ಗಿಲಾಯಿ ಮಾಡಿಸುವದು, ಫರಸು ಮಾಡುವದು . . . ಇತ್ಯಾದಿ ಕೆಲಸ ಪ್ರಾರಂಭವಾಯಿತು (ಕಂಕುಬಿ. ೯೩).

[ ← ಅರ. ಫರ್ಶ್ ; ಮರಾ. ಫರಶೀ]

**ಫರಸು** 'ಫರಸಿ' ನೋ.

**ಫರಸುಗಲ್ಲು, ಪರಸಿಗಲ್ಲು, ಫರಶಿಗಲ್ಲು** (ನಾ). ನೆಲಗಟ್ಟು, ಕಟ್ಟೆ, ಜಗಲಿ ಮೊದಲಾದುವುಗಳಿಗಾಗಿ ಬಳಸುವ ಹಾಸುಗಲ್ಲು : ಫರಸುಗಲ್ಲಿನ ಬೀದಿಯ ಮೇಲೆಲ್ಲ ಮಣಗಟ್ಲೆ ಮೀನುಗಳು ಸೂರೆಯಾಗಿದ್ದುವು (ಅಕುನಾ. ೯). **ಪರಸಿಗಲ್ಲು** : ಅವಳು ಪರಸಿಗಲ್ಲಾಗಿ ತನ್ನ ಮೈಯನ್ನು ಎಂದಿನಂತೆ ಅದಕ್ಕೆ ಮಾತ್ರ ಒಡ್ಡಿದಳು (ಅಜಾಕ. ೩೩). **ಫರಶಿಕಲ್ಲು** : ಆ ಜಾಗದಾಗ ತುಸಾ ದೂರಾ ನಾಕಾರು ಫರಶಿಕಲ್ಲು ಒಗೆ (ಕಮ್ಮಬಿ. ೨೬).

[ ಫರಸು (< ಫರಸಿ) + ಕಲ್ಲು (<ಕಲ್$_2$) ]

**ಫರಮೋಷಿ, ಪರಮೋಶಿ, ಪರಾಮೋಶಿ** (ನಾ). ಅಜಾಗ್ರತೆ ; ಕಣ್ಣು ತಪ್ಪಿ ಆದ ತಪ್ಪು : ಫರಾಮೋಷಿಯಾದರೂ ಪಡಪೋಸಿಯಾಗಬಾರದು (ಗಾದೆ). **ಪರಮೋಶಿ** : ಪರಮೋಶಿಯಾಯಿತು. ಬಟ್ಟೆ ಗಿಟ್ಟೆ ಹಾಳಾಗಿಲ್ಲವಷ್ಟೆ (ಕುರುಕಾ. ೬). **ಪರಾಮೋಶಿ** : ಹೀಗೊಂದು ಪರಾಮೋಶಿ ಆಯಿತಲ್ಲ (ಕರುಳ. ೪).

[←ಪಾರ. ಹಿಂ. ಮರಾ. ಫರಾಮೋಶೀ]

**ಫರಾರಿ$_1$, ಪರಾರಿ$_1$, ಫರಾರೆ** (ನಾ). ಕಣ್ಣು ತಪ್ಪಿಸಿ ಹೊರಟುಹೋಗುವಿಕೆ ; ಓಡಿಹೋಗುವಿಕೆ ; ನಾಪತ್ತೆ : ತನ್ನ ಕೆಟ್ಟಬುದ್ಧಿ ಬಿಡದೆ, ಇಲ್ಲಿಂದಾ ಫರಾರಿ ಆಗಿ ಹೋಗಬೇಕು (ರಾಜೇಂದ್ರ. ೨೬೩); ನಿನ್ನೆ ಮಧ್ಯಾನಕ್ಕ ಫರಾರಿ ಆಗಿ ಹೋದವ ಈವತ್ತು ಇಷ್ಟು ತಡ ಆಗಿ ಯಾಕ ಬಂದೊ. (ದಸಂಜ. ೯೩) ; ಹಣ ಸಿಗದಿದ್ದರೆ ಫರಾರಿಯಾಗುವುದೊಂದೇ ಪರಿಹಾರವಾಗಿದೆ (ಕುತ್ಕೃಕ. ೨೦೪). **ಪರಾರಿ$_1$** : ಮಕ್ಕಳುಯಿಬ್ಬರು ಪರಾರಿಯಾಗಿ ಕೆಲವು ದಿವಸದ ಮೇಲೆ (ಎಕ. VIII. ಸಾಗರ. ೯೬–೨೦ ; 1646 ?) ; ನನ್ನ ಧಾಂಡಿಗ ದೂತರಂತೂ ಯಾವಾಗಲೋ ಫರಾರಿಯಾಗಿದ್ದಾರೆ (ಕಕ್ಕೋಂದ. ೦೪೭). **ಫರಾರೆ** : ಆಸಾಮಿ ಫರಾರೆಯಾದ (ಕಕದಾ. II. ೯೩೩).

**ಫರಾರಿ ಮಾಡು** = ಕಣ್ಣಿಗೆ ಬೀಳದಂತೆ ಓಡಿಸಿ ಬಿಡು ; ನಾಪತ್ತೆ ಮಾಡು : ಅವನಿಂದ ಕೈಮುರೆ ಮಾಡಿಕೊಂಡು ಅವನನ್ನು ಫರಾರಿ ಮಾಡಿ ಬಿಡುವುದೂ ಉಂಟು (ಕೃಕಕ್ಕ. ೦೬೨). [←ಅರ. ಹಿಂ. ಮರಾ. ಫರಾರೀ]

**ಫರಾರಿ$_2$** (ನಾ). ೧. ಹಾರಾಡುವ ಬಟ್ಟೆಯ ತುಂಡು: (ಕ). ೨. ನಾವೆಯ ಹಾಯಿಪಟ : (ಕ).     [←ಮರಾ. ಫರಾರಾ]

**ಫರಾರೆ** 'ಫರಾರಿ$_1$' ನೋ.

**ಫರಾಶೀಸ, ಫರಾಷೀಸ, ಫರಾಸಿಸ** (ನಾ). ಫ್ರಾನ್ಸ್‌ದೇಶದವನು : ಕೊಡೆಯಾಲಕ್ಕೆ ಫರಾಶೀಸರ ಕೆಲವು ಮಂದಿ ಬಂದು, ಇಳಿದಿದ್ದರಿಂದ

(ರಾಕೇಂದ್ರ. ೦೦೪)· **ಫರಾಷೀಸ :** ಮೊಮದಲ್ಲಿಖಾನರು ತಮ್ಮ ಮೇಲೆ ಪುಲಚೇರಿಯಿಂದ ಫರಾಷೀಸರ ಫಳುಡು ಸುದಾ ಚಂದಾಸಾಬರು ಬಂದು ಮುತ್ತಿಗೆ ಹಾಕಲಾಗಿ (ಕೃಕಥ. ೩೩). **ಫರಾಸಿಸ :** ನವಾಬನು . . . ತನ್ನ ಕಡೆಯ ಫರಾಸಿಸರ ಸೇನಾಪತಿಯಾದ ಲಾಲಿ ಮೊದಲಾದ ಸರದಾರರನ್ನು ಕರೆಯಿಸಿ (ಅಕ್ರಾಹಾ. ೯೪).
[←ಪಾರ. ಹಿಂ. ಫರಾಸೀಸ್ ; ಮರಾ. ಫರಾಶೀಸ್, ಫರಾಸೀಸ್]

**ಫರಾಷೀಸ** 'ಫರಾಶೀಸ' ನೋ.

**ಫರಾಸಿಸ** 'ಫರಾಶೀಸ' ನೋ.

**ಫರಾಳ** 'ಫಲಾರ' ನೋ.

**ಫರುಜು** 'ಪರಜು' ನೋ.

**ಫರೆ** (ನಾ). ಧಾನ್ಯಗಳನ್ನು ಅಳೆಯುವ ಒಂದು ಪ್ರಮಾಣ : ೧೭ ಪಾಯಲಿ ಅಂದರೆ ೧ ಫರಾ ೮ ಫರೆಗಳು ಅಂದರೆ ೧ ಖಂಡಗ (ಮುಂಶಿವ್ಯಾ. ೦೦೩). [←ಮರಾ. ಫರಾ]

**ಫರ್ಜಿ** (ನಾ). ಚದುರಂಗದ ಆಟದ ವಜೀರ,–ಮಂತ್ರಿ : ಈಗ ತಮ್ಮ ಆ ಸೋತ ಆಟಕ್ಕೆ ಶ್ರದ್ಧೆಯೇ ಫರ್ಜಿ (ಶ್ರೀಋತ್ರ. ೯೯).
[←ಪಾರ. ಮರಾ. ಫರ್ಜಿ ; ಹಿಂ. ಫರಜೀ]

**ಫರ್ಜು** 'ಫರಜು' ನೋ.

**ಫರ್ನಾದಿ** (ನಾ). ಮಾವಿನ ಹಣ್ಣಿನಲ್ಲಿ ಒಂದು ಬಗೆ : (ಜುಂಶಿಯು. ೨–೬೨).
[←ಮರಾ. ಫರ್ನಾದೀನ್, ಫರ್ನಾದೀಸ್./ಪೋರ್ಚು. ಫರ್ನಾದೀಜ್]

**ಫರ್ಮಾನ್** 'ಫರ್ಮಾನು' ನೋ.

**ಫರ್ಮಾನ** 'ಫರ್ಮಾನು' ನೋ.

**ಫರ್ಮಾನು,** ಪರಮಾನು, ಫರಮಾನಾ, ಫರಮಾನು, ಫರ್ಮಾನ್, ಫರ್ಮಾನ (ನಾ). ೧. ಆಜ್ಞೆ ; ಹುಕುಮು : ಬಡಜನರಿಂದ ಹತ್ತು ರೂಪಾಯಿ ವಸೂಲು ಮಾಡಲು ಫರ್ಮಾನು ಹೊರಟಿತು (ಜೀರಾವ. ೬೩) : ಪುಣೆಯಿಂದ ಕಾಕಾನ ಫರ್ಮಾನು ಬಂದಿತು (ದೀಕಹ. II, ೮). ೨. ಆಜ್ಞಾಪತ್ರ : ಹೆಡ್‌ಮಾಸ್ತರರ ಹಸ್ತಾಂಕಿತವಿದ್ದ ಫರ್ಮಾನು ಅದು (ರಕ್ತರ್ಕ. ೦೩೭). **ಪರಮಾನು :** ೧. ಅಧಿಕಾರಿಗಳಿಗೆ ಪರಮಾನು ನಿರೂಪ ಲೇಖನಮಂ ಬರೆಸಿತ್ತು (ಕಳವ. ೩-೫೧)· **ಫರಮಾನಾ :** ೧. ಕಂಬಳಿ ಬಗಿಯಲು 'ಫರಮಾನಾ' ಹೊರಡಿಸಿದರು (ಸಹೋರ. ೦೨೮)· **ಫರಮಾನು :** ೨. ಇವರಿಂಗೆ ಫರಮಾನ ತಂದಿತ್ತರಾಕ್ಷಣ ನೋಡಿ (ದೀಳವು. ೦–೦೩೩)· **ಫರ್ಮಾನ್ :** ೨. ಸುಲ್ತಾನರು ತಮ್ಮ ಎರಡು ಆಣೆಗಳನ್ನು ಪ್ರಕಟಿಸಿದರು. ಅವುಗಳನ್ನು ಫರ್ಮಾನ್ ತಯಾರಿಸಿ . . . ಡಂಗೂರ ಹೊಡೆಸಿದರು (ಕೊಪಕ್ಕೆ. ೦೨೪) ; ಸಾರ್‌ಚಕ್ರವರ್ತಿ ಏನಾದರೂ ಫರ್ಮಾನ್ ಹೊರಡಿಸಿ . . . ರೈತರಿಗೆ ಹಂಚಿ ಬಿಡಬೇಕೆಂದು ಹೇಳಿದರೆ ನೀವೇನು ಮಾಡ್ತೀರಿ? (ಕ್ರಪಕು. ೩೦೩). **ಫರ್ಮಾನ :** ೨. ಬುಂದೇಲಖಂಡದ ಸ್ವಾತಂತ್ರ್ಯದಾನದ ಫರ್ಮಾನವನ್ನು ಬರೆದನು (ರಾಬ್ಲೀಕ. ೨೨೦)· [←ಪಾರ. ಫರ್ಮಾನ್ ; ಹಿಂ. ಫರಮಾನ ; ಮರಾ. ಫರ್ಮಾನ, ಫರ್ಮಾನಾ]

**ಫರ್ಮಾಯಿಸು,** ಫರಮಾಯಿಸು (ಕ್ರಿ). ವಿಧಿಸು ; ಅಪ್ಪಣೆ ಮಾಡು ; ಆಜ್ಞೆ ಮಾಡು : ನಿಮಗೆ ೧೦೦೦ ರೂಪಾಯಿ ದಂಡ ಅಥವಾ ೬ ತಿಂಗಳು ಶಿಕ್ಷೆಯನ್ನು ಫರ್ಮಾಯಿಸಿದ್ದೇನೆ (ಶ್ಯಾಕಂ. ೦೭) ; ಕೈದಿಯನ್ನು ಜತೆಯಲ್ಲಿಯೇ ಕರೆದು ತರಬೇಕೆಂದು ಅಪ್ಪಣೆ ಬೇರೆ ಫರ್ಮಾಯಿಸಿದ್ದಾಳೆ (ಐರಜ. ೦೨೫). **ಫರಮಾಯಿಸು :** ಇಂಗ್ರೇಜಫೌಜು ಹೊರಡಿಸ ಬೇಕಾದ್ದಕ್ಕೆ ಹುಕುಂ ಫರಮಾಯಿಸಲು . . . ತಿಳಿಸಿ ಇದ್ದೇವೆ (ರಾಕೇಂದ್ರ. ೦೫೪). [<ಫರ್ಮಾನು + – ಇಸು₃]

**ಫರ್ಲಾಂಗು** (ನಾ). ದೂರವನ್ನು ಅಳೆಯುವ ಒಂದು ಪ್ರಮಾಣ; ಒಂದು ಮೈಲಿಯ ಎಂಟನೆಯ ಒಂದು ಭಾಗ : ಅವರಿಗೂ ಆಕೆಗೂ ಸುಮಾರು ಒಂದರ್ಧ ಫರ್ಲಾಂಗು ಅಂತರವಿತ್ತು (ಕಂದುಬಿ. ೫೩).
[←ಇಂ. Furlong]

**ಫರ್ಲೋ** (ನಾ). ನಿರ್ದಿಷ್ಟವಾದ ನೌಕರಿಯ ಅವಧಿಯ ನಂತರ ನೌಕರದಾರನಿಗೆ ಸಿಕ್ಕುವ ಪೂರ್ಣವೇತನದ ರಜ : ಒಂದು ವರ್ಷ ಫರ್ಲೋ ರಜವನ್ನು ಪಡೆಯುವುದಕ್ಕಾಗಿ . . . ಗವರ್ನರನ್ನು ಭೇಟಿ ಮಾಡಿದರು (ಜಗಸಂ. ೨೫). [←ಇಂ. Furlough]

**ಫಲ₁,** ಫಳ (ನಾ). ೧. ಹಣ್ಣು : ಫಲಮೂಲಂಗಳನಾಂತು ಮಲ್ಕಲದಿ ನೊಪ್ಪಂಬೆತ್ತು . . . ಇರ್ದಪ್ಪುವು ಪಾರ್ಶ್ವದೊಳ್ ನಿಯಮಮಂ ತಾಳ್ದಿರ್ದಪೋಲ್ ಭೂರುಹಂಗಳ್ (ಶಾಂತಿಪು. ೨೬೨); ಚರಿಪಾರಣ್ಯದ ಪಕ್ಷಿಗೊಂದುತರು ಗೊಡ್ಡಾಗಲ್ ಫಲಂ ತೀವಿದಾ ಮರಗಳ್ ಪುಟ್ಟವೆ (ಸೋಮೇಶ. ೨೭); ಫಲಮಿಲ್ಲದ ಮರನುಂ ಮಕ್ಕಳಿಲ್ಲದೊಂದರಸು ಮೊಪ್ಪದು (ಬಂಹಂ. ೬–೦೪)· ೨. ಬೆಳೆ ; ಉತ್ಪತ್ತಿ : "ಫಲಂ__೧ ಬೆಳೆದ ಧಾನ್ಯಾದಿ ಫಲ, ಪ್ರಯೋಜನ ೨" (ಸಿದ್ಧಾಂಶಿ. ೪೨೦); ಫಲ ನೋಡದೆ ಕೆಟ್ಟಿತು, ಹೊಲ ಹೂಡದೆ ಕೆಟ್ಟಿತು (ಗಾದೆ). ೩. ಲಾಭ ; ಪ್ರಯೋಜನ : ಅಂಧಕನ ಕೈಯಲ್ಲಿ ದರ್ಪಣವಿರ್ದು ಫಲವೇನು (ಬಸವ. ೧೦೮); ಫಲಂ ಸ್ವರ್ಗಭೋಗಭೂಮಿಸಂಭವಂ (ಶಂಪ್ರಶ. ೩–೩೨ ವ); ಬೇವು ಬೆಲ್ಲದೊಳಿಡಲೇನು ಫಲ ಹಾವಿಗೆ ಹಾಲೆರೆದೇನು ಫಲ (ಪುರಂದ. ೦–೬೦ ಕಲ್ಲಿ). ೪. ಕಾರ್ಯದ ಪರಿಣಾಮ; ಫಲಿತಾಂಶ : ದ್ರವ್ಯಮುಂ ಕ್ಷೇತ್ರಮುಂ ಕಾಲಮುಂ ಭಾವಮುಂ ಪ್ರಕೃತಿಯುಂ ತೀರ್ಥಮುಂ ಫಲಮು ಮೆಂದು ಕಥೆಗೆ ಸಪ್ತಾಂಗಮಕ್ಕುಂ . . . ಫಲಮೆಂಬುದು ತತ್ವಜ್ಞಾನಂ (ಶಾಪುಂಕ. ೬); ಏನನೋದಿ ಏನ ಕೇಳಿ ಏನ ಮಾಡಿಯೂ ಫಲವೇನು ನಿಮ್ಮವರೊಲಿಯದನ್ನಕ್ಕ (ಬಸವ. ೨೯೬); ವೇದಪಾರಾಯಣದ ಫಲ ಗಂಗಾದಿ ತೀರ್ಥಸ್ನಾನಫಲ . . . ವಸ್ತ್ರಾದಿ ಕನ್ಯಾದಾನಫಲವಹುದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ (ಕುವ್ಯಾಆ. ೦–೨೦). 'ಫಲಭೋಗ' ಪರಾ. ೫. ಇಚ್ಛೆ; ಬಯಕೆ: 'ಫಲಸಿದ್ಧಿ' ಪರಾ. ೬. ಮುಟ್ಟು; ರಜೋದರ್ಶನ. ೭. ಕತ್ತಿ, ಚಾಕು ಮೊದಲಾದುವುಗಳ ಅಲಗು,— ಧಾರೆ. ೮. ಹಲಗೆ. ೯. ಗುರಾಣಿ; ಢಾಲು: "ಫಲಕಃ, ಫಲಂ, ಚರ್ಮನ್__೩ ಹಲಿಗೆ . . . ಹರಿಗೆ" (ಸಿದ್ಧಾಂಶಿ. ೨೬೩). ೧೦. ಒಂದು ಬಗೆಯ ಚರ್ಮವಾದ್ಯ ; ತಮಟೆ : ಈಶಾನ ಈಶ್ವರಮುಡಿಯಾರ್ಗ್ಗೆ ಕೊಟ್ಟ ತಿಮಿಳಿ ೧ ದಟ್ಟ ೩ ಖಣ್ಡಿಕೆ ೩ ಫಲಂ ೬ ಜಯಘಂಟೆ ೧ ಫಲಕಾಳೆ ೩ ಫಲ ೧೫ (ಪ್ರಕಂ. ೦೯೪೬, ೨೮–೦೫; 1032). ೧೧. ನೇಗಿಲಿನ ಮರ. ೧೨. ನೇಗಿಲಿನ ಕುಳ. ೧೩. ಹಣ್ಣಿನ ಒಳಭಾಗ,– ತಿರುಳು. ೧೪. ಸ್ಥಳದ ಅಳತೆ,—ಆಯ : 'ಕ್ಷೇತ್ರಫಲ', 'ಘನಫಲ' ಪರಾ. ೧೫. [ಗಣಿತ]ಗುಣಿಸುವುದರಿಂದ ಅಥವಾ ಭಾಗಿಸುವುದರಿಂದ ಬರುವ ಲಬ್ಧ; ಗುಣಲಬ್ಧ ಅಥವಾ ಭಾಗಲಬ್ಧ. ೧೬. ತ್ರೈರಾಶಿಕ ದಲ್ಲಿ ಎರಡನೆಯ ರಾಶಿ : ಇಚ್ಛೆ ಫಲಂ ಪ್ರಮಾಣಮೆಂಬವು ನಿಚ್ಚಲು ತಾಂ ಮೂರುರಾಶಿ ಪೆಸರಿವು ನಿರುತಂ ಯಿಚ್ಛೆಯನು ಫಳದಿ ಗುಣಾಯಿಸಿ ಬೆಚ್ಚರದಿಂ ಪವಣೊಳೊತ್ತೆ ಮಧ್ಯದ ಫಲಮುಂ (ವ್ಯಕಹಾ. ಅಮಲಂಶ. I, ೦೦)· ೧೭. [ನ್ಯಾಯಶಾ] ಪ್ರಮೇಯದ ಹನ್ನೆರಡು ವಿಭಾಗಗಳಲ್ಲಿ ಒಂದು : ನ್ಯಾಯಶಾಸ್ತ್ರದಲ್ಲಿ ಹೇಗೆಂದರೆ–ಆತ್ಮ ಶರೀರ ಇಂದ್ರಿಯ ಅರ್ಥ ಬುದ್ಧಿ ಮನಸ್ಸು ಪ್ರವೃತ್ತಿ ದೋಷ ಪ್ರೇತ್ಯಭಾವ ಫಲ ದುಃಖ ಅಪವರ್ಗವೆಂದು ಹನ್ನೆರಡು ವಿಧವಾಗಿ ಪ್ರಮೇಯವನ್ನು . . . ವಿಭಾಗ ಮಾಡಿರುವರು . . . ಸುಖದುಃಖಾನುಭವವು ಫಲ (ಹಿಂದಶಾ. ೦೦೫)· ೧೮. ಹದಿನಾರು ಪದಾರ್ಥಗಳಲ್ಲಿ ಒಂದು : ನ್ಯಾಯದರ್ಶನದಲ್ಲಿ ಪ್ರಮಾಣ ಪ್ರಮೇಯ ಸಂಶಯ ಪ್ರಯೋಜನ ದೃಷ್ಟಾಂತ ಸಿದ್ಧಾಂತ ಅವಯವ ತರ್ಕ ನಿರ್ಣಯವಾದ ಜಲ್ಪ ವಿತಂಡಾ ಹೇತ್ವಾಭಾಸ ಫಲ

ಜಾತಿ ನಿಗ್ರಹಸ್ಥಾನ ಎಂದು ಹದಿನಾರು ಪದಾರ್ಥಗಳನ್ನು ನಿರೂಪಿಸಿರುವವರು (ಹಿಂದಣ. ೧೦೩). ೧೯. (ಆಲಂ) ಗರ್ಭ; ಬಸಿರು : ಫಲಮನ ಪೇಕ್ಷಿಸಿದಿರ್ದೊಡೆ ಪಲಾಶತರುಬೀಜಚೂರ್ಣದೊಳ್ ಮಧುಘೃತಮಂ ಕಲಸಿ . . . ಭಗದೊಳಿಟ್ಟೊಡಾಗದು ಗರ್ಭಂ (ಕೋಕಶಾ. ೯-೦೭೯). 'ಫಲವತಿ' ಪರಾ. ಫಳ : ೧. ಫಳದೊಳ್ ದೇವೇಂದ್ರನುದ್ಯಾನದ ವಿವಿಧಫಲಂ ಪೂಗಳೊಳ್ ಕಲ್ಪವೃಕ್ಷಂಗಳ ಪೂಗಳ್ (ಅಂತ್ಯ. ೦೬-೨); ಫಳಮೆಂದುಂ ಕಟಿವಿಣ್ಣಳಾಗವಲರೆಂದುಂ ಬೀಯವು (ಜಗಂ. ೨-೦೬). ೧೬. ಬಲದ ಭಾಗ ಆದಿಯಾಗಿ ಯಿಚ್ಛೆಯೆಂಬುದೆ ಪ್ರಥಮರಾಶಿ ಫಳ ಮೆಂಬುದೆ ರಾಶಿ ಪ್ರಮಾಣಮೆಂಬುದೆ ಕಡೆಯ ರಾಶಿ (ವ್ಯವಹಾ. ಅನುಬಂಧ I, ೧೦). ೨೦. ಕಪ್ಪುಹಲಗೆ : ಶಿಕ್ಷಕನು ಫಳದ ಮೇಲೆ ಸಣ್ಣ ಬಿಂದು ರೇಖೆ ತೋರಿಸುತ್ತಾನೆ (ಶಾಕಸಂ. ೨೨೮).

ಫಲ ನಿಲ್ಲು = ಬಸಿರಾಗು; ಗರ್ಭ ಕಟ್ಟು: (*). ಫಲವಾಗು = ೧. ಹಣ್ಣು ಬಿಡು: ಬಾಳೆಗೆ ಫಲವಾಯಿತ್ತ ಕಡೆ...ಮಾಡುವ ಭಕ್ತಂಗೆ ಮನ ಹೀನವಾದರೆ ಅದೇ ಕಡೆ (ಬಸವ. ೬೬೯); ನಿಮ್ಮಿಷ್ಟಸಿದ್ಧಿಯು ಬೆಳಸು ಫಲ ವಾಯ್ತು (ಉತ್ತರ್ಕಾಡ್ರೈ. ೭-೦೯). ೨. ಪ್ರಯೋಜನವಾಗು : ಅಳಲಿ ವಾನೆಯಲಿ ಕಾಳಗಡದಡೆ ಫಲವಹುದೆ (ಉತ್ತರ್ಕಾಡ್ರೈ. ೬-೩೨). ೩. ಸಿದ್ಧಿಸು; ನೆರವೇರು; ಕೈಗೂಡು : ಕಂದನ ರಣಕೆ ನೂಕಿದರಿ ಬಗೆಯೊಲವು ಫಲವಾಯ್ತಲಾ (ಉತ್ತರ್ಕಾಡ್ರೈ. ೭-೦೫). ೪. ಬೆಳೆಯಿಂದ ಕೂಡಿರು; ಫಸಲು ಸಹಿತವಾಗಿರು: ಫಲವಾದ ವಾಣ್ಣೆಯಾಟುವಣಂ (ಸೌಂದ. IX-1. ೬೬-೩೬: ೨೨೨). ೫. (ಆಲಂ) ಗರ್ಭ ನಿಲ್ಲು; ಬಸಿರಾಗು : ಫಲ ವಾದೊಡಲಿಗೆ ತಮ್ಮೊಳ್ಳಲೆಗಳನುಟ್ ತೂಗುತಿರ್ಪುವೆಂದೆನೆ ಮಂದಾನಿಲನಿಂ ತೂಗಾಡುತ್ತಂ ಸಲೆ ನಿಲೆ ಕಳವೆಗಳ ಗರ್ದೆಗಳ್ ಬಿರಿದೆಸೆಗುಂ (ತ್ರಿಷ. ೨-೩೯). [ಸಂ.]

**ಫಲ₂** (ನಾ). ಒಂದು ಬಗೆಯ ನಾಣ್ಯ : ಹೊನ್ನಿನ ನಾಲ್ಕನೇ ಒಂದು ಪಾಲಿನಷ್ಟು ಒಂದು ಚಿನ್ನದ ನಾಣ್ಯವಿರುತ್ತಿತ್ತು. ಅದಕ್ಕೆ ಹಣವೆಂತಲೂ ಫಲವೆಂತಲೂ ಅನ್ನುವರು (ಕರ್ನಾಗ. ೨೫೦). [← ಮರಾ. ಫಲವ್]

**ಫಲಂಗುಡು**, ಫಲಕೊಡು (ಕ್ರಿ). ೧. ಫಸಲು ಕೊಡು; ಬೆಳೆಯನ್ನು ನೀಡು : ಸಮಯದೊಳೆ ಬಿತ್ತಿ ಬೀಜವನಮಿತಫಲಂಗುಡುವ ಪೊಲನನುಳಿ ಯಿಂವ ತೆರದಿಂ . . . ಧರ್ಮಪತ್ನಿಯನುಳಿದೆಂ (ಶಾಕುಂತ. ೯೯-೦೩೫). ಫಲ ಕೊಡು ~ ೨. ಫಲ ನೀಡು ; ಹಣ್ಣು ಬಿಡು : ಒಂದೆರಡು ಮಾಲ್ಪಾ ಲಿಂಚಿಗಿಡಗಳನ್ನು ನೆಟ್ಟರೆ, ಅದು ಯಾವಾಗಲೂ ಫಲಕೊಡುತ್ತಿರುವುದು (ಅಡುಗೆ. ೦೫೦). ೩. ಪ್ರಯೋಜನ ಕೊಡು; ಪರಿಣಾಮವುಂಟು ಮಾಡು: ಅದೃಷ್ಟವು ಫಲಕೊಡಬೇಕಾದರೆ ದೃಷ್ಟವಾಗಿ ಕರ್ಮ ಮಾಡ ಬೇಕು (ಕಥಣ. ೧೦). [ಫಲ₁ + ಕುಡು₁ (< ಕೊಡು₁)]

**ಫಲಂದೋಱು**, ಫಲದೋಱು (ಕ್ರಿ). ೧. ಹಣ್ಣು ಬಿಡು : ಮಾವೆಲ್ಲಿ ಫಲಂದೋಱುವುದೀ ಕಾಲದೊಳು (ಕಥಾಸ. ೩-೬೦). ಫಲದೋಱು: ೨. ಪರಿಣಾಮವನ್ನು ಬೀರು : ಮದನಮೋಹನಿಗಾಗ ಚಿಂತೆ ಮೊಳೆತು . . . ಕಾತುರ ವರ್ಚಿ ವಿರಹಾಗ್ನಿ ಸಂತತ ಫಲದೋಱಿದುದು (ಸಂಪಾ. ೯-೦೬). [ಫಲ₁ + ತೋಱು]

**ಫಲಕ**, ಫಳಕ (ನಾ). ೧. ಲೋಹ, ಮರ, ಗಾಜು ಮುಂತಾದುವುಗಳ ತೆಳುವಾದ ಹಾಳೆ : "ಹಲಗೆ ಫಲಕಮಕ್ಕು" (ಮುಂಗಣ. ೬೨-೨೧); ಒಂದು ಉಕ್ಕಿನ ಫಲಕದ (Plate) ಮೇಲೆ... ಒತ್ತಿದ ಇನ್ನೊಂದು ಫಲಕವಿದೆ (ಶಿಲ್ಪಕಲಾ. ೨೦೯); ಪೆಟ್ಟಿಗೆಯಲ್ಲಿ . . . ಛಾಯಗ್ರಾಹಿ ಫಲಕವನ್ನಿಡಲಿಕ್ಕೆ ತಕ್ಕ ವ್ಯವಸ್ಥೆಯಿದೆ (ಚಿತ್ರಾಕಿ. ೬). ೨. ಬರೆಯಲು ಅಥವಾ ಕಂಡರಿಸಲು ಸಿದ್ಧಪಡಿಸಿದ ಸಪಾಟಾದ ಮೇಲ್ಭಾಗ : ಅದರ ಸುತ್ತಲೂ ಇರುವ ಫಲಕಗಳಲ್ಲಿ ಪಾರ್ವತಿ ... ಗಾಯಕರು ಮುಂತಾದವುಗಳು ಇವೆ (ಮೈವಾಸು. ೧೧೦). ೩. ಪುಟ; ಪಾನು : ಪತಿ ಪುತ್ರ ಪಿತನೆಂಬ ಮಿತ್ರ ಬಾಂಧವ ನೆಂಬ ಭವಪಿತ್ತ ಫಲಕಗಳ ತಿರುವುತ್ತ ನಿಂತು (ಸುಕಿರೇ. ೩೯-೬). ೪. ಹರಿಗೆ; ಗುರಾಣಿ : "ಫಲಕಃ, ಫಲಂ, ಚರ್ಮನ್—೩ ಹಲಿಗೆ . . . ಹರಿಗೆ" (ಸಿದ್ಧಾಂಶಿ. ೨೬೫); ಖಡ್ಗ ಫಲಕ ಚಾಪಬಾಣಾಗಳಾಂತ ವಾಮದಕ್ಷಿಣಕರ ಚತುಷ್ಟಯದಿಂ . . . ಪೃಥಿವ್ಯಾದಿ ಸೂಕ್ಷ್ಮಭೂತವರ್ಗದಲ್ಲಿರ್ಪಂ (ಶಿವತ. ೨೫೨); ರಾವುತರ ಅಂಗರಕ್ಷಣೆಗೆ ಹಲವು ಪದರಗಳ ಚರ್ಮದ ಕವಚ; ಪೇಲ್ ವೈಗೆ ಕಬ್ಬಿಣದ ಫಲಕಗಳು (ಅಳಿಕೆ. ೦೨೩). ೫. ಹಣ್ಣು : ನವಕಳಿ ಕಾಂಕುರಪ್ರಕರಮಂ . . . ನವಫಲಕಂಗಳಂ ಮಿಳಿರ್ವ ಕೊಂಬುಗಳಂಬ ಕರಂಗಳಿಂ ಮಧೂತ್ಸವದೋಳನೆಮ್ಮ ತೇದೊಡಮೆಯೆಂದಿದಿರೊಳ್ ಪಿಡಿದಂಗಜಂಗೆ ಲೆಕ್ಕವನೆಗೆದೋಱುವಂತೆಸದು ತೋಱಿದುವಂದಿನ ಬಂದ ಮಾವುಗಳ್ (ಅಜಿತ. ೬-೨೯). ಫಳಕ : ೨. ಆ ಘನಕಾಂತಗವಂರಿಕಾಂತಾಳಿಕ ಫಳಕತಿಳಕಹರನೆನಿಪರಿಗಂಗಂ ತನಯನಧಿಕತೇಜೋವಂತಂ (ಶಂಕರಾ. ೯-೦೬). ೩. ಒಂದು ಫಳಕ ಇದ್ದಂತೆ ಇತಿಹಾಸ. ಒಂದು ರಮ್ಯಕಾವ್ಯ ವನ್ನೂ ಬರೆಯಬಹುದು, ಅಥವಾ ಕರಾಣಿಸಾವಾನದ ಲೆಖ್ಖವನ್ನೂ ಬರೆಯಬಹುದು. (ಅಕಣಾ. ೦೨೪). ೪. " ಖೇಟಕಂ, ಫಳಕಂ, ಚರ್ಮ, ಆವರಣಂ—ಈ ೪ ಹರಿಗೆ" (ಹಲಾಯು. ೬೬-೩೦೬); ಕೊಳ್ಳಿಲೆ ಮಗನೆ ಅಸಿ ಫಳಕವಿದೆ (ಅಶಾರ.ದೇ. ೦೦೬-೨೩). [ಸಂ.]

**ಫಲಕಪಾಣಿ** (ನಾ). ಗುರಾಣಿಯನ್ನು ಹಿಡಿದಿರುವವನು : "ಚರ್ಮಿನ್, ಫಲಕಪಾಣಿ—ಈ ೨ ಕಡಿತಲೆಗಾಱಂ" (ಹಾಕಣ. ೦೩೯). [ಸಂ. ಫಲಕಪಾಣಿನ್]

**ಫಲಕಾರಿ** (ನಾ.) ಪ್ರಯೋಜನವುಳ್ಳದು; ಫಲಪ್ರದವಾದುದು : ನಮ್ಮ ಅರ್ಜಿಯು ಫಲಕಾರಿಯಾಗದೆ ಇರಲಾರದು (ಕಾವೇಂ. ೧೧೦). [ಸಂ. ಫಲಕಾರಿನ್]

**ಫಲಕಾಳೆ** (ನಾ.) ಒಂದು ಬಗೆಯ ಕಹಳೆ (?) : ಈಶಾನ ಈಶ್ವರ ಮುಡಿಯಾರ್ಗ್ಗೆ ಕೊಟ್ಟ ತಿವಳಿ ೧ ದಟ್ಟ ೩ ಖಣ್ಣೆ ೩ ಫಲಂ ೬ ಜಯಘಂಟೆ ೧ ಫಲಕಾಳೆ ೩ ಫಲ ೧೫ (ವ್ಯಂಆಂ. ೦೯೯೬, ೨೬-೦೫: 1032). [ಫಲ₁ + ಕಾಳೆ (< ಕಹಳೆ)]

**ಫಲಕೊಡು** 'ಫಲಂಗುಡು' ನೋ.

**ಫಲಚಕ್ರ** (ನಾ). [ಸಂಗೀತ] ನೂರೆಂಟು ತಾಳಗಳಲ್ಲಿ ಒಂದು : ಚಂಚತ್ಪುಟ...ಫಲಚಕ್ರ . . . ಜಯಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ಶಿವತ. ೨೩೬). [ಸಂ.]

**ಫಲಜೀವಿ** (ನಾ). ಹಣ್ಣು ಮೊದಲಾದುವನ್ನು ಒದಗಿಸುವ ಜೀವ; ಸಸ್ಯ : ಎಂತು ತಪಸಿಗಳಂತೆ ನಿಂತ ಫಲಜೀವಿಗಳ ಜಂತುವಲ್ಲೆಂದು ಜನ ತಿಂದು ಮತ್ತದನು ಸಂತೆಯೊಳಗಿಡುವ (ಸರ್ವಜ್ಞ. ೦೦೩೬). [ಸಂ.ಫಲಜೀವಿನ್]

**ಫಲಜ್ಞಾನ** (ನಾ). ತತ್ತ್ವದ ತಿಳಿವು; ಪರತತ್ತ್ವದ ಜ್ಞಾನ : ಜ್ಞಾನವೆಂಬ ಪ್ರಮಾಣಕ್ಕೂ ಆ ಪ್ರಮಾಣದಿಂದ ಬ್ರಹ್ಮವನ್ನು ಅರಿತುಕೊಳ್ಳುವುದೆಂಬ ಫಲಜ್ಞಾನಕ್ಕೂ ಇರುವ ತಾರತಮ್ಯವನ್ನು ಇಲ್ಲಿ ತಿಳಿಯಿಸಿದೆ (ಶ್ರೀಕೃಷ್ಣ. ೦೯ ೫೩೬). [ಸಂ.]

**ಫಲಜ್ಯೋತಿಷ** (ನಾ). [ಜ್ಯೋತಿ]ಗಣಿತಜ್ಯೋತಿಷ, ಪ್ರಶ್ನಜ್ಯೋತಿಷ, ಫಲಜ್ಯೋತಿಷ ಎಂಬ ಜ್ಯೋತಿಷದ ಮೂರು ಅಂಗಗಳಲ್ಲಿ ಒಂದು: ಜಾತಕವನ್ನು ನೋಡಿ ಮುಂದಿನ ಆಗುಹೋಗು ಮೊದಲಾದ ಫಲವನ್ನು ಹೇಳುವ ಜ್ಯೋತಿಷದ ಭಾಗ : ಫಲಜ್ಯೋತಿಷ (astrology)ದಲ್ಲಿ ಬಹಳ ನಂಬಿಕೆ ಮತ್ತು ಜ್ಞಾನ, ತತ್ತ್ವಶಾಸ್ತ್ರದಲ್ಲೂ ಭೌತಶಾಸ್ತ್ರದಲ್ಲೂ ಬಹಳ ಆಸಕ್ತಿ (ಗಡಕ. ೯೯). [ಸಂ.]

**ಫಲತ್ರಿಕ** (ನಾ). ಅಳಲೆಕಾಯಿ, ತಾರೆಕಾಯಿ ಮತ್ತು ನೆಲ್ಲಿಕಾಯಿ; ತ್ರಿಫಲೆ: "ತ್ರಿಫಲಾ, ಫಲತ್ರಿಕಂ – ಅಳಲೇಕಾಯಿ, ತಾರೇಕಾಯಿ, ನೆಲ್ಲಿಕಾಯಿಗಳೆಂಬ ತ್ರಿಫಲಗಳಿಗೆ ಹೆಸರು" (ಸಿದ್ಧಾಂಶಿ. ೩೦೭). [ಸಂ.]

**ಫಲದ** (ಗು). ೧. ಫಲವನ್ನು ಕೊಡುವ. ೨. ಪ್ರಯೋಜನಕಾರಿಯಾದ; ಲಾಭದಾಯಕವಾದ. (ನಾ). ೩. ಫಲವನ್ನು ಕೊಡುವಂತಹುದು; ಫಲದಾಯಿಯಾದುದು : ನಿಲೆ ಪೆಱತಂಶದೊಳುದಯ ಶಶಾಂಕದಲ್ಲಿ ಬಲ್ಲಿತೆ ಫಲದಂ (ಜಾತಕ. ೨೨-೧೦); ಉದಗ್ರಮನೋಜ್ಞಫಲದಂ . . . ನೀತಿಸುರವಹೀರುಹಂ (ರಾಜಶೇ. ೦೩-೦೬). ೪. ಮರ; ವೃಕ್ಷ. [ಸಂ.]

**ಫಲದಾನ,** ಫಳದಾನ (ನಾ). ೧. ಹಣ್ಣುಗಳನ್ನು ನೀಡುವುದು,—ಒದಗಿಸುವುದು : ಕುಸುಮವಫಲಪರಿಣತಫಲದಾನಂಗಳಪ್ಪ ವನಸ್ಪತಿ ವೃಕ್ಷೌಷಧಿಗುಲ್ಮಂಗಳಪ್ಪನೋಕಹಜಾತಿಗಳಿಂ (ಶಾಂತಿಪು. ೦೨-೦೯ ವ). ೨. ದಾನವಾಗಿ ಅಥವಾ ಪ್ರಸಾದರೂಪವಾಗಿ ಹಣ್ಣು ಇಲ್ಲವೆ ತೆಂಗಿನ ಕಾಯಿ ಕೊಡುವುದು. **ಫಳದಾನ :** ೧. ಫಳದಾನಂಗಳನಿಪ್ಪತ್ತುಕ್ರಿಯ ನನಾಥ ಪ್ರೀತಿಯಂ . . . ವಿನಯದಿಂ ಮಾಡುತ್ತಿರಲ್ ನಾಡೆ ಸಂಗಳಿಕಂ ಕಾಮಿತಸಿದ್ಧಿ (ಕುಸುಮಾ. ೩-೬೬). [ಸಂ.]

**ಫಲದಾಯಕ** (ನಾ). ೧. ಫಲವನ್ನು ನೀಡುವಂತಹುದು : ಮಾಡು ವನ್ನ್ಯ ಫಲದಾಯಕ (ಬಸವ. ೮೬೩). ೨. ಕರ್ಮಕ್ಕೆ ಸರಿಯಾದ ಫಲವನ್ನು ನೀಡುವವನು; ದೇವರು. [ಸಂ.]

**ಫಲದಾಯಿ** (ನಾ). ಪರಿಣಾಮಕಾರಿಯಾದುದು; ಸಫಲವಾದುದು : ಈ ಪೂರ್ವಸಿದ್ಧತೆ . . . ಪ್ರೇಕ್ಷಕರ ಕಡೆಯಿಂದ ಆದಾಗ ಮಾತ್ರ ಆ ಪ್ರದರ್ಶನ ಸಂಪೂರ್ಣ ಫಲದಾಯಿ (ರಾಮನಾ. ೮೦). [ಸಂ. ಫಲದಾಯಿನ್]

**ಫಲದೋಱು** 'ಫಲಂದೋಱು' ನೋ.

**ಫಲಪೂಜೆ** (ನಾ). ೧. ಶುಭಕಾರ್ಯಗಳಲ್ಲಿ ಭಾಗವಹಿಸಿದ ಎಲ್ಲ ಜನರಿಗೆ ಫಲದಾನ ಕೊಡುವುದಕ್ಕೆ ಮುಂಚಿತವಾಗಿ ಬಾಳೆಹಣ್ಣು, ತೆಂಗಿನಕಾಯಿ ಮುಂತಾದುವುಗಳಿಗೆ ಮಾಡುವ ಪೂಜೆ. ೨. ಹೊಸ ಬೆಳೆಯನ್ನು ಒಕ್ಕುವಾಗ (ಕಣದಲ್ಲಿ) ಮಾಡುವ ಧಾನ್ಯದ ಪೂಜೆ; ರಾಶಿಪೂಜೆ. ೩. ಹೊಸಹಣ್ಣುಗಳನ್ನು ಕಿತ್ತು ತಂದಾಗ ಅವುಗಳಿಗೆ ಮಾಡುವ ಪೂಜೆ : (೬). [ಸಂ. ಫಲಪೂಜಾ]

**ಫಲಪೂರ** (ನಾ). ಮಾದಲದ ಮರ ಮತ್ತು ಅದರ ಹಣ್ಣು : ಫಲಪೂರಂ ಜನ್ಮಸಾಫಲ್ಯಸಂಸ್ಥಿತಿಯಂ ಮಾಡಿದುದೆಂದು ನೋಡಿದಳಲಂಪಿಂ (ಭುಕ್ತಕೃ. ೩-೦೦೩). [ಸಂ.]

**ಫಲಪೂರಕ** (ನಾ). =ಫಲಪೂರ : "ಫಲಪೂರಕಃ, ಬೀಜಪೂರಕಃ, ರುಚಕಃ, ಮಾತುಲುಂಗಕಃ— ಳ ಮಾದೀಗಿಡ, ಮಾದಾಳದ ಗಿಡ" (ಶಿವ್ಯಾಂತಿ. ೦೪೦). [ಸಂ.]

**ಫಲಪ್ರದ** (ನಾ). = ಫಲದಾಯಿ : ಹಾಕತಕ್ಕ ತೆರಿಗೆಯು ಚೆನ್ನಾಗಿ ಫಲಪ್ರದವಾಗಿ ಹಣವನ್ನು ಒದಗಿಸುವಂಥದುದಾಗಿರಬೇಕು (ಕಾಕರ. ೩೩೯); ಅವನ ಪ್ರಯತ್ನ ಫಲಪ್ರದವಾಗಲಿಲ್ಲ (ಐತ್ರಿ ೩ಶಿ. ೨೦೬). [ಸಂ.]

**ಫಲಪ್ರಾಪ್ತಿ** (ನಾ). ಫಲವು ದೊರಕುವಿಕೆ : ಮಾಟಕೂಟ ಫಲಪ್ರಾಪ್ತಿ ಎಂಬ ಮಾತ ಕೇಳಲಾಗದು (ಬಸವ. ೩೦೯); ಸುಖದ ಫಲಪ್ರಾಪ್ತಿಯುನಾಗವ ಕಲ್ಪವೃಕ್ಷವಮಲ್ಲದೆ ಧರ್ಮಂ (ಭುಕ್ತಕೃ. ೦೩-೩೩). [ಸಂ.]

**ಫಲಭರ,** ಫಳಭರ (ನಾ). ೧. ಹಣ್ಣುಗಳ ಭಾರ : ಧರ್ಮಾಮೃತ ವರ್ಷದಿಂ . . . ಭವ್ಯಸಸ್ಯಂಗಳನನೇಕಬ್ರತಫಲಭರವಿನತಂಗಳ್ ಮಾಡಿ (ಆದಿಪು. ೦೬-೪೦ ವ); ಫಲಭರದಿಂದೆಱಗುವ ಚೂತಲತಿಕೆಯಂತಿರೆ . . . ಆ ಲಲನೆ ಭೂಪತಿಗೆ ಪೊಡಮಟ್ಟಳ್ (ಕುಸುಮಾ. ೩-೯೬). ೨. ಹಣ್ಣುಗಳ ಭಾರವನ್ನು ಹೊಂದಿದುದು ; ವಿಪುಲವಾದ ಫಲವುಳ್ಳುದು : ಧರಣಿ ಬಿತ್ತದೆ ಬೆಳೆಯಬೇಹುದು ತರುಸಸಿಗಳನವರತ ಫಲಭಾರವಾಗಬೇಕು (ಕೌಶಿಕಾ. ೪೪-೩೩). **ಫಳಭರ :** ೧. ಸೆಳೆಗೊಂಬಲ್ಲಾಡುವವೊಲ್ ಫಳಭರದಿಂ . . . ಸೆಳೆದಲ್ಲಾಡಿಯುವಾಕೆಯ ಸೆಳೆನಡು ನೋಡಿದರ ಮನಮನಲ್ಲಾಡಿ ಸುಗುಂ (ಮಲ್ಲಿಪು. ೩-೩೩); ಫಳಭರನವ್ರುಕಪ್ರುಲತೆಯಂ ಲತೆ ತಂಬೆಲರಿಂದ ಮಪ್ಪಿದಂತೆಳಸಿದ ಸೋದರಪ್ರಣಯದಿಂ ಲಲಿತಾಂಗಿಯರಪ್ಪಿ (ಅಸಂಪು. ೨-೪೯). [ಸಂ.]

**ಫಲಭರಿತ** (ಗು). ೧. ಹಣ್ಣುಗಳಿಂದ ತುಂಬಿದ. (ನಾ). ೨. ಫಸಲಿ ನಿಂದ ತುಂಬಿದುದು : ಫಲಭರಿತಂಗಳನೀ ಕೆಯ್ದಾಲಂಗಳಂ ಕಾವರಿಲ್ಲ (ಕಂದಾಮಾ. ೭-೩೨). [ಸಂ.]

**ಫಲಭಾಗ** (ನಾ). [ಜ್ಯೋತಿ] ಫಲಜ್ಯೋತಿಷದ ವಿಭಾಗ : ಬೇಬಿಲೋನಿ ಯನರು ಜ್ಯೋತಿಷ್ಯದ ಫಲಭಾಗವನ್ನು ಬೆಳೆಸಿದರು (ಶಿಲ್ಪ ಪಾ ೬೪). [ಸಂ.]

**ಫಲಭಾಗಿ** (ನಾ). ಫಲವನ್ನು ಪಡೆಯುವವನು,—ಅನುಭವಿಸುವವನು: ಸುರೇಜ್ಯನಿರೆ . . . ಕುಂಭದೊಳ್ ಕೂಡೆ ತತ್ಸಮಾನಫಲಭಾಗಿ (ಜಾತಕ. ೦೬-೨೮); ಪ್ರಜೆಗಳು ಮಾಡುವ ಎಲ್ಲಾ ಒಳ್ಳೆಯ ಮತ್ತು ಕೆಟ್ಟ ಕೆಲಸ ಗಳಿಗೂ ರಾಜರು ಫಲಭಾಗಿಗಳಾಗಿರುತ್ತಾರೆ (ಪಕಥಾ. ೩೬೮). [ಸಂ. ಫಲಭಾಗಿನ್]

**ಫಲಭಾರ,** ಫಳಭಾರ (ನಾ). = ಫಲಭರ ೧ : ಫಲಭಾರಾಕ್ರಾಂತ ಸಾರ್ವರ್ತುಕಿನಿಕಟವನಂ . . . ಕಣ್ಗಂ ಮನಕ್ಕಂ ಪಡೆದುದು ಪದೆವಂ (ಕಂದಾಮಾ. ೭-೩೦); ಫಲಭಾರಾನತಭೂರುಹಾವಳಿಗಳಿಂ ನೀರೇಜಷಂಡಂಗಳಿಂ ಬೆಳೆಗೆಯ್ದುಂದೆಸೆಗುಂ ಕಳಿಂಗವಿಷಯಂ (ಶೀಬಪು. ೩-೬೯). **ಫಳಭಾರ :** ಫಳಭಾರಾನಮ್ರಕಮ್ರಾವನಿಜವುಂ . . . ಅನುಪಮಮಾನರದಿಂದಿಯ್ದಿದರ್ . . . ಪಾಂಡವರ್ಕಳ್ (ಕೇಬಪು. ೯-೦೦೯); ಫಳಭಾರಾನತಮಾಯ್ತು ಮಾವು (ಶಾಂತೀಶ. ೦೫-೦೦೦). [ಸಂ.]

**ಫಲಭೋಗ** (ನಾ). ಪರಿಣಾಮವನ್ನು ಅನುಭವಿಸುವಿಕೆ : ಏವೇನೆವೆ ನೆಂದೊಡೆ ಮಾಣದು ಕಾಯದ ಕರ್ಮದ ಫಲಭೋಗವು (ಅಕಕ. ೦೪); ನೀನು ನನಗೆ ಒಂದು ಕೆಲಸವನ್ನು ಮಾಡಲು ಹೇಳುವೆ ಮತ್ತು ಅದರ ಫಲಭೋಗವನ್ನು ಮಾತ್ರ ತಪ್ಪಿಸಿಕೊಳ್ಳುವೆ (ಕಠಕ. ೦೩೯). [ಸಂ.]

**ಫಲಮಂಜರಿ,** ಫಳಮಂಜರಿ (ನಾ). ೧. ಹಣ್ಣುಗಳ ಗೊಂಚಲು. ೨. [ಸಂಗೀತ] ಒಂದು ರಾಗದ ಹೆಸರು : ಮಧು ಮಾಧವಿ . . . ಫಲ[.ಶಾಕಾಂ.ಪಳ]ಮಂಜರಿ ಶಯಸೋದರಿಯೆಂಬ ಮೂವತ್ತುನಾಲ್ಕು ರಾಗಂಗಳೇ ಭಾಷಾಂಗದಿಂ ಪುಟ್ಟಿದವು (ಪಪೀಶ. ೨೩೯); ಲಲಿತ ಸಾಳಂಗ ಸಾವೇರಿ ಗುಜ್ಜರಿ ಗೌಳ ಫಲ [ಶಾಕಾಂ. ಪಳ] ಮಂಜರಿಗಳೆಂಬ ರಾಗಂಗಳಿಂ ಬಳಸಿ ಪಾಡಿಸಿದಂ . . . ಕುಶಲವರನು (ಕೃಬಿಪಾ. ೨೦-೩೩). **ಫಳಮಂಜರಿ:** ೧. ಅದು ಮುಕ್ತಿಪುರಕೆ ಗೋಪುರಮದು ನಾಕಾನೋಕಹಕ್ಕೆ ಫಳಮಂಜರಿ (ಶಂಕೃಪು. ೦೦-೨೯). [ಸಂ. ಫಲಮಂಜರೀ]

**ಫಲಮರಿ** (ನಾ). (ಬಲಿ ಕೊಡುವುದಕ್ಕೆ ತಂದ) ಗಬ್ಬದ ಕುರಿ : ಪಕ್ಕ ದಲ್ಲೇ ಹಿಡಿದುಕೊಂಡಿರುವ ಫಲಮರಿಗಳನ್ನು ಒಂದೊಂದಾಗಿ ಅವನ ಕೈಗೆ ಕೊಡುತ್ತಾರೆ (ಪಮ್ಮಕು. ೬೪). [ಫಲ್ಪ+ಮರ್ರಿ (<ಮಱಿ)]

**ಫಲವಂತ** (ನಾ). ೧. ಫಲವತ್ತಾದುದು ; ಫಲಕೊಡುವಂತಹುದು. ೨. [ಜೈನ]ಕರ್ಮಗಳನ್ನು ನಾಶಪಡಿಸುವ ಎಂಟುಧರ್ಮಗಳಲ್ಲಿ ಒಂದು : ಫಲ[ಶಾಕಾಂ. ಳ]ವಂತಮೆಂಬುದು ಜಾತಿಜರಾರೋಗ ಮರಣವಿಚ್ಛೇದದಿಂದಂ ಶಿವಮಜರಮಕ್ಷಯಮವ್ಯಾಬಾಧವುಪ್ಪ ಪರಮ ನಿರ್ವಾಣಮಂ ಪುಟ್ಟಿಸುವ ಧರ್ಮಂ (ಕಾವ್ಯಪು. ೬). [ಸಂ. ಫಲವತ್]

**ಫಲವತಿ,** ಫಳವತಿ (ನಾ). ೧. ಬಸುರಿ; ಗರ್ಭಿಣಿ : ಪಲಕಾಲಂ ಪುಷ್ಪವತಿಯೆನಾದವೆನೆಂದುಂ ಫಲವತಿಯಾದವೆನಿಲ್ಲೆಂದು ಲತಾಲಲಿತಾಂಗಿ ಬಾಡಿ ಪಾಡಟಿದೆಂಗುಂ (ಕುಸುಮಾ. ೯-೯೯); ನೀ ಪುಷ್ಪವತಿಯಾಗಲ್ಲಿ ಫಲವತಿಯಾಗು ನಡೆ ಕುರುರಾಯಭವನದಲಿ (ಕುಪ್ರಾಸ. ೦೪-೬೩). **ಫಳವತಿ:** ೨. ಹಣ್ಣುಗಳನ್ನು ಬಿಡುವ ಮರ ಅಥವಾ ಬಳ್ಳಿ : ಫಳವತಿಯಪ್ಪ ಕಲ್ಪಲತೆ ಪುಷ್ಪವಿಲಾಸಮನಪ್ಪುಕೆಯ್ವವೊಲ್ (ಮಲ್ಲಿಪು. ೪-೩೨). [ಸಂ. ಫಲವತೀ]

**ಫಲವತ್ತು** (ನಾ). ೧. ಸಾರವತ್ತಾದುದು; ಒಳ್ಳೆಯ ಫಸಲು ಕೊಡು ವಂತಹುದು; ಫಲಪ್ರದವಾದುದು : ಫಲವತ್ತಿಲ್ಲದ ರಾಜ್ಯದಲ್ಲಿ ಪ್ರಭು ದಂಡಕ್ಕಾಸೆಗೆಯ್ವಲ್ಲಿ ಬಲ್ಲರ್ ನಿಲೆ ಸಲ್ಲದೈ (ಸೋಮೇಶ. ೧೫); ನೆಲವೂ ಫಲವತ್ತಾದ ಕಪ್ಪುಭೂಮಿ (ಕಳಹು. ೯೨); ತರಕಾರಿಗಳನ್ನು ಬೆಳೆಯಲು ಫಲವತ್ತಾದ ಜಿಗುಟುಮಣ್ಣು ಒಳ್ಳೆಯದು (ಅಡುಗೆ. ೦೨೬). ೨. ಹಣ್ಣು ಗಳಿಂದ ತುಂಬಿದುದು; ಫಲಪೂರ್ಣವಾದುದು. [ಸಂ. ಫಲವತ್]

**ಫಲವಳಿಗೆ**, ಫಳವಳಿಗೆ (ನಾ). ಮಂಟಪಕ್ಕೆ ಕಟ್ಟುವ ಎಲೆ, ವಸ್ತ್ರ, ಹಣ್ಣು, ಆಹಾರಪದಾರ್ಥ ಮೊದಲಾದಂವು : ಮತ್ತೆ ಮಖಮಂಟಪಕೆ ಕಟ್ಟಿ ಫಲವಳಿಗೆಯಂ ಸುತ್ತಲೊಪ್ಪಿತು ಶಾತೆ (ಶುರಂಗ. ೨೦-೯). **ಫಳವಳಿಗೆ**: ಫ[ಪಾಠಾಂ.ಪ]ಳವಳಿಗೆ ಮೇಲ್ಕಟ್ಟು ಹೊಳೆವ ಭಸಿತಂಗಳೊಳು ... ವಿಭವದಿಂ ಶ್ರೀಗುರು ಪ್ರಭು ಬಂದ ಪುಣ್ಯದಿಂ (ದೀಕ್ಷಾಬೋ. ೩೫-೦೦೩೬); ನವಗ್ರಹಹೋಮಕ್ಕೆ ಸಲೆಗೆವೊಂದು ಫಳವಳಿಗೆಯ ಚಕ್ಕುಲಿಗೆ ಕೊಳಗ ಹನ್ನೊಂದು (ಎಕ. III, ತಿರುಮ. ೯೭-೩೩; 1276); ಮಂಟಪದೊಳು ಸಿಂಹ ಪೀಠಮನಿಕ್ಕಿ ... ಉತ್ತಮವಾದ ಸಪುರಂಗಳಾ ವಿಸ್ತರದಿನಳವಡಿಸಿ ಫಳವಳಿ ಗೆಯಂ ಕಟ್ಟಿ (ಶಂಗಪು. ೦೫-೯೮). 'ಪಳವಳಿಗೆ' ಪರಾ. [ಫಲ₁+?]

**ಫಲಶೋಭನ** (ನಾ). ನಿಷೇಕ; ಪ್ರಸ್ಥ : ತಿಂಗಳೊಪ್ಪತ್ತಿನಲ್ಲಿ ಫಲಶೋಭನ ಕಾರ್ಯವನ್ನು ಮುಗಿಸಿಬಿಡಬೇಕೆನ್ನುತ್ತೇನೆ (ಸಹುಜೀ. ೯೬೩). [ಸಂ.]

**ಫಲಶ್ರುತಿ** (ನಾ). ೧. (ಪುರಾಣ ಮೊದಲಾದುವುಗಳ ಕೊನೆಯಲ್ಲಿ ಸತ್ಕಥಾಶ್ರವಣದ) ಫಲವನ್ನು ಹೇಳುವುದು : ಆರನೆಯ ಕಾಂಡದ ಕೊನೆಯಲ್ಲಿ ... ಫಲಶ್ರುತಿಯೂ ಬಂದಿರುವುದರಿಂದ ಅಲ್ಲಿಗೇ ಕಾವ್ಯವು ಮುಗಿದಿರಬೇಕು (ಕಾರವ. ೮೪) ; ಅಧ್ಯಾತ್ಮಿಕ ಫಲಶ್ರುತಿಯನ್ನು ಕವಿ ಮತ್ತೆ ಮತ್ತೆ ಹೇಳಿದ್ದಾನೆ (ಶಂಶೀ. ೦೩೩). ೨. ಪರಿಣಾಮ ; ಲಾಭ ; ಪ್ರಯೋಜನ : ಫಲಶ್ರುತಿ—ಇದು ಪೆಂಪಿಂ ನಡೆನೋಡುತಿರ್ಪ ಸುಜನರ್ಗಿಷ್ಟಾರ್ಥಸಂಸಿದ್ಧಿಯಂ ... ಮಾಳ್ಕುಂ (ಚಾಸ್ಕರಂ. ೦-೨೨) ; ಅದರ ಫಲಶ್ರುತಿಯೇ-ಅವರ ಈ ಹೊಸನೋಟಕ್ಕೆ ಕಾರಣವಾಯಿತು (೬೦ಬಿದ. ೨೮೪). [ಸಂ.]

**ಫಲಸಂಬಂಧ** (ನಾ). ಯಾಗಾದಿ ಕರ್ಮಗಳಿಗೂ ಅವುಗಳನ್ನು ಆಚರಿಸುವ ವ್ಯಕ್ತಿಗೂ ಇರತಕ್ಕ ಮೂರು ಬಗೆಯ ಸಂಬಂಧಗಳಲ್ಲಿ ಒಂದು : ಕರ್ಮಗಳಿಂದ ಉಂಟಾಗುವ ಪ್ರಯೋಜನದಲ್ಲಿ ಅಪೇಕ್ಷೆಯುಳ್ಳವನಾದರ ಅಧಿಕಾರಿಯೆನ್ನಲ್ಪಡುವನು. ಇದೇ ಫಲಸಂಬಂಧ (ಹಿಂದಸಾ. ೨೫೬). [ಸಂ.]

**ಫಲಸಾರಸನ** (ನಾ). ಹಣ್ಣುಗಳ ಸಾಲು_ಮಾಲೆ : ಫಲಸಾರಸನಮ್ ವಂತೆತ್ತಲುಮೊದವಿರೆ ಕುಳಿರ್ವ ಪುಟಿಳೊಳ್ದೆರ್ಗೊಳ್ವಿನೆಗಂ ಕಲರುಶಿಯಂ ಮಾಡಿದುದುತ್ಪಲಸಾರಸನು ಪುಳಿಂದಲಲನಾನಿಕರಂ (ಕಾವ್ಯಾವ. ೩೨೬). [ಸಂ.]

**ಫಲಸಿದ್ಧಿ** (ನಾ). ೧. ಇಷ್ಟಾರ್ಥವು ನೆರವೇರುವಿಕೆ; ಇಷ್ಟವಾದ ಫಲ ಪ್ರಾಪ್ತಿ : ಒದವಿದ ಸಾಮಗ್ರಿಯೊಳೇಕದೇಶವೈಕಲ್ಯಮಾಗೆಯುಂ ಮತ್ತಂ ತ್ತನ್ನದ್ಯಶಫಲಸಿದ್ಧಿಯುಂ ತೋರ್ಪುದದು ವಿಶೇಷೋಕ್ತಿಯೆಂಬಲಂಕೃತಿ ಯಕ್ಕುಂ (ಕಾವ್ಯಾ.ಶ. ೭೫೦) ; ಅಂಗಿ-ಚೊಣ್ಣ-ಟೊಪ್ಪಿಗೆಗಳು ಅಲ್ಲೇ ಬಿದ್ದು ಕಾಯಿಯ ಆಜ್ಞೆಯ ಫಲಸಿದ್ಧಿಯನ್ನು ಹೇಳುವಂತೆ ಅಣಕಿಸುತ್ತಿದ್ದವು (ಪಹುಂಶ. ೯). ೨ ಉತ್ತಮವಾದ ಪರಿಣಾಮ. [ಸಂ.]

**ಫಲಹಾರ** 'ಫಲಾರ' ನೋ.

**ಫಲಾಖ್ಯಾನ** (ನಾ). [ಜೈನ] ಶಲಾಕಾಪುರುಷನಿಗೆ ಮುಂದೆ ಬರಲಿರುವ ಸುಖವನ್ನು ತಿಳಿಸುವುದು: ಫಲಾಖ್ಯಾನಮೆಂಬುದು ಆ ತ್ರಿಷಷ್ಟಿಶಲಾಕಾ ಪುರುಷರ ಪುಣ್ಯಕರ್ಮಪರಿಪಾಕದೊಳ್ಪುಟ್ಟಿದಭ್ಯುದಯಸುಖಮನಕ್ಕೆ ಕರ್ಮಕ್ಷಯದೊಳ್ಪುಟ್ಟಿದ ನಿಶ್ರೇಯಸದ ಸುಖಮನಕ್ಕೆ ಪೇಳ್ವುದು (ಕಾಪುಂಕಿ. ೦೩) [ಸಂ.]

**ಫಲಾಗಮ** (ನಾ). [ಕಾವ್ಯಮಿ] ನಾಯಕನ ಕಾರ್ಯದೃಷ್ಟಿಯಿಂದ ನಾಟಕದ ವಸ್ತುವಿನಲ್ಲಿರುವ ಐದು ಅವಸ್ಥೆಗಳಲ್ಲಿ ಕೊನೆಯದು : ಇಷ್ಟಾರ್ಥ ನೆರವೇರುವುದು : ಫಲಾಗಮ—ಕಾರ್ಯ ಕೈಗೂಡುವಿಕೆ (ಸಂಪಾಟಿ. ೦೩). [ಸಂ.]

**ಫಲಾತನ್** (ನಾ). ಗಟ್ಟಿಗ; ಮಹಾಪರಾಕ್ರಮಿ; ಶೂರ: ಇನ್ನೊಂದು ಹತ್ತುದಿನ ಕಳೆದಿದ್ದರೆ. . . . ನಾನಲ್ಲ, ಫಲಾತನ್ ಬಂದಿದ್ದರೂ ಏನೂ ಮಾಡಕ್ಕಾಗ್ತಾ ಇರ್ಲಿಲ್ಲ (ಸರ್ಕಕಾಂ. ೩೫೨). [ ? ]

**ಫಲಾದನ** (ನಾ). ೧. ಹಣ್ಣು ತಿನ್ನುವುದು. ೨. ಹಣ್ಣು ಮಾತ್ರ ಆಹಾರವಾಗಿರುವುದು ; ಫಲಾಹಾರ : ತ್ರಿದಿನಕ್ಕೊರ್ಮೆ ಫಲಾದನಂ ನೆಗಳ್ದುದಾತಂಗೊಂದು ತಿಂಗಳ್ (ಶಬಶ. ೨-೯೯). ೩. ಗಿಳಿ ; ಶುಕ. [ಸಂ.]

**ಫಲಾಧ್ಯಕ್ಷ** (ನಾ). ಒಂದು ಬಗೆಯ ಗಿಡ ; ಹಾಲೆ : "ರಾಜಾವನಂ, ಫಲಾಧ್ಯಕ್ಷಂ, ಕ್ಷೀರಿಕಾ_ಷಿ ಹಾಲೇಗಿಡ, ಹಾಲುಬಳ್ಳಿ ಹೆಸರು" (ಸಿದ್ಧಾಂತಿ. ೦೨೨). [ಸಂ.]

**ಫಲಾನ**, ಪಲಾನಾ, ಪಲಾನೆ, ಫಲಾನಾ, ಫಲಾನೆ (ಗು). ಈ ಬಗೆಯ; ಇಂತಹ : ಫಲಾನ ಕುಲದ ಹೆಣ್ಣು ಫಲಾನ ಕಾಲದ ಗಂಡಿಗೆ ಕೊಟ್ಟಿದೆ (ಎಸಪ್ಪ. XXVII, ೫). **ಪಲಾನಾ** : ಪಲಾನಾ ಊರಿನಲ್ಲಿ ಪಲಾನಾ ಬ್ರಾಹ್ಮಣನಿದ್ದಾನೆ . . . ಆತನನ್ನು ಕರೆಸಿದರೆ ನಾನು ಬಿಟ್ಟು ಹೋಗುವೆ (ಕಥಾಮಂ. IV. ೯೬-೭೬). **ಪಲಾನೆ** : ಪಲಾನೆ ಮನುಷ್ಯ ಕೆಟ್ಟ ನಡತೆಯ ವನೆಂದು ಗುಮಾನಿಗೆ ಕಾರಣವಿದೆ (ಪಶಂ. II. ೬೫೩). **ಫಲಾನಾ** : ಪ್ರತಿ ವಾದಿಯನ್ನು ಫಲಾನಾ ದಿವಸದಲ್ಲಿ . . . ಪ್ರತ್ಯುತ್ತರ ಕೊಡಬೇಕೆಂದು ತಿಳಿಸ ತಕ್ಕದ್ದು (ಗ್ರಾಮಶಾಕ. ೨೫). **ಫಲಾನೆ** : (೬). [←ಪಾರ. ಅರ. ಹಿಂ. ಫಲಾನಾ; ಮರಾ. ಫಲಾಣಾ]

**ಫಲಾನಾ** 'ಫಲಾನ' ನೋ.

**ಫಲಾನುಮೇಯ** (ಗು). ೧. ಪರಿಣಾಮದ ಮೂಲಕ ಊಹಿಸಬಹು ದಾದ. (ನಾ). ೨. ಪರಿಣಾಮದ ಮೂಲಕ ಊಹಿಸಬಹು ದಾದುದು. [ಸಂ.]

**ಫಲಾನೆ** 'ಫಲಾನ' ನೋ.

**ಫಲಾಭಿಸಂಧಿ** (ನಾ). ಫಲ ದೊರೆಯಬೇಕೆಂಬ ಉದ್ದೇಶ; ಫಲಾಪೇಕ್ಷೆ: ಚಿತ್ತಶುದ್ಧಿಯು . . . ಮಾಡಿದ ಕರ್ಮಗಳನ್ನು ಫಲಾಭಿಸಂಧಿ ಇಲ್ಲದೆ ಈಶ್ವರನಲ್ಲಿ ಸಮರ್ಪಿಸುವುದರಿಂದಲೂ ಸಂಭವಿಸುವುದು (ಭಾಶತ್ಸ. ೩೩೬). [ಸಂ.]

**ಫಲಾರ**, ಪರಾಳ, ಪಲಹಾರ, ಪಲಾರ, ಪಳಾರ, ಫರಾಳ, ಫಲಹಾರ, ಫಳಾರ (ನಾ). ೧. ಕೇವಲ ಹಣ್ಣುಗಳನ್ನು ಆಹಾರವಾಗಿ ತೆಗೆದು ಕೊಳ್ಳುವಿಕೆ ; ಫಲಮಾತ್ರ ಸೇವನೆ : ಪ್ರವೃತ್ತಿಮಾರ್ಗದ ಶೈವ ಭಿನ್ನಯೋಗಿಯ ವಿಶುದ್ಧಿಚಕ್ರ ಪರಮಾನ್ನ ಪಂಚಕಜ್ಜಾಯ ಫಲಾರಂಗಳಿಗೆ ಮುಖವಾಗಿ ಆರೋಗ್ಯದು (ವಚಶ. II. ೦೭೬); ತೋರಬಾರದ ಹನ್ನಂತೆ ಕಾಣೆ ಫಲಾರಕ್ಕೆ ಆಗಬೇಕಂತೆ ಕಾಣೆ (ನಾಶದ. ೨೧೯). ೨. ಅಲ್ಪೋಪ ಹಾರ ; ತಿಂಡಿ ; ತಿನಿಸು : ಅವನ ಫಲಾರವೆಂದರೆ ಲೋಟಾ ನೀರು (ಪಾಪ್ಯ.ಬ.೦೯). **ಪರಾಳ** : ೨.ಅವುಗಳ ಪರಿವಾರವಾದ ಚಹಾ ಪರಾಳದಂಗಡಿ ಗಳೂ ಬೀಡಿ ದುಕಾನುಗಳೂ . . . ಸೌಖ್ಯ ಸೌಕರ್ಯಗಳನ್ನು ಒದಗಿಸು ತ್ತಿವೆ (ಕವಕ. ೦೨). **ಪಲಹಾರ** : ೨. ಪರಲೋಕವೆಂಬುದು ಪಲಹಾರದ ಗುಡ್ಡೆಯೆ ? (ಗಾದೆ) ; ಊಟ ಹಾಗ, ಪಲಹಾರ ಮುಪ್ಪಾಗ (ಗಾದೆ). **ಪಲಾರ** : ೨. ರಙ್ಗಸ್ವಾಮಿಯವರ ಪಾದಕೆ ರಙ್ಗಾಪುರದ ಪರದೇಸಿ ಪಲಾರದ ನಿಗ್ರಿಯೆತ್ತಿ ಭಿಕ್ಷಾವೃತ್ತಿಯಲ್ಲಿ ಮಾಡಿ ಸಮರ್ಪಿಸಿದವ ದೀಪಮಾಲೇ ಕಂಭ (ಎಕ. XII, ತಿಪಟೂ. ೬೯-೫, 1748). **ಪಳಾರ** : ೨. ಟೀಶನ್ನಾಗ

ಫಳಾರ ತಿನಿಸಿ ಚಾ ಕುಡಿಸಿದ್ರೆ ಆತು (ಎಳೆ. ೦೬). **ಫರಾಳ**: ೨. ಬ್ರೆಡ್ಡು, ಬಾಳೆಹಣ್ಣು, ಪುರೀ ಭಾಜಿ ಏನೇನೋ ಗುಡ್ಡ ಎತ್ತರ ಫರಾಳ ಕಟ್ಟಿಸಿ . . . ಶೇಷಣ್ಣ ಬಂದ (ವೃ. ೩); ಅನೇಕ ಬಗೆಯ ಫರಾಳದ ವಸ್ತು ಗಳಿದ್ದರೂ ಅದನ್ನೆಲ್ಲ ಬದಿಗೆ ಸರಿಸಿದರು (ಸ್ಮೃತಿ. ೨೫); ಅಲ್ಲಿಂದ ಚಹಾ ಫರಾಳದ ಗಡಿಬಿಡಿಗೆ ಮೊದಲಾಯ್ತು (ಅನ್ನ. ೨೬). **ಫಲಹಾರ**: ೨. ಮುದ್ರಾಧಾರಣೆಯ ಕೆಲಸವು ತೀರಿದ ತರುವಾಯ ಶ್ರೀಪಾದರಿಗಳ ಫಲಹಾರವು ಮುಗಿಯಿತು (ವಾಗ್ಮೀ. ೩). **ಫಳಾರ**: ೨. ಸುಮಾರು ಎರಡು ತಂಬಿಗೆಯಷ್ಟು ಬಿಸಿನೀರು . . . ಒಂದೂವರೆ ರಾಗಿರೊಟ್ಟಿ – ಇವಿಷ್ಟು ಅವರ ಬೆಳಗಿನ ಹೊಟ್ಟೆ ಗಟ್ಟಿ ಮಾಡುವ ಫಳಾರಗಳು (ಶರಾವ ೨೧); ನಾವು. . . ಏಕಾದಶಿ ದಿನ ಯಾರೂ ಕಾಣದಂತೆ ರಾತ್ರಿ ಫಳಾರ ಮಾಡುತ್ತಿದ್ದಿಲ್ಲವೆ? ಬ್ರಹ್ಮನು ನಾಲ್ಕು ಬಾಯಿಗಳಿಂದಲೂ ಫಳಾರ ಮಾಡುತ್ತಿದ್ದ! (ಕೃ ಣಾ. ೬೧). [< ಫಲಾಹಾರ]

**ಫಲಾವಾಪ್ತಿ** (ನಾ). ೧. ಇಷ್ಟಾರ್ಥವನ್ನು ಪಡೆಯುವಿಕೆ; ಫಲ ಪ್ರಾಪ್ತಿ. ೨. ಸಂತಾನಪ್ರಾಪ್ತಿ, –ಲಾಭ: ದೇವಿಯರೊಂದಭಿಲಷಿತ ಫಲಾವಾಪ್ತಿಗೆ ದೇವ ನಿಮ್ಮ ದಯೆಗೆಯ್ದ ಫಳಂ ಕೇವಲ ಶುಭಸೂಚಕಂ (ಮಲ್ಲಿ. ೯-೩೫). [ಸಂ.]

**ಫಲಾಸಿ** 'ಪಲಾಸಿ' ನೋ.

**ಫಲಾಹಾರ** (ನಾ). ೧. ಹಣ್ಣುಗಳನ್ನು ಮಾತ್ರ ಆಹಾರವಾಗಿ ತೆಗೆದು ಕೊಳ್ಳುವುದು, –ಸೇವಿಸುವುದು: ಆ ವರುಪದದಲ್ಲಿಯ ಜನರು ಮೂಱು ತಾಳದುದ್ದ ವರಾಗಿಕಲ್ಪವೃಕ್ಷಫಲಾಹಾರದಿಂದಿಪ್ಪತ್ತುಸಾವಿರವರ್ಷದಾಯುಷ್ಯ ವಂತರೆನಿಸಿ . . . ಸದಾನಂದಿಗಳಾಗಿರ್ಕುಂ (ಪವೀ. ೨೦೯); ಫಲಾಹಾರವನು ಮಾಡೂ ಪರಮಪುರುಷ ಭೂಬಲನೆ ಲಕ್ಷ್ಮೀಕಂದರ್ಪರ ಸಹಿತ (ಹರಿಕಂ. ರಾ. ೦-೦೩೦ ಕಲ್ಲಿ). ೨. (ಉಪವಾಸ ಮಾಡುವವರು ತೆಗೆದು ಕೊಳ್ಳುವ) ಅಲ್ಪಪ್ರಮಾಣದ ತಿಂಡಿ, – ತಿನಿಸು; ಅಲ್ಪೋಪ ಹಾರ: ಫಲಾಹಾರಕ್ಕೆ ಉಪ್ಪಿಟ್ಟು ಮಾಡುತ್ತೇನೆ (ಏಹಾಗ. ೬); ರಾತ್ರಿ ಫಲಾಹಾರಕ್ಕೆ ಕಡುಬು ಕಾಯಿಹಾಲು ಮಾಡಿತ್ತು (ವಾಗ್ಮೀ. ೨೦). [ಸಂ.]

**ಫಲಾಹಾರಮಂದಿರ** (ನಾ). ದುಡ್ಡು ತೆಗೆದುಕೊಂಡು ತಿಂಡಿ, ತೀರ್ಥ ಗಳನ್ನು ಒದಗಿಸುವ ಸ್ಥಳ; ಹೋಟೆಲು: ಆ ಘಾಸಲೆಗೇ ಅದೊಂದು ಒಳ್ಳೆಯ ಫಲಾಹಾರಮಂದಿರವಾಗಿದೆ (ರೂಢಿ). [ಸಂ.]

**ಫಲಿ**[1] (ಗು). ೧. ಹಣ್ಣು ಬಿಟ್ಟಿರುವ. (ನಾ). ೨. ಹಣ್ಣು ಬಿಟ್ಟಿರುವ ಮರ: "ಫಲವಾನ್, ಫಲಿನಃ ಫಲೀ – ೩ ತತ್ಕಾಲದಲ್ಲಿ ಹಣ್ಣು ಬಿಟ್ಟಿರುವ ಮರದ ಹೆಸರುಗಳು" (ಸಿದ್ಧಾಂತಿ. ೦೦೦). [ಸಂ. ಫಲಿನ್]

**ಫಲಿ**[2] (ನಾ). ಒಂದು ಬಗೆಯ ಬಳ್ಳಿ; ಪ್ರಿಯಂಗು: "ಶ್ಯಾಮಾ . . . ಫಲಿನೀ, ಫಲೀ . . . ಪ್ರಿಯಕಃ – ೧೨ ಪ್ರೇಂಖಣಗಿಡದ ಹೆಸರು, ಪ್ರಿಯಂಗು ಪ್ರಸಿದ್ಧವಾದದ್ದು" (ಸಿದ್ಧಾಂತಿ. ೦೨೪). [ಸಂ. ಫಲೀ]

**ಫಲಿತ**, ಫಳಿತ (ಗು). ೧. ಹಣ್ಣುಗಳುಳ್ಳ; ಫಲಸಹಿತವಾದ: ಅನೇಕ ಪನಸ . . . ಕದಳೀಪ್ರಮುಖಫಲಿತಭೂಜರಾಜಿಗಳ್ (ಕೃಷ್ಣ. ೩-೬೭ ವ); ಕೃತಾಂತನ ಫಲಿತ ಶಾಲೀವನದ ಮುತ್ತಿದ ಗಿಳಿಗಳೋ ಆಚಾರ್ಯನಂಬುಗಳೋ (ಕುಮಾರವ್ಯಾ. ೦೬-೪). (ನಾ). ೨. ಹಣ್ಣು ಗಳನ್ನುಳ್ಳುದು: ಶುಕಪ್ರಜಮುತ್ಪತ್ತದಿಂ ಸವಿವ ಫಲಂಗಳಿಂ ಫಲಿತಮಾಯ್ತು ಮನೋಜಮನೋರಥದ್ರುಮಂ (ಅಶ್ವ. ೬-೦೦); ವಧೂವರರಾಗವಿಷಯವಲ್ಲರಿ ಫಲಿತಮಾದುದು (ಜಗ. ೨-೩೨೪). ೩. ಪರಿ ಣಾಮ; ಸಿದ್ಧಿ: ಆ ನೀತಿ . . . ಒಂದು ಬುದ್ಧಿಯ ಎಚ್ಚರಿಕೆಯ ಮತ್ತು ಒಂದು ಎದೆಯ ಗಟ್ಟಿತನದ ಸಂಯೋಗದ ಫಲಿತ (ಮಹಾಗ. ೯, ಸ್ವೀಕಾರ ಮಾತು). 'ಫಲಿತಾಂಶ' ಪರಾ. ೪. ಪರಿಣಾಮವಾಗಿ ಬಂದ ಫಲ: ಅನೇಕ ಬಲಗಳಿಗೆ ಸಮಾನವಾದ ಒಂದು ಬಲವನ್ನು ಆ ಬಲಗಳ ಫಲಿತವೆಂದು (Resultant) ಹೇಳುವರು (ಭೌತ. ೯೯). **ಫಳಿತ**: ೧. ಫಳಿತ ಪನಸಾಮ್ರಸನ್ಮಾತುಳಂಗ . . . ಅನೋಕಹಕುಳಂಗಳಿಂದೆಸೆವುವುದಱಿ ಬಹಿ ರುದ್ಯಾನಂ (ಪರ್ವ. ೦-೫೩); ಫಳಿತ ಕುಜಂಗಳಿಂದಧಿಕನಂತಿರೆ . . . ದಾಡಿಮ ತರುವ್ರಜಮಾ ಬನದೊಳ್ ವಿರಾಜಿಕುಂ (ಕುಸುಮಾ. ೦-೧೦). [ಸಂ.]

**ಫಲಿತಾಂಶ** (ನಾ). ೧. ಪರೀಕ್ಷೆಯ ಪರಿಣಾಮ; ಫಲಿತಾಂಶಕ್ಕಾಗಿ ಕಾದ ವಿದ್ಯಾರ್ಥಿಯಂತೆ ವಾಸಂತಿಯ ಮನಸ್ಸಿನ ಸ್ಥಿತಿಯಾಗಿತ್ತು (ಶಿಖರೋ. ೦೦೩); ನೀವು ಹೇಗೆ ಇಷ್ಟು ಒಳ್ಳೆಯ ಫಲಿತಾಂಶವನ್ನು ಪಡೆದಿರಿ (ಕಾಲಮ. ೨೨೩). ೨. ಯಾವುದಾದರೊಂದು ಸಂಶೋಧನೆಯಿಂದ ತಿಳಿವಿಗೆ ಬಂದ ವಿಷಯ: ಅವರ ಮಹತ್ತರವಾದ ಸಂಶೋಧನೆಯ ಫಲಿತಾಂಶದಿಂದ ಮಾನವಕುಲಕ್ಕೇ ಉಪಕಾರವಾಯಿತು (ರೂಢಿ). [ಸಂ.]

**ಫಲಿತಾರ್ಥ** (ನಾ). ಪರಿಣಾಮದ ಫಲ: ಆತನಿದಿರೊಳಗಸುವ ಲಲಿತ ಮಂದನಿಸಿ ಶಮನಿಲಯಮಂ ಸಾರುವೊಡೆ ಫಲಿತಾರ್ಥಮೆಂದು ತಿಳಿ (ವಂಶಾಭ. ೨-೩-೩೨). [ಸಂ.]

**ಫಲಿನ**, ಫಳಿನ (ಗು). ೧. ಫಲವನ್ನು ಕೊಡುವ. ೨. ಫಲ ಸಹಿತವಾದ; ಸಫಲವಾದ. (ನಾ). ೩. ಹಣ್ಣು ಬಿಟ್ಟಿರುವ ಮರ: "ಫಲ ಹಿಡಿದ ಮರನಂ ಫಲಿನಮೆಂಬುದು" (ಹಲಾಯು. ೨೯-೨೧); "ಮರ ಗಳೊಳು ಫಲಿನಮನೆ ಫಲಮುಳ್ಳವಕ್ಕುಂ" (ಮಂಗರಾ. ೩೦-೧). ೪. ಹಲಸಿನ ಮರ; ಪನಸವೃಕ್ಷ. **ಫಳಿನ**: ೩. "ಫಲಮುಳ್ಳುದು ಫಳಿನಂ" (ಪಮ್ಮಕೋ. ೩೦-೨). [ಸಂ.]

**ಫಲಿನಿ**, ಫಳಿನಿ (ನಾ). ೧. ಒಂದು ಬಗೆಯ ಬಳ್ಳಿ; ಪ್ರಿಯಂಗು: "ಪ್ರಿಯಂಗುಃ, ಫಲಿನೀ, ಶ್ಯಾಮಾ – ಈ ೩ ಪ್ರಿಯಂಗು" (ಹಲಾಯು. ೩೨-೧೦); "ಪ್ರಿಯಂಗು ಶ್ಯಾಮೆ ಫಲಿನಿ" (ಮಂಗರಾ. ೩೯-೯). ೨. ಒಂದು ಬಗೆಯ ಸಸ್ಯ; ಜಾಲಿನಿ: "ಫಲಿನಿ ಜಾಲಿನಿಯುಕ್ಕು" (ಮಂಗರಾ. ೯೯-೯೯). ೩. ಒಂದು ಬಗೆಯ ಸಸ್ಯ; ಅಗ್ನಿಶಿಖೆ: "ವಿಶಲ್ಯಾ, ಅಗ್ನಿ ಶಿಖಾ, ಅನಂತಾ, ಫಲಿನೀ, ಶಕ್ರಪುಷ್ಪೀ–೫ ಬೆಣ್ಣೆಬಿದುರುಸೊಪ್ಪು, ಅಗ್ನಿಶಿಖೆ" (ಸಿದ್ಧಾಂತಿ. ೦೯೩). **ಫಳಿನಿ**: ೧. "ಫಳಿನಿ ಶ್ಯಾಮಂ ಪ್ರಿಯಂಗುನಾಮಂ ನೆಗಳ್ಗುಂ" (ಪಮ್ಮಕೋ. ೩೩-೪). [ಸಂ. ಫಲಿನೀ]

**ಫಲಿನೀಫಲ** (ನಾ). ಪ್ರಿಯಂಗುಬಳ್ಳಿಯ ಹಣ್ಣು: ಇವು ಜಂಬೂಫಲ ಮಂಜರಿಯುವು ಫಲಿನೀಫಲದ ಗುಚ್ಛಂ . . . ಎಂದು ತೋಱುದನವನೀ ಪಾಲಂಗೆ ಲೀಲೆಯಿಂ ವನಪಾಲಂ (ಶಂಪ್ರಭೃ. ೨-೬೬). [ಸಂ.]

**ಫಲಿಯಿಸು** 'ಫಲಿಸು' ನೋ.

**ಫಲಿಸಿಕೆ** (ನಾ). ಹೊಂದಿಕೊಳ್ಳುವಿಕೆ; ಪ್ರಯೋಜನಕರವಾಗಿರುವಿಕೆ; ಕೂಡಿಬರುವಿಕೆ: ಈ ಊರಿನಲ್ಲಿ ಫಲಿಸಿಕೆಯಿಲ್ಲವೆಂದು ಅವರು ಊರು ಬಿಟ್ಟು ಬೇರೆ ಊರಿಗೆ ಹೋದರು (ರೂಢಿ). [ಫಲಿಸು + – ಇಕೆ]

**ಫಲಿಸು**, ಫಲಿಯಿಸು, ಫಳಿಯಿಸು, ಫಳಿಸು (ಕ್ರಿ). ೧. ಹಣ್ಣು ಬಿಡು; ಫಲ ಕೊಡು: ಫಲಿಸಿತರಸಾ ನಿನ್ನ ಭಾಗ್ಯದ ಬೆಳಸು (ಕುಮಾರವ್ಯಾ. ೦೩-೩); ರಾಮ ನಿನ್ನಲಿ ಫಲಿಸಿತಗ್ಗದ ಸತ್ಕತರು (ತೊರವೆ. ೨-೩-೨೪); ಪಲ್ಗಿರಿದುಸಿರುವವೋಲ್ಫಲಿಸಿ ದಾಳಿಂಬದ ಮರಗಳೊಪ್ಪಿಹುವು (ಕಂಪಶ. ೩-೬೦); ಬಾಳೇ ಅಗಿಗಳನ್ನು ಹಚ್ಚಿದ ಬಳಿಕ ಮೂರನೇ ವರ್ಷ ಫಲಿಸುತ್ತವೆ (ಕಬಾಗ. ೨೬೬). ೨. ಉಂಟಾಗು; ಪ್ರಾಪ್ತವಾಗು; ಒದಗು: ಇನ್ನಿವರಿಂ ದಿವ್ಯ ಫಲಿಕ್ಕೆ (ರಮ್ಯಾ. ೪-೯೬); ಸದುಗುರುಭಜನಂ ಫಲಿಸುವುದ ದೆಂದೋ (ಬಸವ. ೯೩-೪೨); ಸುಮಂತ್ರಮುಖದಲಿ ಫಲಿಸುವುದೆ ಸುತಲಾಭ (ತೊರವೆ. ೦-೩-೩); ಕೊನೆಯ ಗಳಿಗೆಯು ಫಲಿಸೆ ಕುಡಿ ಗಾಳಿಪಾಲು (ಶಿಶುಕ. ೩೦-೦೩). ೩. ಪ್ರಯೋಜನವಾಗು; ಉಪಯೋಗಕ್ಕೆ ಬರು: ಆವನೋಲೆಯಕಾಱತನ ಗಾಂಡೀವಿಯಿದಿರಲಿ ಫಲಿಸುವುದು ಮೇಣಾವನದ್ಭುತ ಮಂತ್ರಶಕ್ತಿಗೆ ಮಣಿವನಸುರಾರಿ ಕಾವರಿಲ್ಲರ್ಜುನನ ಕೈಯಲಿ ಸಾವವರು

ನಾವಲ್ಲ (ಉವ್ಯಾಕ್ರೋ. ೬-೩೩); ಅವರ ಕೈಯಿಂದಲೇ ಹಿಡಿದು ಕೊಡಬೇಕು ಹಾಗಲ್ಲದಿದ್ದರೆ ಆ ದಾನವು ಫಲಿಸುವುದಿಲ್ಲ (ಶಂಗಾಶ್ಚ. ೦೫೬). ೪. ಈಡೇರು; ನೆರವೇರು; ಸಿದ್ಧಿಯನ್ನು ಪಡೆ: ನುಡಿದುದು ಫಲಿಸಲರಿಯದು ದೈವ ಗತಿಯಲಿ ಫಲಿಸಿತಾದಡೆ ರಾಜ್ಯಲಕ್ಷ್ಮಿಗೆ ಸೂಳೆತನವಹುದೆ (ಕುವ್ಯಾ. ೩-೦೦); ಮಾತಿದು ಫಲಿಸದಿರ್ದರೆ ಪತಿಕರಿಸಬೇಡ (ತೊರೆರಾ. ೬-೧೭-೦೦) : ಇನಿಯನ್ನೈತರುವ ಅವಧಿಯ ದಿನಂ, ಷಣ್ಮಾಸದ ನಿರೀಕ್ಷಣಂ ಫಲಿಸುವಾ ದಿನಂ (ಕಶ್ಯಾಂಗ. ೬೨-೦೭೦೫); ಅರ್ಜುನನು ಮಹಾಸಂಗ್ರಾಮಕ್ಕೆ ಅಣಿಯಾಗುತ್ತಾನೆ. ಹೀಗೆ ಭಗವಂತನ ಕಾರ್ಯ ಫಲಿಸುತ್ತದೆ (ರರ್ಜುನಾ. ೧೩೮). ೫. ದೊರಕಿಸಿ ಕೊಡು; ಲಾಭವಾಗುವಂತೆ ಮಾಡು: ಗ ೬೦ ವರಹದ ಭುಮಿಯಂನು ಕಂಲು ನೆಟು ಫಲಿಸಿ ಕೊಟದರಿಂದ (ಎಕ. VII. ಶಿಕಮೊ. ೦೦೬-೨೨: 1558 ?).

ಫಲಿಯಿಸು : ೨. ತೀರ್ಥಕರನಪ್ಪ ಪುಣ್ಯಂ ಬೇಗಂ ಫಲಿಯಿಸಿತು (ಕರ್ಣಾಮೃ. ೪-೬೪) ; ಫಲಿಯಿಸಿದುದು ಕೆಯ್ಕೊಳ್ ಪರಲಲನಾಪರಿರಂಭವೊಲ್ಲದಿರ್ದೊಡಂ (ಆಲಾವ. ೦೪-೦೦೭): ಹುಂ ಎನೆಯುಂ ಅಲ್ಲೆಯಲ್ಲೆಯೆನೆಯುಂ ಫಲಿಯಿಸುಗುಂ ಪ್ರಶ್ನಾರ್ಥೋಜ್ಜ್ವಲಾನುವಾನಾರ್ಥಯುಗಳವವು (ಶವಪ. ೩೦೪). ಫಳಿಯಿಸು : ೧. ಫಳಿಯಿಸಲಾರ್ತುದೇ ಅಸುಕೆ (ಹಂಪ್ರವು. ೬-೯೨). ಫಳಿಸು : ೧. ಫಳಿಕುಂ ತ್ರಿವರ್ಗಮುಂ ಕೈಗೊಳಿಕುಂ ತತ್ಸಾಧನಂಗಳುಂ (ಚಿಕಪ. ೪-೬೪). [ಫಲ$_1$ + —ಇಸು$_1$]

ಫಲೀನ (ನಾ). ೧. ಹಣ್ಣು; ಫಲ. ೨. ಸಜ್ಜನ; ಉತ್ತಮ ಮನುಷ್ಯ. ೩. ಮುನಿ; ಯತಿ. ೪. ಮೋಕ್ಷ; ಮುಕ್ತಿ. ೫. ತಲೆಯ ಕೂದಲು. ೬. ಕೆಸರು: "ಉತ್ತಮನುಂ ಪಂಕ ಶಿರೋರುಹಂ ಮುನಿ ಫಲಂ ಮೋಕ್ಷಂ ಫಲೀನಾಹ್ವಯಂ" (ನಾನಾರ. ೪೬). [ ? ]

ಫಲುಗುಣ 'ಪಲುಗುಣ' ನೋ.

ಫಲೋತ್ತರ (ನಾ). ಒದಗಲಿರುವ ಫಲ ; ಬರಲಿರುವ ಪರಿಣಾಮ : ಧೌಮ್ಯಾದಿ ಋಷಿಗಳು ಹೇಳಿದರು ತಚ್ಛಕುನಸಂಗತಿಗಳ ಫಲೋತ್ತರವ (ಕುವ್ಯಾ. ೦೦-೦). [ಸಂ.]

ಫಲೋತ್ಸುಕ (ನಾ). ಫಸಲನ್ನು ಬಯಸುವವನು : ಬೇಸಣಾಳ್ವನೇ ಬೆಳೆವ ಬಿತ್ತಿನ ಸಂಕ್ರಮದೊಳ್ ಫಲೋತ್ಸುಕಂ (ಕೃಕೃಪ. ೩-೬೦). [ಸಂ.]

ಫಲೋದಯ (ನಾ). ೧. ಫಲವುಂಟಾಗುವುದು ; ಫಲಪ್ರಾಪ್ತಿ ; ಲಾಭ: ಜೀವವಿವಾದಮತ್ತ ಪರಲೋಕಫಲೋದಯಮತ್ತ (ಶಾಂತಿಪು. ೯-೦೨೯). ೨. ಫಸಲು ಉಂಟಾಗುವುದು,—ದೊರಕುವುದು : ದುಷ್ಟಪ್ರಸರದೇಳಿಗೆ ಪಾಪಿಯೋಲಗ ಹುಸಿಯ ಬಾಳುವೆ ಹುದುವಿನಾರಂಭದ ಫಲೋದಯವು ನಸಿದು ಹೋಗದೆ (ಕುವ್ಯಾ. ೬-೯೮). [ಸಂ.]

ಫಲ್ಗು (ಗು). ೧. ಚಿಕ್ಕ ; ಕ್ಷುದ್ರ ; ಅಲ್ಪವಾದ. ೨. ಸಾರವಿಲ್ಲದ : ನೀರಸವಾದ. (ನಾ). ೩. ಚಿಕ್ಕದು ; ಸಣ್ಣದು: ಕೂಸನೆಯಿನ್ನುಂ ಶಾಸ್ತ್ರಾಭ್ಯಾಸಂ ಪಿರಿದಿಲ್ಲ ಫಲ್ಗು ಬಹುವಚನೋಪನ್ಯಾಸದೊಳಮೆಸೆದು ನೀನಿಂತೀ ಸಭೆಯಂ ಪೊಕ್ಕು ಬಾದುಗೆಯ್ಯಲ್ ನೆಟೆವೋ (ವರ್ಧಮಾ. ೦೪-೧೩). ೪. ಸಾರವಿಲ್ಲದುದು : "ರಿಕ್ತಂ, ತುಚ್ಛಂ, ಅಸಾರಂ, ಫಲ್ಗು, ವೃಥಾಫಲಂ — ಈ ೫ ತುಚ್ಛಂ" (ಹಲಾಯು. ೦೨೯-೯೨). ೫. ಒಂದು ಬಗೆಯ ಸಸ್ಯ : "ಕಾಕೋದುಂಬರಿಕಾ, ಫಲ್ಗು:, ಮಲಪೂ:, ಜಘನೇ ಫಲಾ—ಳ ಕಲ್ಲತ್ತೀಗಿಡದ ಹೆಸರುಗಳು" (ಸಿದ್ಧಾಂತಿ. ೦೨೩). [ಸಂ.]

ಫಲ್ಗುಣ 'ಪಲುಗುಣ' ನೋ.

ಫಲ್ಗುನ (ನಾ). ೧. ಫಾಲ್ಗುಣಮಾಸ. ೨. ಅರ್ಜುನ ; ಫಲುಗುಣ. ೩. ಇಂದ್ರ. [ಸಂ.]

ಫಲ್ಗುನಿ (ನಾ). ಪುಬ್ಬಾ ಮತ್ತು ಉತ್ತರೆ ಎಂಬ ಎರಡು ನಕ್ಷತ್ರಗಳ ಜೋಡಿ. [ಸಂ. ಫಲ್ಗುನೀ]

ಫವುಚಾಯಿಸು 'ಪೌಂಚಾಯಿಸು' ನೋ.

ಫವುಜು 'ಫೌಜು' ನೋ.

ಫಶಿ (ನಾ). ಮೋಸ ; ವಂಚನೆ.

**ಫಶಿ ಹಾಕು = ಮೋಸಮಾಡು :** ಗಿರಾಕಿಕರು ಹಳೆಮಾಲಿಗೆ ಹೊಸಾದರ ಧಾರಣೆಯು ಕೊಟ್ಟು ಫಸಾಸುವ ಅಂದರೆ ಫಶಿ ಹಾಕುವ ಅಥವಾ ಠಕ್ಕಿಸುವ ಸಂಭವವಿರುತ್ತದೆ (ಮುಂಬಾ. ೯೦). [←ಮರಾ. ಫಶಿ]

ಫಸಗಿ (ನಾ). = ಫಶಿ.

**ಫಸಗಿ ಹಾಕು = ಮೋಸ ಮಾಡು:** ನೀವು ನಮಗೂ ಫಸಗಿ ಹಾಕಿದ್ರೆಲ್ಲಾ (ಬಂಶಹು. ೦೬೬) ; ಕೌಕಾನ್ನ ಹ್ಯಾಂಗ ಫಸಗೀ ಹಾಕಿದೇ ಅಂತ (ದೀಶಹ. II. ೨೦೨). [← ಮರಾ. ಫಸಗತ್]

ಫಸಫಸಿಸು (ಕ್ರಿ). ಫಸಫಸ ಎಂಬ ಶಬ್ದವಾಗುವಂತೆ ನೊರೆ ಬಿಡು,— ಬುರುಗೇಳು : ಆಸಿಡ್ ಅಥವಾ ಲಿಂಬೇರಸ ಹಿಂಡಲು ಯಾವ ಜಸದ ಭಸ್ಮವು ಶಾಂತ, ಸ್ಥಿರವಾಗಿ ನಿಲ್ಲುವದೋ, ಫಸಫಸಿಸುವುದಿಲ್ಲವೋ ಅದು . . . ಶರೀರದಲ್ಲಿ ಸೇರಲು ಯೋಗ್ಯವಾಯಿತೆಂದು ತಿಳಿಯಬೇಕು (ಶಿಕಧೀ. ೩೩). [ಫಸಫಸ$_2$ + —ಇಸು$_1$]

ಫಸಲ್, ಫಸಲು (ನಾ). ಬೆಳೆ; ಬೆಳಸು : ಮುಂದಿನ ಸಾಲಿಗೆ ಕೀರ್ವೇ ಜಾಸ್ತಿ ಫಸಲ್ ಜಾಸ್ತಿ ಮುಂತಾದವುಗಳನ್ನು ಭರ್ತಿ ಮಾಡಿ ಪಟ್ಟಾ ಕೊಡಲ್ಪಡುವದು (ಗ್ರಾಶಾಳ. ೬೯). ಫಸಲು : ಬಂಗಾರದಂಥ ಫಸಲು ಬಂದು ಮನೆ ತುಂಬುತ್ತದೆ (ಕಂದಕೋ. ೦೦೬); ಫಸಲು ಕಣಜಕ್ಕೆ ಬಂದು ಸೇರಿತೆಂದರೆ ಆಗ ಅದನ್ನು ತೂಕ ಮಾಡಿ ಬೆಲೆ ಕಟ್ಟುವುದು ಹದಕ್ಕೆ ಬರುತ್ತದೆ (ಶಿಂರ. II. ೬) ; ಖರ್ಜೂರದ ಫಸಲು ಇನ್ನೆಷ್ಟು ಬಂದಿದೆ ಮನೆಗೆ (ಘಟ್ಟಿರ. ೮೩). [← ಅರ. ಫಸ್ಲ್ ; ಹಿಂ., ಮರಾ. ಫಸಲ್]

ಫಸಲಿ, ಫಸ್ಲಿ (ನಾ). ಒಂದು ಮುಸಲ್ಮಾನ ವರ್ಷಗಣನೆ : (ಕ). ಫಸ್ಲಿ: ಹೈದರಾಬಾದಿನ ಜಹಗೀರುಗಳ (ವಿನಿಯಮದ) ಫಸ್ಲಿ ೧೩೫೫ನೆಯ ವರ್ಷದ ವಿನಿಯಮನ (ಫಸ್ಲಿ ೧೩೫೫ನೆಯ ವರ್ಷದ ೨೫ನೆಯ ವಿನಿಯಮವು) (ರಾಶಾಲ. ೩೦೭ ಒಂಬತ್ತನೆಯ ಅನುಸೂಚಿ). ಈ 'ಫಸಲಿ' ಎಂಬ ಗಣನೆಯ ಕ್ರಮವನ್ನು ಅಕ್ಬರ್ ಉತ್ತರಭಾರತದಲ್ಲಿ ೧೫೫೬ರಲ್ಲಿ ಪ್ರಾರಂಭಿಸಿದನು. ಇದನ್ನೇ ಶಹಜಹಾನನು ೧೬೩೬ರಲ್ಲಿ ದಕ್ಷಿಣ ಭಾರತಕ್ಕೂ ಅನ್ವಯಿಸಿದನು. [←ಪಾರ. ಫಸ್ಲೀ; ಹಿಂ. ಫಸಲೀ ; ಮರಾ. ಫಸಲೀ, ಫಸ್ಲೀ]

ಫಸಲು 'ಫಸಲ್' ನೋ.

ಫಸಾದ (ನಾ). ಬಂಡು ; ದಂಗೆ : ಫಸಾದ ಮಾಡಲಿಕ್ಕೆ ನೋಡುವವರನ್ನು ಕೊತ್ವಾಲರಿಂದ ಕೋಳ ಹಾಕಿಸಿ ಬಿಡುತ್ತೇನೆ (ವಾಗ್ನಿಬ. ೦೦೬). [←ಅರ. ಹಿಂ. ಮರಾ. ಫಸಾದ್]

ಫಸಾಯಿಸು, ಫಸಾಸು (ಕ್ರಿ). ಮೋಸ ಮಾಡು : ನೀವು ಹೀಂಗ ನನ್ನ ಫಸಾಯಿಸಬಾರದಿತ್ತು (ಮೂಂಡಾ. ೨೩೦) ; ಈ ವಿಶ್ವನಾಥ . . . ಒಬ್ಬಿಬ್ಬರನ್ನು ಫಸಾಯಿಸಿದ್ದಾನೆಯೆ? (ಮೂಂರುದಾ. ೬೦). ಫಸಾಸು : ಫಸಾಸುವ ಅಂದರೆ ಫಶಿ ಹಾಕುವ ಅಥವಾ ಠಕ್ಕಿಸುವ ಸಂಭವವಿರುತ್ತದೆ (ಮುಂಬಾ. ೯೦) ; ನಾಳೆ ನೀನ ಅನಬಾರದು ಕಾಕೂ ಫಸಾಸಿದರೂ ಅಂತ (ದೀಶಹ. I, ೦೬೩). [ಫಸ್ಸಾ (← ಮರಾ. ಫಸವಿಣೇ) + — ಇಸು$_1$]

ಫಸಾಸು 'ಫಸಾಯಿಸು' ನೋ.

ಫಸ್ಲಿ 'ಫಸಲಿ' ನೋ.

ಫಳ 'ಫಲ$_1$' ನೋ.

ಫಳಕ 'ಫಲಕ' ನೋ.

ಫಳಕಾರ (ನಾ). ಪ್ರಯೋಜನವನ್ನು ಉಂಟುಮಾಡುವವನು ; ಉಪಕಾರಿ : ಇಳೆಯೊಳಗೆಲ್ಲ ಸಿಂಹಚೂಡನೆ ಫಳಕಾರಂ ಚಂಡಶಾಸನಂ ಬಗೆವೊಡೆ ಭೂತಳದೊಳ್ಕೃತಘ್ನಂ (ಅಪಂತಿ. ೦೦-೩೩). [ಸಂ. ಫಲಕಾರ]

**ಫಳಣೆ** 'ಫಾಳಣೆ' ನೋ.

**ಫಳದಾನ** 'ಫಲದಾನ' ನೋ.

**ಫಳಪಾಕಾಂತತೆ** (ನಾ). ೧. ಫಲ ಬಿಟ್ಟೊಡನೆ ನಾಶವಾಗುವ ವಾರ್ಷಿಕಬೆಳೆಯ ಸ್ವಭಾವ. ೨. ಸಂತಾನಪ್ರಾಪ್ತಿಯಾದೊಡನೆ ತಂದೆ ತಾಯಿಗಳು ಸಾಯುವಿಕೆ. ೧. ೨ : ಫಳಪಾಕಾಂತತೆಯೋಷಧಿಗಳ ತೆಱದಿಂದೆಯ್ದೆ ಸಮನಿಸುತ್ತಕೃಕಟ ಸುಗಳಸದೆ ತನಯನ ಲೀಲಾವಿಳೋಕನ ಪ್ರಭವಸೌಖ್ಯಮಮಾ ದಂಪತಿಯೊಳ್ (ಚಂದ್ರಪ್ರ. ೩-೯೦).
[ಸಂ. ಫಲಪಾಕಾಂತತಾ]

**ಫಳಫಳ** (ನಾ). ಒಂದು ಅನುಕರಣಪದ : ಅವಳ ಕಿವಿಯ ಓಲೆಗಳು ದೀಪದ ಬೆಳಕಿನಲ್ಲಿ ಫಳಫಳ ಎಂದು ಹೊಳೆಯುತ್ತಿದ್ದುವು (ಲೂಪ).

**ಫಳಫಳನೆ** (ಅ). ೧. ಪ್ರಕಾಶಮಾನವಾಗಿ : ಜನವಾರವು ರಾತ್ರಿಯ ಮಿಂಚಿನಂತೆ ಫಳಫಳನೆ ಹೊಳೆಯುತ್ತಾ ಇತ್ತು (ಹುಚ್ಚುಕ. ೬೦). ೨. ವೇಗವಾಗಿ ; ರಭಸವಾಗಿ : ಫಳಫಳನೆ ಅರ್ಭಟಿಸಿ ಭಾವುರೇ ರಾವಣನ ಬೆಳೆ ಬೆಳೆದ ನಂದನವನದ ಕಿತ್ತಿ (ತಾರೀ. ೨-೯೩).
[ಫಳಫಳ + — ಅನೆ]

**ಫಳಫಳಿಸು** (ಕ್ರಿ). ಹೊಳೆ ; ಮಿಂಚು : ನಂದಿಯ ಪತಾಕೆಗಳ್ ಫಳಫಳಿಸೆ ಗಗನದೊಳ್ (ಹೀರಕು. ೧೦-೨೫); ಫಣವ ಮೆಟ್ಟಿ ಬಾಲವ ಕೈಯಲಿ ಪಿಡಿದು ಫಳಫಳಿಸುತ್ತ ನಾಟ್ಯವನಾಡೆ (ಪುರಂದ ೨-೧೦೭-೨) ; ಬೆಳಕು ಅವನ ಮುಖದ ಮೇಲೆ ಬಿದ್ದು ಫಳಫಳಿಸಿದುದರಿಂದ ಅವನು ಒಳ್ಳೇ ಗೌರವರ್ಣದ ಸುಂದರತರುಣನೆಂದೂ ಹೊಳೆಯಿತು (ಕಾಬರ್ಗು. ೩).
[ಫಳಫಳ + — ಇಸು]

**ಫಳಭರ** 'ಫಲಭರ' ನೋ.

**ಫಳಭಾರ** 'ಫಲಭಾರ' ನೋ.

**ಫಳಮಂಜರಿ** 'ಫಲಮಂಜರಿ' ನೋ.

**ಫಳರಸ** (ನಾ). ಹಣ್ಣಿನ ರಸ : ಫಳರಸದೆ ಬೆಳೆವ ನವಶಾಳೀವನಂಗಳ್ (ಹರಿ. ಈ. ೨-೧೦) ; ಫಳರಸದಿಂದ ಮುಂ ಬಳೆದಮಂಬಿದಱಿಂ ನವಪುಷ್ಪವಾಟಸಂಕುಳಕಾಸುವಮಾಸವಂ ಪೊರೆಯೆ ತತ್ಫಳವುಂ ಮಧುಪಾಳಿ ಮುತ್ತೆ (ಪಾರ್ಶ್ವಪು ೦೩-೯೯). [ ಸಂ. ಫಲರಸ ]

**ಫಳವತಿ** 'ಫಲವತಿ' ನೋ.

**ಫಳವಳಿಗೆ** 'ಫಲವಳಿಗೆ' ನೋ.

**ಫಳಹೀನತೆ** (ನಾ). ಫಲವಾಗದಿರುವಿಕೆ ; ನಿಷ್ಫಲತೆ : ಅತಿರಾಗತೆಯಿಂ ಸ್ತ್ರೀಪದಹತಿಗಂ ದಳವೇಱಿಯಲರ್ದಶೋಕಂ ಫಳಹೀನತೆಗೆಡೆಯಾದುದು (ಚಂದ್ರಪ್ರ. ೬-೯೫). [ಸಂ. ಫಲಹೀನತಾ]

**ಫಳಾರ್** (ನಾ). ಒಂದು ಅನುಕರಣಪದ : ಒಂದು ತಣಿಗೆಯನ್ನು . . . ಉಜ್ಜಿದರು. ಅದು ಫಳಾರ್ ಎಂದು ಮಿಂಚಿತು (ಹುಚ್ಚುಕ. ೬೯).

**ಫಳಾರ** 'ಫಲಾರ' ನೋ.

**ಫಳಿ₁** (ನಾ). ಒಂದು ಬಗೆಯ ಉತ್ತಮವಾದ ಬಟ್ಟೆ : ಫ [ಪಾಶಾಂ. ಪ್ರ]ಳಿಯ ಸೀರೆಯ ಪಟ್ಟೆವಳಿಕೆಯ ಪೆಣ್ಗಳ ತಂಡವೆಳಸಿದುದಾರಕಿವಿಡಿದು (ಕುರಂಗಾಂ. ೯೦-೬೦) ; ಭೀಮಸೇನಂ ಧಟ್ಟನೆದ್ದನು ಫಳಿಯನುಟ್ಟು ಶೃಂಗರದಿಂದ ತೊಟ್ಟು ಕುಪ್ಪಸಗಳಂ ಹೆಣ್ಣ ರೂಪಂ ತಾಳ್ದು . . . ಪವಡಿಸಿದ (ಕುರಂಗ. ೩೫-೫೦). [ಸಂ. ಫಲಿ]

**ಫಳಿ₂**, ಫಣ್ಣಿ₂ (ನಾ). ೧. ಮರದಿಂದ ಮಾಡಿದ ತೆಳುವಾದ ಉದ್ದನೆಯ ತುಂಡು ; ಹಲಗೆ : ನೆಲಕ್ಕೆ ಕಟ್ಟಿಗೆಯ ಫಳಿಗಳನ್ನು ಜೋಡಿಸಿದ್ದರು (ಘಾರಕ. ೩) ; ಶೇಷಣ್ಣ ಸಾಮಾನು ಇಡುವ ಫಳಿಯ ಮೇಲೆ ಚಾದರ ಹಾಸಿದ (ಸ್ಫೂ. ೨) ; ಫಳಿಗಳನ್ನು ಜೋಡಿಸಿ ರಂಗಭೂಮಿಯನ್ನು ರಚಿಸಲಾಗಿತ್ತು (ರಂಗಸೋ. ೦೩೮). **ಫಣ್ಣಿ₂** : ೨. ಕೋಲು ; ದಂಡ : ಯಾವ ಕ್ಷೇತ್ರದ ಅಳತೆಯು ತಿಳಿಯಬೇಕಾಗಿರುವದೋ ಆ ನಂಬರಿನ ಮೇಲೆ ಈ ಫಣಿಯನ್ನು ಇಡಬೇಕು (ಕಹಾಂ. ೧೪). ೩. ಚಿಣ್ಣಿಕೋಲಾಟದಲ್ಲಿ ಬಳಸುವ ಕೋಲು ; ದಾಂಡು : ಬಣ್ಣದ ಫಣಿಯು ಉರೀ ಹಚ್ಚುವ ಕಟ್ಟಿಗೆ ಯಾಯಿತು (ಹುಂಬಾಯು. ೨-೨೬೯). 'ಚಿಣಿಫಣಿ' ಪರಾ.
[←ಮರಾ. ಫಳೀ]

**ಫಳಿತ** 'ಫಲಿತ' ನೋ.

**ಫಳಿದ್ರ** 'ಫಳಿದ್ರ' ನೋ.

**ಫಳಿನ** 'ಫಲಿನ' ನೋ.

**ಫಳಿನಿ** 'ಫಲಿನಿ' ನೋ.

**ಫಳಿಯಿಸು** 'ಫಲಿಸಂ' ನೋ.

**ಫಳಿಸು** 'ಫಲಿಸಂ' ನೋ.

**ಫಳಿಹತ** 'ಪಟಿಹತ್ತ' ನೋ.

**ಫಳೆಯಕಾಱ** (ನಾ). ಗುರಾಣಿಯನ್ನು ಹಿಡಿದಿರುವವನು ; ಹಲಗೆಕಾರ : ಫಳೆಯಕಾಱಂ, ಫಳಾವುಗಂ (ಕಬಿರ. ೦೫ ಕೃಸೋ).
[ಫಳೆಯ (ಫ← ಪ್ರಾ. ಫಲಅ) + — ಕಾಱ]

**ಫಾಂಟ** (ನಾ). ೧. ಸೋಸುವುದೆ ಮೊದಲಾದ ಕ್ರಿಯೆಗಳಿಂದ ಸುಲಭವಾಗಿ ಸಿದ್ಧಪಡಿಸಿದುದಂ : "ಫಾಂಟಂ ಎಂಬುದು ಸುಗಮಂ" (ಹಠಾಯು. ೦೨೬-೯೯) ; ಆ ಕ್ಷಣದಲ್ಲಿ ಔಷಧಗಳ ನೀರಿನಲ್ಲಿ ನೆನೆಯಿಕ್ಕಿ ಆಗತಾನೆ ಹಿಂಡಿದ ರಸ ಫಾಂಟ-ಕಷಾಯ (ವೈದ್ಯಸಾ. I. ೦೦೫). ೨. ಕಷಾಯ ; ಅರ್ಕ : ಔಷಧದ ಚೂರ್ಣದಲ್ಲಿ ಅದರ ನಾಲ್ಕುಪಟು ಎಸರುನೀರು ಸುರಿವಿ ಸ್ವಚ್ಛವಾದ ಅರಿವೆಯಲ್ಲಿ ಹಾಕಿ ಸೋಸಬೇಕು. ಇದಕ್ಕೆ ಫಾಂಟವೆನ್ನುತ್ತಾರೆ (ಗೃಹವೈ. ೦೦). [ಸಂ.]

**ಫಾಕಡ**, ಪಾಕಡ, ಪಾಕಡಾ, ಫಕ್ಕಡ, ಫಾಕಡಾ (ಗು). ೧. ಚಾಲಾಕಾದ ; ಚತುರತೆಯಿಂದ ಕೂಡಿದ : ಫಾಕಡ ಆಸಾಮಿ ಕಾಣಪ್ಪ (ಐದುಕ್ಕಿ. ೩೫). **ಪಾಕಡ** : ೧. ನೀನು ಪಾಕಡ ಆಸಾಮಿ ಅಂತ ನನಗೆ ಗೊತ್ತು (ಕಟಿಣಾ. ೬೬೯). (ನಾ). ೨. ಬುದ್ಧಿವಂತ ; ಚತುರ : ಈತ ದಕ್ಷ, ಗಟ್ಟಿಗ, ಪಾಕಡ, ಫಾಟ (ಮೃಳ. ೨೨). **ಪಾಕಡಾ** : ೩. ಕಿಲಾಡಿ ; ಪಟಿಂಗ : ನಮ್ಮ ರೈಲಿನಲ್ಲಿ ಒಬ್ಬ ಪಾಕಡಾ ಇದ್ದಾನೆ (ಅಆ. ೨೬೩). **ಫಕ್ಕಡ** : (ಗು). ೪. ಸೊಗಸಾದ ; ಅಚ್ಚುಕಟ್ಟಾದ : ಇಂದು ಫಕ್ಕಡ ಮಸರು ಅವಲಕ್ಕಿ ಆಗಿ ಬಿಡಲಿ (ಕಕೀ. ೦೩) ; ಎಂಥ ಫಕ್ಕಡ ಕನ್ನಡ ಮಾತಾಡತಾನಲ್ರೀ (ಹೂಸಂಜ. ೦೦೨). **ಫಾಕಡಾ** : ೧. ಫಾಕಡಾ ಆಸಾಮಿ ಧೆಪ್ಪಟಿಕಮಿಾಷನರು (ಪಪ್ಪನ್ರು. ೦೬).
[←ಹಿಂ. ಮರಾ. ಫಾಕಡಾ]

**ಫಾಕಡಾ** 'ಫಾಕಡ' ನೋ.

**ಫಾಜಿಲ್** (ಗು). ೧. ಆವಶ್ಯಕತೆಗಿಂತ ಅಥವಾ ನಿರೀಕ್ಷೆಗಿಂತ ಹೆಚ್ಚಾದ; ಮಿತಿಮಿಾರಿದ ; (*). (ನಾ). ೨. ನಿರೀಕ್ಷಿಸಿದುದಕ್ಕಿಂತ ಹೆಚ್ಚಾಗಿ ಬಂದ ; ಉತ್ಪನ್ನ, — ಆದಾಯ : (*).
[←ಅರ. ಹಿಂ. ಫಾಜಿಲ್ ; ಮರಾ. ಫಾಜೀಲ್]

**ಫಾಜೀಲ** (ಗು). ಶಿಷ್ಟವಲ್ಲದ : ಅಶ್ಲೀಲವಾದ : ಈ ಕತೆಯಲ್ಲಿಯ ಅವಳ ಫಾಜೀಲ ಅಸ್ಥೆಯನ್ನು ತಿರಸ್ಕರಿಸುತ್ತ ನುಡಿದಳು ಚಂದ್ರಭಾಗಕ್ಕ (ಮುಂಚುಡಾ. ೩೬). 'ಫಾಜೀಲತನ' ಪರಾ .
[←ಅರ. ಹಿಂ. ಫಾಜೀಲ್ ; ಮರಾ. ಫಾಜೀಲ]

**ಫಾಜೀಲತನ** (ನಾ). ಅಶ್ಲೀಲತೆ ; ಅಸಭ್ಯತೆ : ತುಂಗಕ್ಕ ಬದಿಯ ಹೆಂಗಸಿನತ್ತ ಒಮ್ಮೆ ನೋಡಿ ಕಣ್ಣು ಮಿಟುಕಿಸಿದ ರೀತಿಯ ಫಾಜೀಲತನ ನೋಡಿ (ಮುಂಚುಂಡಾ. ೦೯೪). [ಫಾಜೀಲ + — ತನ]

**ಫಾಜೆ**, ಪಾಜ್ಜೆ₂ (ನಾ). (ಉಕ) (ಆಟದಲ್ಲಿ) ಮುಟ್ಟಬೇಕಾದ ಸ್ಥಳ.

**ಪಾಜ್ಯೆ** : (ಶಾಕಶೋ. ೦೩).

**ಫಾಜೆಗಟ್ಟ, ಪಾಜೆಗಟ್ಟ, ಫಾಡೆಗಟ್ಟ** = ಫಾಜೆ: ಮತ್ತೆ ನಾವು ಇದೇ ಮಾಳಿನ ಫಾಡೆಗಟ್ಟಿಗೆ ಬಂದೆವು (೦೬ಹು. ೬೦) ; ಅಡಗಿಕೊಂಡ ಚಿಕ್ಕಮಕ್ಕಳು ಕೂಗಾಡುತ್ತ ತಪ್ಪಿಸಿಕೊಂಡು . . . ಪಾಜೆಗಟ್ಟಿ ಮುಟ್ಟುವರು (ಶಕ್ಯಾ. ೩೬); ಮುಂಬಯಿಯ ಕೊನೆಯ ಫಾಜೆಗಟ್ಟೆಯಾದ ವ್ಹಿ. ಟಿ. ಸ್ಟೇಶನ್ನು ಬಂದಿತು (ಗಾಟಿಕ. ೬೨). [←ಮರಾ. ಫಾಂಜ್ = ಅಗಸೆಯ ಕಟ್ಟೆ]

**ಫಾಣಾಫಾಣ, ಫಾನಾಫಾನ** (ನಾ). (ಉಕ) ಅವ್ಯವಸ್ಥಿತವಾಗಿ ಚೆದುರುವುದು ; ದಿಕ್ಕಾಪಾಲು : ಎಲ್ಲರೂ ಫಾಣಾಫಾಣ ಆಗಿ, ಊರು ದಿಕ್ಕದಿವಾಳಿ ಆಗಿ ಹೋತು (ಗ್ರಾಪತಾಯು. ೬೦೦). **ಫಾನಾಫಾನ** : ದುಡ್ಡು ಹೋದ ವ್ಯಾಲ ಎಲ್ಲಾರು ಫಾನಾಫಾನಾ ಆಗೋರು (ಗಂಪತಾಯು. ೦೦೦). [←ಮರಾ. ಫಾಣಾಫಾಣ]

**ಫಾಣಿ** (ನಾ). ೧. ಶುದ್ಧಗೊಳಿಸದೆ ಇರುವ ಬೆಲ್ಲದ ರಸ : ಕಾಕಂಬಿ. ೨. ಮೊಸರಿನಲ್ಲಿ ಕಲಸಿದ ಹುರಿಹಿಟ್ಟು ; ಕರಂಭ. [ಸಂ.]

**ಫಾಣಿತ** (ನಾ). ೧. ಬೆಲ್ಲದ ಪಾಕಕ್ಕೆ ಸಂಪೂರ್ಣವಾಗಿ ಬಂದಿರದ ಕಬ್ಬಿನ ರಸ ; ಕಾಕಂಬಿ : "ಗುಡಃಕಾರಂ ಫಾಣಿತಂ" (ಶಸ್ತ್ರಕೋ. ೪೪-೦೨) ; "ಅರ್ಧಪಾಕವಾಗಿ ಕಾಯಿಸಿದ ಕಬ್ಬಿನ ಹಾಲಿಗೆ ಫಾಣಿತವೆಂತಲೂ ಹೆಸರುಗಳು" (ಸಿದ್ಧಾಂತಿ. ೨೯೬). ೨. ಬೆಲ್ಲ : "ಮತ್ಸ್ಯಂಡಿ, ಫಾಣಿತ ಎಂದೊಡೆ ಬೆಲ್ಲದ ಪಾಕ, ಬೆಲ್ಲವೆಂದೂ ಎಂಬರು" (ಶಾಕಶಾ. ೬). ೩. ಹಾಲಿನಿಂದ ಮಾಡುವ ಒಂದು ಬಗೆಯ ತಿಂಡಿ. [ಸಂ.]

**ಫಾನಾಫಾನ** 'ಫಾಣಾಫಾಣ' ನೋ.

**ಫಾಯದೆ** 'ಫಾಯಿದೆ' ನೋ.

**ಫಾಯದೆಶೀರ** 'ಫಾಯಿದೇಶೀರ' ನೋ.

**ಫಾಯಿದೆ, ಪಾಯದೆ, ಪಾಯಿದೆ, ಫಾಯದೆ** (ನಾ). ಪ್ರಯೋಜನ ; ಲಾಭ ನಫೆ : ತಮ್ಮ ವಿಲಾಖತಿನ ಫಾಯಿದೆಯಿಂದ ಸಂತೋಷ ಪಡಿಸಬೇಕು (ರಾಜೇಂದ್ರ. ೩೬) ; ಎಲ್ಲೋ ಫಾಯಿದೆ ಮಾಡಲು ಇನ್ನೊಂದೂರಿಗೆ ಹೋಗಿರಬೇಕು (ತುಗಹು. ೩). **ಪಾಯದೆ**: ಇಂಜನೇರು ಕೆಪ್ಪನ್ ರನೆಲ್‌ಸಾಹೇಬ್ ಬಹಾದ್ದೂರವರು ನಿಶಾನಿ ನಿಲ್ಲಿಸಿ, ದುರ್ಬೀನಿನಿಂದಾ ನೋಡಿ, ತಮ್ಮ ಸರಕಾರದ ಪಾಯದೆ ಕೆಲಸ ಮಾಡುತ್ತಿದ್ದರು (ರಾಜೇಂದ್ರ. ೨೪೪); ನಮ್ಮನ್ನ ವ್ಯಾಪಾರೀ ದುಡಿಸಿ, ಅದರ ಪಾಯದೇಕ ತಾವು ಮಾಲಕ ರಾಗೂದು (ಕೆಂಡಹು. ೪೪). **ಪಾಯಿದೆ** : ಈ ವ್ಯಾಪಾರದಲ್ಲಿ ತುಂಬಾ ಪಾಯಿದೆ ಇದೆ (ರೂಢಿ). **ಫಾಯದೆ** : ನನಗಿದೆಲ್ಲದರಿಂದ ಬಂದ ಫಾಯದೆ ಏನು ಹೇಳು (ಪುತಿರುಪಾ. ೪೨) ; ಅವರ ಆಸ್ಥೆಯ ಫಾಯದೆ ಒಂದಿಲ್ಲೊಂದು ರೀತಿಯಲ್ಲಿ ತೆಗೆದುಕೊಳ್ಳಬಹುದಲ್ಲ (ಕ್ರಿತಿ. ೬೮).
[← ಅರ. ಫಾಯಿದಾ ; ಪಾರ. ಹಿಂ. ಮರಾ. ಫಾಯದಾ]

**ಫಾಯಿದೇಶೀರ, ಫಾಯದೆಶೀರ** (ಅ). ಲಾಭಪ್ರದವಾಗಿ ; ಲಾಭ ಬರುವಂತೆ : ರೋಖ ರಕಮಿನಿಂದ ಖರೀದಿ ಮಾಡುವ ಅಸಾಮಿಗಳಿಗೆ ಮಜೂರಿಯ ಖರ್ಚು ಫಾಯಿದೇಶೀರ ಬೀಳುವ ಸೂಚನೆ (ಮುಂಬವ್ಯಾ. ೪೦ ಕ್ರಗ್ರಾಪನ). **ಫಾಯದೆಶೀರ** : ಕಿರಕೋಳಕ್ಕೆ ಫಾಯದೆಶೀರ ಬೆಲೆಯು ಸಿಗಲಿಕ್ಕಿಲ್ಲ (ಮುಂಬವ್ಯಾ. ೨೩೦). [← ಮರಾ. ಫಾಯದೇಶೀರ್]

**ಫಾಯಿಷ್** (ನಾ). ಪ್ರಕಟಣೆ ; ಜಾಹಿರಾತು : ಡಿಸ್ಟ್ರಿಕ್ಟ್ ಗೆಜೆಟನಲ್ಲಿ ಫಾಯಿಷ್ಮಾಡಬೇಕು (ಗ್ರಾಪತಾಳ. ೬೦). [← ಮರಾ. ಫಾಯಶ್]

**ಫಾರಂ** 'ಫಾರಮ್ಮು' ನೋ.

**ಫಾರಮ್ಮು, ಫಾರಂ** (ನಾ). ೧. ಮಾಹಿತಿಯನ್ನು ಬರೆಯಲು ನಿಗದಿಯಾದ ರೀತಿಯಲ್ಲಿ ಸಿದ್ಧಪಡಿಸಿದ ಕಾಗದ : ಅವರು ಕೊಟ್ಟ ಫಾರಮ್ಮಿನಲ್ಲಿ ನನ್ನ ವಿವರವನ್ನೆಲ್ಲಾ ತುಂಬಿಸಿದೆ (ರೂಢಿ). ೨. ಶಾಲೆಗಳಲ್ಲಿಯ ತರಗತಿ.—ಇಯತ್ತೆ: ಮನೆಯ ತಾಪತ್ರಯದಿಂದಾಗಿ ಅವಳ ಓದು ಎಂಟನೆಯ ಫಾರಮ್ಮಿಗೇ ನಿಂತುಹೋಯಿತು (ರೂಢಿ). **ಫಾರಂ** : ೧. ನಡೆದ ಸಂಗತಿ ತಿಳಿದ ಕೂಡಲೆ ೩ ರಿಪೋರ್ಟುಫಾರಂಗಳುಳ್ಳ ಫಾರಂಗಳಲ್ಲಿ ಬರೆದು . . . ರವಾನಿಸಬೇಕು (ಗ್ರಾಪತಾಳ. ೩೨). ೨. ನಿಮ್ಮ ಮಗಳು ಎಷ್ಟನೇ ಫಾರಂನಲ್ಲಿ ಓದುತ್ತಿದ್ದಾಳೆ ? (ರೂಢಿ). ೩. ಒಟ್ಟಿಗೆ ಮುದ್ರಿಸಲು ಚೌಕಟ್ಟಿನಲ್ಲಿ ಬಂಧಿಸಿ ಅಣಿಮಾಡಿ ಇಟ್ಟಿರುವ ಮುದ್ರಣದ ಮೊಳೆಗಳ ಜೋಡಣೆ ಮತ್ತು ಇಂತಹ ಜೋಡಣೆಯಿಂದ ಆದ ಪುಟಗಳ ಸಮೂಹ : ಹೀಗೆ ಚೌಕಟ್ಟಿನಲ್ಲಿ ಬಿಗಿ ಮಾಡಿದ ಪುಟಸಮೂಹಕ್ಕೆ 'ಫಾರಂ' ಎಂದು ಹೆಸರು (ಮುದ್ರಕ. ೪೦). [← ಇಂ. Form]

**ಫಾರೀಕತ್ತು, ಪಾರಿಕತ್ತು, ಪಾರಿಖತ್ತು, ಪಾರೀಕತ್ತು, ಪಾರೀಖತ್ತು** (ನಾ). ೧. ಪಾಲು ; ವಿಭಾಗ : ಫಾರೀಕತ್ತು ಅನದ್ಯಾಕಪಾ. ಅವನ್ಸಂಗ್ತೀಲೆ ಫಾರಿಕತ್ತು ಮಾಡಿಕೊಂಬೋ ಹಾಂಗಿಲ್ಲಾ (ಬಿಂಕಹು. ೦೦೬). **ಪಾರಿಕತ್ತು** : ೨. (ಜಮೀನು, ಆಸ್ತಿ ಮುಂತಾದುವು) ಬೇರೆ ಬೇರೆಯಾದುದನ್ನು ತಿಳಿಸುವ ಪತ್ರ ; ವಿಭಜನೆಯ ಪತ್ರ : ಮುಂದಿನ ವಾರವೋ ಆ ಮುಂದಿನ ವಾರವೋ "ಹಿಸ್ಸೆ ಆಗಿ ಪಾರಿಕತ್ತಾಗ್ತದಂತೆ !" (ಶಾಬೂರು. ೩೦೮) ; ಎಲ್ಲಿ ಹುಡುಕಿದರೂ 'ಪಾರಿಕತ್ತು' ಏಕೆ ಸಿಗಲಿಲ್ಲವೆಂಬುದೂ . . . ಕೋರ್ಟಿನಲ್ಲಿ ದತ್ತು ಏಕೆ ಊರ್ಜಿತವಾಗಲಿಲ್ಲವೆಂಬುದೂ ಮುಂತಾದ ಸಾವಿರಾರು ವಿಚಾರಗಳು ನಮ್ಮ ಹಳ್ಳಿಯ ಶ್ಯಾನುಭೋಗನಿಗೆ ಗೊತ್ತು (ಗರುಡಾ. ೯೬). **ಪಾರಿಖತ್ತು** : ೧. ಇಬ್ಬರೂ ಸ್ವಂತ ಹಿಡುವಳಿದಾರರಾಗಿದ್ದರೆ ಹಿಸ್ಸೆಯ ಪಾರಿಖತ್ತು ಪತ್ರ ಛಾಪಾಕಾಗದದ ಮೇಲಾಗಿ ಅದನ್ನು ರಿಜಿಸ್ಟರು ಮಾಡಬೇಕಿತ್ತು (ಗಂಗಾಳ. ೦೩೪). **ಪಾರೀಕತ್ತು**: ೨. ಸಣ್ಣಪ್ಪ ಸತ್ತ ಮೇಲೆ ಅವನ ಮಕ್ಕಳೆಲ್ಲ ವಿಭಾಗವಾಗಿ "ಪಾರೀಕತ್ತು" ಮಾಡಿಕೊಂಡರೂ . . . ದತ್ತು ಏಕೆ ಊರ್ಜಿತವಾಗಲಿಲ್ಲ (ಗರುಡಾ. ೯೬). **ಪಾರೀಖತ್ತು**: ೧. ಮಾತೆತ್ತಿದರೆ ಪಾಲು ಪಾರೀಖತ್ತು ಎಂದು ಅಪ್ಪ ಮಕ್ಕಳು ಅಣ್ಣತಮ್ಮಂದಿರು ಹಿಸ್ಸೆ ಮಾಡಿಕೊಂಡ ಕಾರಣ ಒಂದು ಸಣ್ಣ ಮನೆ ನಾಲ್ಕಾರು . . . ಮನೆಗಳಾಗಿ ಮಾರ್ಪಟ್ಟಿದೆ (ಪಮ್ಮೂರು. ೩೦೪).
[← ಪಾರ. ಫಾರಿಗಖತೀ ; ಹಿಂ. ಫಾರಖತಿ ; ಮರಾ. ಪಾರಕತ್, ಪಾರಕತೀ, ಪಾರಖತ್, ಪಾರಖತೀ]

**ಫಾಲ** (ನಾ). ೧. ನೇಗಿಲಿನ ಗುಳ. ೨. ಹತ್ತಿ ಬಟ್ಟೆ: "ಫಾಲಂ, ಕಾರ್ಪಾಸಂ, ಬಾದರಂ—೩ ನೂಲುಬಟ್ಟೆ" (ಸಿದ್ಧಾಂತಿ. ೨೦೨). ೩. ಗಂಟಲು ; ಮೂಟೆ. ೪. ಹಣೆ ; ನೊಸಲು : ಸಂತಸಂದಳೆದಾಳಿದನ ಪದಧೂಳಿಗೆಯು ಸಿರಫಾಲವನು ಸಾರ್ಚಿ (ಗಗಶಾ. ೨೨-೦೦೪). [ಸಂ.]

**ಫಾಲದಿವ್ಯ** (ನಾ). ಕಾಯಿಸಿದ ಕಬ್ಬಿಣದ ಗುಳವನ್ನು ಹಿಡಿದು ತಾನು ಸತ್ಯವಂತನೆಂದು ಸಿದ್ಧಪಡಿಸುವ ಒಂದು ದಿವ್ಯ: ದಿವ್ಯಗಳಲ್ಲಿ ಬಹು ಪ್ರಚಲಿತವಿದ್ದುದೆಂದರೆ 'ಪಾಳದಿವ್ಯ' ಅಥವಾ 'ಫಾಲದಿವ್ಯ' (ಕಶಾಂ. ೩೪೮) ; [ಸಂ.]

**ಫಾಲ್ಗುಣ** 'ಪಾಲುಗುಣ' ನೋ.

**ಫಾಲ್ಗುನ** (ನಾ). ಚಾಂದ್ರಮಾನವರ್ಷದ ಹನ್ನೆರಡನೆಯ ತಿಂಗಳು : "ಫಾಲ್ಗುನಃ, ತಪಸ್ಯಃ, ಫಾಲ್ಗುನಿಕಃ—೩ ಫಾಲ್ಗುನಮಾಸದ ಹೆಸರುಗಳು" (ಸಿದ್ಧಾಂತಿ. ೪೦) ; ವಿಶ್ವನಾಥನಾದಿಜಿನಂ ಫಾಲ್ಗುನಬಹುಲೈಕಾದಶಿಯೊಳಮನಂತಸುಖನಿಲಯನುತ್ತರಾಷಾಢದೊಳ್ ಧ್ಯಾನಮರೀಚಿಯಿಂ ಬೆದಱಿ (ಅಪು. ೧೦-೧೬). [ಸಂ.]

**ಫಾಲ್ಗುನನಂದೀಶ್ವರ** (ನಾ). [ಜೈನ] ಫಾಲ್ಗುಣಮಾಸದಲ್ಲಿ ಆಚರಿಸುವ ಒಂದು ವ್ರತ ಮತ್ತು ಆ ವ್ರತ ನಡೆಯುವ ದಿನ,—ನೋಂಪಿ: ಅನ್ನೆಗಂ ಫಾಲ್ಗುನನಂದೀಶ್ವರಮಾದುದಾಗಳುಭಯಬಲಮುಮುಭಯಘೋಷಣೆಯಂ ಘೋಷಿಸಿ ಕಾಳೆಗಮನುಬಿಡದಿರ್ಪುದುಂ (ಶಂಶಾಪತಾ. ೦೪-೯೩ ವ). [ಸಂ.]

**ಫಾಲ್ಗುನಿಕ** (ನಾ). = ಫಾಲ್ಗುನ : "ಫಾಲ್ಗುನಃ, ತಪಸ್ಯಃ, ಫಾಲ್ಗುನಿಕಃ —ಇ ಫಾಲ್ಗುನಮಾಸದ ಹೆಸರುಗಳು" (ಸಿದ್ಧಾಂತಿ. ೯೦). [ಸಂ.]

**ಫಾಶಾ** 'ಫಾಸೆ' ನೋ.

**ಫಾಶಿ** 'ಫಾಸಿ' ನೋ.

**ಫಾಸಲೆ, ಪಾಸಲೆ, ಫಾಸಿಲೆ** (ನಾ). ೧. ದೂರ; ಅಂತರ: ಬೆಂಗಳೂರಿನಿಂದ ಮೈಸೂರಿಗೆ ಬರುವ ದಾರಿಯಲ್ಲಿ ೨೭ ಮೈಲಿ ಫಾಸಲೆಯಲ್ಲಿರುವ ರಾಮಗಿರಿ ಎಂಬ ಊರಿಗೆ ಕ್ಲೋಸ್‌ಪೇಟೆ ಎಂಬ ಹೆಸರು ಉಂಟಾಯಿತು (ಕುಹಾಸಂ. II, ೩); ನಂಜರಾಜನ ಶರೀರವು ಬಿದ್ದಿದ್ದ ಸ್ಥಳಕ್ಕೂ ರಾಜಒಡೆಯನಿದ್ದ ಸ್ಥಳಕ್ಕೂ ಅರ್ಧಮೈಲು ಫಾಸಲೆಯಿರಬಹುದು (ಶ್ರೀನಾಯು. ೨೦೦); ನಾಲ್ಕುಮೈಲಿ ಫಾಸಲೆಯಲ್ಲಿ ಯಾವ ಊರೂ ಇರಬಾರದು (ಅರಿಕು. ೬೬). **ಪಾಸಲೆ** : ೨. ಸುತ್ತಮುತ್ತಲ ಪ್ರದೇಶ,—ಸ್ಥಳ : ಸುಮಾರು ಹತ್ತಿಪ್ಪತ್ತು ಮೈಲು ಪಾಸಲೆಯೊಳಗೆ ಒಂದೇ ಒಂದು ಆಸ್ಪತ್ರೆ ಇಲ್ಲ (ಜಾನಪ. ೦೯); ಈ ಪಾಸಲೆಗೆಲ್ಲ ಅವರೇ ಮೊದಲು ಗಾಡಿ ತರಿಸ್ದೋರು (ಕುಕಹು. ೦೬೬). **ಫಾಸಿಲೆ**: ೧. ಎರಡು ಗ್ರಾಮಗಳ ನಾಲ್ಕು ಮೈಲಿ ಫಾಸಿಲೆಯಲ್ಲಿ ಮೊಕ್ಕಾಂ ಮಾಡಿದರು (ಕಹಿಹಾ II, ೬೬೨). [← ಅರ. ಹಿಂ. ಮರಾ. ಫಾಸಲಾ]

**ಫಾಸಿ, ಪಾಶ್ಶಿ, ಪಾಸ್ಸಿ, ಫಾಶಿ** (ನಾ). ನೇಣು ಹಾಕಿ ಕೊಲ್ಲುವ ಶಿಕ್ಷೆ; ಗಲ್ಲು: ಆದರೆ ಫಾಸಿಯ ಹಗ್ಗ ಒಂದಿರಲಿಲ್ಲ (ಬಂಗಾಹಿ. ೨೫); ಅವನಿಗೆ ಸಿಂಗಾಪುರದಲ್ಲಿ ಫಾಸಿಯಾಯಿತು (ಕಾರಕ. ೬೦). **ಪಾಶ್ಶಿ** : 'ಪಾಶಿ ಸಜಾ' ಪರಾ. **ಪಾಸ್ಸಿ** : ದೀನಜನೋದ್ಧಾರಕನಂತೆ . . . ದೀನ ಜನರ ಕೊರಳಿಗೆ ಪಾಸಿ ಹಾಕುವವ (ತಳರು. ೯೨). **ಫಾಶಿ** : ಏನು, ಯಾರಾದರೂ ಫಾಶಿಗೆ ಕೊಡಲಿರುವರೇನು ನನ್ನನ್ನ (ಹಾಸ್ಯಸ್ಮೃ. ೨೦೬); ಜಹಾಗೀರದಾರರಿಗೆ ಯಾವ ಶಿಕ್ಷೆ ಆಗುವುದೋ ಕೇಳಬೇಕೆಂದು ಎಲ್ಲರೂ ಆತುರರಾಗಿದ್ದಾರೆ. 'ಫಾಶಿ ಇಲ್ಲದಿದ್ದರೆ ಕಾಳಾಪಾಣಿ' ಎಂದು ಎಲ್ಲರೂ ಆಡುತ್ತಾರೆ (ಕಪಳ. ೯೦); ಭೀತಿಯ ಅಪಾಯದ ಹಾಗೂ ಫಾಶಿಯ ಉರುಳಿನ ನೆರಳಲ್ಲೇ ನಾವು ದುಡಿಯಬೇಕು (ಅಶ್ವತ್ಥ. ೦೫೬).

**ಫಾಸಿ ಕೊಡು** = ಗಲ್ಲುಗಂಬಕ್ಕೇರಿಸು; ನೇಣು ಹಾಕು : ಕಳ್ಳರನ್ನು ಪತ್ತೆ ಮಾಡದಿದ್ದರೆ ನಿನಗೆ ಫಾಸಿ ಕೊಡುವೆನು (ಹಂಚಾಹಮ್ಮ. ೩೬). [← ಹಿಂ. ಫಾಂಸೀ; ಮರಾ. ಫಾಶೀ, ಫಾಂಶೀ]

**ಫಾಸಿಕಂಬ** (ನಾ). ನೇಣು ಹಾಕುವ ಕಂಬ : ಅವನ ದೃಷ್ಟಿಯೆದುರಿಗೆ ಜೇಲಿನ ದೊಡ್ಡ ದೊಡ್ಡ ಗೋಡೆಗಳು ಬಂದು ನಿಂತಂತಾಯಿತು. ತಿವಿಗತ್ತಿಯ ಬಂದೂಕು ಹಿಡಿದುಕೊಂಡು ಪಹರೆ ಮಾಡುವ ಪೋಲೀಸರು, ಕಲ್ಲು ಒಡೆಯುವ ಕೈದಿಗಳು, ಫಾಸೀಕಂಬ (ಕುಮ್ಮಹಿ. ೦೫). [ಫಾಸಿ + ಕಂಬ$_1$ (< ಕಂಭ)]

**ಫಾಸಿಖಾನೆ** (ನಾ). ಗಲ್ಲಿನ ಶಿಕ್ಷೆಯನ್ನು ಕೊಡುವ ಸ್ಥಳ: ನಿನಗೆ ಈ ಬಂದೀಖಾನೆಯಲ್ಲಿ ಫಾಸಿಖಾನೆಯುದೆಯೆಂದೂ ಮತ್ತು ನನಗೆ ಫಾಸಿ ಶಿಕ್ಷೆಯನ್ನು ವಿಧಿಸಲು ಅಧಿಕಾರವಿದೆಯೆಂದೂ ತಿಳಿದಿರುವುದೇ? (ಘಾತಕಾ. ೦೬೩). [ಫಾಸಿ + ಖಾನೆ]

**ಫಾಸಿಲ್** 'ಫಾಸಲೆ' ನೋ.

**ಫಾಸಿಶಿಕ್ಷೆ** (ನಾ). = ಫಾಸಿ : ಮುಖಕ್ಕೆ ಫಾಸಿಶಿಕ್ಷೆ ಅನುಭವಿಸಲು ಹೋಗುವ ಕೈದಿಯ ಕಳೆ ಬರುವುದು (ದೋರೆಪು. ೬೬). [ಫಾಸಿ + ಶಿಕ್ಷೆ]

**ಫಾಸೆ, ಪಾಸ್ಕೆ, ಪಾಸ್ಸೆ, ಫಾಶಾ** (ನಾ). ೧. ಪಗಡೆ, ಲೆತ್ತ ಮೊದಲಾದುವುಗಳಲ್ಲಿ ಬಳಸುವ ದಾಳ : ಬಸಂತಿಯು . . . ಪಗಡೆಗಳನ್ನು ಇಟ್ಟು ಹಸ್ತಿದಂತ ನಿರ್ಮಿತವಾದ ಫಾಸೆಗಳನ್ನು ಕೊಟ್ಟಳು (ಮುಂಕಾಳ. ೬೨). **ಪಾಸ್ಕೆ** : ೨. ಪಗಡೆಯಾಟದಲ್ಲಿ ದಾಳಗಳಿಂದ ಸೂಚಿತವಾಗುವ ಸಂಖ್ಯೆ; ಗರ: ಇಂದು ಲೆತ್ತದ ಪಾಸಿಯೇ ತಿರುವುಮುರುವಾಗಿ ಬಿಟ್ಟಿತು (ಶ್ರೀನೂಶ್ರ. ೨೮೦). **ಪಾಸ್ಸೆ** : ೨. ದೂತ್ಯವಾಡುವಲ್ಲಿ ನಿಪುಣನಾದವನು ಪಾಸೆಗಳು ಹೇಗೆ ಬಿದ್ದರೂ ಖೇದಪಡುವುದಿಲ್ಲ (ಕುಘಾಕ. ೯೦). **ಫಾಶಾ** : ೧. ಪರಮಪಾಪಿ ಶಕುನಿ ತಾನು ಫಾಶಾದೊಳಗೆ ಫಕೀರನಾಗಿ ಧರ್ಮರಾಜ ಧರಣಿ ದ್ರೌಪದಿನ ಸೋತರ (ಹುಲ್ಗಿ. ೯೯). [← ಮರಾ. ಫಾಸಾ]

**ಫಾಳ, ಫಾಳು** (ನಾ). ತುಂಡು; ತುಕಡಿ : ಜಂಗಮೋತ್ತಮರಿಗೆಲ್ಲರಿಗು ಆ ಕನಕದ ಫಾಳವನ್ನು ತೋರಿ (ಹುಕೋಕ. ೦೩೦). **ಫಾಳು** : ಆ ಚರಮೂರ್ತಿಗಂ ಪೊಂದು ಹೇಮದು ಫಾಳನ್ನು ಕೊಟ್ಟು (ಹುಕೋಕ. ೦೩೦). [← ಮರಾ. ಫಾಳ]

**ಫಾಳಣಿ, ಫಳಣಿ** (ನಾ). ೧. ವಿಭಾಗಿಸುವಿಕೆ; ಬೇರ್ಪಡಿಸುವಿಕೆ : ರೇಲವೇ ಫೀ, ಜಕಾತ, ಗಾಡಿಬಾಡಿಗೆ ಮುಂತಾದ ಖರ್ಚುಗಳ ಫಾಳಣಿ ಮಾಡಲಿಕ್ಕೆ ಅಡಚಣಿ ಬೀಳುವದು (ಮುಂಅಬ್ಬಾ. ೯೦). **ಫಳಣಿ** : ೨. ಜಮೀನಿನ ವಿಭಾಗ,—ತುಂಡು : ಕೆಲವು ಹಳ್ಳಿಗಳಲ್ಲಿ ಫಳಣಿಯೆಂಬ ವಿಭಾಗಗಳಿದ್ದವು. ಒಂದು ಫಳಣಿಯೆಂದರೆ ಸುಮಾರು ೨ ಕೂರಿಗೆ ಆಗುತ್ತಿತ್ತು (ಕಹಾಗ. ೩೬೩). [← ಮರಾ. ಫಾಳಣೀ]

**ಫಾಳಿ** (ನಾ). ತುಂಡು; ತುಕಡಿ (?) : ಈ ಕ್ಷೇತ್ರಮಂ ವಿಷ್ಕಂಭದಿನಪಕರ್ಷಣಭಾಗಹಾರಮಾತ್ರ ಫಾಳಿಗಳಂ ಮಾಡಿಯೇಕಫಾಳಿಯಂ ತೆಗೆವುತ್ತಿರೆ ವಿಶೇಷಕ್ಷೇತ್ರಮಕ್ಕುಂ (ಕ್ಷೇಗ. ೨೦–೨೦). [← ಮರಾ. ಫಾಳೀ]

**ಫಾಳು** 'ಫಾಳ' ನೋ.

**ಫಾಳೆ** 'ಪಾಳ್ಯೆ' ನೋ.

**ಫಿಕೀರು, ಪಿಕೀರು** (ನಾ). ೧. ಆಸ್ಥೆ; ಆಸಕ್ತಿ : ಶಿವರಾತ್ರಿಯ ಹಬ್ಬದ ದಿವಸ ಮಹದೇವಪುರದಲ್ಲಿ ಬಹಳ ಫಿಕೀರಿನಲ್ಲಿ ಖುಷಿಯಿಂದ ಹಬ್ಬ ಮಾಡುತ್ತಾ ಇರುತ್ತಾರೆ (ರಾತೇಂದ್ರ. ೦೦೯). **ಪಿಕೀರು** : ೨. ಚಿಂತೆ; ಕಾಳಜಿ : ಕೆಂಪಿ ಕೇರೀಲಿರೋದು ಅಕ್ಕಪಕ್ಕದ ಮನೆಯೋರ್ಗೆಲ್ಲಾ ತುಂಬಾ ಪಿಕೀರಾಗಿತ್ತು (ಅನಾಬಿ. ೬೯); ಮಣಿ . . . ಏನಾಗಿ ಹೋಗಿದೆಯೋ ಅವರಿಗೆ ಎಂಬ ಪಿಕೀರಿನಿಂದ ಹೆಡ್‌ಮೇಷ್ಟರ ರೂಮಿನೊಳಕ್ಕೆ ಬಂದ (ಸ್ವಾಮಿಸ್ಕೀ. ೦೬೪).

[← ಅರ. ಫಿಕ್ರ್; ಹಿಂ. ಫಿಕಿರ್, ಫಿಕ್ರ್; ಮರಾ. ಫಿಕೀರ್, ಫಿಕರ್]

**ಫಿತೂರಿ, ಪಿತೂರಿ** (ನಾ). ಕುತಂತ್ರ; "ಒಳಸಂಚು; ಸಂಚು" (ಶಾಸಕೋ. ೦೮). **ಪಿತೂರಿ** : ನಿಜಸಂಸ್ಥಾನದೊಳಿರ್ಪ ಕುಹಕನಿಯೋಗಿಗಳೊಡರ್ಚಿದ ಪಿತೂರಿ[ಪಾಠಾಂ. ಪಿತುಮೆ]ಯಿಂ ವಿಜಯಪುರವರ್ತಿಯೆನಿಸುವ ಮುಜಬರಖಾನು ತರಲ್ಚೆ (ಕಳಿಸ್ವ. ೬–೩೩); ಇದು ಬಂಡವಾಳಗಾರರ ಪಿತೂರಿ (ಅಶ್ವತ್ಥ. ೦೬); ರಾಜಕೀಯಜಾಗೃತಿ ಎರಡು ರೂಪಗಳನ್ನು ತಾಳಿತು; ಒಂದು ಪಿತೂರಿಯದು; ಇನ್ನೊಂದು ಸುಧಾರಣೆಯದು (ಶಾಸ್ತ್ರಿಕಾ. ೦೩).

**ಪಿತೂರಿ ನಡೆ** = ಒಳಸಂಚು ಆಗು; ತಂತ್ರಕ್ಕೆ ಎಡೆಯಾಗಿರು: ಹೈದರನು ತಕ್ಷಣವೇ ಅನುಮಾನಶಕ್ತಿಯಿಂದ ಪಿತೂರಿ ನಡೆದಿದೆಯೆಂದು ಗ್ರಹಿಸಿದನು (ಒಡಳ. ೬೩). **ಪಿತೂರಿ ನಡೆಸು**=ಒಳಸಂಚನ್ನು ಹೂಡು; ಸಂಚು ಮಾಡು : ಇಬ್ಬರೂ ಸೇರಿ ಪಿತೂರಿ ನಡೆಸಿದರು (ಕೂಪಕೆ. ೨೦೩); ನೀವೆಲ್ಲ ಕೂಡಿ ನನ್ನ ವಿರುದ್ಧ ಒಂದು ಪಿತೂರಿ ನಡೆಸಿದ್ದೀರಿ (ಐದುಚ. ೦೩೪). **ಪಿತೂರಿ ಮಾಡು** = ಪಿತೂರಿ ನಡೆಸು: ನಾನು ಎಷ್ಟೋ ಪಿತೂರಿ ಮಾಡಿದೆ. ಆದರೆ ದುಃಖ ಮತ್ತು ಲಜ್ಜೆ ಹೊರತು ಮತ್ತೇನೂ ದೊರೆಯಲಿಲ್ಲ (ಮರಿಪಾ. ೦೦೨). **ಪಿತೂರಿ ಹೂಡು** = ಪಿತೂರಿ ನಡೆಸು: ಎರಡನೆಯ ಬಾಜಿರಾಯ . . . ಬ್ರಿಟೀಷರ ಮೇಲೆ ಬೀಳಲು ಪಿತೂರಿ ಹೂಡಿದನು (ಶಾರದ. ೯೨೬). **ಫಿತೂರಿಯಾಗು** = ಒಳಸಂಚಿನಲ್ಲಿ ಭಾಗಿಯಾಗು : ನೀನು ಫಿತೂರಿಯಾಗಿಲ್ಲವೆಂಬುದನ್ನು ಕಾರ್ಯ ಮಾಡಿ

ತೋರಿಸದಿದ್ದರೆ ನನ್ನ ವತನವನ್ನೇ ಖಲಾಸಾ ಮಾಡಿಸಿ ಬಿಡುವೆನು (ಹ್ಮಬ. ೨೭೩).

[← ಅರ. ಫುತುರ್; ಹಿಂ. ಫಿತೂರ್; ಮರಾ. ಫಿತುರೀ, ಫಿತೂರ್]

**ಫಿದವಿ**, **ಫಿದಿವಿ**, **ಫಿದ್ವಿ** (ನಾ). ೧. ಸೇವೆ; ಕೈಂಕರ್ಯ: ಗೌರ್ನರ್ ಪದವಿ ಮೇಲೆ, ಕಾರ್ಕೂನ್ ಫಿದವಿ ಕೀಳೆ? ಎರಡೂ ಒಂದೆ ನನಗೆ (ಕಿರಂ೦. ೨೮-೩). **ಫಿದಿವಿ**: ೨. ಸೇವಕ; ಆಳು: (೯). **ಫಿದ್ವಿ**: ೨. (ಕೃಶಗ. II. ೩೩೯). [← ಅರ. ಹಿಂ. ಮರಾ. ಫಿದವೀ]

**ಫಿದಿವಿ** 'ಫಿದವಿ' ನೋ.

**ಫಿದ್ವಿ** 'ಫಿದವಿ' ನೋ.

**ಫಿನಾಯಿಲ್** 'ಫಿನೈಲ್' ನೋ.

**ಫಿನೈಲ್**, **ಫಿನಾಯಿಲ್** (ನಾ). ಕ್ರಿಮಿನಾಶಕವಾದ ಒಂದು ಔಷಧಿ ದ್ರವ; ಕಾರ್ಬಾಲಿಕ್ ಆಮ್ಲ: ನೊಣಗಳ ವಿಷಯವೂ ಹೀಗೆಯೇ . . . ನಿತ್ಯವೂ ಫಿನೈಲ್ ಹಾಕಿ ನೆಲವನ್ನು ಸಾರಿಸುತಿದ್ದರೂ ಅವು ಎಲ್ಲೆಲ್ಲೂ ಕಾಣಿಸಿಕೊಳ್ಳುತ್ತವೆ (ಶಂಟಿಖ. ೯೯). **ಫಿನಾಯಿಲ್**: ಮೊನ್ನೆ ಫಿನಾಯಿಲ್ ಹಾಕಿದ ಬಕೆಟ್ಟಿನಲ್ಲಿ ಹುಳಿ ತಂದು ಬಡಿಸಿಬಿಟ್ಟರು ಪುಣ್ಯಾತ್ಮರು (ಅಗಸ್ಯ. ೬೩).

[← ಇಂ. Phenyl, Phenol]

**ಫಿರಂಗಿ**, ಪರಂಗ, ಪರಂಗಿ, ಪಿರಂಗಿ, ಫರಂಗಿ (ನಾ). ೧. ಐರೋಪ್ಯ ಜನಾಂಗಕ್ಕೆ ಸೇರಿದವನು: ಕಾವಲುದಳದ ಸಿಪಾಯಿಗಳು . . . ಫಿರಂಗಿಗಳ ಬಳಿಗೋಡಿದರು (ವನಹೂ. ೦೨೬); ಫಿರಂಗಿಗಳನ್ನು ಹಿಂದುಸ್ಥಾನದಿಂದ ಹೊರಗೆ ಅಟ್ಟುವುದನ್ನು ನೋಡುವುದೇ ನನ್ನ ತೀವ್ರ ಇಚ್ಛೆಯಾಗಿದೆ (ಕೃ೦೦ರ. ೫೭). ೨. ತೋಪು; ದೊಡ್ಡ ತುಬಾಕಿ: ಇಡಿಸಲೆ ನಿನ್ನ ಫಿರಂಗಿ ಬಾಯೊಳು (ರಾಕ್ಷಿರಾ. ೩-೭೭); ಪಟಲು ಬಾಣ ಫಿರಂಗಿ ಕೋವಿಯ ಭಟರು ಹರಿಗೆಯ ಬಲ್ಲಿನಲಿ ಸಂಘಟಿಸಿತಾಕ್ಷಣ (ಕರಾ೦. ೩೩೦-೦೫); ಅವರನ್ನು ಫಿರಂಗೀಬಾಯಿಗೆ ಕಟ್ಟಿ ಸಂಹರಿಸುವಂತೆ ಹೇಳು (ಮುದ್ರಾಶು೦. ೦೨೭); ಗುಂಡು ಹಾರಿಸಿದ ಫಿರಂಗಿಯಿಂದ ಹೊರಟಿದ್ದ ಕರಿನೀಲಿಯ ಹೊಗೆ ಬತೇರಿಯನ್ನು ತುಂಬಿತ್ತು (ಕೃಕೃಶೂ. ೨). ೩. ಮೇಹರೋಗ: 'ಫಿರಂಗಿರೋಗ' ಪರಾ. **ಪರಂಗ**: ೧. ಸಮಸ್ತವೀರಪರಿವಾರಾ ಸಯವಾಗಿ ಗೋವಯ ಪರಂಗದ ಕಪಿತನ ಮೇಲೆ ದಂ[ಡು] × ಟಯೆಲ್ಲಿನ × (ಕೆಇ. I. ೬೮-೬; ೦೫೨೨); ಪರಂಗದವರ ರಾಜಕಾರ್ಯ್ಯದಲಿ ನಂಮ ಅರಮನೆಯ ಬಾಗಿಲಲ್ಲಿ ನಿಂ[ನ ತಂಮ] ಯೆಕಪ್ಪನಾಯಕನು ಯಿಱಿದು ಯಿ[ಱಿಯಿಸಿಕೊಂಡು] ಬೀಳಲಾಗಿ (ಕೆಇ. III. ೦೩-೯; 1542). **ಪರಂಗಿ**: ೧. ಹೊಯ್ಸಳ ಕೊಂಗು ಸಿಂಧು ಪರಂಗಿ ಪಾಂಚಾಲಾದಿ ನೃಪರೇಳ್ಪಂದರಲ್ಲಿಯಲಿ (ಪುರಂ೩. ೯-೧೩); ಕರೆಯವನಿಗೆ ಬಾಧಕರಾಗಿರುವ ಪರಂಗಿಗಳ ಬಲವನುತುಗಿಸಿ (ಕಆಪ್ನ. ೭-೭); ಪರಂಗಿಗಳಿಂದ ಬಂದ ಹಮ್ಮೀರದ್ರವ್ಯಂಗಳಂ . . . ಉಳಿಯಬ್ನೇಳ್ಪು (ಮುಹಾಶ. ೧೦-೯೦). ೪. ಒಂದು ಬಗೆಯ ಮರ ಮತ್ತು ಅದರ ಹಣ್ಣು; ಪಪ್ಪಾಯಿ: 'ಪರಂಗಿಗಿಡ' ಪರಾ. ೫. (ಕರಾ) ಪೈನಾಪಲ್ ಗಿಡ; ಅನಾನಸು: 'ಪರಂಗಿಗಿಡ' ಪರಾ. **ಪಿರಂಗಿ**: ೨. ತರಕಸ ಶಾರ್ಙ್ಗ ಪಿರಂಗಿ ಭಲ್ಲೆಯ ಬಟ್ಟ ಬಿಜುಗಣ್ಣು ಭೀಕರಾನನವು . . . ಒಪ್ಪಲ್ಪಪ್ಪ ತುರುಕ ವಜೀರ (ಪುರಂ೩. ೨೦-೭೦); ಪುರದ ಕೋಟೆಯ ಸುತ್ತಣ ಕೊತ್ತಳಗಳೊಳು ಮಡಿದುವು ಬಲು ಪಿರಂಗಿಗಳು (ಕೆಂಶಶ. ೬-೦೭): ಕೊತ್ತಲಗಳ ಮೇಲೆ ಯೆತ್ತಿ ಪಿರಂಗಿಯ ಹತ್ತು ದಿಕ್ಕಿನೊಳು ಹಾರಿಸಲು (ತ್ರಿಗಂಶ. ೨-೦೯). **ಫರಂಗಿ**: ೧. ಯಾವ ಫರಂಗಿ ಬಂದು ಹೇಳುತ್ತಾನೋ ಹೇಳಲಿ (ಶಿಪಶ. ೯೬); ಇವನನ್ನು . . . ಫರಂಗಿಯವರು ಹಿಡಿದು ಗಲ್ಲಿಗೆ ಏರಿಸಿದಾಗ ತಾಲ್ಲೂಕು ತಾಲ್ಲೂಕೇ ಅತ್ತಿತಂತೆ (ಕಕಡ. II. ೦೫೨); ನಡುವೆ ಫಿರಂಗಿಗುಂಡು ಸುತ್ತುತ್ ಫರಂಗಿ ದಂಡು (ಜಾಕದ. ೦೫೨).

[← ಇಂ. Frank./ ಹಿಂ. ಮರಾ. ಫಿರಂಗೀ. / ಸಂ. ಫಿರಂಗ]

**ಫಿರಂಗಿಉಬ್ಬೆ** (ನಾ). ಫಿರಂಗಿರೋಗದಿಂದ ಬರುವ ಹುಣ್ಣು: ಫಿರಂಗಿಉಬ್ಬೆಗೆ . . . ತಾಳಕ ೧೦ ತೂಕ, ರಸ ೨ ತೂಕ, ಕಪ್ಪುಲಿಸತ್ವ ೧ ತೂಕ ನಿಂಬೇಹುಳಿಯಿಂದರೆದು ಮೂಸೆಯಲಿರಿಸಿ ಗುಳಿಗೆಯ ಮಾಡಿ ಮೂಸೆಯಲಿರಿಸಿ ಮೇಲೆ ಮರಳ ತುಂಬಿ ತುಸು ಪುಟಿಸಿಕೊಳ್ಳೆ ಹರವಹುದು (ಕಪ್ನ೩. ೦೫೨). [ಫಿರಂಗಿ + ಉಬ್ಬೆ$_1$? ]

**ಫಿರಂಗಿಚಕ್ಕೆ**, ಪರಂಗಿಚಕ್ಕೆ (ನಾ). ಒಂದು ಬಗೆಯ ಔಷಧೀಸಸ್ಯ ಮತ್ತು ಅದರ ಬೇರು: ಫಿರಂಗಿ ಚಕ್ಕೆ ೧ ಸೇರು, ಇದಕ್ಕೆ ಕೊಡುವ ದ್ರವ್ಯ- ಹಿಪ್ಪಲಿ . . . ದೇವದಾರು, ಇವುಗಳು ಪತ್ರಿ ಗ ೨ ತೂಕದ ಚೂರ್ಣವ ಮಾಡಿ ತೆಗೆದುಕೊಳ್ಳುವುದು (ಕಪ್ನ೩. ೩೯). **ಪರಂಗಿಚಕ್ಕೆ**: (ಮ್ನಕಿ. ೬೦-೦೯೭೭); ಪರಂಗಿಚಕ್ಕೆಯ ಒಣಬೇರುಗಳಿಂದ ಸಾರ್ಸಪರಿಲ ಎಂಬ ವಸ್ತು ಸಿಕ್ಕುತ್ತದೆ (ಕಶಕೋ. X. ೬೯೩).

[ದೇ.೩ ತಮಿ. ಪರಙ್ಕಿಚ್ಚಕ್ಕೈ; ತೆಲು. ಪರಂಗಿಚೆಕ್ಕ]

**ಫಿರಂಗಿರೋಗ**, ಪರಂಗಿರೋಗ (ನಾ). ಒಂದು ಬಗೆಯ ಮೇಹರೋಗ; ಉಪದಂಶ; ಪರಂಗಿ ಹುಣ್ಣಿನ ರೋಗ: ಉಪದಂಶ ಅಥವಾ ಫಿರಂಗಿರೋಗ (syphilis)ದಲ್ಲಿ ತೀವ್ರವಾದ ಮನೋರೋಗಗಳುಂಟಾಗುವುವು (ಮನೋರೋ. ೨೯). **ಪರಂಗಿರೋಗ**: ಪರಂಗಿ ರೋಗವು ನಮ್ಮ ಇಂಡಿಯಾದೇಶದ ಹಲವು ಭಾಗಗಳಲ್ಲಿರುವ ಕುರುಡುತನಕ್ಕೆ ಕಾರಣವಾಗಿರುತ್ತೆ (ಕಮ್ನರ್ನ. ೦೦೫). [ಫಿರಂಗಿ + ರೋಗ]

**ಫಿರಂಗಿಶೂಲೆ** (ನಾ). = ಫಿರಂಗಿಉಬ್ಬೆ: ಫಿರಂಗಿಶೂಲೆಯಾಗಿದ್ದ ಠಾವಿಗೆ ದಿನ ಒಂದಕ್ಕೆ ಮೂಱು ಬಾರಿ ತೊಡೆದು ಮಾಯಲು ೫ ದಿನದ ಮೇಲೆ ಕೀವು ಬರುವುದು (ಕಪ್ನ೩. ೩೯). [ಫಿರಂಗಿ + ಶೂಲೆ$_1$]

**ಫಿರಂಗಿಹುಣ್ಣು**, ಪರಂಗಿಹುಣ್ಣು (ನಾ). = ಫಿರಂಗಿಉಬ್ಬೆ: ಆ ತೈಲವಂ ಪಾವಡಗೆ ತೊಡೆದು ಹುಣ್ಣಿಗೆ ಹಾಕಲು ಎಂಥ ಫಿರಂಗಿಹುಣ್ಣು ಮಾಣ್ಗುಂ (ಕಪ್ನ೩. ೬೬). **ಪರಂಗಿಹುಣ್ಣು**: ಉಪದಂಶವೆಂದರೂ . . . ಪರಂಗಿ ಹುಣ್ಣು ಎಂದರೂ ಎಲ್ಲಾ ಒಂದೇ ಜಾತಿ (ವೈಕ್ನಸಾ. II. ೦೬೭).

[ಫಿರಂಗಿ + ಹುಣ್ಣು (<ಪುಣ್)]

**ಫಿರಕ** 'ಫಿರ್ಕಾ' ನೋ.

**ಫಿರತಿ**, ಫಿರ್ತಿ (ನಾ). ಸಂಚಾರ; ಪರ್ಯಟನ; ಪ್ರವಾಸ: ಈ ಸಾರಿಯ ಫಿರತಿಯಲ್ಲಿ . . . ರಾಮರಾಯನ ಜೊತೆಗೆ ಕಟ್ಟಿಗೆ ಹೋಗಬೇಕಾಗಿ ಬಂದಿತು. ಅವನ ಫಿರತಿಗಳು ಹೆಸರಾಗಿದ್ದವು (ಗಂಪೂಡು. ೦೬೪); ಇವರು ವರ್ಷಕ್ಕೆ ಎಳು ತಿಂಗಳು ಫಿರತೀ ಮಾಡಲೇಬೇಕು (ಕಾಲಪ. ೬೫); ಇದ್ದೂರಾಗ ಹತ್ತು ರೂಪಾಯಿ ಕಡಿಮಿ ಸಂಬಳ ಸಿಕ್ಕರೂ ಅಡ್ಡಿಯಿಲ್ಲ ಈ ಫಿರತಿ ಕೆಲಸ ಸಿಗಬಾರದು (ಪೂಶಾಕ. ೯೩). **ಫಿರ್ತಿ**: ಆಗಾಗ ಫಿರ್ತಿಯ ಕೆಲಸವೂ ಬೀಳುವುದು (ಸಾಂಖು. ೧೩೦); ಸಾಹೇಬರೊಂದಿಗೆ ಅವರು ಹಳ್ಳಿಯ ಮೇಲೆ ಫಿರ್ತಿಗೆ ಅದೇ ಹೋಗಿದ್ದರು (ಹೀಮಂಕ. ೦೭೫).

[← ಮರಾ. ಫಿರತೀ]

**ಫಿರಿಕಟ್ಟು** (ನಾ). ತಡೆ; ಬಂಧನ; ಬಂದೋಬಸ್ತು: ಅವನಿಗೆ ಜಾರಂದಾಯ ಭೂತ ಹಿಡಿದಿದೆ . . . ಆದಕ್ಕೆ ತಕ್ಕ ಫಿರಿಕಟ್ಟು ಮಾಡದಿದ್ದರೆ ಅದು ಎಲ್ಲರನ್ನೂ ರಕ್ತ ಕಾರಿಸಿ ಕೊಲ್ಲುವ ಮಹಾಭೂತ! (ಕಪಾಶ. ೦೯೯).

[← ತುಳು. ಪಿರಿಕಟ್ಟು]

**ಫಿರಿಯಾದಿ** 'ಫಿರ್ಯಾದು' ನೋ.

**ಫಿರಿಯಾದು** 'ಫಿರ್ಯಾದು' ನೋ.

**ಫಿರ್ಕಾ**, ಫಿರಕ, ಪಿರ್ಕಾ (ನಾ). ಶಾನುಭೋಗನ ಅಧಿಕಾರಕ್ಕೆ ಒಳಪಟ್ಟ ಹೋಬಳಿಯ ಒಂದು ವಿಭಾಗ: ಸಿಲೆದಾರಿ ಫಿರ್ಕಾದಲ್ಲಿ

೨೮,೦೦೦ ಕುದುರೆಗಳಿದ್ದುವು (ಮುಹಾಸಂ. II. ೦೬); ಎರಡು ಅಥವಾ ಹೆಚ್ಚು ಗ್ರಾಮಗಳನ್ನು ಅಥವಾ ಅವುಗಳ ಭಾಗಗಳನ್ನು ಒಂದು ಫಿರ್ಕಾವಾಗಿ ಏರ್ಪಡಿಸಬಹುದು (ಗ್ರಾಪಂಕಾ. ೮೬); ಅವರ ಫಿರ್ಕಾದಲ್ಲಿ ಕಂದಾಯ ಯಾವಾಗಲೂ ಬಾಕಿಯಾದುದೇ ಇಲ್ಲ (ಜೈಶ್ರೀ. ೨೦). ಫಿರಕ : (೩).

**ಫಿರ್ಕಾ** : ಒಂದೊಂದು ಫಿರ್ಕಾದಲ್ಲಿ ತಾಲ್ಲೂಕು ಅವುಲ್ದಾರರುಗಳು . . . ಗ್ರಾಮನೌಕರರಿಗೆ ರಜಾ ಮಂಜೂರ್ಮಾಡಲು ಅಧಿಕಾರ ಹೊಂದಿರುವರು (ಗ್ರಾಪಂಕಾ. ೭). [← ಅರ. ಹಿಂ. ಫಿರಕಾ]

**ಫಿರ್ಕಾ** 'ಫಿರ್ಕಾ' ನೋ.

**ಫಿರ್ತಿ** 'ಫಿರತಿ' ನೋ.

**ಫಿರ್ಯಾದಿ** 'ಫಿರ್ಯಾದು' ನೋ.

**ಫಿರ್ಯಾದು, ಫಿರಿಯಾದಿ, ಫಿರಿಯಾದಿ, ಫಿರಿಯಾದು, ಫಿರ್ಯಾದಿ** (ನಾ). ೧. ತಮಗಿರುವ ತೊಂದರೆಯನ್ನು ತಿಳಿಸಿ ಪರಿಹಾರಕ್ಕಾಗಿ ಮಾಡುವ ವಿನಂತಿ; ನ್ಯಾಯಸಂಪಾದನೆಗಾಗಿ ಸಲ್ಲಿಸುವ ಅಹವಾಲು : ಈ ಕೋರ್ಟಿನ ಹಕೀಮರಲ್ಲಿ ಒಬ್ಬರ ತರುವಾಯ ಮತ್ತೊಬ್ಬರು ಅಧಿಕಾರ ವಹಿಸಿ ಹದಿನೈದು ದಿನ ಫಿರ್ಯಾದುಗಳನ್ನು ದಾಖಲ್ಮಾಡಿಕೊಂಡು ಆಮೇಲೆ ಹದಿನೈದು ದಿನ ಅವುಗಳ ವಿಚಾರಣೆ ನಡೆಸುತ್ತಿದ್ದರು (ಮುಹಾಸಂ. II. ೪೭); ಡೆಪ್ಯೂಟಿಕಮಿಷನರವರು . . . ತಮ್ಮಲ್ಲಿಗೆ ಫಿರ್ಯಾದು ಬಂದು ವಿಚಾರಣೆ ನಡೆಸಿಯಾಗಲಿ, ಫಿರ್ಯಾದಿಲ್ಲದೆ ತಾವಾಗಿಯೇ ಆಗಲಿ ಜುಮ್ಮಾನೆ ಹಾಕಬಹುದು (ಗ್ರಾಪಂಕಾ. ೮೪). ೨. ದೂರು : ರಷ್ಯಾನ್ಸಿಯ ರಾಜ್ಯದ ಮೇಲೆ ಅನೇಕ ಸಾಹುಕಾರರ ಅರ್ಜಿ, ಫಿರ್ಯಾದುಗಳು ಹೆಚ್ಚಿದವು (ಮುಶಾಅ. ೩); ಯಾವ ಕೋರ್ಟಿಗೆ ಹೋಗಿ . . . ಫಿರ್ಯಾದು ಮಾಡುವುದು ? (ಮುಶಾಅ. ೧೯೦).

**ಫಿರಿಯಾದಿ** : ೩. ದೂರು ಕೊಟ್ಟವನು ; ಆಪಾದನೆ ಮಾಡಿ ಅಹವಾಲು ಸಲ್ಲಿಸಿದವನು ; ವಾದಿ : ಈ ವಿವರವನ್ನು ಟೀಪುಸುಲ್ತಾನರಿಗೆ ಫಿರಿಯಾದಿಯಾಗಿ ಜಾಹೀರು ಮಾಡಿದರಿಂದ (ರಾಕೇಂಚ್ರ. ೩೯). **ಫಿರಿಯಾದಿ**: ೨. ಆಳುಗಳು ಪೋಲೀಸ್ ಸ್ಟೇಷನ್ನಿಗೆ ಫಿರಿಯಾದಿ ಕೊಟ್ಟರು (ಗಂಗಾಳ. ೩೯).

**ಫಿರಿಯಾದು** : ೧. ಕುಹಕಿಗಳ್ ರಚಿಸಿದ ಫಿರಿಯಾದಿನಿಂ ನಿತ್ರಸಿಸಲಪ್ಪುದೆ ಸ್ಥಳದಿಂ ಮುನ್ನಮೆ ತೊಲಗಿ ಪೋಗಿ (ಕಳಪ್ಪ. ೮-೪೩) : ಅಮಿಲ ಶಿರಸ್ತೇದಾರರು ಹೋಗಿ ಜನರ ಫಿರಿಯಾದನ್ನು ವಿಚಾರಣೆ ಮಾಡಿ ಬಂದೋಬಸ್ತು ಮಾಡಿಸಬೇಕು (ಮುಹಾಸಂ. II. ೬೪). **ಫಿರ್ಯಾದಿ** : ೧. ನ್ಯಾಯಾಧೀಶರ ಸಭೆಯಲ್ಲಿ ಫಿರ್ಯಾದಿಯನ್ನು ಮಾಡಿದರು (ಕೃಚಿತ್ರ. ೨೦); ಅವರು . . . ನನ್ನಿಂದ ಫಿರ್ಯಾದಿ ಬರೆಯಿಸಿದರು (ಎಡಹ. ೬೭) ; ನಾಳೆ ದರ್ಬಾರದಲ್ಲಿ ಫಿರ್ಯಾದಿಯನ್ನು ಕೊಡು (ಮುಂದಾಶ. ೦೧೦). ೨. ನನ್ನ ಮೇಲಿನ ಫಿರ್ಯಾದಿಗಳನ್ನು ಕೇಳಿ ಕೇಳಿ ಬೇಸತ್ತನು (ಮೋಐಮು. ೩). ೩. ಫಿರ್ಯಾದಿಯ ವಕೀಲನಿಗೆ ಮೈ ಉರಿಯಿತು (ಕಮಳ. ೦೩೭) ; ಅದಕ್ಕೆ ನಾನೇ ಪ್ರಮುಖ ಫಿರ್ಯಾದಿ ಆಗಿದ್ದೆ (ಅಕಾ. ೨) ; ಫಿರ್ಯಾದಿ, ಅಪರಾಧಿಗಳಿಬ್ಬರೂ ತಮ್ಮ ತಮ್ಮ ಪರವಾಗಿ ವಾದಿಸುವವರನ್ನು ನೇಮಿಸಿಕೊಳ್ಳುವ ಅಧಿಕಾರವಿತ್ತು (ಹುಟ್ಟಿಹ. ೦೬).

**ಫಿರ್ಯಾದಿ ಹೋಗು** = ನ್ಯಾಯಾಲಯಕ್ಕೆ ಅಹವಾಲು ಸಲ್ಲಿಸು : ಅವನು ನ್ಯಾಯಾಧೀಶನ ಬಳಿಗೆ ಫಿರ್ಯಾದಿ ಹೋದನು (ಮುಂಬಿಹ. ೪೦೭).

[← ಅರ. ಪಾರ. ಫರ್ಯಾದ್, ಫರಿಯಾದ್ ; ಹಿಂ. ಫರಿಯಾದ್, ಫಿರಿಯಾದ್ ; ಮರಾ. ಫಿರ್ಯಾದ್ ]

**ಫಿರ್ಯಾದುಕಛೇರಿ** (ನಾ). ಮೈಸೂರಿನ ಅರಸರು ಏರ್ಪಡಿಸಿದ ಅಠಾರಾ ಕಚೇರಿಗಳಲ್ಲಿ ಒಂದು; ತಕರಾರುಗಳು, ಅಹವಾಲುಗಳನ್ನು ವಿಚಾರಣೆ ಮಾಡುವ ಕಚೇರಿ : ಕಚೇರಿಗಳು ೧. ದಿವಾನ್‌ಕಚೇರಿ . . . ೧೮. ಫಿರ್ಯಾದುಕಛೇರಿ (ಮುಹಾಸಂ. II. ೩೯).

[ಫಿರ್ಯಾದು + ಕಛೇರಿ (<ಕಚೇರಿ)]

**ಫಿರ್ಯಾದುದಾರ** (ನಾ). = ಫಿರ್ಯಾದು ೩ : ಫಿರ್ಯಾದುದಾರರು ಮತ್ತು ಸೆಷನ್ಸ್ ನ್ಯಾಯಾಧೀಶರೇ ನಡೆಸಬೇಕಾದ ಕೇಸುಗಳಲ್ಲಿ, ದಾವಾದ ಬಗ್ಗೆ . . . ಆರೋಪ ಹೊರಿಸಬಹುದು (ಕರಕೇಹೊ. I. ೮೬೩).

[ಫಿರ್ಯಾದು + — ದಾರ್]

**ಫಿಲಂ** (ನಾ). ೧. ಭಾವಚಿತ್ರ ಅಥವಾ ಚಲನಚಿತ್ರಗಳನ್ನು ಮೂಡಿಸುವುದಕ್ಕಾಗಿ ಉಪಯೋಗಿಸುವ ಸೆಲ್ಯುಲೈಡಿನ ಸುರುಳಿ. ೨. ಚಲನಚಿತ್ರ ; ಸಿನಿಮಾ : ಇದನ್ನು 'ಫಿಲಂ' ತೆಗೆಯಬೇಕು (ಹಮ್ಮಿಂಚ. ೫ ಪಕ್ಷ-ಪಮ್ಮ ಮಾತು). [← ಇಂ. Film]

**ಫೀ, ಫೀಜು, ಫೀಸಂ** (ನಾ). ಶುಲ್ಕ : ಆ ಬದುಕಿಗೆ ಬಿದ್ದಿರುವ ಫೀಗೆ ಬದ್ದು ತಕ್ಕೊಳ್ಳಲಾಗದು (ಮುಂಚಿಪ್ಪ. ೨೨ ಪ್ರಶ್ನಾಮ) ; ವಕೀಲರ ಫೀ ಕೊಡಬೇಕಲ್ಲ ಜನ್ನಪ್ಪ ? (ಗ್ರಾಮಾಡು. ೨೬೬). **ಫೀಜು** : ಉಳಿದ ಒಂದು ಪಾಲು ಕಕ್ಷಿಗಾರರ ಕಡೆಯ ವಕೀಲರಿಗೆ ಫೀಜಾಗಿ ಸಲ್ಲುತ್ತಿತ್ತು (ಮುಹಾಸಂ. II. ೯೩) ; ಹೈಸ್ಕೂಲಿನಲ್ಲಿ ಓದುತ್ತಿದ್ದ ಇಬ್ಬರಿಗೆ ಅರ್ಧ ಫೀಜು ಕಟ್ಟಬೇಕಾಗಿತ್ತು (ಮುಹಾಗ. ೬೩). **ಫೀಸು** : ಈಗ ನಾನು ನಿಮಗೆಷ್ಟು ಫೀಸು ಕೊಡಬೇಕಾಗಿದೆ ? (ಕುಕಕು. ೨೦೫). ☞ 'ಫೀಜು', 'ಫೀಸು' ಎಂಬ ರೂಪಗಳು ಇಂಗ್ಲಿಷಿನ 'ಫೀ' ಎಂಬುದರ ಬಹುವಚನ ರೂಪಗಳು. [← ಇಂ. Fee]

**ಫೀಜು** 'ಫೀ' ನೋ.

**ಫೀನಿಕ್ಸ್** (ನಾ). ೧. ಐದಾರು ಶತಮಾನಗಳ ಕಾಲ ಅರೇಬಿಯಾ ಮರಳುಗಾಡಿನಲ್ಲಿ ಜೀವಿಸಿದ್ದು, ಬಳಿಕ ತಾನೇ ಬೆಂಕಿಯಲ್ಲಿ ಸುಟ್ಟುಕೊಂಡು ಮತ್ತೆ ಹೊಸ ಹುರುಪಿನೊಂದಿಗೆ ಅದೇ ಬೂದಿಯಿಂದ ಹೊರಬಂದು ಬಹುಕಾಲ ಬದುಕುವುದೆಂದು ನಂಬಲಾದ ಒಂದು ಬಗೆಯ ಪಕ್ಷಿ : ಮುಕ್ಕಿ ಮೊಗೆಯುವ ಕಾಲ . . . ಉಗ್ರವ್ಯಾಘ್ರನ ಹರಿತಹಲ್ಲು ಕಿತ್ತಿಸಿವೆ. ಪುರಾತನ ಪಕ್ಷಿ ಫೀನಿಕ್ಸ್ ತನ್ನ ರಕ್ತದ ಬೂದಿ (ಕಂಚಮು. ೬೦-೪). ೨. ಒಂದು ನಕ್ಷತ್ರರಾಶಿ : ಚಕೋರವು ಪಾಶ್ಚಾತ್ಯರ ಫೀನಿಕ್ಸ್ (ಪಕ್ಷತ್ರ. ೨೦). [← ಇಂ. Phoenix]

**ಫೀಸು** 'ಫೀ' ನೋ.

**ಫುಕ್ಕಟೆ** 'ಪುಕ್ಕಟೆ' ನೋ.

**ಫುಗಡಿ, ಪುಗಡಿ, ಪುಗುಡಿ** (ನಾ). ಪರಸ್ಪರ ಕೈಗಳನ್ನು ಭದ್ರವಾಗಿ ಹಿಡಿದು, ನಿಂತಲ್ಲೇ ಗಿರ್ರನೆ ತಿರುಗುವ ಒಂದು ಬಗೆಯ ಆಟ; ಅಪ್ಪಾಲೆ ತಿಪ್ಪಾಲೆ ; ಬಗಟ್ಟಬುಗುರಿ (ಉಕ) : ಇಬ್ಬರೂ ಎದ್ದು ನಿಂತು ಚಿಕ್ಕಮಕ್ಕಳು ಪುಗಡಿಯಾಡುತ್ತಾರಲ್ಲ — ಆ ರೀತಿಯಲ್ಲಿ ಕೈಯಲ್ಲಿ ಕೈಯಿಕ್ಕಿ ರಿಂಗಣಗುಣಿತ ಹಾಕತೊಡಗಿದರು (ಗೀಜುಗ. ೧೩) ; ಪುಗಡಿಯಾಟ ನಡೆದಿತ್ತು (ಪಾತರ. ೬೦). **ಪುಗಡಿ** : ನಾನೊಮ್ಮೆ ಪುಗಡಿ ಆಡುತ್ತಿದ್ದೆ — ಗೋಯ ಕೂಡ (ಕವಕ. ೯೭) : ನಾಳೆ ತಿಳಿಯುವುದು ಬೆಳಗಾದರೆ, ಗಂಡ ಬಂದು ಪುಗಡೀ ಆಡಿಸುವಾಗ ತಲೆ ಹೇಗೆ ತಿರಗುವದೆಂಬುದು (ಕವಕ. ೯೭). **ಪುಗುಡಿ** : "ರಾಸಕ್ರೀಡಾ — ಪುಗುಡಿ" (ಶಾಕಕ್ಕ. ೦೨೦); "ಪುಗುಡಿ — ಮಕ್ಕಳ ಆಟ, ಹೆಣ್ಣು ಮಕ್ಕಳ ದುಂಡಾಟ" (ಪಾನಕೋ. ೧೬).

**ಫುಗಡಿ ಹಾಕು** = ಅಪ್ಪಾಲೆ ತಿಪ್ಪಾಲೆ ಆಡು : ಪಗಡೆಕಾಯಿ ಕುಚಬಾಲೇರೇ ಫುಗಡಿ ಹಾಕೀರೆನ್ನ ಮುಂದೆ ತೆಗೆದುಕೊಡುವೆ ವಸ್ತುವ ನಿಮಗೆ (ಕವಕ. ೦೦೯-೪). [← ಮರಾ. ಫುಗಡೀ]

**ಫುಟ್‌ಲಾಯರಿ** 'ಫೂಟ್‌ಲಾಯರಿ' ನೋ.

**ಫುಟ್‌ಲಾಯರು, ಪೂಟುಲಾಯರು** (ನಾ). ಕಾನೂನಿನ ಪ್ರಶಸ್ತಿಪತ್ರ ಅಥವಾ ಸನದನ್ನು ಪಡೆಯದೆ ಹಳ್ಳಿಗಳಲ್ಲಿ ಒಬ್ಬ ವಕೀಲನ ಪರವಾಗಿ ವಕೀಲಿವೃತ್ತಿಯನ್ನು ನಡೆಸಿ ಲಾಯರ ಬಳಿಗೆ ಕಕ್ಷಿಗಳನ್ನು ಒದಗಿಸುವವನು : ಹೆಸರಾಂತ ಫುಟ್‌ಲಾಯರು ಚಿಂತಾಮಣಿಯವರ

ಕುವರಿ ಕೇವಲ ನಾಟಕದ ನರಸಿಂಹನ ಕೈಹಿಡಿಯುವುದುಂಟೇ ? (ಮಾಕುಕ. ೩೩). **ಫುಟುಲಾಯರು :** ಅವನೊಬ್ಬ ಫುಟುಲಾಯರು (ಕೂಶಿ). [<ಫೂಟು₁ + ಲಾಯರು]

**ಫುಟಾಫುಟ** (ನಾ). ೧. ಚೂರುಚೂರು ; ತುಂಡುತುಂಡು. ೨. ಅಸ್ತವ್ಯಸ್ತ ; ಚೆಲ್ಲಾಪಿಲ್ಲಿ : ಈ ಫರಜುಲ್ಲಾಖಾನನ ದಂಡು ಯಾವತ್ತೂ ಮುರಿದು ಫುಟಾಫುಟ ಆದ ವರ್ತಮಾನ ನವಾಬಹೈದರಲ್ಲಿ ಖಾನರು ಕೇಳಿ (ರಾಕೇಂಶ್ರ. ೨೦). [←ಮರಾ. ಫುಟಾಫುಟ್]

**ಫುಪ್ಫುಸ, ಪುಪ್ಫುಸ** (ನಾ). ಶ್ವಾಸಕೋಶ : ಈ ವಿಷಪದಾರ್ಥಗಳು . . . ಶ್ವಾಸದ ಮಾರ್ಗದಿಂದ ನಮ್ಮ ಫುಪ್ಫುಸಗಳಲ್ಲಿ ಸೇರಿ ಅಪಕಾರ ಮಾಡುತ್ತವೆ (ಮುಂಬಯಿ. ೩-೧೫೦) ; ಆ ನರುಗಂಪನ್ನು ಎರಡು ವರ್ಷಗಳ ವರೆಗೆ ತನ್ನ ಪುಪ್ಫುಸಗಳಲ್ಲಿ ಕಾದಿಡಲು ಪ್ರಮೀಳೆ ಹವಣಿಸಿದಳು (ನಕುಕ. ೩೩೦) ; ಹೃದಯ, ಫುಪ್ಫುಸ ತಮ್ಮ ಕಾರ್ಯವನ್ನು ರಕ್ತದ ಬೆಂಬಲದಿಂದ ಸಾಗಿಸುತ್ತಿರುವುವು (ಆರೋಬಿ. ೬೨). **ಫುಪ್ಫುಸ :** ಫುಪ್ಫುಸದಲ್ಲಿ ನೋವಿದೆಯೇ? (ದೇರಾಸ. ೦೨೩) ; ರಮಾಬಾಯಿಗೆ . . . ಫುಪ್ಫುಸವಿಕಾರದ ಬಾಧೆಯಾಗಿತ್ತು (ಶ್ರೀರಂಗ. ೩೦): ಈ ಬಲಫುಪ್ಫುಸದ ಆಪರೇಶನ್ನು ಆದ ನಂತರ ಆತ ಸಂಕಟದಿಂದ ಪಾರಾದ (ಮುಚ್ಚಿ. ೯). [<ಸಂ. ಫುಪ್ಫುಸ]

**ಫುರೋಕ್ತು** 'ಪುರೋಕ್ತು' ನೋ.

**ಫುಲ್ಗರ** (ನಾ). ಒಂದು ಬಗೆಯ ಜೋಳ : ಭಗವಂತಫುಲ್ಗರ, ಪಟ್ಟಣಸಾಳಿ, ಗೌರೀಕುಲು, ಬಸವನ ಪಾದ, ಫುಲ್ಗರ . . . ಕೆಂಡಮೂಕನ ಜೋಳ ಈ ಯೆಂಟು ಜಾತಿಗಳನ್ನು ಮುಖ್ಯ ಪೈರುಗಳಾಗಿ, ಇಲ್ಲವೇ ಬೇರೆ ಮುಂಗಾರೀ ಹಿಂಗಾರೀ ಜಾತಿಗಳ ಪೈರಿನಲ್ಲಿ ನಡುನಡುವ ಹಲಕೆಲವು ಸಾಲುಗಳಾಗಿ ಬಿತ್ತುವರು (ಕಬಾಗ. ೨೭೦). [ ? ]

**ಫುಲ್ಲ** (ಗು). ೧. ಅರಳಿದ ; ವಿಕಸಿತವಾದ : "ಫುಲ್ಲಮುದ್ಗಮನಂ ವಿಜೃಂಭಿತಂ" (ಮಂಗರಾ. ೧೨೦-೩) : ತಿಳಿಗೊಳನಂ ಫುಲ್ಲಪಂಕೇಜವಂ ನಿರ್ಮಳತಾರಾಧೀಶನಂ ಪೋಲ್ತೆಸೆಯೆ ನಗೆಮೊಗಂ ಕಾಂತೆ ಕಣ್ಗೊಪ್ಪಿತೋರ್ಕುಂ (ಆಕಿಶ. ೦-೯೦) ; ವಿಪಿನಸುಂದರಚೈತ್ರಮಾಸದ ಫುಲ್ಲಪುಷ್ಪಮಯ ಕಿಂಶುಕವೊ (ಶ್ರೀಗಾಪಾ. ೩೦೩-೯೯). ೨. ಹೂವು ಬಿಟ್ಟಿರುವ ; ಹೂವುಗಳಿಂದ ತುಂಬಿದ. ೩. (ಕಣ್ಣುಗಳಂತೆ) ಅಗಲವಾಗಿ ತೆರೆದ, — ಹಿಗ್ಗಲಿಸಿದ. (ನಾ). ೪. ಹೂವು ; ಪುಷ್ಪ : 'ಫುಲ್ಲಶರ' ಪರಾ. ೫. [ನಾಟ್ಯ] ಕಪೋಲದ ಆರು ಭೇದಗಳಲ್ಲಿ ಒಂದು ; ೯ ಕೆನ್ನೆಗಳನ್ನು ಸಂತೋಷದಿಂದ ಅರಳಿಸುವುದು. ಸಂತೋಷದಲ್ಲಿ ಇದನ್ನು ವಿನಿಯೋಗಿಸಬೇಕು" (ಅಾಸ್ಕರಂ. ಗದ್ಯಾನುವಾದ ೨೬೬): ನುತಿವಡೆದ ಕುಂಚಿತಂ ಕಂಪಿತಮೊಪ್ಪುವ ಪೂರ್ಣಮೆಸೆವ ಕ್ಷಾಮಂಫುಲ್ಲಂ ಸತಿ ಕೇಳ್ ಸಮಮಿಂತಾಱುಂ ಮತದಿಂ ರಂಜಿಪುದು ಗಲ್ಲಮಂಬುಜಪದನೇ (ಅಾಸ್ಕರಂ. ೩-೬೯). [ಸಂ.]

**ಫುಲ್ಲಂಬು** (ನಾ). ಹೂವಿನ ಬಾಣ : ಮಲ್ಲಿಗೆಗೋಲ್ಗಳೊ ಮರದ ಮಿಂಟೆಯೊ ಪೇಳು ಫುಲ್ಲಂಬೊ ಲೋಹದಂಬುಗಳೊ (ಭರತ. ೩೦-೩೩). [ಫುಲ್ಲ + ಅಮ್ಬು]

**ಫುಲ್ಲಕ** (ನಾ). ಹುಳು ; ಕ್ರಿಮಿ : "ಕ್ರಿಮಿಃ, ಕೀಟಃ, ನೀಲಂಗುಃ, ಫುಲ್ಲಕಃ_ ಈ ೪ ಪು (ಹು)ಟು" (ಹಕಾಮ. ೧೦೩-೦೯) ; "ನೀಲಂಗು ಫುಲ್ಲಕಂ ಕ್ರಿಮಿ ಕೀಟವಚ್ಚಪುಟುವಕ್ಕುಂ" (ಮಂಗರಾ. ೧೧೭-೩). [ಸಂ.]

**ಫುಲ್ಲನೇತ್ರ** (ನಾ). (ಕಮಲದ) ಹೂವಿನಂತೆ ಕಣ್ಣುಗಳುಳ್ಳವನು ; ವಿಷ್ಣು : ಫುಲ್ಲನೇತ್ರನೊಳರ್ಕನೊಳು ಶಶಿಯೊಳಾತ್ಮನೊಳು . . . ಸರೋಜದೋಲ್ ಪರಿವರ್ತಿಸಿರ್ಕುಂ ಹಂಸಾಭಿಧಾನಂ (ಮಂಗರಾ. ೦೪೩-೯೦). [ಸಂ.]

**ಫುಲ್ಲಶರ** (ನಾ). ೧. ಹೂವಿನ ಬಾಣ ; ಮನ್ಮಥಬಾಣ : ಫುಲ್ಲಶರಂ ಬಸಂತದ ಪುಗಿಲ್ ನೆಟಿದಿಂಗಳ ತಣ್ಪಸಿಲ್ . . . ಎಂಬಿಸಂ ಬಲ್ಲವರಂ ಮನಂಗೊಳಿಸುಗುಂ ಕೃತಿ (ಮಲ್ಲಿಶ. ೦-೯೯). ೨. ಹೂವಿನ ಬಾಣಗಳುಳ್ಳವನು ; ಮನ್ಮಥ : ಫುಲ್ಲಶರಂಗಿಸುವೆಡೆಗವೆ ನಲ್ಲಂಬುಗಳ್ (ಅಂಶ. ೦೧-೧೦೦) ; ಫುಲ್ಲಶರನೆಸಕಮುಂ ಹೃದಯೋಲ್ಲಾಸಮುಮಿಂದ್ರಿಯಂಗಳಿಚ್ಚೆಯ ಸವಿಯುಂ ಸಲ್ಲದೊಡಂ . . . ಅಸಾರಮಿ ಸಂಸಾರಂ (ಅರುಕ. ೯-೩೩). [ಸಂ.]

**ಫುಲ್ಲಹೇತಿ** (ನಾ). = ಫುಲ್ಲಶರ ೨ : ಫುಲ್ಲಹೇತಿಯ ಧಲ್ಲೆಹಕೆ ಕಡು ನೊಂದೆ ನನ್ನಯ ನಲ್ಲನಾಗಿಯೆ ಮನ್ಮನೋರಥಮೀಯಬೇಕು (ಘಶಿಡಾ. ೩-೦೬). [ಸಂ.]

**ಫುಲ್ಲಾಬ್ಜಪುತ್ರ** (ನಾ). ಅರಳಿದ ತಾವರೆಯಲ್ಲಿ ಹುಟ್ಟಿದವನು ; ಬ್ರಹ್ಮ : ಆ ತಾರಕಂ . . . ಉಗ್ರತಪಮಂ ಮಾಡಲಾತಂಗೆ ಫುಲ್ಲಾಬ್ಜಪುತ್ರನಿಂ ವರವ ಕೊಡಿಸಲ್ಕೆಂದು ನೆಲಸಿದಂ ಸರ್ವೇಶ್ವರಂ (ಅಲ್ಕಶ. ೩-೨೦-೯೭). [ಸಂ.]

**ಫುಲ್ಲೈಸು** (ಕ್ರಿ). ಅರಳು ; ವಿಕಾಸವಾಗು : ಫುಲ್ಲೈಪ ಸರಸಸುಮನಃಪಲ್ಲವಸಂಗದೆ ಪೊದಟ್ದು ಪೊಂಗುವನಿತಟಿಸೋಳ್ ಮಲ್ಲೀವಲ್ಲಿಮತಲ್ಲಿಗದಲ್ಲಿಯ ಕಡುಮಂಕಿ ಸೋಂಕಿ ಕೂಂಕುವುದಕಟಾ (ಕಕಶಿ. ೬-೦೩೯). [ಫುಲ್ಲ + < — ಇಸು₁]

**ಫುಲ್ಲೋತ್ಪಲ** (ನಾ). ಅರಳಿದ ಕಮಲ : ಫುಲ್ಲೋತ್ಪಲಭಾವನೆಯಿಂ ನಿಲ್ಲದೆ ಕೆಯ್ಕೊಳ್ವುದೆಂದು ಸಾಂಖ್ಯಂ ಮೂಱುಂ ಕಲ್ಲಿಂದಿಡುತಂ ಗೌರೀವಲ್ಲಭನಂ ನಚ್ಚಿ ಮಚ್ಚಿ ಪೂಜಿಸುತಿರ್ದಂ (ಬ್ರಶಶಿ. ೩೯-೦೨೦). [ಸಂ.]

**ಫುಸಲತ್ತು** 'ಪುಸಲತ್ತು' ನೋ.

**ಫೂಟ್‌ಲಾಯರಿ, ಫೂಟಲಾಯರಿ, ಫುಟ್‌ಲಾಯರಿ, ಪೂಟಲಾಯರಿ** (ನಾ). ೧. ಫೂಟ್‌ಲಾಯರನ ವೃತ್ತಿ,—ಕಾರ್ಯ : ಲಾ ಪಾಯಿಂಟುಗಳನ್ನೆಲ್ಲಾ ಅಷ್ಟಿಷ್ಟು ತಿಳಿದಿದ್ದ ಚನ್ನ ಫೂಟ್‌ಲಾಯರಿ ಕೆಲಸ ಮಾಡಿದ (ವನ್ನೂರು. ೨೦೩). **ಫೂಟಲಾಯರಿ :** ೨. = ಫುಟ್‌ಲಾಯರು : ಹಳ್ಳಿಯಲ್ಲಿ ಹೀಗಾದರೆ ಫೂಟಲಾಯರಿಯು ಮುಂದೆ ಬಂದು (ಮುಂಶಿಮೂ. ೬೯). **ಫುಟ್‌ಲಾಯರಿ :** ೨. ಇವನು ಕೊಂಡಾಪುರದ ಶಾಂತವೀರಯ್ಯ, ಫುಟ್‌ಲಾಯರಿಯ ಹಾಗೆ ಏನಾದರೂ ಇವನ ತಲೆಯಲ್ಲಿ ಇದ್ದೇ ಇರುತ್ತ ವಿಚಾರಗಳು (ಮರಿಕ. ೩೯). **ಪೂಟಲಾಯರಿ :** ೧. ಪೂಟಲಾಯರಿಯಲ್ಲಿ ಸಂಪಾದಿಸುತ್ತಿದ್ದುದು (ಅಾಮಿಕಾಂ. ೩). [<ಫುಟ್‌ಲಾಯರು]

**ಫೂಟಕೂಲ್‌ಪತ್ರಕ** (ನಾ). ಒಂದೇ ಸರ್ವೆನಂಬರಿನಲ್ಲಿ ಎರಡು ಅಥವಾ ಅದಕ್ಕೂ ಹೆಚ್ಚು ಸಾಗುವಳಿದಾರರನ್ನು ನಮೂದಿಸಿದಾಗ, ಪ್ರತಿಯೊಬ್ಬರ ವಶದಲ್ಲಿರುವ ಭೂಮಿಯ ಕ್ಷೇತ್ರ, ಕಂದಾಯ ಮೊದಲಾದುವುಗಳನ್ನು ತಿಳಿಸುವ ಕಾಗದ : (ಕೃಶಗ. II, ೩೩೯). [ ಫೂಟಕೂಲ್₀ ( ೯ ← ಇಂ. Protocol) + ಪತ್ರಕ ]

**ಫೂಟಮಾಗಣಿ** (ನಾ). ಮಾಗಣಿಯ ಪೋಟುಭಾಗ,—ಹಿಸ್ಸೆ : (ಕೃಶಗ. II, ೩೩೯). [ < ಫೂಟು₁ + ಮಾಗಣಿ₁ ]

**ಫೂಟಲಾಯರಿ** 'ಫೂಟ್‌ಲಾಯರಿ' ನೋ.

**ಫೂಟು₁, ಪೂಟು** (ನಾ). ೧. ಪ್ರತ್ಯೇಕವಾದುದು ; ಪೃಥಕ್ಕಾದುದು : ತಾಲ್ಲೂಕ್ ಅಮಲ್ದಾರರಾಗಲಿ, ಸಬ್‌ತಾಲ್ಲೂಕ್‌ಡೆಪ್ಯುಟಿಅಮಲ್ದಾರರಾಗಲಿ ಫೂಟಾಗಿ ವಿಚಾರಣೆ ಮಾಡಿ ಫೈಸಲ್ ಕೊಡತಕ್ಕದ್ದು (ಗ್ರಾಮಶಾ. ೯೩). (ಗು). ೨. ಚಿಕ್ಕ ; ಸಣ್ಣವಿಭಾಗಕ್ಕೆ ಸೇರಿದ : 'ಫೂಟುದೊರೆ' ಪರಾ. **ಫೂಟು :** ೩. ಸಾರಾಂಶ ; ತಿರುಳು : 'ಫೂಟರ್ಜಿ' ಪರಾ. [ ← ಮರಾ. ಫೂಟ್ ]

**ಫೂಟು₂** (ನಾ). ಒಂದು ಅಳತೆಯ ಪ್ರಮಾಣ ; ಒಂದು ಅಡಿ ; ಹನ್ನೆರಡು ಅಂಗುಲ : ಸ್ತೂಪದ್ರಿಯ ೧೭೦೦ ಫೂಟು ಯೆತ್ತರವಾದ

ಶಿಖರಗಳು ಸಮುದ್ರತೀರಕ್ಕೆ ಹೊಂದಿರುತ್ತವೆ (ಕಣಾಗ. ೯): ಮರದ ಸುತ್ತಳತೆಯು ಹೆಚ್ಚುಕಡಿಮೆ ಎರಡು ಸಾವಿರ ಫೂಟುವುಂಟು (ಋುಂಶಬು. ೨-೨೯); ಒಂಭತ್ತು ಫೂಟು ಅಂದರೆ ಒಂದು ಮಾರು ಆಗುವದು (ಕೃಶಿಕ್ರ. ೯೩).. [←ಇಂ. Foot]

**ಫೂಟುತೀರ್ಮಾನ** (ನಾ). (ನ್ಯಾಯಾಲಯದಲ್ಲಿ ಅನಾವಶ್ಯಕವಾದ ವಿವರಗಳನ್ನು ಗಮನಿಸದೆ) ಆಗಿಂದಾಗ್ಗೆ ಕ್ಷಿಪ್ರವಾಗಿ ಕೊಡುವ ನ್ಯಾಯನಿರ್ಣಯ : ಯಾವುದಾದರೂ ಅಪೀಲನ್ನು. . . ಆ ನ್ಯಾಯಾಲಯದವರಿಗೆ ತೋರಿದ ಸಂದರ್ಭದಲ್ಲಿ ಫೂಟುತೀರ್ಮಾನ ಮಾಡುವುದಕ್ಕೆ ಉಪಬಂಧಗಳನ್ನು ಕಲ್ಪಿಸುವ ನಿಯಮಗಳು (ಕಾರಾಸ. ೬೬). [ಫೂಟು$_1$ + ತೀರ್ಮಾನ]

**ಫೂಟುದೊರೆ** (ನಾ). ಚಿಕ್ಕರಾಜ್ಯದ ಅರಸು ; ಪಾಳೆಯಗಾರ; ಮಾಂಡಲಿಕ : ಕೆಲವರು. . . ದೇಶೀಯ ಮಹಾರಾಜರನ್ನೂ ಮುಸಲ್ಮಾನ್ ದೊರೆಗಳನ್ನೂ ಅನುಸರಿಸಿಕೊಂಡು ಇದ್ದರು. ಇಂಥಾ ಫೂಟುದೊರೆಗಳು ಜರುಗಿಸುತ್ತಿದ್ದ ಅಧಿಕಾರವು ಅಲ್ಲಲ್ಲಿ ವಿಶೇಷವಾಗಿ ಭಿನ್ನಿಸಿದ್ದಾಗ್ಯೂ ನಮ್ಮ ಭರತಖಂಡದಲ್ಲಿ ಇಂಥವರು ಹೆಚ್ಚಾಗಿದ್ದಂತೆ ತಿಳಿಯಬಂದಿದೆ (ಹಾಲೆಗಾ. ೦೯). [ಫೂಟು$_1$ + ದೊರೆ$_2$]

**ಫೂತ್ಕರಿಸು** (ಕ್ರಿ). ೧. ಉಗಿ; ಉಗುಳು : ನಾಕನದೀವಾರಿಯನೀಂಟಿ ಫೂತ್ಕರಿಸಿ . . . ಪಾಲ್ಗಡಲೊಳುದ್ಯದ್ವಾಲಲೀಲಾಪ್ರವರ್ತನಮಂ ತಾಳ್ದಿಭವಕ್ತ್ರನೀ ಕೃತಿಗಜಸ್ರುಂ ಮಾಳ್ಕೆ ನಿರ್ವಿಘ್ನಮಂ (ಕಶಿಕಂ. ೦-೬); ಅಭ್ರಮಾತಂಗ ಫೂತ್ಕರಿಸಲ್ಕೆ ಚದರಿ ಪನಿಗಳ್ಗಗನತಳದಿ ಪತಕಲಿಸಿದುವೊಯೆನಲು ನಕ್ಷತ್ರತತಿಯು ಚಿದುರ ಬೀರಿದವು (ಕಂಚಾಶಾ. ೩-೨-೩೩); ಸಗ್ಗಿಗರಾಣ್ಮನ ಘನಕರಿಘಟೆಗಳ್. . . ತುಂಬಿಕೆಯೊಳಿಂಬುಗೊಂಡ ತುಂಬುನೀರಂ ಫೂತ್ಕರಿಸಿದವುವೆಂಬಂತಿರೆ ಎಡೆವಿಡದೆ ಬಲ್ಸರಿ ಸುರಿಯೆ (ರಾಜಾಶ್ಕ್ಯ. ೩-೦೦). ೨. ಟಿಸ್ ಎಂದಂ ಸದ್ದು ಮಾಡು : ದೀಪ ನೊಂದುವಾಗ ತುಸು ಫೂತ್ಕರಿಸಿಯೆ ನೊಂದುತ್ತದೆ (ಇತ್ಕ್ರಕ. ೦೯೩). ೩. ಹಾವಿನಂತೆ ಬುಸಂಗುಡು; ಬುಸ್ಸೆನ್ನು : ಅಗ್ನಿ . . . ಪ್ರಳಯಕಾಲದ ಮಹಾಸರ್ಪದಂತೆ ಫೂತ್ಕರಿಸಿತು (ಅಕ್ಕಬು. ೦೦೯). ೪. (ಅಲಂ) ಸಿಡುಕಿನಿಂದ ಮಾತನಾಡು; ಅಬ್ಬರಿಸಂ : ನೀ ಏನ ಹೇಳುವಿ ಅದನ್ನ ? – ಗಂಗವ್ವ ಫೂತ್ಕರಿಸಿದಳು (ಅಕೋಕ. ೬೩). [ಫೂತ್ಕರಣ + –ಇಸು$_1$]

**ಫೂತ್ಕಾರ** (ನಾ). ೧. ಸಶಬ್ದವಾಗಿ ಉಸಿರು ಬಿಡುವಿಕೆ : ಧನ್ವಿಪದಾತಿವ್ರಾತಟಂಕಾರದಿನುರುಕಹಳಾಜಾಲಫೂತ್ಕಾರದಿಂ . . . ವಿಷ್ವಪಮಂ ಶಬ್ದಾತ್ಮಕಂ ಮಾಡಿದುದುಭಯಮಹೀಭೃಚ್ಚಮೂಚಕ್ರವಾಳಂ (ಕಂಕ್ರಪು. ೦೦-೬೬); ಮುಖಂಡಗಜಫೂತ್ಕಾಗಂ ರಥಾಂಗರಥಚೀತ್ಕಾರಂ. . . ಬೆರಸಿ ಬಳೆದಾಗುಸಮಂ ಮುಸುಂಕೆ (ಗಂಕೆ. ೬-೫ ಪ). ೨. ಹಾವಿನ ಬುಸುಗುಟ್ಟುವಿಕೆ : ಜಹಾಂಗೀರ ಕಣಕಿದ ನಾಗಿನಿಯನ್ನು ತಡೆದು ಫೂತ್ಕಾರವನ್ನು ಸ್ವಾಗತಿಸುವ ಅವಿವೇಕಕ್ಕೆ ಹೋಗಲಿಲ್ಲ (ಹೂರಿಡ. ೨೦). [ಸಂ.]

**ಫೂತ್ಕೃತಿ** (ನಾ). = ಫೂತ್ಕಾರ ೧ : ಭೃಂಗವಧೂಝಂಕೃತಿ ಶಂಖಫೂತ್ಕೃತಿರುತಂ. . . ಉದ್ಯತ್ಕೋಕಿಳರವಂ ಭೇರೀಘನಧ್ವಾನವಾಗೆ ವಸಂತಂ ಋತುಸಾರ್ವಭೌಮವಿಭವಂ ಮೆಯ್ವೆತ್ತದೇಂ ಬಂದುದೋ (ಹಂಸ್ರತಿ. ೭-೩೬). [ಸಂ.]

**ಫೂಲ್‌ಸ್ಕೇಪು, ಫೂಲ್ಸ್‌ಕೇಪ್** (ನಾ). ಹದಿನೈದರಿಂದ ಹದಿನೇಳು ಅಂಗುಲ ಉದ್ದವೂ ಹನ್ನೆರಡರಿಂದ ಹದಿಮೂರುವರೆ ಅಂಗುಲ ಅಗಲವೂ ಇರುವ ಕಾಗದ : ಸಾಮಾನ್ಯವಾಗಿ ಬರೆಯಲು ಉಪಯೋಗಿಸುವ 'ಫೂಲ್‌ಸ್ಕೇಪು' ಕಾಗದಗಳಿಗೆ ಈ ಗುರುತುಗಳಿರುವುವು (ಖಾಂಶ್ರ. II. ೯೨೯). **ಫೂಲ್ಸ್‌ಕೇಪ್**: ಮುದ್ರಣಕ್ಕೆ ಉಪಯೋಗಿಸುವ ಕಾಗದಗಳು : ೧. ಫೂಲ್ಸ್‌ಕೇಪ್, ೨. ಕ್ರೌನ್ (ಮುದ್ರಕ. ೯೨). [←ಇಂ. Fool's-Cap]

**ಫೂಲ್ಸ್‌ಕೇಪ್** 'ಫೂಲ್‌ಸ್ಕೇಪು' ನೋ.

**ಫೆಳಾವುಗ** (ನಾ). (?) : ಫಳಿಯಕಾಜಿ, ಫೆಳಾವುಗಂ, ಫೇಳಿ, ಅಫಳಿಯಂ (ಕಪುರ. ೦೩ ಕ್ರಯೋ). [?]

**ಫೇಡೆ** 'ಪೇಡ' ನೋ.

**ಫೇಣಿ** (ನಾ). ಒಂದು ಬಗೆಯ ಸಿಹಿ ಭಕ್ಷ್ಯ : ಅಜುಬೋನ ಫೇಣಿ ಗಾಂಗೆ ಇಡ್ಡಲಿಗೆ ಅವುಗು . . . ಹೂರುಂಡೆಯನು ತೆಟಿಹಿಲ್ಲನಿಸಿ ಗಡಣಿಸುತ್ತ ಗುಡ್ಡರುಗಳಿಗೆ (ಸಿಕ್ರಕಾ. ೬-೬೩); ರಸವೊಸರ್ವ ಸಜ್ಜಿಗೆಯೆಣ್ಣೆವೂರಿಗೆ ಸುಫೇಣಿ ಮುಸುಕೊಡೆ ಬೆಣ್ಣೆದಿಜಗು (ಕಂರಕು. ೦೦-೨೬); ಜೇನು ಸಕ್ಕರೆ ಕ್ಷೀರ ರಸವಪ್ಪ ಫೇಣಿ ಸುಖೀನುಂಡೆ ವಡೆ ಗಾರಿಗೆಯ. . . ಬಡಿಸಿದರು (ತೋಕಶ. ೩-೩೨). [ಸಂ. ಫೇಣೀ]

**ಫೇನ** (ನಾ). ೧. ನೊರೆ ; ಬುರುಗು : "ಫೇನಃ, ಡಿಂಡೀರಃ—ಈ ೨ ನೊರೆ" (ಹಲಾಯು. ೧೦೦-೪೩); ಸುಲಿಪಲ್ ಮಿಂಚಿನ ಗೊಂಚಲುಟ್ಟು ದುಗುಲಂ ಗಂಗಾನದೀಫೇನಂ (ಕಂಶಶಾ. ೦-೦೬೬); ಉತ್ಕೀರ್ಣಫೇನಂ. . . ಅಂಭೋನಿಧಾನಂ (ಜಗಂ. ೦-೨೩); ರವಿಹಯಾನನಫೇನಪುಂಜವೋ. . . ಎನೆ ತರಳತಾರಾಳಿ ಕಣ್ಗೆಸೆದುದು (ಹಕಶಾ. ೩-೭೯). ೨. ಕಡಲ ನಾಲಗೆ; ಸಮುದ್ರದ ನೊರೆ : "ಡಿಂಡೀರಃ, ಅಬ್ಧಿಕಫಃ, ಫೇನಃ — ೩ ಸಮುದ್ರದ ನೊರೆ" (ಸಿದ್ಧಾಂತಿ. ೩೦೬). [ಸಂ.]

**ಫೇನಿಲ** (ಗು). ೧. ನೊರೆಯುಳ್ಳ ; ಬುರುಗುಳ್ಳ. (ನಾ). ೨. ಅಂಟುವಾಳದ ಮರ ಮತ್ತು ಅದರ ಕಾಯಿ. ೩. ಒಂದು ಬಗೆಯ ಮರ ; ತಿಲಕವೃಕ್ಷ : "ತಿಲಕಂ ಕ್ಷುರಕಮಾಖ್ಯಂ ಫೇನಿಲಮಕ್ಕುಮರಿಷ್ಟಶಾಖಿ" (ವಸ್ತುಕೋ. ೩೩-೨) ; "ಕ್ಷುರಕಮೆನೆ ಫೇನಿಲಮೆನಲ್ ತಿಲಕತರು ವಕ್ಕು" (ಮಂಗರಾ. ೩೬-೦೭). [ಸಂ.]

**ಫೇರಂಡ** (ನಾ). ನರಿ ; ಜಂಬುಕ : "ಜಂಬುಕಃ, ಶಿವಾ, ಫೇರಂಡಃ . . . ಮೃಗಧೂರ್ತಕಃ —ಈ ೮ ನರಿ" (ಹಲಾಯು. ೩೬-೬೬). [ಸಂ.]

**ಫೇರಣೆ** 'ಪೈರಣೆ' ನೋ.

**ಫೇರವ** (ನಾ). ೧. = ಫೇರಂಡ: "ಶಿವೆ ಮೃಗಧೂರ್ತಂ ... ನರಿ ಫೇರವಂ" (ವಸ್ತುಕೋ. ೯೦-೩) ; ಕಾಕಳಿಕಳಿಕಿತಮಪ್ಪ ಕಳಕಂಠೀಜನದ ಗೇಯಮೆತ್ತಲೀ ಕಠೋರಫೇರವ ಪೆಕ್ಕಾರಾರಾವಮೆತ್ತಲ್ (ಪರ್ರಪು. ೬-೯ ಪ) ; ಹರಿಶಂಖಮಹಾಭೈರವರವಮದು ಕಿವಿವುಗೆ ಫೇರವರವವೊದವೆ ರಿಪುಬಲಂ ಕೆಡೆದಿರದೇ (ಜಗಂ. ೬-೦೦೭). ೨. ನೀಚ ; ಅಧಮ. ೩. ಪಿಶಾಚಿ ; ರಾಕ್ಷಸ. [ಸಂ.]

**ಫೇರಿ, ಪೇರಿ$_1$** (ನಾ). ೧.ಪ್ರದಕ್ಷಿಣೆ ; ಸುತ್ತು : ಭೂಮಿಯು ತನ್ನ ಮೈ ಸುತ್ತು ತಿರುಗುತ್ತ ಸೂರ್ಯನ ಸುತ್ತುಮುತ್ತು ವರ್ತುಲಾಕಾರವಾಗಿ ಫೇರಿಯನ್ನು ಹಾಕುತ್ತದೆ (ಮುಂಶಬು. ೬-೩೯) ; ಎಂಥಾ ಮೋಜಿನ ಕುದುರಿ ಹತ್ತಿದ ಮ್ಯಾಲ ತಿರುಗುವುದು ಹನ್ನೊಂದು ಫೇರಿ (ಕಂಕ. ೯೬-೨) ; ಮರಿಗುದುರೆ ಫೇರಿ ತಿರುಹುತ ಬರುತಾನೆ ಬರಿಗ್ಯೊಡದವ್ವ ಬದಿಗಾಗೆ (ಕರ್ಹಾಪು. ೦೨೯). ೨. ಸುತ್ತಾಟ ; ಸಂಚಾರ ; ಓಡಾಟ : ಕುದುರೆಗಳು ಹಲ್ಲಣಿಸಿ ಫೇರಿ ಮಾಡಲಿಕೆಂದು ಸಂದಣಿಸಿ ನಿಂದಿರುವವು (ಕೃಕ್ರಂ. ೨-೩೩) ; ಅಲ್ಲಿ ನಿಂತಿದ್ದುದೂ ಜಾತಿಯಲ್ಲಿ ಕುದುರೆಯಾಗಿದ್ದರೂ . . . ಅಜ್ಜಸಾಬು ಹೇರಿಗೂ ಫೇರಿಗೂ ಬಳಸುತ್ತಿದ್ದ ಟಟ್ಟಿಗಿಂತ ತುಸು ಉತ್ತಮವಾಗಿತ್ತು (ಮರಕು. ೯೨೦). ೩. ಸುತ್ತುಗಳನ್ನುಳ್ಳದು ; ಸುಂಳಿ (?) : ಕಬ್ಬು ಬೆಳೆಯುವ ಸಮಯದಲ್ಲಿ ಒಂದು ಫೇರಿ ಬರುವುದನ್ನು ನೋಡಿ ಆ ಕಬ್ಬಿನ ನಾಲ್ಕೂ ಕಡೆಗೂ ಅದರ ಭಾರದ ತೂಕವನ್ನು ನೋಡಿ ಹತ್ತು ಹದಿನೈದು ಇಪ್ಪತ್ತು ಕಬ್ಬುಗಳನ್ನು ಒಂದುಗೂಡಿಸಿ . . . ಬಿಗಿದು ಕಟ್ಟಿ (ಕೃಶಿಕ್ರ. ೦೯೯).
**ಪೇರಿ$_1$** : ೨. ನಾವು ತಿರುಗೋ ಮುಖ್ಯಗಳು, ಆಗಾಗ ಒಂದು ಫೇರಿ ಹೊಡದು ಬಂದು ಬುದ್ದೀನಿ (ಪುಳ್ಳಿ. ೦೬೩). 'ಪ್ರಭಾತಫೇರಿ' ಪರಾ.

**ಫೇರಿ ಬಿಡು**=ಓಟ ಕೀಳು ; ವೇಗವಾಗಿ ಹೋಗು : ಆ ದಿವಸ ಸೈಕಲು ಹತ್ತಿ ಫೇರಿ ಬಿಟ್ಟೆನಾಯಿತು (ಚಹಚ. ೬೬) : ಗಾಡಿ 'ರೋಟು' ಇದ್ದರೆ ನಾನು ಸೈಕಲ್ ಫೇರಿ ಬಿಡುತ್ತೇನೆ (ಚಹಚ. ೨೬) ; ಫೇರಿ ಬಿಟ್ಟನೆಂದರೆ ಸುಬ್ಬಯ್ಯಶೆಟ್ಟರ ಜಟ್ಕ ಸುಳ್ಳು (ಶಿವಾಉ. ೭). **ಫೇರಿ ಹೊಡೆ**=ಸಂಚರಿಸು ; ಸುತ್ತು : ಹುಬ್ಬಳ್ಳಿ ಧಾರವಾಡ ಕಡೆ ಒಂದು ಫೇರಿ ಹೊಡದು ಬಂದರ ಬೇಕಾದ್ಹಂಗ ಚೈನೀನ ಚೈನಿ (ಶಿಹುಗು. ೩೩). **ಫೇರೀ ಮಾಡು** = ಫೇರಿ ಹೊಡೆ : ಅಕೀ ಏನು ಸಾಂಗಲೀ ಪುಣೇದ ಫೇರೀ ಮಾಡತಿರತಾಳೇನು ? (ಬೀಚಹ. II.೦೩). [←ಹಿಂ. ಮರಾ. ಫೇರೀ]

**ಫೇರಿಸ್ತ್** 'ಫೇರಿಸ್ತು' ನೋ.

**ಫೇರಿಸ್ತಾ** 'ಫೇರಿಸ್ತು' ನೋ.

**ಫೇರಿಸ್ತು, ಫೇರಿಸ್ತ್, ಫೇರಿಸ್ತಾ, ಫೇರೀಸ್ತು** (ನಾ). ವಿವರಗಳನ್ನೊಳಗೊಂಡ ಸೂಚಿ ; ಯಾದಿ ; ಪಟ್ಟಿ : (೧). **ಫೇರಿಸ್ತ್** : (ಕೃಶಗ. II. ೫೯೮). **ಫೇರಿಸ್ತಾ** : ಮಲ್ಲಿಕ್‌ಕಾಫರನು, ದಂಡೆತ್ತಿ ಬಂದಾಗ ಬೇಲೂರು ದೇವಾಲಯವೊಂದರಿಂದಲೇ ತೊಂಭತ್ತಾರು ಸಾವಿರ ಮಣ ಭಂಗಾರವನ್ನು ಸುಲಿಗೆ ಮಾಡಿದನೆಂದು ಅಬ್ದುಲ್ ರಜಾಕನ ಫೇರಿಸ್ತಾದಿಂದ ತಿಳಿದು ಬರುತ್ತದೆ (ಕಶಿಶಿ. ೦೩೨). **ಫೇರೀಸ್ತು** : (೧).
[←ಅರ. ಪಾರ. ಫಿಹರಿಸ್ತ್ ; ಹಿಂ. ಫೇಹರಿಸ್ತ್ ; ಮರಾ. ಫೇರೀಸ್ತ್]

**ಫೇರೀಸ್ತು** 'ಫೇರಿಸ್ತು' ನೋ.

**ಫೇರು** (ನಾ). = ಫೇರಂಡ : "ಜಂಬುಕಃ . . . ಫೇರುಃ, ಕ್ರೋಷ್ಟಾ (ಚ) ಮೃಗಧೂರ್ತಕಃ — ಈ ೮ ನರಿ" (ಹಠಾಹು. ೩೬-೬೬) : ಶ್ವಾನ ಶಾರ್ದೂಲ ಫೇರು . . . ಮುಂತಾದ ಕ್ರೂರಜೀವಂಗಳು ಸಾಯಲು (ಜ್ಞಾಶಚ. ೨೯-೯೦). [ಸಂ.]

**ಫೇಲ** (ನಾ). ತಿಂದುಂ ಮಿಕ್ಕುದು ; ಎಂಜಲು ; ಉಚ್ಛಿಷ್ಟ. [ಸಂ.]

**ಫೇಲಿ, ಫೇಳಿ** (ನಾ). = ಫೇಲ : "ಭೋಜನಕ್ಕಾಗಿ ಮಿಕ್ಕುದು ವಿಘಸ ಮುಕ್ಕುಂಡ ಭಾಜನದೊಳಿರೆ ಫೇಲಿ[ಪಾಠಾ. ಳಿ]ಯುಚ್ಛಿಷ್ಟಮೆನಿಸಿಕ್ಕು" (ಮಂಗನಿಘ. ೬೬-೬). **ಫೇಳಿ** : ಜಂಗುಳಿ ಪುತ್ತಳಿ ಗೋಳಿ ಫೇಳಿ ಜುಟಸಂದೇಹಂ (ಕಪುದ. ೨೩). [ಸಂ. ಫೇಲೀ]

**ಫೇಲಿಕೆ. ಫೇಳಿಕೆ** (ನಾ).=ಫೇಲ. **ಫೇಳಿಕೆ** : "ಭುಕ್ತೋಚ್ಛಿಷ್ಟಂ, ಫೇಳಿಕಾ ಈ ೨ ಮಡಗೂಟು" (ಹಠಾಹು. ೩೯-೦೬೦) ; "ಭುಕ್ತೋಚ್ಛಿಷ್ಟಂ ಫೇಳಿಕೆ" (ಪತ್ರುಶೋ. ೯೩-೯). [ಸಂ. ಫೇಲಿಕಾ]

**ಫೇಲಿಪಾತ್ರ** (ನಾ). ಪೀಕದಾನಿ ; ಪಡಿಗ: "ಫೇಲಿ[ಪಾಠಾ. ಳಿ]ಪಾತ್ರ ಯೆನೆ ಪಡಿಗಮೆನಿಸಿಕ್ಕು" (ಮಂಗನಿಘ. ೬೬-೨೩). [<ಸಂ. ಫೇಲೀಪಾತ್ರ]

**ಫೇಲು** (ನಾ). ತೇರ್ಗಡೆಯಾಗದಿರುವಿಕೆ ; ಅನುತ್ತೀರ್ಣತೆ ; ನಾಪಾಸು : ಕಳೆದ ಪರೀಕ್ಷೆಯಲ್ಲಿ ಅವನು ಫೇಲಾಗಿದ್ದುದರಿಂದ ಈಗ ಕಷ್ಟಪಟ್ಟು ಓದುತ್ತಿದ್ದಾನೆ (ಲೂಹ). [ ← ಇಂ. Fail]

**ಫೇಲೆ** (ನಾ). = ಫೇಲ : "ಫೇಲಾ . . . ಉಂಡು ಮಿಕ್ಕ ಎಂಜಲು" (ಸಿದ್ಧಾಂಶಿ. ೨೯೦). [ಸಂ. ಫೇಲಾ]

**ಫೇಳಿ** 'ಫೇಲಿ' ನೋ.

**ಫೇಳಿಕೆ** 'ಫೇಲಿಕೆ'ನೋ.

**ಫೈಲು** (ನಾ). ೧. ಬೇಕಾದಾಗ ನೋಡುವುದಕ್ಕೆ ಅನುಕೂಲವಾಗುವಂತೆ ಕಾಗದಪತ್ರಗಳನ್ನು ಜೋಡಿಸಿ ಇಡುವ ಸಾಧನ : ಅದಕ್ಕೆ ಸಂಬಂಧಿಸಿದ ಕಾಗದಗಳನ್ನು ಮೊದಲನೆಯ ಫೈಲಿನಲ್ಲಿ ಇಟ್ಟಿದ್ದೀನಿ (ಲೂಹ). ೨. ಜೋಡಿಸಿಟ್ಟ ಕಾಗದಪತ್ರಗಳ ಕಟ್ಟು : ಕಾರಕೂನ . . . ಯಾವುದೋ ಫೈಲಿನಲ್ಲಿ ಮಗ್ನನಾದ (ಶಪ್ಪುಹಿಂ. ೦೩) ; ಎಲ್ಲ ಫೈಲುಗಳನ್ನು ತರಿಸಿ ತಾವೇ ಪರಿಶೀಲಿಸುವುದಾಗಿ ಅಧಿಕಾರಿಗಳು ತಿಳಿಸಿದ್ದಾರೆ (ಲೂಹ). ೩. ನ್ಯಾಯಾಲಯದಲ್ಲಿಯ ವಿಚಾರಣೆಗಾಗಿ ಜೋಡಿಸಿ ಇಟ್ಟುಕೊಂಡಿರುವ ದಾಖಲೆಗಳ ಕಟ್ಟು : ಸದರಿ ವ್ಯಾಜ್ಯವನ್ನು ಫೈಲಿನಿಂದ ವಜಾ ಮಾಡುತ್ತಾರೆ (ನ್ಯಾಮೂಕ. ೨೯) ; ಮೊಕದ್ದಮೆಯನ್ನು ಪೊಲೀಸಿನವರು ಫೈಲಿಗೆ ತೆಗೆದುಕೊಂಡು ತನಿಖೆ ಪ್ರಾರಂಭವಮಾಡಿದರು (ಕಚಿಚಾ. II. ೬೬೦). [ ←ಇಂ. File ]

**ಫೈಸಲ್** 'ಫೈಸಲು' ನೋ.

**ಫೈಸಲಾತಿ** (ನಾ). ತೀರ್ಮಾನ ; ನಿರ್ಣಯ : ಅವನ ಪ್ರಾಮಾಣಿಕತನವನ್ನು ಮೆಚ್ಚಿ ಸಾಲಿಗರು ಲೇವಾದೇವಿಯ ಫೈಸಲಾತಿ ಕ್ರಮಂಗಳಿಗೆ ಅವನನ್ನೇ ನೇಮಿಸಿದರು (ದಾದಾಪ. ೪೦); ಕಚೇರಿಯ ಒಂದು ಕಡತವನ್ನು ಫೈಸಲಾತಿ ಬಗ್ಗೆ ತರಬೇಕೆಂದು ಹೇಳಿ ಕಳಿಸುತ್ತೇನೆ (ಹುಹಾಗ. ೦೨೩). [ < ಫೈಸಲು ]

**ಫೈಸಲು, ಫೈಸಲ್** (ನಾ). = ಫೈಸಲಾತಿ : ಕಮ್ಮಿ ಜಾಸ್ತಿಯ ಲೆಖ್ಖವಿದ್ದ ರಹಿತರು ಸಹಿತ ಫೈಸಲಿಗೆ ಬರುವಂತೆ ಕರಣಿಕರಿಗುಸುರು ನೀನು (ಕಹಾರಿ. ೩೦-೩೮); ಈ ಮೊಕದ್ದಮೆಯ ಫೈಸಲನ್ನು ಮೂರನೇ ದಿನಸ ಹೇಳುವುದಾಗಿ ದಂಡನಾಧಿಕಾರಿ ಅಪ್ಪಣೇ ಮಾಡಿದ್ದೂ ಅಲ್ಲದೆ-ಯಾವ ಕೃತ್ಯವೂ ನಡೆಯಲಿಲ್ಲವೆಂದು ಹೇಳುವುದಕ್ಕಾಗುವುದಿಲ್ಲ (ಅರೂಟಿ. ೦೯೩). **ಫೈಸಲ್** : ಆಗ ಫೈಸಲ್ ಆಗುವಂತೆ ತೋರಲಿಲ್ಲ (ಕೂಹುತ್ತೃ. ೯); ಯಾವ ಕೋರ್ಟಿನಲ್ಲಾಗಲಿ ಫೈಸಲಾಗದೆ ಬಾಕಿಯಲ್ಲಿರುವ ಇಂಥಾ ಎಲ್ಲಾ ವ್ಯಾಜ್ಯಗಳೂ ಆಯಾ ಕೋರ್ಟಿನವರಿಂದಲೇ ವಿಚಾರಿಸಲ್ಪಟ್ಟು ವ್ಯವಸ್ಥೆ ಮಾಡಲ್ಪಡಬೇಕು (ನ್ಯಾಮೂಕ. ೨೦).

**ಫೈಸಲ್ ಮಾಡು**=ತೀರ್ಮಾನಿಸು ; ನಿಕಾಲೆಮಾಡು : ಎಲ್ಲ ಫೈಸಲ್ ಮಾಡಿ ಬಿಡುತ್ತೇನೆ (ದಾಂಶ್. ೨೬೦) ; ಆ ಕಾಗದಗಳನ್ನೆಲ್ಲ ನಾನೇ ಫೈಸಲ್ ಮಾಡತ್ತಿದ್ದೆನಲ್ಲ ? (ರಂಗಳ. ೨೦).
[← ಅರ. ಫೈಸ್ಲಾ ; ಹಿಂ. ಮರಾ. ಫೈಸಲ್]

**ಫೊಟ್ಟನೆ** (ಅ). 'ಫೊಟ್' ಎಂಬ ಸದ್ದಿನೊಡನೆ : ಥೊಪ್ಪನೆ, ಧಣಮ್ಮನೆ ಪುಟ್ಟನೆ, ಫಟಾಲನೆ (ಕಶುದ. ೦೯ ಪ್ರಯೋ). [ಫೊಟ್$_ಅ$+ —ಅನೆ$_೧$]

**ಫೊಳಲಿನಾಡು** (ನಾ). ಒಂದು ನಾಡಿನ ಹೆಸರು : ಕೊಟುಂಬಾಧಿಂಗಜರಲ್ಲಿ ಪಡೆದ ಊರು ಫೊಳಲಿನಾಡುಕ್ಕೊಟಿಯಿಲ್ಲ ಬಳಗೂರಂ ದಿಜಿಟ ಮಾದೇವಿಯಾಳುತ್ತಿರೆ (ಎಕ. XII. ಶಿಕಾ. ೨೯-೩೯; ಹು. ೫೦೦). [? + ನಾಡು]

**ಫೋಟೋ** (ನಾ). ಚಿತ್ರಗ್ರಾಹಕಯಂತ್ರ (ಕೆಮರಾ)ದ ಸಹಾಯದಿಂದ ಮೂಡಿಸುವ ಚಿತ್ರ ; ಛಾಯಾಚಿತ್ರ : ಪತ್ರಿಕೆಯಲ್ಲಿ ೧೨ ವರ್ಷದ ಒಬ್ಬ ಹುಡುಗನ ಫೋಟೋ ಬಂದಿತ್ತು (ಜೀವಾಕ್ಕ. ೨೮೨); ಅಕ್ಕನ ಫೋಟೋ ಮೊಗ್ಗಾವಿಯ ಮನೆಯಲ್ಲಿ ಉಳಿದುಬಿಟ್ಟಿದೆ (ತಪುಹೀ. ೪೬೪).
[← ಇಂ. Photo]

**ಫೋಟೋಗ್ರಫಿ** (ನಾ). ಛಾಯಾಚಿತ್ರ ತೆಗೆಯುವ ವಿದ್ಯೆ : ಫೋಟೋ ತೆಗೆಯಲು ಸ್ಥೂಲಪ್ರಕಾಶ ಬೇಕು. ಸೂಕ್ಷ್ಮಶರೀರವು ಫೋಟೋಗ್ರಫಿ ತತ್ವಕ್ಕೆ ಸಂಬಂಧಪಟ್ಟುದಲ್ಲ (ಜೀವಾಕ್ಕ. ೨೩೩). [←ಇಂ. Photography]

**ಫೋಟೋಗ್ರಾಫರ್** (ನಾ). ಛಾಯಾಚಿತ್ರಗಳನ್ನು ತೆಗೆಯುವವನು ; ಫೋಟೋ ತೆಗೆಯುವವನು : ಫೋಟೋಗ್ರಾಫರ್‌ನು ದೊಡ್ಡ ಚಿತ್ರಗಳನ್ನು ಚಿಕ್ಕವನ್ನಾಗಿಯೂ . . . ಪರಿವರ್ತಿಸಬಲ್ಲ (ಜೀವಾಕ್ಕ. ೨೨೩).
[ ← ಇಂ. Photographer ]

**ಫೋಡ್** (ನಾ). ಜಮೀನನ್ನು ವಿಭಾಗಿಸುವಿಕೆ. – ಪೋಟುಭಾಗ ಮಾಡುವಿಕೆ : (ಕೃಶಗ. II. ೩೩೯). 'ಫೋಡು' ಪರಾ.
[←ಹಿಂ. ಫೋಡಾ ; ಮರಾ. ಫೋಡ್]

**ಫೋತಿ** 'ಪೌತಿ' ನೋ.

**ಫೋನ್** 'ಫೋನು' ನೋ.

**ಫೋನು, ಫೋನ್** (ನಾ). ವಿದ್ಯುಚ್ಛಕ್ತಿಯ ಸಹಾಯದಿಂದ ಧ್ವನಿಯನ್ನು (ಮುಖ್ಯವಾಗಿ ಮಾತುಗಳನ್ನು) ತಂತಿಮಾರ್ಗವಾಗಿ ಸ್ಥಳ

ದಿಂದ ಸ್ಥಳಕ್ಕೆ ಸಾಗಿಸುವ ಸಲಕರಣೆ ; ದೂರವಾಣಿ ; ಟೆಲಿಫೋನು : ನನ್ನ ಫೋನಿನ ಸಂಖ್ಯೆಯನ್ನು ಆತನಿಗೆ ಶ್ರುತಪಡಿಸಿ . . . ಹಸಿದಿದ್ದ ಹೊಟ್ಟೆಯ ಕಡೆಗೆ ಈಗ ಗಮನ ಕೊಟ್ಟೆ (ಹಂಚಿಟು. ೦೦೩). **ಫೋನ್** : ನಮ್ಮ ಮನೆಯಲ್ಲಿ ಫೋನ್ ಇದೆ (ರೂಢಿ).

**ಫೋನುಮಾಡು** = ದೂರವಾಣಿಯ ಮೂಲಕ ಸಂಪರ್ಕ ಬೆಳೆಸು.— ಮಾತನಾಡು : ಅಗತ್ಯವಿದ್ದರೆ ಫೋನು ಮಾಡಿ ತಿಳಿಸಿಬಿಡು (ರೂಢಿ).

[← ಇಂ. Phone]

**ಫೋನೋಗ್ರಾಫು** (ನಾ). ರಬ್ಬರ್ ತಟ್ಟೆಗಳ ಮೇಲೆ ಧ್ವನಿಸಂಗ್ರಹ ಮಾಡಿ, ಅದನ್ನು ಪುನಃ ಧ್ವನಿಯಾಗಿ ಹೊರಡಿಸುವ ಯಂತ್ರ; ಸ್ವರಲೇಖಕಯಂತ್ರ; ಗ್ರಾಮಫೋನು : ಮಹಾರಾಜರು ಅದನ್ನು ಎಡಿಸನ್ನನ ಫೋನೋಗ್ರಾಫಿನಲ್ಲಿ . . . ಧ್ವನಿ ಮುದ್ರಿಸಿಕೊಂಡರು (ಸಂಗೀತ.೨೦) ; ಫೋನೋಗ್ರಾಫಿನಲ್ಲಿ ನಾಟಕದ ನಟಿಯರ ಹಾಡುಗಳನ್ನು ಕೇಳಿಸಿ, ಅವನು ತನ್ನ ಮಿತ್ರವರ್ಗವನ್ನು ಸಂತೋಷಗೊಳಿಸುವ (ಆತ್ಮ.೩೦೧).

[← ಇಂ. Phonograph]

**ಫೋನೋಗ್ರಾಮ್** (ನಾ). = ಫೋನೋಗ್ರಾಫು : ಅವರ ಮನೆಯ ಹಳೆಯ ಕಾಲದ ಫೋನೋಗ್ರಾಮಿನಿಂದ ಹಾಡು ಕೇಳಿ ಬರುತ್ತಿತ್ತು (ರೂಢಿ).

[← ಇಂ. Phonogram]

**ಫೋರ್ಜರಿ** (ಗು). ೧. ಕೃತಕವಾದ ; ನಕಲಿ : ನಿನ್ನ ಹತ್ತಿರ ಫೋರ್ಜರಿ ನೋಟುಗಳು ಇಲ್ಲವಲ್ಲ (ಕೂಪತ್ನ. ೦೬). (ನಾ). ೨. ದಸ್ತೈವಜು ಮೊದಲಾದುವುಗಳ ಖೋಟಾ ರಚನೆ ; ಅಸಲಿನಂತೆಯೇ ಇರುವ ಸುಳ್ಳುಪತ್ರ : ಅವನು 'ಫೋರ್ಜರಿ' ತಯಾರಿಸುವುದರಲ್ಲಿ ಹೆಸರುವಾಸಿ (ರೂಢಿ). ೩. ಕಳ್ಳರುಜು.—ಸಹಿ : ಅವನು . . . ಫೋರ್ಜರಿಯ ಅಪಾದನೆಗಾಗಿ ಬಂದಿಯಾಗಿದ್ದ ತನ್ನ ತಮ್ಮನನ್ನು ನೋಡುವ ಸಲುವಾಗಿ ಅವನಲ್ಲಿಗೆ ಬಂದಿದ್ದನು (ಪ್ರಕರು. ೦೬೮). [← ಇಂ. Forgery]

**ಫೌಜದಾರ್** 'ಫೌಜುದಾರ' ನೋ.

**ಫೌಜದಾರ** 'ಫೌಜುದಾರ' ನೋ.

**ಫೌಜದಾರಿ** 'ಫೌಜುದಾರಿ' ನೋ.

**ಫೌಜು**, **ಪವುಜು**, ಪೌಜು, ಫವುಜು (ನಾ). ದಂಡು ; ಸೈನ್ಯ ; ಪಡೆ : ಭಾಸ್ಕರ ಬಿಸಿಲ್ಗುದುರೆಯ ಫೌ[ಪಾಠಾ. ಪೌ]ಜನಟ್ಟಿದನು (ಜೈಮಿನಿ. ೦೯–೯೩); ಪಾರವಿಲ್ಲದ ರತ್ನಕಾಂತಿಯಿಂ ಜ್ವಲಿಪ ಭಂಗಾರದಾಸನದಲ್ಲಿ ಮಂಡಿಸಲ್ಕೆ ಪರಿವಾರ ನೃಪಸೇವೆಯೊಳ್ ನಿರತರಾಗಿರುತಿರಲು ಸುರುಟಂಗೆ ಫೌಜೊದಗಿತು (ಅಹಲ್ಯಾ.೨೯–೩೩); ಗಾಜಿ ನೋಡಲು ಬಂದ ಜನರಿಗೂ ವಿನಾಕಾರಣ ಪೆಟ್ಟು ಸಿಕ್ಕಿ ಸರಕಾರದ ಮೇಲೂ ಪೋಲೀಸು ಫೌಜಿನ ಮೇಲೂ ಹಳ್ಳಿಗರಿಗೆ ಒಳಗೊಳಗೆ ಕುದಿಯುತ್ತಿತ್ತು (ಕರುಳಿ. ೦೨೦). **ಪವುಜು** : ಭರದಿಂದಾ ಕಾಲದ ಕಾರ್ಮುಗಿಲೊಳ್ ಪಿರಿದುಂ ಮುಳಿದು ಪಳಂಚುವ ಪಾಂಗಿಂದೆರಡುಂ ಪವುಜಿನ ವೀರಾನೀಕ ತಟ್ಟೇಟಾಯಿರ್ದಿರ್ದರು (ಜಯನೃ.೬–೩೬); ಕರಿಗಳೊ ಕಲ್ಪಾಂತಮೇಘದೊಬ್ಬುಳಿಗಳ ಸರಿಗಳೊ ಕಾಲಾಳ ಪವುಜೊ . . . ಎನೆ ತುರುಕರ ಬಲವ್ಯದಿದುದು (ಕಂಠೀರ.೦೯–೯೬). **ಪೌಜು**: "ಒಡ್ಡಿನಲ್ ಪೌಜುವೆಸರ್" (ಚತುರಾ. ೩೮); ತಾ ತುರಂಗದ ಮೇಲೆ ಪಶು ತಮವೆಂಬ ಖಂಡೆಯವ ಒಡಿದು ಚಂಡಿಕಾಕಿರಣದ ಮೇಲೆ ಅಂಗೈಸಿ ಏಚ ಲಾಗಿ ಪೌಜು ಬೆರೆಯಿತ್ತು (ಸರ್ವಜ್ಞ. ೩೬–೨೯೯); ಕರಿಘಟೆಯೊಂದು ಕರಭ ಪಾಜು ತುರಗ ಸಾವಿರ ಹತ್ತುಸಾವಿರಮುಂದಿ ಇರಲದನೊಂದು ಪೌಜೆಂದು ಪೇಳ್ವರು (ಶಂಕರಸಾಂ. ೯೦–೬೩) ; ಮೋಳೈಸಿ ನಿಲಿಸಿದಂ ನಿಜಬಲದ ಪೌಜುಗಳ ನರ್ಧಚಂದ್ರಾಕೃತಿಯೊಳು (ಕೃಷ್ಣರಾ. ೨೫–೦೦). **ಫವುಜು**: ಒಡ್ಡಿದ ಫವುಜನು ದೊಕ್ಕನೆಂದೊಬ್ಬುಳಿ ಮಾಡಿ (ಅನಂತ.೨೯–೪೦); ಈಗ ನಿಮ್ಮ ಫವುಜು ಕಳುಹಿಸಿ ಕೊಟ್ಟರೆ ಈ ಕೋಟೆ ನಿಮ್ಮ ಕೈವಶ ಮಾಡಿಕೊಡುತ್ತೇವೆ (ರಾಕೇಂದ್ರ.೪).

**ಫೌಜುಫೌಜು**, **ಪೌಜುಪೌಜು** (ದ್ವಿರುಕ್ತಿ): ವಾಜಿವಾಜಿಗಳ ವೈಹಾಳಿಯುಂ ಮಾಡುತ್ತ ಫೌಜುಫೌಜಿಗೆ ಕೂಡಿಕೂಡಿ ಖುರಪುಟರವಕೆ ಮೂಜಗವು ತಲ್ಲಣಿಪ ತೆರದಿಂದೆ . . . ಹೊಯ್ದಾಡುತಿರಲು (ಶ್ರೀಕರಾ.೦೯–೩೮); ಪೌಜು ಪೌಜಾಗಿ ಬೊಬ್ಬಿಟೇಳುವರಿಭಟರೋಜೆಯನೇನ ಬಣ್ಣಿಸುವೆ (ಕಂಠೀರ. ೦೯–೯೭). **ಫೌಜನಿಕ್ಕು** = ಸೈನ್ಯವನ್ನು ನಿಲ್ಲಿಸು: ಕಾಳಗದಲ್ಲಿ ಫೌಜನಿಕ್ಕಿದಡೆ ವೋಚಿದಡೆ ಅರಸೆಂಬರಲ್ಲದೆ ಬಂಟರೆಂಬುದಿಲ್ಲ (ಪೋಷಕಶ.೨–೩); ಶೋಣಿತಪುರದ ಪಶ್ಚಿಮದಿಕ್ಕಿನಲ್ಲಿ ಶೂಲಪಾಣಿಯಾ ಪಾಜನಿಕ್ಕಿದನು (ಪೋಷಕ. ೩೬–೩೦). **ಫೌಜಾಗು** = ಗುಂಪಾಗು ; ಪಡೆಯಾಗು : ಅತಿಬಲರಖಿಲ ಧಾತ್ರೀಶರನಿಬರು ಬೇಗ ತಂತಮ್ಮ ಬಲವೆರಸಿ ಪೌಜಾಗಿ . . . ನಿಲೆ (ಹ್ಮಿ.ಶಾ. ೦೬–೬೬) : ಆತನ ಯಜ್ಞಶಾಲೆಯೊಳ್ ಅಜಸಾಸಿರಗಂಧರ್ವರೇಳುಪೌಜಾಗಿ ಮೇಳಮಂ ಕಟ್ಟಿ ನರ್ತನಮನೆಸಗುತ್ತಿರ್ಪರು (ರಾಜಶೇಖ. ೨೯–೨೦೩). [← ಅರ. ಹಿಂ. ಮರಾ. ಫೌಜ್]

**ಫೌಜುದಾರ**, ಪಉಜುದಾರ, ಪೌಜುದಾರ, ಫೌಜದಾರ್, ಫೌಜದಾರ, ಫೌಜ್ದಾರ (ನಾ). ೧. ಸೈನ್ಯದ ನಾಯಕ; ಸೇನಾಧಿಪತಿ : ಯುದ್ಧ ಪ್ರಸಕ್ತಿ ಬಿದ್ದ ಕಾಲದಲ್ಲಿ ಅಂಥಾ ಮುಖಂಡರಿಂದ ದಂಡಿನ ಸಹಾಯವನ್ನು ಹೊಂದುತಿದ್ದರು; ಇಂಥಾ ಮುಖಂಡರಿಗೆ ಫೌಜುದಾರರು ಎಂತಲೂ ಹೆಸರಿತ್ತು (ಹಳೇಗ.೦೬); ಬಾಜಿಯು ಹೆಚ್ಚು ಸಿಪಾಯಿಗಳನ್ನು ತರುವಂತೆ ಫೌಜುದಾರನಿಗೆ ಹೇಳಿ ಕಳುಹಿಸಿದನು (ಅಂತರು. ೩೦೨). ೨. ಪೋಲೀಸು ದಳದ ಕಿರಿಯ ಅಧಿಕಾರಿ : ಏನು ಮಾಡಬೇಕೆಂಬ ಪ್ರಶ್ನಾರ್ಥಕ ದೃಷ್ಟಿಯನ್ನು ಫೌಜುಧಾರನು ಗುಪ್ತಪೋಲೀಸನ ಕಡೆಗೆ ಬೀರಿದನು (ಪೂಜಾಸಾ. ೩೬); ಅವನು ಫೌಜುದಾರರ ಮಗ ಹುಸೇನಿ (ರಂಗರೋ.೨೨). **ಪಉಜುದಾರ**: ೧. ಅಮಾನ ಪಉಜುದಾರ ಅಮೀರಬೇಗಸಾಹೇಬರು ಜಮೀನದಾರರು . . . ಬರಸಿ ಕೊಟ್ಟ ತಾಮ್ರಪ್ರದ ಶಾಸನ (ಎಪಿ. XII. ತಿಪ. ೦೦೨–೩; 1780). **ಫೌಜುದಾರ** : (೩). **ಫೌಜದಾರ್** : ೨. ಹೆಡ್‌ಕ್ವಾರ್ಟರಿನ ಈ ಎಲ್ಲ ಪೋಲೀಸರ ಮೇಲೆ ಒಬ್ಬ ಫೌಜದಾರ್ (ಸಬ್‌ಇನ್‌ಸ್ಪೆಕ್ಟರ್) ಇರುತ್ತಾರೆ (ಹಾಳೂರು.೪೩). **ಫೌಜದಾರ**: ೧. ಅದುವರಗೂ ಅಲ್ಲಿ ಫೌಜದಾರ ಮುಂತಾದ ಪ್ರಧಾನರಾದ ರಾಜಕರ್ಮಚಾರಿಗಳು ವಾಸಮಾಡುತ್ತಿದ್ದರು (ಕಡಾಳು. ೩೬). ೨. ನೆಲಕ್ಕೆ ಬಿದ್ದ ಫೌಜದಾರರನ್ನು ಉಪಚರಿಸಲು ಕೂಡ ಚಾವಡಿಯಲ್ಲಿ ಯಾರೂ ಉಳಿದಿರಲಿಲ್ಲ (ಗ್ರಾಮಾಯ. ೦೬೪); ಮಧ್ಯವಯಸ್ಸಿನ ದಷ್ಟಪುಷ್ಟ ದೇಹದ ಆ ಫೌಜದಾರರು ತಮ್ಮ ತೀಕ್ಷ್ಣದೃಷ್ಟಿಯನ್ನು ನನ್ನ ಮೇಲೆ ಹರಿದಾಡಿಸಿದರು (ಹಾಳೂರು.೪೩); ಫೌಜದಾರರು ಅವರನ್ನು ಬಹು ಟಬರಿನಿಂದ ಆಮಂತ್ರಿಸಿದರು (ಅಕ್ಕರ್ಮ. ೨೯೬). **ಫೌಜ್ದಾರ** : ೨. ಧತ್ರದಲ್ಲಿ ಪ್ರಿಯಪಟ್ಟಣದ ಫೌಜ್ದಾರರು ಬಿಡಾರ ಮಾಡಿಕೊಂಡಿದ್ದರೆ . . . ಅವರ ಒಬ್ಬಳೇ ಮಗಳು ಹತ್ತು ವರ್ಷದ ಹುಡುಗಿಯನ್ನು ಎತ್ತಿಕೊಂಡು ಹೋಗಿ ಬಿಟ್ಟಿಧಾರಂತೆ (ಕಂಗಾಳ. ೦೨೦). [ ಫೌಜು + –ದಾರ೩ ]

**ಫೌಜುದಾರಿ**, ಪೌಜುದಾರಿ, ಫೌಜದಾರಿ (ನಾ). ೧. ಆಡಳಿತ ಸೌಕರ್ಯಕ್ಕಾಗಿ ಪ್ರತ್ಯೇಕಿಸಿದ ಪ್ರಾಂತ,—ಜಿಲ್ಲೆ : ಅಲ್ಲಿಯ ನಡವಳಿಕೆಗಳನ್ನು ತಿಳಿಯಲು ಆ ಗಡಿಗಳಿಗೆ ಸಮೀಪವಾಗಿರುವಂತೆ ೬ ಫೌಜುದಾರಿ(ತುಕಡಿ)ಗಳೂ ಸ್ಥಾಪಿತವಾದುವು (ಮಹಾಶಂ. II. ೩೬). **ಫೌಜುದಾರಿ** : ೨. ಅಪರಾಧಕ್ಕೆ ತಕ್ಕ ದಂಡನೆಯನ್ನು ವಿಧಿಸುವ ಸ್ಥಳ : ತಕ್ಸೀರು ವಿಚಾರಣೆ ಮಾಡುವ ಕಚೇರಿ,—ನ್ಯಾಯಾಲಯ: (೩). **ಫೌಜದಾರಿ** : ೧. ಪೂರ್ವದಲ್ಲಿ ಡಿಸ್ಟ್ರಿಕ್ಟುಗಳಿಗೆ ಫೌಜದಾರೀ ಎಂದು ಹೆಸರು ಇತ್ತು (ಹಾಸುಶಂ. ೩೩೬). ೩. ದೊಂಬಿ ; ಜಗಳ ; ರೂಪಚಂದನ ಅಪ್ಪಣೆಯ ಮೇರೆಗೆ ಅವನಿಂದ ಎಷ್ಟೋ ಫೌಜದಾರಿಗಳಾಗಿದ್ದುವು (ಇಬಾತ್ಸಾ. ೯೦); ಇವರು ಜೀವ ಉಳಿಸಿಕೊಂಡು ಓಡಿಬರದಿದ್ದರೆ ಫೌಜದಾರಿಯಾಗುತ್ತಿತ್ತು (ಕ್ರೀಡಾತ್ರ.೩೩). [ ←ಹಿಂ. ಮರಾ. ಫೌಜದಾರೀ ]

**ಫೌಜ್ದಾರ** 'ಫೌಜುದಾರ' ನೋ.

**ಫ್ಯಾಷನ್** 'ಫ್ಯಾಷನ್ನು' ನೋ.

**ಫ್ಯಾಷನ್ನು, ಫ್ಯಾಷನ್** (ನಾ). ಉಡುಗೆ, ತೊಡುಗೆ ಮೊದಲಾದುವು ಗಳಲ್ಲಿ ಕಾಲಕಾಲಕ್ಕೆ ಬಳಕೆಗೆ ಬರುವ ಸಂಪ್ರದಾಯ.—ರೂಢಿ: ದಿನದಿಂದ ದಿನಕ್ಕೆ ಉಡುಗೆ ತೊಡುಗೆಗಳ ಫ್ಯಾಷನ್ನು ಬದಲಾಗುತ್ತಲೇ ಇರುತ್ತದೆ (ರೂಢಿ). **ಫ್ಯಾಷನ್**: ಅವಳು ಈಗಿನ ಕಾಲದ ಯಾವ ಫ್ಯಾಷನ್ ಅನ್ನೂ ಮಾಡುವುದಿಲ್ಲ (ರೂಢಿ). [ ← ಇಂ. Fashion ]

**ಫ್ರೋಕ್ಸು** 'ಪುರೋಕ್ಷು' ನೋ.

**ಬ₁** (ನಾ). ೧. ಕನ್ನಡವರ್ಣಮಾಲೆಯ ನಲವತ್ತುಮೂರನೆಯ ಅಕ್ಷರ; ಬಕಾರ: ಉತ್ತರಪದದ ಆದಿಯಲ್ಲಿರುವ ಕ, ತ, ಪ ಗಳಿಗೆ ಕ್ರಮವಾಗಿ ಗ, ದ, ಬ ಗಳು ಪ್ರಾಯಶಃ ಆದೇಶವಾಗಿ ಬರುವುವು (ಶಬ್ದ.ರ.೯೦). ೨. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ: "ಖಛಫರವಾದರಡಕ್ಕು ಗ ಡ ಬ ಲಂ ಮೂಱಕ್ಕು" (ಶುಂಗಣಾ. ೦೪೯-೦೦).

—**ಬ₂** (ಪ್ರ). ಗುಣವಾಚಕದೊಂದಿಗೆ ಸೇರಿ ವ್ಯಕ್ತಿವಾಚಕಾರ್ಥವನ್ನು ಕೊಡುವ ಒಂದು ಪ್ರತ್ಯಯ: 'ಪಳಬ', 'ಪೊಸಂಬ' ಪರಾ.

**ಬಂಕ₁** 'ಬಂಕಿ₁' ನೋ.

**ಬಂಕ₂** 'ಪಕ್ಕ' ನೋ.

**ಬಂಕ₃** 'ಬಾಂಕು₂' ನೋ.

**ಬಂಕಂಗಡಿ** (ನಾ). ಮುಂಭಾಗದ ಎರಡೂಕಡೆಗಳಲ್ಲಿ ಜಗಲಿಗಳಿರುವ ಅಂಗಡಿ: ಅಲ್ಲಿಂದ ಹೊರಟ ಮೇಣವನು, ಮೈಲಾಪುರದ ಕಾಳಾದೇವಿ ರಸ್ತೆಯಲ್ಲಿರುವ ಗೋಪಾಲನಾಯರ‍್ರ ಬಂಕಂಗಡಿಗೆ ಬಂದು ಮುಟ್ಟಿದನು (ಕಾಬುಯು.೩೩). [ಬಂಕ₃ (< ಬಾಂಕು₂) + ಅಂಗಡಿ (<ಅಂಗಾಡಿ)]

**ಬಂಕಣ** 'ಬೊಕ್ಕಣ₁' ನೋ.

**ಬಂಕದೆೞ್** (ನಾ). ಒಂದು ಬಗೆಯ ತೆರಿಗೆ.—ಸಂಂಕ: ಬಂಕದೆೞ್ ಸಿದ್ದಾಯ ಬಿಟ್ಟ ಕೊಟ್ಟಣವನುಪಸಂಕ ಮಲವದಿಕೆ ಸೊಲ್ಲಿಗೆ ಕವಾ ಕಡ್ಡಾಯ (ಸಿಂಗಿರಾ.೨೨-೨೬). [ ಬಂಕ₂ + ತೆಱ್₂ ]

**ಬಂಕಪುರ, ಬಂಕಾಪುರ** (ನಾ). ಒಂದು ಊರಿನ ಹೆಸರು; ಈಗಿನ ಧಾರವಾಡಜಿಲ್ಲೆಯ ಶಿಗ್ಗಾಂವಿತಾಲ್ಲೂಕಿನ ಒಂದು ಊರು: ಬ[ಙ್ಕ]ಪುರದ ಧೋರ ಜಿನಾಲಯದ ಚನ್ದ್ರಪ್ರಭ ಭಟಾರಾರ್ಪ್ಪ ಸುಣ್ಣಿಯನುಭನ್ನರಸಿದ್ದಿಯಾಳುತ್ತಿರೆ (ಕ್ಶಾಇ. XI-1, ೩೭-೭; 925); ಚಕ್ರ ಗೊಟ್ಟವ್ಯಚ್ಚಂಗಿ ವಿರಾಟನ ಪೊಳಲು ಬನ್ನಪುರಂ ಬನವಾಸೆ (ಎಕ. XVI, ಕಶಾ. ೬೨-೯; 1282). **ಬಂಕಾಪುರ**: ಬಙ್ಕಾಪುರದೊಳಜಿತಸೇನಭಟ್ಟಾರಕರ ಶ್ರೀಪಾದಸನ್ನಿಧಿಯೊಳ್ ... ನೋನ್ತು (ಎಕ. II, ೫೯-೦೦೯; 974); ಬಂಕಾಪುರದ ಪಂಚಮಠಸ್ಥಾನಮುಂ (ಎಕ. XIII, ೦೭೦-೪೦; 1055); ಬಂಕಾಪುರಕ್ಕೆ ಹೋದರೆ ಡೊಂಕು ಬಿಟ್ಟೀತೇ? (ಗಾದೆ). [ಬಂಕ₂ + ಪುರ₂]

**ಬಂಕಾಪುರ** 'ಬಂಕಪುರ' ನೋ.

**ಬಂಕಿ** 'ವಂಕಿ' ನೋ.

**ಬಂಕು₁** (ಕ್ರಿ). ಬಾಗು; ಡೊಂಕಾಗು; ವಕ್ರವಾಗು: "ಬಂಕು—ಕೌಟಿಲ್ಯೇ (ವಕ್ರವಾಗು)" (ಕ್ರಿಯಾ); ಸೊಪದಿಂಗಮಾಗ್ಗಿಸಿ ತುಂಬಿಪೆರಸು ಕೂಂಕಿ ಬಂಕಿ ಬಿಟ್ಟು ಕುವಳಯಾಪೀಡನಂ ಕುವಳಯಾಪೀಡನಂ ಮಾಡಿ (ಆದಿಪು. ೬-೬೩ ವ); ಕೊಂಕುತೆ ಬಂಕುತೆ ಹಾರೈಸುತ್ತಂ ... ಆಡುವ ಗುಂಡಯ್ಯನ ಹೊಸನೃತ್ಯಂ ನೋಡುವ ಶಿವನಂ ಮುಟ್ಟಿತು ಸತ್ಯಂ (ಸೋಮೇಶ. ೩-೩೩.೨೦). 'ಬಗ್ಗು₁' ಪರಾ. [ ದೇ. ೫ ತಮಿ. ವಾಙ್ಕು; ಮಲ. ವಾಙ್ಙು; ತುಳು. ಬಾಂಗು; ಕೊಡ. ಬಾಂಗ್; ತೆಲು. ವಂಗು; ಕೋಲಾ. ವಾಯ್ಕು. ಪರ್ಜಿ. ವಂಗ್ ]

**ಬಂಕು₂** 'ವಂಕು' ನೋ.

**ಬಂಕುಡಿ** 'ವಂಕುಡಿ' ನೋ.

**ಬಂಕುಡಿಗಾಲು, ಬಂಕುಳಿಕಾಲು** (ನಾ). ಸೊಟ್ಟಗೆ ತಿರುಗಿಕೊಂಡಿರುವ ಕಾಲು: ಒಡನೊಡಂಬಡದ ಕೆಂಪಿಡಿದ ತಲೆನವಿರ ಬಂಕುಡಿಗಾಲ ಬೆರಳುಗಳ ದೊಡ್ಡತುಟಿಯ ... ದೂರ್ತಿನ ಸೊಗಸದಡಿಯಿಡುವವಳೆ ಹಸ್ತಿನಿ (ಅಪರ. ೨-೦೩). **ಬಂಕುಳಿಕಾಲು**: ಬಂಕುಳಿಕಾಲು ಜುಂಗುಗಳು ವಳ್ಳಿಹ ಉಗುರ್ಗಳು (ಸೌಗಂ. ೯೯೯-೩). [ಬಂಕುಡಿ (< ವಂಕುಡಿ) + ಕಾಲು₁ (< ಕಾಲ್₁)]

**ಬಂಕುರು** (ನಾ). ಒಂದು ಬಗೆಯ ಮೀನು: ಹೆಲ್ಲರಂ ಬಂಕುರಂ ... ಗಿಜಿಲುಗಳೆಂಬ ಹೊಳೆವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹರಿಶ. ೩-೯೩). [ ? ]

**ಬಂಕುಳಿಕಾಲು** 'ಬಂಕುಡಿಗಾಲು' ನೋ.

**ಬಂಕೆ₁, ಬಂಕ₁, ಬೊಂಕ, ಬೊಂಕೆ** (ನಾ). ೧. ಒಂದು ಬಗೆಯ ಅಂಟು.– ಗೋಂದು; ನಿರ್ಯಾಸ: ಬಂಕೆಯಂಟನಂದದಿ ಸ್ನೇಹ (ಕವಿಮು. ೯೭-೩೯). ೨. ಅಂಟು; ಜಿಗಿ: ತ್ರಿದೋಷದಲ್ಲಿ ಸಾವವನ ನಾಡಿ ಅತಿಶೈತ್ಯವಾಗಿ ತುಪ್ಪದ ಕೊಡೆದ ಹಾಗೆ ನಯವಾಗಿ ಬಂಕೆ ಬೆವರಾಡುವದು (ವೈದ್ಯಸಾ. I, ೩). **ಬಂಕ₁**: ೧. 'ಬೂರಗಬಂಕ' ಪರಾ. ೩. ಸಿಪ್ಪೆ; ತೊಗಟೆ: ದಾಳಿಂಬದ ಬಂಕಮಂ ಚೂರ್ಣಿಸಿ ವಸ್ತ್ರಗಾಳಿತಮಂ ಮಾಡಿ ... ತೆಗೆದುಕೊಳ್ಳಲು ಎಂತಪ್ಪ ಬಹುಮೂತ್ರಮುಂ ಮಾಣ್ಗುಂ (ಕಳ್ಯ. ೩೬೩). **ಬೊಂಕ**: ೧. "ಕೋಲಕಂ, ತಕ್ಕೋಲಕಂ, ಕೋಶಫಲಂ — ೩ ತಕ್ಕೋಲದ ಗಿಡ, ತಕ್ಕೋಲದ ಬೊಂಕ" (ಸಿದ್ಧಾಂತಿ. ೨೦೬). **ಬೊಂಕೆ**: ೧. "ಪಾಯಸಃ ... ಸರಳದ್ರವಃ — ೫ ಸರಳದೇವದಾರುವೃಕ್ಷದ ಬೊಂಕೆ" (ಸಿದ್ಧಾಂತಿ. ೨೦೬). 'ಬೂರಗೆಬಂಕೆ' ಪರಾ.

**ಬಂಕೆಬೆವರು**=ಅಂಟಂಟಾದ ಬೆವರು: ಜ್ವರ ಬಿಟ್ಟು ಹೋಗುವಿನ ಮೈಯೆಲ್ಲಾ ಬಂಕೆಬೆವರಿನಿಂದ ತೊಯ್ದು ಹೋಗಿದೆ (ರೂಢಿ). [ದೇ. ೫ ತೆಲು. ಬಂಕ; ಕೋಲಾ. ಬನ್ಕ.ಬಕ್ಕ; ನಾಯ್ಕಿ. ಬಕ್ಕ; ಪರ್ಜಿ. ಬಾಕ್; ಗೊಂಡಿ. ಬೊಕರ್]

**ಬಂಕೆ₂** 'ವಂಕು' ನೋ.

**ಬಂಕೆಯರಸ** (ನಾ). ಒಬ್ಬಾತನ ಹೆಸರು: ಬಂಕೆಯರಸರಾಳುತ್ತಿರೆ ಬಂಕೆಯರ ಮಗಂ ಕುನ್ದಟ್ಟ (ಎಕ. VII, ೨೦೩-೬; 874); ಮಹಾಸಾಮನ್ತ ಕಲಿದೇವಯ್ಯರಾನ್ವಯದೊಳ್ ಬಙ್ಕೆಯರಸರ ಮಗಂ ಶ್ರೀಲೋಕಟಿಯರಸರ್ (ಎಕ. VII (S), ಶಿಕಾ. ೩೬೮-೫; 902). [ಬಂಕೆ₂ + ಅರಸ₁]

**ಬಂಕೋಲು** (ನಾ). ಕೊಕ್ಕೆಕೋಲು; ದೋಟಿ: ಹಣ್ಣ ಬಂಕೋಲ ನುರೆ ಮುಂಗೈಯ್ಗೆಲೆಡೆಯಲ್ಲಿ ಹೊಂದಿಸುತ (ಧುರಕ್ಷ. ೬-೦೨). [ ಬಂಕು₂ (< ವಂಕು) + ಕೋಲು₁ (< ಕೋಲ್₁) ]

**ಬಂಗ** (ನಾ). ೧. ಭಿನ್ನವಾದುದು; ಚೂರು: "ಬಂಗ (ಬಂಗಿ)—ಭಂಗ = ನಾಶ, ಭಿನ್ನ" (ಕರ್ಣಕೋ. ೨೬). ೨. ಕಷ್ಟ; ದುರ್ಗತಿ; ಹೀನಸ್ಥಿತಿ: ಏನೋ ನಿನ್ನ ಅಣವು ದಣವು ಬಂಗ ಬಡತನ ಎಲ್ಲಾ ಕೇಳಿಕೊಂಡು ಬಂದಿದ್ದೀಯ್ತು (ಹುಟ್ಟಿಹ.೦೩೮); ಏನೋ ಅವರ ಬಂಗ ಬಡತನಕ್ಕೆ ಒಂದಿಷ್ಟು ಕಾಯಿ ಕಸಿ ಕಿತ್ತುಕೊಂಡ್ಹೋಗಿ ಹೊಟ್ಟೆ ಹೊರಕಹಾರೆ (ಕಪ್ಪುಕು. ೦೩೯); ಬಂಗು ಬಂದವನಿಗೆ ಬಂಗ ಬರದಿರದು (ಗಾದೆ). ೩. ಅವಮಾನ; ತೇಜೋಭಂಗ: ಅವರ ಮನೆ ಬಾಗಿಲಿಗೆ ಹೋಗಿ ಅನುಭವಿಸಿದ ಬಂಗ ಎಂದಿಗೂ ಮರೆಯಲಾರೆ (ರೂಢಿ). ೪. (ಆಲಂ) ವೃತ್ತಿ; ಉದ್ಯೋಗ: ಆಳುಗಳೆಲ್ಲಾ ... ವ್ಯವಸಾಯಗಳಿಗೂ ಬಂಗಗಳಿಗೂ ಸೇರಿಕೊಂಡರು (ಚಕ್ರ. ೪೧). [< ಸಂ. ಭಂಗ]

**ಬಂಗಡ** (ನಾ). ಒಂದು ಬಗೆಯ ಬಳ್ಳಿ: ಬಳಿತಿಗಡೆ. ಬಂಗಡಬಳ್ಳಿ (ವೃಕ್ಷಾಗಿ. ೩೬-೦೦೩೪). [ ? ]

**ಬಂಗಡೆ**, ಬಗ್ಗಡೆ (ನಾ). ಒಂದು ಬಗೆಯ ಕಡಲ ಮೀನು : ಸೀಗುಡಿ ಗೆಂಡೆ ಕುಚ್ಚು ಪನ್ನಲು ಬಿಸಿಗ ಗಿಚ್ಚಿಲು ಬಂಗಡೆ ಹಾವು . . . ಮೀನ್ಗಳಂ ಗುದಿಗೆಯ್ದರು (ಹಕಶಾ. ೩-೯೩) ; ಈ ಹೊತ್ತು ರಂಪಣಿ ಹಾಕಿದ್ದರೆ ಬಂಗಡೆ ರಾಶಿಗಟ್ಟಲೆ ಬೀಳಬಹುದಿತ್ತು (ಚೋಮನದು. ೬೩) ; ಸ್ವಾರ್ಲಿ ಮತ್ತು ಬಂಗಡೆಮೀನಿನ ಗಬ್ಬುವಾಸನೆಯೊಡನೆ ಕುದುರೆಯ . . . ಉಚ್ಚೆಯ ಕಟುವಾಸನೆಯೂ ಕೂಡಿದ್ದುದನ್ನು ನೋಡಿದರೆ (ಮರಳಮ. ೯೨೦). **ಬಗ್ಗಡೆ** : ಮಂದಿಮೀನ್ವಿಚಿಮೀನ್ಬಗ್ಗಡೆ ಬಣ್ಣಮೀನೆನಿಪವೆಲ್ಲಂ ಬೀಳ್ದುವಾ ತಾಣದೊಳ್ (ರಾಜಶೇ. ೩-೦೦೩).

[ ← ತುಳು. ಬಂಗುಡೆ, ಬೊಂಗುಡೆ. / ಮರಾ. ಬಂಗಡ್ ]

**ಬಂಗಡ್ಡ** (ನಾ). ಒಂದು ಬಗೆಯ ಹುಲ್ಲು: (೬). [ ? ]

**ಬಂಗರ**$_1$ 'ಬಂಗಾರ' ನೋ.

**ಬಂಗರ**$_2$ 'ಬವರಿ' ನೋ.

**ಬಂಗರಳಿ** (ನಾ). ಒಂದು ಬಗೆಯ ಸಸ್ಯ : "ಬಂಗರಳಿಯೆನೆ ಹೀಲವಕ್ಕುಂ" (ಮುಂಗರಾ. ೩೬-೦೭) ; ಬಂಗರಳಿಯರಳಿ . . . ಪೇರಿಪ್ಪ ತುಪ್ಪಗಳಿರ್ಪವು (ಸಂರಿಮರ. ೦೦-೨೬). [ ? ]

**ಬಂಗಲೆ**, ಬಂಗ್ಲೆ (ನಾ). ದೊಡ್ಡಮನೆ ; ಮಹಲು : ಕೃಷ್ಣರಾಯರು ವಾಸಮಾಡುತ್ತಿದ್ದುದು ಆ ಬಡಾವಣೆಯಲ್ಲಿ ಸ್ವಂತ ಬಂಗಲೆಯಲ್ಲಿ (ಮಹಾಗ. ೦೨) : ಮಧ್ಯಾಹ್ನ ಹೊಸಬರನ್ನೆಲ್ಲ ಬಂಗಲೆಗೆ ಬರಹೇಳಿ . . . ಹಾಜರು ಪಟ್ಟಿಯಲ್ಲಿ ದಾಖಲು ಮಾಡಿಕೊಂಡರು (ರಕ್ತರೂ. ೬೨). **ಬಂಗ್ಲೆ**: ಈ ಬಂಗ್ಲೆಯಲ್ಲಿ ಎಷ್ಟು ಕೋಣೆಗಳಿವೆ ? (ಶಂದುಬಿ. ೯೯) ; ಊರ ಹೊರಗೆ ದೊಡ್ಡದೊಂದು ಬಂಗ್ಲೆ ಮಾರಾಟಕ್ಕೆ ಬಂದಿದೆ (ಹಮ್ಮೊಂಡ. ೯೬).

[ ←ಇಂ. Bungalow. / ಹಿಂ. ಮರಾ. ಬಂಗಲಾ ]

**ಬಂಗವಾಡಿ** (ನಾ). ಒಂದು ಊರಿನ ಹೆಸರು : ಬಂಗವಾಡಿಯ ಕೆಚಿಗೆ ಬಿತ್ತುಕಟ್ಟು ಬಿಟ್ಟುದು (ಎಕ. X, ಕೋಲಾರ. ೦೯೯-೦೯; ಸು. ೬೬೦).

[ಬಂಗ? + ವಾಡಿ$_2$]

**ಬಂಗಳಿಚ** (ನಾ). ಬಂಗಾಳದೇಶದಲ್ಲಿ ಹುಟ್ಟಿದವನು ; ಬಂಗಾಳಿ : ವರೇಚಂ, ಬಂಗಳಿಚಂ (ಶಬ್ದಾ.ಸು. ೪೨೦ ವ್ಯಾಖ್ಯಾ). [ಬಂಗಳ$_0$ + —ಇಚ]

**ಬಂಗಾರ**, ಬಂಗರ$_1$, ಬಂಗಾಱ, ಬಿಂಗರ, ಬಿಂಗಾರ, ಬಿಂಗಾರ$_2$, ಭಂಗಾರ, ಬಂಗಾಱ (ನಾ). ೧. (ವಿಶೇಷವಾಗಿ ಒಡವೆಗಳನ್ನು ಮಾಡಲು ಉಪಯೋಗಿಸುವ) ಒಂದು ಬಗೆಯ ಹಳದಿಬಣ್ಣದ ಲೋಹ ; ಹೊನ್ನು ; ಚಿನ್ನ : "ಬಂಗಾರ (ಭಂಗಾರ) — ಭೃಂಗಾರ= ಚಿನ್ನ, ಚಿನ್ನದ ಹೂಜೆ" (ತದ್ಭಕೋ. ೨೬) ; ಹಳೆಯ ಬಂಗಾರದಿಂದ ಹೊಸ ಒಡವೆ ಮಾಡುವಂತೆ ಹಳೆಯ ವೈದಿಕಧರ್ಮಕ್ಕೆ ನವ್ಯಚೇತನವನ್ನು . . . ಶ್ರೀಕೃಷ್ಣನು ನೀಡಿದ್ದಾನೆ (ಶಾರದ. ೦೦೬) : ಅತ್ತಿಮಬ್ಬೆ . . . ಲಿಪಿಗಾರರಿಗೆ ಬಂಗಾರದ ಕಂಟವನ್ನು ದಾನಮಾಡಿಬಿಡುತ್ತಿದ್ದಳು (ದಾನಚಿಂ. ೦೭೬). ೨. ಚಿನ್ನದಿಂದ ಮಾಡಿದ ಹೂಜೆ: ಮೇಲಿನ 'ತದ್ಭಕೋ' ಪ್ರಯೋಗವನ್ನು ನೋಡಿ. ೩. ಚಿನ್ನದ ಒಡವೆ ; ಸ್ವರ್ಣಾಭರಣ : ಹಣ ಬಂಗಾರ ವಸ್ತ್ರ ಕಪ್ಪಡ ಬಟ್ಟೆಯಲ್ಲಿ ನೆಟ್ಟನೆ ಬಿದ್ದಿರಲು ಕಂಡು ಕಾತರಿಸಿ ಕೈಮುಟ್ಟಿ ಎತ್ತದ ಭಾವೆ (ಆದಶ. ೨೦-೩೨) : ಬಣ್ಣದ ನುಡರು ಬಂಗಾರಗಳನು ತೊಡರು (ಪೀಟಿಚಂ. ೬-೯೦) ; ಮೈಯ್ಯ ಬಂಗಾರಗಳ ನುಗಿದು ಮಜೆಮಾಡಿದರ್ (ಶಂಕೀ. ೨೯-೨೬). ೪. (ಅಲಂ) ಮಕ್ಕಳನ್ನು ಪ್ರೀತಿಯಿಂದ ಕರೆಯುವಾಗ ಬಳಸುವ ಶಬ್ದ: ನನ್ನ ಬಂಗಾರ ಬಾಪ್ಪಾ ಇಲ್ಲಿ (ರೂಢಿ). **ಬಂಗರ**$_1$ : ೧. ಮುತ್ತಿನ ಕಂಠಿ ಬಂಗರದ ಕೊಡೆ (ಎಕ. VI, ಕಕ್ಕಮ. ೦೦೯-೩೬; 1717) ; ಬಂಗರವು ಬೆಂಕಿಯೊಳು ಬೀಳಲು ಬಂಗರವು ತಂಡಸದಿ ಹುಡುಕುಯೆ ಹಿಡಿದ ತೆರನಂತೆ (ಜ್ಞಾಮು. ೦೯-೩೬). **Δ ಬಂಗಾಱ** : ೫. (ಅಲಂ) ಶ್ರೇಷ್ಠನಾದವನು : ಪರಬಳಸೂಱೆಕಾಱಂ ವೈರಿಬಂಗಾಱಂ (ಮುಂಬಂ. X, ೨೦೯-೯; ೯೮೧) : ರಿಪುರಾಯ[ರ]ವರಬಂಗಾಱಂ (ಕೌಶ೩. XI-ii, ೦೬೨-೭; 1112) : ಬಿರುದ ಬಂಗಾಱಂ ಶಾಮಂತ ಗಸಣಿ (ಮೈಂ. ೦೯೩೭, ೦೭-೨೯; 1190). **ಬಿಂಗರ** : ೩. ಉಂಗುರದ ಕಾಲ ಊರುತ ಜಾರುತ ಬಿಂಗರದ ನಡುವ ಬಳುಕುತ ಲಕ್ಕವ್ವ ಬಂದಳೇ (ನಾಕಕ. ೨೩). **ಬಿಂಗಾರ** : ೧. "ಬಿಂಗಾರ (ರ) — ಭೃಂಗಾರ" (ತದ್ಭಕೋ. ೩೦) : ಋತ್ವಕ್ಕೃತ್ವಂ–ಋಜು—ರಿಜು . . . ಭೃಂಗಾರ—ಬಿಂಗಾರ (ಕಮದ. ೨೬೬ ಕ್ರ ಹೋ). ೬. ಕಾಗೆಬಂಗಾರ: ಅಭ್ರಕ : ಇದರಲ್ಲಿ ಮುಖ್ಯವಾಗಿರುವ ವಸ್ತುಗಳೆಂದರೆ ನುಣುಪಾದ ಜಿಡ್ಡಿನಂತಿರುವ ಖನಿಜದ ಪುಡಿ, ಬಿಂಗಾರ (ಟಾಲ್ಕ್) (ಶಂಕೋ. I, ೩೬). **ಬಿಂಗಾರ**$_2$ : ೨. (ನಂಜವ್ವಗೆ ಆಕ್ಕರವಿ ಮಾಡಿ, ಹೊನ್ನ ಬಿಂಗಾರ ಯನ್ನು ತೋರಿ, ಮುಗುಳ್ನ ಕೊಳ್ಳನು) (ಶಲ್ಯಕ. ೯೨-೨೩). ೭. ತೂಗು ಬಿಟ್ಟಿರುವ ಚಿನ್ನದ ಅಲಂಕಾರವಸ್ತು; ಗುಳೋಪು ; ರಸಗುಂಡು : ಬಿಗಿದ ಬಿಂಗಾರಿಗಳ ಹಸುರ್ವಂದರವ ಮುಸುಕಿ ನೆಗೆದ ಮೇಲ್ಕಟ್ಟುಗಳ ಸೂಯಾಣ ಪಂಚವರ್ಣದ ಚೂಳಿಕೆಗಳೊಪ್ಪಲು . . . ವಿವಾಹಗೃಹವೆಸೆಯಿತ್ತು (ಸಿದ್ಧಕಾ. ೬-೩೩); ಬಿಗಿದ ಬಿಂಗಾರಿಗಳ ಮೇಲ್ಕಟ್ಟುಗಳ ಮಣಿ ಮಯಸೂಸಕದ. . .ಚಪ್ಪರದೆಡೆಯೆಡೆಯ ಚೌಕಿಗೆಯ ಚತುರಂಗದ ವಿಚಿತ್ರದ ರಚನೆ ಚೆಲುವಾಯ್ತು (ಕುಮಾಕ. ೬-೨೩); ಬಿಗಿದ ಬಿಂಗಾರಿಗಳ . . . ಸುತ್ತಣ ಸಾಲಭಂಜಿಕೆಗಳ ವಿಲಾಸದಲಿ ಸೊಗಯಿತಾ ಮಂಟಪ (ಕೊರಂ. ೦-೦೩-೬). **ಭಂಗಾರ** : ೧. ವರ್ಗಚತುರ್ಥಾಕ್ಷರಂಗಳ್ಗೆ-ಘಟಾಯಂ . . . ಭಂಗಾರಂ, ಭಂಡಾರಂ (ಕಮದ. ೦೩ ಕ್ರ ಹೋ); ತೋರದ ತೋಳುಳ್ಳರ್ ಭಂಗಾರದ ಕಂಭದವೊಲಪ್ಪೊಡಂಬುಳ್ಳವರ್ (ಕೌಶಂದ. ೦-೦೯). ೩. ಚಿನ್ನದಿಂದಾದ ಭಂಗಾರ (ಒಡವೆ) ಚಿನ್ನದ ರೂಪಲ್ಲದೆ ಮತ್ತೊಂದು ರೂಪವಾಗಬಲ್ಲದೆ ಹೇಳಾ (ಸಿದ್ಧಕ. ೦೯-೩೨). ೮.(ಅಲಂ)ಶ್ರೇಷ್ಠವಾದುದು; ಉತ್ತಮವಾದುದು: ಭಂಗಾರದಂಥಾ ಎತ್ತೊಂದು ಪೊನ್ನೇ ಕೈಯೊಳಗಿಂದ ಹೋಯಿತು (ಅಕೋಕ. ೯೦). **Δ ಭಂಗಾಱ** : ೫. ಮಣ್ಣಾಳಿಕ ಬಿರುದ ಭಂಗಾಱಂ (ಕೌಶ೩. XI-i, ೯೬-೭; 1062) ; ರಾಯಜಗದಳವು[ನೋಜ] [ರತಿ]ಮುಚ್ಚರಿವ ಸವತಿ.ಮದ ಭಂಜನೆ ರಾಯಭಂಗಾಱ (ಎಇ. XXVIII, ೩೩-೩೬; 1082); ರಾಯರಾಯ ಪುರಸೂಱೆಕಾಱ ವೈರಿಭಂಗಾಱ (ಎಕ. II, ೦೯೩-೯೦; 1131).

ಬಂಗಾರದ ನೀರು = ಚಿನ್ನದ ಬಣ್ಣ ಬರುವಂತೆ ಮೆರುಗನ್ನು ಕೊಡುವ ರಾಸಾಯನಿಕದ್ರವ : ಬೆಳ್ಳಿಒಡವೆಗೆ ಬಂಗಾರದ ನೀರು ಬಿಡಿಸಿದ್ದಾರೆ (ರೂಢಿ). ಬಂಗಾರದ ಮುಲಾಮು = ಚಿನ್ನದ ಮುಲಾಮು.— ಗಿಲೀಟು : ಅವೆಲ್ಲಾ ಬಂಗಾರದ ಮುಲಾಮು ಹಾಕಿದ ಒಡವೆಗಳು (ರೂಢಿ). ಬಂಗಾರದವಳು, ಭಂಗಾರದವಳು = (ರಾಜನ) ಉಪಪತ್ನಿ : ಪಟ್ಟದ ಹೆಂಡತಿಗೆ ಅಚ್ಯುತರಾಯನೆಂಬ ಮಗನಿದ್ದನು. ಬಂಗಾರದವಳಿಗೆ ಕೃಷ್ಣರಾಯನೆಂಬ ಮಗನಿದ್ದನು (ಕೀತಿಕಾ. VII, ೨೦) ; ಬಂಗಾರದವಳು. ಬಂಗಾರಕ್ಕಾಗಿ ಹೆಂಡಿರಂತೆ ಬಂದವಳು. ವೇಶ್ಯೆಯಲ್ಲ. ಮದುವೆಯಾದ ಹೆಂಡಿರಲ್ಲ (ಪಮ್ಮುಸು. ೦೩೮) ; ದೊಡ್ಡಮ್ಮ ರಣಧೀರನ ಭಂಗಾರದವಳಾಗಿರಲು ಅಪೇಕ್ಷಿಪಟ್ಟು, ಅರಮನೆಗೆ ತೆರಳುತ್ತಾಳೆ (ಸಂಕಕ. ೦೦೨). ಭಂಗಾರದ ಸ್ತ್ರೀ = ಬಂಗಾರದವಳು : "ಭೋಗಿನ್ಯಃ, ಅನ್ಯಾಃ, ನೃಪಸ್ತ್ರೀಯಃ — ಅರಸು ಭೋಗಪಡುವದಕ್ಕೆ ಉಪಯುಕ್ತರಾಗಿ ಪಟ್ಟದ ರಾಣಿಗಿಂತಲೂ ಬೇರೆ ಸ್ತ್ರೀಯರ ಪೆಸರುಗಳು. ಇದು ಭಂಗಾರದ ಸ್ತ್ರೀಯರಿಗೂ ಹೆಸರಾಗುತ್ತೆ " (ಸಿದ್ಧಾಂತ. ೦೬೯).

[< ಸಂ. ಭೃಂಗಾರ, ಭೃಂಗಾರೀ. / ತಮಿ. ಪಜ್ಮಾರ, ಪಜ್ಮಾರು ; ತುಳು. ಬಂಗಾರ, ಭಂಗಾರ್, ಭಂಗಾರ; ತೆಲು. ಬಂಗರ, ಬಂಗರು, ಬಂಗಾರ, ಬಂಗಾರು]

**ಬಂಗಾರಕಡ್ಡಿ** (ನಾ). ಚಿನ್ನದ ಕಡ್ಡಿಯಂತೆ ತೆಳುವಾಗಿರುವ ಒಂದು

ಬಗೆಯ ಬತ್ತ: ಈಗ ಬಂಗಾರಕಡ್ಡಿ ಬೆಲೆ ಕ್ವಿಂಟಾಲಿಗೆ ನಾನೂರೈವತ್ತು ರೂಪಾಯಿ ಆಗಿದೆ (ಜಾ). 'ಬಂಗಾರಸಣ್ಣ' ಪರಾ.

[ಬಂಗಾರ + ಕಡ್ಡಿ]

**ಬಂಗಾರಚೌಕಿ** (ನಾ). ಅರಮನೆಯ ಸ್ತ್ರೀಯರಂ ವಾಸಿಸುವ ಅಂತಃಪುರದ ಒಂದು ಭಾಗ: ಕಂಗೊಳಿಸುವ ದಿವ್ಯಕಾಂತಿಯ ತೀಡುತ ಬಂಗಾರಚೌಕಿಯೊಪ್ಪಿದುದು (ಕಂಷ. ೬-೩೪). [ಬಂಗಾರ + ಚೌಕಿ]

**ಬಂಗಾರಸಣ್ಣ** (ನಾ). =ಬಂಗಾರಕಡ್ಡಿ: ಬಂಗಾರಕಡ್ಡಿಯನ್ನೇ ಬಂಗಾರಸಣ್ಣ ಎಂದೂ ಕರೆಯುತ್ತಾರೆ (ಜಾ). [ಬಂಗಾರ + ಸಣ್ಣ]

**ಬಂಗಾರಹುಡಿ** (ನಾ). ಚಿನ್ನದ ಪುಡಿ: ಬಂಗಾರಹುಡೀಲೇ ಭಂಡಾರಾನ ಬೆಳಸೇನಂದಾಂವಾ (ಸಜಗೀ. ೯೨-೬). [ಬಂಗಾರ + ಹುಡಿ (<ಪುಡಿ)]

**ಬಂಗಾಲ**, **ಬಂಗಾಳ** (ನಾ). ಒಂದು ದೇಶದ ಹೆಸರು; ವಂಗ: ಬಂಗಾಲದಲ್ಲಿ ಮುತ್ತೈದೆಯರು ಶಂಖದ ಬಳೆ ಹಾಕಿಕೊಳ್ಳುತ್ತಾರೆ (ಅಕ್ಕ. ೪); ಬಂಗಾಲ: ಭಾರತಉಪಖಂಡದ ಈಶಾನ್ಯಭಾಗದಲ್ಲಿರುವ ಐತಿಹಾಸಿಕಪ್ರದೇಶ (ಕಅಕೋ. XI. ೬೭೪). **ಬಂಗಾಳ**: ವಂಗ ಕಳಿಂಗ ಬಂಗಾಳ . . . ನೇಪಾಳರ್ ಮೊದಲಾದ ರಾಜಪುತ್ರರ ಪಂಕ್ತಿಗಳೊಳಂ (೧೧೪. ೨-೦೦೩ ಕ); ಲಾಳ ಚೋಳ ವರಾಳ ಯವ ಬಂಗಾಳ . . . ವಿದರ್ಭಧರಣೀಪಾಲತತಿ ಸಂದಣಿಸಿದುದು (ಹೊಕರಾ. ೦-೬-೦೪); ಅಂಗಾಲಿಗೆ ತ್ರಾಣವಿದ್ದರ ಬಂಗಾಳಕ್ಕ ಹೋಗಬಹುದು (ಗಾದೆ).

[←ಹಿಂ. ಮರಾ. ಬಂಗಾಲ್ / ಸಂ. ವಂಗ]

**ಬಂಗಾಲಿ**, **ಬಂಗಾಳಿ** (ನಾ). ೧. ಬಂಗಾಳದೇಶಕ್ಕೆ ಸೇರಿದವನು. ೨. ಬಂಗಾಳದೇಶದ ಭಾಷೆ: ಈ ಬಂಗಾಲೀಚಿತ್ರಕ್ಕೆ ಈ ಗೌಡಬಂಗಾಲೀ ವಿಮರ್ಶೆ ಹೊಂದಿಕೆಯಾಗುತ್ತದೆ (ಹಿಹಕ. ೩೩). ೩. (ಆಲಂ) ಮೋಸಗಾರಿಕೆ; ಕುಯುಕ್ತಿ: 'ಗೌಡಬಂಗಾಲಿ', 'ಬಾರಾಬಂಗಾಲಿ' ಪರಾ. **ಬಂಗಾಳಿ**: ೨. ಬಂಗಾಳಿಯನ್ನು ಅಭ್ಯಾಸ ಮಾಡಲು ಈ ಭಾಷಾಂತರ ನೆರವಾಗುತ್ತದೆಯೆಂಬುದು ನನ್ನ ನಂಬಿಕೆ (ಹಿಅರ. I. xvi ಮುಮ್ಮು). ೩. ಬಂಗಾಳಕ್ಕೆ ಹೋದರೂ ಗೌಡಬಂಗಾಳಿ ಬಿಡಲಿಲ್ಲ (ಗಾದೆ). ೪. ಒಂದು ಬಗೆಯ ಮರ; ಹೂವರಸಿ: ರಕ್ತವಿಪ್ಪುದು ಬಂಗಾಳಿರಸದಂತೆ (ಅಮ್ಲೋಕ್ತ. ೩-೨೩-೨೦); ಬಂಗಾಳಿಗಿಡದ ಬುಡಕ್ಕೆ ಕುಳಿತ ಮುದುಕಿಯು ಕಡೆಯಿಂದ ನಾಲ್ಕಾಣೆ ಪುಗ್ಗೆ ತಿಂದು ಮುಗಿಸುವಷ್ಟರಲ್ಲಿ ಶಾಲೆ ಬಿಟ್ಟಿತು (ನಾಕ. ೦೬೬). ೫. [ಸಂಗೀತ] ಒಂದು ರಾಗದ ಹೆಸರು: ಸಮಸ್ವರಾಗಂಗಳೊಳಗೆ ರಾಮಕ್ರಿಯೆ . . . ಬಂಗಾಳಿ ಮಧ್ಯಮಾವತಿಯೆಂಬ ಮುವತ್ತಾಱು ರಾಗಂಗಳೇ ಮುಖ್ಯಮಾಗಿ ಬಳಕೆಯಿಂದ . . . ಇರ್ಪವು (ಹಿಶೀ. ೨೩೪); ಪಾಟ್ಯ ಸಾಳಂಗ ಬಹುಳಿ ಬಂಗಾಳಿ ಈ ನಾಲ್ಕು ರಾಗವಾದಿಯಾದ ಮೂವತ್ತೆರಡುರಾಗವನು . . . ಪಾಡುವರು (ಕೃಶಕೋ. I, ೨೨). [← ಹಿಂ. ಮರಾ. ಬಂಗಾಲೀ]

**ಬಂಗಾಲಿತನ** (ನಾ). ಮೋಸ; ವಂಚನೆ; ಠಕ್ಕು: ಕಂಗಾಲತನವು ಹೆಚ್ಚಾದ ಕಾಲಕ್ಕೆ ಅನ್ನದ ಕೊರತೆಯನ್ನು ತತ್ವಜ್ಞಾನದ ಬಂಗಾಲಿತನದಿಂದ ಮುಚ್ಚಬೇಕಾಗುತ್ತದೆ (ಹಿಹಮು. ೩೪). [ಬಂಗಾಲಿ + — ತನ]

**ಬಂಗಾಳ** 'ಬಂಗಾಲ' ನೋ.

**ಬಂಗಾಳಪಚ್ಚೆ** (ನಾ). ಒಂದು ಬಗೆಯ ಔಷಧದ್ರವ್ಯ: ಬೋಳಾಮುಸ್ತಕಿ, ಬಂಗಾಳಪಚ್ಚೆ, ಪಚ್ಚೆತುತ್ತ . . . ತಾವ್ರುದ ಬೇಬಿನಲ್ಲಿ ಮರ್ದಿಸಿ ಹುಳುಕಡ್ಡಿ ರಕ್ತ ಬರುವ ಹಾಗೆ ಕೆರೆದು ತೊಡೆಯ ಗುಣ (ಅಕ್ಕಿ. ೧೦೪).

[ ← ತಮಿ. ವಙ್ಗಾಳಪ್ಪಚ್ಚೈ ]

**ಬಂಗಾಳವಿದ್ಯೆ** (ನಾ). =ಬಂಗಾಲಿತನ: ಬಂಗಾಳವಿದ್ಯದಹಮ್ಮಿನಲಿ ಬಸವ ನಾಡಿಗೊಡೆಯನ ಗೆಲ್ಲ ಹಮ್ಮೊಡಗೂಡಿ ಗೃಹಕ್ಕೈದಿದನು (ಅಕ್ಕ. ೬-೦).

[ಬಂಗಾಳ (<ಬಂಗಾಲ) + ವಿದ್ಯೆ ]

**ಬಂಗಾಳಿ** 'ಬಂಗಾಲಿ' ನೋ.

Δ**ಬಂಗಾಱ** 'ಬಂಗಾರ' ನೋ.

**ಬಂಗಿ** 'ಭಂಗಿ' ನೋ.

**ಬಂಗಿಮುಕ್ಕ** 'ಭಂಗಿಮುಕ್ಕ' ನೋ.

**ಬಂಗು** (ನಾ). ೧. ಚರ್ಮದ ಮೇಲೆ ಕಪ್ಪುಚುಕ್ಕೆಗಳುಂಟಾಗುವ ಒಂದು ಬಗೆಯ ಚರ್ಮರೋಗ: ಬೀರಗೆ ಸಿದ್ಧಾರ್ಥಂ ಕಾಟ್ಚೀರಗೆ ಕರಿಯೆಳ್ಳೆಂಬಿವಂ ಪೊಸುಗಜಕ್ಷೀರದೊಳರೆದಾನನಪಂಕೇರುಹಮಂ ಬಂಗುಹಿಂಗುಗುಂ (ಲೋಕೋಪ. ೬-೮೫); ನರವುಲಿ ಮೊಡವ ಬಂ[ಜಾಕಾಂ. ಭಾ. ಪಂ]ಗು ನೆರೆದಾನನದ ಚುಬ್ಬುವರಸಿರ್ದ ಲಂಕಿಣಿಯ ನಿಡಿಯೊಡಲು (ಅಪಕ. ೦೦-೦೦); ಪಡಪಲದ ಬೀಜದ ಪೂಸೆ ಬಂಗು ತೀರ್ಗುಂ (ಅಕ್ಕಿ. ೫೪). ೨. ಬೂಷ್ಟು; ಬೂಜು: ಅವನುಪಕಾರಮನಾಂ ಪೇ[ಟ]ವೇಟ್ಚುದೆ ನಮ್ಮ ತಿಂದು ತಂದುಣ್ಬ ಶನಕ್ಕವ[ರ]ಣ್ಣೆ ಸೂಜಿಮೊನೆಯನಿಸುವೆಣ್ಣೆಯುಂ ಬಂಗುವಡೆದ ಕಟಿಯುಂ ಪೇಟ್ಚುಂ (ಸುಕುಮಾ. ೨-೬೬). [ದೇ॥ ತಮಿ. ವಙ್ಕು]

**ಬಂಗುರಿಸು** (ಕ್ರಿ). ೧. 'ಬಂ' ಎಂದು ಶಬ್ದ ಮಾಡು: ಇಂಗಡಲ ತಾವರೆಸದಿ ಬಂಗುರಿಪ ತುಂಬಿಗಳ ಗಾವರಂ ಗಾನ ಮಿಗೆ ರಂಗಿಸುತ ಕೇಳುವೆಯ ನಿಟ್ಟಿಪ ಸಮುದ್ರೇಶ (ಅಂಗಕ. ೨-೩೦). ೨. (?): ಬಾಂಬಟ್ಟೆಯೆಡೆಗೆ ಹೋಗಿ ಬೆಳೆದಮ್ರತಫಳಮಂ ಗಣಸೆಯಿಲ್ಲೆನಿಸಿ ಬಂಗುರಿಪ ಖಚರಪಾನಂಗಳಿಂ ಬಿಡದೆಱೆವ ತಂಗರಗವೊ . . . ಎನಿಸಿ ಶೃಂಗಚೆಂದೆಂಗೆಸೆದವು (ಅಂಗಕ. ೩-೨೮). [? + — ಇಸು]

**ಬಂಗ್ಲೆ** 'ಬಂಗಲೆ' ನೋ.

**ಬಂಚ**, **ವಂಚ** (ನಾ). ೧. ಪೀಳಿಗೆ; ಮನೆತನ; ಕುಲ: "ವಂಶಮಂಬಂಚಮೆನಲಕ್ಕು" (ಕ್ನಾಕ್ಕ. ೩೬); ಈ ಎಲ್ಲಾಡನಬಾದೊಂ ಕೊಂಬಿನ್ಗಾಳರ ಕೊಡುಗೂರರ ಬಿಟ್ಟಾವುತ್ತನ್ನೆ ಅಱಿಗೆ (ಎಕ.III(R). ಹಗ್ಗ. ೩-೦೫; ಸು. ೯೫೦ ಕ); ಶತ್ತಕ್ಕೆ ಚತ್ತಂ . . . ವಂಶ—ಬಂಚ (ಕಶಬ್ದ. ೨೬೩ ಕ್ರಿಯೋ). ೨. ಕೊಳಲು: ಎರಡುಂ ಬಂಚಂಗಳಿಂದೀಚರಮೂರ್ಛನೆಗಂ ಕಿನ್ನರದ್ವಂದ್ವಮೊತ್ತುತ್ತಿರೆ . . . ಕೇಳುತ್ತಿರ್ದ ಕಾದಂಬರಿಯುವಮನಿಪಂ ದೂರದೊಳ್ ಕಂಡಂ (ಕಾದಂಬ. ೦೬೪); ಮದನನ ಬಿಲ್ಲ ಹೇವೂಡೆ ವಿಪಂಚಿಯ ಬಂಚದ ನುಣ್ಪು ಕರ್ಣಪೂರದ ಪರಮಾಮೃತಾಂಬುವೆನೆ ನೇವುರದಿಂದುಡೆ ನೂಲ ತೊಂಗಲಿಂ ಮ್ಮದುರವಮುಣ್ಚೆ (ಅಪಕ. ೪-೩೦); ಗೋವರ ಪೆಣ್ಗಳ್ ಬಂಚದ ಗಾವರಕಾರ ಸೋಲ್ತು ಬಳಸಿ ನಿಲೆ (ಕಮಕಪ. ೪-೦೫೬). **ವಂಚ**: ೧. "ವಂಚಂ=ವಂಶಂ" (ಕಮದ. ಶಂ. ೨). ೨. 'ವಂಚಿಗ' ಪರಾ. [<ಸಂ. ವಂಶ]

**ಬಂಚನೆ** (ನಾ). ಮೋಸ; ಕಪಟ: "ಅತಿಬಂಚನೆಯನೆ ಮರುಟಕ್ಕು [ಮಱಸದಕ್ಕು]" (ಕನ್ನಂ. ೩); "ಬಂಚನೆಯೆ ವಂಚನೆ" (ಕಹಾಶ. ೬೦); ಪುಸಿನಸೆ ಬಣ್ಣನೆ (ಎಕ. VI. ಕಕ್ಕು. ೯೯-೦೫; ಸು. 1060 ?). [<ಸಂ. ವಂಚನ]

**ಬಂಚರ** (ನಾ). ೧. ಒಂದು ಬಗೆಯ ತಂತೀವಾದ್ಯ; ತಂಬೂರಿ: ಆ ಬಂಚರವನ್ನೆತ್ತಿ ವಿಪಾಂಚಿ ಪರೀಕ್ಷಿಸಿ, ಸುತಿ ಮಾಡಿ . . . ರಾಗಮಾಲಿಕೆಯನ್ನು ಸವಿಗರೆಯುವಳು (ಮುಕ್ತಕ. ೩೬-೧೨). ೨. ವೀಣೆ (?): ಬಾಳ ಬಂಚರ ಮಿಡಿದು ನುಡಿಸು ಬಂಧುರ ಸುಂದರಾ! (ಕಹಾ. I, ೯೬೦). ೩. (?): ಚಂಚತ್ಪಂಚಶರನ ಬಂಚರದಂತೆ ಮುಂಚಿ ಪಂಚಮದಿಂಚರಂ ಪಂಚಮನೆ ನೆಗಳ್ದು ಸಂಗಡಿಸಿದ ಕೆಂಗಣ್ಣಕ್ಕಿಗಳಿಂ (ರಾಜಶೇ. ೨-೬೬ ಕ); "ಭಟ್ಟಂಗಿ ಧ್ವನಿ" (ರಾಜಶೇ. ಕೋಶ). [ ? ]

**ಬಂಚರದ್ದಳಿ** ? (ನಾ): ಅಳಿನೀಜ್ಯಾಮ್ಯದುಮಂಜಿಂಜಿತ ಸಮಂ ಸಣ್ಣಿಂಚರಂ ಬಂಚರದ್ದಳಿಯೊಳ್ಕೊಡನುಣ್ಮೆ ನುಣ್ಚರದೆ ಮಿಂಚಂ ಸೀಳ್ದ ಪೊಲ್ಲೊಣ್ಮೆ ಕಾಳೆಳೆಯೊಳ್ಕೂಡಿದ ಸೀಯನಪ್ಪ ರಸಗೇಯಂ ಚಿತ್ರಮಂ ತಾಗೆ (ಲೀಲಾವ. ೩-೬೦). [ ? ]

**ಬಂಚಿಸು** (ಕ್ರಿ) ೧. ಮೋಸ ಮಾಡು ; ವಂಚಿಸು : ಬಂಚಿಸಿ ತನ್ನನುಡೆಯ ಧನವಂ ಚಪಲಂ ಕೊಂಡು (ಅಂತಿ. ೩-೦೪): ಧರ್ಮ ಬುದ್ಧಿಯಧರ್ಮಬುದ್ಧಿಯಾಗಿ ಧನವಂ ಬಂಚಿಸಿ (ಪಂಚತಂ. ೦೬೬-೨೦). ೨. ತಪ್ಪಿಸು : ಚಾಣಾಕ್ಯನ ದೃಷ್ಟಿಯಂ ಬಂಚಿಸಿ [ಪಾಠಾಂ. ಯಿಂದಂಜಿಸಿ] . . . ತುತ್ತನರಸಂ ವಿಷಮಿಶ್ರಿತಮೆಂದಱಿಯದೆ ಕೊಟ್ಟಂ (ವಡ್ಡಾರಾ. ೦೮೦-೨); ಅತ್ತ ಮನುಜಮನೋಜನುಂ ಮದನಪರಿತಾಪಕ್ಕಾಱದುಪ್ಪಳಿಸಿ ಮಧುಮಥನನ ಕಣ್ಣಂ ಬಂಚಿಸಿ . . . ಎಯ್ದೆವಂದು (ಶಂಶಠಾ. ೩-೦೦ ವ); ನೆಣದ ಪಳ್ಳಂಗಳಂ ಪಾಯ್ದುಂ ನೆತ್ತರ ತೊಱೆಗಳಂ ಬಂಚಿ[ಪಾಠಾಂ. ಜಿ]ಸಿಯುಂ . . . ಪೋಗಿಪೋಗಿ (ಪಂಶಠಾ. ೦೩-೩೩ ವ).

[ಬಂಚನೆ+ —ಇಸು₁]

**ಬಂಜ** (ನಾ). ನಿರ್ವೀರ್ಯನಾದವನು ; ಷಂಡ : ನಿನ್ನೊಡನಿರ್ದ ಬೊಜಂಗರ್ ನಿನ್ನಂತಿರೆ ಬಂಜರಲ್ಲರದಟರ್ಕಳವರ್ (ಧರ್ಮಾಮೃ. ೨-೦೨೩) ; ಈ ಸಲೆ ಬಂಜನೆಂಬ ಸೊಲ್ಲಾತ್ರಿಯೊಳಿಂತು ಪೋಪುದು (ಅಾದ್ವತಿ. ೬-೩೪).

[< ಸಂ. ವಂಧ್ಯ. / ಪ್ರಾ. ವಂಝ. ಮರಾ. ವಾಂಝ್]

**ಬಂಜಗೆ** (ನಾ). = ಬಂಜ : ಬಂಜಗಂ ನೀನರಸ ಮುಟ್ಟದಿರು . . . ದೂರದಲಿ ನಿಲ್ಲು (ಶರಸು. ೩-೨೮). [ಬಂಜ + — ಗ₂]

**ಬಂಜರ** 'ಬಂಜರು' ನೋ.

**ಬಂಜರು, ಬಂಜರ** (ನಾ). ೧. ಏನೂ ಬೆಳೆಯದ ನೆಲ ; ಬೀಳುನೆಲ ; ಪಾಳುಭೂಮಿ : "ಊಷವಾನ್, ಊಷರಃ—೨ ಚವುಳುಮಣ್ಣುಳ್ಳ ಬಂಜರುದಿಣ್ಣೆ ಪೆಸರುಗಳು" (ಸಿದ್ಧಾಂತಿ. ೪೩) ; ಅರಣ್ಯಪ್ರದೇಶವನ್ನೂ ಬಂಜರುಜಮೀನನ್ನೂ ತಾತಾ ಅವರಿಗೆ ವಶಪಡಿಸಬೇಕಾಗಿತ್ತು (ಭಾಗ್ಯಶಿ. ೬೩).

**ಬಂಜರ** : ೩. (ಆಲಂ) ವ್ಯರ್ಥವಾದುದು; ಬರಡು; ಅಪ್ರಯೋಜಕವಾದುದು : ಕೀರಂಗಳಾಡದಿಹ ಪಂಜರಂ ಬಂಜರಂ ಸಾರಸಗಳಿಲ್ಲದಿಹ ಕಾಸಾರ ನಿಸ್ಸಾರ (ಪಂಚಾರಾ. ೦-೩-೬೦).

ಬಂಜರಾಗು = (ಆಲಂ) ಬರಿದಾಗು ; ಶೂನ್ಯವಾಗು : ಮನ ಬೀಡು ಬಂಜರಾಯ್ತು (ಕಾಪಡಃ. ೨-೨೬). ಬಂಜರು ಬೀಳು = ಏನೂ ಬೆಳೆಯದಿರು ; ಫಲವಿಲ್ಲದಾಗು : ಅಷ್ಟು ದೊಡ್ಡ ತೋಟ ನೋಡಿಕೊಳ್ಳುವವರಿಲ್ಲದೆ ಬಂಜರು ಬಿದ್ದಿದೆ (ಕೂ).

[← ಹಿಂ. ಮರಾ. ಬಂಜರ್. / ತುಳು. ಬಂಜರ = ಏನೂ ಬೆಳೆಯದ; ತೆಲು. ಬಂಜರು]

**ಬಂಜರುಗಾಡು** (ನಾ). = ಬಂಜರು ೧ : ಕುಜಗ್ರಹದ ಬಹುಭಾಗ ನೀರಿನಿಂದ ಬತ್ತಿ ಹೋದ ಮರುಭೂಮಿ ; ಬಂಜರುಗಾಡು (ಅಣುತ. ೨೦).

[ಬಂಜರು + ಕಾಡು₂]

**ಬಂಜರುಭೂಮಿ** (ನಾ). = ಬಂಜರು ೧ : ದೀಕ್ಷಾಗ್ರಹಣ ಮಾಡದ ಆಗಮಾನುಷ್ಠಾನವು ಬಂಜರುಭೂಮಿಯಲ್ಲಿ ಬಿತ್ತಿದ ಬೆಳೆಯಂತೆ (ಶಾರದ. ೬೩). [ಬಂಜರು + ಭೂಮಿ]

**ಬಂಜಾರ** (ನಾ). ಒಂದು ಅಲೆಮಾರಿ ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ ; ಲಂಬಾಣಿ : (ಎಶಮ್ಮ. XXV. ೧).

[← ಹಿಂ. ಬಂಜಾರಾ ;. ಮರಾ. ಬಂಜಾರೀ, ವಣಜಾರಾ, ವಣಜಾರೀ]

**ಬಂಜಾವು** (ನಾ). ಕರಂ ಹಾಕದ ಹಸು ; ಗೊಡ್ಡಾಕಳಂ : ಸತ್ಯನಿಧಿ ಕಟ್ಟಿಸಿದಂ ಬಂಜಾವನು (ಲಕ್ಷಿಶಂ. ೩೨-೬೦). [ಬಂಜು + ಆವು]

**ಬಂಜು** (ನಾ). ಬಂಜೆತನ ; ಗೊಡ್ಡುತನ : 'ಬಂಜಾವು', 'ಬಂಜುಗೆಡು' ಪರಾ. [ಬಂಜ + — ಉ₄]

**ಬಂಜುಗೆಡು** (ಕ್ರಿ.) ಬಂಜರಿಲ್ಲದಾಗು ; ಫಲವತ್ತಾಗು : ಮೊದಲ ಮೊಳಗಿಗೇ ಬಂಜುಗೆಟ್ಟಿತೋ ಭೂಮಿ ಅಣಬೆ ತಾಳಿ (ಪಂಚಶತಿಮ. ೩-೦೦).

[ಬಂಜು + ಕೆಡು₁]

**ಬಂಜೆ** (ನಾ). ೧. ಗೊಡ್ಡು ; ಫಲವಿಲ್ಲದುದು : "ಬಂಜೆ—ವಂಧ್ಯಾ(ಧ್ಯ) = ಗೊಡ್ಡು ; ವಿಫಲ" (ಕರ್ಣಕೋ. ೨೪) ; ಬಂಜೆಯ (ಮ)ರನಂ ಅವಕೇಶಿಯೆಂಬುದು (ಕಲಾಪುಸು. ೨೯-೨೪). ೨. ವ್ಯರ್ಥ; ಹಾಳು ; ನಿರರ್ಥಕ : ಮಹಾಧ್ವರಕಾಲಂ ಬರ್ಪನ್ನವರಂ ದಿವಸಂಗಳಂ ಬಂಜೆಯಿಲ್ಲದುತ್ತುಂಗ ದಾನಂಗಳಂ ಮಾಡುತ್ತುಮಿರ್ದ್ದಟಕ್ಷಿತೀಂದ್ರಚಂದ್ರಮನಿರಿಯರೆ (ಅಾದ್ವತಿ. ೯-೩೧ ವ) ; ದಿನವ ಬಂಜೆಯ ಮಾಡದಿಹ ಪರವಿನಯನಹ ವರದೈವಗುರುಪೂಜನೆಯ . . . ಅನುಗೊಳಿಪನಾವನು ಮನುಜರೊಳಗುತ್ತಮನು (ಕುಮ್ಯಾರಾ. ೩-೫೦). 'ಬಂಜೆವಡಿಸು' ಪರಾ. ೩. ಮಕ್ಕಳನ್ನು ಹಡೆಯದವಳು ; ಗೊಡ್ಡಿ : "ಬಂಜೆಯೆನೆ ವಂಧ್ಯಾಖ್ಯಂ" (ಕಬಿಸಂ. ೦೫೪) ; ಮಗನಂ ಪಡೆವಂತಿರೆ ಬಂಜೆಗೆ ಮರ್ದಂ ಪಾಟಿಸ್ಪಂ (ಸಮುಕ. ೦೨-೩೩) ; ಬಂಜೆ ಬೇನೆಯನಱಿಯಳು (ವುಕಾರೆ. ೫. ೦೬೦-೬೧೯) ; ಹೆತ್ತರಿಯದ ಬಂಜೆ ಸೂಲಗಿತ್ತಿಯೆ ಜಗದಿ? (ಗೀತಂ. ೦೦೦-೧). ೪. ಪ್ರಯೋಜನವನ್ನು ಹೊಂದದವಳು ; ಫಲವನ್ನು ಪಡೆಯದಿರುವವಳು : ಲಾವಣ್ಯದ ಬಂಜೆ ಭೋಗದ ವಿಯೋಗಿಯೆನಿಸಿರ್ದ ತರುಣಿಯರ ವಿರಹಾತಿಶಯಮುಮಂ ಗಿರಿರಾಜಂ ಕರುಣಿಸಿ ನೋಡಿ (ಗಿರಿಜಾ. ೯-೦೦೪ ವ). ೫. ಒಂದು ಬಗೆಯ ಸಸ್ಯ : "ನಾಗಾರಿಃ—ಗರುಡ, ಬಂಜೆ, ಮಡುವಾಗಲು" (ಓಷಧಿ. ೯೪). (ಗು). ೬. ಫಲವಿಲ್ಲದ ; ಗೊಡ್ಡಾದ : ಮೊದಲಿಲ್ಲದ ಭೂಮಿರುಹಕ್ಕೆ ಶಾಖೆಬಂಜೆವನಿತೆ ಗಾತ್ರಜಂ ಮೃತಶರೀರಿಗೆ ಜೀವಕಳಾಪ್ರವೇಶಮೆಂಬಿವು ಪಿರತೇನು (ಚಶಳ. ೦೫೩-೦೬). ೭. ವ್ಯರ್ಥವಾದ ; ನಿರರ್ಥಕ ; ಹಾಳಾದ : ಈಶನಂ ನೆನೆಯದ ದಿನಂ ಬಂಜೆ ದಿನವಯ್ಯ (ಪಾಂಗಲ. ದೇ. ೨೬೩-೧೦).

ಬಂಜೆ ಮಾಡು = ಹಾಳಂ ಮಾಡು ; ನಿಷ್ಫಲಗೊಳಿಸು : ವಿಜಯಲಕ್ಷ್ಮಿಪೊಲೀಶನ ತೋಳ ತಟ್ಟಿನೊಳ್ ಪೊಸಯಿಸು ನಲ್ಮೆಯಂ ದಿವಸಲಕ್ಷ್ಮಿಯನೇಕೆಗೆ ಬಂಜೆ ಮಾಡುವೈ (ಪಂಚಾಶು. ೯-೦೬೬). ಬಂಜೆಯಾಗು = ೧. ಫಲವಿಲ್ಲದಾಗು ; ನಿಷ್ಫಲವಾಗು : ಅವಂಧ್ಯಃ, ಫಲೇಗ್ರಹಿಃ — ೨. ಬಂಜೆಯಾಗದೇ ಕ್ಲುಪ್ತವಾಗಿ ಫಲ ಬಿಡುವ ಗಿಡದ ಹೆಸರು, ಫಲವೃಕ್ಷ (ಸಿದ್ಧಾಂತಿ. ೦೦೦) ; ಭೂಮಿ ಯಾರೊಬ್ಬರ ಸ್ವಂತ ಆಸ್ತಿ ಆಗದಿರುವ ಪಕ್ಷಕ್ಕೆ ಅದೆಂದೂ ಬಂಜೆಯಾಗಿರುವುದಿಲ್ಲ (ಪುಪರು. ೪೨೩). ೨. ಮಕ್ಕಳನ್ನು ಹೆರದಿರು ; ಗೊಡ್ಡಾಗು : ಕಪಿಲೆ ಎಂಬಳು ಮಕ್ಕಳಿಲ್ಲದೆ ಬಂಜೆಯಾಗಿರ್ಪುದಂ (ಪುಣ್ಯಾಸ್ರ. ೩-೬೦ ವ) ; ಬಮ್ಮಲದೇವಿ ಬಂಜೆಯಾಗಿಯೇ ಉಳಿದಿರಲಾರಳು (ಕಚಿ. VIII, ಶ್ರಸ್ತಾಪಕ). ೩. ವ್ಯರ್ಥವಾಗು ; ನಿರರ್ಥಕಗೊಳ್ಳು : ಭಾವರತಿ ಬಲಿದು ಬಂದಂತೆ ಬಗೆದು ಕಣ್ಬೆಱೆದು ಕಾಣದೆ ಬಯಲನಪ್ಪಿದ ತೋಳ್ ಬಂಜೆಯಾಗೆ (ಗಿರಿಜಾ. ೨-೦೦೩ ವ) ; ದಿನ ಬಂಜೆಯಾಗದೆ ಪರಮಾತ್ಮರತರಾದ ಮುನಿಗಳಿಗನ್ನದಾನವನು ಮನ ಮುಟ್ಟಿ ಮಾಡುವ ಭಾಗ್ಯವೆಂಬುದನಾವ ಮನುಜ ಪಡೆಯಬಹುದೆಂಬ (ಪ್ರಭು. ೩-೯೦); ಬಂಜೆಯಾಗದು ವಿಪ್ರರಂದೆನ್ನೊಳೆಂದ ನುಡಿ (ಕೃಪುಹಾ. ೨೯-೫೬).

[< ಸಂ. ವಂಧ್ಯಾ. / ಪ್ರಾ. ವಂಝಾ. / ತುಳು. ಬಂಜೆ. / ಹಿಂ. ಬಂಝಾ ; ಮರಾ. ವಾಂಝ್]

**ಬಂಜೆಗೈ** (ಕ್ರಿ). ವ್ಯರ್ಥಗೊಳಿಸು ; ನಿರರ್ಥಕಗೊಳಿಸು : ತನ್ನ ಬಾಣವಂ ಬಂಜೆಗೈದಪರೆ ಪೋಱಿಬಿಗರು (ಕೃಪುಹಾ. ೨೦-೫೪).

[ಬಂಜೆ + ಗೈ (< ಕೆಯ್₁)]

**ಬಂಜೆತನ** (ನಾ). ಫಲವಾಗದಿರುವಿಕೆ ; ಗೊಡ್ಡುತನ : ಎನಗೀ ಜನ್ಮ ಮಿದಿಂತ ಬಂಜೆತನದಿಂದಂ ಪೋಕುವೋ (ಸುಕುಸು. ೯-೦೦೯) ; ತನ್ನ ಬಂಜೆತನವಿಂದು ಪೋದುದು (ಕೃಪುಹಾ. ೨೬-೫೯) ; ನಂಜುಂಡ ಜೀವದ ಬಂಜೆತನವಳಿಯಿತು (ಸಿರ್ದ್ಯಕ್ಷಿ. ೩-೦೦). [ಬಂಜೆ + — ತನ]

**ಬಂಜೆವಡಿಸು** (ಕ್ರಿ). ವ್ಯರ್ಥಗೊಳಿಸು ; ನಿರರ್ಥಕಗೊಳಿಸು : ಸತ್ಪುರುಷ

ರದೇಕೆ ಬಂಜೆವಡಿವರ್ ಗಡ ದುರ್ಲಭಕಾಲಲಬ್ಧಿಯಂ (ಚಂದ್ರಪ್ರ. ೨-೫೭) ; ಮದಗಂಧಸಾರಸಪ್ತಚ್ಛದಂಗಳಂ ಪುದಿದು ಬೆಳೆದ ಶಾಖಾಸಂಭವದ ಪರ್ವೊವಡ ಕಠಿಣಕಂಕಯಿಂ ವಾಮ್ಬುವಟಿಗೊಳ್ ಮುವಿತತ್ತಿ ಬಂಜೆವಡೆಪುದು ಮುಳಿಸು (ಚಂದ್ರಪ್ರ. ೫-೫೦). [ಬಂಜೆ + ಪಡಿಸು]

**ಬಂಜೆವಾಗಲ್**, ಬಂಜೆವಾಗಲ, ಬಂಜೆಹಾಗಲ (ನಾ). ಒಂದಂ ಬಗೆಯ ಮೂಲಿಕೆ : ವಿವಿಧವ್ರಣದೊಳ್ ಸಲೆ ಬಂಜೆವಾಗಲಂ . . . ಪೂಸುಗಾ ವಿಷಂ ಪೋಜಮಡುಗುಂ (ಲೋಕೋಪ. ೧೦-೩೬). **ಬಂಜೆವಾಗಲ** : ಬಂಜೆ ವಾಗಲದ ಗೆಣಸ ನಾಲ್ಕುವರಹತೂಕವ ನೀರಿನಿಂದಾ ಅರದು ನಸ್ಯಂ ಕುಡಿಯ ಕೊಡಲು ಸರ್ಪಯಿಲಿ ಬೆಕ್ಕು ಚೇಳು ನಾಯಿ ನರಿ ಮೊದಲಾದ ವಿಷಗಳು ಶಮನವಹುದು (ಐಶಪ. ೨೩-೬). **ಬಂಜೆಹಾಗಲ** : ಬಂಜೆಹಾಗಲದ ಗೆಡ್ಡೆ, ತುರುಚನ ಬೇರಿನ ತಿಗುಡು ಇವುಗಳನ್ನು ಸಮತೂಕದಲ್ಲಿ ಚೂರ್ಣಿಸಿ (ಸಕವೈ. ೮೬). [ಬಂಜೆ$_{1}$ + ಪಾಗಲ್$_{1}$]

**ಬಂಜೆವಾಗಲ** 'ಬಂಜೆವಾಗಲ್' ನೋ.

**ಬಂಜೆವಾತು** (ನಾ). ವ್ಯರ್ಥವಾಗುವ ಮಾತು ; ಫಲ ಕೊಡದ ಮಾತು: ನುಡಿಯಬಹುದೇ ಬಂಜೆವಾತನು (ಕುವ್ಯಾಭಿ. ೬-೨೬). [ಬಂಜೆ + ಮಾತು$_{1}$]

**ಬಂಜೆವೊಲ್ತು** (ನಾ). ವ್ಯರ್ಥವಾದ ಕಾಲ ; ಪ್ರಯೋಜನಕ್ಕೆ ಬಾರದಿರುವ ಸಮಯ : ಸದಮಳಪಾತ್ರಕ್ಷೇತ್ರದೊಳಿದು ಬಿತ್ತುವ ಪದದ ಪೊಲ್ತು ಗೃಹಮೇಧಿಗಿದೇವುದೊ ಮಧ್ಯಾಹ್ನದ ಪೊಲ್ತಲ್ಲದ ಪೊಲ್ತುಂ ಬಂಜೆವೊಲ್ತು ತಾನದು ಪೊಲ್ತೀ (ಅರ್ಹದಾ. ೧-೬೯). [ಬಂಜೆ + ಪೊಲ್ತು]

**ಬಂಜೆಹಾಗಲ** 'ಬಂಜೆವಾಗಲ್' ನೋ.

**ಬಂಟ$_{1}$**, ಬಟ, ಭಂಟ (ನಾ). ೧. ವೀರ ; ಶೂರ ; ಪರಾಕ್ರಮಿ : "ಘನವೀರನಪ್ಪವಂ ತುಟುಲಾಳು ಬಂಟಂ" (ಕಂಪ್ರಕ್ತ. ೪೨); ಕನ್ನೆಯ ಬಂಟನ ವೃದ್ಧಸ್ತ್ರೀಯ ಮೂವರ ಚಿತ್ರಕಥೆಗಳಂ ಪಟದೊಳ್ ತೋಱಿ (ವಡ್ಡಾರಾ. ೧೯-೦೬) ; ಮಹಾಸಾಮಸ್ತಂ ಕನ್ನನ ಬಣ್ಣಂ ಕಟಕಪ್ರಾಕಾರಂ ನೆರೆಪೊಡೆ ಬಣ್ಣಂ (ಶಾಶಾ. XI-i. ೯೬-೭ ; ೯೯೩). ೨. ಯೋಧ ; ಸೈನಿಕ : ಕಾಳಗದಲ್ಲಿ ಪೌಜನಿಕ್ಕಿದಡೆ ಮಾಱದಡೆ ಅರಸಂಬ ರಲ್ಲದೆ ಬಂಟರೆಂಬುದಿಲ್ಲ (ಪೋಲೀಕಾ. ೨-೩) ; ಬವರಕ್ಕಾಗದ ಬಂಟನೇ (ಸೋಮೇಶ. ೨೨). ೩. ದಾಸ ; ಸೇವಕ : ತೊತ್ತಿಂಗೇಕೆ ಲಕ್ಷಣ ಬಂಟಂಗೇಕೆ ಆಚಾರ (ಐಸವ. ೯೬೬) ; ಬಗೆದೆನಪರಾಧವನು ಕರುಣಾಳುಗಳ ಬಲ್ಲಹ ನೀನು ನಿನ್ನಂಘ್ರಿಗಳಿಗೀ ತಲೆಬಂಟ ನೀನಿದ ಕಾಯಬೇಕು (ಕುವ್ಯಾಭಿ. ೧೦-೧೯) ; ನೆಚ್ಚಿನ ಬಂಟಂ ಹನುಮಂತಂ ಕಿಮ್ಮನಿರ್ದನೆ? (ರಾಮಾಕ್ಕ. ೩೭-೮) ; ಸಮಯಕ್ಕಾದವನೇ ನಂಟ, ಕೆಲಸಕ್ಕೆ ಒದಗಿದವನೇ ಬಂಟ (ಗಾದೆ). ೪. ದಕ್ಷಿಣಕನ್ನಡದ ಒಕ್ಕಲಿಗರ ಒಂದು ಪಂಗಡ : ವ್ಯವಸಾಯಗಾರರು . . . ಬಂಟ, ದಳ್ಳಿ (ಕುಳನಾ. ೧೬೦). **ಬಟ** : ೧. "ಬಟ (ಬಂಟ, ಬಂಟು)_ಭಟ" (ಕದ್ಯಕೋ. ೨೮); ಸಾಂತರಸ . . . ಬೆಸಗೆಯ್ವಲ್ಲಿ ಮರಲಿ ಬಟರಿಂಗೆ ಕೊಟ್ಟಾರ್ (ಎಕ. VI. ಕೊಪ್ಪ. ೩೯-೪ ; ಸು. 700?) ; ಅಚುತರಾಯಮಹಾರಾಯರೂ . . . ವೀರಬಟರಿಗೆ ದರ್ಮವಾಗಿ ವಿಟ್ಟ (ಎಕ. X (೩). ಕೋಲಾರ. ೧೦೪-೫ ; 1536). ೨. ಮತ್ತಿ ಘಡದ ಚಿಕ್ಕನಾಯಕಹಳ್ಳಿಯ ಸುತ್ತಣ ಬಟರೊಂದೆಸೆಯ ಒತ್ತರಿಸಿ . . . ಏಱಿದರು (ಕಂಪಿಲ. ೦೯-೩೬). ೩. ನಿತಂಬಿನಿಯರುಸಿಯ ಬಾಸೆಗಳಂ ಯಮರಾಜನ ಬ[ಹಾಠಾಂ. ಭ]ಟರೆನ್ನದೆ ಶೋಭಾಕರಮೆಂದೊಡಂ (ಧರ್ಮಾಮೃ. ೭-೦೫೫). **ಭಂಟ** : ೧. ನಾವು ವೃದ್ಧರು ಬಿರುದುಗಿರುದಿನ ಲಾವಣಿಗೆ ನಮಗೇಕೆ ಹೇಳೈ ನೀವಲೈ ಜವ್ವನದ ಭಂಟರು ರಣದ ಧುರ ಧರೆಕೆ (ಕುವ್ಯಾಕೀ. ೯-೪೦) ; ಪಂಡಿತರಿಗಳ ತಲೆಯನರಿದು ಕಾಳಕಂಠಗೆ ವನಮಾಲೆಯಿತ್ತು ಭಂಟರಾಗಿಹೆವು (ಕೆಂಪಿಲ. ೮-೪೨) ; ಬಂಟ ನೀನೊಳ ಜಗಕೆ ಭಂಟ ಹೊರಜಗಕೆ (ಸಂಕರಾಕ. ೬೩). ೨. ಭಂಟನಸೆ ಬಕುತರಿಗೆ (ಕುವ್ಯಾಉ. ೫-೬) ; ಭಂಟನಲ್ಲವೆ ನಾನು ದೀನರ ನೆಂಟನಲ್ಲವೆ ನೀನು (ಹಂಪಾ. ೭೦). ೩. ಕಾವಲುಗಾರ ; ಕಾಪಿನ ಆಳು : ಸುಡುಗಾಡಿಕ್ಕೆಗೆ ಭಂಟನಾಗನೆ ಹರಿಶ್ಚಂದ್ರಂ (ಸೋಮೇಶ. ೩೨).

**ಬಂಟರ ಬಾವ, ಬಂಟರ ಭಾವ** = ಪರಾಕ್ರಮಿಗಳನ್ನು ಸೋಲಿಸಿ, ಅವರ ಕಡೆಯ ಹೆಣ್ಣನ್ನು ಮದುವೆಯಾಗುವವನು ; ಒಂದು ಬಿರುದು : ಪರಬಲಭಯಂಕರನುಂ ಬಣ್ಣರ ಬಾವನುಂ (ಎಕ. VI. ಕಡೂರು. ೧೫೭-೫೨ ; 1191) ; ಕೊತ್ತಗಾವುಣ್ಣನ್ ತತ್ಪುತ್ರ ಕೋರಾತ್ಕ ಗಾವುಣ್ಣಂ ದುಷ್ಪಸ್ವವಾಹಕ ಮಾಱವೊಕ್ಕೆ ಕಾವನ್ನೆ ಬಣ್ಣರ ಭಾವಂ (ಎಕ. III. ಸಂತಿಶ. ೦೨೨-೦೪ ; 260 ? ಕ್ರಶ) ; ಯಾಚಕಜನನಿಧಿನಿಧಾನ[ಂ] ಬಂಟರ ಭಾವಂ ಪರನಾರೀದೂರಂ ಶರಣಾಗತಪ್ರಿಯಂ (ಕಾಶ. ೯೧-೩೯-೦೦ ; 1128) ; ಗೋವನಿಕಲಂಕಮಲ್ಲ ಬಂಟರ ಭಾವ ಪರನಾರೀಸಹೋದರ (ಇಕ. V. ೯೧-೨೬ ; 1586). [< ಸಂ. ಭಟ]

**ಬಂಟ$_{2}$**, ಬಟ್ಟ$_{4}$, ಭಟ್ಟ (ನಾ). ೧. ಹೊಗಳುವವನು ; ಸ್ತುತಿಪಾಠಕ : 'ಬಂಟಸಾಮಿ' ಪರಾ. **ಬಟ್ಟ$_{4}$** : ೧. 'ಹೊಗಳುಬಟ್ಟ' ಪರಾ. ೨. ವಿದ್ವಾಂಸ ; ಪಂಡಿತ : (?). ೩. ಪೂಜಾರಿ ; ಪುರೋಹಿತ : ಬಟ್ಟರಿಗೆ ಮಂತ್ರಕ್ಕಿಂತ ಉಗುಳೇ ಜಾಸ್ತಿ (ಗಾದೆ). ೪. ಅಡುಗೆಯವನು : ಈವತ್ತು ಬಟ್ಟರು ಬಂದಿಲ್ಲ (ಆಡು). **ಭಟ$_{1}$** : ೧: "ಭಟಃ_ಉಗ್ಗಡಿಸುವಂ" (ಕಾಶಕ್ಕ. ೨೯೨). 'ಭಟಾಂಗ' ಪರಾ. [< ಸಂ. ಭಟ್ಟ]

**ಬಂಟ$_{3}$** (ನಾ). ಶ್ರೇಷ್ಠಜಾತಿಯ ಕುದುರೆ : ದಾಂಟಲಪ್ಪಾರದ ಕುಟಾಯಂ ಗಂಟಱಿೊಳಂ ಕಂಡು ಪರಿದು ಪರಿತಂದು ಮುಂದಂ ನಾಂಟಿರೆ ಲಂಘಿಸಿ ಪೋದವು ಬಂಟಂಗಳೆನಿಪ್ಪ ಕುದುರೆಗಳ್ ಕೆಲವದಱೊಳ್ (ಪಾರವು. ೧೦-೪). [ ?./ಮರಾ. ಬಟ್ ]

**ಬಂಟಂಗ** (ನಾ). ಶೌರ್ಯದ ರೀತಿ ; ಪರಾಕ್ರಮದ ಬಗೆ : ಕಂಠೀರವ ರಾಜಾದಿರಲಿ ಕರಿಗಳ ಬಂಟಂಗ ಮೆಱೆವುದೆ ಸ್ವಾಮಿ (ಕಂಪಿಲ. ೦೨-೬೨). [ಬಂಟು + ಅಂಗ$_{1}$]

**ಬಂಟತನ** (ನಾ). ೧. ಪರಾಕ್ರಮ ; ಶೌರ್ಯ : ರಾವಣಗೆಂಟುಮಡಿ ಯಿಂದ್ಪರಿ ರಣದಲಿ ಬಂಟತನದ ಪರಾಕ್ರಮಂಗಳ ಕಾಣದೇ ಲೋಕ (ಕೌಶಿಪಾ. ೩೬-೨೦) ; ಅಕ್ಕಮಹಾದೇವಿಯ ವಚನವು ಅವಳ ಧೈರ್ಯ ಸಾಹಸಗಳ ನಿದರ್ಶನವಾಗಿ ನಮ್ಮಲ್ಲಿ ಬಾಳುವೆಯ ಬಂಟತನವನ್ನು ಪ್ರೇರಿಸುತ್ತದೆ (ಕವಿಶಾ. ೫). [ಬಂಟ$_{1}$ + — ತನ]

**ಬಂಟವಣ** (ನಾ). ಪರಾಕ್ರಮಿಗಳಂ ಸಲ್ಲಿಸಂವ ಹಣ: ಈನ್ತು ನೆಗರ್ತ್ತವೆತ್ತ ಬಂಟಸಾಸಿರ್ವ್ವರುಂ ದೇವರ್ಗ್ಗೆ ಬಂಟವಣಮನಾಚಂದ್ರಾರ್ಕ್ಕತಾರಂಬರಂ ಬಿಟ್ಟರ್ (ಶಾಶಾ. XI-ii, ೦೯೩-೬; 1008). [ಬಂಟ$_{1}$ + ಪಣ$_{1}$]

**ಬಂಟಸಾಮಿ** (ನಾ). ಹೊಗಳಂಭಟ್ಟರಲ್ಲಿ ಮುಖ್ಯನಾದವನು : ಅಚ್ಚಗದಿಂ ಕಟ್ಟಿದ ಕೆಟ್ಟ ಕನ್ನಡದ ಕಾವ್ಯಬ್ಬಗಳಂ ಬಂಟ[ಹಾಠಾಂ. ಬಟ್ಟ]ಸಾಮಿಗಳಂ ಕೇಳಿಸಿ ತಾಮೆ ತಮ್ಮ ಮನದೊಳ್ಸರ್ವಜ್ಞರೆಂದಿರ್ಪ ಕಬ್ಬಿಗರುಂ ಕಬ್ಬಿಗರೆಂಬ ಲೆಕ್ಕದೊಳಗೇಂ (ಅರ್ಹದಾ. ೧-೩೫). ♦ ಇದು ಇತರರನ್ನು ದೂಷಣೆ ಮಾಡಿ ಒಡೆಯನನ್ನು ಹೊಗಳುವವನು ಎಂಬರ್ಥದಲ್ಲಿ ಉಪಯೋಗವಾಗಿದೆ. [ಬಂಟ$_{2}$ + ಸಾಮಿ$_{1}$]

**ಬಂಟಿಕೆ** (ನಾ). ವಾರ್ತೆ; ದೌತ್ಯ (?) : ಅಂಬರೀಷಾವನಿಪಸುತೆಯ ಬಂಟಿಕೆಯ ಹರಿಗಂಬರೀಷಂ ಮುಳಿಯನೆ (ಕರ್ಣಾ. ೧೦-೬೨). [ಬಂಟ$_{1}$ + — ಇಕೆ]

**ಬಂಟು** (ನಾ). ೧. ಪರಾಕ್ರಮ; ಶೌರ್ಯ : ಸಾಸಿರ್ವ್ವರುಂ (ವ)ಅತನ ಬಣ್ಣಂಗೆ ಮೆಚ್ಚಿ (ಎಕ. VIII. ಸೊರಬ. ೮೬-೭; 1150); ಉಂಟಾದ ಬಲೆ ಕಾಲು ಕಣ್ಣ ನಾಯಕ ಕುನ್ನಿ ಬಂಟುಳ್ಳ ನಾಯಿ ಹುಲಿಗಳ ಅಂಟುಸಾಳುವ

ಸೇಣೆ ತಡಿಕೆ ಗಾಣಗಳಿಂದ ಉಂಟಾಗಿ ನಡೆಸಂದ ರಾಯ (ಹಂಶಾಂ. ೧-೬೦): ನಂಟುಂ ಬಂಟುಂ ನೆರವಿರ್ಪಿನಂ ಗೆಲ್ವುದುಮೊಲ್ವುದುಂ ನಿಮಗಕ್ಕುಂ (ರಾಮಾಶ್ವ. ೯೬-೦೭). 'ಬಂಟುತನ' ಪರಾ. ೨. ಸೇವೆ; ಕೈಂಕರ್ಯ: 'ಬಂಟುಗೆಯ್' ಪರಾ. ೩. ಪರಿವಾರ; ರಕ್ಷಕನಳ; ಕಲಿ ಮಲಪ್ರಧ್ಮಂ ಸಕಂ ಕೇಶಿರಾಜನ ಬಂಟು ಸಯ[ಸೇ]ನಸೂರಿಪದಪದ್ಮಾರಾಧನಾರ್ತ್ತ ಚಿತ್ತನ್ (ಎಇ. XVI. ೩೩-೦೬; 1053). ೪. ಸೈನ್ಯ; ದಂಡು: ತುರಗಮು ಮೊಂದುಸತ್ತಿಗೆಯುಮೊಂದಿರೆ ಕಾಪಿನ ಬಂಟು ಸುತ್ತಲುಂ ಬರೆ (ಆದಿಪು.೧೦-೯೬ ಅಧಿಕಪದ್ಯ); ಭೂರಿ ಗೋವೃಂದವನು ಗೋಪಕುಮಾರರನು ಯಾದವರ ಬಂಟಿನ ಮೇರೆಯನು ಎಗೆ ಕಾದನಲ್ಲದೆ ತುಱುವ ಕಾದವನೇ (ಹಾಳ್ಕಾ. ೨೦.೬೬). ೫. ಸೇವಕ; ಭೃತ್ಯ; ಊಳಿಗದವನು: ನಮ್ಮ ಬಂಟಂಗೆ [ಪಾಠಾಂ. ಎಮ್ಮ ಭಂಟಂಗೆ]ನಾವೆ ಬೆಸಕೆಯ್ವುನಿತಾಯ್ತು (ಹಂಪಸಂ.೨೦೦-೦೭); ಭೂತಗಣ ಬಂಟು ನೃತ್ಯ (ಶಂಕಪು. ೩೦-೨೪). [ಬಂಟು$_1$ + — ಉ./ತುಳು. ಬಂಟು = ವೀರೋಚಿತವಾದ; ತೆಲು. ಬಂಟು]

**ಬಂಟುಗೆಡು** (ಕ್ರಿ). ಶೌರ್ಯ ಕುಂದು; ಕೆಚ್ಚಿಲ್ಲದಾಗು: ಕೂರದರ್ ನೆಲಸನೊಟ್ಟಜಯುಂ ಕೊಳೆ ಕೊಟ್ಟು ಬಂಟು[ಪಾಠಾಂ. ಮುಂಡು, ಮುಟ್ಟುಗೆ]ಗೆಟ್ಟನ್ನುಮರಣ್ಯದೊಳ್ ನಮೆದವಂ ಯಮನಂದನಂ (ಶಂಶಭಾ. ೬-೩೩); ಕಂಠಮಂ ಕತ್ತರಿಸಲಾ ಶಿರಂ ತನ್ನೆಡೆಗೆ ಬಂಟುಗೆಡದ್ಯೆದಿದೊಡೆ (ಕೃಷ್ಣಬಾ. ೦೩-೬೨). [ಬಂಟು + ಕೆಡು$_1$]

**ಬಂಟುಗೆಯ್** (ಕ್ರಿ). ಸೇವೆ ಮಾಡು; ಊಳಿಗ ಮಾಡು: ದುಷ್ಕುಲಂಗಳೊಳ್ ಪುಟ್ಟಿ ಪೆಱರ್ಗೆ ಕೀಱುವಸಂಗೆಯ್ದುಂ ಬಂಟುಗೆಯ್ದುಂ ನವೆವುತ್ತಂ. . .ದುರ್ಗತಿಗೆ ಸಲುವರ್ (ಪಶಾರ. ೩೭೩). [ಬಂಟು + ಕೆಯ್$_1$]

**ಬಂಟುತನ** (ನಾ). ಪರಾಕ್ರಮ; ಕೆಚ್ಚು; ಶೌರ್ಯ: ನೆರೆದು ಪರದಾರಮಂ ಕಲಿವುದೆ ಚತುರತ್ವಂ ಸೊಕ್ಕುವುದೆ ಬಂಟುತನಂ . . . ಎಂಬರ್ ಧೂರ್ತರ್ (ಶಾಂತಿಪು. ೩೬೬); ಗಱಿ ತೋಱಿ ಗಂಡರೆಂಬವರ ಕಾಣೆ ನಿಱಿ ಸೋಂಕಲು ಮುನಿಯಿಲ್ಲ ನೋಡಯ್ಯಾ ನಂಟುತನವೇನವನ ಬಂಟು[ಪಾಠಾಂ. ಟ]ತನವೇನವನ ಹುಲ್ಲ ಕಿಚ್ಚು ಹೊಲೆಯನ ಮೇಳಾಪ (ಶಿಪ. ೪. ೧೦೨); ಜಗಂ ನೋಡೆ ಮಾಡಿದನತ್ಯದ್ಭುತಮಪ್ಪ ಬಂಟುತನಮಂ ಗೋವಿನ್ದರಣ್ಣಾಧಿಪಂ (ಶಾಇಇ. XX.೮೭-೯೨; ೪); ಬಂಟುತನವು ಎದೆಗಾರಿಕೆ ಧೈರ್ಯ ವೀರತ್ವವನ್ನು ತಿಳಿಯಪಡಿಸುತ್ತದೆ (ತುಳುಪಾ. ೬೧). [ಬಂಟು + — ತನ./ತೆಲು. ಬಂಟುತನ]

**ಬಂಟೆದೆ** (ನಾ). ಪರಾಕ್ರಮವುಳ್ಳ ಮನಸ್ಸು: ಇಂದು ಬೆಳಗಿನಿಂದ 'ಹೊಯ್ಸಳ! ಹೊಯ್ ಸಳ!' ಎಂಬ ಕಡೆಯಿಲ್ಲದ ಕೂಗು ನಿನ್ನ ಬಂಟೆದೆಯ ಮುಟ್ಟಲೆಂದು ನನ್ನ ಕಿವಿಕೊಳವಿಯಲ್ಲಿ ಹೊಕ್ಕಾಡುತಿದೆ (ಏಶಾ. ೪). [ಬಂಟು + ಎದೆ (<ಎರ್ದೆ)]

**ಬಂಟೇಳು** 'ಬಂಡೇಳು' ನೋ.

**ಬಂಡ$_1$** (ನಾ). ೧. ಪದಾರ್ಥ; ಸಾಮಾನು; ಸರಕು: ಪಲಂಬರ್ ಶಾಕಟಿಕಪರದರುಬಿರಸು ಬಂಡಿಗಳೊಳ್ ಪಟ್ಟಿಯುಂ ಧಾನ್ಯಮಂ ತೀವಿ ಕೊಂಡು ಪೊಱಲ್ಗೆ ಮಾಱಲೆಂದು ಪೋಪನ್ನೆಗಂ . . . ಬಂಡಮುಮೆಟ್ಟುಗಳುಂ ಮೊದಲಾಗೆಲ್ಲಮಂ ಕಳ್ಳರ್ ಕೊಂಡು ಪೋದರ್ (ವಡ್ಡಾ. ೬೬-೦೪); ಬಂಡವ ತುಂಬಿದ ಹಸುಬೆ ಕೊಂಡವನ ನುಂಗಿತ್ತು (ಪೋಳೆಶಿವ. ೨೪೩-೬೯೪); ಉರುತರ ಬಂಡವ ತುಂಬಿ ಹಡಗೇಱಿ ಹರದುಗೆಯ್ಯಲು (ಶೀಬಸಂ. ೪-೦೩). ೨. ಮಾನವಿಲ್ಲದವನು; ನಿರ್ಲಜ್ಜ: "ಬೂತುಗಳೆನೆ ಬಂಡರ್ [ಪಾಠಾಂ. ಬಂಡುಂ]" (ಛಂಪ. ೨೯); ಕಬ್ಬಿಗರ ಜೋಡೆಯ ಬಂಡರ. . . ಬೀಡೆಗಾಱರಾಗರಮನೆ . . . ಏಸದಿರ್ಪುವು ಸೂಳೆಗೇರಿಗಳ್ (ಶಬ್ದಕಾ. ೭೨); ಲೋಕದೊಳ್ಬೀಡುವಂ ಬಂ[ಪಾಠಾಂ. ಭು]ಡಂ (ಕೃಷ್ಣಬಾ. ೨೬-೬೪); ಬಂಡನ ಸ್ನೇಹ ಮಾಡಿ ಇದ್ದ ಬುಡ ಕಳಕೊಂಡ (ಗಾದೆ). ೩. ವಿದೂಷಕ ಹಾಸ್ಯಗಾರ: ಭಂಡಂ — ಬಂಡಂ (ಶಮದ. ೩. ೨೩೩ ಪ್ರಯೋ.). ೪. ಹೇರಳ; ಹೆಚ್ಚಳ; ಆಧಿಕ್ಯ: ದವಸ ಬಂಡವಾಗಿದೆ (ಶಬ್ದೀ. ೨೯೦-೨೦). (ಗ್ರ). ೫. ನಾಚಿಕೆಯಿಲ್ಲದ; ಲಜ್ಜೆಗೇಡಿಯಾದ: ಬಂಡವೈಷ್ಣವನೆ ಕೇಳದಱಿಂದ ಹರಿಯಡಿಯು ಖಂಡಿಸಿದುದೆಂದು ಪದ್ಮ ಪುರಾಣವೊರೆದುದು (ಸಿದ್ಧೇಪು. ೬-೩೩).

**ಬಂಡಬಂಡವಾಗಿ** = ಹೆಚ್ಚುಹೆಚ್ಚಾಗಿ; ಅತ್ಯಧಿಕವಾಗಿ: ತೊಲೆಗಳ ವರೆಗೆ ಬಂಡಬಂಡವಾಗಿ ನೇಲುಬಿದ್ದ ಇಲ್ಲಣ, ಜಾಡಗಳನ್ನು ಸವರಿದರು (ಚಕ್ರ. ೨೬೦). [<ಸಂ. ಭಂಡ. / ತಮಿ. ವಣ್ಣ, ವಣ್ಣು; ತುಳು. ಬಂಡ್, ಬಂಡು, ಭಂಡ್, ಭಂಡ, ಭಂಡೆ; ಕೊಡ. ಬಂಡೇ; ತೆಲು. ಬಂಡ, ಬಂಡು; ಕೋತ. ಬಂಡ್ಯಾ. / ಮರಾ. ಭಂಡ್, ಭಾಂಡ್]

**ಬಂಡ$_2$** (ಗು). ೧. ಕುಂದುಗಳುಳ್ಳ; ನ್ಯೂನ. ೨. ಸತ್ವಗುಂದಿದ: ನಿರ್ವೀರ್ಯ. (ನಾ). ೩. ಬಾಲವಿಲ್ಲದ ಎತ್ತು: "ಬಂಡ-ಬಾಲ ಮೋಟಾದ ಎತ್ತು" (ಪಾಶಂ. ೬); ಮಾಗಧೀಭಾಷೆಯಲ್ಲಿ ಬಾಲ ಕತ್ತರಿಸಿದ ಗೂಳಿಯನ್ನು 'ಬಂಡ' ಎಂದು ಕರೆಯುತ್ತಾರೆ (ಪಾಶೀ. ೦೦). [ಸಂ.]

**ಬಂಡ$_3$, ಬಂಡೆ$_3$** (ನಾ). ಕುರಿಯ ತುಪ್ಪಟ; ಉಣ್ಣೆ: ಬಣ್ಣವೇಱಿಂಗೆ ಅಯ್ದು ಏಸ (ಎಇ. VIII. ೨೮೬-೫೪; 732); ಕುರುಬರ ಸಂಗವ ಮಾಡಿ ಕುರಿಗಳ ಮಯ್ಯೋದ ಕಲಿತು ಬಂಡ ನೂಲೋದ ಕಲಿತು (ಪಾಶಶ. ೦೫೦). 'ಅಡಿಬಂಡ' ಪರಾ. **ಬಂಡೆ$_3$**: "ಊರ್ಣಾ—ಕುರಿಬಂಡ ಮುಂತಾದ ಕೂದಲು" (ಸಿದ್ಧಾಂತಿ. ೩೯೭). [?]

**ಬಂಡಣ, ಭಂಡಣ** (ನಾ). ಕಾಳಗ; ಯುದ್ಧ: "ಬಂಡಣ = ಕಾಳೆಗಂ" (ಕಮದ. ಶಂ. ೨); ಬಂಡಣದೊಳೆನ್ನನೋಡಿಸಿ ಕೊಂಡುಯ್ದುಂ ನಿನ್ನನಾ ಸರಿತ್ಸುತಂ (ಶಂಶಭಾ. ೦-೬೬); ಚಂಡಕೋದಂಡನ ದಂಡು ಬಂಡಣಕ್ಕಿಸ ಲಂಡುಗೊಂಡು ನಿಂತು (ಹರಿಶ್ಚಂ. ೩-೩೬ ಪ); ಪಲಬರರಸರಂ ಬಂಡಣದೊಳ್ ಗೆಲ್ದು (ಪಾಶಕ. ೨-೩೬ ಪ). **ಭಂಡಣ**: "ಯುದ್ಧಾಹ್ವಯಂ ಭಂಡಣಂ" (ಕರ್ಣಾ. ೨); ಭಂಡಣದೊಳಟ್ಟಿದು ಪೆಂಡಿರ್ ಭಂಡಾರಂ ಪೋದೊಡದು ವಿಧಾತೃವಶಂ (ಅಶಂಪು. ೦೦-೬೦); ಭಂಡಣದೊಳ್ ಜಯಾವ ಜಯಮೆಂಬುದು ಸಿದ್ಧಂ (ದಶಕು. ೨-೩೪); ಚಂಡವರಾಕ್ರಮದಷ್ಟು ಶಶಾಂಕರ್ ಭಂಡಣಮಂ ಪೊಕ್ಕು ನೃಪಪಂಚಕದೊಳಗೆ ಪಳಂಚಿದರು (ಜಯುಶಾ. ೬-೩೩). [<ಸಂ. ಭಂಡನ]

**ಬಂಡತನ** (ನಾ). ನಾಚಿಕೆಯಿಲ್ಲದಿರುವಿಕೆ; ಅವಮಾನದಿಂದ ಕೂಡಿರುವಿಕೆ; ನಿರ್ಲಜ್ಜೆ: ಆ ಯಮಂ ಬಂಡತನವೇ ಶ್ವೇತ ನಡೆ ನರಕಕುಂಡಕ್ಕೆ ನೀನೆಂದು ಗರ್ಜಿಸಲ್ಕೆ (ಶಿವಪು. ೩೦-೨೬); ಪೈಶಾಚರಂತೆ ಹೇಸದೆ ರಕ್ತ ಪಾನವಮಂ ಮಾಡಿಯೊಡಲ ಪೋಷಿಸಿದೆ ಬಂ[ಪಾಠಾಂ. ಭಂ]ಡತನವಿದು (ಕೃಷ್ಣಬಾ. ೨-೬೦). [ಬಂಡ$_1$ + — ತನ]

**ಬಂಡಬಾಳು** (ನಾ). ಮಾನವಿಲ್ಲದ ಬಾಳು; ಹೀನಬದುಕು: ಬಂಡ ಬಾಳನ್ನು ಬಾಳಿದ ಬಾಣಭಟ್ಟ ಏಕಿಂದು ಪರಾಧೀನನಾಗಿದ್ದಾನೆ? (ಪಾಶಶ. ೦೦೯). [ಬಂಡ$_1$ + ಬಾಳು$_2$ (<ಬಾಟ್ಕು)]

**ಬಂಡಮಾತು** (ನಾ). ನಾಚಿಕೆಯಿಲ್ಲದ ಮಾತು: ಇನ್ನೊಂದು ಸಲ ಇಂಥ ಬಂಡಮಾತು ಆಡಬೇಡ (ಬೂತಿ). [ಬಂಡ$_1$ + ಮಾತು$_1$]

**ಬಂಡಲು, ಬಂಡಲ್ಲು** (ನಾ). ೧. ಗಂಟು; ಮೂಟೆ: ತನ್ನ ಮೇಲೆ ಹೇರಿದ ಬಂಡಲನ್ನು ಹೊತ್ತುಕೊಂಡು ತಿರುಗುವ ಅಭ್ಯಾಸ ಮಾಡಿಕೊಳ್ಳ ಬೇಕಾಯಿತು (ಅಂಗಾಹ. ೩೩). ೨. ಕಟ್ಟು; ಪೊಟ್ಟಣ: ಚಹಾ ತುಂಬಿದ ಕಿಟ್ಲಿ, ಬಿಸ್ಕೀಟ ಬಂಡಲುಗಳು ಬಂದವು (ಜೀರಾಶ. ೦೬). **ಬಂಡಲ್ಲು**: ೧. ನನಗ ಇರಲೀ ಅಂತ ಒಂದು ದೊಡ್ಡ ಬಂಡಲ್ಲ ತಂದು ಕೊಟ್ಟಾರ ನೋಡ! (ಬಂಡಯು. ೪೪). [←ಇಂ. Bundle]

**ಬಂಡಲ್ಲು** 'ಬಂಡಲು' ನೋ.

**ಬಂಡವಲ** 'ಬಂಡವಾಳ' ನೋ.
**ಬಂಡವಲು** 'ಬಂಡವಾಳ' ನೋ.
**ಬಂಡವಳ** 'ಬಂಡವಾಳ' ನೋ.
**ಬಂಡವಳಗಾರ** 'ಬಂಡವಾಳಗಾರ' ನೋ.
**ಬಂಡವಾಲಶಾಹಿ** 'ಬಂಡವಾಳಶಾಹಿ' ನೋ.

**ಬಂಡವಾಳ**, ಬಂಡವಲ, ಬಂಡವಲು, ಬಂಡವಳ, ಬಂಡವಾಳು, ಬಾಂಡವಲು, ಭಂಡವಲ, ಭಂಡವಲು, ಭಂಡವಾಳ, ಭಂಡವಾಳು, ಭಾಂಡವಲ, ಭಾಂಡವಲು, ಭಾಂಡವಳು (ನಾ). ೧. (ವ್ಯಾಪಾರ ಅಥವಾ ಉದ್ಯೋಗದಲ್ಲಿ ತೊಡಗಿಸುವ) ಮೂಲಧನ; ಅಸಲು: ಇಲ್ಲಿನ ಕೈಗಾರಿಕೆಗಳಿಗೇ ಬಂಡವಾಳವಿಲ್ಲದಿರುವಾಗ. . . ಇಲ್ಲಿ ಏಳಿಗೆ ಹೇಗುಂಟಾಗಬೇಕು ? (ಜಾಕ್ರ. ೧೫೦); ಅರ್ಥಶಾಸ್ತ್ರದಲ್ಲಿ ಬಂಡವಾಳವನ್ನು ಒಂದು ಉತ್ಪಾದನಕಾರಕವಾಗಿ ಪರಿಗಣಿಸುವುದು ರೂಢಿಗೆ ಬಂದಿದೆ (ಕವಿಕೋ. XI, ೭೯೩). ೨. ಬೆಲೆ; ಮೌಲ್ಯ: ಚಮತ್ಕಾರಗಳ ಚದುರತನಮಂ. . . ಶೃಂಗಾರದ ಬಂಡವಾಳವಂ ತಿಳಿದವಳು (ಶೃಗಂಧಿ. ೨೨೦-೩). **ಬಂಡವಲ:** ೧. ವ್ಯವಹರಿಸುವಗೆ ಬಂಡವಲಮಿ[ಬಾಶಾಂ. ಬಂಡಮೊದವಿಲ್ಲದೆಂತು ಪೋದಪ್ಪೆ (ಭುಕ್ಕಾಸ್ತ್ರ. ೯-೬ ವ). ೩. (ಆಲಂ) ಸತ್ತ್ವ; ತಿರುಳು; ಸಾರ: ತಮ್ಮಲ್ಲಿದ್ದ ಬುದ್ಧಿಯ ಬಂಡವಲವನ್ನು ವ್ಯವಹಾರಕ್ಕೆ ಬಳಸಿ, ವ್ಯವಹಾರನಿಪುಣರಾಗಿದ್ದರು (ಕನಸಿ. ೦೦೧). **ಬಂಡವಲು** : ೧. ಸಂಪತ್ತಿಯನ್ನು ಹುಟ್ಟಿಸಲಿಕ್ಕೆ ಬಂಡವಲಾದರೂ ಬೇಕು (ಮುಂಬಯಿ. ೩-೨೫೦). ೩. ಆತನು ಆದೊಂದು ಕೊಡಲಿಯಿಂದ ಇಡಿಯ ಆಯುಷ್ಯದಲ್ಲಿ ಹೊಟ್ಟೆಯ ಪ್ರಶ್ನೆಯನ್ನು ಬಿಡಿಸಬಲ್ಲನು. ಅದುವೆ ಅವನ ಬಂಡವಲು (ಕಕ್ಕಡಿ. ೩೯); ಸುಖ ಸಿಗಲೊಲ್ಲದೆಂದು. . . ಮಡದಿ ಮಕ್ಕಳಿಂದ ಕಾಣೆಯಾಗುವದಕ್ಕಾಗಲಿ ಬಹಳ ಬಂಡವಲು ಬೇಕಿಲ್ಲ (ಬಾಳಿಣ. ೩೭). **ಬಂಡವಳ:** ೧. 'ಬಂಡವಳಗಾರ' ಪರಾ. **ಬಂಡವಾಳು:** ೧. ನಿಮ್ಮ ದಯದ ಬಂಡವಾಳೊಂದಧಿಕವಾಗಿರಲಿ (ಶರಕು. ೩-೨೦). **ಬಾಂಡವಲು** : ೧. 'ಬಾಂಡವಲುಶಾಹಿ' ಪರಾ. **ಭಂಡವಲ** : ೧. ಭಂಡವಲ ಹಾಕಿ ಭಂಡವಲ ತಗಿಯೋ ಕೆಲಸ (ಗಂಪಾಜಾ. ೨೧೩); ಭಂಡವಲ ಕೂಡಾ ಆಗ ಸ್ಥಿರವಾಗಿ ನೆಲೆಯೂರಿತ್ತು (ಹಸುತ. ೦೯). **ಭಂಡವಲು:** ೧. ಗೋದಿಯ ಒಂದೇ ವ್ಯವಹಾರದಲ್ಲಿ ಭಂಡವಲಿನ ಇಪ್ಪಡಿ ಲಾಭವಾಯಿತು (ಜಯುಂಕ. ೩೯೬); ಕಲಕತ್ತೆಯ ಪತ್ರಿಕೆಗಳು ಪರದೇಶದ ಭಂಡವಲಿನಿಂದಲೇ ಕೂಡಿದ್ದವು (ಶಕ್ರೃಕಾ. ೨೪). ೩. ಮೂಲ ಭಂಡವಲು ಮುಗಿಯಲಿಲ್ಲ, ನಿಜ, ಬೆಳೆಯಲಿಲ್ಲ ಕೂಡ ಜ್ಞಾನವೆಲ್ಲ ಅಜ್ಞಾನದಂತೆ ಮೊದಲಿದ್ದ ಹಾಗೆ ಮೂಢ (ಅರಳು. ೨೪೯-೬). **ಭಂಡವಾಳ:** ೧. 'ಭಂಡವಾಳಗಾರ' ಪರಾ. **ಭಂಡವಾಳು:** ೧. 'ಭಂಡವಾಳುಗಾರ' ಪರಾ. **ಭಾಂಡವಲ:** ೧. ಮಲ್ಲೇಶ ನೌಕರನಲ್ಲದಿದ್ದರೂ ಗೌಡನ ಭಾಂಡವಲದಲ್ಲಿಯೆ ವ್ಯಾಪಾರ ಮಾಡುವ ಪಾಲುಗಾರನಲ್ಲವೆ? (ಶ್ರಜಕ. ೪೦). **ಭಾಂಡವಲು:** ೧. ಅವನ ಭಾಂಡವಲು ಉಪಯೋಗಿಸಿಕೊಂಡು ಇತ್ತ ಬೇರೆ ವ್ಯವಹಾರ ಸಾಗಿಸ ಬೇಕಾಯಿತು ! (ಶ್ರಜಕ. ೩೬); ಯಾವನೊಬ್ಬ ಸಾಹಸಿಯೂ ನಾಲ್ಕಾರು ಮಂದಿಯ ಕಡೆಯಿಂದ ಭಾಂಡವಲು ಕೂಡಿಸಿಕೊಂಡು (ಶ್ರಬಂರ. ೨೭). ೪. ವಸ್ತು; ಸಾಧನ: ಈಗ ಹಡಗದ ಎಣ್ಣೆ–ಮುಖ್ಯ ಭಾಂಡವಲ–ತೀರಿತು (ಅಕನಾ. ೨೨೩). **ಭಾಂಡವಳು:** ೩. ಭಾಂಡವಳು ಅವನಲ್ಲಿಲ್ಲ (ಒಂಬಿರ. ೨೭.)

**ಬಂಡವಾಳವಿಲ್ಲದ ಬಡಾಯಿ** = ೧. ಸತ್ತ್ವವಿಲ್ಲದ ಜಂಬ; ಒಣಜಂಬ: ನಾನು ಬಂಡವಾಳವಿಲ್ಲದ ಬಡಾಯಿಯನ್ನು ಕೊಚ್ಚಿದ್ದೆ (ಕಥಾ. II, ೧೦೦೯). ೨. ಒಣಜಂಬದ ವ್ಯಕ್ತಿ: ಅವನಂಥ ಬಂಡವಾಳವಿಲ್ಲದ ಬಡಾಯಿಯನ್ನು ನಾನು ಮತ್ತೆಲ್ಲೂ ನೋಡಿಲ್ಲ (ಅದೇ).

[ ← ಮರಾ. ಭಾಂಡವಲ/. ತೆಲು. ಬಂಡವಲ, ಬಂಡಾಲ ]

**ಬಂಡವಾಳಗಾರ**, ಬಂಡವಳಗಾರ, ಭಂಡವಾಳಗಾರ, ಭಂಡವಾಳುಗಾರ (ನಾ). ಹಣವನ್ನು ವ್ಯಾಪಾರದಲ್ಲಿ ತೊಡಗಿಸುವವನು; ಸಾಹುಕಾರ: ಜನರನ್ನು ಒಂಸಿಸುತ್ತಿದ್ದ ಬಂಡವಾಳಗಾರರನ್ನು ಓಡಿಸಿದೆವು (ಶಾಕಿಮ. ೬೯); ಬಂಡವಾಳಗಾರರಿಗೂ ಕಾರ್ಮಿಕರಿಗೂ ಉಂಟಾಗುತ್ತಿರುವ ಘರ್ಷಣೆಗಳ ಕಾರಣಗಳನ್ನೂ ಕುರಿತು ತರುಣವಿದ್ಯಾರ್ಥಿಗಳು ವಿಚಾರ ಮಾಡುವಂತೆ ಪ್ರಚೋದಿಸುವುದು ಆವಶ್ಯಕ (ಕೃಹೂಕಿ. ೧೫೦). **ಬಂಡವಳಗಾರ:** ಬಂಡವಾಳಗಾರರ ಮತ್ತು ಕಾರ್ಮಿಕರ, ಶ್ರೀಮಂತರ ಮತ್ತು ಬಡವರ ನಡುವಣ ಕಲಹಗಳಿಗೆ ಕಾರಣವೇ ಇರುವುದಿಲ್ಲ (ಕಕ್ರಸ್ತ್ರಾ. ೧೫೨). **ಭಂಡವಾಳಗಾರ** : ಚಂಪಾರಣ್ಯಜಿಲ್ಲೆಯ ಒಕ್ಕಲುಜನವನ್ನು ಸಂಘಟಿಸಿ ಆಂಗ್ಲೇಯ ಭಂಡವಾಳಗಾರರ ವಿರುದ್ಧ ಸತ್ಯಾಗ್ರಹವನ್ನು ಹೂಡಬೇಕಾಯಿತು (ರಾಜಚ. ೪). **ಭಂಡವಾಳುಗಾರ** : ಅಜ್ಞಾನದ ಲಾಭ ಪಡೆದು ಅವರನ್ನು ಆಳುತ್ತಿರುವ ರೀತಿ ಭಂಡವಾಳಗಾರರ ದುಡ್ಡಿನ ಸುಲಿಗೆಗಿಂತಲೂ ನೀಚತಮವಾದದ್ದು (ಒಂಬಿರ. ೦೦೦).

[ ಬಂಡವಾಳ + – ಗಾರ (< – ಕಾಜ) ]

**ಬಂಡವಾಳಗಾರಿಕೆ** (ನಾ). ಬಂಡವಾಳವನ್ನು ಹೂಡಿ ಮಾಡುವ ಉದ್ಯೋಗ : ಹೆಚ್ಚಿನ ಹಣವನ್ನು ಉತ್ಪಾದನೆ ಮಾಡುವುದು ಬಂಡವಾಳಗಾರಿಕೆಯಾದ್ದರಿಂದ ಮೂಲದಲ್ಲಿ ಹಣವು ಅವಶ್ಯ (ಮೂವಾದ. ೦೨೩).

[ ಬಂಡವಾಳಗಾರ + – ಇಕೆ ]

**ಬಂಡವಾಳದಾರ**, **ಭಾಂಡವಲದಾರ** (ನಾ). = ಬಂಡವಾಳಗಾರ : ಆ ಕಂಪೆನಿಯ ಬಂಡವಾಳದಾರರಲ್ಲಿ ಭಿನ್ನಾಭಿಪ್ರಾಯವುಂಟಾಗಿ ವ್ಯಾಪಾರವೆಲ್ಲಾ ಕೆಟ್ಟು ಕಂಪನಿಯನ್ನೇ ಮುಚ್ಚಿ ಬಿಟ್ಟರು (ಅದೇ). **ಭಾಂಡವಲದಾರ:** ಭಾಂಡವಲದಾರ ಕೂಲಿಕಾರರ ವಿಷಯಗಳೂ . . . ಸಾಹಿತ್ಯದಲ್ಲಿ ಪ್ರತಿಬಿಂಬಿಸುವುವು (ಶ್ರಬಂರ. ೦). [ ಬಂಡವಾಳ + – ದಾರ್ ]

**ಬಂಡವಾಳಶಾಹಿ**, ಬಂಡವಾಲಶಾಹಿ, ಬಾಂಡವಲುಶಾಹಿ, ಭಂಡವಾಳಶಾಹಿ, ಭಾಂಡವಲಶಾಹಿ (ಗು). ೧. ಐಶ್ವರ್ಯದ ಮದದಿಂದ ಕೂಡಿದ: ತನ್ನ ಹಂಗಿಗೊಳಗಾಗಲಿಲ್ಲವಲ್ಲ ಎಂದು ಅವರ "ಬಂಡವಾಳಶಾಹಿ" ಬುದ್ಧಿ ಕೆರಳಿತು (ಅಕಕಾ. ೦೦೦). (ನಾ). ೨. = ಬಂಡವಾಳಗಾರ : ನಮ್ಮ ದೃಷ್ಟಿಯೇನೋ ಬಂಡವಾಳಶಾಹಿಯ ಕಡೆಗೆ. ಒಲವೆಲ್ಲಾ ಅವರ ಕಡೆಗೆ (ಕಕ್ರಕಿ. ೧೨). **ಬಂಡವಾಲಶಾಹಿ** : ೨. ಬಂಡವಾಲಶಾಹಿಯ ಜತೆ ಸಾಮ್ರಾಜ್ಯಶಾಹಿಯ ಜತೆ–ಬಂಡುಹೂಡಿದ ಸ್ವಾತಂತ್ರ್ಯಪ್ರೇಮಿ (ಹಾರಹು. ೨೨). **ಬಾಂಡವಲುಶಾಹಿ:** ೨. ನಾವೇನು ಬಡವರ ರಕ್ತ ಹೀರುವ ಬಾಂಡವಲುಶಾಹಿಗಳೇ? (ಹುತ್ತುಹು. ೩೨). **ಭಂಡವಾಳಶಾಹಿ:** ೩. ಬಂಡವಾಳದ ಅಧಿಕಾರ; ಐಶ್ವರ್ಯದ ದೌಲತ್ತು: ಭಂಡವಾಳಶಾಹಿಯು ನಿರ್ನಾಮವಾಗಲಿ, ಕೆಲಸಮಾಡಿದ ಕೈಯು ತುತ್ತು ಕೆಲಸ ಮಾಡಿದವನ ಬಾಯಿಗೇ ಬೀಳಬೇಕು (ಕೃಜಾಕ. ೩೭). **ಭಾಂಡವಲಶಾಹಿ** : ೨. ಭಾಂಡವಲಶಾಹಿಗಳು ಹೊನ್ನ ಹಕ್ಕಿಯನ್ನು ಉಕ್ಕಿನ ಪಂಜರದಲ್ಲಿ ಬಂಧಿಸಿಟ್ಟರು (ದಕ್ಷವಾ. ೩೯). [ಬಂಡವಾಳ + ಶಾಹಿ./ಮರಾ. ಭಾಂಡವಲಶಾಹೀ ]

**ಬಂಡವಾಳಿಗ**, ಭಂಡವಾಳಿಗ (ನಾ). = ಬಂಡವಾಳಗಾರ: ಅತಿರೇಕದ ಅತಿಕ್ರಮಮೂಲ್ಯವನ್ನು ಎತ್ತಿಹಾಕುವ ನಡವಳಿಗೆ ಬಂಡವಾಳಿಗ ದಲ್ಲಾಲಿಯಾಗಿ ಮಾರ್ಪಡುವದೇ ಈ ಬೇಸಾಯದ ಬಂಡವಾಳಗಾರಿಕೆಯ ಹೆದ್ದಾಸೆಯ ಹೆದ್ದಾರಿ (ಮೂವಾದ. ೧೯೪). **ಭಂಡವಾಳಿಗ** : ಅವರ ಆಸೆ ಆಕಾಂಕ್ಷೆಗಳೆಲ್ಲ ಭಂಡವಾಳಿಗರ ದರ್ಪದ ತುಳಿತಕ್ಕೆ ಸಿಲುಕಿ ಕಮರಿ ಹೋಗುತ್ತವೆ (ಕಾಂಅಯ. ೩೩). [ ಬಂಡವಾಳ + – ಇಗ ]

**ಬಂಡವಾಳು** 'ಬಂಡವಾಳ' ನೋ.

**ಬಂಡಸಾಲೆ** (ನಾ). ೧. ಮಳಿಗೆ; ಕೋಠಿ; ಉಗ್ರಾಣ: ಅವರ ಬಂಡಸಾಲೆಯಲ್ಲಿ ಹಣದ ಪುರವಣೆಯನ್ನು ಮಾತ್ರ ನಾನು ಮಾಡಿ,

ಕೊಟ್ಟಿನು (ಜಿಂಪ್ನ. ೦೬೭). ೨. ದೊಡ್ಡ ಕಟ್ಟಡ; ಮಹಲು; ಸೌಧ: ಸಂಪಿಗೆಯ ಊರಲ್ಲೇ ಭಟ್ಟರು ಎಬ್ಬಿಸಿದ 'ಬಂಡಸಾಲೆ' ಸಾಮಾನ್ಯವಾಗಿ 'ವಿಲಾಯತಿ'ಯಲ್ಲೇ ನೋಡ ಸಿಗಬೇಕು (ಶಣಪ. ೭).

[ಬಂಡ₁ + ಸಾಲೆ₄./ತುಳು. ಬಂಡಸಾಲೆ]

**ಬಂಡಳಿಸು** (ಕ್ರಿ). ಹೇಳಿದುದನ್ನೇ ಪುನಃ ಹೇಳು; ಪುನರುಕ್ತಿ ಮಾಡು : ಮುಳಿವ ತಿಳಿವ ಗಂಡರ ಪೆಂಡಿರ ನುಡಿಗಳನೆ ಬಂಡಳಿಸುವ [ಪಾಠಾಂ. ಬಂದಣಿಸುವ, ಬಂಡುಳಿಸುವ, ಬಣ್ಣಿಸುವ] ಪುರುಳಿಗಳುಮಂ . . . ಕೊಟ್ಟು (ಅಂಕ್ಷಿ. ೪-೩೪ ವ); ಪೂಗೊಂಬಿನೊಳ್ ಪಾಯ್ದು ಬಂಡಳಿಸು[ಪಾಠಾಂ. ಬಂಡಣಿಸು, ಬಂಡುಳಿಸು, ಬಂದೆಳಸು, ಮಂಡಳಿಸು]ತ್ತಿರ್ಪ ಶುಕಾಳಿ (ಅಂಕ್ಷಿ. ೧೦-೭೬); ಅರಗಿಳಿವಿಂಡು ಬಂಡಳಿವ ಸಾರಿಕೆ ಚಾವಳಿಪುನ್ನದಾಳಿ ಗಾವರಿಸುವ ಸೋಗೆ ಕೇಗುವ . . . ವಿಕಾರವಿಲ್ಲದಿರೆಯುಂ ಬನವೊಪ್ಪಿದುದು (ಪುಷ್ಪಪು. ೦೪-೨೩).

[ಬಂಡಳ್ಳ (ಇ←ತವಿ. ವಣ್ಣುಚ್ಚ್=ಅರ್ಥವಿಲ್ಲದ ಶಬ್ದ) + –ಇಸ್ಸು₁]

**ಬಂಡಾಟ** (ನಾ). ಅವಮಾನ; ಸಿಗ್ಗು: ಕೂಟಕಪಟದಿಂದ ಕುಂದ ಪೊಜಿಸಿ ಬಂಡಾಟ ಬಾಹಿರನೆಂದೆನಿಸಿ (ಕಕಪಾಂ. ೦೦-೩೪). ೨. ಕಷ್ಟಪಡು ವಿಕೆ; ಹೆಣಗಾಟ; ಒದ್ದಾಟ: ಸಮುದ್ರದ ನಂಟಸ್ತನ ಉಪ್ಪಿಗೆ ಬಂಡಾಟ (ಹುಟ್ಟಿಹ. ೬೪); ಅದೇ ಬಂಡಾಟ ಸಾರ್ ಈ ಹಳ್ಳೀಲಿ (ರಂಗಳ. ೭೩); ಬಂಡಿ ಬಂಡಾಟ ಹೇರು ಹಟ್ಯಾಟ ತಲೆಮೊಟ್ಟೆ ಪರಮಸುಖ (ಗಾದೆ).

[ಬಂಡು₃ + ಆಟ]

**ಬಂಡಾಡು₁** 'ಬಂಡು₂' ಪರಾ.

**ಬಂಡಾಡು₂** 'ಬಂಡು₄' ಪರಾ.

**ಬಂಡಾಯ** (ನಾ). (ಸರ್ಕಾರ ಮುಂತಾದ) ಆಡಳಿತದ ರೀತಿಗೆ ತಮ್ಮ ಅಸಮ್ಮತಿಯನ್ನು ಸೂಚಿಸಲು ಮಾಡುವ ಪ್ರತಿಭಟನೆ; ಕ್ರಾಂತಿ : ಭಾರತದಲ್ಲಿ ಬಂಡಾಯಕ್ಕಾಗಿ ವೀರ ಉತ್ಸಾಹಿಯೋಧರು ಬೇಕಾಗಿದ್ದಾರೆ (ಅಶ್ವಾಶೇ. ೦೩೩); ೧೮೫೭ರ ಬಂಡಾಯದಲ್ಲಿ ನಮ್ಮ ಅಜ್ಜನನ್ನು ಹಿಡಿದೊಯ್ದು ಗಲ್ಲಿಗೇರಿಸಿದರು (ಸ್ವ.ತಿಶ. ೦೫); ಪರದೇಶಿಯರನ್ನು ಬಗ್ಗುಬಡಿಯಲು ನಮ್ಮ ಹಿರಿಯರಾದ ಸೈನಿಕರು ಬಂಡಾಯವನ್ನೇ ಹೂಡಿದರೆಂಬುದನ್ನು ಮರೆಯಬೇಡಿರಿ (ಹಬ್ಬಿ. ೦೯೯). 'ಬಂಡು₄' ಪರಾ.

[← ಮರಾ. ಬಂಡಾಳಿ, ಬಂಡಾಳ, ಬಂಡಾವೀ./ತುಳು. ಬಂಡಾಯಿ]

**ಬಂಡಾಯಗಾರ** (ನಾ). ದಂಗೆ ಮಾಡುವವನು; ಕ್ರಾಂತಿಕಾರ : ಸರ್ಕಾರಕ್ಕೆ ವಿರೋಧವಾಗಿ ಹೂಡಿದ ಹೋರಾಟದಲ್ಲಿ ಆ ಬಂಡಾಯಗಾರರು ಪ್ರಯೋಗಿಸಿದ . . . ವಿಧಾನಗಳ ಬಗ್ಗೆ ಅವನ ಮನಸ್ಸು ಅಲ್ಲೋಲ ಕಲ್ಲೋಲವಾಯಿತು (ಪುನಕು. ೪೪೪).

[ಬಂಡಾಯ + – ಗಾರ (< – ಕಾಱ) ]

**ಬಂಡಾಯಸಾಹಿತಿ** (ನಾ). ಸಾಮಾಜಿಕಶೋಷಣೆಗಳ ವಿರುದ್ಧವಾಗಿ ಸಾಹಿತ್ಯಸೃಷ್ಟಿ ಮಾಡುವವನು : ಬಂಡಾಯಸಾಹಿತಿ ಸಾಮಾಜಿಕ ಸಂಬಂಧಗಳ ಹಿಂದಿರುವ ಮೋಸಗಳನ್ನು ಅಮಾನವೀಯತೆಯನ್ನು ಗುರುತಿಸಿ ಸಮಾಜವ್ಯವಸ್ಥೆಯ ವಿರುದ್ಧ ಸ್ಫೋಟಿಸುತ್ತಾನೆ (ಕಂಕೋ. XI. ೭೯೭).

[ಬಂಡಾಯ + ಸಾಹಿತಿ]

**ಬಂಡಾಯಸಾಹಿತ್ಯ** (ನಾ). ಆಧುನಿಕ ಕನ್ನಡಸಾಹಿತ್ಯದ ಒಂದು ಪ್ರಕಾರ; ರಾಜಕೀಯ, ಸಾಮಾಜಿಕ ಘಟನೆಗಳಿಂದ ಬದುಕಿನಲ್ಲಿ ಉಂಟಾದ ಬವಲಾವಣೆಯನ್ನು ಪ್ರತಿಭಟಿಸುವ ಸಲುವಾಗಿ ಸೃಷ್ಟಿಯಾದ ಸಾಹಿತ್ಯ: ಶೋಷಣೆಯ ವಿರುದ್ಧ ಶ್ರಮಜೀವಿಗಳನ್ನು ಬಂಡಾಯಕ್ಕೆ ಅನುಗೊಳಿಸುವುದೇ ಬಂಡಾಯಸಾಹಿತ್ಯದ ಗುರಿಯಾಗಿದೆ (ಕಂಕೋ. XI, ೭೯೭).

[ಬಂಡಾಯ + ಸಾಹಿತ್ಯ]

**ಬಂಡಾರ** 'ಭಂಡಾರ' ನೋ.

**ಬಂಡಾರಿ** 'ಭಂಡಾರಿ' ನೋ.

**ಬಂಡಾರಿಗ** 'ಭಂಡಾರಿಗ' ನೋ.

**ಬಂಡಾರಿಸು** 'ಭಂಡಾರಿಸಂ' ನೋ.

**ಬಂಡಾರೆ** 'ಬಂಡಾರಿ' ನೋ.

Δ **ಬಂಡಾಱ** 'ಭಂಡಾರ' ನೋ.

**ಬಂಡಾಱಕಾಱ** (ನಾ). ಖಜಾನೆಯ ಮುಖ್ಯಾಧಿಕಾರಿ; ಖಜಾಂಚಿ : ಆಳಿಕಾಱರುಂ ಬಣ್ಣಾಱಕಾಱರುಂ(ಎಕ VIII. ಸೊರಬ. ೨೬೬-೪೦; ಸು. 1266).

[ಬಂಡಾಱ (<ಭಂಡಾರ) + – ಕಾಱ]

**ಬಂಡಿ₁**, ಭಂಡಿ₁ (ನಾ). ೧. ಗಾಡಿ ; ಶಕಟ ; ಚಕ್ಕಡಿ : "ಮಾಡಿಯೆನಲ್ ಬಂ[ಪಾಠಾಂ. ಗಾ, ದಂ]ಡಿ" (ಶಬ್ದಾಂಶ. ೩೯) ; ಶಾಕಟಿಕ ಪರದರುಂಬೆರಸು ಬಂಡಿಗಳೊಳ್ ಪಟ್ಟೆಯುಮಂ ಧಾನ್ಯಮಂ ತೀವಿಕೊಂಡು ಪೊಟಲ್ಗೆ ಮಾಱಲೆಂದು ಪೋಪನ್ನೆಗಂ (ವಡ್ಡಾರಾ. ೭೬-೦೦); ಅಂತು ತನ್ನ ತಂದ ಬಂಡಿಯ ಕೂಟಲ್ಲಮಂ ವತ್ತೆಂಟು ತುತ್ತಿನೊಳೆ ಸಮೆಯೆ ತುತ್ತುವುದಂ ಕಂಡು (ಶಂಕಪು. ೩-೨೪ ವ); ಕಡೆಗೀಲಿಲ್ಲದ ಬಂಡಿ ಹೊಡೆಗೆಡುವುದು ಮಾಬುದೆ ಕಡೆಗೀಲು ಬಂಡಿಗಾಧಾರ (ದೇರಾಪ. ೦-೨); ಬಾರಿಸಿದ ಬಲು ಹೊಱೆಯ ಬಂ[ಪಾಠಾಂ. ಭಂ]ಡಿಗಳೋರಣಿಸಿದವು ಪಯಣದಲಿ (ಕೊರಿಭಾ. ೦-೬-೩). ೨. ರಥ ; ತೇರು : ಕೀಲ ಕಳೆವರು ರವಿಯ ಬಂಡಿಯ (ಸಂಶಹ. ೭-೦೫) ; ನೀನಾರ ಬಂಡಿಯುಂ ಪೊಡೆದಪ್ಪೆ (ಕೃಪಿಬಾ. ೨೪-೩೪). ೩. ಗಾಲಿ ; ಚಕ್ರ : (೩). ಭಂಡಿ₁ : ೧. ಧನ್ಯನುಂ ಭದ್ರನುಮೆಂಬೊರಿರ್ವರ್ ಕುಡಿಯರರೊರ್ಮೆ ನಡೆವ ಭಂಡಿಗಳ್ ಶ್ರೀನದೀ ತೀರದಿಟ್ಟೆಡೆಯೊಳೊಂದೊಂದಂ ಸೋಂಕಿ ಮುಱಿಯೆ (ಶಾಂತಿಪು. ೯-೯೭ ವ); ತಂಬುಲಿಗರ್ವಿಟ್ಟಾಯಂ ಭಂಡಿಗೆಲೆ ನೂಱುಹೇಱಂಗೆ ನೂಱು (ಎಇ. XX. ೦೨-೩೩; 1167). ೩. "ಶಕಟಂ [ರ]ಥಾಂಗ[ಮ]ರ]ಸಂಜ್ಞಕಮಂತದು ಭಂಡಿ ಗಂತ್ರಿ ಕಂಬಳ ವಾಹ್ಯಂ ಪ್ರಕಟಂ ಕರ್ಣೀರಥನಾಮಕಮಕ್ಕುಂ ಪ್ರವಹಣಂ ರಥಾಂಗಂ ಚಕ್ರಂ" (ಚತ್ತುಕೋ. ೭೬-೨೬); ಭಂಡಿಗಳಂತೆ ಕಣಾವ ಕಡಗಗಳಂ ಧರಿಸಿ (ತೌಗಂಂ. ೩೪೬-೯).

**ಬಂಡಿಯ ಈಚು** = ಗಾಡಿಯ ಮೂಕಿಯ ಮರ : "ಈಷಾ = ಬಂಡಿಯ ಈಚು" (ಶಾಶಕ್ಕ. ೩೭) **ಬಂಡಿಯ ಗಾಲಿ, ಭಂಡಿಯ ಗಾಲಿ** = ೧. ಗಾಡಿಯ ಚಕ್ರ : ಪಾಂಡವಕೌರವಬಲಮಾಲ್‌ದಿರ್ದ ಭೂಮಿಯೊಳ್ ಪಣಮಂ ಬಿತ್ತುವುದುಂ ಬಂ[ಪಾಠಾಂ. ಭಂ]ಡಿಯ ಗಾಲಿಯ ಪಣವಕ್ಕುಂ (ಸಮಜ. ೧೨-೧೪); ಇದೊಂದು ಭಂಡಿಯ ಗಾಲಿಯಂತುಟನೆರಡು ಕಲಹಂಸೆಗಳ್ ಕರ್ಚಿಕೊಂಡು ಪೋದಪ್ಪುವು (ಶಂಕಕಂ. ೦೫೭-೨೦) ; ಅಱ ಸಱ ತೋರಗಲು ಕವಣೆಗಲು ಕಣೆ ಭಂಡಿಯ ಗಾಲಿ ಕಲ್ಲೆ (ತೌಇಕ್ಕ. XX. ೦೨೬-೩ ; 1186). ೨. (ಆಲಂ) ಸೊನ್ನೆ; ಶೂನ್ಯ: ನೀನು ಹೀಗೇ ಕಾಲ ಕಳೀತಿದ್ದರೆ ಪರೀಕ್ಷೇಲಿ ನಿನಗೆ ಬಂಡಿಯ ಗಾಲಿಯೇ ಬರೋದು (ರೂಢಿ). **ಬಂಡಿಯ ಬೋಯಿಕೆ** = ರಥವನ್ನು ನಡೆಸುವ ಊಳಿಗ, – ಸೇವೆ; ಸಾರಥ್ಯ: ಕಮಲದಳಾಯತೇಕ್ಷಣನೊಡನೆ ಬಂಡಿಯ ಬೋಯಿಕೆಗೆ ವೀಳೆಯವ ಪಿಡಿದೆವು (ಕುಪ್ಪಾಕ. ೩-೭೭). **ಬಂಡಿಯ ಬೋವ, ಭಂಡಿಯ ಬೋವ** = ರಥವನ್ನು ನಡೆಸುವವನು ; ಸಾರಥಿ : ಕಿರೀಟಿಯ ಮನೆಯ ಬಂಡಿಯ ಬೋವನಾದವನು ವೀರನಾರಯಣ (ಕುಪ್ಪಾಉ. ೦-೪೩); ಒಬ್ಬ ಮಾವನ ಕೊಂದ ಒಬ್ಬ ಮೈದುನಗೆ ಭಂಡಿಯ ಬೋವನಾದ (ಪುಕಂಶ. ೦-೦೦೭-೧). **ಬಂಡಿಯ ಬೋವಗುಲ** = ರಥವನ್ನು ನಡೆಸುವ ಊಳಿಗದವನ ವಂಶ ; ಸಾರಥ್ಯವನ್ನು ಮಾಡುವವನ ಕುಲ : ದೇವಕೀಸುತ ನೇಸು ಬಂಡಿಯ ಬೋವಗುಲದಲಿ ಜನಿಸಿದನೆ (ಕುಪ್ಪಾಕ. ೩-೩೪). **ಬಂಡಿಯ ರ, ಬಂಡಿಯ ಱ** = ಗಾಡಿಯ ಗಾಲಿಯ ಆಕಾರದಲ್ಲಿರುವ 'ರ' ; ಶಕಟರೇಫ (ಱ) : ಹೀಗೆ 'ಬ' ಕ್ಕೆ ರಳ ಎಂದೂ 'ಱ' ಕ್ಕೆ ಶಕಟರೇಫ

ಅಥವಾ ಬಂಡಿಯು ರ ಎಂದೂ ಹೆಸರಾಯಿತು (ಶ್ಶಬ್ದ. ೯) : ರಕಾರವನ್ನು ಕೇಶಿರಾಜ ಮತ್ತು ಇತರರು ಶಟರೇಫ ಎಂದು ಕರೆದಿದ್ದಾರೆ. ಮತ್ತೆ ಕೆಲವರು ಇದನ್ನು ಬಂಡಿಯು ರ (ಱ) ಎಂದೂ ಉಲ್ಲೇಖಿಸಿದ್ದಾರೆ (ಪ್ರಾಶಬ್ದ. ೩೬೦). **ಬಂಡಿಯ ಹುಲಿ, ಭಂಡಿಯ ಪುಲಿ** = ಬೇಟೆಗಾಗಿ ಬಂಡಿಯಲ್ಲಿ ಸಾಗಿಸುವ ಸಾಕಿ ಪಳಗಿಸಿದ ಹುಲಿ : ಒಡಿನಾಯಿಗಳು ಹಗಲ ಸಾಳುಪಂ ಬಂ[ಪಾಠಾಂ. ಭಂ]ಡಿಯ ಹುಲಿ . . . ಅಡವಿಗಂತಕರಂತೆ ನಡೆವ ಶಬರರ ಕಂಡನು (ಹರಿಶ್ಚ. ೩-೯) ; ಭಂಡಿಯ ಪುಲಿಯಂ ಮೆಲ್ಲನೆ ಕೊಂಡಿಳಿಪುತೆ . . . ಮೃಗಮಂಡಲಮನಸರ್ಕೆ ತೋಱಿ (ಗಿರಿಜಾ. ೧-೯೯). **ಬಂಡೀಕಪ್ಪು** = (ಬೇಗನೆ ಅಳಿಸಿ ಹೋಗದ) ಗಾಡಿಯ ಚಕ್ರದ ಕೀಲೆಣ್ಣೆಯ ಮಸಿ : ಅರ್ಜಿ ಬರೆಸುತ್ತಿದ್ದವರೆಲ್ಲ ಅತ್ತುರಾತುರದಲ್ಲಿ ಬರೆಸಿ, ಬಂಡೀಕಪ್ಪಿನ ಹೆಬ್ಬೆಟ್ಟುಗಳನ್ನು ಎಣ್ಣೆ ಸಮೇತ ಒತ್ತಿ ಒಂದೊಂದಾಗಿ ತಂದು ಕೊಟ್ಟರು (ಪಸ್ನೂರು. ೧೩೦). [ದೇ.॥ ತಮಿ. ಪಣ್ಣಿ, ವಣ್ಣಿ; ಮಲ. ವಣ್ಣಿ; ತುಳು. ಬಂಡಿ, ಭಂಡಿ ; ತೆಲು. ಕೋಲಾ. ಬಂಡಿ ; ಕೋತ. ವಂಡ್ಯ್; ತೊದ. ಪೊಡ್ಯ್. / ಪ್ರಾ. ಭಂಡೀ, ಭಂಡಿಆ]

**ಬಂಡಿ₂** (ನಾ). ಸೊಂಟದ ವರೆಗೆ ಬರುವ ಒಂದು ಬಗೆಯ ಅಂಗಿ ; ಕಸೆಯಂಗಿ : ಕುಬೇರನು ತನ್ನ ಬಂಡಿಯ ಜೇಬಿನೊಳಗಿಂದ ಒಂದು ಅಂಬೆಯ ಚೀಲವನ್ನು ಹೊರಕ್ಕೆ ಎಳೆದನು (ರತ್ನಕ್ಕ. ೬). 'ಬಗಲಬಂಡಿ' ಪರಾ. [← ಮರಾ. ಬಂಡೀ]

**ಬಂಡಿಕಾರ** 'ಬಂಡಿಕಾಱ' ನೋ.

**ಬಂಡಿಕಾಱ**, ಬಂಡಿಕಾರ, ಭಂಡಿಕಾರ, ಭಂಡಿಕಾಱ (ನಾ). ೧. ಗಾಡಿ ಹೊಡೆಯುವವನು ; ಗಾಡಿಕಾರ : ಮಿಗೆ ಮಣ್ಣೆಲಸದೊತ್ತರು ಬಂಡಿಕಾಱರು ಕಲುಕುಟಿಗರಿದ್ದೆಡೆಯ ಸೊನ್ನಲಪುರಕೆ ಪ್ರಭು ಬಂದ (ಶ್ರೀಶೂಂ. ೧೩-೯). **ಬಂಡಿಕಾರ :** ೧. ಬಂಡಿಕಾರಣ್ಣನ ಬಂಪಾಟ ನೋಡಿರೊ ಬಾರುಕೋಲವನ ಬಲಗೈಲಿ (ಹಳ್ಳಿಹಾ. ೯೬) ೨. ದೇವಾಲಯದ ರಥದ ಮೇಲ್ವಿಚಾರಕ : (ಶಿ). **ಭಂಡಿಕಾರ :** ೧. ಪೊರಮಟ್ಟು ಕಲ್ಲುಕುಟುಕರ ಭಂಡಿಕಾರರಂ ಕರಸಿದನು (ವಡಮೋ. ೨೧-೧೩) **ಭಂಡಿಕಾಱ :** ೧. ಕಲಸಿಗಗೆ ಕಲುಕುಟಿಗರಿಗೆ ಭಾಗಿ ೨ ಭಣ್ಣಕಾಱಂಗೆ ೧ (ಎಕ. II, ೩೩೦-೩ ; ಸು. 1500). ೨. ಭಂಡಿಕಾಱರ ಜೀವಿತಕ್ಕೆ ವರಹ ಗ ೧ (ಎಕ. XV, ಶೀಲೂರು. ೭೦-೯೩ ; 1485). [ಬಂಡಿ₁ + -ಕಾಱ]

**ಬಂಡಿಬಸವ** (ನಾ). ೧. ಹಿಂದಿನ ಕಾಲದಲ್ಲಿ ಮಕ್ಕಳ ಆಟಕ್ಕಾಗಿ ಮಾಡುತ್ತಿದ್ದ ಮರದ ಅಥವಾ ಲೋಹದ ಗಾಲಿಗಳಿರುವ ಬಸವಣ್ಣನ ವಿಗ್ರಹ : ಮಗುವು ಬಂಡಿಬಸವನನ್ನು ಎಳೆದುಕೊಂಡು ಆಡುತ್ತಾ ಇದೆ (ಶಿ೦). ೨. ಬಸವನ ಹುಳು : ಜಿಗಣೆ, ಜೇಡ, ಚೇಳು . . . ಬಂಡಿಬಸವ, ಜರಿ (ಪಶುವೈ. ೨೯೦). [ಬಂಡಿ₁ + ಬಸವ₁]

**ಬಂಡಿಬೋವ** (ನಾ). ಗಾಡಿಯನ್ನು ನಡೆಸುವವನು ; ಗಾಡಿಕಾರ : ಕಟ್ಟಿಗೆಕಾಱರಿಂಗಱಿದು ಬಂಡಿಬೋವರ್ಗಱಿದು ನಾಯಕಮಂಡಳೀಕರ್ಗೆ ಱಿದು (ಬಸವ. ೩೯ ೨೭). [ಬಂಡಿ₁ + ಬೋವ (< ಬೋವು)]

**ಬಂಡಿಮಾಳ** (ನಾ). ಗಾಡಿಗಳನ್ನು ನಿಲ್ಲಿಸುವ ಸ್ಥಳ ; ಗಾಡಿಖಾನೆ : ತೋಪು ವಿಶಾಲವಾದ ಬಂಡಿಮಾಳಕ್ಕೆ ನೆರಳನ್ನು ಕೊಡುತ್ತಿದೆ (ಸ್ವಸ್ಥಹೊ. ೯೯). [ಬಂಡಿ₁ + ಮಾಳ₃ (= ಮಾಲ)]

**ಬಂಡಿವರಿಯಿಸು** (ಕ್ರಿ). ಗಾಡಿಯನ್ನು ಓಡಿಸು : ಗಾಲಿಯಿಲ್ಲದೆ ಬಂಡಿವರಿಯಿಸುವ (ಶರ್ಮಾಪ್ಯ. ೦೨-೨೯). [ಬಂಡಿ₁ + ಪರಿಯಿಸು]

**ಬಂಡಿಹೋಕ** (ನಾ). ಗಾಡಿಯಲ್ಲಿ ಪ್ರಯಾಣ ಮಾಡುವವನು : ಪರಸ್ಥಳದ ಬಂಡಿಹೋಕರು ಕಾಯಿವಲ್ಲೆ ಮಾರಾಟಗಾರರು ಇವರನ್ನುಳಿದವರು ಮನೆಯಲ್ಲಿಯೇ ಇದ್ದರು (ರತ್ನಕ್ಕ. ೨೦೯). [ಬಂಡಿ₁ + ಹೋಕ (< ಪೋಕ)]

**ಬಂಡು₁** 'ವಂಡು' ನೋ.

**ಬಂಡು₂** (ನಾ). ಜೇನು ; ಮಕರಂದ ; ಮಧು : "ಬಂಡು ಮಕರಂದಂ" (ಶಬ್ದಮ. ೯೬) ; ಒಗರವೂಗಳ ಬಂಡನಯ್ದೆ ಪೀರುತ್ತೊಡವಂದುವಿಂದ್ರವನದಿಂ ಮಱದುಂಬಿಗಳ್ (ಶಂಕರಾ. ೧೧-೬೦) ; ಬಂಡನುಂಡು ನನೆಗೊಂಬುಗಳಂ ಮೊರೆದೇಱ್ಪ ಭೃಂಗರುಚುಕಾರವೆ ಮಾಟ್ಪುದಾರ ಬಗೆಗಂ ವದನೋತ್ಸವ ಹರ್ಷಭಾರಮಂ (ಶಂರಾಮಾ. ೦-೦೦೬) ; ಹೊಸಕಮಳಕುಟ್ಮಲದ . . . ಬಂಡಂಬ ಕೊಳ್ಳೆಸಱಳೆಗೆ ಸಿಲ್ಕಿ ಜಿನುಗುವ ಮಱಿಗೆ ಸೌರಭ್ಯರಸದ ಕುಟುಕಿತ್ತು ಸಾಗಿಸುವ ಬಾಣತಿಮುಂಬಿ ಮೆಱಿದುವು (ಶಕಕಾ. ೩-೯೦).

**ಬಂಡಾಡು₁** = ಜೇನು ತುಂಬಿ ಸೂಸು ; ಮಕರಂದ ಹೊರ ಹೊಮ್ಮು : ಬಂಡಾಡುವ [ಪಾಠಾಂ. ಡೋಡಿದ] ಸವಕರ್ಣಿಕಾರವಮತಿಮಧು ರತೆಯೊಳ್ ಕೂಡಿದ ನಿಂಬಾರಾಮಂ ನಾಡೆಗಳಗೊಳವಂಬೊಡಿನ್ನದೇವರ್ಣ ಪುದೋ (ಕಾವ್ಯಾವ. ೯೭೩) ; ಬಂಡಾಡೆ ಮೇಲೆ ಮಧುಕರಮಂಡಳಿಗಳ್ ಬಿಬ್ಬು ವಿಳಿರ್ವ ಮತದಿಯ ಮುಡಿ ಮಾರ್ಕೊಂಡುದು ಕಾರ್ಮುಗಿಲಡಿಯೊಳ್ ತಾಂಡವಮಂ ಮೆಱಿವ ಸೋಗೆಸವಿಲ ಬೆಡಂಗು (ವರ್ಧಕೃ. ೩-೩೩).

**ಬಂಡು₃** (ನಾ). ೧. ನಾಚಿಕೆಯಿಲ್ಲದಿರುವಿಕೆ ; ನಿರ್ಲಜ್ಜೆ : 'ಬಂಡು ಮಾತು', 'ಬಂಡುಮೋಗು' ಪರಾ. ೨. ನಾಚಿಕೆಗೇಡಿನ ನಡುವಳಿಕೆ : ಭಂಡತನ: ಬಂಡು ಬಕ್ಕುಡಿ ಭಂಗ ಬಂಧನ ಕನಲ್ಕೆ ಕಳಕಳ ಮೆಂಬಿವು . . . ಜನದೊಳಿಲ್ಲ (ಕಂಪು. ೬-೯೨). ೩. ಹೆಣಗಾಟ ; ಕಷ್ಟ ; ಜವಣೆ : ಹೆಂಡರಿಲ್ಲದ ಮನೆವಾರ್ತೆ ಅವಗು ಬಂಡು ಕಾಣಯ್ಯ (ಸರ್ವಜ್ಞ. ೦೬೯೩). ೪. ನಾಚಿಕೆಯಿಲ್ಲದವಳು ; ಮಾನವಿಲ್ಲದವಳು : ಬಂಡು ಹೆಂಡತಿಯಾಗಿ ತುಂಡೊಬ್ಬ ಸೊಸೆಯಾಗಿ ಕಂಡಲ್ಲಿ ಹರಿವ ಮಗ ನಾದರಾ ಮನೆಗೆ ದಂಡ ತಪ್ಪುವದೆ (ಸರ್ವಜ್ಞ. ೦೬೩೩). (ಗು). ೫. ನಾಚಿಕೆಗೇಡಿಯಾದ ; ಲಜ್ಜಾಸ್ಪದವಾದ : ಬಂಡು ಭೂತಗಳಿಲ್ಲ ಕೊಂಡೆಯುವರಿಲ್ಲ ವಂಡವಿಲ್ಲಾ ಪುರದೊಳಗೆ (ಜನಪಾ. ೦-೯೩).

**ಬಂಡಾಗು** = ೧. ನಾಚಿಕೆಗೀಡಾಗು ; ಅವಮಾನ ಹೊಂದು : ಭೂಮಂಡಲೇಶ್ವರನು ಕೇಳಿದೊಡೆ ದಂಡವನೆಮ್ಮಪರೊಳು ಕೊಂಬನದಱಂ ಬಂಡಾಗುವುದೆಮ್ಮ ಕಾರ್ಯ (ಶ್ರೀಶೂಂ. ೩-೯೩); ನಿನ್ನಿಂದೆ ಬಂಡಾಗಿ ಹೋಗದ ವೀರರಾರಲವೋ (ಶೋಹತ. ೩೯-೧೦); ಕಮಲಪದನೆಯರ ಪೀನಸ್ತನಂಗಳ ನೋಡಿ . . . ತಲೆಗೆದರ್ದು ಬಂಡಾದಂತೆ ಪವ್ಮಚಯವುಮಲರ್ದೊಪ್ಪಿರೆ (ವಡಮೋ. ೦೦-೯೩). ೨. ಹೆಣಗಾಡು ; ಕಷ್ಟಕ್ಕೀಡಾಗು: ಈ ಅಂದಗಾಱ ಅಣ್ಣಾಗಳ ಕಂಡು ಬಂಡಾದಿರಣ್ಣಾ (ಜಾನಪಾ. ೦೭-೬೬). **ಬಂಡುಮಾಡು** = ಅವಮಾನ ಮಾಡು ; ನಾಚಿಕೆಗೇಡು ಮಾಡು : ದೇವೇಂದ್ರನಿದಿರಲಿ ಮುನಿಯ ಬಂಡು ಮಾಡುವೆ [ಪಾಠಾಂ. ಭಂಡನಂ ಮಾಳ್ಪೆ] (ಹಕರಾ. ೩-೮); ಗಂಡನುಳ್ಳ ಹೆಂಡಿರ ಕೊಂಡು ಒಯ್ಯು ಅವರ ಬಂ[ಪಾಠಾಂ. ಭಂ]ಡು ಮಾಡುವನೀ ಪುರಂದರವಿಠಲ (ಪುರಂದ. ೦-೦೦೯-೩); ಧನಸೇನಸೆಟ್ಟಿ . . . ಬಂಡು ಮಾಡಿ ಸತಿಯ ಕೊಲ್ಲದೆ ತನ್ನ ಧನವ ಧರ್ಮಕ್ಕಿತ್ತು ತಾನು ತಪವನಾಚರಿಸುವುದಕ್ಕೆ ಪೋದನು (ಕೃಕಶಿಮ. I, ೩೭೩). [ಬಂಡ₃ + -ಉ₄]

**ಬಂಡು₄** (ನಾ). ೧. ಬಂಡಾಯ ; ದಂಗೆ : ಮುಂದೆ ತೀವ್ರವೇ ಜಂಗಮರ ಬಂಡು ಮುರಿಯಿತು (ಮಂಚಣ್ಣ. ೯-೬೦). ೨. ಅಡ್ಡಿ ; ತಡೆ : ಉದ್ದಂಡ ಶಿವಮಂತ್ರವಮಂ ಸ್ಮರಿಸುತಿರೆ ಮಱಿದೊಮ್ಮೆ ಬಂಡು ಬರೆ ನಾಲಿಗೆಯ ಕೊಯ್ದಿಟ್ಟ (ಶ್ರೀಶೂಂ. ೬-೨೨೭).

**ಬಂಡಾಡು₂** = ಬಂಡಾಯ ಹೂಡು ; ದಂಗೆಯೇಳು : ರೂಢಿಯಲಿ ಶುಂಭಾಸುರಂಗೆ ಬಂಡಾಡಿದನು ವಿಳ ಚಂಡನೆಂಬವ (ದೇವೀಮ. ೩-೯೦). **ಬಂಡುಹೂಡು** = ದಂಗೆಯೇಳು ; ಬಂಡಾಯ ಏಬ್ಬಿಸು : ಭಾರತೀಯನುದು ಮುರ್ಖಾದಿತವಾಗಿ ಕೆಲವರು ತಿಳಿದುಕೊಂಡ ಸಂಸ್ಕೃತಿಗೆ ಬೌದ್ಧರೂ, ಜೈನರೂ ತಂತಮ್ಮ ರೀತಿಯಲ್ಲಿ ಇದಿರುಬಿದ್ದಂತೆ ವೀರಶೈವರೂ ಸ್ವತಂತ್ರವಾಗಿ ಬಂಡು ಹೂಡಿದರು (ಶಪಾ. ೦೩); ನೀವೆಲ್ಲರು ಕೂಡಿ ಸಸ್ನ

ಮೇಲೆ ಬಂಡುಹೂಡಿದರೂ ನಾನು ಈ ಮಾತು ಖಂಡಿತ ಸತ್ಯವೆಂದೇ ಹೇಳುತ್ತೇನೆ (ಗಾಂಗು. ೩೪). [←ಮರಾ. ಬಂಡ್, ಬಂದ್]

**ಬಂಡುಕೋರ**, ಬಂಡುಖೋರ (ನಾ). ೧. (ಸರ್ಕಾರ ಮುಂತಾದ) ಆಡಳಿತಕ್ಕೆ ವಿರೋಧವನ್ನು ವ್ಯಕ್ತಪಡಿಸುವವನು ; ದಂಗೆಯೇಳುವವನು ; ಬಂಡಾಯಗಾರ : ಹಲವಾರು ಬಂಡುಕೋರರು ಒಂದಾಗಿ ಆ ಜಮೀನ್ದಾರನ ಪುಂಡಾಟವನ್ನು ಅಡಗಿಸಿದರು (ಒಂ೮). ಬಂಡುಖೋರ : ೧. ನಾರಣ್ಣನು ಬಂಡುಖೋರರ ಗುಂಪನ್ನು ಸೇರಿದ್ದನ್ನು ಕಂಡು ಅವನಿಗೆ ಸಹಿಸದ ಆಶ್ಚರ್ಯವಾಗಿತ್ತು (ಸವಾಣ. ೬೭೦). (ಗು). ೨. ಬಂಡಾಯಪ್ರವೃತ್ತಿಯ : ಅವರಲ್ಲಿ ನಿಮ್ಮಂತೆ ಉಂಡಾಡಿಗತನವಾಗಲೀ ಬಂಡುಖೋರ ಮನೋವೃತ್ತಿಯಾಗಲೀ ಇರುವುದಿಲ್ಲ (ಪಾತ್ರಮ. ೨೦೦). [ಬಂಡು₄ + — ಕೋರ್ಯ./ಮರಾ. ಬಂಡ್‌ಖೋರ್]

**ಬಂಡುಖೋರ** 'ಬಂಡುಕೋರ' ನೋ.

**ಬಂಡುಗ** (ನಾ). = ಬಂಡುಕೋರ ೧ : ನೆರೆ ಮುಳ್ಳು ತುಂಟವೆಸರ ಬಂಡುಗರೆಮ್ಮ ಹೊರೆಯೊಳಗಿರಬೇಡವೆಂದು ಪರವನವುಪ್ಪಗಳ್ಗೊಡಿಸೆ ಬೆಳ್ದಾಳೆಯುರಲೊಪ್ಪಿದುವು ವನತಟದೆ (ಕಂಪಿ. ೩-೯೬). [ಬಂಡು₄ + — ಗ₂]

**ಬಂಡುಗಟ್ಟು** (ಕ್ರಿ). ದಂಗೆಯೇಳು : ಬಂಡಾಯ ಮಾಡು : ಕೆಲ ಬಕ್ರ್ಯಾಂಕಣಗರ್ಮ್ಯಾರ್ವಮ್ಯಾರ್ಬೆವದಟಂ ಬಣ್ಡುಗಟ್ಟಿ (ಎಕ. VIII. ಹೊಕ. ೦೩೨-೦೭ : 1380). [ಬಂಡು₄ + ಕಟ್ಟು₁₁]

**ಬಂಡುಗಾರ** (ನಾ). ೧. = ಬಂಡುಕೋರ ೧ : ಪುಗಾರಗೊಲಿದ ಬಂಡುಗಾರ ಗೊಲ್ಲ (ಬಿಡಾಳ. ೦೩೩-೩) : ಪುಂಡ ಪಾಳಯಗಾರಿಕೆಯ ಬಂಡುಗಾರರನ್ನು ಬೆಳೆಯಿಸಿ ಕೊಡುವದು ಯಾವ ದೃಷ್ಟಿಯಿಂದಲೂ ಹಿತವಲ್ಲ (ಕಾಹಮಂ. ೨೦). ೨. ಬದಲಾವಣೆಯನ್ನು ಬಯಸುವವನು ; ಕ್ರಾಂತಿಕಾರ : ಇಂದಿನ ಸಾಹಿತ್ಯದ ಬಂಡುಗಾರರೇ ನಾಳಿನ ಸಮ್ಮೇಲನದ ಅಧ್ಯಕ್ಷರಾಗುವವರು (ಮುಂಗಾರು. ೦೦೭). [ಬಂಡು₄ + — ಗಾರ (< — ಕಾಱ)]

**ಬಂಡುಗಾರಿಕೆ** (ನಾ). ದಂಗೆಯೇಳುವ ಪ್ರವೃತ್ತಿ : ಜೀವನದ ಆರಂಭದಲ್ಲಿಯೇ ಅವನು ತನ್ನ ಸ್ವಚ್ಛಂದವೃತ್ತಿಯ, ಸ್ವತಂತ್ರಬುದ್ಧಿಯ, ಉದ್ದಂಡ ಬಂಡುಗಾರಿಕೆಯ, ಮುಂಗುರುಹುಗಳನ್ನು ತೋರಿಸದೇ ಹೋಗಲಿಲ್ಲ (ಮಾವಾದ. ೦೪). [ಬಂಡುಗಾರ + — ಇಕೆ]

**ಬಂಡುಗೆಡೆ** (ಕ್ರಿ). ನಾಚಿಕೆಯಿಲ್ಲದ ಮಾತನ್ನಾಡು : ತೊಡಕಿಕ್ಕಿ ಠವಾಳತನದಲಿ ಬಂಡುಗೆಡೆ[ಪಾಠಾಂ. ಭಂಡುಗೆಲೆ]ವುತ ಮಲುಹಣನ ತಾಯ್ ವಿಂಡನಂ ಹೊಡೆವಡಿಸಿ (ಶಕಶ. ೪೨-೦೪) : ಕೆಂಡದ ಕೊಂಡವ ಮಂಡೆದೊನೆದು ಪೊಕ್ಕು ಬಂಡುಗೆಡವುತ ಕಳ್ಗುಡಿದು (ಶಕಹಾಂ. ೦೦-೬೪). [ಬಂಡು₃ + ಕಡೆ₂]

**ಬಂಡುಗೆಯ್** (ಕ್ರಿ). = ಬಂಡುಗಟ್ಟು : ನೀಂ ಕಂಡುಮಂ ಕಂಡಂತೊರೆದು ಗಂಡನಲೆದು ಬಂಡುಗೆಯ್ದು ಸಬ್ಬವಂಗೊಳವೇಟ್ಟುದು (ಶಕಿ. ೬-೦೩೩ ಕ); ಅವನೆಮ್ಮ ನಾಡೊಳ್ ದಾಟುಟ್ಟು ತುಱುಸೆಱೆಯೊಡನೆನ್ನನಾಗರಂ ಪಿಡಿದು ಬಂಡುಗೆಯ್ದು (ಕಳಿವಂ. ೦೩-೯). [ಬಂಡು₄ + ಕೆಯ್₁]

**ಬಂಡುಗೆಲೆ** (ಕ್ರಿ). = ಬಂಡುಗೆಡೆ : ಕೋಡಗನಂತೆ ಕಂಡಕಂಡವರಲ್ಲಿ ಹಿಂಡಿನೊಳಗೆ ಹೊಕ್ಕು ಬಂಡುಗೆಲೆಯಲೇತಕ್ಕೋ (ಪುರಂದರ. ೦೭-೬೬) ; ಪುಂಡರೆಲ್ಲರ ಕೂಡಿಕೊಂಡು ಬಂ[ಪಾಠಾಂ. ಭಂ]ಡುಗೆಲೆವುತೆಮ್ಮ ಪವುಳಿಯ ಹೊಱಗೆ ಮುಂಕೊಂಡಾಡುತಿರ್ದನುಬ್ಬಿನೊಳು (ಕಂದಾಹಂ. ೩೪-೩೦) ; ಪೋಟ ಪೋಂಡಂಗೆ ಕುರುಡ ಕುಂಟರಿಗೆ ಬಂಡುಗೆಲೆವುದು ಸಹಜ (ಭೃಂಗಸ. I. ೪೬). [ಬಂಡು₃ + ಕೆಲೆ]

**ಬಂಡುಣ್** (ಕ್ರಿ). ಜೇನನ್ನು ಕುಡಿ ; ಮಕರಂದವನ್ನು ಹೀರು : ಅಲರಂ ನೋಯಿಸದೊಮ್ಮನೊಯ್ಯನಳಿಗಳ್ ಬಂಡುಣ್ಬುವು (ಶಂಶಹ. ೩-೬೦) ; ಕೂಡುತಿರ್ಪ ರಥಾಂಗಂ ನಲಿದಾಡಿ ನರ್ತಿಪ ನವಿಲ್ ಬಂಡುಂಬ ಪೆಣ್ದುಂಬಿ (ಸುಕುಮಾ. ೦-೬೩) ; ಮಾಳತಿಯೊಳ್ ಬಂಡುಂಡ ಮದಾಳಿಯನಳಿಮಾಲೆ ಎಱಗಿ ಬಂಡುಣ್ಬವೊಲ್ (ಗಿರಿ. ೯-೦೩೨). [ಬಂಡು₁ + ಉಣ್]

**ಬಂಡುಣಿ** (ನಾ). ಹೂವಿನ ರಸವನ್ನು ಆಹಾರವಾಗಿ ಉಳ್ಳದು ; ದುಂಬಿ : "ಅಲರ್ವಕ್ಕಿ, ಬಂಡುಣಿ, ಪಱಮೆ . . . ಮುಯ್ಯೆರಡಡಿ—ಈ ೭ ಭ್ರಮರಂ" (ಶಬ್ದಮ. ೩೩-೦೭೮) : ಬಂಡುಣಿಗಳಿಱುವ ಮೃಗಂಪು ಸೊಗಸಲೊರ್ವಳ್ಬಾಲೆ ಕಣ್ಗೆಸೆದಳು (ಶ್ರೀಂದಕ. ೦೭-೩೪) : ರಾಜರಾಜಪ ಲೋಚನ ಕೈರವದೊಳು . . . ನೃಪತಿಯ ಚಾರುನಯನವಾತಿಲಗ್ನಂಬಡೆದುವು ಬಂಡುಣಿವಱೆಯಂತೆ (ಶಹುಶಾ. ೩-೦೦) ; ಅವಳಾಡಿದ ನಾಲ್ಕಾರು ಇನಿಮಾತುಗಳನ್ನು ಅವನು ಬಂಡುಣಿಯಂತೆ ಅರ್ತಿಯಿಂದ ಹೀರಿದ (ಕುಂಕಾ. ೩೭). [ಬಂಡುಣ್ + — ಇ₃]

**ಬಂಡುಣಿಗುರುಳ್** (ನಾ). ತುಂಬಿಯಂತೆ ಕಪ್ಪಾದ ಕೂದಲು ; ಭ್ರಮರಕುಂತಳ : ಹರಿಣೆಗಣ್ಗಳ ಬಂಡುಣಿಗುರುಳ್ಗಳ ವರಪಿಕಾಲಾಪದ . . . ಆ ಲಲನೆಯನೀಕ್ಷಿಸಿದನು (ಕೃಶಂತ. ೪-೦೪). [ಬಂಡುಣಿ + ಕುರುಳ್₁]

**ಬಂಡುಣಿವೆದೆಯ** (ನಾ). ತುಂಬಿಯನ್ನು ಬಿಲ್ಲಿನ ಹೆದೆಯಾಗಿ ಹೊಂದಿರುವವನು ; ಮನ್ಮಥ : "ಇಂಗೋಲ್ವಿಲ್ಲಂ, ಬಂಡುಣಿವೆದೆಯಂ . . . ಗಿಳಿದೇರಂ— ಇವು ೧೩ ಕಾಮದೇವಂಗೆ ಪೆಸರ್" (ಶಶಾ. ೪೬-೦೩) ; ದಿಂಡುದೊಡೆಯ ಮಿಂಡಿಯರ್ ಬಂಡುಣಿವೆದೆಯನ ದಂಡಾಳ್ಗಳೆನೆ ಹಿಂಡಿಟ್ಟಲ್ಲಿಗಲ್ಲಿಗೆ ಸಂಚರಿಸಿ (ರಾಶಾ. ೦೩೨-೨೯). [ಬಂಡುಣಿ + ಪೆದೆ + — ಅ₇]

**ಬಂಡುಣಿಸು** (ನಾ). ಹೂವಿನ ಜೇನಿನ ಸೇವನೆ : ಕೆಂದಾವರೆಯ ಬಂಡುಣಿಸಿಗೆಳಸಿಯೈತಂದಿಹ ಮದಹಂಸೆಯಂತೆ (ಕಂಪಿ. ೯-೨೨). [ಬಂಡು₁ + ಉಣಿಸು₁]

**ಬಂಡುಬಾಳು** (ನಾ). = ಬಂಡಬಾಳು : ಆತ ತನ್ನ ಬಂಡುಬಾಳನ್ನು ನೆನೆದು ದುಃಖಿಸಿದನು (ಶಿಂ೮). [ಬಂಡು₃ + ಬಾಳು₂ (< ಬಾಟ್₂)]

**ಬಂಡುಮಾತು** (ನಾ). ನಾಚಿಕೆಯಿಲ್ಲದ ಮಾತು ; ಲಜ್ಜಾಸ್ಪದವಾದ ನುಡಿ: ಕಂಡ ನಾರಿಗಿಚ್ಛೈಸುವ ಲಂಡಗೆ ಪುರಾಣವೇಕೆ ಬಂ[ಪಾಠಾಂ. ಭಂ]ಡು ಮಾತಿನ ಕವಿಯ ಬಹುಪಾಂಡಿತ್ಯವೇತಕೆ (ಪುಕಂದ. ೦-೩೦-೩). [ಬಂಡು₃ + ಮಾತು₁]

**ಬಂಡುಪೋಗು** (ಕ್ರಿ). ನಾಚಿಕೆಗೆ ಈಡಾಗು ; ಲಜ್ಜೆಗೊಳಗಾಗು : ಬಿತ್ತಲ್ಲದದು ಫಲದೊಳಱುತ್ತಿಂಬ ನಾಟ್ಯುಡಿಯಂತೆ ತಪದಿಂದಂ ಗುಣದಿಂದಂ ಪುರದೊಳ್ ಪಲವುದಿವಸಂ ಮೆಚ್ಚಾಗಿರ್ದಲ್ಲಿಯೆ ಬಂಡುಪೋದ್ಯೆ (ಶರ್ಮಾನು. ೬-೦೨೬). [ಬಂಡು₃ + ಪೋಗು₁ (< ಪೋ₁)]

**ಬಂಡುಸೋನೆ** (ನಾ). ಜೇನಿನ ಮಳೆ : ಕಣ್ಮಲರ್ಗಳಿಂ ಸುರಿಯುವ ಬಂಡುಸೋನೆಗೆಣೆಯೊಂದಿದ ಕಣ್ಣನಿ (ಪ್ರಸೂಹ. ೪-೩೪). [ಬಂಡು₁ + ಸೋನೆ₁]

**ಬಂಡುಳಿಕೆ ?** (ನಾ). (?) : ಕಾರ್ವಿಲ್ಲ ಪಳಿವ ಪುರ್ಬಿಲ್ಲಿಯ ಬಂಡುಳಿಕೆಗಳ ನಿಳಿಕೆಗೈವ ಸುಕ್ಕುಗುರುಳುಗಳೆಳದಾಡೆ (ಕುಶ್ಯಾಂಗ. ೩-೦೪). [?]

**ಬಂಡೆ₁**, ಭಂಡೆ₁ (ನಾ). ದೊಡ್ಡ ಗಾತ್ರದ ಕಲ್ಲು: ಆ ಕಱೆಯವೊಳಗಣ ಬಣ್ಡೆಯ × × × ದ ಕಂಡೇಶ್ವರದೇವರ ಅಮೃತಪಡಿ (ಎಕ. XII. ಮಧ್ಗಿ. ೦೦೭-೯; 1503) ; ಪ್ರವಾಹದಲ್ಲಿ ಈಜಿ ಶಕ್ತಿಗುಂದಿ ತೇಲಿಹೋಗುತ್ತಿದ್ದೆ. ಈ ದಿನ ಬಂಡೆಯೊಂದು ಸಿಕ್ಕಿತು (ರಾಜುಪ. ೦೦೦). **ಭಂಡೆ₁** : ಬಡಗಲು ಕಲ್ಲ ಭಣ್ಡೆಯ [ಬಟ್ಟೆ]ಯೇ ಮೇರೆ (ಶಾಕಾ. XI—ii, ೦೪೦-೬೦; 1097) : ಬಡಗ ಯಾಶಾವ್ಯ ಭಂಡೆದ ಗಡಿ (ಎಕ. VII. ಶವಮೊ. ೦-೩೦೨; 1513). [ದೇ. ; ತೆಲು. ಬಂಡ]

**ಬಂಡೆ₂** (ನಾ). ಶೀಲವಿಲ್ಲದವಳು ; ಕುಲಟೆ : ರಂಡೆಗೆ ಗಂಡನಿಲ್ಲ ಬಂಡೆಗೆ ನೀತಿಯಿಲ್ಲ (ಗಾದೆ). 'ಭಂಡಿ₂' ಪರಾ. [ಸಂ. ಬಂಡಾ./ಪ್ರಾ. ಭಂಡೀ]

**ಬಂಡೆ₃** 'ಬಂಡ₃' ನೋ.

**ಬಂಡೆಕಲ್ಲು** 'ಬಂಡೆಗಲ್ಲು' ನೋ.

**ಬಂಡೆಗಲ್ಲು, ಬಂಡೆಕಲ್ಲು** (ನಾ). = ಬಂಡೆ₁ : ಕೊಪ್ಪಳದ ಹತ್ತಿರ . . . ಬಂಡೆಗಲ್ಲುಗಳ ಮೇಲೆ ಅಶೋಕನ ಶಾಸನಗಳು ಇರುತ್ತವೆಂದು ಇತ್ತೀಚೆಗೆ ತಿಳಿಯ ಬಂದಿದೆ (ಕಪಾಠ. ೨) ; ಬಂಡೆಗಲ್ಲಿನ ನಿವೇಶನದಲ್ಲಿ ನೀರು ಬೇಗ ಹರಿದುಹೋಗುವುದು (ಗೃತೋ. ೦೩೩). **ಬಂಡೆಕಲ್ಲು** : ಅಂಗಿ ವಸ್ತ್ರಗಳನ್ನು ನೊರೆಕಾಯಿ ಹಾಕಿ ಬಂಡೆಕಲ್ಲಿನಲ್ಲಿ ಒಗೆದಾಯಿತು (ಕೇಶೂ. ೯೭). [ಬಂಡೆ₁ + ಕಲ್ಲು (<ಕಲ್₃)]

**ಬಂಡೆಬ್ಬಿಸು** (ಕ್ರಿ). = ಬಂಡುಗಟ್ಟು : ನಿಂದ್ಯವಾದ ಸಂಗತಿಗಳ ವಿರುದ್ಧ ಬಂಡೆಬ್ಬಿಸುವ ಧೈರ್ಯವು ನಮ್ಮ ಜನಕ್ಕೆ ಬರುವವರೆಗೆ ದೇಶದ ಉದ್ಧಾರ ವಾಗಲಾರದು (ಶ್ರಾಕುಅ. ೨೩) ; ಇಡೀ ದೇಶದ ಭಕ್ತರ ದಳವು ಬಂಡೆಬ್ಬಿಸಬಹುದು (ತೋಕ೩. ೯೯).

[ಬಂಡು₄ + ಎಬ್ಬಿಸು (< ಎಟ್ಟಿಸು)]

**ಬಂಡೇಳು, ಬಂಟೇಳು** (ಕ್ರಿ). = ಬಂಡುಗಟ್ಟು : ಬಂಡೆದ್ದು ಗಿರಿಷ್ಟ್ವ ನೆರೆ ಸೂರೆಹೋದಾವು (ಎಂಣಾ. ೦೩೩-೦). **ಬಂಟೇಳು** : ಎಂಟುಸಾವಿರ ದೈನಿಂಬ್ಬರನಗಿಲ್ಲಿ ನಾಂಟರುತಿಹ ವಕ್ಷದವರು ಉಂಟು ನಿಮಗೆ ಲಕ್ಷವಕ್ಷ ನೀವದಱಿಂದ ಬಂಟೆದ್ದಿರೆಂದನಾ ಚಕ್ರಿ (ಕರಕ. ೯೩-೨೨).

[ಬಂಡು₄ + ಏಳು₁ (< ಎೞ್₁)]

**ಬಂತಿ** 'ಪಂತಿ' ನೋ.

**ಬಂತಿಗಟ್ಟು** 'ಪಂತಿಗಟ್ಟು' ನೋ.

**ಬಂತಿದಲೆಯ** (ನಾ). ಸಾಲು ತಲೆಗಳುಳ್ಳವನು ; ದಶಕಂಠ ; ರಾವಣ : ಇಂತು ಬಂತಿದಲೆಯಂ ಚಲ್ಲಣಮನಿಟ್ಟು, ದಟ್ಟಿಯಂ ಬಿಗಿದು . . . ಪೊಱಮಡುವುದುಂ (ಅದ್ಭುತ. ೯೩-೦೭).

[ಬಂತಿ (< ಪಂತಿ) + ತಲೆ₁ + – ಅ₁]

**ಬಂತಿದೇರ** 'ಪಂತಿದೇರ' ನೋ.

**ಬಂದ್** 'ಬಂದು₂' ನೋ.

**ಬಂದ₁** 'ವರ್' ಪರಾ.

**ಬಂದ₂** 'ಬಂದು₂' ನೋ.

**ಬಂದಂಬಿಡು** (ಕ್ರಿ). ಬಂಧನವನ್ನು ತೊರೆ ; ವ್ಯಾಮೋಹವನ್ನು ತ್ಯಜಿಸಂ : ಮನಸಂ ಸ್ಥಿತಿಟ್ಟು ಬಾಟ್ಸ್ಸಾಸೆಯಿಂ ಬಂದಂಬಿಟ್ಟು ವಿಮೋಹಮಂ ಬಿಸುಟು ಕಣ್ಣಂ ಮುಚ್ಚಿ (ಧರ್ಮಾಮೃ. ೯-೬೨).

[ಬಂದ₂ (<ಬಂದು₂) + ಬಿಡು₁]

**ಬಂದಗಾವುಂಡ** (ನಾ). ಒಬ್ಬಾತನ ಹೆಸರು : ಇದಕ್ಕೆ ಸಾಕ್ಷಿ . . . ಬಿಜಯಿತಗಾವುಣ್ಣನುಂ ಬನ್ದಗಾವುಣ್ಣನುಂ (ಎಕ್.XI.ಹೊಳಲ್ಕೆ. ೩೦-೦೦; ೯೬೪).

[ಬಂದ₁ + ಗಾವುಂಡ (<ಗಾವುಂಡ)]

**ಬಂದಣಿಕೆ, ಬಂದಣಿಗೆ, ಬಂದನಿಕೆ, ಬಂದನಿಕ್ಕೆ, ಬಂದರಿಕೆ, ಬಂದಲಿಕೆ, ಬಂದಳಿಕೆ, ಬಣತಿಗೆ, ಬತಣಿಕೆ, ಬದಣಿಕೆ, ಬದನಿಕೆ, ಬಿಂದಣಿಕೆ** (ನಾ). ೧. ಬೇರೊಂದು ಸಸ್ಯವನ್ನು ಅವಲಂಬಿಸಿ ಜೀವಿಸುವ ಸಸ್ಯ ; ಪರಾವಲಂಬಿಸಸ್ಯ : ಎಲವದ ಬಂದಣಿಕೆ ಯನಿಂತಲಸದೆ ಕುಡಿಸಲ್ಕೆ(ಲ್ತೆ) ನಾಯ ವಿಷಮುಟ್ಟಿಗುಂ (ಚವುದ. ೦೩-೩೩) ; ಅಶ್ವತ್ಥವೃಕ್ಷದಲ್ಲಿನಾದರೂ ಅದರ ಬಂದಣಿಕೆಯನಾದರೂ ಶುಭದಿನದಲ್ಲಿ ತಂದು ಹಾಲಲ್ಲರೆದು ಋತುಸ್ನಾತೆಯಾದ ಸ್ತ್ರೀಗೆ ಕುಡಿಯ ಕೊಡಲು ಗರ್ಭ ನಿಲ್ಲುವುದು (ಕೃಶಾ. II. ೯೯) ; ತನ್ನಂಥ ನಿಸರ್ಗವಿರೋಧಿವ್ಯಕ್ತಿಯ ಕತ್ತಿಗೆ ಆ ಬಳ್ಳಿಯೇ ಬಂದಣಿಕೆಯಾಗಲೂ ಬಹುದು (ಪಾಕ್ಕಿ. ೩೦೩). ೨. ಒಂದು ಬಗೆಯ ಪರಾವಲಂಬಿಸಸ್ಯ ; ಜೀವಂತಿಕೆ : "ಬಂದಣಿಕೆ, ಜೀವಂತಿಕೆ, ವೃಕ್ಷರುಹೆ, ವಂದೆ, ವೃಕ್ಷಾದನಿ" (ಚಿಕಶಾ.೩). ೩. ಒಂದು ಸ್ಥಳದ ಹೆಸರು : ಬನ್ದಣಿಕೆಯ ಸತ್ಯಜಿರ ನಾಗಾರ್ಜುನ ನಾರ್ಗ್ಗ ವೃಣ್ಣಿಗೆಯ (ಎಕ್. VIII. ಸೊರಬ. ೨೩೯-೩; ೯೦೦); ಒಂದಿರುಳೊಳ್ಳಾನುವರಂ ತಂದಿಕ್ಕಿದ ಪುಷ್ಪಮಾಲೆ ನಿಮಿರ್ದುದು ಪಾದಕ್ಕೆಂದೊಡೆ ಭುವನಕ್ಕಚ್ಚರಿ ಬಂದಣಿಗೆ[ಪಾಠಾಂ. ರಿಕೆ]ಯ ಶಾಂತಿನಾಥತೀರ್ಥಾತಿಶಯಂ (ಸಮುತ.೨-೬೦).

**ಬಂದಣಿಗೆ** : ೧. ಲೊಕ್ಕಿಯ ಬಂದಣಿಗೆಯುಮಂ ಚಕ್ಕನೆ ಪೂಸಲಿಲ್ಲ ದಿರ್ದೊಡೆರ್ಕೆಯ ಪಾಲಂ ಪೊಕ್ಕಿರಲೆಱ ನಿಬಿಡಮೆನಲ್ ಸಿಕ್ಕಿದ ಮುಳ್ಳಲಗು ಪಾದದಿಂ ಪೊಱಮಡುಗುಂ (ಚವುದ.೨-೨೦೬). ೨. "ಪರರೋಹಿಣೀ – ಬಂದಣಿಗೆ(ಕೆ)" (ಚಿಶಾ. ೯೩). **ಬಂದನಿಕೆ** : ೩. ಬಲ್ಲ ಬನ್ದು ಬನ್ದನಿಕೆಯ ತೀರ್ತ್ಥದೊಳ್ಗೊಱದುದಚ್ಚರಿಯಂ (ಎಕ್. VII. ಶಿಕಾರಿ. ೨೦೯-೨೫; ೯೧೮).

**ಬಂದನಿಕ್ಕೆ** : ೩. ಬನ್ದನಿಕ್ಕೆಯ ನಟ್ಟಮುಣ್ದರ್ ತಪ್ಪೊಳೆಱೆಯ (ಎಕ್. VIII. ಸೊರಬ.೩೨೦-೨; ಸು. ೯೦೦?). **ಬಂದರಿಕೆ** : ೨. ಬಂದರೆ; ಬಂಡಾರ, ಹಂಗರಿಕೆ, ಬಂದರಿಕೆ (ವೃಕ್ಷಿನಿ.೩೨-೬೦೪). **ಬಂದಲಿಕೆ** : ೧. ಗಂಡಸು ಗೇಸೆಬೇಕು. ಪೆರಸೈಟ್ (ಬಂದಲಿಕೆ)ನ ಹಾಗೆ ಬದುಕಬಾರದು (ಅದುಅ. ೨೩೦). ೩. × × × ವಮಾಸ ಸುದ್ದ ಗುರು ಈ ದಿನದ ಹುಣ್ಣಾವಗೆ ಬನ್ದಲಿಕೆಯಾಗಿ ಕೊಡಕಣಿಯ ಬಡಗಿ ಸಾದೋಜನ ಕಳ್ಳರು ಕಾಗಿ ತಳಿದ್ದುರ್ಗ ಸುರಲೋಕಪ್ರಾಪ್ತನಾದ (ಎಕ್. VIII, ಸೊರಬ;೦೭-೫;1371). **ಬಂದಳಿಕೆ** : ೧. ವಿಜಯನಗರದ ಪ್ರೌಢ ದೇವರಾಯನ ಕಾಲದ ನೂರೊಂದು ವಿರಕ್ತರ ತರುವಾಯ ಶರಣಸುರ ಭೂಜವನಕ್ಕೆ ಮತ್ತೆ ಬಂದಳಿಕೆ ಬಂದಿತು (ಕರಕ. ೬೦೭); ಮಾನವು ಗೆದ್ದಲು ಒಲವಿನ ವೃಕ್ಷಕೆ ಜಾಡಿಯ ಮಾತು ಬಂದಳಿಕ (ಕಂಶ್ರೀ. ೦೧೨-೯೫). ೨. "ವಂದಾ – ಬಂದಳಿಕೆ" (ಚಿಶಧ. ೦೯೩). ೩. ತತುಸಮಯಲ್ಲಿ ಬಂದಳಿಕೆಗೆತ್ತಿ ನಡೆದಲ್ಲಿ (ಎಕ್. VII. ಶಿಕಾರಿ.೦೬೧-೫; ಸು. 1160). **ಬಣತಿಗೆ** : ೧. ಒಣಗಿದ ಮರ ಎಲೆಯಿಲ್ಲದ ಬಳ್ಳಿ ಬಣತಿಗೆ ಪುಟ್ಟಿದ ವನದಲ್ಲಿ [ಪಾಠಾಂ. ಒಣಗಿದ ಮರದಲಿ ಇಲ್ಲದ ಬಳ್ಳಿ ಬಣತಿಗೆ ಹುಟ್ಟಿದವನ ತಳ್ಳಿ] (ಶ್ರೀಸಂಪ. ರಾ. ೯-೦೯-೩). **ಬತಣಿಕೆ** : ೨. "ವಂದಾ, ವೃಕ್ಷಾದನಿ:, ವೃಕ್ಷರುಹಾ, ಜೀವಂತಿಕಾ_ಈ ೪ ಬತಣಿಕ" (ಪಾಠಶಿ. ೦೦೯). **ಬದಣಿಕೆ** : ೧. ಎಳೆಯ ದೆಲೆಯ ಬದಣಿಕೆಯಂ ಭರಣಿನಕ್ಷತ್ರದಲ್ಲಿ ತಂದು ಕೈಗೆ ಕಟ್ಟುವುದು (ಸಕಿತ್ಸ. ೦೨೦). **ಬದನಿಕೆ** : ೧. ಇನ್ನೊಂದು ವರ್ಗದ ಗಿಡಗಳು ಬದನಿಕೆಯಂಥವು (ಪಾಂಶ್ರ. I. ೩೦೩); ಗಿಡಕ್ಕಂಟಿದ ಬದನಿಕೆಯಂತೆ ಬೆಳೆಬೆಳೆದು (ಹುಕೃಷ. ೩). ೨. "ಬದನಿಕ (ಬಂದಣಿಕೆ) – ವಂದಾಕಾ" (ಕದ್ಯಕೋ. ೨೮) ; "ಕಳುಬಳ್ಳಿ, ಅಮರಬಳ್ಳಿ, ಬದನಿಕ . . . ಶಾವಿಗೆಬಳ್ಳಿ" (ಸಕ್ವಿ. ೪೩): ೪. ಒಂದು ಬಗೆಯ ಗಿಡದ ಬೇರು : ಇಟ್ಟ ಕಣ್ಣಿನ ಬೊಟ್ಟು . . . ವಸುರಿನ ಬಟ್ಟ ಗುಪ್ಪಸ . . . ಮೆಟ್ಟದೆಕ್ಕಡ ತೋಳ ಬದನಿಕೆ ತೊಟ್ಟ ಮಾಂದಳಿರೆಲೆಯ ಚಲ್ಲಣ ದಿಟ್ಟಗಚ್ಚರಿದೋರೆ ಬಂದರು . . . ಶಬರಕೋಟಿಗಳು (ಅನಂತಾ. ೩-೩-೩). **ಬಿಂದಣಿಕೆ** : "ಮಾರತರುಹವ್ಮನಲು ಬಿಂದಣಿಕೆ [ಪಾಠಾಂ. ಮಾರತರುತರುಹವನೆ ಬಂದಣಿಕೆ]ಯಕ್ಕು" (ಶುಂಗಿರಾ. ೯೩-೯೦).

[ <ಸಂ. ವಂದಾಕ, ವಂದಾಕಾ, ವಂದಾಕೀ./ತುಳು. ಬಂದಣಿಗೆ, ಬಂದನಿಗೆ; ತೆಲು. ಬದನಿಕ, ವದನಿಕ]

**ಬಂದಣಿಗೆ** 'ಬಂದಣಿಕೆ' ನೋ.

**ಬಂದನಿಕೆ** 'ಬಂದಣಿಕೆ' ನೋ.

**ಬಂದನಿಕ್ಕೆ** 'ಬಂದಣಿಕೆ' ನೋ.

**ಬಂದಮಿಣಿ** (ನಾ). ಕಾಲಿಗೆ ಕಟ್ಟಿಕೊಳ್ಳುವ ಹಗ್ಗ : "ಬಂದಮಿಣಿ– ಈಳಿಗರ ಈಚಲಗಿಡ ಏರುವ ಸರಹಗ್ಗ" (ಜಾವಕೋ.೨೦).

[ಬಂದ₂(<ಬಂದು₂) + ಮಿಣಿ₂ (<ಮಿಳ್₂)]

**ಬಂದರಿ** 'ಬಂದಾರಿ' ನೋ.

**ಬಂದರಿಕೆ** 'ಬಂದಣಿಕೆ' ನೋ.

**ಬಂದರು** (ನಾ). ಕರಾವಳಿಯಲ್ಲಿ ಹಡಗಿನಿಂದ ವಸ್ತುಗಳನ್ನು ಇಳಿಸುವ ಹಾಗೂ ಹಡಗಿಗೆ ತುಂಬುವ ಸ್ಥಳ; ಹಡಗುನಿಲ್ದಾಣ; ರೇವು: ಹಡಗುಗಳು ನಿಲ್ಲುವುದಕ್ಕೆ ಬೇಕಾಗುವ ಆಳವುಳ್ಳ ಅನುಕೂಲವಾದ ಮತ್ತು ವಿಸ್ತಾರವಾದ ಬಂದರು ಇಂಡಿಯಾದಲ್ಲಿ ಎಲ್ಲಿಯೂ ಇಲ್ಲ (ಕೂಗಿ.ಜೀ.೬೭); ಪರವೂರುಗಳಿಂದ ಬಂದ ಮಂಜಿಗಳು ಊರ ಬಂದರಿನಲ್ಲಿ ತಂಗುವುದು ಸ್ವಾಭಾವಿಕ (ಜಾಹುತ್ತ.೩೩).
[←ಪಾರ., ಹಿಂ. ಮರಾ. ಬಂದರ್]

**ಬಂದರೆ** 'ಬಂದಾರಿ' ನೋ.

**ಬಂದರಿಕೆ** 'ಬಂದಣಿಕೆ' ನೋ.

**ಬಂದಳ** (ನಾ). ಅಗಲಬಾಯಿಯ ಪಾತ್ರೆ: ಬಂದಳ ಸೋರೆ ಬಿರಗ ಹರವಿಯು ಮೊಗೆ ಬಿಂದಿಗೆ ಗಡಿಗೆ ಗುಡಾಣ (ಅಮು.ಕಾಂ. ೩-೧೩೭).
[←ತೆಲು. ಬಂದಳ, ಬಂದಲ, ಬಂದಡ]

**ಬಂದಳಿಕೆ** 'ಬಂದಣಿಕೆ' ನೋ.

**ಬಂದಾ** (ನಾ). ಚಿಲ್ಲರೆಯಲ್ಲದುದು: ಈ ಚಿಲ್ಲರೆ ಕೊಟ್ಟು ಬಂದಾ ತೆಗೆದುಕೊಂಡು ಬಾ (ರೂಢಿ). [←ಪಾರ. ಬಂದ್ : ಮರಾ. ಬಂದಾ]

**ಬಂದಾರಿ, ಬಂಡಾರೆ, ಬಂದರಿ, ಬಂದರೆ, ಬಂದುರೆ** (ನಾ). ೧. ಒಂದು ಬಗೆಯ ಮರ: ಬೆಳ್ಳವತ ಬಂದಾರಿ ಸಾವೇರಿಯಿಂ ತಡಸು . . . ತಾಳಿ ಬೋರೆಗಳೆಸೆದವು (ಶಂಕಕಾ. ೦೩-೦೩). **ಬಂಡಾರೆ:** ೨. ಒಂದು ಬಗೆಯ ಗಿಡ: ಬಂದರೆ, ಬಂಡಾರೆ, ಹಂಗರಿಕೆ, ಬಂದರಿಕೆ (ವೃ.ಶಿಗ. ೩೨-೬೦೬). **ಬಂದರಿ:** ೨. ಅಲ್ಲಿಂದಂ ಮೂಡಲು ಬಂದರಿಗಿಡುವಿನ ಹಿಟ್ಟುಗಲ್ಲು ಬಂಡೆ (ಶಾಇ. IX-ii. ೩೩೩-೨೬; 1531). **ಬಂದರೆ:** ೨. 'ಬಂದಾರೆ' ಉಲ್ಲೇಖದ 'ಮೈಡಿಗಿ. ೩೨-೬೧೮' ಪ್ರಯೋಗವನ್ನು ನೋಡಿ. **ಬಂದುರೆ:** ೨. (ವೃ.ಶಿಗ. ೬೦-೦೨೦೩).
[←ತೆಲು. ಬಂದಾರು, ಬಂಡಾರು. / ಮರಾ. ಬಂದಾಟೀ]

**ಬಂದಿ$_1$** (ನಾ). ೧. ಸೆರೆ; ಬಂಧನ; ಕಟ್ಟು: ಎನಗಿಂದಿಂಗಾಱುತಿಂಗಳ್ ಸಮನಿಸಿದವುದಿಲ್ಲಲ್ಲಿಯುಂ ಬಂದಿಮಾಂಬಲ್ (ಶಾಳುಕಾ. ೬-೦೬); ಅಗ್ಗಳದ ಬಾಣದ ಬಂದಿಯಲಿ ಸಿಲುಕಿತ್ತು ರಿಪುಸೇನೆ (ಶಬ್ದ.ರೂ. ೦೯-೩೩); ರಾಘವಂ . . . ದೇವರ್ಕಳ ಬಂದಿಯಂ ಬಿಡಿಸಿ . . . ಅರಸುಗೆಯ್ಯುತಿರ್ದಂ (ರಾಮಾಶ್ವ. ೦೭-೦೬). ೨. ಸೆರೆಮನೆ; ಬಂದೀಖಾನೆ; ಜೈಲು: ಬಂದಿಯೊಳಗಿದ್ದವರ ಬಂಧನವ ಬಿಡಿಸುವಾ ಬಂದಿಕಾರಾ ಶ್ರಾವಣಾ (ಗಂಗಾಕ. ೩೬-೨). ೩. ಹತೋಟಿ; ಹಿಡಿತ; ಅಂಕೆ: ತಪಸ ಮಾಡಿ ಏಕಾಂಗಿಗಳು ಬ್ರಹ್ಮಂಗೆ ಬಂದಿಯಾಸಿಕ್ಕಿದರು ಬಳಿಕ (ಶಬ್ದ.ಕ. ೬-೦೩); ಮಾಯಾಗುಣವಿಕಾರದ ಬಂದಿಯಲಿ ತಲೆ ಸಿಲುಕಿ ನರಕದಲಾಳುತಿಹರು (ಶಿಭಾಗ. ೯-೯-೨೩). ೪. ಸೆರೆ ಸಿಕ್ಕಿದ ವ್ಯಕ್ತಿ; ಸೆರೆಯಾಳು: ಭೂನಾಯಕಂ ಬಿಡಿಸೆ ಬಿಟ್ಟ ಬಹು ಬಂದಿಯಂ ಕರವೆ . . . ಕಣ್ಗೆಸೆದುದು ನರೇಂದ್ರಭವನಾಂಗಣಂ (ಅಹಪು.೯-೬ ೮ಗ೪); ಬಂದಿಯ ಹಿಡಿದಾತನ ತಂದೆಯ ತಲೆ ಹೋಹುದೆಂದು ಓತರಾಚಾರವೆಂದು ವೃಥಾ ಸಾವನೇ (ಹರಿಶ. ೦೭೩-೬೬೬); ನೀನು ಇಲ್ಲಿ ಬಂದಿ ಎಂಬುದನ್ನು ಅರಿತಿರುವಿಯಾ? (ರಾಂಬ್. ೯೩). ೫. ಸೆರೆಹಿಡಿಯುವವನು: "ಪ್ರಗ್ರಹಃ, ಗ್ರಾಹಕಃ, ವಂದೀ – ಈ ೩ ಬಂದಿ" (ಹಲಾಯು. ೦೨೩-೬೯). ೬. ತಡೆ; ಅಡ್ಡಿ; ಪ್ರತಿಬಂಧ: (ಶ). ೭. ಕೊಳ್ಳೆ; ಲೂಟಿ; ಸೂರೆ: ಅಳಿಗಳ್ ದಳವುಳಂ ಬಸಂತನ ಬಂದಿ ಬಾಲಚೂತನ ಭಯಂ ಮಳಯಾನಿಳನ ಗಾಸಿ (ಗಂಕ. ೯-೦೦೬ ಕ); ಕಳವು ಹುಸಿ ಹಾದರ ವಿರೋಧ ಸ್ಖಲಿತವಾಜಡಿ ಬಂದಿ ಪಳದುಳ ಬೆಳುಗವತೆಯನ್ಯಾಯ . . . ಅಡಗಿದವೀ ಯುಧಿಷ್ಠಿರ ನೃಪನ ರಾಜ್ಯದಲಿ (ಶಬ್ದ.ಸ. ೬-೦೦); ಕಿಸುರು ಗಾವಳಿ ಬಂದಿ ಗಳಹತನ ಮಾವಿವೇಕಮುಸಿರಲೀನಾ ಚಿನ್ನಬಸವನಿಹ ರಾಜ್ಯದೊಳ್ ಮಿಸುಕೆ ಮೇವಣ್ಣಸುವನು (ಚಂಪು.೬-೯೦). ೮. ತೋಳಿಗೆ ಧರಿಸುವ ಒಂದು ಬಗೆಯ ಆಭರಣ; ವಂಕಿ: ನವರತ್ನದ ರವೆಯಾದ ಬಂದಿ ವಿರಾಜಿಸು ತಿರ್ಪುದಪ್ಪಿಯಗಜೆಯ ತೋಳೆಂ (ಗಂಕ. ೩-೬೩); ಕಡಗ ಕಂಕಣ ಸೂಡಗ ಹೊನ್ನ ಬಳೆ ಬಂದಿ ಖಡೆಯ (ಶಬಕಾಂ. ೦-೦೦೬); ಇರೋದು ನಾಗರ ಕುಚ್ಚು, ಈ ಬಂದಿ (ಕುಂಕುಮ. ೩೮). ೯. ಕತ್ತಿನಲ್ಲಿ ಧರಿಸುವ ಒಂದು ಬಗೆಯ ಸರ: ನಾ ತೂಗಿ ಬಾಗಿ ನೀರು ಮೊಗೆದೆ ಮಾವಯ್ಯ ಕೊಂಡಿ ಸಮೊದು ಬಂದಿ ಬಿತ್ತು ಮಾವಯ್ಯ (ಜಾನಪು. ೦೩೯); ಕತ್ತಿನಲ್ಲಿ ಅಡ್ಡಿಕೆ, ಅಸಲಿ, ಬಂದಿ, ಜೋಮಾಲೆ (ಖುಷಿ. ೯೦). [ಸಂ. ಬಂದಿ, ಬಂದೀ]

**ಬಂದಿ$_2$** (ನಾ). ೧. ಹೊಗಳುಭಟ್ಟ; ಸ್ತುತಿಪಾಠಕ: "ಬಂದಿ–ವಂದಿನ್ – ಸ್ತುತಿಪಾಠಕ" (ಅಭ್ಯಕೋ. ೨೯). ೨. ಹೊಗಳಿಕೆ; ಕೊಂಡಾಟ: ಅಗ್ಗಳಿಕೆ ಮುಳಿಸು ಮುಖದಲಿ ಮೋಡಿ ಬಂದಿ ಭಾರಣೆ ಬಿಂಕ ಬೆಡಗು ಚಮತ್ಕಾರಂಗಳಿಂದ ಸಮಮಾಗೆ ಕೈದೋಱಿದಂ ವೃಷಕೇತು ಬಭ್ರುವಾಹನನ ಮೇಲೆ (ಕೈ.ಶಿಭಾ. ೨೩-೦೩). 'ವಂದಿ'$_1$ ಪರಾ.
[ಸಂ. ಬಂದಿನ್, ವಂದಿನ್]

**ಬಂದಿಕಾರ** 'ಬಂದಿಗಾಳಿ' ನೋ.

**ಬಂದಿಕಾಳಿ** 'ಬಂದಿಗಾಳಿ' ನೋ.

**ಬಂದಿಕಾಳಿತನ** (ನಾ). ಬಂಧನದಲ್ಲಿಡುವ ಗುಣ: ಕೊಂದು ಕುಟ್ಟಿ ದಂಡವ ತೆಕ್ಕೊಂಬುವಂಗೆ ಅದು ಬಂದಿಕಾಳಿತನವೊ ಕೃಪೆಯೋ ಇದ ಬಿಂದವ ತಿಳಿಯಬೇಕು (ಮೋಕ್ಷಾ. ೦೫೬-೫೦೬).
[ಬಂದಿಕಾಳಿ (<ಬಂದಿಗಾಳಿ) + – ತನ]

**ಬಂದಿಕೋಲು** 'ಬಂದಿಗೋಲ್' ನೋ.

**ಬಂದಿಖಾನ** 'ಬಂದೀಖಾನೆ' ನೋ.

**ಬಂದಿಖಾನೆ** 'ಬಂದೀಖಾನೆ' ನೋ.

**ಬಂದಿಗಟ್ಟಿಸು** (ಕ್ರಿ). ತಾಳಿಯಿರುವ ಬಂದಿಯನ್ನು ಕೊರಳಿಗೆ ಕಟ್ಟುವಂತೆ ಮಾಡು; ಮದುವೆಮಾಡು: ಇಲ್ಲಿಗಾಪ್ತರನಟ್ಟಿ ಬಂದಿಗಟ್ಟಿಸನು ತನ್ನಲ್ಲಿಗೆ ಬರಲೆಂಬನವ್ವ ಇಲ್ಲಿ ತನ್ನಂಗಲವಸಗಿದರದೆ ಸಾಕು ಸಲ್ಲೀಲೆಯೊಳಗೀವೆನೆಂದ (ಜೈಕ. ೩೬-೩೮). [ಬಂದಿ$_1$ + ಕಟ್ಟಿಸು]

**ಬಂದಿಗಟ್ಟು** (ಕ್ರಿ). ೧. ತಾಳಿಯಿರುವ ಬಂದಿಯನ್ನು ಕೊರಳಿಗೆ ಕಟ್ಟು; ಮದುವೆಯಾಗು: ಕರಮೆಸೆವ ಸಾಕೇತನಗರದ ದೊರೆ ಸುರಥನಿಗೆ ವಜ್ರರೇಖೆಗೆ ನೆಱೆ ಜನಿಸಿಯ ಸನತ್ಕುಮಾರಗೆ ಬಂದಿಗಟ್ಟಿರ್ದ ತರುಣಿ ತಾನು ಸುನಂದೆ (ಶಕತ್ಮ. ೬-೦೩). ೨. ಮದುವೆಯನ್ನು ಮಾಡಿಸು: ಇವಳಿವನಿಗೆ ತಕ್ಕವಳಿವನಿವಳಿಗೆ ವಿವರಿಸೆ ತಕ್ಕವನೆಂದು ತವೆ ಪೂಗೊಲ್ಲರೊಸೆದು ನಿನಗೆನ್ನನುತ್ಸವದೊಳು ಬಂದಿಗಟ್ಟಿದರು (ಶಬಕಾಂ. ೨೬-೦೦೫).
[ಬಂದಿ$_1$ + ಕಟ್ಟು$_1$]

**ಬಂದಿಗಾವಲು** (ನಾ). ಸೆರೆಮನೆಯ ಕಾವಲು; ಜೈಲಿನ ಕಾವಲು: ಮುಂದಣ ಮೆಯ್ಯಾಗಿಹಿಗೊಂದನ್ನು ಕಯಪ್ಪುವೀಸಿ ಹೊರನಡೆಯಿಸಿ, ಬಂದಿಗಾವಲರಿಗೆ ಕ್ಷೀಣಸ್ವರದಿಂದ ಬೆಸಗುಡುತ್ತಿರುವನು (ಕುಂತ್ರ.ಕ. ೦೨೬-೦೬).
[ಬಂದಿ$_1$ + ಕಾವಲು (< ಕಾವಲ್$_1$)]

**ಬಂದಿಗಾಳಿ, ಬಂದಿಕಾರ, ಬಂದಿಕಾಳಿ** (ನಾ). ೧. ಬಂಧಿಸುವವನು; ಸೆರೆಹಿಡಿಯುವವನು: ನೊಂದೆವಾಲಿಶಿ ದೇವ ಸುರಕುಲಬಂದಿಗಾ[ಶಾಕಾಂ. ಕಾ]ಳಿನ ಕೈಯುಲಕಟಾ (ಕೊಶಲಾ. ೦-೯-೩೩); ಅದೇಂ ಬೆಲೆವಡೆದತ್ತೊ ಚಿತ್ತಭವನಂದದ ಬಂದಿಗಾಳಿನಾ (ಶಶಿ. ೩-೬). ೨. ಸೂರೆ ಮಾಡುವವನು; ಕೊಳ್ಳೆಗಾರ: ಮುಂದುಂ ಪಿಂದುಂ ಸಂಧಿಸಿದ ಬಂದಿಗಾಳರ ಗೊಂದಣಮುಂ ನಂದಿಪ (ರಾಮಾಶ್ವ. ೯೦-೨೯). **ಬಂದಿಕಾರ:** ೩. ಜೈಲಿನ ಮೇಲಧಿಕಾರಿ: ಬಂದಿಯೊಳಗಿದ್ದವರ ಬಂಧನವ ಬಿಡಿಸುವಾ ಬಂದಿಕಾರಾ ಶ್ರಾವಣಾ

(ಗಂಗಾಕ. ೩೭-೨). **ಬಂದಿಕಾಱ:** ೧. ಬಂದಿಕಾಱನಂತೆ ತೆಱಪುವಾರ್ದು ಪಿಡಿವ ಶಾಕಿನಿಯರಿಂ . . . ರಣದೇವತೆಯರಿಂದತಿಭಯಂಕರಾಕಾರವಪ್ಪುದು (ಕಾವ್ಯಸಾ. ೩೨೯ ಕೊದ್ರಳ); ದುರ್ಯೋಧನಂ ಬಂದಿಕಾಱನಂತೆ ಸೆಱೆಗೆಯ್ದಿಂ (ಕಂಕಥಾ. ೬-೬೨ ವ) ; ಬಂದು ಕಂಡರು ಮೇಲವರಾ ಕುದುರೆಯ ಬಂದಿಕಾಱನನು ಬೇಗದೊಳು (ಕುಜಾಜಾ. ೯-೬೯). ೨. ಸಂದ ಸುಭಟರು ಬನ್ನಿ ಸ್ವರ್ಗದ ಬಂದಿಕಾಱರು ಬನ್ನಿ (ಕುವ್ಯಾಭ. ೮-೩೦). ೩. ಕಳ್ಳ; **ತುಡುಗ:** ಕುತ್ಸಿತ ಕುಮಂತ್ರದ ಬಂದಿಕಾಱನು ಚಾಟು ಚವಳಿಗನೆಂದು ನಾ ಮುಂದಱಿಯೆ (ಕೃಕೊಉ. ೬-೫೩) [ಬಂದಿ$_1$ + —ಕಾಱ]

**ಬಂದಿಗೃಹ** (ನಾ). ಸೆರೆಮನೆ ; ಕಾರಾಗೃಹ ; ಜೈಲು : ನನ್ನನ್ನು ಪತ್ತೆ ಹುಟ್ಟುವ ಹಂಚಿಕೆ ನಿಮಗೆ ಸಿಗುವಂತಿದ್ದರೆ, ನೀವು ಈ ಪ್ರಕಾರದ ಬಂದಿಗೃಹ ರಕ್ಷಕನ—ಜೇಲರನ ಚಾಕರಿಗೆ ನಿಲ್ಲುತ್ತಿರಲಿಲ್ಲ (ಅಂಅಳ. ೨೯). [ಸಂ.]

**ಬಂದಿಗೆ** (ನಾ). ೧. ಆಯುಧದ ಹಿಡಿ : ಕಾವಿಲ್ಲದ ಕೊಡಲಿವಿಡಿವೆನೆಂಬಂತೆ ಬಂದಿಗೆಯಿಲ್ಲದೆ ಸುರಿಗಿವಿಡಿವೆನೆಂಬಂತೆ . . . ದೆಸೆಗಿಡಲ್ವೇಡ (ಅಕಬಸವ್ಯ. ೪-೩೦). ೨. ಹಿಡಿಯುಳ್ಳ ಆಯುಧ,– ಕತ್ತಿ: ಮಡಿಸಿದ ಶೇಷನ ಬಂದಿಗೆ ಮಾರಿಯ ಮುಂಡೆಯ ನಡುಘೇಟಿಯ ಮೃತ್ಯುವಿನೊಳನಡುವುಂ ದೊಂಗಲ್ ಪಿಡಿದೊಣಗಲ್ಗುರುಳುಳ್ಳ ಹಿಣಿಲ ಚವುರದ ಹಲಗೆಯ ಕಡುಗಲಿ ಕಣ್ಗೊಟ್ಟಿದನು (ಜೀಉಕ. ೨-೬); ಮುಗಿಲ ಹರಿಗೆಗೆ ಮಾರುತನ ಬಂದಿಗೆಯ ಹೊಯ್ಲಿನೆ ನಕುಳನೆಚ್ಚಂಬುಗಳು ಕಿಡಿ ಸೂಸಿದವು (ಕುವ್ಯಾಭ. ೨೦-೦೯).

[ ? ]

**ಬಂದಿಗೆಕೋಲು** 'ಬಂದುಗೆಗೋಲು' ನೋ.

**ಬಂದಿಗೊಳ್** (ಕ್ರಿ). ಸೆರೆಹಿಡಿ ; ಬಂಧಿಸಂ : ಇನಿಯನ ಬಗೆಯ ತೀದು ಬಂದಿಗೊಂಬ ಸುಗುಣೆಯರಿಹವರದೊಳು ಸೂಱೆಗೊಂಬರು ಸೊಗದ ಸುಗ್ಗಿಯ (ಹರಿಶ. ೮-೩೦) ; ಹಸುವಂ ಬಂದಿಗೊಂಡ ಪೊಟಲ ತಳವಾಱ ರೊರ್ಮೆಗಂ ಕಟ್ಟೋಲಗದ ರಾಯನೆಡೆಗೆಯ್ತಂದು (ರಾಮಾಶ್ವ. ೦೧೦-೦೩).
[ಬಂದಿ$_1$ + ಕೊಳ್$_1$]

**ಬಂದಿಗೊಳಿಸು** (ಕ್ರಿ). ಸೆರೆಹಿಡಿ; ಬಂಧಿಸು: ಸೌಂದರ್ಯಮನೆರ್ದೆಯೊಳ್ ಬಂದಿಗೊಳಿಸಿ (ಅಕ್ರೂರ. ೦೧೩-೬). [ಬಂದಿಗೊಳ್ + —ಇಸು$_3$]

**ಬಂದಿಗೋಲ್, ಬಂದಿಕೋಲು** (ನಾ). ಅಂಗಸಾಧಕನು ಉಪಯೋಗಿಸುವ ದಂಡ: ಕಟ್ಟಿದ ದಟ್ಟಿ ಕೈದಳದ ಪೊಂಗಿಱುಗುಟ್ಟಿಗೆ ರನ್ನ ಬಂದಿಗೋಲ್ . . . ಮನಂಗೊಳಲ್ (ಚಕಶ. ೯-೦೫೯). **ಬಂದಿಕೋಲು** : ಅಂದುಗೆ ಕಾಲೊಳು ಝಣಝಣರೆನುತಿರೆ ಬಂದಿಕೋಲನು ಕೈಯೊಳಾಂತು (ಜ್ಞಾವಚ. ೨-೩೨). [← ತುಳು. ಬಂದಿಕೋಲು]

**ಬಂದಿಗ್ರಹಣ** (ನಾ). ಕಳ್ಳನನ್ನು ಹಿಡಿಯುವುದು: ಬಂದಿಗ್ರಹಣ, ಬಲ್ಲಂದಿಕಾಱ (ಕಮುರ. ೨೯೮ ಕೃಹೊ) ; ವಸುಮತಿಗೆ ಬಲ್ಲಂದಿಕಾಱ ಬಂದಿ ಗ್ರಹಣ (ಕಾವ್ಯಸ. ೯೩). [ಸಂ.]

**ಬಂದಿನಿ** (ನಾ). ಸೆರೆಯಲ್ಲಿರುವವಳು : ಬಂಧಿತಳಾದವಳು : ಅವಳೀಗ ಕೇವಲ ಬಂದಿನಿಯಾಗಿದ್ದಳು (ಅಂಅಳ. ೨೯). [ಸಂ. ಬಂದಿನೀ]

**ಬಂದಿವಡು** (ಕ್ರಿ). ಸೆರೆಯಹಾಗಂ ; ಬಂಧನಕ್ಕೊಳಗಾಗು : ಸಿರಿಕಂಡದ ಕೋಟೆಕ್ಕಿಸಱೆಯೊಳ್ ಕಾಲ್ಲುಸಿದುಂ ಪಾಱುಗೆಯ್ದುಕ್ಕೆ ಬಂದಿವಟ್ಟುಂ (ರಾಮಾಶ್ವ. ೨-೨೩). [ಬಂದಿ$_1$ + ಪಡು$_1$]

**ಬಂದಿವನೆ** (ನಾ). = ಬಂದಿಗೃಹ : ಮಹಿಶೂರನಾಡೊಳ್ ಬಂದಿವನೆ ಯೊಳಿರ್ಪವರ ಸೊಗಮುಂ ಟಂಡು (ಅಕ್ರೂಶ. ೦೧೬-೬). [ಬಂದಿ$_1$ + ಮನೆ]

**ಬಂದಿವರ್** (ಕ್ರಿ). ಬಂಧನಕ್ಕೊಳಗಾಗು; ಸೆರೆಯಾಗು: ಕೈಬಸದೊಳೊಪ್ಪಿಸಿ ತಪ್ಪದೆ ಬಂದಿವಂದುದೋ (ಚಕಶ. ೩-೦೦೩). [ಬಂದಿ$_1$ + ಬರ್]

**ಬಂದಿವಾನ** 'ಬಂದೀವಾನ' ನೋ.

**ಬಂದಿವಾೞ್** (ಕ್ರಿ). ಸೆರೆಯಲ್ಲಿರು ; ಬಂಧನದಲ್ಲಿ ಬಾಳು : ರಕ್ಕಸನೊಳ್ ಬಂದಿವಾೞ್ದಿನ್ನನೊಪ್ಪುಗೊಂಡನೆಂಬೊಂದು ಲೋಕಾಪ ವಾದದ ದೂಸಱಿಂ . . . ಕಳಿಪಿದನೈ (ರಾಮಾಶ್ವ. ೧೦-೨೫).
[ಬಂದಿ$_1$ + ಬಾೞ್$_1$]

**ಬಂದಿವಾೞ್ಗೆ** (ನಾ). ಸೆರೆಯ ಜೀವನ ; ಬಂಧನದ ಬದುಕು : ಪಂಜರ ನೊಂದು ಪಕ್ಕಿ . . . ತನ್ನ ಬಂದಿವಾೞ್ಗೆಯೊಳ್ ದಿನದಿನದ ಪಾಲ್ಪಣ್ಗಳ ನಿನಿದಿಸಿದಾಗಿ ಸವಿಯುತುಂ ನಿಶ್ಚಿಂತಮಿರ್ಪಂತಿರೆ (ರಾಮಾಶ್ವ. ೬೯-೩೦).
[ಬಂದಿವಾೞ್ + — ಗೆ]

**ಬಂದಿವಿಡಿ, ಬಂದಿಹಿಡಿ** (ಕ್ರಿ). ೧. ಸೆರೆಹಿಡಿ ; ಬಂಧಿಸು : ಮನದಿಂ ಸೆಱೆಗೆಯ್ಯುಂ ಲೋಚನದಿಂ ಬಂದಿವಿಡಿಗುವೆಂದುಂ ವನಿತಾಜನಂ (ಕಾಂತಿಶ. ೩-೦೦) ; ಅವುದುರ್ ಬಸವಣ್ಣನಂ ಬಂದಿವಿಡಿಯಲ್ಕೆಂದು ಬಱು ಮನದ ಹೊಱವಿಭೂತಿಯನಲ್ಲಿ ತೀವಿಟ್ಟು (ಬಸ. ೯-೧೨) ; ತನ್ನಬಲೆಯ ಬಗೆಯಂ ಬಂದಿವಿಡಿದು ಕೂಡಿದನಾ ಕಾದಲನು (ಜಡುಆ. ೬-೯೬). ೨. ಕೊಳ್ಳೆಹೊಡೆ : ಸೂರೆ ಮಾಡು : ಕನ್ನಮನಿಕ್ಕುವ ಬಟ್ಟೆಗೊಳ್ಳ ಸಂಚಳಿಸದೆ ಪೊಕ್ಕು ಬಂದಿವಿಡಿವಾಯಿಲವೊಡ್ಡುವ ನಿನ್ನ ಗೊಡ್ಡಮಂ ಶೀವದವಧಾರಿಸು (ವರ್ಧಮಾ. ೬-೩೧) : ಕಳಹೋದರೆ ಕನ್ನದುಳಿಯ ಹಿಡಿವೆ ಬಂದಿವಿಡಿವರೆ ನಿಮ್ಮಿಂದ ಮುಂದೆ ನಡೆವೆ ಮನಭೀತಿ ಮನಶಂಕೆಗೊಂಡೆ ನಾದರೆ ನಿಮ್ಮಾಣೆ (ಬಸವ. ೬೧೬). **ಬಂದಿಹಿಡಿ** : ೧. ಬಂದ ಹುಳುವ ಬಂದಿ ಹಿಡಿದು ಕೊಂದು ತಿಂಬುದು (ಚಿಕೀಗೀ. ೬೪-೦೬). [ಬಂದಿ$_1$ + ಪಿಡಿ$_1$]

**ಬಂದಿವಿಡಿಹ** (ನಾ). ಸೆರೆಹಿಡಿಯುವಿಕೆ ; ಬಂಧಿಸುವಿಕೆ : "ಗ್ರಾಹಕಂ ಪ್ರಗ್ರಹವೆನಲ್ಬಂದಿವಿಡಿಹವಕ್ಕು" (ಶಬ್ದಮಣಿ. ೦೩೬-೪೦). [ಬಂದಿ$_1$ + ಪಿಡಿಹ]

**ಬಂದಿಶಾಲೆ** (ನಾ). ಕಾರಾಗೃಹ ; ಸೆರೆಮನೆ : ಬಂದಿಶಾಲೆಯೊಳಕಟ ಶಿವಶಿವವೊಂದು ಕಡೆಯಲಿ ಖಚರ ಕಿನ್ನರರೊಂದು ಕಡೆಯಲಿ ಸಿದ್ಧ ವಿದ್ಯಾಧರ ಮಹೋರಗರು (ಕೌಶರಾ. ೦೦-೩೬) : ದೇವದಾಸುರನ ರಾಣಿವಾಸದ ಮಂದಿರಂಗಳು ಹಲವು ದೇವರ ಬಂದಿಶಾಲೆ ವಿಚಿತ್ರ ಕರಣಿಕ ಮಂತ್ರಿ ಕೇರಿಗಳು (ಕೌಶರಾ. ೩೨-೯). [ಸಂ. ಬಂದಿಶಾಲಾ]

**ಬಂದಿಸು$_1$** (ಕ್ರಿ). ಅಡ್ಡಬೀಳು : ನಮಸ್ಕರಿಸು : ಪಿರಿದಪ್ಪ ಪೂಜೆಯಂ ಮಾಡಿಯರ್ಚಿಸಿ ಪೂಜಿಸಿ ಬಂದಿಸಿದೊಡೆ (ವಡ್ಡಾರಾ. ೬೪-೨೬) ; ಜನಬೃತ್ತ ಬ್ರಾತವುಂ ಬಂದಿಸು ಜನಪದಪದ್ಮಂಗಳಂ ದಿವ್ಯಮಾಪ್ಪರ್ಚನೆಯಿಂದು ಭಕ್ತಿ ಯಿಂದರ್ಚಿಸು (ಅಂಶಿ. ೩-೬) ; ಚಂಡಮಾರಿ ಲೋಚನಗೋಚರತನುವಾಗಿ ಕುವರನಂ ಬಂಡಿಸಿ (ಯಶೋಚ. ೪-೬೨). [< ವಂದಿಸು]

**ಬಂದಿಸು$_2$** (ಕ್ರಿ). ಸೆರೆಹಾಕು : ಬಂಧಿಸು : ರಾಜದ್ರೋಹದೇವತೆ ಬಂದಿರುಳು ತನ್ನೆದೆಯ ಮೆಟ್ಟಿಯೆ ಬಂದಿಸುವಳದನೇನ ಪೇಳುವೆನು (ಜೀಉಕ. ೪-೩೦). [ಬಂದಿ$_1$ + — ಇಸು$_3$]

**ಬಂದಿಹಿಡಿ** 'ಬಂದಿವಿಡಿ' ನೋ.

**ಬಂದಿಹೊಗು** (ಕ್ರಿ). ಸೆರೆಸಿಕ್ಕು : ಬಂದಿಯಾಗು : ನಿಂದೆ ಹೊದ್ದದು ನಡೆವಳಿಗಳು . . . ಬಂದಿ ಹೊಗದಾಸಱು ವಿತಾಳಿಸಿ ನಿಂದಿರದು ನೆಲೆಗೊಳ್ಳದಾ ಜನವೃಂದದಲಿ ಕಟ್ಟಾಸೆ ದಶರಥನೃಪನ ರಾಜ್ಯದಲಿ (ತೊರೆರಾ. ೧-೩-೨೬). [ಬಂದಿ$_1$ + ಹೊಗು (< ಪುಗು)]

**ಬಂದೀಕರಣ** (ನಾ). ಸೆರೆ ; ಬಂಧನ : ಬಂದೀಕರಣ ಮಾಡಿದ ಯಾವ ವ್ಯಕ್ತಿಯನ್ನೂ ಬಂದೀಕರಣದ ಕಾರಣಗಳನ್ನು ಸಾಧ್ಯವಾದಷ್ಟು ಶೀಘ್ರವಾಗಿ ತಿಳಿಸದೆ ಅಭಿರಕ್ಷೆಯಲ್ಲಿ ಇಡತಕ್ಕುದಲ್ಲ (ಭಾಸಂವಿ. ೦೨). [ಸಂ.]

**ಬಂದೀಕರಿಸು** (ಕ್ರಿ). ತನ್ನ ವಶಕ್ಕೆ ತೆಗೆದುಕೊಳ್ಳು; ಸೆರೆಹಿಡಿ; ಬಂಧಿಸು; ಕೈದು ಮಾಡು : ಮಂದಹಾಸದ ಭಾಸಮಂ ಕೊಳಲು ಚಂದ್ರಿಕೆಯ ಬಂದೀಕರಿಸಿ ಬಾಣತತಿಯ ಕುಡಿನೋಟಂಗಳಂದಮಂ ಕಂಡು ಮುನಿವೃಂದ ಮಾನಂದಮಂ ಪೊಂದಿದರು (ಪಂಶಾಶಾ. ೧-೦೬-೯).
[ಬಂದೀಕರಣ + — ಇಸು$_3$]

**ಬಂದೀಖಾನೆ**, ಬಂದಿಖಾನ, ಬಂದಿಖಾನೆ (ನಾ). ಸೆರೆಮನೆ; ಕಾರಾಗೃಹ : "ಕಾರಾ, ಬಂಧನಾಲಯಃ — ೨ ಸೆರೆಮನೆ, ಬಂದೀಖಾನೆ" (ಸಿದ್ಧಾಂತಿ. ೨೬೩); ಜಂಗಮಕ್ಕೆ ಸುಖಾಸನವನಿಕ್ಕದೆ ತಾನೆ ಗದ್ದುಗೆಯ ಮೇಲೆ ಕುಳಿತಡೆ ಬಂದೀಖಾನೆ[ಪಾಠಾಂ. ಬಂದಿಕಾನ]ಯಲ್ಲಿ ಕುಳಿತ ಸಮಾನ (ಕಪ್ಪಸ. ೯-೩); ಅವನನ್ನು ಬಂದೀಖಾನೆಗೆ ಹಾಕಿದ್ದೇವೆ (ಜೀಕಥೋ. ೨೬). **ಬಂದಿಖಾನ** : ಬಿಡದುಪಚರಿಸಿ ನೇಮಿಯು ಕುಂಜಳಕಾಯನೊಡೆದು ಹುಟ್ಟಿದ ರಾಯನನು ತಡೆಹನಿಕ್ಕಿಸಿದನು ಬಂದಿಖಾನದೊಳು ಪೊಡವೀಶ್ವರ ಸುರುತಾಳ (ಕುಪಾಪಾಂ. ೦೭-೦೦೬). **ಬಂದಿಖಾನೆ** : ಮೋಹದ ಬಂದಿಖಾನೆಗೆ ಸಿಲುಕಿ ಕೆಡಬೇಡ (ಅಪಂರಾ. ೦-೩-೭೬); ಅವನ ಕಾಲಿಗೆ ಬೇಡಿ ಹಾಕಿಸಿ ಬಂದಿಖಾನೆಯಲ್ಲಿ ಮಡಗಿಸಿ (ರಾಜೇಂದ್ರ. ೦೨೦). [← ಪಾರ. ಬಂದೀಖಾನಹ್; ಹಿಂ. ಮರಾ. ಬಂದೀಖಾನಾ]

**ಬಂದೀವಾನ**, ಬಂದಿವಾನ (ನಾ). ಸೆರೆಯಲ್ಲಿರುವವನು ; ಕೈದಿ : "ಪ್ರಗ್ರಹಃ, ಉಪಗ್ರಹಃ, ಬಂದೀ — ೩ ಸೆರೆಮನೆಯೊಳಗಿರುವವನ ಹೆಸರುಗಳು, ಬಂದೀವಾನ" (ಸಿದ್ಧಾಂತಿ. ೨೬೩). **ಬಂದಿವಾನ** : ನೀನೀ ಸಮಯದಲ್ಲಿ ಬಾರದಿದ್ದಲ್ಲಿ ನಾನೂ ನನ್ನ ಪುತ್ರಿಯೂ ಕಳ್ಳರ ಬಂದಿವಾನರಾಗುತ್ತಿದ್ದೆವು (ಕಥಾಕೋ. ೬೮) ; ಸಂಕೋಲೆಗಳನ್ನು . . . ವಧ್ಯರಾದ ಬಂದಿವಾನರೆಲ್ಲರಿಗೂ ಹಾಕುವ ಪದ್ಧತಿಯಿದೆ (ಕೋಕ್ಳ್ರು. ೯೯).

[← ಹಿಂ.ಮರಾ. ಬಂದೀವಾನ್]

**ಬಂದೀವಾಸ** (ನಾ). ಸೆರೆಮನೆ ವಾಸ ; ಜೈಲಿನ ವಾಸ : ಅವನ ಬಂದೀವಾಸದ ಸಮಯದಲ್ಲಿ ಅವನು ತನ್ನೊಬ್ಬ ಗೆಳೆಯನಿಗೆ ಚೀನಾ, ಹಿಂದೂಸ್ಥಾನಗಳ ವಿಚಾರವನ್ನು ಬಣ್ಣಿಸಿದ್ದನು (ಚಾಂಕ್ರ. III.೦೨೬೯). [ಸಂ.]

**ಬಂದು**$_1$ 'ಪರ್' ಪರಾ.

**ಬಂದು**$_2$, ಬಂದ್, ಬಂದ್ಯ$_2$, ಬಾಂದ್$_1$, ಬಾಂದು (ನಾ). ೧. ಬಂಧನ ; ಸೆರೆ : (೬). ೨. ಬೇಡಿ ; ಸಂಕೋಲೆ. ೩. ಮುಚ್ಚಿದುದು ; ನಿಲ್ಲಿಸಿದುದು ; ಕೊನೆಯಾದುದು : ನಂಬಿಗೆಯು ಇಲ್ಲದಂತಾಗಿ ಖಾತೆಗಳನ್ನು ಬಂದು ಇಡುವ ಪ್ರಸಂಗಗಳು ಬರಹತ್ತಿದವು (ಪುಂಖಣ್ಣಾ. ೬ ಕ್ರ.ಶ್ವ.ಪಕ). ೪. ಹರತಾಳ ; ಸಂಪು ; ಮಂಪ್ಕರ : ತಮ್ಮ ಬೇಡಿಕೆಗಳ ಪೂರೈಕೆಗಾಗಿ ಸದಾಕಾಲ ಯಾವುದಾದರೊಂದು ಪಂಗಡದವರು ಪದೇ ಪದೇ ಬಂದು ಆಚರಿಸಲು ಜನತೆಗೆ ಕರೆಯುತ್ತರೆ ದೇಶದ ಪ್ರಗತಿಯಾದರೂ ಹೇಗೆ ಸಾಧ್ಯ ? (ಪೂಅ). **ಬಂದ್** : ೩. ಅತು ಹಗಾರ. ಭಜನಿ ಬಂದ್ (ಪಾಠಾಂ. ೨೯) ; ಮುಂದಿನ ಕದ ಬಂದ್ — ಗಲ್ಲಿ ಕದ ಖುಲ್ಲಾ (ಕಂಗು. ೦೫೯). **ಬಂದ್ಯ**$_2$ : ೫. ಸಂಬಂಧ ; ಕಟ್ಟು ; ಬಾಂಧವ್ಯ : 'ಬಂದಂಬಿಡು' ಪರಾ. ೬. ಹೊಂದಿಸಿ ಕಟ್ಟಿದುದು: 'ನೆತ್ತಿವಂದ' ಪರಾ. **ಬಾಂದ್**$_1$: ೭. ಜಮೀನಿನ ಎಲ್ಲೆಕಟ್ಟನ್ನು ಖಚಿತಗೊಳಿಸಲು ಹಾಕುವ ಕಟ್ಟೆ; ಒಡ್ಡು : (ಕೃಷಿಗ. II. ೩೯೬) ; ಬಾಂದಪ್ಪಿಕೋರು ಬರುತಾರಂತೆ . . . ಬಾಂದು ಎಂಬೋದು ಬಂಧನವಾಗಿದೆ (ನಾಶಕ. ೦೯೬). **ಬಾಂದು** : ೭. ಒಂದು ಹೊಲದ ಮಣ್ಣು ಮತ್ತೊಂದು ಹೊಲಕ್ಕೆ ಹೋಗದ ಹಾಗೆ ಹೊಲದ ಬಾಂದಿನ ಹದ್ದು ಹಿಡಿದು . . . ಸುತ್ತಲೂ ಒಡ್ಡು ಹಾಕಿಸುವದು ಅವಶ್ಯವಾಗಿದೆ (ಕೃಷಿಕ್ರ. ೬೨); ಬೇಕಾದರೆ ಬೇರೆ ಬಾಂದು ಹಾಕಿ (ಪುಂಖರೂ. ೦೫೫). ೮. ಗಡಿ; ಮೇರೆ: ಅಂದೇ ನನ್ನ ಕಾರ್ಯಕ್ಷೇತ್ರದ ಬಾಂದುಗಳನ್ನು ಗುರುತಿಸಿಕೊಂಡೆ (ಕಾಂಕ. ೦೯).
☞ ಈ ಪರ್ಯಾಯರೂಪದ ವ್ಯುತ್ಪತ್ತಿ ವಿಚಾರಣೀಯ.

ಬಂದಾಗು = ಮುಚ್ಚು : ಈ ರಸ್ತೆ ಬಂದಾದಂತೆಯೇ (ಅಕೋಕ. ೯೯); ಇಂದು ಅಂಗಡಿ ಬಂದಾಗಿದೆ (ಪೂಅ). ಬಂದು ಮಾಡು=೧. ನಿಲ್ಲಿಸು; ತಡೆಹಾಕು : ನಿನ್ನ ಚಿತ್ರವ್ಯವಸಾಯವನ್ನು ಬಂದು ಮಾಡು ಶ್ಯಾಮಾ (ಕಂಗರೋ. ೦೯೬) ; ಈ ಉಪದೇಶವನ್ನು ಬಂದು ಮಾಡಿರಿ ಸಾರ್ (ಕಂಗರೋ. ೫೭). ೨. ಮುಚ್ಚು ; ಹಾಕು: ಹೋಗಿ ಬಹಳ ಬೇಗನೇ ಬಂದು ಮಾಡಿ ಬಾ (ಕೂಕಿಕಾ. ೩). ಬಾಂದಿನವರು = ಭೂಮಿಯನ್ನು ಅಳತೆ ಮಾಡುವವರು; ಮೋಜಣಿದಾರರು : ಬಾಂದಿನವರು ಬಂದರು ಕಾಣಿಸ್ಲಾ ನಾವ್ ಬಾಳೋದ್ ಹೊಗಸ್ಲಾ (ಪಾಶಕ. ೦೩೯); ಈಗ ಬಾಂದಿನವರೊಬ್ಬರು ಆ ಮನೆಯಲ್ಲಿ ಬಾಡಿಗೆದಾರರಾಗಿ . . . ಇರುತ್ತಿದ್ದರು (ಸಮುಜ. ೦೨೬೨).

[← ಪಾರ. ಹಿಂ. ಬಂದ್ ; ಮರಾ. ಬಂದ್, ಬಾಂದೀ. / ಸಂ. ಬಂಧ]

**ಬಂದುಕ**, ಬೊಂದುಕ$_2$ (ನಾ). ೧. ಮೋಸಗಾರ; ವಂಚಕ; ಕಪಟಿ : "ಬಂದುಕನೆವಲ್ ಚಲ್ಲವತ್ತನುಮೆನಲ್ ನಂಬಿಸಿಯೆ ತಿಂಬಾತನಕ್ಕು" (ಶಬ್ದಮಂ. ೪೬); ಉಕ ಪ್ರತ್ಯಯಕ್ಕೆ — ಕಟ್ಟುಕಂ . . . ಬಂದುಕಂ, ದಿಂಡುಕಂ (ಶಮದ. ೨೦೩ ಕ್ರ.ಹೂ.). ೨. ಉಪಾಧ್ಯಾಯಂ ; ಗುರು : "ಬಂದುಕನುಪಾಧ್ಯಾಯನಕ್ಕು" (ಕಕರ. ೬೨). **ಬೊಂದುಕ**$_2$ : ೧. "ಬೊಂದುಕನೆಂದುಂ ಚಿಲ್ಲವತ್ತನೆಂದುಂ ನಂಬಿಸಿ ತಿಂಬವಂ" (ಕಕಪಾ. ೬೦-೩೩೬) ; "ನಂಬಿಸಿ ತಿಂಬವನಂ ಬುಧರಂಬರ್ ಬೊಂದುಕನು ಚಿಲ್ಲವತ್ತನುಮೆಂದುಂ" (ಕಕಾಂ. ೦೫೩). [?]

**ಬಂದುಕಟ್ಟು** (ನಾ). ೧. ಅಚ್ಚುಕಟ್ಟು; ಓರಣ : (೬). ೨. ಜಾತಿ ಪದ್ಧತಿ : (೬). ೩. ನಿಯಮಕ್ಕೆ ಒಳಪಟ್ಟಿರುವುದು ; ಸಂಪ್ರದಾಯಬದ್ಧವಾದುದು: ಅಚ್ಚುಕಟ್ಟಾದ ಕೆಲಸ ಚೆಂದ, ಬಂದುಕಟ್ಟಾದ ಊಟ ಚೆಂದ (ಗಾದೆ). [ದೇ. ‖ತುಳು. ಬಂದುಕಟ್; ತೆಲು. ಬಂದುಕಟ್ಟು]

**ಬಂದುಗೆ** 'ಬಂಧೂಕ$_1$' ನೋ.

**ಬಂದುಗೆಗೋಲು**, ಬಂದಿಗೆಕೋಲು (ನಾ). ೧. ಅಂಗಸಾಧಕನು ವ್ಯಾಯಾಮಕ್ಕಾಗಿ ಉಪಯೋಗಿಸುವ ಒಂದು ಬಗೆಯ ಸಾಧನ : ಹಡಪಿಗರೂಡುವಲೆಯ ಫಳಿಗೆಗಳ ಪಾಡಬೀದರೆಗಟ್ಟಿಕೊಳುತ ಬಂದುಗೆಗೋಲ ನೀಡುತ ತಿರುಹುತಿಯ್ದಿದರು (ಜಕಕ. ೬೩-೦೭). 'ಬಂದಿಗೋಲ್' ಪರಾ. **ಬಂದಿಗೆಕೋಲು** : ೨. = ಬಂದಿಗೆ ೩ : ಹಿಡಿ ಮಾರ್ಕೋಲನೆನ್ನೊಡನೆನುತ ತಿವಿದನು ಭೀಮ ಕುರುಪತಿಯ ಮೇಳಮಿಸಿ ತೆರದಂಕ ಬಂದಿಗೆಕೋಲ ಹೊಯ್ದಾಟದಲಿ ಬಳಿಕಾ ಕೀಲುಗದೆಗಳ ಹಿಡಿದು ತಬುಬಿದರಧಿಕರೋಷದಲಿ (ಕುವ್ಯಾಆ. ೭-೩೯).

[ ಬಂದುಗೆ$_1$ + ಕೋಲ್$_1$ ]

**ಬಂದುಗೆದುಟಿ** (ನಾ). ಬಂದುಗೆಯ ಹೂವಿನಂತೆ ಕೆಂಪಗಿರುವ ತುಟಿ : ಬಂದುಗೆದುಟಿ ತೊಂಡೆವಣ್ದುಟಿಯವರು ಮಂದಗಮನೆಯೊಳ್ಳಿದಿದರು (ಜೀಜಂಪಾಂ. ೦೦-೪೭) ; ಬಂದುಗೆದುಟಿಯು ವಿಸುವ ಬಡನಡುವಿನ . . . ಕುಮಾರಿಯು ರೂಪನದೇನಂ ಬಣ್ಣಿಪೆನು (ತಿಹುಕಾ. ೩-೬೨).

[ಬಂದುಗೆ (< ಬಂಧೂಕ$_1$) + ತುಟಿ]

**ಬಂದುಗೆಯರಲ್** 'ಬಂದುಗೆಯಲರ್' ನೋ.

**ಬಂದುಗೆಯಲರ್**, ಬಂದುಗೆಯರಲ್ (ನಾ). ಬಂಧೂಕವೃಕ್ಷದ ಹೂವು : ಬಂದುಗೆಯಲರಂ ಸವಿವಪೊಲಿಂದಿಂದಿರನಾವ್ರುಘಲವನರಿಗೀ ನಲವಿಂ ಮಾಂದಳಿರಂ ಪಿಕನಿನಿಯಳ ಚೆಂದುಟಿಯಂ ಚುಂಬಿಸಿದನಿಳಾಧಿಪ ನಾಗಗಳ್ (ಉದ್ಧಟ. ೯-೦೧೨). **ಬಂದುಗೆಯರಲ್** : ಕೋಮಳೆಯು ಕನಕ ಕಾಂಚೀದಾಮದ ಕೆಂಬರಲ ನುಣ್ಗದಿರ್ ತಿಂಬಿರೆ ನಾಭೀಮಂಡಳಮಿಮೆಸಿದು ದಭ್ರಾಮತೆಯಿಂದುಳ್ಳರಲ್ದ ಬಂದುಗೆಯರಲಂ (ಕಂದ್ರಕೃ. ೦೦-೦೦೯) ; ಬಂದುಗೆಯರಲ ತೊಡರ್ (ಕಸ್ಮ... ೦೯೨).

[ಬಂದುಗೆ (<ಬಂಧೂಕ$_1$) + ಅಲರ್$_2$]

**ಬಂದುಗೆವಾಯ್** (ನಾ). ಬಂದುಗೆಹೂವಿನಂತೆ ಕೆಂಪಗಿರುವ ಬಾಯಿ : ಬಲ್ಮೊಲೆಯ ನಳಿತೋಳ ಬಂದುಗೆವಾಯ ತೆಳ್ಗದಂಪಿನ . . . ಗಣಿಕೆಯರೆಸೆದರು (ಶಶ್ಮಾರಾ. ೬-೯೯) ; ಬಂದುಗೆವಾಯ್ದೆಱೆದು ಬಂಧಕಿ ಇಂತೆಂದು ತ್ತರಂಗೊಟ್ಟಳಾಗ (ಕ್ರಕಂಅ. ೩-೭೮). [ಬಂದುಗೆ (<ಬಂಧೂಕ$_1$) + ಬಾಯ್]

**ಬಂದುಗೆವಾಯ್ದುಟಿ** (ನಾ). = ಬಂದುಗೆದುಟಿ : ನಿಜಿಗುರುಳಿನ ತುಱುಗೆವೆಯ ಬಂದುಗೆವಾಯ್ದುಟಿಯ ಏಱುಗುವ ಕದಪಿನ ಪೆರ್ಮೊಲೆಯ ಪೆಣ್ಗಳ ತಂಡ (ಉಭಾಸಾ. ೩೪-೧೩).
[ಬಂದುಗೆ (<ಬಂಧೂಕ₁) + ಬಾಯ್ದುಟಿ]

**ಬಂದುರೆ** 'ಬಂದಾರೆ' ನೋ.

**ಬಂದೂಕ₁**, ಬಂದುಗೆ (ನಾ). ಕೆಂಪುಹೂವುಗಳನ್ನು ಬಿಡುವ ಒಂದು ಬಗೆಯ ಸಸ್ಯ : ಕವುಲ ಕೈರವ ಮೊಲ್ಲೆ ಬಂದೂಕ ಚಂಪಕಂ ಕವನೀಯವೆಸೆವ ಮಲ್ಲಿಗೆ (ಚಕೇಶ್ವ. ೩-೨೩). ಬಂದುಗೆ : "ಬಂಧೂಕಂ, ಬಂಧುಜೀವಂ—ಈ ೨ ಬಂದುಗೆ" (ಹಲಾಯು. ೩೩-೩೩) : ಬಂದುಗೆಯ ಕುಸುಮವರಸವಂ . . . ಪೀರ್ವ ಷಟ್ಪದಂ ನೆನೆಯಿಸಿತೆಯ್ಯೆಂದು ನಯದಿಂದೆ ಪತಿ ಸಾರ್ತಂದರುಣಾಧರವನೀಂಟುವುದನಂಗನೆಯಾ (ಚಾರ್ಕ್ರ. ೯-೩೮) : ಕಣಗಿಲೆಯ ಬಂದುಗೆಯ ಕಕ್ಕೆಯ ಸಣಬ ಸರಿಸದ ಕುಸುಮದಲಿ ರಿಪುಗಣಭಯಂಕರನರ್ಚಿಸಿದನಂಧಾಸುರಾಂತಕನ (ಉದ್ಭ. ೩-೯೬). [< ಸಂ. ಬಂಧೂಕ]

**ಬಂದೂಕ₂** 'ಬಂದೂಕು' ನೋ.

**ಬಂದೂಕು**, ಬಂದೂಕ₂, ಬಂದೂಖು (ನಾ). ಮದ್ದಿನ ಸಹಾಯದಿಂದ ಗುಂಡು ಹಾರಿಸುವ ಸಾಧನ ; ತುಪಾಕಿ ; ಕೋವಿ : ಬಂದೂಕಿನ ಮುಂದೆ ಯಾವ ಧೈರ್ಯ ನಿಂತೀತು! (ಹುಭಾ. ೧೮೨); ಬಂದೂಕಿನ ತೋಟವನ್ನು ಅವುಕುತ್ತಲೇ ಗುಂಡು ಹಾರುತ್ತದೆ (ಚಿಚಾಕ್ಕ. ೦೧೬). ಬಂದೂಕ₂ : ಕಲ್ಲಿನ ಏಟಿಗೆ ಸಿಕ್ಕದವರು ಮೇಲಿಂದ ಬಿದ್ದ ಬಂದೂಕದ ಏಟಿಗೆ ಸಿಕ್ಕಿ ಸತ್ತರು (ಕಂಠಿಸು. ೨೨೪); ಈ ಅಂಬಾರಿಗಳಲ್ಲಿ ನಾಲ್ಕು ಜನ ಉದ್ದನೆಯ ಬಂದೂಕಗಳನ್ನು ಹಿಡಿದು ಕುಳಿತಿದ್ದರು (ಕ್ರ.ಪಾ. II, ೧೬೧). ಬಂದೂಖು : ಅಂತಹ ಸಂದರ್ಭಗಳಲ್ಲಿ ಬಂದೂಖು ವಗೈರೆ ಆಯುಧಗಳನ್ನು ಉಪಯೋಗಿಸುವ ಸಂಭವ ಬಂದರೂ ಸಾಧ್ಯವಾದಷ್ಟು ಮಟ್ಟಿಗೂ ಉಪಯೋಗಿಸಿ (ಗ್ರಾಹುಕ. ೫೦).
[← ಅರ. ಪಾರ. ಹಿಂ. ಮರಾ. ಬಂದೂಕ್]

**ಬಂದೂಖು** 'ಬಂದೂಕು' ನೋ.

**ಬಂದೋಬಸ್ತ್** 'ಬಂದೋಬಸ್ತು' ನೋ.

**ಬಂದೋಬಸ್ತಿ** 'ಬಂದೋಬಸ್ತು' ನೋ.

**ಬಂದೋಬಸ್ತು**, ಬಂದೋಬಸ್ತ್, ಬಂದೋಬಸ್ತಿ (ನಾ). ೧. ಸರಿಯಾದ ವ್ಯವಸ್ಥೆ ; ಅಚ್ಚುಕಟ್ಟಾದ ಏರ್ಪಾಟು : ಬಂದೋಬಸ್ತುಗಳೆಲ್ಲವೂ ಲೀಲಾಜಾಲವಾಗಿ ನಡೆದುಕೊಂಡು ಹೋಗುವುವು (ಹುಭಾಚಿ. ೦೨೨). ೨. ರಕ್ಷಣೆ ; ಭದ್ರತೆ : ಕೆಲವರನ್ನು ಮಾತ್ರ ಒಳಗಡಿಯ ಬಂದೋಬಸ್ತಿಗೋಸ್ಕರ ಅವಶ್ಯಕವಾದ ಸ್ಥಳಗಳಲ್ಲಿ ಇರಿಸಿ (ಹುಚಾಶಂ. II, ೦೫): ಅಲ್ಲಲ್ಲಿ ಬೇಕಾದಷ್ಟು ಮಂದಿ ಇಟ್ಟು ಬಂದೋಬಸ್ತು ಮಾಡಿಸಿ (ರಾಕೇಂಕ್ರ. ೩): ಅವಳನ್ನು ನೀನು ಗಿಣಿಯಂತೆ ಮನೆಯೊಳಗೇ ಬಂದೋಬಸ್ತಿನಲ್ಲಿ ಇಟ್ಟಿರುವೆಯಾ ? (ಕಕ್ಕಕೂ. ೬೯). ಬಂದೋಬಸ್ತ್: ೧. 'ಬಂದೋಬಸ್ತ್' ಈ ಪದವು ನನಗೆ ಅತ್ಯಂತಪ್ರಿಯ (ಹುಭಾಚಿ. ೦೨೨). ಬಂದೋಬಸ್ತಿ : ೨. ಇದರ ಬಂದೋಬಸ್ತಿಯ ಬಗ್ಗೆ ತಮ್ಮ ಸನ್ನಿಧಿಗೆ ಬಂದಿರುವೆವು (ಕೈಪಿಕ್ರ. ೨೦).

ಬಂದೋಬಸ್ತು ಮಾಡು = ಭದ್ರಮಾಡು ; ಜೋಪಾನಗೊಳಿಸಂ : ಒಳಕ್ಕೆ ಬಾರದಂತೆ ಕೋಟೇ ಬಾಗಿಲಲ್ಲಿ ತನ್ನ ಕಡೇ ಜನಗಳನ್ನು ಇಟ್ಟು ಬಂದೋಬಸ್ತುಮಾಡಿ (ಚಾಕುಸಂ. ೦೬೦); ತಪ್ಪಿದ್ದವರನ್ನು ಶಿಕ್ಷಿಸಿ ಬಂದೋಬಸ್ತು ಮಾಡುವುದು (ಹುಂಶಾಚ. ೯೬). [←ಪಾರ. ಬಂದುಬಸ್ತ್, ಹಿಂ. ಬಂದೋಬಸ್ತ್ ; ಮರಾ. ಬಂದೋಬಸ್ತ, ಬಂದೋಬಸ್ತೀ]

**ಬಂದ್ರು** (ನಾ). ಒಂದು ಬಗೆಯ ಬಟ್ಟೆ (?) : ಜರತರದ ವಸ್ತ್ರವಾಗಂಗಿ ಕಿಂಖಾಪು ಮೇಲ್ ಥರಥರದ ವೈಚಣೆಯು ಚಾದ್ರ ಬೂರಾನ್ನುರಿಯ ಪರಿಪರಿಯ ಬಂದ್ರುಗಳ ವಸ್ತ್ರದ ಖಿಲತ್ತುಗಳು (ಕೃಕ್ವ.ಕಿ. ೩-೫೬). [?]

**ಬಂಧ** (ನಾ). ೧. ಕಟ್ಟು ; ಬಂಧನ. ೨. ಹಗ್ಗ ; ಪಾಶ : "ಹಗ್ಗವಾ ಬಂಧಂ" (ಹುಂಗಣ. ೦೦೯-೨). ೩. ಸಂಕೋಲೆ ; ಸರಪಣಿ. ೪. ಗಾಯದ ಪಟ್ಟಿ. ೫. ಅಡವು ; ಒತ್ತೆ. ೬. ಸೆರೆ ಹಿಡಿಯುವುದು ; ಬಂಧಿಸುವುದು. ೭. ಸೇರಿಸುವುದು; ಕೂಡಿಸುವುದು. ೮. ಕೂಡುವುದು ; ಸೇರುವಿಕೆ ; ಯೋಗ. ೯. ಕೂಡಿಸಿದುದು ; ಜೋಡಣೆ : ಅಂತು ಸಮುದ್ರಂ ಬಹಿತ್ರಂ ಬೆದಱುವಂದು ತಿಟ್ಟನೆ ತಿಱಿದು . . . ಕೂಪಕಂಭಂ ಮುಱಿಯೆ ಬಂಧಂ ಬಿರಿಯೆ . . . ನಾವಿಕಾಜನಮೆರ್ದೆಗೆಟ್ಟು (ಜಂಪುಚ. ೯-೦೯೪). ೧೦. ಅಳ್ಳಕವಲ್ಲದುದು ; ಗಟ್ಟಿ ; ಮಂದ : ತುಱುವೆಯು ಚೀರನಿಕ್ಕಿ ತಱುಪೆರ್ಮೆಯ ಪಾಲುಮಮರ್ಥಮಪ್ಪಿನಂ ಪಱುಗಿಸಿ ಬಂಧವಾಗೆ (ರೋಕೋಚ. ೯-೦೦). ೧೧. (ಕಾವ್ಯ ಮೊದಲಾದುವುಗಳ) ರಚನೆ : ಸಮಮೆಂಬುದು ಬಂಧದೊಳವಿಷಮಂ ಮೃದುಸ್ಫುಟವಿಮಿಶ್ರವಿನ್ಯಾಸಪದಕ್ರಮದಿಂ ಮಾಱು ತೆಱು ಬಂಧಮುಂ ಯಥಾರ್ಥಾನುವೃತ್ತಿಯುಂ ವರ್ತಿಸುಗುಂ (ಕಾವ್ಯಾವ. ೫೦೦); ಬಂಧದೊಳು ಲಕ್ಷಣದೊಳು ಪದವಿಸರದೊಳು . . . ತಿದ್ದುವುದು (ಕಕಕಾ. ೦-೨೦); ಗತಿಯು ತನ್ನ ಛಂದದಲ್ಲಿ ಭಾವ ತನ್ನ ಬಂಧದಲ್ಲಿ ಹಂವೆನಿಲ್ಲ ಹೊಂದದಲ್ಲಿ (ಅರಳು. ೦೬೪-೦೦). ೧೨. ಅಂಚು; ಗಡಿ. ೧೩. ದೇಹ; ಕಾಯ. ೧೪. ಒಂದು ಬಗೆಯ ಸಸ್ಯ : ಸಿಡಿಗುಲಿಗೆ, ಬಂಧ (ಶ್ರುಬಿಂ. ೦೯-೨೩೩). ೧೫. [ತತ್ತ್ವಶಾ] ಇಹಲೋಕದ ಬಾಂಧವ್ಯ; ಲೌಕಿಕವ್ಯಾಮೋಹ: ಬಂಧಂ ಬಂಧಕಾರಣಂ ಮೋಕ್ಷಂ ಮೋಕ್ಷಕಾರಣಂ (ಪದ್ಮಾ.ರಾ. ೬-೦೬); ದಯಿತಾಸಂಬಂಧ ಬಂಧಂ ಭವಪರಿಣತಿ ತನ್ಮೂಲಮಿಾ ಬೇವಸಂ ಬಿಸ್ಟಯ ಮಂದಾಶಂ ತೊಡರ್ವಂ ಬಿಡಿಸಿ (ಶಾಂತಿಪು. ೯-೦೯); ಧೀರ ಲಾಲಿಸು ಬಂಧ ಮೋಕ್ಷಕೆ ಕಾರಣವು ಮನವಹುದು (ಗಗಕಾ. ೦೬-೨೬). ೧೬. [ಕಾವ್ಯಮಿಾ] ಚಮತ್ಕಾರಪೂರ್ಣವಾದ ಶಬ್ದವೈಚಿತ್ರ್ಯದಿಂದ ಕೂಡಿದ ವಾಕ್ಯ ; ಚಿತ್ರಕವಿತ್ವ : ಅಕ್ಷರಗಳನ್ನೂ ಪದಗಳನ್ನೂ ಕುಶಲತೆಯಿಂದ ಆರಿಸಿ ಜೋಡಿಸಿ ಕವಿಗಳು ಉಂಟುಮಾಡುವ ಇತರ ಶಬ್ದವೈಚಿತ್ರ್ಯಕ್ಕೆ ಚಿತ್ರಕವಿತ್ವವೆಂದೂ 'ಬಂಧವೆಂದೂ' ಹೆಸರು (ಕೈಶಿಶಿ. ೨೩೯). ೧೭. [ಜೈನ] ನವಪದಾರ್ಥಗಳಲ್ಲಿ ಒಂದಂ : ಜೀವಮುಂ ಕರ್ಮಮುಂ ಎಂಬೆರಡಱ ಅನ್ಯೋನ್ಯಪ್ರದೇಶಾನುಪ್ರವೇಶಾತ್ಮಕಮಪ್ಪುದು ಬಂಧಂ (ಕಕ್ಕ್ರ. ೮): ಅಜೀವಕರ್ಮಪುದ್ಗಲಗಳೊಡನೆ ಜೀವನು ಏಕೀಭೂತನಾಗುವುದೆ ಬಂಧವು (ಕೈಶಶ. ೩). ೧೮. ಸಪ್ತತತ್ತ್ವಗಳಲ್ಲಿ ಒಂದು: ತತ್ತ್ವಗಳು ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರಾ ಮತ್ತು ಮೋಕ್ಷ ಎಂದು ಏಳುವಿಧಗಳನ್ನುಳ್ಳವೆಂದೂ ಹೇಳಬಹುದು (ಶಾಕಕ್ಕ. ೨೩೩).

ಬಂಧದ ಕಾಯಿ = (ಬಿಡಿಭಾಗಗಳನ್ನು ಜೋಡಿಸಲು ಉಪಯೋಗಿಸುವ) ಅಂಟುಳ್ಳ ಒಂದು ಬಗೆಯ ಕಾಯಿ : ಮುಸಿ ಮ್ಯಾಟಲ್ಸಗಳಿಗೆ ತಗುಲದಂತೆ ಹುಡುಗರಿಂದ ಬಂಧದ ಕಾಯಿ ತರಿಸಿ, ಅದರ ಅಂಟುನೀರು ಚಿಮುಕಿಸಿ ಅರೆಯಬೇಕು (ಶಾಳಿಗ. ೨೬). [ಸಂ.]

**ಬಂಧಕ** (ಗು). ೧. ಹಿಡಿಯುವ ; ಬಂಧಿಸುವ. ೨. ತಡೆಗಟ್ಟುವ ; ಪ್ರತಿಬಂಧಿಸುವ. (ನಾ). ೩. ಹಿಡಿಯುವುದು ; ಬಂಧಿಸುವುದು : ಉಳಿದ ಕರ್ಮವೆಲ್ಲವೂ ಅವನಿಗೆ ಬಂಧಕವೂ ಮಾರಕವೂ ಆದುದು (ಕಕ್ಕಿ. ೯೬). ೪. ಕಟ್ಟು ; ಬಂಧನ : ವಿಶ್ವದ ಎಲ್ಲ ಭಾಗಗಳನ್ನೂ ಒಟ್ಟಿಗೆ ಸೇರಿಸುವ ಬಂಧಕವು ಎಲ್ಲಿದೆ ? (ಹುನ್ಯಾಕ. ೨೬೬). ೫. ಸೆರೆಹಿಡಿಯುವವನು ; ಬಂಧಿಸುವವನಂ. ೬. ಏರಿ ; ಒಡ್ಡು ; ಅಡ್ಡಗಟ್ಟೆ. ೭. ಕೆರೆ ; ಕಟ್ಟೆ. ೮. ಒತ್ತೆ ; ಅಡವು. [ಸಂ.]

**ಬಂಧಕಿ** (ನಾ). ೧. ಹಾದರಗಿತ್ತಿ ; ಜಾರೆ : "ಪಾಂಸುಳಾ, ಬಂಧಕೀ . . . ಅಭಿಸಾರಿಕಾ—ಈ ೧೧ ಹಾದರಗಿತ್ತಿ" (ಶಠಾಭಿ. ೬೦-೩೪೨) ; ಸತ್ಕವಾದಿಯಂತೆ ಪೊಳೆಯದೆ ಬಂಧಕಿಯಂತೆ ಮಂದಿಗೇವ್ಯಸದೆ (ಶೃಜ್ಞಾಸ್ರ. ೬-೩೦ ಪ) ; ಈಕೆಗೆ ಅನೇಕ ಭರ್ತೃಗಳಿರುವುದರಿಂದ ಈಕೆ ಬಂಧಕಿ (ಹರಿ. ೦೮೩). ೨. ಬಂಜೆ. ೩. ಹೆಣ್ಣಾನೆ. [ಸಂ. ಬಂಧಕೀ]

**ಬಂಧಗೌರವ** (ನಾ). ಕಾವ್ಯರಚನೆಯ ಹಿರಿಮೆ,—ಪ್ರೌಢಿಮೆ : ಇನಿತು ವಿವರ್ಜಿಕೆ ವಾತ್ಕೃತಿಯೊಳ್ . . . ಶಾಂತಿವರ್ಮನ ನಯಂ ಗುಣವರ್ಮನ ಬಂಧಗೌರವಂ (ಆಗಂ. ೧-೦೦). [ಸಂ.]

**ಬಂಧತಂತ್ರ** (ನಾ). ರಥ, ಆನೆ, ಕುದುರೆ ಮತ್ತು ಪದಾತಿಗಳಿರುವ ಸೈನ್ಯಸಮೂಹ; ಸಂಪೂರ್ಣವಾದ ಸೈನ್ಯ. [ಸಂ.]

**ಬಂಧನ** (ಗು). ೧. ಕಟ್ಟುವ ; ಬಂಧಿಸುವ. ೨. ತಡೆಗಟ್ಟುವ ; ವಿರೋಧಿಸುವ. (ನಾ). ೩. ಕಟ್ಟುವಿಕೆ ; ಜೊತೆಗೂಡಿಸುವಿಕೆ. ೪. ಸೆರೆಮನೆ; ಕಾರಾಗೃಹ : "ಕಾರಂ ಬಂಧನಾಖ್ಯಂ" (ಹಂಗರಾ. ೦೦೩-೦); ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವ ನೆನೆವಂತೆ ನೆನೆವೆನಯ್ಯ (ಬಸವ. ೩. ೦೩೭-೪೦೩); ರಾಮಪ್ಪಗೌಡ ಮತ್ತು ತಿಮ್ಮಪ್ಪಗೌಡ ಇಬ್ಬರನ್ನು ಸೆರೆಹಿಡಿದು, ಬಂಧನದಲ್ಲಿರಿಸಿದನು (ಕೋಳಂ. ೬೪). ೫. ಕಟ್ಟು ; ಬಂಧ : ಬಂಧನಂ ಕಚದೊಳ್ ವಿರೋಧಂ ಪಂಜರದೊಳ್ . . . ಅಲ್ಲದಿಲ್ಲವಲ್ಲಿಯುಂ (ಚಂದ್ರ.ಕ. ೩-೪ ಪ). ೬. ಹಗ್ಗ ; ಪಾಶ. ೭. ಸರಪಳಿ ; ಸಂಕೋಲೆ : ಬಂಧನವಂ ಪರಿಯಿಯುತ್ತೆ . . . ಗಂಧಮಹಾಸಿಂಧುರಮಯಿತರ್ಪಂತಿರೆ ಸ್ಯಂದನವೆಟ್ಟಂದು ತಾಗಿದಂ ನರಸುತನೊಳ್ (ಜಾಹ. ೦೨-೨೨). ೮. ಸೆರೆ ಹಿಡಿಯುವುದು ; ಬಂಧಿಸುವುದು. ೯. ಪಟ್ಟಿ. ೧೦. ಸೆರೆ ; ವಶ ; ಅಧೀನ. ೧೧. ನಿಗ್ರಹ ; ಅಂಕೆ ; ಹಿಡಿತ. ೧೨. ರಚನೆ ; ನಿರ್ಮಾಣ. ೧೩. [ತತ್ತ್ವಶಾ] ಐಹಿಕಬಂಧ: 'ಭವಬಂಧನ' ಪರಾ.

**ಬಂಧನ ಹಾಕು** = ಮಂತ್ರಶಕ್ತಿಯಿಂದ ಕಟ್ಟುಹಾಕು, –ದಿಗ್ಬಂಧನ ಮಾಡು : ಪ್ರೇತವನ್ನು ಹಿಡಿದು ಮನೆಗೆ ಬಂಧನ ಹಾಕಿ ಬರಬಾರದೆ ? (ಕರ್ನಾಸ. ೨೩೪). [ಸಂ.]

**ಬಂಧನಕಾರಿ** (ನಾ). ಕಟ್ಟಿಗೆ ಒಳಪಡಿಸುವಂತಹುದು ; ಬಂಧಿಸುವುದು : ನಾನು ಮಾಡಿದ ಹದಿನೈದು ವರ್ಗಗಳು ಅಭ್ಯಾಸಕ್ಕೆ ಅನುಕೂಲವಾಗಿವೆ. ಆದರೆ ವಿಭಾಗಗಳು ನಿರ್ದಿಷ್ಟವಾಗಿ ಹೀಗೆಯೇ ಎಂದು ಬಂಧನಕಾರಿಯಾಗಲಾರವು (ಸಾಸಮೂ. ೩೦). [ಸಂ. ಬಂಧನಕಾರಿನ್]

**ಬಂಧನಗೊಳಿಸು** (ಕ್ರಿ). ಬಿಗಿಮಾಡು ; ಸೇರಿಸು : ಬಗೆವೆತ್ತ ಬಾಗಿಲ ಕದ ವಜ್ರ ಲಾಳವಿಂಡಿಗೆಗಳ ಬಂಧನಗೊಳಿಸಿ ವಿಗೆ ವಿಶ್ವಾಸಿ ಕಠೋರ ರಾಕ್ಷಸಿಯರ ತ್ರಿಗೆಯದೆ ಕಾವನಿಕ್ಕಿದಳು (ತೋಜಶ. ೩೩-೩೭).

[ಬಂಧನ + ಕೊಳ್$_1$ + —ಇಸು]

**ಬಂಧನಾಗಾರ** (ನಾ). ಸೆರೆಮನೆ ; ಕಾರಾಗೃಹ : ಭಿಕ್ಷುವು ತಾನು ಋಣ, ರೋಗ, ಬಂಧನಾಗಾರ, ದಾಸತ್ವ, ಕಾಂತಾರಗಳಲ್ಲಿ ಇದ್ದಂತೆ ತಿಳಿಯುವನು (ಬುದ್ಧಶ. ೦೭೩). [ಸಂ.]

**ಬಂಧನಿ** (ನಾ). ೧. ಕಟ್ಟು ; ಬಂಧನ. ೨. ಹಗ್ಗ ; ಮಿಣಿ. ೩. ಸರಪಳಿ ; ಸಂಕೋಲೆ : ಕಬ್ಬಿಣದ ಬಂಧನಿಗಳಿಂದ ಬಿಗಿದಿದ್ದ ತೇಗದ ತೊಲೆಗಳ ಬಲವಾದ ಸಾರುವೆ ಆ ಕಟ್ಟಡವನ್ನು ಸುತ್ತುವರಿದಿತ್ತು (ಕೃಷರು. ೩೦೬). [ಸಂ. ಬಂಧನೀ]

**ಬಂಧಮೋಚನ** (ನಾ). [ಜೈನ] ಬಂಧನದಿಂದ ಬಿಡುಗಡೆ ಹೊಂದುವ ಒಂದು ಬಗೆಯ ವಿದ್ಯೆ : ಅಮಿತತೇಜಂ ಶ್ರೀವಿಜಯಂಗೆ ಯುದ್ಧವೀರ್ಯಮುಂ ಪ್ರಹರಣಾವರಣಮುಂ ಬಂಧಮೋಚನಮುಮೆಂಬ ಮೂಱು ವಿದ್ಯೆಗಳಂ ಕೊಟ್ಟು (ಶಾಪುಂಕ. ೦೯೦). [ಸಂ.]

**ಬಂಧಮೋಚನಿ** (ನಾ). = ಬಂಧಮೋಚನ : ಮಹಾಜ್ವಾಳಿನಿ ಯುದ್ಧವೀರ್ಯ ಬಂಧಮೋಚನಿ ಪ್ರಹರಣಾವರಣ ಭ್ರಾಮಂ ಆಭೋಗಿನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಶಾಪುಂಕ. ೦೯೬). [ಸಂ. ಬಂಧಮೋಚನೀ]

**ಬಂಧವಿದ** (ನಾ). (ಆಭರಣಾದಿಗಳನ್ನು) ಮಾಡುವವನು ; ರಚಿಸುವವನು : ದಿಟ್ಟಗೆವರ ಬಂಧವಿದಂ ಕಟ್ಟಿದ ಪಲತೆಱದ ಮಣಿಯ ಸೂಸಕದ ಸೇಲ್ ಕುಟ್ಟಿಮತಲದೊಳ್ ಪೊಳೆದೆಡೆಗುಟ್ಟುತ್ತಲ್ಲಿ ಬಣ್ಣವುರವಂ ತೀವಲ್ (ಚಂದ್ರಪು. ೬-೪೬). [ಸಂ. ಬಂಧವಿದ್]

**ಬಂಧವಿಮೋಚನಿ** (ನಾ). = ಬಂಧಮೋಚನ : ಸೌಜನ್ಯಕಂದಾಂಕುರಂ ಶ್ರೀವಿಜಯಂಗೆ ಹೇತಿವಿದಾರಿಣಿಯುಂ ಬಂಧವಿಮೋಚನಿಯುಮೆಂಬ ವರದುಂ ವಿದ್ಯೆಗಳಂ ಕೊಟ್ಟು (ಶಾಂತಿಪು. ೬-೩೭ ಪ).

[ಸಂ. ಬಂಧವಿಮೋಚನೀ]

**ಬಂಧಸ್ತಂಭ** (ನಾ). ಆನೆಯನ್ನು ಕಟ್ಟುವ ಕಂಬ ; ಆಲಾನಸ್ತಂಭ : "ಆಲಾನಂ, ಬಂಧಸ್ತಂಭಃ—೨ ಆನೆಯನ್ನು ಕಟ್ಟಹಾಕುವ ಕಂಭದಂಥಾ ಗೂಟದ ಪೆಸರು" (ಸಿದ್ದಾಂತಿ. ೨೪೯). [ಸಂ.]

**ಬಂಧಾಬಂಧಿ** (ನಾ). ಮಲ್ಲಯುದ್ಧದ ಒಂದು ವರಸೆ ; ಕೈಕೈಗಳನ್ನು ಹಿಡಿದು ವರಸೆಗಳನ್ನು ಹೂಡಿ, ಕಾದುವ ಯುದ್ಧ : ಒಡನೆ ದಂಡಗಳನೊಡ್ಡುತ್ತಲ್ಲಿ ಕೈಗಳಂ ಪಿಡಿದು ಬಂಧಾಬಂಧಿಯರರ ಮುಷ್ಟಾಮುಷ್ಟಿ ಬೆಡಗಿನಿಂದೊದಗಿ . . . ತೊಡಕುಗಾಳಿಗವ ತೊಡಗಿದರು (ಶೀಕೃಪು. ೩-೬-೭೯). [ಸಂ.]

**ಬಂಧಿತ** (ಗು). ೧. ಕಟ್ಟಿಗೆ ಒಳಗಾದ ; ಬಂಧನಕ್ಕೊಳಗಾದ. (ನಾ). ೨. ಕಟ್ಟಿಗೆ ಒಳಗಾದುದು : ಭವ್ಯಪರಂಪರೆಯ ನಾಡು ಪರ ತಂತ್ರ್ಯದ ಸಂಕೋಲೆಯಿಂದ ಬಂಧಿತವಾಯಿತು (ಅಶ್ವಾರ್ಗ. ೨). ೩. ಕಟ್ಟಿಗೆ ಒಳಪಟ್ಟವನು ; ಬಂಧನಕ್ಕೆ ಒಳಗಾದವನು : ಅಜ್ಞಾನದಿಂದ ಆವರಿಸಲ್ಪಟ್ಟವನಾಗಿಯೂ ವಿಷಯಾದಿಗಳಿಂದ ಬಂಧಿತನಾಗಿಯೂ ಬಹಿರ್ಮುಖವಾದ ಮನಸ್ಸುಳ್ಳವನಾಗಿಯೂ ವ್ಯವಹಾರ ಮಾಡುತ್ತಿದ್ದೇನೆ (ಹುಕ್ಕಾರ. ೨೬೦). [ಸಂ.]

**ಬಂಧಿಸು** (ಕ್ರಿ). ೧. ಕಟ್ಟಿಹಾಕು; ಬಿಗಿ : ಪುಸಿ ಕೊಲೆ ಕಳವು ಪರಸ್ತ್ರೀವ್ಯಸನಂ ಬಹುವಿಧಪರಿಗ್ರಹಂ ನರರಂ ಬಂಧಿಸಲೀ ಭವಾಬ್ಧಿಯೊಳಗಿರ್ದಿಸಲಾರ್ಕುಂ ದ್ಯೂತಮದ್ಯಮಾಂಸವ್ಯಸನಂ (ಅಜಿಪು. ೨-೬೭); ನೊಸಲ ಸೀಸಕ ನುಗ್ಗುನುಸಿ ಬಂಧಿಸಿದ ಸರವಣಿ ಹಿಳಿದವರಿಬಲದೆಸಕ ನಿಂದುದು ಪಾರ್ಥನೆಚ್ಚನು ವೈರಿಮೋಹರವ (ಕುಮಾವ್ಯಾದ್ರೋ. ೦೪-೩) ; ನಳತೋಳ ಪಾಶದೊಳಗೆ ತನ್ನಿನಿಯನ ಬಿಗಿದು ಬಂಧಿಸುತ (ಕಂಹ. ೬-೦೭೦) . ೨. ಬೇಡಿ ಹಾಕು; ಕೋಳ ತೊಡಿಸು : ತಸ್ಕರರಂ ಬಾರಿಸಿ ಕಪ್ಪರಂ ಕೆಡಿಸಿ ದಂಡಂಗೊಂಡು ವಿಂಡರ್ಕಳಂ ಭರದಿಂ ಬಂಧಿಸಿ (ಧರ್ಮಾಮೃ. ೨-೯೪) ; ಹಾಸಿ ಹರಹಿದ ತೋಳನೊಬ್ಬುಳಿ ಮಾಡಿ ಬಂಧಿಸಿದ (ಕೌಶಿರಾ. ೨೨-೦೦) ; ಈತನ ಹಿಡಿದು ಬಂಧಿಸಲಾಗಿ ಯದುಕುಲನಾಥನಾರಾಯಣ ಬಹನು (ತೋಜಶ. ೩೩-೬೦). ೩. ಕೂಡಿಸು ; ಜೋಡಿಸು : ವಿಸುನಿಯಂತ್ರದ ಮಣಿಮಾಲೆಯ ತೋಳ್ಗೆ ಬಂಧಿಸಿದಳತ್ಯಂತಭಕ್ತಿಯಲಿ (ತೋಜಶ. ೪-೬೬). ೪. ನಿರ್ಮಿಸು; ರಚಿಸು : ಶಶಿಕಾಂತಶಿಲೆಯಿಂದೆ ಬಂಧಿಸಿದ ಸೋಪಾನದ ಸುಪಂತಿಯಿಂದ . . . ಶೋಭಿಸುತಿರೆ (ಜಸಮೋ. ೬-೨೪). ೫. ಮುಚ್ಚು : ಮುಂದಕೆ ಅಡಿಯನೊಂದನಿಡೆ ಕಕ್ಕಯ್ಯ ಬಂಧಿಸಲು ತನ್ನ ದ್ವಾರದ ಕವಾಟವನಾಗ (ಭ್ರೌಕಥಾ. ೦೯-೩). [ಬಂಧನ + —ಇಸು]

**ಬಂಧಿಸ್ತು** (ನಾ). ಬಂದೋಬಸ್ತು ; ಜೋಪಾನ : ಅಳಿಯನ ಆಳೀಸಿನಿಂದ ತರಿಸಿದ ಗಟ್ಟರಟ್ಟಿನ ಫಾಯಿಲ್‌ಬೋರ್ಡಿನಲ್ಲಿ ಬಂಧಿಸ್ತ ಮಾಡಿಸಿಕೊಂಡರು (ಜಿಕಜ. II. ೦೬). [ ← ಮರಾ. ಬಂದಿಷ್ಟ, ಬಂದಿಸ್ತೀ ಬಂದೀಸ್ತ ]

**ಬಂಧು** (ನಾ). ೧. ಸಂಬಂಧ; ನೆಂಟು. ೨. (ವಿಶೇಷವಾಗಿ ತಾಯಿಯ

ಕಡೆಯ) ಸಂಬಂಧಿಕ : ನೆಂಟ : "ಆತ್ಮೀಯಃ, ಸ್ವಜನಃ, ಬಂಧುಃ, ಆಪ್ತಃ, ಜ್ಞಾತಿಃ, ಬಾಂಧವಃ ಈ ೬ ನೆಂಟರ್" (ಹಲಾಯು. ೬೯-೩೫೫); ಉಂಬಾಗಳಿಲ್ಲೆನ್ನ ಉಡುವಾಗಳಿಲ್ಲೆನ್ನ ಬಂಧುಗಳು ಬಂದಾಗಳಿಲ್ಲೆನ್ನ ಲಿಂಗಕ್ಕೆ ಇಲ್ಲೆಂಬ ಜಂಗಮಕ್ಕೆ ಇಲ್ಲೆಂಬ . . . ಸಾವಾಗ ದೇಹವ ದೇಗುಲಕ್ಕೊಯ್ಯೆಂಬ ದೇವರಿಗೆ ಹೇಱಿ ಬಿಟ್ಟ ಹೇಳಿತ್ತೆ (ಬಸವ. ೨೨೨); ಕಂಸಂ . . . ಬಂಧುಗಳಬಂಧುರಮೆನೆ . . . ಕೈಕೊಳ್ಳದೆ . . . ಪಾಸಱಿಯೊಳ್ ಕೂಸಿನವೊಲಿಸಿ (ಜಗಂ. ೨-೫೩ ವ); ತಾಯಿಗಿಂತ ಬಂಧುವಿಲ್ಲ, ಉಪ್ಪಿಗಿಂತ ರುಚಿಯಿಲ್ಲ (ಗಾದೆ). ೩. ಗೆಳೆಯ ; ಸ್ನೇಹಿತ. ೪. ಒಂದು ಬಗೆಯ ಮರ : 'ಬಂಧುಜೀವ' ಪರ್ಯಾ. ೫. [ಜ್ಯೋತಿ] ಲಗ್ನದಿಂದ ನಾಲ್ಕನೆಯ ರಾಶಿ : ವ್ಯವಹರಿಪ ಸಂಜ್ಞೆ ಚತುರಸ್ರವದೆಂದಷ್ಟಮ ಚತುರ್ಥಗೃಹಕೆ ಚತುರ್ಥಕ್ಕೆ ವಲಂ ಮತ್ತಂ ಪಾತಾಳ ವೇಶ್ಮ ಸುಖ ಹಿಬುಕ ಬಂಧುವೆಂದೈದು ಪೆಸರ್ (ಜಾತಕ. ೦-೩೯).

ಬಂಧುಚಿಂತಾಮಣಿ = ಬಂಧುಗಳು ಕೇಳಿದುದನ್ನು ಚಿಂತಾಮಣಿಯಂತೆ ಕೊಡುವವನು ; ಒಂದು ಬಿರುದು : ಬಂಧುಚಿನ್ತಾಮಣಿ ಸಮಾಶ್ರಿತಜನಕಲ್ಪವೃಕ್ಷನ್ನಾಮಾದಿ ಸಮಸ್ತಪ್ರಶಸ್ತಿಸಹಿತಂ (ಕೌಶಿ. XX. ೯೬-೦೮; 1072). ಬಂಧುಬಳಗ = ನೆಂಟರು ಮತ್ತು ಪರಿಜನರು : ಅನಿಮಿತ್ತಬಂಧುವೆ ತಾಯ್ತಂದೆ ಬಂಧುಬಳಗವೆ . . . ಕಾವುದು (ಬಸವ. ೨-೩೯); ತಂದೆ ತಾಯಿಯು ನೀನೆ ಬಂಧು ಬಳಗವು ನೀನೆ (ಪುರಂದ. ೦-೯೩-೦). [ಸಂ.]

**ಬಂಧುಕೃತ್ಯ** (ನಾ). ಒಬ್ಬನು ತನ್ನ ಬಂಧುಗಳಿಗೆ ಮಾಡಬೇಕಾದ ಕಾರ್ಯ.— ಕರ್ತವ್ಯ : ಆಳುಗಲಸಕೆ ಕಲಬರರಸನ ಬೇಳಮೇಳಕೆ ಕಲರು ಕಲಬರು ಬಾಲೆಯರ ಕೊಳುಕೊಡೆಯ ಬಳಗದ ಬಂಧುಕೃತ್ಯದಲಿ (ಕುಮಾ.ಆ. ೩-೦೯). [ಸಂ.]

**ಬಂಧುಜನ** (ನಾ). ನೆಂಟರು ; ಬಳಗ : ಕಡಲ ತಡಿಯೆಯ್ದೆ ನೆಲನಂ ಪಡೆದರ್ ಭವದೀಯ ಪುತ್ರರುಳ್ಳಳವಿಗಳೊಳ್ ಪಡೆದುದು ಬಂಧುಜನಂ ನಿಮ್ಮಡಿಗಾವೇಂ ಪೋಷ್ಯವರ್ಗದಿಂದಂ ಪೊಱಗೇ (ಅಂತಿ. ೯-೯೬). [ಸಂ.]

**ಬಂಧುಜೀವ** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು : "ಬಂಧೂಕಂ, ಬಂಧುಜೀವಂ—ಈ ೨ ಬಂದುಗೆ" (ಹಲಾಯು. ೩೫-೫೫). [ಸಂ.]

**ಬಂಧುಜೀವಕ** (ನಾ). = ಬಂಧುಜೀವ. [ಸಂ.]

**ಬಂಧುತನ** (ನಾ). ನೆಂಟಸ್ತಿಕೆ ; ಬಾಂಧವ್ಯ : ಬಳ್ಳಿಳ ಬಳಿನ ಬಂಧುತನವಿನಿತಾಯ್ತೋ (ಸುಕುಮಾ. ೪-೨೮); ನೀವೇಳನೆಯ ಭವದಲಿ ಬಂಧುತನದಲಿ ನಮ್ಮನೈದುವುದು (ಕೊಕರ. ೦-೯-೨೦); ಉಳಿದು ಕೌರವ ಬಂಧುತ[ಪಾಠಾಂ. ಜ]ನವನು ತೀರ್ಥಯಾತ್ರೆಗೆ ವಿದುರ ಹೋದವಂಟ (ಕಿಗಾಗ. ೩-೦ ಸೂಚಕ). [ಬಂಧು + -ತನ]

**ಬಂಧುತೆ** (ನಾ). ೧. ಬಾಂಧವ್ಯ ; ನೆಂಟು. ೨. ನೆಂಟರ ಗುಂಪು ; ಬಳಗ "ಬಂಧುತಾ ಅಂದರೆ ನೆಂಟರ ಗುಂಪು, ನೆಂಟತನಕ್ಕೂ ಹೆಸರು" (ಸಿದ್ಧಾಂತಿ. ೦೬೬). [ಸಂ. ಬಂಧುತಾ]

**ಬಂಧುತ್ವ** (ನಾ). = ಬಂಧುತನ. [ಸಂ.]

**ಬಂಧುರ** (ಗು). ೧. ಸಮತಟ್ಟಿಲ್ಲದ; ಏರುಪೇರಾದ. ೨. ಕೊಂಕಿದ; ವಕ್ರವಾದ. ೩. ಚೆಲುವಾದ ; ಸುಂದರವಾದ. ೪. ನೋವುಂಟು ಮಾಡುವ ; ತೊಂದರೆಯನ್ನು ಕೊಡುವ. (ನಾ). ೫. ಬಾಗಿರುವುದು ; ಮಣಿದುದು : "ನತಂ, ನಮ್ರಂ, ಬಂಧುರಂ—ಈ ೩ ಎಱಗಿರ್ದುದು" (ಹಲಾಯು. ೦೨೫-೬೫). ೬. ಚೆಲುವಾದುದು : ಸಂದರವಾದಂದು: ಅನ್ಯಗುಣಂಗಳಸಹಾಯಂಗಳ್ ಬೆರಸಿರೆ ಕನ್ನಡದೊಳ್ ಬಂಧುರಮಾಗದು ಕಾವ್ಯರಚನೆ (ಶಬ್ದಾ. ೦-೫೩); ಆನಂದವರ್ಧನನ ಜೀವನ ಸರ್ವಾಂಗಸುಂದರವೂ ತತ್ತ್ವಾನುಭವಬಂಧುರವೂ ಭಕ್ತಿನಿರ್ಭರವೂ ಆಗಿತ್ತು (ಕೃತ್ಯಾಕೋ. XXVII. ೬೮೦೧). ೭. ಒಂದು ಬಗೆಯ ಪಕ್ಷಿ ; ಬಾತು. ೮. ಬಂಧುಜೀವ. ೯. ರಥದಲ್ಲಿ ಸಾರಥಿಯು ಕುಳಿತುಕೊಳ್ಳುವ ಸ್ಥಳ. [ಸಂ.]

**ಬಂಧುರತೆ** (ನಾ). ಚೆಲುವು ; ಸೌಂದರ್ಯ : ತಳೋದರಿಗೆ ವೃಕೋದರನಾಗಿಪಂ ಕಚಬಂಧಬಂಧುರತೆಯಂ (ಗದಾಯು. ೦-೬೦); ವಿಶ್ವಚೇತನದಾಸ್ಪಂದನವೇ ಸೌಂದರ್ಯವಾದುದುವೆ ಜೀವನ ಮೂಲಬಂಧುರತೆ ಬೊಮ್ಮನದು (ಮಂಗಳ. ೯೯೬). [ಸಂ.]

**ಬಂಧುರವಡೆ** (ಕ್ರಿ). ಚೆಲುವಾಗು ; ಸುಂದರವಾಗು : ಬಂಧುರಪಡೆದ ಮೋಹನಶಾಲೆಯುಂದದೆಯ್ದುಂದಿರಾಮಂದಿರವಿಹುದು (ಶಂಪ. ೬-೩೭). [ಬಂಧುರ + ಪಡೆ]

**ಬಂಧುರವಿಡಿ** (ಕ್ರಿ). = ಬಂಧುರವಡೆ : ಸ್ಮರಕರಿಕರದಂತೆ ರಂಜಿಸುತಿಹ ಬಂಧುರವಿಡಿದೂರುದ್ವಯದ ಗರುವನಾರಸಿಗ (ಶಂಪ. ೯-೧೦೬). [ಬಂಧುರ + ಪಿಡಿ]

**ಬಂಧುರಿತ** (ಗು). ೧. ಬಾಗಿದ ; ಬಗ್ಗಿದ. ೨. ಕೊಂಕಿದ ; ವಕ್ರವಾದ. (ನಾ). ೩. = ಬಂಧುರಿತಕರಣ : ವಲ್ಲನೆ ಮಲಗಿರ್ದವಳು ತನ್ನ ಎರಡು ಕೈಗಳಿಂ ಕೊರಳಂ ಪಿಡಿದು ರಮಿಸಲ್ಕೆ ಬಂಧುರಿತಮೆಂಬ ಕರಣಂ (ಕಾಮಶಾ. ೨೩೬). [ಸಂ.]

**ಬಂಧುರಿತಕರಣ** (ನಾ). [ಕಾಮಶಾ] ರತಿಕೇಳಿಯ ಒಂದು ಭಂಗಿ : ಮಗುಳ್ದೊಱಗಿ ಮೊಳಕಾಲೊಳಗೆ ಕಯ್ಯನೊಯ್ದು ಬಲೆ ಬಗೆಗೊಂಡವನ ಕೊರಳನಪ್ಪಲವನು ಸೊಗಸೊಗೆಯಲವಳೂರುಯುಗವಾನಮದಪ್ಪಿ ರತಿವೊಗೆಯಲದೆ ಬಂಧುರಿತಕರಣಂ (ಬಸವ. ೯-೩೩). [ಸಂ.]

**ಬಂಧುರೆ** (ನಾ). ಚೆಲುವೆ ; ಸುಂದರಿ : ಲಾವಣ್ಯಸಿಂಧುವೇಳಾಲೀಲಾಯಮಾನಕೇಶಕಾಂತಿಬಂಧುರೆಯುಂ ಭರತಾಗಮಭವನವಿಹಿತಮಹನೀಯಮಾತಿಪ್ರದೀಪೆಯುಂ (ಎಕ. V. ಶೇಂಗಾನು. ೫೬-೩೩; 1117). [ಬಂಧುರ + -ಎ]

**ಬಂಧುಲ, ಬಂಧುಳ** (ಗು). ೧. ಬಾಗಿದ ; ಬಗ್ಗಿದ. ೨. ಸುಂದರವಾದ ; ಚೆಲುವಾದ. (ನಾ). ೩. ಗಂಡನಲ್ಲದವನಿಂದ ಹುಟ್ಟಿದವನು : "ಕಟ್ಟವಳತನುಜಂ ಬಂಧುಲ[ಪಾಠಾಂ. ಳ]ನೆನಿಕ್ಕುಂ" (ಮಂಗರಾ. ೯೨-೦೦). ೪. ವೇಶ್ಯಾಮಂದಿರದ ಸೇವಕ. ೫. = ಬಂಧೂಕ : (ಮೃತಿಗಿ. ೩೦-೦೦೨೧). ಬಂಧುಳ : ೨. ಬಂಧುಳಃ, ಬಂಧಕೀಪುತ್ರಃ—ಈ ೨ ಕಿಡಿಕೆಯ ಮಗಂ" (ಹಲಾಯು. ೮೨-೩೪೬). [ಸಂ.]

**ಬಂಧುವರ್ಗ** (ನಾ). ನೆಂಟರ ಗುಂಪು ; ಆಪ್ತರ ಸಮೂಹ : ತೀಹಿದನು ಧೃತರಾಷ್ಟ್ರ ಭೀಷ್ಮರ ಲಲಿತಮತವನು ಬಂಧುವರ್ಗಸ್ಖಲಿತವನು ಸ್ವೈರಿಸುವುದೆಂದನು ವಿನಯದಲಿ ವಿದುರ (ಕುಮಾ.ಆ. ೧೬-೨೬); ಉರಿಯಲಳಿವುದು ಕಾಯ ಮೋಹದ ತರುಣಿಪುಳಿವಳು ಬಂಧುವರ್ಗವು ಸರಿಗು ಹಿಂದಕೆ (ಕೌಶಿಕ. ೨೩-೦೬). [ಸಂ.]

**ಬಂಧುವಿಯೋಗ** (ನಾ). ನೆಂಟರ ಅಗಲಿಕೆ : ಬಂಧುವಿಯೋಗದಿನೆನಗನು ಬಂಧಿಸಿದ ಮಹೋಪತಾಪಮದು ನೀಂ ಬರೆ ನಿರ್ಬಂಧದಿನಳಚುತ್ತದಜುಂ ಬಂಧುಗಳಿಂ ನೀನೆ ಬಂಧು ಜಗತಿ:ಬಂಧು (ಶಂಕ್ರತ. ೩-೨೮). [ಸಂ.]

**ಬಂಧುಸ್ಥಾನ** (ನಾ). [ಜ್ಯೋತಿ] "ಲಗ್ನದಿಂದ ನಾಲ್ಕನೆಯ ಸ್ಥಾನ" (ಜಾತಕ. ೯೦೬೬). [ಸಂ.]

**ಬಂಧುಹನನ** (ನಾ). ನೆಂಟರನ್ನು ಕೊಲ್ಲುವುದು ; ಆಪ್ತರ ಸಂಹಾರ : ಬಂಧುಹನನಕೆ ಮನದರಲು ಭವವಿಂಧ್ಯದಲಿ ಬೆಳ್ಳಾಗಿ ರೌರವಸಿಂಧುವಿನೊಳೋಲಾಡದಿಹನೇ ಪರಮಪಾತಕನು (ಕುಮಾ.ಆ. ೩-೩೬). [ಸಂ.]

**ಬಂಧುಳ** 'ಬಂಧುಲ' ನೋ.

**ಬಂಧೂಕ** (ನಾ). ಕೆಂಪುಹೂವುಗಳನ್ನು ಬಿಡುವ ಒಂದು ಬಗೆಯ ಗಿಡ;

ಬಂದುಗೆ : "ಬಂಧೂಕಂ, ಬಂಧುಜೀವಂ—ಈ ಎರಡು ಬಂದುಗೆ" (ಶಬ್ದಮ. ೩೩-೩೩); ಮುದವಂ ಜಪಾಪ್ರಸವರಕ್ತಾಶೋಕಬಂಧೂಕಶೋಣ ವರ್ಣಜ್ಯೋತಿಗಳೆಕ್ಕಯಿಂ ಕುಡೆ ಜಯಂ ಭದ್ರಂ ಶುಭಂ ಮಂಗಳಂ (ಅರಿಪು. ೦೬-೩): ಬಂದನು ಸೂರ್ಯನು . . . ಬಂದನು ಉದಯಾದ್ರಿ ಶಿಖರದ ರತ್ನನು ಬಂಧೂಕಸುಮದ ಸನ್ನಿಭನು (ಶಂಕಾಶ. ೦೩-೩೦) [ಸಂ.]

**ಬಂಪು₁**, ಬೊಂಪು (ನಾ). ೧. ಸಾಬೂನಿನಂತೆ ಉಪಯೋಗಿಸುವ, ಅಂಟುಅಂಟಾಗಿರುವ ಒಂದು ಬಗೆಯ ವನಸ್ಪತಿ : (?). **ಬೊಂಪು₁** : ೨. ಅಂಟು : ಜಿಗಿ : ಕಣ್ಣುಗಳಲ್ಲಿ ಶ್ಲೇಷ್ಮವೆರಸಿ ನೀರು ಬೊಂಪುಬೋಪಾಗಿ ಸುರಿಯಲು ಮೇವು ಬಟ್ಟು ಜಡನಾಗಿ ನಿಂತಿರಲು (ಅಶ್ವಶಾ. ೬೨-೯); ಬಿಳಿದಾಗಿ ನೀಟಾಗಿ ಕೂಂಚ ಬೊಂಪಾಗಿ ಪಿರಿದು ಬಲ್ಪಿತಾಗಿ ಇದ್ದೊಡೆ ಮದನಜಲಮೆಂಬುದು (ಕಾಮಶಾ. ೩೩೩).

[ದೇ.] ತಮಿ. ವಟುವುಪ್ಪು; ಮಲ. ವಟುಪ್ಪು; ತೆಲು. ಬಂಪು= ಹಲ್ಲಿನ ಮೇಲಿನ ಕೊಳೆ]

**ಬಂಪು₂**, ಬೊಂಪು₂ (ನಾ). ಒಂದು ಬಗೆಯ ಮೀನು : ಸೀಗಡಿ ಕೊರವಂ ಬಂಪು . . . ಹಂದಿಗನಾನೆಪುಗಪುದಲೆಂಬಗಣಿತಶಫರಾಳಿ ಗಳನೆ ತೆಗೆದರ್ ಬೇಡರ್ (ಕೃಷ್ಣಚ. ೨೭-೯೦). **ಬೊಂಪು₂** : ಸಿಸಿಲು ಬೋಪು ಸವಿವಾಯು ಗೊದಳೆ ಗಜು ಮೆಚಿವ ಕಾಗೆಂಡೆ . . . ಅನೆವೊಗನೆಂಬ ಮಾನ್ಗಳಂ ಗುದಿಗೆಯ್ದರು (ಶಶಾಶ. ೩-೯೩). [?]

ಬಂಬಣ (ಅ). ಹೆಚ್ಚಾಗಿ, ಅಧಿಕವಾಗಿ ಎಂಬ ಅರ್ಥವನ್ನು ಕೊಡುವ ಒಂದು ಅನುಕರಣಾವ್ಯಯ. 'ಬಂಬಲ', 'ಬಂಬಳ' ಪರಾ.

**ಬಂಬಣ ಬಾಡಿಸು**=ಅಧಿಕವಾಗಿ ಸೊರಗಿಸು,—ಒಣಗಿಸು : ಪಗಲೊ ಳೊರ್ಮೆಯುಂ ತಮ್ಮನಂಡಲೆದು ಬಂಬಣ ಬಾಡಿಸಿ ಬಿಡದೆ ಕಡುಗಾಯ್ದು ಕಣ್ಣೊಳುಳ್ಳುಷ್ಣಕರನ ಬಿಸುಗದಿರ್ಗಳೆಯ್ದೆ ಮಯ್ದಗಿದುವೊ (ವರ್ಧಪು. ೬-೨೩ ವ). **ಬಂಬಣಂ ಬಾಡು**=ಅಧಿಕವಾಗಿ ಒಣಗು,—ಸೊರಗು : ವಿರಹಾಕುಳೆಯಲರ್ದ ಲತೆಗಳಂ ಪೊರ್ದಲೊಲ್ಲದೆ ತನ್ನಂತೆ ಬಂಬಣಂ ಬಾಡಿದರ್ ಜಾದಿಯಂ ನೋಡಿ (ಪಾರ್ಶ್ವಪು. ೯-೬೯ ವ).

**ಬಂಬಲ್₁**, ಬಂಬಲು₁, ಬೊಂಬಲ್ (ನಾ). ೧. ಗುಂಪು ; ಸಮೂಹ : "ಬಂಬಲ್, ತುಱುಗಲ್ . . . ಗುಪ್ಪಿ, ಗೊಂದಣ (ಉಂದಲ್)—ಈ ೪೦ ಸಮೂಹಂ" (ಕಕಶಾ. ೦೦-೩೩೩); ಮದಗಜಗಂಡಸ್ಥಳಂಗಳೊಳೆಱಗಿ ಮೊರೆವ ತುಂಬಿಯ ಬಂಬಲ್ಗಳೆ ವಿಮುಖೀಭೂತಂಗಳಾದುವು (ಪಂಪಭಾ. ೯-೯೯ ವ); ಮೀಳಿರ್ದಾಡುವ ತುಂಬಿಯ ಬಂಬಲಂತೆ . . . ಸೋಲಿಸದೆ ಕಾವನ ಬಿಬ್ಬಂ (ಜನ್ನಾಶ. ೦೯). **ಬಂಬಲು₁** : ೧. "ಬಂಬಲೆನಲು ಬಳಗಮೆನಲ್ ಶ್ರೇಣಿ" (ಕಕಶ. ೬೯); ಬಂಬಲು ತುಱುಗಲಾಗಿರೆಪೊಳಿಸಿ ಪೊಱಮಡುವ ಕಾಲನವಣೆಗಳೊಳಮೇಂ ನವವಿಧದ ಬಿನ್ನಣಮಂ ನಿನ್ನಾಳ್ದಂಗೆ ಬಿನ್ನವಿಸು (ಅಹಂಪು. ೨-೩೦ ವ). ೨. ಒಟ್ಟಿಲು; ರಾಶಿ : ಬಸಿವ ಬಲುಜಿಗಿಯ ಕರುಳ ಬಂಬಲು (ಕುಮಾರವ್ಯಾಸ. ೨-೩೩). ೩. ಜೊಂಪೆ; ಗೊಂಚಲು : ತಾರಗೆಗಳ ಬಂಬಲಂತೆ ತೋರವುಡಿಯೊಳೆಳಿಮುತ್ತಿನ ಬಲೆಯ ಶೃಂಗಾರವೊಪ್ಪಿರೆ (ಶಶಿ. ೯೦-೩೦). ೪. ರಭಸ; ವೇಗ: 'ಬಂಬಲ್ವರಿ' ಪರಾ. **ಬೊಂಬಲ್**: ೨. ಮಲ್ಲಿಗೆದಲ ತೆರೆಯ ಬೊಂಬಲ್ಗಳಂ ಜೇಂಗೊಡನ ಸಾಲ್ಗಳಂ (ಶೀಶೃ. ೩-೦-೦). [ದೇ.] ತುಳು. ಬೊಂಬುಳಿ]

**ಬಂಬಲ್₂** (ಅ). ಹೆಚ್ಚಾಗಿ, ಬಹುವಾಗಿ ಎಂಬ ಅರ್ಥವನ್ನು ಕೊಡುವ ಒಂದು ಅನುಕರಣಾವ್ಯಯ . 'ಬಂಬಲ', 'ಬಂಬಳ' ಪರಾ.

**ಬಂಬಲ್ವಾಡು**=ಅಧಿಕವಾಗಿ ಸೊರಗು,—ಬಾಡು : ಕೊಟ್ಟಡೆಯದ ನಂತೆ ಬಂಬಲ್ವಡುತ್ತುಂ (ಧರ್ಮಾಮೃ. ೦-೦೯೯).

**ಬಂಬಲ** (ಅ). ಅಧಿಕವಾಗಿ, ಹೆಚ್ಚಾಗಿ ಎಂಬ ಅರ್ಥವನ್ನು ಕೊಡುವ ಒಂದು ಅನುಕರಣಾವ್ಯಯ . 'ಬಂಬಳ' ಪರಾ.

**ಬಂಬಲಂ ಬಾಡು**, ಬಂಬಲ ಬಾಡು=ಅಧಿಕವಾಗಿ ಸೊರಗು,— ಬಾಡು : ಪದ್ಮೋದರಂ ಪಥಶ್ರಮದಿಂ ಪರಿಶ್ರಾಂತನಾಗಿ ಪಸಿವಳುರೆ ಬಂಬಲಂ ಬಾಡಿ ಬಟಲ್ವುದುಂ (ವಾಮನಸ. ೦೬-೯೩); ಪೆಂಡಿರುಂ . . . ಆದರ್ಪಿಲ್ಲದೆ ಕಲ್ಪವೃಕ್ಷಮುಡಿದು ಕಿಡೆಯೆ ಬಂಬಲ ಬಾಡಿದ ವಸಲತೆ ಗಳುಮಂ ಪೋಲ್ತು (ಶಂಕರಾ. ೦೯-೯ ವ): ಊಣಲಿಲ್ಲದೆ ಪಸಿವಿಂ ಬಂಬಲ ಬಾಡಿ (ಧರ್ಮಾಮೃ. ೬-೦೬೮).

**ಬಂಬಲಿಸು**, ಬಂಬಳಿಸು, ಬೊಂಬಾಳಿಸು (ಕ್ರಿ). ೧. ಗುಂಪಾಗು ; ಸಂದಣಿಸು : ತುಱುಗೆಮಯ ತೆರ್ಕೆಯೊಳ್ ಬಂಬಲಿ [ಶಾಶಾ. ೯]ವ ಕಣ್ಣನಿ ಗಳೊಸರೆ (ವರ್ಧಪು. ೪-೬೨ ವ): ಹೂಗಿಡಮುಲರಿಹುದೇತಕ್ಕೆ ? ತುಂಬಿಯು ಬಂಬಲಿಸಲಿ ಎಂದು (ಗಜೇಶ. ೬೩-೯). **ಬಂಬಳಿಸು** : ೧. ಮೇಲಿನ 'ವರ್ಧಪು' ಪ್ರಯೋಗದ ಪಾಠಾಂತರವನ್ನು ನೋಡಿ. **ಬೊಂಬಾಳಿಸು**: ೨. ಹರಡು ; ವ್ಯಾಪಿಸು : ಜಳಲಿನನು ಬೊಂಬಾಳಿಸಿದ ಭಾಸುರದ ರಕ್ತದಲಿ (ಕೊರಶಾ. ೩-೦೦-೨೮). [ಬಂಬಲ್₁ + —ಇಸು]

ಬಂಬಲು₁ 'ಬಂಬಲ್₁' ನೋ.

**ಬಂಬಲು₂** (ನಾ). ಎಳನೀರಿನ ತೆಂಗಿನ ಕಾಯಿಯಲ್ಲಿರುವ ತೆಳುವಾದ ತಿರುಳು; ಗಂಜಿ: ಬಂಬಲು ಗೋರಿಕೊಡ್ಲ ಬುದ್ಧಿ! (ಪಮ್ಮಕು. ೦೬೦). [?]

ಬಂಬಲುಗರುಳು 'ಬಂಬಲ್ಗರುಳ್' ನೋ.

**ಬಂಬಲುಗಿಡಿ** (ನಾ). ಕಿಡಿಗಳ ಗುಂಪು,—ರಾಶಿ : ಹೊಸಮಸೆಯ ಬಾಯ್ದಾರೆಗಳ ಬಂಬಲುಗಿಡಿಯು ಬಾಣಾಳಿಗಳಲೀತನ ಹೂಳಿದನು (ಕುಮಾರವ್ಯಾ. ಶ. ೨೦-೨೩) ; ಕಡಲೊಡಲೊಡನೆ ಬಂಬಲುಗಿಡಿಯು ಗಡಣದಿಂ ಬಡಬನೊಡ ಗೂಡಿ (ಅಶ್ವಶ. ೦-೯). [ಬಂಬಲು₁ (< ಬಂಬಲ್₁) + ಕಿಡಿ]

ಬಂಬಲುಗುರುಳ್ 'ಬಂಬಲ್ಗುರುಳ್' ನೋ.

**ಬಂಬಲ್ಗಡಿ** (?). (?) : ಬರಿಗುಂಡಂ ಪಿಣಿಲೇಱಿ ರೋಮಮುಡಿ ದಿರ್ಬಣ್ಣಾಗೆ ಮುಂಗಾಲಗಲ್ತಿರೆ ಬಿರ್ಕುರ್ವೆ ಮೊಗಂ ಕರಂ ಪೆಗಲ ಬಣ್ಣಂ ಜೋಲ್ವ ಬಾಲಂ ಮುಱುಂಕಿರೆ ಬಂಬಲ್ಗಡಿಮಂ ಪೊದೆಟ್ಟಗೆಪೊಗೊಂಬೊಪ್ಪೆ ಕೋಟ್ಕುಟ್ಟೆ ಪೆರ್ಸೊರೆ ಸೂಸುತ್ತಿರೆ ಭೀಕರಂ ಸೊಗಯಿಸಿತ್ತುತ್ಕಟಕರಂ ಸೂಕರಂ (ಶಂಭ್ರಪು. ೩-೬೦). [?]

**ಬಂಬಲ್ಗರುಳ್**, ಬಂಬಲುಗರುಳು, ಬಂಬಲ್ಗರುಳು (ನಾ). ಜೊಂಪೆ ಜೊಂಪೆಯಾಗಿ ಹೆಣೆದುಕೊಂಡಿರುವ ಕರುಳು ; ದೊಂಡೆಕರುಳು : ಖಳ ದುಶ್ಶಾಸನನಂ ಪೊರಳ್ಚಿ ಬಸಿಱಂ ಪೋಳ್ಚಿಕ್ಕಿ ಬಂಬಲ್ಗರುಳ್ಗಳನಾಸಲ್ಗೆ ವಿಳಾಸದಿಂ ಮುಡಿಯಿಪಂ ಪಂಕೇಜಪತ್ರೇಕ್ಷಣೇ (ಶಂಭಶಾ. ೩-೦೨). **ಬಂಬಲುಗರುಳು** : ಅಂದ ಕೊರಳಿನ ಬಸಿವ ಬಂಬಲುಗರುಳ ಜಱಿವ ಕಪಾಲದೊಗುನೆತ್ತರ ರಣಾವನಿ ಕಱಿಪುತಿರ್ದುದು ರೌದ್ರಮಯರಸವ (ಕುಮಾರವ್ಯಾ. ೦೩-೬೯). **ಬಂಬಲ್ಗರುಳು** : ಒಡಲನೊಜ್ಜತಗೊಂಡ ವಂಬಿನ ಕುಡಿಗೆ ನೆಱೆಯಿದು ರಕ್ತಜಲ ಬಳಿವಿಡಿದು ಕವಿಪಂಬುಗಳು ಬಂಬಲ್ಗರುಳ ಸೇದಿದವು (ಕುಮಾರವ್ಯಾ. ೦೦-೩). [ಬಂಬಲ್₁ + ಕರುಳ್]

ಬಂಬಲ್ಗರುಳು 'ಬಂಬಲ್ಗರುಳ್' ನೋ.

**ಬಂಬಲ್ಗುರುಳ್**, ಬಂಬಲುಗುರುಳ್ (ನಾ). ಒತ್ತಾದ ಕೂದಲು ; ದಟ್ಟವಾದ ಕೇಶರಾಶಿ : ಅಮರಾಂಗನೆಯರ ಬೀಸುವ ಚಾಮರದ ಗಾಳಿಯಲಂಪಿನೊಳಲ್ಲುಗುವ ಬಂಬಲ್ಗುರುಳ್ಗಳ ಬಂಬಲಿಂದಂ ತರ್ಕೆವ ಚಿನ್ನಪೂಗಳನವಯುವದೊಳ್ ಸಯ್ತು ಮಾಡುವ ಕೆಯ್ಪುಮುಮಂ (ಆದಿಪು. ೯-೯ ವ) ; ಮೀಳಿರ್ವ ಬಂಬಲ್ಗುರುಳ್ಗಳೆಂಬ ತೊಡಂಕುವಲೆ ಬಸಂತನ ಕೆಳೆಯನೇಂ ಬೆರಲೆಯುಂ ಸಿಲ್ಕಿಸೆಯುಂ (ಜನ್ನಾಶ. ೭೩). **ಬಂಬಲುಗುರುಳ್** : ದೀರ್ಘನಯನದ ಬಲುಮೊಲೆಯ ಬಾಸೆಗಳ ಬಂಬಲುಗುರುಳ . . . ಪುಳಿನಜಘನಸ್ಥಳದ ದಾನವಸತಿಯರಿರ್ದರ್ (ಕೂಡಶಾ. ೩-೨-೪೬). [ಬಂಬಲ್₁ + ಕುರುಳ್₁]

**ಬಂಬಲ್ಗೊಂಬು** (ನಾ). ಎಲೆಯ ಜೊಂಪೆಗಳಿಂದ ತುಂಬಿರುವ **ಕೊಂಬೆ** ; ಎಲೆಗಳಿಂದ ಕೂಡಿ ದಟ್ಟವಾದ ಶಾಖೆ : ನೆಗೆದು ಲಂಬಿಸಿದ ಬಂಬಲ್ಗೊಂಬುಗಳನಿಂಬಾದಶೋಕಾನೋಕಪದಿಂಬಿನೊಳೊಂದಿ ಮಂದ ಯಿಸಿ ನೀಳ್ಪು ವರ್ಪ ಪೆರ್ವರ್ಪೆತ್ತ ಕರ್ಪುರಗಿರಿಯೊಳಗೆ (ನೇಮಿ.ಪು. ೫-೪೨ ವ). [ಬಂಬಲ್$_1$ + ಕೊಂಬು$_1$]

**ಬಂಬಲ್ಗೊಳ್** (ಕ್ರಿ). ಗುಂಪಾಗು ; ಸಾಂದ್ರವಾಗು ; ಮಂದಯಿಸು : ಚೆಂಬಾಯ್ಪರಿಯಂ ಬಂದುಗೆಯೆಂಬಾಸಯಿನೊಸೆದು ಮುಸುಬಿ ಬಂಬ ಲ್ಗೊಂಬಾ ತುಂಬಿಗಳನೆಯಳಮಿಸೆಯುದೇಂ ಬಳಿಮುದೊ ಚುಂಬಿಪೊಗದ ಕಚಿಗೆಚಿದೊರೆವೋಲ್ (ಶಬರ. ೯-೦೩೬). [ಬಂಬಲ್$_1$ + ಕೊಳ್$_1$]

**ಬಂಬಲ್ಜಡೆ, ಬಂಬಲ್ಜೆಡೆ** (ನಾ). ಹೆಣೆದುಕೊಂಡಿರುವ ಕೂದಲು ; ಜಟೆ : ನೀಳ್ದ ಬಂಬಲ್ಜಡೆ ನೆರೆ ಮೆರೆಯಲ್ ಸ್ಥಾಣುವೋಲ್ ನಿಶ್ಚಲತ್ವಂ ಬೆರಸಾದಂ ಸೂರ್ಯಬಿಂಬಕ್ಕಭಿಮುಖನೆನಿಪೀ ಮೌನಿ (ಶಾಂತಿ. ೦೦೨-೧೬೯). **ಬಂಬಲ್ಜೆಡೆ** : ಎಳಮಿಂಚು ಪೋಲ್ವ ಬಂಬಲ್ಜಡ ಬಳಿವ ಘನಶ್ಮಶ್ರು . . . ಮಿಸುಗೆ ಚರಿಯಿಪರ್ ತಪ್ಪಲೊಳ್ ತಾಪಸೇಂದ್ರರ್ (ಶಾಂತೀ. ೦-೦೩೩). [ಬಂಬಲ್$_1$ + ಜಡೆ$_1$]

**ಬಂಬಲ್ಜೆಡೆ** 'ಬಂಬಲ್ಜಡೆ' ನೋ.

**ಬಂಬಲ್ದಂಬುಲ** (ನಾ). ಕಟ್ಟುವೀಳೆಯ : ಕರಂ ಮೆಯ್ವೆತ್ತು ಮುಯ್ಯಾಗವಮಾಗದುಮಾರ್ಗಂ ಕುಡುಕಿರ್ಪ ಕಪ್ಪುರದ ಬಂಬಲ್ದಂಬುಲಂ (ಶಂಕರಾ. ೯-೦೦೪). [ಬಂಬಲ್$_1$ + ತಂಬುಲ]

**ಬಂಬಲ್ದಗುಳ್** (ಕ್ರಿ). ದಟ್ಟಯಿಸು ; ಸಾಂದ್ರವಾಗು ; ಅಧಿಕವಾಗು : ಹೇಮಂತದೊಳ್ ಮದಮಂ ತಗು[ಳ್ದು] ಶಿಶಿರದೊಳಬ್ಬಿದು ಮತ್ತಂ ಬಸಂತದೊಳ್ ಬಂಬಲ್ದಗುಳ್ದ ಮದನಮದಾನೇಕಪಕ್ಕೆ ಪಕ್ಕಾದಳೀಕ (ಶಾಂತಿ. ೬-೯೯ ವ). [ಬಂಬಲ್$_1$ + ತಗುಳ್$_1$]

**ಬಂಬಲ್ದೆರೆ** (ನಾ). ಒಂದಾದ ಮೇಲೊಂದರಂತೆ ಬರುವ ಅಲೆ ; ತರಂಗಮಾಲೆ : ಎಡೆಗುಡದೆ ನೂಂಕಿ ಮೆಲ್ಲನೆ ತಡಿಯಂ ಸಾರ್ಚಿದ ವುದಿದಱ ಬಂಬಲ್ದೆರೆಗಳ್ (ಕುಶಾಸಾ. ೫-೩೩) ; ಪಾಲ್ದಂಬಿದ ಸಾಲ್ದೆನೆಗಳ ನೆಲ್ದಲಬುಗಲನೊಲ್ದು ಸೀಳಿ ಗಿಳಿ ಭಯಭರದಿಂ ಜೋಲ್ದಿಳಿಗೆಲ್ಲಂತಿರೆ ಬಂಬಲ್ದೆರೆಯೊಳೊಳ್ಪಿರದು ಮಡಿಯ ನೀರೊಳ್ವೋರ್ಚುಂ (ಶಾಂತೀ. ೨-೦೩). [ಬಂಬಲ್$_1$ + ತೆರೆ$_2$]

**ಬಂಬಲ್ದೊಱೆ** (ನಾ). ತೊರೆಗಳ ಸಮೂಹ : ಅಲರ್ವಂಡಿಂದಾದ ಬಂಬಲ್ದೊಱೆಗಳ ನಲವಿಂ ದಾಂಟಿ ಪೋಪನ್ನೆಗಂ (ಕಾವ್ಯಸಾ. ೦೦೩). [ಬಂಬಲ್$_1$ + ತೊಱೆ$_1$]

**ಬಂಬಲ್ನಿಱಿ** (ನಾ). ಒತ್ತಾದ ನೆರಿಗೆ ; ದಟ್ಟವಾಗಿರುವ ನಿರಿಗೆ : ಬಂಬಲ್ನಿಱಿ ಮದನನ ನನೆಯಂಬಿನ ಪೊದೆಯೆನಿಸೆ ಕಣೆಯಮಾಳಪಟ್ಟಿರೆ ಮುಯ್ಯಂ ಬಳಸಿದ ಮೇಲುದು ಕುಚಮಂ ಬಿಗಿದಿರೆ ಗುರುನಿತಂಬೆ ದುಗುಲಮಮುಟ್ಟಳ್ (ಜಗ. ೦೦-೦೦೬). [ಬಂಬಲ್$_1$ + ನಿಱಿ$_1$]

**ಬಂಬಲ್ಮಿದುಳ್** (ನಾ). ಒಂದರೊಡನೊಂದು ತೊಡರಿಕೊಂಡಿರುವ ಮಿದುಳಂಗಳ ರಾಶಿ : ಬಂಬಲ್ಮಿದುಳ್ ಪಾಯ್ಪುರೆ . . . ಕಾದಿತ್ತು ಪಿಡ್ಡಿಪ್ರತಾನಂ (ಜಗ. ೬-೫೩). [ಬಂಬಲ್$_1$ + ಮಿದುಳ್]

**ಬಂಬಲ್ಮುಡಿ** (ನಾ). = ಬಂಬಲ್ಗುರುಳ್ : ಜೋಲ್ದಿರ್ದ ಬಂಬಲ್ಮುಡಿ ಶಿಥಿಲಕವರಿರ್ದ ನೀವೀಭರಂ ಕಣ್ಗೊಳಿಪನ್ನಂ ಲೀಲೆಯಿಂದುಪ್ಪವಡಿಸಿದಳೆ ಹೃದ್ಯಾಂಗಿ ಶಯ್ಯಾಗ್ರದಿಂದಂ (ಜಗ. ೨-೬೮). [ಬಂಬಲ್$_1$ + ಮುಡಿ]

**ಬಂಬಲ್ವನಿ** (ನಾ). ಎಡೆಬಿಡದೆ ಸುರಿಯುವ ಹನಿ : ವನಿತ ಮೊಲೆವಾಲ ಬಂಬಲ್ವನಿಗಳೊ ನಸುನಗೆಯೊ ಮೊಳೆಗಳೋ ಪೊಳೆದಪುವೆಂಬನಮೊಗದ ಪಲ್ಲಿಮೊಪ್ಪುವ ತನಯನ ನಗೆಮೊಗಮನೆಂದು ಮೇಬು ಕಂಡಪೆನೋ (ಅಗ್ರೀಕೆ. ೦-೯೯) [ಬಂಬಲ್$_1$ + ಪನಿ$_2$]

**ಬಂಬಲ್ವರಿ** (ಕ್ರಿ.) ರಭಸವಾಗಿ ಓಡು : ಧಾವಿಸಂ : ನೇಲ್ಪ ವೇಣಿಕ್ಕೆ ಪರ್ದೆಱಗೆ ವೈರಿಯ ನಾಲ್ಕುಬಲಕ್ಕಮೊಂದೆ ಬಂಬಲ್ವರಿಯುತ್ತುಮಿರ್ದುದು ಜಯದ್ವಿರದಂ (ಕಾವ್ಯಾ.ಕ. ೬೮) ; ಬಂಬಲ್ವರಿಯುತ್ತುಂ ನೆಗೆವಂಬುದಮಂ ತೇಜವಿಮುಱಿಯುತಂ . . . ಅದೇಂ ಬಿನದಮುನಮರಪತಿಗೆ ತೋಱಿದುದೊ ಗಜಂ (ಚಂದ್ರಪ್ರ. ೦೨-೮೧) ; ಮುಸಗಿದ ಮಿಟ್ಟುವೆ ಮದಗಜದೆಸಕಮನೊಳ ಕೊಂಡುದೆನಿಸಿ ಭೀಮನ ಬಲಮಂ ದೆಸೆಗೆಡಲಱಿಯುಟ್ಟುತ್ತುರ್ವಿಸಿ ಬಂಬಲ್ವರಿದು ತೊತ್ತಳದುಬಿಳುತ್ತುಂ ಬಂದು (ಮುಹಾಕೀ. ೦೨-೦೩೮). [ಬಂಬಲ್$_1$ + ಪರಿ$_2$]

**ಬಂಬಲ್ವರಿಗೊಳ್** (ಕ್ರಿ). ದಟ್ಟವಾಗಿ ವ್ಯಾಪಿಸು ; ಸಾಂದ್ರವಾಗು : ಕಾಲ್ಕಿಡಿದಿರ್ದೊಡಾ ಚರಣಪಲ್ಲವದಿಂದೊದೆದೆತ್ತಿ ಸುತ್ತಿ ಬಂಬಲ್ವರಿ ಗೊಂಡು ನೀಳ್ದ ಕಿಸುವೇಱದ ಕೇಕರಕಾಮಪಾಶದಿಂ ಕೊಲ್ವವೋಲ್ (ಲೀಲಾವ. ೦೯-೬೬). [ಬಂಬಲ್$_1$ + ಪರಿಗೊಳ್]

**ಬಂಬಲ್ವರಿಯಿಸು** (ಕ್ರಿ). ರಭಸವಾಗಿ ಓಡಿಸು ; ವೇಗವಾಗಿ ಧಾವಿಸು ವಂತೆ ಮಾಡು : ಎರಡುಂ ಭಾಗಂಗಳೊಳ್ ತನ್ನಣುಗಿನ ಸುತರುನ್ನತ ನಾಗಂಗಳಂ ಜೇಂಕರಿಸುತ್ತಿಂಬಾಗಿ ಬಂಬಲ್ವರಿಯಿಸೆ (ಶಾಂತಿಪು. ೫-೩೯) ; ಕರಿಯಂ ಪಾಯ್ದೇಱಿ ಬಂಬಲ್ವರಿಯಿಸಿ ಗಿರಿಯೊಳ್ ಪೋರಿಸುತ್ತುಂ ಸರತ್ಕೇ ಸರಿ ಕಾಸಾರಕ್ಕೆ ಕೊಂಡುಯ್ಯುವುದಿದು (ಲೀಲಾವ. ೯-೨೪) ; ರಾಕ್ಷಸಧ್ವಜ ಬಲಕ್ಕೆ ತಾರ್ಕ್ಷ್ಯಧ್ವಜರ ಬಲಮುಗಿದು ಸುಗಿವುದುಂ ಬಲದೇವಂ ಕಂಡು ತನ್ನ ಗಂಧಗಜಮಂ ಬಂಬಲ್ವರಿಯಿಸಿ ಪಿದ್ದಿಡ್ಡಲದ ವೀರರಂ ವಿನಾಶಕ್ಕೆ ತಪ್ಪದುಂ (ಮುಹಾಕೀ. ೬-೮೩ ವ). [ಬಂಬಲ್$_1$ + ಪರಿಯಿಸು]

**ಬಂಬಲ್ವೆಳಗು** (ನಾ). ದಟ್ಟವಾದ ಬೆಳಕು ; ಸಾಂದ್ರವಾದ ಕಾಂತಿ : ಜೋಲ್ವ ಮೇಲುದನಿನಿಸು ಮುಸುಕುತಲರ್ಗಣ್ಣ ಬಂಬಲ್ವೆಳಗುಗಳ ಸೂಸುತೆ (ಹರ್ಮ. ೯-೨೦). [ಬಂಬಲ್$_1$ + ಬೆಳಗು$_2$]

**ಬಂಬಲ್ಸರಿ** (ನಾ). ಎಡೆಬಿಡದ ಮಳೆ ; ಜಡಿಮಳೆ : ಮಲ್ಸರಿ ಸೂಲ್ಸರಿ ಮುಗಿಲೊಳ್ಗಲ್ಸರಿ ತೆಳ್ಸರಿ ಕರಂ ಪೊನಲ್ವರಿಯುವ ಬಂಬಲ್ಸರಿ ಬಲ್ಸರಿ ಕಾಲ್ಸರಿ ಸಾಲ್ಸರಿ ಸಲೆ ಸುರಿದು ಕಱಿದುಮಿರುಳುಂ ಪಗಲುಂ (ರಾಜಶೇ. ೯-೦೦೨). [ಬಂಬಲ್$_1$ + ಸರಿ$_6$]

**ಬಂಬಳ** (ಅ). ಹೆಚ್ಚಾಗಿ, ಅಧಿಕವಾಗಿ ಎಂಬರ್ಥವನ್ನು ಕೊಡುವ ಒಂದು ಅನುಕರಣಾವ್ಯಯ : ಕಂಬನಿಯೊಳೋಲಾಡಿ ಬಂಬಳ ಪೊಗಬಾಡಿ ನೋವಿಂ ಕರಂ ಬಬಲಲು (ಜಗ. ೦೩-೦೦೬ ಟಿಳೆ). 'ಬಂಬಲ 'ಪರಾ.

**ಬಂಬಳಂ ಬಾಡು, ಬಂಬಳ ಬಾಡು** = ಹೆಚ್ಚಾಗಿ ಒಣಗು ; ಅಧಿಕ ವಾಗಿ ಸೊರಗು,—ಬತ್ತು : ಮುಖದಿಂದಂ ತೃಷೆಯಿಂದಂ ಪಥಶ್ರಮದಿಂ ದಾದಮಾನಂ ಸೇದೆಗೆಟ್ಟು ಬಂಬಳಂ ಬಾಡಿರ್ಪನ್ನೆಗಂ (ಪಂಪ್ಪರಾ. ೧೦೦೦-೨೩); ಕಾಂತೆಯರ್ . . . ನಿಜವಾಸದ ವಿಳಾಸವಿಹಗಂಗಳಂ ನೋಡಿ ಬಂಬಳಂ ಬಾಡಿ (ತ್ರಿಪ್ರಕ. ೦೩-೯೭ ವ) ; ಆ ಬಾಳೆ ಕಾದ ಪುಡಿಯೊಳ್ ಬಿರ್ದೆಳವಾಳೆ ಯಂತೆ ಬಂಬಳ ಬಾಡಿ (ಸುಕುಮಾ. ೦೨-೨೪ ವ) ; ಬಂಬಳ ಬಾಡಿದ ದೇಹ ಲಟ್ಟಿಳಿದ ತುಱುಂಬು ಕಂದಿದ ಮೊಗದಿಂದ . . . ಪಲುಂಬಿದರು (ಜೈಶ. ೭೦-೭೯). **ಬಂಬಳನೆ ಬಾಡು** = ಹೆಚ್ಚಾಗಿ ಸೊರಗು, —ಬತ್ತು : ಬಂಬಳ [ಹಾಠಾಂ. ಲ]ನೆ ಬಾಡಿ ಮುಂಚಿಱಿದಂಬುಜಲತೆಯಂತಿರ್ದ ಜಾನಕಿಯಂ ನೀಲಾಂಬರನೀಕ್ಷಿಸಿ (ಕಂಠಾಮು. ೦೫-೯).

**ಬಂಬಳಿಸು** 'ಬಂಬಲಿಸು' ನೋ.

**ಬಂಬಾಳ, ಬೊಂಬಾಳ$_2$** (ನಾ). ೧. ಕಣ್ಣು ಕೋರೈಸುವಂತಹ ಬೆಳಕು ; ಅತ್ಯಂತ ಪ್ರಕಾಶಮಾನವಾದ ಪ್ರಭೆ : 'ಬಂಬಾಳದೀವಿಗೆ' ಪರಾ. **ಬೊಂಬಾಳ$_2$** : ೧. 'ಬೊಂಬಾಳದೀಪ', 'ಬೊಂಬಾಳ ದೀವಿಗೆ' ಪರಾ. ೨. ಕಣ್ಣು ಕೋರೈಸುವ ಪ್ರಭೆಯುಳ್ಳ ದೀಪ : ಚಂದನದ ತೈಲದಿಂದುರಿವ ಬೊಂಬಾಳಂಗಳಿಂದೆ . . . ಇರುಳ್ಗಂಗೊಳಿಸು

ತಿರೆ (ಕೃಮಿಶಾ. ೨೯-೩೩); ಜಾರಚೋರರತ್ತಣಿಂ ಭೀತಿಯಣಂ ನಾಡೊಳೆಲ್ಲೆನ ಬಾಗಿಲಂ ಪಡಿದೆಱೆದು ಬೊಂಬಾಳಂಗಳನುರಿಯಿಸಿ ತಾಂ ನಿದ್ದೆವೋದ ಸಜ್ಜನರ ಸಜ್ಜುಗೊಂಡ ಬೀಡುಗಳ ಸಾಲ್ಗಳಿಂ . . . ಕೇರಿಗಳ್ ಸೊಗಯಿಸೆ (ಧರ್ಮಪ. ೩೩-೨೦); ಮುನಿವ ಕಾಲಂಗೆಯ್ದು ನಿನ್ನುರಿವ ಬೊಂಬಾಳ ನಂದುವಂತಿವನ ಚಿತ್ರವಿಮೋಕ್ಷವಾಯ್ತು! (ಕೃಶಾಂ. ೯೯-೩೯೯).

[ ← ಮರಾ. ಬಂಬಾಳ್, ಬಂಭಾಳ್]

ಬಂಬಾಳದೀವಿಗೆ, ಬೊಂಬಾಳದೀವಿಗೆ (ನಾ). ಪ್ರಕಾಶಮಾನವಾಗಿ ಉರಿಯುತ್ತಿರುವ ದೀಪ; ಪ್ರಜ್ವಲಿಸುತ್ತಿರುವ ದೀಪ : ಬಂ[ಪಾಠಾಂ. ಬೊಂ]ಬಾಳದೀವಿಗೆ ಬೆಳಗಿತು ಬಾಲಾರ್ಕಬಿಂಬಗಳೆನೆ (ಶಬರಾಶಂ. ೦೯-೩೯) . ಬೊಂಬಾಳದೀವಿಗೆ : ಬೆಳಗಿದವು ಬೊಂಬಾಳದೀವಿಗೆ (ಶಿವಾಪ್ರದೀ. ೬-೯೩); ಬೆಳಗಿದವು ಬೊಂಬಾಳದೀವಿಗೆ ಲಕ್ಷಸಂಖ್ಯೆಯಲಿ (ಕೊರಿಶಾ. ೩-೭-೩); ಹೂವಿನ ಗೊಂಚಲೆಂಬಂದದೆ ಬೊಂಬಾಳದೀವಿಗೆ ಮಱೆದುವಿಕ್ಕಲದೆ (ಶೋಕಶ. ೦೩-೭).

[ ಬಂಬಾಳ + ದೀವಿಗೆ./ಮರಾ. ಬಂದಾಳ್‌ದಿವಾ, ಬಂಬಾಳ್‌ದಿವಾ]

ಬಂಬಿಕನೂರ್ (ನಾ). ಒಂದು ಊರಿನ ಹೆಸರು : ಬಂಬಿಕನೂರ ಪೂರ್ವ್ವಿಗರ ಗೊಲಂಕಿಗಾವುಣ್ಣನ ಮಗ (ಎಕ. IX, (೩). ಶಾಸಕೋ. ೨೦೬-೩; ೬೮೦).

[ ? + ಊರ್ ]

ಬಂಬು₁ 'ಬೊಂಬು₁' ನೋ.

ಬಂಬು₂, ಬೊಂಬು₂ (ನಾ). ೧. ಕೊಳವೆ; ನಳಿಗೆ : ಬಂಬಿನ ಸಹಾಯದಿಂದ ಬಾವಿಯೊಳಗಿನ ನೀರು ಮೇಲೆ ತೆಗೆಯುತ್ತಾರೆ (ಜೀವಂಕು. ೩-೮೦). ೨. ಗಾಳಿಯ ಒತ್ತಡದಿಂದ ಕೂಗುವ ಸಾಧನ; ಸೈರನ್ನು : ಗಿರಣಿಯ ಬಂಬು ಕರೆಯುವುದು ಏಳು! (ಸೂರ್ಯಶಾ. ೩೦-೭); ಕೋಲಾರಂಪೂರ ರೇಲ್ವೆವರ್ಕಶಾಪದ ಬಂಬು ಕೂಗಿಕೊಂಡಿತು (ಜಟಾ. ೦೨೭). ೩. ದೊಡ್ಡಪಾತ್ರೆ; ಹಂಡೆ : ಬಂಬಿನಲ್ಲಿಯ ನೀರು ಆರಿಲ್ಲವಷ್ಟೆ ಎಂದು . . . ಬದಿಗೆ ಇಟ್ಟ ಬಂಬಿಗೆ ಕೈಹಚ್ಚಿ ನೋಡಿದಳು (೭೦ಹ. ೯೭); ಮತ್ತೊಂದು ಮೂಲೆಯಲ್ಲಿ ಝುಗಝುಗಿಸುವ ಬಿಸಿನೀರಿನ ಬಂಬು (ಸಂಕಾ. ೨). ಬೊಂಬು₂ : ೧. "ಬೊಂಬು = ಕೊಳವೆ" (ಶಾಸಕೋ. ೨೯).

[←ಅರಂ. ಹಿಂ. ಬಂದಾ; ಮರಾ. ಬಂಬ್]

ಬಂಬುಚ್ಚು 'ಬಂಬೂಚು' ನೋ.

ಬಂಬೂಚು, ಬಂಬುಚ್ಚು (ನಾ). (ಕರು) ತೇವದಿಂದ ವಸ್ತುಗಳ ಮೇಲೆ ಬರುವ ಒಂದು ಬಗೆಯ ಕ್ರಿಮಿ : ಎಲ್ಲಿಯು ಹಣ ತೆತ್ತು ಬಿತ್ತಿದರೂ ಆ ಹಂದಿ ಹರಿಣ ಮೊದಲಾದ ಕಾಡು ಪ್ರಾಣಿಗಳ ಕಾಟ ಬೇರೆ. ಬಂಬೂಚು ರೋಗವೂ ತಪ್ಪಿದ್ದಲ್ಲ (ಹಾಗಿ. ೦೦೯). ಬಂಬುಚ್ಚು : ಈ Racket ಕೃಷಿ departmentನವರಿಗೆ ಬಂಬುಚ್ಚು ಹಿಡಿಯಲಿ ಕಪ್ಪಾದೀತು (ಮಣಿಗಮು. ೦೮೦).

[< ಬೂಜು₁ ?]

ಬಂಭರ (ನಾ). ತುಂಬಿ; ಭ್ರಮರ : ಗಂಡಸ್ಥಳದ ಮದಪರಿಮಳಕೆ ಬಂದೆರಗುತಿಹ ಬಂಭರವ ಪೊಡೆವ ವಿಶಾಲಕರ್ಣಂಗಳದ ಮಾರುತನ (ಅಮಂಶಾ. ೦-೦-೯); ಮೃದುರವದಿಂದಲೆಡಬಲದಿ ನಾದಿಸುವ ಕೋಗಿಲೆ ಶುಕಾಳಿಗಳ ಭೋರ್ಗರೆವ ಬಂಭರಗಳ . . . ನೋಡುತ್ತ (ಕೀಶಾಶಾ. ೩-೯-೩೨).

[ಸಂ.]

ಬಂಭ್ರಮಿಸು (ಕ್ರಿ). ಅತಿಶಯವಾಗಿ ಸುತ್ತು,-ತಿರುಗು : ಎಂಥತ್ತು ನಾಲ್ಕುಲಕ್ಷಣಗುಣಗಳೆಂಬ ಗಂಭೀರದ ನೇಣ ಬಿಗಿದು ಬಂ[ಪಾಠಾಂ. ಸಂ]ಭ್ರಮಿಸದ ಧ್ಯಾನವೆಂಬ ನೊಗವ ಮಾಡಿ ಸಂಭ್ರಮ ಮಿಗೆ ಹೂಡಿದನು (ಕೃಶಾಂ. ೦೦-೦೦೯); ಕಂಗಳು ಬಂಭ್ರಮಿಸಿ, ಹವ್ವುಕ್ಕಿ ಜಂಗಮಿಸಿ ಎದೆ ಮೊಗ ಕೆಳಗಿಳಿಸಿ ನೋಡುತಿರೆ (ಕಹೇಗ. ೯೯-೧೦೯).

[ಬಂ₂ (ಪ ← ಸಂ. ಭ್ರಮ) + ಭ್ರಮಿಸು]

ಬಂಹಿಮ (ನಾ). ಹೆಚ್ಚಳ; ಆಧಿಕ್ಯ; ಅತಿಶಯ : ಬಂ[ಪಾಠಾಂ. ಬ್ರಂ]ಹಿಮವಜ್ಜ್ವಲಲಕ್ಷ್ಮಿಯ ಸಿಂಹಂಗಳನಂತಬಳನ ಪಾದಾಂತಿಕದೊಳ್ ಸಂಹತಿಗೊಂಡಿರ್ದಪುವೆನೆ ಸಿಂಹಾಸನಮೆಸದುದಮಳಮಣಿಖಚಿತಂಗಳ್ (ಅನಂತಪ. ೬-೯೭); ಅಸುರಾರಿಯ ಪೊರ್ಕುಳ ಪದ್ಮಮಂ ಖರದ್ಯೋತಿಯ ಕೆಯ್ಯ ಕಂಜಮಂ ನಿದೆಯ್ದೆ ಸುರುಳ್ಗುಗುವೆಂಬಿನಂ ಜಗತ್ಕೌತುಕಮಾಯ್ತು ನುಷ್ಟ ಮಹಿಮಂ (ಪುಶ್ಪಶ್ರೀ. ೬-೯೩).

[ಸಂ. ಬಂಹಿಮನ್]

ಬಕ (ನಾ).೧. (ಯುಕ್ತಿ,-ಮೋಸ ಹಾಗೂ ಜಾಗರೂಕತೆಗಳಿಗೆ ಹೆಸರಾದ) ಕೊಕ್ಕರೆ ಜಾತಿಯ ಒಂದು ಬಗೆಯ ಹಕ್ಕಿ : "ಬಕಃ, ಬಕೋಟಃ — ಈ ೨ ಬಕಂ" (ಶಬ್ದಮ. ೯೨-೯೭); ಬಕ ಕುರರವಕ್ರಪಕ್ಷಿಪ್ರಕರಜಕಿಂಜಲ್ಕಪುಂಜಪಿಂಜರಿತಾಚ್ಛೋದಕ ಪರಿಪೂರ್ಣತಟಾಕಪ್ರಕರ ಸರೋನಿಕರರಂಜಿತಾಶಾವಲಯಂ (ಆಪು. ೬-೩೦); ಬೆಳುವ ಬೆರಟಗ ಬೊಕ್ಕ ಬಕ ಮಿಂಚುಲಿಗ ಕೆಂಜರಿಗಣ್ಣ ಶಿಖಿ ಮಡಗೋಳಲಿ ಮುಖ್ಯವಿಹಂಗವಿವೆ (ಕೊಶಾ. ೩-೦-೩೩). ೨. ಕಪಟ; ವಂಚಕ; ಠಕ್ಕ. ೩. ಭೀಮಸೇನನಿಂದ ಹತನಾದ ಒಬ್ಬ ರಾಕ್ಷಸ : ನೇಸಱ್ ಮೂಡಿದುದು ಬಕಂಗೆ ಮಿಱ್ತು ಮೂಡುವ ತೆಱದಿಂ (ಪಂಪಭಾ. ೩-೩೩); ಬಕನಂ ಹಿಡಿಂಬನಂ . . . ಜರಾಸಂಧನನಿಕ್ಕಿ ಕೊಂದ ಬಲ್ಲಾಳ್ಗಳಿರುತ್ತುತಂ ಕೇವಳನೇ (ಗದಾಯು. ೨-೯೭); ವಿಕಟಭುಜಬಲರೇಖಚಕ್ರದೊಳಕಟುಳಿಬರು ಭೂಸುರರ ರಕ್ಷಿಸಿ ಬಕನ ಮುಱಿದರು (ಕುಪ್ರಾ. ೦೦ ಸೂಚಕ). ೪. ಕೃಷ್ಣನಿಂದ ಹತನಾದ (ಕೊಕ್ಕರೆಯ ರೂಪದ) ಒಬ್ಬ ರಾಕ್ಷಸ : ಸಂದ ಪೂತನಿ ಬಕರನಿಪ್ಪವರಿಂದ ಕಿಱಯನುದಾರವಿಕ್ರಮನಿಂದು ಬಾಲಕರಾಟವನು ಮಾಣಿಸುವನು (ಹರಿಗ. ೦೦-೦೨-೦೭). ೫. ಒಂದು ಬಗೆಯ ಗಿಡ : "ಶಿವಮಲ್ಲೀ, ಪಾಶುಪತಃ, ಏಕಾಷ್ಠೀಲಃ, ಬಕಃ, ವಸುಃ – ಈ ಬಕಪುಷ್ಪದ ಹೆಸರು, ಕೊಕ್ಕರೇ ಹುವ್ವಿನ ಗಿಡ" (ಕಿಶಾ.ಪಿ. ೦೪೦). ೬. ಖನಿಜಗಳನ್ನು ಸುಡುವ ಅಥವಾ ಘನಭಟ್ಟಿ ಇಳಿಸುವ ಒಂದು ಸಾಧನ: ರಾಮವನ್ನು ಬಟ್ಟ (ಬಕ)ಗಳಲ್ಲಿ ಕಾಯಿಸಿದರೆ, ಗಂಧಕವು ಕಾದು ಕರಗಿ, ಅನಿಲರೂಪವನ್ನು ತಾಳಿ, ಇನ್ನೊಂದು ಕಡೆಗೆ ಬಂದು, ಗಂಧಕವಾಗಿ ಗಟ್ಟಿಗಟ್ಟುವುದು (ಶಾಂಸ್ತ್ರ. II, ೭೩೯).

[ ಸಂ. ]

ಬಕಗ್ರೀವ (ನಾ). ಬರವಣಿಗೆಯಲ್ಲಿ ಉದ್ಧೃತಭಾಗಗಳನ್ನು ತೋರಿಸಲು ಬಳಸುವ ಚಿಹ್ನೆ; (" ") : "ಬಕಗ್ರೀವದಲ್ಲಿ" ಎನ್ನುವುದು "in inverted commas" ಎಂಬುದಕ್ಕೆ ಕನ್ನಡ! ನಮ್ಮಲ್ಲಿ ಹಿಂದಿನಿಂದಲೂ ಇರುವ "ಹಂಸಪಾದ" ಎಂಬುದರ ಮಾದರಿಯ ಮೇಲೆ, ಈ "ಬಕಗ್ರೀವ"ವನ್ನು ಅನುವಾದ ಚಿಹ್ನೆ ಎಂಬ ಅರ್ಥದಲ್ಲಿ . . . ಬಳಕೆಗೆ ತಂದಿದ್ದರು (ಹಂಚು. ೩೦).

[ಸಂ.]

ಬಕತರ (ನಾ). ಲೋಹದ ಜಾಲರಿಯಿಂದ ಕೂಡಿದ ಕವಚ : ದಂತದ ಸೂನಗೆ ಸೊಂದಿಲೋಳಾಂತುಸಿವ್ಯೆಗಮರ್ದ ಜಿಲೆಯ ಬಕತರ ಜೋಡಾಲುತೋಳಪಾನೆಯನೇರ್ದಿದಿರಾಂತಂ ಧುರಕಾ ಬರೀದಯಮಾದೀಶಂ (ಕಕ್ಕ. ೨-೩೩); ಧರಿಕ್ಕೆಗಳೋಳಾಂತಸಿ ಬಕತರ ದಂತಂಗಳೋಳಮರ್ದ ಸೂನಗೆಯಸೆಯುಲ್ ಕರಪದಮೊಗದೆಡೆಯಾಡುವ ಗಿರಿತುಲವೆನೆ ಕವಿದು ಮಾನವಿಂಡೊತ್ತಿಸೆಯೊಳ್ (ಕಕ್ಕ. ೨-೩೬).

[←ಫಾರ. ಹಿಂ. ಬಕ್ತರ್, ಬಖ್ತರ್; ಮರಾ. ಬಕತರ್, ಬಕ್ತರ್, ಬಖತರ್, ಬಖ್ತರ್]

ಬಕಧ್ಯಾನ (ನಾ). ಬಕಪಕ್ಷಿಯು ತನ್ನ ಆಹಾರದ ನಿಮಿತ್ತವಾಗಿ ನಿಶ್ಚಲವಾಗಿರುವಂತೆ ಮಾಡುವ ಧ್ಯಾನ; ಕಪಟಧ್ಯಾನ : ಗೀರ್ವಾಣಭಾಷೆಯೊಳ್ ಸ್ತುತಿಯಂ ವಾಚಿಸಿದನೋಂಕಾರವೆರಸಿ, ಬಕಧ್ಯಾನಮಂ ನಿಂದಿ ಪೋಲಲ್ಕೆ ನಿಂದನು, ಬಗೆಯ ಬಾವಿಯಂ ರೆಪ್ಪೆವುಲ್ಲಿಂದಡಕಿ ಮುಚ್ಚಿ (ಶ್ರೀಶಾಕಾ. ೨೯೩-೯೨೩).

[ಸಂ.]

**ಬಕಬಂಧನ** (ನಾ). (ಬಕಪಕ್ಷಿಯನ್ನು ಹಿಡಿಯುವ) ವಿಫಲವಾದ ಪ್ರಯತ್ನ : ಹೋದ ದಾರಿಯ ಹೋಕೆ ! ಬಕಬಂಧನಕೆ ವೃಥಾ ಯತ್ನಿಸದಿರ್ದ್ದ ಗೆಳೆಯ (ಹಕ್ಕಿ. ೦೭-೯೩). [ಸಂ.]

**ಬಕಬಂಧನಕೌಶಲ** (ನಾ). (ಅಲಂ)ಸರಳರೀತಿಯಿಂದ ಮಾಡಬಹುದಾದ ಕೆಲಸವನ್ನು ಕಠಿಣಮಾರ್ಗದಿಂದ ಮಾಡುವಿಕೆ ; ವ್ಯಥಾಶ್ರಮ ಪಡುವಿಕೆ : ನಿಮ್ಮ ಮಾತು ಬಕಬಂಧನಕೌಶಲವೇ ಹೊರತು ಬೇರೆಯಲ್ಲ (ಕಕ್ಕ.ಕೀ. ೬೦). 'ದ್ರಾವಿಡಪ್ರಾಣಾಯಾಮ ' ಹೋ. [ಸಂ.]

**ಬಕರ** 'ಬಕರಾ' ನೋ.

**ಬಕರಾ, ಬಕರ** (ನಾ). ೧. ಗಂಡಾಡು ; ಹೋತ. ೨. (ಅಲಂ) ಏನೂ ತಿಳಿಯದವನು ; ದಡ್ಡ : ಈ ಕೇಶವರಾಯನಿಗೆ. ಅದೆಷ್ಟು ಮನಸ್ಸು ಚಲಿಸಲಿಲ್ಲವೆಂದರೆ ನಂಬುವ ಬಕರಾ ಯಾರು ? (ಕಂಗಿಂ. ೩೩) ; ಹತ್ತು ಗಂಟೆಗೆ ಒಬ್ಬ 'ಬಕರಾ'ನನ್ನು ಹಿಡಿಯಬೇಕಾಗಿದೆ. (ಎಡಹ. ೬೩). **ಬಕರ** : ೧. ಜೀವನ್ನ ಬೆದರಿದ ಬಕರನಂತೆ ಬೆಚ್ಚಿ ಹಿಮ್ಮೆಟ್ಟಿದ (ಶಬರುಃ ೦೦೯). ೨. ಅಂಗಡಿಯವನಿಗೂ ಆ ಬಿದ್ದ ಬಕರನಿಗೂ ಮಾರಾಮಾರಿಯಾಯಿತು (ವೃಕ್ಕಿ. ೬೯). [←ಹಿಂ. ಬಕರಾ ; ಮರಾ. ಬಕರಾ, ಬಕರೀ, ಬಕರೇ. / ಸಂ. ಬರ್ಕರ]

**ಬಕರೆ** 'ಬಕ್ಕರೆ' ನೋ.

**ಬಕವಿಡಂಬನ** (ನಾ). ಸೋಗು ; ಕಪಟ : ವಿಕಳರಾವಿದನೆತ್ತ ಜಲ್ಲವು ಸಕಲಗುಣಸರ್ವಜ್ಞ ನಿನಗೀ ಬಕವಿಡಂಬನವೇ (ಕುವ್ಯಾ.ಕ. ೨೨-೨೦). [ಸಂ.]

**ಬಕವೃತ್ತಿ** (ನಾ). ೧. ಮೋಸಗಾರಿಕೆ ; ಕಪಟ : ಬಕವೃತ್ತಿ ಹಿಸುಣತನ ಪರನಿಂದೆ . . . ದೋಷಾಕರಗಳು (ಜೀವಂಧ. ೩-೮೯) ; ಪರಸ್ತ್ರೀವ್ಯಸನ ವತ್ಕ್ಯಾಚಾರ ಬಕವೃತ್ತಿ ಕೃತವಿನಾಶನ ಡಂಭ ಹಿಂಸಾರತಿ ನಿಜಾನ್ವಯಧರ್ಮ ಕರ್ಮಚ್ಯುತಿಗಳವು ದೋಷಾಂಕುರಂಗಳು (ಕುವ್ಯಾ.ಅ. ೦೩-೦೪). ೨. ಮೋಸಗಾರ ; ವಂಚಕ. [ಸಂ.]

**ಬಕವೇಸಿತನ** (ನಾ). ಮೋಸದ ವ್ಯಭಿಚಾರ : ಬಕವೇಸಿತನದಿಂದೊಡಲ ಸೂಡಿಂಗಿರಲಾಜದೆ ಪುಸಿಗೂರ್ಮೆಯಿಂದೋವಳನಪ್ಪಿಕೊಂಡು (ಧರ್ಮಾಮೃ. ೩-೩೩). [ಬಕ + ವೇಸಿ₁ (<ವೇಶಿ) + –ತನ]

**ಬಕವೈರಿ** (ನಾ). ೧. ಬಕನ ರೂಪದಲ್ಲಿದ್ದ ರಾಕ್ಷಸನನ್ನು ಕೊಂದವನು; ಕೃಷ್ಣ : (೩). ೨. ಬಕಾಸುರನನ್ನು ಕೊಂದವನು ; ಭೀಮಸೇನ : ಶುಕಮುನಿಯಂತೆ ಸ್ತುತಿಸಲಜಾಯಿ ಬಕವೈರಿಯಂತೆ ಧ್ಯಾನವ ಮಾಡಲಜಾಯಿ (ಭ್ರರಂಡ. ಠಾ. ೧-೮೦-೧) : ಆ ನೃಪಂ ಬಕವೈರಿಗಿಂತೆಂದನು (ಕೃಜಾ. ೪-೬೦). [ಸಂ. ಬಕವೈರಿನ್]

**ಬಕವ್ರತಿ** (ನಾ). (ಮೋಸ ಮಾಡುವುದಕ್ಕಾಗಿ) ತಪಸ್ವಿಯಂತೆ ನಟಿಸುವವನು : ಸ್ವಾಮಿಕಾರ್ಯವಿಘಾತಕಂಗತಿಕಾಮುಕಗೆ ಮಿಥ್ಯಾಪವಾಡಿಗೆ ಭೂಮಿದೇವದ್ವೇಷಿಗತ್ಯಾಶಿಗೆ ಬಕವ್ರತಿಗೆ . . . ಪರಲೋಕವಿಲ್ಲ (ಕುವ್ಯಾ.ಅ. ೪-೨೬). [ಸಂ. ಬಕವ್ರತಿನ್]

**ಬಕಳು** (ನಾ). ಒಂದು ಬಗೆಯ ತೆರಿಗೆ (?) : ಆ ಹಳಿಗಳ ಪೂರ್ಬ್ಬಾಯ ಅಪೂರ್ಬ್ಬಾಯ ಥಾಣ ಅಭೋಗ ಬಕಳು ಕತುಪೆ ಬಂಡಿ ಅರವಟ್ಟಿಕೆ ಕುದಿರೆಹದಿಕೆ ಆನೆಪದಿಕೆ (ಎಕ. IX (S). ಕೊಗಳೂ. ೦೬೯-೨ : 1329). [?]

**ಬಕಾಟಿ** (ನಾ). ಪುರುಷನ ಜನನೇಂದ್ರಿಯ : ನೀ ಅವಡ ಕಟ್ಟಿ ಹಿಡದರ ಕಾಡ ಕಾನ್ಸಾ ಬಕಾಟ ಕಟ್ಟಿ ಹೋದೀತು ! (ಹೂಸಂಗಾ. ೨೩). [← ಮರಾ. ಬಕಟೇ]

**ಬಕಾರ** (ನಾ). 'ಬ' ಎಂಬ ಅಕ್ಷರ : ಬಕಾರಕ್ಕೆ — ನಾಂಬಂ, ಎಂಬಂ, ತಿಂಬಂ (ಶಬ್ದಮ. ೨೩೨ ವೃತ್ತಿ). [ಸಂ.]

**ಬಕಾರಿ** (ನಾ). = ಬಕವೈರಿ ೨ : ಕುರುಕುಲಮಂ ಬಕಾರಿ . . . ತವೆ ಕೊಂದ ಮುಟ್ಟಿಯಿಂದುರುತರ ಬಾಹುವಿಕ್ರಮದೆ ನಾಂ ತವೆ ಕೊಲ್ಲದೆ ಮಾಣೆಂ (ಶಂಕಕಂ. ೨೪೯-೦೩) ; ಧರೆಯೊಳ್ ಬೀರದ ವೆಂಪಿಂ ನರನಿಂದಿರ್ಮಡಿ ಬಕಾರಿಯಿಂ ಮೂವಡಿ ಭಾಸ್ಕರಸುತನಿಂ ನಾಲ್ಮಡಿ ಶಂಕರನಿಂದಯ್ಮಡಿ ನೆಗಟ್ಟಿಯುದಟರ ಭೀಮಂ (ಕಾವ್ಯಾ.ಕ. ೬೦) : ಕೀಚಕನಂ ಬಕಾರಿ ಮುಟ್ಟಿದಂ (ಸೋಮಕುಃ. ೩೯).

ಬಕಾರಿನಂದನ = ಭೀಮನ ಮಗ ; ಘಟೋತ್ಕಚ : ಆರಿವನು ಹೈಡಿಂಬನೀಚಿಯಲಾರು ಭೀಮಜನಿತ್ತಲಾರು ಬಕಾರಿನಂದನನೆನಲು ಬಲುವಿರುಳಾಳಪುರವಯವಾಯ್ತು (ಕುವ್ಯಾದ್ರೋ. ೦೬-೯೭). [ಸಂ.]

**ಬಕಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಪ್ರಕಾರ : ಮುಖ್ಯವಾದ ಕೆಲವು ಆಸನಗಳು, ಅಷ್ಟವಿನ್ಯಾಸಗಳು — ೧. ಉತ್ತಾನಾಸನ . . . ೧೨. ಬಕಾಸನ (ಶಾರದ. ೦೩೬) ; ಬಕಾಸನ . . . ಬಕ ' ವೆಂದರೆ ಕೊಕ್ಕರೆ. ಈ ಭಂಗಿಯಲ್ಲಿರುವಾಗ, ದೇಹವು, ನೀರಿನಲ್ಲಿ ಹಾಯ್ದುಹೋಗುವ ಕೊಕ್ಕರೆಯ ರೂಪವನ್ನು ಹೋಲುತ್ತದಾದುದರಿಂದ ಈ ಆಸನಕ್ಕೆ ಈ ಹೆಸರು (ಯೋಗಿಂ. ೨೨೯). [ಸಂ.]

**ಬಕಾಳ** (ನಾ). ವ್ಯಾಪಾರಿ ; ಉದ್ಯಮಿ : (೩). [←ಅರ. ಹಿಂ. ಬಕ್ಕಾಲ್ ; ಮರಾ. ಬಕಾಲ್, ಬಕ್ಕಾಲ್]

**ಬಕಾಳಭಾತು** (ನಾ). (ಅಂಗಡಿಯವನು ಮಾರುವ) ಮೊಸರನ್ನ : ಈವತ್ತು ಅವರ ಮನೆಯಲ್ಲಿ ಪುಳಿಯೋಗರೆ, ಬಕಾಳಭಾತು ಮಾಡಿದ್ದರು (ಕೂತಿ). [ಬಕಾಳ + ಭಾತು]

**ಬಕೀಟು** 'ಬಕೆಟ್ಟು' ನೋ.

**ಬಕುತ, ಬಗುತ** (ನಾ). ಗುರು, ಹಿರಿಯರು, ದೇವರುಗಳಲ್ಲಿ ಭಕ್ತಿಯುಳ್ಳವನು ; ಭಕ್ತ : "ಬಕುತ (ಬಗುತ) — ಭಕ್ತ" (ಕರ್ಕೃಕೋ. ೨೬) ; ಬಡಿಸಿದರುಂಡು ತೇಗುವ ಬಕುತರಿಗೆ ನೂರ್ಮಡಿ ಸತ್ಫಲವನೆಯ್ದುಸುವ (ಸೋಹಕ. ೩೬-೯೬) ; ತ್ರಿಭುವನದೊಳಗಿಹ ಬಕುತರಿಗನುದಿನ ಶುಭಗಳನಿತ್ತು ರಕ್ಷಿಸುತ (ಕಂನವಂ. ೦-೨). **ಬಗುತ** : ಬಗುತರುಗಳ ಚಿವುಟಿದಡೆ ಹಾಲುಗುವವೇ (ಬಸವ. ೩೭-೭೩) ; ತದ್ದ್ರವ್ಯದೊಳಗೆನಿತು ಬಗುತರ್ ಬಂದೆರೆದೊಡವರ್ ಬೇಡಿದುದನಿಲ್ಲೆನ್ನದೀವಂ ಗಡ (ಶರ್ಮ. ೯-೭). [<ಸಂ. ಭಕ್ತ]

**ಬಕುತವತ್ಸಲ** (ನಾ). ಭಕ್ತರಲ್ಲಿ ಪ್ರೀತಿಯುಳ್ಳವನು ; ಭಕ್ತವತ್ಸಲ : ಬಕುತವತ್ಸಲ ಶ್ರೀರಂಗೇಶ ಸಾಹಸ್ರಮುಖನ ತಲ್ಪದೊಳೆಸೆದಿಹನು (ಕಂನವಂ. ೬-೯೩). [< ಸಂ. ಭಕ್ತವತ್ಸಲ]

**ಬಕುತಿ, ಬಗುತಿ** (ನಾ). ಭಕ್ತಿ : "ಬಕುತಿ (ಬಗುತಿ) — ಭಕ್ತಿ" (ಕರ್ಕೃಕೋ. ೨೬); ಸಂಪ್ರೀತಿಯುಹ ನವವಿಧದ ಬಕುತಿಗೆ ಸಿಲುಕ (ಕುವ್ಯಾ.ಅ. ೬೦೨. ೩-೦೩); ಆಲಿಗಳೆವೆಯಲುಗದೆ ಬಕುತಿಯುಲಿ ತ್ರಿಶೂಲಿಯ ಮೇಲೆ ಕಣ್ಣನವ ಕೀಲಿಸಿದನು (ಸೋಹಕ. ೨೦-೩೩); ಅಕಳಂಕಚರಿತ ಬೆಟ್ಟದ ಚಾಮೇಂದ್ರನ ಬಕುತಿಗೆ ಮನವೊಲಿದಿಹೆನು (ಕಂನವಂ. ೪-೯೦). **ಬಗುತಿ** : "ಬಕುತಿ (ಬಗುತಿ) — ಭಕ್ತಿ" (ಕರ್ಕೃಕೋ. ೨೬). [< ಸಂ. ಭಕ್ತಿ]

**ಬಕುರ** (ನಾ). ಒಂದು ಬಗೆಯ ಊದುವ ವಾದ್ಯ; ಕಹಳೆ : ಆ ವಾದ್ಯಗಳ ಸಮೂಹದಲ್ಲಿ . . . ನಾಡೀ, ತುರವ, ಬಕುರ ಮುಂತಾದ, ಮರುದ್ವಾದ್ಯಗಳೂ ಹೆಸರಿಸಲ್ಪಟ್ಟಿವೆ (ಸಂಗೀಕಂ. ೦೦೪). [ಸಂ.]

**ಬಕುಶ** (ನಾ). [ಜೈನ]ಮುನಿಗಳ ಐದು ಪ್ರಕಾರಗಳಲ್ಲಿ ಒಂದು ಪಂಗಡ : ಮುನಿಗಳಲ್ಲಿ ಪುಲಾಕ, ಬಕುಶ, ಕುಶೀಲ, ನಿರ್ಗ್ರಂಥ, ಸ್ನಾತಕ ಎಂದು ಅಯ್ದು ಪ್ರಕಾರಗಳು (ಕೃಸರ. ೯೯). [< ಸಂ. ವಕುಶ]

**ಬಕುಳ** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು; ನಾಗಕೇಸರ ; P ದೋಹದಕ್ರಿಯೆ ಮಾಡುವಾಗ ಸ್ತ್ರೀಯರು ಮದ್ಯಪಾನ ಮಾಡಿ ಬಕುಳವೃಕ್ಷದ ಮೇಲೆ ಉಗುಳಿದರೆ ಅದರ ಹೂವುಗಳು ಅರಳುವುವೆಂಬುದು ಕವಿಸಮಯಗಳಲ್ಲಿ ಒಂದು : "ವಕುಳದೊಳ

ಬಕುಳಂ" (ಕರ್ಣಾ. ೩೩) : ಬಕುಳದ ಪೂವಿನಸ್ವವಳಯಕ್ಕೆ ದುಕೂಲದ ಚೆಲ್ವನಪ್ಪ ಸಾಳಿಗೆಗೆ ಪಯೋಜಸೂತ್ರನವಮುಂಜಿಗೆ ನೇತ್ರದ ಕೋವ ಣಕ್ಕೆ ವಿಕ್ಕಗುರುವ ಬೂದಿಗೊಡ್ಡೆ ತನುವಂ . . . ನಿಂದಳೊರ್ವಳಂ ಕಂಡು (ಶಾಂತಿಪು. ೯-೬೦) ; ಬೇಲ ಬೊಬ್ಬುಲಿ ಬಕುಳ ಶಮಿ ಕುದ್ದಾಳ . . . ಒಪ್ಪಲ ವಾರೆಯುವ ನೋಡಬಲೆ (ಕೂರಿರಾ. ೩-೦-೨೪).

ಬಕುಳದ ಮಡಕೆ = (?) : ಖಡುಗಿ ಹಳಚುವ ಖಳನ ಮಸ್ತಕ ವ್ನೊಡೆಯಲೊದೆದನು ತಿರುಗಿ ಬಕುಳದ ಮಡಕೆವೊಡದಂತಾಯ್ತು ಚಿಮ್ಮಿದು ವರುಣಜಲ ನಭಕೆ (ತಿಠಾಗ. ೭-೭-೪೬) ; ಜರಿದ ಬಕುಳದ ಮಡಕೆಯಂದದಿ ಮೆರೆವ ಹನುಮನು ಸತ್ವಗೆಟ್ಟುದು ಹರಣ ತಳಕೆಳಕಾಗೆ ಧರೆಯೊಳು ಬಿದ್ದನಾ ಹನುಮ (ಮೂಂರಾ. ೫-೨೭). [ಸಂ. ಬಕುಲ]

ಬಕೆಟ್ಟು, ಬಕೀಟು (ನಾ). ನೀರು ಸೇದಲು, ತುಂಬಿಡಲು ಹಾಗೂ ಒಯ್ಯಲು ಉಪಯೋಗಿಸುವ ಮರದ ಅಥವಾ ಲೋಹದ ಹಿಡಿ ಯುಳ್ಳ ಪಾತ್ರೆ; ಬಾಲ್ದಿ (ಉಕ): ಮೊನ್ನೆ ಫಿನಾಯಲ್ ಹಾಕಿದ ಬಕೆಟ್ಟಿನಲ್ಲಿ ಹುಳಿ ತಂದು ಬಡಿಸಿಬಿಟ್ಟರು ಪುಣ್ಯಾತ್ಮರು (ಜಗ್ಗ. ೭೩) ; ಟ್ರ್ಯಾಕ್ಟರ್ ಮುನ್ನುಗ್ಗಿದೊಡನೆಯೇ ಬಕೆಟ್ಟು ತುಂಬಿಕೊಳ್ಳುತ್ತದೆ (ಕರಿಕೋ. I. ೦೭೩). ಬಕೀಟು : ಎರಡು ಮೂರು ಬಕೀಟು ನೀರಾದರೂ ಅವನ ಮಡಿವಂತಿಕೆಗೆ ಸಾಕಾಗುತ್ತಿರಲಿಲ್ಲ (ಶಂಕ. ೦೭). [← ಇಂ. Bucket]

ಬಕೋಟ (ನಾ). ಒಂದು ಬಗೆಯ ಕೊಕ್ಕರೆ: "ಬಕಃ, ಬಕೋಟಃ— ಈ ೨ ಬಕಂ" (ಶಠಾಪು. ೪೨-೯೭); ಎಳೆಮೀನ್ ಪೊಳೆದೊಡವೊಳವುಗ ದಿರ್ದುವು ಜಲಾಶಯಪ್ರಾಂತದೊಳ್ ಬಕೋಟಕುಟುಂಬಂ (ಲೀಲಾತ. ೯-೦೪). [ಸಂ.]

ಬಕ್ಕ$_1$, ಬೊಕ್ಕ (ನಾ). ೧. ಬೋಳು ತಲೆಯವನು; ಬೋಡ : ಆ ಬಕ್ಕನನ್ನು ಮದುವೆಯಾಗುವುದಿಲ್ಲವೆಂದು ಹುಡುಗಿ ನಿರಾಕರಿಸಿದಳು (ಕೂಇ). ೨. ಏನೂ ಇಲ್ಲದುದು ; ಬೋಳು ; ಬರಿದು : (ಕ). (ಗು). ೩. ಏನೂ ಇಲ್ಲದ ; ಬೋಳಾದ ; ಬರಿದಾದ : 'ಬಕ್ಕದಲೆ' ಪರಾ. ಬೊಕ್ಕ : ೧. ಬೊಕ್ಕರ್ ಕೆಲಂಬರದಟಿಂ ಪಕ್ಕನೆ ನಡೆತಂದು ಚಕ್ರದಿಂ ಕೊಡಲಿಗಳಿಂ ಗಕ್ಕನೆ ಕಾರ್ಬೊನ್‌ದಡಿಯಿಂ ಪೊಕ್ಕುತ್ತ ನಿಮ್ಮಂ ಕನಲ್ದು ಬಾಧಿಸುತಿರ್ಕುಂ (ಹಾಠಕ್ಕ. ೯-೦೫-೨೭). ೩. 'ಬೊಕ್ಕತಲೆ' ಪರಾ.

—ಬಕ್ಕ$_2$ '— ಬಾಕ' ನೋ.

ಬಕ್ಕಂಡಿ (ನಾ). ಹಲ್ಲುಮುಡಿ.

ಬಕ್ಕಂಡಿ ಕಟ್ಟು=ಹಲ್ಲುಮುಡಿ ಕಟ್ಟು ; ಅವುಡುಗಟ್ಟು : ಗೋವರ್ಧನ ರಾಯರು ಬಕ್ಕಂಡಿ ಕಟ್ಟಿಕೊಂಡು ಬಿದ್ದರು (ಕೆಳ್ರಿ. ೦೬೨).

[← ಮರಾ. ಬಕಂದೀ = ಮುಚ್ಚಿಯು ಹೊಡೆತ]

ಬಕ್ಕಂಬಯಲ್, ಬಕ್ಕಬಯಲ್ (ನಾ). ೧. ತೆರವಾದ ಜಾಗ; ಬಯಲು ಸ್ಥಳ : ಸಿತಗೆ ಪತಿಗೆ ಮಿಗೆ ಕಾಯ್ವಳ್ ನೋಟಕ್ಕೆ ಕಡುಸೋದಿ ನಾಣಳಿ ಬಕ್ಕಂಬಯಲೊಳಮದಾರುವಂ ಬಂಚಿಸುವಳ್ (ಕಾವ್ಯಾ.ಕ. ೩೩೩) ; ಬಕ್ಕಂಬಯಲ್, ಕಳ್ಳಂಗಡಲೆ (ಕಮರ. ೦೬೨ ಕ್ರಿಯಾ). ೨. ಬರಿದು; ಶೂನ್ಯ : (ಕ). ಬಕ್ಕಬಯಲ್ : ೧. ಅಗ್ನಿಶಿಖಾಮುಖಕ್ಕೆ ದೂರವಪ್ಪ ಬಕ್ಕ[ಪಾಠಾಂ. ಬಕ್ಕಟ]ಬಯಲ ತಾಣದೊಳ್ ದೊಮ್ಮಳಿಸಿ ನಿಂದು ಬಹು ಜನಂಗಳುಮ್ಮಳಿಸಿ ತಮ್ಮೊಳಿಂತೆಂದರ್ (ಶಂಠಾಪು. ೦೦-೦೫೫ ಕ) ; ಕುಟು ಯಿದು ತೆಮರಿದು ಬಕ್ಕಬಯಲಿದಾಶ್ರಯಮಿದು ಗೆಂಟಿದು ಸಾರೆಯೆಂಬ ನಿರ್ಣಯಮಾದುದಿಲ್ಲೊದವಿ ಪುದಿದ ಮರ್ಬಿನೊಳಾರ್ಗಂ (ಕಾವ್ಯಾ.ಕ. ೭೯೬).

ಬಕ್ಕಂಬಯಲಾಗು, ಬಕ್ಕಬಯಲಾಗು = ೧. (ಅಲಂ) ಏನೂ ಇಲ್ಲ ದಾಗು ; ಕರಗಿ ಹೋಗು ; ಲೀನವಾಗು : ಅಕ್ಕ ನಿನ್ನಾತ್ಮಸಂಭವ ಮಗ್ಗುಲೊಳಗಿರ್ದು ಬಕ್ಕಂಬಯಲಾದ ಬಗೆಯ ಒಕ್ಕಣಿಸೆನಗೆಂದು ಸತ್ರಾ ಜಿತಸುತೆ ದುಃಕ್ಕವನಾಂತು ಕೇಳಿದಳು (ಹೋಠಕ. ೯-೮೬). ೨. ನಾಶವಾಗು; ಪಾಳುಬೀಳು ; ಹಾಳಾಗು : ಎಲೆಲೆ ಪಗಲ್ಗಳ್ಳ . . . ನಿನ್ನ ನಾಡು ಬಕ್ಕಂಬಯಲಕ್ಕು (ರಾಘೂಕ್ಕ. ೬೬-೨೩) ; ಆ ತೋಟ ಬಕ್ಕಬಯಲಾಯಿತು (ಕೂಇ). [ಬಕ್ಕ$_1$ + ಬಯಲ್ (< ವಯಲ್)]

ಬಕ್ಕಟ 'ಬಜುಕಟೆ' ನೋ.

ಬಕ್ಕಟಬಯಲು 'ಬರ್ಕಟಬಯಲ್' ನೋ.

ಬಕ್ಕಡ (ನಾ). (?) : ಕಂಗಳ ಸಂಘಟ್ಟದಿನೊಗೆವುರಿಗಳ ಬಕ್ಕಡಗಳರಿಯ ಬಕ್ಕಡಗಳ್ ಜೋದರ ಬಾಣಮಗ್ನಿಬಾಣಂ ಕರಚಕ್ರ ತಮೋರಿಚಕ್ರಮೆನಿಸಿ ದುದೆನಸುಂ (ಗದಾಯು. ೯-೩೭) [?]

ಬಕ್ಕಣ$_1$ 'ಬೊಕ್ಕಣ$_1$' ನೋ.

ಬಕ್ಕಣ$_2$, ಬೊಕ್ಕಣ$_2$ (ನಾ). ಆಹಾರ : ತಿನಿಸು : "ಬಕ್ಕಣ – ಭಕ್ಷಣ = ತಿನಿಸು, ತಿಂಡಿ" (ಕಧ್ಯಕೋ. ೨೭) ; ಮುಯ್ಯಲಿಗಳ ಕಂಡದಿಂಡೆಗಳ ಬಕ್ಕಣ ಮಂ, ತಮ ಮೆಲ್ದು . . . ಕೃಪಜ಼ಿಯೊಳಾಡುವ ರಕ್ಕಸಿಯರ್ಕಳೊಪ್ಪಿ ದರ್ (ಕಥ್ಯಾ. ೨೬೫) ; ತಿನೆ ತವುಗುವೊಂದು ಚಿಂತೆಯನಿನಿತುಂ ತಿನಲಾರ ದಾನೆ ಬಕ್ಕಣಮಂ ಬಯ್ತುನುವಿಂ ಪೆರ್ಗಿಕ್ಕದೆ ದುಮ್ಮನದಿಂ ಪಸುತಿರ್ದು ಪರರ ಲೋಭಿಮರುಳಗ್ಗಳ್ (ಚಂದ್ರಕ್ಕು. ೫-೪೫). ಬೊಕ್ಕಣ$_2$: "ಬೊಕ್ಕಣ- ಭಕ್ಷಣ = ಬಕ್ಕಣ" (ಕಕ್ಕಕೋ. ೩೨). [< ಸಂ. ಭಕ್ಷಣ]

ಬಕ್ಕಣವಲ್ಕಣೆ (ನಾ). ಒಂದು ಪ್ರದೇಶದ ಹೆಸರು (?) : ಬಟ್ಟ ಗೆಜಿಯ ಏರಿ ಉಳಗಾಗಿ ಬನ್ದು ಕಡೆಗೊಡೆ ಕಲ್ಬುನಾಸೆಯು ಅನ್ತೆ ಬನ್ದು ಸೇರಲವದಾ ಬಕ್ಕಣವಲ್ಕಣೆಯ ಅನ್ತೆ ಬಡಗ ನೋಡಿ ಪರಿದ ಪೇರೊ ಜ಼್ಬಿಯ (ಎಕ. IX (ಅ). ಕಂಗಳೂ. ೦೫೦-೪೦ ; ೩೭೫). [?]

ಬಕ್ಕತಲೆ 'ಬಕ್ಕದಲೆ' ನೋ.

ಬಕ್ಕದಲೆ, ಬಕ್ಕತಲೆ, ಬೊಕ್ಕತಲೆ, ಬೊಕ್ಕದಲೆ (ನಾ). ೧. ಕೂದಲು ಉದುರಿ ಬೋಳಾದ ತಲೆ : ಬಕ್ಕದಲೆಯ ಆ ಮನುಷ್ಯನನ್ನು ಎಲ್ಲಿಯೋ ನೋಡಿದಂತಿದೆ (ಕೂಇ). ೨. ಟೋಪಿ. ಪೇಟ ಮೊದಲಾದುವನ್ನು ಧರಿಸದಿರುವ ತಲೆ ; ಬರಿತಲೆ : ಬಳ್ಳಾರಿಯ ವಿದ್ಯಾರ್ಥಿಯೊಬ್ಬನು ನಮ್ಮ ವರ್ಗಕ್ಕೆ ಸೇರಿದನು. ತನ್ನ ಪರಿಪಾಟಿಯಂತೆ ಬಕ್ಕದಲೆಯಿಂದಲೆ ಒಳಗೆ ಬಂದನು (ಗಾರಿಕ. ೦೩೩). ಬಕ್ಕತಲೆ : ೨. ಬಕ್ಕತಲೆಯಲಿಂತು ನೀನು ಅರಳಿದೊಂದು ಕುಸುಮದೆದುರು ನಿಂತು (ಶಂಕಕ. ೩೩-೪). ಬೊಕ್ಕತಲೆ : ೧. ಇದ್ದಕ್ಕಿದ್ದಂತೆಯೇ ಅವನ ಕಣ್ಣು ತುಂಬಿಕೊಂಡು ನಾಲ್ಕೈದು ಹನಿಗಳು ಮರಿಯಪ್ಪನವರ ಬೋಕ್ಕತಲೆಯ ಮೇಲೆ ಬಿದ್ದುವು (ಅಂಕುಶಾ. ೦೯೭). ೨. ಈಗ ಏಕೆ ಕರೀಳಿಸಿರಬಹುದೆಂಬ ತರ್ಕದಲ್ಲಿಯೇ ಕಿಟ್ಟ ಜೋಡು ಮೆಟ್ಟಿಕೊಂಡು ಬೊಕ್ಕತಲೆಯಿಂದ ಹೊರಟನು (ಗಂಡೂಪು. ೯೯). ಬೊಕ್ಕದಲೆ : ೧. (ಕುಂಠಾಪು. ೬. ೩-೨೯೬). ೨. ಬೊಕ್ಕದಲೆ ಯೊಳು ಬೊಕ್ಕರಿಸುತಂ ಮುಕ್ಕರಿಕಿ ನಿಲ್ಲಲು (ಶಿಕಪು. ೯-೩೦).

[ಬಕ್ಕ$_1$ + ತಲೆ$_1$]

ಬಕ್ಕದಾಸ (ನಾ). ಏನೂ ಗತಿಯಿಲ್ಲದವನು ; ನಿರ್ಗತಿಕ : ದಾನಧರ್ಮ ವಿಲ್ಲದ ಹೀನದಾಸನು ನಾನು. . . ಬ್ಯಾನೆ ಇದ್ದಲ್ಲಿ ಬಡುವ ಬಕ್ಕದಾಸನು ನಾನು (ಹೋಸ್ತಕಿ. ೨೭-೩) ; ಬಕ್ಕದಾಸನೊ ನಾನು ವಿಜಯವಿಠಲ ನಿನ್ನ ಲೆಖ್ಖಕ್ಕೆ ಮೊದಲು ಎನಿಸುವನೇನಯ್ಯ (ಹಿದಾಕ್ಕ. ೨೩೬-೦೫೭).

[ಬಕ್ಕ + ದಾಸ$_1$]

ಬಕ್ಕನೆ (ಅ). ಇದ್ದಕ್ಕಿದ್ದಂತೆ ; ಕೂಡಲೆ : ಬೆಕ್ಕು ಹಿಂದೆ ಹೋಗುತಾ, ಶಾನೆ ಹಿಂದೆ ನಿಂತ ಒಂದು ಇಲಿಯನ್ನು ಬಕ್ಕನೆ ಬಾಯಿಗೆ ಹಾಕಿ ಕೊಳ್ಳುತಾ ಬಂತು (ಹಿತಿಹಾ. iv ೨೭). [ಬಕ್$^{ಕ}$ + —ಅನೆ]

ಬಕ್ಕನೆತ್ತಿ, ಬೊಕ್ಕನೆತ್ತಿ (ನಾ). = ಬಕ್ಕದಲೆ ೨: ಒಂದು ಕಾಲದಲ್ಲಿ ಟೊಪ್ಪಿಗೆ ಹಾಕುವುದು ಮಂಗಲಚಿಹ್ನವಾಗಿತ್ತು. ಇಂದು ಬಕ್ಕನೆತ್ತಿ ಯಿಂದ ಅಡ್ಡಾಡುವುದೇ ಏಕ್ಕದ ಕುರುಹು (ಧಾರಿಕಂ. ೪೭). ಬೊಕ್ಕನೆತ್ತಿ :

ತುಂಬಾ ಹಿಮ ಬೀಳುತ್ತಿದೆ. ಬೊಕ್ಕನೆತ್ತಿಯಲ್ಲಿ ಬರಬೇಡ (ಆಡು).

[ಬಕ್ಕ$_1$ + ನೆತ್ತಿ]

**ಬಕ್ಕಬಯಲ್** 'ಬಕ್ಕಂಬಯಲ್' ನೋ.

**ಬಕ್ಕಬಾಗಿಲು** (ನಾ). (?) : ಯಾವತ್ತು ಕಡಂಗ ಕಂಡುಕ ಮುಂತಾಗಿ ತೆಗಸಿ ಆಳ್ವೇರಿ ಬಕ್ಕಬಾಗಿಲು ಮುಂತಾಗಿ ತಯಾರು ಮಾಡಿಸಿ (ರಾಜೇಂದ್ರ.೩). [ಬಕ್ಕ$_?$ + ಬಾಗಿಲು (< ಬಾಗಿಲ್)]

**ಬಕ್ಕಬೋರಲು.** **ಬೊಕ್ಕಬೋರಲು.** **ಬೊಕ್ಕುಬೋರಲು** (ನಾ). ಬುಡಮೇಲು ; ತಲೆಕೆಳಗು : ಒಂದು ಎಲೆ ತೆಗೆದು ಬಕ್ಕಬೋರಲಾಗಿ ಮಗ್ಗುಲಿಗೆ ಮುಚ್ಚಿ ಇಟ್ಟುಕೊಂಡ (ಗಾಳಿಹ. ೨೩). **ಬೊಕ್ಕಬೋರಲು :** ತಿಂಗಳ ಕಡೆಯಾದ್ದರಿಂದ ಡಬ್ಬಿಗಳನ್ನೆಲ್ಲಾ ಬೊಕ್ಕಬೋರಲು ಮಾಡಿ ಅಡಿಗೆ ಮಾಡಬೇಕಾಯಿತು (ಆಡು). **ಬೊಕ್ಕುಬೋರಲು :** ಅದನ್ನು ಮೆಲ್ಲಗೆ ಕಿಡಕಿಯ ಹೊರಗೆ ಎತ್ತಿ ಬೊಕ್ಕುಬೋರಲಾಗಿ ಹಿಡಿದಳು (ಗಂಡಹಾಯ. ೪).

ಬಕ್ಕಬೋರಲು ಬೀಳು, ಬೊಕ್ಕಬೋರಲು ಬೀಳು = ಹೊಟ್ಟೆ ಅಡಿಯಾಗಿ ಬೀಳು ; ಮಗುಚಿಕೊಳ್ಳು: ಮೆಟ್ಟಿಲಿನ ಮೇಲೆ ಯಾಯಾನ ಶರೀರ ಬಕ್ಕಬೋರಲು ಬಿದ್ದಿತು (ಶಾಶಂ. ೦೦೩) ; ಎತ್ತರದ ಜಗಲಿಯಿಂದ ಮಗು ಬೊಕ್ಕಬೋರಲು ಬಿದ್ದು ಅಳುತ್ತಿದೆ (ಆಡು). **ಬಕ್ಕಬೋರಲು ಹಾಕು** = ೧. ಮಗುಚಿ ಇಡು : ಡಬ್ಬಿಗಳನ್ನೆಲ್ಲಾ ಚೆನ್ನಾಗಿ ತೊಳೆದು ಬಕ್ಕಬೋರಲು ಹಾಕು (ಆಡು). ೨. (ಆಲಂ) ನಾಶಮಾಡು ; ಹಾಳುಮಾಡು : ಚಿತ್ರಕೇತುರಾಜನ ಮನೆಯನ್ನು ನಾರದನೇ ಬಕ್ಕಬೋರಲು ಹಾಕಿದನು (ಕುಳಿಗಿ. ೨೩) ; ಎಷ್ಟೋ ವರ್ಷ ಗಳಿಂದ ಮಾಡಿಕೊಂಡಿದ್ದೆಲ್ಲಾ ಒಂದು ಕ್ಷಣದಲ್ಲಿ ಬಕ್ಕಬೋರಲು ಹಾಕಿ ದ್ದಾಯ್ತು (ಆಡು). [ ಬಕ್ಕ$_1$ + ಬೋರಲು ]

**ಬಕ್ಕಬೋಳು** (ನಾ). ಬರಿದು; ಖಾಲಿ; ಶೂನ್ಯ: ಹೂಮುಡಿದು ಕೊಂಡು ಹಿಗ್ಗುವುದು ಹೆಣ್ಣಿಗಷ್ಟೆ ಇರುವ ಸೌಭಾಗ್ಯ. ಗಂಡುಗಾಡಿ ಬಕ್ಕ ಬೋಳು (ಗಾಳಿಹ. ೦೦೦). [ಬಕ್ಕ$_1$ + ಬೋಳು (< ಬೋಡು)]

**ಬಕ್ಕರಸೆ** (ನಾ). (?): ನಿಯತದ್ವಿತ್ವಕ್ಕೆ—ಪಪ್ಪುಕಂ . . . ಬಕ್ಕಸೆ, ರಕ್ಕಸಿ, ಕೆಕ್ಕೊರಸು, ಉಕ್ಕಿವಂ, ಬಕ್ಕರಸೆ, ಬಕ್ಕುಡಿದಂ (ಶಬ್ದಮ. ೩೬ ವ್ರಯೋ). 'ಬಕ್ಕಸೆ' ಪಠಾ. [?]

**ಬಕ್ಕರಿ** 'ಭಕ್ಕರಿ' ನೋ.

**ಬಕ್ಕರಿಸು** (ಕ್ರಿ). ತಿನ್ನು; ಕಬಳಿಸು : ಆತನು ಬಂದ ಕೂಡಲೇ ಆ ಸಪ್ಪು ಬಡಪ್ರಾಣಿಯಾದ ಗೋವನ್ನು ಅಬ್ಬರದಿಂದ ಬಕ್ಕರಿಸಿ ಬಿಟ್ಟಾನು (ಉಪಾತ. ೬೯) ; ತಿನ್ನಲು ಬೆಳೆಯದು ತುಸು ಕಡಿಕಾಳು ಬಕ್ಕರಿಸುವುದೋ ಹಂಟೆಯ ಕೂಳು ? (ಗಂ. ೦೦೯-೦೯); ಒಂದು ತಪ್ಪೇಲಿ ಅನ್ನವನ್ನು ಬಕ್ಕರಿಸುತ್ತಾರೆ! (ಸೋಬಶೀ. ೨೬). [<ಭಕ್ಷಿಸು]

**ಬಕ್ಕರೆ, ಬಕರೆ, ಬಗ್ಗರೆ** (ನಾ). ೧. ಮಡಕೆಯ ಚೂರು; ಓಡು; ಬೋಕಿ : "ವಕ್ಕರೆ ಬಗರಿಗೆ ಎಸೆವ ಬಕ್ಕರೆಯಕ್ಕು" (ಕಬ್ಬಿಮಂ. ೬೩); ಕೈಯೊಳ್ ಬಕ್ಕರೆಯಲ್ಲಿ ಕೆಂಡವಂ ತೆಗೆದುಕೊಂಡು ಬಂದು (ಕುಳಕ. ೧೩); ಅಕ್ಕರೆಯಿಂದ ಕಂದನ ಸಾಕಿ, ಕೈಗೆ ಬಕ್ಕರೆ ಕೊಟ್ಟಾರೆ ? (ಜೀತಶಂ. X, ೨೬). 'ಬೋಕಿ' ಪಠಾ. ೨. ಮುಚ್ಚುಳ ; ಶರಾವೆ : ಫಲ ವಸ್ತ್ರ ತಾಂಬೂಲ ಕಾಣಿಕೆಯುಮಂ ಹೊಸಬಕ್ಕರೆಯಲ್ಲಿ ಇರಿಸಿ ಮಂತ್ರಸಮನ್ವಿತವಾಗಿ...ನಿವಾಳಿಸಿ (ಜಾಂಶ. ೦೩೯-೧೬). **ಬಕರೆ** : ೧. ಕಾಡುಬೆರಣೆಗಳಲ್ಲಿ ಹೊಸ ಮಣ್ಣು ಹೆಂಚು (ಬಕರೆ) ಹೊಸ ಕೆಮ್ಮಣ್ಣುಗೆಡ್ಡೆಗಳನ್ನಿಟ್ಟು ಪುಟ ಹಾಕಿ (ಸಕವ್ವ. ಶಂ. ೪೩೪). **ಬಗ್ಗರೆ** : ೧. ಉಡಲಿಲ್ಲುಣಲಿಲ್ಲದೆಬೇದುದುರಾಗ್ನಿಯೊಡಲ ಸುಡಲು ಬಗ್ಗರೆಯ ಹಿಡಿದು ಪುರದ ಕೇರಿಗಳೊಳು ಭಿಕ್ಷವ ಕೊಡಿಯೆಂದು ಬೇಡುತಮಿರಲು (ಜೀಬಸಂ. ೬-೬೬); ಇರಿಸಿದನೊಂದು ದೊಡ್ಡ ಹೊಸ ಬಗ್ಗರೆಯಂತದು ತುಂಬುವಂತುಟಂ ಸುರಿದನು ಕೂಳ (ಸನ್ನಶಾ. ೬-೩೦೯).

**ಬಕ್ಕಸೆ** (ನಾ). (?) : ನಿಯತದ್ವಿತ್ವಕ್ಕೆ-ಪಪ್ಪುಕಂ...ಬಕ್ಕಸೆ, ರಕ್ಕಸಿ, ಕೆಕ್ಕೊರಸು, ಉಕ್ಕಿವಂ, ಬಕ್ಕರಸೆ (ಶಬ್ದಮ. ೩೬ ಪ್ರಯೋ). 'ಬಕ್ಕರಸೆ' ಪಠಾ. [?]

**ಬಕ್ಕಳ** (ನಾ). ಹೆಚ್ಚು; ಅಧಿಕ; ತುಂಬ : ಬಾಯಿಯಿಂದ ಲೋಕ ಸುಧಾರಣೆಯ ತತ್ವ ಹೇಳುವುದು ಬಕ್ಕಳ. ಆದರೆ ಕೈಯಿಂದ ಕಾರ್ಯ ಕೇಳಬಾರದು (ಕಾಳಶಾ. ೪೭); ತಮ್ಮ ಬಕ್ಕಣದಲ್ಲಿ ಕಾಸು ಕವರ್ಡಿಯಿಲ್ಲ ದಿದ್ದರೂ ಬಾಯಲ್ಲಿ ಬಕ್ಕಳ ಮಾತಿದ್ದರೆ ಸಾಕೆಂಬ ಸಂತೋಷದಿಂದ ಜನರು ಕಾಲ ಕಳೆಯುತ್ತಿದ್ದರು (ಕ್ರೀಮಜಿ. ೬೪). [?]

**ಬಕ್ಕಳೆ** (ನಾ). ಕೊರಳಲ್ಲಿ ಹಾಕಿಕೊಳ್ಳುವ ಹಾರ ಅಥವಾ ಚೀಲ (?) : "ಕಂಠಕಚ್ಚರದೊಳ್ ಬಕ್ಕಳೆ" (ಶಬ್ದಾಶ. ೬೪); ಮೆಯ್ಯ ಮಸಿ ಕೊರಲ ಬಕ್ಕಳೆ[ಪಾಠಾಂ. ಬಕ್ಕಂ, ಬಕ್ಕಳೆ] ಪೊಯ್ಮೆ ಪುಗಿಲ್ಗರೆವ ಕೆಯ್ಯ ಕಂಕರಿಕೆ ಕರಂ ರಯ್ಯಮೆನೆ ಪಾಡುತಿರ್ದರ್ಗಳನೊಯ್ಯನೆ ಕಡೆಗಣ್ಣೊಳಡರೆ ಚಪ್ಪರಿಸು ತ್ತುಂ (ಕಾವ್ಯಾ.ಶ. ೬೦೯) ; ಜಡೆಯುಂ ಬಕ್ಕಳೆ[ಪಾಠಾಂ. ಲೆ]ಯುಮವಾಳು (ಅರ್ಜನೀ. ೩-೯೩) ; ಸತ್ತಿಗೆ ಗಗ್ಗರಂ ಕರುಳ ಬಕ್ಕಳೆ ಮಿಂಟದ ಕಣ್ಗಳ್ವಿಸರಂ ಸುತ್ತಿದ ಬಾಳದುಳ್ಳಿವಿಯ ಸೊಂಟಗೆ ಪಂಪಲೆಯೊಂದು ಬಾಸಿಗಂ ನೆತ್ತರ ತಳ್ತ ಬಲ್ದಲೆಯು ಬಂದಿಗೆ ಪಾವುಗೆ ಪಂಚವಸ್ಥನಂ ಬೆತ್ತದ ಕೋಲಿವೊಂದಿ ನಿಲೆ ಸಾಧಕ ಬತ್ತಲೆ ಬರ್ಪಲೊಪ್ಪಿದರ್ (ಕಾವ್ಯಸಾ. ೩೪೩). [?]

**ಬಕ್ಕಾಯಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಮಾತಂಗಿ ಬಕ್ಕಾಯಿ ಎಲ್ಲ ನಾನಾಕದಾ ಕಳ್ಳದೇವತೆಗಳನಿಲ್ಲದೆ ಒಲಿಸಿದರು ಪೊಳ್ಳಲ್ಲದ ಗತಿ ಇಲ್ಲವೊ ಎಂದಿಗೂ (ಶಿಶಾಸು. ೩೬-೨). [?]

**ಬಕ್ಕಿ** (ನಾ). ಕಂಕುಳು ; ಬಗಲು : ಸಿಕ್ಕಿರ್ದ ಮರಿಗಳಂ ಬಕ್ಕಿಯೊಳಗವ ಚುತ್ತ ಮಿಕ್ಕಿರ್ದ ಕುರಿಗಳಂ ಚೈಯ ಚೈಚೈಯೆಂದು ಕರೆಯುತ್ತ . . . ಬೀರಪ್ಪನಂ ನೆನೆದು ಮರೆದಿರ್ದನಾ ಮಾಯಿಕಂ (ಮರಕೃ. ೯-೧೩).

[← ಮರಾ. ಬಖ್. ತೆಲು. ಬಗಿ = ಪಕ್ಕ]

**ಬಕ್ಕು** (ನಾ). ಒಂದು ಬಗೆಯ ನೀರುಹಕ್ಕಿ : ಬಕ್ಕುಗಳಂಚೆ ಕೊಂಚೆ ಜಳ ವಾಯಸಸಂತತಿ . . . ಸಾರಸಪಕ್ಕಿಯೆಂಬ ನೀರ್ವಕ್ಕಿಗಳಿಂ ಮನಂಗೊಳಿಸು ತಿರ್ದುದು ಪೂಗೊಳನಂಬುಜಾವಳಂ (ಸಳಶಂ. ೧೧೯). [?]

**ಬಕ್ಕುಡಿ$_1$, ಬಕ್ಕುಡಿ, ಬಳ್ಳುಡಿ** (ನಾ). ೧. ಬೆರಗು; ಆಶ್ಚರ್ಯ: "ಬಕ್ಕುಡಿ . . . ತಳವೆಳಗು ಮಲ್ಲಟಿಯೆನಲ್ಕೆ ಬೆಜಗಪ್ಪ ಭಾವಂ" (ಅಭಿ. ೪೧). ೨. ಭಯ; ಅಂಜಿಕೆ: ಒತ್ತುವ ಕೋಡ ಕಾಳೆ ಕುಣಿವೋಜೆಗೆ ಬಾಜಿಪ ಜಾಂಜೆ ಬೇಂಟೆಯೀಂದೆತ್ತಣಿನಪ್ಪ ಬಕ್ಕುಡಿಯ ಬಲ್ಲುಲಿ (ಸೂಕ್ತಿಸು. ೩-೨೦೦). ೩. ದೈನ್ಯ; ನಮ್ರಭಾವ: ಚುಂಬನಮಪ್ಪು ಚಪ್ಪರಣೆ ಬೇಡುವ ಬಕ್ಕುಡಿ ಕಾಯ್ದು ಕೂಡುವಟ್ಟುಂಬರಿಯೆಂಬಿವಾಗೆ (ಅರ್ಜನೀ. ೩-೭೦); ಮಕ್ಕಳಾಟಿಕೆಯಾಯ್ತುಲಾ ಸೌಬಲನ ದೆಸೆಯಿಂದ ಮಿಕ್ಕು ನೀ ಸೈರಿಸುವು ದೆಮ್ಮದು ಬಕ್ಕುಡಿಯ ಬೇಳಂಬ (ಕುಮ್ಯಾ.ಸ. ೦೩-೫೯). ೪. ತಳಮಳ; ಕಾತರ: ಬಂದು ಬಕ್ಕುಡಿ ಭಂಗ ಬಂಧನ ಕನಲ್ಕೆ ಕಳಕಳಮೆಂಬಿವು . . . ನೋಡಲಾ ನಾಡ ಹಿರಿಯೂರ ಪಟ್ಟಣದ ಪಾಳೆಯದ ಜನದೊಳಿಲ್ಲ (ಕಂಕ. ೬-೯೨). ೫. ವಿವಾದ; ಚರ್ಚೆ : "ವಿವಾದಃ = ಬಕ್ಕುಡಿಯುಂ" (ಅಭಿಪಾ-೨೨-೬). 'ಬಕ್ಕುಡಿಗುಟ್ಟು' ಪಠಾ. **ಬಕ್ಕುಡಿ:** ೫. ನಿಮ್ಮೊಳಿದೇಂ ಬಕ್ಕುಡಿಯೆಂದಾತನಂ ನಿವಾರಿಸಿ (ನೇಮಿಚಂ. ೯-೨೬೪); ಪೊನ್ನೆಣೆ ನೀಂ ನೀಟ ನುಡಿವಂತು ಬಕ್ಕು[ಪಾಠಾಂ.ಳ್ಳು]ಡಿಯೆ (ಅಜಿತಪ. ೨-೦೦೩); ಮುಳಿಸೆರ್ಗು ಸೊರ್ಕು ಬಕ್ಕುಡಿ ಪುರುಡು . . . ನುಸುಳ್ಗಣಕಾಂಗನೆಯುರ್ಗೆ ಶಾಶ್ವತಂ (ಕೃಶಕಂ. ೨೮-೬೩). **ಬಳ್ಳುಡಿ :** ೨. "ಅಗುರ್ವು ಬಿಗುರ್ ಬೆಗರ್ ಬಳ್ಳುಡಿ ... ಅದಿರ್ಪು — ಈ ೧೦ ಭಯಂ" (ಶಶಾ. ೩೬-೨೨೩) ; ಎಕ್ಕೆಕ್ಕ ಬಾಧಿಸುತ್ತಿದ್ದ ಸಂದೇಗವನು ಬಳ್ಳುಡಿಯನು ಸಂತರಿಸಿಕೊಳ್ಳಲು ನನಗೆ ಅನುಪೂಪವಿತ್ತು (ಶಬ್ದಿರ. ೨೦೨-೧೨).

**ಬಕ್ಕುಡಿ$_2$** (ನಾ). ಒಂದು ಬಗೆಯ ಸಸ್ಯ: ಮಂಗರವಳ್ಳಿ : "ಮಂಗುರ ವಳ್ಳಿ ವಕ್ರಿ ಬಕ್ಕುಡಿಯೆನಿಕ್ಕುಂ" (ಮುಂಗರಾ. ೪೩-೦೩). [?]

**ಬಕ್ಕುಡಿಗುಟ್ಟು, ಬರ್ಕುಡಿಗುಟ್ಟು** (ಕ್ರಿ). ಚರ್ಚಿಸು; ವಾದವಾಡು : ತನ್ನ ಧರ್ಮದವರೊಡನೆ ಪುಸ್ತಕಾದಿಗಳೊಳು ನಿನಗಿದೆನಗಿದೆಂದು ಬಕ್ಕುಡಿ ಗುಟ್ಟದುದುಂ (ಕಚೂಕ್ಕ. ೨೨೬); ಮತಿವಿಕಳ ಚಾರ್ವಾಕ ಬಿಡಿದೆ ಬಕ್ಕುಡಿ ಗುಟ್ಟುತ್ತಿರ್ಪಾದಿಪ್ಪೆ (ಅರಾಕ. ೩-೬-೫); ನಿಮ್ಮ ದೈವಂ ಸ್ವತಂತ್ರನಲ್ಲಾಗಿ ಬಂಧುರತರ ಜಗತ್ಕರ್ತನೆಂತು ಬಕ್ಕುಡಿಗುಟ್ಟಬೇಡವೆಲೆ ದುಷ್ಕೃತಯುತ (ಶಾಸೋಪು. ೯-೧೬೨). **ಬರ್ಕುಡಿಗುಟ್ಟು:** ತರ್ಕದೊಳ್ ಬಾದುಂ ಬರ್ಕುಡಿ ಗುಟ್ಟಿ ಪೊಟ್ಟುವಡೆದೆ (ಸುಕುಮಾ. ೩-೪೫). [ಬಕ್ಕುಡಿ$_1$ + ಕುಟ್ಟು$_1$]

**ಬಕ್ಕುಡಿಗೆಯ್, ಬರ್ಕುಡಿಗೆಯ್, ಬಳ್ಕುಡಿಗೆಯ್** (ಕ್ರಿ). ೧. = ಬಕ್ಕುಡಿ ಗುಟ್ಟು: ವಟುಗಳೋದನಾಲಿಸಿ ತಪ್ಪಂ ಓಡಿಪ್ಪುದುವನ್ನಾಸದೆ ಬಕ್ಕುಡಿ ಗೆಯ್ವುವು ಮುನಿಗಳೊಡನೆ ಶುಕಶಾರಿಕೆಗಳ್ (ಜಗಂ.೦೬-೩೦); ಕೋಟಿವಜ್ಜೆಯು ತಾನಾಕೆಯುಂ ಪಾಣಿಗ್ರಹಣಕ್ಕೆ ಕೆಯ್ಯನೊಡ್ಡುವಂತೆ ಕೆಯ್ಯನೊಡ್ಡಿ ಬಗೆದು ಮೊಯ್ಯನೆ ಸೋಲ್ತು ಬಕ್ಕುಡಿಗೆಯ್ದುಯ್ವಂತೆ ಕೆಯ್ಯ ಪೊಯ್ದೊಡೆ (ಬಂಕಂ. ೯-೬೭ ವ). ೨. ಆಶ್ಚರ್ಯಪಡು : ಕಯ್ವಾರದಿಂದೆ ಬಕ್ಕುಡಿಗೆಯ್ವರ್ಪರಿ ದೊಂದು ಸಮಯಮುಂ ಸಮತೆಯಿನಾರಯ್ವರ್ ಜೈನಮುನಾವೆಡೆಗೆಯ್ವುಡ ಮತ್ಯಂತಕಲುಷಹೃದಯರದೇನೋ (ಸಮುಚ. ಅಮಾಖಂಡ. ೩೬೫-೬೦). **ಬರ್ಕುಡಿಗೆಯ್:** ೧. ಜಯಂತನಂ ಜಡಿದು ಬರ್ಕುಡಿಗೆಯ್ದು ಬಸಂತನಂ ಸಮುಜ್ಜ್ವಳಕುಸುಮಾಸ್ತ್ರನಂ ಜಟಿದು (ವೃಕಂ. ೦೬-೬). **ಬಳ್ಕುಡಿಗೆಯ್:** ೧. ಜಲಜನ್ಮಕೋರಕದ್ವಯ ಸೊಕ್ಕುಮಿಕ್ಕಾನೆದಲೆ ಗಾಲಿವಕ್ಕಿ ಪೊಂಜೊ ನ್ನಲಿಗೆಗಳ ಚೆಲ್ವನಲೆದು ಮಲೆದೆಕ್ಕತುಳಗೆಡಿಸಿ ಬಳ್ಕುಡಿಗೆಯ್ದು ನೆಲೆವನೆಯ ಮುಂದೆ ನಿಂದ ಬೆಲೆವೆಂಡಿರುಗಳ ನೆಲೆಮೊಲೆಗಳ್ . . . ಎಡ್ಡಂಬಡೆದವು (ಕಾದ್ಯರೇ. ೪-೨೦). [ಬಕ್ಕುಡಿ$_1$ + ಕೆಯ್$_1$]

**ಬಕ್ಕುಡೆಯ, ಬಗ್ಗಡೆಯ** (ನಾ). ವಿತಂಡವಾದ ಮಾಡುವವನು : ಕಡುದುರುಳರಂ ಧೂರ್ತರಂ ಬಕ್ಕುಡೆ [ಪಾಠಾಂ. ಬಗ್ಗಡೆ, ಬಗೆಗೆಡೆ]ಯರಂ ದುರ್ನೀತರು ನಾಣ್ಗೆಡಿಕರಂ . . . ಕಾಯ್ಯಾಕೆಯೆಮ್ಮೆವಂ (ಬಸಪು. ೩೮-೭೦). **ಬಗ್ಗಡೆಯ :** ನುಡಿದಹನು ದುರ್ಭಾಷೆಗಳನಡಿಗಡಿಗೆ ಶಿವನಿಂದೆಯನುಸುರ್ವ ಬಗ್ಗಡೆಯನಂ ಕೊಲಲಹುದು (ಬಸಪು. ೫೬-೨೯).

ಬಗ್ಗಡೆಯತನ = ಔಚಿತ್ಯ ಮೀರಿದ ವರ್ತನೆ; ಅಧಿಕಪ್ರಸಂಗ : ಹಿಗ್ಗಿ ಹಿಂದೆಮ್ಮವನು ಹಾವಿನ ಹಗ್ಗದಲಿ ಹೆಡಗುಡಿಯ ಕಟ್ಟಿದ ಬಗ್ಗಡೆಯತನ ಕಿದಕೊ . . . ಸಾವಿನ ಸುಗ್ಗಿ ನಿನಗೆನುತಚ್ಚ ನಿಂದ್ರಾರಿಯನು ಸೌಮಿತ್ರಿ (ತೊರರಾ. ೬-೪೪-೦೩). [<ಬಕ್ಕುಡಿ$_1$ + — ಅ$_7$]

**ಬಕ್ಕೆ, ಬರ್ಕೆ** (ನಾ). ೧. ಸಿಹಿಯಾದುದು; ಇನಿದು : (?). ೨. ಒಂದು ಬಗೆಯ ಹಲಸು : ಪಥಿಕರ್ಬರ್ಕೆಂದು ಭೃಂಗಂಗಳಿಂದುಲಿವಂತಿ ರ್ದುದು ಪಣ್ತ ಬಕ್ಕೆ (ಅಧಿಪು. ೦೨-೬೬); ಬೇಗ್ಗಳಿಂ ತುಬಿಗಿರೆ ಕಾಯ್ತ ಬಕ್ಕೆ (ಎಕ. XI. ದಾವಣ. ೩೫-೩೮; ಸು. 1160); ಹಲಸಿನ ಹಣ್ಣಿನ ಮಹಾ ಗಾತ್ರವನ್ನು ನೋಡಿ ಅಜ್ಜೀಸಾಬು ಕೇಳಿದನು "ಬಿಳುವನೋ ? ಬಕ್ಕೆಯೋ ?" (ಮರಳು. ೪೩೦). 'ಬಕ್ಕೆವಲಸು' ಪರಾ. △ **ಬರ್ಕೆ :** ೨. ಬರ್ಕೆ[ಪಾಠಾಂ.ಕ್ಕೆ]ವಲಸುಗಳೊಳಸುರರ ತೆರ್ಕೆಯನೆಟ್ಟಿಟ್ಟ ಪೊಯ್ವುದುಂ ಕೋಟ್ಕಿದುಟುಂ ಬರ್ಕೆ[ಪಾಠಾಂ.ಕ್ಕೆ]ಯ ತೊಳೆಯುಂ ಸೂಸಿದುವು (ಶಂರಾಮಾ. ೦೦-೦೨೦). 'ಬರ್ಕೆವಲಸಂ' ಪರಾ.

[ದೇ.॥ ತಮಿ. ವರುಕ್ಕೈ. / ಮಲಾ. ಬರಕಾ]

**ಬಕ್ಕೆವಲಸು, ಬಕ್ಕೆಹಲಸು, ಬರ್ಕೆವಲಸು** (ನಾ). = ಬಕ್ಕೆ ೨: "ಸ್ವಾದುಪನಸಕ್ಕೆ ಪೆಸರೊಂದುವುದು ಬಕ್ಕೆವಲಸೆಂದು" (ಶಬ್ದ.ಮಂ. ೨೬); ಅರನೇಟಿಲ ಪೊಂಬಾಟಿಯ ಸುರಯಿಯ ಮಾಮರದ ಬಕ್ಕೆವಲಸಿನ ಪುದುವಿಂ ಪರಿದುರ್ಬಿದ ಕಟ್ಟಲೆ ದಿನಕರಾಂಶುಗಳ್ಗಂ ವಿಭೇದಿಸಲ್ಕರಿದು (ಕಾವ್ಯಾವ. ೨೪೯) : ಬೇರ್ಗಳೊಳಗೆ ಕಾತ ಬಕ್ಕೆವಲಸುಗಳ ಪಣ್ಗೊನೆಗಳಂ . . . ಮುಕ್ಕಣ್ಣನೆಡೆಗೆ ವನಪಾಲಕಂ ಪೊಱಿಸಿಕೊಂಡೈತಂದನು (ಕಾಪು. ೪೫-೨೯) : ದಾಳಿಂಬಂ ಬಕ್ಕೆವಲಸು . . . ಎಡೆಯೆಡೆಯೊಳ್ ಮನೋಹರಮಾಗಿರ್ಕುಂ (ರಾಮಾಕ. ೬-೨೫). **ಬಕ್ಕೆಹಲಸು :** ಬಕ್ಕೆಹಲಸು, ಅರಬಕ್ಕೆಹಲಸು, ಕಾವು ಹಲಸು ಹೀಗೆ ಬಗೆಬಗೆಯ ಹಲಸಿನ ಮರಗಳಿದ್ದವು (ಕ್ಯಾಕುಟಾ. ೯೦); ಒಂದು ಬಕ್ಕೆಹಲಸಿನ ಹಣ್ಣನ್ನು ಕತ್ತರಿಸಿ ಮಕ್ಕಳ ಮುಂದಿಟ್ಟರು (ಕಂಜಂ. ೦೫). △**ಬರ್ಕೆವಲಸು :** ಬರ್ಕೆ[ಪಾಠಾಂ.ಕ್ಕೆ]ವಲಸುಗಳೊಳಸುರರ ತೆರ್ಕೆಯನೆಟ್ಟಿಟ್ಟ ಪೊಯ್ವುದುಂ ಕೋಟ್ಕಿದುಟುಂ ಬರ್ಕೆ[ಪಾಠಾಂ.ಕ್ಕೆ]ಯ ತೊಳೆಯುಂ ಸೂಸಿದುವು (ಶಂರಾಮಾ. ೦೦-೦೨೦); ಕಾಯ್ತಳೆದೆಂಗು ಪಣ್ತ ಬರ್ಕೆವಲಸು ([illegible]. ೨-೦೬). [ಬಕ್ಕೆ + ಪಲಸು]

**ಬಕ್ಕೆಹಲಸು** 'ಬಕ್ಕೆವಲಸಂ' ನೋ.

**ಬಕ್ರಬರ್** (ಕ್ರಿ). ಅಡ್ಡಬರು; ತೊಡಕಾಗು : ಇ ದರ್ಮ್ಮಕ್ಕೆ ಬಕ್ರ ಬಪ್ಪೊಂ ಬಾರಣಾಸಿಯುಳ್ ಸಾಸಿರ್ವ್ವರ್ಪಾರ್ವ್ವರುಂ ಸಾಸಿರಂ ಕವಿಲೆಯುಂ ಕೊಂದ ಪಾತಕನಕ್ಕೆ (ಪ್ಯಾಕಂ. ೦೯೩೬, ೫೩-೩೪; ಸು. 550).

[ಬಕ್ರ$_9$ (? ←ಸಂ. ವಕ್ರ) + ಬರ್ (<ವರ್)]

**ಬಕ್ಶೀಸು** 'ಬಕ್ಷೀಸು' ನೋ.

**ಬಕ್ಷಿ, ಭಕ್ಷಿ** (ನಾ). ೧. ಅರಮನೆಯ ಮುಖ್ಯಾಧಿಕಾರಿ : ಮೋದೀಖಾನೀ ಬಕ್ಷೀ ವೀರಭದ್ರೈಯ (ಎಕ. XIV. ಕಾಪುರಾ. ೨೦೬-೦; 1868) ; ಇಬ್ಬರು ಬಕ್ಷಿಗಳನ್ನು ಜಡ್ಜಿಗಳಾಗಿ ನೇಮಿಸಿ (ಮಹಾಮಂ. II, ೨೬): ಈ ತಳ್ಳಿಯು . . . ವಿಳಂಬವಿಲ್ಲದೆ ಅರಮನೆಯ ಬಕ್ಷಿಯ ಕೈಗೆ ಬಂತು (ಹಾಗ್ಗೇಪ. ೨೨೬). ೨. (ಬಕ್ಷಿಯ ಹೆಸರಿನಲ್ಲಿ ಮುದ್ರಿಸಿದ) ಒಂದು ಬಗೆಯ ನಾಣ್ಯ : 'ಗೋವಿಂದಬಕ್ಷಿ' ಪರಾ. **ಭಕ್ಷಿ :** ೧. ಮುಂದಿನ ನವರಾತ್ರಿಯಲ್ಲಿ ಅವನು ಮಹಾರಾಜರ ಮುಂದೆ ಹಾಡುವುದಕ್ಕೆ ಏರ್ಪಾಡು ಮಾಡುವುದಾಗಿ ವೀಣೆ ಭಕ್ಷಿಗಳು ಅವನಿಗೆ ವಾಗ್ದಾನ ಮಾಡಿದ್ದರು (ಸುಬ್ಬಣ್ಣ. ೮); ಭಕ್ಷಿ ಆನಂದ ರಾಯನಿಗೆ ವರ್ತಮಾನವನ್ನು ಕೂಡಲೇ ಹೇಳಿ ಕಳುಹಿಸಿದನು (೩೦ತು. ೯೯).

[←ಪಾರ. ಬಖ್ಶೀ ; ಹಿಂ. ಬಕೀ. ಬಕ್ಶಿ: ಮರಾ. ಬಕ್ಷೀ. ಬಕ್ಶೀ. ಬಖ್ಶಿ. ಬಖ್ಷೀ]

**ಬಕ್ಷೀಸ್** 'ಬಕ್ಷೀಸು' ನೋ.

**ಬಕ್ಷೀಸು, ಬಕ್ಶೀಸಂ, ಬಕ್ಷೀಸ್, ಭಕ್ಷೀಸ್, ಭಕ್ಷೀಸಂ** (ನಾ). (ಮೆಚ್ಚುಗೆಯಿಂದ ಕೊಡುವ) ಬಹುಮಾನ ; ಇನಾಮು : ಆಳು ಗಳಿಗೆ ಹದಿನೈದು ರೂಬಲ್ ಬಕ್ಷೀಸು ಕೊಟ್ಟನು (ಪುಷರು. ೯೦) ; ಬಕ್ಷೀಸಿನ ಆಶೆಯಿಂದ ಎಲ್ಲಾದರೂ ಇಂಥ ಕಳವುಗಳ ಪತ್ತೆಯಾಗುವುದುಂಟೇ ? (ಕಳ್ಳಕಾ. ೬). **ಬಕ್ಶೀಸು :** ಸಂಕಣ್ಣನಾಯಕನಂ ಕರಶಿ ಆಲಿಂಗನವಂ ಮಾಡಿ ಕೊಂಡು ಮರೆಮಾಚಿದೆಯೆಂದು ಹೇಳಿ ಸದರಿ ಬಕ್ಶೀಸನ್ನು ಕೊಟ್ಟ (ಕೆಳದಿಂ. ೨೦_೦೯). **ಬಕ್ಷೀಸ್ :** ಅಲ್ಲಿ ಕಾಯುತ್ತಿದ್ದ ದರವಾನನಿಗೆ ಐದು ರೂಪಾಯಿಯ ನೋಟನ್ನು "ಬಕ್ಷೀಸ್" ಇತ್ತು ಬ್ರೊಹೆಯನ್ನು ಹತ್ತಿದನು (ಹಿಧಿಕ್ಕ. ೩೯). **ಭಕ್ಷೀಸ್ :** ಮೇಘದೂತದ ಶ್ಲೋಕಗಳನ್ನು ಹೇಳು ವುದು ಕೇಳಿ ಎಜ್ಯುಕೇಶನಲ್ ಇನ್ಸ್‌ಪೆಕ್ಟರ್ ಕೃಷ್ಣಮೂರ್ತಿಗೆ ಒಂದು ಫೌಂಟನ್ ಪೆನ್ 'ಭಕ್ಷೀಸ್' ಕೊಟ್ಟಿದ್ದರು (ಅಸ್ಮಿಕಂ. ೩೪). **ಭಕ್ಷೀಸು :** ನಿಮಗೆ ಇದನ್ನು ಭಕ್ಷೀಸಾಗಿ ಕೊಟ್ಟಿದ್ದೇನೆ (ಕಮಳ. ೨).

[←ಪಾರ. ಬಖ್ಶೀಸ್ ; ಹಿಂ. ಬಖಶೀಸ್, ಬಖ್ಶೀಸ್ ; ಮರಾ. ಬಕ್ಷೀಸ್, ಬಖ್ಶೀಸ್, ಬಖ್ಷೀಸ್]

**ಬಖರ್** 'ಬಖರು' ನೋ.

**ಬಖರು, ಬಖರ್, ಬಖೈರು** (ನಾ). ದೇಶಭಾಷೆಯಲ್ಲಿ ಗದ್ಯರೂಪ ವಾಗಿ ಬರೆದ ಐತಿಹಾಸಿಕ ವಿವರಗಳನ್ನೊಳಗೊಂಡ ಗ್ರಂಥ : ನವಾಬರು ಸವಣೂರಿಗೆ ರಾಜಕುಟುಂಬವನ್ನೂ . . . ಕರೆದುಕೊಂಡು

ಹೋಗಿ ಮನ್ನಿಸಿದರೆಂದು ಆ ಸಂಸ್ಥಾನದ ಬಖರುಗಳಲ್ಲಿ ಬರೆದಿದೆ (ಕಮಹೀ. ೫). **ಬಖರ್** : ಇತಿಹಾಸಗ್ರಂಥಗಳು ಬಖರ್ ಎಂದು ಮಹಾರಾಷ್ಟ್ರದಲ್ಲಿ ಪ್ರಸಿದ್ಧವಾಗಿರುವುವು (ಛತ್ರ. ೬೪). **ಬಖೈರು**: ಪುರಾತನ ಕೈಫೀಯತ್ತುಗಳನ್ನೂ ಬಖೈರುಗಳನ್ನೂ ಕಡತಗಳನ್ನೂ ಶಾಸನಗಳನ್ನೂ ತಿಳಿದವರು ಹೊರಕ್ಕೆ ತರಬೇಕು (ಶಿಕ್ಷರು. ೦ ಮುನ್ನುಡಿ) ; ಮರಾಟಿಭಾಷೆಯಲ್ಲಿ ಶಿವಾಜಿ ಮೊದಲಾದ ವೀರರ ಕಥೆಗಳೂ ಪುನೆ ಶ್ರೀಮಂತರ ಚರಿತ್ರೆಗಳೂ ಬರೆಯಲ್ಪಟ್ಟಿವೆ. ಇವುಗಳನ್ನು ಬಖೈರು ಎನ್ನುತ್ತಾರೆ (ಮುಸಂಗ. ೭).

[← ಮರಾ. ಬಖರ್, ಬಖೇರ್]

**ಬಖಾರಿ** (ನಾ). ಧಾನ್ಯ ಮುಂತಾದುವನ್ನು ಬಹಳ ಕಾಲ ರಕ್ಷಿಸಿಡಲು ಮಾಡಿದ ಗೂಡು ; ಪಣತ : ಬಖಾರಿಯಲ್ಲಿ ಗೋಡೆಯ ಹತ್ತಿರ ಇಲ್ಲವೆ ತಳಕ್ಕೆ ಇರುವ ಚೀಲಗಳೆಲ್ಲ ಹವೆಯಿಂದ ನೀರಿನಿಂದ ತೊಯಿದಂತೆ ಆಗುತ್ತದೆ (ಕುಂಬವ್ಯಾ. ೬೫). 'ವಖಾರ' ಪರಾ,

[ ←ಹಿಂ. ಬಖಾರ್ ; ಮರಾ. ಬಖಾರೀ ]

**ಬಖೇಡಿ** (ನಾ). ೧. ವಾಜ್ಯ ; ಕಲಹ ; ಜಗಳ : (*). ೨. ತೊಂದರೆ ; ಕಿರಿಕಿರಿ : (*). [ ←ಹಿಂ. ಮರಾ. ಬಖೇಡಾ]

**ಬಖೈರು** 'ಬಖರು' ನೋ.

**ಬಗಟು** (ಕ್ರಿ). ೧. ತೊಡೆಗಳನ್ನು ಅಗಲಿಸು : "ಬಗಟು_ಊರುವಿಶ್ಲೇಷೇ (ಕಾಲುಗಳನ್ನು) ಅಗಲಿಸು" (ಕಮಧಾ). ೨. ಪಾಲು ಮಾಡು ; ವಿಭಾಗಿಸು : ಅರಿವುದು ಮೂಗನಿಕ್ಕುಬಿಳೆ ಕೀಟ್ವುದು ಪಲ್ಗಳನೇಟುಬಟ್ಟೆಯಾಗಿರೆ ಕಿಬಿದೆಂಟುಸೂಟಬ್ ಬಗಟಿ ಕೊಯ್ವುದು ಮುಂಡೆಯುಂ (ಸೂಕ್ತಿಸು. ೯-೩೬೯).

[ದೇ. ॥ ತಮಿ. ಮಲ. ವಕು ; ತುಳು. ಬಗ್ಟು]

**ಬಗಟೆ** 'ಬಗಡೆ' ನೋ.

**ಬಗಟೆಗೋಳ** (ನಾ). (?) : ಮುದದೆ ವೈಯೆಂಬುದೇ ನಿಶ್ಚಯಂ ಕುಂಠವೆಂಬುದೇ ತಕ್ಕ್ರಿಯಾಹಾನಿ ವೈಕುಂತಮೆನಲಾಗಿ ಮದನಪಿತನೇ ಕಾಲು ಮುರಿದ ಕುಂಠನೆನಿಪ್ಪ ಪೆಸರು ಲೋಕಪ್ರಸಿದ್ಧಂ ಅವರಿಂದಲವನ ಪಾದಸ್ತಂಭವಾಗೆ ಮುರಿದುದು ಮೇಘವಲ್ಲಿ ನೆಲದೊಳಗೊಂದು ಕಾಲಿರಲ್ಕದು ಬಗಟೆಗೋಳ ಮಲ ಹೆಟ್ಟಿದಂತಾಗಿರ್ದಸಾ ಹರಿ ನಿರೋಧದಿಂದ (ಶೀಕೃಷ್ಣ. ೩-೦೪-೨೫). [?]

**ಬಗಡೆ**, ಬಗಟೆ (ನಾ). ೧. ಚೆನ್ನಾಗಿ ತಳಿಸದಿರುವ ಅಕ್ಕಿ ; ತೌಡು ಮಿಶ್ರವಾದ ಅಕ್ಕಿ : (*). ಬಗಟೆ : ೨. "ಅಕ್ಕಿಯ ಮೇಲಣ ತೌಡು (?) " : (ಶ್ರೀರಂ).

ಬಗಡೆಯಕ್ಕಿ=ಚೆನ್ನಾಗಿ ತಳಿಸದ; ತೌಡು ಮಿಶ್ರಿತವಾದ ಅಕ್ಕಿ: ಈ ಸಲದ ರೇಷನ್ ಅಕ್ಕಿ ದನಕ್ಕೆ ಹಾಕುವ ಬಗಡೆಯಕ್ಕಿಯ ಹಾಗಿದೆ (ರೂಢಿ).

[← ಮರಾ. ಬಗಡ್]

**ಬಗದತ್ತಿ** (ನಾ). (?) : ಕಟ್ಟಾಳ್ಮನುಸಗಣ್ಡ ಮನ್ನಿವ ಬಣ್ಣಸಂ ಬೀಟುವೋಂ ಪಡೆಯಂ ಬೆಳಪ ಬಿರುದಪ್ಪವರ ಬಿರುದಸೊಡ್ಡಬಿವೋನ್ ಬಿದ್ದ ಬಗದತ್ತಿ ಆಣೆ ಗಣ್ಡಕದ ಗಣೆ ಪೊಕ್ಕ ಅಪ್ಪಯ ಅಟ್ಟಿ (ಎಇ. XXIV. ೨೬-೦೦; ಸು. 885). [?]

**ಬಗದಳ** 'ಭಗದಾಳ' ನೋ.

**ಬಗದಾರೆ** (ನಾ). ಒಂದು ಬಗೆಯ ಹಕ್ಕಿ : ತರ್ಕಿಪ ಬಗದಾರೆಯ ಕೂಡೆ ಬಿಹ ಕೊಳೆರ್ವಕ್ಕಿಯ ಕೆಲದಾಡಿಸುತ ದಿಕ್ಕಿಗೆ ಪೆಸರಾಂತ ಸಿಪಿಲೆಗೆ ಕವಳವನಿಕ್ಕಿ ಕಾದಿಸುತಿರ್ದ ಮದನ (ಮೋಹತ. ೫-೩೫) ; ಜಾಣ ಮೆಲ್ನುಡಿ ಗೆಲವರೆ ಗಿಳಿ ಬಗದಾದ[ರೆ] . . . ಹೊಮ್ಮಿರಿ ಮಂಚದ ಸುತ್ತ ಠಾಣಮುಚಿರಲು ನೋಡಿದನು (ಮೋಹತ. ೩೦-೪೯). [?]

**ಬಗದಾಳ** 'ಭಗದಾಳ' ನೋ.

**ಬಗನಿ** 'ಬಯಿನೆ' ನೋ.

**ಬಗನೆ** 'ಬಯಿನೆ' ನೋ.

**ಬಗನೆಕಳ್ಳು** (ನಾ). ಬಗನೆಮರದಿಂದ ತೆಗೆದ ಹೆಂಡ. — ಮದ್ಯ: ಅವನಿಗೆ ಕುಡಿಯುವ ಚಟವಿದ್ದಿದ್ದರೆ ಬಗನೆಕಳ್ಳನ್ನು ಅಥವಾ ಅಕ್ಕಿಯ ಭೋಜವನ್ನು ಕುಡಿಸುತ್ತಿದ್ದರು (ಶಂಕಶಂ. ೯೬).

[ ಬಗನೆ (<ಬಯಿನೆ) + ಕಳ್ಳು (<ಕಳ್$_3$) ]

**ಬಗಬಗ** (ನಾ). ಬೆಂಕಿ, ಗಾಯ ಮೊದಲಾದುವುಗಳು ಉರಿಯುವುದನ್ನು ಹೇಳುವ ಒಂದು ಅನುಕರಣ ಪದ: ಹೊತ್ತಿಸಿದ ಜಿಡೆ ಬೆಂದು ದಳ್ಳುರಿ ಹತ್ತಿ ಬಗಬಗ [ಪಾಠಾಂ. ಭಗಭಗ] ಎನುತಲುತ್ತಮನುತ್ತಮಾಂಗಂ ಬೇವುತಿರಲು (ಜಸತ. ೧೬-೨೫); ಗಾಯ ಬಗಬಗ ಎಂದು ಉರಿಯುತ್ತಿದೆ (ರೂಢಿ).

**ಬಗಬಗನೆ** (ಅ). ಬಗಬಗ ಎಂದು : ಬೆಳಗುವನಲಂ ಬಗಬಗನೆ [ಪಾಠಾಂ. ಧಗಧಗನೆ] ಶಿಕೆ ಬೆಳೆದುರಿವುತಿಹ ಕಬ್ಬುನದ ಕಾವಲಿಯೊಳಗೆ ಕುಳ್ಳಿರ್ದು (ಬಸತ. ೫೩-೫೩). [ ಬಗಬಗ + — ಅನ್$_1$ ]

**ಬಗರ್**, ಬಗರು$_2$ (ಅ). ಇಲ್ಲವೆ ; ಹೊರತಾಗಿ : 'ಬಗರ್ಬಡ್ಡಿ', 'ಬಗಹುರ್ಕುಂ' ಪರಾ. **ಬಗರು$_2$** : 'ಬಗರುಚಿರಾಯಿತು' ಪರಾ.

[←ಅರ. ಹಿಂ. ಬಗ್ಯೆರ್; ಪಾರ. ಬಿಘ್ಯೆರ್; ಮರಾ. ಬಗರ್, ಬಗ್ಯೆರ್ ]

**ಬಗರಗೆ** (ನಾ). ೧. (ಒಣಗಿದ ನದಿಮಂಡೆಯಲ್ಲಿ ನೀರಿಗೋಸ್ಕರ ತಾತ್ಕಾಲಿಕವಾಗಿ) ತೋಡಿದ ಕುಳಿ. —ಗುಣ್ಡೆ : "ಚುರೀ, ಚುಂಡೀ, ಚೂಚುಕಃ—ಈ ೩ ಬಗರಗೆ" (ಹಲಾಯು. ೦೧೩-೬೨); ಪಥಿಕರಜಲ್ಕೊಂಡು ತೋಡಿವಬುಂಬುನೀರ ಬಗರಗೆಗಳುಮನೊಳಕೆಯ್ದು ಬತ್ತಿವ ಪಳ್ಳಂಗಳೊಳಂ (ಕಾದಂಕಾ. ೨೬೬); ಬೇಗೆ ಪರ್ವಿದ ಪರ್ವತಂಗಳ ತಾಪಮಂ ಕಳೆವೊಡವರ್ಪುಮನ್ನತಂಗಳಪ್ಪ ಜಲಧರಂಗಳ ಕಳೆಗುಂ ಕೀಬುಮಪ್ಪ ತೊರೆಯುಂ ಬಾವಿಯುಂ ಬಗರಗೆಯುಂ ಕಳೆದುಲಾವುವು (ಅರ್ಜನೀ. ೬-೨೨ ವ); ಬಗರಗೆಯೊಳ್ ಮಣಲನೆನಿತ್ತಗಟ್ವರ್ ಮಾನಸರನಿತ್ತು ನೀರೂರ್ಗುಂ (ಶೀತಿಮಂ. II. ೨೯೬). ೨. ಹೆಂಚಿನ ಚೂರು ; ಓಡು ; ಬಕ್ಕರೆ: "ಪಕ್ಕಳೆಂಮಂ ಬಗರಗೆಯೆಂದುಂ ಬಕ್ಕರೆ" (ಶಶಸಾ. ೬೬-೯೯೦); ಕೈಯೊಳ್ ಪಿಡಿದಾ ಲಾಗುಳವ ಕೋಲೊ ಬಗರ[ ಪಾಠಾಂ. ರಿ ]ಗೆಯೋ (ಶಬ್ದಸಾ. ೦೬೯); ಬೆಂಗಡರಿದ ಬಸುರ್ಗಳ ಕಿವರ್ದಲೆಗಳ ಕೆಂಗಣ್ಣುಗಳ ಕೋರೆದಾಡೆಯ ಸಂಗಳಿಸಿದ ಬಗರಗೆ ಬಾಳ ಕೈಯ ಭೂತಂಗಳಾ ಹುರದೊಳಿರ್ದವು ಕೇಳ (ಸೂಡಸೋ. ೯-೨೬); ಘುಗಿಘುಗಿಲ್ಘುಗಿಲೆಂದು ಕಬ್ಬೊಗೆ ನೆಗೆಯಲುರಿ ಹೊಡೆವಬುಜಜಾಂಡದ ಬಗರ[ಪಾಠಾಂ. ರೊ]ಗೆಯ ಭೇದಿಸಿತು (ಕುಪ್ವಾಕ. ೯-೪೪) ೩. (?): ಕೆಣಕಿವರೆ ಘುಗಿಲೆಂದುದೀತನ ರಣಪರಾಕ್ರಮವಿಟ್ಟು ಕರಡದ ಬಣಬೆ ಸಿಕ್ಕಿತು ಕಾಳುಗಿಚ್ಚಿನ ಬಾಯ ಬಗರಗೆಗೆ [ ಪಾಠಾಂ. ತುತ್ತಾಗೆ ] (ಕುಪ್ವಾಕ. ೩-೮).

**ಬಗರಿ** 'ಬವರಿ' ನೋ.

**ಬಗರು$_1$** (ಕ್ರಿ). (ಉಗುರಿನಿಂದ) ಕೆರೆ; ಗೆಬರು ; ಗೋರು ; ತೋಡು : ಪ್ರತಿಯೊಂದನ್ನೂ ಎರಡು ಮೂರು ಬಾರಿ ಕೇಳಿ, ಕೇಳಿ, ಬಗರಿ, ಬಗರಿ ಬಡಿಸುತ್ತಿದ್ದರು (ಶಂಶಾ. ೬೯) : ಇದನ್ನೆಲ್ಲವನ್ನು ಬಗರಿ ಕೂಡಿಡಬಹುದು (ಶಾಕ್ವಿತ. ೫೬). [ ದೇ. ॥ ತಮಿ. ಪರುಕ; ತೆಲು. ಬರುಕು ; ಕುಇ. ಪೆರ್ಕ ]

**ಬಗರು$_2$** 'ಬಗರ್' ನೋ.

**ಬಗರುಚಿರಾಯಿತು** (ನಾ). ಸರ್ಕಾರದ ಅಪ್ಪಣೆಯಿಲ್ಲದೆ ಬೇಸಾಯ ಮಾಡುವ ನೆಲ : ಭೂಮಿ ಇಲ್ಲದ ಬಡವನಾದ ಬಗರುಚಿರಾಯಿತು ಕುಳವು ಹೆಗ್ಗಡಿಯಾಗಿ ಬಲವಾಗಿರತಕ್ಕ ಪುರುಷನ ಸಹಾಯವನ್ನು ಪಡೆಯಬೇಕಾಗಿತ್ತು (ಶಾಳಗಾ. ೨೧). [ ಬಗರು$_2$ (<ಬಗರ್) + ಚಿರಾಯಿತು ]

**ಬಗರ್ಬಡ್ಡಿ** (ಅ). ಬಡ್ಡಿ ಇಲ್ಲದೆ : (*). [ ಬಗರ್ + ಬಡ್ಡಿ$_3$ ]

**ಬಗರ್ಬದಲಿ** (ಅ). ಬದಲಿಯಿಲ್ಲದೆ; ವ್ಯತ್ಯಾಸವಿಲ್ಲದೆ : (*). [ ಬಗರ್ + ಬದಲಿ₂ ]

**ಬಗರ್ರಜ** (ಅ). ರಜವಿಲ್ಲದೆ; ಬಿಡುವಿಲ್ಲದೆ : (*). [ ಬಗರ್ + ರಜ್ಯ (< ರಜಾ) ]

**ಬಗರ್ಹುಕುಂ, ಬಗರ್ಹುಕ್ಕುಂ** (ಅ). ಅಪ್ಪಣೆಯಿಲ್ಲದೆ : ರವಿನ್ಯೂ ಜಮೀನಿನಲ್ಲಿ ಕನ್‌ವರ್ಷನ್ ಆಗದೆ 'ಬಗರ್‌ಹುಕುಂ' ಮನೆ ಕಟ್ಟಿದ್ದು ಸರ್ಕಾರಕ್ಕೆ ಗೊತ್ತಾದರೆ ನಿನ್ನ ಮನೆ ಪಾಯದ ಕಲ್ಲು ಕದಲಿಸಿ ಬಿಟ್ಟಾರು ! (ಪಪ್ಪ್ಪ. ೪). **ಬಗರ್ಹುಕ್ಕುಂ**: ಸರ್ಕಾರದ ಜಮೀನನ್ನು ಅಥವಾ ನೀರನ್ನು ಬಗರ್‌ಹುಕ್ಕುಂ ಉಪಯೋಗಿಸಿದ್ದಕ್ಕೆ . . . ವಿಧಿಸುವ ಜುಲ್ಮಾನೆ (ಕಂದಾ. ೦೩೩). [ ಬಗರ್ + ಹುಕುಂ ]

**ಬಗರ್ಹುಕ್ಕುಂ** 'ಬಗರ್ಹುಕುಂ' ನೋ.

**ಬಗಲ್** (ನಾ). ತುಂಡು ; ಚೂರು.

ಬಗಬಗಲ್ಮಾಡು = ಚೂರುಚೂರು ಮಾಡು : ಯುಗಸಹಸ್ರ ಕ್ಕೊಡೆಯಬಹುದೆ ಬಲದುರ್ಗವಂ ಬಗಬಗಲ್ಮಾಡಿ ಮುರಿವಡದು ರಿಪುವುಸ್ಸಕವನೊಗದು ಬಿಸುಡಿದ ಪಾರ್ಥ ಪಾಶುಪತಬಾಣದಿಂ (ಕುರಂಗ. ೩೭-೩೪). [ ←ಮರಾ. ಬಖಲ್ ]

**ಬಗಲ** (ನಾ). ವಿಶಿಷ್ಟ ಆಕಾರದ ಒಂದು ಬಗೆಯ ಅರಬ್ಬಿನಾವೆ : ಫತ್ತೆಮಾರಿಗಳಲ್ಲಿಯೂ ಬಗಲಗಳಲ್ಲಿಯೂ ಸರಕುಗಳನ್ನು ತುಂಬಿಕೊಂಡು . . . ಸಮುದ್ರಪ್ರಯಾಣ ಮಾಡುತ್ತಿದ್ದರು (ಮುಂಬಯಿ. ೩-೧೦೨). [ ← ಮರಾ. ಬಗಲಾ./ತುಳು. ಬಗಲೆ ]

**ಬಗಲಂಗಿ** (ನಾ). ಗಿಡ್ಡತೋಳಿನ ಒಂದು ಬಗೆಯ ಅಂಗಿ : (*). [ ಬಗಲು + ಅಂಗಿ₂ ]

**ಬಗಲಬಂಡಿ** 'ಬಗಲುಬಂದು' ನೋ.

**ಬಗಲಬಂಡೆ** 'ಬಗಲುಬಂದು' ನೋ.

**ಬಗಲಾಂಟ** (ನಾ). ಸುಳ್ಳು ಆಪಾದನೆ; ಮಿಥ್ಯಾರೋಪ : ಇದೇನು ಹೊಸ 'ಬಗಲಾಂಟ'ದ ಸುದ್ದಿ ತಂದಾನೊ ಎನ್ನುವಂತೆ ಮಾಸ್ತರರನ್ನು ನೋಡಿ . . . ಕೇಳಿದರು (ಮೂರುಂ. ೩೦). [ ←ಮರಾ. ಬಂಗಲಾಟ್, ಬಂಗಲಾಥ್ ]

**ಬಗಲಿ** (ನಾ). ಕನ್ನ ; ಕಂಡಿ: 'ಬಗಲಿಪದ್ಧತಿ' ಪರಾ. [←ಮರಾ. ಬಗಲೀ]

**ಬಗಲಿಪದ್ಧತಿ** (ನಾ). ಕನ್ನ ಕೊರೆದು ಕದಿಯುವ ಪದ್ಧತಿ : ಬಾಗಿಲಿನ ಹತ್ತಿರ ಗೋಡೆ ಕೊರೆದು ಒಳಸೇರುವುದಕ್ಕೆ 'ಬಗಲಿ'ಪದ್ಧತಿಯೆಂದೂ . . . ಕರೆಯುವ ರೂಢಿಯಿದೆ (ಬಂಗಾರ. ೦೩೦). [ಬಗಲಿ + ಪದ್ಧತಿ]

**ಬಗಲು** (ನಾ). ೧. ಕಂಕುಳು; ಕಕ್ಷ : ಗಂಡುಗಲಿ ಕೃತವೀರ್ಯ ಸಂಭವಂ ಬಗಲೊಳಾಂತೊಲಪಿನಿಂ ತಿರುಗಲು (ಪರಸು. ೦೩-೩೭); ಲಲನೆ ಯರ ಮೈ ಕಂಪನೆಂಬಡೆದು ಬಗಲೊಳಗೆ ಜಲವಿಳಿದು ಬಾಮರತವು (ಮಲ್ಲಿಕ. ೬-೮); ಪಾದರಕ್ಷೆಯನ್ನು ಪಟ್ಟೆಯ ವಸ್ತ್ರದಲ್ಲಿ ಹುದುಗಿಸಿ, ಬಗಲಲ್ಲಿಟ್ಟು ಬಸವಣ್ಣನವರ ಅರಮನೆಗೊಯ್ದನು (ಕರೀ. ೪೩೦-೭ ಪ). ೨. ಮಗ್ಗುಲು ; ಪಕ್ಕ : ಪಡುವಲಾಗಿ ತಿರಿಗಿ ಬಗಲಾಗಿ ತಿರಿಗಿದ ದುರಿದಿಬಲಾಗಿ ಕರಿಯ ಕಲ್ಲ ಮೇಲೆ ಹಾದು (ಎಕ. III, ತಿರುಮ. ೬೨-೨೦: 1622); ಹಳ್ಳಿಯ ರೈತನೊಬ್ಬ. . . ದಾರಿಯ ಬಗಲಲ್ಲಿ ಗಾಡಿ ಹೊಡದು ಕೊಂಡು ಹೋಗುತ್ತಿದ್ದನು (ಶಿಪರು. ೦೭೨). ೩. ಪಕ್ಷ; ಪಂಗಡ : ಒಬ್ಬೊಬ್ಬ ಸಂಪಾದಕರು ಬಗಲಿಗೆ ಇರಲಿ (ಅರಳು. ೩೪೭-೧೦).

ಬಗಲಿಗೆ ಬೀಳು=ಅಧೀನವಾಗು ; ವಶವಾಗು : ಶ್ಯಾಮಣ್ಣ ಬಗಲಿಗೆ ಬಿದ್ದರೆ (ಶೀಲಕಳ. ೦೪) ; ಕಾಕಾ ಬಗಲಿಗೆ ಬಿದ್ದರ ಅಂತ ತಿಳೀ (ದೀಪಹ. II, ೨೦೦). [←ಪಾರ. ಬಘಲ್ ; ಹಿಂ. ಮರಾ. ಬಗಲ್]

**ಬಗಲುಕಸೆ** (ನಾ). ಒಂದು ಪಕ್ಕದಲ್ಲಿ ಲಾಡಿಯನ್ನು ಗಂಟುಕಟ್ಟಿ ತೊಡುವ ಅಂಗಿ : ಮೈಯಲ್ಲಿ ಕೊಡೆಯರಿವೆಯ ಬಗಲುಕಸೆಯ ಅಂಗಿ ಯನ್ನು ತೊಟ್ಟಿದ್ದ (ಜನಪ. ೨೬). [ಬಗಲು + ಕಸೆ₂]

**ಬಗಲುಚೀಲ** (ನಾ). ಹೆಗಲಿಗೆ ನೇತುಹಾಕಿಕೊಳ್ಳುವ ಚೀಲ : ಅವನು ತನ್ನ ಬಗಲುಚೀಲದಿಂದ ಪುಸ್ತಕಗಳನ್ನು ಹೊರದೆಗೆದನು (ರೂಪಿ). [ಬಗಲು + ಚೀಲ]

**ಬಗಲುಬಂಡಿ** 'ಬಗಲುಬಂದು' ನೋ.

**ಬಗಲುಬಂದು, ಬಗಲಬಂಡಿ, ಬಗಲಬಂಡೆ, ಬಗಲುಬಂಡಿ** (ನಾ). ಒಂದು ಬಗೆಯ ಅಂಗಿ : ಜಗನ್ನಾಥದಾಸರು ಬಗಲುಬಂದನ್ನು ತೊಟ್ಟು ಕೊಂಡು ಲಪ್ಪಾಟಿಯನ್ನು ಸುತ್ತಿಕೊಂಡು. . . ಮನೆಗೆ ಬಂದರು (ಕಥಾ. ೩೨೩). **ಬಗಲಬಂಡಿ** : ಶರೀಫರು. . . ಬಿಳೀ ಬಗಲಬಂಡಿಯನ್ನು ಅಚ್ಚುಕಟ್ಟಾಗಿ ತೊಡುತ್ತಿದ್ದರು (ಶಂಕ. ೬೧ ಶರೀಫರು); ಚಳಿಯ ಸಲುವಾಗಿ ಅವರು ಒಂದು ಖಾದಿಯ 'ಬಗಲಬಂಡಿ' ಯನ್ನು ಹಾಕುತ್ತಿ ದ್ದರು (ಎಸ್ಸ. ೦೩೦). **ಬಗಲಬಂಡೆ** : ವೇದವ್ಯಾಸಾಚಾರ್ಯ ಉಟ್ಟಿದ್ದು ಅಂಚಿನ ದೋತರ, ತಲೆಗೆ ಸುತ್ತಿದ್ದು ಕೆಂಪುಬನಾತು, ಮೈಯಲ್ಲಿ ಶುಭ್ರ ವಾದ ಬಗಲಬಂಡೆ (ಕಾದಮ್ಮ. ೦೬). **ಬಗಲುಬಂಡಿ** : ಹಿಂದಕ್ಕೊಮ್ಮೆ ಬಗಲುಬಂಡಿಗಳನ್ನು ನಮ್ಮ ಪುರಾತನರು ಹಾಕುತ್ತಿದ್ದರು (ಮುಂಗಾರು. ೨೪). [←ಪಾರ. ಮರಾ. ಬಗಲ್‌ಬಂದ್ ; ಹಿಂ. ಬಗಲ್‌ಬಂದೀ]

**ಬಗಲೆ, ಬಗಳೆ** (ನಾ). ೧. ತಾಂತ್ರಿಕರು ಪೂಜಿಸುವ ಒಬ್ಬ ದೇವತೆಯ ಹೆಸರು : ಈ ಎಲ್ಲಾ ಕ್ರಮಗಳೂ ಸಚ್ಚಿದಾನಂದರೂಪಿಣಿಯಾಗಿರುವ ತ್ರಿಪುರಾ, ಲಲಿತಾ, ಪರಾ, ಬಗಲಾ — ಮೊದಲಾದ ಸಾವಿರಾರು ಸಂಕೇತ ಗಳಿಂದ ಸೂಚಿಸಲ್ಪಡುವ ಶಕ್ತಿತಾದಾತ್ಮ್ಯವನ್ನು ಉಂಟುಮಾಡುವವು ಗಳಾಗಿವೆ (ಶಾರದ. ೨೨೦). **ಬಗಳೆ** : ೨. ವಗಲಾದೇವತೆಯನ್ನು ಕುರಿತು ಹೇಳುವ ಮಹಾಮಂತ್ರಗಳಲ್ಲಿ ಒಂದು : ಬಗಳಾ . . . ಇತ್ಯಾದಿ ಮಹಾಮಂತ್ರಗಳು (ಶಿವಕ. ೬೦). [<ಸಂ. ವಗಲಾ]

**ಬಗಸಿಗೆ** (ನಾ). ಬೊಗಸೆ ; ಅಂಜಲಿ : ಕುಂಚಿತಾಂಗುಲಿಗಳನ್ನುಳ್ಳ ಅಂಗೈಯು ಪ್ರಸೃತಿಯೆನಿಸುಗು. ಅದು ಕುಡಿತೆ; ಆ ಎರಡೂ ಕೂಡಿದರೆ ಅಂಜಲಿಯೆನಿಸುಗು. ಅದು ಬಗಸಿಗೆ (ಪಾಕಶಾ. ೪). [<ಬಗಸೆ]

**ಬಗಸು₁** 'ಬಯಸು₁' ನೋ.

**ಬಗಸು₂** (ನಾ). ೧. ಆಸೆ; ಹಂಬಲ : ಅಗಸಿಯ ತೆರಿ ನನ್ನ ಬಗಸುಳ್ಳ ತಳವಾರಾ ಬೊಗಸಿ ತುಂಬಿ ಪತಕಿ ಬಿಳಿಎಲಿಯ ಕೋ(ಪಲ್ಲಗೆ. ೩೯). ೨. (?) : ಸೊಗಸಿನಿಂ ಬಗಸಿನಿಂ ಮಿಗಿಲಾಗಿ ಲಘುವಾಗಿ (ಜನಪದ. ೯೬-೩೦). [<ಬಗಸು₁]

**ಬಗಸೆ, ಬೊಗಸೆ₁** (ನಾ). ೧. ಎರಡು ಅಂಗೈಗಳನ್ನೂ ಕೂಡಿಸಿದುದು ; ಸೇರೆ; ಅಂಜಲಿ : ಕುಡುತೆ ಬಗಸೆ ಪೊಱ ಗೆರಸಿ . . . ಮೊದಲಾದವು ಅವಮಾನಮೆಂಬುದಕ್ಕುಂ (ಶ್ರಾವಣ. ೩೬-೦೬); ಒಗೆದೊಗೆದು ಕಾಲ್ದೆರುಹಿ ರಕ್ತಮಂ ಬಗಸೆಯಿಂ ಮೊಗೆಮೊಗೆದು ಕುಡಿವುತಂ (ಕಸುಕು. ೩-೭-೬೬); ಹುಡುಗಿಯರು ಗಾಡಿಗಳನ್ನು ನಿಲ್ಲಿಸದೆ ಹಾಗೆಯೇ ಮೇಲೇರಿ ಬಗಸೆ ತುಂಬ ದ್ರಾಕ್ಷಿಗಳನ್ನು ಎತ್ತಿ . . . ಹಾಕುತ್ತಿದ್ದರು (ಮರಳಿ. ೦೩೬). ೨. ಒಂದು ಸೇರೆಯಲ್ಲಿ ತುಂಬುವಷ್ಟು : ಯಾರಾದರು ಬಂದ ಪುಣ್ಯಾತ್ಮರು ಸಾಸ್ಸ ತಲಿ ಪ್ಯಾಲಿ ಮಂದು ಬಗಸೆ ನೀರ್ರು ಆಕಬೇಕೆಂದು ಬೇಡುತ್ತೇನೆ (ಪ್ರಮ. ೧೯೨೯, ೯೭-೦೬: 1593 ?). **ಬೊಗಸೆ₁** : ೧. ರಕ್ತವನ್ನು ಬೊಗಸೆಗಳಿಂದ ಹಿಡಿದು ಬಾರಿಬಾರಿಗೂ ಕುಡಿಯುತ (ಕೃಪಾಕ. ೦೩೩); ಬೊಗಸೆಯೊಳಿರೆ ಹೂವು ಕೈಗಳನೆರಡನು ಪರಿಮಳಗೊಳಿಸುವುದಲ್ತೆ (ಜಂತಾಕ. ೬೯-೩೩). ೨. ಆಕೆಯನ್ನು ಮೂರುಲೋಕ ಸುತ್ತಿಸಿ, ಮೂರು ಬೊಗಸೆ ನೀರನ್ನು ಕುಡಿಸದೆ ಬಿಡುವೆನೇ ? (ಅಕ್ಕ್ಕ್ಕ. ೦೭೦).

**ಬಗಸೆಗಣ್**, ಬಗಸೆಗಣು, ಬಗಸೆಗಣ್ಣು, ಬೊಗಸೆಗಣ್, ಬೊಗಸೆಗಣ್ಣು (ನಾ). ಬೊಗಸೆಯಷ್ಟು ಅಗಲವಾದ ಕಣ್ಣು: ಬಗಸೆಗಣ್ಣುಡಿನೋಟವಮುಮ ಪೊಸಗಾಡಿಯುಂ ತೆಗೆಯೆ (ಕರ್ನಾ. ೩-೩೦); ಬಗಸೆಗಣ್ಣಳೊಳು ವಿಲಾಸವೆಸೆಯೆ ರಸವೂಗುವಂತೆ ಪಾತ್ರವಾಡಿದಳು (ಶಠಕ. ೦೩-೭೮); ಮೊಗವನಿನಿತುಮಂ ವ್ಯಾಪಿಸಲೆಳಸುವ ಬಗಸೆಗಣ್ಣಳಂ ಮೇರೆಯೊಳ್ ನಿಲಿಸುವೆಲ್ಲೆಗಟ್ಟೆಗಳಂತಿರ್ಪ ಪುರ್ಬುಗಳುಂ . . . ಮನಂಗೊಳೆ (ಕಳವಂ. ೭೭-೦೯). **ಬಗಸೆಗಣು**: ಸಕಿಯನ್ನ ಮೊಗದೊಳು ಮೊಳಿವ ವಿಶಾಸೆಯ ಚೆನ್ನವಾಣಿಕದುಟಿ ಬಗಸೆಗಣು [ಪಾಠಾಂ. ಣ್]ತಿಂಗಳರೆನೊಸಲು (ಸಾಳ್ವಭಾ. ೯-೬). **ಬಗಸೆಗಣ್ಣು**: ಒರ್ವಳಂ ತನ್ನ ಬಗಸೆಗಣ್ಣಿಂ ಮುರಿದು ನೋಡೆ (ಕರ್ನಾ. ೮-೯೬); ಬಗಸೆಗಣ್ಣ ಮಲಾಣಿಯರ್ಮೈತಂದರು ಬಗಿದ ಪುರ್ಬಿನ ಪೆಣ್ಣನೊಡನೆ (ಕಂಪ್ರಸಾಂ. ೯-೦೧೦). **ಬೊಗಸೆಗಣ್**: ಬೊಗಸೆಗಂಗಳ ಬಾಲೆಯರ ತಂದಾತನ ಶ್ರೀಕೃಷ್ಣ ಎನ್ನಿರೊ (ಕವಳ. ೦೩೦-೩); ಭಟ್ಟನಿಯ ಬೊಗಸೆಗಂಗಳಲ್ಲಿ ಕಂಬನಿ ತುಂಬಿ ಬಂದಿತು (ಪಾಡಾ. ೩೭೮). **ಬೊಗಸೆಗಣ್ಣು**: ಬೊಗಸೆಗಣ್ಣಿನ ಮುಗುದೆಯನು ನೋಳ್ಪೆ (ಹಾಸಂತ. ೧೮ ಅಡಕಕ್ಕ); ಅವಳ ಬೊಗಸೆಗಣ್ಣುಗಳಲ್ಲಿ ತುಂಬುತ್ತಿದ್ದ ನೀರನ್ನು ನೋಡಿದಾಗ ಗಲಿಬಿಲಿಗೊಂಡ (ವಾತ್ಸಲ್ಯ. ೩೭).

[ಬಗಸೆ + ಕಣ್]

**ಬಗಸೆಗಣು** 'ಬಗಸೆಗಣ್' ನೋ.

**ಬಗಸೆಗಣ್ಣು** 'ಬಗಸೆಗಣ್' ನೋ.

**ಬಗಸೆಗೈ** (ನಾ). ಜೋಡಿಸಿದ ಕೈ; ಸೇರೆಗೈ: ಬಗಸೆಗೈಗಳಲಿ ನೀರ್ವಿಡಿದು ಶ್ರೀರಂಗೇಶ ಸೊಗಸುಗಾತಿಯರ ಮೇಲಿಸಲು (ಕಂಪಾ. ೨೩-೦೨೩).

[ಬಗಸೆ + ಕೈ₂ (< ಕಯ್₂)]

**ಬಗಳಾಮುಖಿ** (ನಾ). = ಬಗಲೆ ೧: ಗಿರಿಗಳೊಳು ಸುರಗಿರಿಯು ಭೂಮಿಯ ತರುಗಳೊಳು ಮಂದಾರ ದೈವತದಿರವಿನೊಳು ಬಗಳಾಮುಖಿಯು (ಜ್ಞಾನಸಿಂ. ೧-೦೨). [< ಸಂ. ವಗಲಾಮುಖೀ]

**ಬಗಳಿ** 'ಬೊಗಳಿ' ನೋ.

**ಬಗಳೆ** 'ಬಗಲೆ' ನೋ.

**ಬಗಾಟಬಗರಿ** 'ಬೊಗಾಟಬುಗರಿ' ನೋ.

**ಬಗಿ₁** (ಕ್ರಿ). ೧. (ಎರಡು ಭಾಗಗಳಾಗುವಂತೆ) ಸೀಳು; ಹೋಳು ಮಾಡು: "ಬಗಿ–ವಿಶ್ಲೇಷೇ (ಭಾಗ ಮಾಡು)" (ಕಧಾಪ); ಅಂಬರಂಬರಂ ಬಗಿದು ನಿಮಿರ್ವ [ಪಾಠಾಂ. ಬಳೆದು ನಿಮಿರ್ವ] ತೆರೆಗಳ್ (ಆದಿಪು. ೦೨-೭೯ ವ); ನಿಮ್ಮುದರವ ಬಗಿದಾನು ಹೊಗುವ ಭರವೇನಗೆ (ಜಕವ. ೯೮೭); ಈಗಳೆ ನಿಮ್ಮನುಗಿದುಂ ಬಗಿದುಂ ದೆಸೆವಲಿಗುಡುತುಮನ್ನ ಚೆನ್ನ ತಮ್ಮನಂ ಕೊಳ್ವೆಂ (ರಾಮಾಶ್ವ. ೦೩೭-೨), ೨. ಕೆದಕು; ಬೆದಕು: ಪಿರಿದಪ್ಪೆರೆಯುಂ . . . ನಿಮ್ಮುರದಿಕ್ಕಿ ಮೆಟ್ಟಿ ಪುಬುಗಳ್ ಕರಮೆಲ್ಲೆಡೆ ಪತ್ತಿ ಬಗಿದು ತಿನೆ ಮೆಯ್ಯುಡಗಂ (ಧರ್ಮಾಮೃ. ೩-೭೯). 'ಬಗಿಯೇಜು' ಪರಾ. ೩. ಎರಡು ಭಾಗಗಳಾಗುವಂತೆ ತಳ್ಳಿ, ಜಾಗ ಮಾಡಿಕೊಳ್ಳು: ಮೊನೆಯಂಬಿನ ತಂಪಲೊಳರ್ಜುನನಂ ಕರ್ಣನುಮನಿನಿಸು ಕಾಣದಣಂ ಮೆಲ್ಲನೆ ಬಗಿದು ನೋಡಿ ಕುಡುಮಿಂಚಿನಂತೆ ಮೇಗೊಗೆದು ನಾರದಂ ನರ್ತಿಸಿದಂ (ಕಂಪಶಾ. ೦೨-೦೮೯); ಸೌಂದರಪೆರುಮಾಳೆಯರ್ದ ವನಕ್ಕೆ ಬಂದು ಅಲ್ಲಿ ಮುಂದೆ ನೆರೆದಿರ್ದ ನೆರವಿಯಂ ಬಗಿದು ಎನ್ನ ಭಕ್ತನ ಕೂಡಿ (ಕಂಪಾಶ. ೬-೮೫); ಬಿಡುಮುಡಿಯ ಕಟ್ಟದೆ ತವಕದಲ್ಲಿ ನೋಳ್ಪೆತ್ಸ್ವುಕದಿಂ ಮಂದಿಯ ಬಗಿದು ಚೆಲ್ವೆಗಂಗಳೋಳ್ಪಿಸುತ್ತಿರ್ದಲೊರ್ವಳಾ ಕುವರನ ಮಹೋತ್ಸವವನು (ಕಂಪು. ೫-೦೪). ೪. ಅಗೆ; ತೋಡು: ಬಗಿವು ಪಾತಾಳವುಂ ಮುಟ್ಟುವಗಳುದ್ಧದಿಂ . . . ಎಸೆವುವಾ ಪುರವು (ಜಕಾಂ. ೩. ೨೦೦-೧); ಹೊಸವೂಜಿತೆಯಂ ಬಗಬಗಿದು ತೋಡಿದದಲ್ಲದೇ ಕೈಕೊಳ್ಳನು (ಲಕ್ಷ್ಮೀ. ೯೭-೧೧). ೫. ಬೇರೆ ಮಾಡು; ಬೇರ್ಪಡಿಸು; ವಿರಳಗೊಳಿಸು (?): ಬಗಿದಗುಟ್ಟಿಂದದಂತೆ ತೆಗೆದಾಚೆಸಿದೋಗರದೊಳ್ ಪೊವಳ್ದು ಕಮ್ಮಗೆ ಕನೆಗೊಂಡ ಗೆಡ್ಡೆಮೊಸರಂ ಸುರಿದು . . . ಕಲಸಿರ್ದತಣ್ಣಲಸುಗೂಬನಿಳಾಪತಿಗಿತ್ತಂ (ಲೀಲಾವ. ೫-೬೨); ನಿಡುಗೇಶವ: ಗಿಬಗಿದು ಕಮ್ಮೈಣ್ಣೆಯನೊಡನೆಚಿದೊರ್ವಳವಳಿಗೆ . . . ಉಗುರ್ಗಳನಾಡಿಸಿದಳು (ಕುಂಬಾಸಾಂ. ೨೯-೯೩). ೬. (ಅಲಂ) ನಾಶಮಾಡು; ಇಲ್ಲವಾಗಿಸು: ಕೌರವನ ತಮ್ಮಂದಿರ ಸುಸನ್ನಾಹವ ವಿಸಂಚಿಸಿ ಬಗಿದು ಸಮಸಪ್ತಕರನೊಡೆಹಾಯ್ಸಿ (ಕುಮಾವ್ಯ. ೦೯-೨೯).

[ದೇ.॥ ತಮಿ. ವಕ್ಕೈ, ವಕು; ಮಲ. ವಕಪ್ಪು, ವಕು]

**ಬಗಿ₂** (ನಾ). ೧. ಸೀಳುನಿಕೆ; ಕತ್ತರಿಸುವಿಕೆ: (?). ೨. ಹೋಳು; ಭಾಗ: 'ಇರ್ಬಗಿ' ಪರಾ. ೩. ಸೀಳು; ಬಿರುಕು: ಕೊಯ್ಕೆ ಪೊರಳ್ಚಿ ಕುತ್ತೆ ಕೂಜಿದಿಕ್ಕಿ ತಡಂಗಡಿದೊಟ್ಟೆ ನೆತ್ತಿಯಂ ಪೊಯ್ಕೆ ಬಬಲ್ದು ವೈತರಣಿಯಂ ಪುಗೆ ಕಾಯ್ಸುಬಿ ಲೋಹವಾರಿ ಚುಂಚ್ಚುಯ್ಯನೆ ಸುಟ್ಟು ಹುಣ್ಣಾರೆಳೆ ಮೆಯ್ಯನಿತುಂ ಬಗಿಯಾಗಿ ಬಾಯ್ಗಳಿಂ ಹುಯ್ಯಲನಿಕ್ಕುವಂ ಕೊಳಜು ಕೊಳ್ಗುದಿವುಳ್ಗುದಿಗೊಂಡು ಮಗ್ಗುವರ್ (ಅಪಂತ. ೯-೩೨).

[< ಬಗಿ₁./ ತೆಲು. ಬಗಿ = ಪಕ್ಕ]

**ಬಗಿ₃**, ಬಗ್ಗಿ (ನಾ). (ಉಕ) (ನಾಲ್ಕು ಚಕ್ರಗಳುಳ್ಳ, ಒಂದು ಅಥವಾ ಎರಡು ಕುದುರೆಗಳನ್ನು ಕಟ್ಟುವ) ಒಂದು ಬಗೆಯ ಕುದುರೆಯ ಗಾಡಿ; ಸಾರೋಟು: ಜಾಗಿರದಾರರ ಮಕ್ಕಳು ವಿರಾಜಮಾನರಾಗಿ ಒಂದು ಬಗಿಯಲ್ಲಿ ಕುಳಿತುಕೊಂಡು ಆ ಶಾಲೆಗೆ ಹೋಗುತ್ತಿದ್ದರು (ತತ್ತ್ರೀ. ೩೦); ಜ್ಞಾನಶಂಕರರು . . . ಬಾಡಿಗೆ ಬಗಿಯನ್ನು ಹಿಡಿದು ಮನೆಗೆ ಹೊರಟರು (ಶ್ರೀನಮಿಕ್ರ. ೩೯). **ಬಗ್ಗಿ**: ಒಬ್ಬನು ಅಥವಾ ಇಬ್ಬರು ಸವಾರಿ ಮಾಡಬಹುದಾದ ಹಗುರವಾದ ಗಾಡಿ: ಬಗ್ಗಿ (Buggy. ಇಂಕಅ).

[← ಇಂ. Buggy. / ಅರ. ಬೋಗೀ; ಹಿಂ. ಬಗ್ಗೀ, ಬಗ್ಘೀ; ಮರಾ. ಬಗೀ]

**ಬಗಿನಿ** 'ಬಯಿನೆ' ನೋ.

**ಬಗಿಯೇಜು** (ನಾ). ಕೆದಕಿದುದರಿಂದ ಉಂಟಾದ ಗಾಯ: ಅರೆವಣನಾದೊಡಂ ಬಿಡದೆ ಮಾಡುವ ದೀವಿಗೆಯಾಸೆಯುಳ್ಳ ಬೀರರ ಬ[ಪಾಠಾಂ. ಬಿ]ಗಿಯೇಜ ಬಾಯಂಗಿಲು ಸಿಂಕಿಪ ಕೆಂಡದ ಸತ್ತ ರಾಜಪುತ್ರರ ವನಿತಾಜನಂ ತೊಳ್ದು ತೋ[ಕೋ]ಳ್ಗುದಿ ಬಾಳ್ಗುದಿಯಾಗಿ ಬೇವ ದಳ್ಳುರಿಗಳ ಮಾಲೆಗೊಂಡ ಬೆಳಗಿಂ ಬೆಳಗಾಮ್ಯೆರಮುಂ ಬಲಂಗಳೊಳ್ (ಅಸಂತ. ೦೦-೯೭).

[ಬಗಿ₁ + ಏಜು₄ (<ಏಜ್₄)]

**ಬಗಿಸು** (ಕ್ರಿ). ೧. ಸೀಳುವಂತೆ ಮಾಡು; ಸೀಳಿಸು: ಉದ್ರೇಕದಿಂದೀಕೆಯು ದರಮಂ ಬಗಿಸಿದ ಸತಿದ್ರೋಹ ನಾಲ್ಕು (ಕಂಪು. ೯-೩೧). ೨. ಅಗೆಯಿಸು; ತೋಡಿಸು: ಹೊಲದ ಮಣ್ಣನ್ನೇ ಬಗಿಸಿ ತೆಗೆದು ಸಾರಿಸಿ ದೊಡ್ಡದೊಂದು ಕಣವನ್ನು ಮಾಡಿಸುತ್ತಿದ್ದರು (ನಲಾ. ೬೩). [ಬಗಿ₁ + –ಸು₁]

**ಬಗೀಚಾ**, ಬಗೀಚೆ (ನಾ). ಸಣ್ಣ ತೋಟ; ಕೈತೋಟ: ಇದು ಬಂದ ಹೋದವರ ದಣಿಯಿಂದ ಮಾಡಿದ ಬಗೀಚಾ ಅಂತ ತಿಳಿದಿಯೇನು? (ಪಾಂಡಾಯ. ೦೪). **ಬಗೀಚೆ**: ಒಂದೊಮ್ಮೆ ಹೇಳಿದ ಬಗೀಚೆಯೊಳಗಿನ ಬಂಗಲೆಯಲ್ಲಿ ಇಬ್ಬರೂ ಕೂಡಿ ಸುಖವಾಗಿ ಕಾಲವನ್ನು ಕಳೆಯಬಹುದಾಗಿದ್ದಿತು (ನಳಗು. ೩೬).

[← ಪಾರ. ಬಾಗಚಾ; ಹಿಂ. ಬಗೀಚಾ; ಮರಾ. ಬಗಿಚಾ, ಬಗೀಚಾ]

**ಬಗೀಚೆ** 'ಬಗೀಚಾ' ನೋ.

**ಬಗುತ** 'ಬಕುತ' ನೋ.

**ಬಗುತಿ** 'ಬಕುತಿ' ನೋ.

**ಬಗುನಿ** 'ಬಯಿನೆ' ನೋ.

**ಬಗುಲಿ** (ನಾ). ಒಂದು ಬಗೆಯ ಸಸ್ಯ: ಮರಸದ. ಬಗುಲಿ. ಹಂಜಾಕೆ ಕಡ್ಡು. ಮರಸುತ್ತುಬಳ್ಳಿ (ಮ್ಯಾಕ್. ೦೬-೨೯೨). [ ? ]

**ಬಗುಸಾಳೆ** (ನಾ). ಬೊಗಳೆ; ಬಡಾಯಿ: ಒಂದೇ ಪೆಟ್ಟಿನಲ್ಲಿ ಹೊಡೆದು ಹಾಕಿ ಬರುತ್ತೇನೆಂದು ಬಗುಸಾಳೆ ಮಾತು ಕೊಟ್ಟು . . . ಮನೆಯ ದೂಲದ ಮೇಲೆ ಬಂದು ಕೂತುಕೊಂಡಿತು (ಕಥಾಮು. IV. ೯೬). [ ? ]

**ಬಗುಳ್₁**, ಬಗುಳು₁, ಬೊಗಳು, ಬೊಗುಳು₁ (ಕ್ರಿ). ೧. ನಾಯಿಯು ಕೂಗು,-ಧ್ವನಿ ಮಾಡು: "ಬಗುಳ್_ಕರ್ಕರಧ್ವನೌ, ಸಾರಣೇ ಚ (ಅವುಶಂಕೆಯಿಂದ ತೊಂದರೆಪಡು)" (ಕಧಾ): ಪರ್ಬುಡಿಕೆಯ ನಾತ ಮಾನಿಗಳ ಬರ್ಣನಂ ಬಗುಳುತ್ತ ಮುತ್ತಿ ಕೀವುದುತ ತಗುಳ್ವನಂ ತೆಗೆವ ವಾಯ್ಗಳಗುರ್ವಿಸುತಿರ್ಪ ತೋರ್ಪ ಪೇರಡವಿಯ ಬೇಡಪಳ್ಳಿಗಳ ನೀಕ್ಷಿಸುತಂ (ಅರಾತ. ೩-೪೩); ಬಾಟ್ಟ ಮನೆಗೊಂದು ಬಗುಳ್ವುದು ಬೇಟ್ಯುಂ (ಅಚೂಕ್ರ. ೦-೯೦). ೨. ಗಳಹು; ಅಪಲಾಪ ಮಾಡು; ಹರಟು: ನ್ಯಾಯಮಿದು ಧರೆಗೆ ದುರಭಿಪ್ರಾಯದ ದುರ್ಜನನ ಮೊಱೆಯುಂ ಕಂಡೊಡೆ ಥೂ ಚೀಯೆಂಬುದುಱ್ ಬಗುಳ್ವನ ಬಾಯೊಳಗುಗುಳ್ಂಬ ನಾಡ ಗಾದೆಯ ಬಲದಿಂ (ಧರ್ಮಾ. ೦-೬೯); ನಾಯಿ ಬಗುಳದೆ ಕೆಲಕ ಸುರು (ಕೊರಾ. ೩-೩-೬). ಬಗುಳು₁ : ೧. ಮುಳಿದು ಬಗುಳುವ ನಾಯ್ಗೆ ಚಂದ್ರಮನಳುಕುವನೆ (ಕುಮ್ಯಾ. ೬೦೩. ೦೦-೦೬); ನಾಯಿಯೊಂದು . . . ಬಗುಳಿತು (ಕುಜಾಂ. ೧೦೨). ೨. ಬಗುಳುವವದಿರು ಹರಿಯ ಬಡಿಹೋರಿಗಳಲಾ (ಕುವ್ಯಾಸ. ೦೦-೯); ಬಾಯ ಬಡಿಕರು ಬಂದ ಬಣ್ಣಿಗೆಯಸಗಿ ಬಗುಳುವರು (ಕೃಷ್ಣಾ. ೦೯-೨೯). ಬೊಗಳು: ೧. ಆನೆ ಕಂಡು ಶ್ವಾನ ಬೊಗಳಿದ ಹಾಗೆ (ಗಾದೆ). ೨. ಶರಣ ಏಕ ಗುರು ಚರ ಪರವೆಂದು ಬೊಗಳುವ ಕುನ್ನಿಗಳ ನೋಡಿ (ಮಹಾದೇ. ೩. ೯೭-೨೨೩); ಹುಸಿಯ ಬೊಗಳುವನೊಬ್ಬ ಹುಚ್ಚ ಹೊಲೆಯ (ಪುರಂದ. ೦-೦೬೩-೯); ಈ ಗಂಡುಹುಡುಗರು ಏನೇನೋ ಬೊಗಳುತ್ತಾರೆ (ರಂಗಓ. ೯೬). ಬೊಗುಳು₁ : ೩. ಒದರು; ಹೇಳು : ಯಾವ ತೋಟ ಲೂಟಿ ಹೊಡೆಯುವುದಕ್ಕೆ ಹೋಗಿದ್ದಿರಿ. ನಿಜ ಬೊಗುಳಿ (ಕಳ್ಳು. ೩೨).

ಬಗುಳ ಸನ್ನಿ = ಬಗುಳುಸನ್ನಿ: ಏತರಿಂದಿವಗೀ ಪರಿಯ ಕಡುಮಾತು ಬಂದುದೊ . . . ತನುಜಾತಗಿಕ್ಕಿತು ಬಗುಳ ಸನ್ನಿ ವಿಕಾರವಕಟ (ಕೃಷ್ಣಾಕ. ೦೦-೯). [ದೇ. ॥ ತುಳು. ಬಗುಳು, ಬಗಳ್ಳು, ಬಗುಲ್, ಬಗುಲು]

**ಬಗುಳ್₂** (ಕ್ರಿ). ಭೇದಿಯಾಗು; ಆಮಶಂಕೆಯುಂಟಾಗು: "ಬಗುಳ್_ಕರ್ಕರಧ್ವನೌ, ಸಾರಣೇ ಚ (ಆಮಶಂಕೆಯಿಂದ ತೊಂದರೆ ಪಡು)" (ಕಧಾ). [ ? ]

**ಬಗುಳಾಟ**, ಬೊಗುಳಾಟ (ನಾ). ಕೆಲಸಕ್ಕೆ ಬಾರದ ಮಾತು; ಹರಟೆ: ಬಂಡುಗಳೆ ಬಗುಳಾಟವಾಡುತ ಪಿಂಡರೊಡನೆ ತಿರುಗುವ ತುಂಡುವೇಶ್ಯೆಯ ತುರ್ಡುಕುಜಗಳಕಿ ಭಂಡರಲ್ಲ (ಕಠಿಣ. ೩೬೯-೩); ಬಗೆಯದೆ ಪುರುಷನ ಮಾತಾ ನಗೆಗೇಡಿತನದಲ್ಲಿ ಬಗುಳಾಟದೊಳಗಿಹ ಏಗಡೆಯಾದರ ನಿನ್ನ ನೆನೆಯೆ (ಕಪೂಕ. ೦೯-೬೩). ಬೊಗುಳಾಟ : ಆವ ತೆರದ ಬೊಗುಳಾಟವುನ್ನುಳಿದರೀ ಭೂಪಾಲರು (ಕಕಬು. ೩-೦೯). [ಬಗುಳ್₂ + ಆಟ]

**ಬಗುಳಿಸು**, ಬೊಗುಳಿಸು (ಕ್ರಿ). ನಾಯಿಯು ಬಗುಳುವಂತೆ ಮಾಡು: ಆ ಹುಡುಗ ನಾಯಿಯನ್ನು ಛೂ ಬಿಟ್ಟು ಬಗುಳಿಸಿದನು (ಕೂಕ). ಬೊಗುಳಿಸು: ನೀನು ಆ ನಾಯಿಯನ್ನು ಹಿಂಸೆ ಮಾಡಿ ಬೊಗುಳಿಸಬೇಡ (ಕೂಕ). [ಬಗುಳು₁ (<ಬಗುಳ್₁) + – ಇಸು₃]

**ಬಗುಳು₁** 'ಬಗುಳ್₁' ನೋ.

**ಬಗುಳು₂**, ಬಳ್ಳು₂, ಬೊಗುಳ್, ಬೊಗುಳು₂, ಬೊಳ್ಳು (ನಾ). ೧. (ನಾಯಿ,ನರಿ ಮುಂತಾದ) ಪ್ರಾಣಿಗಳು ಕೂಗುವಿಕೆ,_ಅರಚುವಿಕೆ: ರಾತ್ರಿಯೆಲ್ಲಾ ಎದುರುಮನೆಯ ನಾಯಿಯ ಬಗುಳಿನಿಂದ ನಿದ್ರೆ ಮಾಡಲಾಗಲಿಲ್ಲ (ಕೂಕ). ೨. ಗಳಹುವಿಕೆ; ಬಡಬಡಿಸುವಿಕೆ: 'ಬಗುಳುಸನ್ನಿ' ಪರಾ. ಬಳ್ಳು₂: ೧ 'ಬಳ್ಳಿಕ್ಕು', 'ಬಳ್ಳುಗೆಡೆ' ಪರಾ. ಬೊಗುಳ್ : ೧. "ಭಂಡನಂ, ಭಂಡನೀಯಂ, ಭಂಡ್ಯಂ, ಈ ೩ ಬೊಗುಳ್" (ಕಾಶಿ. ೧೦೦). ಬೊಗುಳು₂: ೨. 'ಬೊಗುಳುಸನ್ನಿ' ಪರಾ. ಬೊಳ್ಳು: ೧. 'ಬೊಳ್ಳಿಡು', 'ಬೊಳ್ಳುಗರೆ' ಪರಾ.

[<ಬಗುಳ್₁ . / ತುಳು. ಬಗಳು]

**ಬಗುಳುಸನ್ನಿ**, ಬೊಗುಳುಸನ್ನಿ (ನಾ). ಜ್ವರದ ತಾಪವು ಹೆಚ್ಚಾಗಿ ಅಸಂಬದ್ಧವಾಗಿ ಮಾತನಾಡುವಂತಹ ಒಂದು ಬಗೆಯ ರೋಗ: "(ಟೈಫಸ್ ಜ್ವರದಲ್ಲಿಯಂತೆ) ಮಾತಾಡುವ, ಗೊಣಗುಟ್ಟುವ,-ಸನ್ನಿ; ಬಗುಳು ಸನ್ನಿ" (Typhomania. ೩೦೯೩). ಬೊಗುಳುಸನ್ನಿ : ಆತ ಬೊಗುಳುಸನ್ನಿಯಿಂದ ರಾತ್ರಿಯೆಲ್ಲಾ ಕೂಗಾಡಿದನು (ಕೂಕ). [ಬಗುಳು₂ + ಸನ್ನಿ₂]

**ಬಗುಳೆ**, ಬೊಗಳೆ (ನಾ). ೧. ಕೆಲಸಕ್ಕೆ ಬಾರದ ಮಾತು; ಪೊಳ್ಳು ಹರಟೆ: "ಪೊಳ್ಳುಹರಟೆ; ಬುರುಡೆ; ಬಗುಳೆ; ಅವಿವೇಕದ ಮಾತು; ಅವಿವೇಕ" (Bosh. ೩೦೯೩). ಬೊಗಳೆ: ೧. ನಿಜವಾದ ವೀರನಿಗೆ ಇಂತಹ ಬೊಗಳೆಯು ಸರಿಯೆನಿಸದು (ಹಂಕು. ೭). ೨. ಸುಳ್ಳು : ಅದೆಲ್ಲ ಬರೀ ಬೊಗಳೆಯೆಂದೇ ನನ್ನ ಅಭಿಪ್ರಾಯ (ಶಾಪೂರಿ. ೦೬೭). ೩. ಬಡಾಯಿ : ಅವನು ಬೊಗಳೆ ಕೊಚ್ಚಿಕೊಳ್ಳುವುದರಲ್ಲಿ ಬಲು ಗಟ್ಟಿಗ (ಕೂಕ). ೪. ಬಡಾಯಿಕೋರ : ಈತ ಎಷ್ಟಿದ್ದರೂ ಬೊಗಳೆ (ಕಶ್ಯಾಕಿ. ೦೯೩).

ಬೊಗಳೆ ಬಿಡು = ಸುಳ್ಳು ಹೇಳು; ಸುಳ್ಳಾಡು: ರುದ್ರನನ್ನು ಹಿಗ್ಗಿಸಲು . . . ಸೋಮಯಾಜರು ಬೊಗಳೆ ಬಿಡುತ್ತಾರೆ (ರೀಕಹೊ. ೦೯೦).

ಬೊಗಳೆ ಹೊಡೆ = ಬೊಗಳೆ ಬಿಡು : ಅವನ ಹಾಗೆ ಬೊಗಳೆ ಹೊಡೆಯುವವನನ್ನು ನಾನು ಬೇರೆಲ್ಲೂ ನೋಡಿಲ್ಲ (ಕೂಕ). [<ಬಗುಳ್₁]

**ಬಗೆ₁** (ಕ್ರಿ). ೧. ಆಲೋಚನೆ ಮಾಡು; ಯೋಚಿಸು : "ಬಗೆ–ಪರಿಭಾವೇ, ಚಿತ್ತೇ ಚ" (ಕಧಾ): ಸಕೃದವುಂ ಪಾಗದವುಮುದಕ್ಕುಂ ಬಗೆದಂತೆ ಸಮಱ್ ಪೇಟಲ್ ಮುನ್ನಂ (ಕಶಾ. ೧-೯೦); ದಿವ್ಯಾಹಾರಮನೆಲ್ಲಾ ಕಾಲಮುಣಲ್ಪೆಱಲಕ್ಕುಮೆಂದು ಬಗೆದು (ವಡ್ಡಾರಾ. ೬೯-೩); ಎಂದು ತನ್ನೊಳ್ ಬಗೆಯುತ್ತಿರ್ಪನಂ (ಶಂಕರಾ. ೦೦-೦೯ ವ). ೨. ಎಣಿಸು; ಗಣಿಸು; ಲಕ್ಷಿಸು: ಅಂತು ಬಂದ ಪಾಟಿಗಾಲಮಂ ಬಗೆಯದೆ . . . ಬರ್ಪನಂ (ಅಜಿತ. ೩೬೩); ಎನ್ನನಣಂ ಬಗೆಯರೆಂಬ ಬಗೆಯನೆ ಬಗೆದಂ (ಕುಸುಮಾ. ೨-೬೧). ೩. ಅರಿ; ತಿಳಿ; ಭಾವಿಸು: ಬಗೆಯೆ ನಿರಹಂಕಾರ ಸುಜ್ಞಾನಿಗಳ ಮೇಳವನೊಲ್ಲದಾ ಪ್ರಭುವಗಲಿ ತಾನಿರಬಲ್ಲನೇ (ಪ್ರಭುಲಿ. ೬-೪೯); ತನ್ನಂತೆ ಪರರ ಬಗೆದಡೆ ಕೈಲಾಸ ಬಿನ್ನಾಣವಕ್ಕು (ಕರ್ತಬ್ಯ. ೬೦೪). ೪. ಬಯಸು; ಅಪೇಕ್ಷಿಸು; ಇಚ್ಛಿಸು: ಅಱಿಯಲ್ ಬಗೆವೊಂಗೆ ಬ್ರಹ್ಮತಿಯ ಪಾಪ ಮಕ್ಕುಂ (ಎಪಿ. VII. ೨೦೦-೨೦; ೧೧೩೩); ಬಗೆದೆಡೆಯನೆಯ್ದೆ ಬಗೆದ ಬಗೆಯಂ ಬಗೆದಂತೆ ಕೀರ್ತಿ ಪೋವ ಜೋಡೆಯರಂ ಕಂಡು (ಶಂಕರಾ. ೯-೯೦ ವ); ಬಗೆದು ದಣಿಯರು ಯೋಗಿಗಳು (ಕುವ್ಯಾಸ. ೯-೬೬); ಆಳಾಗಿ ಅರಸಂಗೆ ಕೇಡು ಬಗೆವವ ಹೊಲೆಯ . . . ಉಂಡ ಮನೆಗೆರಡನ್ನು ಬಗೆವಾತನೇ ಹೊಲೆಯ (ಪುರಂದ. ೦-೦೬೩-೨).

[ದೇ. ॥ ತಮಿ. ವಕೈ; ತುಳು. ಬಗೆ; ತೆಲು. ವಗಚು]

**ಬಗೆ₂** (ನಾ). ೧. ಆಲೋಚನೆ; ಯೋಚನೆ : ಬಗೆ ಪೊಸತಪ್ಪುದಾಗಿ ಪ್ರಬಂಧಬಂಧದೊಳೊಂದುವುದೊಂದಿ ದೇಸಿಯೊಳ್ ಪುಗುವುದು (ಶಂಕರಾ. ೦-೯); ಇದಂ ಪಿರಿದು ಮಾಡಿ ಪೇೞ್ವೆನೆಂಬ ಬಗೆ ಮನದೊಳ್ ಮಿಗೆ ಮಾಣದೆ (ಶಂಕರಾ. ೯೩-೬). ೨. ಅಭಿಪ್ರಾಯ; ಮತ: "ಬಗೆಯೆನಲಭಿಪ್ರಾಯಮಕ್ಕು" (ಕಕಾ. ೬೯); ಮಂದಗಮನೆಯ ಕಂಡಿರೇ ಎನೆಂದು ನುಡಿದಳು ಸತಿಯ ಬಗೆಯೇನೆಂದು ಕೇಳಲು ನೃಪಗೆ ಬಳಿಕಿಂತೆಂದುದಾ ಪಕ್ಷಿ (ಕಕಕ. ೨-೯೯). ೩. ಮನಸ್ಸು; ಚಿತ್ತ: "ಬಗೆ – ಪರಿಭಾವೇ.

ಚಿತ್ತೇ ಚ" (ಶಬ್ದಮ) ; ಕುಟಿಲತಂತ್ರ ಪೆಱರ ಬಗೆಯಂ ತೆಱದಿರೆ ಪೆಱಗಾಳ್ ಪೆಲಾರ್ವವಂ ಮಾತಱಿವಂ (ಕವಿರಾ. ೦-೦೩) ; ಅಬ್ಬಾ ಇಂದೆಮಗುಣ್ಣಲ್ಕೆ ಬಗೆಯಿಲ್ಲವುಪವಾಸಂಗೆಯ್ದಪ್ಪೆಂ (ಪಂಪಭಾ. ೬೦-೯) : ಮಾಸವ ಕೀರ್ತಿ ಕಲಿ ಹುಗದ ಹೆಸರಿಂಗದೋಚೆ ಕೊರಗದ ವರ್ಪವುಗದ ಬಗೆ ಹುಸಿ ಹುಗದ ನುಡಿ (ಶಶಾ. ೦-೯೯). ೪. ರೀತಿ ; ಮಾರ್ಗ ; ಕ್ರಮ : ಪಸರಿಸಿದಾ ಬಗೆ ಮನಮಂ ಪೊಸತಾಗಿ ನೆಗಟ್ಟುಲಜೀಯನಾ ರಚನೆಯೊಳೀಂ ಬಸಸಂ (ಕವಿರಾ. ೦-೦೨) : ಎನಗನುಕೂಲಮಕ್ಕೆ ಗುಣವರ್ಪನ ಜಾಣ್ನುಡಿ ಪಂಪನಿಂವು ಪೊನ್ನನ ಬಗೆ (ಅಪಂಪು. ೦-೩೩) ; ವಾಗಳ ನೀನಾತನ ಕೈವಿಡಿ ದಂದಿನ ಬಗೆಯ ಸುಖಂಗಳನಾಂತು ವಿಗೆ ಜೀವಿಸು (ಪೋಹಶ. ೬-೯೬). ೫. ಆಸೆ ; ಬಯಕೆ ; ಇಚ್ಛೆ : ನೀನಿದರ್ಕೇನುಮಂ ಬಗೆಯಲ್ವೇಡ ನಿನ್ನ ಬಗೆಯಂ ಬಗೆವಂತೆ ತೀರ್ಚುವೆಂ (ಶುಕಶಾ. ೪-೬೯ ವ) ; ನುಡಿಯೊಳಗೆ ತನ್ನ ಬಗೆಯರಿ ಬೇಡಿದ ಪವವಿಯನೀವ ಕೂಡಲಸಂಗಮದೇವ (ಬಸವ. ೬೬೦). ೬. ಕಲ್ಪನೆ ; ಊಹೆ ; ತುಂಗಭವದ್ಯೋಧರ ಬೆಳಗಿಂ ಗೊಳಗವ್ವನಿತನೆವ್ವು ಬಗೆ ಪುಗದು (ಅಂಕು. ೬-೦೦). ೭. ಉಪಾಯ ; ತಂತ್ರ ; ಹಂಚಿಕೆ : ಆ ನರಿ ಬಗೆಯೊಳ್ ಏರಿಯನವ್ವುದಱಿಂ ತನ್ನ ಬುದ್ಧಿಗೆ ತಾನೇ ಮೆಚ್ಚಿ (ಪಂಚತಂ. ೩೯-೬); ಆವಗಂ ಕಾಣಲೀಯವು ರಾಮಾಣೀಯರೋಮಾವಳಿಯನುದ್ವೃತ್ತಪೀನಕುಚಯುಗಳವಿನ್ನಾವು ದಿಂತಿ ದಕೆ ಬಗೆಯಿಂದು ಕೂರ್ತೇಕಾಂತವಾಂ ಕರ್ಣದೊಡನೆ ಪಾಳ್ಬ ಭಾವದಿಂ ಪರವನಾಚಿಯ ಲೋಚನಂಗಳಿಂದೀವರದಳಗಳಂತೊಪ್ಪಿದವು (ಶಾಂತಪು. ೬-೩). ೮. ಗತಿ : ದಿಕ್ಕು : ಪಿಂಡಕ್ಕೆ ಬಗೆ ಇಲ್ಲದವ ದಂಡ ಏನು ಕೊಟ್ಟಾನು ? (ಗಾದೆ). ೯. ಜಾತಿ : ಬಗೆಯ್ಯದು ತಣಿಯುತಿರೆ ಬಳಗಕೇಂ ವಾರ್ತಂ (ಕಾವ್ಯಾವ. ೩೪-೦೩೩) ; ಬಗೆಯೊಂವರೆ ಜಾತಿ ; ಬಗೆಯಿಂದರೆ ರೀತಿ (ಶಬ್ದಮ. ೩೯).

ಬಗೆಯೊಳೊಗೆದವ = ಮನಸ್ಸಿನಲ್ಲಿ ಹುಟ್ಟಿದವನು ; ಮನ್ಮಥ ; ಮನಸಿಜ : "ಬಗೆಯೊಳೊಗೆದವನೆಂದು ಬಂಡುಣಿವದೆಯನೆಂದು ಮುಗು ಳ್ಗಣೆಯಾತ್ಮ" (ಶಬ್ದ. ೬೪). ಬಗೆಯೊಳೊಗೆವ, ಬಗೆಯೊಳೊಗೆವವ = ಮನಸ್ಸಿನಲ್ಲಿ ಹುಟ್ಟುವವನು ; ಕಾಮ : "ಇಂಗೋಲ್ವಿಲ್ಲಂ . . . ಬಗೆಯೊಳೊಗೆವಂ . . . ಗಿಳಿದೇರಂ — ಇವು ೧೩ ಕಾಮಂದೇವಾಗೆ ಪೆಸರ್" (ಶಬ್ದ. ೯೬-೦೩) ; "ಗಿಳಿದೇರ ಪೂವುಣಂಬಂ ಬಗೆಯೊಳೊಗೆವವಂ" (ಶಬ್ದಸಂ. ೨೮).

[<ಬಗೆ₁./ ತುಳು. ಬಗೆ ; ತೆಲು. ವಗ. / ಮರಾ. ಬಗಾ]

**ಬಗೆ₃** (ನಾ). ಒಂದು ಬಗೆಯ ಹೂವು ಮತ್ತು ಅದರ ಗಿಡ : ಪ್ರಕಟವಂದಾರ ಬಗೆ ನಾಗಸಂಪಗೆಯಾದಿ ಸಕಲಕುಸುಮಂಗಳಂ ತಂದು (ಶಾಂತಿ. ೬೩-೯೩). [<ಸಂ. ಬಕ. / ಪ್ರಾ. ಬಗ]

**ಬಗೆಕಾರ** 'ಬಗೆಗಾಱ' ನೋ.

**ಬಗೆಕಾರ್ತಿ** 'ಬಗೆಗಾರ್ತಿ' ನೋ.

**ಬಗೆಕಾಱ** 'ಬಗೆಗಾಱ' ನೋ.

**ಬಗೆಗ** (ನಾ). ಒಬ್ಬಾತನ ಹೆಸರು : ವಲ್ಲಿಕಾರ್ಜುನಭಟ್ಟರ್ಗ್ಗೆ ಮಾವಿನೂರೊಳ್ ಬಗೆಗನು ಕೊಟ್ಟಂ . ಸಾವಿರಬಳ್ಳಿಯ ತೋಣ್ಟ (ಎಕ. XXVI. ೪-೦೯ ; ೪೦೬). [?]

**ಬಗೆಗಲ್** (ಕ್ರಿ). ಮನಸ್ಸನ್ನು ತಿಳಿ, — ಅರಿತುಕೊಳ್ಳು : ಅಬಲೆ ಯಿರ್ದಿರವಂ ಸಖಿ ನೋಡಿ ಮಾತ್ರಮಾ ಕಮಲದಳಾಯತೇಕ್ಷಣೆಗಿದಂ ನುಡಿದಳ್ ಬಗೆಗಲ್ವ ಬಲ್ಮೆಯಿಂ (ಚಂದ್ರ. ೦೦-೦೦). [ಬಗೆ₁ + ಕಲ್₁]

**ಬಗೆಗಾಣ್**, ಬಗೆಗಾಣು (ಕ್ರಿ). ೧. ಮನಸ್ಸನ್ನು ತಿಳಿ, —ಅರಿ: ಪುದುವಾಟಕ್ಕೆ ಯೊಳಿನ್ನ ಬಳ್ಳದಳ್ಳದ ಬಗೆಗಂಡಿರೇ (ಪಂಚತಂ. ೦೦-೩೦). ಬಗೆಗಾಣು : ೨. ದಾರಿಗಾಣು; ಮಾರ್ಗವನ್ನು ಕಂಡುಕೊಳ್ಳು : ಇವನಂ ಜಯಿಸುವ ಬಗೆ ಗಾಣೆನು (ಕೃಷ್ಣಭಾ. ೨೩-೬) ; ಸಾಧನಕೆ ಬಗೆಗಾಣೆನೆನ್ನಬಹುದೆ ಸಾದರದಿ ಗುರುಕರುಣ ತಾ ಪಡೆದ ಬಳಿಕ (ಶಿದಾಕೃ. ೨೫ ಪಲ್ಲ). [ಬಗೆ₁ + ಕಾಣ್]

**ಬಗೆಗಾಣು** 'ಬಗೆಗಾಣ್' ನೋ.

**ಬಗೆಗಾರ** 'ಬಗೆಗಾಱ' ನೋ.

**ಬಗೆಗಾರ್ತಿ**, ಬಗೆಕಾರ್ತಿ (ನಾ). ಬೇರೆಯವರ ಮನಸ್ಸನ್ನು ತಿಳಿಯುವ ವಳು ; ಇಂಗಿತಜ್ಞೆ : ಪೂಗೆಯ ಗಂಧವನುರ್ದಿಸುತ ಪೂವ ಪೊರೆಯುತ ಬಗೆಗಾರ್ತಿಯರೊರ್ವಳೆಸೆದಳ್ (ಚನ್ನಬಾ. ೬-೯೯). ; ಪಲ್ಲೆಳಗಿನ ಒಗುವಿಂಗೆಯಂ ಬಳಯಿಸುತ ಬೆಲ್ಡಿಂಗಳ ಬಗೆಗಾರ್ತಿಯರೆಯ್ದಿದರ್ (ಶಬರಶಂ. ೩೬-೦೬). ಬಗೆಕಾರ್ತಿ : ನಗೆಕಾರ್ತಿ, ನುಡಿಕಾರ್ತಿ, ಬಗೆಕಾರ್ತಿ (ಕನ್ನಡಸು. ೨೦೦. ಪ್ರಯೋ). [ಬಗೆಗಾಱ + — ತಿ₁ (< — ಇತ್ತಿ)]

**ಬಗೆಗಾಱ**, ಬಗೆಕಾರ, ಬಗೆಕಾಱ, ಬಗೆಗಾರ (ನಾ). ಬೇರೆಯವರ ಮನಸ್ಸನ್ನು ತಿಳಿಯುವವನು ; ಇಂಗಿತಜ್ಞ : ಆ ಬಗೆಯ ರಸಾಬ್ಧಿ ಯಪ್ಪ ಬಗೆಗಾಱರ ಮೊತ್ತದಿನೊಪ್ಪಿತೋಲಗಂ (ಶಾಂತೀಶ. ೨-೬೦) ; ಬೆಳ್ನುಡಿಯಿಂದ ಬಗುಹುಕಾಱರ ಬಲ್ಮೆಯಿಂದ ಬಗೆಗಾಱರನೆಡೆಗೆಡಿಸುವನು (ಶಬರಶಂ. ೪-೦೦೩). ಬಗೆಕಾರ : ಭಾವುಕ, ರಸಿಕ, ಚದುರ, ಬಗೆಕಾರ, ಜಾಣ, ಅರಿಗ (ಕನ್ನಡಸು. ೯೯). ಬಗೆಕಾಱ : ಪಗೆಕಾಱ, ಬಗೆಕಾಱ, ನಡೆವಳಿಕಾಱ (ಕಾವ್ಯಸಾ. ೧೬೦ ಟಿಪ್ಪ) : ಕಾಬುರಿಚ ಪೊಳಲಿಚ ದಡಿಗ ಬಗೆಕಾಱ ನಡೆವಣಿಗ . . . ಬಂಚುಗಾಱರ ಕೇರಿ ಮೊಱೆದಿಹವು (ಶಾಸ್ತ್ರಸಾ. ೨-೮) ; ಅಱಿಯಿಯಾ ನೀನಿದ ನಗೆಕಾಱ ಬಗೆಕಾಱ ಮಱೆಕಾಱ ಬಲುಟೌಳಿಕಾಱ (ಶಶಕ. ೬-೨೩). ಬಗೆಗಾರ : ನಗೆಯ ಮರೆಯಿಂದ ತೋರಿಕೆಗೆ ನಗೆಗಾರನಾಗಿದ್ದರೂ ಒಳಗೆ ಅವನೊಬ್ಬ ಬಗೆಗಾರನಾಗಿದ್ದನೆಂದು ತೋರುತ್ತದೆ (ಕರಪ. ೯೬೬) ; ಕಲಾಕುಶಲನು ... ಹಳೆಯ ಮಾತನ್ನು ಹೊಸ ಮಾಡಿಯಲ್ಲಿ ನುಡಿಯುವ ಬಗೆಗಾರನು (ಶಾಪಕ್ಕ. ೩).

ಬಗೆಕಾಱಮುಖದರ್ಪಣ = ಮನಸ್ಸನ್ನು ತಿಳಿಯುವವರಿಗೆ ಕನ್ನಡಿ ಯಂತಿರುವವನು ; ಒಂದು ಬಿರುದು : ವರಪ್ರಸಾದಮನ್ಯಾಱ [ರಾ]ಯಾಸ್ಥಾನಚಮತ್ಕಾರ ಬಗೆಕಾಱಮುಖದರ್ಪಣ (ಮೊಂಕಶಾ. ೦೯೬೬, ಸಂದಗ. ೦೦-೬ : ೯೭೮) ; ಮಹಾಲಕ್ಷ್ಮೀಲಬ್ಧವರಪ್ರಸಾದ [ಮನ್ಯಾ] ಱ ರಾಯಾಸ್ಥಾನಚಮತ್ಕಾರ ಬಗೆಕಾಱಮುಖದರ್ಪಣ ಶರಣಾಗತವಜ್ರ ಪಂಜರಂ (ಕಶಿವಶ. XX. ೩೬-೬; 1056). [ಬಗೆ₁ + — ಕಾಱ]

**ಬಗೆಗಿಡಿಸು** 'ಬಗೆಗೆಡಿಸು' ನೋ.

**ಬಗೆಗಿಡು** 'ಬಗೆಗೆಡು' ನೋ.

**ಬಗೆಗುಂದು** (ಕ್ರಿ). ಮನಸ್ಸು ಕುಗ್ಗು; ನಿರಾಶೆಗೊಳ್ಳು ; ಬೇಸರ ಹೊಂದು : ಬಗೆಗುಂದಿ ಚಕ್ರಮಿಥುನಂ ವಿಗೆ ನೊಂದು (ಗಿಂಕ. ೪-೬೯); ಪಗೆಮ ಕೆಳೆಗೊಂಡ ಪದ್ಮಿನಿ ನಗೆಗುಂದಿದಳೆನಡಂಗೆ ಕೋಕಾನೀಕಂ ಬಗೆಗುಂದಿದುದೆಂದನಾದೆ ನಗುವಂತೊಪ್ಪಲರ್ದುದಾದುತ್ಪಲಂ (ಪ್ರಶಪ. ೬-೯೯).

[ಬಗೆ₂ + ಕುಂದು₁]

**ಬಗೆಗುಡು** (ಕ್ರಿ). ಮನಸ್ಸು ಕೊಡು : ಚಿತ್ತವಿಡು : ಕೊಲೆಯೊಳ್ ಪೊರೆಯಿಲ್ಲದ ಪರಬಲನೆಗೆ ಬಗೆಗುಡದ ಕಳ್ಳದುಱಿ ಪುಸಿಯದ ಕಾದಲಿಸಿ ವಿಷಯಂಗಳೊಳ್ ಪಂಬಲಿಸದ ಗುಣವ್ಯೆದಣಾಪ್ರತಾ ಜನಪದದೊಳ್ (ಶಾಂತಿಪು. ೦-೦೬). [ಬಗೆ₂ + ಕುಡು₁ (<ಕೊಡು₁)]

**ಬಗೆಗುದಿ** (ನಾ). ಮನಸ್ಸಿನ ಚಿಂತೆ ; ಮನೋವ್ಯಥೆ : ಮತ್ತಾರು ನೀನೆ ! ಮೂಡದಲಿಸಿತು ಅವನ ಬಗೆಗುದಿ (ಚಿತ್ರಾಂ. ೦೬೪).

[ಬಗೆ₂ + ಕುದಿ₃]

**ಬಗೆಗುರುಡುತನ** (ನಾ). ಮನಸ್ಸಿಲ್ಲದಿರುವುದು : ಸದರ್ಥಮು ಕಾಣದ ಬಗೆಗುರುಡುತನವು ಈಗಿನವರ ಪಾಲಿಗೆ ಬಂದಿರುವುದು ಇನ್ನೊಂದು ದೋಷ (ಶಾಹಿ. ೬೦). [ಬಗೆ₂ + ಕುರುಡು + — ತನ]

**ಬಗೆಗೆಡಿಸು**, ಬಗೆಗಿಡಿಸು (ಕ್ರಿ). ಕ್ರಮ ತಪ್ಪಿಸು ; ದಾರಿ ತಪ್ಪಿಸು ; ರೀತಿಗೆಡಿಸು : ಬಗೆಗೆಡಿಸಿ ಮರವೆಯುಮ . . . ಬ್ರಹ್ಮವನಗಲದೆ ತಾನೆಂದು ಭಾವಿಸಿ ಧನ್ಯನಾಗು (ಗುಗೀ. ೧೩-೯೦). **ಬಗೆಗಿಡಿಸು** : ಬಗೆಗಿಡಿಸೆ ಮೋಹನೀಯುಂ ನಗಧರ ಶವಧಾರಿಯಾಗೆ ಷಣ್ಮಾಸಮದೇಂ ನೆಗಟ್ದುದೊ ಸಲೆ ಬಲದೇವನ ಮೆಗಲ ಮೆಣಂ ಕುಂದದೆಂಬ ನಾಟ್ಟುಡಿ ಜಗದೊಳ್ (ಶಂಕಾಪು. ೦೩-೩೩). [ಬಗ್ಗೆ + ಕೆಡಿಸು]

**ಬಗೆಗೆಡು**, ಬಗೆಗಿಡು (ಕ್ರಿ). ೧. ಬುದ್ಧಿಗೆಡು ; ವಿವೇಕವಿಲ್ಲದಾಗು: ಮಗನೆ ನೀಂ ಮಗುಳು ತಪಿದೊಟ್ಟು ನೆಟ್ಟನೆನ್ನದ ಬಗೆಗೆಟ್ಟು ದಾಯಿಗರೊಳಿಂ ಮಗುಟ್ಟುಂ ಪುದುವಾಟ್ಟುದೆಂಬರೇ (ಶಂಶಕಾ. ೦೦-೩೦); ಬಗೆಗೆಟ್ಟು ಸಾವ ಬಗೆಯುಂ ಮಗಳೆ ಮಹಾಶ್ವೇತೆ ಬಗೆಯದಿರ್ (ಕಾದಂಪೂ. ೯೯೦) ; ಪಗೆವನ ಮನೆಯುಂ ಬಗೆಗೆಟ್ಟು ಪೊಕ್ಕೊದು ಸಾವಕ್ಕುಂ (ಶಂಶತಂ. ೨೦೩-೦೦). ೨. ಚಿತ್ತಕ್ಷೋಭೆಯುಂಟಾಗು : ಪಾದರಿಗಂ ನಿಲ್ಲದೆ ಪೋದುದರ್ಕೆ ಬಗೆಗೆಟ್ಟದಾಕೆ ಕನ್ನೊಪ್ಪಿದರ್ (ಕಸ್ತ್ರಕಾ. ೬೯) ; ಬಗೆಗೆಟ್ಟು ಬಾಯ್ವಿಟ್ಟು ಜನನಿ ಜವದಿನೀಳ್ತಂದಲ್ಲಿಯೆಮೆಂಬಿಸಿ ಕಾಣದೆ (ಶಾಶಚ. ೦೩-೦೦೨ ಪ) : ಕಷ್ಟಗಳೆಷ್ಟಿದ್ದರೇನು ಸಭ್ಯರು ಬಗೆಗೆಡದೇಳ್ಗೆ ವಡೆದವರಲ್ತೆ (೩೦೫೩ಚ. ೨೨೦-೯೩). **ಬಗೆಗಿಡು** : ೧. ಬಗೆಗಿಡೆ ಮುಪ್ಪು ಚಪ್ಪರಿಸದನ್ನೆಗಂ . . . ಪರಮದೀಕ್ಷೆಗುಪೇಕ್ಷಿಸಿದಂ ವಿವೇಕಿಯೋ (ಶ್ರೀಪುರಾ. ೦೩-೩೯). [ಬಗ್ಗೆ + ಕೆಡು]

**ಬಗೆಗೆಲ್** (ಕ್ರಿ). ಮನಸ್ಸನ್ನು ಗೆಲ್ಲು ; ಚಿತ್ತವನ್ನು ಸೆಳೆ : ಬಗೆಗೆಲಲೆಂದು ಕಾಡಿ ಪುಸಿನಿದ್ದೆಯೊಳಾನಿರ ಲಲ್ಲೆಗೆಯ್ದು (ಶಂಶಕಾ. ೯-೦೦೭). [ಬಗ್ಗೆ + ಗೆಲ್]

**ಬಗೆಗೇಡು** (ನಾ). ದಾರಿ ತಪ್ಪಿಸುವಂತಹುದು; ಮಾರ್ಗ ಕೆಡಿಸುವಂತಹುದು : 'ನಾ ಬಲ್ಲೆ' 'ಗೊತ್ತಿಲ್ಲ' ಎಂಬ ವಾದದ ಹಾದಿ ಬಗೆಗೇಡು ನಗೆಗೇಡು ಹತಮತಿಮು (ಮುಕ್ತಕಂ. ೬-೨). [ಬಗ್ಗೆ + ಕೇಡು]

**ಬಗೆಗೊಳ್**, ಬಗೆಗೊಳು, ಬಗೆಗೊಳ್ಳು (ಕ್ರಿ). ೧. ಮನಸ್ಸಿಗೆ ತಂದುಕೊಳ್ಳು; ಲಕ್ಷ್ಯಕ್ಕೆ ತೆಗೆದುಕೊಳ್ಳು : ಅದಱಿಂದ ಚಿತ್ತಮಳ್ಕದ ಮನಂ ಬಗೆಗೊಳ್ಳದ ಮೋಹಮತ್ತಿ ಕಟ್ಟಿದ ಜಡೆ (ಶಂಶಕಾ. ೭-೬೯); ಜಗಜ್ಜನವಂಧಿತಾನಂದಂಬೆರಸಿಯ್ದೆ ಕೀರ್ತಿಸುತ್ತಿರೆ ವಿದ್ವದ್ವೃಂದಂ ಬಗೆಗೊಂಡಾಗ್ರಹದಿಂದಂ ವೇಟಲ್ಕೆವೇಟ (ಶಂಶತಂ. ೦೨-೭) ; ಬಗೆಗೊಂಡೋದದೆ ಕೇಳದಲ್ಲ ಕಳೆಯುಂ ಕಾವ್ಯಜ್ಞರಿಂ ಕಲ್ಲದಚ್ಚಿಗದಿಂ ಕಟ್ಟಿದ ಕಟ್ಟ ಕನ್ನಡದ ಕಾಟ್ಟಿಬ್ಬೇಗಳಂ ಬಂಟಸಾವಿಗಳಂ ಕೇಳಿಸಿ (ಅರ್ಚಸೀ. ೦-೩೩). ೨. ಎಣಿಸು ; ನಿಶ್ಚಯಿಸು : ಆದಡಂ ಪೋಗಿ ನೋಡುವೆನೆಂದು ಬಗೆಗೊಂಡು (ಶಶಚ. ೩-೩) ; ಈತನಲಿಯೊಂದು ವಿನೋದವನು ಮಾಡುವೆನೆನುತ್ತಲ್ಲ ಮನು ಬಗೆಗೊಂಡ (ಕೃಷ್ಣಜೀ. ೦೧-೭). ೩. ಮನಸ್ಸನ್ನು ಸೆಳೆ, ಆಕರ್ಷಿಸು : ಸೊಗಯಿಪ ಸಕ್ಕದಂ ಬೆರಸಿದಲ್ಲದ ಕನ್ನಡದಲ್ಲಿ ಕಬ್ಬವಂ ಬಗೆಗೊಳೆ ಪೇಟಲಾಜನಿತುಂ (ಕಸ್ತ್ರಕಾ. ೦೩). **ಬಗೆಗೊಳು** : ೧. ಈರೇಳು ದ್ವೀಪಗಳೆರಲ್ ದಾಂಟುವೆನವನು ಬಗೆಗೊಳದೆ (ಕೊರಚಾ. ೭-೩೬-೬೭). ೩. ಇದ್ದೊಂದು ಒಡವೆಯು ಇಬ್ಬಗೆ ಮೂಳಿವಗೆ ಬಗೆಬಗೆ ಒಡವೂಡಿ ಬಗೆಗೊಳಲು (ಮುಕ್ತಕಂ. ೩-೩೭). **ಬಗೆಗೊಳ್ಳು** : ೧. ಶ್ರೀಶರಣಾಶುದ್ಧನು . . . ಕುಲಾದಿ ಮದಂಗಳ ಬಗೆಗೊಳ್ಳ (ಮಹಾಚ. ೮. ೦೩-೨೦೬) ; ಏತೆಱದಿಂ ಮೃಗಾಕ್ಷಿದಮಯಂತಿಯು ಸಂಗಮದಪ್ಪುದೆಂದು ನಿಶ್ಚೇತನನಾಗಿ ರಾಜ್ಯಸುಖಮಂ ಬಗೆಗೊಳ್ಳದೆ (ನಳಶಂ. ೬೩); ಸುತನಾಶವನು ಬಗೆಗೊಳ್ಳನು (ಕುಮಾ.ರಾ. ೦೬-೩೩). [ಬಗೆ + ಕೊಳ್]

**ಬಗೆಗೊಳಿಸು** (ಕ್ರಿ). ೧. ಮನಸ್ಸನ್ನು ಆಕರ್ಷಿಸು ; ಚಿತ್ತವನ್ನು ಸೆಳೆ : ಲಲಿತಮುಖಸೌರಭಕ್ಕೆಳಗುವಲಿಮಾಲೆಯುಂ ಬಗೆಗೊಳಿಸಿ ತಳರ್ದುದು ಗಜಗಮನೆ (ಅಂಶು. ೭-೨೭ ಹಳೆ) ; ಸಮುಜ್ಜ್ವಳಕನಕವರ್ಣ ಎಂಗ ಬಗೆಗೊಳಿಸಿದಳುದ್ಯಾನಕೇಳಿಲೀಲಾಕ್ಷಣದೊಳ್ (ಶಾಂತಿಪು. ೮-೦೬) ; ಬಗೆಗೊಳಿಸ ತೊಡಗಿತ್ತು ಎಂಗೆ ರೂಪು ಲೋಚನಕೆ (ಶಂಶಕ. ೩-೦೦). ೨. ಮನಸ್ಸಿಗೆ ತಂದುಕೊಳ್ಳು ; ಮೆಚ್ಚು : ರಾಯನುಮರಸಿಯರುಮಾನಂದಪಡೆದು ಬಗೆಗೊಳಿಸೆ . . . ಪೇಳಿದೆನು ( ಹಂಶ. ೦-೩೦). [ಬಗೆಗೊಳ್ + — ಇಸು]

**ಬಗೆಗೊಳು** 'ಬಗೆಗೊಳ್' ನೋ.

**ಬಗೆಗೊಳ್ಳು** 'ಬಗೆಗೊಳ್' ನೋ.

**ಬಗೆತ** (ನಾ). ಅಭಿಪ್ರಾಯ ; ಮನೋಗತ : ಬರೆಹ ಮಾತ್ರಕ್ಕೆ ನಾನಲ್ಲದೆ ಬಗೆತಕ್ಕೆ ಆತನೇ (ಮೂರಲು. ೯. ಎರಡುಮಾತು) ; ನುಡಿತದಲ್ಲಿ ಮಿಂಚೂ ಇದೆ, ಬಗೆತದಲ್ಲಿ ಜೇನೂ ಇದೆ (ಕಿಶ್ರಕೃ. ೦ ಮುನ್ನುಡಿ) ; ಈ ಬಗೆತವು ಇಲ್ಲಿ ಬಲು ಚೆನ್ನಾಗಿ ಸಾಧಿಸಲಾಗಿದೆ (ಕಾಯಿಶ. ೭ ಪಠೀ). [ಬಗ್ಗೆ + — ತ]

**ಬಗೆತುಂಬು** 'ಬಗೆದುಂಬು' ನೋ.

**ಬಗೆದಟ್ಟು** (ಕ್ರಿ). ಮನಸ್ಸನ್ನು ತಾಗು ; ಮನವರಿಕೆಯಾಗು : ಬಗಸೆಗಳ್ ಪೊಳೆಯ ನಡುವಲೆಯ ಕಂಣಮುಲಿಯೆ ಬಗೆದಟ್ಟಿ ಘಟ್ಟವಳ್ತಿಯರರದರಾ ಯುಕ್ಷಕರ್ದಮಾದಿಗಳನೊಲವಿಂ (ಕಸ್ತ್ರಕಾ. ೯-೬೯). [ಬಗ್ಗೆ + ತಟ್ಟು]

**ಬಗೆದರ್** (ಕ್ರಿ). ಎಣಿಸು ; ನಿಶ್ಚಯಿಸು : ಚಿಂತಾಸಮುದ್ರಾಂತರ ಪರಿವೃತನಾಗಿ ಸ್ಮರಿಸಲಾಱದೆ ಪೊಟಲುಂ ತೊಟಲ್ದು ನೋಟ್ಟ ಬಗೆದಂದು ರಾಜಮಂದಿರದಿಂ ಪೊಱಮಟ್ಟು ಬರೆ (ಶಂಶಕಾ. ೪-೬೯ ಪ) ; ನೋಡಿಕೊಂಬೆ ನೆನುತ್ತ ನುಡಿದೊಡಂಬಡಿಸಿ ಮನಮಾಡಿ ತಿರುವೆಣ್ಣೆನಲ್ಲೂರ್ಗೆಂದು ಬಗೆದಂದು ವಹಿಲದಿಂ ಪೊಱಮಟ್ಟನು (ಶ್ರೀಂದಪು. ೪-೬೯) ; ಕಲ್ಮಿದೊಳ್ ಕುಳ್ಳಿರ್ದ ಮಂಜೊಳಗೊಂದಿದ ಮೊಲ್ಲೆವೂಪನಾರಡಿವೂರೆ ಭೋಗಿಸಲ್ಕ ಮುಳಿಯಲ್ಕಮಣಂ ಬಗೆವರ್ದೊಡಾರೊ ನಾಂ (ಶಾಕುಂತ. ೬೭-೦೦೯). [ಬಗ್ಗೆ + ತರ್]

**ಬಗೆದೀರ್** (ಕ್ರಿ). ಮನಸ್ಸು ತೃಪ್ತಿಯಾಗು ; ತಣಿ : ದಿವ್ಯಮುನಿಪುಂಗವರಂ ಬಗೆದೀರ್ಪಿನಂ ನಿಜಾತ್ಯಂತಪತಿವ್ರತಾಗುಣದಿನರ್ಚಿಸಿ ಮೆಚ್ಚಿಸು ನೀಂ (ಶಂಶಕಾ. ೦-೦೦೬). [ಬಗ್ಗೆ + ತೀರ್]

**ಬಗೆದುಂಬು**, ಬಗೆತುಂಬು (ಕ್ರಿ). (ಸಂತೋಷದಿಂದ) ಹೃದಯ ತುಂಬು, — ಉಬ್ಬು : ಆಂಡಯ್ಯಕವಿ 'ಕನ್ನಡನಾಡನ್ನು' ಬಗೆದುಂಬಿ ಬಣ್ಣಿಸಿದ್ದಾನೆ (ಶಾಸಕಾ. ೨೭). **ಬಗೆತುಂಬು** : ನೀಲಾಂಬಿಕೆ ಲಿಂಗೈಕ್ಯವಾದಂದು ಸೊನ್ನಲಿಗೆಯ ಸಿದ್ಧರಾಮ ಬಗೆತುಂಬಿ ಹೇಳಿದ (ಕಹಾಳ. ೦೨೯). [ಬಗ್ಗೆ + ತುಂಬು]

**ಬಗೆದೆರು** (ಕ್ರಿ). ಮನಸ್ಸು ಕೊಡು ; ಚಿತ್ತವಿಡು : ಕಾವನು ಬಗೆದೆತ್ತು ಬರೆಯುತಿದೆ ಸುಗ್ಗಿ (ಕಾಂಚಿಕ. ೧೩೦-೨೩೨). [ಬಗ್ಗೆ + ತೆರು (< ತೆಱು)]

**ಬಗೆದೋಱು** (ಕ್ರಿ). ೧. ಮನಸ್ಸಿನಲ್ಲಿದ್ದುದನ್ನು ಹೇಳು, — ಪ್ರಕಟಿಸು : ಇಂತಿದನೀವೆನೆಂದ[ನ]ಂ ಪುಸಿದೊಡಮಾಸೆದೋಱ ಬಗೆದೋ[ಱ] [ಶಾಕಂ. ಱ]ದೊಡಂ ನೆರೆದಿರ್ದೊಡಂ . . . ಮತ್ತಮೂಟಿಸುವುದೆ (ಶಂಶಕಾ. ೯-೯೨) ; ಅಂಗನೆ ನೀಂ ಗರ್ವಿಸಿದಪ್ಪೆಯೆಂದು ಬಗೆದೋಱಿ ನಲ್ಲನೇನೊಲ್ಲನೇ (ಅಶಂಪು. ೮-೯೦). ೨. ಆಸೆಯನ್ನು ಪ್ರಕಟಿಸು; ಹಂಬಲವನ್ನು ತಿಳಿಸು : ಆ ವೇಳೆಯಲ್ಲಿ ಸಿಂಗರಗೈದು ನಿನ್ನಯ ಭಾವದ ಬಗೆದೋಱುಯವನ ಕಾವನಂಬಿಗೆ ಮಯ್ಯೊಡ್ಡಿಸಿ ಸೆಳೆವು ಸಂಭಾವಿಸು ಮೋಹರತಿಯೊಳು (ಕಂಶಪ. ೬-೩೭). [ಬಗ್ಗೆ + ತೋಱು]

**ಬಗೆಪೋಗು** (ಕ್ರಿ). ಮನಸ್ಸಿಗೆ ಹಿತವಾಗು ; ಮನದಟ್ಟಾಗು : ಬಗೆಪೋಯ್ತಿಂತಿದು ನಾಕಲೋಕವಿಭವಂ ಮದ್ಯ್ಯಸ್ತ್ರಕಂ ತಪ್ಪದು (ಅಂಶು. ೩-೬೬) ; ಬಗೆಪೋಯ್ತಾಗಳೆಲೇ ಇವಲ್ತೆ ತುಹಿನಕ್ಷೋಣಿ. ಧ್ರುಮತ್ತುಂಗಸಾನು

ಗೆಱೊಳ್ ಭೋರಿವೆ ಬಂದು ಪಾಯ್ವುದದೆ ನೋಡಾಕಾಶಗಂಗಾಜಲಂ (ಅಜಿತ. ೪. ೧೬). [ಬಗ್ಗೆ$_2$ + ಪೋಗು$_1$ (< ಪೋ$_1$)]

**ಬಗೆಬರ್** 'ಬಗೆವರ್' ನೋ.

**ಬಗೆಬಿಚ್ಚು** (ಕ್ರಿ). ಅಂತರಂಗವನ್ನು ವಿವರಿಸು; ಮನಸ್ಸಿನ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳು: ಬಂದುದಂ ಬಗೆಬಿಚ್ಚಿ ನುಡಿವ ರೊಮ್ಮೊಮ್ಮೆ (ಶಾಂತೀ. ೯೦–೦೬೮). [ಬಗ್ಗೆ$_2$ + ಬಿಚ್ಚು$_1$ (< ಬಿರ್ಚು)]

**ಬಗೆಮುಟ್ಟು** (ಕ್ರಿ). ೧. ಮನಸ್ಸನ್ನು ತಟ್ಟು,–ತಾಗು; ಹೃದಯಸ್ಪರ್ಶಿಯಾಗು: ಬೀಣೆಯಂ ಮಿಡಿವ ಬಂಚಮನೊತ್ತುವ ದಕ್ಷಿಣಾಜ ಪಾಡುವ ಬಗೆಮುಟ್ಟಿ ಪಾಡುವವರಗ್ಗದ ದೇವರ ಕದ್ದಿರೇಂದ್ರದಾ ದಿವಿಜ ವಿಮಾನದಂತೆ ಬಳಸಿರ್ದ ವಿಶಾಳಜನಾಲಯಂಗಳೊಳ್ (ಮಲ್ಲಿ. ೧೧–೧೦೨). ೨. ಮನಸ್ಸು ಒಪ್ಪು; ಸಮ್ಮತಿಸು: ನಾವು ಆ ವಾಕ್ಯಗಳಿಗೆ ಬಗೆ ಮುಟ್ಟಿ ಒಪ್ಪಿಸಿಕೊಟ್ಟಿರುವ ಈ ಉಂಬಳಿಗೆಯನ್ನು . . . ಸಾರ್ಥಕಮಾಡಿ ಕಂಡದೇಕು (ಮುಳ್ಳೂರ. ೦೬–೨೬). [ಬಗ್ಗೆ$_2$ + ಮುಟ್ಟು$_1$]

**ಬಗೆಯಣುಗ** (ನಾ). ಮನಸ್ಸಿನಿಂದ ಹುಟ್ಟಿದವನು; ಕಾಮ: ಖಗ ನಾಮವಿಹುದಾವುದು ಬಗೆಯಣುಗನ ಗಜವೇಂ (ಕೃಷ್ಣ. ೦–೨೬–೩). [ಬಗ್ಗೆ$_2$ + ಅಣುಗ (< ಅಣುಂಗ)]

**ಬಗೆಯಳಲು** 'ಬಗೆಯಬಲ್' ನೋ.

**ಬಗೆಯಱ್** (ಕ್ರಿ). ಮನಸ್ಸನ್ನು ತಿಳಿ; ಇಂಗಿತವನ್ನು ಅರಿ: ಮಗ ಮಗಿವ ಜಾದಿ ಪೂಂಗೇದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಳಂ ಬಗೆ ಯಱ್ದೋಲಗಿಪುದು ಮಾಲೆಗಾಱನಂ ಪೋಲ್ವುದಗ್ರಮಾಲ್ಯಮಹೀಜಂ (ಅಜಿ. ೩–೩೬); ಅರಸಾ ಜೊನ್ನಮನುಣ್ಣ ಪಕ್ಕಿಬಾಗಿಲೊಳ್ ಬಂದಿರ್ಪು ದೆಂದು ಬಗೆಯಱ್ದು ಬಿನ್ನಪಂಗೆಯ್ದು (ಕಬ್ಬಿ. ೦೩೮); ವಿಶ್ವ ಧರ್ಮದೊಳು ಬಗೆಯಱ್ತೆಸಗಬಲ್ಲವರಿಗೆಂದೆಂದಿಗೂ ಮೊಗದೋಱವು ಮೋಸಗಳು (ಹರಿ. ೨–೨೦). [ಬಗ್ಗೆ$_2$ + ಅಱ್]

**ಬಗೆಯಬಲ್**, ಬಗೆಯಳಲು (ನಾ). ಮನಸ್ಸಿನ ಕ್ಲೇಶ; ಮನೋವ್ಯಥೆ: ಅದರ್ಕೆ ತಕ್ಕುದಂ ನಿಮ್ಮಡಿಗಳೆ ಬಲ್ಲಿರೆಂದು ಬಗೆಯಬಲಾಱ್ ಜೊನ್ನವಕ್ಕಿ ಬಿನ್ನಪಂಗೆಯ್ಯಲ್ (ಕಬ್ಬಿ. ೦೩೦). ಬಗೆಯಳಲು: ಅಡಿದಳ ನನ್ನಿಯಂ ಬಗೆಯಳಲಿನಿಂ ಪಾಲ ನೀಡಿದಳ್ (ಶಾಂತೀ. ೦೧೨–೩೦೭). [ಬಗ್ಗೆ$_2$ + ಅಬಲ್$_2$]

**ಬಗೆಯಾಣ್ಮ** (ನಾ). ಮನೋವಲ್ಲಭ; ನಲ್ಲ: ಒಂದೆಡೆಯೊಳ್ ಮನೆಯಾಣ್ಮನ ಕಣ್ಣೆಮೆಯ ಕಾಂಡಪಟಮಾಗೆಯುಂ ಬಗೆಯಾಣ್ಮನ ಕಣ್ಣೆಮೆಯ ದೂದವಿಯಾಗೆಯುಂ (ಶಂಕರಾ. ೯–೮೦ ಶ). [ಬಗ್ಗೆ$_2$ + ಅಣ್ಮ (< ಆಳ್ವ)]

**ಬಗೆಯಿಡು** (ಕ್ರಿ). ಮನಸ್ಸಿಡು; ಆಸಕ್ತನಾಗು: ಬಟ್ಟಮೊಲೆಯ ದಾಲೆಯ ನೊಸಲೊಳು ಬಗೆಯಿಟ್ಟಾ ಬಲ್ಲಹನೊಲವಿಂ ಚವುಕದ ಬೊಟ್ಟಂ ಕಂಕುವದಿಂದಿಡೆ (ಅಜಿತಾ. ೦೯–೩೯). [ಬಗ್ಗೆ$_2$ + ಇಡು$_1$]

**ಬಗೆಯಿಸು** (ಕ್ರಿ). ೧. ಮನಸ್ಸನ್ನು ಸೆಳೆ,–ಆಕರ್ಷಿಸು: ಮನಕೆ ಪ ನೊಗೆಯಿಸುವ ಬಗೆಯಿಸುವ ರಾಜೋಪವನವೆಸೆದುದು (ಕೃಷ್ಣ. ೨೮–೯೬). ೨. ತಿಳಿದಂತೆಕೊಳ್ಳುವಂತೆ ಮಾಡು; ಭಾವಿಸುವಂತೆ ಮಾಡು: ಹಗೆತನವನುಳಿದು ದಯವಲ್ಲ ಬೆಳೆದು ತನ್ನಂತೆ ಪರರ ಬಗೆಯಿಸುವುದು ಬಡತನ (ಶಿಶು. ೬೩). [ಬಗ್ಗೆ$_2$ + –ಇಸು$_2$]

**ಬಗೆಯೆಣಿಕೆ** (ನಾ). ಮನಸ್ಸಿನ ಅಭಿಪ್ರಾಯ,–ಆಶಯ: ಇದು ನಿನಗೆ ಬಗೆಯೆಣಿಕೆ, ಎನಗೆ ಏರ್ವೆಣಿಕೆ (ಅಕ್ಷಕ್ಕಾ. ೩೬–೨೩೬). [ಬಗ್ಗೆ$_2$ + ಎಣಿಕೆ]

**ಬಗೆಯೊಡೆಯ** (ನಾ). = ಬಗೆಯಾಣ್ಮ: ಗಡಣದೆ ಮಾಡೇವಿಯ ಬಗೆಯೊಡೆಯನ ನೊಸಲೊಳ್ . . . ನಟ್ಟುವು ಕಾವನಂಬುಗಳ್ ತಾವ್ಬೆದುಂ (ಕಬ್ಬಿ. ೩೦೬). [ಬಗ್ಗೆ$_2$ + ಒಡೆಯ]

**ಬಗೆವಡೆ** (ಕ್ರಿ). ತಿಳಿ; ಅರಿತುಕೊಳ್ಳು: ಆ ತೊರೆ ಸಮುದ್ರೆರಿಗೆಳತ್ತಲೇ ಹರಿದು ಹೋಗುವುದೆಂಬುದನ್ನು ಬಗೆವಡೆದವು (ಪಾತೋಂ. ೩೫೩). [ಬಗ್ಗೆ$_2$ + ಪಡೆ$_1$]

**ಬಗೆವರ್**, ಬಗೆಬರ್ (ಕ್ರಿ). ಮನಸ್ಸಿಗೆ ಬರು,–ತೋಚು: ಬಗೆವಂದ ಗೊಡ್ಡಾಟವಮಾಡಲೆಂದು ದುರ್ಜನಪರಿವೃತನಾಗಿ (ಧರ್ಮಾಮೃ. ೨–೨೯). ಬಗೆಬರ್: ಸ್ವೈರಿಣಿ ಬಗೆಬಂದಾಗಳೆ ಮಾರಕ್ರೀಡೆಯನೊಡರ್ಚಲೆಂದುಪ ಪತಿಯಂ ದಾರಕನಂ ಕೊಲವೇಟ್ಟಳ್ (ಶಂಕರಾ. ೬–೩೨); ಹರನ ಭಕ್ತಿಯ ಮಾಡಿದೊಡೆ ಗೋಚರಿಸಿ ತೋಱುವನಲ್ಲವುಪ್ರಭು ಕರುಣದಿಂದಲಿ ನೀನು ಬಳಿಕಾತನಲಿ ಬಗೆಬಂದ ವರವುನೋರಥಸಿದ್ಧಿಯನು ಪತಿಕರಿಸಿ ಪಡೆವುದು (ಕೃಷ್ಣ. ೬–೩). [ಬಗ್ಗೆ$_2$ + ವರ್]

**ಬಗೆವಿಡಿ** (ಕ್ರಿ). ಮನಸ್ಸನ್ನು ಸೆಳೆ,–ಆಕರ್ಷಿಸು: ಬಗೆವಿಡಿದಾಹತವಾದಿ ಗಮಕಂಗಳಿನೊಯ್ಯನೆ ಬೀಣೆ ಬಾಜಿಪನ್ನೆಗಂ (ಶಬ. ೯–೦೦೩). [ಬಗ್ಗೆ$_2$ + ಪಿಡಿ$_1$]

**ಬಗೆವುಗಿಸು** (ಕ್ರಿ). = ಬಗೆವಿಡಿ: ಏಂ ಬಗೆವುಗಿಸಿದುದೋ ಹೇಮಾಂಬುಜದ ಮರಾಳಮಿಥುನವಮಂ ತನ್ಮಿಥುನಂ (ಅಜಿತ. ೬–೩೩). [ಬಗ್ಗೆ$_2$ + ಪುಗಿಸು (< ಪುಗಿಸು)]

**ಬಗೆವುಗು** 'ಬಗೆವೊಗು' ನೋ.

**ಬಗೆವೆಚ್ಚು** 'ಬಗೆವೆರ್ಚು' ನೋ.

**ಬಗೆವೆರಸು** (ಕ್ರಿ). ಮನಸ್ಸಿಗೆ ಬರು; ಮನಮುಟ್ಟು: ಬಗೆವೆರಸಿ ಸಂದಪ್ಪವಾದಡಱಿಯೆಂ ಪರೋಕ್ಷಿಗಳರ್ಥವಾಂ (ಶಬಾ. ೦–೨೮); ಜಗದರಸ ರಾಮಂಗೆ ಕೈಗಳ ಮುಗಿದುಮುಗಿದು ಕೆಲಸಾರುತಿರ್ದಾದಂ ಬಗೆವೆರಸಿ ಬಲ[ಪಾಠಾಂ. ಬಗುಬಗೆಯ ಕಪಿ]ಪತಿಗಳೆಪ್ಪತ್ತೇಳು ಕೋಟಿಯೆನೆ (ತೊರವೆ. ೯–೮–೨). [ಬಗ್ಗೆ$_2$ + ಬೆರಸು$_1$ (< ಬೆರೆಯಿಸು)]

**ಬಗೆವೆರ್ಚು**, ಬಗೆವೆಚ್ಚು (ಕ್ರಿ). ಮನಸ್ಸು ಉಬ್ಬು; ಉತ್ಸಾಹಗೊಳ್ಳು: ಬಗೆವೆರ್ಚೆ ಕೇಳುತಿರ್ದಪೆ ವಿಗೆ ಪೇಳ್ದಪೆನೆಲೆಲೆ ಧೂರ್ತವಿಪ್ರನೆ ಕೇಳ್ (ಗಿರಿ. ೯–೦೦೯). ಬಗೆವೆಚ್ಚು: ಪೊಗುತ ಸೈಗಡೆದೆದ್ದು ಮತ್ತಮಯ್ಯಿಕ್ಕುತಂ ಬಗೆವಚ್ಚಿ ಪೊಡಮಟ್ಟು ನಲಿದೆದ್ದು ನಡೆವುತಂ (ಶಂಕರ. ೯–೦೨೨). [ಬಗ್ಗೆ$_2$ + ಪೆರ್ಚು$_1$]

**ಬಗೆವೆಱು** (ಕ್ರಿ). ಮನಸ್ಸಿಗೆ ಬರು; ಮೆಚ್ಚು: ಬಗೆವೆತ್ತು ಅಭವಾದಿಗಳಿತ್ತ ಪದವಿಗೆ ಹಗೆಗೊಂಡು ಹರಿ ಕೆಡಿಸುವನು (ಸೋಮಶ. ೩೦–೦೬). [ಬಗ್ಗೆ$_2$ + ಪೆಱು$_1$]

**ಬಗೆವೇಳ್** 'ಬಗೆವೇಟ್' ನೋ.

**ಬಗೆವೇಟ್**, ಬಗೆವೇಳ್ (ಕ್ರಿ). ೧. ಮನಸ್ಸನ್ನು ತೆರೆದು ಮಾತನಾಡು; ಹೃದಯವನ್ನು ಬಿಚ್ಚಿ ಹೇಳು: ತನಯರನಿಟ್ಟು ಸಂತತಿಯೊಳಂತೆಮಾಗಂ ಬಗೆವೇಟದೇಕೆ ಪೋದನೊ (ಅಜಿತ. ೯–೩೬); ಬಗೆವೇಟ್ಟೊಡನ್ನ ಮೇಳದ ಕೆಳೆಯರ್ಕಳಿಲ್ಲ (ಶಂಕರಾ. ೯–೩೯); ಸಮಧಿಕಚಿಂತೆಯಿಂ ನುಡಿಯಲುಂ ಬಗೆವೇಟಲುಮೊಲ್ಲದಾ ಶರತ್ಸಮಯದ ಸೋಗೆಯಿರ್ಪ ತೆಱದಿಂ ಕಡುವಿನ್ನನೆ ಮೂಗುಮಟ್ಟು ಖೇದಮನೊಳಗೊಂಡು ನಿಂದಬಲೆಯಿರ್ದಿರವಂ ಸಖಿ ನೋಡಿ (ಚಂದ್ರ. ೦೦–೦೦). ಬಗೆವೇಳ್: ೨. ದಾರಿ ತೋರಿಸು: ಶಿವಭಕ್ತಾಪರಾಧದಿಂ ಸಂಭವಿಸಿತಿನಿತು ಪರಿಭವವಿದಕೆ ಬಗೆವೇಳ್ವೆನೋಡ ಮಾರ್ದನಿಯೆಂದು ದೈನ್ಯದಿಂ ಬಿನ್ನೈಸಿ (ಸೌಂದರ. ೯–೦೩). [ಬಗ್ಗೆ$_2$ + ಪೇಟ್]

**ಬಗೆವೊಗು**, ಬಗೆವುಗು (ಕ್ರಿ). ಮನಸ್ಸನ್ನು ಪ್ರವೇಶಿಸು: ನೋಟದೊಳ್ ಟ್ಟಜಂಬಡೆದು ಮೆಲ್ನುಡಿಯೊಳ್ ಬಗೆವೊಕ್ಕು . . . ಕೂಟಸುಖಂಗಳಂ ಪಡೆದಂ (ಶಂಕರಾ. ೩–೮೨). ಬಗೆವುಗು: ಎಲ್ಲಮನೊಪ್ಪಿಸಿ ನಿರ್ಣಯಂ ನಯಂ ಬಗೆವುಗೆ ಮಾಡಿದರ್ಕಬುಷವೇಷಮನೊಲ್ಲದನುಪ್ರವೇಶವಂ

(ಮಲ್ಲಿಪು. ೪-೧೫೦) ; ಶ್ರೀಕಂಠರಿಪುವಿನಸ್ತ್ರಾನೀಕಂ ಬಗೆವೊಗಲದೊರ್ಮೆ ಸತ್ರಾಜಿತ್ಕನ್ಯಾಕಾರಂ ಬಗೆವೊಕ್ಕುದು ಲೋಕಜನಮಸ್ತುತಿಗಳಿಂ ಗರುತ್ಮದ್ಧ್ವಜನಾ (ಜಗಪಿ. ೧೦-೧); ಗುಣವಮವಾರೆ ಶಬ್ದವಣಿದವರ್ಗನಾವಾವನಿಟ್ಟು ನೆಱೆಯೆ ಕರ್ಣಾಟಕಲಕ್ಷಣಶಬ್ದಶಾಸ್ತ್ರವಂ ಲಾಕ್ಷಣಿಕರ್ವೇಟಿಂದು ಬೆಸಸೆ ಬಗೆವುಗೆ ಪೇಟ್ವಿಂ (ಶಬ್ದ. ೩). [ ಬಗೆ$_2$ + ಪೊಗು ]

**ಬಗೆಹರಿ** (ಕ್ರಿ). (ಮನಸ್ಸಿನ ಆಲೋಚನೆ, ಉದ್ದೇಶ ಮುಂತಾದುವು ನಿರಾತಂಕವಾಗಿ) ತೀರ್ಮಾನವಾಗು ; ಇತ್ಯರ್ಥಗೊಳ್ಳು ; ನಿರ್ಧಾರವಾಗು: ಕನ್ನಡಸಾಹಿತ್ಯದಲ್ಲಿ ನಾಗವರ್ಮರು ಎಷ್ಟು ಮಂದಿ ಎಂಬ ಪ್ರಶ್ನೆಯೊಂದು ಬಗೆಹರಿಯದ ಸಮಸ್ಯೆಯಾಗಿದೆ (ಕಾಪಿಸ. ೨೯) ; ಈ ದೇಶದ ಶೈಕ್ಷಣಿಕಸಮಸ್ಯೆಗಳು ಖಂಡಿತವಾಗಿಯೂ ಬಗೆಹರಿಯುವುದಿಲ್ಲ (ಶಿಪರ್ಜ. ೧೦). [ ಬಗೆ$_2$ + ಹರಿ$_2$ (< ಪರಿ$_2$) ]

**ಬಗೆಹರಿಸು** (ಕ್ರಿ). ೧. ಇತ್ಯರ್ಥಗೊಳಿಸು; ನಿರ್ಣಯಿಸು; ನಿರ್ಧರಿಸು: ಕುತ್ತಿನ ಜೀಲದ ಪ್ರಶ್ನೆಯನ್ನು ಐದು ತಲೆಮಾರು ಹಿಂದೆಯೇ ಸಮಾಜ ಬಗೆಹರಿಸಿದ್ದಿತು (ಕಾಂಯು. ೯೬); ಅಂತಿಮವಾಗಿ ಈ ಪ್ರಶ್ನೆಯನ್ನು ಬಗೆಹರಿಸಬೇಕು (ಹಂಕಹ. ೧೫೦). ೨. ತೀರಿಸು; ಸಂದಾಯ ಮಾಡು : ನೆರೆದಿದ್ದ ಅಷ್ಟು ಜನ ಸಾಹುಕಾರರ ಸಾಲದಲ್ಲಿ ಒಂದನ್ನು ಸಹ ಬಗೆಹರಿಸುವ ಪರಿಸ್ಥಿತಿಯಿರಲಿಲ್ಲ (ಚಕ್ಕಿಕೊ. ೫೯). [ ಬಗೆ$_2$ + ಹರಿಸು (< ಪರಿಯಿಸು) ]

**ಬಗ್ಗ$_1$, ವಗ್ಗ$_1$** (ನಾ). ಹುಲಿ: ವ್ಯಾಘ್ರ: "ಬಗ್ಗಂ ವ್ಯಾಘ್ರಾಭಿಧಾನಂ" (ಕರ್ಣಾರ.೯೭); ಸುತ್ತಿನ ರೇಫ ದಿಡ್ಡಕ್ಕರವಾದುದರ್ಕೆ – ಚಕ್ರಪಕ್ಷಿ – ಚಕ್ಕವಕ್ಕಿ . . . ವ್ಯಾಘ್ರ – ಬಗ್ಗ (ಶಮಶ. ೨೬೦ ಪ್ರಯೋ); ಗರ್ಜಿಸುತ್ತಿರ್ಪ ಬಗ್ಗದ ಬಲ್ಲಂಡಿಕೆಗಂಡು . . . ತಿವಿದಂ ತತ್ಕಾಳಮೇಘಾಹ್ವಯಂ (ರಾಜಶೇ. ೩-೯೯); ಇದೆ ಬಗ್ಗನನಿಕ್ಕು ! ಮೇಣಿದೆ ಚಿತ್ರಗನಂ ತುಡು ! (ರಾಘವಾಂಕ. ೯೮-೧೨). **ವಗ್ಗ$_1$** : ಶ್ರೀಮದಾಹವಮಲ್ಲದೇವರ ವಗ್ಗ (ಎಪಿ.ಕ. XVI, ೮೬-೩: 1067). [< ಪ್ರಾ. ವಗ್ಘ. /ಸಂ. ವ್ಯಾಘ್ರ]

**ಬಗ್ಗ$_2$, ವಗ್ಗ$_2$** (ನಾ). ೧. ಗುಂಪು: ನೆರವಿ; ಸಮೂಹ : "ಬಗ್ಗಂ ವರ್ಗಂ" (ಕರ್ಣಾರ.೯೭); ದಿತ್ವಾಗ್ರರೇಫಲೋಪಕ್ಕೆ – ವರ್ಗ – ಬಗ್ಗ (ಶಮಶ. ೨೬೦ ಪ್ರಯೋ). **ವಗ್ಗ$_2$**: "ವಗ್ಗ (ಬಗ್ಗ) _ ವರ್ಗ" (ತದ್ಭಕೋ.೩೯). ೨. ಗ್ರಂಥದ ಪರಿಚ್ಛೇದ, – ಸರ್ಗ: ಅನೇಕ ಶಾಸನಗಳ ಕೊನೆಯಲ್ಲಿ ಕಂಡುಬರುವ ಚಿಹ್ನೆಯೊಂದು ಧಮ್ಮಪದದ ಪ್ರತಿ 'ವಗ್ಗ'ದ ಕೊನೆಯಲ್ಲಿಯೂ ಇದೆ (ಶಾಕಪ.೦೯). [<ಪ್ರಾ. ವಗ್ಗ. /ಸಂ. ವರ್ಗ]

**ಬಗ್ಗ$_3$** (ನಾ). ಶಿವ; ಈಶ್ವರ : "ಬಗ್ಗನೆನೆ ಮುಕ್ಕಣ್ಣನಕ್ಕು" (ಕಶಿ.೬೩); ಬೆಳಯಳ್ ಸರಸತಿ, ಬಿಳಿಯಂ ಬಗ್ಗಂ (ಕಮ್ಮಾಕು.೦೦೫ ವ್ಯಾಖ್ಯಾ); ವೇಗದಿ ಬಗ್ಗನಂಘ್ರಿಯೆಡೆಗಂ ನಡೆತಂದದನೆಲ್ಲಮಂ . . . ಪೇಳಲು (ಹಾಲಾಸ್ಯ. ೦-೬-೨೩). [<ಸಂ. ಭರ್ಗ]

**ಬಗ್ಗಂದೊವಲ್, ಬಗ್ಗದೊವಲ್, ಬಗ್ಗದೊವಲು** (ನಾ). ಹುಲಿಯ ಚರ್ಮ; ವ್ಯಾಘ್ರಾಜಿನ: ಬಗ್ಗಂದೊವಲ್, ಬಗ್ಗದೊವಲ್ (ಕಮ್ಮಾಕು.೩೭೯ ಪ್ರಯೋ). **ಬಗ್ಗದೊವಲ್** : ಬಗ್ಗದೊವಲಂ ಅಸವಸದೊಳುಟ್ಟನಂ ದೇವರಾದಿತ್ಯನಂ. . .ನುತಿಸಿದಂ (ಅಕ್ಕಕೆ.೩-೩೦); ಪಾರ್ವತಿಯಾಣ್ಮಂ . . . ಬಗ್ಗದೊವಲ ವಾಸುಗೆಯಲ್ಲಿ ಸಲ್ಲೇಲೆಯಿಂ ಮೂರ್ತಿಗೊಂಡಿರೆಯಿರ (ಕೃಶು. ೦೯-೩೦ ಕ); ಬಗ್ಗದೊವಲಂ ಕಂಡೊಡಂ ಬೆರ್ಚುವರಲೆಗಳ್ ಪರಿವ ಪೆರ್ಬುಲಿನೋಟವಮಂ ಸೊಸಲುಂಟೆ (ಶ್ರೀಪಾಪು.೦೬-೩೩). **ಬಗ್ಗದೊವಲು** : 'ಬಗ್ಗದೊವಲುಡಿಗೆ' ಪರಾ. [ಬಗ್ಗ$_1$+ತೊವಲ್$_2$ (<ತೊಲ್$_1$)]

**ಬಗ್ಗಡ, ಬೊಗ್ಗಡ** (ನಾ).೧. ಮಣ್ಣು, ಕಸ, ಸೆಗಣಿ ಮುಂತಾದುವು ಕಲಸಿಕೊಂಡಿರುವ ನೀರು; ರಾಡಿ; ಕೊಚ್ಚೆ : ಆನೆ, ಕುದುರೆ, ರಥ, ಪದಾತಿಗಳಿಂದ ಆ ನೀರು ಕಲಕುವುದು, ಕದಡುವುದು, ಬಗ್ಗಡವಾಗುವುದು (ಐಶ್ವ.ಕ. ಏಂಂಂ. ೯೬); ನಾವು ಕೇವಲ ಕಸರನ್ನೂ ಸಗಣಿಯ ಬಗ್ಗಡವನ್ನೂ ಉಳಿದಿದ್ದೇವೆ (ಹಂಂರ.II.೨೫೩). ೨. ಕೊನೆಯಲ್ಲಿ ಉಳಿದುದು: ಗಸಿ; ಗಷ್ಟು : ಮೇಲಿನ ತಿಳಿ ಖರ್ಚಾಗಿ ಬಗ್ಗಡ ಮಾತ್ರ ಉಳಿದಿದೆ (ಜಾತಿ). **ಬೊಗ್ಗಡ** : ೩. (ಆಲಂ) ಕಳವಳ ; ಕ್ಷೋಭೆ : ಕಿಟ್ಟಣ್ಣನ ಮನಸ್ಸು ಕಲಕಿ ಬೊಗ್ಗಡವಾಗಿ ಹೋಗಿ ಮತ್ತೆ ತಿಳಿಯಾಗಬೇಕಾದರೆ ಎಂಟು ಹತ್ತು ದಿನಗಳು ಬೇಕಾಗುತ್ತಿತ್ತು (ಶ್ರೀಕಹ.೪). [?]

**ಬಗ್ಗಡೆ** 'ಬಂಗಡೆ' ನೋ.

**ಬಗ್ಗಡೆಯು** 'ಬಕ್ಕುಡೆಯ' ನೋ.

**ಬಗ್ಗಣೆ$_1$** (ನಾ). ೧. ಗದರಿಕೆ ; ಝಂಕಣೆ: ತಂದೆ ಕಡಂಗಿ ಕಲ್ಪಿಸುವ ಕಲ್ಪಿಯನೊಲ್ಲದೆ ತಾಯ್ಮಗುಟ್ಟು ನಿರ್ವಂದದಿನೆಯ್ದೆ ಬಗ್ಗಿಸುವ ಬಗ್ಗಣೆಗಳ್ಕದೆ (ಸುಕುಮಾ.೨-೮); ನಿಱಿಸು ನಿಘಾತಮಾಂಕೆ ಬಗೆ ಬಗ್ಗಣೆ ವಂಚನೆ ಬಂಧಮೆಂಬಿವಂ ಮೞೆವೊವರ್ಕಳೇಂ ಕಲಿಸುತಿರ್ವರೊ ಚಟ್ಟರನಟ್ಟಮಟ್ಟರಂ (ಕುಶ್ವಕು.೨-೩೦). ೨. ಕೂಗಾಟ; ಅರ್ಭಟ: ಹೆಗ್ಗಡಲ ತೆರೆಯಂತೆ ಮೊಳಗುವ ಲಗ್ಗೆಗಳೆಲೋರಂತೆ ಸುಭಟರ ಬಗ್ಗಣೆಯ ಬಲುಧುಜರ ಘನತರ ಸಿಂಹನಾದದಲಿ ತಗ್ಗಿದುದು ಧರೆ (ಕಭಾಗ. ೦೦-೩೨-೯೪).

**ಬಗ್ಗಣೆ$_2$, ಬಗ್ಗಳೆ** (ನಾ). ಹಕ್ಕಿಗಳ ಕೂಗು; ಕೂಜನ : ಕಳಕಂಠಿಯ ಬಗ್ಗಣೆಯೇವಮಂಬ . . . ಮಧುಮಾಸದ ಗೋಸಣೆಯೇವುವೆಂಬ ಬದ್ದರ ನಟೆಯಟ್ಟಿ (ಅಂತ.೬-೨೩); ಕೋಗಿಲೆಯ ಬಗ್ಗಣೆ ತುಂಬಿಯ ಗೇಯಮೆಂಬಿವಂ ಬಲ್ಲವರು ಮನಂಗೊಳಿಸುಗುಂ ಕೃತಿ ಸತ್ಕೃತಿ ನಾಗಚಂದ್ರನಾ (ಮಲ್ಲಿಪು.೦-೪೪). **ಬಗ್ಗಳೆ**: ಪರಪುಷ್ಟಧ್ವಾನದೊಳ್ ಬಗ್ಗಳೆ ಪುರುಳಿಗೊಳಲ್ ಲಲ್ಲೆ (ಅಪಂಪು. ೦-೯೩). [ಬಗ್ಗ$_2$ + — ಅಣೆ$_1$]

**ಬಗ್ಗದೊವಲ್** 'ಬಗ್ಗಂದೊವಲ್' ನೋ.

**ಬಗ್ಗದೊವಲ** (ನಾ). ಹುಲಿಯ ಚರ್ಮವನ್ನು ಧರಿಸಿದವನು ; ವ್ಯಾಘ್ರಚರ್ಮಾಂಬರ ; ಶಿವ : ಬಗ್ಗದೊವಲಗೆ ಸೊಡರ ಹಚ್ಚುಸುವ ಹಾರೆರವೆ (ಚಕ್ಕಿಕ. ೩-೫೦). [ಬಗ್ಗದೊವಲ್(<ಬಗ್ಗಂದೊವಲ್) + —ಅ$_1$]

**ಬಗ್ಗದೊವಲು** 'ಬಗ್ಗಂದೊವಲ್' ನೋ.

**ಬಗ್ಗದೊವಲುಡಿಗ** (ನಾ). = ಬಗ್ಗದೊವಲ : ಬಗ್ಗದೊವಲುಡಿಗನೀರೇಳ್ಬುವನದೊಡೆಯನೆಸೆದಂ ರಾಜವಿಭವದಿಂದೆ (ಕಂಶಿ. ೨೯-೪೦). [ಬಗ್ಗದೊವಲುಡೆ+ — ಇಗ]

**ಬಗ್ಗದೊವಲುಡಿಗೆ** (ನಾ). ಹುಲಿಯ ಚರ್ಮದ ಉಡುಪು ; ವ್ಯಾಘ್ರಚರ್ಮದ ಉಡುಗೆ : ಬೆಳುಗಾಯ ಕೆಂಜಡೆಯು ಚೆನ್ನಾಗಿ ಬಗ್ಗದೊವಲುಡಿಗೆ ವಿಭೂತಿ ರುದ್ರಾಕ್ಷಿಗಳು (ಶಕಶೋ. ೦೩.೦೩). [ಬಗ್ಗದೊವಲು (<ಬಗ್ಗಂದೊವಲ್) + ಉಡಿಗೆ$_1$ (<ಉಡುಗೆ)]

**ಬಗ್ಗದೊವಲುಡೆ** (ನಾ). =ಬಗ್ಗದೊವಲುಡಿಗೆ : 'ಬಗ್ಗದೊವಲುಡೆಯು' ಪರಾ. [ಬಗ್ಗದೊವಲ್ (< ಬಗ್ಗಂದೊವಲ್)+ಉಡೆ$_1$]

**ಬಗ್ಗದೊವಲುಡೆಯು** (ನಾ).=ಬಗ್ಗದೊವಲ : "ಎನ್ನಯ್ಯಂ . . . ಸಬ್ಬಂ, ಬಗ್ಗದೊವಲುಡೆಯಂ, ಬಾನ್ನವಿರಂ . . . ಅಯ್ಯೊಗು _ ಈ ೩೩ ಈಶ್ವರಂಗೆ ಪೆಸರ್" (ಕಶಾ. ೯೭-೦) ; ವೆಗ್ಗಳಿವ ಶೀತಕರನೀರೆಂಟುಭಾಗದೊಳ್ ಬಗ್ಗದೊವಲುಡೆಯನೊಂದಂ ತಳೆದು ಚಂದ್ರನಂ ನೋಡಿ ಮತ್ತಿಂತೆಂದನು (ಕಂಶಿ. ೨೨-೨೩) ; ಬಗ್ಗದೊವಲುಡೆಯುಂಗೆ ಪಟ್ಟಣಗೆಯನುಡಿಸಿ (ರಾಘವಾಂಕ. ೦೪೦-೦೨). [ಬಗ್ಗದೊವಲುಡೆ +—ಅ$_1$]

**ಬಗ್ಗನೆ** (ಅ). ಕೂಡಲೆ ; ತಕ್ಷಣ : ಬಗ್ಗನಿಲ್ಲಿಂದ್ಯೆದಿ ನಾವು ನಮ್ಮಯ ಗಡಿದುರ್ಗದೊಳ್ತಲಿ ನಿಲ್ವವು (ಕಂಪಪು. ೦೯-೯೯) ; ಸಗ್ಗದಿನಾಗಳೆ ಚರರುಂ ದಿಗ್ಗಜಮಂ ಕರತರಲ್ಕೆ ಕಳಿಪಿದೊಡವರ್ಗಳ್ ಬಗ್ಗನೆ ಬಂದುಸಿರಲ್ಕೆ (ಹಾಲಾಸ್ಯ. ೦-೩-೨೩) ; ಸಗ್ಗಿಗರ ಪರಿಯನ್ನಿತರ ನೋಡಿ ಹರ್ಷದಿಂ ಬಗ್ಗನಿದಿರೆದ್ದು ಸಲೆದಪ್ಪಿ (ಹಂಕಾಪು. ೨-೩೨-೩೬). [ಬಗ್$_2$+—ಅನೆ$_1$]

**ಬಗ್ಗಬರಿ** 'ಬಜ್ಜು₂' ವರಾ.

**ಬಗ್ಗಬಜ್** 'ಬಜ್ಜು₂' ವರಾ.

**ಬಗ್ಗಮರಿ** (ನಾ). ಹುಲಿಯ ಮರಿ; ವ್ಯಾಘ್ರಶಿಶು : ಚಳೆಯನುರೆ ಚೆಲ್ಲುವವು ಬಗ್ಗಮರಿಗಳು (ಶಶಿಕೋ. ೬-೦೦). [ಬಗ್ಗ₁+ಮರಿ₂ (<ಮಱ)]

**ಬಗ್ಗರೆ** 'ಬಕ್ಕರೆ' ನೋ.

**ಬಗ್ಗವಳ್ಳಿ** (ನಾ). ಒಂದು ಬಗೆಯ ಬಳ್ಳಿ (?) : ಬಗ್ಗವಳ್ಳಿಯ ಬಳ್ಳಿ ಗಾವಣದೋಳಿಯಿಂ ಸೊಗಯಿಪ್ಪ ಸಮ್ಯಗ್ಗವಾಕ್ಷದ ವಂಕದಾರದ ಕೇತಕೀಗರ್ಭಯಿನೊಂದಿ ನಿಂದಗ್ಗಳಿಕ್ಕೆಯನೀಟ್ಟು ನೀಳ್ದ ನಿವೇಶದೊಳ್ ಮದನಂ ಮಹಿಕ್ಕಗ್ಗು ಪೊರ್ದದ ರೂಹಿನೊಳ್ ನೆಲಸಿರ್ಪವೋಲ್ ಸುಖಿಯಿರ್ಪಿನಂ (ಜಾಂಚಿಕ. ೩-೬೯). [ಬಗ್ಗ₂ + ಬಳ್ಳಿ]

**ಬಗ್ಗಸಮ್ಮ** (ನಾ). —ಬಗ್ಗಂದೊವಲ್ : ಜಡೆಗಳ ಬಂಬಲೇ ತಲೆವೇರ್ ಘಟೆ ಸುತ್ತಿದ ಬಳ್ಳಿ . . . ಬಗ್ಗಸಮ್ಮದೊಳ್ಪುಡೆ ಪೊಸಜಲ್ಲಣಂ (ಕಕಾಂ. ೩-೩). [ಬಗ್ಗ₁+ಸವ್ಮ₃ (<ಚವ್ಮ)]

**ಬಗ್ಗಳಿ** 'ಬಗ್ಗಣ್ಣೆ' ನೋ.

**ಬಗ್ಗಿ** 'ಬಗ್ಗಿ' ನೋ.

**ಬಗ್ಗಿಸು₁** (ಕ್ರಿ). ೧. ಬಗ್ಗುವಂತೆ ಮಾಡು ; ಬಾಗಿಸು : ತರಣಿಶತಕೋಟಿ ತೇಜದ ರತ್ನದೋಹರಿಯ ಪಿರಿಯ ಸೌಧೋತ್ತರಂಗಳ ಪ್ರಾಂಗಣಂಗಳೊಳು ಹರನೋಲಗದ ಸಮಯಮಂ ದ್ವಾರಪಾಲಕರ ಶಿರವ ಬಗ್ಗಿಸಿ ಕೇಳುತ ಕರಗಳಂ ಮುಗಿದು (ಗುಶಕ. ೩-೯೦) ; ನೀನು ತಲೆ ಬಗ್ಗಿಸಿಕೊಂಡೇ ಕುಳಿತಿದ್ದೀಯಲ್ಲ (ಕಂಗಾಳ್ಮ. ೨೩೨). ೨. ಚೆಲ್ಲು ; ಸಂಠಿ : ಬೀರಕ್ಕ . . . ಕಡಾಯಿನ ನೀರನೆಲ್ಲಾ ಬಗ್ಗಿಸಿದ್ದಾಳೆ (ಜಲಕಿಂ. IX. ೩೨) ; ಮಗ್ಗಲುತೋಟದ ಜನಗಳೆಲ್ಲಾ ಅಲ್ಲಿಗೆ ಬಂದು ನಾನು ನೀರು ಬಗ್ಗಿಸುತ್ತಿದ್ದ ಧಾಟಿಯನ್ನೇ ನೋಡುತ್ತಿದ್ದರು (ಕಂಗಾಳ್ಮ. ೬೦೭). ೩. ಸೋಲಿಸು ; ಹಿಮ್ಮೆಟ್ಟಿಸು : ಜಕ್ಕವಕ್ಕಿಯಂ ಪಱವಡೆದಿರ್ದ ಕೋರವೂರೆ ಬಗ್ಗಿಸೆ ನೈದಿಲದಿನೆಯ್ದೆ ಕಣ್ಮಲರ್ ಕೊರಗಿಸೆ ನಾಡೆ . . . ಬನವಣ್ಣಿಸಿವಂದದಿನೊರ್ವಳೊಪ್ಪಿದಳ್ (ಕಬ್ಬಿಗ. ೦೦೨). ೪. ಗದರಿಸು ; ಬೆದರಿಸು; ಝಂಕಿಸು : "ಬಗ್ಗಿಸಿದನೆನಲ್ಕೆ ಝುಂಕಿಸಿದ ನೊಳು ಜೋಬ್ಬುಂ" (ಕಜಾರಂ. ೯೮) ; ಒಸಗೆ ಮೇಣ್ ಮುನಿಗೆ ಮೇಣವ ರೆಲ್ಲರುಮಂತೆ ಬಗ್ಗಿಸುಗೆ ಮತ್ತುಱುಯಲಾಗದು ನೆಟ್ಟನೆ ಪೂಣ್ದುದಂ (ಕಜಾ. ೦-೨೩) ; ಕಿಱಯಂದು ತಂದೆ ಬಗ್ಗಿಸಲಱಯನೆ ತಾಯ್ ಜಡಿದು ತಿಳಿವಲ ಱಯಳೆ (ಸುಕಸು. ೨-೬). ೫. ಮೂದಲಿಸು ; ಹೀಯಾಳಿಸು ; ಹಂಗಿಸು : ನಾಗಂಗಳ್ ವೆಡೆಗಳನೆತ್ತಿ ನಾಲಗೆಗಳಂ ಪೊಳೆಯಿಸುತ್ತಂ ಬಂದೊಡೆ ನೀಮೊದಱಯವಂ ಬಗ್ಗಿಸಿದೊಡದೃಶ್ಯಂಗಳಾಗಿ ಪೋಕುಂ (ಕಜಾ.ಡಾ. ೦೦೦-೪) ; ಮುನಿಕುವರಾರರೋದುವ ವೇದವೇದಾಂಗಂಗಳಂ ತಪ್ಪುವಿಡಿದು ಜಡಿದು ಬಗ್ಗಿಸುವ ಪದುಮರಾಗದ ಬಣ್ಣದರಗಿಳಿಗಳುಮಂ (ಹಂಕರಾ. ೦-೦೦೩ ಪ) ; ಕಟಲೆ ನುಡಿದಟಲೆ ಬಗ್ಗಿಸಿ ಘಟಿಲಿನೆ ನಡೆಯೆಂದು ಜಡಿದು ಸಾರಥಿಯಂ ಪಾಂಗುಱದು ನಿಲಲೀಯದಲ್ಲಿಂದೆಟೆದುಯ್ಯಂತುಯ್ದು ಕಾತ್ಯಾಯನಂ ನರನಂ (ಕಾವ್ಯಾ.ಕ. ೨೬). 'ಬಾಗಿಸು₁' ವರಾ. [ಬಗ್ಗು₁ + — ಇಸು₁]

**ಬಗ್ಗಿಸು₂** (ಕ್ರಿ). (ಕೋಗಿಲೆ ಮೊದಲಾದ ಪಕ್ಷಿಗಳು) ಕೂಗು ; ಉಲಿ : ಕಾವ್ಯಬಂಧಮಪ್ಪುಗುಮೆಳಮಾವ ಕೆಂದಳಿರ ಪೂವಿನ ಬಿಣ್ಪೊಱೆಯಿಂ ಬಟಲ್ದು ತುಂಬಿಗಳನೆ ತುಂಬಿ ಕೋಗಿಲೆಯ ಬಗ್ಗಿಸೆ ಸುಗ್ಗಿಯೊಳೊಪ್ಪು ವಂತೆವೋಲ್ (ಹಂಕಶಾ. ೦-೬) ; ಪಿರಿದುನ್ನದಾಳಿ ಬಗ್ಗಿಸುವ ಪಿಕಾಳಿ ಪುಷ್ಪಿತ ಲತಾಳಿ (ಎಕ. VIII, ಸಾಗರ. ೦೦೬-೨೬; 1042) ; ಪಾಡುವ ತುಂಬಿ ಬಗ್ಗಿಸುವ ಕೋಗಿಲೆ ಪರ್ಣಿಪ ನೀಲಕಂಠ (ಕಬುಷಾ. ೩-೦೯೯). [ಬಗ್ಗು₂ + — ಇಸು₁]

**ಬಗ್ಗು₁** (ಕ್ರಿ). ೧. ಕೆಳಮುಖವಾಗು ; ಬಾಗು ; ಬಗ್ಗಿ ಕವಿವಂಬುಗಳ ಗೞಗಳ ಲಗ್ಗೆಗರಿನಾಯಕರ ಕಿವಿಗಳು ನೆಗ್ಗಿದವು ಮುಗ್ಗಿದವು ಮನ ಮಾಱಂಕದತಿರಥರ (ಜಯಾ. ೪. ೨೦-೭); ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೇ ? (ಗಾದೆ). ೨. ಡೊಂಕಾಗು ; ವಕ್ರವಾಗು : ಆ ಕಿಟಕಿಯ ಸರಳುಗಳೆಲ್ಲ ಹಳೆಯವಾಗಿ ಬಗ್ಗಿವೆ (ಬಳಕೆ). ೩. ಓರೆಯಾಗು ; ಓಲು : ಬಿನ್ನಣದ ಗೋಪುರದ ಮಂಟಪದ ಕೃಹುಮಗಳು ಚೆನ್ನಾಗಿ ನಿಗುರುತಂ ಬಗ್ಗುತ್ತ. . .ನೋಡಿ (ಜಯು. ೨೦-೩-೬೬). ೪. ವಿನಯವನ್ನು ಹೊಂದು ; ವಿನೀತವಾಗು : ಭೋಗ್ಗನೊಂದೇ ದಿನದೊಳು ಕೋಟಿ ನಾತ್ಮನು ಬಗ್ಗಿದಾಗ್ ಬಾಗಿಲಹುದೇ (ಜಜ. ೨-೬೬) ; ಬಗ್ಗಿದವನಿಗೆ ಒಂದು ಗುದ್ದು ಹೆಚ್ಚು (ಗಾದೆ). ೫. ಮಣಿ ; ಸಗ್ಗು ; ತಗ್ಗು : ಅತಿಕಾಂಕ್ಷೆಯನಾವಂ ಮಾಳ್ಪನವಂ ಸತತಂ ಹಿಂಸೆಗೆ ಬಗ್ಗುವನಲ್ಲಂ (ಜಯಕ. ೦೦-೦೩) ; ಗ್ರಾಮದ ಮುಖಂಡರು ಇಷ್ಟು ಪ್ರಯತ್ನಪಟ್ಟರೂ ಬಗ್ಗದ ಹಟವಾದಿಯು . . . ಗ್ರಾಮಸ್ಥರನ್ನು ಅಕರಾಧಿಗಳನ್ನಾಗಿ ಮಾಡುತ್ತಿದ್ದನು (ಜನ್ಮಶ. ೦೩). ೬. ಗದರು ; ಝುಂಕಿಸು : 'ಬಗ್ಗಣ್ಣೆ', 'ಬಗ್ಗಿಸು₁' ವರಾ. 'ಬಾಗು' ಹೋ. [ದೇ. ೩ ತುಳು. ಬಗ್ಗು ; ಕೊಡ. ಬಗ್ಗ್]

**ಬಗ್ಗು₂** (ಕ್ರಿ). (ಪಕ್ಷಿಗಳು) ಕೂಗು ; ಉಲಿ : 'ಬಗ್ಗಿಸು₂' ವರಾ.

**ಬಗ್ಗು₃** (ನಾ). ಬೆದರಿಸುವಿಕೆ ; ಗದರಿಸುವಿಕೆ ; ಝುಂಕಣೆ : "ಬಗ್ಗು, ಬಪ್ಪಂಡಂ, ಬೆಚ್ಚ, ಚಪ್ಪರಣೆ—ಈ ೪ ಜಂಕಣ್" (ಕಜಾ. ೩೬-೨೫೬). [ <ಬಗ್ಗು₁ ].

**ಬಗ್ಗು₄** (ನಾ). ಪಕ್ಷಿಗಳ ಕೂಗು ; ಹಕ್ಕಿಗಳ ಧ್ವನಿ : "ಬಗ್ಗೆನಲ್ಕದು ಪಕ್ಷಿಗಳ ದನಿಗೆ" (ಕಜ. ೦೨೭). [<ಬಗ್ಗು₂]

**ಬಗ್ಗು₅** (ನಾ). ಐಶ್ವರ್ಯ ; ಸಂಪತ್ತು : "ಬಗ್ಗು (ಬಗ್ಗ, ಬಾಗ)— ಭಾಗ್ಯ" (ಕಕೈಕೋ. ೩೬) ; ಕೃತಿಯಿದು ಚದುರಕರ್ಣಾಟಕಕ್ಷಿತಿಯಿಱವನ ಬಗ್ಗಿನ ಬೆಳೆ (ಷಂಕಜೋ. ೦-೨೨) ; ಮೂವರಲಕರೆಯ ಲಲನೆಯ ನೊಸಲದು ಬಗ್ಗಿನ ನೆಲೆವನೆ (ಹಾಶಾತ್ಮ. ೦-೦೩-೦೭) ; ಪುಣ್ಯದ ರಾಶಿಯಂತೆ ಬಗ್ಗಿನ ನೆಲೆಯಂತೆ ಮೈಮವತ್ತು ಚೆಲ್ವಾದ ಪರ್ವತಂ ತೋಱವಂದುದು (ಣಾಶತ್ಮ. ೬೨-೦೦). [<ಪ್ರಾ. ಬಗ್ಗ./ಸಂ. ಭಾಗ್ಯ]

**ಬಗ್ಗುಬಡಿ** (ಕ್ರಿ). (ಅಲಂ) ಬಾಯಿ ಮುಚ್ಚಿಸು : ಅಡಗಿಸು ; ಸಂಮ್ಮನಾಗಿಸು : ಸಂನ್ಯಾಸಿಗಳನ್ನು ಬಗ್ಗುಬಡಿದೆವೆಂದು ಹಂಸ ಡಿಂಭರ ಅವಿನಯವು ಮತ್ತಷ್ಟು ಉಬ್ಬಿ ಹರಿಯಿತು (ಶೀಜಟ್ಟು. ೦೯೦) ; ತಾಯಿಯನ್ನು ಬಗ್ಗುಬಡಿದಂತೆ ಈ ಬಾರಿಯೂ ಮಾಡಬೇಕೆಂದು ನೆನೆಸಿ ಇದರ ಬಗ್ಗೆ ಮನೆಯಲ್ಲಿ ಚಕಾರವೆತ್ತಿ ತೆಗೆಯಲಿಲ್ಲ (ಗಂಜಾಯಿ. ೩೩). [ ಬಗ್ಗು₁ + ಬಡಿ₁ ]

**ಬಗ್ಗುರಿ₁** (ನಾ). ಎದೆಗೂಡಿನ ಮೂಳೆ : ಕಟಕಟಾಯಿಪಾ ಮತ್ಸ್ಯವಿಪ್ಲರಲ್ ಜಗಕೆ ಸಂಕಟಮಪ್ಪುದಚ್ಚರಿಯೆ ನೋಡೆಂದು ಕೂರ್ಪ ಲಟಕಟಿಸಿ ಕಡ ಲೊಳ್ ಪೊಕ್ಕು ಗುಡಿಗುಡಿವ ವಿಪಾನ ಬಗ್ಗುರಿಯನೊದೆದಾಂತೆ (ಕಜಾ. ೨೦-೬) : ಉಡಿದರಾಂತವರ ಬಗ್ಗುರಿಗಳಂ ದಾನವರ್ ಕುಡಿದರ ರುಣಾಂಬುವಂ ಶಾಕಿನಿಯರ್ (ಕಜಾ. ೨೪ ೨೨). [ ದೇ. ೩ ಕೊಡ. ಬಗ್ಗರೆ = ಬೆನ್ನೆಲುಬು ]

**ಬಗ್ಗುರಿ₂** (ನಾ). ಜಿಂಕೆ ಮೊದಲಾದ ಪ್ರಾಣಿಗಳನ್ನು ಹಿಡಿಯುವವನು; ಬೇಡ : ಜಗದ ಪ್ರಾಣಿಗಳುಲಿದುಲಿದು ಮರಳಿ ಮತ್ಸಕ್ಷಿಯೇ ಬೀಳಲು ಬಲೆಯ ನೇಣು ಬಗ್ಗುರಿಯ ಕೈಯಲಿರಲು ಬಲೆಯ ನೇಣ ಕಣ್ಣಿಯ ಕಳಚಿ ಶರಣನು ಶರಣೆನುತ್ತವೆ ನೀದು (ಅವತಾ. ೬೩-೩೭೭). [< ಸಂ. ವಾಗುರಿಕ]

**ಬಗ್ಗುವೆಣ್** (ನಾ). ಸಂಪತ್ತಿನ ದೇವತೆ ; ಭಾಗ್ಯಲಕ್ಷ್ಮಿ : ಬಗ್ಗದೊವಲು ಡೆಯೊಳುಳ್ಪುಡೆ ವಿಜಾಜಸುತಿರಲ್ ಬಗ್ಗುವೆಣ್ಣನಿಯನಟ್ಟಿಯ ಚೆಲ್ವಗಾಲ ಸಲಹಗ್ಗಳದ ಭೋಗವಮಲ್ಲ (ಕೀಶವು. ೬-೩೯). [ಬಗ್ಗು₅ + ಪೆಣ್]

**ಬಗ್ರಿಹಗ್ಗ** (ನಾ). ಎರಡು ಕೊನೆಗಳಲ್ಲೂ ಹಿಡಿದುಕೊಳ್ಳಲು ಅನುಕೂಲವಾದ ಲೋಹದ ಬಳೆಗಳನ್ನು ಹೊಂದಿರುವ ಹಗ್ಗ ; ಇದಕ್ಕೆ 'ಡಗ್ರಿಹಗ್ಗ'ವೆಂದೂ ಹೇಳುತ್ತಾರೆ : ಅವರು ಬಲೆಗಳನ್ನೆಲ್ಲಾ ಒಂದರೊಂದಿಗೆ ಒಂದನ್ನು ಗಂಟುಹಾಕಿ ಅದರ ಎರಡೂ ತುದಿಗಳಿಗೂ 'ಆಣೆ' (ಬಿದಿರಿನ ದೊಣ್ಣೆ)ಯನ್ನು ಹಾಕಿ 'ಬಗ್ರಿ' ಹಗ್ಗವನ್ನು ಕಟ್ಟಿ ಆಚೆ ಈಚೆ ಗಿಡಗಳಿಗೆ ಬಿಗಿದರು (ಕೃಷಿಜೀ. ೦೦೩) ; ಬಲೆಯ ಕೆಳಗಡೆ ಅಂಚು. ಆ ಅಂಚುಗಳ ತುದಿಯಲ್ಲಿ ಕಟ್ಟಿರುವ ಬಗ್ರಿಹಗ್ಗವನ್ನು ಹತ್ತಾರು ಮಾರು ದೂರಕ್ಕೆ ಎಳೆದು ಬಂಡೆಗಳಿಗೂ ಕುರುಚಲುಗಿಡದ ಬುಡಗಳಿಗೂ ಕಟ್ಟಿದರು (ಜುಬ್ಬಿಹ. ೦೯). [ಬಗ್ರಿ₁ + ಹಗ್ಗ (< ವಗ್ಗ)]

**ಬಚಕಾನಿ** 'ಬಚ್ಚಕಾನೆ' ನೋ.

**ಬಚನಾಗ** (ನಾ). ಒಂದು ಬಗೆಯ ವಿಷಯುಕ್ತವಾದ ಔಷಧಿ ಬೇರು : ಬಚನಾಗ (ಕಡಗೋಲಮಂಡೀ ಬೇರು), ಸುಂಬಳಕಾರ ಮೊದಲಾದ ಪ್ರಸಿದ್ಧ ವಿಷಗಳು. ಇವುಗಳಿಗೆ ಯೋಗವಾಹಿ ಎಂದೂ ಹೇಳುವರು ; ಅಂದರೆ ಬೇರೆ ಔಷಧಗಳ ಕೂಡ ಬೆರಸಿದರೂ ಇವು ತಮ್ಮ ಪರಾಕ್ರಮವನ್ನು ತೋರಿಸತಕ್ಕವೆಂಬ ಅರ್ಥವು (ಗೃಹವೈ. ೬) ; ಜೀವಸಗಳು ೧. ಅಕ್ಕಲಖಾರ . . . ೧೫. ಬಚನಾಗ (ಜುಂಬಿಕ್ಕಾ. ೦೨೨).
[← ಹಿಂ. ಬಛನಾಗ್ ; ಮರಾ. ಬಚನಾಗ್. / ಸಂ. ವತ್ಸನಾಭ]

**ಬಚಲು** 'ಬಚ್ಚಲ್' ನೋ.

**ಬಚಾಯಿಸು** (ಕ್ರಿ). ೧. ಉಳಿಸು ; ಪಾರುಮಾಡು; ರಕ್ಷಿಸು : ಏನು ತಪ್ಪುಮಾಡಿದ್ದರೂ ಅವರನ್ನು ಬಚಾಯಿಸುತ್ತೀನೆ (ಕಂಪ. ೨೯೩) ; ಅವಳನ್ನು ಬಚಾಯಿಸುವ ಜವಾಬ್ದಾರಿ ನಿಮ್ಮದು (ಕಾಕರುಣಾ. ೬೨) ; ನಿಮ್ಮನ್ನು ಬಚಾಯಿಸುವ ಮನಸ್ಸಿದೆ (ದೀಪಹೊ. ೦೫೦). ೨. ನಿಭಾಯಿಸು ; ನಿರ್ವಹಿಸು : ಅವನು ಯಾವ ಕೆಲಸವನ್ನಾದರೂ ಬಚಾಯಿಸುತ್ತಾನೆಂಬ ವಿಶ್ವಾಸ ನನಗಿದೆ (ಲೋಕ).

**ಬಚಾಯಿಸಿಕೊಳ್ಳು** = ಉಳಿದುಕೊಳ್ಳು; ಪಾರಾಗು; ರಕ್ಷಿಸಿಕೊಳ್ಳು: ನಿಮ್ಮೆಲ್ಲಿ ಬಚಾಯಿಸಿಕೊಂಡೋರು ಯಾರು ? (ರಂಗಪ. ೯೩) ; ಅವನಿಂದ ಬಚಾಯಿಸಿಕೊಂಡು ಹೋದರೆ ಸಾಕಪ್ಪ ಅಂತಿದ್ದೆ (ಪುಕರು. ೨೦೨).
[< ಬಚಾವು + – ಇಸು₁]

**ಬಚಾವ್** 'ಬಚಾವು' ನೋ.

**ಬಚಾವು**, ಬಚಾವ್ (ನಾ). ಉಳಿವು ; ಪಾರಾಗುವಿಕೆ ; ರಕ್ಷಣೆ : ಮುಂದೆ ನಡೆದ ಕೇಸಿನಲ್ಲಿ ಕಾಳೇಗೌಡನ ಬಚಾವು (ಕಂಪ. ೨೬೫) ; ಸಂಜೆಯ ಮುಂದೆ ಈ ದೃಶ್ಯದ ರಂಗಕಾಲೀಮನ್ನು ಇಡುವುದರಿಂದ ಸಾರ್ವಜನಿಕರ ಕಾಳ್ಕು ಕಟ್ಟಿಗೆಗಳು ಬಚಾವು ಆಗುತ್ತದೆ (ಕಂಗಕೋ. ೧೨೦). ಬಚಾವ್ : "ಬಚಾವ್ ಆದೆನಪ್ಪ" ಎನ್ನುತ್ತ ಪಾಗಾರವನ್ನಿಳಿದ ಮಾಸ್ತರರ ಮನಸ್ಸು ಬಹಳ ಕದಡಿಹೋಗಿತ್ತು (ಜುಂಕುಜಾ. ೭೯) ; ಈಗಿನ ದಿವಸದಲ್ಲಿ ಮಕ್ಕಳು ಕಲಿತು ಬುದ್ಧಿವಂತರಾಗದಿದ್ದರೆ ಬಚಾವೇ ಇಲ್ಲ (ಸ್ವಸ್ಮಹೊ. ೪೬).

**ಬಚಾವಾಗು** = ಉಳಿದುಕೊಳ್ಳು; ರಕ್ಷಿಸಿಕೊಳ್ಳು; ಪಾರಾಗು : ನಿಮ್ಮ ಮಾತಿನಂತೆ ಇವತ್ತು ಬಚಾವಾದರೆ ಸಾಕು (ಜುಕಲ. ೦೫೨). **ಬಚಾವು ಮಾಡು** = ಉಳಿಸು ; ಪಾರುಮಾಡು ; ರಕ್ಷಿಸು : ನಿನ್ನನ್ನು ಹೇಗೋ ಬಚಾವು ಮಾಡಿದರಂತೆ (ಜುರುಜ. ೨೮೦). [← ಹಿಂ. ಮರಾ. ಬಚಾವ್]

**ಬಚ್ಚ₁**, ವಚ್ಚ₂ (ನಾ). ೧. ಮಗು ; ಬಾಲಕ ; ಹಸುಳೆ : "ಬಚ್ಚ—ವತ್ಸ = ಮಗು, ವೈಶ್ಯ" (ಕರ್ಣಕೋ. ೨೯) ; ಬಚ್ಚರ ಬಯಲ ನುಡಿಗೆ ಬಗೆಯಿತ್ತೊಡ ಮೆಚ್ಚಿ ಮಿಗಿಲನೀಯದನೇಳಿಸಿದೊಡೆ . . . ಪುಚ್ಚಣೆಯಹುದು (ಜಹುಣಾ. ೧೯-೫೦). ೨. ಹಸುವಿನ ಕರು : (ಕ). ವಚ್ಚ₂ : ೨. ಪಶು . . . ವಚ್ಚ ಸಹಿತ ಬಂದಿರ (ಷೋಡಶ. ೨೨-೩೭). [< ಪ್ರಾ. ಬಚ್ಚ, ವಚ್ಚ, ವಚ್ಛ. / ಸಂ ವತ್ಸ. / ಪಾರ. ಹಿಂ. ಮರಾ. ಬಚ್ಚಾ]

**ಬಚ್ಚ₂** (ನಾ). ವ್ಯಾಪಾರ ಮಾಡುವವನು ; ಹರದ ; ವೈಶ್ಯ: ಬಚ್ಚರ ದೂಸಿಗರ ನಿಯೋಗಿಗಳಗ್ಗಳಮಪ್ಪ ಸೂಳೆಯರ ಸಾಮಂತರ ಕಸವರಂಗಳೆಲ್ಲಮಂ ಕಳ್ದು (ಜಕ್ಕಾ.ಜಾ. ೦೨೩-೪) ; ಧನದಭವನಮನಿವ ಸಿರಿಯ ಬಚ್ಚರಾಪಣಾಂಗಳಿಂ ಪೊದಟ್ಟ [ಕಾವ]ಣಂಗಳಿಂ . . . ಸಮಸ್ತವಸ್ತುವಿಸ್ತಾರಹಾರಮಾಗಿರ್ದ ಹಸ್ತಿನಪುರವೆ ನಿಜವಂಶಾವಳಂಬಮಾಗೆ (ಶಾಂತಿಪು. ೦-೨೬ ಕಗಳ) ; ಬಚ್ಚರ್ ಕಿರ್ಚು ಮುಟ್ಟಿದ ತುಪ್ಪದಂತೆ ಬಲ್ಲುಗಿಡೆ (ಧರ್ಮಾಮೃ. ೨-೬೯).
[< ಸಂ. ವೈಶ್ಯ. / ತೆಲು. ಬಚ್ಚು]

**ಬಚ್ಚ₃** (ನಾ). ಮಕ್ಕಳು ಆಟಕ್ಕಾಗಿ ಬಳಸುವ ಕಲ್ಲು ಅಥವಾ ಬಿಕ್ಕರೆಯ ಚಪ್ಪಟೆಯಾದ ಸಣ್ಣ ಬಿಲ್ಲೆ,—ಹಲವೆ ; ಚಾವು : ಹುಡುಗಿಯರು ಬಚ್ಚ ಇಟ್ಟುಕೊಂಡು ಕುಂಟಬಿಲ್ಲೆಯಾಟ ಆಡುತ್ತಿದ್ದಾರೆ (ಲೋಕ).
[← ಮರಾ. ಬಚ್ಚಾ]

**ಬಚ್ಚಕಾನೆ**, ಬಚಕಾನಿ, ಬಚ್ಚಖಾನೆ, ಬಚ್ಚಗಾನಿ (ನಾ). ೧. ಹುಡುಗರ ಬಟ್ಟೆ,—ಉಡುಪು : (ಕ). ಬಚಕಾನಿ : ೧. ಹುಡುಗರ ಸಲುವಾಗಿ ನೆಯ್ದ ರೇಶ್ಮಿಯ ಅಂಚಿನ ಸಣ್ಣದೋತರ ಜೋಡುಗಳಿಗೆ ಬಚಕಾನಿಯೆನ್ನುತ್ತಾರೆ (ಜುಂಬಯಿ. ೬-೯೯). ೨. ಬಟ್ಟೆ; ವಸ್ತ್ರ: ಅವರ ಕಣ್ಣಿಗೆ ಅಷ್ಟೊಂದು ಜರಿಪೇಟಗಳೂ ಬಣ್ಣದ ಬಟ್ಟೆಗಳೂ ಬಚಕಾನಿಗಳೂ . . . ಸೇರಿದ ಹಾಗಿತ್ತು (ಕಾಮೂರು. ೩೩೦). ಬಚ್ಚಖಾನೆ : ೨. ಮೈತುಂಬ ಬಚ್ಚಖಾನೆಗಳನ್ನು, ಸೀರೆ, ಕಣಗಳನ್ನು ಮದುವಣಗಿಗೆ ಹೊರಿಸಿದರು (ಜುಕಕು. ೦೦೩). ಬಚ್ಚಗಾನಿ : ೧. ಬಚ್ಚಗಾನಿ ಉಟ್ಕಂಡು ಚಿನ್ನದ ರುದ್ರಾಕ್ಷೀನ ಕೊರಳಿಗೆ ಹಾಕ್ಕೊಂಡಿದ್ನಲ್ಲಾ ? (ಜುಕಕು. ೫೦೬). [← ಮರಾ. ಬಚಕನೀ]

**ಬಚ್ಚಖಾನೆ** 'ಬಚ್ಚಕಾನೆ' ನೋ.

**ಬಚ್ಚಗಾನಿ** 'ಬಚ್ಚಕಾನೆ' ನೋ.

**ಬಚ್ಚಣಿಸು** (ಕ್ರಿ). ೧. ಬಣ್ಣವನ್ನು ಹಚ್ಚು,—ಬಳಿ ; ರಂಗನ್ನು ಲೇಪಿಸು : ಬರೆದು ಬಚ್ಚಣಿಸಿದಂತಿನ್ನೆದೆಯೊಳಗಿರು ಗುರುವೆ (ಜಕಕ. ೪-೦೨೩) : ಮಣ್ಣಿನಿಂದ ಹೊಸದಾಗಿ ಒಂದು ದೊಡ್ಡ ಇಂದುರೆಯನ್ನು ಮಾಡಿ ಬಚ್ಚಣಿಸಿ ನಿಲ್ಲಿಸಿದ್ದರು (ಜಗಗ. ೯೫). ೨. ಬಳಿ ; ಲೇಪಿಸು : ಸುಣ್ಣದ ಮೂಗಿನಲಿ ಬಚ್ಚಣಿಸಿ ಕಳುಹುವವನವರ ಮನೆಗಳಿಗೆ (ಕೃ.ಪ್ರಾ.ಶಾ. ೬-೩೩).
[ಬಚ್ಚಣೆ₁ + – ಇಸು₁]

**ಬಚ್ಚಣೆ₁**, ಬಚ್ಚರಣೆ, ಬರ್ಚಣೆ (ನಾ). ೧. ಬಣ್ಣವನ್ನು ಬಳಿದು ಚಿತ್ರಿಸುವಿಕೆ ; ಬಣ್ಣದ ಕೆಲಸ : ಕಣ್ಣಿಲ್ಲದವಂಗೆ ಬಣ್ಣ ಬಚ್ಚಣೆ ಯಾಕೆ (ಷೋಳವಾ. ೯೨-೩೬೬) ; ತೋಳ ದರ್ಪದಲುಬ್ಬಿ ವಾಲಿಯ ಬಾಲಕನ ಬಚ್ಚಣೆಯ ತೊಟ್ಟಿಲ[ಪಾಠಾಂ. ಬಚ್ಚರಣೆದೊಟ್ಟಿಲ]ಕಾಲ ದೆಸೆಯಲಿ ಕಟ್ಟುವಡೆದವನೀತನಲ್ಲವಲೆ (ಕೊರಕಾ. ೬-೦೦-೫೦). ೨. ಶೃಂಗಾರ; ಅಲಂಕಾರ: ಬಣ್ಣ ಬಚ್ಚಣೆಯ ರಂಜನೆಯ ವೇಷವನೊಂದಿದಣ್ಣಗಳು ಸಹಜಸುಜ್ಞಾನಿಗಳೆನಿಪ್ಪ ಮುಕ್ಕಣ್ಣನ ಶರಣಜನಕೆ ಸರಿಯೆ (ಸಿದ್ಧೇಶ್ವ. ೨೨-೦೬೫). ೩. ಬಣ್ಣ ಹಾಕಿದ ಆಕೃತಿ ; ಚಿತ್ರ: ಪೊಳೆವ ಬಚ್ಚಣೆಯ ಹರಿಗೆ ಬಿಚ್ಚುಗತ್ತಿಯ . . . ಬಲಗಳ ಮಧ್ಯದೆ ಸರ್ವಸಂಭ್ರಮದೊಳು ಮಾಲೆಯಾಳದೇಶದಮನೀಶ ಬಂದ (ಕಂಪಹ. ೨೦-೬೫). ೪. (ಅಲಂ) ವೇಷ ; ಸೋಗು : ಬನ್ನಿರೆ ಅಕ್ಕಗಳು ಹೋಗಿರೆ ಅಲದ ಮರಕ್ಕೆ ಕಚ್ಚುವುವೆ ನಿಮ್ಮ ಚಿಪ್ಪಿನ ಹಲ್ಲುಗಳು ಬೆಚ್ಚಸುವುವೆ ನಿಮ್ಮ ಬಚ್ಚಣೆಯ ರೂಹುಗಳು (ಶಿತಕ. ೫೬೨) ; ತೊಲಗದ ಕಂಭದ ಹುಲಿಯ ಬಚ್ಚಣೆಯ ಗಜಮುಖದ ಭುಜಬಳಗರುಡನ . . . ಹರಿಗೆಕಾಜರ ಪರಿವೀಥಿಯೊಳಂ (೧೦೪. ೬-೫೫ ಶ). ಬಚ್ಚರಣೆ : ೩. ಅಂತು ಬರಹದ ಬಚ್ಚರಣೆಯ ಪೆಣ್ಣು ಕಣ್ಗೊಳ್ ತೊಬಲೆ ಧೈರ್ಯಂಗೆಟ್ಟು ಬಾಯ್ಬಿಟ್ಟು ಕನ್ಯಾರತ್ನಂ ತನಗೆಂತು ಸಾಧ್ಯಮಪ್ಪುದೆಂದು ವಿಚಾರಿಸಿ (ಪ್ರಭ್ವಾಸ್ಪ. ೩-೯೨ ಶ) ; ಶರಭಭೇರುಂಡರೂಪಾಂಚಿತ ವಿಚಿತ್ರದ ಬಚ್ಚರಣೆಯ ಹರಿಗೆಯ . . . ಹರಿಗೆಕಾಜರ ಮೊತ್ತದೊತ್ತಿನುಭಯಪಾರ್ಶ್ವದೊಳು (ಜುಮ್ಮಾಕ.

೩-೩೩ ಪ). ೫. ಬಣ್ಣ ಬಳಿಯುವ ಕಸಬು ; ಬಣ್ಣಗಾರಿಕೆ : ಕಳಕಳಿಕೆ ಕೋಳಾಹಳಿಸೆ ಕದ್ದಳಿಗ ದೂಸಿಗ ಬೂಸ ಗಂಧಿಗ ಕೊಲಪ ಚಿಪ್ಪಿಗ ಬಚ್ಚರಣೆ ಬಳೆಗಾಜಿ ದೋಗಾಜಿ . . . ಜಂಗುಳಿಗಗೇರಿಗಳೊಳಗೆ ರ್‍ಪಾಡಿಸಿದನು ಶಿವಾಳಿಗಳ (ಕೊರಂಬ. ೩-೬-೩೩). ೬. (ಅಲಂ) ಮಾಯೆ: ಬಚ್ಚರಣೆಯ ಸಂಸಾರದ ಹಚ್ಚನೆಯ ಕಂಡು ದಿಟವೆನುತಿರ್ಪ ಕುಚ್ಚಿತವುಸಾವಿಸಮು ಬೆಚ್ಚಿಸುವುದಿದೋನ್ನಮಶಿವಾ (ಹರಕಾ. ೨೪). ಬರ್ಚಣೆ : ೩. ಕೋಡ ಮೊನೆಯೊಳ್ ತಗುಳ್ಚಿದ ಸೂನಗಿತ್ತಿಯ ಕೊನೆಗೊಡಂಕೆಯೊಳ್ ತೂಗುವ ಬಿಳಿಯ ಚಾಮರದ ಬಿದುವೊಳ್ಪರೆದು ಬರ್ಚಿಸಿದ ಸಿಂಧೂರದ ಬರ್ಚಣೆಯ . . . ವಿಳಾಸವಾಳವಡೆ (ಶಾಂತೀ. ೬-೧೧ ಪ).

ಬಚ್ಚಣೆಯ ಮಾತು = ಬಣ್ಣದ ನುಡಿ; ಗಿಲೀಟಿನ ಮಾತು : ಬಣ್ಣ ಬಚ್ಚಣೆಯ ಮಾತು ಕಲಿತು ಹೊನ್ನು ಹೆಣ್ಣು ಮಣ್ಣಗಾಗಿ ಅನ್ಯವ ನಿನ್ನವರ ಪ್ರಸಂಗವ ಹಡೆಯಬಂದ ಗನ್ನಗಾಜಿಂಗೇಕೆ ಅಱಿವು (ವಚನಸಂ. ೩೪-೩೩೪).

[< ಪಚ್ಚು₃ + – ಅಣೆ₄. / ತೆಲು. ಬಚ್ಚನ. / ಸಂ. ಪ್ರಚ್ಛನ್ನ]

**ಬಚ್ಚಣೆ₃** 'ಬಚ್ಚಳೆ' ನೋ.

**ಬಚ್ಚಣೆವಾತು** (ನಾ). ಬಣ್ಣದ ಮಾತು : ಗಿಲೀಟಿನ ನುಡಿ : ಬಚ್ಚರ ಬಯಲ ನುಡಿಗೆ ಬಗೆಯಿತ್ತೊಡೆ ಮೆಚ್ಚಿ ಮಿಗಿಲನೀಯದನೇಳಿಸಿದೊಡೆ ಬಚ್ಚಣೆವಾತಿನ ಬದಗರ್ಗೊಲಿದೊಡೆ . . . ಪುಚ್ಚಣೆಯಹುದು (ಶಬ್ದಮ. ೦೪-೩೦) ; ಈ ನಿಮ್ಮ ಬಚ್ಚಣೆವಾ[ಹಾಕಾಂ. ಮಾ]ತಿಗಿರದೆ ನಾನೊಡ ಬಡುವುದಿಲ್ಲ (ಸಮ್ಯಕ್ತ್ವ. ೩-೩೪).  [ಬಚ್ಚಣೆ₁ + ಮಾತು₁]

**ಬಚ್ಚಣೆವೆಱು** (ಕ್ರಿ). ಬಣ್ಣದ ಕೆಲಸದಿಂದ ಕೂಡಿರು ; ಚಿತ್ತಾರ ವನ್ನು ಪಡೆ : ಪರಿಗೆಗಳಲ್ಲಿ ಕೀಲಿಸಿದ ಗೆಜ್ಜೆಯ ಬಚ್ಚಣೆವೆತ್ತ ಬಿಲ್ಗಳ್ (ಶಬ್ದಾ. ೨೬೩).  [ಬಚ್ಚಣೆ₁ + ವೆಱು₁]

**ಬಚ್ಚನಾಲಗೆ** (ನಾ.) (ಅಲಂ) ವ್ಯರ್ಥವಾದ ನಾಲಗೆ: ಅಚ್ಚ ಪಳದಿಯ ಕಾಯ ಜೋಡ ಮೇಲೊತ್ತಿದೊಡೆ ನಟ್ಟಿರ್ದ ಕೈಯ ಕರಿದಿನ ಹಿಂಡ ಹಿಡಿಯದೊಡೆ ಮೆಚ್ಚಿನಾಟಕ ಮಿಱಿ ಬಂದ ಕೆಂಪಿನ ಹಣ್ಣನಂಡ ಲೆದು ಬಿಡದಿರ್ದೊಡೆ ಬಚ್ಚನಾಲಗೆಯೆ ದೀಳೆಂದು ಹಾಸಂಗಿಯಂ ಪಚ್ಚಿಯ ವಿದೂಷಕನುರುಳ್ಚಿದಂ ಬಾಲಿಯರ ಮೆಚ್ಚಿಸುವ ಕಟಕಿವಾತುಗಳ ಜಾಣ್ಮ ಗಳಿಂದೆ ಪಗಡೆಯಾಡುವ ನೆವದೊಳು (ಕ್ಷೇಬಿಚಾ. ೬-೩೦). ☞ ಇಲ್ಲಿಯ ಶ್ಲೇಷಾರ್ಥದಲ್ಲಿ ಸಂದೇಹವಿದೆ. [< ಬಚ್ಚ₁₇ + ನಾಲಗೆ]

**ಬಚ್ಚನೆ** (ಅ). ಇದ್ದಕ್ಕಿದ್ದಂತೆ : ತಟ್ಟನೆ; ಕೂಡಲೆ : ಇನಿಯನ ಕೆಂದಳಂ ತಳಮನೊಯ್ಯನೆ ಸೋಂಕೆ ಪೊದಟ್ಟ ನಾಣ ಪೆಂಪಿನೊಳೊಗೆತರ್ಪ ಘರ್ಮಜಲಬಿಂದುಗಳಿಂ ನಮಿತಾನನಾಬ್ಜೆ ಬಚ್ಚನೆ ಬಸಿಯುತ್ತುಂ (ಶಾಕ್ಯಾಕ. ೬೬೩).  [ಬಚ್₂ + – ಅನೆ₁]

**ಬಚ್ಚಬಯಲ್** 'ವಯಲ್' ಪರಾ.

**ಬಚ್ಚಬಯಲು** 'ವಯಲ್' ಪರಾ.

**ಬಚ್ಚಬರಿದು** 'ಬಱಿದು' ಪರಾ.

**ಬಚ್ಚಬರಿಯ** 'ಬಱು'₂ ಪರಾ.

**ಬಚ್ಚಬಱಿದಾಗು** 'ಬಱಿದು' ಪರಾ.

**ಬಚ್ಚಬಱಿಯ** 'ಬಱು' ಪರಾ.

**ಬಚ್ಚರ** (ನಾ). ಒಂದು ಬಗೆಯ ರೋಗ (?) : ನೆಲದಾಳಕಲ್ಪಮಂ ಪೇಳ್ವೆ . . . ಅಕ್ಕಗಟ್ಟನಲ್ಲಿ ಕುಡಿಯೆ ಬಚ್ಚರಂ ಪೋಕು (ಜಾನ್ಸಿ. ೩). [?]

**ಬಚ್ಚರಣೆ** 'ಬಚ್ಚಣೆ'₁ ನೋ.

**ಬಚ್ಚರೆ ?** (ನಾ). ದೇವತೆಗಳ ವಾಸಸ್ಥಾನ ; ಸ್ವರ್ಗ : "ಬಚ್ಚರೆ ಬರ್ದಿರ್ ಸಗ್ಗಮೆನಲಮರಲೋಕಂ" (ಅಭಿಧಾ. ೦೦೦). [ ? ]

**ಬಚ್ಚಲ್**, ಬಚಲು, ಬಚ್ಚಲು₁, ಬರ್ಚಲ್ (ನಾ). ೧. ಹೊಲಸು ನೀರು ಹರಿದುಹೋಗಲು ಮಾಡಿರುವ) ಚರಂಡಿ : ಗಟಾರ ; ಮೋರಿ: "ಕಸಱುಗೆಯೆಂದು ಬಚ್ಚಲ್" (ಅಭಿಧಾ. ೬೩-೩೩೩) ; ನಿಚ್ಚಂ ನಿರ್ಮಲಜಲಮಿರೆ ಬಚ್ಚಲ ನೀರ್ಗಟಿವ ಕೀಟಕಂಬೊಲ್ತನ್ನಂ ನಚ್ಚಿದ ಸತಿಯಿರೆ ಬೆಲೆವೆಣ್ಗೆಳ್ಚಿಸುವುದು ನೀತಿಯೇ (ಅಧ್ಯಾತ್ಮ. ೧೦-೬೩). ೨. (ವ್ಯವಸಾಯ ಮುಂತಾದುವಕ್ಕೆ ನೀರನ್ನು ಒದಗಿಸಲು ತೋಡಿದ) ನಾಲೆ: ಬಚ್ಚಲ್ಗಳಂ ತಿರ್ದಿಸಲವಿರಳಘರ್ಮಾರ್ದ್ರಕಾಂತಾಜನ ಕ್ಕಾದರದಿಂ ನೀರಾಟವಾಡಲ್ ನೆಱೆಗುವೆನೆ ಪೊದಟ್ಟತ್ತು ಚಂದ್ರಾಂಶು ಜಾಲಂ (ಕಾದಂಬ. ೪೨೨); ಬೆಲಗಸೆ ತೀವಿಕೊಂಡು ಕುಡಿಯಲ್ ಮೊಗೆಯಲ್ ಕೊಡಗೊಂಡು ತಿರ್ದಿ ಬಚ್ಚಲನೆಲೆದೋಂಟದೊಳ್ ಪರಿಯಿಸಲ್ ಪಱು ಗೋಲ್ಗಳನಿಕ್ಕಿ ವಾಯಿಸಲ್ . . . ಬಗೆದುದಂದು ಜನಂ ಘನಚಂದ್ರಿಕೆಯಂ ಬುವಂ (ಅಜಿತ. ೬-೪೩) ; ವಾಪೀಕೂಪದೀರ್ಘಿಕಾಘಟೀಯಂತ್ರಪ್ರವಾಹಂ ಪುಗುವ ಬಚ್ಚಲ್ಗಳ ಪೊಱಮಡುವ ತೂಂಬುಗಳ ಬೆಡಂಗು ಕಣ್ಗೆ ನಿರವಿಸೆ (ಅನಂತ. ೬-೨೪ ಪ). ಬಚಲು: ೨. ಮುರಿದು ಬಂದ ಬಚಲ ಹೆಬ್ಬದುವಿನ ನಟ್ಟ ಕಲ್ಲು (ಎಂಶಾಸ. ೧೯೪೪, ಶಿಂಕಾಪುರ. ೬-೩೯ ; 1258); ನಾರಣಸೆಟ್ಟಿಯ ಬಚಲಿಂದ ತೆಂಕಲು (ಶಾಸ. ೧೯೩೦, ಮಂಗಳೂರು. ೩೩೪-೧೨ ; 1278) ; ಪಡುವಲು ಹರಿದ ಬಚಲಿಂದ ಮೂಡಲು (ಶಾಸ. ೧೯೩೩, ಕಾರ್ಕಳ. ೩೨೩-೨೬; 1364). ಬಚ್ಚಲು₁ : ೧. ಬಚ್ಚಲ ನೀರು ತಿಳಿದಲ್ಲಿ ಫಲವೇನು (ಅಕವ. ೦೨೦); ಬಚ್ಚಲುದಕಂ ತಿಳಿದೊಡಾರ ಮಾಹಕ್ಕೆ ಯೋಗ್ಯಂ (ಹರಿಶಾ., ೬-೦೩); ತನ್ನ ಕಾಲಂ ತೊಳೆದುಕೊಳಲ್ ಬಚ್ಚಲಿಗಳವಡುವುದೆಂದು ಏಱಿದಪ್ಪಿಟ್ಟಗೆಯ ನೊಂದನೊಯ್ದು ನಿಚ್ಚಲು ನೀರಿಂ ಕಾಲ್ಗಚ್ಚುವ ಸಮಯದಲ್ಲಿ ಮಿಸುನಿ ಯಾಗಿರ್ದುದಂ ಕಂಡು ತುಷ್ಟನಾಗಿ (ಪುಣ್ಯಾಸ್ರ. ೯-೩೨ ಪ) ; ಸಜ್ಜನರ ಸಂಗವದು ಹೆಜ್ಜೇನುಸವಿದಂತೆ ದುರ್ಜನರ ಸಂಗದೊಡನಾಟ ಬಚ್ಚಲಿನ ರೊಜ್ಜನಂತಿಹುದು (ಸರ್ವಜ್ಞ. ೪೦೯). ೩. (ಮನೆಯಲ್ಲಿ) ನೀರು ಹರಿದು ಹೋಗಲು ಅನುಕೂಲವಾದ ಮೋರಿಯಿರುವ ಸ್ನಾನ ಮಾಡುವ ಕೋಣೆ; ಸ್ನಾನಗೃಹ : ನಮ್ಮ ರಾಮೂ ನಿಮ್ಮನೇ ಬಚ್ಚಲಲ್ಲೇ ಸ್ನಾನ ಮಾಡ್ತೀನಿ ಅಂತ ಹಟ ಹಿಡಿದಿದ್ದಾನೆ (ಕಹಿಸಂ. ೦೩) ; ಬಚ್ಚಲಿಗೆ ಬಗೆಯಿಲ್ಲದವ ಮಾಳಿಗೆ ಕಟ್ಟ್ಯಾನೇ ? (ಗಾದೆ). ೪. (ಮನೆಯಲ್ಲಿ) ನೀರು ಹರಿದು ಹೋಗಲು ಅನುಕೂಲವಾದ ಮೋರಿ ಮತ್ತು ಕಟ್ಟೆಗಳಿರುವ (ಸ್ನಾನ ಮಾಡುವ) ನಿರ್ದಿಷ್ಟಸ್ಥಳ: ಬಚ್ಚಲಿನ ಜಗಲಿಯ ಮೇಲೆ ತಾಮ್ರದ ಬೋಸಿ (ನಾಳಹೂ. ೦೦೩); ಅವರು ಸ್ನಾನ ಮಾಡಲು ಬಚ್ಚಲಿಗೀದಿದ್ದಾರೆ (ಕೊಂ). Δ ಬರ್ಚಲ್: ೨. ಮೂಡಣ ಕಂಟಿ ವಡ್ಡದಿಂ ಬಡಗಲುಂ ಕೆಱೆಯ ಬರ್ಚಲಿಂದ ಮೂಡಲುಂ (ಎಕ. VII, ಶಿಕಾರಿ. ೦೩೦-೬೦; 1047).

ಬಚ್ಚಲ ಮನೆ=ಬಚ್ಚಲು ಕೋಣೆ : ಶ್ರೀಧರನು ಆದಷ್ಟು ಬೇಗ ಬಚ್ಚಲ ಮನೆಗಾಗಿ ಹೊರಟನು (ನಾಳಹೂ. ೦೦೪).

**ಬಚ್ಚಲು₁** 'ಬಚ್ಚಲ್' ನೋ.

**ಬಚ್ಚಲು₂** 'ಬಸಲೆ' ನೋ.

**ಬಚ್ಚಲುಕೋಣೆ** (ನಾ). ಸ್ನಾನ ಮಾಡಿದ ನೀರು ಹೊರಕ್ಕೆ ಹರಿದು ಹೋಗಲು ಅನುಕೂಲವಾದ ಬಚ್ಚಲಿರುವ ಕೊಠಡಿ; ಸ್ನಾನಗೃಹ : ಅವರ ಮನೆಯ ಬಚ್ಚಲುಕೋಣೆಯಲ್ಲಿ ದೊಡ್ಡ ಹಂಡೆಯಿದೆ (ಕೊಂ).

[ಬಚ್ಚಲು₁ (<ಬಚ್ಚಲ್) + ಕೋಣೆ₂ (<ಕೋಣ್)]

**ಬಚ್ಚಲುಮನೆ** (ನಾ). = ಬಚ್ಚಲುಕೋಣೆ : ಬಚ್ಚಲುಮನೆ ಕಟ್ಟುವವನು ಅದರಲ್ಲಿ ತೂಬು, ಒಲೆ, ಗೂಡು ಇತ್ಯಾದಿಗಳನ್ನು ತನ್ನ ಅಭಿರುಚಿಗೆ ತಕ್ಕಂತೆ ನಿರ್ಮಿಸಬಹುದಾಗಿದೆ (ಅಪಾತ್ರ. ೦೬೩).

[ಬಚ್ಚಲು₁ (<ಬಚ್ಚಲ್) + ಮನೆ]

**ಬಚ್ಚಲೆ₁** 'ಬಸಲೆ₁' ನೋ.

**ಬಚ್ಚವಸರ** (ನಾ). ವೈಶ್ಯರ ಅಂಗಡಿಗಳ ಸಾಲು : ಬಾಗಿಲ್ವಾಡದ ಮುಂದಣ ಭಾಗಂಗಳ ಬಚ್ಚವಸರಮಾರ್ಗಗೆ ಕಾಡುವುದೋ ಗದ ಪಸರವು ವಿತ್ರಾಸವಾಗವುದಿಂ ಗೆಯ್ಯೊನಿಲ್ಲ ಪರದಂ ಪರದಂ (ಶಾಂತಿಪು. ೩-೦೩). [ಬಚ್ಚ$_8$ + ಪಸರ]

**ಬಚ್ಚಳೆ, ಬಚ್ಚಣೆ$_8$** (ನಾ). ೧. ಕರುವಿನ ಮೇಲೆ ಪ್ರೀತಿಯುಳ್ಳ ಹಸಂ ; ವತ್ಸಲೆ : ತಕಾರಕ್ಕೆ ಚತ್ವಂ . . . ವತ್ಸಲಾ–ಬಚ್ಚಳೆ, ಬಚ್ಚಣೆ (ಶಬ್ದಸಾರ. ೨೬೩ ಕ್ರಿಯೋ) ; ಹೊಗರೊಗುವ ಬಚ್ಚಳೆಯು ನಂದಿಯು ವೊಗದ ಮಾಳ್ಕೆಯೊಳಿಹ ಮುಖಾದವ ನಗುತ ಶಂಕರದಾಸಿಮಯ್ಯನ ಮುಖಕೆ ಸೇರಿಸಿದ (ಶಂಕರದಾ. ೬-೫). ೨. ಪ್ರೀತಿಪಾತ್ರಳಾದ ಯುವತಿ : ಎನ್ನ ಪೊನ್ನ ಪದಗದ ರನ್ನದಾರದ ಬಚ್ಚಳೆ, ನೀಟೆ! (ರಾಜಶೇ. ೦೦೪-೦೦). **ಬಚ್ಚಣೆ$_2$** : ೧. ತಕಾರಕ್ಕೆ ಚತ್ವಂ . . . ವತ್ಸಳಾ–ಬಚ್ಚಳೆ, ಬಚ್ಚಣೆ (ಶಬ್ದ. ೨೬೨ ಕ್ರಿಯೋ). [< ಸಂ. ವತ್ಸಲಾ]

**ಬಚ್ಚಾಳಿ, ಬಚ್ಚಾಲಿ** (ನಾ). ಕೆಡುಕ ; ಕಿಡಿಗೇಡಿ : ಕೆಳಗಡೆಯು ಕೋಣೆಗಳಲ್ಲಿ ಯಾರೋ ಕೆಲವು ಬಚ್ಚಾಳೀ ತರುಣರಂಥವರು ಬಾಡಿಗೆಗಿದ್ದರು (ಶು. ೩೪). **ಬಚ್ಚಾಲಿ** : ವಾಚು ಮಾರಿಯಾಗಿತ್ತು . . . ಯಾರೋ ಒಬ್ಬ ಬಚ್ಚಾಲಿಗೆ ಹದಿನೈದು ರೂಪಾಯಿಗೆ ಅದನ್ನು ಕೊಟ್ಟಿದ್ದ (ಮಾಂಗಾಯಿ. ೨೦). [?]

**ಬಚ್ಚಿಸು$_1$** (ಕ್ರಿ). ಬಚ್ಚಿಡು ; ರಹಸ್ಯವಾಗಿಡು : ಬಚ್ಚಿ ಬಿಸುಡುತ ಮಾಯೆಯು ಬಚ್ಚಿಸುತಲಗದು ಹೊಳಿಸುತ ಸಂಸಾರವಂ ಕೊಚ್ಚಿಸುತ . . . ರಂಜಿಸಿದರಚ್ಚರಿಯ ಶಿವಗಣಗಳು (ಲಿಂಗಪು. ೩೦-೦೦). [ಬಚ್ಚು$_1$ (<ಬಯ್ಚು) + – ಇಸು$_3$]

**ಬಚ್ಚಿಸು$_2$, ಬರ್ಚಿಸಂ** (ಕ್ರಿ). ೧. ಬಣ್ಣ ಹಾಕು ; ಚಿತ್ರಿಸು : ವರ್ಣ ವಿನ್ಯಾಸ ಮಾಡು : ಬರೆಯಲ್ಬಾರದು ಬಚ್ಚಿಸಲ್ಕರಿದು (ಅನಂತಪು. ೦-೦೦೪); ಚಿತ್ರಿಯೊಳಂದಂಬಡೆವಂತು ಬಚ್ಚಿಸಿದ ಬಣ್ಣಂಗಳು ಬೇಟೆವೇಟ್ ನೋಡಿ ಮೆಚ್ಚುತಿರ್ಪರ್ಗಳ್ (ಕಾವ್ಯಾ. ೯೩). ೨. ಬಳಿ ; ಲೇಪಿಸು ; ಲೇಪನವಮಾಡು : ಪಚ್ಚಿಗಪ್ಪುರವನೆಚ್ಚುವನು ಗಂಧವ ಮೈಗೆ ಬಚ್ಚಿಸುವನು ಚಕ್ರನಾಥ (ಕರಿ. ೦೯-೧೩೩). **△ಬರ್ಚಿಸು** : ೧. ವಿಶ್ವಕರ್ಮನೆಣೆಯಾಗಿರೆ ಕಂಡರಿಸಲ್ವಿಳಾಸದಿಂ ಕರುವನೊಡರ್ಚಿ ಬರ್ಚಿಸುವ ಬಲ್ಮೆಗೆ ಬೀಗುವ ಚೀರಫಟ್ಟ ತಾಂ ಸರಿಯೆನಿಪಂದದಿಂ ಕರು ವಿಡಲ್ ನೆಟೆಯಂ ದ್ವಿಜರಾಜಕನ್ನೆಯಂ (ಶುಳುವಮಾ. ೫-೩೬) ; ಬರೆದು ಬರ್ಚಿಸಿದಂತೆವೊಲಾಗೆ . . . ಎಸೆದುದುನ್ನವಿತೋತ್ಸವಕೇತನಂ ಶುಭಾನಂದಿತಲೋಕಚೇತನವಾತೀವವಿನೂತನವಾ ನಿಕೇತನಂ (ಜಗ. ೦೦-೯೩) ; ಪಸೆದಸಪಾಸ್ತ್ರನುನ್ಮದನಬಾಣಶಲಾಕೆ ವಿಳಾಸದಿಂದವೋಜಿಸಿದಲರ್ವಿಲ್ಲ ನೈಕ್ಷವ ಧನುರ್ಲತೆ ಬರ್ಚಿಸಿ ಮೀನಕೇತುವೆತ್ತಿಸಿದ ಸಮುಲ್ಲಸಜರ್ಝಷಪತಾಕೆಯೆನಿಪ್ಪವೊಲಾಂತಳಾಕೆಯಾ ಪಸದನದೊಳ್ ಜಗತ್ರಿತಯಚಿತ್ರವಿಮೋಹನ ಶಕ್ತಿಯೋಟ್ಗೆಯಂ (ಶಂಪ್ರಪು. ೬-೬೬). ೨. ಪಲ್ಲವಪ್ರಸರದೊಳಿಯ್ದೆ ಕಣ್ಗೆ ಪಸರಂಬಡೆದೊಪ್ಪುವ ಕೆಂಪು ತುಂಬಿಯೊಳ್ ಪಿಸುಗುವ ಕರ್ಪು ಬರ್ಚಿಸಿದವೊಲ್ ಬಗೆಗೊಳ್ವಿನೆಗಂ ಬಸಂತದೊಳ್ ಬಸದಿಯು ಬಾಗಿಲಂ ತೆಟೆದ ಮಾಟ್ಕಿಯೊಳಿದರ್ಪುವು ಬಂದ ಮಾವುಗಳ್ (ಆದಿಪು. ೦-೬೬); ಅವಿರಳವಾದುವಾ ಪುರದೊಳ್ . . . ತೀವುವ ಕಲಶಂಗಳರ್ಚಿಸುಪ ಕನ್ನಡಿ ಬರ್ಚಿಸಿಕೊಳ್ವ ಪೆಂಡಿರಾಡುವ ರಸಲಾಸ್ಯಂ (ಅನಂಪು. ೫-೪). [<ಬಚ್ಚಣೆ$_1$ + – ಇಸು$_3$]

**ಬಚ್ಚು$_1$** 'ಬಯ್ಚು' ನೋ.

**ಬಚ್ಚು$_2$, ಬರ್ಚು, ಬೊಚ್ಚು$_2$** (ಕ್ರಿ). ೧. ಒಣಗಂ ; ಬತ್ತು; ಬಾಡು: ಬೂದಿಯಲ್ಲಿ ಹೊರಳುವ ಕತ್ತೆಯಂತೆ ಕಿಚ್ಚ ಹಾಯಿ[ಯು]ವವಳಂತೆ ಬಚ್ಚಿ ಹೊತ್ತಿನ ಭೋಗಕ್ಕೆ ಮಚ್ಚಿ ಹುಚ್ಚಾದಿರಲ್ಲಾ (ಸಿದ್ಧೇಶ. ೦೩೩-೪೦೦) ಬೆಚ್ಚು ಹಾಕಿದ ಗದಗಿ ಮುಚ್ಚಿಟ್ಟು ಬಿಸಹುಲುಸು ಬಚ್ಚಾದ ಬೆಳೆಯ ಕಣವುಕ್ಕ ಗುಂಡಯ್ಯ ಹೆಚ್ಚಾಯ್ತು ನಿನ್ನ ಶಿವಭಕ್ತಿ (ಕನ್ನಡಜಾ. ೩೦೪). ೨. ಕೃಶವಾಗು; ಸೊರಗು: ತಿಂಗಳೊಂದಾಯಿತು ನನ್ನ ಗಂಡು ಬಚ್ಚಿ, ಒಣಗಿ, ಕಡ್ಡಿಯಾಗಿ ಕಂಗಾಲು (ಕಾಕುದಾ. ೦೨೩); ಹೊತ್ತಿಗೆ ಒಂದೊಂದು ತಂಬಿಗೆ ಕೊಡುತ್ತಿದ್ದಳು ಭಾಗೀರಥಿ. ಈಗ ಬಚ್ಚಿದೆ. ಆದಾದರೂ ಏನು ಕೊಟ್ಟೀತು ! (ಕಾಳಗ. ೨೦). ೩. ಬರಿದಾಗು; ಬೋಳಾಗು: 'ಬಚ್ಚು ಬಾಯಿ' ಪರಾ. **△ ಬರ್ಚು** : ೪. ಕಡಮೆಯಾಗು; ಕುಗ್ಗು: ಪರ್ಚು ವುದು ಪುಳ್ಳಿಯಿಂದಂ ಬರ್ಚುವುದದು ಕಂದೆ ಕಿರ್ಚು ಮೋಹಾಗ್ನಿ ಕರಂ ಪರ್ಚುವುದರ್ಥಂ ಬರೆಯುಂ ಪರ್ಚುವುದದು ಬಾರದಿರೆಯುಂ (ಜೀವಸಂ. ೪೪-೦೯). ೫. (ಆಲಂ) ನಾಶಮಾಡು ; ನಿಸ್ಸತ್ತ್ವಗೊಳಿಸು : ಜವನ ಮುಳಿಸವನ ಮುಳಿಸನೆ ಜವನೇ ಬರ್ಚಿದವೊಲಿಂತು ಕುಜಿದಜಿದಜಿದಂ (ಗದಾಯು. ೩-೦೭); ಪಾಂಡವಪತಾಕಿನಿಗೆ ಜವಂ ನೆಟ್ ಬರ್ಚಿದಂತೆ ಭೋರನೆ ಬಂದು . . . ಬಾಂದೊಟೆಯು ಸುತನೊಡ್ಡಿ ನಿಲೆ (ಕೇಶಿಪು. ೦೨-೪೯ ಪ). **ಬೊಚ್ಚು$_3$** : ೩. 'ಬೊಚ್ಚು ಬಾಯಿ' ಪರಾ.

ಬಚ್ಚಿ ಬರು = ಸೊರಗು; ಕೃಶವಾಗು : ಹೆತ್ತವರು ಒಂದು ವರ್ಷದೊಳಗಾಗಿ ಸತ್ತುಹೋದರೆಂಬ ವ್ಯಥೆಯಿಂದ ವಾಗ್ದೇವಿಯು ಬಚ್ಚಿ ಬಂದಳು (ವಾಗ್ದೇವಿ. ೦೪೦). 'ಬತ್ತು$_1$' ಪರಾ. [ದೇ. ॥ ತುಳು. ಬಚ್ಚು]

**ಬಚ್ಚು$_3$** (ನಾ). (ಮರ, ಗಿಡ ಮುಂತಾದುವು) ಬತ್ತಿ ಹೋಗಿರುವುದು; ಒಣಗಿರುವುದು : ಒಂದು ಈಚಲು ಬಚ್ಚು ತೇಲಿಕೊಂಡು ಹೋಗುತ್ತಿತ್ತು (ಪಮ್ಮಿಕು. ೦೪೦). [< ಬಚ್ಚು$_2$]

**ಬಚ್ಚು$_4$** (ನಾ). ಕೋಟೆಕಾಳಗದಲ್ಲಿ ಬಳಸುವ ಒಂದು ಬಗೆಯ ಯಂತ್ರವಿಶೇಷ (?) : ವಿಚಿತ್ರವಾದ ಕೊತ್ತಳಗಳುಳ್ಳ ಕೋಟೆಗಳು ಫಿರಂಗಿಗಳು ಬಚ್ಚುಗಳು ಜವರುಜಂಗಿಗಳು . . . ಮೊದಲಾದ ಯಂತ್ರ ವಿಶೇಷಗಳು (ಕೃಪಾಲ. ೦೬೪). [ ? ]

**ಬಚ್ಚುಬಾಯಿ, ಬೊಚ್ಚುಬಾಯಿ** (ನಾ). ಹಲ್ಲಿಲ್ಲದೆ ಬರಿದಾದ ಬಾಯಿ; ಬೋಡುಬಾಯಿ : ಕುಂಟುಕಾಲು, ಬಚ್ಚುಬಾಯಿ (ಕಂಕೋ. ೩೦-೭). **ಬೊಚ್ಚುಬಾಯಿ** : ಆಕೆಯ ಬೊಚ್ಚುಬಾಯಿ ಏನನ್ನೋ ಹೇಳಲು ವ್ಯಾಕುಲಿತವಾಗಿದ್ದಿತು (ಶಾಂತಿ. ೫) : ಬೊಚ್ಚುಬಾಯಿ ಆದವನು ಕಬ್ಬು ಬಯಸಿದ ಹಾಗೆ (ಗಾದೆ). [ ಬಚ್ಚು$_2$ + ಬಾಯಿ$_1$ (< ಬಾಯ್) ]

**ಬಚ್ಚಿ$_1$, ಪಚ್ಚಿ$_3$** (ಗು). ೧. ಬರಡಾದ; ಗೊಡ್ಡಾದ : 'ಬಚ್ಚಿವೆಣ್' ಪರಾ. (ನಾ). ೨. ವ್ಯರ್ಥವಾದುದು ; ಹಾಳಾದುದು : "ಬಚ್ಚಿಯೆನಲ್ ಕೆಟ್ಟುದು" (ಶಬ್ದಮ. ೫೨). **ಪಚ್ಚಿ$_3$** : ೧. 'ಪಚ್ಚಿವೆಣ್' ಪರಾ. ೩. ಮಕ್ಕಳಾಗದವಳಂ; ಬಂಜೆ : "ಪಚ್ಚಿ ಬಂಜೆಯೆನೆ ವಂಧ್ಯಾಖಂ" (ಶಬ್ದಮ. ೦೫೬).

ಬಚ್ಚಿಬಜಾಗ = ಅಪ್ರಯೋಜಕ ; ನಿರುಪಯೋಗಿ : ಸಾಸಿರಾಬ್ಬ[ಬ್ದ]ದ ಬಚ್ಚಿಬಜಾಗನೊ ಪನ್ನಿರಳ್ಕರುಷದ ಸುಧೀಷಣನೊ (ಜೋಳಿ. ೩-೬). **ಬಚ್ಚಿಯಾಗು** = ಇಲ್ಲವಾಗು; ಹಾಳಾಗು; ನಾಶವಾಗು : ಮನೆಯೊಳೆಲ್ಲಂ ಮನೆಯೊಳುಂ ಮಾಯವಾಗುತಿರೆ ನೆನೆದುದೆಲ್ಲಂ ನೆನಹಿನೊಳ್ ಬಚ್ಚಿಯಾಗುತಿರೆ (ಶಂಕೀರ. ಶ. ೦೩೭-೪): ಎರಡಟ ಮನೋಮಲಿನ ಹೋಯಿತ್ತು ಕರಿಗೊಂಡು ಹುರುಡು ಮುರುಟಿತ್ತು ಮುನಿಸನು ಗೆಟ್ಟುದುಗ್ರಮತ್ಸರ ಬಚ್ಚಿಯಾಯ್ತು (ಹಕಳಾ. ೦೪-೧೯); ಮದನವಿಕಾರ ಮೊಮೊರ್ದಲೆ ಸಾರ್ಚಿ ಶಕುಂತಳೆಗಿಬ್ಬ ಬಚ್ಚಿಯಾದುದು (ಸತ್ಯಶು.೦೫-೩೩). [ < ಬಂಜೆ ]

**ಬಚ್ಚಿ$_2$** (ನಾ). ಒಂದು ನಾಡಿನ ಹೆಸರು : ಕಾವ್ಯಕ್ಕೆ ತಾನಿತ್ತಂ ಶಾಸನದಗ್ರಹಾರಂ ಸಾರವೆಂಬಿನಂ ಪೆಸರಿಟ್ಟು ತಾನೀಯೆ ಹರಿಗನ ಧರ್ಮ ಭಂಡಾರದಂತೆ ಸಾರವಮಾದುದು ಬಟ್ಟಗ್ರಹಾರವಮಾ ಬಚ್ಚಿ[ಶಾಸನ.

ಚಚ್ಚಿ, ಚರ್ಚಿ] ಸಾಸಿರದೊಳಂ ಧರ್ಮಪುರಂ (ಶಂಶಶಾ. ೦೯-೩೬); "ಬಚ್ಚಿಸಾಸಿರದೊಳಂ – ಆ ಬಚ್ಚಿಸಾವಿರ ಎಂಬ ನಾಡಿನಲ್ಲಿಯೂ . . . ಬಚ್ಚಿಸಾಸಿರ : ಇದೊಂದು ನಾಡಿನ ಹೆಸರು. ಜಿನವಲ್ಲಭ ಗಂಗಾಧರನ ಶಾಸನದಲ್ಲಿ "ಸಬ್ಬಿನಾಡ ನಟ್ಟನಡುವಣ ಧರ್ಮಪುರ ದುತ್ತರದಿಗ್ಭಾಗದ ವೃಷಭಗಿರಿ" ಎಂಬಲ್ಲಿ ನಾಡಿನ ಹೆಸರು ಸಬ್ಬಿ ಎಂದು ಕಾಣುತ್ತದೆ. ಇದು ಸಬ್ಬಿಸಹಸ್ರನಾಡಾಗಿರಬೇಕು. ಬಚ್ಚಿ ಸಾಸಿರ ಸರಿಯಾದ ಹೆಸರಲ್ಲವೆಂದೂ "ಸಬ್ಬಿಸಾಸಿರ"ಎಂಬುದು ಸರಿ ಯಾದುದೆಂದೂ ಹೇಳಬಹುದಾಗಿದೆ" (ಶಂಶಶಾ. ೩೬೬). [?]

**ಬಚ್ಚಿಗ** (ನಾ). ಮಕ್ಕಳನ್ನು ಪಡೆಯಲಾರದವನು ; ನಪುಂಸಕ : ಪೆಚ್ಚಿದೆನು ಪೆಚ್ಚಿದನಿನ್ನು ಪುನ ಪೆಚ್ಚಿನರಕೆಯನುಸುರಿನಲ್ಯಂಗಿಬ್ಬನಡಿ ಗೆದ್ದಱಿ ನತಸಂತಾನ ಸಂತಾನ ಬ[ಪಾಠಾಂ. ಬಿ]ಚ್ಚಿಗನುಮೆನೆಂಬ ನುಡಿಯಂ ಬಿಚ್ಚಿಯೆನಿಸೆನೆ (ಜುಕೀಪು. ೬-೬). [ಬಚ್ಚಿ$_1$ + – ಗ$_2$]

**ಬಚ್ಚಿವೆಣ್**, ಪಚ್ಚಿವೆಣ್ (ನಾ). ಮಕ್ಕಳಾಗದವಳು ; ಬಂಜೆ : "ಬ[ಪಾಠಾಂ. ಪ]ಚ್ಚಿವೆಣ್ಣಂ ಬಂಜೆ" (ಕನ್ನಕೈ. ೨೬). ಹಚ್ಚಿವೆಣ್ : "ಪಚ್ಚಿವೆಣ್ಣೆಂದು ಬಂಜೆ" (ಕಶಾಅ. ೬೨-೬೬೫) ; "ಪಚ್ಚಿವೆಣ್ ಬಂಜೆಯ್ಯೆ ನಿಸುಗು" (ಅಭಿಕೋ. ೬೯). [ಬಚ್ಚಿ$_1$+ವೆಣ್]

**ಬಚ್ಚಿಪೋಗು** (ಕ್ರಿ). ವ್ಯರ್ಥವಾಗು; ಹಾಳಾಗು; ನಾಶವಾಗು : ಬಚ್ಚಿ ಪೋಗದ ರಾಮಬಾಣಂಗಳಂ ನಡುವೆ ನುಚ್ಚುನೂಱಾಗೆ ಕತ್ತರಿಸಿ (ಕೈಬಖಾ. ೨೧-೬೯). [ಬಚ್ಚಿ$_1$ + ಪೋಗು$_1$ (< ಪೋ$_1$)]

**ಬಚ್ಚೋಡಿಮ್ಯ** (ನಾ). (?) : ಕೆಂಪಿನ ಸೀರೆ, ಬಿಳಿಯ ಸೀರೆ, ಇವು ಕೆಡುವುದಕ್ಕೆ—ಬಿಳಿದಾಸಾಳದ ಹೂ ಕೆಂಪಿನ ದಾಸಾಳದ ಹೂ ಕರಿಹತ್ತಿಯ ಹೂ ಈ ಎಳಗಾಯಿ ಇವಂ ನೀರಲ್ಲಿ ಕುದಿಸಿ ಕೈಯಲ್ಲಿ ಕಿವಿಚಿ ನೀರ ಬಿಟ್ಟು ಕೊಂಡು ಬಿಳಿಯ ವಸ್ತ್ರವ ಸುಟ್ಟು ಕರಿಯ ಹಾಕಿ ಗೋಪಿಚಂದನ ಸಹ ಹಾಕಿ ಕದಡಿ ಬಚ್ಚೋಡಿಮ್ಯೆಯವಳಿಗೆ ಒಂದು ಬಟ್ಟಲು × × × ಮೈಯೊಳಗೆ ಅರಬಟ್ಟಲು ಮೇರೆಯಲ್ಲಿ ಎಂಟುದಿನ ಕುಡಿಯ ಕೊಡಲು ಕೆಂಪಿನ ಸೀರೆ ಬೀಸೀರೆ ಕೆಡುವುದು ಸಹ ಪ್ರಮಾಣ್ಯಂ (ಸಕಕ. ೦೯೯). [ಬಚ್ಚೋಡಿ$_1$ + ಮ್ಯ (< ಮೆಯ್$_2$)]

**ಬಚ್ಚಾಲಿ** 'ಬಚ್ಚಾಳಿ' ನೋ.

**ಬಜಂತ್ರಿ** 'ಬಾಜಂತ್ರಿ' ನೋ.

**ಬಜರಂಗಬಲಿ** (ನಾ). ಹನುಮಂತ; ಆಂಜನೇಯ; ಮಾರುತಿ : ಬಜರಂಗಬಲಿಯ ಮೂರ್ತಿಯನ್ನೂ ಕುಸ್ತಿಪಟ್ಟರ ಚಿತ್ರಗಳನ್ನೂ ಅವನು ತನ್ನ ಗೋಡೆ ಮುಚ್ಚಲು ಮಾತ್ರ ಇಟ್ಟಿಲ್ಲ (ಕೀಶಕ್ಕ. ೬೨). [← ಹಿಂ. ಮರಾ. ಬಜರಂಗಬಲೀ, / ಸಂ. ವಜ್ರಾಂಗಬಲಿನ್]

**ಬಜಾಯಿ** (ನಾ). ಒಂದು ಬಗೆಯ ಚರ್ಮವಾದ್ಯ : 'ಬಜಾಯಿಆನೆ' ಪರಾ. 'ಬಾಜಾ' ನೋ. [← ಹಿಂ. ಮರಾ. ಬಾಜಾ]

**ಬಜಾಯಿಆನೆ** (ನಾ). ಬಜಾಯಿ ಮುಂತಾದ ವಾದ್ಯಗಳನ್ನು ಹೊತ್ತು ಕೊಂಡು ಹೋಗುವ ಆನೆ : ೧೦೦೦ ನಿಶಾನೆಆನೆಗಳೂ ೨೦೦೦ ಬಜಾಯಿ ಆನೆಗಳೂ ಇದ್ದುವು (ಅಕ್ಕಹು. ೦೪). 'ನಿಶಾನೆಆನೆ' ಪರಾ. [ಬಜಾಯಿ + ಆನೆ$_1$]

**ಬಜಾಯಿಸು** (ಕ್ರಿ). ೧. ವಾದ್ಯವನ್ನು (ಜೋರಾಗಿ) ಬಾರಿಸಂ, – ನುಡಿಸು : ವಾದ್ಯಗಾರರು ಭಯಂಕರವಾಗಿ ವಾದ್ಯವನ್ನು ಪೂರ್ಯಸಿ ಡೋಲು ಬಜಾಯಿಸುತ್ತಾರೆ (ಗರುಡಾ. ೬೦). ೨. ಕಟ್ಟುನಿಟ್ಟಾಗಿ ಹೇಳು ; ಅಪ್ಪಣೆ ಮಾಡು : ಮಿಟಾಯಿದೋಲೆಕಾರರ್ ಭೀಮಗೆ ದಾಟು ದಾಟು ಬಜಾಯಿಸುವರಿಲ್ಲ (ಕಶಾಅ. ೦೬); ಮನ್ನಾಗ ಆ ಹುಡುಗಳಿಗೋಳಿಗೆ ಸಲಗೀ ಕೊಡಬ್ಯಾಡಾ ಸಲಗೀ ನಾಯಿ ತಲೀಗೇರ್ಯಾವು ಎಂದು ಬಜಾಯಿಸಿದ್ದರು (ಹೂಂಬಿಲು. ೨೨). ೩. ಜಾರಿಮಾಡು ; ಚಲಾಯಿಸು : ಇನ್ನೂ ಒಂದು ಹೊಸ ಚಾಳಿಯು ಇವರಿಗೆ ಇತ್ತಿತ್ತ ಅಂಟಿತ್ತು. ಏನೂ ಕಾರಣವಿಲ್ಲದೇ ಉಳಿದವರ ಮೇಲೆ ಅಧಿಕಾರ ಚಲಾಯಿಸುವುದು (ಪುಂಊಬಾ. ೬೦); ರಂಗಕ್ಕ ಯಜಮಾನರಿಗೆ ಸಸ್ತಮನಾಯಿ ಹುಕುಂ ಬಜಾಯಿಸಿದರು (೬೦೯೩. II. ೩೦೩). [ಬಜಾವಣೆ + – ಇಸು$_1$]

**ಬಜಾರ್** 'ಬಾಜಾರ' ನೋ.

**ಬಜಾರ** 'ಬಾಜಾರ' ನೋ.

**ಬಜಾರಿ** 'ಬಾಜಾರಿ' ನೋ.

**ಬಜಾರು** 'ಬಾಜಾರ' ನೋ.

**ಬಜಾವಣೆ**, ಬಾಜವಣೆ (ನಾ). ೧. ಚರ್ಮವಾದ್ಯ ಮೊದಲಾದುವು ಗಳನ್ನು ಬಾರಿಸುವಿಕೆ : ತಾಳಮಾನ ಸರಿಸವನಜಿಯ ಒಜೆಬಜಾವಣೆ [ಪಾಠಾಂ. ಣೆ]ಯ ಲೆಕ್ಕವನಱಿಯ (ಅಸಶ. ೯೯೯) ; ಮಾಳಿಗೆಯೊಳಗಣ ಸೊಡರ್ಗುಡಿ ಡಾಳಂಬಡೆದಂತೆ ರಂಗರಕ್ತೆಯೊಳಪುದರ್ಮಂ ಪಾಳಿಕೆಪಡೆದು ಬಜಾವಣೆ ಮಾಳವಸಿರಿಯೆಂಬ ರಾಗವಂ ಚಾಳಿಸಿದಂ (ಜುಕೀಪು. ೨-೩೦); ಕಾಯೆ ಬಜಾವಣೆ ಗವಕವೆಸೆಯೆ ಪಾದರಾಯತವಾದರು ಕೂಡೆ (ಕರಹ. ೩-೩೬). ೨. ಕಾಯದೆ ಮೊದಲಾದುವುಗಳನ್ನು ಜಾರಿ ಮಾಡು ವುದಂ, – ಚಲಾವಣೆ ಮಾಡುವುದು : ಅಮೃತದ ಬಟ್ಟಲಿರುವ ತಟ್ಟೆ ಯಲ್ಲಿ ಟೆಂಗಿನ ಸೂಚ್ಯಿ ಸೇರಿಸಿದಂತಾಗುವುದೆಂದು ಬಜಾಯಿಸಿದ್ದಾನೆ. ಆದರೆ ಈ ಬಜಾವಣೆ ತಿಳಿದವರಿಗೆ ಮಾತ್ರ (ಜುಶಾಬಿ. ೨೬). ಬಾಜವಣೆ : ೧. ಚಂಡೆಮದ್ದಳೆಗಳ ಬಾಜವಣೆಯಲ್ಲಿ ಕೈ ನುರಿತ ಮೇಳಗಾರರೂ ನಮ್ಮಲ್ಲಿದ್ದರು (ಕಾಶೀಗಸು. ೯೯). [←ಮರಾ. ಬಜಾವಣೇ, ಬಜಾವಿಣೇ = ವಾದ್ಯವನ್ನು ಬಾರಿಸು, ಕಾಯದೆಯನ್ನು ಜಾರಿಗೆ ತರು]

**ಬಜೆ** (ನಾ). ಕಟುವಾದ ವಾಸನೆಯುಳ್ಳ ಒಂದು ಬಗೆಯ ಸಸ್ಯ ಮತ್ತು ಉಪಯುಕ್ತ ಔಷಧೀಯ ಗುಣವುಳ್ಳ ಅದರ ಬೇರು ; ಉಗ್ರಗಂಧಿ : "ಉಗ್ರಗಂಧಿಯನೆ ವಚೆ ಬಜೆಯ [ಪಾಠಾಂ. ವಚೆಯೆಂದ] ನಿಕ್ಕುಂ" (ಮಂಗರಾ. ೯೦-೬೯) ; ಬಜೆ ಸಂಪರ್ಚಲ ಹಿಂಗುಬಜೆ ಕೊಡಸಿಗೆಯೆಂಬುವನಿತುಮಂ ಕುಡಿಯಿಸಲುಷ್ಣಜಲಾನ್ವಿತಮದು ಕಿಡಿಸುಗು ಮಜಸ್ರಮೆನೆ ನಡೆವ ನುಣ್ಣುಮಂ ನೆತ್ತರುಮಂ (ಕೋಶೋಕ. ೯-೦೨೦) ; ಒಡೆಯ ಚಿತ್ರಸೊಂದೆ ಪೆಟ್ಟಿಗೆ ಕುಡಿದ ಬಜೆಯನು ಕಾರಿಸುವ (ಪಾಕ್ಕಶಾ. ೨೨-೬೬); ಬಜೆ . . . ಇದು ಜವುಗುಪ್ರದೇಶದಲ್ಲಿ ಬೆಳೆಯು ತ್ತದೆ. ಇದಕ್ಕೆ ಗುಪ್ಪಕಾಂಡವಿದೆ. ಮಕ್ಕಳ ಅಜೀರ್ಣಕ್ಕೂ ಅತಿಸಾರಕ್ಕೂ ಇದರ ಬೇರಿನ ಕಷಾಯವನ್ನು ಉಪಯೋಗಿಸುತ್ತಾರೆ (ಸಸ್ಯಶಾ. ೦೬೬). 'ಅತಿಬಜೆ' ಪರಾ.

ಬಜೆಬೆಣ್ಣೆ = ತೇದ ಬಜೆ ಮತ್ತು ಬೆಣ್ಣೆಗಳ ಮಿಶ್ರಣ ; ಈ ವಿಶೇಷವಾದ ಔಷಧೀಯಂಗುಣವುಳ್ಳ ಈ ಮಿಶ್ರಣವನ್ನು ಎಳೆಯ ಮಕ್ಕಳಿಗೆ ತಿನ್ನಿಸುವ ವಾಡಿಕೆ ಇದೆ : ತೊಟ್ಟಿಲೊಳ್ ವಿಷ್ಣುವಂ ಮಲಗಿಸಿದಳಿಕ್ಕಿ ಬಜೆಬೆಣ್ಣೆಯಂ ಸುರಕೋಟಿ ಕೈಮುಗಿವೊಲು (ಕರಕು. ೦೫-೯೪); ಸ್ವಧರ್ಮದ್ರೋಹಿಯ ಮುಖವು ಕಾಣಬರುತ್ತಲೇ ಪ್ರತಾಪನಿಗೆ ಹುಟ್ಟಿದಾಗ ಇಟ್ಟಿದ್ದ ಬಜೆಬೆಣ್ಣೆಯು ಕೂಡ ತೊಳಸಿ ಕೊಂಡು ಮೇಲಕ್ಕೆ ಬಂದದ್ದರಿಂದ ಒಡನೆ ಅವನು ತನ್ನ ಬರ್ಚಿಯನ್ನು ಗುರಿಯಿಟ್ಟೆಸೆದನು (ಕಶ್ಯಕೀಜಿ. ೦೯೬). [<ಸಂ. ವಚಾ./ತವಿ. ವಚಮ್, ವಚಮ್ಪು ; ಮಲ. ವಯಮ್ಪು ; ತುಳು. ಬಜೆ; ತೆಲು. ವಚ, ವಸ]

**ಬಜ್ಜೆ** 'ಭಜಿ' ನೋ.

**ಬಜೆಕರಕು** 'ಬಜೆಕರುಕು' ನೋ.

**ಬಜೆಕರುಕು**, ಬಜೆಕರಕು (ನಾ). ಬಜೆಯನ್ನು ಸಂಟ್ಟು ಮಾಡಿದ ಪುಡಿ (?) : ಪರ್ಪಾಟಕ, ಬಜೆಕರುಕು . . .ಕಷಾಯ ಹಾಕಿ ಕೊಡಲು. . .ಸಕಲ

ಜ್ವರಗಳೂ ನಿಲ್ಲುವವು (ಶಕಶ್. ೦೦೦.). **ಬಜೆಕರಕು** : ರೇಣುಕೆ, ಗಲಜರವೇರು, ಬಜೆಕರಕು, ಜಟಾಮಾಂಸಿ . . . ಇವಂ ಕಷಾಯಂ ಕಾಯಿಸಿ ಕೊಟ್ಟರೆ ವಾತಜ್ವರಂ ಕೆಡುಗುಂ (ಶಕಶ್.೬೯). [ಬಜೆ₁ + ಕರುಂ₁ < ಕರಿಂಬು]

**ಬಜೆಟ್** 'ಬಜೆಟ್ಟು' ನೋ.

**ಬಜೆಟ್ಟು, ಬಜೆಟ್** (ನಾ). ವಾರ್ಷಿಕ ಆಯವ್ಯಯದ ಅಂದಾಜುಪಟ್ಟಿ: ಅಧ್ಯಯನತಂಡಗಳು ಸಾಮಾನ್ಯವಾಗಿ ತಮ್ಮದೇ ಆದ ಬಜೆಟ್ಟು (Budgets)ಗಳನ್ನೂ . . . ಹೊಂದಿರುವ ಸ್ವತಂತ್ರ ಅಂತರಸರ್ಕಾರಿ ಸಂಸ್ಥೆಗಳಾಗಿವೆ (ಅಂಚೆಟ. ೦೯೦). **ಬಜೆಟ್** : ಆಯವ್ಯಯಪತ್ರ, ಮುಂಗಡಪತ್ರ, ಬಜೆಟ್ (Budget. ಕಶ್ರಿ. ೦೦). [← ಇಂಗ್ಲಿ. Budget]

**ಬಜ್ಜರ** (ನಾ). ೧. ನವರತ್ನಗಳಲ್ಲಿ ಒಂದು; ವಜ್ರ ; ಹೀರ : "ಬಜ್ಜರಮೆಂದು ವಜ್ರಂ" (ಕಟಾ. ೩೦-೬೦); ನಿಡಿದಾದ ದಾಹುಬಳ ಮುನ್ನದಸಿಂಧುರಕಂಧರಕ್ಕೆ ಬಜ್ಜರದಮುಳ್ಗಂಬಮಾದ ತೊಡೆ . . . ಜಗದೊಳ್ಕೆಣೆಗುಂ ನೃಪೇಂದ್ರನಾ (ಅಶಂಪು. ೨-೨); ಎಳೆಮುತ್ತಿನಂತೆ ಮೈವಣ್ಣ ಬಜ್ಜರದಂತೆ ಸುಲಿಪಲ್ಲ ಪಂಕ್ತಿ . . . ನವೀನಪ್ರವಾಳದಂತೆ ಪೊಳೆವ ಪದತಳಮೊಪ್ಪೆ (ಶ್ರೀರಕ್ಷ. ೦೨-೬); ಪಳಿಕಿನಜಗಿಯ ಭಿತ್ತಿಯಿಂ, ಬಜ್ಜರದ ಜಂತೆಯಿಂ . . . ಮದನಗೃಹದ ಬಾಗಿಲ್ವಾಡದ ಸಿಂಗರದೊಂದು ದೇಗುಲಂ ಕಣ್ಗೆಡ್ಡಮಾಗಿ ರಂಜಿಕುಂ (ಅಕಸೂಕ್ತ ೩೯-೨೦). ೨. ಇಂದ್ರನ ಆಯುಧ: ವಜ್ರಾಯುಧ: "ಬಜ್ಜರಮೆಂದು ವಜ್ರಾಯುಧಂ" (ಕಟಾ.೯೯-೨೦); ಅಲರ್ವಿಲ್ಲಿಲ್ಲದಂಗಜನಂತೆ ಬಜ್ಜರದಲಗಿಲ್ಲದಮರೇಂದ್ರನಂತೆ ಕಲಿಯಿಲ್ಲದಿಂದುವಿನಂತಲ್ಲಿಗೆಯ್ದುಂದನಲಘುವಿಕ್ರಮ ರಾಮನಾಥ (ಕುಮಾರಾ. ೨೦-೦೦೩). [<ಸಂ. ವಜ್ರ]

**ಬಜ್ಜರಕವಾಟ**(ನಾ). ವಜ್ರದ ಬಾಗಿಲು,—ದ್ವಾರ : ವಿವಿಧತರಚಿತ್ರಿತದ ಬಜ್ಜರಕವಾಟದಿಂ . . . ಶಿವನಿರ್ಪ ಲೋಕ ಜ್ಯೋತಿರ್ಲೋಕಮೆರಡನೀ ಲವಲವಿಕೆ ಧಿಕ್ಕರಿಸುತಿದೆ (ಪಂಪಾಶ. ೩-೨-೩). [ಬಜ್ಜರ + ಕವಾಟ]

**ಬಜ್ಜರಕೇರಿ** (ನಾ). ವಜ್ರದ ಮಾರಾಟ ಮಾಡುವ ಬೀದಿ : ಸಾಲುಮನೆಗಳ ಕೇರಿ ಪವಳ ಬಜ್ಜರಕೇರಿ (ಸಿದ್ಧಕಾ. ೦೩-೩೩). [ಬಜ್ಜರ + ಕೇರಿ]

**ಬಜ್ಜರಗಂಬ** (ನಾ). ವಜ್ರದ ಕಂಬ,—ಸ್ತಂಭ : ಬಜ್ಜರಗಂಬಮಿಂದ್ರನೀಲದ ತೊಲೆ (೯೮ಚ. ೦೩-೦೫); ನಿಮಿರ್ಚಿದ ಬಜ್ಜರಗಂಬ[ಕಾಂ. ಭ] ವಿಂಬುಗೊಂಡುತ್ತಮನೀಲಪುತ್ರಿಕೆ ವಿರ ಜಿತಮಾಯ್ತು ವಿವಾಹಗೇಹದೊಳ್(ಕಾಶಕ. ೬-೨). [ಬಜ್ಜರ + ಕಂಬ₁ (< ಕಂಭ)]

**ಬಜ್ಜರದುಂಬಿ** (ನಾ). ವಜ್ರದಷ್ಟು ಕಠಿಣವಾದ ಮೂತಿಯನ್ನು ಹೊಂದಿರುವ ತುಂಬಿ,—ಭ್ರಮರ : ಶಿವನ ನಿರ್ಮಾಲ್ಯಮಪ್ಪಾನದಿಂದ ನಾಕಪತಿ ಶಿರಿಯ ಮಸ್ತಕಕ್ಕೆ ಹಾಕಲು ಪೂಮಿನಾ ಕಂಪಿಗೆಜಗೆ ಬಜ್ಜರದುಂಬಿಗಳು ತಾಳದಾ ಕುಸುಮಮಾಲೆಯನು ತೆಗೆದು ನೆಲಕ್ಕೆ ಕಾಲಿಂದೊರಸುತಿರಲುಮದನು (ರಾಶಕ. ೦೨-೯೩). [ಬಜ್ಜರ+ತುಂಬಿ₁]

**ಬಜ್ಜರವಂಕಿ** (ನಾ). ವಜ್ರದ ವಂಕಿ; ತೋಳುಬಂದಿ : ಕುಟಿಸುಟಿಪೊರ್ಕುಟಿರ್ಕೊಳಿಸಿ ಸುತ್ತಿದ ಪಟ್ಟೆಯ ದಟ್ಟಿ ಪಕ್ಕಮಂ ಕೆಳಗೊಳೆ ಸಿಕ್ಕಿದೊತ್ತರದ ಬಜ್ಜರವಂಕಿ ತೊಡಂಕು ಸೊನ್ನೆನೂಲ್ ತಳತಳೆನಿಪ್ಪ ಸಣ್ಣಪೊಸ ಪೊನ್ನುಡೆ ಬಿಣ್ಪೊಡೆ ಬಿಂಕವೆತ್ತ ಮಲ್ಲದಿರಡಿಕೆಂದಳಂ ತೊಳಗುಗನ್ನೆರ್ದೆಯೊಳ್ ಯದುಶೈಲನಾಥನಾ (ಕಕಶ. ೩-೯೦). [ಬಜ್ಜರ + ವಂಕಿ]

**ಬಜ್ಜರವಸರ** (ನಾ). ವಜ್ರಗಳನ್ನು ಮಾರುವ ಅಂಗಡಿ: ದೆಸೆಗಳ್ ನಿಜಾಂಶುವಿಂ ರಂಜಿಸುತಿರೆ ಪುಂಜಿಸಿದ ಪೊನ್ನ ಪುಂಜದಿಯಿಂದಂ ಕೊಸಗಿನ ಮರದುಜುಗಲರಲ್ದೆಸೆವಂತೆಸದಿರ್ಪುದಲ್ಲಿ ಬಜ್ಜರವಸರಂ (ಜಾಪು. ೯-೦೦೬). [ಬಜ್ಜರ + ವಸರ]

**ಬಜ್ಜರಿ** (ನಾ). (?) : ಪದದೊಡವೆ ವೀರಸಿರಿಯುಪ್ಪಿದ ತೋಳ್ಸುತ್ತಿನಿಪ ರನ್ನವಟ್ಟೆಯ ರುಕ್ಪುಂಜದ ಮಂಜರಿಪೊಲ್ ರಂಜಿಸುದುದು ಪೊನ್ನಾಯುಗಳ ಪೊನ್ನ ಬಜ್ಜರಿ ಕಟಿಯೊಳ್ (ಅಶಂಪು. ೩-೩೦). [?]

**ಬಜ್ಜರೋದಕ** (ನಾ). ವಜ್ರದ ಕಾಂತಿ : ದಂತಿಕುಂಭದ ವಿದಾರಿಸಿ ಸೂಸಿಹ ಮುತ್ತು ತತ್ತರ್ದಿರ್ದಾವವು ಬಜ್ಜರೋದೀಮೆ ಪುಷ್ಪಸರಂ ಸುರಗಿರಿಯಗ್ರಶೃಂಗಗಳ್ ತೀವಿದ ಕೋಡಾಗೆಸೆಯೆ ಪಾಮರಮುದ್ರಿಯಪೊಲ್ವಿ ರಾಜಿಕುಂ (ಭರಶ್. ೩-೨೬). [ಬಜ್ಜರ + ಉದಕ₂]

**ಬಜ್ಜಿ₁** (ನಾ). ಬದನೆಕಾಯಿ ಮೊದಲಾದ ತರಕಾರಿಗಳನ್ನು ಸುಟ್ಟು ಅಥವಾ ಬೇಯಿಸಿ, ಸೌತೆಕಾಯಿ, ಕ್ಯಾರೆಟ್, ಟೊಮ್ಯಾಟೋ ಮೊದಲಾದ ತರಕಾರಿಗಳನ್ನು ಹಸಿಯಾಗಿ ಮೊಸರಿನೊಂದಿಗೆ ಸೇರಿಸಿ, ಒಗ್ಗರಿಸಿ ಮಾಡುವ ಒಂದು ಬಗೆಯ ವ್ಯಂಜನ : ಕೆಲವಕ್ಕೆ ಬದನೆಯ ಬಜ್ಜಿ ಕೆಲವಕ್ಕೆ ಕತ್ತರಿಸಿದಳಿಕೇರಿ ಚಿಲುಕೆ (ಸೂಶಕಾ. ೯-೨೦); ಗೋದುಮೆಯ ಸಜ್ಜಿಗೆದಗೆದೆಳೆವಳುಕಿನಲೊಪ್ಪುವ ಕಜ್ಜಾಯಕೆ ವ್ಯಂತಾಕದ ಸೊಬಗಿನ ಬಜ್ಜಿಯ ಮುಖಾಮಿಳಶಾಖಾಮೃತಗಳ ನೀಡಿದರಬಲೆಯರು (ಶುಕೇಳು. ೦೯-೩೬); ಮರಿಚೇಲಕ್ಕೀರಳ್ಳಿಯು ಕರಿಬೇವು ಕಾರಗೆಣಸು ಕೊತ್ತುಂಬರಿಯೊಪ್ಪಿರುತಿಹ ಕ್ಷೀರಂ ತಿಂತ್ರಿಣಿವೆರಸಿದ ವಾರ್ತಾಕ ಬಜ್ಜಿಯಮರಗುರ್ಗುಂಟೇ (ಜೀಚಂ. ೩೮೦). [ದೇ.೩ ತುಳು. ತೆಲು. ಬಜ್ಜಿ]

**ಬಜ್ಜಿ₂** 'ಭಜಿ' ನೋ.

**ಬಜ್ಜಿಸು** 'ಭಜ್ಜಿಸು' ನೋ.

**ಬಜ್ಜಿಗುಂಟಣೆ** (ನಾ). ಗಟ್ಟಿಗಿತ್ತಿಯಾದ ಕುಂಟಲಗಿತ್ತಿ : ಬಜ್ಜಿಗುಂಟಣೆ ಸಜ್ಜೆವನೆಯ ಬಾಗಿಲಂ ಪತ್ತಿ ಮಹಿಗೇಳುತ್ತಿರ್ದೊಳಗಂ ಪೊಕ್ಕು (ಕಂದ್ರಪು. ೯-೩೯ ಕ). [ಬಜ್ಜಿ ? + ಕುಂಟಣೆ]

**ಬಟ** 'ಬಂಟ₁' ನೋ.

**ಬಟಮಾನ್ಯ** 'ಭಟಮಾನ್ಯ' ನೋ.

**ಬಟರಿ** 'ಭಟಾರಿ' ನೋ.

**ಬಟವಡೆ** 'ಬಟವಾಡೆ' ನೋ.

**ಬಟವಾಡೆ, ಬಟವಡೆ, ಬಟ್ವಾಡೆ** (ನಾ). (ಸಂಬಳ, ಕೂಲಿ, ಪತ್ರ ಮೊದಲಾದುವುಗಳನ್ನು) ಹಂಚುವುದು; ವಿತರಣೆ ಮಾಡುವುದು : ಸೇನಾಜನರುಗಳಿಗೆ ತಲಬಿನ ಬಟವಾಡೆಯಾಗುತ್ತಿತ್ತು (ಮಚಾಪಂ. II. ೦೩); ಚಿಕ್ಕನವಾಬರು ತಾವೇ ಸ್ವತಃ ಕೂಲಿಯವರಿಗೆ ದುಡ್ಡು ಬಟವಾಡೇ ಮಾಡಿ . . . ಬರುವಾಗ (ಹುಟ್ಟಿಹ. ೬೬); ಅತ್ತ ಬಟವಾಡೆಯಾದ ಹಣವೆಲ್ಲವೂ ಮರುದಿನ ಈ ಉಪಾಯದಿಂದ ಹೈದರನ ಬೊಕ್ಕಸಕ್ಕೆ ಬಂದು ಸೇರಿತು (ಒಕಳ. ೬೨). **ಬಟವಡೆ** : ಪಗಾರ ಬಟವಡೆಯು ಕೆಲಸ ಸುರುವಾಗಿ ಮೂರು ನಾಲ್ಕು ತಾಸಿನವರೆಗೂ ಹಾಗೇ ನಡೆಯಿತು (ಅಕ್ಕ. ೨೦೯); ವಾರಕ್ಕೊಂದಾವರ್ತಿ ಕೊಡುವ ಬಟವಡೆಹಣ ಅರೆಹೊಟ್ಟೆಗೆ ಮಾತ್ರ ಆಧಾರ (ಕೂಶಕಲ. ೩೨); ಅಂಚೆಯ ಹಸಿಬೆಯನ್ನು ಹೆಗಲಿಗೇರಿಸಿ ಬಟವಡೆಗೆ ಹೊರಟ (ಅಕಕ.II, ೩೩). **ಬಟ್ವಾಡೆ** : ಪೂಜೆ ಮುಗಿದು ಶನಿವಾರ ಬಟ್ವಾಡೆಯ ಸಮಯ ಅವನಿಗೆ ವಿಠೋಬನ ನೆನಪು (ಚಿಟ್ಕೋಳ. ೩); ಬಟ್ವಾಡೆಯಾದ ತಾರೀಕು ಇನ್ನೂ ಎರಡು ದಿನ ಮುಂದಿನದ್ದಾಗಿ (ಕ್ಷುರುಪಾ. ೭); ಮೊದಲು ಟಪ್ಪಾಲುಕಚೇರಿಯಲ್ಲಿ ಕಾಗದಪತ್ರಗಳ ಬಟ್ವಾಡೆ ಮಾಡುತ್ತಿದ್ದ (ಹುಕ್ಕುಶು. ೨೨). [← ಹಿಂ. ಬಟವಾರಾ . ಮರಾ. ಬಟವಾಡಾ]

**ಬಟಾಟೆ** (ನಾ). (ನೆಲದ ಅಡಿಯಲ್ಲಿ ಬೆಳೆಯುವ, ತರಕಾರಿಯಾಗಿ ಬಳಸುವ) ಗೆಣಸಿನಂಥ ಒಂದು ಬಗೆಯ ಗೆಡ್ಡೆ; ಆಲೂಗೆಡ್ಡೆ : ಬಟಾಟೆ ಗಿಡದಲ್ಲಿ ಕೆಲವು ಉತ್ತಮತರದ "ಬೀಜ"ಗಳನ್ನು ಆಯ್ದು ಅವುಗಳನ್ನು ಮುಂದಿನ ಋತುವಿನಲ್ಲಿ ಬೆಳೆಸಿದನು (ಸಸ್ಯಳ. ೨೯); ನಮ್ಮ ಆಳುಮನುಷ್ಯ ಪೇಟೆಯಿಂದ ಬಟಾಟೆ ತರುವುದು ಮೂರು ಸೇರು (ಕುಂಶಿಲಂ. ೯).

[←ಮರಾ. ಬಟಾಟಾ, ಬಟಾಟೇ./ತುಳು. ಬಟಾಟೆ./ಇಂ. Batata. Potato : ಪೋರ್ಚು. ಸ್ಪ್ಯಾನಿಷ್. ಬಟಾಟಾ]

**ಬಟಾಣಿ**, ಬಟ್ಟಾಣಿ, ವಟಾಣಿ (ನಾ). (ಕಡಲೆಯ ಜಾತಿಗೆ ಸೇರಿದ) ಒಂದು ಬಗೆಯ ದ್ವಿದಳಧಾನ್ಯ : ಬಟಾಣಿಬೀಜಗಳನ್ನು ಹಸಿಯಾಗಿರುವಾಗ, ಒಣಗಿದಾಗ ಉಪಯೋಗಿಸಲಾಗುವುದು . . . ಬಟಾಣಿಯಲ್ಲಿ ರುಚಿಯ ಜೊತೆಗೆ ಶರೀರಪೋಷಕ ಸಾರವಸ್ತುವಿದೆ (ಹಿತ. ೯೦). 'ಬಟ್ಟಗಡಲೆ' ಹೋ. ಬಟ್ಟಾಣಿ : ಕಿತ್ತು ಕಿತ್ತಿತ್ತಿತ್ತ ಕೆಡದ ಹಾರಂಗಳೊಳ್ಮುತ್ತುಗಳ್ಕಾರಿ ನೋಕ್ಕಿಲದೊಳಗೆ ಬಿತ್ತಿದೊತ್ತೊತ್ತಾದ ಹೋಳ ಬಟ್ಟಾಣಿಗಳ ಬೀಜಂಗಳೆಂಬಂತೆ ಕಾಣಿಸಿದುವು (ಶೀಶಾ. ೯-೩). ವಟಾಣಿ : ಸ್ವಲ್ಪ ಕಪ್ಪು ಅಥವಾ ಕೇಸರಿ ನೆಲವಾದರೆ . . . ಹಿಂಗಾರಿಯ ಧಾನ್ಯ ವಟಾಣಿ ಮೊದಲಾದ ಕಟಾಣಿಜನಸುಗಳು ಕಡಲಿಯ ಧಾನ್ಯಗಳು ಇವುಗಳನ್ನು ಬೆಳೆಯಬಹುದು (ಕೃಶಿಕ್ಕೃ. ೯೨). [ದೇ.೩ ತಮಿ. ಮಲ. ವಟ್ಟಾಣ ; ತುಳು. ಬಟಾಣ ; ತೆಲು. ಬಟಾನಿ. / ಮರಾ. ವಾಟಾಣಾ. / ಸಂ. ವಟಧಾನ್ಯ]

**ಬಟಾಯಿ** (ನಾ). ೧. ಬೇಗಾರನಿಂದ ಹೊಲದ ಒಡೆಯನಿಗೆ ಸಲ್ಲುವ ಧಾನ್ಯದ ಅಂಶ, –ಭಾಗ ; ವಾರಪಾಲು ; ಕೋರು : (ಕೃಸಂಗ. II. ೩೯೯) : ವೆಂಕಟರಾಯನು ಗಿರಿಯಪ್ಪನೆಂಬ ಪವಾಡಗಿತ್ತಿಯು ಮಾಡುವ ಸಮಾರಾಧನೆಗೆ ಬಟಾಯಿ ಧಾನ್ಯವನ್ನು ಉಪಯೋಗಿಸಿ ರಾಜದ್ರೋಹ ಮಾಡಿದ್ದಾನೆ (ಕಛ. ೩೬೬). ೨. "ಸರ್ಕಾರದ ಪರವಾಗಿ ಮಾಡುವ ವ್ಯವಸಾಯ" (ಕಅ. ಕೋಶ) : ಇವುಗಳಲ್ಲಿ ಕೆಲವು ಬಟಾಯಿ — ಅಂದರೆ ವೃತ್ತಿದಾರರಾದ ಇನಾಂದಾರರ ಸ್ವಂತ ಅನುಭವ ಅಥವಾ ವಹಿವಾಟನಲ್ಲಿದ್ದವು (ಕಅ. ೨೩೯).

[←ಹಿಂ. ಮರಾ. ಬಟಈ., ಬಟಾಈ]

**ಬಟಾಯಿಭೂಮಿ** (ನಾ). ವಾರಕ್ಕೆ ಕೊಟ್ಟಿರುವ ಭೂಮಿ ; ಕೋರಿ ಜಮೀನು : ಅರಮನೇ ಚಾಕರರಲ್ಲದವರು ಅನೇಕರು ಸರ್ಕಾರದ ಬಟಾಯಿಭೂಮಿಗಳನ್ನು ವ್ಯವಸಾಯ ಮಾಡುತಾ . . . ಜೀವಿಸಿಕೊಳ್ಳುತ್ತಿದ್ದರು (ಮಕುಕ. ೨). [ಬಟಾಯಿ+ಭೂಮಿ]

**ಬಟಾರ**₁ 'ಭಟಾರ' ನೋ.

**ಬಟಾರ**₂ (ನಾ). ಗೋಣೀಚೀಲ : ಅದನ್ನು ಚನ್ನಾಗಿ ಬಿಸಿಲಲ್ಲಿ ಹಾಕಿ ಒಣಗಿಸಿ ಬಟಾರಗಳಲ್ಲಿ ತುಂಬಿ ಇಟ್ಟು ರಂಗು ನೋಡಿ ಮಾರಾಟ ಮಾಡುತ್ತಾರೆ (ಕೃಶಿಕ್ಕೃ. ೯೨). [?]

**ಬಟಾರಿ** 'ಭಟಾರಿ' ನೋ.

**ಬಟು**₁ 'ಬಟ್ಟು' ನೋ.

**ಬಟು**₂ (ನಾ). ಬ್ರಹ್ಮಚಾರಿ ; ವಟು : "ಬಟು — ವಟು = ಹುಡುಗ, ಬ್ರಹ್ಮಚಾರಿ" (ಕನ್ನಕೋ. ೨೬) ; ಪೋಜವಾಗಿಲೊಳ್ ಮುನಿಯೋರ್ವರ್ಂ ಬಟುವರಸು ಬಂದಿರ್ಕುಂ (ಹಪುಶಾ. ೧೧-೧). [<ಸಂ. ವಟು]

**ಬಟುಗಲ್ಲು** (ನಾ). ಗುಂಡಗಿರುವ ಕಲ್ಲು ; ದುಂಡಾದ ಶಿಲೆ : ನಿಡಿಗಲ್ಲು ನಿಶಿತ ಹಾಸುಗಲ್ಲು ಚೌಕದ ಬಡಿಗಲ್ಲು ಬಟುಗಲ್ಲು ಬೀಳೆ ತುಡುಕಿದ ವಜ್ರ ಮಾರ್ಗಣದಿಂದ ಶ್ರೀಕೃಷ್ಣ ಹುಡಿಯೋಳಳಚ್ಚು ಹಾಚಿಸಿದ (ಕೃಂಚಕ. ೯೦-೬೩). [ಬಟು₁ (<ಬಟ್ಟು) + ಕಲ್ಲು (<ಕಲ್₃)]

**ಬಟುಮೊಲೆ** 'ಬಟ್ಟಮೊಲೆ' ನೋ.

**ಬಟುವು** 'ಬಟ್ಟು' ನೋ.

**ಬಟುವುದಿಂಬು** (ನಾ). ಗುಂಡಾಗಿರುವ ದಿಂಬು ; ದುಂಡನೆಯ ದಿಂಬು : ಬಿಳಿಯ ಬಟ್ಟೆಗಳಿಂದ ಕಟ್ಟಿ ಪೂಲಿದಿರುವ ಮನ್ಮಥನ ವಂದು ತೊಡೆಯು ಬಟುವುದಿಂಬುಯಿದೆಂಬಂತೆ (ಶಾಗಂಂ. ೦೯೬-೯).

[ಬಟುವು (<ಬಟ್ಟು) + ದಿಂಬು₂]

**ಬಟುಹು** 'ಬಟ್ಟು' ನೋ.

**ಬಟ್ಟ**₁ 'ಬಟ್ಟು' ನೋ.

**ಬಟ್ಟ**₂ (ಸಪೂರೂ). 'ಬಟ್ಟಿತು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬಟ್ಟಗಲ್', 'ಬಟ್ಟವೆಣ್' ಪರಾ. [<ಬಟ್ಟಿತು]

**ಬಟ್ಟ**₃ (ಸಪೂರೂ). 'ಬಟುದು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬಟ್ಟತಲೆ' ಪರಾ. [<ಬಟುದು]

**ಬಟ್ಟ**₄ 'ಬಂಟ₂' ನೋ.

**ಬಟ್ಟಕೆಱೆ** (ನಾ). ಒಂದು ಊರಿನ ಹೆಸರು (?) : ಸಾದೇವಂ ಬಟ್ಟಕೆಱೆಯಂ ಅಟ್ಟದಂ (ಎಕ. XIII. ೦೪೯-೩ ; ೩೩೦). 'ಬಟ್ಟಿಕೆಱೆ' ಪರಾ. [ಬಟ್ಟ₁ + ಕೆಱೆ]

**ಬಟ್ಟಗಡಲೆ** (ನಾ). ದುಂಡಗಿರುವ ಒಂದು ಬಗೆಯ ಕಡಲೆ : "ಕಳಾಯಃ, ಖಂಡಿಕಃ, ಸಾತೀನಃ — ಹೃ ೩ ಬಟ್ಟಗಡಲೆ" (ಹಿಂತು. ೧೩-೪೨೬) ; ಕರಿಹಸ್ತಚರ್ಮಮಂ ಪೇಳ್ ಕರಿದಂತವನರೆದು ಬಟ್ಟಗಡಲೆಯ ಪಿಟ್ಟಂ ಬೆರಸಿಕ್ಕುಗೆ ಮೊದಲೊಳ್ ತಾವರೆಯಲರಲ್ಲದ ಸುರಭಿಗಂಧಮನಾಳ್ಗುಂ (ಜಾಕೋಕ. ೬-೩೨). 'ಬಟಾಣಿ' ಹೋ.

[ಬಟ್ಟ₂ (<ಬಟ್ಟಿತು) + ಕಡಲೆ]

**ಬಟ್ಟಗಡಸು** (ನಾ). ಮೈ ತುಂಬಿಕೊಂಡಿರುವ ಕಡಸು : ಬಟ್ಟಗಡಸು ಕೆಂದ ಹುರಿಗ ಕಾರಿಯು ಬೆಳ್ಳ ನೆಟ್ಟ ಕೊಂಚನಕಾರಿ ಜಾರೆ (ಕುಮಿಸಾ. ೦-೯೦). [ಬಟ್ಟ₂ (<ಬಟ್ಟಿತು) + ಕಡಸು₁]

**ಬಟ್ಟಗದ್ದ** (ನಾ). ದುಂಡನೆಯ ಗದ್ದ : ತಳತಳಿಪೊಳ್ಪೊಸಲ್ . . . ಪೊಳ್ಳೆವಲ್ ಪೊಳೆವ ಮಲ್ಲಿಗೆ ಮಟ್ಟಿದ ಬಟ್ಟಗದ್ದದಿಂ ಬಳೆಯುವುದೊಳ್ಪೊಗಂ ಸೊಬಗಿನಿಂ ಬಗೆಗಾರ್ತಿಯರ್ಗಾಸೆಯಟ್ಟಿಯಂ (ಜಾ. ೩-೬).

[ಬಟ್ಟ₂ (< ಬಟ್ಟಿತು) + ಗದ್ದ₁]

**ಬಟ್ಟಗಲ್**, ಬಟ್ಟಗಲ್ಲು (ನಾ). ಗುಂಡಗಿರುವ ಕಲ್ಲು ; ದುಂಡುಗಲ್ಲು : ಬಟ್ಟಗಲ್ಲಿಂತು ವರ್ತುಳದಿಂದೆ ಚೆಲ್ವಾಗಿ ಪುಟ್ಟುವುದೆ ಪೊಸತು (ಕೃಬಾ. ೨೬-೨೬). ಬಟ್ಟಗಲ್ಲು : ಅಂತೆ ಬರೆ ಒಟ್ಟೆಯೊಳಗಣ ಬಿಳಿಯ ಬಟ್ಟಗಲ್ಲು (ಕುಞ. ೦೯೨೦, ೦೦-೦೬೬ ; ೯೭೭) ; ಬಟ್ಟಗಲ್ಲಿನ ವಮ್ಮಲ ತುಪ್ಪ ಸುರುವಿದಂಗ ಏನಾರ ಆತ ನನ ಮಗಳ (ಜಾಕಗಾ. ೨೦೦).

[ಬಟ್ಟ₂ (< ಬಟ್ಟಿತು) + ಕಲ್₃]

**ಬಟ್ಟಗಲ್ಲು** 'ಬಟ್ಟಗಲ್' ನೋ.

**ಬಟ್ಟಗಾಣ** (ನಾ). ಗುಂಡಾಗಿ ಸುತ್ತುವ ಗಾಣ : ಅಯ್ಯಾ ಮನದ ರಜದ ಮಣ್ಣು ಕಳೆದು . . . ಅದನೊಂದೆಡೆಗೆ ತಂದು ಬಟ್ಟಗಾಣದಲಿಕ್ಕಿ ಹಿಳಿವನಯ್ಯಾ (ಸಿದ್ಧಕ. ೪೦೫-೦೦೨೬). [ಬಟ್ಟ₂ (<ಬಟ್ಟಿತು) + ಗಾಣ₁]

**ಬಟ್ಟಗುತ್ತ** (ನಾ). ೧. (ಆಲಂ) ಮೋಸ ; ವಂಚನೆ : ಬಟ್ಟಗುತ್ತದ ವಿದ್ಯವಿವರಿಗೆ ಕೊಟ್ಟರುಂಟೆಲೆ ಮಂತ್ರಿ ಕೇಳ್ ಮಾನವಮುಟ್ಟ ನುಡಿಯಲಿ ಭಾವಿಸದೆ ಸದ್ಧರ್ಮಮಾರ್ಗದಲಿ (ಕೊರಚ. ೨-೨-೩೯). ೨. ಮೋಸಗಾರ ; ವಂಚಕ : ಸೂಚಿಗಾಜನಂತೆ ಪೆಱರಂ ಕ್ಲೇಶಂಗೊಳಿಸದೆ ಬಟ್ಟೆ [ಟ್ಟ] ಗುತ್ತನಂತೆ ಉಪವಾಸಮಂ ತೋಱಿ ಕಾಡದೆ (ಧರ್ಮಾಮೃ. ೩-೯೯). 'ಬಟ್ಟೆಗುತ್ತ' ಹೋ. [ಬಟ್ಟ₁ + ಗುತ್ತ₂ (< ಗುಪುತ)]

**ಬಟ್ಟಗುತ್ತತನ** (ನಾ). ಮೋಸಗಾರಿಕೆ ; ವಂಚನೆ : ಕಾಯವ ದಂಡಿಸಿ ಆತ್ಮನಿಗ್ರಹವ ಮಾಡಿ ಬಟ್ಟಗುತ್ತತನವ ಹನ್ನೆ ತಗಹಿನಲ್ಲಿ ಕುಳಿರ್ದರ್ು ಬೇಡಿಕೊಂಬ ತಪ ತಾನೇಕೆ (ಶಿವಸ. ೯. ೬೨೩-೬೬೩) ; ಆಹಹ ಕುಡುವನೆಂಬ ಬುದ್ಧಿ ಚಿತ್ತದೊಳಗೆ ಬೇಗ ಹೊಳದು ಕೊಟ್ಟನೇಳು ತಂಗಿ ಬಟ್ಟಗುತ್ತತನವಿದೇವುದು (ಕೃಚರ. ೫. ೨೬೬-೩). [ಬಟ್ಟಗುತ್ತ + –ತನ]

**ಬಟ್ಟಗೆ** (ಅ). ದುಂಡಗೆ : ಗುಂಡಾಗಿ : ಬಾಳಾಂತು ಬಳಸಿ ಬಟ್ಟಗೆ ಬಂದು ಸುಟ್ಟುರಿಗಾಳಿಯಂತೊದಗಿ ಸುತ್ತುವರು ಏಳೆಂಟು ಹದಿನಾಱು ಹಾರ

**ಬಡವಾನಳ** (ನಾ). ೧. ಬಡಬಾನಲ : ಒಳಗಿರ್ದ ವೈರಿಗಳ್ ಮೊಕ್ಕಳ ವಿಯಾಯಮ್ ಪರ್ವಲಧಿಕವಿಭವರ್ಕಳುಮಂ ತಳರದೊಡನಿರ್ದು ಬಡವಾ [ಬಾಡಂ.ಬಾ] ನಳನೆಂದುಂ ಪರ್ವಲೀಯದುದಾತ್ತಂಬುಧಿಯಃ (ಕರಾರಾ. ೩-೦೯೯). [ಸಂ. ಬಡವಾನಲ]

**ಬಡವಿ** (ನಾ). ಯಾವ ಆಧಾರವೂ ಇಲ್ಲದವಳು; ನಿರ್ಗತಿಕಳಾದವಳು; ದರಿದ್ರೆ: ನಾನು ಬಡವಿ ಆತ ಬಡವ ಒಲವೆ ನಮ್ಮ ಬದುಕು ಬಳಸಿ ಕೊಂಡವರನೆ ನಾವು ಅರಕು ಇರಕು ಎರಕು (ಬಾರಕೀ. ೩೯-೦); ನನ್ನ ಹತ್ತಿರ ಅಷ್ಟು ರೂಪಾಯಿ ಎಲ್ಲಿಂದ ಬರಬೇಕು ? ನಾ ಬಡವಿ (ಬಾಕೂಲೀ. ೩೦೫). [ಬಡವ + — ಇ]

**ಬಡವು** (ನಾ). ೧. ಕೃಶವಾಗಿರುವಿಕೆ ; ಸೊರಗಿರುವಿಕೆ : (೬). ೨. ಸೊರಗಿದುದಂ ; ಕೃಶವಾದುದಂ ; ತೆಳುವಾದುದಂ : ನಭದೊಳಿರ್ದಪೆಯಷ್ಟುಪ್ಪದಱಿಂದೆ ನಿನ್ನನಾನನುವಿಪನೆನ್ನ ಮೆಯ್ ಬಡವೊ ನಲ್ಲನ ಮೆಯ್ ಬಡವೋ ನಿಶಾಕರಾ (ಅಂಷ. ೦೨-೯೦). ೩. ಏನೂ ಇಲ್ಲದಿರುವಿಕೆ ; ನಿರ್ಗತಿಕತನ ; ದಾರಿದ್ರ್ಯ : (೬). ೪. ಕಿರಿದುಂ ; ಚಿಕ್ಕದು ; ಅಲ್ಪವಾದುದಂ : ನಿರ್ಜರವತಿ ಎಷ್ಟು ಬಾಗಿಲ ಕಾದಿರ್ದ ಸಜ್ಜನಸಂಪತ್ತು ಬಡವೆ (ಕೋಹಕ. ೩೦-೦೩). ೫. ಅಶಕ್ತನಾದವನು ; ಅಸಮರ್ಥನಾದವನು ; ದುರ್ಬಲ : ಬೇಡ ಒಂಸಿಸಬೇತ, ಆ ಬಡವು ಗೋಪನನ್ (ಅಕೃಕ್ಕಾ. ೬-೯೬) ; ನಿನ್ನಂಬೆಯಂ ಕೊಲ್ಲಿಸಿದ ತವಸಿಯುಂ, ಮೇಣ್ ಕೊಂದ ಆ ಬಡವು ಬಡಗನುಂ ತವಿಯದರೊಳರಿನ್ನುಂ (ಶ್ರೀಬಾಹು. ೨೦೯-೨೨೯).

**ಬಡವಾಗು** = ೧. ಕೃಶವಾಗು ; ಸಣ್ಣನಾಗು ; ಸೊರಗು : ಆತನ ಮಹಾದೇವಿ ಮಂದೆಯೆಂಬೊಳಾಕೆಗೆ ಗರ್ಭಮಾಗಿ ಚಂದ್ರನಂ ನುಂಗುವ ಬಯಕೆಯಾಗಿ ಬಡವಾದೊಡೆ (ಚಕ್ಕಾರಾ. ೦೫೬-೦೦) : ಬಡವಪ್ಪೊಡೆ ಮೇಯದೆ ನೀರ್ಗುಡಿಯದೆ ಮೆಲ್ಕಿಱಿಯದಿರ್ಪೊಡೋರಂತಿರೆ ಕೊಡುವುದು ಬೇವಿನ ಕಷಾಯಮಂ (ಕೋಕಹ. ೯-೨೦೬). ೨. ನಿರ್ಗತಿಕನಾಗು ; ದಾರಿದ್ರ್ಯವನ್ನು ಹೊಂದು : ಧನ ಸವೆದು ಬಡವಾದರೆ ಆ ಭಕ್ತನು ಆ ಲಿಂಗಕ್ಕೆ ಪೂಜೆಯಹನು (ಬಸವ. ೦೫೦) ; ಬಡವಾದಿರರಸ ಕಾಲೊಳ್ ನಡೆದಕಿರೊಡನಾರುಮಿಲ್ಲ ಕಡಲಿಗಳೇ ನಿಮ್ಮಡಿಯೊಳಗೆ ಪಡುವ ದೇಗುಲ ದೆಡೆಯಾವುದು ಕುಡದ ನಿಮಗಮಾಯೆಡಜಾಯ್ಯೇ (ಕಬಿರ. ೦೦೨ ಕೃತೀ); ಕಾಣೆಯ ಬೀಯದಲಿ ಬಡವಹುದೆ ಕನಕಾಚಲ (ಕುಮಾರಕ್ರಿ. ೦-೦೬).

**ಬಡವುಗಳ್** = ಅಸಹಾಯಕವಾದ ಪ್ರಾಣಿ ಮುಂತಾದುವು : ಕರಿ ಕಳಭಂಗಳ ಶಿಶುಕೇಸರಿಗಳ ಬಱಿಯಂ ತಗುಳ್ದು ಬಡವುಗಳನದಂ ತಿರಿಪಿ ಒಡಿಯುತ್ತುಮಿರಿಗಂ ಪರಿದಾಡುವ ಸುವವಯ[ಸ್ಕರೊ]ಳ್ ಸೊಗಯಿಸಿದಂ (ಜಂಕರ. ೨-೦೦); ಅಧಿಕಾರಿಗಳೆನೆ ಸ್ಪರಿಸವಧಿಕಾರಿಗಳಾಗಿ ಬಾಳ್ವಗ್ಗಿ ಬಡವು ಗಳವರ್ಗಾಯಿಯುಧುಭಾರಮೇಕೆ (ಗರಾಹು. ೩-೩೩). **ಬಡವು ಬಗ್ಗುಗಳ್** = ಬಡಬಗ್ಗರು : ಬಡವುಬಗ್ಗುಗಳ ಕರಕರದು ಕೃಹಾರದಲಿ ಮನವರಿಸಿ ಸೂಱೆಯ ಬಿಟ್ಟು ತೆಱಗೆಯ ಬರಹಗಳ ನೆಱ ತೊಡಿಸಿ ಸಂತಸವಡಿಸಿದನು ಜನವ (ತೊರಾ. ೬-೯೬-೨೬).

**ಬಡವೆ** (ನಾ). =ಬಡವಿ : ಕುಡುವ ಬೊಜಂಗನಂ ಪಡೆದ ಕುಂಟಣಿಯಂತೆ ಸಿರಿವಂತನ ಕಯ್ಯಂ ಪಿಡಿದ ಬಡವೆಯಂತೆ (ರಕಬಾಸ್ಕ. ೩-೦೨೩) : ನಾನು ಬಡವೆ, ತಿರಕೊಂಡು ತಿಂಬೋಳು (ಜುಕ್ಕಿಕ. ೦೬೬). [ಬಡವ + — ಎ]

**ಬಡವೆಣ್** (ನಾ). ಹೆಚ್ಚು ತಿಳಿಯದ ಹೆಂಗಸು ; ಮುಗ್ಧಸ್ತ್ರೀ : ಕಡು ನಾಣ್ಚೆಯಿಂದ ಕಣ್ಮುಚ್ಚಿ ಕಂಪನಗೊಂಬ ಬಡವೆಣ್ಗಳೇ [ಬಾಡಂ. ಎಡವೆಣ್ಗಳೇ, ಮಡದಿಯರೀ] ಕೃತಿಗೆಳೆ ಎಡಬಲದವರೇಳಸದಂತೆ ಮನ ದನ್ನರೊಡವ ಬಾಳುವರಪನೊಳು (ಕರಾ. ೦-೩೩). [ಬಡ (< ಬಡವು) + ಪೆಣ್]

**ಬಡವೆಱೆ**[3], **ಬಡಪೆಱೆ**[3] (ನಾ). ಚಿಕ್ಕದಾಗಿರುವ ಚಂದ್ರ; ಬಾಲಚಂದ್ರ: ಭಾಳದೊಳಿಕ್ಕಿದ ಬಡವೆಱೆವೊಪ್ಪಂ ಸ್ಥೂಲವಯೋಧರಕಿಕ್ಕಿದ ತಾರಾ ಮಾಲೆಗಳಂ ಬಾಲೆಯುತರಬರೆಸಿದರ್ (ಅಯಕಾ. ೦೨-೧೧). **ಬಡೆಪೆಱೆ**[3] : ಹರನ ಜೆಡೆಯ ಬಡಪೆಱೆಯಂ ವಾಣೀವರನ ಬೆರಲ ಕಂಠವನಂಬುರು ಹೋದರನ ಕರದ ಕಂಬುವನು . . . ತರಿಸಿ (ಅಹುಕಾ. ೦-೬೪). [ಬಡ (< ಬಡವು) + ಪೆಱೆ[3]]

**ಬಡವೊಡಲ್**, **ಬಡವೊಡಲು** (ನಾ). ಕೃಶವಾದ ಶರೀರ ; ಸೊರಗಿದ ಮೈ : ಬಡವೊಡಲಂತೆ ಪೋಲ್ತು ಪರ್ವಡದ ಪಂದೆಯಂತೆ ತಲ್ಲಣಿಸಿ (ರಹಕಾಕ್ಕ. ೧-೦೩೬) : ಸೀರಂತೆವೊಲ್, ತುಂತುರಾಗದೇವಿ ನನ್ನ ಬಡವೊಡಲ್ ? (ಶ್ರೀಬಾಹು. ೩೦೩-೬೩). **ಬಡವೊಡಲು** : ಬಡವೊಡಲು ನಾಸಿದಱ ಬಿಗುಹಂ ಸಡಿಲಿದಡ ನೀ ಮಾತ್ರ ಮುಂದಕ್ಕಡಿಯನಿಡಬಾರದೆ ನಿಲುವೆ (ಅಶಸು. ೯೯-೯). [ಬಡ (< ಬಡವು) + ಒಡಲ್]

**ಬಡವೊಡಲು** 'ಬಡವೊಡಲ್' ನೋ.

**ಬಡಹ** 'ಬಡವ' ನೋ.

**ಬಡಹಾರುವ** 'ಬಡವಾರ್ವ' ನೋ.

**ಬಡಹುರಿ** (ನಾ). ಕೃಶವಾದ ಹಗ್ಗ ; ತೆಳುವಾದ ಹುರಿ : ಹಿಡಿದು ಕಱುಗಳನೆಳೆವವೊಲವಗಡಿಸಿ ಕಟ್ಟಿದನೇಳನೊಂದೇ ಬಡಹುರಿಯ ನೇಣಿನಲಿ (ಅಜಗ. ೦೦-೬೮-೩೨). [ಬಡ (< ಬಡವು) + ಹುರಿ[2] (< ಪುರಿ[2])]

**ಬಡಹೆಱೆ**[3] 'ಬಡವೆಱೆ' ನೋ.

**ಬಡಾ** (ಗು). ೧. ದೊಡ್ಡ ; ಹಿರಿಯ : ಇಂಥಾ ದುರ್ಘಟಸಮಯದಲ್ಲಿ ಬಡಾಫಕೀರರಿಲ್ಲವೇ ಎಂಬುದು ಎಲ್ಲರಿಗೂ ಆಶಂಕೆ (ಬಾಂಕ್. ೧೦). (ನಾ). ೨. ವಿಸ್ತಾರವಾದುದಂ : 'ಬಡಾಯಿಸು', 'ಬಡಾವಣೆ' ಪರಾ. [← ಹಿಂ. ಬಡಾ]

**ಬಡಾಯಿ**[1] 'ಬಡಗಿ' ನೋ.

**ಬಡಾಯಿ**[2] (ನಾ). ದೊಡ್ಡಸ್ತಿಕೆ ; ಒಣಜಂಬ; ಹೆಮ್ಮೆ : ಅವಳ ತಾಯಿ ತಂದೆ ಇದ್ದಿದ್ದರೆ ಎಷ್ಟು ಸಂತೋಷಪಡುತ್ತಿದ್ದರೋ? ಸ್ವಲ್ಪವೂ ಜಂಬ, ಬಡಾಯಿ ಇಲ್ಲ (ದೂರಿಕ. ೦೦೩); ಒಣಸಾಹಸದ ಬಡಾಯಿಯಲ್ಲ; ಅವನು ಬಹುಶ್ರುತನಾಗಿದ್ದನು (ಅಂಕಿಹು. ೯೯೨). [← ಹಿಂ. ಮರಾ. ಬಡಾಈ, ಬಢಾಈ. / ತುಳು. ತೆಲು. ಬಡಾಯಿ]

**ಬಡಾಯಿಕೊಚ್ಚು** (ಕ್ರಿ). ಜಂಬ ಹೊಡೆ : ನಾನದನ್ನು ಬಲ್ಲೆ, ಬಲ್ಲೆ ಎಂದು ಯಾರು ಬೇಕಾದರೂ ಬಡಾಯಿಕೊಚ್ಚಬಹುದು (ಕಕಂಜಾ. ೦೯೬); ಕೃಷ್ಣಭಟ್ಟರು ಬಡಾಯಿಕೊಚ್ಚಿಕೊಳ್ಳುತ್ತಿದ್ದರು (ಶ್ರೀಕಕು. ೦೬). [ಬಡಾಯಿ[2] + ಕೊಚ್ಚು[1]]

**ಬಡಾಯಿಗಾರ** (ನಾ). ಒಣಜಂಬದವನು : ಅವನು ಚಮತ್ಕಾರಕೂಸ್ಯವಾದ ಬಡಾಯಿಗಾರ ಮಾತ್ರವಲ್ಲ . . . ಆಡಂಬರವ್ಯಕ್ತಿಯೆಂದು ಆಗ ಪ್ರತಿಯೊಬ್ಬರಿಗೂ ಮನದಟ್ಟಾಯಿತು (ಕೃಕರು. ೩೩೩). [ಬಡಾಯಿ[2] + — ಕಾರ[1] (< — ಕಾಱ)]

**ಬಡಾಯಿಸು** (ಕ್ರಿ). ೧. ದೊಡ್ಡದಾಗು : ಹೆಚ್ಚು : ಅಧಿಕವಾಗು: ಮೈಸೂರವರು ಬಡಾಯಿಸಿ ಕೊಡಗಿನ ಸೀಮೆ ಪಳನುಗ್ಗಿ ಬಂದರು (ಕಾಕೀಂದ್ರ. ೩). ೨. ವಿಸ್ತರಿಸು: ಹೆಚ್ಚಿಸು: ಅಧಿಕಗೊಳಿಸು : ಈ ಬಾರಿನ ಸಂಖ್ಯೆಯನ್ನು ೭,೦೦೦ಕ್ಕೆ ಬಡಾಯಿಸಿದರು (ಮಹಾಕಂ. ೧೧. ೦೯); ನಾಲೆಯನ್ನು ಮೈಸೂರವರೆಗೂ ಬಡಾಯಿಸಿ ಭಾರಿಯಾಗಿ ಕಾಲುವೆ ಮಾಡಿ ದರು (ಮುತುಗ. ೬೯); ಹುಡುಗ ವ್ಯಾಪಾರ ಮಾಡಿಕೊಂಡು ಹೋಟೆಲ್ ಬಡಾಯಿಸಿದ (ಕಕಂ. ೦೯೮). [ಬಡಾ + — ಇಸು[2]./ತೆಲು. ಬಡಾಯಿಂಚು]

**ಬಡಾಯಿಹೊಡೆ** (ಕ್ರಿ). = ಬಡಾಯಿಕೊಚ್ಚು : ನಾನಾಸಾಹೇಬ ನಕ್ಕು "ನಾನು ಅಷ್ಟು ಹೆಡ್ಡನೇ. ಅಷ್ಟು ಯೋಚಿಸುವ ಸಾಮರ್ಥ್ಯವುಂಟು

ನನ್ನಲ್ಲಿ" ಬಡಾಯಿತುಹೊಡೆಯುವವನಂತೆ ನನ್ನ ಹತ್ತಿರ ಹೇಳಿದ (ಅರುಣ. ೦೭೬). [ಬಡಾಯಿ₂ + ಹೊಡೆ₁ (< ಪೊಡೆ₁)]

**ಬಡಾವಣೆ** (ನಾ). ೧. ಕಟ್ಟಡ, ನಗರ ಮೊದಲಾದುವುಗಳನ್ನು ವಿಸ್ತರಿಸುವಿಕೆ.–ವಿಶಾಲಗೊಳಿಸುವಿಕೆ: ಹತ್ತಿಪ್ಪತ್ತು ವರ್ಷಗಳ ಹಿಂದೆ ಬೆಂಗಳೂರಿನ ಸುತ್ತಲೂ ತರಕಾರಿ ತೋಟಗಳಿದ್ದವು. ಅವುಗಳನ್ನು ನಗರ ಬಡಾವಣೆಗಾಗಿ ಆಕ್ರಮಿಸಿಕೊಳ್ಳಲಾಗಿದೆ (ಕಕಕ. ೬೩); ದೊಡ್ಡಿಗಳ ಕಟ್ಟಡ ವನ್ನು ಕಟ್ಟಿಸುವದಕ್ಕೂ ಕಟ್ಟಡವನ್ನು ರಿಪೇರಿ ಬಡಾವಣೆ ಮಾಡುವುದಕ್ಕೂ ಹೀಗೆ ಖರ್ಚಾಗಿ ಉಳಿದ ಹಣವನ್ನು . . . ಕೊಡಲ್ಪಡತಕ್ಕದ್ದು (ಗ್ರಾ ಶಾಸ. ೦೦೦). ೨. ಕಟ್ಟಡ, ನಗರ ಮೊದಲಾದುವುಗಳ ವಿಸ್ತರಿಸಿದ ಭಾಗ.–ವಿಸ್ತರಣ: ನಮ್ಮ ಮನೆಯಿರುವುದು ಬೆಂಗಳೂರುನಗರದ ಜನ ಭರಿತ ಬಡಾವಣೆಯೊಂದರಲ್ಲಿ (ಪಾಂಗೀ. ೦೯೯). [ಬಡಾ+–ಅಣೆ₄]

**ಬಡಿ₁** (ಕ್ರಿ). ೧. ಹೊಡೆ; ಏಟುಹಾಕು; ತಾಡಿಸು: "ಬಡಿ– ತಾಡನೇ, ಸ್ವಲ್ಪದಂಡೇ ಚ" (ಶಮದ); ಮೊಗಮಂ ಸುಡು ಒಡಿ ಬಡಿ ನಿಮಿರ್ದಜಿ ಬಯಲ್ ಕಡಂಗಿ ನುಂಗೆಂದು ಮುಸುಜಿ ನಾರಕರಾಗಳ್ . . . ಕುತ್ತುವುದುಂ (ಶಬ್ದಾ.ರಾ. ೨೬-೯); ಕರಿಘಟೆಗಳನಾರ್ದುಡಿಯೆ ಬಡಿದಾನೆವೆರಸಾಗಡೆ ಕೊಂದಂ ಕ್ಷೇಮಧೂರ್ತಿಯಂ ಪವನಸುತಂ (ಹಂಕಶಾ. ೦೨-೬೮); ಹುತ್ತವ ಬಡಿದೊಡೆ ಹಾವು ಸಾಯಬಲ್ಲುದೆ (ಬಸವ. ೦೦೬); ತಾಯೆ ಬಾರೌ ತಂಗಿ . . . ಸಾಯಲವದಿರ ಬಡಿದು ತಾ (ಕುಮ್ಮಾರ. ೯-೦೦). ೨. (ಕಬ್ಬಿಣ ಮೊದಲಾದುವುಗಳನ್ನು ಕಾಯಿಸಿ) ಚಚ್ಚಿ ಉದ್ದ ಮಾಡು; ಸಾಗು ಹಾಕು: ಕಮ್ಮಾರನಂತೆ ಕಾಸಿ ಬಡಿವರ್ ಮೇದನಂತೆ ಸೀಳ್ವರ್ (ಧರ್ಮಾಮೃ. ೩-೭೩); ಕಾದಿರುವಾಗ ತಾನೆ ಕಬ್ಬಿಣವನ್ನು ಬಡಿಯಬೇಕಾಗು ವುದು (ಕ್ಷೇತ್ರ.೯೯). ೩. (ಕೈ ಮೊದಲಾದುವುಗಳನ್ನು) ತಟ್ಟು: ಬರೆದ ಬರಹವಿದೆಂದು ಕಯ್ಯ್ ನೊಸಲ ಬಡಿದಂ (ಕಾದಂಬ. ೦೩೩-೨೯೯); ಎರಡೂ ಕೈಗಳನ್ನು ಬಡಿದು ಧೂಳನ್ನು ಹಾಡಿಸಿ (ಕಮ್ಮಟ. ೨). ೪. (ರಭಸ ವಾಗಿ) ತಾಗು; ತಗಲು: ನನ್ನ ಕಾಲು ಕುರ್ಚಿಗೆ ಬಡಿದು ಬೆರಳಿನಲ್ಲಿ ರಕ್ತ ಬರುತ್ತಿದೆ (ರೂಢಿ). ೫. ಅವಯವಗಳನ್ನೇ (ಅಸಹಾಯಕವಾಗಿ) ಅಲುಗಾಡಿಸು; ಒದರು; ಚಲಿಸುವಂತೆ ಮಾಡು: ಮುಸಕಂಗುಂದಿದ ಮೆಯ್ಯ್ ಮಲೆ ಬಡಿವ ಕಾಲ್ (ಹಂಕಶಾ. ೦೨-೦೫೦); ಬಲೆಯೊಳ್ ಕಪೋತಂಗಳಸಂಘಾತಂ ಸಿಲ್ಕಿ ತಲೆಯುಮನೊಡಲುಮಂ ಬಡಿಬಡಿದು ಬಲಿಲುತಿರ್ಪುದುಂ (ಹಂಕಹಂ. ೨೯೯-೦೯); ಉಡು ಮೊಲ ನರಿ ಹುಲ್ಲೆ ಮರೆ ಸಾರಗಗಳ ಕಂಗಿಡಿಸುವ ಜಂಘಾಲಿಗಳು ನಡುವಿನ ರತ್ನಮುಃಖಲೆಯಾಂತು ಬಾಲವ ಬಡಿಯುತ ನಡೆದುವೊಗ್ಗಿನಲಿ (ಕೋಹಕ. ೧೯-೦೨). ೬. (ಹರೆ, ನಗಾರಿ, ತಮಟೆ ಮೊದಲಾದ ಚರ್ಮವಾದ್ಯಗಳನ್ನು ಬಾರಿಸು; ನುಡಿಸು: ಕೂಟಿಲ್ಲದೆ ಮದ್ದಳೆಯುಂ ಬಡಿವ (ಧರ್ಮಾಮೃ. ೦೨-೨೪); ಸಿಡಿಲ ಕಡುಹಿನಿಂದೆ ಬ್ರಹ್ಮಾಂಡಭೇರಿಯು ಬಡಿವವೊಲಾನೆಯ ಮೇಲೆ ಹೊಡೆವ ಡಮಾವಿಗಳಬ್ಬರ ಗಗನವ ತುಡುಕಿತು (ಕಂಶಿರ. ೦೦-೨೩); ಸುಡುವರೆ ಪಂಜಹುದು ಬಡಿಯೆ ಭೇರಿಯು ಇಹುದು (ಸರ್ವಜ್ಞ. ೨೯೬). ೭. (ಸಿಡಿಲು ಮೊದಲಾದುವುಗಳು) ಎರಗು; ಹೊಡೆ; ಅಪ್ಪಳಿಸು: ತೆಜಹು ಗೊಟ್ಟೊಳಹೊಗಿಸಿ ತದೆದನು ಬಲಿಸಿಡಿಲು ಬಡಿವಂತೆ (ತಳಕ. ೯-೩೦). ೮. ಗ್ರಹ, ದೃಷ್ಟಿ, ರೋಗ ಮೊದಲಾದುವು ತಾಗು.–ಹಿಡಿ.–ಆವರಿಸು: ಅಚ್ಚರಿಗೊಂಡುಗ್ರಬಾಹು ಕಂಡು ಬೆಚ್ಚಿಬಿದ್ದನು ತನಗೆ ಬಡಿ ಯಲು ರಾಹು (ಶ್ರೀಗಂಧ. ೯೪-೩); ದೃಷ್ಟಿ ಬಡಿದಿದೆ, ಅದಕ್ಕೆ ಮದ್ದು ಮಾಡಿ ನೋಡ್ತೀನಿ (ಶುಪೋತಂ. ೩೩೫). 'ಗರಬಡಿ' ಪರಾ. ೯. (ಕೆಟ್ಟ ವಾಸನೆ ಮುಂತಾದುವು) ಬರು.–ಉಂಟಾಗು: ಹೋತದಲ್ಲಿ ಅದರಲ್ಲೂ ಬೆದೆಹತ್ತುವ ಕಾಲದಲ್ಲಿ ತಡೆಯಲಾಗದ ಹೊಲಸುನಾತ ಬಡಿಯುವುದು (ಕಂಕೋ. I. ೭೨೬); ಕಾಕಾ ಅವರಿಂದ ಕಾಗದ ಬಂದ ವಾಸನಿ ಅವಂಗ ಬಡಿದವ (ಬೇಕಶ. II. ೦೦೩). ೧೦. [ಗಣಿತ] ಗುಣಿಸು; ಗುಣಾಕಾರ ಮಾಡು: ತಿಪಿ ಪೊಯ್ಯ್ ಚರ್ಚಿಸು . . . ಅಣಿ ಬಡಿ ಮೇದು . . . ಬೆಳ ಸೆಂದು ಇಂತಿಸಿತ್ತುಂ ಗುಣಿಸೋದಕ್ಕೆ ಹೆಸರು (ವ್ಯವಹಾ. ೦೧).

**ಬಡಿದಾಟ**=ಹೊಡೆದಾಟ; ಘರ್ಷಣೆ; ಹೋರಾಟ: ಕೋಮುವಾರು ಘರ್ಷಣೆಗಳಾಗುವ ಸೂಚನೆ ಕಾಣಿಸಿತು . . . ಆದರೆ ಬಡಿದಾಟಕ್ಕೊಂದು ಕುಂಟುನೆವ ಬೇಕಲ್ಲ? (ಅಶ್ವತ್ಥ.೦೬೮); ಸಹಸ್ರಾರು ಜನರು ತಮ್ಮ ಉದ್ದೇಶ ಸಾಧನೆಗಳಿಗಾಗಿ ಬಡಿದಾಟ ನಡಿಸುವರು (ಪಾಹಾಕ್ಯ. ೬೯). **ಬಡಿದಾಡು**= ಹೊಡೆದಾಡು; ಹೋರಾಡು: ಕಡಿದಾಡಿದರ್ ಕತ್ತಿ ಕೈದುವಿಂ ಗದೆಗಳಿಂ ಬಡಿ ದಾಡಿದರ್ (ಕಂಕ್ರ. ೨೯-೬); ಪಶುಗಳನ್ನು ಸಾಕಿದವರು . . . ಹೆಚ್ಚಿನ ಬೆಳೆಯ ಪಾಲಿಗೆ ಪಾತ್ರರೆಂದು ಬಡಿದಾಡಹತ್ತಿದರು (ಮಾಹಾರ. ೬೨). **ಬಡಿದುಕೊಳ್ಳು** =೧. ಹೊಡೆದುಕೊಳ್ಳು; ತಾಟಿಸಿಕೊಳ್ಳು: ತಲೆಯುಂ ಕಾಲ್ಗಳುಂ ಪಾಷಾಣವೃಕ್ಷಂಗಳೊಳ್ ಶತಚೂರ್ಣಮಾಗೆ ಬಡಿದುಕೊಂಡು . . . ಪ್ರಳಾಪಂಗೆಯ್ದು (ಶಬ್ದಾ.ರಾ. ೪೬-೨೯). ೨. ಆವರಿಸು; ಹಿಡಿದುಕೊಳ್ಳು: ಪ್ರಾಚೀನಕಾಲದಲ್ಲಿ ದೇವತೆಗಳಿಗೆ ಅಲ್ಲದಿದ್ದರೆ ರಾಕ್ಷಸರಿಗಾದರೂ ನೆಗಡಿ ಬಡಿದುಕೊಳ್ಳುತ್ತ ಇದ್ದಿರಬೇಕು (ದೇಶಕ. ೦೬); ಇವನ ಅಪ್ಪನಿಗೋ ಅಜ್ಜಿಗೋ ಇದ್ದಿತಂತೆ ಈ ದಮ್ಮಿನ ರೋಗ. ಆದರೆ ಇವನಿಗೆ ಹನ್ನೆರಡ ನೆಯ ವರ್ಷಕ್ಕೇ ಬಡಿದುಕೊಳ್ಳಬೇಕೇ? (ಮೂರುದಾ. ೯೩).

☞ ಈ ಧಾತುವು ಹಲವು ಶಬ್ದಗಳ ಜೊತೆಗೆ ಸೇರಿ ವಿಶಿಷ್ಟವಾದ ಧಾತು ವಾಗಿ ವಿವಿಧವಾದ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಉದಾ: ಕಾಪ್ಪಡಿ, ಗರಬಡಿ, ಬಾಯ್ಬಡಿ, ಸಿಡಿಲ್ಬಡಿ ಇತ್ಯಾದಿ.

[ದೇ.॥ ಮಲ. ಮಟಿ; ತುಳು. ಕೊಡ. ಬಡಿ]

**ಬಡಿ₂** 'ಬಟು₁' ನೋ.

**ಬಡಿ₃** (ನಾ). ೧. ಹೊಡೆಯುವುದು: (೬). ೨. ಪೆಟ್ಟು; ಏಟು: (೬). ೩. (ಹೊಡೆಯಲು ಉಪಯೋಗಿಸುವ) ಕೋಲು; ದೊಣ್ಣೆ; ಬಡಿಗೆ: "ಸ್ವಲ್ಪದಂಡ ತಾಡನಗಳೊಳ್ ಬಡಿಯನಿಕ್ಕುಂ" (ಶಬ್ದಮ. ೯೩); ಮಿಡಮಿಡಮಿಡುಕುವಿನಂ ಬಡಿಯೊಳೊಡೆಯೆ ಪೊಡೆ ಪಡತಲೆಯುಂ (ಶಬ್ದಾ.ರಾ. ೦೨೬-೮): ಜೂದಿನ ಗೆಲ್ಲದೊಳಾದೀ ಮೇದಿನಿಯುಂ ಕಂಡು ಕಜ್ಜಮಂ ಕಾಣದೆ ದುರ್ಯೋದನನದೇನದೇಂ ಮರುಳಾದನೊ ಬಡಿಗಂಡನಿಲ್ಲ ಪಾಲನೆ ಕಂಡಂ (ಹಂಕಶಾ. ೬-೦೯); ಬೆಕ್ಕು ಪಾಲನಲ್ಲದೆ ಮೇಲಣ ಬಡಿಯುಂ ಕಾಣದು (ಧರ್ಮಾಮೃ. ೬-೦೨೯).

[ <ಬಡಿ₁/ತಮಿ. ಮಲ. ಮಟಿ; ತುಳು. ಬಡು; ತೆಲು. ಬಡೆ; ಕೋಲಾ. ಬಡ್]

**ಬಡಿಕ₁** (ನಾ). (ವಾದ್ಯ ಮೊದಲಾದುವುಗಳನ್ನು) ಬಡಿಯುವವನು.–ಬಾರಿಸುವವನು: ಮದ್ದಳೆಯ ಬಡಿಕರ ಬಿಂಕ ಮೇಳವಿಲ್ಲಲಾ ನಿನಗೆ (ಕುಮ್ಮಾರ. ೩-೨೨). [ಬಡಿ₁ + –ಕ₂]

**–ಬಡಿಕ₂, –ಬಡಕ₂, – ಬಡುಕ** (ಪ್ರ). ಲಂಚ, ಮಾತುಗಾರಿಕೆ, ಆಹಾರಸೇವನೆ ಮುಂತಾದುವುಗಳಲ್ಲಿ ಅತಿಯಾದ ಪ್ರವೃತ್ತಿಯುಳ್ಳ ವನು ಎಂಬರ್ಥದಲ್ಲಿ ಬರುವ ಪ್ರತ್ಯಯ: 'ಕೊಟ್ಟಿಡಿಕ', 'ಬಾಯ್ಬಡಿಕ' ಪರಾ. -ಬಡಕ₂: 'ಬಾಯಿಬಡಕ', 'ಲಂಚ ಬಡಕ' ಪರಾ. – ಬಡುಕ: 'ಬಾಯಿಬಡುಕ' ಪರಾ. [<ಬಡಿ₁]

**ಬಡಿಕೆ** 'ಬಡಿಗೆ₁' ನೋ.

**ಬಡಿಕೊಳ್** 'ಬಡಿಗೊಳ್' ನೋ.

**ಬಡಿಕೋಲ್** 'ಬಡಿಗೋಲ್' ನೋ.

**ಬಡಿಕೋಲು** 'ಬಡಿಗೋಲ್' ನೋ.

**ಬಡಿಗ** 'ಬಡಗಿ' ನೋ.

**ಬಡಿಗಲ್ಲು** (ನಾ). ೧. ಹೊಡೆಯಲು ಉಪಯೋಗಿಸುವ ಕಲ್ಲು:

ಇಡುಗಲ್ಲು : ನಿಡಿಗಲ್ಲು ನಿಶಿತ ಹಾಸರೆಗಲ್ಲು ಚೌಕದ ಬಡಿಗಲ್ಲು ಬಟುಗಲ್ಲು ಬೀಳೆ (ಕೋಳಕ. ೪೦-೬೩). ೨. (ಕಬ್ಬಿಣ ಮೊದಲಾದುವುಗಳನ್ನು ಬಡಿಯಲು ಆಧಾರವಾಗಿ ಇರಿಸಿಕೊಳ್ಳುವ) ಅಡಿಗಲ್ಲು; ಅಡೆಗಲ್ಲು : ಮೇಳವದಿ ನೃಪರೊಗ್ಗಿನಿಂದಾ ಸ್ಥೂಳಬಾಪವ ತುಡುಕಲಾ ಧನು ಮೇಲೆ ಬಡಿಗಲ್ಲುರುಳಿದಂತಿರಲು (ಜೈಮಿ. ೦೫-೨೬); ಕುಂಭೀನಸಿಯು ಇದನ್ನೇ ಯೋಚಿಸುತ್ತ ಬಡಿಗಲ್ಲ ಮೇಲೆ ಕುಳಿತಿದ್ದಳು (ಶ್ರೀಅಶ. ೬೧). ೩. ಆಕರ್ಷಣೆಗಾಗಿ ಇಟ್ಟಿರುವ ತಿಂಡಿಯನ್ನು ಇಲಿಯು ಮುಟ್ಟಿದ ಕೂಡಲೆ ದಪ್ಪಕಲ್ಲು ಮೇಲೆ ಬೀಳುವಂತೆ ಆಳವಡಿಸಿರುವ, ಇಲಿ, ಹೆಗ್ಗಣಗಳನ್ನು ಹಿಡಿಯಲು ಉಪಯೋಗಿಸುವ ಒಂದು ಬಗೆಯ ಸಾಧನ; ಬೋನು : ಬಡಲ ಕಿಚ್ಚಿಗೆ ಪೋಗಿ ಬಡಿಗಲ್ಲು ಕಡಹಿಕೊಂಡ ಹಗಿದ ಮೂಷಕನಂತಾದೆ (ಪ್ರಭುಲಿ. ೦-೦೦೪-೨); ಬಡಿಗಲ್ಲಿನಲಿ ಹೆಗ್ಗಣ ಮಿಡುಕುವಂದದಿ ಮದನಶರವಮಾಯಾಪ್ರಬಂಧದಲಿ ತೊಡರಿ . . . ಅಡಿಯಿಡಲಾಣನವನು (ಅಮೃತ. ೨-೬೨). ೪. (ಅಲಂ) ಕಷ್ಟ; ತೊಂದರೆ ; ತಾಪತ್ರಯ : ಏನು ಮಾಡುವುದು ! ತಾನು ಹೋಗುವುದು ಒತ್ತಟ್ಟಿಗಿರಲಿ, ನಿವಮಗೆ ಬಡಿಗಲ್ಲು ತಂದನು ! (ಹೃ. ೦೩೨. ೦೬೬).

[ ಬಡಿ$_1$ + ಕಲ್ಲು (<ಕಲ್$^3$) ]

ಬಡಿಗುಂಡು (ನಾ). ಹೊಡೆಯಲು ಉಪಯೋಗಿಸುವ ಕಲ್ಲು; ಇಡುಗುಂಡು : ಪಿಡಿಗುಂಡು ಬಡಿಗುಂಡು ಜಡಿದು ಪೊಯಿವ ಗುಂಡು ಒಡನೆತ್ತಿ ಹಾಕುವ ಗುಂಡು ಗಡಣಿಸಿ ಕೊತ್ತಳದಪ್ಪದ ತೆನೆಗಳಿಂದೆಡೆಯೊಳಿರ್ದವು ಗುಂಡುಗಳು (ಅಜಿತ. ೦೬-೯೬). [ಬಡಿ$_1$ + ಗುಂಡು$_1$]

ಬಡಿಗೆ$_1$, ಬಡಿಕೆ (ನಾ). ಬಡಿಯುವ ಸಾಧನ; ಕೋಲು; ದೊಣ್ಣೆ : ಬಡಿವ ಬಡಿಗೆಗಳ ಕೆಯ್ಯೊಳಿರ್ ತೊಡೆಯುದು ಸಲೆ ಪೊಟ್ಟಗೊಡೆದು ಕಡವಡದೆತ್ತಂ (ಸುಕುಮಾ. ೩-೦೫) : ಹೊಡೆಸಿದ ಮರೆಳ ವಿಶ್ವಾಮಿತ್ರನಾಕಳ ಹಸಿಯ ಬಡಿಗೆಯಲಿ (ಹಂಕಶ. ೨೯-೬೮); ಬಡಿಗೆಯಲಿ ಹುತ್ತ ಹೊಡೆಯಲಡಗಿಹ ಸರ್ಪ ಮಡಿದಿಹುದೆ (ಸರ್ವಜ್ಞ. ೩೬೩). ಬಡಿಕೆ : ಹಾಳುವಮುಂಡೇ ದಕ್ಕ ದೊಣ್ಣೀನೆ ಸೈ ಅಂತಾ, ಒಂದು ಬಡಿಕೆ ತಗೊಂಡು ಜಪ್ಪಿದ (ಬಾಲಬು. ೩೩); ನಾಲ್ವತ್ತರ ಮೇಲೆ ನಡಿಕೆ. ಎಂಭತ್ತರ ಮೇಲೆ ಬಡಿಕೆ (ಗಾದೆ). [ಬಡಿ$_1$ + – ಗೆ]

ಬಡಿಗೆ$_2$ 'ಬಡಗಿ' ನೋ.

ಬಡಿಗೆಕಾಱ (ನಾ). ಕೋಲು ಹಿಡಿದಿರುವವನು; ಕೋಲುಕಾರ : ಮುಂತಣ ಮಹಾಂತರ ಪಿಂತಣ ಬಡಿಗೆಕಾಱರ ನಡುವಣ ವೀರ ಜೋದರ . . . ಕೋಳಾಹಳದಬ್ಬರಮುಬ್ಬರವಾಗೆ (ಗಿರಿಜಾ. ೬-೫೩ ಪ). [ಬಡಿಗೆ$_1$ + _ ಕಾಱ]

ಬಡಿಗೆಕೊಳ್ 'ಬಡಿಗೆಗೊಳ್' ನೋ.

ಬಡಿಗೆಗೊಳ್, ಬಡಿಗೆಕೊಳ್ (ಕ್ರಿ). ೧. (ಹೆದರಿಸಿ ಓಡಿಸಲು) ದೊಣ್ಣೆಯನ್ನು ಹಿಡಿ ; ಕೋಲನ್ನು ಹಿಡಿದುಕೊಳ್ಳು: ಮರ್ಕಟಂಗಳ ಪಡೆಯನಟ್ಟಿದ ಹಿಂದು ದನವಿಗೆ ಬಡಿಗೆಗೊಂಡಂತೆ (ಕೌಶಿಕ. ೩೫-೦೯). ಬಡಿಗೆಕೊಳ್ : ೨. ದೊಣ್ಣೆಯಿಂದ ಹೊಡೆ : ನೆಲ್ಲಿಯ ಕಾಯ್ಗಳಂ ಬಡಿಗೆಕೊಂಡವೊಲಕ್ರಿದ ತೋರಹತ್ತ್ರದಿಂ ಜಲ್ಲನೆ ತುಂಬಿಗಳ್ ಕೆದಱೆ ಬಂದುವು ಬಿಂಕದಿನಂಕದಾನೆಗಳ್ (ಕಬ್ಬಿಗ. ೨೦೩). [ಬಡಿಗೆ$_1$ + ಕೊಳ್$^1$]

ಬಡಿಗೆಗೋಲು (ನಾ). = ಬಡಿಗೆ$_1$ : ಕೈಗಳ ಸಕಲದನುಜರು ಹಿಡಿದು ಬೋಲಲು ನೆಗೆದು ಹಾಱುತ ಕೊಡಹಿ ಬಡಿದನು ಬಾಲದಿಂದವ ಬಡಿಗೆಗೋಲಂತೆ (ಕೌಶಿಕ. ೦೬-೩೨). [ಬಡಿಗೆ$_1$ + ಕೋಲು$_1$ (<ಕೋಲ್$_1$)]

ಬಡಿಗೆವಲೆ (ನಾ). ಒಂದು ಬಗೆಯ ಬಲೆ : ಹಾಱುವಲೆ ಜಾಱುವಲೆ ಬಡಿಗವಲೆ . . . ಮಂದಸಿನವಲೆಯ ಹೊಱೆಗಳ ಬೇಡವಡೆ ನೆರೆದುದು (ಹರಿಶ. ೩-೮). 'ಬಡಿವಲೆ' ಪರಾ. [ಬಡಿಗೆ$_1$ + ಬಲೆ$_1$]

ಬಡಿಗೊಳ್, ಬಡಿಕೊಳ್ (ಕ್ರಿ). ೧. ದೊಣ್ಣೆಯನ್ನು ಹಿಡಿ; ಕೋಲನ್ನು ತೆಗೆದುಕೊಳ್ಳು: ಬಡಿಗೊಂಡು ಗೋಣವಣ್ಣಂ ಬಡಿವಂತಿರೆ ಪವನಸೂನು . . . ಬಡಿದನನಿಬರುಂ ಕೌರವರಂ (ಗದಾಯು. ೩-೧೦೦) ; ನರನ ಬಿಲುಗೊಂಡೊಂದುದೆಸೆಯಲಿ ಮರುತಿ ಬಡಿಗೊಂಡೊಂದುಕಡೆಯಲಿ . . . ಎರಡುಮಾಱಿಡಿಯಿಸುತ ನಿಂದರು (ಜಾಮ್ಕ. ೪೦-೬೨). ೨. ಬಡಿಗೆಯಿಂದ ಬಡಿ, _ಹೊಡೆ : ಬಡಿಗೊಳೆ ಬಿದು ಬಬ್ಬರಬಿಂದೊಡನುಗೆ ಪೊಸಮುತ್ತು (ಹಂಕಶ. ೦೦-೦೦೩); ಬಡಿಯಂ ಬಹ್ವಾಮಲಕದ ಫಳವುಂ ಬಡಿಗೊಳಲುದಿರ್ವಂದದಿ ಬೀಳ್ವಹ ಬಲ್ವಡೆ (ಜಯನ. ೬-೫೨). ೩. ಬಡಿಗೆಯ ಏಟು ತಿನ್ನು, _ಪೆಟ್ಟುತಿನ್ನು : ಕೆಲರ್ . . . ಸೌಜನ್ಯಕಂದಾಂಕುರನ ಶರಕ್ಕಳ್ಕಿ ಬೆ[ ಳ್ಕ ] ತ್ತೋಡೆಯುಂ . . . ಬಡಿಗೊಂಡ ಪೊಲದಂತೆಯುಂ ತಲೆಕೆಳಗಾಗಿ ಬಿದ್ದರ್ (ಶಾಂತಿಪು. ೯-೪೦ ಪ); ಬಡಿಗೊಂಡು ಪಣ್ ಪಱಿದು ಬೀಱೆ (ಜೀಮು. ೧-೮೮). ಬಡಿಕೊಳ್: ೨. ಬಡಿಕೊಳೆ ಕಾಯುಂ ಪಣ್ಣುಂ ತೊಡಂಬೆ ಪಱಿದುದಿರ್ವ ಮಾಟ್ಕೆಯಿಂ ಕಿಱಿಏರಿಯರ್ ಮಡಿವರನ ಕ್ರಮದಿಂ (ಹಂಕಾಮ. ೦-೬೩). ೩. ರಿಪುಸೇನೆ ಬಲ್ಲು ನಿದ್ರೆಯಿಂ ಬಡಿಕೊಂಡ ನೆಲ್ಲಿಯಂತೆ ನೆಲಕ್ಕೆ ಬೀಳ್ವುದುಂ (ಧರ್ಮಾಮೃ. ೦೩-೧೯೯); ಬಡಿಕೊಂ[ಪಾಠಾಂ. ಗೊಂ]ಡ ನೆಲ್ಲಿಯ ಕಾಯಂತಾ ಬಲವೊಡನೆ ಚೆಲ್ಲಿತು ಕಂಡ ಕಡೆಗೆ (ಕುಮಾರಾಂ. ೯೦-೩೩). [ ಬಡಿ$_2$ + ಕೊಳ್$^1$ ]

ಬಡಿಗೋಲ್, ಬಡಿಕೋಲ್, ಬಡಿಕೋಲು, ಬಡಿಗೋಲು (ನಾ). ಬಡಿಯಲು ಉಪಯೋಗಿಸುವ ಕೋಲು, _ಲಾಠಿ: "ದಂಡೆಯು ಬಡಿಗೋಲ ಪೆಸರ್" (ಅಭಿಧಾ. ೯೩); ಏಱಿನ ಮೇಲೆ ಬಡಿಗೋಲ್ ಕೂರೆಯ ಮೇಲೆ ಕವರ್ತಗೆಯೆಂಬಂತೆ ಸಂತಾಪದ ಮೇಲೆ ಸಂತಾಪವಮಂ ಮಾಡ್ಪ ನಿನ್ನ ನೋಂಪಿಯೆಂಬ ಗರಗಸಕ್ಕೆನ್ನಮೆಯ್ಯನೊಡ್ಡಲಾಱೆಂ (ಧರ್ಮಾಮೃ. ೦-೦೬೨). ಒಡಿವ ಏಗಂಗಳ ಬಡದಿರ ಬಾಯೊಳು ಬಡಿಗೋಲ್ಗಳನಿಕ್ಕಿ ಕಿವಿಯ ಒಡೆಮುರಿದೊಡೊಡದಱುವ ಶಬ್ದವಿಪಿನದೊಳೆದೆಗೊಂಡುದು(ಪೋಳಕ. ೦೫-೨೦೦). ಬಡಿಕೋಲ್: ನಾಲಿ ನೇಣ್ ಬಡಿಕೋಲ್ ಬಲೆ . . . ಇದಿರೊಳ್ ಬರಕಾಣಲುಮಾಗದು (ಕೋಳಕೋಹ. ೦೨-೦೦); ಬಡಿಕೋಲಂ ಸಮಮಾಡಲಕ್ಕುಂ . . . ಕಡುಮುಳಿಯಾರ್ಪ ಹಿತ ಕೇಳ್ವನೇ (ಸೋಮಪೇಶ. ೯೯); ತಿರುಗೆ ತಿರುಗುತ್ತುಂ ಸಂಗಡಿಸಿ ಪರಿದುಬುಱುತುತ್ತುಂ ಬಡಿಕೋಲಿಂದಿಟ್ಟನಧಿಕಬಲನಾಮೊಲನಂ (ಗಿರಿಜಾ. ೦-೫೭). ಬಡಿಕೋಲು : ಚಾಳಿಸಿದ ಹದವಿಲ್ಲುಗಳ ಬಡಿಕೋಲುಗಳ ಬೇಟೆಗಾಱರು ಬಳಸಿದರು ಶಿವನ (ಕುಮಾ. ೩-೩೩) ; ಭ್ರೂಲತೆಯ ಹದವಿಲ್ಲುಗಳ ಹೊಳೆವಾಲಿಗಳ ಹೊದೆಗೋಲುಗಳ ನೇಳತೋಳ ಬಡಿಕೋ[ ಪಾಠಾಂ. ಗೋ]ಲುಗಳ . . . ಬೇಟೆಕಾತಿಯರ್ಹೈದಿದರು ಪವನ (ಕೋರಿಶಾ. ೦-೩-೯೯); ಓಡಿ, ತಡೆಗಟ್ಟಿ; ಬಡಿಕೋಲನಿಡಿ! (ಹಂದ್ರಿಕ. ೨೮-೩). ಬಡಿಗೋಲು : ಮನಸಿಜನ ಬಡಿಗೋ[ ಪಾಠಾಂ. ಕೋ]ಲೋ ಶಿವನು ಸೂಡಿರ್ದ ಚಂದ್ರನ ಭಾಗವೋ . . . ಎನಲರ್ಧಚಂದ್ರನಂ ಬಿಟ್ಟೆಸು ಪೊಡೆದಿರ್ದು ಕಾವ್ಯಂಗಳೊಳಗೆ (ಹಕಾಬ. ೩-೬೨); ಗುಬ್ಬಿಯವರೂ, ಬಡಿಗೋಲಿನವರೂ, ಹಣೆವಟ್ಟದ ದೊಣ್ಣೆಯವರೂ, ಸಿದ್ಧವಾಗಲಿ (ಶಲಿಜಾ. ೩). [ ಬಡಿ$_1$ + ಕೋಲ್$_1$ ]

ಬಡಿಗೋಲು 'ಬಡಿಗೋಲ್' ನೋ.

ಬಡಿನ 'ಬಡಿನ' ನೋ.

ಬಡಿತ (ನಾ). ಹೊಡೆಯುವಿಕೆ; ಏಟು; ಪೆಟ್ಟು: ಬಸಿವ ನೆತ್ತರ ಬಾಳ್ವೆಯೊಳ್ ಬಡಿತ ಕಡಿತಗಳನೆಸಗಿದವನಲ್ಲ (ಶಾಂತೀಶ. ೦೬೨-೩೯೯); ಅವರ ತಲೆ ತಬಲೆಯ ಬಡಿತಕ್ಕೆ ಸರಿಯಾಗಿ ತೂಗುತ್ತಿತ್ತು (ಅಮೋಘ. ೦೬೬). 'ಬಡಿತಂಗಾಸಂ' ಪರಾ. [ ಬಡಿ$_1$ + _ ತ$_2$ ]

ಬಡಿತಂಗಾಸು (ಕ್ರಿ). (ಲೋಹವನ್ನು) ಬಡಿಯುವುದಕ್ಕೆ ಹದವಾಗುವಂತೆ ಕಾಯಿಸು, _ಬಿಸಿಮಾಡು: ಚಾಟೆವಾಟ ತಿದಿಯುಗಿವರುಂ

ಮಿಡುಮಿಡುಕಿ ಬಡಿತಂಗಾಸುವರಂ [ ಪಾಠಾಂ. ಬಡಿತಂಗೊಂಡು ಕಾಸಿ ಸುಡುವರಂ] ನೋಡೆನೋಡೆ ಕಣ್ಗಳಂ ಮಿಾಂಟುವರಂ (ಆದಿಪು. ೩-೯೩೪); ಸುಜ್ಜುಸುಜ್ಜನೆ ಬಡಿತಂಗಾಸುವುದುಂ ಕರ್ಕಶಕ್ಷಾರವಾರಿಯಂ ತಂದು ಸಜ್ಜಸಜ್ಜನೆ ಪೂಸುವುದುಂ (ಸುಕುಮಾ. ೧೦-೯೭ ವ). [ಬಡಿತ + ಕಾಸು₁]

**ಬಡಿತಂಗೊಳ್** (ಕ್ರಿ). ಪೆಟ್ಟುಹಾಕು ; ಏಟುಹೊಡೆ: ಚಾಟಿವಾಟಿ ತಿದಿಯುಗಿವರಂ ಮಿಡುಮಿಡುಕಿ ಬಡಿತಂಗೊಂಡು ಕಾಸಿ ಸುಡುವರಂ [ ಪಾಠಾಂ. ಬಡಿತಂಗಾಸುವರಂ ] (ಆದಿಪು. ೩-೬೩ ವ). [ಬಡಿತ + ಕೊಳ್₁]

**ಬಡಿದಂಟು** (ನಾ). ಕೋಲಿನಂತಿರುವ ಕಾಂಡ ; (ಗರಿಗಳಿಲ್ಲದೆ) ಬರಿದಾಗಿರುವ ಕಡ್ಡಿ : ಗೊಡ್ಡಮ್ಮೆಯ ಮುಂದೆ ಬಡಿದಂಟು ಒಗೆದಂತೆ ಗಿರಾಕಿಗಳ ಮುಂದೆ ಒಂದೆರಡು ಪತ್ರಿಕೆಗಳನ್ನು ಅವರು ಒಗೆದಿರುತ್ತಾರೆ (ಗಾಳಿ. ೩೩). [ಬಡಿ₃ + ದಂಟು]

**ಬಡಿನ**, ಬಡಿಣ (ನಾ). ಬಡಿಸಿದುದು; ಆಹಾರ; ಎಡೆ: ಬಳಾರಿಗಿತ್ತ ಬಡಿನಂ ಹಾರ್ದಿಕದ ಹರ್ದಿರ್ಂಗೆ ಬಿರ್ದರ್ ವೃಕಕ್ಕೆತ್ತಿದ ಬುತ್ತಿಯೆಂದೊಡ ಹಿತರ್ ಮೆಯ್ದೋಜ ಮಾಜಾಂಪರೇ (ಮುಂಶಾಸ. X. ೨೨೩-೩೦ ; ೧೨೦೬); ಅವಯವುಪದಿನೆಯ್ದಿ ಬಲವುಂ ಜವಂಗೆ ಬಡ್ಡಿಸಿದ ಬಡಿನವಿುನೆ ಶರಹತಿಯಿಂ ತವೆ ತಱಿವುತ್ತಿರ್ಪುದುಮಾ ಕುವರಂ ಶತಖಂಡಮಾಯ್ತು ತನ್ನ ಪಸ್ಯೆನ್ನಂ (ಮುಕಾಪೀ. ೧೬-೦೦೬). ಬಡಿಣ: ಬಡಿಣವುನೊಲ್ಲದಂತಿರಿಸಿ ಭಿಕ್ಷೆಕೆ ಪೋಪ ವನಂತ ಕೂಡೆ ಕೊಡೂಡನಿರುತಿರ್ಪ ಮುಕ್ತಿಸುಖಭೋಗಮನೊಲ್ಲದೆ . . . ಕೋಟಲೆಗೊಳುತ್ತಿಹರಾ ಮರುಳರ್ (ಚಕಿ. ೯೭).

[ < ಬಡ್ಡಿಸು. / ತಮಿ. ಪಟ್ಟವಪ್; ತೆಲು. ವಡ್ಡನ, ವಡ್ಡೆನ ]

**ಬಡಿಮಣೆ** (ನಾ). (ನೆಲ ಮೊದಲಾದುವುಗಳನ್ನು) ಬಡಿದು ಸಮ ಮಾಡುವ ಸಾಧನ ; ದಮ್ಮಸು : ಬಡಿಮಣೆಯಿಂದ ಬಡಿದು ಸಮ ಮಾಡಿ (ಮುಂಶಾಸ. ೯-೦೦೬). [ಬಡಿ₁ + ಮಣೆ]

**ಬಡಿವಡೆ**, ಬಡಿಹಡೆ (ಕ್ರಿ). ಹೊಡೆತವನ್ನು ಪಡೆ ; ಏಟು ತಿನ್ನು : ಊರ ಸೀರೆಗೆ ಅಸಗ ಬಡಿವಡೆದಂತೆ [ಪಾಠಾಂ. ತಡಬಡಗೊಂಬು, ಹಡಬಡಿ ಹಡೆ, ಬಡಿಹಡೆದಂತೆ] ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದೆಂದು ಮರುಳಾದೆ (ಅಕವ. ೩೦೯ ; ಗಣಾ. ೩೨-೬ ನೋ): ಮನವಿಲ್ಲದವ ಮುಟ್ಟಿ ಬಡಿವಡೆದ ತೆಱನೆನಗೆ (ಕಣ್ವರ. ಹ. ೪೪-೩) ; ವೀರವಾನರನ ಲಾಂಗೂಲದಿಂ ಬಡಿವಡೆದು ರಕ್ಕಸರ ನೆರವಿ ಹೇರಾಳದಿಂ ಪುಡಿವಡೆದು ಬಯಲಾಗೆ (ಕೈಐಶಾ. ೧೬-೪೨). **ಬಡಿಹಡೆ** : ಲೋಹಸಂಗದಿ ಕಿಚ್ಚು ಬಡಿಹಡೆದುದೆಂಬಂತೆ . . . ಬೇಹುದೊಂದಳವಟ್ಟ ಬಳಿಕ ಬಿಡಲಾಗದು (ಸಿದ್ಧರಾ. ೯-೪೦).

[ಬಡಿ₃ + ಪಡೆ₁]

**ಬಡಿವರ** 'ಬಡಿವಾರ' ನೋ.

**ಬಡಿವಲೆ** (ನಾ). ಒಂದು ಬಗೆಯ ಬಲೆ : ಪಿಡಿವಲೆ . . . ಬಡಿವಲೆ ಬಲುವಲೆಗಾಱರು ಕೂಗಿ ಬೊಬ್ಬಿಡುತಲೈದಿದರು ಮುಂಗಡೆಯ (ಸೋಮಶ. ೦೯-೦೬); ಪಿಡಿವಲೆಯ ಕಾಲ್ಗಣ್ಣಿಗಂಪಿಲ ಬಡಿವಲೆಯ . . . ಕಿ[ಪಿ]ಡಿದು ಕಾಮರ್ಮುಗಿಲಂತೆ ಕವಿದುದು ಶಬರಸಂದೋಹ (ಅಶಂಶಾ. ೩-೩-೩). 'ಬಡಿಗೆವಲೆ' ಪರಾ. [ಬಡಿ₁ + ಬಲೆ₁]

**ಬಡಿವಾರ**, ಬಡಿವರ (ನಾ). ಒಣಜಂಬ ; ಬಡಾಯಿ ; ಡಂಭ : ಬಿಡದಹಂಕಾರ ಬಲುಬಡಿವಾರದಲ್ಲಿ ಸುಖಬಡಿವೆನು ದುರುಳನಡತೆಗಳಾಚರಿಸಿ (ಸೋಕ್ಷಂ. ೦೬-೦) ; ಬಡದೆ ಮಡಿಮಡಿಯೆಂದು ಬಡಿವಾರವುಂ ಮಾಡಿ (ಮುಲ್ಲಕ. ೨-೨೨) ; ಅಟ್ಟಕ್ಕೆ ಹಾರದ ಬೆಕ್ಕು ಬೆಟ್ಟಕ್ಕೆ ಹಾರುವನೆಂದು ಬಡಿವಾರ ಕೊಚ್ಚಿಕೊಂಡಂತಾಗುತ್ತದೆ (ಚಿಕ. ೨೫೪). **ಬಡಿವರ** : ಎನ್ನೊಡನೆ ಬಂದೊಡೀಗಳೆ ಕನ್ನೆಗೆ ಪೊಕ್ಕವನನೊಲ್ಲು ತೋಱದಪಂ ನೀವೆನ್ನಂ ಬಿಡಿ ಪರಸೇವೆಯೊಳೆನ್ನರುಮೋನಾಗರೆನ್ನ ಬಡಿವರಮೇನೋ (ದಾಕು. ೯-೪೪). [← ಪಾರ. ಮರಾ. ಬಡಿವಾರ್]

**ಬಡಿವೆಱು** (ಕ್ರಿ). = ಬಡಿವಡೆ : ಬಡಿವೆತ್ತ [ಬಡವ]ನಂತೆ ಶಕ್ತಿಗೆಟ್ಟು (ರಣರೋಕು. ೦-೦೬೬) ; ಊರ ಸೀರೆಗಸಂ ಬಡಿವೆತ್ತನೆನಿಪ್ಪ ಜನದ ನಾಟ್ಕುಡಿ ನಿನಗೆ (ಜಗಂ. ೬-೬). [ಬಡಿ₃ + ಪೆಱು₁]

**ಬಡಿವೋರಿ**, ಬಡಿಹೋರಿ (ನಾ). ಹೊಡೆತ ತಿಂದುಂ ಕೆಲಸಮಾಡುವ ಎತ್ತು : ಎಂದಿನ ಕೊಂಗರ್ಗಸೆ ಬಡಿವೋರಿಗಳೀ ಪಟಗುಟಿ ಪಂದೆಗಳ್ (ಚಕಿಂ. ೩-೯೩). **ಬಡಿಹೋರಿ** : ಒಡೆಯ ಬಂಟನಿಗೆ ಬಡಿಹೋರಿಯಾದ (ವಗಮಾ. ೪. ೪೨೬-೫೭) ; ಬಗುಳುವಿವದಿರು ಹರಿಯ ಬಡಿಹೋರಿಗಳಲಾ ಜಗವಱಿಯದೇ (ಕುವ್ಯಾ.ಸ. ೦೦-೯) : ಕೊಡಗು ಕೊಂಕಣ ಕೊಂಗ ಮಲೆಯಾಳ ರಾಜ್ಯದ ಬಡಿಹೋರಿಗಳು ಮನನಡುಗಿ ಒಡನೆ ಕಾಣಿಕೆಯ ನಿತ್ಯಾನೆಯ ಸಜ್ಜಾರ ನಡುಕೇರಿಯೊಳಗೊಪ್ಪುತಿಹುದು (ಕಂಕಂ. ೬-೩೨).

[ಬಡಿ₁ + ಪೋರಿ₂]

**ಬಡಿಶ** (ನಾ). (ಮಿಾನು ಮೊದಲಾದುವುಗಳನ್ನು ಹಿಡಿಯಲು ಉಪಯೋಗಿಸುವ) ಗಾಳ ; ಕೊಕ್ಕೆ : "ಬಡಿಶವೆಂಬುದು ಮಿಾನ ಗಾಳಂ" (ಕರಾಮು. ೧೨೬-೩೯) ; ಝಷನಿಚಯಂ ಅವಿಪಲೋಭದಿಂ ಬಡಿಶಮಾಂಸವನಾಸ್ವಾದಿಸಿ ಸಿಲ್ಕಿ ಸಾವನೆಯ್ದುಗುಂ (ಕಣ್ಣಕೃ. ೩೩೦) : ಕರವೆ ಭುಕ್ತ್ಯಾಕಿಶಯಿಂ ಬಡಿಶಂಗಳೊಳ್ಕೆಡೆವ ಪಿರಿಯ ಮಿಾನ್ಗಳ ತೆಱದೆ . . . ರಾಜಸುಖಿಂದ್ರಿಯಂಗಳಿಂದಂ ಶಿವಧ್ಯಾನತತ್ಪರರೆಯ್ದೆ ರಂಜಿಸಿದರು (ಅರಾಕ. ೩-೩-೨೩) ; ಬಡಿಶಗತಝಷ ಮತ್ಸ್ಯದಂದದಿ ಕೆಡೆದು . . . ಬಿಕ್ಕೆಯ ಕಡಿದ ಪಕ್ಷಿಯ ತೆಱದೊಳಡಿಯಿಡಲಾಱದವನು (ಅಮ್ಮಕ. ೨-೬೨).

[ಸಂ.]

**ಬಡಿಸ** (ನಾ). = ಬಡಿಶ : "ಬಡಿಶಂ ಮತ್ಸ್ಯಬಂಧನಂ . . . ಅದು ಕಿಱಿದಾದಡೆ ಬಡಿಸವೆಂಬುದು" (ಶಾಶರಾ. ೦೦೦) ; ಜಲದೊಳಗಣ ನಿಮಿಷಾವಳಿ ಬಲೆಗಾಱನ ಬಡಿಸದಲಿ [ಪಾಠಾಂ. ಸರಳ್ಗೆ] ಸಿಕ್ಕಿಹ ಮಾಂಸಕ್ಕೆಳಸಿ ತನುವಳಿವ ತೆಱದಿಂ ಲಲನೆಯರ್ಗಂ ಹೇಮಭೂಮಿಗೆಳಸಲ್ ಕೆಡುವರ್ (ಪದ್ಮಣಾ. ೩-೯೬)₃ [< ಸಂ. ಬಡಿಶ]

**ಬಡಿಸು₁** (ಕ್ರಿ). ಹೊಡೆಯಿಸಂ ; ಏಟು ಕೊಡಿಸಂ : ಸೋಕ್ಕಿರ್ದರ ಮದಮಿಂತಲ್ಲದುಡುಗದೆಂದು ಸಾಯೆ ಬಡಿಸುವಂ (ರಣರೋಕು. ೨-೬೩) : ಹೊಟ್ಟೆಯನು ಕಟ್ಟುವುದು ಬಟ್ಟೆಯಲಿ ಬಡಿಸುವದು ಕಟ್ಟಾರ ಭಂಗಬಡಿಸು ವದು ಗೇಣುದ್ದ ಹೊಟ್ಟೆ ಕಾಣಾಯ್ಕ (ಸರ್ವಜ್ಞ. ೦೯೩೩). [ಬಡಿ₁ + – ಇಸು₃]

**ಬಡಿಸು₂** 'ಬಡ್ಡಿಸು' ನೋ.

**ಬಡಿಹ** (ನಾ). ಹೊಡೆತ ; ಪೆಟ್ಟು ; ಪ್ರಹಾರ : ಬಡಿಹದ ಮಕ್ಕಳಂತೆ ಅಟಲ್ವೆಯೊಳಂ ನೀರ್ ಮುಟ್ಟದ ಕೆಂಡದಂತುಪಶಮದೊಳಂ . . . ನೆರೆದಿರ್ಪುದುಂ (ರಣರೋಕು. ೩-೦೨೩) ; ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಒಡೆಯಾಣೆಯ ಮಾಡಿ ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು (ಬಕಪ. ೨೫೦) ; ಮರ್ಕಟಂಗಳ ಬಡಿಹ ಮಾಣಸು ದೇವ (ಛಂಶಾ. ೦೩-೯). [ಬಡಿ₁ + – ಹ₂ (< – ಪ₃)]

**ಬಡಿಹಡೆ** 'ಬಡಿವಡೆ' ನೋ.

**ಬಡಿಹೋರಿ** 'ಬಡಿವೋರಿ' ನೋ.

**ಬಡು₁** (ನಾ). ಪ್ರಾಣಿಗಳ ಹೆಣ, – ಶವ : ಜಾಕಿ, ಓಬಯ್ಯ ಇಬ್ಬರನ್ನು ಜೊತೆಗೆ ಕರೆದುಕೊಂಡು ಕೋವಿಗಳೊಡನೆ 'ಬಡು' (ದನದ ಹೆಣ) ಬಿದ್ದಲ್ಲಿಗೆ ಹೊರಟನು (ಕಾಮೂರು. ೨೭೯) ; ದನವನ್ನು ಹುಲಿ ಹಿಡಿದು . . . ಬಡುವನ್ನು ಕಾಡಿಗೆ ಎಳೆದುಕೊಂಡು ಹೋಗಿ . . . ಹಳುವಿನಲ್ಲಿ ಮುಚ್ಚಿಟ್ಟಿತ್ತು (ಶುಂಕು. ೦೯೧). [ದೇ.॥ ತೆಲು. ಬಡುಗು]

**ಬಡು₂** (ನಾ). (ಸಾಮಾನುಗಳನ್ನು ಇಡಲು) ಗೋಡೆಯಲ್ಲಿ ಮುಂಚಾಚಿಕೊಂಡಿರುವಂತೆ ಉದ್ದವಾಗಿ ಕಟ್ಟಿರುವ ಕಲ್ಲು, ಸಿಮೆಂಟು, ಮರ ಮುಂತಾದುವುಗಳ ಕಟ್ಟೆ: ಸಾಮಾನು ಇಡುವ ಮೇಜು (ಅಂತಮ್ಮ

ಗಳುಳ್ಳ) ನಿಲುವು, ಬಡು, ಅಡ್ಡಣಿಗೆ (ಕಟಾಂಡ. ೩೦೪೩) ; ಅಡಿಗೆಮನೆಯ ಒಂದು ಬಡುವಿನ ಮೇಲೆ ಕಂಚಿನ ಗೌರಿಯ ಪ್ರತಿಮೆಯೊಂದಿತ್ತು (ಹೂಚಟ್ಟು. ೬೦).

**–ಬಡುಕ** '–ಬಡಿಕ' ನೋ.

**ಬಡುಗುಲಿ** (ನಾ). (?) : ಪಾತಕಜೀವಂಗಳ್ ಎಳ್ಳಿನಂತೆ ಗಾಣಕ್ಕೆ ವಂದು . . . ಮಣ್ಣುಳ್ಳಲ್ಲದೊಕ್ಕಲಂತೆ ಬಡುಗುಲಿಗೆ ವಂದು . . . ತಿಙ್ಗನೆ ತಿರುವವು (ಕರ್ಣಾಟ್ಟು. ೩-೬೬). [?]

**ಬಡೇಜಾವು** (ನಾ). (ಉಕ) ಒಣಜಂಬ ; ಡೌಲು ; ಬಡಾಯಿ : ಆತನ ಶಾಸನ ಮಾಡುವುದು ಒತ್ತಟ್ಟಿಗೆ ಉಳಿದು, ಆತನ ಬಡೇಜಾವು ನಡೆದರದೆ ! (ಭ್ರತ. ೦೩೬) ; ಆ ಸಣ್ಣ ಹುಡುಗನ ಮುಂದೆ ಯಾಕ ನಿನ್ನ ಬಡೇಜಾವ (ಚಿಚಕ. ೩೦). [ ← ಮರಾ. ಬಡೇಜಾವ್, ಬಡೀಜಾವ್ ]

**ಬಡೇಸೋಪು** (ನಾ). ಜೀರಿಗೆ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ ಮತ್ತು ಅದರ ಬೀಜ : ಗೊರಟೀಜೇರು, ಹಸರಾಣಿ, ಬಡೇ ಸೋಪು ಇವು ಯಾವಾಗಲೂ ಹಸಿಯವೇ ಉಪಯೋಗಿಸಲ್ಪಡಬೇಕು (ಗೃಶಪ್ಯ. ೨). [←ಹಿಂ. ಬಡೀಶೋಫ್; ಮರಾ. ಬಡೀಶೇಪ್, ಬಡೀಶೋಪ್]

**ಬಡ್ಡ** (ನಾ). ತಿಳಿಗೇಡಿ ; ದಡ್ಡ ; ಮಂದಮತಿ : ದುಡ್ಡು ಕೊಟ್ಟಣ್ಣಾನು ಬಡ್ಡನಾಗುವನಯ್ಯ ಬಡ್ಡಿಗೆ ಬಡ್ಡಿ ಗಂಟಿಕ್ಕಿದಾ ಹಣವು ದೊಡ್ಡರಾಯನ ಪಾಲು (ಜಾಂಸಂ. ೬೪-೫೦) ; ಅಡ್ಡೇಟು ತಗಲಿದರೆ ಬಡ್ಡನಾದರೂ ಗೆದ್ದಾನು (ಗಾದೆ). [ಬಡ್ಡು₀ + –ಅ₁. / ತುಳು. ಬಡ್ಡ]

**ಬಡ್ಡಗಿ** 'ಬಡಗಿ' ನೋ.

**ಬಡ್ಡಗಿವಾಳ** (ನಾ). ಮರಗೆಲಸವನ್ನು ಮಾಡುವವನು ; ಬಡಗಿ : ಮಾಳಿಗಾವುಣ್ಣ ಜಕ್ಕೋಜಗೆ ಕಮ್ಮಟವಾಳ ಕೊಟ್ಟ ಕಯಿ ಮತ್ತ ೫ ಬಡ್ಡಗಿ ವಾಳ ಬಿಕ್ಕೋಜಗೆ ಕೊಟ್ಟ ಮತ್ತ ೫ (ಶಾಇ-IX–1, ೦೨೩–೨೬ ; 1059). [ಬಡ್ಡಗಿ (< ಬಡಗಿ) + –ವಾಳ₃ ( <–ವಳು]

**ಬಡ್ಡಿ₁** 'ಪೊಡ್ಡಿ₁' ನೋ.

**ಬಡ್ಡಿ₂**, ವಡ್ಡಿ, ವಿಡ್ಡಿ (ನಾ). ೧. ಹೆಚ್ಚಳ; ಆಧಿಕ್ಯ: ವಿಭೂತಿಯು ಬಡ್ಡಿಗನ್ನಕ ಬದುಕಿದನು (ಕುಚ್ಛಾಸ. ೦೨-೯೩). 'ಬಡ್ಡಿವಡೆ' ಪರಾ. ೨. ಸಾಲವಾಗಿ ಕೊಡುವ ಅಥವಾ ಪಡೆಯುವ ಹಣದ ಮೇಲೆ, ಪಡೆಯುವ ಅಥವಾ ತೆರುವ ಹೆಚ್ಚಿನ ಹಣ ; ವೃದ್ಧಿ : ಕಡನುಂ ಬಡ್ಡಿಯುಮೆಂದವಳೊಡಮೆ ಯನವಳೇಯಿ ಕೊಳ್ಗೆ ಪುಸಿಸಾಲಕ್ಕಂ (ಜುಚ. ೦೦-೬೩) ; ಕಾಸಿಗೆ ವೀಸವ ಬಡ್ಡಿ ಗಳಿಸಿಕೊಂಡು ಶೇಷಗಿರಿಯ ಮೇಲೆ ವಾಸವಾಗಿದ್ದೇನೆ (ಭುಕಂಡ. ೨-೬೨-೧) ; ಇವೊತ್ತು ನಿನ್ನ ಸಾಲವನ್ನೆಲ್ಲಾ ಬಡ್ಡಿಸಹಿತವಾಗಿ ತೀರಿಸಿಬಿಡುತ್ತೇನೆ (ಚಚಾ. ೨೯೬). ವಡ್ಡಿ : ೨. ನೀನೂ ತೆಱುವ ಸಿದ್ದಾಯ ಎರಡು ಹಣ ಯಿಾ ಪೂಣ್ಯಗಳ ಬೆವ್ವಳಿಯು ವಡ್ಡಿ × × × ಗವುಡ ಸುಂಕ ಮಗ್ಗ...ಸರ್ವಮಾನ್ಯವಾಗಿ (ಎಕ. X. ಮುಳಬಾ. ೨೦–೨ ; 1468) ವಿಡ್ಡಿ : ೧. "ವಿಡ್ಡಿ (ವದ್ದಿ), ವೃದ್ಧಿ=ಏಳಿಗೆ; ಹೆಚ್ಚಳ" (ಶಬ್ದಕೋ. ೯೦); ಮತ್ತ ಕೃತ್ಯಂ—ಖುದು—ರಿಜು...ವೃದ್ಧಿ—ವಿಡ್ಡಿ, ಶೃಂಗಾರ—ಸಿಂಗಾರ (ಕಚುಡ. ೨೬೮ ಪ್ರಯೋ).

[< ಪ್ರಾ. ವುಡ್ಡಿ. /ಸಂ. ವೃದ್ಧಿ. /ತಮಿ. ಮಲ. ವಟ್ಟಿ ; ತುಳು. ಬಡ್ಡಿ ; ತೆಲು. ವಡ್ಡಿ]

**ಬಡ್ಡಿಕಾಱ** (ನಾ). ಬಡ್ಡಿ ವ್ಯವಹಾರವನ್ನು ಮಾಡುವವನು : ಬಡ್ಡಿ ಕಾಱನಂತೆ ಒಂದು ಕೊಟ್ಟು ಎರಡು ಪಡೆವ ಜಡಜೀವಿಗಳ ಭಕ್ತರೆನ ಬಹುದೇನಯ್ಯ (ಅಂಕೀ. ೬೩-೯೯). [ಬಡ್ಡಿ₂ + – ಕಾಱ]

**ಬಡ್ಡಿಗುಡು** 'ಬಡ್ಡಿಗೊಡು' ನೋ.

**ಬಡ್ಡಿಗೊಡು**, ಬಡ್ಡಿಗುಡು (ಕ್ರಿ). ೧. ವೃದ್ಧಿಯಾಗು ; ಬೆಳೆ : ಒಡ್ಡಿದನು ಕರತಳವನಗಲಿ ಬಡ್ಡಿಗೊಡುವ ವಿಷಾನಲಾಗ್ರುವನಡ್ಡವಿಸಿ ಘಡ ಹೋಗದಿರು ಹೋಗದಿರು ನಿಲ್ಲೆನುತ ಖಡ್ಡಿಸುತ (ಜಭಾಗ. ೯-೬-೯೯). ೨. ಬಡ್ಡಿಯನ್ನು ಸಲ್ಲಿಸಬೇಕೆಂಬ ಕರಾರಿನಿಂದ ಸಾಲ ಕೊಡು; ಬಡ್ಡಿ ವ್ಯವಹಾರ ಮಾಡು : ತನ್ನ ನಡಯಿಸಿದ ಬಳಿಕನ್ನಿಂದುವರ ಬಡ್ಡಿಗೊಟ್ಟು ವೆಚ್ಚಿಸಿ ಪೊನ್ನಂ . . . ಶ್ರೀಸಾನ್ನಿಪಟ್ಟ ಪರಿರಕ್ಷಿಸಿದಂ (ಶಾಇ. XX. ೨೩–೪೨ ; 1082); ಹರದನ ಬಡ್ಡಿಗೊಟ್ಟೊಡವೆ ರಾಜಕುವರನ ತೇಜದೇಟ್ಗೆ ನಾಣ್ಬರುದಿನ ಚಿತ್ರವಿದ್ದ (ಅಕಂಪ. ೬-೯೯) ; ಆ ಕುಸೀದಕನು . . . ವೃದ್ಧ್ಯಾಜೀವನೆನೆ ಬಡ್ಡಿ ಗೊಡುವವನಕ್ಕುಂ (ಜುಂಗಾ. ೦೦೨-೦). ೩. ತೆಗೆದುಕೊಂಡ ಸಾಲದ ಹಣಕ್ಕೆ ಬಡ್ಡಿಯನ್ನು ತೆರು. ಬಡ್ಡಿಗುಡು : ೨. ದ್ವೈಗುಣಿಕಃ . . . ಕುಸೀದಕಃ – ಈ ೪ ಬಡ್ಡಿಗುಡುವವಂ (ಹಚಾಡು. ೯೬-೯೦೬) ; ಹತ್ತೆಂಟು ಪಣಮಂ ಕಡಂಗೊಟ್ಟು ಬಡ್ಡಿಗುಡುಗಂ (ಶಾಸ್ತ್ರಚು. ೯೯-೬).

[ಬಡ್ಡಿ₂ + ಕೊಡು₁]

**ಬಡ್ಡಿಗೊಳ್** (ಕ್ರಿ). ಬಡ್ಡಿಯ ಹಣವನ್ನು ಪಡೆ : ಸಾಲವಿತ್ತಯದೆ ಬಡ್ಡಿಗೊಳ್ವೆನೆಂಬ [ಪಾಠಾಂ. ಸಾಲಿಸದೆ ಬಡ್ಡಿವೇಟ್ಕೆಂಬ]. . . ಮರುಳನಂತೆ (ಕರ್ಣಾಟ್ಟು. ೦೨–೨೯) ; ಕಡಗೊಂಡನೊ ಬಡ್ಡಿಗೊಂಡನೊ (ಶಬ್ದರ. ೦೬೬ ಪ್ರಯೋ). [ಬಡ್ಡಿ₂ + ಕೊಳ್₁]

**ಬಡ್ಡಿಮಗ** 'ಪೊಡ್ಡಿ' ಪರಾ.

**ಬಡ್ಡಿಯಿಕ್ಕು** (ಕ್ರಿ). ಬಡ್ಡಿಯನ್ನು ಕೊಡು : ಬಡ್ಡಿಯಿಕ್ಕುವಂ ಮೊದಲಂ ಕೊಟ್ಟು ಪತ್ರಮಂ ಸೀಳಿಸುವಂತೆ (ಕರ್ಣಾಟ್ಟು. ೦೯–೦೦೯). [ಬಡ್ಡಿ₂ + ಇಕ್ಕು]

**ಬಡ್ಡಿಯುಣ್** (ಕ್ರಿ). ಬಡ್ಡಿವ್ಯವಹಾರದಿಂದ ಜೀವಿಸು : ಕುಸೀದನೆನೆ ಬಡ್ಡಿಯುಂಬಂ (ಜುಂಗಾ. ೦೦೨-೦). [ಬಡ್ಡಿ₂ + ಉಣ್]

**ಬಡ್ಡಿವಡೆ** (ಕ್ರಿ). ಹೆಚ್ಚಾಗು; ಅಧಿಕಗೊಳ್ಳು: ಆ ಧಾತುವಿನ ಮೂಲಾರ್ಥವೇನೆಂಬುದನ್ನರಿತರೆ, ಬಡ್ಡಿವಡೆಯುತ್ತಾ ಬಂದ ಮತ್ತಿನ ಪದಗಳ ಹೊಲಬು ತಾನಾಗಿ ಕಂಗೊಳಿಸಬಹುದು (ಶಾಬೋಚ. ೩೩೬). [ಬಡ್ಡಿ₂ + ಪಡೆ₁]

**ಬಡ್ಡಿವೇಡು** (ಕ್ರಿ). ಬಡ್ಡಿಯನ್ನು ಅಪೇಕ್ಷಿಸು.–ಬಯಸು : ತನ್ನಂ ತಪದಿಂ ನೋಯಿಸದುನ್ನತಿಯಿಂ ದಿವ್ಯಭೋಗವಂ ಬಯಸುವ ಗಾಂಪಂ ನೆಱೆ ಪೋಲ್ಕುಂ ಸಾಲಿಸದಿನ್ನೆಳಿಪಿಂ ಬಡ್ಡಿವೇಡಿ ಮಱುಗುವ ಮರುಳಂ (ಕರ್ಣಾಟ್ಟು. ೬–೦೩೬). [ಬಡ್ಡಿ₂ + ಬೇಡು₁]

**ಬಡ್ಡಿಸು**, ಬಡಿಸು₂ (ಕ್ರಿ). ಊಟಕ್ಕೆ ನೀಡು.—ಹಾಕು; ಉಣಬಡಿಸಂ: ಈತಂಗೆ ನೀಂ ಬಸಿಱ್ ತೀವೆ ಬಡ್ಡಿಸದಿರ್ (ಶಬ್ದಾಶಾ. ೬೬-೬); ಮಾಳತಿಕೆಯಂ ಬಡ್ಡಿಸಲುಮುತ್ತಳಿಕೆಯಂ ಕೈಘಟ್ಟ ನೀಡಲುಂ . . . ಪೇಟ್ವಾಗಳ್ (ಅಂಪು. ೬–೨೦ ಪ) ; ಬಡ್ಡಿಸಿದಿಡ್ಡಲಿಗೆಯ ಮುಂದೆ ಕುಳ್ಳಿರ್ದು . . . ಉಂಬುವ ಕಾರ್ಯವ ಬಿಟ್ಟು ದೊಡ್ಡಕಾರ್ಯವನೆಣಿಸಿದಿರಿ (ವೀಬಸಂ. ೨೩–೨೬೩). ಬಡಿಸು₂: "ಬಡಿಸು – ಓಲಗಕ್ರಿಯಾಯಾಂ (ಊಟಕ್ಕೆ ಬಡಿಸು)" (ಕಪಾಠ) ; ನೆಟ್ಟನೆ ತಾಂ ಸವಿಯೊಳೊಂದಿರ ಭೋಜನವಮನುಟ್ಟು ಬಡಿಸು ನಾವಮಱಯದೆನಸುಂ ಸವಿಯಂ (ಕಶಾ. ೨-೦೯೬); ಅನಂತಕಾಲ ಮಾಡುವ ಲಿಂಗಪೂಜೆಯು ಒಂದು ದಿನ ಬಡಿಸಿದ ಜಂಗಮವಾತೃಪ್ತಿಗೆ ಸರಿಯಲ್ಲ (ಶಶ್ರವ. ೪. ೩೬೦–೦೦೯೨) ; ಘಡ ತೊಲಗು ಪಪಮಾನಿಸುತ ನಿನ್ನೊಡಲನೀ ಶಾಕಿನಿಯ ಬಳಗಕೆ ಬಡಿಸುವೆನು (ಕುಚ್ಛಾದ್ರೋ. ೦೩–೬೨).

[ದೇ.॥ ತಮಿ. ವಟ್ಟಿ ; ತುಳು. ಬಳಸು ; ತೆಲು. ವಡ್ಡಿಂಚು]

**ಬಡ್ಡು**, ಬೊಡ್ಡು (ನಾ). ೧. ಮೊಂಡು ; ಹರಿತವಿಲ್ಲದುದು ; ತೀಕ್ಷ್ಣತೆಯನ್ನು ಕಳೆದುಕೊಂಡಿರುವುದು : 'ಬಡ್ಡುಗಟ್ಟು' ಪರಾ. ೨. ಮಸುಕಾಗಿರುವಿಕೆ ; ಕಾಂತಿಹೀನತೆ : 'ಬಡ್ಡುಹಿಡಿ' ಪರಾ. ೩. ತಿಳಿಗೇಡಿ ; ಬುದ್ಧಿಯಿಲ್ಲದ ವ್ಯಕ್ತಿ : ಮಱಿಯೊಳಗೆ ಮೃಗರದ ವೀರರಂ ಸಂಹರಿಸುತ ಬಡ್ಡು ಬಣಗುಗಳನೋಡಿಸಿ . . . ಪುರವನೊಳ ಪೊಗುತ್ತಿದ್ದರು (ಕಂಪ. ೯೨–೨೬) ; ಕಲಿಯಲಿಕ್ಕೆ ಸ್ವಲ್ಪ ಬಡ್ಡು. ಅವಳು ಶಾಲೆ ಬಿಟ್ಟು ಎರಡು ವರ್ಷವಾಯಿತು (ಗೋದಾಸಿ. ೬೯.) (ಗಂ). ೪.

ಮೊಂಡಾದ; ಹರಿತವಿಲ್ಲದ: 'ಬಡ್ಡುಗತ್ತಿ' ಪರಾ. ೫. ಮಸುಕಾದ; ಮಂಕಾದ: ಕಾಂತಿಹೀನವಾದ: ಮೊಳಕಾಲಿನವರೆಗಿನ ಕೊಳಕುವಂಚೆ, ತಲೆಗೆ ಸುತ್ತಿದ್ದ ಬಡ್ಡು ಕಂಬಳಿ ವಸ್ತ್ರ (ಮಲೆಮ. ೯೮). ೬. ತಿಳಿಗೇಡಿಯಾದ; ದಡ್ಡತನದಿಂದ ಕೂಡಿದ: ಅವನೊಬ್ಬ ಬಡ್ಡು ಮನುಷ್ಯ. ಅವನಿಗೆ ಯಾರ ಮಾತೂ ಪಥ್ಯವಾಗುವುದಿಲ್ಲ (ಲೋಕ). **ಬೊಡ್ಡು**: ೧. ಚಕ್ರವು ತೀರ ಬೊಡ್ಡಾದುದರಿಂದ ನೀರಿನ ಶಕ್ತಿಯು ಎಷ್ಟೋ ವ್ಯರ್ಥವಾಗುತ್ತಿತ್ತು (ಕಾಂಕ್ರ. I. ೯೦); ಬಾಕಿ ಯಾವುದರಲ್ಲಿ ಬೊಡ್ಡಾದರೇನು. ಇಂತಹ ವಿಷಯಗಳಲ್ಲಿ ಮಾತ್ರ ನಮ್ಮ ಜನರ ಕಲ್ಪನಾಶಕ್ತಿ ಹರಿತ ಅಲ್ಲವೆ! (ಮೂಕಿಬಿದಾ. ೦೯೦); ಹಾರೆ ಮೋಟು, ಗುದ್ದಲಿ ಬೊಡ್ಡು, ಗೈಯುವವನಿಗೆ ಒಕ್ಕೈ (ಗಾದೆ). ೭. ಒರಟು: ನಾಜೂಕಿಲ್ಲದುದು: ಅವರ ಕೆಲಸಗಳೆಲ್ಲ ಬೊಡ್ಡು (ಕಾಂಕ್ರ. II. ೬೦೦). ೮. ಒರಟಾದ: ನಾಜೂಕಿಲ್ಲದ: ಉಳುವುದನ್ನಾಗಲಿ, ನೇಯುವುದನ್ನಾಗಲಿ, ಬಲು ದೊಡ್ಡ ಉಪಕರಣಗಳಿಂದ ಪೂರೈಸುವರು (ಕಾಂಕ್ರ. II. ೬೦೦).

[ದೇ. ೩ ತುಳು. ಬಡ್ಡ್]

**ಬಡ್ಡುಕುದುರೆ** (ನಾ). ಚುರುಕಿಲ್ಲದ ಕುದುರೆ: ಬಡ್ಡುಕುದುರೆಗೆ ಬಡಿತವೇ ಮದ್ದು (ಗಾದೆ). [ಬಡ್ಡು + ಕುದುರೆ]

**ಬಡ್ಡುಗಟ್ಟು** (ಕ್ರಿ). ಮೊಂಡಾಗು; ತೀಕ್ಷ್ಣತೆಯನ್ನು ಕಳೆದುಕೊಳ್ಳು: ತನ್ನ ರಾಜನೀತಿಯ ಭೇದೋಪಾಯದ ಕನ್ನದ ಮೊನೆ, ಬಡ್ಡುಗಟ್ಟುತ್ತಾ ಬರುವುದು ಅವನಿಗೆ ಗೊತ್ತಾಗದಿರಲಿಲ್ಲ (ಶಾಕಿಗಸು. ೦೦೨).

[ಬಡ್ಡು + ಕಟ್ಟು₁]

**ಬಡ್ಡುಗತ್ತಿ**, **ಬೊಡ್ಡುಕತ್ತಿ** (ನಾ). ಮೊಂಡುಕತ್ತಿ: ಹರಿತವಿಲ್ಲದ ಕತ್ತಿ: ಬಡ್ಡುಗತ್ತಿಯಲಿ ಹುಡುಗರ ತಲೆಯ ನೀನಡ್ಡಾದಿಡ್ಡಿಯಲಿ ಕೆರೆವೆ (ಜ್ಞಾಪಕ. ೦೩-೦೩). **ಬೊಡ್ಡುಕತ್ತಿ**: ಎಳಚಿತ್ರಾಯರು . . . ತುರಿಸುತ್ತಿದ್ದ ಕಾಲಿನ ಮಾಂಸಖಂಡಗಳನ್ನು ಕೈಯ ಬೊಡ್ಡುಕತ್ತಿಯಿಂದ ಹರೆದುಕೊಂಡರು (ಹಾಬೆ. ೩೩). [ಬಡ್ಡು + ಕತ್ತಿ]

**ಬಡ್ಡುಹಿಡಿ** (ಕ್ರಿ). ನಯವಿಲ್ಲದೆ ಕಾಂತಿಯನ್ನು ಕಳೆದುಕೊಳ್ಳು,— ಮಂಕಾಗು: ಬಡ್ಡುಹಿಡಿದು ಕೆದರಿದ್ದ ಕೂದಲನ್ನು ಮಾಯಿಸಿ ಎಣ್ಣೆ ಕಾಣಿಸಿ ಬಾಚಿ ಸರಿಮಾಡಿದ್ದಳು (ಮಲೆಮ. ೬೦).

[ಬಡ್ಡು + ಹಿಡಿ₁ (< ಪಿಡಿ₁)]

**ಬಡ್ತಿ** 'ಬಡತಿ' ನೋ.

**ಬಣ₁** (ನಾ). ಶೂನ್ಯತೆಯನ್ನು ಕುರಿತಂತೆ ಬಳಸುವ ಅನುಕರಣಶಬ್ದ: 'ಬಣಗುಟ್ಟು' ಪರಾ.

ಬಣಬಣ (ದ್ವಿರುಕ್ತಿ): ಮದುವೆಗೆ ಬಂದ ನೆಂಟರೆಲ್ಲಾ ಹೊರಟು ಹೋದಮೇಲೆ ಮನೆ ಬಣಬಣ ಎನಿಸುತ್ತಿದೆ (ಲೋಕ).

**ಬಣ₂** 'ಬಣ್ಣ' ನೋ.

**ಬಣ₃** (ನಾ). ಒಂದು ದೇಶದ ಹೆಸರು: ಸೇನನ್ನ ಕಬಣೋಭಯದೇಶದಾ ವೀರಾಪುರುಷ ಸಮುಕ್ಷದೆ ಕೇಕಯ ಪಲ್ಲವರಂ ಕಾದೆಱದು ಪೆರ್ಮಜಯನಾ ವಿಜಅರಸನ್ನ . . . ಕೊಟ್ಟಾರ್ (ಪ್ರಮಿಕ. ೦೯೩೩. ೭೩-೦೦; ಸು. 450). [?]

**ಬಣಂಜ** 'ಬಣಜ' ನೋ.

**ಬಣಂಜಿಗ** 'ಬಣಜಿಗ' ನೋ.

**ಬಣಂಜಿಸು** 'ಬಣಜಿಸು' ನೋ.

**ಬಣಂಜು** 'ಬಣಜು' ನೋ.

**ಬಣಂಜುಧರ್ಮ** (ನಾ). ೧. ವರ್ತಕರ ಧರ್ಮ: ಬಣಂಜುಧರ್ಮಮನೆ ಪಾಳಿಸಿ ಭೀತರನೆಯ್ದೆ ಕಾದು ನಿರ್ಮ್ಮಳತರಕೀರ್ತ್ತಿಯಂ ಪಡೆದಲಾಪ್ಪರ್ಗಡಿ ಪೆಣ್ಣಲ ಸಟ್ಟಿಕವ್ವೆಯೊಳ್ (ಕ್ಷಿ. IV. ೦-೩೯; 1204). ೨. ವರ್ತಕರ ಧರ್ಮವನ್ನು ಪಾಲಿಸುವವನು: ಉದಗ್ರಪುಣ್ಯರಾದರಿತವಿಶಿಷ್ಟರೆಂಬುದಿದು ಸಂಸ್ತುತಿಯಲ್ತು ಬಣಂಜುಧರ್ಮ್ಮರ (ಎಕ. VII. ಶಿಕಾ. ೦೦೯-೩೬; 1181). [ಬಣಂಜು (<ಬಣಜು) + ಧರ್ಮ]

**ಬಣಂಜುಪಟ್ಟಣ** (ನಾ). ವ್ಯಾಪಾರ ನಡೆಯುವ ನಗರ; ವ್ಯಾಪಾರ ಕೇಂದ್ರ: ಮಲ್ಲಿಸೆಟ್ಟಿಯರು ಮುಂನಂ ಶ್ರೀಮದುದನಾದಿಯ ಬಣಂಜುಪಟ್ಟಣಂ ಕಾಬುಪ್ಪೆಟ್ಟದಲು . . . ಸಮಸ್ತಶಾಸನಗರ ಮುಂದಿಟ್ಟು ಕೊಂಡು (ಎಕ. XIX. ೨೩-೯೬; 1246); ಕರವೊಸೆದಿಪ್ಪ ತದ್ವಡಿಸಾಸಿರದಾ [ಬ]ಣಂಜುಪಟ್ಟಣಂ ಸಿರಿಗೆ ನಿವಾಸ ದೇಸಿಯ ಶವರ್ನೆ (ಕೂಶಾ. ೨೦-೩; 1265). [ಬಣಂಜು (<ಬಣಜು) + ಪಟ್ಟಣ]

**ಬಣಂಜುಸಮಯ** (ನಾ). = ಬಣಂಜುಧರ್ಮ ೧: ಧರೆಗೆಸೆ[ವೀ]ಬಣಂಜುಸಮಯಪ್ರತಿಪಾಳನವರ್ತಿಯಿಂದೆ ದುರ್ದ್ದರತರಮಪ್ಪ ಚಂಡಿಕೆಯ ಪೆಣ್ಣಲೆ ನಾರಿಯನಿಪ್ಪ ನಾಮಮಂ ಧರಿಯಿ(ಯಿಸಿ) (ಕ್ಷಿ. IV. ೦-೩೫; 1204). [ಬಣಂಜು (<ಬಣಜು) + ಸಮಯ]

**ಬಣಂಬೆ**, **ಪಣಂಬೆ**, **ಬಣಬೆ**, **ಬಣವೆ**, **ಬಣೆವೆ**, **ಬಳಂಬೆ** (ನಾ). ೧. (ಹುಲ್ಲು, ಮೇವು ಮುಂತಾದುವುಗಳ) ಮೆದೆ,—ರಾಶಿ,—ಒಟ್ಟಿಲು: "ಕುತ್ತಱ ಬಣಂಬೆ" (ಮೂಗಿಗಾ. ೦೦೯-೨); ಕರುಳ ಮಡೆಯುಂ ಪಿಕ್ಕಿ ಪರಪಿ ನೋಡಿಯುಂ ಪಲ್ಗಳ ಬಣಂಬೆಗಳೊಳ್ ಪರವಸಂಗೊಂಡು ಮೆಟ್ಟಿಯುಂ . . . ಎಲ್ಲಿಯುಂ ದುರ್ಯೋಧನನನಱಸಿ ಕಾಣದೆ (ಗದಾಯು. ೬-೨೮ ವ); ಪೆಣದ ಬಣಂಬೆಗಳುಂ ಕೋಟ್ಯಾದುಬಟ ಕೋಟ್ಕೆ ಸೆಱುಮಾಗುರ್ವುಪಡೆಯೆ (ಕಂದಾಮ. ೦೩-೩೯ ವ); ಪೆಣನ ಬಣಂಬೆಯೊನಡರ್ದು ಬಿಸುನೆತ್ತರ ಕಾಲನಿಬಿಡು . . . ನಲಿವ ಕಾಗೆಗೂಗೆಗಳುಂ (ಶಬಕಾ೯.೯೭-೦೩). ೨. ಹುಲ್ಲು, ಮೆದೆ ಮೊದಲಾದುವನ್ನು ಒಟ್ಟುವ ಸ್ಥಳ: ಮಂನೆಯಗೇರಿಯುಮಂ ಬಣಂಬೆಯುಮನೊಂದು ತೋಂಟಮುಮಂ . . . ಧಾರಾಪೂರ್ವ್ವಕಂ ಮಾಡಿ ಬಿಟ್ಟರು (ಕ್ಷಿ. II. ೦೯-೩೬; 1123); ಪನ್ನೆರಡು ಕೆಯ್ಯ ಬಣಂಬೆ (ಸೂಂಕಶಾ. ೦೯೯೩, ಹುಳ್ಳಿ೦. ೯-೦೦; 1195). Δ **ಪಣಂಬೆ**: ೧. ಒಡಲಿದಬಿಂದಮಂ ಬಗೆದು ನೋಟಿಸ್ಟೊಡೆ ಪೇಲ ಪಣಂಬೆ ಕುತ್ತವಿರ್ಪ್ಪದೆ (ರವಾರ್ಜು. ೩-೬೭). **ಬಣಬೆ**: ೧. ಪೆಣನ ಬಣ[ಪಾಠಾಂ. ಣಂ]ಬೆ [ಪಾಠಾಂ. ಪಳ್ಳಂ]ಗಳೊಳ್ ಕೈದುಗುತ್ತಿ ನೋಡಿಯುಂ (ಗದಾಯು. ೬-೨೮ ವ); ಮಡಿದು ಕೆಡೆದ ವೀರರ ಪೆಣದ ಬಣ[ಪಾಠಾಂ. ಣಂ]ಬೆಯಂ ಮೆಟ್ಟಿ . . . ಪೊಱಮಾಡುವಾಗಳ್ (ಅದೇ. ೬-೯೬ ವ); ದ್ರುಪದನಂದನನೆಯುಳಲ ಶಿಖಂಡಿನವಲೇ ಕುರುಕುಲದ ಕರಡದ ಬಣಬೆ ಕಾದುಬಾಹುವುದು (ಕುಭಾ೯. ೨-೩೨). **ಬಣವೆ**: ೧. ಕೊಟ್ಟದ್ದು ಬರಲಿಲ್ಲ ತಂದದ್ದು ಬಿಡಲಿಲ್ಲವೊಟ್ಟಿರ್ದ ಬಣವೆಗಳುಮೊಂದಿಲ್ಲ (ಕುಕ್ಕೀ. ೬-೯); ಯಂತ್ರದ ಮುನ್ನಡೆಗೋಸ್ಕರ ಯುದ್ಧ ಬೇಕೆನ್ನುವುದು ಅರಳಿಗಾಗಿ ಛತ್ರದ ಬಣವೆಯನ್ನು ಸುಟ್ಟ ಹಾಗೆ (ಕಿಪ್ಪಾ. ೦೬೩). **ಬಣೆವೆ**: ೧. ಬಣೆವೆಗಳ ದಹನವು ಎಲ್ಲರಿಗಿಂತ ಅರ್ಧ ತಾಸು ಮುಂಚಿತವಾಗಿ ರಾಘಪ್ಪನಿಗೆ ಗೊತ್ತಿರುತ್ತಿತ್ತು (ಗಂಕಾಯು. ೫೫). **ಬಳಂಬೆ**: ೧. ಬಳಂಬೆಯು ತೆಱ ತಳಸಾರಿಗೆ ಕಾಣಿಕೆ ಕವಣಾಯ ದಣ್ಣಾದಾಯವಿನ್ನಿ ನಿತುಮಂ . . . ಕೊಟ್ಟರ್ (ಸೌಇಇ. IX—1. ೦೬೨-೦೫; 1106); ಪಳ್ಳದೊಳಗಣ ಬಳಂಬೆಯಂತೆ ದ್ರೋಹನ ನಿತ್ತರಣೆಯಂತೆ . . . ಲೇಸಿಲ್ಲದ ಸುಬಿಕ್ಕೆ ಪಾಯಿಸಿ ನೋಯಿಸುಮಿಂದ್ರಿಯಂಗಳುಮಂ (ಕರ್ಣಾಮೃ. ೯-೨೩); ಪರ್ಬಿಣದ ಬಳಂಬೆ ಪೆರ್ಗ್ಗರುಳ ತಿಂತಿಣಿ ನೆತ್ತರ ಪೆರ್ಬೊನಲು (ಎಕ. VIII. ಸೊರಾಂ. ೦೨-೭; 1155 ?). ೨. ಬಳಂಬೆ ನಿವೇಸನಂ ಮೂಡಣ ಬೆಳದೊಳಾಗಳೆಯೊಳಗಲಂ (ಇಸಿ. XIX. ೫೬೩-೩೯; 1054); ಒನ್ದು ಮನೆಯೊನ್ದು ಬಳಂಬೆ (ಎಕ. XIII. ೩೨೦-೨೩; 1126). [ದೇ. ೩ ತುಳು. ಬಣಬೆ]

**ಬಣಕಮೆಂಡಿಗವುಂಡ** (ನಾ). ಒಬ್ಬಾತನ ಹೆಸರು (?): ಈಯಾಳದ ಬಣಕಮೆಣ್ಡಿಗವುಣ್ಡ ತಱುಗಳ್ಗೆಱ್ಗೆ ವಂದು ಏನೀವೃತ್ತಿ ಕದಿ ಸತ್ತು ಸ್ವರ್ಗ್ಗಿ

ಯದಂ (ಕ್ಪ್ಟ.ಆಂ. ೧೬೯೦. ೬೪–೧೦; ೯೬೬). [? + ಗವುಂಡ (<ಗಾವುಂಡ)]

**ಬಣ್ಣಕಾರ** 'ಬಣ್ಣಗಾಜಿ' ನೋ.

**ಬಣಗ₁** 'ಬಳಗ₁' ನೋ.

**ಬಣಗ₂** (ನಾ). ಅಲ್ಪವ್ಯಕ್ತಿ; ಕ್ಷುದ್ರ; ಹೀನ: ಬಣಗರಂದದಲೆನ್ನನೆಂದರೆ ಹಣೆಯ ಕಣ್ಣಿನ ಕಿಡಿಯ ಕೆದಱುವೆನು (ಕೃಕುೞ. ೦೩–೨೬); ಬಣಗರ ತೊಲಗ ಹೇಳೆನುತೆ ಮುಮ್ಮಡಿರಾವಣನಂತೆ ನಿಂದು ಗರ್ಜಿಸಿದ (ಕೋಹಕ. ೦೨–೯೯). [ಬಣಗು₂ + — ಅ₇]

**ಬಣಗಾರ** 'ಬಣ್ಣಗಾಜಿ' ನೋ.

**ಬಣಗು₁** (ಕ್ರಿ). ಹರಟು; ಗಳಹು (?): ಕಲ್ಲುಗೊಳ್ಳುವ ಕೆಲರು ಹಲ್ಲು ಕಿಸಿಯುವ ಕೆಲರು ಬಲ್ಲವರು ಬಲ್ಲಂತೆ ಬಣಗುತಿಹರು (ಪಪ್ಲ. ೬–೪). [<ಬಣಗು₂ ?]

**ಬಣಗು₂** (ನಾ). ೧. ಅಲ್ಪವ್ಯಕ್ತಿ; ಕ್ಷುದ್ರ; ಹೀನ: ಬಣಗಿನಂತೆ ನೇರಿತಲ್ಲದು ಬಗೆವಂದೀ ಶರೀರಂ ಕಷ್ಟಂ (ರಹರಿಚ. ೯–೦೬೩); ನಿಮ್ಮ ತಂದೆ ಕೀರ್ತಿಧರಮಹಾರಾಜಮುನೀಂದ್ರನಂ ನಿಮ್ಮ ತಾಯಿ ಬಣಗೆಂದು ಪೊಱಮಡಿಸಿದುದಕ್ಕೆ ಎನಗತಿದುಃಖಮಾದುದು (ಕೃಜ್ಞಾಸ್ರ. ೬–೬೦ ಪ); ಬಣಗುಗಳ್ ಭೀಮಾರ್ಜುನರು ಅರಣಿಕ ನೀ ನಡುವಾಯು (ಕುಷ್ಮಾಗ. ೬–೪೯). ೨. ತಿಳಿಗೇಡಿ; ಮಂದಮತಿ: ಬಣಗು ನೀನೇಟಕಟ ಭೀಮನ ಕೆಣಕಿ ಬದುಕಿದೆ (ಕುಷ್ಮಾಶ. ೨–೨೦); ಬಣಗೆ ಬೆಱತಿರದೇಳು . . . ಮಣಿದು ಬದುಕುವುದುಚಿತ (ಕೌಶಿಹ. ೯–೬); ಉಣ ಬಂದ ಜಂಗಮಕೆ ಉಣಬಡಿಸ ಲೊಲ್ಲದಲೆ ಉಣದಿಪ್ಪ ಲಿಂಗಹಣಬಡಿಸಿ. ಕೈಮುಗಿವ ಬಣಗುಗಳ ನೋಡ (ಸರಕ್ಕ. ೨೦೦). ೩. ಬಡವ; ದೀನ; ದರಿದ್ರ: ಬಚಿದ ನಾಡಿಂದ ಬಂದ ಬಣಗುಗಳಂತೆ ಮತ್ತಿಕ್ಕುವರೋ ಇಕ್ಕರೋ ಎಂದು ಒಟ್ಟಿಸಿಕೊಂಡು ತಿಂದು ಮಿಕ್ಕುದ ಬಿಸುಡುವ ಕುನ್ನಿಗಳ ಮೆಚ್ಚುವನೆ ನಮ್ಮ ಕೂಡಲಚನ್ನ ಸಂಗಮದೇವ (ಚಕ್ರಶ. ಕ. ೬೬೯–೬೯೯); ಪಣವಿಲ್ಲದೆಯುಟಮಟಿಸುವ ಬಣಗುಗಳಂ ನೆವವನಿಟ್ಟು ಬಿಟ್ಟು . . . ಪಣಮಂ ಸಾಧಿಸುವಳಾವಳವಳೇ ಪಲೆವೆಣ್ (ಅಂಧ್ಯ.ಆ. ೧೦–೬೬). ೪. ಪಿಶಾಚಿ; ಭೂತ: ಬಣಗುಗಳೊರ್ವ ಚುಪ್ಪಿಯ ಪೊಟ್ಟೆಯಂ ವಿದಾರಿಸಿ ಬಸುಱಿಳೊಳಗಿರ್ದಶನಮಂ ತೋಡಿ ತಿನುತಿರ್ಪುದಂ (ಕೃಜ್ಞಾಸ್ರ. ೯–೦೯ ಪ). (ಗು). ೫. ಕೀಳಾದ; ನಿಕೃಷ್ಟವಾದ: ಬಲವೆ ಬಲವೇ ನಿನ್ನ ಬಲವಲ್ಲದೆ ಮಿಕ್ಕ ಬಲಗಳುಂಟೆ ಬಣಗು ಗ್ರಹಗಳಿಂದ (ಕುಕಂಠ. ೨–೬ ಕಠಿಂ); ಗುಣವೆ ಭೂಷಣವಭಿಮಾನವೆ ವಸ್ತ್ರವೆಂದೆನಿಸಿ ಕೈವಿಡಿದಿಹವನಿಗೆ ಬಣಗುದೊಡಿಗೆಯಾಸೆದೋಱಬೇಡ (ಹಹ. ೦೯–೬೦). ೬. ಕೆಲಸಕ್ಕೆ ಬಾರದ; ಅಪ್ರಯೋಜಕನಾದ: ಧನುತನಗೆ ನೆಗಹಲ್ಕೆ ಕೃಷ್ಣಾಜಿನವೊ . . . ಬಣಗುವಿಪ್ರನ ನೆಸಹ ನೋಡಿರೆ (ಕುಷ್ಮಾಆ. ೦೩–೦೬); ಭೂರಿಭುವನದ ಬಹಳ ಭುಜಬಲಧಾರಕರು ನಾವೀ ನೆಲೆಗೆ ನವಗಾರು ಸರಿ ನಾವಂಜಲೇಕೀ ಬಣಗುಭೂಪತಿಗೆ (ಕೋರಂಚ. ೬–೦–೩೦). 'ಬಿನಂಗು₁' ಪರಾ. [ದೇ.ಕ. / ಮರಾ. ಭಣಗ, ಭಣಂಗ]

**ಬಣಗುಕವಿ** 'ಬಣಗುಗವಿ' ನೋ.

**ಬಣಗುಗವಿ, ಬಣಗುಕವಿ** (ನಾ). ಅಸಮರ್ಥನಾದ ಕವಿ; ಕುಕವಿ: ಭಂಡಗವಿ ಬಣಗುಗವಿಗಳ ಕೊಂಡುಂ ಕೊನೆದೂಱುತಿರ್ಪ ಕುಕವಿಗಳಂ ತಾಂ ತೊಂಡರನೆ ಸರಿಯೆನಿಪ್ಪನೆ ಚಂಡಾಲರ ನೋಡಿ ನಗುವ ಕವೀಂದ್ರಂ (ಚಂಕೋಂಚಾ. ೦–೨೯ ಅಶಿ). **ಬಣಗುಕವಿ**: ಬಣಗುಕವಿಗಳ ಲೆಕ್ಕಿಪನೆ . . . ಕವಿ ಕುಮಾರವ್ಯಾಸ (ಕುಷ್ಮಾಆ. ೦–೦೬) [ಬಣಗು₂ + ಕವಿ₁]

**ಬಣಗುಟ್ಟು** (ಕ್ರಿ). ಬರಿದಾಗಿ ಕಾಣು; ಶೂನ್ಯವಾಗಿ ತೋರು: ಒಂದಾನೊಂದು ದಿನ ತಿರುಗಾಟವನ್ನು ನಿಲ್ಲಿಸಿದರೆ, ಆ ದಿನವೆಲ್ಲ ಹಕ್ಕಿಯು ಪಪ್ಪಟ್ಟು ಕರೆದಂತಾಗಿ ಮನವು ಬಣಗುಟ್ಟುತ್ತಿತ್ತು (ಶಿಂಅ. ೬೦). [ಬಣ₁ + ಕುಟ್ಟು₁]

**ಬಣಜ, ಬಣಂಜ, ಬಳಂಜ** (ನಾ). ೧. ವರ್ತಕ; ಹರದ; ವ್ಯಾಪಾರಿ: 'ಬಣಜು' ಪರಾ. ೨. ವರ್ತಕರ ಗುಂಪು,–ಸಮೂಹ: ಬಣಜಮುಂ ನಾನಾದೇಸಿಯಮುಂ ಬಿಟ್ಟಿಯ × × × (ಪ್ಟ.ಆಂ. ೦೯೩೩. ೩–೦೫; 1160). ೩. (ವ್ಯಾಪಾರಿಯ) ಸರಕು; ಸಾಮಗ್ರಿ: ಜಾತ್ರೆಗರೂ, ಕಡುಬೆಬ್ಬಳದ ಆತುರತೆಯಿಂದ ತಂತಮ್ಮ ಬಣಜಗಳನ್ನು ಸಂವರಿಸಿಕೊಂಡ ಬೇಹಾರಿಗರೂ ಇತರರೂ . . . ಗುಡಿಯೊಳಗೆ ಸೇರಿಕೊಳ್ಳರು (ಶರಚಂ. ೦೨–೦೬). **ಬಣಂಜ**: ೩. ದೇಗುಲದುಪಕರಣಂಗಳೊಳಂ ಪರದರ ಬಣಂಜದೊಳಂ ಮತ್ತಮಿಂ ದೇಡರೊಳಂ ಕಪರ್ತಿಯೊಳಂ ತೀರದೆ ದಂದುಗಂಗೊಂಬುದೆನಿತಾನುಮುಂಟು (ಕಕಮಂ. ೯೩–೦೪). **ಬಳಂಜ**: ೨. ಗಂಗವಾಡಿ ತೊಮ್ಬತ್ತಱುಸಾಸಿರಮುಂ ದಾನರವಾಡಿ ಪನ್ನಿರ್ಚ್ಛಾಸಿರದ ಬಳಂಜಮೆಲ್ಲ ನೆರದು (ಎಕ. X (S), ಮುಳಬಾ ೩೦೩–೩; ಸು. 950). [< ಸಂ. ವಣಜ]

**ಬಣಜಿಗ, ಬಣಂಜಿಗ, ಬಳಂಜಿಗ** (ನಾ). ೧. ವ್ಯಾಪಾರಿ; ವರ್ತಕ: ತಳದ ಬಣಜಿಗರೊಳಗಾಗಿ ಭಕ್ತಮುಂ . . . ಕೊಟ್ಟರು (ಸಇಇ. XVII, ೨೯೩–೯೮; 1162); ಬಣಜಿಗನ ಬಟಕೆಯಂತೆ ಕೊತ್ತಳಂ ಬಱಿದಾಗಿ ಬಟಲ್ದ ಬಡಗೊಂಡಿಯಂತಿರಾಳ್ವೇರಿಯುಟಿದು (ಅವಂಪ್ರ. ೧೦–೯೩ ಪ); ಬಳ್ಳಮಾನದ ಬಣಜಿಗರ ಪುತ್ರಿಯರೆ ನಾವೆಲ್ಲ ಶೂದ್ರತಿಯ ಸುತೆಯರೆ ಸಲ್ಲದಿಬಿವೆ ಪಟ್ಟ (ಹಕ. ೩೩–೦೨೦). ೩. [ವೀಶೈ] ವೀರಶೈವರಲ್ಲಿ ಒಂದು ಒಳಪಂಗಡ: ಬಣಜಿಗನೇಸು ಭಕ್ತನಾದರೆಯೂ ಒಟ್ಟಿಲ ಬೆಸನ ಹಂಗ ಬಿಡ (ಹಿಶ. ೯೩೦); ಹಗಲು ಹಾರುವನಾಗಿ ಇರುಳು ಬಣಜಿಗನಾಗಿ ಅರಸಾರ ಮಗನಾಗಿ ತಿರುಗಿ ನಿದ್ದೆಗೆಡಬೆಡ (ಹಲ್ಪಶಾ. ೬೯). **ಬಣಂಜಿಗ**: ೧. ಇಂತೀ ಧರ್ಮ್ಮಮಂ ನಗರಮಹಾಜನಂ ಪಂಚಮಠಮಲ್ಲಿಯ ತಳದ ಬಣಂಜಿಗರುಮೆರಸುಂ ಪ್ರತಿಪಾಳಿಸುವರು (ಸಇಇ. XX. ೬೩–೨೩; 1123); [ನೆರದು ಬ]ಣಂಜಿಗಮ್ಮರ್ಯದದೆ ಕಟ್ಟಿದೊಡ[ಂತರ] ಪಟ್ಟವರ್ತ್ತಿಯಿಂದವರ ಬ[ಚಾ]ಪ್ಪವೆಂದನೆ (ಸಇಇ. XV. ೨೩೩–೩೦; 1216); ಬೇರದವಸರದಿಂ ಮೆಯ್ದುಗೆದು ಬಣಂಜಿಗರ ನೆರವಿ ತಮತಮಗೆ ಪೊಸವರದಿನೆನೆಕೆಯೊಳಿರಯುಂ (ರಾಮಾಶ್ವ. ೨೨–೦೯). ೨. ಸಂಗರರಂಗದೊಳ್ ಪೆಲಮ ಕವ್ಮ ತಲುಂಗ ಬಣಂಜಿಗರ್ ಕರಂ ಭಂಗದೆ ಬೆಂಗುಡರ್ (ಕಕಂ. ೩–೩೦). **ಬಳಂಜಿಗ**: ೧. ಕರಮುದ್ವೃತ್ತತೆಯಿಂ ಬಳಂಜಿಗರ ಪೊಂಗು ಮಯ್ಸಿಗಂ (ಕೋಂಕಣ. ೦೯೩೩, ಶಾಕೀಂ. ೦೨೯–೨೨; 941); ಈ ಧರ್ಮ್ಮಮಂ ದಯಸಿಂಗಸೆಟ್ಟಿಯುಂ ವಲ್ಲಿಯ ತಳದ ಬಳಂಜಿಗರು ನಡೆಯಿಸುವರ್ (ಸಇಇ. XX, ೩೦–೨೬; 1088); ಸೊಂಟಿಗೆಯುಕ್ಕ ಮತ್ತಂ ತಳದ ಬಳಂಜಿಗರುಂ ನಾನಾದೇಶಿಗಳು ವಿಟ್ಟು ಕೊಟ್ಟರ್ (ಸಇಇ. IX-i. ೦೩೨–೦; 1106). [ಬಣಜು + — ಇಗ / ಸಂ. ವಣಿಜಕ]

**ಬಣಜಿಗವಾಗ** (ನಾ). ವರ್ತಕರಿಗೆ ಸೇರಿದ ಭಾಗ (?): ಅಂತಾ ಮುತ್ತರಾಜಿಕ್ಕಂ ಸೀಮಾಸಂಮ[ಬ]ಂಧಮಾಪುದೆಂದಡೆ . . . ಮೂಲಸ್ಥಾನದೇವರ ಕೆಯಿಂ ತೆಂಕಲು ಬಣಜಿಗವಾಗದಿಂ ಮೂಡಲು ಬಾಚಗಾವುಂಡನ ಹಾಗದಿಂ ಪಡುವಲು (ಕೂರ್ಕ್ರಾಕಾ. ೦೩. ೬೬; 1166). [ಬಣಜಿಗ + ಬಾಗ]

**ಬಣಜಿಗಿತಿ** 'ಬಣಜಿಗಿತ್ತಿ' ನೋ.

**ಬಣಜಿಗಿತ್ತಿ, ಬಣಜಿಗಿತಿ** (ನಾ). ವರ್ತಕರ ಹೆಂಗಸು: ಸೋಜೂಮ್ಮ ಬಣಜಿಗಿತ್ತಿಯ ಕಾಲು ಕೀಲಸಿನಷ್ಟಿಡಿ ಕೆಡಿಸಲದೇಕ (ಸಮ್ಮಿಶಾ. ೩–೨೩). **ಬಣಜಿಗಿತಿ**: ನಮ್ಮ ಗಣೆಕಾತಿ ಹೊಸೂರ್ರ ಬಣಜಿಗಿತಿ . . . ನಮ್ಮ ಹಂಬಲವ ಮರತಳೆ (ಜಾಪಕ. ೬೯). [ಬಣಜಿಗ + — ಇತ್ತಿ]

**ಬಣಜಿಸು, ಬಣಂಜಿಸು** (ಕ್ರಿ). ವ್ಯಾಪಾರ ಮಾಡು; ಕ್ರಯವಿಕ್ರಯ ಮಾಡು: ಆಂ ತೆಂಕಣಾಪತ್ಥ ಬಣಜಿಸಿ ಧನಾಜಿಪೆದು ಬಂದಪೆನೆಂದು ಪೆತ್ತತಾಯ್ಗಂದೆಗಳಗೆ . . . ಬಿನ್ನೈಸಲು (ಸೋಚಿ:೩. ೦–೯೩); ಛಕ್ಷನೋರ್ವ

ನೂರೂರ್ಗಳೊಳ್ ಬಣಜಿಸಿರುಳಾಗೆಯಾತಂ ಬಂದಾ ಪುರವ ಪೊಕ್ಕು ನೋಡಲೆಲ್ಲಿಯ ಜಿನನ ಮಂದಿರವೆ ಘನವಾಗಿ (ಸಿದ್ಧೇಶ್ವ. ೭-೬೪). **ಬಣಂಜಿಸು :** ಬಣಂಜಿಸುವವಂ ವಿಪಣಿಕಂ ನೈಗಮಂ ವಣಿಜನಕ್ಕು (ಮಂಗರಾ. ೦೦೨-೦).

[ಬಣಜು + — ಇಸ್ಕು]

**ಬಣಜು, ಬಣಂಜು, ಬಳಂಜು, ಬಟಿಂಜು** (ನಾ). ವ್ಯಾಪಾರ; ಮಾರಾಟ; ಕ್ರಯ ವಿಕ್ರಯ : ಬಣಂಜು - ಬಣಜು (ಕಣ್ಣಾ.ಕು. ೬೦ ಕ್ರಯೋ) ; ಬಣಜಿತವಗೆ ಸಾಜವಪ್ಪ ಕಜ್ಜವೆಂದೆನಿಸಿ . . . ವ್ಯಾಪಾರಾಟದ ಬೇಹಾರವಂ ನಡೆಯುಸುವ ಕಡುಜಾಣೆಯರ್ (ಪುರಾಕ. ೦೯೭-೦೭). ಬಣಂಜು: ಬೇಹಾರಂಗೆಯ್ಯೆ ಪಡುಗುಪರದರ ಕಲಕಲದಿಂ ತೀವಿದ ಬಣಂಜಿನ ಘಟ್ಟಮುಮಂ ನಿಟ್ಟಿಸಿ (ಪುರಾಕ. ೦೯೭-೨೬). 'ಬಣಂಜುಧರ್ಮ' ಪರಾ. ಬಳಂಜು : 'ವೀರಬಳಂಜು' ಪರಾ. Δ ಬಟಿಂಜು : 'ವೀರಬಟಿಂಜು' ಪರಾ.

[ಬಣಜ + — ಉ]

**ಬಣತ** 'ಪಣತ' ನೋ.

**ಬಣತಿಗೆ** 'ಬಂದಣಿಕೆ' ನೋ.

**ಬಣದುರ್ಗಿ** (ನಾ). ಒಂದು ಬಗೆಯ ಮರ : ಬಣದುರ್ಗಿ —ಧಾರವಾಡ ಜಿಲ್ಲೆಯಲ್ಲಿ ಅತಿ ಸಾಧಾರಣವಾದದ್ದು. ಇದರ ಎಲೆಯ ಮೇಲೆ ಹಳದೀಬಣ್ಣದ ಅಂಟು ಮೆತ್ತಗಿರುತ್ತದೆ (ಕಶಾಗ. ೪೪). [?]

**ಬಣಬಣ** 'ಬಣ್ಣ' ಪರಾ.

**ಬಣಬೆ** 'ಬಣಂಬೆ' ನೋ.

**ಬಣವೆ** 'ಬಣಂಬೆ' ನೋ.

**ಬಣಿತೆ** (ನಾ). ೧. ಮಾತು ; ಉಕ್ತಿ ; ವಚನ : "ಬಣಿತೆ—ಭಣಿತ (ಿ) = ಮಾತು" (ಶಬ್ದಕೋ. ೨೮) ; ಅನು ಪೇಳಿದ ಕಾರ್ಯದ ಬಣಿತೆಗಿನ್ನಾವುದುತ್ತರ (ಕೌಂಡಪು. ೪-೭೬) ; ನೆನಹು ಮಾತ್ರದಿಂದ ಜಗವ ಸೃಷ್ಟಿಸಿದೆನೆಂಬ ಭಾವ ಬಣಿತೆಯವನಲ್ಲ (ಸಿದ್ಧೇಶ. ೬-೨೫). ೨. ಚಾತುರ್ಯದಿಂದ ಕೂಡಿದ ಮಾತು ; ಜಾಣ್ನುಡಿ ; ಚತುರೋಕ್ತಿ : ಬಾಣದೊಳ್ಬಣಿತೆಯೊಳ್ . . . ಪರಾಕ್ರಮದ ಪ್ರಾಥದೋಕ್ತ್ಯಾಣಿಸವರಿರ್ವರ್ಗೆ ಸಮರಾದ ಕಲಿಗಳಂ (ಕೃಬಾಕಾ. ೨೨-೦೨). ೩. ಹೇಳಿದುದು ; ಉಕ್ತವಾದುದು : ಎಣಿಸಲಿವು ತತ್ಸಮವೆನಿಪ್ಪ ಶಬ್ದಂಗಳವನಿಯರುಂ ಲಾಕ್ಷಣಿಕ ಕವಿಮಾರ್ಗದೊಳೆ ತಂದು ಬಣಿತೆಯಾಗಿರ್ಪುದಾಹರಣಂಗಳಂ ತಿಳಿದುಕೊಳ್ವುದು (ಕಬ್ಬಮಂ. ೭೮) ; ಕರಣಿಕೆಯನಿತ್ತು ಸಿಸ್ವನ ಬರಹಗಳಿಂದಾಯಬೀಯುಮಂ ಬಣಿತೆಗೆ ತಂದುರುದುವ್ಯಯಂಗಳಂ ತಾಂ ವಿರಚಿಸದಾರ್ಜಿಸಿವನೊಪ್ಪುವಗಣಿತಧನಮಂ (ಕೆಳದಿ. ೭-೩೩). ೪. ಮೂದಲಿಕೆ: ಶಬರನಸುಗೊಂಡು ಪೋಪೆಯೊ ನಿಲ್ಲುನಿಲ್ಲೆನುತ ಕರುಚಿಟ್ಟಿಯಂ ಬಣಿತೆಯಿಂ ಬಾಯೊಳಿಡೆ ತಲೆಯೊಳದು ಥಟ್ಟುಗಿಯೆ (ಕಶುಕು. ೨-೦-೨೭) ; ಪೊಣರ ಚೀಳೀಳೆಂದು ಮುಡುಹ ತಟ್ಟುತ ತೊಡೆಯ ಬಣಿತೆಯಿಂ ಚಪ್ಪರಿಸಿ ಪುರ್ಬುಗಳ ಗಂಟಿಕ್ಕುತೆನೆಕೆಗೊಳ್ಳುತ ವಿಸಾಸೆಯಂ ತಿರ್ದಿ ಕಣ್ಣ ಕೆಂಚಲಿ ಮಾಡಿ ಕುಬುಬಿರಿಯಲು (ಕಶುಕು. ೩-೭-೪೪). ೫. ಚತುರತೆ ; ಜಾಣ್ಮೆ : ಗುಣದೊಳಗೆ ಶೀಲದಲಿ ಮಾತಿನ ಬ[ಪಾಠಾಂ. ಭ] ಣಿತೆಯಲಿ . . . ಶರ್ವಾಣಿ ರತಿಯರಿಗೆಣೆಯೆನಿಪ ಸುಂದರಿಗೆ ವಿಂಕ್ಕನ ಬಣಗುಸತಿಯರು ಸರಿಯೆ (ಕಕಶ. ೧-೪೪) ; ಬಣಿತೆಯಿಂ ರುದ್ರಾಕ್ಷಿ ಪವಳ ಮಾಣಿಕ್ಯದ ಕೇವಣಸಿರ್ದ ಕಂತೆ (ಸಿದ್ಧೇಶ. ೧೬-೪೮). ೬. (ಅಲಂ) ಆಕರ್ಷಣೆ ; ಅಂದ; ಚೆಲುವು (?) : ಕುಣಿಸುವತಿಸದ್ಗುರುನಿತಂಬದ ಮಣಿಯ ಶ್ರುತಿ ಕುಂಡಲದ ಕಾಂತಿಯ ಬಣಿತೆಯೊಳು ಜಗಜಗಿಸಿ ರಂಜಿಸಿತಾ ಮಹಾಶಕ್ತಿ (ಅಂಬಕಾ. ೦೯-೬೦) ; ಸತ್ಪದ್ಮಪೀಠವಮದು ಬಣಿತೆಯಾಗಿರ್ದುದಾ ಸಿಂಹಾಸನಾಗ್ರದುರುಮಧ್ಯದೊಳನಂತಸೊಬಗಿಂ (ಶಿಚಾಕು. ೦-೩೭). ೭. [ಸಂಗೀತ] ಹಾಡಿನ ಸೊಗಸು (?) : ಒಂದು ಪೊಸ ಕೊಳಲಂ ಕೊಳುತ್ರಂಗು. . ಬಣಿತೆ ಗಮಕಮಸುಗುಳೆ ಗಮಕವರಿದಂತೊಡರೆ ಅಣಕ ನಯದೊಳ್ಮೊಳೆಯೆ . . . ಪಂಚಮುಖದೊಳಗಲ್ಲ ಕೊಳಲ ದನಿ ತೊಳಗುತಿರೆ (ಅನಾರ. ಹ. ೦೬೦-೨೩) ; ಇಂಪು ಸೊಂಪು ಬಣಿತೆ ಬೆಡಂಗು. . .ಕಾಲವರ್ಧನಸ್ಥಾಸವಿಧಿಯೊದವೆ ಬಾಲೆಯರ್ ಕೇಳಿಸಿದರಾರ್ಯನಂ ರಸಪೊಸರ್ವಪೋಲ್ ಬೆರಲೆರಡಜಿಂ (ಶಬ್ದರಾ. ೬-೬೧); ಧಾತು ನಯ ನೇವಣಿಬಜಾವಣಿಯ ಬಣಿತೆಯಿಂ . . . ಭೂತೇಶನಂ ಮೆಚ್ಚಿಸಿದನಮಲ ತುಂಬುರಂ (ಅಂಗಕು. ೩-೯೭). [<ಸಂ. ಭಣಿತ]

**ಬಣಿತೆಗಾಜಿಕೆ** (ನಾ). ಮಾತಿನ ಚಾತುರ್ಯ : ಬಣಿತೆಗಾಜಿಕೆಯೊಳುಂ ಮರುಳ ವೇಷವ ತೊಟ್ಟು . . . ಪ್ರಭುದೇವ ಬರಲು (ಪ್ರಭುಕು. ೯-೩೪).

[ಬಣಿತೆ + — ಕಾಜ + — ಇಕೆ]

**ಬಣಿವೆ** 'ಬಣಂಬೆ' ನೋ.

**ಬಣ್ಣ, ಪಣ್ಣ, ಘಣ್ಣ, ಬಣ್ಣ, ವಣ್ಣ** (ನಾ). ೧. ರಂಗು; ವರ್ಣ : "ಸಲೆ ಬಣ್ಣಂ ವರ್ಣದೊಳೆ" (ಶಬ್ದಾಣ. ೪೪) ; ಶುಭಲಕ್ಷಣಾಂಕಿತವಾಗಿ ಕೆಂದಾವರೆಯ ಬಣ್ಣದಂತಪ್ಪ ತಳಮುಮಂ ಕಂಡು (ಕಣ್ಣಾರಾ. ೦೪೬-೦೬); ಬಣ್ಣಂ ಪೊನ್ನ ಬಣ್ಣಕ್ಕೆಣೆಯೆನೆ ಗರುಡಂ ವಾಹವಾಗಿರ್ಪ ಚಕ್ರೇಶ್ವರಿ ಭಾಸ್ವದ್ವರ್ಜಚಕ್ರಾಕ್ರಮಿಗಳನಲೆದಾಟಕ್ಕೆ ವಿಕ್ರಾಂತದಿಂದಂ (ಅಂಕು. ೦-೭); ಸುಣ್ಣದ ತುಯ್ಯಲ ಬಣ್ಣವೊಂದೆ ಎಂದರೆ ನಂಟತನಕ್ಕೆ ಉಣ್ಣಬಹುದೆ (ಜನಪ. ೦೨೦). ೨. ಕೆಂಪುಬಣ್ಣ ; ಕೆಂಬಣ್ಣ 'ಬಣ್ಣದುಟ' ಪರಾ. ೩. ಚಿತ್ರ, ಗೋಡೆ ಮುಂತಾದುವಕ್ಕೆ ಹಚ್ಚಲು ಬಳಸುವ, ಬೇರೆ ಬೇರೆ ವರ್ಣಗಳಲ್ಲಿರುವ ದ್ರವಪದಾರ್ಥ : ವಸ್ತುಗಳ ಮೇಲ್ಮೈಗೆ ಸಾಪೇಕ್ಷವಾಗಿ ತಳುಪೂರೆಯಲ್ಲಿ ಹಚ್ಚಬಹುದಾದ . . . ಆರ್ದ್ರ ದ್ರವ ಪದಾರ್ಥವೇ ಬಣ್ಣ (ಪೇಂಟ್) (ಕಂಕೋ. IX. ೬೨೦). ೪. ಬೇರೆ ಬೇರೆ ಬಣ್ಣಗಳಿಂದ ಕೂಡಿದ ಚಿತ್ರ; ವರ್ಣಚಿತ್ರ : ಬಿತ್ತಿಯೊಳಂದಂಬಡೆವಂತು ಬಚ್ಚಿಸಿದ ಬಣ್ಣಂಗಳಂ ಬೇಚಿವೇಚಿ ನೋಡಿ ಮೆಚ್ಚುತಿರ್ಪರ್ಗಳ್ (ಕಣ್ಣಾರಾ. ೬೩); ಬಣ್ಣವನು ಬರೆಪ ಸತಿ ಹೊಲ್ಲ (ಸರ್ವಜ್ಞ. ೦೬೪೦). ೫. ರಂಗು ರಂಗಾದ ವಸ್ತ್ರ, ಸೀರೆ ಮುಂತಾದುವು : ಕಕ್ಕರವಟಾಯಿಗೆಯ ಚಿತ್ರಾವಟಾಯ ಪಟ್ಟೆವೆಡೆಯ ತುಟಾವೆಡೆಯ ನೆಟಲಪಾಣಿಯ ಬಣ್ಣದ ಕಣದ ಬಣ್ಣವಣ್ಣಿಗೆಯ ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್ (ಅಂಕು. ೯-೩೪ ವ); ಬಣ್ಣವನುಡರು ಬಂಗಾರಗಳನು ತೊಡರುಣ್ಣರಂಗವನೋಸರಿಸರು ಕಣ್ಣ ಸವಿಗೆಯಾತನ ರೂಪ ನೋಡಿದ ಹೆಣ್ಣಲ್ಲರಾ ಪುರದೊಳಗೆ (ಶಬಸಂ. ೬-೪೦); ಬಣ್ಣವಿಲ್ಲದ ಮದುವೆ ಹೆಣ್ಣಿಲ್ಲದವನ ಸಂಸಾರ ಮಳಲೊಳಗೆ ಎಣ್ಣೆ ಹೊಯ್ದುದಂತೆ (ಸರ್ವಜ್ಞ. ೦೬೬೪). ೬. ರಂಗುರಂಗಾದ ಹೂವು. —ಪುಷ್ಪ : 'ಬಣ್ಣಗೋಲ್', 'ಬಣ್ಣಗೋಲ' ಪರಾ. ೭. ಬಗೆ; ವಿಧ; ಪ್ರಕಾರ : ಇಂಬಾಗಿರೆ ಮುದದಿಂ ಪಲವುಂ ಬಣ್ಣದ ಭಕ್ಷ್ಯರಾಶಿವೆರಸಾಕಂಠೋಪ್ಯಂಬರಮುಂಡು (ಶಂಕಶಂ. ೦೦೫ ೨೫). ೮. ಸ್ವರೂಪ ; ನಿಜರೂಪ : ಪಾಪಪುಣ್ಯಮೆಂಬೆರಡಱ ಬಣ್ಣವಾವುದು ಅವಂ ಬಲ್ಲವರಾರ್ (ಕರ್ಣಾಕ. ೩-೧೫ ವ); ಆಕೆಯ ಬಣ್ಣ ಬೆಳಗಲು ತಾಯಿಮುಹಿಮೆಯನು ನೋಡಿರೆಂದೆಲ್ಲಾ ಬಣ್ಣಿಸಲು (ಜಕ್ಕಕು. ೭-೦೬); ದುರಾಸೆಗೆ ಬಿದ್ದವರ ಬಣ್ಣ ಅವರು ಗುರುತಿಸಿದ್ದು ಈಗಲೇ (ಹೂಕ್ಕಿ. ೨೬). ೯. ಅಂದ; ಚೆಂದ; ಚೆಲುವು : ಕಿಸುಗಾಡ ನೆಲಗಳೆಳದೆಳರ ಬಣ್ಣಮಂ ಕೆಯ್ಕೊಂಡು ವಿರಹಿಗಳ ಮನಮನೊನಲಿಸುವಂತೆ ಜಲಜಲನೆ ಪರಿವ ಜರಿಪೊನಲ್ಗಳುಮಂ ಕಂಡು (ಶಂಕಶಾ. ೭-೨೫ ಕ); ಬಾಲೆಯರ ಬಣ್ಣಕ್ಕೆ ಸೋಲದೆ ಕಾಳುಶರೀರವೆಂಬ ಒತ್ತರಂಗೊಳ್ಳದೆ. . .ಮಲ್ಲಿಕಾರ್ಜುನನಲ್ಲಿ ಸರ್ವಾಂಗದಲ್ಲಿ ನಿರ್ಲೇಪವಾದುದೇ ಶರಣಸ್ಥಲ (ಮೋಳಿಶಯ. ೦೦೦-೩೪೭). ೧೦. ಹೊಳಪು; ಕಾಂತಿ: ಪೊನ್ನಂ ಬೆಳಗುವವೋಲ್ ಕರ್ಬೊನ್ನಂ ಬೆಳಗಿದೊಡೆ ಬಣ್ಣಮೇನೆಸಗುಮೆ (ಶಬುಶ. ೦೪-೩೨) ; ದ್ವಿಗುಣಿಸೆ ಬಣ್ಣವಿಂದುಮಣಿಮಂಡಪಕಾಂತಿಗಳಿಂ

ಮುಗುಳ್ತ ಮಲ್ಲಿಗೆಗೆ (ಪುಷ್ಪ.ಕ. ೨-೬೦). 'ಬಣ್ಣಂಗೆಡು' ಪರಾ. ೧೧. ತೋರಿಕೆ; ಸೋಗು; ನಟನೆ: 'ಬಣ್ಣಗಾಜಿ', 'ಬಣ್ಣಗಾಜಿಕೆ' ಪರಾ. ೧೨. ತೋರಿಕೆಯ ಮಾತು; ಬೂಟಾಟಿಕೆಯ ನುಡಿ; ಬಣ್ಣಾಚಾರ : ಚಕ್ರಿ ಕಳುಹೆ ಬಂದು ಬಣ್ಣವ ನುಡಿಯುವ್ವೆ ವಕ್ರವನಜಾದ ಹೋಗು (ಶಠಷ. ೪೮-೬೦). ೧೩. ಗುಣಗಾನ; ಸ್ತುತಿರೂಪವಾದ ಹಾಡು; ಬಣ್ಣವಾಡು : ಕಿನ್ನರಿಯರ್ ಪಾಡುಗೆ ನಿನ್ನದೊಂದು ಪಲವುಂ ಬಣ್ಣಂಗಳಂ (ಶಂಕಶಾ. ೦೪-೩೬). ೧೪. ಯೋಗ್ಯತೆ; ಸತ್ತ್ವ : ನಾನು ಚಾಡಿಯು ಮಂತ್ರವನ್ನು ಜಪಿಸದಿದ್ದರೆ ಆಗ ಕಾಣುತ್ತಿತ್ತು ನಿಮ್ಮ ಧೈರ್ಯಸಾಹಸದ ಬಣ್ಣವೆಷ್ಟೆಂಬುದು (ಅಂಂಕ. ೬). 'ಬಣ್ಣಗಾಣ್' ಪರಾ. ೧೫. ಮೇಲು ಮಟ್ಟಕ್ಕೆ ಸೇರಿದವನು; ಮಿಗಿಲಾದ ವ್ಯಕ್ತಿ : ಬಿಗಿವುಗಿಡದಮರ್ದು ಜಗಿಗೆಸೆವ ಗದ್ಯವಿರಚನೆಗೆ ಬಾಣನಿಂ[ದ]ಂ ಬಣ್ಣಂ...ನಾಗವರ್ಮಕವೀಂದ್ರಂ (ವರ್ಧಮಾ. ೦-೨೬). ೧೬. ಚಿನ್ನ, ವಜ್ರ ಮುಂತಾದುವುಗಳಲ್ಲಿರುವ ಶುದ್ಧತೆಯ ಪರಿಮಾಣ; ಕ್ಯಾರೆಟ್ಟು : ಕಟ್ಟಣಿಯೊಳಗಣ ಕಾಂಸ್ಯದಂತೆ . . . ಚಿನ್ನದೊಳಗಣ ಬಣ್ಣದಂತೆ . . . ಎನ್ನಲ್ಲಿ ಭಿನ್ನವಿಲ್ಲದೆ ಇರ್ದಯಲ್ಲಾ ಸೌರಾಷ್ಟ್ರಸೋಮೇಶ್ವರಾ (ಆದಷ. ೨-೮); ಪದಿನೇಟು ತೂಕದ ಗಟ್ಟಿ ಹತ್ತು ವರೆ ಬಣ್ಣಂ ಹತ್ತು ಗದ್ಯಾಣ ತೂಕದೆಂಟುಂ ನೆಜಿ ಹಾಗ ಬಣ್ಣದ ಪತ್ತೊಂಭತ್ತುಂ ಪೊನ್ನು ತೂಕ ಮತ್ತಮದು ಮತ್ತಂ ಪದಿಮೂಱು ಬಣ್ಣವನೆ ತಾನಾಗಿರ್ದುದು ಪೊನ್ನೆಲ್ಲಮಂ ಪದುಳಂಗೂಡಿ ಸಮಂತದಂ ತರಂಸಲು ಬಣ್ಣಮಂ ಪೇೞಿದಂ (ವ್ಯವಹಾ. ೬೨-೨೪); ಒರೆಗೆ ಬಣ್ಣಕ್ಕೆ ಬಿರಸಿ ವೇದೋಚ್ಚರಿತ ಧರ್ಮವನಱಿಹದನು ಭೂಸುರಗೆ ಧರ್ಮವ್ಯಾಧನೆಂಬನ ಕಥೆಯ ಕೇಳು (ಶಾವ್ಯಾ. ೦೪-೪೮). ೧೭. ಯೋಗ್ಯವಾದುದು; ಉಚಿತವಾದುದು ; ತಕ್ಕುದು : ನೀನೇಕೆ ಮರುಳಪ್ಪುದಣ್ಣ ಈಗ ಜಾನಕಿಯನು ಬಿಟ್ಟುಕೊಡುವುದೇ ಬಣ್ಣ (ಶಾರ್ೞಸು. ೮೬). ೧೮. ಜಾತಿ ; ವರ್ಣ : ಮಿಕ್ಕಾದ ಮೂಱುಂ ಬಣ್ಣದವರಂ ಚೆನ್ನಾಗಿ ದಂಡನೆಗೆಯ್ದು ರಾಜ್ಯಮಂ ಪರಿಪಾಲನೆಯನೆಸಗಬೇಕು (ಚಾರಿತಾಂ. ೬೩-೦೪); ನಾವು ಅಕಸಾಲಿಗಳು ಕೋವಾಟಿಗರು ಮುನ್ನಾದ ಪದಿನೆಣ್ಬಬಣ್ಣದಲ್ಲೂ ಯಲು ವಾಲಗ ಮಾಡಿದಾಗ (ಎಕ. XIV. ಶ್ರೀರಂಗ. ೦೬೦-೦೫ : 1801). ೧೯. [ಸಂಗೀತ] ಇಂಪು : ಭಣಿತಿ ಬೆತಂಗು . . . ಸೇವಣ ಕಣಿ ಬಣ್ಣದೊಡ್ಡವಣಿ . . . ಕಳೆಯೆಂಬವಂ ಪೊಣಿದು ಬಾಜಿಸಿದಂ ಮುರವೈರಿ ವಾಸಮಂ (ಜಗ. ೩-೩). ಪಣ್ಣ: ೧೮. ತಿರುಮಲರಸರಾದ ಮದ್ದಹೆಗ್ಗಡೆಯವರು ಅವರ ನಾಳಿನವರು ಗಣ ಪಣ ಸಾವನ್ತರು ಕಾಪಿನ ರಾಜ್ಯವನು ಪ್ರತಿಪಾಲಿಸುತ್ತಿರ್ದ್ದ ಕಾಲದಲು (ಎಕ. XX. ೬-೨೬ : 1660) ; ನಮ್ಮ ದೇಶದಲ್ಲಿರುವ ಪಣಗಳು – ಪದಿನೆಂಟುಪಣ, ಒಂಬತ್ತು ಪಣಗಳು —ತಮ್ಮಲ್ಲಿ ದೇಶದ ಪ್ರಜೆಯ ಬಹುಭಾಗವನ್ನು ಒಳಕೊಂಡಿವೆ . . . ಇವುಗಳನ್ನು ಬಟ್ಟು ಮಿಕ್ಕವೆಲ್ಲ ಈ ಪಣದ ವ್ಯವಸ್ಥೆಗೆ ಒಳಪಟ್ಟವೆ (ಕರ್ಣಾಸಂ. ೯). 'ಪಣಕಟ್ಟು' ಪರಾ. ಫಣ್ಣ : ೧೮. 'ಫಣಕಟ್ಟು', 'ಫಣಸ್ತ' ಪರಾ. ಬಣ್ಣ : ೧೮. ಬ್ರಾಹ್ಮಣ ಬ್ರಾಹ್ಮಣೇತರ . . . ಎಂದು ಮುಂತಾದ ಬಣ ಬಣಗಳೊಳಗಿನ ಸಂಘರ್ಷಣೆಗಳು ಬ್ರಿಟಿಶರ ಪ್ರೇರಣೆಯಿಂದ ಮೆಲ್ಲಗೆ ತಲೆಯೆತ್ತಿದುವು (ಹುಕ್ಷಕ್ರ. ೨೦). ೨೦. ಪಕ್ಷ; ಪಂಗಡ; ತಂಡ : ಸ್ವಾರ್ಥಪರಾಯಣರ್ ಬಣಗಳಂ ಮಾಡಿ ಬಿಡದೆ ಕೆಡಿಸುವರೊರನು (ಮಹಾಂತೇ.೦೦_೬); ಹಗೆಗಳ ಬಣದವರು ಕೈಯೊಳಗೆ ಸಿಕ್ಕರೆ ಅವರನ್ನು ಸಂರಕ್ಷಿಸಬೇಕು (ಮುಂಂಹಾ. ೩-೦೨೨); ಇಕ್ಕಡಿಯ ಬಣದವರೂ . . . ಜೀವದ ಪರಿವೆಯಿಲ್ಲದೆ ಕಾದಿದೆವು (೪ಕಂ. ೪). ವಣ್ಣ : ೧. ಪ್ರಿಯಸೇನೆಯುಂ ಕೆಂದಾವರೆಯ ವಣ್ಣದೊಳೋರಂತಪ್ಪ ಮೆಯ್ಮುಸೊಡೆಯ ಪದ್ಮಾವತಿಯೆಂಬ ಪಿಡಿಯಾಗಿ ಪುಟ್ಟಿದಳ್ (ಚಕ್ರಾರಾ. ೩೬-೩); ಮಿಸುನಿಯ ವಣ್ಣಕೆ ನಾನಾಬಗೆ ವಟಕ ಸುಪ್ಪೆಪಜ್ಜಿಕೆ ಸರರ ರಸನೆಯ ಸವಿಗೆ ನಾದೆಂದಾಗ ಫಲ ಸಹಿತಸವ ಜಂಬೀರಗಳುಮುವು (ಶಂಸಾ. ೩-೮೪).

ಬಣ್ಣವಣ್ಣ, ಬಣ್ಣಬಣ್ಣ (ದ್ವಿರುಕ್ತಿ) : ಸ್ತ್ರೀಕುಚಕುಂಭಕುಂಕುಮ ರಜಃಕಲ್ಲೋಲದಿಂ ಬಣ್ಣವಣ್ಣದ ಚಿಲ್ವಂ ಗೆಡೆಗೊಂಡು ಚಿತ್ರಿತ ಪತಾಕಾಳಿಲೀಲೆಯಂ ತಾಳ್ದಿ ನಿಂದುದು ಗಂಗಾನದಿ (ಅಂಪು. ೦೦-೦೩೦) ; ಬಣ್ಣಬಣ್ಣದ ಪೂಗೊಯ್ದು ಪೊಂಬಾಳೆಯ ವರ್ಣದ ಪೊಟ್ಟಣಗಟ್ಟಿ . . . ಕಾಂತೆಯರೊಡತಿಗೆ ಬಿನ್ನಣಗೆಯ್ದು ತೋಱಿದರು (ಪ್ರಾಹಕ. ೨೪-೬೩); ಬಣ್ಣಬಣ್ಣದ ಬಟ್ಟೆಯ ಚೂರುಗಳನ್ನು ನೇರವಾಗಿ ಕತ್ತರಿಸಿ ಸೇರಿಸಿ ಹೊಲಿದ ದಟ್ಟಿಗಳನ್ನು ನೆಲದ ಮೇಲೆ ಎಲ್ಲೆಲ್ಲೂ ಹಾಸಿದಂತೆ ಕಾಣಿಸುವ ಹೊಲಗದ್ದೆಗಳು (ಪಂಟಿರು. ೦೩೦). ಬಣ್ಣದ ಕೋಲು = (ಕೋಲಾಟವಾಡಲು ಬಳಸುವ) ಬಣ್ಣ ಬಳಿದ ಕೋಲು : ನಾಯಿ ಬಡೀಲಿಕ್ಕ ಬಣ್ಣದ ಕೋಲೇ ? (ಗಾದೆ). ಬಣ್ಣದ ಬೀಸಣಿಗೆ = ೧. ರಂಗು ಹಚ್ಚಿದ ಬೀಸಣಿಗೆ : ಆ ಅಂಗಡಿಯಲ್ಲಿದ್ದ ಬಣ್ಣದ ಬೀಸಣಿಗೆಗಳೆಲ್ಲಾ ಒಂದೇ ದಿನದಲ್ಲಿ ಮಾರಾಟವಾಗಿ ಹೋದವು (ಆಡು). ೨. (ಆಲಂ) ಒಯ್ಯಾರಿ; ಒನಪುಗಾತಿ : ಬಣ್ಣದ ಬೀಸಣಿಗ್ಯಂತೆ ಹೆಣ್ಣು ತಿರುಗೋದು ಕಂಡು ಕಣ್ಣುಸನ್ನೆಯ ಮಾಡಿ ಕಣ್ಣಲ್ಲಿ ಕಂಡವಾ ಚೆಲಿಕೊಂಬೆ ಮನವೆ (ಪುರಂದ. ೪-೩೨-೦). ಬಣ್ಣದ ಮಾತು = ತೋರಿಕೆಯ ನುಡಿ ; ಬೂಟಾಟಿಕೆಯ ಮಾತು : ಕಣ್ಣು ಕಾಣದ ಹಕ್ಕಿ ಹಣ್ಣ ಮೆಲಬಂದಡೆ ಹಣ್ಣು ಹಕ್ಕಿಯ ನುಂಗಿ ಉಗುಳದಿನ್ನೇತರೋ ಸಣ್ಣ ಬಣ್ಣದ ಮಾತಿನ ಅಣ್ಣಗಳಿತ್ತ ಬಲ್ಲರು (ಸರ್ವಜ್ಞ. ೨೮-೦೩೦) : ಪತಿಗೆ ಬಣ್ಣದ ಮಾತನಾಡ್ಯಾಳೊ ಅವಳು ಮತಿಯಿಲ್ಲದೆ ಪೆಚ್ಚ ಮಾಡ್ಯಾಳೊ (ಪುರಂದ. ೦-೦೬೨_೦). ಬಣ್ಣದ ಸೀರೆ = ಚಿತ್ರ ಬರೆಯಲು ಉಪಯೋಗಿಸುವ ವಸ್ತ್ರ : ಬಣ್ಣದ ಸೀರೆ ಮೇಳಿಪವಣ್ಣಗೆಯ ರ್ಘುಳಂಬವೊಂಬಿವಳಪಟ್ಟರೆ ಭೂಭುಜನಿರ್ದ ಚಿತ್ರಶಾಲೆಗೆ ನಡೆತಂದನಂದು ನವಯೌವನಸೋರ್ವನಪೂರ್ವಚಿತ್ರಕಂ (ಪುಲ್ಲಪು. ೩-೮೯). ಬಣ್ಣಬಚ್ಚಣೆಯ ಮಾತು – ತೋರಿಕೆಯ ಮಾತು ; ಸೋಗಿನ ನುಡಿ : ಬಣ್ಣಬಚ್ಚಣೆಯ ಮಾತು ಕಲಿತು ಹೊನ್ನು ಹೆಣ್ಣು ಮಣ್ಣಿಗಾಗಿ ಅನ್ಯವಸಕ್ಕುವರ ಪ್ರಸಂಗವ ಪಡಮಬಂದ ಗನ್ನಗಾಜಿಂಗೇಕೆ ಅಱಿವು (ಪ್ರಾಣೀಶಾ. ೬೯-೩೩೪). ಬಣ್ಣ ಬದಲಾಯಿಸು = ೧. ರಂಗನ್ನು ಬೇರೆ ಮಾಡು ; ವರ್ಣವನ್ನು ವ್ಯತ್ಯಾಸಗೊಳಿಸು : ಗೋಸುಂಬೆಯು ತನಗೆ ಬೇಕಾದಾಗ ತನ್ನ ಬಣ್ಣ ಬದಲಾಯಿಸಿಕೊಳ್ಳುತ್ತದೆ (ಆಡು). ೨. (ಆಲಂ) (ಸ್ವಾರ್ಥದಿಂದ ವ್ಯವಹಾರ, ನಡವಳಿಕೆಗಳಲ್ಲಿ ಇದ್ದಕ್ಕಿದ್ದಂತೆ) ನೇರಮಾರ್ಗವನ್ನು ಬಿಡು ; ಧೋರಣೆಯನ್ನು ವ್ಯತ್ಯಾಸ ಮಾಡಿಕೊಳ್ಳು : ಸಂಬಾರದ ವಸ್ತುಗಳನ್ನು ತುಂಬಿಕೊಂಡ ನಂತರ ಗಾಮಾ ತನ್ನ ಬಣ್ಣ ಬದಲಾಯಿಸಿದ (ಶ್ರವಾ. II. ೨೩೩). ಬಣ್ಣ ಬಯಲಾಗು = ನಿಜಸ್ವರೂಪವು ಪ್ರಕಟವಾಗು; ಮೋಸ ಹೊರಬೀಳು : ಅವನು ಮಾಡಿದ ಉಪಾಯದಿಂದ ಆ ಮೋಸಗಾರನ ಬಣ್ಣ ಬಯಲಾಯಿತು (ಆಡು). ಬಣ್ಣ ಬಿಡು = ಬಣ್ಣವನ್ನು ಬಿಟ್ಟುಕೊಡು ; ರಂಗನ್ನು ಕಳೆದುಕೊಳ್ಳು ; ಮಾಸಲಾಗು : ರೇಯಾನ್, ಉಣ್ಣೆ ಬಟ್ಟೆಗಳು ಬಣ್ಣ ಬಿಡುವುದಾದರೆ, ಕಡೇ ಸಲ ಜಾಲಾಡುವ ನೀರಿಗೆ ಸ್ವಲ್ಪ ವಿನೆಗರ್ ಹಾಕುತ್ತಾರೆ (ಗೃಪಾ. ೯೪). ಬಣ್ಣಮಾಗು, ಬಣ್ಣವಾಗು – ೧. ರಂಗನ್ನು ಹೊಂದು : ಬಣ್ಣವನ್ನು ತಳೆ : ಪಜ್ಯೋತಿಯಂತೆ ಪಲವುಂ ಬಣ್ಣಮಾಗಿ...ತೇಜಃಸಂತಲ್ಲಾಪಟಂಗಪೊಳಗಾದ್ಯೆ (ಧರ್ಮಾಮೃ. ೨-೦೦೫). ೨. ಕೆಂಪಾಗು : ಹಣ್ಣು ಬಲಿದು ಬಣ್ಣವಪುದಕ್ಕೆ ಮೊದಲ ಕೊಂಬು ಮುಱಿಯಿತ್ತು (ಪ್ರಾಣೀಶಾ. ೪. ೬೦೯-೨೧೯೦). ಬಣ್ಣ ಹಚ್ಚಿ ಹೇಳು = (ಆಲಂ) ಇರುವ ಸ್ವಲ್ಪ ವಿಚಾರವನ್ನು ಅತಿಶಯವಾಗಿ ವರ್ಣಿಸಿ ಹೇಳು :

ಉತ್ಪ್ರೇಕ್ಷೆ ಮಾಡಿ ಹೇಳು : ಬಹಳ ವಾಟ್ಟಗೆ ಅದನ್ನು ಕಾಣದಿದ್ದವರು ಬಣ್ಣ ಹಚ್ಚಿ ಹೇಳುವ ಮಾತುಗಳಿಂದಲೇ ನಮ್ಮಲ್ಲಿ ಭಯ ಹುಟ್ಟುವುದು (ಕವೂಕಥಾ. ೬೪). ಬಣ್ಣ ಹಾಕು = ಚಿತ್ರ. ಬಟ್ಟೆ ಮುಂತಾದುವಕ್ಕೆ ಬಣ್ಣವನ್ನು ತುಂಬು.– ರಂಗನ್ನು ಕೊಡು : ಬಣ್ಣಗಾರರು ನೂಲಿಗೆ ಬಣ್ಣ ಹಾಕುವ ಕಾಯಕ ನಡೆಯಿಸುತ್ತಾರೆ (ಕಕಪು. ೬–೧೨); ದಾರಕ್ಕೆ ಬಣ್ಣ ಹಾಕುವವರು, ಕೊಂಡ ದಾರದಿಂದ ಬಟ್ಟೆ ನೇಯುವವರು ಎಲ್ಲರೂ ಶ್ರಮಪಡಬೇಕು (ಹಂಪ್ರ. ೪). [<ಸಂ. ವರ್ಣ]

**ಬಣ್ಣಂಗುಂದು**, **ಬಣ್ಣಗುಂದು** (ಕ್ರಿ). ೧. ಕಾಂತಿಹೀನವಾಗು ; ಕಳೆಗುಂದು : ಮಂಕಾಗು : ಎಂ ಕೇಳ್ವುದುಯಿವೆ ದಾನವರುಪಟಳಕೆ ಬಣ್ಣಂಗುಂದಿ ಬಾರ್ತೆಗೆಟ್ಟು ದೂಱಿದ ಬರ್ದಿಲರ್ಗೆ ನಾರಾಯಣಂ . . . ಸೈತಿಟ್ಟು ಮಾರಲ್ಚಿದ ತೆಱನಂ? (ರಾವಾಕ್ಯ. ೦೧–೬). **ಬಣ್ಣಗುಂದು** : ೧. ಬಣ್ಣಗುಂದಿದ ದೇಹದೊಳಗೆಳವಣ್ಣಾಗಳ ಸೌಖ್ಯವನು ತೋಱಿದಳು ಮದನನೆಸುಗೆಯಲಿ (ಶಕ. ೧–೩೦): ಜೀವಿತೇಶ್ವರನ ವಿರಹದೊಳು ಸೆಜ್ಜೆಯ ಛಾವಿಸಿ ಬಣ್ಣಗುಂದುವಳು (ಹಂಂ. ೬–೬). ೨. ಕಳೆಗೆಡು ; ತೇಜೋಽವಧೆಯಾಗು : ಕಣ್ಣು ಕಟ್ಟಿಮೇಲೆ ಕಡುರೂಪ ಚಲ್ವಿಕೆಯ ಬಣ್ಣಗುಂದಿದ ಮೇಲೆ ಬಹುಮಾನವೆ (ಕಷ. ೩೬–೧). [ಬಣ್ಣ + ಕುಂದು₁]

**ಬಣ್ಣಂಗೆಡು**, **ಬಣ್ಣಗಡು** (ಕ್ರಿ). ೧. = ಬಣ್ಣಂಗುಂದು ೧ : ಬಂದು ನಿಂದುದು ಮುಂದೆ . . . ಮಹಾಬ್ರಹನ್ ಪೇಃಹಿ! ಮಿಂಚುಶಿರೆ ಪೊನ್ನುಣ್ಣ ಸುತ್ತಣದಗ್ನಿ ಬಣ್ಣಂಗೆಡಲ್. ಯೋಜನದೀರ್ಘ ಕಾಲಾಯಸದ ಖಡುಗದಿನದಂ ತುಂಡರಿಸಿದನು (ಶ್ರೀರಾಪಾ. ೭೦೬–೨೦೭). **ಬಣ್ಣಗೆಡು** : ೧. ಕಾಯೊ ಕರುಣಾಕರನೆ ಕಡುಪಾಪಿ ನಾನು . . . ಬಣ್ಣಗೆಟ್ಟಡವಿಯಲಿ ತಪಸು ಮಾಡಿದವನಲ್ಲ (ಕಷ. ೦೩೩–೦); ತಿಣ್ಣವಡೆದ ಶಾಸನ ಸುದ್ದಿ ಜಪವಾಗಿ ಬಣ್ಣಗೆಟ್ಟುದು ಲೋಕವಲ್ಲ (ಕಂಪ. ೦೦–೩೪); ಬೆಟ್ಟದ ಅರಸು:– (ಬಣ್ಣಗೆಟ್ಟು, ಅಧೋಮುಖನಾಗುವನು) (ಪಕ್ಕಿ. ೩೩–೦೨). ೨. ರಂಗು ಹಾಳಾಗು ; ವರ್ಣವಿಲ್ಲದಾಗು : ಎಂದೆಂದಿಗೂ ಬಣ್ಣಗೆಡದ ಕೃತಕ ಪುಷ್ಪಹಾರವೊಂದು ನೇತಾಡುತ್ತಿತ್ತು (ಕೃಪರು. ೦೯೦). ೩. ದಾರಿ ತಪ್ಪು : ಕಣ್ಣಿಲ್ಲದ ಕಾಪಥನಪೊಲು ಮನ ಬಣ್ಣಗೆ[ಡಾ. ಬ]ಡುತಿದೆ (ಕೊರಲ. ೪೯–೧೩). [ಬಣ್ಣ + ಕೆಡು₁]

**ಬಣ್ಣಂಬಡಿಸು** (ಕ್ರಿ). ಬಣ್ಣವನ್ನು ಲೇಪಿಸು ; ರಂಗನ್ನು ಹಚ್ಚು : ತಿಳಿನೀರ್ಸರಿಯೊಳ್ಮಿಂದ ಸೀತಾದೇವಿಯ ಸಿರಿಯೊಡಲ ಕುಂಕುಮದಿಂ ಪೊಂಬಣ್ಣಮಾದ ಧನುಷ್ಕೋಟಿತೀರ್ಥೋದಕದಿಂ ಸಿರಿರಾಣಿಗರಿಸಿನದಣ್ಣಂ ಬಣ್ಣಂಬಡಿವುದೆಂದುಂ (ಕಕಶಂ. ೦೦೧–೯). [<ಬಣ್ಣಂಬಡೆ + –ಇಸು₁]

**ಬಣ್ಣಂಬಡೆ**, **ಬಣ್ಣವಡೆ** (ಕ್ರಿ). ೧. (ಆಕರ್ಷಕವಾದ) ಬಣ್ಣವನ್ನು ಹೊಂದು : ಪಡದೊಡೆ ಕಂಪಂ ಬಣ್ಣಂಬಡೆಯುವು ಬಣ್ಣವಾನೆ ಪಡೆದು ಪಪ್ಪೊಡೆ ಕಂಪಂ ಪಡೆಯುವುಬಿದಲರ್ಗಳೆರಡುಮನೊಡವೆಳೆದೀ ಚಂಪಕಕ್ಕೆ ಪೂಗಳ್ ದೊರೆಯೇ (ಅಂಪು. ೦೦–೦೦೯); ಅರನೇಱಿಲ್ವಣ್ಣ ಬಣ್ಣಂಬಡದ ತನು ಪೃಥುಶ್ರೋಣಿ ನೀಲಾಳಕಂ . . . ಕೊಂಕಾಂತ ಪುಬ್ಬೊಂದಿರೆ ನಾನಾಶಕ್ತಿಯರ್ ಬೇಡಿತಿಯರೆಸಕವಂ ತಾಳ್ದು ಕಣ್ಗೆಡ್ಡಮಾದರ್ (ಕಂಶಂ. ೩–೬). ೨. ಶೋಭಿಸು; ಮೆರೆ : ತಿರುಮಲೆಯಾರ್ಯನುಮವನ ಪಡಿನೆಲೆಯಂತೆ ಎಲ್ಲಾ ವಿದ್ಯೆಗಳೊಳಂ ಬಲುಸಂದು ಬಣ್ಣಂಬಡೆದಂ (ಕಕಶಂ. ೦೩೬–೨೦); ಮೊದಲೊಳ್ ಹರಿಹರ ಬುಕ್ಕರ್ ಮೊದಲೆನಿಸಿದರರಸುಗೆಯ್ದು ಪಸರಿಸಿ ಜಸಮಂ ಪದಪಿಂ ಕುಱುಂಬರಾಯರ್ ಪದಿಮೂವರ್ ಬರ್ದಿಲವೇಱಿ ಬಣ್ಣಂಬಡೆವರ್ (ಕಕ. ೨–೦೩). **ಬಣ್ಣವಡೆ** : ೨. ಅಣ್ಣ ನಿರ್ದನು . . . ಬಣ್ಣವಡೆವ ಗದ್ದುಗೆಯೊಳು (ಶಕತ. ೪೯–೦೦). ೩. ಅರ್ಹವಾಗು ; ಯೋಗ್ಯವಾಗು : ಬಿಳುವಕ್ಕಿಯ ಪೀಳಿಗೆಪಡಿದ ಬಿಂಕವೀ ಬಳಿಯೊಳು ಬಣ್ಣವಡೆಯದು (ಹಂಂ. ೨–೯೨). [ಬಣ್ಣ + ಪಡೆ₁]

**ಬಣ್ಣಕ** (ನಾ). ತೋರಿಕೆಯ ಮಾತನ್ನಾಡುವವನು : ಬೂಟಾಟಿಕೆಯ ವ್ಯಕ್ತಿ : ಅನ್ಯಸಂಗಂಗಳಿಗೆ ಎಳಸಿ ಬಳಸಿ ಬಣ್ಣಕರಪ್ಪರೆ ಶರಣರು (ಉಂಕ. ೦೯೯–೨೦೬); ಬಣ್ಣಕರು ಬಣ್ಣದೊಳಗಾಳುವದನೆ ಕಂಡು ಅಣ್ಣ ನಗುತಿರ್ದನಯ್ಯಾ ಯೋಗಿನಾಥಾ (ಉಂಗಳ. ೬೨–೦೦).

[ಬಣ್ಣ + –ಕ₄. / ಸಂ. ವರ್ಣಕ]

**ಬಣ್ಣಕಟ್ಟು** 'ಬಣ್ಣಗಟ್ಟು' ನೋ.

**ಬಣ್ಣಗಂಬಿ** (ನಾ). (ಬಣ್ಣ ಬಳಿದ) ಬರೆಯುವ ಕಡ್ಡಿ ; ಲೇಖ್ಯಣಿಕೆ : ಚಾಪದಿಗವಿತೆ ಬಣ್ಣಗಂಬಿಯ ಪುಸ್ತಕಲಿಪಿತಜ್ಞರು ಕನ್ನಡಕವ ತಾಳ್ದಿಹರು (ಮೋಹಕ. ೩–೯೦). [ಬಣ್ಣ + ಕಂಬಿ₁]

**ಬಣ್ಣಗಟ್ಟು**, **ಬಣ್ಣಕಟ್ಟು** (ಕ್ರಿ). ೧. ಕಾಂತಿಗೂಡು ; ನಳನಳಿಸು : 'ಸಾದಾ' ದೋಸೆ ತಿಂದು, ಜೊತೆಗೆ ಬಿಟ್ಟಿ ದೊರೆಯುವ ಸರಾಯಿ ಕುಡಿದರೆ ಸಾಕು. ಹೋರಿ ಬಣ್ಣಗಟ್ಟುತ್ತವೆ (ಕಳುಹು. ೦೬೬). **ಬಣ್ಣಕಟ್ಟು** : ೨. ರಂಗುಹಾಕು : ಆ ಹುಡುಗಿ . . . ನೇಯ್ಗೆಯವನು . . . ಬಟ್ಟೆ ನೇಯುತ್ತಾ, ಬಣ್ಣಕಟ್ಟ ಹಿಗ್ಗುವಂತೆ, ತನ್ನ ಮುಂದಿನ ರಾಜ್ಯವನ್ನು ಕಲ್ಪಿಸಿಕೊಂಡು ಹಿಗ್ಗುತ್ತಿದ್ದಳು (ಹಾಗಿ. ೩). ೩. ಸುಗಂಧದ್ರವ್ಯಗಳನ್ನು ಸೇರಿಸು; ವಾಸನೆ ಕಟ್ಟು.

**ಬಣ್ಣಕಟ್ಟಿದ ಅಡಕೆ** = ಏಲಕ್ಕಿ, ಲವಂಗ, ಸಕ್ಕರೆ, ಕೊಬ್ಬರಿ ಮುಂತಾದುವುಗಳೊಂದಿಗೆ ಮಿಶ್ರಮಾಡಿದ ಪುಡಿಅಡಕೆ : ಬಣ್ಣಕಟ್ಟಿದ ಅಡಕ. ಮೈಸೂರು ವೀಳ್ಯದೆಲೆ ಇದ್ದರೆ ತಾಂಬೂಲ ಹಾಕಿಕೊಳ್ಳಲು ಚೆನ್ನ (ಉಂ). **ಬಣ್ಣಕಟ್ಟಿ ಹೇಳು** = ಅತಿಶಯವಾಗಿ ಹೇಳು ; ಉತ್ಪ್ರೇಕ್ಷೆ ಮಾಡಿ ವರ್ಣಿಸು : ನೀನು ಈ ಕನಸನ್ನು ಸತ್ಯಾ ಅಂತ ಬಣ್ಣಕಟ್ಟಿ ಹೇಳೋದೂ ಅಲ್ಲ; ನಾನು ನಿಜಾ ಅಂತ ನಂಬಿ ಕೇಳೋದೂ ಅಲ್ಲ! (ಹುಚುಕೂ. ೩). [ಬಣ್ಣ + ಕಟ್ಟು₁]

**ಬಣ್ಣಗತೆ** (ನಾ). ಸ್ವಾರಸ್ಯವಾದ ವರ್ಣನೆಯಿಂದ ತುಂಬಿದ ಕತೆ : ಶ್ರೀರಾಜಒಡೆಯ ಮಹಾಸ್ವಾಮಿಯವರಿಗೆ ಸವನಿಸಿದ ಆ ಪ್ರಕರಣದ ವಿಷಯವಾಗಿ . . . ನೂರಾರು ಬಣ್ಣಗತೆಗಳು ಮಸಗುತ್ತಿರುವುವು (ಮುಂಕ್ರಕ. ೦೬೭–೦೯). [ಬಣ್ಣ + ಕತೆ]

**ಬಣ್ಣಗನಸು** (ನಾ). ಸುಂದರವಾದ ಸ್ವಪ್ನ; ಸವಿಗನಸು : ನಿನ್ನ ಪ್ರತಿಮೆಯೊಂದು ನನ್ನ ದೇವಸದಿಂದೆ ರೂಪುಗೊಳಿಸೆ, ನನ್ನ ವರ್ಣನಾ. ಮನೋರಥಗಳನು ಮತ್ತೆಲ್ಲ ಬಣ್ಣಗನಸನು ಭ್ರಾಂತಿಗಳನು ತಂದೆ (ಕಂಮು. ೯೦–೯). [ಬಣ್ಣ + ಕನಸು]

**ಬಣ್ಣಗಬ್ಬ** (ನಾ). ವರ್ಣನೆಗಳಿಂದ ಕೂಡಿದ ಕಾವ್ಯ : ನವರಸದ ತನಿರಸ ಮೊರೆವ ಬಣ್ಣಗಬ್ಬಮಂ ಪೊಳ್ದೊರೆವ ನಿನಗಮೋಂ ನಿರಹಂಕೃತಿಯೊ ನಿನ್ನಾ ಜಾಣ್ಮೆಯೊಳ್ (ರಾಮಾಕ್ಯ. ೦೬೪–೭). 'ಬಣ್ಣಗಬ್ಬಿಗ', 'ಬಣ್ಣಮಾಡು' ಪರಾ. [ಬಣ್ಣ + ಕಬ್ಬ₁]

**ಬಣ್ಣಗಬ್ಬಿಗ** (ನಾ). (ವಿಸ್ತಾರವಾಗಿ) ವರ್ಣಿಸುವ ಕವಿ : ನೀನೋ ವರ್ಣಪೂರ್ವಂ ಬಣ್ಣಗಬ್ಬಿಗರ ಬಲ್ಲಹಂ ಗಡ (ರಾಕವಾಕ್ಯ. ೬೦–೩೯).

[ಬಣ್ಣಗಬ್ಬ + –ಇಗ]

**ಬಣ್ಣಗರಡಿಗೆ** (ನಾ). ಕೆಂಬಣ್ಣದ ಭರಣಿ. – ಸಂಪುಟ : ಬಿರಿದ ಪೆರ್ಗಾಯಿಪಡೆದಿರ್ಪುದಱಿಂ ಶೌಂಗಲಂಕರಿಸಲ್ಕೆ ಬಣ್ಣಗರಡಿಗೆಯುಂ ಮುಚ್ಚುಳ್ದೆಗೆದು ರನ್ನಸರವಂ ನೆಗಟ್ಟುವ ಭಂಡಾಂಗರಂತೆ ಬಗೆವಡೆದ ದಾಡಿಮಂಗಳುಂ . . . ಮನಂಗೊಳೆ (ಕಕಶಂ. ೦೦೨–೨೦).

[ಬಣ್ಣ + ಕರಡಿಗೆ (<ಕರಂಡಿಗೆ)]

**ಬಣ್ಣಗಲ್ಲು** (ನಾ). ಬಣ್ಣದ ಹರಳು ; ರತ್ನ : ಸಂತತ ಬಣ್ಣಗಲ್ಲುಗಳ ಕೇವಣಿಸಿರ್ದ ಚಿಂತಾಕ ಬಲುಹನಿಕ್ಕಿದರು (ಕೋಚಕ. ೩೩–೩೯).

[ಬಣ್ಣ + ಕಲ್ಲು (<ಕಲ್₂)]

**ಬಣ್ಣಗಳ** (ನಾ). ಚೆಲುವಾದ ಕುತ್ತಿಗೆ ; ಅಂದವಾದ ಕೊರಳು : ಸಣ್ಣಗಳ ನುಣ್ಗೊರಳು ಸವಿಗಳ ಬಣ್ಣಗಳವೋ ಕಂಬುಕಂಠವೊ ಬೆಣ್ಣ ಗಳವೋ (ಕಾಶಖ. ೦೩೨-೫೦). [ಬಣ್ಣ+ಗಳ$_{2}$ ( = ಗಲ)]

**ಬಣ್ಣಗಾಣ್** (ಕ್ರಿ). ಸತ್ತ್ವವನ್ನು ತಿಳಿ ; ಯೋಗ್ಯತೆಯನ್ನು ಅರಿ : ಅರೆವನಯ್ಯಾ ಸಣ್ಣವಹನ್ನಕ್ಕ ಒರೆವನಯ್ಯಾ ಬಣ್ಣಗಾಣ್ಬನ್ನಕ್ಕ (ಬಸವ. ೬೮೬). [ಬಣ್ಣ + ಕಾಣ್]

**ಬಣ್ಣಗಾರ** 'ಬಣ್ಣಗಾಱ' ನೋ.

**ಬಣ್ಣಗಾರಿಕೆ** 'ಬಣ್ಣಗಾಱಿಕೆ' ನೋ.

**ಬಣ್ಣಗಾಱ**, ಬಣಕಾರ, ಬಣಗಾರ, ಬಣ್ಣಗಾರ (ನಾ). ೧. ಬೂಟಾಟಿಕೆ ಮಾಡುವವನು ; ಸೋಗುಗಾರ : 'ಬಣ್ಣಗಾಱಿಕೆ' ಪರಾ. **ಬಣಕಾರ** : ೨. (ಮರದ ಸಾಮಾನು, ಬಟ್ಟೆ ಮುಂತಾದುವಕ್ಕೆ) ರಂಗು ಹಚ್ಚುವ ಜನಾಂಗಕ್ಕೆ ಸೇರಿದವನು ; ರಂಗಾರಿ : ಬಣಕಾರ ಫಕೀರಪ್ಪನಲ್ಲಿ . . . ವಿವರಗಳನ್ನು ಚರ್ಚಿಸಿ ಆಯಿತು (ಗಂಕೂಹು. ೨೦೬) ; ಬಣಕಾರರು . . . ಕೊಟ್ಟವನ್ನೂ ತಂಬಾಕಿನ ಕಡ್ಡಿಪುಡಿಯನ್ನೂ ಅಣಿ ಮಾಡಿದರು (ಸುಕಸಂ. ೫೦). **ಬಣಗಾರ** : ೩. (ಚಿತ್ರ ಬರೆದು) ಬಣ್ಣ ಹಚ್ಚುವವನು : ಆನಿ ಮ್ಯಾಗಿರುವ ಶಿವದಾರ ಮೊಗ್ಗಿಯು ಯಾವ ಬಣಗಾರ ಬರೆದಾನ (ಜೋಳಗಿ. ೬೨). **ಬಣ್ಣಗಾರ** : ೨. ಹೊಸಮನೆಯ ಗೋಡೆಗಳಿಗೆ ಬಣ್ಣ ಹಚ್ಚಲು ಅವರು ನಾಲ್ಕು ಜನ ಬಣ್ಣಗಾರರನ್ನು ಕರೆಸಿದ್ದರು (ಕೂ೨). [ಬಣ್ಣ + —ಗಾಱ (< —ಕಾಱ)]

**ಬಣ್ಣಗಾಱಿಕೆ**, ಬಣ್ಣಗಾರಿಕೆ (ನಾ). ೧. ಬೂಟಾಟಿಕೆಯ ನಡವಳಿಕೆ ; ಬಣ್ಣಾಚಾರ ; ತೋರಿಕೆಯ ವರ್ತನೆ : ನಾ ತಪ್ಪ ನುಡಿದಡೆ ಒಪ್ಪವಿಟ್ಟುಕೊಳ್ಳಿರಣ್ಣಾ ಕಣ್ಣನಲ್ಲಿ ಕಸ ಹೊಕ್ಕರೆ ಕೈ ಹಗೆಯೆ ಅಯ್ಯಾ ಇದು ಬಣ್ಣಗಾಱಿಕೆಯಲ್ಲ ಸನ್ನದ್ಧರಿರವು (ಶೋಳಶಖ. ೩೫-೦೯೬) ; ಜಡಪಾತ್ರವೆಂದು ನಮ್ಮತ್ತ ನೋಡದೆ ತನ್ನ ಹಡಪವೆಂಗಳ ನೋಡುತಿದ್ದ ಅಡೋಗ ಬಣ್ಣಗಾಱಿಕಗೆ ಕರೆಸಲಾತನೆಡೆಗೆ ನಾವೆಂತ್ರಿಯ್ದುಬಹುದು (ಚಶ. ೦೯-೩೮). **ಬಣ್ಣಗಾರಿಕೆ** : ೧. ಕಣ್ಣಿಗೆ ಇಚ್ಚೆಯಾಗದ ನಮ್ಮನ್ನು ಈಗ ಬರಿಯ ಬಣ್ಣಗಾರಿಕಗೆ ಕರೆವುದು ಏಕೆ ? (ಮಾಮುಲ್ಲ. ೦೦೨). ೩. ಬಣ್ಣ ಹಚ್ಚುವಿಕೆ ; ರಂಗು ಬಳಿಯುವಿಕೆ : ವರ್ಣಕ್ರಿಯಾವಿಸ್ತಾರಗುಣವಚನೇಷು, ಬಣ್ಣಗಾರಿಕೆಯೊಳಂ, ಬಿತ್ತರದೊಳಂ, ಕೋಡಾಟದೊಳಂ (ಶಾಕಶ್ಮ. ೨೯೦).
[ಬಣ್ಣಗಾಱ + — ಇಕೆ]

**ಬಣ್ಣಗುಂದು** 'ಬಣ್ಣಂಗುಂದು' ನೋ.

**ಬಣ್ಣಗುದುರೆ** (ನಾ). ಮುಖವೂ ಕಾಲೂ ಬೆಳ್ಳಗಿದ್ದು, ಮಿಕ್ಕ ಭಾಗವು ಬೇರೆ ರಂಗುಗಳಿಂದ ಕೂಡಿದ ಕುದುರೆ ; ಪಂಚಕಲ್ಯಾಣ : ಇಂತು ಮುಂಟೆ ಬಂದ ಶರತ್ಕಾಲದೊಳ್ ಲಾಘವನ ಜನ್ನದ ಬಣ್ಣಗುದುರೆ ತೆಂಕಲ್ಗೆ ಮೊಗಮಿಕ್ಕಿ ನಡೆಯುತುಮಿರ್ಪುದುಂ ( ರಾಮಾಶ್ವ. ೬೩-೦೮ ) ; ಮಿಪ್ಪೂರ ನಿಗಳದೊಂದು ಬಣ್ಣಗುದುರೆ (ರಾಮಾಶ್ವ. ೬೯-೨೫).
[ಬಣ್ಣ+ಕುದುರೆ]

**ಬಣ್ಣಗುರುಡ** (ನಾ). ಬೇರೆ ಬೇರೆ ಬಣ್ಣಗಳನ್ನು ಕಂಡುಹಿಡಿಯಲಾಗದ ದೃಷ್ಟಿದೋಷವುಳ್ಳವನು : ಬಣ್ಣಗುರುಡರಲ್ಲಿ ಕೆಲವಟ್ಟಿಗಾದರೂ ಕೆಲವು ಬಣ್ಣಗಳನ್ನು ಗುರುತಿಸುವಷ್ಟು ಸಾಮರ್ಥ್ಯ ಇದ್ದೇ ಇರುತ್ತದೆ (ಕಂಕೋ. XI, ೮೩೩). [ಬಣ್ಣಗುರುಡು + — ಅ$_{1}$]

**ಬಣ್ಣಗುರುಡು** (ನಾ). ಬೇರೆ ಬೇರೆ ಬಣ್ಣಗಳನ್ನು ಕಂಡು ಹಿಡಿಯಲಾಗದಿರುವ ಒಂದು ಬಗೆಯ ಕಣ್ಣಿನ ದೋಷ : ತಂಬಾಕು ಮತ್ತು ರಾಸಾಯನಿಕವಸ್ತುಗಳ ಸೇವನೆಯಿಂದ ದೃಷ್ಟಿಪಟಲದ ನರಕಣಗಳು ಶಿಥಿಲಗೊಂಡು ಬಣ್ಣಗುರುಡನ್ನುಂಟುಮಾಡಬಲ್ಲವು (ಕಂಕೋ. XI, ೮೩೩).
[ಬಣ್ಣ + ಕುರುಡು]

**ಬಣ್ಣಗುರುಡುತನ** (ನಾ). = ಬಣ್ಣಗುರುಡು: ಬಣ್ಣಗುರುಡುತನದಲ್ಲಿ ಎರಡುಬಗೆಯುಂಟು (ಕಂಕೋ. XI, ೮೩೩). [ಬಣ್ಣ + ಕುರುಡುತನ]

**ಬಣ್ಣಗೂಡು** (ಕ್ರಿ). ರಂಗೇರು ; ಹೊಳಪುಂಟಾಗು : ಆ ಬೆಳವಲ ಗಿಡಕ್ಕೆ ಹೊಸ ಚಿಗುರೆಲೆ ಮೂಡಿ ಬಣ್ಣಗೂಡಿ ಮಿರಿಮಿರಿ ಮಿಂಚಹತ್ತಿದ ದಿನ ತಿಳಿಯುತ್ತಿದ್ದೆ . . . ವಸಂತಾಗಮನ ಆಗಿದೆ ಎಂದು (ಜ್ಯೋ. ೯೩೬).
[ಬಣ್ಣ+ಕೂಡು$_{1}$]

**ಬಣ್ಣಗೂಳ್**, ಬಣ್ಣಗೂಳು (ನಾ). (ದೃಷ್ಟಿದೋಷ ಮುಂತಾದುವುಗಳ ನಿವಾರಣೆಗಾಗಿ ಚೆಲ್ಲುವ) ಅರಿಸಿನ, ಕುಂಕುಮ ಮುಂತಾದುವುಗಳನ್ನು ಬೆರಸಿದ ಅನ್ನ ; ಬಣ್ಣದ ಅನ್ನ : ಭೂತಸಂತುಷ್ಟಿಯುಪ್ಪಂತೆ ಕಾಱಿಕೋಣಂಗಳಂ ಪೊಯ್ದು ಬಣ್ಣಗೂಳಂ ಪಸರಿಸಿ (ಕೃಪಿಶಾ. ೫-೬೨) ; ಚಂಗೆ ಚಂಗೆಯಲಿ ಚರುಚೆಟ್ಟಿವಿಳ್ದುದು ಬಣ್ಣಗೂಳ್ (ತ್ರಿಲಾಮೂ. ೬೬೮-೨೦೦). **ಬಣ್ಣಗೂಳು** : ಬಹುವರ್ಣದಲ್ಲಿ ರಂಜಿಪ ಬಣ್ಣಗೂಳು ಬೆಳ್ಳ ಪೊಂಬರಿವಾಣಗಳ ತುಂಬಿ ಸುಳಿಹೆತ್ತಿ ಚೆಲ್ಲಿಸಿದಳು ದೆಸೆದೆಸಗೆ (ಮೋಹಕ. ೩೦-೩೬) ; ಧರ್ಮರಾಯ . . . ಭೂತಸಂತುಷ್ಟಿ ಆಗುವ ಹಾಗೆ ಕುರಿ — ಕೋಣಗಳನ್ನು ಹೊಯ್ದು ಬಣ್ಣಗೂಳನ್ನು ಚೆಲ್ಲಿಸಿದ (ಐದುಕ. ೨೩). [ ಬಣ್ಣ + ಕೂಳ್ (< ಕೂಟು$_{1}$) ]

**ಬಣ್ಣಗೂಳು** ' ಬಣ್ಣಗೂಳ್ ' ನೋ.

**ಬಣ್ಣಗೆಡಿಸು** (ಕ್ರಿ). (ಭಯದಿಂದ) ಸತ್ತ್ವಹೀನವಾಗುವಂತೆ ಮಾಡು; ದುರ್ಬಲಗೊಳಿಸಂ : ಪೆರ್ಬುಲಿ . . . ಕೊಳ್ವಣ್ಣನ ಬಣ್ಣಗೆಡಿಸಿದುದು (ಹಾಳ್ಕಾ. ೫-೩೫). [ಬಣ್ಣಗೆಡು (<ಬಣ್ಣಂಗೆಡು ) + — ಇಸು$_{1}$]

**ಬಣ್ಣಗೆಡು** 'ಬಣ್ಣಂಗೆಡು' ನೋ.

**ಬಣ್ಣಗೇಡು** (ನಾ). ಮಾನಗೇಡು ; ಮಾನಹಾನಿ : ಬಾಯಿ ಬಟ್ಟರೆ ಬಣ್ಣಗೇಡು (ಗಾದೆ). [ಬಣ್ಣ + ಕೇಡು]

**ಬಣ್ಣಗೊರಲ್** (ನಾ). ಸೊಗಸಾದ ಕಂಠ; ಇಂಪಾದ ಧ್ವನಿ : ಬಣ್ಣಗೊರಲ್ಪೆದೆಯರ್ ಸೋಬನವಾಡುಂ ಪಾಡುಗೆ (ಅಳವು. ೦೯೮-೮).
[ಬಣ್ಣ + ಕೊರಲ್ ]

**ಬಣ್ಣಗೊಳ್** (ಕ್ರಿ). ಸ್ವಾರಸ್ಯದಿಂದ ಕೂಡಿರು ; ರಸವತ್ತಾಗಿರು : ಬಾಲ್ಯ, ಮದುವೆ, ವನವಾಸವು, ವಿರಹ, ಚಿಂತೆ, ವಿಧಿ, ರೋಷವು ಬಣ್ಣಗೊಂಡು ನಲಿದಿವೆ (ಸ್ವಪ್ನ. ೩೯ ). [ಬಣ್ಣ + ಕೊಳ್$_{1}$]

**ಬಣ್ಣಗೊಳಿಸು** (ಕ್ರಿ). ರಂಗಾಗುವಂತೆ ಮಾಡು; ವರ್ಣಮಯವಾಗಿಸು : ಕೆರೆ ಕೆರೆಯ ಹರಹಿನೊಳು ಜಲಹಾಸವನು ಮೆರಸಿ ತಿರೆ ಬಣ್ಣಗೊಳಿಸುವೀ ಬಿಸಿಲ ನಲವು (ಮುಕರೀ. ೦೮-೯).
[ ಬಣ್ಣಗೊಳ್ + — ಇಸು$_{1}$ ]

**ಬಣ್ಣಗೋಗಿಲೆ** (ನಾ). ಚೆಲುವಾದ ಕೋಗಿಲೆ : ಅರಸಂಚೆ ಸೋಗೆನವಿಲು ಬಣ್ಣಗೋಗಿಲೆ ಹರಿರಥಾಂಗದ ಪ್ರತಿಮೆಗಳು ಮೆಱೆದುವು ಚೌದಸೆಯುಪ್ಪರಿಗೆಗಳೊಳು (ಕಂಕಶ. ೬-೨೮). [ ಬಣ್ಣ + ಕೋಗಿಲೆ ]

**ಬಣ್ಣಗೋರಟೆ** (ನಾ). ಒಂದು ಬಗೆಯ ಸ್ಫಟಿಕದ ಗಿಡ ಮತ್ತು ಅದರ ಹೂವು : "ರಾಜಶರ್ಯಕಃ — ಬಣ್ಣಗೋರಟೆ" (ಬಕಧಿ. ೧೩೮).
[ಬಣ್ಣ + ಗೋರಟೆ (< ಗೋರಂಟೆ) ]

**ಬಣ್ಣಗೋಲ್** (ನಾ). ೧. (ಕೋಲಾಟವಾಡುವಾಗ ಬಳಸುವ) ಬಣ್ಣ ಬಳಿದ ಕೋಲು : ಜಡೆಕೋಲಾಟದ ಸುನ್ದರಿಯನ್ನು ಒಡ್ಡಿಸಿ . . . ಗೆಜ್ಜೆಯ ಬಣ್ಣಗೋಲ್ಗಳನ್ನು ಹಂಚಿಸುತ್ತಿರುವವಳು (ಕಲ್ಪ. ೦೬೯-೦೯). ೨. ರಂಗುರಂಗಿನ ಹೂವುಗಳಿಂದಾದ ಬಾಣ : 'ಬಣ್ಣಗೋಲ' ಪರಾ.
[ಬಣ್ಣ + ಕೋಲ್$_{1}$]

**ಬಣ್ಣಗೋಲ** (ನಾ). ರಂಗುರಂಗಿನ ಹೂವುಗಳಿಂದಾದ ಬಾಣವನ್ನುಳ್ಳವನು; ಮನ್ಮಥ : ಬಣ್ಣಗೋಲನ ತೋಳ ಸಾವಿನ ನುಣ್ಣಗಂಭವೊ

ಗಾನಕಾಯತ ಸಣ್ಣ ಕೋಮಲ ಸೀತಗಳವಹುದೆಂದೆಳಿಂದುಮುಂಖ (ಹಾಪಚ. ೦೬೨-೫೦). [ಬಣ್ಣಗೋಲ್ + – ಅ]

**ಬಣ್ಣಾಟಿ ?** (ನಾ). (?) : ಮಂಜಡಣ ಹೆಗ್ಗದ್ದೆ ಅದಜ ವೇಂಗಣ ಕೊಡಂಗೆ ಎರಡಟಲ್ಲಿಯೂ ಮೂಡೆ ೨ ಬಂಣಾಟಿ ತುಂಡೆ ೨ (ಎಇ. XXVII. ೦೬೨-೯೯;1268) [?]

**ಬಣ್ಣಾದಳೆ** (ಕ್ರಿ). ರಂಗನ್ನು ಪಡೆ; ರಂಗೇರಂ : ಬಣ್ಣಾದಳೆದ ರನ್ನವಾವುಗೆ ಎಡೆದೆಳ್ಗಣ್ಣಾವೆಳದನೊತ್ತಿನವಿ (ಸೋಕಶ. ೯-೦೩). [ಬಣ್ಣ + ತಳ್ಳಿ]

**ಬಣ್ಣಾದುಟಿ** (ನಾ). ಕೆಂಪಾದ ತುಟಿ; ಚೆಂದುಟಿ : ಆ ರಸಭರಿತ ವಿಚಿತ್ರದೆ ಚಿತ್ರದ ನಾರಿಯು ಬಣ್ಣಾದುಟಿಯು ಬಂದುಗೆಯೊಳು . . . ನೃಪತಿಯು ಚಾರುನಯನನವತಿಲಗ್ನಂಬದುವು ಬಂಡುಣಿವಳಿಯಂತೆ (ಜಯಣ. ೩-೦೦) ಎಣ್ಗೆಗಂಟುಗಳ ತಡಹುತ ಬಣ್ಣಾದುಟಿಯು ಭಾವವ ಬೀಜುತ ಮುದ್ದು ವೆಣ್ಣುಗಳ್ಳೆತಂದರಾಗ (ಕಂಕಶ. ೨೦-೭೪). [ಬಣ್ಣ + ತುಟಿ]

**ಬಣ್ಣಾದೋರು** ' ಬಣ್ಣಾದೋಱು ' ನೋ.

**ಬಣ್ಣಾದೋಱು**, ಬಣ್ಣಾದೋರಂ (ಕ್ರಿ). ೧. ಬೆಡಗು ಮಾಡು; ಥಳಕು ತೋರಿಸು : ಕಣ್ಣ ಮೊದಲಲ್ಲಿ ಕುಳ್ಳಿರ್ದ ಬಣ್ಣಾದೋಱುವ ಪರಿಯ ನೋಡಾ ಬಣ್ಣವಿಲ್ಲದ ಬಣ್ಣವನುಟ್ಟು ಸುಳಿದ ಅಜಗಣ್ಣನ ಯೋಗಕ್ಕೆ ಬೆಱಗಾದೆನು (ಶಿಶಕ್ಕಸಂ. ೨೬-೦೪). **ಬಣ್ಣಾದೋರು** : ೨. ಯೋಗ್ಯತೆ ಯನ್ನು ವ್ಯಕ್ತಪಡಿಸು : ಇನ್ನುಳಿದುದು ಸಹೃದಯಹೃದಯನಿಕಷದಲ್ಲಿ ಬಣ್ಣದೋರಬೇಕು (ಕುಂತೀರಾಜ. ೫-೦೯). [ಬಣ್ಣ + ತೋಱು]

**ಬಣ್ಣನಿದಿಗೆ?** (ನಾ). (?) : ಕುದುರೆಯ ಕೊಟ್ಟಲ್ಲಿ ಪಣ ೧ ಕೊಂಡಲಿ ಪಣ ಬಂಣನಿದಿಗೆಗೆ ಸೊ ೨ ಕಂಚಿಗನ ನಾಯಕಿಟಿಯಲಿ ಗದೆ ಖ ೩ ಕಯು ಖ (ಎಇ· IX (8). ಕೊರತ್ತ. ೬೦-೬೯ ; ಸು. 1260). [?]

**ಬಣ್ಣನೆ**, ಬನ್ನಣೆ (ನಾ). ೧. ವರ್ಣಿಸುವುದು ; ವರ್ಣನೆ : " ಬಣ್ಣನೆ—ವರ್ಣನಾ (ಕದ್ಯಕೋ. ೨೬); ಅಣ್ಣಾಕೇ ಕೀತಗಳ ಮಾತಿನ ಬಣ್ಣನೆ ಗಳಂತಿರಲಿ ಭೂಮಿಯು ತಿಣ್ಣವನು ತಿದ್ದಲಿಕೆ ಹರಿ ನರನಾಗಿ ರೂಹಿಸಿದ (ಕೊಶಾ. ೬ ೨-೨೦); ಬಣ್ಣನೆಯ ನುಡಿಜಾಣ್ಕೆಗವಸರವಲ್ತು (ಜಶಜಕ್ಕ. ೨೯-೩). ೨. ಸ್ತುತಿ; ಹೊಗಳಿಕೆ : ' ಬಣ್ಣಿಸಂ ' ಪರಾ. ೩. ತೋರಿಕೆ; ಸೋಗು ; ನಟನೆ : ಬಣ್ಣಣೆ (ನೆ)ಯ ಕುಸುಱ ವಾತುಗಳಣ್ಣಂದಿರ ತೆಱದ(ದಿ)ನನ್ನದಿನ್ನದೆನುತ್ತಾಂ ಬಣ್ಣಿಸಲಱಿಯಂ (ಚಕುಜಾ. ೦-೬೦). **ಬನ್ನಣೆ** : ೧. ರಾಯನೊಡವೆಯ ಸವಿಸವಿದು ವುಂಡಾಯ್ತಿಕೆ ನಿನಗಹುದು ಸಭೆಯಲಿ ಬಾಯ ಬನ್ನಣೆಯಧಿಕ ವೀರಾಳಾಪ ನಿನಗಹುದು (ಕುಮ್ಮಾಕ್ರೀ. ಹು. ೨೯೯); ವೀರರಾಳಾಪದ ವಿವುಳ ಪ್ರತಾಪದ ಬನ್ನಣೆಯ ಬಿನ್ನಣದ . . . ಹರಿಗೇರಾಜರ ಮೊತ್ತದೊತ್ತಿನು ಭಯಪಾರ್ಶ್ವದೊಳಿಂಬುಗೊಂಡು (ಜಯ್ಮಿಕಿ. ೩-೩೩ ಕ). 'ಬನ್ನಣೆಗಾಱ' ಪರಾ. ೩. ಪುರುಷರನು ಬೆಗಡುಗೊಳಿಸುವ ಬನ್ನಣೆಯ ನುಡಿಯ ಭಾವೆಯರು ಬರುತ್ತಿದ್ದರು (ಶಶಶೂ. ೨೯-೦೩). ೪. ಚೆಲುವು; ಸೌಂದರ್ಯ : ' ಬನ್ನಣೆಗಾರ್ತಿ ' ಪರಾ. ೫. ವರ್ಣಲೇಪನ : ತನ್ನ ಚಿಂತೆಯದೊಂದು ದೈವದ ಗನ್ನಗತಕವದೆರಡು ಭಾವದ ಬನ್ನಣೆಯ ಬಗೆ ಮೂಱು ದೈವದ ಭಿನ್ನಮುಖ ನಾಲ್ಕು (ಕುಜ್ಞಾ. ೩-೫); ಬಯಲ ಬನ್ನಣೆ ಸಂಸಾರಾಯಿದ ಭಾವಿಸಿ ನೋಡಲು ಘೋರ (ಕಕ್ಕಕ. ೩೬-೨). ೬. ಅಲಂಕಾರ; ಶೋಭೆ : ನನ್ನಿಯಂ ಭೂಕಾಂತೆಯೆನುತ ಲೋಷಧಿಯರಸ ಮನ್ನಿಸುತ ವಸುರುಡಿಗೆಗೊಟ್ಟನೋಡೆನೆ ಕೆಳವು ಬನ್ನಣೆಯೊಳಾ ಪುರವ ಬಳಸಿರ್ದುದೇನೆಂಬೆ ಸಂಭ್ರಮ ವಿಜ್ಞಂಭಣೆಯನು (ಕಂಕಶ. ೦-೫-೩೯). [<ಸಂ. ವರ್ಣನ]

**ಬಣ್ಣನೆಗಾರ**, ಬನ್ನಣೆಗಾಱ (ನಾ). ವರ್ಣಿಸುವವನು; ಬಣ್ಣನೆ ಮಾಡುವನು : ' ಬಣ್ಣನೆಗಾರ್ತಿ ' ಪರಾ. **ಬನ್ನಣೆಗಾಱ** : ಬನ್ನಣೆ ಗಾಱರೊಳ್ಪುಂಚರಕ್ಕರಿಗರ್ ಕೆಳೆವಾರ್ವ ಮಕ್ಕಳುಂ ತನ್ನೊಡಣಾಡೆ ನಾಡೆ ನಲಿಗುಂ ಚಿಱದೇವನೃಪಂ (ಚಿಶಂ. ೫-೦೦೦).

[ ಬಣ್ಣನೆ + – ಗಾರ ( < – ಕಾಱ) ]

**ಬಣ್ಣನೆಗಾರ್ತಿ**, ಬನ್ನಣೆಗಾರ್ತಿ (ನಾ). ೧. ಬಣ್ಣಿಸಂವವಳು: "ವರ್ಣನೆ ಮಾಡುವವಳು" (ಶ್ರಕಚ). **ಬನ್ನಣೆಗಾರ್ತಿ** : ೨. ಚೆಲುವೆ; ಸುಂದರಿ : ಚೆನ್ನಾಗಿ ಲಾಲಿಸು ಚೆಲ್ವಡರಿದ ನಿನ್ನ ಕರ್ಣಾಂತರದಲಿ ಪೇಳುವ ಹೊನ್ನ ಹೂವಿಗೆ ಪರಿಮಳ ಬರೆ ಪೇಳುವೆ ಬನ್ನಣೆಗಾರ್ತಿ ಚಿತ್ತೈಸು (ಸೋಕಶ. ೨೯-೨). [ಬಣ್ಣನೆಗಾರ + – ತ್ತಿ ( < – ಇತ್ತಿ)]

**ಬಣ್ಣನೆನುಡಿ**, ಬನ್ನಣೆನುಡಿ (ನಾ). ಹೊಗಳಿಕೆಯ ಮಾತು; " ವರ್ಣಾನೋಕ್ತಿ, ಸ್ತುತಿವಚನ " (ಶ್ರಕಚ). **ಬನ್ನಣೆನುಡಿ** : ಅಲ್ಲಿ ನೆರೆದಿರ್ದ ಪಾರ್ಥಿವರೆದೆ ತಳವೆಳಗಾಗೆ ರಾಯನ ಕುವರಿ ಬಳಸಲ್ಕ ದಾದಿಯ ಬನ್ನಣೆ ನುಡಿಗೆ ಪೆರ್ಕಳಿಸುತ್ತಿದಿದಳಾ ಸಭೆಗೆ (ಕಜಕ್ಕ. ೫-೦೨); ಪ್ರೌಢನಳಸಿಂಗ ರಾರ್ಯಂ ರೂಢಿಗೆ ಬರ್ಪಂತುಟುಸಿರ್ದ ಬನ್ನಣೆನುಡಿಯೊಳ್ ಪ್ರೌಢಿಗೆ ಪಿಟ್ಟುಗ್ರಸರಸಂ ಗಾಢೋತ್ಸುಕನಾದನಾತ್ಮಜಾಲೋಕನದೊಳ್ (ಅಜಾ. ೯-೫೫). [ಬಣ್ಣನೆ + ನುಡಿ]

**ಬಣ್ಣನೆಮಾತು**, ಬನ್ನಣೆಮಾತು (ನಾ). ಹೊಗಳಿಕೆಯ ಮಾತು ; ಕೊಂಡಾಟದ ನಂಡಿ : [ಬಣ್ಣನೆ] [ಪಾಠಂ. ಬನ್ನಣೆ]ವಾತಾಡುವ ಪರಿಹಾಸಗೈವ ಗಾಡಿಕಾತಿಯರು ಗಣನೆಯಿಲ್ಲದೆ ಜೋಡುಗೂಡಿರುವರು ಕೊರ್ವರ್ಯೊಳು (ಜಂಂ. ೦-೦೬). **ಬನ್ನಣೆಮಾತು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಬಣ್ಣನೆ + ಮಾತು]

**ಬಣ್ಣನೆವೇಱು** (ಕ್ರಿ). ಕೊಂಡಾಟವನ್ನು ಪಡೆ ; ಹೊಗಳಿಸಿಕೊಳ್ಳು : ಪತಿಪಾದಭಕ್ತೆಯರೆನಿಸಿ [ಬಣ್ಣನೆ]ವತ್ತ ಸತಿಯರೂಲಿದು ಸಮನಿಸುವ ಪತಿಶುಶ್ರೂಷೆಯ ಬಗೆಯನಱಿತು ಸಂಗತಿಗೈದದನು ಬಣ್ಣಿವೆನು (ಜಂಂ. ೩-೩). [ಬಣ್ಣನೆ + ವೇಱು]

**ಬಣ್ಣಬಂಟ ?** (ನಾ). (?) : ಅಕ್ಕಿಗೆಯೊಬ್ಬಳ ಕೊಡ್ಕಾಡಿ ದಾಹೋದು ಕಂಡೆ ಸತ್ಯವ ಮಾಡುವ ಸಾರನೆಂಟ ಬಣ್ಣಬಂಟ ನೊೞಂಟ ಬಿಡು ಎನ್ನ ಗಂಟ (ಕಶಕ. ೫೫-೨). [?]

**ಬಣ್ಣಬಣ್ಣಿಗೆ** 'ಬಣ್ಣವಣ್ಣಿಗೆ' ನೋ.

**ಬಣ್ಣಬಾಸಿಗ** 'ಬಣ್ಣವಾಸಿಗ' ನೋ.

**ಬಣ್ಣಮೀನ್** (ನಾ). ಒಂದು ಬಗೆಯ ಬಣ್ಣದ ಮೀನು : ಗೋರಿ ವಲೆ ಮಂಡವಲೆಗಳೆಂಬಿವಂ ಬೀಸರಂಬುಗದ ದರ್ಪ ಬೀಸಿದಾಗಳ್ . . . ಪಂದಿಮೀನ್ ಪೆಱಮೀನ್ ಬಗ್ಗಡೆ ಬಣ್ಣಮೀನೆಂಬಿವೆಲ್ಲಂ ಬೀಳ್ಪುವಾ ತಾಣದೊಳ್ (ರಾಜಾ. ೫-೦೦೩). [ಬಣ್ಣ + ಮೀನ್]

**ಬಣ್ಣವಟ್ಟಿಗೆ** (ನಾ). (ಕದಕ್ಕೆ ಹಾಕುವ) ಕೆತ್ತನೆ ಕೆಲಸ ಮಾಡಿದ ಅಡ್ಡಪಟ್ಟಿ : ಮಣಿಸತ್ತಿಗೆಯು ಮೊಗಮಂಟಪದ ಬಣ್ಣವಟ್ಟಿಗೆಯು ಅವಳಿಗುಟಿಯು . . . ಸಿಂಗರದೊಂದು ದೇಗುಲಂ ಕಣ್ಗೆಡ್ಡಮಾಗಿ ರಂಜಿಕುಂ (ಹಾಜುತ್ಕ. ೫೯-೨೦). [ದೇ. ೩ ತುಳು. ಬಣ್ಣಾಟಗೆ, ಬಣ್ಣಾಟಗೆ]

**ಬಣ್ಣವಡೆ** 'ಬಣ್ಣಂಬಡೆ' ನೋ.

**ಬಣ್ಣವಣ್ಣಿಗೆ**, ಬಣ್ಣಬಣ್ಣಿಗೆ, ಬಣ್ಣಾಬಣ್ಣಿಕೆ, ಬಣ್ಣಾವಣ್ಣಿಗೆ (ನಾ). ೧. ಬಣ್ಣ ಬಣ್ಣಗಳಿಂದ ಕೂಡಿದುದು; ನಾನಾವರ್ಣಗಳಿಂದ ಕೂಡಿದುದಂ : ಸೂಟಸೂಟದೇಂ ಸವಿದುಪೊ ಬಣ್ಣವಣ್ಣಿಗೆಯ ಪೂಗಳ ಸೌರಭಮಂ ಮದಾಳಿಗಳ್ (ಅಂಕ. ೦೦-೦೨೬); ಬಣ್ಣಪುರಂ ತೀವಿದಂತೆ ಬೆಡಂಗುವಡೆದ ಬಣ್ಣವಣ್ಣಿಗೆಯ ನೀರ್ಪೂಗಳ ರಜಂಗಳುಮನೊಳ ದೊಂಡಿನ ಪಾಲ್ಗಳುಮಂ ಪೀರ್ದು (ಕಾದಂಬ. ೩೩೬); ಗಗನತಳದೆಗಳೆಯೊಳ್ ಖಚಿತರತ್ನಕದಂಬದ ಕಾಂತಿ ಬಣ್ಣವಣ್ಣಿಗೆಯ ಮುಗಿಲ್ಗಳಂ ಕಿಡಿಜ್ (ಅಜಂಕ. ೯-೬೩). ೨. ಬಣ್ಣ ಬಳಿಯುವುದು; ಚಿತ್ರಣಕಾರ್ಯ: ಹೊಂಬಿನ

ಪಲಗೆಯುಮಂ ಬಣ್ಣವಣ್ಣಿಗೆಯ ಬಟ್ಟಗೆಗಳಂ ತಾನೆ ತಂದು ಕೊಟ್ಟು (೦೧ಹಾಕ. ೬-೫೪ ವ); ಅವನ ಬಣ್ಣವಣ್ಣಿಗೆಯ ಸ್ಪರ್ಶ ಸ್ಪರ್ಶಕ್ಕೆ ಚಿತ್ರದ ರೂಪು ಕಣ್ದೆರೆಯುಪಂತಿತ್ತು (ಶಿಚಾಕ. ೨೪). ೩. ಅನೇಕ ವಿಧವಾದುದು; ಬಗೆಬಗೆಯಾದುದು: ಬೆಣ್ಣೆಗಳ್ಳನ ನಟ್ಟಿ ಹಣ್ಣೆ ಶಿವವಿರಹಿತಂ ಬಣ್ಣವಣ್ಣಿಗೆಯ ದೈವವೆ ನೆರವಲು (ಶಾಶಂಕ. ೨-೬೬). ೪. ಹೊಗಳಿಕೆ; ಸ್ತುತಿ: ಕೊಂಡಾಟ: ಪರಿಪರಿಯ ಬಣ್ಣವಣ್ಣಿಗೆಗಳಿಂ ಜಪಿಸುತುತ್ತರದಿಬ್ಬುಖಕೆ ನಡವುತೆ (ಹಕ್ಕಾತ. ೬-೫೪). ೫. ಸೊಗಸು; ಅಂದ: ಬಣ್ಣಸರವ ಪಸರವನಿಕ್ಕಿ ದಂತೆಲ್ಲ ಬಣ್ಣವಣ್ಣಿಗೆಯಲ್ಲಿ ಕಳೆತು ಸಣ್ಣದನಿಯಸೆಯ ಬಸದಿ ತುಂಬಿರೆ ಕೂರ್ತರ್ ಬಣ್ಣಿಸಿದರು ಪುರುಜನನ (ಚಿಕ. ೦೮-೬೨). ೬. ಬೆಡಗಿನ ವರ್ತನೆ; ಬಣ್ಣಾಚಾರ; ಬಿನ್ನಾಣದ ನಡವಳಿಕೆ: ಹೆಚ್ಚಿದುದು ನಿನ್ನ ರಾಣಿವೆಯುದಚುನವರೊಳಗೆ ಮಚ್ಚರವ ಮಾಡಬೇಡೆಂಬುದನ ಬಿಟ್ಟು ನಿನ್ನಿಚ್ಚೆಗತನದಿ ಬಣ್ಣವಣ್ಣಿಗೆಯ ಮಾತನಾಡುವುದು ನನಗಾದುದಿಲ್ಲ (ಹಟ್ಟಿಳ್ ೦-೯೩). **ಬಣ್ಣಬಣ್ಣಗೆ**: ೧. ಕಣ್ಣಾಪ್ಪಸಂ ತಂದು ಗಣಪದವಿಯಂ ಕೊಟ್ಟು ಬಣ್ಣಬಣ್ಣಗೆಯ ಪೊಸಬೀಳುಡಗೆಗಳಂ ಕೊಟ್ಟು (ಕಬ್ಬಿಕ. ೬೮. ೦೫೦-೦೪). **ಬಣ್ಣಾಬಣ್ಣಿಕೆ**: ೩. ಹಕ್ಕಿ ಪುಕ್ಕಗಳಿಂದ ನಿರ್ಮಿತವಾದ ಬಣ್ಣಾಬಣ್ಣಿಕೆಯಾದ ಅವರ ವೇಷ . . . ಅವರ ಆನಂದವನ್ನು ಸೂಚಿಸುತ್ತಿವೆ (ಶಾರದ. ೩೬೪). **ಬಣ್ಣಾವಣ್ಣಗೆ**: ೧. ಬಣ್ಣಾವಣ್ಣಿಗೆಯ ದುಃಖವನೆಯ್ದಿ ಕುದಿದೇದು . . . ಭವರೋಗಿಶರಥಿಯೇ ದಾಂಟ ನೀಗುವೆವೆಂದು ನೆನೆವುತಿರಲು (ಶಾಶಂಕ. ೪-೬೨ ಕಗಳ). [ಬಣ್ಣ+ಬಣ್ಣಿಗೆ$_1$]

**ಬಣ್ಣವಳಿ** (ಕ್ರಿ). ಸೊಗಸಂ ಕೆಡು; ಅಂದಗೆಡು: ಪಣ್ಣ ಬಾಯಿನವಂ ಬಣ್ಣವಳಿಯದೆ ಕೊಟ್ಟು ಚೂತವಲ್ಲಭನೆಂಬ ಪೆಸರಿಟ್ಟು (೧೧೦೪. ೨-೬೦ ವ).
[ಬಣ್ಣ+ಅಳಿ$_1$ (<ಅಟು$_1$)]

**ಬಣ್ಣವಳ್ಗು** (ಕ್ರಿ). ಕಾಂತಿಗುಂದು; ಕಳಾಹೀನವಾಗು: ಮುದ್ದಾ ಜಮ್ಮಣ್ಣ:— (ಬಣ್ಣವಳ್ಗಿ, ತುಟಿಗಚ್ಚಿ . . . ಕಿಲ್ಲದವನ್ನೆಳೆದು ಕಿರುಗುಂಡಿಗೆ ನಿಲಿಸಿಕೊಳ್ಳುವಳು). (ಬಿಟ್ಟಿ. ೬೬-೦೦).
[ಬಣ್ಣ+ಅಳ್ಗು (<ಅಟ್ಗು)]

**ಬಣ್ಣವಾಡು** (ನಾ). ವರ್ಣನೆಯಿಂದ ಕೂಡಿದ ಸ್ತುತಿರೂಪವಾದ ಹಾಡು: ವೀಣೆದಳೆದು ಬಣ್ಣವಾಡುಗಳಂ ಬಾಜಿಪೋಜಿಯೊಳೊರ್ವಳ್ ನುಣ್ಣುರವೆತ್ತಿ ಪಾಡುವ ಬೆಡಯದೊಳೊರ್ವಳ್ . . . ಬರ್ದಿಲನಾಡೊಳ್ ಬಾಳ್ದಂ (ಕಕಕಂ. ೩೩-೨೦); ದೊಡ್ಡಮ್ಮ . . . ಬಣ್ಣವಾಡಿನ ರಸಗೇಯದ ರಾಗಮಾಲಿಕೆಯನ್ನು ಸವಿಗರೆಯುವಳು (ಶುಂತ್ರಕ. ೩೬-೦೪). 'ಬಣ್ಣಗಬ್ಬ' ಪರಾ. [ಬಣ್ಣ+ಪಾಡು$_2$]

**ಬಣ್ಣವಾಡುಗೆಯ್** (ಕ್ರಿ.) ವರ್ಣನೆಯಿಂದ ಕೂಡಿದ ಸ್ತುತಿರೂಪವಾದ ಹಾಡನ್ನು ರಚಿಸು: ಆ ವಾದ್ಯವಿದ್ಯಾಧಿಕರ್ . . . ಕಾಮತಂತ್ರದ ವೈಶಿಕಪ್ರಕರಣಮಂ ಬಣ್ಣವಾಡುಗೆಯ್ದು ಪಾಡಿದರ್ (ಕಕಂ. ೬-೦೫೪ ವ).
[ಬಣ್ಣವಾಡು+ಕೆಯ್$_1$]

**ಬಣ್ಣವಾತು** (ನಾ). ತೋರಿಕೆಯ ನುಡಿ; ಬಣ್ಣಾಚಾರ; ಸೋಗಿನ ಮಾತು: ಕಣ್ಣೊಳು ನೋಡಿ ಮನದೊಳು ಮಚ್ಚರವನು ಹಣ್ಣುವ ರಾಯರ ಗುಂಡ ಬಣ್ಣವಾತಲ್ಲ ನಿನ್ನಾಣೆ ಮೂಲೋಕದ ಕಣ್ಣುದಯಿಸಿದ ಸೋಡೀಳು (ಕುಣಾಶಾಂ. ೨೪-೩೩); ನಿನ್ನಾ ಬಣ್ಣವಾತಿಗೆ ಮಾಜುವೋದಂ (ಲಶಾಶ್ಯ. ೦೬೩-೨). [ಬಣ್ಣ+ಮಾತು$_1$]

**ಬಣ್ಣವಾವುಗೆ** (ನಾ). ಬಣ್ಣದ ಹಾವುಗೆ; ವರ್ಣಮಯವಾದ ಪಾದರಕ್ಷೆ:- ಆ ವೇಳೆಯೊಳ್ ಮೆಟ್ಟಿದ ಬಣ್ಣವಾವುಗೆಯ . . . ಬೆಡಂಗಿನ ಬಾಲೆಯೊರ್ವಳ್ . . . ಪೊಂಬಟ್ಟಲನೆತ್ತಿ ಬರುತುಮಿರ್ದಳ್ (ಧಾಮೂಕ್ಯ. ೬೫-೦೩). [ಬಣ್ಣ+ಪಾವುಗೆ]

**ಬಣ್ಣವಾಸಿಗ, ಬಣ್ಣಬಾಸಿಗ** (ನಾ). ೧. ಬಣ್ಣಬಣ್ಣದ ಹೂವುಗಳ ದಂಡೆ.—ಮಾಲೆ: ನಮೇರು ಮಂದಾರ ಪಾರಿಜಾತದ ಬಣ್ಣವಾಸಿಗಂಗಳುಂ . . . ಬತಾಮುತ್ತಿನ ಸೇಸೆಗಳುಂ ಬೆರಸು ಮಹತ್ತರದೇವಿಯರ್ ಬಂದು ಪೊಡೆವಟ್ಟು (ಆಪು. ೨-೬೭ ವ); ಅದಿಮೂರ್ತಿಯ ಪಕುಲದ . . . ಕುಂದದ ಬಣ್ಣವಾಸಿಗಂಗಳನುದಾತ್ತಮಾಲ್ಯಂಗಮಹಿರುಹಾ ಕುಡುತಿರ್ಕುಂ (ಶಾಂತಿಪು. ೬-೦೦೨); ಸುರಚಾಪಂಗಳನಿಂದ್ರಂ ಮುರಿದಿಟ್ಟಂತೆಭ್ರಪಥದೊಳೆಗಳ ಬಳಗಂ ಬೆರಸಿಸೆವ ಬಣ್ಣವಾಸಿಗವೆರಡಂ ಚಲದಮಲಕಮಳಲೋಚನೆ ಕಂಡಳ್ (ಸೂಕ್ತಿಸು. ೬-೫೪). **ಬಣ್ಣಬಾಸಿಗೆ**: ೨. ಮದುಮಕ್ಕಳ ಹಣೆಗೆ ಕಟ್ಟುವ (ಬಣ್ಣದ ಕಾಗದ, ಬೆಂಡು ಮುಂತಾದುವುಗಳಿಂದ ಮಾಡಿದ) ಒಂದು ಬಗೆಯ ಅಲಂಕಾರ + ತರುಳ ತೊಂಡಲು ಖಂಡದ ಬಣ್ಣಬಾಸಿಗ ನರದ ಹಂಜರ ಚಪ್ಪರದಲಿ ನೆರೆದು ಶಾಕಿನಿಯರು ಮದುವೆಯ ಮಾಡುತ ಮೆಚಿದರು. (ಚಂಸಾ. ೦೩-೬೩). [ಬಣ್ಣ+ಬಾಸಿಗ]

**ಬಣ್ಣವಿಕ್ಕು** (ಕ್ರಿ). ಬೂಟಾಟಿಕೆಯ ಮಾತನ್ನಾಡು: ಅಣ್ಣಸಲ್ಲೆ ಮಗಾತ ನೊಡೆಯನ್ನೆ ನೀನಿಂತು ಬಣ್ಣವಿಕ್ಕದಿರು ಸಾಕು (ಚಿಕ. ೪೪-೨೩).
[ಬಣ್ಣ+ಇಕ್ಕು]

**ಬಣ್ಣವಿಡು** (ಕ್ರಿ). ೧. ಬಣ್ಣವನ್ನು ಲೇಪಿಸು; ರಂಗು ಹಚ್ಚು: ಕರುವಿಟ್ಟಂ ಕಾಮದೇವಂ ರತಿಯುತಿಶಯದಿಂ ಬಣ್ಣವಿಟ್ಟಳ್ . . . ಎನಲ್ಕಾಂತೆ ಕಣ್ಗೆಡ್ಡಮಾದಳ್ (೦೧ಹಾವ. ೩-೯೬); ತದ್ವಸಂತಂ ಪಡೆಯಿಂದಂ ಬಣ್ಣವಿಟ್ಟಂಗಜನೃಪತಿಯ ಗೂಡಾರವೋ ಶಾನಿದೆಂಬಂದದೆ . . . ಇರ್ದತ್ತು ಚೂತಂ (ಕುಸುಮಾ. ೯-೯೩). ೨. ಚಿತ್ರವನ್ನು ರಚಿಸು: ದೊಡ್ಡಮ್ಮ:—(ಬಣ್ಣವಿಡುತ್ತ ಮೆಲ್ಲಮೆಲ್ಲಗೆ ಹಾಡಿಕೊಳ್ಳಲಾರಂಭಿಸುವಳು) (ಶುಂತ್ರಕ. ೩೦-೦೩). ೩. ಹೊಗಳು; ಪ್ರಶಂಸಿಸು: ಮರುಳೆ ನೀ ಬಲು ಬಣ್ಣವಿಡೆ ಖದ್ಯೋತ ರವಿಯಹುದೆ (ಕಾಶಿಂಗ. ೨೦-೨೦). ೪. ಮೆರುಗು ಕೊಡು; ಒಪ್ಪವಿಡು; ಅಂದಗೊಳಿಸು: ಭಾವದ ಬಯಲಿಂಗೆ ಬಣ್ಣವಿಟ್ಟನೆಮ್ಮ ಬಸವಯ್ಯನು (ಶೀಲಚ. ಕ. ೪-೪); ಕೌರವನು . . . ನೆನೆದ ಮತವನು . . . ಅನುಜಮತದಲಿ ವಿಸ್ತರಿಸಿ ಮೈದುನನ ನುಡಿಯಲಿ ಬಣ್ಣವಿಟ್ಟನು ಜನಪಪಕೀರ್ತಿಗನೆಗೆ ತೊಡಿಸಿದನು ಭೂಷಣವ (ಕುಮಾ್ವಭಾ. ೨-೨೨); ಅಗಣಿತಮತಿಗಳಾದವರೀ ಕೃತಿಯನು ಮಿಗೆ ತಿರ್ದಿ ಬಣ್ಣವಿಡುವುದು (ಅಂಚಕ. ೦-೦೦೬). [ಬಣ್ಣ+ಇಡು$_1$]

**ಬಣ್ಣವಿಳಿ** (ಕ್ರಿ). ಕಾಂತಿಹೀನವಾಗು; ಕಳೆಗುಂದು: ಕರುವಿಮನ್:— (ಬಣ್ಣವಿಳಿದು, ತುಟಿಗಚ್ಚಿಕೊಂಡು, ಹೊರಡುವನು) (ಶುಂತ್ರಕ. ೨೪-೦೬).
[ಬಣ್ಣ+ಇಳಿ$_1$ (< ಇಟ್)]

**ಬಣ್ಣವುರ** (ನಾ). ೧. ವಿಧವಿಧವಾದ ಬಣ್ಣಗಳಿಂದ ಕೂಡಿದ ವಸ್ತ್ರ, ಚಿತ್ರ ಮುಂತಾದುವು: "ಬಣ್ಣವುರಮೊಂದು ವರ್ಣಪೂರಂ" (ಕಕಾ. ೬೩-೪೦೬); ಬಣ್ಣವುರಂ ತೀವಿದಂತೆ ಬೆಡಂಗುವಡೆದ ಬಣ್ಣವಣ್ಣಿಗೆಯ ನೀರ್ಮೂಗಳ ರಜಂಗಳುಮನೊಳದೊಂ[ದಿಂ]ಡಿನ ಪಾಲ್ಗಳುಮಂ ಪೀರ್ದು (ಕಾದಂಬ. ೩೨೬); ಅಲಂಕೃತವಾದ ಬಣ್ಣವುರದ ಗೋಡೆಗಳನ್ನೂ . . . ತುಂಗರಾಯನು ಪರೀಕ್ಷಿಸುತ್ತಿರುವನು (ಶಬ್ದಿ. ೪೬-೩). ೨. ಸಿಂಧೂರ, ಬುಕ್ಕಿ ಹಿಟ್ಟು ಮುಂತಾದ ಬಣ್ಣದ ಹಾಗೂ ಸುಗಂಧದ ಪುಡಿ: ಸಿರಿಗನ್ನಡಿ ಬಣ್ಣವುರ ಕರಿ[ಯ]ಳ್ ಬಳಿಯರಳೆ [ಮ]ಧು ಪೊಸರ್ ನೆ[ಲ್ಲಾ]ಳೋತ್ಕರವೆಂದಶೇಷಮಂಗಳಪರಿಕರಮೆಸದುದು ವಿವಾಹವೇದಿಯ ಕೆಲದೊಳ್ (ವರ್ಧಕಪ. ೩-೮೩); ಗೋರೋಚನಂ ಲಾಜೆ ಬಣ್ಣವುರಂ . . . ಕಾಶ್ಮೀರವಂಬವಜಂ ತಕ್ಕನೆ ತೀವಿ ಪೊಂಬರಿಯಣಂ ಚೆಲ್ವಾದುವು (ಜಗಂ. ೧೦-೯೬); ಲಾಜೆಯಂ ಸಮೆವ ಬಣ್ಣವುರಂಗಳನೊಪ್ಪೆ ಮಾಟ್ಟಿ ನಾನಾವಿಧಮಂಗಳಾಚರಣವಕ್ಕಿಮರಿಂ . . . ತೀವಿ (ವರ್ಧಪು. ೬-೩). ೩. ಬಣ್ಣವನ್ನು ತುಂಬುವುದು; ರಂಗು ಹಾಕುವುದು: ಕವಿ

ಸುತ್ತುಂಬೆಯಿಂದೆ ಸತ್ತಂ ತೋರ್ಪನಾ ಅವಸರಕೆ ಸೌನ್ದರ್ಯತತ್ತ್ವಮವ ತರಿಸಿಕೊಳ್ವನೊಲ್ಪಾರ್ಪ ರೂಪಾರಂ ಮೆಯ್ಸಿರಿ ಬಣ್ಣವುರಂ ಬಾಳ್ಕೆಗಳ ನೊಪ್ಪಿಸಿಯದಂ ಕಾಣ್ಕೆ ಮಾಳ್ಪಂ (ಸಂಸಕ. ೧೦-೬೮). ೪. ರಂಗವಲ್ಲಿ; ಹಸೆ : ಭವಲಾಲಾಟವಿಲೋಚನಾಗ್ನಿಶಿಖೆಯಿಂ ಬೆಂದಳ್ಕಿ ಮತ್ತಂ ಮನೋಭವನೆಟ್ಟ್ರೆಕ್ಕೊಡೆ ಕಾಮಕಾಂತೆ ಬಟ್ಟೆಯಂ ತನ್ನಿಚ್ಚೆಯಿಂ ಮೆಚ್ಚಿ ಬಣ್ಣವುರಂ ತೀವಿದ ಮಾಟ್ಕೆಯಾಯ್ತು ನವಿಲಿಂ ಕುಂದಂಗಳಿಂದಿಂದ್ರಗೋಪವಿಳಾಸಂಗಳ ನಾಲಿಕಲ್ಲ ವರಲಿಂ ಕಾರೋಳ್ ಮಹೀಮಂಡಲಂ (ಶಂಕರಾ. ೬-೨೫); ☞ "ಬಣ್ಣವುರಂ ತೀವಿದ = ವರ್ಣಪೂರ ಎಂಬ ವಸ್ತ್ರದಿಂದ ಮುಚ್ಚಿದ . . . ಬಣ್ಣವುರ < (ಸಂ) ವರ್ಣಪೂರ ಎನ್ನುತ್ತಾನೆ ಕೇಶಿರಾಜ; ಅರ್ಥ ಅನಿರ್ದಿಷ್ಟ; ಬಣ್ಣಬಣ್ಣದ ಜಮಖಾನೆ, ನೆಲಕ್ಕೆ ಹಾಸುವ ಬಟ್ಟೆ ಎಂಬರ್ಥವಿರಬಹುದು" (ಶಂಕರಾ. ೨೪೬); ಬಳಭಿಚ್ಛಾವಲತಾವಳಿ ಬಳಸಿದ ಬೆಳ್ಳಿಗಿಲ ಮುಚ್ಚೆಯಿದೆನೆ ಬಣ್ಣವುರಂ ಬಳಸಿರ್ದೊಡೆ ಸೊಗಯಿಸಿದುದು ಪಳಿಕಿನ ಪಟ್ಟವಣೆ ವೇದಿಕಾಧಿತ್ಯಕದೋಳ್ (ಚಂದ್ರಪ್ರ. ೬-೩೨); ಪೊಸಮುತ್ತಿನ ಬಣ್ಣವುರಂ ಮನೆಮನೆದಪ್ಪದೆ ಶೋಭಿಸಿತು (ಜಗನ್ನಾ. ೨-೬೯).

[ < ಸಂ. ವರ್ಣಪೂರ ]

**ಬಣ್ಣವೇರು** (ಕ್ರಿ). (ನಾಚಿಕೆಯಿಂದ) ಕೆಂಪಾಗು : ತಿಮ್ಮಾಜಮ್ಮಣ್ಣಿ:— (ಬಣ್ಣವೆತ್ತು, ಹಿಂದಕ್ಕೆ ಹುದುಗುವಳು) (ಕಬ್ಬಿಅ. ೦೦೦-೦೦).

[ ಬಣ್ಣ+ಏರು₁ ( < ಏಱು₁) ]

**ಬಣ್ಣವೆರ್ಚು** (ಕ್ರಿ). ಕಾಂತಿಯು ಹೆಚ್ಚಾಗು; ಥಳಥಳಿಸು : ಪಾಂಡ್ಯನಾರಿಯರ ಮೆಯ್ಯ ಪಚ್ಚದ ಪೊಸಪೂಗರಿಂ ಬಣ್ಣವೆರ್ಚಿ ಮಿಱುಗುವ ಸಾಧಂಗಳಿಂ ರಂಜಿಪ . . . ತೋರ್ಪ ಕಾಂಚೀಪುರಮುಂಟು (ರಾಜಶೇಖ. ೬೪-೦೬).

[ಬಣ್ಣ + ಪೆರ್ಚು₁]

**ಬಣ್ಣವೇರು** 'ಬಣ್ಣವೇಱು' ನೋ.

**ಬಣ್ಣವೇಱಿಸು** (ಕ್ರಿ). ಶೋಭಿಸುವಂತೆ ಮಾಡು; ಕಳೆಯೇರುವಂತೆ ಮಾಡು : ಬಣ್ಣವೇಱಿಪುಕ್ಕಿವದ ಪೆರ್ಕಳಮಂ ನಟ್ಟಿಸಾ (ಚಿತ್ರಗೋ. ೮-೨೦).

[ ಬಣ್ಣವೇಱು + - ಇಸು₁ ]

**ಬಣ್ಣವೇಱು, ಬಣ್ಣವೇರು** (ಕ್ರಿ). ೧. ರಂಗೇರು; ಬಣ್ಣಬರು. ೨. ಶೋಭಿಸು; ಸೊಗಸಾಗು : ಭಸಿತಕ್ಕೆ ಬಣ್ಣವೇಱುವಂತೆ ರುದ್ರಾಕ್ಷಿಗೆ ಸೌಂದರ್ಯಂ ಸಾರುವಂತೆ . . . ಬಾಲ್ಯವಿಮೋಚನವಾಗಿ ಯೌವನವಾಲಿಂಗಿಸೆ (ಅಜಿ. ೨-೦೦); ಮಿಗೆ ಬಾಸೆ ಬಣ್ಣವೇಱಿತು ಸೊಗಯಿಸಿದುದು ಮೊಗರಸಂ . . . ಮೇನಕೆಯಾ (ಗಂಆ. ೩-೪೮). ೩. (ಅಲಂ) ಸಡಗರದಿಂದ ಕೂಡಿರು; ಸಂಭ್ರಮಿಸು : ಕಿಲದೋರ್ಪರ್ಕಳು ಗಲ್ಲಗೊಂಬಳು ನೇಹದ ಬಲಿವಳು ಬಣ್ಣವೇಱುವಳು (ಜಂಬು. ೬-೯೬). ೪. ಹೆಚ್ಚಾಗು; ಅಧಿಕಗೊಳ್ಳು : ಸತಿಯರೀ ಕೃತಿಯನಾಲಿಸಿದೊಡಂದಂದಿಗೆ ಪತಿಭಕ್ತಿ ಬಣ್ಣವೇಱುವುದು (ಜಂಬ. ೦-೩೨). **ಬಣ್ಣವೇರು** : ೧. ಆ ಮಾತನ್ನು ಕೇಳಿದ ಕೂಡಲೆ ಅವನ ಮುಖ ಬಣ್ಣವೇರಿತು (ಜಂ೩).

[ ಬಣ್ಣ + ಏಱು₁ ( < ಏಱು₁) ]

**ಬಣ್ಣವೋಡು** (ಕ್ರಿ). ಕಳೆಗುಂದು; ಕಾಂತಿಯನ್ನು ಕಳೆದುಕೊಳ್ಳು : ನೇಸಱುರಿವುರಿಯಿಂದೆ ಸುಟ್ಟು ಕರಿಮುರಿಯೋಗಿ ಚೆನ್ನಮೆಯ್ದೊಗಲ್ ನಿನತು ಬಣ್ಣವೋಡುವುದು (ಅಭ್ಯಕ್ರ. ೨-೨೬).

[ಬಣ್ಣ+ಓಡು₁]

**ಬಣ್ಣಸರ₁** (ನಾ). ೧. ಬಣ್ಣಬಣ್ಣದ ಮಣಿ, ಹೂವು ಮುಂತಾದುವುಗಳ ಮಾಲೆ, - ಹಾರ : "ಬಣ್ಣಸರ—ವರ್ಣಸರ = ಬಣ್ಣದ ಮಾಲೆ" (ಕದ್ಯಕೋ. ೨೬); ಅಂದುಗೆ ಕಂಕಣಂ ಸರಿಗೆ ಬಣ್ಣಸರಂ ಕಟಿಸೂತ್ರಮೆಂದಿ ಪೊಂದೊಂದಿದೊಳೊಂದ[ವಿಂ]ದೆಯೆನೆ ತೊಟ್ಟು (ಶರಚಾರು. ೬-೬೮); ಸುಗಮಬಂಧದ ಬಣ್ಣಸರದೋಳಿಗಳ ಕಂಬದ ವಜ್ರಮಯಧಾರೆಗಳಲೆಸೆದುದು ಭದ್ರಮಂಟಪವಮಲಪಣೆಮಯದ (ಕುಮ್ಮಾ. ೦೨-೦೨); ಪೊಸ ಪವಳ ಕೈಕಟ್ಟಿನ ಪವಳಗಳ್ ಬಣ್ಣಸರದ ಜಾತಿಪವಳ ತಿಣ್ಣವಡೆದ ಪವಳದ ಪಸರಗಳಾಗ ಕಣ್ಣ ಕೋಳ್ಕರಿಸುತೊಪ್ಪಿದುವು (ಕಂಸು. ೬-೬೬). ೨. ರಂಗಿನ ಬಾಣ, — ಸರಳು : ವರ್ಣಶರ—ಬಣ್ಣಸರ (ಕರ್ಮುಕ. ೨೮೧ ಕ್ರಿಯೋ). ☞ ಸಂಸ್ಕೃತದ 'ಶರ' ಮತ್ತು 'ಸರ' ಎಂಬ ಎರಡು ಶಬ್ದಗಳಿಗೂ 'ಬಾಣ' ಎಂಬರ್ಥವಿದೆ.

[< ಸಂ. ವರ್ಣಸರ. / ತೆಲು. ಬಣ್ಣಸರ, ಬನ್ನಸರ, ಬನ್ನಸರಿ]

**ಬಣ್ಣಸರ₂** (ನಾ). ೧. [ಸಂಗೀತ] ರಂಜನೆಯಿಂದ ಕೂಡಿದ ಹಾಡು : ಸುಸ್ವಾರ್ಪವಾದ ಗೀತ : ಬಾಯ್ದೆಱೆಯದೆ ಬಣ್ಣಸರಮನುಚ್ಚರಿಸುವ ನೆಱೆವೆಱೆವೊಗದಬಳೆಯ ನುಣ್ಗೊರಲತಿರಂಜನೆವಡೆಯಿತ್ತು (ಜಗನ್ನಾ. ೬-೩೦); ದೇಗುಲಗಳೊಳಗೆ ಮೊಳಗುವ ಸಮಸ್ತವಾದ್ಯಧ್ವನಿಯಕಾರಮಂ ಗಳೆವುವ ಸಂಗೀತಕಾಜಿರ ಬಣ್ಣಸರಗಳಾ ಪೊಳಲೊಳೆಸೆದಿರ್ದ ಘೂರ್ಣಿಸಿದುವು (ಸಮ್ಯಕ್ತ್ವ. ೦೨-೪). ೨. [ನಾಟ್ಯ] ವರ್ಣದ ಸ್ವರಗಳ ಲಯಕ್ಕನುಗುಣವಾದ ನರ್ತನ (?) : ಪೆಸರಱಿಯದಮರತೂರ್ಯಪ್ರಸರಂಗಳ ಜತಿಗೆ ತೊಡರದಿನಿಸಲದ ಬಣ್ಣಸರಂಗೊಂಡಂತಿರೆ ಬಣ್ಣಸರಂ ಸೊಗಯಿಸಿದುದೇನವಳ ಪರಿಣತಿಯೋ (ಅಂಪು. ೯-೪೦); ಎಸಟ ಮೊನೆ ಕೂರಿತಡಿಗೆಂಬ ಸಂಕೆಯಿಂ ಮೆಟ್ಟದಂತೆ ಮುಟ್ಟದೆ ಕುಣಿದಾಗಸಮೆಂಬ ರಂಗದೋಳ್ ಬಣ್ಣಸರಮನಾಡಿದರನೇಕರಮರಾಂಗನೆಯರ್ (ಶಾಂತಿಪು. ೧೦-೧೬); ಮೆಯ್ವ ಪೊಳೆವ ಮಿಂಚಂ ಪೋಲೆ ಚೆಲ್ವಾಗಿ ಬಣ್ಣಸರಂ ಕಾಟ್ಪುರಮೇಱಿ ಕಾಕಳಿ ನಭೋರಂಗಾಗ್ರದೊಳ್ ನಿಚ್ಚಲಾಡಿಸುವಂ ಪಾಡಿಸುವಂ ವಿಯಚ್ಚರಿಯರುಂ ವಾಗ್ಗೇಯವಿದ್ಯಾಧರಂ (ಅರ್ಹ. ೨-೯೬). 'ಜತಿಸ್ವರ' ಪರಾ.

[<ಸಂ. ವರ್ಣಸ್ವರ]

**ಬಣ್ಣಸರಂಗೊಳ್** (ಕ್ರಿ). ಬಣ್ಣದ ಮಣಿಸರವನ್ನು ತೆಗೆದುಕೊಳ್ಳು : ಪೆಸರಱಿಯದಮರತೂರ್ಯಪ್ರಸರಂಗಳ ಜತಿಗೆ ತೊಡರದಿನಿಸಲದ ಬಣ್ಣಸರಂಗೊಂಡಂತಿರೆ ಬಣ್ಣಸರಂ ಸೊಗಯಿಸಿದುದೇನವಳ ಪರಿಣತಿಯೋ (ಅಂಪು. ೯-೪೦).

[ಬಣ್ಣಸರ₁ + ಕೊಳ್₁]

**ಬಣ್ಣಾಂತರ** (ನಾ). [ಗಣಿತ] ಹದಿನೆಂಟು ಬಗೆಯ ಗುಣಿಸುವ ಲೆಕ್ಕಗಳಲ್ಲಿ ಒಂದು : ಅಡಿಕೆ ಸೂತ್ರ ಬಣ್ಣಾಂತರಾ ಇವು ಮೊದಲಾದ ಲೆಕ್ಕಾಚಾರಗಳು ಗುಣಿಸಿ ಭಾಗಿಸುವ ವಿವರ (ಶಾಸ್ತ್ರಸ. ೦-೯); ವಾಗ್ಗಿಗಣಿತ . . . ಕ್ಷೇತ್ರಗಣಿತಮುಂಗುಳಿಅಕತೆ ರಾಜನೀತಿ ಬಣ್ಣಾಂತರ ಪದ್ಮನಾಭ . . . ಉತ್ಕಳಿತಗುಣಿತವೂ ಅಷ್ಟಾದಶಗುಣಿತಂಗಳು (ಕ್ಷೇತ್ರಗ. ೨-೪).

[?. / ತಮಿ.ವಣ್ಣಾವ್ = ಗುಣಿಸುವ ಸಂಖ್ಯೆ]

**ಬಣ್ಣಾಚಾರ** (ನಾ). ಸೋಗಿನ ನಡೆವಳಿಕೆ; ತೋರಿಕೆಯ ವ್ಯವಹಾರ : ಪಂಚಿತರು ಯಾರೂ ಅವನ ಬಣ್ಣಾಚಾರಕ್ಕೆ ಮರುಳಾಗುವುದಿಲ್ಲ (ಜಂ೩).

[ಬಣ್ಣ + ಆಚಾರ]

**ಬಣ್ಣಾಬಣ್ಣಿಕೆ** 'ಬಣ್ಣಾವಣ್ಣಿಗೆ' ನೋ.

**ಬಣ್ಣಾವಣ್ಣಿಗೆ** 'ಬಣ್ಣಾವಣ್ಣಿಗೆ' ನೋ.

**ಬಣ್ಣಿಕೆ** 'ಬಣ್ಣಿಗೆ₁' ನೋ.

**ಬಣ್ಣಿಗ** (ನಾ). ಕಾಂತಿಯುಳ್ಳವನು ; ಶೋಭಾಯಮಾನನಾದವನು : ನಳನಳಿಪ ಲಾವಣ್ಯದಿಂದೆಸೆವ ಬಣ್ಣಿಗಂ . . . ತಾನಾಗಿ ಬಾಲಲೀಲೆಯ ಬಸವನೊಪ್ಪಿದಂ ಬಳೆದೋಳ ಭಾಗ್ಯನಿಧಿ ಹುಲಿಯುಗುರ ಸುಲಭಗಂ (ಅಜಿ. ೦-೧೨೨).

[ಬಣ್ಣ + —ಇಗ]

**ಬಣ್ಣಿಗೆ₁, ಬಣ್ಣಿಕೆ** (ನಾ). ೧. ರಂಗು ; ವರ್ಣ ; ಬಣ್ಣ : ಐದುಹಿಟ್ಟಕ್ಕಿಯಂ ಐದು ಬಣ್ಣ[ಶಾಕಾಂ. ಣ]ಗೆಯ ಪುಷ್ಪಂಗಳಿಂದೈದುಪರಿಯಾಣದೊಳೈದುಪರಿಯ ಭಕ್ಷ್ಯಂಗಳಂ ಚರುವಿಟ್ಟು (ಪುಣ್ಯಾಸ್ರ. ೬-೪೦ ತ); ಎಸೆವಪರಂಜಿಯ ತಗಡ ಬಣ್ಣಿಗೆಯನು . . . ಅಸಿಯಳಂಗಕೆ ಹೋಲಿಸುವೆವು (ಹೇಜಸಂ. ೨೩-೨೦೬); ರತ್ನಮಯಪೀಠಗಳ ನಾನಾಬಣ್ಣಿಗೆಯ ಲೋಡುಗಳು

ರಂಜಿಪವು (ಹರಿಶ್ಚ. ೦-೩-೨೯). ೨. ಕೆಂಪುಬಣ್ಣ; ಅರುಣವರ್ಣ: 'ಬಣ್ಣಗೆದುಟಿ' ನೋ. ೩. ಬಗೆಬಗೆಯ ಬಣ್ಣಗಳಿಂದ ಕೂಡಿದುದು; ವರ್ಣಮಯವಾದುದು: ನೆಱೆ ವಣ್ಣ ಮೆದ್ದುದರದಿ ಜಗಂಗಳ ಬಣ್ಣಗೆಯ ಚಿತ್ರವನು ತಾಯಿಗೆ ಬಾಯೊಳಗೆ ತೋರ್ಪ (ಚಿಕ್ಕಾಗ. ೧೦-೩೨-೨೭); ಬಣ್ಣಗೆಯ ಚಿತ್ರಾನ್ನ ಪಾಯಸಂಗಳಂ (ಜಕು. ೨೨-೦೬). ೪. ಬಣ್ಣ ಬಳಿಯುವಿಕೆ; ಲೇಪನ: 'ಬಣ್ಣಗೆವಡೆ' ನೋ. ೫. (ಚಿತ್ರಕ್ಕೆ ಬಣ್ಣ ತುಂಬಲು ಬಳಸುವ) ಕುಂಚ: ವಿನೋದಾಸ್ಪದವಾದ ಈ ಚಿತ್ರವು ಅರ್ಧ ಬರೆಯಲ್ಪಟ್ಟಿದೆ...ಬಣ್ಣಗೆಯನ್ನು ತೆಗೆದುಕೊಂಡು ಬಾ (ಶಾಕುಂತ. ೪೮-೬). ೬. ಚಿತ್ರ ಮುಂತಾದುವನ್ನು ಬರೆಯಲು ಬಳಸುವ ಬಣ್ಣ; "ಮಸಿ" (ಶ್ರೀಕಣ್ಠ). ೭. ವಿವರಣೆ; ವರ್ಣನೆ: ಬಾಂಧವನೆಂದು ಮುರಹರನ ಕಣ್ಣು ಕಂಡಱಿಯದಡೆ ಹಿರಿಯರ ಬಣ್ಣಗೆಯ ಲಜ್ಜೆವೆ (ಚಿಕ್ಕಾಗ. ೦-೧೦-೩೦). ೮. ಹೊಗಳಿಕೆ; ಸ್ತುತಿ; ಸ್ತೋತ್ರ: ಯದುಕುಲವರಂವರೆಯಿಂ ಪೂಜೆಗೊಂಡ ಶ್ರೀಮನ್ನಾರಾಯಣನಂ ಪೂಜಿಸುವ ವಸುದೇವನೋ. . . ಎಂದಿಂತು ಪೊಣ್ಮುವ ಬಣ್ಣಗೆಗಳಿಂದಳವಟ್ಟವ ಹೃದಯಮುಮಂ ಪದುಳಂಗೊಳಿಸಿ (ನೇಮಿಚಂ. ೬೦-೦೨). ೯. ಸೊಗಸು; ತೋರಿಕೆ: ಗೊಹೇಶ್ವರಲಿಂಗದಲ್ಲಿ ಈ ಬಣ್ಣಗೆಯ ಮಾತು ಸಲ್ಲದು ಕೇಳಾ (ಬಸವ. ೨೨೩-೦೦೦೯); ಪಾಂಡುಪುತ್ರರು ದಾಯಿಗರು ನಗುವಂದವಾದುದು ಬಾಯ ಬಡಿಕರು ಬಂದ ಬಣ್ಣಗೆಯೆಸಗಿ ಬಗುಳುವರು (ಕೃಷ್ಣಾಜು. ೦೮-೨೯). ೧೦. ರೂಪ; ಆಕಾರ; ಸ್ವರೂಪ: ಬಣ್ಣಗೆಯ ನೋಡಿದರೆ ಮಾದಲ ಹಣ್ಣನಾಕೃತಿ ಛಾಯುವಿಡಿದಿಹುದು (ಕೃಷ್ಣಾಜು. ೯-೫೭). ೧೧. ಸೊಗಸು; ಅಂದ: ಬಿಣ್ಣತೇನವಗೆ ನಿನಗೆ ಬಂಧುತನದೊಂದು ಬಣ್ಣಗೆಯುರಲಿ (ಜೈಮಿ. ೩೩-೪೬). ೧೨. ಅಲಂಕಾರ; ಶೃಂಗಾರ: ಅವ ಪಂಯ ದೇಸಿಯಣ್ಮಗೆ ಬಗೆವರ್ಪುದಾ ವಿಧಗಳನಾರ್ಕೆದು ಭಾವಿಸಿ ತೀಡಿದುಟ್ಟು ಕೊಟ್ಟು ಬಣ್ಣಗೆಯಿಂದ ಭಾವವ ಬಂದಿಗೊಳುವುದು (ಹರಿಶ. ೩-೦೬). ೧೩. ಬಣ್ಣಬಣ್ಣದ ಗೌಸಿನ ಬಟ್ಟೆ (?): ಛತ್ರವಂ ತವನಿಧಿಗೆ ಕವಿಲೆಯಂ ಕಱೆವೆಡೆಗೆ ಎತ್ತುಗಳ ಬಣ್ಣಗೆಯ ಹಿಂಡಿಗೊಂದುಳಿ ನೃಪರೋಲೈಸೆ (ಹರಿಶ್ಚ. ೯-೯೭). ಬಣ್ಣಿಕೆ: ೧೧. ವೃಷವಾಹನಂ. . . ಈಶ್ವರನ ರೂಪಂ ವಿಗುರ್ವಿಸಿ ಬಂದಿರ್ಪುದುಂ ಪುರದವರೆಲ್ಲಂ. . . ಬಣ್ಣಿಕೆಯ ಪೂಜೆಗಳಂ ಮಾಡಿ ಪೊಡೆವಂಡುತಿರ್ಪನ್ನೆಗಂ (ವಡ್ಡಾರಾಧ. ೩-೨೨೭). [<ಸಂ. ವರ್ಣಿಕಾ]

ಬಣ್ಣಗೆ$_2$ (ನಾ). ಒಂದು ಬಗೆಯ ತೆರಿಗೆ: ಊರಲೊಕ್ಕಲಲೊನ್ದು ಪೊಜೆಯುಂ ವತ್ತುಕೊಳಗಭತ್ತಮುಂ ಒನ್ದು ಕಂತೆಯು ಬಣ್ಣಗೆ ಮೂಗುಳಮಂ ಕಪ್ಪಡಕ್ಕೆ ವಟ್ಟಿಯುಂ ಬ್ರಹ್ಮಲಿಂಗಿಬಟ್ಟರ್ಗೆ ಕೊಟ್ಟುದು (ಶಾಸಂ. ೦೯೮೬, ೨೦-೨೮; 1032); ದೇವರ ಗಾಣಕ್ಕೆ [ತೆ] ಱ ಬಣ್ಣಗೆ ತೊಂಕಿ ಬೀರವಣ ಸರ್ವ್ವಬಾಧಾಪರಿಹಾರವಾಗಿ ಬಿಟ್ಟರು (ಕೌಶಾ. XI-ii. ೦೫೮-೨೬; 1109); ನಿಧಿನಿಕ್ಷೇಪ ಜಳ ಪಾಶಾಣ ತರುಮಾಳಾಸಮನ್ವಿತ [ಸುಂ] ಕ ಸಾದ ಬಣ್ಣಗೆ (ಕೌಶಾ. XV. ೦೫೫-೬೬; 1206). [?]

ಬಣ್ಣಗೆಗಯ್ದು (ನಾ). ಬೇರೆ ಬೇರೆ ಆಕಾರದ ಆಯುಧ: ಓರ್ವರೋರ್ವರಂ ಬಣ್ಣಗೆಗಯ್ದುವಂ ಪಿಡಿದು ನಾಡಕರೋವಡೆ ಕುತ್ತಿ ಕೊಯ್ದೊಡಂ . . . ತನು ಮುನ್ನಿನ ಮಾಟ್ಕೆಯಕ್ಕುಂ (ಶಾಸ್ತ್ರಸಾ. ೬-೯೩). [ಬಣ್ಣಗೆ + ಕಯ್ದು (<ಕೆಯ್ದು)]

ಬಣ್ಣಗೆಗಾಲು (ನಾ). ಬಣ್ಣ (ಅಲಕ್ತಕ) ಬಳಿದ ಕಾಲು: ಬಾಲೆದೊಡೆಯ ಬಣ್ಣಗೆಗಾಲಾ...ಮನೋಹರರೂಪದ ನೀಱೆಯ ನವಲಾವಣ್ಯದ ಸಿರಿಯುನ ದೇನಂ ಬಣ್ಣಿಪನು (ಜಯಚಂ. ೩-೬೩); ಬಡನಡುವಿನ ಬಣ್ಣದೊಡೆಯ ಬಣ್ಣಗೆಗಾ[ಶಾಕಂ. ಕಾ]ಲ ನಿಡಿದೋಳಿನರವೆಱೆನೊಸಲ . . . ಬೆಡಗಿನ ಪೆಣ್ಗಳಲ್ಲಿಹರು (ಶಂಕ್ರಶಾಂ. ೦-೨೦೦). [ಬಣ್ಣಗೆ$_2$ + ಕಾಲು$_1$ (<ಕಾಲ್$_1$)]

ಬಣ್ಣಗೆಗೊಳ್, ಬಣ್ಣಗೆಗೊಳು (ಕ್ರಿ). ಹೊಳೆ; ಶೋಭಿಸು: 'ಬಣ್ಣಗೆಗೊಳಿಸಂ' ನೋ. ಬಣ್ಣಗೆಗೊಳು: ಬಣ್ಣಗೆಗೊಳುವ ಬಗೆಯ ಪೊಸವರೆಯಾದ ಪೆಣ್ಣನೊಲುಮೆಯು ಪೆರ್ಚುವುದು (ಜೈಮಿ. ೬-೨೦). [ಬಣ್ಣಗೆ$_1$ + ಕೊಳ್$_1$]

ಬಣ್ಣಗೆಗೊಳಿಸು (ಕ್ರಿ). ಶೋಭಿಸುವಂತೆ ಮಾಡು; ಹೊಳಪುಂಟು ಮಾಡು: ಪೊನ್ನದೊಳ್ಪಣ್ಣುಗೊಳಿಸಿ ಚೆಂಬೊನ್ನ ಕರ್ವಣೆಯ ಪೂರ್ಗರ್ಗಳಿಂ ಬಣ್ಣಗೆಗೊಳಿ ಸಿರಿವಚ್ಚದ ವಚ್ಚವಣಿಗಳ ಬೆಳಗಿನೊಳ್ಪೆರಸಿ (ಚಿಕ್ಕದೇ. ೦೨೩-೦೬). [ಬಣ್ಣಗೆಗೊಳ್ + -ಇಸು$_3$]

ಬಣ್ಣಗೆಗೊಳು 'ಬಣ್ಣಗೆಗೊಳ್' ನೋ.

ಬಣ್ಣಗೆದಪ್ಪು (ಕ್ರಿ). (ಅಲಂ) ಗೌರವಕ್ಕೆ ಕೆಡುಕುಂಟುಮಾಡು; ಹಿರಿಮೆಗೆ ಹಾನಿತರು: ಹೆಣ್ಣು ಬೇಕಾದರೆ ಬರಬೇಕು ನಾವೆಮ್ಮ ಬಣ್ಣಗೆದಪ್ಪಿ ಕೊಡುವವೆ (ಜೈಮಿ. ೩೭-೪೯). [ಬಣ್ಣಗೆ$_1$ + ತಪ್ಪು$_2$]

ಬಣ್ಣಗೆದುಟಿ (ನಾ). ಕೆಂಪಾದ ತುಟಿ; ಚೆಂದುಟಿ: ಬಾಲಪಲ್ಲವವನೇಳಿಪ ಬಣ್ಣಗೆದುಟಿಯ (ಕೃಷ್ಣಂ. ೯-೦೯); ಬಡನಡುವಿನಬಲೆ ಬಣ್ಣಗೆದುಟಿಯ ಚೆನ್ನೆ (ಪದ್ಮಾಣ. ೩-೩). [ಬಣ್ಣಗೆ$_1$ + ತುಟಿ]

ಬಣ್ಣಗೆಬವಣ್ (ನಾ). ೧. ಅಲಂಕಾರದ ಪ್ರಮಾಣ. ೨. ವರ್ಣನೆಯ ಪ್ರಮಾಣ. ೧, ೨: ಕೊನಬುಗಾರ್ತಿಯ ಸೊಗಸಂ ಪಡೆಗುಂ ಕೃತಿಯುಂ ಪದಪಿಂದೆಡೆಯೆಡೆಯೊಳ್ಕೃತಕ್ಕ ಬಣ್ಣಗೆಬವಣಂ (ಜಗ. ೦-೦೬). [ಬಣ್ಣಗೆ + ಪವಣ್]

ಬಣ್ಣಗೆವಡಿಸು (ಕ್ರಿ). ಬಣ್ಣ ಬಳಿ; ಒಳ್ಳೆಯದಾಗಿರುವಂತೆ ಚಿತ್ರಿಸು: ಬನ್ನಣೆಗೆಯ್ದು ಬಱಿದೆ ಬಣ್ಣಗೆವಡಿಸದಿರು (ಗೀತಗೋ. ೨೩-೪೯). [ಬಣ್ಣಗೆ$_1$ + ಪಡಿಸು]

ಬಣ್ಣಗೆವಡೆ (ಕ್ರಿ). ೧. ಬಣ್ಣ ಹೊಂದು; ರಂಗೇರು: ಬಾಲಾತಪದಿಂದ ಬಣ್ಣಗೆವಡೆದಿಂದ್ರನೀಲಾದ್ರಿಯನಿಗೆಯ್ದ ನೀಲನೀರದ ನಿಭಕಾಯಗೆ . . . ಆನೆಱಗುವೆನು (ಕರ್ಣಾಕೃ. ೦-೨೬); ಬಳ್ಳಿಮಿಂಚುಗೆಯಿಂದ ಬಣ್ಣಗೆವಡೆದಿರ್ದ ಕಾರ್ಮುಗಿಲ ಮೋಹರದಂತೆ (ಶಾಂಶಾ. ೪೯೯-೨೦). ೨. ಕೊಂಡಾಟಕ್ಕೆ ಒಳಗಾಗು; ಹೊಗಳಿಸಿಕೊಳ್ಳು: ಪೊಡವಿಯ ಬಲ್ಲೊಱೆಯನಱೆಪಿ ಬಣ್ಣಗೆವಡೆವರ್ (ಅತ್ರೀ. ೨-೦೬). [ಬಣ್ಣಗೆ$_1$ + ಪಡೆ$_1$]

ಬಣ್ಣಗೆವೆಳಗು (ನಾ). ಥಳಥಳಿಸುವ ಕಾಂತಿ; ಸೊಗಸಾದ ಹೊಳಪು: ಪೊಗರೇಱುವ ಮೊಗಸಿರಿಯುಂ ಬಗೆಗೊಳಿಸುವ ಬಗಸೆಗಣ್ಣ ಬಣ್ಣಗೆವೆಳಗುಂ ವಿಗಿಯೆಯೊಸಗೆವೇಟಲೀಪರಿ ನೆಗಟ್ದಿಯ್ದುದ ತನ್ನ ಭಾಗ್ಯದೇವತೆಗೆತ್ತುಂ (ಜಗ. ೯-೩೯). [ಬಣ್ಣಗೆ$_1$ + ಬೆಳಗು$_2$]

ಬಣ್ಣಗೆವೆಱು (ಕ್ರಿ). ೧. ವರ್ಣನೆಯನ್ನು ಹೊಂದು,-ಪಡೆ: ಭೇದಿಸಿ ಕಾಣ್ಬ ತತ್ತ್ವದಿರವೆಣ್ಣಿಪ ಬಣ್ಣಗೆವೆತ್ತ ಬಿನ್ನಣಂ (ಜಗ. ೩-೦೨೨). ೨. =ಬಣ್ಣಗೆವಡೆ ೧: ಸುಳಿವ ಮಿಂಚಿನ ಬಣ್ಣಗೆವೆತ್ತ ಕಣ್ಮಲರ್ ಮಾರ್ವಾರಿಲೆದಾರ್ಪಿನಂ (ಕಮಲಾ. ೨-೦೯೩). [ಬಣ್ಣಗೆ$_1$ + ಪೆಱು$_1$]

ಬಣ್ಣಿಸು, ವಣ್ಣಿಸು (ಕ್ರಿ). ೧. ಬಣ್ಣ ಹಾಕು; ರಂಗೇರುವಂತೆ ಮಾಡು: ಬಣ್ಣ ಕಟ್ಟು: ಅರಿಸಿನವ ಬೆರಸಿ . . . ಎಣ್ಣೆಯೊಳು ಮೊದಲು ಕಲಸಿದ ಬೋನದೊಳಗಿಕ್ಕಿ ಬಣ್ಣಿಸಿಯದು ಕಲಸಿ ಬಳಿಯುಪ್ಪ ನಿಕ್ಕಲದು ಸಾಸುವೆಯ ಕಟ್ಟೋಗರ (ಸೂಪಶಾ. ೩-೨೦). ೨. ಹೊಳೆಯುವಂತೆ ಮಾಡು; ಮೆರುಗು ಕೊಡು: ಪೊಸವಿಸಲ ಪೊಳಪಿನಿಂ ನುಣ್ಣನುಜ್ಜಳಿಪ ರನ್ನದೆಳವೆಳಗಿನ ಬಳಗದಿ ಬಣ್ಣಿಸಿ ಸುರಶರಾಸನಂಗಳ ನೆಬಲ್ಕಿಕ್ಕಿದಂತೆ ನಿಮಿರ್ವ ನಿರ್ಝರಂಗಳುಮಂ (ಶಾಬರಶಾ. ೩.೩೬); ಬಣ್ಣಿಸಿ ನುಣ್ಣಿಸಿದ ಕರ್ಬುಣಗಲ್ಲ ಕೈಗನ್ನಡಿಯಂತಂತು ತಳತಳಿಪ ಗಂಡಮಂಡಲಂ (ರಾಜಶೇಖ. ೦೯೩-೨೯). ೩. ಅಲಂಕರಿಸು; ಶೃಂಗಾರ ಮಾಡು: ಕಣ್ಣಿಗೆ ಕಜ್ಜಳವಚ್ಚಿ ಬಣ್ಣಿಸಿ ಸೊಡರ್ವೆಟ್ಟನಿಟ್ಟು

ಪಾಲೆಜಿ'ದೋವಿ ಚಿಣ್ಣನ ವಕ್ಕೈಗ್ಯದಿದಳು (ಕೋಹಚ. ೯-೬೯). ೪. ವಿಸ್ತಾರವಾಗಿ ಹೇಳು ; ವಿವರಿಸು ; ವರ್ಣಿಸು : ಸೌಧರ್ಮೇಂದ್ರಂ ನಿಮ್ಮ ರೂಪನಾದಮಾನಂ ನಚ್ಚಿ ಬಣ್ಣಿಸಿದೊಡಿಂದ್ರನ ಮಾತಂ ನಂಬದೆ ನಿಮ್ಮಂ ನೋಡಲ್ ಬಂದಂ (ಪಣ್ಣಾರಾ. ೬೭-೬) ; ಎಸಟಿಂ ಮುಟ್ಟಲೊಡಂ ತನ್ನ ಸೌರಭಂಗೆಟ್ಟು ನೆಗಟ್ದ ಕತ್ತುರಿ ಮಣ್ಣಂ ಮಸಿಗಮೆಣೆಯಪ್ಪುದೆನೆ ಬಣ್ಣಿಸುವಂ ಕೇದಗೆಯ ಕಂಪನೇವಣ್ಣಿಸುವಂ (ಅರಿಷ. ೧೦-೧೦೭) ; ಅರಸ ಬಣ್ಣಿಸಲಳವೆ ನರನ ಮಹಾಸ್ತ್ರನಾಟಕವ (ಕುಭಾ.ಆ. ೦೩-೬). ೫. ಹೊಗಳು ; ಕೊಂಡಾಡು ; ಸ್ತುತಿಸು ; ದೇವರ್ಕಳೆಲ್ಲಮಾತನ ಶೀಲ ಪ್ರಭಾವಮಂ ಬಣ್ಣಿಸೆ (ಜಾಪುಂಷ. ೬೦) ; ಬಣ್ಣಿಪುದಿಳಾವಳೆಯುಂ ಸಲೆ ಕಂಚಿಕಬ್ಬೆಯುಂ (ಶಾಇಷ. XI—1, ೬೩-೯೦ ; 1028) ; ಭೀಷ್ಮಂಗೆ ಸಮರ ಸಮಾನಭಟನಿನ್ನಾವನೆಂದು . . . ಕೌರವರಾಯ ಬಣ್ಣಿಸಿದ (ಕುಭಾ.ಭೀ. ೦-೩೩). ವಣ್ಣಿಸು: ೧. ಗಳ್ಪಿಕ್ಕುತ ಮುಂಸುಕಿ ಮುಂಬರಿವ ಶುನಿಗಳು ಎಸೆದುವಾ ದಂಡಿನೆಚ್ಚಟಿಕೆಯ ಕಾವಲರೊಂದೆಸಕವನೇನ ವಣ್ಣಿಸುವೆ (ಕಂಷ. ೦೯-೨೯). ೫. ಬಿರಿದನೀವ ನೆಗಟ್ತೆಯ ದಾನಿಯನ್ನು ನಾನಾ ವಿಧದಿನ್ದೆ ವಣ್ಣಿಪುದಿಳಾವಳಯುಂ ಜಗದೇಕದಾನಿಯುಂ (ಎಕ. VII, ಶಿಕಾಂ. ೦೫೦-೨೫ ; 1047). [ಬಣ್ಣನೆ+—ಇಸು₁]

**ಬತ₁** 'ಬ್ರತ' ನೋ.

**ಬತ₂** (ನಾ). [ಗಣಿತ] ಸಂಕಲನ ಮಾಡುವಿಕೆ ; ಕೂಡುವಿಕೆ : " ಯುತಂ, ಯುಕ್ತಂ . . . ಕೂಡು, ಬತಂ ಇಂತಿನಿತುಂ ಕೂಡೂದಕ್ಕೆ ಹೆಸರು " (ವ್ಯವಗಾ. ೦೦-೨೦). [?]

**ಬತಗೆಡಿಸು** (ಕ್ರಿ.) ವ್ರತದಿಂದ ಭ್ರಷ್ಟನಾಗುವಂತೆ ಮಾಡು ; ವ್ರತ ಗೆಡಿಸು : ವ್ರತವುಳ್ಳವರ ಬತಗೆಡಿಸಿತ್ತು ನೋಡಾ ಮನವು (ಅಂಆಡೇ. ೨೩೭-೦೦೯). [ಬತಗೆಡು + — ಇಸು₁]

**ಬತಗೆಡು** (ಕ್ರಿ). ವ್ರತಭ್ರಷ್ಟನಾಗು : ಗುಡಿ ತನಕ ಹೋಗಿ ಬರ್ತೇನೆ ಅಂದಿತ್ತಂತೆ ಒಂದು ಬತಗೆಟ್ಟ ಮುಂಕ್ಕ! (ಕೇಬಕು. ೯೩): ಹೊನ್ನು ಕಾಣದೆ ಬತಗೆಟ್ಟರುವನೇನು ? (ಕಾಗಿಕ. ೬೮). [ಬತ₁ (<ಬ್ರತ) + ಕೆಡು₁]

**ಬತಗೇಡಿ** 'ಬ್ರತಗೇಡಿ' ನೋ.

**ಬತಣಿಕೆ** 'ಬಂದಣಿಕೆ' ನೋ.

**ಬತಾರೀಕು** (ನಾ). ಆ ದಿನಾಂಕ ; ಆ ತೇದಿ : ಪೂಜೆ ಪಡಿತರ ದೀಪಾರಾಧನೆ ವಗ್ಯರೇ ಬಗ್ಗೆ ಬತಾರೀಕು ಯಿನಾಮು . . . ನಡಸಿಕೊಣ್ಡು ಬರುವದು (ಎಕ. VI, ಕೊಪ್ಪ. ೯೬-೫೭; 1811). [←ಪಾರ. ಮರಾ. ಬತಾರೀಖ್]

**ಬತಾಸು** 'ಬತ್ತಾಸು' ನೋ.

**ಬತೇರಿ**, ಬತ್ತೇರಿ (ನಾ). ಕೋಟೆಯ ಗೋಡೆಗಳನ್ನು ಎತ್ತರಿಸಿ ತುಪಾಕಿಗಳನ್ನಿಟ್ಟು ಶತ್ರು ಸೈನ್ಯಗಳಿಗೆ ಸಾವು ನೋವುಗಳನ್ನುಂಟು ಮಾಡುವಂತೆ ಏರ್ಪಡಿಸಿರುವ ದುಂಡನೆಯ ಪ್ರದೇಶ ; ಕೋಟೆಯ ಮೇಲಿನ ತೋಫ್‌ಖಾನೆ : ಹೆಡವಳಿ ಮಾರ್ಗದಿಂದ ಆ ಬೆಟ್ಟ ಕೋಟೆ ನುಗ್ಗಿ, ಮೂರು ನಾಲ್ಕು ಬತೇರಿಯನ್ನು ಆಕ್ರಮಿಸಿಕೊಂಡು (ಹಾಕೇಂದ್ರ. ೩೦) ; ಬಲವಾದ ಬತೇರಿಗಳನ್ನು ಬಹು ಚಮತ್ಕಾರವಾಗಿ ಸುತ್ತಲೂ ಕಟ್ಟಿದಾರೆ (ಹಾಳಿಗಾ. ೯೬) ; ಅವರ ಸ್ಥೂಲಕಾಯ . . . ದಪ್ಪನಾದ ಕೋಲು—ಒಂದೊಂದೂ ಬೆಟ್ಟದ ಮೇಲೆ ನಿಂತ ಬುರುಜು, ಬತೇರಿಗಳಂತೆ ಚಿತ್ರದುರ್ಗದ ಜನಕ್ಕೆ ಪ್ರೀತಿಪಾತ್ರವಾಗಿವೆ (ಹಂಗೀಕ. ೩). **ಬತ್ತೇರಿ** : ಪಟ್ಟಣದ ಕೋಟೆ ಮುಂದೆ ಯೆರಡು ಹೊಳೆ ಮಧ್ಯ ಬತ್ತೇರಿಗಳ ತಯಾರು ಮಾಡಿಸಿ ಆ ಬತ್ತೇರಿಗಳ ವಳಗೆ ತಮ್ಮ ಫೌಜನ್ನು ನಿಲ್ಲಿಸಿ (ಹಾಕೇಂದ್ರ. ೨೮) ; ಕುತ್ತುರಿಗೆ ಬೆಂಕಿ ಹತ್ತಲು ಬತ್ತೇರಿಗೆ ಒಡಿದರ ನಂದೀತ ? (ಗಾದೆ). 'ಬುರುಜು', 'ಬ್ಯಾಟರಿ' ಹೋ. [ ←ಇಂ. Battery ]

**ಬತ್ತ**, ಭತ್ತ₁, ವತ್ತ (ನಾ). ಒಂದು ಬಗೆಯ ಧಾನ್ಯ ; ನೆಲ್ಲು : ಜಗದ್ಗೃಹನೆಂಬೊಂ ತನ್ನ ಬತ್ತಮಂ ಚಂಪಾನಗರಕ್ಕೆ ಮಾಱಲೆಂದು ಕೊಂಡು ಪೋಗಿ ಬತ್ತಮುನಳೆವಲ್ಲಿಯಾ ಮೂವರ ದೋಷಂಗಳುಂ ಪ್ರಕಟ ಮಾಗಿ (ಪಣ್ಣಾರಾ. ೨೦-೦೫) ; ಅಗ್ಗಳದ ಬತ್ತದ ಪರ್ವಳಿಂದೆ . . . ದೊರೆವೆತ್ತುದು ವೆಂಗಿಮಂಡಲಂ (ಅಆಪು. ೦-೨೨) ; ಗಂಧಶಾಲಿಯ ಬತ್ತದೊಳಗಿರ್ದ ಕಳೆಯ ಕೀಳ್ವಂದದೆ ಖಳರ ತೀರ್ಕಣಿಸಿ (ಮೋಹಕ. ೯೨-೬೭). **ಭತ್ತ** : ಭತ್ತಮುಮನ್ ಕವಿಲೆಯ ಪಾಲು ಎಟ್ಟುಂ (ಎಕ. VI, ಕೊಪ್ಪ. ೩೭-೨; ಸು. ೯೭೬ ?) ; ವಿಶ್ವ ದೇವರ ಮನೆಯ ಭತ್ತಮಂ ಕೊಟ್ಟಣಕ್ಕಿಕ್ಕ ಬರುತಿರೆ (ಸಿದ್ಧರಾ. ೬-೦೨) ; ಕನಸಿನ ಭತ್ತಕ್ಕೆ ಗೋಣಿ ಯಾಂಪ್ಯೆ ನೃಪತೀ (ಶಾಕ್ಯಸಾ. ೩೮೦) ; ಒಂದು ಪಡಿ ಭತ್ತಕೆ ಬಾಯ ಬಿದಿಸ್ಸಾಕಣ್ಣ (ಪುರಂದ. ೦-೦೮೨-೨). **ವತ್ತ₁** : ಇರ್ಪತ್ತಯ್ದುಗ್ಗುಂಡುಗಂ ವತ್ತ ತೆಱುವೊದು (ಎಕ. XIV, ತಿರುಮ. ೨೫೩-೬ ; ಸು. ೮೦೦).

**ಭತ್ತದರಳು**=ನೆಲ್ಲನ್ನು ಹುರಿದು ಮಾಡಿದ ಅರಳು ; ಲಾಜೆ : ಕನ್ನೈದಿಲೆಗೆಡ್ಡೆ, ಖರ್ಜೂರ ಇವುಗಳನ್ನೆಲ್ಲಾ ಕಷಾಯವಿಟ್ಟು . . . ಭತ್ತದರಳಿನ ಚೂರ್ಣವನ್ನು ಹಾಕಿ ತೆಗೆದುಕೊಳ್ಳಲು . . . ಕಾಮಾಲೆ ಸಹ ಗುಣವಾಗುವುವು (ಸಕಪ್ಯ. ೯೩).

[<ಪ್ರಾ. ಭತ್ತ=ಅನ್ನ./ಸಂ. ಭಕ್ತ=ಅನ್ನ./ತಮಿ. ವತ್ತ=ಅನ್ನ ; ಮಲ. ವತ್ತ; ತುಳು. ಬತ್ತ್=ಅನ್ನ]

**ಬತ್ತಂಗುಟ್ಟು**, ಬತ್ತಕುಟ್ಟು, ಬತ್ತಗುಟ್ಟು (ಕ್ರಿ). ೧. ಅಕ್ಕಿ, ಅವಲಕ್ಕಿ ಮುಂತಾದುವನ್ನು ಮಾಡಲು ಒರಳಿನಲ್ಲಿ ನೆಲ್ಲನ್ನು ಹಾಕಿ ಕುಟ್ಟು,—ಕೊಟ್ಟಣಕ್ಕೆ ಹಾಕು : ಬತ್ತಂಗುಟ್ಟುವರಂತೆ . . . ದರ್ಶನಮುಂ ನಿಶ್ಶಂಕೆಯುಮೆಂಬೆರಡುಮಂ ಲೇಸು ಮಾಡುವುದು (ರರ್ಮಾಕ್ಯ. ೨-೯). **ಬತ್ತಕುಟ್ಟು** : ೧. ಹಿಂದಿನ ಕಾಲದಲ್ಲಿ ಮನೆಯಲ್ಲೇ ಬತ್ತ ಕುಟ್ಟಿ ಅಕ್ಕಿ ಮಾಡಿ ಬಳಸುತ್ತಿದ್ದರು (ರೂಢಿ). ೨. (ಅಲಂ) (ಭಯ, ಆತಂಕ ಮೊದಲಾದುವುಗಳಿಂದ ಹೊಟ್ಟೆಯಲ್ಲಿ) ತಳಮಳವಾಗು : ಪರೀಕ್ಷೆ ಹತ್ತಿರ ಬಂದಂತೆಲ್ಲಾ ನನ್ನ ಹೊಟ್ಟೆಯಲ್ಲಿ ಬತ್ತ ಕುಟ್ಟಲು ಮೊದಲಾಯಿತು (ರೂಢಿ). **ಬತ್ತಗುಟ್ಟು** : ೧. ಮೃತ್ಯು ಮಾರಿಯರನ್ನ ಮನೆಯಲಿ ಬತ್ತಗುಟ್ಟುವರು (ಕೌಶಿರಾ. ೧೧-೬೦). [ಬತ್ತ + ಕುಟ್ಟು₁]

**ಬತ್ತಕುಟ್ಟು** 'ಬತ್ತಂಗುಟ್ಟು' ನೋ.

**ಬತ್ತಗುಟ್ಟು** 'ಬತ್ತಂಗುಟ್ಟು' ನೋ.

**ಬತ್ತಲಿಕೆ** 'ಪತ್ತಲಿಕೆ₁' ನೋ.

**ಬತ್ತಲಿಗ**, ಬೆತ್ತಲಿಗ (ನಾ). ೧. ಬಟ್ಟೆಯನ್ನು ಧರಿಸದಿರುವವನು; ನಗ್ನ ; ದಿಗಂಬರ : ಆ ನಿರ್ಲಜ್ಜಂ ಬತ್ತಲಿಗನಪ್ಪ ಸವಣನಲ್ಲಿಗೆ ಪೋಗಿ ಕಂಡು ನುಡಿದು ಕಾಡಿ ಬರ್ಪಂ ಬಾ ಪಾಗಳೆ (ಪಣ್ಣಾರಾ. ೨೨-೨೨). ೨. ಜೈನಸಂನ್ಯಾಸಿ : ಬತ್ತಲಿಗರ ಮಾತಂ ಕೇಳ್ದುತ್ತಮಮೆನಿಸಿರ್ದ ಕುಲ ಮುನಟಿದ್ಯೆ (ರರ್ಮಾಕ್ಯ. ೬-೯೩). **ಬೆತ್ತಲಿಗ** : ೨. ಬೆತ್ತಲಿಗರ ನುಡಿಗೇಳಿ ರಾಜ್ಯಸಂಪತ್ತ ತೋರದೀಡಾಡೆ (ಅಂಕ. ೦೦-೫). [ಬತ್ತಲೆ₁ + —ಇಗ]

**ಬತ್ತಲಿರ್**, ಬತ್ತಲಿರು, ಬತ್ತಲೆಯಿರ್ (ಕ್ರಿ). ಮೈಮೇಲೆ ಬಟ್ಟೆಯಿಲ್ಲದಿರು; ನಗ್ನವಾಗಿರು ; ವಿವಸ್ತ್ರವಾಗಿರು : ಕೃತ್ತಿವುಡೆಯನ್ನಿತ್ತಮೆ ನೀಂ ಬತ್ತಲಿರಲೇಕೆ (ಬಿಸಪು. ೦೬-೦೯). **ಬತ್ತಲಿರು** : ಬತ್ತಲಿದ್ದವಗೆ ಭಯವಿಲ್ಲ (ಸರ್ವಜ್ಞ. ೩೫೦). **ಬತ್ತಲೆಯಿರ್** : ಬತ್ತಲೆಯಿರ್ಪುದರಿಂದೋ ಸೀರೆಯುಟ್ಟಿರ್ಪುದರಿಂದೋ (ರರ್ಮಾಕ್ಯ. ೭-೬೦); ಬತ್ತಲೆ ಪೂಜ್ಯಮಲ್ಲದೊಡೆ ಬತ್ತಲೆಯಪ್ಪ ದಿನೇಶಬಿಂಬಮಂ ಬತ್ತಲೆಯಿರ್ಪ ಮಕ್ಕಳುಗಳಂ . . . ಕಂಡು ಮಾನಿಸರ್ಸತ್ತಮರಾರೊ (ರರ್ಮಾಕ್ಯ. ೯-೭೬).

[ಬತ್ತಲೆ₁+ಇರು₁ (<ಇರ್₁) ]

**ಬತ್ತಲಿರು** 'ಬತ್ತಲಿರ್' ನೋ.

**ಬತ್ತಲಿಸು** (ಕ್ರಿ). ಬರಿದಾಗಿರು ; ಬೋಳಾಗಿರು : ಎಲೆಗಳೆದು ಬತ್ತಲಿಸಿ ನಿಂದ ತರುಕುಲದಂತೆ (ಹಾಗೇಶ. ದೇ. ೨೩೪-೦೬); ಅಜ್ಞಾನವೇ ಸುತ್ತ ಬತ್ತಲಿಸಿದೆ (ಗಂಗಾಶ. ೩೨-೦೬).

[ಬತ್ತಲು$_2$ (<ಬತ್ತಲೆ$_1$) + — ಇಸು$_1$]

**ಬತ್ತಲು$_1$** (ನಾ). ಒಣಗಿದ ತರಕಾರಿ, ಹಣ್ಣು ಮುಂತಾದುವು ; ತಳಲು : ಮಾವಿನ ಬತ್ತಲು ಹುಣಸೆಯ ಹಣ್ಣು . . . ತದುಕಿನ ತಿರುಳು ಇವು ಸಂಭಾರವಸ್ತುಗಳು (ಸೂಶಾ. ೪-೦ ಅಂಬ).

[ಬತ್ತು$_1$ + —ಅಲು ( < —ಅಲ್$_2$ ) . / ತವಿ.ವಟ್ಟಲ್]

**ಬತ್ತಲು$_2$** 'ಬತ್ತಲೆ$_1$' ನೋ.

**ಬತ್ತಲೆ$_1$**, ಬತ್ತಲು$_2$, ಬೆತ್ತಲೆ$_1$ (ನಾ). ೧. ಮೈಮೇಲೆ ಬಟ್ಟೆ ಮೊದಲಾದುವುಗಳ ಹೊದಿಕೆಯಿಲ್ಲದಿರುವುದು; ನಗ್ನತೆ : ಬತ್ತಲೆ ಪೂಜ್ಯಮಲ್ಲದೊಡೆ . . . ಬತ್ತಲೆಯಿರ್ಪ ಮಕ್ಕಳುಗಳಂ . . . ಕಂಡು ಮಾನಿಸರ್ ಸತ್ತಮರಾರೊ (ರಕುರಾಸ್ಸು. ೯-೭೬); ಬತ್ತಲೆಯ ಬಾಳ್ವಿಣಂಗಳು ಸುತ್ತ ಮುತ್ತಿರಲು (ಹಾಗೇಶ. ದೇ. ೨೩೩-೦); ಎಲೆ ಮಗಳೆ ನಿಮ್ಮ ಸವಣರ್ ಸತ್ತು ದೇವಲೋಕದೊಳು ಬತ್ತಲೆಯು ಸವಣರಾಗಿ ಪುಟ್ಟುವರ್ (ಪುಣ್ಯಾಸ್ರ. ೩-೯೩ ಪ). ೨. ಬರಿದಾದುದು; ಶೂನ್ಯವಾದುದು; ರಿಕ್ತವಾದುದು : ಹೊತ್ತು ಮುಣುಗುತ ಬಂತು ಬತ್ತಲೆಯು ಜಗಕೆಲ್ಲ (ಕಣ್ಣಾ. ೨೯೯). ೩. ದಿಗಂಬರಸಂನ್ಯಾಸಿ; ಜೈನಭಿಕ್ಷು : ಪುತ್ತುಂ ಬತ್ತಲೆಯುಂ ಬಱಿದಿಲ್ಲೆಂಬೀ ನಾಣ್ಣುಡಿಯುಂಟಪ್ಪುದು (ರರ್ಶಾಸ್ಸು. ೮-೬೦); ಎಲೆ ದೇವರೆ ಪುತ್ತುಂ ಬತ್ತಲೆಯುಂ ಬಱಿದಿಲ್ಲದೆಂಬರ್ (ಹುಕೋಶ. ೯-೦೩). (ಗು). ೪. ನಗ್ನವಾದ ; ಬರಿಮೈಯಿಂದಿರುವ : ತದಾವ್ರುವನ ದೋಳೊರ್ವಂ . . . ಬ[ಪಾಠಾಂ. ಬೆ]ತ್ತಲೆ ಮರುಳಂತೆ ತನ್ನೊಳೆ ಮಿನು ಕುತ್ತುಂ ಮೋನದೊಳಿರ್ಪಂ (ರರ್ಶಾಸ್ಸು. ೬-೨೬); ಎತ್ತಿದ ಕಯ್ಯ ಕತ್ತಿಗೆ ಭಯಂಗೊಳ್ . . . ಬಪ್ಪ ಬತ್ತಲೆ ಮರುಳ್ಗಳ್ ತಂಡದಿನೇಂ ಮಹೋಗ್ರಮೋ (ಶಂಶು. ೨-೦೬). **ಬತ್ತಲು$_2$** : ೨. 'ಬತ್ತಲಿಸು' ಪರಾ. **ಬೆತ್ತಲೆ$_1$** : ೫. ಮುಚ್ಚುಮರೆಯಿಲ್ಲದುದು; ನಿಚ್ಚಳವಾದುದು : ಇದೂ ನಾಟಕವಲ್ಲ . . . ಕೇವಲ ನಿಜ. ಬೆತ್ತಲೆಯ ಸತ್ಯ (ರಂಗಶಾ. ೦೬೨). ೬. ಮುಚ್ಚುಮರೆಯಿಲ್ಲದ; ನಿಚ್ಚಳವಾದ : ಬೆತ್ತಲೆ ಬದುಕ ಸುತ್ತಿ ತೋರಿಸುತ್ತಿದೆ ಡೌಲು (ಶಂಮು. ೩೦-೦).

**ಬತ್ತಲೆಗುದುರೆ**=ಜೀನು ಹಾಕಿರದ ಕುದುರೆ: ಗಂಡ ಮಾದೇವರಾಯ ಹತ್ತಿದ ಬತ್ತಲೆಗುದುರಿ ಹತ್ತಿದ ಬತ್ತಲೆಗುದುರಿ ಹೊಂಟಾನತ್ತೆಯ ಮನೆಗೆ (ಕಣ್ಣಾ. ೬೨-೦೯).

[ದೇ.೩ ತುಳು. ಬತ್ತಲೆ, ಬೇತಲ್, ಬೇತಾಳ್; ತೆಲು. ಬತ್ತಲ]

**ಬತ್ತಲೆ$_2$**, ಬೆತ್ತಲೆ$_2$ (ಅ). ಮೈಮೇಲೆ ಬಟ್ಟೆಯಿಲ್ಲದೆ ; ನಗ್ನವಾಗಿ ; ವಿವಸ್ತ್ರವಾಗಿ : ಬೇಡಿದ ಭೂಷಣಂಗಳಂ ಬತ್ತಲೆ [ಪಾಠಾಂ. ಳೆ] ಟಾಂಗಿ ತಾಂಗುವಳೆ (ಮುಕ್ತ. ೭-೩೦); ಒರ್ವಳ್ ನೀಱ ಪ್ಪುಯಿಯೊಡ್ಡಿ ಬತ್ತಲೆ ನಿಂದಿರ್ದಳೆರಲ್ಗೆ ತೀರ್ದ ರತಪೇದಶ್ರಾಂತಿಯಿಂ ಬಿಚ್ಚತಂ (ಸೂಕ್ತಿಸು. ೦೪-೬೪); ಬತ್ತಲೆ ತಿರುಗುವ ಜನರಿರುವೆಡೆಯೊಳು ಅಗಸನು ಮಾಡುವುದೇನು (ಶಂಶಾತ. ೦೩೪-೬೩). **ಬೆತ್ತಲೆ$_2$** : ಎಲೆ ಯತಿ ಮುಕ್ತಭಾವ ನೀನೇಕೆ ಬೆತ್ತಲೆ ಬಂದೆ (ಶೇಬಸಂ. ೦೯-೦೩) ; ಹುತ್ತವನೇಱದವರು ಹುಲ್ಲುಗಳ ಕಟ್ಟಿ ಬೆತ್ತಲೆ ನೀರ ಹೊಕ್ಕವರು ಕತ್ತಿ ಕಠಾರಿಯ ಬಿಸುಟ ಕಾಲಿಂಳ ಮೊತ್ತವನೇನ ಬಣ್ಣಿಸುವೆ (ಶಂಷಟ. ೦೩-೯೭). [<ಬತ್ತಲೆ$_1$]

**ಬತ್ತಲೆಗ**, ಬೆತ್ತಲೆಗ (ನಾ). ೧. ದಿಗಂಬರಸಂನ್ಯಾಸಿ ; ಜೈನಭಿಕ್ಷು: ಈ ನಿನ್ನರ್ಥಗವ್ಪಡದ ಯತಿಯರ ಧರ್ಮಮೊಳ್ಪಿತಲ್ಲಿವರುಟ್ಟರು ಮಲ್ಲರ್ ಬತ್ತ[ಪಾಠಾಂ. ಬೆ]ಲೆಗರುಮಲ್ಲರ್ (ವಡ್ಡಾರಾ. ೯೩-೦೨) ; ತಲೆವಱದುಟ್ಟುದಿಕ್ಕಿ ಸುರಲೋಕಸುಖಂಗಳನುಣ್ಬೆವೆಂಬ ಬತ್ತಲೆಗರ ಮಾತುಗೇಳದಿರು (ಅಂಕ. ೨-೯) ; ಸತ್ತು ಸಗ್ಗದ ಸತಿಯರನು ಕೊಡುವೆನೆಂಬ ಬತ್ತಲೆಗರ ಮಾತು ಕೇಳಿ ಉತ್ತಮ ರೂಪವತಿಯರ ಭೋಗಗಳ ನೊತ್ತರಿಸುವೆನೆನಬಹುದೆ (ಶೇಬಸಂ. ೩೪-೩೪). **ಬೆತ್ತಲೆಗ** : ೨. ಬೆತ್ತಲೆಯಾಗಿರುವವನು ; ನಗ್ನ : ಉಡಿಗೆ ತೊಡಿಗೆ ಇಟ್ಟವರು ವೇಷಿಯುಂ ಸೋಂಕಲೊಡನೆ ಬೆತ್ತಲೆ[ಪಾಠಾಂ. ಲಿ]ಗರಾಗಿಹರು (ಗೂಮ್ಮಕ. ೨-೦೦೦).

[ಬತ್ತಲೆ$_1$ + — ಗ$_2$]

**ಬತ್ತಲೆಗಣ್ಣು**, ಬೆತ್ತಲೆಗಣ್ಣು (ನಾ). ೧. (ಅಲಂ) ಜ್ಞಾನದ ಪ್ರಭಾವವಿರದ ಕಣ್ಣು : ಕತ್ತಲೆಯ ಗವಿಯಯ್ಯ ಕವಿಹೃದಯದಾ ಗಹ್ಯ; ಬಯಲು ಬತ್ತಲೆಗಣ್ಣಿಗದು ಅಸಹ್ಯ (ಅಶೇ. ೨-೦೨). **ಬೆತ್ತಲೆಗಣ್ಣು** : ೨. ಕನ್ನಡಕದ ಸಹಾಯವನ್ನು ಹೊಂದದ ಕಣ್ಣು ; ಬರಿಗಣ್ಣು : ಆ ಮಹಾರತ್ನದ ಪ್ರಭೆ ಅವನ ಬೆತ್ತಲೆಗಣ್ಣಿನ ಮೇಲೆ ಬಿದ್ದೊಡನೆಯೇ ಅವನು ಕುರುಡನಾದನು. (ಹೋರಕ. ೬೮). [ಬತ್ತಲೆ$_1$+ಕಣ್ಣು(<ಕಣ್)]

**ಬತ್ತಲೆಯಿರ್** 'ಬತ್ತಲಿರು' ನೋ.

**ಬತ್ತಳಿಕೆ** 'ಪತ್ತಳಿಕೆ$_1$' ನೋ.

**ಬತ್ತಳಿಗೆ** 'ಪತ್ತಳಿಕೆ$_1$' ನೋ.

**ಬತ್ತಾಯ**, ಭತ್ತ್ಯ$_2$, ಭತ್ತಾಯ, ಭತ್ತೆ, ಭತ್ಯ (ನಾ). ೧. ಬತ್ತದ ಬೆಳೆಯಿಂದ ಬರುವ ಉತ್ಪನ್ನ,–ವರಮಾನ : ಕಾಡರಂಬ ನೀರಾರಂಬಕೆ ಸಲುವ ಕಟಿ ಕಂಟಿ ಕೊಣನು ಅಟೆ ಅಚುಕಟುದರ ನೆಡಳಿ ಸಕಳಾ ಬತ್ತಾಯ (ಎಕ. X (S), ಕೋಲಾರ. ೩೦೯-೦೩ ; 17ನೆಯ ಶತ). ೨. ಜೀವನ ನಿರ್ವಹಣೆಗಾಗಿ ಕೊಡುವ ಹಣ ; ಜೀವನಾಂಶ : "ಬತ್ತಾಯ–ಭೃತ್ಯಾ=ಅಶನಾರ್ಥ" (ಕರ್ನಕೋ. ೨೬) ; ಆಂ ಬಂದ ದಿನಮೊದಲಿಂದು ತನಕನ್ನ ಹಿಂದುಳಿದ ಬತ್ತಾಯ ಬಂದುದು (ಹಕಕಾ. ೦೦-೬). **ಭತ್ತ್ಯ$_2$** : ೩. "ಸರ್ಕಾರಿ ನೌಕರರಿಗೆ ನೀಡುವ ಹೆಚ್ಚುವರಿ ಸಂಬಳ ; ನ್ಯಾಯಾಲಯವು ಸಮನ್ಸುಗಳನ್ನು ಜಾರಿ ಮಾಡುವಾಗ ತಾತ್ಕಾಲಿಕ ನೌಕರರಿಗೆ ಕೊಡುವ ಹಣ, ಕಚೇರಿ ಕೆಲಸದ ಮೇಲೆ ಮಾಡುವ ಪ್ರಯಾಣದ ಖರ್ಚಿಗಾಗಿ ಸಿಬ್ಬಂದಿಗೆ ಕೊಡುವ ಹಣ ಮುಂತಾದುವು" (ಕೃಶಗ. ೩೯೯). **ಭತ್ತಾಯ** : ೧. ಆ ದೇವರ್ಗೆ ಬಯ್ಗಿನ ನಿವೇದ್ಯಕೆ ಭತ್ತಾಯ ಹೇರ್ಗೆ (ಎಕ. VII, ಶಿಕಾರಿ. ೨೩೬-೩ ; 1147); ಅರಸರ ಸಿದ್ದಾಯ ಭತ್ತಾಯದೊಳ × × ವದಲು . . . ನಿ[ವೇ] ದ್ಯದ ತುಪ್ಪಕ್ಕೆ ಕೊಟ್ಟರು (ಕೌಇ. XI — ii, ೨೦೬-೦೨ ; ? ). **ಭತ್ತೆ** : ೩. ಸಂಬಳ, ಬಡತಿ, ಭತ್ತೆ, ಪಿಂಚಣಿ, ಪದವಿ ಇವೇ ಈ ವರ್ಗದ ಪಂಚಪ್ರಾಣಗಳಾದವು (ಮಾವಾರ. ೯೩) ; ಮಾರಾಟದ ಉತ್ಪನ್ನದ ಮೇಲೆ ಭತ್ತೆ . . . ಪ್ರವಾಸದ ಸೌಕರ್ಯ ಇವೆಲ್ಲ ಇದ್ದುವು (ನಾಕ್ಕಂ. ೩೩). **ಭತ್ಯ** : ೩. ಇಲಾಖೆಯಲ್ಲಿದ್ದಾಗ ನೂರೆಪ್ಪತ್ತೈದು ರೂಪಾಯಿಗಳ ಸಂಬಳ ಬರುತ್ತಿತ್ತು. ಮೇಲೆ ಭತ್ಯ ಬರುತ್ತಿತ್ತು (ರಂಗಳ. ೩) ; ಸುಲ್ತಾನನ ರಾಜ್ಯದಲ್ಲಿ ಹೋದ ಕಡೆಯಲ್ಲೆಲ್ಲಾ ನಮಗೆ ಬೇಕಾದ ಭತ್ಯವನ್ನೂ ಒದಗಿಸಿಕೊಡಬೇಕೆಂದು ಅಪ್ಪಣೆಯಾಗಿತ್ತು (ಶ್ರವಾಇ. II, ೬೬). 'ಭತ್ತಾದಾಯ' ಪರಾ. [ಬತ್ತ$_1$ +ಆಯ$_1$ . / ಹಿಂ. ಭಾತ್; ಮರಾ. ಭತ್ತಾ. / ಸಂ. ಭೃತ್ಯಾ. / ಲ್ಯಾಟಿನ್ . ಬಸ್ಸುಮ್. / ಇಂ. Batta]

**ಬತ್ತಾಸ** 'ಬತ್ತಾಸು' ನೋ.

**ಬತ್ತಾಸು**, ಬತಾಸು, ಬತ್ತಾಸ (ನಾ). ಸಕ್ಕರೆಯ ಪಾಕದಿಂದ ಮಾಡುವ ಬಗೆಬಗೆಯಾಕಾರದ ಬಗೆಬಗೆಯ ಬಣ್ಣದ ಒಂದು ಸಿಹಿ ತಿಂಡಿ : ಆ ರೊಕ್ಕ ಕೊಟ್ಟು ಬೆಂಡು, ಬತ್ತಾಸು ತಕ್ಕೊಂಡು ತಿನ್ನುವ (ಮುಂಬಯಿ. ೪-೪೪) ; ಅವರು ಮಂಡಕ್ಕಿ, ಹುರಿಕಡಲೆ, ಬೆಂಡು, ಬತ್ತಾಸು ಕೊಂಡುಕೊಂಡರು (ಕಶಕ. ೩-೨೩). **ಬತಾಸು** : ಗೋದುಮೆ ತಂಡುಲಾದಿ ಬಹುಚೂರ್ಣಂಗಳೊಡವೆರಸಿ ಸಕ್ಕರೆಯ ಪರಿಪಾಕದಡಿಗೆಯಿಂ ಘೃತದೊಡನೆ

ಗ್ಯದ ಲಡ್ಡಿಗೆ ಬತಾಸು . . . ಕೊಡುತ (ಶಶಶೋ. ೧೭-೬೦); ಗಂಡು ಹೆಣ್ಣಿನ ಮೇಲೆ . . . ಕಾಳು, ಬತಾಸು ಮುಂತಾದ ಸಿಹಿತಿಂಡಿಗಳನ್ನು ಎಸೆಯುತ್ತಾರೆ (ಕೃಜಾಶ. II, ೯೯೭). ಬತ್ತಾಸ : ಸಕ್ಕರೆಯ ಬೆಂಡು ಬತ್ತಾಸ ಗಳ ಪರ್ವತವೇ ಬಿದ್ದಿತು (ಹಕ್ಕಿಶಿ. ೬೦) ; ಬಂದ ಮುತ್ತೈದೆಯರಿಗೆ, ಕುಮಾರಿಯರಿಗೆ . . . ಪೇಢೆ, ಬತ್ತಾಸಗಳನ್ನು ಹಂಚುತ್ತಾರೆ (ಶಾಹಬ್ಬ. ೬೨). [←ಹಿಂ. ಬತಾಸಾ, ಬತಾಶಾ; ಮರಾ. ಬತ್ತಾಸಾ, ಬತಾಸಾ]

ಬತ್ತಿ (ನಾ). ೧. (ದೀಪಕ್ಕೆ ಹಾಕುವ) ಹುರಿ ಮಾಡಿದ ಹತ್ತಿಯ ಎಳೆ, –ತಿರಿ; ವರ್ತಿ : ಸೊಡರೊಳ್ ಬತ್ತಿಯುಮೆಣ್ಣೆಯುಮೊಡನಟ್ಟಿದ ಪೊಲ್ಲಾಯುಮಂ ಶರೀರಮು[ಮ]ವಾಳಂತೊಡದದವೆ ನೋಂತಂ ಮುನಿ ಮುನ್ನೊಡಮಟ್ಟಿದುವೊಡನೆ ತಪ್ಪುವುದೌಚಿತ್ಯಮೆನಲ್ (ಶಾಂತಿಪು. ೯-೧೦೮); ಪಣತೆಯೂ ಇದೆ ಬತ್ತಿಯೂ ಇದೆ ಜ್ಯೋತಿಯ ಬೆಳಗುವಡೆ ತೈಲವಿಲ್ಲದೆ ಪ್ರಭೆ ತಾನೆಲ್ಲಿಯದೋ (ಅಶಹೂ. ೦೯-೬೮) ; ಬತ್ತಿ ಹೆತ್ತುಪ್ಪವನ್ನು ಹೊತ್ತಿಸಿದ ಫಲವೇನು ಮುತ್ತೊಂದು ದೈವಕೆಱಗುವನ ಶಿವಪೂಜೆ ಹತ್ತಿ ಗೇಡು (ಸರ್ವಜ್ಞ. ೬೭೨). ೨. ಸಿಡಿಮದ್ದನ್ನು ಹತ್ತಿಸಲು ಬಳಸುವ ಒಂದು ಬಗೆಯ ಸಾಧನ : ದಾದಲ್ಯಾ. . .ಖಾಡಿಯ ಬಾಯಿಗೆ ಮದ್ದು ಜಡಿದು, ಬತ್ತಿ ಸೇರಿಸುವ ಸನ್ನಾಹ ಮಾಡತೊಡಗಿದ (ದೀಶಹ. II, ೧೭೭); ಬತ್ತಿ ನೂಕಲಾರದ ಬಂಟ ದಳ ನಡಿಸ್ಯಾನೇ ? (ಗಾಕ). 'ಚಾವಿಗೆಬತ್ತಿ' ಪರಾ. ೩. ಕಂದೀಲು; ಮೋಂಬತ್ತಿ: (೯). ೪. ವಿರೇಚನಚಿಕಿತ್ಸೆಗಾಗಿ ಔಷಧದಲ್ಲಿ ಅದ್ದಿ ಗುದದಲ್ಲಿ ಇಡುವ ವೈದ್ಯಕೀಯ ಸಾಧನ ; ಔಷಧಿಯಲ್ಲಿ ಅದ್ದಿ ತೆಗೆದ ಹತ್ತಿಯ ತಿರಿ : ಸುರದಾರು ಸೊರೆಯ ಬೀಜಂ ಸುರವಾರುಣಿ ಬೆಲ್ಲಮಂಬಿವಿನಿತುಮನೊಂದಾಗಿರೆ ಮಿದಿದು ಮಾಡಿ ಬತ್ತಿಯನಿರಿಸುಗೆ ಗುದದೊಳಗೆ ಕಳೆಗುಮರಿಸೆಯ ಮೊಳೆಗಳ್ (ಲೋಕೋಪ. ೯-೦೯೯) ; ಪುಣಸೆಯ ಪಣ್ಣ ಬತ್ತಿಯೊಳ್ ಸೈಂಧವಮಂ ಬೆರಸಿ ಗುದಮುಖದೊಳಿಡೆ ಬಾಹಿರಮಕ್ಕುಂ ಕಠಿನವಾಗಿ ಬಿಗಿದಿದ್ದ ಮಲಂ (ಕರ್ಣಾ. ೦೦-೨೭). ೫. ಸುಗಂಧವನ್ನು ಲೇಪಿಸಿರುವ ಕಡ್ಡಿ : 'ಅಗರು ಬತ್ತಿ', 'ಊದುಬತ್ತಿ' ಪರಾ. ೬. ಹೊಗೆಸೊಪ್ಪು ಸೇದಲು ಎಲೆಯಿಂನ್ನು ಸುತ್ತಿ ಮಾಡಿದ ಸುರುಳಿ ; ಬೀಡಿ, ಚುಟ್ಟಾ ಮುಂತಾದುವು : ಬದುವಿನ ಮೇಲೆ ನಾಗಣ್ಣ ಬತ್ತೀ ಸೇದುತ್ತ ಕುಳಿತಿದ್ದ (ಬೀಐಕು. ೫) ; ಮಂದೀ ನಗಿಯೊಳಗ ಬತ್ತೀ ಕಮರಿನ ಹೋಗೀ ಎತ್ತ್ಯ. ಇದೇನು ಆಟ ನಮ್ಮವ್ವಾ ! (ಹೊಸಂಗಾ. ೮೯). ೭. (ಆಲಂ) ಎಳೆಯ ಮಗು ; ಹಸುಳೆ ; ಹಸುಗೂಸು : "ಕುಡ –ಬಾಲ್ಯೇ, ಹಸುಳೆತನದೊಳ್ . . . ಕುಡು=ಬತ್ತಿ" (ಶಾಕಸ್ಯ. ೨೨೯) ; ತನ್ನ ತೊಡೆಯ ಮೇಲೆ ಮಗನನ್ನು ಕೂಡಿಸಿಕೊಂಡು ಹತ್ತು ತಿಂಗಳ ಬತ್ತಿಗೆ ಉಣ್ಣಿಸುವಂತೆ ಉಣ್ಣಿಸುವಳು (ಕೃಶಿ. ೦೯೦). ೮. (ಹತ್ತಿಯ) ಚೂರು ; ತುಂಡು : ದೇವಾರ್ಚನೆಗಳಾದಿ ವಿಧಾನದೊಳು [೯] ಗಾಚರಿಂತರಾಗಿಹರಲ್ಲದುಣಾವಾಗ ಪೀನಘಂಟೆಗಳೊಳಿದು ಬತ್ತಿಗಳಾನಿಸುತ ಕರ್ನದಲಿ (ಬಿಲ್ಹಣ. ೯-೨೯) ; ಕಿವಿಯ ಕುಳಿಗಳಲ್ಲಿ ಪಚ್ಚೆಕರ್ಪೂರದ ಬತ್ತಿಗಳನಿತ್ತು (ಪ್ರಗೂಂ. ೫೦೭-೦).

ಬತ್ತಿಕೊಡು = (ಆಲಂ) ಮೋಸ ಮಾಡು ; ದಗಾ ಹಾಕು : ಈ ಹಾಳು ಸುಳಿವಾಲಿ ಇವೊತ್ತು ಬತ್ತಿ ಕೊಟ್ಟ (ಕಳುವು. ೦೬೬) ; ನನ್ನ ದೋಸ್ತಿಗಳೇ ನನ್ನ ಬಾಡಕ್ಕೆ ಬತ್ತಿ ಕೊಟ್ಟರು (ಹಂಗೂಂ. ೯೫). ಬತ್ತಿಯಿಡು =ಕೆಡಕು ಮಾಡುವುದಕ್ಕಾಗಿ ಚಾಡಿಹೇಳು: ಹೊಟ್ಟೆಕಿಚ್ಚಿನಿಂದ ಕೆಲವರು ಬತ್ತಿಯಿಟ್ಟು ಅವರ ಸಂಸಾರವನ್ನೇ ಹಾಳು ಮಾಡಿದರು (ಲೂ೦). ಬತ್ತಿ ಹಚ್ಚು = ಆಸ್ಫೋಟನೆಯನ್ನುಂಟುಮಾಡು : ನಾಲ್ಕಾರು ಜನರ ಮಧ್ಯೆ ಓಡಾಡಿ ಬತ್ತಿ ಹಚ್ಚುವುದೇ ಅವನ ಸ್ವಭಾವ (ಲೂ೦).

[← ಹಿಂ. ಬತ್ತೀ. / ಸಂ. ವರ್ತಿ]

ಬತ್ತಿಕೋವಿ (ನಾ). ಹತ್ತಿಯಿಂದ ಬೆಂಕಿ ಹಚ್ಚುವ ಸಿಡಿಮದ್ದಿನ ಬಂದೂಕ : ಬತ್ತಿಕೋವಿ, ಭರ್ಜಿ, ಈಟಿ, ಉದ್ದಗತ್ತಿ, ಬಿಲ್ಲುಬಾಣಗಳ ಸಾಹಸಿಗಳೂ ಅಲ್ಪ ಸ್ವಲ್ಪ ಇರುತ್ತಿದ್ದರು (ಕುಲಕು. ೬೫).

[ಬತ್ತಿ + ಕೋವಿ₁]

ಬತ್ತಿಗೆ (ನಾ). ನೀರು ಮುಂತಾದ ದ್ರವಪದಾರ್ಥಗಳನ್ನು ತುಂಬಿಡಲು ಹಾಗೂ ಸಾಗಿಸಲು ಬಳಸುವ ಚರ್ಮದ ಚೀಲ; ತಿತ್ತಿ: ನಾನಾವಿಧ ಪಾನಕದ ತುಂತುರುಗಳಿಂದ ಕೆಂಪಾಗಿರುವ ಗೋಚರ್ಮದ ಬತ್ತಿಗೆಯಂ ಪಿಡಿದು (ಕೃಜಾಶಿ. ೫). [< ಸಂ. ಭಸ್ತ್ರಿಕಾ]

ಬತ್ತಿಸು (ಕ್ರಿ). ೧. ನೀರಿಲ್ಲದಂತೆ ಮಾಡು ; ಒಣಗಿಸು ; ಇಂಗಿಸು : ಬತ್ತಿಸಿದನಂದಹಿತಸುಭಟರ ವೀರಶರನಿಧಿಯ (ಕುಮಾಕೃ್ರೀ. ೨-೨೮) ; ಉಗ್ರನೇಱುವ ಮಹಾವಾಹನದ . . . ನಾಲ್ಕುಪಾದಾಗ್ರಹತಿಗೇಳ್ಕೆಂಧೂಳ್ ಬತ್ತಿಸಿತು ಗಗನಗಂಗಾನದೀಜಲವನು (ಕಪು. ೯೯-೦೦) ; ಈ ಖಳಬಲಸಾಗರವನು ಕುಂಭಜನ ಆಗಮದಂದದೆ ಬತ್ತಿಪೆ (ಕಂಕಶಿ. ೦೨-೫೬). ೨. (ಬೆಂಕಿ, ದೀಪ ಮುಂತಾದುವನ್ನು) ಆರಿಸು ; ನಂದಿಸು : ಬಡಬಾಗ್ನಿಯ ಬಾಯನೆಯ್ದೆ ಬತ್ತಿಸುವುದು ತೇಜಂ (ಎಕ. VII, ಶಿಕಶೂ. ೯-೯೬ ; 1122) ; ಬತ್ತಿಯ ಬತ್ತಿಸಗೊಡದಲೆ, ಸುಡುತಿರಲು ದೆಳಕಿನ ಕುಡಿಯಾಗಿ ಮೆರೆಯುವದು (ಷಟ್ಸ್ಥ. ೬೯-೯೭). ೩. ದ್ರವಪದಾರ್ಥವನ್ನು ಕುದಿಸಿ ಇಂಗಿಸು ; ಅಟ್ಟಿಸು : ಕಷಾಯವನ್ನು ಬತ್ತಿಸುವುದರಲ್ಲಿ ತುಸು ಹೆಚ್ಚು ಕಡಿಮೆಯಾದರೆ ಗಾಬರಿಯಿಲ್ಲ (ಮುಕಕು. ೨). ೪. ಅಡಗಿಸು; ಇಲ್ಲವಾಗಿಸು ; ನಾಶಮಾಡು : ಬತ್ತಿಸಿ ನೃಪಾಲರಾಟೋಪಮಂ ಕೋಪದಿಂ (ಜಮ್ಮಾಣಿ. ೬೨-೦೯೬೮). [ಬತ್ತು₁ + – ಇಸು₁]

ಬತ್ತೀಸ (ನಾ). ಒಂದು ಸಂಖ್ಯೆ ; ಮೂವತ್ತೆರಡು : ಕಂಬಳಿಯ ಹಬಿಕಿನಲ್ಲಿ ಬತ್ತೀಸಕೋಟಿ ದೇವರ್ಕಳೆಲ್ಲರು ಸಿಕ್ಕಿ ಅಳಲುತ್ತ ಬಳಲುತ್ತಲೈದಾರೆ (ಬೋಧಶು. ೬-೨೯) : ಮಾದಿರಾಜಂ ಮತ್ತೆ ಬತ್ತೀಸಾದಿ ರಾಗಂಗಳೆ ಗನಿತು ದಂಡಿಗೆಗಳಂ ರಚಿಸಿ ವೇದಿಸಲು (ಬಸಪು. ೦೯-೬) ; ಈ ವಚನಗಳು . . . ಅಂದು ಬಳಕೆಯಲ್ಲಿದ್ದ 'ಬತ್ತೀಸ' ಎಂದರೆ ೩೨ ರಾಗಗಳಲ್ಲಿ ಹಾಡಲ್ಪಡುತ್ತಿದ್ದವು (ಸಂಗೀಶು. ೬೯).

[< ಪ್ರಾ. ಬತ್ತೀಸ. / ಹಿಂ. ಮರಾ. ಬತ್ತೀಸ್. / ಸಂ. ದ್ವಾತ್ರಿಂಶತ್]

ಬತ್ತೀಸಕಡಿ (ನಾ). (?) : ಬತ್ತೀಸಕಡಿಯ ಬಾಹರಪುಟದ ಗುಳವದ ಕಣಂಗಳ ಕುಳಿಶದಳಂ (ಅಶಂಪು. ೦೯-೬ ಶ). 'ಬತ್ತೀಸಾಯುಧ' ಪರಾ.

[ಬತ್ತೀಸ + ಕಡಿ₁]

ಬತ್ತೀಸಕಲೆ (ನಾ). [ವೀಶೈ] ಮೂವತ್ತೆರಡು ಕಲೆಗಳು ; ೯ "ಮೂವತ್ತೆರಡು (ಬತ್ತೀಸ) ಕಳೆಗಳು : ಸದಾಚಾರ, ಸದ್ಭಕ್ತಿ, ಸಮ್ಯಕ್‌ಜ್ಞಾನ, ಸತ್ಕ್ರಿಯೆ, ಸದ್ವರ್ತನೆ, ಸಗುಣ, ನಿರ್ಗುಣ, ನಿಜಗುಣ, ಸಚ್ಚರಿತ, ಸದ್ಭಾವ, ಅಕ್ರೋಧ, ಸತ್ಯವಚನ, ಕ್ಷಮೆ, ದಮೆ, ಭವಿಭಕ್ತಭೇದ, ಸತ್ಪಾತ್ರದ್ರವ್ಯಾರ್ಪಣ, ಗೌರವಬುದ್ಧಿ, ಲಿಂಗಲೀಯ, ಜಂಗಮಾನುಭಾವ, ದಶವಿಧಪಾದೋದಕ, ಏಕಾದಶಪ್ರಸಾದ, ಷೋಡಶಭಕ್ತಿನಿರ್ವಾಹ, ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಚನೆ, ತ್ರಿವಿಧ ಷಡ್ವಿಧ ನವವಿಧ ಜಪ, ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಪಿತ, ಚಿದ್ಭೂತಿ ಸ್ನಾನ ಧೂಳನಧಾರಣ, ಸರ್ವಾಂಗದಲ್ಲಿ ಚಿದ್ರುದ್ರಾಕ್ಷಧಾರಣ, ತಾ ಮಾಡುವ ಸತ್ಯಶುದ್ಧ ಕಾಯಕ, ತಾ ಬೇಡುವ ಸದ್ಭಕ್ತಿ ಭಿಕ್ಷೆ, ತಾ ಕೊಟ್ಟು ಕೊಂಬುವ ಭೇದ, ತಾನಾಚರಿಸುವ ಸತ್ಯ ನಡೆನುಡಿ, ತಾ ನಿಂದ ನಿರ್ವಾಣಪದ –ಇಂತಿವು ೩೨ ಕಳೆಗಳು" (ಶಸ್ವಶ. ೪. ೯೨೬) : ಷೋಡಶಭಕ್ತಿಯ ಮಾರ್ಗವ ತಿಳುಹಿ ಬತ್ತೀಸಕಲೆಯ ನೆಲೆಯನಱುಹಿ . . . ನಿರೂಪವ ಕೊಡಲು (ಶಸ್ವಶ. ೪. ೩೫೬-೬೭೮). [ಬತ್ತೀಸ + ಕಲೆ₁]

**ಬತ್ತೀಸಪುತ್ಥಳಿ** (ನಾ). ಮೂವತ್ತೆರಡು ಗೊಂಬೆಗಳು,—ವಿಗ್ರಹಗಳು. **ಬತ್ತೀಸಪುತ್ಥಳಿಕಥೆ, ಬತ್ತೀಸಪುತ್ಥಳಿಕತೆ** = ವಿಕ್ರಮಾದಿತ್ಯರಾಜನ ಸಿಂಹಾಸನದ ಎರಡು ಬದಿಗಳಲ್ಲೂ ಅಳವಡಿಸಿದ್ದ ಮೂವತ್ತೆರಡು ಗೊಂಬೆಗಳು ಸಜೀವವಾಗಿ, ಭೋಜರಾಜನಿಗೆ ಹೇಳಿದುವೆಂದು ಭಾವಿಸಲಾದ ಮೂವತ್ತೆರಡು ಕಥೆಗಳು : ವಿಚಿತ್ರವಸ್ತುಗಳನ್ನು ಕೇಳುವುದೆಂದರೆ ಮಕ್ಕಳಿಗೆ ಆನಂದ . . . ಬತ್ತೀಸಪುತ್ಥಳಿಕಥೆಗಳು ಈ ಮಾದರಿಯವು (ಶಾಂಕೃ. I, ೨೦೧) ; ಓದುವಾಗ . . . ಅದು ಬತ್ತೀಸ ಪುತ್ಥಳಿಕತೆಯಾದರೂ ಸರಿಯೆ ; ಯವನಯಾಮಿನೀಕಥೆಗಳಾದರೂ ಸರಿಯೆ ಮನಸ್ಸಿಗೆ ಸಂತೋಷವಾಗುತ್ತದೆ (ಬೂಕಿಕ್ಕ. ೩). [ಬತ್ತೀಸ + ಪುತ್ಥಳಿ]

**ಬತ್ತೀಸರಾಗ** (ನಾ). [ಸಂಗೀತ] ಪ್ರಸಿದ್ಧವಾದ ಮೂವತ್ತೆರಡು ಬಗೆಯ ರಾಗಗಳು ; ᑭ "ರಾಗಗಳು — ೮ ಪುರುಷರಾಗಗಳು : ಭೈರವಿ, ಭೂಪತಿ (ಭೂಪಾಲ), ಶ್ರೀರಾಗ, ರಾಗಪಂಜರ, ವಸಂತ, ಮಾಲವ, ಬಂಗಾಲ, ನಾಟಕ (ನಟ್ಟ) ; ೨೪ ಸ್ತ್ರೀರಾಗಗಳು : ಭೈರವಿಗೆ : ದೇವಕ್ರಿಯಾ, ಮೇಘರಂಜೀ, ಕುರಂಜೀ; ಭೂಪಾಲಕ್ಕೆ : ಬೇಲಾವುಲೀ, ಮಲಹರಿ, ಭೌಲೀ ; ಶ್ರೀರಾಗಕ್ಕೆ : ಅಂಧಾಲೀ, ಭಲಾತೀ, ಮಾಹುರೀ; ರಾಗಪಂಜರಕ್ಕೆ: ದೇಶೀ, ಲಲಿತಾ, ತೋಡೀ; ವಸಂತಕ್ಕೆ : ರಾಮಕ್ರಿಯಾ, ವರಾಲೀ, ಕೌಶೀ ; ಮಾಲವಕ್ಕೆ : ಗುಂಡಕ್ರಿಯಾ, ಘೂರ್ಜರೀ, ಗೌಲೀ ; ಬಂಗಾಲಕ್ಕೆ : ಕರ್ಣಾಟ ಗೌಲಿಕಾ, ಧನ್ಯಾಸಿಕಾ, ಕಾಂಭೋಜೀ ; ನಟ್ಟವಿಗೆ : ದೇಶಾಕ್ಷೀ, ಆಹರೀ, ನಾರಾಯಣೀ (ಅಭಸಂ. ೧೧೧೪-೧೧೨೪)" (ಶ್ರೀತತ್ತ್ವ. ೩೬೩) : ಎನ್ನ ಕಾಯುವ ದಂಡಿಗೆಯ ಮಾಡಯ್ಯಾ . . . ಬತ್ತೀ[ಶಾಶಾಂ· ಕೃ]ಸರಾಗವ ಹಾಡಯ್ಯಾ (ಬಸವ. ೫೦೦) ; ಶಿವನ ಮೂರ್ತಿಯನೊಲಿದು ಪಾಡುತಂ ಬತ್ತೀಸರಾಗಂಗಳಿಂದೆ (ಶಾಶಕ. ೨-೦೯). [ಬತ್ತೀಸ + ರಾಗ]

**ಬತ್ತೀಸಲಕ್ಷಣ** (ನಾ). ಮೂವತ್ತೆರಡು ಬಗೆಯ ಗುರುತುಗಳು,—ಚಿಹ್ನೆಗಳು ; ᑭ "(ಅ) ಲಕ್ಷಣ — ೩೨ (ಅ) ಮಹಾಪುರುಷಲಕ್ಷಣ (ಬತ್ತೀಸಶುಭಲಕ್ಷಣ) — ೩೨ : ಪಂಚಸೂಕ್ಷ್ಮಗಳು : ತ್ವಕ್, ಕೇಶ, ಅಂಗುಲಿ, ದಂತ, ಅಂಗುಲಿಪರ್ವ ; ಪಂಚದೀರ್ಘಗಳು : ಭುಜ, ನೇತ್ರ, ಹನು, ಜಂಘೆ, ನಾಸಿಕ ; ಸಪ್ತರಕ್ತಗಳು—ಹಸ್ತ ತಲ, ಪಾದತಲ, ಅಧರೋಷ್ಠ, ನೇತ್ರ, ತಾಲು, ನಾಲಗೆ, ಉಗುರು ; ಷಡುನ್ನತಗಳು—ವಕ್ಷಃಸ್ಥಲ, ಕುಕ್ಷಿ, ಕೇಶ, ಸ್ಕಂದ, ಹಸ್ತ, ಬಾಯಿ ; ಪೃಥುತ್ರಯಗಳು—ವಕ್ಷಸ್ಥಲ, ಕಟಿ, ಲಲಾಟ ; ಲಘುತ್ರಯಗಳು—ಗ್ರೀವಾ, ಜಂಘಾ, ಶಿಶ್ನ ; ಗಂಭೀರತ್ರಯಗಳು —ಸ್ವರ, ಕರ್ಣ, ನಾಭಿ (ಬೌದ್ಧಧರ್ಮಾನುಸಾರಸಂಗ್ರಹ — ಸಂ. ೨೨೪–೫). (ಆ) ಸಾಮುದ್ರಿಕಲಕ್ಷಣ — ೩೨ : ಛತ್ರ, ಕಮಲ, ಮನುಷ್ಯ, ರಥ, ವಜ್ರ, ಕಚ್ಛಪ, ಅಂಕುಶ, ವಾಪಿ, ಸ್ವಸ್ತಿಕ, ತೋರಣ, ಚಾಮರ, ಸಿಂಹ, ವೃಕ್ಷ, ಚಕ್ರ, ಶಂಖ, ಹಸ್ತಿ, ಸಮುದ್ರ, ಕಲಶ, ಪ್ರಾಸಾದ, ಮತ್ಸ್ಯ, ಯವ, ಸ್ತಂಭ, ಸೂರ್ಯ, ಕಮಂಡಲ, ಪರ್ವತ, ಚವರೀ, ದರ್ಪಣ, ವೃಷ, ಪತಾಕಾ, ಲಕ್ಷ್ಮೀ, ಪುಷ್ಪಮಾಲಾ, ಮಯೂರ (ಹಸ್ತಸಾಮುದ್ರಿಕ ಶಾಸ್ತ್ರ — ಸಂ. ೨೨೫–೨೨೬). ಸ್ವಶರೀರ, ಕುಲಿಶ, ದ್ವೀಪ, ಸಮುದ್ರ, ಭವನ, ವಿಮಾನ, ಬಾಣ, ಗೋಪುರ, ಇಂದ್ರಕೇತು, ಶಂಕ, ಪತಾಕ, ಮುಸಲ, ಹಯ, ರವಿ, ಶಶಿ, ಸ್ವಸ್ತಿಕ, ದಾರು, ಕೂರ್ಮ, ಅಂಕುಶ, ಸಿಂಹ, ಗಜ, ವೃಷಭ, ಮತ್ಸ್ಯ, ಛತ್ರ, ಶಯ್ಯಾ, ಆಸನ, ವರ್ಧಮಾನ, ಶ್ರೀವತ್ಸ, ಚಕ್ರ, ಅನಲ, ಕುಂಭ (?) (ಶಾಸ್ತ್ರಸಾರಸಮುಚ್ಚಯ)" (ಶ್ರೀತತ್ತ್ವ. ೩೬೦). [ಬತ್ತೀಸ+ಲಕ್ಷಣ]

**ಬತ್ತೀಸಶಸ್ತ್ರ** (ನಾ). = ಬತ್ತೀಸಾಯುಧ : ಕಲಿಗೆ ಮುಖದರ್ಪಣ ಬತ್ತೀಸಶಸ್ತ್ರಶಾಸ್ತ್ರಪ್ರವೀಣ (ಕೋಶಾ. ೯-೩೭ ; 1171) ; ಬತ್ತೀಸಶಸ್ತ್ರಗಳಲಿಟ್ಟು ಬೊಬ್ಬೆಯನಿಟ್ಟು . . . ಬಿತ್ತರದ ಪರಿಘಂ ಪೊಡೆಯ (ವಂಕಾರಾ. ೩-೦೩-೭). [ಬತ್ತೀಸ + ಶಸ್ತ್ರ]

**ಬತ್ತೀಸಾಯುಧ** (ನಾ). ಮೂವತ್ತೆರಡು ಬಗೆಯ ಅಸ್ತ್ರಗಳು : ᑭ ಈ ಆಯುಧಗಳ ವಿವರದ ಬಗ್ಗೆ ಬೇರೆ ಬೇರೆ ಗ್ರಂಥಗಳಲ್ಲಿ ವ್ಯತ್ಯಾಸ ಗಳಿವೆ. "ಆಯುಧ—೩೨ (ಬತ್ತೀಸಾಯುಧ) : ಚಕ್ರ, ಭಿಂಡಿವಾಳ, ಭೃಶುಂಡಿ, ದ್ರುಘಣ, ದಂಶಕಂಟಕ, ಇಳಾಹಸ್ತ, ಇಷು, ಮುಸಲ, ಮೌಷ್ಟಿಕ, ಮಯೂಖಿ, ಲಗುಡ, ಲವಿತ್ರ, ಪರಿಘ, ಪ್ರಾಸ, ಪಾಶ, ಶಕ್ತಿ, ಶತಘ್ನಿ, ಸೀರ, ಸ್ಥೂಣ, ತೋಮರ, ಗದಾ, ಗೋಶೀರ್ಷ, ಅಮುಕ್ತವಜ್ರ, ಆಸ್ತರ, ಅಸಿಧೇನುಕ, ಪಟ್ಟಸ, ಮುದ್ಗರ, ಪಿನಾಕ, ಕಂಠ, ಕಾಳರಾತ್ರಿ, ಯಾಪನ, ನಳಿಕಾ (ನೀತಿಪ್ರಕಾಶಿಕಾಸಂಸ್ಕಾರರತ್ನಮಾಲಾ. ಪು. ೨೯೦); ಖಡ್ಗ, ಕರಾಚೂರಿ, ಕಕ್ಕಡ, ಕಡುಗತ್ತಿ, ಸಣೆಗತ್ತಿ, ಸಬಳ, ಈಟಿ, ಇದುರಾಗತ್ತಿ, ಉಬ್ಬಣ, ಕಬ್ಬಿ(ಣ)ಕೋಲು, ಚಕ್ರ, ಚಂಡು, ಪೋತಿ, ಚಲ್ಲಿಹ, ಬಲ್ಲಿಹ, ಬಂಕು, ಬಾಣ, ನೇದೆ, ನರಾದಿ, ಶೂಲ, ಶಿರಾದಿ, ಚೂರಿ, ಚಿಕ್ಕಠಾರಿ, ಕಿರಸೆ, ಪರಶು, ಪಾಶ, ಪಟ್ಟೆಯ, ಮಟ್ಟ, ಅಂಕುಶ, ವಂಕಿ, ಲೌಡಿ, ಜವದಾಡೆ (?) (ವಿಚಿಂ. ೧೬೩-೨೬೩. ೬-೪೫೪) : ಬಾಣ, ಖಡ್ಗ, ತೋಮರ, ಸ್ತೋಮ, ಸೃಗ, ಚೀರಿ, ಶಕ್ತಿ, ಯಷ್ಟಿ, ಭಿಂಡಿವಾಲ, ಪರಿಘ, ಪರಶು, ಗದೆ, ಪ್ರಾಸ, ಮುದ್ಗರ, ಮುಸಲ, ಶೂಲ, ಪಾಶ, ಚಕ್ರ, ಮುಸಂಡಿ, ವಜ್ರ, ದಂಡ, ಹಲ, ಅಶನಿ, ಕುಂತ, ಅರಿಷ್ಟ, ಕ್ರಕಚ, ಪರಶು, ಶಂಕು, ತೋತ್ರ, ವೇಣಾ, ತ್ರಿಶೂಲ, ಕುಸೂಲ (ವಿದ್ಯಾಕ. ೧೩)" (ಶ್ರೀತತ್ತ್ವ. ೩೩) : ಬತ್ತೀಸಾಯುಧದಲ್ಲಿ ಅಭ್ಯಾಸವ ಮಾಡಿದರೇನು ಹಗೆಯ ಕೊಲುವರ ಒಂದಲಗು ಸಾಲದೆ (ಬಸವ. ೬೩೯) ; ಬತ್ತೀಸಾಯುಧಂಗಳು ಮೆಚ್ಚುವ ಕರಗಳಲಿ ತೊಳೆವ ಶ್ರೀಮೂರ್ತಿಯನು ನರಹರಿ ದನುಜಾಗಳ ತೋಯುತಿರಲು (ಸಂಕಕ. ೬-೯೯) ; ಜಡಿವ ಬತ್ತೀಸಾಯುಧಂಗಳ ಸುಭಟರ ಬೆಡಗಿನ ನಿಕರವೊಪ್ಪಿಹುವು (ಸಂವಂ. ೬-೩೯). [ಬತ್ತೀಸ + ಆಯುಧ]

**ಬತ್ತು₁** (ಕ್ರಿ). ೧. ಒಣಗು ; ಆರು ; ಇಂಗು : "ಬತ್ತು—ನಿರ್ದ್ರವೇ" (ಕಧಾಂಶ) ; ಕೆಮ್ಮುಂ . . . ಬಾಯ್ ಬತ್ತುವುದುಂ (ಕಶ್ಯಾ. ೩೩-೩); ಒಡಲುರಿಗುಂ ಮನಂ ಮಱುಗುಗುಂ . . . ಬಾಯ್ಬಿಡದೆ ಬತ್ತುಗುಂ (ಅಂಪು. ೦೨-೯೦) ; ಕುರುಪತಿ ನಿನ್ನ ಪೊಕ್ಕ ತೊಱೆಗಳ್ದಲಾಗಿರೆ ಬತ್ತಿದವ್ವುವು (ಗದಾಯು. ೬-೦೨) ; ಸಾಗರ ಬತ್ತಲೆಡೆಯಲಿ ನಿಂದ ನೀರ ಪೊರಾಯ್ತು ಕುರುಸೇನೆ (ಕುವ್ಯಾ. ೨-೭). ೨. ಬರಿದಾಗು ; ಶೂನ್ಯವಾಗು ; ಖಾಲಿಯಾಗು : (೦). ೩. ಗೊಡ್ಡಾಗು ; ಬರಡಾಗು : ಹತ್ತುಮತ್ತರದ ಭೂಮಿ ಬತ್ತುವ ಹಯನು ನಂದಾದೀವಿಗೆಯ ನಡೆಸಿಹೆವೆಂಬವರ ಮುಖವ ನೋಡಲಾಗದು (ಬಸವ. ೨೨೩). ೪. ಸೊರಗು; ಜೋಲು; ಕುಗ್ಗು : ತಾಪತ್ರಯದೊಳಿ ಕುದಿದೆಂ ಬತ್ತಿದೆಂ ಬಾಡಿದೆಂ ಯಾತನೆಗೊಂಡು (ಶಕ್ಯಾ. ೯-೨೨); ತೊಗಲು ಸಡಿಲಿದ ಗಲ್ಲ ಬತ್ತಿದ ಹೆಗಲು ನಡುಕಿದ ನರೆತ ವಿಷಯ. . . ಮುಪ್ಪಿನ ಮುಗುದನೀತನ ಕುದದ ಹೇಳಿದು ನಗೆಯ ಸುರಿದೈ (ಕುವ್ಯಾ.ಉ. ೦-೩೩); ಬತ್ತಿರ್ದ ಮೊಲೆಯ ಕುಪ್ಪಸದೊಳುಮೆಯ ಚಿಂದನೊತ್ತಿ ಬಗಿದು . . . ಹಣ್ಣುವಮುದುಕಿಸೂಳೆಯರಸೆದರು (ಕಂಪು. ೦೦-೬೭). ೫. ಮಂಕಾಗು; ಕಂದು; ಕಾಂತಿಯಿಲ್ಲದಿರು : ಬತ್ತಿರ್ದ ವಕ್ತ್ರಾಂಬುರುಹಂ ಮಿಂಚು ಗಲಿರ್ಪಂ ತೊಡೆದು (ಚಕು. ೬-೧೭); ಬಾಗಿದೊಡಲಿನ ಬತ್ತಿದಾನನದ. . . ಶಬರಿಯ ಸುಪ್ರಸಿದ್ಧೆಯ ಸಾರ್ದರೊಲವಿನಲಿ (ಕೊರರಾ. ೩-೦೨-೨೯). ೬. (ಧ್ವನಿಯು) ಕುಗ್ಗು : ಕಡಮೆಯಾಗು : ಚೀಱಿದ ಬತ್ತದೆ ಜತಿ

ಹಾಡಿ ಕಟ್ಟಿದ ಹಾಡದೆ . . . ಸವಿದೋಱಿ ಹಾಡಿದರು ಗಾಯಕರು (ಚಂಪ. ೬-೬೨). ೭. ದ್ರವಪದಾರ್ಥವು ಕುದಿದು ದ್ರವಾಂಶವು ಕಡಮೆಯಾಗಿ ಗಟ್ಟಿಯಾಗು ; ಅಟ್ಟು : ಕಾಯ ಬತ್ತಿದ ಹಾಲು ಚೆಲುವಾಲನಿಕ್ಕು (ಜಗನ್ನಾ. ೬೯-೨); ಎಳೆಯ ಹಲಸಿನ ಕಾಯ ಕುದಿಸಿ ಮತ್ತೊಮ್ಮೆ ಹಾರೊಳಗುವ್ವನಿಕ್ಕಿಯದ ಬತ್ತುವಂದದಿಯಟ್ಟು (ಸೂಪಶಾ. ೯-೧೬). ೮. ಇಲ್ಲವಾಗು ; ಮಾಯವಾಗು : ಕುಮುದಂಗಳ ನಗೆ ಬತ್ತಿದುವು ಪಾಯ್ದು ನೇಸಱನಾಗಳ್ (ಆದಿಪು. ೩-೩). 'ಬಚ್ಚು₂' ವರಾ.

[ದೇ. ॥ ತಮಿ. ಮಲ. ವಱ್ಟು; ತುಳು. ಬತ್ತು; ಕೊಡ. ಬತ್; ತೆಲು. ವತ್ತು, ವರುಟು; ಕೋಲಾ. ವತ್ ; ಪರ್ಜಿ. ವೆತ್, ವೆಟ್; ಗದಬ. ವಟ್; ಗೊಂಡಿ. ವತ್ತಾನಾ; ಕುರುಖ್. ಬತ್ತಾನಾ]

**ಬತ್ತು₂** (ನಾ). ಒಣಗಿದುದು; ಒಣಕಲು; ಶುಷ್ಕವಾದುದು.

ಬತ್ತಾಗು = ಒಣಕಲಾಗು ; ಬಾಡು : ಬತ್ತು ಮರ ಪಲ್ಲವಿಸಿ ಫಲವಾಯ್ತು ಶೀತ ಮರ ಬತ್ತಾಯ್ತು. . . ಬತ್ತಿದುವು ಕೆರೆ ಭಾವಿ ಹರಿ ಚಕ್ರವಂ ತುಡುಕಲು (ತತ್ತ್ವಂಗ. ೨೨-೯೦). [< ಬತ್ತು₁]

**ಬತ್ತುಂಬಯ** 'ಬತ್ತುಂಬಯಸ್' ನೋ.

**ಬತ್ತುಂಬಯಸ್**, **ಬತ್ತುಂಬಯ** (ನಾ). ಹಾಲು ಕೊಡುವುದನ್ನು ನಿಲ್ಲಿಸಿದ ಹಸು; ಗೊಡ್ಡಾಕಳು: ಬತ್ತುವುದು ಪಯಸ್, ಬತ್ತುಂಬಯಸ್ (ಶಬ್ದಾನು. ೩೩೬). ಬತ್ತುಂಬಯ : ಬಕಾರಕ್ಕೆ_ಬತ್ತುಂಬಯಂ, ಬತ್ತುಂಬಟ್ (ಶಮದ. ೦೬೦ ಪ್ರಯೋ). [ಬತ್ತು₁ + ಪಯಸ್]

**ಬತ್ತುಂಬಟ್** (ನಾ). ಒಣಗಿದ ಬಟ್ಟೆ; ಆರಿದ ಅರಿವೆ : ಬಕಾರಕ್ಕೆ – ಬತ್ತುಂಬಯಂ, ಬತ್ತುಂಬಟ್, ಅಟ್ಟುಂಬರಿ (ಶಮದ. ೦೬೦ ಪ್ರಯೋ).

[ಬತ್ತು₁ + ಪಟ್]

**ಬತ್ತುಗೆ** (ನಾ). ತೇವವನ್ನು ಕಳೆದುಕೊಳ್ಳುವಿಕೆ; ಒಣಗುವಿಕೆ : ಸುರಿವ ಬಾಷ್ಪಜಳಂ ಕರುಣಾರ್ದ್ರಹಾರವಂ ಬಳಿಯಿಸೆ ಬಾಯ ಬತ್ತುಗೆಯ ನಿಂತಿರ್ದೆಗಟ್ಟಲುತುಂ . . . ಬಿಟ್ಟಿಳಂದಜಿತಸೇನ (ಶಾಂತಿಪು. ೩-೦೦).

[ಬತ್ತು₁ + – ಗೆ]

**ಬತ್ತುವಸುರು** (ನಾ). ತೆಳ್ಳಗಿರುವ ಹೊಟ್ಟೆ; ಒಳಸೇರಿದ ಹೊಟ್ಟೆ : ಲೀನಾಕ್ಷಿ ಲೀನವೆಂಬ ಪೆಸರ್ವಡೆದ ಗರ್ಭದಲ್ಲಿ–ಬತ್ತುವಸುರಿನಲ್ಲಿ (ಜಾತಕಾ. ೨-೨-೨೦ ವ). [ ಬತ್ತು₁ + ಬಸುರು (<ಬಸಿಱು) ]

**ಬತ್ತುವಾಲ್** (ನಾ). ಕುದಿಸಿ ಇಂಗಿಸಿದ ಗಟ್ಟಿಯಾದ ಹಾಲು; ಕೆನೆಹಾಲು : ನವಿರಕ್ಕಿಯೋಗರಂ ಕೂಡಿದ ಬತ್ತುವಾಲ್ ವಿಸುವ ಗಳ್ಳೆಮೊಸರ್ ಮೊದಲಾದವೆಲ್ಲಮುಮಂ ಜೋಡಿಸಿ (ಜಾತಕ. ೦-೬-೩).

[ಬತ್ತು₁ + ಪಾಲ್₁]

**ಬತ್ತೆ** (ನಾ). (ಔಷಧಿ, ಅಡಕೆ ಮುಂತಾದುವನ್ನು) ಅರೆಯಲು ಅಥವಾ ಕುಟ್ಟಲು ಬಳಸುವ ಕಲ್ಲಿನ ಅಥವಾ ಲೋಹದ ಒರಳಂ ಮತ್ತು ಗುಂಡು : ಕಬ್ಬಿಣದ ತರತರದ ಜೀನಸಗಳು_೧. ಅಡಕೊತ ಗಳು . . . ೫೭. ಬತ್ತೆಗಳು (ಖಲಬತ್ತೆ) (ಮುಂಡಾ. ೦೦೨). 'ಕಲಬತ್ತು' ವರಾ. [← ಪಾರ. ಬತ್ತಾ; ಮರಾ. ಬತ್ತಾ, ಬತ್ತಾ]

**ಬತ್ತೆಮ್ಮೆ** (ನಾ). ಹಾಲು ಕೊಡದಿರುವ ಎಮ್ಮೆ; ಗೊಡ್ಡೆಮ್ಮೆ : ತಂದ ಬತ್ತೆಮ್ಮೆಗಳು ಕರು ಹಾಕಿದುವು. ಹಾಲು ಮಾರಿದನು (ಅಗುಹ. ೯೬). [ ಬತ್ತು₁ + ಎಮ್ಮೆ (<ಎರ್ಮೆ) ]

**ಬತ್ತೇರಿ** 'ಬತೇರಿ' ನೋ.

**ಬತ್ವ** (ನಾ). 'ಬ' ಎಂಬ ಅಕ್ಷರ; ಬಕಾರ : ಸಮಸಿಸುಗುಂ ಬತ್ವ ಕೊರ್ಮೆ ವತ್ವಮುಂ ವತ್ವದೆಡೆಗೆ ಬತ್ವಂ ಬಹುಳಂ (ಶಮದ. ೨೩೬).

[ಸಂ.]

**ಬದಂಗ** 'ಬದಗ' ನೋ.

**ಬದಗ**, **ಬದಂಗ**, **ಬದೆಗ** (ನಾ). ೧. ವಿಟ ; ಜಾರ; ವ್ಯಭಿಚಾರಿ : ಜಾತಿಸೂಳೆಗೆ ರಣಭೀತನ ಪುಸಿನುಡಿವಾತನ ಖಳನ ಕೆಳೆಯನ ಬದಗನ ಬೂತಿನ ಮಾತು ದಿಟವಲ್ತು (ಅಜಿತಪು. ೨-೩೯) ; ಬಚ್ಚಣೆವಾತಿನ ಬದಗ ಗೋಲಿದೊಡೆ. . . ಪುಚ್ಚಣೆಯಪುದೆನುತೊರ್ವಳ್ ಮುಗ್ಧೆಗೆಯಿಸುವರಿ ದಳು ವಿದಗ್ಧೆ (ಜಗನ್ನಾ. ೦೯-೩೦); ಒಡವಿಸಿಯಾ ವಿಷಯಂಗಳ ಜೀವರ ಬದಗರ ಮಾಡುವಹಾ ಮಾಯೆ (ಶಬ್ದಕ. ೦೬೦-೯). ೨. ಕೆಳದರ್ಜೆಯ ಸೇವಕ ; ಕೀಳಾಳಂ ; ಊಳಿಗದವನು : "ಬದಗನೆಂದು ಕೀಟಾಳ್" (ಕರ್ಣಾ. ೬೦-೩೩೩); ಬಡಿಕೋಲಂ ಪಿಡಿದು ಪರಿವ ಬದಗರುಮಂ ದಟ್ಟರ ನಾಂತು ಪರಿವೃತ್ತಚಕಾಚಿರುವಮಂ . . . ಕಂಡು (ಆದಿಪು. ೫-೦೦೯ ವ) ; ಬದ್ದಿನರ ಏಳೆಯದ ಬದಗರು ಭಟರ ವೋಡಿಯಲಿ ಹೊದ್ದಿದೊಡೆ ಹುರುಳಹರೆ (ಕುಮಾ. ೦೯-೨೩); ದನವ ಕಾಯುತ್ತಿರ್ಪ ಬದಗನೇಂ ಕಱಿದಂ ಕಾಡಿದನೊ (ಸಿದ್ಧೇಶ್ವ. ೯-೩೬). ೩. ದಡ್ಡ; ಮೂರ್ಖ; ತಿಳಿಗೇಡಿ : ಜಾಣ ಜಾಣೆಯರಾಟವೆಂಬುದು ಚದುರಂಗದಾಟದಂತಿಹುದು ಬದಗರ ಲೀಲೆಯಹುದು ಟೊಳ್ಳಿಗವಡೆಯ ಕಿರ್ವ ಸೋಗಳೆಯಾಟದಂತೆ (ಅರ್ಜು. ೦೦-೦೯). ಬದಂಗ : ೧. ಜಡಿದೊಡ ಪೊಂಗಿ ಪಂದೊಪಲ ಪೊರ್ಲ್ಕೊಱೆಯೇಱುವ . . . ಪೊಕ್ಕಳಂಬಡುವ ಬದಂಗನಂ ದೆಸ[ಜಾತಕಾ. ಬದಂಗಿ ದುರ್ಬೆಸ]ನಿಯಲ್ಲದಳಾತನನೊಟ್ಟಿ ಸುಟ್ಟಪಳ್ (ಆದಿಪು. ೨-೩೬). ಬದೆಗ : ೩. ಬದೆಗರಂದದಿ ಹೋರಲೇತಕೆ ಗೆಲವು ನಿನ್ನದು ಸೋಲವೆನಗೆ ಹೋಗು (ಅರ್ಜು. ೩೦-೬೩). ೪. ಅಲ್ಪವ್ಯಕ್ತಿ; ಕ್ಷುದ್ರ; ನೀಚ : ಇದು ತನಗೆ ಪರಿಣಾಮವಾಯ್ತಲೆ ಬದೆಗ ಹುಸಿವವರರಸ (ಕೃಷ್ಣಾಗ. ೩-೭-೦೩); ಬದೆಗ ದಶಮುಖನೊರಡು ಬಾಡಬನಾದರವರಿವುದೆ (ಶಾಕ್ತ್ಯ. ೨೩-೦೯).

[ಬದಗು + – ಅ₁. / ತಮಿ. ಪತಕ. / ಸಂ. ಪಾತಕ – ಪಾಪ ]

**ಬದಗಿ** (ನಾ). ೧. ಊಳಿಗದವಳು ; ಸೇವಕಿ ; ದಾಸಿ : ಎಕೆ ಕೆಣಕಿದೆ ಕರ್ಣ ಬೂತಿನ ಬೀಕಲಿನ ಬದಗಿಯನು (ಕುಮಾ. ೦೩-೦೯); ಕರ್ಣ. ಈ ಬದಗಿಯನ್ನೇಕೆ ಕೆಣಕಿದೆ ? ಯುದ್ಧದಲ್ಲಿ ಆಳೆಯ ಭೀಮನು ನನ್ನನ್ನು ಮುರಿಯುತ್ತಾನಲ್ಲವೆ? (ಕಾಕಸೂ. ೦೦೩). ೨. ಏನೂ ತಿಳಿಯದವಳು; ಮುಗ್ಧೆ : ನೋಡುವುದೆನ್ನದೆಯೋ ಕಣ್ಣೋ . . . ತಾ ಸೊಕಗೇ ಗೀಡಪುದಾತ್ಮನೊ ಪರಮನೊಯೆಂದಳ್ ಬದಗಿಯವೊಲ್ ಚದುರೆ (ಅದ್ಭುಕೀ. ೯-೨೬). [ಬದಗ + – ಇ₁./ತಮಿ. ಪತಕಿ]

**ಬದಗಿಗ** (ನಾ). ನೀಚ ; ಕೀಳುಮನುಷ್ಯ : ಈಸಿಗೆ ಭೂತಚೇಷ್ಟೆಯೊ . . . ಬದಗಿಗರು ಸೈರಿಸದೆ ಶೂನ್ಯಗಳನೆಸಗಿದರೊ (ಪ್ರಭುಲಿ. ೩-೯೦); ಮುಟ್ಟದಿರು . . . ಪೊಲ್ಲೊರೆಗೊಡಂಬಡುವ ಬದಗಿಗ[ಗ]ಯೆಂದು ಯದೆಯೊಳನಿತುಂ ದಯಂಗೊಡದೆ ಕಳಕಳಿಸುವಳ ನೋಡುತಿರಲು (ಪ್ರಭುಲಿ. ೯-೦೬೯). [ಬದಗು + – ಇಗ]

**ಬದಗು** (ನಾ). ೧. ಹಾದರ; ವ್ಯಭಿಚಾರ : ಎತ್ತಿದ ಬರ್ದೊ ವೇಣ್ ಬದಗೊ[ಜಾತಕಾ. ಬೆಜಗೊ] ಪೇಟಿವಿದೀಕೆಯ ಕೂರ್ಪೊ ಮೆರಲ್ಪೊ (ಆದಿಪು. ೨-೭೦); ಎನ್ನ ಮಾಟ್ಟ ಬದಗೇಂ ಪಱಿತಾದುದೆ ಬೇಡ ಕೆಮ್ಮಗಂ ಮನೆಗುಸುಟೆಕೆ ತನ್ನ ಸುಖಕಲ್ಲದೆ ಕೇಳಿಕೆ ಯಾರ ಬಟ್ಟಿಯೋ (ಆದಿಪು. ೨-೦೦೯). ೨. ತೊತ್ತುಗೆಲಸ; ಊಳಿಗ; ಸೇವೆ : 'ಬದಗುಗೆಯ್' ವರಾ. ೩. ಮೋಸ; ವಂಚನೆ; ಠಕ್ಕು : "ಬದಸು, ಬದಗು— ಕೌಟಿಲ್ಯಂ " (ಶಮದ. ೫೦. ೨). ೪. ದಡ್ಡತನ; ಮೂರ್ಖತನ : ಲಿಂಗಾಂಗದ ಪುರುಳಱಿಯದ ಮರುಳೇ ತಿಳಿವಿಸಿಲ್ಲದ ಬದಗಿನ ತಿರುಳೇ ಕೇಳು (ಅದ್ಭುಕೀ. ೩-೬೯). ೫. ವ್ಯಭಿಚಾರಿ ಎಂಬರ್ಥದ ಒಂದು ಬಯ್ಗುಳ: ಚದುರುವಲ್ಲೆಯ ತರದೊಳವಳು ಕೆಟ್ಟೋಡಿ ನಡುಗುತ್ತ

ಗುಡಿಯ ಕದಗಳಂ ಗಳಗಳನೆ ಮುಚ್ಚಿಯಗುಳಿಯ ಜಡಿಯ ಎದೆಗುಂದಿ ಭೂತಂಗಳೋಡೆ ಸಿದ್ಧರ್ ನೋಡೆ ಬದಗು ಹೊಲೆಮಾಲೆ ನೀನೊಳ ಪೊಗಲ್ಪಿಡುವೆನೆ ಭಲರೆ ಎಂದಾರ್ದನೊಲಿದು (ಶಶುಕೃ. ೩-೦-೨೨).

**ಬದಗುಗೆಯ್** (ಕ್ರಿ). ತೊತ್ತುಗೆಲಸ ಮಾಡು; ಊಳಿಗ ಮಾಡು: ಅರಸರ ದೇಸಿಯಂ ಮನೆಯುಂ ಕವರ್ತೇಪೋಪುದುಂ ಪೆಜಿರ್ ಕೀಟ್ಬಲೊ ಳೆಮ್ಮಟ್ಟೆಯುಂ ಮುತ್ತಟ್ಟೆಯುಂ ಸಾರ್ದು ಬದಗುಗೆಯ್ವುದೆ (ಅಂಕೃ. ೩-೩೯ ವ); ಪೆಜಿರ ಕೀಟ್ಬಲಂ ಸಾರ್ದೆಮ್ಮಟ್ಟೆಯುಂ ಮುತ್ತಟ್ಟೆಯುಂ ಬದಗುಗೆಯ್ವುದಾಯಿತೆರ್ದನಂ (ಶಾಪುಂಕೃ. ೦೬). [ಬದಗು + ಕೆಯ್₁]

**ಬದಗುಳಿಗ** (ನಾ). ಊಳಿಗ ಮಾಡಿ ಜೀವಿಸುವವನು; ತೊತ್ತು: ಬದಗುಳಿಗನ ತೋಳ್ಮುಟ್ಟಿದ ಸುದತಿಯೊಳಿಂದಾಗದಂತೆ ಕೆಟ್ಟುದು ಪುಟು ಮುಟ್ಟಿದ ದುಗ್ಧದಂತೆ . . . ಪತಿಗೆ ಶಯ್ಯಾತಳದೊಳ್ (ಹುಕೋಚ. ೨-೩೯). [ಬದಗು + — ಉಳಿಗ₁]

**ಬದಜಾತ** (ನಾ). ಕ್ಷುದ್ರವ್ಯಕ್ತಿ; ಅಲ್ಪ; ನೀಚ: ಈ ಬದಜಾತನನ್ನು ಹೊಡೆದು ಓಡಿಸೋ! (ಒಂಕಮ. ೬೬೮). [← ಪಾರ. ಹಿಂ. ಬದ್‌ಜಾತ್]

**ಬದಣೆ** 'ಬದನೆ' ನೋ.

**ಬದಣಿಕೆ** 'ಬಂದಣಿಕೆ' ನೋ.

**ಬದಣೆ** 'ಬದನೆ' ನೋ.

**ಬದಣೆಗಾಯಿ** 'ಬದನೆಕಾಯ್' ನೋ.

**ಬದಣೆಗುಪ್ಪೆ, ವದಣೆಗುಪ್ಪೆ** (ನಾ). ಒಂದು ಸ್ಥಳದ ಹೆಸರು: ಬದಣೆ ಗುಪ್ಪೆ ನಾಮ ಅವಿನೀತಮಹಾಧಿರಾಜೇನ ದತ್ತೇನ ಪಡಿಯೇಟಜೊಳಂ ಊರೊಳ್ಪನ್ನಿರ್ಕ್ಕಣ್ಡುಗಚ್ಗಿಯ್ದು (ಎಕ. I. ೦-೦೯; ೪೮೮). **ವದಣೆಗುಪ್ಪೆ**: ಪುನ್ನಾಡುಎಣ್ಣಾಡುವಿಷಯೆ ವದಣೆಗುಪ್ಪೆ ನಾಮ ಗ್ರಾಮಃ (ಎಕ. III (B). ತಂಶಿನ. ೨೬೯-೩೩; 808). [ಬದಣೆ (< ಬದನೆ) + ಕುಪ್ಪೆ₁]

**ಬದನಾಮಿ** 'ಬದ್ನಾಮಿ' ನೋ.

**ಬದನಿಕೆ** 'ಬಂದಣಿಕೆ' ನೋ.

**ಬದನಿದಿ** (ನಾ). ಒಂದು ಸ್ಥಳದ ಹೆಸರು: ಮೂಡಣ ಸೀಮೆ ಕಳ್ಳಿವೆಟ್ಟನ ಮೂಡಣ ಪೊರೆಯೆ ಮೂಡುಬೆಟ್ಟು ಒಳಗು ಮೂಡಣ ಬಡಗಣ ಕೊನ್ನೆಡು ಬದನಿದಿಯ ಬಡಗಣ ಒಳ್ಳೆ (ಪ್ರಮುಅಂ. ೦೯೨೬. ೦೨೨-೬೬; 800). [?]

**ಬದನೆ, ಬದಣಿ, ಬದಣೆ** (ನಾ). ೧. ಒಂದು ಬಗೆಯ ತರಕಾರಿ ಗಿಡ ಮತ್ತು ಅದರ ಕಾಯಿ: ಬದನೆಯ ಪೊಸ ಬಿತ್ತಂ ತೋಡಿ ಬಯ್ತುಟ್ಟು ಕೂಷ್ಮಾಂಡದ ಫಲದೊಳದಂ ಮಧ್ವಾಜ್ಯದಿಂ ಮುಚ್ಚಿಸಲ್ ಪಕ್ವೊದವಿ ದಟಿಳೆ ಬಿತ್ತಂ ಕೊಂಡು ಬಿತ್ತಲ್ ವಿಚಿತ್ರಂ ಬದನೆಯ ಫಲಮಕ್ಕುಂ ಬಳ್ಳಿ ಕೂಷ್ಮಾಂಡಮಕ್ಕುಂ (ಲೋಕೋಪ. ೬-೩೩); ಕೊಷ್ಮಾಂಡವವರೆ ಬದನೆಗಳಿಂ ಲೇಸಾಗಿರೆ ಮಾಡಿದ ಸವಿಮೇಲೋಗರಮಂ ತಂದು ಬಡಿಸಿದರ್ ಕಾಂತೆಯರ್ (ಕರ್ಮಕ. ೨-೩೩). ೨. (ಅಲಂ) ಹುರುಳಿಲ್ಲದುದು; ಪ್ರಯೋಜನಕ್ಕೆ ಬಾರದುದು: ಪಂಪ ಹುಟ್ಟಿ ಭಾರತವ ಕಟ್ಟಿ ಹಿರಿ ಸಿದ್ಧಪದವ ಮುಟ್ಟಿ ನಿರ್ಜರೆಯ ಪಡೆದ . . . ತೀಡಿದರು ಅದನೆ ಅದನೆ ಯಾರಾರೊ ಎಂದು ರಸವಾರಿ ಹೋಗಿ ಪುಸ್ತಕವೆ ಆಯ್ತು ಬದನೆ (ಮುಕ್ತೀಂ. ೨೯-೦೨). **ಬದಣಿ**: ೧. "ಬದಣಿ—ವಾರ್ತಾಕಿ, ಭಂಡಾಕಿ, ಹಿಂಗುಲಿ, ಸಿಂಹಿ, ದುಷ್ಪ್ರಧರ್ಷಣಿ"(ಶಾಶಾ. ೬); ಆ ಕ್ಷೇತ್ರದವೊಳಗಾದ ಅಡಕೆ . . . ಬದಣಿ ಕಬ್ಬು ಕಾರೆಗೆಣಸುಯೇನುಂಟಾದುದನು ಆ ಕ್ಷೇತ್ರಕ್ಕೆ ಸಲುವ ನಿವೇಸನ ೧೫ ಅರೆ X (ಎಕ. III (B). ನಂಶಿನ. ೨೮೨-೦೩; 1527). **ಬದಣೆ**: ೧. "ವಾರ್ತಾಕವೆಂಬುದು ಬದಣೆ" (ಕಹಾಯು. ೩೬-೮೦); ಇಂತು ಬದಣೆಯ ಕಾಯಿ ಲಿಂಗವಾಗುತ್ತಮಿರೆ (ಬಸರ. ೯-೩೯); ಸತಿ ಕದ್ದಳೊಂದು ಬದಣೆಯ ಕಾಯನು (ಸಿದ್ಧೇಕೃ. ೦೯-೭).

[ದೇ:೪ ತಮಿ. ವಟುತುಣೈ, ವಟುತಲೈ; ಮಲ. ವಟುತಿನ, ವಟುತಿನಿ; ತುಳು. ಬದನೆ; ತೆಲು. ವಂಗ; ಕೋಲಾ. ವಂಗೆ; ಮಾಲ್ತೊ. ಬಟಂಗೊ. / ಹಿಂ. ಬೈಂಗನ್, ಬೈಂಗನೀ; ಮರಾ. ಬೈಂಗಣ್, ಬೈಂಗನ್. / ಸಂ. ವೃಂತಾಕ].

**ಬದನೆಕಾಯ್, ಬದಣೆಗಾಯಿ, ಬದನೆಕಾಯಿ** (ನಾ). ಒಂದು ಬಗೆಯ ಕಾಯಿಪಲ್ಲೆ; ವೃಂತಾಕ: 'ತುಳಂಪಬದನೆಕಾಯ್' ಪರಾ. **ಬದಣೆಗಾಯಿ**: ಬದಣೆಗಾಯಂ ಸಹಜಲಿಂಗಮಂ ಮಾಡಿದಂ ಬಸವಂ (ಕಂಕೃ. ೩೬-೮೦). **ಬದನೆಕಾಯಿ**: ಬದನೆಕಾಯಿ ಬೀಜವನ್ನು ಡಿಸೆಂಬರ್‌ನಿಂದ . . . ಮೇ ತಿಂಗಳವರೆವಿಗೂ ಸಸಿ ಮಾಡಿ ನೆಡಬಹುದಾಗಿದೆ (ಕಕಕ. ೨೦); ಪುರಾಣ ಹೇಳೋದು, ಬದನೆಕಾಯಿ ತಿನ್ನೋದು (ಗಾದೆ). [ಬದನೆ + ಕಾಯ್₁]

**ಬದನೆಕಾಯಿ** 'ಬದನೆಕಾಯ್' ನೋ.

**ಬದನೆಕುತ್ತಿ** (ನಾ). ಬದನೆಗಿಡದಲ್ಲಿ ಮೊದಲ ಸಲ ಬೆಳೆ ತೆಗೆದ ಮೇಲೆ ಉಳಿಯುವ ಬುಡ; ಗುತ್ತಿ: ಬೆಳಗಿನ ಜಾವ ಎದ್ದೊಡನೆ, ಹೊಗೆಸೊಪ್ಪಿನ ಹಿತ್ತಲಿನಲ್ಲಿ ಉಳಿದ ಹರಿವೆ, ಬದನೆಕುತ್ತಿಗಳಿಗೆ ನೀರೆರೆಯುವ ಸಂಭ್ರಮವಾಯಿತು (ಮಲಮ. ೩೬೯). [ಬದನೆ + ಕುತ್ತಿ₁]

**ಬದಮಾಷ್** 'ಬದ್ಮಾಶ್' ನೋ.

**ಬದರ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು; ಬೋರೆ; ಎಲಚಿ: ತ್ರಿದ್ವೀಕದಿನಾಂತರಿತ ಬದರಾಕ್ಷಾಮಲಕಪ್ರಮಾಣಾ ಹಾರಂಗಳುಮಪ್ಪ ಮಿಥುನಂಗಳ್ಗೆ ಸಂಭೋಗ್ಯಮಾಗಿ ಸಲೆ ಜಘನ್ಯಭೋಗ ಭೂಮಿಯ ಕಡೆಯ ಪರಿಶೋಪವಮದಂಟನೆಯ ಭಾಗಮಾಮಾದುದು (ಅಂಕೃ. ೬-೯೮ ವ); ಆತತಪರಿಖಾವಳಯಂ ಸುತ್ತಲುಮನುಪಮ ಬದರಾಶೋಕ ಮಹೀಜಂ (ಸುಕುಮಚ. ೦೦-೩೬ ದಳಿ); ವಂಗುವಿನ ಮೊಳೆವಲ್ಗಳಿಂದ ಬದರವನಿಯನಿಗೀವಳು ಕಾಂತ (ಗಶಾಸ. ೩೦-೦೦೦). [ಸಂ.]

**ಬದರಿ** (ನಾ). ೧. = ಬದರ: "ಬದರೀ, ಕುವಲೀ, ಕರ್ಕಂಧೂಃ— ಈ ಮೂರುಂ ಬೋರೆಗಿಡದ ಪೆಸರ್" (ಕಹಾಯು. ೬೨-೯೦); ಬದರಿಯ ವೃಕ್ಷದ ಮೂಲದೊಳುದಕಂ ಮಧು ಮಧುಕವೆಳ್ಗೇಬಿವನರದಿಕ್ಕಿದೊಡದು . . . ಮಧುರಫಲನೀಗುಗುಮಧಿಕಂ (ಲೋಕೋಪ. ೬-೩೭); ತೆಂಗು ತಾಟ್ ಬದರಿ ದಾಡಿಮ (ಪರ್ಣಕೃ. ೨-೩). ೨. ಹತ್ತಿಗಿಡ. ೩. ಹಿಮಾಲಯದ ಉತ್ತರದಲ್ಲಿ ಅಲಕನಂದಾ ನದಿಯ ದಡದಲ್ಲಿರುವ ಒಂದು ಪುಣ್ಯ ಕ್ಷೇತ್ರ: ಧರೆಯೊಳಗೆ ಶ್ರೀಪುರಂದರವಿಠಲರೇಯನ ಪರಮಭಾಗವತರ ಉದರ ಬದರಿ (ಪುರಕೀ. ೨-೨೭-೩); ಅರ್ಭಕತನದೊಳೈದಿ ಬದರಿಯಲಿ ಮಧ್ವಮುನಿ ನಿರ್ಭಯದಿ ಸಕಲಶಾಸ್ತ್ರವ ಪಠಿಸಿದ (ಕಶಶಿ. ೩೯). [ಸಂ. ಬದರೀ]

**ಬದರಿಕಾಶ್ರಮ** (ನಾ). = ಬದರಿ ೩: ಮುನ್ನೆ ಬದರಿಕಾಶ್ರಮದೊಳ್ ಆ ಯತಿಯಿಂದಂ ನರ ನಾರಾಯಣರೆನೆ ನೆಗಟ್ದವರಿಗ ನಾವಿರ್ವರುಂ(ಕಂಕಶಾ. ೩೯-೯೯ ವ); ಬದರಿಕಾಶ್ರಮದಿ . . . ಮಹಾನುಭಾವರ ಪಿತನು ನಡೆತಂದ (ಸಂಶಶ. ೩-೦); ಬದರಿಕಾಶ್ರಮಕೆ ಪುನರಪಿಯ್ದಿ ವ್ಯಾಸಮುನಿಪದಕೆರಗಿ . . . ಬ್ರಹ್ಮತ್ವವೈದಿದ ಮಧ್ವಮುನಿರಾಯಗುಭವದಿಪೆ (ಕಶಶಿ. ೩೩). [ಸಂ.]

**ಬದರಿಕೆ** (ನಾ). ೧. ರಕ್ಷಕ; ಕಾವಲುಗಾರ; ಪಹರೆಯವನು: (*). ೨. ರಕ್ಷಣೆ; ಕಾಪಾಡುವಿಕೆ: ಗ್ರಾಮನೌಕರಿಗಳನ್ನು ನೋಡುವವರು ಇಡುವ ಲೆಕ್ಕಗಳ ಮತ್ತು ಇತರ ಕಾಗದಪತ್ರಗಳ ಬದರಿಕೆ, ಅವುಗಳನ್ನು ಹಾಜರ್ ಮಾಡೋಣ ಮತ್ತು ವರ್ಗಾಯಿಸೋಣ (ಗ್ರಾಪಾಕ. ೧೦೦). [← ಪಾರ. ಮರಾ. ಬದರಕಾ, ಬದ್ರಕಾ]

**ಬದಲಾಯಿಸು** 'ಬದಲಿಸು' ನೋ.

**ಬದಲಾವಣೆ** (ನಾ). ಮಾರ್ಪಾಡು; ವ್ಯತ್ಯಾಸ: ಚಿಕ್ಕಪ್ಪನ ಮುಖದಲ್ಲಾದ ಗಮನಾರ್ಹ ಬದಲಾವಣೆಯನ್ನು ಗುರುತಿಸಿ ಯಶೋದೆ ಹೇಳಿದಳು (ವಾತ್ಸಲ್ಯ. ೬೭); ಸರಿಯಾದ ಲೆಕ್ಕವಿದ್ದರೆ ನಿಮ್ಮ ಅವಶ್ಯಕತೆಗಳಿಗೆ ಸರಿಯಾಗಿ ಅಂದಾಜು ಪತ್ರದಲ್ಲಿ ತಕ್ಕ ಬದಲಾವಣೆಗಳನ್ನು ಮಾಡಲು ಸುಲಭವಾಗುವುದು (ಅಡುಕ. ೦೨೩).
[ಬದಲಾಯಿಸು (<ಬದಲಿಸು) + — ಅಣೆ]

**ಬದಲಿ₁** (ಗು). ೧. ಬದಲಾದ; ಬೇರೆಯಾದ: ನಾನು ಕಾಲಕಾಲಕ್ಕೆ ಕೊಂಡ ಹಲವಾರು ಕೊಡೆಗಳು ಹೀಗೆ ಒಂದೊಂದು "ಬದಲಿ ಇಸಮು" ಇಟ್ಟು ಓಡಿಹೋದುದರಿಂದ ನನಗೀಗ ಒಂದು ಹಳೆ ಕೊಡೆಗಳ ಅಂಗಡಿ ಇಟ್ಟರೆ ಹೇಗೆ ಎಂಬ ವಿಚಾರ ಬರತೊಡಗಿದೆ (ಹಲಕ್ಕ. ೮೨). (ನಾ). ೨. ಒಂದು ವಸ್ತುವಿಗೆ ಪ್ರತಿಯಾಗಿ ಬರುವ ಮತ್ತೊಂದು ವಸ್ತು ಅಥವಾ ಒಬ್ಬ ವ್ಯಕ್ತಿಗೆ ಪ್ರತಿಯಾಗಿ ಬರುವ ಮತ್ತೊಬ್ಬ ವ್ಯಕ್ತಿ: ನೀನು ಕೊಟ್ಟ ಪುಸ್ತಕಕ್ಕೆ ಬದಲಿಯಾಗಿ ಈ ಪುಸ್ತಕವನ್ನು ಇಟ್ಟುಕೊಂಡಿರು (ಆಡು). [← ಹಿಂ. ಮರಾ. ಬದಲೀ]

**ಬದಲಿ₂** (ಅ). ಪ್ರತಿಯಾಗಿ; ಬದಲಾಗಿ: ರಶೀದಿಗಳನ್ನು ಕೊಡದೆ ಇದ್ದರೆ ಆ ಶೇಕದಾರ ಸ್ಥಾನುಭಾಗರಿಗೆ ನಶಿಹತ್ತು ಮಾಡಿ ಅವರಿಗೆ ಬದಲಿಯತಬಾರಿ ಶೇಕದಾರ ಸ್ಥಾನಭಾಗರನ್ನ ಮೊಕರರ್ಮಾಡಿಟ್ಟು . . . ನಡೆದು ಕೊಳ್ಳುವದು (ಮುಹುಮು. II. ೬೬). [< ಬದಲ್₁]

**ಬದಲಿನೇಮಕ** (ನಾ). ಒಬ್ಬ ವ್ಯಕ್ತಿಗೆ ಬದಲಾಗಿ ಮತ್ತೊಬ್ಬ ವ್ಯಕ್ತಿಯನ್ನು ಗೊತ್ತುಮಾಡುವಿಕೆ.—ನಿಯಮಿಸುವಿಕೆ: ಕಾರ್ಯನಿರ್ವಾಹಕನೇಮಕ, ಬದಲಿನೇಮಕ (Acting appointment. ಶಬ್ದಕೋ. ೨).
[ಬದಲಿ₂ + ನೇಮಕ]

**ಬದಲಿಭತ್ಯ** (ನಾ). (ಬದಲಿ ಕೆಲಸಕ್ಕಾಗಿ ಕೊಡುವ) ಹೆಚ್ಚಿನ ಹಣ: ಬದಲಿಭತ್ಯ, ಕಾರ್ಯನಿರ್ವಾಹಕ ಸಂಭಾವನೆ (Acting allowance. ಶಬ್ದಕೋ. ೨). [ಬದಲಿ₂ + ಭತ್ಯ (<ಬತ್ತಾಯ)]

**ಬದಲಿರಜೆ** (ನಾ). ರಜಾದಿನವೊಂದರಲ್ಲಿ ಕೆಲಸ ಮಾಡಿದ ಪ್ರಯುಕ್ತ ಅದರ ಬದಲಿಗೆ ಬೇರೊಂದು ದಿನ ಸಿಗುವ ರಜೆ: ನಿನ್ನೆ ಬದಲಿರಜೆ ಹಾಕಿದ್ದೆ (ಆಡು). [ಬದಲಿ₂ + ರಜೆ (<ರಜಾ)]

**ಬದಲಿಸು, ಬದಲಾಯಿಸು** (ಕ್ರಿ). ೧. ವ್ಯತ್ಯಾಸಗೊಳ್ಳು; ಮಾರ್ಪಾಡು ಹೊಂದು; ಬದಲಾಗು: ಈ ತಾರೆಗಳ ಸ್ಥಾನಗಳು ಯಾವಾಗಲೂ ಬದಲಿಸುತ್ತವೆಂದು ಅವನಿಗೆ ತಿಳಿಯಿತು (ಮುಂಜಾ. ೩-೦೬೪); ಸುಂದರಿಯ ಮನಸ್ಸಿನ ಸ್ಥಿತಿಯೇ ಬದಲಿಸಿತು (ಹಳ್ಳಿಹಾ. ೦೦೯). ೨. ವ್ಯತ್ಯಾಸಗೊಳಿಸು; ಬದಲಾಗುವಂತೆ ಮಾಡು; ಮಾರ್ಪಡಿಸು: ಕೇವಲ ಪ್ರೇಮ ಹಾಗೂ ಮರಣಗಳು ಮಾತ್ರ ಸಕಲವನ್ನೂ ಬದಲಿಸಬಲ್ಲವು (ಶ್ರವಾಕೋ. ೩೯); ತನ್ನಭಿಮತವನು ಬದಲಿಸದಾತನು ಹೊಂಡದ ನೀರಿನಂತಹನು (ಇಂಜಾಶ. ೦೯೬-೨೦). **ಬದಲಾಯಿಸು**: ೧. ಆ ಹತ್ತು ವರ್ಷಗಳು ಹರಪಲ್ಲಭನ ಸಂಸಾರವು ಬದಲಾಯಿಸಿ ಬಹಳ ಹೀನಸ್ಥಿತಿಗೆ ಬಂದಿದ್ದಿತು (ಹೀಜೀ. ೬೦); ಹುಡುಗರು ಎಷ್ಟು ಬೇಗ ಬದಲಾಯಿಸುತ್ತಾರೆ ಅನ್ನುವುದೇ ವಿಚಿತ್ರ (ಜಾಕಿಪು. ೦೦೦). ೨. ಶ್ರೀಪುರಂದರದಾಸರು . . . ಪ್ರಚಾರದಲ್ಲಿದ್ದ ಪಾಠಪದ್ಧತಿಯನ್ನು ಬದಲಾಯಿಸಿ . . . ಪಿಳ್ಳಾರಿಗೀತವನ್ನು ಸೃಷ್ಟಿಸಿದರು (ಕಗಮ. ೬೩); ಮಾತು ಬದಲಾಯಿಸಲು ಸಂಗಾಯಿ ನುಡಿದಳು (ಪಶಿಕಾ. II. ೯೬೩). ೩. ಒಂದು ವಸ್ತುವಿಗೆ ಪ್ರತಿಯಾಗಿ ಬೇರೊಂದು ವಸ್ತುವನ್ನು ಕೊಡು; ವಿನಿಮಯ ಮಾಡು: ಎಣ್ಣೆಯು ಸೋರ ಹತ್ತಲು . . . ವ್ಯಾಪಾರಿ ಜನರು ಬದಲಾಯಿಸಿ ಕೊಡುವದಿಲ್ಲ (ಮುಂಜಾ. ೯೯ ಕೃ.ನಾ.ಶಿ). [ಬದಲು₃ + — ಇಸು₃]

**ಬದಲು₁** (ಕ್ರಿ). ವ್ಯತ್ಯಾಸಗೊಳ್ಳು; ಬದಲಾಯಿಸು; ಬೇರೆಯಾಗು: ಬೋಳನ ಆಲೋಚನೆಯು ಆಕಾಶದ ಬಣ್ಣವು ಬದಲುತ್ತಾ ಇದ್ದಂತೆ ನೋಯುತ್ತಾ, ತನ್ನ ಮನೆಗೆ ಹೋದನು (ಗಾಯಿ. ೦೨ ಕಥಾಸಾ).
[←ಅರ.ಪಾರ. ಹಿಂ. ಮರಾ. ಬದಲ್]

**ಬದಲು₂** (ನಾ). ೧. ಬದಲಾವಣೆ; ಮಾರ್ಪಾಡು; ಪರಿವರ್ತನೆ. ೨. ಪ್ರತಿಯಾದುದು; ಒಂದಕ್ಕೆ ಬದಲಾಗಿ ಮತ್ತೊಂದು ಇರುವುದು: ಗ ೩ನೂ ಅರಮನೆಗೆ ವಹಿಸಿಕೊಂಡು ಆ ಬದಲಿಗೆ ಗ ೩ . . . ತೆಗೆದುಕೊಂಡು (ಎಕ. VII. ಶಿಮೊ. ೨೯-೨೬; 1712); ಕ್ರತುವೀರ್ಯಸಂಭವನ ಕೀರ್ತಿಯುಳಿದಿನ್ನೊಂದು ಬದಲಿಲ್ಲವೆರೆ ವಂಗಳ (ಶರಕು. ೬-೨೨); ಈ ರೂಪಿಗೆ ಬದಲಿಲ್ಲ (ಶಕಾ. ೩೬). ೩. ಪ್ರತಿಯಾಗಿ ಹೇಳುವ ಮಾತು; ಮಾರ್ನುಡಿ; ಪ್ರತ್ಯುತ್ತರ: ನಿನ್ನರ್ಭಕಂ . . . ವಿದಿತೋಪಚಾರದಿಂದುರೆ ತೃಪ್ತಿಗೊಳಿಸೆ ಬದಲುಂಟೆ ಸಾಕೆನುತ ವರಸೆ (ಶರಕು. ೯-೯೬); ಸುವೇಳೆಯ್ಯೆ ಧರ್ಮಜನೆ ಬದಲನು ಪೇಳಬೇಡ (ಪಂಡಾ. ೦೯-೯೩); ಈ ಬದಲನ್ನು ಧೈರ್ಯವಾಗಿಯೆ ಹೇಳಿಬಿಟ್ಟರಾದರೂ ಒಳಗೊಳಗೆ ಹೆದರಿಕೆ (ಹುಹು. ೬೩). ೪. ವಿನಿಮಯ; ಅದಲುಬದಲು: ಪಟ್ಟಣಗಳಲ್ಲಿಯೂ ಅನೇಕ ಸಣ್ಣಸಣ್ಣ ಪದಾರ್ಥಗಳನ್ನು ಪದಾರ್ಥದ ಬದಲಿಗೆ (Barter) ಬೆಲೆ ಕೊಳ್ಳುವ ವಾಡಿಕೆಯುಂಟು (ಜಾಶ್ರ. ೦೯). ೫. (ಕೆಲಸ ಮುಂತಾದುವಕ್ಕೆ) ಒಬ್ಬನಿಗೆ ಪ್ರತಿಯಾಗಿ ಬರುವ ಮತ್ತೊಬ್ಬ ವ್ಯಕ್ತಿ: ಎಬ್ಬಿಸಲು ಕೋಪಮಂ ಧರಿಸುವನೊ . . . ಎಳಿಸಲ್ಕೊಬ್ಬರಂ ನಾ ಕಾಣೆ ಬದಲನೆಂದಳಲಿದಳು (ಕುರಂಗ. ೩-೩೩). 'ಬದಲಿ₁' ಪರಾ.

ಬದಬದಲು (ದ್ವಿರುಕ್ತಿ): ಬೆಚ್ಚು ಬಿಲ್ಗೆಡದೆ ಬದಬದಲು ಧನುವಿಡಿಯಲದನೊಡನೊಡನೆ ಹಿಡಿಗೊಡದಲ (ಶಪಡು. ೨೬-೩೩). **ಬದಲಾಗಿ** = ಪ್ರತಿಯಾಗಿ: ಒಂದು ಬಗೇ ಜಿನುಸು ಕೊಟ್ಟು ಅದಕ್ಕೆ ಬದಲಾಗಿ ಮತ್ತೊಂದು ಬಗೇ ತೆಗೆದುಕೊಳ್ಳುವಿಕೆ (ಸಿದ್ಧಾಂ. ೨೯೬): ಗೋಚರಮಾಯ್ತು ಸಮರವೀರ ಸುಭಟರ ಮೋಹರಕೆ ಬದಲಾಗಿ . . . ಮದುವೆ ದಿಬ್ಬಣದೊಸಗೆ ಮೆರವಣಿಗೆ! (ಶಶ್ಯಾಂಗ. ೬೬-೨೦೦೬). **ಬದಲಾಗು** = ವ್ಯತ್ಯಾಸಗೊಳ್ಳು; ಪರಿವರ್ತನೆಯಾಗು: ಬನಸಿರಿ ತೊಟ್ಟ ಪೊಂದೊಡವಿಂಗೆ ಬದಲಾಯ್ತು (ಶ್ರೀರಾಕ. ೯೦ ಪೀಠಿ); ನನ್ನಿಂದಲೆ ಲೋಕ ಉಳಿಯುವುದು; ನನ್ನಿಂದಲೆ ಯುಗ ಬದಲಾಗುವುದು (ಅಕ್ಷಮ. ೩೯). **ಬದಲು ಹೇಳು** = ಉತ್ತರಕೊಡು; ಪ್ರತ್ಯುತ್ತರ ಹೇಳು: ನಾನು ಏನು ಹೇಳಿದರೂ ಏನು ಮಾಡಿದರೂ ಬದಲು ಹೇಳೊಲ್ಲ (ದೂಕಟ್ಟಿ. ೦೨೦).
[<ಬದಲು₁]

**ಬದಲು₃** (ಅ). ಪ್ರತಿಯಾಗಿ; ಬದಲಾಗಿ: ನಾನು ನಿನ್ನನ್ನು ಪ್ರೀತಿಸುವುದನ್ನು ನಿಲ್ಲಿಸಿಬಿಟ್ಟಿದ್ದೇನೆ. ಅದರ ಬದಲು ಇದೀಗ ನಾನು ನಿನ್ನನ್ನು ತಿರಸ್ಕರಿಸುತ್ತೇನೆ (ಅಕ್ರಮ. ೨೯); ದಿನ ದಾಟಿ ದಿನ ಬಂದರೂ ಬರಬೇಕಾದ ದಿವಸಗಳು ಬರಲೊಲ್ಲವು. ಬದಲು ನದಿ . . . ಬಾವಿಗಳ ನೀರು ಅದೆಲ್ಲಿ ಮಾಯವಾಗುತ್ತಿದೆಯೋ ತಿಳಿಯದು (ಹಂಪ. ೦). [<ಬದಲು₁]

**ಬದಲುಗೈ** (ಕ್ರಿ). ಅದಲುಬದಲು ಮಾಡು; ಬದಲಾಯಿಸು: ವನವಾಸಮೆನಗೆ ನಿಯಮಿತಮಾದುದುರೆ ಧರ್ಮದಿಂದಿಳೆಯ ನೀಂ ಪೊರೆಯ ವೇಳ್ಕುಮಂತಿರಲೀವರ್ಗದ ಬದಲುಗೈದೊಡಾ ತಂದೆ ಬಾನೆಡೆಯಿಂದೆ ಬೀಳ್ಗನಲ್ಗೆ (ಛಠ. ೫-೬೬). [ಬದಲು₂ + ಗೈ (<ಕೆಯ್₁)]

**ಬದಲುಜವಾಬು** (ನಾ). ಎದುರುತ್ತರ; ಮಾರ್ನುಡಿ: ಅವರೇನಾದರೂ ಕೋಪಿಸಿಕೊಂಡರೆ ಬದಲುಜವಾಬು ಕೊಡಬೇಡ (ಮುಹಾ. ೦೨೩).
[ಬದಲು₂ + ಜವಾಬು]

**ಬದಲುತ್ತರ** (ನಾ). = ಬದಲುಜವಾಬು: ರಾಜಸತಿಗಾನಂದ ಮಿಗೆ . . . ಸಾರ್ಥಕಕೆ ಮನದಂದನಧಿಪತಿಯನಲು ಬದಲುತ್ತರವನುಸುರಿದಳು (ಶಪಂಕ. ೨-೦-೨೦). [ಬದಲು₂ + ಉತ್ತರ]

**ಬದಲುಮಾತು** (ನಾ). = ಬದಲುಜವಾಬು : ಬದಲುಮಾತದು ಪೂಣು ! (ಪಠಂಇ. I, ೯೦೬); ಬದಲುಮಾತಾಡುವವನು ಬೆದರಿಸಿದರೆ ಬಿಟ್ಟಾನೆ ? (ಗಾದೆ). [ಬದಲು₃ + ಮಾತು₁]

**ಬದವು** 'ಬದುವು' ನೋ.

**ಬದಸಾಟ** (ನಾ). ಮೋಸ; ವಂಚನೆ; ಕುಯುಕ್ತಿ: ಈ ವಿತಜಿಂದು ಬದಿಯ ಬದಸಾ[ಕಾಹಾಂ. ಗಾ]ಟವೊ ! ತನಗಯ್ಯನೆಂದವಜಿದಸಪ್ಪೊದೆ ಕುಶಂ ವಿಶಿಖಮನೆಸುವನ ? (ರಾಮಾಶ್ವ. ೦೬೦-೦೫). [ಬದಸು + ಆಟ]

**ಬದಸು** (ನಾ). ಮೋಸ; ಕುಟಿಲತೆ: "ಬದಸು, ಬದಗು – ಕೌಟಿಲ್ಯಂ" (ಕಮಿಟ. ಕಂ. ೨). 'ಬದಗು', 'ಬದಸಾಟ ಪರಾ. [?]

**ಬದಸ್ತೂರ್** 'ಬದಸ್ತೂರು' ನೋ.

**ಬದಸ್ತೂರು**, ಬದಸ್ತೂರ್ (ಅ). ಹೇಗೆ ಇದೆಯೋ ಹಾಗೆ; ಯಥಾವತ್ತಾಗಿ : ಆನೆಗೆ ಅಲಂಕಾರಕ್ಕೆ . . . ೩ ಆನೆಗೆ ಹಳದೀ ಬನಾತಿನ ಜಬ್ರೀ ಜೂಲು ರೇಶ್ಮೆ ಜಾಲರು ಸಹ ೧ ಬದಸ್ತೂರು ಲೋಕಿಸಿದಿ ೧ ಕತ್ತಿಗೆ ಕಟ್ಟುವ ಪಟ್ಟೆ ಬದಸ್ತೂರು ೧ ಸಹ (ಎಕ್. XIV. ಪಂಚಶ. ೨೯೨-ಪುಟ ೧೯೨ ; 1847); ತಾವೂ ಕೋಟೆ ವಳಗೆ ಹೋಗಿ ಬದಸ್ತೂರು ಆನೆಕಲ್ಲನು ಬಲ ಕಾಯಿಸಿ (ಹೃದಿ. ೯೬); ಬದಸ್ತೂರು ಒಂದೊಂದು ಹೋಬಳಿ ಶೇಕದಾರನು . . . ಶ್ಯಾನುಭಾಗನ ರುಜು ಸಹ ಮಾಡಿ ರಶೀದಿ ಕೊಡುತ್ತಾ ಬರುವದು (ಮಹಾಕಂ. II, ೬೬). **ಬದಸ್ತೂರ್**: ಡಿಕ್ರಿಯ ಅಮಲ್ದಾರಿಯ ಬಗ್ಗೆ ನಡೆಯುವ ಹರಾಜಿನೊಳಗೆ . . . ಕ್ರಯದಾರನಿಂದ ತರಲ್ಪಡುವ ಬದಸ್ತೂರ್ ದಾವೆ (ನ್ಯಾಯಕ. ೦೬೨). [←ಪಾರಂ. ಹಿಂ. ಬದಸ್ತೂರ್]

**ಬದಹು** 'ಬದುವು' ನೋ.

**ಬದಾಮಿ** 'ಬಾದಾಮಿ' ನೋ.

**ಬದಾಮು** 'ಬಾದಾಮಿ' ನೋ.

**ಬದಿ₁** (ನಾ). ೧. ಪಕ್ಕ; ಮಗ್ಗಲು; ಪಾರ್ಶ್ವ: "ಬದಿಯೆನೆ ಪಾರ್ಶ್ವ" (ಕಕರ. ೬೫); ಕಾಳ್ಗಿವಿಗಳೆರಡು ಬದಿ ಗಗನಭುವನವೇ ಗೃಹವು (ಕಮಾ. ೦೬೦-೯೯೬) ; ಬಲದ ಬದಿ ವೇದಾಂತಿಗಳ ಭಾಗ ಎಡದ ಬದಿ ಪಂಡಿತರ ಭಾಗು (ಬಸವ. ೩೩-೦೬); ಬಲದ ಬದಿಯಲ್ಲಿ ಭವಹರನೆಂಬ ಗಣೇಶ್ವರನೆನಿಸಿರ್ಪರಾ ಅಯ್ಯ (ಸಿದ್ಧೇಶ.೬೪-೦೬೯). ೨. ಪಕ್ಕೆ; ಅಳ್ಳೆ; ಬರಿ: "ಬದಿಯೆ ಪಕ್ಕೆಯೆನಿಕ್ಕು" (ಶಬ್ದಮ. ೩೦); ಕಡೆ ಬೇವ ಸರ್ಪ ಬದಿ[ಕಾಹಾಂ.೧] ಬೇವ ಸಾರಂಗ . . . ದೆಸೆಗೆಟ್ಟು ಕವಿದವು ಹರಿಶ್ಚಂದ್ರಭೂಪತಿಯ ಮೇಲೆ (ಹಕಕಾ. ೦೦-೯); ಕುಣಿದವಿಬ್ಬರ ಮುಷ್ಟಿಯಬ್ಬರ ಹಣೆಯಲಿ . . . ಕಂದದಲಿ ಶಿರದಲಿ ಬದಿಯಲುದರದಲಿ (ಕುಮ್ಮಾಶ. ೨-೦೦೬); ತುಜಿಸಿಕೊಳುತಿದ್ದನೆಯು ಬಗಿಗಳ ಹೊಜಿಗನಾಲಿಸುತ . . . ಹರಿಬದಾಜಿಯು ಹೊಜಿಗೆ ವಾಳರ ಬರವ ಬಯಸುತ್ತಿರ್ದನಾ ಹನುಮ (ತೊರಾರಾ. ೩-೩-೨). ೩. ಹತ್ತಿರ ; ಸನಿಹ; ಸಾಮಿಪ್ಯ: ಇದನು ಪಠಿಸೆ ಸದಾ ಭಾಗ್ಯವಕ್ಕು . . . ಬದರನಿವಾಸ ವಿಜಯವಿಠ್ಠಲ ಬದಿಯಲ್ಲೆ ಬಂದೊದಗುವ (ಏದಾಕ. ೯೬-೯); ಇದೆ ರಾವಮನೆನುತ ಬಯಲನ್ನಪ್ಪಲೊರ್ವೆ . . . ಬದಿಯೊಳಿಹನೆಂದ ರಸಿ ತಕ್ಕೈಸಲೊರ್ವೆ ... ವಿಶ್ವರೂಪಾಂತು ಸುದತಿಯರ ಕಂಗಳಿಗೆ ತೋರ ಲಡೆಯಾಡಿದರು (ಪಂಚಾರಾ. ೨-೨೦-೦೦); ಮಾದಯ್ಯನು . . . ಅವಳ ತಲೆಯ ಬದಿಯಲ್ಲಿ ನಿರ್ವಿಣ್ಣನಾಗಿ ಕುಳಿತಿದ್ದನು (ಶ್ರೀರಾಯ. ೦೦೦).

**ಬದಿಬದಿ** (ದ್ವಿರುಕ್ತಿ): ಬೀದಿಯ ಬದಿಬದಿಗೆ ಚದುರಂಗವುದುರ್ಯಾವು (ಜೂಜಾಟ. ೪೯-೦). **ಬದಿಗಾಗು**=ಪಕ್ಕಕ್ಕೆ ಜರುಗು; ಅರುಗಾಗು; ಕೆಲಸಾರು: ನೀರಾಗೆ ನಿಂತಿರುವ ನೀಲೀವಾವುದದಣ್ಣಾ ನೀರು ಕಟ್ಟಾವು; ಬದಿಗಾಗೊ (ಜಕುಪ. ೨೦). **ಬದಿಗಿಡು** = ೧. ಪಕ್ಕಕ್ಕೆ ಸರಿಸು; ಪಕ್ಕದಲ್ಲಿ ಇಡು: ಈ ಪಾತ್ರೆಯನ್ನು ಆ ಬದಿಗಿಡು (ಜೂ). ೨. (ಆಲಂ) ಗಮನಿಸದಿರು ; ಗಣನೆಗೆ ತೆಗೆದುಕೊಳ್ಳದಿರು ; ಅಲಕ್ಷಿಸು : ಅವಳ ಮನಸ್ಸನ್ನು ನೋಯಿಸಬಾರದೆಂದು ತಮ್ಮ ಎಲ್ಲ ಅನಾನುಕೂಲತೆಗಳನ್ನೂ ಬದಿಗಟ್ಟು . . . ಶಿಕ್ಷಣ ಕೊಡಿಸಿದ್ದರು (ಕುಂಕುಮ. ೩೯) ; ಪಾದ್ರಿಯೂ ಮೊದಲಿನ ಸಂಕೋಚ ಬದಿಗಿಟ್ಟು ಬಹುಗಂಭೀರರೀತಿಯಲ್ಲಿ ಹೇಳಿದರು (ಆಮೋಲ. ೨೬). **ಬದಿಗಿರಿಸು** = ೧. ಪಕ್ಕದಲ್ಲಿಡು : ಅದನ್ನು ಅವನ ತಟ್ಟೆಯ ಬದಿಗಿರಿಸಿ ತಾನು ಅವನ ಎದುರು ಕುಳಿತುಕೊಂಡಳು (ಮಹಾಕ್ಷಾ. ೦೬). ೨.=ಬದಿಗಿಡು ೨ : ತಮ್ಮ ವೈಯಕ್ತಿಕ ಆಶೋತ್ತರಗಳನ್ನೂ ಮನೋಧರ್ಮವನ್ನೂ ಬದಿಗಿರಿಸಿ, ಮಕ್ಕಳ ಬೆಳವಣಿಗೆಗೆ ಸೂಕ್ತವೆನಿಸುವಂತೆ ವರ್ತಿಸುವರು (ಶಿಕ್ಷಣ. ೯೯೪) ; ನಿನ್ನ ಸಮಾಧಾನಕ್ಕಾಗಿ ನನ್ನ ದುಃಖವನ್ನು ಬದಿಗಿರಿಸಿ ಬರೆಯಲು ಕುಳಿತಿದ್ದೇನೆ (ಕುಂಕುಮ. ೮೨). **ಬದಿಗೊತ್ತು** = ಬದಿಗಿಡು ೨ : ಬಪ್ಪ ಕರ್ಮಗಳ ಬದಿಗೊತ್ತಿ ಬೊಮ್ಮನೊಳಗಿಪ್ಪವನೆ ಯೋಗಿ (ಸರ್ವಜ್ಞ. ೩೦೨); ಈ ಗ್ರಂಥಗಳಲ್ಲಿ . . . ಜಾತಿ ಕುಲ ಗೋತ್ರಗಳನ್ನು ಬದಿಗೊತ್ತಿ ಭಕ್ತಿಗೆ ಕೊಟ್ಟ ಪ್ರಾಶಸ್ತ್ಯ, ಅತಿಶಯ ಬೆಲೆಯುಳ್ಳದ್ದು (ಕಾರಂತ. ೩೯೯). 'ಬರಿ'₁ ಪರಾ.

[ದೇ. ॥ ತುಳು. ಬದಿ]

**ಬದಿ₂** (ನಾ). ಕೆಸರು ; ಪಂಕ ; ರಾಡಿ : "ಪಕ್ಕೆ ಕೆಸಱುಗಳೊಳಂ ಬದಿ" (ಶಬ್ದಮಂ. ೯೯) ; ಬದಿಗಳೊಳಗೆ ಬಿದ್ದು ಹೊರಳಿದವರು ನೆಜಿ ಕೆದಱಿದ ತಲೆಯಿಂದಲಾಗ ಗದಗಾಪುಗೊಳುತ ಹೋಗಲು ದೆಸೆ ಕಾಣದೆ ಸದೆಯುಸಿಕೊಂಡರೇನೆಂಜೆ (ಕಂಪಾ. ೦೬-೦೪) ; ಗದ್ದೇ ಬದೀಲಿ ಬಿದ್ದು ಮಂಡೀಯು ನೊಂದವು ಮುಂಗೈ ಕಿತ್ತೂ (ಹುಟ್ಟಿಹ. ೯೨) ; ನದೀ ದಾಟ ಬದೀಲಿ ಬಿದ್ದ ಹಾಗೆ (ಗಾದೆ). [ದೇ. ॥ ತಮಿ. ವತಿ ; ತೆಲು. ಬಾಡಿ, ಬಾಡೆ]

**ಬದಿಕೆಜಿ** (ನಾ). ಒಂದು ಕೆರೆಯ ಹೆಸರು : ಬದಿಕೆಜಿಯ ಕೀಟೀರಿಯ ಬೇರುಂಗಾಲುಂ ಒಕ್ಕಲೊಳೊನ್ದು ಪೊಜಿಯುಂ . . . ಬಳಿವತ್ತ್ರಮುಂ ಸಲ್ವದು (ಎಕ್. III (II). ಪಂಚಶ. ೨೯೯-೦೦ ; 977). [ಬದಿ₂+ಕೆಜಿ]

**ಬದಿಪಾರು** (ಕ್ರಿ). ಅಕ್ಕಪಕ್ಕ ನೋಡು : ಪೊಸಗಪಲಿದೆತ್ತಣದಿದೆಂದು ಬದಿಪಾರಲು (ಇಂದ್ರಕೀ. ೩೦). [ಬದಿ₁ + ಪಾರು₁ (< ಪಾರ್₁)]

**ಬದಿಯೆಲು** (ನಾ). ಪಕ್ಕೆಯ ಮೂಳೆ : ತಿವಿದನು ತಿರುಗಿ ಬದಿಯೆಲು ನುಗ್ಗುನುಸಿಯಾಗೆ (ಕುಮ್ಮಾಶ. ೧೧-೩೬); ಸೀಳಿಸೀಳಲುಸಿಟೀಲಿಂದು ಬದಿಯೆಲು ಕಳಚೆ (ತೊರರಾ. ೩-೦-೨೦). [ಬದಿ₁+ಎಲು(<ಎಲ್ವು)]

**ಬದಿರಿ** (ನಾ). ಒಂದು ವಂಶದ ಹೆಸರು (?) : ಸಾಕ್ಷಿ ಕೊಡಲೂರ್ ಪೊಜ್ಜುಗಲರು ಎಳ್ಮಡಿಯರು ಬದಿರಿಯಾರುವಾ ಮಮಗರುವಾ (ಪ್ರಕಂ. ೦೯೧೬, ೦೩-೯ ; 726). [?]

**ಬದಿಶೂಲೆ** (ನಾ). ಪಕ್ಕೆನೋವು ; ಅಳ್ಳೆನೋವು : ತಲೆನೋವು ನಾಯ್ಗೆಮ್ಮು, ಬದಿಶೂಲೆ, ಕಾಲೊಡಕ, ವಾತಪಿತ್ತಗಳೆಲ್ಲ ಭೈರವನ ಸೆರೆಗೈದು ಪೀಡಿಸುಗೆ! (ಅಗ್ನಾ. ೯೬-೬). [ಬದಿ₁ + ಶೂಲೆ]

**ಬದಿಹುಲ್ಲು**, ಬದೆಹುಲ್ಲು (ನಾ). ಒಂದು ಬಗೆಯ ಹುಲ್ಲು : ಬದಿಹುಲ್ಲು, ಕಂಡಬತ್ತದ ಹುಲ್ಲು, ಪರಿಹುಲ್ಲು (ವೃಕ್ಷಶಿ. ೩೦-೩೮೦); **ಬದೆಹುಲ್ಲು** : ಬದೆಹುಲ್ಲು . . . ಕರಡ, ಅಂಜಿಹುಲ್ಲು (ವೃಕ್ಷಶಿ. ೨೬-೩೦೪).

[ಬದಿ₁ + ಹುಲ್ಲು (< ಪುಲ್)]

**ಬದು** 'ಬದುವು' ನೋ.

**ಬದುಂಕು** 'ಬರ್ದುಂಕು' ನೋ.

**ಬದುಕಿಸು** 'ಬರ್ದುಂಕಿಸು' ನೋ.

**ಬದುಕು₁** 'ಬರ್ದುಂಕು' ನೋ.

**ಬದುಕು₂** 'ಬರ್ದುಕ್ಕು₂' ನೋ.

**ಬದುಕುವಂತ** (ನಾ). ಕೆಲಸವಂತ ; ಕಷ್ಟಜೀವಿ : ಸಣ್ಣಸಾವ್ಕಾರ್ರು ಒಳ್ಳೆ ಬದುಕುವಂತರು (ಶಲುಮ. ೦೩೬).

[ಬದುಕು₂ (<ಬರ್ದುಕ್ಕು₂) + – ವಂತ]

**ಬದುಬೆ** 'ಬಾದುಬ್ಬೆ' ನೋ.

**ಬದುವು, ಬದವು, ಬದಹು, ಬದು, ಬದುಹು** (ನಾ). ೧. ಎಲ್ಲೆ ; ಮೇರೆ ; ಗಡಿ ; ಸೀಮೆ : ಪಡುವಂ ಶಂಖದ ಬಸದಿಯ ಪೊಲದ ಮೇರ ವಾಯುಬ್ಯದಲು ಪಳ್ಳದ ಪಡುವಣ [ಬ]ದುವಿನ ಕೊತ್ತುರೊಳಗಣ ಉಳಿಮುಖದ ಕಿಂನರಿಗಲ್ಲು (ಶಾಇ. XX. ೬೯–೪೪ ; 1112). ೨. (ಹೊಲ, ಗದ್ದೆಗಳಲ್ಲಿ ನೀರು ನಿಲ್ಲುವುದಕ್ಕಾಗಿ ಹಾಕುವ) ಮಣ್ಣಿನ ಎತ್ತರವಾದ ಕಟ್ಟೆ,–ದಂಡೆ ; (ಹೊಲ, ಗದ್ದೆಗಳ ಅಂಚಿನಲ್ಲಿ ರಚಿಸಿದ) ಮಣ್ಣಿನ ಒಡ್ಡು : ಹೊಲಗಳ ಗುಂಟ ಬೈಲುದಾರಿ ಹಿಡಿದು ಗದ್ದೆಯ ಬದುವುಗಳ ಮೇಲೆ ಹಾಯ್ದು . . . ಒಕ್ಕಲ ಮಕ್ಕಳು ಗ್ರಾಮಗ್ರಾಮಾಂತರಗಳಿಗೆ ಹೊರಟಿದ್ದಾರೆ (ಜಕ್ಕ. ೪೩) ; ರೈತರ ಹೆಂಗಸರು ಕೆರೆಯಿಂದ ನೀರ ತಂದು ಸಗಣಿಯನ್ನು ಕಲಸಿ ಹೊಲಗಳ ಬದುವಿನಲ್ಲಿ ಬೆರಣಿ ತಟ್ಟುತ್ತಿದ್ದರು (ಕೃಷಿ. ೦೩) ; ಒಂದು ಹೋರಿಯು . . . ಬದುವಿನಲ್ಲಿ ಮೇಯುತ್ತ ನಿಂತಿದ್ದ ಆಳನ್ನು ನಿಟ್ಟಿಸುತ್ತಿತ್ತು (ಖಾಂ. ೩೯). **ಬದವು** : ೩. (?) : ಪಾರಿಸ್ವಸೆಟ್ಟಿಯರಿಂಗೆ ಕೊಟ್ಟ ಸಿಲಾಸಾಸನದ ಕ್ರಮವೆಂತೆಂದಡೆ ಪಟ್ಟಣದ ಬೇಹಾರಿಗಳಿಂಗೆ ಮನೆಮಾವು x ಯಕ್ಕ ವ ಞ ಯದಿಮಕ್ಕ ವ ಞ ಬದವಿಂಗೆ ವ ೩ (ಎಕ. XI (8). ಚಾಕಶಾ. ೬೯–೦೩ ; 1319). **ಬದಹು** : ೪. (ಕೆರೆ, ಕುಂಟೆ ಮುಂತಾದವುಗಳ) ಏರಿ : ಚಿಕ್ಕ ಕುಂಟೆಯ ಒತ್ತಿರಿಣ ಬದಹು (ಎಕ. VII. ಶಿಕಾಪೂ. ೨೬–೨೩೨; 1524). **ಬದು** : ೧. ದಿಬ್ಬದ ತಪ್ಪಲುಗಳೂ, ಗೋಮಾಳಗಳೂ, ಹೊಲದ ಬದುಗಳೂ ಹೇರಳವಾಗಿದ್ದವು (ಹುಚ್ಚ. ೬೯); ತಾಕುಗಳ ಸುತ್ತಲೂ ಬದುಗಳನ್ನು ಹಾಕಬೇಕು (ಕೃಷಿ. ೬೦). ೩. ಈ ಹಿತ್ತಿಲನೂ ಅ ಳ ಮುಡಿ ಗದೆಯನೂ ಬದು ೧೨ ಮುಡಿ ಅಕ್ಕಿಯನೂ ೧ ನಂದಾದೀವಿಗೆಯನೂ ನಡಸಿ . . . ಬಾಳುವರು (ಶಾಇ. IX-ii. ೪೪೪–೨೫; 1433). ೪. ಉದ್ದಕ್ಕೂ ನಾಲೆ ಏರಿಯ (ಬದು) ಮೇಲೆಯೇ ಗಾಡಿಯ ರಸ್ತೆ (ಗಾಂ. ೨೨). **ಬದುಹು** : ೧. ಶ್ರೀರಾಮನಾಥದೇವರ ತೋಟದ ಮೂಡಣ ಬದುಹಿನ ಬಡಗಣ ಕಲ್ಲು (ಎಕ. VI. ಕಂಸಿ. ೩೩–೩೦; 1230 ?); ಅರಳಿಯ ಕೊಳದ ಮೂಡಣ ಬದುಹು ಅಲ್ಲಿಂ ಬಡಗಲು ಹಾದಿಯ ದಾರಿ (ಎಕ. XII. ತಿಪಟೂ. ೯೦–೩೬; 1286). ೨. "ಬದುಹು ವಾಳಿ" (ಶಂಗಶಾ. ೦೦೪–೨); ಮೂಡಲು ಎರೆಯ ಕೆಯ್ಯ ದೊಡ ಬದುಹು (ಎಕ. XI. ಹೊಳಕೆ. ೩೬–೬೫; 1220). ೪. ಚಿಂಚಗಟ್ಟ ನಾಯಕರ ಗುಯ್ಯಲ ಹಳುಗಿನ ಹಳ್ಳದ ಮೂಡಣ ಬದುಹಿನ ನಟ್ಟ ಕಲು ಮೇರೆ (ಶಾಇ. IX-i. ೪೭೩–೩೬; 1226). ' ಬರುಹು ' ಪಠಾ.

**ಬದುಹು** 'ಬದುವು' ನೋ.

**ಬದೆಗ** ' ಬದಗ ' ನೋ.

**ಬದೆಹುಲ್ಲು** 'ಬದಿಹುಲ್ಲು' ನೋ.

**ಬದ್ಧ** (ನಾ). ೧. ಗಾಢವಾದಂದು; ದೃಢವಾದುದು: "ಬದ್ಧಂ=ಗಾಢಂ" (ಕಶಬ. ಶಂ. ೨). ೨. ಸತ್ಯ; ದಿಟ; ನಿಜ : "ಕಸರೋಳಿದ ಹೆಜ್ಜೆಯೊಳು ನಿಶ್ಚಯದೊಳುಂ ಬದ್ಧಮೆನಿಕುಂ'' (ಕಜ. ೬೩); ಕದ್ದ ಕಳ್ಳನ ಮಾತು ಬದ್ಧವಾದರೆಯೇನು (ಚಾಪಟ. ೩೯); ನನ್ನ ಹತ್ರ ಸುಳ್ಳು ಹೇಳ್ತಿಯಲ್ಲಾ ! ಸುಳ್ಳೋ ಬದ್ದೋ ? ಹೇಳು ! (ಪುಕರು. ೨೦). [<ಸಂ. ಬದ್ಧ]

**ಬದ್ದಗಿ** 'ಬಡಗಿ' ನೋ.

**ಬದ್ದಣ** 'ಬದ್ದವಣ₁' ನೋ.

**ಬದ್ದನೆ** (ನಾ). ನಿಯಮಿತವಾಗಿ ಒಂದು ಕಾರ್ಯವನ್ನು ನಡೆಸಿಕೊಂಡು ಹೋಗುವುದು; ವರ್ತನೆ : ಯಾ ಹುಳಿಯಾರ ಸುಂಕದಲ್ಲಿ ನಾನಾದಿನಸಿನ ನಡೆಗಳಿಗೆ ಬದ್ದನೆ ಪ್ರಕಾರಾ ಲೆಕ್ಕಾ ಹಚಿಕೊಳುತ್ತಯಿದ್ದಾರೊ ಅದೆ ಪ್ರಕಾರಕ್ಕೆ ಬದ್ದನೆ ನಿಂತ್ರ ನಡೆ ೧ಕ್ಕೆ ಕಣ್ಣರಾಯಿ ೮೦೦೦೦ (ಎಕ. XVI. ಚಿಕ್ಕನಾ. ೯೦–೦೬; 1802). [<ಸಂ. ವರ್ತನ]

**ಬದ್ದಬದಸು** (ನಾ). ಅತಿಶಯವಾದ ಮೋಸ; ಅಧಿಕವಾದ ವಂಚನೆ : ಅಂತು ಮಚಿಪೊಕ್ಕು ಬಂದ ರಾಯನಂ . . . ಅದಿಗಡಿಗೆ ಬದ್ದಬದಸಿಂ ಪಗೆದು (ರಾಜಕ. ೬೨–೦೦). [ಬದ್ದ + ಬದಸು]

**ಬದ್ದರ, ಬದ್ದರ** (ನಾ). ೧. ಶುಭವಾದುದು; ಮಂಗಳಕರವಾದುದು. ೨. ಗಟ್ಟಿಯಾದುದು; ಬಿಗಿಯಾದುದು; ಭದ್ರವಾದುದು : ಬಿಗಿದ ದಡ್ಡಿಯ ಬದ್ದರದ ಬೀಯಗದ ರಾಣೀವಾಸದಂದಣ ತೆಗೆದು ನಡೆದುದು ಮುಂದೆ ಸಂತೋಷದಲಿ ಯದುಸೇನೆ (ಕುಮಾ. ೦೦–೬೩). ೩. ಒಂದು ಬಗೆಯ ಆನೆ,–ಗಜ : (?). ೪. ಎತ್ತು; ವೃಷಭ. ೫. (ಕೋಟೆ ಕಾಳಗದಲ್ಲಿ) ಆತ್ಮರಕ್ಷಣಾರ್ಥವಾಗಿ ಬಳಸುತ್ತಿದ್ದ ಒಂದು ಬಗೆಯ ಸಾಧನ,–ಉಪಕರಣ : ಪಾಯ್ವ ಕುರ್ಗನೆಗೆ ಬದ್ದರಮೊಡ್ಡಿಪ ಕೋಂಟೆ ಗಾಪಗಂ ಕಿಡವುವ ಗೊಗ್ಗೆ ಪಂಕದರದಿಂ ಪೊಡಿಮಾಟ್ಟಚಿಪಾಳ್ಗಮಾಂಕೆಯಾಳ್ ಗಡಣಿಸೆ ಕಾದುತಿರ್ದುದು ಮಹೇಂದ್ರಪದಾತಿನಿ ಮುತ್ತಿ ಸುತ್ತಲುಂ (ಶಂಪುರಾ. ೫–೦೦೩); ದುರ್ಗಕ್ಕೆ ನಿಚ್ಚಣಿ ಸಾರ್ಚುಂದೊಲೆ ವೀರಸೇತು ನಡೆಸಾರಂ ಬದ್ದರಂ . . . ಪಡಿಗೋಂಟೆಯೆಂಬ ಬಹುಕೋಟಾಯಂತ್ರ ಸಾಮಗ್ರಿ ತಿಂತಿಣಿಗೊಂಡಾಂತಿರೆ ಲಗ್ಗೆಗಾರ್ದು ಪಸುಪೇಣಂ ಸಾರ್ದು ಸೂಳೈಸಿದಂ (ಅಶಂಪು. ೦೦–೬೩); ಬಲದ ಬದ್ದರದೊಟ್ಟದಂಬಿನ ಹೊಳೆವ ಹೊದೆಗಳ ಸೂತರುರವಣೆಗಳ ಸುರೇಖೆಯ ಗತಿಯ ವಾಜಿಯ ರಥವ ನೋಡಿದರು (ಕುಮಾ. ೦೦–೦೬). **ಬದ್ದರ** : ೧. ಒಸಗೆ ಬದ್ದರವಾಗೆ ಶಿಶುವೇಷದಿಂದ ರಂಜಿಸಿದ ಕಾರಣಿಕನು (ಕೃಹ. ೦೬೩). ೫. ಜೋಡನೊಡೆ ಹಾಯ್ದಂಬು ಧರಣಿಯೊಳಾಡಿದವು . . . ಬದ್ದರಂಗಳ ಬಾದಣವ ಕೊಚಿದು ಈಡಿಚಿದವು (ಕುಮಾ. ೬–೯೬); ಉರುಶತಘ್ನಿಯ ರಾಯ ಚಿಮ್ಮುವ ಭರದ ಭೈರವ ಬದ್ದರದ ನಡೆಸರದ ಡಬ್ಬುಕ ಡೊಂಕಣಿಗಳನು ತೂಚಿದರು ನಭಕೆ (ಕೌರಶಾ. ೬–೦೦–೦೯).

ಬದ್ದರದ ಬಂಡಿ, ಬದ್ದರದ ಬಂಡಿ = ಬದ್ದರವೆಂಬ ಸಾಧನವನ್ನು ಹೊಂದಿರುವ ರಥ : ತವಕದಲಿ ಬದ್ದರದ ಬಂಡಿಗಳವುಚಿದವು (ಕುಮಾದ್ರೋ. ೨–೨೫); ಒಗ್ಗಿನಿಂ ಬದ್ದರದ ಬಂಡಿವಿಂಡೈದಿದುವು (ಜಾತ. ೯೨–೨೯); ಕೋಲ ಕೋಲಾಹಳಕೆ ಸೈರಿಸದಾಳ ನಾಯಕವಾಡಿ ಹರಿಗೆಯ ಚಾಚಿದರು ಬಲು ಬದ್ದರದ ಬಂಡಿಗಳ (ಕುಮಾ. ೬–೪೪). [<ಸಂ. ಭದ್ರ]

**ಬದ್ದವಣ₁, ಬದ್ದಣ** (ನಾ). ೧. ಶುಭಸಮಾರಂಭದಲ್ಲಿ ಬಾರಿಸುವ ವಾದ್ಯ; ಮಂಗಳವಾದ್ಯ : " ಬದ್ದವಣಮೆಂದೊಸಗೆವಚಿ " (ಕಜಾ. ೬೩–೯೦೩); ವಸಂತಕನದೇಂ ಗುಡಿತೋರಣ ಶೋಭೆ ಪೊಯ್ದ ಬದ್ದವಣ ಮಳುಂಬಮಾದುದೊ ನಿಕೇತನದಲ್ಲಿ ಮನೋಜರಾಜನಾ (ಅಪು. ೦೦–೦೦೯); ಆ ಪುರದೊಳ್ ಗುಡಿಗಳಂ ಕಟ್ಟಿ ಬದ್ದವಣಂಗಳಂ ಬಾಜಿಸಿ ಪಿರಿದಾಗಿರ್ದೊ ಸಗೆಯಂ ಕೊಂಡಾಡುತುತ್ತುಮಿರಲ್ (ಚಾಕಪು . ೯–೩೬ ಶ); ಕೊಂಬು, ಕಾಳೆ, ಜೇಗಟೆ, ಮದ್ದಳೆ ಮುಂತಪ್ಪ ಬದ್ದವಣಂಗಳ ಬಿರುಸರಂ ಎಲ್ಲೆಡೆಯೊಳಂ . . . ಮಾರ್ದನಿಗುಟ್ಟದುದು (ಅಕ್ಕುಕ. ೩೨–೦೦). ೨. (?) : ಅತ್ತಿಗೆ ಕೇಳ್ ಪೇಟರೆ ನೈಮಿತ್ತಕರೆನೆವೇಡ ಪೇಟ್ವಿಪಿಂ ಬದ್ದವಣಕ್ಕೆತ್ತಿದ ಕೆಯ್ಯನೆ ಬಸಿಚಿಂಗೆತ್ತುವೆಯದು ಕೂಡದಂದು ಕಾಡೆಲೆ ಕುಲಟೇ (ಅರ್ಜುಚ. ೬–೬). **ಬದ್ದಣ** : ೧. "ಬದ್ದಣಮೆನಲೊಸಗೆಯ ಪಚಿ " (ಕಜ. ೯೬); ಎತ್ತಲುಂ ಬದ್ದಣದ ದನಿ (ಶ್ರೀಚಾಕ. ೯೦–೩೮); ಬದ್ದಣಂ ಮೊಳಗಿತ್ತಾಗಳ್ ಬಾನೊಳ್ ಸುರರ ಕೇಳಿಪೊಲ್ (ಶಾಂಪು. ೨–೩೪).

ಬದ್ದವಣಿಗ್=ಶುಭಸಮಾರಂಭದಲ್ಲಿ ಮಂಗಳವಾದ್ಯವನ್ನು ಬಾರಿಸುವವರು : ಬಾಜಿಸಲಿರ್ದ ಬದ್ದವಣಿಗರಿಂ ಫಳಿಪಟ್ಟಲುಂ ಪರಿವೇಷ್ಟಿಸಿರ್ದ ನಕ್ಷತ್ರಪಾಠಕರಿಂ ಕಿಕ್ಕಿಜಾಗಿದ ವಿವಾಹಮಂಟಪಮುಂ . . . ನೋಡುತುಂ (ಶಂಪುರ. ೬–೩೬).

[< ಸಂ. ಭದ್ರಪಣವ]

**ಬದ್ಧವಣ್ಣ** (ನಾ). ೧. ಬೆಳೆಯುವಿಕೆ; ಉತ್ಕರ್ಷ : ವರ್ಧಮಾನ—ಬದ್ಧವಣ (ಕಬಿರ. ೨೫೬ ಪ್ರಯೋ). ೨. ಒಂದು ಬಗೆಯ ಗಿಡ ಮತ್ತು ಅದರ ಕಾಯಿ; ಹರಳು; ಔಡಲ: "ಬದ್ಧವಣ (ಬದ್ಧಣ)—ವರ್ಧಮಾನ—ಮಂಗಳವಾದ್ಯ, ಒಂದು ಗಿಡ" (ಕನ್ನಕೋ. ೫೩). ೩. (?) : ಇದಿರೆ ಪೂತ ಮರದ್ರುಮದಿಡುವುಗಳೊಳ್ ಬದ್ಧವಣದ ಪುಡಿವೂಲ್ ಬೆನ್ನೊಳ್ ಬಿಡದಲುಗೆ ಕುಸುಮಕುಲರಜಮಡರ್ದುದು ಸುರಗಿರಿಯನಿಂದ್ರರುಂದ್ರ ಗಜೇಂದ್ರಂ (ಆಪು. ೬-೭೬). [< ಸಂ. ವರ್ಧಮಾನ]

**ಬದ್ಧವಣಂಬೊಯ್** (ಕ್ರಿ). ಮಂಗಳವಾದ್ಯವನ್ನು ಬಾರಿಸಂ: ಮುನೀಶನಾದೇಶಂಗೆಯ್ದು ಪೋಗೆಂದು ಕಳುಹಿದೊಸಗೆಗೆ ಮನದೊಳ್ ಗುಡಿಗಟ್ಟಿ ಬಗೆಯೊಳ್ ಬದ್ಧವಣಂಬೊಯ್ದು . . . ಬನಮಂ ಪೊಕ್ಕು (ಜಗಂ. ೧೦-೨೫ ಪ). [ಬದ್ಧವಣ್ಣ + ಪೊಯ್₁]

**ಬದ್ಧವಣಂಬೊಯಿಸು** (ಕ್ರಿ). ಮಂಗಳವಾದ್ಯವನ್ನು ಬಾರಿಸುವಂತೆ ಮಾಡು : ಅಂತಸ್ತಮಯವಾಗೆ ಸೈಂಧವನುಂ . . . ಪೊಚ್ಚ ಬದ್ಧವಣಂ ಬೊಯಿಸಿದಂ (ಶಬಪುಕ. ೧೨-೩೨ ಪ). [ಬದ್ಧವಣ್ಣ₁ + ಪೊಯಿಸು]

**ಬದ್ದಿ** 'ಬಡಗಿ' ನೋ.

**ಬದ್ದಿಗೆ** 'ಬದ್ದುಗೆ' ನೋ.

**ಬದ್ದು₁** 'ಬಾಟ್₁' ಪರಾ.

**ಬದ್ದು₂** 'ಬರ್ದು₄' ನೋ.

**ಬದ್ದು₃** (ನಾ). ೧. ಹಳ್ಳ; ಗುಣಿ : ಕಿಣ್ಕಿಂವ ಬಾಣಗಳು ತನೆತನಗಿಕ್ಕಿ ಕಟ್ಟಿದ ತೊಲಿಗಳಗಣಿತ ಕಕ್ಕುದರಿ ಬದ್ದುಗಳಲೊಪ್ಪುವ ತಳ್ಳುವಲಗೆಗಳು ಮಿಕ್ಕಿರುವ ಕೈದುಗಳು . . . ದಿಕ್ಕುದಿಕ್ಕಿಲಿ ತಿಂತಿಣಿಸಿ ರಚಿಸಿದನು ಪಟ್ಟಣವ (ಶ್ರೀಪ್ರಾಕ. ೪-೩೮). ೨. ಚಿಣ್ಣಿಕೋಲು, ಗೋಲಿ ಮುಂತಾದ ಆಟಗಳನ್ನಾಡುವಾಗ ನೆಲದಲ್ಲಿ ತೋಡುವ ಗುಳಿ, –ಕುಣಿ : ಗೋಲಿಯನ್ನು ಬದ್ದಿಗೆ ಸರಿಯಾಗಿ ಬೀಳುವಂತೆ ತೀಕು (ಕಊ). [?]

**ಬದ್ದುಗೆ, ಬದ್ದಿಗೆ** (ನಾ). ೧. (ಸೀರೆ, ಪಂಚೆ ಮೊದಲಾದುವುಗಳ) ಸೆರಗಿನ ತುದಿಯಲ್ಲಿ ನೇಯದೆ ಬಿಟ್ಟ ವಸ್ತ್ರದ ಎಳೆ; ಕರೆ; "ಸೀರೆಯ ಸೆರಗಿನ ದಡಿ" (ಹಾಕಕೋ. ೨೦). ೨. ಸೊಂಟಕ್ಕೆ ಕಟ್ಟಿಕೊಳ್ಳುವ ಪಟ್ಟಿ; ನಡುಕಟ್ಟು : ಉಡಿಯ ಬದ್ದುಗೆಯ ಕಠಾರ ಹಿಡಿದ ಹರಿಗೆಯೆಕ್ಕ ತುಳದ ತುಳುವರೊಗ್ಗು ನಡೆತಂದುದರಸನೋಲ್ಯಸಿ (ಶ್ರೀಕಾಂ. ೦೬-೭೯); ಕಡೆಯ ಪೆಂಡೆಯ ಗೆಜ್ಜೆ ಕಣಕಾಲ ಬಾಸಿಂಗಮಡೆಯ ಬದ್ದುಗೆಯ ಕಿಗ್ಗಟ್ಟು ಬಿಡೆಯುಪ್ಪಿಲ್ಲದೆ ಪೋಲಗಟ್ಟಿನ ಬಲ್ಲಾಳ ಪಡೆ ನಡೆಯುತು ಬಾಣನೊಡನೆ (ಕೋಹಕ. ೧೦-೦೯). ಬದ್ದಿಗೆ : ೧. ಜವಳಿಯೆಳೆಗಳ ಬದ್ದಿಗೆಯ ಸೀಲೆಯಾ ಸೆಜಗು ಸುವಿರಾಜಿಸುತ್ತಿರ್ದುದು (ಗುರುಚ. ೦೯-೩೬). ೨. ಕಟ್ಟಿದ ಕಠಾರದ ಬದ್ದಿಗೆಯ ತೊಂಗಲ್ದೆಗೆದು ಬಿಗಿದೆಟಲ್ವ ಬಾಲಗಚ್ಚೆಯ ವಿಳಸದ ಸೆಜಗಂ ಸೆಳೆದಳ್ಳಿಟಾಯೆಯುಮಂ (ಅಹಂಪು. ೦೦-೬೫ ಪ). 'ಬದುವು' ಹೋ. [ದೇ.₂ ತೆಲು. ಬದ್ದ]

**ಬದ್ದುಗೆದಾರ** (ನಾ). ನಡುಪಟ್ಟಿಯ ದಾರ: ಉಟ್ಟ ಪಟ್ಟಾವಳಿಯ ಮೇಲಳವಟ್ಟ ಬದ್ದುಗೆದಾರದೊಂಗಲ ಕಟ್ಟ ಮೆಚ್ಚುವ ಕಠಾರಿಗಳ ಹೊಂಗಟ್ಟುಗಳು (ಅಕಪು. ೬೦-೨೬); ವೈರಿಬಾಹುದ್ವಯವ ಬದ್ದುಗೆ ದಾರದಲಿ ಕಟ್ಟಿದನು (ಕುಪ್ರಾಕ. ೨೨-೩೬); ಅಳವಡಿಕೆಯಲಿ ಪೀತಪಟ ಸಮ್ಮಿಳಿತ ಬದ್ದುಗೆದಾರವನು ಬಲಿದಲವ ಜಡೆಗಳನೊಬ್ಬುಳಿಸಿ ಬಿಗುಹಿಕ್ಕಿ (ಕೊಡಚ. ೬-೨೮-೦೬). [ಬದ್ದುಗೆ + ದಾರ₁]

**ಬದ್ದೆ₁** 'ಬರ್ದೆ' ನೋ.

**ಬದ್ದೆ₂** (ನಾ). ಕೆಳಹೊಟ್ಟೆ; ಕಿಬ್ಬೊಟ್ಟೆ : ತುಸುವೆ ಉಬ್ಬಿದಂತಿದ್ದ ತನ್ನ ಬದ್ದೆಯ ಭಾಗವನ್ನು ನೋಡಿಕೊಂಡು ಮುಗುಳುನಗುತ್ತಾ ಏನನ್ನೊ ಸವಿಯುವಂತೆ ಕ್ಷಣಕಾಲ ನಿಂತಳು (ಮುಕಹು. ೫೬೬). [?]

**ಬದ್ದೆಗ** 'ಬರ್ದೆಗ' ನೋ.

**ಬದ್ದೆದಲ್ಲಟ** (ನಾ). ಪ್ರೌಢೆಯರನ್ನು ತನ್ನ ಸೌಂದರ್ಯಾದಿಗಳಿಂದ ಸೋಲಿಸಂಪವನು ; ಪ್ರೌಢಸ್ತ್ರೀಯರಿಗೆ ತವಕವನ್ನುಂಟುಮಾಡುವವನು : ನೋಟದೊಳಟ್ಟುಜಂಬದೆದು . . . ಕೂಟದೊಳುಣ್ಮಿದ ಬೆಚ್ಚ ತಟ್ಮಿಯೊಳ್ ಕೂಟಸುಖಂಗಳಂ ಪಡೆದನೇಂ ಚದುರಂ ಗಳ ಬದ್ದೆದಲ್ಲಟಂ (ಕಂಕಕಾ. ೩-೬೨). [ಬದ್ದೆ₁ ( < ಬರ್ದೆ) + ತಲ್ಲಟ]

**ಬದ್ದೆವಜ್ಜೆ** (ನಾ). "ಪ್ರೌಢಿಮೆಯನ್ನುಳ್ಳ ಹೆಜ್ಜೆ ಗುರುತು" (ಕಂಕಕಾ. ೦೫೬) : ಪದವುಮುಪಸಿಂಬುಮನಣಮಚ್ಚಿಯದೇವುದು ಬದ್ದೆ ಬೆಳ್ಳಿಗಂ ಪಜ್ಜೆ ದರೆಂಬುದನೆರಡುಮನಚ್ಚಿಪಾತನೆ ಚದುರಂ ಚದುರಂಗೆ ಬದ್ದೆವಜ್ಜೆಗಳೊಳವೇ (ಕಂಕಕಾ. ೩-೯೩). ☞ ಇದು 'ಬದ್ದೆ' ಮತ್ತು 'ಪಜ್ಜೆ'ಗಳೆಂಬ ಭಿನ್ನಶಬ್ದಗಳಿರಬಹುದು. [ಬದ್ದೆ₁ ( < ಬರ್ದೆ) + ಪಜ್ಜೆ]

**ಬದ್ದೆವೆಣ್** (ನಾ). ಚತುರೆ ; ಪ್ರೌಢಸ್ತ್ರೀ : ನುಡಿಯೊಳು ನಗಿಸುವ ಸರಸಕಾತಿಯರು ಮೇಲುಡಿಸಿ ತೊಡಿಸುವ ನೀಜೆಯರು ವಿಡಿದು ವೀಣೆಗಳ ಬಾಜಿಪ ಬದ್ದೆವೆಂಡಿರು ಕಡುಹಗೆಯಾದರವಳಿಗೆ (ಶಠಕ. ೩-೦೨). [ಬದ್ದೆ₁ (<ಬರ್ದೆ) + ಪೆಣ್]

**ಬದ್ಧ** (ಗು). ೧. ಕಟ್ಟಿದ ; ಬಿಗಿದ. ೨. ಬಂಧನಕ್ಕೊಳಗಾದ; ಅಧೀನವಾದ. ೩. ಕ್ರಮಕ್ಕೆ ಅನುಗುಣವಾದ; ವಿಧಿವತ್ತಾದ; ನಿಯಮಾನುಸಾರವಾದ. ೪. ಹೆಣೆದ : ಕೂಡಿಕೊಂಡ ; ಸೇರಿದ : 'ಬದ್ಧಭ್ರುಕುಟಿ', 'ಬದ್ಧಾಂಜಲಿ' ಪರಾ. ೫. ಆವರಿಸಿದ ; ಸಂತ್ಯವರಿದ : ಸಕಲ ಬದ್ಧಾಶ್ರವನಿರೋಧದಿನಯೋಗಿಕೇವಲಿಗುಣಸ್ಥಾನಮಂ ಪೊರ್ದಿ ಸಮುಚ್ಛಿನ್ನಪ್ರಾಣಾಪಾನಪ್ರಚಾರಂ ಸಮುಚ್ಛಿನ್ನಕ್ರಿಯಾಪ್ರವೃತ್ತಿಧ್ಯಾನಪ್ರವರ್ತನಾಪರನಾಗಿ (ಕಂಶಾಪು. ೦೬-೬೬ ಪ); ಬದ್ಧಾಷ್ಟಕರ್ಮಮಂ ನಿಜಬುದ್ಧಿಯ ಬಲದಿಂದನಂತಚಾತುಷ್ಟಯದಿಂದುದ ತರಿಪುಗಳನುಂಸಿದ ಸಿದ್ಧರ್ ಲೋಕಪ್ರಸಿದ್ಧರೀಗೆಮಗೊಳ್ಪಂ (ಅಭಿಮು. ೦-೨). ೬. ತಡೆದ ; ಹೊರಬರದ ; ಕಟ್ಟಿಕೊಂಡ : 'ಬದ್ಧಮಲ' ಪರಾ. ೭. ಹತ್ತಿಕ್ಕಿದ ; ಹತೋಟಿಯಲ್ಲಿಟ್ಟುಕೊಂಡ : 'ಬದ್ಧೇಂದ್ರಿಯ' ಪರಾ. ೮. ಗಾಢವಾದ ; ದೃಢವಾದ ; ತೀವ್ರವಾದ : 'ಬದ್ಧದ್ವೇಷ', 'ಬದ್ಧವೈರ' ಪರಾ. ೯. ಕುಂದಣಿಸಿದ ; ಕೆತ್ತಿದ. ೧೦. ರಚಿಸಿದ ; ಕಟ್ಟಿದ. ೧೧. ತೊಟ್ಟ ; ಧರಿಸಿದ : ಇನ್ನೆನ್ನುಮಸೊಲ್ಲುಮೊಲ್ಲೆಳವಳಿಂದಾಶಂಕೆ ಪುಟ್ಟಿತ್ತು ಚಿತ್ರದೊಳಾಬೇಗದೊಳುರ್ವರಾಸ್ಮತಿಲಕಂಗತ್ಯುನ್ನತಂ ದಕ್ಷಿಣಾಂಸದ ಬದ್ಧ ಶ್ಲಥಬಾಹುಕೀರ್ತಿ ಕಳೆದತ್ತೆಂದಾದ ಸಂದೇಹಮಂ (ಕಾಂತಿಪು. ೩-೦೫೬). ೧೨. (ನಾ). ಕಟ್ಟು ; ಪಾಶ ; ಬಂಧನ : ಮುಕ್ತಿ ಬದ್ಧಗಳೆರಡು ತಾವತಿಪ್ರಕಟವಾಗಿಯೆ ಸತ್ಯವೆಂಬರ ಮುಕುತಿಯಲ್ಲೊಬ್ಬಾತಗೆರಡಜ ಸಂಗ ದೊರಕುವದೆ (ಶಿಶಾಗ. ೦೦-೦೬-೬) ; ಬದ್ಧವೆಂಬುದು ಮುಕ್ತವೆಂಬುದು ಬುದ್ಧಿಗೇ ಸರಿಯಾತ್ಮಕಿಲ್ಲಲೆ (ಅಪ್ಪುಕ. ೬-೦೪೦). ೧೩. ಕಟ್ಟಿ ಹಾಕಿದುದು ; ಬಂಧಿಸಿದಂದು : "ಬದ್ಧಂ, ಪಿನದ್ಧಂ, ಅಮುಕ್ತಂ, ಅಪಿನದ್ಧಂ—ಈ ೪ ಕಟ್ಟಲ್ಪಟ್ಟುದು" (ಹಲಾಯು. ೦೨೫-೬೨). ೧೪. ಹಿಡಿತ ; ಹತೋಟಿ; ನಿಯಂತ್ರಣ : 'ಬದ್ಧಗೊಳಿಸು' ಪರಾ. ೧೫. ಸತ್ಯ ; ದಿಟ; ನಿಜ : ನೀನು ಹೇಳುವಂಥಾದ್ದು ಸಟೆಯೋ ? ದಿಟವೋ ?. . . ಬದ್ಧವೇ ಸರಿ. ಪರೀಕ್ಷೆ ಮಾಡಬೇಕು (ರಾಕೋಂದ್ರ. ೧೦೬). ೧೬. ಕಟ್ಟಳೆ ; ನಿಯಮ : 'ಬದ್ಧಭೋಜನ' ಪರಾ. ೧೭. ಯಾವುದಾದರೊಂದು ಕಟ್ಟಿಗೆ ಒಳಪಟ್ಟವನು : "ಬದ್ಧಃ, ನದ್ಧಃ, ಸಂಯತಃ — ಈ ೩ ಕಟ್ಟುಪಟ್ಟವಂ" (ಹಲಾಯು. ೩೬-೦೫೩) ; ಬದ್ಧನಲ್ಲ ಮುಕ್ತನಲ್ಲ ಎರಡಿಲ್ಲವಾಗಿ ಸಹಜಭರಿತನಯ್ಯಾ (ಅದವ. ೪. ೦೪೭-೨೭೬). ೧೮. [ವಿಶಿಷ್ಟಾ]

ನಿತ್ಯ, ಮುಕ್ತ, ಬದ್ಧರೆಂಬ ಮೂರುಂ ಬಗೆಯಂ ಜೀವಾತ್ಮರಲ್ಲಿ ಒಂದು ಬಗೆ; ಸಂಸಾರಿ: ಈ ಜೀವಾತ್ಮತತ್ತ್ವವು ನಿತ್ಯ, ಮುಕ್ತ, ಬದ್ಧ ಎಂದು ಮೂರು ವಿಧ . . . ಈಗ ಪ್ರಕೃತಿಸಂಬಂಧದಲ್ಲಿರುವವರು ಬದ್ಧರು (ಹಿಂದೂಶಾ. ೨೪೭). ೧೯. [ಸಂಗೀತ] ತಾನದಲ್ಲಿ ಒಂದು ಪ್ರಕಾರ: ಪ್ರಾಚೀನಸಂಗೀತದಲ್ಲಿ ತಾನ, 'ಬದ್ಧ' ವೆಂದೂ 'ಅಬದ್ಧ' ವೆಂದೂ ಎರಡು ರೀತಿಯಲ್ಲಿತ್ತು (ಸಂಗೀಶಂ. ೬೮). 'ಬದ್ಧತಾನ' ಪರಾ. ೨೦. [ನಾಟ್ಯ] ನರ್ತನದಲ್ಲಿ ಒಂದು ಪ್ರಕಾರ; ನೃತ್ಯದಲ್ಲಿ ಹೆಜ್ಜೆ ಹಾಕುತ್ತ ಮುಂದಕ್ಕೆ ಚಲಿಸುವ ಒಂದು ಬಗೆಯ ಗತಿ: ಒವವಿದವ ಸ್ಕಂದಿತವುಗ್ಗದ ಬದ್ಧಂ ಜನಿತಮುಮೆಸೆವೂರೂಧ್ವೃತ್ತಂ ಸುದತಿ ಪದಿ ನಾಱು ಭೌಮಂ ವುದಿದೆಸೆವೀ ಚಾರಿಯೆಂಬ ಪೆಸರಸೆದಿರ್ಕುಂ (ಅಚ್ಯರಂ. ೬-೪). [ಸಂ.]

**ಬದ್ಧಕ** (ನಾ). ಬಂಧನಕ್ಕೆ ಸಿಲುಕಿದವನು: ಆ ಜಂಗಮ ಹೆಣ್ಣ ಬೇಡಿದರೆ ಸಂಸಾರಿ ಎಂದು ಹೊನ್ನ ಬೇಡಿದರೆ ಆಶಕನೆಂದು ಮಣ್ಣ ಬೇಡಿದರೆ ಬದ್ಧಕನೆಂದು ಇಚ್ಛಕ್ಕೆ ನೊಂದ ವಚನ ಭಕ್ತಿವಾಸಿಗೆ ಹೋರಲೇಕೆ (ಪೋಳವಚ. ೩೬-೨೦೯). [ಸಂ.]

**ಬದ್ಧಕಂಕಣ** (ನಾ). ತನ್ನ ಗುರಿಯನ್ನು ನೆರವೇರಿಸಲು ಸಂಕಲ್ಪ ಮಾಡಿದವನು; ಕಂಕಣಬದ್ಧ: ಬಲದೇವನು . . . ವರ್ಣಚಿತ್ರಕಲೆ (oil Painting) ಯನ್ನು ಮುಂದಕ್ಕೆ ತರಬೇಕೆಂದು ಬದ್ಧಕಂಕಣನಾದನು (ಕಲಾಶಾ. ೩೩). [ಸಂ.]

**ಬದ್ಧಕತನ** (ನಾ). ಬಂಧನಕ್ಕೊಳಗಾಗಿರುವಿಕೆ: ಕಾಯದೊಳ ಗುಂಟೆಂದರೆ ಕರ್ಮಕಾಂಡಿಯಲ್ಲ ಜೀವದೊಳಗುಂಟೆಂದರೆ ನಾನಾಯೋನಿ ಯವನಲ್ಲ . . . ಅದು ಇದ್ದಿಲು ಶುಭ್ರವಾದ ತೆಱನುತೆ ಹೊದ್ದದಾಗಿ ಬದ್ಧಕತನವಿಲ್ಲವೆಂದೆ ನೀಕಳಂಕಮಲ್ಲಿಕಾರ್ಜುನಾ (ಪೋಳವಚ. ೩-೮).

[ಬದ್ಧಕ + — ತನ]

**ಬದ್ಧಕೋಣಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಬಗೆ; ❡ "ಬದ್ಧವೆಂದರೆ ಕಟ್ಟಲ್ಪಟ್ಟ, ತಡೆಯನ್ನು ಹೊಂದಿದ ಎಂದರ್ಥ. 'ಕೋಣ' ವೆಂದರೆ ಮೂಲೆ. ಈ ಭಂಗಿಯಲ್ಲಿ, ನೆಲದ ಮೇಲೆ ಕುಳಿತು, ಹಿಮ್ಮಡಿಗಳನ್ನು ಗುದ ಗುಹ್ಯಸ್ಥಾನಗಳ ನಡುತಾಣಕ್ಕೆ (perineum) ಅಳವಡಿಸಿ ಪಾದಗಳನ್ನು ಹಿಡಿದು, ಮಂಡಿಯ ಭಾಗಗಳು ಎರಡು ಕಡೆಗಳಲ್ಲಿಯೂ ನೆಲ ಮುಟ್ಟುವವರೆಗೂ ತೊಡೆ ಗಳನ್ನಗಲಿಸಬೇಕಾಗಿದೆ" (ಯೋಗದೀ. ೦೦೨): ಅಭ್ಯಾಸಗಳು ೧. ಉತ್ತಾನಾಸನ ೨. ಚತುರಂಗದಂಡಾಸನ . . . ೩೨. ಟಿಟ್ಟಿಭಾಸನ ೩೩. ಬದ್ಧಕೋಣಾಸನ (ಶಾರದ. ೦೬೬). [ಸಂ.]

**ಬದ್ಧಗೊಳಿಸು** (ಕ್ರಿ). ಹಿಡಿತಕ್ಕೆ ತರು; ಹತೋಟಿಯಲ್ಲಿಡು; ನಿಯಂತ್ರಣಗೊಳಿಸು: ಹಾದಿಯಿಲ್ಲದೆ ಹರಿವ ಮರುಳು ಮನವನು ನಿನ್ನ ಬುದ್ಧಿಬಲದಿಂದಲೇ ಬದ್ಧಗೊಳಿಸು (ಪಪ್ಪಲ್ಲ. ೬೬-೪).

[ಬದ್ಧ + ಕೊಳ್[1] + — ಇಸು[1]]

**ಬದ್ಧತಾನ** (ನಾ). = ಬದ್ಧ ೧೯: ಬದ್ಧತಾನ ತಾಳಗತಿಯನ್ನು ಅನುಸರಿಸಿ, ಅಬದ್ಧತಾನ, ತಾಳಗತಿಯನ್ನನುಸರಿಸದೆ ಹಾಡಲ್ಪಡುತ್ತವೆ. ಬದ್ಧತಾನ ಈಗ ಬಳಕೆಯಲ್ಲಿಲ್ಲ (ಸಂಗೀಶಂ. ೬೮). [ಸಂ.]

**ಬದ್ಧತೆ** (ನಾ). ೧. ಕಟ್ಟಳೆ; ನಿಯಮ: ಯಾವನೊಬ್ಬ ನಾಗರಿಕನೂ . . . ಸರ್ವಜನರು ಸೇರುವ ಸ್ಥಾನಗಳನ್ನು ಉಪಯೋಗಿಸುವ ಸಂಬಂಧದಲ್ಲಿ ಯಾವುದೊಂದು ನಿರ್ಯೋಗ್ಯತೆ, ಬದ್ಧತೆ, ನಿರ್ಬಂಧ ಅಥವಾ ಷರತ್ತಿಗೆ ಒಳಪಟ್ಟಿರತಕ್ಕುದಲ್ಲ (ಭಾರಸಂ. ೯). ೨. (ಮಲವು) ಹೊರಬರದೆ ಕಟ್ಟಿಕೊಳ್ಳುವಿಕೆ: 'ಮಲಬದ್ಧತೆ' ಪರಾ. [ಸಂ. ಬದ್ಧತಾ]

**ಬದ್ಧದ್ವೇಷ** (ನಾ). ಕಡು ಹಗೆ; ಗಾಢ ವೈರ: ಅರಸ ಕೇಳಾಯುಯ್ಯ ಭಾಗ್ಯಗಳೆರಡು ಕಡುವವು ತಪ್ಪದವನೀಸುರರ ಬದ್ಧದ್ವೇಷ ಲೇಸಲ್ಲೆಂದನಾ ವಿದುರ (ಕುವ್ಯಾಉ. ೩-೧೮): ವೀರೇಂದ್ರಸಿಂಹನಿಗೂ ಮಾನಸಿಂಹನಿಗೂ ಬದ್ಧದ್ವೇಷ (ಐಂತಿಮು. ೦೯೬). [ಸಂ.]

**ಬದ್ಧಪದ್ಮಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಬಗೆ: ❡ "ಬದ್ಧಪದ್ಮಾಸನ . . . 'ಬದ್ಧ' ವೆಂದರೆ ಕಟ್ಟಲ್ಪಟ್ಟ ಅಥವಾ ಬಿಗಿತಕ್ಕೆ ಒಳಗಾದ. ಈ ಭಂಗಿಯಲ್ಲಿ ಕೈಗಳನ್ನು ಬೆನ್ನ ಹಿಂದೆ ಎದುರುಬದುರು ದಿಕ್ಕಿನಲ್ಲಿ ಅಡ್ಡಗಿಸಿ, ಅವುಗಳಿಂದ ಕಾಲಿನಂಗುಟ (ಹೆಬ್ಬೆರಳು)ಗಳನ್ನು ಹಿಂಗಡೆಯಿಂದ ಬಿಗಿಹಿಡಿಯುವುದು. ಮುಂಗಡೆ ಅಡ್ಡಗಿಸಿದ ಕಾಲುಗಳೂ ಮುಂಗಡೆಯಲ್ಲಿ ಅದೇ ಬಗೆ ಯಲ್ಲಿ ಕೈಗಳೂ ಈ ಮಧ್ಯೆ ದೇಹವು ಇವುಗಳ ಹಿಡಿತಕ್ಕೆ ಒಳಪಟ್ಟಿ ರುವುದರಿಂದ, ಈ ಭಂಗಿಗೆ ಈ ಹೆಸರು" (ಯೋಗದೀ. ೦೦೬): ಮುಖ್ಯವಾದ ಕೆಲವು ಆಸನಗಳು . . . ೧೪. ಬದ್ಧಪದ್ಮಾಸನ ೧೫. ಯೋಗಮುದ್ರಾಸನ (ಶಾರದ. ೦೬೬); ಮುಕ್ತಪದ್ಮಾಸನ, ಬದ್ಧಪದ್ಮಾಸನ ಇವು ಧ್ಯಾನಕ್ಕೆ ಅನುಕೂಲವೆಂದೂ . . . ಹೇಳಲ್ಪಟ್ಟಿದೆ (ಮನೋಶಂ. ೩೦೨).

[ಸಂ.]

**ಬದ್ಧಭೂಮಿಕ** (ನಾ). ಸಮಮಾಡಿ ಸಿದ್ಧಗೊಳಿಸಿದ ವೇದಿಕೆ. — ನೆಲಗಟ್ಟು: "ಕುಟ್ಟಿಮಂ, ಬದ್ಧಭೂಮಿಕಂ — ಈ ೨ ನೆಲಗಟ್ಟು" (ಕರಾಅಭು. ೪೪-೦೪೯). [ಸಂ.]

**ಬದ್ಧಭೋಜನ** (ನಾ). (ದೇವಸ್ಥಾನದಲ್ಲಿ) ಕಟ್ಟಳೆಯ ಪ್ರಕಾರ ಹಾಕುವ ಊಟ,—ಭೋಜನ: ದನಿಯರು ತಮ್ಮ ಬದ್ಧಭೋಜನ ನಡವಂತಾಗಿ ಯಿಕ್ಕಿಕೊಂಡು (ಸೌಇಇ. IX-ii. ೪೦೯—೨೬; 1365). [ಸಂ.]

**ಬದ್ಧಭ್ರುಕುಟಿ** (ನಾ). ೧. ಗಂಟಿಕ್ಕಿದ ಹುಬ್ಬು; ಹುಬ್ಬುಗಂಟು: ಕಾಱಿದವು ಕುಡಿಮಿಸೆ ಕಾದುದು ಮೋಱಿ ಬದ್ಧಭ್ರುಕುಟಿಯಲಿ ಹುಱ ಯೇಱಿತಧಿಕ ಕ್ರೋಧತಾಮಸ ನಿಮ್ಮ ದಳಪತಿಯ (ಕುವ್ಯಾಕ. ೨೩-೩); ದಾಶರಥಿ . . . ಸಿಗ್ಗಿಂದೆ ಬದ್ಧಭ್ರುಕುಟಿಯಿಂದೆ ನೋಡುತಿರ್ದನ್ ಬಲ್ಲು ಬೆರಗಾಗಿ (ಶ್ರೀರಾಮಾ. ೩೦೩-೦೨೩). ೨. ಹುಬ್ಬುಗಂಟಿಕ್ಕಿದವನು: ಭೀಮಸೇನನುದ್ದಾಮಕೋಪಾಟೋಪಚಿತ್ತದಿಂ ಬದ್ಧಭ್ರುಕುಟಿಯಾಗಿ (ಗದಾಯು. ೭-೯ ವ); ಬದ್ಧಭ್ರುಕುಟಿ ಸರೆ ಬಿಗಿಯುವೋಲಾಡುಗಚ್ಚೆ, ನಿದ್ದೆಯನೊದ್ದು, ಸೀಳ್ದು ದುಃಸ್ವಪ್ನಮಂ, ಕುಳಿತರ್ದನಬ್ಬರಿಸಿ (ಶ್ರೀರಾಮಾ. ೨೬೩-೨೬೮). [ಸಂ.]

**ಬದ್ಧಮಲ** (ನಾ). ಕಟ್ಟಿಕೊಂಡಿರುವ ಮಲ; ಹೊರಬರದಿರುವ ಮಲ: ಸಂವತ್ಸರಲವಣ, ಇಂಗು, ಶುಂಠಿ ಎಂಬೀ ಔಷಧಿಗಳನ್ನು ಶುಂಠಿಯ ಕಷಾಯದ ಬಿಸಿನೀರಿಂ ಕುಡಿಯೆ . . . ಬದ್ಧಮಲ ಬಿಡುವುದು (ವೈದ್ಯಾ. ೨೦). [ಸಂ.]

**ಬದ್ಧಮೂಲ** (ನಾ). ೧. ಬಲವಾಗಿ ಬೇರೂರಿದುದು; ಗಾಢವಾಗಿ ನೆಲಸಿದುದು: ಒಂದು ಸಾರಿ ಪ್ರಣಯವು ಹುಟ್ಟಿ ಬದ್ಧಮೂಲವಾದರೆ— ಆಮೇಲೆ ರೂಪವಿರಲಿ ಹೋಗಲಿ ಪ್ರಣಯವು ನಡೆದುಕೊಂಡು ಹೋಗು ವುದು (ಐಂತಿಮು. ೬೦). ೨. ಗಟ್ಟಿಯಾಗಿ ನೆಲಸಿದವನು; ಸ್ಥಿರವಾಗಿ ನಿಂತವನು: ಆ ಸುಖದಲ್ಲಿ ನಾವೆಲ್ಲರೂ ಇಹಸಂಸಾರದಲ್ಲಿ ಬದ್ಧಮೂಲ ರಾಗಿ, ಎಂದರೆ, ಬಲವಾದ ಬೇರನ್ನು ಬಿಟ್ಟುಕೊಂಡವರಾಗಿದ್ದೇವೆ (ಕಶಾಕಂ. ೦೨೩). [ಸಂ.]

**ಬದ್ಧರ** 'ಬದ್ದರ' ನೋ.

**ಬದ್ಧರಸ** (ನಾ). ೧. ಸ್ನೇಹಭಾವದಿಂದ ಕೂಡಿದವನು. ೨. ಪಾರಜ ವನ್ನು ಲೋಹದಲ್ಲಿ ಬೆರಸಿದವನು. ೧, ೨: ಬಿನ್ನವಂಗೆಯ್ಯಲೊಡಂ ಬದ್ಧರಸನುಂ ಸಿದ್ಧರಸವೇದನುಮಾದ ರಸವಾದಿಯಂತೆ ಜ್ವಳನಜಟ ರಾಗಿಸಿ (ಶಾಂತಿಪು. ೩-೩೬ ವ). [ಸಂ.]

**ಬದ್ಧರೂಪ** (ನಾ). [ಭಾಷಾಶಾ] ಬೇರೊಂದಕ್ಕೆ ಹೊಂದಿಕೊಂಡಿರುವಂಥ ಶಬ್ದರೂಪ : ಪ್ರತ್ಯಯಗಳು ಯಾವಾಗಲೂ ಪ್ರಕೃತಿಗಳೊಡನೆ ಕೂಡಿಕೊಂಡೇ ತೋರಿ ಬರುವುದರಿಂದ . . . ಪ್ರತ್ಯಯಗಳನ್ನು ಬದ್ಧರೂಪಗಳೆಂದೂ (ಬಾಂಡ್‌ಫಾರಂ) ಕರೆಯುವುದುಂಟು (ಕವಿಕಾ. 1, ೬೮೩). [ಸಂ.]

**ಬದ್ಧವಿಘಾತಿ** (ನಾ), ಕೆಡುಕಿಗೆ ಸಂಬಂಧಿಸಿದುದು : (ಖಂಡಿತವಾಗಿ) ಕೇಡನ್ನುಂಟು ಮಾಡುವುದು : ದೇವಿ ನೇಮಿಸಲಱಿಯೆನೆಂದೊಡಿದಾವ ಧರ್ಮವು ಶಿವಶಿವೀ ಹದ ಸಾವನವರಿಗೆ ತಹುದು ಬದ್ಧವಿಘಾತಿಯಿದು ಬಲುಹು (ಕುವ್ಯಾ,ವಿ. ೩-೯). [ಸಂ.]

**ಬದ್ಧವಿರೋಧ** (ನಾ). ತೀವ್ರವಾದ ದ್ವೇಷ ; ಕಡುಹಗೆ : ಮೊದಲೊಳ್ ಬದ್ಧವಿರೋಧದಿಂ ನೆಗೞ್ದ ಕುಂತೀಪುತ್ರರೊಳ್ ಭೀಮನಂಕದ ಗಾಂಧಾರಿಯ ಪುತ್ರರೊಳ್ಮೊದಲಿಗಂ ದುರ್ಯೋಧನಂ ಧರ್ಮಯುದ್ಧದೊಳಂತಾತನನಿಕ್ಕಿ ಕೊಂದಂ (ಗದಾಯು. ೦-೩೩). [ಸಂ.]

**ಬದ್ಧವೈರ** (ನಾ). ಅತಿಯಾದ ದ್ವೇಷ ; ಕಡುಹಗೆ ; ಬದ್ಧವಿರೋಧ : ಆ ಬದ್ಧವೈರದಿನಿನಿತು ಕಱುಪ್ಪುಂ ಕಾಯ್ಪುಂ ನಿನಗಾದುದು (ಶಾಂತಿಪು. ೯-೯೦ ವ) : ಆ ಮರ್ಕಟಂಗಳೆರಡರ್ಕಂ ಏಕದ್ರವ್ಯಾಭಿಲಾಷೆಯಿಂ ಬದ್ಧವೈರಂ ಬಳೆದು (ಹಂಶತಂ. ೨೬೬-೬) ; ಓರೊರ್ವರ ನೆಱಂಗಳುಮನನ್ಯೋನ್ಯಬದ್ಧವೈರಕಾರಣಂಗಳುಮಂ ಮೂದಲಿಸುತ್ತುಂ (ಸುಕುಮಾ. ೦೦-೯೨ ವ). [ಸಂ.]

**ಬದ್ಧಾಂಜಲಿ** (ನಾ). (ನಮಸ್ಕಾರ ಮಾಡಲು) ಜೋಡಿಸಿದ ಕೈ ; ಮುಗಿದ ಕೈ : ನೀಂ ಪೋಗಿ ಕಾದಂಬರೀದೇವಿಗೆ ಬದ್ಧಾಂಜಲಿಯಾಗಿ ಪ್ರಣಾಮಪುರಸ್ಸರಮಪ್ಪೆನ್ನ ಬಿನ್ನಪಮಂ ಪೇೞ್ವುದು (ಕಾದಂಬ. ೩೯೯) ; ಉದ್ಧರಿಸಿದನಶ್ರುಮದಿಂ ಸಿದ್ಧಶಿಲೋಚ್ಚಯಮನೊಂದೆ ಕರತಲದಿಂ ದಘೊರ್ಕೋದ್ಧರಣಸಹಿತಮಮರರ್ ಬದ್ಧಾಂಜಲಿಯಪ್ಪಿನಂ ಸುಮಿತ್ರಾಪುತ್ರಂ (ಪಂಪರಾಮಾ. ೦೦-೩೦) ; ಆ ನೀತಿಭೂಷಣಮಂತ್ರಿಪಂ . . . ರಾಜಶೇಖರರಾಜೇಂದ್ರಂಗೆ ಮಣಿಮಕುಟಮಂ ಮಣಿದು ಬದ್ಧಾಂಜಲಿಯಾಗಿ ನಿಂದಿರ್ದಂ (ರಾಜಶೇ. ೩-೦೩೨ ವ). [ಸಂ.]

**ಬದ್ಧಿಸು** (ಕ್ರಿ). ನಿಯಮಿಸು ; ನಿಶ್ಚಯಿಸು : ಉದ್ಯೋಗಿಸಿದರಾಗಮನದಲ್ಲಿ ಹವನವ ಶಿವನ್ನತೆ ದಾನದಕ್ಷಿಣೆಯ ಶುದ್ಧಿಯ ಮಾಡಿದು ಮನೆಯ ಸುಲಗ್ನದಿ ಬದ್ಧಿಸಿದರು ಮೌಹೂರ್ತಿಕರು (ಮೋಹತ. ೦೬-೯೨). [ಬದ್ಧ + — ಇಸು]

**ಬದ್ಧೇಂದ್ರಿಯ** (ನಾ). ಇಂದ್ರಿಯಗಳನ್ನು ನಿಗ್ರಹಿಸಿದವನು,-ಹತೋಟಿಯಲ್ಲಿಟ್ಟುಕೊಂಡಿರುವವನು ; ಜಿತೇಂದ್ರಿಯ : ಶುದ್ಧವಾಗಿರ್ದಧ್ವದೋಳ್ ಶಿವಂಪತಿಯಾಗಿ ಬದ್ಧೇಂದ್ರಿಯಂ ತಾನನಂತೇಶ್ವರಂ (ಶೀಕ್ಸಪು. ೬-೨-೯೨). [ಸಂ.]

**ಬದ್ನಾಮಿ**, ಬದನಾಮಿ (ನಾ). ಕೆಟ್ಟ ಹೆಸರು ; ಅಪಯಶಸ್ಸು ; ಅಪಖ್ಯಾತಿ : ಹಾಗೆ ಮಾಡಿದ್ರೆ ಆದರೆ ನಮ್ಮೂರಿಗೇ ಮುಂಡುಕೋಪಿ ಯಂಬ ಬದ್ನಾಮಿ ಬರುತ್ತೆ (ಕಂಪಿ. ೨೦೦). ಬದನಾಮಿ : ಅದ ಕಹಿದಾದಭವ ಮದನನಂ ಕೊಂಡು ತಾಂ ಮೊದಲೆ ಮಸವಂ ಕೊಲ್ಲದವಗೆ ತಂದ ಬದನಾಮಿ ಸಾಕು (ಕುಮೋಬಿ. ೦-೨೦) ; "ಕೋಟಲೆ" (ಮಹೋಬಿ. ೩೬೯). [←ಪಾರ. ಹಿಂ. ಮರಾ. ಬದನಾಮಿ]

**ಬದ್ಮಾಶ್**, ಬದಮಾಷ್, ಬದ್ಮಾಷ್ (ಗು). ೧. ಕೀಳಾದ; ಕೀಳುಮಟ್ಟದ. (ನಾ). ೨. ನೀಚ ; ಕೀಳುಮನುಷ್ಯ : ಬದ್‌ಮಾಶ್ ನನ್ನ ಕೈ ಹಿಡಿಯಲು ಪ್ರಯತ್ನಿಸುತ್ತಿದ್ದ (ಕಂಪ. ೦೦೦). **ಬದಮಾಷ್** : ೨. ಬ್ಲಾಟೋ ದುಂಡು ಕುಡುಕ, ಲಫಂಗ, ಬದಮಾಷ್ (ಕುಂಹಿ. ೦೨೦) : ಬಂಗಾರದಂಥ ಕಾಯಿಗಳನ್ನು ಹಾಳುಮಾಡಿದಿ ಬದಮಾಷ್ (ರಂಗಕೋ. ೯೦). **ಬದ್ಮಾಷ್** : ೧. ಅವಳು . . . ಯಾರೋ ಬದ್ಮಾಷ್ ಜನರ ಗುಂಪಿನವರೊಳಗಿನವಳಿರುವಂತೆ ತೋರುತ್ತದೆ (ಕ್ಯಕಲ್ಯ. ೩೦). ೨. ಬದ್ಮಾಷ್, ನಿನ್ನ ಬಾಳ್ವೆಸ್ಸು ಹೇಗಾಗುವದೋ ನೋಡುತ್ತೇನೆ (ಸ್ವ.ಶಿ. ೩೩೩) ; ಕೆಲಸ ಮಾಡಾಕ ಬಂದಿದ್ದಿಯೋ, ತುಡುಗು ಮಾಡಾಕ ಬಂದಿದ್ದಿಯೋ ಬದ್ಮಾಷ್ (ಜಾಘೋರಿ. ೦೨೦). [← ಅರ. ಪಾರ. ಹಿಂ. ಮರಾ. ಬದಮಾಶ್]

**ಬದ್ಮಾಷ್** 'ಬದ್ಮಾಶ್' ನೋ.

**ಬಧಿರ** (ನಾ). ಕಿವಿ ಕೇಳಿಸದವನು ; ಕಿವುಡ ; ಕೆಪ್ಪ : "ಬಧಿರನೇಡಂ ಕಿವುಡನೆನಿಸಿಕ್ಕುಂ" (ಹುಂಗರಾ. ೦೦೯-೩) ; ಕುಬ್ಜ ವಾಮನ ಬಧಿರ ಮೂಕ ಕಿರಾತೋನ್ಮತ್ತ ಜಡಜನಂಗಳುಮಂ . . . ಕೊಟ್ಟು (ಆದಿಪು. ೯-೩೯ ವ) ; ಕರುಣವಿಲ್ಲವನ ಕಾಪುರುಷನ ವಿಕಾರಿಯ ಬಧಿರನ ಪೆಂಡಿರು ಪರರ ಪೆಂಡಿರಲ್ತೆ (ಜಿಪವ. ೦೨-೯೯) ; ನಮೆವ ದೀನಾಂಧಬಧಿರರಂ ದಾನಧರ್ಮಂಗಳಿಂ ಪಾಲಿಸುತ್ತುಂ (ರಾಮಾಶ್ವ. ೧೩-೦೯). [ಸಂ.]

**ಬಧಿರತೆ** (ನಾ). ಕಿವಿ ಕೇಳಿಸದಿರುವಿಕೆ ; ಕಿವುಡು : ಘೋಷಘಂಟಾರವಂ ದಿಗ್ರದನೀಶ್ರೋತ್ರಕ್ಕೆ ಸಂಪಾದಿಸೆ ಬಧಿರತೆಯಂ . . . ಬಂದುದಂದನ್ಯಚಕ್ರಿಕ್ಕಿದು ಕಲ್ಪಾಂತಾಭ್ರವೆಂಬಂತುದಿತರಿಪು ಮನೋದೈನ್ಯಮುಗ್ರೇಭಸೈನ್ಯಂ (ಪುಷ್ಪಪು. ೩-೯) ; ಕಟಿತಟಕಾಂಚಿ ಪದನೂಪುರಾಳಿಸ್ವನಂ ದಿಗ್ಗಜಂಗಳ್ಗೆ ಬಧಿರತೆಯನೋಲ್ಕೈಸೆ ಬರುತಿರ್ದುದಾ ಭವಾನಿಯ ಸಖೀನಿವಹಂ (ಶಂಪು. ೩೬-೩೩). [ಸಂ. ಬಧಿರತಾ]

**ಬಧಿರತ್ವ** (ನಾ). = ಬಧಿರತೆ : ಪರರ ಪಟುತನವಾದದಲಿ ಮೂಗರವೊಲಿಹ ಪರವಚನದುತ್ಕಟವೊರೆಗೆ ಬಧಿರತ್ವವನು ಪರಗುಣದೋಷದರುಶನವು ದೊರಕಿದೊಡೆ ಜಾತ್ಯಂಧನೆನಿಸುವ ಪುರುಷನಾವವನವನು ಸಾಕ್ಷಾತ್ಪರಮಪುರುಷೋತ್ತಮನಲೇ (ಕುವ್ಯಾ,ಉ. ೯-೬೦). [ಸಂ.]

**ಬಧಿರಿತ** (ಗು). ಕೇಳಿಸದಂತೆ ಮಾಡಿದ ; ಕಿವುಡುಗೊಳಿಸಿದ : ಅನ್ನೆಗಂ ಗಂಭೀರತರತುರಗಹೇಷಾರವಬಧಿರಿತಸಕಲಭುವನವಿವರನುಂ . . . ಆಗಿ (ಆದಿಪು. ೩-೯೦ ವ) ; ಚಂಚಚ್ಚಾಪಮೌರ್ವೀರವಬಧಿರಿತದಿಕ್ಚಕ್ರಮಂ . . . ನಿರ್ಜನವನಮನಿದಂ ಬಂದು ನೀನೆಂತು ಪೊಕ್ಕೈ (ಹಂಶತಂ. ೩೬-೨). [ಸಂ.]

**ಬನ₁**, ಬನವು (ನಾ). ೧. ಕಾಡು: ಅಡವಿ; ಅರಣ್ಯ: "ಬನವೆಂದು ವನಂ" (ಶಬ್ದಮ. ೩೪-೦೬೦) ; ಮುನಿ ವೀತರಾಗನೆಂದುಂ ಬ[ಶಾಕಾಂ. ಜ]ನಮಂ ಸಾರ್ತಕ್ಕುಂ (ಶಬಿರಾ. ೦-೬೯) ; ಬನಕಂ ಪೊಲಕಂ ನಡೆಯಲ್ಕಿನಿಸಾಱದೆ ಮಱುಗುವಾರ್ಯರಂ ಕಂಡು ಮನೋಜನಿತದಯಂ ಕರಿ ಹರಿ ವಾಹನಂಗಳಂ ಪಡೆದು ವಿಮಲವಾಹನನಾದಂ (ಆದಿಪು. ೬-೩೬) ; ನವಿಲ್ ಕಾರ್ಗಾಲಮಂ ಹಂಸೆ ಸರೋವರಮಂ ಮಧದಾನೆ ಬನಮಂ . . . ನೆನೆವಂತು ಜಿನಪಾದಾಂಭೋಜಂಗಳಂ ನೆನೆಯುತ್ತುಂ (ಧರ್ಮಾಮೃ. ೩-೦೯೦). ೨. ತೋಟ ; ಉದ್ಯಾನ : ನಂದನ : "ಬನಮೆಂದೆನಲ್ಕುದ್ಯಾನಮಕ್ಕುಂ" (ಕಕಿ. ೬೨) ; ಬನದ ತಳಿರ್ ಕಳಿಕೆ ಮುಗುಳ್ ನನೆ ಬಿರಿಮುಗುಳಲರ ಗೊಂಚಲೆಂಬವು ವನಜಾನನೆಯರ ಪೂದುಡುಗೆಗೆ ಮಟ್ಟನಾದುವೇಂ ಪೆಂಪೊ ಭರತನಂತಃಪುರದಾ (ಆದಿಪು. ೧೦-೦೨೩) ; ಚಂಪಕ ಮಾಲತಿ ಮುಡಿವಾಳಗಳಿಂ ಬನವೆಸೆದುದು (ತ್ರಿಕುಬಿ. ೨-೨೦) ; ಮಲ್ಲಿಗೆಯ ವನಸಂಪಿಗೆಯ ಬನವೆಲ್ಲ . . . ವೃಥಾ ಸೆಲನಿಲ್ಲ ನಳನ ರಾಜ್ಯದಲಿ (ನಳಚ. ೯-೦೩). ೩. ಮರಗಳ ಗುಂಪು,– ಸಮೂಹ ; ತೋಪು : "ತೋಪು–ಬನಂ" (ಶಾಕ್ಯ. ೨೯) ; ಅಲರ್ದ ಪೊಂದಾವರೆಯ ಪಂತಿಯೊ ತಳಿತ ಮಾವಿನ ಬನವೊ (ಕುವ್ಯಾ,ಆ. ೬.೦೨). ಬನವು : ೧. ತೆರಳಿದರು ಶೃಂಗಾರನಿಧಿಗಳು . . . ಕಳಾವಿದೆಯರುಗಳಾ ಮುಸಿಯಿಪ್ಪ ಬನವಿಗೆ (ಕೌಶಿಕಾ. ೦-೯೩).

ಬನದ ಊಟ, ಬನದೂಟ = ಹುಣ್ಣಿಮೆದಿನಗಳಲ್ಲಿ ವಿಹಾರಾರ್ಥವಾಗಿ ತೋಟದಲ್ಲಿ ಮಾಡುವ ಊಟ ; ವನಭೋಜನ : ಚಿಕ್ಕ ದೊಡ್ಡ ಹೆಣ್ಣುಮಕ್ಕಳು ಬನದ ಊಟ ನಾಡುವರು (ಕನ್ನಕಾ. ೧೯೨) ಹೆಣ್ಣು

ಮಕ್ಕಳು ಬನದೂಟವನ್ನು ಸೌರಿಸುವರು (ಕಕ್ಕಣ. ೧೩೭). ಬನದಂಬಿಕೆ = ಪಾರ್ವತಿಯ ಒಂದು ಅವತಾರ : ಬನಶಂಕರಿ : ವನದೇವಿ : ಭಕ್ತಜನಪ್ರಸನ್ನೆ ವಿಸ್ತಾರವಿಚಿತ್ರಮೂರ್ತಿ ಬನದಂಬಿಕೆ ಮಾಜ್ಕೆಮಗಿಷ್ಟ ಸಿದ್ಧಿಯಂ (ಶಶಿಕಂ. ೪). ಬನದಬ್ಬೆ = ಬನದಂಬಿಕೆ : ನೆಲನೆಲ್ಲಂ ಕೊಂಡಾಡುವೆಕ್ಕಲವಿರಿಯುಂ ಬನದಬ್ಬೆಯುಂ ಮಹಾಲಕ್ಷ್ಮಿಯುಂ . . . ಪೊಲೆಯರ ದನಿಮುಪ್ಪೊಡಂ ಕೇಳದಂತು ಕಂಚುವಜೆವೆರಸು ಲೇಸುನುಡಿ ಲೇಸುನುಡಿಯೆಂಬ ಮಹಿಮೆಯಿಂದುಣ್ಬರ್ (ಧರ್ಮಾಮೃ. ೯-೧೦೦); ಬನದಬ್ಬೆ ಬಳರಿ ಬಾದು . . . ಮನೆದೈವಮೆಂಬಿವೆಲ್ಲಂ ಜನಭಕ್ತಂಗಡದ ಕಾಲ ಕಟ್ಟಿಂ ಕಷ್ಟಂ (ಕೂಾರ. ೪೬೯). ಬನದ ಶಂಕರಿ = ಬನದಂಬಿಕೆ : ದಿನಪಸುತನ ದೂತರು ಬಂದು ಎಳೆವಾಗ ಬನದ ಶಂಕರಿ ಎತ್ತ ಹೋದಳೆ ಮೂಳೆ (ಪುರಂದ. ದಾ. ೩-೦೨೬-೭). ಬನದ ಹುಣ್ಣಿವೆ = ಪುಷ್ಯಮಾಸದ ಹುಣ್ಣಿಮೆ : ಬನದ ಹುಣ್ಣಿವೆ ದಿನ ಬಾಗಿಲ ತೋರಣವನು ಬಿಟ್ಟ ಬಜಿದ ಪಲ್ಲೆಯುವ ಬೀಜಾ (ಪುರಂದ. ದಾ. ೩-೦೨೬-೭) : ಪೌಷ್ಯಮಾಸದ ೧೫ನೆಯ ತಿಥಿ ಬನದ ಹುಣ್ಣಿವೆ . . . ಬನಶಂಕರಿಯೇ ಈ ಹಬ್ಬದ ಅಧಿದೇವತೆ (ಹಾಹಬ್ಬ. ೧೭೯).

[<ಸಂ. ವನ]

ಬನ₂ (ನಾ). ಒಂದು ಬಗೆಯ ಬೆಲೆ ಬಾಳುವ ಬಟ್ಟೆ.—ಉತ್ತಮವಾದ ವಸ್ತ್ರ : ಮಣಿಕನಕಭಾಜನಂಗಳೊಳ್ ಪಟ್ಟಸೂತ್ರದ ನೇತ್ರದ ಬನದ ಮಹಾ ಚೀನದ ದೇವಾಂಗದ ಮಂಗಳಜವಳಿಗಳನಂತು ಬರ್ಪ ಕಾಂತ್ರಯರ್ ಚಿತ್ರ ಪಟಚಿಹ್ನಾವಳಂಬಿತ ವಿಜಯಕೇತನಂಗಳಾಗೆಯುಂ (ವರ್ಧಮಾ. ೬-೩ ವ).

[?]

ಬನಂಬಿಡಿ (ಕ್ರಿ). ವನವನ್ನು ಆಶ್ರಯಿಸು : ಒಳ್ಳೆರ ಕೈಪೊಡೆ ಕರ್ಬನ ಬಲ್ ತವಗ್ರುಡೊಳ್ ಮಿಳಿರ್ವ ತಮಾಳಪಲ್ಲವದ ಚಾಮರದುಪ್ಪರವಟ್ಟ ಮೊಪ್ಪೆ ಬಂದಳೆದಿಸುಪ್ಪೊಂ ಬನಂಬಿಡಿದು ಪಾಂಥರನಾ ಪರಿಪಂಥಿಮನ್ಮಥಂ (ಚಂದ್ರಪ್ರ. ೮-೧೦೦). [ಬನ₁ + ಪಿಡಿ₁]

ಬನಕಾಜಿ (ನಾ). (ಮರದ ಸಾಮಾನು. ಬಟ್ಟೆ ಮುಂತಾದಂವಕ್ಕೆ) ಬಣ್ಣ ಹಚ್ಚುವವನು : ಬಣ್ಣಗಾರ : ಪಲವುಂ ಮಂರಸನಿಟ್ಟು ಲೇಸಾಗಿ ಮಾಳ್ಪನ್ನಾಗಿ ಬನಕಾಜ ಚವುಂಡೆಯಂಗೆ ಸರ್ವನಮಸ್ಯವಾಗಿ ಬಿಟ್ಟ ಮಾಣಿಕೇಶ್ವರದ ಕೋಲ ಪಾತ್ರರು ಪನ್ನರಡು ಪಂಸಿಕಿಯ್ಯು ನಿವೇಶನ . . . ಬನಕಾಜ ನನ್ನುಯಂಗೆ ಮಾತ್ರಜು ಅಱುಗೆಯ್ಯು ನಿವೇಶನ (ಕಾಶಾ. XX. ೦೬೩-೩೭ ; 1190).

[೨ ಇದು 'ಬಣ್ಣಗಾಜ' ಎಂಬುದರ ಅಪಲಿಖಿತವಿರಬಹುದು]

ಬನಗತ್ತಲೆ 'ಬನಗಳ್ತಲೆ' ನೋ.

ಬನಗಳ್ತಲೆ. ಬನಗತ್ತಲೆ (ನಾ). ದಟ್ಟವಾದ ಕತ್ತಲೆ : ಕಗ್ಗತ್ತಲೆ : ಗಾಢಾಂಧಕಾರ : ಪಸುರಲೆಮಜುಗಿದ ಬನಗಳ್ತಲೆಯೊಳಗೆಸವ ವಸಂತಂ . . . ಆ ಕಂಗಣ್ಣಾಕ್ಕಿಯ ಸರಮಂಜ ಪೊಸ ಗಂಟಿಯನಲುಗಿಸೆ (ಜಗಃಕಾ. ೧-೩೦): ಬನಗಳ್ತಲೆಯುಂ ಕಮಲಾಪ್ತನ ಕದಿರುಂ ಕಾದಿ ಮಡಿವುತಳಿಯುಂ ಚಾಂಪೇಯ ನಿಕಾಯಮಮಾದುಪಲ್ಲದೊಡನುಸುಂ ತದ್ವಯಕೆ ಪಗೆತನಂ ಸಮನಿಪುದೇ (ರಾಜಶೇ. ೩-೩೪). ಬನಗತ್ತಲೆ : ನಿಬಿಡನೀರವಕಾನನಾಂತರಂ ಸತುವಗಲು ಮಾರ್ತಾಂಡನುರವಣಿಯನಡಗಿಸುತೆ ತಂಪು ಬನಗತ್ತಲೆಯು ಭೀಷ್ಮಸಮ್ಮೋ ಹನವ ಮೆರೆದತ್ತು ಚಿತ್ರಗತವಾದಂತೆವೋಲ್ ನಿಶ್ಚಲಂ (ಜೈಮಿನಿ. ೩-೩೭).

[ಬನ₁ + ಕಳ್ತಲೆ (<ಕಟ್ತಲೆ)]

ಬನಗಾಹು (ನಾ). ತೋಟದ ಕಾವಲು, -ರಕ್ಷಣೆ.

ಬನಗಾಹಿನವರು = ತೋಟವನ್ನು ಕಾಯುವವರು : ತೋಟದ ಕಾವಲುಗಾರರು : ವನಿತ ಸತ್ಕೆಯು ಮೋಹದಾ ನಂದನವ ಪೊಗದಿರು ಪೆಂದು ಬನಗಾಹಿನವರಾಡಲು (ಸಾಳ್ವಭಾ. ೩೦-೩೦).

[ಬನ₁ + ಕಾಹು₁ (< ಕಾವು)]

ಬನಗಾಳಿ (ನಾ). ಕಾಡಿನಲ್ಲಿ ಬೀಸುವ ಗಾಳಿ : ಓ! ಓ! ಬನಗಾಳಿ ಇದೇನೀ ತೆಱದೂಟಿಗಂ! (ರಾಜಹಂಸ. ೯೪). [ಬನ₁ + ಗಾಳಿ₁]

ಬನಗುತ್ತಿಗೆ (ನಾ). ತೋಟದ ಗುತ್ತಿಗೆದಾರನಿಂದ ಬರುವ ಹಣ.— ವರಮಾನ : ಆ ಪೂಜಾರಿ ದಾವಣ್ಣ ಚಿಕ್ಕಜಂನ್ನಕಲ್ಲಿಗಳಿಗೆ ಕೊಟ್ಟ ಶಿಲಾಶಾಸನದ ಕ್ರಮವೆಂತೆಂದಡೆ ಮಾಣಲಿಗೆ ನಾಡೊಳಗಣ . . . ತೋಟ ಮನೆ ಕಡಿಗುತ್ತಿಗೆ ಅಜಂವಣವನೂ ಬನಗುತ್ತಿಗೆ . . . ಆಗುವಮಾಡಿಕೊಂಬದು (ಮೈಶಾ. ೦೯೯೨. ೩೭-೩೯ : 1380). [ಬನ₁+ಗುತ್ತಿಗೆ (<ಗುತ್ತಗೆ)]

ಬನದುರ್ಗ (ನಾ). (ಶತ್ರುಗಳು ಪ್ರವೇಶಿಸಲು ಸಾಧ್ಯವಾಗದಂತೆ) ದಟ್ಟವಾದ ಕಾಡಿನ ನಡುವೆ ಕಟ್ಟಿದ ಕೋಟೆ; ವನದುರ್ಗ : ಗುಡಿಯ ಗುಂಟಿಗಳಿಗೆ ಬನದುರ್ಗ ಮೇಲವರೆಡೆಗೆಯ ಗುಂಡಿಗೆ ದುರ್ಗ ಕುಡಿವ ನೀರಿಗೆ ಜಲದುರ್ಗ ಪಾಳಾದುದಾ ಪಡಗೆ ಪಗೆಗಳೆದಿರುಂಟೆ (ವರ್ಧಶ. ೬-೩೪). 'ಜಲದುರ್ಗ' ಪರಾ. [ಬನ₁ + ದುರ್ಗ]

ಬನಪಶ್ಯ (ನಾ). ಔಷಧಿಯಾಗಿ ಉಪಯೋಗಿಸುವ ಒಂದು ಬಗೆಯ ವನಸ್ಪತಿ : ೩೨೨ ಬಾದಾಮಹಲವ, ೩೨೩ ಬನಪಶ್ಯ (ಮುಂಡಾವ್ಯಾ.೦೬೬).

[← ಪಾರ. ಬನಫ್‌ಶಹ್ : ಹಿಂ. ಬನಫ್‌ಶಾ, ಬನಫಶಾ]

ಬನಪು (ನಾ). ಒಂದು ಬಗೆಯ ದೊಡ್ಡ ಜಾತಿಯ ತೇಗದ ಮರ: (೪).

[←ತುಳು. ಬನಂಪು, ಬಣಂಪು, ಬಣುಪು, ಬಣ್ಪು]

ಬನವಂದಿ (ನಾ). ಕಾಡುಹಂದಿ : ಇಭಂ ಬನವಂ [ಶಾಶಾಂ.ಪಂ]ದಿ ತರಕ್ಷು ಖಡ್ಗಿ . . . ಮಾರವಾವುಗಳೆಂಬಿವಾಗಳುಂ ಕರಮೊಸದಿರ್ಪರ್ ಮೆಜಿದುದಾ ವಿಪಿನಂ (ಶಶಿಕಂ. ೩-೩೪). [ಬನ₁ + ಪಂದಿ]

ಬನವಕ್ಕಿ (ನಾ). ಕಾಡಿನಲ್ಲಿರುವ ಪಕ್ಷಿ : ಕಾಡುಹಕ್ಕಿ : ಎಚ್ಚಱಿಸಿ ಪೋಯ್ತುನಿತಜಿಳು ಕೊಳರ್ವಕ್ಕಿ ಬನವಕ್ಕಿಗಳು ಸರಗೆಯ್ಯೆ (ಹಾಳ್ಳಶಾ. ೦೬-೩೯). [ಬನ₁ + ಪಕ್ಕಿ]

ಬನವಟ್ಟೆ (ನಾ). ಕಾಡುದಾರಿ : ಅರಣ್ಯಮಾರ್ಗ : ನಾಡೊಳಗಣ ಚೋರರ ಪರಿಯಾಲಾ ಬೀಡಿನ ಬನವಟ್ಟೆಯು ಪೊಯ್ಯುಂ (ಅಣ್ಣಯ್ಯ. ೨-೨೭); ಅರಣ್ಯ ಗೋಚರರೊರೆಯೆ ಪಣ್ಣಲುಂ ಪೂಗಳ್ಗೆ ತಾಂ ದಿನದಿನಂ ನಡೆದು ಸಮದ ಬನವಟ್ಟೆಯಂ (ಶ್ರೀರಾಮಾ. ೦೬೯-೯೨). [ಬನ₁ + ಬಟ್ಟೆ₁]

ಬನವತಿ (ನಾ). ಒಂದು ಕ್ಷುದ್ರದೇವತೆಯ ಹೆಸರು : ಬನವತಿ ಮಾರಪ್ಪನ ಸಂಬಿದ ಹಾಗೆ (ಗಾದೆ). [?]

ಬನವಸೆ 'ಬನವಾಸಿ' ನೋ.

ಬನವಳಿಗ (ನಾ). ತೋಟದ ಕಾವಲುಗಾರ ; ವನಪಾಲಕ : ಮದನ ಮಂತ್ರಿ ಬನವಂ ಪುತ್ತಿದಂ . . . ತರಹಂಸಲಂದು ದರಹಸಿತಾಸ್ಯ ಗಾಳಿಧಾಳಿಯ ಬಂದವೇದು ಬನವಳಿಗನರಸಗೆ ದೂಜಿದಂ (ಚಂದ್ರಕು. ೬-೪).

[ಬನ₁ + - ವಳಿಗ₂]

ಬನವಾಶಿ 'ಬನವಾಸಿ' ನೋ.

ಬನವಾಸಿ. ಬನವಸೆ. ಬನವಾಶಿ. ಬನವಾಸೆ (ನಾ). ೧. ಒಂದು ದೇಶದ ಹೆಸರು : ನಲ್ಲರೊಳ್ಳೊಗಂ ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರ ನೋಟಿಪ್ಪೊಡಾವ ಬೆಟ್ಟುಗಳೊಳವಾವ ನಂದನವನಂಗಳೊಳಂ ಬನವಾಸಿದೇಶದೊಳ್ (ಪಂಭಾ. ೪-೨೮); ಶ್ರೀವಿಷ್ಣುಪದಸೇಕರಂ ಬನವಾಸಿವಿಷಯಾಧಿಃಶ್ವರಂ ಮಹೇಶ್ವರಭಕ್ತಂ (ಎಇ. III (B). ಹಿಸ್ಟ. ೦೩೩.೦೩; 1079); ಬನವಾಸಿಗೆ ಹೋದರೂ ಬರಗಾಲ ತಪ್ಪಲಿಲ್ಲ (ಗಾದೆ). ೨. ಒಂದು ನಾಡು ಅಥವಾ ಪಟ್ಟಣದ ಹೆಸರು. ೩. ಒಂದು ಬಗೆಯ ನಾಣ್ಯ: ಬ್ರಿಟಿಶ ಸರಕಾರದ ಅಮಲಿನ ಆರಂಭದಲ್ಲಿ . . . ೧೮ ಪ್ರಕಾರದ ವರಹಗಳು ಅಥವಾ ಹೊನ್ನುಗಳು ನಡಿಯುತ್ತಿದ್ದವು . . . ೧೦. ಸವಲಗುಂದೀ, ೧೧. ಬನವಾಸೀ, ೧೨. ಶಮಶೇರಿ (ಅಹಿಗ. ೨೮೦).

ಬನವಸೆ : ೨. ಬನವಸೆ ಹಾನುಂಗಲುಗೊಂಡ ಭುಜಬಳವೀರಗಂಗ

ಪ್ರತಾಪವೆೊಯ್ಸಳಬಲ್ಲಾಳದೇವರು . . . ರಾಜ್ಯಂಗೆಯ್ಯುತ್ತಿರೆ (ಎಶಿ. II (II). ೩೬೩-೨೭ ; 1173) ; ಸಕಲಸೌರಭದಲಿ ಸೊಗಸಿಹುದಲ್ಲಿ ಬನವಸೆಯೆಂಬ ಪಟ್ಟಣವು (ಪ್ರಕುಶೀ. ೩ ೨). **ಬನವಾಶಿ. ಬನವಾಸೆ :** ೨. ರಾಜಧಾನಿ ಬನವಾಸೆಪುರದ ಜಯಂತೀ ಮಧುಕೇಶ್ವರದ ಮೊಗಸಾಲೆ ಯುಮಂ . . . ಮಾಡಿಸಿ (ಕೌಶಿ. XI-i, ೦೦೪-೨೮; 1068 ?); ಬಂಕ ಪುರಂ ಬನವಾಸೆ ಕೊಯತುರ್ತುಂಗಪರಾಕ್ರಮಂ ವಿಜಯವರ್ಧನನೀ ಕಲಿ (ವಿ)ವಿಷ್ಣುವರ್ಧನಂ (ಎಶಿ. XVI, ಹಶೃಶಾ. ೬೨-೯; 1242).

**ಬನವಸೆ ಪನ್ನಿರ್ಚ್ಛಾಸಿರ, ಬನವಾಶಿ ಪನ್ನಿರ್ಚ್ಛಾಸಿರ, ಬನವಾಸಿ ಪನ್ನಿಚ್ಛಾಸಿರ** = ಹನ್ನೆರಡುಸಾವಿರ ಗ್ರಾಮಗಳಿಂದ ಕೂಡಿದ ಬನವಸೆ ಯೆಂಬ ನಾಡು : ಬನವಸೆ ಪನ್ನಿರ್ಚ್ಛಾಸಿರಮುಂ ಬೆಳ್ವೊಲ ಮೂನೂಱುಂ . . . ಬಾಗಿನಾಡೆಪ್ಪತ್ತುಮಂ ಬೂತುಗಂಗೆ ಕನ್ನರದೇವಂ ಪೊಚ್ಚುಗೊಟ್ಟಂ (ಎಶಿ. III, ಮಂಡ್ಯ. ೪೦-೨೦; ೯೬೦); ಶ್ರೀಕನ್ನರದೇವಂ ಪೃಥ್ವೀರಾಜ್ಯಂಗೆಯ್ಯೆ ಬಪ್ಪವ್ವಂ ಬನವಾಶಿ ಪನ್ನಿರ್ಚ್ಛಾಸಿರದ ಪಟ್ಟಮನಾಳೆ (ಕ್ಕುಅಂ. ೧೯೨೯. ೬೬-೯; 964); ಚಾ[ವು]ಣ್ಡರಾಯರಸರ್ ಬನವಾಸಿ ಪನ್ನಿಚ್ಛಾಸಿರಮನಾಳುತ್ತ ವಿರಲ್ (೩೮. IV, ೧೬೯-೧೦; 1068). [< ಸಂ. ವನವಾಸೀ]

**ಬನವಾಸೆ** 'ಬನವಾಸಿ' ನೋ.

**ಬನವು** 'ಬನ₁' ನೋ.

**ಬನವೆಂಕಿ** 'ಬನವೆಂಕೆ' ನೋ.

**ಬನವೆಂಕೆ, ಬನವೆಂಕಿ** (ನಾ). ಕಾಳ್ಗಿಚ್ಚು; ಕಾಡಿನ ಬೆಂಕಿ; ದಾವಾನಲ: "ಬನವೆಂಕೆಯೆಂದು ದಾವಾಗ್ನಿ" (ಕಶಶಾ. ೩೦-೬೨). **ಬನವೆಂಕಿ :** "ಬನ ವೆಂಕಿಯೆ ದಾವಾನಲಂ" (ಕಶೀಕೊ. ೩೬). [ಬನ₁ + ಬೆಂಕಿ]

**ಬನವೆಣ್ಣು** (ನಾ). ಕಾಡಿನಲ್ಲಿ ವಾಸಿಸುವವಳು ; ಕಾಡಿನ ಹೆಣ್ಣು ; ಅನಾಗರಿಕಸ್ತ್ರೀ : ನಿಷ್ಕರುಣೆ ಎನ್ನದಿರ್, ಬನವೆಣ್ (ಶಶ್ಯಾಂಗ. ೨೪-೬೬೨). [ಬನ₁ + ಪೆಣ್ಣು (< ಪೆಣ್)]

**ಬನಶಂಕರಿ** (ನಾ). ಕಾಡಿನ ಅಧಿದೇವತೆ; ಪಾರ್ವತಿಯ ಹೆಸರುಗಳಲ್ಲಿ ಒಂದು : ಬನಶಂಕರಿಯೇ ಈ ಹಬ್ಬದ ಅಧಿದೇವತೆ. ಈ ದೇವತೆ ಪಾರ್ವತೀದೇವಿಯ ಒಂಬತ್ತು ಅವತಾರಗಳಲ್ಲಿ ಆರನೆಯವಳು . . . ಈಕೆ ವನಶಂಕರಿ, ವನದೇವತೆ ಎಂದು ಸ್ಪಷ್ಟವಾಗುವಂತಿದೆ (ಕಾಹಶ್ಯ. ೦೬೯); ಕಾಡಿನ ಕವಿಗಳೆ ಓ ಕಲೆಗಾರರೆ . . . ಬನಶಂಕರಿಯನು ಕೀರ್ತಿಸಿರಿ ! (ಕಲುಣ್ಯ. ೬೪-೯). [ಬನ₁ + ಶಂಕರಿ]

**ಬನಶಿ** 'ಬನಸಿ' ನೋ.

**ಬನಶಿಗೋದಿ** 'ಬನಸಿಗೋದಿ' ನೋ.

**ಬನಸಂಪಗೆ** (ನಾ). ಕಾಡುಸಂಪಗೆ ಮರ ಮತ್ತು ಅದರ ಹೂವು : ಪಚ್ಚೆಯ ಬೆಟ್ಟುಗಳೊಳ್ ಮೆಯ್ವೆಟ್ಟಿದ ವೈಡೂರ್ಯಮಣಿಕದಂಬವೊ ತಾನೆನೆ ಬಿಚ್ಚಳಿಸಿದ ಬನಸಂಪಗೆಯಚ್ಚೆಳಿಯದ ಮುಲರ್ಗಳಿಂದ ಸೊಗಯಿಕುಮನಿಶಂ (ಹಾಲಾಸ್ಯ. ೦-೯-೪೪). [ಬನ₁ + ಸಂಪಗೆ]

**ಬನಸಿ, ಬನಶಿ, ಬನ್ಸಿ** (ನಾ). ದಪ್ಪವಾಗಿಯೂ ನಸುಹಳದಿಬಣ್ಣ ದಿಂದ ಕೂಡಿಯೂ ಇರುವ ಒಂದು ಬಗೆಯ ಗೋದಿ : 'ಬನಸಿ ಗೋದಿ' ಪರಾ. **ಬನಶಿ :** 'ಬನಶಿಗೋಧಿ' ಪರಾ. **ಬನ್ಸಿ :** 'ಬನ್ಸಿರವೆ' ಪರಾ. [← ಮರಾ. ಬನಸೀ, ಬನಶೀ, ಬನ್ಸೀ]

**ಬನಸಿಗೋದಿ, ಬನಶಿಗೋದಿ, ಬನ್ಸಿಗೋಧಿ** (ನಾ). = ಬನಸಿ : ತೊಗರಿ, ಕಡ್ಲಿ, ಬನಸೀಗೋದಿ, ಸಾಸವಿ (ಮುಂಬಶ್ಯಾ. ೨೮). **ಬನಶಿಗೋದಿ :** ಬನಶೀಗೋದಿಯು ಕಾಳು ದೊಡ್ಡದಿದ್ದು ಮತ್ತು ಬಣ್ಣದಿಂದ ದಪ್ಪ ಅರುಷಣವಂತ ಇರಬೇಕು (ಮುಂಬಶ್ಯಾ. ೩೧). **ಬನ್ಸಿಗೋಧಿ :** ಬನ್ಸಿ ಗೋಧಿಯಿಂದ ತಯಾರಿಸಿದ ರವೆಯು ತುಂಬ ಚೆನ್ನಾಗಿರುತ್ತದೆ (ಅದೇ). [ಬನಸಿ + ಗೋದಿ₁ (< ಗೋದುಮೆ)]

**ಬನಸಿರಿ** (ನಾ). ೧. ಕಾಡಿನ ಸಿರಿ ; ಅರಣ್ಯಸಂಪತ್ತು : ಕಾಡಿನಲ್ಲಿ ಮರ ಕಡಿಯಬೇಕಾದರೆ, ಬನಸಿರಿಯನ್ನು ಉಪಯೋಗ ಮಾಡಿಕೊಳ್ಳಬೇಕಾದರೆ ಸರ್ಕಾರದ ಸನ್ನದು ಅವಶ್ಯಕ (ಹಕುಹೂ. ೨೪೦). ೨. ವನದೇವತೆ ; ವನಲಕ್ಷ್ಮಿ : ಬನಸಿರಿ ಸುರವರರಲೋಇದ ಬನಸಿರಿಗುಱಿ ತೋಱಲೆಂದು ನಿಜವಿಭವಮನಂದನುನಯದಿಂ ಕಟ್ಟಿದ ಕಾಂಚನತೋರಣಮೆನಿಸಿ ಕರ್ಣಿಕಾರಂ ಮೆಱೆಗುಂ (ಚಾಣಶೀ. ೯-೬೬). [ಬನ₁+ಸಿರಿ]

**ಬನಹಿಪ್ಪಲಿ** (ನಾ). ಹಿಪ್ಪಲಿಯಲ್ಲಿ ಒಂದು ಬಗೆ ; ಕಾಡುಹಿಪ್ಪಲಿ : ತಗರ ಕೋಡು, ಬನಹಿಪ್ಪಲಿ, ತಲೆನವಿರು, ಕಾಲುಗುರು, ಬಜೆಯುಮಂ ಧೂಪವಿಕ್ಕುವುದು (ಚಾಂಶ. ೦೨೬-೨೦). [ಬನ₁+ಹಿಪ್ಪಲಿ]

**ಬನಾತ** 'ಬನಾತು' ನೋ.

**ಬನಾತು, ಬನಾತ** (ನಾ). ಬಣ್ಣಬಣ್ಣದ ಉಣ್ಣೆಯ ಬಟ್ಟೆ ; ಸಕಲಾತಿ : ದಮಾಸಿನ ವೃಷಭಧ್ವಜಗಳೂ × × × ಬನಾತಿನ ತೆರೆಗಳೂ (ಎಶಿ. XIV, ಪಜಿಶ. ೨೯೨-೦೪೨ ಫುಟ; 1847) ; ಒಂದು ಬಾರಿ ರೋಮನ್ ಚಕ್ರವರ್ತಿಯು ಬಹಳ ಹಸನಾದ ಬನಾತಿನ ಅಂಗಿಯನ್ನು . . . ಕಳುಹಿಸಿದನು (ಕೃಗಂಪ. ೦೨೩) ; ಅಂಗಳದ ಮಧ್ಯದಲ್ಲಿ ಬನಾತಿನ ನಡೆಮುಡಿಯು ಹಾಸಲ್ಪಟ್ಟಿದ್ದಿತು (ಶ್ರೀಕಾಹು. ೯೯). **ಬನಾತ :** ವಾರಿನ ಮೇಲೆ ಕಿಮ್ಮತ್ತು ಆಗತಕ್ಕ ಕಪಡಾ ಜೀನಸಗಳು. ೧. ಬನಾತ, ೨. ಕಾಶ್ಮೀರಿ (ಮುಂಬಶ್ಯಾ. ೦೪೦). [← ಹಿಂ. ಮರಾ. ಬನಾತ್]

**ಬನಾವಟ್** 'ಬನಾವಟ' ನೋ.

**ಬನಾವಟ** 'ಬನಾವಟ' ನೋ.

**ಬನಾವಟ, ಬನಾವಟ್, ಬನಾವಟ** (ಗಂ). ೧. ಕೃತ್ರಿಮವಾದ ; ನಿಜ ವಲ್ಲದ : ಬನಾವಟ ಪತ್ರಗಳನ್ನು ಕಳುಹಿಸಿ ನಿಮಗೆ ಮೋಸಗೊಳಿಸಿರುವ ಆರೋಪದ ಮೇಲೆ ನನ್ನನ್ನು ಈಗಲಾದರೂ 'ಮಾವನ ಮನೆ'ಗೆ ಕಳುಹಿಸ ಬೇಕೆಂಬ ನಿಮ್ಮ ಬಯಕೆಯು ಈಡೇರುವಂತಿಲ್ಲ (ಕಂಶಾ. ೯೩). (ನಾ). ೨. ಕೃತ್ರಿಮವಾದುದು ; ನಕಲಿಯಾದುದು : ಇಲ್ಲಿ ಬನಾವಟಿಯ ಮಾಲವನ್ನು ತಯಾರ ಮಾಡುತ್ತಾರೆ. ಅದಕ್ಕೆ ಇಲ್ಲಿ ಸುಮಾರ ಮಾಲೆಂದೆನ್ನುತ್ತಾರೆ (ಮುಂಬಶ್ಯಾ. ೬೩). **ಬನಾವಟ್ :** ೧. ಹಾಗೆ ಕಲಾಸೃಷ್ಟಿಯಾಗುವಂತಿದ್ದರೆ ಅದು ಕೃತಕವಸ್ತು. ಅಂಥವು ಅನುಕರಣೆ ಗಳು, ಬನಾವಟ್ ಮ್ಹಾಲುಗಳು ! (ಕರಿಶ. ೦೦೬). **ಬನಾವಟ :** ೧. ಈ ಬನಾವಟ ಮುತ್ತಿನ ಹಾರ ಅಲ್ಲಿರಿಸಿ ಅದನ್ನು ತಂದುಕೊಡಿರಿ (ಗರ್ಗು. ೯೩). ೨. ಅಚ್ಚಖರೆ, ಖರೆ ಮತ್ತು ಸುಳ್ಳ ಇವುಗಳ ಮಿಶ್ರಣ ದಿಂದ ತಯಾರಾಗಿದ್ದದ್ದು ಹಾಂಗು ಕೃತ್ರಿಮ ಅಂದರೆ ಬನಾವಟ ಈ ಪ್ರಕಾರ ಮೂರು ತರದು ಇರುತ್ತವೆ (ಮುಂಬಶ್ಯಾ. ೩೨ ಪ್ರಸ್ತಾವನೆ). [←ಹಿಂ. ಬನಾವಟ್, ಬನಾವಟೀ; ಮರಾ. ಬನಾವಟ್, ಬನೋಟ್]

**ಬನಾವಣೆ** (ನಾ). ೧. ಕೃತಕವಾಗಿ ತಯಾರುಮಾಡುವುದು ; ಅನಧಿಕೃತವಾಗಿ ಸಿದ್ಧಪಡಿಸುವುದು : ನಾಣ್ಯವನ್ನು ಬನಾವಣೆ ಮಾಡೋಣ ೭ ಸಂವತ್ಸರಗಳು (ಗ್ರಾಪಶಾ. ೦೬೩). ೨. ಪರಸ್ಪರ ಹೊಂದಾಣಿಕೆ—ಸಾಮರಸ್ಯ : ದೇಹಕ್ಕೂ ಮನಸ್ಸಿಗೂ ಬನಾವಣೆ ಯಿಲ್ಲ ಎನ್ನಿಸಿತು (ಶಿಪಿಂಶ. II, ೦೬೯). ೩. ಕಲ್ಪನೆ; ಊಹೆ : ಅವರ ಕಕ್ಷಿಗಾರರ ಬಚಾವು ಈ ಕೇಸು ಕೇವಲ ಪೋಲೀಸಿನವರ ಬನಾವಣೆ ಯೆಂದು (ಕಂಶ. ೬೮೨). ೪. ಕೃತಕವಾದುದು ; ಕೃತ್ರಿಮವಾದುದು ; ಖೋಟಾ : ಬನಾವಣೆಯಾದದ್ದು ಎಂದು ತಿಳಿದು ಮತ್ತೊಬ್ಬನಿಗೆ ಕೊಟ್ಟರೂ ಇಟ್ಟುಕೊಂಡರೂ ೫ ಸಂವತ್ಸರಗಳ ಪರ್ಯಂತ (ಗ್ರಾಪಶಾ. ೦೬೭). 'ಬನಾವಟ' ಪರಾ. [←ಮರಾ. ಬನಾವಣೀ]

**ಬನಿ₁** (ನಾ). ೧. ಸಾರ ; ಸತ್ತ್ವ ; ತಿರುಳು : ಇವುಗಳಲ್ಲಿ ಜನಪದ ಸಾಹಿತ್ಯದ ಬನಿ ಅಷ್ಟಾಗಿ ಕಂಡುಬರುವುದಿಲ್ಲ (ಕಜಶಾ. ೨೮ ಪ್ರಸ್ತಾವನೆ).

೨. (ಹಾಲು, ಮೊಸರು, ಕಲಸಿದ ಹಿಟ್ಟು ಮುಂತಾದುವುಗಳಲ್ಲಿರುವ) ಜಿಗುಟು ; ಅಂಟು : ಸೊಗಡು : ಅವರು ಪರೀಕ್ಷಿಸಿದ ಯಾವ ಹಸುವೂ ಅವರಿಗೆ ತೃಪ್ತಿಯನ್ನುಂಟುಮಾಡಲಿಲ್ಲ. . . ಐದನೆಯದರ ಹಾಲು ನೀರು, ಅದರಲ್ಲಿ ಬನಿಯಿಲ್ಲ (ಶಿಶು. ೦೫); ಹಸುವಿನ ಬೆಣ್ಣೆಯಲ್ಲಿ ನಶ್ಯವನ್ನು ಮಿದಿಯುತ್ತಿದ್ದರು. ಹಾಗೆ ಮಿದ್ದರೆ ಅದಕ್ಕೆ 'ಬನಿ' ಬರುತ್ತದೆ (ಪಕ್ಷೋ. ೮೬. ೦೬೨). ೩. ಕಳೆ ; ತೇಜಸ್ಸು ; ಹೆಣ್ಣುಡುಗೆಯುಟ್ಟು ಹರೆಯದ ಹೆಣ್ಣು ಚಾಮರ ಹೆಣ್ಣುತನದ ಆ ಬನಿಯನ್ನು, ಚೆಲುವನ್ನು ತಳೆಯುತ್ತಿದ್ದಳು (ಸಪಿ. ೫೩).

ಬನಿ₂, ಬನ್ನಿ₂ (ನಾ). ೧. ಒಂದು ಬಗೆಯ : ತೆರಿಗೆ ಶ್ರೀಮತುತ್ತು ರಗವೆಡೆಂಗಂ ಕಾಳೆಗಕ ನಡವುತ್ತು ರೋಣದ ಮಹಾಜನಕೆ ಬನಿಯಂ ಬಿಟ್ಟಾರ್ (ಎಕ. XIII. ೦೫೬-೭; ಸ್ವ. 876); ಸೋಮೇಶ್ವರಪಂಡಿತ ದೇವರ್ಗ್ಗೆ ಧಾರಾಪೂರ್ವಕಂ ಮಾಡಿ ಬನಿಯಂ ಬಿಟ್ಟನು (ಶಾಶ. XX. ೦೫೬-೭ ; 1174). ಬನ್ನಿ₂: ೧. 'ಹುಲ್ಲುಬನ್ನಿ' ಪರಾ. ೨. (ಹೊಲ, ಗದ್ದೆಗಳಲ್ಲಿ) ಮಾಡಿದ ಕೆಲಸಕ್ಕೆ ಪ್ರತಿಫಲವಾಗಿ ಕೂಲಿಯಾಳಿಗೆ ಕೊಡುವ ಬೆಳೆದ ಧಾನ್ಯದ ಒಂದು ಭಾಗ : (*).

[ ದೇ. ತ. ತುಳು. ಬಣಿ./ಹಿಂ. ಬನಿ, ಬನ್ನೀ ]

ಬನಿಗೊಳ್ಳು (ಕ್ರಿ). ಸತ್ತ್ವಯುತವಾಗು ; ಸಾರವತ್ತಾಗು : ಜೀವಂತವಾದ, ದಿನದಿನವೂ ಬೆಳೆಯುತ್ತಿರುವ, ಬನಿಗೊಳ್ಳುತ್ತಿರುವ,—ಬನಿಗೊಳ್ಳಬೇಕಾಗಿರುವ—ಈಗಿನ ಭಾಷೆಯ ಗತಿಗೆ ತಡೆಯಾಗಿ ತಂದೊಡ್ಡದ ಕವಿತೆಯಲ್ಲಿ ಕೇವಲ ಸಂಪ್ರದಾಯಬದ್ಧವಾದ ಶಬ್ದರೂಪಕ್ಕೂ, ಸಂಧಿನಿಯಮಗಳಿಗೂ, ಕಡೆಗೆ ನಿರ್ದುಷ್ಟತೆಗೂ ಮೀರಿದ ಗುಣವೊಂದಿದೆ (ಎಸಿಗೀ. V ಮುನ್ನುಡಿ). [ಬನಿ₁ + ಕೊಳ್ಳು₁ (< ಕೊಳ್₁)]

ಬನಿಯ, ಬನಿಯಾ (ನಾ). ವ್ಯಾಪಾರ ಮಾಡುವವನು ; ವರ್ತಕ ; ವೈಶ್ಯ : ವ್ಯಾಪಾರಸ್ಥರು . . . ಬಣಜಿಗ, ಬನಿಯ (ಕುಸುಮಾ. ೦೬೨) : ಬನಿಯಾ: ಚಂದ್ರಗುಪ್ತ ದಾಸೀಪುತ್ರ; ಗಾಂಧೀಜಿ ಬನಿಯಾ (ಹುತ್ತಕ್ರ. ೦೬೬).

[←ಹಿಂ. ಮರಾ. ಗುಜ. ಬನಿಯಾ. ಪ್ರಾ. ವಣಿಅ. / ಸಂ. ವಣಿಜ]

ಬನಿಯನ್ನು ' ಬನೀನು' ನೋ.

ಬನಿಯಾ 'ಬನಿಯ ' ನೋ.

ಬನೀನು, ಬನಿಯನ್ನು (ನಾ). ಅರ್ಧತೋಳಿನ ಒಳಅಂಗಿ ; ℗ ಇಂಡಿಯಾದೇಶಕ್ಕೆ ಬಂದ ಆಂಗ್ಲರು ಗುಜರಾತಿನಲ್ಲಿ ವರ್ತಕರು ಉಪಯೋಗಿಸುತ್ತಿದ್ದ ಅರ್ಧತೋಳಿನ ಅಂಗಿಯನ್ನು ಮೆಚ್ಚಿಕೊಂಡರು. ಆದುದರಿಂದ ಗುಜರಾತಿನ 'ವಾನಿಯ=ಬನಿಯ' ಎಂಬುದು ಇಂಗ್ಲಿಷಿನಲ್ಲಿ ಗುಣವಾಚಕವಾಗಿ ಬನಿಯನ್ ಎಂದಾಯಿತು. ಆ ಬಳಿಕ ಇದು ನಾಮಪದದ ಅರ್ಥವನ್ನು ಪಡೆಯಿತು. ಸಂಸ್ಕೃತದ 'ವಣಿಜ' ಎಂಬುದು ಇದರ ಮೂಲವೆಂಬುದಂ ಸ್ವಾರಸ್ಯಕರವಾಗಿದೆ : ರಾಯರು ಒಳ್ಳೆಯ ಒಂದು ಬಿಳೀಪಂಚೆಯನ್ನುಟ್ಟು, ಉದ್ದವಾದ ಬನೀನನ್ನು ತೊಟ್ಟು . . . ನಿಂತಿದ್ದರು (ರಾಘುಕ. ೬೦); ಈ ಹುಡುಗನ ಮೈ ಮೇಲಿದ್ದ ಬಟ್ಟೆಯೆಂದರೆ ತುಂಡು ಬನೀನೊಂದು (ಕ್ಷಣಕಾ.೦೯೦). ಬನಿಯನ್ನು: ಪಾಯಿಜಾಮದ ಮೇಲೆ ಬನಿಯನ್ನು ಹಾಕಿದ್ದಾನೆ (ಪಕಶಾ I. ೩೬೬); ಪೊಲಸು ವಸ್ತ್ರವನ್ನು ಬದಲಿಸಿ ಚೊಕ್ಕವಾದ ಚಡ್ಡಿ, ಬನಿಯನ್ನು ತೊಟ್ಟುಕೊಂಡ (ದೇವಶಂ. ೬೩).

[← ಇಂ. Banian. ಹಿಂ. ಬನಿಯಾಇನ್ : ಮರಾ. ಬನಿಯನ್, ಬನ್ಯಾನ್ : ಗುಜ. ಬನಿಯಾ=ವೈಶ್ಯ./ಸಂ. ವಣಿಜ=ವೈಶ್ಯ]

ಬನೂರ್ 'ಬನ್ನೂರ್' ನೋ.

ಬನ್ನ (ನಾ). ೧. ಅವಮಾನ; ಅಪಮಾನ; ಭಂಗ : "ಬನ್ನಮೆಂದು ಭಂಗಂ" (ಶಶಪಾ. ೬೬-೯೬೨) ; ಪೆಜಿರ್ಾ[ನಾ]ಮಂ ಧರಾಚಕ್ರಕ್ಕೆ ಬೀಱುಂ ಕೆಳೆಯಪ್ಪಮಂ ನೆಱೆ ಯಾರೆಣೆಯೆಂಬನ್ನಂ ಕಱೆಭಂಗೆ ಬನ್ನಮಂ (ಕಂಪ. ೨-೦೩೭); ನಿನ್ನ ಪಡೆಗೆಯ್ದ[ಟ್ಟಂ] ಶರದಿಂ ಬಿಡಿಸಿದನಲ್ಲನೆ ಸರಿತ್ಸುತಂ ಬನ್ನಮಿನ್ನಮೆಂಬುವು ಮೊಳವೇ (ಹಂಪಕಾ. ೬-೩೩); ಅನುಜನ ನೇತ್ರರವೀಂಟದವನ ನೇತ್ರರ ಜೀಮಹಿತ ಮೀಂಟದ ದುರ್ಯೋಧನನೆಂಬ ಪೆಸರ್ಗೆ ಮುಯ್ಯಾಂಪೆನೆ ದುಶ್ಶಾಸನನ ಬನ್ನಮಂ ನೀಗುವೆನೇ (ಗದಾಯು. ೩-೮). ೨. ಸೋಲು; ಪರಾಜಯ; ಪರಾಭವ : ತನ್ನೊಳಗಣ ಪನ್ನಗನಂ ಮುನ್ನೀಂ ಪಿಡಿದೊಗೆಯೆ ಕಾಯ ಲಾಬಿದೆ ಪಿರಿದುಂ ಬನ್ನದ ಕರ್ಪೆಸೆದುದು ತೋಱಿಗಿನ್ನುಂ ಹರಗಳ ತಮಾಳನೀಳಚ್ಛವಿಯಿಂ (ಹಂಪಕಾ. ೩-೫೯); ಬನ್ನದಿಂದಂ ಮಹಾನಾಥ ನಜಾಬೆಗೆ ಮುಱಿದು ಬೆನ್ನ ಹಿಂದಡಗಿದ ಸಮಸ್ತದಿಕ್ಪಾಲರಂ . . . ಕಂಡೊಡನೆ ಪನ್ನಿರಳ್ಳಯನದಿಂ ಕಿಡಿ ಸುರಿಯೆ ಕಲ್ಪಾಂತ ಶರನಂತೆ ಗುಹನೆಸೆದನು (ಕಂಪು.೩೯-೦೬): ಏಸು ಸಲ ತಪವಗ್ಗಿದೇಸು ಬನ್ನವನಾಂತು ಕೌಶಿಕಂ ಬ್ರಹ್ಮರ್ಷಿಪದಕರ್ಹನಾದನ್ ? (ಹಂಪುಕೌ. ೬೯೯). ೩. ನಾಶ; ಅಳಿವು : ಉನ್ನತಬಲಗೂಡಿ ಬಂದಾಗ ತುರುಕರ ಬನ್ನಕ್ಕೆ ತಂದುದೇನೆಂಬೆ (ಕಂಪಟ. ೦೯-೫೯). ೪. ಕಷ್ಟ; ಬಾಧೆ ; ಸಂಕಟ ; ತೊಂದರೆ: ಪರಿಭವದೊಂದು ತುತ್ತತುದಿ ಕೃಷ್ಣೆಯ ಬನ್ನದೊಳಾಗೆ ಜೂದಿನೊಳ್ ಪೊರಸಟ್ ವಂತೆ ತಮ್ಮರಸುಗೆಟ್ಟು ಕಟಲ್ದೆರ್ದೆಗೆಟ್ಟರಣ್ಯದೊಳ್ ತಿರಿತರುತಿರ್ದ ಕಣ್ಣಡಿಗರಿಂ ಮಗುಳ್ಪುಂ . . . ರಾಜ್ಯದೊಳೇಂ ನೆರೆಯಲ್ಕೆ ತೀರ್ಗುಮೇ (ಹಂಪಕಾ. ೬-೩೩); ವರ್ಣಧರ್ಮದ ರಕ್ಷೆಗವನಿಯ ಬನ್ನವನು ಬಿಡಿಸಲಿಕೆ ತಾನುತ್ಪನ್ನನಾದನು ಯದುಕುಲದಲಿಲೆ ಭೂಪ (ಕಿಶಾಗ. ೦೦-೩೦-೦೬) ; ಎನಗೇತಕೆಯೋ ಮದುವೆಯ ಬನ್ನ ! (ಗಹೀಕ. ೩-೦೦೯). ೫. ದುಃಖ; ಅಳಲು : ನಿನ್ನ ಮೊದಲು ನಿನ್ನಾಣೆ ನಿನ್ನನು ಕಾಣದನ್ನಪಾನಂಗಳಿಳಿಯದೆ ಬನ್ನದೊಳಾಳಿದೆ ನಾನು (ಕಂಪಟ. ೨-೦೦೯). ೬. ಕೊರತೆ ; ಚ್ಯುತಿ ; ಕುಂದು : ಮುಂ ಪೂಣ್ದಂ ನನ್ನಿಗೆ ಬನ್ನಂ ಬರಲೀಯದಾರ್ತಸಗದೀ ಮಿಷ್ಯಾತಿಯುಂ ಕೀರ್ತಿಯುಂ ಮುಗಿಲಂ ಮುಟ್ಟಿದುದಲ್ತೆ (ಹಂಪಕಾ. ೦-೩೦). ೭. ಅಡ್ಡಿ; ತಡೆ; ವಿಘ್ನ : ಕನ್ಯೆದಿಲಡ್ಡಮೋಱಿಯೊಳಿರುವುದಱಿಂದ ಬನ್ನವೊಂಟಿ ಪ್ರಭಾಕರಗೆ (ಚಕಚ. ೨೦-೦೦೭); ಬಱಿದೆನ್ನ ತಮಗೆ ಬನ್ನ ಮೆಸಗದೆ ಎಹಗೆ ಬಂದ್ಯೆ ಅಹಗೆ ಪಿಂದಿರುಗ್ಯೆ (ಅಬ್ಬುಕ. ೬-೦೦) ; ಗಣಪತಿಯೆಂದರೆ ಬನ್ನಗಳನ್ನು ಪಂಹರಿಸುವ ದೇವನು (ಧೂಪಹಂ. ೬೩). ೮. ಮುರಿಯುವಿಕೆ; ಸೀಳುವಿಕೆ : (*).

ಬನ್ನದ ಕೂಟ್ =ಕಷ್ಟದಿಂದ ಪಡೆದ ಆಹಾರ; ಭಂಗದ ಕೂಳು : ಪನ್ನಿರಡುವರಿಸಮಲಸದೆ ಬನ್ನದ ಕೂಟುಂಡು ಬರ್ದಿಟಲ್ಪಿಂಗಲೊಡಂ ತನ್ನಿಂ ಕಾಳಿಕೆ ಪಿಂಗಿದ ಪೊನ್ನಿನ ತೆಱನಂತೆ ಕಾಂತೆ ಕರಮೆಸೆದಿರ್ದಳ್ (ಗದಾಯು. ೬-೬೦): ನೀಂ ನಿನ್ನ ನನ್ನಿಯನೆ ಕಾದು ನಿನ್ನನುಜರ್ ಬನ್ನದ ಕೂಟುಸುಂಡರ್ (ಹಂಪಕಾ. ೨೦೬-೦೩). [<ಸಂ. ಭಗ್ನ./℗ 'ಬನ್ನ' ಶಬ್ದಕ್ಕೆ ಇರುವ ಅರ್ಥಗಳು ಸಂಸ್ಕೃತದ 'ಭಂಗ' ಶಬ್ದಕ್ಕೂ ಇದ್ದು ಈ ಶಬ್ದದ ಉಪಯೋಗದಲ್ಲಿ ಸಂಸ್ಕೃತದ 'ಭಂಗ', 'ಭಗ್ನ' ಎಂದೆರಡೂ ಶಬ್ದಗಳ ಪ್ರಭಾವವು ಇರಬಹುದೆಂದು ಕಾಣುತ್ತದೆ ]

ಬನ್ನಂಗ (ನಾ). ಕಷ್ಟ; ಬವಣೆ ; ಸಂಕಟ : ಮುಂಗಾರುಮಳೆ ಆರಂಭವಾಯಿತು . . . ಕಾರಿಗೆ ಮುಂಚೆ ಹೊರಟ ಪಡೆ ದಾರಿಯಲ್ಲಿ ನೀಂಗಾಗಿ ಬನ್ನಂಗ ಪಡಬಾರದು ಎಂದು ಅವನ ಇಷ್ಟ (ಪಪಿ. ೦೯೩). [< ಬನ್ನ./℗ 'ಬನ್ನ' ಮತ್ತು 'ಬಂಗ' ಎಂಬ ಎರಡು ಪದಗಳ ನಡುವಣ ಉಚ್ಚಾರಣಾಸಂಬಂಧದಿಂದ ಈ ಶಬ್ದದ ಉಪಯೋಗವಾಗಿರಬಹುದು]

ಬನ್ನಂಗಾಯಿ (ನಾ). (ಕರಾ) ಅರ್ಧ ಬಲಿತ ತೆಂಗಿನಕಾಯಿ : ಒಂದು ಅರ್ಧ ಮುಡಿ ಅವಲಕ್ಕಿ, ಇಪ್ಪತ್ತು ಬನ್ನಂಗಾಯಿ, ನೂರು ಬಾಳೇಹಣ್ಣು ಇವಿಷ್ಟು ತಯಾರಾಗಲಿ ! (ಕೊಹುಗು. ೦೦).

[←ತುಳು. ಬನ್ನಂಗಾಯಿ, ಬಣಂಗಾಯಿ, ಬಣ್ಣಂಗಾಯಿ]

**ಬನ್ನಂಬಡಿಸು**, ಬನ್ನಪಡಿಸಂ, ಬನ್ನಬಡಿಸು, ಬನ್ನವಡಿಸಂ (ಕ್ರಿ). ೧. ಅವಮಾನಗೊಳಿಸು; ತೇಜೋವಧೆ ಮಾಡು : ಭಂಗಪಡಿಸು : ಅಂತು ಮುನ್ನಂ ತನ್ನಂ ಬನ್ನಂಬಡಿಸಿದುನ್ನತತೇಜನಂ ವಿಶ್ವನಂದಿಯುವ ರಾಜನಂ . . . ಮೂದಲಿಸಿದಂ (ವರ್ಧ. ೩-೧೪ ವ) : ನಿನ್ನ ಪದಭೃತ್ಯ ಪುರುದೌರ್ದನ್ನಂ ಗೆಲ್ದಂ ಕಿರಾತನೀತನನೀಗಳ್ ಬನ್ನಂಬಡ[ಪಾಠಾಂ. ಬಿಡಿ]ಸುತ ಸೋಲಿಪ ಪನ್ನತಿಕೆಯನಿತ್ತು ಪೊರೆ ಕೃಪಾಳುಗಳರಸಾ (ಜಗ. ೧-೧೦೧). ೨. ಹಿಂಸೆಪಡಿಸು ; ಬಾಧೆಗೊಳಗುಮಾಡು ; ಸಂಕಟವನ್ನುಂಟು ಮಾಡು : ಪಿಶಾಚಂ ತೊಡರ್ದುದು ಭೂತಂ ಬನ್ನಂಬಡಿಸಿದುದೆನೆ ಸಿರಿಯೊಳರಸುಗಳ್ ಮೆಯ್ಯರಿಯರ್ (ಕಾದಂಪೂ. ೩೬೩). **ಬನ್ನಪಡಿಸು** : ೨. ದೇವರು ಅನೇಕಾನೇಕವಿಧದಲ್ಲಿ ಭಕ್ತರನ್ನು ಬನ್ನಪಡಿಸಿ ದೃಢತೆಯನ್ನು ಪರೀಕ್ಷಿಸಿ ಒಲಿಯುವಂತೆ ನನಗೀಗ ನೀವೊಲಿದಿರಿ (ಬಸವ. ೦೦೩). **ಬನ್ನಬಡಿಸು**: ೧. ಮಗನೆ ಹೋಗದಿರು ಮರಿದು ವಿಶ್ವಾಮಿತ್ರನಾಶ್ರಮಕ್ಕೆ . . . ಮುನಿ ಬನ್ನಬಡಿಸಿಯೆ ಕಾಡದವನರಿದಿರು (ಹರಿಶ್ಚ. ೩-೬೩) ; ಅಂಜನಾಸುತನು ಮುದದಿ ಪನ್ನಗಾರಿಧ್ವಜನ ಪವನಶಿಖರುತಿಗಳ ಬನ್ನಬಡಿಸಿದ ಬಿರುದನುಪ್ಪಡಿಸಿ ಬಾಲರಂ ಚೆನ್ನಾಗಿ ಶಿಕ್ಷಿಸುವ ಮಾಗಧರ ಕೇರಿಯಂ ಕಂಡು ವಿಸ್ಮಿತನಾದನು (ಜೈಮಿನಿ. ೩-೩೨) ; ನನ್ನ ಜನ ನಿಮ್ಮ ಬನ್ನಬಡಿಸಿದೊಡೆ, ಆಗ ಇಂತೆ ಮೊರೆದು ಹೇಳುವನು (ತಿಮ್ಮ. ೨೧-೧). ೨. ನಿರಪರಾಧಿಯನು ಬನ್ನಬಡಿಸುವುದುಚಿತವೇ (ಅಕ್ಷ. ೩೯-೫೦) ; ಮಾಯೆ ಬನ್ನಬಡಿಸಿದಳಿಂತು ಜಗವನು (ಶಿವಾಗ. ೨-೧-೧೦) ; ಕಣ್ಣು ಕಾಣದೆ ಅರಣ್ಯದಲಿ ಬಿದ್ದಂತಿಹೆ ಬನ್ನಬಡಿಸುವುದು ನಿನ್ನ ಧರ್ಮವಲ್ಲ (ಪುರಂ. ೩-೩). **ಬನ್ನವಡಿಸು** : ೨. ಎನ್ನ ರಾಘವ ಸತ್ಯನಾದೊಡೆ ಬನ್ನವಡಿಸಿದ ನಾಯ ಹರಣವ ತಿನ್ನು ತಿನ್ನೆನುತಾರಿ ಬಾಣವ ಬಿಟ್ಟ ಸೌಮಿತ್ರಿ (ತೊರವೆ. ೩೩-೭೩).

[ಬನ್ನಂಬಡು + -ಇಸು]

**ಬನ್ನಂಬಡು**, ಬನ್ನಪಡು, ಬನ್ನಬಡು, ಬನ್ನವಡು (ಕ್ರಿ). ೧. ಅಗೌರವಕ್ಕೆ ಈಡಾಗು ; ಅವಮಾನಕ್ಕೊಳಗಾಗು ; ಭಂಗಹೊಂದು : ನಿನ್ನ ಗುರು ವರ್ಧಮಾನಂ ಬನ್ನಂಬಡುವಂತೆ ಮಾಡುವೆಂ ಕಿಡೆ ಪೋಪಂ (ವರ್ಧ. ೧೩-೧೪). ೨. ಕಷ್ಟಕ್ಕೆ ಗುರಿಯಾಗು ; ತೊಂದರೆಗೆ ಈಡಾಗು ; ಬಾಧೆಗೊಳಗಾಗು : ಮುನ್ನಿನ ಭವದೊಳ್ ಗೊರವನಾಗಿ ಕಾಂಚೀಪುರದೊಳ್ ತಿರಿದು ಪಲವುಕಾಲಂ ಬನ್ನಂಬಟ್ಟು ಪೊನ್ನಂ ಪಡೆದು (ಶಂಕರ. ೩೧೦-೨೦) ; ಎನ್ನೊಡೆಯನ ಬಲ್ಪಂ ನೀವಿನ್ನುಂ ಕಂಡರಿದುದಿಲ್ಲ ಬರಿ ಯಂಬಣ್ಣಂ ಬನ್ನಂಬಟ್ಟುದನರಿಯನು (ಕಬ್ಬಿಗ. ೦೩೩). ೩. ಸೋಲು ; ಪರಾಭವ ಹೊಂದು; ಹಿಮ್ಮೆಟ್ಟು : ಬನ್ನಂಬಟ್ಟೆನ್ನ ಮುನ್ನಿನ ಬನ್ನಮುಂ ಪಿರಿದದೆ ನೆವಂಗೊಂಡಾನಿಂದಿಲ್ಲಿ ನೀಗದೆ ಮಾಣ್ಬನೇ (ಶಬರ. ೦೨-೧೪); ತನ್ನೊಳ್ ಸೆಣಸೆ ಪೆರ್ಚಿ ಮಹಿಶೂರಾಣ್ಮಂ ಪೊಣರ್ವನ್ನೆಗಂ ಬನ್ನಂಬಟ್ಟವು ಬಣ್ಣಗೆಟ್ಟವು (ಕಂಠ. ೨-೩೬). ೪. ದುಃಖಪಡು ; ಖೇದಗೊಳ್ಳು ; ಸಂಕಟಪಡು : ಕ್ಲೇಶನ್, ಕ್ಲೇಶಕಃ, ಈ ೨ ಬನ್ನಂಬಡುವಂ (ನಾಚಿ. ೨೪೪). **ಬನ್ನಪಡು** : ೨. ಅಸ್ತಿ ಉಳಿಯುವಂತಾದರೆ ನಿನ್ನ ಮಗಳೂ ಮೊಮ್ಮಕ್ಕಳೂ ಹೊಟ್ಟೆಗಿಲ್ಲದೆ ಮುಂದೆ ಬನ್ನಪಡುವುದನ್ನು ತಡೆದಂತಾಗುವುದು (ಕ್ಯಾಸು. ೬೯). **ಬನ್ನಬಡು** : ೨. ಎನ್ನದಾನೆಂಬೆರಡರಿಂದವೆ ಬನ್ನಬಡುವನು ಜೀವನು (ಶಿವಾದ್ವೈ. ೭-೨೩) ; ಮುನ್ನ ಭೂಸುರ ಶಾಪದಿಂದ ಪಲರೊಡೆದು ಬನ್ನಬಟ್ಟವರುಂಟು (ಕೃಷ್ಣರಾ. ೫-೯೦) ; ಅಧಿಕಾರಿಗಳ ಏಟ್ಟಿಳಿ ಕಾನೂನುಗಳಿಂದ ಪ್ರಜೆಗಳು ಬನ್ನಬಡುತಿದ್ದರು (ಪಾಹುತ. ೯೯). ೪. ಚೆನ್ನ ಕರುವಿಗೆ ಬನ್ನ ಬಡುವೆನು, ಕಣ್ಣ ನೀರನು ಮಿಡಿವೆನು (ಕಾವ್ಯ. ೦೮-೭). ೫. ನಾಶವಾಗು ; ಅಳಿದು ಹೋಗು : ತನ್ನ ಸಹಾಯದಿಂದ ಸಂಭಾಧೀಶ್ವರನೆನ್ನ ಮೊಮ್ಮನನು ಬಂಧಿಸಿದ ಮುನ್ನ ಹಿರಣ್ಯಕ ಮೊದಲಾದ ದೈತ್ಯರು ಬನ್ನಬಟ್ಟುದ ಬಲ್ಲರಿಲ್ಲ (ಸೋಮಶ. ೩೭-೦೩).

**ಬನ್ನವಡು** : ೨. ನಿನ್ನ ಕೊಂದವ ನಾನು ಮಾತಿನ ಭಿನ್ನಭಾವ ವನರಿಯದಕಟಾ ಬನ್ನವಟ್ಟೈ ತಂದೆ (ತೊರವೆ. ೩೬-೫೦) ; ಕನಕಲತೆ ಯೆಂಬವಳ್ . . . ವಿರಹದಿಂದೆನಸುಂ ಬನ್ನವಡುವ ಭೂಮಿಪಾಶ್ವರ ತನುಜೆಯ ನೋವಂ ಪಿಂಗಿಸಿ (ಜಗನ್ನಾ. ೯-೯೩). ೫. ಬನ್ನವಟ್ಟಿಹ ಕಪಿಕುಲಂಗಳ ಮುನ್ನ ಸತ್ರಾಣಿಸುವೆ . . . ಎನುತ ಸಂತೈಸಿದನು ನೊಂದವರ (ತೊರವೆ. ೨೩-೨೬). [ಬನ್ನ + ಪಡು]

**ಬನ್ನಂಬಡೆ** (ಕ್ರಿ). ೧. ಅವಮಾನ ಹೊಂದು ; ಭಂಗಕ್ಕೊಳಗಾಗು : ಈಶ್ವರಂ . . . ಅನಿಬ್ಬ ಪುಲ್ಲನೆತ್ತಿದನೆ ದನುಜರ ಗೆಲ್ದವಂ ಎನುತೊಂದು ಪುಲ್ಲನಿಡೆ . . . ಉಳಿದ ಸುರರುಂ ಆ ಪ್ರಕಾರದಿನಾತ್ಮಶಕ್ತಿಗಳಿನೆತ್ತಿ ಮೇಣ್ ಕ್ಷಿಪ್ರದಿಂ ಬನ್ನಂಬಡೆದರ್ (ಶದ್ಭಗಾ. ೦೦-೨೩೦) ; ಎನ್ನಂ ಸೆರೆಯಂ ಬಿಡಿಸಿದೆ ಬನ್ನಂಬಡೆದುದೇನೆಂದು . . . ಶ್ರುತಿಕನ್ನಿಕೆ ಮಾಧವನ ಹರ್ಷದಿಂ ನುತಿಯಿಸಿದಳ್ (ದಶಾವ. ೨-೨೪). ೨. ಸೋಲು ; ಪರಾಭವಗೊಳ್ಳು : ಪೆಣನಾಡಲೆಳೆಯುಂ ನಿನ್ನ ಕೈಯೊಳ್ ಬನ್ನಂಬಡೆದು ಕಿನ್ನನಾಗೆ (ಶಬ್ದಗಾ. ೯೯).

[ಬನ್ನ + ಪಡೆ]

**ಬನ್ನಂಬೆಱು** (ಕ್ರಿ). ೧. = ಬನ್ನಂಬಡೆ ೧: ಹರಿಯಿಂದಂ ಮಂದರಂ ಮಂದರಮಥನದಿನಂಭೋಧಿಯಂಭೋಧಿಯಿಂದಂ ಧರೆ ಬನ್ನಂಬೆತ್ತುವು (ಎಕ. VII, ಶಿಕಾ. ೧೦೯-೨೨; 1089); ಮುನ್ನಮಿಱ್ ಬನ್ನಯೆತ್ತನಂ ಪುಷ್ಪಲ ಪುರದ ಹಯಗ್ರೀವನಂ ಕರ್ವದಿಂದಂ ಮಱೆದಾಂ ಮೆಯ್ಯುಟ್ಟು ನಿದಿರ್ ಸುಖದಿನಟಲೆ ಬಂದು . . . ಎನ್ನೀವನಂ ಕೊಂದು ಪೋದಂ (ಶಾಂತಿ. ೬-೩). ೨. ದುಃಖವನ್ನು ಹೊಂದು ; ಕಳವಳಪಡು : ಬನ್ನಂ ಬೆತ್ತನ್ನಯ ಬನ್ನವಮುಂ ಮನ್ನಿಸು (ಉದ್ಭಟ. ೩-೨೯). [ಬನ್ನ + ಪೆಱು]

**ಬನ್ನಂಬೊಂದು** (ಕ್ರಿ). = ಬನ್ನಂಬಡೆ ೧: ನಿಲ್ಲಲೆಗೇ ಎನುತ್ತೆ ಗುರು ಶಿಷ್ಯಂ ಕೋಪದಿಂ ಗರ್ಜಿಸಲ್ ಬನ್ನಂಬೊಂದುತೆ (ಚಾಳುಕ್ಯ. ೬೩-೧೪೦).

[ ಬನ್ನ + ಪೊಂದು, (< ಪೊರ್ದು) ]

**ಬನ್ನಗೆಡು** (ಕ್ರಿ). ಕಷ್ಟಪಡು; ತೊಂದರೆಗೀಡಾಗು : ತನ್ನ ಗಾತ್ರದೊಳು ಮೇಣನ್ಯರಂಗದೊಳಕಟ ಬನ್ನಗೆಟ್ಟು ಚಕ್ರದಿಂದೆ ಸುಡಲು ನನ್ನಿ ನರಕಕ್ಕೆ ವನೆನ್ನನಾದೊಡವೊಂದ ಧನ್ಯವಪ್ಪಾ ಸೂತಸಂಹಿತೆಯವ (ಸಾವಂತ. ೨-೧೫೨).

[ಬನ್ನ + ಕೆಡು]

**ಬನ್ನಣೆ** 'ಬಣ್ಣನೆ' ನೋ.

**ಬನ್ನಣೆಗಾರ್ತಿ** 'ಬಣ್ಣನೆಗಾರ್ತಿ' ನೋ.

**ಬನ್ನಣೆಗಾಱ** 'ಬಣ್ಣನೆಗಾರ' ನೋ.

**ಬನ್ನಣೆಗೆಯ್**, ಬನ್ನಣೆಗೈ (ಕ್ರಿ). ೧. ವರ್ಣಿಸು: ವಿವರಿಸು : ಬನ್ನಣೆಗೆಯ್ವುದ ಬಜಿದೆ ಬಣ್ಣಗೆವಡಿಸದಿರು (ಗಿರಿಜಾಕ. ೨೩-೨). **ಬನ್ನಣೆಗೈ** : ೨. ಅಲಂಕರಿಸು : ಶೃಂಗಾರಮಾಡು : ಪನ್ನೀರೆರೆದಂಗಿಯನಿಕ್ಕಿ ಕಸ್ತೂರಿಯಿಟ್ಟು ರನ್ನದ ತೊಡವನು ತೊಡಿಸಿ ಬನ್ನಣೆಗೈದಳು ಪರನಂದಿನಿಯು (ಶಕಾಕ. ೨೩೦). [ಬನ್ನಣೆ (<ಬಣ್ಣನೆ) + ಕೆಯ್]

**ಬನ್ನಣೆಗೈ** 'ಬನ್ನಣೆಗೆಯ್' ನೋ.

**ಬನ್ನಣೆನುಡಿ** 'ಬಣ್ಣನೆನುಡಿ' ನೋ.

**ಬನ್ನಣೆಮಾತು** 'ಬಣ್ಣನೆಮಾತು' ನೋ.

**ಬನ್ನಪಡಿಸು** 'ಬನ್ನಂಬಡಿಸು' ನೋ.

**ಬನ್ನಪಡು** 'ಬನ್ನಂಬಡು' ನೋ.

**ಬನ್ನಬಡಿಸು** 'ಬನ್ನಂಬಡಿಸು' ನೋ.

**ಬನ್ನಬಡು** 'ಬನ್ನಂಬಡು' ನೋ.

**ಬನ್ನವಂತ** (ನಾ). (ರೋಗದ) ಬಾಧೆಯನ್ನು ಹೊಂದಿರುವವನು ; ರೋಗಿ ; ವ್ಯಾಧಿಗ್ರಸ್ತ : "ರೋಜನ್, ರೋಜಕಃ, ರುಷ್ಟಃ, ರುಷ್ಟವಾನ್, ರೋಗೀ, ಈ ೫ ಬನ್ನವಂತಂ" (ನಾಚಿ. ೨೨೨). [ಬನ್ನ + -ವಂತ]

ಬನ್ನವಡಿಸು 'ಬನ್ನಂಬಡಿಸು' ನೋ.

ಬನ್ನವಡು 'ಬನ್ನಂಬಡು' ನೋ.

**ಬನ್ನಿ₁** (ನಾ). ಸಣ್ಣ ಸಣ್ಣ ಎಲೆಗಳು ಹಾಗೂ ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಮರ; ಶಮೀವೃಕ್ಷ ; ಹಿಂದೂಗಳು ಈ ಮರವನ್ನು ಪೂಜ್ಯವೆಂದು ಭಾವಿಸಿದ್ದಾರೆ. ನವರಾತ್ರಿಯಲ್ಲಿ ವಿಜಯದಶಮಿಯಂದು ಬನ್ನಿಯ ಮರವನ್ನು ಪೂಜಿಸಿ, ಅದರ ಎಲೆಗಳನ್ನು ಪರಸ್ಪರ ವಿನಿಮಯ ಮಾಡಿಕೊಂಡು ಶುಭಾಶಯಗಳನ್ನು ನುಡಿಯುತ್ತಾರೆ : "ಶಮಿಯೆನೆ ಬನ್ನಿಯಕ್ಕು" (ಮಂಗರಾ. ೩೮-೦೩) : ಮುಳ್ಳಿಲ್ಲದ ಬನ್ನಿಯ ಮರನುಳ್ಳೆಡೆಯೊಳಂ . . . ಒಂದು ಪುರುಷದೊಳ್ ನೀರಕ್ಕುಂ (ಲೋಕೋಪ. ೩-೦೦); ಅನಿಬರು . . . ಅಳಿಕಳೆದುವನೊಂದು ಹೆಣಾಕಾರದಲಿ ಬಿಗಿದೊಂದು ಬನ್ನಿಯ ಮರನ ತುದಿಯಲಿ ಕಟ್ಟಲೇಱಿದರು (ಕುಮಾ.ಭಾ. ೦-೦೨); ಆಲ ಮುಳ್ಳುತ್ತುಗ ಕೊಡಸಿಗೆ ಬನ್ನಿಗಳ್ಪೇಲಕಡರಿ ಮುಸುಕಿಹುವು (ಕಂಕಾ. ೦೫-೩೬).

**ಬನ್ನಿಮಂಟಪ**=ಶಮೀವೃಕ್ಷದ ಸುತ್ತಲೂ ಕಟ್ಟಿಹಾಕಿ ಕಟ್ಟಿರುವ ಮಂಟಪ : ಹಿಂದೆ ವಿಜಯದಶಮಿಯಂದು ಮೈಸೂರು ಮಹಾರಾಜರು ಮೆರವಣಿಗೆಯಲ್ಲಿ ಬನ್ನಿಮಂಟಪಕ್ಕೆ ಹೋಗಿ ಪೂಜೆ ಸಲ್ಲಿಸುತ್ತಿದ್ದರು (ಲೋ). **ಬನ್ನಿಮಹಾಕಾಳಿ**=ಬನ್ನಿಯ ಮರದ ಬಳಿಯ ದುರ್ಗೆ : ವಂಶಾವಳಿಯ ಕರಣಿಕನು ಬನ್ನಿಮಹಾಕಾಳಿಯ ಆಶೀರ್ವಾದದ ಪಟ್ಟಿಯ ನ್ನೋದಿ ಒಪ್ಪಿಸಲು . . . ವಸ್ತ್ರಾಭರಣಗಳಂ ಕೊಡಿಸಿ (ಮುಹಾವಂ. I. ೩೯). **ಬನ್ನಿಯ ಕಟ್ಟೆ**=ಬನ್ನಿಮಂಟಪ : ಬನ್ನಿಯ ಕಟ್ಟೆಯ ಸಾರ್ದನಾ ರಾಯ (ಜಕ. ೨೨-೬); **ಬನ್ನಿಯ ಬೆನಕ** = ಬನ್ನಿಯ ಕಟ್ಟೆಯ ಮೇಲೆ ಪ್ರತಿಷ್ಠೆ ಮಾಡಿರುವ ಗಣಪನ ವಿಗ್ರಹ : ಗುಂಡದೇವಪದ್ದಿ ಬನ್ನಿಯ ಬೆನಕನಲ್ಲಿ ಶ್ರೀಧರದೇವರ ಕಯ್ಯಿಂ ಬಡಗ ನಾಕಱ ಹಸುಗೆಯಲು ಕೊಟ್ಟ ಮತ್ತರು ನಾಲ್ಕು (ಕ್ಕಾಇ. IX — i. ೩೩೩-೯೯; 1216); ಇನ್ನೀ ಚತುಸ್ಸೀಮೆಯಲು ನಾಡು ನಟ್ಟು ಕೊಟ್ಟ ಕಲ್ಲುಗಳಿಂದೊಳಗಣ ಕ್ಷೇತ್ರವನೂ ಹೊನ್ನಹುಣಸೆಯಿಂದವೂ ಬಡಗಲು ಬನ್ನಿಯ ಬೆನಕನಿಂದಲೂ (ಎಕ. IX. ಚನ್ನಪ. ೦೩-೨೦ ; 1266). **ಬನ್ನಿಯ ಮರದ ಮಂಟಪ** = ಬನ್ನಿಮಂಟಪ : ಇನ್ನು ಕೆಲವು ಆಯುಧಗಳನ್ನೂ ಸಂಗಡ ಇರಿಸಿ ಉತ್ತರದಿಕ್ಕಿನ ಬನ್ನಿಯ ಮರದ ಮಂಟಪಕ್ಕೆ ಪಟ್ಟದಾನೆ ಕುದುರೆಗಳ ಸಹಿತವಾಗಿ . . . ಕಳುಹಿಸಿಕೊಟ್ಟರು (ಮುಹಾವಂ. I. ೩೯). [ದೇII. ತಮಿ. ವಾಲ. ವನ್ನಿ]

**ಬನ್ನಿ₂** 'ಬನ್ಸಿ₁' ನೋ.

**ಬನ್ನು** (ನಾ). ಮೃದುವಾದ ಒಂದು ಬಗೆಯ ರೊಟ್ಟಿ : ಆ ಮೂರಿ ಯಂಗಡಿಯಲ್ಲಿ ಬ್ರೆಡ್ಡು, ಬನ್ನು ಸಿಕ್ಕುತ್ತವೆ (ಲೋ). [←ಇಂ. Bun]

**ಬನ್ನೂರ್**, ಬನೂರ್ (ನಾ). ಒಂದು ಸ್ಥಳದ ಹೆಸರು : ಬನ್ನೂರ್ವರಿಯ ಮಗ ಪಾಲ ಬಲ್ಲದ ತುಱುಗೊಳೊ ಕಾದಿ ತುಱುವನಿಕ್ಕಿಸಿ ಸ್ವರ್ಗ್ಗಿಯಾದ (ಎಕ. X. ಮುಳಬಾ. ೯೯-೯ ; ಸು. 970). **ಬನೂರ್** : ತೈಲಪದೇವಂ ರಾಜ್ಯಂಗೆಯೆ ಬನವಾಸಿ ಅರಸುಗೆಯೆ ಬನೂರಯ್ಯ ಮಾಡಿಸಿದ ಕಂಭ (ಎಕ. VIII. ಸೊರಬ. ೩೨೯-೬ ; 985). [ಬನ್ನಿ₁ + ಊರ್]

ಬನ್ಸಿ 'ಬನಸಿ' ನೋ.

ಬನ್ಸಿಗೋಧಿ 'ಬನಸಿಗೋದಿ' ನೋ.

**ಬನ್ಸಿರವೆ** (ನಾ). ಬನಸಿಗೋದಿಯಿಂದ ಮಾಡಿದ ರವೆ : ಬನ್ಸಿರವೆಯಿಂದ ಉಪ್ಪಿಟ್ಟು, ಸಜ್ಜಿಗೆ ಮಾಡಿದರೆ ಉದುರುದುರಾಗಿಯೂ ಮೃದುವಾಗಿಯೂ ಇರುತ್ತದೆ (ಲೋ). [ಬನ್ಸಿ( <ಬನಸಿ) + ರವೆ]

ಬಪ್ಪ₁ 'ವರ್' ಪರಾ.

**ಬಪ್ಪ₂**, ಬೊಪ್ಪ (ನಾ). ೧. ತಂದೆ : ನ್ಯಾಯಂ ಮಂತ್ರಿಗಳುಕ್ತಿ ಬಪ್ಪನ ಮತಂ ಕಾಲೋಚಿತಂ ನಿಮ್ಮಭಿಪ್ರಾಯಂ ನೆಟ್ಟನಲಂಘ್ಯಂ (ಅಪಂಕ. ೦೫-೬೨) ; ಎಲೆ ಮಗನೆ ಬಪ್ಪನನ್ನೊಡಗೊಂಡು ಬಪ್ಪೆ ನಾಂ ಪರಿಣಯಕೆ (ಜಜು. ೬-೦೩). **ಬೊಪ್ಪ** : ೧. ಅಂತು ತನೂಭವಂ ಜನಿಸಿಯಾಕ್ಷಣದೊಳ್ಪಿರಿದೆಯ್ದೆ ಬೊಪ್ಪ ನಾನೆಂತು ಬರ್ದುಂಕುವೆಂ ಬೆಸಸುವೆಂದೊಡೆ (ರಜುಕ. ೬-೨೫) ; ಆ ಶಿಶುತ್ವದಲೆಮ್ಮ ಬೊಪ್ಪನು ವಾಸವನ ಪುರಕ್ಕೈದಿದನು (ಕುಮಾ.ಭಾ. ೯-೯೯) ; ಬೊಪ್ಪ ಕಳುಹಿದ ವಸ್ತುಗಳನೆಲ್ಲವ ರಾಮನೊಪ್ಪಿಸಿಕೊಂಡು ದುರ್ಗವನು ಪೊಪ್ಪವಿಟ್ಟನು ಸುರಣಿಯಿಂದ (ಕುಮಾರಾ. ೧೨-೪೯). ೨. ತಾತ ; ಪಿತಾಮಹ : "ಬೊಪ್ಪಂ ತಾತನೊಳಂ" (ಶಬ್ದಾಂ.೩) ; ಅಪ್ಪನು ನಮ್ಮ ಮಾದರ ಚೆನ್ನಯ್ಯ ಬೊಪ್ಪನು ನಮ್ಮ ಡೋಹರ ಕಕ್ಕಯ್ಯ (ಬಸವ. ೩೪೩). ೩. ಮಕ್ಕಳನ್ನು ಪ್ರೀತಿಯಿಂದ ಸಂಬೋಧಿಸುವಾಗ ಹೇಳುವ ಮಾತು : ಕವಡಿಕೆ ಘಾಳದುಂಡಡೊಳೊಡಂಬಡೆ ದಾದಿಯರಿಕ್ಕೆಲಂಗಳೊಳ್ ಸವಡಿಸಿ ಸಾರ್ಚೆ ದಟ್ಟಡಿಯೊಳಿಟ್ಟಿರುತಿರ್ದನನಾರ ಬೊಪ್ಪನೀ ಕವಡೆಯ ಬೊಪ್ಪನೆಂದು ನಡೆ ನೋಡಿದರ್ (ಸೂಕ್ತಿಸು. ೬-೬೬); ಬಾರೆನ್ನ ಬೊಪ್ಪಯೆಂದಡಿಗಡಿಗೆ ಮುದ್ದಿಸುತ್ತ ಕೀರಳನ ಹರುಷದಿಂ ಲಾಲಿಸುತ್ತ (ಕಪಸು. ೦೦-೬೮) ; ಬಾರಣ್ಣ ಬಾರೋ ಕಾರುಣ್ಯಮೂರ್ತಿ ಬೊಪ್ಪ ಬಾರೊ (ಶಬಕ. ೨೫). ೪. ಒಬ್ಬಾತನ ಹೆಸರು : ಕಲಿಗಂಗನಸ್ತು ತನಯಂ ಶ್ರೀಬೊಪ್ಪದಂಡಾಧಿಪಂ (ಎಕ. II. ೩೮೯-೩೩ ; 1135). ೫. (ಆಲಂ) ಪ್ರಪಂಚಕ್ಕೇ ತಂದೆಯಾದವನು ; ಪರಮಾತ್ಮ ; ಕೃಷ್ಣ : ಈ ಬೊಪ್ಪಂ ದೇವಕಿಗಾದಾ ಬೊಪ್ಪಂ ತಪ್ಪದಪ್ಪನೞೆಂ (ಜಾತಕಮಂ. ೦೮೫-೧೫೭ ; 1181).

**ಬಪ್ಪನಂಕಕಾಱ** = ಒಂದು ಬಿರುದು : ರಿಪುರಾಯಕುವರಬಂಗಾರಂ ಬಪ್ಪನಂಕಕಾಱಂ [ಕುಮರ]ಂಕಭೀಮಂ (ಕ್ಕಾಇ. XX. ೬೦-೯ ; 1109). **ಬಪ್ಪನ ಗಂಧವಾರಣ, ಬೊಪ್ಪನ ಗಂಧವಾರಣ** = ಒಂದು ಬಿರುದು : ಈ ನರಸಿಂಹಭೂಭುಜಂ ಪರಿಚಿತಭದ್ರಲಕ್ಷಣದಿನೊಪ್ಪುವ ಬಪ್ಪನ ಗಂಧವಾರಣಂ (ಎಕ. V. ಚಂರಾಪ. ೦೯೩-; 1161 ; ಜಾತಕಮಂ. ೩೩೬ ನೋ); ಗಡಿಯಂಕಮಲ್ಲ ಬೊಪ್ಪನ ಗಂಧವಾರಣ ಕಲಿದೇವ ಗೋಪಾಳದೇವರ ದಿಬ್ಯಶ್ರೀಪಾದಪದ್ಮಾರಾಧಕರುಂ (ಎಕ. VIII. ತೀರ್ಥಹ. ೨೫-೯ ; 1260).

[<ಪ್ರಾ. ಬಪ್ಪ./ಸಂ. ವಪ್ಪ್ಯ. ಹಿಂ./ಬಪ್ಪಾ, ಬಾಪ್ ; ಮರಾ. ಬಾಪ್]

**ಬಪ್ಪ₃** (ನಾ). ೧. ಬೆಟ್ಟದ ಮಗ್ಗುಲು ; ಸಾನು ; ತಪ್ಪಲು. ೨. ದಡ ; ತೀರ ; ತಟ : "ಬಪ್ಪ—ವಪ್ಪ=ತಪ್ಪಲು, ದಡ" (ಕನ್ನಕೋ.೫೯); ವಪ್ರ, ಬಪ್ಪ (ಕಪ್ಪಾಸು. ೧೫೯ ಕ್ರಿಯೋ) ; ಪತ್ರಿಕೆ — ಕತ್ತಿಗೆ, ವಪ್ರ — ಬಪ್ಪ (ಹೊಸಗ. ೦೦೬). ೩. "ಅಗುಸೇ ಬಾಗಿಲು" (ಕ್ರಕೋ).

[ < ಪ್ರಾ. ವಪ್ಪ./ಸಂ. ವಪ್ರ]

**ಬಪ್ಪಣ** (ನಾ). ಮಕ್ಕಳನ್ನು ತೊಟ್ಟಿಲಲ್ಲಿ ಮಲಗಿಸಿ ಆಡಿಸುವ ಒಂದು ರೀತಿ. — ಬಗೆ : ರೂಢಿಯ ಕೈಯಾಗ ಆರೂಢ ಸಿಕ್ಕಿಹನು ಜೋಡಾಗಿ ಬಪ್ಪಣ ಆಡಿಸುತ ಕಂದನ ಸಡಗರದಿ ತೂಗಿರ (ಸಿದ್ಧಕ. ೩-೩೩). [?]

**ಬಪ್ಪವ್ವ** (ನಾ). ಒಬ್ಬಾಕೆಯ ಹೆಸರು : ಬಪ್ಪವ್ವಂ ಬನವಾಶಿ ಪನ್ನಿರ್ಚ್ಛಾಸಿರದ ಪಟ್ಟಮನಾಳೆ (ಮೃಚಿಅ. ೦೯೩. ೭೮-೯ ; 984).

[ಬಪ್ಪ₂ + ಅವ್ವ₁ (< ಅವ್ವೆ)]

**ಬಪ್ಪಸೆಟ್ಟಿ** (ನಾ). ಒಬ್ಬಾತನ ಹೆಸರು : ಬಪ್ಪಸೆಟ್ಟಿಯ ಮಗಂ × × ಮಂ ಅಮ್ಮಣಸೆಟ್ಟಿ(ಎಕ. III (R). ಗುಂಡ್ಲುಪೇ. ೩೬-೦ ; ೧೦ನೆಯ ಶತ).

[ಬಪ್ಪ₂ + ಸೆಟ್ಟಿ]

**ಬಬಿಯಮ್ಮ** (ನಾ). ಒಬ್ಬಾತನ ಹೆಸರು : ನೀತಿಮಾರ್ಗ್ಗ ಪೆರ್ಮ್ಮಾನಡಿಗಳ್ ಸ್ವರ್ಗ್ಗಮೇಱಿದನ್ದು ಮಱುವೂರ ಬಬಿಯಮ್ಮಂ ಕಿಚ್ಚುಪೊಕ್ಕಂ (ಎಕ. V. ಅರಕ. ೨೬-೧೨ ; ಸು. 916). [? + ಅಮ್ಮ]

**ಬಬ್ಬರ**, ಬೊಬ್ಬರ (ನಾ). ಸುಸಂಸ್ಕೃತನಲ್ಲದವನು ; ಅನಾಗರಿಕ : "ಬಬ್ಬರಂ ಬರ್ಬರಾರ್ಥಂ" (ಶಬ್ದಾಂ. ೩೨). ೨. ಒಂದು ದೇಶದ

ಹೆಸರು; ಬರ್ಬರ : "ಬಬ್ಬರ_ಬರ್ಬರ_ಪಾಮರ, ದೇಶಭೇದ" (ಶಬ್ದಕೋ. ೨೯). **ಬೊಬ್ಬರ :** ೨. ಮಲಯ ಬೊಬ್ಬರ ಮತ್ಸ್ಯ ಮಗಧ ಬಂಗಾಳವು (ಲೀಲಾವ. ೩-೯೦). [ < ಸಂ. ಬರ್ಬರ ]

**ಬಬ್ಬರಿ** (ನಾ). ಒಂದು ಬಗೆಯ ಮದ್ಯ, — ಹೆಂಡ : ಸಿರಿಸಿಂಬಿ ತಂಪುಗೀ ಬಬ್ಬರಿ ಗಂಗಾಸಾಗರಂ ಸುರಾಳಂ ಸೋಮಂ . . . ಎಂಬ ಕೆಲವು ಪೆಸರಿನ ಕಳ್ಳಂ ತುಂಬಿರ್ದನೇಕಘಟನಿಕುರುಂಬವುನನುರಾಗದಿಂದೆ ತಂದಿ ಟ್ಟಪಿದೊಡೆ (ಶಾರದ. ೧೦–೦೨೬). [ ? ]

**ಬಬ್ಬರಿಗ** (ನಾ). ಒಂದು ದೇಶದ ಹೆಸರು ; ಪಾಂಡ್ಯ ಲಾಳ ನೇಪಾಳ ತುರ್ಕ ಬಬ್ಬರಿಗ ಕೇರಳ ಪಲ್ಲವಮಂಗ ವೆಂಗಿ ಪಾಂಚಾಳ ಕಳಿಂಗ ಸಿಂಧು ವಿಷಯಾಧಿಪರಾಳ್ವಸಗೆಯ್ಯ (ಶಾ. I. ೩೦–೦೭; 1222). [ < ಬಬ್ಬರ ]

**ಬಬ್ಬಾಗಿಲ್** (ನಾ). ಒಂದು ಸ್ಥಳದ ಹೆಸರು (?) : ಮುರಿದು ಕಿಡಿವ ಗುಣ್ಣೆಯ ಬಬ್ಬಾಗಿಲ ದ್ವಿಸಸ್ತಿಯ (ಎಕ. III (R). ಶಂಶ. ೨೬೨–೨೯; 969).
[ ? ]

**ಬಬ್ಬಾಟ** 'ಬೊಬ್ಬಾಟ' ನೋ.

**ಬಬ್ಬುಲಿ, ಬಬ್ಬುಳಿ, ಬೊಬ್ಬುಲಿ, ಬೊಬ್ಬುಳಿ$_1$** (ನಾ). ಒಂದು ಬಗೆಯ ಮುಳ್ಳುಗಿಡ; ಜಾಲಿ; ಗೊಬ್ಬುಳಿ : ಪಲಸಾಲಂ ತಡಸಾಸು ತೇಗು ಕದುಕಿಂಚಿಲ್ವೊನ್ನ ಚೆನ್ನಂಗಿ ಬ[ಪಾಠಾಂ. ಬೊ]ಬ್ಬುಲಿ . . . ಎಂಬೀ ಮರದುಱುಗಲಿಱುಂಬಿನಿಂದತಿಗಹನವೆನಿಪ ಗಹನಾಂತರದೊಳಗೆ (ಶಾಕ್ಯಪು. ೦೨–೩೬); ವನಜವನದಲಿ ತಱಿಚಿ ಕಬ್ಬಿನ ಬನದಿ ಕಡಸಿಗೆ ಚೂತಮಯ ಕಾನನದಿ ಬ[ಪಾಠಾಂ. ಬೊ]ಬ್ಬುಲಿ ಭೀಮಸೇನನಯುರವು ತಮ್ಮೊಳಗೆ (ಕುಮಾ.ಭಾ. ೬–೩); ಈಗ ಊರು ಇದ್ದ ಸ್ಥಳದಲ್ಲಿ ಮೊದಲು ಬಬ್ಬುಲಿ (ಜಾಲಿ)ಯ ಬನವಿದ್ದು ತುಡುಗರಿಗೆ ಆಶ್ರಯವಾಗಿತ್ತು (ಕಿಶಾಶ. ೦೨). **ಬಬ್ಬುಳಿ :** ಬಬ್ಬುಳಿಯ ಮುಳ್ಳ ಮೆಳೆಯಲಿ ನಿಲ್ಲೆ (ಗೀತಾಂ. ೬೩–೯). **ಬೊಬ್ಬುಲಿ :** ಬೊಬ್ಬುಲಿಯ ವನಕ್ಕೆನಿಸು ಕೂರ್ಮೆಯಿಂ . . . ನೀರ ನೆಱೆದೊಡಂ ಮಾವಿನ ವನದಂತೆ ಫಲಮಾಗಲಾರ್ಕುಮೆ (ರತ್ನಾಕ. ೬–೬೬); ಚಂದನದ ಸನ್ನಿಧಿಯಲಿ ಪರಿಮಳ ತಾಗಿ ಬೇವು ಬೊಬ್ಬುಲಿ[ಪಾಠಾಂ. ಬಬ್ಬುಲಿ, ಬೊಬ್ಬುಳಿ] ತಱಿಯ ಗಂಧಂಗಳಾಗವೆ (ಜಚಶ. ೧೧೦) ; ಹಿರಿಯ ಬೊಬ್ಬುಲಿಮರದ ನೆಳಲಿದು (ಶಿಶಪು. ೨೦–೧೦). **ಬೊಬ್ಬುಳಿ$_1$ :** ವನಜದಲರನಾಳೆದಾಱಿಡಿಗೆ ಬೊಬ್ಬುಳಿಯ ಪೂವಿನೊಳ್ಮಧುವುಂಟೆ (ಕೃಪಜಿ. ೦೯–೦೨) ; ಹಾವಸೆ, ಬೊಬ್ಬುಳಿಮರದ ತಿಗುಡು ಇವೆರಡನು ಕುಟ್ಟಿ . . . ಸಕ್ಕರೆವೆರಸಿ ತೆಗೆದುಕೊಳ್ಳೆ ದಾಹಂ ಪೋಕ್ಕುಂ (ಸಕಶ್ಯ. ೨೬೨).
[ < ಸಂ. ಬಬ್ಬುಲ, ಬಬ್ಬೂಲ ]

**ಬಬ್ಬುಳಿ** 'ಬಬ್ಬುಲಿ' ನೋ.

**ಬಬ್ರು** (ಗು). (?) : ಆನೆಗೆ ಹಳದೀ ಬನಾತಿನ ಬಬ್ರುಜೂಲು ರೇಶ್ಮೆ ಜಾಲರು ಸಹ ೧ (ಎಕ. XIV, ಶಂಶಶ. ೨೯೨–೦೯೨ ಕುಟಿ; 1847). [ ? ]

**ಬಭ್ರು** (ಗು). ೧. ಕಂದುಬಣ್ಣದಿಂದ ಕೂಡಿದ. (ನಾ). ೨. ಕಂದು ಬಣ್ಣ; ಪಿಂಗಳವರ್ಣ : "ಪಿಂಗಂ ಕಪಿಳಂ ಬಭ್ರು ಪಿಶಂಗಂ . . . ಹರಿತಂ" (ಚತುಸಕೋ. ೦೦೯–೬೩); ಭ್ರುಕುಟಿಕುಟಿಲಭ್ರೂಲತಾಬಭ್ರುರೋಚಿ ಯಿಂ ರುಚಿರತಾಂಬೂಲಾರುಣಾಧರಮರೀಚಿಯಿಂ . . . ರೌದ್ರಭಾವಂ ನೆಲಸಿ ನಿಲೆ (ಕಾದಂಆ. ೨೬೦) ; ಅರಣ್ಯಂ . . . ಮದವತ್ಕುಂಜರಗಾತ್ರ ದಂತೆ ವಿಳಸದ್ವಭ್ರೂಪ್ರಭಾವಿಭ್ರಮಂ (ಕುಶ್ರಕೃ. ೩–೬೬). ೩. ಮುಂಗುಸಿ; ಮುಂಗುಲಿ : "ಮುಂಗುರಿಯಲ್ಲಿಯುಂ ಬಭ್ರುವೆಂಬುದು" (ಶಬ್ದಾಪು. ೦೩೬–೩೦); ಹರಿ ಕರಿಗಳೊಂದಾಗಿ ಬೆರೆದು ಬಭ್ರೂರಗವನೆರಳೆ ಪುಲಿ ಯೊಂದೆನಿಸಿ ಮೆರೆದು ನಿಜವೈರಗಳ ವರಮುನಿಯ ದಿವ್ಯಪ್ರಭಾವ ದಿಂದೊಪ್ಪಿರ್ಪುವಾ ತಪೋಧನನೆಡೆಯೊಳು (ಶಂಕಶಾರಾ. ೦–೬–೮). ೪. ಅಗ್ನಿ : ಬಭ್ರುಸದೃಶ್ಯ ಚಿತ್ರಭಾಂತಿಕೃಲ್ಲುಠತ್ ಪ್ರಭ್ರಾಜಿತೋವ್ಯತ್ ಕಕುಭ್ಪ್ರಮಿತ ಫಣಿಚಯಾದಭ್ರಸ್ಫುಲಿಂಗವವಿವಿಭ್ರಮವಿಭೃತ್ ಖಡ್ಗ ಶುಭ್ರದಕ್ಷಕರಕ್ಷತಾ (ಶದ್ಯಸಾ. ೦–೬). ೫. ವಿಷ್ಣು : "ವಿಷ್ಣುಃ, ಕೃಷ್ಣಃ . . . ಬಭ್ರುಃ, ಹರಿಃ . . . ವನಮಾಲೀ, ಗದಾಧರಃ — ಈ ೮೫ ನಾರಾಯಣನ ಪೆಸರ್" (ಶಬ್ದಾಯು. ೩–೨೯). ೬. ಶಿವ. ೭. ಕುದುರೆಯ ಹುಬ್ಬು : ಅಕ್ಷಿಕೂಟದಿಂ ಪೊಱಗಣ ಪುರ್ಬುಗಳ್ಗೆ ಬಭ್ರುವೆಂಬ ಪೆಸರಕ್ಕುಂ (ಅಶ್ವಶಾ. ೫೭–೨೩). [ಸಂ.]

**ಬಮರ** 'ಬವರ್ಕ್' ನೋ.

**ಬಮರಿ** 'ಬವರಿ' ನೋ.

**ಬಮೆಗೊಳ್** 'ಬೆಮೆಗೊಳ್' ನೋ.

**ಬಮೋಜೀಬ್** (ಅ). ಅದಕ್ಕನುಗುಣವಾಗಿ ; ಅದಕ್ಕನುಸಾರವಾಗಿ : ಅದರ ತರುವಾಯ ನಡೆಯುವ ಅಪಾದನೆಗೆ ಅಯಿವತ್ತು ರೂಪಾಯಿಗೆ ವಿಪಾರದ ಜುರ್ಮಾನೆಗೂ ಗುರಿಯಾಗತಕ್ಕದ್ದು ಬಮೋಜೀಬ್ ಹುಕ್ಕುಂ (ಗ್ರಾಮಕಾ. ೯ ೩೬೬೪). [ ← ಪಾರ. ಬಮೂಜಬ್ ; ಹಿಂ. ಬಮೂ ಜಬ್, ಬಮೂಜಿಬ್ ; ಮರಾ. ಬಮುಜಿಬ್, ಬಮೂಜಿಬ್, ಬಮೋಜಬ್, ಬಮೋಜೀಬ್]

**ಬಮ್ಮ** 'ಬೊಮ್ಮ' ನೋ.

**ಬಮ್ಮಡಿ** 'ಬೊಮ್ಮಡಿ' ನೋ.

**ಬಮ್ಮಯ್ಯ** 'ಬೊಮ್ಮಯ್ಯ' ನೋ.

**ಬಮ್ಮೇತಿ** 'ಬೊಮ್ಮಹತಿ' ನೋ.

**ಬಯ್$_1$, ಬೈ** (ಕ್ರಿ). ಬಯ್ತು, ಬೈತ (ಭೂತಕೃ). ಬಯ್ದು, ಬೈತು (ಭೂತನ್ಯೂ). ೧. ಅಡಗಿಸು ; ನಿಕ್ಷೇಪಿಸು ; ಮುಚ್ಚಿಡು ; ಬಚ್ಚಿಡು : "ಬಯ್-ನಿಕ್ಷೇಪೇ (ಬಚ್ಚಿಡು)" (ಕವಿರಾ) ; ದಂಡಕನ್ನವಂ ಲೋಭಾಭಿಭೂತಂ ವಿಷಾವಿಲದಂಷ್ಟ್ರಂ ಶ್ವಯುಮಾಗಿ ಪುಟ್ಟಿ ಸುಟಿಗುಂ ಮುಂ ಬಯ್ತ ಭಂಡಾರದೊಳ್ (ಆದಿಪು. ೨–೦೨) ; ಕಮಲಜನಿಲ್ಲಿ ಬಯ್ತ ನೊಲವಿಂ ಕುಮುದೇಕ್ಷಣ ವಜ್ರದಂತವಿದ್ರುಮರದನಚ್ಛದಂಗಳಿನವರ್ಚಿದ ಜಂಗಮನೀಲಪುತ್ರಿಕಾಸಮಿತಿಯನೆಂಬಿನಂ . . .ಪುಳಿಂದಿಯರಿರ್ದರದೊಂದು ತಾಣದೊಳ್ (ಹಣ. ೦೩–೦೭) ; ಬರೆದಂತೆ ಪೊಲ್ತಂತೆ ಬಯ್ತಂತೆ ಬೆಚ್ಚಂತೆ ಇರಿಸಿದಂ ಶಿವಮೂರ್ತಿಯಂ ಚಿತ್ತದೊಳಗಿಂತೆ (ಸೋಂದ. ರೀ. ೩೩–೨೫). **ಬೈ :** ೧. ಎರ್ದೆಯೊಳ್ ಬೈತಿಚ್ಚೆಯೊಳ್ ಕೂರ್ಮೆ ತಳ್ತಿರಿಂ ಮುಚ್ಚುಗೆವೆತ್ತ ಪತ್ತುಗೆಯಿನಂತಾ ನಾಲ್ವರಂದಿರ್ವರಿರ್ವರೆ ಯುಗ್ಮದ್ವಯ ಮಾದರೇಂ ಸಫಲಮೋ ಸತ್ಪಾತ್ರದಾನೋದಯಂ (ಶಾಂತಿಪು. ೬–೦೨೩) ; ಓವಿ ಫಳತರುಗೆ ನೀರ್ಗಳನೀವುದುಮಂ ಬೈತು ಬಿತ್ತನೊಲವಿಂ ಬೆಳೆಗೆಯ್ಗೀ ವುದುಮಂ ಸತ್ಪಾತ್ರಕ್ಕೀವುದುಮಂ ದಾನಮೆಂಬ ನಾಣ್ಣೆಕೆಯುಂಟೇ (ಅರ್ಹನೀ. ೬–೯೬) ; ಆಭರಣಗಳೆಲ್ಲಮಂ ಬೈತು ತಾಂ ಬೇಗದಿಂ ವರಸಖಿಂ ಬೆರಸು ಖೇಚರಚಕ್ರವರ್ತಿ ಬೇಡರ ರೂಪನಾಂತು (ಧರ್ಮಾಶ. ೩–೨). ೨. ಪ್ರತಿಷ್ಠೆಮಾಡು : ಬರೆದರೊ ಬೈತರೊ ಪೊಲ್ದರೊ ಪೊರೆದರೊ . . . ಕಡೆದರೋ ಎನೆ ಗಿರಿರಾಜತನೂಜೆ ಪೂಜೆಯೊಳ್ ರಾಜಿಸುವಳ್ (ಗಿರಿಕ. ೩–೦೦೨). ೩. ಸೇರಿಕೊಳ್ಳು : ಹಂಸತೂಲಸ್ಥಲದೊಳ್ ತಾಂ ಬೈತೊಡಂ ಮುಳ್ಳಗಳ ಹೊಸ ಹಸೆಯೊಳ್ ಬೈ[ಪಾಠಾಂ. ಸೈ]ತೊಡಂ ಸ್ನೇಹದಿಂದಂ ನಲವಿಂದಂ ಸ್ತೋತ್ರಮಂ ಮಾಡಿದೊಡೆ ಪಳಿದೊಡಂ ಸರ್ವಮೊಂದಂದ ಮೆಂದಾಂ ಸಲೆ ಕಾಣ್ಬಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೬೩). ೪. ಬಂಧಿಸಿ ಇಡು ; ಅಲುಗಾಡದಂತೆ ಇರಿಸು : ಬೇಸಗೆಕಾಲಮುಂಬಬಳೆ ಬಿಟ್ಟುಗಳೆಂಬೊಲೆಗಲ್ಗಳಲ್ಲಿ ಬೈತೀ ಸಕಲೋರ್ವಿ ಯೆಂಬ ಪೊಸಗಾವಲಿಯಂ ರವಿವಹ್ನಿಯಿಂದೆ ತೋಯಾಶಯಮೆಂಬ ಸಂಪಣ ಮಂನರ್ಪಿಸಿ ತಳ್ತುರಿಯಲ್ಕೆ ಕಾಮೈಗಳ್ ದೋಸೆಯನಟ್ಟುಪೊಲ್ ಮಳಲ ರಾಶಿಗಳೊಪ್ಪಮನಾಳ್ದುವಾಕ್ಷಣಂ (ಶಾರಕು. ೯–೬೮).

[ದೇ.॥ ತಮಿ. ವೈ ; ಮಲ. ವೆಕ್ಕ ; ಕೊಡ. ಬೆಯ್ ; ತೆಲು. ವೇಯು; ಕೋತ. ವಯ್ ; ತೊದ. ಪೊಯ್]

ಬಯ್₃, ಬಯ್ಯು, ಬೈ₃, ಬೈಯು (ಕ್ರಿ). ೧. ಕೆಟ್ಟ ಮಾತನ್ನಾಡು ; ಕಠಿಣವಾಗಿ ನುಡಿ : ಅದನಾತಂ ಬಯ್ದೊಡನಲ್ಲ ನಾಂ ಬಯ್ದಂ (ಶಬ್ದಾ. ೬-೫) ; ಕಿಱಿಯವನಱಿಯದೆ ಕಿಡೆನುಡಿದಿದನ ಪ್ಪೊಡಂ ನೂಱುವರಂ ನೆಱೆ ಸಲಿಸುವುದೆಂದುದನಾಂ ಮಱುವನೆ ಬಯ್ ಬಯ್ಯೆ ಸಲಿಸುವೆಂ ನೋಡುವರಂ (ಜಾಕಕಾ. ೬-೬೦) ; ಪಡುವಲಿಳಿಯದ ರವಿಯ ಬಯ್ಯುತ ನಡೆದನಾ ಕುರುರಾಯನು (ಕುಮಾವ್ಯಾ. ೦೪-೪೫). ೨. ಮೊಳಗಿಸು ; ಹೀಗಳೆ: ಪೊಯ್ಯ ನಿಸ್ಸಾಳ ತಮ್ಮಟದ ಭೇರಿಗಳಲ್ಲಿ ಬಯ್ಯ ಬಿರುದಿನ ಕಹಳೆ ತಿತ್ತಿರಿಗಳಲ್ಲಲ್ಲಿ (ಜೈಕ. ೩೬. ೩೬-೨೨) ; ಪೊಱವೊಲು ಬನದ ಕಟ್ಟಿಲೆ ಮಱುದುಂಬಿಗಳಿಂದೆ ಬಯ್ದು ಪಾಡಿ ಸಾರ್ತಂದುಱದೊಡ್ಡಿ ದರ್ಕಬಿಂಬದ ತುಱುಗಲುದೆನಿಸುವುದು ಕಾಂಚನಪ್ರಾಕಾರಂ (ಪುಷ್ಪ. ೨-೩೩); ಕಿದಱಿದವು ನಿಸ್ಸಾಳ ಬಱಸಿಡಿಲಿಲದುಭುತಧ್ವನಿಯಲಿ ನಿರಂತರವೊದಱಿ ಬಯ್ದುವು ಕಹಳೆ ಬಿರುದಾವಳಿಯಲತಿರಥರ (ಕುಮಾವ್ಯಾ. ೯-೦೫). ಬಯ್ಯು: ೧. ತುದುಗುಣೆಯಿಂದು ಎನ್ನ ಹಿಡಿದು ಬಡಿಯದ ಮುನ್ನ ಒಡೆಯ ನಿಮ್ಮ ಬಯ್ಯದಂತೆ ಮಾಡು (ಜಕಶ. ೩೩) ; ಬಯ್ಯಲಱಿವೆ ದುರುಕ್ತಿ ಶರದಲಿ ಮೆಯ್ಯನೆಸುವೆಯೊ ಮೇಣು ಮಾರ್ಗಣೆ ಕಯ್ಯಲುಂಟೇ ನಿನಗೆ ಸಂಬಳವೇನು ಸಮರದಲಿ (ಕುಮಾವ್ಯಾ. ೦೫-೩೩). ಬೈ₂ : ೧. ಜಯಾವತಿ . . . ಸಿದ್ಧಾರ್ಥರಾಜ್ಞಿಯರ ಮೇಗೆ ಕ್ರೋಧಮಂ ಭಾವಿಸಿ . . . ದಯೆಯಿಲ್ಲದೊಂ ನಿಷ್ಕರುಣಿ ಎಂದು ಬೈದ[ಪಾಠಾಂ. ಬಯ್ದು]ಳ್ (ಶಬ್ದಾ. ೪೫-೦೨) ; ನನೆಯಂಬಂ ತಗೆದೆಚ್ಚನಂಗಜನ ತಪ್ಪೇನಾನುಮಂ ತೋಱಿ ಕಾಣ್ಬನಿತಂ ಮಾಡದೆ ಪದ್ಮಜಂ ಮದನನಂ ಬೈದಂತುಟೇ ಬೇಡವಿಪಿನದಂ (ಕಂಕಹಾ. ೪-೩೯) ; ಕನಲಿ ವಿಧಿಯನು ಬೈವಳೊ ಕುಬನಿಯ ಸುರಿವಳೊ ಶೋಕದಲಿ ನಿಜತನುವ ಬಿಡುವಳೊ ಕಾಂತೆಯೆಂತಿಹಳೆನುತ ನಡೆತಂದ (ಶಕಶ. ೬-೨). ೨. ಬೈದವು ಬಹುವೊಗದೊಳು ಕಹಳೆಗಳ್‌ರೈದುವೊಗದನ ಸೃನ್ಯದೊಳು (ಜೈಕಶ. ೦೨-೬೦). ಬೈಯು : ೧. ಚಾಪಳೆಯರಾಲೋಚಿಸುತ ಕಡುಪಾಪಿಯಂಗಜನೆಂದು ಬೈಯು [ಪಾಠಾಂ. ಬಯ್ಯು]ತ ತೋಪಿನೆಡೆಗಿರದೈದಿ ತಂದರು ಸತಿಯ ಸಂತೈಸಿ (ಶಕಶ. ೦-೪೦); ಯಾರೂ ಹುಡುಗರನ್ನು ಹೊಡೆಯಲಿಲ್ಲ ಬೈಯಲಿಲ್ಲ (ಕಳಕು. ೩೩).

ಬೈಬೈ (ದ್ವಿರುಕ್ತಿ) : ಅಗಿದು ಮೈದೆಗೆದು ಸಿಗ್ಗಾಗಿ ತಮ್ಮಿಂ ತಾವೆ ತಗಳಿ ಬೈಬೈದು ಬಾಯಳಿದು ಶೋಕಿಸಿ ತಾವೆ (ಜಾಕಂಕ. ೪-೨೩೩): ಸಾಲ ಹೆಗ್ಗಹಳೆಗಳು ರಿಪುಭೂಪಾಲಕರ ಬೈಬೈದು ಗಜಱಿದವಾಳುತನದಾಳಾವ ಬೀಱುತು ಬೆಜಗನಹಿತರಿಗೆ (ಕುಮಾವ್ಯಾ. ೬-೩೨). ಬೈದಾಟ=ಒಬ್ಬರನ್ನೊಬ್ಬರು ಬಯ್ಯುವಿಕೆ, —ತೆಗಳುವಿಕೆ : ನುಡಿ ನೋಟ ಬಾಯೂಟ ಬೈದಾಟ ಕಲಹ ಕಾಲ್ಕಿಡಿತವಿಲ್ಲದ ಕಾಂತೆಯರಿಗೆ ಕಡುರಸಿಕರು ಲೇಸು ಮಾಡರೆಂದೊರ್ವಳು ನುಡಿದಳೆಳೆಯಳಿಗೊರ್ವಳಿಗೆ (ಕುಶಾಪಾಂ. ೨೬-೯೨); ಪಾರಿವಗಳ ದನಿ ಕೊರಳ್ವಕ್ಕಿಯ ಉಲ್ಲೆ ಕೀರವಱಿಗಳ ಬೈದಾಟ (ಕಂಕಹಾ. ೦೦-೪೩). ಬೈದಾಡು = ಮೊಳಗಿಸು ; ಹೀಗಳೆ : ಸೊನಸು ಮಿಗಲೊಳಗೊಳಗೆ ಖತಿಯಲಿ ಕೆಣಕಿ ಬೈದಾಡಿದರು ಸಮರಾಂಗಣಭಯಂಕರ ಶಲ್ಯ ಭಾಸ್ಕರಸುತರು ರಥದೊಳಗೆ (ಕುಮಾವ್ಯಾ. ೯ ಸೂಚಕ).

[ದೇ.॥ ತಮಿ. ವೈ; ಕೊಡ. ಬಯ್₃]

ಬಯ್₃, ಬೈ₃, ಬೈಯು (ನಾ). ಸಂಜೆ: ಬೈಗು:(ಕ). ಬೈ₂: ಉಪಾಯವಿಲ್ಲದೆ ಹೊತ್ತು ಬೈಯಾಗುವಾಗ . . . ಹೊರಟೆ (ಕುಬಿಗಬು. ೪). ಬೈಯು : ಕೈಯುಡಿಗಳ್ ಕಂಗಳ್‌ಕಡೆಯೊಯ್ಯನೆಯುಗುರ್ದಾಡೆ ಜಿಹ್ವೆ ಕೀಳ್ವಟಿ ವೇಳುಂ ಬೈಯುದ ಕೆಂಪುಗಳಾಗಿರಲಯ್ಯಂ ತಾನೀವನತುಳಸುಖಸಂಪದಮಂ (ಜಾತಾಕ. ೦-೦೨-೪೯). 'ಬಯ್ಗು' ಪರಾ.

ಬಯ್ಯಣಕ=ಸಂಜೆಯವರೆಗೂ; ಸಾಯಂಕಾಲದ ತನಕ : (ಕ).
[ದೇ.₃ ತುಳು. ಬಯ್ಯ, ಬೈಯ, ಬೈಯ್ಯ]

ಬಯ (ನಾ). ಹೆದರಿಕೆ; ಭಯ ; ದಿಗಿಲು : "ಬಯಮೆನಲು ಭಯದೊಳಗಕ್ಕು" (ಕಜಿ. ೬೩): ಭೋಗಿ, ಬೋಗಿ, ಭಯ, ಬಯ (ಶಬ್ದಾ. ಕು. ೦೪೩ ಕೃಯೋ). 'ಬಯಂಗೊಳ್', 'ಬಯಂಬಡಿಸು' ಪರಾ. [<ಸಂ. ಭಯ]

ಬಯಂಗೊಳ್ (ಕ್ರಿ). ಹೆದರು ; ಭಯಪಡು ; ದಿಗಿಲುಗೊಳ್ಳು : ಇಂದ್ರಿಯಂಗಳ ದೆಸೆಗೆ ನಾಡೆಯುಂ ಬಯಂಗೊಂಡು (ಕರ್ಣಾಕು. ೩-೨೬).
[ಬಯ+ಕೊಳ್₁]

ಬಯಂಬಡಿಸು (ಕ್ರಿ). ಹೆದರುವಂತೆ ಮಾಡು ; ಭಯಪಡಿಸು ; ದಿಗಿಲುಗೊಳಿಸು : ತಿಬ್ಬವೊಗಂ ಬಯಂಬಡಿವ ತೇಜಮನುಳ್ಳ ದೃಢಾಂಗ ಮಾಯತಂ ಗಬ್ಬಿಗರುಂ ನಿರೀಕ್ಷಿಸಲಗಮ್ಯಮುದಾರುದದೊಂದುಮಾಯುಧಂ ನಿಬ್ಬರವಾದ ಚಂಡಮೆನಿಕುಂ ಧರೆಯೊಳ್ (ಜಾತಾಕ. ೦-೦೩-೪೬).
[ಬಯ + ಪಡಿಸು]

ಬಯಕಾಱ (ನಾ). ೧. ಸಂಗೀತಗಾರ : ಮಧ್ಯಮಪಾಂಡ್ಯ ಮರಾಯ ಶಸ್ತ್ರಶಾಸ್ತ್ರಪ್ರವೀಣ ಬಯಕಾಱಶಿಖಾಮಣಿ . . . ಶ್ರೀ ವೀರ ಅರಗದ ಹರಿಯಪ್ಪಒಡೆಯರು ಸುಖಸಂಕಥಾವಿನೋದದಲು ರಾಜ್ಯಂಗೆಯ್ಯುತಿರ್ಪಲ್ಲಿ (ಎಕ. VI. ಕೊಪ್ಪ. ೩೪-೦೫; ಪು. ೧೩೮೦); ಅಚ್ಯುತದೇವರಾಯ ಮಹಾರಾಯರ ಮನೆಯ ಬಯಕಾಱ ರಾಮಪ್ಪಯ್ಯನವರು ಬೂದಿಹಾಳ ಸೀಮೆಯ ಮದುವೆಯ ಸುಂಕವನು ಬಿಟ್ಟು ಕೊಟ್ಟು ಧರ್ಮ್ಮಶಾಸನದ ಕ್ರಮವೆಂತೆನ್ದರೆ (ಎಕ. XII. ಚಿಕ್ಕ. ೩-೬; ೧೫೩೩); ವರವೈಣಿಕ ಬಯಕಾಱರು ಹರುಷದೆ ಕೊರಳ ಬೆರಸನೊಂದುಗೂಡಿ . . . ಪಿರಿದಾಗಿ ಪಾಡುತೊಪ್ಪಿದರು (ಕಂಕಹಾ. ೬-೩೯). ೨. ವೈಣಿಕ : ತುಱುಗಿ ಪಡೆವಾಗಳ್ ಸೋಲಿವಡದವುದೆಂಬ ಭೀತಿಯಿಂ ಪೆಗಲಿಂ ತೆಗೆದು ಬೀಣೆಯಂ ದೃಢಮುಷ್ಟಿಯಿಂ ನೆಗಪಿ ಪಿಡಿದಡಿಗೊಳ್ವ ಬಯಕಾಱರ ತೆರಳ್ಕೆಯಿಂ (ಜಾಕಕಾ. ೦೨-೦೦೬ ಕ); ಹರಿಸಂ ಮಿಗೆ ಚಿಕದೇವಂ ಸರಸಾಗ್ರಣಿ ಪೀಣೆ ಬಾಜಿ ಪೋಱಗಳಂ ಮುಂಬರಿದು ಕುಡೆ ದೇವರಾಯನ ಚರಣಕೆ ಬಯಕಾಱರಿಂದು ಬಣ್ಣಿಸೆ ನೆಗಳ್ದರ್ (ಜಾಶಾ. ೪-೦೦೦). [←ತೆಲು. ಬಯಕಾಂಡು, ಬಯಕಾರಿ]

ಬಯಕೆ₁ 'ಬಯ್ಕೆ₁' ನೋ.

ಬಯಕೆ₂, ಬಯಕ್ಕೆ, ಬಯ್ಕೆ₂, ಬವಕೆ (ನಾ). ೧. ಇಚ್ಛೆ; ಆಸೆ; ಅಪೇಕ್ಷೆ: "ಇಚ್ಛೆ ಕಾಂಕ್ಷೆ ಸ್ಪೃಹೆಯು ಆಶಂಸಾ ರುಚಿ ಕಾಮ ವಾಂಛೆ ತೃಷ್ಣತವೆನಲು ಬಯಕೆ" (ಕಂಗಕಾ. ೦೨೬-೦೦) ; ನಿಯಮಿತಾಕ್ಷರದಿಂದುಪಮಾಪ್ರತಿಷ್ಠೆಯನೆ ತಿರ್ದುವುದಟ್ಟುಯಿನಿರ್ದುಮಾ ಬಯಕೆ ತೀರದ ಕಾರಣದಿಂ ವಿಪರ್ಯಯ ವಿದಭ್ರ್ಯಮವೋಕ್ತ್ಯಮದೂಷಣಂ (ಕಂಕಾ. ೦-೦೩೩) ; ಅಪನಂ ಸಾಮದಿಂದಮಾಳವಡಿಸಿ ನೋಡುವಂ ಸಾಮದೊಳಂ ಪದವಡದೊಡೆ ಬಲ್ತಿರ್ದಪ್ಪ ದಲ್ತೆ ಪದವಡಿಸಲೆನ್ನ ಬಯಕೆಯ ದಂಡಂ (ಅಜಿತ. ೦೪-೪೩): ಅಂತೆ ನಿಪಾದೊಡಂ ಜಾತಿಜೋಗಿನಿಯಲ್ಲು: ಬಗೆಯೊಂದು ಬಯಕೆಯಂ ಪಡೆಯೆ ನೋಂತಿಹೆನಿಂತು (ಶಬ್ದಾಂಗ. ೩೬-೪೬೩). ೨. ಬಸಿರಿಯರಿಗೆ ಉಂಟಾಗುವ ಆಸೆ,—ಹಂಬಲ : ನೀನುಂ ಮನೆಯಿಂದಂ ಪೊಱಮಟ್ಟು ಪೋಗಿ . . . ಕೆಲವುದಿವಸದಿಂ ಸತ್ತು ಶ್ರೀಮತಿಯ ಗರ್ಭದೊಳ್ ನೆಲಸಿರೆಯಾಕೆಗಾ ಜೀವಂಗಳಂ ದಯೆಗೆಯ್ವ ಬಯಕೆಯಪ್ಪುದುದು (ಶಬ್ದಾಕಾ. ೦೩೦-೦೩): ಗರ್ಭಿಣಿಗಳಪ್ಪ ಕಾಮಿನಿಯರ್ ಬಯಸುವ ಬಯಕೆ ದೋಹಲಂ ದೌಹೃದಮುಮಂ (ಶಬ್ದಸಾರ. ೩೪-೦೪); ಬಳಿಕ ಬಯಕೆ ಪರ್ಚಿದುದು . . . ನರನದಳಾಕ್ಷ ನರಸಿಂಹನ ಮೂರುತಿ ಬಳೆಯುಬಂಗನೆಯ ಗರ್ಭದಲಿ (ಕಂಕಹಾ. ೪-೬೦). ೩. (ಅಲಂ) ಸ್ತ್ರೀಯರಿಗೆ ಸೀಮಂತ, ಬಾಣಂತನ ಮುಂತಾದ ಸಂದರ್ಭಗಳಲ್ಲಿ ವಿಶೇಷವಾಗಿ ಉಣ್ಣಗೆ ಹಚ್ಚುವ ಕಾಡಿಗೆ,—ಕಪ್ಪು : "ಅಂಜನವೆ ಬಯಕೆ" (ಕಜಿ. ೦೩೦).

**ಬಯಕ್ಕೆ** : ೧. ನಿನ್ನ ಕೊಟ್ಟುದನೆ ಪಸಾದಮೆಂದು ಪೊಡೆವಟ್ಟು ಮನೋಮುದದಿಂದೆ ಕೊಂಡು ಬಾಳ್ವುದುವೆ ಬಯಕ್ಕೆ ಮುಂ ನಿನಗದಂ ಕಿಡಿಪಂದೆಲೆ ಕರ್ಣ ಕೇತುವಾದುದು ನಿನಗಾ ವೃಕೋದರನ ಕಾಯ್ಪುನೆ ಪೊತ್ತಿಸಿದನ್ನ ಕಾಳೆಗಂ (ಪಂಪಭಾ. ೧೩-೬); ಭವವಾರ್ಧಿ ಪ್ರತಿಮಗ್ನ ಜೀವನಿವಹಂ . . . ಭವಸಂತಾನಂಗಳೊಳ್ ಕೂರ್ವ ಕೂಡುವ ತಳ್ತುರ್ವ ಬಯಕ್ಕೆಯಿಂ ಬಯಸುಗುಂ (ಶಾಂತಿಪು. ೯-೬). ೨. ಜಿನಮಜ್ಜನಂಗಳಂ ಮಾಳ್ಪ ಜಿನೇಂದ್ರಪೂಜೆಯನೆ ಮಾಳ್ಪ . . . ಚತುರ್ವಿಧಮಪ್ಪ ದಾನಮಂ ಮಾಳ್ಪ ಬಯಕ್ಕೆ[ಶಾಶಾಂ. ಯಂಕೆ]ಯಾಯ್ತು ಜಿನದತ್ತಗೆ ಭವ್ಯನ ಮೇರು ಗರ್ಭದೊಳ್ (ಆರಾಕಥೆ. ೨-೨೩); ☞ ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪವಿರಬಹುದು. **ಬಯ್ಕೆ** : ೧. ಚದುರರ ಮೆಚ್ಚು ಭಾವುಕರ ಕೈಪಿಡಿ ಜಾಣರ ಬಯ್ಕೆ ಸತ್ಕಲಾವಿದರ ವಿಲಾಸಮತ್ಕರಿಗಾಭರಣ . . . ತಾನೆನಿಪ್ಪ ಸಮ್ಮುದದೊಳೆ ಬಣ್ಣಿಕುಂ ಧರಣಿ ಸತ್ಕವಿಮಲ್ಲನ ಕಾವ್ಯ ಸಾರಮಂ (ಕಾವ್ಯಸಾ. ೦-೨೩) ; ಕೇಳದಿರು ; ತಿಳಿಯಮೇಟಕ್ಕೆಂಬ ಬಯ್ಕೆಯುಂ ಬೇಡ (ಬ್ರಕ್ರೃ. ೨೬-೩೩೬). ೨. ಯೊಳ್ಳೋಳರ ಹಾದಿ ಗಳೊಂದೆಸೆಯೊಳು ಬಯ್ಕೆಯ ಸತಿಯರ ಸಾಲೊಂದೆಸೆಯೊಳು (ತಿರುಪಾ. ಕೀ. ೨೨೨-೨೦). **ಬವಕೆ** : ೨. ಒಡಲೊಳ್ ಶಿಶುವುದಯಿಸಿ ಬಳೆಯುತ್ತಿರಲೊಡಮಾವುದ ಪಣ್ಣುಣ್ಪ ಬವಕೆ[ಶಾಶಾಂ. ಸೆ] ತನಗಡಸಿತು (ಶಬರಾ. ೨-೪೦).

**ಬಯಕೆ ಮಾಡು** = (ಚೊಚ್ಚಲುಬಸಿರಿಗೆ) ಸೀಮಂತವನ್ನು ಮಾಡು; ಬಯಕೆಯನ್ನು ಪೂರೈಸು : ನಿನಗೆ ಮದುವೆ ಮಾಡಿದೆವು, ಅವಳಿಗೆ ಬಯಕೆ (ಸೀಮಂತ) ಮಾಡಿದೆವು (ಸೋಲು. ೧೦). **ಬೈಕೆಗಪ್ಪು** = ಸ್ತ್ರೀಯರಿಗೆ ಸೀಮಂತ, ಬಾಣಂತನ ಮುಂತಾದ ಸಂದರ್ಭಗಳಲ್ಲಿ ವಿಶೇಷವಾಗಿ ಕಣ್ಣಿಗೆ ಹಚ್ಚುವ ಕಾಡಿಗೆ,—ಕಪ್ಪು : "ಅಂಜನವುನೆ ಬೈಕೆಗಪ್ಪು" (ಕಕುಜಾ. ೮೩).

[< ಬಯುಸು₁ + — ಕೆ. / ತಮಿ. ವಯಮ್, ವಯಾವು ; ತುಳು. ಬಯಕೆ, ಬೈಕೆ; ತೆಲು. ಬಯಂಕ, ಬಯ್ಯಂಕ]

**ಬಯಕೆಗವಿ** (ನಾ). ಮಹತ್ವಾಕಾಂಕ್ಷೆಯನ್ನು ಹೊಂದಿರುವ ಕವಿ : ಅಹಂಕಾರದೊಳ್ ಬಾತು ಬಲ್ಪಿಗೆ ಹಾರೈಸುವರೇಕೆ ಬಯಕೆಗವಿಗಳ್ ಕೆಲಬರ್ (ಅಭಿಧಾನ. ೦-೨೪). [ಬಯಕ್ಕೆ₂ + ಕವಿ₁]

**ಬಯಕೆವಟ್ಟಲ್** (ನಾ). ಬಯಸಿದುದನ್ನು ಕೊಡುವ ಬಟ್ಟಲು ; ಅಕ್ಷಯಪಾತ್ರೆ : ಪೊಡವಿ ಬಯಕೆವಟ್ಟಲ್ ; ಮಾರಿಯ ಕೋಣೆವಲ್ಲು ಮುಜಾವ, ಭೈರವನ ನಿಡುಜಡೆಯುಂ ಪಿಡಿವ, ಕಾಳರಕ್ಕಸಿಯ ಕೂರ್ವಾಳಂ ಸೆಳೆವ ಪಡೆವಳರೊಳರ್ . . . ಮೇಣೇತಜ ಚಿಂತೆ (ರಾಜಶೇ. ೦೨-೩). [ಬಯಕ್ಕೆ₂ + ಬಟ್ಟಲ್]

**ಬಯಕೆವೆಣ್** (ನಾ). ಬಯಕೆಯುಂಟಾದ ಗರ್ಭಿಣಿಹೆಂಗಸು : ಕಂಡಕಂಡರೆಲ್ಲಂ . . . ಬಯಕೆವೆಂಡಿರಂತಗುಟುತ್ತುಂ . . . ಮಗರಣಮಂ ನೋಡುವರಂತೆ ನಗುತ್ತುಮಿಂತೆಂದರ್ (ಧರ್ಮಾಮೃ. ೯-೬೬).

[ ಬಯಕ್ಕೆ₂ + ಪೆಣ್ ] "

**ಬಯಕ್ಕೆ** 'ಬಯಕ್ಕೆ₂' ನೋ.

**ಬಯಗು** (ಕ್ರಿ). = ಬಯಸು (?) : ಶ್ರೀಕೇಸಿಗ × × × ಕಲೆನೆಡೆಯಲು ಕಟ್ಟನ್ ಕಟ್ಟುವುದರ್ಕ್ಕೆ ಕೊಟ್ಟ ಸ್ಥಿತಿಕ್ರಮವೆನ್ತೆನ್ದೊಡೆ ಒನ್ದರಣೆಯ ನೀರ ಬಯಗಿದ ವರಿಸ ಪೆತ್ತೊನ್ದಿ ಎರಡನೆಯ ವರಿಷಮಟಳವಿ ಮೂಜನೆಯ ವರಿಷದನ್ದಗೆ ಅಯ್ದಳವಿ ಎಲ್ಲಾ ಕಾಲಕ್ಕಂ ಎಲ್ಲಿಟ್ಟು ಬಲು ಸಲ್ಗುಂ (ಎಕ. III, ಶ್ರೀರಂಗ. ೦೪೪-೦೬ ; ೯೦೪ ?).

[☞ ಇದು 'ಬಯಸು' ಎಂಬುದರ ಅಪಲಿಖಿತವ ? . / ತುಳು. ಬಯಕು]

ಬಯನಿ 'ಬಯಿನೆ' ನೋ.

**ಬಯಲ್** 'ವಯಲ್' ನೋ.

**ಬಯಲಾಟ**, ಬೈಲಾಟ (ನಾ). ಮೈದಾನದಲ್ಲಿ ಅಟ್ಟಣೆ ಹಾಕಿ ಆಡುವ, ಯಕ್ಷಗಾನದ ಒಂದು ಪ್ರಕಾರ ; ಜಾನಪದ ನಾಟಕ ಪ್ರಕಾರಗಳಲ್ಲಿ ಒಂದು ಬಗೆ : ಈ ನಾಟಕದಲ್ಲಿ ಅಂಕಗಳ ವಿಭಾಗವಿಲ್ಲ . . . ಆಕಾಶದ ಕೆಳಗೆ ಬಯಲಾಟ (ಕಬಿಪಾ. ೦೬೪) ; ಬಯಲಾಟದ ವೇಷ ಕುಣಿದು ಬೆಳಗು ಬರಲು ದಣಿದೆವು (ಕಂಪಬು. ೫೪-೨೩). **ಬೈಲಾಟ** : ಹಾವಭಾವ ತುಂಬಿದ ನಮ್ಮ ಹಳ್ಳಿಗರ ಕುಣಿತಗಳು ಭರತಮುನಿಯ ನೃತ್ಯಗಳನ್ನು ಅನೇಕ ಸಂದರ್ಭಗಳಲ್ಲಿ ಹೋಲುತ್ತವೆ . . . ಉತ್ತರ ಕರ್ನಾಟಕದಲ್ಲಿ 'ಮೂಡಲಪಾಯ' ಬೈಲಾಟಗಳಲ್ಲಿಯ ಕುಣಿತಗಳೇ ಇದಕ್ಕೆ ಬಲವಾದ ಸಾಕ್ಷಿ (ಕನ್ನಜಾ. ೩೪) ; ಬೈಲಾಟದಾಗಿನ ಸೋಗು ಮಾತಾಡಿ ದಾಂಗ ಮಾತಾಡತೀಯಲ್ಲೋ ಮಾವಾ ! (ಸುಶ್ರೃಕ. ೯೩).

[ಬಯಲು (<ವಯಲ್) + ಆಟ]

**ಬಯಲಿಗ** (ನಾ). ಶೂನ್ಯದಲ್ಲಿ ಒಂದಾಗುವವನು. — ಐಕ್ಯ ಹೊಂದುವವನು : ಸಚ್ಚಿದಾನಂದ ನಿತ್ಯಪರಿಪೂರ್ಣವಪ್ಪ ನಿಃಕಲಲಿಂಗವ ಧ್ಯಾನಪೂಜೆಗಳಿಲ್ಲದೆ ನಿರವಯದಲ್ಲಿ ಬಯಲಿಗನಾಗಿ (ಶೂನ್ಯಸಂ. ೦-೨೨) ; ಬನ್ನಬಡದನ ಬಯಲಿಗನನೆ ಮಿಾರ್ವರ್ಗ್ಗೆಯುಂ ಕೆನ್ನವಿಕ್ಕದನ ಸತತಂ . . . ನೋಡಿಯಾಡಿಸುತವಗೆ ಚಿನ್ನ ನವರನ್ನದೊಡಿಗೆಯನಿಕ್ಕಿ ಕಣ್ಣುಂದಿ ನೋಡ ಬೇಕೆರೆ ಪ್ರಿಯನೆ (ಶ್ರಕುಶ. ೩-೦೨೬).

[ಬಯಲ್ (<ವಯಲ್) + — ಇಗ]

**ಬಯಲು** 'ವಯಲ್' ನೋ.

**ಬಯಲುಗ** (ನಾ). [ಬೌದ್ಧ] ಶೂನ್ಯವಾದಿ : ತಮ್ಮ ಯೋಗಗ್ರಂಥಾರಂಭದ ಗುರುವಚನಿಯದ ಮೂರ್ಖಂ ಬಯಲುಗನಪ್ಪ ಸವತ್ಕುಮಾರಂ ಶೂನ್ಯಹೃದ ಯಾಂಧಂ (ಶಾಕಟಾ. ೨೩ ಕ, ಕಕಾರ್ಗ್ ಸಂ೦); ಕೀಜಿದಿರು ಚಾರ್ವಾಕ . . . ಮಿಾಜಿದಿರು ಪ್ರಭಾಕರಗ ಮುಖದೋಱದಿರು ವೇದಾಂತಿ ಬಯಲುಗ ಹೋರದಿರು (ಶಾಕಟಾ. ೯-೦೦೯).

[ ಬಯಲು (<ವಯಲ್) + — ಗ₂ ]

**ಬಯಲುಗೈ** (ಕ್ರಿ). ಪ್ರಕಟಗೊಳಿಸು; ಹೊರಗೆಡಹು : ಸಿಡಿಲ ಪಳಿಗಸು ವರಿವು ರವಿಯ ಸರಿಹಿಡಿವರಿವು . . . ಬಾನ ಜಾಲಾಡುತ್ತ ತಾರೆಗಳನೆಳವರಿವು ಸೂಕ್ಷ್ಮಾತಿಸೂಕ್ಷ್ಮವನು ಬಯಲುಗೈವರಿವು (ಮಲೆದೇ. ೯೩-೯).

[ಬಯಲು (<ವಯಲ್) + ಗೈ (<ಕೆಯ್₁)]

**ಬಯಲುಗೊಳಿಸು** 'ಬಯಲ್ಗೊಳಿಸು' ನೋ.

**ಬಯಲುದೊರೆ** 'ಬಯಲ್ದೊಱೆ' ನೋ.

**ಬಯಲುದೊಱೆ** 'ಬಯಲ್ದೊಱೆ' ನೋ.

**ಬಯಲುನಾಡು** 'ಬಯಲ್ನಾಡು' ನೋ.

**ಬಯಲುಬಂಡಿ** (ನಾ). ಕಮಾನಿಲ್ಲದ ಬಂಡಿ; ಕೊಲ್ಲಾರಿಯಿಲ್ಲದ ಚಕ್ಕಡಿ: ಎಲ್ಲರೂ ಹರದಾರಿ ದೂರ ದಿಬ್ಬಣವಲ್ಲ ಎತ್ತಿನ ಬಂಡಿಯಲ್ಲೇ ಹೊರಟಿತ್ತು. ಕೆಲವು ಸವಾರಿ ಬಂಡಿಗಳು, ಇನ್ನು ಕೆಲವು ಬಯಲುಬಂಡಿಗಳು (ಸ್ವಚಿತ್ರ. ೨೨೬). [ಬಯಲು (<ವಯಲ್) + ಬಂಡಿ₁]

**ಬಯಲುರಂಗಭೂಮಿ** (ನಾ). ಮೈದಾನದ ಆವರಣದಲ್ಲಿ ಚಾವಣಿ ಯಿಲ್ಲದ, ರಂಗವು ಮಧ್ಯದಲ್ಲಿಯೂ ಪೀಠಪಂಕ್ತಿಗಳು ಸುತ್ತಲೂ ಇರುವಂಥ ರಂಗಭೂಮಿ; ☞ "ಇಂತಹ ವೃತ್ತಾಕಾರವಾದ ರಂಗ ಭೂಮಿಗಳು ಗ್ರೀಸ್ ಮತ್ತು ಇಟಲಿ ದೇಶಗಳಲ್ಲಿ ಅನೇಕ ಕಡೆಗಳಲ್ಲಿ ಇದ್ದುವು. ಈಗ ನಮ್ಮ ದೇಶದಲ್ಲಿ ಪಂದ್ಯಪ್ರದರ್ಶನಗಳನ್ನು ನಡೆ ಸಲು ಕಟ್ಟಿಸುವ ಸ್ಟೇಡಿಯಂಗಳನ್ನು ಇದೇ ಮಾದರಿಯಲ್ಲಿ ಕಟ್ಟಿಸು ತ್ತಾರೆ" : ಊರಿನ ಒಂದು ಮೂಲೆಯಲ್ಲಿ ಬಯಲುರಂಗಭೂಮಿ ಇತ್ತು (ಕಕಪು. ೩-೦೪೪). [ಬಯಲು (<ವಯಲ್) + ರಂಗಭೂಮಿ]

**ಬಯಲುಸೀಮೆ** (ನಾ). ಮೈದಾನದಿಂದ ಕೂಡಿದ ಪ್ರದೇಶ; ಬಯಲು ಪ್ರದೇಶ : ಕಳಸಾಪುರದ ಮಲೆನಾಡು ಬಯಲುಸೀಮೆ ಸಂಧಿಸುವ ಜಾಗ ದಲ್ಲಿದೆ (ಕಳಹು. ೯೨); ಬಯಲುಸೀಮೆಯವರಾದ ನಮಗೆ ರೊಟ್ಟಿಯಿಲ್ಲ ದಿದ್ದರೆ ಹೊಟ್ಟೆಯೇ ತುಂಬದು (ಜಂಗಾರ. ೯೦). 'ಗಿಡಸೀಮೆ' ಪರಾ. [ಬಯಲು (<ವಯಲ್)+ಸೀಮೆ]

**ಬಯಲೊಲ್ಮೆ** (ನಾ). ಕಪಟಪ್ರೇಮ; ಸೋಗಿನ ಪ್ರೀತಿ : ಕೊಬ್ಬಿಚಾಟ ಹೋರಟೆ ಕಲಹ ಬಜಬಗುತ್ತ ಬಯಲೊಲ್ಮೆಗಳ ಮಾಡಿ ಬೆಲೆವೆಣ್ಗೆ ತೆಱುವರ ಧನವ ಬಲ್ಲವರು (ಕುಮಾರಾಂ. ೨೯-೬೯). [ಬಯಲ್ (<ವಯಲ್) + ಒಲ್ಮೆ]

**ಬಯಲ್ಕಡೆ**, ಬೈಲುಕಡೆ (ನಾ). (ಆಲಂ) ಶೌಚ ಮುಂತಾದ ಪ್ರಾತರ್ವಿಧಿ; ಮಲವಿಸರ್ಜನೆ; ಬಹಿರ್ದೇಶ: ಹೊಲ ಬರುವಾಗ ನಾಯಿ ಬಯಲ್ಕಡೆಗೆ ಕೂತುಕೊಂಡಿತು (ಗ್ರಾಮ). **ಬೈಲುಕಡೆ** : ಬೈಲುಕಡೆ ಹೋಗೋದು ಹಿಡ ಕೊಂಡು ಹೆಂಡರು ಮಕ್ಕಳು ಮನೀಮಾರು ಎಲ್ಲಾ ಆ ಟನಕದಾಸರು ಹೇಳಿ ಧಾಂಗ ಒಂದು ಗೇಣು ಹೊಟ್ಟೆ ದಶಿಂದ ನೋಡಪಾ (ಕಿಡಗು. ೯೦). [ಬಯಲ್ (< ವಯಲ್) + ಕಡೆ]

**ಬಯಲ್ಗಾಳಿ** (ನಾ). (ಮೈದಾನದ ಕಡೆಯಿಂದ) ತಡೆಯಿಲ್ಲದೆ ಬೀಸುವ ಗಾಳಿ : ಇಂದವನ್, ನಾಳೆ ನಾನ್ ಏನ್ ಮಾಡೊ ಆಕ ಬಾಟುಟ್; ಬೀಸುವ ಬಯಲ್‌ಗಾಳಿ, ಪರಿದಡಗುವ ನೆಬಿಲ್ (ಅಕ್ಷರಾ. ೬-೧೧೦). [ಬಯಲ್ (<ವಯಲ್) + ಗಾಳಿ₁]

**ಬಯಲ್ಗೆಡೆ** (ಕ್ರಿ). (ಆಲಂ) ವ್ಯರ್ಥವಾದುದೆಂದು ಹೀನಾಯವಾಗಿ ನುಡಿ._ ಅವಮಾನಿಸು : ಪರತತ್ತ್ವವೆಂದೇಕ ವರರುದ್ರನೆಂದೊರೆದ ಪೊರೆದಥರ್ವದ ಶಿರದ ಸತ್ಕಾರ್ಥಮಂ ಬಱಿ ಬಯಲ್ಗೆಡೆದು ನೆಟ್ ಉಱಿ ಪುಳ್ಳ ಬೌದ್ಧವ್ಯಾಧರದೆತ್ತಲಱಿಗು ಶೂನ್ಯಾತ್ಮರಬ್ಯೋ (ಶಾಪಂಕ. ೨-೧೬೮). [ಬಯಲ್ (<ವಯಲ್) + ಕೆಡೆ₂]

**ಬಯಲ್ಗೊಳಿಸು**, ಬಯಲುಗೊಳಿಸು (ಕ್ರಿ). ಸಾವಿಗೆ ಒಳಗು ಮಾಡು._ ಗುರಿಮಾಡು; ಸಾವಿಗೀಡುಮಾಡು : ದಕ್ಷಯಾಗದಿ ವಪುವ ಬಯಲ್ಗೊಳಿಸಿ ಮೇನಕೆಯ ಕುಕ್ಷಿಯು ಸಂಜನಿಸಿ ಬೆಳೆಯೆ (ನವಶೋ. ೬-೦೬). **ಬಯಲುಗೊಳಿಸು** : ತ್ರಿಜಗದಾಂಬೆ ಗೌರಾಂಬಿಕೆಯು ದಕ್ಷಯಾಗದಿ ತನುವಂ ಬಯಲುಗೊಳಿಸಲು (ನವಶೋ. ೬-೦೭). [ಬಯಲ್ (<ವಯಲ್) + ಕೊಳ್₁ + _ಇಸು₁]

**ಬಯಲ್ಚು** (ಕ್ರಿ). ಪ್ರಕಟಮಾಡು ; ತೋರಿಸು ; ಹೊರಗೆಡಹು : ರಾಘ ವಾಸ್ತ್ರಜ್ಯೋತಿ ತನ್ನ ಪಕ್ಷಕೆ ತಾನೆ ವಿದ್ರೋಹಿಯಾದುದೆನೆ ವಾನರವ್ಯೂಹ ಸ್ಥಿತಿಯಂನೆಂತ ದಶರಥನ ಸುತಸರ್ಕದಾಣಮಂ ತೋರ್ದುದು ಬಯಲ್ಚಿ ಆ ತಾರಾಕ್ಷಿವಲ್ಲಭಗೆ (ಶ್ರೀರಾಮಾ. ೬೩೬-೦೬೮). [ಬಯಲ್ (<ವಯಲ್) + _ಚು₁]

**ಬಯಲ್ದಾವರೆ** (ನಾ). ನೀರಿನ ಆಶ್ರಯವಿಲ್ಲದೆ ಬೆಳೆಯುವ ತಾವರೆ; ನೆಲದಾವರೆ : ಕರಣಂಗಳೆ ಕಾಪುಗಳೆನೆ ಹರಿವಸ್ತ್ರಂ ಗಳೆ ಪಸುರ್ತ ಪಸುರೆಲೆಯೆನೆ ತೋರ್ಪರುಣದಿನಮಣಿ ಬಯಲ್ದಾವರೆಯೆನೆ ಪೋಲ್ತಿರ್ದನಪರಗಿರಿಪರಶಿರದೊಳ್ (ಶಾಸ್ತ್ರಸಾ. ೬೬೦ ಎಂತ್ರ್ರಿ): ಅರ ದುಱುಗಿರ್ದ ಬಯಲ್ದಾವರೆಯೆಲೆಗೊಡೆಯಿಂದುವಿನಲ್ಲಿ ಸಾಱಿದಿಂ ಕಣ್ಗೆಯ್ದುರ ಹಂಸವಿಘಾಸನಮಂ ಸಿಜಚರಣಾಬ್ಜದೆ ಸೂಂಕಿ ಸ್ವಪಸಾರ್ಥ ಕುಳ್ಳಿರ್ದನಂ (ಶಾರಂಶಾ. ೨೬೨): ಅರವಿಸೆಯೊಳತ್ತಲಿತ್ತಂ ಚರಿಯಿಪ ದೇವಿಯರ ಪದತಳಾಂಶು ಬಯಲ್ದಾವರೆಯೆಸಲನೆಸಗಿದುವು ನೂಪುರತತಿ ಬೀಜಿದುವು ಮದನವರೂಸಿನೀರುಳಿಯಂ (ಶುಕ್ತಿಕ. ೯-೬೨). [ಬಯಲ್ (<ವಯಲ್) + ತಾವರೆ (<ತಾಮರೆ)]

**ಬಯಲ್ದೊರೆ** 'ಬಯಲ್ದೊಱೆ' ನೋ.

**ಬಯಲ್ದೊಱೆ**, ಬಯಲುದೊರೆ. ಬಯಲುದೊಱೆ. ಬಯಲ್ದೊರೆ(ನಾ). ೧. ಮೈದಾನದಲ್ಲಿ ಹರಿಯುವ ನದಿ._ಹೊಳೆ : ಕಣ್ಣಿನೀರ್ಗಳ ಪೊಸರ್ ಕರೆಗಣ್ಣ ಕಪೋಲದೊಳ್ ಬಯಲ್ದೊಱೆಯನೊಡರ್ಚೆ ಚಂದ್ರನುಂ ಕೋಕ ರಸಾಕುಳಚಿತ್ತ್ರರಾಗಿ ಮೆಯ್ಮಱೆಯಳೆ ಚಿತ್ರಮಲ್ತು (ಶಂರಾಶೂ. ೯-೬೦): ವಸುದೇವನಂತಾನುವಮಾ ರಾಕ್ಷಸರಕ್ಷಿತಪ್ರಸೂತಿಕಾನಿಳಯದಿಂ ತಳರ್ದು . . . ಮಧುರಾಪುರಮಂ ಪೊಱಮಟ್ಟು ಬಯಲ್ದೊಱೆವರಿವ ಚಟ್ಟಿ ಯೊಳುದ್ದೇಶಕ್ಕೆ ಬರ್ಪಲ್ಲಿ (ಜಗಂ. ೬-೬೮) ; ಮಿಱುಮಿಱುಪಾದ ಮೈ ಹೊಳಹಿಂದ ತೆರೆಗಟ್ಟಿ ನಿಱಿದೇಳ್ವ ಹೊಂಗಾಸಿಯಿಂದ ಕುಱುಕುಱುಮೆಟ್ಟಿ ರಂಗದೊಳು ತಂಪಿನ ಬಯಲ್ದೊಱೆ ಹೊಳೆವಂತೆ ಹೊಳೆವರು (ಕುಮಾ. ೦೩-೧೦೦). ೨. ಬಿಸಿಲಿನಲ್ಲಿ, ನೀರಿಲ್ಲದಿದ್ದರೂ ನೀರಿರುವಂತೆ ಕಾಣುವ ಭ್ರಮೆಯ ನೋಟ ; ಬಿಸಿಲುಗುದುರೆ ; ಮರೀಚಿಕಾಜಲ : " ಬಯ ಲ್ದೊಱೆ ಬಿಸಿಲ್ಗುದುರೆಯೆನಲುಂ ಗಡ ಮರೀಚಿಕಾಜಳ " (ಕಣ್ಣಕೈ. ೦೦) ; ಸಿರಿ ಸುರಚಾಪದಂತೆ ಪೊಸಜವ್ವನಮಿದ್ದಿಲ ಬೂದಿಯಂತೆ . . . ಪೆಂಡಿರ ಸುಖಮುಣ್ಮಿ ಪೊಣ್ಮುವ ಬಯಲ್ದೊಱೆಯಂತೆ . . . ಕಿಡಲಲ್ಲದೆ ತಾಂ ಸ್ಥಿರಮಾಗಲಾರ್ಕುಮೇ (ರಾಮಾಶ್ವ. ೫-೦೮); ದೇವಾ ಬಯಲ್ದೊಱೆಯ ನೀರುತಿರ್ದಂ ಗುರುವೆ ದೇವಾ ಕನಿಷ್ಠರೊಡನೊಡಱುತಿರ್ದಂ ಪ್ರಭುವೆ (ಶಾಂತೀ. ದೇ. ೨೬೦-೨೦) : ವನಜಂತುಗಳ್ ಬಯಲ್ದೊಱೆಗೆ ಮರುಳ್ಗೊಂಡುವು (ರಾಮಾಶ್ವ. ೫೨-೫). **ಬಯಲುದೊರೆ** : ೨. ಪ್ರೇಮಸಾಗರದಮೃತ ಬಯಲುದೊರೆಯಾಯ್ತು ? (ಶಂಗೀತ. ೬೬-೨೦). **ಬಯಲುದೊಱೆ** : ೨. ಕಯ್ಯ ನೀರಂ ಚೆಲ್ಲಿ ಬಯಲುದೊಱೆಗೆ ಸಲೆ ಪರಿವನೆಂತಂತೆ ಹುಲುಮೃಗದ ಸತ್ತ್ವದಿಂ ಬಲುಸಿಂಹದೊಳ್ ಕದನಮಂ ಮಾಡಿಕೊಂಡವನ ನೆಲೆ ನಿನ್ನೊಳಾದುದು (ಅಚಲಂ. ೦೬-೬). **ಬಯಲ್ದೊರೆ**: " ಬಯಲ್ದೊರೆಯೆನಲ್ ಮರು ಮರೀಚಿಕೆಯನಾಮಂ " (ಕಣ. ೬೩). [ಬಯಲ್ ( < ವಯಲ್) + ತೊಱೆ₂]

**ಬಯಲ್ನಾಡು**, ಬಯಲುನಾಡು (ನಾ). ಗುಡ್ಡ, ಬೆಟ್ಟ ಮುಂತಾದುವು ಗಳಿಲ್ಲದೆ, ಮೈದಾನಗಳಿಂದ ಕೂಡಿದ ನಾಡು ; ಬಯಲುಸೀಮೆ : ಬಯಲ್ನಾಡನೊಳ್ಕೊಗ್ರಹವಾದ ದಿವಸಂ ಬಯಲ್ನಾಡಂ ಬನ್ದು ಕೊತ್ತ ಮಜ್ಜಲವಣಿಱಾದು ತುಱುವಂ ಕೊಣ್ಡು ಪೋಗುತ್ತಿರೆ (ಎಕ. IV. ಹಗ್ಗ. ೦೦೩-೬ ; ಸು. 910). **ಬಯಲುನಾಡು** : ನೀಲಗಿರಿ ಹಡಿಯ ಘಟ್ಟಂ ಯೇಳುಂ ಮಲೆ ಕಂಚಿ ತುಳುವ ರಾಜೇಂದ್ರಪುರಂ ಕೋಲಾಲ ಬಯಲುನಾಡುಮುನಾಳ್ವದೆ ಕೋಡ ವಿಷ್ಣುವರ್ದ್ಧನದೇವಂ (ಎಕ. VIII. ತಿರ್ಥಹ. ೯೦-೩೨ ; 1181). [ಬಯಲ್ (<ವಯಲ್) + ನಾಡು]

**ಬಯಲ್ನುಡಿ** (ನಾ). ಸಂಳ್ಳುನುಡಿ ; ವ್ಯರ್ಥಾಲಾಪ : ಆದೊಡೆ ಬಯಲ್ನುಡಿಯೇದಾನಿದನಿನ್ನೊರೆಯೆಂ (ಅಮೃತ. ೯೦-೦೨). [ಬಯಲ್ (<ವಯಲ್) + ನುಡಿ₂]

**ಬಯಲ್ಪಡಿಸು** (ಕ್ರಿ). ಪ್ರಕಟಗೊಳಿಸು, ಹೊರಗೆಡಹು : ಅಮ್ಮ ಅಪಕಾರವನ್ನು ಮಾಡಿದರೂ ಅದನ್ನು ಬಯಲ್ಪಡಿಸಿದರೆ ಕೆಟ್ಟ ಹೆಸರು ಬಾರದಿರದೆಂದೆಣಿಸಿ ಬಿಟ್ಟಿಟ್ಟನು (ಅಕ್ಬೀತ್ರ ೦೦೬). [ಬಯಲ್ ( < ವಯಲ್) + ಪಡಿಸು]

**ಬಯಲ್ಬೀಟ್** (ಕ್ರಿ). ನೆಲವು ಗೋಚರಿಸು ; ತಳ ಕಾಣು : ಆ ಕೂಪಾರಂ ಬಿಚ್ಚಿ ಭರದಿಂದೆ ವಾರಿಯೆರಟ್ಟಿಸೆಗಂ ಪಚ್ಚು ಸೂಸೆ ಕೆಳ ದೊಳಗೆ ಬಯಲ್ಬೀಬ್ದುದು ತದ್ರುಭಸಕರ್ಚಿಟ್ಟು ಕಡಂಗಿದುವು ಜಳಚರಪ್ರಕರಂ ಗಳ್ (ಶಂಶ್ರತಿ. ೫-೯೩). [ಬಯಲ್ ( < ವಯಲ್) + ಬೀಟ್ ]

**ಬಯಲ್ಪುಗು** (ಕ್ರಿ) ಕಾಣದಾಗು ; ಇಲ್ಲವಾಗು : ಇಂತಾಕೆವಾಳರ ಬೀರಮುಱ್ಯಾಡೆ, ಸೋರ್ಕರ್ ಸೋರೆ, ಅಳವೊಳವಾೞ್, ಚಲಂ ನೆಲಗಿಡೆ, ಜಲಂ ಬಯಲ್ಪುಗೆ, ಕೊಂಚೆಗೋಂಟೆ ದೂಳಿಗೋಟೆಯಪ್ಪುದುಂ (ರಾಮಾಶ್ವ. ೯೬-೨೦). [ಬಯಲ್ (< ವಯಲ್) + ಪುಗು (< ಪುಗು)]

**ಬಯಲ್ಪೊನಲ್** (ನಾ). = ಬಯಲ್ದೊಡೆ ೨ : ಬಯಲ್ಪೊನಲಂತೆ ಕಿಡುವಂತಪ್ಪ ಪರಿವಂದಿನಂತೆ ಕಡಿವಪ್ಪ . . . ಸಂಸಾರವಂ ನಂಬಿ ದರ್ಶನಮುಮಂ ವ್ರತಮುಮಂ ಕಿಡಿಸುವುದಗ್ಗಿಕೆಯೆಂದು ವ್ರತ ಪರಿರಕ್ಷಣೋಪಾಯಮಂ ಚಿಂತಿಸುತ್ತಿರ್ದರ್ (ಧರ್ಮಾಮೃ. ೩-೧೪).
[ಬಯಲ್ ( < ವಯಲ್) + ಪೊನಲ್]

**ಬಯಸಿಕೆ** (ನಾ). ಇಚ್ಛಿಸುವಿಕೆ ; ಬಯಸುವಿಕೆ : ಬಯಕೆಯೊಳೇ ಬಾಳ್ ಕಳೆವುದು ಬಯಕೆಯು ದೊರೆತ ಚಣ ಬಯಸಿಕೆಯನೆ ಬಯಸುವ ತೆರವೇಕಹುದೆನ್ನ ಮನ (ಗೋಕು. ೨೪-೩). [ಬಯಸು$_1$ + — ಇಕೆ]

**ಬಯಸು$_1$** (ಕ್ರಿ). ೧. ಹಂಬಲಿಸು ; ಇಚ್ಛಿಸು ; ಅಪೇಕ್ಷಿಸು : ಕದಪಿನ ಕಣ್ಣ ಸಾಕೆಯನಲಂಕೃತಮಪ್ಪ ಗಳಪ್ರದೇಶಮಂ . . . ಮೃದುರಸನಾಗ್ರಮಂ ಬಯಸಿ ಚುಂಬಿಸಿದರ್ (ಕಾವ್ಯಾ. ೬೬೩ ಟಿಪ್ಪ); ನಿನ್ನ ಪ್ರಾಣವಲ್ಲಭೆ ನಿನ್ನನೆಯಱಸಿ ಬಯಸುತಿರ್ಪಳ್ (ಕಾವ್ಯಾ. ೪೦-೨) ; ರಾಜಹಂಸಿ ಮಾನಸಸರೋವರವನಲ್ಲದೆ ಪೆಱತನೇಕೆ ಬಯಸುಗುಂ (ಸಂಶಾ. ೪-೩೯ ಪ) ; ಪ್ರೇಮಲತೆ ದಾಯಾರಿ ಕಾತರಿಸಿತಾವುದನೊ ತಾನರಿಯದುದ ಬಯಸಿ (ಕಾವ್ಯಾಂಗ. ೭-೦೬). ೨. ಕೋರು; ಹಾರೈಸು : ಪರರ ಕೇಡು ಬಯಸಿ ಗುರುಹಿರಿಯರನ್ನು ನಿಂದಿಸುತ್ತ . . . ಪರಮನಿಷ್ಕಮೌನಿಯಂತೆ ಧರೆಯ ಮೇಲೆ ಡಂಭ ತೋಱ ಹರಿವ ನೀರಿನ ತೀರದಿ ಕುಳಿತರೇನು ಬಕಧ್ಯಾನದಿ (ಪುಕೀತ. ೦-೦೪೦-೨) : ರೋಗಿ ಬಯಸಿದ್ದೂ ಹಾಲು ಅನ್ನ, ವೈದ್ಯ ಹೇಳಿದ್ದೂ ಹಾಲು ಅನ್ನ (ಗಾದೆ). [ದೇ. ॥ ತುಳು. ಬಯಸು, ಬಯಕು]

**ಬಯಸು$_2$** 'ಬಯಿಸಂ' ನೋ.

**ಬಯಸುಹ** (ನಾ). = ಬಯಸಿಕೆ : ತನ್ನೊಳು ಮೋಕ್ಷವಂ ಬಯಸುಹವದೇ ಕೇಳ್ ಪಾರಮಾರ್ಥಿಕ ಜೀವನನುಮತವು (ಸದ್ಗು. ೪-೦೬).
[ಬಯಸು$_1$ + — ಹ$_2$ ( < — ಪ$_2$)]

**ಬಯಸ್ಕೋಪು, ಬಯಾಸ್ಕೋಪು** (ನಾ). ಚಲನಚಿತ್ರ; ಸಿನಿಮಾ : ಇಂಗ್ಲಿಷ್ ಇತಿಹಾಸಕ್ಕೆ ಸಂಬಂಧಿಸಿದ ಕೆಲವು ಕತೆಗಳು ಸ್ಟೆಂಡರ್ಡ್ ಬಯಸ್ಕೋಪುಮಂದಿರಕ್ಕೆ ಬರಲಿವೆಯೆಂದು ಗೊತ್ತಾಯಿತು (ಸ್ವಸ್ವಹೊ. ೦೬೪). **ಬಯಾಸ್ಕೋಪು** : ಬಯಾಸ್ಕೋಪಿಗೆ ಹೋಗಿದ್ದವರೆಲ್ಲರು ಬಂದರು (ಕುಣಾಯ. ೦೦೭). [← ಇಂ. Bioscope]

**ಬಯಾನು** (ನಾ). ತಿಳಿಯಪಡಿಸುವುದು ; ವಿವರಣೆ : ಅವರ ವರ್ಗದ ಅರ್ಜಿಯಲ್ಲಿ ನನಗೆ ಅವರ ಮೇಲೆ ಕ್ರೋಧವಿರುವುದಾಗಿಯೂ . . . ನನ್ನ ಕೋರ್ಟಿನಲ್ಲಿ ಅವರಿಗೆ ನ್ಯಾಯ ದೊರೆಯುವುದಿಲ್ಲವೆಂತಲೂ ಬಯಾನು ಮಾಡಿದ್ದರು (ಕೆಂಪ. ೨೨೨). [← ಪಾರ. ಹಿಂ. ಬಯಾನ್ ; ಅರ. ಬೈಆನಾ; ಮರಾ. ಬಯಾಣ, ಬಯಾಣಾ]

**ಬಯಾಸ್ಕೋಪು** 'ಬಯಸ್ಕೋಪು' ನೋ.

**ಬಯಿನೆ, ಪೈನೆ, ಬಗನಿ, ಬಗನೆ, ಬಗಿನಿ, ಬಗುನಿ, ಬಯುನಿ, ಬೈನಿ, ಬೈನೆ** (ನಾ). ೧. ತಾಳೆಜಾತಿಗೆ ಸೇರಿದ ಒಂದು ಬಗೆಯ ಮರ : ಊರ ತರುಣನೊಬ್ಬ . . . ತೆಂಗಿನ ನಾರಿನ ಹಗ್ಗ, ಬೆತ್ತದ ತೋಳುಕಟ್ಟು, ಬಯಿನೆಹಲಗೆ—ಇವನ್ನು ಜೋಡಿಸಿ ಮನೆಯ ಸಾವಿರ ಬಟ್ಟೆ ಹೊಲವನ್ನು ಸೇರುತ್ತಾನೆ (ಜಾಹಗೀ. ೪೦). **ಪೈನೆ** : ೧. ಬಗನಿ, ಪೈನೆ, ಬೈನೆ, ಬೈರಿ (ಕ್ರಿ ಶಿಗ. ೦೯-೩೨೭). **ಬಗನಿ** : ೧. ಹೆಂಗಸರು ಗೆಣಸು ಹರಡುವುದೂ, ಗಂಡಸರು ಬಗನಿಹೆಂಡವನ್ನು ಇಳಿಸುವುದೂ, ಹಸಿವಾದಾಗ ಬಗನಿಯ ಕಬ್ಬನ್ನೇ ಆಹಾರವನ್ನಾಗಿ ಸಿಗಿದು ಆಯಾಸ ಪರಿಹಾರ ಮಾಡಿಕೊಳ್ಳುವುದೂ ಈ ಜನರ ಅಭ್ಯಾಸ (ಅಮಾ. ೯೬); ಎತ್ತರವಾಗಿ ಬೆಳೆದಿದ್ದ ಆ ಬಗನಿಯ ಮರದ ನೆತ್ತಿಯಲ್ಲಿ ಅದರ ಹೂವಿಗೆ ಕಟ್ಟಿದ್ದ ಕಳ್ಳಿನ ಮಡಕೆಯ ಕರಿಯ ಗೋಳವು ನೇತಾಡುತ್ತಿತ್ತು (ಜಾಹಗೀ. ೪೯). **ಬಗನೆ** : ೧. ಅವನು ಕೈಯಲ್ಲಿ ಕರಿಯ ಬಣ್ಣದ ಬಗನೆಯ ಕೋಲನ್ನು ಹಿಡಿದಿದ್ದನು (ಕಂಕಪಂ. ೨೬). **ಬಗಿನಿ** : ೧. ಸುರೆ ಬಗಿನಿಯಾಚೆಲೋಲೆಯ ಮರಗಳಾದಿ ಮಾತ್ತಿರದೆಸೆವ ಗಂಗಸಾಗರ ಮುಖ್ಯ ರಕ್ಕಸರ ಪರಿಪರಿಯ ಭೋಜನದ್ರವ್ಯಂಗಳಿಡಿದ ಭಂಡಿಗಳೈದೆ ಬರುತಿರ್ದಾವು (ತಂಪ. ೪೭-೪೩). ೨. ಒಂದಂ ಬಗೆಯ ಬಳ್ಳಿ : ಸೌದೆಯ ಹೊರೆಯನ್ನು ಕಟ್ಟಲು ಬಗಿನಿಯ ಬಳ್ಳಿ ಬಿಗಿಯಾಗಿರುತ್ತದೆ (ಕೂ). **ಬಗುನಿ** : ೧. ಬೇಲ ಬಗುನಿಯು ತದುಕು ತಪಸಿ ಕವಳೆಯು . . . ಕಿಕ್ಕಿರಿವ ಕಾನನದೊಳು (ಪಪಕೋ. ೬-೪); ಸೊಗಸು ಚಂದನ ಸೊಂಪು ಚಂಪಕ ಅಗರು ಅಂಬಟೆ ಅತ್ತಿ ಮತ್ತಿಯು ಬಗುನಿ ಬೆಳೆದಿಹ ತೆಂಗು ದಾಡಿಮ ಬಾಳೆ ರಸಬಾಳೆ (ಕರೇ. ೦೬-೩). **ಬಯುನಿ** : ೧. ಪ್ರಳಯಗಾಳಿಯ ತೆಱದಿ ತೆಂಗನು ಹಲಸು ಖದಿರವು ಬಯುನಿ ಮರಗಳನೆಳೆಯು ನೇಱಳು ನುಗ್ಗಿ ಮೂವನು ಕೋಪದಿಂದುಡಿದ (ಅಶಕ. ೦೦.೦೯); ಆತ ಆ ಬಯುನಿಮರದ ಎತ್ತರದಿಂದ ನಾಲ್ಕು ಸುತ್ತಲೂ ನೋಡಿ . . . ಅಲ್ಲಿಂದ ಕೆಳಕ್ಕೆ ಇಳಿದ (ಕೂಲಕ್ಕ. ೩೪). **ಬೈನಿ** : ೧. ಬೈನಿ (ಬೆರ್ಲಿ). —ಇದು ಗೆ ನಾರುಳ್ಳದ್ದು, ಬಿರುಸು, ಗಳೆಯ ಕೆಲಸಕ್ಕೆ ಬರುತ್ತದೆ . . . ರಸದಿಂದ ಅರ್ಕ ತೆಗೆದು ಸರಾಯ ಮಾಡುವರು (ಸಹಾಗ. ೪೬); ಪ್ರಿಯದಿಂ ನಿಮ್ಮಂಘ್ರಿಯಂ ಪೂಜಿಸದ ನರನ ಕೈ ಭಾವಿಸಲ್ ಭಾವುರೆ ಬೈನಿಯ ಕೈ (ಶಂಕ. ೩೬೬೪. XVII). **ಬೈನೆ** : ೧. ಬಗನಿ, ಪೈನೆ, ಬೈನೆ, ಬೈರಿ (ಕ್ರಿ ಶಿಗ. ೦೯-೩೨೭).
[ದೇ. ॥ ತಮಿ. ಪಯಿನಿ . ತುಳು. ಬಯಿನೆ, ದ್ಯೆನ, ಬೈನಿ]

**ಬಯಿಲ** 'ಬೈಲ' ನೋ.

**ಬಯಿಸಣಿಗೆ, ಬೈಶಣಿಗೆ, ಬೈಸಣಿಗೆ$_1$, ಬೈಸನಿಗೆ, ಭಸಣಿಗೆ, ವೈಸಣಿಗೆ** (ನಾ). ೧. (ವೃತ್ತಿಸಂಘದವರು ಒಟ್ಟಾಗಿ ಕುಳಿತು ನಡೆಸುವ) ಸಭೆ : ಸಮಸ್ತ ನಖರಂಗಳುಂ ಹಿರಿಸಿಂಗಿಯಲು ಶ್ರೀಮತು ಹಬ್ಬೇಶ್ವರ ದೇವರ ದೇವಾಯತದೊಳಶೇಶ ಬಯಿಸಣಿಗೆಯಾಗಿರ್ದ್ದ ಯಾ ಹಬ್ಬೇಶ್ವರ ದೇವರ ದೇವಕಾರ್ಯಾರ್ತ್ಥವಾಗಿ . . . ಬಿಟ್ಟ ಎತ್ತುಱುವತ್ತಯ್ದು (ಕೊಣ್ಣೂ. ೦೩-೬೬ ; 1186). ೧. **ಬೈಶಣಿಗೆ** : ನಾಗರಸರ ಮಗ ಬೊಂಮರಸ × × × ಗಳು ಸಮಸ್ತ [ಪಾ]ತ್ರಿಗಳು ನೆರೆದ ಬೈಶಣಿಗೆಯ ಲಾ × × × (ಎಪಿಇ. XV. ೦೩೬-೦೪ ; 1207). **ಬೈಸಣಿಗೆ$_1$** : ೨. ಖಡ್ಗಯುದ್ಧದಲ್ಲಿ ಕುಳಿತುಕೊಳ್ಳುವ ಒಂದು ವರಸೆ.—ಪಟ್ಟು : ಸಮಪಾದದಿಂದ ನಿಂತು ಹಾರಿ ಮುಂದುಗಡೆಯಲ್ಲಿ ಕುಳ್ಳಿರುವದು ಯಾವದುಂಟು ಅದು ಬೈಸಣಿಗೆಯೆಂದು ಖಡ್ಗಶಾಸ್ತ್ರವ ಬಲ್ಲವರಿಂದ ನುಡಿಯಲ್ಪಡುವದು (ಶಿತ್ತ. ೪-೩೨). **ಬೈಸನಿಗೆ** : ೩. ಪೀಠ; ಆಸನ: 'ವಜ್ರಬೈಸನಿಗೆ' ನೋ. **ಭಸಣಿಗೆ** : ೩. 'ವಜ್ರಭಸಣಿಗೆ' ನೋ. **ವೈಸಣಿಗೆ** : ೩. 'ವಜ್ರವೈಸಣಿಗೆ' ನೋ.

**ಬೈಸಣಿಗೆಯಿಕ್ಕು**=ಸಭೆ ಸೇರು : ಸಾದಲಿಯ ನಾಡ ರಾಮೇಶ್ವರದ ಗ್ರಾಮದಲು ಯಿಕ್ಕಿಸಿದ ಸನ್ನೆ . . . ಆ ಬೈಪಿಸಟ್ಟವೊಳಗಾದ ಸಾಲು ಮೂಲೆಯ ಸಮಸ್ತ ಹಲರುಗಳು ಬೈಸಣಿಗೆಯಿಕ್ಕಿ ಮಾಡಿದನ್ನಾ ಸನ್ನೆಯ ಹೊಸನ್ನ ಭಣ್ಡಕ್ಕೆ ಮರುಷ ಪರಿಯಂತರ ಸಬ್ಬ್ರವಾನ್ಯ (ಎಪಿ. ಕ. ೩೩೨೮. ೦೦೨-೩೪ ;1378). [← ಮರಾ. ಬೈಸಣಾ = ಕುಳಿತುಕೊಳ್ಳುವಿಕೆ, ಬೈಸಣೀ = ಕುಳಿತುಕೊಳ್ಳುವ ಪೀಠ ; ಹಿಂ. ಬೈಸನಾ=ಕುಳಿತುಕೊಳ್ಳು]

**ಬಯಿಸಿಕೆ, ಬಯಿಸಿಗೆ** (ನಾ). (?): ಪಟಲಿರಟ ಕಿನ್ನರಂ ಕಿಂಪುರುಷ ಮಹೋರಗ ಗಂಧರ್ವ ಯಕ್ಷರಾಕ್ಷಸ ಭೂತ ಪಿಶಾಚರೆಂಬ ಅಷ್ಟವಿಧವ್ಯಂತರ ಪರಿಶೋಭಿತಂಗಳಪ್ಪ ಎಂಟು ಬಯಿಸಿಕೆವಡಲಿಗೆಗಳುಮಂ (ಶ್ರೀಕೆಚ. ೨೦-೯). **ಬಯಿಸಿಗೆ** : ಅಸುರನಾಗ ವಿದ್ಯುತ್ಸುಪರ್ಣ ಅಗ್ನಿವಾತ ಸನ್ನಿತೋದಧಿ ದ್ವಿಪದ್ದಿಕ್ಕುಮಾರರೆಂಬ. ದಶವಿಧಭವನವಾಸಿಗವಿರಾಜಿತಂಗಳಪ್ಪ ಹುಸ್ತಂ ಬಯಿಸಿಗೆಯ ಶ್ರಾವೆಗಳುಮಂ (ಶ್ರೀಕೆಚ. ೨೦-೩). [ ? ]

**ಬಯಿಸಿಗೆ** 'ಬಯಿಸಿಕೆ' ನೋ.

**ಬಯಿಸು, ಬಯಸು$_2$** (ಕ್ರಿ). ೧. ಮುಚ್ಚಿಡು ; ಅಡಗಿಸು; ಬಚ್ಚಿಡು: ಕೂಡಲಸಂಗಮದೇವಾ ಆನು ಮಾಡಿದುದಲ್ಲದೆ ಬಯಿಸಿದ ಬಯಕೆ ಸಲುವುದೆ ಅಯ್ಯಾ (ಬಸವ. ೭೨೨). **ಬಯಸು$_2$** : ೨. ಅದ್ದು ; ಹುದುಗಿಸು ; ಮುಳುಗಿಸು : ನೇಜಲ ಪಣ್ಣಂ ತಿಳಿಯೆಣ್ಣೆಯೊಳ್ ಬಯಸಿ ತೊಯ್ದಂತಪ್ಪ ನುಣ್ಗುರ್ವು ಪೆರ್ವೊರಲೆ ಚೆಲ್ವಾಗಿರೆ ನಿಂದ ಬೇಡಿತಿಯುರಂ ಕಂಡಂ ಮಹೀವಲ್ಲಭಂ (ಕಾವ್ಯಾವ. ೨೦೬). 'ಬಯ್ಚು' ಪರಾ. [ಬಯ್$_1$ + — ಇಸು$_2$]

**ಬಯ್ಕನೆ** (ಅ). ಬೇಗನೆ, ಶೀಘ್ರವಾಗಿ ಎಂಬರ್ಥದ ಒಂದು ಅನುಕರಣಾವ್ಯಯ : ಭೋಂಕನೆ, ಚಿಕ್ಕನೆ, ಭೋರನೆ, ಪಯ್ಕನೆ, ಬಯ್ಕನೆ (ಶಬ್ದಾಶು. ೨೦ ವ್ರಯೋ). [? + — ಅನೆ$_1$]

**ಬಯ್ಕೆ$_1$, ಬಯಕೆ$_1$, ಬೈಕೆ** (ನಾ). ೧. ಬಚ್ಚಿಟ್ಟುದು ; ನಿಧಿ ; ನಿಕ್ಷೇಪ : "ಕತವರವು ಬಯ್ಕೆಯೆಂಬರ್ ಕವಿಗಳ್" (ಶಂಕಂ. ೨೩೩) ; ತನ್ನ ಮುನ್ನಿನ ಬಯ್ಕೆಯು ಕೆಲದೊಳ್ಪುಲಿಯಾಗಿ ಪುಟ್ಟಿದಂ (ಕಾಪುಂಕ. ೨೫) ; ಬುದ್ಧಿವಂತನಪ್ಪ ಮಗಂಗೆ ಬಯ್ಕೆಯುಂ ತೋರುವಂತೆ (ಧರ್ಮಾಮೃ. ೦೦-೩). ೨. ಗುಟ್ಟು ; ರಹಸ್ಯ : ಬಗೆಯ ಬಯ್ಕೆಯ ನೊಪ್ಪಿಸುವಾಗಳ್ ನೀನೆ ವಲಂ ದೊರೆ ಪೇಟ್ದಪೆಂ ಬಗೆದು ಕೇಳ್ (ಆಂಕ. ೩-೩೩); ಬಗೆಯ ಬಯ್ಕ[ಪಾಠಾಂ. ಬೈಕೆ]ಗೆ ನಾಲಗೆ ಪಿಸುಣನೆಂಬಂತೆ (ಅೀರಾವ. ೯-೬೩ ವ) ; ಭಾವಕರ ಬಗೆಯ ಬಯ್ಕೆಯನಗೆಯುತ್ತಿ ಸೂಚಿಗೊಳ್ವ ಕಳಕಳಾವಪ್ರೌಢಿಯೊಳಂ (ಅವಂತ. ೦೦-೨೬೪). **ಬಯಕೆ$_1$** : ೧. ಕವರಲ್ಬಂದಂಗೆ ಬಯಕೆಯುಂ ತೋರ್ಪುದರೆಂಬಂತೆ ಕಳಲ್ಬಂದಂಗೆ ಕೈಯೆಡೆಗೊಟ್ಟರೆಂಬಂತೆ (ಧರ್ಮಾಮೃ. ೨-೦೯೯) ; ಸತ್ತ ಹೆಣ ಕೂಗಿದುದುಂಟು ಬೈಚಿಟ್ಟ ಬಯಕೆ ಕರೆದುದುಂಟು (ಶಾಹಾರೀ. ೩. ೦೦೨-೨೯೯). **ಬೈಕೆ** : ೧. ಮದನನ ಬೈಕೆಯಿಂದು ಪೊಱಪೊಣ್ಮಿತೊ ಕಾಮನ ಬಾಣ ಸಂಕುಳಂ ಸುದತಿಯರಾಗಿ ಪುಟ್ಟಿದುದೊ . . . ತಿಳಿಯಲ್ಕಗೋಚರ ಮೆನಲ್ ನಡೆದತ್ತಬಳಾಕದಂಬಕಂ (ಪಳಹಂ. ೦೨೮) ; ಬಾಯ ಭಂಡಾರದಲಿ ಸರ್ವವ ಕಾಯದೇ ಭಂಜಿಸುಗು ಬೈಕೆಯ ಬೀಯವನು ಸಂಗ್ರಹವ ಮಾಡದು . . . ರಾಯ ಕೇಳಗ್ನಿಯ ಗುಣಾಂಗಳಿಂದಿವರಲಜಾದುದನು (ಪಾಗ. ೦೦-೧೩ ೦೩೯). [ಬಯ್$_1$ + —ಕೆ]

**ಬಯ್ಕೆ$_2$** 'ಬಯಕೆ$_2$' ನೋ.

**ಬಯ್ಗಳು** 'ಬಯ್ಗಳ್' ನೋ.

**ಬಯ್ಗಿರುಳ್** (ನಾ). ರಾತ್ರಿಯ ಕೊನೆಯ ಸಮಯ ; ಬೆಳಗಿನ ಜಾವ: ಬಯ್ಗಿರುಳಿನ ಮನೋಹರಿಯೆಂಬ ಜಾವದಾಗಳ್ ಬಿಳಿದಪ್ಪ ಕಾಡಾನೆಯಂ ಕಾಣ್ಬುದುಂ (ಶಬ್ದಾಶಾ. ೦೩೬-೦೩) ; ಇಂದಿನ ಬಯ್ಗಿರುಳಿನ [ಪಾಠಾಂ. ಬೆಳಗಪ್ಪ] ಜಾವದೊಳ್ ಪದಿನಾಱು ಕನಸುಗಳಂ ಕಂಡೆಂ (ಆದಿಪು. ೦೩-೨೩೪); ಬಟ್ಟೆವಿಡಿದು ಮುನ್ನಿನಂತೆ ಊರ್ವನೆ ನಡೆದು ನೇಸಱ್ ಪಟ್ಟಲ್ಲಿಯೆ ವಿಶ್ರಮಿಸಿ ಬಯ್ಗಿರುಳೆಟ್ಟು ಪಯಣ:ಬೋಪಾತಂ (ಶೀಶಸಂ. ೩೬-೩೬೪). [ಬಯ್ಗು + ಇರುಳ್]

**ಬಯ್ಗು, ಬಯ್ಗೆ, ಬೈಗು, ಬೈಗ್ಗೆ** (ನಾ). ೧. ಇಳಿಹೊತ್ತು ; ಸಾಯಂಕಾಲ ; ಸಂಜೆ : ಇಲ್ಲಿರಿಸಿ ಪೋಗು ಕಳ್ಳಂ ಮೆಲ್ಲನೆ ಬಯ್ಗಿಂಗೆ ಕುಡಿವಂ (ಧರ್ಮಾಮೃ. ೦೩-೦೯೩) ; ಬಯ್ಗಾದ ಪೊತ್ತು ನಾಲ್ಕಾನೆಯಂ ತಂದು ಸೂಳೆಗೇರಿಯ ಬೀದಿಯ ಕಡೆಯೊಳಿರುವಂ ಪೋಗಲೀಯದಂತದ್ದಂ ನಿಲಿಸಿ (ಬಂಹ. ೩-೬೯ ವ); ಹೊತ್ತಾಱ್ ಬಯ್ಗಿಂಗೆ ಮತ್ತೆ ಬಾ ಎಂದನುತ ಹೊತ್ತನೆ ಕೊಂದು ಹುಸಿಯುವನಿಂದಲು ಸತ್ಯಾತ ಲೇಸು (ಶರ್ಪ. ೬೩೨). ೨. ಬೆಳಗು ; ನಸುಕು ; ಅರುಣೋದಯ : 'ಬಯ್ಗಿರುಳ್' ಪರಾ. **ಬಯ್ಗೆ** : ೧. ಪೇರ್ಟೀಗಳೊ ಬಯ್ಗೆಯೋ ಪೊಗಸೊ ನಾಳೆಯೊ ನಾಡಿದೊ ನಿನ್ನ ಜೀವಿತಂ (ಆಂಕ. ೩-೬೩) ; ಮಗಮಗಿಪ ಪುಷ್ಪವಾಟಾಳಿಗಳಗಳ್ಪಿರಸು ಪೀಠದೊಳ್ ನಿಲೆ ಪೊಗಸುಂ ಪಗಲುಂ ಬಯ್ಗೆಯುಮಿರಲಲ್ಲಿಗೆ ಸೊಗಯಿಪನಲ್ಪ ಕಲ್ಪತರುಗಳೆಯಾದಂ (ಶಾಂತಿಪು. ೦೦-೦೦೦) ; ನಿಯತಂ ಬೇಸಗೆಯೊಳ್ ಬಯ್ಗೆಯುಮಪಗಲುವೊಂದು ದವಸಮಂತರಿಸದೆ ಮಾಗಿಯೊಳಬ್ದಕಾಲದೊಳ್ ಭೂಮಿಯೊಳಂ ಪದನಱಿತು ನೀರನೆತ್ತುಗೆ ಬಲ್ಲರ್ (ಲೋಕೋಪ. ೬-೮). **ಬೈಗು**: ೧. ಇಂದು ಬೈಗಿಂದೊಳಗೆ ರಾಸಿ ಹೊನ್ನಂ ಕೊಡುವೆನೆಂದು ಭಾಷೆಯನಿತ್ತನು (ಹಕಳಾ. ೦೦-೭) ; ಶಿರವನರಿವೆಸು ನಾಳೆ ಬೈಗಿಂದೊಳಗೆ ಸೈಂಧವನ (ಕುಮಾರರಾ. ೮-೩೬) ; ನಸುಕು ಬೈಗು ಬೆಳಕು ಮಬ್ಬು ಕಲೆತು ಬೆರೆತು ಆಡುತ ಎತ್ತೊ ಹೊತ್ತಿನತ್ತ ನುಗ್ಗುತಿಹವು ಯುಗವ ದೂಡುತ (ಅರಳು. ೯೯-೧೩). ೨. ಬೈಗಿನ ಪೊತ್ತಱೊಳ್ ದೇವರ್ಕಳ್ ಬಂದು ಸುಕುಮಾರಸ್ವಾಮಿಯಂ...ಪೊಗಟ್ಟ ಕಳಕಳಧ್ವನಿಯುಮಂ ದೇವದುಂದುಭಿಯ ರವಮುಮಂ ಯಶೋಭದ್ರೆ ನೋಡಿ (ವಡ್ಡಾರಾ. ೨೯-೨೦) ; ಬೈಗಿನ ನೈವೇದ್ಯಕ್ಕಂ ಬೈಗಿನ ಪೂಜೆಗಂ . . . ಚತುಸ್ಸೀಮೆಸಹಿತಂ ಧಾರಾಪೂರ್ವಕ ಮಾಡಿ ಬಿಟ್ಟರು (ಶಾಇ. IX-ii. ೨೦೨-೦೭; 1126). **ಬೈಗೆ$_1$** : ೧. ಹೊತ್ತಾಱ್ ಪೂಜಿಸಲು ಬೇಡ ಕಂಡಾ ಬೈಗೆ ಪೂಜಿಸಲು ಬೇಡ ಕಂಡಾ (ಅಶಸಂ. ೯೬-೨೦೩); ಶಿವಲಿಂಗಪೂಜೆಯಂ ಮಾಡಿ ಹರುಷಂ ಮಿಕ್ಕು ಆಡಿ ಹಾಡುತ್ತಲ್ಲಿ ಬೈಗೆಪರವಿರುತಿರ್ದು (ಚನ್ನಬ. ೮೨-೦೯). 'ಬಯ್$_2$' ಪರಾ. **ಬೈಗಾಗು** = ಸಂಜೆಯಾಗಂ ಸಾಯಂಕಾಲವಾಗು; ಹೊತ್ತು ಮುಳುಗಂ : ಬೈಗಾಗಿ ಗೋವಲ್ಲವಂ ಕೂಡಿ ಹೊಡೆತಂದು (ಅಹಾಕ. ದೀ. ೦೬೩-೦೦); ತರುಣಭಿಕ್ಷಾಂದೇಹಿ ನಾವೀ ಬರುತ ಬೈಗಾಯ್ತಲ್ಲಿ ಬಂದೆವು ತಾಯಿ ನೀಡು (ಕೌಶಾ.೬-೪೦). [ದೇ.ಶ ತಮಿ. ವೈಕಲ್]

**ಬಯ್ಗಂಬೊಳ್ತು** 'ಬಯ್ಗಂಬೊಟ್ತು' ನೋ.

**ಬಯ್ಗಂಬೊಟ್ತು, ಬಯ್ಗಂಬೊಳ್ತು, ಬಯ್ಗುಪೊಟ್ತು, ಬೈಗುಂಬೊಟ್ತು, ಬೈಗಂಪೊಳ್ತು**, (ನಾ). ಸೂರ್ಯನು ಮುಳುಗುವ ಹೊತ್ತು; ಸಂಜೆಯ ಸಮಯ; ಸಾಯಂಕಾಲ : ಅಂತು ನೇಸಱ್ ಪಡಲೊಡಂ ಬಯ್ಗಂಬೊಟ್ತರಸಂ ನೀಳ್ದೊರ್ಪದಿಂ ಪೊಱಮಟ್ಟು (ಕಾದಂಪಾ. ೯೬೨). **ಬಯ್ಗಂಬೊಳ್ತು** : ಪೋದ ಬಯ್ಗಂಬೊಳ್ತು ಕಿಡೆದ ಉಳ್ಕೆಯ ಅಶುಭವಂ ಪರಿಹರಿಸಲೆಂದು ಪರಮೇಶನಂ ಪ್ರಾರ್ಥಿಸಲ್ ಬಂದೆನಯ್ (ಶ್ರೀರಾಮ. ೯೬೭-೩೦೩). **ಬಯ್ಗುಪೊಟ್ತು** : ರವಿ ಬಯ್ಗು [ಪಾಠಾಂ. ಯ್ಗ] ಪೊಟ್ತಲಂಪಿಕ್ಕುವ ಕುಂಕುಮರಜದ ಪೊಟ್ಟಳೆಕೊತ್ತಿದನೆಂಬ ಪೊಲರಗಿನ ಮುದ್ರೆಯನೆಸೆದುವು ಮಧುಯಂತ್ರಮುಕುಳಿತಾಂಬುಜಂಗಳೊಳಳಿಗಳ್ (ಪರ್ವಕ. ೯-೨೩). **ಬೈಗುಂಬೊಟ್ತು** : ನಿಜಜನನೀಗೃಹದೊಳ್ ಮಜ್ಜನ ಭೋಜನಾದಿಗಳಂ ಮನವಲ್ಲದ ಮನದೊಳಗೆ ಮಾಡಿ ಬೈಗುಂಬೊಟ್ತಪ್ಪುದುಂ ನಿಜಭವನಕ್ಕೆ ಬಂದು (ಕಾದಂಪಾ. ೨೬೩); ಸಂಪ್ರಾಪ್ತಮಾದ ವರ್ಷಾಕಾಲದೊಳೊಂದುದಿವಸಂ ಬೈಗುಂಬೊಟ್ತನೊಳೆಂದಿನಂತಿರೋಲಗಂ ಪರಿಯ (ರಾಮಾಶ್ವ. ೯-೬). **ಬೈಗುಪೊಳ್ತು** : ಸೂಚಿತಪಥಂಬಿಡಿದು . . . ಬೈಗುಪೊಳ್ತಿನ ಕಡೆಗೆ ಸಾರ್ತಂದರಾಶ್ರಮಕೆ ಶರಭಂಗನಾ (ಶ್ರೀರಾಮ. ೦೬೩-೦೯೬). [ಬಯ್ಗು + ಪೊಟ್ತು]

**ಬಯ್ಗುಕೆಂಪು, ಬೈಗುಗೆಂಪು** (ನಾ). ಸೂರ್ಯನು ಮುಳುಗುವ ಹೊತ್ತಿನಲ್ಲಿ ಅಥವಾ ಸಾಯಂಕಾಲದ ಸಮಯದಲ್ಲಿ ಆಕಾಶದಲ್ಲಿ ಉಂಟಾಗುವ ಕೆಂಪು ಬಣ್ಣ ; ಸಾಯಂಕಾಲದ ಕೆಂಪುಕಾಂತಿ ; ಸಂಜೆಗೆಂಪು : ಅಂಜನೇಭದ ಸಿಂದುರವೊ . . . ಸಂಜೆವೆಣ್ಣುಟ್ಟ ರಕ್ತಾಂಬರವೊ ಪೇಳೆನಲ್ಕಾ ಬಯ್ಗುಕೆಂಪೆ[ಪಾಠಾಂ. ಬೈಗುಗೆಂಪೆ]ಸೆದುದು (ಕೃಷ್ಣಾ. ೮-೯೬). **ಬೈಗುಗೆಂಪು** : ಆಗ ತಾನೆ ಸೂರ್ಯನು

ಬೈಗುಗೆಂಪವನ್ನು ಚೆಲ್ಲಿ ಪಡುಗಡಲ ತೆರೆಯಲ್ಲಿ ಇಳಿದಿಳಿದು ಮಾಯ ವಾದನು (ಸಕಕ್ಕ. VIII. ಕೃಷ್ಣಾಚಿ) : ಬೈಗುಗೆಂಪುರಿಯಲ್ಲಿ ಸುಡಲಿ ಸಂಶಯವಲ್ಲಿ! ಹುಣ್ಣಿಮೆಯ ರಾತ್ರಿಯಲಿ ಹೊರಗೆ ಬಾ ನೋಡು! (ಹಾಹಕ. ೩೦-೭). [ಬಯ್ಗು + ಕೆಂಪು₁]

**ಬಯ್ಗುಪೊಟ್ಟು** 'ಬಯಂಗ್ಗುಂಬೊಟ್ಟು' ನೋ.

**ಬಯ್ಗುಳ್**, ಬಯ್ಗುಳು, ಬಯ್ಗುಳ, ಬಯ್ಗುಳು, ಬೈಗಳು, ಬೈಗುಳ್, ಬೈಗುಳ, ಬೈಗುಳು (ನಾ). ೧. ಜರಿಯುವಿಕೆ : ತೆಗಳಿಕೆ : "ಶಾಪಃ, ಆಕ್ರೋಶಃ, ಆಕ್ಷೇಪಃ, ಕ್ಷಾರಣಾ, ವಿರೂಕ್ಷಣಾ — ಈ ೫ ಬಯ್ಗುಳ್" (ಶಬಾಹು. ೨೪-೦೪೬); ನಿನ್ನ ತಮ್ಮನಪ್ಪ ವಾಯುಭೂತಿಯ ಜೀವಂ ಅಭಿಮಾನಂ ಕಾರಣ ಮಾಗೆಮ್ಮನುಜದೆ ಪರಿಭವಿಸಿ ಬಾಯ್ಗೆ ವಂದುದನೆ ಪೊಲ್ಲಮೆಯ ಬಯ್ಗುಳಂ ಬಯ್ದುಂ (ಪಶ್ವಾಪು. ೧೪-೨); ಪರಮಾರ್ಥಂ ನಿಜಜನಕರ್ ಪರಸಿದ ಪರಕೆಗಳು ಬಯ್ದ ಬಯ್ಗುಳ್ ಮಕ್ಕಳ್ಗಿರದೆಯ್ದುಗುಂ (ಕಾರಂಹು. ೧೬೬) ; ಸತ್ಕೂಜಾಭಂಗಮುಂ ಬಯ್ಗುಳಂ ಸದ್ವರ್ಶನಾಲಸ್ಯಮೆಂಬ ಕೊಂತಂಗಳಿಂ . . . ಬೀಟ್ ಮೋದುತ್ತುಂ ದಂಡಕೆಯುಂ ಮಾಡುತ್ತುಂ (ಧರ್ಮಾಮೃ. ೧೦-೩೬ ಆಹಾಸ). ಬಯ್ಗಳು : ೧. ಕೊತವಾಲನ ಬಾಯಿಂದ ಹೊರಟ ಬಯ್ಗಳನ್ನು ನಿಚ್ಚಳವಾಗಿ ಕೇಳಿದರು (ಕೊಕಶಾ. ೬೮). ಬಯ್ಗುಳ : ೧. ದಾಂಡಿಗ ಬಂಡಿಗಾರ ಯಜ ಮಾನನ ಅನ್ಯಾಯದ ಬಯ್ಗುಳಕ್ಕಾಗಿ ಕೋಪದಿಂದ ಹುಬ್ಬುಗಂಟಿಕ್ಕಿದನು (ಕೃಷಪು. ೬೫೦). ಬಯ್ಗುಳು: ೧. ಹರಿಯ ಬಯ್ಗುಳು ಬೆದಱಿಸಲು . . . ತರತರದ ಕೈದುಗಳ ಸುಭಟರ ಕಂಡುದಮಳಾಸ್ತ್ರ (ಕುಮ್ವಾದ್ರೋ. ೦೯-೪೦). ಬೈಗಳು : ೧. "ಬೈಗಳನೆ ಪರಿಕಿಸಲ್ ನಿಂದೆಯದು" (ಕಕರ. ೦೨೬): ಕೊಟ್ಟವರು ಬಂದೆನ್ನ ನಿಷ್ಠುರಂಗಳನಾಡ ಕೆಟ್ಟ ಬೈಗಳ ಬೈದು ಮನದಣಿಯಲು ದಿಟ್ಟತನವನು ಬಿಟ್ಟು ಕಳೆಗುಂದಿದೆನಯ್ಯ (ಪುರಂದ. ೦-೦೩೬-೦) ; ನಾ ಹುಟ್ಟಿ ಆಯ್ತೆರಡು ಮಾಸಂ ಬಯಸೆ ಬೈಗಳು ಬಾರವೆನ್ನೊಳೇಂ ದೋಷಂ? (ಕುಶ್ಚಿ. ೦೫-೬). ಬೈಗುಳ್ : ೧. "ಶಾಪಮಾ ಕ್ರೋಶಂ ವಿರೂಕ್ಷಣಂ ಕ್ಷಾರಣಾಕ್ಷೇಪಮೆನೆ ಬೈಗುಳೆನಿಸಿಕ್ಕು" (ಚುಂಗಶಾ. ೨೬-೫); ಆ ವೈಶಂಪಾಯನಂ ತಂದೆಯು ಮುನಿಸಿನ ಬೈಗುಳ್ಗಳಿಂದಂ . . . ಗಿಳಿಯ ಬಸುಱೋಳೀಯುಂದದಿಂ ಬಂದನಲ್ತೆ (ಕಾದಂಹು. ೬೬೯) ; ಪೆಱರ ಬೈಗುಳಂ ಸ್ಯೆರಿಸುವುದರಿದೋ ಪೆಱರೊಡನೆ ಬಾಯಂ ಬಡಿವುದರಿದೋ (ಧರ್ಮಾಮೃ. ೭-೯೦). ಬೈಗುಳ : ೧. ಕೆಲವರು ಇತರ ಮಕ್ಕಳೊಡನೆ ಕಿತ್ತಾಟ, ಜಗಳ, ಹೊಡೆದಾಟ, ಬೈಗುಳ, ಇತ್ಯಾದಿಗಳಲ್ಲಿ ಮನಃತೃಪ್ತಿ ಪಡೆಯುವವರು (ಕಿಶ್ವರ. ೯೯೯), ಯಾವು ದಾದರೂ ಉಪಾಯದಿಂದ ಬೈಗುಳ ತಪ್ಪಿಸಿಕೊಳ್ಳುತ್ತಿದ್ದ (ಕಾಲಿಕು. ೫೦), ಬೈಗುಳು : ೧. ನಾಯಕರ ಕಡೆನುಡಿವ ಬೈಗುಳ ಬಾಯ ಬೊಬ್ಬೆಯ ಕೈಯ ಹೊಯ್ಗುಳ ದಾಯಿಗರಲೇ ಎನುತ ಮೂದಲಿಸಿದನು ತಮ್ಮೊಳಗೆ (ಕುಪ್ಪಾಕ. ೨-೦೫). ೨. ಮೂದಲಿಕೆ; ಹೀಗಳೆಯುವುದು : ನಡೆದುದುಱು ಸನ್ನಾಹದಲಿ ಸೂಳಡಸಿ ಮೊಱೆವ ಗಭೀರಭೇರಿಯ ಕಡುರವದ ರಿಪುಭಟರ ಬೈಗುಳ ಗೌರುಗಹಳೆಗಳ . . . ಕಳಕಳವಾಯ್ತು ರಣ ದೊಳಗೆ (ಕುಪ್ಪಾದ್ರೋ. ೯-೦೨). [ಬಯ್₁+_ಗುಳ್₂. /ಕೊಡ. ಬಯ್ಗುಳ]

**ಬಯ್ಗುಳ** 'ಬಯ್ಗುಳ್' ನೋ.

**ಬಯ್ಗುಳು** 'ಬಯ್ಗುಳ್' ನೋ.

**ಬಯ್ಗೆ** 'ಬಯ್ಗು' ನೋ.

**ಬಯ್ಚು**, ಬಚ್ಚು (ಕ್ರಿ). ಮುಚ್ಚಿಡು; ನಿಧಿಯಾಗಿರಿಸು; ನಿಕ್ಷೇಪ ಮಾಡು : "ಮುಚ್ಚು, ಮುತ್ತು, ಬಯ್ಚು (ಬಚ್ಚು) . . . ಹುದುಗಿಸು, ಅಡಗಿಸು" (ಕಂಕುಹು. ೯೦) ಬಚ್ಚು₁: ಕಿಚ್ಚಿನಂತುಜ್ವಲಿಸೆ ತೇರಿನೊಳ್ಗನು ಶರವ ಬಚ್ಚಿದಂ ಮಿಕ್ಕಿದಂ ಧಾರುಣಿಗೆ ಪಿಡಿದಸಿಯ ಕೊಟ್ಟಿದಂ ಸವರಿದಂ ಪರಿಪರಿದು ಕುರುಬಲಂ ನಡುನಡುಗಿ ತಲ್ಲಣಿಸಲು (ಕುರಂಗ. ೬೩-೦೨) ; ದೌಲತ್ತಳನ್ನು ಬಚ್ಚಿ—ಬಂಧನದಲ್ಲಿಟ್ಟು ಬೇಡದ ನಗರವನ್ನು ಬಿಟ್ಟುಕೊಟ್ಟಿದ್ದಾನೆ (ರಾಂಕ್. ೮೨).

ಬಯ್ಚಿಡು, ಬಚ್ಚಿಡು, ಬೈಚಿಡು = ೧. ಅಡಗಿಸಿ ಇಡು ; ನಿಧಿಯಾಗಿರಿಸು ; ನಿಕ್ಷೇಪಿಸು : ಉದಕದೊಳಗೆ ಬಯ್ಚಿಟ್ಟ ಬಯ್ಕೆಯು ಕಿಚ್ಚಿನಂತಿದ್ದಿತ್ತು (ಬಸವ. ೦); ಬೇವು ಫಲವಾಗಲದು ಸೇವಿಸಲು ಯೋಗ್ಯವೇ ಧನವು ಘನವಾಗಿ ಬಯ್ಚಿಟ್ಟ ಠಾವಿರೇ ಫೋಕು (ಸರ್ವಜ್ಞ. ೬೪೯) ; ಅಯ್ಯ ನಿಮ್ಮ ಶರಣ ಬಸವಣ್ಣನಿಂದ ಲಿಂಗವ ಕಂಡು ಒಳಗೆ ಬಚ್ಚಿಟ್ಟುಕೊಂಡೆನಯ್ಯ (ಚೂನ್ಯಸಂ. ೨೨೦-೫೨) ; ಕೋಳಿ ಹೊಡೆದುಕೊಂಡು ಬಂದ ಸ್ವತ್ತುಗಳನ್ನು ಅಲ್ಲೇ ಒಂದು ಮೂಲೆಯಲ್ಲಿ ಇಟ್ಟುಬಿಟ್ಟು ಮತ್ತೊಂದು ಕಡೆ ಅವರು ಬಚ್ಚಿಟ್ಟುಕೊಂಡರು (ವ್ಯಾಸಜಿ. ೬೭) ; ಜಾಲಗಾಱನ ದೋಣಿಯಂತೆ ಬಳಸುವ ಹುಟ್ಟನಂತೆ ಬೈಚಿಟ್ಟ ನೆಲೆಯಂತೆ ಇದ್ದಡೇನು ಭೋಗಿಸಲರಿಯ ವಾಗಿ (ಮೋಳಿಗಶಾ. ೩೦-೧೨೪) ; ಕೊಟ್ಟಿದ್ದು ತನಗೆ ಬೈಚಿಟ್ಟದ್ದು ಪರರಿಂಗೆ ಕೊಟ್ಟದ್ದು ಕೆಟ್ಟೆತೆನಬೇಡ ಮುಂದಕ್ಕೆ ಕಟ್ಟಿಹುದು ಬುತ್ತಿ (ಸರ್ವಜ್ಞ. ೬೦೭). ೨. ಗುಟ್ಟಾಗಿಡು ; ರಹಸ್ಯವಾಗಿರಿಸು : ಸುಳ್ಳನ್ನು ಬಚ್ಚಿಟ್ಟು ಕೊಳ್ಳುವುದು ಮಹಾ ಅಪರಾಧ (ಶಂಗಕೋ. ೯) ; ಸಾವಿತ್ರಮ್ಮ . . . ಯಾವ ವಿಚಾರವನ್ನೂ ಬಚ್ಚಿಡಲಿಲ್ಲ (ಜೂಷಕೇ. ೨೦೬) ; ಲಲಿತಸುಖ . . . ವಿಟನೊಲಿದೊಡೊಲಿಯುಳು ಬೆರಸಿ ಬೆರಸದೆ ಮನವ ಬೈಚಿಡುತೆ ನಳಿನಮುಖಿ ಬೇಟದೊಳು ಬೇಗೆಯ ಬಳೆಯಿಪಳು (ಕುಶ್ಚಾಲ. ೬೦೨. ೯-೫೭).

[ಬಯ್₁ + _ ಚು₁. / ತೆಲು. ವಯಿಚು, ವೈಚು]

**ಬಯ್ತು** 'ಬಯ್₁' ಪರಾ.

**ಬಯ್ತಲೆ**, ಬೈತಲೆ (ನಾ). ತಲೆಯ ಮೇಲ್ಭಾಗದಲ್ಲಿ ಕೂದಲನ್ನು ಎರಡುಕಡೆಗೂ ಬಾಚಿದಾಗ ವಂಧ್ಯೆ ಗೆರೆಯಂತೆ ಕಾಣುವ ನೇರವಾದ ಸ್ಥಳ,—ಜಾಗ : "ಸೀಮಂತಮೆಂಬುದು ಬಯ್ತಲೆ" (ಶಬಾಹು. ೬೬-೬೬೫) ; ಮೊದಲೊಳ್ ಕಟ್ಟಿದ ಮುಂಡೆಯುಟ್ಟುಡಿಗೆ . . . ತಿರ್ದಿದ ನುಣ್ಬಯ್ತಲೆ ಲೀಲೆಯಿಂ ಸವಿದ ತಾಂಬೂಲಂ ಜಲಂ ಮಿಂದುದಲ್ಲದೆ ಮತ್ತೇನುಮನೊಲ್ಲದಿರ್ದಬಲೆ ಚಿತ್ರಾಕಾರದಿಂ ತೋಱಿದಳ್ (ಪಶಂ. ೬೬೯); ಗಗನಮಣಿ ಪಶ್ಚಿಮಾಂಗನೆಯ ಬಯ್ತಲೆ[ಪಾಠಾಂ. ಬೈತಲೆ]ಯ ರಂಗು ಮಾಣಿಕದಂತೆ ಕಣ್ಗೆ ಕಾಣಿಸುತಿರ್ದುದಸ್ತಗಿರಿಮಸ್ತಕದೊಳು (ಕೃಷ್ಣಶಾ. ೯-೪೫). ಬೈತಲೆ : "ನೀಳ್ದ ಬೈತಲೆ ಸೀಮಂತ ಸಮಾಹ್ವಯಂ" (ಪಕ್ವಕೋ. ೭೦-೨೦); ಕರವಿಂಬಾಗಿರೆ ತಿರ್ದಿ ಬೈತಲೆಯಂ ... ಬರ್ಬರವೆಂ ಪೂಸಿ ತೊಟ್ಟಿರ್ದ (ಸಮಕ. ೬-೬೬) ; ಸಿವಿರ್ದ ವೇಣಿ ಬೈತಲೆಗಳವಟ್ಟ ಸಿಂದುರಮಳಂಕಯೊಳ್ಚಿದ ಕಜ್ಜಳಂ . . . ಚಲನಯುನಂಗಳೊಪ್ಪೆ ನಟನಗೆಯ ಪಿಂದನೆ ಬಂದನಾಕ್ಷಣಂ (ಧಕಸ. ೬-೧೧೧); ಪರಿಗೆ ಕೆಂಪಿನ ರ್ಬುಗೆ ಸುರಾಂಗನೆಯರಿಗೆ ಸುಭಟವ್ರಜಕೆ ಕುಂಟಣಿ ವರದಿಗಂಗನೆಯುಂಗೆ ಬೈತಲೆ ಗೆಸೆವ ಸಿಂಧೂರ . . . ಎನಲುರವಣಿಸಿ ಕೆಂದೂಳಿ ನಭವಪ್ಪರಿಸೆ ಹೊಯ್ವಾಡಿದರುಭಯಚತುರಂಗಬಲ ಹಳಚಿ (ಕುಪ್ಪಾಶ್ರೀ. ೯-೭).

ಬಯ್ತಲೆಯ ಸೌಭಾಗ್ಯ = ಮುತ್ತೈದೆತನ : ಮಱೆಯ ಮಾಯಾಶಿರವಿದೀಗಿದು ಮಱುಗಬೇಡೆಲೆ ತಾಯೆ ನಿನ್ನಯ ನೊಸಲಲಿಹ ಬಯ್ತಲೆ[ಪಾಠಾಂ. ಬೈತಲೆ]ಯ ಸೌಭಾಗ್ಯಕಳಿವುಂಟೆ (ತೊರರಾ. ೬೦೨-೪೯).

[ ದೇಶ್ಯ. ತುಳು. ಬಕ್ತಲೆ, ಬಗುತಲೆ, ಬಗ್ತಲೆ; ಕೊಡ. ಬವ್ತಲೆ]

**ಬಯ್ತಲೆದೆಗೆ**, ಬೈತಲೆದೆಗೆ (ಕ್ರಿ). ಕೂದಲನ್ನು ಬಾಚಿ ಇಬ್ಭಾಗ ಮಾಡು : ಇಂಬಾದಿದಱಿರ್ತಡಿಯ ಬನಂ ಬಯ್ತಲೆದೆಗೆದ ಕೇಶವನಮೆನಿಸೆ ಪರಾಗಂಬೊರೆದ ಸಿಂಧು ಸೀಮಂತಂಬೊಲಿಳಾಕಾಂತೆಗಧಿಪ ಮಿಗೆ ಸೊಗಯಿ ಸುಗುಂ (ಪಾರ್ಶ್ವಾ. ೯-೬). ಬೈತಲೆದೆಗೆ : ಕಿಱುವೆರಲುಗುರಿಂದೆ ಬೈತಲೆ

ದೆಗೆದಾಗ ಮಹಾದುಂದುಗುರುಳ ಮಾನಿನಿಗೆ ತುಱುಬನಿಕ್ಕಿದರು (ಹೋಚಕ. ೨೩-೨೪). [ಬಯ್ತ್ರಲೆ + ತೆಗ್ಗ]

**ಬಯ್ತ್ರಲೆವಣಿ,** ಬೈತಲೆವಣ (ನಾ). ೧. ಬೈತಲೆಯಲ್ಲಿ ಧರಿಸುವ ಆಭರಣ : (ಕಯ್ಪುರಿಗುಚ್ಚುತಿದ್ದು, ಪೆರಲ್ವೆಣೆದುಕೊಂಡು, ಬಯ್ತ್ರಲೆವಣಿಗೆತ್ತಿ ಊರ್ಧ್ವಮುಖಿಯಾಗಿ ಗದ್ಗದಸ್ವರದಿಂದ) . . . (ಪೊಳ್ಳೆಂದು ನಕ್ಕು ಲಲಿತಾಟ್ಟಹಾಸವನ್ನಾಲಾಪಿಸುತ್ತಿರುವಳು (ಪುಂಕ್ರ.ಕ. ೨೪-೨೨). **ಬೈತಲೆವಣಿ:** ೧. ಮುತ್ತಿನ ಭುಜಕೀರ್ತಿ ಹರಳೋಲೆ ಮೂಗುತಿ . . . ಉತ್ತಮವಜ್ರದ ಬೈತಲೆವಣಿಗಳನಿತ್ತನವಳಿಗಸುರೇಂದ್ರ (ಕುಮಾರಾಮ. ೧೦-೩೪); ಕಲಿಗಟುು ಕೆಲವರಿಗೆ ಜಡೆ ಕೆಲವರಿಗೆ ಮತ್ತೆ ಕೆಲರಲ್ಲಿ ತುಱುಬನಿಕ್ಕಿದರು ಅವರು ಚವಲಿ ಬೈತಲೆವಣಿ ಮುತ್ತಿನ ಬಲಿಯಿಲ್ಲ ಬಂದರೊಪ್ಪದೊಳು (ಕಿಕ. ೦೬-೨೫). ೨. (ಅಲಂ) ಆಭರಣಪ್ರಾಯವಾದ ವ್ಯಕ್ತಿ : ಶ್ರೇಷ್ಠವ್ಯಕ್ತಿ : ದ್ಯೂತಕೇಳಿಯೊಳಜ್ಞಾತವಾಸದೊಳಂದು ಧಾತುಗುಂದದೆ ಪಾಂಚಾಲಿ ಓತು ಪಾಂಡವರನೊಲಿಸಿ ಹದಿಬದೆಯರ ಬೈತಲೆವಣಿಯೆನಿಸಿದಳು (ಹಐಶಾ. ೩-೪೪). [ಬಯ್ತ್ರಲೆ + ಮಣಿ]

**ಬಯ್ತ್ರು** 'ಬಯ್$_1$' ಪರಾ.

**ಬಯ್ತುಗ** (ನಾ). (?) : ಲಲನಾಮುಖೇಂದು ಲಾವಣ್ಯಲೀಲೆಯಂ ಪಡೆವ ಬಣ್ಣದಿಂ ಕಂಪಿಂದೇನಲಿದುದೊ ಬಯ್ತುಗ [ಪಾಠಾಂ. ಪೈತಿಕ, ಪೈತಿಗ, ಬೈತುಗ] ದಂತಿರೆ ತಲೆಗೇಱುವ ಕುಸುಮನಿಚಯಮಂ ಕಾಶ್ಮೀರಂ (ಅಂಕ್ಷ. ೦-೦೨೪). [?]

**ಬಯ್ದಕೂರ್** (ನಾ). ಒಂದು ಊರಿನ ಹೆಸರು : ಮದಿರಗೊಣ್ಣ ಕೊಪ್ಪರಗೇಶರಿವರ್ಮ್ಮಂಗೆ ವರಿಷಮಿಪ್ಪತ್ತೊಮ್ಬತ್ತಱೊಳ್ಬಯ್ದಕೂರ ರಾವಿನಾಡ ಮಾರ್ಕಮ್ಮ ಮಮ್ಮ ಗಣಪ ರಾಮ ತುಱುವನಿಕ್ಕಿಸಿ ಅಟ್ಕ್ಕ ಸತ್ತನ್ (ಎಕ. X. ಮುಳಬಾ. ೨೦೩ — ೨೨ ; ೯೮೬). [ ? + ಊರ್]

**ಬಯ್ದುಂಬು** (ನಾ). ಒಂದು ಊರಿನ ಹೆಸರು (?) : ಸ್ವಸ್ತ್ಯನೇಕ ಸಮರಾಸಂಘಟ್ಟಣೋಪಲಬ್ಧ ಜಯಲಕ್ಷ್ಮೀಸಮಾಲಿಂಗಿತವಕ್ಷಸ್ಥಲ ಗಂಡ ತ್ರಿಣೇತ್ರ ಶ್ರೀ ಬಯ್ದುಂಬ ಮಹಾರಾಜರ್ ಪೃಥಿವೀರಾಜ್ಯಂಗೆಯ್ (ಎಇ. XXIV. ೨೬-೩ ; ಕು. ೮೬೩). [ ? + ತುಂಬು (< ತೂಂಬು) ]

**ಬಯ್ಯ$_1$** (ನಾ). ಒಂದು ಜಾತಿಯ ಹೆಸರು (?) : ಅನ್ನಿಯ ಸುಗ್ಗಯ್ಯನು ಬಿಡಿ ಪೊನ್ನಯ್ಯನುಂ ಅಲ್ಲಮ್ಮನುಂ ಬಯ್ಯರ ಜೋಗನುಂ ಇನ್ನಿನಿಬರುಂ ಸಾಕ್ಷಿಯಾಗಿ ಕೊಟ್ಟರ್ (ಎಕ. XI. ಹೊಳಕ್ಕೆ. ೩೦-೦೩ ; ೯೬೪). [?]

**ಬಯ್ಯ$_2$** (ನಾ). (?) : ಕೈಯಣ ಗಿಂಡಿಯು ಕೊಂಕುಳ ಪೆಟ್ಟಿಗೆ ಕಲ್ಲಿಯಿಹದು ತಲಕಟ್ಟು ಬಯ್ಯಗಳೆಂಬವು ಪರಿಪರಿ ನೋಡಲು ಕೋಟಿ ಹಾರಿಕೆ ಅಳವಟ್ಟು (ಕಹಾಕೋ. ೪೨-೩). [?]

**ಬಯ್ಯಿಸು,** ಬಯಿಸ್ಸು, ಬೈಸು$_1$ (ಕ್ರಿ). ಬಯ್ಯುವಂತೆ ಮಾಡು : ಜರೆಯುವಂತೆ ಮಾಡು ; ದೂಷಣೆಗೊಳಗಾಗಿಸು : ನೀನು ಒಪ್ಪುವುದಾದರೆ ನಾನು ನಿಮ್ಮ ಮನೆಗೆ ಬರುತ್ತೇನೆ. ನೀನೂ ಬಯ್ಯಿಸಿಕೊಳ್ಳುವ ಹಾಗಿಲ್ಲ (ಚಾರಿಚು. ೬೩); ನಾನು ಯಾರಿಂದಲೂ ಹಾಗೆ ಬಯ್ಯಿಸಿಕೊಂಡವನಲ್ಲ (ಅಂಗಾರ. ೨೧೫). **ಬಯ್ಸು :** ಭೂಪ್ಪರಾ ನಿಮ್ಮಂ ಪಂಚಮಹಾಪಾತಕನ ಮನೆಗೊಡಗೊಂಡು ಪೋಗಿ ಬಯ್ಸಿದಂ (ವಚ್ಚಾ.ರಾ. ೬-೩). **ಬೈಸು$_1$ :** ಅಪ್ಪನ ಕಡೆ ಬೈಸಿಕೊಳ್ಳೋದು ತಪ್ಪಿತು (ಅಕಾ. ೩೪): ಬಯಕೆ ಕೊಟ್ಟರೂ ಬೈಸಿಕೊಂಬುದು ತಪ್ಪಲಿಲ್ಲ (ಗಾಳಿ). [< ಬಯ್$_1$ + — ಇಸು]

**ಬಯ್ಯು** 'ಬಯ್$_1$' ನೋ.

**ಬಯಿಬತ್ತ** (ನಾ). ಕೆಳತರಗತಿಯ ಒಂದು ಬಗೆಯ ಬತ್ತ : (ಶ). [ದೇ.॥ ತುಳು. ಬೈತರಿ, ಬಯಿತ್ತರಿ]

**ಬಯ್ಸಿಕೆ** 'ಬೈಸಿಕೆ' ನೋ.

**ಬಯ್ಸು** 'ಬಯ್ಯಿಸು' ನೋ.

**ಬರ್** 'ವರ್' ನೋ.

**ಬರ$_1$** 'ಬಱ' ನೋ.

**ಬರ$_2$** 'ವರ$_1$' ನೋ.

**ಬರ$_3$** (ನಾ). ಅನುಗ್ರಹ ; ವರ : "ಬರ—ವರ = ಅನುಗ್ರಹ" (ಕಕ್ಕೆಕೋ. ೨೪); ನಾಲ್ಕು ಲಾವಗೆಗಳಗ್ನಿಸೂಕ್ತಂಗಳನೋದುತ್ತುಮದಿರದಿದಿರಿಂ ಬರೆವೆಂಟ್ಟೆ ಬರವನಗ್ನಿದೇವಂ ಬೇಡಿಕೊಳ್ಳೆಮೆಂದೊಡೆಮ್ಮನ್ನಯಕ್ಕೆ ನೀನೆ ಹೆಣ್ದೆದೆಯಾಗೆಂದು ಬೇಡುವುದುಂ (ಪಂಚಾ. ೩-೦೦೫ ಪ) ; ಮೃಡನಿಂ ಬರಂಗಳಂ ಪಡೆದನೆಂಬರ್ ಕರಾ! (ಶ್ರೀಚಾಪು. ೩೦-೫೦). [ < ಸಂ. ವರ]

**—ಬರ$_4$** '—ವರಂ' ನೋ.

**—ಬರಂ** '—ವರಂ' ನೋ.

**ಬರಂಗಿ** (ನಾ). ( ? ) : ಅಂತು ಖಂ ೭೪ ರೊಕ್ಕ ಗ ೧೧ಕೆ ಭೂಮಿ ಬರಂಗಿ ಖಂ ೨೮ ಮೂರ × × × ರುಹ ಗ ೬ ಅಡಕೆ ಸುಂಕ ಗ ೧ ಉಪಾಧಿಗೆ ಮಾವಿನ ಕೊಡಗಿ ಖಂ ೨೬ ಮೊರಹ × × × (ಎಕ. VIII. ತೀರ್ಥಹ. ೦೪-೯೨ ; 1678). [ ? ]

**ಬರಂಪಿಡಿ** (ಕ್ರಿ). ವರವನ್ನು ಸ್ವೀಕರಿಸು , — ಹೊಂದು : ವಿರೋಧಿಗಂಟರ್ದೆಯ ಮಾಱುವ ವೈರಿಗೆ ಮಾರೂಱಕಂಣ ಮಾನ್ಯರ್ಮ್ಮಡಿವವನೇಂ ಚತುರ್ಬ್ಬಜನೆ ಮತ್ಸರಿವಂಣಲೆಬರ್ಮ್ಮನೊಳ್ ಬರಂಪಿಡಿದನೆ ಮಾಱ್ ಬಾಳ್ವಡವನೇಂ ಜವನೇ ಕಡಿಕೆಯಿಂದು ಕಾದಲೆಂದೊಡರಿಸುವಾತನೇಂ ಭುಜಗ ಮರ್ದ್ದನನೇ ಕಲಿಗೋಣಭೂಪನೊಳ್ (ಎಕ. VIII. ಸಾಗರ. ೦೦೪-೩೬ ; 1042). [ ಬರ$_3$ + ಪಿಡಿ$_1$ ]

**ಬರಂಬಡೆ** (ಕ್ರಿ). ವರವನ್ನು ಹೊಂದು ; ಅನುಗ್ರಹವನ್ನು ಪಡೆ : ಧೃತರಾಷ್ಟ್ರನ ಮಹಾದೇವಿಯಪ್ಪ ಗಾಂಧಾರಿ ನೂರ್ವರ್ ಮಕ್ಕಳಂ ಪಡೆವಂತು ಪರಾಶರಮುನೀಂದ್ರನೊಳ್ ಬರಂಬಡೆದಳ್ (ಪಂಚಾ. ೦-೦೦೬ ಪ) ; ನಡುನಡಪಿತ್ತು ತನ್ನನೆನೆ ಮೆಯ್ ಬಡವಾದುದು . . . ತೋಳ್ಗಳೊಳ್ ಬರಂಬಡೆದವೊಲೆಯ್ದೆ ಸುಯ್ ಸರಳವಾದುದು (ಪಂಕ್ರಪು. ೩-೦೨೪) : ಬರಂಬಡೆವನ್ನವರಾರಾಧಿಸಿದಂ (ಪಚರ.ತ. ೨೩೮ ಕ್ರ.ಯೋ). [ಬರ$_3$ + ಪಡೆ$_1$]

**ಬರಕ$_1$** 'ಬರ್ಕ' ನೋ.

**ಬರಕ$_2$** (ನಾ). ಹೊರೆ ( ? ) : ಪೆಜ್ಜುಂಕಕ್ಕೆ ದ್ರಮ್ಮ ೧ ಆ ಬಳಿಯ ಅಡಕೆ ೨೫ ಕತ್ತ್ರಯ ಬರಕಕ್ಕೆ ಪೊಂಗೆ ಅಡಕೆ ೨೦ ಸೀರೆಯ ಸುಂಕ ಪೊದಕೆಗೆ ಪಾಗ ೨ ಸೀರೆಗೆ ಪಾಗ ೧ . . . ಅನ್ನಿಲ್ಲಿಯ ಎಣ್ಣಾರಾಯಿಗರುಂ ನಾಗೇಶ್ವರ ದೇವರ್ಗ್ಗೆ ೫೦ ಮತ್ತರಲು ತಂತಮಾಯವುಂ ಬಿಟ್ಟರು (ಹಾಂಕೀರ್. ೩-೨೨೫ ; 1047) ; ಅರಮನಸ್ಸಿನಿಂದರೇ ಅಪ್ಪಯ್ಯನ ಹಿತ್ತಲಿಗೆ ಹೋದಳು. ಅಪ್ಪಯ್ಯ ಆ ವೇಳೆಗೆ ಹುಲ್ಲು ಕಿತ್ತಾಗಿತ್ತು, 'ಬರಕ'ದಲ್ಲಿ ಕಟ್ಟುತ್ತಿದ್ದ (ಕಾರು. ೭೬). [ ದೇ.॥ ತೆಲು. ಬರಕ=ಹತ್ತಿಯ ಹೇರು]

**ಬರಕಂದಾಜ** (ನಾ). ಬಂದೂಕು ಅಥವಾ ತುಪಾಕಿಯನ್ನು ಹಿಡಿದಿರುವ ಸೈನಿಕ,—ಸಿಪಾಯಿ: ಇಂಗ್ಲಿಷ್ ಸೇನೆ ಅಂದು ದೇವಿಯ ಹಡಗಿಗೆ ಮುತ್ತಿಗೆ ಹಾಕುವ ಸಂಗತಿ ಅವರಿಗೆ ತಿಳಿದು ಅವರಿಬ್ಬರೂ ಬರಕಂದಾಜ ಸೇನೆಯನ್ನು ತೆಗೆದುಕೊಂಡು ಬಂದಿದ್ದರು (ಅಂಕು. ೨೭೪). [←ಪಾರ. ಹಿಂ. ಬರಕಂದಾಜ್, ಬರ್ಕಂದಾಜ್ ; ಮರಾ. ಬರಕಂದಾಜ್, ಬರ್ಕಂದಾಜ್]

**ಬರಕತ್ತು,** ಬರಖತ್ತು, ಬರ್ಕತ್ತು, ಭರಕತ್ತು (ನಾ). ಏಳಿಗೆ; ಅಭಿವೃದ್ಧಿ: ಆ ಮೂರುಮುಕ್ಕಾಲಿನ ಮಾಸ್ತರುಗಳು ಕ್ಲಬ್ಬಿನಲ್ಲಿ ತುಂಬಿರುವಷ್ಟು ದಿವಸ ಕ್ಲಬ್ಬು ಬರಕತ್ತಿಗೆ ಬರಲಾರದಯ್ಯ (ಮುಗಿಯು. ೨೦೭); ಯಾವ ಯಾವ ಒಕ್ಕಲುಗಳನ್ನು ತಂದು ಹಾಕಿ ನೋಡಿದೆ; ಬರಕತ್ತಿಗೆ ಬರಲಿಲ್ಲ (ಚಿಕ್ಕ. ೦೫). **ಬರಖತ್ತು :** ನೀಯತ್ತಿದ್ದವರಿಗೇ ಬರಖತ್ತು ಎಂದು ತುರುಕರು ಹೇಳುವುದು ನಿಜ (ಕರಿಸಂ. ೦೪೪). **ಬರ್ಕತ್ತು :** ಬಡವರಿಗೆ ಯಾವಾಗಲೂ

ಬರ್ಕತ್ತಿಲ್ಲ (ಜಾಗ. ೦೩); ಆಕೆಗೆ ಈ ಮದುವೆಯಿಂದ ಬರ್ಕತ್ತಿಲ್ಲ ಎಂದು ಅನಿಸಿತ್ತಂತೆ (ಕೃಮಾಂಕ: ೬). **ಭರಕತ್ತು** : ಹಿರಿಯರಾದವರು "ಇದು ಹಿಂದಿನಗಳ ಜಾಗ, ಇಲ್ಲಿ ನಮಗೆ ಭರಕತ್ತು ಇಲ್ಲ" ಎನ್ನುತ್ತಾರೆ (ಗಕಚಾ. ೦೬೩). [ ← ಅರ. ಬರಕತ್; ಹಿಂ. ಬರಕತ್, ಬರ್ಕತ್; ಮರಾ. ಬರಕತ್, ಬರಖತ್, ಬರ್ಕತ್]

**ಬರಕಾಸು**, 'ಬರಖಾಸ್ತು' ನೋ.

**ಬರಖತ್ತು** 'ಬರಕತ್ತು' ನೋ.

**ಬರಖಾಸ್ತ** 'ಬರಖಾಸ್ತು' ನೋ.

**ಬರಖಾಸ್ತು**, ಬರಕಾಸ್ತು, ಬರಖಾಸ್ತ, ಭರಕಾಸ್ತು, ಭರಖಾಸ್ತು (ನಾ). ೧. ಕೊನೆ ; ಮುಕ್ತಾಯ : ಸಾವಿರ ಬಗೆಯ ಭಯದ ಕಲ್ಪನೆಯ ಮೂಲಕ ಬುದ್ಧಿಯನ್ನು ಆರಂಭದಲ್ಲಿಯೇ ಬರಖಾಸ್ತು ಮಾಡಿ ಕುಳಿತಿದ್ದೇವೆ (ಜಾಂಅ. I, ೪೬೬). ೨. ಓಲಗ, ಸಭೆ ಮುಂತಾದುವುಗಳನ್ನು ಸಮಾಪ್ತಿಗೊಳಿಸುವುದು: ವೆಂಕಣ್ಣ ಸಭೆಯನ್ನು ಬರಖಾಸ್ತು ಮಾಡಿದ (ಜಾಂಅ. ೪೦). ೩. ಕಚೇರಿ ಮುಂತಾದುವುಗಳನ್ನು ಮುಚ್ಚುವುದು : ನ್ಯಾಯಾಧಿಕಾರಿಯು ಕೋರ್ಟು ಬರಖಾಸ್ತೆಂದು ಹುಕುಂ ಮಾಡಿದನು (ಕಥಾಸಂ. IV, ೮೩). **ಬರಕಾಸ್ತು** : ೨. ಸಭೆ ಬರಕಾಸ್ತಾಯಿತು (ಅಜ್ಞಾ. ೩೯) ; ದರಬಾರ ಬರಕಾಸ್ತು ಮಾಡಿ ಹುಕುಂ ಆದ್ದು ಬೆಳಿಗ್ಗೆ ದರಬಾರು ಆಗುತ್ತೆ (ಕುಕಕ. ೩-೪). **ಬರಖಾಸ್ತ** : ೨. ಪಾನ-ಸುಪಾರಿಯ ವೇಶ್ಯಾಯ ದರಬಾರ ನಡೆದು ಬರಖಾಸ್ತ ಆಯಿತು (ಶೀಕಕ. II, ೩೬೫). **ಭರಕಾಸ್ತು** : ೨. ಸಭೆ ಭರಕಾಸ್ತಾಯಿತು (ಕುಕುಜ. ೬೬); ಸಭೆ ಚರುವು ಖಾಲಿ ಎಂದು ತಿಳಿದಾಗಲೇ ಭರಕಾಸ್ತಾಗಿ ಬಿರಿದಾಗಿತ್ತು (ಕೃದ್ಧಕ. ೦೧೦). **ಭರಖಾಸ್ತು** : ೨. ಸಭೆಯು ಭರಖಾಸ್ತಾಯಿತು (ಶ್ರೀಕಾಯ. ೩೫೪) : ಈ ದರಬಾರು ಭರಖಾಸ್ತಾಗಲಿ (ಕಾಂಗ್. ೪೯೩). [← ಫಾರ. ಬರ್‌ಖಾಸ್ತ್, ಬರಖವಾಸ್ತ್ ; ಹಿಂ. ಮರಾ. ಬರಖಾಸ್ತ್, ಬರ್ಖಾಸ್ತ್]

**ಬರಗ** 'ಬರಗು' ನೋ.

**ಬರಗರಗ** 'ಬರಗರುಗ' ನೋ.

**ಬರಗರುಗ**, ಬರಗರಗ (ನಾ). ಒಂದು ಬಗೆಯ ಸಸ್ಯ; ಗರುಗದಲ್ಲಿ ಒಂದು ಬಗೆ : ಅಲೆಕಾಯಿ ತಾರೆಕಾಯಿ . . . ಅಮರದ ವಳ್ಳಿ, ಬರಗರುಗ ಇವಂ ಕಷಾಯಮಿಟ್ಟು ಸೇವಿಸೆ ಶ್ಲೇಷ್ಮಜ್ವರಂ ತೀರ್ಗುಂ (ಸಕವ್ಯ. ೪೪). **ಬರಗರಗ**: ಹಿತ್ತಾಳೆ ಶುದ್ಧಿ: ಹೊನ್ನಗೊನ್ನೆ ಸೊಪ್ಪು ಬರಗರ [ಬರಗರಗ] ಸೊಪ್ಪು ತಂಬೆ ಯ ೩ ರಸಗಳನ್ನು ಸಮ ಮಾಡಿ ೭ ದಿನ ಇದರಲ್ಲಿ ಉನೇ ಹಾಕಿ ತೊಳದು . . . ಸ್ವಲ್ಪ ರಸ ಹಾಕಿ ಕರಗಿಸಲು ಬಣ್ಣ ಬರುವುದು (ಗಂರತ್ನ. ೦೬-೩). [ಬರ್₁ (<ಬಱ) + ಗರುಗ]

**ಬರಗಲೆ** (ನಾ). ಒಂದು ಬಗೆಯ ಆಭರಣ : ಸರಿಗೆಗಿವು ಲಂಬಣಕ್ಕಿವು ಬರಗಲೆಗಿವು [ಪಾಠಾಂ. ಬರಗಲ್ಗಿವು] ಮುಗುಳ್ಗಳಿವು ಮೇಖಲೆಗಿವು ನೂಪುರ ರಚನೆಗಿವೆಂದವನಾದರದಿಂದ ಕೊಯ್ದುರಾಯ್ದು ದಿವಿಜಾಂಗನೆಯರ್ (ಅಂಕ್ಷ. ೬-೪೯) ; ಬರಗಲೆಯುಮಂ ಕೊಪ್ಪುಂ ನೂಪುರಮುಮಂ ಲಂಬಣಮುಮಲ್ಲಿ ಮಲ್ಲಿಗೆಯ ಮುಗುಳ್ ಬಿರಿಮುಗುಳೆಂದಿವು ತನಗಾಗಿರೆ ದೇಸೆಯ ಮಾಸ ರೆಕ್ಕೆಯುಂ ಪೊಸಯಿಸಿದಳ್ (ಜಾಂತಿಪು. ೬-೨೨). [?]

**ಬರಗಾಡು** (ನಾ). ನಿಸ್ಸಾರವಾದ ಕಾಡು-ಅಡವಿ : ಬಂಜರುಭೂಮಿ: ಭೂಮಿ ಬರಗಾಡು ನಿಸ್ಸಾರ (ಕೂಂಪ. ೬೦೪). [ಬರ್₁ (<ಬಱ)+ಕಾಡು₁]

**ಬರಗಾಲ** 'ಬಱಗಾಲ' ನೋ.

**ಬರಗಿ** 'ವರಗಿ' ನೋ.

**ಬರಗಿನಹುಲ್ಲು** (ನಾ). ಒಂದು ಬಗೆಯ ಹುಲ್ಲು; ಬರಗು: "ಕೋದ್ರಹುಲ್- ಬರಗಿನ ಹುಲ್ಲು" (ಚಿಕ್ರಿ. ೪೦). [<ಬರಗು₁+ಹುಲ್ಲು (<ಪುಲ್)]

**ಬರಗು₁** (ಕ್ರಿ). ಬಾಚು ; ಗೋರು : ಬಯಲಿಂಗೆ ಕೈ ಚಾಚಿ ಬರಗುತ ಭೀಮ ಬಾ ಸಹಸ ಬಳಲಿದೆಯಲಾಯೆಂದು ಮೋಹದಿಂದ ಕಿಚ್ಚುಗೆದರುತ ಮನದಿ ಕರೆಯಲ್ಪಕಾರಿಯಂ ಅಚ್ಯುತನು ಹಿಂದಿರಿಸಿ . . . ಉಕ್ಕಿನೋಕ್ಕೆಯ ದೃಢ ಭೀಮನಂ ನಿಲಿಸಿದರು ತಂದು ಮುಂದೆ (ಕುಸಂಗ. ೬೬-೨೨); ಕಾವ್ಯವೆಂದರೆ ನಮ್ಮಂಥ ಜೀವಿಯೇ ಅಲ್ಲದಿರುವಲ್ಲಿ ಅದರೊಳಗೆ ಆತ್ಮವನ್ನು ತುಂಬಿಸುವುದೆಂದರೆ . . . ಬಾನನ್ನು ಬರಗುವಂತೆಯೇ ಸರಿ (ಜಾಕಅಂ. ೩೬೪).

**ಬರಗು₂**, ಬರಗ (ನಾ). ೧. ಒಂದು ಬಗೆಯ ಧಾನ್ಯ ; ಹಾರಕ : "ಶ್ಯಾಮಕಾಹ್ವ ಬರಗುವದಕ್ಕುವಂತಾ ಪ್ರಿಯಂಗು ಕಂಗು ಸವಾಖ್ಯಂ" (ಶಬ್ದಮಣಿ. ೪೧-೦೬); ನೀವಿಕ್ಕುವ ಕೀರೆಗಂ ಬರಗಿನೋಗರಕ್ಕಂ ಪುಟ್ಟಿದವನಲ್ಲ (ಶಂಜಿ. ೨-೬೩); ಆದರದೆ ಜ್ಯೇಷ್ಠದವರದ ಬೂದಿಯ ಮೃಗಶಿರದ (ರಾದಿ) ಕೊಂಡ ಮಟಿಯಿಂ ಬೆಳೆಗುಂ ಮೇದಿನಿ ಪೊಜಗಾ(ವರ) ನಾಲ್ಕು ಜೋಳಾದಡೆ ಪಾರಕ್ಕು ಬರ(ಱ)ಗು ಬೆಳೆಗುಂ ಸ್ವಲ್ಪಂ (ಅಟ್ಟಿಕು. ೬-೦೬೬). ೨. ಬೆಟ್ಟಗಳಲ್ಲಿ ಬೆಳೆಯುವ, ಬರೆಯುವ ಲೇಖನಿಯನ್ನು ತಯಾರಿಸಲು ಉಪಯೋಗಿಸುವ ಒಂದು ಬಗೆಯ ಕಡ್ಡಿಯಾಗುವ ಹುಲ್ಲು : 'ಬರಗಂಕಡ್ಡಿ' ಪರಾ. **ಬರಗ** : ೧. ಬರಗದ ಅನ್ನ ತಿನ್ನುವವ ಹೂರಿಗೆ ಬಯಸಿದ ಹಾಗೆ (ಗಾದೆ).

[ದೇ.॥ ತಮಿ. ವರಕು; ಮಲ. ವರಗು; ತೆಲು. ವರಗ, ವರಿಗೆ. / ಸಂ. ವರಕ, ವರುಕ./ಮರಾ. ಬರಗ]

**ಬರಗುಕಡ್ಡಿ** (ನಾ). ೧.=ಬರಗು₂ ೨ : ಕತ್ತೃಣಂ, ಪೌರಂ, ಸೌಗಂಧಿಕಂ, ಧ್ಯಾಮಂ . . . ರೌಹಿಷಂ — ೬ ಕಾಚೀಹುಲ್ಲು, ಕಾಚೀಕಡ್ಡಿ, ಹಂಚೀಕಡ್ಡಿ, ಬರಗುಕಡ್ಡಿ ಇವುಗಳೆಲ್ಲಕ್ಕೂ ಪೆಸರುಗಳು (ಸಿದ್ಧಾಂತಿ. ೦೫೦). ೨. ಬರಗಿನ ಹುಲ್ಲಿನ ಕಡ್ಡಿಯಿಂದ ಮಾಡಿದ ಲೇಖನಿ : (೬).

[ಬರಗು₂ + ಕಡ್ಡಿ]

**ಬರಗೂರ್** (ನಾ). ಒಂದು ಊರಿನ ಹೆಸರು; ಈ ಬಳ್ಳಾರಿ ಜಿಲ್ಲೆಯ ಈಗಿನ ಬರಗೂರು : ಶ್ರೀ ಮಹೇನ್ದ್ರಾಧಿರಾಜನಾತಂ ಚೋರ ಮೊದಲಾದ ಕೇಷಾದಾಯಿಗರ ನಿರ್ಮೂಲಂ ಕಿಡಿಸಿ ಪೃಥ್ವೀರಾಜ್ಯಂಗೆಯ್ಯುತ್ತ ಬರಗೂರೊಳ್ಬೀಡಂ ಬಿಟ್ಟು (ಎಕ. XII. ಶಿರಾ. ೨೯-೨; ಸು. ೯೦೦); ಶ್ರೀ ಪ್ರಿತುವೀವಲ್ಲವ ಪಲ್ಲವಕುಲತಿಲಕ ಶ್ರೀಮನ್ನಯ್ದುಮ್ಮರಸಪ್ಪೃ[ಥು]ವೀರಾಜ್ಯಂಗೆಯ್ಯು ಬರಗೂರೊಳಿರೆ (ಕೌಇ. IX-i, ೪೦-೪; ೯೧೭).

[ ಬರಗು₂ + ಊರ್ ]

**ಬರಗೆಡು** (ಕ್ರಿ). ಏನೂ ಇಲ್ಲದಂತೆ ಆಗಿ ಕಂಗೆಡು; ಗತಿಗೆಡು : ಆ ಬರಗೆಟ್ಟ ಬಡ ಹುಡುಗರು ಉಣ್ಣುವ ಸಂಭ್ರಮ ನೋಡಿ ಆ ಧಾರ್ಮಿಕ ವೈದ್ಯನಿಗೆ ಪರಮಸಂತೋಷವಾಯಿತು (ಕುಂಜಾಯ. ೪-೬೬); ಈ ನಂಜೇಲಿಂಗಭಟ್ಟನು ಬರಗೆಟ್ಟು ಅಲ್ಲಿದ್ದ ತಿಂಡಿಗಳನ್ನು ತಿಂದನು (ಶೀಕಕ. II, ೬).

[ಬರ್₁ ( < ಬಱ) + ಕೆಡು₁]

**ಬರಟು** (ನಾ). (ಉಕ) ಹೂವು, ಕಾಯಿಗಳು ಆಗದಂಥ ತೊಗರಿಯ ಹಸಿಯ ಗಿಡ : ಬರಟಿನಿಂದ ಕಣದ ಕಸ ಹೊಡೆದು ತೆಗೆ (ಬೂಕ). 'ಬಱಲು' ಪರಾ. [?]

**ಬರಡಕೆಱೆ** 'ಬರಡಗೆಱೆ' ನೋ.

**ಬರಡಗೆಱೆ**, ಬರಡಕೆಱೆ (ನಾ). ಒಂದು ಕೆರೆಯ ಹೆಸರು (?) : ಅನ್ತ ಬನ್ದು . . . ಇಶನ್ಯದಿಶಿ ಒಳಗೆಱೆಯ ಬರಡಗೆಱೆಯೊಳ್ಕುಡತ್ತು (ಎಕ. XVI. ತಿಪಟೂ. ೦೪೦-೬೬; ಸು. ೪೦೦). **ಬರಡಕೆಱೆ** : ಕೆಡಸೂರ್ ಪೂರ್ಬ್ಬಸ್ಸಾನ್ದಿಶಿ ಬರಡಕೆಱೆಯ ಮೂಡ ಕಡೆ ಗೋಡಬಳ್ಳವಗೆಱೆಯ (ಮೃಆಂ. ೦೪೦೯. ೦೦-೬೪; ೯೦೦). [ಬರಡ ? + ಕೆಱೆ]

**ಬರಡಾ**, ಬರಡೀ, ಭರಡಾ (ನಾ). ಒಂದು ಬಗೆಯ ಅಡಕೆ ; ಹಣ್ಣು ಅಡಕೆ : ಬರಡಾಅಡಕೆ—ಬಹಳ ದೊಡ್ಡದಾಗಿ ಹಾಂಗೂ ಸಣ್ಣದಾಗಿರ

ಬಾರದು, ಮಧ್ಯಮ ಇರತಕ್ಕದ್ದು . . . ಇಂಥಾ ಮಾಲವೂ ಒಂದನೇ ನಂಬರದ ಬರಡಾಅಡಿಕೆ ಎಂದೆನಿಸಲ್ಪಡುತ್ತದೆ (ಘಾಂಅಡಿಕ್ಕಾ. ೯೯). **ಬರಡೀ:** ಅಡಿಕೇಕಾಯಿ ಹಣ್ಣಾಗುವವರೆಗೆ ಬಿಟ್ಟರೆ ಅದರೊಳಗೆ ಮೇಲಾದ ಬರಡೀ ಅಡಿಕೆ ಹೊರಡುತ್ತದೆ; ಎಳೆತಿನ ಕಾಯಿಯಲ್ಲಿ ಚಿಕಣೀಅಡಿಕೆ ಹೊರಡುತ್ತದೆ (ಕಖಾಗ. ೨೮೯). **ಭರಡಾ:** ಅವಳು . . . ಭರಡಾಅಡಿಕೆಯನ್ನು . . . ಮುಂದೆ ಹಿಡಿದಳು (ಕಕ್ಕರ್ಕ್ಕ. ೨೧೬). [ ← ಮರಾ. ಬರಡಾ, ಬರಡೀ ]

**ಬರಡಿ** 'ಬಱಡಿ' ನೋ.

**ಬರಡೀ** 'ಬರಡಾ' ನೋ.

**ಬರಡು** 'ಬಱಡು' ನೋ.

**ಬರಡುಗಾಲ** (ನಾ). ಕ್ಷಾಮದ ಕಾಲ : ವಚನಸಾಹಿತ್ಯದ ದೃಷ್ಟಿಯಿಂದ ಹದಿಮೂರು ಹದಿನಾಲ್ಕನೇ ಶತಮಾನಗಳು ಬರಡುಗಾಲವೆಂದೇ ಹೇಳಬೇಕು (ಕೂಕ್ಕಸು. ೦೯). [ಬರಡು ( <ಬಱಡು ) + ಕಾಲ]

**ಬರಡುಗೊಳಿಸು** (ಕ್ರಿ). ವ್ಯರ್ಥಗೊಳಿಸು : ನಿಷ್ಪ್ರಯೋಜಕವನ್ನಾಗಿ ಮಾಡು : ಕಣ್ಣು ಗುಡ್ಡಿಯು ಆಗಿ ಕುರುಡುಗೊಳಿಸುವೆಯಾ ? ನರಳು ನೀಡುತ ಸಸಿಯು ಬರಡುಗೊಳಿಸುವೆಯಾ? (ಕಕ್ಕಕ್ಕ. ೬-೦೩). [ಬರಡು (<ಬಱಡು) + ಕೊಳ್$_1$ +— ಇಸು$_1$]

**ಬರಡುತನ** (ನಾ). ಮಕ್ಕಳಾಗದಿರುವಿಕೆ; ಬಂಜೆತನ : ಕೆಲವೊಮ್ಮೆ 'ಇ' ಜೀವಾತಿನ ಅಭಾವದಿಂದ ಹೆಣ್ಣುಮಕ್ಕಳಲ್ಲಿ ಮತ್ತು ಗಂಡಸರಲ್ಲಿ ಕೂಡ, ಬರಡುತನ ಬರಬಹುದು (ಅರುಜಾ. ೬೬). [ಬರಡು (<ಬಱಡು)+— ತನ]

**ಬರಡುಭೂಮಿ** (ನಾ). ಬಂಜೆನೆಲ ; ಪಾಳುಭೂಮಿ ; ಬಂಜರು : ಬರಡುಭೂಮಿ ಬಂಗಾರದ ಭೂಮಿಯಾಗುತ್ತದೆ (ಕಪಂ. ೩೦). [ಬರಡು (<ಬಱಡು) + ಭೂಮಿ]

**ಬರಡುಮರ** (ನಾ). ಫಲ ಬಿಡದ ಮರ : ಎಲ್ಲಿಂದಲೋ ಸುಳಿಗಾಳಿ ತಾಕಿ ಬರಡುಮರದ ಒಂದೆರಡು ಎಲೆಗಳೂ ಉಲಿಯುವಂತೆ, ಅವಳ ತಲೆಯಲ್ಲಿ ಒಂದೆರಡು ವಿಚಾರಗಳು ಗುಜುಗುಜು ಮಾಡಹತ್ತಿದ್ದವು ((ಹಿಕಾಕ. ೩೦). [ಬರಡು(<ಬಱಡು) + ಮರ$_1$]

**ಬರಡುಮಾತು** (ನಾ). ವ್ಯರ್ಥವಾದ ಮಾತು : ಸುಮ್ಮನೆ ಬರಡು ಮಾತಿನಿಂದೇನು ಲಾಭ ? (ಊ). [ಬರಡು (<ಬಱಡು) + ಮಾತು$_1$]

**ಬರಡೆ** 'ಬಱಡೆ' ನೋ.

**ಬರಣ** (ನಾ). (?) : ಕೇಶವ ದೇವರಿಗೆ ಒನ್ದು ವರಹ ಕುಳದ ದಾಸರಿ ಬರಣ ತಿವಪ್ಪ ಒನ್ದು ಬರಣ ತೋಟವನೂ ದೇವಸ್ವವಾಗಿ ಧಾರೆಯನೆಱದು ಕೊಟ್ಟೆವಾಗಿ (ಎಕ. VIII. ಸೊರಬ. ೩೨೬-೦೦ ; 1516). [ ? ]

**ಬರಣೆ** (ನಾ). ಕರಡಿಗೆ ; ಕರಂಡಕ : ಎಂ ಬಱದೆ ಪರಪುವ್ವೆ ಪಲವುಂ ಬರಣೆಯನಿರಿಸು ಕಿಲಕಿ ನೆಲೆವೆಲೆ ಪೇಟಾ ಪೊಂಬರಣೆಗಳೆಸೆದರ್ಕಂ ಚೆಂಬರಣೆ ಗಮಿನಿತಱಿಂದೆ ತಣಿದವೆವೀಗಳ್ (ಕಕಾ. ೬-೩೦) ; ಅರಣೆ ಕಡಿದರೆ ಬರಣೀ ಮದ್ದು ಸಾಲದು (ಗಾದೆ). [<ಸಂ. ಭರಣೀ./ತಮಿ. ಮಲ. ಪರಣಿ ; ತುಳು. ಬರಣೆ, ಬರಣೆ ; ಕೊಡ. ಬರಣಿ ; ತೆಲು. ಬರಣಿ, ಬರಿಣೆ]

**ಬರತ$_1$** 'ಭರತಿ' ನೋ.

**ಬರತ$_2$** (ನಾ). ಒಂದು ಬಗೆಯ ವ್ಯಂಜನಪದಾರ್ಥ ; ಬಜ್ಜಿ : ತಳ್ಳನ್ನ ಎಂಟುಹತ್ತು ರೊಟ್ಟಿಯ ಮಾಡಿ ಬದನೀಕಾಯಿಯ ಸುಟ್ಟು ಬರತವ ಮಾಡಿ ಅಲ ಮಾಗಣೆಬೇರು ಹುಣ್ಣಾಗಂಟಿಯ ಕಾಯಿ ಸಲಸಂದರೊಂದ್ರುತ್ತು ಸಲಸಿದೆನೊ ಶಿವನೆ (ಲೋಕಗೀ. ೯೩). [ ? ].

**ಬರತರಫು** 'ಬರತರಫು' ನೋ.

**ಬರತರಫ್** 'ಬರತರಫು' ನೋ.

**ಬರತರಫು**, ಬಡತರ್ಫ್, ಬರತರಫು, ಬರತರಫ್, ಬರತರ್ಫು, ಬರತರ್ಫು, ಬರ್ತರಫ್, ಬರ್ತರ್ಫ್, ಭರತರ್ಫು (ನಾ). ಉಚ್ಚಾಟನೆ ; ರದ್ದತಿ; ವಜಾ; ಕೆಲಸದಿಂದ ತೆಗೆದುಹಾಕುವಿಕೆ : ಪಾರ್ಲಿಮೆಂಟಿನವರು ಅರಸನಿಗೆ ಹಣ ಕೊಟ್ಟು ಬಕಿಂಗ್‌ಹಮನನ್ನು ಬರತರಫು ಮಾಡಬೇಕೆಂದು ಮತ್ತೆ ಹೇಳಿದರು (ಇಂಗ್ಲಂಡ. ೦೯೦); ೪೦೦೦ ಕುದುರೆ ಬರತರಫು ಮಾಡಿಸಿ (ಹೈದ. ೩೯). **ಬಡತರ್ಫ್ :** ಕೆಲವು ದಿವಸಗಳ ಕೆಳಗೆ ನಾನು ನಮ್ಮ ಬಡತರ್ಫ್ (dismiss) ಮಾಡಿದ ಆಳುಮಗನಿಗೂ ಒಂದು ತುಣುಕು ಮಾನಪತ್ರವನ್ನು ಕೊಟ್ಟೆನು (ಹಿಕಾಕ. ೦೯೭). **ಬರತರಫು :** ಅವನು ಆ ಮನೆಗಾರನನ್ನು ಬರತರಫು ಮಾಡಿಸಿದನು (ಕಕಾಹು. IV. ೩೦). **ಬರತರಫ್ :** ಮೊದಲು ಹೈದರನು ನಾಲ್ಕು ಸಾವಿರ ಕುದುರೆಯ ವರನ್ನು ಈ ರೀತಿ ತೊಲಗಿಸಿ ಅವರ ಸೈನ್ಯವನ್ನು ಬರತರಫ್ ಮಾಡಿಸಿದನು (ಐಕ. ೬೨) ; ಇನ್ಸ್‌ಪೆಕ್ಟರು . . . ನನ್ನನ್ನು ಬರತರಫ್ ಮಾಡಿಬಿಟ್ಟರು (ಶ್ರೀಕಶ. ೬೬). **ಬರತರ್ಫು :** ಸಸ್ಪೆಂಟು, ಬರತರ್ಫು ಎಂದ ಕೂಡಲೆ 'ದಮ್ಮಯ್ಯ ಮಾಫಿ ಮಾಡಿ' ಎಂದು ವಿಧೇಯತೆಯನ್ನು ತೋರಿಸುವುದು (ಗಟುರಾ. ೯೩): **ಬರತರ್ಫು :** ಅಂಥಾ ನೌಕರನನ್ನು ಸಸ್ಪೆಂಡ್ ಮಾಡಬಹುದು, ಬರತರ್ಫು ಮಾಡಬಹುದು (ಗ್ರಾಮಶಿ. ೯೬). **ಬರ್ತರಫ್ :** (ಕೃಸೆಗ. II. ೫೯೩). **ಬರ್ತರ್ಫ್ :** ಜ್ವರ ನಿಂತರೆ ಬರ್ತರ್ಫ್ ಮಾಡುತ್ತಾರಲ್ಲಾ ಜ್ವರಾನೂ ಉಳಿಸಿಕೊಂಡು ಬಿದ್ದು ಕೋಡೇ ಇರೋಣ, ಅಂತ ಅನ್ನಿಸುತ್ತದೆ (ಹಂಗೂ. ೦೦೦) ; ಸೋಮು ಪ್ಯಾಸ್ ಆಗಲಿಲ್ಲ. ಆದುದರಿಂದ ತಂಡದಿಂದ ಅವನಿಗೆ ಬರ್ತರ್ಫ್ ಆಯಿತು (ಜ್ಞಾಬನ್ನೇ. ೦೨೯). **ಭರತರ್ಫು :** ಷರಾರತ್ತು ಮಾಡಿದವರು ಭರತರ್ಫಾಗಿ ಹೋಗುವಲ್ಲಿ ಮಾರ್ಗದಲ್ಲಿ ಅವರನ್ನೆಲ್ಲಾ ಲೂಟೀ ಮಾಡಿ (ಹೈಕಕ. ೩೯). [←ಹಿಂ. ಬರತರಫ್ ; ಮರಾ. ಬರತರಫ್, ಬರತರ್ಫ್, ಬರ್ತರ್ಫ್]

**ಬರತರ್ಫು** 'ಬರತರಫು' ನೋ.

**ಬರತರ್ಫು** 'ಬರತರಫು' ನೋ.

**ಬರದೆ** (ನಾ). ಒಂದು ನದಿಯ ಹೆಸರು ; ವರದಾನದಿ : ಮೂಡಲು ತಮ್ಮುಗೆಯ ಕಳ್ಳಪೊಳೆ ಮೊದಲಾಗಿ ಬರದೆಯಿಂ ತೆಂಕ ಪೋಪ ಭಣ್ಡಕ್ಕೆ (ಎಕ. XIX. ೦೬೩-೦೬ ; 1075). [<ಸಂ. ವರದಾ]

**ಬರನು** 'ಬಱ' ನೋ.

**ಬರಪ** 'ಬರೆಪ' ನೋ.

**ಬರಬತ್ತ** (ನಾ). ಖುಷ್ಕಿ ನೆಲದಲ್ಲಿ ಬೆಳೆಯುವ ಬತ್ತ ; ಪುಣಜಿ ಬತ್ತ : ನೀರಾವರಿ ಇಲ್ಲದ ಕಡೆ ಹೊಲಗಳಲ್ಲೇ ಬರಬತ್ತ ಬೆಳೆಯುತ್ತಾರೆ (ಊ). [ ಬರ್$_1$ (<ಬಱ) + ಬತ್ತ ]

**ಬರಬಿಸಿಲು** (ನಾ). (ಹಸಿಯನ್ನು) ಒಣಗಿಸುವಂತಹ ಬಿಸಿಲು ; ಅತಿ ತಾಪದ ಬಿಸಿಲು : ಬರಬಿಸಿಲಿಂದ, ಹೊದೆಯದ ಅವನ ಮೈ ಬಾಡಿ ಬೆಂಡಾಗಿತ್ತು (ಹೇಟುಕೂ. ೫೯). [ ಬರ್$_1$ (<ಬಱ) + ಬಿಸಿಲು (<ಬಿಸಿಲ್)]

**ಬರಬು** ' ಬರುಹು ' ನೋ.

**ಬರಮ** 'ಬೊಮ್ಮ' ನೋ.

**ಬರಮಪ್ಪ** (ನಾ). ಬೊಮ್ಮ ; ಬ್ರಹ್ಮ : ಡೋಳಿನ ವ್ಯಾಲ್ ಕ್ಕೆ ಬರಮಪ್ಪ ಹಾಕ್ಯಾನು ತಾಳವ ಶಿವನಪ್ಪ ತಟ್ಟ್ಯಾನ್ಯಾ, ಒಳ್ಳೊಳ್ಳೆ ಪದಗಳು ಹನುಮಪ್ಪ ಹಾಡ್ಯಾನು ಚೆಲುವ ಕನಕಪ್ಪ ಕುಣಿದಾನ್ಯಾ (ಕಶಕ. ೦೨೦-೦೨). [ಬರಮ ( <ಬೊಮ್ಮ) + ಅಪ್ಪ$_1$]

**ಬರಮೋಡ** (ನಾ). ಅಕಾಲದ ಮೋಡ ; ನೀರಿಲ್ಲದ ಮೋಡ : ವಸಂತಪೂರ್ಣಿಮೆಯ ಭೃಗುವಾರದಾ ನಡುಹಗಲ ಸಿರಿಹೊತ್ತು, ಭಾಸ್ಕರನ ಸುಳುವಿಲ್ಲ ; ನೋಡೊಂದೆ ಬರಮೋಡ ಬಾನಗಲ ಚಾಚಿ ನೋಹನ ಕಾಲದಾ ಪ್ರಲಯಮೇಘವೆನೆ ಮುಚ್ಚಿಹುದು (ಗೂಕೃಕಾ. ೦೦-೨೮೩). [ಬರ್$_1$ (<ಬಱ)+ ಮೋಡ]

**ಬರಲು** 'ಬಱಲು' ನೋ.

**ಬರಲುಕಡ್ಡಿ** (ನಾ). ಪೊರಕೆಯನ್ನು ಕಟ್ಟಲು ಉಪಯೋಗವಾಗುವ ಗಿಡಗಳ ಒಣಗಿದ ಕಡ್ಡಿ : (ಪ್ರ.ಶಿ. ೦-೪). [ಬರಲು (<ಬಱಲು) + ಕಡ್ಡಿ]

**ಬರಲುಕೊಂಬೆ** (ನಾ). ಎಲೆಗಳು ಉದುರಿ ಬೋಳಾದ ಕೊಂಬೆ : ಕಟುಕಗೆದುರುಬದುರಾಗಿ ಉದ್ದವಾದೊಂದು ಮರದ ನೆರಳು ಬಿದ್ದಿತ್ತು. ಅದರ ಬರಲುಕೊಂಬೆಗಳ ಜಟಿಲವೃತಿರೂಪ . . . ನುಜ್ಜುಗಲ್ಲು ನೆಲದ ಮೇಲೆ ಸ್ಪಷ್ಟವಾಗಿ ಮೂಡಿತ್ತು (ಕ್ರಕರು. ೦೩೩). [ಬರಲು (< ಬಱಲು) + ಕೊಂಬೆ$_1$]

**ಬರಲುಗಿಡ** (ನಾ). ಎಲೆಗಳು ಉದುರಿ ಒಣಗಿದ ಗಿಡ : ಒಂದು ಕವಲ ತುದಿಗೆ ಒಂದು ಗಿಡವು ಶೋಭಾಯಮಾನವಾಗಿ ಬೆಳೆದಿದ್ದು ... ಇನ್ನೊಂದು ಕವಲಿನ ಮೇಲೆ ಒಂದು ಬರಲು ಗಿಡವು ಬೆಳೆದಿತ್ತು (ಕಕ್ಕ್ರ. ೦೬೨). [ಬರಲು (<ಬಱಲು) + ಗಿಡ (<ಗಿಡು)]

**ಬರಲುವೋಗು** (ಕ್ರಿ). ಎಲೆಗಳು ಉದುರಿ ಬೋಳಾಗಿರು : ಮಾಗಿಗೆ ಬರಲುವೋದ ಬೂರುಗವುರಂ ಕೋಡಮುಕೋಡಿನ ಕವಲ್ಗಳಗಳಿಂ ಮಲೆ ತಲೆಗೆ ಕೋಡು ಮೂಡಿದ ಕೆರನ ತೋರ್ಪಂತೆ (ಶ್ರೀಣಾಪಾ. ೨೩೦-೯೯). [ಬರಲು (< ಬಱಲು) + ಪೋಗು$_1$ (<ಪೋ$_1$)]

**ಬರವಣ** (ನಾ). "ಬರವಣಿಗೆ" (ಗಿಳಿಬಂ. ಕೋಶ) : ಹಸುರು ಮಸಿಯಿಂ ಬರೆದುದಿದರ ಬಿನ್ನಣವೇಂ ? ನಿನ್ನ ಕವನಕೆ ಕಾಲನಟ್ಟ ಟಿಪ್ಪಣವೇಂ ? ಮುನ್ನನಿಂದಿಗೆ ಸಾಲವಿತ್ತ ಬರವಣವೊ ? ನಿಚ್ಚತೆಗೆ ನಮ್ಮನೋಲಯಿಸುವವುತಣವೊ ? (ಗಿಳಿಬಂ. ೨೭-೨೩). [ಬರ್ಲ್$_1$ + — ಅಣ]

**ಬರವಣಿಗ** (ನಾ). ಬರೆಯುವವನು; ಲಿಪಿಕಾರ : ಬಿರುದರು ಬರವಣಿಗರುಂ ಗವಱಿಗಳುಂ ಗಾತ್ರಿಗರುಮಯ್ಯತ್ತೊಕ್ಕಲುಂ ಸಮಸ್ತ ನುರಂಗಳುಂ . . . ಪಾಮಶಕ್ತಿದೇವರಿಗೆ ಧಾರಾಪೂರ್ಬ್ಬಕಂ ಮಾಡಿ (ಕೊಲ್ಲಾಶಾ. ೦೫-೬೭, 1186). [ಬರ್ಲ್$_1$ + — ವಣಿಗ$_2$ (< — ವಳಿಗ$_2$)]

**ಬರವಣಿಗೆ, ಬರೆವಣಿಗೆ**(ನಾ). ೧. (ಬರೆದ) ಅಕ್ಷರ ; ಲಿಪಿ : "ಲಿಪಿ, ಲಿಬಿ: — ೨ ... ಬರೆಯಲ್ಪಟ್ಟ ಅಕ್ಷರಗಳ ಆಕಾರಸ್ಥಿತಿಗೆ ಹೆಸರು ಶಾಸನದ ಲಿಪಿ ಮುಂತಾದ್ದು, ಬರವಣಿಗೆಗೂ ಹೆಸರುಗಳು" (ಸಿದ್ಧಾಂತಿ. ೨೩೯). ೨. ಬರೆಯುವಿಕೆ : ಇಗೊರ್ ಅಲೆಕ್ಸಾಂಡ್ರೊವಿಚ ಬರವಣಿಗೆ ಮುಗಿಸಿ ಕನ್ನಡಕವನ್ನು ತೆಗೆದಿಟ್ಟು "ಕುಳಿತುಕೊಳ್ಳಿ, ಕುಳಿತುಕೊಳ್ಳಿ" ಎಂದರು (ಕಾಕಿಕು. ೦೬೩). **ಬರೆವಣಿಗೆ** : ೩. ಬರೆದುದು ; ಬರಹ ; ಲೇಖನ : ಪಂಡಿತರ ಬರೆವಣಿಗೆಗಳಲ್ಲಿ ಸಂಸ್ಕೃತಪ್ರಚುರವಾದ ಭಾಷೆಯಿತ್ತು (ಕಸಾಇ. ೦೦). [ಬರ್ಲ್$_1$ + — ವಣಿಗೆ]

**ಬರವಸ** 'ಭರವಸ' ನೋ.

**ಬರವಸಿಗ** 'ಭರವಸಿಗ' ನೋ.

**ಬರವಿಗ** (ನಾ). ಬರುವವನು ; ಆಗಮಿಸುವವನು : ಅನತಿ ದೂರದೊಳೊರ್ವರ್ ಕೊರಿಸಿದ ಬರವಿಗನ ಬರವಿಂಗೆ ಶಯ್ಯಾಸನವಂ ರಯ್ಯಂ ಮಾಡಿರಿಸೆ ಪೀಠಮರ್ದಕಂ ಸ್ವರ್ದು ನೋಡಿ (ಕಂದ್ರಪು. ೬೫-೬೦೩). [ಬರವು (<ವರ್ಲ್$_1$) + — ಇಗ)]

**ಬರವು** 'ವರ್ಲ್$_1$' ನೋ.

**ಬರವುಲಿಕ** (ನಾ). ಒಂದು ಸ್ಥಳದ ಹೆಸರು : ಪೂರ್ವ್ವಸ್ಯಾಂ ದಿಶಿ ಬರವುಲಿಕ ಸೀಮೆ (ಇಕ. VII. ೨೧೪-೪೪; ಸು. 10ನೆಯ ಶತ). [?]

**ಬರಷಣ** 'ಭರವಣ' ನೋ.

**ಬರಸಿಡಿಲು** 'ಬಱಸಿಡಿಲ್' ನೋ.

**ಬರಸು$_1$** 'ವರಿಸು$_1$' ನೋ.

**ಬರಸು$_2$** 'ಬರೆಯಿಸಂ' ನೋ.

**ಬರಸು$_3$** (ನಾ). ಬರೆಯುವಂತೆ ಮಾಡುವಿಕೆ ; ಬರೆಸುವಿಕೆ : ಮನೆಯ ಸಾಲೆಯನಾಗಬೇಕಾದರೆ ಈ ಬರಸುಗಳ ಅಗತ್ಯವೇನು ? (ಶಂಗಟೋ. ೦೨೬). [ಬರ್ಲ್$_1$ + — ಸು$_3$]

**ಬರಹ** 'ಬರೆಪ' ನೋ

**ಬರಹಗಾತಿ** (ನಾ). ಬರೆಯುವವಳು ; ಲೇಖಕಿ : ಬರಹಗಾತಿಯರ ಲೆಕ್ಕಣಿಕೆಗೆ ಇರುವ ಬಂಧನ ಇದೀಗ ಇಲ್ಲದಾಗಿದೆ (ಕಕ್ಕಪು. ೦೯೩೬-೩೯ ; ೦-೬೦). [ಬರಹ (<ಬರೆವ) + — ಕಾತಿ$_1$]

**ಬರಹಗಾರ** 'ಬರೆಪಕಾಱ' ನೋ.

**ಬರಹಗಾರ್ತಿ** (ನಾ). = ಬರಹಗಾತಿ : ಮಹಿಳಾಬರಹಗಾರರು ; ಅರ್ಥಾತ್ 'ಬರಹಗಾರ್ತಿ'ಯರು (ಕೊಕಸಂ. ೪೩). [ಬರಹಗಾರ (< ಬರೆವಕಾಱ) + — ತಿ$_1$ (< — ಇತ್ತಿ)]

**ಬರಹು$_1$** 'ಬರೆಪು' ನೋ.

**ಬರಹು$_2$** 'ಬರುಹು' ನೋ.

**ಬರಾಕು** (ನಾ). ತ್ವರೆ ; ಜೋರು; ರಭಸ : ರಾಮನ ಕಾಲುಗಳು ತಿರುಗಿ ಆಲಸ್ಯ ಗೊಳ್ಳಲಿಲ್ಲ. ಅವು 'ಬರಾಕಿ'ನಿಂದ ಮನೆಯ ಕಡೆಗೆ ಸರಿದುವು (ಮಕಪು. ೪೬೨) ; ವೆಂಕಮ್ಮ . . . ಬರಾಕಿನಿಂದ ಗುಡಿಯತ್ತ ನಡೆದರು (ಕದ್ರಸ. ೨೨೬). [←ಮರಾ. ಭರಾಕಾ]

**ಬರಾತ$_1$** 'ಪರಾತ' ನೋ.

**ಬರಾತ$_2$** 'ವರಾತ$_1$' ನೋ.

**ಬರಾಬರಿ$_1$, ಬರಾಬ್ಬರಿ, ಬರೋಬರಿ$_1$, ಬರೋಬ್ಬರ, ಬರೋಬ್ಬರಿ, ಭರಾಭರಿ** (ನಾ). ೧. ಸಮನಾದುದು; ಸರಿಯಾದುದು; ಉಚಿತ ವಾದುದು: ಈಗ ಬರಾಬರಿ ಆಯ್ತು ನೋಡು (ಶಂಪ:ಖ ೩೨), ನೀನನ್ನೋದೂ ಒಂದು ರೀತಿಯಿಂದ ಬರಾಬರಿ (ಶರ್ಮಕಿ. ೬೩). ೨. ಸುವ್ಯವಸ್ಥೆ ; ಓರಣ; ಅಚ್ಚುಕಟ್ಟು : ಬಿಡಿಸುತಲಾಗ ಬರಾಬರಿಯನು ಸರ್ವರೊಡಗೂಡಿ ನಿಂದು ಕೊಂಡಿರಲು (ಪ್ರಾಶಕ. ೪೦-೩೪); ರಕ್ಕಸೇಶ್ವರ ಬರಸ್ಲಲಬಲದಿ ಕರಕ ಕರದೀಪಿಕೆಗಳು . . . ಆಭರಣಂಗಳಾರವಂಗಳು ಬರಾಬರಿಯ ಬಿಡಿಸುತ ಮುಂದೆ ಧೋರಣೆಯೊಳ್ಳೆತರುತಮಿರ್ದುದು (ನಂಕಾರಾ. ೩-೬-೨೩). **ಬರಾಬ್ಬರಿ** : ೧. ಬರಾಬ್ಬರಿ ಏನೇ ಆದರೂ ಮದವಿ ಇದೇ ಊರಾಗ ಮಾಡೂದು (ತಿಹುಗು. ೩೪). **ಬರೋಬರಿ$_1$** : ೧. "ಬರೋಬರಿ" ವ್ಯಲಂದ್ದ ಹೆಸರಿನ ಸೋಮಯಾಜಿಗಳು ಉತ್ತರಿಸಿದರು (ಪಠಿಣಾ. II ೯೦೦); ಅಂತೂ ನನ್ನ ಮಾತು ನಿನಗೆ ಬರೋಬರಿ ಅನಿಸಿತಲ್ಲ (ಕಾಗಿಕ. ೬೯). **ಬರೋಬ್ಬರ** : ೧. ಬರೋಬ್ಬರ ಆತು (ಶಂಸಂ. ೬೦). **ಬರೋಬ್ಬರಿ** : ೧. ನಮ್ಮ ಡಾಕ್ಟರ ಹುಣಸೀಕಟ್ಟಿಯವರಲ್ಲಿ ಹೋದರ ಎಲ್ಲಾ ಬರೋಬ್ಬರಿ ಆಗತದ (ಅಕಪಾ. ೦೨೪); ನಿಮ್ಮ ಪೂಸೀಜರ ಬರೋಬ್ಬರಿ ಇರಬೇಕು (ಗಂಷೂಬು. ೪೨). **ಭರಾಭರಿ** : ೨. ತತ್ಸಭೆಯೊಳಾ ನಂದಿಯುಂಮ್ಮಹಾಕಾಳರ್ ಭರಾಭರಿಗಳಂ ಮಾಡುತಿರ್ದರತಿಭಕ್ತಿಯಿಂದ (ಕಿತಪು. ೨-೨೬). 'ಭರಾಭರಿಗೊಡು' ಪರಾ.

[← ಹಿಂ. ಬರಾಬರ್, ಬರಾಬರೀ, ಬರೋಬರ್ ; ಮರಾ. ಬರಾಬರ್, ಬರಾಬರೀ, ಬರೋಬರ್, ಬರೋಬರೀ]

**ಬರಾಬರಿ$_2$, ಬರೋಬರಿ$_2$, ಬರೋಬ್ಬರ್** (ಅ). ಸರಿಯಾಗಿ ; ಸಮನಾಗಿ; ತಕ್ಕುದಾಗಿ : ಈಗ ನನ್ನ ಮನಸ್ಸು ಬರಾಬರಿ ಇಲ್ಲ (ಸಮಜ. ೦೨೬); ನನ್ನ ಖೋಲಿ ಕಸ ಉಡುಗಿ ಟೇಬಲ್ಲೊರಸಿ ಎಲ್ಲಾ ಸಾಮಾನು ಬರಾಬರಿ ಇಟ್ಟು ಬಾ (ಧನಂಜ. ೩). **ಬರೋಬರಿ$_2$** : ಹಾಗಾದರೆ ಉತ್ತರ ಹೇಗೆ ಬರೋಬರಿ ಬಂತು? (ಶಿಂಶ. ೬೩) : ದಾದಲ್ಯಾ ಬರೋಬರಿ ಹೇಳಿದ ನೋಡ ಶಕಿ (೦೦ಚಕ. 11, ೨೦). **ಬರೋಬ್ಬರ್** : ಸೀಪ್ಸ

ಬರೋಬ್ಬರ್ ಕುಲಕರ್ಣಿ ಅನ್ರಪ್ಪ ಸಾಕು (ವ್ಯದ್ಯಶ. ೯೦). [< ಬರಾಬರಿ$_1$]

**ಬರಾಬರಿಗೆಯ್**, ಬರಾಬರಿಗೈ (ಕ್ರಿ). ೧. ವ್ಯವಸ್ಥೆಗೊಳಿಸು ; ಸರಿಗೊಳಿಸು : ಗಲಭೆ ಬೇಡ . . . ವಿಸುಕದಿರಿ ಎಂದು ಸರೆ ವೇತ್ರಕರ್ ಬರಾಬರಿಗೆಯ್ಯುತ್ತಿರ್ದರಾ ಭಾಳನೇತ್ರನ ಸಭೆಯೊಳು (ಶಂಕರಶ. ೩-೩೬).

**ಬರಾಬರಿಗೈ** : ೨. (ಅಲಂ) ಇಲ್ಲವಾಗಿಸು : ಮೇರು ಮಂದರಗಳೆನೆ ಬರುವ ಪೆರ್ದೆರೆಗಳನ್ನೂರುವೇಗದಿ ಬರಾಬರಿಗೈದು ನೀರಧಿಯ ಪೀರುವವೊಲ್ಪೈತಪ್ಪ ವಾರುತಿಯ ನಿಟ್ಟಿಸುತ (ಶಂಕಾರಾ. ೩-೦-೩೬).

[ಬರಾಬರಿ$_1$+ಗೈ (<ಕೆಯ್$_1$)]

**ಬರಾಬರಿಗೈ** 'ಬರಾಬರಿಗೆಯ್' ನೋ.

**ಬರಾಬರಿಗೊಳಿಸು** (ಕ್ರಿ). ಸರಿಮಾಡು ; ನೇರಗೊಳಿಸು ; ವ್ಯವಸ್ಥೆಗೊಳಿಸು : ದನುಜವನಚರರ ನೆರವಿಯು ಬರಾಬರಿಗೊಳಿಸಿ ರುಜುವಥಂಗೈದರಾಗ (ಶಂಕಾರಾ. ೬-೩೩-೦೯). [ಬರಾಬರಿ$_1$+ಕೊಳ್$_1$+ — ಇಸು$_3$]

**ಬರಾಬ್ಬರಿ** 'ಬರಾಬರಿ' ನೋ.

**ಬರಾಯಿಸು** 'ಭರಾಯಿಸಂ' ನೋ.

**ಬರಾರ** (ನಾ). ಒಂದು ಬಗೆಯ ತೆರಿಗೆ : ಚಾಂದಬೀಬಿಯು ಒಹು ಶೌರ್ಯದಿಂದ ಅದನ್ನು ರಕ್ಷಿಸಿದಳು ; ಬರಾರವನ್ನು ಕೊಟ್ಟು ಅಕಬರನ ಕೂಡ ಒಪ್ಪಂದ ಮಾಡಿಕೊಂಡಳು (ಹಿಂದುಇ. ೦೬೯).

[← ಪಾರ. ಹಿಂ. ಬರಾರ್]

**ಬರಾವರ್ದು**(ನಾ). ೧. ಗಣನೆ; ಲೆಕ್ಕಾಚಾರ. ೨. ವಂಶಪಾರಂಪರ್ಯವಾದ ಹಕ್ಕನ್ನು ನಮೂದಿಸುವ ಸರ್ಕಾರಿ ಲೆಕ್ಕ : ಆಗ ಗೌಡರ ಬರಾವರ್ದು ಉಳಿಸಲಿಕ್ಕೆ ಮತ್ತು 'ಸಸ್ಪಿಸ' ಡಿಸ್ಮಿಸಿ ತಪ್ಪಿಸುವುದಕ್ಕೆ ಗೌಡರ ರುಜುವನ್ನು ಶಾನುಭೋಗರು ಫೋರ್ಜರಿ ಮಾಡಿದ್ದುಂಟು (ಶನ್ಯಾಕು. ೦೩೯); ಛತ್ರ, ದೇವಸ್ಥಾನ, ಮಠ . . . ಇವು ಮೊದಲಾದ ಮುಜರಾಯಿ ಬಾಬುಗಳನ್ನು ಪಾವಂದರವರು ವಿಚಾರಿಸಿ ಅಭಿವೃದ್ಧಿಪಡಿಸಿ ಇದರ ಸಂಬಂಧವಾದ ಬರಾವರ್ದುಗಳನ್ನೆಲ್ಲ ಆಯಾ ಫೌಜುದಾರರು ತರಿಸಿಕೊಂಡು ತನಿಖೆ ಮಾಡಿ . . . ನೋಡಿಕೊಳ್ಳಬೇಕೆಂತಲೂ ಸನ್ ೧೮೨೭ರಲ್ಲಿ ಹುಕುಂನಾಮ ಸಾದರ್ವಾಡಿದರು (ಮುಹಾಶಂ. II, ೩೩).

[←ಹಿಂ. ಬರಾವರ್ದ್; ಮರಾ. ಬರಾವರ್ದ್, ಬರಾವರ್ದೀ]

**ಬರಾವರ್ದುದಾರ** (ನಾ). ಬರಾವರ್ದಿನ ಪಟ್ಟಿಯಲ್ಲಿ ಹೆಸರು ನಮೂದಾಗಿರುವ ವ್ಯಕ್ತಿ : ಆಕ್ಟರ್ ಬರಾವರ್ದುದಾರರ ಅಥವಾ ಅವರ ಕುಟುಂಬದವರ ಪೈಕಿ ಯಾರಿಗೆ ಹೆಚ್ಚು ಯೋಗ್ಯತೆಯುಂಟೆಂದು ಡಪ್ಯುಟಿ ಕಮಿಷನರವರಿಗೆ . . . ತೋರುತ್ತದೆಯೋ ಅಂಥಾವರನ್ನು . . . ಚುನಾಯಿಸತಕ್ಕದ್ದು (ಗ್ರಾಪೂಶ. ೩೩); ಬರಾವರ್ದುದಾರ ಶ್ಯಾನುಭೋಗ ವಸೂಲಾದ ಕಂದಾಯದ ಹಣವನ್ನು ದಸು, (ದುರುಪಯೋಗ) ಮಾಡಿದ್ದಾನೆಂದು, ಅವನನ್ನು ಸಸ್ಪೆಂಡ್ ಮಾಡಿ ನಂಜಪ್ಪನೆಂಬುವನನ್ನು . . . ನೇಮಿಸಿದ್ದರು (೯೦೬. ೦೩೩). [ಬರಾವರ್ದು + – ದಾರ್$_4$]

**ಬರಿ$_1$** (ನಾ). ೧. ಪಕ್ಕ; ಬದಿ; ಮಗ್ಗುಲು : 'ಕುನ್' (ಗುಡ್ಡ) + ಬರಿ (ಪಕ್ಕ) ಎಂದರೆ 'ಗುಡ್ಡದ ತಪ್ಪಲು' ಎಂಬುದಾಗಿ ಸಾರ್ಥಕತೆಯೊಡನೆ ಆ 'ಕುಮ್ಮರಿ' ಪದವು ರೂಪುಗೊಂಡಿರಬೇಕು (ಪಾಡೋಶ. ೨೯೬). ೨. ಪಕ್ಕೆ; ಅಳ್ಳೆ : "ಬರಿ ಪಕ್ಕಮದಕ್ಕು" (೪೦೪೦. ೦೯೦); ಪಱಿದವು ಬರಿ ಮುಱಿದ × × ನಿಟ್ಟೆಲ್ವೆರಡು ತೆಱೆದವು (ಎಕ. IV. ಹನ್ನಡ. ೦೦೬-೦೯; ಸು. ೯೩೦); ಅಂತು ಚಾತುರ್ದಂತವೊಂದೊಂದಱೊಳ್ ತಾಗಿ ತಳ್ತಿಱುವಲ್ಲಿ ತಲೆಗಳ್ ಪಱಿಯೆ ಬರಿಗಳ್ ಮುಱಿಯೆ ತೊಡೆಗಳುಡಿಯೆ (ಕಂಕಣ. ೦೮-೩೩ ವ); ಧರಣಿಪಾಲನ ತೆಗೆದು ಭೀಮನ ಬರಿಯನೆಚ್ಚನು. . . ಜವಗೆಡಿಸಿದನು ನಿನ್ನಾತನನಿಲಜನ (ಕುಮ್ಮಾ೯. ೦೯-೨). 'ಬದಿ'$_2$ ಪರಾ.

[ ದೇ. ॥ ತುಳು. ಕೊಡ. ತೆಲು. ಬರಿ ]

**ಬರಿ$_2$** 'ಬಱು$_2$' ನೋ.

**ಬರಿಕೆಯ್** 'ಭರಿಕೆಯ್' ನೋ.

**ಬರಿಕ್ಕೆ$_1$** 'ಬಱುಗೆಯ್$_2$' ನೋ.

**ಬರಿಕ್ಕೆ$_2$** 'ಭರಿಕೆಯ್' ನೋ.

**ಬರಿಕೋಲು** (ನಾ). ರಸ ಹೀರಿದ ಕಬ್ಬು; ರಸವಿಲ್ಲದ ಕಬ್ಬು : ಆಲೆಗಮ್ಮಿಕ್ಷುದಂಡಮನಿಕ್ಕಿ ತಿರುಹಿ ಮರುಕೋಲುಗಳನಿಕ್ಕಿ ಬರಿಕೋಲುಗಳ ಬಿಸುಟವೋಲ್ಸಾರುವಿನೋಳ್ಪಳದ ಫಲಜಾಲವನ್ನಿಳುಪಿದಂ (ಕುರಣ. ೯೦-೬).

[ ಬರಿ$_2$ (<ಬಱಿದು)+ಕೋಲು$_1$ (<ಕೋಲ್$_1$) ]

**ಬರಿಗಂಡ** (ನಾ). ಪಕ್ಕೆಯ ಮಾಂಸಖಂಡ : ಬರಿಗಂಡಂ ಪಿಸಿಲೇಱೆ ರೋಮಮುಡಿದಿರ್ದೆನ್ನಾಗೆ ಮುಂಗಾಲಗಲ್ಗಳ್ಪರೆ ಬಿರ್ಚುರ್ವೆ . . . ಕೋಟ್ಟುಟ್ಟಿ ಪರ್ಸೊರೆ ಸೂಸುತ್ತಿರೆ ಭೀಕರಂ ಸೊಗಯಿಸಿತ್ತುತ್ಕ್ರೋಶರಂ ಸೂಕರಂ (ಕಂದ್ರಶ. ೩-೬೦). [ಬರಿ$_1$ + ಕಂಡ$_2$]

**ಬರಿಗಡಗ** (ನಾ). ಕುದುರೆಯ ಪಕ್ಕೆಗಳ ಸುತ್ತ ಹಾಕುವ ತಂಗು.— ಚರ್ಮದ ಸುತ್ತುಪಟ್ಟಿ : ಬರಿಗಡಗ ಕೀಳ್ಕಂಬಿ ದುಕ್ಕುಡಿಯುರುಗು ಗಡಿಯಣ ಮೊಗವಡಂಗಳು ತುರಗವದನದಲೊಪ್ಪಿರಲು ತಾ ಪಕೆಯನಳವಡಿಸಿ. . . ಪರಿಪರಿಯ ಹಕ್ಕರಿಕೆಯಲಿ ಬೀಸಿದರು ಚೌರಿಗಳ (ಕುಮ್ಮಾ೯. ೯-೯೯) [ಬರಿ$_1$ + ಕಡಗ$_1$]

**ಬರಿಗಾಲು** 'ಬಱಿಗಾಲು' ನೋ.

**ಬರಿಗೆರೆ** 'ಬಱುಗೆಱೆ' ನೋ.

**ಬರಿಗೈ$_1$** 'ಬಱುಗೆಯ್$_1$' ನೋ.

**ಬರಿಗೈ$_2$** 'ಬಱುಗೆಯ್$_2$' ನೋ.

**ಬರಿಚು** (ನಾ). ಬರ್ಚಿ; ಬರ್ಜಿ; ಈಟಿ : ಮುಂದಿಟ್ಟ ಬರಿಚಿನಿಂ ಮೃತ್ಯುವಿನ ಸುರುಚಿಯಿಂ ರಚಿಸಿದೊಲು ರಂಜಿಸಿತು ರಣಮಂಡಲ (ಶರಶು. ೨೬-೨೮). [< ಬರ್ಚಿ]

**ಬರಿದಲೆ** 'ಬಱುದಲೆ' ನೋ.

**ಬರಿದು** 'ಬಱಿದು' ನೋ.

**ಬರಿದೆ** 'ಬಱಿದೆ' ನೋ.

**ಬರಿಮನ** 'ಬಱುಮನ' ನೋ.

**ಬರಿಮಾತು** ' ಬಱುಮಾತು ' ನೋ.

**ಬರಿಮೈ** ' ಬಱುಮೆಯ್ ' ನೋ.

**ಬರಿಯ$_1$** (ನಾ). ದೇವಸ್ಥಾನದ ಸೇವಕ : ದೇವಸ್ಥಾನದ ಸೇವಕರು (Temple Servants) ಅಂಬಲವಾಸಿ, ಬರಿಯ, ದೇವಡಿಗ, ದೇವಾಳಿ . . . ಸ್ಥಾನಿಕ, ವಾರಿಯರ್ (ಕುಳುಪಾ. ೦೬೨). [?]

**ಬರಿಯ$_2$** ' ಬಱಿದು ' ಪರಾ.

**ಬರಿಯಾಟ** ' ಬಱಿಯಾಟ ' ನೋ.

**ಬರಿಯಿಸು** ' ಪರಿಸು$_1$ ' ನೋ.

**ಬರಿಯೂರ್** (ನಾ). ಒಂದು ಊರಿನ ಹೆಸರು : ಮಾದೆಯೂರ ಶಾನ್ತಿವರ್ಮ್ಮಂ ಬರಿಯೂರನಿಱಿಯೆ ಬಳಗಾಜರ ಕೋಳರಂ ಪುನುವಲಪಳ್ಳಿಯಳಿಟ್ಟು ಪುಯ್ಯಲಂ ಪರಿದು ಪಟ್ಟುರ್ಪಲಮಂ ತಳ್ತಿಱಿದು ಸ್ವರ್ಗಾಲಯಕ್ಕೆ ಸನ್ದಂ (ಎಕ. VIII. ಸೊಆ. ೩೩-೩; ೯೭೦). [ಬರಿ$_2$ + ಊರ್]

**ಬರಿಯೆಲ್** ' ಬಱಿಯೆಲ್ವು ' ನೋ.

**ಬರಿಯೆಲುವು** ' ಬಱಿಯೆಲ್ವು ' ನೋ.

**ಬರಿಯೆಲ್ಬು**, ಬರಿಯೆಲ್, ಬರಿಯೆಲುವು (ನಾ). ಪಕ್ಕೆಯ ಎಲುಬು ; ಪಕ್ಕೆಯ ಮೂಳೆ : ವನಿತೆಯು ಕೇಶಮಂ ಸಭೆಯೊಳೆನ್ನನುಜಂ ತೆಗೆವಲ್ಲಿ ಗಂಡನಾಗನೆ ಭಗದತ್ತನಾವೆ ಬರಿಯೆಲ್ಬುಡಿವನ್ನೆಗಮೊತ್ತಿ ಗಂಡನಾಗನೆ (ಗದಾಯು. ೩-೨೩) ; ಮುನಿಪತಿಯ ತೋರ್ಪ ಬರಿಯೆಲ್ಬಿನ

ಪುದುಮಿಂ ಬೂದಿವಾಱುತಿರ್ಪಿರಪಿಂ ಕಾಪುನ ಸುಟ್ಟು ಕಾಡಿವೆನೆ ಕರ್ಗನೆ ಕಸತುದು ಪಾಲದ ಪುಸಿಯ ಪುಸಕದಿನಂಗಂ (ಅರ್ಜುನ. ೦ ೯೩). **ಬರಿಯೆಲ್** : ಮೂಱಿಯ ಕಂಭಮಿಲ್ಲಿ ಸಿಡುಯಿಲ್ಪಿನ ಬಿಪ್ಪುರನೇಕ ಪತ್ರಿ ಕೊಂಡಣೋಳಿಯ ಸೀಳ್ಪು ಸಂದ ಬರಿಯೆಲ್ . . . ಅಪೋಧ್ಯಪೂರ್ಣ ದೇಪಾಳಯಪಿಂತಶುದ್ದಂ (ಜಗಸಂ. ೦೪೦–೨೨). **ಬರಿಯೆಲುವು** : ಉರದ ಬರಿಯೆಲುವನೆಪ್ಪಂತಿರಲಲಿಂ ನಡುಗುತಂ ತಪಸ್ವಿಯ ಕೊರ ಲೊಳ್ ಕರಮೆಸೆದು ತೋಱಿದುದು ತಾಪರೆದಂಟಿನ ಮಿಸುಪ ನೂಲ ಪೊಸ ಜನಿವಾರಂ (ಕಾದಂಪೂ. ೨೦೭); ಖರ ನಕರನಿಕರದಿಂ ಬರಿಯೆಲುವ ನುಗ್ಗೊತ್ತಿ ಕರುಳ ಮಾಲೆಯ ಸೀಳಿ ತೆಗೆವ ಪುಲಿಯುಂ (ತ್ರಾತಸಂ. ೯-೭೪).

[ಬರಿ$_1$ + ಎಲ್ವು]

**ಬರಿವದಣೆ** 'ಬರಿವದನೆ' ನೋ.

**ಬರಿವದನೆ, ಬರಿವದಣೆ, ಬರುವದಣೆ, ಬಲಿವದನೆ** (ನಾ). ಒಂದು ಬಗೆಯ ಔಷಧೀಸಸ್ಯ,—ವಂಶಾಲಿಕೆ ; "ನೆಲಗುಳ್ಳ" (ಕೋಕೋಶ. ೯-೨೦ ೬೮೪) : ಬರಿವದನೆಯಮೃತಲತೆ ನಾಗರಮೆಂಬಿವಿನಿತಱ ಕಷಾಯಾವಮಂ . . . ಕುಡಿಯುಸುಗೆ (ಕೋಕೋಶ. ೯-೨೦); ಸುಂಟಿಯುಮ ಮಂದುರ್ಪಳ್ಳಿಯುಂ ಪುಷ್ಕರಮೂಲಮುಂ ಬರಿವದನೆಯುಂ ಜ್ವರದ ಕೇಡು (ರಸ್ಯಾರ್ಣ. ೯-೦೦೬). **ಬರಿವದಣೆ** : ಒದವಿದರೆ ಬೀದೆನಿಪ ಬರಿವದಣೆಯ ಕಿಱುದೆಂಗು ನೆಲ್ಲಿಯೆಂಬಿನಿತಱ ಮೂಲದಿನಿರ್ಕಯ್ಯಡೆಯೊಳ್ ತೆಂಕದೆಸೆ ಯೊಳಱಿ . . . ನೀರಕ್ಕುಂ (ಕೋಕೋಶ. ೩-೦೭); ಬರಿವದಣೆ ಲೊಕ್ಕ . . . ವಿಷನಾಗರ ಲಶುನಂಗಳೊಳುಪ್ಪಂ ಬೆರಸುಗೆ ಪವಣಱಿಗೆ ಪಂಡ ವಾರೋಗ್ಯಕರಂ (ಅಶ್ವಶಾ. ೭-೩೩). **ಬರುವದಣೆ** : ಬರುವದಣೆ ತುಱುಂಬಿಯೂಸಡಿಯರನ ಫಲಂ . . . ಕಣ್ಗೆಸಲ್ ವಿಷಮಾಟಿಗಂ (ಖಗೇಂದ್ರ. ೬-೨೬). **ಬಲಿವದನೆ** : ನಗ್ಗಿಲು, ಬಲಿವದನೆ, ಪುಷ್ಕರಮೂಲ–ಇವು ಪ್ರತ್ಯೇಕ . . . ನಾಗಳ ನೀರಿನಲ್ಲಿ ಹಾಕಿ . . . ಕಾಸಿ (ಸಕವೈ. ೨೩೯).

[? + ಬದನೆ]

**ಬರಿವೊನಲ್, ಬರಿವೊನಲು** (ನಾ). ದಡ ಸೂಸಿ ಹರಿಯುವ ಪ್ರವಾಹ; ದಡವನ್ನು ಮೀರಿ ಹರಿಯುವ ಪ್ರವಾಹ : ಕಿಱುಮಟಲ ದಿಣ್ಣೆಯೊಳ್ ಪರಿವ ಬರಿವೊನಲೆಸೆದುವೋರೊಂದು ತಾಣದೊಳ್ (ಅಪಂಪು. ೯-೦೭ ರಗಳೆ). **ಬರಿವೊನಲು** : ಕಲ್ಪಮೇಘದ ತಡೆಯ ಬಿಟ್ಟಂತೆ ಬರಿವೊನಲು ಪರಿವು ತೆಯ್ದುದು (ಜಗಂದಪು. ೨-೬೩). 'ಪರಿವೊನಲ್' ಪರಾ.

[ಬರಿ$_1$ + ಪೊನಲ್]

**ಬರಿವೊನಲು** 'ಬರಿವೊನಲ್' ನೋ.

**ಬರಿವೊಯ್ಲು** (ನಾ). ಪಕ್ಕೆಯ ಮಿಡಿಯುವಿಕೆ; ಪಕ್ಕೆಯ ಮಿಡಿತ : ಪೆತ್ತ ಜೀರ್ಕೊಳವಿಪೋಲ್ ಮೂಗೊತ್ತಿ ರೆಕ್ಕೆಂಬುವಂ ಬರಿವೊಯ್ಲುವೆ ನಿವಿರ್ಚಿ ಬಿಕ್ಕುಳಿಕೆ (ಕಸಕ. ೯-೦೯೦).

[ ಬರಿ$_1$ + ಪೊಯ್ಲು (<ಪೊಯಲ್) ]

**ಬರಿಷ, ವರಿಶ, ವರಿಷ, ವರಿಸ, ವರುಶ, ವರುಷ, ವಾರಿಷ** (ನಾ). ೧. ಸಂವತ್ಸರ ; ವರ್ಷ : "ಬರಿಸವೊಂದು ವರ್ಷಂ" (ಕಶಾ. ೬೭-೨೯೭); ಸ್ಮರಿಯಿಪನಿಷ್ಪತ್ತಿರ್ಚ್ಛಾಸಿರಬರಿಸ [ಶಾತಾಂ. ವರ್ಷ]ಕೊರ್ಮೆ ಮನ ದೊಳೆಣಿಸಂ (ಅಂಪು.೬-೦೭); ಬರಿಸ ಪನ್ನೆರಡಾದ ಬಳಿಕಾವರೊಳವೊಂದುವೆರ ಸದೆ ಪೆಱದೆಗೆದಿಹುದು (ಹರಿ. ೪-೩೪); ತಱಗೆಲೆಯುಂಡು ಮೂಱು ಬರಿಸಂ . . . ಗಾಳಿಯನುಂಡು ಮೂಱು ಬರಿಸಂ, ನಿರಾಹಾರಂ ಮೂಱು ಬರಿಸಂ, ಕಟ್ಟುಗ್ರಂ ತಪಂಗೈವಂ (ರಾಮಕಥಾ. ೩೩-೦೪). ೨. ಮಳೆ ; ವೃಷ್ಟಿ : "ಬರಿಸಮನೆ ವೃಷ್ಟಿಯೊಳ್ ವರ್ಷದೊಳ್ ಸಲೆ ಬಕ್ಕುರ್" (ಕಕಾ. ೬೦). **ವರಿಶ**: ೧. ಸ್ವಸ್ತಿ ಸತ್ಯವಾಕ್ಯನ ಪೆರ್ಮ್ಮಾನಡಿಗಳ ಪಟ್ಟಂಗಟ್ಟಿದ ಪದಿ ಷಯ್ದು ವರಿಶದನ್ದು ಮಱೆಯರ ಬೂವಯ್ಯನ ಮಗಂ ಬದಿಯಾಯ್ತು ತುಱುವಸಿಕ್ಕಿಸಿ ಕಾದು ಸತ್ತು (ಎಕ. II, ೩೯೪.೭ ; ೫೫೩ ?). **ವರಿಷ** : ೧. ಮರ್ತ್ಯಾರ್ಕ ಎಪ್ಪು ವರುಷಂ ಪ್ರವರ್ತಿಸೆ (ಜೋಂಕಶಾ. ೦೯೩೪, ೨೦೯ಹೂರ. ೦೭ ೩;೫೮೫); ಶಕ ನೃಪಕಾಲಾತೀತ ಸಂವತ್ಸರಜ್ಗಳಿಟ್ಟೂಱ ಪನ್ನೊತ್ತೊನ್ಪ ವರಿಷದನ್ದು ಸಿಂಘರಗಣದ ನಾಗನಾಣ್ಯಬಾರ್ಜ್ಯವೃರ್ಧದೆರೋರತ್ತಿಗೇರಿಯ ಐಟ್ ಇದಕ್ಕೆ ಸಾಕ್ಷಿ (ಕಾ. II, ೩-೦೦; ೮೫೫). **ವರಿಸ** : ೧. ಸ್ವಸ್ತಿ ಸಕ ನೃಪಕಾಲಮೊಣ್ಬನೂಱ ಪನ್ನೊನ್ದನೆಯ ವರಿಸವಾಗೆ (ಎಕ. VI, ತರೀ. ೬೭-೩ ; ೫೫೫) ; ಸಿಪಾಯುರವಧಿ ಪದಿನಾಲ್ಕು ವರಿಸಮು ಮೋಱುತಿಂಗಳುಮಯ್ದು ದಿವಸವುಂಟೆಸಲ್ (ಸುಕುಮಾ. ೯-೦೦ ವ); ಒಂದೆರಡು ವರಿಸಂ ಸಳನಳಿಸಿ ಬೆಳವೃತಿಪ್ಪ ಅರಳೆಲೆಯುರಸಂ (ಚಸಕ. ೦೦-೦೦೪). **ವರುಶ** : ೧. ಸ್ವಸ್ತಿಶ್ರೀ ಜಯಾದ್ಯುದಯ ಶಾಲಿವಾಹನ ಶಕ ವರುಶ ೧೪೦೪ ಸಂದು ವರ್ತಮಾನ ಶುಭಕೃತು ಸಂವತ್ಸರದ ಕಾರ್ತಿಕ ಶು ೧೨ಲು . . . ಕೊಟ ಮುಂತ್ರಗಾನೆಯ ಗ್ರಾಮ (ವ್ಯಕಾ. ೦೯೩೪, ೪-೩; 1482). **ವರುಷ**: ೧. ಈ ನಾಡೊಳ್ ಪನ್ನೆರಡುವರುಷಂಬರೆಗಮನಾವೃಷ್ಟಿಯಾಗಿ ದುರ್ಭಿಕ್ಷಮಾದಪ್ಪುದು (ಶಬ್ದಾ. ೯೩-೨೦); ಇಂತು ತೊಂಬತ್ತೈದು ವರುಷದೊಳು ಹರನಾಣೆಯುಂ ತಾಳ್ದು ಬಾಳ್ದಿಪ್ಪ ಸಮಯದೊಳು (ಶಿರುಕ. ದೀ. ೦೦-೩); ಪುರವ ವಿರಚಿಸಿ ದಿವ್ಯ ಸಾಸಿರ ವರುಷ ಕೈಗೂಡಿದರೆ ಒಂದೇ ಸರಳಲಾವವನೆಟ್ಟಡಾಗಳೆ ನಿಮಗೆ ಕಡೆಗಾಲ (ಕುಪ್ಪಾ. ೭-೯). ೨. ಸರಳ ಮಳೆಯಲಿ ನನೆದು ಕರಿಘಟೆಯುರುಳಿದವು ಕಲ್ಪಾಂತವರುಷದೊಳುರುಳು ವದ್ರಿಗಳಂತೆಯೆಸೆದವು ವೈರಿದಂತಿಗಳು (ಕುಪ್ಪಾ. ೨-೨೦); ತುರುಕಾಣ್ಯ ದೊಳಗನಾವೃಷ್ಟಿದೋಷ ಬಂದು ಪಸರಿಸೆ ಪವಾಡದಿಂದೆ ವರುಷವಂ ಸುರಿಸಿ . . . ಮಳೆಯ ಮಲ್ಲೇಶನೆಂದೆಂಬ ನಾಮವನಾಂತನು (ಕಲಕು. ೦-೦೯). **ವಾರಿಷ** : ೧. ಏಟ್ನೂಟಪತನೆ ವಾರಿಷಂ ಪ್ರವಾರ್ತಿಸುತಿರೆ (ಎಕ. XVI, ಸಿರಾ. ೦೨೩-೪; 788). [ <ಸಂ. ವರ್ಷ ]

**ಬರಿಸದೆಱ$^3$** (ನಾ). ವಾರ್ಷಿಕ ತೆರಿಗೆ,— ಸುಂಕ: ಬೇಱಿವೇಱಿ$^3$ ಬರಿಸದೆಱ$^3$ ಹಿರಿಯ ಹಾಗವೊಂದು (ಎಕ. XIII, ೨೦-೩೩; 1294). [ಬರಿಸ + ತೆಱ$^3_3$]

**ಬರಿಸವಳ** (ಅ). ಪ್ರತಿವರುಷ; ವರುಷಂಪ್ರತಿ : ಅನ್ನನಿಬರು ಸುಂಕಿಗರು ಎಟ್ಟು ಇ(ಈ) ಕಂಗೆಱ$^3$ಗೆ ಬರಿಸವಳ ಅಱು ಪೇಟ ಸುಂಕವಂ ಬಿಡುವರು (ಎಕ. XVI, ೬೯-೪೦; 1037). [ಬರಿಸ + ? ]

**ಬರಿಸು** 'ವರಿಸಂ$_1$' ನೋ.

**ಬರಿಹ** 'ಬರಹ$_1$' ನೋ.

**ಬರು** 'ವರ್' ನೋ.

**ಬರು$_2$** 'ಬಱು$_1$' ನೋ.

**ಬರು$_3$** (ನಾ). ಒಂದು ಬಗೆಯ ಹುಲ್ಲು : ಚಿನಾಯಿ ಜೀನಸು, ಕಾಗದ ಬೆಳ್ಳಿ ವ ಭಂಗಾರ ಪರ್ದಾನ್ನು, ಕಾಚ, ಕೊಳಾಂಜನ, ಛತ್ರಿ, ಪಚ್ಚಕರ್ಪೂರ ಬರು, ಮೇಣ, ಸಕ್ಕರಿ (ಮುಂಬಾಪ್ರಾ. ೦೫೭).

[ ←ಮರಾ. ಬರೂ, ಬೋರೂ./ಪ್ರಾ. ಬರುಅ ]

**ಬರುಕ್ಕೆ** (ನಾ). "ಹದವಿಲ್ಲದಿದ್ದರೂ ಒಣಗಿದ ಭೂಮಿಯನ್ನು ಗಿಡ ಗಂಟೆ ಪೋಗಿವುದಕ್ಕಾಗಿ ಉಳುವ ಉಕ್ಕೆ" (ವಪ್ಪೂರು. ಕೋಶ) : "ಹಳೇ ತೋಟಕ್ಕೆ ಬರುಕ್ಕೆಗೆ ಆರು ಕಟ್ಟಬೇಕು" ಎಂದು ಕೊಟ್ಟಿಗೆಗೆ ಹೋದ (ವಪ್ಪೂರು. ೩೦೨). [ಬರ್$_1$ (<ಬಱ) + ಉಕ್ಕೆ (<ಉಟಕ್ಕೆ) ]

**ಬರುಗನಸು** (ನಾ). ವ್ಯರ್ಥವಾದ ಕನಸು; ನಿಷ್ಪ್ರಯೋಜಕವಾದ ಕನಸು : ಕಲ್ಪನೆ ಮಾತ್ರವಿದ್ದರೆ ಲಘುವಾಗುತ್ತದೆ; ಭಾವ ಮಾತ್ರವಿದ್ದರೆ ಬರುಗನಸಾಗುತ್ತದೆ (ಶಾಕಗ. ೩೦); ಸಂಬಿ ಬರುಗನಸೊಂದನಾ ಮೇಲೆ ಕೋಳು ಪೋಗದಿರು (ಪಶ್ಚಾಂಗ. ೬೭-೯೯೨).

[ ಬರು$_2$ (< ಬಱಿದು) + ಕನಸು ]

**ಬರುಗಯ್** 'ಬಱುಗೆಯ್' ನೋ.

**ಬರುಗಲ್ಲು** 'ಬಱುಗಲ್ಲು' ನೋ.

**ಬರುಗಾಲು** 'ಬಱುಗಾಲು' ನೋ.

**ಬರುಗೆ** (ನಾ). ಕೆನ್ನೆ ಮತ್ತು ಕಿವಿ ಸೇರುವ ಭಾಗ; ಕೆಪರು: ಇನ್ನೊಂದು ಕಲ್ಲಿನಿಂದ ಅದರ ಎಡದ ಕಿವಿಯ ಬರುಗೆಗೆ ಗುರಿಯಿಟ್ಟು ಹೊಡೆದೆ (ಕಂಗಾಳ್ಕ. ೩೬೪). [ ? ]

**ಬರುದಲೆ** 'ಬಱುದಲೆ' ನೋ.

**ಬರುಬು** 'ಬರಂಪು' ನೋ.

**ಬರುಮು** 'ಬೊಮ್ಮ' ನೋ.

**ಬರುಮರುಕ** (ನಾ). ತೋರಿಕೆಯ ಕನಿಕರ; ಸೋಗಿನ ದಯೆ: ಈ ವೇಳದ ಮಸಕವು ಸರ್ವನಾಶದ ಬರುಮರುಕವಾಗಿ, ಕಣ್ಣಿನಿಂದ ನೆತ್ತರನ್ನು ಹಿಂಡುತ್ತ ಬಾಯಿಂಳಿಯಿಸುವ ಆಗ-ನನ್ನ ಮಾತಿನ ಬೆಲೆಯು ನಿಮಗೆ ಅರ್ಥವಾಗುವುದು! (ಪಂತ್ರಕ. ೬೪-೦೪).
[ಬರು$_2$ (<ಬಱುದು) + ಮರುಕ (<ಮಱುಕ)]

**ಬರುವದಣೆ** 'ಬರಿವದನೆ' ನೋ.

**ಬರುವಳಿ** (ನಾ). ನಿಷ್ಪತ್ತಿ; ಮೂಲ: ಕನ್ನಡಮಾತುಗಳ ಬರುವಳಿ (ಕನ್ನಡಪ. I. ೨೩೪; ೦೪ ೩೬). 'ಹುಟ್ಟುವಳಿ' ಹೋ.
[ಬರು$_1$ (<ವರ್) + – ವಳಿ$_3$]

**ಬರುವೆ** (ನಾ). ಒಂದು ಬಗೆಯ ಪಕ್ಷಿ: ಶುಕ ಮಯೂರ ಮರಾಳ ವಾಯಸಂ ಬಕಪಕ್ಷಿ . . . ವೃಕ ಬರುವೆ ಸಾಳುವಂ ಮರಗೊರಲೆ ಕಾಬು ರಲೆ ವಿಹಂಗನು ಗವುಜಗ ಗುಬ್ಬಿ ಚಿಲಿಮಿಲಿಗ ಕೆಂಬೂತ ತಿಚುಕ ಮರಕುಟುಕ ಕಬ್ಬುಕ್ಕಿಗಳು ಮುಂತಾದ ಪ್ರಾಣಿಗಳನುರಿದಗ್ನಿ ದಹಿಸಿತು (ತುರಂಗ. ೦೬-೩೬).

**ಬರುಹ$_1$** (ನಾ). ಬರುವಿಕೆ: ನಾಯ ಬಾಲಮಂ ಕಾಸಿ ತಿರ್ದುಹವುಂ ಸೌಳುವುಣ್ಣನಲ್ಲಿ ಮಟಿಬರುಹವುಂ . . . ಮೂರ್ಖನಂ ಬುದ್ಧಿವಂತ ನೋಲ್ಪೆಸುಹವುಂ ಇವಱೋಪಾದಿ (ಕಂಕಕಂ. ೦೩೬-೦೦); ಕಿವಿಗಳನೊತ್ತಲ್ ರಕ್ತಂ ಬರುಹ ಕಣ್ಗಳ್ ಚೆನ್ನಾಗಿ ತೋಱುಹ . . . ಸಸಿನಮಾಗಿ ಹಿಂಭಾಗ ಮುಂಭಾಗಂಗಳ್ ಅಗಲಮಾಗಿರುಹ ಈ ಲಕ್ಷಣಂಗಳನುಳ್ಳ ಕುದಿರೆ ಸಂಪೂರ್ಣ ಮಪ್ಪಾಯುಷ್ಯಮನುಳ್ಳುದೆಂದು ಪೇೞಲ್ಪಟ್ಟುದು (ಕೋಳೋಶ. ೦೦-೬೫ ೫೪). [ಬರು$_1$ (< ವರ್) + – ಹ$_2$ (< –ಪ್ಪ$_2$)]

**ಬರುಹ$_2$** (ನಾ). ನವಿಲಿನ ಪುಕ್ಕ,—ಗರಿ; ಬರ್ಹ: ಅರ್ಹಂ, ಅರುಹಂ; ಬರ್ಹಂ, ಬರುಹಂ; ಗಾರ್ಹಪತ್ಯಂ, ಗಾರುಹಪತ್ಯಂ (ಭಾಷಾಭೂ. ೦೨೫ ಕೃಯೋ). [<ಸಂ. ಬರ್ಹ]

**ಬರುಹಿ$_1$**, ಬರಿಹಿ (ನಾ). ನವಿಲು; ಮಯೂರ: ಸೂಕರನ ತುಂಬಿಯ ಮರಾಳನ ಭೇಕವ್ಯೆರಿಯ ಕಾರುರಗ ಕಟಿ ಕೋಕಿಲನ ಬರುಹಿ [ಶಾಕಂ. ಬರ್ಹ] ಯ ಸುಧಾಕಿರಣನ ದಿನಾಧಿಪನ . . . ರತ್ನಾಕರನಲ್ಲೊಂದೋ . . . ಣ ವಿರಬೇಕು (ಕುಮ್ಮಾಕ.೦-೬೪); ಕಂಗೊಳಿಸುವ ಗವಾಕ್ಷಾವಳಿಯಲಾಡುವ ಬರುಹಿ ಪಾರಾವತ ಮೃದುಸ್ವನದ . . . ಮರಗಳ ತಿಂಥಿಣಿಯ ಶೀತಳತರುಚ್ಛಾಯೆ ಯಲಿ ಮೆಱೆವಾ ಪುರವರವ ಕಂಡ (ಶಿಭಾಗ. ೦೦-೩೬-೪೦); ಬರುಹಿ ಕಂಕ ಶಶಾದ . . . ಭರದ್ವಾಜಾದಿ ಖಗವಿರೆ ಕಂಡನಸುರೇಂದ್ರ (ಜಾರಾ. ೯-೪). **ಬರಿಹಿ:** ಹರನಂತೆ ಗಂಗಾಧರತ್ವದಿಂದಂ ಮತ್ತ ಹರಿಯ ಧೈರ್ಯತೆಯಂತೆ ಕರಿಯ ರೇಖೆಗಳಿಂ . . . ಇಂದ್ರನಂದದೆ ಪಾಱುವ ಬರಿಹಿಗಳ ಪಿಂಛಾಂಗ ದಿಂ . . . ಆ ಮಹಾಗಿರಿ ಮೆಱೆದುದ್ದೆ (ಶೀಕೃಪು. ೩-೯-೬).
[< ಸಂ. ಬರ್ಹಿನ್]

**ಬರುಹಿ$_2$** (ನಾ). ೧. ಒಂದು ಬಗೆಯ ಹುಲ್ಲು; ಕುಶ: ಚರು ತಿಲದ ರಾಶಿಗಳ ಸ್ರುಕ್ ಸ್ರುವ ಬರುಹಿಗಳ ಬಲುಹೊಱೆಗಳಾಜ್ಯೋತ್ಕರದ ಪತ್ರಾವಳಿಯ ನಿರ್ಮಳಸಾರ ಸಮಿಧೆಗಳ . . . ವಿವಿಧದ್ರವ್ಯಮಯ ಬಂಧುರದಲೆಸೆದಂದು ಯಜ್ಞವಾಟಿಕೆ ರಾಜಸೂಯದಲಿ (ಕುಮ್ಮಾಕ. ೬-೪೦); ಬರುಹಿಯಿಧ್ಮಸಮಿತ್ಸ್ರುನೇತಾವರಣೆ ಘೃತಪಾತ್ರಾದಿ ಮುಖವಂಕರವ ಮೇಳೈಸಿದರು ತತ್ಕ್ರತುಕುಂಡವಳಯದಲಿ (ಕೂರಾ. ೦-೬-೩೪). ೨. ಬೆಂಕಿ; ಅಗ್ನಿ: ಧರಣಿ ರೇಣುವದಾಗೆ . . . ಸಾಗರಗಳೇ ತುಂತುರ್ವನಿಗಳಾಗಲು ಮಹಾಪ್ರಳಯಬರುಹಿ ಕಿಱುಗಿಡಿಯಾಗಲಚ್ಯುತ ಸರಸಿಜೋದ್ಭವರಣುವೆನಿಸಿ ಭಾಸ್ಪುರಣಜ್ಯೋತಿರ್ಲಿಂಗಮಾದೀಶಂಗೆ ವಂದಿಸುವೆ (ಕಂಕರಾ. ೩-೦). [< ಸಂ. ಬರ್ಹಿ]

**ಬರುಹು**, ಬರಬು, ಬರಹು$_1$, ಬರುಬು (ನಾ). ೧. (ಹೊಲ, ಗದ್ದೆಗಳಲ್ಲಿ ನೀರು ನಿಲ್ಲುವುದಕ್ಕಾಗಿ) ಅಂಚಿನಲ್ಲಿ ಹಾಕುವ ಮಣ್ಣಿನ ದಂಡೆ; ಕಟ್ಟೆ; ಬದುವು: ನಾಲ್ಕುಸೀಮೆಯೆಂತೆಂದಡೆ ಮೂಡಣಸೀಮೆ ಹುಪ್ಪವಳ್ಳಿಯ ಸೀಮೆ . . . ತೆಂಕಣ ಸೀಮೆ ಅರಳಿಯ ಗದ್ದೆಯ ಬಡಗಣ ಬರುಹು ಮೇರೆ (ಕ್ಶಾಇ. XV, ೨೩೩-೬೦; 1216). ೨. ಎತ್ತರವಾದ ಪ್ರದೇಶ; ದಿಬ್ಬ; ದಿಣ್ಣೆ: ಪಡುವಣ ಸೀಮೆ ಕರಿಯ ರಾಮಣನ ಹಕ್ಕಲ ಬರುಹು ಬಡಗಲು ಮಲ್ಲನಹಳ್ಳಿಯ ಹೊಲನ ಸೀಮೆ ಮೇರೆ (ಕ್ಶಾ. V. ೩೨-೬೬; 1216). **ಬರಬು:** ೨. ಆ ಯಲಚಿಯ ಕುಂಟೆಯ ಮೂಡಣಕೋಡಿಯ ಅರಳಿಯ ಮರ ಮೇರೆಯಾಗಿ ಹೊಲದ ಬರಬಿನ ಮೇಲೆ ದರ ಹುಣಿಸೆಯ ಸರಿತದಲು (ಎಕ. X. ಮುಳಬಾ. ೬-೩; 1416); ತೆಂಕಣ ಕೋಡಿ ಸ್ಥಳದಲೂ ಮೂಡಲಿಗೆ ಕಂಭದ ಮಾನ್ಯದ ಹೊಲ ಮೇರೆ ತೆಂಕಲಿಗೆ ದಶಕಸ್ಥಳದ ದೊಡ್ಡ ಬರಬು ಮೇರೆ (ಎಕ. IX (S). ಕಂಗಳೂ. ೫೦-೬; 1632); ಬರಬುಗಳನ್ನು ನೆಲಮಟ್ಟದಿಂದ ಸ್ವಲ್ಪ ಎತ್ತರವಾಗಿರುವಂತೆ ಕಟ್ಟಿ, ಗಟ್ಟಿಯಾಗಲು ಚೆನ್ನಾಗಿ ತೊಯಿಸಿ ತುಳಿಯಬೇಕು (ಕಠಿ. ೬೬). **ಬರಹು$_2$:** ೨. ತೊಪ್ಪೇನ ಘಟ್ಟದ ಬಲ್ಲವತ್ತದ ಕಟ್ಟೆಯ ಬಿತ್ತಿರಿಣ ಹಕ್ಕಲ ಬರಹು (ಎಕ. VII. ಶಿವಮೊ. ೨೬-೨೩೪; 1624). **ಬರುಬು:** ೩. ಕೆರೆ, ಕುಂಟೆ ಮುಂತಾದುವುಗಳ ಏರಿ: ಕಾಲುವೆಗಳ ಮೇಲೂ ಬರುಬುಗಳ ಮೇಲೂ ತಿರುಶಿರುಗಿ (ಕಹಾಮಂ. IV. ೦೪೦). 'ಬದುವು' ಪರಾ.
[ದೇ. ॥ ತಮಿ. ವರಪ್ಪು, ವರಮ್ಪು, ವರ್ಪ್ಪು; ಮಲ. ವರಮ್ಪು; ತುಳು. ಬರಬು; ತೆಲು. ವರುಜು]

**ಬರೆ$_1$**, ವರೆ$_1$ (ಕ್ರಿ). ೧. ಲೇಖಿಸು; ಅಕ್ಷರದಲ್ಲಿರಿಸು: ಕೈಲಾಸವಣ್ಣಿತರ್ಬ್ಬರೆದ ಈ ಮಣ್ಣಾಳಿದೋಂ (ಎಕ. IX, ಕಂಗಳೂ. ೧೦-೦೩; ಸು. 820); ಗುಣ ಸೌಂದರಿಯೊಂಬೊಳ್ . . . ಒಂದೋಲೆಯನಿಂತೆಂದು ಬರೆದಳ್ (ವಡ್ಡಾ. ೦೬೩-೬); ವಿಷಯ ಮೋಹಿಸುವಂತೆ ಕೊಡುವುದೆಂಬೀ ಲೇಖವಿಷಯವಿದು ವಿಧಿಕೃತವೊ ತನ್ನ ಮೋಸವೊ ಬರೆದವನ ಮಱಹೊ (ಕೃಶಂಹಾ. ೫೦-೩೬). ೨. (ಬರೆದುದರ ಮೇಲೆ ಅಭ್ಯಾಸಕ್ಕಾಗಿ) ತಿದ್ದು; ತೀಡು: ಬರೆಯದೆ ಬಂದ ಸುದ್ದಿಗೆಯ ಸೂತ್ರಮನೊಂದೆ ಮುಹೂರ್ತಮಾತ್ರದಿಂ ಬರಿಸಿದುದು (ಕಂಕಶಾ. ೬-೩೪). ೩. ಕಾವ್ಯರಚನೆ ಮಾಡು: ತರಲಾಪಾಂಗ ವಿಲಾಸಸ್ಫುರಿತಮೆ ಲೆಕ್ಕಣಿಕೆಯಾಗೆ ನಲ್ಲಳ್ ಮುನ್ನಂ ಬರೆದತನುಚರಿತಮಿಗಳ್ ಬರೆದಂತಿರ್ದಪುದು ಮನ್ಮನಃಪುಸ್ತಕದೊಳ್ (ಅಂಕ್ರ. ೯-೦೪); ವಿಪರೀತಂ ಬರೆಯುತ್ತುಮೊಂದನಲವುತ್ತುಂ ಗದ್ಯಮಂ ಮಾಡೆ (ರಂರೋಂಬು. ೦-೫೦ ಅತಿಕದ್ಯ); ಬರೆದಾಹ ಬರೆದೆ ಭಾಪುರೆ ಬರೆದಕ್ಕಟ ಬರೆದೆ ಲೇಸು ಬರೆದೆ ಯೆನುತ್ತುಂ ಬಱದೆ ತಲೆತೂಗುವುದಱಿಂ ಬಱದಪ್ಪುದು ಕಾವ್ಯಮಱಿಯ ದರ ಜಾಣಿಂದಂ (೧೧೮. ೧-೨೮). ೪. ಚಿತ್ರಿಸು; ರೇಖಿಸು: ಇಂತು ಬರೆಯಲ್ ಬ್ರಹ್ಮಂಗಮೇಂ ಬರ್ಕುಮೇ ಎಂದು ಮುನ್ನಂ ವಿಚಿತ್ರಚಿತ್ರ ವಿದ್ಯಾಕೌಶಲಮಾನತಿಕುತೂಹಲರೋತ್ತಾರಿತಲೋಚನನಾಗಿ ನೀಡುಂ ಭಾವಿಸಿ ನೋಡಿ (ಅಂಪು. ೯-೯); ಬರೆದ ಬನಮಿರ್ಕೆ ನೋಡೀ ಏರುಮಾಡದ ಕೆಲದೆ ಬೆಳೆದ ಪೂದೋಂಟಮಂ (ಕಬ್ಬಿಗಾ. ೬೪); ನೆನೆದು ಬರೆದಳು ನಳನ ರೂಪ ವನನುನಯದಿ ಚಿತ್ರದಲಿ (ನಳಕ. ೦-೩೬). ೫. ಗೆರೆಯನ್ನು ಎಳೆ; ಗೀಟು ಹಾಕು; ಗೀರು: ಗೆಳೆಯಂ ಸಾಕ್ಷಿಮಾಡಿ ಇರ್ವರುಂ ಚದುರಂಗ

ಮಾಡುತ್ತಿರೆ ಅರಸಿಯರಸನಂ ಗೆಲ್ದೊಡೆ ಗಿಳಿ ನೆಲದೊಳೆರಡು ಬರೆಯುಂ ಬರೆಗುಮರಸನರಸಿಯಂ ಗೆಲ್ದೊಡೆ ಒಂದೆ ಬರೆಯಂ ಬರೆಗುಂ (ಶಬ್ದಾ.ರಾ. ೧೦೬-೨೭); ತನ್ನ ಮುನ್ನಿನ ಜನ್ಮಂಗಳನಿಂತೆಂದು ಬರೆದು ತೋರ್ಪಂತೆ ನೆಲನಂ ಬರೆಯುತ್ತ್ರಮವಗತಮುಖಿಮುದ್ರೆಯಾಗಿ (ಆದಿಪು. ೭-೩೨ ೫); ಸುರನರನಾಗಲೋಕದಿಂ ನರ್ತಿಸುವ ಸೌಂದರವೆಣ್ಣು ಬಾಣನಂದನೆಯ ಸರಿಯಿಲ್ಲವೆಂದು ಮಾರವೆರಲಿಂದೆ ರತಿರಾಜ ಬರೆದಂತೆ ತಿವಳಿ ರಾಜಿಸಿತು (ಕೋಕಕ. ೨೩-೨೦). ೬. ಕಾದ ಲೋಹದಿಂದ ದೇಹದ ಮೇಲೆ ಗೆರೆಯನ್ನು ಎಳೆ; ಬರೆಹಾಕು; ಬರೆಎಳೆ: ಮೃದುನಾಥಿಯ ನಿಟ್ಟೆಲುವಿನ ಹೃದಯದ ಮೇಲಡುಸಿ ಬರೆಯಲಾಗದು ಎಡ್ಡಾವಿದರಿತ್ತಾನುಂ ಬರೆದುದು ಮಾಟ್ಟುಮಪಾಯಮಂ ಮನಸ್ತಾಪಮುಮಂ (ಅಶ್ವಶಾ. ೧೦-೨೬); ಏತರವೂ ದಂಡೆಗಳು ಕೊರಳಲಿ ಭೂತಬರೆಗಳೇದೇನು ಮೆಯ್ಯಲಿ ವಾತರೋಗಕೆ ಬರೆದ ಬರೆಯೇನೆರಡುಮುಡುಹಿನಲಿ . . . ಎಂದು ದಾನವನಾಥ ಜರದೀಡಾಡುತಿರಲು (ಕೃಷ್ಣಾಕ. ೦೩-೯೯). ೭. ದಾಖಲೆಯಾಗು: ಮಲ್ಲ, ನಿನ್ನ ಶೌರ್ಯ ಸಾಹಸಗಳು ಬರೆದು ಹೋಗಿವೆ. ನಿನಗೆ ಗೌರವ ಸಿಗುವುದು ನಿಶ್ಚಯ (ಮಲಯ. ೦೪೭). ವರೆ₁ : ೧. ಕುಪ್ಪಿ ಊರನ್ ವರೆದನ್ (ಎಕ. X. ಕಂಡಾಡು. ೦೨೬ ೬-೭; ಕು. ೮೦೦); ಮರವುಂ ವರೆದ ಲಿಕಿತಂ (ಎಕ. VIII. ಸೊರಬ. ೨೨-೦೦; ಕು. ೮೦೦); ಬೋನರಿ ವರದೋಮ್ (ಬ್ರ.ಎಂ. ೦೯೬೭. ೯೨-೦೩ ; ೪).

ಬರೆದ ಬರೆಹ=(ಹಣೆಯ) ಬರೆಹ; (ಅದೃಷ್ಟದ) ಲಿಖಿತ: ಕೊರಗನರಿದಂ ತನ್ನ ಮನೆಗೆ ಮರಬದ್ದಂತೆ ಬರೆದ ಬರೆಹವಿದೆಂದು ಕಯ್ ಮೊಸಲ ಬಡಿದಂ (ಶಾಂತಿಪು. ೦೩೩-೨೮೯). ಬರೆದಿಟ್ಟುಕೊಳ್ಳು = ೧. ಗುರುತು ಹಾಕು; ಗುರುತಿಸು : ನಿಮ್ಮ ಹಣದ ಪೆಟ್ಟಿಗೆಯಲಿ ಎಷ್ಟು ಹಣವಿದೆಯೆಂದು ಬರೆದಿಟ್ಟುಕೊಳ್ಳಿ (ಅಮುಕ್ತಾ. ೦೨೬); ನಾನು ಓದಿದ ಭಾಗದಲ್ಲಿ ಅಗತ್ಯವೆಂದು ತೋರಿದ ಮುಖ್ಯವಿಷಯಗಳನ್ನು ಸೂಕ್ಷ್ಮವಾಗಿ ಬರೆದಿಡುತ್ತಿದ್ದೆ (ಮುಂಗಾರು. ೦೯). ೨. (ಆಲಂ) ನಿರ್ಧಾರವಾಗಿ ತಿಳಿ : ನೀನು ಪಾರಾಗಲಾರೆ. ಇದನ್ನು ಬರೆದಿಟ್ಟುಕೊ (ಜನ). ಬರೆದುಂಡಿಗೆ = ಬರೆದು ಮುದ್ರಿಸಿದುದು; ಗೊತ್ತುಮಾಡಿದುದು: ಬರೆದುಂಡಿಗೆಯ ಚೆಲ್ವೆ ಹೂವೆಡಿನಿಂ ಕರೆಯೆ ತೆರೆದೆಗೆಯಲಲರಿಂದಂ ಬೇಡಂಬ ಬಗೆಗೆ (ಶಾಂತೀಶ. ೦೪೮-೪೨೬). ಬರೆದು ಕೊಡು = ೧. (ಆಸ್ತಿ ಮೊದಲಾದುವುಗಳನ್ನು) ದಾಖಲೆಯ ಸಹಿತ ಕೊಡು; ದಾಖಲೆ ಮಾಡಿ ಕೊಡು : ಅರರ! ಬಿರುಮನೆ! ಮರೆಯದಿರು ಮನೆ, ಮರಿಯ ಮಕ್ಕಳ ಮಡದಿಯಾ . . . ಬರೆದುಕೊಡುವೆನು ಸ್ಥಿರ ಚರಾಸ್ತಿಯ ಉಂಬಳಿ (ಕುವೆಂ. ೨೦-೯೦). ೨. (ಆಲಂ) ನಿರ್ಧಾರವಾಗಿ ತಿಳಿಸು: ಸುತ್ತುಗಟ್ಟು ಚಟಚಟಸುತ್ತಡೆಯೆಡೆಯನೊಡಗೊಂಡು ಬಿಡುನಾಲಗೆಯೊಳೇನೊ ತಿಳಿಯಹುದ ಬರೆದುಕೊಡುವ ನೆಲದೆಡೆಗೆ ಬಾನ್ ಬಡದ ಬೀಸುವ ಗಾಳಿ (ಕಾಲಚಿ. ೦೬೯-೯೦೬). ಬರೆದುಕೊಳ್ = ೧. ಬರೆದಿಟ್ಟುಕೊಂಡಿರು : ಪೊಲದೆ ಸೀಮೆಯಲ್ಲಮಂ ಓಲೆಯೊಳ್ ಬರೆನ್ದು × × ಕಲ್ಲುಸಾಸನಮಾಗೆ ಬರೆದುಕೊಣ್ಡೆಮು (ಎಕ. III. ಹಂಜವ. ೦೩೯-೨೦; ೯೭೬ ?). ೨. (ನಾಮದ) ಗೆರೆಯನ್ನು ಎಳೆ. ೩. ಕಾದ ಲೋಹದಿಂದ ದೇಹದ ಮೇಲೆ ಬರೆಯನ್ನು ಎಳೆದುಕೊಳ್ಳು.– ಹಾಕಿಕೊಳ್ಳು. ೨, ೩. ನೆಚ್ಚನಯ್ಯ ಹರಿ ಮಚ್ಚನಯ್ಯ . . . ತೊಗಲಿನ ದೇಹಕೆ ಗೋಪಿ ಗಂಧ ತೇದುಕೊಂಡು ರೋಗ ಬಂದೆಮ್ಮೆಯ ಹಾಗೆ ಬರೆದುಕೊಂಬ ಮನುಜನಿಗೆ (ಪುರಂದ. ೨-೬೯-೨)

[ದೇ.॥ ತಮಿ. ವರಿ, ವರೈ; ಮಲ. ವರಿ, ವರೆ; ತುಳು. ಬರಿ, ಬರೆ; ತೆಲು. ವ್ರಾಯು, ರಾಯು]

ಬರೆ₂ (ನಾ). ೧. ಗೆರೆ; ಎಳೆ; ರೇಖೆ: ಗಿಳಿಯಂ ಸಾಕ್ಷಿ ಮಾಡಿರ್ಪರುಂ ಚದುರಂಗಮಾಡುತ್ತಿರೆ ಅರಸಿಯರಸನಂ ಗೆಲ್ದೊಡೆ ಗಿಳಿ ನೆಲದೊಳೆರಡು ಬರೆಯಂ ಬರೆಗುಂ (ಶಬ್ದಾ.ರಾ.೦೦೬-೨೭); ಕಿಱುಕಾಣಿಕೆಯ ಬೆರಲಿಂದೆಡೆವಱಿಯದೆ ಸುಟ್ಟುಂಬೆವರೆಗಬುಯ್ದ ಬರೆಯಿಂ ನೆಱೆ ನೂಱು ವರ್ಷಂ (ಲೋಕೋಪ. ೦೦-೦೬). ೨. ಎಲ್ಲೆಯ ಗುರುತು; ಸೀಮಾರೇಖೆ : ಕೋಟದಧಿವಾಸದಿಯಿಕ್ಕಿದ ಕಲ್ಲಿಂದಂ ಎತ್ತಿದ ಬರೆಯಿಂದ ತೆಂಕಲಿಯಿಂತೀ ಚತುಸ್ಸೀಮೆಯವೊಳಗುಳ್ಳ ಬಾಳು ಬೆಟ್ಟು . . . ಯಿಂತಿಷ್ಟನೂ ಮೂಲಕ್ರಯಕೆ ಸಲುವ ಅರ್ಥವನು ಕೊಂಡು (ಶಾಇ. IX — ii, ೪೭೦-೨೬; 1406). ೩. ಕಾದ ಕುಳದಿಂದ ಮೈಮೇಲೆ ಎಳೆದ ರೇಖೆ.– ಗೆರೆ : ತುಪ್ಪಮುನಾ ಬರೆಯೊಳ್ ಪೂಸುವುದು ಬರದ (ಯ) ಪುಣ್ ಶೀಘ್ರದಿನಂ (ಅಶ್ವಶಾ. ೦೦-೨೬); ಅಭಕ್ಷಣ ವಸ್ತ್ರರಹಿತ ರುಜೆ ಸಲೆ ಶಕ್ತಿಹೀನ ವಿಕಟಾಂಗಿ ಬಹುಭಕ್ಷೆ ಬರೆಗೊಳಗಾದುದತ್ಯಂಗಹೀನ ನಿರ್ವೀರ್ಯ ವಂಧ್ಯಾದ್ಯ ಲಕ್ಷಣಪಶುಗಳಂ ಕಳೆದು (ಕಂಠೀ. ೬೦-೯); ನಾನು ಮರೆತರೂ ಹೊಟ್ಟೆಯ ಮೇಲಿನ ಬರೆಯಂತೂ ನೆನಪು ಕೊಡಲು ಇದ್ದೇ ಇದೆಯಲ್ಲ (ಹುಚ್ಚುಹು. ೪೮) ೪. (?) : ಕುವರಿಯ ಪರಮಸೌಂದರಸಿಂಧುವಾ ಬರೆಹವಣಲ್ಲ ನರಗಿರರಿಂಗೆ (ಕೋಕಕ. ೨೪-೨೬).

ಬರೆ ಕೊಡು = ಕಾದ ಕುಳದಿಂದ ಮೈಮೇಲೆ ಗೆರೆ ಎಳೆ.– ಸುಡು : ಅವರಲ್ಲೊಬ್ಬನು ರೊಚ್ಚಿನಿಂದ ಬರೆ ಕೊಟ್ಟು ಈತನ ಎರಡೂ ಕಣ್ಣುಗಳನ್ನು ಕಳೆದನು (ಮುಂದಾ. ೦೫೮); ಅವನ ಒಂದೊಂದು ಮಾತೂ ಒಳಗೆಲ್ಲೋ ಬರೆ ಕೊಡುತ್ತಿದ್ದಂತೆನಿಸಿ ಕುಳಿತಲ್ಲೇ ಚಡಪಡಿಸಿದ (ಮೂರುದಾ. ೦೫೦). ಬರೆ ಹಾಕು = ಬರೆ ಕೊಡು : ಸರಕಾರವು ಬರೆಬಾತೆಯನ್ನು ಕೂಡಲೇ ನೇಮಿಸಿ ವ್ಯಾಕ್ಸಿನೇಶನ್ ಮೈಲಿಗಳನ್ನು ಹಾಕಿಸಿದಂತೆ ಎಲ್ಲರಿಗೂ ಮನೆಮನೆಗೆ ಬಂದು ಬರೆ ಹಾಕುವ ಏರ್ಪಾಟು ಮಾಡಲೇಬೇಕು (ಹುಚ್ಚುಹು. ೫೦); ಗುಳ ಕಾಸಿ ಬೇಗ ಬರೆ ಹಾಕಿದರೆ ಬದುಕುತ್ತಾನೆ (ಕಥಾಮಂ. IV. ೦೦); ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಬರೆ ಹಾಕಿದರಂತೆ (ಗಾದೆ). [<ಬರೆ₁]

ಬರೆ₃ (ನಾ). ಕಡಿದಾದ ಬೆಟ್ಟ, – ಗುಡ್ಡ : ಎಲ್ಲಿ ನೋಡಲು ಸರಿ ಜರಿ ಹಳ್ಳ ಬರೆಗಳು . . . ಮುಳ್ಳುಮರದ ಬೇರೆಡಹುಗಲ್ಲುಗಳಿಂದ ನಿಲ್ಲದೊಪ್ಪಿದುದು ಕಾಂತಾರ (ಕಂಪನ. ೦೮-೯೩); ಆ ದಾರಿಯಿಂದಲೇ ಬರೆಯನ್ನು ಹತ್ತಿ ಕಾಳೂರಿಗೆ ಹೋಗಬೇಕು (ಷಟ್ಪ್ರ. ೨೬). [ದೇ.॥ ತುಳು. ಬರೆ]

ಬರೆಕೋಲು 'ಬರೆಗೋಲು' ನೋ.

ಬರೆಗುಡುಹು (ನಾ). = ಬರೆಗುಳ : ಕುಱುಬನುಱ ಮುಳುಗತ್ತಿಯಿಂ ತಿರಿಯಲಿವೆಗಳು ಬರೆಗುಡುಹುಮಡಗಿದ ಕುಱುದೊವಲ ತಿದಿಯೊಸೆಯ . . . ಕೆಲವಾಡುಗಳನಾ ಬೊಟ್ಟಲಿಯ ಮರನಿಪ್ಪ ನೆಪ್ಪಿಗಾತನು ಹೊಡೆದು (ಜಕ್ಕೆ. ೨೦-೧೨). [ಬರೆ₁ + ಕುಡುಹು (<ಕುಡುಪು)]

ಬರೆಗುಳ (ನಾ). (ದನಕರುಗಳ ರೋಗನಿವಾರಣೆಗಾಗಿ) ಬರೆಯನ್ನು ಹಾಕುವ ಕಬ್ಬಿಣದ ಸಲಾಕೆ : ಬರೆಗುಳವನ್ನು ಚೆನ್ನಾಗಿ ಕಾಯಿಸಿ ಎತ್ತಿಗೆ ಬರೆಹಾಕಿದರು (ಜನ). [ಬರೆ₁+ಕುಳ (<ಕುಱು)]

ಬರೆಗೊಳ್ (ಕ್ರಿ). ೧. ಬರೆಯನ್ನು ಹೊಂದು; ಸುಡಿಸಿಕೊಳ್ಳು. ೨. (ಆಲಂ) ಏಟುತಿನ್ನು; ಘಾಸಿಹೊಂದು; ಕಷ್ಟವನ್ನು ಅನುಭವಿಸು : ಏಱು ಬರೆಗೊಂಡ ಜೂದುಂಗಾಱನವೊಲ್ ಲಗ್ಗೆ ಮಾಡಲೊಲ್ಲದೆ ಪಡೆಯುಂ ಸಾಱಿಸಿ ಮುಂದಂ ಪಿಂಗುವ ನೀಱಿಯವೊಲ್ ತೆಗೆಯುವೇಟ್ಟನಾ ವಸುಷೇಣಂ (ಅಜಿತಪು. ೦೨-೨೬). [ಬರೆ₁+ಕೊಳ್₁]

ಬರೆಗೋಲು, ಬರೆಕೋಲು (ನಾ). = ಬರೆಗುಳ : (೬). ಬರೆಕೋಲು: ಲೆಕ್ಕಣಿಕೆ ಕೋಲಹುದು, ಕಾಗದವು ಹಗಗಳಿದೆ, ಬರಹದೇ ಬರೆಕೋಲ ಗಾಯಗಳಾಗುವುವು (ಪಕಾಂ. I. ೯೩); ನನ್ನ ತಾಯಿ ಅರಿದ ಬರೆಕೋಲನ್ನು ಹಿಡಿದುಕೊಂಡು ಪ್ರವೇಶಿಸಿ ಅದನ್ನು ಕೆಂಡದಲ್ಲಿಟ್ಟಳು (ಮುಂಗಾರು. ೬೮). [ಬರೆ₁+ಕೋಲು₁ (<ಕೋಲ್₁)]

**ಬರೆಪ**, ಬರಪ. ಬರಹ. ಬರೆತ (ನಾ). ೧. ಬರೆದುದು; ಬರವಣಿಗೆ; ಲೇಖನ: ಶ್ರೀವತ್ಸ್ ಜಕ್ಕಿಮಯ್ಯನ ಮರ್ಮ್ಮಂ ಮಹಾದೇವಯ್ಯನ ಬರೆಪಂ (ಶಾಇಇ. IX-i. ೬೪-೯೦; 1049); ಹೊಸವುರ ಮೊರಕೇಸ್ವರ ದೇವರ ಓಜನ ಮಗ ಸಿಂಗೋಜನ ಪುತ್ರ ಗಣದೋಜನ ಬರೆಪಂ (ಶಾಇಇ. XI-i. ೩೦-೪೯; 1138); ಕೊರಲೊಳೆಸೆವ ಕೊಜಿತದ ಸುಮಂತ್ರದಿ ಬೆರಲ ಕೊನೆಯ ಬರೆಪದ ಬಾಸುಳ ಬಂಧುರಯಂತ್ರದಿ . . . ತನುಣಿಯ ಮೆಯ್ಯಾಲಸ್ಯದ ರಾಜಿಯುಂ ಪಿರಿದುಂ ಪಿಂಗಿಸಿದಂ (ಅದುಆ. ೬-೫೩). ೨. ಚಿತ್ರಣ; ಚಿತ್ರ: ಬರೆಪದ ಕನ್ನೆ ಭವಾಂತರವರಿಚ್ಚಯದಿಂ ಮೋಹ-ಮೂರ್ಛೆಯುಂ ಪುಟ್ಟಿಸಿದಳ್ (ಶಂಖಾಪು. ೪-೯೩); ಬರೆಪದ ಪೆಣ್ಣಂ ಭೂಪ ಕುಸುಮಕಾಂಡಂ ಕಂಡಂ (ಆಜಿತಪು. ೬-೬೪); ಬರೆಪದೆ ಬಣ್ಣವು ವರೆಯೆ ಕಪೋಲದಿಂದುರುಳಿದ ಕಂಬನಿ ಗುರುಕಿದೊ (ಚಾಕುಂತ. ೮೯ ಅಖಿ). ೩. ಕಾವ್ಯಾದಿಗಳ ರಚನೆ: ಬರೆಪದ ಬಲ್ಮೆ ವಾಚನಿಯ ಬನ್ನಣಂ (ಎಕ. VII. ಶಿಕಾಂ. ೦೩೪-೩೯; 1077); ಬರೆಪಂ ವಾಚನೆ ಗಂಡಯುಕ್ತಿ ಗಣಿತಂ . . . ಎಂಬಿನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ (ಪುಣ್ಯಾ. ೪-೩೯). **ಬರಪ**: ೧. ವಾಸ್ತುವಿದ್ಯಾ(ದ್ಯಾ)ಧರಂ ಕಾವೋಜನ ಬರಪ (ಇಇ. XIII. ೯೩-೯೦; 1084); ಜಕ್ಕಣನ ಬರಪ ಮರುಳೋಜ ಮಾದೋಜನ ಕಂಡರಣೆ (ಕಇ. IV. ೦೦-೬೦; 1121). **ಬರಹ**: ೧. ಶ್ರೀಮತು ಕನಕನಂದಿತ್ರೈವಿದ್ಯದೇವರ ಗುಡ್ಡಂ ಸೇನಬೋವ ಭೋಗದೇವನ ಬರಹ (ಎಕ. VII. ಶಿಕಮೊ. ೮೯-೪೯; 1111); ಎರಡರಸನಾನದು ಧರಣಿಯೊಬ್ಬನ ಶಿರದ ಬರಹವ ತೊಡೆವೆನಿದೆಯೆಂದೆನುತ ತೆಗೆದೆಚ್ಚ (ಕುವ್ಯಾ. ೦೩-೯೨); ಅದರ ಮೇಲಿದ್ದ ಬರಹ ಸ್ಪಷ್ಟವಾಗಿ ಗೋಚರಿಸುತ್ತಿರಲಿಲ್ಲ (ಹಾಹುತ್ತ. ೦೦೩). ೨. ಅಂತು ಬರಹದ ಬಚ್ಚರಣೆಯ ಪೆಣ್ಣ ಕಣ್ಣೊಳ್ ತೊಳಲೆ . . . ಮನದೊಳ್ ಚಿಂತಿಸುತ್ತಮಿರಲ್ (ಪ್ರಾಕ್ತ. ೩-೯೨ ಆ); ಎಸೆವ ಬೊಂಬೆಯ ಬರಹದ ಪಟ್ಟೆಪೀತಾಂಬರ ಪೊಸ ಚಂದ್ರಗಾವಿ ಪೂಪ್ಪಳಿಯ . . . ದಿವ್ಯದುಗುಲದ ನಿಱಿಗಳ . . . ಶಶಿಮುಖಿಯರು ರಂಜಿಸಿದರು (ಕಂಶಪ. ೫೯-೯೯). **ಬರೆಹ**: ೧. ಮಱುಗಲಿನ್ನೇಕರಸ ಬಿಡು ವಿಧಿ ಬರೆದ ಬರೆಹವ ತಪ್ಪಿಸಲು ಹರಿಹರವಿರಿಂಚಾದಿಗಳಿಗಳವೇ ನಮ್ಮ ಪಾಡೇನು (ವಲಕ. ೩-೩); ಈ ಶಾಸನಗಳು ದೊಡ್ಡವಲ್ಲ, ಎಲ್ಲ ಪುಟ್ಟ ಪುಟ್ಟ ಕಲ್ಲಿನ ಬರೆಹಗಳು (ದ್ರಾಶಿಶಿ. ೫೩). [ಬರ್$_1$+—ಪ್ಪ]

**ಬರೆಪಂಬೊಗು** (ಕ್ರಿ). ಬರಹಕ್ಕೆ ಸಾಧ್ಯವಾಗು; ಬರವಣಿಗೆಗೆ ಶಕ್ಯವಾಗು: ಅಕ್ಕರಮುಂ ವರ್ಣಮುಮೆಂದಕ್ಕುಂ ಶುದ್ಧಾಕ್ಷರಕ್ಕೆ ನಾಮಂ ಬರೆಪಂಬೊಕ್ಕುಚ್ಚರಿಸಲ್ ಬಾರದುವಕ್ಕರಮಲ್ತು (ಶಬ್ದ. ೨).

[ಬರೆಪ+ಪೊಗು]

**ಬರೆಪಕಾಱ**, ಬರಹಗಾರ (ನಾ). ಬರೆಯುವವನು; ಲೇಖಕ: ಲಲಿತಪದಂ ಪ್ರಸನ್ನಕವಿತಾಗುಣಮಿಲ್ಲದೆ ಪೂಣ್ದು ಪೇಟ್ವ ಬೆಳ್ಗಳ ಕೃತಿಬಂಧಮುಂ ಬರೆಪಕಾಱರ ಕೈಗಳ ಕೇಡು (ಶಂಕಶಂ. ೦-೧೨). **ಬರಹಗಾರ**: ತನ್ನ ಲೇಖನಗಳನ್ನು ಪ್ರಕಟಿಸಿ ಪ್ರಭಾವಿ ಬರಹಗಾರ ಎಂದು ಎನಿಸಿಕೊಂಡಿದ್ದು ರಂಗಣ್ಣನವರಿಗೆ ಧೈರ್ಯ ತಂದುಕೊಟ್ಟಿತು (ಅಶಪಾ. ೦೦); ಮುಂದಕ್ಕೆ ಬರುವಷ್ಟರಲ್ಲಿ ಆ ನನ್ನ ಬರಹಗಾರ ಗೆಳೆಯನೇ ಅವನು ಆಗಿದ್ದ! (ಗಾಳಿಗು. ೦೩). [ಬರೆಪ+—ಕಾಱ]

**ಬರೆಪು**, ಬರಹು$_1$ (ನಾ). ಬರವಣಿಗೆ; ಬರಹ: ಕೃಷ್ಣ — ವಿಲೇಖನೇ. ಉಳ್ಕಯೊಳ್; ಕರ್ಷತಿ = ಉಳ್ತಪುದು . . . ಕಾರ್ಷ್ಯಂ—ಬರೆಪು (ಶಾಕಕ್ಕ. ೩೮). **ಬರಹು$_1$**: ಅಂದವ ಆತಪಂನುಹಕ ಬರಕೊಟ್ಟ ಬರಹು (ಎಕ. VII. ಶಿಕಮೊ. ೦೦೯-೯೨ : 1558 ?); ಸೇನಭವರಮವ ಬರದ ಬರಹು (ಎಕ. VII. ಶಿಕಮೊ. ೯೩-೪೯; ?). [ಬರ್$_1$ + — ಪ್ಪ]

**ಬರೆಯಿಡು** (ಕ್ರಿ). ಕಾದ ಲೋಹದಿಂದ ಮೈಮೇಲೆ ಗೆರೆಯನ್ನು ಎಳೆ; ಬರೆಯೆಳೆ; ಬರೆಹಾಕು: ಬರೆಯಿಡುವೊಡ ಪೆಱಪೆಡೆಯೊಳ್ ಖರಕಿರಣಜ ಸಚ್ಛಶಾಂಕರೇಖಾಕೃತಿಯಿಂ ಬರೆಯಿಡುವುದು (ಅಶ್ವಶಾ. ೦೦-೫೬); ಅಕ್ಕೆ ಬರೆಯಿಟ್ಟಾಗಲೂ ಗೋಳಿಡಲಿ (ಜೊಸ್ತ. ೨೨). [ಬರ್$_2$ + ಇಡು$_1$]

**ಬರೆಯಿಸು**, ಬರಸು$_1$, ಬರೆಸು (ಕ್ರಿ). ೧. ಬರೆಯುವಂತೆ ಮಾಡು; ಲಿಖಿತಗೊಳಿಸು: ಗರ್ವದೆ ಬರೆಯಿಸಿದಂ ಪೆಸರನಖಿಳದಿಗ್ಭಿತ್ತಿಗಳೊಳ್ (ಕಂಶಕಾ. ೦-೨೦); ತನಗೆ ಪರಮವಿಶ್ವಾಸಮುಳ್ಳ ಲೇಖಕನಿಂ ಸೂರ್ಯಮಿತ್ರಂಗೆ ವಿನಯಪತ್ರಮಂ ಬರೆಯಿಸಿ (ಸುಕುಮಾ. ೨_೯೩ ಆ); ಏನೋ ಕಾಗದ ಬರೆಯಿಸಿ ಕೊಟ್ಟರು ಎಂದೂ ಹೇಳಿದ (ಕೆಂಗಾಳ್. ೯೬೦). ೨. ಕಾವ್ಯ ರಚನೆ ಮಾಡಿಸು; ಕೃತಿಯನ್ನು ರಚಿಸುವಂತೆ ಮಾಡು: ಶಾಂತಿ ಪುರಾಣಮನಿದನೋರಂತಿರೆ ಬರೆಯಿಸುವ ಕೂಡೆ ಪರೆಯಿಸುವ ಜನಕ್ಕಿಂತಾರ್ ನೋಂತರ್ (ಶಾಂತಿಪು. ೦-೫೯); ಪೊನ್ನಿಗನಿಂ ಬರೆಯಿಸಿದರ್ ಸಕಳೋರ್ವಿಗೆ ಪರೆಯಿಸಿದರ್ ಸಲೆ ಪುರಾಣಚೂಡಾಮಣಿಯಂ (ಅಜಿಪು. ೦-೩೯); ಕಾವ್ಯಗಳನ್ನು ಬರೆಯಿಸುವ ಮನೋಧರ್ಮ ಅತ್ತಿಮಬ್ಬೆಗೆ ತಂದೆಯ ಮನೆಯಿಂದಲೇ ಬಂದಿತೇನೋ (ಸಶಾಓ. ೦೫೩). ೩. (ಅಧಿಕಾರಕ್ಕೆ) ನೇಮಿಸು; ನೇಮಕಮಾಡು: ಎನ್ನ ಭಂಡಾರಕ್ಕೆ ಬರೆಯಿಸುವೆನೀ ತನಂ (ಐಶಕ. ೩-೦೦೧). **ಬರಸು$_1$**: ೧. ಆಚಂದ್ರಾರ್ಕ್ಕತಾರಂಬರಂ ಬರಸಿ × × × ಕೊಟ್ಟ ಧರ್ಮ್ಮ (ಎಕ. VII. ಶಿಕಮೊ. ೬೨-೦೯; 1292); ಬರಸಿದವು ಬಳಿಕೋಲೆ ಮಣಿಹಾಱಂಗೆ ಹೇಳಿಕೆಯಾಯ್ತು ಶಿಷ್ಯರ ಪರುಟವಿಸಿ ಕಳುಹಿದನು ಪುರಗಳಿಗೆ (ಕಿಹರಾ. ೦-೬-೯). ೪. ಹೇಳಿಕೊಡು; ಬೋಧಿಸು: ದ್ರೋಣ ಬರಸಿದ ಭಾಷೆಯಂದೇ ಕ್ಷೋಣಿಪತಿ ಬಗೆಯದಿರು (ಕುವ್ಯಾ. ೦೩-೩೩). **ಬರೆಸು**: ೧. ಓಲಗಕೆ ನಡೆತಂದು ಬರೆ[ಹಾಕಿ]ರ]ಸಿದನೋಲೆಗಳ ಕಳುಹಿದನು ಧರಣೀಪಾಲಕರ ಬರಹೇಳೆನುತ ಹೊಯಿಸಿದನು ಡಂಗುರವ (ವಲಕ. ೩-೪). ೨. ಒಳ್ಳೆಯ ಸರಸರೂಪಕಗಳನ್ನು ಬರೆದು, ಬರೆಸಿ, ಆಡಿ, ಆಡಿಸಿ, ಪ್ರಚುರಪಡಿಸಬೇಕು (ಹಾಹೀ. ೬೮).

[ಬರ್$_1$ + — ಇಸು$_1$]

**ಬರೆಯೆಳೆ** (ಕ್ರಿ). = ಬರೆಯಿಡು: ನಾಗಣ್ಣನ ಕರುಳಿಗೆ ಒಮ್ಮೆಲೆ ಬರೆಯಳೆದಂತಾಯಿತು (ಜಪಾ. ೯೩); ಭುಸುಗುಡುತ್ತ ಆಕಾಶಕ್ಕೆ ಬೆಂಕಿಯ ಬರೆಯೆಳೆದು ಕಣ್ಮರೆಯಾಗುವ 'ಸುರಾಸುರ್' ಬಾಣ (ಜೂಕುರಾ. ೨೦೩).

[ಬರ್$_2$ + ಎಳೆ$_1$ (< ಎೞ್$_1$)]

**ಬರೆವಣಿಗೆ** 'ಬರವಣಿಗೆ' ನೋ.

**ಬರೆಸು** 'ಬರೆಯಿಸು' ನೋ.

**ಬರೆಹ** 'ಬರೆಪ' ನೋ.

**ಬರೋಬರಿ$_1$** 'ಬರಾಬರಿ$_1$' ನೋ.

**ಬರೋಬರಿ$_2$** 'ಬರಾಬರಿ$_2$' ನೋ.

**ಬರೋಬ್ಬರ್** 'ಬರಾಬರಿ$_2$' ನೋ.

**ಬರೋಬ್ಬರ** 'ಬರಾಬರಿ$_1$' ನೋ.

**ಬರೋಬ್ಬರಿ** 'ಬರಾಬರಿ$_1$' ನೋ.

**ಬರ್ಕ**, ಬರಕ$_1$ (ನಾ). (ಕರಾ) ಒಂದು ಬಗೆಯ ಕಾಡುಪ್ರಾಣಿ: ಹಿಂದೆ ಬರ್ಕ, ಕೆಮ್ಮ, ಕಡವೆ ಯಾವಾಗಲೂ ಕಾಣಲಿಕ್ಕೆ ಸಿಗುತ್ತಿತ್ತು (ಜುಂಕಿಕ್ಕ. ೩೦): ದನ, ಎತ್ತು . . . ಕುರ್ಕ, ಬರ್ಕ, ಮೊಲ, ಮುಂಗುಸಿ, ನವಿಲು, ಹೊರಸಲು, ಕಾಡಾನ ಪಿಕಳಾರ, ಕಾಡುಕೋಳಿ, ಕಣಹಂದಿ ಮೊದಲಾದ ಜಂತುಗಳಂತೆ ಸ್ಥಳೀಯವಾಗಿರಲಿಲ್ಲ (ಜುಕಪು. ೯೨೦). **ಬರಕ$_1$**: ಕಾಡುಕುರಿ, ಕಾಡುಹಂದಿ . . . ಬರಕ, ಮೊಲ, ಮುಸಿಯ, ಹುಲಿ, ಕರಡಿ, ಕುರ್ಕ ಮುಂತಾದ ಇತರ ಪ್ರಾಣಿವರ್ಗಕ್ಕೆ ಕಾಡಿನಲ್ಲಿ ಮಿತಿಯೇ ಇರಲಿಲ್ಲ (ಕಂಜಕಂ. ೨).

[?/ ತುಳು. ಬರಿಂಕ = ಒಂದು ಬಗೆಯ ಸಣ್ಣಗಾತ್ರದ ಜಿಂಕೆ]

**ಬರ್ಕಟ** 'ಬಚುಕಟೆ' ನೋ.

**ಬರ್ಕಟಬಯಲ್**, ಬಕ್ಕಟಬಯಲು (ನಾ). ೧. ಏನೂ ಇಲ್ಲದುದು ; ಶೂನ್ಯ ; ಬರಿದಾದುದು: ತವಮಾಗಳ್ ಬರ್ಕಟಬಯಲಾವುದರ್ಕನು ದಯಿಸುವಾಗಳ್ (ಗಿರಿಜಾ. ೩-೩). ಬಕ್ಕಟಬಯಲು : ೧. ನೀನೆತ್ತ ನಾನೆತ್ತ ಲೆಂದು ಬೊಮ್ಮ ಬಕ್ಕಟಬಯಲು (ಅನುಕಂ. ೩೬೦-೧೦೬೦) ; ಬಯಲ ಪುರುಷ ಬಯಲಾಕಾರ ಬಕ್ಕಟಬಯಲರೂಪನೆ (ಚೆರ. ೬೭-೧). ೨. (ಅಲಂ) ಹಾಳು ; ನಾಶ : ಅಕ್ಕಟಕ್ಕಟ ದೊರಕಿದ ನಿಧಿಯಿಂದಿನೊಳ್ ಬಕ್ಕಟಬಯಲಾಯಿತಿಂತು (ಅಂಚಶ. ೩-೧೮೪).

[ಬರ್ಕಟ (< ಬಚುಕಟೆ) + ಬಯಲ್ (< ವಯಲ್)]

**ಬರ್ಕತ್ತು** 'ಬರಕತ್ತು' ನೋ.

**ಬರ್ಕರ** (ನಾ). ಪ್ರಾಣಿಗಳ ಮರಿ : "ಎಲ್ಲಾ ಪಶುಗಳ ವಾಣಿ ಬರ್ಕರ ವೆಂಬುದು" (ಶಠಾಹು. ೯೬-೧೨೩). [ಸಂ.]

**ಬರ್ಕುಡಿ** 'ಬಕ್ಕುಡಿ$_1$' ನೋ.

**ಬರ್ಕುಡಿಗುಟ್ಟು** 'ಬಕ್ಕುಡಿಗಂಟ್ಟು' ನೋ.

**ಬರ್ಕುಡಿಗೆಯ್** 'ಬಕ್ಕುಡಿಗೆಯ್' ನೋ.

**ಬರ್ಕೆ$_1$** (ನಾ). (ಕರಾ) ಕಡಮೆ ಅಂತಸ್ತಿನ ಮನೆತನ : ಗುತ್ತು ಬರ್ಕೆಗಳ ಯಜಮಾನರನ್ನೂ ಆಮಂತ್ರಿಸಿ ಚೆನ್ನಾಗಿ ಸತ್ಕರಿಸಿದ್ದರು (ಒತ್ತಿ.ಹ. ೩೦). 'ಗುತ್ತು$_4$' ಪರಾ.

[← ತುಳು. ಬರ್ಕೆ – ಬಂಟರ ಒಂದು ಬಿರುದು]

Δ **ಬರ್ಕೆ$_2$** 'ಬಕ್ಕೆ' ನೋ.

Δ **ಬರ್ಕೆವಲಸು** 'ಬಕ್ಕೆವಲಸು' ನೋ.

Δ **ಬರ್ಚಣೆ** 'ಬಚ್ಚಣ್ಣೆ' ನೋ.

Δ **ಬರ್ಚಲ್** 'ಬಚ್ಚಲ್' ನೋ.

**ಬರ್ಚಿ**, ಬರ್ಜಿ, ಭರ್ಚಿ, ಭರ್ಜಿ (ನಾ). ಒಂದು ಬಗೆಯ ಆಯುಧ ; ಈಟಿ ; ಸಬಳ : ಕೊಳುಗುಳದಿ ಮದವೇರಿ ರೋಷದಿಂದುಭಯಬಲ ಹಳಚಿದುದು ಬರ್ಚಿಯಿಂ ಶೂಲದಿಂ ಶಕ್ತಿಯಿಂದಲೆ ಕೃಪಾಣಂಗಳಿಂದೆರ ದೊಡ್ಡನೋಳ್ನಾದಿತುಭಯತರ ಬಲ ಮಡಿದುದು (ಕುರಂಗ. ೩೪-೬) ; ತನ್ನ ಶಕ್ತಿಯಲಿ ನಿನ್ನ ಸುತ್ತಿರುವುದಾವ ಬೆಂಕಿಉರಿಯು? ಪಾಲಿಸುತ್ತಿರೆಯು ಬರ್ಚಿನಾಲಗೆಯ ಚಾಚಿ ಕಾಯುತಿರೆಯು (ಅಕಳು. ೦೬೭-೦೦) ; ದೊಣ್ಣೆ, ಕೋಲು, ಬರ್ಚಿ ಮುಂತಾದ ಸಮಯಕ್ಕೆ ಸಿಕ್ಕ ಆಯುಧಗಳನ್ನು ಹಿಡಿದು ಕೊಂಡು, ಮುಸಲ್ಮಾನರು ಹಿಂದೂಜನರ ಮನೆಗಳನ್ನು ಹುಗ್ಗಿದರು (ಶಂಪಾ. ೬೯). ಬರ್ಜಿ : ಬರ್ಜಿಯಿಂದ ಸಂದಿಯಲ್ಲಿ ತಿವಿದಾಗ ಹಾವು ಹೊರಬಂತು (ಲೂ). ಭರ್ಚಿ : ಕೆಲವು ಸಮಾಜಗಳಲ್ಲಿ ಭರ್ಚಿಯನ್ನು ಗುರಿಯಿಟ್ಟು ದೂರದಿಂದ ಎಸೆದು ಪ್ರಾಣಿಗಳನ್ನು ಕೊಲ್ಲುತ್ತಿದ್ದರು (ಶಿಲ್ಪಾ. ೨೦). ಭರ್ಜಿ : ಗಂಡುಕೊಡಲಿ, ಭರ್ಜಿ, ಗುರಾಣಿ ಎಲ್ಲವನ್ನೂ ಧರಿಸಿದ್ದೆ (ಅರ್ಜುಗೆ. ೩೨) ; ಕಾಸರ್ ಸಿಪಾಯಿಯೊಬ್ಬನು ತನ್ನ ಬಂದೂಕ ವನ್ನೂ ಭರ್ಜಿಯನ್ನೂ ಕೈಯಲಿ ಹಿಡಿದುಕೊಂಡು ಕೆಲವು ಸಮಯದಲ್ಲಿ ಆ ಬಾಗಿಲನ್ನು ಕಾಯುತ್ತಾ ನಿಂತಿರುತ್ತಾನೆ (ಮುರಿಪಾ. ೨೪).

[← ಹಿಂ. ಬರಛಾ, ಬರಛೀ ; ಮರಾ. ಬರಚೀ, ಬರಛೀ, ಬರಶೀ]

**ಬರ್ಚಿಗಾರ** (ನಾ). ಈಟಿಯನ್ನು ಹಿಡಿದಿರುವವನು ; ಬರ್ಜಿಯಿಂದ ಹೋರಾಟ ನಡೆಸುವ ಸೈನಿಕ : ಬರ್ಚಿಗಾರರ ಬಲವೆ ಬೀಡಾರ ಬಿಟ್ಟಂತೆ ಒಟ್ಟಿಲದಲಿ ಜೋಳದ ನೆಲುವು (ಸಂಗೀ. ೨೨-೩).

[ಬರ್ಚಿ + – ಗಾರ (< – ಕಾಱ)]

Δ **ಬರ್ಚಿಸು** 'ಬಚ್ಚಿಸು$_2$' ನೋ.

Δ **ಬರ್ಚು** 'ಬಚ್ಚು$_2$' ನೋ.

**ಬರ್ಜಿ** 'ಬರ್ಚಿ' ನೋ.

**ಬರ್ತರಫ್** 'ಬರತರಫು' ನೋ.

**ಬರ್ತರ್ಫ್** 'ಬರತರಫು' ನೋ.

**ಬರ್ದ** (ನಾ). ಜಾಣ್ಮೆಯುಳ್ಳವನು ; ಬುದ್ಧಿವಂತ : ರತಿಪತಿಯ ರಾಜಧಾನಿಯ ಚತುರೆಯರೊಳ್ ಸುಖವ ಬರ್ದನೀ ಗ್ರಾಮ್ಯಯನೇಂ ಕ್ಷಿತಿಪಾಲ ನೆನೆಗುಮೇ ಮಾಳತಿಗೆರಗಿದ ತುಂಬಿ ನೆನೆಗುಮೇ ಮಿಕ್ಕಲರಂ (ಜಗ್ಗಿ. ೦೦-೦೯).

[ಬರ್ದು$_4$ + – ಅ$_7$]

**ಬರ್ದಂಡು** 'ಭರದಂಡು' ನೋ.

**ಬರ್ದಿಲ** (ನಾ). ೧. ಸಾವಿಲ್ಲದವನು; ಅಮರ ; ದೇವತೆ : "ಆಗಸ ವಟ್ಟೆಗರು ಸಗ್ಗಿಗರು ಬರ್ದಿಲ [ಪಾಠಾಂ. ದುರ್ಗಿ]ರ್ಕದೆ ಯಿಾ ಪೆಸರು ಸಲ್ವುದು ಸುರರ್ಗೆ " (ಕ್ಕಿಜಿಶುಂ. ೦೦) ; ಸಗ್ಗಮಂ ಸಾರ್ದು ಮುಗಿಲ್ದೇರ ನನಟ್ಟಿ ಬರ್ದಿಲರಂ ಸೋಲಿಸಿ, ಕನ್ನವೆಣ್ಗಳಂ ಸೆಟೆವಿಡಿದಂ (ಅದ್ಭುತ. ೨೯-೦೯) ; ಬಲುಗಬ್ಬಿಗನೊಬ್ಬನೆ ಬಾಳ್ವ ಬರ್ದಿಲಂ (ನಿಜಶಿಂ. ೦೦೬-೬). ೨. ದೇವತೆಗಳ ಲೋಕ ; ಸುರಲೋಕ ; ಸ್ವರ್ಗ : "ಬರ್ದಿಲಂ, ಸಗ್ಗಂ –ಈ ೨ ಸ್ವರ್ಗದ ಪೆಸರ್" (ಕಬಾ. ೯೬-೦೭) ; ಬರ್ದಿಲು ಸಗ್ಗಕ್ಕೆ ಪೆಸರ್ (ಕಮುದ. ೯೩) ; ಶ್ರೀರಂಗರಾಜಂ ಅಪುತ್ರನಾಗಿ ಬರ್ದಿಲಮನೈದ ಲೊಡಂ (ಕಳವಂ. ೨-೦೩).

ಬರ್ದಿಲರ ಬಡಗಿ = ದೇವತೆಗಳ ಬಡಗಿ ; ವಿಶ್ವಕರ್ಮ : ಪೆಸರ್ ನಳಂ. ಬರ್ದಿಲರ ಬಡಗಿಗೆನಗೆ ಪುಟ್ಟಿದಾತಂ (ಶ್ರೀ ರಾಮಾ. ೩೬೭-೯೩).

[ಬರ್ದು$_3$ + – ಇಲ]

**ಬರ್ದಿಲನಾಡು** (ನಾ). = ಬರ್ದಿಲ ೨: ಪಗೆದೊರೆಗಳುಮೊಂದಿದರಾ ಬರ್ದಿಲನಾಡ ಬಾಟ್ತೆಯ ಸಿರಿಯಂ (ಅಶ್ವ.ಶಿ. ೦೭-೯೯) ; ಕರ್ವೆಟ್ಟುಗಳೀಗಳ್ ಪೂರ್ವವೈರಮಂ ಬಗೆದು ಬರ್ದಿಲನಾಡಿಂಗೆ ದಾಟಿಡಲ್ಕೆ ದಂಡೆತ್ತಿ ಪೋಪು ವಕ್ಕುಂ (ರಾಮಾಶ್ವ. ೩-೩).

[ಬರ್ದಿಲ + ನಾಡು]

**ಬರ್ದಿಲವಟ್ಟೆ** (ನಾ). ಸ್ವರ್ಗದ ದಾರಿ ; ದೇವಲೋಕದ ಮಾರ್ಗ ; ಆಕಾಶ : ಬರ್ದಿಲವಟ್ಟೆಯೊಳೈತರುತಲಿರ್ದ ಹನುಮನಂ . . . ತಿಳದಳಾ ಸಿಂಹಿಕೆ (ಶ್ರೀರಾಮಾ. ೯೦೦-೨೦೯).

[ಬರ್ದಿಲ + ಬಟ್ಟೆ$_1$]

**ಬರ್ದಿಲಾಣ್ಮ** 'ಬರ್ದಿಲಾಳ್ಮ' ನೋ.

**ಬರ್ದಿಲಾಳ್ಮ**, ಬರ್ದಿಲಾಣ್ಮ (ನಾ). ದೇವಲೋಕದ ಒಡೆಯ ; ಸ್ವರ್ಗದ ರಾಜ : "ಬರ್ದಿಲಾಳ್ಮ[ಪಾಠಾಂ. ಣ್ಮ] ಸಗ್ಗಿಗರರಸ . . . ಸುರಪತಿಯ ನಾಮಮಕ್ಕುಂ" (ಕಜಿಮುಂ. ೦೦). ಬರ್ದಿಲಾಣ್ಮ : ಬರ್ದಿಲಾಣ್ಮನಾಗಿರ್ದೊಡಲ್ಲದೆಯು ಓರೂರ್ವಶಿನುಂ ಬೇಗುದಿಯಳೊಂದೆ ಬಗೆ ತೊಟಲ್ವಪನ್ (ಅದ್ಭುತ್ವ. ೩-೩೬).

[ಬರ್ದಿಲ + ಆಳ್ಮ]

**ಬರ್ದಿಸು** (ಕ್ರಿ). ತಾಳಿಸಂ ; ಬಾಡಿಸು ; ಹುರಿ : ತತ್ತಟಗುದಿದು ಕಾಯ್ದುದು ಕಾಯ್ಗೊಂಡದೆಣ್ಣೆಯೊಳರ್ದಿ ಬರ್ದಿಸುತ್ತುಪಮಾಪಾದಮಸ್ತಕಂ ಬರಂ ವ್ಯತ್ತಿಸಿ ಪತ್ರಿ ತಿದಿಯುಂಗಿಯುತ್ತೆ (ಆಚ್ಚು. ೧೧-೦೦ ಪ).

[ಬರ್ದು$_1$ + – ಇಸು$_3$]

**ಬರ್ದು$_1$** (ಕ್ರಿ). ೧. ಸಾಯು ; ಮರಣವನ್ನು ಹೊಂದು : "ಬರ್ದು–ಮರಣೇ" (ಶಮಾ) ; ಶೂದ್ರಕನ ಪೊಳೆವ ಸುರಿಗೆಯ ಮೊನೆಯೊಳ್ ಪೊಂಗಿ ಸೊಡರ್ಗುಡಿಯ ಮೇಲೆ ಪತಂಗಂ ಪಾಯ್ವಂತೆ ಪಾಯ್ದು ಬರ್ದುದು ಸಿಂಗಂ (ಶಾಬ್ದಾಕಾ. ೦೦೦೯ ವೃತ್ತಿ) ; ಅತಿ ಶೋಕಾಗ್ನಿಯೊಳರ್ದು ಬರ್ದು [ಪಾಠಾಂ. ಬ್ದು] ಪುದಿದಾತ್ಮಧ್ಯಾನದಿಂ . . . ದುರಂತದುಃಖಮನುಣಲ್ಬೇಡ ( ಆದಿಪು. ೩-೩೬ ). ೨. ನವೆ ; ಬಾಡು ; ಸೊರಗು : ಪರಮವಿತ್ರಾ ಇಂತೇಕೆ ಬರ್ದಿ[ಪಾಠಾಂ. ಬಿಟ್ಟ] ಬಂಬಳಂ ಬಾಡಿ ಪಾಡಟಾದುಬ್ಬೆಗಂಬಟ್ಟರ್ದೆ (ಪಶ್ಚಾಂ. ೬೯-೩).

[ದೇ. ॥ ತಮಿ. ವರುನ್ತು]

**ಬರ್ದು$_2$** 'ಬಾಟು$_1$' ಪರಾ.

**ಬರ್ದು₃** (ನಾ). ೧. ಸಾವು ; ಮರಣ : "ಬರ್ದನಲ್ ಸಾವು" (ಕಬ್ಬಿಪಂ. ೯೩) ; ಎನ್ನೊಳ್ ಕೂರ್ತಿರಪ್ಪೊಡೆ ಬರ್ದಿನ ಪೊರ್ದಿನ ಮುನ್ನಮೆ ಶ್ರೀರಘುನಾಯಕಂ ಗೆಲ್ವೆನ್ನರೆ ಕಂಡು ಧನ್ಯನಪ್ಪಂತು ವರಮಂ ಕರುಣಿಪುದು (ರಾಮಾಶ್ವ. ೧೪೦-೦೦). ೨. ಸಾವು ಇಲ್ಲದ ಸ್ಥಳ ; ಸ್ವರ್ಗ : "ಬರ್ದನೆ ಸ್ವರ್ಗಮೆಂದೆನಿಪುದುಂ" (ಕಕಿ. ೬೨). [<ಬರ್ದು₁]

**ಬರ್ದು₄, ಬದ್ದು₂** (ನಾ). ಜಾಣ್ಮೆ ; ಪ್ರೌಢಿಮೆ : ಕೌಶಲ : "ಬರ್ದನೆ ಪ್ರೌಢಿಯೊಳಕ್ಕುಂ" (ಕಕಾರಿ. ೧೬) ; ಉಪರಿಚರಮಹಾರಾಜನಿಂದಗ್ಗಳಂ ಪೆಱರಾರುಮಿಲ್ಲಮೀ ಸಂಸಾರದೊಳ್ ಬರ್ದ ಬಾಟನೀತನೆ ಬರ್ದನೆಂದು ಪೊಗೞ್ವೊಡೆ (ಪಶ್ವಾಭಾ. ೦೩೬-೨೦) ; ಮಸೆದ ಮದನನ ಪೊಳೆವಲಗಣೆಗಳಂತೆ ಕಣ್ಗಳ್ ಬೆಳೆದೆಳಸಿ ಬಂದಿರ್ದ ಪಾಟದಾಟದ ಮುಂದ್ದಿನ ಬರ್ದಿನ ಪರಿವಾರದೇವಿಯರುಮಂ . . . ಕಂಡು (ಆದಿಪು. ೨-೬೩ ವ) ; ಆ ಸರಸತಿ ಕೂರ್ಮೆಯಿಂದೊಸೆದು ಮಾಡುಗೆ ಕಬ್ಬದ ಬರ್ದನೇಟ್ಟಿಯಂ (ಕಬ್ಬಿಕಾ. ೩) ; ಅಧರಾಮೃತಮಂ ನಿಚ್ಚಂ ತಣ್ಣನೆ ಸವಿವ ಬರ್ದುಳ್ಳರ್ಗೆ ಬರ್ದಲರೇಂ ಪಾಸಟಿಯೆ ? (ರಾಮಾಶ್ವ. ೬೦-೦೮). 'ಬರ್ದುಗ' ಪಠಾ. **ಬದ್ದು₃** : ಆತನಂ ಕಾಣಲೊಡಂ ಕರಂ ಬಯಸಿ ತಾಮೆಱೆದಟ್ಟುವರಟ್ಟೆ ಕೂಡೆಯುಂ ನಾ[ಣ]ಲಿವನ್ನರಾದರೆನುತೊಂದು ವಿದಗ್ಧತೆಯಿಲ್ಲ ಬದ್ದಿನೊಳ್ ಪೂಣಿಕೆಯಿಲ್ಲ ಬಾಳಿಕೆಯುಮೆಂತುಗೆ ಕೂಡುತೆ ಗೆಲ್ದಮಾತನಂ (ಅಂಹಂ. ೩-೬೦). [ ? ]

**ಬರ್ದುಂಕಿಸು, ಬದುಕಿಸು, ಬರ್ದುಕಿಸು** (ಕ್ರಿ). ೧. ಕಾಪಾಡು ; ರಕ್ಷಿಸು : ನಿನ್ನೊಳಗೀಕೆ ತಾನೆಯೊಲವಿತ್ತಾ ಪಾಂಗುಮಂ ಪೆಂಡಿರೊಳ್ ಸರಿಗಂಡೀಕೆಯು ನೀಂ ಬರ್ದುಂಕಿಪುದು (ಶಾಕುಂತ. ೩೬-೯೩). ೨. ಮುಕ್ತಗೊಳಿಸು ; ಬಿಡುಗಡೆ ಮಾಡು : ವಿಜಯನೆಂಬ ಕುಮಾರನಂ ಪಿರಿದು ತಂತ್ರಂಬೆರಸು ಪೋಗಿ ಏನಾನುಮೊಂದುಪಾಯದಿಂದೊದ್ದಾಯನನ ಸೆಱೆಯಂ[ಯಿಂ] ಬರ್ದುಂಕಿಸಿ ರಾಜಗೃಹಕ್ಕೊಡಗೊಂಡು ಪೋದೊಡೆ (ವಡ್ಡಾರಾ. ೦೬೩-೦೬). **ಬದುಕಿಸು** : ೧. ಸದ್ಭಾವನೆಯೆ ಪ್ರಸನ್ನವಾಗಿ ಚಿದ್ಬಿಂದುವಿನೊಳು ಪ್ರತಿಬಿಂಬಿಸುತ್ತಿಪ್ಪ ಚಿದ್ಬ್ರಹ್ಮವನೊಳಕೊಂಡ ಮಹಾಶರಣರ ತೋಱಿ ಬದುಕಿಸಾ ಎನ್ನ (ಅರಶ. ೦೬-೯೨) ; ಶಿವಾಚಾರ ಶಿವಭಕ್ತಿ . . . ಶಿವಶರಣರ ಸಂಗ ಇವನೆ ಕರುಣಿಸಿ ಬದುಕಿಸಯ್ಯ ಎನ್ನ (ಅಬಂಧೇ. ೦೯೮-೦೯೩) ; ಬದುಕಿಸು ನನ್ನೊಡೆಯನ ದಮ್ಮಯ್ಯ (ಕೋಗಿಲೆ. ೩೦-೩). ೩. ಬದುಕುವಂತೆ ಮಾಡು ; ಜೀವವುಳಿಸು : ಅಂದು ಮೃತಸಂಜೀವಿಯೌಷಧಿಯಿಂದ ಬದುಕಿಸಿ ಮನೆಗೆ ತಂದನು (ಸಂಕಶ. ೩೦. ೨-೦೩) ; ಅಮೃತ್ಯುಪ್ಯನಿಗೆ ಮರಣಸಂಭವವಾದರೆ ಮಾರ್ಕಂಡೇಯನಂತೆ ಈಶ್ವರನನ್ನು ಮೆಚ್ಚಿಸಿ ಬದುಕಿಸಿಕೊಳ್ಳುವೆನೆಂಬ ಭರವಸೆ (ಕೆಂಗಾಶ್ವ. ೩೨). **ಬರ್ದುಕಿಸು** : ೧. ಅವರೆನ್ನಂಘ್ರಿದ್ವಯದೊಳೆಱಗಿ ಬರ್ದುಕಿಪುದೆಂದರ್ (ವಚಶಾ. ೮-೦೯೩). [ಬರ್ದುಂಕು + — ಇಸು₃]

**ಬರ್ದುಂಕು, ಬದುಂಕು, ಬದುಕು₁, ಬರ್ದುಕು₁, ಬಟ್ದುಂಕು** (ಕ್ರಿ). ೧. ಜೀವಧಾರಣೆ ಮಾಡು; ಪ್ರಾಣವನ್ನುಳಿಸಿಕೊಳ್ಳು; ಜೀವಿಸು : ಕರ್ಮಕೆಯ್ಯೊಡಿ ಬರ್ದುಂಕಲ್ಕಮಱವರಾರ್ ಭೂತಳದೊಳ್ (ಕಂರಾ. ೦-೬೨): ಪಗೆವರೊಕ್ಕಲಿಕೊಳೋಪೆಸಲೊರ್ವರಿಲ್ಲದಂತಿರ ತವೆ ಕೊಲ್ಲುಮಂತುಮಂ ಕೇಸರಿಗಾಂತು ಬರ್ದುಂಕಲಕ್ಕುಮೋ (ಕಂಕಥಾ. ೯-೩೬): ಸಲ್ಲರ ಕೂಡು ವಾಸೆಯೆ ಬರ್ದುಂಕುವುದರ್ಕೆ ಸಿಮಿತ್ತಮಾಗದೇ (ಕಾದಂಉ. ೩೨೮). ೨. ಜೀವನವನ್ನು ನಡಸು; ಬಾಳನ್ನು ಸಾಗಿಸು ; ಹೊಟ್ಟೆಹೊರೆ : ಸೇವಕಂ ಮೊದಲೊಳರಸಂಗಂ ತದನಂತರಂ ಪ್ರಧಾನರ್ಗಂ . . . ಭೀತನಾಗಿರಲ್ವೇಟ್ಕುಂ. . . ಇಂತು ಲಘುತರಮಪ್ಪ ಸೇವೆಯಿಂ ತನ್ನಿಚ್ಛೆಯೊಳ್ ಬರ್ದುಂಕುವ ಶುನಕಂ ಲೇಸು (ಕಂಕಕಂ. ೩೨-೨೦); ಹರಹರ ಕರ್ಮದೊಳ್ ಬಳಲದಿಂತು ಬರ್ದುಂಕಿದೆನ್ನೆ ಸದಾಶಿವಾ ನರವರ ಸೇವೆಯೊಳ್ ಕುದಿಯುದಿಂತು ಬರ್ದುಂಕಿದೆನ್ನೆ (ಕಂಶಾಕ. ೨೩). ೩. ಬಿಡುಗಡೆಯನ್ನು ಹೊಂದು: ಮುಕ್ತವಾಗು : ಆಕೆ ಮದನನ ಕಯ್ಯಿಂ ಬರ್ದುಂಕಿದರಲಂಬು ಬರ್ಪಂತೆ ಬಂದು (ಕಂಕಥಾ. ೩-೦೯ ಕ); ಬಂದುದು ಮದನನ ತಿರುವಿಂ ಬರ್ದುಂಕಿದ ಲರಂಬಿನವೋಲ್ (ಸುಕುಮಾ. ೯-೦೦೬); ಸೆಱೆಯಿಂ ಬರ್ದುಂಕಿದಂ (ಧರ್ಮಾಮೃ. ೯೦ ಆಶ್ವ). ೪. ಸಾರ್ಥಕತೆಯನ್ನು ಹೊಂದು ; ಕೃತಾರ್ಥವಾಗು ; ಧನ್ಯತೆಯನ್ನು ಪಡೆ : ಬಂದ ಭವಂಗತಿಸುಖಮುಖದಿಂದಂ ಮೆಯ್ಯಿಕ್ಕಿ ಹರ ಬರ್ದುಂಕಿದೆವೆನುತುಂ (ಗಿರಿಕ. ೦೦-೧೯). ೫. ಪಾರು ; ನುಸುಳು; ತಪ್ಪಿಸಿಕೊಳ್ಳು : ಆದಂ ತರ್ಪರಗಿಳಿಯನೋಂದು ಗಿಡುಗನೆಡೆಗೊಂಡು ಜಗುನೆಯಂ ಪಾಯ್ವಾಗಳುಗಿಬಿಗಿಮಾಡಿದಾಗಳದಱ ಕೈಯಿಂ ಬರ್ದುಂಕಿ ತೊಱೆಯೊಳಗೆ ಬಿಟ್ಟೊಡೆ (ಕಂಕಥಾ. ೦-೬೮ ಕ) ; ತತ್ಪಲಂಗಳ ಸಮ್ಮತೋಪವಂಗಳನಾರೋಗಿಸುತ್ತುಂ ಸುಖದಿನಿರ್ದೊಂದುದಿವಸಂ ತನ್ನ ಕೈಯಿಂದಂ ಬರ್ದುಂಕಿದ [ಪಾಠಾಂ. ಬಿದಿರ್ದ] ಪಣ್ಣಂಬೋಧಿಮಧ್ಯದೊಳ್ ಬೀೞ್ವುದುಂ (ಕಂಕಕಂ. ೨೬೬-೦೬). **ಬದುಂಕು** : ೧. ಈ ನೃಪನಂ ಕಾವವನಾವ ಅಬನ್ನೃಪನಮೆಸಿಯಿಸೆ ಬದುಂಕುವನ್ನರಾವೊಳರೇ (ಶಾಶಿ. XI-೧, ೬೯-೦೦; 1088); ನಿನ್ನೊಳಂ ತೊಡರ್ದು ಕಾದಿ ಬದುಂಕುವನೇಂ ತ್ರಿನೇತ್ರನೋ (ಎಕ. VI. ಕಡೂರು. ೦೯೯-೯೬; 1206). ೪. ರುದ್ರರಿರ ನಾನಾವ ಕಾಲದೊಳದ್ರಿಜೇಶನ ಪದಯುಗವನುಮ್ಮದ್ಬ್ಭಕ್ತಿಯೊಳರ್ಚಿಸಿ ಬದುಕುವ ಪುಣ್ಯಮಾದಪುದೊ (ಶಸಪು. ೯೩-೯೬). **ಬದುಕು₁** : ೧. ತಳವಱ ಕಳ್ಳರ ಬಾರಿಯೊಳೋಗಾಗದೆ ನಿನ್ನ ಬದು[ಪಾಠಾಂ. ರ್ದು]ಕಿ ಬಂದುದ ಮಿದಾರಳಮೀಗಳುಂಬಂ (ಸುಕುಮಾ. ೬-೨೯); ಸೂನು ಬದುಕಿದೊಡಿಂದು ನಿನ್ನಂ ನೋನುವವು (ಚಪು. ೯೮-೦೯); ವಿಷದ ಹುಟ್ಟಿಯೊಳೆಱಗಿ ನೊಣ ಜೀವಿಸುವುದೇ ಶಿವಶಿವ ಕುಮಾರನ ಮುಸುಡ ಮುಂದಕೆ ಬಿದ್ದು ಬದುಕುವುದುಂಟೆ ಭಟನೀರ (ಕುಮಾರದ್ವೋ. ೬-೯೦). ೨. ನೀರ ಬೊಬ್ಬುಳಿಕೆಗೆ ಕಬ್ಬುನದ ಕಟ್ಟು ಸುರಕ್ಷಿತವ ಮಾಡುವ ಭರವ ನೋಡಾ . . . ಸಂಗವದೇವನ ಪೂಜಿಸಿ ಬದುಕುವೋ ಕಾಯುವ ನಿಶ್ಚಯಿಸದೆ (ಬಸವ. ೧೬೨); ತೊತ್ತಿರೋಳೀ ತಳೋದರಿ ಬೆರಸಿ ಬದುಕಲಿ ಕರ್ಣ ಕಳುಹಿವಳ (ಕುಮಾವ್ಯಾಸ. ೦೩-೮). ೪. ನೀನೊಲಿದ ವಿಭೂತಿಯು ನಾನು ಧರಿಸಿ ಬದುಕಿದೆನು ಕಾಣಾ (ಅದಶ. ೦೮-೯೪); ನೀವೆನ್ನ ಮಾದಿರದೊಳಾರೋಗಿಸಿ ಧೂಡಾನಿಂದು ಬದುಕುವೆನು (ಬಸಪು. ೬೦-೨) ; ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು (ಕಶಶ. ೩೩-೯೬ ಶಲ್ಯ). **ಬರ್ದುಕು₁** : ೧. ನೀನ್ನುಡಿದು ಬರ್ದುಕಿದ್ದ ಪೆಱರೆನ್ನಿದಿರೊಳ್ ನುಡಿದು ಕರ್ಣನಂ ಬರ್ದುಕುವರೇ (ಕಂಕಥಾ. ೦೩-೨೬); ಪಿರಿದಪ್ಪಾಪತ್ತೆಲ್ಲವಂ . . . ಬದಿರ ಗಂಟಂ ಕಡಿವಂತಿರೆ ಕಡಿದು ಬರ್ದುಕಿ ಬಂದ್ಯೆ (ಕಶಾರಕ್ಕು. ೩-೨೯೬ ; ಈಯು ಲರ್ವಿಜ್ಜಣಿಗೆಯನಿನಿತಾಯಾಸದೆ ಬೀಸಲೇಕೆ . . . ಈಯೆಲರಿಂ ಬರ್ದುಕೆ ಲೆಂತುಮಮಾನಾರ್ತಪೆನೇ (ಕಂದ್ರಪು. ೮-೯೦). ೨. ಜನಪತಿಗಳ್ ನುಡಿಯಲ್ ಪಾರ್ದನಿಯುಂತಸುಪದಿಸಿ ಬರ್ದುಕಲೊಲ್ಲದೆ ಮಾಕೊರ್ಂಡನುಚಿತವಿದೆಂದು ಮಾಣಿಪ ಮನುಜೋತ್ತಮರೆಲ್ಲಿಯಾನುಮಿರ್ಪರ್ ಜಗದೊಳ್ (ಗಾರಂಪು. ೩೯೨), ಖಳನಂ ಗುಣಗಣದಾವಾನಳನಂ . . . ಸಮಗ್ರದೋಷಾವಿಳನಂ ಪೆಸರ್ಗೊಂಡು ಬರ್ದುಕುವನ್ನನದಾವಂ (ಶ್ರೀಕೃಪು. ೦-೩೨). ೩. ನೀರಾಂಜನೆ ಕರ್ಬಿನ ಬಿಲ್ಲಿಂ ಮಸೆದ ಮದನನಲರ್ಗಣೆ ಬರ್ದುಕಿತ್ತೆನಿಸುತ್ತೊಳಪೊಕ್ಕಳ್ (ಆದಿಪು. ೯-೦೯); ಸಲ್ಲಲಿತಗಾತ್ರಿಯೊರ್ವಳ್ . . . ಮನೋಜನ ಬಿಲ್ಲಿಂ ಬರ್ದುಕಿದ ಶರಾಳಿಯಂತಿರೆ ಬಂದಳ್ (ಕಶಾರಕ್ಕು. ೬-೧೯೯). ೪. ನೆಳಲಾದುದು ಧಮ್ಮಿಲ್ಲಂ . . . ಶೀತಳತರ ದಳವಾದುದು ಕೋಮಳೆಯಧರವಮರೀಚಿ ಪಾಂಥನೇಂ ಬರ್ದುಕಿದನೋ (ಗಿರಿಕ. ೨-೨೦); ಪರಮಗುರುವವನಡಿವಿಡಿದು ಬರ್ದುಕಿಂ (ಕದ್ಯರಾ. ೮-೬೩): ಅಧಿಕಪರವಸ್ತುವಂ ಕಂಡವರಡಿವಿಡಿದು ಬರ್ದುಕು (ಧಾಶಶಂ. ೩-೨೮). ೫. ಬೀಸುವ ಚಾಮರಾಳಿ

ಸುಂದರಿಯರ ಕಿಯ್ಗಳಿಂ ಬರ್ದುಕಿ ಬಿಟ್ಟುವು (ಶಂಕರಾ ೬-೨೯). ೬. ಸಂರಕ್ಷಿತವಾಗಿರು; ನೆಮ್ಮದಿಯಿಂದಿರು : ಪ್ರಿಯವನಿತಾಘನಸ್ತನದಿ ಜುಬಿನೊಳು . . . ವಿಸುವಾ ಗಭೀರನಾಭಿಯೊಳೊಳವೊಕ್ಕು ಕಾಮುಕ ಜನಂ ಬರ್ದುಕಿರ್ದುದು ಬಂದ ಪಾಗೆಯೊಳ್ (ಅಜಿತಪು. ೬-೨೨); ವಾರಿಜ ಭವ ಶಕ್ರಾದಿ ದೇವತೆಗಳು ನಾರಿಯ ಕುಚಮಂಡಲವ ಸೇರಿ ಬರ್ದುಕಲೆಂದು ಮದನನ ಮುಂಗಡೆ ಮೋರ ಹೆಗ್ಗಾಳೆ ಸಾಱಿದುದು (ಕೋಹಕ. ೬-೮೬).

Δ ಬಟ್ದುಂಕು : ೧. "ಬಟ್ದುಂಕಿದಂ = ಜೀವಿಸಿದಂ; ಬಿಡಲ್ಪಟ್ಟಂ" (ಕಬುದ. ಕ೦. ೦).

[ದೇ.॥ ತುಳು. ಬರ್ಸ್, ಬದುಕು; ಕೊಡ. ಬದೀಕ್; ತೆಲು. ಬತುಕು, ಬದುಕು, ಬ್ರತುಕು, ಬ್ರದುಕು; ಕೋತ. ವರ್ಸ್; ಕುವಿ. ಬತ್ಸ್; ಕೋಲಾ.ಪರ್ಜಿ. ಬರ್ಸ್]

**ಬರ್ದುಕಾಡು** (ಕ್ರಿ). ತಪ್ಪಿಸಿಕೊಳ್ಳು; ಪಾರಾಗು : ನಲ್ಲಳ ಮುಖಾಂಬುಜಮಂ ನಡೆ ನೋಡಿ ನೋಡಿ ಸಾಯದೆ ಬರ್ದುಕಾಡಿದಂ ಜವನ ಬಾರಿಯೊಳಂ ಬರ್ದುಕಾಡದಿರ್ಕುಮೋ (ಅಂಕ್ರಿ. ೦೨-೨೬); ಅಟ್ಟಿದ ನಿಮ್ಮ ಪೆರ್ಗಡೆ ಬರ್ದುಕಿದನೆಂಬುದನಿಂದ್ರಜಾಲಮಂ ತೊಟ್ಟನೆ ತೋಱಿ ಬಂದು ಬರ್ದುಕಾಡಿದಂ (ಶಂಕರಾ. ೯-೯೯).

[ಬರ್ದುಕು₁ (< ಬರ್ದುಂಕು) + ಆಡು₁]

**ಬರ್ದುಕಿಸು** 'ಬರ್ದುಂಕಿಸು' ನೋ.

**ಬರ್ದುಕು₁** 'ಬರ್ದುಂಕು' ನೋ.

**ಬರ್ದುಕು₂**, ಬದುಕು₂ (ನಾ). ೧. ಬಾಳು; ಜೀವನ : ಕಟುದವರ್ಗಟ್ಟುದ ಬೆಟ್ಟುಡವರೇಟಿಟ್ಟುಡಮಂತವರಿಂ ಬಟೆಕ್ಕೆ ಕಾಮುಟವೊಡಮೋಲರಂತ ವರಣಂ ತಮಗಂ ಬರ್ದುಕಿಲ್ಲ (ಶಂಕರಾ. ೨-೨೬); ಕಡೆಗಿಪನ ಬರ್ದುಕು ನೀರೊಳ್ ನೆರೆಯದಿರದೆಂದು ಪೊಡವಿಯಾಡುವ ಪಾಶಿಗೆಡೆಯಾಗಿ ರವಿ ಪಡುವಕಡಲೊಳಾಹಾ ಬಿಳ್ದನು (ಭಾಷಕಾ. ೩-೯೬). ೨. ಆಸ್ತಿ; ಸಂಪತ್ತು : ಗುರು ಸುಂದರನಂ ಸಲೆ ಕೀರ್ತಿವರ್ಗೆ ಬಂಧುರತರ ವಸ್ತುರಾಜಿಗಳನೀವುತ . . . ಬರ್ದುಕಿದೆಲ್ಲಮುಮಂತೆ ಸಮಾಪ್ತಿಯಾಗಲ್ (ಅಜಾತ್ಕ. ೩-೦೦-೩). ಬದುಕು₂ : ೧. ಗಣಿಸುವೊಡೆ ಎಮ್ಮಿರವು ಬದುಕು ಜಯಜಾವು ನಿಮ್ಮ ಕರುಣವಲಾ (ಅಕಕ್ರಿ. ೩೦-೨೯): ಹಸನಾಗಿ ಇದೆ ಬದುಕು ಸಾಯಲಾರೆನು ಎನಲು ಕುಸುರಿದಱಿಯದೆ ಬಿಡರು ಯಮದೂತರು ಆಗ (ಕೃಕಂಡ. ೨-೬೦-೩); ಹಳೆಯ ಭಾವನೆಗಳನ್ನು ಬಿರು ಸಾಚಿತ ಚಿತ್ರಿಸಿದು ಬದುಕನ್ನು ಹೊಸದೃಷ್ಟಿಯಿಂದ ನೋಡುವುದನ್ನು ಕಲಿ (ಜಾಂಜ್ಞ. ೦೬೯). ೨. ಆತನು ಹಿರಿಯ ಮಗನಿಗೆ ತನ್ನ ಬದುಕು ಎಲ್ಲ ಕೊಟ್ಟು ಚಿಕ್ಕವನಿಗೆ ಚನ್ನಾಗಿ ವಿದ್ಯೆ ಲಿಸಿದನು. (ಹಿರಿಯ ಮಗನು) ಕೆಲವು ದಿವಸಗಳಲ್ಲಿ ಆ ಬದುಕೆಲ್ಲ ಹಾಳುಮಾಡಿ, ಬಡವನಾದನು (ಜುಂಜಾ. ೦-೩); ಗಳಿಸಿದ ಬದುಕು ಧರ್ಮಕಾರ್ಯದಲ್ಲಿ ವ್ಯಯಗೊಳಿಸದಿದ್ದರೆ, ಅದು ಬೆಂಕಿಯಿಂದಾಗಲಿ, ಕಳ್ಳರಿಂದಾಗಲಿ, ರಾಜನಿಂದಾಗಲಿ ಅಪಹರಿಸಲ್ಪಡುತ್ತದಂತೆ ! (ಚಲ್ಲಿಹೊ. ೩೩). ೩. ಸರಕು; ಸಾಮಗ್ರಿ; ವಸ್ತು : ಅವರ ಅರಮನೆಯಲ್ಲಿ ಇರುವಂಥಾ ಬದುಕು ಸರ್ವಸ್ವವನ್ನು ಲೂಟಿ ಮಾಡಿಕೊಂಡು ಬಾ (ಕಾಕೀಂದ್ರ. ೯೬); ಕೆಲವರು ಕಳ್ಳರು ಕೂಡಿ ಒಂದು ರಾತ್ರಿ ಒಬ್ಬ ಸಾವುಕಾರನ ಮನೆಯ ಕನ್ನ ಕೊರೆದು ಸಿಕ್ಕ ಬದುಕು ತಕ್ಕೊಂಡು ಹೋಗಿ (ಜುಂಜಾ. ೩-೯೧). ೪. ಕೆಲಸ; ಕಾರ್ಯ : ರಮಾವಲ್ಲಭನ ದರ್ಶನಕೆ ಪರಾತೆಯಾ ಕರೆಯಲಪಳೊಲ್ಲೆ ನಾನಿಲ್ಲಿರದೊಡೀ ಬದುಕ ಸಾಗಿಸುವರಾರೆಂದು ಚಂಡಿಗೊಳಲು (ಕೃಜಿಶಾ. ೯-೬೬); ಎರಡು ಆಳಿನ ಬದುಕನ್ನು ಒಬ್ಬನೆ ಮಾಡಿ ಸ್ವಲ್ಪಮಟ್ಟಿಗೆ ಸಣ್ಣಸಿದ್ದಾನೆ (ಕಕುಮು. ೯೦): ಈ ಹೊಲದ ಬದುಕು ಹದಗೊಳಿಸೋಣ ರಂಟೆಕುಂಟೆಯ ಹಿಡಿದು ಬೆವರು ಹರಿಸಿ (ಕಂಜು. ೦೯-೨೦). ೫. ಕಸುಬು; ಉದ್ಯೋಗ; ವೃತ್ತಿ : ಇದುವೆ ಜೀವನವೀ ಕುಟುಂಬಕ್ಕಿದು ಉಪಾರ್ಜನೆ ಬದುಕಿದೆಂದೆನ್ನದೆ ಮೃಡನ ಕಲ್ಪಿತದಿನಹ ಬಡಕಾಯಕದೊಳಿಂತು ಒದಗಿ ಪಡಿಯಂ ಕೊಡುತಿರಲು (ಏಕಕ್ರಿ. ೯೭-೩).

[<ಬರ್ದುಂಕು./ತಮಿ. ವತುಕ್ಕು; ತುಳು. ಬರ್ಸ್; ತೆಲು. ಬ್ರತುಕು; ಕೊಡ. ಬದೀಕೀ; ಕೋತ. ವರ್ಸ್]

**ಬರ್ದುಕುಗೆಯ್** (ಕ್ರಿ). ಜೀವನವನ್ನು ಸಾಗಿಸು : ಬಾಳು: ಆಮಿನ್ನಟ್ಟುಂಡು ಬರ್ದುಗುಗೆಯ್ವುದು ದಿಟಮೇ (ಕನ್ನಕು. ೨೦೩ ವ್ಯಾಖ್ಯಾ).

[ಬರ್ದುಕು₂ + ಕೆಯ್₁]

**ಬರ್ದುಗ** (ನಾ). ಜಾಣ; ನಿಪುಣ; ಪ್ರೌಢ : "ಬಿತ್ತಿಗನೆಂದುಂ, ಬರ್ದುಗನೆಂದುಂ ಪ್ರೌಢಂ" (ಆಜಾ. ೬೦-೩೩೬); ಪಗೆ ಕೆಳೆಯೊಳ್ ಕೆಳೆ ಪಗೆಯೊಳ್ . . . ನಂಬುಗೆ ಚಲ್ಲವತ್ತರೊಳ್ ಬರ್ದುಗರೊಳ್ ಜರ್ಬಾರ್ಗಮುಂಟು ಮಾಡವ ಕೇಡಂ (ಪಂಚತಂ. I. ೦೦೩). [ಬರ್ದು₄ + – ಗ₁]

**ಬರ್ದುಗಾರ್ತಿ** (ನಾ). ಜಾಣೆ; ನಿಪುಣೆ; ಪ್ರೌಢೆ : ಬರ್ದುಗಾರ್ತಿಯರ ಬಹಿರಂಗಣಂಗಳೊಳ್ ಆಳವಟ್ಟ ಕಂಭಂಗಳಲ್ಲಿ ನೆಗಟ್ಟಿಗೆತ್ತಿ ತೆತ್ತಿಸಿದ ಸೌಭಾಗ್ಯಘಂಟೆಗಳೊಳಂ (ಪುಷ್ಪ್ಪ. ೨-೬೬ ಕ).

[ಬರ್ದು₄ + < – ಕಾಱ + – ತಿ₁ (< – ಇತ್ತಿ)]

**ಬರ್ದುಗೆ** (ನಾ). ಸಾವು; ಮರಣ : "ಬರ್ದುಗೆಯೆನೆ ಸಾವು" (ಕಜಾ೯೨. ೦೬); ಎಳಮಾವೇ ತಳಿರುಯ್ಯಲೇ ಕೊಳೆ ತಗುಳ್ದಿಂದೋಳಮೇ . . . ಕರಂ ಬರ್ದಿದಂ ಗಳ ನಿ.ಮ್ಮೆಲ್ಲರುಮೆನ್ನ ಬರ್ದುಗೆಯನಾ ನಲ್ಲಂಗೆ ಪೇಟಂ (ಶಾಕ್ಯಾಪ. ೦೨೯); ಜನಪಂಗೆ ತತ್ ಬೌದ್ಧಮುನಿಯ ಬರ್ದುಗೆ ಸುದ್ದಿ ಪೇಳೆ (ಆಶಾ. ೯-೨-೨) ; ಆತನ ಬರ್ದುಗೆಯ ಶಾಂತಿಗಿಂತಾತಗೆ ಪಾಳಯಮನೆ ನೀಂ ಮಾಟ್ಪ ಜನ್ನದ ಹಸುವಂ ಕಡಿದೊಡೆ ನಿಮಗೆ ಮುನಿಸಾಯ್ತೆ! (ಕಾಪೂಕ್ತ. ೦೦೩-೩). [ಬರ್ದು₃ + – ಗೆ]

**ಬರ್ದುಗೆಡು** (ಕ್ರಿ). ಪ್ರೌಢಿಮೆಯಿಲ್ಲದಿರು : ಮನದೊಳಿಂ ತಮಾಳಲತಿಕಾಂಗಿಯರಾಟಿಸೆ ಬರ್ದುಗೆಟ್ಟು ಕಾಂಚನಲತಿಕಾಂಗಿಯರ್ ಬಯಸೆ. . . ಸಂದ ನಿನ್ನ ಮುನ್ನಿನ ಚರಿತಂಗಳಂ ನೆನೆಯದಿರ್ (ಅಂಕ್ರಿ. ೨-೯೬).

[ಬರ್ದು₄ + ಕೆಡು₁]

**ಬರ್ದುನುಡಿ** (ನಾ). ಜಾಣ್ಮೆಯಿಂದ ಕೂಡಿದ ಮಾತು; ಪ್ರೌಢೋಕ್ತಿ : ಒಪ್ಪಂಟಿತ್ತಿನಿದಾದ ಬರ್ದುನುಡಿಯುಂ ತಳ್ಳೋಜೆಯುಂ ನಿಲ್ವಿನಂ. . . ಪಲರಲ್ಲರ್ ತಿರ್ದಿದಿ: ಕಬ್ಬಮೆಂತಪ್ಪಂಗಂ ಪೊಸಮುತ್ತಿನೆಕ್ಕಸರದಂತೆಂದುಂ ಕೊರಲೊಳ್ಗೊಳ್ಳದೇ (ಕ್ಯಾಕಾ. ೩). [ಬರ್ದು₄ + ನುಡಿ₂]

**ಬರ್ದುವೆಣ್** (ನಾ). = ಬರ್ದುಗಾರ್ತಿ : ಅಲರ್ಗಳನಾಂತ ಪಾದರಿಗಳೊಳ್ ತರದಿಂದೆಱಗಿರ್ದ ತುಂಬಿಗಳ್ ಪಲವು ಬಸಂತನೊಲ್ದೊಲಿಸಿ ಕಾಡುವ ರೂಢಿಯ ಬರ್ದುವೆಂಡಿರಂ ನಿರೆ ಸೆಱೆಗೆಯ್ವನೆಂದು ಪಲವಾಗಿರೆ ಮಾಡಿದ ತನ್ನ ಬಳ್ಳಿಸಂಕಲೆಗಳೆಂಬಿನಂ ಬಗೆಯನಿರ್ಕೆಗೊಂಡುವು (ಕ್ಯಾಕಾ. ೩೬).

[ಬರ್ದು₄ + ಪೆಣ್]

**ಬರ್ದೆ**, ಬರ್ದ್ದು₁ (ನಾ). ೧. ಪ್ರೌಢೆ; ಜಾಣೆ ; ನಿಪುಣೆ : ವ್ಯಾಳಗಜಂಗಳು ಮನೆಕದ ಬರ್ದೆಯರುಮುನಗಿಬಗಿಮಾಡಿದ ಸಂತೋಷದೊಳ್ ಬಳ್ಳಳಬೆಳೆದ ವಿಶ್ರಾಂತತುಂಗನ ನಿಡುದೋಳ್ಗಳ್ ಗಣಿಕಾಜನಕ್ಕೆ ಕಾಮಪಾಶಂಗಳುಮರಾತಿ ಜನಕ್ಕೆ ಯಮಪಾಶಂಗಳುಮಾದುವು (ಶಂಕರಾ. ೨-೩೯ ಕ) ; ಬಯಸಲ್ ತಕ್ಕಂದದ ಬರ್ದೆಯರೊಲವಿಂ ಬಯಸಿ ಬಂದೊಡಂ ಬಗೆಯದ ಬಲ್ಮೆಯ ನಾಳ್ಪ ಸುಭಗನ್ಕೆ (ಆಆಕ. ೯-೩೮) ; ಸಸಿಯಂ ಮೆಯ್ವುಳಗಿಂದೆ. . . ಮೆಯ್ಗುಣ್ಣನಂ ಪೊಸತಪ್ಪಗ್ಗದ ಗಾಡಿಯಿಂದೆ ಪಿರಿದುಂ ಬೆಳ್ಮಾಡಿ ಬೇಟ್ಟಂತುಟುಟ್ಪಸಮಂ ಮಾಡುವ ಬರ್ದೆಯರ್ ಪಲಬರುಂ ಕಣ್ಗೇಂ ಬೆಡಂಗಾದರೋ (ಕಾವ್ಯಾ. ೦೩೯); ದಾದಿಯರುಂ ಬರ್ದೆಯರುಂ ಬೀದಿಯ ಮನೆಯೊಳ್ ಪೊಗಟ್ಟಿವೆತ್ತೊಪ್ಪುವ ಮುತ್ತೈದೆಯರುಮಂತವರದೊಳ್

. . . ಸಂದಣಿಸಿರ್ಪರ್ (ಶಶಿ. ೪-೨೫). ೨. ಮಧ್ಯವಯಸ್ಸಿನವಳು; ನಡುಪ್ರಾಯದವಳು; ಪ್ರಬುದ್ಧೆ : ಕಿಳದಿಯರಿಂದು ಪಿಂದೆಗೆದು ಮೋನದೊಳಿರ್ದೊಡೆ ಬಟ್ಟಬರ್ದೆಯರ್ಕಳೆನುವಿನಿಂದೊಡಂಬಡಿಸಿಯುಂ ಬಗೆಗೊಳ್ಳದೆ. . . . ದೇವಸಂಗೊಳುತಿರೆ (ಶಶಿ. ೩-೨೮). ೩. ವಯಸ್ಸಾದವಳು; ವೃದ್ಧೆ; ಮುದುಕಿ : ರಸಭಾವಂ ಪಿಂಗೆ ಶೈಥಿಲ್ಯಮಾದವಯಮದೊಳ್ತೀವೆ . . . ಶಯ್ಯೆಗಿಂಬಾಗಿ ರಾರಾಜಿಸದಾದಂ ಬರ್ದೆಯಂ ಪೋಲ್ತು ಧಮಕೃತಿ ರಸಜ್ಞರ್ಗನಾದೇಯಮಲ್ತೇ (ವ್ಯ.ಶಿ. ೦-೪೬); ತಡಿಗಳೊಡೆಯರ್ಕಳಾಗಳೆ ಬಿಡದೊಡನೆಯ್ತಂದು ಬರ್ದೆಯಂ ಪೀಡಿಸೆ . . . ಸುಂದರೇಶನ ಗುಡಿಗೆಯ್ದುತೆ ಶೋಕದಿಂದ ಪೊಡೆಗೆಡೆದುಸಿರ್ದರ್ಳ್ (ಹಾಚಾಸ್ಕ. ೪-೦೩-೨೨). ೪. ಸೂಳೆ; ಗಣಿಕಾಸ್ತ್ರೀ; ವೇಶ್ಯೆ : ಅಡರ್ದ ಕುಚದ್ವಯಂ ದಯಿತೆ ಬಿರ್ದರ್ವಿದೇಕನೆ ಬರ್ದೆಯೆಂದಳಿಂತಡಿಗಡಿಗೋವ ನೀಂ ಸರಸಕಾವು ನಿವಾಸದೊಳಿಟ್ಟ ಕಯ್ಗಳಿಂ ಪಿಡಿದಿರೆ ತವ್ಮೊಳಿಟ್ಟು ಸವಿದೋಱಾದ ದೂಸಱ್ ನೊಂದಹರ್ನಿಶಂ ಕಿಡೆದಪುವು (ಅಂಚಾಶ. ೨-೦೦೯). ೫. ತಲೆಹಿಡುಕಿ; ಕುಂಟಣಿಗಿತ್ತಿ : ಪೊಸನಾರಂ ಕಲ್ಲೊಳಿತ್ತರ್ ತ್ರಿಱಯಲರಲನಾಕಾಶದೊಳ್ ಗಾಳಿಯಂ ಖಂಡಿಸಲ್ . . . ಆ ಬರ್ದೆಬಲ್ಲಳ್ (ವ್ಯ.ಶಿ. ೨೯-೯). ಬರ್ದ್ದೆ$_1$ : ೧. ಬೇಟಕಾರ್ತಿಯರಿವರೀಕೆಗಳ್ ಬಸನಿಗಳ್ ಕಡುಬರ್ದ್ದೆಯರೆಂದುಮಿಲತಾಂಗಿಯರನಿಸಿರ್ದರಂ.ನಯದೆ ನೋಡಿದನವ್ರತಿವೇಶ್ಯಸಂಭವಂ (ಅಂಚಾ. ೩-೪೮); ಬರ್ದ್ದೆಯರುಡಿಸಿದೊಡುಡಕಲ್ತ ಕೊವರನಭಿನವಮಾದನಂ (ಅಚಂಕ್ರ. ೦-೫೬). ೪. ಕೋಳ್ಗಗ್ಗಳಮಾದ ಮನೆಗಂ ತೋಳ್ಗಗ್ಗಳಮಾದ ಬರ್ದ್ದೆಗಂ ಬೇಸತ್ತು (ಶಾಂತಿಪು. ೬-೭೬ ವ); ಮತ್ತಿನ ಗಂಡಮೊರ್ಱಿಯಲ್ಲರೆಂದು ಮನದೋಗೆ ಬಱನೀರ್ಗುಡಿದ ಬರ್ದ್ದೆಯರೀ ಭವಮಿಂತೆ ಪೋದುದು ಮಱುಭವದೊಳಾದೊಡಮಿಾತನೊಳೆ ಬೇಟಮಕ್ಕೆಂದು ಪಱಿಸಿ ಪರಿಚ್ಛೇದಿಸಿ ಕಾಮಾಗ್ನಿಯಂ ಪುಗೆಯುಂ (ಅರ್ಧಶೀ. ೩-೨ ವ).

ಬರ್ದ್ದೆಮನೋಹರ = ಚತುರೆಯರನ್ನು ಆಕರ್ಷಿಸುವವನು : ರಾಷ್ಟ್ರಕೂಟಚಕ್ರವರ್ತಿ ನೃಪತುಂಗನ ಒಂದು ಬಿರುದು : ವೈರಿಭಯಂಕರಂ ಬರ್ದ್ದೆ(ಡ್ಡೆ?)ಮನೋಹರಂ ಅಭಿಮಾನಮನ್ದಿರಂ (ಎಕ. XII. ೨೦೬-೦೨; ೮14); ಅಮೋಘರಾಮಂ ಬರ್ದ್ದೆಮನೋಹರಂ (ಎಕ. VII. ೨೦೬-೦೨; ೮66). [ಬರ್ದ$_4$ + —ಎ$_3$]

ಬರ್ದೆಗ, ಬರ್ದ್ದಗ (ನಾ). ಒಬ್ಬಾತನ ಹೆಸರು : ಬರ್ದೆಗಂ ಕದಂಬಳಿಗೆ ಸಾಯಿರಮುಮನಾಳುತ್ತಿರೆ (ಎಕ. XI. ಚಿಶಿಕ. ೦೦೯-೩;೯೩೦). ಬರ್ದ್ದಗ : ಶ್ರೀಮಾನ್ಸ್ವಧಿಬರ್ದ್ದಗ ಭೂಮಿಭರ್ತ್ತಸ್ತಂನ್ತ್ರಾಧಿ ಪಾಲೋಜನಿ ನಾಗಮಾರ್ಯ್ಯಃ (ಕಶಿಕ. ೨೩-೮-೫೬; ೬೫೦ ೫೫); ಅಮಾರ್ಯರ್ವೀರ್ಯರ್ಗಂಗೆ ಬರ್ದ್ದಗಂ ಪಿರಿದು ಮಗಂ (ಕಂಚಾ. ೦-೨೩). [< ಭದ್ರ + —ಗ$_3$]

ಬರ್ದೆಗೆಯ್ತ (ನಾ). ಪ್ರೌಢಿಮೆಯುಳ್ಳವಳು ಮಾಡುವ ಕೆಲಸ : ಬಿರುದರ ಬಿಂಕಮಂ ಪೊಗಟ್ಟೆ ಕುಂಟಣಿತೋಳ್ಗೆಳಸಿರ್ಪ ಸೂಳೆವೆಂಡಿರ ಸೊಬಗಿಂಗೆ ಮೈಮಱಿದು ಮೆಚ್ಚುವ ಬಿಂಕದ ಬರ್ದೆಗೆಯ್ತದೊಳ್ ಬೆರಸಿದೊಡಂದೆ ಬರ್ದೆನೆನುತಿರ್ಪ ಭುಜಂಗನೆ ತೋಳೊಳಿರ್ಕೆ (ಅಂಚಾಶ. ೨-೬೨). [ ಬರ್ದೆ + ಕೆಯ್ತ ]

ಬರ್ನರು (ನಾ). ಉರಿಯುವ ಅನಿಲದ ಅಥವಾ ಸೀಮೆಯೆಣ್ಣೆಯ ದೀಪಗಳಲ್ಲಿ ದೀಪದ ಜ್ವಾಲೆಗೆ ಆಕಾರವನ್ನು ಕೊಡುವಂಥ ಭಾಗ; ಜ್ವಾಲಕ : ಒಮ್ಮೆ ಹೊಗೆಗಟ್ಟುವುದೊಮ್ಮೆ ಭುಗ್ಗೆನುವುದು ಬರ್ನರು ಕೆಟ್ಟ ಲಾಟೀನು (ಅಂಚಾಶ. ೨೦೩-೬೩). [←ಇಂ. Burner]

ಬರ್ಫೆ 'ಬರ್ಫಿ' ನೋ.

ಬರ್ಫ 'ಬರ್ಫು' ನೋ.

ಬರ್ಫಿ, ಬರ್ಫೆ, ಬರ್ಫೆ (ನಾ). ಒಂದು ಬಗೆಯ ಸಿಹಿತಿಂಡಿ : ಮಿಠಾಯಿ : ಬರ್ಫಿ : ಪದಾರ್ಥಗಳು : ಒಂದು ರಾತಲು ಹಾಲಿನ ಹುಡಿ : ೧/೪ ರಾತಲು ಸಕ್ಕರೆ . . . ಗೇರುಬೀಜದ ಚೂರುಗಳು (ಅಡುಗೆ. ೦೦೦). ಬರ್ಫೆ : ಮೇದೋ ಬರ್ಫೆ ತಕ್ಕೊಂಡು (ಮುಂಬಯಿ. ೩-೪೮); ಚೊಕ್ಕಟವಾದಂತ ಬೆಂಡುಬೆನಕ ಬರ್ಫೆ ತುಕ್ಕುಡಿ ಕಲ್ಯಾಣಿಸಾಮಿಗಳು (ಕಥಾ. ೪೬). ಬರ್ಫೆ : ಮಸಾಲೆ ಮಿಶ್ರಿತ ಕೇಸರಬರ್ಫಿ ಪೇಡೆ ಮೊದಲಾದ ಖಾದ್ಯಪದಾರ್ಥಗಳನ್ನು ಇಟ್ಟಿದ್ದರು (ಮುಂಬೆ. ೨೦). [ ←ಪಾರ. ಬರ್ಫೀ, ಬರಫ್ ; ಹಿಂ. ಮರಾ. ಬರ್ಫೀ, ಬರಫೀ]

ಬರ್ಫು, ಬರ್ಫ (ನಾ). ಮಂಜಿನ ಗಡ್ಡೆ ; ಹಿಮ : ನಗುವಾಗ್ಗೆ ಆಕೆಯ ತುಟಿಗಳೆರಡೂ ತೆರೆದು ಹಲ್ಲುಗಳು ಚಮಕಿಸಿದವು. ಅವು ಬರ್ಫಿನ ತುಂಡುಗಳಂತೆ ಶುಭ್ರವಾಗಿದ್ದವು (ಕಂಚು. ೪೯) ; ಈ ಭಾಗದಲ್ಲಿ ಯಾವಾಗಲೂ ಬರ್ಫು ಇದ್ದು ಚಳಿಯು ಬಹಳಿದ್ದುದರಿಂದ ದಿಕ್ಕಿ ಬೆಳೆಯಲನುಕೂಲವಿಲ್ಲ (ಕೃಚಾಶ. ೨೦). ಬರ್ಫ : ಉಗಿಯು ಪುನಃ ಘನವಾಗಿ ಮಳೆ, ಬರ್ಫಗಳ ರೂಪದಿಂದ ಕೆಳಗೆ ಬೀಳುತ್ತದೆ (ಮುಂಬಯಿ. ೬-೦೬೪) ; ನಿಂತಲ್ಲಿಯೇ ಅವರ ಕೈಕಾಲು ನೀರಿನಲ್ಲಿ ಬರ್ಫಕ್ಕಿಂತ ತಣ್ಣಗಾದವು (ಸಚಿತ. ೪೪೩). [ ←ಪಾರ. ಬರ್ಫ್ ; ಹಿಂ. ಮರಾ. ಬರಫ್, ಬರ್ಫ್ ]

ಬರ್ಫೆ 'ಬರ್ಫಿ' ನೋ.

ಬರ್ಬರ (ನಾ). ೧. ಸುಸಂಸ್ಕೃತನಲ್ಲದವನು ; ಅನಾಗರಿಕ : "ಪಾಮರಂ ಪ್ರಾಕೃತಂ ಬರ್ಬರಂ" (ಕಂಗಾ. ೬೯-೮) ; ಒಂದಾನೊಂದು ಕಾಲದಲ್ಲಿ ಸಂಯಮಹೀನ ಬರ್ಬರರಾಗಿದ್ದವರು ಇಂದು ಮಾನವರಾಗಿದ್ದಾರೆ (ಅಂಕ. II.೨೬೩) ; ಸೌಂದರ್ಯಪೂರ ಪ್ರಳಯಕ್ಕೆ ದೂರ ಬರ್ಬರನು ಕೈಯ ಚಲ್ಲಿ ಮಣ್ಣಾಗಿ ಹೋದ ; ಸಂಹಾರಕಾಲ ಕಲ್ಲಾಗಿ ನಿಂತಿಲ್ಲಿ (ಸೋರ್ಮಾ. ೫೩-೩). ೨. ಸುಸಂಸ್ಕೃತವಲ್ಲದುದು : ಯಾರೂ ಬಂಗಾಳಿಯನ್ನು ಸಡ್ಡೆ ಮಾಡುತ್ತಿರಲಿಲ್ಲ. ಸಂಸ್ಕೃತಪಂಡಿತರಿಗೆ ಅದು ಗ್ರಾಮ್ಯ, ಇಂಗ್ಲಿಷ್ ತಿಳಿದವರಿಗೆ ಬರ್ಬರ (ಬಂಕಿ. X. ಮುನ್ನುಡಿ). ೩. ನೇರವಾಗಿ ಅರ್ಥವಾಗದುದು ; ಅಸ್ಪಷ್ಟವಾದುದು : ಸಕ್ಕ ಪಱಿಪೀಠದೊಳ್ ಕುಳ್ತಿರಲ್ ಕೇಳ್ದೆ ನಾನ್ ಪಕ್ಕಿಗಳ್ ಕರಳ್ಕುಱುದಿ ಪುರ್ಬಿಂದೆ ಬೀಱುಡುವ ಬರ್ಬರದ ಮಱಿನುಡಿಯನ್ (ಅಂತಿಗು. ೪೩-೪೨೩). ೪. ಹಳದಿಬಣ್ಣದ ಶ್ರೀಗಂಧ : "ಹರಿಚಂದನಂ ಮತ್ತೆ ಬರ್ಬರ ಮಕ್ಕು" (ಕಂಗಾ. ೪೯-೨೨). ೫. ಒಂದು ಬಗೆಯ ಗಂಧಕದ್ರವ್ಯ ; ಗೋರೋಚನ : "ಪೂತಿಗಂಧಃ — ಗಾಧಕ, ಬರ್ಬರ" (ಅಭಿ. ೦೦೩). ೬. ಒಂದು ಬಗೆಯ ಗಿಡ ; ಅಜಗಂಧಿಕೆ ; ನಾರುಂಬೇಳೆ : "ಬರ್ಬರಾ . . . ಅಜಗಂಧಿಕಾ — ೫ ನಾರಂಬ್ಯಾಳೀಗಿಡದ ಹೆಸರುಗಳು" (ಕಿಕ್ಶ್ಯಾಶ. ೦೪೪). ೭. ಮುಳ್ಳಿನಿಂದ ಕೂಡಿದ ಒಂದು ಬಗೆಯ ವೃಕ್ಷ : ಬೊಬ್ಬುಲಿ ; ಜಾಲಿ : ಬರ್ಬರಂ—ಬಬ್ಬುರಂ, ಬಬ್ಬುರಮೆಂದು ನಾಱುವ ಬೇಳೆಯುಂ, ಬೊಬ್ಬುಲಿಯುಮೆಂದು ದೇಶಮುಮಕ್ಕುಂ (ಕಶುಟ. ೬. ೨೬೦ ವೃತ್ತಿ). ೮. ಆರ್ಯರಲ್ಲದವರಿಗೆ ಸೇರಿದ ಒಂದು ದೇಶ ಮತ್ತು ಅಲ್ಲಿಯ ಜನಾಂಗ : ಬರ್ಬರ ಪಾರಸೀಕ ಪಾರಿಯಾತ್ರ ಹಮ್ಮೀರ ಜೂಕ್ಕಾರ ತುರುಷ್ಕ ಮರುಪ್ರಭೃತಿಭೂಪಾಲಕರಿಂ ಭಯಾನಕ ರಸಮುಂ . . . ನೆಗಱುತ್ತುಮಿರೆ (ಚಿಗಿ. ೨-೩೯ ವ) ; ತುರುಕ ಬರ್ಬರ ಪಾರಸೀಕರ ತುರಗವ್ಯಸಾವಿರ ಸಹಿತ ಮೋಹರಿಸಿ ನಿಂದನು ಶಕುನಿ (ಕುಭಾಗ. ೦-೪) ; ನಡೆದುದು ಇತ್ತರಿಬಲ . . . ಬರ್ಬರದ ದೂಹಾರಿ ಜೋನಗ ಮಿಂಧ್ಯ ಚೋಟಕ ಪಾರಶಿಕ ಸಾಂಬ್ರಾಣಿ ಹುರುಮಂಜಿಗಳ ಬಳಿವಿಡಿದು (ಕುಕಾ. ೪-೯-೪). ೯. ನೀಚ ; ಪಾಮರ. ೧೦. ದಡ್ಡ : ತಿಳಿಗೇಡಿ. [ಸಂ.]

ಬರ್ಬರತೆ (ನಾ). ಒರಟುತನ ; ಕ್ರೌರ್ಯ : ಮರದ ಪಟ್ಟಿಗಳಂಥ ಸ್ವಲ್ಪವೂ ಪಾಡಿಲ್ಲದ ಅಚಲವಸ್ತುಗಳನ್ನು ಬಟ್ಟು ಮತ್ತಾವುದರ ಮೇಲೂ

ಆ ಬರ್ಬರತೆಗಳನ್ನೆಲ್ಲಾ ಪ್ರಯೋಗಿಸುವ ಅವಕಾಶ ಆ ದುರ್ಬಲ ವಯಸ್ಸಿನಲ್ಲಿ ನನ್ನ ಸ್ವಾಧೀನದಲ್ಲಿರಲಿಲ್ಲ (ತಿಂರ. II. ೩೦). [ಸಂ. ಬರ್ಬರತಾ]

ಬರ್ಬುರ (ನಾ). ಒಂದು ಬಗೆಯ ಮುಳ್ಳಿನ ಮರ ; ಜಾಲಿ ; ಬೊಬ್ಬುಳಿ : ಮಾಕಂದಶಾಲಿ ಶುಕಶಿಶುವೀ ಕಂದಿದ ಬರ್ಬುರವನು ಸೇವ್ರ್ಪದೆ (ಹಂಶಕ. ೬-೨೪). [ಸಂ.]

ಬರ್ಬೂರ (ನಾ). ಜಾಲಿಮರ ; ಬೊಬ್ಬುಳಿ : ದೀರ್ಘಕ್ಕೆ ಹ್ರಸ್ವಂ — . . . ಬಬರ್ೂರ, ಬಬರ್ೂಲ — ಬೊಬ್ಬುಲಿ, ಬಬ್ಬುಲಿ (ಶಮದ. ೨೬೩ ವೃತ್ತಿ); ಗುರುವೆ ನಿಮ್ಮಂಘ್ರಿಯಂ ಬಿಡಲಾಜ಼ೆನೆಂದೊಱಲುತಿರೆಯುಂತೆ ಗೆಯ್ಯೆಂದು ತಂದೊಂದು ಬಬರ್ೂರಧರಣೀಜದಡಿಯೊಳಗಿರಿಸಿ (ಶಬ್ಬ. ೨-೨೩). [< ಸಂ. ಬಬರ್ೂರ]

ಬರ್ಮ 'ಬೊಮ್ಮ' ನೋ.

ಬರ್ಲು 'ಬಱಿಲು' ನೋ.

ಬರ್ಷಣ 'ಭರಷಣ' ನೋ.

ಬರ್ಹ (ನಾ). ೧. ನವಿಲು ಮುಂತಾದ ಪಕ್ಷಿಗಳ ಗರಿ,_ಸೋಗೆ : "ಕಳಾಪಃ, ಬರ್ಹಃ — ಈ ೨ ಸೋಗೆ" (ಹಲಾಯು. ೪೦-೬೪); ಮದನನ ಪಂಚರತ್ನಮಯಖೇಟಕದಂತಿರೆ ಬರ್ಪ ಬರ್ಹಮಂ ಪದೆದು ನವಿಲ್ಗಳಾಡೆ (ಶಗಂ. ೪-೩೦). ೨. ಎಲೆ ; ಪರ್ಣ; ಪತ್ರ: "ಬರ್ಹಂ, ಪರ್ಣಂ, ದಳಂ, ಪತ್ರಂ,ಪಲಾಶಂ. ಛದನಂ. ಛದಃ— ಈ ೭ ಮರದ ಎಲೆ" (ಹಲಾಯು. ೩೦-೩೦); ಬರ್ಹಂಗಳಿಂದಂ ಪೊರೆದಾಶಾಭಿತ್ತಿಯಂ ತನ್ನಯ ಪಸುರ್ವೆಳಗಿಂ ಪೂಸುತಿರ್ಪಂತೆ ಚೆಲ್ವಾಗಿರೆ ಮುಂದೊಂದು ಲತಾಮಂಟಪ ವನವನಿವೃಂದಾರಕಂ ಕಂಡಂ (ಕಾದಂಬ.೪೪೦). ೩. ಪರಿಜನ ; ಪರಿವಾರ. ೪. ಒಂದು ಬಗೆಯ ಸುಗಂಧದ್ರವ್ಯ : "ಗ್ರಂಥಿಪರ್ಣಂ, ಶುಕಂ, ಬರ್ಹಂ . . . ಕುಕ್ಕುರಂ— ೬ ಸ್ಥಾಣೇಯಕವೆಂಬ ಗ್ರಂಥ.ದ್ರವ್ಯದ ಹೆಸರುಗಳು" (ಸಿದ್ಧಾಂತ. ೦೪೨). [ಸಂ.]

ಬರ್ಹಿ$_1$ (ನಾ). ೧. ಬೆಂಕಿ : ಅಗ್ನಿ. ೨. ಯಜ್ಞ. ಯಾಗಾದಿಗಳಲ್ಲಿ ಬಳಸುವ ಒಂದು ಬಗೆಯ ಮೊನಚಾದ ಹುಲ್ಲು ; ಕುಶ : "ಬರ್ಹಿಃ ಕುಶಂ . . . ದರ್ಭೆಯದು" (ಚುಂಗಡ. ೩೪-೯); ಬರ್ಹಿಗಳ ಹೊಱೆಗಳಿಂ ಸ್ರುಕ್ಸ್ರುವಾದಿಗಳ ಸಂದೋಹದಿಂದೆ . . . ದಕ್ಷನಧ್ವರಶಾಲೆ ಕಣ್ಗೆಸೆದುದು (ತಂಪು. ೩೦-೨೪). [ಸಂ. ಬರ್ಹಿಸ್]

ಬರ್ಹಿ$_2$ (ನಾ). ನವಿಲು ; ಮಯೂರ : ಗಿರಿಯ ತೊಱೆದು ಬರ್ಹಿ ಪುಲ್ಲ ಮೊರಡಿಗೆಳಸಬಹುದೆ (ಶುಭಾದೇ. ೩. ೦೫೨-೩೪೦); ಕೇರುರಗ ಕಪಿ ಕೋಕಿಲನ ಬರ್ಹಿಯ ಸುಧಾಕಿರಣನ . . . ರತ್ನಾಕರನಲೊಂದೊಂದು ಗುಣವಿರಬೇಕು ನೃಪರಿಗೆ (ಅಪ್ಪಾಸ. ೦-೩೪). [ಸಂ. ಬರ್ಹಿನ್]

ಬರ್ಹಿಣ (ನಾ). = ಬರ್ಹಿ$_2$ : "ಕೇಕೀ, ಶಿಖೀ . . . ಬರ್ಹಿಣಃ, ಕಲಾಪೀ, ಸರ್ಪಾಶನಃ, ಮಯೂರಃ, ಶಿಖಾವಳಃ, ಶ್ಯಾಮಕಂಠಃ — ಈ ೧೦ ನವಿಲ್" (ಹಲಾಯು. ೪೦-೬೬); ಜಗತ್ಪ್ರಣೂತ ಭೂತಳಾಧಿನಾಥನರ್ಥಿಸಂಘಾತನವ ಬರ್ಹಿಣಾನಂದಕರಣಪ್ರತ್ಯಗ್ರಜಲಧರಾಗಮಂ (ಸುಕುಮಾ. ೦-೬೪ ವ) ; ಎಳಸುತಿರ್ಪಂ . . . ಉದ್ಯಾನಂಗಳೊಳ್ ಬರ್ಹಿಣಕಚಭರೆಯರ್ಕೇಳಿ ಮೋಳಕ್ಕೆ ನಿಚ್ಚಂ (ಅರಗಿ. ೦-೬೩). [ಸಂ.]

ಬರ್ಹಿಣವಾಹನ (ನಾ). ನವಿಲನ್ನು ವಾಹನವಾಗಿ ಉಳ್ಳವನು ; ಷಣ್ಮುಖ : "ಗೌರೀಪುತ್ರಃ, ಷಣ್ಮುಖಃ . . . ಬರ್ಹಿಣವಾಹನಃ, ಮಹಾಸೇನಃ. ಮಹಾತೇಜಾಃ, ಶರಜನ್ಮಾ (ಚ ಕಥ್ಯತೇ)— ಈ ೨೦ ಕಾರ್ತಿಕೇಯನ ಪೆಸರ್" (ಹಲಾಯು. ೩-೨೦). [ಸಂ.]

ಬರ್ಹಿಣಿ (ನಾ). ಹೆಣ್ಣುನವಿಲು : ಶಾನಾ ಪುರುಷಕೇಕಿ ಬರ್ಹಿಣಿಯ ಸಮ್ಮುಖದಿ ಬರ್ಬರಿತ ಕಲಾಪಮೋಚಕಸಹಸ್ರಂಗಳಂ (ಶಬ್ದಾಂಗ. ೩೪-೦೪೬೬). [ಬರ್ಹಿಣ + — ಇ]

ಬರ್ಹಿರ್ಧ್ವಜ (ನಾ). ೧. ನವಿಲನ್ನು ಪತಾಕೆಯಲ್ಲಿ ಉಳ್ಳವನು: ಷಣ್ಮುಖ. ೨. ಒಬ್ಬ ರಾಜನ ಹೆಸರು; ಮಯೂರಧ್ವಜ : ಇವಂ ಬರ್ಹಿರ್ಧ್ವಜನ ತನುಜನನಸೂಯುಕಂ ಧೀರನು (ಜೈಮಿಭಾ. ೨೩-೦೩). [ಸಂ.]

ಬರ್ಹಿರ್ಮುಖ (ನಾ). ಅಗ್ನಿಯ ಮೂಲಕ ಹವಿಸ್ಸನ್ನು ಸೇವಿಸುವವನು : ದೇವತೆ : ಹವಿರ್ಭೋಜನದ ಬರ್ಹಿರ್ಮುಖರು ನೆರದುದು ನೀರದಾಧ್ವದಲಿ (ತೊರವ. ೦-೬-೪೦). [ಸಂ.]

ಬರ್ಹಿಷ್ಕೇಶ (ನಾ). ಬೆಂಕಿಯ ಅಧಿದೇವತೆ ; ಅಗ್ನಿ [ಸಂ.]

ಬರ್ಹಿಷ್ಠ (ಗು). ೧. ದೊಡ್ಡದಾದ; ಬೃಹತ್ತಾದ. ೨. ದೃಢವಾದ: ಬಲವಾದ. (ನಾ). ೩. ಒಂದು ಬಗೆಯ ಸುಗಂಧದ್ರವ್ಯ ; ಮುಡಿವಾಳ: "ಬಾಲಂ, ಹ್ರೀಬೇರಂ, ಬರ್ಹಿಷ್ಠಂ, ಉದೀಚ್ಯಂ, ಕೇಶಾಂಬುನಾಮ —೫ ಮುಡುವಾಳದ ಹೆಸರುಗಳು" (ಸಿದ್ಧಾಂತ. ೦೪೦). ೪. ಒಂದು ಬಗೆಯ ಸಸ್ಯ ; ಶೈಲಪರ್ಣ; "ಉಶೀರಾವೀರಣ" (ಹಂತಕ. ೨೩೦). [ಸಂ.]

ಬಲ್$_1$, ಬಲಿ$_1$ (ಕ್ರಿ). ಬಲ್ತ, ಬಲಿತ. ಬಲಿದ (ಭೂತಕೃ).ಬಲ್ತು, ಬಲಿತು. ಬಲಿದು (ಭೂತನ್ಯೂ). ೧. ದೈಹಿಕವಾಗಿ ಸಾಮರ್ಥ್ಯವನ್ನು ಪಡೆದಿರು; ಸಮರ್ಥವಾಗಿರು ; ಬಲಿಷ್ಠವಾಗು : ಗೋಮೂತ್ರಮಂಡಲ ಮುಮಮಾಕಾಶಂ ಪೇಜಪತಿಯೆಂಬ ವಿಧಿಗಳೊಳ್ ಬಂದು ನೆಲೆಗಿಡಿಸಲುಂ ಪೊಲಗಿಡಿಸಲುಂ ಬಲ್ಲಂ (ಶಾಂತಿಪು. ೩-೨೩ ವ); ಕೊಳನ ತಡಿಯಲ್ಲೊಂದು ಹೊಱಸು ಕುಳ್ಳಿರ್ದರೇನು ಕಳಹಂಸಿಯಾಗಬಲ್ಲುದೆ (ಬಸವ. ೯೬); ಡೊಂಬನ ಬಿನುಗುನುಡಿಯಂತಿರಲಿ ಬಲ್ಲಡೆ ಪೊನೆಗಣೆಯಲೇ ಮಾತನಾಡು (ಕುಮಾರವ್ಯಾ. ೬-೦೩). ೨. ತಿಳಿ ; ಅರಿ : ಬವರದೊಳೇಂ ಬಲ್ಲಂ ಕರಮೊಪಜಾಗೆಯಲ್ (ಶಂಕರಾ. ೦೨-೩) ; ಸಾವ ಪೊತ್ತನಾವಂ ಬಲ್ಲಂ (ಧರ್ಮಾಮೃ. ೦-೨೦೯); ಬ್ರಹ್ಮ ವಿಷ್ಣು ರುದ್ರರಿವರೆಲ್ಲ ಒಂದು ಬ್ರಹ್ಮಾಂಡದೊಳಗಣ ಬಾಲಕರು ಇವರೆತ್ತ ಬಲ್ಲರು ಲಿಂಗದ ನಿಜವ (ಅಕ್ಕ. ೨-೪). ೩. ವೃದ್ಧಿಯಾಗು; ಹೆಚ್ಚಾಗು; ಅಧಿಕಗೊಳ್ಳು: ಚದುರಿಲ್ಲಿಂದಮ ಪರ್ವಿತೆಲ್ಲ ಜಗತಂ ಜಾಣ್ಪೊಂಗಿದತ್ತಿತ್ತಣಿಂ ಪದುರೀ ತಾಣದೆ ಬಲ್ತುದು (ಕಾಲ. ೬-೩೩). ಬಲಿ$_1$: ೧. ನೀಮಾವಿಗಳ್ ವನಸಿಂಹನ್ಯಾಯದಿಂ ದುರ್ಗದೊಳೆ ಬಲಿದು ನಿಂದಲ್ಲಿ ಬಂದೊತ್ತಿ ಚಕ್ರೇಶನ ತಂತ್ರಂ ನಿಲ್ಕುಂ (ಅದಿಪು. ೦೩-೩೬) ; ಗಜ಼ ಪಾಱಿಲ್ಕೆಲ್ಲ ಕಾಲಮಂ ಬಲಿಯವು (ಕಾದಂಬ. ೦೪೦); ಬೀದಿವೀದಿಗಳೊಳಾರುಮಂ ಸುಟ್ಟಿಯಲೀಯದೆ ಬಗ್ಗಿಸುತ್ತೆ ಬಲಿದು ಕಾವುಗೊಂಡು ಬಳಸಿದ ತಳಾಱನಾಯಕರುಮಂ . . . ಈಕ್ಷಿಸುತ್ತುಂ (ಧರ್ಮಪ.೯-೩೬ ವ) : ಕುಲಗಿರಿಗಳೆಲ್ಲವನೊಂದುನಿವಿಷದಿ ಹೊಳಕಿಹೊಳಕಿ ಬಿಡುವೆನ್ನ ಕುಲಿಶದಂಡವ ಪಿಡಿದೀ ಸಗ್ಗಿಗರ ಪಂಗುಳಿ ಸಹಿತವೆ ಬಲಿದೊತ್ತೆ (ಪ್ರಭುಲಿಂ. ೬-೩). ೩. ಬಲದ ಬಲಿದ ಕಳಕಳವಂ ಕೇಳ್ದು (ಶಾಂತಿಪು. ೦೦-೭೩) ; ಭವಪೂಜೆ ಬಲಿದು ಪುರುಷಾಕಾರವಾದಂತೆ (ಬಸವ. ೩-೦೩೨) ; ಬಲಿದ ತೋಳಿಕೆಗಳ . . . ರ್ಷೂಪಿನ್ಮನ ಬಲೆಗೆ ಸಿಲುಕಿದ ಬಲವನರ್ಜುನದೇವನೀಕ್ಷಿಸಿದ (ಕುಮಾರವ್ಯಾ. ೦೬-೪). ೪. ಹಣ್ಣು, ಸಸ್ಯ ಮುಂತಾದಂವು ಪೂರ್ಣವಾಗಿ ಬೆಳೆ : ಒಂದು ವೃಕ್ಷದಲ್ಲಿ ಹುಟ್ಟಿದ ಫಲ ಮೊದಲೇ ಎಳೆಯದಾಗಿ ತದನಂತರದಿಂ ಪಿಾಱ಼ ಬಲಿದಲ್ಲದೆ ಬೀಜಕಂಕುರವಿಲ್ಲ (ಸರ್ವಜ್ಞ. ೦೦೩-೩೬೦) ; ಪೊಳೆಯಲೇ ಮುರುಡಿಸಲು ಬೇಹುದು ಬಲಿದ ಬಳಿಕದು ನಿನ್ನ ಹವಣೇ (ಕುಮಾರ. ೯-೧೩) ; ಹತ್ತಿಯ ಕಾಯಿಗಳು ಬಲಿತು ಹಣ್ಣಾಗಲಿಕ್ಕೆ ಹೆಚ್ಚು ಕಡಿಮೆ ಎರಡುತಿಂಗಳು ಬೇಕಾಗುತ್ತವೆ (ಹುಂಬಹು. ೪-೨೭). ೫. ದಪ್ಪವಾಗು ; ದೊಡ್ಡದಾಗು : ಲತಾಂಗಿಯ ಜಠರವದು ದಿನದಿನಕೆ ನುಣ್ಪಿಂ ಪೆಂಪುಮಿಂಪುಂ ಕೊನದರ್ಪ ಬಲಿದೊಂಬತ್ತುತಿಂಗಳು ತುಂಬಿ ಸಂದೀಶ . . . ಬೆಳೆದನು (ಬಸವ. ೩-೪). ೬. ಪೆಪ್ಪುಗಟ್ಟು ; ಘನರೂಪವನ್ನು ಪಡೆ : ನೀರು ತಾ ಅನಿಲನಿಂದಲಿ ಬಲಿದು ವಾರಿಕಲ್ಲೆಂದೆನಿಸಿತು (ಶಿವಗೀ. ೩೨-೦೪೪) ; ವಾರಿ ಬಲಿದ ವಾರಿಕಲ್ಲಾದಂತೆ ಶೂನ್ಯವೇ ಸ್ವಯಂಭುವಾಯಿತ್ತು (ಅಪಶಂ.

೦೬೩-೬೪೬) ; ಒಂದೊಂದು ರಜ್ಜುವಿಂ ಕಟಗೊಂದೊಂದಿರ್ದಪುವು ನಾರಕರ ಪಾಪರಜಂ ಮಂದಯ್ಸೆ ಬಲಿದು ನೆಲನಾದಂದದೆ ದುಸ್ಪರ್ಶವಿಷಮನರಕಾವನಿಗಳ್ (ಧರ್ಮಾಪು.೦೦-೨). ೭. ಒರಟಾಗು; ಬಿರುಸಾಗು : ಮೆಲ್ಪುಗೆಟ್ಟು ಬಲಿದಿರೆ ಮೆಯ್ ಕಣ್ ಪತ್ತೆ ಕರಿದಾಗೆ ನಾಲಗೆ ಸತ್ತಪುದಾ ವಾಜಿ (ಅಶ್ವಶಾ. ೬-೪೦) ; ಕರ ಸಡುಗೆ ಮೈ ಬಲಿಯೆ ಹುಬ್ಬುಗಳುಜಿ ಬಿಗಿಯೆ . . . ವೀರಾವೇಶದಲಿ ಮಸಗಿದನು ಕಲಿಭೀಮ (ಕುವ್ಯಾಕ. ೦೨-೦೦). ೮. ಮಲೆ; ಸೊಕ್ಕು : ಗರ್ವಿಸು : ಮದೋದಯದೊಳ್ ದೇವ ಬಾಹುಬಲಿ ಬಲಿದಿರ್ದಂ (ಆದಿಪು. ೧೪-೧೬) ; ಅಳ್ವಲಿಪುಳ್ಳಡಶ್ವಬಲಮಿಲ್ಲ ಭಟಾಶ್ವಬಲಂಗಳುಳ್ಳಡಂ ತೋಳ್ಬಲಮಿಲ್ಲ ಭೃತ್ಯಹಯದೋರ್ಬ್ಬಲಮುಳ್ಳಡ ಮೇರ್ವ್ವಲಗಳಿಲ್ಲವೆಳ್ಸೆಸಗೆಯ್ಯದೇಕೆ ಬಲಿವಪ್ಪ್ರಲೆವರ್ (ಎಕ. VII. ಶಿಕಾ. ೦೬೬-೨೬ ; 1068). ೯. ನಿಲ್ಲು ; ಸ್ಥಿರವಾಗು ; ನೆಲೆಗೊಳ್ಳು : [ನಿಡು] ಜಾಗರದೊಳ್ ತೊಡರ್ದೇಕಪಾದದೊಳ್ ಬಲಿದುಪವಾಸದೊಳ್ ನವೆಂದು ನೋಂಪಿಗಳೊಳ್ ನಿಯಮಕ್ರಮಂಗಳಂ ಸಲಿಸಿದರಂತು ನೋನದೆ ಗುಣಾರ್ಣವನಂ ಪಡೆಯಲ್ಕೆ ತೀರ್ಗುಮೇ (ಪಂಪಭಾ. ೦-೦೬೬) ; ಇದು ಕಲಿಭೀತಿಯಿಂ ಕೃತಯುಗಂ ಬಲಿದಿರ್ದಪುದೆಂಬ ಸಚ್ಚರಿತ್ರದಿನೆಸೆದು . . . ಪೆರ್ಮೆಯಿಂ ವಿದಿಸೆಯೆಂಬುದು ಸಬ್ಬಿನ ರಾಜಧಾನಿಯಾದುದು (ಕಾದಂಪೂ. ೦೩); ಗುರು ಕರುಣದಿಂದೊದಗಿದ ಇಷ್ಟಲಿಂಗದಲ್ಲಿ ವಿಶ್ವಾಸ ಬಲಿದಲ್ಲಿ (ಚೆನ್ನಸಂ. ೦೬-೩೬). ೧೦. ದೃಢಮನಸ್ಕನಾಗು ; ಹಟ ಹಿಡಿ : ಆರು ನುಡಿಯಲು ಸರ್ವಥಾ ಖಳನಾರಿಯನು ಕೈಕೊಳ್ಳನೆಂದೇ ವೀರ ಬಲಿದನು (ಕುವ್ಯಾಅ. ೯-೨೩). ೧೧. ರಚಿತವಾಗು ; ನಿರ್ಮಾಣವಾಗು : ಬಲಿದುದನಿತಕೆ ಕೋಟೆ ಪರಿಖಾವಳಯರಚನೆಯಲಾಳುವೇರಿಯ ಹುಲಿಮುಖದ ಮುಗಿಲಟ್ಟಳೆಯ ಸಾಲುಗಳ ಸೊಗಸಿನಲಿ (ತೊರೆರಾ. ೦-೦೩-೨). ೧೨. ಪ್ರಕಟಗೊಳ್ಳು : ವ್ಯಕ್ತವಾಗು : ಪಂಚಪದಪ್ರಾಸ್ವಿತಂ ಪಂಚಾಕ್ಷರೀಪ್ರಿಯಂ ಪಂಚವರ್ಣಂ ಒಗವೊಡೀ ಬಸಿಬಿ ಶಿಶುವೆಂದು ಪಂಚಿಸದೆ ಪೇಳ್ವಂತೆಯುಯ್ದುತಿಂಗಳಲಿ ನವಮಾಸಚಿಹ್ನಂ ಬಲಿದುದು (ಸಿದ್ಧರಾ. ೦-೩೦) . ೧೩. ಆಕಾರವನ್ನು ಹೊಂದು ; ರೂಪವನ್ನು ತಾಳು : ನೀತಿ ಬಲಿದುದೊ ಶಾಂತಿ ರೂಪಾಯ್ತೊ ಸದ್ಗುಣವ್ರಾತವೇ ಮುನಿಯಾಯ್ತೊ (ಹರಿಶ್ಚಂ. ೩-೬೬) ; ಇಂದುರುಚಿ ಬಲಿದುದೋ ಹರಸ್ಮೇರ ದ್ಯುತಿಯೊಳಾಕಾರವಾಯ್ತೊ . . . ಎನೆ ರಜತಾದ್ರಿ ರಂಜಿಪುದು (ಬಸವಪು. ೦-೩೬). ೧೪. ತುಂಬು ; ಹರಡು ; ವ್ಯಾಪಿಸು : ಹಸನದೀಧಿತಿ ವಿಗೆ ರಜತಗಿರಿ ಪಸುಗಳಭಿನವಮಾಯಿತೆನಲಾಗಸದೊಳೆಲ್ಲೆಡೆಯೊಳು ಬಲಿದು ಬೆಳೆದಿಂಗಳಗ್ಗಳಿಸೆ (ಬಸವಪು. ೦೨-೩೭) ; ಅಂಬರದೊಳೊಮ್ಮೊಮ್ಮೆ ಕಾದುವರ್ ಧರೆಗಿಳಿವುತುಂ ಬಿಡದೆ ಸೆಣಸುವರ್ ಧರೆಯೊಳೂರ್ವರ್ ಗಗನಮಂ ಬಲಿವರೂರ್ವರಿರದೆಚ್ಚಾಡುವರ್ (ಶಂಭು. ೨೩-೨೨) ; ಹೊಲೆ ಬಲಿದ ತನುವಿನೊಳಗಿರ್ದುಮದಱೊಳಗೆ ಕುಲವನ ಜಸುವರೆ (ಸರ್ವಜ್ಞ. ೨೦). ೧೫. ನಿಯಮಕ್ಕೆ ಒಳಪಡು.— ಒಳಗಾಗು : ದೇಗುಲಕೆ ಸಾರದೆ ಹಗಲು ಕಂಬಿಯನಿಳಹದೆಲ್ಲಯುನಿಲ್ಲದಡಿಯಿಡಬಾರದಿಂತಪ್ಪ ಬಲಿದಪಸ್ಥೆಯೊಳಿಯ್ದು ಸಂಕಟಗೊಳಲದೇತಕೆ (ಬಸವಪು. ೪-೦೩). ೧೬. ಕ್ಲಿಷ್ಟವಾಗು ; ದುಸ್ಸಾಧ್ಯವಾಗು : ಬಲಿದು ದಾಹವ ಮತ್ತೆ ಚಾತುರ್ಬಲ ಭಡಾಳಿಸಿ ಕಾದುತಿರ್ದುದು ಮುಳಿದು ಶಲ್ಯನ ಕೊಡೆ ಪಂಚಪಾಂಡವದೀಸುತರು (ಕುವ್ಯಾಶ. ೩-೩೦). ೧೭. ಮುಚ್ಚು; ಬಂಧಿಸು : ಕೆಟ್ಟೆನಕಟಾ ಎಂದು ಮನದೊಳಗೆ ಮಱುಗುತ್ತ . . . ಎದ್ದು ತಾ ಕವಾಟವ ಬಲಿಯ (ಹರಿಶ್ಚಂ. ೨-೩೪). ೧೮. ಚುಚ್ಚು ; ನಾಟು : ಆ ಕರಸ್ಥಲವೆಂಬ ರಥಕ್ಕೆ . . . ದಶವಾಯುಗಳೆಂಬ ಪಾಶಮಂ ಬಂಧಿಸಿ ಷಡಂಗಗಳೆಂಬ ಮೊಳೆಗಳಂ ಬಲಿದು (ಅನುಭ. ೨೬೦-೦೦೬೬) ; ಲಲನೆಯರುಪಚಾರದ ನುಡಿ ಕಿವಿಯೊಳು ಬಲಿದ ಬಲ್ಲೆಹವಾಯಿತಾಗ (ಶಂಕರ. ೯-೦೬೩). ೧೯. ಹೆಚ್ಚಿಸು ; ವೃದ್ಧಿಗೊಳಿಸು : ರಕ್ಕೆಯಾಳ್ಗಳೀಂ ಲಕ್ಕಿಸಿ ನೋಡಿ ಕಲಿಂಬರೆಂಬುದನಱಿದು ನಾಡೆಯುಂ ನಲಿದು ಮೆಲ್ಲ ಮೆಲ್ಲನೆ ತನ್ನ ಬಲಮಂ ಬಲಿದು (ಧರ್ಮಾಪು. ೨-೩೪ ವ) ; ಪೊಳಲ ಪೆರ್ಬಾಗಿಲ್ಗಳಿಕ್ಕಿದವು ಕೋಟೆಕೊತ್ತಳದ ಕಾವಲ್ಗಳು ಬಲಿದರಲ್ಲಲ್ಲಿ ಗಜಬಜವಾಯ್ತು ನಗರದೊಳಗೆ (ಕೃಷ್ಣರಾ . ೯-೦೬) ; ಬಳಸಿಹ ರಿಪುನೃಪಮನ್ನೆಯರಿವರಗ್ಗಳೆಗೆ ಕಂಗೆಟ್ಟಾಗ ಇಳೆಯಾಳ್ವ ತಿರುಮಲರಾಜನ ಮಱೆ ಹೊಕ್ಕು ಮುಳಿಸ ಬಲಿವರಾತನಿಗೆ (ಕಂಠೀರ. ೩-೦೪). ೨೦. ಬಿಗಿಗೊಳಿಸು ; ಬಿಗಿಯಾಗಿ ಜೋಡಿಸು : ತನ್ನ ಕಮ್ರ್ಮ ಕಳಶಮಂ ಬಳ್ಳಿಯೊಳ್ ಒಟ್ಟು ನೀರಂ ತೆಗೆವಾಗಳದಂ ಪುಲಿ ಪಿಡಿದು ನೇಲ್ದುದುಮದು ಕಯ್ಗೆ ಬಿಣ್ಣಿತಪ್ಪುದೊಡದು ನೋಟ್ಪೆನೆಂದು ಬಲಿದು ಪಿಡಿದು ಮೆಲ್ಲನೆ ತೆಗೆಯೆ (ಪಂಚತಂ. ೦೦೯-೩) ; ಸೂತ್ರದ ಕೀಲ್ಗಳಂ ಬಲಿದು ಕ್ರಮದಿನಾಡಿಪ ಬಡಗಿ ತಾನೇ (ಬಸವಪು. ೨೦-೨೯); ತಡಿಯ ಬಲಿಸುವ ಗುಳನ ಜೆಂಚಿಗು ಗಡಣಿಸುವ ಹಕ್ಕರಿಕೆಗಳನಾಯ್ದಡಸಿ ಹೊಲಿಸುವ ಕಬ್ಬಿಗಳ ಕೊಂಡಿಗಳ ಮಿಗೆ ಬಲಿವ. . . ಬೆಟ್ಟದ ಗಾಲಿಗಟ್ಟನು ತೊಡಿಸುತಿರಲು (ಕುವ್ಯಾಅ. ೩-೬೭) ; ಬಲಿದು ಮಕುಟಾವಳಿಯ ಶೋಣಿತಪಳಿಯ ರಕ್ಕಸದೇಶಿಯಲಿ ಬಿಗಿದೆಳೆವ ಹಾಹೆಯನೋಜೆಗೊಳಿಸಿಕ್ಕಲಿಸಿ ಪದಯುಗವ (ತೊರೆರಾ. ೧-೦೩-೦೯). ೨೧. ಗಟ್ಟಿಗೊಳಿಸು : ತನ್ನ ಕೆಳದಿಗೆ ಪೇಟ್ದು ಮನಮಂ ಬಲಿದು ತನ್ನಂ ತಾನೆ ಸಂತಯಿಸಿದಳ್ (ಶಾಂತಿಪು. ೬-೦೦೭ ವ) ; ಧನುವನೊದಱಿಸಿ ಸಕಲಸುಭಟರು ಮನವ ಬಲಿದೊಗ್ಗಾಗಿ ಸರಳಿನ ಜಿನುಗುವಳೆಯಲಿ ನಾದಿದರು ನಾರಾಯಣಾರ್ಜುನರ (ಕುವ್ಯಾದ್ರೋ. ೦೯-೩೦). ೨೨. ಭದ್ರಪಡಿಸು ; ಸುರಕ್ಷಿತಗೊಳಿಸು : ಉಗ್ರಸೇನನೆಂಬ ದಂಡಾಧಿಪಂ ಕೋಂಟೆಯುಂ ಬಲಿದು ಕಾದುವ ಸಮಕಟ್ಟಿಂದಿರ್ಪುದುಂ (ಧರ್ಮಾಮೃ. ೪-೨೪೦) ; ಅಂದು ಚಕ್ರವ್ಯೂಹವನು ನಲವಿಂದ ಬಲಿದನು (ಕುವ್ಯಾದ್ರೋ. ೯-೦೯) : ಜಲಧಿ ಮೇರೆಯ ಮೀಱಿ ಕಟ್ಟೆಯ ಬಲಿದು ತಡವವರಾರು (ಉತ್ತರಾ. ೬-೩೯). ೨೩. ನೆಲೆಗೊಳಿಸು; ಸ್ಥಾಪಿಸು : ಪಶ್ಚಿಮಪದ್ಮಾಸನದಲ್ಲಿ ಕುಳ್ಳಿರ್ದು ನಿಟ್ಟೆಲುವ ನೆಟ್ಟನೆ ಮಾಡಿ ಅಧೋಮುಖಕಮಲವ ಬಲಿದು ಊರ್ಧ್ವಮುಖವ ಮಾಡಿ (ಚನ್ನಬ. ೪. ೪೨೬-೯೯೯) ; ಮನಕಲಿತ ಪ್ರಾಣಮಂ ಹೃದ್ದೇಶದೊಳು ಬಲಿದು ವನಜಬಾಂಧವ ಪ್ರತೀಕಾಶವವನದೆ ವೀರವನು ತುಳುಕಿ ತನುವನೊಸೆದಡೆ ಶೈಲಸೆಳೆಮಂಚದಂತಾದುದು (ಪಂಪಾಶ. ೩-೧-೦೦). ೨೪. ನಿಗ್ರಹಿಸು ; ಸಂಯಮಿಸು ; ತಡೆ : ಬಿಂದುವನು ಬಲಿದಾತ ವಂದ್ಯನಹ ಜಗಕೆಲ್ಲ (ಸರ್ವಜ್ಞ. ೪೦೨). ೨೫. ಪ್ರವೇಶವಿಲ್ಲದಂತಾಗು ; ಮುಚ್ಚಿಹೋಗಿರು : ಆ ಕಡೆಗೆ ಹೋಗುತಿರೆ ಗೋಪುರದಾ ಕದವು ಕಡುಬಲಿದಿರಲು ನಿವ್ಯಾಕುಲರಿಗಾಕುಲತೆ ತೋಱಿದುದು (ಸಾಳ್ವಭಾ. ೨೦-೦೦). ೨೬. ನೆರವೇರಿಸು ; ಪೂರ್ಣಗೊಳಿಸು : ಕಳಿದುದೊಂದಪಮೃತ್ಯುವೆನೆ ನೃಪತಿಲಕ ನುಡಿದನು ನಿನ್ನ ಭಾಷೆಯ ಬಲಿದೆ ನಿನ್ನಯ ಬಿರುದ ಸಲಿಸಿದೆ ನಮಗಿದೇನೆಂದ (ಕುವ್ಯಾದ್ರೋ. ೦೩-೩). ೨೭. ಪ್ರಚೋದಿಸು ; ಉತ್ತೇಜಿಸು : ಏಳು ತಾಯೆ ಸರೋಜಮುಖಿ . . . ನಿನ್ನವರಾಳೆಗೊಂಡಂದವನು ಬಲ್ಲೆನು ನಿನ್ನ ಹರಿಬದಲಿ ಕಾಳೆಗವನೇ ಬಲಿದು ತಹೆನು (ಕುವ್ಯಾಅ. ೬-೦೨).

ಬಲ್ಲ₁ = ತಿಳಿದವನು ; ಚತುರ ; ಜಾಣ : ತಡೆಯದೆ ಮಹಾಧ್ಯಕೃತಿಗಳನೊಡರಿಸಲಾಪರ್ಗತನೆಲ್ಲರಿಂದಂ ಬಲ್ಲಂ (ಶಬ್ದಮ. ೦-೦೬) ; ಬಲ್ಲರಿಂದಾನು ಕೇಳಿದುದಕೆ ಪೆರ್ಚು ಕುಂದಿಲ್ಲದಂತಚ್ಚುಗೂಡಿ . . . ಸೊಲ್ಲಿಸುವೆನು (ಶಬ್ದಸಾ. ೦-೪೪). ಬಲ್ಲಂತಿಕೆ = ತಿಳಿವಳಿಕೆ ; ಅರಿವು : ಬೇಡಿದಿಷ್ಟವ ಕೊಟ್ಟಾತನು ಭೂತವೋ ಆತ್ಮನೋ ಬಲ್ಲರೆ ನೀವು ಹೇಳಿರಣ್ಣಾ ನಿಮ್ಮ ಜ್ಞಾನದ ಮುಸುಕ ತೆಱೆದು ನಿಮ್ಮ ಬಲ್ಲಂತಿಕೆಯ ಕಾಣಬಹುದು (ಸಕಲೇಶ. ೬೯-೪೩೪). ಬಲ್ಲತನ = ೧. ಶಕ್ತಿ ; ಸಾಮರ್ಥ್ಯ : ತನ್ನ ಮುನ್ನಿನ ನಲ್ಲರೂಪನೆ ತಾಳ್ದು ನಿನ್ನೊಳು ಬಲ್ಲತನಮಂ ನೋಡಲೆಂದಿಂತಾದೆ ನಾನು (ಬಸವಪು. ೨೦-೩). ೨. ತಿಳಿವಳಿಕೆ ; ಜ್ಞಾನ : ಕಲ್ಲು ಮಾಣ್ಕ

ಮರದಲ್ಲಿ ದೇವನಿದ್ದಹನೆಂದು ಎಲ್ಲಿಯೂ ತೊಳಲುತಿಪ್ಪ ಅಣ್ಣಗಳು ಕೇಳಿರೊ ಅದನಲ್ಲಲ್ಲಿಟ್ಟು ಬಲ್ಲತನದ ಕುಜುಹಲ್ಲದೆ ಸೊಲ್ಲಿಂಗತೀತನಜಿಯ (ಷಟ್‌ಸ್ಥಲ. ೨೪-೬೨) ; ಇದೇಂ ಬಲ್ಲಹನವೇ ಪೆಂಪೆ ಗರುವಿಕೆಯ ಗಂಭೀರ ವೃತ್ತಿಯೋ (ಕದ್ಮರಾ. ೩-೩೦). ಬಲ್ಲರ ಬಲ್ಲಹ = ಶೂರರಲ್ಲಿ ಶೂರ ನಾದವನು : ಅಂಗಡಿವೀಧಿಯೊಳಿಸಿದೆಯ್ಯಂದಂ ತನ್ನೊಡನೆಯ್ದುರೆ ಪರಿವಿಾತಮಿತ್ರಾವಳಿ ಬಲ್ಲರ ಬಲ್ಲಹನು (ಜಗನ್ನಾ. ೦೯-೨೦). ಬಲ್ಲಿಕೆ = ತಿಳಿದಿರುವ ವಿಷಯ : ಶಿರವಸ್ತ್ರದ ರೀತಿಯೊಳು ಪೇರುರಿಕೆ ತವಿತಿವಿನಾಂಕುವದು ಬಲ್ಲಿಕೆ ಪ್ರಾಜ್ಞರಿಗರಿಯದೀಗವರಲ್ಲಿ ಕದನವನು ನೆರೆವೆನೆಂಬುದ ಮರೆ (ಜಸಕಾ. ೩೬-೯೩). ಬಲ್ಲರೊಳ್ ಬಲ್ಲಹ = ಬಲ್ಲರ ಬಲ್ಲಹ : ಬಿರುದೆಂತೆಂಬರ ಗಂಡನಪ್ರತಿಮವೀರಂ ಬಲ್ಲರೊಳ್ಬಲ್ಲಹಂ (ಅಕ್ರೂ. ೦೩-೯). ಬಲ್ಲವ₁ = ತಿಳಿದವನು; ಜಾಣ: "ಚತುರಃ ಕ್ಷೇತ್ರಜ್ಞಃ . . . ಪ್ರವೀಣಃ - ಈ ೧೧ ಬಲ್ಲವಂ "(ಶಬ್ದಾನು. ೩೩-೧೬೦); ಕೆಲವಂ ಬಲ್ಲವರಿಂದ ಕಲ್ತು ಕೆಲವಂ ಶಾಸ್ತ್ರಂಗಳಂ ಕೇಳುತಂ . . . ಸರ್ವಜ್ಞನಪ್ಪಂ ನರಂ (ಸೋಮೇಶ. ೦): ಬಲ್ಲವನೇ ಬಲ್ಲ ಬೆಲ್ಲದ ಸವಿಯ (ಗಾದೆ). ಬಲ್ಲವಿಕೆ = ಬಲ್ಲತನ : ನೀವವುಗೆ ಹಿಂದು ಬಲ್ಲವಿಕೆಯಲಿ ವಾಕ್ಯಾತುರಿಯವನು ರಚಿಸಿದೊಡೆ ನಂಜುಗೆ ದೊರಕುವುದೆ ನಮಗೆ (ಕೃಶಂಕ. ೦೨-೦೬); ಭಾವಾಜಿ ನಿನ್ನ ಚಿತ್ತದ ನಾವು ನೋಡಿಯೊಪುದಾವ ಬಲ್ಲವಿಕೆ (ಚೆಕ. ೩೩-೯೬). ಬಲ್ಲವಿಕೆತನ = ಬುದ್ಧಿವಂತಿಕೆ : ಜಾಣ್ಮೆ : ಇವಳ್ಬಲ್ಲ ಗರ್ವವ ಮುಜಿಯದಿರ್ದಡೆ ಸಲ್ಲದೆನಗೀ ಪೆಸರೆನುತ್ತಲಿ ನಿಲ್ಲಿಸಲು ಗಜವ ಬಲ್ಲವಿಕೆತನವಲ್ಲವರಸಿನವುಲ್ಲಸವ ವನಕೇಳಿಗೆಡರಹುದಲ್ಲ ನಮಗಿದು ನೀತಿಯಂದವಳದೊರ್ವ ನೆಜೆ ಜಣೆ (ನಾಗಿಕ. ೯-೨೨).

[ದೇ.॥ ತಮಿ. ವಲಿ, ವಲ್ಲು ; ಮಲ. ವಲ್ಲುಕ; ತುಳು. ಬಲಾಪಿನಿ; ತೆಲು. ಬಲಿಯು]

ಬಲ್₂. ಬಲು (ಸಪೂರೂ). 'ಬಲ್ಲಿತು' ಎಂಬುದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ. ೧. ಬಲಯುಕ್ತ; ಶಕ್ತಿಯುತ: 'ಬಲ್ಗೆಯ್' ಪರಾ. ೨. ದೊಡ್ಡ; ದಪ್ಪ : 'ಬಲ್ದಲೆಯ' ಪರಾ. ೩. ಬಹಳ; ಅಧಿಕ; ಅತಿಶಯ: 'ಬಲ್ಮಣ್ಣ', 'ಬಲಿರ್ದ್ಬದು' ಪರಾ. ೪. ವಿಶಾಲವಾದ: ವಿಸ್ತಾರವಾದ: 'ಬಲ್ದೊಡಿ' ಪರಾ. ೫. ಗಾಢವಾದ; ದಟ್ಟವಾದ; 'ಬಲ್ಗತ್ತಲೆ', 'ಬಲ್ಲಡವಿ' ಪರಾ. ೬. ಜೋರಾದ; ಅಬ್ಬರದ: 'ಬಲ್ದನಿ', 'ಬಲ್ಸರ' ಪರಾ. ೭. ಒತ್ತಾಯದಿಂದ ಕೂಡಿದ; ಬಲಾತ್ಕಾರದ: 'ಬಲ್ಮೆ' ಪರಾ. ೮. ಬಿರುಸಾದ : ಒರಟಾದ : 'ಬಲ್ನುಡಿ' ಪರಾ. ೯. ಬಿಗಿಯಾದ; ದೃಢವಾದ : 'ಬಲ್ಗಣ್ಣ' ಪರಾ. ೧೦. ಕೊಬ್ಬಿದ; ಬಲಿಷ್ಠವಾದ: 'ಬಲ್ಗಜಿ', 'ಬಲ್ಗೂಳಿ' ಪರಾ. ೧೧. ಸಮರ್ಥನಾದ; ದಕ್ಷನಾದ : 'ಬಲ್ಮಂತ್ರಿ', 'ಬಲ್ಮಾವಂತ' ಪರಾ. ೧೨. ಗಡುಸಾದ; ಗಂಭೀರವಾದ : 'ಬಲ್ಗೂಗ' ಪರಾ. ೧೩. ಗಟ್ಟಿಯಾದ; ಸಾಂದ್ರವಾದ : 'ಬಲ್ಮೊಸರ್' ಪರಾ. ೧೪. ಶ್ರೇಷ್ಠವಾದ; ಉತ್ತಮವಾದ : 'ಬಲ್ಲಡಗು' ಪರಾ. ಬಲು : ೧. 'ಬಲುಗಣೆ' ಪರಾ. ೨. 'ಬಲುಗುಂಡು' ಪರಾ. ೩. ಹಣಮುಳ್ಳಂ ಹೆಣನಾದೊಡಂ ಮುಮತೆಯಿಂ ತಾನಾವಗು ಬಟ್ಟೆರಳ್ ಕ್ಷಣಮಾತ್ರಂ ಬಲುಬೂಟಕಂ ಗಟಪ (ಸೋಮೇಶ. ೬೨); ಹುಲಿಮುಖ ಬಲುಭಯಹೊಕುರವ ಬೀಜುವ್ವವು (ಕಂಶಕ. ೨-೬೨). ೪. 'ಬಲುಗಡಲು' ಪರಾ. ೫. 'ಬಲುಗತ್ತಲೆ', 'ಬಲುಗೆಂಪು' ಪರಾ. ೮. 'ಬಲುಬಿದಿರು' ಪರಾ. ೧೪. ಪರದೇವತೆಯೆಂದು ಭಕ್ತಿಗೈವುದು ಬಲುದೊರೆಯೆಂದುಪಚರಿಸುವುದು (ಹಾಬಿ. ೩-೪೦). ೧೫. ಉಗ್ರವಾದ : 'ಬಲುಬೇಸಗೆ' ಪರಾ. [< ಬಲ್ಲಿತು₁]

ಬಲ₁ (ನಾ). ಎಡಭಾಗವಲ್ಲದುದು; ದಕ್ಷಿಣ ಪಾರ್ಶ್ವ: "ಅಪಸವ್ಯಂ, ದಕ್ಷಿಣಂ – ಈ ೨ ಬಲಂ" (ಶಬ್ದಾನು. ೦೨೯-೬೧); ಬಲದ ಕಯ್ಯೊಳ್ ಭೈಕ್ಷದ ಭಾಜನವಂ ಪಿಡಿದು ತೊಟಲ್ವ ಭೈಕ್ಷವಂ ಬೇಡಿ ಮಡಗಿಟ್ಟು ಪಗಲುಣ್ಬಂ (ಕಮ್ಮಾರ. ೯೨-೦೬); ಬೇಡಿದೊಡೆ ಬಲದ ಬರಿಯುವಮ ನೀಡಾಡುಗುವುದುಗಿದು ಕರ್ಣ (ಕಂಶಕ. ೦-೦೦೦); ಇದಿರೊಳಾನಿಹೆ ಶಲ್ಯ ನೆಡವಂಕದಲಿ ಬಲದಲಿ ಕೃಪನಪರಭಾಗದಲಿ ನೀ ಬಂದೆಸು ಕುಮಾರನ ಕರದ ಕಾರ್ಮುಕವ (ಕುಮಾರವ್ಯಾ. ೬-೨೪); ಅಳುವವನ ಎಡಕ್ಕಿರಬೇಡ, ಹೊಲಿಯುವವನ ಬಲಕ್ಕಿರಬೇಡ (ಗಾದೆ).

ಬಲಗೊಡತಿ = (ಮದುವೆಯಲ್ಲಿ) ಹೆಣ್ಣಿನ ಬಲಭಾಗದಲ್ಲಿ ಜೊತೆಯಾಗಿರುವವಳು. ಬಲಗೊಡೆಯ = (ಮದುವೆಯಲ್ಲಿ) ಗಂಡಿನ ಬಲಭಾಗದಲ್ಲಿ ಜೊತೆಯಾಗಿರುವವನು : ಹಾಳುನಾಯಿ . . . ಇದೊಂದು ಯಾವಾಗಲೂ ನನ್ನ ಬಲಗೊಡೆಯ, ಬಸವನ ಹಿಂದೆ ಬಾಲ ಬಿದ್ದಂಗೆ (ಕುರಿಮ. ೩೬೨). ಬಲದ = ದಕ್ಷಿಣ ಪಾರ್ಶ್ವದಲ್ಲಿರುವವನು : ಬಲಮಗ್ಗುಲಲ್ಲಿರುವ ವ್ಯಕ್ತಿ : ದಕಾರಕ್ಕೆ ಕೆಲದಂ, ಬಲದಂ, ಅಲ್ಲಿದಂ, ಇಲ್ಲಿದಂ, ಎಲ್ಲಿದಂ (ಕಮನ. ೦೦೦) ಕ್ರ.ಹೂ. ಬಲದ ಕಯ್ = ಬಲಗಡೆ; ಬಲಭಾಗ; ಬಲಪಕ್ಕ: ಎರಡುಂ ಬಲದ ವೀರಭಟರ್ಕಳೊಟ್ಟು ಪೊಣಮುಟ್ಟು ಬಿಲ್‌ವಿಲ್ಲಳ್ ಕುದುರೆ ಕುದುರೆಯೊಳ್ ಕಿಟ್ಟಿ ಅತಿತುಮುಲಕಾಳಗ ಪಟ್ಟ ಬಲದ ಕಯ್ಯಂ ಚಿತ್ರವಾಹನನೊತ್ತಿ ಪುಗುತ್ತಿನ್ನು ಕಾದಿಸೆ ಕಣ್ಣು ಕುಲಮುದ್ದ ನೀನೀ ಕಯ್ಯ ಪೊಕ್ಕು ಕಾದೆನ್ದು ಬೆಸಸೆ (ಎಕ. VIII, ಸೊರಬ. ೦೦-೬; ಸು. ೬೦೦). ಬಲದ ಕಯ್ಯ ಭಂಡಾರ = ಬಲಗೈ ನೀಡಿದೊಡನೆಯೇ ಹಸ್ತಗತವಾಗುವ ಐಶ್ವರ್ಯ ; ಒಂದು ಬಿರುದು : ಬಸವಯ್ಯ ದಂಡನಾಯ್ಕರು ರಾಜ್ಯವ ಪ್ರತಿಪಾಲಿಸುವ ಕಾಲದಲು ಅವರ ಬಲದ ಕಯ್ಯ ಭಂಡಾರವೆನಿಪ ಗಣಪತಿಯ ವಿಷ್ಣುವರ್ದ್ಧನಪ್ರತಾಪಹೊಯಿಸಳ ಭುಜಬಳ ದೇಶದೊಳಗೆ ಕಾವೇರಿಯ ದಕ್ಷಿಣಭಾಗದ ಅಧಿಕಾರವ ಮಾಡುವ ಕಾಲದೊಳು (ಎಕ. IV(R). ಕಾಮನಾ. ೨೬೦-೬ ; 1368) ; ಶ್ರೀಮನ್ಮಹಾಪ್ರಧಾನಂ ಮಗಪ್ಪದಣ್ಣಾಯಕರ ಬಲದ ಕಯ್ಯ ಭಂಡಾರವೆನಿಪ ಅಚಂಣ ಪೊಡೆಯಾರು ಹೊಇಸಳದೇಶವನಾಳುತಿವ್ವಲ್ಲಿ (ಎಕ. IV(R). ಕಾಮನಾ. ೨೬೧-೯; 1397). ಬಲವಾಗು = ಬಲಭಾಗಕ್ಕೆ ಬರು ; ಬಲಕ್ಕೆ ತಿರುಗು : (೬);

[ದೇ.॥ ತಮಿ. ಮಲ. ವಲವು ; ತುಳು. ಬಲತ್ ; ತೆಲು. ವಲ, ವಲನು ; ಕೋತ. ವಲ್ ; ಪರ್ಜಿ. ವಲ]

ಬಲ₂ 'ಮಲ್ಲ₁' ನೋ.

ಬಲ₃. ಬಳ₃ (ನಾ). ೧. ಪರಾಕ್ರಮ; ಕಸುವು ; ಶಕ್ತಿ ; ಸಾಮರ್ಥ್ಯ : "ಪ್ರಾಣಃ, ಸ್ಥಾಮ, ಬಲಂ . . . ತರಃ, ಸಹಃ– ಈ ೮ ಬಲ್ಪು (ಬಲುಹು)" (ಶಬ್ದಾನು. ೦೨೦-೪೮) ; ತ್ರಿದಶ ನರಾಸುರೋರಗಾ ಪ್ರಭು ನಿಶ್ಚಿತ ತತ್ತ್ವಯೋಗಿ ಯೋಗದ ಬಲವಾಣ್ಮೆ ಪೊಣ್ಮೆ ಸಿರಿ (ಕಂಶಕಾ. ೦-೬೩) ; ಬಲದಿ ಕುತ್ಸಿತದಾನದ ಫಲದಿಂದೆತ್ತಾನುಮೂರ್ವ ಸಿರಿ ಸಮನಿಸುಗುಂ (ಧರ್ಮಾಮೃ. ೦೦-೬೦). ೨. ಸೈನ್ಯ ; ದಳ ; ಪಡೆ : "ಸೇನೆ ಧ್ವಜಿನಿ ವರೂಥಿನಿ . . . ಬಲಂ ಚಮುವೆಸಲು ಪಡೆಗೆ ನಾಮಂ" (ರಂಗನಿ. ೬೬-೨೯) ; ಅಗ್ಗಳಾಅರಸರಾ ಬೆಸಸಿದೊಡೆ ಬೆಸನ ಪೆತ್ತಬ್ಬೆ ಬಲವಾನಾಳ್ದಿ ಎಱೆದು ಬಿಟ್ಟರ್ (ಎಕ. X (R), ಕೋಲಾರ್. ೯೬-೬ ; ಸು. ೯೨೦) ; ಅಱಿಯಂಬಲೀ ಗಳ್ಳಿರಸೊದವಿದ ಸಂಗ್ರಾಮಸಂರಂಭದಿಂದ ಬಗೆಯಾ ಪ್ರಾಣಪ್ರಿಯಸ್ತ್ರೀಜನತನಯ ಧನವ್ರಾತದೊಳ್ ಮಾಡದಾರ್ತಾಟಿಗೆ ಬಂದೊಡ್ಡಲ್ಕೆ (ಅಣ್ಣ. ೦೯-೬೨) : ಆ ಮೋಹರದ ಜೋಕೆಯ ಹಿಂದೆ ಲಕ್ಷಕಳಂಗಘಟೆಗಳು ಸದೆಣಿಸಿದವು ದ್ರೋಣ ನಿಂದನು ಬಲದ ಕಾಹಿನಲಿ (ಕುಮಾರವ್ಯಾ. ೨-೨೨). ೩. ಪ್ರಭಾವ ; ವರ್ಚಸ್ಸು : ನಿನ್ನ ದಯೆಯಿಂದವಾಂನ್ನವರನ್ನೆಜೆ ಕೊಂದೆವಾಗೆ ಸಕಳರಾಜ್ಯಶ್ರೀಯುಂ ನಿನ್ನ ಬಲದಿಂದೆ ಸಾರ್ದುದು (ಕಂಶಕಾ. ೦೯-೪೬) ; ಜ್ಞಾನದ ಬಲದಿಂದ ಅಜ್ಞಾನದ ಕೇಡ ನೋಡಯಾನ

ಜ್ಯೋತಿಯ ಬಲದಿಂದ ತಮಂಧದ ಕೇಡ ನೋಡಯ್ಯ, ಸತ್ಯದ ಬಲದಿಂದ ಅಸತ್ಯದ ಕೇಡ ನೋಡಯ್ಯ (ಅಕಪ. ೪೯೦). ೪. ನೆರವು; ಸಹಾಯ: ಕೋಪದಲು ರೇಣುಕೆಯು ಭೂಪನ ಕೋಪವನು ನೆಱೆ ಕಂಡು ಬೇಗದಿ ಮಾಪತಿಗೆ ಬಲವಾಗಿ ಬಂದಳು ರಾಮನಿದ್ದೆಡೆಗೆ (ಕುಂಕಕ. ೨೩-೨೦). 'ಜನಬಲ' ಪರಾ. ೫. ಕೃಷ್ಣನ ಅಣ್ಣನಾದ ಬಲರಾಮಂ; ಬಲಭದ್ರ: "ಬಲನೇಕಕುಂಡಲಂ . . . ಕಾಮಪಾಳಂ ರಾಮಂ" (ಶಬ್ದಮ. ೩-೨೩); ಪಲವುಂ ಪ್ರಕಾರದಿಂದಂ ಪ್ರಲಾಪಿಸುತ್ತುಂ ಗುಣಾಂಗಳಂ ಗಣಿಯಿಸುತಂ ಬಲನನುಜಸ್ನೇಹದೆ ವಿಹ್ವಲತೆಯನೆಯ್ದಿರ್ದ ನವನಿಯೊಳ್ ಬಿದ್ದಾಗಳ್ (ಶಾಂತೀಶ. ೯-೩೬); ದಾಡೆಗಳಿಂದ ಕಂಠೀರವ ಮದದಂತಿ ಕೋಡುಗಳಿಂದಲೆಂತಂತೆ ಕೂಡಿದ ಬಲ ನಾರಾಯಣರಿಂದಲಿ ನಾಡೊಡೆಯನು ರಂಜಿಸಿದನು (ಜಗಕ. ೯-೫೦). ೬. ಆಕಾರ; ಆಕೃತಿ; ರೂಪು. ೭. ಇಂದ್ರಿಯ; ವೀರ್ಯ; ರೇತಸ್ಸು: "ಶುಕ್ಲಂ, ವೀರ್ಯಂ, ಬಲಂ, ಬೀಜಂ, ಇಂದ್ರಿಯಂ, ರೇತಃ – ಈ ೬ ಇಂದ್ರಿಯಂ" (ಹಲಾಯು. ೦೦೩-೦೬). ೮. ಕಾಗೆ: "ಕಾಗೆ ಯಲ್ಲಿಯುಂ ಬಲನೆಂಬುದು" (ಹಲಾಯು. ೦೩೩-೩೬). ೯. ಇಂದ್ರನಿಂದ ಹತನಾದ ಒಬ್ಬ ರಾಕ್ಷಸನ ಹೆಸರು: 'ಬಲದಲನ' ಪರಾ. ೧೦. ಭದ್ರ; ಬಿಗಿ; ಗಟ್ಟಿ: ಅವನು ಓಡಿಹೋಗದಂತೆ ಬಲವಾಗಿ ಹಿಡಿದುಕೊಂಡರು (ಲೋಕ). ೧೧. ಒಬ್ಬ ನಿಘಂಟುಕಾರನ ಹೆಸರು: ನಿಜಗೋಪಾಲ ಧನಂಜಯ . . . ಅಮರ ಶಬ್ದಮಂಜರಿ ಬಲಾದ್ಯುಕ್ತಾಭಿಧಾನಾರ್ಥಮಂ ದ್ವಿಜವಂಶಾರ್ಣವಪೂರ್ಣಚಂದ್ರನೆನಿಪೀ ದೇವೋತ್ತಮಂ ವೇಳೆ ಸೂರಿಜನು ಮೆಚ್ಚಲು ಸೇವ್ಯಮಾಯ್ತು ಜಗದೊಳ್ನಾನಾರ್ಥರತ್ನಾಕರಂ (ನಾನಾರ. ೩). ೧೨. ಬಲಿಷ್ಠವಾದದ್ದು; ಬಲಶಾಲಿಯಾದುದು: ಶೇಷನಿಂ ಬಲವಿಲ್ಲ ಮೋಸದಿಂ ಕಳವಿಲ್ಲ ನೇಸಱಿಂ ಜಗಕೆ ಹಿತರಿಲ್ಲ ಪರದೈವ ಈಶನಿಂದಿಲ್ಲ (ಸರ್ವಜ್ಞ. ೨೨೬); ಸರಕಾರ ಬಹಳ ಬಲ ಅಲ್ಲವೇ? (ಕುಟುಂಬ. ೨೪). ೧೩. ಯುದ್ಧ. ೧೪. ಆಹುತಿ; ಬಲಿ: "ರಕ್ಕಸನೊಳಾಹುತಿಯೊಳಿಂದ್ರಿಯದೊಳಾಜಿಯೊಳು ನೀರ್ಗಾಗೆಯೊಳು ಶಕ್ತಿಯೊಳು ಮುಸಲಿಯೊಳು ಬಲವೆನಿಕ್ಕು" (ಕುಂಗನಾ. ೦೯೬-೩೯). ೧೫. ಆಕಾಶ; ಗಗನ. ೧೬. ನೀರು. ೧೭. ಕಪ್ಪು: "ಅಸಿತ ಸಹಾಯಮಿಂದ್ರಿಯ ರಣಾಹುತಿ ದಕ್ಷಿಣ ಸೈನ್ಯ ಶಕ್ತಿವಾಯುಸಮಸಿತಾಂಬರಂ ದನುಜ ರೂಪು ವಿಹಾಯಸ ವಾರಿ ದೊಡ್ಡಿತೆಂಬಿವರೋಳ್ ಬಲಮಕ್ಕು" (ನಾನಾರ. ೦೩). ೧೮. [ಜ್ಯೋತಿ] ಗ್ರಹಗಳು ಜಾತಕನಿಗೆ ನೀಡುವ ಬೆಂಬಲ,– ಸಹಾಯ: 'ಕಂಕಣಬಲ' ಪರಾ. ೧೯. [ವಿಶಿಷ್ಟಾ] ಪರಮಾತ್ಮನ ಆರು ಗುಣಗಳಲ್ಲಿ ಒಂದು: ಶುದ್ಧಸತ್ತ್ವವೆಂಬುದು... ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜಸ್ಸೆಂಬ ಭಗವಂತನ ಆರುಗುಣಗಳಿಗೂ ಪ್ರಕಾಶಕವಾಗಿರುವುದರಿಂದ ಷಾಡ್ಗುಣ್ಯಮಯವು (ಒಂದಮ್ಮ. ೨೩೬). ೨೦. [ದ್ವೈತ] ನಲುವತ್ತು ವಿಧವಾದ ಗುಣಗಳಲ್ಲಿ ಒಂದು: ರೂಪ, ರಸ, ಗಂಧ, ಸ್ಪರ್ಶ . . . ಭಯ, ಬಲ, ಲಜ್ಜೆ . . . ಶೌರ್ಯ, ಸೌಭಾಗ್ಯವೆಂದು, ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಒಂದಮ್ಮ. ೨೬೬). ಬಳ್ಳ: ೧. ಅಂತು ವಸುವೇಣಾನು ಲೋಕಾಂತಂಬರಮಳವಿ ಬಳೆಯ ಬಳದೆಸಕಮದೋರಂತೆ ಜನ[ಂಗಳ] ಕರ್ಣೋಪಾಂತದೊಳೊಗೆದೆಸೆಯ ಕರ್ಣನೆಂಬನುಮಾದಂ (ಕಂಪಕಾ. ೦-೯೯); ಸಕಷಾಯಕಟುಜಂಗಳ ದಂತಕಾಷ್ಠದೊಳ್ ಬೋಟ ಕೌಂಗುವಾದ್ಯ(ಪ್ಯ) ಲವಂಗೋದಕ ಚೂರ್ಣವೆಂಬಿವಂ ತೊಯ್ದುಕೊಂಡು ಪಲ್ಪುಲಿಯ ದಂತ ಬಳಮಂ ಪಡೆಗುಂ (ಲೋಕೋಪ. ೬-೩); ಭರತಂ ಷಟ್ಖಂಡವಸುಂಧರೆಯುಮನೊರ್ವೊಡದಲೆ ಬಿಟ್ಟು ಜಿನಸದ್ರೂಪಂ ಧರಿಯಿಸಿ ದನಂದೊಡಬಿದರ ಸಿರಿಯುಂ ಸಂಪತ್ಕುಮಳವು ಬಳವುಂ ಒಂದೇ (ರತ್ನಾಕರ. ೬-೦೩೩). ೨. "ಬಳಮೆನೆ ಸೈನ್ಯಮಕ್ಕು" (ಅಕಾ. ೬೪); ಬಳ ಮೆರಡುಂ ತನ್ನನೆ ಮಿಳಮಿಳ ನೋಡೆ ನರೇಂದ್ರನೊಂದೆ ರಥದಿಂದ ಸುಹೃದ್ಬಳಮನಿರದೆಯ್ದಿ ಭೀಷ್ಮರ ಚರಣಯುಗಕ್ಕೆಱಗಿ ನಿನಗೆ ಜಯಮ ಕ್ಕೆಂದಂ (ಕಂಪಕಾ. ೦೦-೬೦); ಬಳೆದುದೊ ಭೂತಳಂ ಸುರಿದುದೋ ನಭಮಿಂದುದೊ ದಿಕ್ತಟಂ ಬಳಂಗಳನೆನೆ ಪರ್ವಿದಾ ಪಡೆಯ ತೂಳ್ದುಟಿಯಿಂ ಗಿಡುಬಳ್ಳಿ ಭೂರುಹಾವಳಿ ಪೊದೆಬಳ್ಳಿ ಬಲ್ಲಡವಿ ಪೆರ್ವಯಲಾಯ್ತು (ಕೃಷ್ಣಕ. ೩-೯೬); ತೊಳದ ಬೆಳ್ಳಗಿಲ ಪೊಗ್ಗರದಂತೆ ಸಾಲುಗೊಂಡಳ ವಟ್ಟು ಪುರದಿಂದಲೈದಿ ಸಲಿಲವನೀಂಟಿ ಮರಳಿ ಪೋಪ ತೇಜಿಯ ಬಳ ವೊಪ್ಪಿದುವು (ಕಂಪಕಾ. ೨-೩೩). ೩. ಮಳೆಗಱೆವುದು ಬೆಳೆ ಪೆರ್ಚುವುದಿಳೆ ತಳಕಿಳಿದು ಪೋಗದೆ ತಡೆದಿಹುದು ಪಳಿವಿಲ್ಲದ ಪತಿವ್ರತೆಯರ ನಡತೆಯ ಬಳದೊಳೆಂಬರು ಬಲ್ಲವರು (ಕಂಪ. ೨-೯). ೫. ಬಳನಂ ನಚ್ಚುವೊಡೀ ಕೃಷೀವಳನುಮಿಾ ಜೂದಾಳಿಯುಂ ಗಾಳಿಗಾದಲ್ಯಾಳೀ ಬಳೆದೊಟ್ಟ ನಟ್ಟುವನುಮಿಾ ಗೋಪಾಳರಪ್ಪೀ ಯಮಳ್ಗಳೆ ದರ್ಲ್ ಚಂಡಭುಜರ್ (ಕೃಷ್ಣಕ. ೦೦-೦೦೦); ಎನಿತೊಂದು ಪದೆಪುವೋಹಂ ವನಜಾಕ್ಷನೊಳನಿತು ಪದವು ಮೋಹಂ ಬಳನೊಳ್ ತನಗಾಗೆ ನಂದವಧು ತತ್ತನಯದ್ವಯಾಳೀಯಿಂದೆ ಸುಖಮಂ ಪಡೆದಳ್ (ಜಗನ. ೩-೯೮). [ಸಂ./ ತಮಿ. ವಲವನ್, ವಲ್ಲವನ್, ವಲ್ಲಮೈ, ವಲ್ಲೈ; ಮಲ. ವಲವನ್; ತುಳು ಬಲ; ತೆಲು. ವಲವು, ವಲಮು; ಕೋತ. ವಲ್]

ಬಲಋದ್ಧಿ, ಬಳಋದ್ಧಿ (ನಾ). [ಜೈನ] ಎಂಟು ಬಗೆಯ ಋದ್ಧಿಗಳಲ್ಲಿ ಒಂದು; ❁ "ತಪಃಶಕ್ತಿಯಿಂದ ಅಪರಿಮಿತವಾದ ಮನೋವಾಕ್ಕಾಯ ಬಲಗಳುಂಟಾಗುವುದು" (ಕೃಷಕೋ. ೦೩೯): ಭಾವನೆಯೊಳಾದ ಬುದ್ಧಿ ತಪೋವಿಕ್ರಿಯಾಔಷಧಿರಸಬಲಾಕ್ಷೀಣಾಭಿಧಾನಸಪ್ತರ್ಧಿಗಳೊಳಂ ನೆಱೆದು (ಅಂತ್ಯ. ೬-೩ ಶ); ಬುದ್ಧಿಕ್ರಿಯಾವಿಕ್ರಿಯತಪೋಬಲೌಷಧರಸಕ್ಷೇತ್ರಭೇದದಿಂ ಋದ್ಧಿಪ್ರಾಪ್ತಾರ್ಯರಷ್ಟವಿಧಂ (ಚತ್ರ. ೦೬೩); ಮನ ವಚನ ಕಾಯ ಭೇದದಿಂ ಬಲಋದ್ಧಿ ಮೂಱು ತೆಱಂ (ಕರಾಕ. ೩೯೯). ಬಳಋದ್ಧಿ: ಮನೋಬಳಂ ವಾಗ್ಬಳಂ ಕಾಯಬಳಮೆಂದು ಮೂಱುಂ ತೆಱನಾದ ಬಳ ಋದ್ಧಿಯೊಳಂ . . . ನೆಱೆದು (ಅಂಸ್ರಕೃ. ೦೯-೩೦ ಶ). 'ಬುದ್ಧಿಋದ್ಧಿ' ಪರಾ. [ಸಂ.]

ಬಲಂಗೆಡು (ಕ್ರಿ). ಶಕ್ತಿಗುಂದು; ಬಲಹೀನವಾಗು: ಅರಣ್ಯದಾ ಭೀಳತೆಗಂ ಕೋಡದೆ ಕೊಂಕದೆ . . . ಬೆಚ್ಚದೆ ಬೆದಱದೆ ಬಲಂಗಡದೆ ಮನಂಗುಂದದೆ ಕೆಲನಂ ಸಾರದೆ ಸಹಾಯಮಂ ಬಾಱದೆ ಮಹಾವಟವೃಕ್ಷದ ಕೆಳಗೆ ವಿಪುಳತಪದಿಂದವರ್ಣೆಯೊಪ್ಪುತ್ತುಮಿರೆಯಿರೆ (ಗಿಂ೪. ೯-೩೬ ಶ).

[ಬಲ₃ + ಕೆಡು₁]

ಬಲಂಗೊಳ್, ಬಲಗೊಳ್, ಬಲಗೊಳ್ಳು (ಕ್ರಿ). ಬಲಭಾಗದಿಂದ ಸಂಚರಿಸು ಹಾಕು; ಪ್ರದಕ್ಷಿಣೆ ಮಾಡು: ತನ್ನ ನಾಲ್ವರ್ ತಮ್ಮಂದಿರೊಡನೆ ಮಂಗಳವಸದನಂಗೊಂಡು ಮಂಗಳಪ್ರಧಾನೋಚಿತವಿಜಯಗಜಮನೇಱಿ ವಿದ್ಯೋತಮಾಗಿ ದಕ್ಷಿಣಾವರ್ತಮಪ್ಪ ಹೋಮಾಗ್ನಿಯಂ ಬಲಂಗೊಂಡು (ಪಂಪಭಾ. ೯-೯೩ ಶ); ಶಬಳಂ ರತ್ನದ ತೇಜಮುನ್ನುಮಧಿದೆಯ್ದಂ ಶಂಕಿದೀಯುರ್ಗ್ಗ ಚಂದ್ರಬಳಂ ಬ್ರಹ್ಮಜನೇಂದ್ರಗೇಹಮೆನುತಂ ಬಂದೆತ್ತಿಯಿಂ ಸೇಸೆಗೊಣ್ಡು ಬಲಂಗೊಣ್ಡು ಸಮನ್ತು ಪೊದನಿಸೀ ಗ್ರಾಮಾಧಿಪಂ... ಮೂಱು ಪವ್ವಂಗಳೊಳ್ (ಶಾಶ್ವ. ೫೭–1, ೫೨-೬೫; 1007); ತ್ರಿಲೋಕಸ್ವಾಮಿಯಿರ್ದ ಗಂಧಕುಟಿಯುಂ ವಾಸುದೇವರ್ವೊದಲಾದ ಯಾದವರೆಲ್ಲರುಂ ಮೂಮ ಬಲಂಗೊಂಡು ರೋಮಾಂಚಕಂಚುಕಿತಶರೀರರಾಗಿ ನಿರ್ವಾಣಸೀಮಂತಿನೀಪ್ರಿಯಂಗೆ ಸರ್ವಾಂಗಪ್ರಣತರಾಗಿ (ನೇಮಿಜಿ. ೦೩-೯೯ ಶ). ಬಲಗೊಳ್: ಭಟ್ಟಾರರ್ ಬಸದಿಯಂ ಬಲಗೊಂಡು ಕಾಲಂ ಕರ್ಚೊರ್ಳಗಂ ಪೊಕ್ಕು (ವಡ್ಡಾರಾ. ೬೯-೦); ಶ್ರೀಮಜ್ಜಿನಭವನಮಾನುಲಾಮುದಾರಂಜನರಡು

ವರ್ತಿಸ್ತುತವಮಂ ಮೂಮೆ ಬಲಗೊಂಡು ಭವ್ಯಶಿಖಾಮಣಿಯೆನಿಸಿದ ಸರಸ್ವತೀ ಮಣಿಹಾರಂ (ಅಂತಿ. ೯-೧) ; ಉಪ್ಪಟಯ್ಯನ ಮಯೂರನ ಕಾಳಿದಾಸನ . . . ಭಲ್ಲಟನ ಭಾರವಿಯ ಪದವ ನೆನೆದು ಬಲಗೊಂಡು ತೊಡಗಿದೆನೀ ಮಹಾಕೃತಿಯಂ (ಶತಕಾ. ೦-೦೯): ಚಕ್ರಿ . . . ಬಲಗೊಂಡಸುಜಿ ಮೂಜು ಬಾರಿ ತನ್ನೊಳು ತಾನು ಗೆಲವೇಜು ಮುನಿಗಳರ್ವರಿಗೆ (ಶರಿಶ. ೩-೬೦). **ಬಲಗೊಳ್ಳು :** ಹಾಡಿಸಲ್ಲಿ ಅಕ್ಕಮಹಾದೇವಿ, ಕೆರೂರ ರಾಚಯ್ಯ, ದ್ರೌಪದಿ, ಸುಭದ್ರೆ, ದೇವಕಿ ಇವರನ್ನೆಲ್ಲ ಕವಯಿತ್ರಿ ಬಲ ಗೊಳ್ಳುತ್ತಾಳೆ (ಕರ್ನಾಟ. ೩೯೩); ತುತ್ತು ಮುತ್ತನು ನೀಡು ಸರಸತಿ ಲಕುಮಿ ಕಾಳಿಕ ಅಂಬೆ ಪಾದಪದ್ಮಂಗಳಿಗೆ ಜೀವದ ಹಂಸನಾ ಬಲಗೊಂಬೆ (ಅರಳು. ೧೩-೧೨). [ಬಲ$_1$ + ಕೊಳ್$_1$]

**ಬಲಂಬೆರಸು** (ಅ). ಸೈನ್ಯವನ್ನು ಕೂಡಿಕೊಂಡು; ಸೇನಾಸಮೇತವಾಗಿ: ದ್ರೌಪದಿಯ ಕೊಟ್ಟ ನಣ್ಪುಮಂ ದ್ರೋಣನೊಳಾದ ಪರಿಭವಮುಮಂ ನೆನೆದೊಂದಕ್ಷೋಹಿಣೀಬಲಂಬೆರಸು ದ್ರುಪದಂ . . . ನೆಲಂ ಮೂರಿ ವಿಟ್ಟಂತೆ ಬಲವಕ್ಕದೊಳ್ ನಡೆಯೆ (ಪಂಪಭಾ. ೯-೯೩ ವ); ಕೆಲವು ದಿವಸದ ಮೇಲೆ ವಿಶ್ವಾನುಲೋಮನುಂ ತಾನುಂ ತಂತಮ್ಮ ಬಲಂಬೆರಸು ಪರದೇಶಕ್ಕೆ ಪೋಗಿ ಕಳ್ದು ಬಹುದ್ರವ್ಯಂ ಬಸವಮಾದುದಜುಂ ಪೆರ್ಚೆ (ವಡ್ಡಾರಾಧ. ೨-೦೮೩). [ಬಲ$_3$ + ಬೆರಸು$_3$]

**ಬಲಂಬೆಜು** (ಕ್ರಿ). ಶಕ್ತಿಯನ್ನು ಪಡೆ; ಸಾಮರ್ಥ್ಯವನ್ನು ಹೊಂದು; ಬಲಿಷ್ಠವಾಗು : ಮದೀಯಮಾಗ್ವಿಭವವಿನ್ಯಾಸಂ ಬಲಂಬೆಸ್ತುದಿನ್ನಿರು ಬಲ್ಲಿತ್ತುಟಿ ಕೋಡು ಕೂರಿತವನಂತಿಂತುಂತೆನಲ್ಕರ್ಕುಮೋ (ಅಂತಿ. ೦-೨೩); ಬಲಂಬೆತ್ತೂಡಾ ದಿವಿಜೇಜ್ಯಂ ಸ್ವಗೃಹಂಗಳೊಳ್ ನಿಲೆ ಸುವರ್ಣಂ ಪೂರ್ಣಮಾ ಗೇಹದೊಳ್ (ಶಾಕತ. ೪-೦೩). [ಬಲ$_3$ + ಪೆಜು$_1$]

**ಬಲಂಬೊಯ್** (ಕ್ರಿ). ಶಕ್ತಿಯನ್ನು ಕೊಡು; ಸಾಮರ್ಥ್ಯವನ್ನು ಎರೆ, –ನೀಡು : ಲೋಕಜ್ಞರು ಸೇವಾವಿಚಕ್ಷಣರುಮಪ್ಪುದಜಿಂದಮಿಾ ಕುಕ್ಕುಟಯುದ್ಧನಿರೀಕ್ಷಣರಸಕ್ಕೆ ಭಂಗಂಮಾಡದೆ ವಿದ್ಯಾಸಾಮರ್ಥ್ಯದಿನಿರ್ಪರ್ ಬಲಂಬೊಯ್ದು ತಾಮುಮಿಾ ನೆರವಿಯೊಳದೃಶ್ಯರಾಗಿ ನೋಡುತ್ತು ಮಿರ್ದರ್ (ಶಾಂತಿಪು. ೯-೩೩ ವ ). [ಬಲ$_3$ + ಪೊಯ್$_2$]

**ಬಲಕನಾಡು** (ನಾ). ಒಂದು ಪ್ರದೇಶದ ಹೆಸರು : ಶ್ರೀಸಾಮಿಯಬ್ಬೆ . . . ಬಲಕನಾಡ ಸುಳ್ಳಿಗೋಡದವ್ ದೇವಾರಕ್ಕೆ × × ಭಟಾರರ್ಗ್ಗೆ ಬಟಿಯಂ ನಟ್ಟ ಬಸದಿಗಂ ದೇವಾರ ಕೊಟ್ಟರ್ (ಎಕ. VIII, ಸಗರ. ೩೩-೦೦; ಸು. ೯೬೦). [ಬಲಕ$_2$ + ನಾಡು]

**ಬಲಕಾಯಿಸು** (ಕ್ರಿ). ೧. ಶಕ್ತಿಯನ್ನು ಪಡೆ; ಬಲವಾಗು: ವೆಲೂರಿಗೆ ಪೋಡಿ ಹೋಗಿ ಕಿಲ್ಲೆ ಬಲಕಾಯಿಸಿಕೊಂಡದ್ದರಿಂದ ಅರ್ಕಾಡ ದವಲತ್ತು ಅನಾಯಕವಾದ ವರ್ತಮಾನ . . . ತಿಳಿದು (ಕೃಪರಿ. ೨೯). ೨. ಬಲ ಪಡಿಸು; ಸುಭದ್ರಗೊಳಿಸು : ಆ ಕೋಟೆಯನ್ನು ಮೈಸೂರವರು ತೆಗೆದುಕೊಂಡು ತಮ್ಮ ಮಂದಿ ಠಾಣ್ಯ ಇಟ್ಟು ಬಲಕಾಯಿಸಿಕೊಂಡರು (ರಾಜೇಂದ್ರ. ೯). ೩. ಏರು ; ತೀವ್ರವಾಗು : ಒಳಗೊಳಗೆ ಮಾತು ಬಲಕಾಯಿಸಿತು (ಕುಣರು. ೦೨೪). ೪. ಕಳೆಗಟ್ಟು ; ವಿಜೃಂಭಿಸು : ಇದರಲ್ಲಿ ಸಾಧಾರಣವಾಗಿ ಒಕ್ಕಲಿಗರೇ ಗೆಲ್ಲುವವರಾದುದರಿಂದ ಈ ಉತ್ಸವ ಬಹಳ ಬಲಕಾಯಿಸುತ್ತದೆ (ಗರುಡಾ. ೦೬೦).

[ಬಲಕ್ಕಾ (ಫ ← ಹಿಂ. ಬಲಕನಾ, ಬಲಕಾನಾ) + . – ಇಸು$_3$./ತುಳು. ಬಲಕಾಯಿಸ್, ಬಲಕಾಯಿಸು]

**ಬಲಕಟಿಕೆ** ‘ಬಲುಗುಣಿಕೆ’ ನೋ.

**ಬಲಕೆಯ್** ‘ಬಲಗೆಯ್’ ನೋ.

**ಬಲಖರ್ವೀಕೃತ** (ನಾ). (ದೈವಬಲದ) ಶಕ್ತಿಗುಂದಿದವನು; ಬಲಹೀನ: ಶ್ರೀಕೃಷ್ಣಂ ಕಂಸಪುರಾಲೋಕನಕೌತುಕರಸೋದಯಂ ವೀರರಸೋದ್ರೇಕ ಕ್ಕೆಡೆಗುಡೆ ಬಲಖರ್ವೀಕೃತನಾ ದೈತ್ಯ ಖಳನ ಪೊಟಲ್ಗೆಯ್ತಂದಂ (ಜಗಂ. ೬-೧). [ಸಂ.]

**ಬಲಗಟ್ಟು** (ಕ್ರಿ). ಎಡಗಡೆಯಿಂದ ಬಲಗಡೆಗೆ ಅಡ್ಡಲಾಗಿ ಹೋಗು : (ಕ). [ ಬಲ$_1$ + ಕಟ್ಟು$_1$ ]

**ಬಲಗಡೆ** (ನಾ). ಎಡಭಾಗವಲ್ಲದ ಕಡೆ; ಬಲಪಕ್ಕ; ದಕ್ಷಿಣಪಾರ್ಶ್ವ : ಬಲಗಡೆಯಲ್ಲಿ ಬಸಂತನೊಲವಿನಿಂ ಕುಳ್ಳಿರೆ ತನ್ನೆಡದೆಸೆಯೊಳ್ ಸೊಬಗಿ ಯರಿರೆ ಕಡುಚೆಲ್ವಂ ಪಡೆದನಾವಗಂ ಸನಗೆಣಿಯಂ (ಕಬ್ಬಿಗಕಾ. ೧೩೭); ಬಲಗಡೆಗಾಗಿ ಬಾಗಿ ಬಿಗಿಮಟ್ಟುಜಿ ಬಟ್ಟೆತೆಂಬಿನಂ ಮಲರ ಸರಂಗಳೊತ್ತರಿಸೆ (ಕಳಂ. ೩-೭). [ಬಲ$_1$ + ಕಡೆ$_3$]

**ಬಲಗಯ್** ‘ಬಲಗೆಯ್’ ನೋ.

**ಬಲಗರ್ವ** (ನಾ). ಸಾಮರ್ಥ್ಯದ ಬಗೆಗಿರುವ ಸೊಕ್ಕು,–ಮದ : ಆ ಶಿಶುಪಾಲನಳವದೆಂತೆಂದೊಡೆ ಬಲದ ಬಲಗರ್ವದಿಂ ತೋಳ್ವಲದ ಕರಂ ಚಲದಳುರ್ಕೆ[ಯಿಂ] ಸುರರೊಳ್ ಮಾರ್ವಲೆವಂ (ಪಂಪಭಾ. ೭-೩೯); ಬಲರಿಪು ತನ್ನದೊಂಮು ಬಲಗರ್ವದಗುರ್ವಿನೊಳಿಪ್ಪೊಡಂಕಿಯಂ ಕುಲಿಶದಿ ನೊರ್ವೆ ಖಂಡಿಸಿದಂ (ಕಾವ್ಯಸಾ. ೪೬೯). [ಸಂ.]

**ಬಲಗರ್ವಿತ** (ಗುಂ). ಸಾಮರ್ಥ್ಯದ ದರ್ಪವುಳ್ಳವನು : ಬಲಗರ್ವಿತ ಪ್ರತಾಪಿಗಳಲಂಘ್ಯರಪ್ರತಿಮರಖಿಳಭೂಭೃತ್ಪ್ರಭುಗಳ್ ಬಲದೇವ ವಾಸು ದೇವರ್ ನೆಲೆಗೆಟ್ಟೇಕಾಕಿಯಾದರುಟಿದವರಳವೇ (ಪಂಪಭಾ. ೦೯-೨೯): ದುರುಳನವ ಭಗದತ್ತ ಬಾಹ್ಲಿಕ ನರಕ ವೃದ್ಧಕ್ಷತ್ರ ಮೊದಲಾದರಸುಗಳು ಬಲಗರ್ವಿತರಸಂಖ್ಯಾತರಹರು (ಕುಮಾವ್ಯಾಸ. ೨-೨೦). [ಸಂ.]

**ಬಲಗಾಲ್**, ಬಲಗಾಲು (ನಾ). ಬಲಗಡೆಯ ಕಾಲು; ದಕ್ಷಿಣ ಪಾದ : ಬಲಗಾಲ್ ಸೈತೊಪ್ಪೆ ವಾಮಂ ಕಿಲಕೆ ತೊಲಗೆ. . . ಲೀಲಾಲಲಿತಾಸ್ಯ ಕ್ರಾಂತದಿಂ ನಿಂದವಂರನರಸಭಾಚಿತ್ರದೊಳ್ ಕಾಂತೆ ನಿಂದಳ್ (ಲೀಲಾವ. ೪-೦೩೩); ಬಲಗಾಲ್ಪಿಂದೆಸೆಗಾಗೆ ವಾಮಪದಮಂ ಮುಂದಿಟ್ಟು . . ಕೋಮಲೆ ನಿಂದು (ರಾಜಶೇ. ೩-೯೩). **ಬಲಗಾಲು :** ಆವ ಬಿಂಕವೊ ಎಡಗಾಲ ಗದ್ದುಗೆಯ ಮೇಲೋವಿ ಮಡಿದು ಮತ್ತೆ ಕೆಳಗೆ ಹಾವುಗೆಯೊಳು ಪೆಂಡೆಯದ ಬಲಗಾಲೂಜಿ ಠೀವಿಯೊಳೆಸೆದನಾ ರಾಯ (ಶರಶ. ೦-೬೦).

ಬಲಗಾಲು ಮುಂತಾಗಿ ಹೋಗು=(ಶುಭಲಕ್ಷಣವಾಗಿ) ಬಲಗಾಲನ್ನು ಮುಂದಿಟ್ಟು ಪ್ರವೇಶಿಸು : ನಾನವನ ಮನೆಯುಮಂ ಬಲಗಾಲು ಮುಂತಾಗಿ ಹೊಕ್ಕ ದಿನದಿಂದ ಬಲುಗೆಲಸವಲ್ಲದ ಯಿನಿಸು ತಲೆಮ ತುಜುಸುವೊಡೆ ಹೊತ್ತಂ ಕನಸಿನಲ್ಲಿ ಕಾಣೆ (ಸಭ್ಯಾಳಿ. ೩-೦೯). [ಬಲ$_1$ + ಕಾಲ್$_1$]

**ಬಲಗಾಲು** ‘ಬಲಗಾಲ್’ ನೋ.

**ಬಲಗಿ** ‘ಬಲಿಗೆ’ ನೋ.

**ಬಲಗುಂದು** (ಕ್ರಿ). ೧. ಶಕ್ತಿಯು ಕಡಮೆಯಾಗು; ಸಾಮರ್ಥ್ಯವು ಕುಗ್ಗು. ೨. ಶಕ್ತಿಯನ್ನು ಕಳೆದುಕೊಳ್ಳು; ಬಲಹೀನವಾಗು : ಅವನು ವಯೋಧರ್ಮದಿಂದ ಬಲುಗುಂದಿದ್ದಾನೆ (ರೂಢಿ). [ ಬಲ$_3$ + ಕುಂದು$_1$ ]

**ಬಲಗುಡು** (ಕ್ರಿ). (ಪೂಜಾವಿಧಿಯಲ್ಲಿ) ಬಲಭಾಗದಿಂದ ಸುತ್ತು; ಪ್ರದಕ್ಷಿಣೆ ಹಾಕು : ಸಡಗರದಲಿ ಕಂತುಸುತನುಷಾವಧು ಬಲಗುಡುತಿ ಕುಂಭಾಂಡಜೆ ಸಹಿತ ಪೊಡಮಟ್ಟರು ರುಕ್ಮಿಣಿ ಸತ್ಯಭಾಮೆ ಪೆಣ್ಗಾಡಣಕ್ಕೆ ರತಿದೇವಿಯರಿಗೆ (ಸೋಷತ. ೯೨-೬೩). [ಬಲ$_1$ + ಕುಡು$_1$ (<ಕೊಡು$_1$)]

**ಬಲಗುಣಿಕೆ** ‘ಬಲುಗುಣಿಕೆ’ ನೋ.

**ಬಲಗೂಡು** (ಕ್ರಿ). ಸೈನ್ಯದೊಂದಿಗೆ ಇರು; ಸೇನಾಸಮೇತವಾಗಿರು : ತೋರಿಯ ಮಣಿಪೀಠದಲಿ ಮಂಡಿಸಿ ರಾಯಭಾರಿಗಳ್ಕೈಯಿಂದೆ ಕರೆಸಿ ವಾರಿಜದಳನೇತ್ರ ಬಲಗೂಡಿ ಪ್ರಸ್ಥಾನಭೇರಿಯ ದನಿಮಾಡಿಸಿದ (ಸೋಷತ.

೩೬-೨೬): ಶಿವಭಕ್ತಜನವ್ರಜಂ ವಿಜೃಂಭಿಸಿ ನೆಲಸಿರ್ದ ಪಟ್ಟಣಮಿಂದಿಂತಿ ದಟೆಯೊಳ್ ಬಲ [ಶಾಕಾಂ. ೪]ಗೂಡಿ ಗಾಡಿ ರಂಜಿಸೆ ಪೊಸವಾಜಿಯೇಱಿ ವಿಹರಿಪ್ಪುದು ಬಲ್ಲತನಕ್ಕೆ ತಕ್ಕುದೇ. (ರಾಜಶೇ. ೦೩-೪). [ಬಲ್$_3$ + ಕೂಡು$_1$]

**ಬಲಗೆಯ್**, ಬಲಕೆಯ್, ಬಲಗಯ್, ಬಲಗೈ (ನಾ). ೧. ಬಲಭಾಗದ ಕೈ; ದಕ್ಷಿಣ ಹಸ್ತ : ಬಲದ ಸುಟುಪಿರಸಿದರ್ಚಿಯ ವಿಳಾಸದಿಂದಗ್ನಿರಾಜಿ ನೀರಾಜನದೊಳ್ ಬಲಗೆಯ್ಯೊಳ್ ಚಕ್ರಿಗೆ ದೋರ್ವಲವಿಜಯಮನೀವ ತೆಱದಿನೇಂ ಸೊಗಯಿಸಿತೋ (ಶಾಂತಿಪು. ೦೦-೯೨); ಇನಿರಸವಾಂತ ಕರ್ವಿಲ್ಲಿಗೆ ಭ್ರಮರ ಸಿಂಜಿನಿಗೈದೆಡದ ಹಸ್ತದಲಿ ದನಿಗೆಯ್ಯುತಿರೆ ಬಲಗೆಯ್ಯ ಪೊಸರ ದೊರ್ವ ವನಿತೆ ನಿಂದಿರ್ದಳುತ್ಸವದಿ (ಸೋಹಶ. ೩-೩೭). ೨. ಬಲವಾದ ಸಹಾಯಂ,-ನೆರವು : ಪಡಲಿಟ್ಟಿಂತೆಪೊಲಾಯ್ತು ಕೀಚಕಬಲಂ. . . ಪೆಱವೇಕ್ಕೊಲ್ಲಂಗಮೇನಾಗದಿಂದುಡಿದತ್ತಾಗದೆ ಮತ್ಸ್ಯನೊಂದು ಬಲಗೆಯ್ಯಂದ ಕ್ಕಟಾ ಎಂಬುದಂ ನುಡಿಯಲ್ಕಾರ್ತರುಮಿಲ್ಲ ಪಾರದರದೊಳ್ ಸತ್ರಂಗ ಬಲ್ಲನ್ನರಾರ್ (ಪಂಪಭಾ. ೯-೯೦). **ಬಲಕೆಯ್** : (೬). **ಬಲಗಯ್** : ೧. ಅಕ್ಕರವಂ ಬಲಗಯ್ಯೊಳು[ಶಾಕಾಂ. ಗೈಯೊಳ್] ಲೆಕ್ಕಮನೆಡಗಯ್ಯೊಳಭವನನುಲೋಮವಿಲೋಮಕ್ಕೆ ನೆಲೆಯಾಗಿ ಮಾಡಿ ಜಗಕ್ಕಱಿಪಿದ ನೋಱೆಯಿಂದಮಾದಿಬ್ರಹ್ಮಂ (ಸಮಶ. ೨-೦೧). **ಬಲಗೈ** : ೧. ವಿವಿಧವಿಧ ನವನಾಟಕಮಹೋತ್ಸವಸಮುಚ್ಚಯವೆಸೆಯೆ ಏಕಾಂತವಿಭು ಬಲಗೈಯಲ ಗೆಡದ ಕರದಲಿ ಶಿರಂ ಮೆಱೆಯೆ (ಏಕಪು. ೩೨-೯೦); ಬಲಗೈ ಬೆರಳನೊರ್ವ ನಿಗಿತ್ತ ಮೊಣ್ಣಯುದುಲಿದು ಭಂಗಿಸರೆ ಕಂಡವರು (ಕಂಪಪು. ೭-೦೮೪). ೨. ಭಕ್ತಿಯ ಬಲಗೈಯತುಳವಿರಕ್ತಿಯ ಮನೆ . . . ಎನಲಾ ಪರಶಕ್ತಿಯ ಮಣಿಭವನಮೆಸೆದುದು (ಉದ್ಭಟ. ೭-೬೩); ರಾಯರ ಬಲಗೈ ನಾನು . . . ಅವರು ಯಾವ ಕೆಲಸಕ್ಕೆಂದರೂ ಅದಕ್ಕೆ ತಯಾರಾಗಿರುತ್ತಿದ್ದೆ (ರಾಜಕು. ೭); ಆಚಾರ್ಯರು ಮಾಲವೀಯರ ಬಲಗೈಯಾಗಿದ್ದರು (ಪಪೂಹೊ. ೯೨).

**ಬಲಗೈಯವನು**=ಹೊಲೆಯರಂತಲ್ಲಿ ಉತ್ತಮಜಾತಿಯವನಂ : ಊರ ಹೊರಗೆ ಬಲಗೈಯವನಳಿದರೆ ಹಾರುವನಿಂಗೂರೊಳಗೆಹಗೇತಕೆ ಮೀರಿದ ಸೂತಕ (ಕಕೃಶ. IV. ೦೦-೩). 'ಎಡಗೆಯ್' ಪರಾ. [ಬಲ್$_1$ + ಕೆಯ್$_2$]

**ಬಲಗೆಲ** (ನಾ).= ಬಲಗಡೆ : ಬಲಗೆಲದೆಡೆಯೊಳು ಗರ್ಭಂ ನಿಲೆ ಪುರುಷಂ ವಾಮಭಾಗದಿಂ ಸ್ತ್ರೀಯೆರಡುಂ ಕೆಲದೆಡೆಗಳಮಧ್ಯಗಳು ನಡುವಣ ನೆಲೆಯಿಂದಂ ಪಂಡರಾಗಿ ಪುಟ್ಟುವರೆಂದುಂ (ಮಾಲಾ. ೦-೬೪) ; ಆ ಶಚಿ ಮಾಯಾನಿದ್ರೆಯನಾ ಶಶಧರವದನೆಗಿತ್ತು ಬಲಗೆಲದೊಳ್ ಮಾಯಾಶಿಶುವ ನಿರಿಸಿ ಪಾಣಿಕುಶೇಶಯಯುಗದಿಂದೆ ನೆಗಪಿದಳ್ ಜಿನಶಿಶುವಂ (ಪರ್ವಪು. ೦೩-೯೩). [ಬಲ್$_1$ + ಕಲ$_1$]

**ಬಲಗೈ** 'ಬಲಗೆಯ್' ನೋ.

**ಬಲಗೈಬಂಟ** (ನಾ). ತುಂಬ ಸಹಾಯವನ್ನು ನೀಡುವವನು ; ಅತ್ಯಂತ ಆಪ್ತನಾದವನು : ತಾನು ಚಕ್ರವರ್ತಿಯ ಬಲಗೈಬಂಟನೆಂದು ಸುಖಾರುವಿಗೆ ಹೆಮ್ಮೆ (ಪಾಜಿಸ. ೩೨) ; ವಿಲಿಂಗ್ಡನ್ನರು . . . ಕಾಂಗ್ರೆಸ್ಸಿನೊಡನೆ ಒಪ್ಪಂದಮಾಡಿ ಜನತೆಯ ಕೇಳಿಕೆಯನ್ನು ಮನ್ನಿಸಿದುದು ಬಲಗೈಬಂಟರಾದ ಹಲವಾರು ಸರಕಾರಿ ನೌಕರರಿಗೆ ಒಳಗಿಂದೊಳಗೆ ಚೇಳು ಕುಟುಕಿದಂತಾಗಿತ್ತು (ಕುರುಕಾ. ೦೩೨).

[ಬಲಗೈ (<ಬಲಗೆಯ್) + ಬಂಟ$_1$]

**ಬಲಗೊಳ್** 'ಬಲಂಗೊಳ್' ನೋ.

**ಬಲಗೊಳಿಸು$_1$** (ಕ್ರಿ). ಬಲಗಡೆಯಿಂದ ಸುತ್ತು ಬರುವಂತೆ ಮಾಡು ; ಪ್ರದಕ್ಷಿಣೆ ಹಾಕಿಸು : ಪೂಜೆ ಪೂರಿತವಾಗೆ ವಾದ್ಯಾಳಿ ನಿಂದುದಾ ರಾಜನಂಬಿಕೆಯ ಮುಂದಿಟ್ಟು ಓಜೆಯಿಂದರುಹನ ಬಲಗೊಳಿಸಿದನು ತನೂಜರ ತಾನೊಡನೆಯ್ದಿ (ಶರಶ. ೩೮-೨೩).

[ಬಲಗೊಳ್ (<ಬಲಂಗೊಳ್) + — ಇಸು$_3$]

**ಬಲಗೊಳಿಸು$_2$** (ಕ್ರಿ). ಶಕ್ತಿಶಾಲಿಯಾಗುವಂತೆ ಮಾಡು : ಪುಷ್ಟಿಗೊಳಿಸು : ವ್ಯಾಯಾಮವು ದೇಹವನ್ನು ಬಲಗೊಳಿಸುತ್ತದೆ (ರೂ೦).

[ಬಲ್$_3$ + ಕೊಳ್$_1$ + — ಇಸು$_3$]

**ಬಲಗೊಳ್ಳು** 'ಬಲಂಗೊಳ್' ನೋ.

**ಬಲಗೋಲು**, ಬಲಗೋಳು (ನಾ). ೧. (ನೊಗ ಅಥವಾ ಗಾಡಿಯ) ಬಲಭಾಗ ; ದಕ್ಷಿಣಪಾರ್ಶ್ವ : ಜ್ಞಾನಚಕ್ಷುವೆಂಬ ನೊಗದ ಉಭಯದ ಕೊನೆಯಲ್ಲಿ ಎಡಗೋಲಿನಲ್ಲಿ ಕಾರಿಯ ಹೂಡಿ ಬಲಗೋಲಿನಲ್ಲಿ ಬೆಳ್ಳಿಯ ಹೂಡಿ ಅಡಿ ಕಿತ್ತುವಂತ ಧಾಯೆಂದು ಪೊಡೆಯಲಾಗಿ (ಶಸಪ. III. ೯೬-೯೬); ಇನ್ನೊಂದು ಗಳಿಗೆ ಇನ್ನಾರ ನೆನೆಯಾಲಿ ಬಲಗೋಲಲ್ಲಿರುವ ಬಸವಣ್ಣನ ನೆನೆದಾರೆ ಬಂದಷ್ಟು ಪಾಪ ಪರಿಯಾರ (ಕಜಾಕಾ. ೩). ೨. (ನೊಗ ಅಥವಾ ಗಾಡಿಯ) ಬಲಭಾಗಕ್ಕೆ ಹೂಡುವ ಎತ್ತು : ಈ ಎತ್ತು ಬಲಗೋಲು (ರೂ೦). 'ಎಡಗೋಲು' ಪರಾ. **ಬಲಗೋಳು**: ೧. ಒಮ್ಮನದೊಳದ್ದಿದುವು ಹುಟ್ಟುಗಳು, ಉಪ್ಪುನೀರ್ ತುಳ್ಕಿ ತಳ್ಳೊಯ್ಯೆ, ಬಲಗೋಳು ಮುಂದಾಗಿ ನೂಂಕಿದುದು ನಾವೆ ಬಲಮಲ್ಲ, ಒಗ್ಗಿನಲಿ (ಶಾರಸಿ. ೦೩-೩೩೯). [ಬಲ್$_1$ + ಕೋಲು$_1$ (<ಕೋಲ್$_1$)]

**ಬಲಗೋಳು** 'ಬಲಗೋಲು' ನೋ.

**ಬಲಘಟ್ಟನ** (ನಾ). ಸೇನೆಯಿಂ ತುಳಿತ,·ಪದಾಘಾತ : ಬಲಘಟ್ಟನದಿಂ ಪುಟ್ಟಿದ ಖಳಧೂಳಿಯಿನಾಗಸಂ ಮಲೀಮಸಮಾಗಲ್ ಸಲೆ ರಜನೀ ಶಂಕೆಯಿನುಜ್ಜ್ವಳಕರಮಂ ಕೆದಱಿತಿಲ್ಲ ರವಿ ದಿಕ್ಕುಳದೊಳ್ (ಪಾರಶ್ವ.೦೦-೩೦).

[ಸಂ.]

**ಬಲಚೋರಿ** (ನಾ). ಬಲಭಾಗದ ಎತ್ತು: ನೊಗದ ಬಲಗಡೆಗೆ ಕಟ್ಟುವ ಎತ್ತನ್ನು ಬಲಚೋರಿ ಎಂದೂ ಹೇಳುತ್ತಾರೆ (ರೂ೦). 'ಎಡಚೋರಿ' ಪರಾ. [ಬಲ್$_1$ + ಚೋರಿ ?]

**ಬಲಜ**, ಬಳಜ (ನಾ). ೧. ಪಟ್ಟಣದ ಬಾಗಿಲು ; ಪುರದ್ವಾರ. ೨. ಹೊಲ ; ಕ್ಷೇತ್ರ. ೩. ಸುಂದರವಾದ ಆಕೃತಿ. **ಬಳಜ** : ೪. ಬಾಗಿಲು ; ದ್ವಾರ : ತಿವುರಿ ಗುಡಿ ಗೂಡಾರಂ ಝುಂಪಾಳಿ ಚೌಕಿಗೆ ಜಂಪೆ ಮಂಡವಿಗೆ ಬಳಜಂ ಬಾಗಿಲ್ವಾಡಂ ಬನಂ ಮೊಗಸಾಲೆಯೆಂಬಿವಱ ಪಸುರಿಂ ಕರ್ಪಿಂ ಕೆಂಪಿಂ ಬಸಂತನ ಬೀಡಿನಿಂತವೞ ಪೊಱವೀಡೆತ್ತಾ ಮಾಡಿತ್ತು ಕಣ್ಣನುರಾಗಮಂ (ಅನಂತಪು. ೦೩-೭೩). [ಸಂ.]

**ಬಲಜೆ** (ನಾ). ೧. ಚೆಲುವೆ ; ಸುಂದರಿ. ೨. ಭೂಮಿ. ೩. ಒಂದು ಜಾತಿಯ ಮಲ್ಲಿಗೆ. [ಸಂ. ಬಲಜಾ]

**ಬಲಜ್ಯಾಯ** (ನಾ). ೧. ಬಲಶಾಲಿಯಾದವನು ; ಬಲಿಷ್ಠ. ೨. ಬಲರಾಮನನ್ನು ಅಣ್ಣನನ್ನಾಗಿ ಉಳ್ಳವನು ; ಕೃಷ್ಣ. ೧, ೨ : ಶ್ರೀಯ ಮನಃಪ್ರಿಯಂ ಜನಿತಕಾಮನಿಳಾಪ್ರಿಯನಬ್ಜಶಂಖಲಕ್ಷ್ಮಾಯತಹಸ್ತನಾತ್ತವಿಜಯಂ ದ್ವಿಜರಾಜಸುಸೇವಿತಂ ಬಲಜ್ಯಾಯನಭೇದ್ಯಮಂತ್ರಕುಶಲಂ ಬಲಿಬನ್ಧನನನ್ತೆ ರಾಯನಾರಾಯಣನೆಮ್ಬುದುರ್ವ್ವಿ ನರಸಿಂಹ ನರೇನ್ದ್ರನ ಮನ್ತ್ರಿ ಬೂಚನ (ಎಕ. V. ಅರಸೀ. ೦೭೨-೨೬; 1163).

[ಸಂ. ಬಲಜ್ಯಾಯಸ್]

**ಬಲತಂಗಿ** 'ಮಲತಂಗಿ' ನೋ.

**ಬಲತಮ್ಮ** 'ಮಲತಮ್ಮ' ನೋ.

**ಬಲತಾಯಿ** 'ಮಲ್ದಾಯ್' ನೋ.

**ಬಲದಲನ** (ನಾ). ೧. ಸಂಪೂರ್ಣವನ್ನು ನಾಶಮಾಡಿದವನು. ೨. ಬಲನೆಂಬ ರಾಕ್ಷಸನನ್ನು ಕೊಂದವನು ; ಬಲಧ್ವಂಸಿ ; ಇಂದ್ರ. ೧, ೨ : ಕುಲಗೋತ್ರವೈರಿಯುಂ ಬಲದಲನನುಮೆಂದಮರಪತಿಯನೊಲ್ಲದೆ ಪೋದರ್ ಕುಲಗೋತ್ರವೀರಭಟರುಂ ಬಲನಾಥರುಮುಂತುಮವರೆರೇ ನೋಡುವರೇ (ಜಗಪು. ೦೩-೭೯). [ಸಂ.]

**ಬಲದಾಯಿ** 'ಮಲದಾಯ್' ನೋ.

**ಬಲದೃಪ್ತ** (ನಾ). ಶೌರ್ಯದಿಂದ ಸೊಕ್ಕಿದವನು ; ಪರಾಕ್ರಮದಿಂದ ಅಹಂಕಾರವನ್ನು ಹೊಂದಿದವನು : ಬಲದೃಪ್ತರಾದ ಕ್ಷತ್ರಿಯರು ಒಟ್ಟೊಬ್ಬರಾಗಿ ಹತೋದ್ಯಮರೂ ಹತಾಶರೂ ಆದ ಬಳಿಕ . . . ಅರ್ಜುನನು . . . ಹೋಗುತ್ತಿರುವುದನ್ನು ನೋಡಿ ಎಲ್ಲರೂ ಗುಲ್ಲೆಬ್ಬಿಸಿದರು (ಭೀಷ್ಮ. ೬೦). [ಸಂ.]

**ಬಲದೇವ**, ಬಳದೇವ (ನಾ). ೧. ಕೃಷ್ಣನ ಅಣ್ಣ ; ಬಲರಾಮ : "ಬಲದೇವಃ, ಬಲಭದ್ರಃ . . . ಕಾಮಪಾಲಃ, ಹಲಾಯುಧಃ — ಈ ೧೮ ಬಲದೇವನ ಪೆಸರ್" (ಹಲಾಯು. ೬-೨೯). ೨. ಒಬ್ಬಾತನ ಹೆಸರು : ಬಲದೇವಾಚಾರ್ಯರ ಪಾಲುಗ್ಗವಣ (ಎಕ. II (R), ೯೨; ಕಿಕಯು ೩೩) ; ಬಲದಿಂ ತೇಜದಿನೊಳ್ಪಿನಿಂ . . . ಗಾಂಭೀರ್ಯ್ಯದಿಂ ಸೌರ್ಯ್ಯದಿಂ ಬಲದೇವಂಗೆ ಸಮಾನಮಪ್ಪರೊಳರೇ ಮತ್ತನ್ಯದಂಡಾಧಿಪರು (ಎಕ. II (R), ೦೬೪-೨೬ ; 1139). ೩. [ಜೈನ] ಅರುವತ್ತುಮೂವರು ಶಲಾಕಾಪುರುಷರಲ್ಲಿ ಒಂದು ಗುಂಪು ; ವಿಜಯ, ಅಚಲ, ಸುಧರ್ಮ, ಸುಪ್ರಭ, ಸುದರ್ಶನ, ನಂದಿ, ನಂದಿಮಿತ್ರ, ರಾಮ ಮತ್ತು ಪದ್ಮ ಎಂದು ಒಂಬತ್ತು ಮಂದಿ ಬಲದೇವರು : ಬಲದೇವನಂತೆ ಪೆಣನಂ ಪೊತ್ತು ತೊಟಲ್ವ ಕ್ಷೇತ್ರಪಾಲರಿಂ . . . ಸೋಂಬಸಂ ಮೆಚ್ಚಿ ಬೇಟಿರ್ಗೆ ಪೋದ ಸೂಳೆಯಂತೆಯ್ಯಲಾಡುವ ರಣದೇವತೆಯರಿಂದತಿಭಯಂಕರಾಕಾರಮಪ್ಪುದು (ಕಾವ್ಯಸಾ. ೩೨೯ ಪೂರ್ವ್ಯ) ; ಶ್ರೀವರ್ಮನುಂ ವಿಭೀಷಣನುಮೆಂಬ ಪೆಸರೊಳ್ ಬಲದೇವ ವಾಸುದೇವರೆನಿಸಿ ಬಳೆಯೆ (ಆದಿಪು. ೩-೩೦ ವ) ; ಬಲದೇವಂ ದುಃಖಾಗ್ರಜ್ವಲನಾಹತನಾಗಿ ಪೊತ್ತು ತಮ್ಮನ ಪೆಣನಂ ಪಲವಾಡುತ್ತ ತೊಳಲ್ದಪೊನಲಾಘ್ಯತರಗಹನದಲ್ಲಿಯೆಂಬುದನಱಿದಂ (೦ಂಹಂ. ೦೯-೯೮). **ಬಳದೇವ** : ೨. ಬಳ [ಪಾಠಾಂ. ಲ] ದೇವಂ ಭೀಮನ ಭುಜಬಳದೇವಂ ಮನವಮನಲೆಯೆ ಕುರುಪತಿಯಂ ಮಾರ್ಕೊಳೆ ಪರಿಭವಿಸಿದನೆಂದೇ . . ಲ್ಲದೆ ಮುಳಿದು ಕೆಳರ್ದು ಕಿರ್ಚಿದರ್ಗಳ್ (ಗದಾಯು. ೮-೯೩). ೩. ಬಳದೇವವಾಸುದೇವರನಿಱಿಪುದು ಗುಣದೊಳ್ಪು ರಾಮಲಕ್ಷ್ಮಣರಂ ಪೆಂಪಿಱಿಪುದು ಭೀಮಾರ್ಜುನರನುಮನಿಱಿಪುದು ಮಲ್ಲಪನ ಪೊನ್ನಮಯ್ಯನ ಚರಿತಂ (ಅಜಿತ. ೦-೩೩). [ಸಂ.]

**ಬಲದೊಡ್ಡಿ**, ಬಲಲೊಡ್ಡಿ (ನಾ). ಒಂದು ಬಗೆಯ ಸಸ್ಯ : (ಸಸ್ಯಕೋ. ೧೨೪). **ಬಲಲೊಡ್ಡಿ** : ಬಲರೊಡ್ಡಿ, ಬಾಡಿಗಾನೆ, ಲೊಡ್ಡಿಗಿನ ಮರ (ಪ್ಲಾಂಟಿನ. ೬-೦೯೯೦). [?]

**ಬಲದೋಳ್ತಲೆ** (ನಾ). ಬಲಭುಜ ; ಬಲಹೆಗಲು : ನನೆಯಂಬನೆಯ್ದು ನೆಲನಂ ಬಲದೋಳ್ತಲೆಯಲ್ಲಿ ತಾಳ್ದಿದಂ (ಕಾವ್ಯಾವ. ೪೬).

ಬಲದೋಳ್ತಲೆಯಾಳ್ =ಬಲಭುಜದಂತಿರುವವನು ; ಆಪ್ತನಾದ ಬಂಟ : ಒಡನವನೊಡೆಯಂ ಬಲದೋಳ್ತಲೆಯಾಳಱದುದರ್ಕೆ ಸುರ್ಕಿ ಚಾಮನೃಪಾಲನೊಳೊಪೆವೆರೆದಾಮುಟಿಯುತ್ಸೇಟ್ಟುದೆಂದು ನಿರವಿಸಿ ಮುದಿಯಂ ಸೀಮೆಯಟಿಯೆ ತಂದಿತ್ತಂ ರಾಮಯ ಲಿಂಗಾಖ್ಯಗಜಮನಶ್ವವ್ರಜಮಂ (ಶಿಕಪು. ೨-೬೨). [ಬಲ್₁ + ತೋಳ್ + ತಲೆ₁]

**ಬಲಧ್ವಂಸಿ** (ನಾ). ಬಲನೆಂಬ ರಾಕ್ಷಸನನ್ನು ಸಂಹಾರಮಾಡಿದವನು ; ಇಂದ್ರ : ಸುರಸತಿಯು ಸಂತೈಸಿ . . . ಅರಮನೆಗೆ ಬಂದನು ಬಲಧ್ವಂಸಿ (ಕುಮಾರ. ೮-೯೯). [ಸಂ. ಬಲಧ್ವಂಸಿನ್]

**ಬಲಪಕ್ಕ** 'ಬಲವಕ್ಕ' ನೋ.

**ಬಲಪಡಿಸು** (ಕ್ರಿ). ಹೆಚ್ಚುಮಾಡು ; ವೃದ್ಧಿಗೊಳಿಸು : 'ಬಿಲ್ಲಾನ್' ಎಂಬ ಪೂರ್ವದ ಹಳಗನ್ನಡದ ಛಾಯೆಯುಳ್ಳ ರೂಪವೂ . . . ಕುತೂಹಲವನ್ನು ಬಲಪಡಿಸುತ್ತವೆ (ಶಬ್ದಮಣಿ. ೦೩೯) ; ಅಪಥ್ಯವು ರೋಗವನ್ನು ಬಲಪಡಿಸುತ್ತದೆ (ರೂಢಿ). [ಬಲ್₂ + ಪಡಿಸು]

**ಬಲಪ್ರದರ್ಶನ** (ನಾ). ಶಕ್ತಿಯನ್ನು ತೋರ್ಪಡಿಸುವಿಕೆ : ಸಾಮರ್ಥ್ಯವನ್ನು ಪ್ರದರ್ಶಿಸುವಿಕೆ : ಇಂದು ಅವರ ಸಂಘದಲ್ಲಿ ಬಲಪ್ರದರ್ಶನದ ಸ್ಪರ್ಧೆಯನ್ನು ಏರ್ಪಡಿಸಿದ್ದಾರೆ (ರೂಢಿ). [ಸಂ.]

**ಬಲಪ್ರಯೋಗ** (ನಾ). ೧. ಒತ್ತಾಯ ; ನಿರ್ಬಂಧ : ಒಂಟಿಕೋಣೆಗೆ ಹೋಗುವುದಿಲ್ಲವೆಂದು ವಾಸಿಲ್ಯೇವ್ ಹಠಮಾಡಿದನು. ಕಾವಲುಗಾರರು ಬಲಪ್ರಯೋಗ ಮಾಡಬೇಕಾಯಿತು (ತಾಯಿ. ೨೦೩). ೨. ಒತ್ತಡ ; ಒತ್ತರ : ವಿದ್ಯುತ್ಪ್ರವಾಹವು ಕಾಂತದ ಮೇಲೆ ಬಲಪ್ರಯೋಗ ಮಾಡುವುದನ್ನು ನೋಡಿದರೆ ಆ ಪ್ರವಾಹಕ್ಕೆ ಸಂಬಂಧಿಸಿದ ಕಾಂತಕ್ಷೇತ್ರವಿದೆಯೆಂದು ಕಂಡುಬರುವುದು (ಭೌತಶಾ. ೩೩೦). [ಸಂ.]

**ಬಲಬವರಿ** (ನಾ). ಬಲಭಾಗಕ್ಕೆ ತಿರುಗುವ ಒಂದು ಪಟ್ಟು : ತಿವಿದನಣ ಸಿನಲೂಱಿ ಮೊನೆಯಲಿ ಸವಡಿಯಾನೆಯನೆತ್ತಿದನು ಬಲಬವರಿಯಡಬವರಿಯಲಿ ತಡೆಗಾಲೊತ್ತಿಯದ್ದನಾ ಭೀಮ (ಕುಮಾರ. ಗ. ೦-೩೬). [ಬಲ₁+ಬವರಿ]

**ಬಲಭಂಜನ** (ನಾ). =ಬಲಧ್ವಂಸಿ : 'ಬಲಭಂಜನಾರಿ' ಪರಾ. [ಸಂ.]

**ಬಲಭಂಜನಾರಿ** (ನಾ). ಇಂದ್ರನ ವೈರಿ ; ಇಂದ್ರಜಿತು : ಬಲಭಂಜನಾರಿ [ಪಾಠಾಂ. ಜಂಬಾರಿಜಿತು, ಜಂಭನಾರಿ] ಮಹೀಪತಿಯಾಗಿಯು ಮಗಳ ರೂಪಿನ ಕಪಟಕಾಮಿನಿಯ ಬಾಳಿನಲಿ ಬಱಿಕ್ಕಿದು ಜವರಕೆ ತಾಳಲಾಱದೆ ಹನುಮನಲಿ ಸೇನಾಳಿ ಸಹಿತೋಸರಿಸಿ ನಿಂದನು ಪುರದ ಬಾಹೆಯಲಿ (ತೊರರಾ. ೬-೯೨-೦). [ಸಂ.]

**ಬಲಭದ್ರಿಕೆ** (ನಾ). ಒಂದು ಬಗೆಯ ಔಷಧೀಸಸ್ಯ : "ವಾರ್ಷಿಕಂ, ತ್ರಾಯಮಾಣಾ, ತಾಯಂತ್ರೀ, ಬಲಭದ್ರಿಕಾ — ಳ ನೀರಾಮಬಳ್ಳಿ" (ಸಿದ್ಧಾಂತ. ೦೪೬). [ಸಂ. ಬಲಭದ್ರಿಕಾ]

**ಬಲಭರ** (ನಾ). ೧. ಸೈನ್ಯದ ಹೆಚ್ಚಳ ; ಸೇನೆಯ ಆಧಿಕ್ಯ : ಬಲಭರಸಂಕ್ಷೋಭಭಯಂದಳೆದಂಬರಕೊಗೆದ ನದಿಗಳೆನೆ ನಿಖಿಲದಿಶಾಕುಲಮಂ ಬಾಸಣಿಸುಗುಮುತ್ತಲಾಂಧವಧವಳವೆನಿಸಿದೀ ಧ್ವಜಪಟಲಂ (ಕಾರಂಪೂ. ೬೦೦). ೨. ಸೈನ್ಯದ ಭಾರ : ಬಲಭರದಿಂ ನೆಲಂ ಕುಸಿಯ ಶೇಷನ ಪೆರ್ವೆಡೆ ತರ್ಗಿ ಕಂಠಕಂಧರಮೊಳಗಟ್ಟಡಂಗಿದುದು (ಪುಷ್ಪದಂ. ೩-೩೬). [ಸಂ.]

**ಬಲಭೇದಿ** (ಗು). ೧. ನಿಶ್ಶಕ್ತಿಗೆ ಕಾರಣವಾದ. (ನಾ). ೨. =ಬಲಧ್ವಂಸಿ. ೧, ೨ : ಉಳಿ ಗಳೆ ವಿಷಾದವನುಸಿರ ವೇಗವನಂತೆ, ಮೇಲೆ ಮುಂಬರಿವುದದು ಬೇಡವಿನ್ನು ಗುರುಕಂಪ ನಿನಗೇಕೆ ; ಬಲಭೇದಿ ಜೃಂಭಿತವು ? ಇಲ್ಲಿ ಬಾರಾ ವತ್ಸ ! ನನ್ನ ಜತೆಗೆ (ಶ್ಯಾಮಲೋ. ೯೯). [ಸಂ. ಬಲಭೇದಿನ್]

**ಬಲಮತ್ತ** (ಗು). ೧. ಪರಾಕ್ರಮದಿಂದ ಕೊಬ್ಬಿದ ; ಸಾಮರ್ಥ್ಯದಿಂದ ಸೊಕ್ಕಿದ : ಬಲಮತ್ತ ವ್ಯಕ್ತಿ ಏನು ಮಾಡಲೂ ಹೇಸುವುದಿಲ್ಲ (ರೂಢಿ). (ನಾ). ೨. ಪರಾಕ್ರಮದಿಂದ ಕೊಬ್ಬಿದ ವ್ಯಕ್ತಿ ; ಸಾಮರ್ಥ್ಯದಿಂದ ಸೊಕ್ಕಿದ ವ್ಯಕ್ತಿ : ಅವನು ಕಾಮರೂಪಿಯಾಗಿ ಆಕಾಶದಲ್ಲಿ ಸಂಚರಿಸುತ್ತ ಬಲಮತ್ತನಾಗಿ ದೈತ್ಯರನ್ನೂ ದೇವತೆಗಳನ್ನೂ ಮುತ್ತಿ ಅವರ ರತ್ನಾದಿ ಐಶ್ವರ್ಯಗಳನ್ನು ಹೊತ್ತು ತರುತ್ತಿದ್ದನು (ವನಪ. ೪೦೯). [ಸಂ.]

**ಬಲಮಥನ** (ನಾ). = ಬಲಧ್ವಂಸಿ : ಬಲಮಥನ ಹೊಗಳಲು ಹರುಷದುಬ್ಬಿನಲನುಜನೊಡಗೂಡಿ ಪೃಥುಳಬಲ ತೊರವೆಯ ಹಿರಣ್ಯಕಮಥನ ತಿರುಗಿದನಿತ್ತಲಧಿಕಪ್ರಥಿತ ವಿಜಯಾಭ್ಯುದಯದೇಳಿಗೆಯಿಂದ ಪಾಳಯಕೆ (ತೊರರಾ. ೬-೩೯-೬೦). [ಸಂ.]

**ಬಲಮರ್ದು**, ಬಳಮದ್ದು, ಬಳಮರ್ದು (ನಾ). ೧. ಶ್ರೇಷ್ಠವಾದ ಮದ್ದು ; ಉತ್ತಮವಾದ ಔಷಧ : "ಬಲಮರ್ದನಲಂಕದೌಷಧಂ [ಪಾಠಾಂ. ಬಲಮದಮರ್ದನಲಂಕದೌಷಧಂ] ತಾನಕ್ಕುಂ" (ರಸ್ಯಶಂ. ೪) ;

"ಬಳವಮರ್ದ, ಬಲವಮರ್ದ – ಅಂಕದೌಷಧಂ" (ಕವಿರ. ಶಂ. ೨).

**ಬಳಮದ್ದು** : ೧. "ಬಳವಮರ್ದನಲ್ಕಂಕ[ಪಾಠಾಂ. ಅವಮರ್ದನಲಂಕ, ಬಳ ಮರ್ದನಲಂಕ, ಬಳವರ್ದನಲಂಕ] ದೌಷಧಂ" (ಶಬ್ದಸ. ೮೩). ಬಳ

**ಮರ್ದ** : ೧. "ಬಳವಮರ್ದನಲ್ಕಂಕದೌಷಧಮೆಂದೆನಿಕು ಸಂತತಂ" (ಶಬ್ದಮಂ. ೯೦). ೨. ಅತಿಯಾದ ಮತ್ತನ್ನು ಬರಿಸುವಂಥ ದ್ರವ್ಯ; ಉಗ್ರವಾದ ಮಾದಕದ್ರವ್ಯ : ಪರಿಮಳಲೋಭದಿಂ ಮುಸುಱಿ ಮುತ್ತುವ ತುಂಬಿಗಳೊಳ್ಗುರುಳ್ಗಳೊಳ್ ಬೆರಸುವಿನಂ ಮಗುಳ್ಚುವ ದಳಂಗಳೊಳಂ ನಱುಸುಯ್ಯ ಕೆಂಪುಗಳ್ ಬೆರಸುವಿನಂ ಕದಕ್ಕದಿಸಿ ಪೆರ್ಮರೆಗಳ್ ಬಳವಮರ್ದನಂಗಜಂಗರೆವವೋಲೀಳೆ ಸಾಂದರೆವರಂಬಳವಟ್ಟರೆ ಘಟ್ಟವಳ್ತಿಯರ್ (ಮಲ್ಲಿಕೃ. ೨–೬೦) ; ಕಡೆಗಣ್ಣೊಂಟಣೆವಾತು ದೂದವಿ . . . ತನ್ನ ಬರ್ದಬಳವಮರ್ದಪ್ಪಾಯಿಲಂ ಕೂರ್ವರ್ (೦೮೮ವ. ೩–೯೬). 'ಬಳ ಮರ್ದಿಕ್ಕು', 'ಬಳವಮರ್ದಕಾಱ' ಪರಾ. [ಬಲ್ಮ + ಮರ್ದು]

**ಬಲಮಾಪಕ** (ನಾ). [ಭೌತವಿ] (ಪ್ರಾಣಿ, ಯಂತ್ರ, ಯಾಂತ್ರಿಕಬಲ ಮೊದಲಾದುವುಗಳಿಂದ ವೆಚ್ಚವಾದ) ಶಕ್ತಿಯನ್ನು ಅಳೆಯುವ ಒಂದು ಸಲಕರಣೆ ; ಶಕ್ತಿಮಾಪಕ : (D··· -meter· ಶಾಂಶ. ೩೩)· [ಸಂ.]

**ಬಲಮುರಿ** (ನಾ). ೧. ಬಲಭಾಗಕ್ಕೆ ತಿರುಗಿದುದು ; ಬಲಕ್ಕೆ ಹೊರಳಿದುದು ; ಬಲಸುತ್ತು : ಗರುವರ ಚಿತ್ರವನೊಲಿಸಿಕೊಂಬ ಬಲೆಯ ವರಗೃಹವಾ ಬಲಮುರಿಯ ಸುರುಚಿರಶಂಖವ ಹೋಲಿದ ಭೂಮಿಯ ಸರಿ ಕೇಳು (ವಿ.ಬುಸಂ. ೦೦–೬೦) ; ಒಬ್ಬರೊಬ್ಬರು ಬಲಮುರಿಯೆಡಮುರಿಯಾಗಿ ಸಬ್ಬವದೊಳು ಚಾಪಿವರಿದು ಇಬ್ಬರು ಸುಳಿದಾಡಿ ನಿಂದಳೊಬ್ಬಳು ಹಿಂದೆಯೊಬ್ಬಳಾಡಿದಳು ರಂಗದೊಳು (ಶರಕ. ೮೨–೬೯). ೨. ಬಲಗಡೆಗೆ ಬರುವಂತೆ ಬಿಟ್ಟ (ಸೊಂಟಪಟ್ಟಿಯ) ಚುಂಗು : ವರನಿಭಾರಿಯ ಬಳವಿನಲಿ ಬಲಮುರಿಯ ಬಿಗಿದನು ಪದಮುಖಿಕೆ ಮುಂಜೆರಗ ಬಿಟ್ಟನು ಬಿಗಿದ ಬದ್ದುಗೆದಾರಗೊಂಡೆಯವ (ಕುಮ್ಮಾಸ. ೮–೦೭). ೩. ನದಿಯು ಬಲಗಡೆಗೆ ಬಾಗಿರುವ ಸ್ಥಳ ; ● ಕೊಡಗಿನ ವಿರಾಜಪೇಟೆತಾಲ್ಲೂಕಿ ನಲ್ಲಿರುವ ಒಂದು ಪವಿತ್ರಕ್ಷೇತ್ರ : ಕಾವೇರಿ . . . ಕನಕೆಯೆಂಬಾ ನದಿಯುವಿರಾಗಿಯ ಬಂದು ವಿನಯದೆ ಭಾಗಮಂಡಲದೆ ಘನಸಂತೋಷದೆ ಸಂಗತಿಯಾಗೆ ಕಾನನದೆ ಬಂದಳು ಬಲಮುರಿಗೆ (ಕಂಪಾ. ೩–೯೦). ೪. ಒಂದು ಬಗೆಯ ಸಸ್ಯ ಮತ್ತು ಬಲಕ್ಕೆ ತಿರುಗಿಕೊಂಡಿರುವಂತೆ ಬಿಡುವ ಅದರ ಕಾಯಿ : "ಪಾನೀಯವಲ್ಲೀ – ಬಲಮುರಿ, ಚಿತ್ರಮೂಲ" (೬೩೦. ೯೬) ; ಕಾಡರಿಸಿನ, ಮುಸುಕುಜೋಳದ ಬೇರು, ಬಲಮುರಿಯ ಕಾಯಿ . . . ಹುಳಿ, ಎಣ್ಣೆ ಕೂಡಿ ಭರಣಿಯೊಳಗೆ ಹಾಕಿಸಿ ಎಲಚಿಸೌದೆಯಿಂದ ಅಡುವುದು (ಶಿಶ್ರ೦. ೯೪) ; ಕಾಯಿ ಬಿದುಮುರಿಯಾಗಿ ಬಲಕ್ಕೆ ಸುತ್ತಿರುತ್ತದೆ, ಇದರಿಂದಲೇ ಬಲಮುರಿ ಎಂಬ ಹೆಸರು . . . ಸಂಸ್ಕೃತದಲ್ಲಿ ಮೃಗಶೃಂಗ ಎನ್ನುತ್ತಾರೆ (ಹಸುಹೂ. ೫೯).

ಬಲಮುರಿಯ ಶಂಖ=ಬಲಮುರಿಶಂಖ : ಬಲಮುರಿಯ ಶಂಖಗಳ ಗಂಧದ ಬಲುಹೊಱೆಯ . . . ಹೇಮಘಟಸಂತತಿಯನೊಟ್ಟಿದರು (ಕುಮ್ಮಾಸ. ೩–೯೭). [ಬಲ್ಮ + ಮುರ್ಮ (<ಮುರಿವು)]

**ಬಲಮುರಿಪೊಕ್ಕುಳ್** (ನಾ). ಬಲಸುಳಿಯಿರುವ ಹೊಕ್ಕುಳು,–ನಾಭಿ: ಈ ಬಲಮುರಿಪೊಕ್ಕುಳ್ಗೊಳಸೆ ತನ್ನೊಳ್ಪೆಳೆದ ತಾವರೆಯಿಂ ನಾಲ್ಮೊಗನಂ ನಿರ್ಮಿಸಿ ಜಗತ್ಕಾರಣತ್ವಮಂ ನೆಲೆಗೊಯ್ದುದು (ಕಳಹಂ. ೦೩೭–೦).

[ಬಲಮುರಿ + ಪೊಕ್ಕುಳ್]

**ಬಲಮುರಿಶಂಖ** (ನಾ). ಬಲಭಾಗಕ್ಕೆ ತಿರುಗಿದಂತಿರುವ ಸಂಗಿಗಳುಳ್ಳ ಶಂಖ: ● ಅಪೂರ್ವವಾಗಿ ದೊರೆಯುವ ಇಂಥ ಶಂಖದಿಂದ ಅದೃಷ್ಟ ಉಂಟಾಗುವುದೆಂಬ ನಂಬಿಕೆಯಿದೆ : ಬಲಮುರಿಶಂಖ [ಪಾಠಾಂ. ಮುರಿಯ ಶಂಖ] ಧಿಗಿಲುಭುಗಿಲೆಂದು ಝುಂಕರಿಸಿತೆಂದು ಕಿಬಿಯೊಳಗಣ ಗುಳ್ಳಿ ಕೀಚುಕೀಚೆಂದಂತೆ (ಶಿಸವ. ೩೩–೨೩)· [ಬಲಮುರಿ + ಶಂಖ]

**ಬಲಮುರಿಸಂಕು** (ನಾ). = ಬಲಮುರಿಶಂಖ: ಬೆಳ್ದಿಂಗಳಂತೆ ಪಸರಿಪ ನಗೆಯುಂ ಬಲಮುರಿಸಂಕಿನಂತೆ ಗುಜ್ಜುಗೊಂಡು ರಂಜಿಪ ಕೊರಲುಂ . . . ಅಟ್ಟಜವಮಂ ಪುಟ್ಟಿಪವು (ಅದ್ಭುತ. ೬–೦೬).

[ಬಲಮುರಿ + ಸಂಕು$_1$ (<ಸಂಶ$_1$)]

**ಬಲಮೆಂಡಿಗಮುಂಡ** (ನಾ). ಒಬ್ಬಾತನ ಹೆಸರು: ಬಲಮೆಣ್ಡಿಗಮುಣ್ಡನ್ ಅಱಗೊಳೆ (ಮ್ಯಂಅ. ೧೯೨೬. ೯೯–೬ ; 10 ನೆಯ ಶತ).

[ಬಲಮೆಂಡಿ$_?$ + ಗಮುಂಡ$_?$ (<ಗಾವುಂಡ)]

**ಬಲಯುತ, ಬಳಯುತ** (ಗು). ೧. ಶಕ್ತಿಶಾಲಿಯಾದ; ಸಮರ್ಥನಾದ: ಅತಿರಥನಾತಂ ಗಡ ಬಲಯುತ ಸಮರಥನೆನ್ನೊಳಧಿಕಬಲವಂತಂ ಮಾರುತಿ ಗಡ ಮಹಾರಥಂ ಮಾರುತಿಯುಂ ತದ್ರಥದ ಗಾಲಿಗಳ್ಕೊಡ್ಡಿದುವೇ (ಗದಾಯು. ೩–೩೩); ಬಲಯುತ ಶ್ರೀಕಾಂತನಾಜ್ಞೆಯು ನಿಲೆ ನಿಖಿಲಭೂಪರ ಮುಕುಟದಲಿ . . . ತನ್ನೊಂದು ಚೆಲುವಿಕೆ ನಿಲೆ ವಧೂಹೃದಯದೊಳು ನಿಂದನು ಚಕ್ರಿ ರಾಜ್ಯದಲಿ (ಸುಕ್ಕಿಣ. ೩೬–೩೨). (ನಾ). ೨. ಶಕ್ತಿಶಾಲಿಯಾದವನು; ಸಮರ್ಥ : ಬಲಯುತನಾದೇ ಪಗೆವಂ ಕೊಲಬಾರಂ ಕಾಳಿಯುಂ ಗಡಿಣ್ಣಾಪ್ಪವರಾಗ್ ಸಲೆ ಕೊಲಬಾರದ ಪಗೆಯುಂ ಗೆಲಬಾರದದೆಂದು ಮೊಂತುಮೆಂಬದು ಪದನೇ (ಅರ್ಥಶೇ. ೬–೩೨). ೩. ಬಲರಾಮನನ್ನು ಕೂಡಿಕೊಂಡಿರುವವನು ; ಬಲಭದ್ರಸಹಿತನಾದವನು. ೨. ೩: ಹರಿಯಂತೆ ಬಲಯುತಂ ಶಿವನಂತೆ ರಾಜಶೇಖರಂ ... ಅಮ್ಯತಾರ್ಚಿಯಂತೆ ವಿಸ್ತರಿತಕುವಲಯನೆಂದು ಧರ್ಮಜನ ಧರೆ ಪೊಗಳುತಿರೆ (ಕ್ಷಪಿಚಾ. ೨–೦೩)·

**ಬಳಯುತ** : ೨. ಚಟ್ಟಸಾಮಂತಮಲ್ಲಂಗನುಜಂ ಶಾಂ ಗೋವಿದೇವನಧಿಕ ಬಳಯುತಂ ವಿಷ್ಣುಲೋಕೈಕನಾಥಂ ತನಯಂ ತಾನಾಗೆ ಚೆಲುವಂ ಪಡದುದು ವಿಭವಂ ಮಂಗಳ ಶ್ರೀವಿಳಾಸಂ (ಎಕ. XVI. ಶಕ್ಕಿನಾ. ೬೨–೩೩; 1242); ಬಳಯುತನಪ್ಪ ಚೇರಮನೃಪಾಳನ ನಿರ್ಮಳಕೀರ್ತಿ ಲೋಕಮಂ ಬಳಸಿ ದಿಶಾಗಜಂಗಳನಿತುಂ ಬಿಳಿದಾಗಿರೆ ಕಂಡು (ತ್ರಿಪುಶ. ೩–೯) [ಸಂ.]

**ಬಲರಕ್ಕಸಿ** 'ಬಲರಾಕ್ಷಸಿ' ನೋ.

**ಬಲರಾಕ್ಷಸ** 'ಬಲರಾಕ್ಷಸಿ' ನೋ.

**ಬಲರಾಕ್ಷಸಿ**, ಬಲರಕ್ಕಸಿ, ಬಲರಾಕ್ಷಸ, ಬಲರಾಕ್ಷಿ, ಬಲಾರಾಕ್ಷಸಿ, ಬಲಾರಾಕ್ಷಿ, ಬಲ್ಲರಕ್ಕಸಿ, ಬಾಲರಾಕ್ಷಸ, ಬಾಲರಾಕ್ಷಸಿ, ಬಾಳರಾಕ್ಷ (ನಾ). ಒಂದು ಬಗೆಯ ಸುವಾಸನೆಯ ಗಡ್ಡೆಗಳನ್ನು ಬಿಡುವ ಕುರುಚಲು ಗಿಡ : "ರಾಕ್ಷಸೀ . . . ಗಣಹಾಸಕಃ– ೬ ಕರೀಕಚೋರ, ರಾಕ್ಷಸೀ ಗಡ್ಡೆ" (ಸಿದ್ಧಾಂತಿ./ ೦೯೦)· **ಬಲರಕ್ಕಸಿ** : ಬಿಳೇ ಪದುಮುಟಬೇರು (ವೈಶಿಗಿ. ೬೦–೦೨೯). **ಬಲರಾಕ್ಷಸ**: ಬಲರಾಕ್ಷಸಗಡ್ಡೆ, ಕಳ್ಳಂಗಡಲೆ . . . ನಾವಲಗೆಡ್ಡೆ ಇವಿಷ್ಟು ಪ್ರತ್ಯೇಕವಾಗಿ ಹತ್ತು ಪಲಂಗಳು . . . ತೂಕ ಸೇರಿಸಿ (ಸಕಶ್ಯ. ೬೨). **ಬಲರಾಕ್ಷಿ** : (ಸಸ್ಯಶಿ. ೯). **ಬಲಾರಾಕ್ಷಸಿ** : (೪). **ಬಲಾರಾಕ್ಷಿ** : (ವೈಶಿಗಿ. ೩–೬೯). **ಬಲ್ಲರಕ್ಕಸಿ** : ತಿಲವಿಷ್ಟೆ . . . ಕರಿಬೇವು, ಬಲ್ಲರಕ್ಕಸಿಗಡ್ಡೆ, ರಾಸ್ನೆ . . . ಇವೆಲ್ಲವಂ ಚೂರ್ಣವಂ ಮಾಡಿ (ಸಕಶ್ಯ. ೨೩೩). **ಬಾಲರಾಕ್ಷಸ** : ಅಂಟುತೊಗರಿ, ಬಾಲರಾಕ್ಷಸ (ಸಸ್ಯಶಿ. ೦೦೨). **ಬಾಲರಾಕ್ಷಸಿ**: ಬಲರಕ್ಕಸಿ . . . ಬಾಲರಾಕ್ಷಸಿ (ಸಸ್ಯಶಿ. ೦೦೨). **ಬಾಳರಾಕ್ಷ**: ಮಾನಕ, ಕರಿಮಣಸುಂಗಿ, ಬಲರಕ್ಕಸಿ, ಬಾಳರಾಕ್ಷ (ಸಸ್ಯಶಿ. ೯)·

[?. / ತೆಲು. ಬಲುರಕ್ಕಸಿ, ಬಲುರಕ್ಕಿಸ. ● ಇದು 'ಬಾಳ = ಲಾಮಂಚ' ಎಂಬುದಕ್ಕೆ ಸಂಬಂಧಪಟ್ಟಿರಬಹುದು]

**ಬಲರಾಕ್ಷಿ** 'ಬಲರಾಕ್ಷಸಿ' ನೋ.

**ಬಲರಾಸಿ** (ನಾ). ಸೇನಾಸಮೂಹ; ಸೇನೆಯ ಗುಂಪು: **ಜಱುದುದೀ**

ಬಲರಾಶಿ ಗಾಳಿಯು ಹೊರಳಿಗೊಡ್ಡಿದ ಪೊಟ್ಟು ಹಾಱುವುದಂದೆ (ಕುಮಾ.ವ್ಯಾ. ೧೯-೨೭). [<ಸಂ. ಬಲರಾಶಿ]

**ಬಲರಿಪು** (ನಾ). ಬಲನೆಂಬ ರಾಕ್ಷಸನಿಗೆ ಶತ್ರುವಾದವನು; ಇಂದ್ರ: ಬಲರಿಪು ಪೊಗಳುತ್ತಿರೆ ಚಿಱುವುಲಿಯಿಡಂಗಮರವಿಸುತ ಗಣವಿದಮಂ ಕೊಟ್ಟು (ಶ್ರೀಕೃ. ೩೩-೮); ಬಲರಿಪು ತನ್ನದೊಂದು ಬಲಗರ್ವದಗುರ್ವಿನೊಳೆಮ್ಮೆಱಂಕೆಯಂ ಕಾಲಿಶದಿನೊರ್ವ ಖಂಡಿಸಿದಂ (ಕಾವ್ಯಸಾ. ೯೭೪).

[ಸಂ.]

**ಬಲರೇಖೆ** (ನಾ). [ಭೌತವಿ] "ಬಲಪ್ರಯೋಗದ ದಿಕ್ಕನ್ನು ತೋರಿಸುವ ರೇಖೆ" (Line of force. ೨೦೫೩): ಒಂದು ಏಕಧ್ರುವವನ್ನು ಕಾಂತದ ಉತ್ತರಧ್ರುವದ ಬಳಿ ಬಿಟ್ಟರೆ ಅದು ಕಾಂತದ ಬಲವನ್ನನುಸರಿಸಿ ಚಲಿಸುತ್ತಾ ದಕ್ಷಿಣಧ್ರುವವನ್ನು ಬಂದು ಸೇರುವುದು. ಹಾಗೆ ಬರುವಾಗ ಅದು ಅನುಸರಿಸುವ ಮಾರ್ಗಕ್ಕೆ ಬಲರೇಖೆ (Line of force) ಎಂದು ಹೆಸರು (ಕೌಶಲ. ೪೦೩). [ಸಂ. ಬಲರೇಖಾ]

**ಬಲಲೊಡ್ಡಿ** 'ಬಲದೊಡ್ಡಿ' ನೋ.

**ಬಲವಂಕ** 'ಬಲವಕ್ಕ' ನೋ.

**ಬಲವಂತ**, ಬಳವಂತ (ಗು). ೧. ಶಕ್ತಿಶಾಲಿಯಾದ; ಬಲಿಷ್ಠ: ಬಲವಂತ ಪುತ್ರನಂದಿಯ ತಲೆಯಂ ರಿಪುಬಲವುನೆಯ್ದೆ ತಱಿದಿಕ್ಕಿ ಮಹೀವಳಯು ಮನುಱೆ ಬೆಳಗುತ ಶಿವನಿಳಯುದೊಳಂ ಪೊಕ್ಕು ಚಕ್ರವಿಗಿತ್ತಾಗಳ್ (ಶ್ರೀಕೃ. ೩೨-೭೯); ಘಳಿಲನಲಗಂ ಕಿತ್ತು ಪುಟನೆಗೆವು ಲಾಗಿಸುತ ಪುಲಿಯ ಬೆಂಗಡಗೆಯ್ದು ಇಱಿದು ಕೆಡಪಿದನೊರ್ವ ಬಲವಂತ ಬೇಡನಾಗಳು (ರಾಘಶ. ೦೭-೬೩). (ನಾ). ೨. ಶಕ್ತಿಶಾಲಿಯಾದವನು; ಸಮರ್ಥನಾದವನು: "ಬಲ್ಲಿದಂ ಬಲವಂತನಂ ಸಳನೆನಿಕ್ಕು" (ಮಂಗರಾ. ೭೦-೧೯); ಅತಿರಥನಾತಂ ಗಡ ಬಲಯುತ ಸಮರಥನನ್ನೊಳಧಿಕಬಲವಂತಂ ಮಾರುತಿ ಗಡ ಮಹಾರಥು ಮಾರುತಿಯುಂ ತದ್ರಥದ ಗಾಲಿಗಳ್ವೊಡ್ಡಿದುವೇ (ಗದಾಯು. ೩-೩೩); ಬಲವಂತನ ಪಗೆವಂ ಮೇಲೆತ್ತಿ ಬರೆ ವಸ್ತುವಾಹನಂ ಗಳನಿತ್ರಾತನಂ ಸಂತೈಸುವುದು ಸಂಧಾನಮೆಂಬುದಕ್ಕುಂ (ಶಂಕಶಂ. ೨೦೯-೦೨); ಎಂಥಾ ಬಲವಂತನೋ ಕುಂತಿಯ ಸಂಜಾತನೋ (ಪುರಂದ. ೦-೨೦೩ ಪಲ್ಲವಿ). ೩. ಐಶ್ವರ್ಯವಂತ; ಶ್ರೀಮಂತ: ನೆಲ ಬಲವಂತನಿಗೆ, ಕುಲ ನೇಮವಂತನಿಗೆ (ಗಾದೆ). ೪. ಶಕ್ತಿಶಾಲಿಯಾದುದು; ಬಲಿಷ್ಠವಾದುದು: ಶಾಂತಿಕಗುರು ಪಾದಾಂಬುರುಹಾಂತಿಕದೊಳ್ ಜಾತರೂಪಧರರಾಗಿ ಶಮಸ್ವಾಂತಕ್ಕೆ ಘಾತಿಗಳ್ ಬಲವಂತಗಳ್ ಕಿಡೆ ಜಿನತ್ವಮೆಮ ಗಾಯ್ತಾಗಳ್ (ಶಾಂತಿಪು. ೯-೭೦); ಬಲವಂತನಪ್ಪುದೊಂದು ಸಿಂಹಮಂ ಮೊಲಂ ಕೊಂದುದು (ಶಂಕಶಂ. ೬೭-೬). ೫. ಬಲಾತ್ಕಾರ; ಒತ್ತಾಯ; ನಿರ್ಬಂಧ: ನೀನು . . . ಸಕಲಕಲೆಗಳು ಒಂದೇ ಬಳಿಯಲ್ಲಿ ಸೇರಿದೆಯೆಂಬುದನು ತಿಳಿದಿರಬೇಕೆಂದು ಬಲವಂತದಿಂದ ಕರತಂದೆನು (ವಿಕ್ರಮಾ. ೩೬); ಭೂಮಿಪ ಸೈಂಧವನು ಬಾಗಿಲೊಳ್ನಿಂದಿರ್ದಾ ಭಾಮಿಯನೀಕ್ಷಿಸಿ . . . ಬಲವಂತದಿಂದೆ ಒಡಿದಾ ಲಲನೆಯ ರಥವೇರಿಸುತ್ತ ನಡೆದಂ ಜವದಿಂ (ಶಾಂಶಾ. ೯-೧೦). **ಬಳವಂತ** : ೨. "ಬಳವಂತ– ಬಲವತ್=ಬಲಿಷ್ಠ" (ಕರ್ನಕೋ. ೨೯); ಬಳವಂತನಾದೊಡಂ ತಾನಿಱಿಕೆಯ್ಯಲ್ವೇಡ ರಿಪುವನಾತನಭೀಷ್ಟಂಗಳನೀವುದು ನಯುವುಂ ನೆಱೆ ಬಳೆಯಿಸುವುದು ಬಗೆಯೊಳಿಂತು ಗೆಲ್ವುದು ಪಗೆಯಂ (ಶಾಂತೀಶ್ವ. ೬-೧೩೦).

**ಬಲವಂತಮಾಘಸ್ನಾನ**=(ಅಲಂ) ಇಷ್ಟವಿಲ್ಲದಿದ್ದರೂ ಬಲಾತ್ಕಾರದಿಂದ ಮಾಡಿಸುವ ಕೆಲಸ; ನಿರ್ಬಂಧದಿಂದ ಮಾಡಿಸುವ ಕಾರ್ಯ: ಅಂಥವುಗೆ ಪಾಠ ಓದಿ ಜ್ಞಾನಾರ್ಜನೆ ಮಾಡಿರೆಂದು ಮೂಲೆಯಲ್ಲಿ ಕೂರಿಸುವುದು ಬಲವಂತಮಾಘಸ್ನಾನದಂತಾಗುತ್ತದೆ (ಶಿಕ್ಷಣ. ೦೩೦).

[ಸಂ. ಬಲವತ್]

**ಬಲವಂತತನ** (ನಾ). ೧. ಶೌರ್ಯ; ಸಾಮರ್ಥ್ಯ; ಪರಾಕ್ರಮ: ನೆಲೆಯಾವುದು ನಿನ್ನ ಬಲವಂತತನಕ್ಕೆ ಕುಲದೇವ ಕಪಾಲಿ.ಶ ವಿಜಯ ವಿಠ್ಠಲರೇಯ (ವೀಠ್ಠಲಂ. ೩೩-೬). ೨. ಬಲಾತ್ಕಾರ; ಒತ್ತಾಯ: ಹುಲಿ ಹುತ್ತ ಕಳ್ಳರ ಹಾದಿ ಬಲುಗೈಯರ ತೆಕ್ಕೆ ಇದು ಬಲವಂತತನದಿಂದ ಆಗದು ಅವರವರ ಬಲವರದಿಂದಲ್ಲದೆ (ಸುಂಕಶಂ. ೪. ೩೩೦-೦೬೯೬).

[ಬಲವಂತ + –ತನ]

**ಬಲವಕ್ಕ**, ಬಲಪಕ್ಕ, ಬಲವಂಕ (ನಾ). ಬಲಬದಿ; ದಕ್ಷಿಣಪಾರ್ಶ್ವ: ಒಂದಕ್ಷೋಹಿಣೀ ಬಲಂಬೆರಸು ದ್ರುಪದಂ ಧೃಷ್ಟದ್ಯುಮ್ನ . . . ವಿಚಿತ್ರಾದಿಗಳಪ್ಪ ತನ್ನ ಮಕ್ಕಳ್ವೆರಸು ನೆಲಂ ಮೂಱಿವಿಟ್ಟಂತೆ ಬಲವಕ್ಕದೊಳ್ ನಡೆಯೆ (ಪಂಪಭಾ. ೯-೬೩ ವ); ಓಳಿಗೊಂಡು ಮುಂದಯ್ಸ ನಿಂದ ಬಲವಕ್ಕದೆಡವಕ್ಕದಂಗರಕ್ಕರ ನೆರವಿಯುಮನೀಕ್ಷಿಸುತ್ತುಂ (ವರ್ಧಮಾ. ೯-೩೬ ವ): ಬಂದು ನೆಟ್ಟಗೆ ಬಲವಕ್ಕದೊಳ್ ನೆಲಸಿ ಕಣ್ಗೆಸೆದಂ ಬಿದಿ ನಿಂದು ನೋಟ್ಟರಾ (ಕರ್ನಾಟ. ೦೬೪). 'ಎಡವಕ್ಕ' ಪರಾ. **ಬಲಪಕ್ಕ**: ಹೊಲಿಯುವವರ ಬಲಪಕ್ಕದಲ್ಲಿರಬಾರದು, ಆಳುವವರ ಎಡಪಕ್ಕದಲ್ಲಿರಬಾರದು (ಗಾದೆ). **ಬಲವಂಕ**: ಎಡವಂಕಂ ಬಲವಂಕ [ಶಾಶಾಂ. ವಕ್ಕ] ಮೆಂಬೆಡೆಗಳೊಳ್ ನಾಕಿವ್ರಜಂ ಬರ್ಪುದೆಂದೊಡನೇಕಾದಶರುದ್ರರಷ್ಟವಸುಗಳ್ ಪನ್ನಿರ್ವರಾದಿತ್ಯರುಂ ನಡೆವರ್ ಸಂಗರಕೇಳಿಗೆಬೆಸಕದಿಂದುದ್ವೃತ್ತನಾ ವೃತ್ರಹಂ (ಜಗವ. ೦೩-೨೬); ಧರಣಿಪನ ಬಲವಂಕದಲಿ ಮೋಹರಿಸಿ ಪಾಂಚಾಲಕರು ಚೂಣಿಯೊಳುರವಣಿಸಿದರು ಸಕುಲ ಸಾತ್ಯಕಿ ಭೀಮನಂದನರು (ಕುಮಾ.ವ್ಯಾ. ೯_೩೦); ಕಾಲಿನ ಮೇಲೆ ಕಾಲಿಕ್ಕಿ ಗೌತಮಂ ಸಿಂಹಶಯ್ಯೆಯಲಿ ಬಲವಂಕದಲಿ ಮಲಗಲು (ವೃಷಭಾ. ೬೩–೨೦೮). 'ಎಡವಂಕ', 'ತೆಂಕವಂಕ' ಪರಾ.

[ಬಲ್$_1$ + ಪಕ್ಕ]

**ಬಲವತ್ತಿಕೆ** (ನಾ). ಶಕ್ತಿ; ಸಾಮರ್ಥ್ಯ: ಕಾಲಮೃತ್ಯುವಂ ಕೆಣಕಿದನೆ ಸೈಂಧವನು ತನ್ನ ಬಲವತ್ತಿಕೆಯ ಸಮ್ಮೊಡನೆ ತೋರಿದನೆ ಘಡಘಡ (ತುರಂಗ. ೩೩-೯೦). [<ಬಲವಂತ + –ಇಕೆ]

**ಬಲವತ್ಸೈನ್ಯ**, ಬಳವತ್ಸೈನ್ಯ (ನಾ). ಬಲಿಷ್ಠವಾದ ಸೇನೆ; ಸಮರ್ಥವಾದ ದಂಡು,–ಸೈನ್ಯ: ಬಲ[ಶಾಶಾಂ.ಳ]ವತ್ಸೈನ್ಯಪದೋತ್ಥಪಾಂಸುಚಯದಿಂ ಸೇನಾಮಹಾಭಾರದಿಂ ಬಳಕೋಳಾಹಳದಿಂ ವಿಯುಚ್ಚರಗಣಂ ಶೇಷಂ ದಿಶಾಪಾಲಕರ್ ಪೊಲಗೆಟ್ಟೋಡೆ (ಜಗವ. ೭-೯೦). **ಬಳವತ್ಸೈನ್ಯ**: ಬಳವತ್ಸೈನ್ಯಮನವನೀತಳಪತಿ ಬಿಸುಟಂ (ಶಾಂತಿಪು. ೧೧-೦೯). [ಸಂ.]

**ಬಲವದ್ವಿರೋಧ** (ನಾ). ಶಕ್ತಿವಂತರಾದವರ ವೈರ,— ಹಗೆ; ಸಮರ್ಥರಾದವರ ಶತ್ರುತ್ವ: ಎಮಗೆ ಬಲವದ್ವಿರೋಧದ ತೊಳಸು ಬದ್ದುದು ತೋಟಗಾಱದೆ ಜಲಧಿಮಧ್ಯದಲೂರ ಕಟ್ಟಿದೆವು (ಕುವ್ಯಾ.ಕ. ೨-೦೯). [ಸಂ.]

**ಬಲವದ್ವೈರಿ**, ಬಳವದ್ವೈರಿ (ನಾ). ಪ್ರಬಲವಾದ ಶತ್ರು. ಶಕ್ತಿಶಾಲಿಯಾದ ಹಗೆ: ಬಲವದ್ವೈರಿತಮೋಹರಾತಿಪಟುಗಳ್ ಪದ್ಮಾಸನಸ್ಪರ್ಶಸಲ್ಲಲಿತಂಗಳ್. . .ಆನತಜನಕ್ಕಾನಂದಮಂ ಮಾಟ್ಕೆ ಮಂಗಳಮುಚ್ಚಂಡಕರಂ ಮಹೀವಳಯದೊಳ್ಕಾಳುಕ್ಯಮಾರ್ತಂಡನಾ (ಗದಾಯು. ೦-೪). **ಬಳವದ್ವೈರಿ**: ಬಳವದ್ವೈರಿಕ್ಷಮಾಪಾಲರನಧಿಕಭುಜಾಗರ್ವದಿಂ ಗೆಲ್ದು ಲಕ್ಷ್ಮೀನಿಳಯುಂ . . . ಮಂಗಳಗೀತಂ ಪೊಣ್ಮೆ ಪೊಕ್ಕಂ ನಿಜಶಿಬಿರಮಂ (ಶಂಕಶಂ. ೨೩೬-೦೩). [ಸಂ. ಬಲವದ್ವೈರಿನ್]

**ಬಲವರ್**, ಬಲವರು (ಕ್ರಿ). ಬಲಗಡೆಯಿಂದ ಸುತ್ತು,—ತಿರುಗು: ಪ್ರದಕ್ಷಿಣೆ ಹಾಕು: ನಿಜರಥಮಂ ರಥಾಂಗಧರನಂ ಮುನ್ನಮೇಱಿಲ್ವೇಟ್ದು ಮೂಱುಸೂಟಿಱ್ ಬಲವಂದು ಪೊಡಮಟ್ಟು ರಥಮನೇಱಿ . . . ಗಾಂಡೀವಮನೇಱಿಸಿ ನೀವಿ ಜೇವೊಡೆದಾಗಳ್ (ಪಂಪಭಾ. ೦೦-೦೩೨ ವ); ಕಾಂಭೋಜಾವಳಿಗಳ ತುರುಷ್ಕತುರಂಗಮಂಗಳಡಿಯೊಳಡಂಗಿದನೆ ಗೆತ್ತು

ಕೈಗುತ್ತಿ ನೋಡಿಯುಂ ಬಲವಂದು ನೋಡಿಯುಂ (ಗದಾಯು. ೬-೨೮) ; ಇದೇನಾನುವೊಂದು ಕೃತ್ರಿಮಮಾಗಲವೇಳ್ಕುಮೆಂದಾ ಪುರನಂ ಬಲವಂದು ನೋಡಿ (ಹರಿಹರ. ೦೬೩-೬) ; ಶರಣರಂ ಬಲವಂದನಾಣ್ಣೆಯುಂ ಕೈಕೊಂಡು ಕರುಣಮಂ ತೋಱುತೆ ಕುಮಾರನಂ ಬೀಳ್ಕೊಂಡು (ಚಿತ. ೦-೯೦).

ಬಲವರು : ಬಲವರುತ್ತಿಪ್ಪುದಲ್ಲದೆ ಬೇಱೆ ನಡೆಯಿಲ್ಲ ನಲಿದು ತುತಿಯಿಸು ವುದಲ್ಲದೆ ಬೇಱೆ ನುಡಿಯಿಲ್ಲ (ಬಸವ. ೮೮. ೬೦-೫) ; ಹರಿಯ ಬಲವಂದಣ್ಣ ನಂಘ್ರಿಗೆ ಶಿರವ ಚಾಚಿ ನಿಜಾಯುಧವ ವಿಸ್ತರಿಸಿ ಪವನಜಪಾರ್ಥಮಾದ್ರೀ ಸುತರು ರಥವೇಱಿ ಧುರಕೆ ನಡೆದರು (ಕುಮಾ.ಭಾ. ೦-೬೬) ; ಪರಮ ಪತಿವ್ರತೆಯರ ಪಾದದರ್ಶನ ದೊರೆಕೊಂಡುದೆ ಪುಣ್ಯದಿವಸ ಪರಿದಿವರನು ಬಲವರೆ ಭೂಪ್ರದಕ್ಷಿಣದಿರವನಿನ್ನೇ ವಣ್ಣಿಪೆನು (ಹರಿ. ೨-೦೦).

[ಬಲ್$_1$ + ವರ್]

ಬಲವರು 'ಬಲವರ್' ನೋ.

ಬಲವರ್ಧಕ (ನಾ). ಶಕ್ತಿಯನ್ನು ಹೆಚ್ಚಿಸುವ ಔಷಧ ಮುಂತಾದುವು : ಶಿಶ್ಶಕ್ತವಾಗಿದ್ದ ನಿನ್ನ ದೇಹಕ್ಕೋಸ್ಕರ ಸೀಸೆಗಟ್ಟಲೆ ಬಲವರ್ಧಕಗಳನ್ನು ತಂದು ಕುಡಿಸಿ ಮೈಗೂಡಿಸಿದೆ (ಶಿಶಾ. ೨೫೭). [ಸಂ.]

ಬಲವರ್ಧನ (ನಾ). ಶಕ್ತಿಯ ಹೆಚ್ಚಳ ; ಪುಷ್ಟಿ : ಬಲವರ್ಧನಕ್ಕೆ :— ನ್ಗೆಲ ಬೇರು, ನೆಲ್ಲಿಯ ಚಟ್ಟು, ಅಮರದಬಳ್ಳಿ — ಇವಂ ಚೂರ್ಣಂ ಮಾಡಿ ತುಪ್ಪ, ಜೇನುತುಪ್ಪವಂ ಸಮಮಾನಂಗೊಂಡು ಲೇಹ್ಯಂ ಮಾಡುಗೆ (ಚಿಕಿ. ೨೦೪). [ಸಂ.]

ಬಲವಿನ್ಯಾಸ (ನಾ). (ಯುದ್ಧದಲ್ಲಿ) ಸೈನ್ಯವನ್ನು ನಿಲ್ಲಿಸುವ ಕ್ರಮ : "ವ್ಯೂಹಃ, ಬಲವಿನ್ಯಾಸಃ — ೨ ಕಾಳಗಕ್ಕೆ ಚತುರಂಗದಳವನ್ನೂ ಸ್ಥಲದ ಸಂದುಕಟ್ಟಿಗೆ ತಕ್ಕ ಹಾಗೆಯೇರ್ಪಡಿಸಿ ಗುಂಪುಗುಂಪುಗಳಾಗಿಯೂ ಸಾಲಾಗಿಯೂ ಯುದ್ಧಶಾಸ್ತ್ರರೀತ್ಯಾ ನಾನಾಕಾರಗಳಾಗಿ ನಿಲ್ಲಿಸುವಿಕೆ" (ಸಿಗ್ಗಾಂ. ೨೬೦). [ಸಂ.]

ಬಲವಿರೋಧಿ (ನಾ). = ಬಲರಿಪು : ಸವಣಂ ಬಳಪಂಗೊಳೆ ಗಾಂಡಿವಿ ಬಲ್ಗೊಳೆ ಬಲವಿರೋಧಿ ವಜ್ರಂಗೊಳೆ . . . ಪೊಣರ್ಗಾವಂ ನಿಲ್ವಂ (ಚುಟ. ೦೬೬ ಕ್ರಿಯೋ.) ; ದೂರ್ವಾಸಯ್ಯವಳ ದೆಸೆಯಿಂದ ಬಲವಿರೋಧಿಗೆ ಕೇಳದೈ (ಕೊರಿಶಾ. ೦-೦೦-೦೦) ; ಆ ಮರುತ್ತನೃಪತಿಂದ ಬಲವಿರೋಧಿಗೆ ನಮಿಸಿ . . . ಎನ್ನೊಳು ಬಲಿದು ಬಲುಮುನಿಸನೆಲ್ಲವ ಕಳೆದು ಸಲಹೆಂದೆನುತ ಸಂಪ್ರಾರ್ಥನೆಯ ಮಾಡಿದನು (ಜೈಮಿ. ೦-೦೦೯).

[ ಸಂ. ಬಲವಿರೋಧಿನ್ ]

ಬಲವಿಹೀನ (ನಾ). ಶಕ್ತಿಯಿಲ್ಲದ ವ್ಯಕ್ತಿ ; ದುರ್ಬಲವ್ಯಕ್ತಿ : ಸಭೆಯಲಿ ಬಲವಿಹೀನರಿಗಾಪ್ತರಿಲ್ಲೆಂದಬಲೆಯೊಱಲಿದಳು (ಕುಮಾ.ಭಾ. ೩-೯೦). [ಸಂ.]

ಬಲವು (ನಾ). ಶಕ್ತಿ ; ಸಾಮರ್ಥ್ಯ ; ಪರಾಕ್ರಮ : ವ್ಯಂಜನದ ಮೇಲಣತ್ವಕ್ಕೆ — ನಿಲವು, ಒಲವು, ಬಲವು (ಶಮದ. ೨೦೦ ಕ್ರಿಯೋ.). ☞ ಈ ಶಬ್ದದ ಪ್ರಯೋಗ ಅಪರೂಪ. [< ಬಲ್$_1$ + — ವು]

ಬಲವೈರಿ, ಬಳವೈರಿ (ನಾ). = ಬಲರಿಪು : "ಪಲಗಣ್ಣನುಂ ಮುಗಿಲ್ದೇರ ನಿಂದಿರನೆನಲ್ ಬಲವೈರಿ" (ಅಭಿ. ೦೦) ; ಬಲವೈರಿಸ್ಫಾರವಜ್ರಾಭೀಕ ಭಯಚಕಿತೋದ್ಭೂತ ಮೈನಾಕ ಗೋತ್ರಾಚಲಪಕ್ಷತ್ರಾಯಿಯಿಂದುಪ್ರಿಯ ತಮಂ . . . ಸಮುದ್ರಂ (ಶಂಕರ. ೦೫೦-೫) ; ಜಲನಿಧಿಪೊಲ್ ಗಂಭೀರಂ ಬಲವೈರಿಯವೊಲ್ ಸಮಗ್ರವಿಭವಸನಾಥಂ (ಕಾವ್ಯಾವ. ೬೬೬). ಬಳವೈರಿ : ಬಳವೈರಿಯೆಂಬ ಸಾಧಕನಿಳೆಯಂ ಪೊಸಮಾಸಿಮಾಡಿ ಶಶಿಮಂಡಲಮಂ ಗುಳಿಗೆಯಿಡ ತಿಮಿರಕಾಳಿಕೆ ಶಿಳಿದಂತೆ ಜಲಕ್ಕನಾಯ್ತು ಪೊಸಮೆಲ್ಕಾಂಗಳ್ (ಶಿವಪು. ೬-೬೩). [ಸಂ. ಬಲವೈರಿನ್ ]

ಬಲಶಾಲಿ (ನಾ). ಶಕ್ತಿಶಾಲಿ ; ಪರಾಕ್ರಮವುಳ್ಳವನು : ಆ ಹುಡುಗರಿಗೆಲ್ಲ ಸೀತಾರಾಮು ಎಂಬ ಹುಡುಗನು ಮುಖಂಡ . . . ಬಲಶಾಲಿ ಕುತ್ತು ತುಂಟ (ಅಹು. ೬) ; ತನ್ನ ಆಳು ಬಹಳ ಉಣ್ಣಬೇಕು ಮತ್ತು ಅವರು ಬಲಶಾಲಿಗಳಾಗಿರಬೇಕೆಂದು ಅವನ ಇಚ್ಛೆ ಇತ್ತು (ಬಂಗಾರ. ೦೩).

[ಸಂ. ಬಲಶಾಲಿನ್]

ಬಲಸಂಕು (ನಾ). = ಬಲಮುರಿಶಂಖ : ಏಕಮುಖದ ರುದ್ರಾಕ್ಷಿ ಪಸ್ಸಗ ನೇತ್ರ ಕಾಕಮೃತ್ತಿಕೆ ಬಲಸಂಕು ಬೇಕಾದ ದಿವ್ಯೌಷಧಗಳ ಮುನಿವರರಾ ಕುವರನಿಗೆ ನೀಡಿದರು (ಕೋಳಿಕ. ೦೯-೬೦).

[ ಬಲ್$_1$ + ಸಂಕು$_1$ (< ಸಂಕ$_1$) ]

ಬಲಸಂಘಟ್ಟನ (ನಾ). ಸೈನ್ಯದ ತಾಕತ : ಬಲಸಂಘಟ್ಟನದಿಂ ಮಹೀವನ ವಶೇಷಂ ಪೋಗೆ . . . ಬೀಡುವಿಡುತ್ತ ನಿಚ್ಚಮಯಾಣಂಬಂದಂ ಮುರಧ್ವಂಸಕಂ (ಅಗಾ. ೦೬-೬೦). [ಸಂ.]

ಬಲಸನ್ನೆ (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ ; ಬಲಭಾಗದಿಂದ ಕತ್ತಿಯನ್ನು ಬೀಸುವ ಒಂದು ಕ್ರಮ : ತಳಸಂಚು ಮೇಲ್ವಂಚು ಹಿಂತೋರೆ ಮುಂತೋರೆ ಬಲಸನ್ನೆಯೆಡದ ಸನ್ನೆಯೊಳು ಅಲಗ ನೀಡಿದರಲಗಿನೊಳಾಂತು ನೆಗೆದು ಮೈಹೊಳೆದು ತಪ್ಪಿಸಿದನೆಲ್ಲವನು (ಅಕ್ಕ. ೬೬-೨೬). [ಬಲ್$_1$ + ಸನ್ನೆ]

ಬಲಸು (ನಾ). ಒಂದು ಬಗೆಯ ಮರ : ಎಣ್ಣೆ ಎರಡೂವರೆ ಸೇರು . . . ಬಲಸುಬೇರಿನ ಚಕ್ಕೆ . . . ಭಂಗೀಸೊಪ್ಪಿನ ಪುಡಿ ಎಲ್ಲವನ್ನೂ ಚೂರ್ಣ ಮಾಡಿ (ಸಕಕ್ಕ. ಹು. ೯೭೦) ; ಕಾರೆ, ಗಂಡುಕಕೋಲ್, ಬಲಸು (ಬ್ರಹ್ಮ. ೬೦-೩೦೨). [← ತೆಲು. ಬಲುಸು]

ಬಲಸುತ್ತು (ನಾ). ಬಲಭಾಗಕ್ಕೆ ಸುತ್ತಿಕೊಂಡಿರುವುದು ; ಬಲಪಕ್ಕಕ್ಕೆ ತಿರುಗಿಕೊಂಡಿರುವುದು : ಎದುರುಬದುರು ಸುತ್ತುಗಳುಳ್ಳ ಕೊಳವೆಗಳನ್ನಾಗಲಿ ದಂಡಗಳನ್ನಾಗಲಿ ಒಟ್ಟಿಗೆ ಸೇರಿಸಲು ಎಳೆಯುವ, ಒಂದು ಕೊನೆಯಲ್ಲಿ ಎಡಸುತ್ತುಗಳೂ ಮತ್ತೊಂದು ಕೊನೆಯಲ್ಲಿ ಬಲಸುತ್ತುಗಳೂ ಒಂದರಲ್ಲೇ ಇರುವ ಉದ್ದತಿರುಪುಗಟ್ಟಿ (sleeve-nut. ಇಂಕಕ). 'ಎಡಸುತ್ತು' ಪರಾ. [ಬಲ್$_1$ + ಸುತ್ತು$_2$]

ಬಲಸೂದನ (ನಾ). = ಬಲಧ್ವಂಸಿ : "ಇಂದ್ರಃ, ದುಶ್ಚ್ಯವನಃ . . . ಬಲಸೂದನಃ, ಶತಮುಖಃ . . . ಮೇಘವಾಹನಃ — ಈ ೩೯ ದೇವೇಂದ್ರನ ಪೆಸರ್" (ಕರಾಯು. ೦೦-೬೩) ; ಬಲಸೂದನ ಗೌತಮಮುನಿಲಲನೆಗೆ ಮನ ಮಿಕ್ಕಿರಾತನುರುಶಾಪದೆ ನೀಂ ಸಲೆ ಯಾವಸ್ಥೆವಡೆದೆಯೊಯೆಲೆ ಸುರಪತಿ (ಮೂಡಕಿ. ೦೪-೯೬). [ಸಂ.]

ಬಲಸ್ಥ (ನಾ). ಬಲಿಷ್ಠನಾದವನು ; ಶಕ್ತಿಶಾಲಿ ; ಸಮರ್ಥ : ಕುಲದ ಛಲದಾಯದಳವಿನ ಕಲಿತನದುನ್ನತಿಯನಲಸದೀ ಸುರಸಭೆಯೊಳ್ ಪಲವಾಡುವೆನ್ನ ನಾಲಗೆ ಬಲಸ್ಥನೊರ್ವಂಗೆ ಜೀಯ ದೇವೆಂದಪುದೇ (ಅಜಿತ. ೦೨-೦೦೦) ; ಶುಂಭದ್ವಿಪುಲಾಲಾನಸ್ತಂಭಂ ಲಕ್ಷ್ಮೀಕರೇಣುಗೆನಿಸಿ ದುದು ಭುಜಸ್ತಂಭಂ ಲಕ್ಷ್ಮೀಪ್ರಾಕಾರಂ ಭುವನಕ್ಕೆಂ ಬಲಸ್ಥನೋ ಬಲದೇವಂ (ಜಗನ್ನಾಥ. ೨-೮). [ಸಂ.]

ಬಲಹಂಸ (ನಾ). [ಸಂಗೀತ] ಒಂದು ರಾಗದ ಹೆಸರು : ಬಲಹಂಸ ವೆಂಬ ರಾಗವು (೧) ಆರೋಹದಲ್ಲಿ ನಿ-ಯನ್ನು ಬಿಟ್ಟಿದೆ (ಕರ್ನಾ. ೦೬೪) ; ಬಲಹಂಸ - ೨೮ನೇ ಮೇಳಕರ್ತ ಹರಿಕಾಂಭೋಜಿಯಲ್ಲಿ ಜನ್ಯ (ಸಂಗೀತ. ೦೬೪). [ಸಂ.]

ಬಲಹರ (ನಾ). = ಬಲಧ್ವಂಸಿ : ಬಲುಹುಮಾಡಿಕೊಳಲ್ಕೆ ಹರಿಯದ ಬಲಹರಂ ಪವಣಲ್ಲ (ಅರ್ಜು. ೩೯-೭೬). [ಸಂ.]

ಬಲಹೀನ (ಗು). ೧. ಶಕ್ತಿಯಿಲ್ಲದ ; ನಿಶ್ಶಕ್ತವಾದ ; ನಿರ್ಬಲ ವಾದ : 'ಬಲಹೀನಜಾನು' ಪರಾ. (ನಾ). ೨. ಶಕ್ತಿಯಿಲ್ಲದವನು; ಅಶಕ್ತ : ಅಸಮರ್ಥ : ಬಲಹೀನ ನೀನಾ ಖಳನ ಕೊಲುವುದೆಂತು

(ಶಬ್ದಮ. ೧೪–೯೭) ; ವೈಜಯಂತಿಯಲ್ಲಿ ಆಳುತ್ತಿದ್ದ ಕದಂಬರು ಒನೆಯ ಶತಮಾನದಲ್ಲಿ ಬಲಹೀನರಾಗಿದ್ದರೆಂದು ತಿಳಿಸಿದ್ದೇವೆ (ಕರ್ನಾ. ೯೩.) [ಸಂ.]

**ಬಲಹೀನಜಾನು** (ನಾ). ೧. ದುರ್ಬಲವಾದ ಮೊಳಕಾಲು ; ನಿಶ್ಶಕ್ತವಾದ ಜಾನು. ೨. ದುರ್ಬಲವಾದ ಮೊಳಕಾಲುಗಳನ್ನುಳ್ಳವನು : ಚಲವಿಶ್ವಂ ಬಲಹೀನಜಾನು ಚಪಲಂ ಕಾಂತಾಪ್ರಿಯಂ . . . ಭ್ರಮಣಾರ್ಥಿ ದೇಗವೊಸೆವಂ ಮಾನಾನ್ವಿತಂ ಮೇಷಜಂ (ಜಾತಕ. ೦೪–೦). [ಸಂ.]

**ಬಲಹೀನತೆ** (ನಾ). ಶಕ್ತಿಯಿಲ್ಲದಿರುವಿಕೆ ; ದುರ್ಬಲತೆ : ಅವರಿಗೆ ವಯೋಧರ್ಮದಿಂದ ಬಲಹೀನತೆಯುಂಟಾಗಿದೆ (ಕಂಠಿ). [ಸಂ. ಬಲಹೀನತಾ]

**ಬಲಾಂತಕ** (ನಾ). = ಬಲಧ್ವಂಸಿ : ಅನೇಕವೃಂದಾರಕಾನಂದದುಂದುಭಿಗಭೀರಸ್ವರಂಗಳುಮಶೇಷಾನಿಮಿಷಜಯಜಯವಿಶೇಷಘೋಷಂಗಳುಂ ನೆಗೞೆ ತಳರ್ವಘಬಲಾಂತಕಂಗೆ ಬಲಾಂತಕಂ ಕಯ್ಗೊಟ್ಟೊಳಯಿಂಕೆ ಬಿಜಯಂಗೆಯ್ಸಿ (ಪುಷ್ಪದ. ೦೪–೦೦೯ ವ). [ಸಂ.]

**ಬಲಾಕ**, ಬಳಾಕ (ನಾ). ಒಂದು ಬಗೆಯ ಜಲಚರಪಕ್ಷಿ ; ಬೆಳ್ಳಕ್ಕಿ : ಬಕಕಲಹಂಸಬಲಾಕಪ್ರಕರ ಮೃದುಕ್ವಣಿತರವಮ್ಮಮಿದಿರೊಳ್ ತೋಱಿತ್ತು ಕೊಳಂ (ಶಂಕರಶಾ. ೮–೩೬) ; ಕೋಕನದಕುಮುದಕಲ್ಹಾರಬಕಬಲಾಕಮರಾಳಾನೀಕದಿಂ ಚೆಲ್ವುವೆತ್ತ . . . ಸರೋವರಕೆ ಬಂದು (ಪುಷ್ಪದ. ೦–೯೯ ವ); ಮೈದೋಱಿದುದು ಮುಂಗಾರು . . . ಹರುಷಿಸಿದವು ಬಲಾಕ ಚಾತಕಿ (ಹರಿಶ್ಚ. ೪–೬–೨). **ಬಳಾಕ** : "ಬಿಸಕಂಠಂ ಬಲಾಕಮನೆ ಬೆಳ್ಳಕ್ಕಿ" (ಮಂಗರಾ. ೫೦–೬) ; ಕಾಕೋಲೂಕಸೃಗಾಳಬಲಾಕೋಷ್ಟ್ರಚಮೂರುಖರಮುಖಂಗಳವೊಲ್ ನಾನಾಕುತ್ಸಿತಬೀಭತ್ಸುತರಾಕಾರದಲಿರ್ಪವಲ್ಲಿ ಯೋನಿಮುಖಂಗಳ್ (ಮಲ್ಲಿಪು. ೦೪–೦೩೩) ; ಇದುವೆಳೆವೆಣ್ಣಳ ಕಣ್ಣಳೆಮಿನ್ನಳ ಬೆದಱಿಸ ಬಂದ ಬಳಾಕ (ನಾಗಳು. ೩–೦೫). [ಸಂ.]

**ಬಲಾಕೆ**, ಬಳಾಕೆ (ನಾ). = ಬಲಾಕ: "ಬಲಾಕಾ, ಬಿಸಕಂಠಿಕಾ – ಈ ೨ ಬೆಳ್ಳಕ್ಕಿ" (ಹಲಾಯು. ೧೨–೯೬); ಅಲ್ಲಲ್ಲಿಗೆ ಪಳುಕಿನ ಬಲಾಕೆಗಳೊಳಂ ಬರೆದ ಸುರಶರಾಸನಂಗಳೊಳಂ . . . ಪೆಱವಂ ಪಲತೆಱದ ಶಿಶಿರೋಪಚಾರಂಗಳುಮಂ ಮಾಟ್ಟು ಪರಿಜನಂಗಳುಮಂ ನೋಡುತ್ತಂ ಪೋಗೆಪೋಗೆ (ಕಾದಂಬ. ೨೦೬). **ಬಳಾಕೆ** : ಕಾಚಮೇಚಕಚಯಚ್ಛವಿಯಾಂಬುವಿಂ ಗುಣ್ಪನಿಂ ಪುದಿದಿರ್ದತ್ತು ಸರೋವರಂ ಬಕಬಳಾಕಾನೀಕರಾವಾಕುಳಂ (ಶಂಕರಶಾ. ೦೪–೬೨) ; ಘಳಿಲನೆ ಬಳಾಕೆಯಾಕೃತಿ ಮಟೆಗಾಲದೊಳಿರದದೃಶ್ಯಮಪ್ಪಂದದಿನಿತ್ತುಟಿಯದೆ ಕಡೆಗಾಲದೊಳಳವೞಿಯೆ ಸುರಂ ಮಾಯಮಾಯ್ತು ದಿವಿಜನ ದೇಹಂ (ಶಾಂತ್ರಪು. ೯–೭೯). [ಸಂ. ಬಲಾಕಾ]

**ಬಲಾಚಾರ** (ನಾ). ಒಳ್ಳೆಯ ಗ್ರಹಗತಿ ; ಸಂಯೋಗ ; ಅದೃಷ್ಟ ; ಆ ದಿನ ಗಣೇಶನನ್ನು ಬಾವಿಗೆ ಕಳಿಸಿ, ಅವನ ಸ್ಥಾನದಲ್ಲಿ ಈ ಗ್ರಂಥವನ್ನು ರಿಸಿದ್ದೆ. ಆದರೆ ಆ ವಿದ್ಯಾಪತಿಯಿಂದ ನನ್ನ ಗ್ರಂಥಕ್ಕೇನೂ ಬಲಾಚಾರ ಒದಗಿ ಬರಲಿಲ್ಲ (ಮಾಂಗಾಳಿ. ೦೩). [☞ ಇದು 'ಗ್ರಹಚಾರ' ಎಂಬ ಶಬ್ದ ಸಾಮ್ಯದಿಂದ ಮಾಡಿಕೊಂಡ ರೂಪ]

**ಬಲಾಢ್ಯ**, ಬಳಾಢ್ಯ (ಗು). ೧. ಬಲಶಾಲಿಯಾದ; ಶಕ್ತಿಯುತವಾದ; ಸಮರ್ಥವಾದ : ಭಾರತವನ್ನು ನಿಯಂತ್ರಿಸಲು ಬೇಕಾಗುವ ಬಲಾಢ್ಯ ಸೈನ್ಯವನ್ನು ಹೊಂದಲು ಬ್ರಿಟನ್ನಿಗೆ ಸಾಮರ್ಥ್ಯವಿಲ್ಲ ಎಂಬುದನ್ನು ಆಳುವವರು ಮನಗಂಡರು (ಆಧ್ಯಾ.ಕರ್. ೦೯೦). (ನಾ). ೨. ಬಲಶಾಲಿಯಾದವನು ; ಶಕ್ತಿಶಾಲಿ; ಸಮರ್ಥ : ಗಿರಿಯಂತೆ ಬಿಣ್ಣಿದಂ ಸುರಕರಿಯಂತೆ ಬಲಾಢ್ಯನಬ್ಧಿಯಂತೆ ಗಭೀರಂ (ಕಮದ. ೨೦೪ ಪ್ರದೋ); ಸಹಸ್ರಕಂಠಂ ಜಗದೇಕವೀರಂ ರಾಕ್ಷಸಾಧಿಪಂ ಇನ್ನೆನಿತು ಪರಾಕ್ರಮಿಯೊ, ಎನಿತು ಬಲಾಢ್ಯನೊ, ಪೇೞನಿತು ಕ್ರೂರನೊ, ಆರಱಿವರ್! (ಅದ್ಭುತ. ೪೦–೦೭). **ಬಳಾಢ್ಯ** : ೨. ಜನ್ನಸ್ವಾಮಿ ಬಳಾಢ್ಯನಾಗಿ ನಿಲೆ ಸೌಮ್ಯರ್ ನೋಡೆ ಕೂಸಂ ಸುಧಾಜನ್ಮಂ ರಕ್ಷಿಸುವಂ ಸ್ವಕೀಯಶಿಶುವಂ ತಾಯಂತ್ ರಕ್ಷಿಪ್ಪೊಂದಂದದಿಂ (ಜಾತಕ. ೬–೩). [ಸಂ.]

**ಬಲಾತೈಲ** (ನಾ). ಒಂದು ಬಗೆಯ ಔಷಧೀಸಸ್ಯದಿಂದ ತಯಾರಿಸಿದ ಎಣ್ಣೆ : ಎದೆನೋವುಳ್ಳಾತನು ಬಲಾತೈಲವನ್ನಾದರೂ ಸುಕುಮಾರ ತೈಲವನ್ನಾದರೂ ತೆಗೆದುಕೊಂಬುದು (ವೈದ್ಯಸಾ. I. ೦೫೯). [ಸಂ.]

**ಬಲಾತ್ಕರಿಸು** (ಕ್ರಿ). ೧. ಒತ್ತಾಯಮಾಡು; ಬಲವಂತಮಾಡು; ನಿರ್ಬಂಧಪಡಿಸು : ಆತನು ಬಲಾತ್ಕರಿಸಿದರೂ ಕೂಡ ಮನುವು ನಾನಾವನ್ನು ತನ್ನ ಕುದುರೆಯ ಮೇಲೆಯೇ ಕುಳ್ಳಿರಿಸಿಕೊಂಡು ಕರೆತಂದಳು (ಝಾಂಸಿ. ೦೪); ನಾಲ್ಕಾರುದಿನ ಅಲ್ಲಿಯೇ ಇದ್ದು ಬರಬೇಕೆಂದು ಎಲ್ಲರೂ ಬಲಾತ್ಕರಿಸಿದರು (ಕೃ.ಜಾಕ. ೦೦೩). ೨. ಬಲಪ್ರಯೋಗಮಾಡು; ಶಕ್ತಿಯನ್ನು ಪ್ರಯೋಗಿಸು : ಮಡುವಿನೊಳು ಮಡವಿಡಿದ ನೆಗಳಂ ಬಲಾತ್ಕರಿಸಿ ಬಿಡಿಸಿಕೊಂಡೊಡಮುರಿದು ತಡಿಗಡರಿ (ಕೈ.ಬಿಕಾ. ೦೫–೩೭). [< ಬಲಾತ್ಕಾರ + – ಇಸು₁]

**ಬಲಾತ್ಕಾರ** (ನಾ). ೧. ಒತ್ತಾಯ; ಬಲವಂತ : "ಪ್ರಸಭಂ, ಬಲಾತ್ಕಾರಃ ಹಠಃ – ೩ ಬಲಾತ್ಕಾರದ ಪೆಸರು, ಬಲವಂತಮಾಡುವಿಕೆ, ನಿರ್ಬಂಧಗೊಳಿಸುವಿಕೆ" (ಸಿದ್ಧಾಂತ. ೨೭೦) ; ಬೆದರಿಕೆ ಹಾಕುವುದರಿಂದಲೂ ಬಲಾತ್ಕಾರದಿಂದಲೂ ಬಹಳ ಹಾನಿಯಾಗುವುದು (ಮುಂಬರು. ೪–೭೩); ನನ್ನ ಆಭರಣಗಳನ್ನು ಈ ಪಾಪಿಗಳು ಬಲಾತ್ಕಾರವಾಗಿ ಕಿತ್ತುಕೊಂಡರು (ಕೃ.ಜಾಕ. ೬೦). ೨. [ಜೈನ] ಮುನಿಗಳ ಒಂದು ಗುಂಪು : ಬಲಾತ್ಕಾರದ ಗಣದ ನೇಮಿಚಂದ್ರದೇವರ ಶಿಷ್ಯರು ಪಾರಿಶ್ವದೇವರು ತಂಮ ಹೆಸರ ಹಾಲ ಧಾರಗೆ ಬಿಟ್ಟ ಬಾಳು (ಕ. III–i, ೦೦–೯; 1642) ; ಗಣಗಳು : ದೇವ, ಸೇನ, ಬಲಾತ್ಕಾರ, ಬಳಗಾರ (ಕರ್ನಾ. ೯೬). [ಸಂ.]

**ಬಲಾಧಿಕ** (ನಾ). ಅತಿಶಯವಾದ ಬಲವುಳ್ಳವನು : ಬಲಾಧಿಕರಸಮ ಸೈನಿಕರ್ . . . ಲಂಕೆಯಂ ಪುಗುತಂದರ್ (ಶಂಪಾದಮ. ೦೯–೬೯). [ಸಂ.]

**ಬಲಾಧಿಕೃತ** (ನಾ). ಸೇನಾಧಿಪತಿ; ದಳಪತಿ : ನಿಜನಂದನನಪ್ಪ ಚಂದ್ರಾಪೀಡನಂ ತಾರಾಪೀಡನರೇಂದ್ರಂ ಬರಿಸಲೆಂದು ಬಲಾಧಿಕೃತನಪ್ಪ ಬಲಾಹಕ ನೆಂಬನಂ ಬೆಸಸೆ (ಕಾದಂಬ. ೯೯೩). [ಸಂ.]

**ಬಲಾಧಿಪ** (ನಾ). = ಬಲಾಧಿಕೃತ : ಇವರಂ ಸ್ವದೇಶಕನಂತವೈಭವದಿಂದೆ ನೀಂ ತತಸುವಾಕ್ಯಮನಾಡಿ ಬೀಳ್ಕೊಡಿನಲ್ ಬಲಾಧಿಪನಾಗಳೇ ನುತಬಲಂಗಳನೆಯ್ದಿಸಲ್ ಬಯಲಾದವದ್ಭುತಮೆಂಬಿನಂ (ಹರಿವಂಶ. ೨–೦೯–೩೨). [ಸಂ.]

**ಬಲಾಧ್ಯಕ್ಷ**, ಬಳಾಧ್ಯಕ್ಷ (ನಾ). = ಬಲಾಧಿಕೃತ: ಪುಂಡರೀಕಿಣಿಗೆ ಪಯಣಂಬೋಗಲ್ ನಿಶ್ಚೈಸಿದಂ ಧರಣೀಶ್ವರಂ ಅಂತತಿತ್ವರಿತಗಮನನಿಶ್ಚಿತಮಾನನಾಗಿ ಬಲಾಧ್ಯಕ್ಷನಂ ಬರಿಸಿ (ಆದಿಪು. ೪–೯೦ ವ). **ಬಳಾಧ್ಯಕ್ಷ** : ಭೂಪತಿ ಮೆಚ್ಚಿ . . . ಪಡೆಯಂ ಪಣ್ಣಿ ಬರವೇೞೆಂದು ಬಳಾಧ್ಯಕ್ಷಂಗೆ ಬೆಸಸುವುದುಂ (ಮಲ್ಲಿಪು. ೮–೧೩೦). [ಸಂ.]

**ಬಲಾನ್ವಿತ** (ಗು). ೧. ಶಕ್ತಿಶಾಲಿಯಾದ; ಬಲಿಷ್ಠವಾದ. (ನಾ). ೨. ಶಕ್ತಿಶಾಲಿಯಾದವನು; ಬಲಾಢ್ಯ. [ಸಂ.]

**ಬಲಾರಾಕ್ಷಸಿ** 'ಬಲರಾಕ್ಷಸಿ' ನೋ.

**ಬಲಾರಾಕ್ಷಿ** 'ಬಲರಾಕ್ಷಸಿ' ನೋ.

**ಬಲಾರಾತಿ** (ನಾ). = ಬಲರಿಪು : "ಇಂದ್ರಃ, ಮರುತ್ವಾನ್ . . . ಸುರಪತಿಃ, ಬಲಾರಾತಿಃ, ಶಚೀಪತಿಃ . . . ಸಹಸ್ರಾಕ್ಷಃ, ಋಭುಕ್ಷಾ– ೩೫ ದೇವೇಂದ್ರನ ಹೆಸರುಗಳು" (ಸಿದ್ಧಾಂತ. ೨೦). [ಸಂ.]

**ಬಲಾರಿ₁** 'ಭಟಾರಿ' ನೋ.

**ಬಲಾರಿ₂** (ನಾ). = ಬಲರಿಪು : ಮೊಱೆಯಿಡೆ ಕೇಳ್ದು ಚಕ್ರಧರನುಂ ಜಳಜೋದ್ಭವನುಂ ಬಲಾರಿಯುಂ ಪಱಿಗಿ . . . ಇದಾವನಿಂದಲರ್ದು

ದಾವನಿನೊತ್ತರಿಸಿತ್ತು ಕೌತುಕಂ ಎಂದೆಂದು ನುಡಿಯುತಿರ್ಪನಂ (ಗಂಗ. ೬-೭); ಇತ್ತನೋಲಗವನು ಬಲಾರಿಗೆ ಹತ್ತುಮಡಿ ತೇಜದಲಿ ಖಳನೆಂಬತ್ತು ಕೋಟಿಕಿರೀಟವರ್ಧನರುಗಳ ಗಡಣದಲಿ (ಕೃಕರ್ಣಾ. ೬-೬೦). 'ಬಲಾರಿಚಾಪ' ಪರಾ. [ಸಂ.]

ಬಲಾರಿಚಾಪ (ನಾ). ಕಾಮನ ಬಿಲ್ಲು; ಇಂದ್ರಚಾಪ : ಮೇರುವಿನ ತಪ್ಪಲಲಿ ಬೆಳೆದ ಬಲಾರಿಚಾಪವೊ . . . ಜಂಭಾರಿಭವನವನಳ್ಳಿಯ ತ್ರಿಪುರಾರಿಯೊಡ್ಡಿನ ಹೊಳಹಿನಲಿ ಹೊಳೆಹೊಳೆದನಾ ಹನುಮ (ಕರ್ಣಾ.೬. ೧೦-೬೭). [ಸಂ.]

ಬಲಾವಲೇಪ (ನಾ). ಶಕ್ತಿಯಿಂದ ಉಂಟಾದ ದರ್ಪ, –ಅಹಂಕಾರ : ಸಹಜಾತ ಬಂಹಿಮದ್ಬಲಾವಲೇಪಕ್ಕಂ ಸಮುಚಿತಶಾಸ್ತ್ರವೃತ್ತವರ್ತನಕ್ಕಂ . . . ತಾನೊರ್ವನೆ ನಿರುಪಮಜನ್ಮಭೂಮಿಯಾಗಿ . . . ಒಡ್ಡೋಲಗಂ ಗೊಟ್ಟಿರ್ದ ದವಿತಾರಿಯ ಮುಂದೆ ಕೃತಕಗಾಯಕಿಯರ್ ನಿರೆ (ಶಾಂತಿ. ೬-೯೯ ಕ) ; ಅದನಾಳ್ವಂ . . . ನಿಜಭುಜಬಲಾವಲೇಪ ಪ್ರತಾಪಾಟೋಪನಿರ್ಜಿತಾನೇಕಶತ್ರುಪ್ರಂಬರಸಂ (ಅಜಿತ. ೨-೨೩ ಕ). [ಸಂ.]

ಬಲಾಸ (ನಾ). ವಾತ, ಶ್ಲೇಷ್ಮಗಳಿಂದ ಕೊರಳಲ್ಲಿ ಉಂಟಾಗುವ ಒಂದು ಬಗೆಯ ಗಡ್ಡೆ,–ಗಂಟು : ವಾತಶ್ಲೇಷ್ಮಗಳು ಕೊರಳಲ್ಲಿ ಗಾತ್ರವಾಗಿ ಉನ್ನತವಾಗಿ ಇದ್ದ ಗ್ರಂಥಿಯನು ಉಂಟುಮಾಡುವವು. ಆ ಗ್ರಂಥಿ ಬಲಾಸವೆಸಿಕೊಂಬುದು (ವೈದ್ಯಸಾ. II, ೧೧೬). [ಸಂ.]

ಬಲಾಹ (ನಾ). ಒಂದು ಬಗೆಯ ವಿಷ : ಪಂಚವಿಂಶತಿಸ್ಥಾವರ ವಿಷ ನಾಮಂಗಳ್ ಸಲೆ ಮುಸ್ತೆ ವತ್ಸನಾಭಂ ಬಲಾಹ[ಪಾಠಾಂ. ಬಲುಹುಂ] . . . ಏಕವೀರಂ (ಅಕಾರ. ೨-೩) ; ಬಲಾಹವೆಂದು, ವತ್ಸನಾಭವೆಂದು, ಮುಸ್ತಕವೆಂದು . . . ರೋಹಿಣವೆಂದು, ಮುದ್ಗರವೆಂದು, ಹೀಗೆ ಸ್ಥಾವರವಿಷ ಇಪ್ಪತ್ತೈದುಭೇದಂಗಳಿಂದ ಭಿನ್ನವಾಗಿ ಇಹುದು (ವೈದ್ಯಸಾ. II, ೧೬೬). [ಸಂ. ?]

ಬಲಾಹಕ, ಬಳಾಹಕ (ನಾ). ೧. ಮೋಡ ; ಮುಗಿಲು ; ಮೇಘ : "ಅಭ್ರಂ, ಅಬ್ದಃ, ಘನಃ . . . ಜೀಮೂತಃ, ಬಲಾಹಕಃ — ಈ ೧೦ ಮುಗಿಲ ಪೆಸರ್" (ಹಲಾಯು. ೧೦-೩೬); ಬಲಾಹಕಪುಂಜಕಾಂತಿಯ ಪಿಂಗತರ ಮುಖ ಕೇಶದುನ್ನತಿಯು ಕಂಜನಾಭನ ಮೂರ್ತಿ ಶೋಭಾರಂಜಿತನು (ಕುಮಾ.ರಾ. ೬-೯). ೨. ಅತಿಶಯವಾಗಿ ಮಳೆ ಸುರಿಸುವುದೆಂದು ಭಾವಿಸಲಾದ ಪ್ರಳಯಕಾಲದ ಏಳುಮೇಘಗಳಲ್ಲಿ ಒಂದು : ಅಮರಸಮಿತಿಯ ತಂದ ಪಾಲ್ಗಡಲ ಪಾಲಂ ಪುಷ್ಕಲಾವರ್ತ ಬಲಾಹ ಕಾಂಬುದಂಗಳ್ ಕನಕಾಚಳಚೂಳಿಕೆಯೊಳ್ ಸುರಿವುತಿರ್ಪಂತಿಂದ್ರರುಂ ಭಗವದುತ್ಕ್ಷೇಪದೊಳ್ ಸು[ರಿ]ಯೆ (ಶಾಂತಿ. ೧೦-೯೫ ಕ) ; ಕರಿಯ ಬಲಾಹಕ ದೊಳು ಹರಿದಾಡುವ ಕರ ಸೊಗಯಿಪ ಮಿಂಚಿನಂತೆ (ಕೃಷ್ಣ ಕಥ. ೦೬-೦೯). ೩. ಒಂದು ಬಗೆಯ ಪಕ್ಷಿ; ಬೆಳ್ಳಕ್ಕಿ : ಶುಕಪಿಕಬಕಬಲಾಹಕಟಿಟ್ಟಿಭಕಾದಿ ಪಕ್ಷಿಗಳ ಕೋಲಾಹಲಕಲಕಲಧ್ವನಿಗಳಿಂದಲೂ . . . ಪ್ರಕಾಶಿಸುತ್ತಿದ್ದವು (ಕಥಾ. ೯೬). ೪. ವಿಷ್ಣುವಿನ ನಾಲ್ಕು ಕುದುರೆಗಳಲ್ಲಿ ಒಂದು. ೫. ಒಂದು ಬಗೆಯ ಹಾವು. ಬಳಾಹಕ : ೧. ವರಯುವತಿ ಬಂದಳು . . . ನವಬಳಾ [ಪಾಠಾಂ. ವಲಾ] ಹಕದೊಳಗೆ ಮಿಂಚಿನ ಗುಪಿಸಿತ ಮಹಾಮೇಘವಾವಿರ್ಭವಿಸಿತೆನೆ ದಂಡಿಗೆಯನಿಳಿದಳು ಹೊಕ್ಕಳೋಲಗವ (ಕುಮಾ.ಉ. ೬-೦೬). [ಸಂ.]

ಬಲಿ₁ 'ಬಲ್'₁ ನೋ.

ಬಲಿ₂ (ಗುಂ). ೧. ಶಕ್ತಿಶಾಲಿಯಾದ : ಬಲಿಸೌಮಿತ್ರಿಸಮೇತರಾಮನ ನಿಳಾಸಂಜಾತೆಯುಂ ಮತ್ತೆ ದೋರ್ಬಲಶತ್ರುಘ್ನಪುರಸ್ಥನಾದ ಭರತ ಕ್ಷ್ಮಾಪಾಲನಂ ಕಂಡು . . . ನಮಸ್ಕಾರಂಗಳು ಮಾಡಿದಂ (ಜಗನ್ನಾಥ. ೦೦-೩೬). (ನಾ). ೨. ಗಟ್ಟಿ; ದೃಢ: 'ಬಲಿಕೆಯನ್', 'ಬಲಿವಿಡಿ' ಪರಾ. ೩. ಬಲಿಷ್ಠನಾದವನು ; ಶಕ್ತಿಶಾಲಿ : ಶ್ರೀಯುವತೀಪ್ರಿಯಂ ಬಲ ಯುತಂ ಬಲಿದರ್ಪಹರಂ . . . ಆದಿಪುರುಷಂ ಪುರುಷೋತ್ತಮನೀ ಚಳುಕ್ಯನಾರಾಯಣದೇವನೀಗೆಮಗೆ ಮಂಗಳಕಾರಣಮಾತ್ಮಪಂಗಳಂ (ಗದಾಯು. ೦-೦) ; ಶ್ರೀಯ ಮನಃಪ್ರಿಯಂ . . . ಬಲಜ್ಞ್ಯಾಯನಭೇದ್ಯ ಮನ್ಯಕುಶಲಂ ಬಲಿಬನ್ಧನನನ್ತ ರಾಯನಾರಾಯಣನೆಪ್ಪುದುರ್ವ್ವಿ ನರಸಿಂಹಪರೇನ್ದ್ರನ ಮನ್ತ್ರಿ ಬೂಚನ (ಎಕ. V, ಅರಸೀ. ೭೩-೨೮; 1169); ಆ ಬಲಿಯುಂ ದೈತ್ಯಕದಂಬಕ್ಕೆಬಲಿಯುಂ ಯಕ್ಷೀಕೃತಶತ್ರುಭೃದ್ಬಲಿಯುಂ ಮೆಟ್ಟಿ ರಸಾತಳಕ್ಕಿಟ್ಟಿಪ್ಪೆ ನೀಂ ವಾಮನಾಕಾರದಿಂ (ಅಗಸ. ೦-೩೮). ❋ ಈ ಮೂರು ಪ್ರಯೋಗಗಳಲ್ಲಿ ಬಳಸಿರುವ 'ಬಲಿ' ಶಬ್ದಕ್ಕೆ 'ಬಲಿಚಕ್ರವರ್ತಿ' ಎಂಬುದಾಗಿ ಶ್ಲೇಷಾರ್ಥವನ್ನೂ ಕೊಡಬಹುದು. ೪. ಯೋಧ ; ಸೈನಿಕ. ೫. ಬಲರಾಮ. ೬. ಒಂದು ಬಗೆಯ ಗಿಡ. ೭. ಹಂದಿ. ೮. ಎಮ್ಮೆ. ೯. ಒಂಟೆ. [ಸಂ. ಬಲಿನ್]

ಬಲಿ₃, ಬಳಿ₃ (ನಾ). ೧. (ಹಿಂದೆ ರಾಜರಿಗೆ ಸಲ್ಲಿಸುತ್ತಿದ್ದ) ತೆರಿಗೆ : ಸುಂಕ ; ಕಂದಾಯ : "ಬಲಿ ಕರಾಹ್ವಯಂ ಸಿದ್ಧಾಯಂ" (ಪಸ್ತುಕೋ. ೬೨-೬೦); "ಭಾಗಧೇಯಃ, ಕರಃ, ಬಲಿಃ –೩ ಅರಸಿಗೆ ಕೊಡತಕ್ಕ ಕಾಣಿಕೆ, ಕಪ್ಪ, ಕಂದಾಯ, ಕವಳಿಗೆ, ತೆರಿಗೆ, ಮುಂತಾದುವುಗಳ ಪೆಸರು ಗಳು" (ಸಿದ್ಧಾಂ.ಚಿ. ೨೯೬). ೨. ಕಾಣಿಕೆ ; ಕೊಡುಗೆ : 'ಬಲಿಗೊಳ್' ಪರಾ. ೩. ಪೂಜೆ ; ಆರಾಧನೆ : "ಅರ್ಚಾ, ಪೂಜಾ, ಸಪರ್ಯಾ, ಉಪಹಾರಃ, ಬಲಿಃ — ಈ ೫ ಪೂಜೆ" (ಹಲಾಯು. ೨೦-೦೨೬) ; ಉತ್ಸವ, ಸ್ನಾಪನ, ಬಲಿಗಾಗಿ ಬೇಕಾದ ಮೂರ್ತಿಗಳು ಮಾತ್ರ ಲೋಹದಿಂದ ನಿರ್ಮಿತವಾಗುವುವು (ಶಾಸಿರ. ೩೦೬). ೪. ದೇವತೆಗಳ ಪ್ರೀತ್ಯರ್ಥವಾಗಿ ಗೃಹಸ್ಥನಂ ಪ್ರತಿದಿನವೂ ನಡೆಸಬೇಕಾದ ಪಂಚಯಜ್ಞಗಳಲ್ಲಿ ಒಂದು ; ತನ್ನ ದಿನದ ಆಹಾರದಲ್ಲಿ ಒಂದು ಭಾಗವನ್ನು ಪ್ರಾಣಿ, ಪಕ್ಷಿ ಮುಂತಾದುವುಗಳಿಗೆ ಕೊಡುವ ಧಾರ್ಮಿಕ ಕ್ರಿಯೆ ; ಭೂತಯಜ್ಞ. ೫. ಆಹುತಿಯಾಗಿ ಅರ್ಪಿಸುವ ಅನ್ನ, ದ್ರವ್ಯ, ಪ್ರಾಣಿ, ಮನುಷ್ಯ ಮುಂತಾದುವು : ಬಲಿಭುಗ್ವ್ರಜಕ್ಕೆ ಬಲಿಯಂ ತಾನಿಕ್ಕುವಳ್ (ಶಾಂತಿಪು. ೬೬೬); ಪಚಿದ ಪೂಮಾಲೆಗಳ ಬಣ್ಣಗೂಳ್ಗಳ ಬಲಿಯ ಮೊಜಿದ ಪಳೆಗೋಳ್ಗಳ . . . ಸುಡು ಗಾಡೊಳಾ ಮಂತ್ರಿ ಚಂಡಿಕಾಲಯದೆಡೆಗೆ ನಡೆತಂದನು (ಹರಿಶ್ಚಂ. ೬೦-೩೩); ದೇವತೆಯ ಬಲಿಪೀಠಗಳನ್ನು ಗುಡಿಸುವವರಿಲ್ಲದೆ ಒಪ್ಪಿಸಿದ ಹಿಂದಿನ ಬಲಿ ಗಳು ಕೊಳೆತು ನಾರುತ್ತಿದ್ದುವು (ಕಲ್ಯಾಣ. ೦೬). 'ನರಬಲಿ', 'ಬಲಿಪಶು' ಪರಾ. ೬. ಆಹಾರವನ್ನು ಸೇವಿಸಿದ ಮೇಲೆ ಉಳಿಯುವ ಭಾಗ ; ಎಂಜಲು ; ಉಚ್ಛಿಷ್ಟ. ೭. ಆಹಾರ ; ಅನ್ನ : "ಕೂರ ಮನ್ನಂ ಭಕ್ತಮೋದನಂ ಭಿಸ್ಸಮಾಹಾರಮಶನಂ ಬಲಿಯನಲ್ಪೆಯೋಗರ ಮಂಕ್ಕು" (ಶಬ್ದಗಣ. ೬೬-೬). ೮. ಹಬ್ಬ ; ಉತ್ಸವ : ಬಲಿ ಚಾಯನಂ ಗಳಂ ಮಂಗಲತೂರ್ಯಮುಮೆಸೆಯೆ ಗೇಯರವಮುಂ ಪೊಂದೊಟ್ಟಿಲ ಪೊಳೆವುಂ ರಂಜಿಸುತಿರೆ ಕಲನಾದದ ಗೋಷಕಾಂತೆಯರ್ ನೆರೆದು (ಅಜಿತ. ೬-೨೬). 'ಬಲಿವಮೂರ್ತಿ' ಪರಾ. ೯. ಒಬ್ಬ ಪುರಾಣ ಪ್ರಸಿದ್ಧನಾದ ದೈತ್ಯಚಕ್ರವರ್ತಿಯ ಹೆಸರು ; ಪ್ರಹ್ಲಾದನ ಮಗನಾದ ವಿರೋಚನನ ಮಗ ; ಬಾಣಾಸುರನ ತಂದೆ ; ❋ ಈತನನ್ನು ವಿಷ್ಣುವು ವಾಮನಾವತಾರದಲ್ಲಿ ಮೂರಡಿಯಷ್ಟು ಭೂಮಿಯನ್ನು ಬೇಡಿ ತ್ರಿವಿಕ್ರಮನಾಗಿ ಬೆಳೆದು ಪಾತಾಳಕ್ಕೆ ಮೆಟ್ಟಿದನೆಂಬ ನಂಬಿಕೆಯಿದೆ : ಬಲಿಯುಂ ವಾಮನರೂಪದಿಂದಮೆ ವಲಂ ಮುಂ ಬೇಡಿದಂ ಭೂರಿಭೂತಲಮಂ (ಶಂಕರ. ೯-೨೦); ಸಿರಿಯೊಳಾ ಬಲಿ ಭೋಗದೆಡೆಯಲಿ ಸುರಪ ರೂಪದಿ ಮದನ ಹಗೆಗಳ ಹರಣದಲಿ ಕಾಲಾಗ್ನಿ

ರುದ್ರನು ಭೂಪ ದಶರಥನು (ಕಾತಂ. ೦-೨೪): ಬಲಿಯು ದಾನವ ಗೃಹ ಚರಿತೆಯನು ಹಿಂತೆ ಕಲಿಯಲಿಲ್ಲವೆ ನೀವು? (ಕುಮ. ೧೬-೧). 'ಬಲಿಂದಮ' ಪರಾ. ೧೧. ಚಾವಟರದ ಹಿಡಿ, – ಹಿಡಿಕೆ. ೧೧. ನೇಗಿಲ; ಮಡಿಕೆ: ಸುಕ್ಕು: 'ಬಲಿಮುಖ' ಪರಾ. ೧೨. [ಜೈನ] ಒಂಬತ್ತುಮಂದಿ ಪ್ರತಿನಾರಾಯಣರಲ್ಲಿ ಒಬ್ಬ: 'ಬಲಿಸ್ನವನ, 'ಬಲಿಸ್ನಪನ' ಪರಾ. ೧೩. ಕಾಗೆ; ವಾಯಸ: "ಕಾಗೆಯಲ್ಲಿ ಬಲಿಯೆಂಬುದಕ್ಕು" (ಶಬ್ದಮ. ೦೯೦-೦೨). ೧೪. ಗಂಧಕ. ೧೫. ಸ್ವಭಾವ; ಪ್ರಕೃತಿ: "ಸುಜನೋತ್ಸಹ ದೃಢದಳಪತಿ ರಜಕ ಬಲೀಂದ್ರಂ ಸುಕೀರ್ತಿಸಾಂದ್ರಂ ಕಾಕವ್ರಜ ಪ್ರಕೃತಿ ಬಲಿಕೊಡುವುದು ನಿಜದಿಂ ಪನ್ನೊಂದುನಾಮ ಬಲಿಶಬ್ದಂಗಳ್" (ನಾನಾ. ೯೬); "ಸುಜನ ಬಲೋತ್ಸವಂ ಪ್ರಕೃತಿ ಗಂಧಕ ಕೀರ್ತಿಚಮೂಪ ವಾಯಸಂ ರಜಕ ಬಲೀಂದ್ರಪರ್ವತಗಳುಂ ಬಲಿಯಕ್ಕು" (ನಾನಾ. ೦೭). ಬಲಿ₂: ೧. ಬಳಿಯನಲ್ಲವ ತೆತ್ತು ಹೇಚಿನೆತ್ತಿ ಹೊಳೆಯ ಹೊನ್ನೂರು ತಾವರೆಗೆರೆಯ ಲಿಂಗದಲಿ ತೀಳಿಯ ಕ್ರಿಭಾಂಡ ವಿಕ್ರಯ ಸುಜ್ಞಾನ (ಶಿಶಾ. ೧೯೦-೯೬೩); ಅಳಿವ ಅನ್ಯಾಯ ಕಿರುಕುಳ ತಪ್ಪು ತೌಡಿಮೊಳಗಾದ ಸಮಸ್ತ ಬಳಿಸಹಿತ ಆಗಿ . . . ಪುತ್ರಪೌತ್ರಾದಿಗಳ್ಗೆ ಸಲ್ಲುದು (ಎಕ. XVI. ಶ್ರವ. ೬೭-೨೯; 1318); ಆ ಗ್ರಾಮದ ಚತುಸೀಮೆಯ ಒಳಗುಳ ನಿಧಿ ನಿಕ್ಷೇಪ . . . ಸರ್ವಸ್ವಪ್ರಾಪ್ತಿ ಸರ್ವಸ್ವ ಬಳಿಸಹಿತವಾಗಿ ಆಚಂದ್ರಾರ್ಕಸ್ಥಾಯಿ ಆಗಿ ಸುಖದಿಂ ಭೋಗಿಸೂದ ಎಂದು . . . ಕೊಟ ಗ್ರಾಮ (ಪ್ರಕಂ. ೦೯೯೩. ೦೮-೨೭; 1488). ೯. ಶ್ರೀಕಾನ್ತಾಪತಿ ವಿಕ್ರಮೋರ್ಜಿತ ಬಳಿಕ್ಷೋಣೀತಳಂ ವಿಶ್ವಲೋಕೈಕಸ್ತುತ್ಯದಶಾವತಾರಯುತಸಂದ್ಯಚ್ಛಂಖಚಕ್ರಾಬ್ಜಲಕ್ಷ್ಮಾಕೀರ್ಣಾರ್ತ್ತಿಕರಾಗ್ರನೆನ್ನವೊಲಿವಂ ತಾನೆನ್ದು ಸಾನನ್ದದಿಂದಾ ಕಲ್ಪಾಯು ವನೀಗೆ ಕೇಶವಚಮೂಪಂಗಾಗಳುಂ ಕೇಶವಂ (ಎಕ. VII. ಶಿಕಾ. ೦೭೩-೨; 1159). ☞ ಇಲ್ಲಿರುವ 'ಬಳಿ' ಶಬ್ದಕ್ಕೆ (ಶಕ್ತಿಶಾಲಿ, ಬಲಿ ಚಕ್ರವರ್ತಿ ಎಂಬ) ಶ್ಲೇಷಾರ್ಥಯುತವಾದ ಚಮತ್ಕಾರವಿದೆ.

ಬಲಿ ಬೀಳು = ತುತ್ತಾಗು: ಈಡಾಗು: ರಾಯರು ದುರಾಶೆಗೆ ಬಲಿ ಬಿದ್ದು ಸೊಸೈಟಿಯ ಹಣದ ಋಣ ಬೆಳೆಸುತ್ತಾ ಬರುತ್ತಿದ್ದುದರಿಂದ ಮುಂದೆ ಏನಾಗುಹುದೆಂದು ಊಹಿಸುವುದು ಕಷ್ಟವಾಗಿತ್ತು (ಮುಕ. ೦೬೩).

**ಬಲಿಯಾಗು** = ೧. ಆಹುತಿಯಾಗು; ಮರಣವನ್ನು ಹೊಂದು: ಮೂವರು ಬಾಲಕರು ಬಂದು, ಕಟುಕರಿಗೆ ಹಣವಿತ್ತು, ಕುಮಾರರಾಮನನ್ನು ಬಿಡಿಸಿಕೊಳ್ಳುತ್ತಾರೆ. ಚೆನ್ನಿಗರಾಮ ಬಲಿಯಾಗುತ್ತಾನೆ (ಕುಕರಾಸಾಂ. ೨೨೯); ಖಾಸಗಿ ಸಾಹುಕಾರರ ಲಾಭಕ್ಕಾಗಿ ಸರ್ವಸಾಧಾರಣರ ಬದುಕು ಬಲಿಯಾಗದಂತೆ ಏರ್ಪಡಿಸಬೇಕು (ಜಾತ್ರ. ೦೯೦). ೨. ಈಡಾಗು; ಗುರಿಯಾಗು: ಕಾಲಚಕ್ರದ ಸುಖದುಃಖಗಳಿಗೆ ಸಾಮಾನ್ಯಜೀವಿ ಬಲಿಯಾದಷ್ಟು ಈತ ಬಲಿಯಾಗುವುದಿಲ್ಲ (ರಮಣ. ೯೯). **ಬಲಿಹಾಕು** = ೧. ದುಷ್ಟಶಕ್ತಿಗೆ ಪ್ರಾಣಿ ಅಥವಾ ಆಹಾರವನ್ನು ಬಲಿಯಾಗಿ ಅರ್ಪಿಸು; ಆಹುತಿಕೊಡು: (ಕ). ೨. ಬಲಿಯನ್ನು ಅರ್ಪಿಸಿ ಮಂತ್ರ ಹಾಕುವುದರ ಮೂಲಕ ದುಷ್ಟಶಕ್ತಿಯನ್ನು ಓಡಿಸು: (ಕ). ೩. ಆಹುತಿಯಾಗಿ ತೆಗೆದುಕೊಳ್ಳು: ರಾಜಸೂಯ ಯಾಗಕ್ಕೆ ಮುಂಚೆ ಭೀಮನು ಜರಾಸಂಧನನ್ನು ಹೇಗೆ ಬಲಿ ಹಾಕಿಬಿಟ್ಟ, ನೋಡು! (ಪರ್ವ. ೦೦೩). ೪. (ಆಲಂ) ಶಾಸ್ತಿಮಾಡು; ಶಿಕ್ಷಿಸು: ಡಾಕ್ಟರರನ್ನು ಕರೆಯಲು ಹೋದರೆ ನಿನ್ನನ್ನೇ ಬಲಿಹಾಕಿಯೇನು (ಡಾಕ್ಟರ್. ೨೬೩). [ಸಂ.]

**ಬಲಿಂದಮ** (ನಾ). ಬಲಿಯನ್ನು ದಮನಮಾಡಿದವನು; ವಾಮನ; ವಿಷ್ಣು: ಮುಂದಣ ಮಿಗಮಂ ಕಟುಪದೆ ಸಂದಿಸಿ ಬಟುಗೊಳ್ವ ಮಿಗಮುಮಂ ಕಟುಪದೆ ತಾನೊಂದಳವಿದಪ್ಪದೆಚ್ಚು ಬಲಿಂದಮನಿಂ ಬಲ್ಲ ಬಲ್ಮೆಯಂ ಪೊಗಟಿಸಿದಂ (ಶಂಶಪ. ೩-೯೪). [ಸಂ.]

**ಬಲಿಕರ್ಮ** (ನಾ). ಪೂಜಾಕಾರ್ಯ; ಅರ್ಚನೆ; ಆರಾಧನೆ: "ಉಪಹಾರಂ ಬಲಿಕರ್ಮಂ ಸಪರ್ಯೆ ಪೂಜಾಭಿಧಾನಮರ್ಚನೆಯಕ್ಕುಂ" (ಚಟ್ಟಿಕೋ. ೨೦-೦೯); ಸೌಮಿತ್ರಿ . . . ನದಿಗೆ ನಡೆದೊಡನೆ ಮಜ್ಜನಗೈದು ಕಮಲಕುಮುದಂಗಳಂ ಪಿಡಿದು ಬಂದೆಲೆವನೆಗೆ ಬಲಿಕರ್ಮಗಳ ರಚಿಸಿ ಬಿನ್ನಪಂಗೈದನೊಲಿದು (ಪಂಪರಾ. ೩-೬-೦೪). [ಸಂ. ಬಲಿಕರ್ಮನ್]

**ಬಲಿಕಲ್ಲು** 'ಬಲಿಗಲ್ಲು' ನೋ.

**ಬಲಿಕಾರ್ಯ** (ನಾ). (ಪಿತೃಗಳಿಗೆ) ಬಲಿಯನ್ನು ಅರ್ಪಿಸುವ ಕ್ರಿಯೆ; ಪಿಂಡಪ್ರದಾನ: ಇಂದು ಕೊಲೆಯಿಂ ಸತ್ತ ಹರಿಗೆ ಬಲಿಕಾರ್ಯಕೆ ಧನಂ ದೊರಕದಿರೆ ಫಲ್ಗುನಂ ಕಂದಮೂಲಫಲವೃಂದದಿಂದ ಬಲಿಗೊಟ್ಟು ಸ್ವರ್ಗಕೆಯ್ದಿದಂ (ಪಕ್ಷಕಾ. ೦೦-೦೩೪). [ಸಂ.]

**ಬಲಿಕೆ** 'ಬಲ್ಮೆ' ನೋ.

**ಬಲಿಕೆಅನ್ನ** (ನಾ). (ಕರಾ) ಸರಿಯಾಗಿ ಬೇಯದೆ ಇರುವ ಅನ್ನ; ಬಿರುಸಾದ ಅನ್ನ. [ಬಲಿಕೆ (<ಬಲ್ಮೆ) + ಅನ್ನ₂]

**ಬಲಿಕೆಯ್** (ಕ್ರಿ). ದೃಢಗೊಳಿಸು; ಗಟ್ಟಿಗೊಳಿಸು: ಮನಮಂ ಬಲಿಕೆಯ್ದು ಶುಕನಾಸನನಿಂತೆಂದಂ (ಕಾದಂಪಂ. ೯೯೩). [ಬಲ್ಮೆ₂+ಕೆಯ್₁]

**ಬಲಿಕೆವಂತ** (ನಾ). ತಿಳಿದವನು; ವಿಚಾರಜ್ಞ: ಲಿಂಗಕ್ಕೊಂದು ತನಗೊಂದೆಂಬಾಗ ಆ ಅಂಗ ಲಿಂಗವಿರೋಧಿಯೇ ಆ ಇಷ್ಟಲಿಂಗವ ಆತ್ಮನ ನೆಲೆಯಲ್ಲಿ ಅಜಾದಿಹೆನೆಂಬುದು ಇಂಬಲ್ಲವೆ ಕುಲ ಛಲ ವಾಗ್ವಾದದ ಮಾತಲ್ಲದೆ ಬಲಿಕೆವಂತರ ನೀತಿಯಲ್ಲ (ಸೋಶವಚ. ೦೨೬-೯೭೨). [ಬಲಿಕೆ (<ಬಲ್ಮೆ) + –ವಂತ]

**ಬಲಿಕೊಡು** 'ಬಲಿಗೊಡು' ನೋ.

**ಬಲಿಗಂಬ** (ನಾ). ಆಹುತಿಯಾಗಿ ಕೊಡುವ ಪ್ರಾಣಿಗಳನ್ನು ಕಟ್ಟುವ ಕಂಬ: ಬಲಿಗಂಬಕ್ಕೆ ಬಚ್ಚಪ್ಪನ ಮಗ ದೇವಿಗೆ ಬಲಿಯಾಗಲು ಕೊಡಲ್ಪಟ್ಟಿದ್ದ ಕೋಣವನ್ನು ಕಟ್ಟಿದ್ದ (ಊರುಳ. ೬). [ಬಲ್ಮಿ₃ + ಕಂಬ₁ (<ಕಂಭ)]

**ಬಲಿಗಟ್ಟು** (ಕ್ರಿ). ಬಲಿಯಾಗಿ ಕೊಡು; ಆಹುತಿಯಾಗಿ ಅರ್ಪಿಸು: ಎಲೆ ಸುಕುಮಾರ ನಿನ್ನ ಸುಕುಮಾರಶರೀರಮನಯ್ಯೊ ಪೆತ್ತರಿಂದಲಸದೆ ಬಂದ ರಾಕ್ಷಸತತಿಗೆ ಕೀಳ್ಪಲಿಗಟ್ಟಿ ಮಾಂಸಮಂ ಸುಲಿದುಣಲಿಕ್ಕಲಿರ್ದಪರ್ (ಪ್ರಶಂ. ೦೯-೬೩). [ಬಲ್ಮಿ₃+ಕಟ್ಟು₁]

**ಬಲಿಗಲ್ಲು**, ಬಲಿಕಲ್ಲು (ನಾ). ಬಲಿಯನ್ನು ಇಡುವ ಕಲ್ಲು: ಎಷ್ಟೋ ಸಲ ಹಸಿವೆ ತಡೆಯಲಾಗದೆ . . . ಬಲಿಗಲ್ಲಿನ ಮೇಲೆ ಸುರಿದಿದ್ದ ಅಗಳುಗಳನ್ನು ಹೆಕ್ಕಿ ತಿಂದಿದ್ದೇನೆ (ಕೂಕುರು. ೩೩). ಬಲಿಕಲ್ಲು: ಗುಡಿಯ ಸುತ್ತಲೂ ಪೌಳಿ–ಸಂತ್ರಿನ ನಡುವಿನಲ್ಲಿ ಅಲ್ಲಲ್ಲಿ ಬಲಿಕಲ್ಲುಗಳು–ಹಾಲ್ಕು ದಿಕ್ಕಿನಲ್ಲೂ ಭಕ್ತರು ಕುಳಿತುಕೊಳ್ಳಲು ಅನುಕೂಲವಾಗುವಂತೆ ಚಾವಡಿಗಳು (ಪಚಕಂ. ೩೦). [ಬಲ್ಮಿ₃+ಕಲ್ಲು (<ಕಲ್₃)]

**ಬಲಿಗಿ** 'ಬಲಿಗೆ' ನೋ.

**ಬಲಿಗುಡು** 'ಬಲಿಗೊಡು' ನೋ.

**ಬಲಿಗೂಟ್** (ನಾ). ಬಲಿಯಾಗಿ ಅರ್ಪಿಸುವ ಆಹಾರ; ಆಹುತಿಯಾಗಿ ಕೊಡುವ ಅನ್ನ: ಅಗ್ಗಿಗೊಂಡದೊಳ್ ಪೊತ್ತುವ ನಱುನೆಯ್ಯ ನೆಲ್ಲರಳ ಬಲಿಗೂಟ, ಸಿರಿಕಂಡಸೆಕ್ಕೆಯ ಸಮಿದೆಯ ಕಮಱೆ ಪೊರೆದಿರ್ದ್ದಡೆಯೊಳಿತ್ತಂ ಪಳಂಚಲೆವೆಲರಿಂ . . . ತಪೋವನಮೊಂದು ಕಣ್ಗೊಳಿಸಲೊಡಂ (ರಾಮಾಶ್ವ. ೬೪-೪). [ಬಲ್ಮಿ₃+ಕೂಟ್₁]

**ಬಲಿಗೆ**, ಬಲಗಿ, ಬಲಿಗಿ, ಬಲ್ಲಗ, ಬಲ್ಲಗಿ, ಬಿಲಿಗಿ (ನಾ). ಒಂದು ಬಗೆಯ ಮರ: ಕೆಲವು ಕಡೆಗಳಲ್ಲಿ ತೇಗ, ನಂದಿ, ಹೆಬ್ಬಲಸು, ಬಲಿಗೆ . . . ಮುಂತಾದ ಗಗನಚುಂಬಿತವೃಕ್ಷಗಳಿದ್ದರೆ ಕೆಲವು ಕಡೆಗಳಲ್ಲಿ . . . ಗಿಡಬಳ್ಳಿ ಪೊದೆಗಳಿದ್ದವು (ಕಂಚಕಂ. ೨). ಬಲಗಿ: ಸಹ್ಯದ್ರಾಗುಂಬೆಯಂಟ

ಯೊಳ್ ಬಲಗಿಯ ಬೃಹತ್ತರುಶ್ರೇಣಿ ಕಿಕ್ಕಿರಿವವೋಲ್ ಪಂಕ್ತಿಪಂಕ್ತಿ ಸ್ತಂಭಗಳ್ . . . ಇರ್ದುವಗಣಿತಂ (ಶ್ರೀರಾಮ. ೧೪೯-೨೩೩); ಬಲಗಿಯ ಮರದಂತೆ ತಲೆಯೆತ್ತಿ ನೇರಾಗಿ ನೋಡು ನೀಲಾಕಾಶವತ್ತ (ಇಂಡಾಶ. ೦೩೬-೬೯). **ಬಲಿಗಿ:** ಬಲ್ಲಗಿ, ಬಲಿಗಿ, ಕಿರ್ಬಲ್ಲಿ (ವೃಕ್ಷಕಿ. ೬೬-೦೨೬೪). **ಬಲ್ಲಗ :** "ಬಲಿಗೆ, ಬಲಿಗಿ, ಕಿಬ್ಬಲ್ಲಿ, ಬಲ್ಲಗಿ, ಬಲ್ಲಗ " (ಸಸ್ಯಕೋ. ೦೦೬). **ಬಲ್ಲಗಿ :** ನಾಗಸಂಪಿಗೆ, ಬಲ್ಲಗಿ, ಬಂದಿಗೆ . . . ಜಂಡು, ಬದಿರು (ವಸ್ತುಮು. ೨೩೮). **ಬಲಿಗಿ :** "ಬಲಿಗೆ, ಬಲಿಗಿ . . . ಬಲ್ಲಗ" (ಸಸ್ಯಕೋ. ೦೦೬). [ ದೇ. ‖ ತುಳು. ಬಲಿಗೆ ]

**ಬಲಿಗೆದಱ್, ಬಲಿಗೆದಱು** (ಕ್ರಿ). ಆಹುತಿಗಾಗಿ ಬಣ್ಣದ ಅನ್ನ ಮುಂತಾದುವನ್ನು ಎರಚು: ನಿನ್ನನ್ನೈನೂರ್ತುಂಡುಗೆಯ್ದು ಬಲಿಗೆದರ್ವಂ (ಕಂಪ್ರ. ೯೯-೯೦); ಅಂತ್ಯತಂದು ಮಣಿಮಕುಟಕಿರಣಮರುಣಕುಸುಮಮಂ ಪದಪೀಠದೊಳ್ ಬಲಿಗೆದರ್ದಂತಾಗೆ ಬಾಗಿ ಪೊಡಮೊಟ್ಟು (ರಾಜಶೇ. ೦೪-೩೮). **ಬಲಿಗೆದಱು:** ಪಸಿಯ ನೇತ್ರಮಂ ಪಚ್ಚವಡಿಸಿದಂತೆ ಪಸುರ್ಪುವಡೆದ ನೆಲದೊಳ್ ಪಚ್ಚೆಯ ಪದ್ಮರಾಗದ ಪರಲ್ಗಳಂ ಬಲಿಗೆದಱಿದಂತೆ ಪಸುರ್ಪೆಸೆವ ನೆಲದೊಳು ಉಪಾಶ್ರಯಂಬಡೆದಲಂಕರಿಸುವಿಂದ್ರಗೋಪಂಗಳುಮಂ ಕಿಸುಗಾಡ ನೆಲಂಗಳೆಳದಳಿರ ಬಣ್ಣಮಂ ಕೆಯ್ಕೊಂಡು (ಕಂಶಶಾ. ೭-೨೩೮); ಒಡನೆ ಗಜಱುವ ವಾದ್ಯದಲಿ ಕೆಂಪಡರಿದೋಗರಸಹಿತ ಭೂತಕೆ ಬಡಿಸಿದರು ಮಾಂತ್ರಿಕರು ಬಲಿಗೆದಱಿದರು ದೆಸೆದೆಸೆಗೆ (ಕುಮಾವ್ಯಾ. ೯-೩). [ ಬಲಿ$_3$+ಕೆದಱ್$_1$ ]

**ಬಲಿಗೆದಱು** 'ಬಲಿಗೆದಱ್' ನೋ.

**ಬಲಿಗೆಯ್** (ಕ್ರಿ). ಆಹುತಿಯಾಗಿ ಅರ್ಪಿಸು: ಬಲಿಕೊಡು: ದುಶ್ಶಾಸನ ರಕ್ತಪಾನದೊಳೆ ಸೊರ್ಕಿದ ಪಾತಕನಂ ಪೊರಳ್ಚಿ ಕೊಂದೀ ಸಮರಾಪನೀತಳದೊಳಿಂ ಬಲಿಗೆಯ್ವನವೊಲ್ಲೆನಲ್ತೆ (ಪಂಗಭಾ. ೦೩-೦೯); ಕುತ್ತು ಕುತ್ತು ಬಲಿಗೆಯ್ ಬಲಿಗೆಯ್ ಪೆಜವೆಣ್ಗೆ ಸೋಲ್ವ . . . ಕಳ್ವ ಕಳ್ವರೊಳ್ ನುಡಿವಬ್ಬಿಮಾದನೆಂದು ನವನಾರಕರಂ ಪಜ್ಞಿದೆಯ್ದೆ ನಾರಕರ್ (ಅಕಪು. ೧೦-೧೦). [ ಬಲಿ$_3$ + ಕೆಯ್$_1$ ]

**ಬಲಿಗೊಡು, ಬಲಿಕೊಡು, ಬಲಿಗುಡು** (ಕ್ರಿ). ೧. =ಬಲಿಗೆಯ್: ಅಂದು ಕೊಲೆಯಿಂ ಸತ್ತ ಹರಿಗೆ ಬಲಿಕಾರ್ಯಕೆ ಧನಂ ದೊರಕದಿರೆ ಫಲ್ಗುನಂ ಕಂದಮೂಲಫಲವ್ಯಂದದಿಂ ಬಲಿಗೊಟ್ಟು ಸಗ್ಗಕೆಯ್ದಿದಂ (ಕದ್ಯಸಾ. ೦೦-೦೩೪ ; ಆ ದೈತ್ಯನನು ತನ್ನಾಯುಧಕೆ ಬಲಿಗೊಟ್ಟು ಬಳಿಕ ಸ್ವಾಯಿಧರ್ಮವ ಬಲಿದು ಕೊಟ್ಟನು ದುಂದುಮಾರನ್ನವ (ಕುಮಾಕ. ೦೯-೬೯); ಅಷ್ಟದಿಕ್ಪಾಲರ್ಗೆ ಪೂಜೆಯಂ ಮಾಡಿ ಚೌಷಷ್ಠಿಯೋಗಿನಿಯರ್ಗೆ ಬಲಿಗೊಟ್ಟು (ಕೃಟಿಚಾ. ೩-೬೨). **ಬಲಿಕೊಡು :** ೧. ಒಂದು ದ್ವೀಪದಲ್ಲಿ ಹಿಂದೂಸ್ತ್ರೀಯರು ಗಂಗಾನದಿಗೆ ಪ್ರೀತಿಯಾಗಿ ತಮ್ಮ ಚಿಕ್ಕ ಮಕ್ಕಳನ್ನು ಬಲಿಕೊಡುತ್ತಿದ್ದರು (ಭೂಗೋಳ. ೩೩). ೨. (ಆಲಂ) ಕಷ್ಟಕ್ಕೆ ಸಿಕ್ಕಿಸಂ ; ತೊಂದರೆಗೊಳಗುಮಾಡು : ಸಾಲ ಏರಿದ ಹೊತ್ತಿನಲ್ಲಿ ಆಶ್ರಯವಿತ್ತು ಸಾಕಿದ ಆನಂದನನ್ನೇ ಬಲಿಕೊಡಲೂ ಅವರು ಹೇಸಲಿಲ್ಲ (ಮರಳ. ೦೬೩) ; ಇದಕ್ಕಾಗಿ ಪ್ರಸಂಗ ಬಂದರೆ ಕರ್ತವ್ಯ ದಕ್ಷರಾದ ನಿಮ್ಮನ್ನು ಬಲಿಕೊಡಬೇಕಾಗುವದು (ಕುಂಕುಮ. ೯೯). **ಬಲಿಗುಡು :** ೧. ಇಱಿವ ಬಲಿಗುಡುವ ಪೈರಂದಱಿವುದಂ ಸೀಳ್ವ ಪೊಟ್ಟ ಪರಪುವ ಗೊಟ್ಟಂಗೊಱಿಪಗುಟ್ಟು ನಟ್ಟು ಪರೆವುವ ಪೆಱವುಮ ಗುರ್ವಪ್ಪ ಚಿತ್ರವಿಧವಧೆಯಿಂದಂ . . . ಪುಟ್ಟುಗುಂ ವಿಭಂಗಜ್ಞಾನಂ (ಶಾಂತಿಪು. ೭-೯೦). [ಬಲಿ$_3$+ಕೊಡು$_1$]

**ಬಲಿಗೊರಡು** (ನಾ). ಬಲಿಯನ್ನು ಕೊಡಲು ಉಪಯೋಗಿಸುವ ಕೊರಡು,—ಮರದ ದಿಮ್ಮಿ : ತೋಂಡಾಂಗುಟ್ಟಿ . . . ಕೆಂಗಲ್ಬಣ್ಣದ ಬಲಿಗೊರಡನ್ನೆಳೆದುಯ್ದು ನರಶರಭನ ದೃಷ್ಟಿಗೆಸ್ಪಯಿಸಿ ಎತ್ತಿ ನಿಲ್ಲಿಸಿ (ಮುಂಕೃತ. ೦೦೯-೦೩). [ಬಲಿ$_3$ + ಕೊರಡು$_1$ (<ಕೊಱಡು)]

**ಬಲಿಗೊಲಿಸು** (ಕ್ರಿ). ಬಲಿಯಾಗಿ ಕೊಲ್ಲಿಸು ; ಆಹುತಿ ಕೊಡು : ಸಾಯಿಸು : ಈ ತನ್ನಯ ಮೂರ್ಖತೆಯ ದುರ್ದ್ದಯದಿಂದ ಆವಿರ್ಭವಿಸಿ ವಿಜೃಂಭಿಸುತ್ತಿರುವ ವಿಷಮಸೃಷ್ಟಿಯ ಚಣ್ಣಕರನ್ನಲ್ಲಾಡಿಸುವುದಕ್ಕೆಂದು ಲೆಕ್ಕವಿಲ್ಲದ ಮಹಾಸೈನ್ಯಗಳನ್ನೆತ್ತಿಯೆತ್ತಿ ಬಲಿಗೊಲಿಸುತ್ತ. . . ಕೋಲ್ಲಿದ್ದರುತ್ತಿರುವವನು (ಮಂಕ್ರಶ. ೬೯-೩). [ಬಲಿ$_3$ + ಕೊಲಿಸು]

**ಬಲಿಗೊಳ್, ಬಲಿಗೊಳ್ಳು** (ಕ್ರಿ). ೧. ಆಹುತಿಯಾಗಿ ತೆಗೆದುಕೊಳ್ಳು; ನಾಶಮಾಡು : ಎಲೆ ಎಲೆ ಪಂದಿಪಂದಿ ಮಿಗೆ ಬಂದುದು ಬಂದುದು ಭಿಲ್ಲರೆಲ್ಲರಂ ಬಲಿಗೊಳಲೆಂದು ವ್ಯತ್ತು ಕಿಟಿ ರೂಪಮನಾಳ್ದವೊಲ್ (ಕಂಕಾ. ೯-೬). ೨. ಕಾಣಿಕೆಯಾಗಿ ತೆಗೆದುಕೊಳ್ಳು ; ದಾನವಾಗಿ ಪಡೆ : ಆಜಡಿಗೊಂಡು ಮೂಱಡಿಯನಾ ಬಲಿಯಿಂ ಬಲಿಗೊಂಡು ಭೂಮಿಯಂ ಮೂಱಡಿಯಾಂತು ಮಿಱಿ ಬಳೆದಿತ್ತನಿಕ್ಕಿ ರಸಾತಳಕ್ಕೆ ನಿಂದಾಜಡಿವಣ್ಣದಾಗಸಕೆ ಕಾಲಿಡೆ (ರಾಜಶೇ. ೩-೦೦೦). **ಬಲಿಗೊಳ್ಳು :** ೧. ಅರಸನಲ್ಲಿ ತನ್ನ ಹೆಂಡತಿಯನ್ನು ಬಲಿಗೊಳ್ಳುವನೋ ಎಂದು ಅವನು ಹೆದರಿ ಹುಚ್ಚೆಕಾಯಿ ಆಗಿಹೋಗಿದ್ದನು (ಕಂಜಾವ್ಯ. ೬೪). [ಬಲಿ$_3$ + ಕೊಳ್$_1$]

**ಬಲಿಗೊಳ್ಳು** 'ಬಲಿಗೊಳ್' ನೋ.

**ಬಲಿದಾನ** (ನಾ). ೧. ಬಲಿಯಾಗಿ ಅರ್ಪಿಸುವಿಕೆ; ಆಹುತಿ : ತ್ಯಾಗ, ಬಲಿದಾನಗಳಿಂದ ಕೂಡಿದ ಧರ್ಮವೇ ನಿಜವಾದ ಧರ್ಮ (ಧರ್ಮಸಾ. ೭); ಮೇ ತಿಂಗಳಲ್ಲಿ ಮತ್ತೊಂದು ತಿಕ್ಕಾಟ ನಡೆದು ನಾಲ್ಕು ಮಂದಿಯ ಬಲಿದಾನವಾಯಿತು (ಆತ್ಮಾರ್ಪ. ೦೯೩). [ಸಂ.]

**ಬಲಿಧ್ವಂಸಿ** (ನಾ). ಬಲಿಚಕ್ರವರ್ತಿಯನ್ನು ನಾಶಮಾಡಿದವನು ; ತ್ರಿವಿಕ್ರಮ ; ವಿಷ್ಣು : "ವಿಷ್ಣುಃ, ನಾರಾಯಣಃ, ಕೃಷ್ಣಃ . . . ವನಮಾಲೀ, ಬಲಿಧ್ವಂಸೀ . . . ಶ್ರೀವತ್ಸಲಾಂಛನಃ ಇಲ್ ವಿಷ್ಣುದೇವರ ಹೆಸರುಗಳು" (ನಿಘಂಟು. ೦೬). [ಸಂ. ಬಲಿಧ್ವಂಸಿನ್]

**ಬಲಿನಿಕೇತನ** (ನಾ). ಬಲಿಚಕ್ರವರ್ತಿಯ ವಾಸಸ್ಥಾನ ; ಪಾತಾಳ: "ಪಾತಾಳಮೆನಲು ವಡಬಾಮುಖಮೆನಲು ಬಲಿನಿಕೇತನಮೆನಲು . . . ಅಧೋಭುವನಮೆಂದೆನಲು ಪಾತಾಳಲೋಕಕ್ಕೆ ನಾಮಂ" (ಶಬ್ದಮಣಿ. ೦೦೬-೦). [ಸಂ.]

**ಬಲಿಪ** 'ಬಲಿಪ್ಪ' ನೋ.

**ಬಲಿಪಶು** (ನಾ). ಆಹುತಿಯಾಗಿ ಅರ್ಪಿಸುವ ಪ್ರಾಣಿ : ಹೆಸಾಯ್ಡನ ನಿರೂಪಣೆಯಲ್ಲಿ ಬರುವ ಯಜ್ಞದಲ್ಲಿ ಬಲಿಪಶುವಿನ ಪಾಲು ಹಂಚಿಕೆಯ ಕ್ಷುದ್ರವಿರಸಸಂದರ್ಭವನ್ನು . . . ಈಸ್ಕಿಲಸ್ ಕೈಬಿಟ್ಟದ್ದಾನೆ (ಐತ್ಯಕೃ. VI. ೬೮೪). [ಸಂ.]

**ಬಲಿಪಾಡ್ಯ** (ನಾ). ಕಾರ್ತಿಕಮಾಸದ ಮೊದಲನೆಯ ದಿನ ; ಕಾರ್ತಿಕ ಶುದ್ಧ ಪ್ರತಿಪದೆ ಮತ್ತು ಅಂದು ಆಚರಿಸುವ ಹಬ್ಬ; ಈ ದಿವಸ ವಿಷ್ಣುವು ವಾಮನಾವತಾರದಿಂದ ಬಲಿಚಕ್ರವರ್ತಿಯನ್ನು ಪಾತಾಳಕ್ಕೆ ಮೆಟ್ಟಿದನೆಂಬ ಪೌರಾಣಿಕಕಥೆ ಸುಪ್ರಸಿದ್ಧವಾಗಿದೆ : ಬಲಿಪಾಡ್ಯದಾ ದಿನವು ಬಂದಿಹುದು ನೋಡಿ. ಒಲಿದಿತ್ತು ನಿಮ್ಮ — ಬಾಲಕರ ಕಾಪಾಡಿ. (ಕಂಕಂ. ೦೬-೩); ದಕ್ಷಿಣಭಾರತದವರು . . . ಅಮಾವಾಸ್ಯೆ, ಬಲಿಪಾಡ್ಯಗಳ ದಿವಸ ತಾತ್ಕಾಲಿಕವಾಗಿ, ಆದರೂ ಬಿಡಗಿನಿಂದ ಅಂಗಡಿಪೂಜೆ ಮಾಡುವುದುಂಟು (ಛಾಹಬ್ಬ. ೦೯೬). [ಬಲಿ$_3$ + ಪಾಡ್ಯ (< ಪಾಡಿವ)]

**ಬಲಿಪಾಡ್ಯಮಿ** (ನಾ). = ಬಲಿಪಾಡ್ಯ : ಕಾರ್ತಿಕಶುದ್ಧ ಪ್ರತಿಪದೆಯನ್ನು 'ಬಲಿಪಾಡ್ಯಮಿ' ಎಂದು ಕರೆದು, ಹಬ್ಬವನ್ನು ಆಚರಿಸುತ್ತೇವೆ (ಕೂ). [ಬಲಿ$_3$ + ಪಾಡ್ಯಮಿ]

**ಬಲಿಪೀಠ** (ನಾ). (ದೇವಾಲಯಗಳ ಬಳಿಯಿರುವ, ಸಾಮಾನ್ಯ

ವಾಗಿ ಕಲ್ಲಿನಿಂದ ನಿರ್ಮಿಸಿದ ; ಬಲಿಯನ್ನು ಅರ್ಪಿಸುವ ಜಗಲಿ ; ಆಹುತಿಯಾಗಿ ಕೊಡುವ ದ್ರವ್ಯಗಳನ್ನು ಇಡುವ ಸ್ಥಾನ : ಬಲಿಪೀಠದಶನವಂ ಕೊಳೆ ನೆಲನಂ ಸೋಂಕುತ್ತ ಬರಲು ಪದ್ದಿನ ಪಕ್ಕದಿ ನೆಲಸಿರ್ದ ಗಾಳಿಯಿಂದಂ ಚಲಿಸಿತು ರಜವದುವೆ ಪಕ್ಷಿಗಧಿಪತಿಯಾದುದು (ಪಕ್ಷಿಶಾ. ೬-೬೬): ದೇವತೆಯು ಬಲಿಪೀಠಗಳನ್ನು ಗುಡಿಸುವವರಿಲ್ಲದೆ ಒಪ್ಪಿಸಿದ ಹಿಂದಿನ ಬಲಿಗಳು ಕೊಳೆತು ನಾರುತ್ತಿದ್ದುವು (ಕಳ್ಳಿಶಾ. ೦೮).
[ಸಂ.]

**ಬಲಿಪುಷ್ಪ** (ನಾ). ಬಲಿಯಾಗಿ ಅರ್ಪಿಸಿದ ಆಹಾರಪದಾರ್ಥಗಳಿಂದ ಪುಷ್ಟವಾದುದು ; ಕಾಗೆ: "ಅರಿಷ್ಟಃ, ಕರಟಃ, ಕಾಕಃ, ಬಲಿಪುಷ್ಟಃ, . . . ವಾಯಸಃ — ಈ ೧೦ ಕಾಗೆ" (ಕಶಾಯು. ೯೦-೯೩). [ಸಂ.]

**ಬಲಿಪೂಜೆ** (ನಾ). ೧. ಆಹುತಿಯನ್ನು ಅರ್ಪಿಸಿ ಮಾಡುವ ಪೂಜೆ : ಬಲಿಪೂಜೆ ಆಗುವಾಗ ಅವರ ಕೈ ಏಕೋ ನಡುಗುತ್ತಿತ್ತು (ಕಿಶಕಾ. ೨೪). ೨. ಕಾರ್ತೀಕಶುದ್ಧ ಪ್ರತಿಪದೆಯಂದು ಆಚರಿಸುವ ಬಲಿಚಕ್ರವರ್ತಿಯ ಹಬ್ಬ : ಬಲಿಪೂಜೆಯಂದು ವಿಜೃಂಭಣೆಯಿಂದ ಲಕ್ಷ್ಮಿಯನ್ನು ಪೂಜಿಸುತ್ತಾರೆ (ಕೂಶ). [ಸಂ. ಬಲಿಪೂಜಾ]

**ಬಲಿಪ್ಪ**, ಬಲಿಪ (ನಾ). ಒಂದು ಬಗೆಯ ಶ್ರೇಷ್ಠಜಾತಿಯ ಹುಲಿ : 'ಅಡ್ಡಬಲಿಪ್ಪ' ಪರಾ. ಬಲಿಪ : ಅದು ಬಹುಶಃ ಬಲಿಪ ಇರಬೇಕು. ನಿಮ್ಮ ಈ ಚಿಲ್ಲರೆ ಆಯುಧಗಳಿಂದ ಅದರ ಪ್ರಾಣ ತೆಗೆಯಲಿಕ್ಕೆ ಹೋದರ ನಾಳೆ ಊರಿಗೆ ಊರನ್ನೇ ಅದು ತಿಂದು ಪಥ್ಯ ಮಾಡೀತು (ಕರಾಶ. ೫೨).
[←ತುಳು. ಬಲಿಪ್ಪೆ, ಬಲಿಪೆ]

**ಬಲಿಪ್ರತಿಪದೆ** (ನಾ). =ಬಲಿಪಾಡ್ಯ : ಕಾರ್ತೀಕಶುದ್ಧ ೧ ನೆಯ ತಿಥಿ ಬಲಿಪ್ರತಿಪದೆ (ಶಾಕ್ಕು. ೦೯೬) ; ದೀಪಾವಳಿಯಲ್ಲಿ ಬಲಿಪ್ರತಿಪದೆಯುದೆ (ಶಾಶಾಶಾ. ೭೩). [ಸಂ. ಬಲಿಪ್ರತಿಪದಾ]

**ಬಲಿಬಂಧಕ** (ನಾ). =ಬಲಿಧ್ವಂಸಿ : ವಿಕಳಬಲನವನೇನು ಬಾಳಾಂಬಕನೊ ಬಲಿಬಂಧಕನೋ ಸುರಪಾಲಕನೋ ಢಡಢಡ (ಕುಪ್ಪಾಕ. ೦೨-೫). [ಸಂ.]

**ಬಲಿಬಂಧನ** (ನಾ). =ಬಲಿಧ್ವಂಸಿ : ದುರ್ಯೋಧನನವಮಾಗಳೆ ಬಂದು ಬಲಿಬಂಧನನ ತಲೆದೆಸೆಯೊಳ್ ಕುಳ್ಳಿರೆ (ಕುಶಕಾ. ೯-೦೦ ಪ); ನಾರಾಯಣ ತೇ ನಮೋ ನಮೋ . . . ಬಲಿಬಂಧನ ಗೋವರ್ಧನೋದ್ಧಾರ ನಳಿನೋದರ ತೇ ನಮೋ ನಮೋ (ಪುರಂದ. ೬-೯೦-೨). [ಸಂ.]

**ಬಲಿಬಂಧಾಕ್ಷಿ** (ನಾ). ಒಂದು ಬಗೆಯ ಸಸ್ಯ ; ಹಾವುಮೆಕ್ಕೆ : "ವಾರುಳಿ ಬಲಿಬಂಧಾಕ್ಷಿ [ಪಾಠಾಂ. ಬಲಿಬದ್ಧಾಕ್ಷಿ, ಬಲಿಬರ್ಧ್ವಾಕ್ಷಿ] ಹಾವುಮೆಕ್ಕೆ ಹಿಡಿಹಿಡಿಕ ತ್ರಿಪತ್ರಿಣಿಯೆಂದೆನಿಕ್ಕುಂ" (ಕುಂಗಿಶಾ. ೯೯-೯೯).
[ ? ]

**ಬಲಿಭುಕ್ಕು**, ಬಳಿಭುಕ್ಕು (ನಾ). = ಬಲಿಪುಷ್ಪ : "ಕಾಕಂ ಚಿರಾಯು ಬಲಿಭುಗ್ವಾಯಸಂ . . . ಕರಟಮೆನೆ ಕಾಗೆ" (ಪಾಂಗಿಶಾ. ೫೦-೪); ಬಲಿಬುಗ್ವ್ರಜಕ್ಕೆ ಬಲಿಯಂ ತಾನಿಕ್ಕುವಳ್ (ಕಾಂಕು. ೬೬೬); ಆ ಮಹಾಕಾಳಿಯನಿಪ್ಪ ದೇವಿ ಬಲಿಭುಕ್ಸಗರೂಪಿನೊಳೆಯ್ದುವಂದು ತದ್ಕಾಲನ ಕಣ್ಗಳಂ ನಿಶ್ಚಿತಚಂಚುವಿನಿಂದಿಟಿಯಲ್ಕೆ ಸಾರ್ವುದಂ (ಪುಕಾಶ. ೬-೦೨). ಬಳಿಭುಕ್ಕು: "ಅರಿಷ್ಟಃ, ಕರಟಃ . . . , ಬಳಿಭುಕ್, ಧ್ವಾಂಕ್ಷಃ, ಚಿರಜೀವೀ, ವಾಯಸಃ — ಈ ೧೦ ಕಾಗೆ" (ಕಶಾಯು. ೯೦-೯೩) ; ಬಳಿಭುಗ್ಗೃಧ್ರ ಕದಂಬವುಂಬರದೊಳುಗ್ರಶ್ವಾಪದಶ್ರೇಣಿ ಭೂತಳದೊಳ್ ನರ್ತಿಸೆ . . . ಪಿಂಗಳಕಂ ಗವಾಧಿಪತಿಯುಂ ಕೊಂದಂ ಭುಜಾದಂಡದಿಂ (ಪಂಕಕಾ. ೦೬೬-೦೬).
[ಸಂ. ಬಲಿಭುಜ್]

**ಬಲಿಭೋಜನ** (ನಾ). = ಬಲಿಪುಷ್ಪ : ತೀವಿದ ತಾರಗೆದುತ್ತುಗಳ್ಗೆ ಮೇಲುರವಣಿಸುತ್ತೆ ಬರ್ಪ ಬಲಿಭೋಜನಜಾಲವೊ ಮರ್ಬನೇಳ್ಗೆಯೋ (ಶಾಶಕ. ೦೦-೨೧). [ಸಂ.]

**ಬಲಿಭೋಜಿ** (ನಾ). =ಬಲಿಪುಷ್ಪ : ಪೋದರಂದನಿಬರುಮೊಂದೆ ಬಿಲ್ಗಿದು ತತ್ಪಚರರ್ ಬಲಿಭೋಜಿರಾಜಿವೋಲ್ (ಪೇಬಕು. ೦೦-೯೭).
[ಸಂ. ಬಲಿಭೋಜಿನ್]

**ಬಲಿಮಥನ** (ನಾ). = ಬಲಿಧ್ವಂಸಿ : ಬಲಿಮಥನ ಫಲುಗುಣರು ಸಹಿತಗ್ಗಳಿಯನೇಕಾಂತದಲಿ . . . ಸೀಳಿದು ಬಿಸುಟನಾ ಭೀಮ (ಕುಪ್ಪಾಸ. ೨ ಸೂಪಕ). [ಸಂ.]

**ಬಲಿಮಿಂಡ** (ನಾ). ಬಲಿಷ್ಠನಾದ ವೀರ ; ಅತಿಪರಾಕ್ರಮಿ : ಸ್ವಸ್ತಿ ಶ್ರೀನೊಳಂಬಾದಿಯರಸ ಪೃಥುವೀರಾಜ್ಯಂಗೆಯೆ ಪುತ್ರೂರ ತೊಜು ಕೊಳುಳ್ ಪೆತ್ರೋಂ ಬಲಿಮಿಣ್ಡನಾ ಶೆಟ್ಟಿಯರ ಮಗನರಪಟ್ಟಂಗಟ್ಟೆ (ಎಕ. X, ಕೋಲಾರ ೨೩೬-೪ : ಸು. 815). [ಬಲ್ಮ+ಮಿಂಡ]

**ಬಲಿಮುಖ**, ಬಳಿಮುಖ (ನಾ). ಮುಖದ ಮೇಲೆ ನೆರಿಗೆಗಳುಳ್ಳ ಪ್ರಾಣಿ ; ಕಪಿ ; ಕೋತಿ : "ಪ್ಲವಗಂ ಕಪಿ ಮರ್ಕಟಕಂ ಪ್ಲವಂಗಮಂ ಬಲಿಮುಖಾಹ್ವಯಂ ವಾನರಂ" (ಪಕ್ಕುಕೋ. ೪೦-೬) ; ಸಕಲಕಪಿಸಮಿತಿವರಸಹಿತಕುಲಾಚಲಚಕ್ರ ಜಾರದಂಭೋಳಿ ಜಗತ್ಪ್ರಕಟೋದ್ಯನ್ನಹಿಮನೆನಿಸುವ ಕಕುದ್ವಲಿಯೆನಿಪ ಪೆಸರ ಬಲಿಮುಖನಿರ್ಪಂ (ಕುಕಕಾ. ೨೬೬-೭) ; ಬಹುಕಾನನಂಗಳಲಿ ಬಲಿಮುಖರ ರೂಪುಗಳನವರುಚಿ ತಳೆದಿರ್ಪಾಳ್ವನ ನೇಮದಲಿ (ಕೂಕಶಾ. ೦-೯-೭೦). ಬಳಿಮುಖ : ಬಳಿಮುಖಧರ್ಮಬಹಿರ್ಮುಖ ಚಳಪಾತಿ ನೀಂ ರೌದ್ರಭಾವಮಂ ತಳೆದಿಂತೇಕೊಳಪುಗುವ ಘೋರ ದುರ್ಗತಿಗಳೊಳ್ (ಪೇಬಕು. ೬-೭೩). [ಸಂ.]

**ಬಲಿಮುಖಕೇತನ** (ನಾ). ೧. ಕಪಿಧ್ವಜ. ೨. ಕಪಿಗಳಲ್ಲಿ ಶ್ರೇಷ್ಠನಾದವನು ; ಸುಗ್ರೀವ : ಬ[ಪಾಠಾಂ. ವ]ಲಿಮುಖಕೇತನನಂ ಚಕಿತಲೋಚನಂ ರತ್ನಜಟಿ ನಿಜಪ್ರಾಣಭಯಾಕುಲಚಿತ್ತಂ ಪೌಲಸ್ತ್ಯಂ ಕೊಲಲಟ್ಟಿದ ತೀಕ್ಷ್ಣಪುರುಷನೆಂದೀಕ್ಷಿಸಿದಂ (ಕುಂಪಶಾ. ೦೦-೫೦). ೩. ಕಪಿಧ್ವಜವುಳ್ಳವನು ; ಅರ್ಜುನ. [ಸಂ.]

**ಬಲಿಮುದ್ರೆ** (ನಾ). ಬಲಿ ಕೊಡುವ ಪ್ರಾಣಿಯ ಮೈಮೇಲೆ ಹಾಕುವ ಮುದ್ರೆ—ಗುರುತು : ಬಲಿಮುದ್ರೆ ಕೊಟ್ಟರೂ ಸುಲಿಗೆ ತಪ್ಪಲಿಲ್ಲ (ಗಾಕ). [ಸಂ. ಬಲಿಮುದ್ರಾ]

**ಬಲಿಮೂರ್ತಿ** (ನಾ). (ಕರಾ) ಉತ್ಸವಮೂರ್ತಿ; ಉತ್ಸವದೇವರು.
[ಸಂ.]

**ಬಲಿಯ** (ನಾ). ಬಲಿಷ್ಠನಾದವನು ; ಶಕ್ತಿಶಾಲಿಯಾದವನು.

ಬಲಿಯರ ಭೀಮ =ಬಲಿಷ್ಠರಿಗೆ ಭಯಂಕರನಾದವನು ; ಅತಿಪರಾಕ್ರಮಿ ; ಒಂದು ಬಿರುದು : ಶ್ರೀಮನುಮಹಾಮಣ್ಡಳೇಸ್ವರ ತ್ರಿಪುರಾಧೀಸ್ವರ . . . ವೈರಿಗಜಕೇಸರಿ ಬಲಿಯರ ಭೀಮ ಸಂಗ್ರಾಮರಾಮ ಮಲೆಪರ ನಂದನವನಂ (ಎಕ. I, ೬೨-೦೦; 1095). ☞ ಇಲ್ಲಿ 'ಬಲಿಯರ' ಎಂಬುದಕ್ಕಿಂತ 'ಬಲಿವರ' (=ಎದುರುಬೀಳುವವರ) ಎಂಬುದು ಸೂಕ್ತವಾದುದೇ ? [ಬಲ್ಮ (<ಬಲ್$_{1}$)+-ಇಯ]

**ಬಲಿಯಿಕ್ಕು** (ಕ್ರಿ). =ಬಲಿಗೆಯ್ : ದಳಪತಿಯಾ ಕಾರ್ಯದಿರವ ನಿನ್ನಯ ಪಾದನಳಿನಕ್ಕೆ ಬಿನ್ನೈಸೆಂದು ಬಳಿಕೆನ್ನ ಕಳುಹಿದ ಚಿತ್ತೈಸಿ ರಿಪುಪಾಯದಳವ ಭೂತಕೆ ಬಲಿಯಿಕ್ಕು (ಕಂಪಶ. ೦೦-೦೨೨). [ಬಲ್ಮ+ಇಕ್ಕು]

**ಬಲಿಯಿಸು**, ಬಲಿಸಂ (ಕ್ರಿ). ೧. ಬಲಪಡಿಸಂ ; ಬಿಗಿಗೊಳಿಸಂ ; ಭದ್ರಪಡಿಸಂ : ಕುಮ್ಮಟವನು ಬಲಿಯಿಸು ಹೊಸಮಲೆಗದು ನೆಮ್ಮಗೆ ನೇಮಿಯ ಗೆಲ್ಲ ಹಮ್ಮು ಬಿಡಿನ್ನು ತುರುಕರು ಬಂದರೆ ನಿನಗುಮ್ಮಳವನು ಪಡಾದಿಹರೆ (ಕುಂಚಾಸಾಂ. ೪೦-೪೦). ೨. ಸ್ಥಿರಪಡಿಸಂ ; ಸ್ಥಾಪಿಸು ; ನೆಲೆಗೊಳಿಸಂ : ಮಲೆತಿದಿರಾಂತು ನಿಲ್ವ ಚಿಕದೇವನ ಚಿಲ್ವಿಕೆಗೊಂಡ ತಾಣಕಂ ಕಲಿದಳೆದೊಳ್ಕೊಗಾ ಕದುಬದಬ್ಬುಜ್ಜೊಳೊಚ್ಚತಮಿರ್ಪ ದಿಟ್ಟ

ಪೊಂಬಲಗೆಯ ಸಾರ್ಚಿದೀಕೆಪೊಲಿದಿರ್ಚಿದ ಪೇರೆರ್ದೆಯಂ ನಿರೂಪಕರ್ ಬಲಿಯಿಸಿ ಚಿತ್ರದೊಳ್ ನೆನೆವರಾ ವಧುರಾವುರಮಲ್ಲಲೀಲೆಯಂ (ಅಕಂ. ೪೯-೦೩೮). ೩. ದ್ರವಪದಾರ್ಥವನ್ನು ಚೆನ್ನಾಗಿ ಕಾಯಿಸಿ ಗಟ್ಟಿಯಾಗುವಂತೆ ಮಾಡು; ಅಟ್ಟಿಸು : ಹಿರಿದಾಗಿ ಬಲಿದ ಬಾಳೆಯ ಕಾಯ ಸುಟ್ಟದಱ ತಿರುಳುಮಂ ತೆಗೆದು ಚಿಕ್ಕದಕೆಯಿಂದದೊಳು ಕತ್ತರಿಸಿ ಬಲಿಯಿಸಿದ ಹಾಲು ಮತ್ತದಱ ತೆಱದಿ ಕುಯ್ದು ಬಾಳೆಯ ಕಾಯನು ಬೆರಸಿ (ಸೂಪಶಾ. ೯-೬೪); ನೀರ ಬಲಿಯಿಸ ಬಲ್ಲ, ಓಮರುಚಿಯ ಉರಿಸ ಬಲ್ಲ, ಉರಿಯ ಕೋಡಿಸ ಬಲ್ಲ ಸಾಮರ್ಥ್ಯವುಳ್ಳ ಕುಂಟಣಿತನದ ವಿದ್ಯಾಪರಿಣತೆ ಸಂಗಾಯಿ (ಶಂಜಂಚ. ೯೭). ೪. ವೃದ್ಧಿಗೊಳಿಸು; ಬೆಳೆಸು; ಹೆಚ್ಚಿಸು : ರಸದಿಂದ ಪುಟ್ಟಿಸಿ ಭಾವದಿಂ ಬಲಿಯಿಸಿ ಪೊಸಬಗೆವೆತ್ತಲಂಕೃತಿಯ ಎಸಕದಿಂ ಬಳೆಯಿಸಿ ಕೃತಿಯೆನಿಸುವನಿದ ರಚಕರು ಮೆಚ್ಚುವಂದದಲಿ (ಶಂಶಾಪಾಂ. ೦-೯೦); ಸಂಸಾರಕ್ಕೆ ಸಂತಾನವೇ ಸೂರ್ಯ, ಅವರಿಂದಲೇ ಎಲ್ಲ ಆನಂದಕ್ಕೂ ಜೀವ ಎಂಬುದು ಅರಿವಾಗಿ, ಆ ಅರಿವು, ಆಕೆಯ ಕೊರಗನ್ನು ಮತ್ತಷ್ಟು ಬಲಿಯಿಸಿತು (ಚಕಂಪಾ. ೦೩). ೫. ಹಾಳಾದುದನ್ನು ಸರಿಮಾಡಿಸು,— ದುರಸ್ತುಗೊಳಿಸು : ಈ ಜೀರ್ಣವಾದ ಮರವಸನು ಬಲಿಯಿಸೆಂದು ಹೇಳಿದಲ್ಲಿ ಅವರ ಬೆಸದಿಂದ ಅಧಿಕಾರಿ ರಂಗಂಣನವರು ಆ ಸಿಖರದ ಮರ ಮಸನಂ ಜೀರ್ಣವಾಯಿತೆಲ್ಲವನೂ ಬಲಿಯಿಸಿ ಬಿದ್ದ ಇಟ್ಟಿಗೆ ಎಲ್ಲವನೂ ಹೊಡಿಸಿದರು (ಎಕ.ವ. ಶೀರಂಆರು. ೨೪ ೩; 1298). **ಬಲಿಸು** : ೧. ಒಳಗೆ ನೀ ಕಾದುವೊಡೆ ದುರ್ಗವ ಬಲಿಸು ಬವರಕೆ ಹಿಂದುಗಳೆಯದೆ ನಿಲುವ ಘನ ನಿನಗಿಃಗಲುಂಟೇ (ಕುಭ್ಯಾ.ಶ. ೩-೦೨); ಬಲಿಸು [ಪಾಠಂ. ಬಲಿಯಿಸು] ದುರ್ಗವ ಬೇಗ ಬರಿಸು ಸಂವರಣೆಯ ಸಲಿಸು ಸುಖರ ಸಲುಗೆಯನು (ಕುಪಾಶಾಂ. ೩೦-೩೩). ೨. ಪಡಿಯ ಬಲಿಸುವ ಗುಳವ ಜೆಂಚಿಯ ಗಡಣಿಸುವ ಬಲುಗಿಃಲ ಗಾಲಿಯ ತೊಡಿಸುವುತ್ಸಹವಾಯ್ತುವರ ಪಾಂಡವರ ಬೀಡಿನಲಿ (ಕುಭ್ಯಾ.ಉ. ೦೦-೦೨). ೪. ಗಂಟು ಕಟ್ಟಲಿಕ್ಕೆ ಕಲಿಸೋದು ರೊಕ್ಕ ತುಂಟತನಗಳ ಬಲಿಸೋದು ರೊಕ್ಕ (ಪುರಂದ. ೨-೪೬-೨); ಕಾಟಿ ಗಂಟಿಕ್ಕಿ ಸಂಧಿಗಳನೆಸಗುವ ಮುಳೆಯ ಮೇಟಿಗೊರ್ವನನಱಿಸಿ ಸೊಗಸು ಬಲಿಸುವ ಚಾರುಚೀಟಿಯರ್ಚಲಿಸುವರನಂಗಶಬರನ ಬೇಂಟೆದೋಹಿನ ಮೃಗಂಗಳಂತೆ (ಕೃಶಂಶಾ. ೬-೩೭); ವೈರವ ಬಲಿಸದ ಬಱದೆ ಪಳಿಯದ ಕೊಲೆ ಬೈಗಳಿಂದ ಕೋಟಲೆಗೊಳಿಸದ ಸತ್ಕುಲಕೀವುದು ಕುವರಿಯನು (ಹಂರಿ. ೩-೦೬).

[ಬಲ್$_1$ (<ಬಲ್$_1$)+—ಇಸು$_1$]

**ಬಲಿರಿಪು**, **ಬಳಿರಿಪು** (ನಾ). ಬಲಿಚಕ್ರವರ್ತಿಯ ವೈರಿ; ಕೃಷ್ಣ : ಬಲಿರಿಪು ಬಾಣಾವಳಿಯಂ ಬಲವೈರಿಯ ಬಲದ ಮೇಲೆ ಕಱೆದಂ (ಜಗಂ. ೦೪-೬೬). **ಬಳಿರಿಪು** : ಬಳಿರಿಪುವಿನ್ನೀಕೆಯ ಪದತಳಸಂಗದ ಸುಖ ಮನವಳ ಮುಖಸಂಗದೊಳೇಂ ತಳೆಗುಮೆ ಎಕ್ಕಿಣಿಯುಂಗುಟದೊಳುಳ್ಳ ಸೊಬಗುಂಟೆ ಸತ್ಯಭಾಮೆಯ ನೊಸಲೊಳ್ (ಜಗಂ. ೦೨-೬೨). [ಸಂ.]

**ಬಲಿಪಡೆ** (ಕ್ರಿ). (ಅಲಂ) ಶಿಕ್ಷೆಗೊಳಗಾಗು; ಹೊಡೆತ ತಿನ್ನು : ವನಜವದನೆಯ ಬಯಸಿದೊಡೆ ಬಿಲ್ಲಿನಲಿ ಬಲಿಪಡೆದುದನು ಕೌರವಜನಪ ಮಱೆದಿರಲಾಗದು (ಕುಭ್ಯಾ.ಉ. ೩-೯). [ಬಲ್$_3$ + ಪಡ್$_1$]

**ಬಲಿಪವದನೆ** 'ಬರಿಪವದನೆ' ನೋ.

**ಬಲಿಪಿಡಿ** (ಕ್ರಿ). ದೃಢಗೊಳಿಸು; ಹಿಡಿತಕ್ಕೆ ತಂದುಕೊಳ್ಳು : ಇಂತು ನುಡಿದ ರಾಣಿಯ ನುಡಿಗೇಳಿಯೋರಂತೆ ಚಿತ್ತವ ಬಲಿಪಿಡಿದು ಸಂತಸ ಮಿಗೆ ಸಭೆಯೊಳು ರಾಯಗೆ ಮಾಱಾಂತು ಬಿನ್ನವಿಸಿದೆನಿಂತು (ಹಂರಿ. ೦-೩೦). [ಬಲ್$_3$ + ಪಿಡಿ$_1$]

**ಬಲಿಷ್ಠ** (ಗು). ೧. ಅತ್ಯಂತ ಶಕ್ತಿಶಾಲಿಯಾದ: ಅವನ ಬಲಿಷ್ಠ ಬಾಹುಗಳು ಯಾವ ಕಾರ್ಯಕ್ಕೂ ಜಗ್ಗುವುದಿಲ್ಲ (ಕಂಶಂ). (ನಾ). ೨. ತುಂಬ ಬಲವಾದುದು : ಘೋರಕಾಂತಾರಕ್ಕೆ ಹೋಗಿ ಕುಂಠಾರದಿಂ ಕಟ್ಟಿಗೆಗಳಂ ಕೈಯಾರೆ ಕಡಿಕಡಿದೊಟ್ಟಿ ಕಟ್ಟಿ ಬಲಿಷ್ಠವಾಗಿರ್ದ ಹೋರ ಹೊಱೆಯುಂ ಹೊತ್ತುಕೊಂಡು (ಶಸಕ್ರ. ೩೦-೪). ೩. ಬಲಶಾಲಿ; ಶಕ್ತಿವಂತ : ಆ ಸಮಯದೊಳರಿಬಲಸಂತ್ರಾಸಿ ಬಲಿಷ್ಠಂ ತ್ರಿಪೃಷ್ಠನಶ್ವಗ್ರೀವೋದ್ಭಾಸಿ ಪ್ರದೀಪವಮಂ ಕಿಡೆ ಬೀಸುವವೋಲನುವರಕ್ಕೆ ಕೆಯ್ಮಾಸುವುದುಂ (ಶಾಂತಿಪು. ೩-೩೨); ಈ ಕೀಚಕನು ಏಕೇಃಷ ಬಲಿಷ್ಠನಾಗಿಯೂ ಪರಾಕ್ರಮಶಾಲಿಯಾಗಿಯೂ ಇದ್ದ ಕಾರಣ ಈ ರಾಜ್ಯದ ಮೇಲೆ ಬರುವುದಕ್ಕೆ ಪರರಾಜರು ಹೆದರುತ್ತಿದ್ದರು (ಜೈಕಂ. IX, ೬). [ಸಂ.]

**ಬಲಿಷ್ಠಗೊಳಿಸು** (ಕ್ರಿ). ಪ್ರಬಲಗೊಳಿಸು; ಶಕ್ತಿಯುತವಾಗುವಂತೆ ಮಾಡು : ಅನುಭವ ಅವರ ಸ್ವಭಾವಧರ್ಮವನ್ನು ಸಾಂದ್ರಗೊಳಿಸಿತು, ಬಲಿಷ್ಠಗೊಳಿಸಿತು (ಹಳಗನ್ನ. ೬೬). [ಬಲಿಷ್ಠ + ಕೊಳ್$_1$ + ಇಸು$_1$]

**ಬಲಿಸದ್ಮ** (ನಾ). = ಬಲಿನಿಕೇತನ : "ಅಧೋಭುವನಂ, ಪಾತಾಳಂ, ಬಲಿಸದ್ಮಂ, ರಸಾತಲಂ, ನಾಗಲೋಕಃ — ಐ ಪಾತಾಳಲೋಕದ ಪೆಸರುಗಳು" (ಸಿದ್ಧಾಂತ. ೭೦). [ಸಂ. ಬಲಿಸದ್ಮನ್]

**ಬಲಿಸು** 'ಬಲಿಯಿಸು' ನೋ.

**ಬಲಿಸುತ** (ನಾ). ಬಲಿಚಕ್ರವರ್ತಿಯ ಮಗ; ಬಾಣಾಸುರ : ಉಡಿವಂತೆ ವಿಜಯವಲ್ಲರಿಯಡರ್ಪ ತದ್ಧ್ವನಿ ಪಳಂಚಿ ಕೇತುಧ್ವಜವಂದುಡಿದುದು ಸಹಸ್ರಭುಜವನದುಡಿವಕ್ಕಿದು ಸಂಚಕರಮೆನಲ್ ಬಲಿಸುತನಾ (ಜಗಂ. ೦೩-೮); ಇನಿತೆಲ್ಲ ವಾರ್ತೆಯನು ಖಳನೋರ್ವನುಂಆರೋಡಿ ಪೊಗಿ ಬಲಿಸುತಗೆ ಪೇಳೆ (ಜೈಶಹ. ೦೦-೩೯). [ಸಂ.]

**ಬಲಿಸೂರ್ಯ** (ನಾ). ಗೋಸುಂಬೆ; ಊಸರವಳ್ಳಿ : "ಶಯಾನಕಂ ಬಲಿ[ಪಾಠಂ. ೪]ಸೂರ್ಯಮೆನಲು ಗೋಸುಂಬೆ" (ಹುಂಗಶಾ. ೪೯-೦೨). 'ಪ್ರತಿಸೂರ್ಯ' ಪರಾ.

[ಈ ಪ್ರಾಸಕ್ಕಾಗಿ ಮಾಡಿಕೊಂಡ ಈ ರೂಪ ಸ್ಪಷ್ಟವಾಗಿಲ್ಲ]

**ಬಲಿಸ್ನವನ** (ನಾ). [ಜೈನ] ತ್ರಿಸಂಧ್ಯೆಯಲ್ಲಿ ಮಾಡುವ ಜಿನಪೂಜೆ : ಜಗತ್ತ್ರಯಸ್ವಾಮಿಗೆ ಸಂಧ್ಯಾತ್ರಯದೊಳ್ಪೂಜಾಭಿಷೇಕಂಗಳಂ ವಿಧಿಸಮೇತದಿಂ ಮಾಡುವ ಪೂಜೆ ಬಲಿಸ್ನವನಂ (ಪ್ರಾಶಕಾ. ೦೩೦-೦೦). [ಸಂ.]

**ಬಲಿಸ್ನಪನ** (ನಾ). [ಜೈನ] ಜಿನನಿಗೆ ಮಾಡುವ ಅಭಿಷೇಕ : ಬಲಿಸ್ನಪನಮೆಂಬುದು ಮಹಾಱಂ ಸಂಜೆಯೊಳ್ ಮಾಳ್ಪ ಜಿನಾಭಿಷೇಕಂ (ಅಪಕ್ರ. ೦೨-೦ ಕ). [ಸಂ.]

**ಬಲಿಹರ**, **ಬಳಿಹರ** (ನಾ). = ಬಲಿಧ್ವಂಸಿ : ಬಲಿಹರನ ಚರಣದಂಡದ ತಲೆಯೊಳ್ ಕಱಿಗೊಂಡೆಬಲ್ಲ ಬಾಂದೊಱೆಯಲರಿಂದೊಲೆದುದು ವಿಷ್ಣುಕುಮಾರನ ಗೆಲವಂ ಕಂಡಮರರೊಸೆದು ಕಟ್ಟಿದ ಗುಡಿವೋಲ್ (ಅಕಂಚ. ೬-೩೪). **ಬಳಿಹರ** : ಎಳೆ ರಸೆಯೊಳಟ್ಟುದಂ ಭುಜಬಳದಿಂ ಮುನ್ನೆತ್ತಿದಂತೆ ವಿಷಯಾಂಬುಧಿಯೊಳ್ ಮುಳುಗಿರ್ದಮ್ಮುಯ್ಯರುಮಂ ಬಳಿಹರ ಪಿಡಿದೆತ್ತಲೆಂದು ಬಂದೈ ಬರವಂ (ಶಂಶಕಾ. ೯-೦೩). [ಸಂ.]

**ಬಲಿಹರಣ** (ನಾ.) ೧. ಭೂತಪ್ರೇತಗಳಿಗಾಗಿ ಅರ್ಪಿಸುವ ಬಲಿ; ಆಹುತಿ : ಹರಿಯ ಬಾಣವು . . . ಖರನ ತಲೆಗಳ ಬೀಳಿದುದು ಬಲಿಹರಣವಿಕ್ಕಿತು ಕನಕಮೃಗನನು (ತೊರಾಶಾ. ೦೬-೪೩). ೨. ಪೂಜೆಯ ಕಡೆಯಲ್ಲಿ ದೇವತೆಗಳಿಗೆ ಅಥವಾ ಪಿತೃಗಳಿಗೆ ಅರ್ಪಿಸುವ ನೈವೇದ್ಯದ ಭಾಗ : ವೈಶ್ವದೇವ, ಬಲಿಹರಣರೂಪವಾದ ಎರಡು ಅನ್ನಗಳು ದೇವತೆಗಳಿಗೆ, ಉಪಲಕ್ಷಣ ಯಾ ಪಿತೃಗಳಿಗೂ ಸೇರುವುವು. ಸಪ್ತಾನ್ನಗಳಲ್ಲಿ ವೈಶ್ವದೇವ, ಬಲಿಹರಣರೂಪವಾದ ಎರಡು ಅನ್ನಗಳಿಗೆ ದೇವತೆಗಳನ್ನೂ ಪಿತೃಗಳನ್ನೂ ಭಾಗಿಗಳನ್ನಾಗಿ ಮಾಡಿದರೆಂದರ್ಥ (ಹಱಶ. ೦೪-೦೪ ಭಾಷ್ಯ).

**ಬಲಿಹರಣ ಮಾಡು** = ಆಹುತಿ ಕೊಡು; ಕೊಲ್ಲು : ನಲಿದು ದೈತ್ಯರ ಪಡೆಯನೆಲ್ಲವ ಬಲಿಹರಣ ಮಾಡುತಲು (ತಜಶ. ೯-೦೦೦). [ಸಂ.]

**ಬಲಿಹರಣಂಗೆಯ್** (ಕ್ರಿ). ಭೂತ ಪ್ರೇತಗಳಿಗಾಗಿ ಬಲಿಯನ್ನು

ಅರ್ಪಿಸು : ಒರ್ವ ಶಬರಂ ಕಂಡುವಾ ವಿಹಂಗಬಯವಮಾಡುವವೆ ಯೊಳೆಲ್ಲಿಯುಂ ಬಲಿಯಂ ಪಾಸಿ ಬಲಿಹರಣಂಗೆಯ್ದಂತೆ ಕೂಟಂ ಸೂಸಿ ಪೋಪುದಂ (ಜೀಶಕಂ. ೨೬೬-೦೭). [ಬಲಿಹರಣ + ಕೆಯ್$_1$]

**ಬಲೀಂದ್ರಪೂಜೆ** (ನಾ). ಬಲಿಪಾಡ್ಯಮಿಯ ದಿನ (ಕಾರ್ತಿಕ ಶುದ್ಧ ಪ್ರತಿಪದೆ)ದಂದು ಮಾಡುವ ಬಲಿಚಕ್ರವರ್ತಿಯ ಪೂಜೆ : ಬಲೀಂದ್ರ ಪೂಜೆಯಂದು ಮನೆಯವರೆಲ್ಲಾ ಸಂಭ್ರಮದಿಂದ ಹಬ್ಬವನ್ನು ಆಚರಿಸಿದರು (ರೂಢ). [ಸಂ. ಬಲೀಂದ್ರಪೂಜಾ]

**ಬಲೀಮುಖ** (ನಾ). =ಬಲಿಮುಖ : "ಬಲೀಮುಖಃ, ಮರ್ಕಟಕಃ . . . ಶಾಖಾಮೃಗಃ, ವಾನರಃ — ಈ ೧೧ ಕೋಡಗಂ" (ಹಲಾಯು. ೩೯-೬೬); ಆ ಬಲೀಮುಖಂ ಕಾಲಮುಖಮನೆಯ್ದುತ್ತು (ಶಂಕಕಂ. ೩೦-೯); ಬರಿಯ ಬೆಚುಂಬತೇದಿಸಿ ನಗಿಸಿತು ಭೂಪರನ ಬಲೀಮುಖನೊಂದು (ಕೃಷ್ಣಕಾ. ೬-೨೪). [ಸಂ.]

**ಬಲೀಮುಖಿ** (ನಾ). ಹೆಣ್ಣುಕೋತಿ: ಬಿರಿಕಿನೊಳೊಯ್ಯನೊಯ್ಯನರೆ ದೋಱುವ ಬತ್ತುಗಳಿಂ ವಿಳಾಸವಾವರಿಸಿದ ದಾಡಿಮಿಫಳಮನೊಯ್ಯನೆ ಚುಂಬಿಸಿ ಒರ್ವ ಕಾಂತನಂತರುಚಿರಕಾಂತೆ ಕಂಡು ಪುರುಡಿಂ ಬಡಿಯಲ್ ಪಡಿಗೊಂಡು ದೀಟ್ಟು ಬಲ್ಪರಿದು ಬಲೀಮುಖೀಮುಖಮನೀಡೆನೆ ಚುಂಬಿಸೆ ತೇಂಕಿ ಕೋಪವನಂ (ಕುಕ್ಕುಕು. ೫-೪೭). [ಸಂ. ಬಲೀಮುಖೀ (ಬಲಿ + ಮುಖ + —)]

**ಬಲೀವರ್ದ** (ನಾ). ಎತ್ತು: ವೃಷಭ : "ವೃಷ ಸೌರಭೇಯ ಗೋಪತಿ ಋಷಭ ಬಲೀವರ್ದ ಶಾಕ್ವರೋಕ್ಷ ಕಕುದ್ಮದ್ವೃಷಭಾಖ್ಯಮನಡ್ವಾಹಂ" (ಅಸಂ. ಕೋ. ೬೯-೦) : ಶೃಂಗಾರದಿಂ ಭಂಗಿವಡೆದು ವೃಷಬಲೀವರ್ದಧ್ವಾನಮುಂ ಗೋವತ್ಸಕದಂಬಹಂಭಾರವಮುಂ ವಿಜೃಂಭಿಸೆ (ಚಾಲ. ೯-೫೦ ಪ); ವೃಷಭನ ಅನಿಮಿತ್ತರೋಷಾವೇಶವಿಷಮತೆಗಮಾ ಜರಾದುರ್ಬಲ ಬಲೀವರ್ದದುರ್ದಶಾಮರಣಾಯಾಸಪರಿಣತಿಗಂ ವಿಸ್ಮಯಂಬಟ್ಟು (ಕಂಪ್ರಕು. ೨-೪೦). [ಸಂ.]

**ಬಲು** 'ಬಲ್$_2$' ನೋ.

**ಬಲುಕಜ್ಜ** 'ಬಲ್ಗಜ್ಜ' ನೋ.

**ಬಲುಕಣ** 'ಬಲ್ಕಣ್ಣ' ನೋ.

**ಬಲುಕರಿಸು** (ಕ್ರಿ). ಬಲವಂತ ಮಾಡು; ಒತ್ತಾಯಪಡಿಸು : ಬಲುಕರಿಸಿ ಕೊಲುವುದು ನೀಮವೇ ತತ್ತರುಣಿಗೀ ಕಾಱುಯಲ್ಲದೀಯದ ಗಂಟಲಲಿ (ಐಕಷ್ಣ. ೨೬-೦೨); ಬಲುಕರಿಸಿ ಭೂಮಿಯೊಳಗೊಂದಂಗುಲವನೊತ್ತಿದವಂಗೆ . . . ನರಕದೊಳಿಳಿವುದಲ್ಲದ ಬೇಱೆ ಗತಿಯಿಲ್ಲ (ಕುಮ್ಯಾಉ. ೯-೦೦೯) ; ಎಲೆ ವಸಂತನ ಚಂದ್ರಮನೆ . . . ಕಲುಷರಹಿತೆಯ ಖಳಕುಲಾಧಮ ಬಲುಕರಿಸಿ ಕೊಂದೊಯ್ದನೆಂದುಸುರುವುದು ರಾಮಂಗೆ (ಕೊರಾ. ೬-೦೦-೬). 'ಬಲಾತ್ಕರಿಸು' ಪರಾ. ಪ್ರ 'ನಿರಾಕರಿಸು', 'ಪತಿಕರಿಸು' ಮೊದಲಾದ ಶಬ್ದಸಾಮ್ಯದಿಂದ ಮಾಡಿಕೊಂಡ ರೂಪ. [< ಬಲಾಕರಣ$_2$ + — ಇಸು$_3$]

**ಬಲುಕುಣಿಕೆ** 'ಬಲುಗುಣಿಕೆ' ನೋ.

**ಬಲುಕುಣಿಯ** (ನಾ). ಒಂದು ಬಗೆಯ ಮರ : ಬಲುಕುಣಿಯ ಹುಡುವ ವಕುಳಂ ಸಿಂಧುವಾರ . . . ಒಪ್ಪಿದುದು (ಕುಮ್ಯಾಂಗ. ೦೦-೨). 'ಬಲುಗುಣಿಕೆ' ಪರಾ. [ ? ]

**ಬಲುಗಂಡ** 'ಬಲ್ಗಂಡ' ನೋ.

**ಬಲುಗಜ್ಜ** 'ಬಲ್ಗಜ್ಜ' ನೋ.

**ಬಲುಗಡಲು** 'ಬಲ್ಗಡಲ್' ನೋ.

**ಬಲುಗಡಿ$_1$** (ನಾ). ಅತಿಶಯವಾದ ಸಾಮರ್ಥ್ಯ. — ಪರಾಕ್ರಮ : ಎಲವೊ ಕೀಚಕ ಹೋಗದಿರು ನಿಲ್ಲೆಲವೊ ಹುಲುಮಂಡಳಿಕ ನಿನ್ನಯ ಬಲುಗಡಿಯ ತೋಱುವುದು ನಿನ್ನಂತರದ ರಾಯರಲಿ (ಕುಮ್ಯಾವಿ. ೬೦೩.೨೫-೮); ಸಮ್ಮ ಹಗೆ . . . ಬಲುಗಡಿಯ ರಕ್ಕಸರನೊಬ್ಬರನುಳಿಯಲೀಯದ ಕೊಂದ ನಾವಿನ್ನುಳಿವುಪಾಯವದೆಂತು (ಅಕ್ರೂಕ. ೨-೯). 'ಬಲಗಡಿಯ' ಪರಾ. [ಬಲು ( < ಬಲ್ಲಿತು$_1$ ) + ಕಡಿ$_4$ ( < ಕಡಿದು )]

**ಬಲುಗಡಿ$_2$** (ನಾ). ಬಲವಾದ ಕೋಟೆ. — ದುರ್ಗ : ಇಂತೆಂದು ಬಿನ್ನವಿಸಿದನಾ ನೇಮಿ ಪೊಡವಿಪತಿಗೆ ದಾನವಗೆ ಬಿಡಬಾರದು ಪೌಜುಮಾಡಬಾರದು ಬಲುಗಡಿ[ಪಾಠಂ. ಗಡಿಯು]ಕುಮ್ಮಟದುರ್ಗವಿಳೆಗೆ (ಕುಂರಾಸಾಂ. ೨೦-೯೫). [ಬಲು ( < ಬಲ್ಲಿತು$_1$ ) + ಗಡಿ$_3$]

**ಬಲುಗಡಿಯ** (ನಾ). ಅತ್ಯಂತ ಸಮರ್ಥನಾದವನು; ಮಹಾಪರಾಕ್ರಮಿ: ಎಲೆಲೆ ಪಾತಕಿ ಹೆಣನ ಹೊಯ್ದರೆ ಬಲುಗಡಿಯ ನೀನೆಂಬರೆ (ಕುಮ್ಯಾದ್ರೋ. ೦೯-೩); ಕಡೆಗಾಲದ ರುದ್ರನಿಟ್ಟಾಭರಣದ ಕಡಿಕನಪ್ಪಾ ವಿಷೋರಗನು ಕಡುಮುನಿಸಿಂ ಬರ್ಪವೊಲು ಬಂದಾ ಬಲುಗಡಿಯನ ಮೇಲ್ವಾಯ್ದುದಾಗ (ಜೀಬಂಸಂ. ೦೯-೦೨೦). 'ಬಲುಗಡಿಯತನ' ಪರಾ. [ಬಲುಗಡಿ$_1$ + — ಅ$_7$]

**ಬಲುಗಡಿಯತನ** (ನಾ). = ಬಲುಗಡಿ$_1$ : ಫಡ ಜಯದ್ರಥ ಹೋಗು . . . ತುಡುಕಿದರೆ ಕೈ ಬೇವುದೀ ಬಲುಗಡಿಯತನ ಬಯಲಹುದು (ಕುಮ್ಯಾದ್ರೋ. ೯-೬೦). [ಬಲುಗಡಿಯ + — ತನ]

**ಬಲುಗಣೆ** 'ಬಲ್ಗಣೆ' ನೋ.

**ಬಲುಗತ್ತಲೆ** 'ಬಲ್ಗತ್ತಲೆ' ನೋ.

**ಬಲುಗತ್ತಿ** 'ಬಲ್ಗತ್ತಿ' ನೋ.

**ಬಲುಗಯ್** 'ಬಲ್ಗಯ್$_1$' ನೋ.

**ಬಲುಗಯ್ಯ** 'ಬಲ್ಗಯ್ಯ' ನೋ.

**ಬಲುಗರ$_1$** (ನಾ). ಅನೇಕ ಕೈಗಳು : ಜ್ವಲನಪ್ರೇಂ ಶಿಖಭಕ್ತರಿಂದಗ್ಗಳಮೆಯಾತನ ನಾಲಗೆಗಳಂ ಬಲುಗರಂಗಳನರಿದು ಕಳಿಯನೆ ವೀರಗಣನೊಬ್ಬ (ಬಸಪು. ೯೯-೪೨) ; ಎಲವೊ ಪಾವಕ . . . ವೀರಗಣೇಶ್ವರನು ನಿನ್ನ ಬಲುಗರಂಗಳನೇಳುನಾಲಗೆಗಳನರಿದು ಹಾಯ್ಕಿದನಲಾ (ಬಸಪು ೫೦-೨೪). [ಬಲು ( < ಬಲ್ಲಿತು$_1$ ) + ಕರ$_2$]

**ಬಲುಗರ$_2$** 'ಬಲ್ಗರ' ನೋ.

**ಬಲುಗರುಳು** 'ಬಲ್ಗರುಳ್' ನೋ.

**ಬಲುಗವಣೆ** 'ಬಲ್ಗವಣೆ' ನೋ.

**ಬಲುಗಳವು** (ನಾ). ೧. ಅತಿಯಾದ ಕಳವು ; ಹೆಚ್ಚಿನ ಕಳ್ಳತನ. ೨. ದಪ್ಪವಾದ ಕೊರಳು. ೧, ೨ : ಅಳಿಯಾಸೆ ಪೂವಿನ ಜೊಂಪದೊಳಗೆ ಬಲುಗಳವು ತುರಂಗಸಂಕುಳದಿ ಎಳೆ ಕಣ್ಣು ದೆಸೆಸುತ್ತು ವಾಚಕ ಮೊದಲೊಳು ತಿಳಿಮಲಾ ದೇಶಕೆಯಿಲ್ಲ (ಪರ್ದಿಕ. ೦-೫೦). [ಬಲು ( < ಬಲ್ಲಿತು$_1$ ) + ಕಳವು ; ಬಲು( < ಬಲ್ಲಿತು$_1$ ) + ಗಳವು$_2$ (ಪ್ರ ← ಸಂ. ಗಲ)]

**ಬಲುಗಾಹು$_1$** 'ಬಲ್ಗಾಪು' ನೋ.

**ಬಲುಗಾಹು$_2$** (ನಾ). ಬಲವಾದ ಮೋಸ ; ಅತಿಯಾದ ಠಕ್ಕು. — ವಂಚನೆ : ಅಹತಾಂಡೋಳಿತ ಮೊದಲಾದ ಗಮಕಸಮೂಹಗಳಿಂದ ಕೇಳ್ವರನು ಆಹಾಯೆನಿಸಿದಳಂತರಂಗದ ಬಲುಗಾಹು ಬೇಱಾಗಿರಲವಳು (ಕುಂರಾಸಾಂ. ೨೫-೦೭). [ಬಲು ( < ಬಲ್ಲಿತು$_1$ ) + ಗಾಹು$_3$]

**ಬಲುಗಾಳೆಗ** 'ಬಲ್ಗಾಳೆಗ' ನೋ.

**ಬಲುಗಿಚ್ಚು** 'ಬಲ್ಗಿಚ್ಚು' ನೋ.

**ಬಲುಗುಂಡು** 'ಬಲ್ಗುಂಡು' ನೋ.

**ಬಲುಗುಣಿಕೆ**, ಬಲುಕುಟಿಕೆ, ಬಲಗುಣಿಕೆ, ಬಲುಕುಣಿಕೆ (ನಾ). ೧. ಒಂದು ಬಗೆಯ ಸಸ್ಯ : "ತಲಪೋಟಃ — ಚಿಕ್ಕಾಣಿಕೆ, ಅವರ, ಬಲುಗುಣಿಕೆ,

ಎಲಚಿ, ನೆಲದಾಳು" (ಓಷಂ. ೬೮). ಬಲಕುಟಕೆ : ೧. "ತಲಪೋಟಿಕಾ— ಬಲಕುಟಕೆ" (ಓಷಂ. ೬೬). **ಬಲಗುಣಿಕೆ :** ೧. "ಪೊ.ಟತಲಃ— ಬಲಗುಣಿಕೆ" (ಓಷಧಿ. ೨೦೩). **ಬಲುಕುಣಿಕೆ :** ೧. "ಶಾಟಿಕಾ—ಬಲುಕುಣಿಕೆ" (ಓಷಂ. ೧೬೩). ೨. ಒಂದು ಬಗೆಯ ಮರ : ಬಲುಕುಣಿಕೆ ಪಾದರಿ ಪಾಲೆ ತೇಗುಗಳ ಏಸರ ನಾನಾವೃಕ್ಷಜಾತಿಯಿಂದೆಸೆವ ಘೋರಾರಣ್ಯ ಕಣ್ಗೆಸೆದುದು (ಸಿಂಗಿರಾ. ೩೦-೯). [ಬಲು$_2$ + ಕುಣಿಕೆ$_2$]

**ಬಲುಗುದಿ** (ನಾ). ಅತಿಯಾದ ಕುದಿತ : ಕದಡಿ ಹರಿವರುಣಾಂಬುವಿನ ಬಲುಗುದಿಯೊಳಗೆ ನಾದಿದವು ಬಲವನು ಕದನದಲಿ ಗಣನಿಕರ ಕೊಂದವು ಕೋಟಿದಾನವರಾ (ರೇಶು. ೩-೩೮). [ಬಲು(<ಬಲ್ಲಿತು$_1$)+ಕುದಿ$_3$]

**ಬಲುಗುದುರೆ** 'ಬಲ್ಗುದುರೆ' ನೋ.

**ಬಲುಗುಮ್ಮ** (ನಾ). ಭಾರಿಯಾದ ಭೂತ ; ದೊಡ್ಡ ದೆವ್ವ : ತಮ್ಮ ಬಾ ಬಲ ಬೆದಱುತದೆ ಬಲುಗುಮ್ಮನಿವನನು ಕಂಡು (ಕೃಷಾ. ೬-೨೮-೦೪). [ಬಲು (<ಬಲ್ಲಿತು$_1$) + ಗುಮ್ಮ$_1$]

**ಬಲುಗೂಳಿ** 'ಬಲ್ಗೂಳಿ' ನೋ.

**ಬಲುಗೆಂಪು** (ನಾ). ದಟ್ಟವಾದ ಕೆಂಪು ; ಕಡುಗೆಂಪು : ಸುಳಿದಾಡುವಬ್ಜನೇತ್ರೆಯರ ಪಾದಾಂಗುಳಿಗಳವಟ್ಟ ನುಡಿದಲತಗೆಯ ಬಲುಗೆಂಪು ನೆಲದೊಳೊಪ್ಪಿತು ಭೂದೇವತೆ ತಳೆದ ಕುಂಕುಮಗಂಧದಂತೆ (ಶಂಪು. ೨೯-೦೨). [ಬಲು (<ಬಲ್ಲಿತು$_1$) + ಕೆಂಪು$_1$]

**ಬಲುಗೆಯ್** 'ಬಲ್ಗೆಯ್' ನೋ.

**ಬಲುಗೆಯ್ಯ** 'ಬಲ್ಗೆಯ್ಯ'ನೋ.

**ಬಲುಗೆಲಸ** (ನಾ). ಅತಿಶಯವಾದ ಕೆಲಸ ; ದೊಡ್ಡಕಾರ್ಯ : ಹಲವು ಮಾತೇನಖಿಳಭುವನಾವಳಿಯ ಸೃಷ್ಟಿವಿಧಾನದಿಂ ಬಲುಗೆಲಸ ದಿನಗಾಯಿತು (ಎಕಾಗ. ೨-೨-೯೦). [ಬಲು (<ಬಲ್ಲಿತು$_1$) + ಕೆಲಸ]

**ಬಲುಗೆಲಸಿ** (ನಾ). ಬಹಳ ಕೆಲಸ ಮಾಡುವ ವ್ಯಕ್ತಿ ; ಒಳ್ಳೆಯ ಕೆಲಸಗಾರ : "ಕರ್ಮಠಂ ಕರ್ಮಶೂರನೆನೆ ಬಲುಗೆಲಸಿಯಕ್ಕು" (ಶುಂಗರಾ. ೬೦-೦೩). [ಬಲಗೆಲಸ +— ಇ$_3$]

**ಬಲುಗೆಸಱು** (ನಾ). ಹೆಚ್ಚಾದ ಕೆಸರು ; ಅತಿಯಾದ ರಾಡಿ : ರುಧಿರದ ಬಿಱುವೊನಲ ಬಲುಗೆಸಱ ನೆಣವಸೆಯುಱಿಲ ನೆಲದಲಿ ಧೂಳಿಯೆದ್ದುದು ದಳದ ಪದಹತಿಗೆ (ಕುವ್ಯಾಕ. ೨೨-೬).
[ಬಲು (<ಬಲ್ಲಿತು$_1$) + ಕೆಸಱು (<ಕೆಸಱ್)]

**ಬಲುಗೆಱೆ** 'ಬಲ್ಗೆಱೆ' ನೋ.

**ಬಲುಗೈ** 'ಬಲ್ಗೆಯ್' ನೋ.

**ಬಲುಗೈತನ** (ನಾ). ಶೌರ್ಯ ; ಪರಾಕ್ರಮ : ನರನ ಬಲುಗೈತನವನೀ ದೋಹರದ ಹೆಂಗುಸುತನವ ನೀವವಧರಿಸಿದಿರೆ ಜಗಭಂಡರಿವರಿಗೆ ಮತ್ತೆ ಬಿರುದುಗಳೆ (ಕುವ್ಯಾದ್ರೋ. ೦೦-೯೩) ; ಕಂಡನವರ ಬಲುಗೈತನವನು ಮೇಲೆ ಕೊಂಡೆಚ್ಚು ವಜ್ರಶರದಲಿ ಖಂಡಿಸಿ ಬಿಟ್ಟ ಸರಳ ಮೂದಲಿಸ ಲುದ್ದಂಡ ತ್ರಿಪುರಕುಮಾರ (ಕರ್ಣ. ೬-೦೮).
[ಬಲುಗೈ (<ಬಲ್ಗೆಯ್) +—ತನ]

**ಬಲುಗೈದು** 'ಬಲೆ ಯ್ದು' ನೋ.

**ಬಲುಗೈಬಂಟ** (ನಾ). ಪರಾಕ್ರಮಿಯಾದ ಸೈನಿಕ,—ಯೋಧ : ಈತ ಬಲುಗೈಬಂಟನು (ಕುವ್ಯಾಸ. ೨-೬೬). [ಬಲುಗೈ (<ಬಲ್ಗೆಯ್)+ಬಂಟ$_1$]

**ಬಲುಗೈಯ** 'ಬಲ್ಗೆಯ್ಯ' ನೋ.

**ಬಲುಗೊಱತೆ** (ನಾ). ದೊಡ್ಡ ನಷ್ಟ,—ಕೊರತೆ : ಸಾಯಬೇಕವನಲ್ಲದೊಡಾನು ಬಿಡಬೇಕು ಕಾಯುವನಿರ್ವಡುಳಿವುದು ನ್ಯಾಯವಲ್ಲಿದು ಬಲುಗೊಱತೆ ನಿನಗೆ ಕಂಪರಾಯ (ಕುರಾಶಾಂ. ೩೯-೨೩೦).
[ಬಲು (< ಬಲ್ಲಿತು$_1$) + ಕೊಱತೆ (< ಕೊಱಂತೆ)]

**ಬಲುಗೋಲು** 'ಬಲ್ಗೋಲ್' ನೋ.

**ಬಲುಚರ** 'ಬಲ್ಸರ' ನೋ.

**ಬಲುತವಕ** 'ಬಲುದವಕ' ನೋ.

**ಬಲುತೆರೆ** 'ಬಲ್ದೆರೆ' ನೋ.

**ಬಲುದಂಡಿ** (ನಾ). ಹೆಚ್ಚಿನ ಶಕ್ತಿ ; ಅಧಿಕವಾದ ಪರಾಕ್ರಮಂ : ಕಂಡು ಕಾಟಣ್ಣನ ರಾವುತಿಕೆಯ ಬಲುದಂಡಿಯನಾ ರಾಮನಾಥ ಕೊಂಡಾಡಿದನು (ಕುರಾಶಾಂ. ೯೨-೬೯). [ ಬಲು (<ಬಲ್ಲಿತು$_1$)+ದಂಡಿ$_1$ ]

**ಬಲುದಗಹು** (ನಾ). ಅಧಿಕವಾದ ನಿರ್ಬಂಧ,—ಅಡ್ಡಿ : ಬೆಗಡು ಬೀತುದು ಬೇಸಱಿನ ಬಲುದಗಹು ಸೋತುದು (ಕುವ್ಯಾಕ. ೬-೩೨).
[ಬಲು (<ಬಲ್ಲಿತು$_1$) + ತಗಹು$_2$ (<ತಗೆವು) ]

**ಬಲುದಡಿ** (ನಾ). ಬಲವಾದ ಕೋಲು,—ದಂಡ : ಬಿಲ್ಲು ಬಲುದಡಿ ಪಿಡಿಚಕ್ರದಲಿ ಕಳಬಂಟ ಕಂಠವಿಚ್ಛೇದ ವಿನೋದದ ತಳಪಱರೂರ ಕಾದಿಹರು (ಮೋಹತ. ೦೮-೦೦೩). [ ಬಲು (<ಬಲ್ಲಿತು$_1$) + ದಡಿ$_1$. ]

**ಬಲುದಡಿಗ** 'ಬಲ್ದಡಿಗ' ನೋ.

**ಬಲುದವಕ, ಬಲುತವಕ** (ನಾ). ೧. ಬಹಳವಾದ ಆತುರ : 'ಬಲುದವಕಿ' ಪರಾ. ಬಲುತವಕ : ೨. ಅತಿಯಾದ ಉತ್ಕಂಠತೆ,—ಕಳವಳ : ಇಂತೊಪ್ಪುತಿರೆ ಶಶಿ ವದನಮೋಹಿನಿಗಾಗ ಚಿತ್ತೆ ಮೊಳೆತು ಬಲುತವಕ ಮುಂತಲೆದೋಱ ಕಾತರ ಪರ್ಬಿ ವಿರಹಾಗ್ನಿ ಸಂತತ ಫಲದೋಱದುದು (ಶಂಪು. ೯-೦೬೦). [ ಬಲು (<ಬಲ್ಲಿತು$_1$) + ತವಕ$_1$ ]

**ಬಲುದವಕಿ** (ನಾ). ಬಹಳ ಆತುರವುಳ್ಳವನು : ಅವೆರಡಬಲದೊಳು ರಾವುತರನು ಮತ್ತವರ ಹಿಂಗಡೆಯೊಳಾನೆಗಳ ಅವರ ಮುಂಗಡೆಯೊಳೊಲಿದು ಚೂಣಿಯ ಬಲುದವಕಿಗಳನು ನಿಲಿಸಿದನು (ಕುರಾಶಾಂ. ೨೦-೯).
[ ಬಲುದವಕ + — ಇ$_3$ ]

**ಬಲುದವಕಿಗ** (ನಾ). = ಬಲುದವಕಿ : ಇವರು ಕಳುಹಿದರುಚಿತದಲಿ ನಿನ್ನವರು ಮಸಗಿದ ಕಡಲವೊಲು ಬಲುದವಕಿಗರು ಕೋಲಳವಿಗೊಂಡರು ಕೋಡಕೈಗಳಲಿ (ಕುವ್ಯಾಕ. ೦೩-೦೬). [ ಬಲುದವಕ + — ಇಗ ]

**ಬಲುದಸಿ** 'ಬಲ್ದಸಿ' ನೋ.

**ಬಲುದುಗುಡ** (ನಾ). ಅತಿಯಾದ ದುಃಖ ; ಬಹಳವಾದ ವ್ಯಸನ : ಬಲುದುಗುಡ ಸಹದೇವನಲಿ ಸಂಗಳಿಸಿತೇ ದ್ರೌಪದಿ ಸುಭದ್ರಾಲಲನೆಯರಿಗನುಚಿತವು ಘಟಿಸಿತೆ (ಕುವ್ಯಾದ್ರೋ. ೬-೨೨). [ಬಲು (<ಬಲ್ಲಿತು$_1$) + ದುಗುಡ]

**ಬಲುದುತ್ತು** (ನಾ). ದೊಡ್ಡ ತುತ್ತು : ಎರಡು ಕೈಯನು ಬಲಿದು ಮುಷ್ಟಿಯೊಳಿಱಿಗಿದನು ಖಳ ಬೆನ್ನನೇನಂದಱಿಯಸುತ್ತಲು ಭೀಮ ಬಲುದುತ್ತುಗಳ ತೋಟಿಯಲಿ (ಕುವ್ಯಾಅ. ೦೦-೩೩) ; ಎಲವೊ ನಿನ್ನಯ ಬಾಯ ಹವಣಂಗಳವಡದ ಬಲುದುತ್ತನಂಗೈಗಳಲಿ ಧರಿಸಿದೆ (ಕೊರಾ. ೩-೮-೬).
[ ಬಲು (<ಬಲ್ಲಿತು$_1$) + ತುತ್ತು$_2$ ]

**ಬಲುದೆಪ್ಪ** (ನಾ). ದೊಡ್ಡ ತೆಪ್ಪ,—ದೋಣಿ : ಹೆದ್ದೊಱೆಯನುಱ ತರಿಗೆ ದಾಂಟಿಸುವ ತೋರವಹ ಬಲುದೆಪ್ಪವಿರೆ ಮನ ಹಾಱ ಸೋರೆಯೊಡಂ ಹಿಡಿದು ತಾಂ ಪಾರವೆಯ್ದುವೆನೆಂಬವನವೊಲು . . . ಕೆಟ್ಟುಹೋದೆಯಲಾ (ಬಸಪು. ೬೦-೯೬). [ ಬಲು (<ಬಲ್ಲಿತು$_1$) + ತೆಪ್ಪ ]

**ಬಲುದೋಂಟಿ** (ನಾ). ದೊಡ್ಡ ಕದನ : ಮಹಾಯುದ್ಧ : ಬಲುದೋಂಟಿಯೆಂದರೆಡೆಯೊಳು ನಲಿವ ಸುಭಟರಿಹರು (ಕುರಾಶಾಂ. ೩-೪೦).
[ ಬಲು (<ಬಲ್ಲಿತು$_1$) + ತೋಂಟಿ$_1$ (<ತೋಟಿ$_1$) ]

**ಬಲುಪು** 'ಬಲ್ಪು' ನೋ.

**ಬಲುಬಿದಿರು** (ನಾ). ಬಿರುಸಾದ ಬಿದಿರು : ಬಲುಬಿದಿರನುಚ್ಚಳಿಸುವಳಿ ಮುಖಿಕೆಳೆಯ ಕಟ್ಟಾಣವುದೆ (ಕುವ್ಯಾಕ. ೩-೨೮).
[ ಬಲ್ಲು (< ಬಲ್ಲಿತು$_1$) + ಬಿದಿರು$_2$ (<ಬಿದಿರ್$_2$) ]

**ಬಲುಬಿಲ್ಲು** (ನಾ). ದೊಡ್ಡ ಧನುಸ್ಸು ; ಮಹಾಧನುಸ್ಸು : ನಿಲ್ಲಿ ನಿಲ್ಲಾದರೆಯೆನುತ ಬಲುಬಿಲ್ಲನಂಗುಳಿಸಿದನು ಶರೌಘವನೆಲ್ಲಿ ನಭ ವೆಸಯೆತ್ತ ಲೆನೆ ಘಾಡಿಸಿದವಂಬುಗಳು (ಕುಮ್ಯಾರ. ೩-೯೬) ; ಸಿಂಜನಿಗೆಯ್ದು ಬಲುಬಿಲ್ಲ ಕರದೊಳಗಾಂತು ಹೇವೂಡೆದ (ಮೋಹತ. ೧೯-೩೨). [ ಬಲು (<ಬಲ್ಲಿತು$_1$) + ಬಿಲ್ಲು$_1$ (<ಬಿಲ್$_2$) ]

**ಬಲುಬಿಸಿಲು** 'ಬಲ್ಬಿಸಿಲ್' ನೋ.

**ಬಲುಬೆಟ್ಟ** 'ಬಲ್ಬೆಟ್ಟ' ನೋ.

**ಬಲುಬೆಡಗು** 'ಬಲ್ಬೆಡಗು' ನೋ.

**ಬಲುಬೆಳಸು** (ನಾ). ಅಧಿಕವಾದ ಏಳಿಗೆ ; ಹೆಚ್ಚಾದ ಅಭಿವೃದ್ಧಿ : ಪೊನ್ನ ನಿಳಯಂಗಳತಿಸೊಬಗಿನಲಿ ತೊಳಗಿಹುವರಸನ ಸೌಭಾಗ್ಯದ ಬಲುಬೆಳಸ ನದೇನ ಬಣ್ಣಿಸುವೆ (ಕಂವಂ. ೬-೯೬). [ ಬಲು (<ಬಲ್ಲಿತು$_1$) + ಬೆಳಸು$_2$ ]

**ಬಲುಬೇಗೆ** (ನಾ). ಬಹಳವಾದ ತಾಪ : ಬಲುಬೇಗೆಯೊಳಗೊಳಗೆ ಬಲುಹು ಹೊಱಗೆ ಪರಾಭವದ ಕಂದೊಳಗೆ ಕಡುಹಿನ ಕಲಿತನದ ಹಳಹಳಿಕೆ ಹೊಱಗೆ ಮಹೀಶ ಹದನಿದು ನಿನ್ನ ನಂದನನ (ಕುಮ್ಯಾಕ. ೨-೦). [ ಬಲು (<ಬಲ್ಲಿತು$_1$) + ಬೇಗೆ ]

**ಬಲುಬೇನೆ** (ನಾ). ಅತಿಯಾದ ನೋವು ; ಅಧಿಕವಾದ ವೇದನೆ : ಬಸಿಱೊಳವ ಸಂಕಟದ ಬಲುಬೇನೆ ಭ್ರಾಂತಿನಿಂ ವ್ಯಮಱೆದು ಕಂಡ ಕನಸ್ಸಿಸೆ (ಸಿದ್ಧರಾ. ೨-೬). [ಬಲು (<ಬಲ್ಲಿತು$_1$) +ಬೇನೆ$_1$ ]

**ಬಲುಬೇಸಗೆ** (ನಾ). ಉಗ್ರವಾದ ಸೆಕೆಗಾಲ : ಮಂಜಿನ ಮೇಲುಗಾಳಿಗ ವುಂಟೆ ಬಲುಬೇಸಗೆಯ ಬಿಸಿಲೊಳಗೆ (ಕುಮ್ಯಾರ. ೯-೯೧). [ಬಲು (<ಬಲ್ಲಿತು$_1$)+ಬೇಸಗೆ$_1$]

**ಬಲುಬೊಬ್ಬೆ** 'ಬಲ್ಬೊಬ್ಬೆ' ನೋ.

**ಬಲುಭಟ** (ನಾ). ಸಮರ್ಥನಾದ ಸೈನಿಕ : ಒಳಗೊಳಗೆ ಹೊಯಿದಾಡಿ ಹೊರಳುವ ಬಲುಭಟರನಗಿದೊಗುವ ಬಲುಗತ್ತಲೆಯ ಕೋಳಾಹಳವನು . . . ಅರ್ಜುನದೇವನೀಕ್ಷಿಸಿದ (ಕುಮ್ಯಾರ. ೦೬-೯); ಹೊಳೆವ ಖಡ್ಗ ಕಠಾರಿ ಮೊದಲಾದಖಿಳಕೈದುಗಳ ಬಲುಭಟರು . . . ಸಂದಣಿಸಿ ಮೆಱೆದುದು ಪುರದ ಬಾಹೆಯಲಿ (ಜಳಕ. ೨-೦೦). [ಬಲು (<ಬಲ್ಲಿತು$_1$)+ಭಟ$_2$]

**ಬಲುಭಾರ** 'ಬಲ್ಭಾರ' ನೋ.

**ಬಲುಮಟ್ಟು** (ನಾ). ಅಧಿಕ ಪ್ರಮಾಣ : ಆ ನಂಬಿಕೆಗೆ ಬಲುಮಟ್ಟಿನ ಸಮರ್ಥನೆ 'ಇಂಗ್ಲಿಷ್‌ಗೀತಗಳ'ಲ್ಲಿ ದೊರೆಯುತ್ತದೆ (ಸಮಾಲೋ. ೦೬). [ಬಲು (<ಬಲ್ಲಿತು$_1$)+ಮಟ್ಟು$_2$ (<ಮಟ್ಟ$_1$)]

**ಬಲುಮನುಷ್ಯ** (ನಾ). ಪರಾಕ್ರಮಿಯಾದ ಸೇವಕ : ಶ್ರೀವೀರಬಲ್ಲಾಳ ದೇವರಸರ ಮನೆಯ ಪ್ರಧಾನ ಬೀರೆಯ ದಂಣಾಯಕರ ಬಲುಮನುಷ್ಯ ಚಿಣ್ಣಯನಾಯಕನು (ಹ್ಯಾಹಿ. ೦೯೯೪,೬-೩;1292). 'ಬಲುವಾನಿಸ' ಪರಾ. [ಬಲು (<ಬಲ್ಲಿತು$_1$)+ಮನುಷ್ಯ]

**ಬಲುಮನುಸ್ಸ** 'ಬಲ್ಮನುಸ್ಸ' ನೋ.

**ಬಲುಮರ** 'ಬಲ್ಮರ' ನೋ.

**ಬಲುಮಳೆ** 'ಬಲ್ಮಳೆ' ನೋ.

**ಬಲುಮಿಣಿ** 'ಬಲ್ಮಿಣಿ' ನೋ.

**ಬಲುಮುಗಿಲು** (ನಾ). ದಟ್ಟವಾದ ಮೋಡ : ಸುಗ್ಗಿಯ ಸಿರಿಯ ಹೊಸ ಬೆಳದಿಂಗಳನು ಬಲುಮುಗಿಲು ಕವಿವಂತೆ ಚರನ ಬನ್ನಹಕರಸಿ ಮೊದ ಲಾಗಿರೆ ಸಮಸ್ತಸಖೀಜನದ ಮುಖಸರಸಿರುಹ ಬಾಡಿದವು (ಕುಮ್ಯಾಸ. ೦೯-೩೦). [ಬಲು (<ಬಲ್ಲಿತು$_1$)+ಮುಗಿಲು (<ಮುಗಿಲ್)]

**ಬಲುಮುಡಿ** 'ಬಲ್ಮುಡಿ' ನೋ.

**ಬಲುಮುನಿಸು** 'ಬಲ್ಮುನಿಸು' ನೋ.

**ಬಲುಮೆ** 'ಬಲ್ಮೆ' ನೋ.

**ಬಲುಮೆಗಾಱ** 'ಬಲ್ಮೆಗಾಱ' ನೋ.

**ಬಲುಮೆಗಾಱ** 'ಬಲ್ಮೆಗಾಱ' ನೋ.

**ಬಲುಮೆವಿಡಿ** (ಕ್ರಿ): ಬೆಂಬಲವನ್ನು ಪಡೆ; ಒತ್ತಾಸೆಯನ್ನು ಹೊಂದು : ಆ ನರಸಿಂಹಪುರವನಾಳುವ ಭೂಪೋತ್ತಮ ಕಪ್ಪವ ಕೊಡದೆ ಮತ್ತಾಗ ತುರುಕರ ಬಲುಮೆವಿಡಿದು ಚಲವೆತ್ತಿರ್ದನು (ಕಂವಂ. ೦೯-೨). [ಬಲುಮೆ (< ಬಲ್ಮೆ) + ಪಿಡಿ$_1$ ]

**ಬಲುಮೆಳೆ** 'ಬಲ್ಮೆಳೆ' ನೋ.

**ಬಲುಮೊಲೆ** 'ಬಲ್ಮೊಲೆ' ನೋ.

**ಬಲುವಗೆ** 'ಬಲ್ವಗೆ$_1$' ನೋ.

**ಬಲುವರದ** (ನಾ). ದೊಡ್ಡ ವ್ಯಾಪಾರಿ,–ವರ್ತಕ : ತುರಗಬಹಿತ್ರವನಡರಿ ತುರುಕಬಲಶರಧಿಯ ಪೊಕ್ಕು ಬಡಗಣ ವರವಾಜಿಗಳ ತಂದೊಪ್ಪಿಸಿಹನು ಬಲುವರದನಂತಾ ಕಾಟಣ್ಣ (ಕುಂಣಾಂ. ೯೨-೮೦). [ಬಲು (<ಬಲ್ಲಿತು$_1$)+ಪರದ$_1$]

**ಬಲುವಲಗೆ** (ನಾ). ದೊಡ್ಡ ಹಲಗೆ,–ಗುರಾಣಿ : ಮಾಲೆತ ಹಗೆವನ ಪಡಿ ಮುಖದ ಬಲುವಲಗೆಯಲಿ ಗದೆಯಿಂದ ರಾಯನ ಬಲುಹ ಬಿರುದಾವಳಿಯ ಬರೆವೆನು ಕೃಷ್ಣ (ಕುಮ್ಯಾಗ. ೩-೩೨). [ಬಲು (<ಬಲ್ಲಿತು$_1$)+ಪಲಗೆ]

**ಬಲುವಸರ** (ನಾ). ದೊಡ್ಡ ಅಂಗಡಿ : ಒಂದೊಂದು ಸರಳಿನ ಸಸಿನದಲಿ ಶತಸಾವಿರದ ಲಕ್ಷೋಪಲಕ್ಷಗಳ ವಿಷಮವಾನರಭಟರ ಕೊರಳಿನ ಬೆಸುಗೆ ಬಿಟ್ಟವು ಬಿಡುದಲೆಯ ಬಲುವಸರವಾದವು ಲಯಯುಕ್ತಾಂತನ ಸಂತೆಯಂದ ದಲಿ (ತೊರರಾ. ೬-೨೦-೨೯). [ಬಲು (<ಬಲ್ಲಿತು$_1$)+ಪಸರ]

**ಬಲುವಾತು** (ನಾ). ಅತಿಯಾದ ಮಾತು : ಮಡದಿ ಮೋಹದ ಬಲುವಾತಲಿ ಚದುರಂಗದಡಿಯ ಮೇಲ್ವಾಯ ವೇಳಿದಳು (ಕಂವಂ. ೬-೦೦೯). [ಬಲು (<ಬಲ್ಲಿತು$_1$)+ಮಾತು$_1$]

**ಬಲುವಾನಿಸ** (ನಾ). =ಬಲುಮನುಷ್ಯ : ಸ್ವಸ್ತಿ ಶ್ರೀಮತು ಕೆಳಲಾದಿರಾಯ ಜಗದೊಬ್ಬಗಂಡ ಹೊಯ್ಸಳದೇವನ ಬಲುವಾನಿಸ ಸ್ವಸ್ತಿ ಶ್ರೀಮತು ಸಿತಗರ ಗಂಡ ಸ್ವಾಮಿದ್ರೋಹರ ಗಂಡ ಜಗದೊಬ್ಬ ಗಂಡ (ಎಕ. IX (೩), ಕನ್ನಕ. ೨೦೬-೩; 1272)); ಬದ್ದರದ ಬಲುವಾನಿಸರು [ಪಾಠಾಂ. ಮಾನಿಸರು, ವಾನಿಸದ] ಬಂಡಿಗಳನೊಡ್ಡಿದರಾ ನಿರಂತರ ಶರವ ತಡೆದರು ತಕ್ಕಿವರಿಗೆಯಲಿ (ಕುಮ್ಯಾಶ. ೦೦-೩೦). [ಬಲು (<ಬಲ್ಲಿತು$_1$)+ಮಾನಿಸ$_1$(<ಮಾನುಸ$_1$)]

**ಬಲುವಾಸಿ** (ನಾ). ಅಪಾರವಾದ ಕೀರ್ತಿ : ಮಿಸೆ ಸೀದವು ಭಟರ ಸುಯ್ಲಿನಲಿಸೆ ಬೀತ್ತುದು ದೇಹದಲಿ ಬಲುವಾಸಿಯಲಿ ಮನ ಮುಳುಗಿತ್ತನಿ ಬರಿಗೇಕವುಮುಖವಾಗಿ (ಕುಮ್ಯಾಶ. ೦೩-೬). [ಬಲು (<ಬಲ್ಲಿತು$_1$)+ವಾಸಿ$_1$]

**ಬಲುವಿಡಿ$_1$** 'ಬಲ್ವಿಡಿ' ನೋ.

**ಬಲುವಿಡಿ$_2$** 'ಬಲ್ವಿಡಿ$_2$' ನೋ.

**ಬಲುವೆಸ** (ನಾ). ಶ್ರೇಷ್ಠವಾದ ಕೆಲಸ ; ಉತ್ತಮವಾದ ಕೆಲಸಗಾರಿಕೆ : ಎಸೆವ ಸಭಾಮಂಟಪಮಂ ವಸುಧೆಗೆ ಕಡುಚೋದ್ಯವೆನೆ ಜಗಂ ಬಣ್ಣಿಸೆ ಚೆಲ್ವೆಸೆದಿರೆ ಕರವೊಪ್ಪುವ ಬಲುವೆಸದಿಂ ಮಾಡಿಸಿದನೆಸವಿನಂ ಮಾರ್ತ್ತ(೦)ಣ್ಡಂ (ಕೌಇಇ. IX–i, ೦೯೬–೩೯ ; 1119). [ಬಲು (<ಬಲ್ಲಿತು$_1$) +ಬೆಸ$_1$]

**ಬಲುವೊನಲು** 'ಬಲ್ವೊನಲ್'ನೋ.

**ಬಲುವೊರಜೆ** (ನಾ). (ಆನೆಗೆ ಬಿಗಿಯುವ) ದಪ್ಪವಾದ ಹಗ್ಗ : ತುಳುಕಿ ನುಗ್ಗದಡೆಗಳ ಹಿಣಿಲಿನ ಬಲುವೊರಜೆಗಳ ಬಾರ ಸಂಕಲೆಗಳನು ಬಿಗಿದರು ಜೋಡಿಸಿದರುಬ್ಬರದ ಮದಗಜವ (ಕುಮ್ಯಾರ. ೩-೨). [ಬಲು$_1$(<ಬಲ್ಲಿತು$_1$) + ಪೊರಜೆ]

**ಬಲುಸನ್ನೆ** (ನಾ). ಬಲವಾದ ಸನ್ನೆಕೋಲು ; ಬಲಿಷ್ಠವಾದ ಎತ್ತುವ

ಸಾಧನ : ಸೂಗ ರಕ್ಕಸ ಕಿಂಕರರು ಬೊಬ್ಬಿಡುದು ಬಲುಸನ್ನೆಗಳಲಿಕ್ಕಿನ ತುಡುಕುಗಳಲೆತ್ತಿದರು ತೇರಿಗೆ ತಗ್ಗಲವನಿತಳ (ಕೊರರಾ. ೩-೬-೬).

[ಬಲು (<ಬಲ್ಲಿತ್ತು$_1$) + ಸನ್ನೆ$_1$]

**ಬಲುಸರಳು** (ನಾ). ಅಧಿಕಸಂಖ್ಯೆಯ ಬಾಣ : ಮಳೆಗೆ ತೆರಳದ ಕೋಡ ಬಾಗಿಸಿ ಕಲಿವೃಷಭ ಹೊಗುವಂತೆ ದ್ರೋಣನ ಬಲುಸರಳ ಸರಿವಳೆಗೆ ದಂಡೆಯನೊಡ್ಡಿ ದಳವುಳಿಸಿ . . . ಕಟ್ಟಳವಿಯಲಿ ಹೊಕ್ಕನು ಭೀಮ ಬೊಬ್ಬಿಡುದು (ಕುಮಾ.ದ್ರೋ. ೦೩-೦೨).

[ಬಲು (<ಬಲ್ಲಿತ್ತು$_1$) + ಸರಳು$_1$ (<ಸರಲ್$_1$)]

**ಬಲುಸರಿ** 'ಬಲ್ಸರಿ' ನೋ.

**ಬಲುಸಾಹಿಗ** (ನಾ). ಬಹಳ ಶೂರ ; ಮಹಾಸಾಹಸಿ : ಹೊಯ್ಸಿದನು ಡಂಗುರವ . . . ಈಶದತ್ತ ಮಹೋಗ್ರತರ ಬಾಣಾಸನವ ತೆಗೆದೇರಿಸುವ ಬಲುಸಾಹಿಗರು[ಶಿಶಾಂ. ೪೨]ಬಹುದೆಂದು ಸೂರ್ಯಾಸ್ತಮಯ ಸಮಯದಲಿ (ಕೊಕರಾ. ೦-೦೩-೦೨). [ಬಲು$_1$ (<ಬಲ್ಲಿತು$_1$) + ಸಾಹಿಗ]

**ಬಲುಸೂಜಿ**[3] 'ಬಲ್ಸೂಜಿ' ನೋ.

**ಬಲುಸೆಜಿ**[3] 'ಬಲ್ಸೆಜಿ' ನೋ.

**ಬಲುಹಳಿ** 'ಬಲ್ಪಳಿ' ನೋ.

**ಬಲುಹು** 'ಬಲ್ಪು' ನೋ.

**ಬಲುಹುಗುಂದು** (ಕ್ರಿ). ಬಲಗುಂದು ; ಶಕ್ತಿಗುಂದು : ನಲಿದು ದೈತ್ಯರ ಪಡೆಯನೆಲ್ಲವ ಬಲಿಹರಣ ಮಾಡುತಲು ನೋಡುತ ಬಲಹುಗುಂದದ ರಿಪು ಹಿರಣ್ಯಕಶಿಪುವ ನರಹರಿಯು . . . ನೋಡಾಯೆನುತಲಗಲಕೆ ಚರಣಹತಿ ಮಾಡೆ (ಸಂಶಕ. ೬-೦೦೦). [ಬಲುಹು (<ಬಲ್ಪು) + ಕುಂದು$_1$]

**ಬಲುಹುರಿ** (ನಾ). ಬಹಳವಾಗಿ ಹುರಿಗೊಳಿಸಿದುದು ; ಬಹಳ ಬಿಗಿಯಾದುದು : ಹರುಷ ಮಿಗೆ ಹಂತಂದು ಬಂಡಿಯ ಶಿರದ ಹಲಗೆಯ ನಡರಿದನು ಬಲುಹುರಿಯ ಹಗ್ಗವ ಹಿಡಿದು ಜಡಿದನು ಹೂಡಿದೆತ್ತುಗಳ (ಕುಮಾ.ಉ. ೦೦-೨೬). [ಬಲು (<ಬಲ್ಲಿತು$_1$) + ಹುರಿ$_3$ <ಪುರಿ$_3$)]

**ಬಲುಹೊಜಿ**[3] 'ಬಲ್ಪೊಜಿ' ನೋ.

**ಬಲೂತಿ** (ನಾ). ವಂಶಪಾರಂಪರ್ಯವಾಗಿ ಗ್ರಾಮಕ್ಕೆ ಸೇವೆ ಸಲ್ಲಿಸುವ ಕಸುಬು : ಹಳ್ಳಿಗಳ ಬಲೂತಿದಾರರಲ್ಲಿ ಒಬ್ಬ ಕುಂಬಾರನಿಗೆ ಬಲೂತಿ ಇರುತ್ತದೆ (ಳಹಾಗ. ೦೯೪). 'ಬಾರಾಬಲೂತಿ' ಪರಾ.

[← ಮರಾ. ಬಲುತೇ, ಬಲೋಂತೇ]

**ಬಲೂತಿದಾರ** (ನಾ). ಹಳ್ಳಿಯಲ್ಲಿ ವಂಶಪಾರಂಪರ್ಯವಾಗಿ ಬಂದ ಕಸುಬನ್ನು ನಡೆಸಿ ದವಸ ಇತ್ಯಾದಿ ವರಮಾನಗಳನ್ನು ಪಡೆಯುವ ಹಕ್ಕನ್ನು ಹೊಂದಿರುವವನು ; ☞ ಇವರಲ್ಲಿ ಹನ್ನೆರಡು ಬಗೆ. 'ಬಾರಾಬಲೂತಿ' ಪರಾ : ಹಳ್ಳಿಗಳ ಬಲೂತಿದಾರರಲ್ಲಿ ಒಬ್ಬ ಕುಂಬಾರನಿಗೆ ಬಲೂತಿ ಇರುತ್ತದೆ (ಳಹಾಗ. ೦೯೪) ; ಜೋಯಿಸ, ಸೊನ್ನೆಗಾರ, ನಾದಿಗ, ಅಗಸ, ಮುಂತಾದ ಬಲೂತಿದಾರರು ಊರತನದ ಕೆಲಸಕ್ಕೆ ಪೂರ್ವದಲ್ಲಿ ಸಹಾಯ ಮಾಡುತ್ತಿದ್ದರು (ಅಹಕೊ. ೩೩).

[ಬಲೂತಿ + – ದಾರ್$_4$./ಮರಾ. ಬಲುತೇದಾರ, ಬಲೋತೇದಾರ]

**ಬಲೂನು**. ಬೆಲೂನು (ನಾ). ೧. "ಸರಿಸುಮಾರು ಗಂಡಾಗಿರುವ, ಗಾಳಿತೂರದ ಪಟ್ಟೆಯ ಚೀಲದಲ್ಲಿ ವಾಯುವಿಗಿಂತಲೂ ಹಗುರವಾದ ಅನಿಲವನ್ನು ತುಂಬಿ, ತಾನಾಗಿ ಮೇಲಕ್ಕೇರುವಂತೆ ಮಾಡಿರುವ ಸಾಧನ : ಆಕಾಶಬುಟ್ಟಿ" (Balloon. ೩೦೯೩). ೨. ಮಕ್ಕಳು ಬಾಯಿಂದ ಊದಿ, ಗಾಳಿಯನ್ನು ತುಂಬಿ ಆಡಲು ಬಳಸುವ ಬಣ್ಣಬಣ್ಣದ ತೆಳುವಾದ ರಬ್ಬರಿನ ಚೀಲ : ಉಸುರುಬಾರುಡೆ : ಮಗು ಬಲೂನು ಊದಲು ಬಾರದೆ ಅಳುತ್ತಿದೆ (ಜೂಆ). **ಬೆಲೂನು** : ೨. ನಾವು ಸೂರ್ಯನಷ್ಟು ಗಾತ್ರದಬೆಲೂನನ್ನು ಮಾಡಿದರೆ ಅದರಲ್ಲಿ ಒಂದು ಮಿಲಿಯ ಭೂಮಿಗಳನ್ನು ಹಿಡಿಸಬಹುದು (ಅಆಶ. ೯).

[← ಇಂ. Balloon]

**ಬಲೆ**$_1$ (ನಾ). ೧. ಪ್ರಾಣಿ, ಪಕ್ಷಿ ಮೊದಲಾದುವನ್ನು ಹಿಡಿಯಲು ಬಳಸುವ, ನೂಲು ಅಥವಾ ಹುರಿಯಿಂದ ಮಾಡಿದ ಸಣ್ಣಸಣ್ಣ ಕಂಡಿಗಳುಳ್ಳ ಹೆಣಿಕೆಯ ಸಾಧನ ; ಜಾಲ : "ಅನಾಯಃ, ಜಾಳಃ, ಕುವೇಣೀ, ಮತ್ಸ್ಯಬಂಧಿನೀ – ಈ ೪ ಬಲೆ" (ಹಲಾಯು. ೯೬-೪೪೦) ; ಎಮ್ಮ ಪಾಸಿದ ಚಿತ್ರಪಟವೆಂಬ ಬಲೆಯೊಳ್ ನಿಮ್ಮಂತಪ್ಪ ಬೆಳ್ಳಿಗುಗಳಾಗಳೆ ತೊಡರ್ಗುಂ (ಅಂಪು. ೩-೯೯ವ) ; ಜಗದಗಲದ ಬಲೆಯನಗಲ ಬಲ್ಲವರ ಕಾಣೆ ಮುಗಿಲುದ್ದಂಬರವನುಗಿಯ ಬಲ್ಲವರ ಕಾಣೆ (ಅದಶ. ೦೯-೩೦); ಬಿಡು ನಾಯಂ ಪೊಸಪುಲ್ಲೆಗೊಡ್ಡು ಬಲೆಯಂ. . . ಎಂದು ಬೊಬ್ಬೆಗುಡುತುಂ ಬಂದರ್ ಪಲರ್ ಧೀವರರ್ (ಕಾದ್ಯ.ಟ. ೨-೩೦). ೨. ಕೇಶಾಲಂಕಾರಕ್ಕಾಗಿ ಉಪಯೋಗಿಸುವ ಬಲೆಯಂತಹ ಒಂದು ಅಲಂಕಾರಸಾಧನ : ಮುಡಿಯ ಮುತ್ತಿನ ಬಲೆ ಮುಂಗುರುಳೊಳು ಬಿಗಿವಡೆದಿಹ ಮಣಿಯ ಕುಚ್ಚುಗಳ . . . ಕಡುಚೆಲುವೆಯರೆಸೆದಿಹರು (ಕಂಷಬ. ೬-೦೦೯). ೩. (ಅಲಂ) ಮೋಸ; ವಂಚನೆ; ಕಪಟ : ಈ ಪುಲಿಯುಮತ್ಯಾಚಾರಮಾಗಿರ್ದುದು ಇದರ ಬಲೆಯೊಳ್ ಸಿಲ್ಕವೇಡ (ಹಂಕಕಂ. ೨೩೩-೬); ಈಗಳೀ ದಾನವನ ಬಲೆಯಲಿ ತಾಗಿ ಸಿಲುಕಿತು ನಮ್ಮ ಮೋಹರ (ಕುಮಾ.ದ್ರೋ. ೦೬-೨೯); ನೆರೆದಿಳಾಮಂಡಲದ ರಾಯರು ಬೈದು ಭಂಗಿಸುತಾ ವಿದೇಹಜನ ಬಲೆಯನೊಡ್ಡಿದನಿವನು ಲುಬ್ಧಕತಿಲಕನೋ ನೃಪರುಚಿಯೊ ಸಾಕಿವನೊಳಗೆ ಮಾತೇಕೆನುತ ಮಿಗೆ ಮೊಣೆದದ್ದರಲ್ಲಲ್ಲಿ (ಕೊರರಾ. ೦-೦೩-೨೯).

**ಬಲೆಗೆ ಬೀಳು** = ೧. ಬೇಟೆಗಾಗಿ ಹರಡಿದ ಬಲೆಯಲ್ಲಿ ಸಿಕ್ಕಿಕೊಳ್ಳು: ಹೊಲಬುದಪ್ಪಿದ ಹುಲ್ಲೆ ಬೇಡನ ಬಲೆಗೆ ಬಿದ್ದಂತಾದೆನೈ (ಕುಮಾ.ಸ. ೦೯-೦೨೨); ಹೊಲಬುದಪ್ಪಿದ ಹುಲ್ಲೆ ಬೇಡನ ಬಲೆಗೆ ಬಿದ್ದಂತಾಗೆ ನಳನೃಪ ತಿಲಕನೆಂದನು ಮನದ ದುಗುಡದಿ ತನ್ನ ನಿಜಸತಿಗೆ (ಕಳಕ. ೪-೩೬). ೨. ಪ್ರಭಾವಕ್ಕೆ ಒಳಗಾಗು : ದ್ರೋಹಿಗಳ ರಹಸ್ಯವನ್ನೆಲ್ಲ ತಿಳಿದ ಮೊನೆಗಾರ, ಗುಂಡಪ್ಪನಿಗೆ ನಂಬಿಕೆಯುಂಟಾಗುವಂತೆ . . . ಮಾತನಾಡಿದಾಗ, ಗುಂಡಪ್ಪನು ಆ ಬಲೆಗೆ ಬಿದ್ದು, ತನ್ನ ಪಕ್ಷದವರ ಮಂತ್ರ ತಂತ್ರಗಳನ್ನೆಲ್ಲ ಮೊನೆಗಾರನ ಕಿವಿಗಳಿಗೆ ಪ್ರಕಟಮಾಡುವನು (ಸಂಶಳ. ೦೦೦); ನಿಪುಣಕ ಈ ಜನಗಳ ಬಲೆಗೆ ಬಿದ್ದಿರಬಹುದೆಂದು ನನಗೆ ಸಂದೇಹವಾಗಿತ್ತು (ಶಾಅಕ. ೦೩೨). **ಬಲೆಯ ಬೀಸು** – ವಶಪಡಿಸಿಕೊಳ್ಳಲು ಪ್ರಯತ್ನಿಸು: ಸ್ವಾಧೀನಕ್ಕೆ ತಂದುಕೊಳ್ಳಲು ಹಂಚಿಕೆ ಹೂಡು : ನುಡಿವವಧಿ ಹದಿಮೂಱು ವರುಷದ ಹಿಡತಲೆಯನೊದೆದದ್ದು ನಮ್ಮಾ ಪೊಡವಿಯರ್ಧಕೆ ಬಲೆಯ ಬೀಸದೆ ಬಿಡುವರೇ ಬಳಿಕ (ಕುಮಾ.ಉ. ೨೦-೨೩). **ಬಲೆಯಲ್ಲಿ ಬೀಳು** – ೧. ಬೇಟೆಗಾಗಿ ಹರಡಿದ ಬಲೆಯಲ್ಲಿ ಸಿಕ್ಕಿಕೊಳ್ಳು : ಬಹಳ ಮೀನುಗಳು ಬಲೆಯಲ್ಲಿ ಬಿದ್ದಿವೆ (ಜೂಆ). ೨. ಜಾಲದಲ್ಲಿ ಸಿಕ್ಕಿಕೊಳ್ಳು : ಮುಗ್ಧನಾದ ಬಾಲಕ ವಂಚಕರ ಬಲೆಯಲ್ಲಿ ಬಿದ್ದನು (ಜೂಆ).

[ದೇ.॥ ತಮಿ. ವಲೈ; ಮಲ. ತೆಲು. ವಲ; ಕೋತ. ವಲ್; ತೊದ. ಪಲ್ ; ಕೊಡ. ತುಳು. ಬಲೆ ; ಗದಬ. ವಲ್ಲ ; ಗೊಂಡಿ, ಒಲ್ಲ]

**ಬಲೆ**$_2$, **ಬಳೆ**$_3$ (ನಾ). ಒಂದು ಬಗೆಯ ಸಸ್ಯ; ಕಳ್ಳಂಗಡಲೆ: "ವಾರಾಹೀ-ಬಲೆ" (ಓಅಂ. ೦೯೯): "ಹೆತ್ತುತ್ತಿ, ಹೆಚ್ಚುಟ್ಟಿ, ಕಿಸಂಗಿ, ವಿಷಗುಂಬಳ, ಬಲೆ, ಬಿಟ್ಟರಳು, ಬೆಣ್ಣೆಗರಗ, ಭೇದ" (ಚಕ್ರ.ಅ. ೦೨೦). **ಬಳೆ**$_3$ : ಬಳೆಯಂ ಬಜೆಯುಮನೊಂದಿರೆ ತಿಳಿತ್ತೈಲದೊಳಟ್ಟು ಪೂಸಿ ತಿಮಿರ್ದುದು ಬಜೆಯಂ ಬಟಿಯಂ ಮಿಸಿಸುವುದಂತಾ ಬಳೆಯ ಕಷಾಯಮನೆ ಬಾಲಕಂಗಿತ್ತು ಮಾಣ್ಬುಗುಂ (ಕೋಕೋಕ. ೯-೦೬೬). [ಸಂ. ಬಲಾ]

**ಬಲೆಗಣ್** (ನಾ). ಬಲೆಯಲ್ಲಿರುವ ಕಣ್ಣು; ಜಾಲದ ರಂಧ್ರ : ಪಲ

ವಾಳಾಪದೊಳೇನೊ ಬೆಲ್ಲುಗಸಂ ಕಟ್ಟಳ್ಕಱಿಂದೆತ್ತಿ ಪೊಪಲರ್ವನ್ನಂ ಬಗಿದವ್ಪಿರ್ದ ಸಳತೋಳ್ಗಾಂ ಬಂಚದೊಳ್ಳೊಡದಿರ್ಪಲರ್ಗಣ್ಗಾಂ ಬಲೆಗಣ್ (ವ್ಯಕಾ. ೨-೬೨). [ಬಲೆ₁ + ಕಣ್]

**ಬಲೆಗಾರ** 'ಬಲೆಗಾಱ' ನೋ.

**ಬಲೆಗಾಱ**, ಬಲೆಗಾರ (ನಾ). ೧. ಜಾಲವನ್ನು ಬಳಸುವವನು; ಬೆಸ್ತ: "ಜಾಲಿಕ, ವಾಗುರಿಕ_ಬಲೆಗಾಱ" (ಪಾಕಾಂ. ೩); ವರ ಕವಂತ ಮತ್ಸ್ಯಂಗಳೇ ನಿಜಕರದಿನೇಕೋದಕದೊಳೊಡರಿಚಿ ಪಿರಿಯ ಗಾಳವನಿಕ್ಕುವಾ ಬಲೆಗಾಱನುಂ ತಾನೆ (ಶಕಪು. ೨೦-೨೪); ಸಪ್ಪುಗಾಱರ ಬಲೆಗಾಱರ ಪರದರ ಕ್ಷತ್ರಿಯರ ಪಾರ್ವರ ನಾಡಿಗರೊಂದು ಜಂಗುಳಿ (ಶಾಶಾಕ. ೬೮-೧೪). **ಬಲೆಗಾರ** : ೧. "ಕೈವರ್ತಃ,ದಾಶಃ,ಧೀವರಃ_ಮೀನುಗಳನ್ನು ಹಿಡಿಯುವ ಬೆಸ್ತರವರ ಹೆಸರು, ಮೀನಿನ ಬಲೆಗಾರರು ಅಂದರೆ ಪಾಶವಾರ" (ಸಿದ್ಧಾಂ.ಅ. ೯೦). ೨. ಬಲೆಯಿಂದ ಮೃಗ, ಪಕ್ಷಿಗಳನ್ನು ಬೇಟೆಯಾಡುವವನು ; ಬೇಡ : "ವಾಗುರಿಕಃ, ಜಾಲಿಕಃ . . . ೨ ಮೃಗದ ಬಲೆಗಾರನ ಹೆಸರು" (ಸಿದ್ಧಾಂ.ಅ. ೩೦೨). [ಬಲೆ₁ + _ಕಾಱ]

**ಬಲೆಗ್ರಾಮ** (ನಾ). ಒಂದು ಊರಿನ ಹೆಸರು : ಗೋಪರಾಷ್ಟ್ರ ವಿಷಯಾನ್ತ[ಃ] ಪಾತಿ ಬಲೆಗ್ರಾಮಃ ಸೋದ್ರಜ್ಗಃ (ಇಇ. IX, ೦೨೪-೦೬; 7ನೆಯ ಶ) [ಬಲೆ₁ + ಗ್ರಾಮ]

**ಬಲೆದೊಡಕು** (ನಾ). ಜಾಲದಿಂದ ಸಿಕ್ಕಿ ಬೀಳಿಸುವ ಬಂಧನ : ಸಂಯೋಗದ ಸುಖ ಮೈಯುಂಡವಗೆ ಲೋಕದ ನಚ್ಚುಮಚ್ಚಿನ ಬಲೆದೊಡಉ ತಪ್ಪದು (ಮಪ್ರಅ. ೨೫೭-೬೬). [ಬಲೆ₁+ತೊಡಕು₃(<ತೊಡಂಕು₃)]

**ಬಲೆಬೆತ್ತ** (ನಾ). ಒಂದು ಬಗೆಯ ಬೆತ್ತ : "ನಾಯಿಬೆತ್ತ, ಬಲೆಬೆತ್ತ" (ಸಸ್ಯಕೋ. ೨೬); ಬಲೆಬೆತ್ತ, ನಾಯಿಬೆತ್ತ (ವೃಶಿಂ. ೦೪-೨೬೦).

[ಬಲೆ₂ + ಬೆತ್ತ]

**ಬಲೆವಣಿ** (ನಾ). ತುರು ಬಿನ ಬಲೆಯಲ್ಲಿ ಪೋಣಿಸಿರುವ ಅಲಂಕಾರದ ಮಣಿ : ವೀರಮುದ್ರಿಕೆ ನೂಪುರ ಕಾಂಚಿಯು ದಾಮ ಹಾರ ಪದಕ ಹಸ್ತ ಕಟ್ಟು ತೋರಮುತ್ತಿನ ಬೊಟ್ಟು ತುಱುಬಿನ ಬಲೆವಣಿ ಸೇರಿ ಕಣ್ಗೆಸೆದು ಪವರಿಗೆ (ಕುಂಜಾಕಾಂ. ೩೬-೦೫೭). [ಬಲೆ₁ + ಮಣಿ₂]

**ಬಲೆವಱಿ** (ಕ್ರಿ). ಬಲೆಯನ್ನು ಕತ್ತರಿಸು; ಜಾಲವನ್ನು ಹರಿದು ಹಾಕು: ದ್ರುಮಲಿಂಗಿಮಾಗಿರ್ದ ಪುಷ್ಪದಾಡನಡೆವೆತ್ತು ರಾಗಿಸಿ ಬಲೆವಱಿದ ಕೊಂಕನಂತೆ ಮನೆಯ ಗುಜಿಯಾಗಿರ್ಪುದುಂ (ಧರ್ಮಾಮೃ. ೬-೦೬೬).

[ಬಲೆ₁ + ಪಱಿ₁]

**ಬಲೆವೀಸು** (ಕ್ರಿ). (ಮೀನು, ಪ್ರಾಣಿ, ಪಕ್ಷಿ ಮೊದಲಾದವನ್ನು ಹಿಡಿಯಲು) ಬಲೆಯನ್ನು ಹರಡು ; ಜಾಲವನ್ನು ಒಡ್ಡು : ಬಲೆವೀಸಿ ಪುಲ್ಲೆಯಂ ಕಿಡಪು ಕಡಂಗಿ ಪೊಯ್ ಪುಲಿಯಂ . . . ಎಂಬ ರವಂ ಪರಿದಾಪ್ತುರಣ್ಯದೊಳ್ (ನಾಕಿಚ. ೩-೮೪): ಸಂಚಪರೆಗಾ ನೀರುಳ್ಳ ತಾಣಂಗಳೊಳ್ ಬಲೆವೀಸುತ್ತ ನವೀನಮೀನವುನದೆಂತುಂ ಕಾಣದೆ . . . ಪುರಪೂರ್ವಾಶಾನದೀವಾರಿಯೊಳ್ ಜಾಲಮುಸಿಕ್ಕುತುಂ ಸೆಳೆಯ (ವ್ಯಕಾ. ೦೬-೯೨). [ಬಲೆ₁+ ಬೀಸು₁]

**ಬಲೆಹುಲ್ಲು** (ನಾ). ಒಂದು ಬಗೆಯ ಹುಲ್ಲು : "ಬಲೆಹುಲ್ಲು, ಮರ ಹಾಸ್ಸಿ" (ಸಸ್ಯಕೋ. ೦೨೬). [ಬಲೆ₁+ ಹುಲ್ಲು (<ಪುಲ್)]

**ಬಲೋದ್ಧತೆ** (ನಾ). ಬಲದಿಂದ ಉಂಟಾದ ಗರ್ವ: ಪರಾಕ್ರಮದಿಂದ ಉಂಟಾದ ಸೊಕ್ಕು : ತಾಯೆ ನೀನವಧರಿಸು ಪೇಳ್ದ ನುಡಿ ಪುಸಿಯಲ್ಲ ಮಾಯಿ ಎನ್ನಾಧೀನ ಮದ್ಬಲೋದ್ಧತೆಯಿಂದೆ ಪ್ರೀಯಮಪ್ಪಂತೆಸಗಿ ಮೋಹಿಸುವುದಿದು ಹಥ್ಯ ಮತ್ಪ್ರೇರಣೆಯು ಮೀರದೆ (ವೆಂಣಾಂ. ೨-೩೪-೩೯).

[ಸಂ. ಬಲೋದ್ಧತಾ]

**ಬಲೋದ್ಧಂದಿ** (ನಾ). ಹಿಂಸೆ : ತೊಂದರೆ : ಮಹಾಕೋಪೋದ್ರೇಕದಿಂದ ಬಲೋದ್ಧಂದಿ ಜುಲುಂ ಮಾಡೋಣ ೩ ತಿಂಗಳ ಪರ್ಯಂತರ ಅಥವಾ ೫೦೦ ರೂಪಾಯಿ ಜುರ್ಮಾನೆ (ಗ್ರಾಕೋ. ೧೯೩). [←ಮರಾ. ?]

**ಬಲೋನ್ಮತ್ತ**, ಬಳೋನ್ಮತ್ತ (ನಾ). ಪರಾಕ್ರಮದಿಂದ ಗರ್ವಿಷ್ಠನಾದವನು : ಸಾಮರ್ಥ್ಯದಿಂದ ಸೊಕ್ಕಿದವನು : 'ಬಲೋನ್ಮತ್ತತೆ' ಪರಾ. **ಬಳೋನ್ಮತ್ತ** : ಚಳಾಪರ್ತರ್ . . . ತೀಸೀರಂತಪರಜರ್ ಬಳಾವಷ್ಟಂಭಂಗಟ್ಟುಡಿಗೆಗಿ ಕಂಡರ್ ಪಿರಿಯನೊಳ್ ಬಳೋನ್ಮತ್ತಂ ದರ್ ದುರ್ಬಳಮಿಭಹಯಾಸೂನರಬಳಂ (ಶಾಂತಿಪು. ೦೧-೩೩). [ಸಂ.]

**ಬಲೋನ್ಮತ್ತತೆ** (ನಾ).=ಬಲೋದ್ಧತೆ : ಭೀಮನ ಈ ಬಲೋನ್ಮತ್ತತೆಯನ್ನೂ ಬಾಹುಗರ್ವವನ್ನೂ ನೋಡಿ ಹನುಮಂತನು ಮನಸ್ಸಿನಲ್ಲಿಯೇ ನಕ್ಕು . . . ಎಂದನು (ಪಕಥಾ. ೦೫೨). [ಸಂ. ಬಲೋನ್ಮತ್ತತಾ]

**ಬಲೌಘ** (ನಾ). ಸೈನ್ಯದ ಗುಂಪು ; ಸೇನೆಯ ಸಮೂಹ : ಕಾಲಾಗ್ನಿಯಂತೆ ಇಟ್ಟಣಿಸುತ್ತೈದುವ ಸುವೇಗನ ಬಲೌಘಕಿದಿರಿಟ್ಟು ನಿಂದಂ ಭೀಮನುತ್ಸಾಹದಿಂದೆ (ಕೃಬಿಚ. ೯-೨೫); ಕುಶಂ ಬಳಿಕ ನಿಜ ಹಸ್ತಲಾಘವದೊಳಲ್ಲಿರ್ದರಂ ಸದೆದು ಲವನಂ ಬಲೌಘಮೊತ್ತಾಯದಿಂ ಮುತ್ತಿಕೊಂಡಿರ್ದ ಕೋಲಾಹಲವನಾಱಿಸಿದನು (ಕೃಬಿಚ. ೨೦-೬೬).

[ಬಲ₃+ ಓಘ]

**ಬಲ್ಕಣೆ₁**, ಬಲುಕಣಿ (ನಾ). ೧. ಬಹಳ ಶೂರನಾದವನು ; ಮಹಾಪರಾಕ್ರಮಿ: ಬಲಿಷ್ಠ: ಸಮರ್ಥ : ಕಣೆಯುಂ ಶೌರ್ಯಾಭಿಮಾನಕ್ಕೆಡಱಾದ ರಿಪುಸೈನ್ಯಕ್ಕೆ ಸಂಗ್ರಾಮದೊಳ್ ಬಲ್ಕಣೆಯುಂ . . . ಸಾಮಂತಚೂಡಾಮಣಿಯುಮೆನಿಪುಯರಂ ಬಂದು ಕಂಡಂ ಸುರೇಂದ್ರಂ (ಶಂಪಅ. ೬-೯೩); ಗುಣನಿಧಿ ನಂದಿವರ್ಧನನ ನಾಡುಮನಾಳ್ವಿಸಕಟಿಮ್ಮ ವಿಶ್ವಧಾರಿಣಿಯುಮಿಲ್ಲಗೆಯ್ಮದೆ ನಗಂ ಬೆಸಕೆಯ್ದೊಡೆ ಪಾಳಿಸಾಂತ ಬಲ್ಕಣೆಯನಪಹಾರಿಯುಂ ತವಿಪ ಕಾಲಮಾದಿನ್ನನಗೆ (ಶಾಂತಿಪು. ೯-೧೦೯); ಫಣಿರಾಜಂ ಬಾರಿಯುಟ್ಟಿಟ್ಟಿದೊಡನು ದಿನದಿಂ ಬರ್ಪ ಸರ್ಪಂಗಳಂ ಬಲ್ಕಣೆ ತಾರ್ಕ್ಷ್ಯಂ ಭಕ್ಷಿಸುತ್ತುಂ ಮಳಯಗಿರಿಯೊಳಿರ್ಪಂ (ಕಾವ್ಯಾವ. ೯೦೦). ೨. ನಿಪುಣ ; ನಿಷ್ಣಾತ ; ಪರಿಣತ : ನಾಲ್ಕುಮುಪಾಯದ ನುಡಿಗಳ ಸಿಲ್ಕಾಸಿಲ್ಕಿಗಳನೆಯ್ದೆ ನುಡಿದೈ ಕ್ರಮದಿಂ ಬಲ್ಕಣೆಯ್ದು ನಯದೊಳ್ನುಡಿಯಲ್ಕೊಂಕಂ ಕಲ್ತುದಲ್ತೆ ನಿನ್ನೊಂದಿಗರೊಳ್ (ಶಾಂತಿಪು. ೩-೯೦); ನಾಲ್ಕೆಂಬ ವೀಥಿಯಡೆಯೊಳ್ ನಾಲ್ಕಱ ಮಾಱಬಿಸೊಳೆ ಮಾಱಱಿಂದು ಕೊಳ್ ನೀಂ ಸಿಲ್ಕಿಲ್ಲದೆ ಕೂಡಯ್ದಂ ಬಲ್ಕಣಿ ನೀನಯ್ದುಗೆಯ್ದು ಕಳೆ ಪಡೆದನಿತಂ (ಅಸ್ಕಸು. ೦೨-೩೦). ೩. ಬಲಿಷ್ಠವಾದುದು; ಸಮರ್ಥವಾದುದು; ಪ್ರಬಲವಾದುದು : ಗುಣವಂತಂ ಸತ್ತ್ವಗುಣಾಗಣಿತಂ ನಿರ್ಮಳನದಕನನಾಯುಷ್ಯಂ ಬಲ್ಕಣೆಯುರ್ಪತ್ತುಬ್ಬದೆ ಕ್ಷಣಮಾತ್ರಕ್ಕೆಚುಪುವು (ಅಕ್ಕಾ. ೬-೨೩). ೪. ಪವಿತ್ರವಾದ ಸ್ಥಳ: ಅಣಿವಿಣಿಗೆಯ್ದಾ ಧರ್ಮ್ಮಮನಣಿಯರಮಳಿಗೊಂಗೆ ಪೆಱಱು ಗತಿಯಿಲ್ಲಾ ಬಲ್ಕಣೆ ವಾರಣಾಶಿಯೊಳ್ಸಮುಂ ಬ್ರಾಹ್ಮಣರನಳಿದನಜಗುಜಿಗಿಳಿದ (ಎಪಿಇ. XX. ೦೯-೫೬; 1016); ಪೆಱತು ಗತಿಯಿಲ್ಲಾ ಬಲ್ಕಣಿ ವಾರಣಾಶಿಯಲ್ ಬ್ರಾಹ್ಮಣರುಂ ಪಸುಗಳ್ಮನಳಿದನಜಗುಜಿಗಿಳಿದಂ (ಎಕ. VII. ಶಿಕಾ. ೦೫೩-೩೩; 1039). ೫. ಪರಾಕ್ರಮ; ಸಾಮರ್ಥ್ಯ : ನೀನಿನಿಸಾನುಂ ಬಲ್ಕಣೆಯ ಗಂಡನೆ (ಬಂಪಾ. ೬-೩೦ ವ). ೬. (?) : ನಿನ್ನಂ ಕೊಟ್ಟಿದ ದಕ್ಕ ಬಲ್ಕಣೆಯನೊತ್ತಿದಂತೆ ನರ್ಗುಱ ಮಾಡಮಂ ಬಾಯೆನೆ (ಬಂಪಾ. ೬-೩೦ ವ). **ಬಲುಕಣಿ** : ೨. ಬಲುಕಣೆಗಳೆಪದಿರನು ಕರಿ ಮುಂಕೊಳಿಸಿ ಕೆಡಹಿತು (ಕುಮಾರರಾ. ೩-೨೪); ಫಣಿವಿಭೂಷಾ:ಧಾಸುರರ ಬಲುಕ[ಣೆಗಳಿಂ ಗ]ಣಿಯ ಬವರವನಸುರಕುಲಭೀಷಣ ಹಿರಣ್ಯಕರದಟು ಮಿಕ್ಕುದು (ಕೊರಂ. ೬-೦೭-೫೯). ೭. ಆಶ್ರಯವಾಗಿರುವವನು ; ನೆಲೆಯಾದವನು: ಗುಣಾಜಲನಿಧಿ ತೇಜದ ಬಲುಕಣಿ . . . ಸಾಮಾಸಿಗವಂಶಾಗ್ರಣಿಯೆನೆ ವಿಭುಮಲ್ಲಿಕಾರ್ಜುನಂ ರಂಜಿಸುವಂ (ಶಾಸ.

XX. ೨೯೬-೨೪: 1228).

[ಬಲ್$_2$(<ಬಲ್ಲಿತು$_1$)+ಕಣ್$_4$./ತುಳು. ಬಲ್ಕಡಿ. ಬಲ್ಗಡಿ]

**ಬಲ್ಕಣ್ಣ$_2$** (ನಾ). ಒಂದು ಬಗೆಯ ಮರ (?) : ಪುನದಕ್ಷಿಣಾಸ್ಯ ದಿಸಿ ಬಹುಶಸ್ಯಹಿಯೆ ಬಲ್ಕಣ ವೃಕ್ಷಮೆ ಪುನಪಶ್ಚಿಮ ಮುಖದೆ ಸನ್ನ ಬಹು ಮೂಲಿಕಪೆನ್ನಿಯ . . . ಕೂಡಿತ್ತು ಸೀಮಾನ್ತರಂ (ಎಕ. I, ೦-೨೯ ; 466).

[?]

**ಬಲ್ಕಣತನ** (ನಾ). ೧. ಶೌರ್ಯ ; ಪರಾಕ್ರಮಂ : ಅಣೆದಾರ್ದ ತೋಳ್ ಬಡೆ ಬಲ್ಕಣತನದಿಂದಭಿನಿಷಾದಿಗಳ್ ಜವದಿಂದಂ ಪಣೆಗಳೆಂಕೆಗಳಾಗಿರೆ ರಣಾಗ್ರದೊಳ್ ಪಿಡಿದು ಮನ್ಮನದ್ವಿರದಂಗಳ್ (ಪರ್ವಮಾ. ೪-೬೨). ೨. ರಭಸ ; ಜೋರು : ಕಣಿಕಮನಾಜ್ಯದಿಂ ತೊಡೆದು ಮೋದಿಸಿ ದಿದ್ದಮು ಮಾಗೆ ಪೊಯ್ದು ಬಲ್ಕಣತನದಿಂದಮೊತ್ತಿ ಮಿದಿದು (ಕೋಕಿಲಕ. ೯-೦೩). ೩. ಧೈರ್ಯ : ತತ್ಕುಮಾರತಾಪಸರ್ ತಾಮ್ವಮೊಳಗಳಿಯದೆ ತಳಿಸಂದು ನಿಂದು ನಿರವಧಿಧೈರ್ಯನಿಧಿಯಪ್ಪ ನಾಭಿನಂದನನ ನಿಯಮದವಸಾನಮಂ ಬಲ್ಕಣತನದಿಂ ಕೆಲವು ದೆವಸಂಬರಂ ಪಾರ್ದು ತೀರ್ವುದಂ (ಪರ್ವ. ೦೦-೯೦ ವ). [ಬಲ್ಕಣ್$_1$ + – ತನ]

**ಬಲ್ಕೆ, ಬಲಿಕೆ** (ನಾ). ೧. ಜೋರು ; ರಭಸ : ಭೂರಮಣ . . . ಹುತ್ತಿರಕೆ ಬಂದು ತಾಗಿದ ಸರಳ ಬಲ್ಕೆಯಿಂ ಕಿತ್ತು ಸಗ್ಗಳಿಯುಂಬಕದಿಂದ ಜೋರಡುತಿರ್ದ ನೆತ್ತರಂ ತೊಳದೊರಸಿ ಬ್ಯಗಮಪರೆ ಮಾನಿಸರು ಕ್ರೀಡೆಯಿಂ ನೊಂದಿರೇದಂ (ತುರಂಗ. ೦೦-೧೯). ೨. ದೊಡ್ಡದಾದುದು ; ಹಿರಿದಾದುದು : 'ಬಲ್ಕೆವೆಱು' ಪರಾ. **ಬಲಿಕೆ** : ೩. ಹೆಚ್ಚಳ ; ಆಧಿಕ್ಯ : "ಬೃಂಹಸ್, ಬೃಂಹಿಃ, ಬೃಂಹುಃ, ಬೃಂಹಣಂ, ಬೃಂಹಿತಂ, ಈ ೫ ಬಲಿಕೆ" (ಕಾಶ್ಯ. ೬೬) ; ಮಲಂ ಓಂಗಿದಂಗದೊಳು ಸ್ವೆ ಮೂಲಮಲಮಿಹುದು ಮೇಣ್ಮಲ ತೊಲಗಲಾ ದೇಹದ ಹುಗು ಮತ್ತೇಕ ಮಲಬಲಿಕೆಯಿಂ ರಾಜಿಸಿರ್ಪಂಗಕ್ಕೆ ಲಿಂಗಸಮವಾದ ರುದ್ರಾಕ್ಷಿ ಭಸಿತಂಗಳಂ ಧರಿಸಿಯಾ ದೇಹ ಸಹ ನೀವು ತಲ್ಲಿಂಗವ ಪಿಡಿಯಲಕ್ಕುಮೆ (ಬಸವೇಪು. ೬-೬೩). ೪. ಬೆಳವಣಿಗೆ ; ಅಭಿವೃದ್ಧಿ ; ಏಳಿಗೆ : ಇಕ್ಷುದಂಡ ಬಲಿವುವಕ್ಕೆ ಮೊದಲೆ ತನಿರಸ ಬಹುದೇ ನಾನು ನೀನೆಂಬುದಕ್ಕೆ ಸ್ಥಾಣಾಪಹುವಕ್ಕೆ ಭಾವದ ಬಲಿಕೆ ಇನ್ನಾವುದೋ (ಮೋಹಮೂ. ೩೨-೨೦೩) ; ಶಿಲೆಯ ಪ್ರತಿಷ್ಠೆಯ ಮಾಡಿ ತನ್ನ ಒಲವರ ವಿಶ್ವಾಸದಿಂದ ಬಲಿಕೆಯುಸಱುವುದು ಶಿಲೆಯೊ ಮನವೊ (ಬಂಬಕ. ೯೦೦-೦೩೧೩) ; ಬೆಳೆದೆ ಸೀನಾ ಸೂತಕವ ಹೊತ್ತು ಉದರದೊಳು ಬಳಿಕ ಹೊಲೆ ಮಾದುದಾಕೆಗೆ ನಿನ್ನ ಬಲಿಕೆಯೊಳು (ಬೀಸ್ಮಕೋ. ೯೨-೨೦). ೫. ಬಲಿತಿರುವಿಕೆ; ಗಟ್ಟಿಯಾಗಿರುವಿಕೆ ; ಬಿರುಸಾಗಿರುವಿಕೆ : ಬಲಿಕೆಗೆ ಮೊದಲು ಅಡಕೆ ಮೆದುವಾಗಿರುತ್ತದೆ (ರೂಢಿ). 'ಬಲಿಕೆಅನ್ನ' ಪರಾ. ೬. ಪರಿಣತಿ; ಪ್ರೌಢಿಮೆ: ನಲಿದಾಡುತೆಯ್ತಂದು ಸಖಿಬೂಜನೆಂಬುದೊಂದೆ ಳೆಗೂಸು ಕೈಯೊಳು ಪಿಡಿದು ಗಿಲಿಕೆಯ ಕೋಲನಿತ್ತಯ್ಯಗೆಱಗಿತಿದು ಬಲಿಕೆಯ ಮೆಚ್ಚಲ್ಲೆಯೊಂದ (ಶಕಕ. ೯೬-೦೨೬) ; ಪರರಂ ಜಯಿಸ ಬೇಕಂದೇ ಕಲಿತಿರಲ್ಲದೆ ನೀವು ಮುಕ್ತಿಗೆ ಕಲಿತುದಿಲ್ಲಂ ನಿಮಗೆ ಶಾಸ್ತ್ರದ ಬಲಿಕೆಯುಳ್ಳವರೆನಿಸಿಕೊಂಬುದೆ ಮುಕ್ತಿಯೆಂದಿಹಿರಿ (ಶಂಕರಾ. ೦೨-೯). 'ಬಲಿಕೆವಂತ' ಪರಾ. ೭. ರಚನೆ ; ಮಾಟ; ನಿರ್ಮಾಣ : ಅದು ತೃಣದ ಲೆಪ್ಪದ ಬಲಿಕೆಯೊ ತನ್ನ ಚಿತ್ರದ ಬಲಿಕೆಯೊ (ಶಲೀಶ್ಯ. ೦೬೯): ದಳವಾಡಸಹಿತ ಬೈಚಪ್ಪ ದುರ್ಗವ ಹೊಕ್ಕು ತಳುವದದಱ ಬಲಿಕೆಯನು [ಪಾಠಾಂ. ಬಳಿಕನ್ನು] ಬಳಸಿ ಬಳಸಿ ನೋಡಿ ದುರ್ಗಸೌರಣೆಯನಂದಲಸದೆ ಮಿಗೆ ಮಾಡಿಸಿದನು (ಕಂಠೀರವ. ೩೬-೩೦).

ಬಲಿಕೆಯಾಗು = ೧. ಗಟ್ಟಿಯಾಗು ; ಬಲಿ ; ಬಿರುಸಾಗು : ಬಲಿಕೆಯಾಗದ ಅಡಕೆ ಬಣ್ಣ ಕಟ್ಟಲು ಚೆನ್ನಾಗಿರುತ್ತದೆ (ರೂಢಿ). ೨. ಬಿಗಿಯಾಗು ; ಬಲವಾಗು ; ಭದ್ರವಾಗು: ಕ್ಷಣದೊಳಗೆ ಪಾವೊಂದ ನರರ ತೆಗೆದಲ್ಲಿ ನೆಱೆ ಬಿರಿದ ಕುಕ್ಷಿಯುಂ ಸಸಿನೆ ಮಾಡುತ ಕಟ್ಟಿದು ಬಲಿಕೆಯಪ್ಪಂದದೆ (ಬೀಸ್ಮಪು. ೩-೯-೨೬).

[ಬಲ್$_2$ (<ಬಲ್ಲಿತು$_1$)+ – ಕೆ./ ತುಳು. ಬಲಿಕೆ]

**ಬಲ್ಕೆಲೆ** (ಕ್ರಿ). ಬಹಳ ಮಾತನಾಡು : ಲೋಚನಯುಗ್ಮದಿಂದೆಡಬಲಂಗಳ ನೀಕ್ಷಿಸಿ ತನ್ನ ನಲ್ಲನಂ ಸೂಚನೆಗೈದು ಕೂಡೆ ಕರೆದೊಯ್ಯನೆ ಬಲ್ಕೆಲೆಯುತ್ತು ಮಾತನೊಳ್ (ಅರ್ಧ್ಯಟಿ. ೨-೯೦). [ಬಲ್$_2$ (<ಬಲ್ಲಿತು$_1$) + ಕೆಲೆ]

**ಬಲ್ಕೆವೆಱು** (ಕ್ರಿ). ಹಿರಿದಾಗು ; ದೊಡ್ಡದಾಗು : ನಿಲ್ಕಡೆವೆತ್ತಂದಿ ನಾಯುಮ್ಮವೇಭತ್ತನಾಲ್ಕು ಲಕ್ಷಾಂಕಪೂರ್ವಗಳು ಬಲ್ಕೆವೆತ್ತು ಪೂರ್ವೆಯೆಂದರೆಪ್ಪೆಂಬುದ ಸಿಲ್ಕಾಗದಂತೆ ಪೇಳುವೆನು (ಶಠತ. ೬೬-೭).

[ಬಲ್ಕೆ + ಪೆಱು$_1$]

**ಬಲ್ಕೇಡಿಗ** (ನಾ). ಬಹಳ ಕೇಡಾಳಿಯಾದವನು ; ಅತಿ ದುಷ್ಟಸ್ವಭಾವದವನು : ಕೇಡಿಗರೊಳವನೋರ್ವನೇ ಬಲ್ಕೇಡಿಗನು (ಶಂಶಪಮ. ೨೩೦-೯೩).

[ ಬಲ್$_2$ (<ಬಲ್ಲಿತು$_1$) + ಕೇಡಿಗ ]

**ಬಲ್ಗಂಡ, ಬಲುಗಂಡ** (ನಾ). ಬಹಳ ಶೂರನಾದವನು ; ಅತ್ಯಂತ ಪರಾಕ್ರಮಿಯಾದವನು : ಪರಾಂಗನಾಪುತ್ರಂ ಮಲೆಗೆ ಮಾರ್ತಾಂಡಂ ಗಜಕೆ ಬಲ್ಗಂಡಂ ಹಯವತ್ಸರಾಜಂ (ಎಕ. VII, ಶಿಕಾ. ೩೩-೦೦ ; 1027) ; ಚೋಳಕುಳಕಾಳದಣ್ಡಂ ಸಬರೆ ಬಲ್ಗಂಣ್ಡಂ ಕಲಿಗಳಾರಾಧ್ಯನಾಗ್ಗ ಮಸಾಧ್ಯಂ (ಸೌಇಇ. XI-i, ೯೭-೯; 1062); ಉದಾರಮಹೇಶ್ವರಂ ಚಲಕೆ ಬಲ್ಗಣ್ಡಂ ಶೌರ್ಯ್ಯಮಾರ್ತ್ತಣ್ಡಂ . . . ಶ್ರೀಮನ್ಮಹಾಮಣ್ಡಳೇಶ್ವರಂ ಲಕ್ಷ್ಮರಸರ್ (ಸೌಇಇ. XX. ೯೭-೭ ; 1074) **ಬಲುಗಂಡ** : ಯಾದವ ಕುಳಾಮ್ಬರದ್ಯುಮಣಿ ಸಮ್ಯಕ್ತ್ವಚೂಡಾಮಣಿ ಮಲಪರೊಳ್ಗಣ್ಡ ಚಲಕೆ ಬಲುಗಣ್ಡ . . . ತಳಕಾಡುಗೊಣ್ಡ (ಎಕ. II, ೦೯೩-೨೦ ; 1131).

[ಬಲ್$_2$ (<ಬಲ್ಲಿತು$_1$) + ಗಂಡ$_1$]

**ಬಲ್ಗಂಡಿಕೆ** (ನಾ). ಬಹಳ ಶೂರತನ ; ಅತ್ಯಂತ ಪರಾಕ್ರಮ : ಒಳಕೆಯ್ಯೊಳಿರ್ದು ಪಲ್ಗಿರಿದೊಳವಾಲಂಗೊಂಡು ಮೊರೆವ ಭಷಕನ ತೆಱದಿಂದೊಳಪೊಕ್ಕು ದುರ್ಗಮಂ ಸಂಚಳಚಿತ್ತಂ ನುಡಿಗುಮೆಮಗೆ ಬಲ್ಗಂಡಿಕೆಯಂ (ಕಾವ್ಯಾವ. ೨೯೯) ; ಈತನಲ್ತೆ ಪುಳಿದೆನ್ನನಿಲ್ಲಿ ಪೊದಱೊಳ್ ಬಲ್ಗಂಡಿಕೆಯಿನಾಳಿಮೆಟ್ಟಿದೊನೆಂದೊಡರ್ಜುನನಾ ಬಂದಾತನನೀತೆಂದಂ (ಪಂಪಭಾ. ೦೦-೩೦ ವ). [ಬಲ್$_2$ (< ಬಲ್ಲಿತು$_1$) + ಗಂಡಿಕೆ$_1$]

**ಬಲ್ಗಂಡಿಕೆಗಾಣ್** (ಕ್ರಿ). ಅತಿಶಯವಾದ ಶೌರ್ಯವನ್ನು ಕಾಣು ; ಅತ್ಯಂತ ಪರಾಕ್ರಮವನ್ನು ತಿಳಿ : ಪೊದಱಿಂದಂ ಪೊಱಮಟ್ಟು ಕಟ್ಟಿದಿರೊಳಾರ್ಪಿಂ ಗರ್ಜಿಸುತ್ತಿರ್ಪ ಬಗ್ಗದ ಬಲ್ಗಂಡಿಕೆಗಾಡು ಗಂಡುಗಲಿ ಬೇಡಂ ಖಡ್ಗದ ಬೆನ್ನೊಳ್ ಮೊನೆದೋಱೆಮಿಱು ಕಿವಿದಂ ತತ್ಕಾಳ ಮೇಘಾತ್ಮಯಂ (ಕಾಶಕೀ. ೩ ೯೯). 'ಗಂಡಿಕೆಗಾಣ್' ಪರಾ.

[ಬಲ್ಗಂಡಿಕೆ + ಕಾಣ್]

**ಬಲ್ಗಂಡು** (ನಾ). = ಬಲ್ಗಂಡಿಕೆ : ಗಂಡುಡೆಯುಟ್ಟು ಕೈದುವಿಡಿದುವ್ವಾಳಮಂ ನಿನಗುಂಟುಪಹಾಟ್ಟು ಬಲ್ಗಂಡಿನ ದೇವ ಮಾನವ ವಿಯಚ್ಚರರೊರ್ವರುಮಿಲ್ಲ (ಶಂಖಮಾ. ೯-೦೩೮). [ಬಲ್$_2$ (< ಬಲ್ಲಿತು$_1$) + ಗಂಡು]

**ಬಲ್ಗಂದ** (ನಾ). ಬಹಳವಾದ ಪರಿಮಳ ; ಅತಿಶಯವಾದ ಸುವಾಸನೆ : ಹಯತತಿಗೆ ಮೊಗರಂಬ ಕಡಿಯಣಂಗಳನಿಟ್ಟು ಪಲ್ಲಣದ ಬಿಗುಹುಗಳ ತಾಪಣೆಯ ಲೇವೆಗಳನಳವಡಿಸಿ ಬಲ್ಗಂದವಿಡಿದು ನವಿಸಿ ನೆಗೆದಡರಿ. . . ಕಾದುತ್ತಲಿರ್ದರಿರ್ಬಲದ ಘೋಟಾರೂಢರಾಹವದೊಳು (ಶರಶ. ೯೯-೩೦).

[ಬಲ್$_2$ (< ಬಲ್ಲಿತು$_1$) + ಗಂದ]

**ಬಲ್ಗಂಬ** (ನಾ). ಬಲವಾದ ಕಂಬ ; ಬಲಿಷ್ಠವಾದ ಸ್ತಂಭ : ರಾಜಾಂಗಣದ ಬಯಲ ಬಲ್ಗಂ[ಪಾಠಾಂ. ಬಾಳ್ಗಂ]ಬಂಗಳೊಳ್ ಸಱಿಗೆಯ್ದಿರ್ದ ಜಾಪದಾನೆಗಳ ಮೇಲೆಡೆಗೆಡೆದು ಮೂವಳಸಾಗಿ ಮುಸುಂಕಿ

ತನ್ನ ಜಂಗಳ್ಗೆ ಪಾಲ್ಗಡಲ ನಡುವಣ್ಗೈರಾವತದ ಲೀಲೆಯನೋಲಗಿಸಿಯುಂ (ಹಂಪ್ರಶು. ೬-೧೧ ವ): ಸಪ್ತಮದಾವಸ್ಥೆಯಿಂ ಮುಂದುಗಾಣದೆ ಬಲ್ಲಂಬ [ಪಾಠಾಂ. ಭ]ವಮಂ ಮುಱಿದು ಸಿಗಳಮಂ ಪಱಿದು ಸಿಟ್ಟೋಟದಿಂ ಬೀದಿವರಿವುದು (ಲೀಲಾವ. ೬-೦೦ ವ).

[ಬಲ್$_2$ (< ಬಲ್ಲಿತು$_1$) । ಕಂಬ$_1$ (< ಕಂಭ)]

**ಬಲ್ಗಜ್ಜ**, ಬಲುಕಜ್ಜ, ಬಲುಗಜ್ಜ (ನಾ). ಬಹಳವಾದ ಕಾರ್ಯ; ವಿಶೇಷವಾದ ಕೆಲಸ: ವತ್ಸಾಧಿಶಂ ತಾಮ್ಮೊದಲುಜ್ಜುಗಿಸಿದ ಬಲ್ಗಜ್ಜಮೆ ನೇಮವೆ ತನಗೆನುತವೆ ತನುವಿನವೊಂದಾಸೆಗೆ ಜಗಿಗುಪದ ಸಾಮಜಗಮನೆ ಸುಲೋಚನೆಯಾವುದ್ದಾಮ ಸದಿಯ ಪೆಮ್ಮಡುವಂ ಪೊಕ್ಕಳ್ (ಕಮಲಾ. ೯-೨೧). **ಬಲುಕಜ್ಜ**: ಉಲುಹೆಯೇನಧಿಕವೈ ವರತನು ಮುಂದಿನ್ನು ಬಲುಕಜ್ಜವುಂಟದಱಿಂದ ತೊಲಗದಮ್ಮೊತ್ತಿನೊಳಿರು (ಪಂಪ. ೨೭-೨). **ಬಲುಗಜ್ಜ**: ಹಲವು ಕೋಶಕೆ ಕಡಿವೆಯಿಲ್ಲವಿಸಿ ಚತುರಂಗಬಲದೊಳೆರಡಿಲ್ಲವಿಂದೆನ್ನೆಡೆಗೆ ನೀಂ ಬರ್ಪ ಬಲುಗಜ್ಜವಾವುದುಂಟೆನೆ (ಚಂಪು. ೯-೨೦).

[ಬಲ್$_2$ (< ಬಲ್ಲಿತು$_1$) + ಕಜ್ಜ]

**ಬಲ್ಗಟ್ಟು** (ನಾ). ದೊಡ್ಡ ಅಣೆಕಟ್ಟು: ಬುಕ್ಕರಾಜಂ ಹರಿದ್ರಾನದಿಯಂ ಬಲ್ಗಟ್ಟೆಯಂ ಕಟ್ಟಿಸಿ . . . ಅಖಿಲಜನಕೆ ಸಂಜೀವನೋಪಾಯಮಂ ಮಾಡಿದಂ (ಎಕ. XI. ದಾವಣ. ೨೯-೬. ೧೪೨೪)

[ಬಲ್$_2$ (< ಬಲ್ಲಿತು$_1$) + ಕಟ್ಟು$_1$]

**ಬಲ್ಗಡಣೆ** (ನಾ). ದೊಡ್ಡ ಸಮೂಹ, — ರಾಶಿ: ಕಡಲ ಮುನ್ನಱಿಯದ ವೆಂಗಳಚ್ಚರಿವಟ್ಟು ನಿಡುಬೆರಳಟ್ಟು ನಾಸಿಕಕೆ ಮುಡಿಯೊಲೆದೊಲೆದು ನೋಡಿದರದಱೊಂದು ಬಲ್ಗಡಣೆಗೆ ಬಗೆಯೊಳು ಮೆಚ್ಚಿ (ಪಂಪ. ೨೩-೯೩).

[ಬಲ್ (< ಬಲ್ಲಿತು$_1$) + ಗಡಣೆ$_1$ (< ಗಡಣ)]

**ಬಲ್ಗಡಲ್**, ಬಲುಗಡಲು (ನಾ). ದೊಡ್ಡ ಸಮುದ್ರ; ವಿಶಾಲವಾದ ಸಾಗರ: ಅಡಿಗಡಿಗಾನಂದವೆಂಬ ಸಾಗರವನೊಕ್ಕುಡಿತೆಯ ಮಾಡಿ ಸೇವಿಪನು ಒಡನೊಡನೀಂಟದವ್ಪಕೆ ಹೆಚ್ಚಿ ಕಡಲು ಬಲ್ಗಡಲಾಗುತಿಹುದು (ಪಂಪ. ೦೪-೬೦). **ಬಲುಗಡಲು**: ಬಗೆವುದೇ ಬಲುಗಡಲು ಮಂಜನ ಮುಗಿಲವಳಿಯನು (ಕುಮಾವ್ಯಾ. ೦೦-೧೦).

[ಬಲ್$_2$ (< ಬಲ್ಲಿತು$_1$) + ಕಡಲ್$_2$]

**ಬಲ್ಗಣೆ**, ಬಲುಗಣೆ (ನಾ). ಬಲವಾದ ಬಾಣ; ಶಕ್ತಿಯುತವಾದ ಬಾಣ: ಕೋಲ್ಗಾರೊಳ್ ಸುರಿವಾಲಿವರಲ್ಲಳವೊಲ್ ನೆತ್ತಿಯೆಡೆವು ಮುತ್ತುಗಳೆತ್ತಂ ಗಲ್ಗಲನೆ ಸುರಿಯೆ ಜೋದರ್ ಬಲ್ಗಣೆಯಿಂದೆಚ್ಚರದಟನಿಂದಾನೆಗಳಂ (ಆಕ್ಕಾಮ. ೨೬೨); ಬಲ್ಗಿಚ್ಚ ಪಳಿವ ಲಿಂಗಂ ಮೂಡೆ ಕಣ್ಗೆಟ್ಟು ಕಾಲ್ಗಿಗಿದಾವನಾ ಕಾಳ್ಗೆಯ್ಯಕಳ್ಕುತೆ ತುಳಿಲ್ಗುಂದಿ ನಾಲ್ಗೊಗು ತಲೆಗಂಡನೇ ಶಿವನ ಬಲ್ಗಣೆಯ ಪೋಲ್ಗಾವನು (ಶಾವಶಾಂ. ೩-೨೬). **ಬಲುಗಣೆ**: ಅಣದಣದು ಹೋಹವನ ಗಗನಾಂಗಣದ ಮಾರ್ಗಿಯ ಮಾಡದಿರ ಬಲುಗ[ಪಾಠಾಂ. ಕ]ಣೆಯ ಭಟನೇ ತಾನೆನುತ ಹೊಱವಂಟ ನಾಹವಕೆ (ಕೊರಶಾ. ೯-೩-೯).

[ಬಲ್$_2$ (< ಬಲ್ಲಿತು$_1$) + ಕಣೆ$_1$]

**ಬಲ್ಗಣ್ಣಿ** (ನಾ). ಬಿಗಿಯಾದ ಹಗ್ಗ: ಮರೆಗೀತೊಡ್ಡೊಡ್ಡು ಬಲ್ಗಣ್ಣಯ ಬಲೆಗಳನಂತೊತ್ತುಗೊಳ್ಗೊತ್ತುಗೊಳ್ಳೀ ಸರದಿಂ. . . ಎಂದೆನುತ್ತಾತುರದಿಂದೋರೊರ್ಬರೊಳ್ ಸಾಱುವ ಶಬರರ ತೀವ್ರಸ್ವನಂ ಪರ್ಬಿತಾಗಳ್ (ಕುಮುಚಾ. ೦೯-೨೧); ಅಣ್ಣಾದೇವನೊಳಿಡಿದ ವಾತ್ಸಲ್ಯಮೆಂಬ ಬಲ್ಗಣ್ಣಿಯೊಳ್ಕಟ್ಟುವಡೆದಲ್ಲನಲಱಿಯದೆ ನಿರ್ವಿಣ್ಣ ಭಾವದೊಳೆಂದು ಲಕ್ಷ್ಮಣಂ. . . ಇಂತೆಂದನು (ಕೃಮಿಶಾ. ೦೯-೬೦).

[ಬಲ್$_2$ (< ಬಲ್ಲಿತು$_1$) + ಕಣ್ಣಿ]

**ಬಲ್ಗತ್ತಲೆ**, ಬಲುಗತ್ತಲೆ (ನಾ). ದಟ್ಟವಾದ ಕತ್ತಲೆ; ಕಗ್ಗತ್ತಲೆ: ಕಾದಿ ಕಾದಿ ಶತಮಾಯನುಱೆ ಬೇಸತ್ತಡದರ್ಂಬರಾಂಗಣದೊಳಿರ್ದು ಬಲ್ಗತ್ತಲೆಯನೊತ್ತಿ ಕವಿಸಿ ಮೋಸದೊಳ್ ಬಲ್ಲಂಬುಗಳ ಸದ್ದು ಪುಟ್ಟದಂತೋಸರಿಸದೆಸುತಿರ್ದಂ (ಕಬಪು. ೧೯-೩೧); ಕತ್ತ ಬಲ್ಗತ್ತಲೆಗೆ ತರಣಿ ಮುಂಗಾಣದಿರೆ ಪೊತ್ತುವೆಳಗಂ ಬೇಱೆ ತೋರ್ಪರಾರ್ (ಕೃಮಿಶಾ. ೨-೦೬). **ಬಲುಗತ್ತಲೆ**: ಲೇಸೆನಿಪ ಕೈದೀವಿಗೆಗಳ ವಿಭಾಸದಿಂ ಮಿಗೆ ಪಿಡಿವಕೊಂಡು ಲ್ಲಾಸವೆತ್ತಾಳ್ವೆರಿಯ ಮೇಲಿಂತಿರುಳು ತಿರುಗುತಿರೆ ಆ ಸರವಿಗಳು ಸವೆಯೆ ಪರಿತಂದಾಸುರದಿ ಬಲುಗತ್ತಲೆಯು ಮುಱಿಯಾಸೆಯಲಿ ಹಗೆಯಾಗು ಹೊಗುವರೊ (ಅಕಪು. ೦೬-೨೩); ಬಿಲವುಮುಖದೊಳುತ್ತರಿಸಿ ಬಲುಗತ್ತಲೆಯೊಳಡವಿಯ ಮಾರ್ಗದಲಿ ಕಲುಮುಳುಗಳೊಳು ಕಾಪಥಕೆ ಕೋಮಳ ಚರಣಗಳ ಕೊಡುತ ತೊಳಲಿದರು (ಕುಮಾವ್ಯಾ. ೬-೯೩).

[ಬಲ್$_2$ (< ಬಲ್ಲಿತು$_1$) + ಕತ್ತಲೆ$_1$ (< ಕಟ್ಟಲೆ)]

**ಬಲ್ಗತ್ತಿ**, ಬಲುಗತ್ತಿ (ನಾ). ಬಲವಾದ ಕತ್ತಿ; ಬಲಿಷ್ಠವಾದ ಖಡ್ಗ: ಎತ್ತಿ ಜಪ ಸತ್ತಿಗೆಯ ಮೊತ್ತಂಗಳೆತ್ತಲುಂ ಕತ್ತಲಿಸೆ ಪೊತ್ತ ಮಾಸೆವೆತ್ತ ಬಲ್ಗತ್ತಿಗಳ ಕಿತ್ತು ಭಟರತ್ತಿ ಜಡಿಯುತ್ತಿರಲ್ಕೆ (ಕೃಮಿಶಾ. ೪-೦೯). **ಬಲುಗತ್ತಿ**: ತತ್ತನೂಜನ ಗಂಟಲಲಿ ಬಲುಗತ್ತಿಯಂ ಪ್ರತನೊತ್ತು ವಾಗಳೆ ಕೃತ್ತಿವಾಸಂ ಜಾಣನಾದಡೆ ಮೆಚ್ಚಿ ಕೊಡಬೇಡಾ (ಅಕಪು. ೨೩-೨೩).

[ಬಲ್$_2$ (< ಬಲ್ಲಿತು$_1$) + ಕತ್ತಿ]

**ಬಲ್ಗನ್ನ** (ನಾ). ಬಹಳವಾದ ಮೋಸ; ಅತಿಯಾದ ವಂಚನೆ: ಸಾಂಬನಂ ಜಾಂಬವತಿಯಣುಗನಂ ಸ್ತ್ರೀವೊಲ್ ತೆಱಂಬೊಳೆಯೆ ಸಿಂಗರಿಸಿ ತನ್ನುನಿಗಳೆಡೆಗೆ ತಂದೆಂ ಬಣ್ಣಿಪೆಂ ನಮಿಸಿ ಭಾವಿಕಾರ್ಯಂಗೇಳ್ವೆವೆನುತೆ ಬಲ್ಗನ್ನದಿಂದೆ ಡಂಬಕರ್ ಕೇಳ್ದರೀ ಪುತ್ರಕಾವಿಯ ಬಭ್ರುವೆಂಬವನ ಪೆಂಡಿರವ ಳೀಸಂ ಪೆಱುವಳೆಂಬುದಂ (ಕರ್ಮಣಾ. ೧೦-೦೯೬).

[ಬಲ್$_2$ (< ಬಲ್ಲಿತು$_1$) + ಗನ್ನ$_1$]

**ಬಲ್ಗಯ್** 'ಬಲ್ಗೆಯ್' ನೋ.

**ಬಲ್ಗಯ್ಯ** 'ಬಲ್ಗೆಯ್ಯ' ನೋ.

**ಬಲ್ಗರ**, ಬಲುಗರ$_2$ (ನಾ). ೧. ಬಲವಾದ ಗ್ರಹ: ಅರಸುಮಕ್ಕಳೆಲ್ಲಮಾ ಬಲ್ಲಂ ಕಂಡು ಬಲ್ಗರಂ ಪೊಡೆವಂತೆ ಪೆಡಂ ಮಗುಳೆ (ಶಂಶಾರಾ. ೩-೯೦ ವ); ನುಡಿದಪೆಯಿಲ್ಲ ನೀಂ ಮಗಳೆ ನಿನ್ನನಿದೇಂ ಪೊಡೆದತ್ತೊ ಬಲ್ಗರಂ ಪಿಡಿದುದೊ (ಲೀಲಾವ. ೨-೦೦೬); ಬಯಲುಗನವ್ವ ಸನತ್ಕುಮಾರಂ ಶೂನ್ಯಹೃದಯಾಂಧಂ ಕಣ್ಮುಚ್ಚಿ ಗೋಣಂ ನಿಮಿರ್ಚಿ ಬಲ್ಗರಂ ಪೊಡೆದಂತೆ ಬೆಬ್ಬನೆ ಬೆಱತಿರೆ (ಸಾವಂಕ. ಕಥಾಗರ್ಭಸಂಧಿ. ೨೩ ವ). **ಬಲುಗರ$_2$**: ೧. ಪಾರ್ಥ ಬಲುಗರವವಚಿದಂತಿರೆ ಮೂಕನಾದನು ಜೆರಳ ಮೂಗಿನಲಿ (ಕುಮಾವ್ಯಾ. ೬-೩೬). ೨. ಗ್ರಹಚಾರ: ಬಲುಗರವಿದೆತ್ತಣದೊ ಕಾರುಣ್ಯನಿಧಿಗೆನುತೆ ನಡನಡುಗಿ (ಕೃಮಿಶಾ. ೦೯-೩೦).

[ಬಲ್$_2$ (< ಬಲ್ಲಿತು$_1$) + ಗರ$_2$]

**ಬಲ್ಗರು** (ನಾ). ಎರಕದ ದೊಡ್ಡ ಬೊಂಬೆ: ತಿಳಿಜೊನ್ನದೆಱಕದ ಪುರುಷರೊ ಬೆಳ್ಳಿಯ ಥಳಥಳಿಸುವ ಬಲ್ಗರುಗಳ ಪೊಳಪೊಯೆಂದೆನೆ ಧವಳಾಂಬರದಿಂ ಪಾಸರಳೆಸಿದರೇನ ಬಣ್ಣಿಪೆನು (ಕುಮಾಶಾಂ. ೦೯-೩೩).

[ಬಲ್$_2$ (< ಬಲ್ಲಿತು$_1$) + ಕರು$_2$]

**ಬಲ್ಗರುಳ್**, ಬಲುಗರುಳು (ನಾ). ದೊಡ್ಡದಾದ ಕರುಳು, – ಅಂತ್ರ: ದಂತದಂಡಹತಿಯಿಂ ಬಿಸುನೆತ್ತರ ಧಾರೆಗಳ್ ಭುಗಿಲ್ಭುಗಿಲೆನೆ ಪಾಮ್ಪು ಪೊಣ್ಮುದುವು ಕೋಟಿಯ್ಮಿದುಳೊಕ್ಕುವು ಬಲ್ಗರುಳ್ಗಳ್ (ಶಂಶಾರಾ. ೦೩-೬೦). **ಬಲುಗರುಳು**: ಅವನ ನೂಱುಂಬುಗಳ ಕಡಿದವನವಯವವ ಕೀಲಿಸಿದಾಕ್ಷಣವವನಿಯಲಿ ಬಲುಗರುಳು ಬದ್ದವು ಭಟನ ಕಿಬ್ಬರಿಯ (ಕುಮಾವ್ಯಾ. ೩-೯೬).

[ಬಲ್$_2$ (< ಬಲ್ಲಿತು$_1$) + ಕರುಳ್]

**ಬಲ್ಗಲಿ** (ನಾ). ಮಹಾಶೂರ; ಪರಾಕ್ರಮಿ: ಅಳವನಱಿದು ಬೇಗಿಱಿವ ಬಲ್ಗಲಿಗಳುಮಂ . . . ಮತ್ತಮಣ್ಮಿ ನಡೆದಿಱಿವ ನಡೆಗಲಿಗಳುಮಂ ನೋಡಿ ರುದ್ರಾವತಾರಂ . . . ಹಿಮವತ್ಪರ್ವತಕ್ಕೆ ಪೋಪುದುಂ (ಗದಾಯು. ೬-೩೧ ವ). [ಬಲ್$_2$ ( < ಬಲ್ಲಿತು$_1$) + ಕಲಿ$_2$]

**ಬಲ್ಗವಣೆ**, ಬಲುಗವಣೆ (ನಾ). ಕಲ್ಲನ್ನು ಬೀಸಿ ಎಸೆಯಲು ಮಾಡಿರುವ

ದೊಡ್ಡದಾದ ಜಾಳಿಗೆಯ ಸಾಧನ ; ದೊಡ್ಡ ಕವಣೆ : ಸೂಸಿದರ್ ಕೆಂಡಮಂ ಬಲ್ಗವಣೆಕಲ್ಗಳಂ ಬೀಸಿದರ್ (ಕಿರಾತ. ೧೨-೩೬). ಬಲುಗವಣೆ : ಶ್ರವಣ ಮನನದ ಬೀಸುವಲೆ ಶಾಂಭವ ಸುವೇದಾದೀಕ್ಷೆಗಳ ಬಲುಗವಣೆಗಳ . . . ನವವಿಧಾವುಲ ಭಕ್ತಿಗಳ ರಣತವಕ ದೀಹದ ಹುಲ್ಲೆಗಳ ಮೃಗ ಭವವಿದಾರಣ ಸುಭಟರ್ಕೈದಿತು ಶಿವನ ನೇಮವಲಿ (ಕುಮ್ಮಾರ. ೩-೩೩).

[ಬಲ್₂ (< ಬಲ್ಲಿತು₁) + ಕವಣೆ₁]

ಬಲ್ಗಜು (ನಾ). ೧. ದೊಡ್ಡ ರೆಕ್ಕೆ : ಮುಂಚುವೆಱಂಕೆಯಾಗೆ ನಿಡಿದೋಳ್ಗಳ್ . . . ನಖರಾವಳಿ ಬಲ್ಗಜುಯಾಗೆ ನಾಸಿಕಂ ಚುಂಚುವ ದಾಗಲಾಗಳೆ ಸರ್ವಾಕೃತಿ ಗಕ್ಕನೆ ಪೋಗಿ ರಾಜಕೀರಾಂಚಿತಜನ್ಮವೆನ್ನವುದರ್ಪ್ಪಿದುದು (ಅದ್ಭುತ. ೩ ೦೦೩). ೨. ದೊಡ್ಡದಾದ ಬಾಣದ ಗರಿ,– ಪುಂಖ: ಒದೆದೆಡೆಗೊಂಡ ಬಿಲ್ಲ ತಿರುವಂ ಮೊಱೆದೆಳ್ತರದಿಂ ಪಳಂಚಿ ವೇಗದೊಳಿದಿರಾಂತು ಬಲ್ಗಜುಯ ಗಾಢಮೊಡಂಬಡೆ . . . ಱಂಗದೆ ಪೊಗರಾಂತ ಕೂರ್ಗಣೆಗಳೇಂ ಪರಿತಂದುವೊ ಪಾಂಡುಪುತ್ರನಾ (ಕರ್ಣಾ. ೪-೯೨).

[ಬಲ್₂ (< ಬಲ್ಲಿತು₁) + ಗಱು]

ಬಲ್ಗಾಡಿ (ನಾ). ವಿಶೇಷವಾದ ಸೊಗಸು ; ಅತಿಶಯವಾದ ಸೌಂದರ್ಯ : ತಾವರೆಗೊಳಂ ತಣ್ಗೊಳಂ ಮೆಱೆದುವೆಂತೆನಲ್ ಭೂಮಿವನದ ಬಲ್ಗಾಡಿಯಂ ನೋಡಲೆಂದೆಳಸಿ ಪಲಗಣ್ ಮರಲ್ಗಳಂ ಪಡೆದೀಕ್ಷಿಪನುವೊ ಬಳಿಕೆ ಕಮ್ಮರಲ್ಗಳ್ಗಾಟಿಪನೆಂದೆಂಬ ಪಟುಭಟನ ಕಣೆಗಳ ದೊಣೆಗಳೋಯೆಂಬಿನಂ (ಕನ್ಯಾ. ೬-೩೬).

[ಬಲ್₂ (< ಬಲ್ಲಿತು₁) + ಗಾಡಿ₁]

ಬಲ್ಗಾಡು (ನಾ). ದೊಡ್ಡದಾದ ಕಾಡು ; ದಟ್ಟವಾದ ಅರಣ್ಯ : ಶಶಿಯಂತೆ ಶಶಪಟ ವಲ್ಮೀಕಾತ್ರಯ ವಸುಧಾಧಿಪಬಲದಂತೆ ಮುಸುಗಿದ ಖಡ್ಗ ಕಱೀಂದ್ರಗಳಿಂ ಕಣ್ಗೆಸೆದಿಹುದಾ ಬಲ್ಗಾಡು (ಶ್ರೀಕಾಂ. ೬-೦೨).

[ಬಲ್₂ (< ಬಲ್ಲಿತು₁) + ಕಾಡು₁]

ಬಲ್ಗಾಪು, ಬಲುಗಾಹು₁ (ನಾ). ಬಲವಾದ ಕಾವಲು ; ಭದ್ರವಾದ ಪಹರೆ: ಅಂತನರ್ಘ್ಯಮಪ್ಪ ದರ್ಶನರತ್ನಮಂ ಸಂಶಯಚೋರರ್ ಪುಗದಂತು ನುಬುಗೆಯೆಂಬ ಬಲ್ಗಾಪನಿಕ್ಕಿ ಮನಮೆಂಬ ವಜ್ರದೋವರಿಯೊಳಿರಿಸಿ (ಧರ್ಮಾಮೃ. ೨-೨). ಬಲುಗಾಹು₁ : ಅಕ್ಕಱೆಯಿಂದಲ್ಲ ನೀನೋಡಿ ಹೋದಹೆಯೆಂಬ ಕಕ್ಕುಲಿತೆಗೇಱಿಂದೆನ್ನೆಸೆಯಿಸೆ ಬಲುಗಾಹನಿಕ್ಕಯ್ಯ ಎನೆ . . . ನಡೆದಾ (ಹರಿಶ್ಚ. ೬-೬೬). [ಬಲ್₂ (<ಬಲ್ಲಿತು₁)+ಕಾಪು]

ಬಲ್ಗರ (ನಾ). ೧. ಆರ್ಭಟ ; ಗರ್ಜನೆ : ಕೇಸರಿಯ ಬಲ್ಗರ ಕಂಜಿ ವಿಶೇಷಗಜವ್ರಜಂತದು ಶಬರರ ವಾಸವನು ಕಂಡಲ್ಲಿ ಮರೆಗೊಂಡಿರಲು (ಕವಿರಾ. ೧೦-೪೦). ೨. ಉದ್ಘೋಷ ; ಬಲವಾದ ಧ್ವನಿ : 'ಬಲ್ಗಾರಿಕೆ' ಪರಾ. 'ಉದ್ಗಾರ' ಹೋ. [ಬಲ್₂ (<ಬಲ್ಲಿತು₁)+ ?]

ಬಲ್ಗಾರಿಕೆ (ನಾ). = ಬಲ್ಗರ ೨: ಆಱು ಖಂಡದ ಪ್ರಜೆಗಳಿಗೆ ನಿನ್ನಯ ರೂಪ ತೋಱಿ ಕೃತಾರ್ಥರ ಮಾಡಿ ಮೂಱು ಚೋಟೆಂದಾಱು ಖಂಡವ ಕಂಡು ಬಲ್ಗಾರಿಕೆಯೊಳು ಬಹವೇಳು (ಭರತ. ೨೦-೦೩) ; ಆಱು ಖಂಡವ ತನ್ನ ವಶವಮಾಡಿಕೊಂಡೊಡನಾರಂಗಸೇನೆಯೊಲ್ಪ್ಸೆ ಮೂಱು ಲೋಕವ ದಾಂಟ ಕೀರ್ತಿಯನಟ್ಟಿ ಬಲ್ಗಾರಿಕೆಯೊಳು ಬರುತಿರ್ದ (ಭರತ. ೧೧-೩೬).

[ಬಲ್ಗಾರ + – ಇಕೆ]

ಬಲ್ಗಾಳೆಗ, ಬಲುಗಾಳೆಗ (ನಾ). ಬಲವಾದ ಕದನ : ಅಂತು ಬಲ್ಗಾಳೆಗವೆನಿಪ ಬಲ್ಗಾಳೆಗವಮು ನೀಡೂ ಕಾದುವನ್ನೆಗಂ (ಶಾಂತಿಪು. ೪-೩೩ ವ). ಬಲುಗಾಳೆಗ : ಬಲುಗಾಳೆಗವ ಭೀಮಂಗೆ ಸೇರಿಸಿ ಪಾಳಯಕೆ ತಿರುಗಿದರು ಕೃಷ್ಣಾರ್ಜುನರು ದುಗುಡದಲಿ (ಕುಮ್ಮಾರ. ೦೬-೦).

[ಬಲ್₂ (<ಬಲ್ಲಿತು₁) + ಕಾಳೆಗ]

ಬಲ್ಗಿಚ್ಚು, ಬಲುಗಿಚ್ಚು, ಬಲ್ಗಿರ್ಚು (ನಾ). ದೊಡ್ಡ ಉರಿ; ಅಧಿಕವಾದ ಬೆಂಕಿ : ಮಿಱುಪ ಮಿಂಚುಗಳ ಬಂಬಲ್ಗಳಗ್ಗಳ ಮೊಗಳಮೆರ್ದುಗ್ಗೆಯ ಪರ ನೇಸಱ ಪಲವ ಜಗಜಗಿಸುವ ಬಲ್ಗಿಚ್ಚ ಪಳಿವ ಲಿಂಗಂ ಮೂಡೆ (ಶಾಂತಿಪು. ೩-೩೬) ; ಪೆರ್ಚಿದ ಕಂಜನಿಯ ಕಡಲೊಳಗೆ ಡಾವರಿಪ ಬಡಬಾಶಿಖಿಯೆಂಬಿನಂ ಕಾಣಿಸುವ ಬ[ಲ್ಗಾಪಾ. ಳ]ಲ್ಗಿಚ್ಚಿಗವನೊಡಲ ನಿಂಬುಗೊಟ್ಟಂ (ಕೃಷ್ಣಾ. ೦೩-೩೯). ಬಲುಗಿಚ್ಚು : ಉತ್ತಮದ ತಱುಪಿನೆಮ್ಮೆಯ ಹಾಲನೊಲೆಯ ಮೇಲೆತ್ತಿ ಸೋದಿಸಿಕೊಂಡು ಬಲುಗಿಚ್ಚು ನೆಗಸದೆ ಹೊತ್ತದಂದದೊಳು . . . ಕಾಸಿ (ಸೂತಶಾ. ೨-೦) ; ಸುರಂಗಗಳೊಳಗೆ ಕರಿಯಮದ್ದನು ತುಂಬಿ ಹತ್ತಿಸೆ ಬಲುಗಿಚ್ಚು ತರಣಿಮಂಡಲವ ಮುಟ್ಟಿದುದು (ಕಂಠೀ. ೧೮-೦೩೩). ಬಲ್ಗಿರ್ಚು : ಹಿಂದಣ ಹಿತತನದಿಂದೀ ವಿರಹದೊಳೊಂದಿದ ಬಲ್ಗಿರ್ಚಿಗೆ ವೇದನೆಯಂ ತಂದೆನ್ನಂ ಭಸ್ಮೀಕರಿಸದೆ ತಾಂ ನಿರ್ನೆರವಿಹುದಲ್ಲ ಎಂದಾವೊಡುತೊಳಗಣವಾಯುವನಲ್ಲಿಂವವೆ ಪೊಱಮಡಿಸಿದ ವಾಳ್ಕೆಯೊಳರವಿಂದವಿಶಾಲವಿಲೋಚನೆಯಾ ನಿಡುಸುಯ್ಕುರವೊಪ್ಪಿದುದು (ಜಯನೃ. ೪-೪೦). [ಬಲ್₂ (<ಬಲ್ಲಿತು₁) + ಕಿಚ್ಚು]

ಬಲ್ಗಿರ್ಚು 'ಬಲ್ಗಿಚ್ಚು' ನೋ.

ಬಲ್ಗುಂಡು, ಬಲುಗುಂಡು (ನಾ). ೧. ದೊಡ್ಡ ಗುಂಡು ; ಭಾರಿಯಾದ ಕಲ್ಲು,–ಬಂಡೆ : ಎತ್ತುಗಲ್ ಪಿರಿಯ ಡೆಂಕಣಿ . . . ಬಲ್ಗುಂಡು ಪೆರ್ದೊಲೆ . . . ಇಡುಗಲ್ಲ ಮೊತ್ತವಾಪುರದೊಳಿಲ್ಲ (ಕನ್ಯಾ. ೩-೨೦). ಬಲುಗುಂಡು : ೧. ಬಲ್ಲಂಬ ಬಿಸುಟನು ಸುಗತಿದಾಣಮನಿಂಬಱಿದ್ದು ತಾನೇಱುವಂತೇಱಿದನು ಬಲುಗುಂಡ (ಶಾಕ್ಯಶಾ. ೩-೯೦). ೨. ತುಪಾಕಿಯಲ್ಲಿ ಹಾರಿಸುವ ದೊಡ್ಡದಾದ ಗುಂಡು ; ಫಿರಂಗಿಗೆ ಹಾಕುವ ದೊಡ್ಡ ಗೋಲಿ : ನಡೆಡೆಂಕಣಿ ಸೂಸುಡೆಂಕಣಿ ಬಲುಗುಂಡನಿಡುವ ಡೆಂಕಣಿ ತೋಱಿಡೆಡೆಗೆ ಸಿಡಿವ ಡೆಂಕಣಿ ರಾಯಡೆಂಕಣಿಗಳ ಸಾಲು ಬಿಡದೊಪ್ಪಿದವು ದುರ್ಗದೊಳು (ಕುಣಸಾಂ. ೧೨-೩೯).

[ಬಲ್₂ (<ಬಲ್ಲಿತು₁) + ಗುಂಡು]

ಬಲ್ಗುದುರೆ, ಬಲುಗುದುರೆ (ನಾ). ಶಕ್ತಿಯುತವಾದ ಕುದುರೆ ; ಬಲಿಷ್ಠವಾದ ಕುದುರೆ : ಬಲ್ಗುದುರೆಯೊಳ್ ಕೂಡಿ ವಂಬುಗೋಡಿಂದು ಕವಣೆಯಂ ಬಲದಿಂದಶ್ವಾಧಾರಿಯೊಪ್ಪುವಂತೆ . . . ಸುವ್ರತಂಗಳಿಂ ಭವ್ಯರುಮೊಪ್ಪುವೆರಸಿರ್ಪುದು (ಧರ್ಮಾಮೃ. ೦೩-೩). ಬಲುಗುದುರೆ : ಅಳಿದುದೈನೂಱರಸುಗಳು ಮುಮ್ಮುಳಿತವಾಯ್ತೈವತ್ತುಸಾವಿರ ಬಲುಗುದುರೆ ನುಗ್ಗಾದುದೊಂಭೈನೂಱು ಭದ್ರಗಜ (ಕುಮ್ಮಾದ್ರೋ. ೦೦-೨೦) ; ಮುಸುಕಿ ದೆಸೆಯ ಖುರಪುಟಧೂಳಿ ಬಿಡದೆ ಮಾಮಸಕ ವಾಹಕರೇಱಲಿಂದು ಬಿಸಿಲ ಕುದುರೆಯಂತುಭಯಬಲದೊಳು ಕಣ್ಗೆಸೆದವು ಬಲುಗುದುರೆಗಳು (ಕುಣಸಾಂ. ೦೨-೯೦). [ಬಲ್₂ (<ಬಲ್ಲಿತು₁) + ಕುದುರೆ]

ಬಲ್ಗುರುಜು (ನಾ). ದೊಡ್ಡದಾದ ಮಂಟಪ,—ಅಟ್ಟಳೆ : ನಿಳಯ ನಿಳಯದ ಮುಂದೆ ಬಲ್ಗುರುಜುಗಳ್ ನಡುವೆ ತೊಳಪ ಮಣಿಗುಡಿ ತೋರಣಂಗಳಿಂ ಪನ್ನೀರ ಚಳೆಯದಿಂದಗರುಧೂಪದ ಹೊಗೆಗಳಿಂ ಬೀದಿ ಬೀದಿಗಳ್ ಚೆಲ್ವಾದುವು (ಕಂಪು. ೩-೨).

[ಬಲ್₂ (<ಬಲ್ಲಿತು₁) + ಕುರುಜು]

ಬಲ್ಗುಱಿ (ನಾ). ಬಲಿಷ್ಠವಾದ ಕುರಿ ; ಕೊಬ್ಬಿದ ಮೇಷ : ದೈವಮಾ ಕುಱುಯಿದರ್ದೊಂದೆಡೆಗಿದ್ದು ಒಂದೆರಡು ಮೂಱುಂ ನಾಲ್ಕುಮಯ್ದಾಱು ಬಲ್ಗುಱಿಯ ತಿಂದೊಡೆ ಕಾಪಿನಾಳ್ಪಡಿಗುವೋ ನಾಯ್ಕಂಗುಮೋ (ಕಶಾರ. ೯೬೭). [ಬಲ್₂ (<ಬಲ್ಲಿತು₁) + ಕುಱಿ]

ಬಲ್ಲೂದಲ್ (ನಾ). ಹೇರಳವಾದ ಕೂದಲು ; ಕೇಶರಾಶಿ : ಕಿನ್ನವಿರ್ ಮುಡಿ ಕೆದರಿತಾ ರಾಕ್ಷಸಗೆ, ದೆಸೆದೆಸೆಗೆ ಜಡೆಜಡೆಯ ಬಲ್ಲೂದಲಂ ಕೊಡಹಿ (ಶ್ರೀಕಾಪು. ೬೭೭–೨೩೯).

[ಬಲ್₂(<ಬಲ್ಲಿತು₁) + ಕೂದಲ್ (< ಕೂಂದಲ್)]

**ಬಲ್ಗೂಳಿ**, ಬಲುಗೂಳಿ (ನಾ). ಬಲಿಷ್ಠವಾದ ಎತ್ತು : ಕೊಬ್ಬಿದ ವೃಷಭ : ಅದೆಯಂ ಕೋದೆತ್ತುತುಂ ಮಾರ್ದನಿಗೆ ಮುಸಗುತುಂ . . . ಪಾಯ್ದು ಪಿಂಡಂ ಕಲಕಿ ಕೆರೆಯುತುಂ ಬೆರ್ಚೆ ಬಲ್ಗೂಳಿಗಳ್ವೆಂಗುಡೆ ಗಂಡಂ ಸೂಸುತುಂ ಬಂದುದು ಮದವಿದಳಕ್ಕಿಂಗಳಾಕ್ಷಂ ಮಹೋಕ್ಷಂ (ಲೀಲಾವ. ೩-೯೬). **ಬಲುಗೂಳಿ** : ರಕ್ಕಸರೇಳಿಗೆಗೆ ಕಡುಭಂಗವೊದವಿತು ಕೀಳುತ್ತರದಾ ಹುಲುನರರು ಬಲುಗೂಳಿಯಾದವರಲಾ (ರಾಮಾಸಂ. ೪-೪-೨೬).

[ಬಲ್$_2$ (< ಬಲ್ಲಿತು$_1$) + ಗೂಳಿ$_1$]

**ಬಲ್ಗಂಡ** (ನಾ). ದೊಡ್ಡದಾದ ಕೆಂಡ ; ಪ್ರಖರವಾದ ಇಂಗಳ : ಬಲ್ಗೆಂಡಂಗಳನಾಯ್ದು ತಂದು ಪುಟವಪ್ಪಂತೂದಿ . . . ಧೂಪಮಂ ನಲ್ಗಂಪುಣ್ಮಿರಲಾಗಳರ್ಚಿಸಿದನಾ ಗಂಗಾಧರಂಗಟ್ಟಜಿಂ (ಅನ್ನಲ. ೧೩-೬೯).

[ಬಲ್$_2$ (< ಬಲ್ಲಿತು$_1$) + ಕೆಂಡ]

**ಬಲ್ಗಯ್**, ಬಲುಗಯ್, ಬಲುಗೆಯ್, ಬಲುಗೈ, ಬಲ್ಗಯ್, ಬಲ್ಗೈ (ನಾ). ೧. ಶಕ್ತಿ ; ಬಲ ; ಪರಾಕ್ರಮ : 'ಬಲ್ಗಯ್ಯ' ಪರಾ. **ಬಲುಗಯ್** : ೧. ವೀರ ವಿದ್ಯುನ್ಮಾಲಿಯೊಡನೆ ಬರ್ಪ ಕಲಿಮಹಾನಾಭ . . . ಜಂಭ ಮುಂತಾದ ಬಲುಗಯ್ಯ ರಕ್ಕಸರ್ ಕೋಂಟೆಯಂ ಪತ್ತಿರ್ದ ದಿವಿಜರಂ ಸದೆಬಡಿದರು (ಕಂಕ. ೯೪-೨) **ಬಲುಗೆಯ್**: ೨. ಬಲಿಷ್ಠವಾದ ಕೈಗಳನ್ನುಳ್ಳವನು ; ಶೂರ ; ಪರಾಕ್ರಮಿ : ಅಭಿಮನ್ಯುವರ್ಜುನನ ಕುವರನಿವ ಮಗುವಲ್ಲ ಬಲುಗೆಯ್ಯವನ ಮೋಹರದೊತ್ತಿನಲಿ ನಿಂದವರು ಸಾತ್ಯಕಿ ಚೇಕಿತಾನ ಪ್ರಮುಖ ನಾಯಕರು (ಕುವ್ಯಾಭೀ. ೨-೧೯). **ಬಲುಗೈ** : ೨. ಎಲೆ ಧನಂಜಯ ಸೀನ ಬಲುಗೈಯುಳಿದವರು ರಣಖೇಡರೇ (ಕುವ್ಯಾಕ. ೧೯-೪೦). ೩. ಶಕ್ತಿಯುತವಾದ ಹಸ್ತ : ಜಗವ ಹೂಡುವ ಹೊರೆವ ಬಲುಗೈಯುಗಧರಂಗೀ ನೃಪರ ಕುಱಿವಿಂಡುಗಳ ಕುಮ್ಮರಿಗಡಿತಕಾವುದು ಬೇಕು ಭುಜಸತ್ವ (ಕುವ್ಯಾಸ. ೦೦-೦೦). ೪. (ಆಲಂ) ಬೆಂಬಲನಾದವನು : ಸರ್ವರಿಗೆ ಬಲುಗೈ ಸಮೃದ್ಧಚತುರ್ವರ್ಗಲಾನ್ವಿತಸುರು ಕೃಪಾನಿಧಿ ಶರ್ವನನು ಭಜಿಸಿದನು ಕಾಮಿಸಿ ಯಾದವರ ಜಯವ (ಏಕಾಗ. ೦೦-೬೦-೦೬). **ಬಲ್ಗಯ್** : ೧. ಬಲ್ಗಯ್ಯ ನೃಪರಂಜಿ ತಡೆಯದೆ ರಘೂದ್ವಹನ ಸೊಲ್ಗೋಳಿ ನಮಿಸಲಿಳೆಯೊಳ್ಚರಿಸುತಧ್ವರದ ನಲ್ಗುದುರೆ ಬಂದು . . . ಪೊಕ್ಕೃತೆ (ಕೃಕುಶಾ. ೨೦-೩). **ಬಲ್ಗೈ** : ೧. 'ಬಲ್ಗೈಗಲಿ' ಪರಾ.

ಬಲುಗಯ್ಯತನ = ಶೌರ್ಯ : ಪರಾಕ್ರಮ : ಬಲುರಾವುತರ ನ್ಯೈಯೊಳಗೆ ಬಲ್ಲಹವನು ಬಲಿದನು ಸೆಲದ ರಾವುತರ ಸೆಲವನಿಕ್ಕಿದನಂತಕನ ಮೇಲೆ ರಾಮನ ಬಲುಗಯ್ಯತನವನೇನೆಂಬೆ (ಕುರಾಸಾಂ. ೦೬-೯೨).

[ಬಲ್$_2$ (< ಬಲ್ಲಿತು$_1$) + ಕೆಯ್$_2$]

**ಬಲ್ಗಯ್ತ** (ನಾ). ೧. ಬಹಳ ಕಾರ್ಯ ; ಅನೇಕ ಕೆಲಸ : ಮನಮಂ ಬೆಟ್ಟಿತು ಮಾಡಲೆಂದೆ ಬಡುವಳ್ ಬಲ್ದೊಂಟಿಯಿಂ ಬೇಂಟದೊಳ್ ಮನಮಂ ಬೇಂಟವಮಾಗಳಂತೆ ಬಳಿವಳ್ ಬಲ್ಗಯ್ತದಿಂದೊತ್ತಿಯಾಣ್ಮನೊಳಂ ಮಯ್ಯನೆ ಮಾಱುವಾಕೆ ಭವಮಂ ಪೇಟ್ಮಾಱೀ (ಲೀಲಾವ. ೨-೧೦೪). ೨. ಒಳ್ಳೆಯ ಕೆಲಸ : ಕಾಲ್ಗಾಪಿನ ಬಲ್ಲಣೆಯೊಳ್ಬಲ್ಗಯ್ತದಿ ನಿಱಿದು ಮಡಿಯೆ ನೆತ್ತರ ತೊಱೆಗಳ್ಗಲ್ಗಲನೆ ಪರಿಯೆ ಕರುಳ ಪಿಣಿಲ್ಗಳೆ ತೆಪ್ಪಂಗಳಾಗೆ ತೇಂಕಿದರರಿಬರ್ (ಕಂರಾಪು. ೦೪-೬೯).

[ಬಲ್$_2$ (< ಬಲ್ಲಿತು$_1$) + ಕೆಯ್ತ$_1$]

**ಬಲ್ಗಯ್ದು**, ಬಲುಗೈದು, ಬಲ್ಗೈದು (ನಾ). ಬಲವಾದ ಆಯುಧ ; ಬಲಿಷ್ಠವಾದ ಶಸ್ತ್ರ : ಪುಸಿಮಾತಿಗೆ ಬಾಯ್ದೆಗೆಯದ ವೈರಿಗಳಱೆತದ ಬಲ್ಗಯ್ದಿಗೆ ಸುಗಿಯದ ಯತಿಕುಲತಿಲಕನನವನೀಪತಿ ಕಂಡಂ (ಜಯಃಕಾ. ೯-೯೩). **ಬಲುಗೈದು** : ಕೈದುವೇಕೆ ಪುಳಿಂದ ಸಮ್ಮೊಡನೈದಿಸಾ ಭುಜಯುದ್ಧದಲಿ ಬಲುಗೈದುವಿದೆಲಾ ಮುಷ್ಟಿ (ಕುವ್ಯಾಅ. ೬-೨೪) ; ತೋಳ್ಬೇರ್ಕೈದು ತಲೆಗಳ ಬೈತಿರಿಸಿ ಬಲುಗೈದುಗಳ ಬಿಸುಟಡಗಿಸೀ ರಾಕ್ಷಸಕಳೇವರವ ಐದು ತಾಪಸವೇಷವನು (ಕೊರಶಾ. ೪-೮-೦೪). **ಬಲ್ಗೈದು** : ಬಲಸಲ್ವ ಕರ್ಮರಿಪುವಂ ಗೆಲ್ವೊಂದು ಬಲ್ಗೈದುವಾವುದೊ ಸದ್ದರ್ಶನದೀಕ್ಷೆ (ಅಪಂಕ. ೯-೯೧) : ಬಲ್ಗೈದುಗಳ್ವಲಚರಂಗಳಂತಿರೆ ಭಟರ ಬೊಬ್ಬೆಯುಬ್ಬರವಾಗೆ ಪಡಗುಗಳ ಪರಿಜನಾಂತಿರೆ ಪತಾಕಾನ್ವಿತ ರಥಂಗಳಾಪತೆ ನೋಡೆ ಕಡಲೆನಿಸಿತು (ಕೀಶರಾ. ೦೦-೦೨).

[ಬಲ್$_2$ (< ಬಲ್ಲಿತು$_1$) + ಕೆಯ್ದು]

**ಬಲ್ಗಯ್ಯ**, ಬಲುಗಯ್ಯ, ಬಲುಗೆಯ್ಯ, ಬಲುಗೈಯ, ಬಲ್ಗಯ್ಯ (ನಾ). ೧. ವಿಶೇಷವಾದ ತೋಳ್ಬಲವನ್ನುಳ್ಳವನು : ಮಹಾ ಪರಾಕ್ರಮಿ ; ಸಮರ್ಥ : "ಪರಾಕ್ರಮ.೦ ಪ್ರಥಿತಂ ಬಲ್ಗ[ಪಾಠಾಂ. ಲ್ಗೈ]ಯ್ಯಂ" (ಕಶಬ್ದ. ೧೦೩-೩೦) ; ಮೆಯ್ಯ ದಂಡಿಸಿವನೆ ಭಕ್ತೆಗೆಂದೊರ್ವಗ್ರ್ ಕೆಯ್ದೊಡ್ಡಿದನೆ ಚಕ್ರಧರನು ಉಯ್ಯಲ ತೂಗಿದಂತಮ್ಯತಕೆ ಸಂದ ಬಲ್ಗಯ್ಯನಲ್ಲವೆ (ಶರಕ. ೬೮-೩೯). **ಬಲುಗಯ್ಯ** : ೧. ಎಲಗೆ ನಾ ಬೇಡಲೀಯದೆ ನಿನ್ನ ನಿಮ್ಮಣ್ಣ ತಲೆಗೊಟ್ಟನಿನ್ನು ನಿನ್ನವ ಕಾವ ಬಲುಗಯ್ಯ [ಪಾಠಾಂ. ಗೈಯ] ನಾರು ಹೇಳು (ಸೂಐಸೋ. ೬-೩೬) : ಚಲದಂಕ ಕಾಟ ಕಬ್ಬಿಲ ನಾಗ ಬುಕ್ಕಣ್ಣ ಬಲುಗಯ್ಯ ತಿಮ್ಮಣ್ಣ ವರದ ಕೊಲೆಗೇಡಿ ಮಾದಿಗ ಹಂಪನೆಂದೆಂಬೀ ಬಲುತರದವರೆಯ್ದಿದರು (ಕುರಾಸಾಂ. ೧೯-೯೦). ೨. ಶ್ರೇಷ್ಠನಾದವನು ; ಜ್ಞಾನಿ : ಬಲ್ಲನೆಂಬ ಬಲುಗಯ್ಯ [ಪಾಠಾಂ. ಗೈಯ]ರ ನುಂಗಿತ್ತು ಮಾಯೆ ಅಱಿಯೆನೆಂಬ ಅಜ್ಞಾನಿಗಳ ನುಂಗಿತ್ತು ಮಾಯೆ (ಪುಹಾರೇ. ೬. ೦೬-೨೩) ; (ವಸಸಂ. ೩೯-೨೦ ನೋ). **ಬಲುಗೆಯ್ಯ** : ೧. ಮೆಯ್ಯ ದಂಡಿಸದೆ ಚಿತ್ತವನೆ ದಂಡಿಸಿ ತನ್ನೊಳೊಯ್ಯನೆ ನಿಂದು ಕರ್ಮಗಳಾ ಉಯ್ಯ ನುಗ್ಗೊತ್ತಿ ವಂತೊತ್ತಿಬಿಟ್ಟ ಬಲುಗೆಯ್ಯನೆದ್ದನು ತನ್ನ ಪುರಕೆ (ಶರಕ. ೬೨-೬೦). **ಬಲುಗೈಯ** : ೧. ಬಲುಗೈಯ[ಪಾಠಾಂ. ಗಯ್ಯ]ನೊಡನೆ ಹಗೆವಡೆದು ಕೊಲೆಗಂಜಲೇಕೆ (ಮೋಲಮೂ. ೯೦-೦೬೬) ; ಜರೆಯನಿಪುದಭಧಾನವೆನ್ನದು ವರ ಜರಾಸಂಧಕನಿವನು ಸುರನರರೊಳಗೆ ಬಲುಗೈಯ [ಪಾಠಾಂ. ಯ್ಯ] ನಹಸೆಂದಿತ್ತಳರ್ಭಕನ (ಕುವ್ಯಾಸ. ೨-೪೬). **ಬಲ್ಗಯ್ಯ** : ೧. ಬಲ್ಗಯ್ಯಂ, ಮೆಲ್ಗಯ್ಯಂ (ಶಬ್ದಾವು. ೬೬೧ ಪ್ರಯೋ). [ಬಲ್ಗಯ್ + — ಅ$_7$]

**ಬಲ್ಗಿರ್ಚು** (ನಾ). (ಮರವ) ವಿಶೇಷವಾದ ಕಿಚ್ಚು,—ಸತ್ತ್ವ ; ಹೇರಳವಾದ ಸಾರ: ಮಂದರದೊಳಂದಂಬಡೆದು ನಿಂದ ಬಲ್ಗಿರ್ಚ[ಪಾಠಾಂ. ಚ್ಚಿ]ನ ಮುಂದಿಗೆಯಂ ಮುಱಿದು ಪಿಂಗಾಲ್ಗೆ ತೊಡರ್ಚಿದಗ್ಗದಗ್ಗರಣೆಯಂ ಛಟಛಟನೆ ಕೀಳ್ತು (ರಾಜಶೇ. ೬-೧೦ ವ). [ಬಲ್$_2$ (< ಬಲ್ಲಿತು$_1$) + ಕಿರ್ಚು]

**ಬಲ್ಗೆಱೆ**, ಬಲುಗೆಱೆ (ನಾ). ದೊಡ್ಡದಾದ ಕೆರೆ : ಕಡಲುಗಳಾ ನಾಡಸಿರಿಯ ಮೊಗವ ನೋಡೆ ಬಿಡದೆಯ್ತಂದು ವೆಂಬಂತೆ ಕಡೆಗೋಡಿಗಳಿಂದ ಮೆಱೆವ ಬಲ್ಗೆಱೆಗಳಾ ಪೊಡವಿಯೊಳೆಸೆದಿರುತಿಹವು (ಕುರಾಸಾಂ. ೨-೪೯). **ಬಲುಗೆಱೆ** : ಬಲುಗೆಱೆಗಳು ಬಱತವು ಪೊಕ್ಕ ತೊಱೆಗಳು ತೊಲಗಿಸಿದವು ಜೀವನವನು ಶಿಲೆಗಳೊಟ್ಟಲು ಪುಡಿಪುಡಿವೊದವೆನಲಾ ಬಲದ ಬಹಳವನೇನೆಂಬೆ (ಕುರಾಸಾಂ. ೯೦-೬೮). [ಬಲ್$_2$ (< ಬಲ್ಲಿತು$_1$) + ಕೆಱೆ]

**ಬಲ್ಗೇಣ್** (ನಾ). ಬಲಿಷ್ಠವಾದ ಸಣ್ಣ ಕತ್ತಿ : ಬಾಣ ಸವೆಯೆ ಬಾಣಾಸನ ಮುಱಿಯೆ ಬಲ್ಗೇಣಿಂದ ಪೊಕ್ಕಿಱಿದಾಡಿ ಪ್ರಾಣವನುಳಿವ ಬಿಲ್ವಡೆ ಸಗ್ಗದೊಳು ಪೋಗಿ ಕಾಣಸಿಕೊಂಡರೆಂದೊಸೆದು (ಕುರಾಸಾಂ. ೧೨-೬೦).

[ಬಲ್$_2$ (< ಬಲ್ಲಿತು$_1$) + ಗೇಣ್]

**ಬಲ್ಗೈ** 'ಬಲ್ಗಯ್' ನೋ.

**ಬಲ್ಗೈಗಲಿ** (ನಾ). ಕರಕೌಶಲವುಳ್ಳ ವೀರ ; ಬಹಳ ಪರಾಕ್ರಮಿ : ಬಿಲ್ಗಾಱಿಕೆಯೊಳ್ ಬಲ್ಗೈಗಲಿಗಳನೆಸಗಿ. ಪಾಟಮಾಟಮುಪ್ಪಾಂತು ಕಲಿಸಲೊಡಂ . . . ಕಳೆಳಂ ಬೆಳಗಿದರ್ ಯಮಳರ್ (ರಾಮಾಕ. ೭೩೧-೦೪).

[ಬಲ್ಗೈ (< ಬಲ್ಗಯ್) + ಕಲಿ$_3$]

**ಬಲ್ಗೈದು** 'ಬಲ್ಗೆಯ್ದು' ನೋ.

**ಬಲ್ಗೊಲೆ** (ನಾ). ಭೀಕರವಾದ ಕೊಲೆ,—ಹತ್ಯೆ : ಸೂಸಿದರ್ ಕೆಂಡಮಂ . . . ಮಾಸಿದರ್ ಕಾರ್ಬೊಗೆಯ ಪರ್ಬಿನಿಂ ಬಲ್ಗೊಲೆಗೆ ಹೇಸಿದರ್ (ಕಂಠೀ. ೪೨-೬೬) ; ನೆಗೆವತ್ತು ಕಯ್ಗೆ ಬಾಳ್ ಬಲ್ಗೊಲೆಗಳ್, ಬಾಳ್ಗಳೆಡೆವೊಕ್ಕು ಸಂತೈಸದಿರೆ ಕೃಷ್ಣನ್ ಎಲ್ಲಿ ಅಶ್ವತ್ಥಾಮನ್ ? ಒರೆವು ದೊಂದಿರ್ಕುಂ (ಅಕ್ಕಾಕಾ. ೬೦-೩೫೦). [ಬಲ್$_2$ (< ಬಲ್ಲಿತು$_1$) + ಕೊಲೆ]

**ಬಲ್ಗೋಂಟೆ** (ನಾ). ಬಲವಾದ ಕೋಟೆ ; ಭದ್ರವಾದ ದುರ್ಗ : ತಂತ್ರ ಪಾಲನಂತೆ ಗುಣಪಾಲನುಂ ಬಲ್ಗೋಂಟೆಯಂತೆ ವಿಧ್ವಾತ್ಯಕ್ಕಭೇದ್ಯನುಂ ಮುತ್ತಿನ ಸತ್ತಿಗೆಯಂತೆಲ್ಲಾ ದೆಸೆಯೊಳ್ ಸೇವ್ಯನುಂ . . . ರಾಜಸೇವಕ ನಂತಡಕವಂತನುಮಪ್ಪುದು (ಧರ್ಮಾಮೃ. ೩-೯೯) ; ಆವ ಪೆರ್ಗಡಲ್ ಅಗಳು, ಆವ ಮಲೆ ಬಲ್ಗೋಂಟೆ, ಅದರ ಮುಂಬಾಯ್ದಾರಿವು ಮೊಗಗಟ್ಟು ನಿಲಲು ? (ಶಾರಸ. ೬-೦೨೬). [ಬಲ್$_2$ (< ಬಲ್ಲಿತು$_1$) + ಕೋಂಟೆ]

**ಬಲ್ಗೋಲ್**, ಬಲುಗೋಲು (ನಾ). ಶಕ್ತಿಯುತವಾದ ಬಾಣ : ಕೋಶಿ ವಡೆಯುಮಾಳ್ಪಲಮುಂ . . . ಬಿಬೀಚಣಾ ಮುಂತಪ್ಪ ಬೀರರ ಕೂಟವಮುಂ, ಬಲ್ಗೋಲ ರಭಸಮುಂ ತಡೆಯಲಾಱದೆ . . . ಮುನ್ನಂ ಪೊಱಮಟ್ಟ ತಂತಮ್ಮೆಡೆಯಂ ಸಾರ್ದುದು (ಅದ್ಭುಕ. ೪೬-೦೫). **ಬಲುಗೋಲು** : ಬೀಳಲವನೀಪತಿಗಳತಿಹೀಹಾಳಿಯಲಿ ಸಾತ್ಯಕಿ ಮುಳಿದು ಬಲುಗೋಲಿನಲಿ ಗಂಗಾಕುಮಾರನ ಸಾರಥಿಯನೆಸಲು (ಕುವ್ಯಾ.೮. ೬-೬). [ಬಲ್$_2$ (< ಬಲ್ಲಿತು$_1$) + ಕೋಲ್$_1$]

**ಬಲ್ಸರ** 'ಬಲ್ಸರ' ನೋ.

**ಬಲ್ಟಗರ್** (ನಾ). ಬಲಿಷ್ಠವಾದ ಟಗರು ; ಕೊಬ್ಬಿದ ಟಗರು : ಆತನ ಕಿಲದೊಳ್ ಚಂಡವ್ರಾತಂ ಸಿಡಿಲೇಳ್ಗೆಯೇಳ್ವ ಬಲ್ಟಗ[ಕಾಶಿಂ. ಬಲುದಗ] ರೇಱುರ್ದಾತಂ ಸಕಳಜಗದ್ವಿಖ್ಯಾತಂ ಹುತವಹನೆನಿಪ್ಪನು (ಗಂಳ. ೬-೩೦). [ಬಲ್$_2$ (< ಬಲ್ಲಿತು$_1$) + ತಗರ್$_2$]

**ಬಲ್ದಡಿಗ**, ಬಲುದಡಿಗ (ನಾ). ೧. ಅತಿಬಲಿಷ್ಠನಾದವನು; ಮಹಾಬಲ ಶಾಲಿ; ಪತ್ತೊಂಬುಸಾಸಿರಮಾನೆಯುಂ ಪಡಲ್ವಡಿಸಿಯುಂ ಸೈರಿಸಲಾಱದೆ . . . ಬಲ್ದಡಿಗಂ ಬೀಸಿಯುಮೊಂದುಕೋಟಿವರೆಗಂ ಕೊಂದಂ ಮದೇಭಗಳಂ (ಶಂಕರಾ. - ೦೦-೦೮೯). ೨. ಬಹಳಗಾತ್ರವಾದ ಶರೀರವುಳ್ಳವನು : ನಿಡಿಯರ್ ಬಲ್ಪಾಯದ ಬಲ್ದಡಿಗರ್ ವಂದಿರ್ದರಯ್ಯರಾಲದ ಕೆಟಗಿಂ ತೊಡರ್ದರ್ ನಮ್ಮಾಯ ಭಕ್ಷದೊಳಡು ವಣ್ಣಡು ಪೋಗು ನೀನುಮಾನುಂ ತಿಂಬಂ (ಶಂಕರಾ. ೩-೦೨) ; ತಡೆಯನೆ ಮೇಲೆತ್ತಲ್ ಬಲ್ದಡಿಗರ್ ಬಲದಿಂದೆ ಕೆಡೆಯ ನೂಂಕಲುಮೆಂತುಂ ಗಡ ಬಾರದೆನಿಪ ಬೆಟ್ಟಂಗಡಹಡಿಸದೆ ನೋಡಿ (ಧರ್ಮಾಮೃ. ೦೯-೨೪). (ಗು). ೩. ಅತಿಬಲಿಷ್ಠವಾದ ; ಅತ್ಯಂತ ಬಲ ವುಳ್ಳ : ಮನಂಗೆಡಿವ ಪುಲಿಯಿಂ ರೌದ್ರಾಕಾರಂಗಳಿಂ ಬಿಡೆ ಪಾಯ್ವ ಬಲ್ದಡಿಗ ಮರುಳಿಂ . . . ಇವು ಮೊದಲಾದನೇಕೋಪಸರ್ಗಂಗಳು ಮಾಡಿಯುಂ (ಧರ್ಮಾಮೃ. ೨-೨೨೯). ೪. ತುಂಬಿದಪ್ಪವಾದ : ಪೆರ್ವರದ ದಿಮ್ಮಿಗಳ್, ಬಲ್ದಡಿಗ ವೇಣುಗಳ್ . . . ನುಣ್ಣಳಲ್ವೆಟ್ಟುಗಳ್ ಮೆರೆದಿರ್ದು ವಲ್ಲಲ್ಲಿ (ಶ್ರೀರಾಮಪು. ೪೩೩-೨೬೪). **ಬಲುದಡಿಗ** : ೨. ತರೆಯಂ ಬಲುದಡಿ ಗರ್ಗಟಿ$^3$ ನಿಲಲಾಱದೆ ಸುಂಟಿದಿಂದ ಕೋಡಗದಂತುಮ್ಮಳಿಸಿ ಕಳವಳಿಸಿ . . . ಕರವೆ ಮಱುಗಿ ತಳವೆಳಗಾದಂ (ಧರ್ಮಾಮೃ. ೦-೧೪೦). [ಬಲ್$_2$ (< ಬಲ್ಲಿತು$_1$) + ದಡಿಗ]

**ಬಲ್ದನಿ** (ನಾ). ಜೋರಾದ ಸ್ವರ ; ಗಟ್ಟಿಯಾದ ಧ್ವನಿ : ಪಾಮರಿ ಚರಿಸುತಾ ವನಕೆ ಸಾಲ್ದೆಸೆಯನೊಸೆದು ಬಂದೆಱಪ ಗಿಳಿವಳಗಂ ಕಯ್ಯೆತ್ತಿ ರಯ್ಯಮಾಗಿ ಬಲ್ದನಿವೆರಸು ಸೋವೆ (ಶಬ್ದಾ. ೬-೦೬) ; ಬಲ್ದನಿಯ ಚಪ್ಪಳಿ ಗಳುಣ್ಮುವೋಲಪ್ಪಳಿಸಿ ತೋಳ್ಗಳಂ (ಶ್ರೀರಾಮಪು. ೩೯೨-೨೨೭). [ಬಲ್$_2$ (< ಬಲ್ಲಿತು$_1$) + ದನಿ$_1$]

**ಬಲ್ದಲೆ** (ನಾ). ದೊಡ್ಡ ತಲೆ ; ದಪ್ಪ ತಲೆ : ಸತ್ತಿಗೆ ಗಗ್ಗರಂ ಕರುಳ ಬಕ್ಕಳೆ . . . ನೆತ್ತರ ತಳ್ತ ಬಲ್ದಲೆಯ ಬಂದಿಗೆ ಪಾವುಗೆ ಪಂಚಪುಷ್ಪನಂ ಬೆತ್ತದ ಕೋಲಿವೊಂದಿ ನಿಲೆ ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಸಾ. ೩೩೩). 'ಬಲ್ದಲೆಯ' ಪರಾ. [ಬಲ್$_2$ (< ಬಲ್ಲಿತು) + ತಲೆ$_1$]

**ಬಲ್ದಲೆಯ** (ನಾ). ೧. ದೊಡ್ಡ ತಲೆಯನ್ನುಳ್ಳವನು : ಬಲ್ದಲೆಯುಂ ತೋಳ್ನೀಳ್ದನಗಲ್ದುರದಂ ಬಟ್ಟದೊಡೆಯುಮಂ ಕೆಂಗಣ್ಣಂ ನೇಲ್ದ ಕಿವಿಯಾತ ನೆನಿಸುವನೊಲ್ದೊಲಿಸುಗುಮೆಸೆವ ಬೀರಸಿರಿಯಾ ಧುರದೊಳ್ (ಕಾವ್ಯಾವ. ೨೩೩) ; ಅತ್ತೆಕ್ಕೆ—ಅಲರ್ಗಣ್ಣಂ ... ಬಲ್ದಲೆಯಂ, ಅಗಲ್ದುರದಂ (ಕವಿಚ. ೦೪೬ ಕೃಹೂ). ೨. ಸಮರ್ಥನಾದವನು; ಬಲಿಷ್ಠನಾದವನು; ಪರಾಕ್ರಮಿ : ಗೆಲ್ವಾರೆ ಜನಕಸೇನೆ ಸಡಿಲ್ದಗಿಯೆ ಕಿರಾತಸೇನೆ ದಶರಥ ರಾಮನುಂ ಬಿಲ್ಗೆದಿಸೆ ಮಾರ್ಪಡೆಯೊಳ್ ಬಲ್ದಲೆಯರುಂ ಶಬರನಾಯಕರ್ ಪಡಲಿಟ್ಟರ್ (ಶಂಗಾಪು. ೪-೬೪). [ಬಲ್ದಲೆ + — ಅ$_7$]

**ಬಲ್ದಸಿ**, ಬಲುದಸಿ (ನಾ). ಮರ ಅಥವಾ ಲೋಹದ ಚೂಪಾದ ದೊಡ್ಡ ಗೂಟ,— ಶೂಲ : ಬಡುವುರಿಯೊಳ್ಗೆ ಸೂಸುವ ಕನಲ್ಗಿಡಿ. . . ಕಡೆಸಿರಗೆಯ್ದು ನೂಂಕುದಳಿಯಿಕ್ಕುವ ಬಲ್ದಸಿ ಭೀತಿಯಂ ಮಸಕ್ಕೊಡರಿಸೆ (ಶಂಶ್ರ.ಕೃ. ೩-೦೫೩) ; ಹುರಿವ ಮಳಲಿನ ಕಾಸುವಂಬಲಿಯ . . . ಮರುಳ ಕೈಗಳ ನೆಟ್ಟ ಬಲ್ದಸಿಗಳ ಪರಿಪರಿಯ ಗುಂಡುಗೋವಿಯು. . . ಪಂದಿವಲೆಯ ಮೊತ್ತಂಗಳಾಳ್ವೇರಿಯೊ$^\times$ ಪಸರಿಸಿದುವು (ಚಂಶಿ. ೪೨-೧೧). **ಬಲುದಸಿ** : ಎಸೆವ ಕೋಂಟೆಯ ತನೆಗಳಲಿ ಕಟ್ಟಿಸಿ ಪತಾಕೆಗಳಂ ಬಸಿದ ಬಲುದಸಿಗಳಂ ಮಲಗಿಸಿ ಮಾರಂಗಳನಿರಿಸಿ ಎಡೆಗೆಡೆಗೆ . . . ಪೊಸದುರ್ಗಮಂ ಪಾಟಿಸಿ ಪಿರಿಯ ನತಟಾವಿಗಳನಗುಳಿಸಿದನವಜ$^0$ೊಳಗೆ (ಬಸವು. ೧೬-೧೦) ; ಜಲೆ ಕಾಲ್ಬಣ್ಣೆ ಗುನ್ನಲುಗೂಡಿಡಿಸಲು ಬಲುದಸಿಯುರುಳಿಯಿಂದ ನೆಲಗಪ್ಪಗಳಿಂದ ಮೃಗಗಳ ಹರಣವ ತೊಲಗಿಸುವರು ಬೇಡರಲ್ಲಿ (ರಾಘಾ.ಶಿ. ೦೩-೬೪). [ಬಲ್$_2$ (< ಬಲ್ಲಿತು$_1$) + ದಸಿ]

**ಬಲ್ದೆರೆ**, ಬಲುತೆರೆ (ನಾ). ದೊಡ್ಡದಾದ ಅಲೆ,–ತರಂಗ : ಕುದುರೆಯ ತಟ್ಟುಗಳ್ ನೆರೆದ ಬಲ್ದೆರೆಯಂ ಪಿಡಿದಿರ್ದ ಬಾಳ್ಗಳುಣ್ಮಿದ ನಿಡು ಪಾಳೆಯುಂ ... ಪೊಸತೇರ್ ಪಡಗಂ ನೆಗೞ್ಚೆ ಪೆರ್ಚಿದ ಕಡಲಂಬಿನಂ ಮಸಗಿ ಬಂದುದು ಪೆರ್ಬಡೆ ಕರ್ಬುವಿಲ್ಲನಾ (ಕಬ್ಬಿಗಾ. ೨೦೬) ; ತುಂಬಿದ ಸಂಗೀತ ರಸದ ಬಲ್ದೆರೆಯೊಂದು ತುಂಬನುಚ್ಚಿದರೋ ಎಂಬಂತೆ ತುಂಬುರುವೀಣೆ ಯೊಳೊಲ್ದು ಪಾಡಿದರಂದು ತುಂಬುಜವ್ವನೆಯರು (ಶರಕ. ೩-೬೨) ; ವಾರ್ಧಿಗಳ ಬಲ್ದೆರೆಗಳೊಂದೊಂದನಣವಂತೆ ದುರ್ಧರದ ರಾವ್ತರಿಱ ದಾಡಿದರ್ (ಚಂಶಿ. ೨೪-೯). **ಬಲುತೆರೆ** : ಜಲವಾಸಕ್ಕೆದುವ ಕುದುರೆಯ ಸಾಲುಗಳ್ ಬಲುತೆರೆ ಬೆಳುಗೊಡೆ ನೊರೆಯು ಕೊಳಿಪ ಚಾಮರ ಶಫರ ಗಳಾಗಲಾ ಪುರ ಜಲರಾಶಿಯಂತೆ ರಾಜಿಸಿತು (ಕಂಸಪ. ೬-೩೩). [ಬಲ್$_2$ (< ಬಲ್ಲಿತು$_1$) + ತೆರೆ$_4$]

**ಬಲ್ದೊಱೆ**$^1$ (ನಾ). ವಿಶಾಲವಾದ ತೊರೆ : ನಿತ್ತರಿಸದೆ ಬಲ್ದೊಱೆ$^1$ ಯೊಳ್ ಮತ್ತನಿಸದೆ ಬರ್ದೊಡಣ್ಣ ಸಹವಾಸಿಯ ಬಂದೆತ್ತುವುದುಳದವ ರಜಸಿಯುಮೆತ್ತಲ್ ಕೇಳಾಗದೆಂಬ ನಿಯಮಮುಮುಂಟೇ (ಧರ್ಮಾಮೃ. ೦-೧೨೩) ; ಉತ್ತುಂಗಶಿಲೆಗಳಿಂ ಭರದಿಂ ಬಿಳ್ದು ಪರಿವ ಬಲ್ದೊಱೆ$^1$ಯುತಿ ಬಂಧುರವಡೆಯಿತ್ತು (ಜಯಾಕಾ. ೯-೦೦). [ಬಲ್$_2$ (< ಬಲ್ಲಿತು$_1$) + ತೊಱೆ$_2$]

**ಬಲ್ನಗೆ** (ನಾ). ಅತಿಯಾದ ನಗು; ದೊಡ್ಡನಗೆ : ಆ ಸಮಯದೆ ದೇವಿಯುಪಗೆ ಮೋಹದ ರತಿಯಾಸೆಯ ಪುಟ್ಟಸಲಾಗ ಸೂಸುತ ರೂವ ಜಯಂತ ಬಲ್ನಗೆಯ ವಿಲಾಸದೆ ಸುರಿರೊಳಿಂತೆಂದ (ಕಂಸಪ. ೦೦-೯). [ಬಲ್$_2$ (< ಬಲ್ಲಿತು$_1$) + ನಗೆ]

**ಬಲ್ನನೆ** (ನಾ). ದಪ್ಪವಾಗಿರುವ ಮೊಗ್ಗು : ನನೆಯುಂ ಮುಂಡಾಡುತ

ಬಲ್ನನೆಯಿಂ ಬಲವಂದು ಮುಗುಳನಾಲಿಂಗಿಸಿ ಕಂಪಿನ ಬಿರಿಮುಗುಳಂ ಚುಂಬಿಸಿಯುನುನಯದಿಂದಲರನಲೆದು ತೀವಿದುವಳಿಗಳ್ (ಗಂಳ. ೨-೬೬); ಮಿಳಿರ್ದಾಡುವ ನುಣ್ದಳಿರಲ್ಲಿಯುಲ್ಲಿ ಬಲ್ನನೆಗಳವೆಲ್ಲಿಯಲ್ಲಿ ... ಪಣ್ಗೊನೆಗಳವೆಲ್ಲಿಯಲ್ಲಿಯೆನೆ ಸೋಲಿಸುಗುಂ ಬಿಡದಾವನಂ ಬನಂ (ಕಬ್ಬಿಕಾ. ೬೨).

[ ಬಲ್$_2$ (<ಬಲ್ಲಿತು$_1$) + ನನೆ$_3$ ]

**ಬಲ್ನಿಡಿದು** (ನಾ). ಬಹಳ ದೊಡ್ಡದಾದುದು; ಅತಿ ವಿಶಾಲವಾದುದು. ಬಲ್ನಿಡಿಯುವು (ಬಹುವ) : = ವೈಡೂರ್ಯಮಯಮುಂ ಕಾಂಚನಮಯಮುಂ ಸ್ವರ್ಣರತ್ನಮಯಮುಮಾಗಿ ಯಥಾಕ್ರಮದಿನೆಂಟುಂ ನಾಲ್ಕುಂ ನಾಲ್ಕುಂ ಬಲ್ನಿಡಿಯುವಪ್ಪ ಮೂಱುಂ ಪೀಠಂಗಳ ಮೇಗೆ ... ಸೆರೆದು (ಆದಿಪು. ೬.೦೨೦ ವ). [ಬಲ್$_2$ (<ಬಲ್ಲಿತು$_1$) + ನಿಡಿದು$_1$]

**ಬಲ್ನಿಱಿ** (ನಾ). ಹೆಚ್ಚಿನ ಸೆರಿಗೆ ; ತುಂಬ ನಿಱಿ : ಎಲೆ ಸುಕುಮಾರ . . . ಗೆಜ್ಜೆ ಮೆಲ್ಲುಲಿಗುಡೆ ಬಂದು ಬಲ್ನಿಱಿಯುನಪ್ಪದೆ ತಳ್ವಿದೆಯ್ಯ ತನೂಭವಾ (ರಾಜಶೇ. ೦೩-೦೦೨) ; ತಮಾಲದೊಳ್ದಳಿರುಡೆ ತಳ್ತ ಪೀಲಿಯ ತರಂಗದ ಬಲ್ನಿಱಿಗಟ್ಟು ... ಪಸಿರ್ವವತ್ತ ಪಟ್ಟಳಿಯ ನಿಚೋಳಮೊಪ್ಪಿರೆ ಪುಳಿಂದಿಯಾರಾದರಮರ್ತ್ಯಕಾಂತೆಯರ್ (ಕಬಕಂ. ೩-೯).

[ ಬಲ್$_2$ (<ಬಲ್ಲಿತು$_1$) + ನಿಱಿ$_2$ ]

**ಬಲ್ನುಡಿ** (ನಾ). ಬಿರುಸಾದ ನುಡಿ; ಒರಟಾದ ಮಾತು : ಬಡಿಹೋರಿ ಬಲ್ಪುಂಟನೆಂಬ ಬಡನುಡಿ ಬಲ್ನುಡಿ ಬಡಧೈರ್ಯವಲ್ಲದೆ ಬಡಶಬ್ದ ನಿನ್ನ ಪೊಂದುವದೆ (ಕಹಾಂ. ೬೨-೬೪); ಕೊಡೆದಳೆಯುಂ ಮಾನವನುಂ ಬಿಡಿಮಂ ಮಳೆ ಬಿಸಿಲ ದೆಸೆಗೆಯುದೞಿಂತೀಗಳ್ ಬಡದೊರೆಗಳ್ ಚಂಡನ ಬಲ್ನುಡಿಗೊಳಗಾಗಿಂತು ಕಟ್ಟುತನಮುಂ ನೆಗಳ್ದರ್ (ಹರಿಶ್ಚ. ೩-೨೨).

[ ಬಲ್$_2$ (<ಬಲ್ಲಿತು$_1$) + ನುಡಿ$_2$ ]

**ಬಲ್ನೆಣ** (ನಾ). ಹೆಚ್ಚಾದ ಕೊಬ್ಬು; ಅತಿಯಾದ ಮೇದಸ್ಸು : ಕಾದ ಪಂದಿಗಳ ಬಲ್ನೆಣದಿಂ ಪೊಲಸಟ್ಟ ನಾರ್ವ ಹೇವಡೆಗಳ ಪುಣ್ಗಳಿಂ ಕೊರೆವ ಸೆತ್ತರ ಕೆಯ್ ನಡುಗಲ್ಕೆ ನೀಡಿ ಕೀಟಾಚ್ಚಯುಡೆ ಗಂಟಲಂ ಮುಚಿದ ಸೊರ್ಮೆಯು ನಿರ್ಘೃಣನೆನ್ನ ತಂದೆಯುಂ (ಕಾಕಂಪು. ೦೯೪).

[ ಬಲ್$_2$ (<ಬಲ್ಲಿತು$_1$) + ನೆಣ ]

**ಬಲ್ನೆಲೆ** (ನಾ). ಬಲವಾದ ನೆಲೆ ; ಸ್ಥಿರವಾದ ಆಶ್ರಯ : ನಿತ್ಯಯೋಗ ನಿಷ್ಕಂಪಮುವಂಗೆ ಶಾಂತಮನುತಾಪಮನಾಱಿಸಿ ತಂ[ದಾದಂ]ದು ಬರ್ದೊರೆ ಪರಿದಿರ್ದಪೋಲ್ ಮುನಿಗೆ ಕಲ್ನೆಲೆ ಬಲ್ನೆಲೆಯುಂ ನಿದಾಘದೊಳ್ (ಶಾಂತಿಪು. ೯-೦೦೯). [ ಬಲ್$_2$ (<ಬಲ್ಲಿತು$_1$)+ನೆಲೆ$_1$ ]

**ಬಲ್ಪಂಥ** (ನಾ). ಅತಿಶಯವಾದ ಹಟ ; ಬಹಳವಾದ ಛಲ : ಸ್ವಲ್ಪ ದಿನವುಳಿಯುತು ಒಂದು ಸಾಧನ ಕಾಣೆ ಕಲ್ಪಾಯು ನಿನಗಿಲ್ಲವಲ್ಲೊ ಬಲ್ಪಂಥಗಳ ಮಾಡಿ ಫಿಂಗಪಡದಿರು (ತಿರುಳ್ಗ. ೪೬-೯).

[ ಬಲ್$_2$ (<ಬಲ್ಲಿತು$_1$) +ಪಂಥ$_1$ (<ಪಂತ$_1$) ]

**ಬಲ್ಪಳಿ, ಬಲುಪಳಿ** (ಕ್ರಿ). ಬಲಗುಂದು ; ಶಕ್ತಿಹೀನವಾಗು : ಬಿಕ್ಕುತುಂ ಬೀಗುತುಂ ಬಲ್ಪಳಿದು ಬಾಡುತುಂ ತಕ್ಕಳಿದು ತಡವಾಗಿ ಹೊರೆಯೇಱಿ ನೋಡುತುಂ (ಕಂಬರ. ೬-೨೨೯) ; ದೆಸೆದೆಸೆಗೆ ಕರೆಕರೆದು ಬಾಯಾಱಿ ಬಲ್ಪಳಿದು ನಿಂದಿರ ಲಾಱದೆ ಕಾಲ್ ಕುಪ್ಪಳಿಸಿ ಭೋಂಕನೆ ಕುಳ್ಳಿರ್ದ (ಗಂಳ. ೯-೬೬೮); ನೋಡಿ ಮರೀಚಿಕಾಜಲಮನಂಬುಮಿದೆಂದೆಳಸುತ್ತ ಬಂದು ಕೈನೀಡಿ ಕಲಂಕಿ ಪೊಕ್ಕು ತಗೆದಿಕ್ಕುತ ಪುಷ್ಕರಮಂ ನಿಜಾಸ್ಯದೊಳ್ ಬಾಡಿ ಬಳಲ್ದು ಬಲ್ಪಳಿದು . . . ಬೀಳ್ದುದರ್ಕಕರಕಲ್ಪಿತಸಂಜ್ವರನೊಂದು ಕುಂಜರಂ (ರಾಜಶೇ. ೫-೩೯). ಬಲುಹಳಿ : ಮಂಗಳ ಮಂಗಳ . . . ಕುಲಮಳಿದು ಛಲಮಳಿದು ಬಲುಹಳಿದು ನಿಲಲು ಸೂತ್ರದ ಜಂತ್ರದಪಳಿಯೊಲು ಫಲಸಿದ್ಧಿ ಎನಿಸಿ ನಿಷ್ಫಲಸಿದ್ಧಿಯನೆ ಬಿಟ್ಟು ಭಕ್ತ್ಯಂಗನೆಯ ಮರ್ತ್ಯಕ್ಕೆ ತಂದಿತ್ತವಂಗೆ (ಅಪಕಂ. ೨೬೯-೦೩೦೦) ; ಎನ್ನನ್ನೇಕೆ ಕಾಡುವಿರಿ ಎಲೆ ತಂದೆಗಳಿರಾ ಬಲುಹಳಿದು ಭವಗೆಟ್ಟು ಛಲವಳಿದು ಭಕ್ತಿಯಾಗಿ ಚೆನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದವಳ (ಜುಹಾರೇ ಬ. ೦೩೦-೨೯೪).

[ ಬಲ್ಪು+ಅಳಿ$_1$ (<ಅೞ್$_1$) ]

**ಬಲ್ಪಾವು** (ನಾ). ದೊಡ್ಡಹಾವು : ಅವನಮರಪದವಿಯುಂತ್ಯದೊಳವನಿಗೆ ಬಲ್ಪಾವದಾಗಿ ಬೀಳ್ವನಂ (ಜಾಲಾಸ್ತ್ರ. ೦-೨-೫೯).

[ ಬಲ್$_2$ (< ಬಲ್ಲಿತು$_1$) + ಪಾವು$_1$ ]

**ಬಲ್ಪಿಡಿ$_1$** 'ಬಲ್ವಿಡಿ$_1$' ನೋ.

**ಬಲ್ಪಿಡಿ$_2$** 'ಬಲ್ವಿಡಿ$_2$' ನೋ.

**ಬಲ್ಪಿಲಿ** (ನಾ). ಬಲಪಿಲ್ಲದುದು ; ನಿರ್ಬಲವಾದುದು : ಒಡಲಿದು ಬಲ್ಪಿಲಿಯುಕಲ್ಕು (ಕೌಶಂಡ. ೯-೦೦). [ಬಲ್ಪು + –ಇಲಿ$_3$]

**ಬಲ್ಪು, ಬಲುಪು, ಬಲುಹು** (ನಾ). ೧. ಬಲ; ಶಕ್ತಿ; ಸಾಮರ್ಥ್ಯ; ಪರಾಕ್ರಮ : "ಪ್ರಾಣಃ ... ತರಃ ಸಹಃ__ಈ ೮ ಬಲ್ಪು (ಬಲುಹು)" (ಹಲಾಯು. ೦೨೦-೩೬) ; ಬಲ್ಪುಂ ಕೂರ್ಪುಮಾರ್ಪುಂ ನಿರಂತರಮೊಪ್ಪಲ್ (ಎ೩. XIII. ೩೨೫-೩; ೨೭೨) ; ಮಾಣಿಕಂ ಸೂಸೆ ಬಲ್ಪಿಂದೊದೆದಂ ಸಾರ್ತಂದು ದುರ್ಯೋಧನನ ಮಕುಟಮಂ ಕೋಪದಿಂ ಭೀಮಸೇನಂ (ಕಂಕಥಾ. ೦೩-೯೮); ಕೆಡೆದಿರ್ದ ಶಬರಂ ಕಕ್ಕಡಪಂದಿಯುನೀಕ್ಷಿಸುತ್ತೆ ಶಬರಸಮೂಹಂ ಬಿಡೆ ಕೊಂಡುಕೊನೆದು ಬಲ್ಪಂ ನುಡಿಯುತ್ತಿರ್ಪನ್ನಂ (ಗಂಳ. ೦-೦೦೦). ೨. ಬೆಳೆಯುವಿಕೆ; ಬಲಿಯುವಿಕೆ : ಎಳವಾಳೆ ಬಲ್ಪಿಗೆ ಬಂದರೆ ಸೀಗೆಯು ಮೆಳೆಯೊಳು ಮಥನವೆ (ಮೋಹತ. ೩೯-೨೪). ೩. ದೃಢತೆ; ಸ್ಥಿರತೆ : ಪಿಡಿದೀ ವ್ರತಮಂ ನಾಂ ಸಾವೊಡೆ ಸಾವೆಂ ಬಿಡುವೆವಲ್ಲವೆಂದೊಡೆ ಮೂರ್ಖಿಂ ಮಡಿಪದೆ ಮಾಣಾ ಬಲ್ಪಿಂ ಪಿಡಿವೆಂ ಜನಪದಮನಿದುವೆ ಕಷ್ಟಂ ಪೆಱತೇಂ (ಧರ್ಮಾಮೃ. ೩-೦೦೦): ಪಿಂಗಿದ ನೀಜರ ಬಲ್ಪು ಪಾಱ ಪಾದರಿಗರ ನಾಣ್ಗಳಂಕರ್ಗಿಡೆ . . . ಜೇವೊಡೆಯ ಬಲ್ಲುಲಿ ನೀಳ್ದುದು ಕರ್ಪುವಿಲ್ಲನಾ (ಕಬ್ಬಿಗಾ. ೩೦೦) ; ವಿರಚಿಸಿದಂ . . . ಲಕ್ಷ್ಮೀಶನೆಂಬೊರ್ವನು ಹೃದ್ವನದೊಳ್ದೇವಪುರದ ಲಕ್ಷ್ಮೀಶನ ಪದದ್ವಯುವನಾವಗಂ ಧ್ಯಾನಿಸುವರಡಿಗಳು ಸದ್ವಿನಯದಿಂ ಭಜಿಪ ಬಲ್ಪಿಂದೆ ವಿಮಲ ಜೈಮಿನಿಭಾರತದ ಕಥೆಯನು (ಜೈಮಿಭಾ. ೦-೦೦). ೪. ಗಾಢತೆ; ಬಿಗುಹು; ಬಿಗಿ: ಕಲ್ಪಲತೆಗಳೆಡಬಲದಲ್ಲಿ ಹಬ್ಬಿದ ಕಲ್ಪವೃಕ್ಷವೊಯೆಂಬ ಸೊಬಗ ಕಲ್ಪಿಸುತ್ತಿದ್ದನಾ ರಾಯನಾವೆಣ್ಗಳ ಬಲ್ಪಿನೊಳಮರ್ದಪ್ಪಿದಾಗ (ಅಶಿ. ೬-೩೩). ೫. ಬಲಾತ್ಕಾರ; ಬಲವಂತ ; ಒತ್ತಾಯಂ : ಸಮಸುಖದುಃಖಮಂ ತಳೆವ ರೋಹಿಣಿ . . . ಎನ್ನಯ ಮೋಹದೆ ಮರ್ತ್ಯರೂಪದಿಂದಮೆ ಬಱಿಸಂದಳೊಲ್ದು ಮಗುಳ್ದುಂಬರೆ ಪಿಂತೆಯೆ ಮತ್ತೆ ಬಲ್ಪಿನಿಂಗಮೆ ನಿಲಿಸಿಟ್ಟನೆಯ್ದೆ ನಿಜಲೋಕದೊಳಾಕೆಯನಲ್ಲಿ ಕಂಡಪ್ಪೆ (ಕಾಕಂಪು. ೬೦೪) ; ಕೆಲಬರ್ ಸಿಂಗಮನೊತ್ತಿ ಪಲ್ಲಣಿಸಿ ಬಲ್ಪಿಂದೇಱುತುಂ ಬೇಗದಿಂ . . . ನಡಮರತ್ತಂ ಬೀರರಾ ಪಾಡಿಯೊಳ್ (ಕಬ್ಬಿಗಾ. ೨೫೩) ; ಕಂತೆ ಕಟ್ಟಿಗೆ ಕಪ್ಪರಂಗಳನಿಭಾಸುರನ ವಿಷ್ಣುವಿಧಿಗಳ ಸದೆದು ಬಲ್ಪಿನಿಂ ಸೆಳೆದುಕೊಂಡ್ಯ (ಭಾಶಶಂ. ೯-೦). ಬಲುಪು : ೧. ಬಲುಪಿನೊಳಂ ತೇಜದೊಳಂ . . . ರೂಪಿನೊಳಂ ಸಲ್ಲಲಿತವಪ್ಪಱಿತದೊಳಂ ಗೆಲುವವನ್ನಗ್ಗಣಿ ರೇವಗಾಂಡಂಗೆಳೆಯೊಲ್ (ಶಾಶಾ. IX-i. ೨೪೯-೫೭; 1147); ಕಲಿತನದ ಬಲುಪಿನಾಟ್ಪಿರ್ಂ ಕೂಪ್ಪಿರ್ಂ ಧರೆಗಸೆವ ಪಂಚಲಿಂಗನ ಚರಣಾಬ್ಜಪರಪ್ರಸಾದ ತೋಟಿಗುತ್ತರ್ವರ್ಷಂಪ್ರತಿ ಕಂಡಗೆಯುಂ . . . ರಂಗಭೋಗಕ್ಕೆಂದುಂ (ಕ೩. I. ೩೦-೩೫; 1222); ಮೆಲುಪು ಬಲುಪಿನ ಶಕುತಿಗಳುಡುಗಲಿ ನೆನಪು ಮರಳದೆ ತೊಡೆದು ಹೋಗಲಿ (ಏಕೀಗೀ. ೦೦೪-೯). ೫. ಪೆಡಗುಡಿಯು ಕಟ್ಟುಪುಭಯಾವ ನಡೆಯಲಿ ಹಱುಗೋಲಿನಲ್ಕೆಯುಂಬಿಗನಾಗಂ ಪಿಡಿದು ಕೋಡಗನ ದ್ವಿಜನಂ ಕಡುಬಲುಪಿಂ ಪಿಂತೆ ತೆಗೆದು ಕಟ್ಟಿದ ಕರಮುಂ (ವಜ್ರಕಾ. ೨-೦೪೪). ಬಲುಹು : ೧. "ಪ್ರಾಣಃ, ಸ್ಥಾಮನ್, ಬಲಂ . . . ಸಹಃ_ಈ ೮ ಬಲ್ಪು (ಬಲುಹು")

(ಹರಿಹು. ೧೨೦-೬೮); ಜನನಮರಣಕ್ಕೊಳಗಾಗದನ ಬಲುಹನೇನ ಬಣ್ಣಿಪೆನಪ್ಪ (ಹರಿಹಾ ದೇ. ಶಿ. ೧೦-೬): ಕುಬೇರನ ಗರ್ವಭೂರುಹವ ಬೇರುಳಿಯದೆ ಕಿತ್ತು ಬಿಸಾಡುವೆನೀಶನ ಭಾರಿಯ ಬಲುಹ ಮುಚ್ಚಿವೆನು (ಕೃಷ್ಣಾ. ೧೦-೧೨೬); ಎಲೆ ಕುಮಾರಕ ಹರಕುಮಾರಾಗಳೆಯಲಿ ನಿಲಲರಿದು ಕೊರಳಿನ ಬಲುಹನಜ್ಜಿಯದೆ ಗಿರಿಯ ಹೊಜಲುಂಪ್ಪಿಸುವರೆ ಭಟರು (ಕುಮಾರವ್ಯಾ. ೪-೩೪). ೩. ಬೇಂಟೆಗೆಯ್ವುದ ಭೂಪಾಲಕನನೆಳೆತಟಂ ಮಾಡಿ ತಗೆದೆನ್ನಾಶ್ರಮಕ್ಕೊಯ್ದು ಬಳಿಕ ನೋಡುವೆನವನ ಸತ್ವಗಿತ್ವದ ಬಲುಹನೆಂದ ವಿಶ್ವಾಮಿತ್ರನು (ಹಕಳ. ೩-೧೧); ಅನಘನಪ್ಪಾ ಮಾದಿರಾಜನ ಮನದ ಬಲುಹಂ ನೋಡಿದಪೆ ನಾನು (ಬಸವ. ೧೯-೯೩). ೪. ಪಸ್ತುವ ಬಹಳವಾಗಿ ಧರಿಸು ಸೆಜ್ಜೆಯ ಬಲುಹಾಗಿ ಕಟ್ಟು ಶಿವದಾರವ ಬಲುಹಿನಲಿ ಸುತ್ತೆಂದು ಹೇಳುವುದು ಉಪದೇಶವೇ ಬೇಜ ಕಟ್ಟುವ ಠಾವುಟಾಗಿ (ಕನ್ನಡ. ೪. ೩೩೬-೧೦೬೬); ಆಗಳತಿಸಾಕಾರರೂಪವದಾಗೆ ನಡನಡುಗುತ್ತ ಹತ್ತಿರೆಗಾಗ ಕೈಸನ್ನೆಯಲಿ ಕರೆವುತ್ತೊಡೆಯ ನಂಬಿಯನು ಆಗ ತನ್ನುಡೆಚ್ಚಿ ಯನು ಬಲುಹಾಗಿ ಒಡಿಸುತ್ತಾತನಂ ತಲೆವಾಗಿಸುತ್ತಂ ಭಯದ ಬಿತ್ತಂ ಬಿತ್ತಿ ಚಿತ್ತದಲಿ (ಬಸವ. ೨೬-೨೫). ೫. "ಹಠಃ, ಪ್ರಸಭಃ — ಈ ೨ ಬಲುಹು (ಬಲ್ಪು)" (ಹಲಾಯು. ೦೨೫-೬೪); ಕಂಗಳಲಿ ಕಟ್ಟಿದ್ದ ಮುಸುಕ ಸಭಂಗನಾಗ ತಗೆದು ಬಿಸುಟು ಸಮನಂಗಳಂ ಬಲುಹಿಂದ ತಜೆದುಬಿ ನೋಡಲು (ಬಸವ. ೩೦-೯೦); ಕಾಂಶೀದೇವಿ . . . ಬಲುಹಿನಲಿ ಭೂಸುರನ ಚಿತ್ತವ ಕಿಳುಹಿ ಬಂದಳು ಮನೆಗೆ (ಕುಮಾರ. ೧೦-೨೦); ಅನೆಯಮನುಜನಸು ವಂತಾ ಕಾಂತೆ ಬಲುಹಿಂದ ತಾನುಣಿಸಿದಳಾತ್ಮಪತಿಯ (ಶಶಿಕ. ೧೧-೬೭). ೬. ಬಲವುಳ್ಳದು; ಬಲಿಷ್ಠವಾದುದು; ಸಮರ್ಥವಾದುದು : ತಲೆ ಇಲ್ಲದ ಕಾಗೆ ನೆಲದಲ್ಲಿ ನಡೆಯಿತ್ತು . . . ಬಲುಹೆನಿಸಿದ ಕರಡಿ ಹಾಡಿ ಹರಸಿ ಬೆಳೆಯಿತ್ತು (ಅರಶ. ೩೪-೧೦೩); ದೇವಿ ನೇಮಿಸಲಜ್ಜೆಯೆನೆಂದೊಡಿದಾವ ಧರ್ಮವು ಶಿವಶಿವೀ ಹದ ಸಾವನವರಿಗೆ ತಹುದು ಬದ್ಧವಿಘಾತಿಯಿದು ಬಲುಹು (ಕುಮಾರ. ೩-೪). ೭. ಬಲವುಳ್ಳವನು; ಬಲಿಷ್ಠನಾದವನು; ಸಮರ್ಥ : ಒಲಿವನಿತನಾರೋಗಿಸಿದಪಂ ನಿಲಿಸಲಾಪ್ಪೆ ಎನ್ನನೆನುತಂ ಬಲುಹಲಾ ನೀನಿದಕೆ ನಾನೇನಜ್ಜಿಯೆನೇ ಎನುತ (ಬಸವ. ೩೯-೧೭); ಈತ ಧವನುವಿಪರೀತ ಖಡ್ಗದಲೀತ ಪರಿಘದಲೀತ ಕುಂತದಲೀತ ಬಲುಹೆಂದಂಥ ಭೂಪತಿಗಜುಹಿದನು ವಿದುರ (ಕುಮಾರ. ೬-೨೪). ೮. ಅಧಿಕ ನಾದವನು; ಮಿಗಿಲಾದವನು; ಉತ್ತಮ : ಬಲುಹದಾರ್ಬ್ಯ ತಾಟಕಿಗೆ ವೆಗ್ಗಳರದಾರು ಸುಬಾಹುವಿಗೆ (ತೊರವೆ. ೩-೭-೯೨). ೯. ಹೆಚ್ಚಾದುದು; ಅಧಿಕವಾದುದು : ಭಟನುಬಿಬೆ ಬಲುಹೋ ದಿಟ್ಟನಿವ ಕೌರವರ ಥಟ್ಟಿನಲಿ (ಕುಮಾರ. ೨೦-೬೩); ನೆಲಹುಗಳಾ ವೊಸರ ನುಂಡನು ನಿನ್ನ ಕಂದನ ಗಸಣಿ ಬಲುಹು ಯಶೋದೆ (ಹಾಸ್ಯ. ಶಾ. ೨೦-೯೯). ೧೦. ಬೆಂಬಲ; ಒತ್ತಾಸೆ : ನರನ ನುಡಿ ಹೊಳ್ಳುಗಡಾ ಪುರಹರನ ಬಲುಹುಳ್ಳನ್ನಬರ (ಕುಮಾರವ್ಯಾ. ೬-೬೩); ಜನರ ಪರಿಪರಿ ದೂಷ್ಯ ಭೂಷ್ಯವ ನೆನೆವೆನೇ ತಮ್ಮಡಿಯ ಸಂಭಾಷಣದ ಬಲುಹಿರಲಾವ ಭಯ ಮೇಕೀದು ಕೈಮುಗಿದ (ಗಗಶ. ೦೭-೬೪). ೧೧. ಕಟ್ಟು; ಆನಿಕೆ : ಕಾಂತಾಲಿಬ್ಧಾರದಿಂದೆ ನುಣ್ಣೂರಲು ಪಯಿದಂತಹುದೆಂದು ಸಂದೆಗದ ಸಂತತ ಬಣ್ಣಗಲ್ಲುಗಳ ಕೇವಣಿಸಿರ್ದ ಚಂತಾಕ ಬಲುಹನಿಕ್ಕಿದರು (ಮೋಹತ. ೨೩-೪೦). ೧೨. ಕಠಿಣವಾದುದು; ಕಷ್ಟಕರವಾದುದು : ದೇವ ಕಾಳೆಗ ಬಲುಹು ಬಿಸಿಲಿನ ಡಾಫರಕೆ ರಥತುರಗಪತಿನಿರ್ಜೀವಿಯಾದವು (ಕುಮಾರವ್ಯಾ. ೧೦-೨೭): ಬಲುಹಿನ ಸೀನಾ ಬಳಿನ ಕೊಲುವುದೆಂತೆನೆ ಕೋಪಿಶನಾಗಿ ತನಗಿದು ಬಲುಹಮೊಂದಪನುಸುರಿದನು (ಜೈಮಿನಿ. ೦೩-೯೬): ವರಕಾಮುಪೃಷ್ಟಿಯೆನಿಪ ಗೃಹಪತಿರತ್ನ ಪರಿಪರಿ ಗೃಹವಸ್ತುಗಳನು ನೆರಪುವುದನೋಡು ವಿಭವವ ಮಾಳ್ಪೆನೆಂದರೆ ತಡಬಡವುಂಟೆ ಬಲುಹೆ (ಶಶಿಕ. ೬೩-೦೦೩). ೧೩. ಮಹಿಮೆ; ಪ್ರಭಾವ : ಎನಲು ತಾ ನರವರವಸಿಷ್ಠಂಗಿನಿತು ಸತ್ವವಿದೇನದೆಂದರೆ ಘನವನಜಾಯಿಲು ಪಾರ್ಥ ರುಷಿಗಳ ತಪದ ಬಲುಹುಗಳ ತನತನಗೆ ಮುನಿವರರು ದೇವರ ಜನವ ಶಾಪಿಸಲೊಪ್ಪರೊಪ್ಪರಿಗನುಸರಿಸಿ ಗಜಜಿಸಿತು ತತ್‍ಕ್ಷಣ ಪಾರ್ಥ ಕೇಳೆಂದ (ಸಂಶಕ. ೨೯-೩೭). ೧೪. ಹಿರಿಮೆ; ಘನತೆ; ಪ್ರೌಢಿಮೆ : ವಿದ್ಯದ ಬಲುಹನೆ ತೋಜಿ ಬುದ್ಧಿಯ ಮೆಜಿವವನಲ್ಲ ನಿರ್ಧೂಳಿ ಜನ್ಮ ನಿಜಗುಣಯೋಗಿ ಕಂಡಯ್ಯ (ಶತಗ. ೧೨೯-೬೯೨). ೧೫. ಬಿರುಸು ಮಾತು : ಕೆಲಸ ಮಾಡಲು ನಿಮ್ಮ ಭವನದ ನಳಿನಮುಖಿಯರ ಕಳುಹು ಸುರಪತಿ ಬಲುಹ ನುಡಿದರೆ ನಿನ್ನ ಕತನದಿ ಕೆಡುಪುದಾ ಲೋಕ (ಸಂಶಕ. ೨೦-೩೫). (ಗು). ೧೬. (ಅಲು) ಹೊರಗೆ ಮಾತ್ರ ಬಲವಾಗಿರುವಂತೆ ಕಾಣುವ; ಅಶಾಶ್ವತವಾದ : ನಂಬದಿರು ಈ ದೇಹ ನಿತ್ಯವಲ್ಲ . . . ಒಳಗೆ ಮಲ ಮೂತ್ರಾದಿ ಕ್ರಿಮಿಗಳಿರವು ಹಲವು ವ್ಯಾಧಿಯ ಬೀಡು ಪಂಚಭೂತದ ನಾಡು ಬಲುಹು ದೇಹವ ನೆಚ್ಚಿ ಕೆಡಬೇಡ ಮನುಜ (ಪುರಂದ. ೦-೨೬-೦).

ಬಲುಹು ಮಾಡು= ೧. ಬಲಪ್ರಯೋಗ ಮಾಡು; ಶಕ್ತಿಯನ್ನು ಉಪಯೋಗಿಸು : ಬಲುಹು ಮಾಡಿಕೊಳಲ್ಕೆ ಹರಿಯಜ ಬಲಹರರ ಪವಣಲ್ಲ ಎಂದಡೆ ಅಳವಿಯೇ ನಿಮಗೆವ್ಯೊಡನೆ ಮಾಜಾಂತು ಕೆಡಬೇಡ (ಬಸವ. ೩೬-೩೭). ೨. ಒತ್ತಾಯ ಮಾಡು; ಬಲಾತ್ಕಾರ ಮಾಡು : ಮನೆವೆಂಡಿತಿಯೊ ನಾನೊತ್ತಸೂಳೆಯೊ ನಿನಗೆ ಸೋದರವತ್ತಿಗೆಯೊ . . . ನಿನ್ನಪರ ಒತ್ತಿ ನೀನೆನ್ನಂ ಬಲುಹು ಮಾಡುತ್ತ ಕಾಡಲದೇಂ ಬಹುದು (ಬಸವ. ೪೦-೯೭).

ಬಲ್ಪಾಗು, ಬಲುಪಾಗು, ಬಲುಹಾಗು = ೧. ಹೆಚ್ಚಾಗು; ಅಧಿಕವಾಗು; ಬಹಳವಾಗು : ಮುಪ್ಪು ಬಲ್ಪಾಗೆ ಶಿಥಿಲನಕ್ಕಂ (ಮುಂಗರಾ. ೯೦-೧೦); ಭರ್ತ್ರುರುರವಣೆ ಪಿರಿದಾಯಿತ್ತು ಭಕ್ತರ ತೇಜಂ ಬಲುಪಾಯಿತ್ತು (ಬಸರ. ೩-೯೦); ವೇಡತನ ಬಲುಹಾಯ್ತು ನಿಮ್ಮನು ಕಾಡುಪವರಾರು (ಸಂಶಕ. ೬-೩೦); ಅಜಿವು ತಲೆಕೆಳಗಾಯ್ತು . . . ಮಾಜವೆ ಗಜೀಗಟ್ಟಿತು ಮನೋಭವ ನಿಬಿಗೆಲಸ ಬಲುಹಾಯ್ತು (ಕುಮಾರ. ೨-೦೨). ೨. ಬಲ ಬರು; ಸಾಮರ್ಥ್ಯ ವುಂಟಾಗು : ಬಡವಂಗೆ ಹಣ ದೊರಕಿದಂತೆ ಕತ್ತಲೆಗೆ ಬಲುಪಾದಂತೆ ಗಿರಿಗೆ ನವೆ ದೊರಕಿದಂತೆ ಜಗಗುರುಕ್ಕಸರಿಗೀಶ್ವರನಿರೂಪಿತದಿಂ ದ್ರುಹಿಣ ಕೊಟ್ಟ ವರದ ಬಲದಿಂ ಲೋಕಗಳನೆಲ್ಲ ಹಣಿದವಾಡಲ್ಕುಮರರರ್ದೆಗುದಿತು (ರಾಜಶೇ. ೦೭-೯). ೩. ಬಲವುಳ್ಳದಾಗು; ಬಲಿಷ್ಠವಾಗು : ಕುಂಬಳಕಾಯಿಗೆ ಕಬ್ಬಿನದ ಕಟ್ಟ ಕೊಟ್ಟರೆ ಕೊಳೆವುದಲ್ಲದೆ ಬಲುಹಾಗ ಬಲ್ಲುದೇ (ಬಸವ. ೯೨). ೪. ಬಲಿಷ್ಠನಾಗು; ಸಮರ್ಥನಾಗು: ಆದಡಿದ ಕೊಳ್ಳೆನುತ ಸಾತ್ಯಕಿ ಕೋದನಸಭ್ರುವನಂಬಿನಲಿ ಬಲುಹಾವನ್ಯ ಮಗ್ನು ಎನುತ ಕಡಿದನು ಸೋಮದತ್ತಸುತ (ಕುಮಾರವ್ಯಾ. ೦೯-೪). ೫. ಉಗ್ರವಾಗು; ಪ್ರಚಂಡವಾಗು : ನಡುಹಗಲು ಪರಿಯಂತ ಕಾಳಗ ಬಡದೆ ಬಲುಹಾಯ್ತುಬಳೆಗವ ಕಡುಗುದುರೆ ಬಳಲಿದವು (ಕುಮಾರವ್ಯಾ. ೧೦-೨೨).

[ಬಲ್$_2$ (< ಬಲ್ಲಿತ್ತು$_1$) + — ಪು$_2$]

**ಬಲ್ಪುಗಿಡು** 'ಬಲ್ಪುಗೆಡು' ನೋ.

**ಬಲ್ಪುಗುಳ್** (ನಾ). ದಪ್ಪವಾದ ಗುಳ್ಳೆ; ಭಾರಿಯಾದ ಬೊಬ್ಬೆ: ಪಪ್ಪ ಕೊಪಾಲಲಿಂಗಾಂಗದೊಳಾಯ್ತು ಬಲ್ಪುಗುಳಿದನ್ನಿಂ ಪುಣ್ಣವೇಗ್ಗೆವೆನೆಂದು ಲಸತ್ವಿತ್ತದ ತನ್ನ ಗೋಣ್ಕೊಜಿಯು (ವೃಷಭ. ೯-೬೩).

[ಬಲ್$_2$ (< ಬಲ್ಲಿತ್ತು$_1$) + ಪುಗುಳ್$_2$]

**ಬಲ್ಪುಗೆಡು, ಬಲ್ಪುಗಿಡು** (ಕ್ರಿ). ಬಲವನ್ನು ಕಳೆದುಕೊಳ್ಳು; ಸಾಮರ್ಥ್ಯವನ್ನು ಕಳೆದುಕೊಳ್ಳು; ಶಕ್ತಿಗುಂದು : ಕಡವಗಲೊಳ್ ನಿಜಾಂಗನಾತಿರಕ್ತದೊಳೊಪ್ಪಿರೆ ಬಲ್ಪುಗೆಟ್ಟು ತೇರ್ ಪೊಡೆಗೆಡೆಯಲ್ . . .

ಇನನೆಯ್ದಿದನಸ್ತಶೈಲವಮಂ (ಧರ್ಮಾ. ೨-೩೯). **ಬಲ್ಪುಗಿಡು :** ಎಂತು ಪೆಜಗಿಕ್ಕಿ ನಳನಂ ನೀಂ ತಱಿಸುದಂತೆ ಬಲ್ಪುಗಿಡದಣ್ಮಿಸ್ಕೆಂದಂತಕನೆ ಮಸಗಿ ಮೇಲೆಟ್ಟಿಂತೆಪೊಲಿರ್ದಂ ಪ್ರಹಸ್ತನಪ್ರತಿಮಬಲಂ (ರಾಮಾಭ್ಯು. ೦೪-೬೬); ದೂರ್ತರ್ ಮಾರ್ತಾಂಡನಂ ಕಂಡ ಮಾಜಿನಂತೆ ಪರಿಯೆ ಬಚ್ಚರ್ ಕಿರ್ಚರ್ ಮುಟ್ಟಿವ ತುಪ್ಪದಂತೆ ಬಲ್ಪುಗಿಡೆ (ಧರ್ಮಾಮೃ. ೨-೬೯).

[ಬಲ್ಪು+ಕೆಡ್ಡು$_1$]

**ಬಲ್ಪುಚ್ಚು** (ನಾ). ಬಲವಾದ ಹುಚ್ಚು; ಅತಿಯಾದ ಬುದ್ಧಿಭ್ರಮಣೆ : ಬಲ್ಪುಚ್ಚಾದಂ ಪೆರ್ಚಿದಪೊಲ್ಪೊಳೆಯಿಸುತಂದು ರಾತ್ರಿ ದರ್ಪಕಶಿಖಿ ಪೊಂಗಲ್ಪದ್ಮಾವತಿ ಜಣಾಗಿರ ನಲ್ಪೊಂಬಾಗಿಲ್ಗೆ ಬಂದನಾ ಕವಿರಾಜಂ (ಅದ್ಭು. ೦೨-೩೩). [ಬಲ್$_2$ (< ಬಲ್ಲಿತ್ತು$_1$) + ಪುಚ್ಚು$_1$ (< ಪುರ್ಚು)]

**ಬಲ್ಪುದೋಱ್** 'ಬಲ್ಪುದೋಱು' ನೋ.

**ಬಲ್ಪುದೋಱಿಸು** (ಕ್ರಿ). ಶಕ್ತಿಯನ್ನು ತೋರಿಸು; ಸಾಮರ್ಥ್ಯವನ್ನು ಪ್ರದರ್ಶಿಸು : ಮತ್ತಂ ಮಲೆತು ನೀಂದು ಅಖ್ಖಡದೊಳ್ ಪೊಕ್ಕು ಬಾಹಪ್ಪಳಿಸಿ ಬಲ್ಪುದೋಱಿಸಿದ ಮಲ್ಲನನುರ್ಬುತ್ತೊಯ್ಯನೊಳಪೊಕ್ಕು ಮಿಕ್ಕು ಪಱಿಡಿಕ್ಕಿ ಮುರಿವ ... ಮಲ್ಲರ ನೆರವಿಗಳೊಳಂ (ಗಿರಿಜಾ. ೨-೦೦೩ ವ). [ಬಲ್ಪುದೋಱು + — ಇಸು$_3$]

**ಬಲ್ಪುದೋಱು, ಬಲ್ಪುದೋಱ್** (ಕ್ರಿ). = ಬಲ್ಪುದೋಱಿಸು: ಏಱಿನೆ ಸೂಱಿಗೊಡು ನುಡಿವೀ ನುಡಿಯಲ್ಲದೆ ಮತ್ತಮಾಸನುಡೋಱುವ ಬಲ್ಪುದೋಱುವೆರ್ದೆದೋಱುವ ಕಯ್ಪುಸರುಗಳೆಮ್ಮನುಂತೇಱುವು (ಶಂಕರಾ. ೬-೨೦). **ಬಲ್ಪುದೋಱ್ :** ಪಗಲಿರುಳಿನ್ನೆದನ್ನೊಳೆ ಕಡಂಗುವನೆನ್ನೊಳೆ ಬಲ್ಪುದೋರ್ಪಂ ... ಕರಂ ಮುಳಿಸಿಲ್ಲ ಕಾಯ್ದು ಕೆಮ್ಮಗೆ ಬಳಸಂದು ಕೊಂದಪನಕಾರಣದಿಂ ಮೊಱಿಯೋ ಮನೋಭವಾ (ಅಂಜ. ೧೨-೩೯).

[ಬಲ್ಪು + ತೋಱು]

**ಬಲ್ಪೊಂಬಳೆ** (ನಾ). ಅಡಕೆ, ತೆಂಗು ಮುಂತಾದ ಮರಗಳಲ್ಲಿ ಬಿಡುವ ದೊಡ್ಡ ಹೊಂಬಾಳೆ,_ಹೂಗೊಂಚಲು: ಬಲ್ಪೊಂಬಳೆಯಿಂ ಬಳ್ಕಿತ್ತು ಕೌಂಗು ... ಕಂಜಕಿಂಜಲ್ಕದಿಂ ಕಣ್ಗೊಳಿಸಿತ್ತಬ್ಜಾಕರಂ ತಂಪಲೆವ ಮಲಯಮಂದಾನಿಲಾಂದೋಳದಿಂದಂ (ಕಾದಂಬ. ೬೭೬).

[ಬಲ್$_2$ (< ಬಲ್ಲಿತ್ತು$_1$) + ಪೊಂಬಳೆ (< ಪೊಂಬಾಳೆ$_1$)]

**ಬಲ್ಪೊಱೆ, ಬಲುಹೊಱೆ** (ನಾ). ಬಹಳವಾದ ಹೊರೆ ; ಅಧಿಕವಾದ ಭಾರ: ಪೊಡವಿಯ ಪೊತ್ತ ಬಲ್ಪೊಱೆಯನೊಲ್ದಿಳಿಪಲ್ ಸಬಲಂ ಖಳರ್ಕಳಂ ಕಡಿಕಡಿದೊಟ್ಟಿ ಮೆಟ್ಟಿ ಜಿಂಹಗನಂ ವಿಜಯಾಂಶುವೃದ್ಧಿ ದ್ಪಾಂಗುಡಿಯಿಡೆ (ಕಳಾ. ೨-೦೦); ಬಡಗಣ ಗಡಿಗಾಪಿನವರ್ ಗುಡುಗಾಡಿಸಿ ಗೋಲಕೊಂಡ ವಿಜಯಾಪುರವಂ ಕಡಿದು ಮರಾಟರ ಪಡೆಯಂ ಪೊಡವಿಯ ಬಲ್ಪೊಱೆಯನಿಱಿಪಿ ಬಣ್ಣಿಗೆವಡೆವರ್ (ಅಕ್ರೂ. ೨-೦೬). **ಬಲುಹೊಱೆ:** ತೋಳ ಬಲುಹೊಱೆಗಲಸಿ ಕೆಲಬರು ಮೇಲೆ ನಮ್ಮಯ ಹಗೆಗೆ ಕೆಲಬರು ಕಾಳಗದ ಕಾಮುರ್ಕನೃಪಾಲರ ನೆರವಿಯದೆಯೆಂದ (ಕುಮಾ. ೪-೦೯); ಬಾರಿಸಿದ ಬಲುಹೊಱೆಯ ಬಂಡಿಗಳೋರಣಿಸಿದವು ಪಯಣದಲಿ ಕರ್ಪೂರ ಕಸ್ತುರಿ ಕುಂಕುಮದ ಪೆಟ್ಟಿಗೆಯ ಸಾಲಿನಲಿ (ಕೃಕಥಾ. ೦-೬-೩).

[ಬಲ್$_2$ (< ಬಲ್ಲಿತ್ತು$_1$) + ಪೊಱೆ]

**ಬಲ್ಪೊಟ್ಟು** (ನಾ). ಬಹಳ ಕಾಲ; ಹೆಚ್ಚು ಸಮಯ : ಒಂದು ಮಾತಾಡದೆಯ ಕುಳ್ಳನ್ ಬಲ್ಪೊಟ್ಟು (ಅಕ್ಕಮ್ಮಾ. ೧೩-೨೬೬).

[ಬಲ್$_2$ (< ಬಲ್ಲಿತ್ತು$_1$) + ಪೊಟ್ಟು]

**ಬಲ್ಪಂಟ** (ನಾ). ಮಹಾ ಪರಾಕ್ರಮಿ,--ಯೋಧ: "ಉರ್ಕಾಳ್, ಕೂರಾಳ್, ತುಱುಲಾಳ್, ಬಲಸ್ಲಾಳ್, ಬಲ್ಪಂಟ-ಈ ಶಿ ಪರಾಕ್ರಮಮುಳ್ಳಂ" (ಶಶಸಾ. ೩೬-೨೬೯) ; ಪುಣ್ಯದಿಂ ದೊರೆಕೊಂಡ ಜೈನಧರ್ಮಮನೊಲ್ಲದೆ ಬಿಟ್ಟೊಡೆ ... ಪುಲ್ಪಂಟನಂ ನಂಬಿ ಬಲ್ಪಂಟನಂ ಬಿಡುವ ಪಗೆಗಾಱನುಮಂ ... ಪೋಲ್ವೆನೆಂದು ಪರಿಚ್ಛೇದಿಸಿ (ಧರ್ಮಾಮೃ. ೬-೩೦); ಬಡಿಹೋರಿ ಬಲ್ಪಂಟನೆಂಬ ಒಡನುಡಿ ಬಲ್ಪುಡಿ ಬಡದೈವಕಲ್ಲದೆ ಬಡಶಬ್ದ ನಿನ್ನ ಪೊಂದುವದೆ (ಶಶಸಾ. ೬೨-೬೩); ಬೂತುಗ ಮತ್ತು ಅವನ ಮಗ ಮಾರಸಿಂಹರಂತಹ ಸಚ್ಚಿನವರಾದ ಬಲ್ಪಂಟರು ಆ ಸಾಮ್ರಾಜ್ಯವನ್ನು ಎತ್ತಿ ಹಿಡಿಯಲು ಪ್ರಯತ್ನ ಮಾಡಿದುದರಿಂದ ರಾಷ್ಟ್ರಕೂಟರ ಪಟ್ಟವು ಮುಂದೆ ಕೆಲವು ವರುಷ ಜೀವ ಹಿಡಿದುಕೊಂಡಿತು (ಕರ್ನಾ. ೨೯). [ಬಲ್$_2$ (< ಬಲ್ಲಿತ್ತು$_1$) + ಬಂಟ$_1$]

**ಬಲ್ಪಂಡಿ** (ನಾ). ದೊಡ್ಡ ಗಾಡಿ : ಬಡಿಕೋಲ್ ಕಿಗ್ಗಟ್ಟು . . . ಸಾಳುವಂ ಕೂಳೆ ಗಾಳಂ ಗಿಡುಗಂ ಬಲ್ಪಂ [ಹಾಂಚಂ. ಲ್ವಿಂ]ಡಿಯೊಳ್ ದೀಹದ ಪುಲಿ ನಿಶಿತಾಸ್ತ್ರಂಗಳುಗ್ರತ್ವಮಂ ಸಂಗಡಿಸುತ್ತಿರ್ದೊಪ್ಪೆ ವೀಥ್ಯಾಟವಿಗೆ ನಡೆದು ದುದ್ಯತ್ಕಿರಾತಪ್ರಜಾತಂ (ಗಿರಿಜಾ. ೦-೬೯).

[ಬಲ್$_2$ (< ಬಲ್ಲಿತ್ತು$_1$) + ಬಂಡಿ$_1$]

**ಬಲ್ಪಂದಿ** ' ಬಲ್ವಂದಿ$_2$ ' ನೋ.

**ಬಲ್ಪಂದಿಕಾಱ** ' ಬಲ್ವಂದಿಕಾಱ ' ನೋ.

**ಬಲ್ಪಗೆ** ' ಬಲ್ವಗೆ$_2$ ' ನೋ.

**ಬಲ್ಬಜ** (ನಾ). ೧. ದನಗಳು ತಿನ್ನದ ಒಂದು ಬಗೆಯ ಒರಟುಹುಲ್ಲು : "ಹೆಚ್ಚುಲಿಹುಲ್ಲು, ಬಲ್ಬಜ, ಗಂಜಳದ ಹೂ " (ಶಸ್ತ್ರಿ. ೩೯); ನೊದೆ ನಾಣಲ್ಪತ್ತ ಬಲ್ಬಜ ಧನ್ವಂಗಳುಂ ಮಿಗಿಲಾಗಿ ಸಂಗ್ರಹಂಗೆಯ್ಯಬೇಕು (ಶಾರಂಗ. ೩೬೬-೬೬). ೨. (ಆಲಂ) ಕೆಲಸಕ್ಕೆ ಬಾರದುದು : ನಿರುಪಯುಕ್ತವಾದುದು : ಈ ಬಲ್ಬಜಕ್ಕೆ ಮನಸ್ಸಿನ ಶಾಂತಿ ಕಳೆದುಕೊಳ್ಳಬಾರದು (ಕೂಶ). [ಸಂ.]

**ಬಲ್ಬಜೆ** (ನಾ). (?) : ಕುಜನಸಂಗದಿ ಕೇಡು ಸುಜನರ್ಗಿಂಬಾ ನೀತಿ ತ್ರಿಜಗವಱಿಯೆ ಕಾಣಬಾರದು ಮರಳು ಪ್ರಾಣಘ್ರಾಣದೊಳ್ಪಿಜವಿದೆ ಇದಕೆ ಬಲ್ಬಜೆಯೇಕೆ (ಭ್ರಕಥೆ. ೦-೨೨೯); ಹೊರಳಿ ಬಲ್ಬಜೆಯಿಂದ ತನ್ನಯ ಬಿರಿದ ಬಿಡುವವೆನುತ ಭೋಂಕನೆ ಪರಿದು ಬಂದರು ಭಾಳನೇತ್ರರ ಮಹಿಮನಿದ್ದೆಡೆಗೆ (ಶಂಕರಾ. ೦೯-೩). [?]

**ಬಲ್ಬಯಕೆ** (ನಾ). ಅತಿಯಾದ ಅಪೇಕ್ಷೆ; ಬಹಳವಾದ ಆಸೆ; ಹೆಬ್ಬಯಕೆ : ದಣಾಯಕರೆ, (ಬಲ್‌ಬಯಕೆಯಿಂದ) ಮತ್ತೆ ನನ್ನ ಶ್ರೀವಿರೂಪಾಕ್ಷನ ಪಂಪಾಪುರಕ್ಕೆ ಹೋಗಬೇಕೆಂಬ ತುಡಿತ ದಿನದಿನಕ್ಕೂ ಬಲಿಯುತ್ತಿದೆ (ತುಂಗಭ. ೦೩); ಬಹುದಿನದ ಬಲ್ಬಯಕೆ ಈಡೇರಿತು (ಕಳುಹು. ೨೨೦).

[ಬಲ್$_2$ (<ಬಲ್ಲಿತ್ತು$_1$) + ಬಯಕೆ$_1$]

**ಬಲ್ಬಱ** (ನಾ). ಭೀಕರವಾದ ಬರಗಾಲ ; ಬಹಳವಾದ ಕ್ಷಾಮ ; ದುರ್ಭಿಕ್ಷ : ಬಹುಧನಧಾನ್ಯಾವಳಿಯನೊಪ್ಪಿಸನೆ ಬಲ್ಬಱದೊಳ್ ಘನಶರಣತತಿಗೆ (ವೃಷಭ. ೬-೩೬). [ಬಲ್$_2$(<ಬಲ್ಲಿತ್ತು$_1$) + ಬಱ]

**ಬಲ್ಬಟಲ್** (ಕ್ರಿ). ಅತಿಯಾದ ಆಯಾಸವನ್ನು ಹೊಂದು ; ಬಹಳ ದಣಿ: ಸಪ್ತಾಶ್ವಂ ನಿಚ್ಚಪಯಣದೊಳ್ ಬಲ್ಬಟಲ್ದಶ್ವಸಪ್ತಕಮಂ ಕಡಲೊಳ್ ಮುಂಮ್ಗುರ್ಚಿ ನೀರ್ಗುಡಿಸಲ್ಕೆಂದು ಸಾರಥಿಯ ನೇರ್ಪಡಿಸಿ ತಾಂ ತೇರಿನಿಱಿದನೆನೆ ಪಡುವಟ್ಟೆನೆಡೆಯೊಳ್ ಮೆಲ್ಲನೆ ಮೆಯ್ಗರೆಯಲೊಡಂ (ರಾಜಶೇಖ ೨೨-೩). [ಬಲ್$_2$ (<ಬಲ್ಲಿತ್ತು$_1$) +ಬಟಲ್$_1$]

**ಬಲ್ಬಿಗುರ್** (ನಾ). ಅತಿಯಾದ ಭಯ ; ಬಹಳವಾದ ಅಂಜಿಕೆ : ಬಲ್‌ಬಿಗುರೊ ಎನ್ನೆರ್ದೆಯನಿಱಿಗುಂ (ಅದ್ಭುತ. ೦೦-೨೨೨); ಬಲ್‌ಬಿಗುರಿಂದಂ ಮುತಿಗೆಟ್ಟುವಳನ್ ಕಾಡಿಪುದು ? (ಅದ್ಭುತ. ೪೦-೬೩೩).

[ಬಲ್$_2$(<ಬಲ್ಲಿತ್ತು$_1$) + ಬಿಗುರ್$_2$]

**ಬಲ್ಬಿರುದು** (ನಾ). ದೊಡ್ಡ ಬಿರುದು ; ಪ್ರಸಿದ್ಧವಾದ ಹೆಸರು : ಸುರರ ಸೂಳೆಯರನೆಲ್ಲರಂ ಸೆಱೆವಿಡಿದು ತನಗೆ ಸರಿಯಿಲ್ಲೆಂದು ಬಲ್ಬಿರುದಿನ ಕಾಳೆಯಂ ಪಿಡಿಸಿ ಬಲದಿಂ ಚತುಸ್ಸಾಗರದ ವೇಳೆಯ ಧರಾಮಂಡಲಂಗಳಂ ಸಂತಸದೊಳಾಳೆಯಂಧಾಸುರಂ (ಕಬಿಪು. ೧೭-೦೨); ಪುರದ ಲಗ್ಗೆಗೆ ಬಟ್ಟ

ತುರುಕರನಿಱಿದು ಬಲ್ಬಿರುದ ಮೆಱೆದ ನರಸೇಂದ್ರ (ಕಂಪಪ. ೦೯ ಸೂಚನೆ).

[ಬಲ್$_2$(<ಬಲ್ಲಿತು$_1$)+ಬಿರುದು]

**ಬಲ್ಬಿಸಿಲ್** 'ಬಲ್ವಿಸಿಲ್' ನೋ.

**ಬಲ್ಬಿಸಿಲು** ' ಬಲ್ವಿಸಿಲ್ ' ನೋ.

**ಬಲ್ಬು** (ನಾ). ವಿದ್ಯುತ್ತನ್ನು ಬೆಳಕನ್ನಾಗಿ ಮಾರ್ಪಡಿಸಿ ಹೊರಚೆಲ್ಲುವ ಗಾಜಿನ ಬುರುಡೆ ; ವಿದ್ಯುದ್ದೀಪದ ಬುರುಡೆ : ಈ ತಾಪ್ರದ ತಂತಿಗಳ ತುದಿಗಳು ಬಲ್ಬಿನ ಹೊರಗೆ ಇರುವ ಎರಡು ಸೀಸದ ಬೊಟ್ಟುಗಳಿಗೆ ಸಂಬಂಧಿಸಿವೆ (ಭೌತಶ. ೩೯೩); ಬೆಳಕು ಬೆಳಕನು ಕೂಡಿ ಆಡುತಿರೆ ಬಲ್ಬು ಹೊರೆ ; ಈಗ ಬಲ್ಬಿಗೆ ಬಲ್ಬು ಕಾತರಿಸಿತು (ನಠಂ. ೯೨-೦೩).

[←ಇಂ. Bulb]

**ಬಲ್ಬೆಟ್ಟು, ಬಲುಬೆಟ್ಟು** (ನಾ). ದೊಡ್ಡ ಬೆಟ್ಟ ; ಅಗಾಧವಾದ ಪರ್ವತ : ಮಾರಳಿ ಕವಿದುದು ಸೇನೆ ಮಂಜು ಬಲ್ಬೆಟ್ಟಮಂ ಪರಿವೇಷ್ಟಿಪಂದದಿಂ (ಕಅಪು. ೨೯-೨೩). **ಬಲುಬೆಟ್ಟು** : ಮತ್ತಿದೇನೆಂಬುಧಿಯೊಳಗೆ ತಲೆಯೆತ್ತುತ್ತಿದೆ ಬಲುಬೆಟ್ಟವಿದು ತಾ ಕೃತ್ರಿಮವೊ ಸಹಜವೊ (ತೊರಾಂ. ೩-೦-೮); ಒಡನೆ ಕಪಿ ಬಲುಬೆಟ್ಟವನು ಸಿಡಿಲೆಱಗುವವೊಲೆಱಗಿದನು ರಕ್ಕಸನ (ತೊರಾ. ೬-೨೨-೦೬). [ಬಲ್$_2$(<ಬಲ್ಲಿತು$_1$)+ಬೆಟ್ಟ$_1$]

**ಬಲ್ಬೆಡಗು, ಬಲುಬೆಡಗು** (ನಾ). ವಿಶೇಷವಾದ ಅಂದ ; ಅತಿಯಾದ ಸೊಗಸು : ಮೌಕ್ತಿಕಗಳ ಮುಡಿವಲೆ ಮೆಱೆವ ಬಾವುಲಿಯ ನಿಡು ಗುರುಳಿನ ಮುತ್ತಿನ ಕುಚ್ಚಿನಿಂದ ಬಲ್ಬೆಡಗಾಗಿ ಮೆಱೆದರರ್ತಿಯಲಿ (ಕಂಪಪ. ೨೯-೯೨). **ಬಲುಬೆಡಗು** : ನಾನಾ ಬಗೆ ಪಡುರಸಾನ್ನಗಳ ಪಾಕಗಳ ಕಡುಚೆಲ್ವ ಗೃಹಗಳುಂದರಮನೆಯೊಳು ಬಲುಬೆಡಗ ಬೀಱಿದುವರ್ತಿಯಲಿ (ಕಂಪಪ. ೭-೯೭). [ಬಲ್$_2$(<ಬಲ್ಲಿತು$_1$) +ಬೆಡಗು$_1$ (<ಬೆಡಂಗು)]

**ಬಲ್ಬೆದೆ** (ನಾ). ಅತಿಯಾದ ಕಾಮಾತುರ ; ಬಹಳವಾದ ಕಾಮೇಚ್ಛೆ : ಇತ್ತ ಸೆಳೆದೊಯ್ಯುವುದು, ಹತ್ತಿರಕೆ ' ಬಾ ' ಎಂದು ಚಿತ್ರವನು ಬಲ್ಬೆದೆಯು ತೆರೆ ಅದೊಂದು (ಕಾರಂ. ೦೨-೬). [ಬಲ್$_2$ (<ಬಲ್ಲಿತು$_1$)+ಬೆದೆ]

**ಬಲ್ಬೆಱಗು** (ನಾ). ಬಹಳವಾದ ಆಶ್ಚರ್ಯ ; ಅತಿಶಯವಾದ ಸೋಜಿಗ : ದಿಟವೊರೆವೆ ಬಲ್‌ಬೆಱಗನೊಂದನ್ (ಅಂತಿಗೂ. ೦೦-೨೨೪).

[ಬಲ್$_2$ (<ಬಲ್ಲಿತು$_1$) + ಬೆಱಗು$_1$]

**ಬಲ್ಬೊಬ್ಬೆ, ಬಲುಬೊಬ್ಬೆ** (ನಾ). ಬಹಳವಾದ ಗದ್ದಲ ; ಅತಿಯಾದ ಚೀರಾಟ,—ಕೋಲಾಹಲ : ನಿಬ್ಬರದೆ ಬರ್ಪ ಹಯಬಲದಬ್ಬರಣೆಗೆ ಕೊರ್ಬುಗೆಳೆದುದಿರ್ಕೇರಿಗೆ ಬಲ್ಬೊಬ್ಬೆಗೆ ಸೀರೆಯ ಮುಂ ತವೆ ತಬ್ಬಿಬ್ಬಂ ತಾಳ್ದಿ ತೂಟ್ದಿತಾಳ್ದನ ಸಿರಿಯಂ (ಶಕಪಿ. ೨-೯೭). **ಬಲುಬೊಬ್ಬೆ** : ಬಲುಬೊಬ್ಬೆಯಲಿ ನೆಲನದಿರ ನಡೆದುದು ಸೇನೆ ಕಲಶೋದ್ಭವನ ನೇಮದಲಿ (ಕುಮಾವ್ಯಾ. ೯-೦೩) ; ಬಲುಬೊಬ್ಬೆ ಸಿಡಿಲು ಖಡ್ಗಗಳ ತೊಳಪು ಮಿಂಚು ಸಲೆ ತುರಗದ ದನಿ ಗುಡುಗು (ಕಂಪಪ. ೦೮-೦೦೦).

[ಬಲ್$_2$ (<ಬಲ್ಲಿತು$_1$) + ಬೊಬ್ಬೆ]

**ಬಲ್ಭಾರ, ಬಲುಭಾರ** (ನಾ.) ಹೆಚ್ಚಾದ ಭಾರ ; ಅತಿಯಾದ ತೂಕ : ಹೆಮ್ಮರನಿರ್ದೇನದಱಿಂದಲೆತ್ತಬಹುದೇ ಬಲ್ಭಾರಮಂ ಸನ್ನೆ ಸಾವಿರ ಕಾಲಾಳಿನ ಸತ್ವಮೈ (ಸೋಮೇಶ. ೭೬). **ಬಲುಭಾರ** : "ಭಾರಣೆಯೆನೆ ಬಲುಭಾರಂ" (ಕಾಶಿ. ೩೯). [ಬಲ್$_2$ (<ಬಲ್ಲಿತು$_1$) + ಭಾರ]

**ಬಲ್ಭುಜ** (ನಾ). (ಆಲಂ) ಹಿರಿಮೆ; ಔನ್ನತ್ಯ: ಭುಜಬಲಿಯೋಗೀಂದ್ರ ನೆಂತಿರ್ದನೆಂದನು ರಜತಗಿರಿಯ ಬಿಟ್ಟು ಬೇಱೆ ಗಜವಿಪಿನದೊಳಿರ್ದ ನಾತನ ತಪದ ಬಲ್ಭುಜವ ಚಿತ್ತೈಸಂದರವರು (ಶಶಶ. ೩೯-೯).

[ಬಲ್$_2$ (<ಬಲ್ಲಿತು$_1$) + ಭುಜ]

**ಬಲ್ಮಂತ್ರಿ** (ನಾ). ಸಮರ್ಥನಾದ ಮಂತ್ರಿ : ದೂರದರ್ಶಿಯಂತೆ ಮೇಲನಱಿವನುಂ ಬಲ್ಮಂತ್ರಿಯಂತೆ ಪ್ರಮಾದರಹಿತನುಂ . . . ರಾಜಸೇವಕನಂತ್ತದಕವಂತನುಮಪ್ಪುದು (ಧರ್ಮಾಮೃ. ೩-೯೯).

[ಬಲ್$_2$ (<ಬಲ್ಲಿತು$_1$) + ಮಂತ್ರಿ]

**ಬಲ್ಮತ್ತಿ** (ನಾ). ಒಂದು ಬಗೆಯ ಮತ್ತಿಮರ : ಪಾದರಿ ತಾಱೆ ತಂಡಸು ಚಿಱಿಲ್ ಬಲ್ಮತ್ತಿ [ಪಾಠಾಂ. ಬಿಳಿಬ್ಬಲ್ಮತ್ತಿ] ಬೇವತ್ತಿ . . . ಕಕ್ಕಿಮ್ಮರಂ ಎಂಬೀ ಮರದುಱುಗಲಿಱುಂಬಿನಿಂದತಿಗಹನಮೆನಿಪ ಗಹನಾಂತರದೊಳಗೆ (ಶಾರ್ಙ್ಗಕ. ೦೨-೩೦). 'ಬಿಳಿಮತ್ತಿ' ಪರಾ.

[ ? + ಮತ್ತಿ$_1$ (<ಮಱ್ತು) ]

**ಬಲ್ಮನುಷ್ಯ, ಬಲುಮನುಸ್ಯ** (ನಾ). = ಬಲುಮಾನಿಸ : ಬೆ(ಂ)ಣ್ಣೆಯೂರ್ಪ್ಪ(ಂ)ನ್ನೆರಡಱ ಬಳಿಯ ಬಾಡಂ ಹಱುಹೆಯಿಂ ಬಡಗಲು ಪಾಂಡ್ಯದೇವನ ಬಲ್ಮನುಶ್ಯರು ಬೆ(ಂ)ಣ್ಣೆಯೂರ ಚಂದುಗಿದೇವನುಂ ಕಾಳಗೌಡನುಂ (ಶೌಇಇ. IX-i, ೩೩೭-೯ ; 1220). **ಬಲುಮನುಸ್ಯ** : ಆ ರಾಯನ ಮನೆಯ ಸಂಧಿವಿಗ್ರಹಿ ಲಖಣ್ಣನವರ ಬಲುಮನುಸ್ಯ ದೇವಪ್ಪ ಹರಿಯಪ್ಪನವರು ಹಡವಳಿಕ ನಾಡಿಂಗೆ ಸರ್ವಾಧಿಕಾರಿಗಳಾಗಿದಲ್ಲಿ (ಎಕ. VII, ಶಿಮೊ. ೦೯-೬ ; 1309). [ಬಲ್$_2$ (<ಬಲ್ಲಿತು$_1$) + <ಮನುಷ್ಯ]

**ಬಲ್ಮನೆ** (ನಾ). ದೊಡ್ಡದಾದ ಮನೆ ; ಮಹಾಸೌಧ : ಚಂದಳಿರಾಂತಶೋಕೆ ಮಣಿಮಂಟಪಂ . . . ಎಳೆಮೊಗ್ಗೆಗಳೊಪ್ಪುವ ಮಲ್ಲಿಕಾ ತಾಪ್ರಂದಮೆ ಮುತ್ತು ತೆತ್ತಿಸಿದ ಬಲ್ಮನೆ ಕೇತಕಿ ಸುತ್ತುವೇಲಿ ಕಕ್ಕುಂದರಿಯಾಂತ ಕೋಟೆ ಮದನಂಗೆನೆ ಕಂಗೊಳಿಸಿರ್ದುದಾ ವನಂ (ವೃಶಪಿ. ೯-೩೯).

[ಬಲ್$_2$ (<ಬಲ್ಲಿತು$_1$) + ಮನೆ]

**ಬಲ್ಮನ್ನೆಯ** (ನಾ). ಹೆಚ್ಚು ಮನ್ನಣೆಯನ್ನು ಪಡೆದ ವ್ಯಕ್ತಿ ; ದೊಡ್ಡ ಮುಖಂಡ : ಸಲೆ ಪೋಪ ಬರ್ಪ ಬಲ್ಮನ್ನೆಯರ ಕನ್ನೆಯರ ಸುಳಿಸುಳಿವು ಕಣ್ಗೊಪ್ಪುವಂದಣದ ಗೊಂದಣದ ಕಳಕಳದ ವಾದ್ಯರವದಬ್ಬರದ ನಿಬ್ಬರ ದಿಂ ಪುರಂ ರಂಜಿಸಿದುದು (ಕಲಪು. ೦೦-೩೩).

[ಬಲ್$_2$ (<ಬಲ್ಲಿತು$_1$) + ಮನ್ನೆಯ]

**ಬಲ್ಮರ, ಬಲುಮರ** (ನಾ). ದೊಡ್ಡದಾದ ಮರ ; ಮಹಾವೃಕ್ಷ : ದಾಡೆಯಂ ಮಸೆದು . . . ಮಿಾಂಟುತ್ತೆ ಕಂದಂಗಳಂ ಕೆಡಪುತ್ತುಂಗದೊಳಿರ್ದ ಬಲ್ಮರಗಳಂ ಬಂದತ್ತದೊಂದೆಕ್ಕಲಂ (ರಾಜಶೇ. ೩-೯೯). **ಬಲುಮರ** : ಸಿಡಿದು ಹಾಱಿದ ಹಸ್ತದುಱುಬೆಗೆ ಬುಡಸಹಿತ ಬಲುಮರ ಧರಾತಳಕುಡಿದು ಬಿದ್ದವು (ಕೊಶರಾ. ೦-೦೦-೦೪).

[ಬಲ್$_2$ (<ಬಲ್ಲಿತು$_1$) + ಮರ$_1$]

**ಬಲ್ಮಳೆ, ಬಲುಮಳೆ** (ನಾ). ದೊಡ್ಡಮಳೆ ; ಭಾರಿ ಮಳೆ : ಎಱಂಕವನಿ ಬಲ್ಮಳೆಯುಮೊಳೊಪ್ಪುವುದು (ಎಇ. XIII, ೩೩೦-೩೦ : 929) ; ಮಹಾರಥ ತುರುಗ ಕಾಲಾಳಿಂದ ಶಸ್ತ್ರಾಸ್ತ್ರಗಳ ಬಲ್ಮಳೆಯು ಸುರುಯಿತಿದೆ (ರಜೀಪ. ೩-೦೩). **ಬಲುಮಳೆ** : ಕೋಲ ಬಲುಮ[ಪಾಠಾಂ. ವ]ಳೆಗೊಡ್ಡಿ ಹರಿಗೆಯ ಮೇಳಯುವ ಮಱೆಗೊಂಡು ಪೇಚರರಾಳು ನಿಂದೆಚ್ಚತು ನಿಹಾರದಲರ್ಜುನನ ರಥವ (ಕುವ್ಯಾಕ. ೨೦-೨೩) ; ಬಲುಬೊಬ್ಬೆ ಸಿಡಿಲು . . . ಸಲೆ ತುರಗದ ದನಿ ಗುಡುಗು ಖಳರವಯವ ಕಾಲಮೇಘವಂಬಿನ ಬಲುಮಳೆಗಳ ಕರೆದುವು (ಕಂಪಪ. ೦೮-೦೦೦).

[ಬಲ್$_2$ (<ಬಲ್ಲಿತು$_1$) + ಮಳೆ (<ಮಱೆ)]

**ಬಲ್ಮಾವಂತ** (ನಾ). ದಕ್ಷನಾದ ಮಾವುತ : ತೊಟ್ಟನೆ ಪೊಂದಿದ ಕುದುರೆಯ ತುಟ್ಟಂ ಕಂಡಣೆದು ನೂಂಕಿ ಬಲ್ಮಾವಂತರ್ ಬಿಟ್ಟಿಕ್ಕಿದರಾನೆಗಳಂ (ಅಪ್ರಾಶಾ. ೨೮೦). [ಬಲ್$_2$ (<ಬಲ್ಲಿತು$_1$) + ಮಾವಂತ]

**ಬಲ್ಮಿಂಚು** (ನಾ). ೧. ಹೆಚ್ಚಿನ ಪ್ರಕಾಶ. ೨. (ಆಲಂ) ತುಂಬ ಕಾಂತಿಯಿಂದ ಕೂಡಿದ ವ್ಯಕ್ತಿ : ಮಂಚಿಸಿ ಬಲೆಯೊಳ್ ಪ್ರಪಂಚವೆಲ್ಲ ಸೆಳೆದು ಕಂಚಿಪಟ್ಟಣದಿ ಬಲ್‌ಮಿಂಚಾಗಿದ್ದನೆ (ತುರಂಪ. ೨-೩೨-೨).

[ ಬಲ್$_2$ (<ಬಲ್ಲಿತು$_1$) + ಮಿಂಚು$_2$ ]

**ಬಲ್ಮಿಡಿ** (ನಾ). ದೊಡ್ಡದಾದ ಮಿಡಿ : ತಟುಗಿರ್ದ ಬಲ್ಮಿಡಿಯ ತೊಗಂ ಗೊಂಬನೊಳ್ ಪಾಯ್ದು ಒಂಡಳಿಸುತ್ತಿರ್ಪ ಶುಕಾಳಿ ತಮ್ಮ ಬೆಸದೊಳ್ ತಂತಮ್ಮ ಅಂತರಂಗಳೊಳಿರ್ದಂಗಜತಂತ್ರದಂತೆಸೆವಿನಂ ಚೆಲ್ವಾದುವಿಮ್ಮಾವುಗಳ್ (ಆದಿಪು. ೧೦-೯೯) ; ಆಲರೆಸವೆಳದಳಿರೆಲೆಯಾರಲೆ ಬಲ್ಮಿಡಿ ಮಿಸುಪ ಪಚ್ಚೆಗೋಡಲವಾಳಿ ಕಜ್ಜಲತಿಲಕವೆಂಬಗೆ ತೋರ್ಪುದು ಸಲೆ ಸೊಗಯಿಸಿ ಬಾಲನಂದದಿಂ ಮಾಕಂದಂ (ಶಬ್ದಸಾ. ೩-೩೬).

[ಬಲ್$_{2}$ (<ಬಲ್ಲಿತು$_{1}$) + ಮಿಡಿ$_{4}$]

**ಬಲ್ಮಿಣ** 'ಬಲ್ಮಿಳಿ' ನೋ.

**ಬಲ್ಮಿಳಿ**. ಬಲುಮಿಣಿ, ಬಲ್ಮಿಣಿ (ನಾ). ದೊಡ್ಡದಾದ ಮಿಣಿ ; ಬಲವಾದ ಹಗ್ಗ : ಅಳವಟ್ಟಿಯದೆ ಕೋಟೆಯ ತೆನೆಗಳೊಳೆತ್ತಂ ಸುತ್ತಿ ನೇಲ್ವ ಬರುದರ ಕರುಳೆ ತಳೆದು ಪಿಡಿದಡರ್ದರ್ ಬಲ್ಮಿಳಿ [ಪಾಠಾಂ. ಲ್ಮಿಳಿ] ಯಂ ಪಿಡಿವಡರ್ವ ಮಾಟ್ಕೆಯಿಂ ಮೆಯ್ಗಲಿಗಳ್ (ಪಾರ್ಶ್ವಪು. ೩-೧೫೦). **ಬಲುಮಿಣಿ** : ಈಸ ಬಲಿ ಬಲುಮಿಣಿಯ ಬಿಗಿಯೆನುತ ಮೇಲೆ ಮೇಲಬ್ಬರದ ಘೋಳಾಘೋಳಿ ಫಳಿಸೆ ದೆಸೆಯಲತಿರಥಚಾಲ ಕವಿದುದು ಕದನಕೌತೂಹಲರ ಕೇರಿಯಲಿ (ಕುಮಾವ್ಯಾ. ೬-೦೨); ಎತ್ತದಿರಿ ಬಲುಮಿಣಿ[ಪಾಠಾಂ. ಳಿ]ಯಲಿವನನು ಸುತ್ತಿ ಸಿಂಧುರಘಟೆಗಳಿಂದೆಳೆಸುತ್ತ ಕೊಂಡೊಯ್ಯೆನಲು ಹಮ್ಮಿದರಾನೆಯಲಿ ಕಪಿಯ (ತೊರರಾ. ೩-೬-೩). **ಬಲ್ಮಿಣಿ** : ಬಹಳ ಪಾಶಗಳಂ ಬೀಸಿ ತೊಡಗಿ ಕೆಡವಲ್ವೇಳ್ಕುಮೆಂದು ಬಲ್ಮಿಣಿಗಳಂ ತಮತಮಗೆ ಕೆಯ್ಕೊಳುತ್ತು . . . ಕೋಳಾಹಳದೊಳುಬು ಬರದರ್ ವೃಷಪತಿಯನು .(ಕಬ್ಬಿ. ೯೯-೦೨).

[ಬಲ್$_{2}$ (<ಬಲ್ಲಿತು$_{1}$) + ಮಿಳಿ$_{2}$]

**ಬಲ್ಮುಗುಳ್** (ನಾ). ದೊಡ್ಡದಾದ ಮೊಗ್ಗು ; ದಪ್ಪವಾದ ಕುಟ್ಮಲ: ನೆಗಟ್ಟುದು ದೇವಮಂದುಭಿರವಂ ಸುರನಂದನದಿಂ ಪೊದಟ್ಟ ಬಲ್ಮುಗುಳ್ಗಳ ತಂದಲಂದು ಕವಿತಂದುದು (ಶಾಂತಿಪು. ೦೯-೦೯); ಅಸುಗೆಯ ನಾಗಕೇಸರದ ಬಲ್ಮುಗುಳಂ ಬಿಟ್ಟೊತ್ತಿ ತುಂಬಿ ಚುಂಬಿಸೆ (ಶಾಂತಿಪು. ೬-೩೩); ನೆಗೆದುಡು ಜಾಲದಂತೆ ಪೊಸಮಲ್ಲಿಯ ಬಲ್ಮುಗುಳೊಪ್ಪೆ . . . ವಾರ್ಧಿ ಪೆರ್ಚುಗೆಯ ನಮರ್ಚೆ ತಾಳ್ದನುದಿತೋದಯಮಂ ಹಿಮಕಾಲಚಂದ್ರಮಂ (ಶಾಂತೀ. ೯-೪).

[ಬಲ್$_{2}$ (<ಬಲ್ಲಿತು$_{1}$) + ಮುಗುಳ್$_{2}$]

**ಬಲ್ಮುಡಿ**. ಬಲುಮುಡಿ (ನಾ). ೧. ಕೂದಲಿನ ದೊಡ್ಡ ಗಂಟು ; ದೊಡ್ಡ ತುರುಬು : ಸಾರ್ದೆಳಸಿ ಪಗಿಲ್ತ ಕೇಶಿಯನೆ ಬಲ್ಮುಡಿ ತೋಱಿ (ಕಾದಂ. ೩-೧೩); ಬಳಲುಮುಡಿ ಬಲ್ಮುಡಿಯು ಸೋಲ್ಮುಡಿಯು (ಶಶಪೋ. ೨೯-೦೬). ೨. ದೊಡ್ಡದಾದ ಜಟೆ : ದಟ್ಟವಾದ ಕೂದಲು : ಬಾಂಬೊಳೆ ತಳ್ತ ಕೆಂದಳೆಯ ಬಲ್ಮುಡಿ ತಾಳ್ದ ಶಶಾಂಕಲೇಖೆ . . . ಬಗೆಗೊಳ್ವ ಸುಣ್ಣರ ವರಾಭಯಶೂಲಮೃಗಾಂಕಪಾಣಿಯುಂ ಕಂ ಬಿಡದೊಪ್ಪುವದ್ರಿಜೆ ವಿರಾಜಿಸೆ ರಂಜಿಸಿದಂ ಮಹೇಶ್ವರಂ (ಕಬಿಕಾ. ೧-೬೪). **ಬಲುಮುಡಿ** : ೧. ನಿಶಾಗುರುಳ್ ಸಿವಿರ್ದ ಕಣ್ಬಲುಮುಡಿ . . . ಸಳಿ ತೋಳಸಿಯ ನಡು ಮೆಱೆಯ ಮೆಱೆವಳಾ ನೀಱೆ (ಶಬರಾ. ೨೯-೦೦೬).

[ಬಲ್$_{2}$ (<ಬಲ್ಲಿತು$_{1}$) + ಮುಡಿ$_{3}$]

**ಬಲ್ಮುತ್ತು** (ನಾ). ದೊಡ್ಡದಾದ ಮುತ್ತು: ದಪ್ಪವಾದ ಮೌಕ್ತಿಕ : ಬಲ್ಮುತ್ತಿನ ಬಳಗಮಾಣಾ ಮೆಲ್ಮುಗುಳಾದಂತೆ ಪೊಳೆವ ಬೆಳ್ಪಿಸೆವಲಗೊರ್ಚಲ್ಮುಸುಕಿ ಪರಿಮಳದ ಗೊಂಚಲ್ಮುಸುಕಿದುದಲ್ತೆ ಮಾಧವಿಯ ಪಾದಪದೊಳ್ (ಶಾಂತೀಶ್ವ. ೩-೦೦೦). [ಬಲ್$_{2}$ (<ಬಲ್ಲಿತು$_{1}$) + ಮುತ್ತು$_{2}$]

**ಬಲ್ಮುನಿಸು**. ಬಲುಮುನಿಸು (ನಾ). ಅತಿಯಾದ ಕೋಪ; ಬಹಳವಾದ ಸಿಟ್ಟು : ಮತ್ತಿನ ಮಾನ್ಯರೂರೆದ ಕೃತಿಯಾ ಸಲ್ಲಲಿತಮನೇನೆನ್ನದೆ ತಮ್ಮಯ ಬಲ್ಲತನವನೇ ಮೆಱೆವಣ್ಣಂಗಳ ಬಲ್ಲತನದ ಬಾಯೊಳ್ ಬಳಹರಂ ಬಲ್ಮುನಿಸುದಳೆದು ಹೊಗಲಿ (ಶತುಕಾ. ೦-೦೬). **ಬಲುಮುನಿಸು** : ಹಲವು ಪರಿಯಿಂದಿಂತು ನವಿಸುವನಲಸುವಂ ಪ್ರಾರ್ಥಿಸುವಂ . . . ಬಲುಮುನಿಸು ನಿಮ್ಮಿಂದವಲ್ಲದೆ ತಿಳಿಯದೆನುತಂ ಬಾಲಲಿಂಗನವಸ್ಥೆಗೊಳುತಿರಲು (ಬಸವಪು. ೯೬-೯೬); ಎನ್ನೊಳು ಬಲಿದ ಬಲುಮುನಿಸನೆಲ್ಲವ ಕಳೆದು ಸಲಹೆಂದೆನುತ ಸಂಪ್ರಾರ್ಥನೆಯ ಮಾಡಿದನು (ತಿಮ್ಮ. ೦-೦೦೯). 'ಬಲ್ಮುಳಿಸು' ಪರಾ. [ಬಲ್$_{2}$ (<ಬಲ್ಲಿತು$_{1}$) + ಮುನಿಸು$_{2}$]

**ಬಲ್ಮುಸು** (ನಾ). ಒಂದು ಬಗೆಯ ದೊಡ್ಡ ಆಕಾರದ ಕಪಿ,–ಮುಸಂ : ತಳಿರ್ವತ್ತಿಗೆ ಕಪಲ್ಗೊಂಬು ಠವಣಿಕೋಲಳಿ ಶುಕ ವಟುತತಿಯಾಗಿ ಬಳಸಿರಲೊಂದು ಬಲ್ಮುಸು ನರೆಗಡ್ಡ ತಳೆದ ದೀಕ್ಷಿತನಂತಾಯ್ತು (ಪ್ರಭಾಂ. ೬-೨೯). [ಬಲ್$_{2}$ (<ಬಲ್ಲಿತು$_{1}$) + ಮುಸು$_{2}$]

**ಬಲ್ಮುಸುಡು** (ನಾ). ದೊಡ್ಡದಾದ ಮೂತಿ ; ಹಿರಿದಾದ ಮುಖ : ಕುಸಿದ ಸಿರಂ ಕೆಲಕ್ಕೊಲೆದ ಬಲ್ಮುಸುಡುರ್ಬಿದ ಮೆಯ್ಯ ರೋಮಂ . . . ತಳ್ತಗುರ್ವಿಸೆ ಮಲೆದುರ್ಕಿ ಗರ್ಜಿಸಿ ಕರಂ ಪರಿತಂದುದು ಪಂದಿ ಕಾಯ್ಪಿನಿಂ (ಕಾದಂ. ೪-೯). [ಬಲ್$_{2}$ (<ಬಲ್ಲಿತು$_{1}$) + ಮುಸುಡು]

**ಬಲ್ಮುಳಿಸು** (ನಾ). = ಬಲ್ಮುನಿಸು : ಪಗೆ ಕೆಯ್ಗಿಮಂದು ಬರ್ದುಕಾಡಿದ ಬಲ್ಮುಳಿಸಿಂ ವೃಕೋದರಂ ಅಂತು ಕಳಿಂಗರಾಜ ಮತ್ತಮಾತಂಗಘಟೆಗಳ ಮೇಲೆ ಮುಳಿಸಂ ಕಳೆವೆನೆಂದು ಸಿಂಹನಾದದಿನಾರ್ದು . . . ದಿಗ್ಗಜಮಂ ಪೋಲ್ವ ಗಜಂಗಳಂ ಪಲವುಮಂ ಕೊಂದಂ ಮರುನ್ನಂದನಂ (ಕುಪಾ. ೧೦-೦೦೦); ಇನ್ನೆಮಗಗಮ್ಯನಲಕ್ಷ್ಯನದೃಶ್ಯನಾಗಿ ನಿ ನೆನಸುಮಗಲ್ದ ಬಲ್ಮುಳಿಸು ನಲ್ಲನೆ ಕಾಲ್ವಿಡಿಯಲ್ಕೆ ಮಾಣ್ಗಮೇ (ಶಗಂ. ೬-೦೦೬); ಬಿರಯಿಗಳಂಜೆ ಕೂಡದರ ಕಲ್ಲೆರ್ದೆ ಪವ್ವನೆ ಸೀಱೆ . . . ಬಲ್ಮುಳಿಸಿಂದಮುಗಸ್ಮೆವೆತ್ತ ನಲ್ಲರ ಬಗೆ ಬಲ್ಮೆ ಜೇವೊಡೆಯ ಬಲ್ಲುಲಿ ನೀಳ್ದುದು ಕರ್ಪುವಿಲ್ಲನಾ (ಕಬ್ಬಿಗ. ೩೦೦). [ಬಲ್$_{2}$ (<ಬಲ್ಲಿತು$_{1}$) + ಮುಳಿಸು$_{2}$]

**ಬಲ್ಮುಱಿ** (ನಾ). ಬಹಳ ಚೂರು ; ಅನೇಕ ಚೂರು : ಬಾಳ ಬಲ್ಮುಱಿಯುಂ ನೆತ್ತರ ಪೂರಮುಂ ನೆಗೆದು ಕಣ್ಗೆಂಬಾಯ್ತು ಬಾನೆಂಬ ಕೆಂಗೆಱೆ ಬೆಂಡೆದರ್ದು ಕಲಂಕೆ ಮಿಾನ್ಮಿಡುಕುವಂತತ್ಯುಗ್ರಸಂಗ್ರಾಮದೊಳ್ (ಅಜಿಪು. ೦೪-೯). [ಬಲ್$_{2}$ (<ಬಲ್ಲಿತು$_{1}$) + ಮುಱಿ$_{2}$]

**ಬಲ್ಮೆ**, ಬಲುಮೆ (ನಾ). ೧. ಬಲ; ಶಕ್ತಿ; ಸಾಮರ್ಥ್ಯ; ಪರಾಕ್ರಮ : ಇನಿತೊಂದು ನುಡಿದ ಬಲ್ಮೆಯೆ ನಿನಗಿಲ್ಲದೊಡೇಕೆ ನಿನ್ನನಾಳ್ದಂ ನಿನ್ನಂ ಮನವೊಲ್ದು ನಟ್ಟಿಯಟ್ಟಿದನಾಕಳಂ ದೂತನಿಂತು ನುಡಿಯಲ್ಕೇಟ್ಟುಂ (ಆದಿಪು. ೦೪-೬೩); ಜೀವಮದೊಂದೆ ದೇಹಮೆರಡಿಂತಿವರ್ಗೆಂಬಭಿಶಂಕೆಯಂ ಧರಿತ್ರೀವಳಯಕ್ಕೆ ಮಾಡುವುದು ತಮ್ಮೊಳಿವಂದಿರ ನಲ್ಮೆ ಬಲ್ಮೆ ಶೋಭಾವಹ ಮೂರ್ತಿ ಕೀರ್ತಿ . . . ಸದೃಶಸ್ವರೂಪದಿಂ (ಶಶೆಪು. ೩-೩೩) ; ಮೊಱೆಗೆ ಮಥನನು ಸಂಗ್ರಾಮದೊಳಿಂದು ತಱಿದು ಜೇಡರ ಬಲ್ಮೆಯನು ಮುಱಿವೆ ವಿಳೆಯುವ ತಾರೆಂದವನರಸನ ನೆಱೆ ಧೀರನಾಗಿ ಬೇಡಿದನು (ಶೇಕಂಸಾ. ೬-೨೩). ೨. ಪರಿಣತಿ ; ನೈಪುಣ್ಯ : ಪ್ರಗಲ್ಭತೆ : ಈ ಬರೆದ ಶ್ಲೋಕಮಂ ಚಾಣಾಕ್ಯನೊಂದು ದಿವಸಂ ಕಂಡಿದು ನೀತಿಶಾಸ್ತ್ರದ ಬಲ್ಮೆಯಲ್ತೆಂದವಂ ಸೀಂಟಿ ತಾನಿಂತೆಂದು ಬರೆದಂ (ಕರ್ಣಾಟ. ೦೬೪-೦೩); ತಪ್ಪದೀ ಲಲನೆ ತತ್ಸ್ವಯಂಪ್ರಭೆಯೆ ನೋಟಿಪ್ಪುದಿ: ಚಿತ್ರವಿಂತಿದಾಕೆಯದೆ ಬಲ್ಮೆ ಪೇಱ ಪೆಱರ್ಗಮಿಂತುಟೊಂದಕ್ಕುಮೇ (ಆದಿಪು. ೪-೬) ; ಕವಿಮಾರ್ಗದೊಳಂ ಪೊಸ ದೇಸಿಯ ನುಡಿಗಳೊಳಂ ಪೊಸೆಯಿಪ ಬಲ್ಮೆಗೆ ಚತುರ್ಮುಖಂ ಕವಿರತ್ನಂ (ಗದಾಯು. ೦-೩೯). ೩. ಶ್ರೇಷ್ಠತೆ ; ಉತ್ತಮಿಕೆ: ಪೊಸದೇಸಿಯೊಳೊಂದಿದ ಮಾರ್ಗಮೊಳ್ಪುವೆತ್ತಸದಿರೆ ಪೇಳ್ದು ರಂಜಿಸದೆ ಕಿಮ್ಮನೆ ಬಲ್ಮೆ [ಪಾಠಾಂ. ಲ್ಕೆ]ಗೆ ಮುಯ್ಯನಾಂಪುದೇ (ಕುಸುಮಾ. ೦-೧೯). ೪. ಹಿರಿಮೆ; ಮಹಿಮೆ: ಪತಿತರ ಪಾವನವೆನಿಸುವ ಬಲ್ಮೆಯೊಳತಿಶಯಮಡೆದ ತೀರ್ಥಗಳು ಸತಿಯರ ಪಾದಸಂಸ್ಪರ್ಶದಿಂ ತಮ್ಮ ದುಷ್ಕೃತವ ಕಳೆಯಲೆಳಸುವುವು (ಹರಿ. ೨-೬). ೫. ಏಳಿಗೆ; ಉನ್ನತಿ :

ಅಭಿವೃದ್ಧಿ : ಅನುದಿನವು ತನ್ನ ದೇಶದ ಬಲ್ಮೆಗಾಗಿ ತನು ಮನ ಧನಗಳನು ಅರ್ಪಿಸುತ ಭಕ್ತಿಯಿಂದ (ಕುಶು. ೧೫-೩). ೬. ಶ್ರೇಷ್ಠವಾದುದು; ಉತ್ತಮವಾದುದು; ಮೇಲಾದುದು : ಕವಿಯೇ ಸರ್ವರೊಳುತ್ತಮಂ . . . ರಸಗಳೊಳ್ ಶೃಂಗಾರವೇ ಬಲ್ಮೆ (ಸೂಸುಶ. ೯). ೭. ಬಲಾತ್ಕಾರ; ಒತ್ತಾಯ ; ಜುಲುಮೆ : ಸುಖಾಸನಾರೂಢ ತನ್ನನಿಯನ ಬಲ್ಮೆಯಲ್ಲದ ನಲ್ಮೆಯ ಪರಮಪದವನೋರೊರ್ವರೊಳ್ ನುಡಿವ ಕೆಳದಿಯರ ನುಡಿಯ ನಾಲಿಸುತ್ತುಂ ನಿಜನಿವಾಸಕ್ಕೆ ಬಿಜಯಂಗೆಯ್ದು (ಜುಜ್ಜ. ೯-೬೬); ನಿಮ್ಮರ ಕೋಪಂ ಪಿಡಿದೊತ್ತಿ ಸೂಳೆಯರೊಳುಗ್ರಾಟೋಪದಿಂ ಬಲ್ಮೆಯಿಂ ನೆರೆವಂ ಭೂಭುಜನಂದನಂ (ರಚೂಶ್ಯ. ೨-೫೮). ೮. ಬೆಂಬಲ : ಒತ್ತಾಸೆ : ಗಂಡನ ಬಲ್ಮೆಯೊಳತ್ತಮಾವಂದಿರ ಗಂಡನನವರ ಬಲ್ಮೆಯೊಳು ಅಂಡಲೆಯದೆಯನುಸರನನುಸರಿಸುವ ವೆಂಡಿರ ಜಸ ಪೆರ್ಚುವುದು (ಹಂಬ. ೯-೩). ೯. (ಅಲಂ) ಔಚಿತ್ಯ ; ಯೋಗ್ಯವಾಗಿರುವಿಕೆ : ಕನ್ನೆಯಿದಲರ್ಗೆ ಯಾಱಿಡಿಗೆ ಶಶಿಬಿಂಬಕ್ಕೆ ರನ್ನಕ್ಕೆ ಪೊನ್ನ ಕಳಸಕ್ಕೆ ತಿಳಿಗೊಳಕೆ ಮಿಗೆ ಚೆನ್ನೆಸೆವ ಬಗಸಿಗಣ್ಣಾಳೆವಮಾನನವಮಧರಕುಚಯುಗ್ಮವೆಸೆವ ನಾಭಿ ಮುನ್ನಮೇ ಸರಿಯೆಂಬ ಬಲ್ಮೆ ಪೊಱಿಮಾಱಿಧಿಕವೆನ್ನಲುಚಿತಂ ತಥ್ಯವೆನಲೆಸೆದಳಾ ಚೆಲ್ವ ಕನ್ನೆ (ಶಾಶಚಂ. ೩-೯೬). ಬಲುಮೆ : ೧. ಬಲುಮೆ ಮಿಗೆ ಜನಬಸದಿಗಳ ಮೇಲೆಲವಪಿಪ ಶಿಖಿರಂಗಳಂ ಭೂತಳಕೆಳೆಯ ನೂಕಿಸುತಿವೆಲ್ಲಂ ನುಚ್ಚುನುಱಿ ಮಾಡಿ (ಜಸಕ್ರ. ೩೦-೬೨) ; ಬಲುಮೆಯಿಂ ನೂಂಕಿ ದಟ್ಟಿಪೆವೆಂದೊಡೆಮ್ಮಂದ ಬಲವಂತರಿಲ್ಲ (ಶಾಂರಕ್ರ. ೯-೬೦) ; ಬಲುಮೆಯುಳ್ಳಡೆ ಕಾದು ನಿನ್ನಂ ಕೊಲದೆ ಬಿಡೆನು (ಚಕಂಡಾ. ೦-೯-೨೬). ೨. ರಾಯ ನಿನಗಾವಿಂದು ದಿಟ ಸಿದ್ಧಾಯವನು ನಾವ್ಪೆತ್ತವಲ್ಲದೆ ವಾಯುಜನ ಫಲುಗುಣನ ಬಲ್ಲಿನ ಬಲುಮೆ ಗಂಜಿದೆವೆ (ಕುವ್ಯಾಸ. ೬-೫೦) ; ತಿಳುಹು ಧರ್ಮಜ ಸಕಲಧರ್ಮಾವಳಿಯ ಸಾರವನೆನಲು ಯಕ್ಷನ ಬಲುಮೆಗವನೀಪಾಲನತಿಪರಿತೋಷದಲಿ ನುಡಿದ (ಕುವ್ಯಾಅ. ೨೫-೩೮). ೩. ಜಲಮಣೆಯ ಬೆಡಗಣಿಕ್ಕಬಹುದೆ ಬಯಲ ಬಂಧಿಸಬಹುದೇ ಬಲುಮೆಯ ರಸಿಕಕ್ಕೆ ಸಲೆ ನಿಲಯ ಉಂಟೇ ಇದು ಸಲ್ಲಲಿತ ಇದಱ ಬಲುಮೆಯ ಹೇಳಾ (ಪ್ರಭುಲಿಮಾ. ೧೫-೪೬೯) ; ಗಿರಿಜೆಯರ ಸಂಗಱುಯಬಾರದ ಪರಮಮಾಹೇಶ್ವರರ ವಿಸ್ಮಯಚರಿತವಂ ವರ್ಣಿಸುವ ದಾನೇತಱವನಂತಾಗಿ ಸರಸದಿಂ ಕೇಳಿಸಿದನಾ ಭಕ್ತರನೆ ಮತ್ತನ್ನಕತವನಱಿಯೆನು ನಿರುತದಿಂದೀಪೊಂದು ಬಲುಮೆಯೊಳಾದ ಪೆಂಪಿಂದ (ಬಸಕ್ರ. ೬೦-೬೬). ೭. ಜಲದೊಳಾಡುತ್ತಿರಲು ಕಂಡನು ನಳಿನವದನೆಯನಾ ಗುಹಾಸುರ ಬಲುಮೆಯಲಿ ರಮಿಸಿದನು (ಸಂಶಕ. ೨೬-೧೦೦೩) ; ಎಲ್ಲವನು ಅಱಿದಿಹರೆ ಬಲ್ಲೆನೆಂದೆನಬೇಕು ಅಲ್ಲಲ್ಲಿಗೊಂದನಱಿದುಲಿಯ ಬಲುಮೆಗೆ ಕಲ್ಲು ಹೊತ್ತಂತೆ (ಸರ್ವಜ್ಞ. ೯೫೨). ೮. ಎನ್ನ ದೇಹದಲಿ ಒಲಿದು ನೀನಿರೆ ನಿನ್ನ ಸಲುಗೆಯ ಬಲುಮೆಯಲಿ ಬರಸಳೆವೆ ಮುಕ್ತಿಯ ಲಲನೆಯನು ತಳುವಿಲ್ಲ (ಶಂಶಾ. ೫೯). 'ಬಲುಮೆವಿಡಿ' ಪರಾ.

ಬಲ್ಮೆ ಮಾಡು, ಬಲುಮೆ ಮಾಡು — ೧. ಭದ್ರಗೊಳಿಸು ; ಬಿಗಿಗೊಳಿಸು ; ಬಲಪಡಿಸು : ಪುರದುರ್ಗಂಗಳ ಬಲ್ಮೆ ಮಾಡದೆ ಪ್ರಜಾಕ್ಷೋಭಂಗಳಂ ನೋಡದೆ . . . ಮದನಂಗಾಳಾಗಿಹಂ ಲೋಕದೊಳ್ ದೊರೆಯೇ ಸೊಕ್ಕಿದ ಕೋಣನ್ಯ (ಸೂಸುಶ. ೩೩). ೨. ಬಲಾತ್ಕಾರ ಮಾಡು ; ಒತ್ತಾಯ ಮಾಡು : ನಮ್ಮ ಮೇಲೆಯೇ ಇಷ್ಟು ಬಲುಮೆ ಮಾಡಲಿಕ್ಕೆ ನಾವೇನು ಅಂಥಾದ್ದು ಆತನಿಗೆ ಮಾಡಿದ್ದೇವು (ಕುಂಜಿ. ೯. ೨-೫೩). [ಬಲ್$_2$ (<ಬಲ್ಲಿತು$_1$) + — ಮೆ]

ಬಲ್ಮೆಕಾಱ 'ಬಲ್ಮೆಗಾಱ' ನೋ.

ಬಲ್ಮೆಗಾರ 'ಬಲ್ಮೆಗಾಱ' ನೋ.

ಬಲ್ಮೆಗಾಱ, ಬಲುಮೆಕಾಱ, ಬಲುಮೆಗಾಱ, ಬಲ್ಮೆಕಾಱ, ಬಲ್ಮೆಗಾರ (ನಾ). ೧. ಬಲವುಳ್ಳವನು ; ಪರಾಕ್ರಮಿ : ಇರ್ಮಡಿ ಬಲ್ಮೆಗಾಱರುಂ ಕಲ್ದು ಕೀಲ್ಬೆಟ್ಟಿಯಾಗ್ದದಱಿಂ ಹೊಂತಕಾಱಗಳನಿಬರುಂ ಪಿಂದೆಗೆದು (ಶಶಚಂ. ೦೬೯-೬). ಬಲುಮೆಕಾಱ : ೧. ಅಳುಕಿದರು ಮನುಮಥನ ಗರುಡಿಯ ಬಲುಮೆಕಾ[ಪಾಠಾಂ. ಗಾ]ಱರು ಬಂದಳಗ್ಗದ ನಳಿನಮುಖಿ ಬಹುಜನದ ಮನಕಚ್ಚರಿಯನೊದವಿಸುತ (ಕುವ್ಯಾವಿ. ೦-೨೬); ತೋಳೆಗಳೊಳಗೆ ದಳಿಗಳ ಪೆಟ್ಟಿ ಲಂಘಿಪ ಬಲುಮೆಕಾಱರ ಮೇಲೆ ನೂಕಿ ತಲೆ ಮೈ ಕೈ ಕಾಲೊಳು ಗೂಟಗಳು ಮಾಡಿ ಸಲೆ ತೊಱಿದರು ಜೀವಗಳನು (ಕಂಶಚ. ೧೯-೬೦). ಬಲುಮೆಗಾಱ : ೧. ಎಲೆ ಧರ್ಮಸುತ ಕೇಳಿಂತೂರ್ವನೆ ರಾಜಬಲವನೆಲ್ಲವ ಬಱಿಕೆಯ್ಕ ಬಲುಮೆಗಾಱರ ಬಲ್ಲಹನು ಜರಾಸಂಧ ನೊಲಿದು ಕರ್ಣನ ಕರೆಸಿದನು (ಕರ್ಣಪ್ರ. ೬-೦). ಬಲ್ಮೆಕಾಱ : ೨. ಶ್ರೇಷ್ಠನಾದವನು ; ಮಹಿಮಾವಂತ : ತೋಱಿದ ಚಿಂತೆಯ ನಿಮಿಷಮಾತ್ರದಿ ಕಡೆಗಾಱುಸುವತಿಶಯರೂಪಾ ಜಾಱದೆ ನನ್ನಂತರಂಗದೊಳಿರು ಬಲ್ಮೆಕಾಱಾ ಚಿದಂಬರಪುರುಷಾ (ಚಕಕ. ೩೯-೦೦೬). ೩. ಚತುರನಾದವನು ; ಚಾಣಾಕ್ಷ : ತಾಂಬೂಲವಸ್ತ್ರಭೂಷಣವಿತ್ತು ನಮಿರಾಜ ತುಂಬಿದ್ದ ಜನವ ಬೀಳ್ಕೊಟ್ಟು ಮುಂಬಾಗಿಲೆಡೆ ಮುಟ್ಟ ಹೋಗಿ ತಿರುಗಿ ಬಂದನೀಂ ಬಲ್ಮೆಕಾಱನೊ ಮಂತ್ರಿ (ಚಕಶ. ೩೬-೬೬). ಬಲ್ಮೆಗಾರ : ೩. ನಿನಗಿನ್ನೂ ಸಿದ್ಧಿ ಸದಿರುವುದು — ಬಲ್ಲ ಬಲ್ಮೆಗಾರನ ಉತ್ಕಟೋಪಭೋಗದ ಪ್ರಥಮಸಮಾಗಮ (ಮುಂತ್ರಕ. ೨೯-೦೦). [ಬಲ್ಮೆ + — ಗಾಱ (< — ಕಾಱ)]

ಬಲ್ಮೆಗೈ (ಕ್ರಿ). ಒತ್ತಾಯ ಮಾಡು; ಬಲವಂತ ಮಾಡು : ಅಂಜಲೇತ ಕೆಲೆ ಬಸವಣ್ಣ ನೀಂ ಕೊಟ್ಟ ಘನಲಿಂಗವುಂ ಕೊಂಡಡಂಗಿದನಿಮಿಷನಂದ ಮನಗಿಲ್ಲ ಬಲ್ಮೆಗೈವವನಲ್ಲಮಿಾ ಲಿಂಗಲಕ್ಷಣಂಗಳನಾದೊಡೆ ಎನಗೆ ತಿಳಿಪು (ಕೊಕ್ರು. ೬-೬). [ಬಲ್ಮೆ + ಗೈ (< ಕೆಯ್$_1$)]

ಬಲ್ಮೆದೆ (ನಾ). ದೊಡ್ಡ ಮೆದೆ : ನೆಲ್ಲ ರಾಶಿಗಳಷ್ಟು ಹೊನ್ನ ರಾಶಿಗಳುಂಟು ಹುಲ್ಲ ಹೆಬ್ಬೆಣಬೆಗಳಷ್ಟು ಜಲ್ಲಿಪಟ್ಟೆಗಳ ಬಲ್ಮೆದೆಯುದ್ದುವವ ನೊಂದು ಹುಲ್ಲಿಗೆ ಕಡೆಗಂಡು ಬಿಟ್ಟ (ಛಕಕ. ೫೦-೦೨).
[ಬಲ್$_2$ (< ಬಲ್ಲಿತು$_1$) + ಮೆದೆ$_1$]

ಬಲ್ಮೆಯಲ್ (ನಾ). ದೊಡ್ಡ ದೇಹ ; ನಿಡಿದಾದ ಶರೀರ : ಜಟಾ ದೋಱಿದ್ದಯ ಬಳ್ಳಿಳಬೆಳೆದಾ ಬಲ್ಮೆಯ್ಯ ಕೂಡೆ ಪೆರ್ಚಿದ ಕೈಯಂ ಒಳವುಗಿಸಲೆನ್ನ ಕಾತ್ರೆರ್ದೆಗೊಳಗಕ್ಕಮಾ ಖರ್ವತನುವ ಕರುಣಾಹಸ್ತಂ (ಚಕ್ರಕಂ. ೫೦). [ಬಲ್$_2$ (<ಬಲ್ಲಿತು$_1$) + ಮೆಯ್$_1$]

ಬಲ್ಮೆವಂತ (ನಾ). ೧. ಶಕ್ತಿವಂತ; ಬಲಶಾಲಿ; ಸಮರ್ಥ : "ಶಕನ್, ಶಕಾನಃ, ಶಕ್ತಃ, ಶಕ್ತವಾನ್, ಈ ೪ ಬಲ್ಮೆವಂತಂ" (ಶಾಕಕ್ಕ. ೨೦೯). ೨. ಚತುರ; ನಿಷ್ಣಾತ; ಜಾಣ : ಬಲ್ಮೆವನ್ತನ ಮುದ್ದುನುಡಿಗಳ ಕಟ್ಟಳಸಿನ ತುಮುಲಕೋಲಾಹಲದ ವಿಕಾರಾಭಾಸವನ್ನು ಸೂಕ್ಕುಕ್ಕಿದು (ಮುಂತ್ರಕ. ೦೯೦-೯). [ಬಲ್ಮೆ + — ವಂತ]

ಬಲ್ಮೆಳೆ. ಬಲುಮೆಳೆ (ನಾ). ಗಿಡಬಳ್ಳಿಗಳ ದಟ್ಟವಾದ ಪೊದೆ; ಒತ್ತಾಗಿ ಬೆಳೆದ ಗಿಡ ಮರಗಳ ಗುಂಪು.—ಪೊದರು : ನೆವವಿಟ್ಟು ಮೊರೆವಣಗಳಂ ತವಕದಿನಂದಱಸುವಂತೆ ಬಲ್ಮೆಳೆಗೊಲ್ಲುತ್ಸವದಿಂ ಮೆಲ್ಲನೆ ಪೋದಂ ಯುವತಿಯನೊಡಗೊಂಡು ಶಬರಕಾಮುಕನೊರ್ವಂ (ಉದ್ಭಟ. ೨-೬೬). ಬಲುಮೆಳೆ ; ಸುಮಹಾರಥರ ಹೊದಱಲಿ ಹೊಕ್ಕನುಱಿ ಬಲುಮೆಳೆಯ ಹೊಕ್ಕಂತೆ (ಕುವ್ಯಾದ್ರೋ. ೨-೬೦). [ಬಲ್$_2$ (<ಬಲ್ಲಿತು$_1$) + ಮೆಳೆ]

ಬಲ್ಮೊಗ (ನಾ). ಗಡುಸಾದ ಮುಖ; ಗಂಭೀರವಾದ ಮುಖ : ಅತಿಬಳಮಹಾರಾಜಂ . . . ಪೆಱರ ಮಾರ್ಗದೊಳಿರ್ದಪಲ್ಲದೆ ತಱಸಂದು ನೆಗಟಲೆಂದು ಮೇಲ್ಮೆಗೆಯ್ಮದೆ ಬಲ್ಮೊಗಂ[ಪಾಠಾಂ. ಬಲುಮೊಗಂ] ಮಾಡಿ ತನ್ನಳಿಯಂದಿರ ಮೊಗಮಂ ನೋಡಿ . . . ಎಂಬುದುಂ (ಶುಕಸಪ್ತ. ೨-೬೫). [ಬಲ್$_2$ (< ಬಲ್ಲಿತು$_1$) + ಮೊಗ]

ಬಲ್ಮೊರಡಿ (ನಾ). ದೊಡ್ಡ ಪರ್ವತ; ಭಾರಿ ಬೆಟ್ಟ.

ಬಲ್ಮೊರಡಿಯ ಕನ್ನೆ = ಪರ್ವತರಾಜನ ಮಗಳು ; ಗಿರಿಜೆ; ಪಾರ್ವತಿ : ಮುನ್ನೀರಣುಗಿ ಮುರಾರಿ ಬಲ್ಮೊರಡಿಯ ಕನ್ನೆ ಕಪರ್ದಿ ವಾಗ್ದೇವಿಸ ನ್ನುತಬಿದಿಗಳೊಪ್ಪಿದವೋಲೊಪ್ಪಿದರತ್ಯುನ್ನತಿಕೆಯೊಳಾ ಪ್ರಿಯರು (ಶ್ರೀಶಾಂ. ೧೦-೩೬). [ಬಲ್$_{2}$ (<ಬಲ್ಲಿತ್ತು$_{1}$) + ಮೊರಡಿ$_{1}$]

**ಬಲ್ಮೊರೆ** (ಕ್ರಿ). ಜೋರಾದ ಝೇಂಕಾರವನ್ನು ಮಾಡು : ಮಿಸು ಪಲರಂಬುಗಳರ್ಕಿಂ ಬೆಸಕೆಯ್ಯಡೆ ವಾಲೆವ ಬೀರರಂ ಪರಿದೆಂಟುಂದೆಸೆಗಳೊಳಂ ಕಾಣೆವೆನಿಪ್ಪ ಸರದೆ ಬಲ್ಮೊರೆವುವೀಗಳಾಜಿಡಿ ನೆವದಿಂ (ಕಣ್ಣಾ. ೧೬೩). [ಬಲ್$_{2}$ (< ಬಲ್ಲಿತ್ತು$_{1}$) + ಮೊರೆ$_{1}$]

**ಬಲ್ಮೊಲೆ, ಬಲುಮೊಲೆ** (ನಾ). ತುಂಬಿದ ಸ್ತನ ; ತೋರವಾದ ಕುಚ : ನೆಟ್ಟನೆ ಮೊಗ ನೋಡಿ ಮುದ್ದಿಪ ತರಳನ ಪುಟ್ಟ ಕೈಗಳ ತಂದು ತನ್ನ ಬಟ್ಟ ಬಲ್ಮೊಲೆಗಡರ್ಚುವಳು (ಕೋಚಕ. ೦೦-೩೬); ಅಡರ್ದ ಬಾಸೆಯ ಬಲ್ಮೊಲೆಗಳ ಥಳಥಳಿಪ ನುಣ್ಗೊರಲ . . . ತುಂಬಿಗಳ ಪೋಲ್ವ ಸುಗುರುಳ್ಗಳ ಪೆಣ್ಗಳೆರ್ದರಂದರಸನೊಡ್ಡೋಲಗದೊಳು (ಕಂಪು. ೬-೦೨). **ಬಲುಮೊಲೆ :** ಬಲುಮೊಲೆಯ ಸೋಂಕಿನಲಿ ಶಾಂತರ ತಲೆಕೆಳಕ ಮಾಡುವವು ಕಡೆಗಣ್ಣಾಲಗಿನಲಿ ಕೊಯ್ದುತ್ತುವವು ವಿಜಿತೇಂದ್ರಿಯರ ಮನವ (ಉತ್ತ್ಯ. ೦೬-೦೧); ಬಲುಮೊಲೆಯ ಬಾಸೆಗಳ . . . ಪುಳಿನ ಜಘನಸ್ಥಳದ ದಾನವಸತಿಯರಿರ್ದರದೊಂದು ತಾಣದಲಿ (ಕೂರಣ. ೩-೨-೬೯); ನಳಿತೋಳ ಸಳಿನಡು ಬಲುಮೊಲೆಯ . . . ಮುತ್ತುದೊಡವಿನ ಚೆಲುವೆ ವಾಗುರಿ ಮಡದಿಯಾವಿಂಧ್ಯಕಗೆ (ಶಾಕ್ಷಣಾ. ೩-೦೦). [ಬಲ್$_{2}$ (< ಬಲ್ಲಿತ್ತು$_{1}$) + ಮೊಲೆ$_{1}$]

**ಬಲ್ಮೊಸರ್** (ನಾ). ಗಟ್ಟಿಯಾದ ಮೊಸರು : ಅಜ್ಜಯುಂತಮಪ್ಪುವ ಮಲ್ಲು ತೊಡೆಯೊಳ್ ಪೋಪವಂಗೆ ತಪ್ಪವನಿಕ್ಕಿದೇತಿಕ್ಕಿದ ಗಟ್ಟಿಗೊಂಡ ಬಲ್ಮೊಸರಂ ಕೋಡು ಪುದುಳಿಸಿ ನಿಂದ ಬಟಿಕ್ಕಂ (ವಡ್ಡಾರಾ. ೦-೦೯೬). [ಬಲ್$_{2}$ (< ಬಲ್ಲಿತ್ತು$_{1}$) + ಮೊಸರ್]

**ಬಲ್ಮೊಳಗು** (ನಾ). ಜೋರಾದ ಗುಡುಗು : ಪೊಳೆವ ಮಿಂಚುಗಳ್ಕೆಸೆ ತೇಜಿಗಳಿವಲ್ಲ ಬಲ್ಮೊಳಗುಗಳಿವ್ವಸೆ ರಥಚಕ್ರಧ್ವನಿಗಳಲ್ಲ . . . ಕಂಗೊಳಿಪ ಕಾರ್ಮುಗಿಲ್ಗೆಸೆ ಕೃಷ್ಣನಲ್ಲಿಂಬಪೋಲ್ಮೊಳುಗುವಳೆ ಮೈದೋಚ್ ಕಂಡು ಕಲಿಸಿಂಹದಂತಿದಿರಾದನನುಸಾಲ್ವನು (ಕೃಷ್ಣಚ. ೬-೩೦). [ಬಲ್$_{2}$ (< ಬಲ್ಲಿತ್ತು$_{1}$) + ಮೊಳಗು$_{2}$ (< ಮೊಳಗು$_{1}$) ]

**ಬಲ್ಯುಪಹಾರ** (ನಾ). ಬಲಿಯಾಗಿ ಅರ್ಪಿಸುವ ನೈವೇದ್ಯ : ಈ ಚತುಸ್ಸೀಮೆಯುಮಾನೊಳಗಾಗೆ ಒಡೆಯ ದೊಡ್ಡವಾಡಿಯ ಕಿಟ್ಟ ಬಾಳೆಜಿತ್ತಿ ಭಟಾರಂಗೆ ಬಲ್ಯುಪಹಾರಕ್ಕೆ ದೇವಭೋಗವಾಗಿ ಕೊಟ್ಟುದು (ಎಕ. IX (8), ಕಂಗೆಳಿ. ೦೩೦-೩೧; 828). [ ಸಂ. ]

**ಬಲ್ಲ$_{1}$** ' ಬಲ್$_{1}$ ' ಪರಾ.

**ಬಲ್ಲ$_{2}$** ' ಬಲ್ಲೆಯ ' ನೋ.

**ಬಲ್ಲ$_{3}$** (ನಾ). ಒಂದು ಊರಿನ ಹೆಸರು ; ಈಗಿನ ಕೋಲಾರ ಜಿಲ್ಲೆಯ ಮುಳಬಾಗಿಲು ತಾಲ್ಲೂಕಿನಲ್ಲಿದೆ : ಸ್ವಸ್ತಿಶ್ರೀ ಇಜಿಪ ನೊಳಂಬ ಪೃಥಿವೀರಾಜ್ಯಂಗೆಯ್ಯುತ್ತಿರೆ ಬಲ್ಲದ ತುಱುಗೊಳ್ಗೋಡೆ ಕೊಟ್ಟೆಯಯ್ಯರಿದುಂ ಬಲಿಪಯಂ ತುಱುವನಿಕ್ಕಿ (ಎಕ X, ಮುಳಬಾ. ೩೨-೨ ; ಸು. ೯೫೦); ಬಲ್ಲದ ಲೆಕ್ಕ ಮನೆಮುದ್ದಮಲ್ಲಯಂ . . . ತುಱುವಂ ಕಟ್ಟಿ ಕಾದು ಸತ್ತು ಸಗ್ಗಿಯಾದಂ (ಕ್ಕೂಆರ. ೦೯೨೬, ೯೬-೩; 10ನೆಯ ಶತ). [?]

**ಬಲ್ಲಂಕ** (ನಾ). ದೊಡ್ಡ ಯುದ್ಧ : ತಳಿಯಾಗಲಿ ಹೂಡಿ ಬಲ್ಲಂಕವಾದುದು ಬಲುಹಾದುದು ಪಿಳ್ಳಗೋಂಟೆ ಎಲುವಿನ ಕಟ್ಟನ ಸೊಡರು ಕಿಂಥಿಣಿಯಾಗಿ ತಳತವು ತೆನೆತನೆಗಳಲಿ (ವಾಗಳು. ೦೬-೩). [ಬಲ್$_{2}$ (<ಬಲ್ಲಿತ್ತು$_{1}$) + ಅಂಕ$_{2}$]

**ಬಲ್ಲಂಗಿ** (ನಾ). ಒಂದು ಬಗೆಯ ಸಸ್ಯ : (ವೃಷಭ. ೬೩-೦೨೮೮); (ಸಸ್ಯಕೊ. ೦೦೮). ' ಬಲ್ಲಗಿ ' ಪರಾ. [?]

**ಬಲ್ಲಂತಿಕೆ** ' ಬಲ್$_{1}$ ' ಪರಾ.

**ಬಲ್ಲಕುಂದ, ಬಲ್ಲಕುಂದೆ** (ನಾ). ಒಂದು ನಾಡಿನ ಹೆಸರು : ಶ್ರೀಮತ್ತ್ರೈಲೋಕ್ಯಮಲ್ಲ ನನ್ನಿನೊಳಂಬ ಪಲ್ಲವಪೆರ್ಮಾನಡಿದೇವರು ಕೊಂಗಳಿಯ ಯ್ಯಾಱುಂ ಕದಂಬಳಿಗೆಸಾಸಿರಮುಂ ಬಲ್ಲಕುನ್ದ ಮೂನೂಱುಂ . . . ಸುಖಸಂಕಥಾವಿನೋದದಿನಾಳುತ್ತುಮಿರೆ (ಎಕ. XI, ದಾವಣ. ೨೦-೯; 1045). **ಬಲ್ಲಕುಂದೆ :** ಶ್ರೀಮದಿಱುವ ನೊಳಂಬಾಧಿರಾಜಂ ನೊಳಂಬವಾಡಿ ಮೂವತ್ತಿರ್ಚ್ಛಾಸಿರಮುಂ ಕೆಂಗಟಿಯ್ಯೆನೂಱುಂ ಬಲ್ಲಕುನ್ದೆಮೂನೂಱುಂ . . . ಸುಖದಿನಾಳುತ್ತುಮಿರೆ (ಎಕ. XVI, ೨೯-೦೨; 1010). [ ? + ಕುಂದು$_{2}$ ]

**ಬಲ್ಲಕುಂದೆ** ' ಬಲ್ಲಕುಂದ ' ನೋ.

**ಬಲ್ಲಗ** ' ಬಲಿಗೆ ' ನೋ.

**ಬಲ್ಲಗಿ** ' ಬಲಿಗೆ ' ನೋ.

**ಬಲ್ಲಡಗು** (ನಾ). ಉತ್ತಮವಾದ ಅಡಗು ; ಶ್ರೇಷ್ಠವಾದ ಮಾಂಸ : ಬಲ್ಲಡಗಿಲ್ಲದೊಡುಣಸಣಮಿಲ್ಲೀ ಪ್ರಭುಗೆನುತಮುವನ ತೊಡೆಯಡಗನೆ ತಳ್ವಿಲ್ಲದವಂಗಿಕ್ಕುವರೇಂ ಪೊಲ್ಲದುದೋ ಮಾಂಸಸೇವನಪ್ರತಿಪಾಪಂ (ಶಾಂತಿಪು. ೬-೯೬). [ಬಲ್$_{2}$ (<ಬಲ್ಲಿತ್ತು$_{1}$) + ಅಡಗು$_{3}$]

**ಬಲ್ಲಡವಿ** (ನಾ). ಗಹನವಾದ ಅರಣ್ಯ; ದಟ್ಟಡವಿ: ಬೀಡಿಂಗೆ ಬೀಡುವಿಡಲ್ ನೆಲನುಮೊಲೆಗಲ್ಗಳ್ಕೆ ಬೆಟ್ಟುಗಳುಂ ಗುಡಿಯ ಗೂಂಟಕ್ಕೆ ಬಲ್ಲಡವಿಗಳುಂ . . . ಆ ಪಡೆಗೆ ನೆಱೆಯುವೆನಿಸಿ . . . ಬಂದು (ಶಂಕರಾ. ೯-೦೦೧ ವ); ತಾಂಗಿಮುದು ಗಾಳಿಯುಂ ದೆಸೆಯುಂ ಗವಸಣೆಸಿದಂದು ಮೇಗೆ ಮೊಗೆದಾಗಸಮಂ ನುಂಗಿದುದೆನೆ ಕಟ್ಟಲಿಸಿ ಕಜಂಗಿದ ಬಲ್ಲಡವಿ ಕಣ್ಗೆ ಪಡೆದುದಗುರ್ವಂ (ಶಂಕರಾಪು. ೬-೦೧೯). [ಬಲ್$_{2}$ (<ಬಲ್ಲಿತ್ತು$_{1}$) + ಅಡವಿ]

**ಬಲ್ಲಣೆ** (ನಾ). ದೊಡ್ಡ ಸೈನ್ಯ; ಭಾರಿ ದಂಡು : ತುರಗದಟಂಗಳ ನೊಡ್ಡಿದ ಕರಿಘಟೆಯಂ ಪಿರಿಯ ನೆರ[ವಿ]ಯಂ ಬಲ್ಲಣೆಯುಂ ಧುರದೆಡೆಯೊ[೪]ಱಿದು ಗೆಲ್ದಂ (ಎಕ. X, ೦೩೦-೦೦ ; 918); ಪಸರಿಸಿ ಪೊಕ್ಕು ಕೂಕಿಱಿದು ಕಾದುವ ಬಲ್ಲಣೆಗಳ್ ಪಳಂಚಿ ಪಾಯಿಸುವ ದಟಕ್ಕಗುರ್ವೆಸೆಯೆ ನೂಂಕಿವ ಬಲ್ಲಣೆಗೆತ್ತಮೆಯ್ದೆ . . . ತುಱುಗಾಜಿರಂದಿನಿಸು ಬಲ್ಲಲನಾದುದದೊಂದು ಕಾಳಗಂ (ಶಂಕರಾ. ೯-೯೩); ಕಾಲ್ಗಾಪಿನ ಬಲ್ಲಣೆಯೊಳ್ ಬಲ್ಗಿಪ್ಪುದಿನಿಱಿದು ಮಾಡಿಯ ನೆತ್ತರ ತೂಱಿಗಳ್ ಗಲ್ಗಲನೆ ಪರಿಯೆ (ಶಂಕರಾಪು. ೧೩-೬೯). [ಬಲ್$_{2}$ (<ಬಲ್ಲಿತ್ತು$_{1}$) + ಅಣ್ಣೆ$_{1}$]

**ಬಲ್ಲತನ** 'ಬಲ್$_{1}$' ಪರಾ.

**ಬಲ್ಲಹ** (ನಾ). ಒಬ್ಬಾತನ ಹೆಸರು : ಶ್ರಿಧರಯ್ಯ ಬರೆದ ಪೇಣಿಗಳಂ . . . ಮೋಣಿಗಳಂ ಪೋಗಿ ಪೊಗಚಕೆಲ್ಲಂಗೆಱೆಯೊಳ್ ತಾಱ್ಗಡಕೊಳ್ವೆನೆಸ್ವಾ ಬಲಗರ್ವ್ವದೆ ಬಲ್ಲಹನಲ್ಲಿಗೋಗಿ ಕಾಯ್ವೊಱ್ಗಿಡೆಯಾಗದನ್ತು ನಡಿದಾಪ್ಪನ ಮೆಚಿಸಿಕೊಣ್ಡಾರ್ (ಎಕ. V, ಬೇಲೂರು. ೦೨೩-೪೦; 95?); ಸ್ವಸ್ತಿಶ್ರೀ ಸಕ ನೃಪಕಾಲಾತೀತ ಸಂವತ್ಸರಂಗ ೯೦೮ ನೆಯ ವರ್ಷದ ವ್ಯಯಸಂವತ್ಸರ ಪ್ರವರ್ತ್ತಿಸೆ ಬಲ್ಲಪಂ ಗಂಗವಾಡಿಗೆ ಬನ್ದ ಕಾಲದೊಳಗೆಯುರಿಂ ರಾಜ್ಯಂಗೆಯೆ (ಎಕ. III, ಮುಳಬ. ೩೫-೩; 986). [ ? + ಅಪ (<ಅಪ್ಪ$_{1}$) ]

**ಬಲ್ಲಭ** 'ಬಲ್ಲಹ$_{1}$' ನೋ.

**ಬಲ್ಲಯ್ಯ** (ನಾ). ಒಬ್ಬಾತನ ಹೆಸರು : ಸುಙ್ಕದ ಬಲ್ಲಯ್ಯಂ ದೇಗುಲಕ್ಕೆ ಕೊಟ್ಟ ಪನ್ನೆರಡು ಮತ್ತರು ಕೆಯ್ಯುವ . . . ಕೊಟ್ಟು ಬಿಡಿಸಿದೋಂ (ಕಾಇಶಾ. XI-i, ೯೨.೨೦; 971); ಬಲ್ಲಯ್ಯ ಅಮ್ಮಯ್ಯ ರಾಯ್ಯ ಕೇಸವ ಸಾಹಣಿಯ ಸಿರಿಯಣ್ಣಾ (ಎಕ. VII, ಚನ್ನಗಿ. ೩೨-೩೩; ಸು. 1050?). [ ? + ಅಯ್ಯ$_{61}$ ]

**ಬಲ್ಲರಕ್ಕಸಿ** 'ಬಲರಾಕ್ಷಸಿ' ನೋ.

**ಬಲ್ಲರಿಕೆ** 'ಬಲ್$_{1}$' ಪರಾ.

**ಬಲ್ಲಲಮರ** (ನಾ). ಒಂದು ಬಗೆಯ ಮರ : ಕೆಂಮುಂಣುಪೋಣಿಯ

ವೊಳಗೆ ಬಲ್ಲಲವರನ ಅಡಿಯುಲಂ (ಎಕ. VIII. ತೀರ್ಥಹ. ೨೦೬-೨೭. 1415).
[? + ವರ₁]

**ಬಲ್ಲವ₁** 'ಬಲ್₁' ಪರಾ.

**ಬಲ್ಲವ₂** (ನಾ). ೧. ಅಡಿಗೆಯವನು. ೨. ಅಜ್ಞಾತವಾಸದ ಕಾಲದಲ್ಲಿ ಭೀಮನು ವಿರಾಟನಗರದಲ್ಲಿ ಅಡುಗೆಯವನಾಗಿದ್ದಾಗ ಹೊಂದಿದ್ದ ಹೆಸರು : ಭೀಮನು ನಾನು 'ಬಲ್ಲವ' ನೆಂಬ ಹೆಸರಿಟ್ಟುಕೊಂಡು ವಿರಾಟನ ಹತ್ತಿರವಿರಲೋಣವೆಂದಿದ್ದೇನೆ . . . ಎಂದನು (ಕಕಭಾ. ೦೯೪). [ಸಂ.]

**ಬಲ್ಲವತಿ** (ನಾ). ಒಂದು ಊರಿನ ಹೆಸರು (?) : ತೈಲಪನ ವ × × × ನ ಕಳಿಗದಲ್ ಬಲ್ಲವತಿಯು ಬ್ರಹ್ಮನೊಡನೆ ಕ × × × ಪಂಚಲ ದೇವನ್ ಸಾಲ್ಲಿ ಬ್ರಹ್ಮನಂ ಕಟುಪಿ (ಮೈಆಂ. ೦೯೬೨; ೨-೪; 973). [?]

**ಬಲ್ಲವರಸ** (ನಾ). ಒಬ್ಬಾತನ ಹೆಸರು : ಸ್ವಸ್ತಿ ಶ್ರೀಪುರುಷಮಹಾರಾಜರ್ ಪೃಥುವೀರಾಜ್ಯಂಕೆಯ್ಯೆ ಬಲ್ಲವರಸರ ಬಾಳದುಳ್ ಸೀಯು × × × ರಣಾಧ್ವರ × ಸಳಿನಾಡಾ ಬಾಗೆಯವೆಱದು ವಿಟ್ಟ್ಯಾನ್ (ಎಕ. XVI. ತುಮಕೂ. ೯೩-೭; ಸು. 780) ; ಬಲ್ಲವರಸರ್ ರೋಣದ ಮಹಾಜನಕೆ (ಎಕ. XIII. ೦೬೩-೭; 874). 'ವಲ್ಲವರಸ' ಪರಾ. [< ವಲ್ಲಭ + ಅರಸ₁]

**ಬಲ್ಲವಿಕೆ** 'ಬಲ್₁' ಪರಾ.

**ಬಲ್ಲವಿಕೆತನ** 'ಬಲ್₁' ಪರಾ.

**ಬಲ್ಲಸಿ** (ನಾ). ಬಲವಾದ ಶಕ್ತಿ : ಪಾರಮರಂ ಮೂಱೂರ ಮುಕ್ಕೂಡಲಲ್ಲಿ ಪೊಲಸೀಮೆ ಕೊಡಿತ್ತುಂ ಕಡೆಕೊಳಂದ ಮಣ್ಣಗಪ್ಪೊಂಬ್ಗಲಂ ಕೊಡಲಿಯುಂ ಬಲ್ಲಸಿಯ ಕಮ್ಮಟಂ ಮುಬ್ಬಗೆರಿಯೊಡೆಯೊಂ ಒದಲ ಪೋಲೆಯುಂ ಮಬ್ಬಳಂ (ಮೈಆಂ. ೦೯೩೭, ೩೬-೨೨; 11ನೆಯ ಶತ).
[ಬಲ್₂ (< ಬಲ್ಲಿತು₁) + ಅಸಿ₂]

**ಬಲ್ಲಹ₁**, ಬಲ್ಲಭ, ವಲ್ಲಹ (ನಾ). ೧. ಒಡೆಯ ; ಯಜಮಾನ : "ಅಣ್ಣಂ, ಎಟಿಯುಂ, ಬಲ್ಲಹಂ — ಈ ೩ ಅಧಿಪತಿಗೆ ಪೆಸರ್" (ಶಬಶಾ. ೬೦-೩೨೦) ; ಕೊಡುವ ಬಾಡಕ್ಕಂ ಜೀವಧನಂಗಳ್ಗಂ ಬಿಡುವೆಣ್ಗಂ ಲೆಕ್ಕವಿಲ್ಲೆನಿಸಿ ರಾಗಂಗಿಡದೆ ಕೊಂಡಾಡಿದಂ ಬಲ್ಲಹನಱಿಯೆ ಗುಣಾರ್ಣವಂ ಕವಿತಾಗುಣಾರ್ಣವನಂ (ಪಂಪಭಾ.೦೯-೩೩) ; ತೊತ್ತಿಂಗೆ ಬಲ್ಲಹನೆಂಗಿಗರೆ ಪದವಿಯ ಮಾಡದೆ ಮಾಣ್ಬನೆ (ಬಸವ. ೪೬೪). ೨. ರಾಜ ; ದೊರೆ : ಬಲ್ಲಹನ ಬೆಸದೊಳೊಱಟರ ಮಲ್ಲಂ ದಲ್ಲನ ತನೂಭವಂ ಕರಹಟದಿಂ ಮಲ್ಲಪನು ಬೆನ್ನಟ್ಟಿದ ಬಲ್ಲಾಳ್ತನದಿಂ ನಿಜೇಶನಂ ಮೆಚ್ಚಿಸಿದಂ (ಶಶಪು. ೦-೪೩) ; ಬಲ್ಲಹನುಂ ಸಾಮಂತರುಮೆಲ್ಲಾ ಪ್ರಜೆಯುಂ ಶಿವಂಗೆ ಭಕ್ತರೆ ಜೈನಂ ಪೊಲ್ಲಪ್ಪ ಕತದೆ ಕೈಕೊಳಲೊಲ್ಲ ನ್ನಾಡವರ್ಗಳದಱಿನೆಂಬಮರ್ೞರ್ಖಿರ್ (ಸಮಕ. ೦೩-೦೩) ; ಹಲಬಗೆ ನಾಡು ನಾಡುಗಳು ಬಲ್ಲಹನುತ್ತಮವಸ್ತುವಿಸ್ತೃತಂ (ಎಪ. XIII. ೩೦೭-೬೩; 11೩೬). ೩. ಪರಾಕ್ರಮಿ ; ಸಾಹಸಿ ; ವೀರ ; ಶೂರ : ಪರಸು ಸುಭಾರ್ಧ್ಯಾಲೋಚನದಿನೀಕ್ಷಿಸಿ ನಂದನನಂ . . . ಇದಾರರಸನಿದಾರ ಬಲ್ಲಹ ನಿದಾರ ಕರೀಂದ್ರನಿದಾರ ಸಿಂಹಮೆಂದಿರ್ದಮರ್ದಟ್ಟಿದಳ್ (ಜಗಪಿ. ೩-೩೪). ೪. ಗಂಡ ; ಪತಿ : ಬರುತಾ ಬಲ್ಲಹನೇಱದ ಗಾಲಿಯ ಸರದ ಶಕುನಿಮಂಚದ ಮೇಲೆ . . . ಒಪ್ಪಂಬಡೆದಿರ್ಪ ಅರಸಂಚೆಯ ಕ್ರೀಡುದುಪ್ಪುಳುಮಾಸಂ ಹರಿಸದಿನೇಱದಳಂಗೋದ್ಯವನದರ್ದರಗಳಿ ಹೂಡಿದ ಹೂದೇರೇಱಿಮ ರತಿಯಂಬಂದದೊಳು (ಜಯುಕಾ. ೨-೩೨) ; ಜಲನಿಧಿಯೆಂದು ಸಂದ ಪೊಟಿಪೆಣ್ಗಳ ಬಲ್ಲಹನೆಂದುಮೇಟಿಸ್ಗಿಯಂ ತಳೆದಿರೆ (ಜಶಂ. ೦-೩೭). ೫. ಒಬ್ಬಾತನ ಹೆಸರು : ಸ್ವಸ್ತಿಶ್ರೀ ಬಲ್ಲಹಂ ಪ್ರಿಥುವಿರಾಜ್ಯಙ್ಗೆಯ್ಯೆ (ಎಪ. VI. ೦೬೭-೦ ; 793) ; ಸ್ವಸ್ತಿಶ್ರೀ ಕನ್ನರ ಬಲ್ಲಹ ದಳಿಗವಟಿಗೆಯನಾಳೆ (ಎಕ. X (S). ಮುಳಬಾ. ೦೯೭-೨ ; ಸು. 850) ; ನೆಲದ ನೇಸಲ ಉಳ್ಳನೆಗ ಬಿಟ್ಟ ಇದು ಬಲ್ಲಹನ ದತ್ತಿ (ಸೌಇಇ. IX-I. ೩೪-೭ ; ಸು. ೮ನೆಯ ಶತ) . ಬಲ್ಲಭ : ೫. ಸ್ವಸ್ತಿ ಸಮಧಿಗತ ಪಞ್ಚಮಹಾಶಬ್ದಂ ಪದಡಕ್ಕೆ ದಳಿಧ್ವಜ ಸಾಮನ್ತ × × × ಮಹಾಮಹಾ ಸಾಮನ್ತಾಧಿಪತಿ ಶ್ರೀ ಬಲ್ಲಭ × × × ಹಾ ರಾಜಾಧಿರಾಜ (ಎಕ. II. ೩೩-೨ ; ಸು. 800). ವಲ್ಲಹ : ೫. ಸ್ವಸ್ತಿಶ್ರೀ ಶ್ರೀಪುರುಷ ರಾಜಂಗೆಯ್ಯೆಯೆ ಸಿಯಗೆಲ್ಲರಾ ಮಣೆಮಗತ್ತಿನ್ ಬಲ್ಲಹನಾ ಬೆಸಸಿ ಗಂಗರ ವಲ್ಲಹ × × ಮಾನಿಱಿದು ಸತ್ತ (ಎಕ. XVI. ತುಮಕೂ. ೬೬-೬ ; ಸು. 775) ; ಶ್ರೀ ಶಿವಮಾರ ಸೀಯಗೆಲ್ಲರ್ಕ್ಕಾಗಿಮೊಗೆ ಊರೊಳ್ ವಲ್ಲಹನಂ ಬಾಳದುಳ್ ಶಮ್ಮುತುರ್ವರಂ × × ಎಱಿದು ವಿಟ್ಟ್ಯೊನ್ (ಎಕ. XVI. ತುಮಕೂ. ೦೯-೨; ಸು. 780). ಬಲ್ಲಹರ ಬಲ್ಲಹ = ಒಡೆಯರಿಗೆ ಒಡೆಯನಾದವನು ; ಮಹಾಪ್ರಭು : ಬಲ್ಲಹರ ಬಲ್ಲಹನವಿರ ತೋತ್ತುಪ್ಪಲಮುಖಕಮಳಂ (ಶಶಪು. ೬-೧) ; ಬಲ್ಲಹರ ಬಲ್ಲಹನೆ ನೀನೇ ಬಲ್ಲೆ ಕರುಣಿಪುದೆಮಗೆ ಲಕ್ಷ್ಮೀವಲ್ಲಭನ ಲೀಲಾವತಾರಕಥಾಪ್ರಸಂಗವನ್ನು (ಕಜಾಗ. ೦೦-೦೯). [< ಪ್ರಾ. ವಲ್ಲಹ. / ಸಂ. ವಲ್ಲಭ]

**ಬಲ್ಲಹ₂** (ನಾ). (?) : ಒಂದು ಕಲ್ಲಿನ ಗವಿಯಿಂದ ಬಲ್ಲಹವಾದೀತು ದಿವ್ಮಸಾಲೆ ಪಟ್ಟದ ಬಿದುನೂರು ಹೊಟ್ಟಾಗಿ ಹೋದೀತು ದಿವ್ಮಸಾಲೆ ಮುಂದೆ ಪಟ್ಟಕ್ಕೆ ವೀರವಸಂತನು ಬರುತಾನೆ ದಿವ್ಮಸಾಲೆ (ಕಾಂಸಂ. ೬೦-೨೦). [ ? ]

**ಬಲ್ಳಳತಟ್ಟೆ** 'ಬಲ್ಲಾಳದಟ್ಟಿ' ನೋ.

**ಬಲ್ಲಳದಟ್ಟಿ** (ನಾ.) ಒಂದು ಬಗೆಯ ಬಟ್ಟೆ : ಕಟ್ಟುವಣ್ಣದ ಪಟ್ಟೆ ಬಲ್ಲಳದಟ್ಟಿ [ಪಾಠಾಂ. ಪಟ್ಟೆ] ಭೂಸಲೆ ಮೇಘವಣ್ಣದ ಪಟ್ಟೆ . . . ಇವು ಮೊದಲು ಥರಥರದೊಳಂದೆಮ್ಮವರುಗಳು ಪಡೆದೊದವಿಸಿದಯಾ ವಿವಿಧ ಪಟ್ಟಾವಳಿಗಳುಂಟು (ಶಶ್ಯ. ೦೦-೨೭). [ಬಲ್ಲಳ ? + ದಟ್ಟಿ₁]

**ಬಲ್ಲಾಣಿಕಾಱ** (ನಾ). ಶ್ರೇಷ್ಠನಾದ ರತ್ನಪರೀಕ್ಷಕ : ವಾಣಿ ಮಹಿಯಂ ಬರೆವಳ್ . . . ಕ್ಷೋಣಿ ವಿಶ್ವಾಸಿಯಾಗಿಹಳ್ ವ್ಯೋಮದೊಳಗೆ ಬಲ್ಲಾಣಿಕಾಱ ಧನಂಜಯ ಜಯಕ್ಕೀಶಾನ್ಯ ಹೂಣಿಗನೆನಲ್ಕದುಶ್ರಾವ್ಯಕತನ ಗೃಹಾಂತರದಿ ನಡೆವರ್ನುಡಿವರುನ್ನತ (ಸಿಂಗಾ. ೪-೦೭).
[ಬಲ್₂ ( < ಬಲ್ಲಿತು₁) + ಆಣಿಕಾಱ]

**ಬಲ್ಲಾಣೆಪೊಟಲ್** (ನಾ). ಒಂದು ಊರಿನ ಹೆಸರು : ಬಲ್ಲಾಣೆಪೊಟಲ ಪೊಲ ನಡದ ಪುರುಷರ್ ಕೆಱಿಗೋಡ ರಣವಿಕ್ರಮಗಾಮುಣ್ಡರುಂ . . . ಬರದರುಂ ಆ ಪೊಲನಂ ನಡಯಿಸಿದೋರ್ (ಎಕ. XVI. ಗುಬ್ಬಿ. ೬೩-೩೪; 788). [ಬಲ್ಲಾಣೆ ? + ಪೊಟಲ್₂]

**ಬಲ್ಲಾತ** (ನಾ). ಒಂದು ಬಗೆಯ ಮರ : ಗೇರುಮರ : ನೀ ಬಲ್ಲಾತ ನಾದೊಡರಣ್ಯದೊಳಗೆ ಕುಜಾತನಾಗಿರದಿಲ್ಲಿಗೇತಕೆ ಬಂದೆ ಪೇಳೆನಲು (ಶಂಕರಾ. ೦೦-೨೦). ☞ ಇಲ್ಲಿ 'ಬಲ್ಲ + ಆತ' ಎಂಬರ್ಥದ ಶ್ಲೇಷೆಯಿದೆ. [< ಸಂ. ಭಲ್ಲಾತ]

**ಬಲ್ಲಾನೆ** (ನಾ). ಬಲಿಷ್ಠವಾದ ಆನೆ; ಭಾರಿ ಆನೆ : ಬಲ್ಲಾನೆಯ ಮೆಟ್ಟಿನಡಿಯ ತೆಂಗಿನಕಾಯಂತೆ ರಥಂಗಳ್ ಜಜ್ಜರಿಪೋದುವು ಪಡಿದಟ ದೊಳ್ (ಗದಾಯು. ೦೩೦-೦೭). [ಬಲ್₂ (< ಬಲ್ಲಿತು₁) + ಆನೆ₁]

**ಬಲ್ಲಾಯ** (ನಾ). ಮಿಗಿಲಾದ ಪರಾಕ್ರಮ ; ಹೆಚ್ಚಾದ ಸಾಮರ್ಥ್ಯ : ನಿಡಿಯರ್ ಬಲ್ಲಾಯದ ಬಲ್ಲಿಡಿಗರ್ ವಂದಿರ್ದರಯ್ಯರಾಲದ ಕೆಲಗಿಂತೊಡರ್ದರ್ ನಮ್ಮಯ ಭಕ್ಷದೊಳಡು ಮಣ್ಣಡು ಪೋಗು ನೀನುಮಾನುಂ ಶಿಂಬು (ಪಂಪಭಾ. ೩-೦೨). [ಬಲ್₂ (< ಬಲ್ಲಿತು₁) + ಆಯ₁]

**ಬಲ್ಲಾಳ್** (ನಾ). ಬಲಿಷ್ಠನಾದವನು ; ಶೂರ ; ಪರಾಕ್ರಮಿ : "ಉಱರ್ಕಾಳ್ . . . ಬಲ್ಲಾಳ್, ಬಲ್ಪಂಟಂ — ಈ ೫ ಪರಾಕ್ರಮ ಮುಳ್ಳಂ" (ಶಬಶಾ. ೩೬-೨೬೪); ಈ ಗಿರಿದುರ್ಗಮಂ ದಾಂಟಿ ಬಂದ ಬಲ್ಲಾಳ್ದಿವ್ಯನಕ್ಕೆ ದಿವ್ಯಪ್ರಭಾವನಕ್ಕುಮುದೋಘನಕ್ಕುಮದಱಿನೀತನೋ

ದಿರ್ಪ ಕಾದುವ ಮರುಳ್ತನಂ ಬೇಡ (ಆದಿಪು. ೧೪-೫೬ ವ): ಚಾವಡಿಯಂ ಬಾವುಲಿಯ ಬಲ್ಲಾಳ್ಗಳ ಮುಂದೆಸೆದ ಪರಿಪರಿಯ ಪತಾಕಾವಳಿಯ ಸೂಳಿಱಿದು . . . ಭೂವಿ ಬೆಸಲಾದಂತೆ ಭೂಚಕ್ರಮಂ ತೆಕ್ಕನೆ ತೀವಿದ ಪದಾತಿಬಲದೊಳಂ (ಗಿರಿಜಾ. ೬-೫೫ ವ); ಊರಾಳ ಬಲ್ಲಾಳ ಪೆರ್ಗಡೆ ಮಾಸಾವಂತ ಮನ್ನೆಯ ರಾಯರ್ ಮುಂತಪ್ಪ ನಾಡೊಡೆಯರ್ . . . ತಾಮುಂ ಪಡೆವೆರಸಿ ಕುದುರೆಯ ಕಾವಲ್ಗೊದವಿ ಪೋದರ್ (ರಾಜಶೇಖ. ೫೦-೦೪). [ಬಲ್₂ (<ಬಲ್ಲಿತು₁)+ಆಳ್₂]

ಬಲ್ಲಾಳ (ನಾ). ಅರಸನ ಕೈ ಕೆಳಗಿನ ಒಬ್ಬ ಅಧಿಕಾರಿ : ಈಗ ಹಳ್ಳಿ ಹಳ್ಳಿಗಳಲ್ಲಿ ಪಟೇಲರು ಇರುವ ಹಾಗೆ ಆ ಕಾಲದಲ್ಲಿ ಗ್ರಾಮಕ್ಕೊಬ್ಬ ಗುರಿಕಾರನಿದ್ದನು. ಇಂಥ ನಾಲ್ಕಾರು ಮಂದಿ ಗ್ರಾಮ ಗುರಿಕಾರರ ಮೇಲೆ ಮತ್ತೊಬ್ಬ ಅಧಿಕಾರಿ ಇದ್ದನು, ಇವನಿಗೆ ಬಲ್ಲಾಳ ಎಂದು ಹೆಸರು (ಕೋಟಿಚೆ. ೦); ಪಂಜುರ್ಲಿಭೂತ . . . ಒಂದು ದಿನ ಸಂಜೆಯಾಗುವ ತನಕ ಕಾದು ಕುಳಿತಿತು, ಆ ಊರಿನ ಬಲ್ಲಾಳರ (ಜೈನ ಶ್ರೀಮಂತರು) ಮನೆಗೆ ಸಂಜೆಯ ವೇಳೆ ದನ ಕರುಗಳನ್ನು ಅಟ್ಟಿಕೊಂಡು ಹೋಗುವ ಸಮಯವನ್ನು ಹೊಂಚುಹಾಕಿತು (ಜಾನಪ. ೬೨). [< ಬಲ್ಲಾಳ್]

ಬಲ್ಲಾಳಗಿತ್ತಿ (ನಾ). ಗಟ್ಟಿಗಿತ್ತಿ ; ಗಡುಸುಗಾರ್ತಿ : ಗಂಡಸ್ಕೃದ ಪಡಿಯನೊಲ್ಲದೆ ಬೆಲ್ಲಗೂಳಿಗಾಸೆ ಮಾಡಿ ನೆರೆಮನೆಗೆ ಹೋಗುವ ಬಲ್ಲಾಳಗಿತ್ತಿಗೆ ಪತಿಭಕ್ತಿ ಅಳವಡುವುದೆ ಅಯ್ಯ (ಶಿವಶ. ೨೦-೦೫). [<ಬಲ್ಲಾಳ್ + — ಗಿತ್ತಿ]

ಬಲ್ಲಾಳದಟ್ಟಿ, ಬಲ್ಲಳತಟ್ಟಿ, ಬಲ್ಲಾಳದಡ್ಡಿ, ಬಲ್ಲಾಳ್ದಟ್ಟಿ (ನಾ). ೧. ಒಂದು ಬಗೆಯ ತೆರೆ,—ಪರದೆ : ☞ ಹೊಯ್ಸಳಸಂತತಿಯ ಬಲ್ಲಾಳರಾಜರ ಕಾಲದಲ್ಲಿ ಪ್ರಸಿದ್ಧವಾಗಿದ್ದ ಒಂದು ಬಗೆಯ ತೆರೆಯಿರಬಹುದು: ಅಂತು ಬಂದು ಈರ್ವರುಂ ಬಲ್ಲಾಳದ[ಪಾಠಾಂ. ತ]ಟ್ಟಿಯ ದ್ವಾರವಟ್ಟದೊಳ್ ನಿಂದಿರ್ದು ದೌವಾರಿಕಂಗೆ ದಾರನುಂ ಶಿವನುಂ ಎಂಬ ಬೇಡರ್ ಬಂದಿರ್ದಪರೆಂದರಸಂಗಱಿಪೆನಲ್ (ಪುಣ್ಯಾಸ್ರ. ೬-೬೯೫); ಲಾವಂಚ ಬಲ್ಲಾಳದಟ್ಟಿಯಿಂ ವಿರಚಿಸಿದ ಪಾನೀಯಶಾಲೆ (ಕೀಚಕ. ೨-೦೨). ಬಲ್ಲಳತಟ್ಟಿ : ಸೌಂದರಗೆ ಕೈಗೊಟ್ಟು ತುಂಬುರ ಮಹಾಮಂತ್ರಿ ಸಂದಣಿಯ ತೊಲಗಿಸುತ ತದ್ಗೃಹದ ಮಾಂದಳಿರ ಪಂದಲಂ ಪೊಕ್ಕು ಲಾವಂಚದ ಬಲ್ಲಳತಟ್ಟಿ[ಟ್ಟಿ]ಯಾ ಮಱೆಯೊಳುಱೆ ಬೆವರುತ ನಿಂದಿರ್ದ ಪರವೆಯುಂ ಕಾಣಿಸಲು (ಸೌಂದಪು. ೬-೬೮). ಬಲ್ಲಾಳದಡ್ಡಿ : ಮೇಲುಕಟ್ಟಿನ ದಿವ್ಯಚಿತ್ರದುಕೂಲನಿಚಯದ ಲಾವಚದ ಬಲ್ಲಾಳದಡ್ಡಿ ಗಳೆಡೆಗೆಡೆಗೆ ರಂಜಿಸುವ ಪಟ್ಟಿಗಳ ಮೇಲುಪೊದಕೆಯ ಕರ್ಪೂರದ ಹೊಂಬಾಳೆ ಗಳ ಮಲಯಜದ ಕಂಬದ ಸಾಲುಗಳಲೊಪ್ಪಿದುದು ಚಪ್ಪರವೆರಡು ಯೋಜನದ (ಶಬರ್ಶ.೬.೦೨-೦೦); ಮಂಟಪದ ಚೌಮೂಲೆಯಗಲದ ಲಾಮಚದ ಬಲ್ಲಾಳದಡ್ಡಿಯ ಬಹಳರತ್ನವಿತಾನದುಬ್ಬರದ ಮೇಲುಕಟ್ಟಿನ ಮಲಯಜ ಸ್ತಂಬಾಳಿಗಳ ಮಣಿಪುತ್ರಿಕೆಯ ಸಮಪಾಳಿಯಲಿ ಸೊಗಸಿದುದು ಚಪ್ಪರವೆರಡುಯೋಜನದ (ಕೊರಚ. ೦೪-೦೬). ಬಲ್ಲಾಳ್ದಟ್ಟಿ : ಚೆಲ್ವಿಂಗಡಪಾದ ಪಾದರಿಯೊಳ್ ಕೋದು ಬಳೆದ ಪೊಂಗೇದಗೆಯ ಬಲ್ಲಾಳ್ದಟ್ಟಿಯಿಂದೊಳಗೆ . . . ಅಶೋಕಭೂಜರಾಜಿಯಂ ರಾಜವಿದ್ಯಾಧರನಲಂಕರಿಸುವುದುಂ (ಕಾವ್ಯಾಶ. ೬-೨೯ ವ). ☞ ತಟ್ಟಿ ಮತ್ತು ದಡ್ಡಿ ಎಂಬ ಶಬ್ದಗಳು ಒಟ್ಟಾಗಿಯೇ ಬರಬೇಕಾಗಿದ್ದರೂ ಬೇರೆ ಬೇರೆಯಾಗಿ ಉಲ್ಲೇಖಿತವಾಗಿವೆ. ಅವುಗಳ ಜ್ಞಾತಿಶಬ್ದಗಳಂ ಒಂದೇ ಆಗಿರುವುದರಿಂದ ಇಲ್ಲಿ ಈ ಶಬ್ದಗಳನ್ನು ಒಟ್ಟಾಗಿಯೇ ಕೊಡಲಾಗಿದೆ. [ಬಲ್ಲಾಳ₁+ತಟ್ಟಿ₁]

ಬಲ್ಲಾಳದಡ್ಡಿ 'ಬಲ್ಲಾಳದಟ್ಟಿ' ನೋ.

ಬಲ್ಲಾಳಿಕೆ, ಬಲ್ಲಾಳ್ಕೆ (ನಾ). ೧. ಶೌರ್ಯ : ಸಾಮರ್ಥ್ಯ; ಪರಾಕ್ರಮ: ಕೆಡುವಂತಿದ್ದೀತೇ ಕೌರವನ ರಾಜ್ಯ ಮುಡಿವಂತಿದ್ದೀತೆ ರಾವಣನ ಬಲ್ಲಾಳಿಕೆ ಪರಸ್ತ್ರೀ ಲಕ್ಷ್ಮೀದೇವಿಗೊಲಿದು ಒಂದು ನಿಮಿಷದಲ್ಲಿ ಮಡಿದ (ಶರಣಾಶ. ೯-೦೩); ಕಲಿತನದಿಂ ಕಡದಂತೆ ಗರುವಿಕೆಯಿಂ ಕರುವಿಟ್ಟಂತೆ ಗಂಡಗರ್ವದಿಂ ಕಂಡರಿಸಿದಂತೆ ಬಲ್ಲಾಳಿಕೆಯಿಂ ಬಣ್ಣವಿಟ್ಟಂತೆ ತಿಣ್ಣವಾದೊಡ್ಡುಂ (ಅಜಿತಪು. ೨-೨೬೫). ೨. ಬಲವಂತ; ಒತ್ತಾಯ : ಬಲಾತ್ಕೃತಂ—ಬಲ್ಲಾಳ್ಕೆ (ಳಿಕೆ) ಯಿಂ ಮಾಡಲ್ಪಟ್ಟುದುಂ (ಶಬ್ದಮ. ೨೬-೦೦); ಕೊಲುವುದಾ ವಿಷಮುಂಡವರನೇ ಕೊಲುವುದಿದು ನಿರನುಜ್ಞೆಯಲಿ . . . ಬಲುಹು ಬಲ್ಲಾಳಿಕೆಯಲುಂಡಡೆ ಕೊಲುವುದಿಪ್ಪತ್ತೊಂದು ಕುಲವನು (ತೊರವೆರಾ. ೦೦-೪೩-೯೬). ಬಲ್ಲಾಳ್ಕೆ : ೨. ಬಲಾತ್ಕಾರಸ್ವಭಾವಃ — ಬಲ್ಲಾಳ್ಕೆಯಂ ಮಾಳ್ಪ ಸ್ವಭಾವಂ (ಶಬ್ದಮ. ೬-೩೯). [ಬಲ್ಲಾಳ್ + — ಇಕೆ]

ಬಲ್ಲಾಳ್ಕೆ 'ಬಲ್ಲಾಳಿಕೆ' ನೋ.

ಬಲ್ಲಾಳ್ತನ (ನಾ). ೧. ಶೌರ್ಯ ; ಪರಾಕ್ರಮ ; ಸಾಮರ್ಥ್ಯ : ಮೇಗಿಲ್ಲದ ಬಲ್ಲಾಳ್ತನದಾಗರಮೆನೆ ನೆಗಳ್ದ ತತ್ಪೃಥಾನಂದನರುದ್ಯೋಗದ ಚಾಗದ ಯಾಗದ ಭೋಗದ ಪ್ಯೆಮೆಗೆ ಸುಯೋಧನಂ ಬೆಱಗಾದಂ (ಪಂಪಭಾ. ೬-೬೬); ಮಲ್ಲಾಮಲ್ಲಿಯೊಳಾನ್ತರಿಮಲ್ಲರನಾಹವದೊಳೆರೊತ್ತಿ ಗೋಳ್ಸ್ಮರಿಗೊಳ್ವೀ ಬಲ್ಲಾಳ್ತನದಿನ್ದಾಹವಮಲ್ಲನ ಭುಜಾದಣ್ಣಮೆನಿಸಿ ಧ(ಂ)ಲ್ಲಂ ನೆಗಳ್ದಂ (ಎಪಿಕ. XI-i, ೫೨-೮, 1007); ಕಾಣೆರೆ ತನ್ನ ಬಲ್ಲಾಳ್ತನವುಂ (ರಾಜಶೇಖ. ೩೬-೮). ೨. ಬಲಾತ್ಕಾರ; ಬಲಪ್ರಯೋಗ; ಒತ್ತಾಯ: ಸುಬಾಹುವೆಂಬ ತನ್ನ ಹಿರಿಯ ಮಗಂ ತನ್ನೊಡನೆ ತೊಡೆಯಲ್ ಬಗೆದಿರ್ದೊನಂ ಬಾರಿಸಿ ಬಲ್ಲಾಳ್ತನದಿಂ ರಾಜ್ಯಪಟ್ಟಂಗಟ್ಟಿ (ಪಟ್ಟಾ.ಲಾ. ೦೯೯-೨೨); ಬಲ್ಲಾಳ್ತನದೊಳೆನ್ನನನುಭವಿಸಲ್ ಬಂದೊಂ ನೀನುಂ ವರ್ಣಾಶ್ರಮಗುರುವಯ್ ಎನ್ನಂ ಕಾವುದೆಂದೆನಲೊಡಂ (ಶಾಂತಿಪು. ೬-೬೫೮); ನಿಷ್ಕರುಣೆಯಾಗಿ ಪೋಪೆನೆಂಬ ಬಗೆಯುಳ್ಳೊಡನಿಬರುಮಂ ಕೊಂದು ಪೋಗೆಂದು ಮರದಾನೆಯುಂ ಕಂಬಕ್ಕೆ ತರ್ಪಂತೆ ಲಲ್ಲೆಗೆಯ್ದು ಬಲ್ಲಾಳ್ತನದಿಂ ಪಟ್ಟಮುಂ ಕಟ್ಟಿ (ಧರ್ಮಾಮೃ. ೦೦-೦೩೫). [ಬಲ್ಲಾಳ್+ — ತನ]

ಬಲ್ಲಾಳ್ತನಂಗೆಯ್ (ಕ್ರಿ). ಬಲಾತ್ಕಾರ ಮಾಡು ; ಒತ್ತಾಯಮಾಡು : ಎನಗಾರ್ಬಲ್ಲಿದರೆಂದು ಗಂಡುಗೆಡದೊರ್ವಂ ದೇವ ಚಕ್ರಕ್ಕೆ ಸಾಧನಸಮ್ಮೋಹನದಿಂದಮೆನ್ನ ಮಗಳಂ ಬಲ್ಲಾಳ್ತನಂಗೆಯ್ದು ನಿನ್ನ ನರಾಧೀಶ್ವರನಕ್ಕೆ ಬರ್ಕೆ ಕಾಡೆನೆಂದೊಟ್ಟೈಸಿ ಕೈಕೊಂಡು ನಿಂದು (ಸುಕುಮಾ. ೬-೯೨). [ಬಲ್ಲಾಳ್ತನ + ಕೆಯ್₁]

ಬಲ್ಲಾಳ್ದಟ್ಟಿ 'ಬಲ್ಲಾಳದಟ್ಟಿ' ನೋ.

ಬಲ್ಲಿಗೆ (ನಾ). ಸಂಕೋಲೆ (?) : ತೊಡರೆರಡಗಾಲೊಳೊಪ್ಪುವುದು ಬಲ್ಲಿಗೆಯಂ ಮದಧನ್ವಿಗಿಕ್ಕ ಬಲ್ಲೊಡರಿಸುವೊಂದು ಭಂಗಿಯೊಳೆ ಪೊದೊಡರೊಳ್ ತೊಡರ್ದಿರ್ದ ಪಾಪಿಗಳ್ ತೊಡರ ತೊಡರ್ಪಿನೊಳ್ ತೊಡರಲಣ್ಮದ ಭಾಷೆಯಮಾತ್ಮಲಂಜಿ ಕಾಲ್ವಿಡಿದವೊಲಿಪ್ಪುರ್ವೇಂ ಕುವರಲಕ್ಷ್ಮಿಚಮೂಪತಿ ಗಿಂತಿದೊಪ್ಪದೇ (ಎಕ. V, ಚೆಂರಾಯ. ೦೦೨-೬೦ ; ಸು. 1220 ?); ಮೇಲೆ ಸಾಱುವ ಡೌಡೆಯ ದನಿಗಂ ಕೆಳಗೆಸೆಯೆ ತೆಮಳ್ದ ಕುಪ್ಪಳಿಸು ವಂದುಗೆಯ ತೊಡರ ಬಲ್ಲಿಗೆ ಬಲ್ಲುಲಿಗಂ . . . ರಾಜಾಂಗಣದೊಳ್ ಪಣ್ಣಿ ಬಂದು, ನಿಂದ ಯಾಮಸಾಮಜಸ್ತೋಮಮನಿತುಂ ಬಾಯ್ವಿಟ್ಟು ಬೆದಱೆ ಬೆಸಗೆಟ್ಟೋಡೆಯುಂ (ಅಜಿತಪು. ೨-೨೯ ವ).
[ ?. /ತಮಿ. ವಲ್ಲಿಕ್ಕೈ — ೧. ಒಂದು ಬಗೆಯ ಕಿವಿಯ ಆಭರಣ. ೨. ಕುದುರೆಯನ್ನು ಕಟ್ಟುವ ಹಗ್ಗ]

ಬಲ್ಲಿತು₁, ಬಲ್ಲಿತ್ತು₁ (ನಾ). ೧. ಗಟ್ಟಿಮುಟ್ಟಾದುದು ; ಬಲಿಷ್ಠವಾದುದು : ಪ್ರಬಲವಾದುದು : ಕಲಹಂಸೆಗಳ್ ಬಲ್ಲಿತಪ್ಪುದೊಂದು

ದಕ್ಕಂ ತಂದದಱೆರಡು ಕಡೆಯುಮಂ ತಾವಡಕಿ ಕರ್ಚಿ . . . ಬರುತ್ತುಂ (ಶಂಕಶಂ. ೦೩೭-೦೩) ; ತಲೆ ಬಲ್ಲಿತೆಂದು ಕಲ್ಲನೆ ಹಾಯು ಬೇಡ ಹೋಗೆಲೊ ಪಾಪಿ ಮನ್ಮಥ ಮನೆಗೆ(ಮೋಹತ. ೭-೨೩); ತಲೆ ಬಲ್ಲಿತೆಂದು ಕಲ್ಲಂ ಪಾಯ್ವೊಲಾ ಕಲಿಯಾಗಿ ಸಮರದೊಳ್ಕಾದಿದೊಡೆ ನಿನಗಿಲ್ಲಿ ಗೆಲವಹುದೆ (ಕೃಶಂಶಾ. ೪-೦೯) ; ೨.ದೃಢವಾದುದು ; ಸ್ಥಿರವಾದುದು : ಅದ್ಯಥಂ ಮಾರ್ತಂಡನಿಂ ನಿಪ್ಪೊಸತು ಹಿಮಗುವಿಂ . . . ಬೆಂದುದಂಗಾರನಿಂ ಚಿತ್ರದ ಮಾಟಂ ಸೌಮ್ಯನಿಂ ಬಲ್ಲಿತು ಸುರಗುರುವಿಂ ಸುಂದರಂ ಶುಕ್ರನಿಂ ತಟ್ಗಿದುದಕ್ಕುಂ ಮಂದನಿಂ (ಶಾಕಶ. ೪-೦೨). ೩. ಶ್ರೇಷ್ಠವಾದಂದು ; ಉತ್ತಮವಾದುದು ; ಒಳ್ಳೆಯದು : ಪಿರಿಯರ ನುಡಿಯಂ ಬಲ್ಲಿತೆನೆ ನಂಬಿ ಬೇಂಟೆಯನೊಲ್ಲದೆ ದಟ್ಟಿರ್ದ ಬಿಯದರೊಪ್ಪಿದರ್ (ಶಬ್ದಮ. ೨೨೩). ೪. ಸಾಂದ್ರವಾದುದು ; ದಟ್ಟವಾದುದು ; ನಿಬಿಡವಾದುದು : ಬಲ್ಲಿತಪ್ಪಡವಿಯೊಳು ಸೀಳ್ನಾಯಿ ಕೊಲ್ಲಲಾರ್ಯುಸ್ಮರಣೆಯಿಂದಿರೆ ಮಲ್ಲಿಕಾರ್ಜುನ ಕಾಯ್ದೊಯ್ದನು ಮಹಾಕೂಟಪುರವರಕೆ (ಬಿರೇಶ್ಬ. ೬-೮). ೫. ಕಠಿಣವಾದಂದು ; ಕಷ್ಟಕರವಾದುದು : ಕೆರಳಿ ಕರಿ ಕೈಕೊಂಡು ದರೆಯಟ್ಟಿತು ಮಹಾಂಥತ ಬೆಲ್ಲಿತಿದು ದೆಸೆದೆಸೆಗೆ ಚೌಪಟಮಲ್ಲಗಿಲ್ಲರ ಪಾಡೆ ನಮ್ಮದು ಬಲ್ಲಿತಹುದುಸುರಿಲ್ಲದೊಡಲಿನ ಚೆಲುವು ಫಲವೇನು (ಸಂಕ್ರ್ಯಾ. ೩-೨೩). ಬಲ್ಲಿತ್ತು₁ : ೧. ಪಡೆದಂ ಬ್ರಹ್ಮೇಂದ್ರತೆಯಂ ಗಡಮಾತಂ ಬಗೆದು ನೋಡೆ ನಾರಕನತ್ತಲ್ ಗಡ ದೇವನೆತ್ತ ಕರ್ಮುಮೆ ಕಡು ಬಲ್ಲಿತ್ತದಟ ತಿರಿವದೇಂ ಬಹುವಿಧದೋ (ಅಂಪು. ೩-೯೩); ಹಂಜರ ಬಲ್ಲಿತ್ತೆಂದು ಅಂಜದೆ ಓದುವ ಗಿಳಿಯೇ ಎದೆಂದೂ ಅಳಿಯೆನೆಂದು ಗುಡಿಗಟ್ಟದೆಯಲ್ಲಾ (ಬಸವ. ೦೬೩); ಜಳಸಂಭೂತದೊಳೆಂತು ಹಸ್ತಿಮಕರಂ ಬಲ್ಲಿತ್ತಿಕಾಭಾಗದೊಳು ಸ್ಥಳಸಂಭೂತದೊಳಂತೆ ಕೋಟಿಭಟಸತ್ತ್ವೋದುಭಾಸಿ ಭೇರುಂಡನಿಂದೆಳೆ ಭೇರುಂಡನಿನಗ್ಗಿಕುಂ (ಶಾ. I. ೫೩-೯೩; 1180). (ಗು). ೬. ಬಲಿಷ್ಠವಾದ ; ಶಕ್ತಿಶಾಲಿಯಾದ ; ಬಲವುಳ್ಳ : ತುಕಾರ ದುಃಕಾರಂಗಳೆ ಕಡೆಯಾಗಿ ಪಲವು ಗುಣವಚನಂಗಳೊಳವು ಅವಱೊಳ್ ತುಕಾರಾಂತಕ್ಕೆ ವಿಕಲ್ಪದಿಂ ದ್ವಿತ್ವಮುಂಟು . . . ದೊಡ್ಡಿತ್ತು ; ಬಲ್ಲಿತ್ತು — ಎಂಬಂತೆ ನೋಡಿಕೊಳ್ವುದು (ಕಶುದ. ೩೭ ವೃತ್ತಿ) ; ಒಳ್ಳಿತ್ತ ಕೆಯ್ಯೊರಾಪ್ಪೊಲ್ಲದುಮದಱಿನ್ನ ಬಲ್ಲಿತ್ತು ಕಲಿಗೆ [ಮ] ವಿಪರೀತಾ ಪೌರಾಕ್ರತ ವಿಳ್ಳಿ ಸನ್ನಿಕ್ಕುಮದು ಬನ್ನ (ಎಂ. X. ೬೦-೭ ; ಸು. ೭ನೆಯ ಶ).

ಬಲ್ಲಿತಾಗಿ = ಚೆನ್ನಾಗಿ; ಉತ್ತಮವಾಗಿ ; ಶ್ರೇಷ್ಠವಾಗಿ : ವಿಪುಲ ವಿದ್ಯಮಂ ಬಲ್ಲಿತಾಗಿಯು ಶಿಕ್ಷಿಪಾತ ಬಂದುಕನೆನಲ್ (ಶಬ್ದಮ. ೯೭). ಬಲ್ಲಿತ್ತಟ ಕೋಡು ಕೂರಿತು, ಬಲ್ಲಿತ್ತಟ ಕೋಡುಂ ಕೂರಿತು = (ಎತ್ತಿನ) ಬಲಿಷ್ಠವಾದಂದರ ಕೊಂಬು ಚೂಪಾಗಿರುವುದು,—ಮೊನಚಾಗಿರುವುದು; ಬಲಿಷ್ಠರಾದವರು ಹೇಗೆ ನಡೆದುಕೊಂಡರೂ ಅದನ್ನು ಪ್ರಶ್ನಿಸುವಂತಿಲ್ಲ ಎಂಬ ಭಾವ : ಗುರು ದೇವೇಂದ್ರ ಮುನೀಂದ್ರನಿಂದ್ರನವಿತಂ ದೇವಂ ಕಥಾನಾಯಕಂ ಪುರುದೇವಂ ಕಥೆಯುಂ ತದಾದಿ ಪುರುಷಪ್ರಸ್ತುತ್ಯಜನ್ಮಾಳಿ ಬಂಧುರಮೆಂದೆಂದೆ ಮದೀಯ ವಾಗ್ವಿಭವವಿನ್ಯಾಸಂ ಬಲಂಬೆತ್ತುದಿನ್ನಿರು ಬಲ್ಲಿತ್ತಟ ಕೋಡು ಕೂರಿತದನಂತಿಂತಂತೆನಲ್ಕರ್ಮಮೇ (ಆದಿಪು. ೦-೨೩) ; ತಱಿಸಂದು ಚಕ್ರವರ್ತಿಗೆ ನೆಱೆದಾಂತಂ ವಾಸುದೇವನುಱಿದಿರು ಬಲ್ಲಿತ್ತಟ ಕೋಡು ಕೂರಿತಾರಿದಱಿಯದರಾರಳ ವನಂತವೀರ್ಯನ ಶೌರ್ಯಂ (ಶಾಂತಿಪು. ೪-೯೩), ಉಱಿದಿಮರನಾಂತು ತಱಿಸಂದಿಱವರುವಿಲ್ಲವರು ಪೊಯ್ಯ ವಸ್ತುವುಮದು ತಾಂ ಪೆಱರದಣ ಮಲ್ಲ ಬಲಿತ್ತಟ ಕೋಡುಂ ಕೂರಿತದಱಿನದನಾರ್ ಒಡಿವರ್ (ಶಾಂತಿಪು. ೦೦-೦೦೩). ಬಲ್ಲಿತ್ತು ಮಾಡು = ೧. ಬಲಪಡಿಸು; ಬಲಿಷ್ಠಗೊಳಿಸು; ಶಕ್ತಿಶಾಲಿಯಾಗಿ ಮಾಡು : ಬಡಕಪ್ಪಡಿ ತನ್ನಿಪ್ಪಾ ಗುಡಿಸಂ ಬಲ್ಲಿತ್ತು ಮಾಟ್ಪನೆಲ್ಲಂದದಿನೆಂದೊಡೆ ದೇವನಗಲದಿಪ್ಪಾ ಪಶುವಂ ಕಡೆಯಲ್ಕಣ ವಿನಾಯದಂತು ರಕ್ಷಿಸವೇಡಾ (ಸಮಶ. ೯-೬೨). ೨. ದೃಢಗೊಳಿಸು; ಸ್ಥಿರಪಡಿಸಿಕೊಳ್ಳು; ಗಟ್ಟಿಮಾಡಿಕೊಳ್ಳು: ಬಳಸಂಪನ್ನರನಾಸೆಗೆಯ್ದು ಚತುರಂಗಾನೀಕಮಂ ಕೂಡಿ ಕೊಳ್ಳುಗ್ಗಳಮಂ ಗಂಡುಮನಪ್ಪುಕೆಯ್ದು ಮನಮಂ ಬಲ್ಲಿತ್ತು ಮಾಟ್ಕೆಂದುಮಾನೆಳೆಯಂ ಕಾದಿದೊಡಲ್ಲದೀಯನಱಿರ್ದ(ಶಂಕಖಾ. ೪-೯೦). ಬಲ್ಲಿದ = ೧. ಬಲಿಷ್ಠನಾದವನು; ಪರಾಕ್ರಮಿ : "ಬಲವಾನ್" ಅಂಸಲಃ — ಈ ೨ ಬಲ್ಲಿದಂ" (ಹಲಾಯು. ೩೩-೨೨೬) ; ನಿಮ್ಮಂ ಕರಂ ನಟ್ಟ ಸಂಗರಮಂ ಬಲ್ಲಿದರೊಳ್ ಪೊಣರ್ಚಿದಂ (ಶಂಕಶಂ. ೦೦-೯); ಬಲ್ಲಿದರೊಡನೆ ಬವರವಾದರೆ ಗೆಲುಲುಂಟು ಸೋಲಲುಂಟು (ಬಸವ. ೦೩೦); ಹೇಳಲಱಿಯೆನು ನಿನ್ನವನ ಕಟ್ಟಾಳುತನವನು ದೇವ ದೈತ್ಯರ ಕಾಳೆಗದಲಿವನಂತೆ ಬಲ್ಲಿದರಿಲ್ಲ ಬಲ್ಲಿನಲಿ (ಕುಮಾ. ೦೩-೦೪೦). ೨. ಧನವುಳ್ಳವನು; ಶ್ರೀಮಂತ; ಧನಿಕ : ಸ್ವಾಮಿ ಭೃತ್ಯಸಂಬಂಧದ ದೆಸೆಯುಂ ಬಡವರ್ ಬಲ್ಲಿದರೆಂಬ ದೇಶಭಾಷೆಯುಂ . . . ಅಪಮೃತ್ಯುವಿನ ಸತ್ವಭಾಧೆಯ ಗಂಧಾಗಂಧಮುವಿಲ್ಲ (ಶಾಂತಿಪು. ೬-೧೦೨ ವ): ಬಲ್ಲಿದನ ಹಗೆಹ ತಗೆವನ್ನಬರ ಬಡವನ ಹರಣ ಹೋದ ತೆಱನಂತಾಯಿತ್ತು (ಶುಹಾರೀ. ೭. ೩೩-೬೦) ; ದೈವದೊಳ್ ಯಿರಲಾ ಕಾಲಾನುಕಾಲಕ್ಕೆ ತಾಂ ಬಡವಂ ಬಲ್ಲಿದನಾಗನೇ (ಶೋಚಶ. ೩೫) ೩. ತಿಳಿದವನು; ಜ್ಞಾನಿ : ವರಾಂಗರಸನಾ ವೃಷಣೇಕ್ಷಣ ಶುಕ್ಲಸತ್ತ್ವಮಾಭ್ಯಂತರಮಾದ ಲಕ್ಷಣಮುಮಿಂತಿವೆ ಬಲ್ಲಿದನೋದಿನಿಪ್ಪದೊಳ್ (ಶೋಕೋಶ. ೦೦-೬೩); ಬಲ್ಲಿದರೆಂಬ ಅಱುಹಿರಿಯರೆಲ್ಲ ತಾಮಸಕ್ಕೊಳಗಾಗಿ ವಿಮಾನಕೇತನನ ಬಲೆಗೆ ಸಿಲುಕಿ ಮಾಯೆಯ ಬಾಯ ತುತ್ತಾದರಲ್ಲಾ (ಅಶಶ. ೦೬೩-೬೯೬); ಎಲ್ಲ ಬಲ್ಲವರಿಲ್ಲ ಬಲ್ಲವರು ಬಹಳಿಲ್ಲ ಬಲ್ಲಿದರು ಇದ್ದು ಬಲವಿಲ್ಲ (ಸರ್ವಜ್ಞ. ೨೯). ೪. ಶ್ರೇಷ್ಠನಾದವನು; ಉತ್ತಮನಾದವನು; ಮಹಾತ್ಮ : "ಅಗ್ಗಳೆಯನೆನಲ್ ಬಲ್ಲಿದಂ" (ಶಾಕ. ೦೬) ; ಪೊಲ್ಲದುಗೆಯ್ದನೆಂದು ನಹುಷಾಜಗರಂ ಪಿರಿದಪ್ಪದೈನ್ಯದಿಂ ಬಲ್ಲಿದನಪ್ಪಗಸ್ತ್ಯಮುನಿಯೊಳ್ ದಯೆಯಂ ಪಡೆಯಲ್ಕೆ ಬಂದವೋಲ್ . . . ಎಲ್ಲರ ಚಿತ್ತದೊಳ್ ಪಿರಿದುಮೊಂದಭಿಶಂಕೆಯನುಂಟುಮಾಡುಗುಂ (ಶಾಂತಿಪು. ೦೦೩) : ನೀನು ಜಗಕ್ಕೆ ಬಲ್ಲಿದನು ಆನು ನಿನಗೆ ಬಲ್ಲಿದನು ಕಂಡಯ್ಯಾ (ಬಸವ. ೯೦೩); ಅಲ್ಲಿಗಧಿಪತಿ ಭೀಮನೃಪ ಗುಣದಲ್ಲಿ ನಯದಲಿ ವೀರ್ಯ ವಿತರಣದಲ್ಲಿ ಚಾತುರ್ಯದಲಿ ಸೌಭಾಗ್ಯದಲಿ ಧೈರ್ಯದಲಿ ಬಲ್ಲಿದನು ತಾನಾಗಿ (ನಳಚ. ೦-೨೯). (ಗು). ೫. ಬಲಿಷ್ಠವಾದ; ಶಕ್ತಿಶಾಲಿಯಾದ : ಭಲ್ಲರ ರಭಸಕೆ ನಿಲ್ಲದೆ ಬಲ್ಲಿದ ಕಲಿಪಂದಿಯೊಂದು ಕಟ್ಟುಬಟ್ಟೆಯಿಂ ಮೆಲ್ಲನೆ ಪೋಱಡುತ್ತಿರೆ (ಜಗ್ಗಿ. ೪-೪೪). ೬. ಉತ್ತಮವಾದ; ಶ್ರೇಷ್ಠವಾದ; ಒಳ್ಳೆಯದಾದ : ಬಲ್ಲಿದಾಹಾರ ಭಯ ಶಾಸ್ತ್ರನ್ನಲ್ಲಿ ಭೇಷಜವೆಂಬವಿವು ಎಲ್ಲಕಾದಿಯ ದಾನಮಾರ್ಗ (ಜಾಪು. ೯೭-೩೩). ೭. ಉತ್ತಮನಾದ; ಶ್ರೇಷ್ಠನಾದ : ನಲಿದು ಮುಂದೆ ಬಾದಶಿರಥನಪ್ಪ ನಂಬಿಯಣ್ಣನಂ ನಡುವೆ ಕುಳ್ಳಿರಿಸಿ ನೀನರಸು ನಾವೆಲ್ಲಂ ಪರಿವಾರವೆಂದಲ್ಲಿಯ ಬಲ್ಲಿದ ಬೆವಹಾರಿಗಳ ಮಕ್ಕಳೆಲ್ಲಂ ನೆರೆದು . . . ಪುರದ ತಿರುವೀಥಿಯೊಳು ನಡೆತಪ್ಪಾಗಳು (ಶಂಶಶ. ೨-೧೯). ಬಲ್ಲಿದೆ = ತಿಳಿದವಳು; ಪಂಡಿತೆ; ಜ್ಞಾನಿ : ಘಟಿಕಾಶತ (ಒಂದು ಗಂಟೆಗೆ ನೂರು) ಶ್ಲೋಕಗಳನ್ನು ರಚಿಸುವಲ್ಲಿಯೂ ಅವರು ಬಲ್ಲಿದೆಯರಾಗಿದ್ದರು (ಕರ್ಣಾಕ.೪ –೦).

[ < ಬಲ್₁ ]

ಬಲ್ಲಿತು₂, ಬಲ್ಲಿತ್ತು₂ (ಅ). ೧. ಬಲವಾಗಿ; ಹೆಚ್ಚಾಗಿ; ಅತಿಶಯವಾಗಿ : ಒಲ್ಲೆಮೆಂದರು ಬೇಡವೆಂದರವರು ನೀನು ಬಲ್ಲಿತು ವಿಗೆ ೯ರವಾಗ ವಲ್ಲಭಗಿದಿರುತ್ತರವ ಕೊಡಲಾಗದೆಂದೆಲ್ಲರೆಱಿಗಿದರು ನೃಪತಿ (ಶಶಿ. ೯-೨೩). ಬಲ್ಲಿತ್ತು₂ : ೨. ಬಿಗಿಯಾಗಿ; ಭದ್ರವಾಗಿ : ಆ ಮಹಾತ್ಮರ್ . . . ವಿಚಿತ್ರವಸ್ತ್ರಂಗಳಂ ತೆಗೆದುಕೊಂಡು . . . ಕಂಬದೊಳೆ ಬಲ್ಲಿತ್ತುಗಟ್ಟಿ

ಬಟಿಯುಮುವನಾ ಮಾಡದ ವೆಸಗಸ್ಸಟಿಯುಲಿಕ್ಕಿ (ಸುಕುಮಾ. ೧೦-೯೩ ಪ). [ < ಬಲ್ಲಿತು$_1$ ]

**ಬಲ್ಲಿತುದೋಱು** (ಕ್ರಿ). ಶೌರ್ಯವನ್ನು ತೋರು : ಸಾಮರ್ಥ್ಯವನ್ನು ಪ್ರದರ್ಶಿಸು : ಎಲ್ಲರು ತಪಸಿಗೆಯ್ದುದರು ನೀನೊಬ್ಬ ನಮ್ಮೆಲ್ಲರರ್ಥಿಯ ಸಲಿಸಣ್ಣಾ ಬಲ್ಲಿತುದೋಱಿದಿರಣ್ಣಾನಿಗೆಱಗೆಂದು ಗಲ್ಲವ ಪಿಡಿದಲುಗಿದಳು (ಶಬಶ. ೩೦-೦೬). [ ಬಲ್ಲಿತು$_1$ + ತೋಱು ]

**ಬಲ್ಲಿತ್ತು$_1$** 'ಬಲ್ಲಿತು$_1$' ನೋ.

**ಬಲ್ಲಿತ್ತು$_2$** 'ಬಲ್ಲಿತು$_2$' ನೋ.

**ಬಲ್ಲಿದ** 'ಬಲ್ಲಿತು$_1$' ಪರಾ.

**ಬಲ್ಲಿದೆ** 'ಬಲ್ಲಿತು$_1$' ಪರಾ.

**ಬಲ್ಲುಗ** (ನಾ). ೧. ಒಬ್ಬಾತನ ಹೆಸರು : ಸಾಹಸಮೇನನೂನವೋ ಬಸದಿ ಯೋಜರ್ ಹಲಯಾಮ್ಮೋಜರಾ ಮಗಂ ಬಲ್ಲುಗು ಮಾಡಿದಂ (ಎಕ. V, ಕೇಶೂರು. ೦೩೩-೯೯; ೧೬೨); ಕಾಮಲೆನಾರಿ ಸಕಳಕಳಾಮಹಿತೆಗೆ ನೆಗಳ್ದ × ರಗಂ ಬಲ್ಲುಗನೆಂಬೀ × × × ಧೈರ್ಯಕ್ಕರಖಿಳದಿಶಾಮಂಚಳದತ್ತ ಕೀರ್ತಿಗಳ್ ನುತರಾದರ್ (ಎಕ. VII, ಶಿಕಾ. ೩೩-೬೬; 1167). ೨. ಒಂದು ಸ್ಥಳದ ಹೆಸರು (?) : ಸಾಸ್ವಳಿಗೆಯ ಬೀರ ಸಾನ್ವರನ ಮೇಲೆ ನಡೆವಮ್ಮತ್ತು ನಾಡೊಳಗಣ ಬಲ್ಲುಗದೊಳ್ಪಟ್ಟದನ್ನು ಗೆದೆಯ ವನ್ನೆರಡಱ ನಾಟ್ಯಾಗ್ಗಮ್ಮ ಸೀಬಳ್ಳಯಱಿಹಯ್ಯನ ಜೇಷ್ಠಪುತ್ರ ನಂಗಮ್ಮನ ಮಗ ಜೋಗಯ್ಯಂಗೆ ದಯಗೆಯ್ದು ಕೊಟ್ಟ ಸ್ಥಿತಿ ಯಾವುದೆನ್ನಡೆ (ಎಕ. VIII, ಸೊರಬ. ೯೬೭-೦೬; ೨೨೧). [<ಬಲ್$^1$]

**ಬಲ್ಲುಜ್ಜುಗ** (ನಾ). "ಮಹೋದ್ಯೋಗ, ದೊಡ್ಡ ಕಾರ್ಯ"(ಶ್ರಕಮ). 'ಬಲ್ಲುಜ್ಜುಗಿ' ಪರಾ. [ಬಲ್$^2$(<ಬಲ್ಲಿತು$_1$)+ಉಜ್ಜುಗ]

**ಬಲ್ಲುಜ್ಜುಗಿ** (ನಾ). ದೊಡ್ಡ ಕಾರ್ಯವನ್ನು ಮಾಡುವವನು : ದೊಡ್ಡ ಕೆಲಸವನ್ನು ಮಾಡುವವನು : ಕಡುಟಾಗಿ, ಕಡುಗೆಲಸಿ, ಪುಸಿಬಾದಿ, ಬಲ್ಲುಜ್ಜುಗಿ (ಶಮ್ಮಸ. ೩೨೯ ಶ್ರಯೋ). [ಬಲ್ಲುಜ್ಜುಗ+ — ಇ$_3$]

**ಬಲ್ಲುಲಿ** (ನಾ). ೧. ಬಲವಾದ ಧ್ವನಿ; ಜೋರಾದ ಶಬ್ದ : ಕೋಗಿಲೆಗಳ್ ಪೊಸಮಾಮರಂಗಳೊಳ್ ಬಲ್ಲುಲಿಯಿಂದೆ ಬಗ್ಗಿಸುತುಮಿಂತಿದೆ ಬಂದುದು ಸುಗ್ಗಿ(ಕಕ್ಕಾಕಾ. ೬೩); ಬಱಸಿಡಿಲ ಬಲ್ಲುಲಿಯವೊಲು ಬೊಬ್ಬಿಱಿದು ಬಿಡುಬಿಡು . . . ಆಯುಧವಿಲ್ಲದೆನ್ನೊಡನೊಱಗಿದನ ಒದ್ದೊಯ್ಯುದಧಟೇ ಯೆಂದು ತಾಗಿದಳು (ಶಾಕ್ಕಕಾ. ೦೬-೩೩); ಭುಭೂಭೂ ಎಂದು ಪೂರಯಿಪ ಶಂಖದ ಧಟಂ ಧಟಂ ಧಟವೆಂದು ಮೊಟಗುವ ಭೇರಿಯ ತುತ್ತುತ್ತುರೆಂದು ಸೂಳಯಿಪ ಪೆರ್ಗಾಳೆಯ ಬಲ್ಲುಲಿಯೊಳ್ ಮಾಪೂಜೆ ಸಮಸಂದುದು (ರಾಮಾಶ್ವ. ೬೬-೬). ೨. ಪ್ರುಸಿದ್ಧವಾದ ಮಾತು : ಹೊಗಳಿಕೆಯ ಮಾತು : ಪಲವುಂ ನಾಲಗೆಯುಳ್ಳವಂ ಬಗೆಪೊಡೆಂದುಂ ಬಣ್ಣಿಸಲ್ಕಾಱನಾ ನೆಲನಂ ಮತ್ತಿನ ಮಾನಿಸರ್ ಪೊಗಟಲೇನಂ ಬಲ್ಲರೆಂಬೊಂದು ಬಲ್ಲುಲಿಯಂ ನೆಟ್ಟನೆ ತಾಳ್ದು ಕನ್ನಡಮೆನಿಪ್ಪಾ ನಾಡು ಚೆಲ್ವಾಯ್ತು (ಕಕ್ಕಾಕಾ. ೦೯). [ಬಲ್$^2$(<ಬಲ್ಲಿತು$_1$)+ಉಲಿ$_2$]

**ಬಲ್ಲೆ$_1$** (ನಾ). ದಟ್ಟವಾದ ಮೆಳೆ,—ಪೊದೆ : ಬಿಗಿದು ಪುಗಲ್ಕರಿದೆಲ್ಲಿಯು ಮೊಗೆದ ಮರಂ ಪೊದಱು ಬಳ್ಳಿ ಗಿಡುಮೆಂಬಿವಱಿಂ ಮಿಗಿಲೆನಿಪ ಬಲ್ಲೆ ನಗ ಸಾನುಗಳೊಳದಂತಾವ ಮೆಯ್ಯೊಳಂ ಪುದಿದಿರ್ಗುಂ (ಕಪ್ಪಾಪ. ೯೬); ಆ ಮರಗಳನ್ನು ಸುತ್ತಿ, ತಾವೂ ಗಗನಕ್ಕೇರಿ, ಎಲೆಗಳನ್ನು ಬಿಡಿಸಲು ಯತ್ನಿಸು ತ್ತಿರುವ ಬೀಳಲುಗಳಿಂದ, ಕಾಡು ಒಂದು ದೊಡ್ಡ ಬಲ್ಲೆಯಾಗಿ ಕಾಣು ವುದು (ಹಾಂಶ್ರ. I. ೬೦); ಒಂದೆಡೆ ಎದುರಿಗೆ ಬಲೆಯಂತಹ ಸೀಗೆಯ ಬಲ್ಲೆ, ಇನ್ನೊಂದೆಡೆ ಕೊಡೆ ಆಕಾರದ ಬಳ್ಳಿಗಳು (ಶಾಕಿರಿ. ೬೩). [ದೇ.$_3$ ತಮಿ. ವಲ್ಲೈ; ತುಳು. ಬಲ್ಲೆ]

**ಬಲ್ಲೆ$_2$** 'ಬಲ್ಲೆಯ' ನೋ.

**ಬಲ್ಲೆ$_3$** (ಅ). ಬಳಿಕ; ಮತ್ತೆ; ಅನಂತರ : ಮತ್ತೆಂಬರ್ಥದೊಳುಸಿರ್ವರ್ ಬಿತ್ತಿಗರಾ ಬಲ್ಲೆ ಬಟಿಗಳಂ (ಶಬ್ದಾರ. ೩೦೯). [?]

**ಬಲ್ಲೆತ್ತು** (ನಾ). ಬಲಿಷ್ಠವಾದ ಎತ್ತು; ಬಲವಾದ ವೃಷಭ: "ಮಹೋಕ್ಷಃ, ಉಕ್ಷತರಃ—ಈ ೨ ಬಲ್ಲೆತ್ತು" (ಹಂಶಾಕು. ೯೯-೦೦); ಎಲ್ಲರ ಸುಂಕ ಎತ್ತು ತೊತ್ತು ಭಂಡಿ ಬಲ್ಲೆತ್ತು ಎನ್ನ ಸುಂಕ ಎಲ್ಲರ ಪರಿಯಲ್ಲ (ಸಂಸಂಶಂ. ೩. ೬೯೯-೦೬೯೩) ; ಬಲವದುಕ್ಷೇಶ್ವರನ ರೂಪಗ್ಗಳಿಪ ಬಲ್ಲೆತ್ತುಗಳನೇ ಹೆಗಲ್ಗೊಳಿಸಿ ಬಂಡಿಯೊಳಗ್ರುದಲಿ ಕೇಳಿಕೆಗಳೊತಗೂಡಿ (ಏಕಪ್ರ. ೩೬-೬). [ಬಲ್$^2$(<ಬಲ್ಲಿತು$_1$) +ಎತ್ತು$_2$ (<ಎಱು$_1$)]

**ಬಲ್ಲೆಯ$_1$**, ಬಲ್ಲ$_2$, ಬಲ್ಲೆ$_2$, ಬಲ್ಲೆಹ, ಭಲ್ಲೆಯ, ಭಲ್ಲೆಹ(ನಾ). ಒಂದು ಬಗೆಯ ಆಯುಧ ; ಈಟಿ ; ಭಲ್ಲೆ : ಮೂದಲಿಸಿ ಬಂದ ಮನ್ನೆಯ ರಾವುತರಂ ಬಲ್ಲೆಯ ಪಟ್ಟಸದೊಳುಂಡಿಗೆಯೊತ್ತಿಬಿಟ್ಟು ನಿಚ್ಚಟದ ರಾವುತರು ಲಚ್ಚಣಂದೆಗೆದು ಮುಂಗುಡಿಯ ರಾವುತರು ಭಂಗಿಸಿ ತಿವಿದು (ಪಳಕಹ ೨೨೬-೦೯); ತೂಗುತ್ತಿಹ ತೋಮರಂ ಜಡಿವ ಕಕ್ಕಡೆ ಸಲ್ಲೆಹ ಬಲ್ಲೆಯಂ[ಶಾಕಾಂ. ಸಲ್ಲಿಪ ಬಲ್ಲೆಹಂ]ಗಳತ್ಯುತ್ಕಟಮಾಗೆ ಬಂದು ಸಮರಾಂಗಣದೊಳ್ ತಲೆ ಮುಟ್ಟುದಂದು ಮೂವತ್ತೆರಡಾಯುಧಂಬೆರಸು ವಾರಣವಾಹನ ವೀರ ಸಾಧನಂ (ಪುಣ್ಯಾಸ್ರ. ೨-೩೬); ಕರದ ಬಲ್ಲೆಯ [ಶಾಕಾಂ. ಹ]ದಿಂದ ವಾಲಿಯ ವರಕುಮಾರನ ತಿವಿಯೆ ಹಲಕನ ಸರಿಸದಲ್ಲಿ ಮೊನೆದೋಱಿತುಗುಳುವ ರಕುತ ಧಾರೆಯಲಿ (ತೊರರಾ. ೬-೩೦-೩೦). ಬಲ್ಲ$_2$ : ಇವನಿನ್ನಂ ನೆರೆದಪ್ಪನೆನ್ನಿದಿ ರೊಳಾತ್ಮಶ್ರೀಯನಂದಾರ್ಪಿನಿಂದವೆರೆಟ್ಟಲ್ಲದಿನಬ್ಜನಾಭನಿಸೆ (ಜಗರ. ೦೩-೦೦೦). ಬಲ್ಲೆ$_2$ : ಹೂಡಿದ ತೇರು ಕೂಡಿದ ಆನೆ ಕುದುರೆಯು ಗಾಢದ ರಾಯ ರಾವುತರು ನೀಡಿದ ಹರಿಗೆ ಕರದ ಬಿಲ್ಲು ಈಟಿಯ ಜೋಡಿಸಿ ತೊಟ್ಟ ಬಲ್ಲೆಗಳು (ಹಂಸಾಂ. ೦-೬೩). ಬಲ್ಲೆಹ : ಒಡ ಕುದುರೆಯ ಮೇಲೆ . . . ದೆಸವರಿವ ಅಸುರಾವುತ ಚೊಲ್ಲೆಹವ ಬಲ್ಲೆಹವ ಹಿಡಿದು ಮುಗುಳುನಗೆ ಯವಳಲ್ಲಿ ಎಱ ತಿವಿಯೆ ಚೊಲ್ಲೆಹದ ಬಲ್ಲೆಹ ಮುಱಿದು . . . ಅವಳ ಕಿಸಲಯರಸಕ್ಕೊಳಗಾದ (ಕೋಶಂಶಾಂ. ೨೯-೦೦); ನಿಲ್ಲೆಲೆಗೆ ಸೈರಂಧ್ರಿ ಕಾಮನ ಬಲ್ಲೆಹದ ಜಲುಗಾಯ ತಾಗಿತು ಬಲ್ಲೆ ನೀನೌಷಧಿಯ ರಕ್ಷಿಸಿಕೊಂಬು ದೆನ್ನೊಡಲ (ಕುವ್ಯಾಶ. ೨-೦೯), ಲಲನೆಪುರುಪಚಾರದ ನುಡಿ ಕಿವಿಯೊಳು ಬಲಿದ ಬಲ್ಲೆಹವಾಯಿತಾಗ (ಕಂಶಪ. ೯-೦೬೩). ಭಲ್ಲೆಯ : ವರ್ಗ ಚತುರ್ಥಾಕ್ಷರಂಗಳ್ಗೆ ಘಟೀಯಂ . . . ಭಲ್ಲೆಯಂ, ಭಾವಂ (ಶಮದ. ೦೩ ಶ್ರಯೋ); ಅಲಗಿನೊರಸೊರಸಿಲ್ಲ ಕೈಮೈಗಳಲ್ಲಿ ಮುಳುಗಿದ ಬಾಣವಿಲ್ಲಗ್ಗಳಿಸಿ ನೊಸಲಲಿ ಮುಱಿದ ಭಲ್ಲೆಯವಿಲ್ಲ . . . ನೀ ಮುನ್ನಳುಕಿ ಕೈದುವ ಹಾಯ್ಕಿದ್ದೈ ಸರಿಯಲ್ಲ ನಿನಗೆಂದ (ಕುವ್ಯಾಶಂ. ೩-೩೩); ಬಲ್ಲವರ್ ಹರಿಗೆ ಪಟ್ಟೆಯ ಶೂಲ ಶಲ್ಲೆಹ ಭಲ್ಲೆಯ ಬಲವಂತೆಯರ ಎಲ್ಲರ ತಱಱಿ ಹರ್ಮ್ಯವ ಹತ್ತಿ ಹೇಳ್ದಳು ಫುಲ್ಲಶರಾತ್ಮಸಂಭವಗೆ (ಪೋಹಶ. ೩೩-೭೯). ಭಲ್ಲೆಹ : ಅಂತರಾಂತರದ ಬಾಗಿಲ ಚಾವಡಿಯೊಳು ತಿಂತಿಣಿಸುವ ಪಟುಭಟರು ಕುಂತ ಕಠಾರಿ ಭಲ್ಲೆಹ ಖಡುಗನಾಂತು ಸಂತಸದಲಿ ಕಾದಿಹರು (ಕಂಶಪ. ೨-೬೬) ; ಕುಂತ ತೋಮರ ಖಡ್ಗ ಸುರಗಿ ಭಲ್ಲೆಹಗಳ ಕಾಂತಿ ಮುಸುಕೆ ಚೌದೆಸೆಯ ಹೊಂತಕಾಱಗಳಾಗ ರಾಯ ಮೋಹರದಲ್ಲಿ ಪಂತದೊಳೆಸೆದರುಬ್ಬಿನಲಿ (ಕಂಶಪ. ೦೩-೨೦). [<ಸಂ. ಭಲ್ಲ./ ತಮಿ. ವಲಯ, ವಲ್ಲೈಯ್ಯ$_2$ ; ತೆಲು. ತುಳು. ಬಲ್ಲೆ]

**ಬಲ್ಲೆಹ** 'ಬಲ್ಲೆಯ' ನೋ.

**ಬಲ್ಲೆಹಕಾಱ** (ನಾ). ಮಾತಿನ ಯುದ್ಧ ಹೂಡುವವನು ; ವಿತಂಡ ವಾದಿ : ಸೊಲ್ಲಿನ ಮಾತಿಗೆ ಬಲ್ಲೆನೆಂದು ಹೋರುವ ಬಲ್ಲೆಹಕಾಱ ರಿಗೆಲ್ಲಿಯದೋ ಮುಕ್ತಿ (ಪೋಲಶಮ. ೦೦೩-೪೦೨). [ಬಲ್ಲೆಹ (< ಬಲ್ಲೆಯ) + — ಕಾಱ]

**ಬಲ್ಲೆಳೆ** (ನಾ). ಗಟ್ಟಿಯಾದ ಎಳೆ ; ಬಿಗಿಯಾದ ದಾರ : ವಹಾತಸಹಿತಂ

ಬೆಚ್ಚು ನೀರೆಱೆದೋತು ಲಿಂಗವ ಧರಿಸಿ ಶಿಶುವಿಗೆ ಮಾತೆಯುಂ ಬಳ್ಳಿಯನು ಒಡಿಯಿಸಿ ಸೂತಕೃತ್ಯೆಯದನು ಬಲ್ಲೆಳೆಯೊಳೆಳೆಯದೊಲು ಬಂಧಿಸಿ . . . ಚೂರ್ಣವ ಕಲಸಿ ಕುಡಿಸಿದಳು (ಪುರಾತ. ೦೩-೦೯).

[ಬಲ್$_2$ (<ಬಲ್ಲಿತು$_1$) + ಎಳ್$_2$ (<ಎಟ್$_2$)]

**ಬಲ್ಲೇರಿ** (ನಾ). ಕೆರೆಗೆ ಅಡ್ಡವಾಗಿ ಕಟ್ಟಿರುವ ದೊಡ್ಡದಾದ ಏರಿ.—ಕಟ್ಟೆ : ನೂರ್ವರ್ಡಿ ಅಯ್ಯಹರಸಂ ಬಮ್ಮಿಸೆಟ್ಟಿಗೆಗೊಟ್ಟ ಶಾಸನದ ಪೊಲದ ಸೀಮೆ . . . ಅನ್ನೆ ಬರೆ ಒಡಿಲ ಗೆಱೆಗೆ ಬನ್ದಬಾಗೆ ಆ ಕೆಱೆಯೊಳಗಣ ಬಲ್ಲೇರಿಯೆ ಆ ಕೆಱೆಯ ತೆಂಕಣ ಕೋಡಿಯಿ (ಎಕ. XI. ದಾವಣ. ೦೯-೦೩ ; 1043). [ಬಲ್$_2$ (<ಬಲ್ಲಿತು$_1$) + ಏರಿ$_1$]

**ಬಲ್ಲೇಱು** (ನಾ). ಬಲವಾದ ಪೆಟ್ಟು ; ಜೋರಾದ ಹೊಡೆತ : ಅಸವಾಸ್ತಂ ತೆಗೆದೆಚ್ಚ ಕರ್ಗಣೆಯ ಬಲ್ಲೇಱಿಂಗೆ ಸತ್ಕಾರನೇಕಸವಾನಂ ಕಡುಕೆಯ್ದು ಕಾದಲರ ಮಾತು (ಅಜಿಂಪು. ೬-೯೩).

[ಬಲ್$_2$ (<ಬಲ್ಲಿತು$_1$) + ಏಱು$_4$]

**ಬಲ್ವಂದಿ$_1$** (ನಾ). ಬಲಿಷ್ಠವಾದ ಹಂದಿ ; ಬಲಶಾಲಿಯಾದ ವರಾಹ : ಮುನಿಸಿಂ ಬೊಬ್ಬಿಱಿದುಬ್ಬಿಯುಬ್ಬರಿಸಿ . . . ಬಲ್ವಂದಿ ಬಲ್ವಂದಿಕಾಱನ ಪೋಲ್ ಓಡೋಡೆದೊಂದೆ ಪೋಯ್ತು ಮಲೆದಂತಿಂತಿಕ್ಕಲಕ್ಕೆಕ್ಕಲಂ (ಸೂಕ್ತಿಸು. ೩-೦೩೩). [ಬಲ್$_2$ (<ಬಲ್ಲಿತು$_1$)+ಪಂದಿ]

**ಬಲ್ವಂದಿ$_2$**, ಬಲ್ಬಂದಿ (ನಾ). ಬಲವಾದ ಸೆರೆ ; ಬಲಿಷ್ಠವಾದ ಬಂಧನ : 'ಬಲ್ವಂದಿಗೊಳ್' ಪರಾ. ಬಲ್ಬಂದಿ : 'ಬಲ್ಬಂದಿಕಾಱ' ಪರಾ.

[ಬಲ್$_2$ (<ಬಲ್ಲಿತು$_1$)+ಬಂದಿ$_1$]

**ಬಲ್ವಂದಿಕಾಱ**, ಬಲ್ಬಂದಿಕಾಱ (ನಾ). ಕೈತಪ್ಪಿ ಹೋಗದಂತೆ ಸೆರೆ ಹಿಡಿಯುವವನು; ಪರಾಕ್ರಮಿ: ಮುನಿಸಿಂ ಬೊಬ್ಬಿಱಿದುಬ್ಬಿಯುಬ್ಬರಿಸಿ... ಬಲ್ವಂದಿ ಬಲ್ವಂದಿಕಾಱನ ಪೋಲ್ ಓಡೋಡೆದೊಂದೆ ಪೋಯ್ತು ಮಲೆದಂತಿಂತಿಕ್ಕಲಕ್ಕೆಕ್ಕಲಂ (ಸೂಕ್ತಿಸು. ೩-೦೩೩); ಬಂದಿಗೆ–ಬಂದಿಗ್ರಹಣ.ಬಲ್ವಂದಿಕಾಱ (ಕರ್ಮಣ. ೨೧೮ ಪ್ರಯೋ). ಬಲ್ಬಂದಿಕಾಱ: ೧. "ವಸುಮತಿಗೆ ಬಲ್ಬಂ[ಪಾಠಾಂ. ಲ್ವಂ]ದಿಕಾಱ ಬಂದಿಗ್ರಹಣ" (ಅಭಿಕ್ಕ. ೯೮).

[ಬಲ್$_2$ (<ಬಲ್ಲಿತು$_1$) + ಬಂದಿಕಾಱ (<ಬಂದಿಗಾಱ)]

**ಬಲ್ವಂದಿಗೊಳ್** (ಕ್ರಿ). ಬಲವಾದ ಸೆರೆಯನ್ನು ಹಿಡಿ ; ಬಲಿಷ್ಠನಾದವನನ್ನು ಬಂಧಿಸಂ : ಯುದ್ಧವುಲಿನರಾಗಿರುವ — ಲಿಂಗರಾಜನ, ಕರುವಿಯನ್ ಚೋಳೀವೇಂಕಯ್ಯಂದಿರನ್ನು ಬಲ್ವಂದಿಗೊಂಡೆಳೆತರುವ ಸೈನಿಕರ, ಪ್ರವೇಶ (ಶುಂಕ್ರಶ. ೨೧-೨೨). [ಬಲ್ವಂದಿ$_2$+ಕೊಳ್$_1$]

**ಬಲ್ವಗೆ$_1$**, ಬಲುವಗೆ (ನಾ). ೧. ಬಲಿಷ್ಠನಾದ ಹಗೆ ; ಬಲಶಾಲಿಯಾದ ಶತ್ರು : ದಾಳಿಯುಂ ಕಂಡರಂತೆ ಪುಗುಟಿಟ್ಟೋಡುತ್ತುಂ ಬಲ್ವಗೆಯುಂ ಕಂಡಂತೆ ನೊಗುಂದಿರಿಪುತ್ತುಂ (ರರ್ಮಾಮ್ಮ. ೯-೬೬). ೨. ಅಧಿಕವಾದ ಅಸೂಯೆ ; ಬಲವಾದ ದ್ವೇಷ : ನಿಗಡಂ ಸೊಕ್ಕಾನೆಯೊಳ್ . . . ಕಂಟಕಂ ಹರ್ಷದೊಳ್ ಬಲ್ವ[ಪಾಠಾಂ. ಲ್ಬ]ಗೆ ಕಾವ್ಯಪ್ರೌಢರೊಳ್ ತಳ್ತಿಱುವುದವೆಯೊಳುಂಟಲ್ಲಿ ಬೇಱಿಲ್ಲ ನಾಡೊಳ್ (ಅಜಿಂಪು. ೦-೯೩). ಬಲುವಗೆ : ೧. ಹಗೆಗಳೇ ಕೌರವರು ತಗೆ ಬಲುವಗೆ ಕಣಾ ಕಾಮಾದಿರಿಪುಗಳು (ಕುವ್ಯಾಸ. ೦೩-೩೬). ೨. ಅದೇಕೆ ಬಲುವಗೆ ಬರಲು ಶಂಕಿಸೆ (ತಿಮ್ಮಣಾಂ. ೬-೯೮). [ಬಲ್$_2$ (<ಬಲ್ಲಿತು$_1$)+ಪಗೆ$_1$]

**ಬಲ್ವಗೆ$_2$**, ಬಲ್ಬಗೆ (ನಾ). ಅನೇಕ ರೀತಿ ; ಬಹಳ ವಿಧ : ಇಂತು ಬಲ್ವಗೆಯಿಂ ಪೊಗಟ್ಟಿ ರಾವುನಂ ನೋಡುತ್ತ ಸೀತೆಯಿಂತೆಂದಳ್ ! (ಅಧ್ಯಾತ್ಮ. ೩೯-೦೨). ಬಲ್ಬಗೆ : ಇಂತು ಕೆಯ್ಮೋಡಿಸುತ್ತ ಬಲ್ಬಗೆಯಿಂ ಬೇಡಿಕೊಳ್ವ ಮುನಿಯ ಕಿಟ್ಟಿಗೆಗೆ ಸಕ್ಕ್ಕ, ದೇವ . . . ಮನ್ನಿಸಿ ಕಳೆಪಿದಂ (ಅಧ್ಯಾತ್ಮ. ೦೦-೦). [ಬಲ್$_2$ (<ಬಲ್ಲಿತು$_1$) +ಬಗ್ಗೆ$_1$]

**ಬಲ್ವಜ** (ನಾ). ಒಂದು ಬಗೆಯ ಹುಲ್ಲು ; ಗಂಜಳದ ಹುಲ್ಲು :"ಉಲಪಃ, ಬಲ್ವಜಃ— ಈ ೨ ಗಂಜಳದ ಪುಲ್" (ಪರಾಯು. ೩೨-೩೬). [ಸಂ.]

**ಬಲ್ವಡಿ** (ನಾ). ಬಲವಾದ ಕದ : ಭದ್ರವಾದ ಬಾಗಿಲು : ನಡೆನಡೆ ಕೇರ್ಗಳಂ ಕೆಡವು ಬಲ್ವಡಿ [ಪಾಠಾಂ. ಡೆ]ಯುಂ ಮುಱಿಪೊಕ್ಕು ಗೇಹದೊಳ್ಪುಡುಕಿ . . . ಎನುತುರ್ಬಿ ಬೊಬ್ಬಿಱಿದು ಮುತ್ತಿದರಾ ಗೃಹವಂ ದ್ವಿಷಾಧವರ್ (ಧ್ರುಕಾ. ೩೯-೬). [ಬಲ್$_2$ (<ಬಲ್ಲಿತು$_1$)+ಪಡಿ$_2$]

**ಬಲ್ವಡೆ** (ನಾ). ಬಲವಾದ ಸೈನ್ಯ : ದೊಡ್ಡ ದಂಡು : ಕಳಕುಳವಾಗೆ ಪಂಚಲನ ಬಲ್ವ[ಪಾಠಾಂ. ಲ್ಬ]ಡೆ ಪಂಚಲನಶ್ವಸಂಕುಲಂ ಕಳಕುಳವಾಗೆ (ಅಜಿಪು. ೦-೯೯) ; ಬಡಿಯಿಂ ಬಹ್ವಾಮಲಕದ ಫಳವಂ ಬಡಿಗೊಳಲು ದಿರ್ವಂದದಿ ಬೀಳ್ವಹ ಬಲ್ವಡೆಯುಂ ಕಾಣುತ್ತುಂ (ಜಪುಕಾ. ೬-೫೨) ; ನಾಲ್ವತ್ತು ಸಾಸಿರಂ ಕಡುಗಾಲ್ವೆತ್ತೊಳ್ವಾರುವಂಗಳಳ್ಳೊಲಕ್ಕಂ ಸಲ್ವಾನೆ ಸಾಸಿರಂ ಬರೆ ಬಲ್ವಡೆಯುಂ ತಂದನಮುಮ ಕಂಗೆಯು ಹನುಮಂ (ಕಳಾ. ೨-೯೬).

ಬಲ್ವಡೆ ಸುದ್ರಕನ್ = ಬಲವಾದ ಸೈನ್ಯವನ್ನು ಎದುರಿಸುವುದರಲ್ಲಿ ಶೂದ್ರಕನಂತಿರುವವನಂ ; ಬಹಳ ಪರಾಕ್ರಮಿ : ಒಂದಂ ಬಿರುದು : ಉರ್ಬ್ಬಿಯೊಳ್ಸಕಲದೊಳ್ಜೊರ್ಬ್ಬನೆ ಗಣ್ಡ ಶ್ರೀಜನ್ನಮನೆನ ಮೊಳ್ಪಡೆಯನ್ ಗೊನ್ನಿಸುತರಂ ಪರಾಕ್ರಮನ್ ಬಲ್ವಡೆ ಸುದ್ರಕನ್ ಪುಳಯಧನಿ ಮುತ್ತಿ ಆನೆಯಂ ಅಟ್ಟುವಂಗಂ ಕುಡಲಪೊಂಗಂ ಒರ್ಬ್ಬನೊ ಆಚಾರ್ಯ್ಯ ಂ (ಎಕ. XXIV. ೫೬-೬; ಸು. 885).

[ಬಲ್$_2$ (<ಬಲ್ಲಿತು$_1$) + ಪಡೆ$_2$]

**ಬಲ್ವನಿ** (ನಾ). ದೊಡ್ಡದಾದ ಹನಿ ; ದಪ್ಪವಾದ ಬಿಂದು : ಸ್ವಾತಿ ಬಲ್ವನಿ ಬಂದು ಶುಕ್ತಿಗರ್ಭದಿ ಬಿದ್ದ ಮಾತ್ರದೊಳ್ನನ್ನ ಪೂರ್ವದ ಗುಣವನುಳಿದಮಳಜ್ಯೋತಿ ಮುತ್ತಾದಂತೆ (ಶಶಪೋ. ೬-೯).

[ಬಲ್$_2$ ( <ಬಲ್ಲಿತು$_1$ ) + ಪನಿ$_1$]

**ಬಲ್ವರವಿ** (ನಾ). ದೊಡ್ಡದಾದ ಹರವಿ; ದಪ್ಪದಾದ ಗಡಿಗೆ,—ಮಡಕೆ : ಕೆಲಕೊಱಿಗರ್ದ ಬಲ್ವರವಿಯು ಬಲಗ್ಗೆ ಜಡಿದೊಟ್ಟೆ ತೂಗೆ. . . ಒಬ್ಬದರ್ ಕೆಲಬಲದರ್ಗೆ ಪೋಗಿಯಳೆ ಮಾಱ ಮಗುಟ್ಟರುತಿರ್ಪ ಗೋಪಿಯರ್ (ಅಜಾವ. ೫-೦೦೦). [ಬಲ್$_2$ (<ಬಲ್ಲಿತು$_1$)+ ಪರವಿ]

**ಬಲ್ವರಿಕೆ** (ನಾ). ದೊಡ್ಡ ಧಾಳಿ : ಬಲ್ವರಿಕೆಯೊಳಂನ್ನಪರ ಪಡಲ್ವಡೆ ತಳ್ತಿಱಿದು ರಣದೋಳಾ ವಿಕ್ರಮವಂ ಸೊಲ್ವಿನವಮಾವರ್ಜಿಸಿದಂ ನಾಲ್ವತ್ತಿರಡಱಿಕಾಳೆಗಂಗಳೋಳೀತಂ (ಶಂಶಶಾ.೦-೨೩).

[ಬಲ್$_2$ (<ಬಲ್ಲಿತು$_1$) + ಪರಿಕೆ$_1$]

**ಬಲ್ವಲ** (ನಾ). ೧. ಬಲಿಷ್ಠವಾದ ಸೈನ್ಯ; ಗೆಲ್ಲಲು ಅಸಾಧ್ಯವಾದ ಸೈನ್ಯ : ಪಸರಿಸಿ ಪೊಕ್ಕು ಕೂಕಿಱಿದು ಕಾದುವ ಬಲ್ವಲಗಳ್ ಪಳಂಚಿ. . . ಚೋದಿಸುವ ರಥಕ್ಕೆ ಪೆಪ್ಪಳಿಸದೊರ್ವರಿನೊರ್ವರೆ ಮಿಕ್ಕು ಪಾರ್ದು ಸಾರ್ದಿಸೆ ತಱುಗಾಱಿರಂದಿನಿಸು ಬಲ್ವಲನಾದುದದೊಂದು ಕಾಳೆಗಂ (ಶಂಶಶಾ. ೯-೯೬); ಗೆಲಲೆನಗೆ ರಿಪುಬಲಂ ಬಲ್ವಲಮಾದೊಡೆ ಸಿಂಹನಾದಮಂ ಮಾಡಿಟ್ಟಿಂ ಚೆಂಬಲವಾಗಿ ಬರ್ಪುದೆಂದೀ ಬಲದೇವಂಗಱಿಪಿ ವಾಸುದೇವಂ ಪೋದಂ (ಶಂರಾಮಾ. ೯–೯೬). ೨. ಅತಿಶಯವಾದುದು; ಶ್ರೇಷ್ಠವಾದುದು : ಬಲ್ಪಿಡಿದಿವನಂ ಧರೆಯೊಳ್ ಗೆಲ್ವನ್ನರ್ ಚಾಪಕುಶಲರಿಂಲ್ಲೆನೆ ಕಂಸು ಬಲ್ವಲ[ಪಾಠಾಂ. ಬಲುವಲ]ನಾದಭ್ಯಾಸದೆ ಸಲ್ವಿನಂ(ಕೇಪುಶ. ೫-೬೬). ೩. ಬಹಳ ರಭಸದಿಂದ ಕೂಡಿದುದು; ಅತಿ ವೇಗವನ್ನುಳ್ಳುದು; ಮಹಾಬಲಶಾಲಿಯಾದುದು: ಬಲ್ವಲನಲ್ಲದೀಯಲೆಯುತಿರ್ದುದು ತೆಂಕಣ ಗಾಳಿ ಕಾಮನೀ ಕೊಲ್ವನೆ ಚಂದ್ರನೀ ಕೊಱಿಯ ಕೊಂಬನೆ ನಿನ್ನೊಡ ಗೂಡ ವೇಟ್ಪಾ ನೀನೊಲ್ವುದು ಮೊಗ್ಗೆ ಕಾಡುವುದು ಕಾವುದನಾಥೆಯನೆನ್ನಂ (ಅಜಾಪ. ೦೦-೫೪).

ಬಲ್ವಲಾಗು = ಅಧಿಕವಾಗು : ಜಾಗದ ಬಲ್ವಲಾದ ಪೊಱಲಿಂ

ಬಳೆದೊಪ್ಪುವ ನಾಳಿಕೇರದಿಂ ಪೂಗವನಂಗಳಿಂದಲೆಯು ಬಳ್ಳಿಗಳಿಂ... ನಿರಂತರಂ ಸೊಗಯಿಸಿರ್ಪುವು ಪೆರ್ಗಿಡಿಗಳ್ನಿರಂತರಂ (ಸುಕುಮಾ. ೨-೪೩); ಪಾವುಗೆತ್ತು ಪತ್ತುವ ಮುಂಗುಲಿಗಳಂತೆ ಬಾಲವಮಂ ಬದಿರುತ್ತೆ ಮಣಿಕು ವರೆದರ್ಪ ತುದಿಗೊಂಬುಗಳ ಕೊನೆಯೊಳ್ ಕವಲ್ತು ಪಾಲ್ಮಲುಯ ಬಲ್ಮಲಾದ ಕಿಱುಗೊಂಬುಗಳೊಳಂ (ಅಂಜನಾ. ೬-೪೦ ವ).

[ಬಲ್$_2$ (<ಬಲ್ಲಿತು$_1$) + ಬಲ್ಮ]

**ಬಲ್ಮಲಿಕೆ** (ನಾ). ಬಹಳವಾದ ಸಾಮರ್ಥ್ಯ; ಅತ್ಯಂತ ಪರಾಕ್ರಮ : ಬಲ್ಮಲಿಕೆಯಿಂದಿರ್ದಿರ್ಚದ ಬಲ್ಮಡೆ ತನ್ನೆಚ್ಚ ನಿಶಿತಶರಸಂಹತಿಯಿಂದೆಲ್ಮಡ ಗಾಯ್ತು (ಕಾವ್ಯಾವ. ೬೯). [ಬಲ್$_2$ (<ಬಲ್ಲಿತು$_1$) + ಬಲಿಕೆ (<ಬಲ್ಕೆ)]

**ಬಲ್ವಿಡಿ$_1$**, ಬಲುವಿಡಿ$_1$, ಬಲ್ಪಿಡಿ$_1$ (ಕ್ರಿ). ಬಲವಾಗಿ ಹಿಡಿ; ದೃಢವಾಗಿ ತಿಳಿದುಕೊಳ್ಳು : ಬಲ್ವಿಡಿದಾಳಿಯಂ ಸಖಿಯರಿಂದುದುಗೇಳದೆ ಗೆಂಟು ಮಾಟುಪ್ಪುದುಂ (ಪುಲ್ಲಪು. ೭-೬೬); ಕರ್ಮೇಂಧನಂಗಳುಂ ಸುಡಲುಂ ಜಿನ ಚರಣಮಂ ಬಲ್ವಿಡಿಯಲುಂ ಸನ್ಮಾರ್ಗಮಂ ಪೊರ್ದಲುಂ ಮನಂದಂದು (ಧರ್ಮಾಮೃ. ೭-೩೩೬); ಏಳೇಳಲಿಬ್ಬರ ಕೈವಿಡಿದಳು ಕಾಳೆತೇಳದೆ ಕೈಗಳ ನೀಡ ಚಾಚಿಸಿ ಪೋಪೆವೆಂದತ್ತಿತ್ತಲೊಲೆದರು ಬಾಲೆ ಬಲ್ವಿಡಿದು ತೆಗೆದಳು (ಭಕ್ತ. ೧೦-೯೪). ಬಲುವಿಡಿ$_1$ : ಕೋಟಲೆಗಳೀಯೆರಡರೊಳಗವ ಬೇಟವನೆ ಬಲುವಿಡಿದು ಹೂಡಿದ ಘೋಟಕದ ಹೊಂದೇರಿನಲಿ ಹೊಱಿವಂಟನರ ಮನೆಯ (ಕೊರಚ. ೩-೭-೨೨); ವಸುದೇವನಂದನನಂಘ್ರಿಯನು ದೃಢಭಾವದಲಿ ಬಲು[ಪಾಠಾಂ. ಲ]ವಿಡಿದು ದಾಂಟು ಭವಾಂಬುಧಿಯ (ತಿರಾಗ. ೯-೦೫-೨೪). ಬಲ್ಪಿಡಿ$_1$ : ಈ ಕವನೀಯಕಾವ್ಯಮಂ...ಬಲ್ಪುಸಿರ್ದೆಂ ಬುಧರ್ಕ ಲಾವಲ್ಲಭರ್ಪೆದೆ ಕೇಳ್ದು ಗುಣಮೊಂದನೆ ಬಲ್ಪಿಡಿದಿರ್ಪುದಾವಗಂ (ಕಾದ್ಯಟ. ೦೨-೦೯೯); ಪವನವೇಗವ ಕೀಟ್ಪಡಿಸಿ ದುವಾಳಿಪ ಜವಗಾತಿಯ ಬೆನ್ನೊಳಿರ್ದು ಕುವರ ಕಂಗೆಟ್ಟು ಬದ್ದಪೆನೆಂದು ತಕ್ಕೈಗೊಂಡವಳ ನುಣ್ಗೊಲೆಯ ಬಲ್ಪಿಡಿದ (ಕೋಶಕ. ೩೦-೨೬). [ಬಲ್$_2$ (<ಬಲ್ಲಿತು$_1$) + ಪಿಡಿ$_1$]

**ಬಲ್ವಿಡಿ$_2$**, ಬಲುವಿಡಿ, ಬಲ್ಪಿಡಿ$_2$ (ನಾ). ೧. ಬಲವಾದ ಹಿಡಿತ; ದೃಢ ವಾದ ಹಿಡಿತ : ಬಲ್ವಿಡಿವಿಡಿದು ಶರಣ್ಬುಗು ಜಿನೇಂದ್ರಪದಸರಸಿಜಮಂ (ಅನ್ನ. ೨-೩೬); ಒಡಲುಂ ಪ್ರಾಣಮುಮೆಂಬಿವು ಕಿಡಲೀಯದುವು ಜಸ ಮದೊಂದೆ ಕಿಡದದನಾಂ ಬಲ್ವಿಡಿವಿಡಿದು ನೆಗೞ್ವೆಂ (ಕಂಕಣಾ. ೦೨-೦೬೦). ಬಲುವಿಡಿ$_2$ : ೧. ಬಲುವಿಡಿಯ ಬಿಲು ವಾಮದಲಿ ಬೆರಳೊಳಗೆ ಸವಡಿಸಿ ಸನಡಿಸಿ ತೆಗೆವ ತಿರುವಿನ ಹಿಳುಕು ನಿವಿರಿದ ತೋಳ ತೋಱಿಕೆ ಬಲದ ಭಾಗದಲಿ (ಕುಮಾ. ೨೬-೨೬). ಬಲ್ಪಿಡಿ$_2$ : ೧. ಬಲ್ಪಿಡಿಪಿಡಿದಿರ್ದುದಂಗ ಜನ ಕಯ್ಪುಡಿಯುಂ ಪಿಡಿಯುಂ ಮತಂಗಜಂ (ಪುಷ್ಪ. ೩-೬೦). ೨. ಬಲಿಷ್ಠ ವಾದ ಮುಷ್ಟಿ; ಬಿಗಿಮುಷ್ಟಿ : ಕಡೆಯೊಳ್ ಪ್ರತಾಪಾಗ್ರ್ಯಂ ದಮನನ ಬಲ್ಪಿಡಿ ಗುರ್ದಿಂಗೆ ನಿದ್ದೆವೋದಂ (ರಾಚಾಪ್ರ. ೧೨-೯).

[ಬಲ್$_2$ (<ಬಲ್ಲಿತು$_1$) + ಪಿಡಿ$_2$]

**ಬಲ್ನೆಲ್$_1$** (ನಾ). ಹೇರಳವಾಗಿದ್ದು ತೆಕ್ಕೆಗೊಂಡ ಕೇಶರಾಶಿ : ಗುಡಿಜಲಮನಕ್ಕೆ ಮೇಣ್ ಮಾರುಡಫಲದೊಳ್ ತಿರುಳನಕ್ಕೆ ತಲೆವೂಸಲೊಡಂ ಜಡಿಗೊಂಡ ತಲೆಯ ಬಲ್ನೆಲೊಡೆದು ಮೃದುಸ್ನಿಗ್ಧಸರಳತರಮಾಗಿರ್ಕುಂ (ಸೂಪಶಾಸ್ತ್ರ. ೯-೩೩). [ಬಲ್$_2$ (<ಬಲ್ಲಿತು$_1$) + ಪಿನೆಲ್$_2$]

**ಬಲ್ನೆಲ್$_2$** (ನಾ). (ಕೆಲವು ಪ್ರಾಣಿಗಳ ಬೆನ್ನಿನ ಮೇಲಿರುವ) ದೊಡ್ಡ ದಾದ ಡುಬ್ಬ.—ಎತ್ತರವಾದ ಭಾಗ : ಮಾನವಲೋಕಾಧೀಶ್ವರನಾ ಹೇರಾನೆಯು ಬಲ್ನೆಲೇಱಿ ಸಾನುರಾಗದಿ ಬಂದನಾ ಪುಂಡರೀಕಿಣಿಗಾ ನರಪತಿಬಲಸಹಿತ (ಶ್ರೀಪಾಲಂ. ೦೬-೨೪). [ಬಲ್$_2$ (<ಬಲ್ಲಿತು$_1$) + ಪಿನೆಲ್$_2$]

**ಬಲ್ವೇಕ** (ನಾ). ಉತ್ತಮವಾದ ತಿಳಿವಳಿಕೆ.— ಯಂಕ್ರಾಯಂಕ್ತ ಪರಿಜ್ಞಾನ : ಗಲ್ಪಿವೆಂಬುದು ಬಲ್ಪೆವಂಕಸನ್ನದ್ಧದಿ ನಿಲ್ಪುದುತ್ತಮವೆಂದೆ ಪೊಡೆಯ ಬಲ್ವೇಕಕೆ ಗುರು ನೀನೆನ ಕಂಡುದ ಚೆಲ್ವೆಂದು ಪೊಗಳುತೆ ಯಿದ್ದರು (ಭರತೇ. ೫೦-೫೦). [ಬಲ್$_2$ (<ಬಲ್ಲಿತು$_1$) + ಏವೇಕ]

**ಬಲ್ಬಿಸಿಲ್**, ಬಲುಬಿಸಿಲು, ಬಲ್ಪಿಸಿಲ್, ಬಲ್ಪಿಸಿಲು (ನಾ). ಬಹಳವಾದ ಬಿಸಿಲು : ಅತಿಯಾದ ಸೂರ್ಯನ ತಾಪ : ಬಂದ ವಸಂತ ಬನಕೆ ಬಲ್ಬಿಸಿಲೊಳ್ (ಶಬರಾ. ೦೦-೬೯). ಬಲುಬಿಸಿಲು: ಬಲುಬಿಸಿಲು ಬಾಯ್ಮಾಂತ ಚಂದ್ರಿಕೆವೆಳಗೆನಲು ಘನರೋಷಮಚ್ಚಿಯ ಬೆಳಗು ಬೀತುದು ಚಕಿತ ಚಂದ್ರಮನಾದ ದೂರ್ವಾಸ (ಕುಮಾ. ೦೬-೨೪) : ಗಾಳಿ ಫರ್ವಾಂಬು ಪೊತ್ತುದು ಭೂಮಿ ಬಿಕ್ಕನೆ ಸೀಳಿತು ಕೂರ್ವನ ಬೆನ್ನು ಹೋಳಿಗೆವಡದುದು ಬಲುಬಿಸಿಲೊಂದು ಚಡಾಳಿಕೆ ಜಗದ ಭಂಗಿಸಿತು (ಮೋಹಕ. ೦೯-೯೬). ಬಲ್ಪಿಸಿಲ್ : ಇದು ಮಟೆಯಿದು ಚೆಂ ಬಲ್ಪಿಸಿಲಿದು ಕಟ್ಟಲೆಯೆಂದು ನೋಡದೋಹಿಲನಗರಂ ಮುಂದದಿಂ ತಂದಾ ಸೌರಾಷ್ಟ್ರದ ಸೋಮೇಶಂಗೆ ನಿಚ್ಚಮರ್ಪಿಸುತಿರ್ದಂ (ಅದ್ಯಟ. ೦೦-೯೩). ಬಲ್ಪಿಸಿಲು : ಕ್ಷೋಣಿಯೊಳೀ ಬಲ್ಪಿಸಿಲಿಂದೆ ಕಡುಗಾದ ಬಾಣಲಿಯೆಣ್ಣೆಯೊಳಬುದಿ ಹೂಣಸಿ ಕುದಿಗೊಂಡು ಮರಳ್ವುದು ವನಚರಶ್ರೇಣಿ ಬೆಂಡದ್ದು ತೇಲಿದುವು (ಮೋಹಕ. ೦೯-೯೩).

[ಬಲ್$_2$ (< ಬಲ್ಲಿತು$_1$) + ಬಿಸಿಲ್]

**ಬಲ್ಬಿಸುಪು** (ನಾ). ಬಹಳವಾದ ಶಾಖ ; ಅತಿಯಾದ ತಾಪ. —ಉಷ್ಣ : ಒಡಲಾಂತ ತನುವೀತನ ನೆವದಿಂದೆಂದು ಕಡುಗಳಲ್ಕಾಕಾಶವೆಂಬ ಮೃಡ ನುರಿಗಣ್ಣು ತೆಱೆದವೊಲು ನಡುನೇಸಱಡಸಿದುದು ಬಲ್ಪಿ[ಪಾಠಾಂ. ಲ್ಪಿ]ಸುಪ (ಶ್ರೀಪಾಲಂ. ೯-೩೪). [ಬಲ್$_2$ (< ಬಲ್ಲಿತು$_1$) +ಬಿಸುಪು (<ಬಿಸುರ್ಪು)]

**ಬಲ್ಬೆಣ** (ನಾ). ದೊಡ್ಡದಾದ ಹೆಣ ; ಭಾರಿ ಶವ : ಪೆಣದಿನಿಗಳ ತಂಡಂ ಬಲ್ಬೆಣಗಳನಱಸುತ್ತುಮಲ್ಲಿ ಬರಿವರೆ (ಗದಾಯು. ೯-೦೫) ; ಬಲ್ಬೆಣನುರ್ಚಿ ಕೋಡೋಳಿರೆ ನೆತ್ತರುರೋಮಣಿಯಿಂ ನೆಲಕ್ಕೆ ಬಾನಲ್ಲಿರಿವನ್ನೆಗಂ ಪ್ರಹತ ದಿಂದಿಱಿದೆತ್ತಿದೊಡೆ (ಕಾವ್ಯಾವ. ೬೯) ; ಆನೆಯೊಂದನ್ ತಲ್ಪ್. ಭೀಮ ಸೇನಂಗೆತ್ತು . . . ಎಲ್ಲಿ ತೋಱೆಂದದರ ಕಾಲ್ಪುಯ್ದು, ಬಲ್ಬೆಣನವೊದೆ ದೊದೆದು, ಬಿಸುಟನ್ (ಅಶ್ವಕಾ. ೯-೩೩).

[ಬಲ್$_2$ (< ಬಲ್ಲಿತು$_1$) + ಪೆಣ]

**ಬಲ್ಬೆಣಸು** (ನಾ). ಅಧಿಕವಾದ ಪ್ರಯತ್ನ: ತಾಂ ಮೊಗಂಗುಡೆ ಪದವೆತ್ತು ಚುಂಬಿಸಿ ಭಯಂಗೆಯ್ಯ ಬಲ್ಪೆ[ಪಾಠಾಂ. ಲ್ಪೆ]ಣಸಂ ಪೊದಟ್ಟಿ ನಾಣ್ಗಡ ನೆರೆದೂಡೆಯ ಪ್ರಥಮಸಂಗಮದೊಳ್ ಕುವರಂ ಮರುಳ್ಗಿದಂ (ಕಂದ್ರಪ್ರ. ೬-೬೨). [ಬಲ್$_2$ (< ಬಲ್ಲಿತು$_1$) + ಪೆಣಸು]

**ಬಲ್ಬೆಱೆ** (ನಾ). ಪೂರ್ಣಚಂದ್ರ : ಬರುತಿದೆ ಬಲ್ಬೆಱೆ ಬಂಡುಣಿ ವಸುಳೆಯ ತಿರುವಿಲ್ಲಾಗಿನ ಪಳವಿಗೆಯೆಳಮಿನೆರಡಂ ಕೊಂಡಲೆ ಸಖಿಯವ ಗುಳ್ಳವವ ಹೊಡೆನೂಂಕೆನುತ ತರುಣಿವಿಕಲವಚನವನಾಡಿದಳ್ ವಿರಹದ ವೇದನೆಯೊಳ್ (ಶಬರಾ. ೪-೬೪). [ಬಲ್$_2$ (< ಬಲ್ಲಿತು$_1$) + ಪೆಱೆ]

**ಬಲ್ಬೇಟ** (ನಾ). ಅತಿಯಾದ ಶೃಂಗಾರ ; ಬಹಳವಾದ ಪ್ರಣಯ : ಒಡಸುಟ್ಟ ಪಟ್ಟೆಯ ಚಲ್ಲಣ ಮೋಹನವಡೆದ ಪದಕ ಪೈಠಣಿಯ ಕಡು ಸೊಬಗಿನ ಬಲ್ಬೇಟದ ಸುಕುಮಾರ ನಡೆದನು ಸುಖರ ಮೇಳದಲಿ (ಕಂಕಣ. ೦೦-೨೦). [ಬಲ್$_2$ (< ಬಲ್ಲಿತು$_1$) + ಬೇಟ$_1$ (<ಬೇಂಟ)]

**ಬಲ್ಬೊನಲ್**, ಬಲುಪೊನಲು (ನಾ). ಹೆಚ್ಚಾದ ಹೊನಲು ; ಅತಿ ಶಯವಾದ ಪ್ರವಾಹ : ಪುರಮಂ ಪೊಕ್ಕು ಪುರಂಧ್ರಿನಿಕಾಯದ ತರಳ ಕಟಾಕ್ಷರುಚಿಯ ಬಲ್ಬೊನಲೊಳಗುರುಮುದದಿಂ ತೇಂಕಾಡಿ ನಡೆದು ರಾಜಾಗಾರಮನೆಯ್ದಿ (ಶಬರಾ. ೯-೦೯). ಬಲುಪೊನಲು : ಪ್ರಣದ ಬಲುಪೊನಲೊಳಗೆ ತಲೆಗಳು ಕುಣಿದವರ್ಜುನಸಂಬಿನಾಚುಬಿಗೆ ಹೆಣನ ದಾವಣ ಹಾಸಿದವು ಸೂಸಿದವು ದೊಂಡೆಗಳು (ಕುಮಾ. ದ್ರೋ. ೦೦-೩).

[ಬಲ್$_2$ (<ಬಲ್ಲಿತು$_1$) + ಪೊನಲ್]

**ಬಲ್ಮೊಯಿಲ್** (ನಾ). ಬಲವಾದ ಹೊಡೆತ ; ಜೋರಾದ ಏಟು : ಬಲ್ಲರಿಗಳ ಸಂಭ್ರಮಕ್ಕಂ ಬಱುವಳಿಯ ಬಲ್ಮೊಯಿಲ್ಗಂ ಪೆರ್ವುಳಿಯ

ಧಾರೆಗಂ . . . ಬೆಳ್ಪದೆ ಬೆದಱದೆ ಬಲ್ಗೆಡದೆ . . . ಮಹಾವಟವೃಕ್ಷದ ಕೆಳಗೆ ವಿಪುಳತಪದಿಂದವರ್ಣಿಯೊಪ್ಪುತ್ತುಮಿರೆಯಿರೆ (ಗಂಡ. ೯-೫೮ ಪ). [ಬಲ್$_2$ (< ಬಲ್ಲಿತು$_1$) + ಪೊಯಿಲ್]

**ಬಲ್ಸರ**, ಬಲುಚರ, ಬಲ್ಚರ (ನಾ). ಗಟ್ಟಿಯಾದ ಸ್ವರ; ಜೋರಾದ ಧ್ವನಿ: ಕಡೆಯುಬೇಡಿನ್ನೆನ್ನನೆಂದು ಬೊಮ್ಮಗೆ ಮೊಱೆಯಿಡುವ ಬಲ್ಸರ ವಿದೇಬಂತೆ ಕಡು ಸೊಗಯಿಪ ಘುಳುಘುಳುರವದಿಂದಾ ಕಡಲು ಕಣ್ಗೆಸೆದಿರುತಿಹುದು (ಶಂಕರಸಾಂ. ೨-೩). **ಬಲುಚರ** : ಆಗಸದ ಬಲುಚರ ಮೃತ್ತಿಸ್ರವ ಪಕ್ಷಿಸನಲಂತುಗೆಯ್ಯಲು ಬಂದುದಸುವು (ಶಾಕಟ. ೩-೨೦). **ಬಲ್ಚರ** : ಬಲ್ಚರದಿನವಳ ಸದ್ಗುಣಗಳಂ ಕೊಂಡಾಡಿ . . . ಶೋಕಂ ದಳೆದರಾ ಸಖಿಯರು (ಶಾಕಟ. ೬-೦೦೬). [ಬಲ್$_2$ (< ಬಲ್ಲಿತು$_1$) + ಸರ$_2$]

**ಬಲ್ಸರಿ**, ಬಲುಸರಿ (ನಾ). ಭಾರಿಯಾದ ಮಳೆ; ಅತಿಯಾದ ವೃಷ್ಟಿ: ಅತ್ತ ಕಱೆವಂಬಿನ ಬಲ್ಸರಿಯಿಂದಮಾ ದಿಶಾವಳಿ ಮಸುಳ್ದಂತು ನೀಳ್ದವುದು (ಕುಶಲಾ. ೦೦-೦೦): ಅವರ್ದಿನ ಬಲ್ಸರಿ ಸುರಿದವುದೆನಲವನೀಶ್ವರಂಗಿರುಳ್ ತನ್ನ ಕಂಡ ಕನಸಂ ಪೇಳ್ದಳ್ (ಶಂಕರಸಾ. ೩-೯೦); ತುಂಬಿಕೆಯೊಳಿಂಬುಗೊಂಡ ತುಂಬುನೀರಂ ಪೂತ್ಕರಿಸಿದಪುವೆಂಬಂತಿರೆ ಎಡವಿಡದೆ ಬಲ್ಸರಿ ಸುರಿಯೆ ಮೞೆಗಾಲಂ ಪೆರ್ಚುಯ್ದು (ನಾಕುತ್ಕ. ೩-೦೨). **ಬಲುಸರಿ** : ಮಿಗೆ ಹೊಳೆಹೊಳೆವ ವಹಿಪರ ಮಕುಟರತ್ನದ ಬಳ್ಳಿ ಮಿಂಚುಗಳ ಬಲುಸರಿಯ ನಾರಾಚಜಾಳದ ಮಳೆಯ ನೆತ್ತರ ಹೊನಲುಗಳ ರೌಕುಳದ ಮಳೆಗಾಲದಲಿ ಹೆಚ್ಚಿತು ಭಟರ ಶೌರ್ಯಶಿಖಿ (ಕುಮಾರರ್ಮ್ಯೋ. ೦೫-೨೯). [ಬಲ್$_2$ (< ಬಲ್ಲಿತು$_1$) + ಸರಿ$_1$]

**ಬಲ್ಸಾಸಿ** (ನಾ). ಮಹಾ ಸಾಹಸಿ; ಅತ್ಯಂತ ಶೌರ್ಯಶಾಲಿ: ಇವರ್ಗೆ ಬಾಲಮೊಂದಿರ್ಕುಂ ಪೆರ್ವಡವೆರಸು ಬಂದಿರ್ಪರ್ ಬಲ್ಸಾಸಿಗಳ್ ಕಣಾ (ಅದ್ಭುತ. ೪೨-೨೩). [ಬಲ್$_2$ (< ಬಲ್ಲಿತು$_1$) + ಸಾಸಿ]

**ಬಲ್ಸಿಡಿಲ್** (ನಾ). ಬಲವಾದ ಸಿಡಿಲು : ಬಲ್ಸಿಡಿಲಿಂತಂತಿರೆ ಗರ್ಜಿಸುತ್ತದರ್ದದ ತತ್ಕುಂಭಮಂ ಸೀಳ್ದು (ಕಡಕ. ೩-೩೦). [ಬಲ್$_2$ (< ಬಲ್ಲಿತು$_1$) + ಸಿಡಿಲ್$_2$]

**ಬಲ್ಸಿರ** (ನಾ). ದೊಡ್ಡದಾದ ತಲೆ : ತುರಗಗಳನು ಬೀಳಲಿಱಿದು ರಾವುತರ ಬಲ್ಸಿರಗಳ ಮೆಟ್ಟಿ ಮೂಗರಿದ ದ ರಗಲಿಗಳ ಕಡು ಭಾವು ಶಾಬಾಸೆಂದು ತುರುಕರು ಕೊಂಡಾಡಿದರು (ಕಂಪಿಲ. ೦೬-೦೦೩). [ಬಲ್$_2$ (<ಬಲ್ಲಿತು$_1$) + ಸಿರ$_2$]

**ಬಲ್ಸುಕ** (ನಾ). ಬಹಳವಾದ ಸುಖ ; ಅತಿಶಯವಾದ ನೆಮ್ಮದಿ : ಸಕಲ ವಜೀರರು ಸಹಿತ ಚಕಿತ ಪರಾಕ್ರಮಿ ರಣಧೂಳಿಖಾನ ಬಲ್ಸುಕದೊಳಗಿರ್ದನು (ಕಂಪಿಲ. ೦೬-೫೩). [ಬಲ್$_2$(<ಬಲ್ಲಿತು$_1$) + ಸುಕ$_1$ (<ಸೊಗ)]

**ಬಲ್ಸೂಱೆ**, ಬಲುಸೂಱೆ (ನಾ). ಬಹಳವಾದ ಸೂರೆ ; ಅಧಿಕವಾದ ಕೊಳ್ಳೆ, – ಲೂಟಿ : "ದಟದುಟಂ (ದಟವೃಟಂ) – ಬಲ್ಸೂಱೆ" (ಕಪುಶ. ಕಾ. ೦) ; ನೆರೆದ ಮಹಾನರನಾಯಕಸಭೆಯೊಳಗರೆಬರ ಬುದ್ಧಿಯನೆಳಕುಳಿಯಾಡುತ್ತರೆಬರಹಂಕಾರವನೋವದೆ ಬಲ್ಸೂಱೆಗೊಳುತ (ಶಮುಣ. ೩-೩೦). **ಬಲುಸೂಱೆ** : ಮೇರೆಯಿಲ್ಲದ ತೈಲ ಘೃತ ಬಳಕೂರ ಹರದರ ಹಾರುವರ ಬೇಹಾರಿಗಳ ಬಲುಸೂಱೆಯಾದುದು ಕೇರಿಕೇರಿಯಲಿ (ಕೃಷ್ಣ. ೩-೬-೯). [ಬಲ್$_2$ (<ಬಲ್ಲಿತು$_1$) + ಸೂಱೆ]

**ಬಲ್ಸೆರೆ** (ನಾ). ದೊಡ್ಡದಾದ ನರ, – ರಕ್ತನಾಳ : ಬತ್ತಿದ ಬಡ ಪೊಱವಾಲ ಬಲ್ಸೆರೆ ಸುತ್ತಿ ಹತ್ತಿದ ಹಿಳ್ಳಿಗಾಲುಗಳ ಕೊತ್ತಿಗಣ್ಗಳ ಕೋತಿ ಮುಸುಡಿನ . . . ನಳ್ಳಿಮೂಗಿನ ಭೂತವೆ ನಡೆತಪ್ಪಂತೆ ಮನೆಗೆ ಬರಲು (ಸೌಂದಸಂ. ೬-೦೦೧). [ಬಲ್$_2$ (<ಬಲ್ಲಿತು$_1$) + ಸೆರೆ$_2$]

**ಬಲ್ಸೆಱೆ**, ಬಲುಸೆಱೆ (ನಾ). ಬಲವಾದ ಸೆರೆ ; ಬಿಗಿಯಾದ ಬಂಧನ : ಆಂ ಮೆಯ್ಮಱೆದಿರ್ದನಪ್ಪೊಡಿವಷಂ ತಮ್ಮಯ್ಯನಂ ಪೋಲ್ತು ಬಲ್ಸೆಱೆಯಿಂ ಪಿಂಗಿದುದೊಂದು ಗಂಧಗಜದಂತಾದಾಗಳೇಗೆಯ್ವೆನೋ (ಸಂಕುಶಕಾ. ೦೦-೪೨). **ಬಲುಸೆಱೆ** : ಕಡುಹುವಗ್ಗದ ಕಾಲಕೇಯರ ಗಡಣವಡಗಿತು ಸುರರ ಬಲುಸೆಱೆ ಬಿಡಿಸಿದವು ಬಳಿಕಾಯ್ತು ಕಡುಸುಮ್ಮಾನ ಸುರಕುಲಕೆ (ಕುಮಾರ. ೦೨-೩೩). [ಬಲ್$_2$ (<ಬಲ್ಲಿತು$_1$) + ಸೆಱೆ$_2$]

**ಬಲ್ಸೆಱೆಗೆಯ್** (ಕ್ರಿ). ೧. ಬಲವಾಗಿ ಬಂಧಿಸು, – ಸೆರೆಹಿಡಿ. ೨. (ಅಲಂ) ಬಲವಾಗಿ ಸೆಳೆ ; ಆಕರ್ಷಿಸು : ನಗೆಗಣ್ ಸೂಸೆ ವಿಳಾಸಮಂ . . . ಸ್ಮರಮಂತ್ರದೇವತೆಯವೋಲ್ ಬಾಹಾಲತಾಂದೋಳನಂ ಬಗೆಯಂ ಬಲ್ಸೆಱೆಗೆಯ್ಯೆ ಬಾಲೆ ಮೆಱೆದಳ್ ಲೀಲಾಪದನ್ಯಾಸಮಂ (ಶಂಕರಪುಷ. ೩-೪೨); ನಗವಾಯಂ . . . ಘಣ್ಣಯಿಂ ಬಗೆಯಂ ಬಲ್ಸೆಱೆಗೆಯ್ದು ಪುತ್ರಳಿಗಳಿಂ ರಂಗಸ್ಥಳೀಸ್ತಬ್ಧಮಾವಗಮೊಪ್ಪುತ್ತಿರೆ ರಂಜಿಕು ಹರಿಹಗಶ್ರೀ ದೇವತಾಮನ್ದಿರದ (ಎಕ. XI, ದಾವಣ. ೨೩-೬೬ ; 1224 ). [ಬಲ್ಸೆಱೆ + ಕೆಯ್$_1$]

**ಬಲ್ಸೆಱೆವಿಡಿ** (ಕ್ರಿ). (ಅಲಂ) ಆಕರ್ಷಿಸು : ಎಳನೀರಿಂ ನಾಳಿಕೇರಂ ಬಳೆಯಿಸೆ ಕದಳೀಷಂಡಮಂ ತುಂಬಿಯಿಂ ಪೂಗೊಳದಿಂ ಪೂಗದ್ರುಮಂ ಬಲ್ಸೆಱೆವಿಡಿಯೆ . . . ಸೊಗಯಿಕುಂ ತತ್ಪುರೋದ್ಯಾನಷಂಡಂ (ಮಲ್ಲಿಕ. ೨-೩೪) ; ಕಾಲ್ಸವುನಿಸೆ ಪೊಸ ಬಂಡಿನ ಮೆಲ್ಸರಿಯಂ ಸುರಿಯುತಿರ್ಪ ಸಂಪಗೆವೂಗಳ್ ಬಲ್ಸೆಱೆವಿಡಿವಂತಿರ್ದುವು ಮೆಲ್ಸರದಿಂ ಪಾಡುತಿರ್ಪ ಪೆಣ್ದುಂಬಿಗಳಂ (ಕ್ಮಕಾ. ೬೦). [ಬಲ್ಸೆಱೆ + ಪಿಡಿ$_1$]

**ಬವ$_1$** (ನಾ). ಹುಟ್ಟು ; ಜನ್ಮ : 'ಬವಿ೯ಂ' ಪರಾ. [<ಸಂ. ಭವ]

**ಬವ$_2$** (ನಾ). [ಜ್ಯೋತಿ] ಪ್ರಸಿದ್ಧವಾದ ಏಳು ಬಗೆಯ ಚರಕರಣಗಳಲ್ಲಿ ಮೊದಲನೆಯದು ; "ಚರ ಮತ್ತು ಸ್ಥಿರ ಎಂದು ಕರಣ ಎರಡು ವಿಧ. ಬವ ಬಾಲವ ಕೌಲವ ತೈತುಲೆ ಗರಜೆ ವಣಜೆ ಭದ್ರೆ ಈ ಏಳು ಚರಕರಣಗಳು. ಶುಕ್ಲಪಕ್ಷದ ಪ್ರಥಮಾತಿಥಿಯ ಉತ್ತರಾರ್ಧವಿಂದ ಕೃಷ್ಣಪಕ್ಷದ ಚತುರ್ದಶಿತಿಥಿಯ ಪೂರ್ವಾರ್ಧ ಪೂರ್ತಿ ಈ ಚರಕರಣಗಳು ಕ್ರಮವಾಗಿ ಒಂದು ತಿಂಗಳಿನಲ್ಲಿ ಎಂಟು ಸಲ ಬರುತ್ತವೆ" (ಶಾತಕ. ಕಂ. ೦. ೩೬೯ ಅಟಿ): ಬವ ಬಾಲವ ಕೌಲವ ತೈತುಲ ಗರಜ ವಣಿಜ ಭದ್ರಗಳೆಂಬವೇಳು ಚರಕರಣಂಗಳುಂ (ಶಬ್ದೇಶ. ೨೬೨). [ಸಂ.]

**ಬವಕರಣ** (ನಾ). = ಬವ$_2$: ಭ[ಬ]ವಕರಣಕ್ಕೆ ತಿರಂ ೨೭ಗಳಿಗೆ ಮೇಲೆ ಶ್ಯಾಡ್ಯ (ಶಾಸ್ತ್ರ. ೬೦-೯). [ಸಂ.]

**ಬವಕೆ** 'ಬಯಕ್ಕೆ' ನೋ.

**ಬವಣೆ** 'ಬವಣೆ' ನೋ.

**ಬವಣಿಗ** (ನಾ). (ಸಂಸಾರದ) ಬವಣಿಗೆ ಒಳಗಾದವನು ; ಕಷ್ಟಕ್ಕೆ ಸಿಲುಕಿದವನು ; ತೊಂದರೆಗೆ ಗುರಿಯಾದವನು : ಮಾನಸರಂತಂತು ಬಸಿಱೊಳ್ ಪುಟ್ಟಿಯುಂ, ಬವಣಿಗರಂತಂತು ಕಾಡಂ ತೊೞಲ್ದುಂ . . . ಬಾಳ್ದ ರಾಮನಂ ದೇವನೆ ! (ರಾಮಾಯಣ. ೦೦೦೧೦೨). [ಬವಣೆ + –ಇಗ]

**ಬವಣಿಗೆ**, ಬವಳಿಕೆ (ನಾ). ೧. ಸಂಚ್ಯಾಟ ; ಸಂಚಾರ : ಇಂತಪ್ಪ ನೆಗೞ್ತಿಯು ಪೊಗೞ್ತೆಯುಮಂ ಪ್ರತ್ಯಕ್ಷಂ ಮಾಡುವೆನೆಂದೊಂದು ದಿವಸಂ . . . ವಂದಿಮಾಗಧರ್ಕಳ್ ಪೊಗೞ್ ಪೊಲಲ ಜೇಂಕಾರದ ವಾದ್ಯಂಗಳ್ ನೆಗೞೆ ಬವಣಿಗೆಗೆ ಪೊಱಮಟ್ಟು (ಶಂಕರ. ೦-೫೯ ಪ) ; ಬ[ಶಾಕಾಂ ಫ] ವಣಿಗೆಯ ಬಂದಡವಿಯಲಿ ಪಾಂಡವರು ನವೆದರು (ಕುಮಾರ. ೦೦-೯೦). ೨. ಸುತ್ತುವುದು ; ಪ್ರದಕ್ಷಿಣೆ : ಬವಣಿಗೆ ಜಿನೇಂದ್ರಪೂಜೋತ್ಸವದೊಳ ಮೊಡ್ಡೋಲಗಂ ಜನಾಸ್ಥಾನದೊಳಾ ದಿವಿಜೇಂದ್ರಂಗಾದುದು ಗೀತಿ ವಾದ್ಯ ನೃತ್ಯಪ್ರಸಂಗವಂಜತನ ಕೆಲದೊಳ್ (ಆದಿಪು. ೩-೬೩). ೩. ಕಷ್ಟ ; ತೊಂದರೆ ; ಪರಿಶ್ರಮ : ಬವಣಿಗೆಯು ಕಳೆಯಲಾಱದೆಯಾಯಾಸಂ ಬಟ್ಟವಂ ದೈವಮೆಂತಪ್ಪನು (ಶಾಸೋಕ. ೯-೦೦೨); ಕಱಿಸು ಪರಿಯಲಿ ಪಟ್ಟ ಬವಣಿಗೆಯನು ನೀ ಮರದು ಮೈಸಿಂಗೆ ಬೆರತೆಯಲ್ಲೋ ಆತ್ಮ (ಕಕೃಕ. ೨೯-೩). ೪. ತೊಳಲಾಟ ; ಹೊಯ್ದಾಟ : ಅವನಿಪತಿ ದುಗುಡದಲಿ

ಮೋಟೆಯುಲವುಟಿದನು ಕರತಳವ ಚಿತ್ರದ ಬವಣೆಗೆಯು ಭಾರಣೆಯು ಕಡು ಶೋಕದಲಿ ವ್ಯೆವಜಿದ (ಕುಮಾ.ದ್ರೋ. ೧-೪). **ಬವಳಿಕೆ** : ೩. ತಲೆ ತಿರುಗುವಿಕೆ ; ತಲೆಸುತ್ತು ; ಬವಳಿ ಬರುವುದು : ಆ ಜನರ ಹೆಸರಿಲ್ಲದ ಮುಖ . . . ಶಾಂತರೀತಿಯಿಂದ ಕೆಲಸ ತೆಗೆದುಕೊಳ್ಳುತ್ತಿರುವ ಆ ಹಳ್ಳಿಯ ಗೌಡನ ಧೈರ್ಯಪೂರ್ವಕವಾದ ಓಡಾಟ, ಇಷ್ಟು ನೋಡಿದ ಕಣ್ಣುಗಳು ಬವಳಿಕೆಯ ಬೇನೆಗೀಡಾಗಬೇಕು ! (ಪುರುಷ. ೦೯) : ಕಾರಗತ್ತಲೆಯೊ ಬವಳಿಕೆಯೋ ಮನ ತುಂಬಿ ತೋರದಲೆ ಹೋಯ್ತು ಕಣ್ಮುಂದೆ (ಕಶ್ಯಾ. ೨೬೬). [< ಸಂ. ಭ್ರಮಣಿಕಾ]

**ಬವಣೆಗೊಳ್** 'ಬವಣೆಗೊಳು' ನೋ.

**ಬವಣೆಗೊಳಿಸು** (ಕ್ರಿ). ಸಂತ್ರಿಸಂ ; ತಿರುಗಿಸು : ಬಟವಿಡಿದು ತಳುಬ ದೊಡಮವಳ ಕೈಗೆ ಸಿಲ್ಕದಂಗಳದೊಳ್ ಬಳಬಳಸಿ ಬವಣೆಗೊಳಿಸಿ ಬಳಲಿಸುವ ಬಲ್ಪಂ . . . ನಿರವಿಸಿ ರಾಯಂ (ಶಶಿ. ೪-೯೯).

[ಬವಣೆಗೊಳ್ (< ಬವಣೆಗೊಳು) + – ಇಸು]

**ಬವಣೆಗೊಳು** 'ಬವಣೆಗೊಳಂ' ನೋ.

**ಬವಣೆಗೊಳ್ಳು** 'ಬವಣೆಗೊಳು' ನೋ.

**ಬವಣೆಬಡು** 'ಬವಣೆಬಡು' ನೋ.

**ಬವಣೆಯೇಱು** (ಕ್ರಿ). ತಲೆಸುತ್ತು ಉಂಟಾಗು ; ತಲೆತಿರುಗು ; ಕಣ್ಣು ಕತ್ತಲಿಡು : ಖಂಡವರಶುಗಳವಿಲ್ಲದ ತಾಂಡವದಿಂ ಬವಣೆಯೆಱಿಯೊಡನ ದನಟಿಪಲ್ ಪಿಂಡುವ ನಿಂಬೆಯ ಪಣ್ ವಿಧುಮಂಡಲಮಳಜೊನ್ನಮಱಿವ ನೀರ್ವೂನಲೆನಿಸಂ (ಶಶಿ. ೬-೨೩).

[ ಬವಣ (< ಬವಣೆ) + ಏಱು$_1$ (< ಏಱ್$_1$) ]

**ಬವಣೆ**, ಬವಣ, ಬವಳಿ (ನಾ). ೧. ಸುತ್ತಾಟ ; ಸಂಚಾರ ; ಅಲೆತ : ಗವಿಯೊಳಿಳಿಯೆಲರುಂಬ ಭುಜಗಸಂದೋಹಕಂದವಿರಳದ ನಿಶ್ವಾಸ ಮರುತನ ಬಲಾಹಾರ ಬವಣೆಯಿಂದಮಜೀರ್ಣವಾಗಿ ವಮನಂಗೆಯ್ಕೆ (ಪಂಪಭಾ. ೩-೦-೧೨) : ಪ್ರಚಂಡಮಾರುತನ ಬವಣೆಗೆ ಸಮೀಪದ ಊರಿನ ಮನೆ ಹಂಚುಗಳು ಗಾಳಿಗೆದ್ದು ಹಾರಾಡಿದವು (ಹಿಂದಿ. ೬೩). ೨. ಕೋಟಲೆ ; ಕಷ್ಟ ; ತೊಂದರೆ : ಸ್ವಸ್ತಿ ಶ್ರೀಮನ್ಮಹಾ ಪ್ರಚಂಡದಂಡನಾಯಕ ಬಾಹತ್ತರನಿಯೋಗಾಧಿಪತಿ ಪರಮವಿಶ್ವಾಸಿ ಬಲವೊಳದಣ್ಣಾಯಕರ ಬವಣೆಯಲು ಕೊಮಾರನ ಬೀಡಿನ ಕೊಟ್ಟಗೆಯ ಮಾರೆಯನಾಯಕನ ಮಗ ದೇಪಮಯನಾಯಕನು ಬಯನಾಡ ಬವರದಲು ಕಾದಿ ಹಲರಂ ಕೊಂದು ಸುರಲೋಕಕ್ಕೆ ಸಂದ (ಎಕ. ೪೦. ೦೯೬, ೪೦-೬; 1223); ಒರ್ವ ಪಾರ್ವಂ . . . ಭಿಕ್ಷಾನ್ನಕ್ಕೆ ಪಡಿಯಾಗಿ ಕೈಯೋಗರಮಂ ತಾನೆ ತಂದೀವಂ ಇಂತಾಗೆ ಬಡಪಾರ್ವನ ಕೌಶಿಕನ ಬವಣೆ ನಿಲ್ಲುದು (ಅದ್ಭುತ. ೦೬-೨೨); ಅವಳು ಸೀತೆ ಅನುಭವಿಸಿದ ಬವಣೆಗಳನ್ನು ತನ್ನವೆಂದು ಭಾವಿಸಿ ಕಣ್ಣೀರು ಸುರಿಸಿದಳು (ಹಾಹುಕ. ೬೩). **ಬವಣೆ** : ೧. "ಬವಣೆ(೧)–ಭ್ರಮಣೆ = ಸುತ್ತಾಟ ; ತಲೆತಿರುಕ" (ಶಬ್ದಕೋ. ೨೯); ನಳಿನಭವ ನಳಿನಾಕ್ಷರಿರ್ವರುಂ ಕೈಗಳಂ ಸಲೆ ತೋಱು ತೋಱುತೆ ಕುಲಾಲಚಕ್ರದ ಬವಣೆಯೊಲುವೊಂದುಯಾಮಮಾತ್ರಂ ತಿರುಗಿದರ ದಿಶಾಮಂಡಲ ತಿರುಗುತಿರಲು (ಕಂಪು. ೦೬-೩೬); ಬೇಸಱದೆ ಬಾಂದಳದೊಳಾವಗಂ ನಡೆವ ಬ[ಪಾಠಾಂ. ಭ್ರ]ವಣಿ ಸಾಕೆಂದು ನಿದ್ರೆಗೈದನೊ ಸೋಮನೆನೆ . . . ಮಲಗಿಹ ಚಂದ್ರಹಾಸನಂ ಕಂಡು ವಿಸ್ಮಿತೆಯಾದಳು (ಜೈಮಿಭಾ. ೩೦-೨೦) ; ಅಂಬರದ ಬವಣೆ ಪ್ರತಿದಿನ ಬಿಡದು . . . ಎಂದು ರವಿ ವೇಗದಿಂ ಸಂಭ್ರಮದೊಳೈದಿ ಪಶ್ಚಿಮಗಿರಿಯ ಸಾರುವನದೆಂಬಂತೆ ತವಕದಿಂ ಮೆಲ್ಲಮೆಲ್ಲನೆ ನಭವನಿಳಿದನಾ ಗಿರಿಯ ತಟಕೆ (ಪಂಪಭಾ. ೩-೨-೦೬), ೨. ಏನು ಮತ್ಸ್ಯಕುಮಾರ ಬ[ಪಾಠಾಂ. ಭ]ವಣೆಯಿಂದೇನು ಎನಗೆ (ಕುಮಾ.ಕಿ. ೬-೬೩); ಕಂಡುದಿಲ್ಲವೆ ನಿನ್ನ ಗಂಡನಾಟವ ನಮ್ಮ ಭಂಡು ಮಾಡುವ ಬವಣೆಯುನು (ಅಂಕ. ೯-೬೩) : ಸಾಕಿದಱ ಬವಣೆಯೇತಕೆ ನಮಗೆ ಕಾದುವಯೊ ತುರಗಮಂ ಬಿಟ್ಟಪೆಯೊ ಪೇಳೆಂದನು (ಜೈಮಿಭಾ. ೨೩-೩೨); ಈ ಎಂಟು ವರ್ಷ ಗಂಗಪ್ಪ ಸೋಸಿದ ಬವಣೆ ಅವಳಿಗೇ ಗೊತ್ತು (ಗಂಪತಾಯಿ. ೦). ೩. ತಲೆ ಸುತ್ತುವಿಕೆ ; ಕಣ್ಣು ಕತ್ತಲಿಡುವಿಕೆ ; ತಲೆ ತಿರುಗುವಿಕೆ : ಬವಣೆ ತಲೆಬೇನೆಗಳ್ ಸ್ವೇದವೃದ್ಧಿ ಮುಖರೋಗಮಕ್ಷಿರೋಗಂ ಕಫವಾತ ವಿಕಾರಂ ಪಿಂಗುಗುವಪ್ಪದವೆ ನಸ್ಯಂಗೆಯ್ಕೆ ಶುಂಠಿಯಂ ಬೆಲ್ಲಮುಮಂ (ಲೋಕೋಪ. ೯-೦೩): ಅವನಿಪನ . . . ತಲೆಯ ಪಿತ್ತದ ಬವಣೆ [ಪಾಠಾಂ. ಭವಳಿ, ಬವಳಿ] ಬಲಿದುದು (ತೊರವೆ. ೨-೩-೧೨). **ಬವಳಿ** : ೩. ಮನಂ ಮಿಗುವತಿಸಾರಂ ಬವಳಿಯುಮೊಗೆದಿರ್ಕುಂ ವಾತಪಿತ್ತಜನಿತಜ್ವರದೊಳ್ (ಕರ್ಣಾ. III. ೦೦) ; ಬೇನೆಯಿಂದ ಕ್ಷೀಣಕಾಯನಾಗಿದ್ದ ಅವನಿಗೆ ಆ ದುಃಖಾವೇಗವು ಸಹನವಾಗದೆ, ಸ್ವಲ್ಪ ವೇಳೆ ಬವಳಿಯೂ ಬಂತು (ಸ್ಮೃಂ೦ಬು. ೦೫೩).

ಬವಣೆ ಬರು, ಬವಳಿ ಬರು = ೧. ತಿರುಗು ; ಸುತ್ತು ; ಅಲೆ : ಭವವೆಂಬ ಬಲುಬಿಂಜದೊಳು ಬಹುದಿನದಿಂ ಬವಣೆ ಬಪ್ಪ ಬೇಸಱನು ತವಿಸುವೆನೆಂದು (ಪ್ರಭುಲಿಂ. ೧-೦೬); ಇರುಳು ಹಗಲುಮನ್ನದೆಯಲ್ಲಿ ಕಾಱರು ವೆರಸಿ ಬವಣೆ ಬರುತಿರಲು ಪುರವನಿತೆಯರೆಲ್ಲ ಕೈಗೆಲಸವ ಬಿಟ್ಟು ಪಱದು ಬಂದವನ ನೋಡುವರು (ಶಬರಶಂ. ೬-೩೦). ೨. ಕಣ್ಣು ಕತ್ತಲಿಡು ; ಮೂರ್ಛೆಯುಂಟಾಗು : ಧೃತರಾಷ್ಟ್ರನು . . . ಎರಡು ಮಾತನಾಡಿದ್ದರಿಂದಲೇ ಆಯಾಸವಾಗಿ ಬವಳಿ ಬಂದಿತು (ವಚನಭಾ. ೩೬೯) ; ನಾಲ್ಕು ಹೆಜ್ಜೆ ನಡೆದು ಹೋಗುವುದರೊಳಗೆ ಬವಳಿ ಬಂದಂತಾಗಿ ಕುಳಿತುಬಿಟ್ಟನಂತೆ (ಅರಿಕೋಲೀ. ೮೪). [<ಸಂ. ಭ್ರಮಣ, ಭ್ರಮಣೀ]

**ಬವಣೆಗೊಳು**, ಬವಣೆಗೊಳ್, ಬವಣೆಗೊಳು$_2$, ಬವಣೆಗೊಳ್ಳು, ಬವಣೆಗೊಳ್ಳು, ಬವಳಿಗೊಳ್ಳು (ಕ್ರಿ). ೧. ಕಷ್ಟಪಡು; ತೊಂದರೆಗೊಳಗಾಗು : ಅವಳು ಆ ಕಟ್ಟುಗ್ರಶಿಕ್ಷೆಯುಲಿ ಬವಣೆಗೊಳುತಿಹಳಯ್ಯೊ ಗೋಳಿಟ್ಟು! (ಪಶರಾ. I. ೪೩೪): ನಿಂತಿಹನು ನಾ ನಿನ್ನ ಬಾಗಿಲೆಡೆ ನವ್ಯನಾಗಿ ನುಡಿ ತುಯ್ಯು ಬವಣೆಗೊಳೆ ಭಾವಗಳ ಭಾರದಿಂ ತಲೆಯ ಬಾಗಿ (ಪುರೆರೀ. ೯-೦೦). **ಬವಣೆಗೊಳ್** : ೧. ಧರ್ಮರಾಯಾ ಏನು ಕಾರಣವಾಗಿ ನೀನೀ ರೀತಿಯಲ್ಲಿ ವೇದಮನೋದಿ ವೇದಾರ್ಥಮಂ ತಿಳಿಯದಿರ್ಪ ಜಡಮತಿಯಾದ ಪಾರ್ವನಂತೆ ಬಱದೆ ಬವಣೆಗೊಂಡು ಪಂಬಲಿಸುತಿರ್ಪೆ (ಶಾಕರಾಂ. ೦೦-೪೪); ಗಾಂಪನಿಗೆ ಬಡತನದೊಳು ಬಲು ಬವಣೆಗೊಂಬವನಿಗೆ ಕೊಡಲಾಗದು ಕುವರಿಯನು (ಹಂಂ. ೩-೦೪). ೩. ಸುತ್ತುತಿರುಗು ; ಚಲಿಸು : ಕಡುಗಿ ಖಾತಿಯೋಳೀತನೊಂದು ಸರಳಂ ಪೂಡಿ ಬಿಡಲೂರ್ಮಿಳಾವಲ್ಲಭನ ತೇರೆರಡು ಗಳಿಗೆ ಬಿಡದೆ ತಿರುಗಿತು ಬವಣೆಗೊಂಡು ರಥವಾಜಿಗಳ್ಕೊಡೆ ಗೆಡೆದುವು (ಜೈಮಿಭಾ. ೨೦-೩೩); ನೇಸರ್ವೆಱಗಿಳಿರಾ ನೀವಿನಾಸು ದಿನಂ ಬವಣೆಗೊಂಡಿರಿಂ ಪದುಳವಿರಿಂ (ಅಕ್ರೂ. ೪೦-೦೬). **ಬವಣೆಗೊಳು** : ೨. ತವಕವಾಡುವ ತತ್ತರಿಪ ತಲ್ಲಣಿಸುವ ಬವಣೆಗೊಳುವ ಬಂಬಲಿಡುವ ಕವಿವ ಕಾತರಿಪ ಕರಗುವ ಕಾಲೂಱುವ ಸವಿನೋಟಗಳ ಸಮನಿಪುದು (ಶಶಿ. ೬-೦೩೭ ಸಾಂಗತ್ಯ). **ಬವಣೆಗೊಳ್ಳು**: ೨. ರುದ್ರಂಗೇಳ್ವಂದುಪದ್ರವ ಪರಿಹರಿಸೆ ಕಾವೋದ್ರೇಕದಿಂ ಹಾಸ್ಯವೆತ್ತು ತದ್ರತಿಯುಂ ಬವಣೆಗೊಳ್ಳುತ್ತಿರೆ ಕಾಯಿದದ್ರಿಧರನೆ ರಂಗ ಶರಣು (ಕಶಾಂ. ೬-೩೪). **ಬವಣೆಗೊಳ್ಳು** : ೧. ಹಗಲಿನಂದಿನ ರೂಪು ತಂದಿತು ಬಗೆಗೆ ಸಾವಿನ ಚಿಂತೆಗಳನು ನಗೆಯನಣಕಿಸಿ ಸೊಗವ ಜರಿಯುತ ಬವಣೆಗೊಳ್ಳುವ ಭಾವವ (ಪುಂಂಬ. ೨೯-೨೦). **ಬವಳಿಗೊಳ್ಳು** : ೧. ದಿಕ್ಕುಗೆಡೆಯ ಹಾಗೆ ಏನೊಂದು ತೋಚದೆ ಬವಳಿಗೊಂಡಳು ನಲ್ಲೆ ಬರಿದೆ (ಇಂಚಾಕ. ೩೨-೯೭). ೩. ಮೈಮೇಲಿನ ಎಚ್ಚರ ತಪ್ಪು ; ಅರಿವು ತಪ್ಪು; ಮೂರ್ಛೆಹೋಗು : ಆ ವೇಳೆಗೆ ತಲೆಯ ಮೇಲೆ ಬಿದ್ದ ಪೆಟ್ಟಿನಿಂದ

ಬವಳಿಗೊಂಡಿದ್ದ ಇನ್ನೊಬ್ಬ ರಾಜಪುತ್ರನು ಮೆಲ್ಲಗೆ ಚೇತರಿಸಿಕೊಂಡು. . . ಕೆಳಗೆ ಬಿದ್ದಿದ್ದ ತನ್ನ ಜೊತೆಗಾರನಿಗೆ ಸಹಾಯ ಮಾಡಲು ಹೋದನು (ಹಾಡಿ. ೧). [ಬವಣೆ + ಕೊಳು (< ಕೊಳ್$_1$)]

**ಬವಣೆಗೊಳ್ಳು** 'ಬವಣೆಗೊಳು' ನೋ.

**ಬವಣೆಪಡು** 'ಬವಣೆಬಡು' ನೋ.

**ಬವಣೆಬಡು**, ಬವಣಬಡು, ಬವಣೆಪಡು (ಕ್ರಿ). ಕಷ್ಟಪಡು ; ತೊಂದರೆಪಡು : ದನುಜಮನುಜರಿಂಗೆ ಭವಜಲಧಿಯೊಳಗಾಳುತೇಳುತ ಬವಣೆ [ಹಾಂ. ಣೆ]ಬಡುತಿಹರೀಶ್ವರನ ಕೃಪೆ ಸವನಿಸುವ ಪರಿಯಂತ ಗತಿಯನು ಕಾಣರವರಿಂದ (ಅಖ್ಯ.ಕ. ೨-೯೭). **ಬವಣಬಡು** : ನಾವೆಲ್ಲರೂ ಇಷ್ಟೆಲ್ಲ ಬವಣಬಡುವುದು ಏತಕ್ಕಾಗಿ ? ನಮ್ಮ ದಿವ್ಯಧ್ಯೇಯವಾದ ಪ್ರೇಮವು ಮಾಗಲೆಂದು (ಸಮ್ಮೇ. ೩೬೬). **ಬವಣೆಪಡು** : ಆ ಸ್ತಂಭವು, ಬವಣೆಪಡುತ್ತಿರುವ ಇವರ ಕಡೆಗೆ ಬೆನ್ನುಮಾಡಿ ರಾಕ್ಷಸನಂತೆ ನಿಂತಿತ್ತು (ಕುಹುಕಾ. ೦೯೯): ಮುಖ್ಯೋಪಾಧ್ಯಾಯರಾದ ಮಾಧವರಾಯರು ಜೀವನದಲ್ಲಿ ಸಾಕಷ್ಟು ಬವಣೆಪಟ್ಟವರಾದುದರಿಂದ ಅವರ ಒಲವು ಬಡಪಾಯಿಗಳ ಮೇಲೆ ವಿಶೇಷವಾಗಿತ್ತು (ಕುಕು೪. ೬೩). [ಬವಣೆ + ಪಡು$_1$]

**ಬವನ** (ನಾ). ವಾಂತಿ; ವಮನ : ಸುತ್ತುಂ ಪಿಸುಣಂ ಪೆರ್ಗಿರ್ಪತ್ತುಂ ಮಾಡದಿರನೆಂದು ಮಱುಗಿದಪುದು ಮಚ್ಚಿತ್ತಂ ಮೃತಮಾಷಮುಖಂ ಮತ್ತನಿಸದೆ ಬವನಮಯ್ದುವವೊಲುಂಬವನಂ (ಅಂಜಾಶ. ೦-೩೭). [< ಸಂ. ವಮನ]

**ಬವನಾಶಿ**, ಬವನಾಸಿ, ಬೋನಾಶಿ, ಬೋನಾಸಿ, ಭವನಾಸಿ (ನಾ). (ಸಾಮಾನ್ಯವಾಗಿ ದಾಸರು ಉಪಯೋಗಿಸುವ) ಒಂದು ಬಗೆಯ ಭಿಕ್ಷಾಪಾತ್ರೆ : ಮಗ್ಗುಲಲ್ಲಿ ಆವಳಿಂದ ಹೊರಲಾರದಷ್ಟು ದೊಡ್ಡದಾದ ಜೋಳಿಗೆ ಬಿದ್ದಿದೆ . . . ಒತ್ತಾಳೀಯ ಒಂದು ಬವನಾಶಿಯಿದೆ (ಆಶಾ. ೬೫). **ಬವನಾಸಿ** : ಬ್ರಾಹ್ಮಣನು ಬವನಾಸಿಯನ್ನು ಹಿಡಿದು ಜೀವಿಸುವವನು (ಅೀಕ್ಷ.ಕ. ೦೬೦); ದಾಸಯ್ಯನು ಒಂದು ತುತ್ತೂರಿ ಊದಿ, ಬವನಾಸಿ ತುಂಬಾ ಭತ್ತ ತುಂಬಿಕೊಂಡು ಹೋಗುತ್ತಿದ್ದನು (ಹುಬ್ಬಿ.ಹ. ೬೩). **ಬೋನಾಶಿ** : "ಬವನಾಸಿ (ಬೋನಾಶಿ) ಭಿಕ್ಷಾಪಾತ್ರೆ, ಸಾರು ಬಡಿಸುವ ಮೂತಿಯುಳ್ಳ ಪಾತ್ರೆ" (ಸಿಂಕೋ. ೩೭೨). **ಬೋನಾಸಿ** : ಹಿಂದೆ ದಾಸರಿಗೆ ಬೋನಾಸಿ ತುಂಬಾ ಭಿಕ್ಷೆ ಹಾಕುತ್ತಿದ್ದರು (ಕೂಶ). **ಭವನಾಶಿ** : ತಂಬೂರಿ, ಭವನಾಶಿಗಳು ವಂಶೀಕರ ಪೂಜ್ಯ ಪದಾರ್ಥಗಳಾಗಿವೆ (ಆಶಾ. ೩೬೦); ದಾಸಯ್ಯನ ಜಾಗಟೆ, ಭವನಾಶಿ . . . ಅವರು ನಡೆಸುವ ಆಚರಣೆಯ ಸಾಧನ ಸಲಕರಣೆಗಳು (ಕಜಕೋ. I. ೦೯.) [<ಬೋನ + ?]

**ಬವನಾಸಿ** 'ಬವನಾಶಿ' ನೋ.

**ಬವರ$_1$** (ನಾ). ೧. ಯುದ್ಧ ; ಕಾಳಗ ; ಸಂಗ್ರಾಮ : "ಬವರ ಮೆನಲ್ ಸಂಗ್ರಾಮಂ" (ಕಶಬ್ದ. ೧೬೦); ಕಾವೆನೀ ಬವರದೊಳೀಗಳಾನಿವನನೆಂದು ನೃಪಂ ದಯೆಯಿಂದಮಾ ಯುಯುಯುತ್ಸುವನೊಡಗೊಂಡು ಬಳಿದಂ (ಕಂಶಕಾ. ೦೦-೬೩); ಬವರ ಮುಱಿದುದು ವಿಜಯಲಕ್ಷ್ಮಿಯ ಸವತಿ ಸೇರಿತು ಸುಭಟರಿಗೆ ಬಳಿಕವನಿಪತಿಯೇ ತಱುಬಿ ನಿಂದನು ಭಾನುನಂದನನ (ಕುವ್ಯಾ.ಕ. ೦೦-೯೦); ಕಕ್ಕಸದಿಂದೊಂದು ಬವರ ಬಂದಡಸಿತು ಒಕ್ಕಣಿಸಲು ಬಂದೆ ನಿನಗೆ (ಜೋಕಕ. ೦೦-೭). ೨. ಜಗಳ; ಕಲಹ; ವಾದ : ಧರ್ಮಾಧಿಕರಣರ್ ನಡೆಯಿಂ ನಿಮ್ಮಿರ್ವರ ಬವರಮಂ ತಿರ್ದುವವೆಂದು ವಟವೃಕ್ಷದ ಸಮೀಪಕ್ಕೆ ವಂದು (ಕಂಶಕಾ. ೦೬೬-೨); ಬಲ್ಲಿದರೊಡನೆ ಬವರವಾದರೆ ಗೆಲಲುಂಟು ಸೋಲಲುಂಟು (ಜಕಶ. ೦೫೦); ಆ ನಾರಿ ಅವಿರಳಕೋಪವ ತಾಳಿ ಮರ್ಮವ ಪೇಳಿ ಬವರವನೆಸಗಿದಳಾಗ (ಕಂಶಕಾ. ೬-೦೬೯). ೩. ಸ್ಪರ್ಧೆ; ಹುರುಡು; ಪೈಪೋಟಿ: ಅಂತೂ ನಾಗೋಲಿಯ ದಿವಸದ ಹಾಡಿನ ಬವರಕ್ಕೆ ಅನ್ನಪೂರ್ಣ ಹಾಜರಾದಳು (ಹಾಂಶ. ೩೩). ೪. ಕಷ್ಟ ; ತೊಂದರೆ ; ಸಂಕಟ : ಎನಗೆ ಬಂದ ಬವರಕೇಳ ನಿಮಗೆ ಬಾಧನ (ಕುಹಾದೀ. ಬ. ೦೩೩-೩೯೨); ಬವಗದಲಿ ಸಿಲುಕಿದುದ ಹವಣರಿದು ತೋಳ ನೆವನವರಿಯುತ ಹೇಳ್ದ ನಿಲ್ಲಲವೊ ! ಖೂಳ ! ಅವಸರದಿ ನಿನ್ನಪ್ಪನೆಂಬುದನೆ ಮರೆದೆ (ಕಂಶ್ರ. ೦೩-೭).

**ಬವರದಲ್ಲಣ**—ಯುದ್ಧದಲ್ಲಿ ಶತ್ರುವಿಗೆ ತಲ್ಲಣವನ್ನುಂಟುಮಾಡುವವನು ; ಒಂದು ಬಿರುದಂ : ಬಾವನ್ನವೀರ ಬವರದಲ್ಲಣ ವಾಯುದೇವ ರಾವುತನೆಯ್ದಿದನು (ಕಂರಾಸಾಂ. ೦೦-೬೨). [ದೇ.॥ ತೆಲು. ಬವರ]

**ಬವರ$_2$**, ಬಮರ (ನಾ). ಕಪ್ಪುಬಣ್ಣದ ದೊಡ್ಡ ದುಂಬಿ ; ಭ್ರಮರ : "ಅಲರ್ವಕ್ಕಿ, ಬಂಡುಣಿ, ಪಱಿವೆ, ಮಲ್ಲಳಿ, ಮೊಳಂಬಂ, ಬವರಂ, ಮುಯ್ಯೆರಡಡಿ—ಈ ೭ ಭ್ರಮರಂ" (ಕಶಸಾ. ೩೩-೦೯೬) ; ಪರಿವೃತರೇಫಲೋಪಕ್ಕೆ — ಕ್ರೀಣೆ — ಕೇಣ . . . . ಭ್ರಮರ — ಬವರ (ಕಜಶ. ೨೬೦ ಕ್ರಹೋ) ; ಸುರವರದುಂದುಭಿಧ್ವನಿ ವಿರಾಜಿಸೆ ಬಾಂದಳದೊಳ್ ಮರಲ್ ಸರಿ ಪುರಂಚಿರವಾಗಿ ಸೂಸೆ ಬವರಂಗಳ ರ್ಝೀಂಕೃತಿಯುತ್ತಲುಣ್ಮಿರಲ್ . . . ಪರತರ ಸುಂದರೇಶ ಘನತೇಜದೊಳೊಂದಿದನೂರ್ಜಿತಪ್ರಭಂ (ಹಾಜಕ್ಕ. ೩-೭-೯೩). **ಬಮರ** : "ಬಮರಂ ಭ್ರಮರಮಕ್ಕು" (ಕಶಶ. ೭೩). [ <ಸಂ. ಭ್ರಮರ ]

**ಬವರಂಗೆಯ್** (ಕ್ರಿ). ಯುದ್ಧ ಮಾಡು ; ಕಾಳಗ ಮಾಡು ; ಹೋರಾಡು : ಬವರಂಗೆಯ್ವಮ[ಹಾಂ. ಯ್ವುದ]ವೋಘಮೆಂಬ ಬಗೆಯಿಂ ನೀಮೆಲ್ಲಮಾದಂ ರಣೋತ್ಸವದಿಂ ನಿನ್ನೆಯ ಪೋದ ಗೋಗ್ರಹಣದಂದೇನಾದಿರ್ (ಕಂಶಕ. ೯-೩೩) ; ನೀವಿರ್ವರುಮಿಲ್ಲಿರ್ದು ಬವರಂಗೆಯಲ್ವೇಡ ತಕ್ಕರ ಸಮೀಪಕ್ಕೆ ಪೋಗಿ ವಿಚಾರಂಗೆಯ್ದು ಅವರ್ ಪೇಟ್ದಂತೆ ಕೇಳಿಮನೆ (ಕಂಶಕಂ. ೨೨೬-೭) ; ಮಾಹಿಷ್ಮತೀವಲ್ಲಭಂ ಬವರಂಗೆಯ್ದು ದಶಾನನಂಗೆ ರಣದೊಳ್ ಸೋಲ್ತೀವದಿಂ . . . ಜಿನದೀಕ್ಷೆಗೊಂಡು (ಕಂಶಾಕಾ. ೨-೬೩). [ ಬವರ$_1$ + ಕೆಯ್$_1$ ]

**ಬವರಂಗೊಳ್** (ಕ್ರಿ). = ಬವರಂಗೆಯ್ : ರಾಯಮನ್ನೆಯರ್ ವಿಧವಜ್ಯಲ್ಕೆ ಸಾಲದವರುಂ ಬವರಂಗೊಳಲಿರ್ದವರ್ (ಕಕಶ. ೩-೯೦). [ ಬವರ$_1$ + ಕೊಳ್$_1$ ]

**ಬವರಗಂಡ** (ನಾ). ಕಾಳಗದ ಕಲಿ ; ರಣವೀರ : ಚಿಕ್ಕಕಾಟಯ್ಯ ಸರ್ಗ್ಗತನಾಗೆ ಬಳನೆತಲಾಗ ಜಯಿಸಿ ಸತ್ತ ಮುನವೆಳೆ ಕಳಿಹಿ ಬವರಗಣ್ಡ ತಟಬಿ ಮಕಯ್ಯ ಕಲ್ಲ ನಿಲ್ಲಿಸಿದ ಮಯ್ಯುನ ಪಲ್ಲಯ್ಯ (ಎಕ. ೪, ಕುಂತಿಡಾ. ೩೦-೩ ; ೧೦೩೬). [ ಬವರ$_1$ + ಗಂಡ$_1$ ]

**ಬವರಗಲಿ** (ನಾ). ರಣವೀರ ; ಶೂರ : ಬವರಗಲಿ ನಾಟ್ಯಮಹಿತಂಡಿ ವೆರಸು ದಿವ್ಯಾನಕಂಗಳಲಿವುತ್ತಿರೆ ದಿವ್ಯವಿಮಾನಂ ಬೆಳಗುತ್ತುತ್ಸವದಿಂದಂ ರಜತಗಿರಿಗೆ ಬಂದತ್ತಾಗಳ್ (ಕ್ರಿಪೂ. ೩೦-೦೯) ; ಬವರಗಲಿ ಬಂದೆಯ ಸಮೀರನ ಕುವರ ಮುಖ್ಯಪ್ರಾಣ ಬಾಶ್ಕೆ ಭುವನಪಾವನಚರಿತ ಬಾರೆಂದಪ್ಪಿದನು ರಾಮ (ಕಾಂಶಪೀ. ೩೨). [ ಬವರ$_1$ + ಕಲಿ$_1$ ]

**ಬವರಗಾರ** (ನಾ). ಯುದ್ಧ ಮಾಡುವವನು ; ಸೈನಿಕ; ಯೋಧ : ಬವರಗಾರರ ದೇವನೆನಬಹುದು . . . ಎಂದು ನೃಪ ಪೊಗಳೆ (ಕಶಾಗಾ. ೦೯). [ ಬವರ$_1$ + — ಗಾರ (< _ಕಾಱ) ]

**ಬವರಮುಖ** (ನಾ). ಯುದ್ಧರಂಗ ; ರಣಮುಖ : ಅಂಬುಜಾನನೆ ದನುಜೆ ಕಾಡಿದೆಡೆ ನೋಡಿತ್ತಲಂಬಿಂ ಸಹೋದರಂ ಮಾನಗಳೆದಿರ್ದ ತಾಣಂ ಬವರಮುಖದಿ ಖಳರಟ್ಟಿದ ನೆಲೆ (ಶ್ರೀಶಾಕು. ೩-೯೦). [ಬವರ$_1$ + ಮುಖ]

**ಬವರಿ**, ಬಂಗರ್ಗ್ಗ, ಬಗರಿ, ಬಮರಿ, ಬುಗರಿ, ಬುಗುರಿ, ಬೊಗರಿ, ಬೊಗರೆ, ಬೊಹರಿ, ಭಗರಿ (ನಾ). ೧. ಕಪ್ಪು ಬಣ್ಣದ ದುಂಬಿ : "ಬವರಿಯೆನಲ್ ಭ್ರಮರಿ" (ಕಾಶಿ. ೯೨) ; ತಣ್ಣೀರೊಳ್ಪುದ ತನ

ಗೆಂಡೆಕ್ಕೆ ದೊರೆವರ್ವ ಬವರಿಗಳ ಗಾವರಕ್ಕೆಟ್ಟತ್ತು ಗೂಡನಟಿದು . . . ನಲಿವ ಪಕ್ಕಿಗಳ್ಗೆ (ಚಾಮೂ. ೧೦೦-೦೩). ೨. ತಿರುಗುವಿಕೆ ; ಸುತ್ತು ವಿಕೆ ; ಭ್ರಮಣ : 'ಬವರಿಗೊಳು' ಪರಾ. ೩. (ಯುದ್ಧದಲ್ಲಿ) ಹೊಡೆತವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ವರ್ತುಲಾಕಾರವಾಗಿ ತಿರುಗುವ ಒಂದು ಬಗೆಯ ಪಟ್ಟು.—ವರಸೆ : "ಬವರಿ ಕರ್ತರಿ ಯುಕ್ತ್ಯ" (ಪಂಗಣ. ೬೩-೫) ; ಅಡಸಿ ಹೊಯ್ದೊಡೆ ಬವರಿಯಲಿ ಟೊಣ ದೌಕಿದೊಡೆ ಮಡಮುಟಯುದೊಳಹೊಕ್ಕು ಸವಡಿಮುಂದರದಂತೆ ಕೀಚಕ ಪವನಸುತರೊಪ್ಪಿದರು (ಕುಭಾ.ವಿ. ೩-೯೯) ; ಚಾರಿಯನುಚಾರಿಗಳ ಪಯಗತಿ ಯೋರೆವೋರೆಯ ಬವರಿಗಳ ಸಂಚಾರಣೆಯಲಬ್ಬರಿಸಿ ತಿವಿದನು ರಾಘವೇ ಶ್ವರನ (ಕೂಡಿಂ. ೬-೨೮-೯೮). ೪. ದಾರವನ್ನು ಸುತ್ತಿ ಆಡಿಸುವ ಗುಂಡನೆಯ ಆಟಿಕೆ ; ಭ್ರಮರಕ : ಕುಂಭಾಜನ ಚಕ್ರದಂತೆ ಮಕ್ಕಳಿಟ್ಟ ಬವರಿಯಂತೆ[ಪಾಠಾಂ. ಹರಿಯಟ್ಟಿಯ ನೂಲಿನಂತೆ]ಜೂಟಣದ ಮೊಗವ ಯಂತೆ . . . ಅಳುವುವಂತೆಕ್ಕುಮೆಂದು ಕಳಕಳಿಸಿ ನಕ್ಕು (ಕಬಾಹು. ೯-೨೩). ೫. ವರ್ತುಲಾಕಾರವಾದ ಒಂದು ಬಗೆಯ ಕರ್ಣಾಭರಣ : ಉಡಸುತ್ತಿನ ದಿವ್ಯಾಂಬರ ಶಿರದೊಳು ಕಡಗ ಕುಂಡಲ ಯಜ್ಞಸೂತ್ರ ಎಡನರೆ ಬವರಿ ಮುತ್ತಿನ ಚಿಂತಿ ಕುಲ್ಲಾಯಿ ಬೆಡಗುಗುಣಸೆಸುತಿರಲು (ಹಾಗಳ. ೨೯-೫). ೬. ಕೆನ್ನೆಯ ಮೇಲಿನ ಗುಂಗುರುಕೂದಲು; ಪನ್ನೆ: ವಿಟವೇಷದಿಂ ಬಂದಂ . . . ಮೊಳೆವ ತುಪ್ಪುಳುಮಿಸೆ ತೊಳೆವ ಬ[ಪಾಠಾಂ. ಭ] ವರಿಗಳಿಂದ ಬೆಳಗುತಕ್ಕೆಸೆಗಳೆಗೆ ಪಡೆವ ಕಣ್ಬೆಳಗಿಂದೆ (ಶಬಸಂ. ೦೬೪-೯೩) ; ಮುಗುಳ್ನಗೆ ಮೇಳವಿಸುವ ಮುಖಪ್ರಸನ್ನತೆ ವಿಳ ಬವರಿಯ ಗಡ್ಡಮೊಪ್ಪ ತ್ತಿರೆ ಜಗತ್ಪ್ರಿಯವ ಪಾಲಿಸುವ ಮುನಿವಲ್ಲಭಂ . . . ಇಂತೆಂದಂ (ಅಕೃ. ೩-೨೩) ; ಉಬ್ಬಿ ಬೆಳೆದು ಬಾಗಿತಿಲ್ಲ ರೇಖೆಗೆ ಬಂದು ಹುಬ್ಬಿನಂತಸವಳೆ ಮೀಸೆ ಹುಬ್ಬು ಮೀಸೆಯ ನೋಡಿ ನಲಿವ ಬವರಿ ಕಣ್ಣ ಹುಬ್ಬ ಮಾಳ್ಪ ನೆಲ್ಲರಿಗೆ (ಶಿಕ. ೧-೪೦) ; ಕೆಲವಾತಗಳ ಮುಖಗಳಿಗೆ ಗಡ್ಡ ಬವರಿ ಮೀಸೆ ಜುಲ್ಪಿ ಹಣೆಯ ಉಂಗುರುಗುರುಳು — ಇವುಗಳಲ್ಲಿ ಒಂದೋ ಕೆಲವೋ ಅನಿತವೋ ಇದ್ದರೆಯೇ ಸಲಕ್ಷಣಸೌಂದರ್ಯ (ಪಂಚತ್ರಿಕ.೭೦-೨). ೭. ಕುದುರೆಯ ನಡಿಗೆಯ ಗತಿಗಳಲ್ಲಿ ಒಂದು ಬಗೆ ; ಮಂಡಲಾಕಾರವಾದ ನಡಿಗೆ : ಭ್ರ[ಬ]ವರಿ ಭಂಜನೆ ಅಳಿಲುಳಿತ ವರ ತರಹಮುಂಬ ನವೀನಗತಿಗಳೊಳು ತನ್ನ ಮನಮ ಹಯದ ತನುಗತಿಗಳಾದಂತೆ ವಾಹಕವಿನ್ಯಾಣಂಗಳಂ ತೋಜುತ (ಭುಜಾಸ್ತ್ರ. ೬-೩೦ ಪ). ೮. (?) : × × × ಬಾಣಗಾವುಣ್ಣನ ಕೆಜೆಯ ಬವರಿಯುಂ ಬಾಳುವಲಿ(?)ರಾಜಂ ಅರುವತ್ತೈದು ಊರ್ಗಂ (ಪ್ರುಕ. ೦೯೨೩.೯೨-೯; ೧). **ಬಂಗರ್** : ೧. ಇಷ್ಟೆಲ್ಲ ಮಾತು ನಡೆಯುತ್ತಿರುವಲ್ಲಿ ಚೋಮನ ಬುದ್ಧಿ ಬಂಗರದಂತೆ 'ಓಡುತ್ತಿತ್ತು (ಚೋದು. ೩೯೯). **ಬಗರಿ** : ೧. ನಾ ಬಗರಿ ಆಡಿ ಬಂದು ತಿಂತೇನಿ (ಕೋಕಣು.೨೯). **ಬಮರಿ** : ೧೧. ಕುಳಿರ್ವೆಟ್ಟಿಜೆಯುನ ಕುವರಿಯನ್ನೆವೊಗನೊಲವೆನಿಪಂಬುಜೆಜಗುವ ಬಮರಿಯಂ (ಶಪಾ. II. ೦೦೯ ಅಮುಸ್ತೋತ್ರ ಪಟ್ಟ ರ). **ಬುಗರಿ** : ೧. ನಿನ್ನ ಎದಿ ಮ್ಯಾಲ ಕುಚಾಗಳು ಬುಗರಿ ನಿಂತವು ನಿಗು (ಹುಚ್ಚುಹ. ೪೩). ೯. ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಎಲಚಿ : ಬುಗರಿ ಕಾಯೆ ಶಬರಿ ಕಾಯೆ ರಾಮನಿಲ್ಲಿ ಬಂದನೆ? (ಗಣಿಹಿಂ. ೬೦-೦೩). ೧೦. ಭ್ರಮರಕದ ಆಕಾರದ ಕಾಯಿಗಳನ್ನು ಬಿಡುವ ಒಂದು ಬಗೆಯ ಮರ : ಲಾಲ್‌ಬಾಗಿನಲ್ಲಿ ಬುಗರಿ ಮರಗಳು ಬೇಕಾದಷ್ಟಿವೆ (ಕೋಶ). ೧೧. ಒಂದು ಬಗೆಯ ಗಿಡ: "ಅಸ್ಕಂಧಮನಲಾ ಬುಗ[ಪಾಠಾಂ. ಗು]ರಿ" (ಪಂಗಣ. ೩೩-೦೩). **ಬುಗುರಿ** : ೧. ತಿಗುರಿಯುಂ ಬುಗುರಿಯುಂ ಜಾತಿಯುಂ ಭೀತಿಯುಂ ಆಗೆ ಪರಿವಾಗಳ್ (ರಘುಪಟ್ಟು. ೬-೦೦೯); ಯಾದವ ನೀ ಬಾ . . . ಚೆಂಡು ಬುಗುರಿಯನಾಡುತ ಸಣ್ಣ ಸಣ್ಣ ಗೋವಳರೊಡಗೂಡಿ (ಪುರಂದ. ೦-೦೩-೨); ಸೂರ್ಯನಿಗೆ ಒಂದು ಬಾರಿ ಬುಗುರಿಯಂತೆ ಒಂದು ಸುತ್ತು ಸುತ್ತುವುದಕ್ಕೆ ೨೫ ದಿವಸಗಳು ಬೇಕಾಗು ವುದು (ಅಕಾಶ. ೦೦). ೧೦. ಹೂವಂಸಿ, ಜೋಗಿಯರಳಿ, ಬಾಗುರಿ (ಪ್ರುಕ. ೬೯-೦೫೩೦). ೧೧. ಮೇಲಿನ 'ಬುಗರಿ' ಉಲ್ಲೇಖದ 'ಮಂಗರಾ. ೩೫-೧೫' ಪ್ರಯೋಗದ ಪಾಠಾಂತರವನ್ನು ನೋಡಿ. **ಬೊಗರಿ** : ೧. ವದನದ ಕ್ರಿಯೊಳಗಾಡುವ ಪೊಸ ಚಿನ್ನದ ಬೊಗರಿಯನಿನಿವಿರಿದುಂ ನಗುವಂದದೆ ಹೊಗರಿಸುವ ಮುಕುರ್ಕೈಲಿಯೊಪ್ಪಿದುವಾ ನೃಪನಂದನೆಗೆ (ಅಜಿತ. ೦೩-೦೨): ಕೇತಕಿಯೆಸಳ ಜಟಿವ ಬೆಳ್ಳುಗುರಿಂದ ಶಾತಕುಂಭದ ಬೊಗರಿಗಳ ರೀತಿಯ ಬಲ್ಮೊಲೆಗಳ ಮೇಲೆ ನಿನ್ನಯ ನೂತನನಖರೇಖೆ ದೋಜ್‌ೆ (ಕಂಪ. ೯-೦೯೩); ಕಲ್ಪನೆಯ ಬೊಗರಿ ತುದಿಬೆರಳ ತಿಗರಿ ಓ ಆಡುತ್ತಿತ್ತು ನಿದ್ದೆ (ಅಕಲ. ೧೦೦-೯). ೯. ಶಬರಿ ಇತ್ತೆಳೆಟಿಯಂ ರಾಮನಿದೊ ಮೆಲ್ಲಲಿಲ್ಲಾ ? ನಮ್ಮ ತಿನಿಸೊ ಶಬರಿಯ ಬೊಗರಿ ! (ಶಕ್ಯಕ. ೩೯-೨೨೩). **ಬೊಗರೆ** : ೧. ಗಂಡುಮಕ್ಕಳು ಚೆಂಡು, ಗುಂಡು, ಬೊಗರ ಮೊದಲಾದ ಗುರಿ ಕಲಿಸುವ ಆಟಗಳನ್ನು ಆಡುತ್ತಾರೆ (ಶಕ್ಕಾ. ೯೩); ಅತ್ತ ಚೆಂಡಿದು ಇತ್ತ ಬೊಗರೆಯು (ಗಹ. ೯೯-೨); ಭೂಮಿಯು ಒಂದೇ ನಿಟ್ಟಿಗೆ ಒರಗಿದ ಬೊಗರೆಯಂತೆ ಡೊಂಕಾಗಿ ನಿಂತು ತಿರುಗುತ್ತದೆ (ಪ್ರುಚಿತ್ಯ. ೩೩). **ಬೊಹರಿ**: ೧. ಸಂಡು ಜಿಗಿಹಲ್ಲಿ ಬೊಹರಿಗಳಾಟದಲ್ಲಿ ಮನಗೊಂಡಾಡಿ ಬೆಳೆದು ಜವ್ವನನಾಗಿ ಬಾಳ್ವೆಯಿಲ್ಲದೆ ಕೆಟ್ಟು ಹೋದೆಯಲ್ಲಾ (ಸಪ್ಮಳ. ೦೦-೯). **ಭಗರಿ** : ೧. ಕುಣಿಯೋಣು ಬಾರ . . . ಚಿಗರ್ಯಾಗಿ ತಿಗುರ್ಯಾಗಿ ನಿದ್ದಿಯ ಭಗರ್ಯಾಗಿ ಗಾಳೀಗು ಹಗುರಾಗಿ (ಗರ. ೦೨೮-೩). ೧೨. (ಅಲಂ) ವೃಷಣ : ಪುಣ್ಯಕ್ಕೆ ಹೆಣ್ಣುಮಕ್ಕಳಿಗೆ ಗೋವಿಂದಭಟ್ಟನ ಭಗರಿಯ ಅರ್ಥವಾಗಲಿಲ್ಲ (ರೀಕಕ. II. ೩೬೭). 'ಭ್ರಮರಿ' ಪರಾ.

**ಬೊಗರೆಜಲ**=ಸುಳಿಯಿರುವ ನೀರು ; ಜಲಾವರ್ತ : ಒಗರುಫಲ ತಿನಹೊಲ್ಲ ಬೊಗರೆಜಲ ಹೊಗಹೊಲ್ಲ ಬೊಗಳುವ ನಾಯ ನರೆ ಹೊಲ್ಲ ಮನೆಯಲಿ ಜಗಳವೇ ಹೊಲ್ಲ (ಸರ್ವಜ್ಞ. ೦೦೬೦).

[<ಸಂ. ಭ್ರಮರಿ./ತಮಿ. ಪಮ್ಬರಮ್; ತುಳು. ಬುಗುರಿ, ಬೊಗರಿ, ಬೊಗೊರಿ; ತೆಲು. ಬಮರ, ಬವಿರಿ, ಬವಿರೆ, ಬೊಂಗರ, ಬೊಮ್ಮರ./ಮರಾ. ಭೋವರಾ, ಭೋಂವರಾ]

**ಬವರಿಗ** (ನಾ). ಭಟ; ಸೈನಿಕ ; ಯೋಧ : ಬವರಿಗರು ನೀವೆ ವಿಪ್ರವೇಷದ ಜವನಿಕೆಯ ಚಾಣಾಯ್ಯಲ್ಲತನದಿಂದವಗಡಿಸಿ ಹೊಕ್ಕಿರಿಯವದ್ವಾರದಲಿ ನೃಪ ಸಭೆಯ (ಕುಭಾಸ. ೨-೩೬); ಗಜೆಯ ಗಾಳಿಯ ಬೊಬ್ಬೆ ಬವರಿಗರ ಬಲುರಭಸ . . . ಕಿವಿ ಕಿವುಡುಗೊಂಡುದಜಾಂಡಮಂಡಲದ (ಕೂಡಿಂ. ೬-೪೦-೩೯); ಜವದಾಡೆ ಜಲ್ಲಿಯ ಬಿಲ್ಲು ಕೈಗತ್ತಿಯ ಬವರಿಗರತಿ ಹರುಷದಲಿ. . . ಒಪ್ಪಿಹರು (ಕಂಪಶ. ೦೦-೦೦೩); ಬವರಿಗರಾದ ನೀವು ಬಹಳ ಜಾಣತನದಿಂದ ವಿಪ್ರವೇಷವನ್ನು ಧರಿಸಿದ್ದೀರಿ (ಜಾಜಿಸ. ೦೯).

[ಬವರ್₁+-ಇಗ]

**ಬವರಿಗಡ್ಡ**, **ಬೊಗರಿಗಡ್ಡ** (ನಾ). ಮುಖಕ್ಕೆ ಶೋಭಿಸುವಂತೆ ಕತ್ತರಿಸಿರುವ ಗಡ್ಡ : ರಂಜಿಸುತ ಯವ್ವನದಿರವು ನಿಮ್ಮಯ್ಯಂದಿರಿಗೆ ಕುಡಿವರಿವ ಮೀಸೆಯ ಕಪ್ಪುದೋಜುವ ಬವರಿಗಡ್ಡಗಳ. . . ಹೊಗುನಲೆ ಸದರಿಂದುದಿನೇಶರಂದದಲಿ (ಕೂಡಿಂ. ೪-೦-೦); ಭಂಡಿಯಲಿ ಕುಳಿತಿರುವ ಕಪಿಯನುಗೊಂಡ ರೂಪಿಗು ಬವರಿಗಡ್ಡದ ಚಂಡಿಕೆಗು ವಾಲ್ಮೀಕಿನಿಂದಲಿ ಬೇಸತೊಳುತಿರಲು (ಜಾಜಿಸ. ೩೬೯-೦೯) ; ಗುಜ್ಜುರೂಪನು ಬೊಜ್ಜೆ ಹೊಟ್ಟೆಯು ತನಿಗೆ ಮೋಟಾದ ಕೈಗಳು ಮಿಾಟದ ಮೀಸೆ ಬವರಿಗಡ್ಡವು ತನಿಗೆ (ಜುಕಳ. ೦೬೦). **ಬೊಗರಿಗಡ್ಡ** : ದ್ರೋಣನದ ದಿಟ್ಟಿಸುತ ಬೊಗರಿ ಗಡ್ಡವನೆಳೆದು ಭಟರಿಗಂ ನೇಮಿಸಿದ (ಕುರುಂಗ. ೩೬-೯).

[ಬವರಿ+ಗಡ್ಡ₁./ತೆಲು. ಬವರಿಗಡ್ಡ, ಬವಿರಿಗಡ್ಡ]

**ಬವರಿಗೊಡು** (ಕ್ರಿ). (ಬುಗುರಿಯಂತೆ) ವೇಗವಾಗಿ ಸುತ್ತು,—ತಿರುಗು :

ಲೋಲಭ್ರುವರಂ ಭ್ರುವರೀಮಾಲೆ ತೆಱಂದಿಱಿಯೆ ತಾಂ ತೆಱಂದಿಱಿವ ವೊಲುನ್ಮೀಲಿತಮನನಮರೀಸಮಲೀಲಂ ಹರಿ ಬವರಿಗೊಟ್ಟನಾಟ್ದು ಬೆಡಂಗಿಂ (ಶಾಂತೀ. ೦೦-೬೩); ಒಬ್ಬರ ನೋಡುವಾಗ ಅಱುವತ್ತು ಮನುಷ್ಯರ ನೋಡುವ ಹಾಗೆ ಆಗುತ್ತಿದೆ ಶೂನ್ಯಸಿಂಹಾಸನ ಬವರಿಗೊಡುತ್ತಿದೆ ಪ್ರಾಣ ಹೆಡತಲೆಯಲ್ಲಿ ಹೋಗುತ್ತಿದೆ (ಅಡಜಂ. ೨೪೬-೦೦೩). [ಬವರಿ+ಕೊಡು₁]

**ಬವರಿಗೊಳು** (ಕ್ರಿ). ಸುತ್ತಿಸು; ತಿರುಗುವಂತೆ ಮಾಡು : ವೃಕೋಳಾವುಂ ಬಡಿದು . . . ವುಲ್ಲೆಯಂ ಬವರಿಗೊಳುತ್ತೆ ಬೇಡವಡೆಯಾಡಿದುದಗ್ಗದ ಬೇಂಟೆಯಂ (ರಾಜಶೇ. ೩-೦೦೩). [ಬವರಿ+ಕೊಳು (<ಕೊಳ್₁)]

**ಬವರಿದಿರುಗು, ಬೊಗರಿದಿರುಗು** (ಕ್ರಿ). ಗುಂಡಗೆ ಸುತ್ತು; ತಿರುಗು : ಸಾಯ್ಗುಳುವೆರಸಿ ಮುಕ್ಕುಱಿಕ್ಕಲು ಮಲ್ಲಹೊಲೆದುಬ್ಬಿ ಪುಟನೆಗೆದು ಗಜಱಿ ಗರ್ಜಿಸಿ ಪುಳಿಂದರ ಮೇಲೆ ಬವರಿದಿರುಗಿ . . . ಎಲ್ಲರೊಡಲ ಕಳವಳಿಗೆಯ್ದು ಬೀದಿವರಿದೊಕ್ಕಲಿಕ್ಕಿತ್ತು ಋಕ್ಷಸಮಿಗಂ ಕಾಡೊಡಱಲು (ಜಕಣ. ೬-೬);ಬವರಿದಿರುಗುವ ತಿರುಗಿ ನಡೆವ ನಡೆದೊಡಲುಬ್ಬಿ ಧವರಿಸುವ . . . ಕರಿನಿವಹ ಮತ್ತಾಡಂಬರಂ ಮಿಕ್ಕು ಹಣ್ಣಿ ನಿಂದವು ಬಲದ ನಟ್ಟನಡುವೆ (ಸೋಮಕುಶ. ೩-೨೯). **ಬೊಗರಿದಿರುಗು** : ಬಿರುದಿನಂಕದ ಭಟರು ಭೋರೆಂದು ಬೊಬ್ಬೆಗೈದು . . . ಬೊಗರಿದಿರುಗಿ ಮುತ್ತಿ ಕಾದುವಲ್ಲಿ (ಕಜಾತ. ೩-೦೯೩ ಕ).
[ಬವರಿ + ತಿರುಗು₁]

**ಬವರಿರೇಖೆ** (ನಾ). ವರ್ತುಲಾಕಾರದ ಅಲಂಕಾರದ ರೇಖೆ : ಇಂದುವಿನ ಪರಿವೇಶದಂದಕೆ ಕುಂದನೆನಿಸುವ ಬವರಿರೇಖೆಯ ಹೊಂದಿಕೆಯ ಶಿಂಗಾಡಿಯನೆ ಹುರಿಕೊಂಡ ಮೀಸೆಗಳ ಚಂದದಿಂ ಲಾವಣ್ಯಮೂರ್ತಿ ಗಳೆಂದೆನಿಸಿ ಚಾಪಾಸ್ತ್ರಹಸ್ತಗಳಿಂದ ರಾಜಸದೊಡನೆ ಕುಳ್ಳಿರ್ದರು ಸಭೆಯದಲಿ (ಅಜಂರಾ. ೩-೬-೩೬). [ಬವರಿ + ರೇಖೆ]

**ಬವರಿವರಿ** (ಕ್ರಿ). ವೇಗವಾಗಿ ಸುತ್ತು,—ತಿರುಗು : ತಿವಿವ ತಿರುಗುವ ಲಾಗಿಸುವ ಚಿಮ್ಮುವ ನಿಬಂಧದಲಡರಿ ಮಂಡಿಸಿ . . . ಬವರಿವರಿದುವ್ವರಿಸಿ ಲಂಘಿಸಿ ನಿವಡಿಸಾರದರೆಱಗಿ ಜಾಱುವ ಜವಳಿಬಿನ್ನಾಣವಲಿ ಕಾದಿದರೊಬ್ಬರೊಬ್ಬರಲಿ (ಅಕ್ರೂಕ. ೬-೬೩); ದುಂಡಿವ ದಿಂಡುವಾಯ್ದು ಬವರಿವರಿವ ಚವ್ಮಟಿಗೆಗೆ ಚೆಱಿಯದ ಕಡಿಯಾಣವುಂ ಕೈಕೊಳದ ಬಗೆಯಂ ಬಗೆಯದಂತೆ ಕಂಡು (ರಾಜಶೇ. ೬-೦೦೫); ಆಗಳೆಚ್ಚಂಬಂ ಬಗೆಗೊಳದೆ ಕನಲ್ಕೆಯಂ ಬಳಸಂದು ಬವರಿವರಿದು ತುಱುಗಿ ತುಡುಂಕುವ ಜಾಯಿಲಂಗಳಂ ಲೆಕ್ಕಿಸದೆ (ಜಲಂ. ೪-೦೬೩). [ಬವರಿ + ಪರ್₂]

**ಬವರಿವಿಂಡು** (ನಾ). ತುಂಬಿಗಳ ಸಮೂಹ, —ಗುಂಪು: ತಂಡತಂಡದಿಂ ತೆ:ಂಕುತ್ತೆತಂದು ಮಂದೈಸಿದಲರ್ಜೊಂಪವುಂ ಕಂಡು ಪಿಂಡೆಱಗಿ ಪೊಸ ಜೇನನುಂಡು ಅಕ್ಕೆಯಂ ಬಿದಿರ್ಚಿ ಮೊರೆದೆಟ್ದು ಮೇಣಾಂ ಮುಂಬರಿವ ಬವರಿವಿಂಡಿಂ . . . ಬನಂ ಮನಂಗೊಂಡುದು (ರಾಚುಕ್ಕ. ೩೪-೩).
[ಬವರಿ+ಪಿಂಡು₂]

**ಬವರಿಸು₁** (ಕ್ರಿ). ೧. ಯುದ್ಧಮಾಡು; ಹೋರಾಡು : ಚಿಮ್ಮಿದು ದರುಣಜಲ ನಭಕೆ ಒಡಲು ಬಾಂದಣಗೊರದು ನೆತ್ತರ ಕಡಲು ಕರುಳು ಗಳೆಱಗಲು ಬಗೆಯದೆ ಬಿಡನೆ ಬವರಿಸಿದನು ಬಲಾಧಿಕನಾ ನೃಸಿಂಹನಲಿ (ತಿಶಾಗ. ೬-೬-೯೬). ೨. ಸ್ಪರ್ಧಿಸು; ಹುರುಡಿಸು : ಅಂಗುರುಹ ಕೇಶ ವಾಲಚಯಂಗಳಿ ನಿಡಿಯವು ಕಷಾಯವರ್ಣಂಗಳ್ ದಂತಂಗಳ್ಗೆ ಬವರಿಸುವ ದಂತಂಗಳಿ ಮಲಿನಂಗಳಾಗೆ ವರ್ಷದ್ವಿತಯಂ (ಅಕ್ಕಣ. ೩-೦೩).
[ಬವರ₁ + — ಇಸು₁]

**ಬವರಿಸು₂** (ಕ್ರಿ). ಅಲೆದಾಡು ; ತಿರುಗು : ಇವು ಪಱಿದೀಡಾಡಲ್ಕಮೈವೆ ತುಂಬಿಯ ಬಂಬಲೆಂಬ ಪಂಬಲನಾರ್ಗಂ ಬವರಿಸುವ ನೃಪನ ಕುಂತಳ ನಿವಹಂಗಳಿ ಬಹಳ ಮೃಗಮದಾಮೋದಂಗಳ್ (ಜುಕ್ಕಿಕ. ೦೦-೩೯).
[ಬವರಿ + — ಸು₁]

**ಬವರಿಸು₃** (ಕ್ರಿ). ೧. ಸವರಿ ತೆಗೆ : ನವವಧುವ ಶಂಕೆಯಂ ಕಳೆವ ವಿದಗ್ಧ ವಿಟಂಬೊಲಲೆವ ತೆರೆಗಳ್ ಮೆಲ್ಲಂ ಬ[ಶಾಂತಿ.ಬೆ]ವರಿಸಿ ಸೋಂಕಿಸುತ್ತುಂ ಕಳೆದುವು ಘನಕುಚಕಳಶಕುಂಕುಮಸ್ಥಾಸಕವಂ (ಅಜಿತ.೦೦-೦೯೦) : "ಸುತ್ತುಗಟ್ಟು" (ಅಜಿತ. ಕೋಶ) ; ಪವನ ಪ್ರಕ್ಷೋಭಾಂಬುಧಿರವಮನೆ ಪಟುಪಟಹಶಂಖಭೇರೀರವದೊಳ್ ಬವರಿಸಿ ಗಗನವುನಂತಾ ರವವಿವರಿಸಿತ್ತು ದಶದಿಶಾವಧಿವರೆಗಂ (ಸುಕುಮಾ. ೦೫-೦೦೩); "ಸುತ್ತುವಂತೆ ಮಾಡಂ; ತಿರುಗಿಸು" (ಸುಕುಮಾ. ಕೋಶ). [ಬವರು + — ಇಸು]

**ಬವರಿಸು₄** (ಕ್ರಿ). ಉಂಟಾಗು; ಪ್ರವರ್ತಿಸು : ಮತ್ತವಱ ವಿಪರ್ಯಯ ವೃತ್ತಿಯ ಬವರಿಸುಗುವುದೀಚ್ಛವಾರ್ಗದೊಳ್ ಪ್ರಚುರತೆಯಂ (ಕಾವ್ಯಾವ. ೩೦); ವೀರರಸ ಬವರಿಸುಗುವುಂದಾರೋತ್ಸಾಹಪ್ರವೃತ್ತಿಕಾರಣಕಾರ್ಯಂ ದಾರುಣರೋಷಾವೇಶವಿಕಾರಭವಂ ರೌದ್ರವೆಂಬ ರಸಮದು ನೆಗಳ್ಗುಂ (ಕಾವ್ಯಾವ. ೧೦೩); ಭುವನನುತಶ್ರುತದೇವಿಯುನವಯವದಿಂದೊಲಿಸಿ ಮತ್ತೆ ವೊಟ್ಟೆಗಿಡಂವರಂಬ ವಿಶುದ್ಧಕೀರ್ತಿ ಬವರಿಪ ಕವಿಪರಮೇಷ್ಠಿಗಳ ಕರುಣಮಮುಗಾಭರಣಂ (ಧರ್ಮಾಮ.೦-೨೯) ; ವಿವಿಧ ಬಾದ್ಯುದನಿಕರವೇಕಾರ್ಣವದ ಕ್ಷತಿಯಾಲಿ ತೋಱಿ ತಮ್ಮೊಳು ಬವರಿಸಿದಡಳಿದಡೆ ಮಹಾರ್ಣವಫಲಯದಂತಂತೆ . . . ಇರ್ದನವಧೂತ (ಶಿಭಿಕ. ೩-೯-೦೬). [? + — ಇಸು₁]

**ಬವರು** (ಕ್ರಿ). ಸವರಿ ತೆಗೆ : ಮುತ್ತೀನ ಗುದ್ದೀಲಿ ಅಗಿಸ್ಯಾರು ಅರಸಣವ ಬೆಳ್ಳಿ ಮಂಕ್ರೀಗೇ ಬವರ್ಯಾರು ಅರಸಣವ ತುಂಡು ತುಂಡಾಗಿ ಕಡಿಸ್ಯಾರು (ಜುನ್ನಿಕ. ೦೬೩).

**ಬವಸ** 'ಬೆವಸಾಯ' ನೋ.

**ಬವಸಿಗ** (ನಾ). ವ್ಯವಸಾಯ ಮಾಡುವವನು; ಬೇಸಾಯಗಾರ : ಆ ಗದ್ದೆಗೆ ಹಿರಿಯ ದೇವಧರ ಪ್ರೈಸಾಸರು ಕೊಟ್ಟ ಗದ್ಯಾಣ ೧ . . . ಬವಸಿಗ ಕಲ್ಲಿಸಟ್ಟಿ ಕೊಟ್ಟ ಗದ್ಯಾಣ ೧ ಸೇನಬೋವ ಬಲದೇವಂ ಕೊಟ್ಟ ಗದ್ಯಾಣ ೧ (ಶಾಇ. XX,೬೩—೨೬; 1122). [ಬವಸು (<ಬೆವಸಾಯ) + — ಇಗ]

**ಬವಸು** 'ಬೆವಸಾಯ' ನೋ.

**ಬವಸೆ₁** 'ಬೆವಸಾಯ' ನೋ.

**ಬವಸೆ₂** (ನಾ). ಬಯಕೆ ; ಅಪೇಕ್ಷೆ ; ಇಚ್ಛೆ ; ಆಸಕ್ತಿ : ಜಿನದತ್ತಾದೇವಿ ದಾನಂಗುಡುವ ಬ[ಶಾಂತಿ. ಬೆ]ವಸೆಯೊಳ್ಗಾಲವಿಸಾ ಕಾಲಮಾರುಂ ಮನೆಯೊಳ್ ಸೂನಂಗಳಂ ಸಂಧಿಸದಿರಿವಿರಿವಾಚಾರದಿಂದೆಂದು ವೃದ್ಧೀಜನಕೆಲ್ಲಂ ಸಾಱುವಂತೇನೊಗೆದುದೋ ಮಿಗೆ ಮಧ್ಯಾಹ್ನ ಶಂಖಪ್ರನಾದಂ (ಅರಜಿತ. ೦-೬೩); ಭಾರತೀದೇವಿ ತನ್ನಾದರದಿಂದಂ ಪ್ರೀತಿಯಂ ಪುಟ್ಟಿಸುವ ಬೆ[ಬ]ವಸೆಯಿಂದೆಯ್ದೆ ಮಾತಾಡಿದಳ್ (ಹಾರಕ. ೬-೬೦). [<ಬಯಸು₁]

**ಬವಸೆಗಾಣ್** (ಕ್ರಿ). ಇಷ್ಟಪಡು ; ಇಚ್ಛಿಸು ; ಬಯಸು : ಎನ್ನಯ ಚಿತ್ತದೊಳಿನ್ನು ಮಾಕೆಯಲ್ಲದೆ ಪೆಱತಾವುದುಂ ಪುಗದು ಮಾರ್ಕ್ಡೆರ್ದೆಯಂ ಗುಱಿಮಾಡಿ ಲೇಸನಲ್ಲದೆ ಪೆಱತಾವುದಂ ಬವಸೆಗಾಣವು ಕಾಮನ ಹಸ್ತಶಾಖೆಗಳ್ (ಅಂಜನಾ. ೩-೬೬). [ಬವಸೆ₂ + ಕಾಣ್]

**ಬವಸೆಯಟ್** 'ಬೆವಸಾಯಂಗೆಯ್' ನೋ.

**ಬವಳಿ** 'ಬವಣೆ' ನೋ.

**ಬವಳಿಕೆ** 'ಬವಣಗೆ' ನೋ.

**ಬವಳಿಗೊಳ್ಳು** 'ಬವಣೆಗೊಳು' ನೋ.

**ಬವಳಿವರಿ** (ಕ್ರಿ). ವರ್ತುಲಾಕಾರವಾಗಿ ಸುತ್ತು ; ತಿರುಗು : ತಾನುಂ ಹಿಡಿಂಬೆಯುಮವನ ಬರಿಯ ನರವಿನಡಗಿನಿಡುವಿನೆಡೆಯ ಕೆನ್ನೆತ್ತರೊಳೊ ರ್ವರೊರ್ವರಂ ತಳ್ಳಿಱಿದುಂ ಬೊಬ್ಬಿಱಿದುಂ ಬವಳಿವರಿದುಂ ಬಾನಂ ಗುಟ್ಟಿಗವಱಿದುಂ ಸೂಟ್ವರಿದುಮಾಡುವಾಗಳುಭಯಬಲಂಗಳ್ ಬೆಕ್ಕಸಂಬಟ್ಟು ನೋಡೆ (ಕಂಕಹಾ. ೦೫-೦೫೬ ಕ). [ಬವಳಿ (<ಬವಣೆ)+ ಪರ್₂]

**ಬವಿ** (ನಾ). ಹುಟ್ಟು ಸಾವುಗಳಲ್ಲಿ ತೊಳಲುವವನು ; ಭವಿ :

"ಬವಿ – ಭವಿ = ನರಕಜೀವಿ" (ಕರ್ಣಕೋ. ೨೯) ; ಭಕಾರಕ್ಕೆ ಬಕಾರಂ – ಆರಂಭ – ಆರಂಬ, ಭವಿ – ಬವಿ, ಭಂಡ – ಬಂಡ (ಶಬ್ದಮ. ೨೫೩ ಪ್ರಯೋ). [<ಸಂ. ಭವಿನ್]

**ಬವಿಸು** (ಕ್ರಿ). ಹುಟ್ಟು ; ಜನ್ಮತಾಳು : ಶಿವನೆ ಬಳಿಕಿಂತಿದಕ್ಕೆಂತೆನು ತಲನಸೂಯ ವಿವರಿಸಲು ದೇವಪೂಜೆಗೆ ತಂದ ದೂರ್ವೆಯೊಳು ಬವಿಸು ವೆನೆನುತ್ತೊಡಂಬಟ್ಟು ದೂರ್ವಾಸನಾದನು ಪದ್ಮಸಂಜಾತನು (ಸೌಂದಕ. ೪-೩೦). [ಬವ್$_1$ + – ಇಸು$_3$]

**ಬವ್ವ, ಬವ್ವು, ಬವ್ವುತ** (ನಾ). (ಮಕ್ಕಳ ಮಾತಿನಲ್ಲಿ) ಗುಮ್ಮ ; ಗೊಗ ಯ್ಯ (?) : ಯೌವನವೊದಗಿದಾಗ ಏನೆಂದಲು ಅಪ್ಪ ಅವ್ವಣ್ಣ ನೆಂದು ನಸುನಗುತ ಗವ್ವಳಿಕೆ ವೃದ್ಧಾಪ್ಯ ಬಂದೊದಗಲು ಇವನ ಬವ್ವನ ತೆರದಲಾಡಿಪರೋ ಪ್ರಾಣಿ (ಶಿರಾಶ್ವ. ೪೮-೩). **ಬವ್ವು** : ಬವ್ವು ಬಂದಿತ್ತಲ್ಲ ರಂಗಯ್ಯ ಬವ್ವು ಬಂದಿತಲ್ಲ (ಪುರಂದ. ೪-೦೫೩ ಪಲ್ಲವಿ). **ಬವ್ವುತ**: ಹಾವು ಕೊರಳಲಿಟ್ಟು ಹುಲಿಯ ಚರ್ಮವ ಹೊದ್ದು ಸುತ್ತಲಿ ಬರು ಬರುತಿದೆ ಬವ್ವುತನ ದಂಡು (ಪುರಂದ. ೪-೦೫೩-೨). [ ? ]

**ಬವ್ವು** 'ಬವ್ವ' ನೋ.

**ಬವ್ವುತ** 'ಬವ್ವ' ನೋ.

**ಬಷ್ಕಯಣಿ** (ನಾ). ಬಹುಕಾಲದ ಮೇಲೆ ಕರು ಹಾಕಿದ ಹಸು : "ಬಷ್ಕಯಣೀ, ಪ್ರೌಢವತ್ಸಾ – ಈ ೨ ಕಡೆಗಂದಿ" (ಹಲಾಯು. ೪೩-೦೦೯); "ಚಿರಸೂತಾ – ಬಷ್ಕಯಣೀ – ೨ ಬಹುಕಾಲಕ್ಕೆ ಈಯಲಾದ ಆಕಳಿಗೂ ಈಯಲಾದರೂ ಬಹುಕಾಲ ಹೆರಿಗೆ ಇಲ್ಲದೇ ನಿಂತ ಆಕಳಿಗೂ, ಬಹುಕಾಲಕ್ಕೆ ೧ ಸಾರಿ ಯಿಯ್ಯುವ ಆಕಳಿಗೂ ಹೆಸರುಗಳು, ಕಡೆಗಂದಿನ ಆಕಳು" (ಸಿದ್ಧಾಂತಿ. ೨೯೩). [ಸಂ. ಬಷ್ಕಯಣೀ]

**ಬಪ್ಪಿಗೆ** 'ಭಾಪ್ಪಿಗೆ' ನೋ.

**ಬಸ$_1$** (ನಾ). ೧. ವಶ ; ಅಂಕೆ ; ಸ್ವಾಧೀನ : "ಬಸಂ ವಶದೊಳಂ" (ಶಬ್ದಾರ್ಣ. ೮೨) ; ಆನೆಯಂ ಸೇದೆಗೆಡಿಸಿ ತನ್ನ ಬಸಕ್ಕೆ ಮಾಡಿ ಯೇಱಿಯುಂಕುಸಮಂ ಪೊಳೆಯಿಸುತ್ತಮರಸಿಯಲ್ಲಿಗೆ ವಂದು (ಚಂದ್ರಪ್ರ. ೪೯-೦೭) ; ಆಂ ನಡೆ ನೋಡೆ ನೋಡೆ ನೀಂ ಕರಗಿದೆಯೆಂತುಮನ್ನ ಸುಶರೀರದೊಳಿರ್ದುದು ಜೀವವಿನಾಯೊಡಲ್ ಕರಗಿದುದಿಲ್ಲದೆನ್ನ ಬಸವು ಲ್ಲೊಡಲಿಂದೆಮು ಶೋಕದೊಳ್ ಮನಂ ಕರಗಿದುದೆಯ್ದೆ ವಾರದಿರೆಯಿರ್ದೆ ಡೆಯಿಂ ಲಲಿತಾಂಗವಲ್ಲಭಾ (ಆದಿಪು. ೩-೦೯) ; ತನು ಬಸವಲ್ಲು ಮತ್ತಖಿಗೆ ಮನ್ಮಥನನ್ನನೆನಿಪ್ಪ ತನ್ನುಮಂ ನೆನೆದಪಳೊರ್ವೆ (ಕಾದಂಬ. ೦೯೩). ೨. ಸಾಧ್ಯತೆ ; ಶಕ್ಯತೆ : ನೋಟಕ್ಕೊಡಿಂತೀ ಪೊಚ್ಚಮುಱಿಗುದು ಠೆಯನೊಳಕೊಂಡ ಕಡಲ ಗುಣ್ಪಿಂದೆಸೆಗುಂ, ಪುಗಲೆಮಗಂ ಬಸವಲ್ಲು (ರಾಜಶೇಖ. ೦೨೧-೨). ೩. ತಲ್ಲೀನವಾಗಿರುವಿಕೆ ; ಪರವಶತೆ : ವಿಸುಗುವ ಪೊಸವಸೆಯೊಳಸದಳಮೆಸೆಯೆ ಬಯಸಿ ಪೊಸಯಿಸಿದ ಪೊಸಸುಸಿಲ ಪಸಕದ ಬಸದೊಳ್ ಬ[ಪಾಠಾಂ. ಪ]ಸದಾಗಿಯುಮಸಿ ಯಾಳೆನಗಸವಸದೊಳೆ ಬೆಸೆದು ಪೋಗಿ (ಆದಿಪು. ೪-೦೨ ವ). ೪. ಪ್ರಭಾವ ; ಶಕ್ತಿ ; ಬಲ : ಕೊಳದ ತಡಿವಿಡಿದು ಬೆಳೆದಲರ್ಗಳಶೋಕೆಗಳ ಲತೆಯ ಮನೆಗಳೊಳೆ ತೆಱಂಬೊಳೆವಲರ ಬಸದೆ ಸುಬಾಳಿಗಳ ಬಳಗದ ದನಿಗೆ ಕಿನಿಸಿ ಕಿಂಕಿಣಿಪೋದಲ್ (ಕಂಠಹಾ. ೩-೪) ; ಕುಸುಮಾಸ್ತ್ರಗಜಂ ಬೆಂಕೊಳೆ ಬಿಸುಟಂ ಕಡೆಕೆಯ್ಯೆ ತಪಮನೊಳಕೊಂಡಿರ್ದಿರ್ದೆಸೆಯೊಳಡಂಗದೆ ಬಸನದ ಬಸದಿಂ ತಲೆದೋಱಿ ತೋಱಿದಿರ್ಕುಮ ಕೊಲೆಯಂ (ಆಕ್ಷ. ೨-೮೩) ; ಸಸಿಯಿರ್ದಪನಮವಾಸೆಯ ಬಸದಿಂ ಕಾಣಲ್ಕೆ ಬಾರದಂತಿರೆ ಜನರಂ ವಸುಧೆಯೊಳಿರ್ದಪರಿರ್ದುಂ ವಿಸುಕುವ ಕಲಿಗಾಲ ದೆಸಕದಿಂ ತಲೆದೋಱಿರ್ (ರವಾರೆವ್ವ. ೩-೦೯೪). ೫. ಅಧೀನದಲ್ಲಿರುವವನು (?) : ಶ್ರೀಮನೆನೆಗಂ ಕ್ರಿಯದ ದೇವ ಬಸದ (ಎಕ. II. ೯೪೦-೩ ; ಶ ಸ. 1000).

**ಬಸಂ ಮಾಡು** = ವಶ ಮಾಡಿಕೊಳ್ಳು : ಅಧೀನದಲ್ಲಿಟ್ಟುಕೊಳ್ಳು : ಮನವಂ ನುಡಿಯಂ ಮೆಯ್ಯುಂ ತನಗೆ ಬಸಂ[ಪಾಠಾಂ. ವಶಂ] ಮಾಡಿ ಗುಪ್ತಿಗುಪ್ತಂ ಮುನಿಯೆಂಬಿನೆಗಂ ನೆಗಟ್ಟಂ (ಆದಿಪು. ೬-೨೯); ಎಲ್ಲೆಡೆಗಳುಮಂ ತನ್ನಟ್ಟಿದೋಲಗವಿಟ್ಟುಂಡಿಗೆಗಂ ಬಸಂ ಮಾಡಿದ ನನೆವಿಲ್ಲ ಬಲ್ಲಹಂ ನಿಮ್ಮಡಿ ಗಳ ಪೆಸರಂ ಪಲಂಬರಿಂ ಕೇಳ್ದು ಕಳಿತನಮಂ ಬಳೆಯಿಸುವಿಚ್ಚೆಯಿಂದೆನ್ನಂ ಕಳಿಪಿದಂ (ಕಾವ್ಯಾ. ೧೬೯). 'ಬಶ' ಪರಾ. [<ಸಂ. ವಶ]

**ಬಸ$_2$** (ನಾ). ವೃಷಭ; ಎತ್ತು : "ಬಸ–ವೃಷ=ಎತ್ತು" (ಕರ್ಣಕೋ. ೨೯); ವಸುಧೆಗೆ ಯುಗಭಾರವಾಂಪರೆ ಪೆಱತಿಲ್ಲ ಬಸುಱ ಮಗನೆ ದಿಟವೆಂದು ಉಸುರುವಂದದಿ ಕೆಲವುತಲಿರ್ದ ಬೆಳ್ಪಿನ ಬಸದ ಕನಸುಗಂಡಳಬಲೆ (ಚರಕ. ೦೦-೯೬). [<ಸಂ. ವೃಷ]

**ಬಸಂಗೆಡು, ಬಸಗಿಡು, ಬಸಗೆಡು** (ಕ್ರಿ). ೧. ಶಕ್ತಿಗುಂದಿಸು : ಬಲಹೀನ ವಾಗು : ಬೇಟದ ಸೂಡಿಂ ಬಾಡಿ ಬಸಂಗೆಟ್ಟುದನಿಂದು ನಿಂದು ಕಾಂತಂ ಗೞಿಪಿ ಬಟಿಯಟ್ಟುವೆವನಿತೊಂದು ಪೊಟ್ಟು ಸೈತಿರ್ಪುದೆಂದು ಸಂಶಯಿಸಿ ದೂದುಪೋಪವೆನ ಮುಯ್ಯಾರಡಿಗಳೋಡ (ರಾಜಶೇಖ. ೨೨-೦೦). **ಬಸಗಿಡು** : ೧. 'ಬಸಗಿಡಿಸು' ಪರಾ. **ಬಸಗೆಡು** : ೨. ಚಿಂತೆಗೆ ಒಳಗಾಗು : ತನ್ನ ಜೊತೆಗೆ ಇರಬೇಕೆಂಬಾಸೆಗೆ ಧರ್ಮದ ಹೆಸರಿಟ್ಟು ಸತಿ ಪಡುತಿಹ ಹಿರಿಯಾಯುಸ ನೋಡಿದ ರಾಘವ ಬಸಗೆಟ್ಟು (ರಾಮಚ. ೬-೦೨). [ಬಸ$_1$+ಕೆಡು$_1$]

**ಬಸಂಗೆಯ್** (ಕ್ರಿ). ವಶಪಡಿಸಿಕೊಳ್ಳು ; ಸ್ವಾಧೀನಪಡಿಸಿಕೊಳ್ಳು : ಕೈಯ ಕೈದುಗಳ ನೀಟ್ಟುವಾನೆ ಕುದುರೆಗಳಂ ಬಸಂಗೆಯ್ದು ಅವರೊಕ್ಕಟ್ಟರಸು ಗಳಂ ಕೈಸೆಱೆಗೊಳಲು (ಶಶವಂ. ೪೦). [ಬಸ$_1$+ಕೆಯ್$_1$]

**ಬಸಂಗೊಳಿಸು** (ಕ್ರಿ). = ಬಸಂಗೆಯ್ : ಪಾಳೆಯಗಾರರಂ ಕಾಳಗ ದೊಳ್ಗೆಲ್ದು ನರಸಿಂಹಪುರಂ ಮೊದಲಪ್ಪವರವರ ರಾಜ್ಯಂಗಳಂ ಬಸಂ ಗೊಳಿಸಿ ಪಲವುಂ ಬಿರುದುಗಳಂ ಪಡೆದು (ಚುರಾಕ. ೨-೪ ವ). [ಬಸ$_1$+ಕೊಳ್$_1$+ —ಇಸು$_3$]

**ಬಸಂತ, ಬಸವಂತ, ವಸವಂತ** (ನಾ). ೧. ಚೈತ್ರ ಮತ್ತು ವೈಶಾಖ ಮಾಸಗಳಲ್ಲಿ ಅಂದರೆ ಮಾರ್ಚಿ ತಿಂಗಳ ಮಧ್ಯದಿಂದ ಮೇ ತಿಂಗಳವರೆಗೆ ಬರುವ ಒಂದು ಋತುವಿನ ಹೆಸರು ; ವಸಂತಮಾಸ : "ಬಸಂತಂ, ಸುಗ್ಗಿ, ಹೂವಿನ ಹಬ್ಬಂ_ಈ ೩ ವಸಂತಂ" (ಕರ್ಣಾ. ೩೪-೦೬೨) ; ಪೊಸತಲರ್ದ ಕೊಸಗು . . . ತಳಿರಿಂ ಮುಸುಕಿದ ನನೆಯಂಪೇಱಿದ ಪೊಸಮಾವುಗಳಿಂ ಬಸಂತಮೆಸೆದಪುದಿದ ಱೊಳ್ (ಆದಿಪು. ೦೦-೮೩) ; ವಿಯೋಗಿಜನಮಾರಣಯಜ್ಞಮನೊಲ್ದೊಡ ರ್ಚಿದಾ ಮದನನ ವಿಪ್ರಸಂತಸೆದುದಿಂತು ಬಸಂತದ ಬಂದ ಮಾಮರಂ (ಕುಸುಮಶು. ೩-೩೭). ೨.(ಆಲಂ) ಸಂತೋಷಭರಿತವಾದುದು : ಆನಂದ ದಾಯಕವಾದುದು: ಧರೆ ನಿರ್ದಾಯಾದ್ಯಮೆಂದಾ ಸುಯೋಧನನಾಳುತ್ತಿರೆ ಸಂದ ಹಸ್ತಿನಪುರಂ ಸಂತಂ ಬಸಂತಂ ಕರಂ (ಕಂಠಶಾ. ೩-೩೨): ಕೆಲ್ಲಂ ಗೆಱೆಯಿಂದಮಿಂದು ನಮರಾವತಿಯನ್ನ ಬಸನ್ತಮಾಗಳುಂ (ಎಕ. V. ಅರಸೀ. ೦೦೬-೩೦ ; 1161); ಸನ್ದ ಮಾಧವಪುರಂ ಸನ್ತಂ ಬಸನ್ತಂ ಕರಂ (ಎಕ. VI. ಕಡೂರು. ೦೨೬-೪೪ : 1218). **ಬಸವಂತ** : ೩. ಓಕುಳಿ : 'ಬಸವಂತ ಗೊಳಿಸು' ಪರಾ. **ವಸವಂತ** : ೧. ವಸವಂತನೈತರಲು ವನಗೊರಡು ಚಿಗುರ್ದಪವು (ಶಶನೋ. ೬-೩೪). ೩. ಕಸವನ ಕಣುಮೆಯಲ್ಲಿ . . . ನೆತ್ತರದ ವಸವಂತನಾಡ್ಯಾರು (ಕಾಂತಂ. ೦೯೦-೩೭). ೪. [ಸಂಗೀತ] ಒಂದು ರಾಗದ ಹೆಸರು : ರಾಗ, ವಸವಂತ–ಉದಾ: ಭಯ ಭಕ್ತಿ ಕರುಣ ಕಿಂಕುರ್ವಾಣ ದಾಸೋಹ ನಯ ಭೃತ್ಯಭಾವ ಸಜ್ಜನ ಸತ್ಯ ಸಮತೆ ಸದ್ವಿನೆಯ ಗುಣನಿಪ್ಪೆ ಸಾಹಿತ್ಯ (ಶಿವಗೋ. ೦೩-೬೨). [<ಸಂ. ವಸಂತ]

**ಬಸಂತಕುಮರ** (ನಾ). ಒಬ್ಬಾತನ ಹೆಸರಂ : ಬಸವಾಸಿಯು

ಆಪೆಸಟ್ಟಿಯ ಅಳಿಯ ಬಸನ್ತಕುಮರ ಎಡೆವೊಲ್ಲಾಡ ಸಲವುಗೆಯ ಕೊಟ್ಟ ಶಾಸನವು ಪಡೆದು (ಎಕ. VIII, ಸೊರಬ. ೩೭೦-೭೬; ೧೦೯೮).
[ಬಸಂತ+ಕುಮರ$_1$ (<ಕುಮರ$_2$)]

**ಬಸಂತಮಾಸ** (ನಾ). ವಸಂತಋತುವಿನ ಕಾಲ; ಮಧುಮಾಸ; ಚೈತ್ರ : ಕುಕಿಲ್ವ ಕೋಗಿಲೆ ನನೆದೋಱೆ ನುಣ್ಚಿಸುವ ಮಾಮರನೊರ್ವೊದಲ್ಲ ದುಣ್ಮುವುಯ್ಯಲ ಪೊಸಗಾವರಂ ಪುಗಿಲೊಳೇನೆಸದತ್ತೊ ಬಸಂತಮಾಸದೊಳ್ (ಶಂಕರಾ. ೨-೮೨). [ಬಸಂತ + ಮಾಸ$_1$]

**ಬಸಂತಸಮಯ** (ನಾ). = ಬಸಂತಮಾಸ: ವನಸಾಯಂತನ ಮಲ್ಲಿಕಾಮುಕುಳಕೋಟ್ಟಿಗುಂಗೆಳೊಳ್ ಕೂಡೆ ನೂತನ ಸದ್ಗಂಧಿಗಳೊಳ್ ಮದಾಂಧ ಮಧುಪಂ ಪ್ರತ್ಯೇಕಮಳ್ಕಾಱುವಾಱ ನವಾರ್ದ್ರಧ್ವನಿ ಪಾಯ್ದು ಪಾಯ್ದಿಣಿಸುವಂತಾಯ್ತಾತ್ಮಸೌರಭ್ಯಭಾಜನಸರ್ವಸ್ವಮನೇಂ ಬಸಂತಸಮಯಂ ಸೌಖ್ಯೈಕಸರ್ವಸ್ವಮೋ (ಶಾಂತಿಪು. ೬-೦೨೮).
[ಬಸಂತ + ಸಮಯ$_1$]

**ಬಸಕ್ಕನೆ** (ಅ). ತಕ್ಷಣ ; ಕೂಡಲೆ : ನರ್ಸಿ ಬಸಕ್ಕನೆ ಅತ್ತುಬಿಟ್ಟಳು (ಬ್ಯಾಗಾ. ೩೦). [ಬಸಕ್$_0$ + – ಅನೆ$_1$]

**ಬಸಗಡಿ** (ಕ್ರಿ). ಅಂಕೆ ತಪ್ಪಿಸು ; ಹತೋಟಿ ತಪ್ಪಿಸು : ಬೇವಸಕೆ ಮರುಳ್ಪನಕ್ಕೆ ಕಳವಿಂಗೆ ಕನಲ್ಕೆಗೆ ಠಕ್ಕು ಠೌಳಿಗಂ ಬಸಗಡಿದೀಱ್ವ ಕಾಟ್ಪಿಸನ ದಟ್ಟುಳಿಗಂ ಪುಗದಂತಿರಲ್ಲರಂ ಪೊಸಯಿಸಿ ಕಾರ್ತವೀರ್ಯನೆಸಕಬಡದಂ ದೊಡದೇವಭೂಪರಂ (ಚಿಕ್ಕ. ೩-೦೩). [ಬಸ$_1$ + ಕಡಿ$_2$]

**ಬಸಗಿಡಿಸು** (ಕ್ರಿ). ಶಕ್ತಿಗುಂದಿಸು ; ಬಲಹೀನವಾಗಿ ಮಾಡು : ಗುಡುಗೆಸೆದು ಕಿವಿಯೊಡೆವ ಗುಡುಗಾಟದಾರ್ಭಟಂ, ಕಣ್‌ಗೆಡಿಸಿ ಎರ್ದೆಗಿಡಿಸಿ ಬಸಗಿಡಿವ ಮುನ್ನಂ, ಈಗಳಿನ್ನಿರದೆ ನೀವರ್ ಅಡಿಯೆತ್ತಿಮೋಟೀಂ (ಶಿಕೃಕ್ರಿ. ೫೬-೦೨೩೦). [ಬಸಗಿಡು ( < ಬಸಂಗೆಡು) + – ಇಸು$_3$]

**ಬಸಗಿಡು** 'ಬಸಂಗೆಡು' ನೋ.

**ಬಸಗೆಡು** 'ಬಸಂಗೆಡು' ನೋ.

**ಬಸಗೈ** (ಕ್ರಿ). ವಶಮಾಡಿಕೊಳ್ಳು ; ಸ್ವಾಧೀನಪಡಿಸಿಕೊಳ್ಳು : ಮುನಿದಿನಿಯನ ಕಡುಮೊನೆವಾತಿಗೆ ನೊಂದು ಕನಲದೆ ಗಾರುವಡೆಯದೆ ತನುಮನಗಳ ತನ್ನ ಬಸಗೈದು ದೈನ್ಯದ ಕೊನರಿಸಿ ತಂಪುಗೊಳಿಪುದು (ಹರಿ. ೩-೨೬) ; ಉಸುರ್ಗಂಪಿಗೆರಗುವ ದುಂಬಿಯ ಗಾನವು ಪೊಸವೇದ ಪಾರಾಯಣವು ಹುಸಿದು ನೀನಾಡುವ ಸವಿಯೊಗುವಿನಿವಾತು ಬಸಗೈವ ಬೀಜಾಕ್ಷರವು (ಕರ್ಣಾಕ. ೨೩೦). [ಬಸ$_1$ + ಗೈ ( < ಕೆಯ್$_1$)]

**ಬಸತಿ** 'ಬಸದಿ' ನೋ.

**ಬಸದನ** (ನಾ). (?) : ಸುರಯಿಯ ಮುಗುಳ್ಗಳೊಳುರುವಳಿದಳಿಪತಿ ಬರಯಿಪ ಬೆರಸುವ ಬಸದನ ಬೆಸನಿರೆ ಸುರತ ಸುರಭಿರಸ ಪರಿಮಳಮಿಬ್ಬರ ಬೆರಸಿದನರಮಾಗಣರಸಿಯೊಳೆಸದಿರೆ (ಅರ್ಕಕೆ. ೬-೮). [?]

**ಬಸದಿ**, ಬಸತಿ, ಬಸ್ತಿ$_1$, ವಸದಿ, ವಸ್ತಿ$_1$ (ನಾ). [ಜೈನ] ಜೈನ ದೇವಾಲಯ ; ಜಿನಗೃಹ ; ಚೈತ್ಯಾಲಯ : "ವಸತಿಃ, ಜಿನಾಶ್ರಯಃ—ಈ ೨ ಬಸದಿಯ ಹೆಸರು" (ಚೌಂಡಾ. ೦೦೩); ಸಿವಮಾರನ ಬಸದಿ (ಎಕ. II, ೪೦೩-೫ ; ಸು. 810) ; ಅರಸನುಮಂ ಮಹಾದೇವಿಯುಮಂ ಕರ್ಮಕ್ಷಯಮುಮಕ್ಷಯದಾನಮುಮಕ್ಕೆಂದು ಪರಸಿ ಪೊಱಮಟ್ಟು ಬಸದಿಗೆ ಪೋಪಾಗಳ್ (ಚನ್ನಾಬ. ೬೬-೨೬) ; ವಸುಧೆಗೊಡೆಯನಪ್ಪ ರಾಮಚಂದ್ರನ ಕತೆಯಂ ಪೇಟಿನೆ ಬಸದಿಗೊಡೆಯರಪ್ಪ ಸುರೇಂದ್ರರ ಚರಿತೆಯಂ ಪೇಟ್ಸುದೇಂ ? (ರಾಜಾಕ್ಕ. ೬-೨). ಬಸತಿ : ದೇಗುಲಂ ಬಸತಿಯ ಜಿನನೆ ತಾಂ ಮೇಗೆ ದೈವವು (ಚಿತ್ರ. ೪೪-೦೨) ; ಶಾರದೆ ನಿನ್ನೊಳು ವಿದ್ಯಾಕಲೆಗಳಂ ಹೋರಿ ಸೋತಂಜಿ ಬಸತಿ [ಜಾಹ. ದಿ]ಯ ಸಾಂದಿಳಿನ ನಿನ್ನ ಜಾಣ್ಮೆಗೆ ಸೋಲದರಾರವನಿಯೊಳು (ಶಬ್ದಾಹಾ. ೨೫-೬೬). ಬಸ್ತಿ$_1$ : ತೆಂಕಲೂ ಹರಿದ ಅವಳಿ ಗಡಿ ಪಡು ಬಸ್ತಿ ಗಡಿ . . . ಯಿಂತೀ ನಾಲ್ಕುಗಡಿಯಿಂದ ಒಳಗುಳ್ಳ ಮೂವತ್ತು ಹಾನೆ ಗದ್ದೆಯನೂ ಪಾರ್ಶ್ವದೇವರ ಪಡಿಗೆ . . . ಬಿಟ್ಟದು (ಕಶಿ. I, ೪೦-೩೦: 1417) ; ಬಸ್ತಿಗಳ ನೋಡದು ಲಿಂಗಾಗಾರಮೆನಿಸಿ ನತಮಸ್ತಕರ ಬೌದ್ಧರಂ ಭಕ್ತರಂ ಮಾಳ್ಪವರ ಮಸ್ತಕದೊಳಭಯಮಿತ್ತೆಸೆದನೇಕಾಂತರಾಮಯ್ಯ (ಸುರೇಶ. ೨೮-೫) ; ಮೇಲಣ ಬಸ್ತಿಯೊಂದು ನೋಡಲು ಉಳಿದುದರಿಂದ ಎಲ್ಲರು ಅಲ್ಲಿಗೆ ನಡೆದೆವು (ಕಶಿ. ೬-೩೨). ವಸದಿ : ಇವರ್ಗಳ್ ಜೀವಸಸನವಾಗೆ ನಾಗೂಳ ವಸದಿಗೆ ಕೊಟ್ಟ ಮ [ಣ್ಣು] (ಕಶ. II, ೫-೦೬ ; 859). ವಸ್ತಿ$_1$: ನರಸಿಂಹಸರಸ್ವತಿಗಳ ಜನ್ಮಸ್ಥಳವಾದ ಕಾರಂಜಾದಲ್ಲಿಯೂ ಜೈನರ ವಸ್ತಿ ಇದೆ (ಮುಚಾಹಿ. ೨೨).

**ಬಸದಿಯಣುಗಿ** = (?) : ಅಸಮಾಸ್ತನನಾ ಶುಭದಿನದೊಳಗಾ ಬಸದಿಯಣುಗಿಯೊಲವಿಂ ಪಡೆವಂದದಿ ಶಿಶುವಂ ಶಶಿಮಂಡಲಲಲಿತಾನನೆಯರು ಮುದದಿಂ ಪೆತ್ತ ಒಸಗೆಗಳಾ ಪುರದೊಳಗೆಲ್ಲವು ಪಲ ಪಸುರ್ದೋರಣ ಪಳಿಗುಡಿ ಸಂತಸವಱ ಪೊಸಮುತ್ತಿನ ಬಣ್ಣವುರಂ ಮನೆಮನೆದಪ್ಪದೆ ಶೋಭಿಸಿತು (ಅಜಿತ. ೨-೩೯). [ < ಸಂ. ವಸತಿ./ಪ್ರಾ. ವಸಇ ]

**ಬಸದು** (ನಾ). ವಶ; ಅಂಕೆ ; ಸ್ವಾಧೀನ : ಪೊಸಸಸಿಲ ಮುಸಕದ ಬಸದೊಳ್ ಬಸದಾಗಿಯುಮುಸಿಯಳೆನಗಸವಸದೊಳೆ ಬೆಸೆದು ಪೋಗಿ (ಅಂಶು. ೪-೦೨ ಪ) ; ನಸುಸೋಂಕಿಂ ಬಾಲೆಯೆರಂ ಬಸದಾಗಿಸಿ ನೆನೆದು ಸೀತೆಯಂ ರಾಮಂ ದೂರಿಸಿದಂ ಚಂದ್ರಿಕೆಯಂ ಸೇವಿಸಿದ ಚಕೋರಕ್ಕೆ ಬಾಟ್ತಿಯೇ ತುಹಿನಕಣಂ (ಶಂರಾಮ. ೧೦-೪೦) ; ಅಂತು ಸಹಸ್ರಲೋಚನನುಮಂ ಬಸದಾಗಿಪ ರಂಭೆಯಾಟಮುಂ . . . ಕುಮಾರನ ಮನಂಬುಗಲಾಱವೆ (ಅರಾಕ. ೪-೦೫೩). [ <ಬಸ$_1$ ]

**ಬಸನ** 'ಬೆಸನ$_2$' ನೋ.

**ಬಸನಗಾಱ** (ನಾ). ದುಶ್ಚಟಗಳಿಗೆ ಒಳಗಾದವನು : ಜೂಜುಗಾಱಗೆ ಠೌಳಿಗಾಱಗೆ ಬಸನಗಾಱಗೆ ಮೋಹಿಸಿದ ಅಸಿಯಳಿಗಿನ್ನು ಬೇಱುಂಟೆ ಸಾವು (ಶಂಕ್ರಸಾಂ. ೦೬-೦೩೯).
[ ಬಸನ (< ಬೆಸನ$_2$) + – ಗಾಱ (< – ಕಾಱ) ]

**ಬಸನಿ** 'ಬೆಸನಿ' ನೋ.

**ಬಸನಿಗ** 'ಬೆಸನಿಗ' ನೋ.

**ಬಸನಿಗತನ** (ನಾ). ದುಶ್ಚಟದ ಸ್ವಭಾವವನ್ನು ಹೊಂದಿರುವಿಕೆ; ಕೆಟ್ಟ ನಡವಳಿಕೆಯನ್ನು ಹೊಂದಿರುವಿಕೆ : 'ನಾಯ್ಬಸನಿಗತನ' ಪರಾ.
[ ಬಸನಿಗ ( < ಬೆಸನಿಗ ) + – ತನ ]

**ಬಸನಿಗೆ** (ನಾ). ಇನಿಯನನ್ನು ಕಾಣಲು ಆತುರವುಳ್ಳವಳು; ವಿರಹಾತುರೆ : ಬಸನಿಗೆಯರೊಸಗೆ ಮುತ್ತಿನ ಹಸಿತಂ ಬೆಳ್ವೆಳಗಿನುರುಳಿ ಬೆಳ್ದಿಂಗಳ ಬೆಳ್ಪಸದನಮೆನಲೇಂ ಬಿಂದುದೊ ಪೊಸಮಲ್ಲಿಗೆ ಜಸದ ಬಿಟ್ಟು ಕುಸುಮಾಯುಧನಾ (ಅಂಶು. ೪-೦೭೯). [ಬಸನಿಗ (<ಬೆಸನಿಗ) + – ಎ$_1$]

**ಬಸಬಸ** (ನಾ). ಒಂದು ಅನುಕರಣ ಶಬ್ದ: 'ಬಸಬಸನೆ' ಪರಾ.

**ಬಸಬಸನೆ** (ಅ). ಬಸಬಸ ಎಂಬ ಶಬ್ದದೊಡನೆ : ಸೋಮ ಮಾತಾಡಲಾರದೆ ಅಡ್ಡ ಬಿದ್ದು ಹೂವಯ್ಯನ ಕಾಲು ಹಿಡಿದುಕೊಂಡು ಬಸಬಸನೆ ಅಳತೊಡಗಿದನು (ಕಾಹೂರು. ೩೫೦). [ಬಸಬಸ + – ಅನೆ$_1$]

**ಬಸಬುಸಾವಣೆ** (ನಾ). ಬಸಬಸ ಎಂಬ ಶಬ್ದ : ಆ ಗಾಳಿಯ ಬಸಬುಸಾವಣೆ ಮಾತ್ರ ಆ ಶಾಂತತೆಗೆ ಅಲ್ಪಸ್ವಲ್ಪ ಭಂಗ ಮಾಡುತ್ತಿತ್ತು (ಹಾಲ. ೩೯).
[ < ಬಸಬಸ ]

**ಬಸಮುಟ್**, ಬಸವಳಿ, ಬಸವಟ್ (ಕ್ರಿ). ೧. ಶಕ್ತಿಗುಂದಂ; ಬಲಹೀನವಾಗು : ಒರ್ವರ್ ಋಷಿಯರ್ ನೀರಟ್ಕೆಯಿಂದಂ ಕರಂ ಸೇದೆಗೆಟ್ಟು ಬಸಮುಟ್ಟಿದಿರ್ದೋರಂ ಕಂಡು (ವಡ್ಡಾರಾ. ೦೦೭-೪); ಅಂತೆರಡುಂ ಬಲದ

ದಟಂಗಳ್ . . . ಕಾದಿ ಬಸವಟ್ದು ಪೆಜಱಂಗಿ ನಿಂದಾಗಳ್ (ಶಂಕಕಾ. ೧೦-೫೦ ಪ). ೨. ಎಚ್ಚರ ತಪ್ಪು: ಮೂರ್ಛೆಹೋಗು ಇಱ್ದು ಬಸವಟ್[ಟುದೆ] ಬೀಟ್ಳೊರನ್ ತೆಱ್(ಱ)[ನ] ಮೆಚ್ಚದೊಂ (ಎಕ. XXIV. ೦೯೩-೦೨; ಸು. ೫೫೬); ಬಸವಟ್ವಿನೆಗಂ ಜನಸಿಜನಿಸೆ ನಿನ್ನ ಕೆಲಕ್ಕೆ ವಂದೊಡನ್ನಂ ಬಿಡೆ ಬಗ್ಗಿಸೆ ಮಧುವಿಕಾರಿ ಕೋಗಿಲೆ ಕಿಸುಗಣ್ಣುವೆ ನೀಂ (ಚಿಕ್ಕೆ. ೩-೪೯). ಬಸವಳಿ : ೧. ಪೊಱವಡುವ ಭೂಪಾಲನಂ ಕಂಡು ಕಂಗೆಟ್ಟು ಮಱಗಿ ಬಸುಱಂ ಹೊಸೆದು ಬಸವಳಿದು . . . ವಿಃಡುವಿಃಡನೆ ಮಿಡುಕಿತ್ತು ಪೌರಜನವು (ಶಕಕಾ. ೯-೩): ಬಸವಳಿ ದಾಳಿಗಳ ದೇವನು ಮಹಾಹವದೊಳಗೆ ಪವಡಿಸಿದ (ಕುಮಾರವ್ಯಾ. ೬-೩೦). ೨. ತಲೆ ತಿರುಗಿ ತುಟಿಯೊಣಗಿ ಕಂಗಳ ಬಳೆ ಮಱಳೆ ಬಸವಳಿಯೆ ಸಾರಥಿ ತೊಲಗಿಸಿದನಾ ರಥವನು (ಕುಮಾರವ್ಯಾ. ೩-೩೩): ಅಸವಸದಿ ಕಣ್ದೆಱೆದು ರಮಣನಿನ್ನೆಲ್ಲಿ ಪೋದನೊಯೆನುತ ಬಸವಳಿದಳು (ಶಾಂತಕು. ೯-೨೬). ೩. ಕುಗ್ಗು; ಕಂದಿ : ಕುಸುಮಕುಲಕ್ಕೆ ಬಸವಳಿದು ಮಂದಾನಿಳಂಗೆ ಮಱವುದುಗಿ ಕಾಮನ ಕಾರಾಗಾರದೊಳಿರ್ಪಂತೆ ಕೇಳೀವನದೊಳಿರ್ಪ ಬಾಲಕಿಗೆ ಚಂದ್ರನ ದಾಳಿ . . . ಅಖಂಡಿತವಾಗೆ (೧೩೪. ೯-೦೦೬ ಪ); ಪರಶಿವಪದಧ್ಯಾನದನುಸಂಧಾನವೆಡೆವರಿದ ಶಿವಯೋಗಿಯಂತೆ ಸೌಂದರನ ಕಾಣದೆ ಪರವೆ ಬಸವಳಿದಳು (ಸೌಂದರ. ೦೫-೮೯). ೪. ಕಷ್ಟಪಡು; ಶ್ರಮಪಡು; ಆಯಾಸಪಡು : ಮುಪ್ಪಿನ ತಂದೆಯು ಬಸವಳಿದ ಬಾಳಿಗೆ ಮತ್ತೊಂದು ಉಪಸರ್ಗ ಬಂದು ಸೇರಿಕೊಂಡಿತು (ಜಾಜಿ. ೦೯); ಬಲು ಬಳಲಿ ಬಸವಳಿದು ಬಂದೆ, ಬಾ! (ಕಲ್ಯಾ. ೬೦-೦೬). ೫. ಸಾಯು; ಮರಣ ಹೊಂದು : ಜವನುಂಡು ಕಾಱದಂದದಿನ ವಂದಿರಂ ಕೊಂದು ಬಿನವ ತಾಂ ಬಸವಳಿಯಲುಕವನಂ ವಿಮಾನದಲು ವಾಸವನ ಪುರಕವೊಯಿದರಮರಗಣಿಕೆಯರೊಲವಿಂ (ಎಕ. VIII. ಸೊಕು. ೨೨೯-೩೩; ೧೨೧೮). ಬಸವಟ್ : ೧. ಕಾದಿ ಬಸವಟ್ದ ಸಾತ್ಯಕಿಯಂ ಭೂರಿಶ್ರವಸಕ್ರಮದೊಳ್ ನೆಲಕಿಕ್ಕಿ ಗಂಟಲಂ ಮೆಟ್ಟಿ ತಲೆಯನರಿವಾಗಳ್ (ಪಂಪಭಾ. ೦೦-೦೧೦ ಪ); ಸಗ್ಗಿಗರಾಣ್ಮನ ಘನಕರಿಘಟೆಗಳ್ ಬೇಸಗೆಯ ಬಿಸರಕ್ಕೆ ಬಸವಟ್ದು, ಬಾಯಾಱ್, ಮುನ್ನೀರ ನೀರಂ ಕಂಡು, ಪಿಂಡುಗೂಂಡು ಬಂದು (ಪಾಶಾಕ್ಕ. ೩-೬); ಬಸವಟ್ದನೇ ಮರುಳ್ಗೆ ನಮ್ಮ ಕಲಿ! (ಅಕ್ಕಾ. ೦೯-೩೩೩). ೨. ಇದಿರಾಂತು ಕಾದಿ ಸತ್ತು ವಾಯುಃಸವೀರನಿಕಾಯ್ವ ಮುಮನಲ್ಲಿಯೆ ಕೊಂದು ಬಸವಟ್ದಿರ್ದ ಬಲಿಭುಗ್ಬಲಪ್ರಧಾನರಂ ಕಂಡು (ಪಂಪಕಾ. ೨೦೩-೮೯); ಅಂತು ಬಸವಟ್ದು ಬೀೞೆ ಪೊಯ್ಯುದುಂ ಮೂರ್ಛೆಪೋದನಂ ಗತಪ್ರಾಣನೆ ಗೆತ್ತು ಮಾವಮಾವಿ ಮಗುಟ್ ಪೋಪುದುಂ (ಪಂಪಭಾ. ೦೦-೨೬ ಪ). ೪. ಬಱ್ಯ ವಿಷಯದ ಸವಿಗೆ ಬಸವಟ್ದು ಸೊರ್ಕಿ ಮಯ್ಯಱ್ತು ಬೆಚ್ಚನೆ ದೆಱ್ತು ಮತಿಗಿಡುವೆನೊಮ್ಮೆ (ಗೀತಗೋ. ೬೨-೨). [ಬಸ್ಸ₁ + ಅಟ್₁]

**ಬಸಮುಱು** (ಕ್ರಿ). ಸ್ವಾಧೀನ ತಪ್ಪು : ಕಾಲಡಿಯಂ ಕೊರಲ್ವರೆಗವಿಂಡಗಿ ಯಿಚ್ಚ ಫಣೀಂದ್ರನಾಯಕಂ ಕೀಲಿಸಿದಂತವೋಲ್ ಬಗಿಯ ಸುತ್ತುವುದುಂ ಬಸಮುತ್ತು ಮುಚ್ಚಿ ಕಣ್ಣಾಲಿಗಳಿಚ್ಚಿಗೆಟ್ಟು ಚಿಕೀತನನಾಗಳೆ ಮುಚ್ಚಿ ಪೋಗೆ (ಪಂಪಾಕಾ. ೦೩-೦೯೯). [ಬಸ್ಸ₁ + ಉಱು]

**ಬಸಯಿಸು** (ಕ್ರಿ). ವಶಪಡಿಸಿಕೊಳ್ಳು; ಹಿಡಿತದಲ್ಲಿಟ್ಟುಕೊಳ್ಳು : ಬಸಯಿಸಲಿಂಬುಕೆಯುಲೊಳ ಪೊಯ್ಯಲೊಡಯಡಿಸಲ್ ಪ್ರಮೋದಮಂ ಪೊಸಯಿಸಲಾಱಸರ್ ನೆರೆದುಮಲ್ಲದೆ ಚಿತ್ರಮುದಾತ್ತಚಿತ್ತೆಯಾ (ಪಾಂಚಿ. ೯-೦೦೩). [ಬಸ್ಸ₁ + — ಇಸು₁]

**ಬಸರಾಯಿ** (ನಾ). ಒಂದಂ ಬಗೆಯ ಬಾಳೆ : ಉತ್ತಮಜಾತಿಯ ಈ ಹಣ್ಣುಗಳಲ್ಲಿ 'ಬಸರಾಯಿ' ಎಂಬುದನ್ನು ಜಾಪು ಮರೆಯಲುಂಟೆ? (ಚಣ್ಣು. ೬೦). [← ಮರಾ. ಬಸರಾಈ]

**ಬಸರಿ**. ಬಸಿರಿ₂. ಬಸುರಿ₂ (ನಾ). ೧. ಒಂದು ಬಗೆಯ ಮರ : "ಬಸರಿ ಪರ್ಕಟೀ ಪ್ಲಕ್ಷಃಹ್ಯಂ" . . . (ಅನ್ವಕೋ. ೩೩-೨); ಅತ್ತಿಯ ಬಸರಿಯ ಗೋಳಿಯ ಮತ್ತರಳಿಯ ವಟದ ವರ್ಣನಡಗಂ ಜೇನಂ ಬತ್ತರ ವಾದ್ಯಮನಾಗೆಂಬುತ್ತಮ ಸಂಸೇವ್ಯ ಮೂಲಗುಣಮಾಯೆಂಬುದು (ರತ್ನಕಾಶ. ೫-೧೩೨); ಬಸರಿಯಿನಶ್ವಕೋಟಿಕದಳೀದುಮದಿಂ ಕುಱ್ ಹಸ್ತಿ ಕರ್ಣ ದಿಂದೆಸಗುವ ದಂತಿ (ಚಿಕ್ಕಕು. ೯-೦೫). ಬಸಿರಿ₂ : ೧. ಸಂಪಗೆ ಬಸಿರಿ ನೇಱಲೆ ಲವಂ ಕೌಂಗು ಸುರಹೊನ್ನೆ ಹೊನ್ನೆಯಿಂದಾ ಬನಂ ಕಣ್ಗೆಸೆದುದು (ಕಂಠಿಚು. ೩-೦೬). ಬಸುರಿ₂ : ೧. "ಪರ್ಕಟಕಿನಲು ಬಸುರಿಯಕ್ಕು" (ಜಂಗಕಾ. ೩೬-೨೦): ಇನವಾರದಂದು ಬಸುರಿಯ ಕೊನೆಯಂ ಕೊಂಡೆಸದೆ ಬಱ್ದು(ಳ್ಸಿ) ಕೆಸಱೊಳದಂ ಪೂಟ್ಟನಿತಱೊಳಾ ನರಪುಲಿಯೆನಿತನಿತು ಮವಿರ್ದಡೆಯನಱಿಯದಂತಿರೆ ಪೋಕುಂ (ಲೋಕೋಪ. ೯-೦೩೦); ಅರಳಿ; ಬಸುರಿಯ ಪಾಲೇಱದ ಕೊಂಬನುಡಿದು ಮಧುವಿಶ್ರಿತದಿಂದಾಲೋಚಿಸ ದಿಕ್ಕುವುದಾ(ದೀ)ರೇಟು ದಿನಂಬರ ಹಯಕೆ ಖಾಸವಿನಾಶಂ (ಅಶ್ವಶಾ. ೧೧-೩೨). 'ಕಬ್ಬಸಂರಿ' ಪರಾ. ೨. ಜಟಿ ಎಂಬ ವೃಕ್ಷಗಳು ಬೆಳೆದಿರುವ ಭೂಮಿ : ತನ್ನಾಳ್ಕೆ ಮುಳ್ಳಿನಾಡ ಕೋಡೂರಲ್ಲಿ ಊರ ಮೂಡಣ ಬಸುರಿಯಂ ರಾಜಗೋವಿಂದನು ಧಾರಾಪೂರ್ವ್ವಕಂ ಮಾಡಿ ಕೊಟ್ಟರು (ಶಾಶಾ. IX-1. ೩೩೫-೦೬; 1182); ಸೆಟ್ಟಿಯ ಕೆಱ್ಯ ಮೊದಲೇರಿಯಂ ಮೂಡಲು ಬಸುರಿಯ ನಟ್ಟ ಕಲ್ಲು ಗಡಿಯಾಗಿಯೂ ಗಡಿ ಬಡಲು ಗದ್ದೆ ಕಂಬ ೧೫೦ (ಎಕ. XI. ಹೊಳಲ್ಕೆ. ೦೨೯-೩೦ ; 1208 ?).

**ಬಸಲೆ**₁. ಬಚ್ಚಲು₃. ಬಚ್ಚಲೆ, ಬಸಳೆ (ನಾ). ೧. (ತರಕಾರಿಯಾಗಿ ಬಳಸುವ) ಒಂದು ಬಗೆಯ ಸಸ್ಯ : "ಕಂಬಿ, ಮಹೋದಕಾ ಇದು ಬಸಲೆ" (ಕಾಶಕಾ. ೦೦೨); ಒಡ ಕುದುರೆಯ ಮೇಲೆ ಮಸಿಯ ಹಲ್ಲಣವ ಹಾಕಿ ಬಸಲೆಯ ಹಂಬ ಬಾಯಿಗೆ ಕಟ್ಟಿ (ಶೋಭನಾ. ೨೪-೦೦); ಕುಂಬಳ ಸೋರೆ ಬಸಲೆ ನುಗ್ಗೆ ಬಯಿಕೀರೆ ನಱುವಲು ಹಱುಹೆ ಮೊದಲಾದ ಹಸುರು ಸೊಪ್ಪು . . . ಬೇಱಬೇಱ ಕಡುವಿರಿದು ಹುಸನಾಗಿ ಕೊಣಬಂ ಕಾಸಿ ತಾಳಿಸಿ ಬದನೆಗಾಯಿಗಳನಿಡುವುದು (ಸೂಪಶಾ. ೯-೩೬). ೨. ಬಾಯಿಯಲ್ಲಿ ಏಳುವ ಬೊಕ್ಕೆ-ಗುಳ್ಳೆ; ಬಾಯಿಹುಣ್ಣು : ಕ್ರಿಮಿಕುಲಮುರ್ಬುಗು ಮೇಱಿನೊಳಮೋಘ[ಮೆನೆ] ಬಾಯ ಬಸಲೆಯುಂ ಸಂಭವಿಸಂ (ಖಗೇಂ. ೦೫-೯೬); ಹೊಮ್ಮುಗಳು :—ಇದಂ ನಿಂಬೆಹುಳಿಯಲ್ಲಿ ತೇದು ತೊಡೆಯಲು ಬಾಯ ಬಸಲೆ(?) ಮಾಣ್ಗುಂ (ಅಶ್ವಶಿ. ೯). ಬಚ್ಚಲು₃ : ೧. 'ಕಾವುಬಚ್ಚಲು' ಪರಾ. ಬಚ್ಚಲೆ : ೧. 'ಕಾವುಬಚ್ಚಲೆ' ಪರಾ. ಬಸಳೆ : ೧. ಉಪೋದಿಕೆ (ಬಸಳೆ)ಯು ಮಂದನಾಶಕವು (ಅಶ್ವಂಗ. ೦೩೬-೬೨); ಬಸಳೆಸಪ್ಪು ಮೆಣಸಿಗಸಪ್ಪು ತೊಗರಿಬೇಳೆ ಕಡಲೆಬೇಳೆ . . . ಇವಿಷ್ಟು ಶೋಣಿತವಾತಕ್ಕೆ ಶಮನ (ಪ್ರಾಣಿಹಿ. ೫-೩); ಬಸಳೆಯ ಚಪ್ಪರ ನಿಜವಾಗಿಯೂ ದೊಡ್ಡದಿತ್ತು, ಅತ್ತಿತ್ತ ಬಸಳೆಯ ಬಿಡಿಗಳು ನೇತಾಡಿಕೊಂಡಿದ್ದುವು (ಚಕಚ. ೦೯೬). ೨. ಬಿದ್ದು ನಾಲಗೆ ಬಾಯ ಬಸಳೆಗಳೆದ್ದು ನಡೆನುಡಿಯಡಗಿ . . . ಹಲುಗಡಿದೆದ್ದು ಕಣ್ಣು ಗಳುಸುರು ಭೋರಿಟ್ಟುದ ಕೇಳುತಲಿಹನು ನರನೀ ಪರಿಯ ಮರಣದಲಿ (ಕೃಶ್ವಾ. ೯-೬೩).

ಬಸಲೆಯ ಬಾಡು = ಬಸಲೆಯ ಸೊಪ್ಪಿನಿಂದ ತಯಾರಿಸಿದ ವ್ಯಂಜನ ಪದಾರ್ಥ : ಮಸಣದ ಬೂದಿಯಂ ತಳಿದರೋ ತಲೆಸೇಸೆಗೆ ಮಿಂಡರೊತ್ತಿಯೋಂ ಬಸಲೆಯ ಬಾಡೊ (ಸೂಕ್ತಿಸು. ೯-೪೩೦).

[ ದೇ.॥ ತಮಿ. ಪಚಳೈ, ಪಚಿರಿ, ಪಯಿರಿ, ಪಚಲೈ, ಪಚಳೈ, ಪಯಲೈ; ಮಲ. ಪಚಳ, ಪಸಳ, ಪಸಳ, ಪಯಲ; ತುಳು. ಬಸಳೆ, ಬಚ್ಚಲೆ, ಬಚ್ಚಳೆ; ತೆಲು. ಬಚ್ಚಲಿ]

**ಬಸಲೆ**₂ (ನಾ). (?) : ಕೊಂಡೆಗಿತ್ತಿಯರು ಎಕ್ಕಸೆಕ್ಕೆಯರವರವರುಗಳ

ನಕ್ಕು ಬಸಲೆಯರುಗಿದು ತಿಂಬಾ ರಕ್ಕಸಿಯರಾಶಾಪಿಶಾಚಿಯರಿಚ್ಚೆಗಾತಿಯರು (ಐಶವೃ. ೧೦-೩೨). [?]

**ಬಸವ** (ನಾ). ೧. ಗೂಳಿ; ಹೋರಿ : "ಉಕ್ಷಾ, ಭದ್ರಃ . . . ಸೌರಭೇಯಃ, ಗೌಃ—ಲಿ ಎತ್ತುಗಳ ಹೆಸರು, ಬಸವನಿಗೂ ಹೆಸರು, ವೃಷಭ" (ಸಿದ್ಧಾಂತಿ. ೨೬೩); ಬಸವಂ ಸತ್ತಿರ್ದಡೆ ಸಂತಸದಿಂದಂ ಮಾಸಿ ಪೂಜಿಸುತೆ ಭಂಡಿಯೊಳೇಱಿಸಿ ಸುತ್ತಿ ಪೂಗಳಂ ಪಾಡಿಸುತೆ ಕೊಂಡೊಯ್ದು ಪುಟ್ಟುವಿಪಾವರ್ಮೋರ್ಢರ್ (ಸಮುಕ. ಅಮುಖಂ೮ ೩೫೦); ಕೊಳನಂ ತಾವರೆಯಂ ಕಳೆರ್ದ ವನಮಂ . . . ಬಸವನಂ ಬೆಳ್ಳಕ್ಕಿಯಂ . . . ದೇವರ್ಕಳಂ ತುಂಬಿಯಂ ತಿಳಿಯಲ್ ಸ್ವಪ್ನದಿ ಲೇಸು (ಸೋಮೇಶ. ೬೯); ಬಸವನ ಹಿಂದೆ ಬಾಲ (ಗಾದೆ). ೨. ಶಿವನ ವಾಹನವಾದ ನಂದಿ; ವೃಷಭ : "ಬಸವನೆನೆ ಗೊಂದಯೆನೆ ಚಾರುತರ ವೃಷಭನೊಳ್ಸೆಸರಕ್ಕು" (ಕಬ್ಬಿಗಂ. ೬). ೩. ದೇವತೆಗಳ ಪ್ರೀತ್ಯರ್ಥವಾಗಿ ದೇವಸ್ಥಾನಗಳಿಗೆ ಬಿಡುವ ಬಿಟ್ಟ ಗೂಳಿ,—ಹೋರಿ : ಬೀದಿಯ ಬಸವಂಗೆ ದೇಗುಲದ ಪಶುವಿಂಗೆ ಹುಟ್ಟಿದ ಕಱು ಹೋರಿಗಳು ಬಸವಗಳಪ್ಪವೆ ಲಿಂಗಮುದ್ರೆಯನೊತ್ತ ದನ್ನಕ್ಕರ (ಚನ್ನವ. ೪. ೧೯೨-೧೨೪); ದೇವರ ಹೆಸರಿನ ಮೇಲೆ ಬಿಟ್ಟ ಬಸವ, ಬಸವಿಗಳು ಕಾಲಗತಿಯನ್ನು ಹೊಂದಿದರೆ ಅವುಗಳನ್ನು ಕೊಂಬು ತಮಟೆ ವಾದ್ಯ ಸಮೇತ ತೆಗೆದುಕೊಂಡು ಹೋಗಿ ಸಮಾಧಿ ಮಾಡಿ ಅದರ ಮೇಲೆ ಗಿಡವನ್ನು ನೆಡುತ್ತಿದ್ದರು (ಹುಟ್ಟಿಹ. ೬೦). ೪. ಶಿವನ ಪ್ರಮಥಗಣದಲ್ಲಿ ಒಬ್ಬ : ಆ ಪ್ರಣವಸ್ವರೂಪರಾದ ಬಸವಾದಿ ಅಸಂಖ್ಯಾತ ಪ್ರಮಥಗಣಂಗಳು . . . ನಮಸ್ಕಾರವ ಮಾಡೆ (ಶಿವಶ. ೩೨-೯೩). ೫. ವೀರಶೈವಧರ್ಮಪ್ರವರ್ತಕ ಮತ್ತು ಪ್ರಸಿದ್ಧ ವಚನಕಾರನಾದ ಒಬ್ಬಾತನ ಹೆಸರು ; ಬಸವಣ್ಣ : ಬಸವನಿರವ ನಿಜದಿ . . . ಬಸವನ ಬಯಲ ವಿಚಾರವ ತಿಳಿದು ಭ್ರಮೆಯನಳಿದು ಆನು ಬದುಕಿದೆನಯ್ಯಾ (ಶಿಂವಚ. ೪. ೨೩-೬೯); ದೇವ ಮಮಗುರು ಲಿಂಗ ಜಂಗಮದೇವಯೆನುತಂ ಬಸವನಾ ಪ್ರಭುದೇವರ ಶ್ರೀಪಾದಪದ್ಮಕ್ಕರ್ಚ ನೆಯ ಮಾಡಿ (ಚಾಕೃ. ೮-೦೩). ೬. (ಆಲಂ) ಗೂಳಿಯಂತೆ ತಿರುಗು ವವನು; ಗಂರಿಯಿಲ್ಲದೆ ಸಂತ್ರುಪ್ತವನು : (*).

**ಬಸವತೃಣ** = ದೂರ್ವೆ ; ದರ್ಭೆ (?) : ಹಸುಮಕ್ಕಳಾಗಿ ಕುಳ್ಳಿರ್ದ ಹರ ಹರಿಯಜರಿಗೆ . . . ಮೂವರೆನ್ನ ಸುತರಾಗಿಯೆನೆ ಶಶಿಧರಂ ಯಜ್ಞಕರ ದೂರ್ವಿಜಂ ದೂರ್ವಾಸವೆಸರಾದವೊಲು ಬಸವತೃಣಕೆ ಪೆಸರಿಟ್ಟವನ ಚರಣಾಂಬುಜಕ್ಕೆ ಶರಣು (ಐಶಪಂ. ೩೩-೩೩). **ಬಸವನ ಕಣ್ಣು** = ಕಣ್ಣಿನ ಅಂತರ್ದ್ರವವನ್ನು ಶೋಧಿಸಂವ ಜರಡೆಯಲ್ಲಿ ಉಂಟಾಗುವ ದೋಷ; ಕಣ್ಣಿನ ಒಂದು ಬಗೆಯ ರೋಗ : ಬಸವನ ಕಣ್ಣುಗಳು ಈಗಲೂ ಒಂದು ಕಠಿನ ಸಮಸ್ಯೆಯಾಗಿಯೇ ಉಳಿದಿದೆ (ಪಮ್ಮದ. ೬೫). **ಬಸವನ ಕೊಂಬಿನ ಹುಳ**=ತಲೆಯ ಮೇಲೆ ಕೊಂಬಿನ ಆಕಾರದ ರಚನೆಯಿರುವ ಒಂದು ಬಗೆಯ ಹುಳು; ಶಂಬುಕ : (*). **ಬಸವನ ಕೋಡಿನ ಹುಳ**=ಬಸವನ ಕೊಂಬಿನ ಹುಳ : (*). **ಬಸವನ ನೋಂಪಿ** = ನಂದಿಯನ್ನು ಕುರಿತಂ ಆಚರಿಸುವ ವ್ರತ,—ನೇಮ : ಬಸವನ ನೋಂಪಿಯನ್ನೋಂತು ಧೈರ್ಯದಿಂದೆ ಚಿತ್ರಚಾರಿಯನೊಲಿಸಿ ಗಂಡನಸುವಂ ಪಡೆದು (ಶಂಕೃ. ೩೩-೯೩). **ಬಸವನ ಪೂಜೆ** = ಬಸವನ ನೋಂಪಿ : ಹಸುಮಗಳು ಚನ್ನವ್ವ ಬಸವನ ಪೂಜೆಯ ಮಾಡಿ ಬಸವಂತಿ ಎಂಬ ಮನೆ ಮಾಡಿ . . . ನಿನ್ನಯ ಪ್ರಾಣ ಪಡೆದವಳು (ಜಾನೀತ. ೦೩೦). **ಬಸವನ ಬಿಡು, ಬಸವ ಬಿಡು** = ದೇವರ ಹೆಸರಿನಲ್ಲಿ ಹೋರಿ, ಕಂದುರೆ, ಕುರಿ ಮೊದಲಾದುವುಗಳನ್ನು ವಿಾಸಲಾಗಿ ಬಿಡಂ : ಆ ಕುದುರೆಯನ್ನು ಗೊಂಡೇನಹಳ್ಳಿಯ ಶನಿ ಮಹಾತ್ಮನ ದೇವಸ್ಥಾನಕ್ಕೆ ಬಸವನ ಬಿಟ್ಟಿದ್ದರು (ಚಮ್ಮನಿಕು. ೬೦೩); ನಮ್ಮ ದೇಶದಲ್ಲಿ ದೇವಸ್ಥಾನಗಳಿಗೆ ಗಂಡೆತ್ತನ್ನು 'ಬಸವ' ಬಿಡುತ್ತಾರೆ (ಚಾಂಕ್ರ. II. ೬೬೪). **ಬಸವನ ಮುದ್ರೆ** = ದೇವಸ್ಥಾನಗಳಿಗೆ ವಿಾಸಲು ಬಿಡುವ ಮೊದಲು ಹಾಕುವ ಮುದ್ರೆ,-ಚಸ್ಸೆ : ಹೊದ್ದಿ ಮಲ್ಲನೆ ಸನ್ನೆ ಮಾಡಿ ಕರೆವ ಈ ಬುದ್ಧಿಯು ಒಳ್ಳೇದೇನೆ ಗೋಪಿ ಮುದ್ದು ಮಾಡಿ ಸಾಕಿ ಮಗನಿಗೆ ಬಸವನ ಮುದ್ರೆಯ ಒತ್ತಿದ್ದೇನೆ (ಶ್ರೀಕಂಠ. ೩-೨೦೬-೩). **ಬಸವನ ಮುದ್ರೆ ವರಹ** = (ಬಸವನ ಮುದ್ರೆಯನ್ನು ಹೊಂದಿರುವ) ಐದು ರೂಪಾಯಿ ಬೆಲೆ ಬಾಳುವ ಒಂದು ಚಿನ್ನದ ನಾಣ್ಯ : (*). **ಬಸವನ ಹುಳು** = ಬಸವನ ಕೊಂಬಿನ ಹುಳು : ಎವರ್‌ಗ್ಲ್ಯೈಡ್ ಹದ್ದುಗಳು ಬಸವನ ಹುಳುಗಳನ್ನು ಮಾತ್ರ ತಿನ್ನುತ್ತವೆ (ಪಕ್ಷಿ. ೩೨); ಅವಳು ಹೋದ ಜನ್ಮದಲ್ಲಿ ಬಸವನ ಹುಳು ಆಗಿದ್ದಿರಬೇಕು ! (ಚಾಂತಲಾ. ೨೪೪). [< ಸಂ. ವೃಷಭ / ತೆಲು. ಬಸವ]

**ಬಸವಂತ** 'ಬಸಂತ' ನೋ.

**ಬಸವಂತಕಲ್ಲು** (ನಾ). ಬಸವನ ಗುರುತಿರುವ ಕಲ್ಲಂ (?) : ಅಲ್ಲಿ ಬಹ ವರ್ತ್ತನೆಯನು ಕಳುವೇಶ್ವರದೇವರಿಗೆ ನಡೆಸಿ ಬಹುದು ದೇವರ ಬಸವಂತ ಕಲ್ಲ ಮುಂದೆ ನಾಲ್ವರು ನಾಲ್ವಾಡರು . . . ನಡಸು ವಂಥಾ ಸೀಮೆ ಸ್ವಾಮ್ಯಉ (ಶಾಇಇ. IX-ii. ೪೨೬-೦೪; 1456). [ಬಸವಂತ, (< ಬಸವ) + ಕಲ್ಲು (<ಕಲ್$_3$)]

**ಬಸವಂತಗೊಳಿಸು** (ಕ್ರಿ). ಓಕುಳಿ ಎರಚು : ಜೋಡು ಜರಿದು ಬಿತ್ತರಿಸಿದುವಂಬುಗಳು ಮೆಯ್ಗಳು ಬಿಸಿನೆತ್ತರ ಬಸವಂತಗೊಳಿಸಿ (ವೋಹಕ. ೩೬-೩೨). [ಬಸವಂತ (<ಬಸಂತ) + ಕೊಳ್$^1$$_1$+—ಇಸು$_1$]

**ಬಸವಂತಿ** (ನಾ). ೧. ಬಸವಿ : ಸೂಳೆ : ನೀನು ಬಸವಂತಿ ಇರುವೆ. ಯಾರಿಂದ ಆಯಿತು ಹೇಳು . . .ಎಂದು ಬೆದರಿಕೆ ಹಾಕಿದರು (ಹೊಂಪು. ೬೦). ೨. (?) : ಹಸುಮಗಳು ಚನ್ನವ್ವ ಬಸವನ ಪೂಜೆಯ ಮಾಡಿ ಬಸವಂತಿ ಎಂಬ ಮನೆ ಮಾಡಿ . . . ಚನ್ನವ್ವ ನಿನ್ನಯ ಪ್ರಾಣ ಪಡೆದವಳು (ಜಾನೀತ. ೦೩೦). [< ಬಸವಿ ?]

**ಬಸವಡು** (ಕ್ರಿ). ವಶವಾಗು ; ಅಧೀನವಾಗು : ಬಸವಟ್ಟುದು ಚಿನ್ನ ಪಟ್ಟಣಂ ಪೊಸತಾಂಧ್ರಂಗೆ ಪೊದಟ್ಟುದಿಟ್ಟಣಂ ಅಸಿದಾದುದವಂಗೆ ಮಂಗಲಂ ಬೆಸದಿಂ ಪಿಂಗಿತು ನಾಗಮಂಗಲಂ (ಕಕಪ. ೨-೬೬). [ಬಸ$_1$+ಪಡು$_1$]

**ಬಸವಡೆ** (ಕ್ರಿ). = ಬಸವಡು : ತುರುಕರ ಬಸವಡೆದಾ ದುರ್ಗವಿಟ್ಟೊಡೆ ಪಿರಿದಾಯಸ ಮುಂದಕಹುದು (ಕಂಪಪ. ೦೬-೩೩). [ಬಸ$_1$+ಪಡೆ$_1$]

**ಬಸವಣ** 'ಬಸವಣ್ಣ' ನೋ.

**ಬಸವಣ್ಣ, ಬಸವಣ** (ನಾ). ೧. ಎತ್ತು; ಹೋರಿ: ಬಸವಣ್ಣ ಭೂಮಿ ಉಳುತ್ತಾನೆ, ಭೂಮಿತಾಯಿ ಬೆಳೆ ಕೊಡುತ್ತಾಳೆ (ಕಪಕ. ೨-೬೨); ನಮ್ಮೂರಿನ ರೈತರ ಮೇಲೆ ಬೀಳುವುದಕ್ಕಿದ್ದ ಅನೇಕ ವಿಧವಾದ ಕತ್ತಿಯ ಪೆಟ್ಟುಗಳಿಗೆ ಕಾಲುನಡೆಯು ಬಲವಾದ ಗುರಾಣಿಯಾಗಿದ್ದಿತು. ಅದ್ದರಿಂದಲೇ ಕೆಟ್ಟರೂ ಬಸವಣ್ಣನಿಂದ, ಬದುಕಿದರೂ ಬಸವಣ್ಣನಿಂದ ಎಂದು ಅನ್ನು ತ್ತಿದ್ದರು (ಹುಟ್ಟಿಹ. ೬೦). ೨. ಶಿವನ ವಾಹನ ; ನಂದಿ : ನಮ್ಮ ಮನೆಯ ಹತ್ತಿರ ಬಸವಣ್ಣನ ದೊಡ್ಡ ಗುಡಿ ಇದೆ (ಕೂಪ). ೩. ವೀರಶೈವಧರ್ಮಪ್ರವರ್ತಕನೂ ಪ್ರಸಿದ್ಧ ವಚನಕಾರನೂ ಆದ ಒಬ್ಬಾತನ ಹೆಸರು : ಬಸವಣ್ಣನ ಮನೆಯ ಮಗಳಾಗಿ ಬದುಕಿದೆನಾಗಿ ತನ್ನ ಕರುಣಭಕ್ತಿ ಪ್ರಸಾದವ ಕೊಟ್ಟನು (ಶುಹಾರೇ. ಶಿ. ೬೬-೦೧೬); ಎನ್ನುವಂ ಪದುಳದೊಳಿರಿಸಿ ಪೊರೆ . . . ಕಲಿಯುಗದೆರಡನೆಯ ಮುಕ್ಕಣ್ಣ ಬಸವಣ್ಣ (ಐಶವೃ. ೦-೮). **ಬಸವಣ** : ೩. ಸೂಕ್ಷ್ಮ ಬಸವಣನೆನ್ನ ಮೂಗಿಗೆ[ಪಾಠಾಂ. ಮಾತಿಗೆ] ಸಿಕ್ಕಿದನಲಾ ಎನುತ (ಐಶವೃ. ೩೦-೦೩). [ಬಸವ+ಅಣ್ಣ$_1$]

**ಬಸವನ ಗಿಡ** (ನಾ). ಒಂದು ಬಗೆಯ ಮರ ; ನಂದಿ : "ತುನ್ನಃ

. . . ನಂದಿವೃಕ್ಷಃ– ೬ ನಂದಿ ಎಂಬುವ ಮರದ ಹೆಸರು, ಬಸವನ ಗಿಡ" (ಸಿದ್ಧ್ಂಶಿ. ೧೯೦). [< ಬಸವ+ಗಿಡ ( < ಗಿಡು)]

**ಬಸವನ ಪತ್ರೆ** (ನಾ). ಗರಿಕೆ, ಬಿಲ್ವ ಮುಂತಾದ ಎಲೆ; ಎಸಳು : ಕಣದಲ್ಲಿ 'ಶಂಕರಗಂಡ'ನ ರಾಶಿಯ ಸತ್ತಲೂ . . . ಬಸವನ ಪತ್ರೆಯ ಬಣಿವೆಗಳ ಕೋಟೆಕಾವಲು (ಕಳಚು. ೨೪೬). [< ಬಸವ + ಪತ್ರೆ]

**ಬಸವನ ಪಾದ** (ನಾ). ೧. ಒಂದು ಬಗೆಯ ಸಸ್ಯ ಮತ್ತು ಅದರ ಹೂವು; ಬಸವನ ಪಾದ, ಕುಳಿಆಚಲು (ವೃ ಶಿ. ೦೨–೨೦೯); ಬಸವನ ಪಾದ ಗಂಟೆಹೂ, ತುಂಬೆ ಮತ್ತು ಚೆಂಡುಹೂಗಳನ್ನು ಅಂದವಾಗಿ ಜೋಡಿಸಿದ್ದರು (ಕಕಥ. IV, ೩೬). ೨. ಒಂದು ಬಗೆಯ ಮರ : ಬಸವನ ಪಾದ, ವಿಸ್ತಾರವಾಗಿ ಬೆಳೆಯುತ್ತದೆ. ಕಟ್ಟಿಗೆಯು ಕಲಸಕ್ಕೆ ಬರುವುದಿಲ್ಲ (ಕಹಾಗ. ೯೪). ೩. ಒಂದು ಬಗೆಯ ಜೋಳ : ಬಸವನ ಪಾದ, ಪುಲ್ಗರ . . . ಕೊಡಮೂಕನ ಜೋಳ ಈ ಯೆಂಟು ಜಾತಿ (ಜೋಳ)ಗಳನ್ನು . . . ಬಿತ್ತುವರು (ಕಹಾಗ. ೨೬೦). [< ಬಸವ+ಪಾದ]

**ಬಸವನ ಸುಳಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು : ಇರುವಂತಿಗೆ ಬಸವನ ಸುಳಿ ಪರಿಮಳಿಸುವ ಪಚ್ಚೆದವನ . . . ಬಂದುಗೆ ಪರಿಪರಿಯ ಸುಗಂಧಕುಸುಮದಳಿಕುಳವಿರ್ಕುಂ (ಹರಿಶ್ಚ. ೬–೯೩). [< ಬಸವ + ಸುಳಿ₂ (< ಸುಟ್ಟು₂)]

**ಬಸವನ ಹಳ್ಳಿ** (ನಾ). ಒಂದು ಊರಿನ ಹೆಸರು : ಮಣ್ಣಂ ಬಳಸಿದ ಪ್ರಭುಗಳ್ ಪೆರ್ಮ್ಮಾಡಿಗಾಮುಣ್ಡ ಮುಗುಳಿಯ ನಾಗಯ್ಯ ಬಸವನ ಹಳ್ಳಿಯ ಬಸಮ್ಮ (ಎಕ.XV, ಶೀಕಾಲು. ೩೦೪–೦೧; 971). ◆ ಇದು 'ಬಸವನ ಪಳ್ಳಿ' ಎಂಬುದರ ಅಪಲಿಖಿತವಿರಬಹುದೆ? [< ಬಸವ+ಹಳ್ಳಿ (< ಪಳ್ಳಿ₁)]

**ಬಸವಯ್ಯ** (ನಾ). ಒಬ್ಬಾತನ ಹೆಸರು: ಪೊಙ್ಕುನ್ದದ ಬಾರಾನ್ದರಯ್ಯ ತಗಡೂರ ಕಳೆಯ ಕಾಳಿಗದೊಳ ಬಸವಯ್ಯನ ಮುನ್ದೆ ಕಾದಿ ಸತ್ತು ಸಗ್ಗೆಯದ (ಎಕ. X, ಬೌಂಗ್. ೯೯–೬; ಕು. 950); ಮಣ್ಣಂ ಬಳಸಿದ ಪ್ರಭುಗಳ್ ಪೆರ್ಮ್ಮಾಡಿಗಾಮುಣ್ಡ ಮುಗುಳಿಯ ನಾಗಯ್ಯ ಬಸವನ ಹಳ್ಳಿಯ ಬಸಮ್ಮ (ಎಕ. XV, ಶೀಕಾಲು. ೩೦೪–೦೦ ; 971). [ ಬಸವ + ಅಯ್ಯ₆₁ ]

**ಬಸವಸೆಟ್ಟಿ** (ನಾ). ಒಬ್ಬಾತನ ಹೆಸರು: ಬಸವಸೆಟ್ಟಿಯ ಮಗಂ ಚಬ್ಬಸೆಟ್ಟಿ (ಎಕ. IX, ಕೊರ್ಕ್. ೯–೬; 918); ನಲ್ಲಮುರುಗಸೆಟ್ಟಿಯ ದೊಗ್ಗಟ್ಟಿಯ ಮಗಂ ಸುಪುತ್ರಂ ಪುಟ್ಟಿದ ಬಸವಸೆಟ್ಟಿ (ಎಕ. III (R), ಹ್ಯ್ಕ. ೩೬–೯; 1020). [ಬಸವ + ಸೆಟ್ಟಿ]

**ಬಸವಳಿ** 'ಬಸವಳಿ' ನೋ.

**ಬಸವಳಿಸು** (ಕ್ರಿ). ಆಯಾಸಗೊಳ್ಳುವಂತೆ ಮಾಡು; ಬಳಲಿಸು; ದಣಿಸು: ಬಸವಳಿಸದೆ . . . ಹಸಗೆಡಿಸದೆ ಹುದುಗಿಸದೆ ಬಸಿಚೆನಾಲು ಬಂದ ಪೆಣ್ಮಕ್ಕಳ ಮಜಿಣಕವ ಸೂಳೆಯರೆಡೆಯೊಳೆಸಗುವುದು (ಹರಿ. ೯–೨೩): ವಿಚಾರ ತರಂಗಗಳು ಮುತ್ತಿ ಬಸವಳಿಸಿದವು (ಕಂದಃ. ೬೩). [ಬಸವಳಿ (< ಬಸವಳಿ) + –ಸು₁]

**ಬಸವಳಿ** 'ಬಸವಳಿ' ನೋ.

**ಬಸವಿ** (ನಾ). ೧. ದೇವರ ಹೆಸರಿನಲ್ಲಿ ದೇವಾಲಯದ ಸೇವೆಗಾಗಿ ಮೀಸಲು ಬಿಟ್ಟ ಹುಡುಗಿ; ◆ ತಂದೆತಾಯಿಗಳು ತಮಗೆ ಒದಗಿದ ಯಾವುದೋ ದುರ್ಭರಸಂದರ್ಭದಲ್ಲಿ ತಮ್ಮ ಮಗಳನ್ನು ದೇವರಿಗೆ ಅರ್ಪಿಸುವುದಾಗಿ ಹರಕೆ ಹೊತ್ತು ಚಿಕ್ಕಂದಿನಲ್ಲಿಯೇ ಮೀಸಲು ಬಿಡುತ್ತಾರೆ. ಈ ದೇವದಾಸಿ ಸಂಪ್ರದಾಯವು ಪ್ರಾಚೀನವಾದುದು. ಕೆಲವು ಕಡೆ ಇಂತಹವರನ್ನು 'ದೇವದಾಸಿ'ಯರೆಂದೂ 'ಜೋಗಿತಿ'ಯರೆಂದೂ ಕರೆಯುತ್ತಾರೆ. ಇಂದು ಈ ಪದ್ಧತಿಯು ಶಿಥಿಲಗೊಂಡು ತನ್ನ ಗೌರವವನ್ನು ಕಳೆದುಕೊಂಡು ಹೀನಾಯದ ಸ್ಥಿತಿಗೆ ಇಳಿದಿರುವುದನ್ನು ಕಾಣಬಹುದು: ಹಾಡುವ ಮಹಾದೇವಿ ತಾಳದ ಮಾಕಜ್ಜ ದೇವರ ಬಸವಿಯರು (ಎಕ. XII, ಗುಬ್ಬಿ. ೨೯–೯೬; 1470); ಬಸವಿಯರೊಳು ಪಾತಕಿನಿಯರೊಳು ಮತ್ತ್ರಸತಿಯರೊಳು ಕಳೆಗೊಳದ ಪೊಸತಿಲ ಪೊಜಗಡಿಯಿಡದೊಳ್ಪೆಂಡಿರ ಜಸವಳ್ಳಿ ಜಗವ ಪರ್ಬುವುದು (ಹರಿ. ೯–೯೩). ೨. ಸೂಳೆ; ವೇಶ್ಯೆ: ಇದ್ದೊಬ್ಬ ಮಗಳು ಊರ ಬಸವಿಯಾದಳು (ಕಕಥ. II, ೯೩೩): ನಾಕೇ ನಾಕು ದಿವಸದಾಗೆ ಈ ಕಾಸಿಂಬೀನು ಬಸವಿ ಆಗಿ, ಬಿಕಾರಿ ಆಗಿ ರೋಗದಿಂದ ಸಾಯ್ತಾಳಲ್ಲ ಅಂತ ಎದೆ ಮಿಡುಕಿತು (ಕಂಗಾ. ೦೬೯). 'ಊರುಬಸವಿ', 'ಬೀದಿಬಸವಿ' ಪರಾ. ೩. ದೇವರ ಹೆಸರಿನಲ್ಲಿ ಮೀಸಲು ಬಿಟ್ಟ ಹಸು: ಬಸವಿ ಬಸವನ ಕೊಂದ ಪಾಪಕೆ ಹೋಹರು ಯೆಂದು ಬರದ ಸಾಸನ (ಎಕ. IX, ಕನ್ನಕ. ೬೬–೨೯; 1661), ದೇವರ ಹೆಸರಿನ ಮೇಲೆ ಬಿಟ್ಟ ಬಸವ, ಬಸವಿಗಳು ಕಾಲಗತಿಯನ್ನು ಹೊಂದಿದರೆ ಅವುಗಳನ್ನು ಕೊಂಬು ತಮಟೆ ವಾದ್ಯಸಮೇತ ತಗೆದುಕೊಂಡು ಹೋಗಿ ಸಮಾಧಿ ಮಾಡಿ ಅದರ ಮೇಲೆ ಗಿಡವನ್ನು ನೆಡುತ್ತಿದ್ದರು (ಕುಮ್ಟ. ೬೦).

**ಬಸವಿ ಬಿಡು** = ಅವಿವಾಹಿತತರುಣಿಯನ್ನು ದೇವರ ಸೇವೆಗಾಗಿ ಮೀಸಲಾಗಿಡು; ದೇವದಾಸಿಯನ್ನಾಗಿ ಮಾಡು : ನಿನ್ನನ್ನು ಬಸವಿ ಬಿಡುವುದಾಗಿ ಹೇಳಿದ್ದೇನೆ (ದೇವಕು. ೦೦೭). [ಬಸವ + –ಇ₂./ ತಮಿ. ಪಚವಿ; ತೆಲು. ಬಸಿವಿ]

**ಬಸವಿತ್ತಿ** (ನಾ). = ಬಸವಿ ೧ : ಆ ಮಠವ ಬೋಹರಿಸುವ ಬಸವಿತ್ತಿಯ ಜನ ಒಂದಕ್ಕಂ ವರಿಸ ಒ[ಂದ]ಕ್ಕಂ ಅಕ್ಕಿ ಮೂಡೆ ಎರಡೂ ಹಾನೆ ಹತ್ತು (ಸೌಇಇ. IX–ii, ೪೦೭–೩೯; 1378). [ಬಸವ + – ಇತ್ತಿ]

**ಬಸವೆ** (ನಾ). = ಬಸವಿ ೧ : ಇವಳು ಬೈತಲೆ ಕಲಕದಂತೆ ತಿದ್ದಿಕೊಳುತ್ತ ಮಿವಳು ಹಗಲೆಲ್ಲ ತೊಳೆವುತ ತೀಡಿಕೊಳ್ಳುವಳು ಸೂಳೆ ಬಸವೆಯ ತೆರದೆ (ಪಂಪ್ಲಹ. ೨–೨೦); ಈ ಹನುಮಂತದೇವರಿಗೂ ಅನೇಕ ಕಸಬಿಯರೂ, ಬಸವೆಯರೂ ತಾಳಿಯನ್ನು ಕಟ್ಟಿಕೊಳ್ಳುತ್ತಾರೆ (ಕನ್ನಜಾ. ೯೦); ಬೀದಿಬೀದಿಗೆ ಬಸವೇರಲ್ಲ ಕಸಬೇರೋ ಅವರು ನಾಯಿಪಾಡಿನ ನರಕದ ಕಿಂಡಿ ಅವರ ತವರೂರು (ಅಕಲು. ೨೬೮–೧೯). [ಬಸವ + – ಎ₂]

**ಬಸವೇಜು** (ಕ್ರಿ). ಪರವಶತೆಯು ಅಧಿಕವಾಗು : ಎಬ್ಬಿ ನಿಂದೆಣೆಗೊಂಡು ಪೊರ್ದಿ ಕೈಲಾಗಿತ್ತು ತೋಳ್ತೋಳ್ಗಳ ತೊಡಕಿನೊಳಂ ಬಾಬ್ಬಿ ಸೊಗಸಿ ಮೆಯ್ಬಸವೇಜಿದಂತೆ ಪೊದಬ್ಬಿ ಕದುಬುದಾಳ್ದುವುದು (ಕಥಾ. ೬–೦೩೬ ಸಾಂಗತ್ಯ). [ಬಸ₁ + ಏಜು₁ (< ಏಜ್ಞ₁)]

**ಬಸಳೆ** 'ಬಸಲೆ₁' ನೋ.

**ಬಸಿ₁** (ಕ್ರಿ). ಬಸಿದು, (ಭೂತಕೃ). ೧. ಒಸರು; ಸ್ರವಿಸು; ಜಿನುಗು: ಇನಿಯನ ಕೆಂದಳಂ ತಳಮನೊಯ್ಯನೆ ಸೋಂಕೆ ಪೊವಟ್ಟ ನಾಣ ಪೆಂಪಿನೊಳೊಗೆತರ್ಪ ಘರ್ಮಜಲಬಿಂದುಗಳಿಂ ಸವಿತಾನನಾಬ್ಜೆ ಬೆಚ್ಚನೆ ಬಸಿವಿಂದುಕಾಂತಕರಸಂಕುಳವೊಯ್ಯನವುಂಕೆ ಸೋಂಕೆ (ಅಂಪು. ೯–೯೯). ಬಸಿಯೆ ಜಳಬಿಂದು ಕೇಶಪ್ರಸರಮನೆಡಗೆಯ್ಯೊಳಡಸಿ ಪಿಡಿದೆಸೆದುದು ಕಾಜೆಸುವವೊಲಂಗಜನಸಿಯುಬ್ಬಸಮಾಗಿರೆ ಪೀರ್ದ ವಿರಹಿಜನಜೀವನಮಂ (ಲೀಲಾವ. ೧೪–೬) ; ಆ ಘರ್ಮದಿಂ ಬಸಿವಂಗಂ ಪಣೆಗೊಂಡು ಪತ್ರಿದಳಕಾನೀಕಂ . . . ಚೆಲ್ವಂ ಬೀಜೆ (ಶಾಸುವಾ. ೧೧–೦೫೦) ; ೨. ಪಾತ್ರೆಯನ್ನು ನಿಧಾನವಾಗಿ ಬಗ್ಗಿಸಿ ಅದರಲ್ಲಿರುವ ಬೆಂದ ಅನ್ನ, ತೊಳೆದ ಅಕ್ಕಿ ಹಾಗೂ ತರಕಾರಿ ಮುಂತಾದುವುಗಳು ತಳದಲ್ಲೇ ನಿಂತು ಮೇಲಿನ ಗಂಜಿ, ನೀರು ಮುಂತಾದುವನ್ನು ಸೋರಿ ಹೋಗುವಂತೆ ಮಾಡು : "ಬಸಿ–ಗಲನೇ (ಬಸಿಯು), ಶಾತ, (ಹರಿತ ಮಾಡು). ದಂಡಮಧ್ಯಯೋ: (ದಂಡಿಗೆಯ ಮಧ್ಯಭಾಗ)" (ಶಮಾ); ಬಳಸಿ ರಾಜಾನ್ನದಕ್ಕಿಯನು . . . ಅಕ್ಕಿಗಚ್ಚಂ ಬಸಿದು (ಸೂಶಾ. ೩–೨) ;

ಪಾತ್ರೆ ತುಂಬ ನೀರಿಟ್ಟು ಅಕ್ಕಿ ಹಾಕಿ ಬೆಂದ ಅನಂತರ ನೀರನ್ನೆಲ್ಲ ಬಸಿದು ತೆಗೆಯುವುದು ಸಾಮಾನ್ಯವಾಗಿ ಅನ್ನ ತಯಾರಿಸುವ ವಿಧಾನವಾಗಿದೆ (ಅಡುಗೆ. ೬೯). ೩. ಧಾರೆಯಾಗಿ ಬೀಳು ; ಸುರಿ : ಪೆರ್ಗಸಱಿಗಿರ್ಪುದು ಬಟ್ಟೆ ಪೋದವಿದಱೊಳ್ ಪೆರ್ಬಂದಿಗಳ್ ನೆತ್ತರಂ ಬಸಿವುತ್ತಿರ್ಪುದು ಪೋದ ವಿಕ್ಕಿ ಮಾಱುಯಂ ಪುಲ್ಲಟ್ಟೆಯೊಳ್ ಪುಲ್ಲೆಗಳ್ (ಕಾದಂಪೂ. ೦೩೬); ಬಸಿವ ಸೊರ್ಕಿಂದಾನೆಗಳ ವಾಜಿವದನದಿಂದೊಸರ್ವ ಲಾಲಾಜಲದಿಂದ ಬೆಸವಾಕ್ಕೆ ಕೊಗುವ ವ್ಯಾಬೆವರಿಂದಾ ಬೀದಿ ಕೆಸರ್ವಡೆದಿಹುದನವರತ (ಕುಮಾರಾಮ. ೯-೦೦೬). ೪. ಬೆವರು ಸುರಿ : ರಿಪುಬಂದಿಕಾಱನೊಳೀಱ ಸೂಜಿಗೆ ಬಂದು ಬಸಿವುತ ಪೋದರನಿಬರು ಬೈದು ರವಿಸುತನ (ಕುಮಾವ್ಯಾ. ೬-೩೦); ಭೂಸುರರು ಮಧ್ಯಾಹ್ನಕಾಲದಲಿ ಹಸಿದು ಬಸಿದು ಬಂದರೆ ಮನೆಗೆ ಬೇಸತ್ತು ನಮಗೆ ಗತಿಯಿಲ್ಲ ಹೋಗೆಂದು ಹಸನಾಗಿ ಉಂಬುವುದು ಅದು ಮಡಿಯೊ (ಪುರಂದ.ದಾ. ೩-೬೨-೯). ೫. ಸುರಿಸು : ಈ ಬಾಳ ಮೇಲ್ ಬಿಟ್ಟು ನೆತ್ತರನ್ ಬಸಿವನನ್, ಬಂದು ಮೊದಲಿತ್ತಲ್ ಏಕಲವ್ಯಂಗಱಿವೆ ಅಟ್ಟು ಅರಾನುವುನ್ (ಅಶ್ವತ್ಥಾ. ೩೩-೬೯೬). ೬. ತೊಡೆ ; ಒರೆಸು : ಎಮದುಱುಗಲಿನಿಱುವ ತೋರ ಕಣ್ಣನಿಗಳಂ ಬಸಿಯುತ್ತಮನ್ನನಿಂತೆಂದಂ (ಕಾದಂಪೂ. ೬೯೩). ೭. (ಅಲಂ) ಕುಗ್ಗು ; ಕಡಮೆಯಾಗು : ವೈರಾಗ್ಯದೇಟ್ಗಿಯಂತೆಯುಂ ಶ್ರೀವೈಷ್ಣವರ ಭಾಗ್ಯದಂತೆಯುಂ ತೋರ್ಪ ಶ್ರೀರಾಮಾನುಜರಡಿಗಳಱ ನೇಸಱ ತೇಜದೊಳ್ಬಸಿಯದ ತಣ್ಪಂ ಬೆರಸಿದಂತಿರ್ಪ ಮೆಯ್ವೊಗರುಂ . . . ಆಗಿ (ಚಿಕಪಂ. ೦೦೯-೦೦). ೮. ಇಲ್ಲದಂತೆ ಮಾಡು ; ನಾಶವಾಗಿಸು : ಅದಱಿಂದ ಎಂದಿಂಗಮೆಡೆವಱಿಯದೀ ನೋವು ಏರ್ದೆಗೊಱಿದು ಬಸಿದವುದು ಬಲ್ಮೆಯನ್ (ರಕ್ತಾಕ್ಷಿ. ೨-೩೨).

ಬಸಿದುಕೊಳ್ಳು = ೧. ಪಾತ್ರೆಯ ಬಂಡದಲ್ಲಿರುವ ಗಟ್ಟಿಯಾದ ಪದಾರ್ಥಗಳ ಮೇಲೆ ನಿಂತ ನೀರು, ಎಣ್ಣೆ ಮೊದಲಾದ ದ್ರವ ಪದಾರ್ಥಗಳನ್ನು, ನಿಧಾನವಾಗಿ ಪಾತ್ರೆಯನ್ನು ಓರೆ ಮಾಡಿ ಸುರಿ: ಬೇವಾಗ ಗಂಜಿಯ ಬಸಿದುಕೊಂಡು . . . ಮೃದುವಾಗಿ ಮಾಡಿದುದು ತಾ ಶುದ್ಧಮಪ್ಪೋದನಂ (ಸೂಪಶಾ. ೩-೨) ; ಪುತ್ರುಜೀವಿಶಿರುಳನ್ನು ಚೆನ್ನಾಗಿ ಕುಟ್ಟಿ . . . ಇದರೆಂಟು ಮಡಿ ನೀರು ಹುಯ್ದು . . . ಹದವ ನೋಡಿ ಬಸಿದುಕೊಂಡು (ಸಕವೈ. ೭೦). ೨. ದ್ರವಪದಾರ್ಥವನ್ನು ಕುಡಿ : ಹಣವಂತ . . . ಹೊಟ್ಟೆಗೆ ಏನೂ ಬಸಿದುಕೊಳ್ಳಲಿಲ್ಲ (ಕಂಕಂ. ೦೯); ಬಂದ ತಪ್ಪಿಗೆ ಒಂದಿಷ್ಟು ಕಾಫಿಯನ್ನಾದರೂ ಬಸಿದುಕೊಂಡು ಹೋಗೋಣವೆಂದ್ರ ಕೊಂಡು ಕುಳಿತುಕೊಳ್ಳಲು ಸ್ಥಳ ಹುಡುಕಿದೆ (ಅಂತಃಪು. ೨೯). ಬಸಿದು ಬೀೞ್, ಬಸಿದು ಬೀಳು =೧. (ರಕ್ತ ಸುರಿದು) ನಿಶ್ಶಕ್ತಿಯಿಂದ ಕುಸಿದು ಬೀಳು : ಪರಾಂಗನೆಯೆಂದೊಡೆ ಸಾಮ್ಯಮಲ್ಲವೆಂದೊಡೆ ತಲೆ ಹೋಗಿಯುಂ ಬಸಿದು ಬೀಱದೆ ಸೈರಿಸರಲ್ತೆ ಕಾಮುಕರ್ (ಅಕೀಪು. ೦೦-೩೩); ಬಸಿದು ಬೀಳ್ವ ಕಬಂಧದಲಿ ಹೆಣವಸರೂದುದು ನೆಲನಿದೆಲ್ಲಿಯ ವಿಷಮ ವೀರರೂ ಮರ್ಚುಯಿಸುತ ಮಾರೀಚ ಬೆಱಗಾದ (ಕೊರಾ. ೦-೦೦-೮೯). ೨. ಉಕ್ಕಿ ಹರಿ : ಒಸೆದು ನಿನ್ನವರೆಂದು ಬಗೆವರೆ ಬಸಿದು ಬೀಳುವ ಕೃಪೆಯ ನೀ ತೋಱಿಸಿಯಿದೇನ್ನೆ ಕೃಷ್ಣೆಯೆಂದೊಱಲಿದಳು ನಳಿನಾಕ್ಷಿ (ಕುಭಾವ್ಯಾ. ೧೯-೧೨೭). ೩. ಕಳಚಿ ಬೀಳು : ಒಡಲು ಬೀಳಲಿ ಮೇಣು ತಮ್ಮಿದಿರದವಿಯಲಿ ಹಾಯಿಕ್ಕಿ ಹೋಗಲಿ ಮಡದಿ ಮುನಿಯಲಿ ಬಸಿದು ಬೀಳಲಿ ಧರಣ ಕುರುಪತಿಗೆ (ಕುಭಾ೯. ೯-೦೨). ಬಸ್ಸು ಎಸರು = ಬೇಳೆ ಅಥವಾ ಕಾಳಿನೊಂದಿಗೆ ತರಕಾರಿ, ಸೊಪ್ಪು ಮುಂತಾದುವನ್ನು ಬೇಯಿಸಿ, ಅದರ ಸಾರವನ್ನು ಬಸಿದುಕೊಂಡು ಮಾಡುವ ಸಾರು : ಹಸಿ ಅವರೆಕಾಳು, ಸೊಪ್ಪು ಸೇರಿಸಿ ಮಾಡಿದ್ದ ಬಸ್ಸು ಎಸರು ಮುದ್ದೆಗೆ ಬಹಳ ರುಚಿಯಾಗಿತ್ತು (ಕೂ೦). ಬಸ್ಸು ಸಾರು = ಬಸ್ಸು ಎಸರು : ರಾಗಿ ಮುದ್ದೆ, ಅವರೆಕಾಳು ಬಸ್ಸಾರು ಮಾಡಿದ್ದೀನಿ (ಕೂ೦).

[ದೇ.॥ ತಮಿ. ವಡಿ, ವಟ್ಟ, ವಟ್ಟು; ತುಳು. ಬಸಿ, ಬಚ್ಚು; ತೆಲು. ವಡಿಯು]

ಬಸಿ₂ (ಕ್ರಿ). ೧. ಹರಿತಗೊಳಿಸು; ಚೂಪು ಮಾಡು ; ಮಸೆ : "ಬಸಿ-ಗಲನೇ (ಬಸಿಯು) ಶಾತ, (ಹರಿತ ಮಾಡು) ದಂಡಮಧ್ಯಯೋಃ (ದಂಡಿಗೆಯ ಮಧ್ಯಭಾಗ)" (ಕಮುಥಾ); ಆತನಂ ಶ್ಮಶಾನಕ್ಕಟ್ಟಿದುಕೊಂಡು ಪೋಗಿ ದರ್ಕಂ ಬಸಿದು ಸೂಲದೊಳಿಕ್ಕುವಾಗಳ್ (ವಡ್ಡಾರಾ. ೭೪-೨೯); ಬೆತ್ತಗಣ್ಣೆವಲೆಯಂ ಸಮಕಟ್ಟುವ ಬೆಟ್ಟುಗೂಂಟಮಂ ಬಸಿವ ಪುಳಿಂದಸಂಕುಳದ ಪೆರ್ಗಣದಿಂದೆಸೆದತ್ತು ಪಕ್ಕಣಂ (ಚಂದ್ರಪ್ರ. ೩-೩೪). ೨. ಚೂಪಾಗಿರು; ಹರಿತವಾಗಿರು : ಒಡಲುರಿವನ್ನೆಗಂ ಬಸಿದ ಶೂಲದೊಳಿಕ್ಕಿ (ಧರ್ಮಾಮೃ. ೧೨-೨೩೬); ಬಸಿದಸಿಯ ದಸಿಯನನುಕರಿಪ ಸೂಜಿಗೊಂಬರ್ಚಿ ಸೀಳ್ದ ಬಸುಱಿಂ ನಿಸದಂ ಬಿಸುನೆತ್ತರ ಪೊನಲುಂ ಕರುಳ ಸೋಗೆಯುಂ ಕವಿದುವವನಿಗಾ ಯತಿಪತಿಯಾ (ಕರ್ಣಪು. ೩-೬); ಬಸಿದ ಕೋಡಿನ ಸಲಗನೆಸೆವ ಕೋಣಂಗಳಂ ಮಸಗಿ ವಿಸಟಂಬರಿದು ಕರ್ಚುವುಪ್ಪಂಗಳಿಂ (ಸಾವಂತ. ೯-೦೩೯ ರಗಳೆ).

ಬಸಿ₃ (ನಾ). ೧. (ಮರ, ಲೋಹ ಮೊದಲಾದುವುಗಳಿಂದಾದ) ಗೂಟ, ಶೂಲ ಮುಂತಾದ ಹರಿತವಾದ ಸಾಧನ : ಪೂಱಿಸಿದ ಗಾಲಿಯೊಳಂ ನಿಱಿಸಿದ ಬಸಿಯೊಳಂ ಪೂಸಿದ ಡೆಂಕಣಿಯೊಳಂ . . . ಕೈಗೆಯ್ದು (ಆದಿಪು. ೦೦-೮೨ ವ). ೨. ಮುಳ್ಳು ; ಕಂಟಕ : ಪರಮಂಗೆ ಗುಗ್ಗುಳದ ಕಂಬಿಯುಂ ತರುತಿರಲು ಚರಣವುಂ ಬಸಿ ತಾಗಲು ಹರ ಶಬರವೇಷದಿಂ ಬಂದು ಬಸಿಯಂ ಕೀಳೆ (ರಾಘಶ. ೯-೩೯ ವ). ೩. ತಕ್ಕಡಿಯಲ್ಲಿರುವ ದಂಡಿಗೆಯ ಮಧ್ಯಭಾಗ : "ಬಸಿ-ಗಲನೇ (ಬಸಿಯು) ಶಾತ, (ಹರಿತ ಮಾಡು) ದಂಡಮಧ್ಯಯೋಃ (ದಂಡಿಗೆಯ ಮಧ್ಯಭಾಗ)" (ಕಮುಥಾ). [<ಬಸಿ₂./ತಮಿ. ವಡಿ, ವಯ್; ತೆಲು. ವಸಿ ; ಕೊತ. ವಚ್; ಗೊಂಡಿ. ವಾಯ]

ಬಸಿ₄ (ನಾ). ಬಟ್ಟಲಿನಲ್ಲಿರುವ ದ್ರವವು ಕೆಳಗೆ ಚೆಲ್ಲದಂತೆ ಬಟ್ಟಲಿನ ಅಡಿಯಲ್ಲಿ ಇಡುವ ಸಣ್ಣ ತಟ್ಟೆ ; ಸಾಸರು : ಏಟು ಬಂದಾದ ಕಪ್ಪು ಬಸಿಗಳನ್ನು ತಕ್ಕೊಂಡು ಒಳಗೆ ಹೋದನು (ಚಂದುಬಿ. ೯೩ ); ಅಮೇರಿಕದಲ್ಲಿ . . . ಮಕ್ಕಳು ಹೋಟೇಲಿನಲ್ಲಿ ಕಪ್ಪು, ಬಸಿ ತೊಳೆದು ಹಣ ಸಂಪಾದಿಸಿ, ಆದರಿಂದ ಓದುತ್ತಾರಂತೆ (ಸ್ವಸ್ಥಪೂ. ೦೩೯).

[← ಮರಾ. ಬಸೀ, ಬಶೀ./ಪೋರ್ಚು. ಬಸಿಯಾ]

ಬಸಿಗಲ್ಲು (ನಾ). ಚಂದ್ರನ ಪ್ರಕಾಶದಿಂದ ಕರಗಿ ನೀರು ಬಿಡುವು ದೆಂದು ನಂಬಲಾದ ಕಲ್ಲು; ಚಂದ್ರಕಾಂತಶಿಲೆ : ಬೆಳುದಿಂಗಳಲ್ಲಿ ಬಸಿಗಲ್ಲ ನೀಡಿ ತಿಂಗಳನು ತಣಿಸಬಹುದೆ ? (ಮುಕ್ತಕಂ. ೫೯-೦೯).

[ ಬಸಿ₁ + ಕಲ್ಲು (< ಕಲ್₁) ]

ಬಸಿಗಳ್ (ನಾ). ಒಂದು ಬಗೆಯ ಮದ್ಯ ; ತಿಳಿಹೆಂಡ : ರಸವಣಿಯ ನುಂಡ ಗೊರವಿತಿ ಪೊಸತಾಶೀರ್ವಾದವುಳ್ಳದೊಂದೆಂದಾಗಳ್ ಬಸಿಗಳ್ಳಿಂಗೆ ಮಹೇಶರ ಪಸಾದ ಸುರುಕವಡೆ ಕವಡೆ ಹರಿವೋ ಎಂದಳ್ (ಸೂಕ್ತಿಸು. ೦೩-೨೦). [ಬಸಿ₁ + ಕಳ್₃]

ಬಸಿಗೆ 'ಬೈಸಿಕೆ' ನೋ.

ಬಸಿತ (ನಾ). (ರಕ್ತವು) ಧಾರೆಯಾಗಿ ಇಳಿಯುವಿಕೆ : ಕಂದ ನೆತ್ತರ ಬಸಿತ ಹಿಂಚಿಹುದೆ ? ಉಸಿರೆ ಏತಕೊ ? (ಹಕ್ಕಿಕ. ೪೦-೦೩೩).

[ಬಸಿ₁ + – ತ₃]

ಬಸಿದಲೆ (ನಾ). ನೆತ್ತರಂ ಸುರಿಯುತ್ತಿರುವ ತಲೆ : ಅಲ್ಲೊಬ್ಬ ತರುಣಿ ವಕ್ಕಯ್ಯಾ ಕತ್ತಿ ಬಸಿದಲೆಯೊಂದು ಕರದಿಂ ಬೀಳೆ ಬತ್ತಲಿರಲು (ಕೋಟಾ. ೬-೨೯). [ ಬಸಿ₁ + ತಲೆ₁ ]

ಬಸಿದು₁ 'ಬಸಿ₁' ಪರಾ.

ಬಸಿದು₂ (ನಾ). ೧. ಹರಿತವಾದುದು ; ತೀಕ್ಷ್ಣವಾದುದು : "ಬಸಿದೆಂದು ಕೂರಿತಕ್ಕುಂ" (ಶಬ್ದಮ. ೩೦). ೨. (ಅಲಂ) ತೀಕ್ಷ್ಣವಾದ

ನಡೆವಳಿಕೆ : ಬ[ಪಾಠಾಂ. ದಿ]ಸಿದುಮುಸಿದುವಂ ತೋಱಿ ನುಡಿದೊಡಂ ಬಡಸಿದಳ್ (ಅಜಿತ. ೨-೦೧೪ ಶ).

ಬಸಿಯಂ = ಉಗ್ರನಾದ ವ್ಯಕ್ತಿ ; ಕ್ರೂರಿ: ಅಸಿಯಂ, ಬಸಿಯಂ, ಕರಿಯಂ (ಕಜಿಚ. ೧೫೨ ತ್ರಿಪದಿ). [<ಬಸಿ$_2$]

ಬಸಿಮೂಗ (ನಾ). ಯಾವಾಗಲೂ ನೀರು ಸೋರುತ್ತಿರುವ ಮೂಗುಳ್ಳವನು : ಬಸಿ[ಪಾಠಾಂ. ಸಿ]ಮೂಗಂ ಚಿತ್ರವಿಚಿತ್ರಭೋಗಿ ಕುನಖಂ ಮೆಲ್ಪಿಂದೆ ಬಲ್ಪಿಂದೆ ಸಾಧಿಕೆ ಸಾಧ್ಯಂ ನಿಪುಣಂ ಮಹೋದ್ಯಮಿ ನಿಗೂಢಾಂಸಂ ಧನುರ್ಗೇಹಜಂ (ಜಾತಕ. ೦೩-೪).

[ಬಸಿ$_1$+ಮೂಗು + – ಅ$_7$]

ಬಸಿರಾಸು 'ಬಸಿಱಾಸ್' ನೋ.

ಬಸಿರಿ$_1$ 'ಬಸಿಱಿ' ನೋ.

ಬಸಿರಿ$_2$ 'ಬಸರಿ' ನೋ.

ಬಸಿರು 'ಬಸಿಱ್' ನೋ.

ಬಸಿರ್ಗುತ್ತ$_1$, ಬಸಂಗುತ್ತ (ನಾ). ಅತಿಯಾಗಿ ಭೇದಿಯಾಗುವ ಒಂದು ಬಗೆಯ ರೋಗ ; ಅತಿಸಾರ : "ಬಸಿರ್ಗು[ಪಾಠಾಂ. ಬಸುರ್ಕು]ತ್ತ ಮತಿಸಾರವಕ್ಕು" (ಶಬ್ದಮ. ೦೦೪-೩) ; ಅತಿಸಾರಕಿಯಂ(ಬವನಂ) ಬಾದು ಬಸಿರ್ಗುತ್ತವುಳ್ಳವಂ (ಕರ್ಣಾಟ. ೯೪-೪೩೨). ಬಸುಗುತ್ತ : ಕೋಣನ ಹೇಱಿಂಗೆ ಕಣ್ಣು ಬಸುಗುತ್ತಬಡವಂತೆ ತಾವು ನಂಬರು ನಂಬುವ ವರ ನಂಬಲೀಯರು (ಬಸವ. ೩೩೩) ; ನಿನ್ನೆ ಕಮ್ಮಾರ ಚುಂದನ ಮನೆಯೊಳು ಸೂಕರವಧ್ಯವವನುಂಡ ಬಳಿಕ ಬಸುಗುತ್ತದಿಂದಣಿಯರುಂ ಬಳಲುತಿಹೆ. ಬಸಿರು ನೋನೋಯುತಿದೆ (ಕೃಷಣ. ೩೩-೬). [ಬಸಿಱ್ + ಕುತ್ತ]

ಬಸಿರ್ಪೂಸು (ಕ್ರಿ). ಮಗುವು ಗರ್ಭದಲ್ಲಿರುವಾಗಲೇ ಹೊಟ್ಟೆಯನ್ನು ಸವರುತ್ತ ಇಂತಹವರಿಗೇ ಮದುವೆ ಮಾಡಿಕೊಡುವುದಾಗಿ ಮಾತು ಕೊಡು : ಏನಂಗೋದ್ಧೂತ ಮಾತಾಪಿತೃಗಳೆ ನಿನಗೆನ್ನಂ ಬಸಿರ್ಪೂಸಿ ಪೆತ್ತರ್ (ಶಬರಶ. ೦೪-೩೯) ; ಆಕೆಯುಂ ನಿನಗೆ ಬಸಿರ್ಪೂಸಿ ಪೆತ್ತು ನಿನ್ನಂ ಕರ್ಣದೀಗಳ್ ನಿಮ್ಮಮ್ಮನ ಪಿರಿಯರುಱು ಸತ್ಯಭಾಮೆಯುಂಬಳಾಕೆಯ ಮಗಂ ಭಾನುಕುಮಾರಂಗೆ ಕುಡಲೆಂದು ಮಹಾವಿಭೂತಿಯಿಂದೊಯ್ದುಪ್ಪೊರ್ (ಹಂಕರ. ೯-೩ ಶ) ; ಒಪೋವನ್ನಂ ಕುರುನೃಪದೇವಿ ಬಸಿರ್ಪೂಸಿ ಪೆತ್ತೊಡಾ ಕಂಗೆನೆಯದ್ದಾಪೋಗ್ರದುರಿತಫಲದಿಂದಾ ವಿಭು ಗಂಟಾದೊಳಾಗೆ ಮಱುಗು ತ್ತಿರ್ದಂ (ಹಂಕರ. ೯-೯) ; ಎಡೆಯೊಳ್ ಕೂಡಿದ ನಣ್ಪೆ ಮಾಣ್ಪಮೆ ಬಸಿಱ್ಪೂಸಿರ್ದ ಕಾ[ಪಿಂದವಿಂ]ತ್ತೊಡೆ (ಹಂಕರ. ೦೪-೩).

[ಬಸಿಱ್ + ಪೂಸು$_1$]

ಬಸಿರ್ಪೆಂಡತಿ (ನಾ). ಗರ್ಭಿಣಿಯಾದ ಹೆಂಗಸು ; ಬಸಿರಿ : ಒರ್ವಳ್ ಪೊಸಪ್ರಾಯಕಿ ಬಸಿರ್ಪೆಂಡತಿ ಮೇಳಾಪ್ಪಾಮಿನಿಯಿಂಬೊಳ್ ಕರ್ದಿಂ ಗರ್ಭರುಳೊಳ್ ಕಟ್ಟಲೆಯೊಳ್ ನಿರ್ಗ್ರಂಥಮಪ್ಪ ರೂಪಂ ಕಂಡು ಬೆರ್ಚಿದೊಡಾಕೆಗೆ ಬಸಿಱ್ಬೀದತ್ತು (ಜಮ್ಮಾಪಾ. ೯೩-೬೦).

ಬಸಿರ್ಪೆಂಡಿರ್ (ಬಹುವ) : ಇದನಱಿದೊಂ . . . ಸಾಸಿರ್ವರ್ಬಸಿ ರ್ಪೆಣ್ಡಿರುಮ ಸಾಯಿರೆಕೆಱಿಯುವನಱಿದೊನ ಲೋಕಕ್ಕೆ ಸಲ್ಲು (ಶಾಸನ. IX-1, ೪೦-೦೪ ; 977). [ ಬಸಿಱ್ + ಪೆಂಡತಿ (< ಪೆಂಡಿತಿ) ]

ಬಸಿವನಿ (ನಾ). ಸೋರುವ ಹನಿ, – ತೊಟ್ಟು : ಬಟ್ಟ ಜಡೆಕೇಶದಿಂ ತೊಟ್ಟಿಡುವ ಬಸಿವನಿಯ ನಟ್ಟನೆ ಸ್ವಾತಿ ನೀಲ್ಗೇಘದಿಂ ಸುರಿವುತಿಹ ಬಟ್ಟವ ಆತ್ತಿಕಗಳ ಬಲ್ಪಿಂದುಗಳೆನಿಯನಲುಯೀವುತಿರಲ್ಪತರುತ್ತು (ಶಶಿಹೋ. ೦೩-೪೪). [ಬಸಿ$_1$ + ಪನ್ನಿ]

ಬಸಿವಾಯ್ (ನಾ). (ರಕ್ತ, ಜೊಲ್ಲು ಇತ್ಯಾದಿ) ದ್ರವ ಒಸರುತ್ತಿರುವ ಬಾಯಿ :. ಹಾಯಿದವು ನರಿ ಬಾಯಿಗಳು ಕಟವಾಯಲೆಳಲುವ ಕರುಳಿನಲಿ ಬಸಿವಾಯ ರಕುತದಲೋಡಿದವು ರಣಭೂತ ದೆಸೆದೆಸೆಗೆ (ಜಗನ್ನಾಥವಿ. ೦-೨೦). 'ಬಸಿವಾಯ' ಪರಾ. [ ಬಸಿ$_1$ + ಬಾಯ್ ]

ಬಸಿವಾಯ (ನಾ). ಯಾವಾಗಲೂ ಜೊಲ್ಲು ಸುರಿಯುತ್ತಿರುವ ಬಾಯುಳ್ಳವನು : ಬಸಿ[ಪಾಠಾಂ. ಸೆ]ವಾಯಂ ಕವಿ ವಾಗ್ಮಿ ದೀರ್ಘ ಮುಖಕಂಠಂ ಧಾರ್ಮಿಕಂ . . . ಧನುರ್ಗೇಹಜಂ (ಜಾತಕ. ೦೩-೯).

[ಬಸಿವಾಯ್ + – ಅ$_7$]

ಬಸಿಱ್, ಬಸಿರು, ಬಸಿಱು, ಬಸುರು, ಬಸುಱ್, ಬಸುಱು (ನಾ). ೧. ಹೊಟ್ಟೆ ; ಉದರ : ಜಠರ : "ಬಸಿಱುದರಂ ಜಠರಂ ಕುಕ್ಷಿ ಸಮಾಹ್ವಂ" (ಚಿತ್ರಕೋ. ೩೮-೩); ಈತಂಗೆ ನೀಂ ಬಸಿಱ್ ತೀವೆ ಬಡ್ಡಿಸದಿರ್ (ಕಜ್ಜಾಪಾ. ೩೬-೩); ಬಸಿಱ ತೆಳ್ಪದತ್ತ ಮೊಗಂ ಬೆಳ್ಪೇಱಿದುದೇ ಕುಚಚೂಚುಕಂ ಮಸುಳ್ದುವೇ (ಅಂಜ. ೬-೩೦); ದುಷ್ಟಬುದ್ಧಿ . . . ಕಟ್ಟೆನೆಂದು ದಾಯಂ ಬಸಿಱಂ ಪೊಯ್ದುಕೊಂಡು . . . ನುಡಿಯೆ (ಹಂಕರ. ೦೫೦-೩). ೨. ಭ್ರೂಣವನ್ನು ಒಳಗೊಳ್ಳುವ ಕೋಶ ; ಗರ್ಭ: ಖಳನಲ್ಲೀ ಮಸುಮತಿಯೊಳ್ಗಾಂಧಾರಿಯ ಬಸಿಱಂ ಮೇಣ್ಗಗುಟಿ ಪೋಗಿ ಪೊಕ್ಕಿರ್ದಪನೋ (ಗದಾಯು. ೬-೨೦): ಆ ತಮ್ಮನ ಕಂಡು ಮುಳಿದೆನಗೆ ಪಶುವಿನ ಬಸಿಱೊಳ್ ಬರ್ಪುದೆಂದು ಶಾಪಮನೀಯೆ (ಹಂಕರ. ೬೦-೦೪); ಬಸಿರ್ಗೊಳ್ಳು ಬಣ್ಣವೇಱುವ ದಿಸದಾಕ್ಷಣಿನಮೃತಮಾಟೆ ಪಂಪಿಡಿದಸೆದಳ್ (ಕಕಾ. ೯-೩). ೩. ಗರ್ಭವನ್ನು ಧರಿಸಿರುವ ಸ್ಥಿತಿ: ಗರ್ಭಿಣಿಯಾಗಿರುವಿಕೆ : ಪಾಯದಿರೊತ್ತಿ ಮೂಱುತಿಂಗಳ ಬಸಿಱೀಕೆ ಪಾಯ್ದೊಯಿನಗರ್ಪಣ ಮೋಡಿದುದಿಂದು ನೋಡ ಬಾಯಲಱದುದು ಪಾರದಿರ್ ಮೊಗಮನಿತ್ತು ನುತಂ ಬೆಱಾಗಾಗೆ ಕೂಡಿದರ್ (ಕಾವ್ಯಸಾ. ೯೪೯ ಶೃಂಗಾರ); ಇನಿತುಂ ಪೊಲ್ಪುಂ ಬಸಿಱೊಳಪ್ಪ ಬಯಕೆಗಳ್ಗಿವೆ ಕಾರಣಂಗಳೆನ್ನಿಸಲ್ಕಾ ಬಯಕೆಗಳಂ ಬಯಸುತಿರ್ದಳ್ (ಪುಷ್ಪಪು.೩-೯೪ ಶ). ೪. ಅಂತರ್ಯ ; ಅಂತರಂಗ ; ಒಳಗು: ಬಸಿಱೊಳ್ ಜಗತೀತ್ರಯಮುಮನೊಸೆದಿಟ್ಟೋರಂತೆ ಕಾದ ಪಂಪಿನ ನಿಮ್ಮಾ ಬಸಿಱಂ ಪೊಕ್ಕಿಮ್ಮಯ್ಯನಸುರಕುಳಾಂತಕ ಕಡಂಗಿ ಕಾವುದು ಪಿಂದೆ: (ಹಂಕರ. ೯-೦೩). ಬಸಿರು : ೨. ಕೊಲೆಗೀಡುಪಾಡದೇಕಾದ ಮಗ್ಗಳನ್ನು ಹೆರುವ ಬಸಿರು ದೇಡ (ಜಾನಪ. ೩೯). ೪. ನಿರಾಶೆಯು ಬಸಿರಿನಲ್ಲಿಯೇ ಆಶೆಯು ಬೀಜವಿದೆ – ಬಿತ್ತಿ ನೋಡು ! (ಕಬ್ಬೋ೧೦. ೪೨-೩); ಪಡುವಲ ಕಡಲಿನ ಮಿಂಚನು ಗುಡುಗನು ನುಂಗಿ ಬಸಿರಿನಲಿ, ಮುಡಿಗೆದರಿ ಮುಂಗಾರುಸುರಿಯು ರಕ್ತಸವಚ್ಛಗಳಿಕ್ಕುತ ಬಂದಳು ಬಲುಗದರಿ ! (ಕೃಶಾ. ೩೯-೦). ಬಸಿಱು : ೨. ದಾಕ್ಷಾಯಣ ತನ್ನ ಬಸಿಱೊಳ್ ಬರ್ಪ ಪರಮಂ ಬಯಸಿ ಮೇನೆ ತಪದೋಳಿರಲ್ (೧೦೪. ೦ ಆರಾಸಕ್ತ) ; ಬಸಿಱೊಳಗೆ ಶಿಶುವನು ಅದಾರು ಸಲಹಿದವರು (ಭುವನ. ೨-೯೭ ೩). ೪. ಸಿಸುವಾಗಿ ಪಾತಾಲದೆರೆಯೊಳೊಱಗಿ ತನ್ನ ಬಸಿಱೊಳೀರೇಳುರೋಕಗಳ ಪಸರವ ತೋಱಿ ಬಲ್ಲರ ಬಗೆಗೊಳಿಸುವ ಪೊಸಬಚ್ಚವಳಗೆಱಗುವೆನು (ಅಶ್ವ. ೦-೨೦). ೫. ವಂಶ; ಮನೆತನ : ಧರೆಯ ಕಾಡಿಯರ ಕುಲ ಶಿರೋಮಣಿಗಳೆನಿಪ ಗೌಡರ ಬಸಿಱೊಳೊಗೆ[ದ] ಸುಮುಹೂರ್ತದೊಳು (ಶಿವ್ಯಶಾ. ೦-೩೨). ಬಸುರು : ೨. ಬಸುರಿನಿಂ ಪಡೆಯಲಾರದ ವ್ಯಥೆಯೊಳಿಪ್ಪ ವಧುಗೆಸೆವ ಸುತನಂ ನಿಜಪದೋದೇದಿವಿಪಾವುತಂ (ಹುಜಾತ. ೬-೦ ಕೊಕಕ). ೩. ಬಸುರು ಬಂದಾಕ್ಷಣ ಹಸುರುಶಾಲೆ ಸಿಕ್ಕೀತೇ? (ಗಾದೆ). ೬. ಭ್ರೂಣ ; ಪಿಂಡ : "ಗರ್ಭ ೧, ಭ್ರೂಣ ೧ – ೨ ಗರ್ಭದ ಪೆಸರು, ಬಸುರು" (ಹಿತ್ಯಾಂಶಿ. ೦೩೯). 'ಬಸುರಿಳಿ' ಪರಾ. ಬಸುಱ್ : ೧. ಮನುಷ್ಯರ ಪಿಡಿದು ಪೀಡಿಸಿ ತಮ್ಮ ಬಸುರ್ಗೆ ಕಾಣದ ಕಾಡಾಡಿದ ಕೂಳಂಬಲಿಯನಾಯ್ದು ಕಱುಕುವ ಹೇಸಿದೈವಂಗಳ ಬೆ.ಡದೇಡಿ ನಿರರ್ಥ ಕಿಡಬೇಡ (ಬಸವ. ೩೫೩). ೨. ಪುಟ್ಟಿದ ತಾಣಕ್ಕಾಱುವಂ ಪುಟ್ಟಿಸಲೊಡರಿಸುವ ಕಿಚ್ಚು ತೇಟಟ್ ಕ್ರಿಮಿ ಕುತ್ತಂ ಪುಟ್ಟುವವೊಲ್ ದುಷ್ಕೃತದಿಂ ಪುಟ್ಟಿದಳೀ ಪಾಪಕರ್ಮನೆನ್ನಯ ಬಸುಱಿಂ (ಕಾದಂಬ. ೪೯೨).ಬಸುಱು :

೧. ಬಸುಱ ಬಗಿ ಕರುಳನುಗಿ . . . ಮೂಳೆಯಂ ಮುಱಿಯೆನುತ್ತ ಹಗ್ಗನ್ನಿಗಳ ತಲೆದಡಿವಿ ಹಾಸವುಂ ತಿವಿದು ಕವಿದರು ಬೇಡರಣ್ಣೆಸೆಯೊಳು (ಜಕಕಾ. ೬-೨೫); ಉಗುಳುಗುಳು ದುಶ್ಶಾಸನನ ನೀನುಗುಳು ವುಗುಳಿನ್ನಾರ ಬಸುಱನು ಹೊಗುವೆ (ಕುಮ್ಮಾ. ೨೦-೨೩); ಅಸುರರುರು ಬಲ್ಲಿಹದ ಶಿವಿಗುಳ ಬಸುಱ ಬಾದಣದುರ್ಚುಗಗಳಿನ . . . ಕೋಡಗವ ಸರಗಳ ಸಂದಣಿಯ ಸಂಭ್ರಮವೆಸೆದುದ್ದೈ (ಕೊಕಕಾ. ೬-೪೦-೦೩). ೪. ಬಸು [ಜಾಜಾ. ಸಿ]ಱೊಳಗೆ ಬ್ರಹ್ಮಾಂಡಕೋಟಿಯು ಪಸರಿಸಿದ ಪರಮಾತ್ಮ ನೀನೆಂದುಸುರುತಿವೆ ವೇದಗಳು (ಹಂಪಾ. ೨೩).

ಬಸಿರಿರು = ಗರ್ಭವನ್ನು ತಾಳು: ವಿದ್ಯಾನಂದನನ್ನು ಆಗ ಬಸಿರಿದ್ದೆ. ಆಗ ನನಗೆ ಏಳನೆಯ ತಿಂಗಳು (ಕೃ.ಕಿ. ೬೯). ಬಸಿಱು ಪೊಸೆ, ಬಸುಱು ಹೊಸೆ = (ಹೊಟ್ಟೆಕಿಚ್ಚು, ಸಂಕಟ, ತಿರಸ್ಕಾರ ಮೊದಲಾದ ಭಾವಗಳಿಂದ) ಹೊಟ್ಟೆಯನ್ನು ಕಿವಿಚಿಕೊಳ್ಳು: ಸಂತತಿಗೆ ಪಿರಿಯ ಮಕ್ಕಳ ನಾಂ ತಳೆಯದೆ ಪಡೆವನೆಂದೊಡನ್ನಿಂ ಮುನ್ನಂ ಕುಂತಿಯ ಪಡೆದಳ್ ಗರ್ಭದ ಚಿಂತೆಯುದಿನ್ನೇವುದೆಂದು ಬಸಿಱಂ ಪೊಸೆದಳ್ (ಪಂಪಭಾ. ೦-೦೨೯); ಅಜ್ಞಾನಿಗಳಪ್ಪರ ತಪದೊಳ್ ಫಲವಿಲ್ಲೆಂದು ಬಸಿಱಂ ಪೊಸೆದು ನಕ್ಕು (ರಢಶ್ರೀಮ. ೨-೨೨೯); ಧಗಿಲು ಭುಗಿಲೆನುತ ಮಾಮುಸಳದಿಂ ಮಸಗಿ ತ್ರಿಣೆಯು ಬಸುಱಂ ಹೊಸೆದು ಹೊಯ್ದು ನೆಲಸಂ ತಿರುಗಿ (ಶಿರುರ. ದೀ. ೦೯-೪). ಬಸಿಱ ಕುತ್ತ = ಅತಿಯಾಗಿ ಭೇದಿಯಾಗುವ ಒಂದು ಬಗೆಯ ರೋಗ; ಅತಿಸಾರ: ಗ್ರಹದಂತೆ ಪೀಡೆಯಂ ಮಾಳ್ಪುದು ಬಸಿಱ ಕುತ್ತದಂತೆ ಸವೆಯಿಸುವುದು (ರಢಶ್ರೀಮ. ೪-೦೭೩). ಬಸಿಱಾರೆ = ಹೊಟ್ಟೆ ತುಂಬುವಂತೆ: ಪಾಪ್ಯಾರಾತಿಯ ಮೆಯ್ಯ ನೇತ್ರರಂ ಕಂಡು ಸೂಱೆಯೆನೊಳವನ ನೇತ್ರರೊಕ್ಕೊಡಂ ತನಗೆ ಬಸಿಱಾರೆ ಕುಡಿಯಲುಂ ದ್ರೌಪದಿಯ ಕೇಶಪಾಶಮಂ ತೂಯ್ದು ಮುಡಿಯಲುಂ ನೆಱೆಯದು (ಕುಶಕಾ. ೦೨-೦೯೯ ಕ). ಬಸಿಱೊಡೆ, ಬಸುಱೊಡೆ = ೧. ಮೈಯಿಳಿ; ಗರ್ಭಪಾತವಾಗು: [ಎಲೆಯಡಿಕೆ ಸುಣ್ಣದಿಂ ಪಲ್ ಕಱೆಯುವುದು] ಆಗಲೆ ತಿಗಡೆಯಿಂ ಬಸಿಱೊಡೆವುದು (ರಢಶ್ರೀಮ. ೬-೦೦೮). ೨. ಹೊಟ್ಟೆಯನ್ನು ಸೀಳು,—ಭೇದಿಸು: ವಿಷ್ಣುವ ಅಕ್ಷಿಯಲ್ಲಿ ಧರಿಸಿದ ಬ್ರಹ್ಮನ ಬಾಯಲ್ಲಿ ಧರಿಸಿದ . . . ಬಾಯಲ್ಲಿದ್ದವನ ಬಸುಱೊಡೆಯ ಹೊಯ್ದು (ಸೋಲೀಶಶಾ. ೦೯೬-೬೨೯). ಬಸುರು ನಿಲ್ಲು = ಗರ್ಭವು ಉಳಿ; ಮೈಯಿಳಿಯದಿರು: ಮದುವೆಯಾಗಿ ಹತ್ತಾರು ವರ್ಷಗಳ ನಂತರ ಅವಳಿಗೆ ಮೊದಲ ಸಲ ಬಸುರು ನಿಂತಿತು (ಲೂಕ). ಬಸುಱ ಕಿಚ್ಚು = ಹೊಟ್ಟೆಕಿಚ್ಚು; ಅಸೂಯೆ: ಬಸುಱ ಕಿಚ್ಚ [ಜಾಜಾ. ಬಸುಱ]ಕಿಚ್ಚನು ಬೆಳೆಯಿಸುವ ನುಡಿಯುಸುರಲೇಕವರು (ಜಕ್ಕಜಾ. ೨೦-೦೩). ಬಸುಱ ಹೊಯ್ಯು = ಹೊಟ್ಟೆಯನ್ನು ಬಡಿದುಕೊಳ್ಳು ಏಕೆ: ಕಂಡ ರಢಯಿಲಿ ಪಿರನ ನಗರದ ಹೆಂಡಿರುಗಳಕ್ಕಗಳ ತಳಿಕಿನ ಮಂಡೆಗಳ ತೋಳುಗಳ ಬಾಪ್ಪುಗಳ ಬಸುಱ ಹೊಯ್ಲುಗಳ (ಕೊಕಿರಾ. ೬-೮-೨). ಬಸುಱಾಗು, ಬಸುರಾಗು = ಗರ್ಭ ನಿಲ್ಲು; ಗರ್ಭವನ್ನು ಧರಿಸು: ಚೇಳಿಂಗೆ ಬಸುಱಾಯಿತ್ತು ಕಡೆ ಬಾಳೆಗೆ ಫಲವಾಯಿತ್ತು ಕಡೆ (ಬಸವ. ೬೬೯); ಆ ಕಾಂತೆಗೆ ಬಸುಱಾಗಿ ಶೀವಿ ನವಮಾಸಂ ನಿಶ್ಚಿಂತಂ ಬೆಸಲಾಗಲ್ ಪ್ರೀತಿಯಿಂತಂ ತನ್ನಾಲಯಕ್ಕೆ ಕರಸಿದನಾಗಳ್ (ರಢಶ್ರೀಚ. ೬-೦೩): ಬಸುಱಾಗ ವವಳ ಬಾಳುವೆಯು ಬೇಸಗೆಯ ಬಿಸಿಲು ಕಾವಂತೆ (ಸರ್ವಜ್ಞ. ೧೬೯೯); ದಾಕ್ಷಿಣ್ಯಕ್ಕೆ ಬಸುರಾಗಿ ಹೆರುವುದಕ್ಕೆ ಠಾವಿಲ್ಲ (ಗಾದೆ). ಬಸುಱು ಉರಿ = ಹೊಟ್ಟೆ ಉರಿ: ಪಿಸುಣತ್ವದಲಿ ನಿಂದ್ಯೆಗೈದ ಪಾತಕದಿಂದ ಬಸುಱು ಉರಿಯುತ್ತೊ ಶಿವನೆ (ಅಧ್ಯಾತ್ಮ. ೨-೦೪). ಬಸುಱು ಮಾಡು = ಗರ್ಭ ಧರಿಸುವಂತೆ ಮಾಡು: ಹಸನಾದ ಹಣ್ಣ ಮೇಲೆ ಕುಸುಮುವ ತಂದಿಕ್ಕಿ ಶಶಿವದನೆಯರಿಗೆಲ್ಲ ಬಸು[ಜಾಜಾ. ಸಿ]ಱು ಮಾಡಿದನೀತ (ಪ್ರಕೊರ. ೦-೯೦-೨).

[ದೇ. ॥ ತಮಿ. ವಾಲ. ವಯಿಱು; ತುಳು. ಬಸುರಿ, ಬಸುರು]

ಬಸಿಱಾನ್, ಬಸಿರಾನು (ಕ್ರಿ). ಗರ್ಭವನ್ನು ಧರಿಸು; ಬಸುರಾಗು; ಗರ್ಭಧಾರಣೆ ಮಾಡು: ರತಿದೇವಿ ಬಸಿಱಾಂತು ಪಡೆದ ದುಃಖವ ಸುತವತಿಯಾಗಿ ನೋಳ್ಪ ಸಂತಸವ ವಿಂತಿಗೆಯ್ದುವೆನು (ಸೋಣತಕ. ೦೭-೫೯). ಬಸಿರಾನು: ಅದುವು ಬಸಿರಾಂತ ಮತ್ಕುಲಸವೃದ್ಧಿಕಾರಣೆಯು ಧರ್ಮಪತ್ನಿಯನಾಳಿದೆಂ (ಜಾಳಂಣ. ೯೯-೦೫೫). [ಬಸಿಱು (<ಬಸಿಱ್) + ಆನ್₁]

ಬಸಿಱ್, ಬಸಿರಿ₁, ಬಸರಿ₁, ಬಸುಱ್ (ನಾ). ಗರ್ಭಿಣಿ; ಗರ್ಭವತಿ: ಬಸಿಱ್ ಹೆಂಡತಿ ಮಗನ ಮದುವೆ ನಾಳೆ . . . ಸಾಯಲಾಱೆನು (ಪ್ರಕೊದ. ೨-೬೦-೩); ಈ ಬಸಿಱೆಯರೊಳ್ವನಿಂ ಬಯಸುವರ್ ಬಸಿಱೊಳ್ ನೆಲೆಗೊಂಡ ಬಾಲನೊಂದಸಳದ ಪಾಂಗಿನಿಂದಿಳೆಯೊಳೆಂಬರ ನಾಟ್ಕುಡಿಯಕ್ಕೆ ನಿಕ್ಕುವಂ (ಜಕಶ. ೯-೯). ಬಸಿರಿ₁: ಸರೋಜ ಮನಗೆ ಬಂದು ಎರಡು ವರ್ಷವಾದ ಮೇಲೆ ಬಸಿರಿಯಾದಳು (ಜುಜಾಗ. ೪); ಬಸಿರೀ ಆಗದಿದ್ದರೆ ಹೆಣ್ಣಗೆ ಉಪ್ಪುತ್ತಿಕಾಯಿಸ ರಸವನ್ನು ಕುಡಿಸುತ್ತಿದ್ದರು (ಜುಶ್ಯಕ. ೦೩). ಬಸುರಿ₁: ಕಾಯ್ದಾ ಬಸುರಿ ರೋಷದುಃಖದ್ವಂದ್ವದಲಿ ಬೆಂದು ಮಣೆಪುರಕೆ ಪ್ರೀತಿರಾಗಿ ಬಂದಳತಿಭೀಷಣಮನಃಸ್ಥಿತಿಯಲಿ! (ಜಕ್ಕಾಂಗ. ೬೪-೦೬೫೫); ಗೌರಿಯು . . . ಈಗ ಐದನೆಯ ಬಾರಿ ಬಸುರಿಯಾಗಿದ್ದಳು (ಕುಂಗಾಳು. ೨೫). ಬಸುಱ್: ಹಸುಗೂಸು ಬಸುಱ್ ಬಾಣತಿ ಕುಮಾರಿ ಕೊಡಗೂಸೆಂಬವರ ಹಿಡಿದು ತಿಂಬ ತಿರಿದುಂಬ ಮಾರಯ್ಯ . . . ಕೇತಯ್ಯಗಳೆಂಬ ನೂಱುಮಡಕೆಗೆ ನಮ್ಮ ಕೂಡಲಸಂಗಮದೇವ ಶರಣೆಂಬುದೊಂದು ದಡಿ ಸಾಲದೆ (ಬಸವ. ೫೩೬); ಎಲ್ಲಿಯುಂ ಕೇಳ್ದಱಿಯೆವಿಂತಹ ದುರ್ಲಭದ ಬಸುಱಿಯರನು (ಬಸವ. ೫-೦೬).

[ ಬಸಿಱ್ + — ಇ₂ / ವಾಲ. ವಯಱಿ; ತುಳು. ಬಸುರಿ ]

ಬಸಿಱಿಳಿ 'ಬಸಿಱಿೞಿ' ನೋ.

ಬಸಿಱಿೞಿ, ಬಸಿಱಿಳಿ, ಬಸುಱಿಳಿ (ಕ್ರಿ). ಮೈಯಿಳಿ; ಗರ್ಭಪಾತವಾಗು: ಒರ್ವಳ್ ಪೊಸಶ್ರಾವಕಿ ಬಸಿರ್ವೆಂಣತಿ ವೇಳಾಪ್ಪಾಮಿನಿಯೆಂಬೊಳ್ ಕರ್ದಿಂಗಳಿರುಳೊಳ್ ಕಟ್ಟಿರೆಯೊಳ್ ನಿರ್ಗ್ರಂಥಮಪ್ಪ ರೂಪು ಕಂಡು ಬೆರ್ಚಿದೊಡಾಕೆಗೆ ಬಸಿಱಿೞಿದತ್ತು (ಜಕ್ಕ.ರಾ. ೯೨-೦೩); ಮತ್ತೊಂದು ಶಿಶುವೆಂಬುದು ಬಸಿಱಿೞಿದುದೆಂಬಂತೆ ಗರ್ಭದಿಂ ತೆಗೆದುಯ್ದು ರೋಹಿಣಿಯ ಗರ್ಭದೊಳ್ ನಿಲಿಸಿದೆಂ (ಜಗಶ. ೩-೮ ಕ). ಬಸಿಱಿೞಿ: ಬಸಿಱಿೞಿವ ಸಂಕಟದ ಬಲುಬೇನೆಯ ಭ್ರಾಂತಿನಿಂ ಮೈಮಱೆದು ಕಂಡ ಕನಸ್ಸಿನ (ಸಿಕೃಶಾ. ೨-೬); ಬಸಿಱಿೞಿದು ತದ್ದುಃಖಮಂ ನೀಗಿ ಜೀವಿಸಿದರು ರಾಂದುಯುಸುರರದಱೆನಜರಾಮರರೆನಿಸಿದರ್ (ಜಕ್ಕ.ರಾ. ೦೦-೨೨೬). ಬಸುರಿಳಿ: ನಾಲ್ಕು ದಿನಗಳ ಹಿಂದೆ ಬಸುರಿಳಿದು ಹೋದದ್ದರಿಂದ ಅವಳಿಗೆ ವಿಶ್ರಾಂತಿ ಬೇಕಾಗಿದೆ (ಲೂಕ). [ಬಸಿಱ್ + ಇೞ್]

ಬಸಿಱು 'ಬಸಿಱ್' ನೋ.

ಬಸಿಱುಬೇನೆ (ನಾ). ಹೊಟ್ಟೆಯ ನೋವು; ಉದರಶೂಲೆ: ಸುಗಂಧಿಯ ಬೇರು, ಗುರುಗುಂಜಿಯ ಬೇರು, ಅಳಲೇಕಾಯಿ ಚೂರ್ಣ ಇವು ಎಲ್ಲ ವಸ್ತುಸಮಾನಂಗೊಂಡು ಬೆಲ್ಲದಲ್ಲಿ ಇಕ್ಕಿ ಮೆಲ್ಲಲು ಗರ್ಭಿಣಿಯ ಬಸಿಱುಬೇನೆ ಮಾಣ್ಗುಂ (ಶಿಕ್ಕಶಿ. ೦೦೬).

[ಬಸಿಱು (<ಬಸಿಱ್) + ಬೇನೆ₁]

ಬಸು (ನಾ). ಆಪ, ಧ್ರುವ, ಸೋಮ, ಧರ್ಮ, ಅನಿಲ, ಅನಲ, ಪ್ರತ್ಯೂಷ ಮತ್ತು ಪ್ರಭಾಸ ಎಂಬ ಎಂಟು ಮಂದಿ ವಸುಗಳಲ್ಲಿ ಒಬ್ಬ ವಸು; P ಈ ಹೆಸರುಗಳು ಕಲ್ಪಭೇದದಿಂದ ವ್ಯತ್ಯಾಸ ಹೊಂದಂತ್ತುವೆ: "ಬಸುಗಳ್ದೇವರೊಳ್" (ಕಜಾರಃ. ೯೧).

[<ಸಂ. ವಸು]

ಬಸುಗುತ್ತ 'ಬಸಿಱ್‌ಕುತ್ತ' ನೋ.

**ಬಸುದೇವ** (ನಾ). ಒಬ್ಬಾತನ ಹೆಸರು : ಶ್ರೀ ಚಿಕುರಾಪರವಿಯ ಗುರುವರ ಸಿಷ್ಯರ್ ಸರ್ಬಣನ್ದಿ ಅವನ್ ಶ್ರೀಬಸುದೇವನ್ (ಎಕ. II,೩೬: ಸು. 760). [ಬಸು + ದೇವ]

**ಬಸುಮ** (ನಾ). ಬೂದಿ ; ಭಸ್ಮ: "ಬಸುಮ — ಭಸ್ಮ(ನ್)" (ಶಬ್ದಮಣಿ. ೨೯) ; ಬಸುವುದ ಸಿರಿಯೊಡಲ ಪೆರೆಯುಗಿದ ಪಾವಿನ ತೊಡರ ಸಿಂಗರದ . . . ಪರಮಶಿವನಿರುತಿರ್ದನನುಪಮರತ್ನಪೀಠದಲಿ (ಅಪರಾ. ೦-೨-೦೩) ; ಗಳರವದ ಮಂತ್ರಗಳ ಬಗೆಬಗೆಯೊಳುಚ್ಚರಿಸು ತಡಿಗಡಿಗೆ ನಸುನಗೆಯ ಬಸುಮವಮಂ ತೂಪಿರುವುತ ಮಿಗೆ ಹಸ್ತತಾಡನಗಳತ್ಮು ಸ್ಫುರಭೂತಮಮಂ ನಗಿಸಿ ನುಡಿಸುತ (ಶಂಕರಾ. ೩-೬-೩೩). [<ಸಂ. ಭಸ್ಮನ್]

**ಬಸುರಿ₁** 'ಬಸಿಱ' ನೋ.

**ಬಸುರಿ₂** 'ಬಸರಿ' ನೋ.

**ಬಸುರಿಕೋಡು** (ನಾ). ಒಂದು ಊರಿನ ಹೆಸರು : ದಕ್ಷಿಣತಃ ಬಸುರಿಕೋಡುನಾಮಗ್ರಾಮಃ (ತ್ರಿ.ಅ. ೦೯೩, ೯೦-೬೯; 951). [ಬಸುರ್₂ (<ಬಸರಿ) + ಕೋಡು₁]

**ಬಸುರಿಳಿ** 'ಬಸಿಱಿಳಿ' ನೋ.

**ಬಸುರು** 'ಬಸಿಱು' ನೋ.

**ಬಸುಱ್** 'ಬಸಿಱು' ನೋ.

**ಬಸುಱು** 'ಬಸಿಱು' ನೋ.

**ಬಸುಱಿಳಿಸು** (ಕ್ರಿ). ಮೈಯಿಳಿಸು; ಗರ್ಭಪಾತವಾಗುವಂತೆ ಮಾಡು : ಬಸುಱಿಳಿಪ ಪುತ್ರವಧೆಗೆಯ್ದು ಸತಿಗೆ ದುರ್ಗತಿಗೆ ಕರ್ಮಚಾಂಡಾಳಿಗೆ ರಕ್ಕಸಿಗೆ ನೆಲೆಯಕ್ಕುಮುಚ್ಚಿಸುವಸಿಪತ್ರವನಪ್ರವೇಶದುರ್ಗತಿದುಃಖ (ಜಗನ್ನಾ. ೩೦೦). [ಬಸುಱ್ (<ಬಸಿಱ್) + ಇಳಿಸು]

**ಬಸುಱು** 'ಬಸಿಱ್' ನೋ.

**ಬಸುಱುಚ್ಚು** (ನಾ). ಹೊಟ್ಟೆಯಿಂದ ಜಾರಿ ಬಿದ್ದ ಮಾಂಸಖಂಡ ಮಂಂತಾದುವು : ಇಕ್ಕಡಿಯ ಬಸುಱುಚ್ಚುಗಳ ನರಸೊಕ್ಕು ಡೊಳ್ಳಾಸದ ಮಹಾಭಯವಕ್ಕಸರದಲಿ ಕಾಣಲಾದುದು ವೈರಿಬಲದೊಳಗೆ (ಕುವ್ಯಾದ್ರೋ. ೦೬-೨೬) ; ಇಕ್ಕಡಿಯ ಬಸುಱುಚ್ಚುಗಳ ನರಸುಕ್ಕುಗಳ ನಾಟಕದವೊಲು ಕೈಯಿಕ್ಕಿದಾನೆಯ ಹಿಂಡು ಮುಱಿದುದು ನಿಮಿಷಮಾತ್ರದಲಿ (ಕುವ್ಯಾಗ. ೨-೨೯). P 'ಉಚ್ಚು' ಎಂಬುದಕ್ಕೆ ನಾಮಾರ್ಥದಲ್ಲಿ ಪ್ರಯೋಗ ಗಳು ದೊರೆತಿಲ್ಲ. [ಬಸುಱು (< ಬಸಿಱ್) + ಉಚ್ಚು₁ (< ಉರ್ಚು)]

**ಬಸುಱುದುಂಬು** (ಕ್ರಿ). ಹೊಟ್ಟೆ ತುಂಬು ; ತೃಪ್ತಿಗೊಳ್ಳು ; ತಣಿ : ಬಸುಱುದುಂ[ಪಾಠಾಂ. ತುಂ]ಬದಿರಲ್ಕೆ ನಂಬಿಯ ಬೆಸನದಿಂದೆಡೆಯಾಡಿ ಯಾತನ ದೆಸೆಯೊಳುಣಲಿಲ್ಲದೆ . . . ಹಸಿದು ಬಂದಾ ಚೀರವಂ (ಶಿತ. ೦೩-೨೩). [ಬಸುಱು (< ಬಸಿಱ್) + ತುಂಬು₁]

**ಬಸುಱುಶೂಲೆ** (ನಾ). = ಬಸಿಱುಬೇನೆ : ಯಷ್ಟಿಮಧುಕ, ದ್ರಾಕ್ಷಿ ಹಣ್ಣು, ಇವಂ ಹಸುವಿನ ಹಾಲು ಬಿಟ್ಟು ಅರೆದು ಹಾಲಲ್ಲಿ ಕಾಸಿ ಹಸುವಿನ ತುಪ್ಪದಲ್ಲಿ ಕುಡಿಯೆ ಹೃದಯಶೂಲೆ, ಯೋನಿಶೂಲೆ, ಬಸುಱುಶೂಲೆ, ಜ್ವರ, ವಾತಗುಲ್ಮ, ಬಾಣಂತಿಯರ ಎಲ್ಲಾ ರೋಗಗಳೂ ಮಾಣುವುವು (ವೈದ್ಯಾ. ೦೦೬). [ಬಸುಱು (< ಬಸಿಱ್) + ಶೂಲೆ₁]

**ಬಸೆ**, ವಶಿ (ನಾ). ೧. ಹೆಣ್ಣಾನೆ; ಪಿಡಿ: "ಬಸೆ ಪೆಣ್ಣಾನೆಯು" (ಕರ್ಣಾಟ. ೨); ಕಾಲೊಳ್ ತೊಡರ್ದುತ್ಪಲದಳವಾಲಗಳುಲಿ ಗೆಜ್ಜೆಯೆನಿಸೆ ಮಾಂಗಾಯೆನೆ ಕರ್ಣಾಲಂಬಿ ಕಮಳಮುಕುಳಂ ಬಾಲೇಭಂ ಬಸೆ[ಪಾಠಾಂ. ಸೆಳೆ]ಯ ವೆಱಗೆ ಬಂದುದು ಕೊಳದಿಂ (ಆದಿಪು. ೬-೦೮) ; ಓವನ ಪಡಿಮೊಗ ದೊಳ್ ತುಂತುಱಿಂ ತೂಱಿ . . . ಬಾಷ್ಪಪೂರ್ಣತಾಲೋಕ ಶೋಕಾತುರ ದುಃಖೋದ್ರೇಕದಿಂದಂ ಬಸೆ ಪರವಸೆ ಬೀಸಿತ್ತು ಕರ್ಣಾಗ್ರದಿಂದಂ (ಆದಿಪು. ೬-೨೦ ; ಹೊಸ್ತಕು. ೩-೩೬ ನೋ). ೨. ಗೊಡ್ಡಾಕಳು ; ಬರಡುದನ : ಬಸೆ = ನೆಣ, ಹೆಣ್ಣಾನೆ, ಗೊಡ್ಡಾಕಳು (ಕಮರ. ೨೩೬ ೬೩೬). ವಶಿ : ೧. ಕಾಡಿನ ಕರಿಯು ವಶಿಗಳ ಕೂಡ ನೀರೊಳು ವಿಹಾರಿಸುವಂದದಲಿ (ರಘುವಂ. ೦೬-೬೮). [< ಸಂ. ವಶಾ]

**ಬಸೆ₂** (ನಾ). ಕೊಬ್ಬು ; ನೆಣ : "ಬಸೆ — ವಸಾ = ಕೊಬ್ಬು" (ಶಬ್ದಮಣಿ. ೨೯) ; ಅಲ್ಲಿ . . . ಬಸೆಯೆ ತುಪ್ಪಂ ನಾಯ್ಗಳೆ ಪರಿವಾರಂ ಮದ್ಯಮೆ ಪುರುಷಾರ್ಥಂ (ಕಾದಂಬ. ೬೧೩); ನೆಣನ ಬಸೆಸಹಿತಡಗು ಸುರಿದವು ಕದಡಿ ಹರಿದುದು ರಕುತದರೆವೊನಲು (ಕುವ್ಯಾಗ. ೯-೩); ಬೇಡರ್ ಸವಿಯಡಗಂ ಬಸೆಯಂ ನೆತ್ತರಂ . . . ಮತ್ತಂ ಚವುರಿಯಂ ಪೊತ್ತು ನಗರಿಗೆ ಮರಲ್ದುವರ್ ನಡುವಟ್ಟೆಯೊಳ್ (ರಾಮಾಶ್ವ. ೬೯-೨೦). [< ಸಂ. ವಸಾ]

**ಬಸೆಗ** (ನಾ). ಒಂದು ಬಗೆಯ ವಿಮಾನ : ಹಣ್ಣಲಂ ಬಸೆ [ಪಾಠಾಂ. ಸಿ]ಗ ಗಿಜಿಲಿ ಬಂಗಡೆ . . . ಅನೆಮೊಗನಂಬ ಪರಿಪರಿಯ ಮಿಾನ್ಗಳಂ ಗುದಿ ಗೆಯ್ದರು (ಹಕರಾ. ೩-೪೩). [?. / ಹಿಂ. ಬಸಾ]

**ಬಸೆನಡೆ** (ನಾ). ಹೆಣ್ಣಾನೆಯ ನಡಗೆ : ಬಲಮುರಿಸಂಕುಗೊರಲ ಬಸೆ ನಡೆಯ ಬೆಳ್ದಿಂಗಳ್ಗಣ್ಣಿಯ . . . ಬಾಲೆಯೊರ್ವಳ್ . . . ಪೊಂಬಟ್ಟಲನತ್ತಿ ಬರುತುಮಿರ್ದಳ್ (ರಾಮಾಶ್ವ. ೬೬-೨೯). [ಬಸೆ₁ + ನಡೆ₂]

**ಬಸ್ಕಿ** 'ಬೈಸಿಕೆ' ನೋ.

**ಬಸ್ಕಿಹೊಡೆ** 'ಬೈಸ್ಕಿಹೊಡೆ' ನೋ.

**ಬಸ್ತ** (ನಾ). ಗಂಡಾಡು; ಹೋತ: "ಅಜಃ, ಸ್ತುಭಃ, ಬಸ್ತಃ, ಛಾಗಃ, ಛಗಳಕಃ, ಛಗಃ — ಈ ೬ ಹೋತು" (ಹಲಾಯು. ೯೬-೦೨೨) ; ದುಸ್ತರ ಮೆಂದೇವೈಸದೆ ಹಸ್ತಗತಂ ಮಾಡಿ ಮೌಲ್ಯಮಂ ಕೊಂಡರವರ್ ವಿಸ್ತರ ಕಾಯದವೇಟುಂ ಬಸ್ತಂಗಳನಲ್ಲಿ ಬಸ್ತಪಾಲನ ಕೆಯ್ಯೊಳ್ (ಮಹಾಪೇ. ೯-೦೨೮); ದಕ್ಷನ ಬಿಂದ ಮುಖ ಬಸ್ತಾಸ್ಯವಾಗಲಿ (ಶಿವಾಗ. ೯-೩-೩೩). [ಸಂ.]

**ಬಸ್ತಕ** (ನಾ). ೧.= ಬಸ್ತ : ಬೆದೆಯಾದ ತಾಯನೇಱುದುದು ಸೊರ್ಕಿದ ಗೂಳಿ ತಾಯನೇಱುತ್ತಂಬಂದವೆ ಮತ್ತಮೊಂದು ಬಸ್ತಕಮುದನಿಱಿಯಲ್ ಸತ್ತು ಪೊಕ್ಕುದಜೆಯೊಳ್ಗೀವಂ (ಧರ್ಮಾಮೃ. ೩-೩೯). ೨. ಒಂದು ಬಗೆಯ ಉಪ್ಪು : "ರೌಮಕ, ಬಸ್ತಕಂ — ೨ ಸೌಭರಿ ದೇಶದಲ್ಲಿ (ರುಮ)ಎಂಬ ಗಣಿಯೊಳಗೆ ಹುಟ್ಟುವ ಉಪ್ಪು, ಚೌಳುಪ್ಪಿಗೆ ಹೆಸರುಗಳೆಂದು ಕೆಲವರನ್ನುವರು" (ನಿಘಂಟು. ೨೩೩). [ಸಂ.]

**ಬಸ್ತಪಾಲ** (ನಾ). ಆಡುಗಳನ್ನು ಕಾಯುವವನು, — ಮೇಯಿಸು ವವನು : ದುಸ್ತರಮೆಂದೇವೈಸದೆ ಹಸ್ತಗತಂ ಮಾಡಿ ಮೌಲ್ಯಮಂ ಕೊಂಡರವರ್ ವಿಸ್ತರಕಾಯದವೇಟುಂ ಬಸ್ತಂಗಳನಲ್ಲಿ ಬಸ್ತಪಾಲನ ಕೆಯ್ಯೊಳ್ (ಮಹಾಪೇ. ೯-೦೨೮). [ಸಂ.]

**ಬಸ್ತಾನ** (ನಾ). ಠಿಕಾಣಿ ಹೂಡುವುದು ; ಜೀವನವ್ಯವಸ್ಥೆಯನ್ನು ಮಾಡುವುದು : ಮುಂದೆ ಎಳೆಂಟು ವರ್ಷಗಳಲ್ಲಿ ನಮ್ಮ ಬಸ್ತಾನ ಸರಿ ಯಾಗಿ ಕುಳಿತು ಅಪ್ಪನ ಕಣ್ಣ ಮುಂದೆಯೆ ನಮ್ಮ ಸ್ವಂತದ ಮನೆ ಯಾಯಿತು (ಸ್ಮೃತಿ. ೯೯೯); ಅಂತೂ ನಮ್ಮ ಬಸ್ತಾನ ಕೂತಂ ಗ್ಯಾಯಿತು (ಶತಶೋ. ೦೩). [← ಪಾರ. ಬಸ್ತನ್ = ಕಟ್ಟು ; ಮರಾ. ಬಸ್ತಾನ್, ಬಸ್ತನ್]

**ಬಸ್ತಿ₁** 'ಬಸದಿ' ನೋ.

**ಬಸ್ತಿ₂** (ನಾ). ೧. ಪಿಚಕಾರಿ. ೨. ಪಿಚಕಾರಿಯ ಸಹಾಯದಿಂದ ದ್ರವ ಅಥವಾ ಅನಿಲವನ್ನು ಮಲನಾಳದ ಒಳಹೊಗಿಸಿ ಮಲ ವಿಸರ್ಜನೆ ಮಾಡಿಸುವುದು ; ಎನೀಮಾ ಕೊಡುವುದು : ಕೋಷ್ಠ ಶುದ್ಧಿಯ ಸಲುವಾಗಿ ಬಸ್ತಿಯನ್ನು ಕೊಡಬೇಕೆಂದು ಮಾಡಿದರು . . . ಅರ್ಥಾತ್ ಈ ಪ್ರಯೋಗವು ನೀರಿನಲ್ಲಿ ಸಬಕಾರ ಮತ್ತು ಉಪ್ಪು ಹಾಕಿ ಕೊಡುವದರಲ್ಲಿ ಬಂದಿತು (ಪ್ರಕೃತಿ. ೦೯೩). ೩. ಹೊಕ್ಕುಳಿನ ಕೆಳಭಾಗ. [ಸಂ. / ಹಿಂ. ವಸ್ತಿ ; ಮರಾ. ಬಸ್ತಿ, ಬಸ್ತೀ]

**ಬಸ್ತಿಕ** (ನಾ). [ಯೋಗ]ಹಠಯೋಗದ ಆರು ಬಗೆಯ ಅಂಗಗಳಲ್ಲಿ ಒಂದು : ಆಧಾರಕುಂಚನದಿಂದಾದಂ ಪೊಡವೊಕ್ಕ ನೀರನೆ ಕುಲಕಿಯನುವಿಂ ಶ್ರೀದಂ ನಾಳಿಕದಿಂದಂ ಬಾಧವಡೆಯದಂತೊಡರಿಪನಾ ಬಸ್ತಿಕವಿಂ (ಬ್ರಸೂಕು. ೩-೦೪೬).

[ಸಂ. ಬಸ್ತಿಕ = (ಹೊರಕ್ಕೆ ಜಗ್ಗಿದಾಗ ಮೊನೆಯು ದೇಹದಲ್ಲೇ ಉಳಿಯುವ) ಒಂದು ಬಗೆಯ ಬಾಣ]

**ಬಸ್ತಿಗೆ** (ನಾ). = ಬಸ್ತಿಕ : ಧೌತಿಯುಮಾ ಬಸ್ತಿಗೆಯುಂ ನೇತಿ ತ್ರಾಟಕ ಕಪಾಲಭಾತಿಯುಮಿಳೆಯೊಳ್ ನೂತನನೌಲಿಕವೆಂಬಾ ಪೂತವುಂ ಗಳೊರೆದಱುವಗೆ ಕಷ್ಟಂ ಪೋಗುಂ (ಬ್ರಸೂಕು. ೩-೦೪೦).

[ <ಬಸ್ತಿಕ ]

**ಬಸ್ತು** (ನಾ). ೧. ಸಾಮಾನುಗಳ ಗಂಟು. – ಮೂಟೆ : (೬). ೨. (ವ್ಯವಸ್ಥಿತವಾದ) ಕಾಗದ ಪತ್ರಗಳ ಕಟ್ಟು ; ದಫ್ತರು : (ಕ್ಯಗಹ. IV, ೩೩೪).

**ಬಸ್ತು ಕಟ್ಟು** = ಬೇರೆ ಕಡೆಗೆ ರವಾನಿಸಲು ಅನುಕೂಲವಾಗುವಂತೆ ವಸ್ತುಗಳನ್ನು ಜೋಡಿಸಿ ಕಟ್ಟು : ರೇಷ್ಮೆಯನ್ನು . . . ವ್ಯಾಪಾರಸ್ಥಳಗಳಿಗೆ ಕಳುಹಿಸುವುದಕ್ಕೆ ಯೋಗ್ಯವಾದ ರೀತಿಯಲ್ಲಿ ಬಸ್ತು ಕಟ್ಟುವುದು ಮುಂತಾದ ವಿಚಾರಗಳಲ್ಲಿ ಇಂಡಿಯಾದೇಶದವರಿಗೆ ಶಿಕ್ಷಣ ಕೊಡಲು ಒಂದು ಪ್ರಯೋಗಕ್ಷೇತ್ರವನ್ನು . . . ಸ್ಥಾಪಿಸಿದರು (ಶಾಗ್ಯಶಿ. ೩೪).

[← ಪಾರ. ಹಿಂ. ಮರಾ. ಬಸ್ತಾ]

**ಬಸ್ಸು** (ನಾ). ನಿಗದಿಯಾದ ವೇಳೆ ಹಾಗೂ ಸ್ಥಳಗಳಲ್ಲಿ ಸಂಚರಿಸುವ, ಅನೇಕಜನರು ಕೂಡಬಹುದಾದ, ಪೆಟ್ರೋಲ್ ಮುಂತಾದ ಇಂಧನಗಳಿಂದ ಚಲಿಸುವ ವಾಹನ ; ಮೋಟಾರುಬಂಡಿ : ಉಪ್ಪೋದು ಹೊಗೆ ಸೂಸಿ ಇನ್ನು ಬಸ್ಸೋ ಕಾರೊ ಏನಾದರೂ ಸರಿಯೆ, ಓಡಿತಲ್ಲಿಯೆ ಬುದ್ಧಿ (ಅರಳು. ೦೪೬-೩) ; ನೋಡು, ಮೋಡದ ಬಸ್ಸು ಭರಭರ ತುಂಬಿಕೊಂಡೇ ಸಾಗಿವೆ ಯಾವ ಗಿರಿಶಿಖರದಲಿ ಜಾತ್ರೆಯೋ (ಕಂಠಮು. ೦೦-೯).

[←ಇಂ. Bus]

**ಬಸ್ಸುನಿಲ್ದಾಣ** (ನಾ). ಪ್ರಯಾಣಿಕರು ಹತ್ತಲು, ಇಳಿಯಲು ಅನುಕೂಲವಾಗುವಂತೆ ಸಾರಿಗೆ ಬಸ್ಸುಗಳು ನಿಲ್ಲಲು ಗೊತ್ತುಪಡಿಸಿರುವ ಸ್ಥಳ : ಮನೆಯಿಂದ ಹೊರಟ ಗಣಪತಿ ಸೀದಾಬಸ್ಸು ನಿಲ್ದಾಣಕ್ಕೆ ಬಂದ (ಪಕ್ಯಸ. ೨೦೬). [ಬಸ್ಸು + ನಿಲ್ದಾಣ]

**ಬಹ** 'ವರ್' ಪರಾ.

**ಬಹತ್ತರನಿಯೋಗ** 'ಬಾಹತ್ತರನಿಯೋಗ' ಪರಾ.

**ಬಹದರ್** 'ಬಹಾದುರ್' ನೋ.

**ಬಹದರ** 'ಬಹಾದುರ್' ನೋ.

**ಬಹದರಿ** 'ಬಹಾದುರೀ' ನೋ.

**ಬಹದರಿವರಹ** 'ಬಹಾದ್ದುರಿವರಹ' ನೋ.

**ಬಹದರು** 'ಬಹಾದುರ್' ನೋ.

**ಬಹದ್ದರ** 'ಬಹಾದುರ್' ನೋ.

**ಬಹದ್ದುರಿ** 'ಬಹಾದುರೀ' ನೋ.

**ಬಹದ್ದೂರ್** 'ಬಹಾದುರ್' ನೋ.

**ಬಹದ್ದೂರ** 'ಬಹಾದುರ್' ನೋ.

**ಬಹದ್ದೂರಿ** 'ಬಹಾದುರೀ' ನೋ.

**ಬಹರಿ** (ನಾ). ದಂಡನಾಯಕ (?) : ಮಸಣಿತಮ್ಮ ನವಂಗ ವೀರ ಮಸಣನು ಹೊಯಿದು ಹೊಯಿಕುಟ್ಟಾಡಿ ಉಭಯ ಬಿಲ್ಲಣ ಬಹರಿಯ ಯೇಱಿದ ಕುದುರೆಯನುವಿಱಿದ ಕಾಲಾಳನು ತಿವಿದು ಸುರಲೋಕ ಪ್ರಾಪ್ತನಾದನು (ಎಕ. VI. ಕಳ್ನ್ಯಕು. ೩೬-೦೦ ; 1292). [?]

**ಬಹರಿಚ** (ನಾ). = ಬಹರಿ (?) : ರಾಜಾಧಿರಾಜ ರಾಜಪರಮೇಶ್ವರ ಕೃಷ್ಣರಾಯ ಮಹಾರಾಯನ ಮನೆಯ ಕುದುರೆ ಬಹರಿಚನ ಮಲಿಸಟರ ಮಗ ಚಂನಣಸಟರು (ಎಕ. IX(೩). ಕಂಕುಂ. ೬೪-೬ ; 1528).

[ < ಬಹರಿ ?]

**ಬಹಲ, ಬಹಳ** (ಗು). ೧. ಅಧಿಕವಾದ ; ಅಪಾರವಾದ ; ಹೇರಳವಾದ. ೨. ದಟ್ಟವಾದ ; ಸಾಂದ್ರವಾದ. ೩. ಗಟ್ಟಿಯಾದ ; ದೃಢವಾದ. ೪. ವಿಸ್ತಾರವಾದ ; ಅಗಲವಾದ. ೫. (ಬಣ್ಣದಂತೆ) ಕಡುವಾದ ; ಗಾಢವಾದ. ೬. (ಧ್ವನಿಯಂತೆ) ಕಠೋರವಾದ ; ಬಿರುಸಾದ. ೭. (ಬಾಲದಂತೆ) ಪೊದೆಯಾಗಿರುವ. **ಬಹಳ** : ೧. ಅತಿಬಹಳದಹ್ಯಮಾನಕಾಳಾಗುರುಧೂಪಧೂಮಯಷ್ಟಿಘಟಿತಘನಶ್ಯಾಮಲವ್ಯೋಮತಲಧೂಪಂಗಳಿಂದಂ . . . ಅರ್ಚಿಸಿ (ಅಂಚು. ೨-೩೨ ವ); ತುಂಬುರಂ . . . ಕೋಟಿಮಕುಟವರ್ಧನರಿಂ ಬಹಳ ಗೊಂದಣಾಸ್ಥಾನನಾಗಿರ್ದ ನರಸಿಂಗಮೊನೆಯರ್ಗೆ ಸಾದರದಿಂ ಮಯ್ಯಿಕ್ಕಿ ಕಯ್ಯಂ ಮುಗಿದು (ಹಂಚ. ೪-೬೬) ; ಹೇಳಲೇನದ ಬಹಳ ದುಗುಡದ ಪಾಳೆಯವೊ ನಿನ್ನಾತನೋಲಗಶಾಲೆಯೋ ನಾವಱಿಯೆವು (ಕುವ್ಯಾಕ. ೦-೦೪). ೨. ಕೇಸರಿಯ ಲೀಲಾಳಾಪವಿಲ್ಲದ ಬಹಳ ಕಾನನವೋ . . . ಪಾಳೆಯವೆನುತ ಬರುತಿರ್ದ (ಕುವ್ಯಾದ್ರೋ. ೬-೬). (ನಾ). ೮. ಹೆಚ್ಚು ; ಅಧಿಕ : ಮನೆಯಲ್ಲಿ ಮಂದಿ ಬಹಳ ಹೊನ್ನಿನ ಪಚ್ಚೆ ಘನವು (ಕಂಶಂ. ೬-೦೪೬) ; ಬಂಗಾಲ, ಮಲಯಾಳ, ಮೈಸೂರು ಮುಂತಾದ ಪ್ರಾಂತಗಳಲ್ಲಿ ಹುಲಿಗಳು ಬಹಳ (ಹುಂಬು. ೪-೩೫). ೯. ಒಂದು ಬಗೆಯ ಕಬ್ಬು.

**ಬಹಳ ಮಾಡಿ** = ೧. ಹೆಚ್ಚಾಗಿ ; ಬಹುಮಟ್ಟಿಗೆ : ಸೋಲಾಪುರದಲ್ಲಿ . . . ನಾವು ಯಾವಾಗಲು ಬಹಳ ಮಾಡಿ ಇರುವ ಸ್ಥಳವು ಇದೆ (ಹುಂಬಾ. ೨೪). ೨. ಬಹುಶಃ ; ಬಹುತೇಕ : ಆಗ ಬಹಳ ಮಾಡಿ ಬೆಳಗಿನ ಎಂಟು ಗಂಟೆಯಾಗಿರಬೇಕು (೨ಕ್ಯಕ. ೩೭). ೩. ವಿಶೇಷವಾಗಿ ; ಮುಖ್ಯವಾಗಿ : ಇದು ಬಹಳ ಮಾಡಿ ಪ್ರಾಣಿಗಳ ಮನೋಧರ್ಮವೇ (ಉಹಾಕ. ೦೩೬). **ಬಹಳಷ್ಟು** = ಬಹುಮಟ್ಟಿಗೆ ; ಅದಷ್ಟು : ಹೀಗೆ ಅನಿಸುವುದರಿಂದಲೇ ಸಂಸಾರದೊಳಗೆ ಬಹಳಷ್ಟು ಪ್ರಚ್ಛನ್ನವಾದ ನಿರಾಶೆಯು ಹತ್ತಿಕ್ಕಿದಂತಾಗಿ ಹದುಗಿಕೊಂಡಿದೆ (ಕ್ರಶಂರ. ೩೪) ; ಮಾಸ್ತರರ ಮನಸ್ಸು ಈಗ ಬಹಳಷ್ಟು ಹಗುರವಾಗಿತ್ತು (ಶುರಜಾ. ೭೨). [ಸಂ.]

**ಬಹಲಿ** 'ಬಹಾಲ್' ನೋ.

**ಬಹಲಿಕೆ, ಬಹಳಿಕೆ** (ನಾ). ಅತಿಶಯತೆ ; ಆಧಿಕ್ಯ : ಪೆಳಸಿನನಿಲಿಂದು ಗಿರಿಗೆಯನಳೆದೊರ್ಗ್ಗಣಿಕ್ಕೋಲೊಳೊಳಗೆ ಪೊಱಗಣ ಪೆಱೆಪೊಳ್ಪಳವಡ ಚಾರಿಪ ಬಹಲಿಕೆಯುಳವಿದು ಕೇವಳವೆ ಕೀರ್ತಿನಾರಾಯಣನ (ಎಕ. II. ೦೩೩-೯೬ ; ೨೨೨). **ಬಹಳಿಕೆ** : ವಿಹಗಕುಳಂಗಳಂ ನೆರಪಿ ಕೂಜನದೇಟ್ಗೆ ಮನೋಜರಾಜ್ಯಮಂ ಬಹಳಿಕೆಯಿಂದೆ ಮೂಱಿಡಿಸಿ . . . ಆತ್ಮಮನ್ಮಥ ಗ್ರಹಮವನದೇಂ ಕಟ್ಟಲ್ಕುವರೊ ಯವ್ವನಮತ್ತೆಯರಲ್ಲಿ ನಲ್ಲರೊಳ್ (ಅಕ್ಯಕ. ೨-೯೨) ; ಗಜದಳದ ಬೃಂಹಿತದ ಬಹಳಿಕೆ . . . ಭಡಾಳಿಸಲೊಡ್ಡಿದರು ಮಂಡಳಿಸಿ ಮೋಹರವ (ಕುವ್ಯಾಅ. ೬-೦೪). [ಬಹಲ + – ಇಕೆ]

**ಬಹಲು** 'ಬಹಾಲ್' ನೋ.

**ಬಹಳ** 'ಬಹಲ' ನೋ.

**ಬಹಳಿಕೆ** 'ಬಹಲಿಕೆ' ನೋ.

**ಬಹಳಿತ** (ಗು). ೧. ವಿಶೇಷವಾದ ; ಅತಿಶಯವಾದ : ನಿಜವರೂಥದಲಂದು ಕೌರವವಿಜಯಮಾರುತಿ ಹೊಕ್ಕು ರಿಪುಭೂಭುಜರನರೆಯಟ್ಟಿದನು ಬಹಳಿತ ಸಿಂಹನಾದದಲಿ (ಕುವ್ಯಾದ್ರೋ. ೦೩-೦೭) ; ರಘುಪ್ರಭವ . . . ಸೂತಮಾಗಧವಂದಿಸಂದೋಹ ಬಿರುದನುಚ್ಚಾರಿಸಲು ಮಾರುತಿ ಧಿರುರೆ

ಪಾಯಪಥಾರಿನಲು ಬಂಧುರದ ಬಹಳಿತ ಸೇತುವಿದ್ದೆಡೆಗಾಗಿ ನಡೆತಂದ (ಕೊಶಿಹಾ. ೬-೩-೩). ೨. ದಟ್ಟವಾದ ; ಸಾಂದ್ರವಾದ. ೩. ಪ್ರಬಲವಾದ ; ಬಿರುಸಾದ. [ಸಂ. ಬಹಲಿತ]

**ಬಹಳಿಸು** (ಕ್ರಿ). ಹೆಚ್ಚಾಗು ; ಅಧಿಕವಾಗು : ಸಿಹಿ ಪಿರಿದಾದಲ್ಲಿ ಹುಳಿಗೊಡುವಳು ಹುಳಿ ಬಹಳಿಸಲುವುಪ್ಪಿದೋಟುವಳು (ಅಠಕ. ೧೦-೩೦). [ಬಹಳ (= ಬಹಲ) + – ಇಸು]

**ಬಹಾದರ್** 'ಬಹಾದುರ್' ನೋ.

**ಬಹಾದರಿ** 'ಬಹಾದುರೀ' ನೋ.

**ಬಹಾದರೀವರಹ** 'ಬಹಾದ್ದುರಿವರಹ' ನೋ.

**ಬಹಾದುರ್,** ಬಹದರ್, ಬಹದರ, ಬಹದರಂ, ಬಹದ್ದರ, ಬಹದ್ದೂರ್, ಬಹದ್ದೂರ, ಬಹಾದರ್, ಬಹಾದ್ದರ್, ಬಹಾದ್ದರ, ಬಹಾದ್ದುರ, ಬಹಾದ್ದೂರ್, ಬಹಾದ್ದೂರ, ಬಾದರ್, ಬಾದುರ, ಬಾಧುರ, ಭಾಹದರು (ನಾ). ೧. ವೀರ ; ಶೂರ ; ಸಾಹಸಿ : (ಕ). ೨. ಯೋಧ ; ಸೈನಿಕ : (ಕ). ೩. ಮೊಗಲ್‌ರಾಜರು ಗಣ್ಯವ್ಯಕ್ತಿಗಳಿಗೆ ಕೊಡುತ್ತಿದ್ದ ಒಂದು ಬಿರುದು : ಶ್ರೀಮನ್‌ಮಹಾರಾಜರಾಜಾ ಸಾಹೇಬ್‌ಬಹಾದುರವರು. ಇದರಡಿ ಕಂಡಂತೆ ಕಾನೂನನ್ನು ಏರ್ಪಡಿಸಿರುತ್ತಾರೆ (ಗ್ರಾಮಕ. ೦೪). **ಬಹದರ್** : ೩. ಹೈದರಲ್ಲಿಖಾನ್‌ಬಹದರವರು ಕೊಟ್ಟ ದರ್ಮಕ್ಕೆ ಮಾಗನೂರ ಗ್ರಾಮಶಾಸನ (ಎಕ. XI. ಚಳ್ಳಕೆ. ೦೩೩-೬ ; 1761) : ಮುದ್ದುಕೃಷ್ಣಾಜಮ್ಮಣ್ಣೀಯವರು ನಂಜರಾಜಬಹದರವರು (ಎಕ. X, ಚಿಕನಾ. ೨೧೦-೬ ; ಸು. 1828). **ಬಹದರ** : ೩. ಹೈದರಲ್ಲಿ ಬಹದರನು (ಸೌಕ್ರಾ. ೦೬೪೭. ಸೇಂ. ೦೩೩-೦೪ ; 1759). **ಬಹದರು** : ೩. ಯಾ ಹೈದರಲ್ಲಿಖಾನರ ಹಿರೇರು ಪೂರ್ವದಲ್ಲಿ ಅರಬ್ಬದೇಶದಿಂದ . . . ಬಿಜಾಪುರದ ಸಂಸ್ಥಾನಕ್ಕೆ ಬಂದು ಅಲ್ಲಿನ ಬಹದರಲ್ಲಿ ನೌಕರೀ ನಿಂತು (ಹೈದರ. ೨೦). **ಬಹದ್ದರ** : ೧. ಕಲ್ಲನ್ನ ಬಿಡಿಸಿಗೊಂಡು ಹೋಗೂ ಬಿಹದ್ದರ ಅವರ ಹಿಂಡಿನ್ಯಾಗ ಯಾವನೂ ಇಲ್ಲ (ಗ್ರಾಮಯು. ೨೧೪) ; ಭಾರಿ ಜಮೀನುದಾರರು ಕೂಡ ಈಗ ಅನ್ನಾನ್ನಗತಿಯಾಗಿ ಕೇವಲ ಅದ್ದ ಹೆಸರಿನ ಬಹದ್ದರರಾಗಿ ಆತ್ಮವಂಚನೆಯನ್ನೇ ಮಾಡಿಕೊಳ್ಳುತ್ತಿರುವರು (ಕಮಂ. ೦೧೩). **ಬಹದ್ದೂರ್** : ೧. ನೀವು ದೊಡ್ಡ ಬಹದ್ದೂರರು ಅಕ್ಷಯಬಾಬು ! (ಕಾಶ್ಕೃ. ೨೦೩). ೩. ಶ್ರೀಮುಮ್ಮಡಿಕೃಷ್ಣರಾಜ ಒಡೆಯರ್ ಬಹದ್ದೂರ್ ಜಿ. ಸಿಯಸ್ಐಯವರ ಪಿತೃಗಳಾದ ಮಹಾರಾಜರು ಖಾಸ ಚಾಮರಾಜಒಡೆಯರವರ ಜ್ಞಾಪಕಾರ್ಥ ಇದು ಸ್ಥಾಪಿತವಾಗಿದೆ (ಎಕ. VI (R). ಶ್ರೀರಂಗ. ೩೩-೦ ; 1868 ?) ; ಟೀಪು ಸುಲ್ತಾನ ಬಹದ್ದೂರ್‌ರವರು ತಮ್ಮ ಕಡೆಯಿಂದ ಒಂದು ಕಾಗದ, ಮೀರಸಾದಕನ ಕಡೆಯಿಂದ ಒಂದು ಕಾಗದ . . . ದೋಸ್ತಿ ಮಾಡುವ ಬಗ್ಗೆ ನಂಬಿಗೆ ಭಾಷೆ ಹಾಕಿ ಬರಿಸಿ (ರಾಕೇಂದ್ರ. ೭೪). **ಬಹದ್ದೂರ** : ೧. ಕಂಚಿನ ತಂಬಿಗೆ, ಮಸಿಬುಡ್ಡಿ . . . ಪುಸ್ತಕ ಇತ್ಯಾದಿ, ಇತ್ಯಾದಿ—ಹೆಂಡತಿಯ ಮೈ ಮುಖಕ್ಕೆ ಗುರಿಯಿಟ್ಟು ಬೀಸಿ ಎಸೆಯುವ ಬಹದ್ದೂರರೂ ಇದ್ದಾರೆ (ಹುಕ್ಕುಹು. ೦೨). (ಗು). ೪. ಸಮರ್ಥವಾದ; ಪ್ರಬಲವಾದ : ಮಹಾದೇವನು ನಮಗೆ ಕೊಟ್ಟು ಇರುವಂಥಾ ಒಂದು ನಾಲಿಗೆಯನ್ನು ಇಂಗ್ರೇಜ ಬಹದ್ದೂರ ಸರಕಾರದ ಸ್ನೇಹ ಮಾಡುವಾಗ್ಯೆ, ಅವರಿಗೆ ಕೊಟ್ಟು ಇದ್ದೇವೆ (ರಾಕೇಂದ್ರ. ೬೩). **ಬಹಾದರ್** : (ಕ). **ಬಹಾದ್ದರ್** : ೩. ಜನರಲ್ ಮೆಂಡಸ್‌ಸಾಹೇಬ್‌ಬಹಾದ್ದರವರು . . . ಬಂಗಾಳದ ಲಾರ್ಡ್‌ಕಾರನ್ವಾಲೀಸ್‌ಸಾಹೇಬ್‌ಬಹಾದ್ದರವರ ಫೌಜಿನ ಸಂಗಡ ಕೂಡಿ, ಒಟ್ಟಾಗಿ ಗಟ್ಟ ಹತ್ತಿ ಬಂದು, ಬೆಂಗಳೂರ ಮೊಕ್ಕಾಮಿನಲ್ಲಿ ಇಳುಕೊಂಡರು (ರಾಕೇಂದ್ರ. ೬೦). **ಬಹಾದ್ದರ** : ೧. ಹುಡುಗಿಗೆ ತಕ್ಕಂತೆ, ಅವನು ಬಹಾದ್ದರನೇ ಆಗಿರುವನು (ಕಳ್ಳಾ. ೩). ೪. ಮೊದಲು ಕೊಡಗಿನ ಮಹಾರಾಜರ ಕಡೆಯಿಂದ ಮಿತ್ರತ್ವವಾಂಛಲ್ಯವಿಟ್ಟು ಶಾಶ್ವತವಾಗಿ ನಡದು ಬರಬೇಕು ಎಂಬುದಾಗಿ, ಭಾಷಾಪತ್ರಿಕೆ ಬರೆಸಿ, ಇಂಗ್ರೇಜಬಹಾದ್ದರಕಂಪನಿ ಸರಕಾರದಲ್ಲಿ ಮಡಗಿ ಇದೆ (ರಾಕೇಂದ್ರ. ೬೪). **ಬಹಾದ್ದುರ** : ೪. ಹತ್ತು ಪಾಲು ಹೆಚ್ಚಾಗಿ ಇನ್ನೂ ಇಂಗ್ರೇಜಬಹಾದ್ದುರಕುಂಪನಿ ಸರಕಾರಕ್ಕೆ ಸಹಾಯ ಮಾಡಬೇಕು ಎಂಬುದಾಗಿ, ನಾವು ನಿಶ್ಚೈಸಿ ಇದ್ದೇವೆ (ರಾಕೇಂದ್ರ. ೦೨೬). **ಬಹಾದ್ದೂರ್** : ೧. "ಬಹಾದ್ದೂರ್ = ಶೂರ" (ಶಾಕಕೋ. ೨೦). **ಬಹಾದ್ದೂರ** : ೪. ಈ ಪೂರ್ವೋತ್ತರವೆಲ್ಲಾ ಇಂಗ್ರೇಜಬಹಾದ್ದೂರ ಸರಕಾರಕ್ಕೆ ಬರದು ಕಳುಹುತ್ತೇವೆ (ರಾಕೇಂದ್ರ. ೯೩). **ಬಾದರ್** : ೩. ನವಾಬುಹೈದರಲಿಖಾನ್‌ಬಾದರವರು ಪೃಥ್ವೀಸಾಮ್ರಾಜ್ಯಂಗೆಯುತ್ತಿರಲು (ಎಕ. IX. ಚನ್ನಪ. ೦೬-೬ ; 1767). **ಬಾದುರ** : ೩. ವುಭಯಯದಳ ಪೂಜ್ಯಲಿಂಗವೊಡೆದಳವಿಭಾಡ ಬಾದುರಮಲುಕ ಸರ್ವಾಂಗಹರಣಯೇನು ಮುಲಮಂದ ಪಾರ್ಥಿಕಮಲ್ಲ . . . ಮುಂಮ್ಮಡಿಹೊಟ್ಟಂಣನಾಯಕರ್‍ಯನವರು ಮಾಡಿಸಿದಂತಾ ಶಾಸನಾ (ಪ್ರಕಅ. ೦೯೩೯, ೯೯-೦೪ ; 1700). **ಬಾಧುರ** : ೨. ಹಸ್ತಿಗಳ ಸಾಲಿಂದ ಸಾಲ್ಗಳನೆತ್ತಿಸಿದ ಬಾಧುರರ ರಣದೊಳು ವಿಸ್ತರಿಸಲುಸದಳಗಳಾದವು ರಾಯಬಲವೆಲ್ಲ (ಕುಂರಾಭಾ. ೭-೨೪). **ಭಾಹದರು** : ೩. ಮಹಾರಾಜರಾಜಕೃಷ್ಣರಾಜವೊಡೇರಭಾಹದರು . . . ಬರಸಿ ಕಳುಹಿಸ್ತ ನಿರೂಪ (ಎಕ. VI, ಕೊಪ್ಪ. ೯೩-೦೪ ; 1811).

[←ಪಾರ. ಬಹಾದುರ್; ಹಿಂ. ಬಹಾದುರ್, ಬಹಾದರ್; ಮರಾ. ಬಹಾದೂರ್, ಬಹಾದರ್, ಬಹಾದ್ದರ್]

**ಬಹಾದುರೀ,** ಬಹದರಿ, ಬಹದ್ದುರಿ, ಬಹದ್ದೂರಿ, ಬಹಾದರಿ, ಬಹಾದ್ದರಿ, ಬಹಾದ್ದೂರಿ (ನಾ). ೧. ಬಹದ್ದೂರ್ ಹೈದರನ ಕಾಲದಲ್ಲಿ ಟಂಕಿಸುತ್ತಿದ್ದ ಒಂದು ಬಗೆಯ ಚಿನ್ನದ ನಾಣ್ಯ : ಬ್ರಿಟಿಶಸರಕಾರದ ಆಮಲಿನ ಆರಂಭದಲ್ಲಿ . . . ೦೮ ಪ್ರಕಾರದ ವರಹಗಳು ಅಥವಾ ಹೊನ್ನುಗಳು ನಡಿಯುತ್ತಿದ್ದವು. ಅವುಗಳ ವಿವರ—೧ ಗಜಪತಿ (ವಿಜಯನಗರದ ಅರಸರದು)... ೨ ಬಹಾದುರೀ (ಹೈದರನದು) ರೂ. ೪. ಆ. ೮ (ಕಣಾಗ. ೨೮೦). **ಬಹದರಿ** : (ಗು). ೨. ಬಹದ್ದೂರನಿಗೆ ಸಂಬಂಧಿಸಿದ; ಮೊಗಲ್‌ದೊರೆಗೆ ಸೇರಿದ : 'ಬಹದರಿವರಹ' ಪರಾ. **ಬಹದ್ದುರಿ** : ೩. ಭಾರಿಯಾದ; ಮಹತ್ವದ : ಅದು ಬೇಪಾರಸು ಬಹದ್ದುರೀ ಸುದ್ದಿಯಾದದ್ದರಿಂದ ತಾವು ಅದನ್ನು ವಹಿಸಿಕ್ಕೊಂಡು ವರ್ತಮಾನಕ್ಕೆ ತಂದರೆಂದು, ನನ್ನ ಊಹೆ (ಕಂಠ. ೩೬೪). **ಬಹದ್ದೂರಿ** : ೪. ಯೋಗ್ಯವಾದ; ಸಮರ್ಥವಾದ : ಅವನ ಎತ್ತೂ ಹಾಗೆಯೇ ಬಹದ್ದೂರಿ (ಹಳ್ಳಿಚಿ. ೯೦). **ಬಹಾದರಿ** : ೨. 'ಬಹಾದರೀವರಹ' ಪರಾ. **ಬಹಾದ್ದರಿ** : ೪. 'ಬಹಾದ್ದರಿತನ' ಪರಾ. **ಬಹಾದ್ದೂರಿ** : ೫. ಅಧಿಕಾರ : ಮನಸ್ಸು ಋತುಮೃತ್ಯಾಸವನ್ನು ಗೆದ್ದು ಅದನ್ನು ನಿಶ್ಚೇತನವಾಗಿ ಮಾಡಿ ಒಂದು ಬಹಾದ್ದೂರಿ ನಡಸುವಂತಿದೆ (ಹಂಪ. II, ೪೦೩).

[←ಪಾರ. ಹಿಂ. ಬಹಾದುರೀ ; ಮರಾ. ಬಹಾದರೀ, ಬಹಾದುರೀ, ಬಹಾದೂರೀ]

**ಬಹಾದ್ದರ್** 'ಬಹಾದುರ್' ನೋ.

**ಬಹಾದ್ದರ** 'ಬಹಾದುರ್' ನೋ.

**ಬಹಾದ್ದರಿ** 'ಬಹಾದುರೀ' ನೋ.

**ಬಹಾದ್ದರಿತನ** (ನಾ). ದಕ್ಷತೆ ; ಸಾಮರ್ಥ್ಯ : ಬೆಳ್ಳಾರೆಕೋಟೆ, ಮೂಡ ಕೊಡೆಯಾಲದ ಕೋಟೆ ಸಮಾಚಾರ ಬರಸಿದ್ದು ಕೇಳಲಿಲ್ಲ. ಬಲುಚಾತುರ್ಯ, ಧೈರ್ಯ, ಬಹಾದ್ದರಿತನ ಸಹಾ ತೋರಪಟ್ಟಿತು (ರಾಕೇಂದ್ರ. ೦೯೦). [ಬಹಾದ್ದರಿ (<ಬಹಾದುರೀ) + – ತನ]

**ಬಹಾದ್ದುರ** 'ಬಹಾದುರ್' ನೋ.

**ಬಹಾದ್ದುರಿವರಹ,** **ಬಹದರಿವರಹ,** **ಬಹಾದರೀವರಹ** (ನಾ). ಬಹದ್ದೂರ್ ಹೈದರನ ಕಾಲದಲ್ಲಿ ಟಂಕಿಸಲಾಗುತ್ತಿದ್ದ, ಅಂದಿನ ನಾಲ್ಕು ಅಥವಾ ಐದು ರೂಪಾಯಿಗಳಿಗೆ ಸಮಾನವಾದ ಒಂದು ಬಗೆಯ ಚಿನ್ನದ ನಾಣ್ಯ: ಮರುಕ್ಷಣದಲ್ಲಿ ಐದನೂರುಬಹಾದ್ದುರಿ ವರಹಗಳ ಥೈಲಿ ಝಣ್ಣೆಂದು ಬಿತ್ತು, ಜೋಯಿಸರ ಬೊಗಸೆಗೆ (ಶ್ರೀ.ಪ್ರ.ಹ. ೪೬). **ಬಹದರಿವರಹ**: ಇಂಗ್ಲಿಷ್ ಸರ್ಕಾರಕ್ಕೆ ಸಲ್ಲಬೇಕಾದ ವಗದಿತು ವಿಷಯದಲ್ಲಿ ಈ ರಾಜ್ಯವು ತತ್ಕಾಲಕ್ಕೆ ಕ್ಷೀಣದಶೆಯಲ್ಲಿದ್ದ ಕಾರಣ ಮೊದಲನೆಯ ವರ್ಷದಲ್ಲಿ ೭ ಲಕ್ಷ ಬಹದರಿವರಹಕ್ಕೆ ಬದಲಾಗಿ ೭ ಲಕ್ಷ ೮೦ಸಾವಿರಾಯಿವರಹವನ್ನು ಅಂಗೀಕರಿಸಲಾಗುವುದು (ಮುಚಾಶಾ. II, ೧೦). **ಬಹಾದರೀವರಹ**: (೩). [ಬಹಾದ್ದುರಿ (<ಬಹಾದುರೀ) + ವರಹ]

**ಬಹಾದ್ದೂರ್** 'ಬಹಾದುರ್' ನೋ.

**ಬಹಾಮ್ದೂರ** 'ಬಹಾದುರ್' ನೋ.

**ಬಹಾದ್ದೂರಗಡಿ** (ನಾ). ಸಮರ್ಥನಾದ ವ್ಯಕ್ತಿ; ದಕ್ಷ: ವಕೀಲರು ಬಹಾದ್ದೂರಗಡಿ; ಸರದಾರ ಮನಸ್ಕ (ರಕ್ತಸ್ತ್ರ. ೧೪೬). [ಬಹಾದ್ದೂರ (<ಬಹಾದುರ್)+ಗಡ್ಡಿ(ಶ←ಮರಾ. ಗಡಿ=ಮನುಷ್ಯ)]

**ಬಹಾದ್ದೂರಿ** 'ಬಹಾದುರೀ' ನೋ.

**ಬಹಾರ್** (ನಾ). ೧. ಮೋಜು; ತಮಾಷೆ; ಗಮ್ಮತ್ತು: ಚದುರಂಗದ ಆಟವು ಎಂಥಾ ಬಹಾರ್ ನಡೆದಿರುತ್ತದೆ! (ಕೋ.ಹಿ. ೬೦). ೨. [ಸಂಗೀತ] ಒಂದು ರಾಗದ ಹೆಸರು: ಬಹಾರ್, ಬಾಗೇಶ್ವರಿ, ಪೂರಿಯಾ, ದರ್ಬಾರಿ, ಕಮಾಚ್‌ರಾಗಗಳು ಉನ್ಮಾದವನ್ನೂ . . . ಗುಣಪಡಿಸುವುದೆಂಬ ಭಾವನೆ ಉತ್ತರಭಾರತದಲ್ಲಿದೆ (ಕಸಂ. ೩೪೪). [ ← ಪಾರ. ಹಿಂ. ಬಹಾರ್ ; ಮರಾ. ಬಹಾರ್, ಬಹರ್ ]

**ಬಹಾಲ್,** **ಬಹಲಿ,** **ಬಹಲು** (ನಾ). ೧. ಪೂರ್ವಸ್ಥಿತಿಗೆ ತರುವಿಕೆ; ಯಥಾಸ್ಥಿತಿಗೆ ತರುವಿಕೆ: ಇನಾಂಜಮೀನುಗಳು ಬಹಾಲ್ ಆಗುವಾಗ್ಗೆ ಸರಕಾರದಲ್ಲಿ ಈಗ್ಗೂ ಮೂಲಸನದುಗಳು ಫೈಲಿನಲ್ಲಿ ಅವೆ (ಪಹು. ೨೪೯). **ಬಹಲಿ**: ೨. ಸಂಸ್ಥೆ, ಸ್ಥಾನ, ಕಚೇರಿ ಮೊದಲಾದುವುಗಳಲ್ಲಿನ ವ್ಯವಸ್ಥೆ: (೩). **ಬಹಲು**: ೩. ಇನಾಮು; ಭಕ್ಷೀಸು.

**ಬಹಲ್ ಮಾಡು,** **ಬಹಲು ಮಾಡು**=೧. ಪೂರ್ವಸ್ಥಿತಿಗೆ ತರು; ಯಥಾಸ್ಥಿತಿಗೆ ತರು: ಹಿಂದೆ ಸರ್ಕಾರಕ್ಕೆ ದಾಖಲಾಗಿದ್ದ ಅನೇಕ ದೇವಾದಾಯ ಬ್ರಹ್ಮಾದಾಯ ಛಟವಾನ್ಯಗಳನ್ನು ಬಹಲ್ ಮಾಡಿ ಪ್ರಯಾಣಕರ ಅನುಕೂಲ್ಯಕ್ಕೋಸ್ಕರ ಅಲ್ಲಲ್ಲಿ ಕೆಲವೆಡೆ ಅನ್ನಸತ್ರಗಳನ್ನು ಏರ್ಪಡಿಸಿದರು (ಮಚಾಶಾ. II. ೪೩). ೨. ಭಕ್ಷೀಸು ಕೊಡು: ಇನಾಮು ಕೊಡು: ನಮ್ಮ ದೌಲತ್ತನ್ನು ಬಹಲು ಮಾಡುವುದಕ್ಕೆ ಅದನ್ನು ನಮಗೆ ಯಾರೂ ಕೊಟ್ಟಿಲ್ಲ. ಅವನ್ನು ನಮಗೆ ಕೊಟ್ಟ ಈಶ್ವರ ದೊಡ್ಡವನು (ಶಕ್ತಿಶಾ. ೫೪). ಬಹಲಿಯಿಡು=ಬಹಲ್‌ಮಾಡು ೧: ಅನಂತರ ಆಳಿದ ಅವರ ಪುತ್ರರು ಕಂಠೀರವಮಹಾರಾಜರು ಪಟೇಲರ ಇನಾಮನ್ನು ಜಪ್ತಿ ಮಾಡಿ ಇತರ ಗ್ರಾಮನೌಕರರ ಇನಾಮನ್ನು ಬಹಲಿಯಿಟ್ಟರು (ಮುಚಾಶಾ. II. ೨೯). [ ←ಪಾರ. ಮರಾ. ಬಹಾಲ್; ಹಿಂ. ಬಹಾಲ್, ಬಹಾಲೀ ]

**ಬಹಿ** (ನಾ). ಹೊರಗು: ಕಾಯದಲ್ಪಸುಖಕ್ಕೆ ಘನನಿಶ್ರೇಯಸಕೆ ಬಹಿಯಾಗಿಟೆದ (ಶಾಪಂಕ. ೦೨-೩೩). [ <ಸಂ. ಬಹಿರ್ ]

**ಬಹಿಃಕರಣ** (ನಾ). ಪ್ರಕಟವಾಗುವುದು; ಅಭಿವ್ಯಕ್ತಿ: ನಾವು ಕಲಾಕೃತಿ ಎಂದು ಹಾಡುವುದನ್ನು ಕರೆಯುತ್ತೇವೆಯೋ, ಆ ಚಿತ್ರವೋ, ಗೀತವೋ, ಶಿಲ್ಪವೋ—ಅದು ಏನಿದ್ದರೂ ಪ್ರತಿಭಾನದ ಬಹಿಃಕರಣದ ರೂಪವಾದುದು (ಸಾಂತ. ೬೯). [ಸಂ.]

**ಬಹಿಃಕರಿಸು** (ಕ್ರಿ). ೧. ಅಭಿವ್ಯಕ್ತಪಡಿಸು; ತೋರ್ಪಡಿಸು: ತರುಣ ಕಳಂಕಮನಂತಃಕರಣದೊಳಾಂತಮಳವೃತ್ತಿಯಿಂ ಕೂಡೆ ಬಹಿಃಕರಿಪಂತೆ ಮಹಾರಜನಾಂಬರಮಂ ಕಳೆದೇಕೆ ಧವಳಪಟಮಂ ಪೊದೆದಾ (ಜಗ. ೦೨-೯೦). ೨. ಹೊರಹಾಕು; ಹೊರದೂಡು: ಇರಿಸಿ ತಮೋಗುಣಮಂ ಮಿಕ್ಕ ರಜಸ್ಸತ್ವಂಗಳಂ ಬಹಿಃಕರಿಸುವವೊಲ್ ಅರ್ಜುನಾಧರಪಾಂಡುರದಶನರುಚಿಗಳಾನನದಿನೊಗೆಯೆ ಲಾಂಗಲಿ ನುಡಿದಂ (ಜಗ. ೦೫-೯೦). [ ಬಹಿಃಕರಣ + – ಇಸು ]

**ಬಹಿಃಕ್ಷೇತ್ರ** (ನಾ). ಹೊರಭಾಗ; ಹೊರವಲಯ: ಆ ಯಜ್ಞದ ಸೂತ್ರಪ್ರಕಾರದಿಂ ಮುಖಶಾಲೆಯಂ ಬಹಿಃಕ್ಷೇತ್ರದೊಳ್ಸಲೆ ರಚಿಸಿ (ಕೃಪುಣಾ. ೬-೭). [ಸಂ.]

**ಬಹಿಃಪುರ** (ನಾ). ಊರಿನ ಹೊರಭಾಗ; ಹೊರವಲಯ: ವನಜವನರಾಜಿಕೂಜದ್ವನವಿಹಗವಿರಾಜಿ ಪುರಬಹಿಃಪುರಕೇಳೀವನದೊಡವು ರತಿಯ ಪೊಸಜವ್ವನದೊಡವೆನೆ ನೆಱೆಯೆ ಪೊಗಟಲಾವಂ ನೆಱೆವಂ (ಶಂಶಾಚ. ೦-೦೦೦). [ ಸಂ. ]

**ಬಹಿಃಪುಷ್ಕರ** (ನಾ). ಹೊರಭಾಗಕ್ಕೆ ಚಾಚಿಕೊಂಡಿರುವ ಸೊಂಡಿಲು ಳ್ಳುದು: ಅಗಾಧಸ್ರವಂತೀಪ್ರದಾಂತರ್ಜಲದೊಳ್ ನಿಷ್ಕಂಪತಾಂಗಂ ಮುಚುಗಿದುದು ಬಹಿಃಪುಷ್ಕರಂ ಹಸ್ತಿಯೂಥಂ (ಶಂಕ್ರಪ. ೬-೬೯). [ ಸಂ. ]

**ಬಹಿಕರಿಸು** (ಕ್ರಿ). ದೂರಮಾಡು; ಬಹಿಷ್ಕರಿಸು: ಯಶೋರಮೆ ನಾಚಿ ತಲೆಗೊಡಹಿ ಬಹಿಕರಿಸದಿಹಳೇ . . . ವಿಚಾರವ ಮಹಿಸದಳವರ ಸತಿಯನು (ಕೊಶಾ. ೩-೪-೩೯). [ <ಬಹಿಷ್ಕರಿಸು ]

**ಬಹಿತ್ರ,** **ಬಾಹಿತ್ರ,** **ಬೈತ್ರ,** **ಭೈತ್ರ**(ನಾ). ತೆಪ್ಪ; ಹರಿಗೋಲು: "ತರಣಿ ಬಹಿತ್ರಮುಂ" (ಶಬ್ದಮ. ೦೨೦-೧೭); ಗಗನತಲಜಲಧಿಯೊಳ್ ಬಹಿತ್ರದಂತೆ ಪರಿವ ಸೂರ್ಯಪ್ರಭನೆಂಬ ದೇವನ ವಿಮಾನಮಂ ನೋಡಿ (ಅಂಶ. ೩-೯೩ ಪ); ಏನೊಟ್ಟಿರ್ಪುವೊ ಪೋಲ್ತು ದಿವ್ಯಜಿನಚೈತ್ಯಂಗಳ್ ಬಹಿತ್ರಂಗಳಂ (ಪುಶ್ರೃ. ೨-೬೯). **ಬಾಹಿತ್ರ**: ಪುತ್ರರೇ ದುಃಖಾರ್ಣವಕೆ ಬಾಹಿತ್ರ ಸತ್ಕುಲನಾದನಕ್ಕಾ ಚೈತ್ರಮಾಸಂ (ಶಂಕಾ. ೦೬-೦೭). ಶ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಬೈತ್ರ**: ಬಡಿಗೊಂಡು ಮುಸಗಿ ಬೈತ್ರಮನೊಡೆವ ಮಹಾಮಕರದಂತೆ ಕರಿಘಟೆಗಳನಾರ್ದಡಿಯೆ ಬಡಿದಾನವೆರಸಾಗಡ ಕೊಂದಂ ಕ್ಷೇಮಧೂರ್ತಿಯಂ ಪವನಸುತಂ (ಪಂಭಾ. ೦೨-೬೮); ಜ್ವಲಿಪ ಪೊಂದೇರ್ಗಳೇ ಬೈತ್ರಂಗಳ್ . . . ಎಸೆವ ಮದದಂತಿಗಳೆ ಶೈಲಜಾಲವೆನೆ ಜಲನಿಧಿಯೊಳೊಪ್ಪಿದುದು ರಣರಂಗ (ಸಾಂಶಕ. ೦೬-೨೦); ಗುಂಡಗಳು ಭಾರ ಬೈತ್ರಕ್ಕೆ ಲೋಕಕ್ಕೆ ಕೊಂಡೆಯನೆ ಭಾರ (ಸರ್ವಜ್ಞ. ೦೯೩೦). **ಭೈತ್ರ**: "ಪೋತಃ, ಪ್ರವಹಣಃ—ಈ ೨ ಭೈತ್ರಂ" (ಕರಾಮು. ೦೦೬-೩೩); ಆ ಭುವನತ್ರಯವಿಜಯಿಯುಪ್ಪ ರೂಪಾತಿಶಯದೊಡನವಳ್ಗಳೆದಂತೆ ಬಳೆದ ನಿಸರ್ಗಶೌಚಾದಿಗುಣಂಗಳಿಂ ದಿಙ್ಮಂಡಲಿಕ್ಕಿದ ಭೈತ್ರಮುಮಂ . . . ಪೋಲ್ತು (ಶಾಂತಿಪು. ೦೦-೯೨ ಪ); ತಳ್ಳಿಂಗಳೋರಂತೆ ನಮಿಸಿ ಬೀಳ್ಕೊಂಡು ಭೈತ್ರವನೇಱಿ . . . ಆ ನಾವಿಕಂ ಪಡಂಗಂ ತಡಿಯನುಱಿಸೇರಿಸಿ (ಶಬ್ದಶಾ. ೦೦-೦೫೧). [ < ಸಂ. ವಹಿತ್ರ ]

**ಬಹಿರ,** **ಬಹಿರು** (ನಾ). ೧. ಹೊರಗು; ಬಹಿರಂಗ: ಹೆಜ್ಜೆಹೆಜ್ಜೆಗೆ ಕೃಷ್ಣ ಕೃಷ್ಣ ಅಬ್ಜನಾಭ ನಾರಾಯಣ ಮೂಜಗತ್ಪತಿಯೆಂದು ಸ್ತೋತ್ರ ನಿರ್ಲಜ್ಜವಾಗಿ ಪಠಿಸುತ ರಜ್ಜುಪಾಣಿಯು ಬಹಿರದಿಂದ ನಿರ್ವ್ಯಾಜಭಕುತಿಲಿ ನೋಡಿದೆ (ಪೀಕೇಶು. ೪೨); ಅನ್ಯರ ಕಣ್ಣಿಗೆ ಬಲುರಮ್ಯವಾಗಿ ಪಾವನನೆನಿಸಿಕೊಂಡೆ ಬಹಿರದಲ್ಲಿ ಬಣ್ಣವಿಲ್ಲದೆ ಲೇಶ ಅಂತರಶುಚಿ ಇಲ್ಲಾ (ಪಶಾಸು. ೬೬-೩). **ಬಹಿರು**: ೨. ಬಯಲು ಪ್ರದೇಶ: ಹೇಹದೊಳಗಿರ್ದರಿಗೆ ತದ್ವಿಧಿಗ್ರಾಹಗೊಳಿಸೈತರಲು ಬಹಿರಿಗೆ ಮೋಹರಿಸೆ ಬತ್ತೀಸ ಅಕ್ಷೋಹಿಣಿಯು ನಿಜಸೇನೆ (ಪಶಾ. ೪೩೨-೫೬); ಪುರದ ಪರಬಹಿರಿನೊಳು ದೂಸನು ವಿರಚಿಸಲು (ಪಶಾ. ೬೯-೬೦). [<ಸಂ. ಬಹಿಸ್

**ಬಹಿರಂಗ** (ನಾ). ೧. ಹೊರಗಿನ ಅವಯವ,-ಅಂಗ : ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ . . . ಇದೆ ಅಂತರಂಗಶುದ್ಧಿ ಇದೆ ಬಹಿರಂಗಶುದ್ಧಿ (ಬಸವ. ೨೪೭). ೨. ಹೊರಗಿನದು ; ಹೊರ ಭಾಗಕ್ಕೆ ಸೇರಿದುದು : ಆ ವಿಭುಗಾದುದಂದು ವಿಶದಂ ಬಹಿರಂಗಮುಂ ಮಂತರಂಗಮುಂ (ಶಾಂತಿಪು. ೯-೩೩). ೩. ಹೊರಗಡೆ ; ಹೊರಭಾಗ : ಅಂತರಂಗದಲ್ಲಿ ಜ್ಞಾನ ಬಹಿರಂಗದಲ್ಲಿ ಕ್ರಿಯೋಪಚಾರ ಇರುತಿರಲಿಕ್ಕಾಗಿ ಏಕ ಭಾವವೆನಿಸಿಕೊಂಬುದಯ್ಯಾ (ಸಿಕ್ವೇಶ. ೬೨-೪೯); ಎನ್ನೊರ್ವಗದೆ ಬಹಿರಂಗದಿಂ ತೆರಳ್ವುದು ನೀತಿಯಲ್ಲ(ಕೃಪಾಆಶು. ೯-೬೩). ೪. ಹೊರಗಿನ ಪ್ರದೇಶ,- ಎಡೆ : ಅಯ್ಯೋ ಆ ಬಟ್ಟಬಯಲಿನ ಹಾಳು ಬಹಿರಂಗದಲ್ಲಿ, ಕೋಗಿಲೆಯ ದೊಂದು ಕರ್ರಗೆ ಹವುಗಿ ಕೂತಿತ್ತು(ಕೋಗಿಲೆ. ೩-೬೯). ೫. ಇಂದ್ರಿಯ ಗೋಚರವಾದುದು : ಪ್ರತ್ಯಕ್ಷ : ಬಹಿರಂಗದಲ್ಲಾದರೋ ಕೋಟಿ ಸೂರ್ಯಪ್ರಕಾಶಮಾನವಾದ ಪಾಂಡುರಂಗನ ಪ್ರತ್ಯಕ್ಷದರ್ಶನವಾಯಿತು (ಕಿಲಿ. ೬೬೯). ೬. ಮುಚ್ಚುಮರೆಯಿಲ್ಲದ ಸ್ಥಿತಿ ; ಎಲ್ಲರಿಗೂ ತಿಳಿದಿರುವಂತಹುದು ; ಸರ್ವವಿದಿತ : ಬಹಿರಂಗವಾಗಿ ಕಣಕುವಷ್ಟು ಧೈರ್ಯಗೊಂಡ ಕಡುಮೂರ್ಖರನ್ನು ತಾಮಸವಿಲ್ಲದೆ ಶಿಕ್ಷಿಸಿದನಕ ಭಿಕ್ಷೆ ತಕ್ಕೊಳ್ಳಲಾರೆನೆಂದು ಚಂಚಲನೇತ್ರರು ಹಟಹಿಡಿದರು (ಚಾಗ್ಗೆ.ಬಿ. ೩೪); ಈ ವಿಷಯ ಬಹಿರಂಗಕ್ಕೆ ಬರಲು ಹೆಚ್ಚು ಸಮಯವೇನೂ ಬೇಕಾಗಿಲ್ಲ (ಅದೇ). **ಬಹಿರಂಗಭಕ್ತಿ**=(ಅಂತರಂಗದಲ್ಲಿ ಇಲ್ಲದೆ) ಹೊರಗಡೆಯಲ್ಲಿ ಮಾತ್ರ ತೋರಿಸುವ ಭಕ್ತಿ; ಬೂಟಾಟಿಕೆಯ ಭಕ್ತಿ : ತೋರಿದನು ಬಹಿರಂಗಭಕ್ತಿಯ ಕ್ರೂರಕಪಟಿಯು (ಅಕ್ಕಮಪು. ೧೦-೩೩). **ಬಹಿರಂಗ ಮಾಡು** =ಹೊರಗಡಹು ; ಪ್ರಕಟಿಸು : ಯಾವುದೇ ಗುಟ್ಟಿನ ವಿಷಯವನ್ನು ಬಹಿರಂಗ ಮಾಡಬಾರದು (ಅದೇ). **ಬಹಿರಂಗವಾಗು**=ಎಲ್ಲರಿಗೂ ತಿಳಿಯು ವಂತಾಗು : ಪ್ರಚಾರಗೊಳ್ಳು : ಗುಟ್ಟು ಬಹಿರಂಗವಾದ ಮೇಲೆ ಬಹಿಷ್ಕಾರವಾದರೇನು ? ಪ್ರಾಯಶ್ಚಿತ್ತವಾದರೇನು ? (ಗಾದೆ). **ಬಹಿರಂಗ ವಿಚಾರಣೆ**=ಎಲ್ಲರ ಸಮಕ್ಷಮದಲ್ಲಿ ನಡೆಸುವ ವಿಚಾರಣೆ ; ಸಾರ್ವಜನಿಕವಿಚಾರಣೆ : ಹಲವಾರು ಮಂದಿ ಸೇರಿ ನಡೆಸಿದ ಬಹಿರಂಗ ವಿಚಾರಣೆಯಲ್ಲಿ ಆತನ ಮೇಲಿನ ಅಪಾದನೆಯು ಸಾಕ್ಷ್ಯಾಧಾರಗಳಿಲ್ಲದೆ ಬಿದ್ದು ಹೋಯಿತು (ಅದೇ). [ಸಂ.]

**ಬಹಿರಂಗಪಡಿಸು** (ಕ್ರಿ). ಪ್ರಕಟಪಡಿಸು : ಹೊರಗೆಡಹು : ಆ ಗಂಡ ಹೆಂಡಿರು ತಮ್ಮ ಬಡತನಕ್ಕೋಸುಗ ಸರ್ವಾಭರಣಸಹಿತವಾಗಿ ದೊರೆತ ಮಗುವಿನ ವಿಷಯವನ್ನು ಬಹಿರಂಗಪಡಿಸಲಾರದಿದ್ದರು (ಕಿಳ. ೯). ಮದ್ರಾಸಿನ ಸಭೆಯೊಂದರಲ್ಲಿ ಸ್ವಾಮಿಗಳು ತಾವು ಚಿಕಾಗೋದ ಸರ್ವ ಧರ್ಮಸಮ್ಮೇಳನಕ್ಕೆ ಹೋಗುವುದಾಗಿ ಬಹಿರಂಗಪಡಿಸಿದರು(ಕರ್ಮಯೋ. ೯೬). [ಬಹಿರಂಗ+ಪಡಿಸು]

**ಬಹಿರಕರ್ಮ** (ನಾ). ಪ್ರಾಕೃತಿಕವಾದ ಮಲಮೂತ್ರ ವಿಸರ್ಜನೆ ಮುಂತಾದ ಕ್ರಿಯೆ ; ಪ್ರಾತರ್ವಿಧಿ : ತ್ವರಿತದಿಂ ಬಹಿರಕರ್ಮವ ತೀರ್ಚಿ (ಸವಸೋ. ೦೭-೩); ಬಹಿರಕರ್ಮವ ತೀರ್ಚಿ ತವಕದಿಂ ಲೀಲೆಯಿಂದಂಗ ಮಜ್ಜನಗೈದು (ಸವಸೋ. ೨೩-೬೧). [ಬಹಿರ+ಕರ್ಮ]

**ಬಹಿರರ್ಥಸಿದ್ಧಿ** (ನಾ). ಹೊರಗಿನ ಉದ್ದೇಶದ ಸಾಧನೆ : ವಿಜ್ಞಾನಂ ವಿಜ್ಞಾನಾಂತರಗ್ರಾಹಕಮಕ್ಕುಮಪ್ಪೊಡಾವ ಮಾಟ್ಕೆಯೊಳ್ ವಿಜ್ಞಾನಾಂತರ ಮಪ್ಪುದಾ ಮಾಟ್ಕೆಯೊಳೆ ಬಹಿರರ್ಥಸಿದ್ಧಿಯಾಗಿ ಸರ್ವಪ್ರತ್ಯಯನಿರಾ ಲಂಬನವಾದಂ ಕಿಡುಗುಂ(ಆದಿಪು. ೨-೦೦ ವ). [ಸಂ.]

**ಬಹಿರಾತ್ಮ** (ನಾ). ೧. ಹೊರಗಿನ ಆತ್ಮ,-ಜೀವ; ಶರೀರ : ತತ್ಪ್ರಜಾ ಯತ್ತಂ ಬಹಿರಾತ್ಮಂ ಕಾಯಂ ಪ್ರತ್ಯಕ್ಷಸಪ್ತಧಾತುನಿಬದ್ಧಂ (ಪಶ್ಚಾಸೋ. ೬೧-೩೩). ೨. [ಜೈನ] ಅಂತರಾತ್ಮ, ಬಹಿರಾತ್ಮ ಮತ್ತು ಪರಮಾತ್ಮ ಎಂಬ ಮೂರು ಬಗೆಯ ಆತ್ಮಭೇದಗಳಲ್ಲಿ ಒಂದು : "ಇಂದ್ರಿಯ ಸುಖದಲ್ಲೇ ಆಸಕ್ತ ಮತ್ತು ಶರೀರಾದಿಗಳೇ ತಾನು ಎಂದು ತಿಳಿಯುವವ" (ಕೃಕಸೋ. ೦೬೪) : "ಕೋಮಲವಾದ ಮೈಯು. ಮಕ್ಕಳು ಮೊದಲಾದ ಕ್ಷಣಿಕವಿಷಯಗಳಲ್ಲಿಯೇ ಆತುರಗೊಂಡು ಮಗ್ನನಾಗಿರುವ ಜೀವವು, ತನ್ನದು ಪರರದು ಎಂಬ ಭೇದಭಾವವನ್ನು ಕಲ್ಪಿಸುತ್ತ ಹೋಗುವುದು" ಇದು ಬಹಿರಾತ್ಮನ ಲಕ್ಷಣವು (ಕೃಸಕ. ೩೬). [ಸಂ. ಬಹಿರಾತ್ಮನ್]

**ಬಹಿರಾವರಣ** (ನಾ). ಹೊರಗಿನ ಆವರಣ,-ಆಚ್ಛಾದನೆ,-ಮುಸುಕು : ಆತ ನಿರ್ಲೋಭನೂ ವಿಚಿತ್ರನೂ ಆದ ವ್ಯಕ್ತಿ. ಆತನ ಬಹಿರಾವರಣ ಕಳಚಿ ಹೋದಂತಿತ್ತು (ಪಂಚ II, ೪೯); ಈ ಪ್ರೇಮಕ್ಕೆ ಬಹಿರಾವರಣಗಳ ಆಣೆಯಿಲ್ಲ (ಕಾಪೂವ. ೦೦೭). [ಸಂ.]

**ಬಹಿರಿಂದ್ರಿಯ** (ನಾ). ಕಿವಿ, ಕಣ್ಣು, ಚರ್ಮ, ನಾಲಗೆ ಮತ್ತು ಮೂಗು ಎಂಬ ಐದು ಹೊರಗಿನ ಇಂದ್ರಿಯಗಳು; ಬಾಹ್ಯೇಂದ್ರಿಯ : ತರಣಿ ಮಂಡಲದಲ್ಲಿ ದೃಷ್ಟಿಯನಿರಿಸಿ ಬಹಿರಿಂದ್ರಿಯದ ಬಳಕೆಯ ಮುರಿದು ವೇದಾಂತದ ರಹಸ್ಯದ ವಸ್ತು ತಾನಾಗಿ ಇರಲು (ಉಪ್ಪಾಕೃಷ್ಣೆ. ೦೪-೨೨). [ಸಂ.]

**ಬಹಿರಿಗೆ** (ನಾ). ಊರಿನ ಹೊರಗಿನ ಪ್ರದೇಶ,-ಬಯಲುಪ್ರದೇಶ : ತನ್ನ ಭರಡಾರಸಹಿತಂ ಸ್ತ್ರೀಯರ್ಕಳುಮೆರಸು ಗಾಂಧರ್ವದತ್ತೆಯುಂ ಮುಂ ತಾ[ನುಮಿಾ] ವಿಮಾನಂಗಳನೇಱಿ . . . ಪಯಣಂಬಂದು ಚಂಪಾಪುರ ಮನೆಯ್ದಿ ಪುರಬಹಿರಿಗೆಯೊಳ್ ಬೀಡಂ ಬಿಟ್ಟರ್ (ಜೀಚಂ. ೯-೯೦) ; ಪುರ ಬಹಿರಿಗೆಯೊಳ್ ಬಿಟ್ಟರ್ದ ಪಿರಿಯ ಬೀಡಂ ಕಂಡು (ಜೀಚಂ. ೯-೩ ವ) [ಈ ಶಬ್ದವನ್ನು ಸಂಸ್ಕೃತ ವ್ಯಾಕರಣಸೂತ್ರದ ಮೂಲಕ ಸಾಧಿಸುವುದು ಕಷ್ಟ]

**ಬಹಿರು** 'ಬಹಿರ'ನೋ.

**ಬಹಿರುದ್ಯಾನ** (ನಾ). ಊರ ಹೊರಗಿನ ಉದ್ಯಾನ : ಬಹಿರುದ್ಯಾನಾಂತರ ದೊಳ್ ಸಹಸೋದಿತಮತ್ತಕೋಕಿಲೋಚ್ಚೈರ್ಧ್ವಾನಂ ಮುಹುರಾರ್ಜನಸೆ ಪಡೆದತ್ತರ್ಹನಿಶಂ ವರ್ಧನಂತರಂಗಕ್ಕನ್ನಾ (ಕವಿಕಾ. ೦-೩೩); ಬಹಿರುದ್ಯಾನದ ಕಲದೊಳ್ . . . ಮಾಡಿಸಿದಂ ಗೃಹಮಹತ್ತರಂ ನಿಮಿಷದಿಂ ಸ್ವಯಂವರ ಗೃಹಮಂ (ಕಂಠಾಪೂ. ೯-೩೯). [ಸಂ.]

**ಬಹಿರ್ಗತ** (ಗು). ೧. ಹೊರಹೊಮ್ಮಿದ ; ಪ್ರಕಟಗೊಂಡ. (ನಾ). ೨. [ನಾಟ್ಯ] ಆವರ್ತಿತ, ನತ, ಉತ್ಕ್ಷಿಪ್ತ, ಉದ್ವಾಹಿತ, ಪರಿವರ್ತಿತ, ನಿಸ್ಸೃತ, ಪರಾವೃತ್ತ, ತಿರಶ್ಚೀನ, ಬಹಿರ್ಗತ ಮತ್ತು ಕಂಪಿತ ಎಂಬ ಕಣಕಾಲುಗಳ ಹತ್ತು ಬಗೆಯ ಚಲನೆಗಳಲ್ಲಿ ಒಂದು : "ಜಂಘೆಯನ್ನು ಪಕ್ಕಕ್ಕೆ ನೀಡುವುದು" (ಶಾಸ್ತ್ರರಂ. ಗದ್ಯಾನುವಾದ. ೨೬೯) ; ಮಿಗೆ ಪಾರ್ಶ್ವಕ್ಕಂ ನೀಡುತ್ತೊಗೆದತಿ ಪಸರಿಸೆ ಬಹಿರ್ಗತಾಖ್ಯಂ (ಶಾಸ್ತ್ರರಂ. ೨-೦೪೭). ೩. ಹಿಮ್ಮಡಿಗಳ ಎಂಟು ವಿಧವಾದ ಚಲನೆಗಳಲ್ಲಿ ಒಂದು : ಉತ್ಕ್ಷಿಪ್ತ, ಪತಿತ, ಉತ್ಕ್ಷಿಪ್ತಪತಿತ, ಅಂತರ್ಗತ, ಬಹಿರ್ಗತ, ಮಿಥೋಯುಕ್ತ, ವಿಮುಕ್ತ, ಅಂಗುಲಿಸಂಗತ—ಈ ಎಂಟು ಪಾರ್ಷ್ಣಿಯ ಭೇದಂಗಳ್ (ಶಾಸ್ತ್ರರಂ. ೩-೦೦೦ ವ). ೪. ಐದು ವಿಧವಾದ ಹರಡಿನ ನ್ಯಾಸಗಳಲ್ಲಿ ಒಂದು ವಿಧ : ಅಂಗುಷ್ಠಸಂಶ್ಲಿಷ್ಟ, ಅಂತರ್ಯಾತ, ಬಹಿರ್ಗತ, ಮಿಥೋಯುಕ್ತ, ವಿಯುತ—ಈ ಐದು ಹರಡಿನ ಭೇದಂಗಳ್ (ಶಾಸ್ತ್ರರಂ. ೩-೦೦೦ ವ). [ಸಂ.]

**ಬಹಿರ್ದಾಹಿನಿ** (ನಾ). (ಹೊರಮೈಯನ್ನು ಸುಡುವ) ಒಂದು ಬಗೆಯ ಆಯುಧ : ಬಿಲ್ಲು ತೀರು ಹದೆ . . . ಅಂತರ್ದಾಹಿನಿ ಬಹಿರ್ದಾಹಿನಿ ಆಕಾಶಗಾಮಿನಿ . . . ಪೇಟಕ ಮುಂತಾದ ಶತ್ರುಜಯಾತ್ಮರಕ್ಷಾಧಿಸಾಧನ ವಿಶೇಷಂಗಳಿಂದಲೂ (ಎವೇಕ. ೨೬೩). [ಸಂ. ಬಹಿರ್ದಾಹಿನೀ]

**ಬಹಿರ್ದೃಷ್ಟಿ** (ನಾ). ೧. ಹೊರನೋಟ,-ದೃಷ್ಟಿ. ೨. ಹೊರಗಿನದನ್ನು

ಪರೀಕ್ಷಿಸಿ ನೋಡುವ ದೃಷ್ಟಿಯುಳ್ಳವನು; ಹೊರನೋಟವುಳ್ಳವನು: ಅಂತರ್ದೃಷ್ಟಿಗಳು, ಬಹಿರ್ದೃಷ್ಟಿಗಳು, ಅವತಾರದೃಷ್ಟಿಗಳು, ಸರ್ವದೃಷ್ಟಿಗಳು ಎಂದು ಭಗವದ್ರೂಪದರ್ಶನವಿಭಾಗದಿಂದ ಮನುಷ್ಯರು ಬಹಿರ್ದೃಷ್ಟಿಗಳು (ಹಿಂರಹಾ. ೨೯೦). [ಸಂ.]

**ಬಹಿರ್ದೆಸೆ** (ನಾ). ಶೌಚಕ್ರಿಯೆ: ಬಹಿರ್ದೆಸೆಗೆ ಹೋಗಿರುವವರು ಇನ್ನೂ ಬಂದಿಲ್ಲ (ಜೂಜ). [< ಸಂ. ಬಹಿರ್ದಿಶಾ]

**ಬಹಿರ್ದೇಶ** (ನಾ). ೧. ಹೊರಭಾಗ; ಹೊರವಲಯ: ರಾಜಶೇಖರ ರಾಜೇಂದ್ರಂ ರಾಜವೀಥಿಯುಂ ದಾಂಟಿ ಪುರಬಹಿರ್ದೇಶದ ವೈಹಾಳಿಯ ಬಯಲ್ಗೆ ಸಂಭ್ರಮದಿಂ ಬರೆ (ರಾಜಶೇ. ೦೩-೮೨ ವ). ೨. ಬೇರೆಯ ದೇಶ: ಹೊರನಾಡು. ೩. ಹಳ್ಳಿ, ಊರುಗಳಿಲ್ಲದ ಸ್ಥಳ. ೪. ಮಲಮೂತ್ರವಿಸರ್ಜನೆ; ಶೌಚಕ್ರಿಯೆ: ಪೀರಾಲಿಯು . . . ಬಹಿರ್ದೇಶಕ್ಕೆ ಹೋಗಿ ಬಂದ ನಂತರ ಹಾಜರಾಗುವೆನು ಎಂದು ಹೇಳಿದನು (ಜೂಠಾತಿ. ೩೬೬); ಅವಳ ಮಾತನ್ನು ಅಲ್ಲಿ ಬಹಿರ್ದೇಶಕ್ಕೆಂದು ಹೋಗಿದ್ದ ವೃಷಭೇಂದ್ರನ ತಂದೆ ಕೇಳಿಕೊಂಡು ಮನೆಗೆ ಬಂದು ಹೆಂಡತಿಗೆ ಹೇಳಿದರು (ಕಾಗಿಶ. ೮೩). [ಸಂ.]

**ಬಹಿರ್ದ್ವಾರ** (ನಾ). ೧. ಹೊರಬಾಗಿಲು; ಮುಂದಿನ ಬಾಗಿಲು. ೨. ಬಾಗಿಲಿನ ಹೊರಗಿರುವ ಪ್ರದೇಶ; ಹೊರಅಂಗಳ. [ಸಂ.]

**ಬಹಿರ್ಭಾಗ** (ನಾ). ಹೊರಭಾಗ; ಹೊರಗಡೆ: ಎಯ್ದೆ ಬಹಿರ್ಭಾಗದೊಳ್ ನಿಂದು ವಿಶ್ವಸೇನಮಹಾರಾಜಂಗೆ ಪೊಬಲಂ ಬೇಗಸಪ್ಪಶೋಭೆಯುಂ ಗೆಯ್ಯಲ್ವೇಟ್ಟುಪುದುಂ (ಶಾಂತಿಪು. ೦೦-೬೬ ವ); ಆ ಹಯಂ ಬಳಿಕ ದಕ್ಷಿಣದಿಶಾಮುಖವಾಗಿ ಮಾಹಿಷ್ಮತೀಪಟ್ಟಣದ ಬಹಿರ್ಭಾಗದುಪವನದೆಡೆಗೆ ನಡೆತಂದುದು (ಕೃಜಿಚಾ. ೬-೦೧). [ಸಂ.]

**ಬಹಿರ್ಮಂಡಲ** (ನಾ). ಒಬ್ಬ ರಾಜನ ಸ್ವಂತ ಅಧಿಕಾರಕ್ಕೆ ಹೊರತಾದ ರಾಜ್ಯ; ಶತ್ರುರಾಜ್ಯ: ನಿನಗರಸ ಬಹಿರ್ಮಂಡಲ [ಶಾಜಾ. ೪] ಮನೆ ಸಮುಚಿಲ್ಕಿನಿತು ಬರಿಸವುಂ ಪೋದವು ಕೇಳಿನಿಸಂತರ್ಮಂಡಲಸಾಧನ ಮುಂಟೆಂದೆಚಿಟಿದುದುಮಾ ನಿನ್ನಲ್‍ಪುವವೇ (ಅಜಿಪು. ೦೧-೦೩). [ಸಂ.]

**ಬಹಿರ್ಮುಖ** (ಗು). ೧. ಮನಸ್ಸು ಹೊರಮುಖವಾಗಿರುವ; ಬಾಹ್ಯ ವಿಚಾರಗಳಲ್ಲಿ ಆಸಕ್ತಿಯಿಂದ ಕೂಡಿದ. ೨. ಮುಖವನ್ನು ಬೇರೆಡೆಗೆ ತಿರುಗಿಸಿ ಕೊಂಡಿರುವ; ವಿಮುಖವಾದ. (ನಾ). ೩. ಬಾಹ್ಯ ವಿಷಯಗಳಲ್ಲಿ ಅನುರಕ್ತವಾದ ಸ್ಥಿತಿ: ಅಜ್ಞಾನದಿಂದ ಆವರಿಸಲ್ಪಟ್ಟವನಾಗಿಯೂ ವಿಷಯಾದಿಗಳಿಂದ ಬಾಧಿತನಾಗಿಯೂ ಬಹಿರ್ಮುಖವಾದ ಮನಸ್ಸುಳ್ಳವನಾಗಿಯೂ ವ್ಯವಹಾರ ಮಾಡುತ್ತಿದ್ದೇನೆ (ಮುಕ್ತಾಕ. ೨೬೦). ೪. ವಿಮುಖನಾದವನು: ತಾಂ ಪಿತೃವಿತೃಮದೋನ್ಮತ್ತನಾಗಿ ಧರ್ಮದೊಳ್ ಬಹಿರ್ಮುಖನುಂ ಅರ್ಥದೊಳನ್ಯಾಯೋಪಾರ್ಜಿತಾರ್ಥನುಂ . . . ಆಗಿ (ಕಂಕಕಂ. ೨೬-೨). [ಸಂ.]

**ಬಹಿರ್ಯಾನ** (ನಾ). ೧. ಹೊರಹೋಗುವುದು. ೨. [ಜೈನ] ಐವತ್ತು ಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಎಂಟನೆಯ ಕ್ರಿಯೆ; ☞ ಮಗು ಹುಟ್ಟಿದ ಎರಡು, ಮೂರು ಅಥವಾ ನಾಲ್ಕನೆಯ ತಿಂಗಳಲ್ಲಿ ಅನುಕೂಲವಾದ ಶುಭದಿವಸದಂದು ಮಗುವನ್ನು ಪ್ರಸೂತಿಗೃಹದಿಂದ ಹೊರಕ್ಕೆ ಕರೆದುಕೊಂಡು ಹೋಗುವುದು; ಉಪನಿಷ್ಕ್ರಮಣ: ದ್ವಾದಶಾಂಗದೊಳ್ ಪೇಟ್ದಾದಾನ ಪ್ರೀತಿ ಸುಪ್ರೀತಿ ಧೃತಿ ಮೋದಪ್ರಿಯೋದ್ಭವ ನಾಮಕರ್ಮ ಬಹಿರ್ಯಾನ . . . ತ್ಯಾಗ ನಿವೃತ್ತಿಯೆಂಬಯ್ವತ್ತು ಮೂಱು ಗರ್ಭಾದಿನಿರ್ವಾಣಪರ್ಯಂತಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಅಜಿಪು. ೦೩-೦೩ವ); ಆದಾನಮುಂ . . . ಬಹಿರ್ಯಾನಮುಂ ನಿಷದ್ಯೆಯುಂ . . . ಅಗ್ರನಿವೃತ್ತಿಯುಮೆಂದಾದಾನಾದಿ ನಿರ್ವಾಣಪರ್ಯಂತಮಪ್ಪ ಯ್ವತ್ತುಮೂಱುಗರ್ಭಾನ್ವಯಕ್ರಿಯೆಯೊಳ್ (ಶಾಂತಿಪು. ೨೦೨). [ಸಂ.]

**ಬಹಿರ್ಲಾಪಿ** (ನಾ). ಒಂದು ಬಗೆಯ ಪದ್ಯಬಂಧ: ಪ್ರಶ್ನೆ ಅಥವಾ ಶ್ಲೋಕಗಳಲ್ಲಿರುವ ಶಬ್ದಗಳಿಂದ ಬೇರೆಯಾವ ಕಡೆ ಉತ್ತರವನ್ನು ಹುಡುಕಿ ಹೇಳುವುದು; ☞ ಇದು ಅಂತರ್ಲಾಪಿಗೆ ವಿರುದ್ಧವಾದುದು: ಒಂದು ಸಜ್ಜೆವನೆಯೊಳೊರ್ವಕ್ಕರಿಗೆಬೋಜಂಗಂ ಸೊರ್ಕಿ ಜವ್ವನಗೆ ಸಕ್ಕದದ ಬಹಿರ್ಲಾಪಿಯುಂ ಪೇಳ್ದಂ (ರಾಜಶೇ. ೧೧-೧೭೦ ವ). [ಸಂ. ಬಹಿರ್ಲಾಪಿನ್]

**ಬಹಿರ್ಲೇಪ** (ನಾ). ಹೊರಗಿನ ವಿಷಯದಲ್ಲಿ ಮನಸ್ಸು ಆಸಕ್ತವಾಗಿರುವುದು: ಅಸುರಂಗಮುಂ ವಿರಂಗಮುಮುಳ್ಳ ವಿಷಯಂಗಳು ಯೆನಿಪ ವಿಷಯಂಗಳಂ ಪಿಡಿವಲ್ಲಿ ಬಿಡುವಲ್ಲಿ ಮನದೊಳನಿಸಂ ಬಹಿರ್ಲೇಪವಂತರ್ಲೇಪಮೆಂಬುಭಯಮುಮಭಾವದಿಂದನವರತ ಪರಶಿವಾದ್ವೈತನಿಷ್ಠೆಯೊಳು ನಿಂದ (ಅಚಾ. ೩೪-೪೨). [ಸಂ.]

**ಬಹಿರ್ವಣ** (ನಾ). ಊರ ಹೊರಗಿನ ಉದ್ಯಾನ; ತೋಟ: ಅಣಿಯರಮುಖದರ್ಶನವಂತರ್ವಣದ ಬಹಿರ್ವಣದ ಕಂಪು ಪೊಂಪುಳಿವಡೆ ಪಟ್ಟಣವಿರ್ಪುದು ಮದಿಲೊಳ್ಳಂತಿಣೆಯೆನೆ ಪರಿವಾಳದ ಬಳಿಸಂ ಕಟ್ಟಿದಪೂರ್ (ಅಪಂಪು. ೦-೯೬). ☞ ಇದು ಪ್ರಾಸಕ್ಕಾಗಿ ಮಾಡಿಕೊಂಡ ರೂಪ. [<ಸಂ. ಬಹಿರ್ವನ]

**ಬಹಿರ್ವನ** (ನಾ). = ಬಹಿರ್ವಣ: ಗಿರಿಂದ್ರಜಾ . . . ಬಹಿರ್ವನದೊಳ್ ಗಣ ಬಾಲಚೂತಾಂಕುರವುಂ ಬಲವಂದು (ಗಿರಿಕ. ೩-೧೦೩ ವ). [ಸಂ.]

**ಬಹಿರ್ವರ್ತನೆ** (ನಾ). ಹೊರಗಿನ ನಡವಳಿಕೆ; ಬಾಹ್ಯ ವ್ಯವಹಾರ: ಬಹಿರ್ವರ್ತನೆಯಲ್ಲಿ ಕಾಣುವ ಅಂಶಗಳನ್ನೇ ತೆಗೆದುಕೊಂಡು ತನ್ನ ನೂತನವಾದವನ್ನು ರೂಪಿಸಿದನು (ತಿಕ್ಷದ. ೯೨೯). [ಸಂ. ಬಹಿರ್ವರ್ತನ]

**ಬಹಿರ್ವಳಿಯ** (ನಾ). ಮೂಲವ್ಯಾಧಿಯಲ್ಲಿ ಒಂದು ಬಗೆ; ಗೂದೆ ಹೊರಬರುವ ರೋಗ: ವಿಷಮಾಸನದಿಂದ . . . ಮೇಲೆ ಮೇಲೆ ಭೋಜನವ ಮಾಡುವುದರಿಂದ ಮೂಲವ್ಯಾಧಿಯಕ್ಕುಂ. ಅದರ ಪ್ರಕಾರ— ಇರುದೆಸೆ, ಬಿಸಿಯ ರಕ್ತ ಅಪಾಟಕ್ಕಳಿದು ಬಂಧವಾಗಿ ಸಂಗ್ರಹಿಸಿ ಅಂತರ್ವಳಿಯ, ಬಹಿರ್ವಳಿಯುಂ ಎಂದು ಒಂದೆರಡು ಪ್ರಕಾರಮಕ್ಕು. ಅದು ರಕ್ತ ಒಡೆಯದೆ ಗುದದೊಳು, ಗಟ್ಟಾಗಿಯಿಕ್ಕುಂ, ಅಂತರ್ವಳಿಯ ಉಪವಾಸದಿಂದೆ, ಕಠಿಣಾಸನದಿಂದಂ ಮಲ ಶುಷ್ಕವಾಗಿ ಪೊಕ್ಕು ರಕ್ತ ಒಡೆಯದೇ ಮೊಳಗು ತೋರ್ಕು. ಗೂದೆ ಹೊಜವಟ್ಟು ಬಹಿರ್ವಳಿಯ ಮಕ್ಕು (ಖಚ್ಚಾಂ. ೦೧೦). [ ? ]

**ಬಹಿರ್ವಾಸ** (ನಾ). (ಹೆಗಲ) ಮೇಲೆ ಹಾಕಿಕೊಳ್ಳುವ ವಸ್ತ್ರ: ಕಂಗೊಳಿಸುವ ಧವಳಬಹಿರ್ವಾಸಮುಂ ತೊಟ್ಟು ಕಣ್ಗಳೊಳು ಕರುಣಾಮೃತರಸವ ತುಂಬಿ ಸರ್ವರುಂ ಸಲಹುವ ಯತೀಶನಾರೆ (ಸಿದ್ಧೇಪು. ೦೩-೩೩); ದಂಡಂ ಭಸಿತಾಧಾರಂ ಬಹಿರ್ವಾಸಮುಮುಮರ್ಣರ ಲಿಂಗಾಂಗಸಂಯುಕ್ತ ಯೋಗಿಪ್ರಸರಂ ಬಂದಿರ್ದುದು (ಚೈಕಪ. ೩-೧೯). [ಸಂ. ಬಹಿರ್ವಾಸಸ್]

**ಬಹಿರ್ವೇದಿ** (ನಾ). ಯಜ್ಞಶಾಲೆಯ ಹೊರ ಜಗಲಿ: ನೆರೆದುದವನೀಪಾಲಜನಸಾಗರ ಬಹಿರ್ವೇದಿಯ ಮಹಾಚಪ್ಪರದೊಳಗೆ ತಂತಮ್ಮ ಸಿಂಹಾಸನಸಗಾಢದಲಿ (ಕುಮ್ಮಾಪ. ೬-೨೯); ಬರ್ಹಿ ಸಮಿಧಾಜ್ಯ ತಿಲ ವ್ರೀಹಿ ಚರುವಾದಿಯಾದ ಯಜ್ಞಸಂಭಾರಮುನಿರಿಸಿ ಅಂತರ್ವೇದಿ ಬಹಿರ್ವೇದಿ ಆಹವನೀಯಗಾರ್ಹಪತ್ಯದಕ್ಷಿಣಾಗ್ನಿಯ ರಚಿಸಿ (ರಜಾಪ. ೮-೩೪ ವ). [ಸಂ.]

**ಬಹಿಸ್ಸಂಕೆ** (ನಾ). = ಬಹಿರ್ದೇಶ ೪: ಒಬ್ಬ ಹುಡ್ಗನು ಅಡಕೆಯ ಬಾಯೊಳಿಟ್ಟು ಎಲೆಯ ಕೈಯೊಳ್ಪಿಡಿದು . . . ಬಹಿಸ್ಸಂಕೆಗೆ ಪೋಪಲ್ಲಿ ಎಡಹಿ ಬಿದ್ದು ಎಲೆ ಅಡಕೆಯೊಳು ಬೀಳೆ ತಾನು ಬಿದ್ದು ಆ ಪಟ್ಟಣವ ಬೈವುತ್ತಿರಲು (ಕೃಕಷೊ. I. ೨೬೨). [<ಸಂ. ಬಹಿಶ್ಶಂಕಾ]

**ಬಹಿಷ್ಕರಿಸು** (ಕ್ರಿ). ೧. ಬಹಿರಂಗಪಡಿಸು; ಪ್ರಕಟಿಸು: ಮೆಲ್ಲ

ವೆಲ್ಲನೆ ಮಾತುದೆಗೆವಸಂತ್ಯಕರಣದಲ್ಲಿರ್ದುದಂ ಬಹಿಷ್ಕರಿಸಬೇಕೆಂದೆನುತ ಬಲ್ಲಂಗೆ ಬಲ್ಲಹಂ ಚೆನ್ನಬಸವೇಶ್ವರಂ ವಿಸಯಸಂಪ್ರೀತಿವೆರೆದ ಸೊಲ್ಲಿನಿಂದ . . . ಇಂತೆಂದನು (ಕಂಥ. ೬-೨೬). ೨. ಪ್ರಕಟಿಸಿಕೊಳ್ಳು : ಗೋಚರಿಸು : ಅಖಂಡಪರಿಪೂರ್ಣಜ್ಯೋತಿಯೇ ಪ್ರೈದಾಳಿ ನಿಃಕಳಂಕ ಮಲ್ಲೇಶ್ವರನಾಗಿ ಬಹಿಷ್ಕರಿಸಿ ರುದ್ರಪ್ರಮಥಗಣಂಗಳೊಡಗೂಡಿ ಪ್ರಕಟವಾದ ಮಾರಪ್ಪನ ಪರಮಾನಂದ ಮೇರೆಗಳೆದ ಮಹಾಸಾಗರದಂತೆ ಹರಿಯಿತು (ಪೋತೀಖಾ. ೬೪ ಕೃಷ್ಣಪನ). ೩. (ಯಾವುದಾದರೂ ಧಾರ್ಮಿಕದೃಷ್ಟಿಯಿಂದ ತಪ್ಪುಮಾಡಿದ ವ್ಯಕ್ತಿಯನ್ನು ಜಾತಿ, ದೇಶ ಮೊದಲಾದುವುಗಳಿಂದ) ಹೊರಹಾಕು : ಧಾರ್ಮಿಕವಾಗಿ ಸಮಾಜದಿಂದ ದೂರಮಾಡು : ಇವಳ ಮನೆಗೆ ಹೋಗಬಾರದು. ತಾವು ಮೀರಿ ಹೋಗುವಿರಾದರೆ ಜನರು ತಮ್ಮನ್ನೂ ಬಹಿಷ್ಕರಿಸುವರು (ಕಥಾ. ೪೦೪). ೪. ಹೊರದೂಡು ; ತಿರಸ್ಕರಿಸು : ಪಶುಪಕ್ಷಿಗಳನ್ನು ಸಂರಕ್ಷಿಸುವ ನೀವು ಮಾನವಪ್ರಾಣಿಗಳನ್ನು ಬಹಿಷ್ಕರಿಸುತ್ತೀರಿ (ರಮಗಾ. ೩೩). [<ಬಹಿಷ್ಕಾರ + – ಇಸು₃]

**ಬಹಿಷ್ಕಾರ** (ನಾ). ೧. ಹೊರದೂಡುವಿಕೆ : ಹೊರಹಾಕುವಿಕೆ. ೨. (ಯಾವುದಾದರೂ ಧಾರ್ಮಿಕದೃಷ್ಟಿಯಿಂದ ತಪ್ಪು ಮಾಡಿದ ವ್ಯಕ್ತಿಯನ್ನು ಜಾತಿ, ದೇಶ ಮುಂತಾದುವುಗಳಿಂದ) ಬಹಿಷ್ಕರಿಸುವಿಕೆ: ಊರಿನವರು . . . ದಾಸನಿಗೆ ಬಹಿಷ್ಕಾರಪತ್ರವನ್ನು ತರಿಸಿ ಶುಭಸ್ವೀಕಾರದ ದಿವಸ ಅದನ್ನು ಓದಿಸಿದರು (ಕಥಾ. ೪೦೩) : ವಿಠಲಪಂತ್ ಸಂಸಾರಿಯಾದದ್ದು ಎಂದರೆ ಸಮಾಜದ ಬಹಿಷ್ಕಾರಕ್ಕೆ ತುತ್ತಾದದ್ದು ಎಂದು (ಭಾರರ. ೨೯೨).

**ಬಹಿಷ್ಕಾರ ಕೊಡು** = ಸಮಾಜದಿಂದ ಹೊರಗೆ ಹಾಕು : ಮಾಸಲ್ಮಾನನಾದನೆಂದು ಆತ್ಮೀಯರೆಲ್ಲರೂ ಅವನಿಗೆ ಬಹಿಷ್ಕಾರ ಕೊಟ್ಟು ಶುದ್ಧವಾಗಿ ತ್ಯಜಿಸಿಬಿಟ್ಟರು (ಕಪಾಕಂ. ೩೪). **ಬಹಿಷ್ಕಾರ ಹಾಕು** = ಬಹಿಷ್ಕಾರ ಕೊಡು : ನನ್ನ ದಾಸನಿಗೆ ಬಹಿಷ್ಕಾರ ಹಾಕಿದರೆ ನಿನ್ನ ಬಳಿ ನಾನಿರುವೆನೆ ? (ಕಥಾ. ೪೦೩) ; ಶೃಂಗೇರಿಯ ಗುರುಗಳಿಗೆ ಈ ಸುದ್ದಿ ತಲುಪಿ ಇಡಿಯ ಅಗ್ರಹಾರಕ್ಕೇ ಬಹಿಷ್ಕಾರ ಹಾಕಿದರೆಂದೂ ಪ್ರತೀತಿ (ಸಂಸ್ಕಾರ. ೦೩). [ಸಂ.]

**ಬಹಿಷ್ಕಾರಿ** (ನಾ). ಹೊರಹಾಕಲ್ಪಟ್ಟವನು ; ಬಹಿಷ್ಕೃತನಾದವನು : ಚೋರನನು . . . ಸಮುಚಯವಿಕಾರಭೇದಿಯನಿಂತಜುವರನು ಕಂತ್ರು ಮನ್ನಿಸದೆ ದೂರದಲಿ ವರ್ಜಿಸುವುವು ಬಹಿಷ್ಕಾರಿಗಳು ಸರ್ವಕ್ಕವರುಗಳು (ಶಬ್ದಾಶಾ. ೪-೪೬). P ಸಂಸ್ಕೃತದಲ್ಲಿ ಇದಕ್ಕೆ ಕರ್ತೃ ಅರ್ಥ ಮಾತ್ರ ಇದೆ. [ಸಂ. ಬಹಿಷ್ಕಾರಿನ್]

**ಬಹಿಷ್ಕೃತ** (ಗು). ೧. ಬಹಿಷ್ಕಾರಕ್ಕೊಳಗಾದ; ಹೊರದೂಡಲ್ಪಟ್ಟ: ನುತವಶೀಕೃತ ಭರ್ಗ ನಿಶ್ಯಾಶ್ರಿತ ಮಹೇಶ್ವರ ಭಕ್ತವರ್ಗ ಸುಹಿತ ಘನಪ್ರತಿವೀರಮಾರ್ಗ ಬಹಿಷ್ಕೃತ ಸ್ವರ್ಗ (ಬಸಪು. ೩೬-೬೮). (ನಾ). ೨. ಸಮಾಜದಿಂದ ಹೊರಹಾಕಲ್ಪಟ್ಟವನು ; ಬಹಿಷ್ಕಾರಕ್ಕೆ ಒಳಗಾದವನು. [ಸಂ.]

**ಬಹಿಷ್ಕೃತೆ**(ನಾ). ಹೊರಕ್ಕೆ ದೂಡಲ್ಪಟ್ಟವಳು: ಬಹಿಷ್ಕಾರಕ್ಕೊಳಗಾದವಳು : ತನ್ನದೆಂದು ಕರೆಯಬೇಕಾಗಿದ್ದ ಮನೆಯಲ್ಲೇ ಬಹಿಷ್ಕೃತೆಯಾಗಿ (ಕಾವ್ಯ. ೨೦೯). [ಸಂ. ಬಹಿಷ್ಕೃತಾ]

**ಬಹಿಷ್ಠೆ** (ನಾ). ಹೊರಗಾದವಳು ; ಮುಟ್ಟಾದವಳು : ರಜಸ್ವಲೆ : ನಾನು ಬಹಿಷ್ಠೆಯಾಗಿದ್ದೇನೆ. ಒಂದೇ ಬಟ್ಟೆಯಲ್ಲಿದ್ದೇನೆ (ಕಕಥಾ. ೯೬) : ಬಹಿಷ್ಠೆಯಾಗಿದ್ದ ದ್ರೌಪದಿಯನ್ನು . . . ಸೆಳೆದುಕೊಂಡು ಬಂದು ಸಭಿಕರ ಮುಂದೆ ನಿಲ್ಲಿಸಿದನು (ಶ್ರೀಕೃಶ. ೦೦೬). [ಸಂ. ಬಹಿಷ್ಠಾ]

**ಬಹಿಷ್ಪ್ರಜ್ಞ** (ನಾ). ಹೊರಪ್ರಪಂಚದ ಅರಿವುಳ್ಳವನು; ಬಾಹ್ಯಜ್ಞಾನವುಳ್ಳವನು : ಜಾಗೃತಾವಸ್ಥೆಯೇ ಮೊದಲನೆಯದು. ಇದಕ್ಕೆ ಸಂಬಂಧಪಟ್ಟಂತೆ ಐದುವಿಷಯಗಳನ್ನು ಹೇಳಿದೆ: —೧. ಬಹಿಷ್ಪ್ರಜ್ಞ—ಬಾಹ್ಯಜ್ಞಾನವುಳ್ಳವನು (ಶಂಪಾಕ್ಕ. ೦೨೬). [ಸಂ.]

**ಬಹಿಸ್ತಟ** (ನಾ). ಹೊರಗಡೆಯ ದಡ : ಹೊರದಂಡೆ : ಪೂಗವನಂಗಳಿಂದೆಲೆಯ ಬಳ್ಳಿಗಳಿಂ ತೆಂಗಿನಲ್ಲಿನಲ್ಪಡಂಗಾಗೆ ಬಹಿಸ್ತಟಂ ಪುದಿದ ತಾವರೆವಳ್ಳಿಯ ತಳ್ಪಿನಿಂ ಪಸುಪರ್ಗೆ (ಮಲ್ಲಿಪು. ೨-೪೩). [ಸಂ.]

**ಬಹಿಸ್ಥ** (ನಾ). [ಜ್ಯೋತಿ] (ರಾಶಿಚಕ್ರದ) ಹೊರಭಾಗ : ಉರಗನಿಂದೆ ತಾರೆ ಮುಖದೊಳ್ ಸಲೆ ಮೂಜುಸಿರಕ್ಕೆ . . . ಬಹಿಸ್ಥವಾಜು ತಳ್ತಿರೆ ತೆನೆ ನಂಜು ಕಾಡಿಗೆ ವಿಶೇಷಫಲಂ ಕಡುಸಣ್ಣಮಾಕ್ಕಂ (ಅಟ್ಟಪು. ೯-೨). [ಸಂ.]

**ಬಹು** (ಗು). ೧. ಹೆಚ್ಚು ; ಅಧಿಕ ; ಬಹಳ. ೨. ದೊಡ್ಡದಾದ : ಹಿರಿಯ. (ನಾ). ೩. ಅಧಿಕವಾದುದು : "ಪ್ರಭೂತಂ . . . ಬಹುಳಂ, ಬಹು . . . ಭೂರಿ— ೧೨ ಅಧಿಕವಾದದ್ದರ ಹೆಸರುಗಳು" (ಸಿದ್ಧಾಂತಿ. ೩೪೦).

**ಬಹುಮಟ್ಟಿಗೆ**=ಬಹಳವಾಗಿ ; ಬಹುತೇಕ : ಹೀಗೆ ಬಹುಮಟ್ಟಿಗೆ ಎಲ್ಲ ಸಾರಜನಕವೂ ಸೂರ್ಯನ ಸುತ್ತಲಿನ ಮೋಡದಲ್ಲೇ ಉಳಿಯಿತು (ಭೂಹುಟ್ಟು. ೬೦) ; ಅವರ ಅನುಭವ ಪಾಂಡಿತ್ಯಗಳನ್ನು ಒಳಗೊಂಡ ಈ ಗ್ರಂಥ ಬಹುಮಟ್ಟಿಗೆ ನಿರ್ದುಷ್ಟವಾಗಿದೆ (ಗೃಹಶ. IV ಮುನ್ನುಡಿ). **ಬಹುಮಟ್ಟು**=ಬಹುಮಟ್ಟಿಗೆ : ಇಬ್ಬರಲ್ಲೂ ಬಹುಮಟ್ಟಿನ ಸಾಮ್ಯವೂ ಇದೆ (ಜಗದಾ. ೦೦೬). [ಸಂ.]

**ಬಹುಕಳಿ** (ನಾ). ಮಲ್ಲಯುದ್ಧದ ಒಂದು ಪಟ್ಟು.—ವರಸೆ: ರಂಗವುಂ ಪೊಕ್ಕು ಭುಜಾಸ್ಫಾಳನಂ ಗೆಯ್ದುಬ್ಬಿದೊಡೆ . . . ಪೊಕ್ಕಮರ್ದು ಸಮಲತಾ ಬಹುಕಳಿ ಕತ್ತರಿಗಳಿಂ ಗಾಯಮುಜಿದೊತ್ತಿ ನೋಡಿ (ಬಂಹಂ. ೬-೩೦ ವ). [ ? ]

**ಬಹುಕುಟುಂಬಿ** (ನಾ). ದೊಡ್ಡಸಂಸಾರವುಳ್ಳವನು : ಮನೆ ತುಂಬ ಮಕ್ಕಳು ಮೊಮ್ಮಕ್ಕಳನ್ನು ಪಡೆದ ಬಹುಕುಟುಂಬಿಯಾದವನು (ಶಂಬಾಂಕ. ೯೨). [ಸಂ. ಬಹುಕುಟುಂಬಿನ್]

**ಬಹುಕುಳ** (ಗು). ಅನೇಕ : ಅಧಿಕವಾದ : ಅಳವಡಿಯದ ಭಾಷೆ ಬಹುಕುಳವಾದ ನುಡಿ ಇಂತೆರಡಜಿ ನುಡಿ ಹುಸಿಯಾಯ್ತು (ಅಶಶಂ. ೩೦-೦೩೦). [ಬಹು + ಕುಳ₂]

**ಬಹುಗ್ರಾಹಿ** (ನಾ). [ವೈದ್ಯಶಾ] ಅನೇಕ ರೋಗಗಳನ್ನು ವಾಸಿಮಾಡುವಂತಹುದು : ಬಹುರೋಗನಾಶಕ : ಮದನಕಾಮೇಶ್ವರೀ ಗುಳಿಗೆ . . . ಹಸುವಿನ ತುಪ್ಪದಲ್ಲಿ ವಾತನಾ. ಕಬ್ಬಿನ ಹಾಲಲ್ಲಿ ತ್ರಿದೋಷಹರ. ಲವಂಗದ ಪುಡಿಯಲ್ಲಿ ಬಹುಗ್ರಾಹಿ (ವೈಶಿ. ೪೦). [ಸಂ. ಬಹುಗ್ರಾಹಿನ್]

**ಬಹುಚಾರಿ** (ನಾ). ಅತಿಶಯವಾಗಿ ಚಲಿಸುವಿಕೆ. — ತಿರುಗುವಿಕೆ : ಕ್ರೂರನೆನಿಸಿ ಶಾಂತನೆನಿಸಿ ಮತ್ತೊಮ್ಮೊಮ್ಮೆ ವೀರನೆನಿಸಿ ಹೇಡಿಯೆನಿಸಿ ನಾರಿಯೆನಿಸಿ ಮಲ್ಲನೆನಿಸಿ ಹಂಸನ ಬಹುಚಾರಿಯಾಡುವುವು ಕರ್ಮಗಳು (ಶರಕ. ೬೬-೦೦೦). [ಸಂ. ಬಹುಚಾರಿನ್]

**ಬಹುಚಾಳಿ** (ನಾ). [ನಾಟ್ಯ] ನೃತ್ಯದ ಒಂದು ಪ್ರಕಾರ : ಪೇಜಿವಾಂಗ ಪ್ರತ್ಯಂಗೋಪಾಂಗ ಬಹುಚಾಳಿ ಪರದೇಶಿಕೋಲಚಾರಿಗಳ ಪಿರಿದಾಂಗಹಾರ ಮಂಡಲ ರೇಕ್ಷೇತ್ರ ಬಿರುದಿನ ನಾಟ್ಯವಾಡಿದರು (ಕಾಸವಿ. ೮-೬೩). [ಬಹು + <ಚಾಳಿ₁]

**ಬಹುತೆ** (ನಾ). ೧. ಒಂದಕ್ಕಿಂತ ಹೆಚ್ಚು ಸಂಖ್ಯೆಯಿಂದ ಕೂಡಿದುದು : ಹಿನ್ನಿನ ಎಲ್ಲ ಕಬ್ಬ ಎಂದು ಬಹುತೆಯನ್ನು ಸೂಚಿಸುವಾಗ ಪಂಪನು 'ಕವಿರಾಜಮಾರ್ಗ'ಕ್ಕಿಂತ ಹಿಂದಿನ ಕಾವ್ಯಗ್ರಂಥಗಳನ್ನು

ಮನದಲ್ಲಿ ಇಟ್ಟಿರಬಹುದು (ಕಣಾತ. ೨೬). ೨. [ವ್ಯಾಕ] ಬಹುವಚನ : ಏಕತೆಯ ತನಗೆ ಬಹುತೆಯನಾಶರಿಸದು ಜಾತಿ ತಾಂ (ಶಮದ, ೦೩೯). [ಸಂ. ಬಹುತಾ]

**ಬಹುತೇಕ** (ಅ). ೧. ಅನೇಕ; ಹೆಚ್ಚಾದ : ಭಾರತದ ಬಹುತೇಕ ಜನರು ಗ್ರಾಮಾಂತರಪ್ರದೇಶದಲ್ಲಿ ವಾಸಿಸುತ್ತಾರೆ (ಕಸ್ತೂರಿ. ೬೦೭) ; ಬಹುತೇಕ ನದಿಗಳು ಅನಂತಕಾಲದಿಂದ ಹರಿಯುತ್ತಿವೆ (ಶಕಾ. ೨). ೨. ಪ್ರಾಯಶಃ ; ಬಹುಶಃ : ಮಧ್ಯಾಹ್ನ ಬಹುತೇಕ ನಿಮ್ಮನ್ನು ಹೆದರಿಸಿ ಬಂದದ್ದೇ . . . ಇವರ ಮುಂದೆ 'ಶಿಕ್ಷಾಪರಸು' ಕೊಡೆಯುತ್ತಿದ್ದ (ಮೂಲಚಿತ್ರ. ೬೪); ಕನ್ನಡದಲ್ಲಿ ಇಂದು ಬಹುತೇಕ ಎರಡನೆಯ ಹಾದಿಯ ಮೇಲೆ ಪ್ರಯತ್ನಗಳು ನಡೆದಿವೆ (ಜನಪ. ೨೧). [ ←ಮರಾ. ಬಹುತೇಕ್ ]

**ಬಹುತ್ವ** (ನಾ). [ವ್ಯಾಕ] ಬಹುವಚನ : ಜಾತಿವಿಭಾಗವುಂ ಬಗೆದು ವೇಟ್ ಬಹುತ್ವಮನೇಕವಾಕ್ಯಸಂಜಾತಗುಣಂ ತದೇಕವಚನಂಗಳೊಳಂ ದೊರೆವೆತ್ತು ಕೂಡುಗುಂ (ಶಶಾ. ೦-೦೦೩) ; ಅವಜೊಳ್ ದ್ವಿತ್ವಬಹುತ್ವಂ ಬವರಿಸೆ ತಳ್ಕಿರ್ಪುದಲ್ಲಿ ಗಳ್ ಶಬ್ದಂ (ಶಾಪ್ಯಶ. ೯೮) ; ಏಕ ದ್ವಿತ್ವ ಬಹುತ್ವಮನೇಕ ದ್ವಿಬಹುತ್ವವಸ್ತುಗಳೊಳಂಚರಿಪರ್ (ಶಮದ. ೯೪). [ಸಂ.]

**ಬಹುದು** 'ಪರ್' ಪರಾ.

**ಬಹುದುಃಖ** (ನಾ). ೧. ಅತಿಶಯವಾದ ಅಳಲು.– ಸಂಕಟ: ಅವರು ಬಹುದುಃಖದಿಂದ ಆ ಮಾತನ್ನು ಹೇಳಿದರು(ಲೂಪ). ೨. ಒಂದು ನರಕದ ಹೆಸರು: ಬಹುದುಃಖ . . . ಮಹಾದುಃಖವೆಂಬೈದು ಮಂತ್ರಿನರಕಂಗಳಿಂ (ಶಿಶೀ. ೦೩೦). [ಸಂ.]

**ಬಹುದ್ವಿಷ** (ನಾ). ಅನೇಕ ಶತ್ರುಗಳನ್ನುಳ್ಳವನು ; ಬಹುಜನದ್ವೇಷಿ: ಸುರಗುರುದ್ವಿಜವೈರಿ ಬಹುದ್ವಿಷಂ ಭಯೋಪೇತನಧಾರ್ಮಿಕಂ ವಿಕಳ ತಂತ್ರನನಿಶ್ಚಿತಮಂತ್ರನಾಗಳುಂ ಭೀತಪರಿಗ್ರಹಂ (ಶಂಕಕಂ. ೩೨೦-೮). [ಸಂ.]

**ಬಹುಧಾನ್ಯ** (ನಾ). ೧. ಸಮೃದ್ಧವಾದ ಧಾನ್ಯ,–ಕಾಳು: ಹಂಬನೂರಗಳ ಬಹುಧಾನ್ಯದ ತನೆ (ಮುಕುಗುಂ. ೫. ೨೬೮-೯೩). ೨. ಅರವತ್ತು ಸಂವತ್ಸರಗಳಲ್ಲಿ ಹನ್ನೆರಡನೆಯದು : ಅಭಿನವ ನಿಘಂಟನಭಿನವಮುಂಗ ನಿರ್ಮಿಸಿದನಂಬರಾಂಬಕವಹ್ನಿಯೇಕ್ಕೆಶಶದ ಬಹುಧಾನ್ಯದಲ್ಲಿ (ಶಾಂಗಕಾ. ೦೩೭-೬೬) ; ಆ ವರ್ಷವೇ ಪ್ರಭವ . . . ಬಹುಧಾನ್ಯ . . . ಅಕ್ಷಯ ವೆಂದರುವತ್ತು ತೆಜಾನಾಗಿಹುದು (ಶಿಶೀ. ೩೨೦). [ಸಂ.]

**ಬಹುನಾಯಕತ್ವ** (ನಾ). ಹಲವರಿಂದ ನಡೆಸುವ ಆಧಿಪತ್ಯ : ಇದೆಲ್ಲ ಬಹುನಾಯಕತ್ವದ ಫಲ. ಆದ್ದರಿಂದ ನಿಮ್ಮಲ್ಲಿ ಒಬ್ಬನನ್ನು ನಾಯಕನನ್ನಾಗಿ ಮಾಡಿಕೊಳ್ಳಿರಿ (ಕಕಥ. ೬೩೬). [ಸಂ.]

**ಬಹುನೂತ್ನ** (ಗು). ಹೆಚ್ಚು ನವೀನವಾದ ; ಅತ್ಯಂತ ಹೊಸದಾದ.– ನೂತನವಾದ : ಬಹುನೂತ್ನಕೇತನಟ್ಯಾಯನಿವಾರಿತೋಷ್ಣಮನನಿಂದಿತ ಸುಂಹರರಾಜಮಾರ್ಗವುಂ . . . ಪುಗೆ ನೃಪೇಶ್ವರಕನ್ಯೆಯುಂ ಕುಮಾರನುಂ (ಕಾಂಶಿಪ್ಟ. ೬-೪). [ಬಹು + ನೂತ್ನ]

**ಬಹುಪತಿತ್ವ** (ನಾ). ಒಬ್ಬನಿಗಿಂತ ಹೆಚ್ಚು ಗಂಡಂದಿರನ್ನು ಹೊಂದಿರುವಿಕೆ : ವಿವಾಹವಿಚ್ಛೇದ, ವಿಧವಾವಿವಾಹ, ವಿಧುರವಿವಾಹ ಬಹುಪತ್ನೀತ್ವ ಮತ್ತು ಬಹುಪತಿತ್ವಗಳಲ್ಲಿ ಕೆಲವಕ್ಕಾದರೂ ಅವಕಾಶ ಕೊಡಬೇಕು (ಶಿಶಾ. ೨೩೯). [ಸಂ.]

**ಬಹುಪತ್ನೀತ್ವ** (ನಾ). ಒಬ್ಬಳಿಗಿಂತ ಹೆಚ್ಚು ಪತ್ನಿಯರನ್ನು ಹೊಂದಿರುವಿಕೆ : ಬಹುಪತ್ನೀತ್ವವು ಅಂದಿನ ರಾಜತ್ವಕ್ಕೆ ಸಾಮಾನ್ಯ ರೂಢಿ ಮಾತ್ರವಲ್ಲ, ಅದೊಂದು ಹಿರಿಮೆ (ಕಾರರ. ೪೪೦). [ಸಂ.]

**ಬಹುಪಾದಿ** (ನಾ). ಅನೇಕ ಕಾಲುಗಳನ್ನುಳ್ಳ ಪ್ರಾಣಿ : ಬಹುಪಾದಿಗಳು (MynaPada) ಈ ವರ್ಗದ ಪ್ರಾಣಿಗಳಲ್ಲಿ ೯–೧೫೦ ಜೊತೆ ಉಪಾಂಗಗಳಿರುತ್ತವೆ (ಪ್ರಾಣಿಶಾ. ೩೨೦); ಪಾಲಿಪೊಡ (ಬಹುಪಾದಿ) . . . ಹೊಟ್ಟೆಯ ಹುಸಿಕಾಲುಗಳಿವೆ (ಜೀವಿಶ. ೦೨೪). [ಸಂ. ಬಹುಪಾದಿನ್]

**ಬಹುಪುಷ್ಪ** (ನಾ). ೧. ಪಾರಿಜಾತದ ಗಿಡ. ೨. ಹವಳದ ಗಿಡ. [ಸಂ.]

**ಬಹುಪುಷ್ಪಿ** (ನಾ). ಒಂದು ಬಗೆಯ ಸಸ್ಯ ; ಆವರಿಕೆಯ ಗಿಡ : "ಬಹು [ಶಾಶಾಂ. ರಜ]ಪುಷ್ಪಿ ಆವರವೆನಲ್ಕಾವರಿಯೆನಿಕ್ಕು" (ಶಾಂಗಕಾ. ೪೦-೬೦). [ಸಂ. ಬಹುಪುಷ್ಪೀ]

**ಬಹುಪ್ರಜ** (ನಾ). ೧. ಅನೇಕ ಮಕ್ಕಳಿರುವವನು: ಇರೆ ಲಗ್ನಕ್ಕೆ ಚತುರ್ಥದೊಳ್ ಹಿಮಕರಂ ಸತ್ಪುತ್ರವಿತ್ತಾಢ್ಯಮೊಂದಿರೆ ತತ್ಪಂಚಮದೊಳ್ ಬಹುಪ್ರಜನರಾತಿಸ್ಥಾನದೊಳ್ ಕೂಡೆ ನಿಷ್ಠುರಂ (ಜಾತಕ. ೧೯-೬). ೨. ಹಂದಿ. ೩. ಮುಂಜಹುಲ್ಲು. [ಸಂ.]

**ಬಹುಭಾರ್ಯ** (ನಾ). ಅನೇಕ ಹೆಂಡತಿಯರನ್ನು ಪಡೆದವನು : ಇನಜ . . . ವೃಷರಾಶಿಯೊಳ್ ನೆಲಸೆ ವರ್ಜ್ಯಂ ಸ್ವಲ್ಪವಿತ್ತಂ ವಧೂಜನಮಿತ್ರಂ ಬಹುಭಾರ್ಯಂ (ಜಾತಕ. ೧೭–೬೨). [ಸಂ.]

**ಬಹುಭಾರ್ಯಾಯೋಗ** (ನಾ). [ಜ್ಯೋತಿ] ಹಲವು ನಕ್ಷತ್ರಗಳ ನಿರ್ದಿಷ್ಟ ಸ್ಥಾನಬಲದಿಂದ ಜಾತಕನಿಗೆ ಉಂಟಾಗುವ ಬಹುಪತ್ನೀತ್ವ : ಜೋಯಿಸರು ಮಗುವಿನ ಜಾತಕವನ್ನು ನೋಡಿ ಈ ಮಗುವಿಗೆ ಬಹುಭಾರ್ಯಾಯೋಗವಿದೆಯೆಂದು ಹೇಳಿದರು (ಲೂಪ). [ಸಂ.]

**ಬಹುಭಾಷಣ** (ನಾ). ಅತಿಯಾಗಿ ಮಾತನಾಡುವಿಕೆ ; ವಾಚಾಳತನ : ಶೇಷವಾಸುಗಿ ಬಹಳಸುತಬಹುಭಾಷಣಂಗಳನತಿಗಳೆದೆಸೆದಶೇಷಮಹಿಮಾಮೂರ್ತಿ ಕಂಡೆನು ನಿಮ್ಮ ಪದಯುಗವ (ಐಶ್ವ. ೩೦-೬೦). [ಸಂ.]

**ಬಹುಭಾಷಿ** (ನಾ). ಹೆಚ್ಚು ಮಾತನಾಡುವವನು ; ವಾಚಾಳಿ : ನೀನ ಪ್ಪೊಡೆ ಬಹುಭಾಷಿ (ಶಂಕಕಂ. ೦೩೦-೦೧); ಸಭೆಯೊಳು ಮೇಲೆದ್ದು ಕುಣಿವನು ಬಹುಭಾಷಿ ಹೊದುಳಿವನು ಮಿತಭಾಷಿ (ಶಂಕಾಶ. ೨೦೩-೬೪). [ಸಂ. ಬಹುಭಾಷಿನ್]

**ಬಹುಭೂಮಿಕ** (ನಾ). ೧. ಅನೇಕ ಅಂತಸ್ತುಗಳನ್ನು ಪಡೆದಿರುವುದು; ಹಲವು ಮಹಡಿಗಳನ್ನುಳ್ಳದು. ೨. ಹೆಚ್ಚು ಭೂಮಿಯನ್ನು ಹೊಂದಿರುವವನು; ದೊಡ್ಡ ಜಮೀನುದಾರ. ೧, ೨. ಬಗೆಯೆ ಬಹುಭೂಮಿಕಂ ಮಾನಗುಣೋನ್ನತಿಸಂಯುತಂ ಮಹಾಭೋಗಾ ತನ್ನಗುಣಾವಳಿಯುಂ ಹರ್ಮ್ಯಗೃಹಾಳಿಯುಮೆಂದೊಡೊಳ್ಪನೇವಣ್ಣಿಪುದೋ (ಶಂಪ್ರಪ್ಟ. ೩-೦೩). [ಸಂ.]

**ಬಹುಮಂಜರಿ** (ನಾ). ಒಂದು ಬಗೆಯ ಸಸ್ಯ; ಕೃಷ್ಣತುಳಸಿ : " ತುಳಸಿಯದು ಸುರಸಿ ಬಹುಮಂಜರಿಯೆನಿಕ್ಕು ಕಪ್ಪಾಗಿರಲು " (ಶಾಂಗಕಾ. ೩೯-೨೬). [ಸಂ. ಬಹುಮಂಜರೀ]

**ಬಹುಮತ** (ಗು). ೧. ಗೌರವಕ್ಕೆ ಪಾತ್ರವಾದ. ೨. ಅನೇಕ ಬಗೆಯ ಅಭಿಪ್ರಾಯಗಳನ್ನು ಹೊಂದಿರುವ. (ನಾ). ೩. ಅಧಿಕಸಂಖ್ಯೆಯ ವ್ಯಕ್ತಿಗಳ ಅಭಿಪ್ರಾಯ : ಅವರ ಪಕ್ಷದ ಬಹುಮತವು ಕಡಿಮೆಯಾಗುತ್ತ ಬಂದಿತ್ತು (ಕನ್ನಡಾ. ೯೨); ಒಟ್ಟು ಸದಸ್ಯರಲ್ಲಿ ಮೂರನೆಯ ಎರಡು ಭಾಗಕ್ಕೆ ಕಡಿಮೆಯಿಲ್ಲದಷ್ಟು ಜನಗಳ ಬಹುಮತದಿಂದ ಆ ಸಂಕಲ್ಪವು ಶೀರ್ಣವಾಗಿಲ್ಲದ ಪಕ್ಷದಲ್ಲಿ (ಶಾಭಾವ. ೩೦). [ಸಂ.]

**ಬಹುಮತಿ** (ನಾ). ಅತಿಶಯವಾದ ಗೌರವ: ಮನೆಯಾತ ಅವನಿಗೆ ನಾಲ್ಕು ಸಾವಿರ ಹೊನ್ನು ಕೊಟ್ಟು ಹಲವಾರುರಥಗಳನ್ನೂ ಬಹುಮತಿಯಾಗಿ ಕೊಟ್ಟನು (ಚತ್ತುಕು. ೦೦೬) ; ಪ್ರಪಂಚದಲ್ಲೆಲ್ಲ ಸಾಹಿತ್ಯದಲ್ಲಿ ಪ್ರಮುಖರಾದ ಒಬ್ಬೊಬ್ಬರಿಗೆ ದೊರೆಯುವ ' Nobel Prize ' ಎಂಬ ಬಹುಮತಿಯು ಶುಲ್ಕ ದೊರೆಯಿತು (ಕರ್ನಾಟಾ. ೬೨). [ಸಂ.]

**ಬಹುಮತಿಸು** (ಕ್ರಿ). ಗೌರವಿಸು; ಮನ್ನಿಸು : ನೀಂ ಮುಟ್ಟಿದ ನಂದನೆಯಂ ಬಹುಮತಿಸುತೆ ನಿನ್ನನೆ ಪಾತ್ರೀಕರಿಸಿ ಬಿಟ್ಟ ಮುನಿಯ ವಿಮಾನ್ಯಂ (ಶಾಕುಂತ. ೬೬-೧೨೦) [ಬಹುಮತ + ‒ ಇಸು]

**ಬಹುಮತೆ** (ನಾ). ಗೌರವಾರ್ಹಳಾದ ಹೆಂಗಸು ; ಮಾನ್ಯೆ : ಎಲೆ ಪಾಗಳೆ, ಪತಿಗೆ ಬಹುಮತೆಯಾಗಿ ಬಾಳು (ಶಾಕುಂತ. ೦೦೨-೨೭). [ ಸಂ. ಬಹುಮತಾ ]

**ಬಹುಮಾನ** (ನಾ). ೧. ಅತಿಶಯವಾದ ಗೌರವ ; ವಿಶೇಷವಾದ ಮರ್ಯಾದೆ : ಕಣ್ಣು ಕಟ್ಟು ಮೇಲೆ ಕಡುರೂಪ ಚಲ್ವಿಕೆಯ ಬಣ್ಣ ಗುಂದಿದ ಮೇಲೆ ಬಹುಮಾನವೆ (ಕವಕ. ೩೬-೧) ; ಮಗಳೇ, ಪತಿಯ ಬಹುಮಾನಸೂಚಕವಾದ ಮಹಾದೇವೀಶಬ್ದವನ್ನು ಹೊಂದು! (ಶಾಕುಂತ. ೫೦-೧೦). ೨. ಪಾರಿತೋಷಕ ; ಇನಾಮು ; ಉಡುಗೊರೆ : ದೊಡ್ಡವರು ಬಡವರಿಗೆ ಉಚಿತವಾಗಿ ಕೊಡುವುದನ್ನು ಬಹುಮಾನ ಎನ್ನುತ್ತಾರೆ, ಬಡವರು ದೊಡ್ಡವರಿಗೆ ಉಚಿತವಾಗಿ ಕೊಡುವುದನ್ನು ಮರ್ಯಾದೆ ಎನ್ನುತ್ತಾರೆ (ಶಂಕರ. ೧೦) ; ತಮ್ಮ ರತ್ನಹಾರವನ್ನು ಬಹುಮಾನವಾಗಿ ಕೊಡುವೆವೆಂದು ಮಹಾರಾಜರು ಘೋಷಿಸಿದ್ದಾರೆ (ಶಾಡಿ. ೩೭). [ ಸಂ. ]

**ಬಹುಮುಖ** (ನಾ). ೧. ಏಕಮುಖವಾಗಿಲ್ಲದಿರುವುದು; ಚಂಚಲವಾಗಿರುವುದು : ಹೀನಮುಖ ಬಹುಮುಖ ಪರಾಙ್ಮುಖ ದೀನಮುಖ ವಾಚಾಲ ವಾಙ್ಮುಖವಜ್ಞಾನಮುಖವಂತರ್ಮುಖ ಬಹಿರ್ಮುಖದ ಕಾರ್ಯದಲಿ ಆ ನರೇಂದ್ರನ ವರ್ತನಕೆ ವ್ಯವಸ್ಥೆ ನವಾಗದೆ ಬಿತದು (ಕುವ್ಯಾ.ಅ. ೬-೩೭). ೨. ಅನೇಕ ಬಗೆ ; ರೀತಿ : ಅವನ ಬಹುಮುಖವಾದ ಜ್ಞಾನದಾಹವನ್ನೂ ತೀಕ್ಷ್ಣವಾದ ಗ್ರಹಣಶಕ್ತಿಯನ್ನೂ ನೋಡಿ ಅವಳು ದಿಗ್ಭ್ರಮೆಗೊಂಡಿದ್ದಳು (ಪುನರು. ೩೨೭). [ ಸಂ. ]

**ಬಹುಮುಖಿ** (ನಾ). ಏಕಚಿತ್ತವಿಲ್ಲದವನು; ಚಂಚಲಮನಸ್ಸಿನವನು : ಗುಹೇಶ್ವರನೆಂಬ ಲಿಂಗಸಾರಾಯ ಬಹುಮುಖಿಗಳಿಗೆ ತೋಱದು (ಅವಚ. ೫೯-೨೪೦) ; ಮಾನ್ಯರ ಮನದ ಮನ್ನಣೆಯನಱಿಪ್ಪುದೇ ವ್ರತ . . . ಇಂತಲ್ಲದೆ ಜಗವ ಸಿಕ್ಕಿಸುವ ಬಹುಮುಖಿಗಳಿಗೆಲ್ಲಿಯದೋ ಮುಕ್ತಿ (ಪ್ರೋಕವು. ೩೩-೦೩೯). [ ಸಂ. ಬಹುಮುಖೀ ]

**ಬಹುಮೂತ್ರ** (ನಾ). ಅತಿಯಾಗಿ ಮೂತ್ರವಿಸರ್ಜನೆಯಾಗುವ ಒಂದು ಬಗೆಯ ರೋಗ : ಆವರಿಕೆ :–ಈ ಚಿಗುರು ಅರೆದು . . . ಎಮ್ಮೆ ಮೊಸರಲ್ಲಿ ತೆಗೆದುಕೊಳ್ಳೆ, ಬಹುಮೂತ್ರ ಗುಣ(ಬಿವೈ.ಕ. ೨) ; ಬಹಳವಾದ ಆಯಾಸಪಡುವುದರಿಂದಲೂ . . . ಮಲಮೂತ್ರಾದಿಗಳ ವೇಗವ ತಡೆಯುವುದರಿಂದಲೂ ಈ ೫ ಪ್ರಕಾರದಿಂದ ಬಹುಮೂತ್ರರೋಗವುಂಟಾಗುತ್ತಿಹುದು (ಸಕವೈ. ೩೭೯). [ ಸಂ. ]

**ಬಹುರೂಪ** (ಗು). ೧. ಅನೇಕ ರೂಪಗಳುಳ್ಳ. (ನಾ). ೨. ಅನೇಕರೂಪ : ಹಲವು ಆಕಾರ : ಇಂದ್ರಜಾಲಿಗನಂತೆ ವಿಯದವನೀದಿಗ್ಭಾ[ಗ]ದೊಳ್ ತನ್ನ ರೂಪೆ ರೂಪಾಗಿ ಬಹುರೂಪದಿಂ ಕಾದುತ್ತಿರ್ದ ಸುರಂ . . . ಪೆಜತೆಗೆದು ಪೋಗಿ (ಶಾಂತಿಪು. ೬-೩೯ ವ) : ಉಪಮಾನಕಥನವೊಂದಱಿನುಪಮೇಯಮನಱಿವುದದು ಸಮಾಸೋಕ್ತಿ ನಿಷೇಧಪದಂ ತಾನಂ ಬಂತಾಗೆ ಪೇಟ್ಟುದಾಪೇಕ್ಷೆಮಕ್ಕುಮದು ಬಹುರೂಪಂ (ಕಾವ್ಯಾ.ಶ. ೬೯೭). ೩. ಅನೇಕ ವೇಷಗಳನ್ನು ಧರಿಸಿ ಆಡುವ ಒಂದು ಬಗೆಯ ನಾಟಕ ಪ್ರದರ್ಶನ : ಅಪ್ಪಾ ಬೊಪ್ಪಾ ಚಿಕ್ಕ ಚೋಹವಂ ತೊಟ್ಟು . . . ತಪ್ಪಿ ಹಜ್ಜೆಯನಿಕ್ಕಿ ಆಡುತ್ತಿದ್ದ ರೇಕಣ್ಣಪ್ರಿಯನಾಗಿನಾಥನಲ್ಲಿ ಹೊತ್ತು ಹೋಗದ ಬಹುರೂಪವ (ಸಶವ. II; ೩೩೩-೩) ; ಈತ, ಚಿತ್ರವಿಚಿತ್ರವಾದ ಬಹುರೂಪಗಳನ್ನಾಡಿ ಭಕ್ತರನ್ನು ತಣಿಸುವ . . . ಕಾಯಕವನ್ನು ಕೈಗೊಂಡ (ಕವಿಕೋ. XI. ೯೯೨). ೪. ಅನೇಕ ರೂಪಗಳನ್ನು ಧರಿಸುವವನು ; ಬಹುವೇಷಧಾರಿ : ಕಂದರ್ಪನ ಕೊಂದು ನಿಂದು ನಾಟ್ಯವನಾಡಿದಂದಂದಿನ ಬಹುರೂಪನಾಹೋ (ಶಿವಗೀ. ೦೬೯-೯೯೩). ೫. ಓತಿಕೇತ ; ಗೋಸುಂಬೆ. ೬. ಸೂರ್ಯ. ೭. ಒಂದು ಬಗೆಯ ಮರದ ಅಂಟು ; ಸಜ್ಜರಸ : "ಯಕ್ಷಧೂಪಃ . . . ಬಹುರೂಪಃ—೫ ಸಜ್ಜರಸದ ಹೆಸರುಗಳು" (ಸಿದ್ಧಾಂತಿ. ೫೦೭). ೮. ಶಿವ. ೯. ಬ್ರಹ್ಮ. ೧೦. ವಿಷ್ಣು. ೧೧. ಮನ್ಮಥ. ೧೨. ಕೂದಲು. [ಸಂ.]

**ಬಹುರೂಪಿ** (ನಾ). ೧. ಹಲವು ರೂಪಗಳಿಂದ ಕೂಡಿದುದು : ದೇಹ ಬಹುರೂಪಿ— ಶೈವಲದಂತೆ (ಜಕುಹೂ. ೦೩೯). ೨. ಹಲವು ರೂಪಗಳಿಂದ ಕೂಡಿದವನು ; ಬಗೆಬಗೆಯ ಸೋಗು ಹಾಕುವವನು : ಕಣೆಯಲಾಱದೆ ಸೋತಾಕ್ಷಣದೊಳು ಬಹುರೂಪಿ ಕಱುಗಾಯಿಸಿದನು (ಕೃಕಥೂ. I. ೨೨೨). [ ಸಂ. ಬಹುರೂಪಿನ್ ]

**ಬಹುರೂಪಿಣಿ** (ನಾ). ೧. ವಿಧವಿಧವಾದ ವೇಷವನ್ನು ಧರಿಸುವವಳು; ನಟಿ. ೨. ದೊಂಬರವಳು : "ಬಹುರೂಪಿಣಿ ಕೊಲ್ಲಟಗಿತ್ತಿಯು" (ಕಕಖು. ೯೩). ೩. [ಜೈನ] ಒಂದು ಬಗೆಯ ಮಾಯಾವಿದ್ಯೆ : ತಾನು ಬಯಸಿದ ರೂಪವನ್ನು ಧರಿಸಬಹುದಾದ ವಿದ್ಯೆ : ಸುತಾರಾರೂಪಧಾರಿಣಿಯಾಗಿ . . . ಪಟ್ಟದ ಬಹುರೂಪಿಣಿಯೆಂಬ ಅಶನಿಘೋಷನ ಘೋಷಣವಿದ್ಯೆಯುಮನದಂ ಸುತಾರೆಗೆತ್ತು (ಶಾಂತಿಪು. ೬-೩೯ ವ); ಸಾಧಿಸಿ ಬಹುರೂಪಿಣಿಯುಂ ಸಾಧಿಸುವಂ ವಗೆಯಂ (ಶಂಚಾಪು. ೦೯-೬೨). [ < ಸಂ. ಬಹುರೂಪಿನೀ ]

**ಬಹುರೂಪೆ** (ನಾ). ಅಗ್ನಿಯ ಏಳು ನಾಲಗೆಗಳಲ್ಲಿ ಒಂದು ; "ಯಾಗಕರ್ಮದಲ್ಲಿ (ಸಾತ್ವಿಕ): ಹಿರಣ್ಯಾ, ಕನಕಾ, ರಕ್ತಾ, ಕೃಷ್ಣಾ ಸುಪ್ರಭಾ, ಬಹುರೂಪಾ, ಅತಿರಕ್ತಾ (ತಂತ್ರಸಾರ ಶಕದ್ರು, VI. ೨೬೦–೨೬೧ ; ಅಭಿಧ. ೧೩–೭೮)" (ಕ್ರೀನಿಘ. ೦೩೬) : "ಬಹುರೂಪಮತಿರಕ್ತಮಾಸಿತರಕ್ತಂ ಸದಂಶುಹಿರಣ್ಯಮಾ ಕನಕವರ್ಚಿಯೆಸಲಗ್ನಿಯಲ್ಲಿಹವೇಱುನಾಲಗೆಗಳಕ್ಕು" (ಮಂಗರಾ. ೦೯-೬). [ಸಂ. ಬಹುರೂಪಾ]

**ಬಹುಲ, ಬಹುಳ** (ಗು). ೧. ಅನೇಕ ; ಯಥೇಷ್ಟ : ಬಹುಲರೋಗಂಗಳಿಂ ನವವಂ ಭೃತ್ಯರಂ ನೋಯಿಸುತ ಹಿಡಿದ ಚಲವಂ ಬಿಡದವಂ (ಜೀಕೃಪು. ೯-೨೨-೩೬) ; ಕವಚ ಶೀರ್ಷಕ ಕಣಾರವಂ, ಬಹುಲನಾನಾರವಂ ಕೀಲಿಸಿತು ಕವಿಗತಿಕಠೋರವಂ ! (ಜಕ್ಕಾಂಗ. ೬೨-೨೨೩೩). ೨. ಹೆಚ್ಚಾದ ; ಅಧಿಕವಾದ : ಬಹುಲಕರುಣಾಸಮುದ್ರ ಹಲಗೆಯ ಗುರುವೆ (ಜೀಕೃಪು. ೨-೦೦-೩). ೩. ದಟ್ಟವಾದ ; ನಿಬಿಡವಾದ ; ಸಾಂದ್ರ. ೪. ದಪ್ಪವಾದ ; ಸ್ಥೂಲವಾದ : (+). ೫. ಕರಿಯ ಬಣ್ಣದ ; ಕಪ್ಪಾದ. (ನಾ). ೬. ಚಾಂದ್ರಮಾನ ತಿಂಗಳಿನ ಎರಡನೆಯ ಅರ್ಧ ಭಾಗ ; ಕೃಷ್ಣ ಪಕ್ಷ : ವಿತತಾಷಾಢದ ಬಹುಳ[ಶಾಶಾಂ.೪] ಪ್ರತಿಪದ್ದಿನದಂದು ಕೀರ್ತಿ ನೆಗಟ್ದಿರೆ (ಅಂತಿಪು. ೯-೬೬). ೭. ದಪ್ಪಗಿರುವವನು : "ಪೀವರನೆನಲ್ ಸ್ಥೂಲನೆನೆ ಬಹುಲನೆನೆ (ಪೀನನೆನೆ) ದೊಡ್ಡಿತಪ್ಪವನೆನಿಕ್ಕುಂ" (ಮಂಗರಾ. ೬೯-೦೧). ೮. [ಜ್ಯೋತಿ] ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಮೂರನೆಯದು; ಕೃತ್ತಿಕೆ. ಬಹುಳ: ೧. ಅಗುಱ್ ವಾರ್ಧಿಯಂ ಕಿಟ್ಟಡಿಕುಂ ನಾನಾಮರಾಳೀಬಹುಳಕಳಕಳಧ್ವಾನಸಂತಾನದಿಂದಂ (ಜಗು. ೨-೦೫). ೬. ದಿವಸನಾಥಾದಿ ಗ್ರಹಶ್ರೇಣಿ ಸೌಮ್ಯಗಣಂ ಜೊನ್ನದೊಳನ್ನರುಂ ಬಹುಳದೊಳ್ ನಿರ್ವ್ಯಾಜದಿಂ ಬಲ್ಲಿದರ್ (ಜಾತಿ. ೨-೦೦). ೮. "ಕೃತ್ತಿಕೆ ಬಹುಳವೆನಿಕು" (ಮಂಗರಾ. ೦೨-೬). ೯. ಅಧಿಕ್ಯ; ವಿಪುಲವಾಗಿರುವುದು : "ಪ್ರಭೂತಂ. . . ಬಹುಳಂ, ಬಹು. . . ಭೂರಿ–೧೨ ಅಧಿಕವಾದದ್ದರ ಹೆಸರುಗಳು" (ಸಿದ್ಧಾಂತಿ. ೩೪೦) ; ಹೀಗೆ ಪಾಮರ ಬಹುಳವಾದ 'ಸಲಾಪಾನೀತಳಜನವೇ' ಅರಿಕೇಸರಿಯನ್ನು ಕುರಿತು ಪ್ರಾರ್ಥಿಸಿಕೊಂಡಿತು (ನಾರೋಜ. ೦೯೩). [ಸಂ.]

**ಬಹುಲತೆ, ಬಹುಳತೆ** (ನಾ). ೧. ವಿಪುಲವಾಗಿರುವಿಕೆ; ಅಧಿಕ್ಯ ;

ಹೆಚ್ಚಳ. ಬಹುಳತೆ: ೨. ವಿಶೇಷತೆ ; ಅತಿಶಯತೆ: ಮುತ್ತಿನ ಮಕುಟ ವಿಂದೆನಿಸಲಾರ್ತುದತಿಬಹುಳತೆಯಿಂ (ಆಕಥೆ. ೯-೩೬). ೩. [ವ್ಯಾಕ] ಎರಡು ರೀತಿಗಳಲ್ಲಿ ವಿಶೇಷವಾದ ಅರ್ಥವುಳ್ಳುದು : ಬಹುಳತೆ ಯತ್ವ ವತ್ವ ದೊಳ್ ಸಂಸ್ಕೃತಕ್ಕೆ ತಾನಿಲ್ಲೆಂದಂ (ಕಪುರ. ೩೩). [ಸಂ. ಬಹುಲತಾ]

**ಬಹುಲತ್ವ**, ಬಹುಳತ್ವ (ನಾ). ೧. =ಬಹುಲತೆ ೧. ಬಹುಳತ್ವ : ೨. = ಬಹುಲತೆ ೩ : ಸಂಸ್ಕೃತದೊಳ್ ಯತ್ವ ವತ್ವಂಗಳ್ಗೆ ಬಹುಳತ್ವ ವಿಲ್ಲ, ನಿತ್ಯಂ (ಕಪುರ. ೩೩ ವೃತ್ತಿ). [ಸಂ.]

**ಬಹುಲವೆಳ್ಳಂಗ** (ನಾ). ಒಬ್ಬಾತನ ಹೆಸರು : ಶ್ರೀಆವ್ಮಡಿಪೆರ್ಮ್ಮಾಡಿ ಯಾಚಾರಿ ಬಹುಲವೆಳ್ಳಂಗನ ಶೀಘ್ರಲಿಖಿತಂ (ಎಕ. III, ತಂಕಪ. ೦೬೩-೦೩; 977). [?]

**ಬಹುಲಾಯಿ** (ನಾ). [ಸಂಗೀತ] ಶಾರೀರಕ್ಕೆಂದು ವರ್ಣಿಸಲಾಗಿಂವ, ವಿಶಿಷ್ಟರೀತಿಯ ಪಲುಕನ್ನು ಹೊಂದಿರುವ ಠಾಯ (?) : ಗೀತಿ ಜತಿ ಜೋಕೆ ನಯಂ ಬಹುಲಾಯಿ ದೇಸೆ ಪೆಲ್ಲಣೆ ಕಳೆಯೊಂಬಿವಂ ಮೆಚಿದು ಬಾಜಿಸಿದಂ ಮುರವೈರಿ ವಾಸವಂ (ಹರಿವ. ೩-೩). [?]

**ಬಹುಲಿಮ** (ಗು). ಹೇರಳವಾದ ; ಸಮೃದ್ಧವಾದ : ಚಿತ್ರಕ್ಕೆ ಮಾಡಿ ತ್ಕೊಲವಂ ತಾರುಣ್ಯಮಾಸಾಧಿತಬಹುಲಿ[ಪಾಠಾಂ. ಹಳಿ]ಮಲಾವಣ್ಯಶೋಭಾ ವರೇಣ್ಯಂ (ಕಂದ್ರಕ. ೯-೬). [ಸಂ.]

**ಬಹುಲೆ**, ಬಹುಳೆ (ನಾ). ೧. ಹಸು; ಗೋವು. ೨. ದೊಡ್ಡ ಏಲಕ್ಕಿ ಗಿಡ : "ಪೃಥ್ವೀಕಾ, ಚಂದ್ರಬಾಲಾ, ಎಲಾ, ನಿಷ್ಕುಟೀ, ಬಹುಲಾ_ ಈ ದೊಡ್ಡ ಏಲಕ್ಕೀ ಹೆಸರುಗಳು" (ನಿಘ್ಂಟು. ೦೯೦). ೩. ನೀಲಿಗಿಡ. ೪. ಆರು ತಾರೆಗಳುಳ್ಳ ಒಂದು ನಕ್ಷತ್ರಪುಂಜ; ಕೃತ್ತಿಕಾನಕ್ಷತ್ರ : "ಕೃತ್ತಿಕಾಃ, ಬಹುಲಾಃ—ಈ ೨ ಕೃತ್ತಿಕೆ" (ಹಲಾಯು. ೯-೩೦) ಬಹುಳೆ : ೪. "ಬಹುಲಾಃ—ಕೃತ್ತಿಕಾನಕ್ಷತ್ರ, ಗೋವುಗಳು" (ನಿಘ್ಂಟು. ೯೦೯).

[ಸಂ. ಬಹುಲಾ]

**ಬಹುವಚ** (ನಾ). ಅತಿಯಾಗಿ ಮಾತನಾಡುವವನು ; ವಾಚಾಳಿ : "ಬಹುವಚಂ ಗಟಬಹುವವನಕ್ಕು" (ಮಂಗರಾ. ೬೩-೨೦). [ಸಂ.]

**ಬಹುವಚನ** (ನಾ). ೧. ಒಂದಕ್ಕಿಂತ ಹೆಚ್ಚು ಸಂಖ್ಯೆಯುಳ್ಳುದು. ೨. [ವ್ಯಾಕ] ಒಂದಕ್ಕಿಂತ ಹೆಚ್ಚಿನ ಸಂಖ್ಯೆಯನ್ನು ಸೂಚಿಸುವ ಪದ: ಏಕವಚನಕ್ಕೆ—೭ವನೇನ್, ಅ_ಳೇನ್, ಅದೇನ್, ಬಹುವಚನಾರ್ಥಕ್ಕೆ_ ತತ್ಪರಿಜನಾಲಾವಂಗಳೇನ್ (ಕಪುರ. ೬೯ ಪ್ರಯೋ); ಒಂದಕ್ಕಿಂತ ಹೆಚ್ಚು ವಸ್ತುಗಳನ್ನು ಹೇಳುವುದು ಬಹುವಚನ (ಕೃಶಿಖ. ೩೩). [ಸಂ.]

**ಬಹುವಾರಕ** (ನಾ). ಒಂದು ಬಗೆಯ ಸಸ್ಯ ; ಚಳ್ಳೆ : "ಶೇಲುಃ ... ಬಹುವಾರಕಃ—ಈ ಚಳ್ಳೆಮರ" (ನಿಘ್ಂಟು. ೦೦೬); ಬಹುವಾರಕ ಗಾಯತ್ರಿಯ ವಿಹಿತಾಗಿಹ್ನಾವ್ಯಕ್ತಾಗ್ನಿಮುಖಿಗಳ್ಗೆಚಿಗುಂ (ಹರಿಶ್ಚಂ. ೯-೬೦). [ಸಂ.]

**ಬಹುವಾರ್ಷಿಕ** (ನಾ). ಅನೇಕ ವರ್ಷಗಳು ಇರುವಂತಹುದು : ಅಕ್ಕಿಲೇ ಜಯ; ಆಕರ್ಷಣೀಯವಾದ ಹೂ ಬಿಡುವ ಅಲಂಕಾರಸಸ್ಯ. . . ಇವು ಬಹುವಾರ್ಷಿಕಗಳಾದ್ದರಿಂದ ಫಲವತ್ತಾದ ಮಣ್ಣು ಅಗತ್ಯ (ಕಂಕೋ. I, ೦೬೦). [ಸಂ.]

**ಬಹುವಿಕೆ** (ನಾ). ಹೆಚ್ಚಳ; ಅತಿಶಯತೆ : ಬಿಂಕಂ ಲುಳಿವಡೆಯೆ ಲುಳಿ ನವಣಿವಡೆಯೆ ನವಣಿ ಬಹುವಿಕೆವಡೆಯೆ (ಅಪಂತ. ೨-೨೩೭).

[ಬಹು + —ಇಕೆ]

**ಬಹುವಿತ್ತ** (ನಾ). ೧. ಅಧಿಕವಾದ ಸಂಪತ್ತು. ೨. ಧನಿಕ; ಶ್ರೀಮಂತ : ಬಹುತನಯಂ ಬಹುವಿತ್ತಂ. . . ಮಹಿತನಯಂ ನೆಲಸಿರೆ ಮೃಗಗೃಹ ದೊಳ್ ತನ್ನನುಜನೆನಿಸುಗುಂ (ಜಾತಕ. ೦೬-೨). [ಸಂ.]

**ಬಹುವ್ರೀಹಿ** (ನಾ). ೧. ಹೆಚ್ಚು ಬತ್ತವನ್ನು ಹೊಂದಿರುವುದು. ೨. [ವ್ಯಾಕ]ಸಮಾಸಗಳಲ್ಲಿ ಒಂದು; ಸಮಾಸದಲ್ಲಿ ಸೇರಿರುವ ಎರಡು ಪದಗಳ ಅರ್ಥವೂ ಮುಖ್ಯವಾಗದೆ ಬೇರೊಂದು ವಸ್ತುವನ್ನು ಹೇಳು ವುದೇ ಸಮಾಸದ ಅರ್ಥವಾದಾಗ ಆಗುವ ಸಮಾಸ :ದ್ವಿಪದಂ ಮೇಣ್ ಬಹುಪದಮನ್ಯಪದಾರ್ಥದೊಳೊಂದಿ ನಿಲೆ ಬಹುವ್ರೀಹಿ (ಶಬ್ದಾ. ವ. ೨೦೬); ಎರಡುಂ ಪದಂ ಮೇಣ್ ಪಲವುಂ ಪದಂ ಅನ್ಯಪದಾರ್ಥಮಂ ಬಯಸುತ್ತಿರೆ ಬಹುವ್ರೀಹಿಯಕ್ಕುಂ (ಕಪುರ. ೦೬೩ ವೃತ್ತಿ); ಅನ್ಯಪದವು ವಿಶೇಷ್ಯವಾಗಿ ಅನೇಕ ಪದಗಳಿಗೆ ಆಗುವ ಸಮಾಸವು ಬಹುವ್ರೀಹಿ (ಕೃಶಿಖ. ೨೨). [ಸಂ.]

**ಬಹುಶಃ** (ಅ). ಬಹಳ ಮಾಡಿ; ಬಹುಪಟ್ಟಿಗೆ : ದ್ವಾರದ ಮೇಲಿರುವ ಶಾಸನಗಳಿಂದ ಬಹುಶಃ ಕ್ರಿ.ಶ. ೯೫೦ರಲ್ಲಿ ಕಟ್ಟಿರಬಹುದೆಂದು ಹೇಳಬಹುದು (ಹೊಯ್ಸಳ. ೨೦೬); ಬಹುಶಃ ದೇವದಾಸಿಯರ ವೃತ್ತಿಯು ಒಂದು ರೀತಿಯಲ್ಲಿ ತಲೆಯಿಂದ ತಲೆಗೆ ಹರಿದುಕೊಂಡು ಬರುತ್ತದೆ (ಕಶಾಇ. ೦೬೩).

[ಸಂ. ಬಹುಶಸ್]

**ಬಹುಶಿಲ್ಪಿ** (ನಾ). ಅನೇಕಕಲೆಗಳನ್ನು ಬಲ್ಲವನು : ಧಾರ್ಮಿಕಂ ತ್ಯಾಗಿ ವೀರ್ಯಸಮೇತಂ ಬಹುಶಿಲ್ಪಿ. . . ಧನುರ್ಗೇಹಜಂ (ಜಾತಕ. ೦೬-೯).

[ಸಂ. ಬಹುಶಿಲ್ಪಿನ್]

**ಬಹುಶ್ರುತ** (ನಾ). ೧. ಅನೇಕ ಶಾಸ್ತ್ರಗಳನ್ನು ಕೇಳಿ ಅರಿತವನು; ವಿದ್ವಾಂಸ ; ಪಂಡಿತ : ಅತಿಗಂಭೀರಮೃದೂಕ್ತಿ ವಕ್ತ್ರದೊಳೊಸಂ ಬಟ್ಟೊಪ್ಪೆ ಕೇಳ್ದಂ ಬಹುಶ್ರುತನಲ್ಪಶ್ರುತನೆನ್ನದಾರ ಕಿವಿಗಂ ನುಣ್ಪೆಂಪಿ ನೊಳ್ ಕೂಡೆ ಪೇಟಲ್ (ಚಂತಿಪ. ೦-೬); ಪರಿಮೃತನಾವನೆ ವಿಶ್ರುತ ಬಹುಶ್ರುತೋದಾತ್ತಯಶಂ (ಸುಕುಮಾ. ೨-೧೨). ೨. ವೇದಗಳನ್ನು ಚೆನ್ನಾಗಿ ಬಲ್ಲವನು; ವೇದಪಾರಂಗತ. [ಸಂ.]

**ಬಹುಸುತ** (ನಾ). ಅನೇಕ ಮಕ್ಕಳುಳ್ಳವನು: ಬಹುಸುತನುಪಚಿತತನು ಸಂಗ್ರಹಶೀಲಂ ಮಚ್ಚಸಾರನಕ್ಕುಂ (ಲೋಕೋಪ. ೧೦-೬೭). [ಸಂ.]

**ಬಹುಸೂತಿ** (ನಾ). ೧. ಹಲವು ಮಕ್ಕಳನ್ನು ಹಡೆದ ಹೆಂಗಸು. ೨. ಹಲವು ಬಾರಿ ಕರು ಹಾಕಿದ ಹಸು: "ಬಹುಸೂತಿಃ, ಪರೇಷ್ಟುಕಾ—೨ ಅನೇಕ ಹೆಂಗೆಗಳನ್ನು ಈದ ಆಕಳು" (ನಿಘ್ಂಟು. ೨೯೩). [ಸಂ.]

**ಬಹುಳ** 'ಬಹುಲ' ನೋ.

**ಬಹುಳಗ್ರಹಣ** (ನಾ). ವಿಸ್ತಾರವಾದ ಅರ್ಥವನ್ನು ತಿಳಿದು ಕೊಳ್ಳುವುದು : ಅದಮೆಂಬ ಬಹುಳಗ್ರಹಣದಿಂದಾಕಾರಾಂತಮಲ್ಲದ ಕಾರಾಂತಮುಂ ಹ್ರಸ್ವಮಪ್ಪೇತ್ವಮಂ ಪಡೆದೊಡಂ ಲಿಂಗಮಕ್ಕುಂ (ಕಪುರ. ೩೯ ವೃತ್ತಿ). [ಸಂ. ಬಹುಲಗ್ರಹಣ]

**ಬಹುಳತೆ** 'ಬಹುಲತೆ' ನೋ.

**ಬಹುಳತ್ವ** 'ಬಹುಲತ್ವ' ನೋ.

**ಬಹುಳಪಕ್ಷ** (ನಾ). ಕೃಷ್ಣಪಕ್ಷ: ಸೌಮ್ಯವತ್ಸರದ ಶ್ರಾವಣಬಹುಪಕ್ಷದಶಮಿ ಜೀವವಾರದೊಳಾದಿವ್ಯಪಬೇಂದ್ರಾವತಾರದ ಬಸವಚರಿತೆ ಸಮಾಪ್ತ ವಾಯಿತ್ತು (ಬಸಪು. ೬೦-೯೨). [ಸಂ. ಬಹುಲಪಕ್ಷ]

**ಬಹುಳವೃತ್ತಿ** (ನಾ). = ಬಹುಲತೆ ೩ : ವಿದಿತಸ್ವರದಿನನಾದೇಶದ ಸಹಜ ವ್ಯಂಜನಂಗಳಿಂ ಪರದ ಪವರ್ಗದ ನೆಲೆಗಕ್ಕುಂ ವತ್ವಂ ಪದವಿಧಿಯೋಳ್ ಬಹುಳವೃತ್ತಿಯಿಂ ವಾಕ್ಯದೊಳಂ (ಕಪುರ. ೬೬). [ಸಂ. ಬಹುಲವೃತ್ತಿ]

**ಬಹುಳಸ್ಥಿತಿ** (ನಾ). = ಬಹುಲತೆ ೩: ಇರೆ ವರ್ಗಪ್ರಥಮಂಗಳ್ ಪರದೊಳ್ ಚಟವರ್ಗಮುಬಿಯೆ ತಮ್ಮ ತೃತೀಯಾಕ್ಷರಮಕ್ಕುಂ ಪದವಿಧಿಯೊಳ್ ಪರಿಹರಿಸಲ್ಬಾರದಲ್ಲಿ ಬಹುಳಸ್ಥಿತಿಯುಂ (ಕಪುರ. ೬೩).

[ಸಂ. ಬಹುಲಸ್ಥಿತಿ]

**ಬಹುಳೆ** 'ಬಹುಲೆ' ನೋ.

**ಬಹೂಕ್ತಿ** (ನಾ). = ಬಹುವಚನ ೨ : ಸೊಗಯಿಪುವುಗೆಕೆಗಳನ್ನೊಕ್ಕಿಗೆ ವಿಧ್ಯರ್ಥಕ್ಕೆ ಮಧ್ಯಮೋತ್ತಮಪುರುಷಪ್ರಗತಬಹೂಕ್ತಿಯೊಳಿಮಮೆಂದೊಗೆ ತರ್ಕುಂ ಯುಂಗಪದುಕ್ತಿಯೊಳ್ ಕ್ರಮದಿಂದಂ (ಕಪುರ. ೨೨೯). [ಸಂ.]

**ಬಹೂದಕ** (ನಾ). ಹಂಸ, ಪರಮಹಂಸ, ಕುಟೀಚಕ ಮತ್ತು ಬಹೂದಕ ಎಂಬ ಸಂನ್ಯಾಸಿಗಳ ನಾಲ್ಕು ಗುಂಪುಗಳಲ್ಲಿ ಒಂದು ಗುಂಪಿಗೆ ಸೇರಿದವನು; ತೀರ್ಥಯಾತ್ರಾಕ್ಷೇತ್ರಗಳಿಗೆ ಪ್ರವಾಸ ಮಾಡುವ ಸಂನ್ಯಾಸಿ; ಪರಿವ್ರಾಜಕ: ಈಶ್ವರಧ್ಯಾನತತ್ಪರನಾಗಿ ಏಕಾನ್ನವನೊಲ್ಲದೆ ಬಂಧುಪುತ್ರಾದಿಗೃಹಮಂ ಪುಗದೆ ಬೇಱೆ ಏಳುಮನೆಯಲ್ಲಿಯು ಭಿಕ್ಷಾನ್ನಮಂ ತಂದನು ಭವಿಸುತ್ತೆ ಸಹಜಮಯನಾಗಿರ್ಪಾತನೇ ಬಹೂದಕನಪ್ಪಂ (ಶಬೇಕ. ೦೨೬). [ಸಂ.]

**ಬಹೂಪಮಾನ** (ನಾ). [ಕಾವ್ಯಮೀ] ಒಂದಕ್ಕಿಂತ ಹೆಚ್ಚು ಉಪಮಾನಗಳನ್ನು ಕೊಡುವ ಒಂದು ಅಲಂಕಾರ: ಮಲಯರುಹ ಶಿಶಿರಕರ ಶೀತಲಿಕಾಕರಕೇಂದುಕಾಂತಜಲಶೀತಳಮೀ ಲಲನಾಲಿಂಗನಸುಖಕರವಿಲಾಸಮೆಂಬುದು ಬಹೂಪಮಾನವಿಕಲ್ಪಂ (ಕಹಾ. ೩-೫೦). [ಸಂ.]

**ಬಹೂಪಮೆ** (ನಾ). = ಬಹೂಪಮಾನ: ಬಹೂಪಮೆಗೆ—ಶರದಂಬುದಮಂ ಗಂಗಾತರಂಗಮಂ ಸಿಂಧುವಾರಕುಸುಮಶ್ರೀಯಂ ಹರಹಾಸವಿಳಾಸಮಂ ನಸುಕರಿಸುವುದತಿವಿಶದಕೀರ್ತಿ ತೋಳ್ಪೊಪ್ಪುವನಾ (ಕಾವ್ಯಾ. ೬೬೩). [ಸಂ. ಬಹೂಪಮಾ]

**ಬಹ್ವಾರಂಭಪರಿಗ್ರಹ** (ನಾ). [ಜೈನ]ಪಂಚಮಹಾಪಾತಕಗಳಲ್ಲಿ ಒಂದು; ಬಹಳ ಪ್ರಯತ್ನದಿಂದ ಧನವನ್ನು ಸಂಗ್ರಹಿಸುವುದು : ಬಹ್ವಾರಂಭಪರಿಗ್ರಹವಿಹ್ವಲನಿಂದ್ರಿಯಸುಖಾರ್ಥಿ ಸಂಸಾರಗುಹಾಗಹ್ವರದೊಳಗಿರ್ಪನ ಚಿತ್ತಾಹ್ಲಾದವೊಲ್ ಮಱುಗದೇಂ ಸುಖಿಂಬಡೆದವನೇ (ಅಧಿಪು. ೩-೬೪). [ಸಂ.]

**ಬಹ್ವಾರಂಭಪಾರಿಗ್ರಹ** (ನಾ). = ಬಹ್ವಾರಂಭಪರಿಗ್ರಹ : ಆ ಜೀವಘಾತಾನೃತವಚನ ಪರಾರ್ಥಾಪಹಾರಾನ್ಯನಾರೀಗಮಬಹ್ವಾರಂಭಪಾರಿಗ್ರಹಮೆನಿಸುವವಯ್ದುಂ ಮಹಾಪಾತಕಂಗಳ್ಗೆ ಮನಂದಂದೊಂಗೆ ಸಂಸ್ಕೃತ್ಯದಧಿತಟಮಧ್ಯಾಸನ್ನಂ (ಸುಕುಮಾ. ೫-೯೩). [ಸಂ.]

**ಬಹ್ವಾಶಿ** (ನಾ). ೧. ಅತಿಯಾಗಿ ತಿನ್ನುವವನು; ಹೊಟ್ಟೆಬಾಕ; (ಕ.) ೨. ಅತಿಯಾಗಿ ತಿನ್ನುವಂತಹುದು: ಬಹ್ವಾಶಿಯಪ್ಪ ತುರಗಂ ವಿಹ್ವಲನಾಗಿರ್ದು ಮೇಯದಿರ್ದೊಡಂ . . . ಮರಣಭಯಂ (ಅಶ್ವಶಾ. ೬-೯೨). [ಸಂ. ಬಹ್ವಾಶಿನ್]

**ಬಳ₁** 'ಬಳ್ಳ' ನೋ.

**ಬಳ₂** 'ಬಲ'₂ ನೋ.

**ಬಳ₃** (ನಾ). ಒಂದು ಬಗೆಯ ಕೊಡುಗೆಯ ಭೂಮಿ (?) : ಬಮ್ಮಗಾವುಣ್ಡನ ಬಳದಿಂ ಬಡಗ (ಶಾಶಾ. XI–ii. ೦೦೯-೫೦; 948); ಮೂನೂಱಯ್ವತ್ತು ಮತ್ತರ್ಕ್ಕೆಸುಕಾಡುವನ್ನು ಬಳಕ್ಕೆ ಸಾಯಿರದ ನೂಱುಮತ್ತರಾಗಿ (ಶಾಶಾ. IX–i, ೬೬-೦೯; 992); ಅದಱ ಹತ್ತಸಿನ ತನ್ನ ಬಳದೊಳಗೆ ಬಮ್ಮರ್ಯ್ಯಂ ವಿದ್ಯಾದಾನಕ್ಕೆ ಕೊಟ್ಟ ಮತ್ತರ್ಪನ್ನೆರಡು (ಶಾಶಾ. IX–i, ೦೦೯-೦೯; 1046); ಗುರುಗಳ ಮನೆಯು ಸ್ಥಳ ಬಿಯಾಳ ಕೇತಿಸೆಟ್ಟಿಯು ಬಳದಲು ಮನೆ ಎಡು ಮುದ್ದಯ್ಯನ ಬಳ್ಳದಲು ಮನೆ (ಎಕ. XI, ಹೊಳೆಕೆ. ೩೬.೬೬; 1220). [?]

**ಬಳಖುದ್ದಿ** 'ಬಲಖುದ್ದಿ' ನೋ.

**ಬಳಂಜ** 'ಬಣಜ' ನೋ.

**ಬಳಂಜಿಗ** 'ಬಣಜಿಗ' ನೋ.

**ಬಳಂಜು** 'ಬಣಜು' ನೋ.

**ಬಳಂಬೆ** 'ಬಣಂಬೆ' ನೋ.

**ಬಳಕೆ** 'ಬಟಿಕೆ' ನೋ.

**ಬಳಕೆಗಾರ** 'ಬಳಕೆಗಾಱ' ನೋ.

**ಬಳಕೆಗಾಱ**, ಬಳಕೆಗಾರ (ನಾ). ೧. ಹೆಚ್ಚು ವ್ಯವಹಾರದಲ್ಲಿರುವವನು; ನಾಡಾಡಿ; ಸಾಮಾನ್ಯಮನುಷ್ಯ : ಆ ಕ್ಷತ್ರಿಯಕುಲರತ್ನಗುಹಾರಮುಂಟು ಮಲವಿಲ್ಲ ಮೂತ್ರವಿಲ್ಲೆಂದರೀ ಲೋಕದ ಬಳಕೆಗಾಱರ ಮೇಳ್ವೆ ತೆಱನೆ (ಚೆಕ. ೧-೩೩); ಅವನ ನೆಲೆ ಮೋಕ್ಷಗಾಮಿಗೆ ಗಮ್ಯವಲ್ಲದೆ ನಾಡ ಬಳಕೆಗಾಱಂಗೆ ಗೋಚರವೆ (ಚೆಕ. ೯೧-೦೬). **ಬಳಕೆಗಾರ** : ೨. ಪದಾರ್ಥಗಳನ್ನು ಕೊಂಡುಕೊಳ್ಳುವವನು; ಗ್ರಾಹಕ : ಬಳಕೆಗಾರರ ಅನುಕೂಲಕ್ಕಾಗಿ ರಜಾದಿನಗಳಲ್ಲೂ ಆ ಅಂಗಡಿಯನ್ನು ತೆರೆದಿರುತ್ತಾರೆ (ರೂಢಿ). [ಬಳಕೆ (< ಬಟಕೆ) + –ಕಾಱ]

**ಬಳಕೆಮಾತು** 'ಬಳಕೆವಾತು' ನೋ.

**ಬಳಕೆವಾತು**, ಬಳಕೆಮಾತು (ನಾ). ೧. ಆಡುಮಾತು ; ರೂಢಿಯ ಮಾತು: ಆಂಡಯ್ಯನ ಭಾಷೆ ಕನ್ನಡಜಿಲ್ಲೆಗಳ ಬಳಕೆವಾತಿಗೆ ಸಂಬಂಧಪಟ್ಟುದು (ತಹಾ. ೦೨೯); ಈ ರೀತಿ ಬಳಕೆವಾತಿನಲ್ಲಿ ತಿಳಿವಿನ ತುತ್ತತುದಿಯನ್ನು ಮುಟ್ಟಿದ ಈ ವಚನಕಾರರ ವಾಗ್ವಿಲಾಸ ಕನ್ನಡಕ್ಕೆ ವಿಶಿಷ್ಟವಾದ ಕಾಣಿಕೆಯೇ ಸರಿ (ಸುವರ್ಣ. ೧೦೩). ೨. ಪರಿಚಯದ ಮಾತು,-ನುಡಿ ; ಸಲುಗೆಯ ಮಾತು : ನಂಟನ ಬಳಕೆವಾತಿನ [ಪಾಠಾಂ. ನಂಜನ ಬಳಗವೀತನ]ಬಂಧುಕೃತ್ಯದ ಬಳವಿಗೆಯೊಳೀ ನಿನ್ನ ಮಗನನು ಬೇಡಿಕೊಳಲೇಕೆ (ಕುವ್ಯಾಆ. ೬೦೨. ೦೦-೦೬). **ಬಳಕೆಮಾತು** : ೧. ಬಳಕೆವಾತಿನಲ್ಲಿರುವ ಎಷ್ಟೋ ಶಬ್ದಗಳು ನಿಘಂಟಿನಲ್ಲಿ ಸೇರಿಸಲಾಗದೆ ಕಾಲಕ್ರಮೇಣ ಅವುಗಳು ಮರೆಯಾಗಿ ಬಿಡುತ್ತವೆ (ರೂಢಿ). [ಬಳಕೆ (< ಬಟಕೆ) + ಮಾತು₁]

**ಬಳಕೆವೆರು** (ಕ್ರಿ). ರೂಢಿಯಾಗು ; ಅಭ್ಯಾಸವಾಗು : ನೋಡೆ ರಹಸ್ಯದೊಳ್ ಬಳಕೆವೆತ್ತೀ ಚಿತ್ರದಭ್ಯಾಸದಿಂ ದಹನಾಕ್ರಾಂತಮೆನಿಪ್ಪ ಮಂದಿರದವೋಲ್ ಕಾಣ್ಬೆಂ ಜನಾಕೀರ್ಣಮಂ (ಶಾಕುಂತ. ೬೯-೦೦೦). [ ಬಳಕೆ (< ಬಟಕೆ) + ಪೆರ್₁ (< ಪೆಱು₁) ]

**ಬಳಗ₁**, ಬಣಗ₁ (ನಾ). ೧. ಗುಂಪು; ಸಮೂಹ: " ಬಂಬಲ್. . . ಬಳಗಂ . . . ಗೊಂದಣೆ (ಉಂದಲ್) ಈ ೧೪ ಸಮೂಹಂ " (ಚಿಕಾ. ೩೬-೨೨೨); ಅಟ್ಟಿದಟ್ಟಿದ ಕರಿಘಟೆಗಳ ಬಳಗದಿನುಚ್ಚಳಿಸಿ ಮೊರೆವ ನೆತ್ತರತೆರೆಗಳ್ (ಕಂಕಶಾ. ೧೧-೩೬); ಕರುಳನಣಲೊಳಗಡಸಿ ನಲಿದುದು ಮರುಳಬಳಗ (ಕುವ್ಯಾಶಿ. ೫-೩೨). ೨. ರಾಶಿ; ಒಟ್ಟಿಲು : ಎಳದಳಿರ ಬಳಗದೊಳ್ ಪೊರಳ್ದು ಪೊರಳ್ದು (೧೦೪. ೩-೦೦೩ ಕ). ೩. ಒಂದೇ ಮನೆ ಅಥವಾ ಒಂದು ವಂಶಕ್ಕೆ ಸೇರಿದವರು ; ನೆಂಟರಿಷ್ಟರು; ಪರಿಜನ : ದೇವದೇವ ಅನಾಥನಾಥ ಅನಿಮಿತ್ತಬಂಧುವೆ ತಾಯ್ತಂದೆ ಬಂಧು ಬಳಗವೆ (ಬಸವ. ೨-೫೪); ಜ್ವಳನಕೊಂಡವನಿಕ್ಕಿಕೊಂಡೀ ಬಳಗವೆಲ್ಲಂ ಒಂದು ಪೇರುರಿಯೊಳಗೆ ಬೀಳುವೆವು (ಚಿಪು. ೫೬-೨೪) ; ಕಾಗೆಯುಗುಳನು ಕಂಡು ಕೂಗುವದು ಬಳಗವನು (ಸರ್ವಜ್ಞ. ೬೬೬); ಮದುವೆಗೆಂದು ಪರಊರಿನ ನಮ್ಮ ಸಮೀಪದ ಬಳಗದವರೆಲ್ಲ ಬರಹತ್ತಿದರು (ಅಹೋರಾ. ೯೦). ೪. ದಟ್ಟಣೆ; ಸಾಂದ್ರತೆ : ಕಾದಲರ ಪುರುಡಿನೆಸಕದೊಡನೆ ಇರುಳ ಬಳಗಂ ಬಡಬಡಾಗೆಯುಂ (ಕಂವ್ಯ. ೬-೬೨ ಕ). ಬಣಗ₁: ೧. ಮಿಗೆ ಮನೋಹರಮಾದ ಬೆಳ್ಕೊಕ್ಕರೆಗಳ ಬಣಗಮೋಯೆನಲು ತೋರಿತ್ತಗಣಿತಾಮಲತಾರಕಾಸಂದೋಹವಂಬರದಿ (ಶ್ರೀಕೃಷ್ಣ. ೯-೫೩). [ದೇ.॥ ತಮಿ. ವಲಙ್ಕಮ್=ದೊಡ್ಡ ಕುಟುಂಬ ; ತುಳು. ಬಳಗ ; ತೆಲು. ಬಲಗ]

**ಬಳಗ₂** (ನಾ). ನೊಗದಿಂದ ಎತ್ತು ನುಣಚಿಕೊಳ್ಳುವಿಕೆ; ತಪ್ಪಿಸಿಕೊಳ್ಳುವಿಕೆ : ' ಬಳಗವಿಕ್ಕು ' ಪರಾ.

ಬಳಗ ಹಾಕು = ನೊಗದಿಂದ ಎತ್ತು ತಪ್ಪಿಸಿಕೊಳ್ಳು : ಎತ್ತು ಬಳಗ ಹಾಕಿ ನಿಂತು ಬಿಟ್ಟಿತು (ರೂಢಿ). ಬಳಗಾ ತೆಗೆ = ಬಳಗ ಹಾಕು : " ಹೆಗಲು ಕೊಡದಿರು " (ಕಾಪಕೋ. ೨೦). [ ದೇ.॥ ತಮಿ. ವಟುಕ್ಕು ]

**ಬಳಗಜವಳಿ** (ನಾ). ನಂಟರಿಷ್ಟರಿಗೆ ಕೊಡುವ ಬಟ್ಟೆಯ ಉಡುಗೊರೆ: ಬಳಗಜವಳಿಗೆಂದು ಬಂದ ಚೀನದುಕೂಲದ ಹುರಾವಳಿಯು ಪಲವು ದಿಂಡುಗಳುಮಂ (ರಘುರ್ಚ. ೩-೨೩೨). [ಬಳಗ$_1$+ಜವಳಿ$_1$]

**ಬಳಗದೊತ್ತು** (ನಾ). [ವೀಶೈ] ಶರಣಸಮೂಹಕ್ಕೆ ದಾಸನಾದವನು: ಬಳಿದೊತ್ತು ಬಳಗದೊತ್ತು ವಂಶದೊತ್ತು ನಾನಯ್ಯಾ (ಬಸವ. ೩೩೩). [ಬಳಗ$_1$+ತೊತ್ತು (<ತೊಟ್ಟು)]

**ಬಳಗಧಾರೆ** (ನಾ). ಒಂದು ಬಗೆಯ ವಿವಾಹವಿಧಿ ; ಮದುವೆಯಲ್ಲಿ ಕನ್ಯಾದಾನ ಮಾಡುವಾಗ ನಂಟರಿಷ್ಟರೆಲ್ಲ ಸೇರಿ ಎರೆಯುವ ನೀರಿನ ಧಾರೆ : ಒಕ್ಕಲಿಗರಲ್ಲಿ ಬಳಗಧಾರೆಯು ಪದ್ಧತಿಯುಂಟು (ರೂಢಿ). [ಬಳಗ$_1$+ಧಾರೆ]

**ಬಳಗಮಿಕ್ಕು**, ಬಳಗವಿಕ್ಕು (ಕ್ರಿ). ನೊಗದಿಂದ ಎತ್ತು ತಪ್ಪಿಸಿಕೊಳ್ಳು : ಆ ಧೂರ್ತನೆಟ್ಟನಂದವುನೆ ಮಾಡಿ ಮರ್ಯಾದೆಯೊಳೊರ್ವೆಯೊಡಂಬಟ್ಟುಂ ಒಮ್ಮೆಯೊಡಂಬಡದೆಯುಂ ಬಳಗಮಿಕ್ಕಿ ಕಾಡಿದೊಡೆ (ಹಂಕಹಂ. ೩೩-೦೨). **ಬಳಗವಿಕ್ಕು** : ನಡವೆಟ್ಟುಗಳ್ ಬಳಗವಿಕ್ಕಿರೆ ಕಳ್ಳಿರಿನಕ್ಕುಮಚ್ಚಿಗಂ (ಅಭಿಷು.೯-೩೦). [ಬಳಗ$_2$+ ಇಕ್ಕು]

**ಬಳಗವಿಕ್ಕು** ' ಬಳಗಮಿಕ್ಕು ' ನೋ.

**ಬಳಗಾರ** ' ಬಳೆಗಾಟಿ ' ನೋ.

**ಬಳಗಾಟಿ** ' ಬಳೆಗಾಟಿ ' ನೋ.

**ಬಳಗಾಟಿಗಣ** (ನಾ). [ಜೈನ]ಶ್ರವಣರ ಪಂಗಡಗಳಲ್ಲಿ ಒಂದು : ಬಳಗಾಟಿಗಣದ ಮೇಘನನ್ದಿಭಟ್ಟಾರಕರ ಶಿಷ್ಯರಪ್ಪ ಕೇಶವನನ್ದಿ ಅಷ್ಟೋಪವಾಸಿ ಭಳಾರರ ಬಸದಿಗೆ . . . ಕೊಟ್ಟ ಗಟ್ಟಿ ಮತ್ತರಯ್ದು (ಇಆ. IV, ೦೬೦-೦೭; 1048). [ಬಳಗಾಟಿ (<ಬಳೆಗಾಟಿ)+ಗಣ]

**ಬಳಚು** 'ಬಟ್ಚು' ನೋ.

**ಬಳಜ** 'ಬಲಜ' ನೋ.

**ಬಳತ** 'ಪಣತ' ನೋ.

**ಬಳದಡಿ** (ನಾ). ಒಂದು ಬಗೆಯ ಆಯುಧ ; ದೊಡ್ಡಬಡಿಗೆ : ಹೇಱುವ ಬಱುಗಲ್ಲು ಬಳದಡಿ ವರಶಕ್ತಿ ಪಾಱುಂಬಳೆ ಶೂಲದಿಂದೆ ಏಱುಗಾಣಿಸಿ . . . ಗಾಱುಮಾಡಿದರು ರಕ್ಕಸರು (ಜೋಹಕ. ೩೯-೨೭); ಬಿಲ್ಲಂಬು ಬಾಕು ಬಳದಡಿ ಕೊಡಲಿ ಮುರಗತ್ತಿ (ಗುರುಚಾ. ೩-೩೦). [ಬಳ್$_3$(=ಬಲ್$_3$)+ದಡಿ$_1$]

**ಬಳದೇವ** ' ಬಲದೇವ ' ನೋ.

**ಬಳಪ**, ಬಳಹ (ನಾ). ೧. ವಿಗ್ರಹ ಪಾತ್ರೆ ಮುಂತಾದುವುಗಳನ್ನು ಮಾಡಲು ಬಳಸುವ ಒಂದು ಬಗೆಯ ಮೃದುವಾದ ಬಿಳಿ ಕಲ್ಲು: " ಬಳಪವುದು ಶುಭ್ರೋಪಲಂ " (ಕುಂಗಹಾ. ೦೦೬-೦೩) ; ತಂಬುಲದ ಸೊರ್ಕೆರ್ ದೊರೆಕೊಳೆ ತಿಂಬುದು ಬಳಪಮಂ (ಲೋಕೋಪ. ೦೦-೯೯) ; ಬೆಳ್ಪಿನಿರ್ ತುಱುಗಿ ನಿರಂತರಂ ಬಳಪಮಂ ತೊಡೆದಂತಿರೆ (ಸೂಕ್ತಿಸು. ೩-೩೭). ೨. ಕಪ್ಪುಹಲಗೆಯ ಮೇಲೆ ಬರೆಯಲು ಮೃದುವಾದ ಬಿಳಿಯ ಕಲ್ಲಿನಿಂದ ತಯಾರಿಸುವ ಲೇಖನಸಾಧನ : ಪಡೆದ ಧನಕ್ಕೆ ಲೆಕ್ಕಮಿಡಲಿಂದ್ರನಗಂ ಬಳಪಂ ಧರಾತಳಂ ಕಡಿತಮುಹೀಶ್ವರಂ ತಗುಳೆ ಬಾಚಿಸುವೊಂ (ಶಾಂತಿಪು. ೯-೦೯೭) ; ನಿರ್ಮಳಫಳಕಂ ನೇರಿರ್ದೊಡಂತದು ತೆಗೆದದಱೊಳ್ ಬಳಪದಿನಾಗಳ್ ಬರೆದಂ ಲಳನೆಯ ರೂಪಾತಿಶಯಮಂ (ರಹಳು. ೬-೩೦೮); ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ (ಕುವ್ಯಾ.ಆ. ೦-೦೩). **ಬಳಹ** : ೧. "ಶ್ವೇತಧಾತುಃ—ಬಳಹ" (ಬಿತಂ. ೦೬೦) ; ಕಾಕಿಣೀ ಹಿರಣ್ಮಯೋರ್ವಾ = ಬಳಹಮುಂ ಪೊನ್ನುಮೆಂಬವಱ ಮುಟ್ಟುಹಂಸೂರುಳ್ (ಶಬ್ದಮಾ. ೨೭-೩೨). ೨. ಸ್ಮರತಾಪದಿಂ ಬೆದಱ . . . ಧಾತ್ರಿಯೊಳ್ಬಳಹದಿಂ ಬರೆದಂ ಸತಿರೂಪನೊಪ್ಪುವಂತಿರೆ (ರಘುಚ. ೩-೨೨).

ಬಳಪದ ಕಲ್ಲು = ಬರೆಯುವ ಸಾಧನ, ಒಡವೆ, ಮೂರಿಗೆ ಮುಂತಾದುವುಗಳನ್ನು ಮಾಡಲು ಉಪಯೋಗಿಸುವ ಮೃದುವಾದ ಬಿಳಿಕಲ್ಲು : ನೀಲಗಿರಿಯಿಂದ ತರಿಸಿದ ಹಸರುಕಲ್ಲು, ಅಮೃತಶಿಲೆ, ಬಳಪದ ಕಲ್ಲು . . . ಬ್ರೆಕ್ಕಿಯ ಇತ್ಯಾದಿ ಶಿಲೆಗಳಿಂದ ಆಭರಣಗಳನ್ನು ತಯಾರಿಸುತ್ತಿದ್ದರು (ಕಾಕರ. ೦೯) ; ಈ ಬಳಪದ ಕಲ್ಲಿನ ಮುಚ್ಚಳದ ಮೇಲಿನ . . . ಲಿಪಿಯಿಂದ ಹೊರಡುವ ಅರ್ಥದ ವಿಚಾರದಲ್ಲೂ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ (ಪ್ರಾ೩೦. ೩೦). ಬಳಪದೋಲೆ, ಬಳಹದ ಓಲೆ, ಬಳಹದೋಲೆ = ಬಳಪದ ಕಲ್ಲಿನಿಂದ ಮಾಡಿದ ಕರ್ಣಾಭರಣ : ಜಾದಿಯಂ ಮುಡಿದು ಮುತ್ತಂ ತೊಟ್ಟು ಬೆಳ್ಮಡಿಯನುಟ್ಟು ಬಳಪದೋಲೆಯನಿಟ್ಟು . . . ಕೈಗೈಯ (ಅಂಶಾತ. ೬-೩೩ ವ); ಚಿತ್ರದ ಕಂಕಣಂ ಬಳಪದೋಲೆ ಕುರುಳ್ಗಳವಟ್ಟ ಕಾಡ ಹೂ. . .ಮನಂಗೊಳೆ ಪುಳಿಂದಿಯರೊಪ್ಪುವರಾ ಮಹಾದ್ರಿಯೊಳ್ (ರಹಳು. ೯-೨೭) ; ಹಳದಿಯ ಸೀರೆಯನುಟ್ಟು ಬಳಹದ ಓಲೆ ಕಿವಿಯಲ್ಲಿ ಇಕ್ಕಿ (ಕರ್ಪವ. ೯೭-೯೯೯); ಕಿವಿಯಲಿಕ್ಕಿದ ಬಳಹದೋಲೆ ಹಳದಿಯ ಉಡುಗೆ (ಬಸರ. ೯-೧೦೦). [ದ್ರಾ.? ತಮಿ. ಪಲಪ್ಪಮ್, ಪಲಪ್ಪಮ್; ಮಲ. ಪಲಪ್ಪಮ್ ; ತುಳು. ಬಳಪು, ಬಲವು; ತೆಲು. ಬಲಪ, ಬಲ್ಪ]

**ಬಳಪಂಗೊಳ್** (ಕ್ರಿ). ಲೇಖನದ ಸಾಧನವನ್ನು ಹಿಡಿದು ಕಾವ್ಯ ಮುಂತಾದುವನ್ನು ರಚಿಸು : ಸವಣಂ ಬಳಪಂಗೊಳೆ ಗಾಂಡಿವಿಬಿಲ್ಗೊಳೆ . . . ಕೌರವಾರಿ ಗದೆಗೊಳೆ ಪೊಣರ್ಕೆಗಾವಂ ನಿಲ್ವಂ (ಕಥಕ. ೦೬೭ ಕ್ರಹೋ). [ಬಳಪ + ಕೊಳ್$_1$]

**ಬಳಪಂದೊಡೆ** (ಕ್ರಿ). ಬಳಪದ ಕಲ್ಲಿನಿಂದ ಬಿಳಿಯ ಬಣ್ಣವನ್ನು ಲೇಪಿಸು : ಕತ್ತರಿಸಿದ ಗಡ್ಡವಿಟ್ಟ ತಿಲಕಂ ಬಳಪಂದೊಡೆದೋಲೆ ದೇಸೆಯುಂತಿರೆ ಸುಲಿಪಲ್ ತಳತ್ತಳಿಸಿ ತಂಬುಲಮಂ ಪೊಳಕುತ್ತ (ಅರ್ಜುಣ. ೩-೩೦). [ಬಳಪ + ತೊಡು$_1$]

**ಬಳಬಳ$_1$** (ನಾ). (ದ್ರವಪದಾರ್ಥವು ಮೇಲಿನಿಂದ ಕೆಳಕ್ಕೆ ಬೀಳುವುದನ್ನು ಸೂಚಿಸುವ) ಒಂದು ಅನುಕರಣಶಬ್ದ : 'ಬಳಬಳನೆ' ಪರಾ.

**ಬಳಬಳ$_2$** (ಅ). ಅಧಿಕವಾಗಿ; ಅತಿಶಯವಾಗಿ : ಪರಿಪಕ್ವಫಳಪ್ರಚಾರದಿಂ ಬಳಬಳ ಬಳ್ಳುವಾಂಬ್ರವನದಿನ್ದೆ . . . ಈಕ್ಷಿಪರ್ಗ್ಗತಿಮನೋಹರವಲ್ತೆ (ತಶಿಇ. IX-i, ೨೪೬-೦೫; 1177).

**ಬಳಬಳನೆ** (ಅ). ಒಂದು ಅನುಕರಣಾವ್ಯಯ: ಸಂದುಕಳಾಸಂಗಳು ತಪ್ಪಿ ಅಸ್ಥಿಗಳು ಬಳಬಳನುದುರಲು (ಕಕ್ಕ. ೫. ೩೯-೦೯೦); ನೃಪನರಮನೆಗೆ ಬಳಬಳನಾಗಳೆ ಸ್ವರ್ಗಲೋಕದ ಹೂಮಳೆಗಱೆದುದು ಚೆಲ್ಲಿದಂತೆ (ಶಶಕ. ೩-೦೦೫). [ಬಳಬಳ$_1$ + – ಅನ್$_1$]

**ಬಳಬಳಿಕೆ**, ಬಳಬಳಿಕ್ಕೆ (ನಾ). [ನಾಟ್ಯ] ಒಂದು ಬಗೆಯ ನೃತ್ಯಭಂಗಿ : ಆ ನಿಲವಿನ ನಿರ್ವಾಹಮಂ ಗತಿಯ ಗೌರವಮಂ ಚಾರಿಗಳ ಚೆಂದಮಂ . . . ಬಳಬಳಿಕೆಯ ಚಂಚುರತೆಯಂ . . . ತೋಱುತ್ತುಮಿರೆ (ಕುಸುಮಾ. ೬-೩೬ ವ). **ಬಳಬಳಿಕ್ಕೆ** : ಚಾಳೆಯದೋಜೆಗಳ್ ಬಳಬಳಿಕ್ಕೆಗಳಾಂತಿರೆ. . . ಸಂದುದು ರಂಭೆಯ ಲಾಸ್ಯವಿಭ್ರಮಂ (ಅನಂತಪು. ೯-೯೦). [?]

**ಬಳಬಳಿಕ್ಕೆ** 'ಬಳಬಳಿಕೆ' ನೋ.

**ಬಳಮುದ್ದು** 'ಬಲಮುದ್ದು' ನೋ.

**ಬಳಮರ್ದಿಕ್ಕು** (ಕ್ರಿ). ಉಗ್ರವಾದ ಮಾದಕದ್ರವ್ಯವನ್ನು ಕುಡಿಸು : ತದ್ವಿಪಶಾರಿಯ ಬಲದ ತೋಳ್ಪಱಿದು ಬೀ[ಬ್ಯ]ಂತಾತಂ ಬೀ[ಟ್ಟು] ದುಮುಂಬರಚರಶ್ರೀಕಾಂತೆಗೆ ಬಳಮರ್ದಿಕ್ಕುವಂತಾತನಕ್ಕುವುದಂ ಕಂಡು (ಶಾಂತಿಪು. ೯-೨೭ ವ). [ಬಳಮರ್ದು ( < ಬಲಮರ್ದು ) + ಇಕ್ಕು]

**ಬಳಮರ್ದು** 'ಬಲಮರ್ದು' ನೋ.

**ಬಳಮರ್ದುಕಾಱಿ** (ನಾ). ಉಗ್ರವಾದ ಮಾದಕದ್ರವ್ಯವನ್ನು ತಯಾರಿಸು ವವನು : ಕಾಮದೇವನೆಂಬ ಬಳಮರ್ದುಕಾಱಿನ ಮಾಡಿದ ಮರ್ದಿನಂತೆ ಬಳಿದು ಪಳಂಬಡದು (ಶಂಶಪಾ. ೯-೬೭ ವ).
[ಬಳಮರ್ದು (< ಬಲಮರ್ದು) +— ಕಾಱಿ]

**ಬಳಯಿಸು** 'ಬಳೆಯಿಸು' ನೋ.

**ಬಳಯುತ** 'ಬಲಯಂತ' ನೋ.

**ಬಳರಿ** 'ಭಟಾರಿ' ನೋ.

**ಬಳಲ್** 'ಬಟಲ್' ನೋ.

**ಬಳಲಕೊಪ್ಪ** (ನಾ). ಒಂದು ಊರಿನ ಹೆಸರು : ಸಂನಕೊಪ್ಪದ ಬಸ್ತಿಯಾಪ್ಪ ಬಡಗಲು ಬಳಲಕೊಪ್ಪದ ಕೆಱೆ × × ಕಲು ಸರುಹ ಸಹ ಬಿಟ್ಟರು (ಎಕ. VII, ಶಿಕಪೂ. ೦೦೯-೪೦; ೯೫೦ ೯). [? + ಕೊಪ್ಪ]

**ಬಳಲಿಕೆ** 'ಬಟಲ್ಕೆ' ನೋ.

**ಬಳಲಿಸು** 'ಬಟಲಿಸು' ನೋ.

**ಬಳಲು** 'ಬಟಲ್' ನೋ.

**ಬಳಲುಗಚ್ಚೆ** (ನಾ). ಜೋತಾಡುವಂತೆ ಕಟ್ಟಿದ ಕಚ್ಚೆ : ಉಟ್ಟ ಬಾಸರ ಬಳಲುಗಚ್ಚೆಯನಟ್ಟಹಾಸದ ಜನದ ನಗೆಗಳ ನಟ್ಟವಿಗನೋಸರಿಸಿ ಸಭೆಯಲಿ ಮೆಲ್ಲನೈತಂದ (ಕುಮ್ಯಾಭಿ. ೦೩-೦೩); ಉಟ್ಟ ಧೋತ್ರದ ಬಳಲುಗಚ್ಚೆಯ [ಪಾಠಾಂ. ತಳರುಗಾಸೆಯ] ಸೃಷ್ಟಿಗಚ್ಚರಿರೂಪಿನಲಿ . . . ಬಾದನಾ ಖುತುವರ್ಣನೋಲಗಕೆ (ಕಳಕ. ೬-೨೯). [ಬಳಲು (< ಬಟಲ್) + ಕಚ್ಚೆ]

**ಬಳಲುಗೈ** (ನಾ). ತೂಗಾಡುವ ಕೈ : ವಣಿವುಯಭದ್ರಭವನಾವಳಿಗಳ ನಿಲಜನ ಬಳಲುಗೈಸೋಂಕಿನಲಿ ನೆಲಕಪ್ಪಳಿಸಿ ಬಿದ್ದವು (ಕೂಕಿಠಾ. ೩-೭-೦೭).
[ಬಳಲು (<ಬಟಲ್) + ಕೈ (< ಕಯ್)]

**ಬಳಲುಗೊರಳು** (ನಾ). ಜೋತುಬಿದ್ದ ಕೊರಳು,- ಕುತ್ತಿಗೆ : ಬಳಲು ಗೊರಳಿಲಿ ದೀಳುತಿರ್ದವು ಬೆಳುವ ಗಿಳಿ ಕಬ್ಬಕ್ಕಿ . . . ಕೋಟಿಗಳವನಿ ಯಗಲದಲಿ (ಕೂಕಿಠಾ. ೬-೩-೦೬).
[ಬಳಲು (<ಬಟಲ್) + ಕೊರಳು (< ಕೊರಲ್)]

**ಬಳಲುಡಿಗೆ** (ನಾ). ಜೋಲುವ ಉಡಿಗೆ; ನೇತಾಡುವ ಬಟ್ಟೆ : ಆ ಸಮಯದಲಿ ಬಂದನೊಬ್ಬನು ಭೂಸುರನು . . . ಬಾಸರದ ಬಳಲುಡಿಗೆ ಮಟ್ಟಿಯ ಧೂಸರದ ಮೈದೊಡಿಗೆ ಮೆಱೆಯೆ (ಕುಮ್ಯಾಭಿ. ೨೦-೦೩).
[ಬಳಲು (< ಬಟಲ್) + ಉಡಿಗೆ (< ಉಡುಗೆ)]

**ಬಳಲುನೋಟ** (ನಾ). ದಣಿದ ದೃಷ್ಟಿ; ಆಯಾಸಗೊಂಡ ನೋಟ : ಬಳಲುನೋಟಗಳೋರೆನೋಟವಾಗವೆಂದೊಳುನೋಟವರುಸು ಪಾಡಿದಳು (ಕಠಕ. ೦೦-೪೦). [ಬಳಲು (<ಬಟಲ್) + ನೋಟ]

**ಬಳಲುಮುಡಿ** 'ಬಟಲ್ಮುಡಿ' ನೋ.

**ಬಳಲುಹೆಜ್ಜೆ** (ನಾ). ದಣಿದ ಹೆಜ್ಜೆ; ಸೋತ ಹೆಜ್ಜೆ : ನೀಲಿಕನ್ನಡಕದ ಮುಂದಾಕ ಬಳಲುಹೆಜ್ಜೆ ಹಾಕುತ್ತ ಹೊರಗೆ ನಡೆದನು (ಶಿಪಕು. ೨೨೯).
[ಬಳಲು (< ಬಟಲ್) + ಹೆಜ್ಜೆ (< ಪಜ್ಜೆ)]

**ಬಳಲೊಡಲ್** (ನಾ). ತೆಳ್ಳಗಿರುವ ಶರೀರ; ಕೃಶೋದರ : ಬಳಲೊಡಲ ಬೆಡಂಗಿನ ಬಾಲೆಯೊರ್ವಳ್ . . . ಬರುತುಮಿರ್ದಳ್ (ಕಾಪೂಕ್ಕ. ೧೬-೨೯).
[ಬಳಲ್ (< ಬಟಲ್) + ಒಡಲ್]

**ಬಳಲ್ಕೆ** 'ಬಟಲ್ಕೆ' ನೋ.

**ಬಳಲ್ಕೆಗಳೆ** 'ಬಟಲ್ಕೆಗಳೆ' ನೋ.

**ಬಳಲ್ಗಾಮಿಲೆ** (ನಾ). ಹೆಚ್ಚು ಆಯಾಸವನ್ನುಂಟುಮಾಡುವ ಒಂದು ಬಗೆಯ ಕಾಮಾಲೆರೋಗ : ಮೂಲಕತ್ತ, ಕಾಮಾಲೆ, ಊದುಗಾಮಿಲೆ, ಬಳಲ್ಗಾಮಿಲೆ, ಕುಂಭಕಾಮಿಲೆ (ಕುಳಕ. ೩೨೭).
[ಬಳಲ್ (<ಬಟಲ್) + ಕಾಮಿಲೆ (< ಕಾಮಾಲೆ)]

**ಬಳಲ್ಗಿವಿ** (ನಾ). ಜೋತು ಬಿದ್ದ ಕಿವಿ : ಪಡೆ ಗೋಳಟ್ಟುದಾನೆಕುದುರೆ ಗಳೊರೆವ ಕಂಬನಿ ಬಳಲ್ಗಿವಿಗಳಿಂ ಜೋಲ್ದವು (ಕೃಬಕಾ. ೦೩-೩೦).
[ಬಳಲ್ (< ಬಟಲ್) + ಕಿವಿ]

**ಬಳಲ್ಚು** (ಕ್ರಿ). (ದ್ರವ ಮುಂತಾದುವನ್ನು) ಬಳಿದುಕೊಳ್ಳು; ಬಳಿದಂ ಕೂಡಿಸು; ಬಾಚು: ಮಿಸುವ ಮಿಂಚಿನೊಳಗೆ ಸುಳಿವ ಬಣ್ಣಮುಂ ಬಳಲ್ಚಿ ಕೊಂಡು ಚಿತ್ರಕಾಶರಾಶಿಯೆನಿಪ . . . ವಿಭೂತಿ (ಪಪೂಅ. ೯-೩); ಎಳೆವಳೆಸೆ ಬೆಳ್ಪೆಳಗಂ ಬಳಲ್ಚಿ ಶಶಿರುಚಿಯೊಳೆರೆದಿಟ್ಟಂದದಿನೇಂ ತೊಳೆಗಿದುದೊ . . . ಸದ್ಯೋಜಾತವದನಂ (ಕಪಿಪು. ೩-೩). [ಬಳಲ್ ? + — ಚು]

**ಬಳಲ್ದುಱುಬು** (ನಾ). ಜೋತಾಡುವ ಮುಡಿ : ವೃಗಳ ಮುಡಿಯದ ಬಳಲ್ದುಱುಬು . . . ಸಿಂಗರಕೆ ಮಿಗಿಲಾಯ್ತುವನಿಸುತೆಗೆ ಖುತುಮತಿ ಯಾಗಲು (ಕೃಬಕಾ. ೦೬-೨೩).
[ಬಳಲ್ (< ಬಟಲ್) + ತುಱುಬು (< ತುಱುಂಬು)]

**ಬಳಲ್ನಡು** (ನಾ). ಸಣ್ಣ ಸೊಂಟ; ಬಡನಡು : ಬಿಣ್ಗೊಡೆಯ ಬಡ ವಾಸೆಯ ಬಳಲ್ನಡುವಿನ . . . ಬೆಡಂಗಿನ ಬಾಲೆಯೊರ್ವಳ್ . . . ಬರುತುಮಿರ್ದಳ್ (ಕಾಪೂಕ್ಕ. ೧೬-೨೩). [ಬಳಲ್ (< ಬಟಲ್) + ನಡು]

**ಬಳಲ್ನುಡಿ** (ನಾ). (ಅಲಂ) ನೋವಿನಿಂದ ಕೂಡಿದ ಮಾತು : ಕೊಟ್ಟ ಬೀಳ್ಕೊಡದೆ ಮಾತಾಡೆನೆಂಬ ಬಳಲ್ನು [ಪಾಠಾಂ. ಬಳಲುನು; ಅಳಲ್ನು, ನಳಲನು]ಡಿಯುಂ ಕೇಳ್ದು ಶಿವಂ ಕೌತುಕಂಬಟ್ಟು (ಶಂಪಠ. ೦೨-೬೩).
[ಬಳಲ್ (< ಬಟಲ್) + ನುಡಿ]

**ಬಳಲ್ಮಿಡಿ** (ನಾ). ತೂಗಾಡುವ ಹೀಚು ಕಾಯಿ : ಬಳಲ್ಮಿಡಿಗಳಲ್ಲಿ ಬಲ್ಮಿಡಿಕಾಯ್ಗಳ್ . . . ತನಿವಣ್ಗೊಳಿವ್ಯಾಪಿಸದುದು (ಶಂಕೃಕೃ. ೨-೩-೦೩).
[ಬಳಲ್ (< ಬಟಲ್) + ಮಿಡಿ]

**ಬಳಲ್ಮುಡಿ** 'ಬಟಲ್ಮುಡಿ' ನೋ.

**ಬಳಲ್ಮೊಗ** (ನಾ). ಆಯಾಸಗೊಂಡಂತಿರುವ ಮುಖ : ಎಸೆವ ಬಳಲ್ಮೊಗಮುಷ್ಣಮನುಸಿರ್ಪುಸಿರನುರಾಗವೇಱುವಕ್ಷಿದ್ವಿತಯಂ . . . ತನು ಮನೋಹರಂ ಮಾನಿನಿಯಾ (ಗಂಕಿ. ೨-೨೦).
[ಬಳಲ್ (< ಬಟಲ್) + ಮೊಗ]

**ಬಳವಂತ** 'ಬಲವಂತ' ನೋ.

**ಬಳವಡಿಕೆ** (ನಾ). ಒಂದು ಬಗೆಯ ಸಸ್ಯ : ಅಡಕುಪುಟ್ಟನ ಗಿಡ, ಬಳವಡಿಕೆ . . . ರಕ್ತಪುನರ್ನವ (ಕ್ರುಶಿಗಿ. ೦೩-೨೩೦). [?]

**ಬಳವತ್ಸೈನ್ಯ** 'ಬಲವತ್ಸೈನ್ಯ' ನೋ.

**ಬಳವದ್ವೈರಿ** 'ಬಲವದ್ವೈರಿ' ನೋ.

**ಬಳವಳಿಸು** (ಕ್ರಿ). (?) : ಜಳಲವಮಿರ್ದ ಬೆಂಚೆಗೆ ತುಷಾತುರದಿಂ ಪರಿ ತಂದು ತೀರದೊಳ್ ಘಳಿಲನೆ ಕಾಲನೂಱೆ ಮೊಗಮುಂ ನೆಱೆ ನೀಡಿ ತದೀಯ ಪಂಕವಾಷ್ಕುಳದ ಮಹೋಷ್ಣಮೋಷ್ಠಪುಟಮುಂ ಸುಡೆ ಸಾರ್ದು ಬದಿರ್ಚಿ ಮೋಱೆಯಿಂ ಬಳವಳಿಸುತ್ತುಮಿರ್ದುದು ಸಮಂತು ಮೃಗೌಘ ಮದಾ ನಿದಾಘದೊಳ್ (ಕುಸುಪೂ. ೬-೦೨೬ ; ಕಾಂತೀಶ್ಯ. ೦೨-೨೩ ನೋ.). 'ಅಳವಟಿಸಂ' ಹೋ. [ ಇದು 'ಕಳವಳಿಸು' ಎಂಬುದರ ಅಪಲಿಖಿತವಿರಬಹುದೆ ? ]

**ಬಳವಿ** (ನಾ). ೧. ಬೆಳವಣಿಗೆ; ವೃದ್ಧಿ : ತಿಂಗಳ ಬಳವಿಯುಸುಚ್ಚ ತರಂಗಾಂಬುಧಿ ಬಳೆವ ತೆಱದಿನನುದಿನದಿಂದಂ ತಿಂಗಳ ಬಳವಿಯುನೆಱಾ ಶೃಂಗಾರಾಂಬುಧಿಗೆ ಗರ್ಭವೇಂ ಬಳೆದತ್ತೊ (ಸುಕುಪಪಾ. ೦೦-೦೩) ; ತನುಜನ ಬಳವಿಯನೆ ನೋಡಿ ಜನಕಂ ನಲಿದಂ (ಕಪುರ. ೨೦೩ ಪ್ರದೋ) ; ಮಾಡಿದುದು ಚಂತಾಕ್ರಾಂತತಯನೆಮಗೀ ಮಗಳ ಬಳವಿ (ಪರ್ವಪು. ೯-೩೯). ೨. ವ್ಯಾಪ್ತಿ; ಹರಹು : ಕಮ್ಮನೂರ ಬಳವಿಯೊಳು ಅಯ್ಗಣ್ಣುಗಂ ಬೆಟ್ಟಲೆ (ಎಕ. XIV, ಎಡಕಿಕ. ೧೬-೦೦ ; 1079) ; ಬೆಳತಿಗೆಗಣ್ಣ ಬಳವಿಗಿದಾವೆ ಗುಜು

ಯೆಂದು ಕುಱುಪನಿಕ್ಕುವಂತೆ ಕೊನೆಗೊಡಂಕೆಯೊಳ್ ತೋರಮುತ್ತಿನ ಮುಗುಳೀ ತೆಗಳ್ಚಿಯುಂ (ಚಂದ್ರಕೃ. ೬-೬೩ ವ). ೩. ಆಕ್ರಮಣ ; ಮುತ್ತಿಗೆ : ಜಾನ್‌ಕಸ್ತೂರಿಯು ಕೊಡಗುಜನರ ಬಳವಿಗೆ ಸಿಕ್ಕಿ ಜಗಳವಾಡಿ ಬಹಳ ಜನಕ್ಕೆ ಜಾಯ ಜಖಮಿ ಆದ್ದರಿಂದ ಲಾಚಾರಾಗಿ (ಹಕೊಂಶ್ರ. ೪೦).

[ ಬಳ್ $_1$ + — ವಿ$_1$ ]

**ಬಳವಿಗೆ** (ನಾ). ೧. ಬೆಳವಣಿಗೆ ; ವೃದ್ಧಿ : "ಸಚರ ನರರಲ್ಲಿ ಬಳೆದಂ ಬಳವ ಬಳವಿಗೆಯ ರುಚಿರವಮಕ್ಕುಂ" (ಸಂಜೀವ. ೨೬) ; ಮಕ್ಕಳಂ ಪಡೆದವರ ಕೂಸಾಟಮವರ ಬಳವಿಗೆಯವರ ಹರೆಯದ ವಿಳಾಸಮುಂ ನೋಡಲಿವು ಮಾಱು ಮುನ್ನಂ ನೋನದವರ್ಗೆಂತು ಸಂಭವಿಪುದು (ಪದ್ಮಪು. ೩-೧೦). ೨. ಅಭಿವೃದ್ಧಿ ; ಏಳಿಗೆ ; ಶ್ರೇಯಸ್ಸು : ಭಕ್ತನ ಬ[ಹಸಂ. ಬೆ]ಳವಿಗೆಯ ಮಾಡಿದನುಪೋಯೆಂದುದು ಸುರಸ್ತೋಮ (ಉದ್ಭಟ. ೬-೧೯). ೩. ಅತಿಶಯ ; ಅಧಿಕ್ಯ ; ಹೆಚ್ಚಳ : ಇಳೆಯ ಸುಧರ್ಮಮಾರ್ಗದಲ್ಲಿ ನಲವಿಂದ ಪಾಲಿಸುತಿರ್ದರು ಹರಿಭಕ್ತಿ ಬಳವಿಗೆಯೊಳು ನಲಿದಾಗ (ಸಂಪಕು. ೩-೦೫).

[ಬಳವಿ + — ಗೆ]

**ಬಳವಿವಡೆ** (ಕ್ರಿ). ಹೆಚ್ಚಳವನ್ನು ಹೊಂದು ; ಅಧಿಕವಾಗು : ಕೆಚ್ಚು ವಿರ್ದ ಮಚ್ಚುಮನುರ್ಚಿಪೋದ ಮೇಳಮುಮನಳವಿಗುಬ್ಬಿದಲಂಪುಮಂ ಬಳವಿವಡೆದಲ್ಕಱುಮನೋತೋರ್ಪರೊಳ್ ನೆಱೆದು (ಅಂಕಿ. ೪-೩೨ ವ).

[ಬಳವಿ + ವಡೆ]

**ಬಳವೈರಿ** 'ಬಲವೈರಿ' ನೋ.

**ಬಳಸಿಗ** (ನಾ). ಕವಚವನ್ನು ತೊಟ್ಟವನು : "ಬಳಸಿಗಂ—ಕುಪ್ಪಸಿಗಂ" (ಶಮದ. ಶ. ೩೬ ಅಖಿ) ; ಬಳಸಿಗಂ ಪೊಳೆ ತಾಳಂ . . . ಯಿಱುಕುಳಿ ಯಿಮಾದಿಯಾಗಱು ಕುಳನಂ (ಶಮದ. ೨೬). [ಬಳಸು$_3$ + — ಇಗ]

**ಬಳಸು$_1$** (ಕ್ರಿ). ೧. ಸುತ್ತುವರಿ ; ಸುತ್ತುಗಟ್ಟು : ಶ್ರೀ ತಳ್ಪರದೊಳ್ ಕೌಸ್ತುಭಜಾತದ್ಯುತಿ ಬಳಸಿ ಕಾಂಡಪಟದಂತಿರೆ (ಕಬಿಠ. ೧-೧) ; ಪಲವು ವಿಮಾನಂಗಳಂ ಏಗುರ್ವಿಸಿ ಕ್ಷಪಣಕನ ವಿಮಾನದ ಮುಂದೆ ಬಳಸಿಯುಂ ಪೋಪಂತು ಮಾಡಿಯಾಕಾಶಮೆಲ್ಲಮುಂ ವಿಮಾನಮಯಮಾಗೆ ವಿಗುರ್ವಿಸಿ (ವಡ್ಡಾರಾ. ೬೯-೬) ; ನೆರೆದರಸುಮಕ್ಕಳ ನಿಡುಗಣ್ಗಳ ಬಳಗಮಂಜಿಗೆ ತನ್ನಯ ಪಂಜ್ತೆಯ್ಗಳ್ ನಡೆ ಬಳಸಿ ಪಲರುಮುಂಬಂ ತುಡೆ ನಡಮವಿರ್ದೊಂದು ಪುಲ್ಲೆಯಿರ್ಪಂತಿರ್ದಳ್ (ಕಂಪಕಾ. ೩-೫೦) ; ಆಗಲಾ ಕೊಳನ ಬಳಸಿ ಬಂದು ನಿರ್ಭರವಾಗಿ ಬೊಬ್ಬಿಱುದಬ್ಬರಂಗೆಯ್ಯ (ಗದಾಯು. ೬-೧ ವ). ೨. ಸುತ್ತುಹಾಕು ; ಅಲೆ : "ಬಳಸು—ಭ್ರಮಣ, ಕಂಚುಕಾಂಗಯೋ: (ಯುದ್ಧಕವಚ)" (ಕಮುಕ) ; ಅವರೋದುವ ಕ್ಷೇತ್ರದೆ ಬಳಸಿಯುಂ ನೋಡಿಸುವುದೆಂದು ಪೇಳ್ದೊಡೆ (ವಡ್ಡಾರಾ. ೦೬೬-೨೨). ೩. ತಿರುಗು ; ಹೊರಳು : ಹೊಳೆಯ ಸುಳಿಯಲ್ಲಿ ಸಿಕ್ಕಿದ ಹುಲ್ಲು ಬಳಸುವದಲ್ಲದೆ ಅಳಿವುದಿಲ್ಲ ಮುಳುಗುವುದಿಲ್ಲ (ಶೂೀಕಶಾ. ೦೩೦-೫೦೬). ೪. ಸುತ್ತಿ ಹೇಳು : ಮುನ್ನಮೆ ಮುಟ್ಟಿ ನುಡಿಯದೆ ಪೊಱಪೊಱಗನೆ ಬಳಸಿ ಕನ್ನೆಯು ಶಂಕೆಯಿಂ ಕಿಡಿಸಿ ಮತ್ತವಿಂತೆಂದಳ್ (ಕಂಪಕಾ. ೪-೬೩ ವ).

ಬಳಸುಬಳಸು, ಬಳಬಳಸು (ದ್ವಿರುಕ್ತಿ) : ಹಲವು ಸೂಳ್ ಕೈ ಮುಟ್ಟಿ ಸವಿಸುತ ಬಳಸಿಬಳಸಿ ಬಳಕೆ ಹೊಡವಡುತ (ಬಸಕೃ. ೩೯-೨೩) ; ಅನಿರೀಕ್ಷಿತವಾಗಿ ಅನೇಕಾನೇಕ ವಿಷಯಗಳು ಅವನ ಮನಸ್ಸನ್ನು ಬಳಬಳಸಿ ಹಾದು ಹೋದುವು (ಏಕಠಾ. ೦೩೦). ಬಳಸಿ ಹೇಳು= ಸುತ್ತಿ ಹೇಳು; ನೇರವಾಗಿ ಹೇಳದಿರು : ಹಾಗ್ಯಾಕೆ ಬಳಸಿ ಹೇಳ್ತೀಯೋ ಮುನಿಯ ? (ವಚಿದಾ. II. ೧೦೩). [ಬಳ್$_2$ + — ಸು$_1$./ತುಳು. ಬಲೆಪು. ಬಳೆಪು]

**ಬಳಸು$_2$** 'ಬಟಿಸು$_1$' ನೋ.

**ಬಳಸು$_3$** (ನಾ). ೧. ಆವರಿಸುವಿಕೆ ; ಮುತ್ತುವುದು ; ಸುತ್ತುವರಿಯುವಿಕೆ : ಅಶ್ವತ್ಥಾಮಂ ಭೀಮೋದ್ದಾಮಶ್ಯಾಮಜಳಧರಪಿಮುಕ್ತ ಶರಾವಳಿಯ ಬಳಸಂ ಕಂಡು ಮುಗುಳ್ನಗೆ ನಕ್ಕು (ಕಂಪಕಾ. ೧೨-೬೬ ವ) ; ಬೆಳಗುಗಳ ಬಳೆದ ಬಳಗದ ಬಳಸುಗಳೊಳಗೊಳಗೆ ತೊಳಗಿ ಪೊಳೆ ಪೊಳೆದೊಳಗುಚ್ಚಳಿಸಿ . . . ತಳರ್ದರ್ತ್ಯಾಗಗಳ್ (ಕಾವ್ಯಸ. ೨೩). ೨. ಸುತ್ತುವಿಕೆ ; ಭ್ರಮಣ : ಚಾಪಂ ಕುಟಿಲತೆಗೆಟ್ಟು ಚಕ್ರವಳಯದ ಬಳಸಂ ಮಾಂಕರಿಸಿ ಬಿಲ್ಲ ಕೊಪ್ಪು ಕೊಡಂಕೆಯ ಕೊಪ್ಪಿನವೊಲಮರೆ (ಶಾಂತಿಪು. ೪-೯೩). ೩. ಸುತ್ತುಗಟ್ಟುವಿಕೆ: ಎಳವಳ್ಳಿಯ ಬಳಸಿಂಗೊಳಗಾದಸುಗೆಯ ಚೊಂಪಂಗಳೊಳ್ (ಕಲ್ಯಾ. ೦೨೫) ; ದಂತಪಂಕ್ತಿಯ ನಡುವೆ ಎಂತಿಪ್ಪುದದು ಜಿಹ್ವೆ ಅಂತು ದುರ್ಜನರ ಬಳಸಿನಲಿ ಸಜ್ಜನನು ನಿಂತಿಹನು (ಸರ್ವಜ್ಞ. ೬೨೦). ೪. ಸುತ್ತಿ ಕಟ್ಟುವ ಸಾಧನ : ಎಂಟುಂ ದೆಸೆಯ ದೇವತೆಗಳೆ ಗೋಳ್ಪಾಗಿಯುಂ ವಾಸುಗೆಯ ಬಳಸಾಗೆಯುಂ (ಶಾ. IV. ೫೦-೦೦ ; 1000 ?) ; ಲೋಕಪಾಳಕರೇ ಗೋಂಟಾಗೆ ವಾಸುಗಿಯೇ ಬಳಸಾಗೆ ಫಣಿಕುಳಂಗಳೇ ದಾರವಾಗಿ (ಎಶ. VII. ಶಿಕಾ. ೦೦೬-೩೦ ; 1064). ೫. ಸುತ್ತುಮುತ್ತು ; ಆಸುಪಾಸು : ಮಾಧವಿಯ ಮಂಡಪದ ಬಳಸಿನೊಳಗೆ ವಳುಕಿನ ಕುಂಭದೊಳಂ . . . ಕಪ್ಪುರದ ಬೀಯದ ಬಾಯಿನದ ವಿಲಾಸಮುಚ್ಚರಿಯಿಸಗೆ (ಅನಂತಪು. ೯-೩ ವ) ; ಸಡಗರದಿ ಮಹಿಳಾನಿಕರ ಬಂದುದು ಸತಿಯ ಬಳಸಿನಲಿ (ಜೈಮಿನಿ. ೯-೩೦). ೬. ಆವರ್ತ ; ಸುತ್ತು : 'ಮೂಱುವಳಸು' ಪರಾ. ೭. ನೇರವಾಗಿ ಹೇಳದಿರುವಿಕೆ ; ಸಂತ್ತು ಮಾತು : ನೇರವಲ್ಲದ ಮಾತು : ಬಳಸಿನೊಳೀಂ ತಿಂಬುದು ಮಾತುಳಂಗವಕ್ರಪ್ರಯುಕ್ತಮಧುಮಂ ಬೇಗಂ ಕಳೆಗುಂ ಮಸಗಿದಪಾನಾನಿಳನಂ (ಲೋಕೋಪ. ೯-೦೯೬) ; ಎತ್ತುವುದೆ ಮಂತ್ರಮಿನ್ನಾ ಸುತ್ತುಂಬಳಸುಗಳ ನುಡಿಯವು (ಸುಹಾಪಿ. ೦೦-೬೬) ; ಸುತ್ತೇಕೆ ಬಳಸೇಕೆ ನೆಟ್ಟನೆ ಮಾತಾಡು (ಇಂಕಾಶ. ೨೩೯-೬೬). 'ಸುತ್ತು ವಳಸು ' ಪರಾ. ೮. (ಊಟ ಮೊದಲಾದ ವಿಷಯಗಳಲ್ಲಿ) ಸರದಿ ; ಸಲ ; ಬಾರಿ : ಅವರ ಮನೆಯ ಔತಣದಲ್ಲಿ ನಾಲ್ಕು ಬಳಸು ಬಡಿಸಿದರು (ರೂಢಿ). ೯. ಕವಚ ; ಚಿಲುಖತ್ತು : "ಬಳಸು ಭ್ರಮಣ, ಕಂಚುಕಾಂಗಯೋಃ (ಯುದ್ಧಕವಚ)" (ಕಮುಕ).

[ < ಬಳಸು$_1$ ]

**ಬಳಸು$_4$** 'ಬಟಿಸು$_2$' ನೋ.

**ಬಳಸುಗ** (ನಾ). ಸುತ್ತಾಡುವವನು ; ತಿರುಗುವವನು : "ಪ್ರೀಣ, ಪ್ರಯಾಣಃ—ಈ ೨ ಬಳಸುಗಂ" (ಕಾಕ್ಕ. ೦೯೬). [ಬಳಸು$_1$ + — ಗ$_2$]

**ಬಳಸುಗೆಯ್ಮೆ** (ನಾ). ಸುತ್ತಿ ಬಳಸಿ ಮಾಡುವ ಕೆಲಸ ; ನೇರವಾಗಿ ಮಾಡದ ಕಾರ್ಯ : ನಿನ್ನ ಸೇನೆಯನೆನಗೆ ತೋರ್ದು, ನಾನದಂ ದೊರೆಗೊರವ ಬಳಸುಗೆಯ್ಮೆಗೆ ಬರಿದೆ ದಣಿಯದಿರ್ (ಶ್ರೀಣಕಶಾ. ೬೦೬-೦೬೬).

[ಬಳಸು$_1$ + ಗೆಯ್ಮೆ (< ಕೈಮೆ$_1$)]

**ಬಳಸುದಾರಿ** (ನಾ). ಸುತ್ತಾದ ಹಾದಿ ; ಹತ್ತಿರವಲ್ಲದ ಮಾರ್ಗ ; ನೇರವಲ್ಲದ ದಾರಿ : ಬಳಸುದಾರಿಯಲಿ . . . ಮುಂಬರಿಯುತಿದೆ ರಾಯನ ಸವಾರಿ ! (ಏಕಠ. ೯-೯) ; ದಿಮ್ಮಿಗಳನ್ನು ಅಲ್ಲಿಂದ ಸಾಗಿಸುವ . . . ಉದ್ದೇಶದಿಂದ ಬಳಸುದಾರಿಯನ್ನು ತುಳಿದಿದ್ದ (ಏಕಠ. ೯೯).

[ಬಳಸು$_1$ + ದಾರಿ]

**ಬಳಸುದೊಂಗಲ್** (ನಾ). ಸುತ್ತಿರುವ ಕುಚ್ಚು, — ಗೊಂಡೆ : ದೇವಿಯರ್ಗೆಲ್ಲಂ ಕೊಱಚೆ ಪಾಂಡ್ಯಸತಿಯರ ತೊಂಡಲ್ದೀವಿದ ಘನರತ್ನಂಗಳ್ ಪಾವುಗೆಗಳ ಬಳಸುದೊಂಗಲಿಡೆಯೊಳ್ ತೋರ್ಕುಂ (ಕಳಿಪ. ೩-೩೬).

[ಬಳಸು$_1$ + ತೊಂಗಲ್]

**ಬಳಹ** ' ಬಳಪ ' ನೋ.

**ಬಳಹರಿ** ' ಭಟ್ಟಾರಿ ' ನೋ.

**ಬಳಾಕ** ' ಬಲಾಕ ' ನೋ.

**ಬಳಾಕೆ** 'ಬಲಾಕೆ' ನೋ.

**ಬಳಾಢ್ಯ** 'ಬಲಾಢ್ಯ' ನೋ.

**ಬಳಾಧ್ಯಕ್ಷ** 'ಬಲಾಧ್ಯಕ್ಷ' ನೋ.

**ಬಳಾರ** 'ಭಟಾರ' ನೋ.

**ಬಳಾರಿ** 'ಭಟಾರಿ' ನೋ.

**ಬಳಾಹಕ** 'ಬಲಾಹಕ' ನೋ.

**ಬಳಾಹಿತ** (ನಾ). ಇಂದ್ರ; ದೇವೇಂದ್ರ: ಬಳಾಹಿತಮುಖಾಮರನತೇ ಗಳಾನ್ವಿತಹಲಾಹಲಭಿಲೇಶಯ ಕಳೇವರವಿಳಾಸದೆ ಕಳಂಕರಹಿತೇ (ಕಾಕಿಲ. ೧೦-೦೧೦). [ಸಂ. ಬಲಾಹಿತ]

**ಬಳಿ₁** 'ಬಟ್ಟಿ₁' ನೋ.

**ಬಳಿ₂** 'ಬಟ್ಟಿ₃' ನೋ.

**ಬಳಿ₃** 'ಬಲಿ₃' ನೋ.

**ಬಳಿಕ** 'ಬಟಿಕು' ನೋ.

**ಬಳಿಕಜಿ** (ನಾ). ಒಂದು ಊರಿನ ಹೆಸರು: ಚಿಕ್ಕೇಶ್ವರಕ್ಕೆ ಈಶಾನ್ಯದ ಪೊಳಿಯುಂ ಬಳಿಕಜಿಯ ಕೀಟೇರಿಯ ಬೇರುಂಗಾಲಂ ಒಕ್ಕಲೊಳೊನ್ದು ಪೊಜಿಯುಂ ಸಲ್ವದು (ಎಕ. III. ಸಂಖ್ಯೆ. ೦೬೩-೦೦; 977). [ಬಳಿ₁ + ಕಜಿ]

**ಬಳಿಕೋಲು** (ನಾ). ಬಿಲದೊಳಗೆ ಹೊಕ್ಕ ಪ್ರಾಣಿಗಳನ್ನು ಈಚೆಗೆ ಬರುವಂತೆ ಮಾಡಲು ಆ ಪ್ರಾಣಿಗಳು ಹೋದ ಕಡೆ ಹಾಕಿ ತಿವಿಯುವ ಕೋಲು: ಬಳಿಕೋಲು ಹಾಕಿ ನೋಡಿದಾಗ ಒಚೇಲಿ ಗೊತ್ತಾತು! (ಕುರಕು. ೬೬). [ಬಳಿ₂ (<ಬಟ್ಟಿ₃) + ಕೋಲು₁ (< ಕೋಲ್₁)]

**ಬಳಿಕ್ಕ** 'ಬಟಿಕಂ' ನೋ.

**ಬಳಿಕ್ಕಂ** 'ಬಟಿಕಂ' ನೋ.

**ಬಳಿಗಳುಹಿಸು** (ಕ್ರಿ). ಊರಿಗೆ ಬಂದ ಆಪ್ತೇಷ್ಟರನ್ನು (ಊರಿನ ಹೊರಗಿನ ಜಲಾಶಯದ ವರೆಗೆ ಜೊತೆಯಲ್ಲಿ ಕರೆದುಕೊಂಡು ಹೋಗಿ) ಬೀಳ್ಕೊಡು: ಲಲಿತಲತಾಂಗಿ ಶಶಿಪ್ರಭೆಯುಸು ಬಳಿಗಳು ಓಸಿ ಜಯವರ್ಮನೃಪತಿ ಲಲನೆ ಜಯಶ್ರೀದೇವಿ ಸಹಿತ ತನ್ನ ಪೊಳಲ ಪೊಕ್ಕನು (ಶಂಕ್ರುತಾಂ. ೦೩-೬೫). [ಬಳಿ₂ (< ಬಟ್ಟಿ₃) + ಕಳುಹಿಸು]

**ಬಳಿಗೆಲಸ** (ನಾ). ಹತ್ತಿರವಿದ್ದು ಮಾಡುವ ಸೇವಾಕಾರ್ಯ; ಉಳಿಗ: "ಸೇವನಂ, ಸೇವನೀಯಂ, ಸೇವಿಃ, ಸೇವ್ಯಂ, ಸೈವ್ಯಂ — ಈ ೫ ಬಳಿಗೆಲಸಂ" (ಕಾಕಕ್ಕ. ೦೦೩); ಹಲವು ಸೂಳೋರಂತೆ ನಂಬಿಯು ಬಳಿಗೆಲಸವ ಮಾಡಲಾಜದೆ (ಬಸಕ್ಕ. ೦೬-೦೨); ಬಾರ್ಕೆ ಬಳಿಗೆಲಸ ಕಿನ್ನರು ನೀನೆಮಗಲ್ಲದಾವ್ಪರಲಿ (ಕೂಕಕಾ. ೩-೩-೬). [ಬಳಿ₂ (< ಬಟ್ಟಿ₃) + ಕೆಲಸ]

**ಬಳಿಗೆಲಸಿ** (ನಾ). ಹತ್ತಿರವಿದ್ದು ಸೇವೆ ಮಾಡುವ ವ್ಯಕ್ತಿ: ನಂಬಿಯ ಸಂಗಡಿಗನೋ . . . ಬಳಿಗೆಲಸಿಯೋ ಮಲ್ಲಿಕಾರ್ಜುನಪಂಡಿತರ ಮನೆಯ (ಬಸಕ್ಕ. ೯೬-೩೬). [ಬಳಿಗೆಲಸ + — ಇ₃]

**ಬಳಿಗೆಲಸಿಗ** (ನಾ). = ಬಳಿಗೆಲಸಿ: "ವಾಸಯನ್ = ಬಳಿಗೆಲಸಿಗಂ" (ಕಾಕಕ್ಕ. ೨೪೫). [ಬಳಿಗೆಲಸ + — ಇಗ]

**ಬಳಿಗೊಳ್** 'ಬಟಿಗೊಳ್' ನೋ.

**ಬಳಿಚಿಸು** 'ಬಟ್ಚಿಸು' ನೋ.

**ಬಳಿಚು** 'ಬಟ್ಚು' ನೋ.

**ಬಳಿಜಸ** (ನಾ). ವಂಶದ ಕೀರ್ತಿ: ಪಗೆ ಪಳಿಗಳೆರಡಂ ತೀರ್ಚಿ ಬಳಿ ಜಸವನೆನ್ನ ಪೌರುಷತೇಜವಂ ಬಿಡದೆ ಸಾಧಿಸಿರ್ಪೆನ್ (ಶ್ರೀರಾಮಪ. ೮೫೨-೪೦೩). [ಬಳಿ₂ (< ಬಟ್ಟಿ₃) + ಜಸ₁]

**ಬಳಿತ** (ನಾ). ಬಳಿಯುವಿಕೆ; ಲೇಪಿಸುವಿಕೆ: "ಲೇಪನಂ. ಲೇಪನೀಯಂ . . . ಲಿಪ್ತಃ — ಈ ೫ ಬಳಿತಂ" (ಕಾಕಕ್ಕ. ೨೦೪). [ಬಳಿ₁ (< ಬಟ್ಟಿ₁) + — ತ₂]

**ಬಳಿದಪ್ಪು** 'ಬಟಿದಪ್ಪು' ನೋ.

**ಬಳಿದೊತ್ತು** 'ಬಟಿದೊಟ್ಟು' ನೋ.

**ಬಳಿದೊಳ್ತು** 'ಬಟಿದೊಟ್ಟು' ನೋ.

**ಬಳಿನಕಲು** (ನಾ). ಮೂಲಪ್ರತಿಗೆ ಹತ್ತಿರವಾದ ಪ್ರತಿ: ಬಹು ಸಂಖ್ಯೆಯ ಸ್ವಹಸ್ತ ಪ್ರತಿಗಳು ಇಲ್ಲವೆ ಅವುಗಳ ಬಳಿನಕಲುಗಳು ಅಥವಾ ಪ್ರಾಚೀನಪ್ರತಿಗಳು ನಾಶವಾಗಿ ಬಿಟ್ಟದ್ದು (ಭಾರತ. ೩೮). [ಬಳಿ₂ (< ಬಟ್ಟಿ₃) + ನಕಲು]

**ಬಳಿನಡೆ** (ನಾ). ವಂಶಪಾರಂಪರ್ಯವಾದ ನಡವಳಿಕೆ.— ಆಚರಣೆ: ಆಚಣ್ಣಾದೇವಣ್ಣಗಳು ಬಳಿನಡೆಗೆ ಕೊಟ್ಟ ಗ ೩ ಪು × × ಯಮ್ಮೆ ಬಳಿನಡೆಗೆ ಕೊಟ್ಟ ಗ ೬ (ಎಕ. VI. ಕಡೂರು. ೩೫-೦೦; 1217). [ಬಳಿ₂ (<ಬಟ್ಟಿ₃) + ನಡೆ₂]

**ಬಳಿನೀರ್** 'ಬಟಿನೀರ್' ನೋ.

**ಬಳಿನೀರು** 'ಬಟಿನೀರ್' ನೋ.

**ಬಳಿನೀರ್ಗುಡಿ** 'ಬಟಿನೀರ್ಗುಡಿ' ನೋ.

**ಬಳಿನೀರ್ಗೊಳ್** (ಕ್ರಿ). = ಬಟಿನೀರ್ಗುಡಿ: ಮೊಲೆಯುಂಬ ಲಿಂಗಮುಂ ಮುಟ್ಟಿಯುಧರಾಮೃತವನೊಲಿದು ಬಳಿನೀರ್ಗೊಂಡ ತಪ್ಪಿಂದಲರೆ ಮೆಯ್ಯುನಾದ (ತೀರಪು. ೮-೦). [ಬಳಿನೀರ್ (< ಬಟಿನೀರ್) + ಕೊಳ್₁]

**ಬಳಿಬರು** 'ಬಟಿವರ್' ನೋ.

**ಬಳಿಭುಕ್ಕು** 'ಬಲಿಭುಕ್ಕು' ನೋ.

**ಬಳಿಮಾರಿ** (ನಾ). ವಂಶಕ್ಕೆ ಮಾರಕವಾದ ವ್ಯಕ್ತಿ: ಉಳಿದರ್ಗೀಯದೆ ತಾನೇ ಕಾಲಯಮನಂತತ್ಕುಗ್ರಮಂ ತಾಳ್ದಿದಾ ದಳವಾಯೀ ಬಳಿಮಾರಿಯ್ಕೆ (ಸೋವಸೇ. ೬೯). [ಬಳಿ₂ (<ಬಟ್ಟಿ₃) + ಮಾರಿ₂]

**ಬಳಿಮುಖ** 'ಬಲಿಮುಖ' ನೋ.

**ಬಳಿಯ** 'ಬಟಿಯ' ನೋ.

**ಬಳಿಯಂ** 'ಬಟಿಕಂ' ನೋ.

**ಬಳಿಯಟ್ಟು** 'ಬಟಿಯಟ್ಟು' ನೋ.

**ಬಳಿಯಣ** 'ಬಟ್ಟಿ₃' ಪರಾ.

**ಬಳಿಯಿಸು, ಬಳಿಸಂ** (ಕ್ರಿ). ೧. ಕಸವನ್ನು ಗುಡಿಸುವಂತೆ ಮಾಡು; ನೆಲವನ್ನು ಸ್ವಚ್ಛ ಮಾಡಿಸು. ೨. (ಬಣ್ಣ ಮೊದಲಾದುವನ್ನು) ಹಚ್ಚುವಂತೆ ಮಾಡು; ಹಚ್ಚಿಸು: ಏಳು ರೇಸ್ಮೆ ಬಟ್ಟೆಯ ತುಂಡುಗಳ ಮೇಲೆಯೂ ಸಪ್ತರಂಜನದ ಏಳು ಬಣ್ಣಗಳನ್ನು . . . ಬಳಿಯಿಸಿ (ಕ್ಷೋಣಿರ್. ೨೪೪). **ಬಳಿಸು**: ೧. ಹರಿಯ ದಾಸರಿಗಿನ್ನು ಸರಿಯುಂಟೆ . . . ಮಸಣಿಯಾ ಕೈಯ ಕಸ ಬಳಿಸುವರು (ಕ್ರೀಂದ. ೦-೦೯೩-೦). [ಬಳಿ₁ (<ಬಟ್ಟಿ₁) + — ಇಸು₃]

**ಬಳಿರಿಪು** 'ಬಲಿರಿಪು' ನೋ.

**ಬಳಿವಟ, ಬಳಿವತ್ರ** (ನಾ). ಒಂದು ಬಗೆಯ ತೆರಿಗೆ (?): ಆ ಶಾಂತಿ ಗ್ರಾಮದ ಸಿದ್ದಾಯದ ಮೊದಲ ಹೊಂನೊಳಗೆ ಆಯ್ದು ಹೊಂನನು ಆವಳ ಸಮಸ್ತ ಬಳಿವಟ ನೋಡಿ (ಪ್ರಾಇಂ. ೧೯೯೦.೩-೨೯; 1216). **ಬಳಿವತ್ರ**: ಒಕ್ಕಲೊಳೊನ್ದು ಪೊಜಿಯುಂ ಕಯ್ಯುಂ ಪದಿರ್ಕೊಳ್ ಭತ್ತಮುಂ ವಿಷಸಲಂ ಬಳಿವತ್ರಮುಂ ಸಲ್ವದು (ಎಕ. III. ಸಂಖ್ಯೆ. ೦೬೩-೦೦; 977). 'ಬಳಿ₃' ಪರಾ. [?]

**ಬಳಿವತ್ರ** 'ಬಳಿವಟ' ನೋ.

**ಬಳಿವರ್** 'ಬಟಿವರ್' ನೋ.

**ಬಳಿವರಿ** (ಕ್ರಿ.) ಸಮೀಪಕ್ಕೆ ನುಗ್ಗು; ಹತ್ತಿರಕ್ಕೆ ಧಾವಿಸು : ಚಿಲ್ಲಿದರೆ ಬಳಿವರಿದು ಚೌಪಟಮಲ್ಲ ಹೊಕ್ಕನು ಹೊಯ್ದು ಗದೆಯಲಿ ಘಲ್ಲಿಸಿದನು (ಕುಮ್ಮಾರ್ಯ. ೧೫-೩೦). [ಬಳಿ₂ (<ಬಟ್ಟ್₃) + ಪರಿ₁]

**ಬಳಿವರು** 'ಬಟಿವರ್' ನೋ.

**ಬಳಿವಿ** (ನಾ). (?) : ವಿವಿಧವಣಿಕಿರಣಚಯದಿಂದವನಿಪನಂ ಬಳಿದು ಕೊಟ್ಟು ನರ್ಥಿಜನಕ್ಕಾ ದಿವಿಜೇಂದ್ರಂ ಬಳಿವಿಯು ಮಂತ್ರವಾದಿಯೆನೆ ನೆರೆದ ಮಕುಟಬದ್ಧಸಮಾಜಂ (ಶಾಂತಿಪು. ೧೦-೧೦).

[☞ ಇದು 'ಜಳವೆ = ದಂಡ' ಎಂಬುದರ ಅಪಲಿಖಿತವಿರಬಹುದು]

**ಬಳಿವಿಡಿ** 'ಬಟಿವಿಡಿ' ನೋ.

**ಬಳಿವೆಳಗು** (ನಾ.) ಹತ್ತಿರದ ಬೆಳಕು : ಬಳಿವೆಳಗಿನ. . .ಬಚ್ಚೆಳಗಿನ ಬೆಳಸಿನ ಸಿರಿಯೆನೆ ತೊಳತೊಳಗಿದುದು ಮೂರ್ತಿ ಚಂದ್ರಪ್ರಭನಾ (ಕರ್ಣಾಟ. ೦೯೦ ಕ್ಕಾಕ್ಕ). [ಬಳಿ₂ (<ಬಟ್ಟ್₃) + ಬೆಳಗು₂]

**ಬಳಿವೊರ್ದು** (ಕ್ರಿ). ಸಮೀಪಿಸು ; ಜೊತೆಗೂಡು : ರಾಹು ತೊರೆದೊಡನೆ ಶಶಿಯಂ ರೋಹಿಣಿ ಬಳಿವೊರ್ದಿದಂತೆ . . . ಸೇರ್ದಯೆಂನ್ನಯ ಬಳಿಯಂ (ಶಾಕುಂತ. ೦೦೯-೦೫೩). [ಬಳಿ₂ (<ಬಟ್ಟ್₃) + ಪೊರ್ದು₁]

**ಬಳಿಶರ** (ನಾ). ಒಂದರ ಹಿಂದೆ ಒಂದು ಬರುವ ಬಾಣ : ನೂಱುಶರದಲಿ ಬಳಿಶಿಖಿ ನಾನೂಱಱಲಿ ಬಳಿಶರಕೆ ಬಳಿಶರವಾಱುಸಾವಿರದಿಂದ ತಱಱದನು ಪಾರ್ಥನಿಬಲವ (ಕುಮ್ಮಾಗ. ೨-೦೯).

[ಬಳಿ₂ ( < ಬಟ್ಟ್₃ ) + ಶರ ]

**ಬಳಿಸರಳು** (ನಾ). = ಬಳಿಶರ : ಸರಳನೆಚ್ಚನು ಸರಳನಾ ಬಳಿಸರಳು ಮುಂಚಿದುದಾ ಸರಳ ಬಳಿಸರಳು ಮುಂಚಿದುದು (ಕುಮ್ಮಾಕ. ೩-೦೯); ಬಳಿಸರಳ ಸಂದಾನದಲಿ ಬಳಿಕುಳಿಕಲಿನ ರಕ್ಕಸರ ಜವಪುರದೊಳಗೆ ಹೊಗಿಸಿದನು (ಕೊರಾ. ೦-೧೦-೨೨).

[ಬಳಿ₂ (<ಬಟ್ಟ್₃) + ಸರಳು₁ (<ಸರಲ್₁)]

**ಬಳಿಸಲ್** 'ಬಟಿಸಲ್' ನೋ.

**ಬಳಿಸಲಿಸು** (ಕ್ರಿ). ಹಿಂದೆ ಬರು; ಅನುಸರಿಸು : ರಿಪುಜಾಲವನು ನೀ ಖಂಡಿಗಳ ಬಹವಾವು ಬಳಿಸಲಿಸಿ (ಕುಮ್ಮಾರ್ಯ. ೬-೨೮).

[ಬಳಿ₂ (<ಬಟ್ಟ್₃) + ಸಲಿಸು]

**ಬಳಿಸಾರ್**, **ಬಳಿಸಾರು** (ಕ್ರಿ). ಹತ್ತಿರ ಬರು ; ಸಮೀಪಿಸು : ತುಂಬಿ ಕವಿವಾವ್ರುಮನಭ್ರಮ ಗೆತ್ತು ಕೇಕಿಮಂಡಳಿ ಬಳಿಸಾರ್ದು ನರ್ತಿಸಗುಂ (ಶಶಿಂ. ೨-೯೭); ಅಕ್ಕಟಾ ! ಎಂದೊಬ್ಬಳಳಿ ಬಳಿಸಾರ್ದು . . . ಕರೆದಂ (ಗಾಡೀಕ. ೯೬-೦೯೬). **ಬಳಿಸಾರು** : ಏನನೊ ನುಡಿಯುತಲಿರುವಳದೇನೆಂದು ಬಳಿಸಾರಿ ಮೆಲ್ಲನೆ ಕೇಳು (ಶಂಕಾಕ. ೦೬೬-೨೪).

[ಬಳಿ₂ (<ಬಟ್ಟ್₃) + ಸಾರ್₁]

**ಬಳಿಸಾರು** 'ಬಳಿಸಾರ್' ನೋ.

**ಬಳಿಸಾಲು** (ನಾ). ಅಕ್ಕಪಕ್ಕದ ಪಂಕ್ತಿ ; ಸಮಾನಾಂತರದ ಸಾಲು : ಹರಗಬಲ್ಲನು ಬಿತ್ತಬಲ್ಲನು ಅರಿದು ಬಳಿಸಾಲುಗಳ ಹೊಡೆವನು (ಕೇಶರಾ. ೦-೦೯). [ಬಳಿ₂ (<ಬಟ್ಟ್₃) + ಸಾಲು₂ (<ಸಾಲ್₂)]

**ಬಳಿಸು** 'ಬಳಿಯಿಸು' ನೋ.

**ಬಳಿಸೇರು** (ಕ್ರಿ). = ಬಳಿವೊರ್ದು : ಆ ವ್ರತಕ್ಕೆ ದೀರ್ಘಾಯುವಾದ ನೀವು ಬಳಿಸೇರಿ ತಮ್ಮನ್ನು ಆದರಿಸಬೇಕೆಂದು ದೇವಿಯರು ಆಜ್ಞಾಪಿಸುವರು (ಶಾಕುಂತ. ೨೯-೩). [ಬಳಿ₂ (<ಬಟ್ಟ್₃) + ಸೇರು₁ (<ಸೇರ್)]

**ಬಳಿಸೇವೆ** (ನಾ). = ಬಳಿಗೆಲಸ : ರಾಜಂಗೆ ಬಳಿಸೇವೆಗೆಯ್ವರೊಳು ನಚ್ಚಿನವರಾರು (ಶಾರ. ೦೬-೩೯೯). [ಬಳಿ₂ (<ಬಟ್ಟ್₃) + ಸೇವೆ₁]

**ಬಳಿಹರ** 'ಬಲಿಹರ' ನೋ.

**ಬಳು** (ನಾ). ಒಂದು ಅಳತೆ (?) : ಮೂಡಣ ಹೆಗ್ಗಡ್ಡ ಅದಱ ಮೇಗಣ ಕೊಡಂಗೆ ಎರಡಱಲ್ಲಿಯು ಮೂಡೆ ೨ ಬಂಣಟೆ ಮೂಡೆ ೨ ಮುಂದಿನ ಮಾಡುವ ಬಳು ಮೂಡೆ ೧ ಚಿಕ್ಕಬಿಟ್ಟುವ ಕೊಡಂಗೆ ಮೂಡೆ ೧ (ಎಕ. XXVII. ೦೬೨-೯೯; 1266). [?]

**ಬಳುಂಕು** 'ಬೆಳ್ಕು₁' ನೋ.

**ಬಳುಕಿಸು** 'ಬಳ್ಕಿಸು' ನೋ.

**ಬಳುಕು₁** 'ಬೆಳ್ಕು₁' ನೋ.

**ಬಳುಕು₂** 'ಬೆಳ್ಕು₂' ನೋ.

**ಬಳುಕುನಡೆ** (ನಾ). ತೊನೆಯುತ್ತಾ ನಡೆಯುವುದು : ವಿಲಸಿತದ ವಿಘುವಿಂಗೆ ದಟ್ಟಡಿ ಬಳುಕುನಡೆ ಮೆಲ್ನಡೆಗಳೆಂಬಿವು ತೀವವರ ಮನಸಿಂಗೆ ಮಱೆ ತಾನಲ್ಲವೇ (ಕೂರಾ. ೦-೯೭೭). [ಬಳುಕು₁ (<ಬೆಳ್ಕು₁)+ನಡೆ₁]

**ಬಳುಕುನೀರು** (ನಾ). ಒಂದು ಬಗೆಯ ತೆರಿಗೆ : ಕಳುವಡೆ ನಾರಡೆ ಬಳುಕುನೀರು ಊರಸಂಕೆ ಮೊದಲಾದ ಹಲ ಉಪಾಧಿಗಳು ಸಹ . . . ಅನುಭವಿಸಿಕೊಂಡು (ಎಇಇ. IX-೧೩, ೯೬೬-೬; ಕು. 1471). [?]

**ಬಳುಕುಮೈ** (ನಾ). (ಒಯ್ಯಾರದಿಂದ) ತೊನೆಯುವ ಶರೀರ : ಕೈಮುಗಿವ ಪ್ರಮದೆಯರ ಕಾಕಣಗಳಲುಗುತ್ತ ಕುಂಬಿಡುವ ಬಳುಕುಮೈಗೆಚ್ಚರಿಕೆಯುಲಿಯೆ (ಜುರಿಕೇ. ೩೦-೪).

[ಬಳುಕು₁ (<ಬೆಳ್ಕು₁) + ಮೈ (<ಮೆಯ್₁)]

**ಬಳುವಟ್ಟೆ** (ನಾ). ಕಾಡುದಾರಿ : ನಾಯಿಗಳ ಹಾಗೆ ಬಳುವಟ್ಟೆ ತಿರುಗಾಡಿಕೊಂಡು ಇರುವುದು (ಕುಂಟಕ. ೨೭). [< ಪಳುವಟ್ಟೆ]

**ಬಳುವಳ** 'ಬಳ್ವಳಂ' ನೋ.

**ಬಳುವಳಿ** 'ಬಟಿವಟಿ₁' ನೋ.

**ಬಳುವಳಿಕೊಡು** 'ಬಟಿವಟಿಗೊಡು' ನೋ.

**ಬಳುವಳಿಗೊಡು** 'ಬಟಿವಟಿಗೊಡು' ನೋ.

**ಬಳುವೆ** (ನಾ). (?) : ಸುಳಿದವಾಪ್ತಿ ಕರ್ಪೂರದ ಪ್ರಜ್ವಲಿಪ ಮಾಣಿಕದೀಪ್ತಿಗಳ ಪಸ್ರು[ಪಾಠಾಂ. ಬಲು]ಗಳವೆಗೂಳಿನ ಬಳುವೆಗಳುಮ್ರುಗಳ [ಪಾಠಾಂ. ಬಳುವೆಯುಪ್ಪರಿಕೆಯ] ಸೂಸಿಕೆಯು ಕಳಕಳದೊಳೊಪ್ಪಿಮುದು ಪಾರ್ಥಿವನಿಳಯವು (ಕೋರಾ. ೬-೩೩-೦೬); "ಭೀತರ ಸೋಲಕು ತೆಗೆಯಂವ ಒಂದು ವಿಧಿ" (ಕೋರಾ. ಕೋಶ). [?]

**ಬಳೆ₁**, **ವಳೆ₁** (ಕ್ರಿ). ೧. (ಮಾನವ, ಪ್ರಾಣಿ, ಪಕ್ಷಿ ಮೊದಲಾದಂವು ಶಾರೀರಿಕವಾಗಿ ಅಥವಾ ವಯಸ್ಸಿನಲ್ಲಿ ಅಥವಾ ಮಾನಸಿಕವಾಗಿ) ವೃದ್ಧಿಯಾಗು; ವರ್ಧಿಸು : ಕೂಸಿಂಗೆ . . . ಎರಟ್ಟೂಱುತಿಂಗಳೀಂಗೆ ಶಾಯ್ ಕಟಿದೊಡೆ ಬಂದ ನಂಟರೆ ನಡವೆ ಬಳೆದೊಡೆ (ಕರ್ಣಾಟ. ೬೬-೦೭); ಆ ಕಾಲದೊಳ್ ನಾನೆನ್ನ ಮಾವಂ ಕೊಂತಿಭೋಜನ ಮನೆಯೊಳ್ ಬಳೆವಂದು (ಪಂಪಭಾ. ೦-೦೦೬ ಪ); ಆ ಕಪಿ ಶಿಂ ತಾಪಸರ ಸಮೀಪದೊಳೆ ಬಳೆದ ಕಾರಣದಿಂ ತತ್ತ್ವವೇದಿಯಪ್ಪುದಱಿಂ (ಪಂಪಭಾ. ೦೯೩-೦೪); ಫಳರಸದಿ ಬೆಳೆವ ನವಶಾಳೀವನಂಗಳಂ ತನಿವಾಲನುಂಡು ಬಳೆವರಗಿಳಿಗಳುಕೆಣಿಂ (ಶಬರ. ಈ. ೨-೦೦); ಶಶಿ ಮೂಡಿ ಬಳೆದನಾಗಸದೊಳು (ಕಂಪಪ. ೯-೨೬೯). ೨. ಗಿಡ, ಮರಗಳು ವೃದ್ಧಿಯಾಗು; ಸಸ್ಯಗಳು ಬೆಳೆ : ದೆಸೆಗಳಂ ತಡವರಿಸಿಕೊಳ್ವಂತೆ ಬಳ್ಳಿಗಳ ಬಳೆದು ಸೊಗಯಿಸುವ ಪೆರ್ಮರಂಗಳಿಂದಂ . . . ಅತಿಭಯಂಕರಾಕಾರಮಪ್ಪ ದ್ವೈತವನಕ್ಕೆ ಬಂದು (ಪಂಪಭಾ. ೬-೨೯ ಪ) ; ಬಾನುದ್ದಂ ಬಳೆದಿರ್ದ ಪೆರ್ಮರದ ತುಟ್ಟತುದಿಯ ಕೊಂಬನೆತ್ತಿ ಟಬ್ಬಯಾಸದಿಂದಂ (ಶಾಕಶಾಂ. ೯೬-೦೦). ೩. ಹುಟ್ಟು ; ಮೊಳೆ ; ಅಂಕುರಿಸು : ವಿರೋಧಿಮದೇಭಮಸ್ತಕಸ್ಥಳಜಲರಾಶಿಯೊಳ್ ಬಳೆದ ನಿರ್ಮಳನಿರ್ವ್ರಣವೃತ್ತಮೌಕ್ತಿಕಾವಳಿಯನೆ ತರ್ಪುದು (ಪಂಪಭಾ. ೦೦-೯೭); ಎಳವೆಱ್ ಬಳೆಯುವ ಗಗನಸ್ಥಿ (ಕುಶಿಕ. ೩-೦೦೦). ೪. (ಭಯ, ಕೋಪ, ಆಶ್ಚರ್ಯ, ಅನುರಾಗ ಇತ್ಯಾದಿ

ಭಾವನೆಗಳು) ಉಂಟಾಗು; ಮೂಡು : ಬಗೆಯೊಳಗೆ ಬಳೆದ ಭೀತಿಯ ಮಿಗೆ ಭವದಾಸ್ಥಾನಭೂಮಿಯಂ ಪುಗುಗೆ (ಅಜಿತ. ೧೪-೨೨); ಆದ ಮುಳಿಸಿಂದವಾಗಳ್ ಮೋದುವ ಬಗೆ ಬಳೆಯೆ (ಶಂಕರಾ. ೨-೬೨); ಬಳೆದ ಹೃದಯಾನುರಾಗದಿನೀಶನಾಗಳ್ ನಿಜಪ್ರಧಾನಂ ಪ್ರಜ್ಞಾಬಳನ ತನಯಂಗೆ ಮೇಧಾವಿಳನೆಂಬುಚಿತಾಭಿಧಾನಮಂ ತಾನಿತ್ತಂ (ಧರ್ಮಾ. ೬-೧೦೬); ಆ ಮುಕುಂದನ ದಿವ್ಯನಾಮಪ್ರೇಮರಸಕಿದು ಸಿದ್ಧಿಯೆಂದೆನಲಾ ಮಹಾಸ್ಥಾನದಲಿ ಬ[ಹಾಜಾಂ. ದ]ಳೆದುದು ಬೆಡಗು ಬಿಂಕದಲಿ (ಕುವ್ಯಾ.ಕ. ೫೫-೩). ೫. (ಗಾತ್ರದಲ್ಲಿ) ಬೆಳವಣಿಗೆಯನ್ನು ಹೊಂದು; ದೊಡ್ಡದಾಗು; ತೋರವಾಗು : ನಿನ್ನನಾ ತನ್ನಯತ್ತಂ ಬಳೆದುತ್ತುಂಗಸ್ತನಂ ಮಣ್ಣಿರದೆ ಬಳಸಲ್ (ಅಜಿತ. ೪-೨೦); ಎನಿತ್ತನಿತ್ತಂಬುಜಪತ್ರನೇತ್ರೆಯಾ ಘನಸ್ತನಂಗಳ್ ಬಳೆಗುಂ ಕಿರಾತೆಯಾ (ಕಾವ್ಯಾ.ಶ. ೩೬೪); ಚೂಚುಗಂ ತರ್ಗಿದವು ನಾಭಿ ಪೂಜವೊಣ್ಮಿತಸಿಯ ನಡುವುಂ ಬಳೆದುದು (ಅಜಿತ. ೪-೧೧). ೬. ಪೈರಿನಿಂದ ತುಂಬು : ಬಹುಪೋಷದಿಮ್ಮಾವಿನ ಸಹಕಾರದ ಸೊನೆಯು ಸೋನೆ ಬಳೆಯಿಸೆ ಬಳೆಗುಂ ಮಹಿ (ಶಾಂತಿಪು. ೧-೩೧); ಪಸಿದೆಮ್ಮ ಬಳೆದ ಕಿಯ್ಯಂ ಪೊಕ್ಕಂತೆ (ಧರ್ಮಾಮೃ. ೬-೪೩). ೭. ಎತ್ತರವಾಗು; ನೀಳವಾಗು; ಔನ್ನತ್ಯವನ್ನು ಹೊಂದು: ಬಳೆಯಲ್ಕಣ್ಮದುದಿಲ್ಲ ವಿಂಧ್ಯಗಿರಿಯುಂ ತನ್ನಾಜ್ಞೆಯಿಂದೊರ್ಮೆ ಮುಕ್ಕುಳಿಸಲ್ಕಂಬುಧಿ ಸಾಲ್ವುದಿಲ್ಲ (ಶಂಕರಾ. ೪-೨೦); ಆವ ನಗಂ ಮಾತ್ಸರಮುಮದೆಂದು ಬೀಗಿ ಬಳೆದಂತಿರ್ದಂ ಜಿನಸ್ನಾನಪಾವನವಾ ನಿರ್ಜರನಿರ್ಜರೋಜ್ಜ್ವಲಮಣಿ ಶ್ರೀಕಂದರಂ ಮಂದರಂ (ಅರ್ಕಶೀ. ೧-೫೬); ಮಾಯಾಕಾಂತನ ಮೂಲಶಕ್ತಿಯ ತೋಳ್ಪಿನೆ ಬಳೆದು ತೋಳ್ಪಸಿದ (ಸೋಮಶ. ೧೧-೭೭); ಅಗಲಕೆ ಭೂಮಂಡಲ ಕಿಱಿದುಬ್ಬಲು ಮಿಗೆ ಕಾಳದಷ್ಟದಿಕ್ಕಿಂದು ನಗುತಾಗ ಮೇಲಕ್ಕೆ ಬಳೆದೋಲು ಹೊಂಗೋಂಟೆ ಗಗನಮಂಡಲವ ಮುಟ್ಟಿಹುದು (ಶಂಕ. ೬-೪). ೮. ಉದ್ದವಾಗು; ಲಂಬವಾಗು; ಚಾಚು : ಬಳೆದ ಜಡೆ ನಿಮಿರ್ದ ಬಳ್ಳಿಗಳೊಳೆ ಪೆಣೆದು ವಿಷೋರಗಾಸಳಾರ್ಚಿಗಳಿಂದಂ ಮಿಳಿರ್ದುವು (ಅಜಿತ. ೧೪-೧೪೨); ಪೆಗಲ್ವರಂ ಬಳೆದು ರಂಜಿಸುಗುಂ ಜಡೆಗಳ್ ಮೃಗಾಕ್ಷಿಯಾ (ಕಾದಂಬ. ೬೬೮); ಬೋಳಾದ ತಲೆಯ ರೋಮಂ ಮೇಲೆನಿಸಿದ ಬೆರಲ ಮುಱಿದ ಸೆಳ್ಳುಗುರುಂ ಸಲ್ಲೀಲೆಯೊಳೆ ಬಳೆವ ತೆಱದಿಂ (ಧರ್ಮಾಮೃ. ೪-೪೦); ಬಳೆದಸೆದಿರ್ದ ಸೆಳ್ಳುಗುರ ಮಾಯ್ದೊಳೆಪಿಂ ಮಿಗೆ ಪೆರ್ಮೆವೆತ್ತು ಕಣ್ಗೊಳಿಸಿದಳಾಕೆ (ಕವ್ಯಾ. ೭೪). ೯. ಹೆಚ್ಚಾಗು; ಅಧಿಕವಾಗು : ಬಳೆದ ತಮಮುಂಬ ಕರಡಮು(?) ನಳವಲ್ಲದೆ ಸುಟ್ಟು ಕಿಡಿಸಲೆಂದು . . . ಅರ್ಕನುದಯಂಗೆಯ್ದಂ (ಕಾವ್ಯಸಾ. ೩೦ ಸೂತ್ರ ೪); ಅನಲಂ . . . ನೀಳ್ದು ಬಳೆದವಿಗೆ ಪರ್ವಿದನಾ ವನಾಂತಮಂ (ಶಂಕರಾ. ೫-೬೫); ದಿವದಿವಸಂಗಳಿಂ ಕುಂದುವುವಲ್ಲದೆ ಬಳೆಯವಾಯುವುಂ ವಪುವುಂ (ಅಜಿತ. ೨-೭೪); ಬೇಸಗೆಯಿಂದ ಬಳೆದ ಬಿಸಿಲಿನೊಳು ಬೆಂದು . . .ನಿಂದನು ಮರದ ನೆಳಲೊಳು (ಜೈಮಿ. ೨-೩೨). ೧೦. ಹೆಚ್ಚಿಸು; ಅಧಿಕಗೊಳಿಸು: ದೇವಮಾತೃಕಮೆನಿಪ್ಪ ಪೊಲಂ ನವಗಂಧಶಾಳಿಯಂ ಬೆಳೆವುದು ರಮ್ಯನಾದನ ವನಾಳಿ ವಿಯೋಗಿಜನಕ್ಕೆ ಬೇಟಮಂ ಬಳೆವುದು ನಾಡ ಕಾಡ ಬೆಳಸಿಂ ಬೆಳಸಾ ವಿಷಯಾಂತರಾಳದೊಳ್ (ಶಂಕರಾ. ೧-೫೪). ೧೧. ಹಬ್ಬು; ವ್ಯಾಪಿಸು; ಹರಡು : ಕಿಯ್ಯಕ್ಕಿ ನಿಂದಿರೆ ಪತ್ತಿತ್ತು ಸಮಸ್ತಧಾತ್ರಿ ವಳಯಕ್ಕೆಂದುಂ ದಿಶಾದಂತಿಗಳ್ವರೆಗಂ ತಂದೆಯ ಕೀರ್ತಿಯೋಲ್ ಬಳೆದುದೋ (ಗದಾಯು. ೧-೧೨); ಸಕಲಲೋಕಂಗಳೊಳ್ ಶಿವಭಕ್ತಿ ಬಳೆವುತಿರ್ಪುದು ದಿನದಿನಕ್ಕೆ (ಬಸವ. ೩-೬). ೧೨. ಅಭಿವೃದ್ಧಿಯಾಗು; ಏಳಿಗೆಯನ್ನು ಹೊಂದು; ಪ್ರಗತಿ ಹೊಂದು : "ಬಳೆ-ಪ್ರವೃದ್ಧೌ, ಕಾಚಭೂಷಣೇ ಚ" (ಶಮದ); ಇಂಚೆಯ ಪಸವಿನ ಒಡಿದ ಕಳಿಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ವಿರಂಚಿಯ ಕೆಯ್ಪಡಿಯವೊಲಾದುವಾ ನಾಡೂರ್ಗಳ್ (ಶಂಕರಾ. ೮-೫೧); ಪೆಣ್ಣು ಪೆತ್ತವರ ಬಳಗ ಬಳೆವುದು ಬೇಗ ಪೆಣ್ಣು ಪೆತ್ತವರು ಪೆರ್ಚುವರು (ಹರಿ. ೫-೪). ೧೩. ನೆರವೇರು; ನಡೆ : ಬೆಳೆದುದು ಹಿಮವರ್ಷದೆ ರಾತ್ರಿಗಳತೆಯೆನಲ್ ಬಳೆದುವಿರುಳ್ಗಳೊಳ್ ಸುರತಂಗಳ್ ಬಳೆದುವು ದಂಪತಿ ಶತದೊಳ್ ಬಳೆವಿನೆಗಂ ಮದನನಾಜ್ಞೆಯುಂ ಭುಜಬಲಮುಂ (ಜಗ. ೧೪-೧೬); ಎಲೆ ಸಖಿ, ನಿನಗೆ ಸುಖಮಜ್ಜನ ಬಳೆಯಿತ್ತೆ ? (ಶಾಕುಂತ. ೫೦-೧೫). ೧೪. ಸಂಪಾದಿಸು; ಪಡೆ; ಹೊಂದು : ಇಳೆಯೊಳಿದ ಹೇಳುವರ ಕೇಳ್ವರ ಬಳಗವಾಕ್ಷಣ ಪುಣ್ಯರಾಶಿಯ ಬಳೆವುದೆಂಬುದನಱಿದು ಭಾರತಕೃತಿಯ ಹೇಳುವೆನು (ಸಂಭಾ. ೧-೨೮). ವಳೆ೧ : ೨. ಎಟ್ಟದಿನ್ನರು ನರಮೊಕರಮನೊಡೆದೊಡಪ್ಪಡತ್ತದು ಪುಣಸೂರ್ಪ್ಪರ್ಲ ನೆಲ್ಲುಪಟ್ಟಿಯು ಪಳೆವದು (ಪ್ರಾ.ಅ.. ೧೯೩೦. ೩೬-೯; ೩ನೆಯ ಸಾ).

ಬಳೆವಳೆ (ದ್ವಿರುಕ್ತಿ) : ತನ್ಮಹಾಶಯವಿಶುದ್ಧಗರ್ಭಾವಾಸದೊಳಾ ಸಮಸ್ತಗುಣನಿವಾಸಂ ನೆಲಸಿ ಬಳೆವಳೆಯೆ (ಧರ್ಮಾಮೃ. ೧೩-೬೫ ವ).

೯ 'ಬಳೆ' ಮತ್ತು 'ಬೆಳೆ' ಎಂಬ ಎರಡು ಧಾತುಗಳ ಬಗ್ಗೆ ಕನ್ನಡದಲ್ಲಿ ಪೂರ್ವಕವಿಗಳು, ವಿದ್ವಾಂಸರು ಅನುಸರಿಸುತ್ತಿದ್ದ ಒಂದು ಪದ್ಧತಿಯಿದ್ದಂತೆ ಕಾಣುತ್ತದೆ. ಕೇಶಿರಾಜನು "ಬೆಳೆಯೆಂಬ ಧಾತು ಸಸ್ಯಾವಳಿಯೊಳ್ ಬಳೆಯೆಂಬ ಧಾತು ಮಿಕ್ಕೆಡೆಯೊಳ್ ಸಂಗಳಿಕುಂ" ಎಂದು ಹೇಳಿದ್ದಾನೆ. ಅದೇ ಅಭಿಪ್ರಾಯವನ್ನು 'ಕರ್ನಾಟಕ ಸಂಜೀವನಂ' ಎಂಬ ನಿಘಂಟಿನ ಕರ್ತೃವಾದ ಶೃಂಗಾರಕವಿಯು "ಅಚರಂಗಳಲ್ಲಿ ಬೆಳೆದುದು ಬೆಳಸೆನಿಕ್ಕುಮಾ ಸಚರನರರಲ್ಲಿ ಬಳೆದಂ ಬಳವಿ ಬಳವಿಗೆ ರುಚಿರಮಕ್ಕುಂ" ಎಂದು ವಿವರಿಸುತ್ತಾನೆ. ಶೃಂಗಾರಕವಿಯು 'ರುಚಿರಮಕ್ಕುಂ' ಎನ್ನುವ ಶಬ್ದ ಗಮನಾರ್ಹ. ಆದರೆ ಈ ಎರಡು ಶಬ್ದಗಳ ನಡುವೆ ಇದ್ದಿರಬಹುದಾದ ವ್ಯತ್ಯಾಸವು ಬಹುಕಾಲದ ಹಿಂದೆಯೇ, ಅಂದರೆ ವಡ್ಡಾರಾಧನೆ ಮತ್ತು ಪಂಪಭಾರತಗಳ ಕಾಲದಿಂದಲೂ ಮರೆಯಾಗಿರಬೇಕು. ಆದರೆ ಕೇಶಿರಾಜನ ಹೇಳಿಕೆಯನ್ನು ಗಮನದಲ್ಲಿಟ್ಟುಕೊಂಡು 'ಬಳೆ' ಮತ್ತು 'ಬೆಳೆ' ಉಲ್ಲೇಖಗಳನ್ನು ಬೇರೆಬೇರೆಯಾಗಿ ಕೊಟ್ಟಿದೆ. 'ಬೆಳೆ೧' ಪರಾ. [ದೇ.॥ ತುಳು. ಬಳಂಪುನಿ]

ಬಳೆ೩, ವಳೆ೩ (ನಾ). ೧. ವರ್ತುಲ; ಮಂಡಲ; ವೃತ್ತ : 'ಅಗ್ನಿವಳೆದೆಣ್ಣೆ', 'ಬಳಸು೧', 'ಬಳೆಗೆಱೆ' ಪರಾ. ೨. ಕೈಗೆ ತೊಡುವ (ಗಾಜು, ಚಿನ್ನ ಇತ್ಯಾದಿಗಳ) ವರ್ತುಲಾಕಾರದ ಆಭರಣ; ಕಂಕಣ : "ಬಳೆ-ಪ್ರವೃದ್ಧೌ, ಕಾಚಭೂಷಣೇ ಚ" (ಶಮದ); ಬಳೆಯು ಪೇಱನಾನೆ ಮೆಟ್ಟಿದಂತೆ ನುರ್ಚುನೂಱಿತ್ತು ನವಮುಂಕಿ (ಶಂಕರಾ. ೮-೭೬ ವ); ಬಳೆಯೆ ಸರ್ವವಿಭೂಷಣಕ್ಕೆ ಮೊದಲ್ಕೆ (ನೇಮಿಜಿ. ೧೪); ಕಣಿಕಿಣಿಗಿಣಿರೆಂಬ ಕರದ ಕಂಕಣ ಬಳೆ (ಪುರಂದ. ೨.೬೨-೨). ೩. ಕಾಲಿನಲ್ಲಿ ಧರಿಸುವ ಕಡಗ : 'ಕಾಲ್ಬಳೆ' ಪರಾ. ೪. ತೋಳಿಗೆ ಧರಿಸುವ ಆಭರಣ; ತೋಳು ಬಂದಿ; ವಂಕಿ : ತೊಟ್ಟು ತೀವಿ ಬಳೆಯಂ ನಿಡುದೋಳ್ಗಳೊಳ್ (ಕಾವ್ಯಾ.ಶ. ೩೬೨); ಖವ ಖವಿಸುವ ತೋಳ ಬಳೆಯು ಕುವಲಯನೇತ್ರೆಯರೆಸೆದರು (ಶಂಶಿ. ೨೪-೪೩). 'ತೋಳ್ವಳೆ' ಪರಾ. ೫. ಗಂಟಲ ಮೂಳೆ,-ಎಲುವು: ಪಗೆವರ ಗಂಟಲ ಬಳೆಯನೊಡೆದು ಕಳೆವುದನನುಕರಿಸುವಂತೆ ತೀವಿ ತೊಟ್ಟ ಮುಂಗೈಯ ಬಳೆಗಳನೊಡೆದು (ಶಂಕರಾ. ೮-೧೧೧ ವ). ೬. ಕತ್ತಿನ ಸುತ್ತಲೂ ಇರುವ ವಳಯಾಕಾರದ ಮೂಳೆ : ಕರಿಗಳ ಗಡಣ ಕೆಡೆದವು ಮಸ್ತಕದ ಬಳೆ ಹಱಿದು ಕಳಚಿದವು (ಕುವ್ಯಾ.ದ್ರೋ. ೬೦೨. ಶಂ. ೨೯೨-೫); ಮತ್ತೆ ಕೊರಳಾ ಬಳೆಯೊಳು ಬಳೆಯಂತೆ ತಿರಿಗಿಸಿ ರಾಯನ ತಲೆದೂಗಿಸಿದರು ಗಾಯಕರು (ಕವಿಕ. ೧೨-೪೩). ೭. ಪರಿಧಿ; ವಲಯಂ; ಸುತ್ತು:

ತಲೆ ತಿರುಗಿ ತುಟಿಯೊಣಗಿ ಕಂಗಳ ಬಳೆ ಮರಳೆ ಬಸವಳಿಯೆ ಸಾರಥಿ ತೂಲಗಿಸಿದನಾ ರಥವನು (ಕುಮಾರವ್ಯಾ. ೫-೩೩). ೮. ವರ್ತುಲಾಕಾರದ ಒಂದು ಬಗೆಯ ಆಯುಧ : ಚಕ್ರ : 'ಪಾಱುಂಬಳೆ' ಪರಾ. ೯. ರಥ, ಬಂಡಿ ಮೊದಲಾದುವುಗಳ ಚಕ್ರದ ಹೊರಭಾಗಕ್ಕೆ ತೊಡಿಸುವ ಕಬ್ಬಿಣದ ವರ್ತುಲಾಕಾರದ ಸಾಧನ, – ಕಬ್ಬಿಣದ ಪಟ್ಟಿ : ಜೋಲ್ವ ಬಳ್ಳಿಗೊಂಬಿನ ಬಳೆ ತೋರಗೊಂಬಿನ ನೊಗಂ ನಿಡುಗೊಂಬಿನ ಮೂಂಕು ಕಣ್ಗೆ ಚೆಲ್ವಿನ ನಡೆತಂದುವಂದಸುಗೆಯೆಂಬ ನೆಗಟ್ತೆಯ ತೇರ್ಗಳೆತ್ತಲುಂ (ಶಬ್ದಮ. ೨೦೩) ; ಕೀಲಚ್ಚು ಬಳೆ ಮೊಳೆಯನಾರ್ಸಿದು ಸಿಂಧವಂ ನೆಗಪಿ ... ಸೂತನಿದಿರಾಗಿ ತಂದಿರಿಸಿದ ತೇರ ತೇಜಿಗೆ ನಮಿಸುತ (ಕಂಪ್ರ. ೧೮-೩೩): ಮೊಳೆ, ಕೊಂಡಿ, ಬಳೆ ಮುಂತಾದ ಸಾಮಾನು ಕಮ್ಮಾರರು ಮಾಡುತ್ತಾರೆ (ಜುಂಬಯು. ೧-೦೦೮). 'ನೇಮಿ$_1$' ಪರಾ. ೧೦. ಆನೆಯ ಕೋರೆಗಳಿಗೆ ಅಥವಾ ಎತ್ತು ಮುಂತಾದ ಪ್ರಾಣಿಗಳ ಕೊಂಬುಗಳಿಗೆ ತುದಿಯಲ್ಲಿ ತೊಡಿಸುವ ಅಲಂಕಾರದ ಸಾಧನ ; ಅಣಸು : ಇದಿರಾದರಿಭೂಪಾಲರ ಮದದಾನೆಯ ಕೋಬಿನೆಸೆವ ದಂತದ ಬಳೆಯುಂ ಬಿದುವಿನ ಮುತ್ತಿನ ಹಾರಮನೊದವಿಸಿ ಜಯಾಸಿಂಗೆ ತುಡಿಸುವಂ ನರಸಿಂಗಂ (ಶಾಸ್ತ್ರಸು. ೦-೦೬). 'ಬಳಿವೋಗು' ಪರಾ. ವಳ್ಳಿ$_3$ : ೧೧. (ಕುದುರೆಯ ತುಂಟಾತನವನ್ನು ತಡೆಹಿಡಿಯಲು ಕಟ್ಟುವ) ಸೊಂಟಪಟ್ಟಿ ; ತಂಗುಪಟ್ಟಿ : "ವಳೆಯೊನಲ್ ಕುದುರೆವಳೆಯುಂ" (ಶಬ್ದಸಂ. ೧೨).

**ಬಳೆಯಾಕೆ** = (ಬಂಗಾರದ) ಕಂಕಣ ಇತ್ಯಾದಿ ಆಭರಣಗಳನ್ನಿಟ್ಟು ಒಲಿಸಿಕೊಂಡವಳು ; ಬಂಗಾರದವಳು : ತೊರಾಪುರುಷ ಸಾವಂತರನ ಬಳೆಯಾಕೆ ತಮ್ಮಬ್ಬೆಯು ಸನ್ನಾ × × ಭುತ್ತ್ರಂ ಈ ಕಲ್ಲ ಬಸದಿಯುಂ ಒನ್ದು ದೇವಾರಪುವಮಂ ಮಾಡಿಸಿದಳ್ (ಎಕ. VIII, ಸಗರ. ೧೩-೬; ಸು. ೩೫೦). [ದೇ.೩ ತಮಿ. ವಳ್ಯ, ವಳ್ಯೆಯಲ್ ; ಮಲ. ವಳ; ತೊದ. ಪಳ್; ಕೊಡ. ತುಳು. ಬಳೆ]

**ಬಳ್ಳಿ$_3$** 'ಬಲ್ಕೆ$_2$' ನೋ.

**ಬಳೆಕಣ್** 'ಬಳೆಗಣ್' ನೋ.

**ಬಳೆಗ** (ನಾ). (?) : ಪುತ್ತೂರುಡೆ ಶಿವಮಾರಮ್ಮಂ ದುಣ್ಡಾಗೆರ್ಗ್ಗಂ ನಲ್ಲತ್ತೂರೊಡೆ ಒಗ್ಗವನೆ ಬಳೆಗಮುಂ ಅಯ್ದೂಮ್ಮು ಮೆದಕಲನಿಯು ಎಟ್ಟೂಮ್ಬು ಬಾಳೆ ತೋಟ್ಟಪಟ್ಟು ಬ್ರಹ್ಮದೇಯಂ ಕೊಟ್ಟೋದು (ಎಕ. X, ಕೋಲಾರ. ೨೩೧-೪ ; ಸು. ೩೦೦ ?). [?]

**ಬಳೆಗಣ್**, ಬಳೆಕಣ್ (ನಾ). ೧. ಒಳಭಾಗದಲ್ಲಿ ವೃತ್ತಾಕಾರವಾದ ಬಿಳಿಯ ರೇಖೆಯುಳ್ಳ ಕುದುರೆಯ ಕಣ್ಣು : ಬಳೆಗಣ್ಣಂಬರ್ ಪಾಱುಂಬಳೆಯಂದದ ಬಿಳಿಯ ರೇಖೆ ಕಣ್ಣೊಳ್ ತೋಱಿರ್ ಬಳಸಿರೆ ಲೋಚನಯುಗಳಂ ಬಳೆಗಣ್ಣಾದಂದು ಶುಭದಮೊಂದಱೊಳಶುಭಂ (ಅಶ್ವಶಾ. ೨-೩೬). **ಬಳೆಕಣ್** : ೨. ಸುತ್ತಲೂ ಹಳ್ಳ ಬಿದ್ದಿರುವ ಕಣ್ಣು ; ಗುಳಿಗಣ್ಣು (?) : ಬಳೆಕಣ್ಬೆರ್ದುವು ಕಣ್ಪಾಯ್ಪೆಳೆಯಾಯ್ತು ಬರ್ದೆಯಳಿವು ಮೆತ್ತದ [ಱ]ವೋಪಿನೆಗಂ ಬಳಸಿ ಬಲುವಂದು ನೋಡುವಯೆಳವೆಂಡಿರನವರೊಳಪ್ಪ ನಿನಗೇಳಪ್ಪಂ (ಅಜಿತಪು. ೨-೯೩). [ಬಳೆ$_2$ + ಕಣ್]

**ಬಳೆಗಳೆ** (ಕ್ರಿ). ಗಂಟಲ ಮೂಳೆಯನ್ನು ನೆಗ್ಗು : ಕುಳಿಯೊಳಿಕ್ಕುವ ಮುದುಡಿ ಮುಚ್ಚಿ ಮುಗ್ಗುವ ಮುಳಿವ ಬಳೆಗಳವ ಹೋಳ್ವ ಸೀಳ್ವಾಱುವ . . . ಕೋಳಾಹಳದೊಳಾ ರೌರವಂ ಭಯಂಕರವಾದುದು (ಸಿದ್ಧರಾ. ೬-೨೯). [ಬಳೆ$_2$ + ಕಳೆ$_1$]

**ಬಳೆಗಾತಿ** (ನಾ). ಬಳೆಯನ್ನು ಮಾರುವವಳು : ಬಳೆಗಳ ಕುಱುಹು ಕಂಡುದು ಚಿತ್ರ ನೀವೇನು ಬಳೆಗಾತಿಯರೊಯೆಂದಳೊಲಿದು (ಭರತ. ೧೨-೨೦). [ಬಳೆ$_2$ + – ಕಾತಿ$_2$]

**ಬಳೆಗಾರ** 'ಬಳೆಗಾಱ' ನೋ.

**ಬಳೆಗಾರ್ತಿ** (ನಾ). = ಬಳೆಗಾತಿ : ಮಾಲೆಗಾರ್ತಿ, ಬಳೆಗಾರ್ತಿ, ಗೆಲ್ಲಗಾರ್ತಿ (ಶಾಶಾಖೊ. ೦೯೯ ಉದಾ) ; ಮಾಲೆಗಾರ್ತಿ . . . ಹಾಲಗಾರ್ತಿ, ಬಳೆಗಾರ್ತಿ (ಕಮುರ. ೨೦೯ ವ್ಯಯೋ). [ಬಳೆಗಾಱ +– ತಿ$_1$(< – ಇತ್ತಿ)]

**ಬಳೆಗಾಱ**, ಬಳಗಾರ, ಬಳಗಾಱ, ಬಳೆಗಾರ (ನಾ). ೧. ಬಳೆಯನ್ನು ಮಾರುವವನು : ಹರಿಬಲರಲ್ಲಿಂ ತಳರ್ದಾದರದಿಂ . . . ಬಳೆಗಾಱರ ತಂಬುಲಿಗರ ಮಣಿಗಾಱರ ಗಾದಿಗರಾಪಣಂಗಳೊಳ್ ನಡೆತಂದರ್ (ಹಗಹ. ೬-೧೫) ; ಎಳವೆರಲ್ಗಳ ಚಿಟುಕೊತ್ತಿ ಕೈದೊಡಿಸುವ ಬಳೆಗಾಱರಿರ್ದಾಕ್ಕಲದಿ (ಸುಕುಮಾ. ೩-೨೩). ೨. [ಜೈನ] ಒಂದು ವಂಶದ ಹೆಸರು ; ಶ್ರವಣರ ಪಂಗಡಗಳಲ್ಲಿ ಒಂದಾದ ಬಳಗಾರಗಣದ ಗುರುಗಳನ್ನು ಹೊಂದಿದ ಒಂದು ವಂಶವೆಂದು ಒಂದು ಅಭಿಪ್ರಾಯವಿದೆ : ಬೆಳುಗರೆನಾಡೊಳ್ ಪುಟ್ಟಿದ ಬಳೆಗಾಱರ ಕುಲದೊಳೆಱದಜಿತಶಾಸನವಂ ಬೆಳಗುವ ಚಕ್ರೇಶ್ವರಮಂಡಳೇಶ್ವರಂ ಬೆಸಸೆ (ಅಜಿತಪು. ೧೨-೧೧). **ಬಳೆಗಾರ** : ೨. ಶ್ರೀವತ್ಸವಂಶಕುಲತಿಲಕಂ ಬಳಗಾರಮಹೋದಧಿ ಕರುಳಕಾಮಸೆಟ್ಟಿ (ಸೌಇಇ. IX – i. ೬೦-೮; 931) ; ಬಡಗಲು ಬಳಗಾರ ಬಳೆಯವರ ಗಡಿಯಿಂದಂ (ಸೌಇಇ. IX – ii. ೧೨೪-೦೩; 1401). **ಬಳಗಾಱ** : ೩. ಒಂದು ವಂಶದ ಹೆಸರು ; ಬಳೆಗಾರರ ಮಂನೆತನ : ಬಳಗಾಱರ ಕೋಕರು ಪುನುವಲವಳ್ಳಿಯಲಿಟ್ಟು ಪುಯ್ಯಲಂ ಪಂದು ಮಾರ್ಬ್ಬಲಮಂ ತಳ್ತಿಱಿದು ಸ್ವರ್ಗಾಲಯಕೆ ಸನ್ದಂ (ಎಕ. VIII ಸೊರಬ. ೩೩೦-೩: ೯೭೦). **ಬಳೆಗಾರ** : ೧. ಬಳೆಗಾರ ಮಣಿಗಾರ ಬಿಚ್ಚೋಲೆಯನ್ನು ಮಾರುವರು (ಪಠಪೋ. ೨-೯೭); ಬಳೆಗಾರಸೆಟ್ಟಿ ಹೋಗಯ್ಯ ನನ್ನ ತವರಿಗೆ (ಜಾನಪ. ೬೮); ಬಳೆಗಾರನ ಅಂಗಡೀಲಿ ಬಾಳೇಹಣ್ಣು ಸಿಕ್ಕೀತೇ? (ಗಾದೆ). [ಬಳೆ$_2$+-ಕಾಱ]

**ಬಳೆಗಾಱಿಕೆ** (ನಾ). ಬಳೆಯನ್ನು ಮಾರುವ ಉದ್ಯೋಗ : ಓಲೆಕಾಱಿಕೆ, ಕಂಚುಗಾಱಿಕೆ, ಬಳೆಗಾಱಿಕೆ (ಶಬ್ದಾನು. ೧೩೦ ವ್ಯಾಖ್ಯಾ). [ಬಳೆಗಾಱ +–ಇಕೆ]

**ಬಳೆಗೈ** (ನಾ). ಬಳೆಗಳನ್ನು ಧರಿಸಿದ ಕೈ : ಬಳೆಗೈಯೆತ್ತಿ ಬಗುಸೆಗಣ್ಗಳ ಕೋಮಲೆಯರ್ವಾಱಿಸುತೀಕ್ಷಿಪ ಕಡೆಗಣ್ಣೆಳಗೆಸೆದುವು (ಜಯನೃ. ೦-೧೦). [ಬಳೆ$_2$+ಕೈ$_{12}$ (<ಕೆಯ್$_2$)]

**ಬಳೆಗೊಯ್** (ಕ್ರಿ). ಕೊರಳ ಸುತ್ತಲೂ ಇರುವ ಮೃದ್ವಸ್ಥಿಯನ್ನು ಕತ್ತರಿಸು : ಊರುರ ಮೂಳೆಯುಂ ತಿಂಬುಗುರು ಪಯುಗರಿಯ ತನಿಗೊಂಬಂ ಬಳೆಗೊಯ್ಯಲ್ ಪೂಣ್ದು ತುದಿಯೊಳೋಡಿ ಪೋಪ ಧೀರುವಪ್ಪ ಪಣಿದ ಕಾಱನಂತೆ (ಶಾಂತಿಪು. ೮-೯೯ ವ). [ಬಳೆ$_2$+ಕೊಯ್$_1$]

**ಬಳೆಗೋ** (ಕ್ರಿ). ೧. ಬಳೆಯನ್ನು ತೊಡಿಸು, – ಹೊಂದಿಸು. ೨. (ಅಲಂ) ಸೋತು ಹೋಗು; ಸೋಲೊಪ್ಪು : ತಗಯಲ್ ಜೈಮಿನಿ ತಿಪ್ಪಿಕೊಣ್ಡು ಪರಿಯಲ್ ವೈಶೇಷಿಕಂ ಪೋಗದುಣ್ಡಗೆಯೊತ್ತಲ್ ಸುಗತಂ ಕಡಂಗಿ ಬಳೆಗೋಯಲ್ ಕಕ್ಷಪಾದಂ . . . ತೂಳ್ದಿತು ಗೋಪಣಾನ್ದ ದಿಗಿಭ ಪ್ರೋದ್ಭಾಸಿ ಗಾಧದ್ವಿಪಂ (ಎಕ. II. ೬೯-೯೯; ಸು. 1100). ೩. ವಶಪಡಿಸಿಕೊಳ್ಳು ; ಹುತೋಟಿಗೆ ತರು: ಬಳೆಗೋಱುದು ಕೀರ್ತಿದಿಶಾಕಳಭಂಗಳ ನಿಗ್ಗವಂಗಳೊಳ್ ರಿಪುಕಾಂತಾಪಳಿಯೊಳ್ ಭವತ್ಪ್ರತಾಪಂ ಬಳೆಗಳೆಯಿಸೆ ತಾನದಕ್ಕೆ ಮಚ್ಚರಿಸುವವೋಲ್ (ಧರ್ಮಾಮೃ. ೩-೪). [ಬಳೆ$_2$+ಕೋ$_1$]

**ಬಳೆತೊಡಿಸು** 'ಬಳೆದೊಡಿಸು' ನೋ.

**ಬಳೆತೊಡು** 'ಬಳೆದೊಡು' ನೋ.

**ಬಳೆದೊಡಿಸು**, ಬಳೆತೊಡಿಸು (ಕ್ರಿ). ೧. ಕೈಗೆ ಬಳೆಗಳನ್ನು ತೊಡಿಸು. ೨. ವೇಶ್ಯೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳುವ ಮೊದಲು ಕೈಗೆ ಬಳೆತೊಡಿಸುವ ವಿಧಿಯನ್ನು ಆಚರಿಸು : ಪೆಱರ ಪೆಂಡಿರ್ಗೆ ಬಳೆದೊಡಿಸುವ ಪೆಂಡಿರಂ ಕೊಟ್ಟು ಮಾನ್ಯಂಬಡೆವ . . . ಕಟ್ಟೆಗ್ಗರಂತೆ (ಧರ್ಮಾಮೃ. ೯-೦೬೨); ಬಳೆದೊಡಿಸಲೆಂದು ಸುದತಿಯು ಕೆಳೆಯನದೊರ್ವಂ ಕರಕ್ಕೆ ಕೆಯ್ನೀಡೆ (ಗಿರಿಜಾ. ೪-೦೩೮). **ಬಳೆತೊಡಿಸು** : ೩. ಚೊಚ್ಚಲುಗರ್ಭಿಣಿಯಾದವಳಿಗೆ

ಏಳನೆಯ ತಿಂಗಳಲ್ಲಿ ನಡೆಸುವ ಸೀಮಂತಸಮಾರಂಭವನ್ನು ಆಚರಿಸು: ಆಗ ನಾನು ಚೊಚ್ಚಿಲ ಬಸಿರು . . . ಬಳೆತೊಡಿಸುವ ಶಾಸ್ತ್ರವಾದಿ ನಮ್ಮ ತಾಯಿ ನನ್ನನ್ನು ಕಳಿಸಿದರು (ಕಾಂಕುಜು. ೯೬). [ಬಳೆ₂+ತೊಡಿಸು]

**ಬಳೆದೊಡು, ಬಳೆತೊಡು** (ಕ್ರಿ). ೧. ಕೈಗೆ ಬಳೆಗಳನ್ನು ಹಾಕಿಕೊಳ್ಳು: ಎಳೆಯಂ ಕೋಳ್ಪಟ್ಟುಂ ಮುಂ ಬಳೆದೊಟ್ಟುಂ ಮುಟ್ಟುಗೆಟ್ಟುವಿರ್ದೀಗಳ್ ಬಳ್ವಳನೆ ನುಡಿದವುದೆ (ಪಂಪಭಾ. ೧೨-೧೬೬); ಗಂಡುಗೆಟ್ಟು ಬಳೆದೊಟ್ಟು ಬೃಹನ್ನಳೆಯಾಗಿ ಪಾರ್ಥನಿರ್ದಿರವುಮನಲ್ಕೆ ಪಾರ್ಥನದು ರಂಭೆಯ ಶಾಪಮೊ ತನ್ನ ಪಾಪಮೋ (ಗದಾಯು. ೩-೩೦) ; ಕ್ರಿಯಾಸಮಾಸಕ್ಕೆ - ಬಳೆದೊಟ್ಟಂ ; ಕೆಳೆಗೊಂಡಂ (ಶಮದ. ೦೬೬ ಕ್ರ.ಯೋ) : ಹಲವು ಬಳೆಗಳ ಕೈಯ ಫಲಫಲಿರನುವುದು ಒಂಟಿ ಬಳೆದೊಟ್ಟ ಕೈ ಮೌನಿ (ತಂಜಾಪ. ೨೦೦-೯೦). **ಬಳೆತೊಡು** : ೧. ನಿನ್ನಯ್ಯನೇಂ ಬಳೆತೊಟ್ಟು ನಟ್ಟುವನೊ ? ದಿಟ್ಟನಿಂದೆಂದಾದೊಡಂ ಪಂದೆ ಪುಟ್ಟುವುದೆ ? (ಶಬ್ದಾಗ. ೬೦-೨೦೯೬). ೨. (ಆಲಂ) ಸೋಲನ್ನು ಒಪ್ಪಿಕೊಳ್ಳು : ನಾನೇನು ಬಳೆತೊಟ್ಟು ಕೂತಿಲ್ಲ (ಜಾಂ). [ಬಳೆ₂+ತೊಡು₁]

**ಬಳೆದೋಳ್** (ನಾ). ಬಳೆಯ ಆಕಾರದ ಆಭರಣವನ್ನು ಧರಿಸಿದ ತೋಳು : ವನಲಕ್ಷ್ಮಿಗೆ ಸಕಲವಿಲಾಸಿನಿಯರ್ ಬಳೆದೋಳ್ಗಳಿಂದೆ ಚಾಮರಮಿಕ್ಕಲ್ (ಗಿರಿಜಾ. ೨-೯೬); ನವನರ್ತನದ ಹಸನಿಗಂ ಬಳೆದೋಳ ಭಾಗ್ಯಸಿಧಿ ಹುಲಿಯುಗುರ ಸುಲಭಿಗಂ (ಬಸವ. ೦-೧೩೦). [ಬಳೆ₂+ತೋಳ್]

**ಬಳೆಮುರಿ** (ನಾ). ಒಂದು ಬಗೆಯ ಸಕ್ಕರೆ : ಸೂಟ್ಟಿ ಸಕ್ಕರೆ ಬೆಲ್ಲ ಬಳೆಮುರಿ ತವರಾಜ . . . ದ್ರಾಕ್ಷಿವಣ್ಗಳ ಹೊಚಿ ಸಾಲಿಟ್ಟವು ಕೊಟ್ಟಗೆಯೊಳಗೆ (ಕುಮಾರಾಂ. ೪೦-೩೩); ಬಳೆಮುರಿ ಸಕ್ಕರೆಯನು ಬಟ್ಟವಾಲೊಳು ಕಲಸಿ ಹೊಂಬಟ್ಟಲನೆತ್ತಿ ಲಲನ ನಲ್ಲನ ಕೈಗೆ ನೀಡುವಳು (ಪಾಠ. ೦೦-೩೦). [ ? ]

**ಬಳೆಯವಾಡ** (ನಾ). ಒಂದು ಪ್ರದೇಶದ ಹೆಸರು : ಒನ್ನವಾಡ ಗಂಗವಾಡ ಬಳೆಯವಾಡರೆನ್ನಾಡಾಳ ಸಿಯಾಳಾಬಿಸಾವಿ ಸರ್ಬರಸ ಕೊಟೋರ್ (ಧ್ವಜಾ. ೦೯೨೯, ೦೦೬-೦; ಸು. 820). [ ? + ಬಾಡ₁ ]

**ಬಳೆಯಿಸು, ಬಳಯಿಸು, ಬಳೆಸು** (ಕ್ರಿ). ೧. ಗಿಡ, ಮರಗಳು ವೃದ್ಧಿಯಾಗುವಂತೆ ಮಾಡು; ಬೆಳೆಸು : ಬಹುಪೋಷಣದಿಮ್ಮಾವಿನ ಸಹಕಾರದ ಸೊನೆಯ ಸೋನೆ ಬಳೆಯಿಸೆ ಬಳೆಗುಂ ಮಹಿಯೆನೆ ಬಣ್ಣಿಸುವ ಪಿತಾಮಹಂ ಗಮರಿದೆಗ್ಗ ಮೊಗ್ಗ ನಿನಗುದುದೆನಗಾ (ಕಾಂತಿಪು. ೦-೬೦); ಆ ಕಳಮಧಾತ್ರಿ ಕಣಿಶಶಾಚಾಕಲಿತಪಯಃಪ್ರತಾನದಿಂ ಬಳೆಯಿಸೆ ನಿರ್ವ್ಯಾಕುಳಮೆನೆ ರಾಜಶುಕಾನೀಕಶಿಶುಪ್ರತತಿ ಬಳೆವುದುಚಿತಸ್ಥಿತಿಯಿಂ (ಶಂಕ್ರಪು. ೦-೯೩). ೨. ಅಭಿವೃದ್ಧಿಗೊಳಿಸು; ಏಳಿಗೆ ಹೊಂದುವಂತೆ ಮಾಡು : ಪಲವು ಧರ್ಮಂಗಳ ಬಳೆಯುವುದಾಯಾಸಫಲವ ಭೋಗಿಪುದಾನಂದ (ಹರಿ. ೨-೩೩). ೩. ಹೆಚ್ಚಿಸು; ಅಧಿಕಗೊಳಿಸು : ಕಳೆದುದು ಪತ್ರಭಂಗದ ಬೆಡಂಗುಗಳಂ ಕುಟಿಲಾಲಕಂಗಳಂ ಬಳೆಯಿಸಿದತ್ತು . . . ಮಿಂಟ್ಟು ಪುಳಕೋದಯಮಂ ಪಡೆದತ್ತು (ಆದಿಪು. ೦೦-೦೯೬) ಇಲ್ಲದ ತಪ್ಪಂ ಕಲ್ಪಿಸಿ ಮೆಲ್ಲನೆ ಮುಳಿದೊಲ್ದು ಕೂರ್ಮೆಯಂ ಬಳೆಯಿಸುತಂ ಪಲ್ಲವಕರ್ಮೆರಸಿಸೆ ದರ್ಸಲ್ಲೀಲೆಯನಾಂತು ಲೋಲೆಯರ್ ಮುದದಿಂದಂ (ಕಾವ್ಯಾ. ೦೧-೬೦) ; ದೇವಪೂಜೆಯು ದೇವರಿಗೆಱಗುವುದು . . . ತನ್ನ ಭಾವಶುದ್ಧಿಯು ಬಳೆಯುವುದು (ಹರಿ. ೬-೯). ೪. ಉಂಟುಮಾಡು; ಹುಟ್ಟಿಸು : ಚಕ್ರೇಶ್ವರಂ ವಾರ್ಧಿಭೂತಲನಾಥಂಗನುರಾಗಮಂ ಬಳೆಯಿಸಲ್ಕೆ ಘರ್ಷ ಕ್ರಿಯಾತಂಡುಲಂಗಳೆಮೆಂದಾದರದಿಂದೆ ಕೊಂಡನವಜ್ಯೋಳ್ ಪತ್ರಿಂಟು ರತ್ನಂಗಳಂ (ಆದಿಪು. ೦೨-೦೨೦). ೫. ಚಾಚು; ನೀಡು : ಆ ಕೇಶಿಯಂ ಮುಂಜಕೇಶಿ ಮಾರ್ಕೊಂಡು ಕರಮಂ ತೂಂತಿ ತದಾಸ್ಯದೊಳ್ ಬಳೆಯಿಸಲ್ ತದ್ವರ್ಧನೋದ್ರೇಕದಿಂ ಸರೆಗಳ್ ಬಿಗಿ ನೆಲೆನೆಲ್ಗರೆಯ (ಹರಿ. ೩-೯೬). ೬. ನಡೆಸು; ನೆರವೇರಿಸು; ಜರುಗಿಸು : ಉತ್ಪಾತಶಾಂತಿಪೌಷ್ಟಿಕಕ್ರಿಯೆಗಳಂ ಮಹಾಬ್ರಾಹ್ಮಣರಿಂದಂ ಬಳೆಯಿಸಿ (ಶಂಪಾ. ೦-೧೩೬ ವ). ೭. [ಗಣಿತ] ಗುಣಿಸು; ಗುಣಾಕಾರ ಮಾಡು : ಕೊಳಗವೆನಿತಾದೊಡಂ ನೀಂ ಬಳೆಯಿಸು ನಿಧಿಯಂಗ್ಮದಿಂದ ಖಂಡುಗ ಮಕ್ಕುಂ ಬಳೆಯಿಸು ನಿಧಿಯಿಂದರ್ಧಿಸಯಿಳೆಯೊಳು ವರುಷಕ್ಕೆ ಬಳ್ಳ ಖಾಡುಗವಕ್ಕುಂ (ವ್ಯವಹಾ. ೩ಕ್ಕಾರ್ಣ). **ಬಳಯಿಸು** : ೧. ಎಳನೀರಿಂ ನಾಳಿಕೇರಂ ಬಳಯಿಸೆ ಕದಳೀಷಂಡಮುಂ . . . ಸೊಗಯಿಕುಂ ತತ್ಪುರೋದ್ಯಾನಷಂಡಂ (ಶಬ್ದಮ. ೨-೩೪), ಅಂಗಜಾ ಪರ್ಪಿಸಿದ ಲತೆ ಸುಧಾಸೂತಿ ಪೀಯೂಷಧಾರಾಂಬುವೆ ಪೊಯ್ಯಾರಾಗೆ ಪುದ್ದಿಂ ಬಳ[ಪಾಠಾಂ.ಳೆ]ಯಿಸಿ ದೆಳದೆಂಗೆಯ್ದು ಮಂದಾನಿಲಂ ತೋಂಟವೆಸಂಗೆಯ್ದ ಟ್ಯಚೆಂ ಪೆರ್ಚಿಸಿದ ವಿಚಕಿಳಂ ರಯ್ಯಂ (ಪುಷ್ಪಪು. ೦-೯೬); ಕಳೆಯ ಪಗೆಯೊಡನೆ ಪಗೆಯಂ ಬಳ[ಪಾಠಾಂ.ಳೆ]ಯಿಪುದಂ ಬಿಟ್ಟು ಕೂಸುಗೊಟ್ಟನುನಯಮಂ ಬಳ[ಪಾಠಾಂ.ಳೆ]ಯಿಸುವುದು (ಪಂಪಾಚ. ೦೩-೩೬): ಉಗುರ್ಗಳ ಚೆಲ್ವಿಕೆಯಿಂದಾಡುರಾಜಿಯು ಮೊಗಗಡಿಸುತ ಪಲ್ವೆಳಗಿನ ಒಗುವಿಗೆಯಂ ಬಳಯಿಸುತ ಬೆಲ್ಡಂಗಳ್ ಬಗೆಗಾರ್ತಿಯರೆಯ್ದಿದರು (ಕುಮಾರಾಂ. ೩೬-೧೮). ೪. ಕುಸುಮಾವಳಿಯ ತಳೆಯದ ನಿನ್ನ ಜಟಾಮಂಡ ಬಳಯಿಸಿದವುದೆನ್ನ ಮನಕೆ ಖೇದಮನೀಗಳ್ (ಕಾದಂಪೂ. ೩೩೬); ದಳಿತಲಸತ್ಕುಂದದ್ಯುತಿಯಳಂಕೃತಾಶೇಷಭುವನಮಾ ನೃಪನ ಯಶಂ ಬಳಯಿಪುದರಿನೃಪವನಿತೋಜ್ಜ್ವಳಮುಖಚಂದ್ರಂಗೆ ಮಳಿನತೆಯನಿದು ಚಿತ್ರಂ(ಶರ್ಮಪು. ೦-೬೯). ೭. ಪೊಡೆ . . . ಬಳಯಿಸು ಏಕಂಮೊಡರಿಪ ವಾಕ್ಯಂಗಳ್ ತಾ ಪೊಡಮಿಯ ಸರರ್ಗ್ಲ ಗುಣಿಯಿಸೆಂಬುವು ನಿರತಂ (ವ್ಯವಹಾ. ೦೨-೦೦). **ಬಳೆಸು** : ೩. ವಿಲಾಸಮನಲರ್ಚಿಸುತುಂ ಮುಳಿಸಂ ನೆಗಟ್ಚುತುಂ ವಿಕಸಿತಮೋದಮಂ ಬಳಿಸುತುಂ ಸತಿ ಕಾಂತೆಯರಾದಮೊಪ್ಪಿದರ್ (ಕಾವ್ಯಾ. ೦೦-೬೯). [ಬಳೆ₁+–ಇಸು₃]

**ಬಳೆವೋಗು** (ಕ್ರಿ). ಆನೆಯ ದಂತದ ತುದಿಗೆ ಅಳವಡಿಸಿದ ಅಣಸು ಕಳಚಿ ಬೀಳು : ಕಟ್ಟದಿರೊಳೆ ನೂಂಕಿದಾನೆಗಳ ಕೋಡುಗಳಂ ಬಳೆವೋಗೆ ಪೊಯ್ದುಂ (ಪಂಪಭಾ. ೦೦-೯೦). [ಬಳೆ₂+ಪೋಗು₁ (<ಪೋ₁)]

**ಬಳೆಸು** 'ಬಳೆಯಿಸು' ನೋ.

**ಬಳೋನ್ಮತ್ತ** 'ಬಲೋನ್ಮತ್ತ' ನೋ.

**ಬಳ್ಕಿಸು, ಬಳುಕಿಸು** (ಕ್ರಿ). ಬಾಗುವಂತೆ ಮಾಡು; ಬಾಗಿಸು : ಫಲಭರದಿಂದೆಱಗುವ ಚೂತಲತಿಕೆಯಂತಿರೆ ಕುಚದ್ವಯಂ ಬಳ್ಕಿಸೆ . . . ಲಲನೆ ಭೂಪತಿಗೆ ಪೊಡಮಟ್ಟಳ್ (ಕುಸುಮಾ. ೬-೯೬); ಕ್ಷೋಣಿಯಂ ಪದುದೇಟ್ಗೆ ಬಳ್ವಳ ಬಳ್ಕಿಸುತ್ತಿರೆ . . . ನೃತ್ಯಮನಾಡಿದಂ ಸುರನಾಯಕಂ (ಆಶಂಪು. ೦೯-೬೦); ಕೈಯಂ ಮುಗಿದು ಬಳ್ಕಿಸಿ ನಡುವನೊಯ್ಯನೆ ನೆಗಹಿ ಮುನ್ನಿನ ತನ್ನ ಬಾವದಲಿ ಸೇರಿ (ಅಕಪು. ೯-೦೨). **ಬಳುಕಿಸು**: ವಾಸುಗಿಯ ಬಳುಕಿಸುವ ತಾರೆಗಳ ತಱಿದಗಿವ ಗರ್ವಿತ ಗೌರವರನರ್ಬುದಷಸಂಗದವೀರ ತೋಱಿಸಿ ಮೆಚ್ಚಿಸಿದನು (ಕೂರಗು. ೯-೬-೨೦). [ಬಳ್ಕು₁ (<ಬೆಳ್ಕು₁) + – ಇಸು₃]

**ಬಳ್ಕು₁** 'ಬೆಳ್ಕು₁' ನೋ.

**ಬಳ್ಕು₂** 'ಬೆಳ್ಕು₂' ನೋ.

**ಬಳ್ಕುಡಿ** 'ಬಕ್ಕುಡಿ₁' ನೋ.

**ಬಳ್ಕುಡಿಗೆಯ್** 'ಬಕ್ಕುಡಿಗೆಯ್' ನೋ.

**ಬಳ್ಕುವೋಗು** (ಕ್ರಿ). ನಡುಕವನ್ನು ಹೊಂದು ; ನಡುಗು : ನಯಹೀನರ್ಪಡೆದೊತ್ತಿ . . . ನಿರ್ದಯದಿಂ ಓಡಿಸಿ ಬಳ್ಕುವೋಪಿನೆಗಮೆಲ್ವಂ ತಾಪಿನಂ ಮೇಗೆ ಮೂಗಿಯ ಮೂಗಂ ತಲೆವಾರ ಕೊಯ್ದು (ಸುಕುಮಾ. ೬-೨೯). [ಬಳ್ಕು₂(<ಬೆಳ್ಕು₂)+ಪೋಗು₁(<ಪೋ₁)]

**ಬಳ್ಳುಱು** 'ಬೆಳ್ಳುಱು₁' ನೋ.

**ಬಳ್ಳ್ದು** 'ಬಾಟ್₁' ಪರಾ.

**ಬಳ್ವಳ₁** (ನಾ). ೧. ಹೆಚ್ಚಳ; ಅತಿಶಯ; 'ಬಳ್ವಳಿಕೆ' ಪರಾ. ೨. ಹಿರಿದಾದುದು: "ಬಳ್ವಳಮೆಂದು ಪಿರಿದಾಗಿ ಬೆಳೆದುದು" (ಕಕಾಕಾ. ೭೦-೬೦೨). ೩. ವಿಸ್ತಾರವಾದುದು; ವಿಶಾಲವಾದುದು: ಆತನ ಪಡೆಗೆ ನಡೆಯಲೆಡೆ ಮಾಡಿದಂತೆ ಬಳ್ವಳಾದ ದೆಸೆಗಳುಮಾತನ ವಿಜಯಸ್ತಂಭಕ್ಕೆ ತಡೆಯದೆ ಪಾಯುಲ್ವೆಟ್ಟು ಮಂಬಂತೆ ನೆಲೆಯಾದ ಮಹಾನದಿಗಳುಂ . . . ತನ್ನ ಬಲಮಂ ಪ್ರಕಟಂಮಾಡ (ಆಂತಿ. ೦೧-೩ ವ).

**ಬಳ್ವಳ₂** 'ಬಳ್ವಳಂ' ನೋ.

**ಬಳ್ವಳಂ**. ಬಳುವಳ, ಬಳ್ವಳ₃ (ಅ). ಹೆಚ್ಚಾಗಿ : ಅಧಿಕವಾಗಿ : ಅತಿಶಯವಾಗಿ : ಪರಿಕಿಪೊಡಗ್ನಿಗವಾಕಿಯ ವಿರಹಾಗ್ನಿಗವಿಲ್ಲ ಭೇದ ಮಲ್ಲಿಗೆಯೊಡೇಂ ಕಪ್ಪುರದ ರಜಕ್ಕಂ ವೀಜನದೆರಲ್ಲಪುದು ಕಿಸದ ಬಳ್ವಳಂ ಬಳಿನಪುದೇ (ಕಂಪ್ರಕ. ೩-೧೨೯); ಬಳ್ಪೆಂದೆ ಬಳ್ವಳಮುಣ್ಮಿ ಕೈವೆರ್ಯೊಳ್ಗೊಡಂ ಬಿದಿಗಂ ನೇತ್ರಂ ಕಿಂಡದಂತಾಗೆ ಗಲ್ಲಲನಾಗಳ್ಗೊರವಟ್ಟಿ ಸಂದಿರಿದು ತೀರಂ ಮಾತ್ರಿಯಂಬ್ಬೆಗದಿಂ (ಕಂಪ್ರಕ್ಕಂ. ೦೬-೦೩); **ಬಳುವಳ** : ಕಿಡ ವಳಿಗಳು ಬಳುವಳ ಬಳಿಯ ತಳುವಿಸಿಕೈರ್ಗೀವಂಳಂಗವಮಂ ಜವಜವಾಗೆ ಬೆಳದುದ(ದು) ಗರ್ಭ್ಭಂ (ಕಇ. 1. ೨೩-೩೦ ; 1186) : ಸಳನಳಿಸಿ ಬಳು [ಪಾಠಾಂ. ಳ]ವಳ ಬೆಳೆದೆಳಲತೆಯು ತಾಂಬೂಲಲತೆಯು . . . ನಂದಕಲತೆಯು ಕಿಂತಿಣಿಯುಂ ಸಲ್ಲಲಿತಪೂಪ ವಲ್ಲೀವನಪ್ರದೇಶದೊಳ್ (ರವೀಂಕ. ೦-೫೨ ವ). **ಬಳ್ವಳ₂** : ಪದ್ಮಬಾಂಧವಂ ಬಳ್ವಳ ನೀಡಿದಂ ಕರಸಹಸ್ರಮಂ (ಅಶಿಕ. ೬-೭೯) : ಅಳ್ವಿ ರಿಪುಪರಸರಥಮಂ ಬಳ್ವಳ ಬಗೆದೊಗೆದ ತನ್ನ ವಿಕ್ರಮದಹನಂ ತೀಳ್ವಲಮಂ ಸರ್ವಾರ್ಥನಂದನಂ ಸಿದ್ಧಾರ್ಥಂ (ವರ್ಧಮಾ. ೧೧-೩೨): ಬಳ್ವಳ ಬೆಳೆದ ಬಾಳೆಚೂತದ ವಾಟಿಕೆಯಂಪಂಗಳುಮಂ (ಅರ್ಜನೇ. ೩-೦೦ ವ). [< ಬಳ್ವಳ₁]

**ಬಳ್ವಳನೆ** (ಅ). ಅಧಿಕವಾಗಿ ; ಹೆಚ್ಚಾಗಿ: ತುಂಬಿ: ಎಳೆಯುಂ ಕೋಳ್ವಟ್ಟುಂ ಮುಂ ಬಳೆದೊಟ್ಟುಂ ಮುಟ್ಟುಗಟ್ಟುವಿರ್ದೀಗಳ್ ಬಳ್ವಳನೆ ಸಾಧಿದಪುದೆ (ಶಂಪಿಷಾ. ೦೨-೭೭೭) : ಬಳ್ವಳನೆ ಬಳೆದ ಸಿಜಂಬಿಗಳ್ವೆರಸುಜ್ಜ್ವಲ ಶಿಲಾತಳಂ ಮನಮಂ ಬೆಂಕೊಳ್ವಪೆಸಿಂಸರ್ಧಿಚಂದ್ರಂಗೊಳ್ಗೆಂತೆಸೆದಿರ್ದ್ದ ಪರ್ಧಳಂದ್ರಾಕೃತಿಯಂ (ಅಶಿಕ. ೬-೭೩) : ಅಂಬುದನಿನದಾಡಂಬರ ಮಂಜರದೊಳಳಂಬುವಾಗಳೆಸೆದಪುದನೆ ಬೇಗಂ ಬಳ್ವಳನೆಸೆದುದು ಭೋರೆಂಬ ಸವಾ ಮುನಿಸುಬಾಧ್ರುವಿಭ್ರಮನಿನದಂ ( ಸುಕುಕುಮಾ. ೦೨-೬೯).

[ ಬಳ್ವಳ₂ ( < ಬಳ್ವಳಂ ) + – ಅನೆ₁]

**ಬಳ್ವಳಿಕೆ** (ನಾ). ೧. ಅಧಿಕವಾದ ತೂಗಾಟ : ಅತಿಶಯವಾದ ಬೀಸಾಟ : ತನ್ನ ಬಾಯ್ವಿಡಿಯೊಳಾಲದ ಪಣ್ಣನ ವೆಯ್ಯ ಬಣ್ಣದೊಳ್ ಕೊಸಗನೆ ತನ್ನ ಬಳ್ವಳಿಕೆಯೊಳ್ ಸೆಳಗೊಂಬನೆ ಪೋಲ್ತು (ಆಂತಿ. ೦೨-೬೩) : ತಳರ್ದುದು ಕರ್ಣತಾಳಪವನಾಹತಿಯಿಂ ಜಳರಾಶಿ ಕೆಯ್ಯ ಬಳ್ವಳಿಕೆಗೆ ದಿಗ್ಗಜಂ ದೆಸೆಯಿನತ್ತ ತೆರಳ್ದುವು (ಶಂಪಿಷಾ. ೦೦-೭೦). ೨. ಅಧಿಕವಾದ ಚಲನವಲನ : ಕಿಡುತಂಮುದು ಮನದಜ್ಞರಯುಮೆ ನುಡಿಯ ತೊವಳ್ ಪಿರಿಗೆ ಪೋಯ್ಯು ತರ್ವಡಿಯೊಳ್ ಬಲ್ಲಡರ್ದುದು ಬಳ್ವಳಿಕೆಗೆ ತನುವಿಡೆ ಗೊಟ್ಟುದು ನಾಡೆ ಶೃತವಾತಿಕ್ರಮದೊಳ್ (ಕಂಪ್ರಕ. ೯-೨). ೩. ವಿಸ್ತಾರವಾದುದು : ವ್ಯಾಪ್ತವಾದುದು : ಏಳ್ವ ಪುಳಕ . . . ವೈವರ್ಣ್ಯತ್ವ ಮನಂ ತಾಳ್ದಿ ಮೊಗಂ ತವಕಿಪ ತನು ತೂರ್ಳಂಗೊಳ್ಳಿಂಗಂ ಹರ್ಷಜಲಂ ತೀವಿದ ಬಳ್ವಳಿಕೆಯ ನೋಟಂ ಕಣ್ಗೊಪ್ಪಿದುದಾ ನೃಪವಿಭೂಸದೊಳು (ಆದಿಪು. ೬-೩೧). [ ಬಳ್ವಳ₁ + – ಇಕೆ ]

**ಬಳ್ವಳಿಕೆವಡೆ** (ಕ್ರಿ). ವಿಸ್ತಾರವಾಗು: ಪೃಥುಲವಾಗು : ನಡ ನೋಟ್ಟರ ಕಡೆಗಣ್ಣಿಂ ಕಡುಸಲ್ಲರ ಮನಮುಂಮೊವನೆ ಪೊತ್ತ್ತ್ರವ ಭರದೊಳ್ ಮಡದಿಯರ ಮೊಲೆಯುಂ ಸಲ್ಲದೊಡುಡಿಯದೆ ಬಳ್ವಳಿಕೆ [ಪಾಠಾಂ. ಬಳಸಳಿಕೆ, ಬಳುವಳಿಕೆ]ವಡೆದ ಬಡನಡು ಭರದಿಂ (ರಾಜಾವ. ೭-೦೦; ಅರ್ಜನೇ. ೯-೨೨ ನೋ).

[ಬಳ್ವಳಿಕೆ + ಪಡೆ₁]

**ಬಳ್ವಳಿಸು** (ಕ್ರಿ). ದೊಡ್ಡದಾಗಿ ಬೆಳೆ: ಹಿರಿದಾಗು: ಶಬರನ ಬೀಸುಂಬಲೆಯು ಪಾಸಮನಿಸಿ ಬಳ್ವಳಿಪ . . . ಲಾಂಗೂಲಲತೆಯೊಳಂ (ಪಾರ್ಥ. ೦೦-೩ ವ): ಗುಲ್ಮಕಂಟಕ ವಿಕೀರ್ಣಮಾಗಿ ಬಳಸಿ ಬಳ್ವಳಿಪ ಬಾಟ್ಕೆಲಿಗನತಿದೂರದೊಳ್ (ಕೃಕ್ಕ. ೨-೬೦ ವ).

[ಬಳ್ವಳ₁ + – ಇಸು₃]

**ಬಳ್ಳ₁**, ಬಳ₁ (ನಾ). ೧. ಒಂದು ಅಳತೆಯ ಪ್ರಮಾಣ; ನಾಲ್ಕು ಸೇರಿನ ಅಳತೆ: ಈ ಎರಡು, ನಾಲ್ಕು, ಹತ್ತು ಅಥವಾ ಹನ್ನೆರಡು ಸೇರಿನ ಅಳತೆಗಳು ಬಳ್ಳವೆಂಬ ಹೆಸರಿನಲ್ಲಿ ಬೇರೆ ಬೇರೆ ಕಡೆಗಳಲ್ಲಿ ಪ್ರಚಾರದಲ್ಲಿದೆ : "ನಾಲ್ಕು ಸೊಲ್ಲಗೆ ಮಾನಮವು ನಾಲ್ಕಗೆ ಬಳ್ಳಮವು ನಾಲ್ಕೆನಲು ಕೊಳಗ" (ಶಬ್ದಗಣ. ೦೦೯-೦೦); ಧಾನ್ಯಂಗಳೊಳೆಲ್ಲಂ ಪೊಂಗೆರದು ಬಳ್ಳಮಂ ಕೊಟ್ಟಿಂತಾಗಿ (ಕಾಶಾಇ. IX-i. ೬೯-೦೯; 1036); ಕಂಡುಗ ಕೊಳಗ ಬಳ್ಳ ಮಾನ ಸೊಲ್ಲಗೆಯನಿತು ಮೊದಲಾಗಿ (ಸಿಕ್ರಂ. ೬-೭೦). ೨. ಧಾನ್ಯವನ್ನು ಅಳೆಯುವ ಸಾಧನ: ನಾಲ್ಕು ಸೇರು ಹಿಡಿಸುವ ಒಂದು ಸಣ್ಣ ಕೊಳಗದಾಕಾರದ ಸಾಧನ : ಸಟ್ಟಿಯ ಬಳ್ಳಂ ಕಿಱಿದು (ಶಂಪಿಷಾ. ೦೨-೦೬೩): ಬಳ್ಳದ ಬಾಯಂತೆ ಒಂದೇ ಮನದ ಮಾಡಿ (ಚಕಿಶ. ೬೬೩); ನಮ್ಮ ಸಟ್ಟಿಯು ಮಾತೊಳ್ಳಿದುವು ಬಳ್ಳಂ ಕಿಱಿದು (ರಮಾರ್ಣವ.೬-೨೩೨). ೩. ತಟ್ಟೆ; ತಳಿಗೆ : ಊಟಕ್ಕೆ ಬಳ್ಳ ಹಾಕಿದ್ದಾರೆ (ರೂಢಿ). **ಬಳ₁** : ೧. ಸಬಗಿನೊಳಂದೊರ್ಬಳ್ ನೆಲ್ಲಂ ಕಟ್ಟಿಕೊಂಡವಂ ಪೊಱುವಟ್ಟಂ (ದೀಪ. ೦೨-೦೦೬); ಸಲಿಕೆಯ ಹಾಗೆಬಲಿ ಭತ್ತ ಬಳ ೩೦ ಲೆಕ್ಕದ ಮೂಡೆ (ಕಾಶಾಇ. ಮುಂಗ್ರಹ. ೯೬೩-೨೯: 1312).

[ದೇ.೩ ತಮಿ. ಮಲ. ವಳ್ಳಮ್; ತುಳು. ತುಲು. ಬಳ್ಳ]

**ಬಳ್ಳಂಗೆಱೆ**. ಬಳ್ಳಗೆಱೆ, ಬಳ್ಳವಗೆಱೆ (ನಾ). ಒಂದು ಕೆರೆಯ ಹೆಸರು : ಬಳ್ಳಂಗೆಱೆಕ್ಷೇತ್ರೀ ಸಹಸ್ರವಲ್ಲೀಮಾತ್ರ ಕ್ಷೇತ್ರಂ ದತ್ತಂ (ಎಇ. XIII. ೦೯೩-೦೦ : ೯೦೨). **ಬಳ್ಳಗೆಱೆ** : ಉತ್ತರತ ಬಳ್ಳಗೆಱೆಯ ಪಡುವ (ಎಇ. XII. ೦೬-೯೬; ೬೧೩). **ಬಳ್ಳವಗೆಱೆ** : ಬರತ ಕೆಱೆಯ ಮೂಡ ಕಡಗೋಡೆ ಬಳ್ಳವಗೆಱೆಯ ಮೂಡಣ ಕಡೆಗೋಡೆ (ಮೈಆರಿ. ೦೯೦೯. ೦೨-೬೭; ೯೦೦). [ಬಳ್ಳ ? + ಕೆಱೆ]

**ಬಳ್ಳಂಗೊಱೆ** (ಕ್ರಿ). (ಬಳ್ಳದಷ್ಟು) ದೊಡ್ಡದಾಗಿ ಕೊರೆದು ರಂಧ್ರ ಮಾಡು : ಪಲ್ಗಳಂ ನುರ್ಗುಗುಟ್ಟುವುದುಂ ಕೈಗಳಂ ಗೊಟ್ಟಂಗೊಱೆಪುದುಂ ಬಾಯುಂ ಬಳ್ಳಂಗೊಱೆವುದುಂ (ಸುಕುಮಾ. ೦೨-೯೭ ವ).

[ಬಳ್ಳ + ಕೊಱೆ₁]

**ಬಳ್ಳಗೆಱೆ** 'ಬಳ್ಳಂಗೆಱೆ' ನೋ.

**ಬಳ್ಳಜ್ಜ** (ನಾ). ಒಬ್ಬಾತನ ಹೆಸರು : ಕೊಪುಳಗೆಱೆಯ ಗವುಣ್ಡ ಬಳ್ಳಜ್ಜನನ್ನು[ಮು]ಡಿಸಿದ ದೇಗುಲಕೆ ಬಿಟ್ಟ ಕೆಯು . . . ಕಱಿದು [ಕೊ]ಣ್ಡಿರಪ್ಪಡೆ ಕವಿಲೆಯುವ ಕಱುನಟಿದರ ಲೋಕಕೆ ಸಲ್ಗು (ಕಾಶಾಇ. XI – i. ೬೩-೩; ೯೩೩). [? + ಅಜ್ಜ₁]

**ಬಳ್ಳನ** (ನಾ). ಒಂದು ವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದವನು (?) : ಗಣೇಗೂರಾ ನರಿವೆವರಂ ಬೆಳ್ಳಮಣೆಯರುಂ ಸನ್ನಿಗೂಲಾ ಪುಟ್ಟುರುಂ ಬಳ್ಳವರುಂ ಪಸುನ್ನಾಯ ಕಬ್ಬಾತರು ಬಿರದರುಂ ಇ ಪೊಲನಂ ನಡಯಿಸಿದೋರ್ (ಎಇ. XVI ಗುಬ್ಬಿ. ೬೩-೩೯; ೭೩೦). [?]

**ಬಳ್ಳವಗೆಱೆ** 'ಬಳ್ಳಂಗೆಱೆ' ನೋ.

**ಬಳ್ಳವಳ್ಳಿ** 'ಬಟಿವಟಿ₁' ನೋ.

**ಬಳ್ಳವಾಡಿ** (ನಾ). ಒಂದು ಊರಿನ ಹೆಸರು : ಬಿಟ್ಟುದು ಬಳ್ಳವಾಡಿ

ನೆಲೆ ನಂಬಿದುರ್ಗದಾರುಹತಂ ಜಿನೇಂದ್ರನಂತಿರ್ದ ಮಹಾನುಭಾವರ್ × × × (ಶಬ್ದ. ೨೯ ಪ್ರಯೋ). [ಬಳ್ಳ$_1$ + ವಾಡಿ$_2$]

**ಬಳ್ಳವಿನಾಡು** (ನಾ). ಒಂದು ಸ್ಥಳದ ಹೆಸರು : ಇದಕ್ಕಾರ್ ಸನ್ನಿನಾಡಯ್ಯೂಱುಂ ವಯಿಯ್ಯೂನೂರ್ಗಡೆಟ್ಟಿತ್ತು ಬಳ್ಳವಿನಾಡು ಸಾಕ್ಷಿ (ಎಕ. IV, ಕಡೂರು, ೯-೨೩; ಸು. ೨೨೦ ?); ಬಳ್ಳವಿನಾಡ ಹಡಿಯವೊಳಲು (ಎಕ.V ಬೇಲೂರು. ೫೯-೬೨; 1117). [ಬಳ್ಳವಿ$_1$ + ನಾಡು]

**ಬಳ್ಳಿ** (ನಾ). ೧. ಹಬ್ಬಿ ಬೆಳೆಯುವ ಸಸ್ಯ; ಹಂಬು; ಲತೆ : "ಲತಾ, ಪ್ರತಾನಿನೀ . . . ಪ್ರತತಿಃ—ಈ ಐದು ಬಳ್ಳಿ (ಹಲಾಯು. ೩೦-೨೬); ಬಳ್ಳಿಯುಂ ಕೊರಲೊಳ್ ತಗುಳ್ದಿಯೆಟಲೆ ಪಿಡಿದುಕೊಂಡು (ವಡ್ಡಾರಾ. ೦೨೦-೮); ತವರಾಜದ ಸಸಿಯು ಮೇಲೆ ಸೂಯ ಬಳ್ಳಿಯುನಡರಿಸುವಂತೆ (ಕಂಕಕ. ೦೯-೩೯) ; ಪಡೆಯು ಕಾಲ್ದುಳಿಗಾಗ ಗಿಡು ಬಳ್ಳಿ ಪೆವ್ಮ್ಮರ ಪುಡಿಯಾಗೆ (ಕಂಪಾ. ೦೨-೬). ೨. ವೀಳೆಯದೆಲೆಯ ಬಳ್ಳಿ; ನಾಗವಲ್ಲಿ: ಚನ್ದ್ರತೇಜಭಟ್ಟಾರರ್ಗ್ಗೆ ಮೂವಿನೂರ್ವರ್ ಬಗಗ[ನು] ಕೊಟ್ಟಂ ಸಾವಿರಂ ಬಳ್ಳಿಯ ತೋಣ್ಟದ ಸಾವ್ಯಮು ಮುಗಿನ ಕಾಡಮ್ಮನುಂ ಎಱನಾಗನುಂ ಕಾಪ್ಪನುಂ ಮಾದನುಂ ಒಕ್ಕಲ್ನಂಗೆಯ್ಯೆ (ಎಕ. XXVI, ೬೨-೦೫; ೨೦೫); ಪನ್ನಿರ್ವರ್ಗಳ್ಳರು ಸಾಯಿರ ಬಳ್ಳಿಯ ಎಳಕ್ಕಿಯ ತೋಣ್ಟಮುವನ್ ಕೊಟ್ಟರ್ (ಎಕ. XI. ಚಿತ್ರದು. ೨೬-೦೬; 947 ?); ಸಾಯಿರ ಬಳ್ಳಿಯ ತೋಂಟವುಂ ದೇವರ್ಗ್ಗೆ ಕೊಟ್ಟರ್ (ಎಕ. XII, ೨೫೬-೬; ೨೬೦). ೩. ಹಗ್ಗ; ಕಣ್ಣಿ : ಎಳತಂದು ಕಡೆಗೋಲ್ಬಳ್ಳಿಯಲಿ ಕೈಗಟ್ಟಿ ಕಂಬದಲಿ ಬಂಧಿಸಿದಳು (ಶಾಳ್ವಭಾ. ೨೦-೦೩); ಮೇವಿಗೆ ಬಿಟ್ಟಿದ್ದ ಹಸು ಕತ್ತಲಾದರೂ ಮನೆಗೆ ಬರಲಿಲ್ಲವಂತೆ. ಕೈಯಲ್ಲಿ ಬಳ್ಳಿ ಹಿಡಿದು ಮಂಜರೀ ಹಕ್ಕಲ ತುಂಬ ಹುಡುಕಾಡಿದರು (ಡಿಕಹ. ೫೬). ೪. ಸುತ್ತು; ಕೊಂಕಾದ ಭಾಗ : ಒಂದು ಬಳ್ಳಿ ಚಕ್ಲಿ ಕೊಡು. ಚಹಾದ ಜೋಡಿ (ಗಂಹಾಯ. ೫೦). ೫. ದೀರ್ಘದ ಗುರುತು ಮುಂತಾದ ಕಾಗುಣಿತ : ಬಿಂದುವಿನೊಂದು ಕೋಛ ತಲೆಕಟ್ಟಿನ ಪೂರ್ಕುಟ ಚೆಲ್ವ . . ಬಳ್ಳಿಯೊಳೊಡಂಬಡುತಿರ್ಪ ನಯುಂ (ಚಿತ್ರಕೆ. ೦೯-೫೬); ನಂತರ ಅವರು ಕಾಳ ಬಳ್ಳಿ ಕಲಿಸಿದರು (ಸ್ವ.ಚಿ. ೦೨೦). ೬. ಸಂಬಂಧ; ನಂಟು : ತಮ್ಮಂ ಸಯ ಬಳ್ಳಿಯುಂ ನಿಗಳಮುಂ ತ[ಳ್ತ]ಂದುವೃಂ ಬಳ್ಳಿ ಸಂಕಲೆಯುಂ ಪೋದ ಗಜಂ ಬನಕ್ಕೆ ತಳರ್ವಂತುದ್ವೇಗದಿಂ ಮೋಹನಶೃಂಖಲೆ ಪಾಱಲ್ ತಪೋವನಕ್ಕೆ ತಳರ್ದು (ಶಾಂತಿಪು. ೯-೦೦೬). ೭. ವಂಶದ ಕುಡಿ; ಸಂತಾನ : ನಿನ್ನ ಬಳ್ಳಿ ಹಬ್ಬುತ್ತದೆ. ಧಾರ್ಮಿಕವಾಗಿ ಬಾಳು (ಹಳ್ಳಿ. ೯); ಹಾಲುಂಡ ತವರೀಗೆ ಏನೆಂದು ಹಾಡಲೆ ಹೊಳೆದಂಡೆಲಿರುವ ಕರಕೀಯ ಕುಡಿಯಂಗ ಹಬ್ಬಲೆ ಅವರ ರಸಬಳ್ಳಿ (ಜನಗೀ. ೫೫). ೮. (?): ಶ್ರೀಲೋಕಪಾಲೇಶ್ವರಕಂ ಪಾಱ ಬಳ್ಳಿ (ಇಕ. X, ೧೬೩-೬; 733).

**ಬಳ್ಳಿಬಳ್ಳಿ** (ದ್ವಿರುಕ್ತಿ) = ೧. ಹಬ್ಬಿಕೊಂಡಿರುವಿಕೆ; ವ್ಯಾಪಿಸಿರುವಿಕೆ; ಹಬ್ಬುಗೆ : ಬಳಸಿದ ಮಾಧವೀಲತೆಯ ಬಳ್ಳಿವಳ್ಳಿಯ ಬಳ್ಳಿಗಾವಣದ ಮುಂದೆ ಬಳ್ಳಳ ಬಳದೆಳೆದಳಸುವ ಪೊಸ ಕೆಂದಳಿರ ಗೊಂದಳದೊಳ್ (ಅಜಿತ. ೦೦-೩೦ ವ). ೨. ಆಧಿಕ್ಯ; ಅತಿಶಯ; ಹೆಚ್ಚಳ: ರತ್ನಭೂಷಣದ ಚೆಲ್ವನುರಾಗದ ಬಳ್ಳಿವಳ್ಳಿಯುಂ ಹೃದಯದೊಳಂದು ಪರ್ಬುವುದುಂ (ಸುಕುಮಾ. ೯-೬೯). ೩. ಸಮೂಹ ; ಗುಂಪು : ಒಳವಟ್ಟು ಬರ್ಪ ಶುಚದ ಬಳ್ಳಿ[ಪಾಠಾಂ. ಳ್ಳ]ವಳ್ಳಿಗಳುಮಂ (ಅಜಿತ. ೦೨-೬೯ ವ). ೪. ಪರಂಪರೆ : ಅದಿರದೆ ಮೋಹವಿರೋಧಿಯು ಪುದಿದೊದವಿದ ಬಳ್ಳಿವಳ್ಳಿಯಂ ಪಱಿದು (ಶಾಂತಿಪು. ೬-೯೬) ; ಪಿತೃಗಳುಪಾರ್ಜಿಸಿಟ್ಟ ಸಿರಿ ಜವ್ವನದೇಟ್ಗೆ ಪೆಱಗಿದಿಲ್ಲನಿಪ್ಪ ಶಿಶಯುರೂಪುಶಕ್ತಿಗಳಿವಲ್ಲವೆ ಹಾನಿಯ ಬಳ್ಳಿವಳ್ಳಿ ನಿಶ್ಚಿತಂ (ಶಾಂತಿಪು. ೫೩೯). ಬಳ್ಳಿಗುರುಡ=ಒಬ್ಬನ ಕೈಯನ್ನು ಹಿಡಿದ ಇನ್ನೊಬ್ಬನಂತೆ ಸಾಲಾಗಿ ನಿಂತ ಕುರುಡರಲ್ಲಿ ಒಬ್ಬ : ಮೂಢಮತಿಯಿಂದ ಕಾಡ ಲಿಂಗವ . . . ಪೂಜಿಸುವ ಶಿಷ್ಯನು ಬಳ್ಳಿ ಗುರುಡನ ಕಯ್ಯ ಬಳ್ಳಿಗುರುಡವಿಡಿದು ಕಾಣದೆ ಡೊಂಗುರವ ಬಿದ್ದಂತೆ ಗುರುಶಿಷ್ಯರೆಂಬುಭಯರು ಯಮಗುಂಡದಲ್ಲಿ ಬೀಳುವರು (ಶಕಕಾ. I. ೯೬); ಜನಾಂಗವು ಬಳ್ಳಿಗುರುಡರಂತೆ ಮುನ್ನುಗ್ಗದೆ ಅದರ ಸಿದ್ಧಾಂತಗಳ ಸಾಧಕ ಬಾಧಕ ಪ್ರಮಾಣಗಳಂತ ಒರೆಹಚ್ಚಿ ವಿಚಾರಮಾಡಿ (ಕೂಪಾದ. ೦ ಎರಡು ಮಾತುಗಳು). [< ಸಂ. ವಲ್ಲೀ. / ತಮಿ. ಮಲ. ವಳ್ಳಿ; ತುಳು. ಕೊಡ. ಬಳ್ಳಿ; ತೆಲು. ವ್ರಲ್ಲಿ]

**ಬಳ್ಳಿಕೌಂಗು** 'ಬಳ್ಳಿಗವುಂಗು' ನೋ.

**ಬಳ್ಳಿಕ್ಕು** (ಕ್ರಿ). ನಾಯಿ, ನರಿ ಮೊದಲಾದುವು ಅರಚು,– ಬಗುಳು,– ಊಳಿಡು : ಬೀದಿಯನರೆವ ಶುನಕಸಮುದಯು ಬಳ್ಳಿಕ್ಕಿದುವು ಕೂಡೆ (ಶ್ರೀರಾಮಾ. ೯೬೦-೦) ; ಬಳ್ಳಿಕ್ಕುತಿದೆ ಪೊಳ್ಳು ಜಂಬುಕಂ ಸಿಂಗದದಿರಿನಲಿ ! (ಚಿತ್ರಾಂಗ. ೬೯-೨೧೯೦). 'ಬಳ್ಳಿಡು' ಪರಾ. [ಬಳ್ಳು$_2$ (<ಬಗುಳ್ಳು$_2$) + ಇಕ್ಕು]

**ಬಳ್ಳಿಗಂಟಕ** (ನಾ). (ಮುಳ್ಳಿನ) ಬಳ್ಳಿಯಲ್ಲಿರುವ ಮುಳ್ಳು : ಒಳ್ಪುಣಿಸೊಳ್ಪಿಂಡಿರ ಭೋಗಿಪೆನೆಂಬೊಳ್ಪಿತಪ್ಪೆನ್ನೀ ತನುಗೆ ಬಳ್ಳಿಗಂಟಕ ಮಾದುದೀ ಮುಪ್ಪೆಂದಾಗ ತಳ್ಳಂಕವಡೆದನಾ ನೃಪತಿ (ಶ್ರೀಪಾಂ. ೦೯-೩೨). [ಬಳ್ಳಿ + ಕಂಟಕ]

**ಬಳ್ಳಿಗತ್ತಿ** (ನಾ). ಬಳ್ಳಿಯಂ ಹಾಗೆ ಬಳುಕುವ ತೆಳುವಾದ ಕತ್ತಿ: ಆ ಬಳ್ಳಿಗತ್ತಿಯೇನಾದರೂ ಅವನ ಕಯ್ಯಲ್ಲಿದ್ದುಬಿಟ್ಟರೆ (ಚುಂತ್ರಕ. ೯೦-೨೨). [ಬಳ್ಳಿ + ಕತ್ತಿ]

**ಬಳ್ಳಿಗರುಳು** (ನಾ). ಬಳ್ಳಿಯ ಹಾಗೆ ಸುತ್ತಿಕೊಂಡಿರುವ ಕರುಳು : ಬುಳ್ಳನಂ ಹೊಳ್ಳಿಸಿತು . . . ಬಳ್ಳಿಗರುಳುಚ್ಚಿದುದು (ಸಾಳ್ವಭಾ. ೫-೩೫). [ಬಳ್ಳಿ + ಕರುಳು (< ಕರುಳ್)]

**ಬಳ್ಳಿಗವರ್ತೆ** (ನಾ). ವೀಳೆಯದೆಲೆಯ ಮೇಲೆ ಹಾಕುತ್ತಿದ್ದ ತೆರಿಗೆ : ಈ ವಿಷಯದ ವಿನ್ನಾಣಿಗಳಾ ಬಳ್ಳಿಗವರ್ತ್ತೆಯುನಃಬಿಪಿದ ಆಚಾರಿಯ (ಇಕ. X, ೦೬೯-೬; 7ನೆಯ ಶತ). [ಬಳ್ಳಿ + ಕವರ್ತೆ$_2$]

**ಬಳ್ಳಿಗವುಂಗು, ಬಳ್ಳಿಕೌಂಗು, ಬಳ್ಳಿಗೌಂಗು** (ನಾ). ಬಳ್ಳಿಗಳು ಹಬ್ಬಿಕೊಂಡಿರುವ ಅಡಕೆಮರ : ಬಳ್ಳಿಗವುಂಗು ತಳ್ತಿಲೆವಳ್ಳಿಯ ಕಟ್ಟಲೆಯುನಲೆವ ಸೊಡಗರ್ಡಿಗಳಂ (ಅಜಿತ. ೦೦-೬೫); ರಾಜಿಪುವು ಬಳ್ಳಿಗವುಂಗಿನ ತಟ್ಟೆ ಬಳ್ಳಿಮಾವಿನ ಮನೆ (ಶಾಂತಿಪು. ೬-೦೩೦). ಬಳ್ಳಿಕೌಂಗು: ಕಾಯ್ತು ಬಳ್ಳಿಕೌಂ[ಪಾಠಾಂ. ಗೌಂ]ಗಿನ ಪಸುರ್ವಂದರುಮಂ ಪಣ್ತ ಮಧುರದ್ರಾಕ್ಷೆಯ ಬಾಟ್ವಂದರುಮನಿರ್ಕಲದೊಳಿಕ್ಕಿ (ಅರ್ಕಕೀ ೬-೦೦ ವ). ಬಳ್ಳಿಗೌಂಗು : ಎಳಲತೆ ತಳ್ತ ಚಂದನದ ಸಾಲೆಳ ವಳ್ಳಿಗಳಂಡುಗೊಂಡು ಗೊಂದಳಿಸಿದ ಬಳ್ಳಿಗೌಂಗು . . . ಮೆಱೆವುದು (ಸೂಕ್ತಿಸು. ೯-೩೨). [ಬಳ್ಳಿ + ಕವುಂಗು]

**ಬಳ್ಳಿಗಱಿಕೆ** (ನಾ). ಬಹಳ ಉದ್ದವಾಗಿ ಹಬ್ಬಿ ಬೆಳೆಯುವ ಹುಲ್ಲು : "ಗಂಡೋರಿಃ, ಶಕುಲಾಕ್ಷಕಃ – ಈ ೨ ಬಳ್ಳಿಗಱಿಕೆ" (ಶಾಕರಾ. ೦೦೨). [ಬಳ್ಳಿ + ಕಱಿಕೆ (<ಕಱುಕೆ)]

**ಬಳ್ಳಿಗಾಮೆ** 'ವಳ್ಳಿಗಾಮೆ' ನೋ.

**ಬಳ್ಳಿಗಾವಣ** (ನಾ). ಬಳ್ಳಿಗಳಿಂದ ರಚಿತವಾದ ಮಂಟಪ; ಲತಾಗೃಹ : ಬೀಡುಮಾಣಂಗಳೊಳಿಕ್ಕಿದ ಬಳ್ಳಿಗಾವಣಂಗಳೊಳು ನನೆಯ ಜೊಂಪಂಗಳೊಳಂ ವಿಶ್ರಮಿಸುತ್ತುಂ (ಕಂಪಾ. ೨-೯೬ ವ); ಬಗ್ಗವಳ್ಳಿಯ ಬಳ್ಳಿಗಾವಣದೋಳಿಯಿಂ ಸೊಗಯಿಪ್ಪ ಸಮ್ಯಗ್ಗವಾಕ್ಷದ ವಂಕದಾರದ ಕೇತಕಿರ್ಗೆ ಮಿನೊಂದಿ ನಿಂದು (ಶಾಂತಿಪು. ೫-೬೯). [ಬಳ್ಳಿ + ಕಾವಣ$_1$]

**ಬಳ್ಳಿಗಾವೆ** 'ವಳ್ಳಿಗಾಮೆ' ನೋ.

**ಬಳ್ಳಿಗುರುಳ್** (ನಾ). ಬಳ್ಳಿಯಂತೆ ಕೊಂಕಾಗಿರುವ ಕೂದಲು;

ಗುಂಗುರುಕೂದಲು ; ಅವಳ ಪೆಱನೊಸಲನಲೆವ ಬಳ್ಳಿಗುರುಳೊಳ್ ತೊಡಂಕಿದ ಕಣ್ ಕಣ್ಣಲೆಯೊಳ್ ಕೆಡೆದಿರಲೆಯಂತಡಿಯಿಡಲಾರ್ತುದಿಲ್ಲ (ಅಗ್ರಾ. ೩೦). [ಬಳ್ಳಿ + ಕುರುಳ್₁]

**ಬಳ್ಳಿಗೊಳಿಸು** (ಕ್ರಿ). ಸಂಬಂಧವನ್ನುಂಟು ಮಾಡು ; ಹೊಂದಿಸು : ಮತ್ತಮಾ ರಾಗಂಗಳಂ ಪಾಡುವಲ್ಲಿ ಗ್ರಾಮವರ್ಣಂಗಳಂ ತೋಱಿದು ಜನ್ಯ ಜನಕಂಗಳಂ ಬಳ್ಳಿಗೊಳಿಸಿ (ಅಜಿಪು. ೨೪೩). [ಬಳ್ಳಿ + ಕೊಳಿಸು]

**ಬಳ್ಳಿಗೊಂಗು** 'ಬಳ್ಳಿಗವುಂಗು' ನೋ.

**ಬಳ್ಳಿಗ್ಗಮ** (ನಾ). ಒಂದು ಊರಿನ ಹೆಸರು : ಸ್ವಿಮ್ಮನೂರ ಕಿಳ್ಳಮ್ಮನ್ ಅಣ್ಣುಗಿಯ ರಟ್ಟಿಗನ್ ಬೆದೆಮಟ್ಟಿಯಾಲಮ್ಮನ್ ಬಳ್ಳಿಗ್ಗಮಯ ಗಾಮುಣ್ಡನ್ (ಎಕ. VIII. ಸೊರಬ. ೧೦-೧೪; ಸು. ೯೦೦).

[☞ ಇದು 'ಬಳ್ಳಿಗಾಮೆ' ಎಂಬುದರ ಅಪಲಿಖಿತ]

**ಬಳ್ಳಿಡು, ಬೊಳ್ಳಿಡು** (ಕ್ರಿ). ೧. = ಬಳ್ಳಿಕ್ಕು : ಲಿಂಗನಿಷ್ಠಾಹೀನರು ಓದಿ ಹಾಡಿದರೆ ನಳ್ಳಿಗುಳ್ಳೆಯ ತಿಂದ ನರಿ ಹಳ್ಳದ ತಡಿಯಲ್ಲಿ ಬಳ್ಳಿಟ್ಟು ಬಗುಳಿದಂತೆ (ಸಿದ್ಧೇಶ. ೬೫-೨೦೯). ೨. (ನಾಯಿ, ನರಿಗಳ ಹಾಗೆ) ಅರಚು; ಕೂಗಾಡು; ಬೊಬ್ಬಿಡು : ಕೊಟ್ಟರೆ ಹರಸುವೆನು ಕೊಡದಿದ್ದರೆ ಬಳ್ಳಿಟ್ಟು ಬಗುಳುವಂಥ ಭ್ರಷ್ಟದಾಸನು ನಾನು (ಪುರಂದರ. ೬೫-೨೩); ಹರಿಹರಣ ಹರಣಕ್ಕೆಂದು ಬಳ್ಳಿಟ್ಟು ಬೊಗಳುತ್ತ ಒಂದು ಪ್ರಾಂತದೊಳು ಹದುಳಮಿಹನು (ಜಾಕಶ. ೦೯-೬೬). **ಬೊಳ್ಳಿಡು** : ೨. ಬಳ್ಳಿಯ ಮಾತಿಂಗೆಯುಳ್ಳೊಡವೆ ಕೊಡೆನೆಂದು ಬೊಳ್ಳಿಟ್ಟು ಬೊಗಳಿ ಹುಸಿದು ಸಾಲವ ನುಂಗಿ ಇಲ್ಲೆನುತಲಿಹನು (ಸರ್ವಜ್ಞ. ೦೩೯೯).

[ ಬಳ್ಳು₂ (<ಬಗುಳು₂) + ಇಡು₁ ]

**ಬಳ್ಳಿತುಱುಚಿ** 'ಬಳ್ಳಿದುಱುಚಿ' ನೋ.

**ಬಳ್ಳಿದಲೆಯ** (ನಾ). (ಬಳ್ಳಿಯಂ ಹಾಗೆ ಹಬ್ಬಿರುವ) ಅನೇಕ ತಲೆಗಳ ನ್ನುಳ್ಳವನು; ರಾವಣ : ಬಳ್ಳಿದಲೆಯನ ತರಳನಾಗಲೆ ಬಂದನಿಂದ್ರಾರಿ (ತೊರವೆ. ೦೯-೩). [ ಬಳ್ಳಿ + ತಲೆ₁ + — ಅ₇ ]

**ಬಳ್ಳಿದುಱುಚಿ, ಬಳ್ಳಿತುಱುಚಿ** (ನಾ). ಒಂದು ಬಗೆಯ ಓಷಧೀ ಸಸ್ಯ; ಹಬ್ಬಿ ಬೆಳೆಯುವ ತುರಚಿಗಿಡ : "ಯಾಸಃ, ಯವಾಸಃ, ದುಃಸ್ಪರ್ಶಃ, ಧನ್ವಯಾಸಃ . . . ದುರಾಲಭಾ–ಈ ೧೦ ಬಳ್ಳಿದುಱುಚಿ" (ಚಾಚಾಲ. ೦೦೯) ; ಬಳ್ಳಿದುಱುಚಿಯ ಬೇರು . . . ಅರೆದು ಪೂಸಲು ನಸುಗುನ್ನಿಯ ವಿಷ ಶಮನವಹುದು (ಕೃದ್ಯ. II, ೨೩೯) ; ಬಳ್ಳಿದುಱುಚಿ ನೆಱೆಬೇವು ಮುಸ್ತೆ (ಅಭ್ಯಾ. ೩-೩೨) ; ಬಳ್ಳಿದುಱುಚಿ ನೆಱೆ ಮುಳ್ಳುನೆಗ್ಗಿಲು ಕಾಡಕಳ್ಳಿ . . . ಬೆಳೆದು (ಕಂಠೀ. ೦೯-೩೯). **ಬಳ್ಳಿತುಱುಚಿ** : ಬಳ್ಳಿತುಱುಚಿಯ ಬೇರ ಒಳ್ಳೆಹಾಗಿಯ ಹಣದು ಬೆಳ್ಳಿಯ ರಸದಿ ಬೆರೆಯಲ್ಕೆ ಹೇಮ ತಾ ಬಳ್ಳದಲಿ ಬಕ್ಕು (ಸರ್ವಜ್ಞ. ೦೯೬೪). 'ತುರಚಿಬಳ್ಳಿ' ಪರಾ. [ಬಳ್ಳಿ + ತುಱುಚಿ]

**ಬಳ್ಳಿಬರೆ** (ಕ್ರಿ). (ದೀರ್ಘ ಮುಂತಾದ) ಕಾಗುಣಿತವನ್ನು ಬರೆ : ವಾಧ್ಯಾಯರ ಕಾಗದ ಪುಸ್ತಕ ಓದುವ ಹುಡುಗರು ತಲೆಗೆ ಒಂದು ದುಡ್ಡನ್ನೂ, ಹಲಗೇ ಬರೆಯುವವರು ಮೂರು ಕಾಸನ್ನೂ, ನೆಲದ ಮೇಲೆ ಬಳ್ಳಿಬರೆಯುವವರು ಎರಡು ಕಾಸನ್ನೂ ತಂದು ಪಂತರಿಗೆ ಆ ದಿವಸ ಕೊಟ್ಟು ಶಾರದಾಪೂಜೆಯನ್ನು ಮಾಡಿದರು (ಮುದ್ರಾರಾ. ೩೯). [ಬಳ್ಳಿ + ಬರೆ₁]

**ಬಳ್ಳಿಬೆಳಗು** 'ಬಳ್ಳಿವೆಳಗು' ನೋ.

**ಬಳ್ಳಿಮಾಡ, ಬಳ್ಳಿವಾಡ** (ನಾ). ಬಳ್ಳಿಗಳಿಂದ ರಚಿತವಾದ ಮನೆ; ಲತಾ ಕುಂಜ : ಮೂಪತ್ತೆರ್ಛ್ಬಳ್ಳಿಮಾಡಂಗಳುಮಂ ಮಾಡಿಸಿ(ಅಭ್ಯಾ. ಶಾ. ೧೫-೨೦); ಸುರತಸುಖದ ಬಳ್ಳಿವಳ್ಳಿಯೆನಿಪ ಬಳ್ಳಿವಾಡದಿಂ ಮಹಾವಿನೋದನೀಡದಿಂ (ಕಂಠೀಪ್ರ. ೧-೩೬ ರಗಳೆ) ; ನಲವಿಂದಂ ಬಳ್ಳಿಮಾಡಂಗಳೊಳ್ ಗುಡಿಯುಂ ಬೇಗನ ಕಟ್ಟಿಂ (ಅಭ್ಯಾ. ಶಾ. ೩೨). **ಬಳ್ಳಿವಾಡ** : ರತ್ನದೀಧಿತಿಯೊಳೊಂದಿ ಪಳಯುವ ಬಳ್ಳಿವಾಡದಿಂ ಕಳಸದ ಮತ್ತವಾರಣದ ಶೋಭೆಗಂ (ಶಬ್ದಮ. ೩-೧೫) : ಬಿರಿಮುಗುಳೆನೊಪ್ಪುವ ಕಾಡುಮಲ್ಲಿಗೆಯ ಬಳ್ಳಿವಾಡಮುಂ (ಚಂದ್ರ. ೬೦-೦೯) ; ನಂದನವನಂ ದ್ರಾಕ್ಷಾರಸಾಲಂಗಳಂ ಮಿಂಚುಂದೀವಿಗೆ ಬಳ್ಳಿವಾಡಮೆಸೆಯೆ (ಪ್ರ. ಸೂಕ್ತಿ. ೩-೯೩). [ಬಳ್ಳಿ+ಮಾಡ₁]

**ಬಳ್ಳಿಮಾವು** (ನಾ). ಬಳ್ಳಿಗಳು ಹಬ್ಬಿರುವ ಮಾವಿನ ಮರ : ರಾಜಿಪುವು ಬಳ್ಳಿಗವುಂಗಿನ ತಟ್ಟಿ ಬಳ್ಳಿಮಾವಿನ ಮನೆ ಬಳ್ಳಿಮಲ್ಲಿಗೆಯ ಮಂಡಪಂ (ಶಾಂತಿಪು. ೬-೧೩೦) ; ಇಮ್ಮಾವಿನ ಬಳ್ಳಿಮಾವಿನಳಮಾವಿನ ಸೊಂಪೆಸಗುಂ ವನಾಂತದೊಳ್ (ಜಗ. ೦೯-೨೬) : ಮೆಲ್ಲನೆ ನಡೆವಂಚೆಗಳಂ ತಳೆದಿರ್ಪ ಬಳ್ಳಿಮಾವಿನ ಸಾಲ್ಗಳ್ (ಅಭ್ಯಾ. ೦೦೩). [ಬಳ್ಳಿ + ಮಾವು]

**ಬಳ್ಳಿಮಿಂಚು** (ನಾ). ಬಳ್ಳಿಯ ಹಾಗೆ ಕವಲಾಗಿ ಕೋರೈಸುವ ಮಿಂಚು ; ಕೋಲುಮಿಂಚು : ನೆಗೆದುದು ಬಾಳ್ಗೊಗೆ ಕಾರಮುಗಿಲ್ ಬಳ್ಳಿಮಿಂ[ಚೆನಿಂದು]ಳ್ಮಿಪವೋಲ್ (ಕಂಠೀಪ್ರ. ೧೦-೬೯); ಅಡರ್ದತ್ತ ಶ್ರಮಂ ಬಳ್ಳಿಮಿಂಚು ತಳೆದಾಶಾಮಂಡಲಂ ಕಟ್ಟನೆ ಕುನಿಯೆ ಜಳಸ್ಫೀತ ಜೀಮೂತಜಾತಂ (ಜಗ. ೯-೦೪) ; ಬಂದರೂರ್ವಶಿ ಬಳ್ಳಿಮಿಂಚಿನ ಮಾಂದಿಯಲಿ (ಕುಮಾ. ೯-೦೩). [ಬಳ್ಳಿ + ಮಿಂಚು₂]

**ಬಳ್ಳಿವರಿ** (ಕ್ರಿ). ಬಳ್ಳಿಯ ಹಾಗೆ ಹಬ್ಬು,–ವಿಸ್ತಾರವಾಗು,–ಹರಡು : ಬೆಟ್ಟದ ಮೇಲೊಂದು ದಳ್ಳುರಿ ನಿಮಿರಿ ಬಳ್ಳಿವರಿದು ಆಕಾಶಕ್ಕಡರಿ ಜಗದೊಳ್ಪಸಂಗಿ ಸಪ್ತಸಮುದ್ರಂಗಳ ನುಂಗಿತ್ತು (ಅರಚ. ೩೬-೯೩) ; ಮೂಡಿದುದು ನೆಯ್ದಿಲ ಬೆಳ್ಪು ಮಡಲ್ವುದಚ್ಚವೆಳ್ದಿಂಗಳ ಬಳ್ಳಿವರಿದತ್ತೆಳವಂಡಿರ ಕಣ್ಣ ಬೆಳ್ಪು (ಅಜಿಪು. ೨-೨೦) ; ಸೆಜ್ಜೆವನೆಯ ಸಿರಿಮಂಚದೊಳ್ ಕುಳ್ಳಿರ್ದು ಬಳ್ಳಿವರಿವ ನೇಹಂ ಕುಡಿ ನಿಮಿರೆ(ಗೀತ. ೨-೦೦೩ ವ). [ಬಳ್ಳಿ + ಪರ್₁]

**ಬಳ್ಳಿವಲೆ** (ನಾ). ಬಳ್ಳಿಯಂ ಹಾಗೆ ಇರುವ ಬಲೆ : ತಳ್ಳಿವಲೆ ಬಳ್ಳಿವಲೆ ತೊಡಕುವಲೆ . . . ಮಂದಸಿನ ವಲೆಯು ಹೋಱಗಳ ಬೇಡವಡೆ ನೆರೆದುದು (ಹಕಾ. ೩-೬) ; ಬಿರ್ಚುವಲೆ ಬಳ್ಳಿವಲೆ ಗೋರಿವಲೆ ಖಂಡವಲೆಗಳೆಂಬಿವಂ ಬೀಸರಂಬುಗದೆ ಬಿರ್ಚಿ ಬೀಸಿದಾಗಳ್ (ಗಾಂಧೀ. ೩-೦೦೯ ವ). [ಬಳ್ಳಿ + ಬಲೆ₁]

**ಬಳ್ಳಿವಾಡ** 'ಬಳ್ಳಿಮಾಡ' ನೋ.

**ಬಳ್ಳಿವಾಯ್** (ಕ್ರಿ). ಬಳ್ಳಿಯು ಹಬ್ಬುವಂತೆ ಸಾಲುಗಟ್ಟಿ ನುಗ್ಗು,– ಸಾಲಾಗಿ ನುಗ್ಗು : ಸಪ್ತಚ್ಛದ ಗಂಧದ ಸೊವಡು ಮುಟ್ಟೆ ಮದಕರಿ ಕುಳಮೋವದೆ ಬಳ್ಳಿವಾಯ್ದು ಗರಿ ತುಳ್ಕದ ೧೨ ಪಂಮತ್ತ ಪರಿದು ಮರವಾಯ್ದುರ್ಕಂ (ಶಾಂತಿಪು. ೯-೧೯೦). [ಬಳ್ಳಿ + ಪಾಯ್₁]

**ಬಳ್ಳಿವಿಡಿ** (ಕ್ರಿ). ಬಳ್ಳಿಯನ್ನು ಆಧಾರವಾಗಿ ಹಿಡಿ : ದುರಾರೋಹ ಮುಮಾದೊಡಂ ಬಗೆಯದೆ ಬಳಸಿದ ಬಳ್ಳಿವಿಡಿದಡರ್ದೇಱು (ಕಾದಂಪೂ. ೦೩೩).

[ಬಳ್ಳಿ + ಪಿಡಿ₁]

**ಬಳ್ಳಿವೆರ್ಚು**(ಕ್ರಿ). ಬಳ್ಳಿಯು ಹಬ್ಬುವಂತೆ ವ್ಯಾಪಿಸು; ಹರಡು :ಆಕಾಶ ಗಂಗಾ ಪ್ರವಾಹಮನಾಧಾರತೆಯಿಂದವನಿಗಲ್ಲೊಕ್ಕಿತೆಂಬಂತೆ ಒರ್ಮೊದೆಯ ಒಯಲೊಳ್ ಬಳ್ಳಿಂಗೆಡೆದು ಬಳ್ಳಿವೆರ್ಚಿಯುಂ (ಕಾವ್ಯಸ. ೬-೧೪ ವ).

[ಬಳ್ಳಿ + ಪೆರ್ಚು₁]

**ಬಳ್ಳಿವೆಳಗು, ಬಳ್ಳಿಬೆಳಗು** (ನಾ). ಬಳ್ಳಿಯಂ ಹಬ್ಬಿದಂತೆ ಹರಡಿರುವ ಕಾಂತಿ : ನನೆಗೆಱವ ತುಂಬಿ ಗಱಿಯನೆ ಕೊನೆವೆಳಗಿಂ [ವೆರಲಿಂ] ನಿಮಿರ್ವ ಬಳ್ಳಿವೆಳಗುರ್ಬಿದ ಕಾಲನೆ ಗಱಗಟ್ಟುವುದತನುಗೆ ನನೆಗಟ್ಟುವ ನೆವದೆ ಪುಷ್ಪಲಾವೀನಿವಹಂ (ಶಬ್ದಮ. ೦-೩೩) ; ನುಣ್ಪೆಳಗನೀವ ಪೊಂಬಟ್ಟೆಯ ಬಳ್ಳಿವೆಳಗಂ ಕಱೆವ ಬೆಳ್ವಟ್ಟೆಯ . . . ಮೇಲ್ಕಟ್ಟಿನ ಬೆರಕೆವೆಳಗು ಮಂಟಪದೊಳಗಂ ಪೊಱಗಂ ತಳ್ತನೆ ತೀವೆ (ಗಿರಿಜ. ೧೦-೨೧ ವ) : ಹರಿದು ಹಬ್ಬುವ ಬಳ್ಳಿವೆಳಗಿನ ಮುರಿವು ಮಂಡಳಿಸಿದುದು (ಕುಮಾ. ೬-೩೩). **ಬಳ್ಳಿಬೆಳಗು** : ಒರೆನೋಟದ ಬಳ್ಳಿಬೆಳಗುಗಳ. . . ಗರುವೆಯರಡಱದರು ದ್ರುಪದಾತ್ಮಜೆಯ ದಂಡಿಗೆಯ ಬಳಸಿನಲಿ (ಕುಮಾ. ೦೩-೦೦೦).

[ಬಳ್ಳಿ + ಬೆಳಗು₁]

**ಬಳ್ಳಿವಳ್ಪು** (ನಾ). ಬಳ್ಳಿವೆಳಗು : ಗಂಗೆ ಬಬಲ್ಬವೋಲ್ನಲತೆ ಬೆಳ್ಳಿಯ ಬೆಟ್ಟದ ಬಳ್ಳಿವೆಳ್ಪು ಬೆಳ್ಳಂಗೆಡೆದೊಪ್ಪ (ಅರ್ಜನೀ. ೨-೬೦); ಕಡುನೆಗೆದಬ್ಬರಂ ವೊಣಗಿಸಂತಿರೆ ಬಿಲ್ಲೊಳಿಪರ್ಕವೆತ್ತ ಕನ್ನಡಿಗಳ ಬಳ್ಳಿವೆಳ್ಪು ಬಡುವಿಂಬಿನ ಪೋಲಿರೆ ... ಪುಟಿಯಂ ಕಟಿದರ್ ಪಿಂಗೆ ಬಿಲ್ಲ ಬಲ್ಲಹರ್ (ಶಬ್ಧಿಕಾ. ೨೬೭). [ಬಳ್ಳಿ + ಬೆಳ್ಪು₂]

**ಬಳ್ಳಿಸುಂಡೆ, ಬಳ್ಳಿಸೊಂಡೆ** (ನಾ). (ಬೇಲಿಗಳ ಮೇಲೆ ಹಬ್ಬುವ, ಕೆಂಪಾದ ಹಣ್ಣು ಬಿಡುವ) ಒಂದು ಬಗೆಯ ಸಸ್ಯ : "ಕರ್ಣಕಾ— ಬಳ್ಳಿಸುಂಡೆ" (೬ಶಾ. ೨೦): ಬಳ್ಳಿಸುಂಡೆಯ ಸಹಮೂಲವು ಮಂಗರವಳ್ಳಿ ರಸಂಗಳು ಸಹಿತ (ಸಾಳ್ಯಸಾಂ. ೦೪); ಗರುಗವ ಸೊಪ್ಪು ಕುರುಟಿಗೆ ಸೊಪ್ಪು ಹೊನಗನ್ನೆ ಬಳ್ಳಿಸುಂಡೆ ಇದರ ರಸವನು . . . ಅಭ್ಯಂಗವ ಮಾಡಿಸಲು ಪಕ್ಷಿಗ್ರಹ ದೋಷ ಶಮನವಹುದು (ವೈದ್ಯಸಾ. II. ೦೪). **ಬಳ್ಳಿಸೊಂಡೆ** : ಹೀರೆಕಾಯಿ, ಬಳ್ಳಿಸೊಂಡೆ . . . ಜ್ವರದವರಿಗೆ ಪಥ್ಯ ದ್ರವ್ಯಗಳೆಂದು ಮತಾಂತರದಲ್ಲಿ ಹೇಳಲ್ಪಟ್ಟದೆ (ಸಕಲ್ಯ. ೦೦೨); ಬಳ್ಳಿ ಸೊಂಡೆ ಬೇರು ಸರುಪಲಬೇರು ಕಡವದ ಬೇರು (ದ್ರಾಕ್ಷಾಕೂ. ೨-೨). [ಬಳ್ಳಿ + ಸುಂಡೆ₁]

**ಬಳ್ಳಿಸೊಂಡೆ** 'ಬಳ್ಳಿಸುಂಡೆ' ನೋ.

**ಬಳ್ಳಿಹಾಲೆ** (ನಾ). ಬಳ್ಳಿಯಾಗಿ ಹಬ್ಬುವ ಹಾಲೆ ಸಸ್ಯ : "ಮಧು ಪರ್ಣಿಕಾ—ಬಳ್ಳಿಹಾಲೆ" (ಶಾಹಟೀ. ೨-೨-೬೦ ಪ). [ಬಳ್ಳಿ + ಹಾಲೆ₂ (< ಪಾಲೆ₂)]

**ಬಳ್ಳಿಹುಸಿಕ** (ನಾ). (ಬಳ್ಳಿ ಹಬ್ಬುವ ರೀತಿಯಲ್ಲಿ) ಅನೇಕ ಸುಳ್ಳು ಹೇಳುವವನು; ಬಹಳ ಸುಳ್ಳುಗಾರ : ಒಳ್ಳೆನೆಂದಂಗೆ ಕಡುಪಾಪಿಯುವ ನೆಂದಂಗೆ ಬಳ್ಳಿಹುಸಿಕಂ ಬಟಿಯ ಕೋಪಿಯುವನೆಂದಂಗೆ ಶಿವಭಕ್ತಿಡಂಬ ನೆಂದೆನಿಸಲಾಟಂ (ಶಿರುಕ. ದೀ. ೨೦-೦೩). [ಬಳ್ಳಿ + ಹುಸಿಕ (< ಪುಸಿಕ)]

**ಬಳ್ಳು₁** (ನಾ). ನರಿ; ಜಂಬುಕ : "ಜಂಬುಕಂ ಸೃಗಾಲಂ ನರಿ ಫೇರವಮುಜಿಗೆ ಬಳ್ಳು" (ವಸ್ತುಕೋ. ೪೦-೩); ಇಂದ್ರಜಾಲಿಗನಂತುರಿಯಸುಗುಬ್ಬ ಬಳ್ಳುಗಳಂ (ಕಾವ್ಯಸಾ. ಜಾಲ ಕೂದ್ರಳ); ಆಕಾಶಕ್ಕೆ ಬಾಯಂ ತಟಿದೂಳ್ವ ಬಳ್ಳುಗಳುಮಂ (ಪಂಪಭಾ. ೦೩-೯೬ ಪ); ಬಳ್ಳೊರಲ್ದುದು ಮುಂದೆ ಮಾರ್ಗಮಂ ದಾಂಟಿಮುದು ಕುಳ್ಳಿರ್ದ ಮೃಗಮೆದ್ದು (ಕೈಪಿಥಾ. ೦೯-೩). [ದೇ. ‖ ಮಲ. ವವ್ವಾಯಿ, ವವ್ವಾಲಿ]

**ಬಳ್ಳು₂** 'ಬಗುಳ್ಳು₁' ನೋ.

**ಬಳ್ಳುಗರೆ, ಬೊಳ್ಳುಗರೆ, ಬೋಳುಗರೆ** (ಕ್ರಿ). ೧. (ನಾಯಿ, ನರಿಗಳ ಹಾಗೆ) ಅರಚು ; ಬೊಬ್ಬಿಡು : ಮುತ್ತ ಮುದು ನರಿಯಂತ ಬಳ್ಳು ಗರಿವರ್ಕಲರು ಕತ್ತಿಯಂತರಚಿ ಕಾಳ್ಗಿಡವುತಿರ್ಪರ್ಕಲರು (ಬಸಂಶಿ. ಹ. ೨೬೭-೦೦); ಕೊರೆವಳ್ ಪಲ್ಲಿಂ ಬಳ್ಳ್ಳುಗರೆವಳ್ ಕನಪರಿಸಿ ಬಳ್ಳುಗರೆವಳ್ (ಸೂಕ್ತಿಸು. ೬-೪೪೬); ನೀ ಬಳ್ಳುಗರೆಯಲು ದಡಿಗ ಹಾಲಿನ ಸವಿಯ ನೋಡುವೆ (ಕೌಶಿಶಿ. ೦೬-೪೪). **ಬೊಳ್ಳುಗರೆ** : ೧. ಹುಚ್ಚುನಾಯಿ ಕಚ್ಚಿದುದರಿಂದ ಅವನು ನಾಯಿಯಂತೆಯೇ ಬೊಳ್ಳುಗರೆಯುತ್ತಿದ್ದನು (ಕೂಶಿ). **ಬೋಳುಗೆರೆ** : ೨. = ಬಳ್ಳಿಕ್ಕು : ಸೂರನ ಬೊಳ್ಳುನಾಯಿ ಬೋಳು ಗರೆಯಿತು (ಸುಕಶು. ೩೩). [ಬಳ್ಳು₂ (< ಬಗುಳ್ಳು₂) + ಕರೆ₁]

**ಬಳ್ಳುಗೆಡೆ** (ಕ್ರಿ). = ಬಳ್ಳುಗರೆ ೧ : ಕಡಿತಲೆಯ ನಾಯಕರ್ ಕೆಯ್ಯೊಂಡು ಬಳ್ಳುಗೆಡೆದ[ ಪಾಠಾಂ. ಬಳುಗೆಡದಿ, ಬಳ್ಳುಗೆಡೆ ]ಕೈವಾಜು ವಾಜು (ಪಂಪಭಾ. ೦೦-೬೦ಪ); ಕೊಳ್ಳಿಗಳಂ ಬಿಡದೋವದ ಬೀಸುವ ಬಳ್ಳು ಗೆಡೆದು ಬಿಸುವುಡಿಯಂ ಸೂಸುವ . . . ಮರುಳ ನೆರವಿಗಿನಿಸಪ್ಪಡಮಾಗಿ ಯದೆ (ವರ್ಧಮಾ. ೦೩-೨೦ ಕಗಳ); ಎಲವೊ ರಕ್ಕಸ ಬಳ್ಳುಗೆಡೆಯುದಿರುಳಿದು ಹೋದರೆ ನೀನು ವೀರನು (ಕೌಶಿಶಿ. ೨೨-೨೪). [ಬಳ್ಳು₂ (<ಬಗುಳ್ಳು₂) + ಕೆಡೆ₂]

**ಬಳ್ಳುಪಿಳ್ಳೆ** (ನಾ). ನರಿಯ ಮರಿ : ರಣದ ಪೈಸೋಲದ ಸಾಲದ ಬಾಲ ನೊರ್ವನಂ ಬಳ್ಳುಪಿಳ್ಳೆಯನೆಂತಂತು ಕೊಂಡುಯ್ವುದಿದಾವ ನಾಯಂ ? (ರಾಘವಾಂಕ. ೦೫೬-೦೦). [ಬಳ್ಳು₁ + ಪಿಳ್ಳೆ]

**ಬಳ್ಳೆ₁** (ನಾ). ಒಂದು ಬಗೆಯ (ಮಾದಕತೆಯನ್ನುಂಟು ಮಾಡುವ) ಸೊಪ್ಪಿನ ಬಳ್ಳಿ: "ಕುಶಲತೆಯೆನಲ್ ಬಳ್ಳೆ" (ಪಂಗರಾ. ೪೩-೯೬); ಬಳ್ಳೆ ಭಂಗಿ ನುಗ್ಗೆ ಉಳ್ಳಿ ಮೊದಲಾದ ಇವನೆಲ್ಲವ ಬಿಡಬೇಕು (ಬಶೀಕ್ಷ. ೬೪); ಬಳ್ಳೆ ಬೆಲ್ಲವತ್ತದ ಕಾಯಿ ಸೋರೆಯ ಕಾಯಿ ಅತ್ತಿ ಅರಳಿ ಆಲ ಬಸುಂ ಗೋಣಿ . . . ಕಳವಿಗೆಯ ಹಣ್ಣುಮಂ ತೊಜೆವುದುಂ (ಕಸಾರ. ೪೪). [<ಬಳ್ಳಿ./ತಮಿ. ವಳ್ಳೈ₃=ಬಿಳಿಹಂಬು]

**ಬಳ್ಳೆ₂** 'ಬಾಟಿಲೆ' ನೋ.

**ಬಳ್ಳೊಳ್ಳಿ** 'ಬಟಿವಟಿ₁' ನೋ.

**ಬಜಿ, ಬರ₁, ಬರನು, ಬಜಿನ್, ಬಜಿನಂ** (ನಾ). ೧. ಕ್ಷಾಮ; ದುರ್ಭಿಕ್ಷ: ಇಂಚೆಯ ಪಸವಿನ ಬಜಿದ ಕಳೆಂಚಿನ ಡಾವರದ ಬಾಧೆಯಿಲ್ಲದ ಪದದೊಳ್ . . . ವಿರಿಂಚಿಯ ಕಯ್ಯಿಡಿವೋಲಾದುವಾ ನಾಡೂರ್ಗಳ್ (ಶಂಕಶಾ. ೬-೩೦); ಎಲೆ ಮುನೀಶ್ವರ ಬಜಿಗಳಾದುವು ಮಳೆಗಳಿಲ್ಲದೆ ವರುಷ ಹನ್ನೆರಡಾಯ್ತು (ಕೌಶಿಂ. ೦-೩೬). ೨. ಒಣಗಿರುವುದು; ಶುಷ್ಕವಾಗಿರುವುದು; ಬತ್ತಿ ದುದು : ಕಟ್ಟುಜಿದ ಬಜಿದ ಬಾಯಾಯ್ತುರಿಯಂ ಗೆಲಲಾರ್ಪೊಡೆ ಪೋರ್ಪೊಡೆ . . . ಅಂತು ಸಂಕಿಪರೊಳರೇ (ರಾಘವಾಂಕ. ೦೫೬-೦೬). ೩. ತಾಪ ಹೆಚ್ಚಾದುದು : ವಿರಹಾನಳನಿಂ ನೆಜಿ ಬಜಿವಾಗಿರೆ ಪಡುನೇಸ ಜಿಳೊಳಳುರ್ದುವಗಲ್ದು ಚಕ್ರವಾಕದ್ವಂದ್ವಂ (ಸೂಕ್ತಿಸು. ೬-೩೦). ೪. ಅತ್ಯಾಸೆ ; ಅತ್ಯಪೇಕ್ಷೆ : ದಿವ್ಯಸ್ವರೂಪನಂ . . . ಕಂಡನ್ನ ಕಂಗಳ ಬಜಿ ಹಿಂಗಿತ್ತಿಂದು (ಪುಹಾರೇ. ಬಿ. ೩೨-೬೬); ಧರಾಜನದ ಕಣ್ಣ ಬಜಿ ತಿಳಿದವು (ಸಿದ್ಧರಾ. ೬-೪೩); ಇರ್ವರ ಬಾಳ ಬಾಯ್ದುಗಳ ಬಜಿಂ ಪಿಂಗಲ್ಕೆವೇಡಂ (ಅಜಿಂಶ. ೦೩-೩೦). **ಬರ₁** : ೧. ಮಳೆ ಬಂದರೆ ಬೆಳೆ, ಇಲ್ಲವಾದರೆ ಬರ (ಪಪಂ.೩); ಈ ಬರದೊಡನೆ ಅನೇಕ ಪಿಡುಗುಗಳೂ ಪ್ರಾರಂಭವಾದವು (ಳಳಹು. ೦೦೦). ೫. ಅಭಾವ ; ಕೊರತೆ : ಸಕ್ಕರೆ ಬರ ಬಿದ್ದಾಗ ಕಾಫಿಗೆ ಉಪ್ಪು ಸೇರಿಸಿ ಕುಡಿಯುವಿರಾ (ಹುಟ್ಟುಹು. ೩೬). **ಬರನು**: ೫. ಭಕ್ತಿ ಬರನಾದೀತು ಸತ್ತಾವ ತಪ್ಪಾರು (ಎಂಶಾ. ೦೨೦-೦೨). **ಬಜಿನ್** : ೧. ಮರನೊಳ್ ದೆವೇಂದ್ರಚಾಪಂ ನೆಗೆದಿರೆ ಬೆಳೆಗುಂ ಧಾತ್ರಿಯೊಳ್ ಮುಂದೆ ಸಸ್ಯೋ ತ್ಕರನಾಶಂ ವಾರಿಯೊಳ್ ಪುಟ್ಟಿರೆ ಬಜಿನೊಗೆಗುಂ (ಶೀಲಕೋಶ. ೪-೨೬) ; ಅಂತು ಬಜಿನಜಿಯಟ್ಟಿ ಕಂದಮೂಲಫಲಂಗಳಂ ಮೆಲ್ದು ಜೀವಿಪೆವೆಂದು ಕೆಲಂಬರ್ . . . ಅರಣ್ಯಕ್ಕೆ ಬಂದು (ಧಶಶು. ೩-೦೨ ಪ). ೨. ನಾಲ್ವೆರಲುದ್ದ ದೊಳಗೆ ಕತ್ತರಿಸಿಕೊಂಡೀರ ವಲಸಿನಕಾಯಂ ಹುಳಿಯುಪ್ಪುವೆಜಿದ್ದು ಮೊಸರಂ ಕಲಸಿ ಬಜಿನಾಗುವಂತಟ್ಟು (ಸೂಪಶಾ. ೩-೬೦). ೪. ಎನ್ನ ಗುರು ವಿನ್ನೆಂದು ಬಿಜಯಂಗೈದು ಕರುಣದಲಿ ಕಣ್ಣ ಬಜಿನನು ತಿಳುಹಿ . . . ಮನ್ನಿಸುವನೋ ಎನುತಲಾ ಬಸವಣ್ಣ ಚಿಂತಿಸಿದ (ಪ್ರಭುಲೀ. ೨೨-೩). ೫. ಬಯಕೆಯೊಳು ಬಜಿಸುಮಂ ಮೌನದೊಳು ನುಡಿಯುಮಂ . . . ಬಯ್ತು ಡುತೆ (ಶಿರುಕ.ದೀ. ೬-೯). ೬. (ಅಲಂ) ಇಲ್ಲವಾದುದು; ಹಾಳಾದುದು: ನಾಶವಾದುದು : ಬಜಿತುದು ಧೈರ್ಯವಾರ್ಧಿ ಬಜಿನಾದುದು ಪೆರ್ಚಿದ ಶಕ್ತಿ ಬಿಂಕಮುಂ ತೊಜಿದುದು ಚಿತ್ತವೃತ್ತಿ (ಜಕಶಂ. ೪-೬೪). **ಬಜಿನು** : ೪. ಕಿಜಿನನಿಗೆವೆರಸಿ ರಾಮುನ ನೋಡುವಳು ಕಣ್ಣ ಬಜಿನೆಲ್ಲ ಬಜಿತು ಹೋಹಂತೆ (ಧರಾ. ೩-೬೬).

**ಬಜಿಬಜಿ, ಬಜಿಬಜಿಗು, ಬಜಿಬಜಿನು** (ದ್ವಿರುಕ್ತಿ) : ಬಜಿಬಜಿಯಾಗಿ ಬಾಯ್ ಬತ್ತುವೊಡಂ. . . ಸಾಯ್ವುಂ ತುರಗಂ (ಅಶ್ವಶಾ. ೬-೩೬): ಬಜಿತು ಬಸಿವ ಕಂಬನಿಯಿಂದ ನಾಂದಿರ್ದ ಗಜಿಗಳು ವಿರಹಾಗ್ನಿಯಿಂದ ಬಜಿಬಜಿ ಗಾದವು (ಜಂಪ್ರಸಾಂ. ೦೬-೦೪) ; ಬಜಿಬಜಿನಾಗೆ ತಾಳಿಸಿದಸರ್ವರೆಯುಂ ರವಿ

(ಅಜಿತ. ೯-೧೩); ಬೇಗೆಯ ಬೆಂಕೆಯಿಂ ಕರಂ ಬಱಬಱನಾಗಿ ತಾಳಿಸಿದವೊಲ್ ಕರಿವೋದುವು ಬೆಂದು ಬೆಟ್ಟಂಗಳ್ (ಧಾರಿತ್ರಿ. ೯-೬೮). **ಬಱಬಱಂ ಬತ್ತು, ಬಱಬಱ ಬತ್ತು** = ಪೂರ್ತಿ ಒಣಗು; ಸಂಪೂರ್ಣವಾಗಿ ಶುಷ್ಕವಾಗು : ಬೆಂದು ಬೆಂಡೆಳ್ದು ಬಱಬಱಂ ಬತ್ತಿ . . . ಕೋಟರೆಗೊಳುತಿರ್ಪ ಪಾದಪಂಗಳಕಲದಿಂ (ಗಿರಿಜಾ. ೯-೨೬ ಶ); ಕೆಱೆ ಬತ್ತಿ ಬೀಡೇಳೆ ಬಱಬ[ಪಾಠಾಂ. ವ]ಱಂ ಬತ್ತೆ ಪಥಿಕರ ಬಾಯ್ಗಳು . . . ಬೇಸಗೆ ಬಂದುದು (ಕುಮುದಾ. ೬-೬೩); ಅಱಿಯೆಂ ವಾಱಿಲ್ ಬಾಯುಂ ಬಱಬಱ ಬತ್ತಿತ್ತು (ಗಾದಂಷ. ೦೯೦); ಬಱಬಱ ಬತ್ತೆ ಬಾಯ್ . . . ಚಂದ್ರನಖಿ ಶೋಕರಸಕೆಳಚಿತ್ರಯಾಗಿ (ಕಂರಾಮಾ. ೯-೩೦).

[ದೇ.॥ ತಮಿ. ಮಲ. ವಱಮ್; ತುಳು. ಬರ ; ತೆಲು. ವರವು]

**ಬಱಂ** (ಪ್ರ). 'ವರೆಗೆ', ಎಂಬರ್ಥದಲ್ಲಿ ಬಳಕೆಯಾದ ಪ್ರತ್ಯಯ : ಉಟ್ಟಗೆರಡುವರಿಸಬಟ್ಟವರಿಯರ ಪತ್ತುವರಿಸಂಬಱಂ ಮತ್ತವರ್ಣಂ ಉಟ್ಟಗೂರ್ವಱಿನ್ನು ಮಾಣಲಾಗ ತಮ್ಮ ಸ್ವೇಚ್ಛೆಯೊ[ಳಂ] ನೆಟ್ಟುದು (ಶಾಶಾ. XI-i ೪೩-೦೯, ೯೭೦). [೬ ಇದು 'ಬರಂ' ಎಂಬುದರ ಅಪಲಿಖಿತ]

**ಬಱಗಾಲ, ಬರಗಾಲ** (ನಾ). ದುರ್ಭಿಕ್ಷಕಾಲ ; ಕ್ಷಾಮ : ಬಱಗಾಲದ ಕೆಱೆಯಂತೆ ನೆಱೆ ಬತ್ತಿದ ಬಾಯುಂ . . . ಬೆನ್ನಂ ಪತ್ತಿದ ಬಸಿಱುಮಿರೆಸು ಬರ್ಪ ವೃದ್ಧ ತಾಪಸನು ಕಂಡು (ಪಂಕಚ. ೬೩-೬) ; ಬಱಗಾಲದ ಬೆಳಸಿ ನಂತೆ ಮಱೆಗಾಲದ ಬಿಸಿಲಂತೆ . . . ಸಂಶಯಕ್ಕೆಡೆಯಾದರ್ಥಮುಮಂ (ರಚಶೇಖ. ೯-೨೩). **ಬರಗಾಲ** : ಅವರು ಬರಗಾಲ ಮತ್ತು ಕಷ್ಟಕಾಲ ಸಮಯಗಳಲ್ಲಿ ದೀನದರಿದ್ರರನ್ನೂ ಸಾಮಾನ್ಯ ಜನರನ್ನೂ ಸಂತೈಸುವುದರಲ್ಲಿ . . . ಹಿಂದೆ ಮುಂದೆ ನೋಡಿದವರಲ್ಲ (ಸಸ್ವ. ೯೩) ; ಬರಗಾಲವಿಲ್ಲದ ದಕ್ಷಿಣದೇಶಕ್ಕೆ ಅವರು ಹೊರಟರು (ಳಕಶ. ೯-೦೦೦) ; ಬರಗಾಲವು ಬಂದು ರೈತರು ದಣಿದಿದ್ದಾರೆ (ತ್ರಿಣಾಹ. ೦೮೮). [ಬಱ + ಕಾಲ]

**ಬಱಗೇಡು** (ನಾ). ಕ್ಷಾಮದಿಂದ ಉಂಟಾಗುವ ಕೇಡು,– ಹಾನಿ : ಆ ಮಂಡಳನೂ ಬಾನಗೇಡು ಬಱಗೇಡು ಎಂನದೆ (ಶಾಶಾ. ೦೯೩೩. ಕಾಕುಶಿ. ೩೦೩-೨೨ ; ೧೨೦೩) ; ಬಾನಗೇಡು ಬಱಗೇಡು ಯೆಂನದೆ ೧೨ ಮುಡಿ ಅಕ್ಕಿಯನೂ . . . ನಡಸಿ ಬಹರು (ಶಾಶಾ. IX-ii, ೪೪೪-೩೮ ; 1488). 'ಬಾನಗೇಡು' ಪರಾ. [ಬಱ + ಕೇಡು]

**ಬಱಗೋಡಿ** (ನಾ). ನೀರು ಬತ್ತಿಹೋದ ಕೋಡಿ : ಮಿಗೆ ಬಸಿಲ ಬೇಗೆಯನು ಬಱಗೋಡಿಗಳ ಮೀನ್ಗಳು ದಿನದಿನಕೆ ಮೈದೆಗೆಯದನುಭವಿಸುತ್ತ ಕುದಿಕುದಿಕುದಿದು ಮಗ್ಗಿದವು (ಚಿಕಾಗ. ೦೦-೦೯-೦೭). [ಬಱ³ + ಕೋಡಿ₁]

**ಬಱಟಿ, ಬೆರಣಿ, ಬೆಱಟಿ, ಬೆಱಣಿ, ಬೆಱಣೆ, ಬೆಱಳಿ** (ನಾ). ೧. (ಇಂಧನವಾಗಿ ಉಪಯೋಗಿಸಲು) ತಟ್ಟಿ ಒಣಗಿಸಿದ ಸಗಣಿ ; ಕುರುಳು : ತರ್ದುಗಳೆಱಗುಂ ಬ[ಪಾಠಾಂ. ಬೆ]ಱಟಿಯೊಳುರ್ದಿ ನೆಲಾವರೆಯ ಬೇರ ನಾಮುಳಕಮುಮಂ . . . ಪೂಸೆ ದಿನಪಂಚಕದೊಳ್ (ಕಮಚ. ೨೭೦ ಕ್ರಯೋ). **ಬೆರಣಿ** : ೧. "ಕರೀಷಂ-ಸಗಣಿ, ಬೆರಣಿ" (೬ಕಧ. ೨೦); ಅವರಿಕೆಸೊಪ್ಪು . . . ಸಹ ಇದರಲ್ಲಿ ರಸವ ಹಿಂಡಿ ಬೆರಣಿ ಬೂದಿಯ ಕಲಸಿ ನೆತ್ತಿಬಾಯಿಗೆ ಒತ್ತಿ ದಾಕ್ಷಿಣವೇ ರಕ್ತವಾಂತಿ ನಿಲ್ಲುದು (ಸಕಕ. ೦೮೮) ; ಬೆರಣಿಯನ್ನು ಪುಡಿ ಮಾಡಿ ಚಕಮಕಿಯನ್ನು ಹೊಡೆದು ಬೆಂಕಿಯನ್ನು ಮಾಡಿದಳು (ಕೇಜೀಶ. ೬೭) ; ಬಿದ್ದ ಬಳೀಲಿ ಬೆರಣಿ ಆಯಬೇಕು ಇದ್ದ ಬಳೀಲಿ ಇರಬೇಕು (ಗಾದೆ). **ಬೆಱಟಿ** : ೧. ಅಂದು ಗೋವರ್ಧನಗಿರಿಯನಿಳೆಗೊಂದು ಬೆಱಟಿಯನಿಳುಹು ವಂತೆಳುಹಿದನು ಮುರವೈರಿ (ಜಾಕ್ಕಶಾ. ೨೦-೬೭). **ಬೆಱಣಿ** : ೧. ಬೆಱಣಿಯ ನಾಯಲಲ್ಲದೆ ಅಟ್ಟುಣ್ಣ ತಱಹಿಲ್ಲವೆನಗೆ (ಬಸಶ. ೨೬೦) ; ತನಯನುಂ ತನ್ನೊಡನೆ ಬರುತಿರ ಜನನಿ ಬೆಱಣಿಯನಾಯ್ದು ಕೊಂಡಾ ಮನೆಗೆ ಬರುತಿರ (ಅತಪು. ೯೬-೮). ೨. ಸಗಣಿ ; ಗೋಮಯ : ಪುಳ್ಳಿ ಬೆಱಣಿ [ಪಾಠಾಂ. ಬೆರಟ]ಯೊಳಗಣ ಪುಱುವಂ ಸಾರ್ಕ್ಕುಸುವಲ್ಲಿ ದಯೆಯಿಂದಾರೈವುದನಿಪ್ಪ ಮನೆಗಳಲ್ಲದೆ ತೀರ್ಥಂ (ಸಮಚ. ೬-೯೯); ಉದಧಿಯೊಳ್ ಬೆಱಣಿಯಂ ಹಾಕಿದಂತಾಯ್ತು ಜಿತಶತ್ರುಭೂಪನ ವಾಹಿನಿ (ಸಮ್ಯಕೌ. ೯-೩೨). **ಬೆಱಣೆ** : ೧. ಆ ಶಂಕರಾನಂದಂಗಂ ಪಂಚಪಾಯಸವ ಲೇಸಪ್ಪ ಭಕ್ಷ್ಯಗಳ ಬೆಱಣೆ ಮುಳ್ಳುಂ ದಟಿಯು ಪಾಷಾಣದೊಡಕಗಳನೊಡಗೂಡಿ ಗಡಣಿಸಲು (ಗುರುರಾ. ೬-೯೨). **ಬೆಱಳಿ** : ೩. (ಆಲಂ) (ಸಗಣಿಯ ಬಿಲ್ಲೆಯಂತೆ) ಅಗಲವಾಗಿರುವುದು : ದೊಡ್ಡದು : 'ಬೆಱಳಿವಲ್' ಪರಾ.

[ದೇ.॥ ತಮಿ. ನರಟ್ಟಿ, ವರಾಟ್ಟಿ, ವಱಳ್; ಮಲ. ವರಡಿ, ವರಳಿ, ವಱಟಿ; ತುಳು. ಬೆಜಂಟ್; ತೆಲು. ವರಟ]

**ಬಱಡ** (ನಾ). ೧. ನಿರುಪಯೋಗಿಯಾದ ವ್ಯಕ್ತಿ; ಕೆಲಸಕ್ಕೆ ಬಾರದವನು : ಬಱಡನಿವನೀ ದೈವದೊಡನಬ್ಬರಿಸಿದೊಡೆಯೊ ಇಬ್ಬರಭ್ಯಂತರ ವನಿವರಱಿಯರೆ ಮುನೀಂದ್ರರು (ಕುಮ್ಯಾಸ. ೯-೩೦). ೨. ಬುದ್ಧಿಯಿಲ್ಲದಿರುವವನು; ದಡ್ಡ; ಅವಿವೇಕಿ : ವಶಗ್ರೀವಪುರದ ಹನನವು ಪುರದ ಹನನಂ ದೊರಕುವುದಲಾಯೆಂಬ ಬುದ್ಧಿಗೆ ಬಱಡನಾಗಿ ಬಳಿಕ್ಕ ರಕ್ಕಸರಾಯನಿಂತೆಂದ (ಕೂಕರಾ. ೩-೯-೬). ೩. ಜಿಪುಣ : ತ್ಯಾಗಿಯುಂ ಬಱಡಂ ಬಾಲರ ಮುಂದ್ದ ಬಂಜೆ . . . ಜಱೆಯರ್ (ಸೋಮಪಂಚ. ೯೩). ೪. ಪುಂಸತ್ವವಿಲ್ಲದವನು; ಷಂಡ : ಬಱಡರು ಬಾಳಕನ್ನದೆ ಪೋಪವರ ಕೈವಿಡಿದು ಕೊಂಡೊಯ್ದು ತೋಳ ತೆಕ್ಕೆಯೊಳಿರಿಕಿ ನಿವಿಪಥ ವೇಳವಿಸಿ ಹಣಗೊಂಡು ಹೋರುವ ಖೂಳರಂಬಾಕಿಯರ ಕಂಡಸುರಾರಿ ನಗುತಿರ್ದ (ಅಕ್ರೂಸ. ೬-೬೩). [ಬಱಡು + – ಅ./ ತಮಿ. ವಱಟನ್]

**ಬಱಡಾವು** (ನಾ). ಗೊಡ್ಡು ಹಸು : ಬಂಜೆಯಾದ ಆಕಳು : ಸುರಧೇನು ಚಿಂತಾಮಣಿ ಕಲ್ಪವೃಕ್ಷವ ಬಱಡ[ದಾ]ವು ಕಲ್ಮರವೆನಿಸಿ ಮುರಹರ ತ್ಯಾಗವ ಕುಡುತಿರ್ದ ಲಕ್ಷ್ಮೀವರನಾದ ಕಾರಣದಿಂದ (ಸೋಮಚ. ೦೭-೬೭). 'ಗೊಡ್ಡಾವು' ಪರಾ. [ಬಱಡು + ಆವು]

**ಬಱಡಿ, ಬರಡಿ** (ನಾ). ೧. ಹೆಣ್ಣಿನ ಸತ್ವವಿಲ್ಲದವಳಂ; ಸ್ತ್ರೀತ್ವವಿಲ್ಲದವಳಂ : ಗೊಡ್ಡಿ : ಬರಡ[ಬಱಡಿ]ಗೆ [ಪಾಠಾಂ. ಬರಗಡ]ಯೇಱಿದಂ ದಟಿಯ ಸೂಳುಮನೇಱಿದನೊತ್ತಿಗೊಟ್ಟವಂ ಕರೆದಭಿಮಾನವಂ ಪೆರ್ಗೆ ಕೊಟ್ಟನಟ್ಟುಱದುಯ್ದು ರಾಗದಿಂ (೬೮ಚಾಶ. ೨-೦೦೦). ೨. ಮಕ್ಕಳಾಗದೆ ಇರುವವಳು; ಬಂಜೆ : ಬಱಡಿಯು ಕೈಯಲ್ಲಿ ಮಕ್ಕಳಿದ್ದಡೆ ತೊರೆವುದೆ ಮೊಲೆ (ಶೋರಾಚ. ೨೩-೦೦೦). **ಬರಡಿ** : ೧. ಬಸುರಿ ಬಾಣತಿಯರು ಶಿಶುವ ಮುದ್ದಾಡುವ ಶಶಿಮುಖಿಯರು ಒಟ್ಟಿಯರಹರು ಅಡಿಯಳು ಬಂಜೆ ಬರಡಿ ಯೆಂಬ ನುಡಿಗಳ ಘಸಣೆಯಿಲ್ಲವು ಸೀಮೆಯಲಿ (ಷಡರೇಶಾಂ. ೦-೩೮).

[ಬಱಡ + – ಇ./ತಮಿ. ವಱಟಿ]

**ಬಱಡು, ಬರಡು** (ನಾ). ೧. ನಿಸ್ಸಾರವಾದುದು; ವ್ಯರ್ಥವಾದುದು; ಪೊಳ್ಳು : ಮನೋಮುದಂ ಬಱಡೆನಿಸುತ್ತು ಮತ್ತುಸರ್ವದೇನೊ ವಿಧಿ ಪ್ರತಿಬಂಧಕಾರ್ಯವಂ (ರಕಶ. ೩-೩೭); ದೇವಯಾನಿಯ ಬಯಕೆ ಬಱಡಾಯ್ತು (ಸಂಕಶ. ಹಂ. ೩೨೯); ನರರ ತುತಿಸಿ ನಾಲಿಗೆ ಬಱಡಾಯಿತಲ್ಲ (ಕುರಂಶ. ೦-೨೯-೦). ೨. ನಿಸ್ಸಾರನಾದವನು : ನಿರ್ವೀರ್ಯ : ದುರ್ಬಲ : ಬ[ಪಾಠಾಂ. ಜ]ಱಡುಗಳು ನೀವೀ ಜನಾರ್ದನನೊರೆಗೆ ಬಹಿರೇ . . . ಹೋಗಿಯೆಂದನು ಭೂಪರಿಗೆ ಭೀಷ್ಮ (ಕುಮ್ಯಾಸ. ೬೦೩. ೦೦-೩೩). ೩. ಗೊಡ್ಡು ಹಸು; ಬಂಜೆದನ : ನೀನೊಲಿದರೆ ಬಱಡು ಹಯನಹುದಯ್ಯಾ (ಬಸಶ. ೬೬) ; ಸುರಧೇನು ಬಱಡಾದೊಡನ್ನೆಂತು ಮಾಡುವೆಂ (ಶಾಗೀಶ. ರ್ದ. ೨೬೦-೦) ; ಕಱೆಯದ ಬಱಡುಗಳು ಹಯನಾದುವು (ಶ್ರಕುಂ. ೬-೨೩). (ಗು). ೪. ನಿಸ್ಸಾರವಾದ: ಪೊಳ್ಳಾದ : 'ಬಱಡುಮನ' ಪರಾ. ೫. ಗೊಡ್ಡಾದ; ಬಂಜೆಯಾದ: ಮುಂದೆ ಕಟ್ಟಿರ್ದೀ ಬಱಡುಪಶುವಿಂದೆ ಹಾಲಂ ಏಗೆ ಪಡೆವೆ (ಅಚಪು. ೯-೨೬). **ಬರಡು** : ೧. ನನ್ನ ಜೀವನ ಬರಡು (ಹ್ಮಾತ. ೯೭); ಇಂದ್ರಿಯಾನು

ಭವರ ಎಲ್ಲೆಯನು ಮೀರಿದ ಭಾವನೆಗಳು . . . ಬರೀ ಜಳ್ಳು, ಬರಡು (ಕಾಕೋ. I, ೬೬೭) ; ಕೃತಿಯಾಗಿ ನಿಲ್ಲದ ಜ್ಞಾನ ಬರಡು (ಮಹಾದ. ೫೩). ೩. ಕೊರಡು ಕೊನರುವುದು ಬಲು ಬರಡು ಹಯನಹುದು (ಕೃಷಾರ. ೪೦-೨೬) ; ಬರಡು ಹಯನಾಗಿ ಕರುವ ಪಡೆದೀತು ಅವು (ಕೊಡಗಣಾ. ೪೪-೩). [ದೇ. ॥ ತವಿ. ವಱಟು ; ಮಲ. ವಱಡು ; ತುಳು. ಬರಡು]

**ಬಱುಡುಗಱೆ** (ಕ್ರಿ). (ಗೊಡ್ಡು ಹಸುವಿನ ಹಾಲು ಕರೆಯುವಂತೆ) ನಿಷ್ಪ್ರಯೋಜಕವಾದ ಕೆಲಸವನ್ನು ಮಾಡು : ವ್ಯುತ್ಪನ್ನಿನ ಬಾಯ ತುತ್ತಾಗುತಿರ್ದಂ ದೇವ ಕತ್ತಲೆಯೊಳಗೆ ಬಱುಡುಗಱೆವುತಿರ್ದಂ ದೇವ (ಶಾಗೀರ. ೮೮. ೨೬೦-೦೪). [ಬಱುಡು + ಕಱೆ$_1$]

**ಬಱುಡುಮನ** (ನಾ). ಭಕ್ತಿ, ಶ್ರದ್ಧೆ, ಪ್ರೀತಿಗಳಿಲ್ಲದ ಅಂತರಂಗ : ವರರ ಸತಿಯನನಂಗರತಿಯಲಿ ಬೆರಸಿತಿಲ್ಲ . . . ದ್ವಿಜರ ಪೂಜೆಯಲಿ ಬಱುಡುಮನವನು ಮಾಡಿತಿಲ್ಲ (ಕೊಕಂ. ೧-೩-೦೪). [ಬಱುಡು + ಮನ]

**ಬಱುಡೆ**, ಬರಡೆ (ನಾ). = ಬಱುಡಿ ೨ : ಬಱುಡೆಯಲ್ಲಾಕೆ ಮರೀಚಿರಾಜನ ನೊಬ್ಬ ಹಿರಿಯ ಪುತ್ರನ ಪೆತ್ತಳೆಹುದು (ಚಕ. ೩೪-೮೦). **ಬರಡೆ** : ಗಂಡಂಗೆ ಮಮಕಾರವಿರಲು ಬರಡೆಯಾದರು ಭಾಗ್ಯಲಕ್ಷ್ಮಿಯಂತಿಹಳು (ಕಂಳ. ೧೧೪-೬). [ಬಱುಡ + — ಎ$_2$]

**ಬಱುನ್** 'ಬಱು' ನೋ.

**ಬಱುನು** 'ಬಱು' ನೋ.

**ಬಱುಪ** (ನಾ). ಅತ್ಯಪೇಕ್ಷೆ ; ಅತ್ಯಾಸೆ : ಸಾಱೆ ಬಱಲ್ದ ಮೆಯ್ಗೆ ಚೇತರಣೆಯಲರ್ಚಿ ಬಾಯ್ಗೆ ಬಱುಪಂ ಬರಿಸುತ್ತಿರೆ ಪೋದ ಕೂಟವುಂ ಪರಿಪಿಡಿಗೆಯ್ಗೆ ಚಿತ್ರವೆಳಸಿತ್ತು ರತಾಂತಸುಖಾಂತಮೋಪರಾ (ಕಂದ್ರಪ್ರ. ೬-೬೦). [< ಬಱು]

**ಬಱಲು**, ಬರಲು, ಬರ್ಲ್ (ನಾ). ೧. (ಎಲೆ, ಹೂವು, ಮೊದಲಾದುವುಗಳು ಇಲ್ಲದೆ) ಒಣಗಿ ಕಡ್ಡಿಯಾದುದು ; ಬೋಳಾದುದು : 'ಬಱಲುಗೊಳ್' ಪರಾ. ೨. ಒಣಗಿದ ಕಡ್ಡಿ : ಕಲ್ಲಿಂದಿಟ್ಟು ಕರಂ ಬಡಿಯಿಂದವೆ ನಿಲ್ಲದೆ ಬಡಿದು ಬಱಲ ಬರ್ಲೊಯ್ಯಿಂದೆಲ್ಲೆಡೆ ಬಾಸುಳೆನೇಳಿಸಿ (ಕಥಾಕಾ. ೦೩-೪೦) ; ಲಂಡಯನು ಹಿಡಿತರಿಸಿ ನುಡಿದಾ ಬಾಯೊಳು ಮಣ್ಣುತುಂಬಿಸಿ ಬಱಲ ತರಿಸಿ . . . ಮೆಯ್ಯೊಳಂ ಹುಣ್ಣು ಹುಣ್ಣಾಗುವಂತೆ ನೆಱೆ ಕೊಲಿಸಬೇಕು (ಸಪ್ತಶೀ. ೬-೩೪). **ಬರಲು**: ೨. ಬಂಬಲೀ ಮರದ ಬರಲಿನಿಂದ ಕೈಗೆ ಬಂದಂತೆ ಹೊಡೆದನಂತೆ (ಹೊಸ್ಸ. ೦೬೮) ; ಅವನನ್ನು ಅಲ್ಲಿಯೇ ಒಂದು ಮರಕ್ಕೆ ಬಿಗಿದು ಹುಣಸೆಯ ಬರಲುಗಳಿಂದ ಮನ ಬಂದಂತೆ ಬಡಿಯಹತ್ತಿದನು (ಕಗಿರ್ನ. ೩೬); ಒಂದು ಬುಟ್ಟಿ ಕುಳ್ಳು, ಒಂದು ಕಟ್ಟು ಬರಲು ಕೊಟ್ಟು ಕಳಿಸಿದನು (ಚಿಟ್ಟಿಹೂ. ೪೪). ೩. ಒಣಗಿದ ಕಡ್ಡಿಗಳ ಕಟ್ಟು ; ಕಸಬರಿಗೆ : ಪೊರಕೆ, ಬರಲು (Broom. ೩೦೪೨). **ಬರ್ಲ್** : ೨. ಒಣಗಿದ ಮುಳ್ಳುಗಳು, ಬರ್ಲುಗಳು, ಟೊಂಗೆಗಳು ಸಾಮ್ರಾಜ್ಯದ ಸೀಮೆಯನ್ನು ಭದ್ರಪಡಿಸಿದ್ದವು (ಮಂಡು. ೬೨). [ಬಱು + — ಅಲು(< — ಅಲ್$_3$)]

**ಬಱಲುಗೊಳ್** (ಕ್ರಿ). (ಎಲೆ, ಹೂವು ಮೊದಲಾದುವುಗಳಿಲ್ಲದೆ ಗಿಡವು) ಬೋಳಾಗು : ಅಱಲುಗೊಂಡ ಕೆಱೆಗೆ ತೊಱೆ ಬಂದು ಹಾಯ್ದಂತೆ ಬಱಲುಗೊಂಡ ಸುಗೆ ಮಳೆ ಸುರಿದಂತಾಯಿತ್ತು (ಮಹಾರಾ. ೩. ೨೪-೪೩). [ಬಱಲು + ಕೊಳ್$_1$]

**ಬಱುಸಿಡಿಲ್**, ಬರಸಿಡಿಲು, ಬಱುಸಿಡಿಲು (ನಾ). ೧. ಮಳೆಯಿಲ್ಲದೆಯೇ ಹೊಡೆಯುವ ಸಿಡಿಲು ; ಅಕಾಲದಲ್ಲಿ ಬೀಳುವ ಸಿಡಿಲು : ಬಱುಸಿಡಿಲ್ ಪೊಡೆದು ಪ್ರಿಯಸೇನೆ ಸತ್ತಳ್ (ವಡ್ಡಾರ. ೬೬-೨೪) ; ಬಱುಸಿಡಿಲ್ ಪೊಡೆಯೆ ಕಿಡಿದ ಶಾಲತರುಗಳೆನ್ನಂತಿರ್ದ ನಾಲ್ವರ್ ತಮ್ಮಿಂದಿರುಮಂ ಕಂಡು ಬೆಕ್ಕಸಂಬಟ್ಟು (ಪಂಪಭಾ. ೬-೯೩ ವ) ; ಕಲ್ಪಾಂತರ ಬಱುಸಿಡಿಲೆಯ್ದಿಂದು ಪೊಸ್ಮಳ್ಳಿಲಂ ಕಂಪಿಸುವಂತೆ (ಶಾಂತೀಪು. ೬೦೦). **ಬರಸಿಡಿಲು** : ೧. ಮಾರುತಾತ್ಮಜನ ಬೆದರಿಸಿದಳೇನೆಂಬೆ ಶಾವರ್ಗಿಲ ಬರಸಿಡಿಲು ಪೋಲ್ವ ಬಿರುನುಡಿಗಳಿಂದ (ಕಂಕಾಗ. ೩-೩-೩) ; ಪ್ರಳಯಕಾಲದಲ್ಲಿ ನಡೆಯುವಂತೆ ಬರಸಿಡಿಲು ರಾಜರ ಸಮಿಪದಲ್ಲಿಯೇ ಬಿತ್ತು (೬೬೪. ೩). ೨ (ಅಲಂ) ಅನಿರೀಕ್ಷಿತವಾದ ಹೊಡೆತ, — ಆಘಾತ : ಇಲ್ಲದೆ ಹೋದರು ತಂದೆ ಬರಸಿಡಿಲೆರಗಿದ ಹಾಗಾದ ನಾನಾಗ (ತಾಣಕ. ೨೨-೯೩). **ಬಱುಸಿಡಿಲು**: ೧. ಕಾಲವಲ್ಲದ ಕಾಲ ಬಱುಸಿಡಿಲೇಳಗೆಯಲುಟ್ಟಿದ್ದು ಮಲ್ಲರ ಪಾಳಯವ ನೆಱುಗುವುದ ನಾನದ ಕಂಡೆ ಸ್ವಪ್ನದಲಿ (ಕುಮ್ಮಾರ. ೬೦೪. ೪-೨೨) ; ಹೊಡೆಸಿದ ಪಟಹ ನಿಸ್ಸಾಳ ಭೇರಿ ಪಱೆ ಬಱುಸಿಡಿಲಿನಂತಾಯ್ತು (ಕೌಶಿಕ. ೦೪-೦೦); ಬಱುಸಿಡಿಲಂತೆ ಭಾರಿಯ ಭೇರಿ ಸೂಳೈಸೆ (ಚಕ. ೨೩-೩೦). [ಬಱು + ಸಿಡಿಲ್$_2$]

**ಬಱುಸಿಡಿಲು** 'ಬಱುಸಿಡಿಲ್' ನೋ.

**ಬಱುಹಾಳೆ** (ನಾ). ಒಣಗಿ ತರಗಾದ ಅಡಕೆಯ ಹಾಳೆ : ವಿಜಯಾರ್ಧ ಶೈಲದೊಳ್ಕಿಡಿ ಪಡಿಯ ನಾಳೆ ಹೋಳ್ಮಿಡಿ ಬಿಡುವೆನೊಣಗಿದ ಬಱುಹಾಳೆಯನೊಡೆಯ ಹೊಯ್ದಂತೆ (ಚಕ. ೨೪-೩).

[< ಬಱು$^3$ + ಹಾಳೆ$_1$ (< ಪಾಳೆ$_1$)]

**ಬಱುಹು** (ನಾ). ಕ್ಷಾಮ ; ದುರ್ಭಿಕ್ಷ: ವ್ಯಾಧಿಯಲ್ಲಿ ಕ್ಲೇಶದಲ್ಲಿ ಬಱುಹಿನಲ್ಲಿ ಹಗೆಗಳ್ ಕೊಲಬಂದಲ್ಲಿ ಅರಮನೆಯ ದ್ವಾರದಲ್ಲಿ ಶ್ಮಶಾನದಲ್ಲಿ ತನಗಾದವರೇ ಬಂಧುಗಳ್ (ಹಂಕಹಂ. ೬೨-೦೪) ; ಪಾಟಿಯ ಬಱುಹಿನಲ್ಲಿ ಅವಗ್ರಾಹ, ಅವಗ್ರಹ ಎನಿಸುಗು (ಶಾಕಂ. ೪). [ಬಱು + — ಹು$_2$ ( < ವು$_2$)]

**ಬಱೆ** 'ಬಱು' ನೋ.

**ಬಱೆಕಯ್** 'ಬಱುಗೆಯ್$_2$' ನೋ.

**ಬಱೆಕೆಯ್** 'ಬಱುಗೆಯ್$_1$' ನೋ.

**ಬಱೆಕ್ಕೆ** 'ಬಱುಗೆಯ್$_1$' ನೋ.

**ಬಱೆಗಂಟು** (ನಾ). ೧. ಒಳಗೆ ಏನೂ ಇಲ್ಲದ ಗಂಟು ; ಬೆಲೆಯಿಲ್ಲದ ಗಂಟು. ೨. ಪೊಳ್ಳಾದ ಸಂಬಂಧ ; ಸುಳ್ಳು ಸಂಬಂಧ,—ನಂಟು : ಬಱೆಗಂಟು ಬಱೆಮಾತು ಸುಳ್ಳುಸುದ್ದಿಯ ಹೇಳಿ ಹಿರಿಯುವಾಗ ನಂತೊಡಲ ಹೊರಕೊಂಬೆ ಮನವೆ (ಕಳಂದ. ಅ. ೨-೦೦-೪).

[ ಬಱೆ (<ಬಱುದು) + ಗಂಟು ]

**ಬಱೆಗಲ್ಲು**, ಬರುಗಲ್ಲು (ನಾ). (ಮಣ್ಣಿಲ್ಲದಿರುವ) ಕಲ್ಲಿನಿಂದ ಕೂಡಿದ ನೆಲ; ಹರಳುಹರಳಾಗಿರುವ ಕಲ್ಲಿನ ನೆಲ : ನಿಜಗುರುಳಿಬಲೆ ನಿನ್ನಯ ದಿವ್ಯದೇಹವ ಬಱೆನೆಲದೆಡೆಯಲ್ಲಿ ಹರಹಿ ಬಱೆಗಲ್ಲ ಗಾಯದಿ ಮಿಡುಕುವ ನಾಗರಮುಱಿಯಂತೆ ಹೊರಳಬೇಡ (ಕೋಹಕ. ೩೩-೪೪). **ಬರುಗಲ್ಲು** : ಬರುಗಲ್ಲ ಗಾಯದ ಮುರಿನಾಗರದ (ಕಂಳ. ೦೨೩-೦೦).

[ ಬಱೆ (<ಬಱುದು) + ಕಲ್ಲು (<ಕಲ್$_3$) ]

**ಬಱೆಗಾಲು** 'ಬಱುಗಾಲು' ನೋ.

**ಬಱೆಗುಟ್ಟು** (ಕ್ರಿ). ಬರಿದು ಮಾಡು ; ಇಲ್ಲವಾಗಿಸು : ಮಕ್ಕಳು ಹುಟ್ಟಿ ಕಡೆಯಲಿ ವಂಶವನು ಬಱೆಗುಟ್ಟದಲ್ಲದೆ ಮಾಣರು (ಕಣಗ. ೩-೦-೨೦). [ ಬಱೆ (<ಬಱುದು) + ಕುಟ್ಟು$_1$ ]

**ಬಱೆಗೊಟಿ** 'ಬಱುಗೊಟಿ' ನೋ.

**ಬಱೆಗೆಂಡ** 'ಬಱುಗೆಂಡ' ನೋ.

**ಬಱೆಗೆಯ್** 'ಬಱುಗೆಯ್$_1$' ನೋ.

**ಬಱೆಗೆಱೆ** 'ಬಱುಗೆಱೆ' ನೋ.

**ಬಱೆಗೈ$_1$** 'ಬಱುಗೆಯ್$_1$' ನೋ.

**ಬಱೆಗೈ$_2$** 'ಬಱುಗೆಯ್$_2$' ನೋ.

**ಬಱೆಗೋಪ** (ನಾ). ವ್ಯರ್ಥವಾದ ಕೋಪ : ಗನ್ನದಿಂ ಬಱೆಗೋಪವಮಂ

ತಾಳ್ದು ರ್ಝುಂಕಿಸುತೆ (ಶಿಕಿಶ. ೮೯. ೦೩-೦೨). [ಬಱಿ (<ಬಱಿದು) + ಕೋಪ]

**ಬಱಿತನ** (ನಾ). ಬರಿದಾದುದು ; ಹುರುಳಿಲ್ಲದುದು : ಶರಣರೆಂತೆ ಹರೆಂಬು ದನೊಲ್ದು ನೋಡದೀ ಬಱಿತನವಕ್ಕಿಚಾಪಲದ ಗೌರವದಿಂ ಫಲವೇಂ (ಶಕಳ. ೦-೬೨). [ಬಱಿ (<ಬಱಿದು) + — ತನ]

**ಬಱಿದಲೆ** 'ಬಱುದಲೆ' ನೋ.

**ಬಱಿದು,** ಬರಿದು(ನಾ). ೧. ಏನೂ ಇಲ್ಲದಿರುವುದು ; ಶೂನ್ಯ ವಾದುದು : ಪೀಚರವಹೀಚರಕೋಟಿಗೆ ಬಾಯಿನಂಗಳಂ ತೀವಿವಿಶೇಷ ಕೋಶಗೃಹವಂ ಬಱಿದಾಗಿರೆ ಕೊಟ್ಟು (ಶಾಂತಿಪು. ೬-೦೯) ; ಎನಿತು ಕುರು ಕ್ಷೇತ್ರದೊಳೆಡೆಯನಿತುಂ ಬಱಿದಿಲ್ಲದಂತು ಶವಶತದಿಂ ತೆಕ್ಕನೆ ತೀವೆ (ಗದಾಯು. ೬-೬೩) ; ದಿವಸಗಳಿಯಿಂ ಕಿಱುಗವ್ವಗಳೆಲ್ಲಮುಮಂ ಬಱಿದಾಗೆ ಮಾಡಿ (ಶಂಕಶಂ. ೨೬೪-೦೦). ೨. ವ್ಯರ್ಥವಾದುದು ; ನಿರರ್ಥಕ ವಾದುದು ; ಪೊಳ್ಳು : ಬಱಿದಲ್ತು ಮೆಚ್ಚು ಶೌಚಂ ಕಿಱಿದಲ್ತು (ಸೌ೨ಇ. XI-i. ೪೦-೨೩ ; ೨೬೨). **ಬರಿದು** : ೨. ಜಗಕ್ಕೆಸೆಯೆ ಶಿವಾಲಯ ವಂ ಮಾಡಿಸುವಂಗೆ ನೊಳಂಬವಟ್ಟಮೆಂಬುದು ಬರಿದೇ (ಸೌ೨ಇ. IX-i. ೪೯-೬೩ ; 1076 ?).

ಬಗ್ಗಬಱಿ, ಬಗ್ಗಬರಿ, ಬಚ್ಚಬಱಿ (ದ್ವಿರುಕ್ತಿ) : ಭರ್ಗನಂ ಕಾಣುತ್ತ ಬಗ್ಗಬಱಿಯಾದಳು (ಶಂಶ್ರೀ. ೦೯-೨೭) ; ಪುಡಿಪುಡಿಯಾಗಿ ಹಾಱುವವು ರಥಂ ಗಳು ಒಡಲು ಬಗ್ಗಬಱಿಯಾಗಿ ಕೆಡೆವುವು ಹಯ (ಜ್ಯಾಶಕ. ೩೦-೦೮) ; ಗಡಿ ವೊಯ್ಯಲಿನಿಂದ ತಾಂ ಬಗ್ಗಬರಿಯಂ ತರ್[ವಾ]ಡ ಕೌರವಾನುಜರ ಸದೆದಗ್ಗಳೆಯರಂ ಪೊಯ್ದು ದುಶ್ಶಾಸನಂ ರಥವ ಪರಿಸಿದಂ ಪಟುತರದೊಳು (ಅಕ್ಕಚ. ೮-೪-೭); ಕಳಕಳವಿದೇನೆಂದು ನೆರೆಯಂಗಡಿಯ ಮುಂದಣಂಗಡಿಯ ಪರದರಂ ಕಂಡು ಬೆಸಗೊಳ್ವ ಬಚ್ಚಬಱಿ[ಶಾಕಾಂ. ಪಚ್ಚುಪಸಿ]ಯೆಗ್ಗರುಮಂ . . . ನೋಡಿ (ಗದಾಯು. ೪-೪೪). **ಬಚ್ಚಬಱಿದಾಗು, ಬಚ್ಚಬರಿದಾಗು**= ಏನೂ ಇಲ್ಲದಂತಾಗು ; ಶೂನ್ಯವಾಗು : ಹೊಱಗೆಲ್ಲವ ತೊಱೆದೊಳಗೆ ನಿರ್ಮಲವಾಗಿ ಮೆಱೆವವರುಂಟು ಲೋಕದೊಳು ಹೊಱಗೆಲ್ಲವಿದ್ದೊಳ ಗೇನುವಿಲ್ಲನೆ ಬಚ್ಚಬಱಿದಾದರಾರು ನಿನ್ನಂತೆ (ಶಶಕ. ೨-೩೯) ; ದೇಶ ಕೋಶಗಳೆಲ್ಲಾ ಬಚ್ಚ ಬರಿದಾಗಿ, ಅವರೂ ಅವನಂತೆಯೇ ನಾಡಾಡಿಗಳಾಗುವ ದುರವಸ್ಥೆಗುರುಳ್ದಿರುವುದು ಪ್ರತ್ಯಕ್ಷಪ್ರಮಾಣವಾಗಿದೆ (ವಂಶ್ರಕ. ೦೯-೨೩). **ಬಚ್ಚಬಱಿಯ, ಬಚ್ಚಬರಿಯ** = ಕೇವಲವಾದ; ಅಷ್ಟುಮಾತ್ರದ : ಕೂಡಲಸಂಗಮದೇವಾ ನಿಮ್ಮ ಶರಣರು ಸ್ವತಂತ್ರರು ಎನ್ನ ಬಚ್ಚಬಱಿಯ ಬಸವನೆನಿಸಯ್ಯಾ (ಏಶಕ. ೬೦೩) ; ಮಾಡಿಸಿ ಸಂಗವಸು ನೋಡಿಸು ನಿನ್ನವರ ಕೊಡಿಸು ಬಚ್ಚಬರಿಯ ಭಕ್ತಿ ನಸಗಿನ್ನು ನೀಡು ಪಾದೋದಕ ಪ್ರಸಾದವ (ಸಿದ್ಧಕೃ. ೪೪-೩೦). **ಬಱಿದು ಮಾಡು** = ಖಾಲಿ ಮಾಡು; ಇಲ್ಲದಂತೆ ಮಾಡು : ಕುಡಿಪೇಟಿ ಲಪಾವ್ವಿದಯನೀಗಡೆ ತೋಳೊಳ್ ತುಳ್ಕಿ ಬಱಿದು ಮಾಟ್ಪೆನೊ ಪೇಟು (ಅಂಶ್ರ. ೧೨-೬೬). **ಬಱಿಯ, ಬರಿಯ**೧=೧. ಕೆಲಸಕ್ಕೆ ಬಾರದವನು ; ನಿರುಪಯುಕ್ತ : ವರಧರ್ಮ ಮನುತ್ಸವದಿಂ ಸ್ಥಿರಮನದಿಂ ಕೇಳಲೊಲ್ಲದಾತನೆ ಕಿಱಿಯಂ ವರಧರ್ಮ ಮನಱಿವಿಂದಂ ಸ್ಥಿರಮನನಾಗಱಿಯಲೊಲ್ಲನಾತನೆ ಬಱಿಯಂ (ಧರ್ಮಾಮೃ. ೨-೦೬೩). ೨. ಖಾಲಿಯಾದ ; ಬೋಳಾಗಿರುವ : ಬಱಿಯ ಗೋಡೆಯ ಮೇಲೆ ಬರೆದ ಚಿತ್ರವ ಕಂಡು ಮಱುಗಿ ಮಾಡುವುದೇನು (ಪೋಹಕ. ೪-೦೭). ೩. ವ್ಯರ್ಥವಾದ : ಬಱಿಯ ಕಾರ್ಪಣ್ಯದಲಿ ಮೇಘದ ಮಱಿಯ ಹೊಕ್ಕರೆ ರಾಹು ಬಿಡುವನೆ (ಕುಪ್ರಾದ್ರೋ. ೨-೪೪) ; ಬರಿಯ ಮಾತಿನಲ್ಲಿ ಕಾಲ ಕಳೆಯಬೇಡ (ರೂಢಿ). ೪. ಅಷ್ಟು ಮಾತ್ರದ ; ಕೇವಲ : ನವಮಾಸಂ ತೀವಿ ಬಱಿಯ ಮುಂಡವಂ ಬೆಸಲೆಯಾಗಿ (ಧರ್ಮಾಶ. ೯-೩೨ ವ) : ಬಱಿಯ ಬಾಯಿಯಲಿ ನಿನ್ನ ಹೊಗಳುವ ಭಟ್ಟನಾರು (ಸಂಶಶ. ೪-೨೦). [ದೇ.॥ ತಮಿ. ವಱಿತ್ತು]

**ಬಱಿದೂಱು** 'ಬಱುದೂಱು' ನೋ.

**ಬಱಿದೆ,** ಬರಿದೆ (ಅ). ವ್ಯರ್ಥವಾಗಿ ; ಸುಮ್ಮನೆ : ಆತನೊತ್ತಂಬದಿನಾಂ ತೊಡಾಂ ಬಱಿದೆ ತಪ್ಪಿದನೆಂದು ಕಿರೀಟಿ ತನ್ನ ಬಿಲ್ಲಂ ಬಿಸುಟರ್ದೊಡೆ (ಪಂಶಭಾ. ೦೦-೬೪); ಅವರಾರಾಪಗೆ ಕೆಲಗೆ ನಿಂದ ಜಿನಬಿಂಬದ ಮೇಲವರ್ದಿರೆ ವಠಿತಂದುದಜುಂದಮು ಪಾವನವಾಯ್ತು ಬಱಿದೆ ಪಾವನಮಾಯ್ತೇ (ಸವುಶ. ೨-೩೩); ನಂಬರು ನೆಚ್ಚರು ಬಱಿದೆ ಕರೆವರು (ಏಶಕ. ೦೦೬). **ಬರಿದೆ** : ಕೌತುಕಕೆ ಬೆಚ್ಚದಿರ್ ಬರಿದೆ (ಶಕ್ತ್ಯಾಂಗ. ೨೩-೬೪೨). [<ಬಱಿದು]

**ಬಱಿದೇರು** (ನಾ). ಯಾವ ಅಲಂಕಾರವಿಲ್ಲದ ಮತ್ತು ಯಾರೂ ಕುಳಿತಿಲ್ಲದ ಬರಿಯ ರಥ; ಬರಿದಾದ ತೇರು : ನಿನ್ನೊರ್ಳಿರ್ದಪುದು ಬಱಿದೇರೆನ್ನ ಕೈಯೊಳಿದೆ ಪನ್ನಗಾರಿಧ್ವಜ ಕಿರೀಟಗಳ್ವೆರಸಿರ್ದ ಸನ್ನುತ ಸ್ಯಂದನಂ ನೋಡು (ಕೈಶಿಭಾ. ೨೭-೪೩).

[ಬಱಿ (<ಬಱಿದು) + ತೇರು೨ (<ತೇರ್೨)]

**ಬಱಿದೊಱೆ** 'ಬಱುದೊಱೆ' ನೋ.

**ಬಱಿನುಡಿ** 'ಬಱುನುಡಿ' ನೋ.

**ಬಱಿಪಾತು** 'ಬಱುಪಾತು' ನೋ.

**ಬಱಿಮಾಯೆ** (ನಾ). ಕೇವಲ ಕಣ್ಕಟ್ಟು,–ತಂತ್ರ : ಎಲವೊ ಬಱಿಮಾಯೆ ಗಳನಸಗಿ ವೇಸದೊಳ್ತುರಗಪಂ ಕೊಂಡು ಬಾಂದಳಕಡರ್ದೊಡೆ ನಿನ್ನನು ಉಳುಹುವರೆ (ಕೈಶಿಭಾ. ೪-೧೩). [ಬಱಿ(<ಬಱಿದು)+ಮಾಯೆ]

**ಬಱಿಮುಳಿಸು** (ನಾ). ಹುಸಿ ಕೋಪ : ಪುರುಹು ಮುದ್ದು ವಿನೋದ ಠಕ್ಕುಪಚಾರ ಬಱಿಮುಳಿ[ಶಾಕಾಂ. ನಿ]ಸು . . . ಎಂಬೀ ಪರಿಪರಿಯ ಮಾಯೆಗಳ ಮಹಿಳಾಜನ ವಿರಾಜಿಸಿತು (ಕೂಶರಾ. ೦-೩-೬೨).

[ಬಱಿ (<ಬಱಿದು) + ಮುಳಿಸು೨]

**ಬಱಿಮೆಯ್,** ಬರಿಮೈ, ಬಱಿಮೈ (ನಾ). ೧. ಬತ್ತಲೆ ದೇಹ ; ನಗ್ನ ಶರೀರ: ಎಲೆಗೇ ನೀನೆಲ್ಲರೊಂವಂದದಿನಿರೆ ಬಱಿಮಯ್ಯೊಂದಮಿರ್ಪಂ ತುಟಕ್ಕಂ (ಶಂರ್ಶ್ರ. ೬-೬೩). **ಬರಿಮೈ** : ೧. ಬರಿಮೈ ತಣ್ಣಗೆ, ಮನದಲಿ ಬಿಸಿ ಹಗೆ (ಶಂಕಿಶ. ೧೩೨) ; ಕಿಡಿಗೇಡಿ ಮಗು ! ಬರಿಮೈಯಿಂದ ಮಂಜಿನಲ್ಲಿ ತಿರುಗುತ್ತಿದೆ ! (ಎಚಿ. ೦೭). **ಬಱಿಮೈ** : ೨. ಅಲಂಕಾರರಹಿತವಾದ ಮೈ,—ಶರೀರ : ಕೃಷ್ಣನಾಮಸ್ಮರಣೆ ಮಾಡುತ ಮರುತಸುತನಾ ಕರ ವಿಡಿದು ಬಱಿಗಾಲು ಬಱಿಮೈಯಿಂದ ಬರುತಿರಲು (ಸಂಶಶ. ೨೦-೦೦೩).

[ಬಱಿ (<ಬಱಿದು) + ಮೆಯ್೨]

**ಬಱಿಮೈ** 'ಬಱಿಮೆಯ್' ನೋ.

**ಬಱಿಯಾಟ,** ಬರಿಯಾಟ (ನಾ). ಕೇವಲ ಆಟ,–ಕ್ರೀಡೆ : ಮುನ್ನ ಬಱಿಯಾಟಂಗಳಂ ಬೆಳಗನ್ನ ಕಾಡಿದಡೆನ್ನ ಜಠರವದಿನ್ನು ತುಂಬದು (ಬಸಕೃ. ೦೩-೨೪). **ಬರಿಯಾಟ** : ಯುವಕರ್ಗೆ ಪಯಣವೇದರೆ ಏನು ? ಬರಿ ಯಾಟವ್ವೆಸೆ ! (ಶಂರ್ಶ್ರಸ. ೬೭). [ಬಱಿ (<ಬಱಿದು) + ಆಟ]

**ಬಱಿವಾತು** 'ಬಱುವಾತು' ನೋ.

**ಬಱಿವಾತುಗಾಱ** (ನಾ). ವ್ಯರ್ಥವಾದ ಮಾತುಗಳನ್ನಾಡುವವನು : ಪೊಱಮಿಂಚುಗೈವನಂ ಬಱಿವಾತುಗಾಱನಂ . . . ತೊಱೆಯದುದೆಗ್ಗತನ ವಲ್ಲೇ (ರಾಜಶೇ. ೦೦-೬೨). [ಬಱಿವಾತು (<ಬಱುವಾತು) + —ಕಾಱ]

**ಬಱಿವಾಯ್** 'ಬಱುವಾಯ್' ನೋ.

**ಬಱಿಸೂಱೆ** 'ಬಱುಸೂಱೆ' ನೋ.

**ಬಱಿಸೂಱೆಗೈ** (ಕ್ರಿ). ವ್ಯರ್ಥವಾಗಿ ಸೂರೆಮಾಡು; ಅನ್ಯಾಯವಾಗಿ ಹಾಳುಮಾಡು : ಇಟ್ಟ ಮರಂಗಳಂ ಒಟ್ಟಿದ ಕಲ್ಗಳಂ ದೈವಮೆಂದು ಪೆಸರಿಟ್ಟು ಕೊಂಡಾಡಿ ವರಮಿಗಾಗುವೆಂಬಾಸೆಯಿಂ ತಮ್ಮೊಳರ್ಥಮಂ ಬಱಿಸೂಱೆಗೈವರ್ (ಪದ್ಮಶಾ. II, ೮೩೦ ವ).

[ಬಱಿಸೂಱೆ (< ಬಱುಸೂಱೆ) + ಗೈ (< ಕೆಯ್೧)]

**ಬಱಿಸಜ್ಜೆ** (ನಾ). ಖಾಲಿಯಿರುವ ಕರಡಿಗೆ : ಗಳದ ಬಱುಸಜ್ಜೆಯಲಿ ಲಿಂಗವು ನೆಲಸಿದುದು (ಬಸವ. ೩೯ ಸೂಕತ). [ಬಱಿ (<ಬಱುದು) + ಸಜ್ಜೆ]

**ಬಱಿಹುಂಡ** (ನಾ). ನಿರುಪಯುಕ್ತನಾದವನು; ನಿಷ್ಪ್ರಯೋಜಕ : ಬಱಿಹುಂಡನ ಗಡಿವಾಡದಲ್ಲಿರಿಸಿದಂತೆ ಒಡೆಯರಿಲ್ಲದ ಮನೆಯ ತುಡುಗುಣಿ ಹೊಕ್ಕು ಗಡಬಡಿಯ ಮಾಡಿದಂತೆ (ಸಕವ. I, ೨೦೫-೭೧೦). [ಬಱಿ(<ಬಱುದು) + ಹುಂಡ]

**ಬಱು**, ಬರಿ$_2$, ಬರು$_2$, ಬಱಿ (ಸಪೂರೂ) 'ಬಱುದು' ಎಂಬ ನಾಮವಾಚಕಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬಱುಗಾಲು', 'ಬಱುಗಿವಿ' ಪರಾ. ಬರಿ$_2$ : 'ಬರಿಗಾಲು', 'ಬರಿಮನ' ಪರಾ. ಬರು$_2$ : 'ಬರುಗನಸು', 'ಬರುಮರುಕ' ಪರಾ. ಬಱಿ : 'ಬಱಿಗಾಲು', 'ಬಱಿದಲೆ' ಪರಾ. [<ಬಱುದು]

**ಬಱುಂಟು**, ಬೆರಟು, ಬೆಱಂಟು, ಬೆಱಟು (ಕ್ರಿ). ೧. (ಕಾಲ್ಬೆರಳಿಂ ಅಥವಾ ಕೈಬೆರಳಿನಿಂದ) ಕೆರೆ ; ಗೆಬರು; ಗೀರು : ಮೃತ್ತಿಕಾಹಸ್ತಿ . . . ಭೂಮಂಡಳಮನುಂಡಿಗೆ ಸಾಧ್ಯಂ ಮಾಡಿ ಬಡಬಾಮಂದಱುವು ಮಂದದಿಂ ದಕ್ಷಿಣಾವಾದದಿಂ ಮೇದಿನಿಯಂ ಬಱುಂಟುತ್ತುಂ (ಶಾಕ್ಯಕೌ. ೯-೩೪ ಪ). ೨. ಕೆದಕು ; ಬೆದಕು : ಪೇಟಲ್ಬಾರದ ಮನದೊಳ್ ಪೊಱಲ್ವಾರದ ಬಱುಂಟ[ಪಾಠಾಂ. ಟಿ] ಕೇಳ್ವವರಾರುಂ ಬಾಱಲ್ವಾರದ ಕನಸಂ . . . ಕಂಸಂ ಕಂಡಂ (ಅರ್ಜ. ೬-೬೬); ಪೊಗೆಯಡಂಗೆಗವಿದ ದೂಮೆಯಂತಿರೆ ಬಱುಂಟಿದೊಡೆ ಬಸಿಯನುಗುಟ್ಟ ಕಪ್ಪುರದ ನುಣ್ಣಲಗುಲಿಯುಂ (ಪಂಪಭಾ. ೩-೬೩ ಪ). ೩. ಚಿವುಟು ; ಜಿಗುಟು : ತಂದೆಯ ಮಱಿಲುಂದಿದಲ್ಲಿಗೆಪೋಗಿ ಬಱುಂಟಿ[ಪಾಠಾಂ. ಬೆಱಂಟಿ] ಎಟ್ಟಿ ಪೊಟ್ಟಳಿಗೆಯಂ ತಂದೆಗೆ ಕೊಟ್ಟಳ್ (ವಡ್ಡಾರಾ. ೦೭-೨೩). ೪. ಕೆಣಕು ; ಕೆರಳಿಸು : ಕಾಮನ ತೋಳೋರ್ವರ ರತಿ ಶಂಭುಕುಮಾರನುಮಂ ಬಱುಂಟಲೇ (ಅಜಿತಪು. ೦೦-೩೮). **ಬೆರಟು** : ೧. ಬೆರಟಿದೊಡಂಗುಟದಿಂ ಪೊನ್ನೊರೆದೋರ್ವರ್ವರೆ ಕಡಲ್ಗೆ ಪಡಿಯೆಂಬಿನೆಗಂ ಪಂಕಾಲೆತ್ತಂ ಪರ್ವಿರೆ (ರಕಚ. ೦-೪); ಐದು ಕುದುರೆಗಳು . . . ನೆಲವನ್ನು ಮುಂಗಾಲಿನಿಂದ ಬೆರಟುತ್ತಿದ್ದುವು (ಕೀಚಕಾಂ. ೨೦). **ಬೆಱಂಟು** : ೧. ಭೂಭಾಗ ಮನತ್ಯುತ್ಸಾಹದಿಂ ದಕ್ಷಿಣ ಖುರದೆ ಬೆಱಂಟಿತ್ತು ದಿವ್ಯಾಶ್ವಮಾಗಳ್ (ಅನಂತಪು. ೪೬೩); ಉಗುರಿನಿಂದಂಟಿ ಬೆಱಂಟಿಯುಂಜನಮದಕ್ಕುಂ . . . ಶಾನಿದೆಂಬಂತಿರೀ ಜಗದೊಳ್ ಕಣ್ಗೆ ವಿಚಿತ್ರಮಾಗೆ ನೆಟಿ ದಟ್ಟಮಿಸ್ತ್ರಿನಿತ್ತಂ ತಮಂ (ಗಿರಿಜಾ. ೪-೬೬); ಅಂಗದಿಬ್ಬದಿಗಳನುಬಱುಂಗಿ ಬೆಱಂಟಿ . . . ಪಲ್ಗಿರಿದು ಗೋಲಾಂಗೂಲಂ ಪುರ್ಬಿಕ್ಕಿ ನಗಿಸುವವಲ್ಲಿ ವಟುಕಪಳಿಲ (ಪುಲಿಕೇ. ೩-೦೬). **ಬೆಱಟು** : ೧. ನೆಲನ ತಟ್ಟ ಬೆಱಟುವ ಪದಂ ನೆಗೆದಲ್ಲೆ ಬೆಂಗರ್ದರ್ ದಾಲದಿಂ . . . ಐಳುಂಕಿಟ್ಟು ಹರಿಯಿತ್ತು (ಪಶಾಕ. ೩-೯೦); ಕಾಲಲ್ಲಿ ನೆಲನಂ ಬೆಱಟುತ . . . ಬಾಲಪನೆತ್ತಿ ಬೀಸುತ್ತ (ಅಕಪು. ೩೨-೨೩); ಕಯ್ಯುಡಿಯನೊಳ್ಪುಗುರಿಂ ಬೆಱಟುತ್ತ ಬೆಳ್ಮೃಗಂ ಸಮನಿಸೆ ಕಾಲ್ಬೆರಲ್ ಬರೆಯೆ ಭೂಮಿಯನಿರ್ದಳದೊಂದು ಚೆಲ್ವಿನಿಂ (ರಾಜ. ೪-೦೮೩). ೩. ಕೇರಿಯೊಳ್ಪಮಸೆಮಗೆ ಬೆಱಟುತ ಕೆರಟುತಂ ಸನ್ನೆಯಿಂ ಮುಗುಳ್ನೆಗುವರು (ಶಾಂತಿ. ೬-೬೩). ೪. ತಿರುಗಿ ನೋಡಿದ ಬೇತಾಳನ ಬೆಱಟ ಪಲ್ಮೊರೆದೌಡುಗರ್ಚಿಯುಂಜಿಸುತ ತರಹರದಿಂದ ನಿಟ್ಟುಸಿರ್ದನಾ ಭೂವರನು (ಶ್ರೀಕಾಂ. ೬-೯೬). ೫. ಕೀಳು ; ಎಬ್ಬು : ಬೆರಲೊಂದು ಬೊಗ್ಗಿಸುತ್ತವನ ಭಾಳಾಕ್ಷಿಯಂ ಬೆಱಟ ತೆಗವುತ ಬಾಯ್ಗೆ ಹಾಕಿಕೊಳಲು (ಹರಿಶ್ಚಂ. ೬-೨-೪೭) ; ತನ್ನ ಮುಂದೆ ಮಸಣಿಯೆಯೆನುತ ಪಣೆಗಣ್ಣ ತೆಗೆಯ ಬೆರಳಿಂದದಂ ಬೆಱಟ ನುಂಗಲ್ಕಹುಂಕರಿಸಿರ್ದನೆಂದು ಪೊಗಳಲ್ ಮಸಣಿಯಿಂದೆ ಬಳಿಕಾತಂಗೆ ಪಣೆಗಣ್ಣನುಗುಳಿಸಿದನು (ಶಂಕ. ೩೩-೩೩). 'ಪರಡ್ಮು' ಪರಾ.

[ದೇ.೩ ತಮಿ. ವಱಣ್ಣು, ವಱುಕು ; ತೆಲು. ಬಱಟು, ಬರಟು, ಬರಕು]

**ಬಱುಕಟೆ**, ಬಕ್ಕಟ, ಬರ್ಕಟ (ನಾ). ನಿಷ್ಪ್ರಯೋಜಕವಾದುದು ; ನಿರರ್ಥಕವಾದುದು : ತ್ರಿವಿಧದ ಹುಱುಯಲ್ಲಿ ಅಡಿಯನಿಕ್ಕಿ ಅಡೆಗೊಂಡಿದಂತೆ ಬದ್ದಿರುತ್ತ ಮಾತ್ರಱಾಕೆಯ ಮಾತನಾಡಿದಡೆ ಅದು ಬಱುಕಟೆ [ಪಾಠಾಂ. ಟಿ]ಯೆಂಬರು (ಚಾಟೂಕ್ತಿ. ೪. ೩೩೬-೦೬); ಇಂತೀ ಬಱುಬರ ಅರ್ಚನೆ ಹುರಿಯ ಬೊಂಬೆಯಂತ ಇಂತಿ: ಅಱುಗುಱುಗಳ ಪೂಜೆ ಬಱುಕಟೆಯಂತೆ (ಗುಪ್ತಭಂ. ೪. ೨೨೨-೩೩); ಬೆಳಗದ ಕಂಚು ತೊಳೆಯದ ಕಂಭ ವಕ್ಕ ಕಳೆಯದ ಫಲ ನೆಱೆಯರಿಯದವನ ಸತ್ಕ್ರಿಯೆ ಮಾಟ ಬಱುಕಟೆ ಹೋಯಿತ್ತು (ಸಕಲ. ೦೨೯-೬೩೨). **ಬಕ್ಕಟ** : ಆತ್ಮಜರಾಶಿ ಬಕ್ಕಟಪಕ್ಕು ದೆಂಬಳವಳಗೆಗೊಳಲಾಗವನನಾಯಕನು (ಅನಂತಪು. ೨೬-೬೬). **ಬರ್ಕಟ** : 'ಬರ್ಕಟಬಯಲ್' ಪರಾ. [ಬಱು (<ಬಱುದು) + ?]

**ಬಱುಕಾಯ** (ನಾ). [ವೀರಶೈ] ಇಷ್ಟಲಿಂಗವನ್ನು ಧರಿಸಿದವನು : ಹಲವು ಕೊಂಬಿಂಗೆ ಹಾಯಬೇಡ ಬಱುಕಾಯಕ್ಕೆ ನೀಡಬೇಡ (ಚನ್ನ. ೬೨೨); ಅಂಗದ ಮೇಲೆ ಲಿಂಗವುಳ್ಳವರ ಮನೆಯ ಹೊಗಿಸಲಾಗದು ಬಱು[ಪಾಠಾಂ. ಬಱಿಯ]ಕಾಯರಿಗೆ ನೀಡಲಾಗದು (ಚನ್ನಬ. ೪. ೬೩೯-೦೪೩೦) ; ಹುಸಿ ಡಂಭಕ ದುರ್ಮೂರ್ತಿ ಬಱುಕಾಯನಿಗೆ ಅಖಂಡೇಶ್ವರ ಎಂತು ಮೆಚ್ಚುವನು (ಅಖಂಡೇ. ೯೬-೦೩). [ಬಱು ( < ಬಱುದು) + ಕಾಯ ]

**ಬಱುಗ** (ನಾ). ಹಣ ಇಲ್ಲದವನು ; ಬಡವ ; ದರಿದ್ರ : ಮಾತ್ರವನ ವಿತ್ತದೊಳಗಿನಿತುಳಿಯದಂತೆಲ್ಲವಂ ಕವರ್ದುಕೊಂಡು ಬಱುಗನಂ ಮಾಡಿ (ಕೀರವು. ೬-೩೪). [ಬಱು ( < ಬಱುದು) + — ಗ$_2$]

**ಬಱುಗಯ್** 'ಬಱುಗೆಯ್' ನೋ.

**ಬಱುಗಾಲು**, ಬರಿಗಾಲು, ಬರುಗಾಲು, ಬಱಿಗಾಲು (ನಾ). ಪಾದರಕ್ಷೆಗಳನ್ನು ಧರಿಸದ ಕಾಲು ; ಜೋಡು ಮೆಟ್ಟದಿರುವ ಕಾಲು ; ಬರಿಯ ಕಾಲು : ದಂತಿಯಿಂದಿಳಿದು ನಡೆದಱಿಯದವ ಬಱುಗಾಲೊಳೆ ತಡಿಯನಿಡುವೆ (ಜೈಮಿ. ೯-೬). **ಬರಿಗಾಲು** : ಕಾಲೇಜಿಗೆ ಬರಲು ಬರಿಗಾಲಿನಲ್ಲಿ ಮೈಲುಮೈಲಿಗಳ ದೂರ ನಡಿಗೆ (ರಂಗಪ. ೦೨೩); ಎಂಟು ವರುಷದ ಮಗ ಹೊಂಟಾನ ಬರಿಗಾಲ ಬಂಟರಂಗ ಗಿರಿಯ ಏರುತ (ಸಿದ್ಧಕೃ. ೩-೩೨): ಈ ಮುಳ್ಳುನೆಲದ ಮೇಲೆ ಬರಿಗಾಲಿನಲ್ಲಿ ಏಕೆ ನಡೆಯುತ್ತೀಯ (ಶುಕ್ಯಭು. ೬೬). **ಬರುಗಾಲು** : ಕೊಳೆದಪ್ಪಲಿಯನ್ನು ಹೊತ್ತು ಬರುಗಾಲಿನ ಹೆಂಗಸರಿಬ್ಬರು . . . ಹೊರಗೆ ಬಂದರು (ಕೃಪಕು. ೬೪). **ಬಱಿಗಾಲು** : ಕೃಷ್ಣನಾಮಸ್ಮರಣೆಮಾಡುತ ಮರುತಸುತನಾ ಕರವಿಡಿದು ಬಱುಗಾಲು ಬಱಿಮೈಯಿಂದ ಬರುತಿರಲು (ಸಂಕಪ. ೨೦-೦೦೪); ಕರೆಯದಲೆ ಬರುವವನ ಬರೆಯದಲೆ ಓದುವನ ಬಱುಗಾಲಿನಿಂದ ನಡೆವವನ ಕರೆತಂದು ಕೆರದಿ ಹೊಡೆಯೆಂದ (ಸರ್ವಜ್ಞ. ೦೫೦೦).

[ ಬಱು (<ಬಱುದು) + ಕಾಲು$_1$ (<ಕಾಲ್$_1$) ]

**ಬಱುಗಿವಿ** (ನಾ). (ಒಡವೆಯನ್ನು ಧರಿಸದಿರುವ) ಕಿವಿ : ಬರಿದಾದ ಕಿವಿ : ಬೋಳಾದ ಕಿವಿ : ಹಾರಪದಕವಿದ್ದು ಬಱುಗಿವಿಯಾದ ಶೃಂಗಾರ ರಮ್ಯವೆ ಹೇಳೆಂದ (ಭರತ. ೩೬-೪೦). [ಬಱು (<ಬಱುದು) + ಕಿವಿ$_2$]

**ಬಱುಗುತ್ತ** (ನಾ). ಬರಿಯ ರೋಗ ; ಸದಾ ಇರುವ ರೋಗ : ಕಟಕಿ ಹುರುಡು ಮಾಡಲೆ . . . ಕಲಹ ಸಟೆ ಬಱುಗುತ್ತಗಳನು ಮಾಡಿ ಬೆಲೆವೆಣ್ಗೆ ವಿಟರು ಸೋಲುವರೆ ಧನವನು (ಗುರುರಾ. ೦-೦೦೬); ಕೊಬಟಾಟ ಹೋರಟೆ ಕಲಹ ಬಱುಗುತ್ತ ಬಯಲೊಲ್ಮೆಗಳ ಮಾಡಿ[ಪಾಠಾಂ. ಬಱುಗುತ್ತು ಬಯಲೊಲ್ಮೆಱಗಳ ಮಾಡಿ] ಬೆಲೆವೆಣ್ಗೆ ತೆಱುವರ ಧನವ ಬಲ್ಲವರು (ರಾಜಶೇಖ. ೨೬-೬೬). [ಬಱು (<ಬಱುದು) + ಕುತ್ತ]

**ಬಱುಗೊಟ್ಟ್**. ಬಱಿಗೊಟ್ಟ್ (ನಾ). (ಸಾರು ಅಥವಾ ಮಜ್ಜಿಗೆ ಬೆರಸದ) ಅನ್ನ ; ಬರಿಯ ಅನ್ನ : ಬಱು[ಪಾಠಾಂ. ಱಿ] ಗೂಟನುಂಜ

ಸಿಪ್ಪುಗಡಿಯುಂ ಕಳಿಯುಂ ಕೂಟನುಂಬ ಆಯಂಬಿಲವುಮೆಂದಿವಂ ತನ್ನ ಶಕ್ತಿಯಿಂ ಮಱಸದಾವುದಂ ಮಾಡಿದೊಡಂ ಪ್ರೋಷಧೋಪವಾಸಮಂ ಬೆರಡನೆಯ ಶಿಕ್ಷಾವ್ರತಮಕ್ಕುಂ (ಕರ್ಣಾಕ. ೩೦೬). **ಬಱಿಗೂಟಿಟ್** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ಬಱು (<ಬಱಿದು) + ಕೊಟ್ಟ್$_1$]

**ಬಱುಗೆಂಡ**, ಬಱಿಗೆಂಡ (ನಾ). ಉರಿಯಿಲ್ಲದ ಕೆಂಡ; ಬರಿಯ ಕೆಂಡ : ಬಱು[ಪಾಠಾಂ.ಱಿ]ಗೆಂಡದೊಳು ಸುಟ್ಟಡಗು ಬೂದಿಕೆಯೆನಿಕ್ಕು (ಜಂಗಣ. ೬೯-೪). **ಬಱಿಗೆಂಡ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಬಱು (<ಬಱಿದು) + ಕೆಂಡ]

**ಬಱುಗೆಯ್**$_1$, ಬರಿಗ್ಗೆ$_1$, ಬಱಿಕೆಯ್, ಬಱಿಕ್ಕೆ, ಬಱಿಗೆಯ್, ಬಱಿಗ್ಗೆ$_1$ ಬಱುಗ್ಗೆ (ಕ್ರಿ). ೧. ಇಲ್ಲದಂತೆ ಮಾಡು; ನಾಶಮಾಡು; ಸಂಹರಿಸು: ಅಲಘುಸಾಹಸಿ ಹೊಡೆದ ಗಾಯಕೆ ಖಳರ ಮುಂಡಗಳಾಡುತಿ ರ್ದವು ಜಲವ ಬಱುಗೆಯ್ದು (ಕೌಶಿಕ. ೨೮-೯೩). **ಬರಿಗ್ಗೆ$_1$** : ೨. ಬರಿದು ಗೊಳಿಸು ; ನಿಷ್ಫಲಗೊಳಿಸು : ಬರಿಗ್ಗೆಯೆ ನಾ ನಿನ್ನ ಬಯಕೆಯನು (ಕುಮಾರವ್ಯಾ. ೧೨೪). **ಬಱಿಕೆಯ್** : ೧. ಮಱಿದೊಱಗಿರ್ದ ಕಾಕಬಲಮಲ್ಲವಂ ಬಱಿಕೆಯ್ವ (ಕಂಕಕಂ. ೨೦೨-೨೦) : ಅದಟರನಾನ್ನು ಕೊಲ್ವುದಟನಣ್ಮದರಂ ಬಱಿಕೆಯ್ವ . . . ನಿತ್ತರಿಪ ಕಾದುವ ಮಯ್ಗಲಿ ಯಾದ್ದಗರಿತ್ರಿಯೊಳ್ (ಶಾಸ್ತ್ರ. XX, ೬೯-೨೪ ; 1112). ೨. ಬಾಯ್ಬಿ ಟಿಯ ಮಾತುಗಳಂ ಬಱಿಕೆಯ್ವ ಚರ್ಚೆಯಲ್ಲ (ಅಪಂಪು. ೦-೩೬). **ಬಱಿಕ್ಕೆ** : ೧. ಒಂದೆರಡೆಂದು ಸಲುಗೆಗೆ ಸಲಿಸಿ ಬಂದೈನೂಱ ಬಱಿಕ್ಕೆದು (ಜಂಬೂ. ೪-೬೮); ಹುಲಬಲವ ಬಱಿಕ್ಕೆವುತಿರ್ದುದು ಹರಿಜದತಿಬಲ ಖಳಕದಂಬಕ ಮಪವಾಸಮಾರದಲಿ (ಕೊರಂ. ೬-೩೦-೬). ೨. ಮಾರುತಾಸುರನ ಭಾರ ಣೆಯ ಬಱಿಕ್ಕೆವ ವೀರರದಾರು (ಏಕಾಗ. ೨-೩-೦೮). **ಬಱಿಗೆಯ್** : ೧. ತಲೆ ನಡುಗುತಿರ್ದುದೆನ್ನದ ತರದಿಂ ಬಱಿಗೆಯ್ಯುತ್ತಿರ್ದ ಮಾಯ್ದುಱಗುಲಿ ಕರ್ವೇಡನಲ್ಲಿ ಮುದುಗಿಳಿಗಳುಮಂ (ಕಾದಂಪೂ. ೦೬೪) ; ಪೊಯ್ಯು ಪೊಯ್ಯು ಭರದಿಂ ಬಱಿಗೆಯ್ದನಭೇದ್ಯವಿಕ್ರಮಂ (ಗಂಗಂ. ೩೩-೦೬). **ಬಱಿಗ್ಗೆ$_1$** : ೧. ಎಲವೊ ನಿನ್ನಯ ಬಲವನೆಲ್ಲವ ತುಳಿದು ಬಱಿಗ್ಗೆವನ್ನಬರ ನೀಸುಳಿದು ನೋಡಾ (ಸಂಕಕ. ೬-೦೦೦) ; ಚಾರಿಪರಿದನು . . . ಪಡೆಯ ಬಱಿಗ್ಗೆದು (ಕೌಶಿಕ. ೨೨-೬). **ಬಱುಗ್ಗೆ** : ೧. ಥಟ್ಟುಗೆಡಹಿದನೇನನೆಂಬೆನು ಪಡೆಯ ಬಱುಗ್ಗೆದ (ಕೌಶಿಕ. ೩೩-೦೩). [ಬಱು (<ಬಱಿದು) + ಕೆಯ್$_1$]

**ಬಱುಗೆಯ್$_2$**, ಬರಿಕ್ಕೆ$_1$, ಬರಿಗ್ಗೆ$_2$, ಬರುಗೆಯ್, ಬಱಿಕಯ್, ಬಱಿಗ್ಗೆ$_2$, ಬಱುಗೆಯ್ (ನಾ). ಆಹಾರ, ಹಣ, ಹಣ್ಣು ಹಂಪಲು ಆಯುಧ ಇತ್ಯಾದಿಗಳನ್ನು ಹೊಂದಿರದ ಕೈ; ಖಾಲಿಕೈ : ಬರಿದಾದ ಹಸ್ತ; ರಿಕ್ತಹಸ್ತ . ವಿಜಯನುಪ್ಪಿರೆ ಸರ್ವಾಂಗಂ ಬಱುಗೆಯ್ಯಿಂ ಬಯಲ ನೀಗುತ್ತಿರೆ (ಕಬ್ಬಿಗ. ೨-೦). **ಬರಿಕ್ಕೆ$_1$** : ತೊಳಲಿ ಶೋಧಿಸಿ ಬಳಲಿ ಬಂದು ಬರಿಕ್ಕೆಯವಾದುದೆನುತ ಚಿಂತಿಸಿ (ವಂಕಾಠ. ೩-೩-೦). **ಬರಿಗ್ಗೆ$_2$**: ಇದಕ್ಕೆ ಬಲಿಬಿದ್ದು ಅನೇಕರು ಬರಿಗ್ಗೆಯವಾಗಿದ್ದಾರೆ (ಏಕಕ್ಕ. ೨೨): ಹೀಗೆ ಬರಿಗ್ಗೆಲಿ ಮರಳುವುದು ನನಗೆ ಎಳ್ಳಷ್ಟೂ ಸರಿ ಕಾಣುವುದಿಲ್ಲ (ಜಂಗಾಹ. ೩೪) : ಆನಂದ ಇತ್ತೀಚೆಗೆ ಬರಿಗ್ಗೆಯಿಂದ ಮನೆಗೆ ಹೋಗಲಾರದೆ ಬಾರಿಬಾರಿಗೂ ನೊಂದುಕೊಳ್ಳುತ್ತಾನೆ (ಕೇಷೂಕ. ೨). **ಬರುಗೆಯ್** : 'ದೇಹಿ' ಎಂದು ಸೇರೆಗಯ್ಯನ್ನೆತ್ತಿದ ಆರೂ . . . ಬರುಗಯ್ಯಿಂದ ಹಿಂದಿ ರುಗಿದರಿಲ್ಲ (ಚಿಕ್ಕಿಕ. ೭೩-೨). **ಬಱಿಕಯ್** : ಮನಸಿಜನಾತ್ಮಜ ಬಱಿ ಕಯ್ಯೊಳಿರ್ಪುದು ಸಮುಮತವಲ್ಲ (ಕೋಚಕ. ೩೩-೬೦). **ಬಱಿಗ್ಗೆ$_2$** : ಸಂಬಂಧಿ ಗಳಪ್ಪರಲ್ಲಿಗೆ ಬಱಿಗ್ಗೆಯಿಂ ಪೋಗಲಾಗದೆಂಬರ್ (ಕಂಕಕಂ. ೨೬೦-೨); ಕೆಟಿನಂ ಕಾಣದ ಬಾಟ್ಕೆ . . . ದುರ್ಮಾರ್ಗರೊಳ್ ಸ್ನೇಹಮುಂ ಬಱಿ ಗ್ಗೆಯುಂ ಸುಱಿಪಂತೆತ್ತೆ (ಸೂಕ್ತಿಸು. ೦೭); ಬರುತೇನು ತಂದೆ ಬಱಿಗ್ಗೆಲಿ ಬಂದೆ (ಪ್ರಿಂಡ. ೨-೩೩-೧). **ಬಱುಗಯ್** : ಬಱುಗಯ್ಯೊಳಿ ಗುರ್ದಯುಂ ಪುದುಕುನೀರೊಳರ್ದೆಯುಂ (ಅಪು. ೦೦-೦೦ ೫).

**ಬರಿಕ್ಕೆಯಲ್ಲಿ ಮೊಳಹಾಕು**, ಬರಿಗ್ಗೆಯಲ್ಲಿ ಮೊಳಹಾಕು = ಹಣವಿಲ್ಲದೆ ಖರ್ಚಿಗೆ ಯೋಜನೆ ಹಾಕು : ಬರಿಕ್ಕೆಯಲ್ಲಿ ಮೊಳಹಾಕಿದರೆ ಪುರುಷಾರ್ಥ ವೇನಿದೆ (ಬಾಗ್ಗೆ. ೦೦೩) ; ಅವುಗಳನ್ನೆಲ್ಲ ಕಂಡುಹಿಡಿದು ಕನ್ನಡಿಗರಿ ಗೊಟ್ಟಿಸುವ ಶಕ್ತಿಯಾಗಲಿ, ಬರಿಗ್ಗೆಯಲ್ಲಿ ಮೊಳಹಾಕುವ ನಮ್ಮಂಥ ವ್ಯಕ್ತಿ ಗಳಿಗೆಲ್ಲಿಂದ ಬರಬೇಕು (ಪಾಡೋಕ. ೧೯೬). **ಬರಿಗ್ಗೆಲಿ ಬರು** = ಕೆಲಸವಾಗದೆ ಹಿಂತಿರುಗು : ನಿಷ್ಫಲನಾಗಿ ಹಿಂದಿರುಗು : ಹೋಗಿ ಬಂದವರು ಬರಿಗ್ಗೆಲಿ ಬಂದರು (ಕುಕ್ಕಿಕ. ೬೯). **ಬಱಿಗ್ಗೆಯವರು** = ಹಣವಿಲ್ಲದವರು; ದರಿದ್ರರು : ನಾವು ಬಱಿಗ್ಗೆಯವರು ಬರಲಿಮಗಾವುದಲ್ಲಿಯ ಕೆಲಸ (ಕುಪ್ಪಾಣ. ೦-೯೩). [ಬಱು (<ಬಱಿದು) + ಕೆಯ್$_2$]

**ಬಱುಗೆಱೆ**[3], ಬರಿಗೆರೆ, ಬಱಿಗೆಱೆ[3] (ನಾ). ನೀರಿಲ್ಲದೆ ಖಾಲಿಯಾಗಿರುವ ಕೆರೆ : ಕೆಱೆಯು ಬಱುಗೆಱೆ[3]ಯಾಗಲೀಕ್ಷಿಸಿ (ಪಾರ್ಶ್ವಚ. ೫೦-೩೬). **ಬರಿಗೆರೆ** : ಬರಿಗೆರೆಯೊಳಗೊಂದು ಬಕಪಕ್ಷಿ ಕುಳಿತಂತೆ (ಸಾಂಗತ್ಯ. ೬-೦೩೪). **ಬಱಿಗೆಱೆ[3]**: ಕೆಱೆ[3] ನೆಱೆ[3] ನೀರ್ ತವುತರ ಬಱಿ[3][ಪಾಠಾಂ. ಱು]ಗೆಱೆ[3]ಯಾದುವು . . . ಕಾಲವಶವುದೇನಾಗಿಸದೋ (ಅಗಂ. ೦೬-೬೪). [ಬಱು (< ಬಱಿದು)+ಕೆಱೆ[3]]

**ಬಱುಗ್ಗೆ** 'ಬಱುಗೆಯ್$_1$' ನೋ.

**ಬಱುಗೊಂದೆ** (ನಾ). ಕ್ಷುಲ್ಲಕವಾದ ಪಶು; ಹೀನಜಂತು : ಇನ್ನೆಬರಂ ಶವುಗೆ ಜಗಂ ತೋಡಾಗದೆಂದು ಸೂರ್ಕಿನರ್ಕಿ ಬಱುಗೊಂದೆ ಪಂದೆರಾಯರಂ ಕಾಡಿ ಬೇಡಿ ಕೂಡಿದ ಜಾಳಿಗೆಪೊನ್ನಂ ಕೋಳುಗೊಂಬೆಂ (ರಾಜಶೇಕ್ಕ. ೦೨೬-೨೬). [ಬಱು (<ಬಱಿದು) + ಗೊಂದ್ಯ]

**ಬಱುಜಗಳ** (ನಾ). ವ್ಯರ್ಥವಾದ ಕಲಹ; ಒಣಗುದ್ದಾಟ: ಅಕಟಕಟ ಬಱುಜಗಳಗೋಪ ಜಾಣೆಂತಿವಳಾ (ಕಳಾ. ೬-೨೬೦).

[ಬಱು (< ಬಱಿದು) + ಜಗಳ (< ಜಗಲು)]

**ಬಱುಜೋಗಿ** (ನಾ). ನಿಷ್ಪ್ರಯೋಜಕನಾದ ಜೋಗಿ : ಪೋ ಪೋಗಿರ! ಬೂದಿಯ ಬಱುಜೋಗಿಯನುಱುದತ್ತಂ (ರಾಜಶೇಕ್ಕ. ೬೧ ೨೬).

[ಬಱು (< ಬಱಿದು) + ಜೋಗಿ$_1$]

**ಬಱುದಲೆ**, ಬರಿದಲೆ, ಬರುದಲೆ, ಬಱಿದಲೆ (ನಾ). ೧. ಬೋಳುದಲೆ ಯುಳ್ಳವನು ; ಲೋಚುಮಾಡಿಕೊಂಡ ತಲೆಯುಳ್ಳವನು ಜೈನ ಸಂನ್ಯಾಸಿ : ಪೆಱರಂ ದೂಱುವರೊಳ್ ತಱನಱಿಯದೆ ನುಡಿವವರೊಳ್ . . . ಪುರುಡಿಗರೊಳ್ ಬಱುದಲೆಯೆಂದೆಳಸಿ ಕೇಳಲಾಗದು ಪುರುಷಂ (ಧರ್ಮಾಮೃ. ೬-೨೦೩). **ಬರಿದಲೆ**: ೨. ಏನನ್ನೂ ಧರಿಸದೆ ಇರುವ ತಲೆ; ಬೋಳುತಲೆ: ಹಿಂದೆ ಟೋಪಿ ಅಥವಾ ಮುಂಡಾಸಿಲ್ಲದ ಬರಿದಲೆಯಲ್ಲಿ ಯಾರೂ ಓಡಾಡುತ್ತಿರಲಿಲ್ಲ (ಕಂ೦). **ಬರುದಲೆ**: ೩. ಕೂದಲಂ ಬೆಳೆಯದಿರುವ ಅಥವಾ ಮುಂಡನ ಮಾಡಿಸಿಕೊಂಡ ತಲೆ ; ಬೋಕ್ಕ ತಲೆ : ಆ ಬೋಳ ಚಾಮರಾಜನ ಬರುದಲೆಯನ್ನು (ಸುಗುಗಂ. ೬೨-೦೩). **ಬಱಿದಲೆ**: ೨. ತಂಕಲಲಿ ಬಱಿದಲೆಯುಲಿಹರು (ಶರಣ್ಕ. ೦೬೦೬).

[ಬಱು (< ಬಱಿದು) + ತಲೆ$_1$]

**ಬಱುದೂಱು**, ಬಱಿದೂಱು (ನಾ). ಮಿಥ್ಯಾಪವಾದ : ಅಱುಹಿನವರು ಬಂದು ಕಾಱಿಯ ಕೊಂಡೊಯ್ದರೆ ಬಱುದೂಱೆಂತಕೊ (ಅಕಂ. ೫೦೦-೦೬೦೬). **ಬಱಿದೂಱು** : ಅರಱಿಯದಂತದಱಿಳಗೆ ಹೃದಯಾರ ವಿಂದದಿ ನೀನಿರಲು ಬಱಿದೂಱು ಜೀವನಿಗುಂಟೆ (ಕಂಣ. ೬೪).

[ಬಱು (<ಬಱಿದು) + ದೂಱು$_1$]

**ಬಱುದೊಡಂಬೆ** (ನಾ). ಹೂವಿರದ ಬರಿಯ ತೊಟ್ಟು : ಮಾವಿನ ಪೊಸ ಗೊಂಚಲೊಳ್ ಬಱುದೊಡಂಬೆಗಳಿರ್ಪುವೆ ಕಟ್ಟು ಸೂಸೆಯುಂ (ಅಱಾಕ. ೦೦-೪).

[ಬಱು (<ಬಱಿದು) + ತೊಡಂಬೆ$_1$]

**ಬಱುದೊಱೆ**, ಬಱಿದೊಱೆ (ನಾ). ೧. ನೀರಿಲ್ಲದೆ ಬರಿದಾಗಿರುವ ತೊರೆ,—ಹೊಳೆ. ೨. (ಆಲಂ) ಮರೀಚಿಕೆ: ನೀನೆನ್ನ ಪರಿ ಬಱು[ಪಾಠಾಂ. ಱ]ದೊಱೆಯಲೋಲಾಡಿಸಿದೆ ನೀ ಪಸಿದಿರಿಸಿ ಹಾರುವನ (ಶಿಥಾಗ. ೯-೩-೪೯). ೩. ವ್ಯರ್ಥವಾದುದು; ನಿಷ್ಪ್ರಯೋಜಕವಾದುದು: ಕಾಮೇಚ್ಛೆಯೊಳಿ ಪಡೆದ ಪೊಟ್ಟೆ ಬಱುದೊಱೆಯಾಯಿತೇ . . . ಹಾಯೆಂದೊಟ್ಟಪೊಱಳಿ ದಳಬಲ (ಕೋಶಿಂ. ೨-೩-೩೭). ೪. ನಾಶ; ಅಳಿವು: ಕುದುರೆ ಬಱು ದೊಱೆಯಾಯ್ತು ಕರಿಯು ಹಿಂಡಡಗಿದುದು (ಕಾಕ್ರಿ. ೨೮-೩೦). **ಬಱಿದೊಱೆ**: ೧. ಅಱಿವು ತಲೆಕೆಳಗಾಯ್ತು ಧೈರ್ಯದ ನಿಱಿಗೆ ನಗೆಗೆಡೆ ಯಾಯ್ತು ಲಜ್ಜೆಯ ಹೊಱಿಗೆ ಬಱಿದೊಱೆಯಾಯ್ತು (ಕುಭಾ.ಶಿ. ೨-೦೨). ೩. ನಿಮ್ಮಾ ಶಾತ ಶಂಕರ ಕೊಟ್ಟ ನಿರುತದ ಮಾತು ಬಱಿದೊಱೆಯಾಗದು (ಸಂಶಕ. ೩೦-೩೭). [ಬಱು (<ಬಱಿದು) + ತೊಱೆ₁]

**ಬಱುದೊಱೆವೋಗು** (ಕ್ರಿ). ೧. ನೀರು ಬತ್ತಿದ ತೊರೆಗೆ ಇಳಿ. ೨. (ಆಲಂ) ಫಲ ದೊರಕದ ಕೆಲಸಮಾಡು; ವ್ಯರ್ಥವಾದ ಶ್ರಮ ವನ್ನು ಹೊಂದು: ಮಾಯದ ಸಂಸಾರದ ನಚ್ಚಿ ಮಾಯಕ್ಕೆ ಕೆಟ್ಟು ಬಱುದೊಱೆವೊಱಿಪೇಡ (ಬಸವ. ೬೨೪). [ಬಱುದೊಱೆ + ಪೋಗು]

**ಬಱುದೊಱೆವೋಗು**, ಬಱಿದೊಱೆಹೋಗು (ಕ್ರಿ). (ನೀರು ಬತ್ತಿದ ಹೊಳೆಯಂತೆ) ವ್ಯರ್ಥವಾಗು: ನಿಷ್ಪ್ರಯೋಜಕವಾಗು: ಕರಣ ದಿಟ್ಟೆಗೆ ಹರಿದು ನರಕದಲ್ಲಿ ನೆರೆದು ಬಱುದೊಱೆವೋಗದೆ ಮಱೆಯದೆ ಪೂಜಿಸು (ದೇವಾಶ. ೩೩-೪೯); ಬಱುದೊಱೆವೋದುದು ಕೆಱಿಗಂ ದೇಗುಲಕ ಮಾಗದುಱಿಪವರರ್ಥಂ (ಎ. ಕ. ೪೦. ಶೀಕಾರು. ೧೪೩-೪೫; 1161); ಬಱು ದೊಱೆವೋದುದೆನ್ನಯ ವಿವೇಕಂ (ಪ್ರಸಾ. ೩೦-೩೩). **ಬಱುದೊಱೆ ಹೋಗು**: ಮೋಹನ ಮೊಲೆ ಮುದ್ದುಮೊಗದ ಭಾವಕಿಯರ ಲಲ್ಲೆನುಡಿ ಯೆಂಬ ನಯಗತ್ತಿ ಎಲ್ಲರ ಹೃದಯವ ಕೊಱೆವುತ್ತಿದೆ ನೋಡಾ . . . ಬಲ್ಲತನ ಬಱುದೊಱೆಹೋಯಿತ್ತು (ಸಿದ್ಧೇಶ. ೪೦-೦೦೬). [ಬಱುದೊಱೆ + ಪೋಗು₁ (<ಪೋ₁)]

**ಬಱುದೊಱೆಹೋಗು** 'ಬಱುದೊಱೆವೋಗು' ನೋ.

**ಬಱುನುಡಿ**, ಬಱಿನುಡಿ (ನಾ). ಬರಿಯ ಮಾತು: ಒಣಮಾತು: ಒಡ ವುಟ್ಟಿದರೆಂಬೀ ಬಱುನುಡಿವಡೆವರ್ಪದರ್ಕೆ ಮಱುಮಯ್ಯೊಳದಾರೊಡ ವುಟ್ಟುವರ್ (ಶಾಂತೀಶ್ವ. ೦೪-೦೨೦); ನಂಬದೊಡೆ ಬಱುನುಡಿಯೊಳಾದ ಫಲ ವೇನು (೦೩೪೦. ೬-೯). **ಬಱಿನುಡಿ**: ದಿಟವೀರನೇ ಕೂರಲಗಿನಲಿ ಮಾತಾಡು ಬಱಿನುಡಿ ಛಂಡತನ (ಕುಭಾದ್ರೋ. ೦೪-೩). [ಬಱು (<ಬಱಿದು) + ನುಡಿ₂]

**ಬಱುನೆನಹು** (ನಾ). ಬರಿಯ ನೆನಪು: ಬಱುನೆನಹು ಸ್ವಪ್ನಂ (ಮಂಗರಾ. ೯೯-೩). [ಬಱು (< ಬಱಿದು) + ನೆನಹು (<ನೆನಪು)]

**ಬಱುನೋಟ** (ನಾ). ಬರಿಯ ದೃಷ್ಟಿ,—ನೋಟ: ಬಱುನೋಟವನೆ ಪಸರಿಸುವಾ ಮೋಹಮಿಂಚೆಕಿವರೊಳೆನಗೆಂಬಾ ಹದನನಱಿವಡೆ (ಶಾಸ್ತ್ರಸಾ. ೯-೩೦). [ಬಱು (< ಬಱಿದು) + ನೋಟ]

**ಬಱುಬ** 'ಬಱುವ' ನೋ.

**ಬಱುಬೆಸನಿಗ** (ನಾ). ಬರಿಯ ದುರಭ್ಯಾಸಗಳುಳ್ಳವನು; ದುಶ್ಚಟ ಗಳುಳ್ಳವನು: ಪಸಗೆಟ್ಟುರವಣಿಸುವ ಬಱುಬೆಸನಿಗನೊಳ್ಪಸಗೆ ಸಂದು (ಅಕಿ. ೬-೦೪೩). [ಬಱು (< ಬಱಿದು) + ಬೆಸನಿಗ]

**ಬಱುಮುಂಡೆ** (ನಾ). ಏನನ್ನೂ ಧರಿಸದಿರುವ ತಲೆ; ಬೋಳುತಲೆ: ಬಱುಮುಂಡೆ ಬಳಿದ ದಾವನ್ನ ಸುಲಿದ ಪಲ್ಲು ಮಿಱುಪ ಸಬಳಕ್ಕೆಕರಿ ಮೆಱೆಯ ಸುಳಿಗೆರೆಯ್ಯಂದರು (ಕುರಾಸಾಂ. ೦೯-೨೦). [ಬಱು (<ಬಱಿದು) + ಮುಂಡೆ]

**ಬಱುಮನ**, ಬರಿಮನ (ನಾ). ಭಕ್ತಿ, ಶ್ರದ್ಧೆ, ಪ್ರೀತಿಗಳಿಲ್ಲದ ಅಂತರಂಗ: ಅಮರ್ದರ್ ಬಸವಣ್ಣನಂ ಬಂದಿವಿಡಿಯಲ್ಕೆಂದು ಬಱುಮನದ ಹೊಱ ವಿಭೂತಿಯನಲ್ಲಿ ಕೀಲಿಟ್ಟು (ಬಸ. ೯-೪೩). **ಬರಿಮನ**: ಬರಿಮನ ಸಲ್ಲದಣ್ಣಾ! ಬಲ್ಲವರೊಳೆಲ್ಲಗೈವನೆ ಮನುಜನಣ್ಣಾ (ಕಂತೆ. ೩೭-೬). [ಬಱು (<ಬಱಿದು) + ಮನ]

**ಬಱುಮಾಟ** (ನಾ). ಶ್ರದ್ಧೆಯಿಲ್ಲದ ಕೆಲಸ: ಮನಸ್ಸಿಲ್ಲದ ಕಾರ್ಯ: ಶ್ರೀ ಗುರುವಿನುಪದೇಶವಿಲ್ಲದೆ ಹೋಗಿ ದೇವಾರ್ಚನೆಯ ಮಾಡಿದೊಡೇಗು ವುದು ಬಱುಮಾಟ ನಿಷ್ಫಲವೆಂದಳಾ ವಿಮಳೆ (ಪ್ರಭುಲಿಂ. ೭-೬). [ಬಱು (<ಬಱಿದು) + ಮಾಟ₁]

**ಬಱುಮಾತು** 'ಬಱುವಾತು' ನೋ.

**ಬಱುವ**, ಬಱುಬ (ನಾ). ೧. ಬರಿಯ ಕೈಯಲ್ಲಿರುವವನು; ನಿರಾಯುಧ; ಅಸಹಾಯಕ: ಬಱುವಂ ಸಾರಥಿಯಿಲ್ಲ ಮಯ್ಗ್ಗ ಮಱೆಯುಂ ತಾನಿಲ್ಲದೆಂತೀಗಳಾನಿಱುವೆಂ (ಶಂಕರಾ. ೦೨-೨೦೭); ಬಱುವನನಾಜ ಶ್ರಾಂತನಂ ಯಶೋಧನನಿಱಿಯಂ (ಶಾಂತಿಕೃ. ೯-೩೦). ೨. ದರಿದ್ರ; ಬಡವ; ನಿರ್ಗತಿಕ: ಕಱಿಯಂ ಮುತ್ತಂ ಧನದಂ ಬಱುವಂ [ಪಾಠಾಂ. ಱಿಯಂ]ತೊಱೆದಂ ಗೃಹಸ್ಥನೆನ್ನದೆ ಮುಂ ಬಟ್ಟಱಿಸಿ ಕೊಲುತಿರ್ಪ ಜವ ನೆಂಬಱಿಕೆಯ ಪಗೆವಂಗದಂತು ಪಂಗಿಗನನಪ್ಪಂ (ಅದಿಪು. ೪-೭೭); ಅಱ ವಿಲ್ಲದೆ ಮತ್ತಲ್ಲಂ ನೆಱದಿರ್ದೊಡಮೇನೊ ಬಱುವನಾತಂ ದಿಟದಿಂ (ಕೀತಿಮು. ೨-೩೦೦); ಜರೆಯ ನರೆಯ ಮುಡಲ್ತ ನೆರೆದುಱುಗಲ ಸುರ್ಕುಂ ದೊವಲ ಅಸಿದೊಡಲ ಬಱುವಂ ಜೋಗಿಯುಂ ಮಾಲಿಸುತುಂ (ರಾಮಾಶ್ವ. ೩೯-೦೬). **ಬಱುಬ**: ೧. ಬಱುಬಂ ಪೊಯಿಲ್ವೆತ್ತಂತೇನುಮನಱ ಯದೆ . . . ನಡನಡಂಗಿ (ಶಂಕರಾ. ೬-೭೦ ವ); ಬ[ಱುಬ]ನನೇಳಿದನಂ ಮೆಯ್ಯುಱಿಯದೊನಂ ಬೆರಲನಳಿಪಿ ಕರ್ಚಿದೊನಂ ಕಾಲ್ಗೆಱಗಿದನನಿಱಿಯ ಲಾಗದು (ಶಂಕರಾ. ೦೦-೦೯). ೨. ಅದು ಒಡೆಯರೊಡವೆಯಲ್ಲದೆ ಬಱುಬಂಗೆ ಅರಗದು [ಪಾಠಾಂ. ಬಱುಬರಿಗರಗದು] (ಕೋಲಶಾಂ. ೩೭); ಬಱುಬನು ನಿಧಿಗಂಡ ತೆಱನಂತೆ ಸಂತಸದೊಱೆಯೊಳಾಳುತಲೇಳುತಿರ್ದ (ಪದ್ಮಕ. ೦೦-೯೩). ೩. ತಿಳಿವಳಿಕೆಯಿಲ್ಲದವನು: ಅಜ್ಞಾನಿ: ಬಱುಬರನುಱ ಬಲ್ಲರೆಂಬ . . . ನೆಱ ಜಾಣರು (ಕುರಾಸಾಂ. ೩೩-೦೬): ಬಲ್ಲವನೀತ ಬಱುಬ [ಪಾಠಾಂ. ಡವ]ನೀತ ಚವಳೀಕನೆಲ್ಲಶಾಸ್ತ್ರಂಗಳಱಿವನು ಬಲ್ಲಿದನೀತ ಬಡವ ನೆಂದು ಪೂಜಿಪಗೆಲ್ಲಿಯ ಶೀಲ (ಅಮಹಾಂ. ೯-೦೦೬). [ಬಱು (< ಬಱಿದು) + — ಅ₁]

**ಬಱುವಣ್ಣನೆ** (ನಾ). ಅರ್ಥವಿಲ್ಲದ ವರ್ಣನೆ; ಬರಿಯ ವಿವರಣೆ: ಪುರುಳಿಲ್ಲದ . . . ಬಱುವಣ್ಣನೆಯ ಬೇಸಱಿಕೆಯು ಪಾಟ್ಟಬ್ಬವುಂ ಪೊಳ್ಳೆಂದೆ ನುಡಿದೆಂ (ರಾಮಾಶ್ವ. ೦೪೯-೯) [ಬಱು (< ಬಱಿದು) + ಬಣ್ಣನೆ]

**ಬಱುವನೆ** (ನಾ). ಹಾಳುಮನೆ; ಗೃಹಿಣಿಯೊಳ್ ಸಂಗುಣವಿಲ್ಲದೊಡೆ ಗೃಹಮದು ಬಱುವನೆಯು (ಕೀತಿಮು. ೩-೨೨). [ಬಱು (<ಬಱಿದು) + ಮನೆ]

**ಬಱುವಾತು**, ಬರಿಮಾತು, ಬಱಿಮಾತು, ಬಱಿವಾತು, ಬಱುಮಾತು (ನಾ). ಕೆಲಸಕ್ಕೆ ಬಾರದ ಮಾತು; ವ್ಯರ್ಥವಾದ ಮಾತು: ಮಾತಱ ಯದ ಮಾತು ತಮ್ಮ ಬಱುವಾತುಗಳೊಳ್ ಪುದಿದು (ಶಂಕರಾ. ೯-೯೫): ವಾಕ್ಕಿನೊಳಿಲ್ಲ ಮೋಣಾ ಪರಿಚಯಂ ಬಗೆ ಮೊಕ್ಕಳಮಂತುಟಲ್ತೆ ಗಂಟಕ್ಕಾಪ ರೆಂಜಲಾದ ಬ[ಪಾಠಾಂ. ಬ]ಱುವಾತುಗಳು (ಸೂಕ್ತಿಸು. ೦-೩೭). **ಬರಿ ಮಾತು**: ಬರಿಮಾತಿನಿಂದ ಏನು ಪ್ರಯೋಜನ? (ರೂಢಿ). **ಬಱಿ ಮಾತು**: ಈ ಸವಿಹಾರಜನೀಗ ಹೃದಯುನಿವಾಸಮಾರುತಸಜ ಹರೀಶ್ವರ ರೋಸರದ ಬಱಿಮಾತದಲ್ಲಿದು ವೇದಮಾತವೆಂದ (ಕೃಷ್ಣರಾ. ೯-೦೨-೦೩). **ಬಱಿವಾತು**: ಬಱಿವಾತನಿನಿಸು ಪೊಟ್ಟುಂ ಮೆಱಿವಿನಗಂ ಗಟವಲೇಕೆ

(ಕ್ಷ್ಮಾ. ೦೭೯). **ಬಱುಮಾತು** : ಏನೆಂದಱಿಯರು ಎಂತೆಂದಱಿಯರು ಬಱುವಾತಿನ ಬೊಮ್ಮವನಾಡುತಿಪ್ಪರು (ಅಜಿತ. ೦೦೬-೪೦೩).
[ಬಱು (< ಬಱಿದು) + ಮಾತು₁]

**ಬಱುವಾತುಂಗುಟ್ಟು**, **ಬಱುವಾತುಗುಟ್ಟು** (ಕ್ರಿ). ಕೆಲಸಕ್ಕೆ ಬಾರದ ಮಾತನ್ನಾಡು ; ವ್ಯರ್ಥವಾದ ಮಾತನ್ನಾಡು : ಸಂಗರಕೆ ಬಂದು ಬಱುವಾತುಂಗುಟ್ಟದಿರು (ಶಿಶು. ೦೦-೦೩). **ಬಱುವಾತುಗುಟ್ಟು** : ಬಱುವಾತುಗುಟ್ಟಿ ಪೋಪರೇ ಗಂಡರುಂ (ಕಮಲ. ೦೬೬ ಪ್ರಯೋ).
[ಬಱುವಾತು + ಕುಟ್ಟು₁]

**ಬಱುವಾತುಗುಟ್ಟು** 'ಬಱುವಾತುಂಗುಟ್ಟು' ನೋ.

**ಬಱುವಾನಿಸ** (ನಾ). ನಿಷ್ಪ್ರಯೋಜಕನಾದ ಮನುಷ್ಯ : ತಾಮಸರ್ ಲೋಕಕಂಟಕರಾಗೆ ರಕ್ಕಸರೆನಿಸಿ . . . ಬಡವು ಬಱುವಾನಿಸರಂ ಕೊಂದು ತಿಂದು ಬಿಸುರ್ಳಿಸಿ ಪೆರ್ಚಿಸಿ ತಿರಿಗೆ ಪೊಱಮಾವರ್ (ಅಮಾತ್ಯ. ೦೦೯-೨೩).
[ಬಱು (<ಬಱಿದು) + ಮಾನಿಸ₁ (< ಮಾನುಸ)]

**ಬಱುವಾಯ್**, **ಬಱಿವಾಯ್** (ನಾ). ೧. ಬರಿಯ ಬಾಯಿ ; ಖಾಲಿ ಬಾಯಿ. ೨. (ಅಲಂ) ವ್ಯರ್ಥವಾಗಿ ಗಳಸುವ ಬಾಯಿ ; ನಿಷ್ಪ್ರಯೋಜಕವಾದ ಮಾತನ್ನು ಆಡುವ ಬಾಯಿ : ಉಂಡ ದಲೆಯೋತಿಗಳು ಬಱುವಾಯ ಬಳ್ಳುಗಳು . . . ಅಗ್ಗದ ಚರಿಗೆಗಳ ನರಗಳು (ಸೋಮಶೇ. ೯-೯೦). **ಬಱಿವಾಯ್** : ೨. ಬಾಲೆಯುತ ಮುಂದೆ ತಿರುಗುತ್ತಿಪ್ಪ ಬಱಿವಾಯ ಭಂಜಕರುಗಳು ತಾವು ಅಱಿವುಳ್ಳವರೆಂದು ಬೀಗಿ ಬೆಱಿಯುತ್ತಿಪ್ಪರು (ಮೋಹತರ. ೦೮೮-೭೦೯).
[ಬಱು (< ಬಱಿದು) + ಬಾಯ್]

**ಬಱುವಾಳ್ಕೆ** (ನಾ). ನಿರರ್ಥಕವಾದ ಬದುಕು : ವ್ಯರ್ಥವಾದ ಜೀವನ : ಪುರುಳೇಂ ಬಱುವಾಳ್ಕೆಯ ಬರ್ದುಂಕಿನೊಳ್ (ಅಮಾತ್ಯ. ೬೩-೦೦). [ಬಱು (<ಬಱಿದು) + ಬಾಳ್ಕೆ]

**ಬಱುವೆ** (ನಾ). ನೆರವಿಲ್ಲದವಳು ; ಅಸಹಾಯಕಳು : ಆನೊರ್ವಳೆ ಬಡವೆ ಬಱುವೆಯಾದೆಂ (ಅಮಾತ್ಯ. ೪೦-೩). [ಬಱುವ + — ಎ₂]

**ಬಱುಸೂಱೆ**, **ಬಱಿಸೂಱೆ** (ನಾ). ವ್ಯರ್ಥವಾದ ಸೂರೆ,— ಲೂಟಿ : 'ಬಱುಸೂಱೆವೋಗು' ಪರಾ. **ಬಱಿಸೂಱೆ** : 'ಬಱಿಸೂಱೆಗೈ' ಪರಾ. [ಬಱು (< ಬಱಿದು) + ಸೂಱೆ]

**ಬಱುಸೂಱೆವೋಗು** (ಕ್ರಿ). ವ್ಯರ್ಥವಾಗಿ ಸೂರೆಹೋಗು ; ಹಾಳಾಗು : ಮಾಂಜಾಲಲೋಕವೆಯ್ದೆ ಬಱುಸೂಱೆವೋಯಿತ್ತು (ಅನಂತ. ೦೦೯-೯೯).
[ಬಱುಸೂಱೆ + ಪೋಗು₁ (<ಪೋ₁)]

**ಬಱಿ**₁ (ಕ್ರಿ). ಬಱಿತ (ಭೂತಕೃ). ೧. ಒಣಗು : ಆರು : ಬತ್ತು : ನಚ್ಚಿನ ಮುಂಗ್ಗಾಲಾಪವಿಂಪು ಱಿದು ಬಱಿತುದೆಂಬನ್ನೆಗಂ ಬತ್ತಿರಲ್ಪಾಯ್ (ಕಾದಂಬ. ೩೨೩); ಬಾಡಿದ ಮೊಗಂ ಬಱಿತ ಬಾಯ್ . . . ಮಾಸಿದ ಮುಂದಂ ಕೂಡೆ . . . ಪುರಜನಂಗಳಂ ನೋಡಿ ತೋಱಿಸಿ ಬೇಱಿ ವೇಱಿಱುಪ್ಪುಗೊಡುತಿರ್ದನಾ ಧೈರ್ಯನಿಧಿ ಭೂಪನು (ಜಗನ್ನಾ. ೯-೦) ; ಕಱಿ ತೋಱಿಗಳೊಱಿತ ಬಱಿತುವು (ಕೈವಲ್ಯ. ೦೩-೨). ೨. ಒರಟಾಗು : ಬಿರುಸಾಗು ; ಕಠಿಣವಾಗು : ಇನ್ನೆಗಂ ನೆಲಸಿ ನೀರ್ ಸೆಱಿಗೊಂಡ ಪೊಲಿರ್ದುದರ್ಕೆ ವ್ಯೆ ಬಱಿತಪೊಲಾಗಿ (ಕಂದರ್ಪ. ೯-೦೩). ೩. (ಜ್ವರ, ಬಿಸಿಲು, ಕಾವು ಮೊದಲಾದುವುಗಳಿಂದ) ಬಾಡು; ಕುಗ್ಗು ; ಸೊರಗು: ಸುರಿತಂದಶ್ರುಪ್ರವಾಹಂ ಬಱುತಿಱಿಗಿದ ಬಾಸುಱಿಗ್ಗೆಗಂ . . . ವ್ಯಸನಾಳಿಕಂಗಳ್ವೆರಸುಲರ್ವಸೆಯೊಳ್ ಕಾಂತೆಯಿಂತಿರ್ದಳಾಗಳ್ (ಶಬಸಾ. ೦೩-೬೯).
[ದೇ.॥ ತಮಿ. ವಱು, ವಱ್ಳು : ಮಲ. ವಱ್ಳು, ವಱ್ಳು; ತೆಲು. ವರುಟು; ಕೋತ. ವರ್ವ]

**ಬಟಂಜು** 'ಬಣಜು' ನೋ.

**ಬಟಕೆ**, **ಬಳಕೆ** (ನಾ). ೧. ಉಪಯೋಗಿಸುವಿಕೆ ; ಬಳಸುವಿಕೆ : ಏಕವಚನವೊರ್ವನ ಬಟಕೆಗೆ ಬಹುವಚನವೆಲ್ಲರಂ ವೇಟ್ಕುಡೆಯೊಳ್ (ಕವಿರಾ. ೨೨೯). ೨. ವಿಶೇಷವಾದ ಪರಿಚಯ,—ಗುರುತು ; ನಿಕಟವಾದ ಸಲುಗೆ : ತನ್ನಳವಂ ಕಲಿತನವುಂ ನಂಬಿ ಬಲಂ ತಳರದೆ ಸಾಧಿಸುವೆನೆಂಬ ಬಟಕೆಯನಾತಂ . . . ರಾತ್ರಿಯೊಳ್ ಗಂಧವತಿಯ ತಡಿವಿಡಿದು ಬಂದು (ರಾಜಾಶೇ. ೦೩-೦೯). **ಬಳಕೆ** : ೧. ನಿಶ್ಚಲದ ನೋಟದ ಲಿಂಗಭಾವದ ಬಳಕೆಯನೆ ಬಲಿದಿರುತಲಿರ್ದನು ನಿಜನಿವಾಸದಲಿ (ಪ್ರಭುಲಿಂ. ೦೦-೬೭); ಕಲಿತನವೆ ಹೃದಯದಲಿ ಕಾರ್ಯದ ಬಳಕೆ ಕೈಯಲಿ ನಡುವೆ ನಾಲಗೆಯುಲಿದಡೇನಗ್ಗಳಿಕೆಯಹುದೋ (ಕುಮಾರ. ೦೦-೯೩). ೨. ಸುಳಿದಳೂರ್ವಶಿ ಸುರಪತಿಸ್ಪದ ಬಳಕೆಯವರಿಗಸಾಧ್ಯವೆಂಬುಜ್ವಲತೆಯಲಿ (ಕುಮಾರ. ೦-೩-೦೨); ಸಕಲಸೀಮೆಯ ಬಳಕೆಗೆಳೆದಳು ಸಕಲಕುಶಲವ ನೊರೆದಳು (ಹರಿಹರ. ೬-೦೦). ೩. ರೂಢಿ ; ಅಭ್ಯಾಸ : ಮುಂದಕೆ ಪೋಪುದು ತನುವಿದು ಹಿಂದೆಸೆಗೋಡುವುದು ಬಳಕೆಗೈದದ ಮನವೇ ನೆಂದಪೆನೊ (ಶಾಕುಂತ. ೦೫-೩೯). ೪. ರೀತಿ; ಕ್ರಮ : ಮುಕಿತದ ಜಲಜಭವರಂತಲ್ಲ ಪಾರ್ಥನ ಬಳಕೆ (ಕೃಷ್ಣರಾ. ೦೦-೩೩).
[ದೇ.॥ ತಮಿ. ವಟಕ್ಕಮ್, ವಟಕ್ಕು ; ತುಳು. ಬಳಕೆ , ಬಳಕೆ ; ತೆಲು. ವಡುಗು]

**ಬಟಪ** 'ಪಟಹ' ನೋ.

**ಬಟಲ್**, **ಬಳಲ್**, **ಬಳಲು**, **ಬಟಲು**₁ (ಕ್ರಿ). ೧. ಬಾಡು ; ಒಣಗು : ಅರಸಿಯರ ತೊಟ್ಟ ಪೂದುಡಿಗೆಗಳೆಲ್ಲಂ ಬಟಲ್ದು ಕಟಲ್ದು (ಶಾಂತಿಪು. ೬-೩೦ ವ) ; ಪುಷ್ಪವೊಂದು ಬಟಲಲ್ ಭೃಂಗಕ್ಕೆ ಪೂವಿಲ್ಲವೇ (ಸೋಮೇಶ. ೨೬). ೨. ದಣಿ ; ಆಯಾಸಗೊಳ್ಳು : "ಬಟಲ್ — ಶ್ರಾಂತೌ" (ಶಬ್ದಮ) ; ಅರಿಭೂಪಾನೀಕಭಯಂಕರನುಂ ಗಡಮೋಕೆಂದಱಿಯಂ ಬಟಲ್ದು ಜೋಲ್ದಂ ಧರೆಯೊಳ್ (ಶಂಕರ. ೬-೯೦) ; ಮಱುವಾತುಗುಡದೆ ರವಿಸುತ ಮಱ ಮಿಂದಿರ್ದಪೆಯೊ ಮೇಣ್ಬಟಲ್ದಿರ್ದಪೆಯೋ (ಗದಾಯು. ೩-೦೩) ; ರುಧಿರವುಂ ನೆಱಿ ಕಾಱ ಬಟಲ್ದು ಬಿಟ್ಟಂ (ರಕ್ಕಸ. ೯-೦೦೯). ೩. ಜೋಲು ; ನೇತಾಡು : ನನಪುನ ಪೇಱ ಕೆಂದಳಿರೊಳೆಯ್ದ ಬಟಲ್ದೆಳವಾಮ ಬಂದ ಮಾಮನೆ ಮಱಿಗೊಂಡು ಬಗ್ಗಿಸುವ ಕೋಗಿಲೆ (ಆದಿಪು. ೦-೬೩); ಮುಂಗುಳಂ ಪೇಱ ಬಟಲ್ದ ಗೊಂಚಲೆಡೆಯೊಳ್ ಪುಷ್ಪಾಸ್ತ್ರವತ್ರಂಗಳಂ ತೆಗೆದು (ಶಾಂತಿಪು. ೬-೦೦). ೪. ಜಾರು ; ಸರಿ : ಬಟಲ ಪೆಗಲಿಂ ಚಂಚಚ್ಚಲ್ಯಾಂಚಲಂ ಪೆಗಲಿಂಗೆ ಬಂದೆಟಲೆ ಜಡೆಗಳ್ . . . ಪರಿಪಟ್ಯೋರಂತೆ ಆಕಾಶಮಾರ್ಗದೆ ಬಂದ ಪಾಡಭೇದ ಸಮಿನಂ ಮುಂದಾಂ ಕಂಡಂ (ಕಾದಂಬ. ೬೦೩). ೫. (?) : ಕಡಿದ ಶರನಿಕರದುಡಿ ನಭದೆಡೆವರೆಗಂ ಬಟಲೆ (ಶಾಂತಿಪು. ೦೨-೦೬೯). **ಬಳಲ್** : ೨. ಪೇಚರರ್ ಬಿಸಿಲ್ಗಂಜುತ್ತುಂ ಭರದೊಳ್ ಬಳಲ್ದು ಬಂದಾ ಗಿರಿಶಿಖರದ ಮರದ ತುದಿಯ ನೆಳಲಂ ಸಾರ್ವರ್ (ಗಿರಿ. ೦-೩೩) ; ಮಾಳಲೊಟ್ಟಿಲನೇಱ ಪಾಱುಗುಪ್ಪೆಯನಾಡಿ ಬಳಲ್ದವಯವ ಬೆಮರಾಂತು ( ಸೋಮಶ. ೯-೩೮ ); ಚರಿಸಿ ನೆಱಿ ಬಳಲ್ದ ಪಥಿಕರಕ್ಷಿಗಳಿಗೆ ಕಲಶಕುಚದ ಲಾವಣ್ಯಾಂಬುವೆಱಿಯುತ (ಶಂಕರ. ೬-೮೦) ; ಬರಿದೆ ಬಲಂ ಬಳಲ್ದ (ಜಗನ್ನಾ. ೬೯-೬). **ಬಳಲು** : ೨. ನೆಳಲನುಡಿಸುವೆನೆಂದು ಬಳಲುವನಂತೆ (ಅಜಿತ. ೨-೬) ; ಸತ್ಯವಱಿಯ ದತ್ತಚಿತ್ತ ಸುಕ್ತಿ ಬಳಲುತಿರ್ದನಯ್ಯ (ಹಂಪೆರ. ಹ. ೩೦೦-೦೦) ; ಭಟರು ಬಳಲಿದರೆಂವು ರಣಪುಪ್ಯಕಟವು (ಕುಮಾರವ್ಯಾ. ೦೩-೯೨). **ಬಟಲು**₁ : ೨. ಗಾಯಂಬಡೆದೆನಸು ಬಟಲುತಿರ್ದಂ ಪಡುನೇಸಱ ತೆಱದೆ ರಾಜಹಂಸ ನರೇಂದ್ರಂ (ದಶಕು. ೨-೩೭).
[ದೇ.॥ ತಮಿ. ಮಲ. ವಯುಕ್ಕು ; ತೆಲು. ಬಡಲು]

**ಬಟಲಿಕೆ** 'ಬಟಲ್ಕೆ' ನೋ.

ಬೊಂಬೆಯೊ ಎಂಬ ತೆಱದಿಂದ (ಶಳಶ. ೬-೨೪) ; ಬೇಡುವಾತನ ಮೋಟೆ ಕಾಡಿಗೆಯುಂ ಬಡಿದಿಕ್ಕು ಬೇಡಲೀಯದವನ ಮೋಟೆ ಉರಿಕೆಂಡವನು ನೋಡಿ ದಂತಕ್ಕು (ಸರ್ವಜ್ಞ. ೬೦೩). ಬಳಿ$_1$ : ೧. ಜವಾನನು ಕೋಣೆಯ ಕಸ ಬಳಿಯುತ್ತಿದ್ದಾನೆ (ಹೊಸ). ೨. ಮೋಚಿಯುಲಿಳಿವ ಬೆವರನು ಬೆರಳ ಕೊನೆಯುಲಿ ಬಳಿದು (ಕುಮಾರವ್ಯಾ. ೦೩-೩೦); ಮಹೋಗ್ರಚಾಪದ ಗುಣವ ಸಡಿಲಿಸಿ . . . ರಕ್ಕಸರಣಭಯಂ ಕರಸ್ವೆದಿದನು ಬಸಿವ ವ್ಯವಸಗಳನು ಬಳಿದಿಕ್ಕಿ (ಕೊರಣ. ೩-೬-೫೬). ೩. ಹೇರೊಡಲಿನ ಗರುಡನ ಪಕ್ಷಪ್ರಳಯಸಮೀರಣನುಬ್ಬಟೆಯಿಂದೆ ವಾರಾಶಿ ಬಳಿದುವು ನೆಗಳಾನೆಗಳು ಕೂಡಿ ನೀರ ಚೆಲ್ಲಿದರೆಂಬ ತೆಱದಿ (ತೋಹಚ. ೩೬-೩೦); ಏನಾದರೂ ಇದ್ದರೆ ಬಳಿದುಕೊಂಡು ಹೋಗಲು ಬಂದಿದ್ದರು (ಗಂಗಾಶಾ. ೪೦). ೪. ಕಾಡಿಗೆಯೊಳಗೆ ಕಾರಿರುಳ ತಿರುಳ ರಸವಂ ಕಲಸಿ ಮೊಗೆದು ಬಳಿದಾತೆ ಬಳವೆತ್ತ ಕತ್ತಲೆ ಸಿದ್ಧರಾವಂಗೆ ಬೆಳಗಾದುದು (ಸಿದ್ಧಚ. ೩-೩೦); ಕಳೇವರಕೆ ಬಳಿದು ಚಂದನವಂ (ಶಕ್ರಶಾ. ೬-೯೨) ; ಬೆಂದ ಹುಣ್ಣಲಿ ಸಾಸಿವೆಯ ಬಳಿಯುದಿರು ಸಂಜಯ (ಕುಮಾರವ್ಯಾ. ೦-೮). ೭. (ನೆಲವನ್ನು) ಸಾರಿಸು : ರೋಗಿಗಳು ಮಲಗಿದ ನೆಲವನ್ನು ಕ್ರಿಮಿನಾಶಕವನ್ನು ಬೆರಸಿದ ನೀರಿಂದ ಬಳಿಯಬೇಕು (ಹೊಸ).

ಬಳಿಬಟ್ಟು–ಅನ್ನವನ್ನು ಕಲಸಿ ಕೈತಂತ್ತು ಹಾಕುವಾಗ ಕೊನೆಯಲ್ಲಿ ಬಳಿದು ತೆಗೆದುದು : ಹಂಚಿದವರಿಗೆ ಬಳಿಬಟ್ಟೆಯೇ ಗತಿ (ಹೊಸ).

[ದೇ.॥ ತಮಿ. ವಟ್ ; ಮಲ. ವಟಿ ; ತೆಲು. ಬಡಿಯು]

**ಬಟ್ಟೆ$_2$** (ನಾ). ಸಾರಿಸುವಿಕೆ ; ಸ್ವಚ್ಛಗೊಳಿಸುವಿಕೆ : "ಸನಿಹ ಪಥ ವಂಶ ಸಮ್ಮಾರ್ಜನಗಳೊಳ್ ಬಟ್ಟೆ" (ಕಬ್ಬಸುಂ. ೦೦೬) 'ಕಾಲ್ವಟ್ಟೆ' ಪರಾ. [<ಬಟ್ಟೆ$_1$]

**ಬಟ್ಟೆ$_3$, ಬಳಿ$_2$** (ನಾ). ೧. ದಾರಿ ; ಮಾರ್ಗ : ಅನಿತು ಬಟ್ಟೆ ಬಲ್ಲೊನವನೆ. ಜಾಣನೆ (ಅಂತಿಗೂ. ೦೬-೩೪೦) ; ಬಯಕೆ ಬಟ್ಟೆ ಕವಲೊಡೆಗುಂ (ಶಬ್ದಸೂ. ೦೩-೦೦೨). ೨. ಎಡೆ ; ಸ್ಥಳ ; ತಾಣ ; ಪ್ರದೇಶ : "ಬಟ್ಟೆ- ಎಡೆ. ತಾವು" (ಶಾಕಾಕ. ೬. ೦೨೮) ; ಸುಟ್ಟೆವೆಳವೊಡಿರ ಕಡೆಗಣ್ ಬಟ್ಟೆಯಂ ಪಸರಿಸುವ ಬೆಳಗು ಬೆಳದಿಂಗಳ ಪೊಂಪುಟ್ಟೆಯೆಂದು (ಚಂದ್ರಪ್ರ. ೬-೯೬) ; ಬಾಸುಟ್ಟೆ-ಪೊಯ್ದು ಬಟ್ಟೆ (ಕಮುದ. ಶಂ. ೦). ೩. ಸಮೀಪ ; ಹತ್ತಿರ : ಕುಱಿತು ಸಮುಚ್ಚಯದಾ ಬಟ್ಟೆವಿಕಲ್ಪದಾ ತೆಱದೊಳೆ ದೋಷಮುಮನಂತೆ ಗುಣಮುಮಂ ಕಿಱಿದಱೊಳ್ ನೆಟ್ಟೆಯೆ ಪೇಟ್ಟಿಂ (ಶಬ್ದ ೦-೦೫೬) ; ಚಂದ್ರಗುಪ್ತಮುನಿಯು ಬಟ್ಟೆಯಂ ಋಷಿಸಮುದಾಯಮೆಲ್ಲಂ ತಗುಳ್ದು (ಕಥಾಕೋ. ೯೦-೪) ; ಕರಿಕಳಭಂಗಳ ಶಿಶು ಕೇಸರಿಗಳ ಬಟ್ಟೆಯಂ ತಗುಳ್ದು (ಹಂಶಾ. ೨-೦೦) ; ಗಟ್ಟೆಯ ಬಟ್ಟೆಯ ಪಾವಿನಂತೆ ಬೆಂಬಟ್ಟೆಯಂ ತಗುಳ್ದು (ಸುಕುಮಾ. ೬-೩೩ ವ). ೪. ಹಿಂಭಾಗ ; ಹಿಂದುಗಡೆ : ಅಂತು ಪೊಱಲಂ ಪೊಱಮಡೆ ಬಟ್ಟೆಯನೆ ತಗುಳ್ದು ಬರ್ಪ ತಮ್ಮೊಡನಾಡಿಗಳಪ್ಪ ಮೇಳದ ಸಬ್ಬವದ ನಗೆಯ ತಗಟೆನವರೆಮ್ಮ ಬಟ್ಟೆಯಟ್ಟಿದಂದು ಬನ್ನಿವೆಂದು ಪ್ರಿಯಂ ನುಡಿದಿರಿಸಿ (ಹಂಶಾ. ೨-೯೩ ವ) ; ಮಿಂಚಿನ ಬಟ್ಟೆಯ ಪೊಱಗುವೊಲ್ ಬೆನ್ನನೆ ಬಂದಳ್ (ಶಾಂತಿಪು. ೬-೨೮) ; ಸೂಜಿಯು ಬಟ್ಟೆಯ ದಾರದಂತೆ (ಶರ್ವಜ್ಞ. ೦೪-೦೦೪). ೫. ವಂಶ ; ಪೀಳಿಗೆ; ಕುಲ; ಮನೆತನ : "ಬಟ್ಟೆ = ಬಟ್ಟೆ. ವಂಶಂ, ಕರೆವಂ. ಲೇಖಿಸುವುದು. ಪಿಂಗಲಿಯ ಬಟ್ಟೆಗೊರಲ್. ಮತ್ತಂ" (ಕಮುದ. ಶಂ. ೦) ; ಅತ್ತಿಗೇರಿಯ ಬಟ್ಟೆ ಇದಕ್ಕೆ ಸಾಕ್ಷಿ (ಕಇ. II. ೩-೦೨ ; 869) ; ಅವರ ಒಡಿವ ಬಲ್ ಬಿಲ್ಲೆಮ್ಮಂಬುಗಳುಮವರಿತ್ತ ನಲ್ಲಂಬುಗಳೆಸೆ ಬಟ್ಟೆಗಾಯದಂತು ಚಲಮನೆ ಕಾವೆಂ (ಹಂಶಾ. ೦೨-೩೯) : ಅಯೋಧ್ಯಾನಗರದೊಳ್ ನೇಸಱ ಬಟ್ಟೆಯ ಪಲಂಬರರಸರರಸುಗೆಯ್ಯುತಿರ್ಪರ್ (ಶಾಖಾಕ್ಯ. ೬-೮). ೬. ಪಕ್ಷಿಗಳ ಗಂಟಲಿನ ಇಳಿಜಾರಾದ ಭಾಗ ; ೭ ಪಿಂಗಳಾನಾಡಿಯ ಮುಂದಕೆ ಇರುವ ಗಂಟಲಿನ ಭಾಗ : "ಬಟ್ಟೆ = ಬಟ್ಟೆ. ವಂಶಂ, ಕರೆವಂ. ಲೇಖಿಸುವುದು. ಪಿಂಗಲಿಯ ಬಟ್ಟೆಗೊರಲ್, ಮತ್ತಂ" (ಕಮುದ. ಶಂ. ೦). ೭. ಕರೆ ; ಆಹ್ವಾನ : "ಕರೆವಲ್ಲಿ ಲೇಖನಂಗೆಯ್ವಲ್ಲಿ ಬಟ್ಟೆಯೊಳ್ ವಂಶದೊಳ್ ಪಲ್ಲಕ್ಕಿಯಾ ಸ್ವರಭೇದದಲ್ಲಿ ಬಟ್ಟೆಯೆನಿಸುಗುಂ" (ಸಂಚೀವ. ೦೬) ; ಕುಬೇರಸೆಟ್ಟಿಯ (ಧನಮಿತ್ರ) ಶಿರೋರುಹದೊಳ್ ಪಲಿತಾಂಕುರಮಂ ಧನಪತಿ ಕಂಡು ನಿನಗೆ ಬಟ್ಟೆ ಬಂದುದೆಂದು ನಗುತ್ತುಂ ತೋಱದೊಡೆ (ಜಾಮ್ಬವ. ೬೦) ; ಯೌವರಾಜ್ಯಾಭಿಷೇಕಪ್ರಾರಂಭಪ್ರಕ್ರಿಯೆಯಿಂದಟ್ಟಿದ ಬಟ್ಟೆಗೆ ಮಗಂ ಬರ್ಪುದುಂ (ಕಾದಂಪೂ. ೩೬೬). ೮. ಯಾವುದಾದರೊಂದು ಸುದ್ದಿ ಅಥವಾ ಆಹ್ವಾನವನ್ನು ಒಯ್ಯುವ ದೂತ : ರಿಪಿಯರ್ಕಳ್ಗೆಲ್ಲಂ ಬಟ್ಟೆಯನಟ್ಟಿ ಬರಿಸಿ (ಶಬ್ದಾಶಾ. ೬೩-೦೬) ; ದುಶ್ಶಾಸನಾದಿಗಳ್ಗೆಲ್ಲಂ ಬಟ್ಟೆಯ ನಟ್ಟಿ ಬರಿಸಿ (ಹಂಶಾ. ೬-೩೩ ವ) ; ಒಡಗೊಂಡು ಬರ್ಪಂತು ವೈಶಂಪಾಯನಂಗೆ ಬಟ್ಟೆಯನಟ್ಟುವಂ (ಕಾದಂಬ. ೪೬೬). 'ಬಟ್ಟೆಯಟ್ಟು' ಪರಾ. ೯. ಉಡುಗೊರೆ ; ಕಾಣಿಕೆ ; ಕೊಡುಗೆ : 'ಬಟ್ಟೆವಟ್ಟು$_1$' ಪರಾ. ೧೦. ನಡೆವಳಿಕೆ ; ವರ್ತನೆ : 'ಬಟ್ಟೆಯ' ಪರಾ. ಬಳಿ$_2$ : ೧. ಬಳಿವಿಡಿದು ನಡೆತಂದು ಕಂಡನು ಮುಂದೆ ಮುನಿವರೇಣ್ಯನನು (ಹಶಾ. ೩-೬೩) ; ಬಂಡಿಯನೇಱು ಪೋಪಾ ಬಳಿಯುಲಿರೆ ಪೆರ್ಬಾವು (ಶಾಸ್ತ್ರಾ. ೨೦-೬೩). ೨. ಹಳ್ಳಿಯಲಿ ನಗರಂಗಳಲಿ ನಗಕುಲದ ಬಳಿಗಳಲಿ ಬಳಕವರು ಕಾಣದೆ ಹೋಳಲ ಸಾರ್ದರು (ಕೊರಣ. ೩-೨-೦೬) ; ಇಳಿದಿರ್ದ ಬಳಿಯಿಂದ ಪಾಳಿಯದೆಗೆದೊಡೆ (ಕಂಶಿ. ೦೪-೩೨) ; ಪರಮಪತಿವ್ರತೆಯಿದ್ದ ಬಳಿಯೊಳಾ ಸಿರಿರಾಣಿ ಸೇರಿ ಬಂದಿಹಳು (ಹರಿ. ೨-೦೬). ೩. ಮಣ್ಣಲಿ ಸಾಗಿವ ಬಳಿಯ ಭಾಡಂ (ಎಕ. VII. ಶಿಕಾ. ೯೬-೦೩ ; 1113) ; ಸೈಂಧವನ ತಲೆಯನು ಕೊಡೆದು ನಿನ್ನಯ ಕಾಲ ಬಳಿಯಲಿ ಕೆಡಹುವೆನು (ಕುಮಾರವ್ಯಾ. ೯-೩೩) ; ನೆಳಲು ತನುವಿನ ಬಳಿಯೊಳಲ್ಲದೆ ಚಲಿಸುವುದೆ (ಶಳಶ. ೦-೦೦). ೪. ಬಂದರು ವಸಂತರಾಜನ ಬಳಿಯ ಲತೆಯಂತೆ (ಇಹಶ. ರೇ. ೩೩-೦೫). ೫. ಅಣನ್ನೂರು ಮೂನೂಱ ಬಳಿಯ ಅಂಕಾಲಗೆಯ್ಯುತ್ತ ಬೆಳ್ಳಿ [ಬ]ಟ್ಟೆಯನ ಕರಂಜಿಗೆಯ (ಎಇ. XXVII. ೦೫-೪೪ ; 1114) ; ಅರಿಯ ಬಳಿಯವರ ಗಡಿಯಿಂ ಕೊಳಹರ ಬಳಿಯವರ ಗಡಿಯಿಂದಂ (ಸೌಇ. XI-ii, ೪೨೪-೦೬ ; 1401) ; ಜನಿಯಿಸಿದೆನು ನಾನು ಮೂರನೆಯವನಾಗಿ ಬಳಿಯ ಬಳ್ಳಿಯ ಕುಡಿಯಾಗಿ (ಜಂಕಾಶ. ೩-೨೯). ೮. ನಗರೇಶ್ವರದೊಳಿರ್ದ್ದವರ್ಗಂ ಬಳಿಯನ(ಪು)ಟ್ಟೆಯರಸರಿಂ ಕಾಲು ಕಟ್ಟಿಸಿ (ಸೌಇ. IX — i, ೦೦೦-೩೬ ; 1046) ; ಬಳಿಯನಟ್ಟಿ ಬರಿಸಿ ಕಾಲಂ ಕಟ್ಟಿ (ಎಇ. XVI. ೬೭-೦೩ ; 1058).

ಬಳಿಯಣ = ಹತ್ತಿರದ ; ಸಮೀಪದ : ಉತ್ತರಕೆ ವೆಂನೊಬನ ಹಳಿ ಬಳಿಯಣ ಮುಂಡುಬಂಡೆ ದಕ್ಷಿಣಕೆ ಹುರಳಿಗೆರೆಯೇ ಮೇರೆ (ಎಕ. XII. ಶಾಕಗ. ೪೬-೩೪ ; 1670). ಬಳಿಯತನ = ಪಾರಂಪರ್ಯ : ಎರಡಿಲ್ಲದ ಬಳಿಯತನದಿಂ ಪಿಂತಣ ಕಬ್ಬಿಗರುಮೊಳರುಂ ಧರೆಗವತರಿಸಲ್ಕಿವರ್ ಸಾರ್ವಲೌಕಿಕಕವಿಗೆ ಬಲ್ಲಂತಿರೆ ತಾಂ ಮಾರ್ಗಪರಿಷ್ಕರಣಕಾರಿಗಳ್ ಭುವನಮನವಂಗೆಳ್ಚರಿಸಿ ಸಿದ್ಧಂ ಮಾಳ್ಪರ್ ಸೂಳಾಯ್ತುರುದಯರಾಗವ ಪಾಡುತ್ತುಂ (ಸಂಸಶ. ೬-೩). ಬಟ್ಟೆವಟ್ಟೆ$_2$, ಬಳಿಬಳಿ, ಬಳಿವಳಿ (ದ್ವಿರುಕ್ತಿ) : ಇವರೆಲ್ಲಿಗೆ ಪೋದಪ್ಪರೋ ಎಂದು ಬಟ್ಟೆವಟ್ಟೆಯನೆ ವಂದು (ಜಶಾ. ೬೬-೦) ; ಸರನಂದನನ ಬಟ್ಟೆವಟ್ಟೆಯಂ ತಗುಳ್ದು ಗಟ್ಟೆವಟ್ಟೆಯ ಪಾವಿನಂತೆ ಚಕ್ರವ್ಯೂಹಮಂ ಪುಗಲೆಂದು ಬರ್ಪ ದ್ರುಪದ . . . ಘಟೋತ್ಕಚಾದಿಗಳೊಡನೆ ಮಲ್ಲಾಮಲ್ಲಿಯಾಗಿ (ಹಂಶಾ. ೦೦-೯೬ ವ) ; ಹರನು ಮೂಲಿಗನಾಗಿ ಪುರಾತರೊಳಗಾಗಿ ಬಳಿಬಳಿಯಲು ಬಂದ ಮಾದಾರನ ಮಗ ನಾನಯ್ಯಾ (ಬಸವ. ೩೪೬); ಕಱುಗಳೋಡದಂತೊಡನೆ ಬಳಿವಳಿಯಲಿದ್ದಲ್ಲರೋಪಾದಿಯಿಂ ನಡೆವುದು (ಸಿದ್ಧಚ. ೨-೦೪).

[ದೇ.॥ ತಮಿ. ಮಲ. ವಟ್; ತೊದ. ಪೊಳ್; ತುಳು. ಬರಿ]

**ಬಟ್ಟ$_4$** (ಅ). ಆಮೇಲೆ ; ನಂತರ ; ಮತ್ತೆ : ಮತ್ತಂಬರ್ಥದೊಳು ಸಿರ್ವರ್ ಬಿತ್ತಗರಾ ಬಲ್ಲ ಬಟ್ಟಗಳಂ (ಶಬ್ದ. ೩೦೪). [← ತಮಿ. ವಟ್ಟು]

**ಬಟ್ಟಿಕ** 'ಬಟ್ಟಿಕಂ' ನೋ.

**ಬಟ್ಟಿಕಂ**, ಬಳಿಕ$_2$, ಬಳಿಕ$_3$, ಬಳಿಕ್ಕಂ, ಬಳಿಯಂ, ಬಟ್ಟಿಕ$_2$, ಬಟ್ಟಿಕೆ, ಬಟ್ಟಿಕ್ಕ$_2$, ಬಟ್ಟಿಕ್ಕಂ, ಬಟ್ಟಿಕ್ಕೆ, ಬಟ್ಟಿಯಂ (ಅ). ತರುವಾಯ; ಆಮೇಲೆ; ಅನಂತರ : "ಪಶ್ಚಾತ್, ಚರಮಂ — ೨ ಈ ಬಟ್ಟಿಕಂ" (ಶಬ್ದಮ. ೦೦೬-೨೨); "ಬಟ್ಟಿಕಂ ಬಟ್ಟಿಕ್ಕೆ ಬಟ್ಟಿಯಂ ಮತ್ತೆನಿಪ್ಪುದು" (ಅಭಿಧಾ. ೨) ; ನುಡಿ ಮುನ್ನಂ ಸ್ಪಷ್ಟಮಾಗಿರ್ದುದು ಬಟ್ಟಿವಿದಸ್ಪಷ್ಟ ಮಾಯ್ತು (ಕಾದಂಪೂ. ೩೬); ಬಟ್ಟಿಕಂ [ಪಾಠಾಂ. ಬಟ್ಟಿಯು] ಮನುಷ್ಯರಂ ಕಂಡು ಗರ್ಜನಾದಿಗಳಿನಂಜಿಸಿ (ಕಾದಂಪೂ. ೦೦). **ಬಳಿಕ$_2$** : ಆ ಮನ ನಿಮ್ಮಲ್ಲಿ ಒಡಮೆರದ ಬಳಿಕ ಎನಗೆ ಭವವುಂಟೆ (ಬಸವರಾ. ೩. ೨೪-೪೬); ನರಲೋಕ ದೊಳ್ ಪುಟ್ಟಿ ಅರಿದು ಬಳಿಕಿಲ್ಲಿರವು ನರನಾದ ಬಳಿಕ ಎತ್ತಣದು ಇತ್ತಣ ಬರವು (ಶಂಕರ. ೦-೩೬). **ಬಳಿಕ್ಕ** : ಅಲ್ಲಿ ಜಯಿಸಿ ಬಳಿಕ್ಕಂದು ಬಪ್ಪಂ ದೇವ (ಬಸವ. ೦-೬೩); ವಿಪಿನವನುಂಡು ಭ್ರಮಿಸಿ ಬಿದ್ದ ಬಳಿಕ್ಕ ಕಾದಡೆ ನಿಮಗೆ ಶಕ್ಯವೆ (ಬಸವ. ೦೩-೬); ಸ್ವಾಮಿಯ ಪದವಂ ನೆನೆದು ಬಳಿಕ್ಕೀ ಕಾವ್ಯ ಮನುಸುರುವೆನು (ಜಯನೃ. ೦-೪). **ಬಳಿಕ್ಕಂ** : ಅಲ್ಲಿಂ ಬಳಿಕ್ಕಂ ಎಮ್ಮ ನರ್ಚಿಸುತ್ತ ಭಕ್ತರ ಬಂಧುವಾಗಿ (ಬಸವ. ೯-೩೨); ಬಾಲಕನಂ ಬಿಸುಡೆ ಭೂಮಿಂದೇವಿ ಬಳಿಕ್ಕಂ ಪಾಲಿಸೆ ಬಳೆದಂ (ಜಯನೃ. ೨-೨೨). **ಬಳಿಯಂ** : ಸತ್ಯೇಂದ್ರಚೋಳಧರಣೀಶ್ವರಂ . . . ಮುಳಿಯದಿರ್ಪನೆ ಬಳಿಯಂ (ಚೆನ್ನಬ. ೦೩-೪೪). **ಬಟ್ಟಿಕ$_2$** : ಅವರಿಂ ಬಟ್ಟಿಕವರ ಮಗನ್ ರಾಜಪುಲಿ ಕುಲಮುದ್ದನ್ (ಎಕ. VIII. ಸೊರಬ. ೯-೩ ; ಕು. ೫೦೦) ; ಅಲ್ಲಿಂ ಬಟ್ಟಿಕ ಹಯಮುರಧ್ವಾನಂ (ಅಂಪು. ೦೪-೪೪). **ಬಟ್ಟಿಕೆ** : ಆಹವವಿಜಯಿಯಪ್ಪ ವಿಜಯನನೆ ಪಲು ಮುಂ ಕಂಡು ಬಟ್ಟಿಕೆ ನೃಪನಂ ಕಂಡಂ (ಪಂಪಭಾ. ೯-೦೦); ಪತ್ರಲೇಖಾಂಗನೆಯುಂ ಮುಂದಿಟ್ಟು ಬಟ್ಟಿಕೆ ಬರ್ಪುದು (ಕಾದಂಬ. ೨೬೦); ಬಿಡದಾರಾಧಿಸೆ ಮುನ್ನಮೆ ಕುಡಲಾಖಿದೆ ಬಟ್ಟಿಕೆ ಗಂಟಲಂ ಮೆಟ್ಟಿದೊಡೆ (ಗದಾಯು. ೩-೪೯). **ಬಟ್ಟಿಕ್ಕ$_2$** : ಸಂಧ್ಯಾಸಮಯಾತ್ತರಕ್ತರುಚಿ ಪಿಂಗೆ ಬಟ್ಟಿಕ್ಕುದಯಾದ್ರಿಯೊಳ್ ಪದಂಗಾಸಿದ ಪೊನ್ನ ಪುಂಜಿಯವೊಲಿರ್ದುದು ಕಣ್ಗೆ ಹಿಮಾಂಶುಮಂಡಲಂ (ಶಂಕರಾ. ೩-೬೦); ಆಕೆಯಂ ತರ್ಪುದನುಬಟ್ಟಿಯ ಬಟ್ಟಿಕ್ಕಿಲ್ಲ ದೇಖಿಂದುಪಾಯಾಂ (ಕಾದಂಪೂ. ೬೩೪). **ಬಟ್ಟಿಕ್ಕಂ** : ಮೊದಲ ಪದಂ ನ್ಯೂನಾಕ್ಷರಮದಱಿಂದೆ ಬಟ್ಟಿಕ್ಕಮರ್ಧಮಧಿಕಾಕ್ಷರಂ (ಛಂದೋ. ೦-೪೪). **ಬಟ್ಟಿಕ್ಕೆ** : ಶ್ರೀಭದ್ರಬಾಹು ಸಚಂದ್ರಗುಪ್ತಮುನೀನ್ದ್ರಯುಗ್ಮದಿನೊಪ್ಪ ವಲ್ ಭದ್ರಮಾಗಿದ ಧರ್ಮಮನ್ದುಬಟ್ಟಿಕ್ಕವನ್ದಿನಿಸಳ್ಕಲೋ . . . ವಿದ್ಯಾಧರ ಶಾನ್ತಿಸೇನಮುನೀಶನಾಕ್ಕಿ ಎವೆಳ್ಗೊಳ್ ಅದ್ರಿ ಮೇಲಶನಾದಿವಿಟ್ಟು ಪುನರ್ಭವಕ್ಕೆಜ್ ಆಗಿ (ಎಕ. II. ೩೦-೨; ಕು. ೬೬೦); ಈತನೆವ್ವಿಂ ಬಟ್ಟಿಕ್ಕೆ ಚತುರ್ದಶಪೂರ್ವಧಾರಿಯಪ್ಪ ಮಹಾತ್ಮಮನೊಡೆಯೊಂ ಭದ್ರಬಾಹುಭಟಾರರಂಬೊರಪ್ಪೊರ್ (ವಡ್ಡಾರಾ. ೩೪-೯) ; ಬಟ್ಟಿಕ್ಕೆ ಧಾತ್ರಿಯಂ ಶತಬಲನಾತ್ಮಜಂಗೆ ನೆಗಟ್ದು (ಆಂಪು. ೨-೦೪). **ಬಟ್ಟಿಯಂ** : "ಬಟ್ಟಿಯಂ, ಬಟ್ಟಿಕಂ, ಬಟ್ಟಿಕ್ಕಂ, ಬಟ್ಟಿಕೆ. ಬಟ್ಟಿಕ್ಕೆ ಇವು ಪಶ್ಚಾದರ್ಥಂಗಳ್" (ಶಬ್ದಮ. ಶಂ. ೦) ; ಧರ್ಮಂಗಳಂ ನಮಸ್ಕಂ ನಡೆಯಿಸಿ ಬಟ್ಟಿಯ ಮೊನ್ನು ವರ್ಷಂ ರಾಜ್ಯಮಂ ಪತ್ತುವಿಟ್ಟು (ಎಕ. II. ೩೪-೦೦೪; ೯೭೪) ; ಪೊಡಮಂ ಕೂಟಂ ಬಟ್ಟಿಯುಂ ಪೊಡೆಮಂ ರಕ್ಕಸನಂ (ಶಂಕರಾ. ೩-೨೯); ಪೊಡಮಟ್ಟು ಬಟ್ಟಿಯಂ ಪಳೀಮುಖನಿಂತೆಂದುದು (ಶಂಕರಂ. ೦೦೦-೨).

**ಬಳಿಕಣ**=ನಂತರದ : ಆ ಬಳಿಕಣ ಇದರ ಈ ಏನೆಯ ಮುದ್ರಣವು . . . ಪ್ರಕಾಶಿತವಾಗಿದೆ (ಗೊಲ್ಲಾಶಾ. iii. ಪುಟ್ಟು೩). [< ಬಟ್ಟ$_4$]

**ಬಟ್ಟಿಕೆ** 'ಬಟ್ಟಿಕಂ' ನೋ.

**ಬಟ್ಟಿಕೊಳ್** 'ಬಟ್ಟಿಗೊಳ್' ನೋ.

**ಬಟ್ಟಿಕ್ಕ$_1$** (ನಾ). ಅನಂತರದ ಸಮಯ : ಬಟ್ಟಿಕ್ಕನ ನುಡಿಗೆ ಸೈಂಸಲಾಖದ ಫಣಿಕೇತನನಿಂತೆಂದಂ (ಶಂಕರಾ. ೦೩-೨ ವ). [<ಬಟ್ಟಿಕಂ]

**ಬಟ್ಟಿಕ್ಕ$_2$** 'ಬಟ್ಟಿಕಂ' ನೋ.

**ಬಟ್ಟಿಕ್ಕಂ** 'ಬಟ್ಟಿಕಂ' ನೋ.

**ಬಟ್ಟಿಕ್ಕೆ** ಬಟ್ಟಿಕಂ' ನೋ.

**ಬಟ್ಟಿಗಳಿಪು** (ಕ್ರಿ). ಹಿಂದೆಯೇ ಕಳುಹಿಸು : ಅಗಲಲಾಖದೆ ಕಳಿಪುತ್ತುಂ ಕಳಿಪಿ ಪೋಗಿ ತದಾ [ದ] ನುಗ್ರಹಮಂ ಏನಾಜಲಣ್ಣದೆ ಕಣ್ಣಲರ ಮಾಲೆಯನೆ ಬಟ್ಟಿಗಳಿಪಿ ಬಂದಂ (ಆಕಂಪು. ೯-೯೩ ವ).

[ಬಟ್ಟ$_3$ + ಕಳಿಪು(< ಕಟ್ಟಿಪು$_1$) ]

**ಬಟ್ಟಿಗೊರಲ್** (ನಾ). ಪಕ್ಷಿಗಳ ಗಂಟಲಿನ ಇಳಿಜಾರಾದ ಭಾಗ ; ಪಿಂಗಳಾನಾಡಿಯ ಮುಂದಕ್ಕೆ ಇರುವ ಗಂಟಲಿನ ಭಾಗ : "ಬಟ್ಟಿ –ಬಟ್ಟೆ, ವಂಶ, ಕರೆವಂ, ಲೇಪಿಸುವುದು, ಪಿಂಗಲಿಯ ಬಟ್ಟಿಗೊರಲ್, ಮತ್ತೆ" (ಶಬ್ದ. ಶಂ. ೦). [ಬಟ್ಟ$_3$+ಕೊರಲ್]

**ಬಟ್ಟಿಗೊಳ್**, ಬಳಿಗೊಳ್, ಬಟ್ಟಿಕೊಳ್ (ಕ್ರಿ). ೧. ಹಿಂದೆ ಹೋಗು ; ಹಿಂಬಾಲಿಸು : ಮುಂಧಣ ಮಿಗಮಂ ಕಟ್ಟಿಪದೆ ಸಂದಿಸಿ ಬಟ್ಟಿಗೊಳ್ಳ ಮಿಗಮುಮಂ ಕಟ್ಟಿಪದೆ ತಾನೊಂದಳವಿದಪ್ಪದೆಚ್ಚು ಬಲೀಂದಮನಿಂ ದಿಲ್ಲ ಬಲ್ಮೆಯಂ ಪೊಗಟ್ಟಿಸಿದಂ (ಶಂಕರಾ. ೩-೯೬). ೨. (ಅಲಂ) ಗಮನ ವಿಡು; ಲಕ್ಷಿಸು: ಕಳಶಮನೆತ್ತಿ ನೀರೆಱೆವ ಕಾಂತೆಯ ಲೋಲ ವಿಲೋಚ ನಾಂಶುಸಂಕುಳಮನೆ ವಾರಿಧಾರೆಯನುತಂ ನಿಜತೋಯಮನೀಂಟದೊಯ್ಯ ನಂಜಳಿಯನಮರ್ಚೆ ಬಾಯ್ಗೆ ಮೊಗಮಂ ಬಟ್ಟಿಗೊಂಡೆಡಕಂ ಬಲಕಮುಜ್ವಳ ತೃಷೆಯಿಂದೆ ತಂದೞಿಕೆ ಪಿಂಗದೆ ನಾಣ್ಚದನೊರ್ವ ಬಟ್ಟಿಗಂ (ಕಾವ್ಯಾವ. ೩-೪೨). **ಬಳಿಗೊಳ್** : ೧. ಎಂದಿನಂದದಿ ಗೋಕುಲಂಗಳು ಬಳಿಗೊಂಡು (ಕಪಾಠ. ರೀ. ೦೬೪-೩); ಆಕೆಯ ಬಳಿಗೊಂಡು ಗಾಯತ್ರಿಯರೆಯ್ದಿದರು (ಭಕ. ೯-೯೬); ಅಲ್ಲಿರ್ದ ಸಭೆಯು ಬೀಳ್ಕೊಟ್ಟು ಮಂತ್ರಿಯು ಸಖರ ಸಲ್ಲೀಲೆಯಿಂದೆ ಬಳಿಗೊಂಡು . . . ಪಲ್ಲಕ್ಕಿಯುಮನೇರಿ (ಪಪಪ.ಅ. ೬-೯೩). ೩. ದಾರಿಯನ್ನು ಹಿಡಿ; ಮಾರ್ಗವನ್ನು ಅನುಸರಿಸಂ: ಗಿಡುವಿನ ಸರುವಿನ ವರುವಿನ ಮಡುವಿನ ಬಳಿಗೊಂಡು ಶುನಕನಟ್ಟಿತು ಮೊಲನಂ (ಗಿರಿಜ. ೦-೯೩). **ಬಟ್ಟಿಕೊಳ್** : ೪. ಕ್ರಮವಾಗಿಡು; ಕ್ರಮದಲ್ಲಿರಿಸು : "ಬಟ್ಟಿಕೊಳ್–ಕ್ರಮಾಸಂಧಾನೇ (ಕ್ರಮವಾಗಿಡು)" (ಕವಿರಾ).

[ಬಟ್ಟ$_3$ + ಕೊಳ್$_1$]

**ಬಟ್ಟಿದಪ್ಪು**, ಬಳಿದಪ್ಪು (ಕ್ರಿ). ೧. ದಾರಿತಪ್ಪು; ಹಾದಿತಪ್ಪು : ಮರದ ಮಱೆಗಳೊಳ್ ಬಟ್ಟಿದಪ್ಪಿದ ಮಱಿಯನಱಸಿ ಮಱುಕದಿಂ ಸುಟ್ಟುರ್ವ ಖಿದ್ಗ್ರಧೇನುಗಳ (ಶಂದ್ರಕು. ೩-೬೩ ವ); ನೀನೆ ಸೋಲ್ದಿರ್ಪ ಜಾಣ್ಮೆಯೊಳ್, ಬಟ್ಟಿದಪ್ಪಿ ಪೋಗಿರ್ಪ (ಅದ್ಭುತ. ೨೩-೩೩೬). ೨. ಸಾನ್ನಿಧ್ಯ ತಪ್ಪು; ದೂರವಾಗು: ದಿನೇಶನ ಬಟ್ಟಿದಪ್ಪಿದ ಕಿರಣಂಗಳ್ ಟಟ್ಟಲೆಯಂ ಕಂಡಳ್ಕಿ ತನ್ನ ಮಱೆಯಂ ಪೊಕ್ಕಂತೆ (ಶಂಕರಾ. ೦೨-೬೬ ವ). **ಬಳಿದಪ್ಪು** : ೧. ಹೊಲಬುಗೆಟ್ಟ ಶಿಶು ತನ್ನ ತಾಯ ಬಯಸುವಂತೆ ಬಳಿದಪ್ಪಿದ ಪಶು ತನ್ನ ಹಿಂಡನರಸುವಂತೆ (ಬಸವ. ೩೬೩). [ಬಟ್ಟ$_3$ + ತಪ್ಪು$_1$]

**ಬಟ್ಟಿದೊಟ್ಟು**, ಬಳಿದೊತ್ತು, ಬಳಿದೊಳ್ತು (ನಾ). ವಂಶಪಾರಂ ಪರ್ಯವಾಗಿ ಬಂದ ಆಳು.–ಸೇವೆ ಮಾಡುವ ವ್ಯಕ್ತಿ : ತೊಟ್ಟೀ ಬಟ್ಟಿದೊಟ್ಟಿರ ಪಡಿದೊಟ್ಟಿವಳಾರೊಳ್ಳಿಲಪೊ ನರವಾನರ ಪೇಟ್ (ಶಶಿಪ. ೩-೨೮೯). **ಬಳಿದೊತ್ತು** : ಬಳಿದೊತ್ತು ಬಳಗದೊತ್ತು ವಂಶದೊತ್ತು ನಾನಯ್ಯ (ಬಸವ. ೩೩೩); ಅಂದಿಂದಿರನಗೆ ಕುಲವಳಿಯ ಬಳಿದೊತ್ತಿರಪ್ಪ ವಱೀಂದೀ ನಂಬಿಯುನೆನಗೆ ತೊತ್ತಿನ ಮಗನಾಗಿ ಕೊಟ್ಟರ್ (ಶಂಭ. ೩-೦೦೦). **ಬಳಿದೊಳ್ತು** : ನಾವೆಲ್ಲಮುಂ ನೆಲದೊಳ್ತಿರ್ ಬಳಿದೊಳ್ತಿರ್ ಸಲೆದೊಳ್ತಿರ್ ನಿಮಗೆನುತ್ತೆ (ಗಿರಿಜ. ೦೦-೯೩). [ಬಟ್ಟ$_3$+ತೊಳ್ತು]

**ಬಟ್ನೀರ್**, ಬಳಿನೀರ್, ಬಳಿನೀರು (ನಾ). ೧. ದೇವತಾವಿಗ್ರಹಕ್ಕೆ ಅಭಿಷೇಕ ಮಾಡಿದ ನೀರು ; ☞ ತನ್ನ ನಿಷ್ಠೆಯನ್ನು ನಿರೂಪಿಸಲು ಈ ನೀರನ್ನು ಕುಡಿಯುವ ಪದ್ಧತಿಯಿತ್ತು. ಇದೊಂದು ದಿವ್ಯ ಪರೀಕ್ಷೆ ; ಇದಕ್ಕೆ ಕೋಶಪಾನವೆಂದು ಹೆಸರಿದೆ : "ಕೋಶಪಾನಂ–ಬಟ್ನೀರು[ರ್]" (ಶಬ್ದಮ. ೨೯–೬೩). ೨. ವೇಶ್ಯೆಯು ವಿಟನಿಗೆ ತನ್ನ ಅಚಲವಾದ ಪ್ರೇಮವನ್ನು ತಿಳಿಸುವುದಕ್ಕಾಗಿ ಮಾಡಿ ತೋರಿಸುವ ಪ್ರತಿಜ್ಞೆಯ ಸಂಕೇತವಾಗಿ ಕುಡಿಯುವ ನೀರು : ವಿಟನು ಕುಡಿದ ಬಳಿಕ ಕುಡಿಯುವ ನೀರು : ನಿಜಗಳನಿಕ್ಕಿ ದಾಂಟಿಸದೆ ದುಂಡಿಸು ವಾಕೆಯನೊತ್ತಿಗೊಳ್ಳದಂತೆಯಿರದೆ ತೀಪೆಗಳ್ಳ ಬಟ್ನೀರ್ಗಳನಗ್ಗದ ಪೆಣ್ಗೆ ಪೆಯ್ಯನಿಯ್ದಿರದೆ . . . ವಿಟವೃತ್ತಿಗೆ ಮುಯ್ಯನಾಂಪುದೇ (ಲೀಲಾವ. ೨–೯೩); ನುಡಿಯಲ್ಲಂ ಹೊರೆ ಸೂರುಳೊಳ್ಳಿ ಹೊಸಂತಿಲ್ ಕೊಂಗೊಳೆಲ್ ಪುತ್ರಾಯ್ಯುಡಿನೀರೊರ್ವರ್ಗೆ ಕವ್ವನವ್ವ ಬಟ್ನೀರೂರೂರ ದೈವಂಗಳುಂ ಪಡಿಗತ್ತೋಡಿದುವೀಕೆಗಂಜಿ ವಿಟರಿಂದುಂ ಗಂಟು (ಲೀಲಾವ. ೨–೧೧೨); ಕುಡಿದೊಡೆ ಹೊಟ್ಟೆಯಿಂದೆ ಬಟ್ನೀರ್ ಪೊಱ ಪಾಯ್ವುವೆ ಸುತ್ತಿ ಕಾಲನೇಂ ತೊಡರ್ವುವೆ ದಾಂಟುವಲ್ಲಿ ನಿಜ (ಶಂಕ್ರ.ಪು. ೬–೩೦). **ಬಳಿನೀರ್**: ೨. ಕುಡಿದ ನೀರವರನುಳಿದು ಪೋಗದಂತವರ್ಗೊಡನೆ ಕುಡಿದ ಬಳಿನೀರ್ಗೆ [ಪಾಠಾಂ. ಬಳಲಿಕೆಯು] ಪಡಿಯಾಗೆ ಪಥಿಕರಲ್ಲಿಂ ತೆರಳದೆ ನಿಂದು ತಡೆಯ ದಿಟ್ಟಿಸುತಿಹರವರ (ಲಂಬಾಂ. ೨–೩೦). **ಬಳಿನೀರು** : ೧. ಹರಿ ಬ್ರಹ್ಮರಿಗೆಟುಗದಂತೆ ಬಳಿನೀರನೆರೆಯಾ (ಬಸವ. ೯೯೯); ಕೂಲಿಗೆ ಬಳಿನೀರ ಕುಡಿದರೆ ಆಧಾರ ಮುಟ್ಟುವುದು (ಬಸವ. ೬೯). ೨. ಬಳಿನೀರ ಕುಡಿದು ನಿಜಿಯು ದಾಂಟ ಪುತ್ರಾದಿ ಬಳಸಂದನಿಯರ ಚಿತ್ರವನು ತಿಳಿಪಿ ಕಾಲ್ನಿಡಿದೊಡಗೂಡುವ ಗಳಿಸಾಳಿ ಬೆಲೆವೆಣ್ಣ ಸದರಂದಲ್ಲಿ (ಲಂಬಾಂ. ೨೬–೬೬). [ಬಟ್₁ + ನೀರ್]

**ಬಟ್ನೀರ್ಗುಡಿ**, ಬಳಿನೀರ್ಗುಡಿ (ಕ್ರಿ). ೧. ದೇವತಾವಿಗ್ರಹವನ್ನು ಅಭಿಷೇಕ ಮಾಡಿದ ನೀರನ್ನು, ತನ್ನ ನಿಷ್ಠೆ ಅಥವಾ ಸತ್ಯಸಂಧತೆಯನ್ನು ನಿರೂಪಿಸಲು ಕುಡಿ : ಬಟ್ನೀರ್ಗುಡಿದು ಪುರುಷನ ಸಂತಾನ ಕ್ಷಯವಾಕ್ಕುಂ (ಶಬ್ದಮ. ೨೯–೬೩). ೨. ವೇಶ್ಯೆಯು ವಿಟನಿಗೆ ತನ್ನ ಅಚಲವಾದ ಪ್ರೇಮವನ್ನು ತಿಳಿಸುವುದಕ್ಕಾಗಿ ಮಾಡಿ ತೋರಿಸುವ ಪ್ರತಿಜ್ಞೆಯ ಸಂಕೇತವಾಗಿ ವಿಟನು ಕುಡಿದು ಉಳಿಸಿದ ನೀರನ್ನು ಕುಡಿ : ಪೊಸಮೇಟವಂ ಪೊಯ್ದುಕೊಳಲುಂ ಮತ್ತಿನ ಗಂಡರ್ಮೊಲಡಿಯಲ್ಲರೆಂದು ಮನದೊಳಗೆ ಬಟ್ನೀರ್ಗುಡಿದ ಬದ್ದೆಯರ್ (ಅರ್ಜುನ. ೩–೨ ವ). **ಬಳಿನೀರ್ಗುಡಿ** : ೧. ಪರವಣ್ಣಿನಗವ್ಮ ಹರಿಹರದೇವಿಯು ದೊರೆಯೆಂಗಿಶನ ಮುಂದೆ ಭರದಿಂದ ಬಳಿ[ಪಾಠಾಂ. ಬಳಿಕ]ನೀರ್ಗುಡಿವಂತವನಾಗಳಿದೀಂಟಿದನು ತೀರ್ಥಜಲವ (ಲಂಬಾಂ. ೨೯–೪೭). ೨. ಉಟ್ಟ ನಿಜಿ ದಾಂಟಿದಡೆ ಕಟ್ಟುವುದೆ ದೈವವಂ ಮುಟ್ಟಿದಡೆ ಬೆರಳು ಹತ್ತುವುದೆ ಬಳಿನೀರ್ಗುಡಿಯೆ ಹೊಟ್ಟೆ ಹಱವುದೆ (ಹರಿಶ. ೯–೨೩); ದೇವರ ನಿಲುಕೆ ಹತ್ತುವುದೆ ಕರತಳ ನಿಜಿಯು ದಾಂಟಲು ಕಟ್ಟುವುದೆ ಬಳಿನೀರ್ಗುಡಿಯಲೀಯುದರ ಉರಿವುದೆ (ಹರಿಶ. ೧೭–೩೭). [ಬಟ್ನೀರ್+ಕುಡಿ₁]

**ಬಟ್ಯ**, ಬಳಿಯ (ನಾ). ೧. (ವಿಧೇಯತೆಯ) ನಡವಳಿಕೆಯುಳ್ಳವನು; ವಿಧೇಯ : "ಬಟ್ಯನೆಂದೆನೆ ವಿಧೇಯಂ" (ಸಂಚಿತ. ೯); "ಬಟ್ಯಂ–ವಿಧೇಯಂ" (ಕರ್ಣಾ. ಶಂ. ೧). **ಬಳಿಯ**: ೧. ಕಿರುಜಂತುವನುಂ ಕೊಲಲಿಲ್ಲಂ ಒರಿಯ ಗುಣಂ ಬಳಿಯಂ ಗುರುಸೇವೆಯಿಂದುರು ಕರುಣಾಳುವನೇನೆಂಬೆ (ಶಾಂತಿ. ೩–೩೦). ೨. ಒಂದು ವಂಶದ ಹೆಸರು : ಮಹಾಜನ ಅಯ್ವದಿಂಬರುಂ ಉಭಯಸಮ್ಮತದೊಳಿಟ್ಟು ಬಳಿಯರ ಬಾವಮ್ಮಗೆ ಬೂದಗೂಟನಿತ್ತೊರ್ (ಶಾಶಾ. IX–I, ೫೯–೬; ?). [ಬಟ್₃ + — ಅ₇]

ಬಟ್ಯಂ 'ಬಟ್ಕಂ' ನೋ.

**ಬಟ್ಯಟ್ಟು**, ಬಳಿಯಟ್ಟು (ಕ್ರಿ). ದೂತನ ಮೂಲಕ ಸುದ್ದಿಯನ್ನು ಕಳುಹಿಸು,–ಕರೆಕಳುಹಿಸು : ಕಜ್ಜಂ ಪುಟ್ಟಿದೊಡಮಗೆ ಬಟ್ಯಟ್ಟಿದೀ ಪೊಟ್ಟಿದಾವುದು ಮನೆವಾಟ್ಟಿಗೆಟ್ಟಿಂದೆ (ಶಂಕರ. ೧೦–೩ ವ); ಧಾತ್ರೀಪತಿಗಱಪಿ ಮರುತ್ಪುತ್ರಂ ಬಟ್ಯಟ್ಟೆ ಕರಸಿ (ಗದಾಯು. ೬–೯೯): ಅಂತು ಬಟ್ಯಟ್ಟಲೊಡಂ ಗಿರಿರಾಜರ್ ನೆಟಿದು ಬಂದು (ಶಂಕರ. ೨೬೯–೧೨). **ಬಳಿಯಟ್ಟು** : ಭುವನೈಕ[ಮ]ಲ್ಲ ಭೂಪತಿ ಬಳಿಯಟ್ಟೆ ತನ್ನನಿವದಾಬ್ಜಯುಗಕ್ಕೆ ವಿನಮ್ರನಾಗಿ (ಎಇ. XVIII, ೦೯೬–೦೯;1104); ರಾಜಸದ ಹಮ್ಮಿನಲಿ ಬಳಿಯಟ್ಟುವುದು ಬಸವಾ ನಿನಗಿದುಚಿತವೆ (ಪ್ರಭುಲಿಂ. ೦೯–೦೯): ಮಾರಿಯ ಮನೆಗೆ ಬಳಿಯಟ್ಟುವವೊಲಟ್ಟಿದನುರಗಶಯನಂಗೆ (ಶಾಲ್ಯಶಾ. ೨೨–೩೦). [ಬಟ್₃+ಅಟ್ಟು₂]

**ಬಟ್ವರ್**, ಬಳಿಬರು, ಬಳಿವರ್, ಬಳಿವರು (ಕ್ರಿ). ೧. ಹತ್ತಿರ ಬರು ; ಸಮೀಪಿಸು : ನಂದವನಪವನಂ ಬಟ್ವಂದೊಡಗೊಂಡೊಯ್ದು ಪೂಗೆಬನವಂ (ಶಾಂತಿ. ೬–೩); ನೋಟ್ಟ ಪರ್ವವನೀ ಬಾಲಕರೆಂಬದರ್ಕೆ ಬಟ್ವಂದೆಂ ಭೋಜರಾಜಾಜ್ಞೆಯಿಂ (ಜಗನ್ನಾ. ೩–೬೩); ಎನ್ ಬಟ್ವಂದೊಡಮಂಜಿವಡುವನ್ (ಚಕ್ರಪ್ರ. ೬–೧೬೩). **ಬಳಿಬರು** : ೧. ಗುರುಭಾರವಾದರು ಬಳಿಬಂದ ಮುಗಿಲನು ಹೊರುವುದು ತಲೆಯ ಮೇಲಗವು (ಜಂಬೂಶ. ೦೦೯–೩೩). **ಬಳಿವರ್** : ೨. ಕೂಡಿಕೊಳ್ಳು ; ಹೊಂದಿಕೊಳ್ಳು: ಎರಡುಂ ಕೇರಿಯ ಸಾಸಿರ್ವರ್ಗ್ಗಂ ನಿರ್ವಿಕಲ್ಪದಿಂ ಸಹಾಯರಾಗಿ ಬಳಿವನ್ದು ಬಾಳ್ವುದು (ಶಾಶಾ. XI–I, ೬೯–೩೩ ; 1028). **ಬಳಿವರು** : ೧. ಅಲರ ಪರಿಮಳವೆಳಸಿದೆಳೆಗಾಳಿಸುಳಿವಂತೆ ನಲವಿಂದ ಬಳಿವರುವ ಇನಿಯಳಂತೆ (ರಾಜಶೇ. ೩೦–೬). [ಬಟ್₃ + ಬರ್ (< ವರ್) ]

**ಬಟ್ವಟ್**, ಬಳುವಳಿ, ಬಳ್ಳವಳ್ಳಿ, ಬಳ್ಳೊಳ್ಳಿ (ನಾ). (ವಿಶೇಷವಾಗಿ ವಂಶದ ಸಂಬಂಧ ಅಥವಾ ಹೆಣ್ಣುಕೊಟ್ಟು ಬೆಳೆಸಿದ ನಂಟಿನ ಮೂಲಕ ಬರುವ) ಕೊಡುಗೆ; ಉಡುಗೊರೆ : "ಬಟ್ವಟ್ (ಬಟ್ವಟ್) = ಕೊಟ್ಟ ವಸ್ತುವಿನ ಬಟ್ಯೊಳ್ ಕುಡುವುದು" (ಕಬುಡ. ಶಂ. ೧); ಕೊಟ್ಟಂ ತಂಗಿಗೆ ಬಟ್ವಟ್ಯೆಂದಿತು ಸರ್ವಸ್ವಮೆಲ್ಲಮಂ ಪುರುಷೋತ್ತಮಂ (ಶಂಕರ. ೩–೨೬); ಬಟ್ವಟ್ಯೆಂಬುದು ಬಡವಂಗಟ್ಪಂಗೇಂ ಮುಟ್ಟೆ (ಶಾಂತಿ. ೬–೨೦). **ಬಳುವಳಿ** : ನಿಮ್ಮಯ ಹೆಂಡಿರನು ಬಳುವಳಿಯ ಕೊಡಿ ಹಾರುವನ ಹೆಂಡತಿಗೆ (ಲಂಬಾಂ. ೦೩–೪೦); ಅಳಿಯನನು ಮನ್ನಿಸುತ ಮಗಳಿಗೆ . . . ಗಜ ರಥ ತುರಗ ಪಾದಾತಿಗಳ ಲಲನೆಯರ ಬಳುವಳಿಯನಿತ್ತ (ಶಶಿಶ. ೩–೬೨); ನಿಜನಂದನೆಗೆ ಬಳುವಳಿಯನು . . . ವಸ್ತ್ರಾಭರಣವಂ ಕೊಟ್ಟು (ಶಂಕ. ೩೬–೬೦); ಹರಿಸಂ ಮಿಗೆ ಬಳುವಳಿಯಾಗಿತ್ತ ಧನಕನಕವಸ್ತುವಾಹನಸಹಿಸಂತಾನವನೊಡವೋಪಂತೆ ನೇಮಿಸಿ (ಯಾಜ್ಞ. ೯–೬೬ ವ). ಅವಳ ಅಜ್ಜ ಬಳುವಳಿ ಬಿಟ್ಟಿದಾರೇನು? (ಶಾಕ್ಯಶ್ರೀ. ೬೨). **ಬಳ್ಳವಳ್ಳಿ**: ಕಾವು ರತಿದೇವಿಗುಡುಗೊರೆ ಬಳ್ಳವಳ್ಳಿಗಳ ಕುಡು (ಮೋಹತ. ೦೩–೦೩). **ಬಳ್ಳೊಳ್ಳಿ** : ದೊಡ್ಡಮಾವನ ಮದುವೇಲಿ . . . ಬಳ್ಳೊಳ್ಳಿ ಕೊಟ್ಟಿದ್ದಂತೆ (ಜಾನಪ. ೩೦೦). [< ಬಟ್₃./ತುಳು. ಬಳಿವಳಿ, ಬಳುವಳಿ]

**ಬಟ್ವಟ್ಗೊಡು**, ಬಳುವಳಿಕೊಡು, ಬಳುವಳಿಗೊಡು (ಕ್ರಿ). (ವಿಶೇಷವಾಗಿ ಮದುವೆಯಾದ ಹೆಣ್ಣುಮಗಳಿಗೆ ತೌರಿನವರು) ಉಡುಗೊರೆ ಕೊಡು ; ಕೊಡುಗೆ ನೀಡು : ತನ್ನ ಮಗಳಪ್ಪ ಸುಮತಿಗೆ ಬಟ್ವಟ್ಗೊಟ್ಟು (ವರ್ಧಮಾ. ೦೦೬–೨೨); ಆತನ ಬಟ್ವಟ್ಗೊಟ್ಟ ಮದಕರಿಕರೇಣುಜಾತ್ಯಶ್ವ ಶಶಿತಾರಹಾರವಸ್ತುಗಳಂ ಕೆಯ್ಕೊಂಡು ದ್ರುಪದಜೆಯನೊಡಗೊಂಡು . . . ಮದಗಜಪುರವನೆಯ್ದೆವಂದಾಗಳ್ (ಪಂಪಭಾ. ೯–೯ ವ); ಅನೇಕನೂತ್ನರತ್ನಾಭರಣಂಗಳುಮಂ ಬಟ್ವಟ್ಗೊಟ್ಟು ಕಟ್ಪುತ್ತುಂ ಬರೆವರ್(ಲೀಲಾವ. ೯–೦೦೬ ವ). **ಬಳುವಳಿಕೊಡು** : ಲಿಂಗಯ್ಯ ತಾನು ಮಗಳಿಗೆ

ಬಳುವಳಿ ಕೊಡಲೆಂದು ತೆಗೆದಿಟ್ಟ ನಗಗಳ ಗಂಟನ್ನು ತೆಗೆದುಕೊಳ್ಳಲು ಮರೆಯಲಿಲ್ಲ (ಚಾಟುಕ. ೯೯). **ಬಳುವಳಿಗೊಡು**: ಉರುತರವಪ್ಪ ವಸ್ತುವ ಬಳುವಳಿಗೊಟ್ಟು . . . ಕಳುಹೆ ಹರಿಸದಿ ಮದವಕ್ಕಳುಗೂಡಿ ಹಸ್ತಿನಪುರಕೆ ಬಂದನು ಭೀಷ್ಮನೃಪತಿ (ಕೇಜಿಹ. ೩-೬೨). [ ಬಟ್ಟವಟ್ + ಕೊಡು₁ ]

**ಬಟ್ಟವಟ್ಟಗೊಳ್** (ಕ್ರಿ). ಉಡುಗೊರೆಯಾಗಿ ಸ್ವೀಕರಿಸಂ,— ಪಡೆ: ನಿನ್ನೀ ಪೂಟಲಂ . . . ನಿನ್ನೀ ಕುಲಧನವುನೊಡನೆ ಬಟ್ಟವಟ್ಟಗೊಳ್ಳಂ (ಧರ್ಮಾ. ೬-೬೦). [ ಬಟ್ಟವಟ್ + ಕೊಳ್₁ ]

**ಬಟ್ಟವಿಡಿ, ಬಳಿವಿಡಿ** (ಕ್ರಿ). ಹಿಂದೆ ಹೋಗು; ಹಿಂಬಾಲಿಸು: ನಡ ನಟ್ಟ ಕೋಲ ಬಟ್ಟವಿಡಿದೆತ್ತಂ ಸುರಿದುವು . . . ನವರುಧಿರಂಗಳ್ (ಪಂಪಭಾ. ೦೩-೦೯೯); ಇಂದ್ರಾಯುಧದ ಬಟ್ಟವಿಡಿದು . . . ಕುತೂಹಲದಿಂದೆ ಪರಿಜನಂ ಬರುತ್ತಮಿರೆ (ಕಾದಂಬ. ೩೬೦); ವೀಣೆಯ ಕೊಬಲ ಬದಂಡೆಯು ಗಣದ ಬಟ್ಟವಿಡಿದು ಸುಟ್ಟಿದು . ಬಳಸುವ ನಾಣಲಿಗಳನೀ ಬುಧಾಳಿಯೊಳ್ ಪೊಗುಸುವುದೆ (ಸುಕುಮಾ. ೨-೨೯). **ಬಳಿವಿಡಿ**: ನಿನ್ನ ಶರಣರ ಬಳಿವಿಡಿದರೆ ಎನ್ನ ದಂದುಗ ಹಿಂಗುವುದು (ಬಸವ. ೩೬); ತೀಡುವ ಗಂಧವಹನ ಬಳಿವಿಡಿದು...ಮೊಚೆವ ಮಧುಕರಪ್ರಕರದಿಂ (ಗಿರಿಜ. ೨-೬೦ ಕ); ಬಳಿಕ ಸೌಗಂಧಿಕದ ಪವನನ ಬಳಿವಿಡಿದು ನಾ ಬಂದೆ (ಕುಮಾ.ಭಾ. ೦೦-೨೩). [ ಬಟ್ಟ₃ + ಪಿಡಿ₁ ]

**ಬಟ್ಟವಿಡು** (ಕ್ರಿ). ೧. ದಾರಿಯನ್ನು ಬಿಡು ; ಎಡೆಮಾಡಿಕೊಡು : ಸುರರಾ[ಜ] ಕೈವಾರದಿಂ ಬಟ್ಟವಿಟ್ಟು ಪಮ್ಮನೆ ನೋಡ ನೋಡುವರ್ (ಪಂಪಭಾ. ೦೩ ೯೩). ೨. ಸಾವಿಗಾಪ್ತವನ್ನು ಬಿಡು; ದೂರ ಹೋಗು: ಬಟ್ಟವಿಡದ ಮುಸುಕುಮೇಗಳ್ ಬಳಗಕ್ಕೇನೈಸಿ ಮಾಗುದೆ ಕೆಳಿಯಲ್ ಸರದೊಳ್ ಮುಳುಗಿರ್ದುದ ನೆಗೆದುಮ ಕಂಡು (ಕುಸುಮಾ. ೩-೦೯೬). [ ಬಟ್ಟ₃ + ಬಿಡು₁ ]

**ಬಟ್ಟಪೋಕ** (ನಾ). ದಾರಿಹೋಕ; ಪಥಿಕ, ಪಾಂಥ: ಬಟ್ಟಪೋಕರಂ ಕೊಲ್ಲ ಕಳ್ಳ ದುಙುದುಂಬಿ ಕೊರೆಗೇಗೆ . . . ಕಾಣಲ್ಪಾರದು (ಧರ್ಮಾ. ೬೯-೨). [ ಬಟ್ಟ₃ + ಪೋಕ ]

**ಬಟ್ಟಪೋಗು** (ಕ್ರಿ). ದಾರಿ ಹಿಡಿದು ಹೋಗು; ಮಾರ್ಗವನ್ನು ಅನುಸರಿಸಿ ಸಾಗು: ಲಲಿತಯಾನವಿಳಾಸದಿನೊಂದೆ ಪೋಪ ಹಂಸಗಳನದೊಂದು ಕಾಣದೊಳಭೀಪ್ಸಿಸಿ ಮೆಲ್ಲಡೆಯಂ ಕಲಲ್ಕೆ ನೆಟ್ಟಗೆ ಬಟ್ಟಪೋಗುತಿರ್ದಪುವು ತತ್ಪತಿ ಪೋದವಳಿಲ್ಲಿಯೆಂಬುದಂ ಬಗೆದಿರದೆಯ್ದಿದಂ (ಕುಸುಮಾ. ೦೯-೨೩೦). [ಬಟ್ಟ₃ + ಪೋಗು₁ (<ಪೋ₁) ]

**ಬಟ್ಟಸಲ್, ಬಳಿಸಲ್, ಬಳಿಸಲು** (ಕ್ರಿ). ಅನುಸರಿಸಿ ಹೋಗು; ಹಿಂಬಾಲಿಸು : "ಬಟ್ಟಸಲ್_ಅನುಗಮನೇ (ಸಮೀಪಕ್ಕೆ ಬರು)" (ಶಮಧಾ) ; ಮತ್ತಿನುಟ್ಟಿದರುಮನುಟ್ಟಿಯಲೀಯದೆ ಬಟ್ಟಸಂದಾಗಳ್ (ಪಂಪಭಾ. ೧೦-೮ ಕ) ; ಮೊದಲೊಳ್ಳತ್ತಿನ್ನರದ್ದಂಡ್ಯದ ಬಟ್ಟಸಲಲೆತ್ತಾನುವಚ್ಚಿಟ್ಟೋದಮಂ ಸಾರ್ವಭದೆತ್ತ (ಕಾಡಂಬ. ೩೬೩). **ಬಳಿಸಲ್** : ಜಗತ್ಪ್ರಪಂಚವ ಮಾಡಿ ಆ ಜಗದಲ್ಲಿ ಜೀವರೂಪಿಂದ ಬಳಿಸಂದನೆಂದು ಹೇಳುವ ಶ್ರುತಿಯುಂತಿರಲಿ (ಅಕಕ. ೩-೧೦); ಚಿತ್ರಜಕೇಳಿಗೆಂದು ಮತ್ತಗಜಂ ಪರಿವ ಕರಿಣಿಯ ಬಳಿಸಂದು ಬೋಳ್ಕೆಸಿ ಕರವಂ ನೆಗಪಿ ಕೊಡುವ . . . ಸಮಯದೊಳ್ ತ್ರೋಟ್ಪನೆ ಕಂಠೀರವರವಮಂ ಕೇಳಲಾಗೆ (ಗಿರಿಜ. ೦-೦೨೬ ಕ); ಹಿಂದಣಂಬುಗಳೆಂಜಲಿಸಿ ಬಳಿಸಂದಪುಲಿದಂಬುಗಳೆನಲು ಕವಿದೆಚ್ಚನವನಿವನ (ಕುಮಾ.ಭಾ. ೨-೩೨). **ಬಳಿಸಲು** : ಕಾನನಾಂತರ ಬಳಿಸಲುವವರೆನ್ನೊಡನೆ ನೃಪವರರು (ಕುಮಾ.ಭಾ. ೬೦೩. ೨೨-೨೯); ಬಳಿಸಲುವ ತುಂಬಿಗಳ ಪಾಡುವ ಗಿಳಿಗಳ. . .ವನಲಕ್ಷುಮಿ ತರೆದೂಗಿಸಿತು ಸುರರ (ಬಸವ. ೯-೩-೦೩). [ಬಟ್ಟ₃ + ಸಲ್₁]

**ಬಟ್ಟಸಲುಹ** (ನಾ). ಹಿಂಬಾಲಿಸುವಿಕೆ : "ಅನುಪದಂ, ಅನ್ವಕ್, ಅನ್ವಕ್ಷಂ — ಈ ೩ ಬಟ್ಟಸಲುಹ" (ಶಬ್ದಾ.ಸಂ. ೦೨೦-೯೬). [ಬಟ್ಟ₃ + ಸಲುಹ]

**ಬಟುವ** (ನಾ). (?) : ಮಚಿವುಗೆ ಕಾವ ಚಲದಂಕರಾಮ ನನ್ನಿಯ ಮೇರು ರೇಂಕರ ಬಟುವ ಪೋಚಣ್ಣನ ತಮ್ಮ ಶ್ರೀಮದ್ಗಣ್ಣರ ಗಣ್ನನೊಟಂಬಸೆಟ್ಟಿಯುಂ ಪದ್ಮಾವತಿಯಬ್ಬೆಯು ಪರೋಕ್ಷವಿನಯಕ್ಕೆಂದು ಬಿಟ್ಟ ಛತ್ರ (ಎ.ಕ. IX-I, ೦೬೦-೨೩; ೪). [?]

**ಬಟ್ಟುಸು, ಬಳಿಚಿಸು** (ಕ್ರಿ). ೧. ಸವರು ತಡವು (?) : ಪಟು ವೇಷಧಾರಿಯಾ[ದಂ] ಪಟುಮತಿ ಬಟ್ಟುಸಿದ ಕಯ್ಯ ಕವಳಿಗೆಯುಂ ಕರ್ಪಟವುಂಬೆರಸಜ್ಞಾನೋತ್ಕಟಮದನರಮನೆಯು ಬಾ ಗಿ ಲೊ ಳ್ ಬಂದಿರ್ದಂ (ಕಾಂತಿಪು. ೬-೦೨೬). **ಬಳಿಚಿಸು** : ೨. ವಿನಾಯಿತಿ ಕೊಡು; ಲೆಕ್ಕದಿಂದ ಬೇರೆ ಮಾಡು (?) : ಯಾ ಹೊಂನಿಗೆ ಬಳಿಚಿಸಿದ ಸ್ಥಳದ ವಿವರ (ಎ.ಇ. VI, ಶುಂಠಗೆ. ೪೦-೨೩; 1516). [ ಬಟ್ಟು + — ಇಸು₁ ]

**ಬಟ್ಟು, ಬಳಚು, ಬಳಿಚು** (ಕ್ರಿ). ೧. ಜಾರು; ಹೊರಳು; ನುಣುಚಿಕೊಳ್ಳು: ಸ್ವರ್ಗದಿಂದ ಬಟ್ಟು ಬಂದಿಲ್ಲಿ. . .ಇಳಾಮಹಾದೇವಿಗೆ ಮಗನಾಗಿ ಪುಟ್ಟುಗುಂ (ಚಾವುಂಡ. ೦೦೬-೩); ಸಮ್ಯಕ್ತ್ವದಿಂ ಬಟ್ಟಿದರಾದೊಡೆ ಅರ್ಧ ಪುದ್ಗಲಪರಾವರ್ತನಕಾಲಮಿರ್ಪರು (ಚಾವುಂಡ. ೦೫೯-೩). **ಬಳಚು** : ೧. ಕೊರಳುಡಿದು ತೊಡೆಯುಕ್ಕುಳಿಸಿ ತೋಳ್ಗಳು ಜರಿದು ಬೆನ್ನೆಲು ಬಳಚಿ ಕೆನ್ನೆತ್ತರು ಸುರಿದು (ಜೈಮಿ. ೦೦-೬೮-೪೦). ೨. ಕೊಚ್ಚಿಹಾಕು; ಕತ್ತರಿಸು: ಮೃತ್ಯುವಿನ ಪಾಶದ ಕೊರಳ ಬಳಚಿದನು (ಕುಮಾ.ದ್ರೋ. ೬-೬೩); ಕೊಲುವುದನುಚಿತವೆಂಬ ನುಡಿಯಿಂದೊಳಗವಳ ನಾಸಿಕವನುದ್ದಕೆ ಬಳಚಿದನು (ಕುಶಲ. ೩-೪-೨೬). ೩. ಪರಿಹಾರವಾಗು : ನಿವಾರಣೆ ಹೊಂದು : ಬಂದ ಕಂಟಕ ಬಳ [ಚಾಕಾಂ. ಕಳ, ೪]ಚಿತೇ (ಕುಮಾ.ಗ. ೬-೩೩). ೪. ಸವರು; ತಡವು : "ಭಾರವಿದೆ, ಕಂಚಿನ ಮೂರ್ತಿ ಇದ್ದ ಹಾಗೆ ಕಾಣುತ್ತೆ" ಎಂದು ಅರಿವಿಸಹಿತವಾಗಿಯೇ ಅದನ್ನು ಬಳಚಿ ನೋಡಿದರು (ಚುಂಚ. ೧೦೭); ಮೂಲೆಯಲ್ಲಿದ್ದ ಹರಕುಮುರುಕು ಸ್ಟೂಲನ್ನು ಬಳಚಿ ನೋಡುತ್ತ . . . ಅದರ ಮೇಲೆ ಕುಂಡೆಯೂರಿ ಕುಳಿತ (ಕುಂಠು. ೦೬೬). **ಬಳಿಚು** : ೧. ಲೌಕಾಂತಿಕದೇವರಲ್ಲಿಂ ಬಳಿಚಿ ಮನುಷ್ಯರಾಗಿ ಮುಕ್ತರಪ್ಪರು (ಕರ್ಣಾಟ. ೦೬). ೨. ಕೊಲುವ ದುರ್ಜನ ಕಾಲಪಾಶವ ಬಳಿಚಿ[ಚಾಕಾಂ. ಸ] ದೇಕೆಂಬುವರು . . . ಆಶ್ರಯಿಸುವುದು ಹರಿಗುರುಚರಣಾಂಬಜವ (ಅಚಾಗ. ೩-೦೨-೨೩) ;ಸೀಳ್ದು ತ್ತರಿಸಿ ಕಿತ್ತಿ ಖಂಡಿಸಿ ಬಳಿಚಿ ತಿವಿದಿಕ್ಕಿ ಕೊಯ್ದು ಪೊಯ್ದು . . . ಪೊರಳ್ದುದುಮರಿಚತುರ್ಬಲವನೆಲ್ಲವಂ ಕರ್ಣಜನಿಸುವ ಕಣೆಗಳು (ಕೃ.ಚರಿ. ೬-೪೪). ೪. ಬಳಿವಿಡಿದು ಬಳಿಚಿದಂಬಿಂ ಮುಂದೆ ಹರಿದು (ಚಕಿತ. ೬-೩೯) ; ಬಳಿಚಿ ಬಿಟ್ಟನು ವಾಯು ಕೊಲ್ಲದೆ . . . ಎನುತಲಿದು ಕಣೆಗಳ ಕಿದಜ್ ಕರ್ಣನ ತಜುಬಿದನು ಭೀಮ (ಕುಮಾ.ಕ. ೦೩-೪೦).

[ಬಟರ್ + — ಚು₁./ತಮಿ. ಮಲ. ವಟುಕ್ಕು; ತೆಲು. ವ್ರಾಲು, ವ್ರಾಲುಚು, ವ್ರೇಲು]

ಬಟ್ಟಿ 'ಬಾಟ್₁' ನೋ.

Δ ಬಟ್ಟೆಂಕು 'ಬರ್ದುಂಕು' ನೋ.

**ಬಾ₁, ಬಾಯು** (ಕ್ರಿ). ೧. ಬಾತ (ಭೂತಕೃ), ಬಾತಕ್ಕ (ಭೂತನ್ಯೂ). ೧. ಊದಿಕೊಳ್ಳು; ಉಬ್ಬು : "ಬಾ _ ಶೋಥೇ (ಬಾತುಕೊಳ್ಳು)" (ಶಮಧಾ); ಅತನಂ ಕಾಣದಿರುಳುಂ ಪಗಲುಂ ನೆನೆದಟ್ಟು ಕಣ್ಗಳ್ ಬಾತಿರ್ಪುವು (ವಡ್ಡಾ.ಕ. ೦೩-೨೦); ಪುರಾಕೃತಸಂಕೃತಫಲಂಗಳವು ನೆನೆದನವರತವಟ್ಟು ಬಾತ ಕಣ್ಗಳುಂ ಚಿಂತಾನಿದ್ರೆಯಿಂ ದರ್ದುರವಾದ ಮೊಗಮುಂ (ಕಾಂತಿಪು. ೪-೬೯ ಕ); ಕುಸಿಗೊರಲಿಬ್ಬರ್ದೆ ಪೊಜಂಟ ಬೆನ್ ಬಾತ ಬಸಿಱ್ (ಹುಕೋಕ. ೨-೩೬). ೨. (ಅಲಂ) ಸಂತೋಷದಿಂದ ಅಥವಾ ಹೆಮ್ಮೆಯಿಂದ ಉಬ್ಬು,—ಗರ್ವಿಸು : ಪುರುಳಿಲ್ಲ

ದಹಂಕಾರದೊಳ್ ಬಾತು ಬಲ್ಮೆಗೆ ಹಾರೈಸುವರೇಕೆ ಬಯಕೆಗವಿಗಳ್ ಕೆಲಬರ್ (ಅಜಿತಪ. ೧-೨೫). ಬಾಯು : 'ಬಾಯಿಸು' ಪರಾ.

**ಬಾತುಕೊಳ್, ಬಾತುಕೊಳ್ಳು** = ೧. ಊದಿಕೊಳ್ಳು : ನಡೆದು ನಡೆದು ಕಾಲುಗಳು ಬಾತುಕೊಂಡು, ಅಡಿ ಇಡುವುದೇ ಕಷ್ಟವಾಗಿದ್ದಿತು (ಕೃಕಾತ. ೩೬); ಮುಖವೆಲ್ಲ ಬಾತುಕೊಂಡಿತ್ತು (ಕೇಶೀಅ. ೧೦). ೨. (ಆಲಂ) ಬೀಗು; ಗರ್ವಿಸು : ಮನೆಯೊಳ್ಮೆಯ್ಗೆ ಬಾತುಕೊಂಡು ಸಿರಿಯೊಳ್ಕಣ್ಣಾದೊಡ್ಡ್ಯುವಂ (ಸುಕುಸೂ. ೬-೨೬). **ಬಾತು ಹೋಗು** = ಊದಿಕೊಳ್ಳು: ನಮ್ಮ ಅಂಗೈಗಳೆಲ್ಲ ಬಾತು ಹೋಗಿವೆ (ಕಂಗರಿಚಿ. ೦೦).
[ದೇ.॥ ತಮಿ. ಮಲ. ಕೋಲಾ. ಸಾಯ್ಕು. ವಾಯ್]

**ಬ್ಯಾ** 'ವರ್' ಪರಾ.

**ಬಾಂ₁** 'ಬಾನ್₂' ನೋ.

**ಬಾಂ₂** 'ಬಾನ್₃' ನೋ.

**ಬಾಂಕು₁**, ಬಾಕು₂ (ನಾ). ತುದಿಯಲ್ಲಿ ಸ್ವಲ್ಪ ಬಾಗಿರುವ ಚಿಕ್ಕ ಕತ್ತಿ; ಕಿರುಗತ್ತಿ : ಬಲಗೈಯೊಳು ಬಾಂಕನಾಂತ ನಟನೆಯಿಂದ ಮಲಗಿನ ಮೇಲೊರಗಿರುವ (ಶ್ಯಾಕಪ. ೦೬-೦೦೬); ಈ ಜನದ ವೇಷ ಬದಲುಮಾಡಿ ಕಠಾರಿ ಬಾಂಕು ಮುಂತಾದ ವಳಾಯುಧ ಕೊಟ್ಟು (ರಾಕೇಅಶ್ರ. ೩೩). ಬಾಕು₂ : ಚಿನ್ನದ ಬೆಳ್ಳಿಯ ಪಕ್ಕರಗಟ್ಟಿದ ರನ್ನದ ಬಾಕು ಕಯ್ಯಂಬು ಹೊನ್ನ ಚೂಡಾಯತ ಮಜೀಯ ಬಂದರು ಕೂಡೆ ಕನ್ನಡ ರಾಯರಾವುತರು (ಕುರಾಹಾಂ. ೦೦-೨೧) ; ಸಾಯುದರಿಲ್ಲ ಖಂಡೆಯದ ಪೆಟ್ಟಲಿ ನೆಟಿ ನೋಯದರಿಲ್ಲ ಬಾಕಿನಲಿ (ಕಂಪಹ. ೦೩-೯೬); ಕಟ್ಟಿದ ಕಾಸೆ ಚಮ್ಮುರಿ ಬಾಕು ತ್ರಿಶೂಲ (ಐಕ್ರಾ. ೬-೩೩). 'ಬಾಕು' ಪರಾ.
[←ಹಿಂ. ಬಾಂಕ್; ಮರಾ. ಬಾಂಕ್, ಬಾಕ್]

**ಬಾಂಕು₂**, ಬಂಕ್ಕ, ಬಾಕು₃ (ನಾ). ೧. ಸಾಲಾಗಿ ನಾಲ್ಕಾರು ಜನ ಕಾಲು ಇಳಿಬಿಟ್ಟು ಕುಳಿತುಕೊಳ್ಳಬಹುದಾದ, ಮರ, ಕಲ್ಲು ಅಥವಾ ಲೋಹದಿಂದ ತಯಾರಿಸಿದ ಆಸನ ; ಬೆಂಚು : ವೆಂಕಟರಮಣ . . . ಮೂಲೆಯಲ್ಲಿಯ ಕಟ್ಟಿಗೆಯ ಬಾಂಕೊಂದರ ಮೇಲೆ ಹೋಗಿ ಕುಳಿತ (ಮೂರುದಾ. ೦೬೩). ಬಂಕ್₃ : ೨. ಮನೆಯ ಮುಂದೆ ಇರುವ ಜಗುಲಿ : ಆ ಸನ್ಯಾಸಿಯು ಹೋಗಿ ಒಂದು ಬಂಕದಲ್ಲಿ ನೆಲದ ಮೇಲೆ ತನ್ನ ಹುಲಿದೊಗಲು ಹಾಸಿ . . . ಅಡ್ಡಾದನು (ಮುಂಜಯ. ೯-೦೫೦); ಪಟೇಲರು . . . ಮನೆಯ ಮುಂದಿನ ಬಂಕದಲ್ಲಿಯೇ ಕುಳಿತಿದ್ದರು (ಐಶಿ.೬೬). ೩. ಎತ್ತರವಾದ ವೇದಿಕೆಯುಳ್ಳ ಮಂಟಪ : ಆ ಬಂಕಗಳಲ್ಲಿ ಒಂದೊಂದು ಈಶ್ವರಲಿಂಗವೂ ಮುಂದೆ ನಂದಿಕೇಶ್ವರನೂ ಇದ್ದಾರೆ (ಹಮ್ಮಬ. ೯). ೪. ಎತ್ತಿನ ಗಾಡಿಯಲ್ಲಿ ಹುಲ್ಲು ಹೇರಲು ಅನುಕೂಲವಾಗುವಂತೆ ಬಗ್ಗಿಸಿ ಕಟ್ಟಿದ ಗಳು : ಭಿ. ಹುಲ್ಲು ತುಂಬಿದ ಈ ಬಂಕದ ಗಾಡಿ ಎಳೆಯಲು ಎತ್ತಿಗೆ ಬಹು ಕಷ್ಟ (ಕೂಶಿ). ಬಾಕು₃ : ೧. ಬಾಗಿಲಿನಿಂದ ಬರಲು ಎಡಗಡೆಗೆ ಒಂದು ದೊಡ್ಡ ಬಾಕು (ಉಪಕ್ಕಿ. ೩೩); ಇಬ್ಬರೂ . . . ಬಾಕಿನ ಮೇಲೆ ಕುಳಿತರು (ಕಕ್ಕೃ. ೨೫) ; ಎದುರು ಬಾಕಿನ ಮೇಲೆ ರೂಪಾ ಕುಳಿತಿದ್ದಳು (ಇದುಂತ. ೪೯). [ ←ಇಂ. Bank = ಬೆಂಚು. / ತುಳು. ಬಾಂಕು. / ಪೋರ್ಚು. ಬಂಕೋ ; ಸ್ವೀಡಿಶ್. ಜರ್ಮನ್. ಬಾಂಕ್. /ಮರಾ. ಬಾಂಕ್ ]

**ಬಾಂಕು₃** 'ಬಾಂಗ್₁' ನೋ.

**ಬಾಂಕು₄** 'ಭಾಂಕಿ' ನೋ.

**ಬಾಂಗ₁**, ಬಾಂಕು₃ (ನಾ). ೧. ಗಟ್ಟಿಯಾದ ಕೂಗು. ೨. ಮುಲ್ಲಾನು ಮಸೀದಿಯಲ್ಲಿ ನಿಂತು ನಮಾಜು ಮಾಡಲು ಮುಸಲ್ಮಾನ ಜನರನ್ನು ಕರೆಯುವ ಕೂಗು : "ಬಾಂಗೀ"ಗಳು 'ಬಾಂಗ' (ಭಗವದಾಹ್ವಾನ) ಮಾಡಿದ ಕೂಡಲೆ ಎಲ್ಲರೂ ಮೊಣಕಾಲೂರಿ ಭಕ್ತಿಪುರಸ್ಸರವಾಗಿ ಪ್ರಾರ್ಥನೆ ಮಾಡಿದರು (ಶಿರಂಗ. ೨೬). ಬಾಂಕು₃ : ೨. ಮುಸಲ್ಮಾನಜನರು ಸಂಜೆ ಮುಂಜಾನೆಗಳಲ್ಲಿ . . . ಜನರನ್ನು "ಬಾಂಕು" ಕೊಟ್ಟು ಕರೆಯುವಂತೆ ಕ್ರಿಶ್ಚನರು ಉನ್ನತ ಕೊತ್ತಳಗಳನ್ನು ವಿರಚಿಸಿ, ಅವುಗಳಲ್ಲಿ ಘಂಟೆಯನ್ನು ಇರಿಸಿ ಬಾರಿಸತೊಡಗಿದರು (ಜಾಂಕ್ರಿ. II. ೦೦೬೨).
[ ← ಪಾರ. ಹಿಂ. ಬಾಂಗ್. / ತುಳು. ಬಾಂಕು, ಬಾಂಗ್, ಬಾಂಗ, ಬಂಂಗು ]

**ಬಾಂಗ₂** (ನಾ). ಅಫೀಮು ಬೆರಸಿ ತಯಾರಿಸಿದ ಒಂದು ಬಗೆಯ ಮಾದಕ ಪೇಯ : ಮಸಾಲ್ ಹಾಲು ಎಂದು ಹೇಳಿ ಒಂದು ರೀತಿಯ 'ಬಾಂಗ' ಮಾಡಿಕೊಟ್ಟಿದ್ದನು (ಇತ್ರಿ. ೦೯೭). [←ಹಿಂ. ಮರಾ. ಭಾಂಗ್]

**ಬಾಂಗಡಲ್** (ನಾ). (ಆಲಂ) ಆಕಾಶದ ನದಿ ; ದೇವನದಿ : ಬಳಮಾಸೆಯೆಂಬ ಜಗುನೆಯೊಳೊಡವೆರೆಯಲ್ಕಚಿಹಿಮಾದ್ರಿಯಿಂದ್ಯೆದುವ ಬಾಂಗಡಲೆನೆ ಹಿಮಾಂಬು ಪೊಸ ಪೊಂಗೊಡದಿಂ ವಧು ಸೂಸೆ ಸುರಿವುತುಂ ಸೊಗಯಿಸುಗುಂ (ರಾಚಿಕ. ೧೦-೮೨). [ ಬಾಂ₂ (<ಬಾನ್₃) + ಕಡಲ್₂ ]

**ಬಾಂಗಡಿ** (ನಾ). ಕೈಬಳೆ ; ಕಂಕಣ : ವಿಜಾಪುರದ ಬಾದಶಹನು ತನ್ನ ಮಗಳ ಬಳೆಯ (ಬಾಂಗಡಿಗಳ ವೆಚ್ಚಕ್ಕಾಗಿ ಬಾಗಲಕೋಟೆಯನ್ನು ಹಚ್ಚಿ ಕೊಟ್ಟಿದ್ದರಿಂದ ಇದಕ್ಕೆ "ಬಾಂಗಡೀ ಕೋಟ್" ಯೆಂಬ ಹೆಸರು ಬಂತೆಂದು ಹೇಳುತ್ತಾರೆ (ಕಡಾಗಿ. ೩೨೩). [ ← ಮರಾ. ಬಾಂಗಡೀ ]

**ಬಾಂಗಡೆ** (ನಾ). ೧. ಆಕಾಶದ ಕೊನೆ. –ಅಂಚು. –ತುದಿ : ಕಾಣಬಹುದು ಕಾಲಾಹಿಯ ಹಜ್ಜೆಯ ಕಾಣಬಹುದು ಬಾಂಗಡೆಯ (ಕೃಕೂ. ೩-೩೬). ೨. ಆಕಾಶದ ಭಾಗ ; ನಭಸ್ಥಳ : ಬಾಂಗಡೆಯ[ಯ್ಯ]ನೀತಂ ದೆಬಿಗೆ ನೃಪಸಿಂಗ ಗಜವ ನಿರಂಕುಶದಿನಾಲ್ದಂಗವಿದು ಲೇಸೆನುತಲೀರ್ವರು ನೃಪನ ಪೊಗಳಿದರು (ಸುಕ್ಕಾ. ೦೬-೦೩). [ಬಾಂ₂ (<ಬಾನ್₃) + ಕಡೆ₂]

**ಬಾಂಗರೆ** (ನಾ). ಆಕಾಶದ ಅಂಚು ; ದಿಗಂತ ; ಕ್ಷಿತಿಜ : "ದಿಗಂತ ; ಕ್ಷಿತಿಜ ; ಬಾನಂಚು, ಬಾಂಗರೆ" (Horizon. ೩೩೩).
[ ಬಾಂ₂ (< ಬಾನ್₃) + ಕರೆ₄ ]

**ಬಾಂಗಳ** (ನಾ). ಕಲ್ಲಿನ ಗುಹೆ : ಕಿರಿಯ ಮೂಲೆಯ ಕಾಡನ್ನು ಹೊಕ್ಕು ಬಾಂಗಳದಿಂದ ತುಸು ದೂರದಲ್ಲಿಯೇ ... ಕಾದು ಕುಳಿತರು (ಶ್ಯಾಗಹು. ೩೬); ಬಾಂಗಳದಿಂದ ಹುಲಿ ಹೊರಟು ಬರುವಲ್ಲೇ ಅಡಗಿ ಕುಳ್ಳಿರಲು ಸರಿಯಾದ ಜಾಗವಿರಲಿಲ್ಲ (ಶ್ಯಾಗಹು. ೩೩). [?]

**ಬಾಂಗಿ** 'ಭಾಂಗಿ' ನೋ.

**ಬಾಂಗೀ** (ನಾ). ಮಸೀದಿಯಲ್ಲಿ ನಿಂತು, ನಮಾಜಿನ ಕರೆ ಕೊಡುವ (ಇಸ್ಲಾಂ) ಮುಲ್ಲಾ : 'ಬಾಂಗೀ'ಗಳು 'ಬಾಂಗ' (ಭಗವದಾಹ್ವಾನ) ಮಾಡಿದ ಕೂಡಲೆ ಎಲ್ಲರೂ . . . ಪ್ರಾರ್ಥನೆ ಮಾಡಿದರು (ಶಿರಂಗ. ೨೬).
[ <ಬಾಂಗ₁ ]

**ಬಾಂಗುಳಿಗೆ** (ನಾ). ಆಕಾಶದಲ್ಲಿರುವ ಚಿಕ್ಕಚಿಕ್ಕ ಗ್ರಹ ; ಕ್ಷುದ್ರಗ್ರಹ: ಒಂದುವಲಯದಲ್ಲಿ ನೂರಾರು ಕ್ಷುದ್ರಗ್ರಹಗಳು ಹರಡಿರುವುದನ್ನು ಜ್ಯೋತಿಷ್ಯರು ಕಂಡುಹಿಡಿದಿರುವರು. ಈ ತರನಾದ ಬಾಂಗುಳಿಗೆಗಳು ಬರಿಯ ಕಣ್ಣಿಗೆ ಕಾಣವು (ಜ್ಯೋತಿಶಾ. ೦೨೬). [ಬಾಂ₂ (< ಬಾನ್₃) + ಗುಳಿಗೆ₁]

**ಬಾಂಗುಟಿ**, ಬಾನಂಗುಟಿ₁ (ನಾ). ಆಕಾಶದ ಕುಳಿ. –ಗರ್ತ : ವಿಮಾನಂ ಬಚ್ಚು, ವಿಮಾಂಬುಚು, ಬಾನಂಗುಟಿ, ಬಾಂಗುಟಿ, ಕಣ್ಣಂದೊಟಲಿ, ಕಣ್ಣೊಟಲಿ (ಕಣ್ಣಾಕು. ೩೯೬ ಕ್ರಮೀ). ಬಾನಂಗುಟಿ₁ : ಮೇಲಿನ ಪ್ರಯೋಗವನ್ನು ನೋಡಿ. [ ಬಾಂ₂ (<ಬಾನ್₃) + ಕುಟ್ಟಿ₁ ]

**ಬಾಂಗೂದಲ** (ನಾ). ಆಕಾಶವನ್ನೇ ತಲೆಯ ಕೂದಲನ್ನಾಗಿ ಉಳ್ಳವನು; ವ್ಯೋಮಕೇಶ : ಶಿವ: ಅರೆಗಂಪಿಡಿದ ಮಾಡಿದ ಜಡೆಮುಡಿ ಬಾಂಗೂದಲನ ಕಪರ್ದಮಂ ಕೀಟ್ಟಾಡೆ (ರಾಚಿಕ. ೦೪೯-೪).
[ ಬಾಂ₂ (< ಬಾನ್₃) + ಕೂದಲ್ (< ಕೂಂದಲ್)+ – ಅ₁]

**ಬಾಂಚೋತ್** (ನಾ). ತನ್ನ ಅಕ್ಕನೊಡನೆ ಅನೈತಿಕಸಂಬಂಧವಿಟ್ಟು ಕೊಂಡವನು ಎಂಬ ಅರ್ಥದಲ್ಲಿ ಬಳಸುವ ಒಂದು ಬೈಗುಳು.
[← ಹಿಂ. (ಬಹನ್ + ಚೂತ್)]

**ಬಾಂಜಗುನೆ** (ನಾ). (ಅಲಂ) ಆಕಾಶದಲ್ಲಿರುವ ಯಮುನೆ ; ಆಕಾಶನದಿ; ದೇವನದಿ : ಬಾಂಜಗುನೆಗೆ ನೆಗೆದುವೊ ನೊರೆಯನೆ ಬಗೆಗೊಂಡುವು ಬಾನೊಳೊಗೆದ ಬಿಳಿಯ ಮುಗಿಲ್ಗಳ್ (ಅಜಿತ. ೩-೨೨).
[ಬಾಂ$_{2}$ (<ಬಾನ್$_{3}$) + ಜಗುನೆ (<ಜಮುನೆ)]

**ಬಾಂಜೊಡರ್** (ನಾ). ಆಕಾಶದ ದೀವ,_ಸೊಡರು ; ಸೂರ್ಯ : ಬಾಂಜೊಡರಿರಿರಿಸಿನ ಹರೆಯಂ (ಜಿನಾ. ೦೩_೬೬).
[ಬಾಂ$_{2}$ (<ಬಾನ್$_{3}$) + ಸೊಡರ್]

**ಬಾಂಡ್** 'ಬಾಂಡು' ನೋ.

**ಬಾಂಡಲಿ** 'ಬಾಣಲಿ' ನೋ.

**ಬಾಂಡಲೆ** 'ಬಾಣಲಿ' ನೋ.

**ಬಾಂಡವಲು** 'ಬಂಡವಾಳ' ನೋ.

**ಬಾಂಡವಲುಶಾಹಿ** 'ಬಂಡವಾಳಶಾಹಿ' ನೋ.

**ಬಾಂಡು**, **ಬಾಂಡ್** (ನಾ). ೧. ಒಡಂಬಡಿಕೆಯ ಪತ್ರ ; ಕರಾರುಪತ್ರ : ಕೆಲವರು ಶಾವಿರುವ ನಾಟಕಕಂಪನಿಯ ಯಜಮಾನನಿಗೆ ಬಾಂಡು ಬರೆದು ಕೊಟ್ಟಿರುವುದರಿಂದ ಬರುವದಾಗುವದಿಲ್ಲವೆಂದು ಹೇಳಿದರು (ಗಂಗಾಜಾ. ೬೦) ; ತಿಂಗಳೊಂದಕ್ಕೆ ಒಸರೂ ಕೊಡುವ ಕರಾರ ಮಾಡಿ ೬ ವರ್ಷದ ಬಾಂಡು ಬರೆಯಿಸಿಕೊಂಡರು (ಶಾಸಹು. ೬). ೨. ಸಾಲಪತ್ರ : ಒಂದರ ಬಾಂಡು ಗಳನ್ನೂ ಸ್ಟಾಕುಗಳನ್ನೂ ಇನ್ನೊಂದು ಕಂಪನಿಯ ಮಾಲಿಕರೂ ಚಾಲಕರೂ ಕೊಂಡಿಟ್ಟುಕೊಂಡರೆ ಇದರ ಮೇಲಿನ ಅಧಿಕಾರವೆಲ್ಲ ಅವರ ಕೈಗೆ ಸಾಗುವುದು ಶಾನೇ ! (ಹಣಶ್ರ. ೦೨೯). **ಬಾಂಡ್** : ೧. ನೀವು ಒಂದು ವರುಷದವರೆ ಗಾದರೂ ಇರುವದಾಗಿ 'ಬಾಂಡ್' ಬರೆದುಕೊಡಬೇಕು (ಕಹಂ. ೦೬೩). ೩. ದಸ್ತೈವಜುಗಳನ್ನು ಬರೆಯಲುವುದಕ್ಕೆಂದು ತಯಾರಿಸಿದ ಒಂದು ಬಗೆಯ ಉತ್ತಮವಾದ ಕಾಗದ : ಯಂತ್ರದಲ್ಲಿ ಕಾಗದವನ್ನು ತಯಾರಿಸುವಾಗ 'ಸೈಜ್' ಅನ್ನು ಸೇರಿಸಿ, ಬಾಂಡ್, ಲೆಡ್ಜರ್, ಇಾಡೆಕ್ಸ್ ಮೊದಲಾದ ಕಾಗದಗಳನ್ನು ತಯಾರಿಸುವರು (ಹುತ್ರ್ಯ. ೬೦).
[ ←ಇಂ. Bond ]

**ಬಾಂಡ್ಲಿ** 'ಬಾಣಲಿ' ನೋ.

**ಬಾಂಡ್ಲೆ** 'ಬಾಣಲಿ' ನೋ.

**ಬಾಂದಲೆಯ** (ನಾ). ಆಕಾಶವನ್ನೇ ತಲೆಯಂ ಕೂದಲನ್ನಾಗಿ ಉಳ್ಳವನು; ವ್ಯೋಮಕೇಶ ; ಶಿವ : ಪುಷ್ಪಂಬನೊಡಲುರಿಕ ಬಾಂದಲೆಯ ಯಲುಗೊರಲಯಡಿಗಣ್ಣ ಕಿಚ್ಚುಚ್ಚಿಗನೆ (ಶಶಜೋ. ೩೩-೦).
[ಬಾಂ$_{2}$ (<ಬಾನ್$_{3}$) + ತಲೆ$_{1}$ + –ಅ$_{1}$]

**ಬಾಂದಳ** (ನಾ). ಆಕಾಶ ; ಗಗನ : ಬಿಸಿಲ್ ಬಾಂದಳನೊಡವುಟಿಯಲ್ . . . ಎಸೆದಂ ಪದ್ಮಿನೀಜೀವಿತೇಶಂ (ಕಾದ್ಮಿ. ೦೦-೦೯) ; ಮೇಸದೊಳ್ಸು ರಗಮಂ ಕೊಂಡು ಬಾಂದಳಕಡರ್ದೊಡೆ ನಿನ್ನನು ಉಳುಹುವರೆ ಯೌವನಾ ಶ್ವನ ಸುಭಟರು (ಕೈಮಿಣಿ. ೯–೦೩); ಬಾಂದಳದ ಕರುಮಾಡದಲ್ಲಿ ಚಿಕ್ಕೆಮಣ್ಣು ಗಳು ನೆರೆದು ಇಳೆಯ ಸೊಬಗನ್ನು ದಿಟ್ಟಿಸುತ್ತಿದ್ದುವು (ರೂಪಕು. ೩೦).
[ಬಾಂ$_{2}$ (<ಬಾನ್$_{3}$) + ತಳ (=ತಲ)]

**ಬಾಂದಿ** 'ಬಾಂದೀ' ನೋ.

**ಬಾಂದೀ**, **ಬಾಂದಿ** (ನಾ). ಸೇವಕಿ; ದಾಸಿ : ಇಬ್ಬರು ಅರಸತಿಯರನ್ನೂ ವೀರರಾಜೇಂದ್ರಒಡೆಯರವರ ಬಲ ಅಣ್ಣನ ಮಗ ಒಬ್ಬರನ್ನೂ ಎರಡು ಜನ ಬಾಂದೀರನ್ನೂ ಅಂಬಿನಿಂದ ಇಟ್ಟು ಕೊಂದು ಹಾಕಿ (ರಾಜೇಂದ್ರ. ೨೬). **ಬಾಂದಿ** : ಈ ಹುಡುಗಿಯು . . . ಮನೆಯಲ್ಲಿ ಚಾಕರಿ ಮಾಡುವ ಬಾಂದಿ ಗಳಲ್ಲಿ ಹೆಚ್ಚು ಮಾತನಾಡುತಿರಲಿಲ್ಲ (ಮಾಸುರಾ. ೬೬).
[←ಹಿಂ. ಮರಾ. ಬಾಂದೀ ; ಫಾರ. ಬಂದಹ್]

**ಬಾಂದೀತನ** (ನಾ). ಚಾಕರಿ; ಸೇವೆ : ಬಾಂದೀತನಕ್ಕೆ ಆಸಾಮಿಯನ್ನು ಚೋರಿ ಮಾಡೋಣ (ಗ್ರಾಪತ್ರ. ೦೯೪). [ಬಾಂದೀ + – ತನ]

**ಬಾಂದು** 'ಬಂದ್ಮು$_{2}$' ನೋ.

**ಬಾಂದುಕಲ್ಲು** (ನಾ). (ಭೂಮಿಯ) ಗಡಿಯನ್ನು ಗುರುತಿಸಲು ನಿಲ್ಲಿಸಿ ರುವ ಕಲ್ಲು ; ಗಡಿಕಲ್ಲು : ಬಾಂದುಕಲ್ಲುಗಳೆಂದರೇನು ? (ಕೂಜಿ. ೨೩); ಆಕೆಗೆ ಶಾಗಿದ ಆ ಕಲ್ಲು ಅಣ್ಣತಮ್ಮಂದಿರನ್ನು ಬೇರ್ಪಡಿಸಿದ, ದೂರವಾಗಿಸಿದ 'ಬಾಂದು' ಕಲ್ಲಾಗಿತ್ತು (ಶರಹಾ. ೦೯೦) ; ಮೋಜಿಣಿದಾರರನ್ನು ಕರೆಸಿ, ಅಳತೆ ಮಾಡಿಸಿ, ಸರಿಯಾದ ಸ್ಥಳಕ್ಕೆ ಬಾಂದುಕಲ್ಲು ನಡೆಸಿದ್ದನವನು (ಅಶಾಖ. ೩೩).
[ಬಾಂದು (<ಬಂದ್ಮು$_{2}$) + ಕಲ್ಲು (<ಕಲ್$_{3}$)]

**ಬಾಂದೇರ್** (ನಾ). ಆಕಾಶದಲ್ಲಿ ಸಂಚರಿಸುವ ವಿಮಾನ : ಲಕ್ಕುಮನ ಲಂಕೇಶ್ವರಂ . . . ಹಾರಿದನು ಬಾನ್ದೇರನೇರಿ (ಶ್ರೀರಾಮಾ. ೨೯೬-೩೨೬).
[ಬಾಂ$_{2}$ (<ಬಾನ್$_{3}$) + ತೇರ್$_{3}$]

**ಬಾಂದೊರೆ** 'ಬಾಂದೊಱೆ' ನೋ.

**ಬಾಂದೊಱೆ**, **ಬಾಂದೊರೆ** (ನಾ). ಆಕಾಶದ ನದಿ ; ದೇವಗಂಗೆ : "ದೇವತಾಗಂಗೆಯೊಳ್ ಬಾಂದೊಱೆ" (ಶಬ್ದಾಶಿ. ೧೦) ; ಕಱೆಗೊರಲಾತಂ . . . ಬಾಂದೊಱೆಯನೆ ಪೊತ್ತು ಕ[ವ]ರ್ಧ್ವೊಱ[ಗುಬ್ಬ]ದನೀ ಪ್ರದೇಶ ದೊಳ್ (ಹಂಶಕಾ. ೬-೬೩) ; ತೂಱೆಗಳೆಲ್ಲಂ ಬಾಂದೊ [ಶಾಂ. ಪಾಲ್ದೊ] ಱೆಯೆನಿಸಯುಂ (ಅಜಿತ. ೯-೬೬ ವ) ; ಬಾಂದೊಱೆಯಂ ಪೊತ್ತಿರ್ಪ್ಪನಗಜೆ ಯೊಳ್ಕೂಡಿಪ್ಪಂ (ಸಜುಶ. ೬-೩೮). **ಬಾಂದೊರೆ** : ಬೊಮ್ಮಯ್ಯ ಭಕ್ತಿಯ ಬಾಂದೊರೆಯಲ್ಲಿ ಮಿಂದು ಆನಂದತುಂದಿಲನಾದ (ಶಕಶ. ೬೬).

**ಬಾಂದೊಱೆದಲೆಯ** = ತಲೆಯಲ್ಲಿ ಗಂಗೆಯನ್ನು ಧರಿಸಿದವನು ; ಶಿವ : ಆ ಬಾಂದೊಱೆದಲೆಯನ ಸಾಮಂದಳೆದು ಬಂದು ನೀನೀ ಪೂವಿನ ಪೊಟಲೊಳ್ ನನೆಯಂಬನೆಂಬರಸಾದೆ (ಕಬ್ಬಿಗ. ೩೦೯) ; ಬಾಂದೊಱೆ ದಲೆಯನ ಮೊಗಕೊಂದರಲ್ ಮಱೆಯಾಗೆ ಕೆಂದಿ ಕುಂದುತ್ತ (ಶತ್ವರಾ. ೬-೩೨). **ಬಾಂದೊಱೆಯ ಮಗ**=ಗಂಗಾದೇವಿಯ ಮಗ ; ಭೀಷ್ಮ : ಅಱಿನ ಮಗಂ ಪ್ರಾರ್ಥಿಸೆ ಬಾಂದೊಱೆಯ ಮಗಂ ಮಾಡೆ ಸಂಧಿಯಾದಪು ದೆನುತುಂ ಮಱುಗುವೆಂ (ಗದಾಯು. ೦-೬೨). **ಬಾಂದೊಱೆಯ ಸುತ** = ಬಾಂದೊಱೆಯ ಮಗ : ಚಂದ್ರಹಾಸದ ಕರ್ಬಿನೊಳಂ ರುದ್ರನ ಕಾಯ್ಪಿನೊಳಂ ನೆರೆದು ಬಾಂದೊಱೆಯ ಸುತನೊಡ್ಡಿ ನಿಲೆ (ಶೇಶಿಂಕ. ೦೨-೯೮ ವ).
[ಬಾಂ$_{2}$ (< ಬಾನ್$_{3}$) + ತೊಱೆ$_{3}$]

**ಬಾಂಧವ** (ನಾ). ೧. ನಂಟ ; ಸಂಬಂಧಿಕ : ಬಾಂಧವರನಿಱಿಸಿ . . . ನಮ್ಮಂಧನರೇಂದ್ರನ ಮೊಗವಂ ಗಾಂಧಾರಿಯ ಮೊಗವನಾವ ಮೊಗದೊಳೆ ನೋಟ್ಪೆಂ (ಗದಾಯು. ೩-೬೦); ಅವತ್ತ ಭೃತ್ಯಬಾಂಧವಾಂತಃಪುರಪುರ ಸ್ವರಯಾಂರಗೇಶ್ವರ ಸಮುದ್ರಮಂ ಪೋಗಿ ಪುಗು (ಜಗಂ. ೬-೦೦೯ ವ) ; ಒಲಿದು ತನ್ನೊಡವುಟ್ಟು ಸೊಸೆ ಮಗಳೆಂದೆಂಬ ಪಲರು ಮುನ್ನಿನ ಬಾಂಧವರು . . . ತಂತಮ್ಮಿಷ್ಟ ಫಲವ ಪಡೆವರೆನ್ನಿಂದು (ಹಂಶಂ. ೦-೯೦); ಹೊನ್ನನು ತನ್ನ ತಂದೆಗಾಗಿಯೂ ಬಾಂಧವರಿಗಾಗಿಯೂ ಮಾಡಿದ ಆಚರಣೆಯು ಆ ದೇಶದ ಅರಸನಿಗೆ ತಿಳಿಯಲು . . . ಬಹಳ ಕೌತುಕ ವಾಯಿತು (ಮುಂಶಿಯು. ೯-೬೩). ೨. ಗೆಳೆಯ; ಮಿತ್ರ. ೩. ಗೆಳೆತನ ದಿಂದ ಮಾಡುವ ಕಾರ್ಯ : ವಿಶ್ವಲೋಕವಿಭುಗೊರ್ವಂ ಭೂಪ ನಾತ್ಮೀಯ ಭೂಲವಮಂ ಕೊಟ್ಟಭಿಷೇಕಮಂ ನೆಗೞ್ಚಿನೆಂದಂ ಮರ್ತ್ಯ ವೇಷಂಗೆ ಬಾಂಧವಮಂ ತೋಱಲೆ ಬಲ್ಲನೇಕಱಗುಮಜ್ಜಂ ವಿಷ್ಣು ಸಾಮರ್ಥ್ಯಮಂ (ಜಗಂ. ೬-೯೮). ೪. ಒಡಹುಟ್ಟಿದವನು; ಸಹೋದರ.
[ಸಂ.]

**ಬಾಂಧವಕೃತ್ಯ** (ನಾ). ಹಿರಿಯರಾದವರು ತಮ್ಮ ಸಂಬಂಧಿಕರಿಗೆ ಮಾಡುವ ಸಹಾಯ, ಸಲಹೆ ಮೊದಲಾದ ಕಾರ್ಯ: ಬಂಧುಗಳು ಮಾಡುವ ಕಾರ್ಯ : ವೈಭವಂಬಡೆದಿರೆ ಬಂದು ಸಂದಣಿಪ ಬಂಧುಗಳೆರ್ ಸಮಂತು ನಿನ್ನೊಳಾದೊಡೆ ಕೊಸೆಗೊಂಡುದ್ದೈ ಪ್ರಜೆಯ ಬಾಂಧವಕೃತ್ಯಂ (ಶಾಕುಂತ. ೬೪-೧೦೬). [ಸಂ.]

**ಬಾಂಧವ್ಯ** (ನಾ). ೧. ನಂಟು ; ನಂಟಸ್ತಿಕೆ ; ಸಂಬಂಧ : ಈಗಲೂ ಕಾಸರ್ ಮನೆತನಗಳು ಬೆಚನರ್‌ಗಳೊಂದಿಗೆ ಬಾಂಧವ್ಯವನ್ನು ಹೇಳಿಕೊಳ್ಳುತ್ತವೆ (ಕುರಿಜಾ. ೨೦); ವಿಂತ್ರರ ಸ್ನೇಹವು ಬಾಂಧವ್ಯವಾದರೆ ಮತ್ತಷ್ಟು ಹಿತವನು ತರದೆ (ಇಂಕಾಇ. ೨೦೫-೦೫). ೨. ಕೆಳೆ ; ಸ್ನೇಹ ; ಮೈತ್ರಿ : ಇಲ್ಲಿ ಕಂಡು ಬರುವ ಜಾತಿ, ಮತ, ಕುಲ, ಗೋತ್ರ, ಭಾಷೆ — ಇವುಗಳ ಭಿನ್ನತೆ ನಮ್ಮ ನಮ್ಮ ಬಾಂಧವ್ಯವನ್ನು ಸಡಿಲಿಸುತ್ತಿದೆ (ಶಿಲ್ಪಶ. ೨೪). ೩. ಸೋದರತೆ ; ಬಂಧುತ್ವ ; ಜ್ಞಾತಿಸಂಬಂಧ : ಭಾಷೆಗಳ ಬಾಂಧವ್ಯವನ್ನು ಪ್ರಕಟಗೊಳಿಸುವ ಅಳತೆಗೋಲು ವ್ಯಾಕರಣ (ದ್ರಾವಿಡ. ೦೯ ಪೀಠಿಕೆ). [ಸಂ.]

**ಬಾಂಬ್** 'ಬಾಂಬು' ನೋ.

**ಬಾಂಬ**$_1$ (ನಾ). ೧. ಮಡಿಕೆ, ಕುಡಿಕೆಗಳನ್ನು ಮಾಡುವವನು ; ಕುಂಬಾರ: "ಬಾಂಬರ್ ಕುಂಬಜಿರ್ (ಕುಂಬಾರ)" (ಶಬ್ದಮ. ಶಿ. ೨); "ಬಾಂಬರ್ಕಳಾ ಕುಂಬಜಿರ್" (ಶಬ್ದಾಂ. ೬೪) ; ಆ ಮಹಾಪಾಪಾಧವನ್ನು ನಡೆಯಿಸುವ ಜಡತ್ವವು ಧೃಷ್ಟತೆಯು ದುಷ್ಕೃತವು ಬಾಂಬನೆನಿಸಿರುವ ನಾದರೂ, ಆ ಬ್ರಹ್ಮನಿಗೆ ಸಾಧ್ಯವೆ? (ಮಂತ್ರಶ. ೧೦-೬). ೨. (ಅಲಂ) ಹೆಡ್ಡ ; ದಡ್ಡ: ತಾನೊರ್ವನೆ ಜಗಕ್ಕೆ ಗಂಡಂ, ಮಿಕ್ಕುಳಿದರೆಸುಗಳೆಲ್ಲರ್ ಬಾಂಬರೆಂದೆ ಬಗೆವಂ ರಾವಮಂ (ರಾಮಾಶ್ವ. ೦೨೫-೨).

[ಬಾಂ$_1$ (< ಬಾನ್$_2$) + — ಬ$_2$]

**ಬಾಂಬ**$_2$ (ನಾ). ಸ್ವರ್ಗಲೋಕದವನು ; ದೇವತೆ : ಸ್ಮರಿಸೆದುಂ ಬಾಂಬರನ್ ಕಳದಿರ್ಕೆಂದು ಚಲುಬಡಿದು ತಲೆಸಂದರರೆಬರ್ (ಅದ್ಭಶ್ರ. ೦೨-೨೫೩).

ಬಾಂಬರಿಜೆಯು = ದೇವತೆಗಳ ಒಡೆಯ ; ದೇವರಾಜ : ಪಿರಿಯ ಬಾಂಬರೆಜೆಮುನಿವನ್ . . . ಎನ್ನನಿಜೆಯುತಿರ್ಪವನ್ (ಅದ್ಭಶ್ರ. ೦೦-೨೦೫).

[ಬಾಂ$_2$ (< ಬಾನ್$_3$) + — ಬ$_2$]

**ಬಾಂಬಟ್ಟೆ** 'ಬಾನ್ಬಟ್ಟೆ' ನೋ.

**ಬಾಂಬಟ್ಟೆಗ** (ನಾ). ಆಕಾಶಮಾರ್ಗದಲ್ಲಿ ಸಂಚಾರ ಮಾಡುವವನು ; ಖೇಚರ ; ದೇವತೆ : ಕಟ್ಟಿದ ವೈಜಯಂತಿಗಳ ಸಂದಣಿ ಬಾಂಬಟ್ಟೆಗರೆಡೆ ಯಾಟವನು ಕಟ್ಟಿದುದು (ಕುಂತಾಪಾ. ೬-೦೨) ; ಪಟ್ಟಶಿಲಾಪುಟಭೇದನ ದಟ್ಟಳೆಗಳನೊಲ್ದು ನೋಡಿ ತೊಲಗದೆ ಮಿಗೆ ಬಾಂಬಟ್ಟೆಗರಿರ್ದು ಪಥ ಶ್ರವದಟ್ಟಳಿಯಂ ಕಳೆದು ಪೋಪರತಿಮುದದಿಂದಂ (ಹರ್ಮ್ಯಶ. ೦-೬೨); ಅಲರೊಳ್ ಬಂಡುಣಿವಿಂಡುಗಳ್ ಸೊದೆಯೊಳಾ ಬಾಂಬಟ್ಟೆಗರ್ . . . ಎಂದಿಗಂ ತಣಿಯದಂತೆ (ಶಿಶಂ. ೦-೯೦).

[ಬಾಂಬಟ್ಟೆ (< ಬಾನ್ಬಟ್ಟೆ) + — ಗ$_1$]

**ಬಾಂಬಟ್ಟೆಗವೆಣ್** (ನಾ). ಆಕಾಶಮಾರ್ಗದಲ್ಲಿ ಸಂಚರಿಸುವವಳು ; ಖೇಚರಿ ; ದೇವತಾಸ್ತ್ರೀ : ವಿದ್ಯಾಧರರಾಯನ ಮಿಸುಕುವ ರೂಪಿಗೆ ಹೊಸ ಹರೆಯಂ ಬಂದುದು ಬಾಂಬಟ್ಟೆಗವೆಣ್ಣಳನತಿ ಮೋಹಿಸುತ (ಜಯುಕಾ. ೦೪-೬). [ಬಾಂಬಟ್ಟೆಗ + ಪೆಣ್]

**ಬಾಂಬರಿ** (ನಾ). ಆಕಾಶದಲ್ಲಿ ಮಾಡುವ ಸಂಚಾರ; ಗಗನಸಂಚಾರ : ಬಾಂಬರಿಯೊಳ್ ಪರ್ತಾಡನುಮಂ ಪುಲ್ಲ ಕಡ್ಡಿಗು ಕೈಕೊಳ್ಳೆಳ್ (ಅರ್ಥಸಂ. ೩-೬). [ಬಾಂ$_2$ (< ಬಾನ್$_3$) + ಪರಿ$_1$]

**ಬಾಂಬರು** (ನಾ). ಸಿಡಿಗುಂಡುಗಳನ್ನೆಸೆಯುವ ಯುದ್ಧವಿಮಾನ : ಚಂಡಮಾರುತನೇರಿ ಬಂದ ಬಾಂಬರುಗಳೂ ಸೋತೋಡಿದುವು (ಪತ್ನಿಶ್ರ. ೦೨-೪). [← ಇಂ. Bomber]

**ಬಾಂಬಸು** (ನಾ). ಸ್ವರ್ಗಲೋಕದ ಹಸು; ಕಾಮಧೇನು : ಏನೆಮಗಾ ಬಾಂಬಸುವಿಂದೇನೆಮಗಾ ಬಾಮ್ಮರಂಗಳಿಂ (ಅಶ್ವತಿ. ೯೧-೦೨) ; ಮದನನ ಚಾಗದೇಳ್ಗೆಯನಭೀಕ್ಷಿಸಿ . . . ಬೆದರ್ದತ್ತು ಬಾಂಬಸು ಕರಂ (ತಂತ್ರಶ್ರು. ೦೫-೦೯೩). [ಬಾಂ$_2$ (< ಬಾನ್$_3$) + ಪಸು$_1$]

**ಬಾಂಬಳಿಕು** (ನಾ). ಸೂರ್ಯಕಾಂತಶಿಲೆ ; ಆಕಾಶಸ್ಫಟಿಕ : ಗೋಡೆ ಗೋಮೇದಿಕರತ್ನದಿಂ ಬಾಗಿಲ್ವಾಡ ಬಾಂಬಳಿಕಿಂದ ಜಗಲಿ ವೈಡೂರ್ಯದಿಂ . . . ನಾಡ ಕಣ್ಸೆಸೆದಿಹವಲ್ಲಿ (ಕುಮಾರಿಂ. ೩-೬೨).

[ಬಾಂ$_2$ (< ಬಾನ್$_3$) + ಪಳಿಕು (< ಪಟಿಕ)]

**ಬಾಂಬಾವು** (ನಾ). ಆಕಾಶದ ಹಾವು ; ರಾಹು ; ಸೈಂಹಿಕೇಯ : "ಬಾಂಬಾವೆಂದು ರಾಹು" (ಶಬ್ದಾ. ೯೯-೩೦) ; ಇನಮಂಡಲಮಂ ಪಿಡಿಯಲ್ಕನುಗೈದೆಬ್ಬಂದು ಸಾರ್ದ ಬಾಂಬಾವೆನೆ ತಾಂ ವಿನುಗುವ ಮುಡಿಪಣಿಯಂ ತಳೆದೆಸಿಸುಂ ಸೊಗಸಿದುದು ವೇಣಿ ತದ್ಬಾಲಿಕೆಯಾ (ಅದ್ಭಶಿ. ೫-೯೨); ಬಿಡದೆ ಬಾಂಬಾವಿಗಂಗಮುವನೋಸಂಸದೀವುದು (ಕಂಪಾ. ೦೯-೨೦).

[ಬಾಂ$_2$ (< ಬಾನ್$_3$) + ಪಾವು$_1$]

**ಬಾಂಬಿಲ್** (ನಾ). ಆಕಾಶದಲ್ಲಿ ಮೂಡುವ ಕಾಮನ ಬಿಲ್ಲು; ಇಂದ್ರಧನುಸ್ಸು : ಕಣ್ಣ ಬಾಂಬಿಲ್ಗಳಿಲಿ ನೇಹವನು ಹೂಡುವಿರಿ ಕುದಿವ ಹೃದಯವ ಮಿಡಿಸಿ ಮೌನ ನುಡಿಸಿ (ಹಿಮ್ಮಗೃ. ೨).

[ಬಾಂ$_2$ (< ಬಾನ್$_3$) + ಬಿಲ್$_2$]

**ಬಾಂಬು, ಬಾಂಬ್** (ನಾ). ಫಿರಂಗಿಯಿಂದ ಹೊಡೆಯುವ ಅಥವಾ ಕೈಯಿಂದ ಎಸೆದು ಸಿಡಿಸುವ ಸಿಡಿಮದ್ದು ತುಂಬಿದ ಕಬ್ಬಿಣದ ಗುಂಡು ; ಸ್ಫೋಟಕಗುಂಡು; ಸಿಡಿಗುಂಡು : ಸಿಡಿವ ಮದ್ದಿನುಂಡೆಯಂತೆ, ಹಾರಲಿಹ ಫಿರಂಗಿಯಂತೆ, ಒಡೆಯಲಿರುವ ಬಾಂಬಿನಂತೆ, ವಿಪ್ಲವದ ಕೇಸರಿಯು . . . ಸಿದ್ಧವಾಗುತಿರುವುದು (ಶಾಂತಿಹ. ೩೯-೨೨); ಬಾಂಬಿನ ದಾಳಿಗೆ ಊರು ತುತ್ತಾಯಿತು (ಸಂಸ್ಕೃತಿ. ೦೯-೩೬). **ಬಾಂಬ್** : ವಿಜಯ . . . ಬಾಂಬ್ ತಯಾರಿಕೆಯಲ್ಲಿ ನಿರತನಾಗುತ್ತಿದ್ದ (ಅಶ್ವತ್ಥ. ೦೩೬).

[← ಇಂ. Bomb]

**ಬಾಂಬೆಣ್** (ನಾ). ಸ್ವರ್ಗದ ಹೆಣ್ಣು ; ದೇವತೆ ; ಅಪ್ಸರೆ.

ಬಾಂಬೆಡಿರ್ = ಅಪ್ಸರೆಯರು : ಅಡರ್ವರ್ತಾಂ ಮೇರುಶೃಂಗಕ್ಕರಿಗಳಡರೆ ನೀಂ ತನ್ಮಹಾದುರ್ಗಮಂ . . . ಪಿಡಿವರ್ಬಾಂಬೆಡಿರಂ ತಾಂ ಪಿಡಿಯೆ ಜಡಿದು ತತ್ಕನ್ಯಕಾರತ್ನಮಂ ನೀಂ (ಅಶ್ವತಿ. ೬೯-೬೨).

[ಬಾಂ$_2$ (< ಬಾನ್$_3$) + ಪೆಣ್]

**ಬಾಂಬೊಳ್ಚ** (ನಾ). ಆಕಾಶದ ನದಿ ; ದೇವಗಂಗೆ ; ಅವುಗಳೆಲ್ಲಂ ಭೂಸ್ವಾಭಾವ್ಯಂಗೊಂಡ ಬಾಂಬೊಳ್ಚದ ನೀರ್ವನಿಗಳಪ್ಪೊರ್ ಮಾನುಷ ಚಾರಿತ್ರಗಂಧಮಂ ತಾಳ್ದಿದುವು (ಅಭ್ಯುಶ. ೨-೦೬).

ಬಾಂಬೊಳ್ಚದಲೆಯ = ತಲೆಯಲ್ಲಿ ಗಂಗೆಯನ್ನು ಧರಿಸಿದವನು ; ಶಿವ : "ಬಾಂಬೊಳ್ಚದಲೆಯಂ . . . ಕಿಡಿಗಣ್ಣನು" (ಕಬ್ಬಿಗಕೈ. ೪) ; ಕೆಂಗಿಡಿಗಣ್ಣ ಬಾಂಬೊಳ್ಚದಲೆಯ ಪಿರಿದಿನಿವ[ಪ್ಪೊ]ಡೆಯ ವಿಡ ನಿರಂಜನ ಲಿಂಗ (ಹರಿಹರಪು. ೦೩-೦) ; ಬಾಂಬೊಳ್ಚಂ ತಲೆಯೊಳ್ ಆಪಂಗೆ ಆತಂ ಬಾಂಬೊಳ್ಚದಲೆಯಂ (ಶಬ್ದಾನು. ೩೦೦ ಪ್ರಯೋ).

[ಬಾಂ$_2$ (< ಬಾನ್$_3$) + ಪೊಳ್ಚ$_3$]

**ಬಾಂಬೊಳಲ್** 'ಬಾಂಬೊಬಿಲ್' ನೋ.

**ಬಾಂಬೊಳಲ** (ನಾ). ಆಕಾಶದಲ್ಲಿ ಕಟ್ಟಿದ ಪಟ್ಟಣಕ್ಕೆ ಸೇರಿದವನು.

ಬಾಂಬೊಳಲರ್ = ಆಕಾಶದಲ್ಲಿ ಕಟ್ಟಿದ ಮೂರು ಪಟ್ಟಣಗಳಿಗೆ ಸೇರಿದ ವಿದ್ಯುನ್ಮಾಲಿ, ಕಮಲಾಕ್ಷ, ತಾರಕಾಕ್ಷರೆಂಬ ಮೂರು ಜನ

ದೈತ್ಯರು : ಮೂಜಗ ಬಾಂಬೊಳಲರ ಪೊಗ್ಗರವಂ ಮುಗ್ಗಿಸಿದುಂಗಣ್ಣಂ ಬಗ್ಗಂ ಕುಡುಗೆಮಗೆ (ಉದ್ಭ.ದೇ. ೪-೪೩).

[ಬಾಂಬೊಳಲ್ (<ಬಾಂಬೊಬಲ್) + –ಅ₇]

**ಬಾಂಬೊಳೆ** 'ಬಾಂಬೊಟೆ' ನೋ.

**ಬಾಂಬೊಲ್**, ಬಾಂಬೊಳಲ್ (ನಾ). ೧. ಸ್ವರ್ಗದ ಪಟ್ಟಣ : ಅಮರಾವತಿ : 'ಬಾಂಬೊಟಲ್ಮರ' ಪರಾ. ೨. ಆಕಾಶದಲ್ಲಿ ಕಟ್ಟಿದ ಪಟ್ಟಣ; ತ್ರಿಪುರ; P ತಾರಕಾಸುರನ ಮಕ್ಕಳಾದ ಮೂರು ಜನ ದೈತ್ಯರು ಕಟ್ಟಿಕೊಂಡ ಮೂರು ಪಟ್ಟಣಗಳು. ಆಕಾಶದಲ್ಲಿ ವಿದ್ಯುನ್ಮಾಲಿಯ ಕಬ್ಬಿಣದ ಪಟ್ಟಣ. ಅದಕ್ಕೂ ಮೇಲೆ ಅಂತರಿಕ್ಷದಲ್ಲಿ ಕಮಲಾಕ್ಷನ ಬೆಳ್ಳಿಪಟ್ಟಣ. ಅದಕ್ಕೂ ಮೇಲೆ ತಾರಕಾಕ್ಷನ ಚಿನ್ನದ ಪಟ್ಟಣ : ಬಾಂಬೊಟಲನುರ್ಕಿಂ ಮೂಱುಮಂ ಸುಟ್ಟು (ಶಬ್ದ.ಕಾ. ೦೩೬); ಬಾಂಬೊಬಲ ರಕ್ಕಸರಂ ಗಾಜುಗಿಡಿಸಿದ ತನ್ನೊಂದಧಟಿಂದಣುವನನಿರ್ಚಿದಾ ಫಣಿಭೂಷಂ (ರಾಘವಾಂ. ೧೩೨-೨). **ಬಾಂಬೊಳಲ್** : 'ಬಾಂಬೊಳಲು' ಪರಾ. [ಬಾಂ₂ (<ಬಾನ್₃) + ಪೊಬಲ್₁]

**ಬಾಂಬೊಟಲುರಿಕ** (ನಾ). ಆಕಾಶದ (ಮೂರು) ಪಟ್ಟಣಗಳನ್ನು ಸುಟ್ಟವನು; ಶಿವ : ''ಬಾಂಬೊಟಲುರಿಕಂ, ದೇಸಿಗಂ, ಗಂಧರಗಿವಿಯಂ. ಬೆಳ್ಳಡಿ . . . ಅಯ್ಯೊಗಂ–ಈ ೩೩ ಈಶ್ವರಂಗೆ ಪೆಸರ್'' (ಕಕಶಾ. ೪೭-೦): "ಬಾಂಬೊಟಲುರಿಕಂ ಶಿಖಿಳಿ ಕಂದುಮಗೊರಲಂ ಗೊರವಂ'' (ಕಬಿಕಾ. ೦೩).

[ಬಾಂಬೊಟಲ್ + ಉರಿಕ]

**ಬಾಂಬೊಟಲ್ಮರ** (ನಾ). ದೇವಲೋಕದಲ್ಲಿರುವ ಮರ ; ಸ್ವರ್ಗದ ವೃಕ್ಷ; ಕಲ್ಪವೃಕ್ಷ: ಪೂತಿಸವ ಬಾಂಬೊಟಲ್ಮರನಂ ದೊರೆಗೊಂಬ ಮೆಲ್ಲಡಿಗಳಂ (ಕಳಿಕಾಂ. ೩೪-೭). [ಬಾಂಬೊಬಲ್ + ಮರ₁]

**ಬಾಂಬೊಟೆ**, ಬಾಂಬೊಳೆ (ನಾ). = ಬಾಂಬೊಚ್ಚೆ : ''ಬಾಂಬೊಟೆಯನೆ ಮಂದಾಕಿನಿ'' (ಕಶಿಾ. ೦೦) ; ಬಾನೊಳ್ ಪೊಟೆ, ಬಾಂಬೊಟೆ (ಶಬ್ದಾ.ವು. ೩೦೩ ವ್ಯಾಖ್ಯಾ) ; ಮೊಸಳೆ ಮುಸುಂಕದಚ್ಚ ಪೊಸಬಾಂಬೊಟೆಯಿಂ ಪೊನಲೊರ್ವೆ ಕೂಸೊಗಾಂ ಮುಸುಬಿದ ಜೇನ ಪುಟ್ಟಿ ಮೊನೆವುಳ್ಳಿ ಗೇದಗೆ . . . ಮಾಮುಸಗಿತೂ ಗಂಡುವೋಳಿಗರ ಕೈಬಿಮರ್ಕ್ಕೊಂಡವ ಸೂಳೆಮೇಳವೇಂ (ಕಳಾಂ. ೬-೦೩೩). **ಬಾಂಬೊಳೆ** : ''ನಾಕನದಿಗಕ್ಕು ಬಾಂಬೊಳೆಯೆಂದು'' (ಕಕಶ. ೬೭); ಬಾಂಬೊಳೆಯೊಳ್ ಸುರಗಿರಿಗೆ ಪರಿದು ಜನಬಿಂಬಕ್ಕೆಲಗಿ (ಆದಿಪು. ೦೩-೨೩); ಇಳೆಯನೀರಡಿ ಮಾಡಿದ ಪಾದ ಜತನ ಬಾಂಬೊಳೆಯು ಪರಿಸಿದಂಘ್ರಿ ಜತನ (ಮೋಹತ. ೦೪-೦೪).

**ಬಾಂಬೊಳೆದಲೆಯ** = ತಲೆಯಲ್ಲಿ ಗಂಗೆಯನ್ನು ಧರಿಸಿದವನು : ಶಿವ : ಭಳಿವಟ್ಟಣನಾಗಿಯಾಣ್ಮಾರುಮೊಗನ್ನೆಯ ಬಾಂಬೊಳೆದಲೆಯ . . . ಪೊರೆಗೆಮ್ಮನು (ಶಬಮೋ. ೩೨-೦). [ಬಾಂ₂ (<ಬಾನ್₃) + ಪೊಟೆ]

**ಬಾಂಬೊಳೆ** 'ಬೊಂಬಾಳೆ₁' ನೋ.

**–ಬಾಕ**, – ಬಕ್ಕ₁ (ಪ್ರ). (ಅತಿಯಾಗಿ ತಿನ್ನುವವನು ಎಂಬರ್ಥದಲ್ಲಿ ಸೇರುವ) ಒಂದು ತದ್ಧಿತಪ್ರತ್ಯಯ : 'ಹೊಟ್ಟೆಬಾಕ' ಪರಾ. **ಬಕ್ಕ₂** : 'ಕೂಳ್ಬಕ್ಕ', 'ತಿನಿಸುಬಕ್ಕ' ಪರಾ.

**ಬಾಕತನ** (ನಾ). ಹೊಟ್ಟೆಬಾಕತನ ; ತಿನಿಸುಬಕ್ಕತನ : ಉಪ್ಪುನೀರಂ ದಿನಂಪ್ರತಿ ಬಾ[ಶಾಕಾಂ. ಚಾ. ಪಾ]ಕತನದಿಂದ ತಪ್ಪದೇ ಹೀರಿದಾ ತಲೆ ಬಿಗುಡು ಗಗನದೊಳಗೊಪ್ಪದಿಂ ಪರಿವ ದೇವಾಪಗೆಯ ಮಧುರತರವಾರಿಯ ಹೀರಿಹೀರಿ ಚಪ್ಪರಿಸಿದಲ್ಲದೇ ಹೋಗದು (ಸಮ್ಮೀ. ೦೨-೯). P ಇದು ಒಂದಂ ಅಪರೂಪದ ಶಬ್ದ. ' ಹೊಟ್ಟೆಬಾಕ ' ಎಂಬುದರ ಸಂಕ್ಷಿಪ್ತ ರೂಪವಾಗಿ ' ಬಾಕ ' ಎಂದು ಬಳಕೆಯಾಗಿರುವ ಪ್ರಯೋಗಗಳು ನಮಗೆ ದೊರೆತಿಲ್ಲ. ಆದರೆ ಇಲ್ಲಿ '-ಬಾಕ' ಮತ್ತು '–ತನ' ಎಂಬ ಎರಡು ಪ್ರತ್ಯಯಗಳಂ ಸೇರಿ ನಾಮಪದವಾಗಿರುವುದನ್ನು ಗಮನಿಸಬಹುದು. [ –ಬಾಕ+ –ತನ ]

**ಬಾಕಯ್ಯ** (ನಾ). ಒಬ್ಬಾತನ ಹೆಸರು : ಬಾಕಯ್ಯ ತುಜುಗೊಳಿಲೊಳ್ ಸ್ವರ್ಗಸ್ಥನಾದಂ (ಎಶ. XI. ಹೊಳಲ್ಕೆ. ೮೭-೩ ; 975).

[ ಬಾಕ₀ । ಅಯ್ಯ₁ ]

**ಬಾಕಿ** (ಗು). ೧. ಇತರ; ಬೇರೆಯ : ಉಳಿದ : ಭಿಸಿ ಪೆಂಡ ಮುಡಿ ತುಕನ ಬಾಕಿ ತುಕವ ತುಪ (ಎಶ. VII. ಶಿಕಾರಿ. ೧೦೭-೦೭; 1570) ; ಬಾಕಿ ಎರಡು ಪಾಡದ ಹಣವನ್ನೂ ಸಹ ಅವರ ಮನೆಗಳಲ್ಲಿ ಎಂದು ಕೊಡು ತ್ತಾರೆಯೋ ! (ಕರಾಸಾ. ೨೦). (ನಾ). ೨. ಉಳಿದುದು ; ಮಿಕ್ಕಿದುದು; ಶಿಲ್ಕು : ಇವರೊಳಿಮುಗತ್ಯಧಿಕಬಲ ಬಂದೊದಗುಪುದುಯಿನ್ನುಳಿದ ಬಾಕಿ ಯನದನು ಕೈಕೊಳ್ಳಿಯ್ಯ (ಜನಭಾ. ೩೪-೩೦); ಸರಿ! ಇನ್ನದೊಂದೇ ಬಾಕಿ! (ಶಂಕಕಾ. ೮) ; ಈ ಬಾಕಿಯುದಷ್ಟೂ ನಾವು ತೆಗೆದುಕೊಳ್ಳೋಣ (ನಡಹಾ. ೧. ೩೨೪). ೩. ತೀರಿಸಬೇಕಾದ ಹಣ; ಸಾಲ : ಏನಾದರೊಂದು ಬಾಕಿಗಾಗಿ ಯಾರಾದ ರೊಬ್ಬರು ಕಾಡಿದರೆ ಹೆಚ್ಚಾಗಿ ನೆರವಿಗೆ ಬರುತ್ತಿದ್ದುದು ಮಾಲತಿಯ (ವಾತ್ಸಲ್ಯ. ೩೦).

**ಬಾಕಿ ಉಳಿಸು** = ೧. ಯಾವುದಾದರೊಂದು ಕೆಲಸವನ್ನು ಪೂರ್ತಿ ಮಾಡಿ ಮುಗಿಸದಿರು : ಇಂದಿನ ಕೆಲಸವನ್ನು ನಾಳೆಗೆ ಬಾಕಿ ಉಳಿಸ ಬಾರದು (ರೂಢಿ). ೨. ಕೊಡಬೇಕಾದ ಹಣವನ್ನು ಪೂರ್ತಿಯಾಗಿ ಕೊಡದಿರು : ಈ ತಿಂಗಳು ಬಾಕಿ ಉಳಿಸದೆ ಪೂರ್ತಿಹಣವನ್ನು ಕೊಟ್ಟು ಬಿಡುತ್ತೇನೆ (ರೂಢಿ). **ಬಾಕಿ ತೀರು** = ಕೊಡಬೇಕಾದ ಹಣ ಸಂದಾಯ ವಾಗು; ಸಾಲ ತೀರು : ಬಾಕಿ ತೀರಿದ ಮೇಲೆ ಉಳಿಯುವ ಆಸ್ತಿ ನಮಗೆ ಸೇರುತ್ತದೆ (ಕೃಪಾ. II. ೪೩೦). **ಬಾಕಿ ಬೀಳು** = ಪೂರ್ಣವಾಗ ದಿರು ; ತೀರದಿರು : ತೆತ್ತಷ್ಟು ಬಾಕಿ ಬಿದ್ದರೆ ಮತ್ತೇನು ಕೊಟ್ಟಾನು ? (ಗಾದೆ) ; ಬಾಕಿ ಬಿದ್ದ ಕೆಲಸವನ್ನು ನಾಳೆ ಪೂರೈಸಲೇ ಬೇಕು (ರೂಢಿ). **ಬಾಕಿಮಾತು** = ಬೇರೆಯ ಮಾತು : ನೀನು ಬಂದದ್ದೇಕೆ ಹೇಳು. ಬಾಕಿಮಾತು ಬೇಡ (ರೂಢಿ). **ಬಾಕಿಯಿರಿಸು** = ಕೊಡಬೇಕಾದುದರಲ್ಲಿ ಬಾಕಿಯನ್ನು ಉಳಿಸಿಕೊಳ್ಳು : ತಿಂಗಳ ಗೊಮ್ಮೆ ಕೊಡುವ ಹಣದಲ್ಲಿ ಏನೂ ಬಾಕಿಯಿರಿಸಬಾರದು (ಅತುಚಾ. ೦೨೩).

[←ಅರ. ಹಿಂ. ಮರಾ. ಬಾಕೀ]

**ಬಾಕಿದಾರ** (ನಾ). ಸಾಲ ತೀರಿಸದೆ ಇರುವವನು ; ಕೊಡಬೇಕಾದ ಹಣವನ್ನು ಬಾಕಿ ನಿಲ್ಲಿಸಿ ಕೊಂಡವನು : ಸೀತಾರಾಮನು ಬಾಕಿದಾರ ರನ್ನೂ ತಹಸೀಲ್‌ದಾರರನ್ನೂ ಸೆರೆಯಲ್ಲಿಡಿಸಿದನು (ರಂಶಿಪು. ೩೦೬) ; ಪುಂಡರು ಬಾಕಿದಾರರಿಗೆ ಕಂದಾಯ ಪಾವತಿ ಮಾಡದಂತೆ ಚಿತಾವಣೆ ಮಾಡುತ್ತಿದ್ದರು (ದಾಪಾಕ. ೬೨).

[ಬಾಕಿ+ –ದಾರ್₄. / ಹಿಂ. ಮರಾ. ಬಾಕೀದಾರ್]

**ಬಾಕಿಮಾರು** (ನಾ). ಮನೆಯ ಮುಂದುಗಡೆಯಿರುವ ವಿಸ್ತಾರವಾದ ಜಮೀನು : ಬೀಡಿನ ಮುಂದಿನ ಬಾಕಿಮಾರು ಗದ್ದೆ (ಕೋಟಿಚ. ೦೬).

[←ತುಳು. ಬಾಕಿಮಾರ್, ಬಾಕ್ಯಾರ್]

**ಬಾಕಿಜು** (ಕ್ರಿ). ಕಿರಂಗತ್ತಿಯಿಂದ ಇರಿ ; ಚುಚ್ಚು: ರಿಪುಭಟರ . . . ಬಾಕಿಜಿಯ ಯಮರಾಜನ ಪುರಕ್ಕಟ್ಟಿದಿರ (ಶಂಸಂ. ೦೪-೬೩).

[ ಬಾಕು₂ ( < ಬಾಂಕು₁ ) + ಇಜು₁ ]

**ಬಾಕು₁** ' ಬಾಪು₁ ' ನೋ.

**ಬಾಕು₂** ' ಬಾಂಕು₁ ' ನೋ.

**ಬಾಕು₃** ' ಬಾಂಕು₂ ' ನೋ.

**ಬಾಕುಳ** ' ಬಾಗುಳ ' ನೋ.

**ಬಾಕುಳಿ** ' ಬಾಗುಳಿ ' ನೋ.

**ಬಾಕುಳಿಕ** (ಗು). ಅತ್ಯಪೇಕ್ಷೆಯಿಂದ ಕೂಡಿದ ; ಅತ್ಯಾಸೆಯ : ಶ್ರೀಕಂಠ

ಶಿವನ ನೆನೆಯದುದು ಲೌಕಿಕವಾರ್ತೆಯುನೆ ಸೂರಪುತಿರ್ಪಪ್ರವೆಸ್ಸೇ ಬಾಕುಳಿಕ ಜಿಪ್ಪೆ (ಶಂಕರ. ೦). [ಬಾಕುಳಿ (< ಬಾಗುಳಿ) ; ?]

**ಬಾಕುಳಿಕತ್ವ** (ನಾ). ಅತ್ಯಪೇಕ್ಷೆ; ಅತ್ಯಾಸೆ : ಬಾಕುಳಿಕತ್ವ ಸೀಗಿ ಮಿತಾಹಾರ ದಿಂದ ಆಚರಣೆ ಇತ್ಯಾದಿ (ಚಾಸು. ೯೯ ಕುತತ). [ಬಾಕುಳಿಕ + — ತ್ವ]

**ಬಾಕುಳಿಗ** (ನಾ). ಅಧಿಕವಾಗಿ ಆಸೆಪಡುವವನು, — ಅಪೇಕ್ಷಿಸು ವವನು : ತೋಳಿದರು ತೂಜಿಂಬ ಬೊಪ್ಪಯ ಬಾಕುಳಿಗರೊಳಪೊಕ್ಕು (ಕೂಠಣ. ೩-೩-೧೮). [ಬಾಕುಳಿ (< ಬಾಗುಳಿ) + — ಗ]

**ಬಾಕುಳಿಗಣ್** (ನಾ). ಅತ್ಯಾಸೆಯಿಂದ ಕೂಡಿದ ಕಣ್ಣು ; ವಿಷಯಾ ತುರವಾದ ಕಣ್ಣು : ಸಿಟ್ಟಿಪ ಬಾಕುಳಿಗಣ್ಗಳ್ ರುಚಿಯೊಡವುಟ್ಟಿಪ ಕಾತರದಿಂ . . . ಮನಮುಟ್ಟಿ ಕರಂ ಕೂಡಿದರಂಗಭವಂ ಮಿಗೆ ಮೆಚ್ಚುವ ತೆಜದಿ (ಜಯಕಾ. ೨-೬೩). [ಬಾಕುಳಿ (< ಬಾಗುಳಿ) + ಕಣ್]

**ಬಾಕುಳಿಗತನ** (ನಾ). ಅತ್ಯಾಸೆ ; ಲೋಭ : ಸುರಾಸುರರ್ಜಲಧಿಯಂ ಕಡೆಸು ಲಕ್ಷ್ಮಲಘುಸದ್ವಸ್ತುಗಳ್ಪರ ಮತ್ತೆ ವುತ್ತ್ರ ಬಾಕುಳಿಗತನದಿಂ ಪಂಥಸಿಸಲ್ವಿವ ವನುಗುಳೆ . . . ತದ್ಗರಳವನಗಜಾವರಂ ಗಳದಲ್ಲಿ ಧರಿಸಿವಂ (ಹಾಕೋಕ್ಕ. ೦೦-೬೬). [ಬಾಕುಳಿಗ + — ತನ]

**ಬಾಕುಳಿಗೊಳ್** (ಕ್ರಿ). ಅಧಿಕವಾಗಿ ಆಸೆಪಡು, — ಬಯಸು : ಹಣ್ಣಿಂಬ ವಾರ್ತೆಯು ಕೇಳಿ ಕಾಮುಕರದೆ ಹಣ್ಣಾಗಿ ಬಾಕುಳಿಗೊಂಡು ಹಣ್ಣುಗಳ ವರಕೆ ಹಕ್ಕಿಗಳೋಡಿ ಐಹ ಮೋಡಿ ಹಣ್ಣ ಕೂಡಿದರು (ಭರತ. ೩೩-೦೬). [ಬಾಕುಳಿ (< ಬಾಗುಳಿ) + ಕೊಳ್₁]

**ಬಾಕುಳಿತನ** (ನಾ). = ಬಾಕುಳಿಗತನ : ಬಾಕುಳಿತನದಿಂ ಬಳಸಿ ಸರೀಕ್ಷಿಪ ಶಾಕಿನಿ ಡಾಕಿನಿ ಭೂತಪ್ರೇತಾಸೀಕದ ಕಣ್ಣೀಜುಂದಿಸಿಪಿರಿದುಂ ತಿಂದಿಸಿ ಸಕ್ಕಸದೆ ಓಕರಿಸುವ ಬೇತಾಳನ ಬಾಯಿಂದಾ ಕರುಳೋಡದೆ ಸುರಿದುದು (ಜಯಕಾ. ೬-೩೨) ; ಬಾಗಿಲ್ಗಾಯ್ದುದಿದಮ್ಮಗಳೋಜೆಯಿಂಬಲಿಯುಣ್ಬ ನೊಡನೆ ಬಾಕುಳಿತನದಿಂ ಕಮ್ಮೋತಾಂತದ ಸರಿಯದೆ ಸುಜೀವುದಿದಮ್ಮ ಗಳೇಲ್ಗಿಯ (ಅಧ್ವ. ೩-೩೨). [ಬಾಕುಳಿ (< ಬಾಗುಳಿ) + — ತನ]

**ಬಾಕುಳಿವಾತು** (ನಾ). ಅಧಿಕವಾದ ಆಸೆಯನ್ನು ಹುಟ್ಟಿಸುವ ನುಡಿ; ಅತ್ಯಪೇಕ್ಷೆಯ ಮಾತು : ಬೇಕಾದಷ್ಟು ಸೆಳೆದುಕೊಂಡು ದೊರೆಯೊಳು ಬಾಕುಳಿವಾತ ಗಂಟಿಕ್ಕಿ (ಜ್ಞಾನ. ೩೦-೦೯೯). [ಬಾಕುಳಿ (< ಬಾಗುಳಿ) + ಮಾತು₁]

**ಬಾಕುಳಿ** (ನಾ). ಅಧಿಕವಾದ ಆಸೆಯುಳ್ಳವಳು; ಅತ್ಯಪೇಕ್ಷೆಯುಳ್ಳ ವಳು : ಬಾಕುಳೆಯರ ಬಾಯ್ಮಡಿಪಡೆದ ಸೆಳಿದು ಬದ್ದೆಯರುಡಿಸಿದೊಡುದ ಕಲ್ಪ ಕೊವರನಭಿನವಮದನಂ (ಅನಂತ. ೦-೩೬). [ಬಾಕುಳ (< ಬಾಗುಳ) + — ಎ₂]

**ಬಾಗ್** (ನಾ). ತೋಟ; ಉದ್ಯಾನ : 'ಲಾಲ್‌ಬಾಗ್' ಪರಾ. [← ಪಾರ. ಬಾಘ್; ಅರ. ಹಿಂ. ಮರಾ. ಬಾಗ್]

**ಬಾಗ, ಬಾಗ್ಯ** (ನಾ). ಪಾಲು ; ಭಾಗ : ಭಾಗಂ—ಬಾಗಂ; ಭಾಡಂ— ಬಾಡಂ (ಶಬ್ದ.ಮ. ೨೬೯ ಪ್ರಯೋ). 'ಕಡಿವಾಗ' ಪರಾ. ಬಾಗ್ಯ : ಅಷ್ಟಮಾಭಾಗೆಯೊಳಗಿಪ್ಪಂದು ಬಾಗೆಯುಂ ಕೊಟ್ಟು (ಕೋಂಬಳ. ೬-೬). 'ಭಾಗೆ' ಪರಾ. [< ಸಂ. ಭಾಗ]

**ಬಾಗಡ, ಬಾಗಡಗೆ** (ನಾ). ಒಂದು ಪ್ರಾಂತ್ಯದ ಹೆಸರು ; ಈಗಿನ ಬಿಜಾಪುರಜಿಲ್ಲೆಯ ಬಾಗಲಕೋಟೆಗೆ ಓಂದೆ ಇದ್ದ ಹೆಸರು : ಶ್ರೀಮತ್ಸೆಪ್ಪರ್ಣಾಸಡಿಗಳ್ . . . ಕಿಸುಕಾಡೆಪ್ಪತ್ತ್ರುಮಾ [ಬಾಗಡೆ]ಲ್ಪತ್ತ್ರುಮಂ ನಿರಾಕುಳವಮಾಳುತ್ತಿರೆ (ಸೌಇ. XI — i. ೯೦-೯; 969). ಬಾಗಡಗೆ : ಬಾಗಡಗಾ ರಾಜಪಥೋತ್ತರತಃ ಭೋಗಗಾಪುಣ್ಣಾ ಬಳವದ್ಧ್ಯೇ ನಿವತ್ತ್ರ[ಿ] ನಾನಾ ತ್ರಿಂಶತಾ ವಿಪ್ರುದೇವಾಯುಸಮೇದಿತಂ (ಸೌಇ. XI-i. ೬೩-೨೨ ; 1049) ; ಕಿಸುಕಾಡೆಪ್ಪತ್ತ್ರುಂ ಬಾಗಡಗೆಯೆಪ್ಪತ್ತ್ರುಂ (೨೫. IX. ೯೬-೨೨ ; 1169) : ಅಟ್ಟಿಯಿನ್ದೆ ಬಾಗಡಗೆಯ ರುದ್ರನಾದರದೆ ಮಾಡಿಸಿದಂ ವಿಳಸತ್ ಪ್ರತಿಷ್ಠೆಯಂ (ಎಇ. II. ೨೩೯. ೬೨ ; ಸು. 1160). [?]

**ಬಾಗಡಗೆ** ' ಬಾಗಡ ' ನೋ.

**ಬಾಗಡೋರು** (ನಾ). ಕುದುರೆಯ ಲಗಾಮಿಗೆ ಜೋಡಿಸಿದ ಹಗ್ಗ : ವಾಘಿ : ಕುದುರೆ ಇಳಿದು ಚಿಕ್ಕ ಮರಕ್ಕೆ ಬಾಗಡೋರು ಹಗ್ಗದಿಂದ ಕಟ್ಟಿಹಾಕಿ (ಕಥಾಮಂ. IV. ೩೯) ; ಅಲ್ಲಿ ಒಂದು ಕಂಭಕ್ಕೆ ಬಾಗಡೋರು ಹಗ್ಗದಿಂದ ಅವನನ್ನು ಬಿಗಿದು ಆಚೆಗೆ ಹೊರಟು ಹೋದರು (ಮುಸುಗ. ೦೯೩). [← ಹಿಂ. ಬಾಗಡೋರ್]

**ಬಾಗಧೂಪ** (ನಾ). ಗುಗ್ಗುಳದ ಮರ ; ಮಡ್ಡಿಮರ : ಗುಗ್ಗುಳಧೂಪ, ಮಾಡಧೂಪ, ಮಡ್ಡಿಧೂಪ, ಬಾಗಧೂಪ (ವೈಕಿನಿ. ೯-೩೯). [ಬಾಗ್ಯ + ಧೂಪ]

**ಬಾಗರಣ** (ನಾ). ವ್ಯಾಕರಣ : ಬಾಗರಣಾ ವ್ಯಾಕರಣಂ (ಶಬ್ದ.ಮ. ೮೦೬ ವ್ಯಾಖ್ಯಾ). [< ಪ್ರಾ. ವಾಗರಣ./ಸಂ. ವ್ಯಾಕರಣ]

**ಬಾಗರಣಿಗ** (ನಾ). ವ್ಯಾಕರಣಕಾರ; ವೈಯಾಕರಣಿ : ಜೋಯಿಸನು ನಜಿಪನೋದುವಂ ಮೇಣ್. ಜೋಯಿಸಿಗಂ ಏವಂ ಗಣದಿಗಂ . . . ಶಾಸ್ತ್ರಿಗಂ ಬಾಗರಣಿಗಂ (ಶಬ್ದ.ಮ. ೮೦೬ ಪ್ರಯೋ). [ಬಾಗರಣ + — ಇಗ]

**ಬಾಗವತ್ತ** (ನಾ). ಯಕ್ಷಗಾನ, ಬಯಲಾಟ ಮೊದಲಾದುವುಗಳನ್ನು ಕಲಿಸುವ ಗುರು; ಭಾಗವತ : ಶಾಸನವಂ ಬರೆದಾತಂ ಬಾಗವತ್ತ ಬೀರಮರಸಗ್ಗ್ರಂ ಗಾರಬೆಗಂ ಹುಟ್ಟಿದ ಸರಸ್ವತೀಪ್ರಿಯಪುತ್ರ ಹಾವಲ ಕೆರೆಯ ಸೇಸಬೋವ ಮಲಯ (ಎಇ. XVI. ಶಿಕಾ. ೬೩-೫೦; 1224). [< ಸಂ. ಭಾಗವತ]

**ಬಾಗವಸ** (ನಾ). ಧನುರ್ವಿದ್ಯೆಯಲ್ಲಿ ಒಂದು ಪ್ರಕಾರ (?) : ನ್ಯಾಯ ಪುರುಷಸಂತಾನಸ್ಥಾನಸಂಸ್ಥಾನಂ ಬಿಲ್ಮುಟ್ಟಿ ಲಕ್ಷಣೋಪೇತಂ ಬಗೆ ಬಾಗ ವಾವೆಂಬವಸಜೀದು ಧನುರ್ವಿದ್ಯೆಯೇ ರೂಪುಗೊಂಡಂತಿರ್ವರುಂ ಕಾದೆ (ನಾಂತಿಪು. ೯-೯೩ ವ). [ ? ]

**ಬಾಗವಳಿ** (ನಾ). ಪಾಲು; ಭಾಗ : ತುರುಬಿನ ತಂಮನಾಯಕನ ಬಾಗವಳಿ ಹಳಿಹರವರಿ ಕೋಣಕಾರು ಅಂತಾಯಿವಕಿ ಗೇಣ ೧೪೦ (ಕ್ವ. I. ೩೦-೨೦ ; 1432 ?). 'ಭಾಗಾವಳಿ' ಪರಾ. [ಬಾಗ + — ವಳಿ₂]

**ಬಾಗವಾನ** (ನಾ). ತೋಟವನ್ನು ನೋಡಿಕೊಳ್ಳುವವನು ; ತೋಟಗಾರ : ಸೀತಾಫಲಗಳು ತುಟ್ಟಿಯಾದ ಕಾರಣವೇನೆಂದು ಒಬ್ಬ ಬಾಗವಾನನನ್ನು ಕೇಳಿದನು (ಮುಂಶಿ. ೩-೨೬೩) ; ಬಾಗವಾನರ ಮಕ್ಕಳಿಂದ ಕಾಯಿಪಲ್ಯ ಗಳನ್ನು ತೆಗೆದುಕೊಂಡು ತೃಪ್ತರಾಗುತ್ತಿದ್ದರು (ಕುಗ್ರಾಮ. ೩೦) ; ಜಿ ಹಣ್ಣು ಗಳಿಲ್ಲ ನಮಗೆ ಬರುವಂತಿಲ್ಲ ಅಣ್ಣಾ, ಅವುಗಳನ್ನು ಬಾಗವಾನರಿಗೆ . . . ಮಾರಿ ಬಿಟ್ಟಿದ್ದೇನೆ (ಹಕ್ಕಿ. ೦೨೯). [← ಪಾರ. ಬಾಘವಾನ್ ; ಹಿಂ. ಮರಾ. ಬಾಗವಾನ್]

**ಬಾಗಾದಿ** (ನಾ). (ಅವಿಭಕ್ತಕುಟುಂಬದ) ಆಸ್ತಿಯ ಪಾಲಿಗೆ ಹಕ್ಕುಳ್ಳ ವನು : ದಾಯಾದಿ : ಬಾಣಾತಿ ಮನೆ ಮುಂದೆ ಹೋಗಿ ಬಾ ಅಣ್ಣಯ್ಯ . . . ನಿನ ಕಂಡು ಬಾಗಾದಿ ಬಾಯ ಬಿಡುವಾಳು (ಹಳ್ಳಿ. ೬೬) ; ಬಾಗಾದಿ ಮಂದಿ ನೀ, ಹ್ಯಾಗಾದಿ ನನ ಮಗನ ಬಾಗಾದಿ ಕೇಳಿ ಹಾಸರತು ಜನದಾಗ ಮೂಗ ಮುಂದಾಡಿ ನಗತಾಳೆ . . . ಬಾಗಾದಿ ಮನಿ ಮುಂದ ಹ್ಯಾಂಗ್ಹಾಯ್ದೆ ನನ ಮಗನ ಚೌರಿ ಚಿತ್ತ್ರಕಿ ನೆರಳೀಲೆ ಬರುವಾಗ ಬಾಗಾದಿ ಮಾರಿ ತಳ್ಳಾಕೊ (ಕನ್ನಜಾ. ೦೦೨). 'ಭಾಗಾದಿ' ಪರಾ. [< ಸಂ. ಭಾಗಾದಿನ್ ?]

**ಬಾಗಾಯತ, ಬಾಗಾಯಿತಿ, ಬಾಗಾಯಿತಂ, ಬಾಗಾಯಿತು** (ನಾ). ತೆಂಗು, ಅಡಿಕೆ ಮೊದಲಾದುವುಗಳನ್ನು ಬೆಳೆಯುವ ನೀರಾವರಿ ಭೂಮಿ ; ತೋಟಪಟ್ಟಿ ಜಮೀನು : ಬಾಗಾಯತ ಭೂಮಿ ಇದ್ದವರಿಗೆ

ಯಾವ ಕಾಲವಾದರೂ ಬರಗಾಲವೇ ಇಲ್ಲ (ಶ್ರೀಚಿತ್ರ. ೦೬೬). **ಬಾಗಾಯಿತಿ** : ಪೆಣ್ಣಸ್ನು ಗಂಟು ಹಾಕಿಕೊಳ್ಳೋದು, ಒಂದು ಬಾಗಾಯಿತಿ ಜಮೀನಿನ ಖರೀದಿ ಮಾಡಿದ ಹಾಂಗ (ಕಳ್ಳರ್ಕ. ೮೨). **ಬಾಗಾಯಿತು** : ಜಲಾಧಾರದಿಂದ ಕಬ್ಬು, ತೆಂಗು, ಅಡಿಕೆ, ಏಳ್ಕದೆಲೆ ಮುಂತಾದ ಬೆಳೆ ತೆಗೆಯುವಂತಾ ಭೂಮಿಯನ್ನು ಬಾಗಾಯಿತುಯೆಂದು ಹೇಳುವುದು (ಕೃಷಿಶಿ. ೩೩) ; ವುತ್ತೊಂದು ಜಾತಿಯ ಪೈರಿಗೆ ವರ್ಷವೆಲ್ಲಾ ನೀರು ಅಷ್ಟೋ ಇಷ್ಟೋ ಬೇಕಾಗುತ್ತದೆ. ಇದನ್ನು ತೋಟದ ಪೈರು ಅಥವಾ ಬಾಗಾಯಿತು ಎನ್ನುತ್ತಾರೆ (ಕಲ್ಪಿಶಾ. ೩೬೯). **ಬಾಗಾಯ್ತು** : ತರಿ ಬರಿದಾಯ್ತು, ಖುಷ್ಕಿ ಶುಷ್ಕವಾಯ್ತು, ಬಾಗಾಯ್ತು ಹೋಗಾಯ್ತು (ಗಾದೆ). [← ಹಿಂ. ಬಾಗಾತೀ ; ಮರಾ. ಬಾಗಾಈತ್, ಬಾಗಾಯತ್]

**ಬಾಗಾಯಿತಿ** 'ಬಾಗಾಯತ' ನೋ.

**ಬಾಗಾಯಿತು** 'ಬಾಗಾಯತ' ನೋ.

**ಬಾಗಾಯ್ತು** 'ಬಾಗಾಯತ' ನೋ.

**ಬಾಗಾರ** 'ಭಾಗಾಹಾರ' ನೋ.

**ಬಾಗಿ**$_1$ 'ಬಾಗೆ$_1$' ನೋ.

**ಬಾಗಿ**$_2$ 'ಬಾಗು$_2$' ನೋ.

**ಬಾಗಿನ** 'ಬಾಯನ' ನೋ.

**ಬಾಗಿನಕೊಡು** 'ಬಾಯಿನಂಗೊಡು' ನೋ.

**ಬಾಗಿನಾಡು** (ನಾ). ಒಂದು ನಾಡಿನ ಹೆಸರು : ಕಿಸುಕಾಡೆಪ್ಪತ್ತುಂ ಬಾಗಿನಾಡೆಪ್ಪತ್ತುವಂ ಬೂತುಗಂಗೆ ಕನ್ನರದೇವಂ ಮೆಚ್ಚುಗೊಟ್ಟಂ (ಎಕ. III. ಮಂಡ್ಯ. ೪೦-೨೦; 950). [ ಬಾಗಿ$_1$ (< ಬಾಗೆ$_1$) + ನಾಡು ]

**ಬಾಗಿಲ್**, ಬಾಗಿಲ, ಬಾಗಿಲು (ನಾ). ಪ್ರವೇಶಮಾರ್ಗ ; ದ್ವಾರ : "ದ್ವಾಃ, ದ್ವಾರಂ, ವಳಜಂ— ಈ ೩ ಬಾಗಿಲ್" (ಹಲಾಯು. ೩೦-೦೯೩) ; ಗುಹೆಯ ಬಾಗಿಲಂ ಒರಿದೊಂದು ಸಿಲೆಯುಂ ತಂದಿಟ್ಟು ಮುಚ್ಚಿ (ಶಬ್ದಾರಾ. ೦೨೨-೨೦) ; ಬಸಂತದೊಳ್ ಬಸದಿಯ ಬಾಗಿಲಂ ತೆಱೆದ ಮಾಟಕ್ಕೆ ಯೊಳಿರ್ದುವು ಮಾವುಗಳ್ (ಆದಿಪು. ೦-೬೬) ; ಸಮುತ್ತುಂಗಶಿಖರಂಗಳ್ ನಾಲ್ಕುಂ ದೆಸೆಯೊಳುಮಾಗಿ ಬಾಗಿಲೊಂದೆಯಾಗಿರ್ಪುದು ಗುಹ್ಯಾಖ್ಯಂ (ಶಂಕರಂ. ೨೦೩-೦೯). **ಬಾಗಿಲ** : ಕಾದಿ ಹಿರಣ್ಯಕನ ಕರುಳ ಕೊರಳೊಳಗೆ ಧರಿಸೇಳು ಕಾಯ್ದು ಬಲಿ ಬಾಗಿಲದೊಳು ಭೇದಿಸಿ ಭೂಮಿ ತ್ರಿಪಾದದಿಂದಳೆಬೇಕು (ಕುಕಂದ. ೩-೦೬೯-೨). **ಬಾಗಿಲು** : ಆವಾವ ಭಾವದಲ್ಲಿ ಮಾಡಿ ಕೂಡಿಹೆವೆಂಬರ ಬಾಗಿಲ ತೋರಯ್ಯ (ಬಸವ. ೩೬೨) ; ಅರಗಿನರಸನ ಬಾಗಿಲಲಿ ದಳ್ಳುರಿಗೆ ತಡವೇ (ಚಾಮರಸ್ರೀ. ೩-೪೦) ; ತುಂಬಿರುವ ಪಟ್ಟಣಕೊಂಭತ್ತು ಬಾಗಿಲು (ಕುಕಂ೮. ೦-೦೬೨-೦).

**ಬಾಗಿಲ ಕಾ, ಬಾಗಿಲ ಕಾಯ್, ಬಾಗಿಲ ಕಾಯು** = ೧. ದ್ವಾರಪಾಲಕ ನಾಗು : ನಿರ್ಜರಪತಿ ವಿಷ್ಣು ಬಾಗಿಲ ಕಾದಿರ್ಪ ಸಜ್ಜನಸಂಪತ್ತು ಬಡವೆ (ಮೋಹಕ. ೩೦-೦೩). ೨. ಬಿನ್ನಹಮಾಡಿಕೊಳ್ಳಲೆಂದು ಬಾಗಿಲ ಬಳಿ ಬಂದು ನಿಂತಿರು : ಹರಿಯಜ ಮುನಿಗಳೆಲ್ಲರೂ ನಿಜ ನಿಮ್ಮ ಬಾಗಿಲ ಕಾಯ್ದಿಹರು (ಬಸವ. ೭೯೨) ; ಹರಿಯು ಬಾಗಿಲ ಕಾಯ್ದು ಬಲಿ ಭಾಗ್ಯವಂತ ನಾದ ಹರನ ಬಾಗಿಲ ಕಾಯ್ದು ಬಾಣನಳಿದ (ಕುಕಂದ. ೨-೬೩-೧) ; ಬಾಗಿಲ ಕಾಯುವರು ಕಡುಮಾರ್ಖರಿಂತಿದ ನಮಗೆ ಮನ್ನಿಪುದು (ಸಂಕಣ. ೬-೯). **ಬಾಗಿಲ ಸೆಜ್ಜೆ** = ಅಗಸೆಬಾಗಿಲ ಮೇಲಿನ ಗೋಪುರ ; ಬಾಗಿಲಂ ವಾಡ : ಒರಿದಾಗಿ ಬಾಗಿಲ ಸೆಜ್ಜೆಯುಭ್ರುವ ವ್ಯಾಪಿಸಿದುವು ಶುಭ್ರವಿಡಿದು (ಕಂಪಾ. ೬-೦೩).

[ದೇ. ॥ ತಮಿ. ವಾಯಿಲ್ ವಾಯಲ್, ವಾಚಲ್ ; ಮಲ. ವಾಕಿಲ್ ; ತುಳು. ಬಾಕಿಲು · ತೆಲು. ವಾಕಿಲಿ ; ಕೋಲಾ. ವಕಲ್ ; ನಾಯ್ಕಿ. ವಾಕಲ್ ]

**ಬಾಗಿಲ** 'ಬಾಗಿಲ್' ನೋ.

**ಬಾಗಿಲಾಯ್ತ** (ನಾ). ಬಾಗಿಲು ಕಾಯುವವನು : ದ್ವಾರಪಾಲಕ ; ಪಡಿಹಾರ : ಬಾಗಿಲಾಯ್ತಂ, ಅಚ್ಚುಳಾಯ್ತಂ, ಕಲ್ಲಾಯ್ತಂ (ಶಬ್ದಮ. ೪೨೩ ಪ್ರಯೋ). [ಬಾಗಿಲ್ + –ಆಯ್ತ]

**ಬಾಗಿಲು** 'ಬಾಗಿಲ್' ನೋ.

**ಬಾಗಿಲುಗಟ್ಟಳೆ** (ನಾ). (ಯಾವುದಾದರೊಂದು ಸಾರ್ವಜನಿಕ ಕಾರ್ಯಕ್ಕೆ) ಪ್ರತಿಯೊಂದಂ ಮನೆಯವರೂ ಇಂತಿಷ್ಟು (ಹಣವನ್ನು) ತೆರಬೇಕೆಂಬ ನಿಯಮ : ಬೆಳುಗುಳದ ತೀರ್ತ್ಥದಲ್ಲಿ ವೈಷ್ಣವ ಅಂಗರಕ್ಷೆಗೋಸುಕ ಸಮಸ್ತರಾಜ್ಯದೊಳಗುಳ್ಳಂತಹ ಜೈನರಾ ಬಾಗಿಲು ಗಟ್ಟಳೆಯಾಗಿ ಮನೆವಂನೆಗೆ ವರ್ಷಕ್ಕೆ ೧ ಹಣ ಕೊಟ್ಟು . . . ಕೀರ್ತ್ತಿಯನೂ ಪುಂಣ್ಯವನೂ ಉಪಾರ್ಜ್ಜಿಸಿಕೊಂಬುದು (ಎಕ. II. ೩೪೪-೨೩ ; 1368). [ಬಾಗಿಲು (<ಬಾಗಿಲ್) + ಕಟ್ಟಳೆ$_1$]

**ಬಾಗಿಲುಗಾಹಿ** (ನಾ). = ಬಾಗಿಲಾಯ್ತ : ಕೂಡಲ ಸಂಗನ ಶರಣರ ಬಾಗಿಲುಗಾಹಿ ನಾನಾಗಿರ್ದ ಕರ್ತರು ಗೃಹಕ್ಕೆ ಬಂದರೆ ಬೇಕು ಬೇಡೆನೆ (ಬಸವ. ೦೦೩-೩೦೪). [ಬಾಗಿಲು (< ಬಾಗಿಲ್) + ಕಾಹಿ]

**ಬಾಗಿಲುಜೋಳ** (ನಾ). ಪ್ರತಿಯೊಂದು ಮನೆಯವರೂ (ದೇವರ ಕಾರ್ಯಂಕ್ಕಾಗಿ) ಇಂತಿಷ್ಟು ಜೋಳವನ್ನು ಕೊಡಬೇಕೆಂಬ ನಿಯಮ : ಸ್ಥಾನಪೂಜೆ ಬೆಳುಗೊಡೆ ಬಾಗಿಲುಜೋಳ ತಳಾಜಗೂಲಿ ಅಸತನ್ಯಾಯ ವಿಂತಿನಿತುವಂ ಸರ್ಬ್ಬಮಾನ್ಯವಾಗಿ ಹಡದು ದೇವರ ಪೂಜಾರಿಗಂ ೬ವಿಲಗವಿರಲು ಮ[ರ]ವಾಗಿ ಬಿಟ್ಟರು (ಕೌಇಇ. XV. ೦೦೦-೪೪ ; 1165). [ಬಾಗಿಲು (<ಬಾಗಿಲ್) + ಜೋಳ]

**ಬಾಗಿಲುತಡೆ** 'ಬಾಗಿಲುದಡೆ' ನೋ.

**ಬಾಗಿಲುದಡೆ**, ಬಾಗಿಲುತಡೆ (ಕ್ರಿ). (ಮದುವೆಯ ಸಂದರ್ಭದಲ್ಲಿ, ವಧೂವರರು ಪರಸ್ಪರ ಹೆಸರಂ ಹೇಳುವವರೆಗೂ ಒಳಗೆ ಬರ ದಂತೆ ವರನ ಸಹೋದರಿಯರು) ಬಾಗಿಲಲ್ಲಿ ತಡೆಗಟ್ಟಿ ನಿಲ್ಲು ; ಹಾಗೆ ತಡೆಗಟ್ಟುವ ಶಾಸ್ತ್ರವನ್ನು ಆಚರಿಸು : ಕುವರರ ಮದುವೆ ಯೊಳ್ ಬಾಗಿಲುವಡೆದಾಗ ಕುವರಿಯರ್ಗಿತ್ತ ಭೂತಳವ (ಭರತೇ. ೪೪-೨೮). **ಬಾಗಿಲುತಡೆ** : ಬಾಗಿಲು ತಡೆದ ಅಕ್ಕನನ್ನು ತಮ್ಮ ಕೇಳಿಕೊಳ್ಳುತ್ತಾನೆ (ಜಮ್ಮೂರು. ೯೮). [ಬಾಗಿಲು (<ಬಾಗಿಲ್) + ತಡೆ$_1$]

**ಬಾಗಿಲುವಾಡ** 'ಬಾಗಿಲ್ವಾಡ' ನೋ.

**ಬಾಗಿಲ್ಕೋಲು** (ನಾ). ಬಾಗಿಲಿಗೆ ಹಾಕುವ ಅಗುಳಿ : ಭೂರಮಣ ದ್ವಾರಸ್ಥರಂ ಕರೆದು ನಿಂದು ಬಾಗಿಲ್‌ಕೋಲ ತೆಗೆಯದಿರಿ ನಮ್ಮರಿಕೆ ಯಿಂದಲಲ್ಲದೆ ವಿಪ್ರರಿಂಗೆಸಲು ಕೈಗೊಂಡು ಕಾದಿರಲ್ಕೇಲುಭಟರು (ತ:ರಂಗ. ೬-೩೦). [ಬಾಗಿಲ್ + ಕೋಲು$_1$ (<ಕೋಲ್$_1$)]

**ಬಾಗಿಲ್ಗಾಪು** (ನಾ). ಬಾಗಿಲಿನಲ್ಲಿ ಇರುವ ಕಾವಲು : ಬಂದ ದೆಸೆಯಂ ಪೋದ ದೆಸೆಯುನಾರುಂ ಕಾಣದಂದದಿಂ ಪಲವು ಬಾಗಿಲ್ಗಾಪುಗಳನುಳಿದು . . . ಪೋಪುದಿದು ಪರಿಭಾವಿಸೆ ಸಂದಳ್ಕಿಕಾಱಿರೊಳಗಂಟೆ (ಶಬ್ದಮ. ೩-೩೦); ಬಾಗಿಲ್ಗಾಪಿನ ಪಡಿಯರತಿಯರು ಬಾಗಿ ತುಳಿಲ್ಗೆಯ್ವಾಗ ಒಡತಿಯ ಮುಖ ವನ್ನು ನೋಡುತ್ತಿದ್ದರು (ಸಪಾ. ೨೦೦). [ಬಾಗಿಲ್ + ಕಾಪು]

**ಬಾಗಿಲ್ಗಾಯ್** (ಕ್ರಿ). ಬಾಗಿಲನ್ನು ಕಾಯು ; ದ್ವಾರಪಾಲಕನಾಗು : ಬಾಗಿಲ್ಗಾಯ್ವುದಿದಯ್ಯಗಳೋಜೆಯೆ (ಅಕ್ಕರೇ. ೩-೩೨); ಬಾಗಿಲ್ಗಾಯ್ವರ್ ತಾವುರುತರದ ಕೋಟಾಕವಾಟಂಗಳಂ ದಲ್ (ಹಾಲಾಸ್ಯ. ೩-೨-೦೩). [ಬಾಗಿಲ್ + ಕಾಯ್$_1$ (<ಕಾ$_1$)]

**ಬಾಗಿಲ್ಮಾಡ** 'ಬಾಗಿಲ್ವಾಡ' ನೋ.

**ಬಾಗಿಲ್ವಾಡ**, ಬಾಗಿಲುವಾಡ, ಬಾಗಿಲ್ಮಾಡ, ಬಾಗಿಲ್ವಾಡು (ನಾ). ೧. ಹೆಬ್ಬಾಗಿಲು ; ಪುರದ್ವಾರ ; ಗೋಪುರ : ಸಾಕೇತನಗರವಂ ಬಳಸಿದ

ಕನಕಪ್ರಾಕಾರದ ಬಾಗಿಲ್ವಾಡಂಗಳೊಳಂ (ಅಂಶು. ೧೬.೩೭ ವ): ಇಳೆಯೊಳ್ಮನ ಕರುಣರಸಂ ಶೀವಿದ ಲಲಿತತಟಾಕಮದಾಗಲ್ಕರವನೆ ತೊಳಗುವ ಬಾಗಿಲ್ವಾಡಪಂದಜ ತೊಂಬೆಂಬವೊಲೊಪ್ಪಿದುದು (ಪಂಪರಾ. ೧-೬೩). **ಬಾಗಿಲುವಾಡ:** "ಗೋಪುರಂ, ಪುರದ್ವಾರಂ — ಈ ೨ ಬಾಗಿಲುವಾಡಂ" (ಶಬ್ದಮ. ೧೯-೧೩೩): ಪಿಂತೆ ಪತಿಹಿತವ ಸಹಿತಂ ಬರುತಭವಸತ್ತ ಪುರದ ಬಾಗಿಲುವಾಡಮಂ ಪೊಜಮಡಲು ಕಂಡು (ಜಹರ. ೮೮. ೩೮-೬). ೨. ಅಗಸೆಬಾಗಿಲಿನ ಮೇಲಿನ ಉಪ್ಪರಿಗೆ: ಮಾಡ ಗೋಪುರ ಮದಿಲ್ ಮಾಳಿಗೆ ಬಾಗಿಲುವಾಡ ದೇಗುಲಗಳನೇಱಿ ನೋಡಿದವರ್ಪುರಸತಿಯರು (ಹರಿಕ. ೩೬-೩೯). ೩. ಬಾಗಿಲಿನ ಚೌಕಟ್ಟು: ಹೊಸಮನೆಗೆ ಇಂದು ಬಾಗಿಲುವಾಡವನ್ನು ಇಟ್ಟರು (ಆಡು). **ಬಾಗಿಲ್ವಾಡ:** ೧. ಧಾರಿಣಿಮಹಾದೇವಿಯಯ್ಯೂರ್ವರರಸಿಯರ್ಕಳುಂ. . . ಒಂದು ಬಾಗಿಲ್ವಾಡದ ಪೊಱಗಣ ದೆಸೆಯೊಳ್ ತಂತಮ್ಮ ವಾಹನಂಗಳಿಂದಿೞಿದು (ವಡ್ಡಾರಾ. ೮೦-೧೩): ಗಂಗೆ ಜಮುನೆಗಳಿಂದೊಪ್ಪುವ ದ್ವಾರಜಗತೀತಳಂಗಳಂ ತೋಱುತ್ತುಂ ಎರಡನೆಯ ಬಾಗಿಲ್ವಾಡಮಂ ಪೊಕ್ಕು (ಶಾಂತಿಪು. ೩-೦೬ ವ). ೨. ಉಗ್ರಸೇನಮಹಾರಾಜನುಮಂ. . . ಪೊಱಲ ಬಾಗಿಲ್ವಾಡದ ಮೇಗಣಪಂಜರದೊಳ್ಸೆಱೆಯಿಟ್ಟು (ನೇಮಿಪು. ೩-೭೩ ವ). **ಬಾಗಿಲ್ವಾಡು:** ೧. ಸತತಂ ಪೊಂಗಳಸದ ದೀಧಿತಿಯುನ್ನತಿಗಳ್ಕಿ ಬಳ್ಕಿ ಕೆಲಸಾರ್ದು ದಿವಾಪತಿ ದಕ್ಷಿಣಗತನ್ಯುತ್ತರಗತಿಯಾದಂ ಪೊಸಬಾಗಿಲ್ವಾಡಂ (ಜಗಂ. ೯-೧೦೬). [ಬಾಗಿಲ್ + ಮಾಡ₁]

**ಬಾಗಿಲ್ವಾಡು** 'ಬಾಗಿಲ್ವಾಡ' ನೋ.

**ಬಾಗಿಸು₁** (ಕ್ರಿ). ೧. ಬಾಗುವಂತೆ ಮಾಡು; ಬಗ್ಗಿಸು; ಮಣಿಸು: ಕಲಿಯಂ ದೇವಾಗಾರದ ಪಳಯಿಗೆ ದೂರದೆ ಬಾಗಿಸುವನ್ನಿಕ್ಕರ್ವಲ್ಲಿ ವಾತೋದ್ಧೂತಂ (ಕ್ರಿಶಾ. IX-i. ೦೩೬-೯೩; 1090); ನಿಮ್ಮಡಿಯ ನೆನಹೆ ಕೊರ್ವಿದರಿವಾದಿಗಳ ಮಾೞಗನಿದು. . .ಬಾಗಿಸದೆ ತಲೆಯಂ (ಪದ್ಮರಾ. ೯-೨೯): ವಾಳಿಗೆ ತೆರಳದೆ ಕೋಡ ಬಾಗಿಸಿ ಕಲಿವೃಷಭ ಹೊಗುವಂತೆ ದ್ರೋಣನ ಬಲುಸರಳ ಸರಿವಳೆಗೆ ದಡೆಮನೊಡ್ಡಿ ದಳವುಳಿಸಿ (ಕುಮಾ.ದ್ರೋ. ೦೩-೦೨). ೨. ಸೋಲಿಸು; ಪರಾಜಯಗೊಳಿಸು: ನಾಗಪುರದರಸುಗಳ ಮಕ್ಕಳ ಬಾಗಿಸಿತು ಬಿಲುವಿದ್ಯೆ ಲೋಕದ ಭೋಗಿಗನ್ಯಪರತ್ನದ ವಿದ್ಯೆಯದೇಕಲವ್ವನಿ ಬಾಗಿ ಹೋಯಿತು (ಸಂಕರ. ೦೬-೦೨೦). ೧. ೨: ಕರವೀರವರ್ಗವುಂ ಬಾಗಿಸಿದರದಟರಂತಿರದೆ ಪುನ್ನಾಗಮುಂ ಪತ್ತಿ ರಂಜಿಸಿದರ್ಚಿಮರ ಮಾವುತಿಗರಂತೆ (ಕೃರಾಕ. ೯-೨೨). [ಬಾಗು₁ + — ಇಸು₁]

**ಬಾಗಿಸು₂** (ಕ್ರಿ). ೧. ಸೀಳು; ಹೋಳು ಮಾಡು: ತವಕದ ಬಳಿಯಲಿಯ . . . ಪಿರಿದು ಕಂಬಳಿಂದ ಬಾಗಿಸಿಯಾತಗೆ ಪರಮಪ್ರೀತಿಯಲೂಡುವುದು (ಕಂಪಶಾ. ೬ ೦೧೦). ೨. ಭಾಗ ಮಾಡು; ವಿಭಾಗಿಸು: ಭೃಂಗಳಂತಲವನು ಬಾಗಿಸಿ ನಿಖಿಲ ಗೋಪಾಂಗನೆಯರು ಪಡೆವೆಸೆಯೆ (ನೋಹಕ. ೦೯-೯೨). ೩. [ಗಣಿತ] ಭಾಗಾಹಾರ ಮಾಡು: ಭಾಗಿಸು: ಲಬ್ಧ ಉಂದದೆ ಬಾಗಿಸಿ ಕೊಟ್ಟರೆ (ಬಾಸ್ಕರ. ೦೩-೩). [ಬಾಗ₁ + — ಇಸು₁]

**ಬಾಗಿಸೂತ್ರ** (ನಾ). ಒಂದು ಬಗೆಯ ಸಸ್ಯ: "ಬಾಗಿಸೂತ್ರ, ಗಂಟಲಂಪಣ, ಬಾರ್ಜರಿ, ದೊಡ್ಡ ಮರದರಿಶಿನ, ಪೊಟ್ಟವಲ್ಲಿ" (ಸಸ್ಯಕೋ. ೨೦); ದೊಡ್ಡಮರದ ರಿಸಿನ, ಬಾಗಿಸೂತ್ರ (ವೃಕ್ಷಶಿ. ೦೩-೨೦೧). [?]

**ಬಾಗು₁** (ಕ್ರಿ). ೧. ಮಣಿ; ಬಗ್ಗು: ದೇವೋತ್ತಮಾಂಗಂಗಳುಂ ಬಾಗಿದುವು (ಅಂಶು. ೬-೩೯); ಫಳಭಾರದಿಂದೊಲೆದು ತೂಗಿ ಬಾಗುವ ಮರಂ (ಹರಿಶಾ. ೬-೯೦): ಚಿನ್ನ ಪಣ್ಣೊನೆಯ ಭರದಿಂ ಸನ್ನತಮಾಗಿರ್ದ ಬಾಟಿಸಸುಯೊಳ್ ವಿಳಗ್ರಂ ತನ್ನ ಶಿಶುವಿಂಗೆ ಮೊಲೆಯಂ ಮನ್ನಿಸಿ ಬಾಗಿರ್ದು ಕೊಡುವ ಬಾಲೆಯ ತೆಱದಿಂ (ಬಾರಕು. ೦-೦೦೬). ೨. ಡೊಂಕಾಗು; ಡೊಗಾಗು; ವಕ್ರವಾಗು: ಗುಡಿಲಂತೆ ಬಾಗಿದ ಬೆನ್ನುಂ (ರಮಾರ್ಜು. ೯-೬೩); ಹಲ್ಲು ಹೋಗಿ ಬೆನ್ನು ಬಾಗಿ ಅನ್ನಕ್ಕಿಂಗೆ ಹಂಗಾಗದ ಮುನ್ನ . . . ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೦೩೦): ಅಗದು ತಪಕ್ಕೆ ವಿಘ್ನಂ ಬಾಗಿದ ಬೆನ್ನುಡುಗಿದಾರಮಡಂಗಿದ ಜಘನ ತೂಗುವ ತಲೆ ಕಂಪಿಪ ಕೈ (ರಮಾಕ. ೩-೯೩): ಬಾಗಿದ ಪುರ್ಬು ಶಾವರೆಯಸಳಿನೇಳಪ ನಿಡುಗಣ್ (ಶೋಹಕ. ೦೬-೬೨). ೩. ಎರಗು: ವಂದಿಸು: ನಮಸ್ಕರಿಸು: "ಬಾಗೆಜಗು ಮೊಗ್ಗು ತಲೆಲ್ಲಯೆನ್ಸಲ್ . . . ವಂದನಾರ್ಥ" (ಕರ್ಣಾ. ೦೩೯): ಪಾಪೀನಿಧ್ರುನಾ ಪದಯುಗದೊಳ್ ಮನೋಮುದದೆ ಬಾಗುವೆಂ (ಕರ್ಣಾ. ೨-೦೦೯); ಅಂಗದಪರ್ಣನೆಂಬ ಗಂಧರ್ವಂ . . . ಬಾಗಿದಂ ಪದಯುಗಕ್ಕರೂಢಸರ್ವಜ್ಞನಾ (ಸಂಪತಾ. ೩-೩೯). ೪. ಬಗ್ಗಿಸು; ಮಣಿಸು; ಬಾಗಿಸು: ನಾಣ್ಚಿ ತಲೆಯಂ ಬಾಗಿ ನೆಲನಂ ಬರೆಯುತ್ತುಂ (ಸಂಪಶಾ. ೯-೬೯ ವ): ಉದ್ವೃತ್ತಗೋತ್ರಾಭಿಮುಖಿಂ ವಜ್ರಾಘಾತಮಾದಂತೆ ಸಿಗ್ಗಾಗಿ ತಲೆಯಂ ಬಾಗಿ (ಗದಾಯು. ೩-೬೯ ವ); ಕರವ ಮುಗಿದು ಸಜ್ಜನರಿಗೆ ಶಿರ ಬಾಗಿ ಚರಿಸುತಿರಬೇಕು (ಭೂಕಂದ. ೨-೯೩-೨). ೫. ಪಾತ್ರೆಯನ್ನು ಬಗ್ಗಿಸಿ ಅನ್ನದ ಗಂಜಿಯನ್ನು ಬಸಿ: ಪುಷ್ಪವಾಸನೆಯ ಮಲ್ಲಿನ ತಣ್ಣನ ಕಂಪಿನಲು ಪೊಪುಟಿ ಪೋಗುತಿರ್ಪ ತಂಡುಲಂಗಳಂ ಕಳೆದುಕೊಂಡು ಬಾಗಿದೋಗರಮನಾರೋಗಿಸುವಂ (ಸುಕುಮಾ. ೦೦-೩೩ ವ): ಕುದಿ ಬರಲೊಯ್ಯನೆ. . . ಅಗುಬ್ಬಿಗಳ ಹವನಂ ತೆಗೆದೊತ್ತಿ ನೋಡಿ ಬಾಗಿವಳಾಗಳ್ (ಅಡು. ೦೨-೧೨೨); ಅನ್ನ ಬೆಂದದ್ದು ಹೆಚ್ಚಾಗಿ. ಬೋಸವಾಗಿದೆ. ಬಾಗಿವರೆ ತಿಳಿಯೇ ಇಲ್ಲ (ಪುರಕು. ೨೨). ೬. (ಆಲಂ) ವಿನಯದಿಂದ ವರ್ತಿಸು; ತಗ್ಗಿ ನಡೆ; ಸಗ್ಗು: ತಾಗಿ ಬಾಗದ ಮರುಳುತನದು ದ್ರೋಗವಿದಕೇನೆಂಜಿಸಕೆಟಕಟೀಗಲದ್ದುದು ಕೌರವಾನ್ವಯವೆಂದನಾ ದ್ರೋಣ (ಕುಮಾ.ಶೀ. ೦-೯); ಪಿರಿಯರ ಸೇವೆಗೆಯ್ . . . ಪರಿಜನವಂ ಕರಂ ಸಲಹು ಭಾಗ್ಯದೆ ಬಾಗಿರು ಪೆಣ್ಣಳಂತಿರಲ್ ಗರತಿಯರಪ್ಪರ್ (ಶಾಕುಂತ. ೩೬-೯೩).

**ಬಾಗಿಕೊಂಡಿರು** = (ಆಲಂ) ವಿನಯದಿಂದಿರು: ನಮ್ರತೆಯಿಂದಿರು: ಬೇಗಿ ಬೆಳೆದ ಗೊನೆವಾಳೆಯಂತೆ ಬಾಗಿಕೊಂಡಿದ್ದಡೆ ಬೇಡಿದ ಪದವಿಯನೀವ . . . ಕೂಡಲ ಸಂಗಮದೇವ (ಬಸವ. ೦೩೯).

**ಬಾಗೊತ್ತು** = ಬಾಗುವಂತೆ ಒತ್ತು; ಬಾಗಿಸು: ಪೂಗಣೆಯನ ಚಾಮರವುಂ ಸೀಗುರಿಯುಂ ಪಿಡಿವಳಂತೆ ಸೆಳೆಗೊಂಬುಗಳಂ ಬಾಗೊತ್ತಿ ಗುಜ್ಜುಮಾವಿನ ಪೂಗೊಂಚಲನುಡಿದು ಪಿಡಿದಳೆವೆರಸೊರ್ವಳ್ (ರಾಜಶೇ. ೦೩-೬೨); ಎತ್ತಿದನು ಬಾಗೊತ್ತಿದನು ಕೊರಳಿಗೆ ತೊಡಿಸಿದನು ಕಿರುವ (ಕುಮಾ.ಅ. ೦೩-೩೭): ಹಂಸಧ್ವಜಂ. . .ರಥವೇಱಿ ಬಾಗೊತ್ತಿ ನಿಜಚಾಪಮಂ ಜೇಗೈದು ಪಡೆಸಹಿತ ಫಲುಗುಣನಂಗಿದಿರಾದನು (ಕೃಬಾಶಾ. ೦೯-೨೯). 'ಬಗ್ಗು₁' ಪರಾ.

[ದೇ.II ತಮಿ. ವಾಜ್ಜು. ವಾಕ್ಕು; ಮಲ. ವಾಜ್ಞು; ತುಳು. ಬಾಗು, ಬಾಂಗು; ತೆಲು. ವಂಗು; ಕೊಡ. ಬಾಕ್; ಕೋಲಾ. ವಂಗ್]

**ಬಾಗು₂**, ಬಾಗ್ಗಿ₂, ಬಾಗೆ₂ (ನಾ). ೧. (ಆಯುಧ ಮುಂತಾದುವುಗಳ ತುದಿಯ) ಕೊಂಕಾದ ಭಾಗ: ನಾರಿಸುತನ ಆಸ್ಯಕೆಗೊಂಬವನ ಬೇರಿನ ಬಿಲ್ಲು ನುಂಗಿತ್ತು ಬಿಲ್ಲಿನಾ ಬಾಗಿನಲ್ಲಿ ಇಪರೆಲ್ಲರು ಸಿಕ್ಕಿದರು (ಮೋಳಿಮಾ. ೦೯೦-೬೦೭); ತಾಗಿ ಕಡಿದೊಟ್ಟಿದನು ಕೊಡಲಿಯ ಬಾಗಿನಲಿ ಬಹು ಚಾತುರಂಗವ (ಸಂಕರ. ೨೬-೩೮): ಅಗಸದ ಬಾಗು ಚಂದ್ರಮನ ಗುಂಡಿನ ನಣ್ಣು ಸಾಗರದ ತೆರೆಪಂಕು, ಗಿಡಬಳ್ಳಿ ಬಳುಕು . . . ಯಾಸೃಷ್ಟಿಯಿಂ ನಮ್ಮೊಳಾಗಿಹುದು ರೂಪರುಚಿ (ಮುಂಕಶ. ೨೦೬). ೨. ನದಿಯ ತಿರುವಿನಲ್ಲಿ ಇರುವ ಜಮೀನು, ಗದ್ದೆ, ತೋಟ ಮುಂತಾದ ಫಲವತ್ತಾದ ಪ್ರದೇಶ: ಅಳಿಯುಲ್ಲವಬ್ಬುವನವಿಲ್ಲು ದ್ಯಾನಸಂತಾನಮಿಲ್ಲದ ಬಾಗಿಲ್ಲ (ಶಾಂತಕು. ೯-೦೩೩); ಅಗ್ನೇಯದೊಳಿಱಿಯ

ಬಾಗುಂ . . . ಪಡುವ ಪೂವಿನ ಕಿಡಿಯುಂ ಬುರುಲ ಬಾಗುಂ (ಶಾಸ. IX-i, ೦೨೦-೧೩ ; 1058) ; ಮಾಬಲಯ್ಯನ ಬಳದ ಮರೆಯ ಸೋಂಕಿನ ಬಾಗಿನ ಬಟ್ಟೆಯಿಂ ಮೂಡಣ ಮೆಯ್ಯ ಕಿರುಕ್ (ಶಾಸ. II, ೯-೨೫ ; 1076). ೩. ಸಂದುಗೊಂದು ; ಮೂಲೆ : ಕಿಲ್ಲೆ ಕುಹರದ ಕೋಣೆ ಬಾಗು ಗಳ್ಳಿಲ್ಲವನು ಹೊಕ್ಕರಿಸಿ ತೆರಳಿಚಿದನು ಮಹಾಧನವ (ಕುಮಾ.ಭಾ. ೩-೧೮) ; ಒರಬಾಗಿನ ಕುಡುವ ಕೊಳ್ಳದ ಗೌರಿಕರನಪ್ಪಳಿಸಿ ಮಲೆಯ ವಿಹಾರಿಗಳ ಬಡಿಗೈದು ತುಂಬಿಸಿದನು ಸುವಸ್ತುಗಳ (ಕುಮಾ.ಭಾ. ೯-೦೦). ೪. [ಸಂಗೀತ] ಧ್ವನಿಯ ಪಲುಕು.—ಬಳುಕು : ಉದ್ದ ನೀಚ ಸ್ಥಾಯ ಸಂಚಾರ ಠಾಯ ಬಾಗು ಸುಬದ್ಧಾಬದ್ಧಾದ್ವಾವಿಂಶತಿ ಶ್ರುತಿಯೇಕವಿಂಶತಿ ಮೂರ್ಛನೆ ಗಳಿಸಿಯೆ . . . ಪಾಡುತ್ತಿರಿಯುಂ (ಶಾಂತೀಶ್ವ. ೦೬-೬೬ ಕ) ; ಆ ವಧು ಠಾಯ ಬಾಗು ವೋಹ ಚಾಳಿಯುಮಂ ನೆಱೆ ಮಾಡಿ ತೋಡಿ ವೇಳಾವಳಿ ದೇಶಿ ಗುರ್ಜರಿಪರಾಳಿಗಳಿಂದಮೆ ನಾಡೆ ಪಾಡುತ್ತುಂ (ರಾಜಶೇ. ೩-೯೦). **ಬಾಗಿ₁** : ೨. ಪಡುವ ಬಾಗಿಯ ಪೊಳಗೆ (ಶಾಸ. ೦೯೩೦, ಉಡುಪಿ. ೫೬೬-೦೯: 1414). **ಬಾಗೆ₁** : ೨. ತೆಂಕಣ ಬಾಗೆಯ ತೋಱವಳಿ ನಾಡ ಬೆಳತ್ತೂರಿಯ ಮೂಳಗದ್ದೆ ಬೆದ್ದಲು ಚತುಸ್ಸೀಮೆಯುಸುಳ್ಳದನು ಸರ್ವಮಾನ್ಯದ ಕೊಡಗೆಯಾಗಿ . . . ಶಿಲಾಶಾಸನವ ಮಾಡಿಕೊಟ್ಟೆವು (ಎಕ. IX, ಕಂಗಳೂ. ೮೮-೦೨ : 1303) ; ಜಿಡ್ಡಿಗ್ರಾಗಳ ಬಾಗೆಯೊಳಗೆ ಬೀಯಣ್ಣನ ಹೊಲ (ಎಕ. IX (೩).ಕಂಗಳೂ. ೦೬೯-೦೦; 1424). [<ಬಾಗು₁]

**ಬಾಗುಂಜಿ** 'ಬಾಗುಜಿ' ನೋ.

**ಬಾಗುಜಿ**, ಬಾಗುಂಜಿ, ಬಾಬಿಂಜೆ, ಬಾವಂಚಿ, ಬಾವಂಜಿ, ಬಾವುಜಿ, ಭಾವಂಚಿ, ವಾಕುಚಿ, ವಾಗುಂಜಿ, ವಾಗುಚಿ (ನಾ). ಒಂದು ಬಗೆಯ ಔಷಧೀಸಸ್ಯ ; ಸೋಮವಲ್ಲಿ : "ಚಂದ್ರಮುಷ್ಟಿ, ಬಾಗುಜಿ" (ಅಭಿಧಾ. ೦೦-೦೦) ; "ಕಾಳಮೇಷಿ—ಕರಿಯ ಕಿಗಡೆ, ಕರಿಯ ಜೀರಗೆ, ವಾಂಜಿಷ್ಠ, ಬಾಗುಜಿ ?" (೬೩೦. ೪೦). **ಬಾಗುಂಜೆ** : ಚಿತ್ರಮೂಲ ಬಾಗುಂಜೀ ಬೀಜ ಇವನು ಗೋಮೂತ್ರದಿಂದ ಅರೆದು ಲೇಪಿಸಲು ಕುಷ್ಠ . . . ಶಮನ (ವೈದ್ಯಸಾ. I, ೪೯೩) ; ಬಾಗುಂಜಬಿತ್ತುವಾಕಳೆತುಪ್ಪದಲಿ ಕುಡೆ ಕುಷ್ಠ ತಾ ಕೆಡುಗುಂ (ಪಾಕ್ಯಶಾಂ. ೨೦) ; ಚಿತ್ರಮೂಲ ಬಾಗುಂಜೀ ಬೀಜ ಇವನು ಗೋಮೂತ್ರದಿಂದ ಅರೆದು ಲೇಪಿಸಲು ಕುಷ್ಠ ಹರ (ವೈದ್ಯ.ಪ. ೦೯೫). **ಬಾಬಿಂಜೆ** : ಗುಲ್ಲಳಂಚಿ, ಬಾಬಿಂಜಿ (ವೈದ್ಯಶಿ. ೨೫-೯೬೯). **ಬಾವಂಚಿ** : ಹೀರಿಯ ಮತ್ತು ಬಾವಂಚಿಯು ಮಲಭೇದಕ (ಅಶ್ವಾಂಗ. ೦೬೫-೩ ಟೀಕು) ; ಬಾವಂಚಿ ಗಿಡ, ಕಾರ್ಬೀಕ್‌ಬೀಜ (ವೈದ್ಯಶಿ. ೬೫-೦೩೦೩). **ಬಾವಂಜಿ** : ತಗಟೆಯ ಬೀಜ ಬಾವಂಜಿಯ ಬೀಜ . . . ಇವೆಲ್ಲವಂ ತವ್ಯೊಳು ಸರಿಯಾಗಿ ಕೊಂಡು ಚೂರ್ಣವಂ ಮಾಡಿ (ವೈದ್ಯ.ಪ. ೯೨). **ಬಾವುಜಿ** : "ವಾಕುಚಿಯೆನಲು ಬಾವುಜಿಯೆನಿಕ್ಕು" (ಕುಂಗಣಾ. ೬೬-೨೦). **ಭಾವಂಚಿ**: ಏಲಕ್ಕಿ ಲವಂಗ . . . ಭಾವಂಚಿಯಲೆರಸದಿಂದರದು . . . ಕಲಸಿ ಕೊಡಲು ಜ್ವರಾತಿಸಾರ ಗ್ರಹಿಣಿ ಸಹ ಗುಣಮಕ್ಕುಂ (ಕಳಶ್ವ. ೩೦೯). **ವಾಕುಚಿ**: "ಅವಲ್ಗುಜ, ಸೋಮರಾಜಿ . . . ವಾಕುಚಿ, ವಾಗುಚಿ, ಪೂತಿಫಲಿ " (ಶಾಶಂ. ೬). **ವಾಗುಂಜೆ** : ಸಾಸಿವೆಯ ಗಿಡದ ಅಗಿಲು, ಬಿಳಿಯ ಗುರುಗುಜಿ, ವಾಗುಂಜಿಯ ಬೀಜ, ಪ್ರತ್ಯೇಕ ೪ ತೂಕ(ವೈದ್ಯ.ಪ. ೨೮). **ವಾಗುಚಿ** : ಮೇಲಿನ 'ನಾಚಿರಾ' ಪ್ರಯೋಗವನ್ನು ನೋಡಿ. [<ಸಂ. ವಾಕುಚೀ./ಹಿಂ. ಬಕುಚೀ, ಬಾಬಚೀ; ಮರಾ. ಬಾವಚೀ]

**ಬಾಗುಮರಿಗೆ** (ನಾ). ಅನ್ನದ ಗಂಜಿಯನ್ನು ಬಸಿಯುವ ಪಾತ್ರೆ: ಅನ್ನದ ಪಿಶ್ವಾಳಿಚಂಗೆಯನ್ನು ಒಲೆಯ ಪಕ್ಕದಲ್ಲಿಟ್ಟಿದ್ದ ತಾಮ್ರದ ಬಾಗುಮರಿಗೆಗೆ ಎತ್ತಿ ಇಳಿಸಿ . . . ಅನ್ನ ಬಸಿಯಲು ಅಣಿಯಾಗುತಿದ್ದಳು (ಹುಲಿಯು. ೩೦೦). [ಬಾಗು₂ + ಮರಿಗೆ (< ಮರಗೆ)]

ಬಾಗುಪಡೆ (ಕ್ರಿ). ಕೊಂಕನ್ನು ಹೊಂದು ; ವಕ್ರತೆಯನ್ನು ಪಡೆ : ಎಡೆಯಾದ ಸೀಡಡಿ ಶರೀರದೊಡನತಿಬಾಗುಪಡೆದೆಡದ ಮೆಯಕ್ ನೆಗೆದ ಬಲದ ಕಟಿ ನಾರಿಯಂ ತುಡುಕಿ ಕರ್ಣದ ಕಡೆಗೆ ಸೆಳೆದ ಕೈ . . . ದೃಷ್ಟಿ ಮುಷ್ಟಿ ಶರಸಂಧಾನವನುವಾಗೆ ಕಿಡೆಕಿಡೆಯೆನುತ್ತೆ ಕೊಕ್ಕರಿಸಿದೆಚ್ಚನು (ಹರಿಶ. ೬-೨೯). [ಬಾಗು₂ + ಪಡೆ₂]

**ಬಾಗುಳ್** 'ಬಾಗುಳ' ನೋ.

**ಬಾಗುಳ**, ಬಾಕುಳ, ಬಾಗುಳ್ (ನಾ). ೧. ಮನಸ್ಸಿನ ಗೊಂದಲ; ಕಳವಳ ; ಚಿಂತೆ : "ಬಾಗುಳಂ ವ್ಯಾಕುಲದೊಳ್" (ಕರ್ನಾಟ. ೬೮); ಬಯಕೆಯ ಬಾಗುಳಮಾ ಕಾಂತೆಯೊಳಂತದು ನೆಗಟ್ಟುದಿಲ್ಲಣಂ ತೃಷ್ಣಾರ್ತಿ ಕ್ಷಯಕರನಿರೆ ತಾಂ ಗರ್ಭಾಶಯದೊಳ್ ತೋಱುಗುಮ ದೋಹದಂಗಳ ವೊಂದುಂ (ಪಂಚತಂ. ೦೦-೬೨); ಪೋಗುಪೋಗೆಂದೆನ್ನನಟ್ಟಿಯೆ . . . ಬಾಗುಳದೆ ಹುಲುನರಂಗೊಪ್ಪುವ ಕೀಳುನುಡಿಗಳಲಿ ಬೇಗುದಿಯನೆನೆ ಗಿತ್ತರದರಿಂ ಬೇಗ ಬಂದೆನು (ರಾಜಶೇಸಂ. ೩-೩-೦೩). **ಬಾಕುಳ** : ೨. ತೀವ್ರವಾದ ಅಪೇಕ್ಷೆ; ಉತ್ಕಟವಾದ ಬಯಕೆ: ನೋಡುವ ಕಣ್ಗೆ ಮೆಯ್ಪುವಿಯ ಮಾಡುವ ಕೂರುಗುರ್ಪೂಯ್ಯೆ ಮೆಯ್ಗೆಳಂ ನೀಡುವ ಬಾಯ ಬಾಕುಳಕೆ ಪಲ್ಲಟಮಾಡುವ ಬಯ್ದ ಬಯ್ಗುಳಂ ಬೇಡುವ . . . ಗಂಡು ಹೇಲ್ ತಡಂ ಮಾಡುಗುಂ (ಅಪಂಕ್ತಿ. ೬-೩೦). ೩. ಆಸೆ ಪಡುವವನು ; ಆಸಕ್ತ : ತನಿಗಳ್ಳ ತಪಕಿಗಂ ಬಾಡಿನ ಬಾಕುಳನೀತನೆಂದು ಲೋಕದ ರಸಮಂ ತನು ಕುಡಿಯೆ ಕುಡಿಯಿಪರ್ (ಅಪಂಕ್ತಿ. ೯-೩೩). **ಬಾಗುಳ್**: ೧. ಗಾಳಿ ಬಿಮರ್ತಂದು ನೇಸಱುಕ್ ಕಂಗಳನಾದಂದು ಅಮರ್ದು ನಂಜಾದಂದು ನಿನಗೆ ಬಾಗುಳ್ (ಶಾಸಾಶ್ವ. ೦೦-೪೦). ☞ ಈ ಶಬ್ದರೂಪ ವಿಚಾರಣೀಯ ವಾದುದು. [< ಸಂ. ವ್ಯಾಕುಲ]

**ಬಾಗುಳಿ**, ಬಾಕುಳಿ (ನಾ). ೧. ಹೆಬ್ಬಯಕೆ ; ಲೋಲುಪತೆ ; ಅತ್ಯಾಸಕ್ತಿ : "ಬಾಗುಳಿಯೆನಲ್ಕತ್ಯಾಸೆ" (ಕಶ. ೬೬). ೨. ಅಧಿಕವಾಗಿ ಬಯಸುವ ವ್ಯಕ್ತಿ: ವ್ಯಸನಿ : ಬಾಗುಳಿಗಳು ಏನು ನೆರೆದಿರ್ದೊಡೆ ಏನು ಕೂಗಿಸುವೆನು ಕಾಗೆಯಂತೆ (ಪ್ರಾಚಕ. ೦೯-೦೦೦). **ಬಾಕುಳಿ** : ೧. "ಬಾಕುಳಿ, ವೊಗಸು, ಪಸಂ, ಇಚ್ಛೆ—ಈ ೪ ಇಚ್ಛೆ" (ಕರಣ. ೩೬-೨೩೩): ಕೊಸಱುವ ಲಾಗು ಕೂಡಿ ತಣಿವಿಲ್ಲದ ಬಾಕುಳಿ ಗುಂಪುಗೊಟ್ಟಿಯಂ ಪೊಸಯಿಪ ಬೇಟಮಂ ಬೆಳಸುವಿಷ್ಟಿಯ ಜತ್ತಕಿ ತಾನೆ ಲೋಕದೊಳ್ (ಸೂಕ್ತಿಸು. ೬-೯೦೦) ; ಒಕುಳಿಯ ನೆವದಿಂದ ತಕ್ಕೆಯ ಬಾಕುಳಿಗಳುರವಣಿಸಿತೇ (ಕುಮಾರ. ೭-೬೬); ಮಜಾಂಬಿ ಮೇಲಜೀಯದೆ ಅಲರ್ಗಳಂ ಬಾಯ ಬಾಕುಳಿಯಿಂದೆ ತುಳಿದು ಸಲ್ಲಲಿತಕುಸುಮಾವೋದವಮಂ ಓರ್ವುರ್ಪೋ (ಅಂಜನ. ೨-೦-೦೦). ೨. ವಾತ್ರೋರ್ವಳ್ ಬೆಸನವ ಬಾಕುಳಿ (ಅಂಜನ. ೦೯-೯೨೮); ಪುಣ್ಯಲೋಭ ಭಕ್ತರ ಬಾಕುಳಿ ಶರಣರ ಸೂಜೆ (ಬಸವ. ೯-೨೫). [< ಬಾಗುಳ]

**ಬಾಗುಟೆ** (ನಾ). ಬಲೆ ; ಜಾಲ : ವಾಗುರಾ—ಬಾಗುಟೆ (ಕರ್ನಾಟ. ೦೯೮ ವ್ಯಾಖ್ಯಾ). [< ಸಂ. ವಾಗುರಾ]

**ಬಾಗೆ₁**, ಬಾಗಿ₁ (ನಾ). ೧. ಒಂದು ಬಗೆಯ ಮರ; ಶಿರೀಷ ; ಸಿರಿಸಲ ಮರ : "ಶಿರಿಸಮೆನೆ ಬಾಗೆ" (ಕುಂಗಣಾ. ೩೬-೦೬); ಬಾಗೆಯಂತೆ ನಿಸ್ಸಾರನಾಗಿ ಅಶೋಕೆಯಂತೆ ನಿಷ್ಫಲನಾಗಿ . . . ಎಲ್ಲಾ ಪಟಿಗಮೊಳಗಾದ್ಯೆ (ರತ್ನಕರಂ. ೨-೦೦೫) ; ಬಾಗೆಯನೊತ್ತಿ ಹಿಡಿದ ಕುಂದಂ ಕೃಷ್ಣಾಗರು ವಿಡಿದುಡುಪಳಿಗಳಿಂದಾ ಪೂಗಣೆಯನ ಜಯನಾಲಯಮೆನೆ ವಸವತಿಮಾವನ ವಾಯ್ತು (ಜಯನೃ. ೦೫-೯೯). ೨. ಒಂದು ಊರಿನ ಹೆಸರು : ಬಾಗೆಯಟ್ಟುತ್ತುವಂ (ಎಇ. IV, ೩೫-೨೬ ; 975); ಶ್ರೀಮತ್ ಕೇತಲ ದೇವಿಯರ್ ತದ್ದ್ವಾಪಿಸಾಸಿರದೊಳಗಣಬುನುಮಂ ಬಾಡದ ಖಂಪಣ ಬಾಗೆಯುದ್ಯತ್ತಜ ಬಬ್ಬಯುಮುತ್ತಮುವಾಗ್ರಹಾರಂ ಪೊನ್ನವಾಡವಂ . . . ಆಳುತ್ತಮಿರೆ (ಎಕ. XIX, ೨೬೩-೬; 1054). **ಬಾಗಿ₁** : ೧. ಕೋಸಲ

ದೇಶದಲ್ಲಿ ಪುಟ್ಟುವ ವಜ್ರವು ಬಾಗೀಹೂವಿನ ವರ್ಣದಿಂದಿರುವದು (ಶ್ರೀಗಂ೨. ೩೬೪-೨೫) : ವಾರಗಳು ಪೆಸವ, ಪೆಬ್ಬಲಸು . . . ತೇಗ, ಕೂಲುತೇಗ, ಬಾಗಿ, ಬಿಲ್ವಾರ, ದಿಂಡಿಗ (ಪಮ್ಮ. ೫೯೬).

[ದೇ.॥ ತಮಿ. ವಾಕೈ; ಮಲ .ವಾಕ; ತುಳು. ಬಾಗೆ]

**ಬಾಗೆ₂** 'ಬಾಗು₂' ನೋ.

**ಬಾಗೆ₃** 'ಬಾಗ' ನೋ.

**ಬಾಗೆಯ** (ನಾ). ಒಬ್ಬಾತನ ಹೆಸರು : ಸೆಣನಾಡಾ ಬಾಗೆಯುವೆಜೀಯದು ವಿಟ್ಟಾನ್ (ಎಪಿ. XVI. ತುಮಕೂ. ೯೩-೬ : ಸು. 780).

[ಬಾಗೆ₁ + ಅಯ್ಯ₁ (<ಅಯ್ಯ₁)]

**ಬಾಗೆಯೂರ್** (ನಾ). ಒಂದು ಊರಿನ ಹೆಸರು : ಬಾಗೆಯೂರ ಬಲ್ಲಹನೆಜೀ ನೊಳ್ಳಿಯಾನ್ . . . ಪಡೆಯುಳಿಜೀದು ಸತ್ತನ್ (ಎಪಿ. XVI. ತುಮಕೂ. ೯೩-೬ : ಸು. 780) ; ಇದಕ್ಕೆ ಸಕ್ಕಿ ಜಮ್ಮೂರ ಪೆರ್ಮ್ಮಾಡಿ ಗಾವುಣ್ಡಸು ಬಾಗೆಯೂರ ಕವ್ವಾಜಗಾವುಣ್ಡನು (ಎಪಿ. V. ಚನ್ನರಾ. ೨೫೦.೦೩ : ಸು. 925). [ಬಾಗೆ₁ +ಊರ್]

**ಬಾಗೆವಾಡಿ** (ನಾ). ಒಂದು ಊರಿನ ಹೆಸರು ; ◆ ಬಸವಣ್ಣನವರ ಜನ್ಮಸ್ಥಳವಾದ. ಈಗಿನ ವಿಜಾಪುರಜಿಲ್ಲೆಯ ಬಸವನ ಬಾಗೆವಾಡಿ: ಸಿ[ರ್ಮ]ಲಗೆ ಪೂರ್ವ್ವದಿಗ್ಭಾಗೇ ಕೃಷ್ಣಬೆಣ್ಣ್ವೇತ್ರರ ಪಥೇ ಬಾಸುರಿಕೋಡು ಇಂಗಲಸರ ಬಾಗೆವಾಡಿ ಸಾವುಳವಾಡಿಗೆ ಒಡ್ಡವೊಡಿಗೆ ಮಧ್ಯವರ್ತಿ[ನ] ಒಪ್ಪರಗೆನಾಮಗ್ರಹೋ (ಕರ್ನಾ. XI — i. ೬-೦೮ ; 802) ; ಅಗ್ರಹಾರಂ ಬಾಗೆವಾಡಿಯೊಳಗೆಸೆದಿರ್ಪ ಅಗ್ರೇಶ್ವರಂ ಕಮ್ಮೆಕುಲ ದಿಂದೆ ಮೆಜೆದಿರ್ಪ ವಿಪ್ರನಿರ್ಪಂ (ಬಸವ. ೦-೯೭). [ಬಾಗೆ₁ + ವಾಡಿ₂]

**ಬಾಗೇಶ್ರೀ, ಬಾಗೇಶ್ವರಿ** (ನಾ). [ಸಂಗೀತ] ಒಂದು ರಾಗದ ಹೆಸರು : ಹತಭಾಗ್ಯೆಯಾದ ಚಿತ್ರಾಂಗದೆ ತನ್ನ ಪೂರ್ವಕತೆಯನ್ನು ಬಾಗೇಶ್ರೀಯಲ್ಲಿ ತೋಡಿಕೊಳ್ಳುತ್ತಾಳೆ (ಕೃಷ್ಣಮೋ. ೬೨೯). **ಬಾಗೇಶ್ವರಿ** : ಬಾಗೇಶ್ವರಿ ಪೂರಿಯಾ ದರ್ಬಾರಿ ಕಮಾಚ್ ರಾಗಗಳು ಉನ್ಮಾದವನ್ನೂ . . . ಗುಣಪಡಿಸುವುವೆಂಬ ಭಾವನೆ ಉತ್ತರಭಾರತದಲ್ಲಿದೆ (ಭಾರತ. ೫೧೯).

[←ಹಿಂ. ಬಾಗೇಸರೀ; ಮರಾ. ಬಾಗೇಶ್ರೀ, ಬಾಗೇಸರೀ, ವಾಗೇಶ್ವರೀ]

**ಬಾಗೇಶ್ವರಿ** 'ಬಾಗೇಶ್ರೀ' ನೋ.

**ಬಾಚಂಗೆ** 'ಬಾಚಣಿಗೆ' ನೋ.

**ಬಾಚಣಿಗೆ, ಬಾಚಣಗೆ, ಬಾಸಣಿಗೆ₁** (ನಾ). ೧. ಒಂದು ಬಗೆಯ ಮರ : ಈಜಿಗಿಡ, ಅಗ್ನಿಮಂಥ, ತಕ್ಕಿಲೆ, ಬಾಚಣಿಗೆಮರ (ವೃಕ್ಷಶಿ. ೬೯-೧೪೦೦). ೨. ಕೂದಲನ್ನು ಹಿಕ್ಕುವ ಒಂದು ಬಗೆಯ ಸಾಧನ ; ಹಣಿಗೆ ; ಕಂಕತಿಕೆ : ಅದು ವೀಳೆಯದೆಲೆಗೊಡುತ ಬಾಚಣಿಗೆ ಬೊಕ್ಕಸವಾಂತು ಬಲುಸಂದಣಿಸುತ್ತಾಳೀಜನ ನಡೆಯುತಾ ಬಾರಾಜವ್ವರಕೆ (ಸವತ್ಕು. ೯-೫೭) ; ತಲೆಯ ಕೂದಲೆಲ್ಲಾ ಬಾಚಣಿಗೆ ಕಾಣದೆ ಗಾಳಿಯಲ್ಲಿ ಹಾರಾಟದ ಅಭ್ಯಾಸ ನಡೆಸುತ್ತಿವೆ (ಅಂತಹೂ. ೦೦೬).
**ಬಾಚಂಗೆ** : ೧. ಬಾಚಂಗೆ (ಪನಿಯಾರ) — ಎತ್ತರವಾದ ವೃಕ್ಷವು. ಇದರ ಕಟ್ಟಿಗೆಯಿಂದ ಹಣಿಗೆಗಳನ್ನೂ ಕರಡಿಗೆ ಮುಂತಾದ ಶೋಭೆಯ ಒಡವೆಗಳನ್ನೂ ಮಾಡುತ್ತಾರೆ (ಕಳಾಗ. ೯೪). **ಬಾಸಣಿಗೆ** : ೨. ಕಾಳಾಂಜಿ ಕೈವಿಡಿ ಬಾಸಣಿಗೆ ಬಂಧುರದಾಲವಟ್ಟ ಚಾಮರದ . . . ನಾರಿಯ ರೈದಿದರು (ಕಂಸವ. ೯-೬೮) ; ರನ್ನದ ಬಾಸಣಿಗೆ ಚಿನ್ನದ ಸೀರಣಿಗೆ ಕೈಕಟ್ಟಿನವ ಕಟಿಸರಿಗೆ ಸೀರೆಯ ತಾಯಿ ಸಮ್ಮುವ್ವ ಕಳುವ್ವಾಳೀ (ಗೀತಕ. ೦೦). [ಬಾಚು (<ಬಾರ್ಚು) + ಹಣಿಗೆ./ತುಳು. ಬಾಚಣಗೆ]

**ಬಾಚಣಿಸು₁, ಬಾಸಣಿಸು₁** (ಕ್ರಿ). ಕೂದಲನ್ನು ಹಿಕ್ಕು.— **ಬಾಚು** : ಕುರುಳ ಬಾಚಣಿಸುತಲಿ ಬೈತಲಿಸರವು ಮುತ್ತಿನ ಬೊಟ್ಟು . . . ಇಟ್ಟು ಶೃಂಗರಿಸೆ (ಪಂಪಾ. ೩-೬೯) ; ಹದ್ವಾರವಿಂತು ಕಡುಚಿಲುವೆಸೆಯೆ ತತ್ಪುರದ ಮಧ್ಯ ಭೂದೇವಿ ಚನ್ನಸ್ಸರವ ಬಾಚಣಿಸಿ ತಿದ್ದಿದ ಸುಬೈತಲೆಯು ರೇಖೆ ಯೆನೆ (ಸವಪೋ. ೨-೨೯). **ಬಾಸಣಿಸು₁** : ರುಕ್ಮಿಣಿಸತ್ಯಭಾಮಾದೇವಿಯರ್ ಕುರುಳ ಬಾಸಣಿಸಿ ಪೂವಿಡಿಕಿಜಿದು ಪರ್ಜೆಡವೇಣಿದರು (ಮೋಹನ. ೦೮-೪೦) ; ಶ್ರೀತಳೋದರಿಯ ಕೇಶವ ಬಗಿದು ಬಾಸಣಿಸಿ ಬೈತಲೆಯ ತೆಗೆದು ತಿದ್ದಿದರು (ಸವಪೋ. ೨೩-೦೨). [<ಬಾಚಣಿಗೆ + — ಇಸು₁]

**ಬಾಚಣಿಸು₂** 'ಬಾಸಣಿಸು₂' ನೋ.

**ಬಾಚಿ₁** (ನಾ). ಮರವನ್ನು ಕೆತ್ತಲು, ಬಡಗಿಗಳಂ ಬಳಸುವ ಅಗಲ ಬಾಯಿಯ ಒಂದು ಬಗೆಯ ಕಬ್ಬಿಣದ ಸಾಧನ : "ದುಡಿಯೇನೆ ಬಾಚಿ" (ಮಂಗರಾ. ೧೦೩-೬) ; ಬಾಚಿಯಿಂ ತಡಂಗಡಿದುಂ ಕೊಂತದಿಂ ತಗುಳ್ಚಿಜಿದುಂ (ಧರ್ಮಾಮೃ. ೩-೬೩) ; ಬಾಚಿಯೊಳು ಕೆತ್ತುವ ಕತ್ತಿಯಿಂ ಕಡಿವ ಕರಗಸದಿ ಕೊಜೆವ ರೌರವದ ನರಕಂ ಭಯಂಕರವಾದುದು (ಸಿದ್ಧರಾ. ೬-೨೮). 'ಕೈಬಾಚಿ' ಪರಾ.

[<ಸಂ. ವಾಶೀ, ವಾಸೀ./ತಮಿ. ವಾಚ್ಚಿ, ವಾಯ್‌ಚ್ಚಿ ; ಮಲ. ವಾಚ್ಚಿ : ತುಳು. ಬಾಚಿ, ಬಾಜಿ ; ತೆಲು. ಬಾಡಿಸ]

**ಬಾಚಿ₂** (ನಾ). ಮೈಜೋಡು; ಕಂಚುಕ : "ಆ ವಾರವಾಣಕಂ ಕಂಚುಕಂ ಚೋಳಕಂ ಕುಪ್ಪಸಂ ಬಾಚಿಯುಕ್ಕುಂ" (ಶಬ್ದಮ. ೦೦೦-೨೯). [?]

**ಬಾಚಿಸು₁** (ಕ್ರಿ). ೧. (ಕಸವನ್ನು) ಒಟ್ಟಾಗುವಂತೆ ಸೇರಿಸು; ಗೋರಿಸು: (೬). ೨. ಹಣಿಗೆಯಿಂದ ಕೂದಲನ್ನು ಹಿಕ್ಕುವಂತೆ ಮಾಡು : ಶಾಂತಿಯೇನೋ . . . 'ಅಕ್ಕ' ನಿಂದ ತಲೆ ಬಾಚಿಸಿಕೊಳ್ಳಲು ಒಪ್ಪಿದಳು (ವಾತ್ಸಲ್ಯ. ೫೬). [ಬಾಚು (<ಬಾರ್ಚು) + — ಇಸು₁]

**ಬಾಚಿಸು₂, ಬಾಜಿಸು₁** (ಕ್ರಿ). ಓದು ; ವಾಚಿಸು : ವಾಚಕನೋಲೆಯರ್ಥ ಮಂನಜಿಯದೆ ವಿಪರೀತಮಾಗಿಂತೆಂದು ಬಾಚಿ[ಪಾಠಾಂ. ಜಿ]ಸಿದಂ (ಪದ್ಮರಾ. ೬೫-೦೭) ; ಯುವರಾಜನೃಪಂ . . . ರಾಜಾದೇಶವನಾಸ್ಥೆಯಿಂ ನೋಡಿ ತಾಂ ಬಾಚಿಸಿದಂ (ಕಾದಂಬ. ೨೫೬) ; ಒಂದಂ ಬಾಚಿಸುತಿರೆ ಮತ್ತೊಂದಂ ಬೆಸಗೊಳ್ವಂ . . . ಇದು ಕಾವ್ಯಮಂ ಪಿಳಂ ಕೇಳ್ವಂದಂ (ಸುಕುಮಾ. ೦-೩೩). **ಬಾಜಿಸು₁** : ಅದಂ ಸಂಧಿವಿಗ್ರಹಿ ಕೊಂಡು . . . ಅತಿಮಧುರೋದ್ದಾವಿತಗಂಭೀರನಾದದಿಂ ಬಾಜಿಸಿದಂ (ಅಜಿತ. ೦೯-೯೬) ; ಸಂಧಿವಿಗ್ರಹಿ ರಾಜಾಜ್ಞೆಯಿಂ (ರಾಜಶ್ರೇಷ್ಠಿಯಾ) ಲೇಖವನಿಂತೆಂದು ಬಾಜಿಸಿದಂ (ಜಾವುಂತ. ೦೫೩) ; ಬರೆಯಲುಂ ಬಾಜಿಸಲುಂ ಬಲ್ಲ ಶಬ್ದ ಸಂಸ್ಕಾರವುಳ್ಳಾತ ನಾಗದೇಸಿಗರ್ಗೆ ನಿತ್ಯಸ್ಥಿತಿಯೊನ್ನು ಪೊಟ್ಟಿಣಾಹಾರವುಂ ವರಿಷಕ್ಕೊನ್ನು ಕಪ್ಪಡವುವನಿಕ್ಕಿಯೋದಿಸಿ (ಎಪಿ. XX. ೬೮-೨೬ : 1012). [< ಬಾಜನೆ₁ + — ಇಸು₁]

**ಬಾಚು** 'ಬಾರ್ಚು' ನೋ.

**ಬಾಚುಗಜು** (ನಾ). ತಲೆ ಬಾಚಿಕೊಳ್ಳುವ ವ್ಯಕ್ತಿ; ಶೃಂಗಾರದಲ್ಲಿ ಆಸಕ್ತನಾದ ವ್ಯಕ್ತಿ : ಲೋಚನೊಳಗಿರ್ದಂತು ಬಾಚುಗಜುವಾದನೇ ವಾಚಾಲರೊಳಗಿರ್ದನಾಚಾರಿಯಾದನೇ (ಹಾಗೀತ. ರಾ. ೨೩೬-೬).

[ಬಾಚು (< ಬಾರ್ಚು) + ಕಜು₁]

**ಬಾಚುಮುದ್ದೆಬೆಲ್ಲ** (ನಾ). ಉಂಡೆಬೆಲ್ಲ : ಒಳ್ಳೆಯ ಬಾಚುಮುದ್ದೆಬೆಲ್ಲ ಒಂದು ತಟ್ಟೆಯಲ್ಲಿತ್ತು (ಕುಕತು. ೦೨೩).

[ಬಾಚು (<ಬಾರ್ಚು) + ಮುದ್ದೆ₁ + ಬೆಲ್ಲ]

**ಬಾಚುವಲೆ** (ನಾ). (ಬೇಟೆಯಲ್ಲಿ ಪ್ರಾಣಿ, ಪಕ್ಷಿಗಳನ್ನು ಒಟ್ಟಾಗಿ ಗೋರಲು ಸಾಧ್ಯವಾಗುವಂತೆ ಹೆಣೆದ) ಒಂದು ಬಗೆಯ ಬಲೆ : ಬಡಿಗೆವಲೆ ಬಾಚುವಲೆ ಗಾಢವಲೆ ಗೂಢವಲೆ ಮಡಿಕೆವಲೆ ಮಂದಸಿನ ವಲೆಯ ಹೊಜೆಗಳ ಬೇಡವಡೆ ನೆರೆದುದು (ಹರಿಶ್ಚ. ೩-೬).

[ಬಾಚು (< ಬಾರ್ಚು) + ಬಲೆ₁]

**ಬಾಜಂತ್ರಿ, ಬಜಂತ್ರಿ** (ನಾ). ಒಂದು ಬಗೆಯ ಚರ್ಮವಾದ್ಯ : ತ್ರಿಸಂಧ್ಯ

ಯೊಳಂ ಸಂಜೆವಜಿಯುಂ ಬಾಜಂತ್ರಿಯಯುಣ ಹಜಿಕಾಜಿಗೆ[ಕೆ]ಯ್ಮತ್ತರು ಹಂಸೆರಡು (ಶಾಸಕ. ೯೬-೦೦೦; 1178). **ಬಜಂತ್ರಿ**: ಬಜಂತ್ರಿಗಳು ಡಮುರುಗವು . . . ವೊರವುತಿರ್ದವು ಸರ್ವವಾದ್ಯವು ಸಲಘೋಷದಲಿ (ಶ್ಯಾಕಸಂ. ೦೩-೨೯); ಬಜಂತ್ರಿಯ . . . ಒಡಕುದನಿ ಕಿವಿಯನ್ನು ಗಡಚಿಕ್ಕಿಸಿಬಿಟ್ಟಿತು (ಕೃಶಿ. ೬). [← ಮರಾ. ವಾಜಂತ್ರೀ./ಸಂ. ವಾದಿತ್ರ]

**ಬಾಜಣೆ** 'ಬಾಜನ್ನೆ' ನೋ.

**ಬಾಜನ್ನೆ** (ನಾ). ಓದು; ಓದುವಿಕೆ; ವಾಚನ: ಬರೆವದ ಬಲ್ಮೆ ಬಾಜನೆಯ ಬಿನ್ನಣಮೊಪ್ಪುವ ಲೆಕ್ಕದೊಡೆ ಸಂಕರಸುತಸೊಳ್ಸರಸ್ವತಿಯೊಳಂಬುರುಹಾಸನನೊಳ್ಳಿಚಾರಿಸಲ್ದೊರೆ ಸರಿವಾಟಿಯೆಂದು ನಿಖಿಳೋರ್ಬ್ಬರೆ ಬಣ್ಣಿಸುತಿರ್ಪ್ಪದೆಂದೊಡೇಂ ಓರಿಯನೊ ಸಿಂಗಂ (ಎಕ. VII, ಶಿಕಾ. ೦೨೯-೨೯; 1077); ಚಕಾರಕ್ಕೆ ಜಕಾರಂ . . . ವಾಚನಾ_ಬಾಜನೆ (ಶಬ್ದ. ೨೩೩ ವೃ.ಯೋ.). 'ಬಾಜನೆಗಬ್ಬ' ವರಾ. [< ಸಂ. ವಾಚನ]

**ಬಾಜನ್ನೆ**, ಬಾಜಣೆ (ನಾ). ವಾದ್ಯಗಳನ್ನು ನುಡಿಸುವಿಕೆ, –ಬಾರಿಸುವಿಕೆ: ಆಟಂ ಬಾಜನೆ ಗಾಡಿಗಳ್ ಪಸದನಂ ಬೆಳ್ದಿಂಗಳೊಳ್ಪಾತು ಕೊಂಡಾಟಂ ಕತ್ತುರಿ ಕಪ್ಪುರಂ . . . ಎಂದಿಂತಿವಂ ಬೇಟಕ್ಕಾಗರಮೆಂಬೆನಣ್ಣ (ಶಾಭ್ಯಾಕ. ೬೬೬); ಪಾಡುವ ಸುರಗಣಿಕಾಜನಮಾಡುವ ದೇವಾಂಗನಾಜನಂ ಬಾಜನೆಯುಂ ಮಾಡುವವರಿ ಜನಂ ತೇಂಕಾಡಿಸುವುದು ರಾಗರಸದೊಳ ಮರನ ಸಭೆಯಂ (ಅಜಿಂಪು. ೦೨-೯೦); ನಾಡಿಗೆ ನಾಡೇ ಉರಿಯುತ್ತಿರುವಾಗ ಎಲ್ಲಿಯು ಹಾಡುಗಾರಿಕೆ? ಬನ್ನವೇ ಅನ್ನವಾದಾಗ ಎಲ್ಲಿಯು ಬಾಜನೆ? (ಕಿಶ್ಮ. ೦). **ಬಾಜಣೆ**: ವರುಟವಣೆಯು ಗಾನದ ನಚ್ಚಣೆಯು ಬಾಜಣೆಯು ಬಿಜ್ಜೋದರರ ಗಂದರರಚ್ಚರರ ಗಜಬಜಂ ತೆರೈಸಿದ ... ದೇವಾಂಗನೆಯರ ಗೊಂದಣಂ (ಶಾಚುಕ್ಕ. ೬೬-೨೯). [<ಸಂ. ವಾದನ]

**ಬಾಜನೆಕಾಜಿ** (ನಾ). ವಾದ್ಯವನ್ನು ನುಡಿಸುವವನು; ವಾದಕ; ವಾದನಕಾರ: ರಾಜಸುತೆಯನು ತಜ್ಞಾತಿಗೆ ಕುಡುವುದೊಂದೋಜೆಯು ಮಿಜು ದುಷ್ಕುಲದ ಬಾಜನೆಕಾಜಿಗೆ ಕುಡುವುದುಚಿತವೆ (ಶೇಬಸಂ. ೦೨-೬೩).
[ಬಾಜನ್ನೆ + –ಕಾಜಿ]

**ಬಾಜನೆಗಬ್ಬ** (ನಾ). ಒಂದು ಬಗೆಯ ಕಾವ್ಯ: ಪಲತೆಱದ ಪದ್ಯದಿಂದಂ ಲಲಿತವಚೋರಚನಾಚಯಪದ್ಧತಿಕೆಗಳಂ ಸಲೆ ನಿಲೆ ಸಮೆದುದು ಸರಸಾಪುಲ ವರ್ಣನಮಾದೊಡದುವೆ ಬಾಜನೆಗಬ್ಬಂ (ಶಾಭ್ಯಾಕ. ೯೩೩); ಕನ್ನಡದ ಮಟ್ಟಿಗೆ ಹಾಡು, ಮೆಲ್ವಾಡು, ಬಾಜನೆಗಬ್ಬಗಳಿದ್ದುವು (ಕಶಾಕ. ೨೯೯).
[ಬಾಜನ್ನೆ + ಕಬ್ಬ₁]

**ಬಾಜವಣೆ** 'ಬಜಾವಣೆ' ನೋ.

**ಬಾಜಾ**, ಬಾಜೆ, (ನಾ). ೧. ಊದುವ ಅಥವಾ ಬಾರಿಸುವ ವಾದ್ಯ: ಆ ಜಾತ್ರ್ಯಾಗ ಬಾಜಾ ತಗೋತೀನಿ (ಏಪೃಶ. ೦೯೬). ೨. ವಾದ್ಯಗಳನ್ನು ಬಾರಿಸುವಿಕೆ; ವಾದನ: ಬೇಂಡು ಬಜಂತ್ರಿ ಎರಡೂ ಬಾಜಾ ಸುರುಮಾಡಿದವು (ಕೃಶಿ. ೯). **ಬಾಜೆ**: ೧. 'ಬಾಜೆಬಜಾವಣೆ' ವರಾ.
**ಬಾಜಾ ಬಜಂತ್ರಿ** –ಹಲವಾರು ಬಗೆಯ ವಾದ್ಯಗಳ ಮೇಳವಾದನ: ರಾಜರಾಜೇಶ್ವರಿ ಕಂಪೆನಿ ಬಹಳ ವೈಭವದಿಂದ ಬಾಜಾಬಜಂತ್ರಿ ಮಾಡಿಸಿ ಕೊಂಡು ಬೆಂಗಳೂರಿಗೆ ಬಂತು (ಶಬಜಾ. ೯೯).
[← ಹಿಂ. ಮರಾ. ಬಾಜಾ. / ಸಂ. ವಾದ್ಯ]

**ಬಾಜಾಣೆ** (ನಾ). ನಾಲ್ಕಾರು ಬಗೆಯ ಧಾನ್ಯಗಳನ್ನು ಹುರಿದು ಕೊಡಿಸಿ ಮಾಡಿದ ಹಿಟ್ಟು; ಇದರಿಂದ ತಾಲೀಪಟ್ಟು, ಕೋಡುಬಳೆ ಮೊದಲಾದ ತಿಂಡಿಗಳನ್ನು ಮಾಡುತ್ತಾರೆ: ಗಿರಿಕ್ಕಾಗ ಬೀಸಿದ ಬಾಜಾಣೆ ಜಗಟ ಇರಾಕಿಲ್ರಿ (ಜಾಚು. ೩).
[← ಮರಾ. ಭಾಜಣೀ, ಭಾಜಾಣೀ]

ಬಾಜಾರ್ 'ಬಾಜಾರ' ನೋ.

**ಬಾಜಾರ**, ಬಜಾರ್, ಬಜಾರ, ಬಜಾರು, ಬಾಜಸಾರ್, ಬಾಜಾರು (ನಾ). ದಿನಸಿ ಮುಂತಾದ ಪದಾರ್ಥಗಳನ್ನು ಫಮಾರಾಟ ಮಾಡುವ ಸ್ಥಳ; ಪೇಟೆ; ಮಾರುಕಟ್ಟೆ: ಪುರದ ಬಾಜಾರದೈಶ್ವರ್ಯಮಂ ಪೊಗಳಲಳವೆ (ಗುರುಚಾ. ೦-೨೯); ಪುರದ ಬಾಜಾರದಿಂದ್ಯೆತಂದರಾನಂದದಿಂ (ಶುಚಾಶಿ. ೦೯-೦೦೦); ರೇವತಿ ಗಂಡನಿಂದ ಇಪ್ಪತ್ತು ರೂಪಾಯಿಗಳನ್ನು ಪಡೆದುಕೊಂಡು ಸಾಮಾನುಗಳನ್ನು ತರಲು ಬಜಾರಕ್ಕೆ ನಡೆದಳು (ಶುತ್ತ್ರಕಿ. ೬೦). **ಬಜಾರ್**: (ವೃಗಕ. IV. ೬೬೯). **ಬಜಾರ**: ಬಾಜ ಬಜಾರವು ಬಯಲೆದ್ದು ಹೋದೀತು (ಎಂಶಾ. ೦೨೬-೨೯). **ಬಜಾರು**: ಬಜಾರಿನಲ್ಲಿ ಕಬ್ಬಿಣದ ಧಾರಣೆ ಹೇಗೆ ಏರುತ್ತಿದೆ ಬಲ್ಲಿರಾ? (ಶಾಚಿಣಂ. ೦೦೪). **ಬಾಜಸಾರ್**: ಚಾರುತರದ ಬುರುಜಿನೊಳು ಬಾಜಾರ್ ಹೂಡ್ರೇ (ಶೀಕ. ೨೪). **ಬಾಜಾರು**: ಸರಹದ್ದಿನ ಬೆಟ್ಟ ಪರಿಯಂತ್ರ ಲಷ್ಕರಿನ ಬಾಜಾರು ಇಳಿಸಿ ಇದ್ದರು (ಶಕೇಂದ್ರ. ೧೪೯); ಬಾಜಾರಿನಲ್ಲಿ ಅಕ್ಕಿ ತುಟ್ಟಿ (ಶುಂಚಿತ. ೩-೨೩೯).
[← ಪಾರ. ಹಿಂ. ಮರಾ. ಬಾಜಾರ್]

**ಬಾಜಾರಬೀದಿ** (ನಾ). ಪೇಟೆಯ ಬೀದಿ: ಮಹಾಲಿಂಗೇಂದ್ರಂ . . . ಮಂಟವವನುಳಿದು ಬಾಜಾರಬೀದಿಯೊಳೈದಲು (ಮಚಾಶಿ. ೨೯-೩೯).
[ಬಾಜಾರ + ಬೀದಿ]

**ಬಾಜಾರಮುಖ್ಯ** (ನಾ). ಪೇಟೆಯ ಮುಖಂಡ; ವರ್ತಕಪ್ರಮುಖ: ಲಲಿತ ತೊಂಬತ್ತೆಂಟು ಬಾಜಾರಮುಖ್ಯರ್ಗೆ ಗೆಲವಿನಿಂ ವೀಥಿಗಳ ಶೃಂಗರಿಸ ವೇಳ್ಕೆಂದು ದಲಿತದಿಂ ಬಸವರಸ ಪೇಳಲು (ಶ್ರಬುಕ. ೯-೦೬).
[ಬಾಜಾರ + ಮುಖ್ಯ]

**ಬಾಜಾರಿ**, ಬಜಾರಿ (ಗು). ೧. ಪೇಟೆಗೆ ಸಂಬಂಧಿಸಿದ; ವ್ಯಾಪಾರ ವಿಷಯಕವಾದ. ೨. ನೀಚ; ಕೀಳುಮಟ್ಟದ: ನಿಜಗಂಡನ ಸಂಗವನೊಲ್ಲದೆ ಭುಜಗರ ಸಂಗವ ಮಾಡುವ ಬಾಜಾರಿ ತೊತ್ತುಗಳ್ಲಿಯದೋ ನಿಜ ಮುತ್ತೈದಿತನ (ಶಕಾ. I. ೩೩೩). **ಬಜಾರಿ**: ೩. ಕಳಪೆಯಾದ; ಅತಿಸಾಮಾನ್ಯವಾದ: ಎಣ್ಣೆಯಲ್ಲಿ ಕರಿದಿದ್ದ ವಡೆ, ಹಳಸಿದ ಕೊಬ್ಬರಿ ಮಿಠಾಯಿ, ಬಜಾರಿ ಷರಬತ್ತು ಅವುಗಳ ಕೆಲಸ ಅವು ಮಾಡಿದ್ದವು (ಶಾಂಕ. ೨೬). (ನಾ). ೪. ಮಾನಗೆಟ್ಟ ಹೆಣ್ಣು; ಸೂಳೆ; ಬೀದಿಬಸವಿ: ಮಗನಿಗೆ ಆಸ್ತಿಯನ್ನು ತಪ್ಪಿಸಿ ಚಲ್ಲಾಟಿಲಿನ ಬಜಾರಿಗೆ ಸ್ವತ್ತು ಸೇರುವಂತೆ ಮಾಡಬಾರದು (ಹುಬ್ಬಿಶ. ೦೮೬); ನನ್ನ ಚಾರಿತ್ರ್ಯದ ಬಗ್ಗೆ ಮಾತನಾಡಿದಳೇ ಈ ಮಾರು ಕಾಸಿನ ಬಜಾರಿ? (ಶುಶುಚಾ. ೦೯೩).
[←ಹಿಂ. ಮರಾ. ಬಾಜಾರೀ]

**ಬಾಜಾರು** 'ಬಾಜಾರ' ನೋ.

**ಬಾಜಿ** (ನಾ). ೧. ಪಣವನ್ನಿಟ್ಟು ಆಡುವ ಗಂಜೀಫು, ಇಸ್ಪೀಟು ಮುಂತಾದ ಆಟ; ದ್ಯೂತ; ಜೂಜು: ಸಾಕುಸಾಕು ಬಾಜಿಯ ಬಿಟ್ಟು ತೊಲಗಿರಿ (ಶಚುಚು. ೨೦). ೨. ದ್ಯೂತಕ್ಕೆ ಒಡ್ಡುವ ಪಣ ಅಥವಾ ವಸ್ತು: ಅವ್ರೇನೂ ಬಾಜೀ ಮಡಗ್ತೇಕಾದ್ಸಿಲ್ಲ (ಕಮ್ಮಚು. ೨೨). 'ಬಾಜಿಕಟ್ಟು' ವರಾ. [←ಪಾರ. ಹಿಂ. ಮರಾ. ಬಾಜೀ]

**ಬಾಜಿಕಟ್ಟು** (ಕ್ರಿ). ೧. ಜೂಜಿನಲ್ಲಿ ಪಣವಿಡು, –ಪಣಕಟ್ಟು: ಯಾರು ಗೆಲ್ಲುತ್ತಾರೆ, ಯಾರು ಸೋಲುತ್ತಾರೆ ಎಂಬುದಾಗಿ ಅನೇಕರು ಬಾಜಿ ಕಟ್ಟಿದ್ದರು (ಅಚುಶಾ. ೦); ಇಬ್ಬರು ಸ್ನೇಹಿತರು ಬಾಜಿಕಟ್ಟಿ ಅದರ ಅರ್ಥವನ್ನು ನಿರ್ಣಯಿಸುವ ಭಾರವನ್ನು ವಹಿಸಿಕೊಂಡರು (ಶಂಂಕ. II. ೯೦). ೨. ಒತ್ತೆಯಾಗಿ ಒಡ್ಡು; ಒಪ್ಪಿಸು: ಇವರು ಒಂದು ಹಗಲೆಲ್ಲ ಅನ್ನ ನೀರು ಇಲ್ಲದೆ ತಮ್ಮ ಪ್ರಾಣವನ್ನೇ ಬಾಜಿಕಟ್ಟಿ ಹಿಂಬಾಲಿಸಿದ ಮೇಲೆ, ಕಳ್ಳರು . . . ಮೊಕ್ಕಾಂ ಮಾಡಿದರು (ಶಕಚಾ. II. ೬೬೨).
[ಬಾಜಿ + ಕಟ್ಟು₁]

**ಬಾಜಿಗ** (ನಾ). ವಾದ್ಯಗಾರ ; ವಾದಕ : ಮೊಳಗಿತು ಬಾಜಿಗರಲ್ಲಿ ಬಾಜಿಸಲ್' ಶುಭವಾದ್ಯ (ಕುಮಾಕ. ೬೨-೬೭).

[<ಬಾಜಾ + — ಇಗ./ತುಳು. ಬಾಜಿಗೆ]

**ಬಾಜಿಸು₁** 'ಬಾಚಿಸು₁' ನೋ.

**ಬಾಜಿಸು₂, ಬಾರಿಸು₂** (ಕ್ರಿ). ವಾದ್ಯವನ್ನು ನುಡಿಸು.-ಧ್ವನಿಮಾಡುವಂತೆ ಬಡಿ : ದೇವಲೋಕದ ಪಟಹಂಗಳಂ ಬಾಜಿಸುತ್ತಂ . . . ಇಂತೆಂದು ಪೇಳ್ದುದಿದಂ (ಪಂಪಭಾ. ೪೪-೭) ; ಸುರಸುದತಿ ಪೆಱಿಲ್ ಮೆಱೆದು ಬೀಣೆಯುಂ ಬಾಜಿಸಿದಳ್ (ಅಂಪು. ೬-೨೦) ; ಆ ಸುರದುಂದುಮಿಕಾಸುವ ಕೊಯ್ಕದೆ ಸೂಸಿದವು ಬಾಜಿಸದೆ ಮೊಳಗಿದವಾ ಸುರಾನಕವು (ಶಾಕ್ಸಾ. ೩೬-೮). **ಬಾರಿಸು₂** : ಬಾರಿಸುವ ಕಿಂಬು ಮದ್ದಳೆ ಘಂಟೆಯೊಂದುಗೆಯ ಘೋರತರರಭಸದಲಿ . . . ಎಯ್ತಂದರು (ಸಿದ್ಧರಾ. ೬-೪೪) ; ರಾಜಕುಮಾರಿ ವೀಣೆಯನ್ನು ಬಾರಿಸಲಾರಂಭಿಸಿದಳು (ಬಾಪಾ. ೩೦).

[ಬಾಜನ್ನೆ + — ಇಸು₂./ತುಳು. ಬಾರಿಸು; ತೆಲು. ವಾಯಿಂಚು]

**ಬಾಜೀಬಂದು** 'ಬಾಜುಬಂದ' ನೋ.

**ಬಾಜು, ಬಾಜೂ** (ನಾ). ೧. ತೋಳು ; ಭುಜ. ೨. ಪಕ್ಕ; ಮಗ್ಗುಲು; ಪಾರ್ಶ್ವ : ವಿಕ್ರಮನ ಬಾಜುಯಲ್ಲಿ ತಾನೂ ಪವಳಿಸಿ ನಿದ್ರೆಯಂ ಗೆಯ್ಯಲು (ಕಜಾ. ೦೩); ಪರವ್ವ ಯಾರದೋ ಮಾರ್ಗಪ್ರತೀಕ್ಷೆ ಮಾಡುತ್ತ ತನ್ನ ಮನೆಯ ಬಲ ಬಾಜುವಿನ ಕಟ್ಟೆಯ ಮೇಲೆ ನಿಂತಿದ್ದಾಳೆ (ಗಂಗಾಗ. ೬೪). ೩. ಪಕ್ಷ ; ಪರ : ಆ ಮುದಿಹದ್ದು ತನ್ನ ಮಗನ ಬಾಜು ಹಿಡಿದು ನನ್ನನ್ನು ಮೂಡಬೇಕೆಂದ (ಜೀವಪಾ. ೬೮) ; ಅವರು ಚಂದ್ರಭಾಗಕ್ಕನ ಬಾಜು ಹಿಡಿದು . . . ಭೀಮಾರೀ ಹಾಕಿದರೆ ಚಂದ್ರಭಾಗಕ್ಕನ ಪಾಡು ನಾಯಿ ಪಾಡಾಗುತ್ತಿತ್ತು (ಕುರುಕು. ೬೬). **ಬಾಜೂ** : ೨. ಆನೆಗೆ ಬಾಜೂ ಘಂಟೆಗೆ ಕಬ್ಬಿಣದ ಸರಪಣಿ ಸಹಾ ಪೋಣಿಸಿರುವ ಹಿತ್ತಾಳೆ ಸರಪಣಿ ೧ (ಎಕ. XIV. ಕೊಪ. ೨೬೩-೯೩; 1847); ಎಡಬಲದ ಎರಡು ಬಾಜೂದಲ್ಲಿಯೂ ಒಡ್ಡುಹಾಕಿಸಬೇಕು (ಕೃಶಿಶ್ರ. ೩೩) ; ವಿವಾಹಕಾಲದಲ್ಲಿ ಅಂತಃಪಟವನ್ನು ಹಿಡಿದಿರುತ್ತಾರೆ. ಕೊನೆಗೆ ಚಪ್ಪಾಳೆ ಹೊಡೆದ ಅದಲೆ ಬಾಜೂಕ್ಕೆ ಸರಿಸುತ್ತಾರೆ (ಧಾಸಂ. ೩೨೩). ೪. ದಿಕ್ಕು ; ಕಡೆ : ಭಾಳ ದಿನಾ ಆತು ನೀವು ಈ ಬಾಜೂಕ ಬಂದು ! (ಚಾಳ. ೬೬೨).

[←ಪಾರ. ಹಿಂ. ಮರಾ. ಬಾಜೂ]

**ಬಾಜುಬಂದ, ಬಾಜೀಬಂದು, ಬಾಜುಬಂದಿ, ಬಾಜುಬಂದು, ಬಾಜೂಬಂದು** (ನಾ). ಸ್ತ್ರೀಯರು ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ; ತೋಳುಬಂದಿ : ಕೈಗಳಲ್ಲಿ ರತ್ನಜಡಿತ ಕಂಕಣಗಳು, ಭುಜದಲ್ಲಿ ಬಾಜುಬಂದಗಳು ಒಪ್ಪುತ್ತಿದ್ದವು (ಚಿಕಾ. ೦೦೬); ವಜ್ರದ ಬೆಂಡೋಲೆ ಮುತ್ತಿನ ಕಂಠಿ ಬಸುಮ್ಮ ಬಾಜುಬಂದ ನಾಗಮುರಿಗೆ (ಸಿದ್ಧಕೃ. ೦೭-೬೭). **ಬಾಜೀಬಂದು** : ನಾಗಮುರಿಗೆ, ವಂಕಿ, ಬಾಜೀಬಂದು . . . ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಕುಲಕು. ೩೪). **ಬಾಜುಬಂದಿ** : ವಂಕಿಯು ಭಾಪುರಿ ಕಂಕಣಗಳುಲಿಯೆ ಬಾಜುಬಂದಿ ನೆರವಿನ ಮಣಿ ಸಿರಿಯೆ (ಶುಕೀಲೋ. ೦೨೬). **ಬಾಜುಬಂದು** : ತೋಳಿಗೊಂಕಿ ಬಾಜುಬಂದು ಗೊಂಡೆಗಳು (ಕಾಶ. ೨೬೬). **ಬಾಜೂಬಂದು** : ತೋಳಿಗೆ ಬಾಜೂಬಂದು, ಕತ್ತಿನಲ್ಲಿ ಅಡ್ಡಿಕೆ (ಕುಲ್ಲ. ೪೦).

[←ಪಾರ. ಹಿಂ. ಬಾಜೂಬಂದ್ ; ಮರಾ. ಬಾಜುಬಂದ, ಬಾಜೂಬಂದ]

**ಬಾಜುಬಂದಿ** 'ಬಾಜುಬಂದ' ನೋ.

**ಬಾಜುಬಂದು** 'ಬಾಜುಬಂದ' ನೋ.

**ಬಾಜೂ** 'ಬಾಜು' ನೋ.

**ಬಾಜೂಬಂದು** 'ಬಾಜುಬಂದ' ನೋ.

**ಬಾಜೆ₁** 'ಬಾಜಾ' ನೋ.

**ಬಾಜೆ₂** (ಗು). ಚಿಲ್ಲರೆಬಾಬುಗಳನ್ನೊಳಗೊಂಡ ; ಸಾದಿಲ್ವಾರಿಗೆ ಸೇರಿದ : ಚಿಲರ ಬಾಜೆಬಾಬು ಬೇರೀಜು ಮೇರೆ (ಮೈಶಾ. ೧೯೩೮. ೩೦-೦೬; 1817) ; ಬಾಜೆಬಾಬುಗಳು ಸಹಾ ಯಾವತ್ತೂನ್ನೂ . . . ಅನುಭವಿಸು ವದೂ (ಮೈಶಾ. ೦೯೩೯, ೯೨-೯೬ ; 1825). [ ← ಮರಾ. ಬಾಜೇ]

**ಬಾಜೆಬಜಾವಣೆ** (ನಾ). ಹಲವಾರು ಬಗೆಯ ವಾದ್ಯಗಳ ಮೇಳ ವಾದನ : ಮದುಮಕ್ಕಳನ್ನು ಬಾಜೇಬಜಾವಣೆಗಳೊಂದಿಗೆ ಮೆರೆಯಿಸುತ್ತ . . . ನಿಬ್ಬಣ ಹೊರಡಿಸಿದರು (ಹೂಬಿ. ೦೪).

[ಬಾಜೆ₁ (< ಬಾಜಾ) + ಬಜಾವಣೆ]

**ಬಾಟಲಿ** 'ಬಾಟಲು' ನೋ.

**ಬಾಟಲು, ಬಾಟಲಿ** (ನಾ). ಗಾಜಿನ ಸೀಸೆ : ಕುಪ್ಪಿ : ಏಳು ಬಾಟಲು ಬ್ರಾಂದಿ ಮೊದಲೇ ತರಿಸಿ ಇಟ್ಟುಕೊಂಡಿದ್ದೆವು (ಕಂಗಾಕ. ೬). **ಬಾಟಲಿ** : ನನ್ನ ಶಾಂಪೇನ್ ಬಾಟಲಿ ಎಲ್ಲಿ ಅದೆ ? (ಸೋಹಿಬ. ೩೬) ; ಬಾಟಲಿ ಕೊಟ್ಟು ಕಳಿಸಿರಿ. ಔಷಧ ಕೊಡುವೆ (ಅಕೋಕ. ೨೪). [← ಇಂ. Bottle]

**ಬಾಟಾ** 'ಭಾಟಾ' ನೋ.

**ಬಾಟಾಮಾರ್ಗ** 'ಭಾಟಾಮಾರ್ಗ' ನೋ.

**ಬಾಟಿ** (ನಾ). ೧. ಒಂದು ಬಗೆಯ ರೊಟ್ಟಿ : ಎಲ್ಲರೂ ದೂರದಲ್ಲಿ ಬದಿಯಲ್ಲಿ ಕುಳಿತು ಬಾಟಿ ತಿನ್ನುತ್ತಿದ್ದರು (ಹೊಸಮೇ. ೨೬೪). ೨. ಜೋಳದ ತೆನೆ : ಸುಗ್ಗಿಯ ಪೂರ್ವದಲ್ಲಿ ಕೂಲಿಕಾರ ಜನರು . . . ಹೊಲಗಳಲ್ಲಿಯ ಬೆಳೆಗಳನ್ನು ಕೊಡು. ಬಾಟೀ ಮಾರಿ ಬಹಳ ರೊಕ್ಕ ಗಳಿಸುವರು (ಕಾಗ. ೪೩೪) ; ನಾನು ಕೈಯಲ್ಲಿ ಕುಡಗೋಲು ಹಿಡಿದು ಬಾಟ ಕೊಯ್ಯುವವ (ಬಾಬಂ. ೫೦). [ ← ಹಿಂ. ಮರಾ. ಬಾಟೀ]

**ಬಾಟು** (ನಾ). ಎತ್ತರದಲ್ಲಿ ಸಪಾಟಾಗಿದ್ದು, ವ್ಯವಸಾಯಯೋಗ್ಯ ವಾಗಿರುವ ಭೂಮಿ : ಸ್ಥಳದ ಪೂರ್ವದ ಮಾನ್ಯ ಆಯ ಸ್ವಾಮ್ಯ ಬಾಟು ಬೋಟು ಸಹ ತೂಗುಗಿಟ್ಟಿಕೆ ಸಲುವ ಉಪಗ್ರಾಮರ್ ಹಳಿ ಸಹ . . . ಅನುಭವಿಸಿಕೊಣ್ಣು (ಎಕ. XII. ಕುಣಿ. ೯೩-೬; 1684 ?).

[← ಹಿಂ. ಭಾಟ್, ಭಾಠ್ ; ಮರಾ. ಭಾಟ್]

**ಬಾಟಿ** 'ಭಾಟಾ' ನೋ.

**ಬಾಡ, ಬಾಡ, ವಾಡ, ವಾಡೆ₁** (ನಾ). ೧. ಹಳ್ಳಿ ; ಗ್ರಾಮ : ಇಂತಗ್ರಾಸನಮನುಣುತ್ತಮುಬುವತ್ತುಬಾಡಮನಾಳುತ್ತಂ ಸುಖಸಂಕಥಾ ವಿನೋದದಿಂ ಕಾಲಂ ಸಲೆ (ಪಂಪಭಾ. ೦೬೩-೦೨) ; ಅವರ್ಗಿಪ್ಪುದೊಳ್ನೆ ನಿಲೆ . . . ಅಯ್ದು ಬಾಡಮಂ (ಕಂಪಶಾ. ೯-೯೩) ; ಸಂಧಿಗೆಯಲ್ಕೆ ಪೇಡಿದರೆ ಪಾಂಡುತನೂಭವರಯ್ದುಬಾಡಮಂ (ಗದಾಯು. ೩-೨೦). ೨. ಒಂದು ಊರಿನ ಹೆಸರು : ಕಱಯೂರ ಜಾದಿಯೂರ ಕೊಡಂಗನೂರ ಬಾಡದ ಮಹಾಜನಮುಂ (ಎಕ. XI. ಚಿತ್ರದು. ೬೪-೨೮; 968) ; ಕದಂಬಳಿಗೆ ಸಾಸಿರದ ಬಳಿಯಗ್ರಹಾರ ಬಾಡದ ಶ್ರೀನಾರಾಯಣದೇವರ್ಗ್ಗೆ ನಿವೇದ್ಯಕ್ಕೆ . . . ಬಿಟ್ಟ ಗಟ್ಟಿಯ ಕಮ್ಮ ೨೩೩೫ (ಎಕ. XI. ದಾವಣ. ೦೧೦-೦೩; 1060). ೩. ಕೆಲವು ಊರಿನ ಹೆಸರುಗಳ ಕಡೆಯಲ್ಲಿ ಸೇರುವ ಶಬ್ದ : 'ಗಂಗವಾಡ' ಪರಾ. **ಬಾಡೆ** : ೪. ಮನೆ ; ನಿವಾಸ : ಅವಳು ಆ ರಾತ್ರಿ ನೆಲ್ಲಕ್ಕಿ ಬಾಡೆಯಲ್ಲಿ ಬೆಳಗುತ್ತಿದ್ದ ದೀಪಕ್ಕೆ ನಮಸ್ಕರಿಸಿ . . . ಮಟ್ಟಿಲೀದಳು (ಹುಂಪಾ. ೦೩). ೫. ಹಜಾರ ; ನಡುಮನೆ ; ಅತ್ತ . . . ಗಂಡನನ್ನೂ ಮಗನನ್ನೂ ಕರೆದುಕೊಂಡು ಬಂದು ಬಾಡೆಯಲ್ಲಿ ಊಟಕ್ಕೆ ಕುಳಿತರು (ಮುಸಳ. ೪೪). **ವಾಡ** : ೬. ದನಗಳ ಹಟ್ಟಿ ; ಕೊಟ್ಟಿಗೆ : ವಾಡ-ವಾಡಿ ಪದಕ್ಕೆ ಗೋವುಗಳ ಹಟ್ಟಿ, ಎಂದರ್ಥ (ಕರ್ನಾಟ. ೪೪). 'ಕೊಂಡವಾಡ' ಹೋ. **ವಾಡೆ₂** : ೪. ಅವರು . . . ಹಳೇ ಹುಬ್ಬಳ್ಳಿಯ ಒಂದು ಮೂಲೆಯೊಳಗಿನ ಒಂದು ವಾಡೆಯಲ್ಲಿ ಒತ್ತಟ್ಟಿಗಿನ ಒಂದು ಕೋಣೆಯನ್ನು ಬಾಡಿಗೆ ಹಿಡಿದರು (ಹೋಜೀಹ. ೩).

೭. (ಅರಸರು, ಜಮೀನುದಾರರು ಮುಂತಾದವರು ವಾಸಿಸುವ) ಭವ್ಯವಾದ ಗೃಹ ; ಪ್ರಾಸಾದ ; ಭವನ : ದೊಡ್ಡ ವಾಡೆಮುಂತಿಸ್ತ ಮನೆ ಅವರದು. ಅದಕ್ಕೊಂದು ಮಹಾದ್ವಾರ (ಸಮಚೀ. ೦೨೯) ; ವಾಡೆಯ ಹೆಬ್ಬಾಗಿಲಿನ ಭವ್ಯವಾದ ಹೊಸ್ತಿಲನ್ನು ಅವಳಿನ್ನೂ ದಾಟಿರಲಿಲ್ಲ (ಗ್ರಾಮಾಯ. ೬). 'ವಾಡ್ಯಿ' ಪರಾ.

[< ಸಂ. ವಾಟ./ತಮಿ. ವಾಟ್ಟಿ. ಮಲ. ವಾಡ ; ಕೊಡ. ಬಾಡ ; ತೆಲು. ವಾಡ = ಮನೆಗಳ ಸಾಲು. / ಮರಾ. ವಾಡ, ವಾಡಾ]

**ಬಾಡಗ** (ನಾ). ತೋಟ ; ವನ : "ವಾಟಕಮನೆ ಬಾಡಗವುದು" (ಶಶಬ. ೦೪). [< ಸಂ. ವಾಟಕ]

**ಬಾಡಗೆ**, ಬಾಡಿಗೆ, ಭಾಡಿಗೆ (ನಾ). ಮನೆ, ಕೊಠಡಿ, ಯಂತ್ರ ಮೊದಲಾದುವುಗಳನ್ನು ನಿಯಮಿತ ಅವಧಿಗೆ ಉಪಯೋಗಿಸಿಕೊಳ್ಳುವವನು, ಅವುಗಳ ಒಡೆಯನಿಗೆ ಕೊಡಬೇಕಾದ ಹಣ : "ಭಾಟಕಃ, ಅವಕ್ರಯಃ_ಈ ೨ ಬಾಡಗೆ" (ಹಲಾಯು. ೯೯-೧೦೯) ; ಕೆಯ್ಯ ಗುತ್ತಗೆಯಿಂ ಮನೆಯ ಬಾಡಗೆಯಿಂ ವಿಶೇಷಂ ಗದ್ಯಾಣ ಧರಣವಾಗಿಯುಳಿದಡೆ ಪಸಿದು ಬಂದುವರ್ಗಂಬಲಿಯ ಸತ್ರವಂ ನಡಯಿಸುವರು (ಶಾಇ. XX, ೦೦೦-೩೯; 1180) ; ಬಾಡ[ಶಾಸಂ. ಡಿ]ಗೆಯ ಮನೆಗೆ ಹೊಯಿದಾತದ್ರೋಹಕ್ಕೆ (ಶೋಶಿಮ. ೬-೨೯) ; ಕೊಳೆಚೆಯುದಕಕೆ ಕೊಂಬುದೇ ಹಬಿಗೋಲ ಬಾಡಗೆಯ (ಕುಭ್ಯಾ.ಳ. ೨೨-೩೦). **ಬಾಡಿಗೆ** : ರೋಗುರ ಕಾರ್ಯಕ್ಕೆ ಬಿಡಿದು ಕೊಳ್ಳ ಬಾಡಿಗೆಯ ಮನೆಗೆ ತಿವಿದುಕೊಳ್ಳ . . . ಕಟ್ಟಿಗ್ಗರಂತೆ (ಭರ್ತೋಕ್ಷು. ೯-೦೬೨); ಎತ್ತ ಹೋದರು ಬಾಡಿಗೆ ಸುಂಕವಿದಕಿಲ್ಲ (ಪುರಂದ. ೦-೦೩-೦) ; ಬಾಲಕರಿಲ್ಲದ ಬಾಲೆಯದು ಯಾತರ ಜನ್ಮ ಬಾಡಿಗೆ ಎತ್ತು ದುಡಿದ ಹಾಗೆ (ಜಾನಪ. ೬೯). **ಭಾಡಿಗೆ** : ಪೋಂದು ತೇಣ ಮನೆಗೆ ಮಾಡಿದ ಯರಡು ಪಸರದ ಭಾಡಿಗೆಯುಂದ . . . ದಿನ ೧ ಕೆ ಸೊಲ್ಲಗೆ ತೆಂಗಿನ ಯೆಣ್ಣೆ (ಶಾ. III-1, ೦೯-೩೦; 1545); ಸಾಹೇಬರು . . . ಆ ಜಾಗಾ ಭಾಡಿಗೆಗೆ ಪಡಕೊಂಡರಂತೆ (ಅಶಪಾ. ೦೦೯).

[< ಸಂ. ಭಾಟಕ./ತಮಿ. ವಾಟಕ್ಕೈ; ಮಲ. ವಾಡಕ. ತುಳು; ಬಾಡಿಗೆ, ಬಾಡಾಯಿ; ತೆಲು. ಬಾಡಿಗೆ, ಬಾಡಿಗ. ಬಾಡುಗ./ಮರಾ. ಭಾಡೇ]

**ಬಾಡಗೆಕಾಜ** (ನಾ). ಕೂಲಿಗೆ ಗೊತ್ತುಮಾಡಿಕೊಂಡ ಆಳು ; ಹಣವನ್ನು ಕೊಟ್ಟು ನೇಮಿಸಿಕೊಂಡವನು : ಬಾಡಗೆಕಾಜ ನನ್ನ ಸ್ತ್ರೀಯೆನಲು ತವರೂರಲ್ಲಿರ್ದ ಜಾರ ನನ್ನ ಸ್ತ್ರೀಯೆನಲು . . . ಅವಳ ಸೀರೆ ಎರಡು ಹೆಣ್ಣುಗಳ ಮಾಡಿದುವರಿಬ್ಬರಿಗೆ ಕೊಟ್ಟು (ಕೃಶಸೂ. I, ೩೩೬). [ಬಾಡಗೆ + — ಕಾಜ]

**ಬಾಡಗೆಗೊಳ್** (ಕ್ರಿ). ಬಾಡಿಗೆಯನ್ನು ಕೊಡುವ ಕರಾರಿನಿಂದ ವಸ್ತುವನ್ನು ಪಡೆ : ಕೆಲವತ್ತಂ ಬಾಡಗೆಗೊಂಡು ಭಂಡಮಂ ಪೇಱಿ . . . ಪೆರ್ವಟುವಿನೊಳ್ ಬಟ್ಟೆಲ್ಲಿ (ಶಂಹಂ. ೯-೦೦ ವ). [ಬಾಡಗೆ+ಕೊಳ್]

**ಬಾಡಬ** (ನಾ). ೧. ಕುದುರೆ ; ಅಶ್ವ : ಶ್ರೀರಾಮಚರಿತಮಂ ಕೇಳಿಸಲೊಡಂ ಬಾಡಬಂಗಂ ಬಾಡಬಕ್ಕಂ ವಿಮೋಚನಮಕ್ಕುಂ (ರಾಶಪಾ. ೦೩೬-೯). ೨. ಕಡಲೊಳಗಿರುವ ಕುದುರೆಯ ಮುಖದಿಂದ ಹುಟ್ಟಿದುದೆಂದು ನಂಬಲಾದ ಬೆಂಕಿ; ಔರ್ವಾನಳ; ಕಡಲ್ಗಿಚ್ಚು : "ಔರ್ವಃ, ಸಮುದ್ರವಹ್ನಿಃ, ಬಾಡಬಃ, ಬಡಬಾಮುಖಃ — ಈ ೪ ಸಮುದ್ರದ ಕಿಚ್ಚು" (ಹಲಾಯು. ೦೩-೬೦); ಭವಗರ್ವರಸಜೀವನಿಧಿಬಾಡಬ ಉಮಾವಲ್ಲಭ (ಶಿಕ್ಕ.ಕು. ೩-೦೦-೦); ನೊರಜು ಬಾಡಬನುವರವಂವುದೆ (ಅಶ್ಕ.ಳ. ೨೩-೦೯). ೧. ೨ : ಆ ಮಹಾರ್ಣವಂ . . . ಮದ್ಯಜನ್ಮಸ್ಥಾನಮಾಗಿಯುಂ ಬಾಡಬೋಪಭೋಗಯೋಗ್ಯಮುಂ . . . ಎನಿಸಿದುದು (ಶಗಸ. ೦-೯೯ ವ). ೩. ಹಾರವ; ಬ್ರಾಹ್ಮಣ ; ವಿಪ್ರ : "ಬ್ರಾಹ್ಮಣಂ ಬಾಡಬಂ ಭೂಮಿದೇವಂ ದ್ವಿಜಂ" (ಶುಂಗಶಾ. ೬೩-೦); ಆ ಕಲ್ಲಿದೇವಯ್ಯ . . . ಆ ಬಾಡಬರ್ಗಿಂತೆಂದು ನುಡಿದನು (ಬಸಪು. ೩೩_೩೬); ಘೋರನೆ ಬಂದು ತುಜುಗಿರ್ದ ಜನರು ಬಾಡಬರು ವೈಷ್ಣವರು ತನತನಗಿದು ಚೋದ್ಯವೆನುತ ಪೇಗಿಸ ಕೋಪ ಕೊಸರಿತು ಭೈರವಾಂಕನಿಗೆ (ಕೃಶವೇ. ೩-೩೦). ೪. [ಕಾಮಶಾ] ರತಿಕ್ರೀಡೆಯಲ್ಲಿ ಒಂದು ಬಗೆ : 'ಬಾಡಬಕರಣ' ಪರಾ. [ಸಂ.]

**ಬಾಡಬಕ** (ನಾ) = ಬಾಡಬ ೪ : ಅಗಲಿರ್ದ ಸ್ತ್ರೀ ತನ್ನಯ ಯೋನಿಯ ಇರ್ದೆಶೆಯುಂ ಸಂಪುಟಂಗಳಿಂ ಪುರುಷನ ಲಿಂಗವೇಳದಿರ್ದೊಡೆಯಲ್ಲಿ ಈ ಸ್ತ್ರೀಯಿಸಾ ಕರಣದಿಂದೊತ್ತಲ್ಕೆ ರವಿಸೋದು ಬಾಡಬಕಂ (ಕಾಮಶಾ. ೨೩೩). [ಸಂ.]

**ಬಾಡಬಕರಣ** (ನಾ). = ಬಾಡಬ ೪ : ಪುರುಷನ ಪತಾಕೆಯೊಜಗಿರೆ ಮಗುಳ್ದು ಮಲಗಿರ್ದ ಗುರುಕುಚೆಯುಪನುಗ್ರಹದೆರಡುಕಡೆಯೊಳು ಓರಿದೊತ್ತಲವಗೆಟ್ಟಿಱರವನಸಿ ನೆರವುತಿಪ್ಪರವದೇ ಬಾಡಬಕರಣಂ (ಶಶಪ. ೯-೦೯). [ಸಂ.]

**ಬಾಡಬಕ್ಕ**, ಬಾಡಬಾಕ, ಬಾಡಬಾಕು, ಬಾಡುಬಕ್ಕೆ, ಬಾಡುಬುಕ್ಕ (ನಾ). ೧. ಒಂದು ಬಗೆಯ (ದ್ವಿದಳಧಾನ್ಯದ) ಬಳ್ಳಿ: "ಬಾಡಬಕ್ಕ, ಬಾಡುಬುಕ್ಕಬಳ್ಳಿ" (ಶಸ್ಕ.ಶಿ. ೦೦೦); (ವ್ಯಶಿಗ. ೬೩-೦೩೦೯). ೨. ಒಂದು ಬಗೆಯ ಮುಳ್ಳುಗಿಡ : ಚರ್ವಿತಚರ್ವಣಲಬ್ಧವಾದ ವರ್ಣನೆಗಳನ್ನು ತುರುಕಿ, ಸಾಹಿತ್ಯ ಸೀಗೆ ಗಜ್ಜುಗ ಬಾಡಬಕ್ಕಗಳ ಲಗ್ಗಾಡಾಗುವಂತೆ ಪರಿವರ್ತಿಸುತ್ತಾರೆ (ಶಂಶುಂಠ. ೯೯). **ಬಾಡಬಾಕ** : ೧. ಬಾಡಬಾಕನ ಸೊಪ್ಪಂ ನೀರಿಂ ಅರೆದು ಎಣ್ಣೆಯಾಗಲಿ ಹಸುವಿನ ತುಪ್ಪವಾಗಲೀ ಕೂಡಿಸಿ ಆಜುದಿನ ಕೊಂಡರೆ ಅಂಡವಾತ ಮಾಣ್ಗುಂ (ಅಶ್ವ.ಶಿ. ೬೩). **ಬಾಡಬಾಕು** : ೨. ಬೆತ್ತ ಕೆಂಜಿಗೆ ಸೀಗೆ ಗಜುಗ ಬದಿರು ಮುಳ್ಳುಮುತ್ತುಗ ಬಾಡಬಾಕುಗಳು (ಶ್ಯಾಸಕ. ೦೦-೨೩). **ಬಾಡುಬಕ್ಕೆ** : ೨. 'ಬಾಡುಬಕ್ಕೆ ಮುಳ್ಳು' ಎಂಬ ಚೂಪಾದ ಕೊಕ್ಕೆಯ ಮುಳ್ಳುಂಟು. ಇದಕ್ಕೆ ಮೈ ತಾಗಿದರೆ ಒಂದಿಷ್ಟಾದರೂ ಬಾಡು ಕಿತ್ತು ಬರದೆ ಇರುವುದಿಲ್ಲ (ಶಹ್ಮರು. ೩೯೬). **ಬಾಡುಬುಕ್ಕ** : ೧. "ಬಾಡಬಕ್ಕ, ಬಾಡುಬುಕ್ಕಬಳ್ಳಿ" (ಶಸ್ಕ.ಶಿ. ೦೦೦). [ ? ]

**ಬಾಡಬಾಕ** 'ಬಾಡಬಕ್ಕ' ನೋ.

**ಬಾಡಬಾಕು** 'ಬಾಡಬಕ್ಕ' ನೋ.

**ಬಾಡಬಾಗ್ನಿ** (ನಾ). = ಬಾಡಬ ೨ : ಹಿಡಿದು ಬಲುಹಿಂ ಕಡಲ ಕುಡಿಸುವ ಬಾಡಬಾಗ್ನಿಯನು (ಕೌಶಿರಾ. ೦೩-೯೨); ಕಾಲಾಗ್ನಿ ಬಾಡಬಾಗ್ನಿ ಪಾಷಾಣಾಗ್ನಿ ವೈದ್ಯುತಾಗ್ನಿ ಸೂರ್ಯಾಗ್ನಿ ಎಂಬ ಸೂಕ್ಷ್ಮರೂಪಪಾದ ಪಂಚಾಗ್ನಿ ಧ್ಯಾನಯುಕ್ತನಾಗಿ (ಶಶೀಳ. ೦೨೬). [ಸಂ.]

**ಬಾಡಬಾನಲ**, ಬಾಡಬಾನಳ (ನಾ). = ಬಾಡಬ ೨. **ಬಾಡಬಾನಳ** : ಪರಸೈನ್ಯಸುಭಟಮಹಾರ್ಣವಕೆ ಬಿಡು ನಿನ್ನ ವಿಕ್ರಮಬಾಡಬಾನಳನ (ಕುಭ್ಯಾ.ಕ್ರೋ. ೦-೦೬). [ಸಂ.]

**ಬಾಡಬಾನಳ** 'ಬಾಡಬಾನಲ' ನೋ.

**ಬಾಡಬೇಯ** (ನಾ). ಎತ್ತು; ವೃಷಭ : "ಉಕ್ಷಾ . . . ಬಾಡಬೇಯಃ, ಶಾಕ್ವರಃ — ಈ ೧೧ ಯ(ಎ)ತ್ತು" (ಹಲಾಯು. ೯೯-೦೦೬). [ಸಂ.]

**ಬಾಡವ** (ನಾ). ೧. ಕುದುರೆ; ಅಶ್ವ : ಬಾಡವಂಗಳಂ ಹಂಸೆಗಳಂ . . . ಅಂಬರಚರೇಶ್ವರ ಪ್ರಭು ಮಗಳ್ಗೆ ಬಟ್ಟಿವಟ್ಟಿಗೊಟ್ಟಂ (ಶರಶವಾ. ೩-೯೯). ೨. = ಬಾಡಬ ೨ : ಕೃತ್ರಿಮಸೌಷ್ಠವದಿಂ ಸಲಿಲಮುಮಂ ಬಾಡವನು ಮನೊಳಕೊಂಡ ಕಡಲನರಸಂ ಪೋಲ್ಗುಂ (ಅಶಾವ. ೯-೬) ; ವಾರಿಧಿಯೊಳಡಗಿ ನಿದ್ರಿಪ ಬಾಡವವೊ ತೃಷ್ಣೆ (ಶುಂಶುಶ. ೨೬೬). ೧. ೨ : ಧುರದೊಳ್ ಶೂದ್ರನೂರ್ಜಿತಾಶ್ಚರ್ಯಚರ್ಯೆಯಿಂ ಧೈರ್ಯಾಕ್ರಮಕ್ಷತ್ರಿಯುಂ ಪರಸೈನ್ಯಾಂಬುಧಿ ಬಾಡಮಂ ದಲ್ ಅದಱಿಂ ತಾಂ ವರ್ಣಸಾಂಕರ್ಯಮಂ ನರಸಿಂಹಂ

ತಳೆದಿರ್ದನ್ (ಎಕ. V. ಕೇಂಉಕು. ೧೯೩-೯೦; 1161). ೩. ಬ್ರಾಹ್ಮಣ; ವಿಪ್ರ : "ಬ್ರಾಹ್ಮಣಃ, ಬಾಡವಃ, ವಿಪ್ರಃ . . . ದ್ವಿಜಃ — ಈ ೧೦ ಬ್ರಾಹ್ಮಣಂ" (ಹಲಾಯು. ೬೩-೨೩೭). [ಸಂ.]

**ಬಾಡವಾಗ್ನಿ** (ನಾ). = ಬಾಡಬ ೨ : ತವೆ ಕುಡಿಯಲ್ಕೆಳಿಯದು ಬಾಡವಾಗ್ನಿ ಪೋಗೆಂದು ಕುಂಭಸಂಭವಕೋಪಾಗ್ನಿ ವಿಯತ್ತಳದಿಂ ಕಿಡಿವಿಡುತಮಿಟಿವೊಲ್ಪವನನವರಜಳನಿಧಿಗಿಟಿದಂ (ಜಗನ್ನಾ. ೬-೦೯). [ಸಂ.]

**ಬಾಡವಾನಳ** (ನಾ). = ಬಾಡಬ ೨ : ಬಾಡವಾನಳಾವಳಿಜಳವುಂ ಮನಂ ಬಯಸಿ ನೋಡಿದನರ್ಣವಮಂ ಗುಣಾರ್ಣವಂ (ಪಂಪಭಾ. ೪-೨೩). [ಸಂ. ಬಾಡವಾನಲ]

**ಬಾಡವೆ** (ನಾ). ಬ್ರಾಹ್ಮಣ ; ಹಾರವ : ಕನ್ನಡ ಯಾತ್ರಿಕರು ಪಂಢರಪುರಿಗೆ ಹೋದಾಗ ಅಲ್ಲಿನ ಬಾಡವೆಗಳು ಅದೇ ಸ್ತಂಭವನ್ನು ದಾಸರ ಸ್ತಂಭವೆಂದು ತೋರಿಸುತ್ತಾರೆ (ಕಸಾಂ. ii, ಜುಕನ್ನಾ). [ಸಂ. ಬಾಡವ]

**ಬಾಡಿಗೆ** 'ಬಾಡಗೆ' ನೋ.

**ಬಾಡಿಗೆದಾರ** (ನಾ). (ಮನೆ ಮೊದಲಾದುವನ್ನು) ಬಾಡಿಗೆಗೆ ಹಿಡಿದಿರುವವನು : ಈ ಸಲ ಬಾಡಿಗೆದಾರರ ಪೈಕಿ ನಾರಾಯಣನು . . . ತುಂಬಾ ಕಂಗಾಲಾಗಿ ಹೋಗಿದ್ದನು (ಕಂಠಿಕಾ. ೦೨). [ಬಾಡಿಗೆ (< ಬಾಡಗೆ) + — ದಾರ್]

**ಬಾಡಿಗೆಮನೆ** (ನಾ). ಬಾಡಿಗೆ ಕೊಡುವ ಕರಾರಿನಿಂದ ಪಡೆದ ಮನೆ : ಶ್ಯಾಮಲಾಲರು . . . ಕಲಕತ್ತೆಯ ಬಾಡಿಗೆಮನೆಯಲ್ಲಿ ಹೆಂಡತಿ ಬೇಗರೊಡನೆ ವಾಸಿಸುತ್ತಾರೆ (ಕಬಾಂಕಿ. ೦೯೯) ; ಬಾಡಿಗೆಮನೆ, ಕೂಡಿಕೆಹೆಂಟರು (ಗಾರ). [ಬಾಡಿಗೆ (< ಬಾಡಗೆ) + ಮನೆ]

**ಬಾಡಿಸು**, ವಾಟಿಸು (ಕ್ರಿ). ೧. ಸೊಪ್ಪು, ತರಕಾರಿ, ಮಾಂಸ ಮುಂತಾದುವನ್ನು ಬಾಣಲಿಯಲ್ಲಿ ಹಾಕಿ ಬೆಂಕಿಯ ಮೇಲಿಟ್ಟು ಹುರಿ.– ತಾಳಿಸು : ಚಮ್ಮಟಿಗೆಗಂಶುಕಕಟ್ಟುಗಳಾಗಿ ಬೆಟ್ಟದರ್ ಬಾಡಿಸುವೇಜ ಬಾಡಿಸುವ ಹೇಜುವ ಕಟ್ಟುವ ಕುಟ್ಟುವಾವಗಂ ಹೂಡುವ ದುಃಖದಿಂ ತಿರಿಣಜಾತಿಯು ಕೋಟಲೆ ಕುಂದದೊರ್ಮೆಯುಂ (ಅಪಂತ್ರ. ೯-೯೩): ಪಿಸಿತವನು ಕತ್ತರಿಸು ಹುರಿ ಹುರಿ ಕಾಸು ತಾಳಿಸು ಬಾಡಿಸು (ಶಾಗಚ. ೦೩-೯೩): ಈ ಕಾಡುಪರಕಾರಿಗಳನ್ನು . . . ಬೇಯಿಸುವುದು ಬೇಕಿಲ್ಲ, ಒಗ್ಗರಣೆ ಹಾಕಿ ಬಾಡಿಸಿದರೆ ಸಾಕು ! (ಜಸುಹೂ. ೩೦೦). ೨. ಕಳೆಗುಂದಿಸು ; ಒಣಗಿಸು ; ಕಂದಿಸು : ತೇಜಂ ಬಾಡಿಸುತಿರ್ಪ ರೇಪಿಯೊ ಚಿರಂ ಬಾಟ್ಸಾಸಯಿಂದೀ ಮಹಾರಾಜನರ್ಲೀಡುವ ತೀವ್ರತೇಜದ ಮಹಾಸಪ್ರಾರ್ಚಿಗಂಡುಂ ಮಹಾತೇಜಂ ಭಾಸ್ಕರನಸ್ತದೊಳ್ ಕೆಡೆವುದುಂ ಕಂಡುಂ ಮಹೋಳ್ಕಂ ಜ್ವಳತ್ತೇಜಂ ಬೀಳ್ವುದುಗಂಡುಮುದ್ಧತಮಹಾಮೋಹಾಂಧಕಾರಾಂಧಕರ್ (ಅರ್ಜಚ. ೯-೩೯). ೩. ಹಪ್ಪಳ, ಉಪ್ಪಿನಕಾಯಿ, ಚಕ್ಕಣ ಮೊದಲಾದ ಪದಾರ್ಥಗಳನ್ನು ( ಆಹಾರ ಅಥವಾ ಕಳ್ಳಿನೊಂದಿಗೆ ) ನಂಜಿಕೊಳ್ಳು : ಉಪದಂಶಃ, ಅವದಂಶಃ, ಭಕ್ಷಣಂ— ಈ ೩ ಕುಡಿವುತ್ತ ಬಾಡಿಸುವುದು (ಹಲಾಯು. ೩೯-೦೬೩) ; ಕುಂಟಣಿಮಂ ನೋಣೆಗಬ್ಬಿ ತಿಂಗೆ ಬೇಗುರುಟಿ ಬಳಾರಿ ಬಾಡಿಸುಗೆ (ಲೀಲಾಶ. ೨-೦೦೬) ; ಮೊಸರನ್ನ ಉಂಡ ಮೇಲೆಯೂ ಹಾಗೆಯೆ ಪಲ್ಲೆಕಾಯಿ ಬಾಡಿಸುತ್ತ, ಅವು ತೀರಿದ ಮೇಲೆ ಬರಿಯ ಉಪ್ಪನ್ನ ಬಾಡಿಸುತ್ತ . . . ಕುಳಿತಾಗ ಬಡಿಸುವವರ ಹುಚ್ಚುನಗೆ ಕಂಡಾಗ ನನ್ನ ಊಟ ಮುಗಿದುದರ ಕಲ್ಪನೆ ಬಂದುದೂ ಗೊತ್ತಿದೆ (ಮುಂಗಾರು ೬೩). ವಾಟಿಸು : ೧. ಪರ್ಸಿಣಂಗಳಿಂ ತಗುಳ್ದೂಜಿಸಿಯುಂ ಕಾವಲಿಯೊಳಿಕ್ಕಿ ವಾಟಿಸಿಯುಂ ಇಂತನೇಕವಿಧದಂಡನೆಗಳಿಂ ದಂಡಿಸಿಯುಂ ಸ್ವಸಿಸಲಾಜಿದೆ (ಧರ್ಮಾಮೃ. ೩-೬೩). [ಬಾಡು₂ + — ಇಸು₃./ತೆಲು. ವಾಡಿಂಚು]

**ಬಾಡು₁** (ಕ್ರಿ). ೧. (ಹೂವು, ಚಿಗುರು ಮುಂತಾದುವುಗಳು) ಒಣಗು ; ಮುರುಟು : " ಬಾಡು—ಮ್ಲಾನೇ, ಮಾಂಸೇ ಶಾಕೇಚ " (ಕಶಬ್ದಾ. ೫) ; ಸಸ್ಯಾವಳಿ ಸುಗಿದುಗಿದು ಕೂಡೆ ಬಾಡಿರ್ದುದು (ಅಂತ್ರ. ೦೦-೬೬) ; ಹೂ ಬಾಡಿದಲ್ಲಿ ಪಂಪುಳವನಜುಸುವರೆ (ಚಿನ. ೦೨೬) ; ಕಟ್ಟಿಯುಮೇನೊ ಮಾಲೆಗಾಜಿನ ಪೊಸಬಾಸಿಗಂ ಮುಡಿದ ಭೋಗಿಗಲ್ಲದೆ ಬಾಡಿ ಪೋಗದೇ (ಅಪಂತ್ರ. ೦-೯೩) ; ಭಯದಲಿ ಬಾಡುವುವಲೇ ರಿಪುನೃಪಾಲರ ಮುಖಸರಸಿಜಯಲಿಜ (ಕುಮ್ಮಾರ. ೦೨-೬೬). ೨. ಕಳೆಗುಂದು ; ಕಾಂತಿಗುಂದು ; ಮಂಕಾಗು : ಇಂದೆಮಗುಣನಲ್ಕೆ ಬಗೆಯಲ್ಲುವವಾಸುಗೆಯ್ದಪ್ಪೆಮೆಂದು ಪರಿಚ್ಛೇದಿಸಿ ನುಡಿದೊಡೆ ಬಿನ್ನನೆ ಮೊಗಂ ಬಾ[ಪಾಠಾಂ. ಮಾ]ಡಿ ಭಟರರಂ ವಂದಿಸಿ ಪೋಗಿ (ವಡ್ಡಾರಾ. ೬೦-೦೦); ಈ ಮೊಗವಿದಿಂತೇತರ್ಕೆ ಬಾಡಿರ್ದುದು (ಅಂತ್ರ. ೩-೨೩); ಅರಾತಿನೃಪವಕ್ತ್ರಾಬ್ಜಂ ಕರಂ ಬಾಡುಗುಂ (ಅಭ್ಯಲಿ. ೦೨-೬೨). ೩. ಸೊರಗು ; ಕಂಗ್ಗು : ಇಂತೀಕೆ ಬರ್ದಿ ಬಂಬಳಂಬಾಡಿ ಪಾಡಟ್ಟುದುದ್ದೆಗಂಬಟ್ಟಿರ್ದ್ (ವಡ್ಡಾರಾ. ೩೯-೬) ; ಬಾಡಿ ಪಾಡಟಿದು ಬಟಲ್ದು ಜೋಲ್ದಿರವು . . . ಕನ್ನಡಿಸಿದವೃವು ಕನ್ನೆಯ ಕನ್ನೇಟವುಂ (ಪಂಪಭಾ. ೯-೬೦) ; ಹೊಡಿದುದಿನ ತೋಳ ತಗಹಿನ ಬಾಡಿದುತ್ಸಾಹದ ವಿತಾಳದ ಬೀಡಿಕೆಯ ದೇಳುವೆಗೆ ಬೆಬ್ಬಳಿಪೋದನಾ ಪಾರ್ಥ (ಕುಮ್ಮಾ. ೦೯-೦೦).

[ದೇ. ೫ ತಮಿ. ವಾಟು, ವಾಟ್ಟು ; ಮಲ. ವಾಟುಕ, ವಾಟ್ಟುಕ; ತುಳು. ಬಾಡು ; ಕೊಡ. ಬಾಡ್ ; ತೆಲು. ವಾಡು ; ಪರ್ಜಿ. ವಾಡ್]

**ಬಾಡು₂** (ನಾ). ೧. ಅಡಗು ; ಮಾಂಸ : "ಅಡಗು, ಬಿಕ್ಕು, ಬಾಡು— ಈ ೩ ಮಾಂಸಂ " (ಕಶಬ್ದಾ. ೩೨-೦೨೬) ; ಲೇಸಾಗಿ ಬೆಂದ ಬಾಡಂ ಬಾಸಣಿಸಿಟ್ಟದನೆಯಮೃತಮಂತಿಗಟ್ಟಿಸಿದಂ (ಜುಕೋಕ. ೩-೬೦) ; ಸಗರ್ವಿಭೀಮನ ಬಾಡ ಕೊಯ್‌ಕೊಯ್ದು ಮರುಳ ಬಳಗವ ತಣಿಸಿದಡೆ ಹಿರಿಯರಸರಲಿ ಸಂಧಾನವೆಂದೈ (ಕುಮ್ಮಾಗ. ೫-೨೯) ; ಜೀಮೂತವಾಹನ . . . ತನ್ನೊಡಲ ಬಾಡ ಗರುತ್ಮನಿಗಿತ್ತು ಸತ್ಕೀರ್ತಿಯ ನಾಡೊಳು ಪಡೆದುದನಜೀಯಾ (ಕೋಚಿಕ. ೫-೩೬) ; ಸೂಕ್ಷಿದೀ ಬಾಲ ಹೆಮ್ಮಾರಿ ಕಾಲಿನಂತೋಡದಿದು ; ಹಲ್ಲಕೊಲು ಕಡಿಯದಿದು ; ನಾಲಗೆಯು ತಿರೆ ಬಾಡಸವಿ ತಿಳಿಯದು (ಕುಂತ್ರ. ೯೩-೬). ೨. ತರಕಾರಿ ; ಕಾಯಿಪಲ್ಯ : ಹೆಡಗೆಗೆ ಪೊಂದು ಹಿಡಿ ಬಾಡು (ಚೂಂಕಾ. ೦೯೩೩. ಇಂತಿ. ೯೬-೦೦ ; ೯). 'ಬಾಡೂಡಾಯ್' ಪರಾ. ೩. ಊಟದ ಮಧ್ಯೆ ಮಧ್ಯೆ ನಂಜಿಕೊಳ್ಳಲು ಬಳಸುವ ಹುರಿದ ಅಥವಾ ಕರಿದ ಮಾಂಸ, ತರಕಾರಿ ಮುಂತಾದುವುಗಳಿಂದ ಮಾಡಿದ ಪದಾರ್ಥ : ತುಪ್ಪಮುಂ ಪಲವುತೆಱದ ಬಾಡು[ಪಾಠಾಂ. ಶಾಕಂ]ಗಳುಂ ತುಯ್ಯಲುಂ . . . ಪದಿನೆಂಟುಂತೆಱದ ಭಕ್ಷ್ಯರೂಪಂಗಳುಮಂ . . . ಬ್ರಹ್ಮಯ್ಯಂಗೆ ಮಹಾದೇವಿ ಬಡ್ಡಿಸಿದೊಡೆ (ವಡ್ಡಾರಾ. ೬೬-೦೬) ; ಆ ಪರದಂ ಕೂಟಂ ಕಲಸಿ ಪಲವುಂ ಬಾಡುವರೆಸಿ ಕೂಟನೊಂದು ದಳಿಂಬದ ಕಪ್ಪಟದೊಳ್ ಕಟ್ಟಿ ಕೊಟ್ಟಡೆ (ಶಾಂತಿ. ೦೯-೩೦ ೫). [ದೇ. ೫ ತಮಿ. ವಾಟ್ಟು; ತುಳು. ಬಾಟಣೆ]

**ಬಾಡು₃** (ನಾ). ೧. ತೆರೆ ; ಮರೆ : ಕೃಷ್ಣನುಯಲ್ಲಿ ಪೋದನುಯನುತ್ತೆ ನಲ್ಲೆಯರು ಕೈಗಳನು ಹೊಸಕೊಳುತ ಬಾಡ ಮರೆಯಲ್ಲಿ ಮರೆಗೊಂಡಿರ್ಪನೆಂದು ಪೊಕ್ಕರಸಿ ಕಾವೆಲ್ಲ[ ವಲ್ಲಿ ] ಕಾಣದೆ ಮರಳಿ ಬಂದು (ಕಕಕೋ. ೦೦ ೩೯). 'ಪಂಬಾಡು' ಪರಾ. ೨. ಗುಡಾರ ; ತಂಬು : ಸುತ್ತು ವಳೆಯುವರಿ[ ರಿ ] ಶುಭ್ರಪಚ್ಚಡಗಳಲಿ ರಚಿತ ಪೊಸಬಾಡನುರೆ ಬಂಧಿಸಿದರು (ಶವಕೋ. ೩೯-೬೬). [ ← ತೆಲು. ಬಾಡು / ಮರಾ. ಬಾಡ್ ]

**ಬಾಡುಂದಳಿರ್** (ನಾ). ಒಣಗಿದ ಎಲೆ ; ಮುರುಟಿದ ಚಿಗುರು : ಬಟ್ಟಪೊರ್ಪಟಲ್ಕೆಗಟಿದುದನಜುವ ಬಾಡುಂದಳಿರ ಪಾಸಿಗಳುಮಂ (ಕಾದಂಬ. ೨೬೬). [ಬಾಡು₁ + ತಳಿರ್₂ ]

**ಬಾಡುಕಟ್ಟು** (ಕ್ರಿ). (ಹೊಲಗದ್ದೆಗಳ ರಕ್ಷಣೆಗಾಗಿ ಸುತ್ತಲೂ ಬಾಡಿದ ಸೊಪ್ಪು, ರೆಂಬೆ ಮುಂತಾದುವುಗಳಿಂದ) ಬೇಲಿಯನ್ನು ಕಟ್ಟು : ಗಿಡಗಳು ದೊಡ್ಡವಾಗುವವರೆಗೂ ಸುತ್ತಲೂ . . . ಈಚಲುಬರಿಗಳಿಂದಾ

ಗಲಿ ಕರಕಲ ಕಟ್ಟಿಗೆಯ ಬರಿಗಳಿಂದಾಗಲಿ ತಟ್ಟಿಗಳನ್ನು ಹೆಣೆದು ಸುತ್ತಲೂ ಬಾಡು ಕಟ್ಟದ ಹಾಗೆ ಕಟ್ಟಿ ಬಾಟು ಮಾಡಬೇಕು (ಕೃಷಿಪ್ರ. ೦೬೩).

[ ಬಾಡು$_2$ (ಪ್ರ.ದ್ರಾ. ತುಳು. ಬಾಡು = ಬೇಲಿ) + ಕಟ್ಟು$_1$ ]

**ಬಾಡುಕಾಯ್**, ಬಾಡುಕಾಯಿ (ನಾ). ತರಕಾರಿಯಾಗಿ ಉಪಯೋಗಿಸುವ ಕಾಯಿ : ಬಾಡುಕಾಯೆಂಬಿವು ಭಂಡಿಗೆ ಹತ್ತು ತಲೆವೊಜೆಗೆ ನಾಲ್ಕಕ್ಕಂ (ಎಇ. XIX, ೩೬-೪೦ ; 1136); ಶಾಕಶಾಕಟಂ, ಶಾಕಶಾಕಿನಃ – ಈ ೨ ಬಾಡುಕಾಯ ತೋಟಂ (ಹಲಾಯು. ೫೬-೯); ಮಾರುವ ಹೆಡಗೆಯು ಹಣ್ಣುಹಂವಲ್ ಬಾಡುಕಾಯ್ಗೆ ಹಿಡಿಬಾಡು ಹಿಡಿಹಣ್ಣಂ ಕೊಟ್ಟರ್ (ಎಇ. V. ೩೦-೩೯; 1161). **ಬಾಡುಕಾಯಿ**: [ಬೋವ]ಕ್ಕಳು ತಂದು ಮಾರುವ ಬಾಡುಕಾಯಿಗೆ ತಿಪ್ಪೆಸುಂಕವ ಕೊಟ್ಟರು (ಶಾಇ. XX. ೨೪೪-೭೬; 1228).

[ಬಾಡು$_2$ + ಕಾಯ್$_4$]

**ಬಾಡುಕಾಯಿ** 'ಬಾಡುಕಾಯ್' ನೋ.

**ಬಾಡುಣಿ** (ನಾ). ಮಾಂಸವನ್ನು ತಿನ್ನುವಂಥದು; ಭೂತ; ಪಿಶಾಚಿ : ಓಡಂ ಪಿಡಿದಿರ್ದೊಡೆಯುರ ಬಾಡುಣಿಗಳ ಕೂಡಿ ಬಿತ್ತಲೋಡಾಡಿಯು ನೀಂ ಬೇಡಿದ ವರಗಳ ನೀಡುವೆ (ಶಂಕರ. ೪-೦೦). [ಬಾಡು$_1$+ –ಉಣಿ]

**ಬಾಡುಬಕ್ಕ** 'ಬಾಡಬಕ್ಕ' ನೋ.

**ಬಾಡುಬುಕ್ಕ** 'ಬಾಡಬಕ್ಕ' ನೋ.

**ಬಾಡುಮೋರೆ** (ನಾ). ಮಂಕಾದ ಮುಖ; ಕಾಂತಿಹೀನವಾದ ಮುಖ : ಭೀತಿಯಲಿ ಬಾಡುಮೋರೆಯನೆತ್ತಿ ಕೈಗಳ ನೀಡಿ ಕಂಗಳ ಮುಚ್ಚಿ . . . ಬೆಚ್ಚಿದನಡಿಗಡಿಗೆ ಭೀಮ (ಕುಮಾ. ೦೦-೩೬). [ಬಾಡು$_1$ + ಮೋರೆ$^3$]

**ಬಾಡೆ** 'ಬಾಡ' ನೋ.

**ಬಾಣ$_1$** 'ಬಾಣೆ' ನೋ.

**ಬಾಣ$_2$**, ವಾಣ$_1$ (ನಾ). ಒಬ್ಬಾತನ ಹೆಸರು: 'ಬಾಣರಸ', 'ಬಾಣಸಾಮಿ' ಪರಾ. ವಾಣ$_1$ : ಪ್ರತಿಪನ್ನಮಂದರಂ ವಾಣಸ್ಕನ್ನಯುಪುರಂದರಂ . . . ಶ್ರೀಮನ್ಮಹಾಪ್ರಧಾನಂ ಕಿಡಿತವೆರ್ಗ್ಗಡೆ (ಕಇ. ೭-೩-೨೬೨; 1062). 'ವಾಣರಸ' ಪರಾ.

**ಬಾಣನ ಪಳ್ಳಿ** = ಒಂದು ಊರಿನ ಹೆಸರು : ದೇವಕೊಮಾರನುಂ ಧೋರನುಮಿಬ್ಬಾರರಪೆ ಬಾಣನ ಪಳ್ಳಿಯ ಕೊಣ್ಡು ಶ್ರೀ ಕೇಸಿಗ × × × ತಲೆಸೇಜೆಯುಲು ಕಟ್ಟಿನ್ ಕಟ್ಟು ಪುರ್ಧ್ಯೆ ಕೊಟ್ಟ ಸ್ಥಿತಿಕ್ರಮವೆಂತಾವೇದೊಡೆ (ಎಕ. III, ಶ್ರೀರಂಗ. ೦೯೪-೦೨; 904 ?). **ಬಾಣರವಾಡಿ** = ಒಂದು ಸ್ಥಳದ ಹೆಸರು : ಗಂಗವಾಡಿ ತೊಮ್ಬತ್ತಱುಸಾಸಿರವುಂ ಬಾಣರವಾಡಿ ಪನ್ನಿರ್ಚ್ಛಾಸಿರದ ಬಳೆಂಜಮೆಲ್ಲ ಕೆರೆದು (ಎಕ. X (೩). ಮುಳಬಾ. ೨೦೬-೩; ಸು.950).

**ಬಾಣ$_3$** (ನಾ). ೧. ಬಿಲ್ಲಿಗೆ ಹೂಡಿ ಬಿಡುವ ಅಸ್ತ್ರ; ಅಂಬು; ಕಣೆ : "ಚಿತ್ರಪುಂಖಂ ಮಾರ್ಗಣಂ ಬಾಣಂ . . . ಕಾಂಡಮೆಂದೆನಲ್ಕಂಬೆನಿಕ್ಕು" (ಹುಣಪಾ. ೫೭-೩೪); ಗುಣಾರ್ಣವಂ ಮತ್ತಮೈಂದ್ರ ವಾರುಣವಾಯವ್ಯಾಗ್ನೇಯಪಾರ್ವತಾದಿ ಬಾಣಂಗಳಂ ತುಡೆ (ಪಂಪಭಾ. ೨-೭೬ ೪); ಐದುಬಾಣವ ಕೊಂಡು ಯಂತ್ರದ ಹೊಳಹನೀಕ್ಷಿಸಿದ (ಕುಮಾ. ೦೫-೨೬) ; ವನಜಾಕ್ಷಿ . . . ನಂದನದ ಕಾಣದೆ ಕಂಗೆಟ್ಟು ಹೊರಳ್ದಳು ಮುಮ್ಮೊನೆಬಾಣ ತಾಗಿದ ಹುಲ್ಲೆಯಂತೆ (ಜೋಹರ. ೪-೩೯). ೨. ಶಬ್ದ; ಸದ್ದು : ಶಬರುಲ ಬಾಣಮಯ ಬಾಣಮಯ ಬಾಣಮಯವಾಗಿ ಕಾವನಂ ಕಣ್ಗೆಸೆದುದು (ಪಶಿಶಾ. ೫-೦೪). ೩. ಬೆಂಕಿ; ಅಗ್ನಿ : ಮೇಲಿನ 'ಹಚಕಾ' ಪ್ರಯೋಗವನ್ನು ನೋಡಿ. ೪. ಒಂದು ಬಗೆಯ ಸಸ್ಯ; ನೀಲಿಗೋರಂಟೆ : "ನೀಲೀ, ಝಿಂಟೀ, ಬಾಣಃ – ಈ ೩ ಕರಿಯ ಗೋರಂಟೆ" (ಹಲಾಯು. ೪೯-೫೨). ೫. ಈಶ್ವರ ಸಂಕೇತವಾದ ಲಿಂಗಾಕೃತಿಯಲ್ಲಿ ಪಾಣಿಪಟ್ಟಲಿನ ಮೇಲೆ ಕಾಣುವ ರುಬ್ಬುಗುಂಡಿನಾಕಾರದಲ್ಲಿರುವ ಭಾಗ: ಅವರು ಶಿವಲಿಂಗದ ಬಾಣವೇ ಪುರುಷಚಿಹ್ನೆಯೆಂದೂ ಅದರ ಕೆಳಗಿರುವ ಯೋನಿಯೇ ಶಕ್ತಿಯೆಂದೂ ಹೇಳುತ್ತಾರೆ (ಭಾರತ. ೨೦೬). ೬. ಶಿವಭಕ್ತನಾದ ಒಬ್ಬ ರಾಕ್ಷಸರಾಜ; ಬಲೀಂದ್ರನ ಮಗ : ಏನು ಕಾರಣ ನೀವು ಬಾಣನ ಬಾಗಿಲ ಕಾಯ್ವಿರಿ (ಬಸವ. ೬೪೨); ಸಂಬಂಧಿ ಬಾಣನಂ ಹಾರೈಸುವೊಡೆ ನಿನ್ನ ಬೇರ್ಗೊಳೆಗೆ ಶಿವನಿಪ್ಪ ಕಾರಣಮುನಂಗಕ್ಕವೇ ಪ್ರಾಪ್ತಮೆಂದು ಹರಿ ತನ್ನ ಸುತನಂ ಜಱೆದನು (ಕೃಶಿಕಾ. ೭-೪೦). ೭. ಹುಲ್ಲು : ತೃಣ. ೮. ಹರ್ಷವರ್ಧನನ ಕಾಲದಲ್ಲಿ ಕಾದಂಬರೀ, ಹರ್ಷಚರಿತಗಳೆಂಬ ಕಾವ್ಯಗಳನ್ನು ಬರೆದ ಒಬ್ಬ ಪ್ರಸಿದ್ಧ ಸಂಸ್ಕೃತಕವಿ : ಬಾಣಂ ವಲ್ಲಭನಕ್ಕುಮೆಂದು ಪಡೆದಾ ವಾಗ್ದೇವಿಗಬ್ಬೋದ್ಭವಂ ಬಾಣಂ ಬಾಣೆಯೆನಿಪ್ಪದೊಂದು ಪಸರಂ ಮುನ್ನಿತ್ತಂ (ಕಾದಂಭೂ. ೩). ೯. ದೀಪಾವಳಿ ಮುಂತಾದ ಹಬ್ಬದ ದಿನಗಳಲ್ಲೂ ಸಂತೋಷಸಮಾರಂಭಗಳಲ್ಲೂ ಹಾರಿಸುವ ಹೂಬಾಣ ಮುಂತಾದ ಸಿಡಿಮದ್ದು : ಬುದ್ಬುದ ನಾನಾ ಚಿತ್ರಭೆ ತೋರುವ ಬಾಣ ಬಿರಿಸು ಬಹಳಿನಲಿ (ಜಪಾಶ. ೦೪೩-೬); ಹಗಲುಬತ್ತಿಯು ಬಾಣಬಿರಿಸು ಮಹತಾಪುಗಳು (ಕೃಕಾ. ೩-೦೦); ಬಾಣ ಬಿರುಸು ರಂಭೋಲುಪಾದ್ಯ (ಹುಬ್ಬಿಹ. ೧೦). ೧೦. ಒಂದು ಬಗೆಯ ಬಟ್ಟೆ-ವಸ್ತ್ರ. ೧೧. [ಗಣಿತ]ಐದು ಎಂಬ ಸಂಖ್ಯೆಯ ಸಂಕೇತ: ಕ್ಷೋಣೀಶ ವಾಯು ದಿನೇಶ ರುದ್ರನುಂ ಬಾಣಸ್ಥಾನದೊಳಾಗೆ ವಿಶ್ವಮುಂ ಬಾಣಂ ನಿಲ್ಲಿರೆ ಸಂದುದಲೆ ಕಲ್ಯಾಣಾ (ರಾರೋಂಬು. ೨-೦೦೨). ಹಿಮಕರ ಬಾಣೇಂದುವಾಗಲಾ ಪುಷ್ಪತೆಯಂ ವಿಪ್ರ ೧ ಕೆ ತಾವರೆಪುಷ್ಪ ೯ ಕೊಡುತ್ತಿರಲು (ಬಾಸ್ಕರ. ೦೬-೬): "ಎಲ್ಲ ಶರದೊಳು ತೃಣದೊಳಸುರನೊಳು ಗೋರಟೆ[ಪಾಠಾಂ.. ಗದೆ]ಯೊಳುಂ ಬಾಣಶಬ್ದಮಕ್ಕುಂ" (ಮಂಗರಾ. ೦೪೮-೪೦): "ಪುಲ್ಲು ವಸನ ದೈತ್ಯ ಸಂಖ್ಯೆ ಶರ ಗೋರಟೆ ಎಂಬವು ಬಾಣ ವಾಚಕಂ" (ನಾನಾರ. ೬). ೧೨. [ಛಂದ] ಪ್ರತಿಪಾದದಲ್ಲಿ ಹನ್ನೆರಡು ಅಕ್ಷರಗಳಿರುವ ಒಂದು ಅಕ್ಷರವೃತ್ತ : 'ಬಾಣವೃತ್ತ' ಪರಾ.

[ಸಂ.]

**ಬಾಣಂತನ** 'ಬಾಣಂತಿತನ' ನೋ.

**ಬಾಣಂತಿ** 'ಬಾಳಂತಿ' ನೋ.

**ಬಾಣಂತಿಕಾಯಿ** (ನಾ). ಪಗಡೆಯಾಟದಲ್ಲಿ (ಬಾಣಂತಿಯಂತೆ) ಪೇಲವವಾಗಿರುವ ಕಾಯಿ ; ಹಳದಿಕಾಯಿ : ದುಗವನೆಸೆ ಭಾರಗಳನಿಡುಯುದು ನೆಗೆದು ಹೊಯ್ ಬಾಣಂತಿಕಾಯ್ಗಳ ಚಿಗುಟಬಿಡು ಹಸುರ (ಕಂಠೀರ. ೪೮-೭೦). [ ಬಾಣಂತಿ (< ಬಾಳಂತಿ) + ಕಾಯಿ$_4$ (< ಕಾಯ್$_4$) ]

**ಬಾಣಂತಿಖಾರ** (ನಾ). ಬಾಣಂತಿಗೆ ಪ್ರತಿದಿನ ತಿನ್ನಲು ಕೊಡುವ, ಪುಷ್ಟಿಕರವಾದ ಔಷಧೀದ್ರವ್ಯಗಳಿಂದ ಕೂಡಿದ ಒಂದು ಬಗೆಯ ಖಾರಪದಾರ್ಥ : ಮೆದುವಲ್ಲ ಸಿಹಿಯಲ್ಲ ಹಾಲುಬಾಯಿಯುವೋಲು ಬಾಣಂತಿಖಾರವೂ ಖಾಳು (ಜಂಪಾಶ. ೬೬-೨೪).

[ಬಾಣಂತಿ (< ಬಾಳಂತಿ) + ಖಾರ$_1$ (< ಕಾರ$_2$)./ಮರಾ. ಬಾಳಂತಕಾಢಾ]

**ಬಾಣಂತಿಜ್ವರ** (ನಾ). ಸಾಮಾನ್ಯವಾಗಿ ಹೆರಿಗೆಯಾದ ಹತ್ತು ದಿನಗಳಲ್ಲಿ ಬಾಣಂತಿಗೆ ಬರುವ ಜ್ವರ : ಜನನಾಂಗಗಳ ಸೋಂಕುರೋಗ ಬಾಣಂತಿ ಜ್ವರಕ್ಕೆ ಬಹಳಷ್ಟು ಪ್ರಮುಖ ಕಾರಣ (ಕಂಕೋ. XII, ೨೬).

[ಬಾಣಂತಿ (< ಬಾಳಂತಿ) + ಜ್ವರ]

**ಬಾಣಂತಿತನ**, ಬಾಣಂತನ, ಬಾಲಂತಿತನ (ನಾ). ೧. ಹೆರಿಗೆಯಾದವಳಿಗೆ ಮಾಡುವ ಆರೈಕೆ – ಉಪಚಾರ : ನನ್ನ ಬಾಣಂತಿತನ ಮಾಡಿದವಳು ಅತ್ತೆಯೇ (ಸ್ವ.ಕಿಶ. ೬೬) ; ಎರಡನೇ ಬಾಣಂತಿತನಕ್ಕಾಗಿ ತವರೂರಿಗೆ ಹೋಗಬೇಕೆಂದು ರಮಾದೇವಿಯ ಮನಸ್ಸಿನಲ್ಲಿತ್ತು (ಸ್ವ.ಂಬಿ. ೨೨೪). **ಬಾಣಂತನ** : ೧. ಬಾಣಂತನ ಯಾರು ಮಾಡುವರಪ್ಪಾ ? ತಾಯನ್ನೂ ದೂರ ಮಾಡಿದ್ದಾನೆ (ಕಿಕಾ. ೨೩೦) ; ತನ್ನ ಬಾಣಂತನಕ್ಕೆ ತನ್ನ ತಾಯಿ,

ವಾತ್ಸಲ್ಯದೇವಿ ಬರಬಹುದೇ ? (ವಾತ್ಸಂ. ೩೭೨). ೨. ಬಾಣಂತಿಯಾಗಿರುವಿಕೆ : ಇಂಥಾ ದಿನಗಳಲ್ಲಿ ವರ್ಷಕ್ಕೊಂದು ಬಾಣಂತನವು ಬೇರೆ ! (ಕೃಣಸ. ೩). **ಬಾಲಂತಿತನ** : ೧. ಬಾಲಂತಿತನಕ್ಕಾಗಿಯೇ ಎಂದು ಬೇವಿನ ಗಿಡದ ಬುಡದಲ್ಲಿ ಹಾಕಿದ ಗುಡಿಸಲಿನಲ್ಲಿ ತಾಯಿ ಶಚೀದೇವಿಯಿಂದ ಅವತರಿಸಿದನು (ಗೌರಾಂಗ. ೬). [ಬಾಣಂತಿ (<ಬಾಳಂತಿ) + – ತನ]

**ಬಾಣಂತಿಬೋಳ** (ನಾ). ಬಾಣಂತಿಯರಿಗೆ ಔಷಧಿಯಾಗಿ ಕೊಡುವ ಕರಿಬೋಳ ಎಂಬ ಸಸ್ಯದ ಅಂಟು : ಲವಂಗಪತ್ರ ೧/೨ ಪಾವು. ಬಾಣಂತಿಬೋಳ ೧/೨ ಪಾವು . . . ಇಡಿದು ವಸ್ತ್ರಗಾಳಿತವಂ ಮಾಡಿ . . . ತಾರೆಕಾಯಿಪ್ರಮಾಣವಂ ತೆಗೆದುಕೊಳ್ಳಲು ಸಮಸ್ತಪೈತ್ಯವ್ಯಾಧಿ . . . ಪರಿಹರವಕ್ಕುಂ (ಸಕವ್ಯ. ೦೩೩).

[ಬಾಣಂತಿ(<ಬಾಳಂತಿ)+ಬೋಳ$_1$(<ಬೋಟ$_3$)./ಮರಾ. ಬಾಳಂತಬೋಳ]

**ಬಾಣಂತಿಸನ್ನಿ** (ನಾ). ಬಾಣಂತಿಗೆ ಜ್ವರದಿಂದುಟಾಗುವ ಸನ್ನಿಪಾತ : ತಾಯಿಯ:–ಈ ಬೇರಂ ನರವಾೂತ್ರದಿಂದ ಅರೆದು ತೆಗೆದುಕೊಳ್ಳೆ ಬಾಣಂತಿಸನ್ನಿ ಪರ (ವೈಸಂ. ೪); ಪುತ್ರಜೀವಿ ತಿರುಳು, ಬೇವಿನ ಬೀಜದ ತಿರುಳು . . . ನಿಂಬೆಹುಳಿಯಲ್ಲರೆದು ನಾಲಗೆಗೆ ಲೇಪ ಮಾಡೆ ಸುಖಸನ್ನಿ ದೋಷಂ ಮಾಣ್ಗುಂ ; ಬಾಣಂತಿಸನ್ನಿ, ತಲೆಯ ಪಿತ್ತ ಸಹ ಕೆಡುಗುಂ (ಸಕವ್ಯ. ೦೬೦). [ಬಾಣಂತಿ (<ಬಾಳಂತಿ) + ಸನ್ನಿ]

**ಬಾಣಂತಿಸೂಳೆ, ಬಾಣತಿಸೂಳೆ** (ನಾ). ಇನ್ನೂ ಬಾಣಂತಿಯಾಗಿರುವ ವೇಶ್ಯೆ ; ಕೂಸುಳ್ಳ ಸೂಳೆ : ಹೆತ್ತ ಶಿಶುವಿಂಗಲ್ಲ ವಿತ್ತವನಿತ್ತ ವಿಟನಿಂಗಲ್ಲದೆಡೆಯಾಡುತ್ತಲಿಹ ಬಾಣಂತಿಸೂಳೆಯ ಚೇಷ್ಟೆಯಿಂದದಲಿ ವ್ಯರ್ಥವಾಗಿಯೆ ಕೆಡುವನಕಟಾ ಮರ್ತ್ಯನೆತ್ತಲು ಮುಟ್ಟ (ಅನುಕ. ೨-೦೦೬). **ಬಾಣತಿಸೂಳೆ** : ಬಾಣತಿಸೂಳೆಯಂತೆ ಸಿಡಿಮಿಡಿಗೊಂಡು ತಳಾಡಿನಂಕಂತ ಕಳ್ಳನಂತೆ ಕುಸಿದು (ಕರ್ಣಾಟಕು. ೩-೨೩).

[ಬಾಣಂತಿ (<ಬಾಳಂತಿ) + ಸೂಳೆ$_1$]

**ಬಾಣಗಳೆ**[3] (ನಾ). ಒಂದು ಕೆರೆಯ ಹೆಸರು : ಅನ್ತೆ ಬನ್ದು ಬಾಣಗಳೆಯ ಏರಿಯ ಮೇಗಣಂ (ಎಕ. III. ತಂಜಾಪ. ೦೩೯–೨೨; 915 ?).

[ಬಾಣಗ$_1$ + ಕೆಱೆ[3]]

**ಬಾಣಗತ್ತಲು** (ನಾ). ಕಣೆಗಳ ದಟ್ಟಣೆಯಿಂದುಂಟಾದ ಕತ್ತಲೆ : ಹತ್ತು ಬಿಲ್ಲಲಿ ಸರಳ ಸುಂದನದತ್ತ ಸೆಳ ದೆಸೆಯತ್ತ ರಾಘವನೆತ್ತಲಂಬರ ವಣೆಯ ಮುಸುಕಿತು ಬಾಣಗತ್ತಲದು (ಶೌರಾ. ೨೨-೯೩). 'ಮೊಲಗಟ್ಟಲೆ' ಪರಾ. [ಬಾಣ$_1$ + ಕತ್ತಲು (<ಕಟ್ಟಲೆ) ]

**ಬಾಣಗಾಱ** (ನಾ). ಬಿಲ್ಲಿಗೆ ಕಣೆಗಳನ್ನು ಹೂಡಿ ಬಿಡುವವನು : ರಾಜರು ರಕ್ಕಸವಾಂತರು ಲಾಳಿ ಬಲ್ಲೋಜರು ವೇಟಲಂಬಿನವರು ತೇಜೋವಾಯ ಬಾಣಗಾಱರೀಱಿತು ಖಗರಾಜನೆಱಂಕೆಯಿಕ್ಕಲದಿ (ಕೋಶಶ. ೩೬-೯೨). [ಬಾಣ$_1$ +– ಕಾಱ]

**ಬಾಣಗೇಹ** (ನಾ). ಕಣೆಗಳನ್ನಿಡುವ ಚೀಲ ; ಬತ್ತಳಿಕೆ ; ಮೂಡಿಗೆ : ಬಾಣಗೇಹನದ್ಮಂಬುಧಿಕಾನನಂ ಶರಧಿ ಎಂದೆನಿಕುಂ (ನಾನಾರ. ೦೨). [ಸಂ.]

**ಬಾಣಜಾತ** (ನಾ). ಕಣೆಗಳ ಸಮೂಹ : ಮುರಹರನ ಮೊಮ್ಮನಾಂ ಬೆಚ್ಚುವೊಡೆ ಬಿಡು ಹಯವನಲ್ಲದೊಡ ನೋಡೆನ್ನ ಬಾಣಜಾತವನು (ಕೃಮಿರಾ. ೨೩-೨೦). [ಸಂ.]

**ಬಾಣಜಾತೆ** (ನಾ). ಬಾಣಾಸುರನ ಮಗಳು; ಅನಿರುದ್ಧನ ಹೆಂಡತಿ ಯಾದ ಉಷೆ : ಬಾಣಜಾತವನೀಗ ನೋಡಲಿರ್ದಪುದೆ ನೀಂ ಬಾಣಜಾತೆಯ ರಮಣನು (ಕೃಮಿರಾ. ೨೩-೨೦). [ಸಂ. ಬಾಣಜಾತಾ]

**ಬಾಣತಟ್ಟರ** (ನಾ). ಒಬ್ಬಾತನ ಹೆಸರು : ಬಾಣರಸರ್ ಪ್ರಿಥುವೀರಾಜ್ಯಂಗೆಯೆ ವಿಜಯಿತ್ತನಾಳು ಬಾಣತಟ್ಟರನ್ ತನ್ನ ಆಳು ಉಗೆ ಪೋಗಿ ಮಱುಬಪ್ಪೊಂಗೆ ಕುಂತಿಅಲದಲಿ ಕುದುರೆ ಏಱಿ ಬರುತಿರೆ ಗಣಮುತ್ತ್ರ್ ಎಚ್ಚೊಡೆ . . . ತಟ್ಟು ಸತ್ತ (ಶೌಇಇ. IX-1. ೬-೯; ೨ನೆಯ ೩೪). [?]

**ಬಾಣತಿ** 'ಬಾಳಂತಿ' ನೋ.

**ಬಾಣತಿಸೂಳೆ** 'ಬಾಣಂತಿಸೂಳೆ' ನೋ.

**ಬಾಣದಾಯಕ** (ನಾ). (ಯುದ್ಧದಲ್ಲಿ ಯೋಧನಿಗೆ) ಕಣೆಗಳನ್ನು ತಂದು ಕೊಡುವವನು : ಹಡಪಿಗ ಚಮರ ಬಾಹೆಯ ಬಾಣದಾಯಕರ ಕರೆದು ಮನ್ನಿಸಿ . . . ರಣಸುಮ್ಮಾನದಲಿ ಹೊಗರೇಱಿದನು ಕರ್ಣ (ಕುವ್ಯಾಕ. ೨೦-೩). [ಸಂ.]

**ಬಾಣಧಿ** (ನಾ). = ಬಾಣಗೇಹ : ಅಂತಮೋಘಬಾಣಮಂ ಬಾಣಧಿಯಿಂದುರ್ಚಿಕೊಂಡು ಪುರುಪರಮೇಶ್ವರಪುತ್ರಂ ಭರತೇಶ್ವರಚಕ್ರವರ್ತಿ ಬಂದಿರ್ದಂ (ಆದಿಪು. ೦೨-೯೮ ವ) ; ಲುಬ್ಧಕರ್ತಂಡದೆ ಸುತ್ತಿ ಮುತ್ತೆ ಗೊಲೆಗೊತ್ತಿದನೇ ಧನುವಂ ಸರಲ್ಗಳಂ ಕೊಂಡನೆ ದಿವ್ಯಬಾಣಧಿಯಿಂ . . . ಜನಾರ್ದನಂ (ಶಂಕಾಶು. ೬-೦೦೩). [ಸಂ.]

**ಬಾಣಪಂಚಕ** (ನಾ). ಐದು ಕಣೆಗಳನ್ನುಳ್ಳವನು ; ಕಾಮ ; ಮನ್ಮಥ : ಬಾಣಪಂಚಕಭಸ್ಮಧಾರಣ ಪರಾಕು (ಶಶವೋ. ೨೯-೯೦); ಬಾಣಪಂಚಕಗಿತ್ತು ಚೆಲ್ವನು . . . ಜಾಣರೆಲ್ಲರ್ಗೊಡೆಯನಾದ ನಿರ್ವಾಣಲಕ್ಷ್ಮೀಕಾಂತನೇಗೆ ಮಗಿಷ್ಟಸಿದ್ಧಿಯನು (ವಾಗಣ. ೦.೦). [ಸಂ.]

**ಬಾಣಪೀಠ** (ನಾ). ಈಶ್ವರಸಂಕೇತವಾದ ಲಿಂಗಾಕೃತಿಯಲ್ಲಿ (ಅಭಿಷೇಕದ ನೀರು ಹರಿದು ಹೋಗಲು ಅನುಕೂಲವಾಗುವಂತೆ) ಲಿಂಗದ ಸುತ್ತಲೂ ಇರುವ ತಗ್ಗಾದ ಪೀಠ : ಸ್ಫುರಿತರುಚಿರಸ್ಫಟಿಕಲಿಂಗವು ಬಾಣಪೀಠದಲಿ ಸ್ಫುರಿತರುಚಿರಸ್ಫಟಿಕಪೀಠಕೆ ಸುರುಚಿರೋನ್ನತ ಬಾಣಲಿಂಗವು ಕರಮೆಸವುತಿರೆ ಸುಪ್ರತಿಷ್ಠಿತವಾದವೆಯಿತೆಂದು (ಐಶಕ್ತು. ೩೬-೬೩). 'ಬಾಣಲಿಂಗ' ಪರಾ. [ಸಂ.]

**ಬಾಣಪ್ರಯೋಗ** (ನಾ). ಕಣೆಯನ್ನು ಎಸೆಯುವುದು,–ಬಿಡುವುದು : ಬಾಣಪ್ರಯೋಗದಲ್ಲಿ ಲಾಘವ . . . ವಿಕ್ರಮ ಇವು ಯಾವುವರಲ್ಲೂ ಅರ್ಜುನನು ನನಗೆ ಸಮನಲ್ಲ (ವಕಥಾ. ೨೯೩). [ಸಂ.]

**ಬಾಣಬೆಟ್ಟು** (ನಾ). ಎತ್ತರದ ಪ್ರದೇಶದಲ್ಲಿರುವ ಗದ್ದೆ : ಬಾಣಬೆಟ್ಟನಲ್ಲಿ ಬಿದ್ದು ಸುಟ್ಟು ಸಾಯಿಯ ಅಂತೀಯಾ ? (ಕರಾಶ. ೩೬).

[ಬಾಣ$_1$ (< ಬಾಣೆ) + ಬೆಟ್ಟು$_2$ (<ಬೆಟ್ಟ). / ತುಳು. ಬಾನೆಬೊಟ್ಟು]

**ಬಾಣರಸ, ವಾಣರಸ** (ನಾ). ಒಬ್ಬಾತನ ಹೆಸರು : ಮಹಾರಾಜರು[೦] ಬಾಣರಸರುಂ ಸೋರೆಪಟ ಕೋಟ್ಟಿಂ(ಕೋಟ್ಟ) ಯಿಟ್ಟಲ್ಲಿ (ಎಇ. XXIV. ೦೯೦-೩; ಸು. 886) ; ಪೊಮ್ಬಲ್ಲವೊಡೆಯಮಾರ್ಗ್ಗೆ ಪಾಡಿಯೊಳೊಡ್ಡಿ ಬಾಣರಸರುಳ್ ಕಾದಿ ಪಲರನಿಱಿದು ಬಿಟ್ಟು ಬೀರಲೋಕಮೆಯ್ದಿದ (ಎಕ. X. ಕೋಲಾರ. ೬೯-೦೦ ; ಸು. 890). **ವಾಣರಸ** ; ಸ್ವಸ್ತಿಗುವಳಾಲಂ ಗೊಂಗುಂ ವಾಣರಸ ಆಳೆ (ಎಕ. X. ಮುಳಬಾ. ೨೬೩-೦; ಸು. 860).

[ಬಾಣ$_3$ + ಅರಸ$_1$]

**ಬಾಣರಾಸ** (ನಾ). ಒಬ್ಬಾತನ ಹೆಸರು : ಸಮುತಿಹಾರೀಕ್ರಿಷ್ಣಮಹಾ × × × ಮತ್ ಬಾಣರಾಸರ್ ಗಙ್ಗನಱು × × × ಳುತಿರೆ (ಎಕ. X (S). ನಾಗಮ. ೬೬-೩; ಸು. 820).

[? ಇದು 'ಬಾಣರಸ' ಎಂಬುದರ ಅಪಲಿಖಿತ]

**ಬಾಣರಾಸಿ** 'ಬಾರಣಾಸಿ' ನೋ.

**ಬಾಣಲಿ, ಬಾಂಡಲಿ, ಬಾಂಡಲೆ, ಬಾಂಡ್ಲಿ, ಬಾಂಡ್ಲೆ, ಬಾಣಲೆ, ಬಾಳಣಿ, ಬಾಳಲಿ** (ನಾ). ಆಹಾರಪದಾರ್ಥಗಳನ್ನು ಕರಿಯಲು ಅಥವಾ ಹುರಿಯಲು ಬಳಸುವ, ಬಳಪದ ಕಲ್ಲು ಅಥವಾ ಲೋಹದಿಂದ ಮಾಡಿದ, ಅಗಲಬಾಯಿಯ ಒಂದು ಸಾಧನ : "ಅಂಬರೀಷಃ, ಭ್ರಾಷ್ಟ್ರಃ– ೨ . . . ಹುರಿಯುವ ಹೆಂಚು, ಬಾಣಲಿ"

(ಶಿವ್ಯಾಂತಿ. ೨೬೩): ಕ್ಷೋಣಿಯೊಳ್ ಬಿಲ್ಪಿಸಿಲಿಂದೆ ಕಡುಗಾದ ಬಾಣಲಿಯಣ್ಣೆಯೊಳಬುದಿ ಹೊಣೆಸಿ ಕುದಿಗೊಂಡು ಮರಳ್ವುದು ವನಚರಶ್ರೇಣಿ ಬೆಂದದ್ದು ತೇಲಿದಾವು (ಹೋಹರ. ೧೯-೪೩); ಬೀದಿ ಮಗ್ಗುಲಲ್ಲಿ ಬಾಣಲಿ ಇರಿಸಿಕೊಂಡು ಕರೀತಾರಲ್ಲಾ ಅಂಬೊಡೆ, ಅದರ ಹೆಸರು ಕೇಳಿದರೆ ಸಾಕು ಅವಳಿಗೆ ಬಾಯಲ್ಲಿ ನೀರು (ಹೊಗೆಊ. ೪೨). **ಬಾಂಡಲಿ :** ಬಾಂಡಲಿಯೊಳಗೆ, ಕಾದಿರುವ ಎಣ್ಣೆಯೊಳಕ್ಕೆ ಆಹಾರವನ್ನು ಹಾಕಿ ಕರಿಯಬಹುದು (ಗೃಹಿಂ. ೩೪). **ಬಾಂಡಲೆ :** ಏನು ಕಪ್ಪು, ಎಂತಹ ಆಕಾಶ_ಬಾಂಡಲೆಯನ್ನು ಮೇಲೆ ಕವಚಿದಂತೆ, ಏನು ನೀರವತೆ! (ಬಾಳುಕ. ೦೦೩). **ಬಾಂಡ್ಲಿ:** "ಬಾಣಲಿ (ಲೆ, ಬಾಂಡ್ಲಿ) ಭ್ರಾಷ್ಟ್ರ" (ಕದ್ರಕೋ. ೩೦). **ಬಾಂಡ್ಲೆ:** ಕಾವಲಿ, ಬಾಂಡ್ಲೆ ಇಟ್ಟುಕೊಂಡು (ಬಿಕಬು. ೨). **ಬಾಣಾಲೆ :** "ಅಂಗಾರಶಕಟಿಯೆಂದರೆ ಬಾಣಲೆಯೆಂಬಿಕ್ಕು" (ಹುಂಗಾ. ೬೩-೨೪); ಸಂಪಂಗಿ ಹೂಗಳನ್ನು ಬಾಣಲೆಯಲ್ಲಿ ಹೊಗೆ ಹೋಗದ ರೀತಿಯಲ್ಲಿ ಬಿಳಾವರ್ತಿ ಹುರಿದು ನಯವಾಗಿ ಅರೆದು ಜೇನುತುಪ್ಪದೊಡನೆ ಕೊಟ್ಟರೆ ಕೆಮ್ಮು ಹೋಗುವುದು (ಶಕ್ಕ್ಯ. ಹು. ೯೩೩); ಅವರ ಹೊಗಳಿಕೆ ಕೇಳಿ ಎದೆ ಕಾದ ಬಾಣಾಲೆ! (ಕಕಬೊ. ೬೬-೮). **ಬಾಳಣೆ :** ಅವರ ನಾದಿನಿ ಅವರಿಗೆ ಹುಚು ಬಾಳಣೆ ಮುಂತಾದವುಗಳನ್ನು ತರಹೇಳಿದ್ದಳು (ಕೃ.ಶಿ. ೩೯೨). **ಬಾಳಲಿ:** "ಖಾದೀಪ, ಪಿಷ್ಟಪಚನ_ಎಣ್ಣೆಯಲ್ಲಿ ಹಿಟ್ಟನಡುವ ಬಾಳಲಿ" (ಬಾಕಾ. ೬).
[ದೇ. ತಮಿ. ವಾಣಲಿ, ವಾಣಾಲಿ; ತುಳು. ಬಾಣಲೆ; ತೆಲು. ಬಾಣಲಿ]

**ಬಾಣಲಿಂಗ** (ನಾ). ೧. ನರ್ಮದಾನದಿಯಲ್ಲಿ ದೊರಕಿದುದೆಂದು ಭಾವಿಸಿ, ಶಿವಲಿಂಗವೆಂದು ಪೂಜಿಸುವ ಒಂದು ಬಗೆಯ ಬಿಳಿಯ ಶಿಲೆ : ಸ್ಫುರಿತರುಚಿರಸ್ಫಟಿಕಲಿಂಗವು ಬಾಣಪೀಠದಲಿ ಸ್ಫುರಿತರುಚಿರ ಸ್ಫಟಿಕಪೀಠಕೆ ಸುರುಚಿರೋನ್ನತ ಬಾಣಲಿಂಗವು ಕರಮೆಸಾತಿರೆ ಸುಪ್ರತಿಷ್ಠಿತ ಪಾದವೆಯಿಕೆಂದು (ಅಕ್ಕ. ೩೬-೬೬); ವಾರಣಾಸಿಯಿಂದ ಬಾಣಲಿಂಗವನು ತರಿಸಿ ವಿಶ್ವೇಶ್ವರ ಲಕ್ಷ್ಮೀನಾರಾಯಣದೇವರ ಪ್ರತಿಷ್ಠೆಯನು ಮಾಡಿಸಿ (ಎಕ. X. ಗೌರಿಬಿ. ೩೯-೬ : ೧೪೦೩). ೨. [ವೀಶೈ] ಒಂದು ಲಿಂಗಾಕೃತಿಯ ಹೆಸರು : ಸ್ವಯಂಭೂಲಿಂಗ, ಬಾಣಲಿಂಗ, ಚರಲಿಂಗ, ಸಂಕೀರ್ಣಲಿಂಗ ಮತ್ತು ಪ್ರಾಣಲಿಂಗವೆಂಬ ಐದು ಬಗೆಯ ಲಿಂಗಗಳಲ್ಲಿ ಒಂದು : ಸೆಜ್ಜಾಂಗಿನಲಿ ಕಟ್ಟಿರ್ದ ಬದನೆಯ ಕಾಯಿ ನಿಮಿಷದಲಿ ಸಂಗಮೇಶ್ವರ ಬಸವರಾಜನ ಸಂಗಭಾವದಿ ಬಾಣಲಿಂಗ ಸುರಂಗಮಾದುವು (ಬಸವು. ೯-೩); ಶೈವಸಿದ್ಧಾಂತಸಮ್ಮತಮಾದ ಪಂಚಲಿಂಗಾರ್ಚನದೊಳು ಸ್ವಯಂಭೂಲಿಂಗ ಬಾಣಲಿಂಗ . . . ಪ್ರಾಣಲಿಂಗವೆಂಬೈದರೊಳಗೆ ತಮ್ಮ ತಮ್ಮ ಶಕ್ತ್ಯನುಸಾರವಾಗಿ ಅರ್ಚನತತ್ಪರರಾಗಬೇಕೆಂದು ನಿಶ್ಚಯಿಸಲಕ್ಕುಂ (ಶಿಶೀಕ. ೦೦೨). 'ಪಂಚಲಿಂಗ' ಪರಾ. [ಸಂ.]

**ಬಾಣಲೆ** 'ಬಾಣಲಿ' ನೋ.

**ಬಾಣವರ್ಷ** (ನಾ). ಅಂಬುಗಳ ಮಳೆ.—ವೃಷ್ಟಿ : ಅಶ್ವತ್ಥಾಮನು ಅರ್ಜುನನಿಗೆ ಅಡ್ಡವಾಗಿ ಬಂದು ಮೇಘವು ಮಳೆಗರೆದಂತೆ ಅವನ ಮೇಲೆ ಬಾಣವರ್ಷವನ್ನು ಕರೆದನು (ಕಕಭಾ. ೨೦೩). [ಸಂ.]

**ಬಾಣವೃತ್ತ** (ನಾ). [ಛಂದ] ಪ್ರತಿಪಾದದಲ್ಲಿ ಹನ್ನೆರಡು ಅಕ್ಷರಗಳಿರುವ ಒಂದು ವರ್ಣವೃತ್ತ: ಸಭರಯಂ ಬರೆ ಬಾಣವೃತ್ತಮಕ್ಕುಂ (ಛಂಬು. ೮೦). [ಸಂ.]

**ಬಾಣವೃಷ್ಟಿ** (ನಾ). = ಬಾಣವರ್ಷ : ಇಪ್ಪರೊಳ್ ಪ್ರಸಾದಸೌಮ್ಯದೃಷ್ಟಿಯಲ್ಲದೆ ವಿಷ್ಣುಪತಿ ಮೇಳಂ ಬಾಣವೃಷ್ಟಿ ಬೀಳ್ವುದೆ (ಶಾಕುಂತ. ೯೬ ೩೩೮). [ಸಂ.]

**ಬಾಣಶಯನ** (ನಾ). ಕಣೆಗಳ ಹಾಸುಗೆ : ಶರಶಯನ : ಭೀಷ್ಮ . . . ನೋವಿನ ಕಳಕಳಿಕೆ ಧೃತಿಗೆಡದೆ ಮೆಚಿದನು ಬಾಣಶಯನದಲಿ (ಕುವ್ಯಾದ್ರೋ. ೧೦-೨೬). [ಸಂ.]

**ಬಾಣಸ, ಬಾಣಸು** (ನಾ). ೧. (ಅಧಿಕಸಂಖ್ಯೆಯ ಜನರ ಭೋಜನ ಕೂಟಕ್ಕೆ ಉಪಯೋಗಿಸುವ) ದೊಡ್ಡ ಅಡುಗೆಮನೆ.—ಪಾಕಶಾಲೆ : "ಬಾಣಸ(ಸು) — ಮಹಾನಸ = ಪಾಕಶಾಲೆ" (ಕದ್ರಕೋ. ೩೦); ಅರ್ಣವದೊಳ್ ನೀಂ ಮತ್ಸ್ಯನಾಗಲೆನೆಂದು ಸಮುದ್ರವಿಸಿದನಪ್ಪೊಡದಂ ಗಾಣವಿಕ್ಕಿ ಬಾಣಸಕ್ಕೊಪ್ಪಿಸನೇ (ಜಗಪು. ೧೬-೩೪); ಅವರನೊತ್ತಿಟ್ಟ ಮನೆಯನೇಪೊಗಳ್ತನದು . . . ಅಂತಕನ ನಗರ ಮೃತ್ಯುವಿನ ಬಲುಬಾಣಸದ ಹಂತಿ (ಕಕಭಾ. ೦೨-೨). ೨. ಅಡುಗೆ ; ಪಾಕ : ಸಿರಿಯಾಳನ ಮಗನ ಬಾಣಸವ ಮಾಡಿಸಿ ಉಣಲೊಲ್ಲದೆ ಕಾಡಿದೆ (ಬಸವ. ೬೪೦); ಸಿಡಿಲುವಕ್ಕಿಯ ಪಕ್ಷಪನು ಕಿತ್ತಡಬಳದ ಬಾಣಸವ ಮಾಡುವ ಕಡುಗಲಿಗಳಾರುಂಟು (ಕ್ರಕುಂ. ೮-೦೩); ಹೆಣ್ಣಾಗಿ ಬಾಣಸದ ಪವಣರಿಯದುದಿಲ್ಲಲಾ (ಕೃಶಾಕಾ. ೨-೩೦). 'ಬಾಣಸಗೈ' ಪರಾ. ೩. ಅಡುಗೆಯ ಕೆಲಸ.—ಕಸುಬು : ಎಮ್ಮಕ್ಕ ಕಂಚಿಯಲ್ಲಿ ಬಾಣಸವ ಮಾಡುವಳು (ಬಸವ. ೩೩೦). ೪. ಉಣಿಸು ; ಆಹಾರ ; ಭಕ್ಷ್ಯ : ಇಂದಿನ ಬಾಣಸಕ್ಕೆನ್ನಂ ನಿವೇದಿಸಿದಂ ದೇವರ್ ಕೈಕೊಳ್ಳಂ (ಶಂಕಹೊ. ೦೯೩-೩); ಅಂಜಬೇಡ ಮಹಾಸುರನ ಬಾಣಸದ ಬೀಯಕೆ ರಮಣ ವೆಂಟೆಮಗೆ (ಕುವ್ಯಾದ್ರೋ. ೦-೦೯); ಬರೆಯಲಿ ಜವನುಂಡು ಚೆಲ್ಲಿದ ಪರಿಪರಿಯ ಬಾಣಸಗಳೆಸೆದಿಹ ಹರಿಯಣದವೊಲು ಕಣ್ಗೆ ಕೌತುಕವಾಯ್ತು ರಣಭೂಮಿ (ಕಾತ್ರಿಣ. ೨೦-೨೩). ೫. ಅಡುಗೆಮಾಡುವವನು ; ಅಡುಗೆಯವನು : ಪಾಸ್ಸ್ವರರ್ ಗಂಧಿಗರ್ ಬಾಣಸರ್ ತಾಂಬೂಲಿಗರ್ . . . ಜೂದುಗಾಜರ್ ಮುಖ್ಯರೊದಗಿ ಬರುತಿರ್ದರ್ (ಕಂಪು. ೪೬-೪೦). **ಬಾಣಸು :** ೧. ನೃಪೇಂದ್ರತನುಜಾತರ್, ನಿಪ್ಪೀತಂ ಪೊಕ್ಕರ್ ಮಾರಿದ ಕೃತಾಂತನ ಬಾಣಸುವೊಲಿರ್ದ ಮಾರಿಯ ಮನೆಯುಂ (ಯಶೋಚ. ೦-೩೩); ಲಲಿತ ಬೋನದ ವಿವಿಧ ಭಕ್ಷ್ಯಾವಳಿಯ ಬಾಣಸಿನೊ[ಪಾಠಾಂ. ಸದೊ]ಳಗೆ ಬಂದಳು ಮತ್ತಗಜಗಮನೆ (ಕುವ್ಯಾದ್ರೋ. ೩-೩೬). ೨. ವಿರಾಟಂ . . . ನಿನ್ನ ನಾಳ್ನೆಂದು ಬಾಣಸಿನ ಕರಣಕ್ಕೆ ನಿರೂಪಣಂಗೆಯ್ದಂ (ಕುಶಭಾ. ೯-೩೪ ವ); ಅಂತು ಮನೆಗಟ್ಟ ಬಾಣಸಿನ ಕೂಟಿಲ್ಲಮನುಂಡುಮಾವ್ಪಾ ಪಸಿವು ಪೋಗದೆಂದದರಿಸಿ ಬೋದ್ರ್ಯಂಬಟ್ಟು (ಬಂಪು. ೯-೨೬ ವ); ಅದೊಂದು ನೀಲಪರ್ವತಂ . . . ನಿಚ್ಚವಯಣಾಂಬರ್ವ ಜಾತ್ರಿಯ ಜನರ ಬರ್ದಿನ ಪಗಲೂಟದ ಬಾಣಸಿನಾವಿಗೆಯ ತಸಿಗೆಂಡದೋವರಿಯೆಂಬಂತು ತಟತಟನೆ ಪೊಳೆವ ರಂಗು ಮಾಣಿಕದಗಟ್ಟಿಯಿಂ . . . ಮನೋಜ್ಞಂ (ಕುವ್ಯಾದ್ರೋ. ೬೨ ೨೩).

**ಬಾಣಸದ ಭವನ** = ಅಡುಗೆಮನೆ ; ಪಾಕಶಾಲೆ : ಸೈಂಸರು ಬಾಣಸದ[ಪಾಠಾಂ. ಸಿನ] ಭವನದ ನಾರಿಯರು ದುರ್ಜನರು (ಕುವ್ಯಾದ್ರೋ. ೩-೪೦); ಹನ್ನೆರಡುಯೋಜನತರದ ಭೋಜನಶಾಲೆಗಳು ವಿಸ್ತರಿಸಿದವು ಬಾಣಸದ ಭವನಂಗಳು ಸುವೀಥಿಯಲಿ (ಕೊರಕಾ. ೦-೬-೬). **ಬಾಣಸದ ಮನೆ, ಬಾಣಸಿನ ಮನೆ**=ಬಾಣಸದ ಭವನ : ಬಾಣಸದ ಮನೆ—ರಸವತಿ, ಪಾಕಸ್ಥಾನ, ಮಹಾನಸ" (ಹಾಕಾ. ೬); ಗುಹೇಶ್ವರ ನಿಮ್ಮ ಶರಣ ಕಟ್ಟಿದಿರ ಬಾಣಸದ ಮನೆಗೆ ಬಂದನು (ಅಪಶೂ. ೦೯೩-೬೬೨); "ಪಾಕಸ್ಥಾನಂ, ರಸವತೀ, ಮಹಾನಸಂ—ಈ ೩ ಬಾಣಸಿನ ಮನೆ" (ಕರಾಡು. ೪೯-೦೪೦); ಸಹಸ್ರಸಿಂಹಬಲನೆನಿಪ ಸಿಂಹಬಲನ[ನ]ಶ್ರಮದೊಳೆ ಕೊಂದು ಜವಂಗೆ ಬಾಣಸುಗೆಯ್ದಂದಿನಂದದೊಳೆ ಬಾಣಸಿನ ಮನೆಯೊಳ್ ಬಂದಿರ್ದಂ (ಹುಕುಭಾ. ೯-೬೯ ವ); ಕೆಳವಳದ ಕರಣದ ಮುಗುದೆ ಬಂದಳು ಬಾಣಸಿನ ಮನೆಗೆ (ಕುವ್ಯಾದ್ರೋ. ೩-೪೩). **ಬಾಣಸದ ಶಾಲೆ** = ಬಾಣಸದ ಭವನ : ಮೃತ್ಯುವಿನ ಬಾಣಸದ ಶಾಲೆಯೋ ಸಮರಾಂಗಣವೊ (ಕೊರಕಾ. ೬-೩೬-೪೩).
[< ಸಂ. ಮಹಾನಸ. / ಪ್ರಾ. ಮಹಾಣಸ. / ತೆಲು. ಬಾನಸ]

**ಬಾಣಸಂಧಾನ** (ನಾ). ಬಿಲ್ಲಿನ ಹೆದೆಗೆ ಕಣೆಯನ್ನು ಹೂಡುವುದು ; ಶರಸಂಧಾನ : ಕರ್ಣನು ಎರಡು ಸಾರಿ ಗುರಿಯಿಟ್ಟು ಬಾಣಸಂಧಾನ ಮಾಡುವುದಿಲ್ಲ (ಕಕಭಾ. ೨೯೯). [ಸಂ.]

**ಬಾಣಸಗಿತ್ತಿ** (ನಾ). ಅಡುಗೆಯ ಕೆಲಸ ಮಾಡುವವಳು; ಅಡುಗೆಯವಳು : ಶೂಲಧರ ನಿಮ್ಮಡಬಳಂ ಸಿರಿಯಾಳ ಬಾಣಸಗಿತ್ತಿ ಚಂಗಳೆ (ಬಸವ. ೯-೪೦). [ಬಾಣಸ + –ಗಿತ್ತಿ]

**ಬಾಣಸಗೈ**, ಬಾಣಸುಗೆಯ್, ಬಾಣಸುಗೈ (ಕ್ರಿ). ಅಡುಗೆ ಮಾಡು; ಆಹಾರವನ್ನು ಸಿದ್ಧಪಡಿಸು : ಅನಲ ಬಾಣಸಗೈವನೋ ತಿಥಿದಿನವ ಸುರಗುರುವುಸುರನೋ (ಕೃಷ್ಣರಾ. ೬ ಕಂ. ೭೦೦). **ಬಾಣಸುಗೆಯ್** : ಸಹಸ್ರಸಿಂಹಬಲನೆನಿಪ ಸಿಂಹಬಲನ[ನ]ಶ್ರಮದೊಳೆ ಕೊಂಡು ಜವಂಗೆ ಬಾಣಸುಗೆಯ್ವಂದಿನಂದದೊಳೆ ಬಾಣಸಿನ ಮನೆಯೊಳ್ ಬಂದಿರ್ದಂ (ಪಂಪಭಾ. ೮-೬೮ ವ); ಪಿರಿಯಣ್ಣನ ನನ್ನಿಯನಾದರದಿಂ ಕಾಯಲ್ಕೆ ಪೆಱರ್ಗೆ ಬಾಣಸುಗೆಯ್ದಂ ಕುರುವಂಶಜ ಕೇಳ್ ಸಿನ್ನೀ ಶರೀರಮಾಂಸದೊಳೆ ಮರುಳ್ಗೆ ಬಾಣಸುಗೆಯ್ವಂ (ಗದಾಯು. ೬-೩೮). **ಬಾಣಸುಗೈ** : ಅಗ್ಗಿ ಮೊಗರ್ಗೆ ಬಾಣಸುಗೈದು ನಿಚ್ಚಮುಯ್ವ ಜನ್ನದುರಿಯ ನಡುಬೀದಿಯೆನೆ ಮುಗಿಲುದ್ದಮೊಂದಿದ ಕರ್ಪೂಗೆಯಿಂ . . . ತೋರ್ಪ ತಪೋವನವೊಂದು ಕಣ್ಗೊಳಿಸಲ್ (ರಾಮಾಶ್ವ. ೬೯-೨). [ಬಾಣಸ + ಗೈ (< ಕೆಯ್$_1$)]

**ಬಾಣಸಮನೆ** 'ಬಾಣಸವನೆ' ನೋ.

**ಬಾಣಸವನೆ**, ಬಾಣಸಮನೆ (ನಾ). = ಬಾಣಸ ೧ : ಜವನ ಕಣಜವೊ ಮೇಣು ಲಯಮೃತ್ಯುವಿನ ಬಾಣಸವನೆಯೊ (ಕೃಷ್ಣರಾ. ೬-೦೩-೪೩). **ಬಾಣಸಮನೆ** : ಮರ್ತ್ಯಪೆಂಬುವದು ಕರ್ತಾರನ ಕಮ್ಮಟವು ಮತ್ತೆ ಅಟ್ಟನ ಮೊಳೆ ಬಾಣಸಮನೆ ದೇವನ ಸೊತ್ತಿಹುದು ನೀನೇನು ಕೊಟ್ಟೆ ಬಸವ (ಸಿದ್ಧಕೃ. ೩೦-೪೯). [ಬಾಣಸ + ಮನೆ]

**ಬಾಣಸವಿದ್ಯೆ** (ನಾ). ಅಡುಗೆಯ ವಿಧಾನವನ್ನು ತಿಳಿಸುವ ಕಲೆ ; ಪಾಕವಿದ್ಯೆ : ಹದ್ದು ಕಾಗೆಯು ಮನೆಮ ಬಾಣಸವಿದ್ಯೆಯೆಮ್ಮದು ಯಮನ ನಿಳಯಕೆ ಬದ್ದಿನರು ನೀವು (ಕುಮಾ.ಭೀ. ೮-೨೩). [ಬಾಣಸ + ವಿದ್ಯೆ]

**ಬಾಣಸವಿರು** (ಕ್ರಿ). ಅಡುಗೆಯ ಕೆಲಸಕ್ಕಿರು : ಹದ್ದು ಕಾಗೆಯ ಮನೆಗೆ ಬಾಣಸವಿದ್ದುದೋ ಗಜಪೆನುತ ಬೊಬ್ಬಿಡುಶಿದ್ದುದರಿಬಲವು (ಕುಮಾ.ದ್ರೋ. ೩-೪೩). [ಬಾಣಸ + ಇರು$_1$ (< ಇರ್$_1$)]

**ಬಾಣಸವೆರ್ಗಡೆ**, ಬಾಣಸಿವೆರ್ಗಡೆ, ಬಾಣಸುವೆಗ್ಗಡೆ, ಭಾಣಸವೆರ್ಗಡೆ, ಭಾಣಸುವೆರ್ಗಡೆ(ನಾ). ಪಾಕಶಾಲೆಯ ಮೇಲ್ವಿಚಾರಕ,–ಮುಖ್ಯಸ್ಥ : ಶ್ರೀಮಹಾಪ್ರಧಾನ ಬಾಣಸವೆರ್ಗ್ಗಡೆ ಮನೆವೆಗ್ಗಡೆ ದಣ್ಣಾಯಕನನನ್ತ ಪಾಳಯ್ಯಂಗಳ ಪೆರ್ಗ್ಗಡೆ ಸಿರಿಪತಿನಾಯಕಂ . . . ಮೂಱುಗವ್ಯಾಣ ಪೊನ್ನಂ ಬಿಟ್ಟರ್ (ಸೌಂಇಂಡಿ. ೦೯-೦೦; 1116). **ಬಾಣಸಿವೆರ್ಗಡೆ** : ಶ್ರೀಮನ್ಮಹಾಪ್ರಧಾನಂ ದಣ್ಣನಾ[ಯ]ಕ ಬಾಣಸಿವೆರ್ಗ್ಗಡೆ ಅನನ್ತ ಪಾಳಯ್ಯಗಳ [ವ(ತ)]ತುಪಾದಪದ್ಮೋಪಜೀವಿ (ಕಇ. IV. ೩-೦೨ ; 1114). **ಬಾಣಸುವೆಗ್ಗಡೆ** : "ಪೌರೋಗವಃ, ಸೂದಾಧ್ಯಕ್ಷಃ – ಈ ೨ ಬಾಣಸುವೆಗ್ಗಡೆ" (ಹಲಾಯು. ೬೦-೨೬೭). **ಭಾಣಸವೆರ್ಗಡೆ** : ಶ್ರೀಮನ್ಮಹಾಪ್ರಧಾನಂ ಭಾಣಸವೆರ್ಗ್ಗಡೆ ಮನೆವೆರ್ಗ್ಗಡೆ ಪ(೦)ಸ್ನಾಯದಧಿಷ್ಠಾಯಕನ ನನ್ತಪಾಳಯ್ಯದಣ್ಣನಾಯಕರು . . . ಸುಂಕವುಂ ಸರ್ವ್ವಾಯ ಶುದ್ಧಿಯಿಂ ಬಿಟ್ಟರು (ಸೌಇಇ. IX – i, ೧೫೩-೬೬ ; 1083): ಶ್ರೀಮನ್ಮಹಾಪ್ರಚಂಡದಂಡನಾಯಕಂ ಭಾಣಸವೆರ್ಗ್ಗಡೆ ಅನನ್ತಪಾ[ಳ]ದಂಡನಾಯಕಂಗೆ ಬಿನ್ನಪಂಗೆಯ್ದು . . . ಬಿಟ್ಟ ಧರ್ಮ್ಮಮೆಂತೆಂದ[ಡೆ] (ಸೌಇಇ. XI – ii, ೧೯೦-೬; 1100). **ಭಾಣಸುವೆರ್ಗಡೆ** : ಶ್ರೀಮನ್ ಮಹಾಪ್ರಧಾನಂ ಭಾಣಸುವೆರ್ಗ್ಗಡೆ ಅನನ್ತಪಾಳರಸನ ದೆಸೆಯಿಂಸವರಳಿಯುಂ . . . ಬಿಟ್ಟಲಿವರಡಾಱುಸೂಱುಮಂ ಮಂಷ್ಟನಿಗ್ರಹಶಿಷ್ಟಪ್ರತಿಪಾಳನದಿಂದಾಳುತ್ತಮಿರ್ದ್ದು (ಎಇ. XVIII, ೦೯೦-೪: 1104) ; ಶ್ರೀಮನುಮಹಾಪ್ರಧಾನಂ ಭಾಣಸುವೆರ್ಗ್ಗಡೆ ಮನೆವೆರ್ಗ್ಗಡೆ ಸೇನಾಧಿಪತಿ ದಂಡನಾಯಕನ ನನ್ತಪಾಳಯ್ಯಂಗಳು... ಧಾರಾಪೂರ್ವ್ವಕವಾಗಿ ಕೊಟ್ಟು (ಸೌಇಇ. IX – i, ೨೨೪-೦೬; 1130). [ಬಾಣಸ + ಪೆರ್ಗಡೆ$_1$]

**ಬಾಣಸಾಮಿ** (ನಾ). ಒಬ್ಬಾತನ ಹೆಸರು : ಬೆಣ್ಣೆಗೂರ ಕರ್ಮ್ಮಣವೆ ಬಾಣಸಾಮಿ ಮಗನ್ ಪುಜಿಕಾಮನ್ . . . ಸತ್ತನ್ (ಎಕ. X, ಬಂಗಾ. ೪೩-೩; ಸು. ೫೫೦?). [ಬಾಣ$_2$ + ಸಾಮಿ$_1$]

**ಬಾಣಸಿ** (ನಾ). ಅಡುಗೆ ಮಾಡುವ ಕೆಲಸಕ್ಕೆ ನಿಯುಕ್ತನಾದವನು : ಅಡುಗೆಯವನು : "ಬಾಣಸಿಯೆನಲ್ ಅಡಿಗವಳ್ಂ" (ಕನ್ನ. ೨೦೬); ಬಾಣಸಿಯಾನು ಭೀಮನ ಮನೆಯವನು (ಕುಮಾ.ವಿ. ೦-೩೨); ಭೂಮಿ ತಾನೋ ವಾರಿ ತಾನೋ ವ್ಯೋಮಚರ ಬಾಣಸಿಯು ತಾನೋ (ಭಾಗ. ೦೦-೧೭-೦೩).

[ಬಾಣಸ + –ಇ$_3$. / ಸಂ. ಮಹಾನಸೀ. / ಪ್ರಾ. ಮಹಾಣಸಿ. / ತಮಿ. ವಾನಚಿ ; ತೆಲು. ಬಾನಸೀಂಡು]

**ಬಾಣಸಿಗ** (ನಾ). = ಬಾಣಸಿ : "ಆರಾಳಿಕಃ, ಸೂಪಕಾರಃ, ಸೂದಃ, ಪಲ್ಲವಃ – ಈ ೪ ಬಾಣಸಿಗಂ" (ಹಲಾಯು. ೬೦-೨೬೩); ಬಾಣಸಿಗಂ ಬಂದು ಬೋನಸಮೆತ್ತಿಯೋಗರವಾಱಿದಪ್ಪುದೆಂದು ಪೇಳ್ದೊಡೆ (ಶಬ್ದಾ.ಕಾ. ೪೬-೦೬); ವಿರಾಟಂ . . . ತನ್ನ ಬಾಣಸಿಗನಾಗಿರ್ದ ವಲ್ಲಲನಂ ಕರೆದು ಪೇಳ್ದಾಗಳ್ (ಪಂಪಭಾ. ೮-೩೩ ವ); ಎಸರನಿಡುವ . . . ಕಂಚುಗರ್ಚುವ ಬೆಸನಂ ಬೆಸನಲ್ಲದೆ ಮತ್ಸ್ಯನಬಾಣಸಿಗಂಗಾಂತ್ತರೆಲವೊ ನಿನಗೀ ಬೆಸನಂ (ಗದಾಯು. ೬-೩೭). [ಬಾಣಸ + –ಇಗ]

**ಬಾಣಸಿಗತನ** (ನಾ). ಅಡುಗೆಯವನ ಕೆಲಸ ; ಬಾಣಸಿಗನ ಕಾರ್ಯ : ಬಾಣಸಿಗತನಕ್ಕೆ ಸಂದು ವಿಗೆ ಮತ್ಸ್ಯನೃಪಂಗುಣಲಿಕ್ಕಿ ಭೀಮ ಜೀವಿಸಿದನು (ಕರ್ಣಕಂ. ೦೭). [ಬಾಣಸಿಗ + – ತನ]

**ಬಾಣಸಿಗಿತಿ** 'ಬಾಣಸಿಗಿತ್ತಿ' ನೋ.

**ಬಾಣಸಿಗಿತ್ತಿ**, ಬಾಣಸಿಗಿತಿ (ನಾ). = ಬಾಣಸಗಿತ್ತಿ : ಆ ಸತ್ಯಭಾಮೆಯನು ಯತಸನ್ನ ಬಾಣಸಿಗಿತ್ತಿಯಾಗಿರ್ದೊಂದುದಿವಸಂ . . . ಪಂಚಾಶ್ಚರ್ಯಂ ನೆಗಳ್ (ಶಾಪುಂಕು. ೦೯೩). **ಬಾಣಸಿಗಿತಿ** : ಪೂಜಾರಿ ಬಾಣಸಿಗಿತಿ ದವಸಿಗ × × × ತೋಟಿಗರು ಸಾಕಿಮಯನೊಳಗಾಗಿ ಜೀರ್ಣ್ನೋದ್ಧಾರಕಂ ವಿತ್ತಿ ಮೂವತ್ತು (ಎಕ. XII. ಗುಬ್ಬಿ. ೦೯-೬೨ ; 1140) ; ಬಿಡದಮ್ಮ ತಾನ್ನವ ನೊಱಲ್ದು ಬಾಣಸಿಗಿತಿವೊಲ್ ಕುಡುತಿರ್ದಳ್ (ಶಾಮ್ಯಶ. ೩೩೦).

[ಬಾಣಸಿಗ + – ಇತ್ತಿ]

**ಬಾಣಸಿಗೆ**, ಭಾಣಸಿಗೆ (ನಾ). = ಬಾಣಸಗಿತ್ತಿ : ಕಿಱುಕಬೆ ಸರ್ಗ್ಗತನ ಬಾಣಸಿಗೆಯಾಕೆಯ ಪಿರಿಯ ಮಗಂ × × ಟಿಯಕ್ಕಂ (ಎಕ. VIII, ಸಾಗ. ೪೩-೩; ಸು. 950); ಬಾಣಸಿಗೆಯರ್ . . . ಹಯ್ಯಂಗವೀನಮುಮನರಸಂಗು ಪಂಕ್ತಿಯೊಳುಣ್ಬ ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್ (ಸುಕುಮಾ. ೦೦-೨೯ ವ). **ಭಾಣಸಿಗೆ** : ನಿವೇದ್ಯಮನಡುವ ಭಾಣಸಿಗೆಗೆ ಮತ್ತರುರ್ (ಕಇ. ೯-೩-೩೨೩; 1085). [ಬಾಣಸಿಗ + – ಎ$_3$]

**ಬಾಣಸಿತನ** (ನಾ). = ಬಾಣಸಿಗತನ : ಬಾಹುಕನು . . . ತುರಗನಿಕರದ ಶಿಕ್ಷೆಯಲಿ ಮಂದಿರದ ಬಾಣಸಿತನದ ಕೆಲಸದಿ ನೆಱೆ ನಿಪುಣನೆಂದೆನಿಸಿಕೊಂಡಿಹ ನೃಪನ ಸಭೆಯೊಳಗೆ (ನಳಚ. ೯-೧೯) ; ಅಗ್ನಿಯು ಅನವರತಂ ಬಾಣಸಿತನಮಂ ಕೈಕೊಂಡಿರ್ಪನು (ಮುಳಸ. ೧೪೪). [ಬಾಣಸಿ + –ತನ]

**ಬಾಣಸಿವೆರ್ಗಡೆ** 'ಬಾಣಸವೆರ್ಗಡೆ' ನೋ.

**ಬಾಣಸು** 'ಬಾಣಸ' ನೋ.

**ಬಾಣಸುಗೆಯ್** 'ಬಾಣಸಗೈ' ನೋ.

**ಬಾಣಸುಗೈ** 'ಬಾಣಸಗೈ' ನೋ.

**ಬಾಣಸುವೆಗ್ಗಡೆ** 'ಬಾಣಸವೆರ್ಗಡೆ' ನೋ.

**ಬಾಣಹತಿ** (ನಾ). ಅಂಬಿನ ಹೊಡೆತ,– ಪೆಟ್ಟು : ದೇವ ನಿಜೋಗ್ರ ಬಾಣಹತಿಯಿಂ ತಲೆಗಳ್ ಗಗನಕ್ಕೆ . . . ಪಾಱುತಿರ್ಪಿನಂ . . . ರಾವಣನಂ ರಘುಪ್ರಭವರೂಪದೆ ಮರ್ದಿಸಿದೈ ಜನಾರ್ದನಾ (ಜಗ. ೦-೬೦);

ಬಾಣಹತಿಗಕ್ಕುಡಿಸಿ ರಾಜ್ಯಶ್ರೀಣಿ ಜರುಗಿತು (ಕುಪ್ರಾಳ ೨೪-೯೩). [ಸಂ.]

**ಬಾಣಹರ** (ನಾ). ಬಾಣನೆಂಬ ರಾಕ್ಷಸನನ್ನು ಕೊಂದವನು ; ಕೃಷ್ಣ : "ಮುರಹಿರಣ್ಯ ಕಂಸಮಧುಕೇಶಿಜಲಿಬಾಣಹರನೆನಲು . . . ಕೃಷ್ಣ" (ಮಂಗರಾ. ೬-೧೪). [ಸಂ.]

**ಬಾಣಾಗ್ನಿ** (ನಾ). ಬಾಣದಿಂದ ಉತ್ಪತ್ತಿಯಾಗುವ ಬೆಂಕಿ : ಆ ಮಹಾರಿಪುಭಯುಂಂರನೀಗಳೆನಗಾಗಿ, ತನ್ನೊಳಿದ ಕೈಹಿಡಿದಬಲಿಗಾಗಿ, ಶೋಷಿಸನೆ ಶರಧಿಯುಂ ಬಾಣಾಗ್ನಿಯಿಂ ? (ಶ್ರೀರಾಮಪ. ೫೦೬-೯೯೩). [ಸಂ.]

**ಬಾಣಾಯಿತ** (ನಾ). (ಬಿಲ್ಲಿಗೆ) ಅಂಬನ್ನು ಹೂಡುವವನಂ; ಬಿಲ್ಲುಗಾರ : ಕಠಾರಾಯಿತರ ಬಾಣಾಯಿತರ ಮಲ್ಲಜಟ್ಟಿಗಳ . . . ಮೊತ್ತ ದೊತ್ತರದ ಶಿಂಥಿಣಿಯನೊತ್ತರಿಸಿ ಇಟ್ಟಣಿಸಿದ ಕಟ್ಟಣಕದಾಸ್ಥಾನದೊಳು (ಜಸರ. ೬-೨೩). [ಬಾಣ₂ + – ಆಯಿತ (< – ಆಯ್ತ)]

**ಬಾಣಾರಸಿ** 'ಬಾರಣಾಸಿ' ನೋ.

**ಬಾಣಾಶ್ರಯ** (ನಾ). ಅಂಬಿಗೆ ಆಶ್ರಯಸ್ಥಾನವಾದುದಂ ; ಬತ್ತಳಿಕೆ : "ತೂಣೀರಂ ಉಪಾಸಂಗಃ . . . ಬಾಣಾಶ್ರಯಃ, ಕಳಾಪಃ — ಈ ೮ ಮೂಡಿಗೆ" (ಹಲಾಯು. ೬೬-೪೦೦). [ಸಂ.]

**ಬಾಣಾಸನ** (ನಾ). ೧. ಬಿಲ್ಲು; ಧನುಸ್ಸು : "ಧನು ಕೋದಂಡಂ ಬಾಣಾಸನಮಸ್ತ್ರಂ ಕಾರ್ಮುಕಾಖ್ಯಮದು ಚಾಪಂ" (ಅಸ್ರಕೋ. ೬೩-೦೭) ; ಪಂಚವಿಂಶತ್ಯನ್ವಿತಸಪ್ತಶತಬಾಣಾಸನೋಚ್ಛ್ರಿತನಂ ನಲಿನಪ್ರಮಾಣಃ ಯುಪ್ಪಮನುಮಾಗಿ . . . ಪುಟ್ಟಿ (ಅಂಡ. ೬-೩೬ ಪ) ; ಬಾಸಗೊಳಿಸಿದ ಮದನನ ಬಾಣಾಸನದವೊಲೆಸೆವ ಚಾರುರುಚಿಂಪಾಣದೊಳುದ್ಭಾಸಿನಿಯರ್ ನೃಪಸುತನ ವಿಳಾಸಿನಿಯರ್ ಬಂದರೇಱ ಪೊನ್ನಂದಣಮಂ (ಪುಷ್ಪಪು. ೩-೨೦). ೨. ಬಿಲ್ಲಿನ ಹಗ್ಗ; ನಾರಿ : ವಿನುತ ಶಿವಪದಮೆಂಬ ಬಾಣಾಸನವನೇಱಿಸಿ ತಿರುಗುವಿಂದ್ರಿಯಮನೆಸಿಪ ಬಲು ಸಾರಂಗಮಂ ನಿವಿಷಕೆ ಪಱಿಯಲೆಚ್ಚು (ಜಸಕ್ಕ. ೪೪-೩೩). [ಸಂ.]

**ಬಾಣಿ₁** 'ಪಾನೆ' ನೋ.

**ಬಾಣಿ₂** (ನಾ). ೧. ಮಾತು ; ವಚನ ; ನುಡಿ. ೨. ಶಬ್ದ ; ಧ್ವನಿ. ೩. ಮಾತಿನ ಅಧಿದೇವತೆ ; ಸರಸ್ವತಿ ; ವಾಣಿ : "ಬಾಣಿ ಬಿಜ್ಜ ವೆಣ್ಣಿಂ ಬಾಸೆವೆಣ್ಣು ಸರಸತಿಯುಮೆನೆ ವಾಣಾಯಕ್ಕುಂ" (ಕಕ್ಕೆ. ೯) ; ಬಾಣಿಂ ವಲ್ಲಭನಕ್ಕುಮೆಂದು ಪಡೆದಾ ವಾಗ್ದೇವಿಗುಜ್ಜೋದ್ಭವಂ ಜಾಣಿಂ ಬಾಣಿಯೆನಿಪ್ಪದೊಂದು ಪೆಸರಂ ಮುನ್ನಿತ್ತಂ (ಕಾದಂಪೂ. ೩) ; ಬೀಣೆ ಪೊತ್ತಗೆಗಳಂ ಪೊತ್ತ ಕೈಯ ಚೆಲ್ವೆ ! ಸುವ್ವಿ ! ಸುವ್ವಿ ! ಬಾಣಿ (ರಾಮಾಶ್ವ. ೬೬-೭). [<ಸಂ. ವಾಣೀ]

**ಬಾಣಿಗ**, ಬಾಣಿಗ್ಗ, ವಾಣಿ₂, ವಾಣಿಯ₂ (ನಾ). ೧. ವ್ಯಾಪಾರ ಮಾಡುವವನು ; ವ್ಯಾಪಾರಿ : ಬಾಣಿಗ ಬೀಮಯ್ಯನ ಮಗ . . . ಸಾನ್ತಯ್ಯ ಕೊಟಗಮ್ಮನ್ನು ತುಱುವ ಕೊಣ್ನು ಪೋಪಾಗ (ಪ್ರಕಿಅ. ೦೧೪೧. ೨೩-೦೦; 1030); ಬಾಣಿಗರ ಬೆಳ್ಳಿಗವುಣ್ಣನ ಮಗ ಬಿಟ್ಟಿಗಾವುಂಡನು . . . ನಡಿಸಿದ ಕಲ್ಲ ಗಾಣ (ಪ್ರಕಿಅ. ೦೧೩೩, ೬೬-೬ ; 1179) ; ಚಲುಡೋಜನ ಬರಹ ಸಮಸ್ತ ಬಾಣಿಗರ ಒಪ್ಪ (ಎಕ. III, ಮುಳಕ. ೨೦-೨೦ ; 1388). ಬಾಣಿಗ್ಗ : ೧. ಸಮಸ್ತ ಬಾಣಿಗ್ಗರ ಅರುಹನಹಳ್ಳಿಯ ಬಾಗಿಗಾಗಿ ನಟ × × × (ಎಕ. III, ಮುಳಕ. ೨೦-೦೩; 1388). ವಾಣಿ₂ : ೨. ವ್ಯಾಪಾರ ಮಾಡುವ ಒಂದು ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ : ಮಾರವಾಡೀ ಬ್ರಾಹ್ಮಣರು . . . ಹಲಕೆಲವರು ಮಾರವಾಡೀವಾಣೀ ಜನರಲ್ಲಿ ಅಡಿಗೆ ಮಾಡುವರು (ಕಜಾಗ. ೬೪); ಸಿಂಪಿ, ವಾಣಿ (ಬಣಜಿಗ), ಕುಣಬಿ (ಒಕ್ಕಲಿಗ) ಮುಂತಾದವರು ಶ್ರೀಪ್ರಸಾಧುಗಳಿಂದು ಎಲ್ಲಿಂದ ಮನ್ನಣೆ ಪಡೆದಿರುವರು (ಕರ್ನಾಸಂ. ೬೭). ೩. ವ್ಯಾಪಾರದ ಸರಕು : 'ಹಸುರುವಾಣಿ' ಪರಾ. ◘ ಈ ಶಬ್ದದ ರೂಪದಲ್ಲಿ ಮರಾಠಿಯ ಪ್ರಭಾವವಿದ್ದಂತೆ ಕಾಣಬರುತ್ತದೆ. ವಾಣಿಯ₂ : ೧. ವಾಣಿಯರುಂ ವಾರಸ್ತ್ರೀಜಾಣರುಗಳ್ . . . ಶಿಲ್ಪಿಗರ್ ಪೊಜಿಮಟ್ಟರ್ (ಸೂಕ್ತಿಸು. ೦೬-೨೬); ಶೌರ್ಯನಗರದ ವಾಣಿಯರು ಹೊಕ್ಕೆಚಿದು ಹೋಗಾಡಿದರು ಪತಿರಿಣವ (ಕುಪ್ರಾಳ ೨೪-೯೩); ವಾಣಿಯರ್ ಚೆನ್ನವರದರ್ ದೂಸಿಗರ್ . . . ಜೂಜುಗಾಜಿರ್ ಮುಖ್ಯರೊಡಗಿ ಬರುತಿರ್ದರ್ (ಕಲಕ್ಕ. ೯೬-೯೦). 'ಬನಿಯ' ಪರಾ.

[<ಸಂ. ವಾಣಿಜ./ಪ್ರಾ. ವಾಣಿಅ./ಮರಾ. ವಾಣಿಯಾ. ವಾಣೀ./ತಮಿ. ವಾಣಿಯನ್, ವಾಣಿಕನ್ ; ತೆಲು. ವಾಣಿಜುಡು]

**ಬಾಣಿಗ್ಗ** 'ಬಾಣಿಗ' ನೋ.

**ಬಾಣಿನೋಟ** (ನಾ). ಸರಸ್ವತಿಯ ದೃಷ್ಟಿ,-ಕಟಾಕ್ಷ : ಚಂಚಳಿಸುವ ಭಾವವಾಂತೆಡೆಗಳೊಳ್ ನೆರೆನಿಲ್ಲ ಬೆಡಂಗಿನಿಂದಮೇಂ ಬಳೆದುವೊ ಬಾಣಿನೋಟದವೊಲೀ ಚಿಕದೇವನ ತಾನದೊಳ್ಪುಗಳ್ (ಚಿಅಂ. ೯-೦೨೩).

[ಬಾಣಿ₂ + ನೋಟ]

**ಬಾಣೆ**. ಬಾಣ್ಯ (ನಾ). ಗದ್ದೆಯ ಸಮೀಪದಲ್ಲಿರುವ, ಸಾಮಾನ್ಯವಾಗಿ ಕುರುಚಲುಗಿಡಗಳಿಂದ ತುಂಬಿರುವ ಕಾಡುಪ್ರದೇಶ : (ಕಸಂಗ್ರಾ. ೦೬೦); ಕಾನ, ಬಾಣೆ, ಕುಮುಕಿ, ದರ್ಕಾಸ್ತ್, ತೋಡು, ಕೆರೆ ಇವುಗಳ ವಿಸ್ತೀರ್ಣಗಳೆಲ್ಲ ಬಾಯಿ ಪಾಠ (ಕಟುಳ. ೬). ಬಾಣ್ಯ : 'ಬಾಣಬೆಟ್ಟು' ಪರಾ.

[ದೇ. ॥ ತುಳು. ಬಾಣೆ, ಬಾನೆ ; ಕೊಡ ಬಾಣೆ]

**ಬಾತ** 'ಬಾ₁' ಪರಾ.

**ಬಾತಖಾನಿ**, ಬಾತಾಖಾನಿ (ಗು). ೧. ಹರಟೆ ಹೊಡೆಯುವ ಸ್ವಭಾವದ : ಆ 'ಬಾತಖಾನಿ' ಮುದುಕಿಗೆ ತನ್ನ ಮಾತು ಕೇಳುವವರು ಒಬ್ಬರು ಬೇಕು (ಶಾಲೀಕು. ೦೦೩). ಬಾತಾಖಾನಿ : ೨. ಹರಟೆ ಹೊಡೆಯುವ ಸ್ವಭಾವವುಳ್ಳ ವ್ಯಕ್ತಿ ; ನಿರರ್ಥಕವಾಗಿ ಮಾತನಾಡುವ ವ್ಯಕ್ತಿ : "ಬಾತಾಖಾನಿ = ಮಾತುಗಂಟ" (ಕಾನಕೋ. ೨೦).

[← ಮರಾ. ಬಾತೇಖಾನೀ]

**ಬಾತಮಿ** 'ಬಾತಮೀ' ನೋ.

**ಬಾತಮಿದಾರ** 'ಬಾತಮೀದಾರ' ನೋ.

**ಬಾತಮೀ**, ಬಾತಮಿ, ಬಾತ್ಮಿ, ಬಾತ್ಮೆ (ನಾ). ೧. ವರ್ತಮಾನ ; ಸುದ್ದಿ ; ಸಮಾಚಾರ : ಈ ಬಾತಮೀ ತಿಳಿದು ನವಾಬರು ಪಟ್ಟದ ದಂಡಿನ ಮೇಲೆ ಬಿದ್ದು . . . ಪತ್ತೆಮಾಡಿದರು (ಹೈಅಇ. ೫೦). ಬಾತಮಿ : ೧. ಯಾರಾದರೂ ಈ ಬಾತಮಿಯನ್ನು ಹೊರಡಿಸಿದರೇ ಎಂದು ಸಂಶಯವು ಆತನ ಮನಸ್ಸಿಗೆ ಥಕ್ಕನೆ ಹೊಳೆಯಿತು (ಎಂಪ್ಕ. ೦೨೬) ; ಒಂದೆರಡು ಸಲ ನನ್ನಿಂದ ಬಾತಮಿಯನ್ನು ಹೊರಡಿಸುವ ಬೇಠಿನಿಂದ . . . ಕೇಳಿ ನೋಡಿದ್ದ (೦೬ಹ. II. ೧೪). ೨. ಬೇಹು ; ಗೂಢಚರ್ಯೆ : ಇವರನ್ನು ನವಾಬರ ಕಡೆ ಬಾತಮಿ ಕುದುರೆಯವರು ಹಿಡಿದು ಹೈದರಲ್ಲಿಯ ಸಮೀಪಕ್ಕೆ ಕರೆದು ತಂದರು (ಹೈಅಇ. ೬೬). ಬಾತ್ಮಿ : ೧. ತೀರ ತಾಜಾ ಬಾತ್ಮಿ ಯಾವುದರಲ್ಲಿ ಇದೆ ? (ಗಾಳಿಕ. ೩೭). ಬಾತ್ಮೆ : ೨. ದುಷ್ಮಾನರ ಲಷ್ಕರಿನ ಬಾತ್ಮೆ ಸಮಾಚಾರ ತರಿಸಿಕೊಡಬೇಕು (ರಾಕೇಂದ್ರ. ೦೬೦).

[ ← ಮರಾ. ಬಾತಮೀ. / ಸಂ. ವಾರ್ತಾ ? ]

**ಬಾತಮೀದಾರ**, ಬಾತಮಿದಾರ, ಬಾತ್ಮಿದಾರ, ಬಾತ್ಮೀದಾರ (ನಾ). ೧. (ವರ್ತಮಾನಪತ್ರಿಕೆ ಮುಂತಾದುವುಗಳಿಗೆ) ಸುದ್ದಿ, ಸಮಾಚಾರಗಳನ್ನು ಸಂಗ್ರಹಿಸಿ ತಿಳಿಸುವವನು ; ಸುದ್ದಿಗಾರ ; ವರದಿಗಾರ : ಎಲ್ಲ ಪತ್ರಿಕೆಗಳವರೂ, ಬೇರೆಬೇರೆ ಪ್ರದೇಶಗಳಲ್ಲಿ ಬಾತಮೀದಾರರನ್ನು ನಿಯಮಿಸಿರುತ್ತಾರೆ (ಕೂತಿ). ೨. ಬೇಹುಗಾರ ; ಗೂಢಚಾರ : "ಯಥಾರ್ಹಃ, ವರ್ಣಃ . . . ಗೂಢಪುರುಷಃ — ೭ ಬಾತಮೀದಾರನ ಹೆಸರುಗಳು, ಗೂಢಚಾರನು, ವೇಷಧಾರಿಯಾಗಿ ಕಪಟದಿಂದ ತನ್ನನ್ನು

ತಿಳಿಯಪಡಿಸದೇ ಹೊಂಚಿ ವಿಷಯವನ್ನು ತಿಳಿದು ತಂದರಿಕೆ ಮಾಡುವ ದೂತನು" (ಸಿದ್ಧಾಂತಿ. ೨೩೯). **ಬಾತಮಿದಾರ**: ೧. "(ಸಂಗತಿ) ಹೇಳುವವನು ; ವರ್ತಮಾನ ಕೊಡುವವನು ; ಬಾತಮಿದಾರ" (Informant· ೩೦೯೩). ೨. ಗೊಲ್ಲರವನು ದುರ್ಗಕ್ಕೆ ಹೋಗಿ ದಕ್ಷಿಣ ಪ್ರಾಂತದ ಬಾತಮಿದಾರನ ಸಮೇತ ದೊರೆಯ ಸ್ಥಾನದಲ್ಲಿ ಈ ಸಂಗತಿಯನ್ನು ಅರಿಕೆಮಾಡಿದನು (ಚಿತ್ರಕಾ. ೬೩). **ಬಾತ್ಮಿದಾರ**: ೧. ಸಾಕ್ಷಿಗಳು ಬಾತ್ಮಿದಾರರು ಎಲ್ಲಾ ಬಂದಿದ್ದಾರೋ ? (ವೀರಚೋ. ೩೦); ಪತ್ರಿಕಾಬಾತ್ಮಿದಾರನ ಆಸೂಯೆಯಿಂದ ಆ ವಿಷಯವು ಬರಲಿಲ್ಲವೆಂದು ಸಮಾಧಾನ ಮಾಡಿ, ರಾಯರ ಮನಸ್ಸಿಗೆ ಶಾಂತಿಯನ್ನುಂಟುಮಾಡಲು ಪ್ರಯತ್ನಿಸಿದೆ (ರಾಯು. ೬೩). **ಬಾತ್ಮೀದಾರ**: ೧. ಒಬ್ಬೊಬ್ಬ ಸಂಪಾದಕರು ಬಗಲಿಗೆ ಇರಲಿ ; ಕೊನೆಗೆ ಬಾತ್ಮೀದಾರ (ಅಕಅ. ೩೧೬-೯) ; ಅದರಲ್ಲಿ ಸಮ್ಮೂರಿನ ಬಾತ್ಮೀದಾರನಿಂದ, ರಾಯರ ವಿಷಯವಾಗಿ ಈ ರೀತಿ ಬರೆದಿತ್ತು (ರಾಯು. ೬೩).

[ಬಾತಮಿ + – ದಾರ್ / ಮರಾ. ಬಾತಮೀದಾರ್]

**ಬಾತಾಖಾನಿ** 'ಬಾತಖಾನಿ' ನೋ.

**ಬಾತಾಳಿಸು** (ಕ್ರಿ). ಕಿರಿಚು; ಅರಚು ; ಒರಲು : ಕೇಳಿ ದಶಕಂಧರನು ಕೋಪ ಚಡಾಳಿಸಲು . . . ತೋಳುಬಲುಹನು ನೋಡೆನುತ ಬಾತಾಳಿಸಲು (ಅನಂರಾ. ೦-೦೦-೨೦); ತೊಡಕಿ ಕಾದುವ ಸಂಘಟನಸುವನು ತುಡುಕೆನುತ ಬಾತಾಳಿಸುತಲಾ ವ್ಯಥನ ಭೂತಗಣಂಗಳೆಸಲುರುಬಿದರು ಕಪಿವರರು (ಅರಂರಾ. ೬-೦೦-೬೨). [ ← ತೆಲು. ಬಾತಲಿಂಚು, ಬಾತಲಿಂಚು]

**ಬಾತು$_1$** 'ಬಾ$_1$' ಪರಾ.

**ಬಾತು$_2$** (ನಾ). ಊತ ; ಬಾವು : ಉಡಿಯಿಂದ ಮೇಲೆ ಬಾತು ಉಂಟಾಗಿ ಹಣ . . . ಅಪಾನಪ್ರದೇಶ. ಗುಹ್ಯಪ್ರದೇಶಗಳಲ್ಲಿ ಬಾತುವುಂಟಾಗಿ ಇಹಣ . . . ಈ ರೀತಿಯುಳ್ಳರಲು ಆತನು ಸರ್ವಥಾ ಜೀವಿಸುವುದಿಲ್ಲ (ಕೃಷ್ಣಾ. I. ೩೩೫)· 'ಬಾತುಗಾಲು' ಪರಾ.

[< ಬಾ$_1$ ./ ತುಳು· ಬಾತ್ = ಊದು]

**ಬಾತು$_3$** (ನಾ)· ಒಂದು ಬಗೆಯ ನೀರುಹಕ್ಕಿ : "ಬಾತೆನೆ ತಾಂ ಕೋಳಿಯೆಂಬುದರ್ಥಂ" (ಶಾಕಶ. ೨೯); ಚಿಮ್ಮುವ ಬಾಲದ ಬಾತುಗಳು . . . ಉದ್ದಕಾಲಿನ ಬಾತುಗಳೂ ಈ ಗುಂಪಿಗೆ ಸೇರುವುವು (ಕಂಕೋ. XII. ೨೬).

[ ←ಅರ. ಬತ್; ಪಾರ. ಬತಕ್; ಹಿಂ. ಬತ್, ಬತಕ್, ಬತಖ್; ಮರಾ. ಬತಕ್, ಬದಕ್. / ತಮಿ. ವಾತ್ತು; ಮಲ. ಬಾತ್ತು; ತುಳು. ಬಾತ್, ಬತ್ತ್; ಕೊಡ. ಬಾತ್; ತೆಲು. ಬಾತು. /ಪೋರ್ಚ್. ಪಾತೊ]

**ಬಾತುಕೋಳಿ** 'ಬಾತುಗೋಳಿ' ನೋ.

**ಬಾತುಗಾಲು** (ನಾ). ಊತ ಬಂದ ಕಾಲು ; ಬಾವಿನಿಂದ ಕೂಡಿರುವ ಕಾಲು ; ಸಿತ್ರಾಣವಾದ ಬಿಳಿಯ ಬದುರಿನಯೂ ಬಾತುಗಾಲಿನ ಬಚಕಲ ಕುದುರೆಯೂ . . . ನಿಧಾನವಾಗಿ ಸಾಗುತ್ತಿದ್ದುದರಿಂದ ಅವನು ಅಪರಿಚಿತ ವ್ಯಕ್ತಿಯನ್ನು ಮಾತಾಡಿಸಬೇಕೆಂದು ಕಾತರನಾಗಿದ್ದನು (ಪ್ರಕರು. ೨೬೩).

[ಬಾತು$_2$ + ಕಾಲು$_1$ (< ಕಾಲ್$_1$)]

**ಬಾತುಗೋಳಿ, ಬಾತುಕೋಳಿ** (ನಾ). = ಬಾತು$_3$ : ಬಾತುಗೋಳಿ ಹಾಂಗ ಬಾತೀದ ಜಾತ್ಕಲ್ಲ (ಜಮಹಿಳಾ. ೪೬-೦೩)· **ಬಾತುಕೋಳಿ** : "ಕಾರಂಡ, ಕಾರಂಡವ – ಕಾಗೆಯ ಹಾಗೆ ಇರುವದೊಂದು ಪಕ್ಕಿ, ಬಾತುಕೋಳಿ" (ಗಂಗಾವು. ೬೦); ಯಂತ್ರದ ಬಳಿಯ ನೀರಿನಿಂದ ಬಾತು ಕೋಳಿಗಳ ಕೇಕಾರವ ಕೇಳಿಸುತ್ತಿತ್ತು (ಪ್ರಕರು. ೨೪೭).

[ಬಾತು$_3$ + ಕೋಳಿ$_1$ (< ಕೋೞ್$_1$) ]

**ಬಾತೆ** 'ಬಾಚ್ಚಿ' ನೋ.

**ಬಾತೆಗೆಡು** 'ಬಾರ್ತೆಗೆಡು' ನೋ.

**ಬಾತೆಗೇಡಿ** (ನಾ). ಬದುಕು ಕೆಟ್ಟವನು ; ಹಾಳಾದವನು : ಬಾತೆಗೇಡಿಗಳೆ ಪ್ಪೋಳೆಸಿತು ರೋಷವೆರೆ ಪಾತಕರನಟ್ಟಿದಟ್ಟಿದು ಮಸಾರದೆಸಲೇಕೆ ಸರೆ (ಕಾಸಂಕ. ೪-೨೦೩). [ಬಾತೆ (< ಬಾಚ್ಚಿ) + ಕೇಡಿ$_1$]

**ಬಾತ್ಮಿ** 'ಬಾತಮಿ' ನೋ.

**ಬಾತ್ಮಿದಾರ** 'ಬಾತಮಿದಾರ' ನೋ.

**ಬಾತ್ಮೀದಾರ** 'ಬಾತಮಿದಾರ' ನೋ.

**ಬಾತ್ಮೆ** 'ಬಾತಮಿ' ನೋ.

**ಬಾದಣ$_1$** 'ಬಾದವಣ' ನೋ.

**ಬಾದಣ$_2$** (ನಾ). ತಟ್ಟೆ; ತಳಿಗೆ : ದೇವವಿತತಿ ಚಂದಿರನ ಬಾದಣಕೆಟ್ ದಮೃತಸೇವನೆಯ ಮಾಡುತಿರೆಯೊಸರ್ದುದೋ ಎಯುಪ್ಪೊಲು ಕಳಂಕಾಂಕ ನೆಸೆದಿರೆ ಜೊನ್ನಮುಟ್ ವರ್ಬಿತು (ಸಿದ್ಧೇಪು. ೦೩-೨೦). [< ಸಂ. ಭಾಜನ]

**ಬಾದಣಂಗೈಸು** (ಕ್ರಿ). ತೂತು ಬೀಳುವಂತೆ ಮಾಡು : ದನುಜೇಂದ್ರ ನಂಗವ ಬಾದಣಂಗೈಸಿದರು ಶಿವಶಿವ ಶೂಲ ಚಕ್ರದಲಿ (ಅಂರಾ. ೪೧-೨೩).

[ಬಾದಣ$_1$ (< ಬಾದವಣ) + ಕೈಸು (<ಕೆಯ್ಸು) ]

**ಬಾದಣಗಂಡ** (ನಾ). ಬಿರುಕು ಬಿಟ್ಟ ಗಾಯದ ಮಾಂಸ : ಬಾಗಿ ಮುರಿದವುಡಿ ಕೆಡವುವ ಮೊಗು ಬಿಗಿದು ಬಾದಣಗಂಡವ ಬಿಡೆಕಾಟ್ ಓರಿ ಹಿಂಡುವ ಕಂಠ . . . ಮೆಟ್ಟಿಯೆ ಕರಿಗಳಂ ಕೆಡಹುದುವು ಸಿಂಹಂಗಳು (ಕಕಅ. ೩-೩೭)· [ಬಾದಣ$_1$ (< ಬಾದವಣ) + ಕಂಡ$_1$]

**ಬಾದಣಗೊಱೆ** (ಕ್ರಿ). ೧· ತೂತಾಗುವಂತೆ ಕೊರೆ; ರಂಧ್ರಮಾಡು : ನೀ ಬಱಿದೇಕೆ ಚುಚ್ಚುವೆ ಕಾಸಿ ಬಾದಣಗೊಱೆದ ಘಾಯದಲಿ (ಕುಮ್ಯಾ.ಗ. ೬-೩೯); ಬಾದಣಗೊಱೆದು ಪಾತಾಳಕಿಳಿದು ಭೋಗಾವತಿಯ ಮುತ್ತಿದರು (ಸಿದ್ಧೇಪು. ೪-೯೭)· ೨. ರಂಧ್ರವಾಗು ; ತೂತಾಗು : ರಣದೊಳು ಖಾನಖಾನರ ಮೆಯ್ಗಳು ಬಾದಣಗೊಱೆದವು (ಕುಣಾಸಾಂ. ೯೩-೯೭); ಇಭ ನಕ್ರಪತಿಗಳ ಪರಮಸತ್ತ್ವೋತ್ಕರ್ಷವೆಂತುಟೊ ಗಿರಿ ಬರಿಯ ಧರೆ ದೆಸೆಗೆ ಬಾದಣಗೊಱೆಯ ವದಹತಿಗೆ (ಅಣಗ. ೬-೩-೮).

[ಬಾದಣ$_1$ (< ಬಾದವಣ) + ಕೊಱೆ$_1$]

**ಬಾದಣದಲೆ** (ನಾ)· ತೂತು ಬಿದ್ದ ತಲೆ : ಸೂಕರನ ದಾಡೆಗಳಿಱಿತದಂಗದ ಬಱಿಯ ಬಾದಣದಲೆಯ ಭುಟರದೆ ದೇವ ನೋಡು (ಕೂಕಾ. ೬-೨೦-೬೦)·

[ಬಾದಣ$_1$ (< ಬಾದವಣ) + ತಲೆ$_1$]

**ಬಾದಣದೆಗೆ** (ಕ್ರಿ). ತೂತುಮಾಡು; ರಂಧ್ರವನ್ನು ಕೊರೆ : ಜೀವ ನೆಗೆದು ತಾಗಿ ನಡುನೆತ್ತಿಯಂ ಬಗಿದು ಬಾದಣದೆಗೆದು ಮೇಗುದರ್ಗ ಗಗನಕ್ಕೆ ದಂಡಾಯಮಾನದುರಿಯಾಗಿ ನೆಗೆಯಲ್ಕೆ (ಸಿದ್ಧರಾ. ೪-೩೯).

[ಬಾದಣ$_1$ (< ಬಾದವಣ) + ತೆಗೆ$_1$]

**ಬಾದಣವಾಗಿಲು** (ನಾ). ರಂಧ್ರದ ದ್ವಾರ; ಬಿಲದ ಬಾಯಿ : ಇಂದು ನಿನ್ನೈಶ್ವರ್ಯಲಕ್ಷ್ಮೀ ಕ್ಕೆಲಿದು ಭಂಡಾರವೆಂದಿರವೊಗಲ್ಬಂಚಿ ಗಡ ಸಾರ್ಚರಲು ತಿರುಗುವಂದಗಂಡೊಳಹೊಗಿಸಲಭವ ನಿರ್ಮಿಸಿದ ಬಾದಣವಾಗಿಲದು ಕನ್ನವೆ (ಸಿಂಗಿರಾ· ೦೬-೦೩).

[ಬಾದಣ$_1$ (< ಬಾದವಣ) + ಬಾಗಿಲು (< ಬಾಗಿಲ್) ]

**ಬಾದಣಿಸು, ಬಾದಳಿಸು** (ಕ್ರಿ). ತೂತಾಗು ; ರಂಧ್ರವಾಗು : ಬಾದಣಿಸಿ ದೇಟಗಳ ಬಾಯೊಳು ಕಾದ ಬಾರಂಗಿಗಳನೆಳೆಗೆ ಕೋಲು ವಾಮ ದೊಳೆಯ್ದೆ ಹಿಡಿದರು ತೈಲಧಾರೆಗಳ (ಕುಮ್ಯಾ.ಆ. ೩-೪೦)· **ಬಾದಳಿಸು** : ಬಿಲ್ಲ ನಾರಿಯ ನೀವಿ ರ್ಘೋಗ್ರೈಸುಲಬ್ಧ ತುಳುಕ ಮೇದಿನಿಯು ನಡುಗಲಚಲ ಗಳಲುಗ ಖಗರ ಹೃದಿ ಬಾದಳಿಸೆ (ಕಪಶು· ೨೯-೦೩).

[ಬಾದಣ$_1$ (< ಬಾದವಣ) + – ಇಸು$_2$]

**ಬಾದಮಿ** 'ಬಾದುಬ್ಬೆ' ನೋ.

**ಬಾದಮ್ಮ** (ನಾ). ಒಬ್ಬಾತನ ಹೆಸರು : ಬಾಗುಗುಳಿಯ ಮಹಾಜನ ಅಯ್ನೂರ್ವರುಂ ಉಭಯಸಮ್ಮತದೊಳಿಟ್ಟು ಬಳಿಯರ ಬಾದಮ್ಮಗೆ ಬೊದಗೊಟನಿತ್ತೂರ್ (ಶಾಇ. IX-i. ೩೯-೮ ; ಸು. 10ಶತು ೩೩).
[? + ಅಮ್ಮ$_1$]

**ಬಾದರ್** 'ಬಹಾದುರ್' ನೋ.

**ಬಾದರ** (ಗು). ೧. ಎಲಚಿಮರಕ್ಕೆ ಸಂಬಂಧಿಸಿದ. ೨. ಹತ್ತಿಯಿಂದ ಮಾಡಿದ. ೩. ಒರಟಾದ ; ನಯವಿಲ್ಲದ. (ನಾ). ೪. ಹತ್ತಿ ಮತ್ತು ಅದರ ಗಿಡ ; ಅರಳೆ : "ಬಾದರಂ ಪಿಚುವ್ಯಾಖ್ಯೆಯುಂ ಗಿ ಪಿಚು ಕಾರ್ಪಾಸಂ" (ಅಭಿ.ಕೋ. ೩೭-೩೦). ೫. ಹತ್ತಿಯಿಂದ ತಯಾರಿಸಿದ ಬಟ್ಟೆ : "ಕಾರ್ಪಾಸಂ, ಬಾದರಂ—ಈ ೨ ಹತ್ತಿಯಿಂದಾದ ಸೀರೆ" (ಶಬಾಸು. ೯೦-೪೯೩). ೬. ಎಲಚಿಗಿಡ ಮತ್ತು ಅದರ ಹಣ್ಣು ; ಬೋರೆ. ೭. ನೀರು ; ಜಲ. ೮. [ಜೈನ] ಸೂಕ್ಷ್ಮವಲ್ಲದುದು ; ಸ್ಥೂಲವಾದುದು : ಸುಗಮಸಂಜ್ವಲನದ ಮುನಿಸೊಮ್ಮೆ ಹಮ್ಮೊಮ್ಮೆ ತೆಗೆದುಹೋದುವು ಮುಂದೆ ಲೋಭ ಏಗೆ ಸೂಕ್ಷ್ಮದೊಳು ನಿಂದುದದಱ ಬಾದರಗೂಡಿ ಜಗುಳಿತು ಮಾಯೆ ಲೆಕ್ಕಿಸದೆ (ಶಅ. ೩೯-೭೩). 'ಬಾದರರೂಪ' ಪರಾ. ೯. (ಹಾಲು, ನೀರು ಇತ್ಯಾದಿ ದ್ರವ ಪದಾರ್ಥಗಳಂತೆ) ವಿಭಾಗ ಹೊಂದಿದ ಮೇಲೆ ಮೂರನೆಯ ವಸ್ತುವಿನ ಸಹಾಯವಿಲ್ಲದೆ ಏಕರೂಪವಾಗುವ ಪುದ್ಗಲಸ್ಕಂಧ : ಅಂತರ್ಮುಹೂರ್ತನಿರುದ್ಧಾಶೇಷಮನೋವಾಗ್ಬಾದರಕಾಯಯೋಗಸೂಕ್ಷ್ಮಕಾಯಯೋಗಪರಿಣತಂ (ಆಪು. ೦೬-೯೯ ವ) ; ಬಾದರಸೂಕ್ಷ್ಮೈಕೇಂದ್ರಿಯ ದ್ವಿತ್ರಿಚತುರಿಂದ್ರಿಯಸಂಜ್ಞಾಸಂಜ್ಞಿಗಳು ಅದವು ಪರ್ಯಾಪ್ತಾಪರ್ಯಾಪ್ತದ ಭೇದದಿ ಜೀವಸಮಾಸ (ದ್ವಾದಶಾ. ೩-೩). ೧೦. ಜೀವಾದಿತತ್ತ್ವಗಳಲ್ಲಿ ವಿವಕ್ಷಿತವಾಗಿರುವ ಹದಿಮೂರು ಪ್ರಕೃತಿಗಳಲ್ಲಿ ಒಂದು : ಸ್ವಕೀಯಚರಮಸಮಯದೊಳನ್ಯತರವೇದನೀಯ . . . ಬಾದರ ಯಶಸ್ಕೀರ್ತಿರುಚ್ಚೈರ್ಗೋತ್ರತೀರ್ಥಕರನಾಮಂಗಳೆಂಬ ಪದಿಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ (ಆಪು. ೦೬-೯೯ ವ) ; ಚರಮ ಸಮಯದೊಳ್ ಮತ್ತಿಪ್ಪಾನ್ಯತರವೇದನೀಯ ಮನುಷ್ಯಾಯುರ್ಮನುಷ್ಯಗತಿ ಪಂಚೇಂದ್ರಿಯ ಜಾತ್ಯಾನುಪೂರ್ವಿತ್ರಸನಾಮಬಾದರಪರ್ಯಾಪ್ತಕ ಸುಭಗಾದೇಯಯಶಸ್ಕೀರ್ತಿ ತೀರ್ಥಂಕರನಾಮೋಚ್ಚೈರ್ಗೋತ್ರಂಗಳೆಂಬ ಪದಿಮೂಱುಂ ಪ್ರಕೃತಿಗಳುಮೊರ್ಮೆಯೆ ನಿರ್ಮೂಲಮಾಗೆ (ಶಂಶಾಪು. ೦೬-೯೦ ಶ). 'ಪ್ರಕೃತಿ' ಪರಾ. [ಸಂ.]

**ಬಾದರಕೃಷ್ಟಿ** (ನಾ). [ಜೈನ] "ಅನಿವೃತ್ತಿಕರಣಗುಣಸ್ಥಾನದಲ್ಲಿ ಸಂಜ್ವಲನಕ್ರೋಧ–ಮಾನ–ಮಾಯಾ–ಲೋಭಗಳ ಅನುಭಾಗಗಳನ್ನು ಕಡಿಮೆಮಾಡಿ ಸ್ಥೂಲಖಂಡ ಮಾಡುವುದು" (ಆಪು. ೭೭ ಕೃಪಾಂಶಾಬಶ ಶಾ.ಕೋಶ) : ಬಾದರಕೃಷ್ಟಿಕರಣಕಾಲಪ್ರಮಾಣಮೇನೆಂದೊಡೆ (ಧವಸಾ. ೨೩-೭೩). [ಸಂ.]

**ಬಾದರರೂಪ** (ನಾ). [ಜೈನ] ಸೂಕ್ಷ್ಮವಲ್ಲದ ರೂಪ ; ಸ್ಥೂಲವಾದ ರೂಪ : ಪದಪು ಜಿನೇಂದ್ರಪಾದಕಮಲಂಗಳೊಳಾವಗಮಾಗೆ ಕರ್ಮಬಂಧದ ಬಿಗಿಪೊಯ್ಮನೊಯ್ಯನೆ ಸಡಿಲ್ದಿರೆ ಬಾದರರೂಪದಿಂದೆ ಕೊಲ್ಲದ ಪರನಾರಿಗಾಟಿಸದ ಕಳ್ಳದಸತ್ಯದೊಳೊಂದದಾಗಳುಂ ಕುದಿವವತೃಷ್ಣೆಯಂ ಕುಸಿದು ಮಾಣಿಸುವಯ್ದುಮಣುವ್ರತಂಗಳಂ . . . ತಾಳ್ದಿ (ಅಂಪು. ೬-೭). [ಸಂ.]

**ಬಾದರಸೂಕ್ಷ್ಮ** (ನಾ). [ಜೈನ] "ಸ್ಥೂಲರೂಪವಾಗಿ ಕಂಡರೂ ಯಾವ ಪುದ್ಗಲಗಳನ್ನು ಭೇದಿಸಲಿಕ್ಕೂ ಅವುಗಳಲ್ಲಿ ಛಿದ್ರವನ್ನು ಮಾಡುವುದಕ್ಕೂ ಅನ್ಯಗಳನ್ನು ಹಿಡಿಯುವುದಕ್ಕೂ ಬರುವುದಿಲ್ಲವೋ ಅವು ಬಾದರಸೂಕ್ಷ್ಮಗಳು" (ಕೃಪಶ. ೩೩). [ಸಂ.]

**ಬಾದರಸ್ವರೂಪ** (ನಾ). = ಬಾದರರೂಪ : ಅಲ್ಲಿ ಮೂಲಪ್ರಕೃತಿಗಳೆಂಟುಮಂ ಬಾದರಸ್ವರೂಪದಿಂ ನೂಱ ನಾಲ್ವತ್ತೆಂಟುವಿಕಲ್ಪಮಾದುತ್ತರ ಪ್ರಕೃತಿಗಳುಮನೊಳಕೊಂಡನುಬಂಧಿಸುವ ಬಂಧಂ ಪ್ರಕೃತಿಬಂಧಮೆಂಬುದಕ್ಕುಂ (ಸುಕುಮಾ. ೬-೨೭ ವ). [ಸಂ.]

**ಬಾದರಾಯಣ** (ನಾ). ಬ್ರಹ್ಮಸೂತ್ರ ಮತ್ತು ಮಹಾಭಾರತಗಳನ್ನು ಬರೆದವನೆಂದು ನಂಬಲಾದ ಒಬ್ಬ ಮಹರ್ಷಿ ; ವ್ಯಾಸ ; ಕೃಷ್ಣದ್ವೈಪಾಯನ ; ● ಈ ಋಷಿಯು ಬದರೀವನದಲ್ಲಿ ಆಶ್ರಮವನ್ನು ಹೂಡಿ ತಪಸ್ಸನ್ನಾಚರಿಸುತ್ತಿದ್ದ ಕಾರಣ ಈ ಹೆಸರು ಬಂದಿದೆಯೆಂಬ ನಂಬಿಕೆಯಿದೆ : ದ್ವಾಪಾರದಲಿ ಭಾವಜಜನಕನಾವಿರ್ಭವಿಸಿದ ತ್ರಿಜಗವಱಿಯಲು ಬಾದರಾಯಣನೆಂಬ ನಾಮದಲಿ (ಐಕಪು. ೩೯-೩೩) ; ಶಾಲಿಹೋತ್ರಾಶ್ರಮಾವನಸಿಬರು ಬೀಳುಕೊಂಡರು ಮತ್ತೆ ಕಂಡರು ಬಾದರಾಯಣನ (ಕುಮ್ಮ.ಭಾ. ೦೦-೦) ; ಹ್ಯಾಂಗೆ ನೀ ದಾಸನಾದಿ ಪ್ರಾಣೆ . . . ಬಾದರಾಯಣಕೃತ ಭಾಗವತ ಕೇಳದೆ (ಕಸಳ. ೦೦೬-೯).

**ಬಾದರಾಯಣಸಂಬಂಧ**=(ಆಲಂ) ಕಲ್ಪಿತವಾದ ಅಥವಾ ಅತ್ಯಂತ ದೂರದ ಸಂಬಂಧ ; ಬಹುದೂರದ ನಂಟುತನ : ಚೌಲಕರ್ಮಕ್ಕೂ ಸ್ತ್ರೀಯರ ನಗ್ನಚಿತ್ರಗಳಿಗೂ ಯಾವ ಬಾದರಾಯಣಸಂಬಂಧವೋ ಕಾಣೆ (ನಾಡಗೀ. ೨೩೬) ; ಅವರು ಮನೆ ಬಿಟ್ಟು ಹೋಗುವುದಕ್ಕೂ ನನ್ನ ವಿದ್ಯೆಗೂ ಇರುವ ಬಾದರಾಯಣಸಂಬಂಧವಾದರೂ ಯಾವುದು ? (ಭಾರತಿ. ೦೦೦). [ಸಂ.]

**ಬಾದರಾಯಣಸಿದ್ಧಾಂತ** (ನಾ). ಬಾದರಾಯಣಮಹರ್ಷಿಯಿಂದ ರಚಿತವಾದ ವೇದಾಂತಸೂಕ್ತಿ : ಈ ವಾದದಲ್ಲಿ . . . ಪುರುಷಾರ್ಥಕ್ಕೆ ಲೋಪವಿಲ್ಲವೆಂಬುದು ತಾತ್ಪರ್ಯವಾಗುತ್ತದೆ. ಬಾದರಾಯಣಸಿದ್ಧಾಂತದಲ್ಲೂ ಇದೇ ತಾತ್ಪರ್ಯವು (ಹಿಂದಶಾ. ೬೩). [ಸಂ.]

**ಬಾದರಾಯಣಸೂತ್ರ** (ನಾ). =ಬಾದರಾಯಣಸಿದ್ಧಾಂತ : ಈ ಬ್ರಹ್ಮಸೂತ್ರಕ್ಕೇ ಬಾದರಾಯಣಸೂತ್ರ, ವೇದಾಂತಸೂತ್ರ, ಶಾರೀರಕಮೀಮಾಂಸಾ, ಬ್ರಹ್ಮಮೀಮಾಂಸಾ ಎಂಬ ಹೆಸರುಗಳು ಬಂದಿವೆ (ಭಾರಶ. ೩೯೦). [ಸಂ.]

**ಬಾದಲಿ$_1$**, ಬಾದ್ಲಿ, ಬಾಲ್ದಿ (ನಾ). (ನೀರನ್ನು ಸೇದಲು ಅಥವಾ ತೆಗೆದು ಕೊಂಡು ಹೋಗಲು ಬಳಸುವ) ಒಂದು ಬಗೆಯ ಪಾತ್ರೆ : ಬಾದಲಿಯ ಮೇಲೆ ಬಾದಲಿ ಬಿಸಿನೀರು ತಾ, ತಣ್ಣೀರು ತಾ ಎಂದು ಇವನ ಆಜ್ಞೆ ಇರತಕ್ಕದ್ದೆ ! (ಗಾಳಿಶ. ೪೩). **ಬಾದ್ಲಿ** : ಚಿನ್ನಿ . . . ಬಾದ್ಲಿಯನ್ನು ನೀರಲ್ಲಿ ಮುಣುಗಿಸಿದಳು (ಹೂಪಶ. ೬೩). **ಬಾಲ್ದಿ** : ಕೆಲವೇಳೆ ಬಾಲ್ದಿ ತೆಗೆದುಕೊಂಡು ಸಸಿಗಳಿಗೆ ನೀರು ಹಾಕುತ್ತಿದ್ದೆವು (ಕಂಠ. ೨೨); ಸೊಸೆ ಬಾಲ್ದಿಯಲ್ಲಿ ನೀರು ತಂದು, ಒದ್ದೆಬಟ್ಟೆಯಿಂದ ನೆಲವನ್ನೊರಸಿದಳು (ಶಾಳಿಗಿ. ೯೨).

[ ←ಹಿಂ. ಬಾಲಟೀ, ಬಾಲ್ಟೀ ; ಮರಾ. ಬಾದಲೀ, ಬಾರಡೀ, ಬಾಲಟೀ, ಬಾಲಡೀ, ಬಾಲದೀ, ಬಾಲ್ಡೀ./ಇಂ. Bucket]

**ಬಾದಲಿ$_2$** (ಗು). ಜರತಾರಿಯ ; ಕಲಾಬತ್ತಿನಿಂದ ಕೂಡಿದ : ಯಾರ ತಲೆಯ ಮೇಲೆ ನೋಡಿದರೂ ಗಾಂಧಿಟೊಪ್ಪಿಗೆಯ ಬದಲು 'ಬಾದಲಿ' 'ಕೋಟಾ' ಪಟಕಗಳೇ ಕಾಣಹತ್ತಿದವು (ಅಶ್ವತ್ಥ. ೯).

[ ← ಹಿಂ. ಬಾದಲಾ = ಜರತಾರಿ ; ಮರಾ. ಬಾದಲೀ ]

**ಬಾದವಣ**, ಬಾದಣ$_1$, ಬಾದಳ (ನಾ). ೧. (ಮನೆಯಲ್ಲಿ ಗಾಳಿ, ಬೆಳಕು ಬರುವುದಕ್ಕಾಗಿ ಮಾಡಿರುವ) ಗವಾಕ್ಷಿ : "ಬಾದವಣಂ ವಾತಾಯನಂ ಗವಾಕ್ಷಂ ಜಾಳಂ" (ವಸ್ತುಕೋ. ೯೭-೦೦). ೨. ತೂತು ; ರಂಧ್ರ : 'ಬಾದವಣಂಬೋಗು' ಪರಾ. **ಬಾದಣ$_1$** : ೧. ನೃಪತಿಯ ಪ್ರಾಸಾದದ ಶಿಖರದ ಮಧ್ಯಪ್ರದೇಶಮಂ ಬಾದಣ[ಪಾಠಾಂ. ವ]ದಂತಿರೆ ಛಿದ್ರಂ ಮಾಡಿ (ವಡ್ಡಾರಾ. ೦೩೬-೦೯); ಕುದುರೆ ಕಟ್ಟುವರ್ ಬಾದಣಮಂ ನೋಡಿದ

ರೆಂಬಂತೆ ನಾಣ್ಣುಡಿಯುಂ ನನ್ನಿ ಮಾಡಿ (ರಶರ್ಣವ್ರ. ೧೨-೩೩); ಸೂಳೆಗೇರಿಯೋವರಿಸು ಬಾದಣದಿಸೂಗೆವ. ಅಗುರುಪಿನ ಕರ್ಪೂರಗಯು ಸುರ್ಬಿನೊಳ್ ತಳ್ಪೊಯ್ಯು (ಕಂದ್ರಪ್ರ. ೬-೯೩ ವ). ೨. ಬಸುಱ ಬಾದಾಕ ಬಾಯ್ಬಿಟ್ಟು ದುಱದುಱನೊಗುವ ಬಿಸಿನೆತ್ತರಂ ಕುಡಿದು (ಜಜಾ. ೬-೦೩); ಜೋಡನೊಡೆದಾಯ್ದಂಬು ಧರಣಿಯೊಳಾಡಿದವು ಗುಳ ಸರಿದ ಠರಿಗಳ ತೋಡಿ ನೆಟ್ಟವು ಬದ್ದರಂಗಳ ಬಾದಣದ ಕೊಚೆದು (ಕುಶ್ಯಾಪು. ೮-೯೬); ಬೆಟ್ಟಕ್ಕೆ ಬಾದಣವ ತೆಗೆದಂತೆ ಛಾಯಾವಿರೆ (ಶ್ರಸುಕೃ. ೫-೬೪). **ಬಾದಳ**: ೧. ಆ ಮನೆಗೆ ಒಂಬತ್ತುಬಾಗಿಲು ಈಡ ಬಿಂಗಳವೆಂಬ ಗಾಳಿಯು ಬಾದಳ (ಗಜಾ. ೧೩-೩); ಅನುನಯದೆ ಹಣಹಣಿಕಿ ನೋಡುತ್ತ ಬಾದಳದೆ . . . ಕಳ್ಳರೆಸದರ್ ತಮದೊಳು (ಕಸುಕೃ. ೦-೩-೦೨). ೨. ಬಲುಗಜಕ್ಕೆ ಬಾದಳದಲ್ಲಿ ಹಾದಿಯುಂಟೆ (ಐಶ್ಯಾ. ೪. ೬೦-೬೬). [< ಸಂ. ವಾತಾಯನ]

**ಬಾದವಣಂಬೋಗು** (ಕ್ರಿ). ರಂಧ್ರವಾಗು; ತೂತಾಗು: ಪೂಗಣೆಯಿಂ ಬಾದವಣಂಬೋಗಿರೆ ಹೃದಯಂ (ಶರ್ಣಪ್ರ. ೬-೦೩).
[ಬಾದವಣ + ಪೋಗು₁ (< ಪೋ₁)]

**ಬಾದಶಹ** 'ಪಾತಶಹ' ನೋ.

**ಬಾದಶಾಹ** 'ಪಾತಶಹ' ನೋ.

**ಬಾದಷಹ** 'ಪಾತಶಹ' ನೋ.

**ಬಾದಷಹಜಾದೆ** (ನಾ). (ಮುಸಲ್ಮಾನ) ದೊರೆಯ ಮಗಳು; ರಾಜಕುಮಾರಿ: ಬಾದಷಹಜಾದೆಯರು ಮದುವೆಯು ಕಟ್ಟಿಗೆ ಸಿಕ್ಕಿ ಸಂಕಟಪಡಬೇಕಾಗಿಲ್ಲ (ಐಂಕಮ. ೨೪೬). [← ಪಾರ. ಹಿಂ. ಬಾದಶಾಹ್‌ಜಾದೀ]

**ಬಾದಷಾಹಿ** 'ಪಾತಷಾಹಿ' ನೋ.

**ಬಾದಳ** ' ಬಾದವಣ ' ನೋ.

**ಬಾದಳಗಂಡಿ** (ನಾ). ಗವಾಕ್ಷಿಯ ಕಂಡಿ, ರಂಧ್ರ: ಬಾದಳಗಂಡಿಯೊಳಗೆ ಕಂಡನಸ್ತಾದ್ರಿಗಾದಿತ್ಯಬಿಂಬ ಸಾರ್ದುದನು (ಚಕ. ೦೦-೦೨೬).
[ಬಾದಳ (< ಬಾದವಣ) + ಕಂಡಿ₁]

**ಬಾದಳಗೊಯಿ** (ಕ್ರಿ). ತೂತಾಗುವಂತೆ ಕತ್ತರಿಸು; ರಂಧ್ರವಾಗುವಂತೆ ಕೊಯ್ಯು: ಸುರಗಿಯಿಂ ಕಿತ್ತು ಹಡಿಗೋಲ ತೊಗಲಂ ಹಡಿಯಲಿಚಿದು ಬಾದಳಗೊಯಿದುಯೆಲವೊ ನಿನ್ನಮ ಹರಿಯ ಚರಣದೊಳಗುದಿಸಿದುದು ದಿಟವಾದೊಡಿವರೆಲ್ಲರಂ ರಕ್ಷಿಸೆಂದೆನುತಿರೆ (ಗುರುಚ. ೦೩-೦೨).
[ಬಾದಳ್ (< ಬಾದವಣ) + ಕೊಯಿ (< ಕೊಯ್)]

**ಬಾದಳಿಸು** ' ಬಾದಣಿಸು ' ನೋ.

**ಬಾದಾಮಿ₁**, ಬಾದಾವಿ (ನಾ). (ಚಾಲುಕ್ಯರ ರಾಜಧಾನಿಯಾಗಿದ್ದ) ಒಂದು ಊರಿನ ಹೆಸರು: " ಬಾದಾಮಿ-ವಾತಾಪಿ = ಒಂದು ಪಟ್ಟಣ " (ಶಬ್ದಕೋ. ೬೦); ತೋಜೆಗಲ್ಲು ಬಾದಾಮಿ ಮುದಿಗಲ್ಲು ಕೊಪಣದ ತಜಿಸಿನ ರಾಜ್ಯವೆಲ್ಲವನು ಇಜಿದು ಕೆಡಿಸುತ (ಕುರಾಜಾಂ. ೦೯-೯೮); ಶ್ರೀತಾವರೆಗೆರೇ ರಾಜ್ಯೇ ಗ್ರಾಮಂ ಬಚ್ಚನಹಾಳುಕಂ ಗ್ರಾಮಂ ತಥೈವ ಬಾದಾಮಿದೇಶೇ ಖ್ಯಾತಾಭಿದಂ ವರಂ (ಎಕ. III (R). ಸಂಜಕ. ೦೦೨-೨೦; 1576); ಕರ್ನಾಟಕದ ಶಾಸನಗಳಲ್ಲಿ ಕಂಡುಬರುವ ಸುಪ್ರಸಿದ್ಧ ಅತ್ಯಂತ ಪ್ರಾಚೀನ ಕೋಟೆಯೆಂದರೆ ಬಾದಾಮಿಯ ಕೋಟೆ (ಕಶಾಅ. ೨೯೬). **ಬಾದಾವಿ**: ಬಾದಾವಿಯ ಸಿದ್ಧಾಯದೊಳಗೆ ಹತು(ತ್ತು) ಗದ್ಯಾಣ ಪೊನ್ನು . . . ಬಿಟ್ಟರು (ಇಆ. VI. ೦೪೦-೨೩; 1139). P ಕ್ರಿ. ಶ. ಎರಡನೆಯ ಶತಮಾನದ ಟಾಲೆಮಿಯು ಬಾದಾಮಿಯನ್ನು ' ಬದಿಯ ಮೈಯಿ ' (Badia maioi) ಎಂಬ ಹೆಸರಿನಿಂದ ಸೂಚಿಸಿರುವುದರಿಂದ, ಆರನೆಯ ಶತಮಾನದ ಜಯಸಿಂಹನಿಗಿಂತ ಹಿಂದೆಯೇ ಇದು ಪ್ರಮುಖಸ್ಥಳವಾಗಿದ್ದಿತೆಂದು ಎಇ. XXVII. ೨ನೆಯ ಶಾಸನದ ವಿವರಣೆಯಿಂದ ತಿಳಿದುಬರುತ್ತದೆ. [← ತಮಿ. ವಾತಾಪಿ, ವಾತಾವಿ]

**ಬಾದಾಮಿ₂**. ಬದಾಮಿ, ಬದಾಮು (ನಾ). ಒಂದು ಬಗೆಯ ಮರ ಮತ್ತು ಕಠಿಣವಾದ ಕವಚವುಳ್ಳ, ಪೌಷ್ಟಿಕವಾದ ಅದರ ಬೀಜ: ಕತ್ತರಿಸಿದ ಕಬ್ಬು ಬಾದಾಮಿ ಬಾಗುಂಬಿಯು ಅತ್ತಿ ಪನ್ನೀರಲಿ ನೆನೆಗಡಲಿಯು (ಬಿಚಿ೬೬. ೦೪೯-೨); ಮುದಿಕುರುಡಿ ಪೋಗೆಯಿನು "ಬಾದಾಮಿ, ಕೋ" ಯೆನುತ ಪವ್ವಳದಿಂ ಮೊಮ್ಮಂಗೆ ಕೊಡಲು ಸಿಹಿಯಹುದೆ? (ಮುಂಕುಕ. ೬೬). **ಬದಾಮಿ**: ಬದಾಮಿಯ ಅಗಿಗಳನ್ನು ಒಂದು ವರ್ಷಪರಿಯಂತರ ಚನ್ನಾಗಿ ಬೆಳಸಿ, ಬೇರೆ ಒಂದು ಕಡೆಗೆ ತಗ್ಗುಗಳನ್ನು ತಯಾರುಮಾಡಿ ಅಗಿಗಳನ್ನು ಕಿತ್ತಿ ಹಚ್ಚಬೇಕು (ಕೃಶಕ್ರ. ೦೬೦). **ಬದಾಮು**: ಈ ಹಡಗಗಳಲ್ಲಿ ಅರಬಸ್ಥಾನದಿಂದ ಉತ್ತತ್ತಿ, ಖರ್ಜೂರ, ದಾಳಿಂಬ, ಬದಾಮು . . . ಇನ್ನೆ ಮುಂತಾದ ಸರಕುಗಳು ಬರುತ್ತವೆ (ಕಶಾಗ. ೩೦೬); ಹುಣಚಿ ಬದಾಮು ಮುಂತಾದ ಫಲವೃಕ್ಷಗಳು (ಮುಂಜಿಯು. ೬-೨೬೬).
[← ಪಾರ. ಬಾದಾಮ್; ಹಿಂ. ಬದಾಮ್, ಬಾದಾಮ್; ಮರಾ. ಬದಾಮ್, ಬಾದಾಮ್, ಬಾದಾಮಿ. / ತಮಿ. ವಾತುಮೈ; ಮಲ. ಬಾದಾಮ್; ತುಳು. ಬಾದಾಮ್, ಬದಾಮು; ತೆಲು. ಬಾದಮು, ಬಾದಾಮು, ಬಾದಾಮುಮು]

**ಬಾದಾಮಿಮಾವು** (ನಾ). (ಬಾದಾಮಿಯ ಆಕಾರದ) ಒಂದು ಬಗೆಯ ಉತ್ತಮಜಾತಿಯ ಮಾವು: ಬಾದಾಮಿಮಾವು ಇತರ ಮಾವಿನ ಹಣ್ಣುಗಳಿಗಿಂತ ಸಿಹಿಯಾಗಿರುತ್ತದೆ (ಕಥಿ). [ಬಾದಾಮಿ₂ + ಮಾವು]

**ಬಾದಾಮಿಹಲ್ವ** (ನಾ). ಬಾದಾಮಿಬೀಜದಿಂದ ತಯಾರಿಸುವ ಒಂದು ಬಗೆಯ ಸಿಹಿತಿಂಡಿ: ದುರೋಟ್, ಬಾದಾಮಿಹಲ್ವ . . . ಗರಪಾಗರಂ ಬಾದೂಷಾ _ ಏನು ಕೊಡಲಿ ಸಾರ್ (ಮುಜಾಂ. ೯೬); ಅವಲಕ್ಕಿ, ಬಾದಾಮಿಹಲ್ವ, ಕೋಸುಂಬರಿ (ರೂಕಶಂ. ೦೭).
[ ಬಾದಾಮಿ₂ + ಹಲ್ವ (< ಹಲ್ವಾ) ]

**ಬಾದಾಮಿಹಾಲು** (ನಾ). ಬಾದಾಮಿಯ ಪುಡಿಯನ್ನು ಮಿಶ್ರಮಾಡಿ ಕಾಯಿಸಿದ ಹಾಲು: ಮೇಜೊಂದರ ಮೇಲಿದ್ದ ಬಾದಾಮಿಹಾಲು ಅಲ್ಲೇ ಆರಿ ತಣ್ಣಗಾಗಿತ್ತು (೬೬ಲುಗೂಂ. ೪೩); ಗೋವಿಂದಪ್ಪನ ಬಾದಾಮಿಹಾಲು ಬಟ್ಟರ ಹೊಟ್ಟೆಗೆ ಮತ್ತೇನೂ ಬದ್ದಿರಲಿಲ್ಲ (ಮುಜಾಂ. ೬೦).
[ ಬಾದಾಮಿ₂ + ಹಾಲು₁ (< ಪಾಲ್₁) ]

**ಬಾದಾವಿ** ' ಬಾದಾಮಿ₁ ' ನೋ.

**ಬಾದಿ** (ನಾ). ಭಾರ; ಹೊರೆ: ಬದುಕು ಬಾದಿ ಇದು ಅನಾದಿ ಹಿಡಿದ ಹಾದಿ ಲೇಸೋ (ಕ್ರೈಂಕರ್ನ. ೯-೨೦); ಹಣ ಹೊರುವವನಿಗೆ ರೋಮ ಬಾದಿಯೇ ? (ಗಾದೆ). [← ತುಳು. ಬಾದಿ = ಭಾರವಾದ]

**ಬಾದಿಪೊಡ್ಡಿ** (ನಾ). ಒಬ್ಬಾಕೆಯ ಹೆಸರು: ಗೋಯಿನ್ದಪೊಡ್ಡಿಯ ಮಗಳು ಬಾದಿ(?ಳ)ಪೊಡ್ಡಿಯೆಪ್ಪೊಳ್ . . . ಅಶ್ವರಥ[ೀ]ಗೆಟ್ಟೊಳ್ (ಇಆ. XI. ೦೨೩-೪; ಸು. 778). [ಬಾದಿ₂ + ಪೊಡ್ಡಿ]

**ಬಾದಿಶರ್ಮ** (ನಾ). ಒಬ್ಬಾತನ ಹೆಸರು: ಪುನ ಬಾದಿಶರ್ಮ್ಮನಾ ಏಕ್ಕಂಶಃ (ಇಆ. VII. ೦೬೦-೬೬; ೬೦೬). [ಬಾದಿ₂ + ಶರ್ಮ]

**ಬಾದು₁**, ವಾದು (ನಾ). ೧. ಮಾತು; ನುಡಿ: ಬಾದೇನಾ ಮದೀಯ ಕರ್ಮಫಳೋದಿತಸಂತಾಪರೂಪಪಾವಕಳಾಪಚ್ಛೇದನಕರಮಾಯ್ತು ಭವತ್ಪಾದಪ್ರಕ್ಷಾಳನೋದಕಂ ಮುನಿನಾಥಾ (ಕಂಕಾ. ೬-೦೩); ಆದರಿಸಿ ಭವ್ಯಜನಮು ಸೋದರರಿವರೆಂದು ತಮ್ಮ ಸುಕೃತದ ಫಲದೊಪಾದಿಯನೀವ ಜೈನರು ಬಾದಿನೊಳೇನನ್ಯಸಮಯದವರಿತ್ತಪರ (ಕಮಾಹ. ೯-೬೬); ಓದಿನೊಳಂ ರೂಪಿನೊಳಂ ಬಾದೆಂ ನಮ್ಮೂರೊರ್ದ ಮುನಿಗಳವೋಲೀ ಮೇದಿನಿಯೊಳೊಳರೆ (ರಶರ್ಣವ್ರ. ೯-೦೦೬). ೨. ಚರ್ಚೆ; ತರ್ಕ; ವಾದ: ಬಾದಿನೊಳವೋದಿನೊಳಂ ವಿಬುಧಾಳಿಯುಂ ತೊಡಲ್ದಾಡುವ ಕೀರವೀ ಪೊಸವಡಂಗಿಲೆಯೊಪ್ಪುವ ನಂದನಂಗಳೊಳು . . . ರಂಜಿಕುಂ (ಶಾಇ. IX-i,

೧೦೬ ೨೪ ; ಸು. 1087) : ತರ್ಕದೊಳ್ ಬಾದುಂ ಬರ್ದುಡಿಗುಟ್ಟಿ ಪೊಟ್ಟು ವಡೆದೆಂ (ಸುಕುಮಾ. ೩-೪೩) : ಆದಿಯಾಗಿಪ್ಪುರ್ದಾರ್ಹತಸಮಯಕ್ಕೆ ಮೂಲ ಸಂಘಂ ಕೊಣ್ಡಕುನ್ದಾನ್ವಯಂ ಬಾದುವೇತದಂ ಬಳಯುವುದಲ್ಲಿಯ ದೇಸಿಗ ಗಣದ ಪುಸ್ತಕಗಚ್ಛದ . . . ಗಂಗುವಸೂಜವತಿ (ಎಕ.11. ೬೩-೩೦ ; 1118). 'ಬಾದುಗುಟ್ಟು'. ' ಬಾದುಗೆಯ್ ' ಪರಾ. ೩. ಭಾಷೆ ; ಶಪಥ : ಬಾದುಂಬೊದು ಪತ್ತನೆಯ ತಲೆಯುಮಂ ನೇದರ್ದಾಗಳ್ (ಕಮುತ. ೨೪೦ ಕ್ರ.ಯೋ). ೪. ಜೊತೆ ; ಜೋಡಿ : ತಿಬಿಕಲ್ಲಾಡುವ ಬೊಟ್ಟುವೋರಿಸುವ ಸಂಡಂ ಪೊಪ್ಪು ಬಾದಿಂಗೆ ಕೈನಿಚಿದೆರ್ದಾಡುವ . . . ನಾನಾಕ್ರೀಡೆಯಿಂದಿ ರ್ವರುಂ ತಳುಸುದು (ಸುಕುಮಾ. ೨-೬). 'ಬಾದುಗ್ಯೆ' ಪರಾ. ವಾದು : ೨. ಇಲ್ಲಿ ಪ್ರಸಾದಮಂ ಕುಡದಿರ್ದ ಬಳಿವಿಡಿದು ಅಲ್ಲಿ ಪ್ರಸಾದಮಂ ವಾದಿನಿಂದಂ ಪಡೆವ . . . ಎನ್ನ ಪ್ರಸಾದಸಾಮರ್ಥ್ಯಮಂ ತೋಱುತಂ ಮನ್ನಣೆಯೋಳ್ಲೆಗ್ಯೆತಪ್ಪುದು (ಚಿಇ. ೦-೮೦) 'ವಾದುಗುಟ್ಟು' ಪರಾ. ೫. ಮೂದಲಿಕೆ ; ನಿಂದೆ: ಸೇದುವರಳಿನ ತಿರುವಿನಂಬಿನ ವಾದಿನಸುಗೆಯ ಬಿರುದರಗ್ಗದ ಕೈದುಕಾಱರು ಕಿಣ್ಕಿದಮರರ ಹೊಟ್ಟ ತೂಱಿದರು (ಕುಮ್ಮಾಕ. ೬-೨೬). [<ಸಂ. ವಾದ. / ತಮಿ. ವಾತು ; ತೆಲು. ವಾದು]

**ಬಾದು₂** (ನಾ). ೧. (ಉಕ) ವ್ಯರ್ಥವಾದುದು ; ನಿಷ್ಪ್ರಯೋಜಕ ವಾದುದು : ಈ ಹೆಣ್ಣುಮಕ್ಕಳ ಬುದ್ಧಿ ಅಂದರ ವ್ಯವಹಾರಕ್ಕ ಬಾದು (ಕಹುಕು. ೫೬). ೨. (ಸಂಖ್ಯೆ, ಪಟ್ಟಿ ಮುಂತಾದುವುಗಳಿಂದ) ಕಳೆದುದು ; ವಜಾಮಾಡಿದುದು : (೬).

ಬಾದಮಾಲು = ವಿಕ್ರಯವಾಗದ ಉಳಿದ ಸರಕು ; ನಿಷ್ಪ್ರಯೋಜಕ ವಾದ ಮಾಲು : ಅಂಗಡಿಯಲ್ಲಿ ಉಳಿದ ಬಾದಮಾಲಿನ ಪ್ರಮಾಣ ದಿಂದ, ಆ ಅಂಗಡಿಗೆಂದು ಸರುಕಗಳನ್ನು ಕೊಳ್ಳುವವನ ದತ್ತಕ್ಷತನ ಜಾಣತನಗಳನ್ನು ತಿಳಿದುಕೊಳ್ಳಬಹುದು (ಕಣ್ಣ್ಯ. ೦೨೪). ಬಾದಾಗು = ೧. ವ್ಯರ್ಥವಾಗು ; ನಿರರ್ಥಕವಾಗು : ಒಂದು ವರ್ಷಂತೂ ಬಾದಾತು. ಇನ್ನು ಮುಂದಿನ ವರುಷರ . . . ಪರೀಕ್ಷಾಕ ಕೂಡವ (ಅನ್ನ. ೯೬). ೨. ಊನವಾಗು ; ವಿಕಲವಾಗು : ನಡುವಿನ ಸ್ಥಿತಿಯಲ್ಲಿ ಕಳವು ಹೆಚ್ಚಾಗಿ ಒಮ್ಮೊಮ್ಮೆ ರೋಗಿಯ ಯಾವುದಾದರೊಂದು ಅವಯವವೇ ಬಾದಾಗುತ್ತದೆ (ಗೃಹವ್ಯ. ೪೭). ೩. ಶೂನ್ಯವಾಗು ; ತೆರವಾಗು : ಹೋಲಿಗಳೆಲ್ಲಾ ಬರಬರತಾ ಬಹಳ ಬಾದಾಗಲಿಕ್ಕ ಹತ್ಯಾವರೆಪಾ (ಜಾಪಜಾ. ೪೦). [← ಅರ. ಬಳದ್ ; ಹಿಂ. ಬಾದಿ; ಮರಾ. ಬಾದ್]

**ಬಾದುಬೆ** 'ಬಾದುಬ್ಬೆ' ನೋ.

**ಬಾದುಗುಟ್ಟು**, ವಾದುಗುಟ್ಟು (ಕ್ರಿ). ವಾದ ಮಾಡು ; ತರ್ಕಮಾಡು ; ಚರ್ಚಿಸು : ಪರಮನ ಪೋರ್ಸೆಗೆ ಬರ್ದಂತಿರೆ ತನ್ನೊಳ್ ಬಾದುಗುಟ್ಟ ಸವರಿಡಿಂಬರ್ ಬಿತ್ತರಿಸಿದ ವಿಕ್ರಿಯೆಯೊಳ್ಪೆಂತಿರೆ ಸಹಜಾತಿಶಯದಿಂದ ಸೊಬಗಂ ಸೋಲ್ವರ್ (ಅನಂತಪು. ೬-೧೦). ವಾದುಗುಟ್ಟು : ವಾದುಗುಟ್ಟ ನಶೇಷಶಾಸ್ತ್ರವನಾದರಿಸನು . . . ವೈಯಾಕರಣನವನು (ತಿಇಗ. ೫-೪-೩೦); ವಾದುಗುಟ್ಟದೆ ಕೊಡು ಮಗನೆ (ತಿಇಗ. ೯-೨-೪೨). [ಬಾದು₁ + ಕುಟ್ಟು₁]

**ಬಾದುಗೆಯ್**, ಬಾದುಗ್ಯೆ, ವಾದುಗೆಯ್ (ಕ್ರಿ). ೧. = ಬಾದುಗುಟ್ಟು: ಇರ್ವರುಮೊಂದುದಿವಸಮಜಿತಂಜಯನೊಡನೆ ಪೋಗಿ ತತ್ಪ್ರರೋಪ ವನದೊಳಿರ್ದ ಮತಿಸಾಗರಮುನಿಪತಿಯೊಳ್ ಬಾದುಗೆಯ್ದು (ಅಂಕ್ಷ. ೩-೬೩ ವ) ; ಬಿಡೆ ಬಾದುಗೆಯ್ದೊಡರಿಸುವ ತಮ್ಮ ಕಡುಪಿಂದೆ . . . ಹಾಸ ಬೀಭತ್ಸಾದಿ ನಾನಾರಸಂಗಳಿಂದೊಂದಿದ ಜರದ್ವಿಳಥಾವಿರ್ಗಕಜನಂಗಳ್ (ಶಾಬಂಅ. ೨೬೦); ಎಕ್ಕೆಯ ಬೇರ್ . . . ಅರೆದು ಲೇಪಿಸೆ ವೃಶ್ಚಿಕಮೂಜಃ ದೊಂದು ಠಾಣಕ್ಕೆ ಬಟಿಕ್ಕಮುಗ್ರಮನಿಸಿರ್ಪ ವಿಷಂ ಕಿಡುಗುಂ ಜನಂಗ ಳೆಕ್ಕೆಗೆ ಬಾದುಗೆಯ್ದು ತಿಮುವಂತಿರ ಲೋಕದ ಪಕ್ಷಪಾತದಿಂ (ಖಮುಡ. ೫೨-೬೨). ಬಾದುಗ್ಯೆ : ೨. ಜೊತೆಗೂಡು ; ಸೇರು : ಹೆಣೆದು ಕೊಳ್ಳು : ಅದು . . . ಸೀಳ್ದುವರಿದಡ್ಡಂಬಾಯ್ದುಳ್ಳಿಗೊಂಬುಗಳೊಳ್ ಬಾದುಗ್ಯೆದು ಬಳಿದು ಮುಗಿಲಂ ಮುಟ್ಟಿ ಮುಗುಳ್ವಂತೆ ಸಸಬಾಗಿ ನಿಂದ ಕೀಟಗ್ಗೊಂಬುಗಳೊಳಂ . . . ಸೊಗಯಿಸಿದುದು (೦೧೮೨ವ. ೬-೪೦ ವ).

**ವಾದುಗೆಯ್ :** ೧. ಸ್ಕಂದಕುಮಾರಮುನಿಪೊಡನೆ ವಾದುಗೆಯ್ದು ಸೋಲ್ದೊಡೆ (ವಡ್ಡಾರಾ. ೧೬೬-೦೨) ; ಶೂನ್ಯವಾದಿಗಳ್ . . . ಮತಿಸಾಗರ ಮುನಿಪತಿಯೊಳು ವಾದುಗೆಯ್ದು (ಶಾಪುಂಶ. ೨೨). [ಬಾದು₁ + ಕೆಯ್₁]

**ಬಾದುಗ್ಯೆ** 'ಬಾದುಗೆಯ್' ನೋ.

**ಬಾದುಬೆ** 'ಬಾದುಬ್ಬೆ' ನೋ.

**ಬಾದುಬ್ಬೆ**, ಬದುಬೆ, ಬಾದವಿ, ಬಾದುಂಬೆ, ಬಾದುಬೆ, ಬಾದುವೆ, ಬಾದುವೆ, ಬಾಳುಬೆ (ನಾ). ೧. ಒಂದು ಕ್ಷುದ್ರದೇವತೆಯ ಹೆಸರು : ಅದರ ಅತಿ ಪ್ರಾಚೀನರೂಪ ಕ್ರಿ. ಶ. ೮೭೨ರ ಶಾಸನದಲ್ಲಿರುವ ಬಾದುಬ್ಬೆ ಎಂಬುದು. ಕಾಲಕ್ರಮದಲ್ಲಿ ಇದರ ಬೆಳವಣಿಗೆ ಬಾದುಬ್ಬೆ > ಬಾದುಂಬೆ > ಬಾದುಬೆ, ಬಾದುವೆ > ಬಾದವಿ ಎಂದಿರುವಂತೆ ತೋರು ತ್ತದೆ. ಸಾಹಿತ್ಯದಲ್ಲಿ ಈ ಪದ ಹೆಚ್ಚಾಗಿ ಬಳಕೆಯಾಗಿಲ್ಲ (ಕಣ್ಣ. ೬. ೪೯). ೨. ವೈಶಾಖಮಾಸದ ಅಮಾವಾಸ್ಯೆಯಂದು ಆಚರಿಸುವ ಒಂದು ಹಬ್ಬ—ಉತ್ಸವ : ಅಂತಹ ಹಬ್ಬಗಳಲ್ಲಿ ಮುಖ್ಯವಾಗಿ ಮೂರು ಹಬ್ಬ ಗಳನ್ನು ಶಾಸನಗಳು ಹೆಸರಿಸಿವೆ—ಬಾದುಬ್ಬೆ, ದೀಪಾವಳಿ, ಕಾರ ಹುಣ್ಣಿವೆ. ಈ ಮೂರು ಹಬ್ಬಗಳು ಇಂದಿಗೂ ಉಳಿದುಕೊಂಡಿವೆ (ಕಶಾಅ. ೦೯೬). **ಬದುಬೆ :** ೨. ಬವುಬೆಯ ಅಮಾವಾಸೆಯಂದು ಸ್ವಸ್ತಿಶ್ರೀಮತು ದಣ್ಡ ನಾಯಕಂ . . . ವಿನಾಯಕರ್ಗ್ಗೆ ಬಿಟ್ಟ ಕರಿಯ ಕೆಯಿ (ಕಶಿಇ. VIII. ೩:೫೦ ; 1090). **ಬಾದವಿ. ಬಾದುಂಬೆ :** ೧. ಸಾಯಿರಖಂಡುಗಮಂ ಬೆಳದಾವೊಕ್ಕಲ ಮಗನದೊಂದು ೧೦ಬಮನೊಯ್ಯದಿಟ್ಟಾವೂರಿನ ಬಾದುಂಬೆಗೆ ಸಾಯಿರವಂ ಬೆಳದನೆಂದು ನುಡಿವಮೂರ್ಖರ್ (ಕಮಪ. ೯-೬೨); ವೆಟಿಯುಂ ಗೋಕುಳಮಂ ಗಿರಿಪ್ರಕರಮಂ ಬಾದುಂಬೆಯುಂ ಚಾಂತಿಯುಂ . . . ದೈವಂಗಳೆಂದಿಂತು ಕೂರ್ತೆಜಗುತ್ತಿರ್ಪವರೆಂತು ಮುಕ್ತಿವಡೆವರ್ (ಕಶಿಇ. I. ೦೬೪ ಶ್ರೀ.ರೋ.ಕೃಹಿರಾಮಾನುಜಸ್ತೋತ್ರ) : ಬಾದುಂಬೆ ದೇಶ್ಯವೋ ಅನ್ಯದೇಶ್ಯವೋ ಎಂಬುದನ್ನು ನಿರ್ಣಯಿಸುವುದಕ್ಕೂ, ಅದು ಯಾವ ದೇವತೆಯೆಂಬುದಕ್ಕೂ ಇದುವರೆಗೆ ದೊರೆತಿರುವ ಸಾಕ್ಷ್ಯಗಳು ಸಾಲವು (ಕಣ್ಣ. ೬. ೫೩). ೨. ದೀಪಾವಳಿ ಬಾದುಂಬೆ ಕಾರ ಪುಣ್ಣಮೆಯೆಂಬೀ ಮಹಾಪರ್ವ್ವಗಳೊಳ್ (ಜೊಂಕಶಾ. ೦೯೩೪, ಶಾವೆಂ. ೬೦-೯೬ ; ೪). ೩. ಬಾದುಂಬೆಯೆಂಬ ದೇವತೆಯ ವಿಗ್ರಹವಿರುವ ಒಂದು ಸ್ಥಳದ ಹೆಸರು (?) : ಬಳ್ಳಿಗೊಳನೆ ಮೋರೆ ಯಲ್ಲಿಂ ಪಡುವಲು ಬಾದುಂಬೆಯುನಿಂ ಬಡಗಲು ಪೂದೋಂಟ ಕಂಬ ನಾಲ್ವತ್ತುಮನಾ ದೇವರ ಪೂಜೆ ಪುನಸ್ಕಾರಕ್ಕಂ . . . ಜೀರ್ಣೋದ್ಧಾರಕ್ಕ ವೇದು ಕೊಟ್ಟರು (ಎಕ. VII, ಶಿಕಾ. ೦೨೬-೪೦ ; 1019); ಅಲ್ಲಿಯ ಬಾದುಂಬೆಯುನಿಂ ಬಡಗಣ ಗದ್ದೆಕಟ್ಟು (ಎಕ XIV. ೨೬೩-೪೩ ; 1173). **ಬಾದುಬೆ :** ೧. ವಟವಾರವೆ ಬಾದುಬೆ ಶತ್ರುಸಾಲವಂ ದೇವವಿನಿ ವಿರ್ಮ್ಮಿತಂಗಳೆನೆ ಮಾಡಿಸಿ[ದೀ]ಶ್ವರನೇಂ ಕೃತಾರ್ತ್ಥನೋ (ಕಶಿ. V. ೨೦-೫೪ ; 1080) ; ಪಡುವ ಚಂದಣಗೇರಿಯೆಕ್ಕಸಂದಿಯಿಂ ಬಡಗವಾರಿಯಿಂ ಮೂಡಣ ಮನೆಯು ನಿವೇಶಣಮಂ ಬಾವುಬೆಯು ದೇಗುಲದಿಂ × × × (ಕಶಿಇ. XIV. ೦೨೯-೯೬ ; 1176) ; ಬಸನಬ್ಬೆ ಬಳಿ ಬಾದುಬೇ ಕಿನಿಸಂಬರಿ [ಪಾಠಾಂ. ಬಾದುಮ ಕಿನಿಸಂಬಲಿ. ಬಾದುಂಬೆ ಕಿನಿಸಂಬಲಿ] ಜಲದ ಜಕ್ಕಿ ಜಾತ್ರಯ ದೈವಂ ಮನೆದೈವಮೆಂಬಿವೆಲ್ಲಂ ಜನಭಕ್ತಂಗೆಡದ ಕಾಲ ಕಪ್ಪಂ ಎಪ್ಪಂ (ಕಶಾರ. ೪೬೯). ೨. ಬಲಂ ಗೊಣ್ಡು ಸಮಸ್ತ ಪೋದನೆಸವೀ ಗ್ರಾಮಾಧಿಪಂ ಸಂತ ಬಾದುಬೆ ದೀಪಾವಳಿ ಕಾರ ಪುಣ್ಣಮೆಯೆನಿಪ್ಪೀ ಮೂಱುಪರ್ವ್ವಂಗಳೊಳ್ (ಕಶಿಇ. XI-I. ೫೨-೬೬ ; 1007) ; ಬಾದುಬೆ ಕಾರ ಪುಣ್ಣಮಿ ದೀಪಾಳಿಗೆ ಮೂಱುಪರ್ವ್ವ

ದೊಳಂ ಪ್ರತ್ಯೇಕವೊನ್ದು ಗದ್ಯಾಣ (ಎಇ. XX, ೬-೩೩; 1012). ಬಾದುಮೆ: ೧. ಹರವಳ್ಳಿಕಾರ್ಜುನಂಗಪ್ಪವೂಜೆಯ ಕೊಟ್ಟು ಪಸುಸೂತ್ರದೊಳಗಿರ್ದ ಬಾದುವೆ[ಹಾಣಂ. ದುವಿ, ದುವೆ, ಧುವೆ]ಯ ಕಟ್ಟಿ . . . ಕೈಲಾಸಕ್ಕೆ ಹೊ.ಗಿ (ಸಿದ್ಧರಾ. ೬-೬೦) ; ಸೊನ್ನಲಿಗೆಯ ಮಲ್ಲಿಕಾರ್ಜುನದೇವಸ್ಥಾನದ ಒಳವಲಯದಲ್ಲಿ ("ಪಸುಸೂತ್ರ") ಬಾದುಮದೇವತೆ ಇದ್ದಳೆಂಬುದು ಇದರಿಂದ ತಿಳಿಯುಬರುತ್ತದೆ (ಸಂಕೋಶ. ೦೪೩). ಬಾದುವೆ: ೧. ಕ್ರಿ. ಶ. ೧೨೦೩ರ ಶಾಸನದಲ್ಲಿ 'ಬಾದುವೆಯ ನಾಯಕ' ಎಂಬ ವ್ಯಕ್ತಿಯ ಹೆಸರಿದೆ . . . ಇಲ್ಲಿ ಬಾದುವೆದೇವತೆಯ ಹೆಸರನ್ನು ಕಾಣಬಹುದು (ಸಂಕೋಶ. ೦೪೩). ೪. ಬಾದುಬ್ಬೆಯೆಂಬ ದೇವತೆಯ ದೇವಸ್ಥಾನ : × × × ಕುಡಿಸುದೆ ಚೌಯ್ಮಂ ಅಯ್ದು ಬ್ರಹ್ಮಪುರಿಯ ಬಾ[ದು]ವೆಯ ಕಾಳಗಿಗಳ ಕೈಯಲು × × × ಮಂ ಪಾದಪ್ರಕ್ಷಾಳನಂ ಮಾಡಿ ಧಾರಾಪೂರ್ವಕವಾಗಿ ಬಿಟ್ಟರು (ಎಕ. XV, ೬೨-೩೭ ; 1186). ಬಾಳುಬೆ : ೧. ಪಶ್ಚಿಮದೊಳ್ಪುಷ್ಕರಿಣಿ ವಾಯುವ್ಯದೊಳ್ಗೋಣೇಶ್ವರದೇವರ ತೋಂಟಂ ಉತ್ತರದೊಳ್ ಬಾಳುಬೆಯೇರಿ (ಎಕ. VIII, ಸಾಗರ. ೦೦೯-೬೦ ; 1042) ; ಸಾಗರತಾಲ್ಲೂಕಿನ ಶಾಸನವೊಂದರಲ್ಲಿ 'ಬಾಳುಬೆಯೇರಿ' ಎಂದಿದೆ. ಈ 'ಬಾಳುಬೆ' ಎಂಬುದು ಬಹುಶಃ 'ಬಾದುಬೆ' ಎಂದಿರಬೇಕು (ಸಂಕೋಶ. ೦೪೩).

ಬಾದಮಿಅಮವಾಸೆ = ಬಾದುಬ್ಬೆಯ ಉತ್ಸವ ನಡೆಯುವ ವೈಶಾಖಮಾಸದ ಅಮಾವಾಸ್ಯೆ : ವೈಶಾಖಮಾಸದ ಅಮಾವಾಸ್ಯೆಗೆ 'ಬಾದಮಿಅಮವಾಸೆ'ಯೆಂದು ಉತ್ತರಕರ್ನಾಟಕದ ರೂಢಿಯ ಹೆಸರು (ಕಜಾ.ಶಿ. ೯೩); ಬಾದಮಿಅಮವಾಸೆಯಲ್ಲಿ ಬಾದಾಮಿಯಲ್ಲಿ ಬನಶಂಕರಿಪೂಜೆ ನಡೆಯುತ್ತದೆ (ಕಜಾ.ಶಿ. ೩೦). ಬಾದಮಿನೈವೇದ್ಯ=ವೈಶಾಖದ ಅಮಾವಾಸ್ಯೆಯಂದು ಆಚರಿಸುವ ಬಾದುಬ್ಬೆಯ ಹಬ್ಬದಲ್ಲಿ ಮಾಡುವ ಎಡೆ: ನದಿಯಿಂದಲಾಗಲಿ ಹೊಲದಿಂದಲಾಗಲಿ ಐದು ಚಿಕ್ಕ ಕಲ್ಲುಗಳನ್ನು ಆಯ್ದು ತಂದು ... ಮನೆಯ ಯಜಮಾನ ಅವುಗಳನ್ನು ಪೂಜಿಸಿ ಹೂರಣದ ಹೋಳಿಗೆಯ ನೈವೇದ್ಯ ಮಾಡುವನು . . . ಪ್ರತ್ಯೇಕವಾದ ಎಡೆಯಲ್ಲಿ ಬಡಿಸುವ ಈ ನೈವೇದ್ಯವನ್ನು 'ಬಾದಮಿನೈವೇದ್ಯ' ಎಂದು ಹೇಳುವರು (ಸಂಕೋಶ. ೦೪೩). ಬಾದುಂಬೆಯ ಕಟ್ಟೆ=ಬಾದುಬ್ಬೆಯೆಂಬ ದೇವತೆಯ ಹೆಸರಿನಲ್ಲಿರುವ ಕೆರೆ (?) : ಬಾದುಂಬೆಯ ಕಟ್ಟೆಯಿಂ ಮೂಡ ಹಿರಿಯಗೋಣೆಯಿಂ ಬಡಗ ಕೆಂಗಾಡು ಮತ್ತರೆರಡು (ಎಕ. IX-i, ೩೨೬-೩೩; 1209). ಬಾದುಬ್ಬೆಯ ಪರ್ವ, ಬಾದುಂಬೆಯ ಪರ್ವ=ವೈಶಾಖದ ಅಮಾವಾಸ್ಯೆಯಂದು ಉತ್ತರಕರ್ನಾಟಕದಲ್ಲಿ ಆಚರಿಸುವ, ಬಾದುಬ್ಬೆಯೆಂಬ ದೇವತೆಯ ಒಂದು ಹಬ್ಬ : ಆ ನಗಿಸಿದ ಪಗರಣಿಗಂಗೆ ಪಿರಿದು ಕಸವರವನಿತ್ತೊನಂದಿಂದಿತ್ತ ಬಾದುಬ್ಬೆ[ಹಾಣಂ. ೦ಬ್ಬೆ]ಯ ಪರ್ವಮುಂ ಪಗರಣದಾಟಪಾಟಮುಮಾದುವು (ಕಜ್ಞಾ.ಕಾ. ೦೦೬-೨೦) ; ಬಾದುಬ್ಬೆಯ ಪರ್ವ್ವದನ್ದು ಪೆರ್ಗ್ಗಡೆ ಗೊಪಗರಣದ ದ್ರವ್ಯಮೆಣ್ಣತ್ತು (ಕಇಇ. ೯೬-೦೮-೨೪; 932) ; 'ಬಾದುಂಬೆಯ ಪರ್ವ'ವೆಂದು ಶಾಸನಗಳಲ್ಲಿ ಹೇಳಿರುವ ಹಬ್ಬ ಈ ದೇವಿಯ ಜಾತ್ರೆಯ ಕಾಲವೆಂದು ತೋರುತ್ತದೆ (ಕಜಾ.ಶಿ. ೩೦). ಬಾದುಬ್ಬೆಯ ಪಾಳು, ಬಾದುಂಬೆಯ ಪಾಳು=ಬಾದುಬ್ಬೆಯೆಂಬ ದೇವತೆಯ ದೇವಸ್ಥಾನಕ್ಕೆ ಬಿಟ್ಟ ಭೂಮಿ,—ಜಮೀನು : ಶ್ರೀಮತ್ತ್ರಿಪುರುಷಪಣ್ಡಿತದೇವರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಕಿಸುಕಾಡೆಪ್ಪತ್ತ ಬಳಿಯ ಬಾದುಬ್ಬೆಯ ಪಾಳನವರ ವಿದ್ಯಾರ್ತ್ಥಿತಪೋಧನರ ಗ್ರಾಸಕ್ಕಂ ದೇವರ ಪೂಜೆಗಂ . . . ಶ್ರೀ ಬಲ್ಲವರಸಕ್ಕೊಟ್ಟರ್ (ಎಕ. XI-i, ೬೦೩-೨೯; 1075); ಈ ದೇವಿಗಾಗಿ ಬಿಟ್ಟ ಭೂದತ್ತಿಗಳಿಗೆ 'ಬಾದುಂಬೆಯ ಪಾಳು' ಎಂಬ ಹೆಸರಿತ್ತೆಂದು ಊಹಿಸಬಹುದು (ಕಜಾ.ಶಿ. ೩೦). ಬಾದುಬ್ಬೆಯಮಾವಾಸ್ಯೆ, ಬಾದಮಿಅಮಾವಾಸ್ಯೆ, ಬಾದುಂಬೆಅಮಾವಾಸ್ಯೆ, ಬಾದುಂಬೆಯಮಾವಾಸ್ಯೆ = ಬಾದಮಿಅಮವಾಸೆ : ಜಯಸಂವತ್ಸರದ ಬಾದುಬ್ಬೆಯಮಾವಾಸ್ಯೆ ಸೂರ್ಯ್ಯಗ್ರಹಣದನ್ದು . . . ಶ್ರೀಖಣ್ಡಕ್ಕಂ ಧೂಪಕ್ಕಂ ಮೊದಲ್ಗೊಟ್ಟ ಗದ್ಯಾಣಂ ಪದಿನೈಯ್ದು (ಎಕ. XI-i, ೬೨-೬೦; 1064); ಈಗಲೂ ಆ ಅಮಾವಾಸ್ಯೆಯನ್ನು 'ಬಾದಮಿಅಮಾವಾಸ್ಯೆ' ಎಂದು ಕರೆಯುತ್ತಿರುವುದು, ಆ ದಿನ ಬನಶಂಕರಿಗೆ ವಿಶೇಷಪೂಜೆ ನಡೆಯುವುದು—ಇವೆಲ್ಲಾ ಬನಶಂಕರಿ (=ಬನದಬ್ಬೆ) ಮತ್ತು ಬಾದುಬ್ಬೆ ಒಂದೇ ಎಂಬುದನ್ನು ಸೂಚಿಸುವುದಿಲ್ಲವೇ ? (ಸಂಕೋಶ. ೦೪೯); ವೈಶಾಖ ಬಹುಳಅಮಾವಾಸ್ಯೆಯನ್ನು ಬಾದುಮೆ, ಬಾದುಂಬೆಅಮಾವಾಸ್ಯೆ ಯೆನ್ನುವರು. ಈ ಅಮಾವಾಸ್ಯೆಯ ದಿವಸ ಬಾದಾಮಿಯ ಬನಶಂಕರಿಯ ಉತ್ಸವ ನಡೆಯುತ್ತದೆ (ಖಜ್ಞಾ. ೯೬); ಬಾದುಂಬೆಯಮಾವಾಸ್ಯೆಯಾದಿವಾರಂ ಸೂರ್ಯ್ಯಗ್ರಹಣದಂದು . . . ಎಲೆಯ ಪೇಜಿನ ಸುಂಕಮಂ ದೇವಸಿಂಗಜೀಯರ ಪುತ್ರಂ ನೀಲೇಶ್ವರಪಣ್ಡಿತದೇವರ ಕಾಲಂ ಕರ್ಚ್ಚಿ ಧಾರಾಪೂರ್ಬ್ಬಕ(ಂ)ಮ್ಮಾಡಿ ಕೊಟ್ಟಂ (ಎಕ. IX-i, ೦೯೯-೨೦; 1119). ಬಾದುಬ್ಬೆಯ ಹಬ್ಬ=ಬಾದುಬ್ಬೆಯ ಪರ್ವ : ಬಾದುಬ್ಬೆಯ ಹಬ್ಬವು ಮೂಲತಃ ಜೈನರ ಹಬ್ಬ ಎಂದು ಸಾಧಿಸುವ ಪ್ರಯತ್ನವಿದೆ. ಆದರೆ ನಮಗೆ ಮುಖ್ಯವಾದದ್ದು ಈಗಿನ ರಂಜಾನ್ ಹಬ್ಬದಲ್ಲಿನಂತೆ ಬಾದುಬ್ಬೆಯ ಹಬ್ಬದಲ್ಲಿಯೂ ವೇಷಗಳನ್ನು ಕಟ್ಟುತ್ತಿದ್ದರು ಎಂಬುದು (ಸಂಕೋಶ. ೦೪೩). ಬಾದುಮೆಯ ಮದುವೆ=ಬಾದುಬ್ಬೆಯೆಂಬ ದೇವತೆಯ ಮದುವೆ; ಅಸಂಭವವಾದುದು : ಗೀಜಗನ ಗೂಡು ಕೋಡಗದಣಲ ಸಂಚಿ ಬಾದುಮೆಯ ಮದುವೆ ಬಾವುಲ ಬಿದ್ದಿನಂತೆ ಜೂಜುಗಾಜಿನ ಮಾತು ಬೀದಿಯ ಗುಂಡನ ಸೊಬಗು ಓಡಿನೊಳಗಗೆಯ ಹೊಯ್ದಂತೆ (ಏಕಕ. ೩೩೩); 'ಬಾದುಮೆಯ ಮದುವೆ' ಎಂಬುದು 'ಗಣಪತಿಯ ಮದುವೆ' ಎಂಬ ಉಕ್ತಿಗೆ ಸಮಾನವಾದುದು (ಸಂಕೋಶ. ೦೪೮). ☞ ಈ ಶಬ್ದದ ವ್ಯುತ್ಪತ್ತಿಯ ಬಗೆಗೆ ಬೇರೆಬೇರೆ ಊಹೆಗಳಿವೆ. ಶ್ರೀ ಪಿ. ಬಿ. ದೇಸಾಯಿಯವರು 'ವಸಂತಾಂಬೆ' ಎಂಬುದರಿಂದಲೂ ಶ್ರೀ ಡಿ. ಎಲ್. ನರಸಿಂಹಾಚಾರ್ ಅವರು 'ಭದ್ರಾಂಬೆ' ಎಂಬುದರಿಂದಲೂ ಮತ್ತು ಡಾ. ಎಂ. ಚಿದಾನಂದಮೂರ್ತಿಯವರು 'ಬನದಬ್ಬೆ' ಎಂಬುದರಿಂದಲೂ ಈ ಶಬ್ದವು ಬಂದಿರಬೇಕೆಂದು ಊಹಿಸಿದ್ದಾರೆ.

[ ? ]

ಬಾದುಮಯ 'ಬಾದುಮಯ್ಯ' ನೋ.

ಬಾದುಮಯ್ಯ, ಬಾದುಮಯ (ನಾ). ೧. ಒಂದು ದೇವತೆಯ ಹೆಸರು (?) : ಅರಗಿನ ರೂಪನುರಿಯ ಕೊನೆ ಪತ್ತಿದಂತಾಗೆ ಬಾದುಮಯ್ಯನ ಮೆಯ್ಯಂ ಬಜಿಸಿಡಿಲು ಪೊಡೆದಂತಾಗೆ (ಕಂರಾರ. ಹ. ೯೦೩-೦೩); ನಮ್ಮ ದೇವರು ಮಾರಿ ಮಸಣಿ ಬೀರ ಮೈಲಾರ ಉಡಿಸಿಕಾರಿ ಬಾದುಮಯ್ಯ ವೀರನ ಬಡಲಾಟ (ಕೃಕಸೂ. I. ೨೦೯). ಬಾದುಮಯ : ೨. ಒಬ್ಬಾತನ ಹೆಸರು (?) : ಅದಕೆ ಒಡೆಯ ಮಲೆಯರ ವಾಣಿಸಯೂ ಬಾದುಮಯಂಗೆ ಮತ್ತರು ೨ (ಕಾಕ್ಶಾ. ೩೬-೩೦; 1049).

[ಬಾದುಮೆ(<ಬಾದುಬ್ಬೆ)+ಅಯ್ಯ₁]

ಬಾದುಮೆ 'ಬಾದುಬ್ಬೆ' ನೋ.

ಬಾದುರ 'ಬಹಾದುರ್' ನೋ.

ಬಾದುವೆ 'ಬಾದುಬ್ಬೆ' ನೋ.

ಬಾದುಶ 'ಪಾತಶಹ' ನೋ.

ಬಾದೂಷಾ (ನಾ). ಒಂದು ಬಗೆಯ ಸಿಹಿತಿಂಡಿ : ಜಿಲೇಬಿ, ದಂರೋಟ್ . . . ಬಜ್ಜಿ, ಗರಮಾಗರಂ ಬಾದೂಷಾ—ಏನು ಕೊಡಲಿ ಸಾರ್ ? (ಮುಶಾಂ. ೩೬). [<- ಹಿಂ. ಬಾಲೂಸಾಹೀ, ಬಾಲೂಶಾಹೀ]

ಬಾದೆಯ (ನಾ). ಒಬ್ಬಾತನ ಹೆಸರು : ಶ್ರೀಗಜ್ಜುಮಹಾಪಾಯ್ಯಾ

ಮಗನ್ಪಾದೆಯನ್ನಿರಟ್ಟ ತುಱುಗೊಳ್ಳಾದಿ ತುಱುವನಿಕ್ಕಿ ಸುರಲೋಕದ ಭೋಗಿ ಆದನ್ (ಎಕ. IX. ಹೊಸಕೋ. ೮೯-೨; ಸು. ೭೫೦).
[? + ಅಯ್ಯ₁ (<ಅಯ್ಯ₁)]

**ಬಾದೆಯಹುಲ್ಲು** (ನಾ). ಒಂದು ಬಗೆಯ ಹುಲ್ಲು : ಮೂಡಲ ದೇಶಕ್ಕೆ ಹೋದ್ಮಲ್ಲೊ ಗೀಜುಗ ಬಾದೆಯಹುಲ್ಲ ತಂದ್ಮಲ್ಲೊ ಗೀಜುಗ (ಜಾಕಪ. ೦೯). [? + ಹುಲ್ಲು (<ಪುಲ್)]

**ಬಾದೋವೋಜ** (ನಾ). ಒಬ್ಬಾತನ ಹೆಸರು : ಬಾದೋವೋಜ ಮಾಡಿದ (ಎಕ. VIII. ಸೊರಬ. ೯-೩; ಸು. ೩೦೦). [? + ಓಜ₁ (<ಒವಜ್ಝ)]

**ಬಾದ್ಲಿ** 'ಬಾದಲಿ₁' ನೋ.

**ಬಾಧ** (ನಾ). ೧. ನೋವು ; ವೇದನೆ. ೨. ಕಷ್ಟ ; ತೊಂದರೆ. ೩. ಹಿಂಸೆ; ಕಾಟ; ಕಿರುಕುಳ. ೪. ಕೆಡುಕು ; ಹಾನಿ. ೫. ಅಪಾಯ; ಆಪತ್ತು. ೬. ತಡೆ ; ಅಡ್ಡಿ. ೭. ವಿರೋಧ ; ಪ್ರತಿಷೇಧ. ೮. [ನ್ಯಾಯಶಾ] ಹೇತ್ವಾಭಾಸದಲ್ಲಿ ಹೇಳಿರುವ ವ್ಯಭಿಚಾರ, ವಿರುದ್ಧ, ಸತ್ಪ್ರತಿಪಕ್ಷ, ಅಸಿದ್ಧಿ ಮತ್ತು ಬಾಧ ಎಂಬ ಐದುಬಗೆಯ ದೋಷಗಳಲ್ಲಿ ಒಂದು : ಸವ್ಯಭಿಚಾರ ವಿರುದ್ಧ ಸತ್ಪ್ರತಿಪಕ್ಷ ಅಸಿದ್ಧಿ ಬಾಧಗಳೆಂಬ ಹೇತ್ವಾಭಾಸದೋಷಗಳಿಲ್ಲದಿರುವಿಕೆಯುಂ (ಅಪೇಕ. ೦೬); ಬಾಧ ಎಂದರೆ ಪ್ರಮಾಣಜ್ಞಾನದ ವಿಷಯವು ಅಸತ್ ಎಂದು ಸಿದ್ಧಿಸೋಣ (ಜಾಕಕ್ತ. ೩೨೫). ೯. ಮನುಷ್ಯನು ಆಚರಿಸಬೇಕಾದ ನಾಲ್ಕುಬಗೆಯ ಆಶ್ರಮಗಳ ವಿಷಯದಲ್ಲಿರುವ ಮೂರು ರೀತಿಯ ಮತಗಳಲ್ಲಿ ಒಂದು : ಆಶ್ರಮವಿಷಯದಲ್ಲಿ ಬಾಧ ವಿಕಲ್ಪ ಸಮುಚ್ಚಯವೆಂದು ಮೂರು ಮತಗಳಾದವು. ಬಾಧವಕ್ಷವು ಜೈಮಿನಿ ಸಮ್ಮತವು (ಹಿಂಜಾ. ೦೩೪). [ಸಂ.]

**ಬಾಧಕ** (ನಾ). ತೊಂದರೆ ; ಕಷ್ಟ : ಒಬ್ಬನಿಗೆ ತಲೆ ಸರಿಯಿಲ್ಲ ಅನ್ನುತ್ತಾರೆ. ಏನು ಬಾಧಕ ಅದರಿಂದ ? (ಜುಕಕ್ಕ. ೨೬೦) ; ಅಳದಿದ್ದರೆ ಮಗುವಿನ ಶರೀರವೃದ್ಧಿಗೆ ಬಾಧಕವೆಂದು ವಿಕಾಸವಾದಿಗಳ ಮತ (ಜಜಾಕ್ಕ. ೦೬೦). [ಸಂ.]

**ಬಾಧಾಕರ** (ನಾ). ತೊಂದರೆಯನ್ನುಂಟುಮಾಡುವುದು ; ಉಪದ್ರವಕಾರಿಯಾದುದು : ದೃಷ್ಟಾದೃಷ್ಟಬಾಧಾಕರಮಿದುವೆ ಪರಪ್ರೇಯಸೀಪ್ರೇಮಂ (ಶಂಕಾಶಪ. ೦೦-೬೦). [ಸಂ.]

**ಬಾಧಿಸು** (ಕ್ರಿ). ೧. ಕ್ಲೇಶಪಡಿಸು ; ಸಂಕಟಪಡಿಸು : ಶೂಲೆ ಬಾಧಿಸುತಿಪ್ಪ ಸಂಕಟಕಾಱದಿಳೆಯೊಳು ದೊಪ್ಪದೊಪ್ಪನೆ ಕೆಡೆದು ಹೊರಳುತ ಮಿಗೆ ನರಳುತಿರಲು (ಅಕಪು. ೯೯-೨೬) ; ಪಾತಕದ್ರೋಹಿಗಳ ಮುಂದಲೆಯ ಪಿಡಿದೆಳೆದುಕೊಂಡೊಯ್ದು ಕೈಕಾಲ ಸಂದುಗಳ ಬಿಡಿಸಿ ಕೊಟ್ದಿಟ್ದಿದಂದು ಬಾಧಿಸುವುದು (ಚಾಪು. ೩೬-೯೦); ರಮಣೀಯವಾದ ಆ ಗಿರಿಯನ್ನು ನೋಡಿ ರಾಮನ ಮನಸ್ಸನ್ನು ಆ ವ್ಯಥೆ ಬಾಧಿಸುವುದು ನಿಂತುಹೋಯಿತಂತೆ (ಸಕಜಾಟೂ. ೦೦೦). ೨. ಪೀಡಿಸು ; ಹಿಂಸೆಮಾಡು : ಸಾಧುಗೆ ಸಾಧು ಮಾಧೂ(ಧು)ರ್ಯ್ಯಗ್ನೆ(ಂಗೆ) ಮಾಧೂ(ಧು)ರ್ಯ್ಯಂ ಬಾಧಿಪ್ಪ ಕಲಿಗೆ ಕಲಿಯುಗವಿಪರೀತನ್ (ಇಕ. X. ಬಂ-೫; ೭೬೬ರ ಕಕ); ಹೆಱರ ಬಾಧಿಸುವುದು ತನು ಕೆಡುವನ್ನಕ್ಕ ಮಾಣದು (ಬಸಕ. ೦೦) ; ಬಾಧಿಸುವುದೀ ದೇಹಮಂ ನರೆ ತೆರೆಗಳೆನ್ನು (ಕೃಬಾಕಾ. ೦೦-೩೬). ೩. ನಿಗ್ರಹಗೊಳಿಸು ; ದಂಡಿಸು : ಸಾಧಿಸುವೊಡಮಸ್ಮಚಯಮನಿನ್ನುಂ ತನುವಂ ಬಾಧಿಸು ತಪೋಗ್ನಿಯಿಂದಾರಾಧಿಸು ನೀಂ ಮಗನೆ ದುರಿತಹರನಂ ಹರನಂ (ಶಂಕಪಾ. ೬-೬).
[ಬಾಧ + – ಇಸು₁]

**ಬಾಧುರ** 'ಬಹಾದುರ್' ನೋ.

**ಬಾಧೆ** (ನಾ). ೧. ನೋವು ; ವೇದನೆ : "ಪೀಡಾ, ಬಾಧಾ . . . ಅಭೀಲಂ, ೯ ಸಾಮಾನ್ಯವಾಗಿ ದುಃಖದ ಹೆಸರುಗಳು" (ಸಿದ್ಧಾಂತಿ. ೬೩). ೨. ಹಿಂಸೆ; ಕಾಟ ; ಕಿರುಕುಳ : ಇಂಚೆಯ ಪಾಪಿನ ಬಜದ ಕಳಿಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ವಿರಿಂಚಿಯ ಕೆಯ್ಪಡಿವೊಲಾದುವಾ ನಾಡಗಗ್ಗಳ್ (ಪಂಕಪಾ. ೯-೩೦) ; ಜನವೆಲ್ಲ . . . ದೇಶದೊಳಗಾದ ಖಗಮೃಗದ ಬಾಧೆಯನು ಧರಣೀಶನೆನಿಸುವ ಹಂಶ್ಚಂದ್ರರಾಯಂಗೆ ತವಮ್ಮಾಸಱೀವಂತೆ ಬಿನ್ನೈಸುತ್ತ ಕೈಮುಗಿಯುತಿರ್ದರು (ಹಕಾಕ. ೩-೬೮); ಇನ್ನು ಕೆಲವರು ಇದು ಪಿಶಾಚಿಯ ಬಾಧೆಯೆಂದೂ ಹೇಳತೊಡಗಿದರು (ಕಾಮೂಕ. ೦೯ ಕಥಾಸಾರ). ೩. ಅಪಾಯ ; ಆಪತ್ತು. ೪. ನಿಷೇಧ ; ನಿರೋಧ : "ಆಪತ್ತಿನೊಳು ನಿಷೇಧದೆ ಬಾಧೆಯೆಂದೆಂಬುದು" (ಮುಂಗಿಪಾ. ೦೯೩-೨೬). ೫. ಅಡಚಣೆ ; ಅಡ್ಡಿ. ೬. [ನ್ಯಾಯಶಾ] ವಾದದಿಂದ ಖಂಡಿಸುವಿಕೆ ; ಆಕ್ಷೇಪಣೆ. [ಸಂ. ಬಾಧಾ]

**ಬಾಧೆಬಡಿಸು** (ಕ್ರಿ). ಸಂಕಟಪಡಿಸು ; ಹಿಂಸಿಸು : ಋಣವೆಂಬ ಸೂತಕವು ಬಹುಬಾಧೆಬಡಿಸುತಿದೆ ಗುಣನಿಧಿಯೆ ನೀ ಎನ್ನ ಕಡೆಹಾಯಿಸಯ್ಯ (ಪುರಂದ. ದಾ. ೨-೨೧ ಕಡ್ಡಿ). [ಬಾಧೆ+ಪಡಿಸು]

**ಬಾಧ್ಯ₁** (ಗು). ೧. ನೊಂದ ; ವೇದನೆಗೊಳಗಾದ. ೨. ಪೀಡೆಗೊಳಗಾದ ; ಹಿಂಸೆಗೊಂಡ. ೩. ವಿರುದ್ಧವಾದ ; ಹೊಂದಿಕೆಯಾಗದ : ಪ್ರಕಟಂ ವಾಂಧಿವೇಲ ವಾರ್ಧಿಗೆ ಜಲೌಘಸ್ಪರ್ಧೆಯೊಳ್ ಬಾಧ್ಯಬಾಧಕಭಾವಂ ನೆಗಟಲ್ಕೆ ನಿಲ್ಲ ತೆಱದಿಂದೀ ಸೃಷ್ಟಿಗನ್ಯೋನ್ಯ ಸೈನಿಕಸಂಗ್ರಾಮದೆ ಬಾಧ್ಯಬಾಧತೆ ಪುಟ್ಟಲ್ ನಿಲ್ವನಾನಿಂತು ಸೃಷ್ಟಿ ಕರಂ ಪೆರ್ಚದೆ ದೇವ ತಾಳ್ದು ನಿಲಲಾಜಿಂ ತನ್ಮಹಾಭಾರಮಂ (ಜಗಪು. ೦-೪೦). ೪. ಪ್ರತಿಭಟಿಸಲು ಯೋಗ್ಯವಾದ ; ವಿರೋಧಿಸಲು ತಕ್ಕುದಾದ. ೫. ಅಸಂಬದ್ಧವಾದ ; ಅಸಂಗತವಾದ. [ಸಂ.]

**ಬಾಧ್ಯ₂** (ನಾ). ೧. (ಆಸ್ತಿಯ ಮೇಲಿರುವ) ಹಕ್ಕು. – ಸ್ವಾಮ್ಯ : ತಂದೆಯ ಆಸ್ತಿಯ ಮೇಲೆ ಮಗನಿಗೆ ಬಾಧ್ಯವುಂಟು (ಬಂಕ). ೨. ಕಟ್ಟು ; ಬಂಧನ ; ಸಂಬಂಧ : "ಬಧನಂ, ಬಧನೀಯಂ, ಬಧ್ಯಂ, ಬಾಧ್ಯಂ, ಈ ೪ ಕಟ್ಟು" (ಶಾಕಕ್ಕ. ೦೬೦). ೩. ಹಕ್ಕನ್ನು ಹೊಂದಿರುವ ವ್ಯಕ್ತಿ ; ಸ್ವಾಮ್ಯವನ್ನು ಪಡೆದಿರುವ ವ್ಯಕ್ತಿ : ಹ್ಯಾಗಾದರೂ ಹೆಣ್ಣುಮಕ್ಕಳು ನೆರಮನೆಗೆ ಬಾಧ್ಯರಾಗುವರು (ಕಕಾಕುಂ. IV, ೬). ೪. ಹೊಣೆಗಾರಿಕೆಯನ್ನು ಹೊಂದಿದ ವ್ಯಕ್ತಿ ; ಜವಾಬ್ದಾರ : ಮಂಡಲೇಶ್ವರರಾದ ಶ್ರೀರಂಗರಾಯರು ನಮ್ಮನ್ನು ರಕ್ಷಿಸಲು ಬಾಧ್ಯರಾಗಿದ್ದಾರೆ (ಶ್ರೀಜಾಪು. ೦೨೬). ೫. ಆಸ್ತಿ ; ಸ್ವತ್ತು : "ದಾಯ-ಬಾಧ್ಯ" (ಗಂಗಾಪು. ೦೬೩).

ಬಾಧ್ಯಪಡು = ಸಂಬಂಧಪಡು ; ನಂಟುತನವನ್ನು ಹೊಂದು : ಅಜಿಂಪಾಸನೂ ದಿಲ್ಲಿಯಲ್ಲಿಯೂ ಆಗ್ರಾದಲ್ಲಿಯೂ ಇದ್ದ ಉಮರಾಗಳೂ ಲುತ್ಪುಉನ್ನೀಸಗೆ ಬಹಳ ಬಾಧ್ಯಪಟ್ಟವರಾಗಿದ್ದರು (ಕಕಾಕುಂ. ೬೩).

[< ಸಂ. ಬಾಂಧವ್ಯ?./ ತಮಿ. ಪಾತ್ತಿಯಮ್; ಮಲ. ಬಾಧ್ಯಮ್; ತುಳು. ಬಾಧ್ಯ=ಸಂಬಂಧಿಸಿದ; ತೆಲು. ಬಾಧ್ಯಮು]

**ಬಾಧ್ಯತನ** (ನಾ). ಒಡೆತನ ; ಹಕ್ಕು; ಅಧಿಕಾರ : ಸ್ವಾಮ್ಯ=ಬಾಧ್ಯತನ, ಒಡೆಯತನ (ಗಂಗಾಪು. ೪೯೯). [ಬಾಧ್ಯ₂+ –ತನ]

**ಬಾಧ್ಯತೆ** (ನಾ). ೧. ಸಂಬಂಧ ; ನಂಟುತನ : ಈ ಬಾಧ್ಯತೆಯನ್ನು ಪಂಡಿತರು ಅನುಗ್ರಹಿಸಬೇಕು (ಜಾಂಕಪಾ. ೬೬). ೨. (ಆಸ್ತಿಯ ಮೇಲಿರುವ) ಹಕ್ಕು ; ಅಧಿಕಾರ : ರಾಜ್ಯದ ಮೇಲೆ ನ್ಯಾಯವಾಗಿದ್ದ ತನ್ನ ಬಾಧ್ಯತೆಯನ್ನು ಸ್ಥಿರಪಡಿಸಿಕೊಂಡನೆಂದೂ ವ್ಯಕ್ತವಾಗುತ್ತದೆ (ಕಜಾಗಿ. ೦೩೬); ಲಾಜೆಯನ್ನು ಎತ್ತಿ ವಧುಗಳ ಬೊಗಸೆಗಳಿಗೆ ತುಂಬುವ ಬಾಧ್ಯತೆ ವಧುಗಳ ಸೋದರರಿಗೆ ಮಾತ್ರ ಸೇರಿದ್ದು (ಜಾಂಕಪಾ. ೦೦೦). ೩. ಹಕ್ಕಿಗೆ ಒಳಗಾಗಿರುವುದು ; ಸ್ವಾಮ್ಯಕ್ಕೆ ಒಳಪಟ್ಟುದು : ಬಾಧ್ಯತೆಗೆ ಬಾಧ್ಯನಾದರ ಚೋದ್ಯವೇನು? (ಗಾದೆ). ೪. ಹೊಣೆಗಾರಿಕೆ; ಕರ್ತವ್ಯ : ಒಪ್ಪಂದಗಳು ಮತ್ತು ಇತರ ಅಂತರರಾಷ್ಟ್ರೀಯ ಕಾನೂನುಗಳಿಂದ ಉದ್ಭವಿಸಿದ ಬಾಧ್ಯತೆಗಳು(obligations) ತೃಪ್ತಿಕರವಾಗಿ

ಗೌರವಿಸಲ್ಪಡುವಂತಹ ವಾತಾವರಣವನ್ನು ಕಾಪಾಡಿಕೊಂಡು ಬರಬೇಕು (ಅಂತಕಂ. ೧೫). [ಬಾಧ್ಯ$_2$+ —ತ್ವ$_3$]

**ಬಾಧ್ಯತ್ವ** (ನಾ). ಕಳೆದುಕೊಳ್ಳುವಿಕೆ; ನಿರರ್ಥಕಗೊಳಿಸುವಿಕೆ : ಬಾಧ್ಯತ್ವ ವೆಂದರೆ ತನ್ನ ಶಕ್ತಿಯನ್ನು ಕಳೆದುಕೊಳ್ಳುವಿಕೆ, ಅಷ್ಟೆ (ದ್ವೈತ್ಯಾರೋ. ೦೬೯). [ ಸಂ. ]

**ಬಾಧ್ಯಸ್ತ** (ನಾ). ೧. ಹಕ್ಕನ್ನುಳ್ಳ ವ್ಯಕ್ತಿ ; ಅಧಿಕಾರವಿರುವ ವ್ಯಕ್ತಿ : ಗಂಡಸುವುಗ ಹುಟ್ಟಿದರೆ . . . ತಾನೂ ಸಕ್ಕರೆ ಹಂಚಲು ಬಾಧ್ಯಸ್ಥಳಲ್ಲವೇ ? (ಗಂಪಹಾಯ. ೨೫೮). ೨. ಹಕ್ಕುದಾರ; ಒಡೆಯ : (*). ೩. (ಯಾವುದಾದರೂ ಒಂದು ಕರ್ತವ್ಯವನ್ನು ಮಾಡಲು) ನಿಯೋಜಿತನಾದವನು : ಹೊಣೆಗಾರ: (*). 'ಬಾಧ್ಯಸ್ಥ' ಪರಾ. [ ಬಾಧ್ಯ$_2$+ —ಸ್ತ ]

**ಬಾಧ್ಯಸ್ಥ** (ನಾ). ಹಕ್ಕುದಾರ ; ಉತ್ತರಾಧಿಕಾರಿ : ಚೊಚ್ಚಲ ಮಕ್ಕಳಾದ ಆಲ್ಬರ್ಟ ಎಡ್ವರ್ಡ ಎಂಬವರು ಚಕ್ರವರ್ತಿನಿಯವರ ಪಟ್ಟಕ್ಕೆ ಬಾಧ್ಯಸ್ಥರು (ಜಾಂಜಂಹಯ. ೯-೩); ರಾಂಪುರದಲ್ಲಿ ದೂರದ ನೆಂಟರು, ಬಾಧ್ಯಸ್ಥರು ಇದ್ದಾರೆ ಅಂತ ಯಾರೋ ಹೇಳಿ ಇಲ್ಲಿಗೆ ಕಳಿಸಿದರಂತೆ (ಮರೀ. ೯೦). 'ಬಾಧ್ಯಸ್ತ' ಪರಾ. [ಬಾಧ್ಯ$_2$+ —ಸ್ಥ]

**ಬಾನ್**$_1$ (ಕ್ರಿ). ಮಡಕೆ, ಕುಡಿಕೆ ಮುಂತಾದುವುಗಳನ್ನು ಮಾಡು ; ಕುಂಬಾರನ ಕೆಲಸವನ್ನು ಮಾಡು : "ಬಾನ್-ಕುಲಾಲಕರಣೇ, ಆಕಾಶ, ಗೋಮಯಪಿಂಡಪುಂಜಯೋಃ (ಸಗಣಿಯ ಉಂಡೆಯ ರಾಶಿ)" (ಕಮರಾ); ತಾನಕ್ಕರೆಯನೊಪ್ಪಿ ಬಾಂದೊಡವೆಯೊಡೆವನೇ ಹಿಂಗಿಸಿದ ಕಾಲಂ ? (ಗಿರಿಬಿಂ. ೦೨೩-೪೩).

[ದೇ.॥ ತಮಿ. ಮಣ್ಣು, ಪನೈ=ಆಕಾರ ಕೊಡು ; ಮಲ. ಮನಯು, ಮನಿಯು ; ತೆಲು. ವಾನು ; ಪರ್ಜಿ. ವಾನ್]

**ಬಾನ್**$_2$, **ಬಾಂ**$_1$, **ಬಾನು**$_1$ (ನಾ). ೧. ಮಡಕೆ, ಕುಡಿಕೆ ಮುಂತಾದುವು : 'ಬಾನಿಗ' ಪರಾ. ೨. ಮಣ್ಣಿನ ಪಾತ್ರೆಗಳ ರಾಶಿ ; ಮಡಕೆ, ಕುಡಿಕೆಗಳ ಒಟ್ಟಿಲು : (*). ೩. (ಒಣಗಿದ) ಸಗಣಿಯ ರಾಶಿ ; ಬೆರಣಿಯ ರಾಶಿ: "ಬಾನ್—ಕುಲಾಲಕರಣೇ. ಆಕಾಶ, ಗೋಮಯ ಪಿಂಡಪುಂಜಯೋಃ (ಸಗಣಿಯ ಉಂಡೆಯ ರಾಶಿ)" (ಕಮರಾ). **ಬಾಂ**$_1$ : ೧. 'ಬಾಂಬ' ಪರಾ. **ಬಾನು**$_1$ : ೨. "ಸಗಣಿಪಿಂಡದ ಪುಂಜದಲ್ಲಿ ಪ್ರಕಾಶದೊಳ್ ಪಿಂಗೆ ಕುಂಬದೊಟ್ಟಿಲೊಳ್ ಬಾನು" (ಕನ್ನಡಂ. ೦೦೦). ೩. ಮೇಲಿನ 'ಶಬ್ದಮಂ' ಪ್ರಯೋಗವನ್ನು ನೋಡಿ. [<ಬಾನ್$_1$]

**ಬಾನ್**$_3$, **ಬಾಂ**$_2$, **ಬಾನ**$_2$, **ಬಾನು**$_3$ (ನಾ). ೧. ಆಕಾಶ ; ಗಗನ : "ಅಗಸ . . . ಮುಗಿಲ್ವಟ್ಟೆ, ಬಾನ್—ಈ ೬ ಆಕಾಶಂ" (ಕಕಾ. ೯೯-೯೦); ನಾಲವನೆಪ್ಪೆ ನೋಡಿ ಬಾನೊಳ್ಳುಣದಾಡೆ ದೇವತತಿ ನೋಡೆ (ಶಾಂತಿಪು. ೩ ೬೯) ; ಆಗಳ್ ಬಾನತ್ತಣಿನರಬ್ಬಿಟೆ ಸುರಿದತ್ತು ರಾಮನ ಸಿರದೊಳ್ (ಅಜಿತ. ೩೬-೨೦) ; ಬಾನಾಚೆಯಿಂ ವಿಶ್ವಸತ್ತ್ವ ತಾನಿಳಿದಿಳೆಗೆ ನಾನೆನುವ ಜೀವನದಿ ರೂಪುಗೊಂಡಿಹುದೋ ? (ಮುಕುಳ. ೦೩೬). ೨. ಸ್ವರ್ಗ: 'ಬಾನಂದ'. 'ಬಾನಾಳ್ಕೆ' ಪರಾ. ೩. ಆಕಾಶದಿಂದ ಸುರಿಯುವ ಮಳೆ : 'ಬಾನಗೇಡು' ಪರಾ. **ಬಾಂ**$_2$ : ೧. ಪೊಂಗಾಲಿ ಪಿಂಜುಗೆ ಪೞಯಿಗೆ ಬಾಂಗೆ ಪೆಡಂಮಗುಟಿ . . . ರಥಂಗಳ್ ಪಂದುವು ಬಳಾಬ್ಧಿ ಸಕ್ಕಾಕೃತಿಯೊಳ್ (ಜಗಂ. ೬-೬೨) ; ಜೋಡಿಸುವೇಗಿ ತುರಗವಂ ತನ್ನ ತೇಗ್ಗದು ಗಾಡದಿಂ ಬಾಂಗೆತ್ತಿಕೊಂಡೊಯ್ಯದಿರನಬ್ಜಸುಮಿಂ (ಕೃಬಿಜಾ. ೯-೦೯) ; ಆಗಳಸುರುಳ್ಳ ಬಾಂಗಿಟ್ಟನೀ ಮೊರೆಯಂ (ಗಿರಿಬಿಂ. ೦೨೦-೨೪). ೨. 'ಬಾಂಬಸು', 'ಬಾಂಬೆಣ್' ಪರಾ. **ಬಾನ**$_2$ : ೧. ಬಾನ ದೊಳಾಗಸವಟ್ಟಿಗರ್[ಪಾಠಾಂ. ಬಾನೊಳು ಸಗ್ಗವಟ್ಟಿಗ, ಬಾನೊಳಾಗಸ ವಟ್ಟಿಗ] ನೆಲದೊಳು ಮಾನವಬಲ ಕಿಕ್ಕಿಱಿದು ಸಾನುರಾಗದೊಳೆಯ್ದಿತು ಪುಂಡರೀಕಿಣಿಗಾ ನರನಾಥನೊಂದಾಗಿ (ಶ್ರೀಪಾಂ. ೦೪-೦೬) ; ಬಾನದಿಂದಿಳಿದು ಬಂದಾ ಬಾಲಭಾಸ್ಕರನೀ ನೆಲದೊಳು ನಡೆವಂತೆ (ಪ್ರಭುಲಿಂ. ೨-೬೩) ; ಇಟ್ಟಿರಡಿಯಿಂ ಯತಿಗತಿ ಪುಟ್ಟದೆ ಬಾನವನೊರಲ್ದು ನಿಟ್ಟಿಸಿ ಹಸಿರಿಂದಟ್ಟಿಸಿ ಹಲಗೆಯ ತೊಟ್ಟನೆ ಪಟ್ಟರಿಸುವ ಹೊಟ್ಟುಗಬ್ಬಿಗಂ ಕಬ್ಬಿಗನೇ (ಶಿಶು. ೯೦). **ಬಾನು**$_3$ : ೧. ತನ್ನ ದಾಂಗುಡಿಯ ಗೊನೆ ಬಾನು ಮಣ್ಣೊಂದಾಗಿ ಒಂದಾಗಿ ಕೆಲವಾಗಿ ಇರುವ ಹರುಹಿನ ತುಂಬ . . . ಏಂಚಿತ್ತು ಒಂದೇ ಬಿಂಬ (ಪಂಚಕ್ಷಂ. ೩೨-೩) ; ನಿನ್ನ ಪಾಳ ಬಾನಿನಲ್ಲಿ ಗುಡುಗು ಸಿಡಿಲುಗಳಷ್ಟೇ ಇಲ್ಲ ಇಂದ್ರಚಾಪವೂ ಇದೆ (ಕರ್ನಾಂ. ೨-೦೬). ೨. ಬಾನ್ ಕೊಂಡ ಕೃಷ್ಣನ್. ನೆಲನೆಲ್ಲಮನ್ ಗೆಲ್ದು, ಬಾನುಮನ್ ಕೊಂಡ ಕೃಷ್ಣನ್ । (ಹೊಂಗಳು. ೨೯-೦೦).

**ಬಾನಗಣ್ಣು**=ಸೂರ್ಯ: ಬಾನಗಣ್ಣನ ಬಿಸಿಯ ಹಯಿಯಿರದಲೆ ಕುಡಿದು ಬೆಳಕ ನೀರಡಿಕೆಯನು ಹುಟ್ಟಿಸುವದು (ಸೂರ್ಯಕಾ. ೦-೩). **ಬಾನ ಜೊಡರ್** =ಆಕಾಶದ ದೀಪ ; ಸೂರ್ಯ ; "ನೇಸಱ್" (ಕಹಿಂ. ೩. I. ೯). **ಬಾನದರ್** = ದೇವತೆಗಳು ; ಸುರರು : ಬಾನದರುಘೋಷಯಿಂದು ಪೊಗಳೆ ಪೆರ್ಬನವನು ಕೃಶಾನು ಪೊಕ್ಕಂತೆ ಸಂಹರಿಸಿದಂ ಸತ್ಯಸಂಧಾನಿ ಗಾಂಗೇಯಂ (ಲಕ್ಷ್ಮೀಶಾ. ೯-೬). **ಬಾನವರ್**=ಬಾನದರ್ : ಬಾನವರೊರ್ಮೆ ಕಾಡಲ್ ಮಸೆಯಲ್, ತಪ್ಪದ ಕಾಡುಗುಮುದಙಾ ಕಾಟವಿಟ್ (ಅಂತಿಗೂ. ೨೬-೩೩೯); ಸಟೆಯ ಕರೆದವರ್ ಬಾನವರ್, ಪುಮಿಮಾತ್ಯಾಸ್ ಮುನ್ನೆಣಿಕೆಯುಳ್ಳವನ್ ಎಂದು (ಶಿವಕೃ. ೬.೦೦೬). **ಬಾನುದ್ದಂ**=ಆಕಾಶದ ವರೆಗಿರುವ ಎತ್ತರ; ಆಕಾಶದಷ್ಟು ಉದ್ದ : ಬಾನುದ್ದಂ ; ಏನಾಯ್ತು (ಕಹಿಂ. ೬೯ ಪ್ರಯೋ); ಬಾನುದ್ದಂಬರವೊಗೆದಂದೇನೆಸೆದುದು ರತ್ನವಪ್ರಂ (ಪುಷ್ಪಾಸ್ರ. ೦೦-೨೩); ತಣಿವೀವುದು ಬಾನುದ್ದಮಪ್ಪ ಪೇರೊಡಲವರ್ಗಂ (ಕಮ್ಮಾಪು. ೩೯೨ ಪ್ಯಾಖ್ಯಾ). **ಬಾನುದ್ದಮಾಗು**=(ಆಲಂ) ಅತಿಯಾಗಿ ಗರ್ವಿಸು.–ಅಹಂ ಕಾರಪಡು : ಆನುಂ ಬುಧರೊಡನೆ ಸ್ಪರ್ಧಾಸ್ಥಾನದೊಳಿರ್ದಪ್ಪೆನೆಂದು ಕುಕವಿಕದಂಬಂ ಬಾನುದ್ದಮಪ್ಪುದೇಕುದ್ಯಾನದೊಳೊಡನಿರವೆ ಕಾಗೆಯುಂ ಕೋಗಿಲೆಯುಂ (ಅಂತಾಶ. ೦-೨೬). [ದೇ.॥ ತಮಿ. ಮಲ. ವಾನ್, ವಾನವನ್ ; ತುಳು. ಕೊಡ. ಬಾನ, ಬಾಣ ; ತೆಲು. ಕೋಲಾ. ನಾಯ್ಕಿ. ವಾನ ; ಕೋತ. ವಾನ್ ; ಪರ್ಜಿ. ವಾನ]

**ಬಾನ**$_1$ ' ಪಾನೆ ' ನೋ.

**ಬಾನ**$_2$ ' ಬಾನ್$_3$ ' ನೋ.

**ಬಾನಂಗುಳಿಗೆ** (ನಾ). (ಒಣಗಿದ) ಸಗಣಿಯ ಉಂಡೆ ; ಬೆರಣಿ : ನಕಾರಕ್ಕೆ — ವಿಮಾನಂಬುಬು, ಬಾನಂಗುಳಿಗೆ (ಕಹಿಂದ. ೦೬೨ ಪ್ರಯೋ). ℗ 'ಶಮದ. ನ. ೧೮೩ ಅಡಿಟ' ಯಲ್ಲಿ ಈ ಶಬ್ದಕ್ಕೆ 'ನಕ್ಷತ್ರ' ಎಂಬ ಅರ್ಥವನ್ನು ಕೊಡಲಾಗಿದೆ. 'ಬಾಂಗುಳಿಗೆ' ಪರಾ. [<ಬಾನ್$_3$+ಗುಳಿಗೆ$_1$]

**ಬಾನಂಗುಟಿ**$_1$ 'ಬಾಂಗುಟಿ' ನೋ.

**ಬಾನಂಗುಟಿ**$_2$ (ನಾ). (?) : ಪುಟ್ಟ ಬಾಯ್ ಬೇಕರಿಯೋದಂತಿರ್ದ ಬಾನಂಗುಟಿ[ಪಾಠಾಂ. ಬಾನಂಗುಳಿ, ಬೆನ್ನಂಗುಳಿ] ಗಿಟಗಿಟಜಂತ್ರಂಬೊ ಲಾಗಿರ್ದ ಮೈ ಮೆಯ್ಸುರಿ ಚಿದ್ರೂಪಕ್ಕೆ ಪಕ್ಕಾಗಿರೆ ಚರಿಗೊಡಲ್ಪಂದ ನೊರ್ವಂ ಮುನೀಂದ್ರಂ (ಅರ್ಕಶೀ. ೬-೨): ℗ "ಇಲ್ಲಿ ಬರುವ ಬಾನಂಗುಳಿ ಎಂಬುದು ಮೈಯ ಒಂದು ಭಾಗವಿರಬಂತೆ ತೋರುತ್ತದೆ" (ಕಂಠಶೀ. ೯೯೦). [ ? ]

**ಬಾನಂಗುಟಿಗೆ** ? (?). (?) : ತಾನುಂ ಹಿಡಿಂಬೆಯುಂ . . . ಕೂಱಿದುಂ ತೇಗಿಯುಂ ಪಸಿಗೆವರಿದುಂ ಬವಳಿವರಿದುಂ ಬಾನಂ[ಪಾಠಾಂ. ಸಂ] ಗುಟಿಗೆವಱಿದುಂ ಸೂಲ್ಪರಿದುಮಾಡುವಾಗಳುಭಯಬಲಂಗಳ್ ಬೆಕ್ಕಸಂ ಬಟ್ಟು ನೋಡಿ (ಕಂಕಶಾ. ೦೨-೦೫೯ ಪ) ; "ಬಾನಂಗುಟಿಗೆ—ಒಂದು

ಬಗೆಯ ನಡಿಗೆ " (ಶಂಕರಾ. ೬೦೫) ; " ಬಾನಂಗುಳಿಗೆವರಿದುಂ–ನಕ್ಷತ್ರ ಮಂಡಲಕ್ಕೆ ನೆಗೆದೂ" (ಶಂಕರ. ೪೬೬).

**ಬಾನಂಚು** (ನಾ). ಭೂಮಿಯೂ ಆಕಾಶವೂ ಸೇರುವಂತೆ ಕಾಣುವ ಭಾಗ : ಕ್ಷಿತಿಜ : ದಿಗಂತ : ಕಣ್ಣು ತುಂಬುವ ಹೊರೆ ಬಾನಂಚಿಗೆ (ಶಂಕು. ೨೧ ೦೪). [ಬಾನ್₃ + ಅಂಚು₂]

**ಬಾನಂದ** (ನಾ). ಸ್ವರ್ಗದ ಸೊಬಗು; ದೇವಲೋಕದ ಮನೋಹರತೆ: ಬಾನಂದವನು ಸವಿದ ಸುಖದ ಯುದುಭೂವರ್ . . . ಕಲೆತೆಲ್ಲ ಬಂದುರ್ (ಹೊಂಗಳು. ೩೦-೧೨). [ಬಾನ್₃ + ಅಂದ]

**ಬಾನಕ್ಕಿ** ' ಬಾನ್ವಕ್ಕಿ ' ನೋ.

**ಬಾನಗಡಿ** ' ಭಾನಗಡಿ ' ನೋ.

**ಬಾನಗಿತ್ತಿ** ' ಬೋನಗಿತ್ತಿ ' ನೋ.

**ಬಾನಗೇಡು** (ನಾ). ಆಕಾಶದಿಂದ ಸುರಿಯುವ ಮಳೆಯಿಂದ ಉಂಟಾಗುವ ತೊಂದರೆ; ಅತಿವೃಷ್ಟಿಯಿಂದಾಗುವ ಕೆಡುಕು: ಆ ಮಂಡಚಿಸುಂ ಬಾನಗೇಡು ಬಜಗೇಡು ಎಂಬದೆ (ಕೌಶ್ಲಿ. ೦೪೩೨. ಉಡುಬಿ. ೩೦೬ ೨೨; 1293): ವರುಷಂಪ್ರತಿ ಬಾನಗೇಡು ಬಜಗೇಡುಯೆಂಸದೆ ೧೨ ಮುಡಿ ಅಕ್ಕಿಯುಸೂ . . . ನಡಸಿ ಬಹರು (ಕೌಶ್ಲಿ. IX—ii, ೪೪೪-೪೩ ; 1434).
[ಬಾನ್₂ (<ಬಾನ್₃) + ಕೇಡು]

**ಬಾನಲ್** (ನಾ). ೧. ಧಾರೆ; ಪ್ರವಾಹ : ಪೊವಟ್ಟ ಕಣ್ಬನಿಯ ಬಾನಲ ತಣ್ಣಸದೊಳ್ ಪಗಲ್ಪು ಪಾವಸೆಗೊಳೆ ಕಾರ ತಂದಲೊಳಗುಂದಲೆಯಾಗಿರೆ ನಟ್ಟು ಸೋರ್ವ ಪಾಟ್ಟಸದಿಯ ಪೆಣ್ಣ ಜೋಹದವೊಲೊಪ್ಪಿದಳೊರ್ವ ಳನಂಗರಾಗದಿಂ (ಶಾಂತಿಪು. ೮-೬೬); ಕಣ್ಣೀರ ಬಾನಲ್ಗಳಿಂ ಬಸಿವಸ್ಕಂ . . . ಪಿಸುಣಾಡಿತ್ತಸಮಾಸ್ತ್ರನಸ್ತ್ರಹತಿಯಂ ತತ್ಕಾಮಿನೀರೂಪಕಂ (ಲೀಲಾವ. ೪-೦೯೩) ; ಕಪೋಲದೊಳ್ ಬಳೆಯಿಸೆ ಬಾನಲಂ ಸುರಿವ ಬಾಷ್ಪಜಳಂ ಕರುಣಾರ್ದ್ರಹಾರವಂ ಬಳೆಯಿಸೆ ಬಾಯ ಬತ್ತುಗೆಯನೀರ್ದೆಗೆಟ್ಟುಬುತಂ . . . ಬಿಟ್ಟಳಂದಜತಸೇನೆ ನೃಪಾಲಪದಾಬ್ಜಮೂಲದೊಳ್ (ಶಂಕ್ರಕೃ. ೩-೦೦). ೨. ನಿಂತ ನೀರು; ಕಂಟೆ; ಬೆಂಚೆ : ನಾನಲ ಬಾನಲ ನೀರಂ ಮೀನೊಲ್ಲುಂ ರಾಜಹಂಸನೊಲ್ಲುಮೆ (ಚುಲ್ಲಕ. ೦೪-೦೬೩): ಮೆಳೆಯುಮಂ ನಾನಲುಮಂ ಬಾನಲುಮಂ ಸಡಿಂಬಮನಿಡಿಂಬಮಂ . . . ಬಳ್ಳಿಯುಮಂ ಕಳ್ಳಿಯುಮಂ ಕಳೆದು ಪೋಗಿ (ಲೀಲಾವ. ೬-೦೬ ವ). ೩. (ಕಣ್ಣೀರು, ಬೆವರು ಇತ್ಯಾದಿಗಳ ತೇವದಿಂದ) ಕದಡಿರುವ ಸ್ಥಿತಿ ; ಮಸುಕಾಗಿರುವಿಕೆ : "ಬಾನಲೆನೆ [ಶಾಕಾಂ. ಬಾಸುಳೆನೆ] ಮಸುಳಿದುದುಂ" (ಕಕಬೂ. ೬೦) ; ಉಣ್ಕೆ ಬೆವರ್ ನಸುಬಾನಲಾದ ಬೊಟ್ಟೆಂಬಿವು ಕೂಟದೊಂದು ಸವಿಯಂ ಪಿಸುಣಾಡುವುವೀ ಲತಾಂಗಿಯಾ (ಶಂಕ್ರಕೃ. ೮-೭೨) : ತಾಣುಂಬಟ್ಟೆಯಟ್ಟ ಚುಂಚುಬೆಮಂ ಕಡೆಗಣ್ಣೆಯ ಬಾನಲಾದ ಬೊಟ್ಟು (ಕಮರ. ೦೭೨ ಪ್ರಯೋ) ; ಚಿತ್ರಭುವನದ ಮಾಂಕನಿಂದ ಬಾನಲಾಗಿ. ರಣಧೀರನಿಗೆ ಅನಿಮಿಷಾಕ್ಷಿಯಾಗಿರುವಳು (ಶುಂಕ್ರಕ. ೦೪೩-೭). 'ಬಾನಲ್ಗೊಳ್'. 'ಬಾನಲ್ಪೊರೆ' ಪರಾ.

[ದೇ.೩ ತಮಿ. ವಾಣಲ್ = ವ್ಯವಸಾಯದ ಭೂಮಿ, ಸಮುದ್ರ. ಒಂದು ಬಗೆಯ ಸಸ್ಯ ; ಮಲ. ವಾಣಲ್ = ಒಂದು ಬಗೆಯ ಸಸ್ಯ]

**ಬಾನಲೆ** (ಕ್ರಿ). ಆಕಾಶದಲ್ಲಿ ತಿರುಗು. –ಸುತ್ತಾಡು: ಗಾಳಿ ಬಾನಲೆಯುತ್ತಿದೆ ದೆಸೆಗಟ್ಟಿ ತಿರುಕನಂತೆ (ಗೋಕುಂ. ೦-೦೩).

**ಬಾನಲೆವರ್** = ಆಕಾಶದಲ್ಲಿ ಸಂಚರಿಸುವವರು ; ದೇವತೆಗಳು : ಬನ್ನಿ, ಓ ಬಾನಲೆವರೆ, ನಮ್ಮ ತೋಟಕೆ, ನಂದನವನೆ ಎಂಬಸುವಿ ದಿವ್ಯ ತೋಟಕೆ (ಶಾಕಾ. ೨೦-೦). [ಬಾನ್₃ + ಅಲೆ₁]

ಬಾನಲ್ಗೊಳ್ (ಕ್ರಿ). ಮಸುಕಾಗು ; ಕಾಂತಿಹೀನವಾಗು : ಬೆಳ್ವೇಟ್ ಬಾನಲ್ಗೊಂಡ ವದನಮಂಡಲವುಮಂ ... ಜಡತೆಗೆಡೆಯಾದ ಯಾನಮುಂ ಬೆರಸು ಮೆಲ್ಲನಲ್ಲಿಗೆ ವಂದು (ಕುಸುಮಾ. ೦೩-೯೬ ವ). [ಬಾನಲ್ + ಕೊಳ್₁]

**ಬಾನಲ್ಪೊರೆ** (ಕ್ರಿ). (ಕಣ್ಣೀರಿನ) ಧಾರೆಯಿಂದ ಕೂಡಿಕೊಳ್ಳು : ವ್ಯಸ್ತ ಭೃಂಗಾಳಕಂ ಪ್ರಸ್ಖಲಿತತೋಯಮದ್ದೇಣ ಬಾನಲ್ಪೊರೆದಮಳಕಪೋಳ[ಸ್ಥಳಂ] . . . ಕಣ್ಗೊಳೆ ತಳಿರ್ವಸೆಯೊಳ್ಕಾಂತೆಯುಂತಿರ್ದಳಾಗಳ್ (ಶಾಂತೀಶ್ವ. ೦೦ ೬೯). [ಬಾನಲ್ + ಪೊರ್₂]

**ಬಾನಲ್ವರಿ** (ಕ್ರಿ). ಧಾರೆಯಾಗಿ ಸುರಿ. – ಹರಿ : ಬಲ್ಪೆಣನುರ್ಚಿ ಕೋಡೊಳಿರೆ ನೆತ್ತರುರೋಮುಗೆಯಿಂ ನಲಕ್ಕೆ ಬಾನಲ್ವರಿವನ್ನೆಗಂ ಪ್ರಹತ ದಿಂಡಿಜದತ್ತಿದೊಡಗ್ರಹಸ್ತದೊಳ್ (ಕಾವ್ಯಾವ. ೬೪); ಕಣ್ಣೀರೆ ಬಾನಲ್ವರಿದು ಬೆಳಪ ಮೈ ಮೈಯು ಸಂತಾಪದಿಂ ಬಾಡುವ ಪಕ್ಷ್ಮಂ (ಜಗ. ೦೦-೩) ; ಆ ನುಡಿಗೇಳುತಾಸಂದಾಶ್ರು ಕಣ್ಗೊಳು ಬಾನಲ್ವರಿದುದು (ಕಬಾಕಾಂ. ೩೬-೪೦).
[ಬಾನಲ್ + ಪರಿ₂]

**ಬಾನಳ್ಳಿ** (ನಾ). ಒಂದು ಹಳ್ಳಿಯ ಹೆಸರು : ಬಾನಳ್ಳಿಯ ಬನ್ನಿಯಮ್ಮ ಸೆಟ್ಟಿಯ ಮಗ ಪೆಮ್ಮಣ್ಣ (ಎಕ. IV(ii), ಶಾಮರಾ. ೦೦೩-೪ ; 10ನೆಯ ಶತ).
[ ? + ಹಳ್ಳಿ (<ಪಳ್ಳಿ₁) ]

**ಬಾನಾಡಿ** (ನಾ). ಆಕಾಶವನ್ನು ಮುಟ್ಟುವಂತೆ ಕಾಣುವಷ್ಟು ಎತ್ತರಕ್ಕೆ ಹಾರಾಡುವ ಒಂದು ಬಗೆಯ ಪಕ್ಷಿ : ಟಿಟ್ಟಿಭ : "ಬಾನಾಡಿಯೆಂದು ಟಿಟ್ಟಿಭಂ" (ಕಶಾ. ೩೦-೯೬) ; ಶುಕಂ ಬಾನಾಡಿ . . . ರತ್ನಖಗದಿರ್ಕುಂ ತದ್ವನಾಗೌಘದೊಳ್ (ರಾಜಶೇ. ೩-೩೯) ; ಈ ದೃಷ್ಟಿಯೀವ ಪೆಲ್ಲಿ ಕವಿಮ ಬಾನಾಡಿ (Skylark) ಒಂದು ಹಕ್ಕಿ ಮಾತ್ರವಲ್ಲ ; ಅದೊಂದು ಚೈತನ್ಯ (ಸೌಂದಕ. ೩೭). [ಬಾನ್₃ + –ಆಡಿ₁]

**ಬಾನಾವರ** (ನಾ). ಒಂದು ಬಗೆಯ ಸಸ್ಯ: ಬಾನಾವರ, ನೀರುಸಲ್ಲೆ. ಹನಿ (ಕೃಷಿಕ. ೩೯-೭೭೩). [?]

**ಬಾನಾಳ್ಕೆ** (ನಾ). ಸ್ವರ್ಗದ ಆಳ್ವಿಕೆ.– ರಾಜ್ಯಭಾರ : ಸರ್ವಜೀವಂಗಳುಂ ಮುಕ್ತಿಯುಂ ಕಾಣ್ಗೆ . . . ಸಾವುದೆಲ್ಲಾ ಸತ್ತು, ಬಾನಾಳ್ಕೆ ಪೂಣ್ಗೆ (ಹೊಂಗಳು. ೩೪-೨೦). [ಬಾನ್₃ + ಆಳ್ಕೆ]

**ಬಾನಿ**₁ 'ಪಾನಿ' ನೋ.

**ಬಾನಿ**₂, **ಭಾನಿ** (ನಾ). ಗಾಯನದ ರೀತಿ.–ಪದ್ಧತಿ : ಆ ರಾಗವನ್ನು ಹಾಗೆ ಹಾಡಬಹುದೆಂದು ಅವನು ತಿಳಿದಿರಲಿಲ್ಲ. ಆ 'ಬಾನಿ' ಅವನಿಗೆ ತುಂಬ ಹಿಡಿಸಿತ್ತು (ರಾಗತ. ೦೩೬). **ಭಾನಿ** : ನಿಮ್ಮ ಭಾನಿ ನೋಡಿದರೆ ನಿಮಗೆ ಕರ್ನಾಟಕಸಂಗೀತ ಚೆನ್ನಾಗಿ ಬರುತ್ತೆ ಎಂದು ಕಾಣುತ್ತೆ (ರಾಜಶಿಸ. ೯೦).
[←ಹಿಂ. ಬಾನಾ ; ಮರಾ. ಬಾಣೀ]

**ಬಾನಿಗ** (ನಾ). ಮಡಕೆಯನ್ನು ಮಾಡುವವನು ; ಕುಂಬಾರ : ನಾಗಪಣ್ಣೆ ತರ ಮಕ್ಕಳು ಮಲ್ಲಪನವರು ಕಾಳಿಭಕ್ತನ ಮಕಳು ಪುರಾಹಳಿ ಬಾನಿಗ ಕಾಲಭಕ್ತಗೆ . . . ವಿಕ್ರಮಸಂವತ್ಸರದ ಕಾರ್ತಿಕ ಶು ೧ ಪರಿಮಿಸ್ಸರ × × × (ಎಕ. III, ಮಳವ. ೦೦೯-೦೯ ; 1338) ; ಒಳ್ಳೂರಿಗಂ. ಬಾನಿಗಂ, ಪಟ್ಟಣಿಗಂ (ಕಪ್ರಾ.ಸು. ೪೦೯ ಪ್ರಯೋ). [ಬಾನ್₂ + – ಇಗ]

**ಬಾನು**₁ 'ಬಾನ್₂' ನೋ.

**ಬಾನು**₂ 'ಪಾನೆ' ನೋ.

**ಬಾನು**₃ 'ಬಾನ್₃' ನೋ.

**ಬಾನುಲಿ** (ನಾ). ೧. ಆಕಾಶದಲ್ಲಿ ಕೇಳಿ ಬರುವ ಶಬ್ದ : ಅಶರೀರವಾಣಿ: ನೀರಡಿಸಿದುದರಿಂದ . . . ಕೊಳದೊಳಗೆ ಕಾಲಿಟ್ಟನು. ಅಷ್ಟರಲ್ಲಿ ಒಂದು ಬಾನುಲಿಯು ಕೇಳಬಂದಿತು (ಹುಕ್ಕಶ್ರ. ೨) ; ನನ್ನ ದೇಹದ ಬೂದಿ ಯೊಳಗೊಂದಿನಿತು ಗಂಗೆಯ ಸೇರಲಿ. ಅಲ್ಲ ಧಾರ್ಮಿಕಸಂಬಕೆಯು ; ಅದು ನನ್ನ ಬಾಲ್ಯದ ಬಾನುಲಿ (ಶಂಕು. ೩೩-೨). ೨. ರೇಡಿಯೋ ; ಆಕಾಶವಾಣಿ : ಅದು ಸಂಗೀತಕಚೇರಿ ಇಲ್ಲವೆ ಬಾನುಲಿ ಇವುಗಳಿಂದ ಕೇಳಿ ಬರುವ ಸಂಗೀತವಲ್ಲ (ಶಕಶ. ೩೦) ; ಬಾನುಲಿಯೋ ಕಂಪಿಸಿ ವಿಶ್ವಪೆಲ್ಲ

ರ್ಕೋಪಿಸಿ ಏನನರ್ಥ ಏನನರ್ಥ ಎಂದು ಕೂಗೆಕೂಗಿತು (ಸೂರ್ಯಕಾ. ೦೦-೯). ೩. ನಿಸ್ತಂತುವಾರ್ತಾಪ್ರಸರಣವನ್ನು ಮಾಡುವ ಕೇಂದ್ರ : ಆಕಾಶವಾಣೀನಿಲಯ ; ರೇಡಿಯೋಕೇಂದ್ರ : ಬಾನುಲಿ ಅಧಿ ಉಪಅಧಿಕಾರಿಗಳಿಗೆ ಮಾತಿಗೊಮ್ಮೆ ಕೈಮುಗಿದು ನಗಲು ಸಹ ಸವುಡಿಲ್ಲದಾಯಿತು (ಹುಚ್ಚುಮ. ೦೯) ; ಬಾನುಲಿಯಲ್ಲಿಯ ತನ್ನ ಕಾರ್ಯಕ್ರಮವನ್ನು ಮುಗಿಸಿಕೊಂಡು ಮರುದಿನ . . . ರಹೀಮ ಊರಲ್ಲಿದ್ದ (ಎಂಟ್ಟ. ೩೩).

[ಬಾನ್₃ + ಉಲಿ₂]

**ಬಾನುಲಿಕೇಂದ್ರ** (ನಾ). = ಬಾನುಲಿ ೩ : ದೆಹಲಿಯ ಬಾನುಲಿಕೇಂದ್ರದೊಳಿರುವರು ಆ ರಾಮಕೃಷ್ಣನೆನುವವರು (೨೦ಚಾಶ. ೩೯-೭೦) ; ಬಾನುಲಿಕೇಂದ್ರದ ಮಂತ್ರಿಗಳಿಂದ ಹಿಡಿದು . . . ಪ್ರತಿಯೊಬ್ಬರಿಗೂ ಪತ್ರಗಳನ್ನು ತಂದ (ಹುಚ್ಚುಮ. ೦೬). [ಬಾನುಲಿ + ಕೇಂದ್ರ]

**ಬಾನೆ** 'ಪಾನೆ' ನೋ.

**ಬಾನೆಡೆ** (ನಾ). ಗಗನಸ್ಥಳ; ಆಕಾಶ : ಎಣ್ಣೊಡೆಯನ ಬಲ್ಲಂ . . . ಬಾನೆಡೆಯೊಳ್ ಸುಟಿದಾಡುವರೇನಱಿಯರೆ (ಕಣ್ಣಕಾ. ೦೬೭) ; ಏನೆಂಬೆನತುಳಸಂತೋಷಮುಂ ರೋಷಮುಂ ಬಾನೆಡೆಗೆ ನೆಗೆವ ಬೊಬ್ಬಾಟಮುಂ ಘಾಟಮುಂ . . . ದೇವಾಸುರರೊಳೆಸೆದುದು (ಶಂಪು. ೪೩-೩೬).

[ಬಾನ್₃ + ಎಡೆ₃]

**ಬಾನೆರೆಯ** (ನಾ). ದೇವತೆಗಳ ಒಡೆಯ ; ದೇವರಾಜ : ಮಣಿಮುಮೆನು ಮಾತಾಯಿ, ಬಾನೆರೆಯನೆರಗುವೆನು (ತರಂಗ. I. ೯೩೩).

[ಬಾನ್₃ + ಎರೆಯ (< ಎಱೆಯ)]

**ಬಾನೊಡತಿ** (ನಾ). ದೇವತೆ; ಅಪ್ಸರೆ : ಮುಡಿ ಮುಗಿಲ್ಮಿಣ್ಮಿಂಚುಗುರುತಾರೆ ಮೊಗ ಸಸಿ ಬಡನಡುವಾಗಸವಾಗೆ ಕಡುರಯ್ಯಮಾದಳು ಯ್ಯಲೆಯೊಳೊರ್ವಳು ಬಾನೊಡತಿ[ಶಾಕಂ. ಲಿ]ಯಂತೆ (ಕುರಾಣಂ. ೨೮-೩೩).

[ಬಾನ್₃ + ಒಡತಿ]

**ಬಾನೊಡಲ** (ನಾ). ಆಕಾಶವೇ ದೇಹವಾಗುಳ್ಳವನು; ಸ್ವರೂಪರಹಿತ : ಸುಡುವುದು ಪುದ್ಗಲ ಕೇಳ್ವುದು ಪುದ್ಗಲ ಕಡೆಗೆ ಪುದ್ಗಲ ಸ್ನೇಹ ಕೋಪ ಒಡಿದಿಪ ಸೋಂಕಿ ಸನ್ನೆದೆಯೊಳಿರಯ್ಯ ಬಾನೊಡಲಾ ಬಿಡುಬರಪುರುಷ (ಶರತ. ೯೬.೦೨೩).  [ಬಾನ್₃ + ಒಡಲ್ + – ಅ₇]

**ಬಾನ್ಕೆ** (ನಾ). "ಕುಂಬಾರಿಕೆ" (ಕೃಕಣ್ಣ) : ಬಾನ್ಕೆ, ಆನ್ಕೆ, ಸೀನ್ಕೆ (ಕಣ್ಣಾಸು. ೩೩೭ ಕೃಪೋ).  [ಬಾನ್₁ + – ಕೆ]

**ಬಾನ್ನವಿರ** (ನಾ). ಆಕಾಶವೇ ಕೂದಲಾಗಿರುವವನು ; ವ್ಯೋಮಕೇಶ ; ಶಿವ : "ಎಣ್ಮಯ್ಯಂ . . . ಬಾನ್ನವಿರಂ, ದಪ್ಪಕವಗೆಯುಂ . . . ಅಬ್ಬೊಗು — ಈ ೩೩ ಈಶ್ವರಂಗೆ ಪೆಸರ್" (ಶಶಾ. ೦-೯೭) ; ಬೆಳ್ಜಸಂದಳೆದೆಸೆದಿರ್ದ ಬಾನ್ನವಿರನೊಳ್ವರಿಜಂ ತಳೆದೊಪ್ಪಿ ತೋಱಿದಂ (ಬಾಶಿ. ೩-೯) ; ಬಾನ್ನವಿರನ ತಲೆಯಿಂಸಡರ್ದುಂ ಪಾರ್ವತಿಗೆ ಸವತಿಯಾಗಿಯುಂ . . . ಪಾತಾಲದತ್ತಣ್ಗೆ ಪೋದ ತ್ರಿಪಥಗೆ ಕಾಣಿಸಿಕೊಂಡಳ್ (ಅಶರಾಕ. ೩೦-೦೦).  [ಬಾನ್₃ + ನವಿರ್ + – ಅ₇]

**ಬಾನ್ನಿಗಾರ್ಲಕುಪ್ಪೆ** (ನಾ). ಒಂದು ಸ್ಥಳದ ಹೆಸರು : ಅನ್ತೆ ಬನ್ದು ಬಾನ್ನಿಗಾರ್ಲಕುಪ್ಪೆಯ ಪಾಟಿಒಬ್ಬಿಯ ಸನ್ದು ಪಾದರಿಯುಳ್ ಕೂಡಿತ್ತು (ಪ್ರು.ಅಂ. ೦೯೫೩.೦೦೬-೯೯ ; 720).  [?]

**ಬಾನ್ನೀಱೆ** (ನಾ). ಸ್ವರ್ಗಲೋಕದ ಹೆಣ್ಣು ; ಅಪ್ಸರೆ : ಮಱದಿ ಬಾನ್ನೀಱೆಯೊರ್ವಳ್ ಚಂಚಲವೃತ್ತಿಯಿನತ್ತಮಿತ್ತಂ ಸೋಲ್ಪ ಳ್ (ಅಶರಾಕ. ೦-೯).  [ಬಾನ್₃ + ನೀಱೆ]

**ಬಾನ್ನುಡಿ** (ನಾ). = ಬಾನುಲಿ ೧ : "ಎಲ್ವೆ ರಾಜ . . . ಇವಳ ಮನೆಗುಯ್ದು ಮಗಳೆಂದೆ ಪಾಲಿಸು" ಎಂದು ಬಾನ್ನುಡಿಯೊಂದಾದುದು (ಅಪ್ಪ್ರತ. ೩೦-೨೬).  [ಬಾನ್₃ + ನುಡಿ₂]

**ಬಾನ್ಬಟ್ಟೆ, ಬಾಂಬಟ್ಟೆ** (ನಾ). ಆಕಾಶದ ದಾರಿ ; ಅಂತರಿಕ್ಷಮಾರ್ಗ : ಗಿರಿಶನೊಡವರಸಿ ಗಿರಿಜಾತೆ ಬಾನ್ಬಟ್ಟೆಯೊಳು ಬರುತಲಿ (ಶಾಂಭ. ೦೨-೩೦) ; ಬಾನ್ಬಟ್ಟೆಯರೆವ ಬರ್ದಿಲರಾ ಚಾಚರೆಯೊಳೇಗಳುಂ ಕಳೆತಿರ್ದ ಶಿಖರಗಾತ್ರದ ಪರ್ದುಮುದಿಯನಂ ಕಂಡದಕೆ 'ಶಕುನಿಶಿರೆ' ಪೆಸರಿಟ್ಟರನ್ವರ್ಥಮಂ (ಶ್ರೀರಾಮ. ೩೩೩-೩೮). **ಬಾಂಬಟ್ಟೆ** : ಇಂದಿರವಿಲ್ಲ ಪಾಂಗನೆನಸುಂ ಬಾಂಬಟ್ಟೆಯೊಳ್ ಬೀಱ ಕಣ್ಗೆತ್ತಂ ಸೋಲಮನೀವ ರತ್ನವಸರಂ ಚೆಲ್ವಾದುದಾ ಬೀದಿಯೊಳ್ (ಅಭಿ. ೩೬) ; ಅಸಿಬ ತೊಲಗಿವ ಜಲವುಂಟೆ ಬಾಂಬಟ್ಟೆಯೊಳು (ಜಾಗಳು. ೦-೩೩).  [ಬಾನ್₃ + ಬಟ್ಟೆ₁]

**ಬಾನ್ಬರೆಹ** (ನಾ). (ಅಲಂ) ವಿಧಿಲಿಖಿತ ; ದೈವಸಂಕಲ್ಪ : ಆ ಭಯಂಕರ ಗಗನಶರಣನುಮಂ ನೋಡಿ, ದೊರೆ ದಶರಥಂ ತನ್ನ ಕೊನೆಗದೆ ಬಾನ್ಬರಹವೆಂದು ಬಗೆದು . . . ಒರೆದನಿಂತುಟು (ಶ್ರೀರಾಮ. ೩೬-೩೩).

[ ಬಾನ್₃+ಬರೆಹ ]

**ಬಾನ್ಬೆಳಕು** (ನಾ). ಆಕಾಶದ ಬೆಳಕು ; ಗಗನದ ಕಾಂತಿ : ಕಂಡರಾ ಬಿಡುಗಣ್ಣಾ ಬೆಳಕನ್, ಪೊಳದು ಪೊಳೆಯಿಸುತಿರ್ಪ ಬೀಳಿಯ ಬಾನ್ಬೆಳಕನ್ (ಹೋಂಗಳು. ೩೩-೦೨).  [ಬಾನ್₃ + ಬೆಳಕು₂ (<ಬೆಳಗು₂)]

**ಬಾನ್ಮಣಿ, ಬಾಮ್ಮಣಿ** (ನಾ). ೧. ಸೂರ್ಯ : "ತಾವರೆಗೆಳೆಯಂ, ಪಗಲ ಬೊಜಂಗಂ . . . ಬಾನ್ಮಣಿ . . . ಗರಂಗಳ್ದಾಣ್ಮಂ — ಈ ೧೧ ಸೂರ್ಯನ ಪೆಸರ್" (ಶಶಾ. ೯೬-೨೮) ; "ಬೆಂಗದಿರಂ . . . ಬಾನ್ಮಣಿ ಪಿಂಗದೆ ತಾಂ ನೇಸಱೆಂದು ತಾವರೆಗೆಳೆಯಂ" (ಕರಕಿ. ೯೦). **ಬಾಮ್ಮಣಿ** : ೨. (ಬೇಡಿದುದನ್ನು ಕೊಡಬಲ್ಲುದೆಂದು ಭಾವಿಸಲಾದ) ಸ್ವರ್ಗಲೋಕದ ಒಂದು ರತ್ನ ; ಚಿಂತಾಮಣಿ : ಮದನನ ಬಾಗದೇಳ್ಗೆಯನ ಭೀಕ್ಷಿಸಿ ಬಾಮ್ಮರಮುಂದು ನಾಡೆ ನಿಂದುದು ಬೆದರ್ದತ್ತು, ಬಾಂಬಸು ಕರಂ ಪಿಗೆ ಬಾಮ್ಮಣಿ ಕಲ್ಲಿದೆಂದು ತೋರ್ದುದು ಜಗದಲ್ಲಿ (ಶಂದ್ರಕು. ೦೩-೦೯೩).

**ಬಾನ್ಮಣಿಗಣ್ಣ** = ಸೂರ್ಯನನ್ನು ಕಣ್ಣಾಗುಳ್ಳವನು ; ಶಿವ : ಬಾನ್ಮಣಿಗಣ್ಣನು . . . ನೆಲದೆಳೆದನಾಗಿಯೂಣ್ಮಂ ಸಿದ್ಧನಂಜೇಶ ರಕ್ಷಿಸುಗೆ ಬಿಡದೆಮ್ಮನು (ರಾಶಂ. ೦-೯).  [ಬಾನ್₃ + ಮಣಿ₂]

**ಬಾನ್ಮೀನ್** (ನಾ). (ಆಕಾಶದ) ನಕ್ಷತ್ರ ; ತಾರೆ : ದಾರ, ಓ ಬಾನ್ ಮೀನ್ಗಳ ಮೇಟೀ ! (ಅಂತಿಗೂ. ೩೦-೦೦೬).  [ಬಾನ್₃ + ಮೀನ್₁]

**ಬಾನ್ಮೀನ** (ನಾ). = ಬಾನ್ಮೀನ್ : ನನ್ನಲ್ಲಿ ಏನೊ ಮಿಸುಗುತ್ತಲಿಹುದು ಬಾನ್ಮೀನ ಮಿಣುಕುವಂತೆ (ಕೃಪ. ೯-೮).  [ಬಾನ್₃ + ಮೀನ]

**ಬಾನ್ವಕ್ಕಿ, ಬಾನಕ್ಕಿ** (ನಾ). ಒಂದು ಬಗೆಯ ಹಕ್ಕಿ ; ಬಾನಾಡಿ : ನರ್ತಿಪ ನವಿಲು ಕೊಂಡಾಡುವ ಬಾನ್ವಕ್ಕಿ ಪತಿಯ ಬೇಡುವ ಗಿಳಿವಿಂಡು ದೈನ್ಯದಿಂ ಬಸ್ನಹ ಮಾಡುತಿರ್ದುವು ಮನ್ಮಥಗೆ (ಕೋಚಶ. ೩-೩೯). **ಬಾನಕ್ಕಿ** : ಬಾನಕ್ಕಿಯು ಬೇರೆ ತರದಿಂದ ತನ್ನ ಗೂಡು ಕಟ್ಟಿಕೊಳ್ಳುತ್ತದೆ (ಪುಂಬಯ. ೩-೦೦೯); ಸುಗ್ಗಿಯೆಡೆಗಯ್ದುದಾ ಬಾನಕ್ಕಿಯಂತೆ (ಗೊರೂಕಾ. ೯೯-೩೩೯).  [ಬಾನ್₃ + ಪಕ್ಕಿ]

**ಬಾಪು** 'ಬಾಪ್ಪು' ನೋ.

**ಬಾಪುರಿ, ಬಾಪೂರಿ, ಬಾಪ್ಪುರಿ, ಬಾಹುಪುರಿ, ಬಾಹುರಿ** (ನಾ). ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ ; ಕೇಯೂರ : "ಬಾಪುರಿ (ಬಾಹುರಿ)–ಬಾಹುಪೂರ(_ಯ) = ಕೇಯೂರ" (ಅಭಿಕೋ. ೩೦) ; ಕಂಕಿಲ್ಲಿಯ ಕರ್ಣಪೂರಮದಿರ್ಮುತ್ತಿಯ ಬಾಪುರಿ ಮೆಱೆವ ಪೂವಿನ ಸಂತೆ ಕರಂ ಮನೋಹರಂ (ಕೃಕಂ. ೯-೬೩) ; ಅಳವಡಿಸಿ ತೋಳ ಬಾಪುರಿ ಬಂದಿ ಭುಜಕೀರ್ತಿಗಳನು (ಬಪಹೋ. ೦೦-೨೩). **ಬಾಪೂರಿ** : ಗೌರಮ್ಮ ಉಟ್ಟಿಹಳು ಭರಜರಿ ಹೊನ್ನ ಹಾರ ತೋಳಿಗೆ ಒಂಕಿ ಬಾಪೂರಿ (ಅಭ್ಯಪು. ೦೯-೬೦) ; ಹರಡೇ ಕಂಕಣ ಕಮಲಾದೇವೀ ಒಂಕೀ ಬಾಪೂರೀ ನಿಟ್ಟಿನೊಳಗೇ ಕಂಪುಸಾಪೂ (ಹುಟ್ಟಿಶ. ೦೭೩). **ಬಾಪ್ಪುರಿ** : ಬಾಲೆಯ ಕಡಗ ಕಂಕಣ

ತೋರ ಬಾಪ್ಪುರಿ ಮೇಳೈಸಿರೆ ತನುವಿನೊಳು (ಶಶಿಕಾ. ೬ ೬೬). **ಬಾಹುಪುರಿ :** ಪೊಳೆವ ರತ್ನದ ಬಾಹುಪುರಿ ಭುಜಕೀರ್ತಿ ತೋಳ್ವಳೆ . , . ಧರಿಸಿ ಕಳಿವುವೆನು (ಗೀತಗೋ. ೬–೪) ; ವಜ್ರದ ಕಡಗಗಳಂ ರತ್ನಬಾಹುಪುರಿ ಉಂಗುರಗಳು . . . ತರಿಸಿ ಅವರನ್ನು ತಾನೇ ಅಲಂಕರಿಸಿ (ಮುದ್ರಾಮಂ. ೦೦೪). **ಬಾಹುರಿ :** ರನ್ನಬಾಹುರಿಯು ಕರಮೆಸೆವ ಜರ್ಝಾಣಿತಕಂಕಣ ಬೆರಳ ಮುದ್ರಿಕೆ ಚಿಳ್ಳುಗುರ ಸಿಂಗರವಿಡಾಯದೊಳ್ (ಅನಂತಾ. ೩ ೭ -೧೪) ; ಬಿಂಕದೊಡ್ಯಾಣ ಬಾಹುರಿ ಪಿಲ್ಲಿ ಮಂಟಿಕೆ ಕುಂತಳಮಾಂಗಿಯು ಧರಿಸುತಿಹ (ಶಂಕರಶ. ೦೯೯). ‘ಬಾಹುಪೂರಕ’, ‘ಬಾಹುಪೂರಯು’ ಪರಾ.

[<ಸಂ. ಬಾಹುಪೂರ./ ತೆಲು. ಬಾಹುಪುರಿ]

**ಬಾಪುರೆ** ‘ಬಾಪ್ಪುರೆ’ ನೋ.

**ಬಾಪೂರಿ** ‘ಬಾಪುರಿ’ ನೋ.

**ಬಾಪ್ಪು,** ಬಾಪು, ಬಾಪ್ಪ್ರ, ಭಾಪು, ಭಾಪ್ಪು (ಅ). ಶೌರ್ಯ, ಸಾಹಸಗಳನ್ನು ಕುರಿತು ಮೆಚ್ಚುಗೆ, ಸಂತೋಷ, ಅಭಿನಂದನೆ ಮುಂತಾದುವುಗಳನ್ನು ಸೂಚಿಸುವಾಗ ಬಳಸುವ ಒಂದು ಶಬ್ದ : ಪೊಗಳಲ್ ಬಾಪ್ಪುಪ್ಪುಕೆಯ್ಪಂ ನೃಪಗುಣಗಣಮಂ ರಟ್ಟಕಂದರ್ಪದೇವಂ (ಎಪಿ. XIII, ೩೬೦:೮ ; ೪೧೧) ; ಅರೆ ಪೋಯಾಜ ಬಾಪ್ಪೆಂದು ಹರಿಗನ ಗುರು ಪೊಗಟ್ಟಂ (ಶಂಕರಾ. ೨-೬೦) ; ಸ್ಥಿರನೀ ಬಾಪ್ಪುಮರಾದ್ರಿಯಿಂದಧಿಕ ಗಭೀರನೆ ಬಾಪ್ಪು (ಪ್ರಿಆ. ೧೯೪೩, ೦೩-೪; 1170). **ಬಾಪು :** ಉತ್ತುಂಗಂ ಬಾಪೆಂದು ಧಾತ್ರಿ ಕೈಮುಗಿವಿನೆಗಂ ಉಪವಾಸದೊಳ್ನಿಗಟ್ಟಂ ಪ್ರೋಷಧೋಪವಾಸನೆಂಬ ನಾಲ್ಕನೆಯ ಶ್ರಾವಕನಕ್ಕುಂ (ಧರ್ಮಾಮೃ. ೩-೦೩೮) ; ಬಾಪು ಭಾಗ್ಯವೆ ನರಜನ್ಮದೊಳು ಬಂದು ಗುರುಕರುಣವಂ ಪೊತ್ತು ಹರಕಿಂಕರನಾಗಿ ಶರಣರ ಬರವು ಪಡೆದೆಂ (ಏಕರ. ೬-೯೮). **ಬಾಪ್ಪ್ರ :** ಆ ಶೇಷನಂ ತಾಂ ಪಡೆಯಿಂ ಬಾಲಂಬರಂ ಬಾಲ್ಪುಮವು ಮಾಲೆವರಾಗ್ಗಳ್ಪಂ . . . ಏಕ್ಕಲಕ್ಷೋಣಿಪಾಳ (ಎಕ. VIII, ಸೊರಬ. ೦೩೮-೩೦ : 1145).. **ಭಾಪು :** ಒಬ್ಬರೊಬ್ಬರ ವಿಧಿಯನೊಮ್ಮಿಂಗೆ ಕೈಗೊಳ್ಳು ಉರ್ವೀಶ ಸೊಡ್ಡಳಾ ಭಾಪು ಭಾಪುರೆ (ಸರ್ವಜ್ಞ. ೧೬೩-೭೭೩) ; ಪೂತು ಸಾರಥಿ ಭಾಪು ಮಝಾರೇ ಸೂತ ಧಿರುಧಿರು ಎನುತ ರಥಿಕವ್ರಾತ ಏಗೆ ಬೋಳೈಸಿಕೊಂಡರು ಹಯದ ವಾಘೆಗಳ (ಕುಮಾವ್ಯಾ. ೪-೯೩); ದಶಾಸ್ಯನ ಪದವಿಘಾತಿಗೆ ಪೂತು ಮಝು ಭಾಪೆಂದುದಮರಗಣ (ತೊರರಾ. ೦-೦೩-೨೦). **ಭಾಪ್ಪು :** ಅಂಬರದೊಳ್ ನಿಂದು ಗಜಪ್ರಿಯಾಂಬರಚರರ್ ಜೀಯಯ್ಯ ಭಾಪ್ಪೆಂದು ಜೀಂಕರಿಪನ್ನಂ ವನದಂತಿ ಪೋರ್ವುದು ಸಿಪಾದ್ಯಾರೂಢದಿಂ ಪೋರ್ವವೊಲ್ (ಅರ್ಜುಚಿ. ೨-೦೦೦); ಭಾಪ್ಪೆನೆ ಪಂಚಾಚರಣಂಗಳಿಂ . . . ದಯೆಗೆಯ್ಗೆ ಸೂರಿಗಳಶೇಷರ್ ನಮ್ಮೊಳಾ ಚಾರವಂ (ಶಬರ. ೦-೩).

**ಬಬಾಪ್ಪು, ಭಾಪುಭಾಪು, ಭಾಪ್ಪುಭಾಪ್ಪು** (ದ್ವಿರುಕ್ತಿ): ವಂದಿಜನ ಕಲ್ಪಕುಜಾತನೆನಲ್ಕೆ ಸಾಲ್ದು ಲಕ್ಷ್ಮೀಸಿಳಯಂ ಬಬಾಪ್ಪೆಸೆದನೀ ಕಲಿಸಿಂದರ ಬಾಚಿಭೂಮಿಪ (ಕಇಶ. IX–i, ೨೨೬-೨೯; 1132): ಏಳಸದ[ಉ] ಭೋಗಾವತಿಯೆನೆರೆ (ಸ)ಲೆ ಭೋಗಿಗಳಿಂ ಬಬಾಪ್ಪು ಮಾಳಿಗೆ ರಯ್ಯಂ (ಎಪಿ. XV. ೩೨೦-೩೩; 1172): ಅಭಿನವಭಂಗಿಯೊಳರಿಯಂ ವಿಭು ಮಡಿಪದೆ ಭಾಪುಭಾಪೆ ನುತ್ತುತ್ಸವದಿಂ ನಭದೊಳ್ ಮುನಿಪತಿ ನಾರದಂ . . . ಹರಿಗಿಂತೆಂದಂ (ಜಗು. ೩-೪೮); ಗಗನದಿ ಸುರರು ಕೊಂಡಾಡಿದರು ರಾವುತರರಸನಹುದೋ ಭಾಪುಭಾಪೆಂದುದು ಸಮಸ್ತಜನ (ನಳಚ. ೬-೬); ಸಂಗರರಂಗಭೂಮಿಯೊಳ್ವರಿದುದು ಭಾಪ್ಪುಭಾಪ್ಪು ಮಝು ಭಾಪ್ಪೆನಲಿಂಣನ ಗಂಧವಾರಣಂ (ಎಕ. VIII, ಸಾಗರ. ೦೦೯-೨೭; 1079).

**ಬಾಪ್ಪುರಿ** ‘ಬಾಪುರಿ’ ನೋ.

**ಬಾಪ್ಪುರೆ,** ಬಾಪುರೆ, ಭಪ್ಪರೆ, ಭಾಪುರೆ (ಅ). ಶೌರ್ಯ, ಸಾಹಸಗಳನ್ನು ಕುರಿತು ಹೊಗಳುವಾಗ ಬಳಸುವ ಒಂದು ಕೊಂಡಾಟದ ನುಡಿ : ಬಾಪ್ಪುರೆ ಸಿಂಗಂ ಭಬ್ಯ(ವ್ಯ)ಸೇಬ್ಯ(ವ್ಯ)ಂ ಸು(ಶು)ಚಿ ಸು(ಶು)ಭಚರಿತಂ ಧಾತ್ರಿಯೊಳು ಪುಣ್ಯಪುಂಜ[ಂ] (ಇಆ. XVIII. ೩೯-೦೩ ; ೪೪೪); ನಾನಾವಿಷಯುತತಿಗೆ . . . ತನ್ನುಗ್ಗಡಿಗೆಯೆನೆ ಪದಿತಾಜ್ಞಾಸ್ಥಿತಂ ಮಾಡಿದಂ ಬಾಪ್ಪುರೆ ಪಮ್ಮನಂದತೇಜಂ (ಕಇಶ. XI–i, ೦೦೩-೭ ; 1076); ಭಲಾ ! ಭಲಾ ! ಭಲಾ! ಬಾಪ್ಪುರೇ! (ತಂದ್ರಸ. ೪೩-೦೪). **ಬಾಪುರೆ :** ಬಾಪು [ಶಾಕಾಂ. ಪ್ರ್ಪ]ರೆ ಲೋಕೋತ್ತರಮಹಾರ್ಹತವ್ರತಮದಂ ಬಣ್ಣಿಪ್ಪನೇವಣ್ಣಿಪಂ (ಸಮಾಶ. ೪ ೬೧); ಶಿವ ಶಿವ ಮಹಾದೇವ ಬಾ[ಶಾಕಾಂ. ಭಾ]ಪುರೇ ಸೌಂದರಾ (ಮಂಜಿಕ. ೧೭ ೦೯೩). **ಭಪ್ಪರೆ :** ಭಪ್ಪರೆ ! ಎರಡು ಹೆಚ್ಚಿನ ಕಣ್ಣು ಉಪಯೋಗಿಸಿದ್ದಕ್ಕೂ ಸಾರ್ಥಕ ಆಯ್ತು (ತಂಜಾಚ. ೩೨); ಭಪ್ಪರೇ ವಿದ್ಯಾಪ್ರವೀಣ! (ರಂಗವ. ೨೦೩). **ಭಾಪುರೆ :** ಭಾಪುರೇ ಕಾವ್ಯನಾಥಂ ಗಿರಿಜಾನಾಥಂ (ಗಿರಿಕ. ೧-೩೩); ಭಾಪುರೇ ಕೌರವಮಹಾರ್ಣವವೆನುತ ಮಕುಟವ ತೂಗಿದನು ಪಾರ್ಥ (ಕುಮಾವ್ಯಾಕ. ೦೪-೩೪); ಸಮ್ಯಕ್ಸಮೃದ್ಧಿ ಬಿಡದೆಸುವ ಚಾಪಗಾರರ ಪೊಗಳ್ವರು ಭಾಪುರೆ ಮಝು ಭಾಪುರೆಯೆಂದು ಸಗ್ಗಿಗರು (ಶಂತ್ರಸಾಂ. ೮-೪೧). ‘ಬಾಪ್ಪು’ ಪರಾ. [<ಬಾಪ್ಪು./ತೆಲು. ಬಾಪುರೆ, ಬಾಪುರೇ]

**ಬಾಬಂದಿ** (ನಾ). ಒಂದು ಬಗೆಯ ತೆರಿಗೆ: ಬಾಳ್ಗೊಳ್ಳಿಯೂರೊಡೆಯಂ ಪಶುಪತಿ ಧಟ್ಟಬಟ್ಟಿ ಬಾಬನ್ದಿಯ ಸಂಬನ್ಧದ ರಾಜದ್ರವ್ಯಮಾದುದೆಲ್ಲಮಂ ಬಿಟ್ಟರ್ (ಕಇಶ. IX–i. ೩೩-೦೦; ಸು. ೯೫೦). [ ? ]

**ಬಾಬತ್** ‘ಬಾಬತ್ತು’ ನೋ.

**ಬಾಬತು** ‘ಬಾಬತ್ತು’ ನೋ.

**ಬಾಬತ್ತು,** ಬಾಬತ್, ಬಾಬತು (ನಾ). ವಿಷಯ ; ಸಂಗತಿ : ಇನ್ನೊಂದಷ್ಟು ಖರ್ಚಿನ ಬಾಬತ್ತಿದೆ (ಸಂಸ್ಕಾರ. ೦೨೩) : ಸಲ್ಲಿ ದೀಪ ಇವ್ವುಗಳ ಬಾಬತ್ತೆಲ್ಲಾ ನಿಮಗೇ ಸೇರಿದ್ದು (ರಂಜಿಕ. ೪೨). **ಬಾಬತ್ :** ಮೊದಲು ಈ ಬಾಡಿಗೆ ಬಾಬತ್ ಫೈಸಲ್ ಮಾಡಿ (ರಂಜಿಕ. ೩). **ಬಾಬತು :** ಫಸಲಿನ ಮಾರಾಟದಿಂದ ಸಿಗುತ್ತಿದ್ದ ದ್ರವ್ಯ ಇತರ ಬಾಬತುಗಳಿಗೆ ವ್ಯಯವಾಯಿತು (ಶಾಸಗ. ೩೨): ನಿನ್ನ ಮುಖದ ಗೆಲವು ನೋಡಿದರೆ ಅದೇನೋ ಭಾರೀ ಬಾಬತ್ತೇ ಇದ್ದಾಗಿದೆ (ನಡೆದಾ. I. ೩೩೩).

[←ಅರ. ಪಾರ. ಹಿಂ. ಬಾಬತ್ ; ಮರಾ. ಬಾಬತ್, ಬಾಬದ್]

**ಬಾಬಯ್ಯ** (ನಾ). ಅಂಗೈ ಅಥವಾ ಪಂಜದ ಆಕಾರದಲ್ಲಿರುವ ಒಂದು ಪ್ರತೀಕ ; P “ಮಧ್ಯ ಇರಾನ್ ಮತ್ತು ಮೆಸೊಪೊಟೇಮಿಯವನ್ನು ಆಳಿದ ಬುವಯ್‌ಹಿ ಸಂತತಿಯವರು ಅಲಿಸಂತತಿಗೆ ಭಕ್ತಿಯಿಂದ ನಡೆದುಕೊಂಡು ಕರ್ಬಲದ ದುರಂತಪ್ರಕರಣದ ನೆನಪಿಗಾಗಿ ಕೂಟ ಕೂಡುವುದಕ್ಕೆ ಪ್ರೋತ್ಸಾಹ ಕೊಟ್ಟರು . . . ಇದೇ ರೀತಿ ಇಂಡಿಯಾದಲ್ಲೂ ವರ್ಷಂಪ್ರತಿ ಕೂಟಗಳು ಏರ್ಪಟ್ಟವು. ಆದರೆ, ಶೋಕಮೂಲವಾದ ಈ ಕೂಟಗಳು ಬರಬರುತ್ತ, ಇಂಡಿಯಾದಲ್ಲಿ ಉತ್ಸವಸಂದರ್ಭವಾಗಿ ಪರಿಣಮಿಸಿಬಿಟ್ಟವೆ. ಆದರೆ, ಹುಲಿಯ ವೇಷ ಕರ್ಬಲದಲ್ಲಿ ಸತ್ತು ಕೆಡೆದ ವೀರರ ದೇಹವನ್ನು ಕಾದುವೆಂದು ಹೇಳುವ ಹುಲಿಗಳಿಗೂ, ಅಲಾವಹ್ ಅಥವಾ ಹೊಂಡ ಹಾಳಯುದ ಹಿಂಭಾಗದಲ್ಲಿ ಹಾಕಿದ್ದ ಬೇಕಿಗೂ, ಪಂಜ ಅಥವಾ ಕೈ ಆಕಾರದ ಗುಡಿ (ಬಾವುಟ) ಮಹಮ್ಮದ್, ಆಲಿ, ಫಾತಿಮ, ಹಸನ್ ಮತ್ತು ಹುಸೇನರಿಗೂ ಚಿಹ್ನೆಯಾಗಿರಬಹುದು” (ಇಸ್ಲಾಂಸಂ. ೩೭೯): ಮುಸ್ಲೀಮರು ಹಿಂದೂಗಳ ಮಧ್ಯ ಬೀದಿಯಲ್ಲಿ ಸಣ್ಣಕುಂಡವನ್ನು ತೋಡಿ, ಎದುರಿಗಿದ್ದ ಕೃಷ್ಣಾಚಾರಿಯ ಮನೆಯ ಜಗುಲಿಯ ಮೇಲೆ ಅಂಗೈ ಆಕಾರವಿರುವ ಬಾಬಯ್ಯನ ಬೆಳ್ಳಿಯ ವಿಗ್ರಹಗಳನ್ನು ಸ್ಥಾಪಿಸಿ, ಹೂವು, ಗಂಧ, ಚಂದನದಿಂದ ಪೂಜಿಸುತ್ತಿದ್ದರು (ಮಂಗಳಾಂ. ೦); ಬಾಬಯ್ಯನ ಹಸ್ತಗಳನ್ನು ಕೆರೆಯಲ್ಲಿ ತೊಳೆದು ಅಲ್ಲಿ

ದಾಯ' ಪಾಡುತ್ತಾ ಅವನು ಬರುವಾಗ . . . ಹಿಂದುಗಳ ಕಣ್ಣಿನಲ್ಲೂ ನೀರು ಬಗುತ್ತಿತ್ತು (ಊರುಕೆ. ೩೦).

ಬಾಬಯ್ಯನ ಜಲ್ದಿ = ಮೊಹರಂ ಹಬ್ಬದ ಕೊನೆಯ ದಿನದ ಉತ್ಸವ : ಹಿಂದೆ ಹೆಮ್ಮಳ್ಳಿಯಲ್ಲಿ ಬಾಬಯ್ಯನ ಜಲ್ದಿ ಎಂದರೆ ಹಿಂದುಗಳಿಗೆ ಒಂದು ದೊಡ್ಡ ಹಬ್ಬ (ಬುಗಮೂಂ. ೧). 'ಜಲ್ದಿ' ಪರಾ. ಬಾಬಯ್ಯನ ಹಬ್ಬ = ಬಾಬಯ್ಯನ ಜಲ್ದಿ : ಬಾಬಯ್ಯನ ಹಬ್ಬದ ಸಂದರ್ಭದಲ್ಲಿ ಹುಲಿವೇಷದ ಜೊತೆಗೇ ಬರುವ ಮತ್ತೊಂದು ಮನರಂಜನೆಕರ ಕರಿಬೇವಿನ ಸೊಪ್ಪಿನ ವೇಷ (ಕಳಕ. ೦೬೯).

[ಬಾಬ್ಬು (ಫ ← ಪಾರ. ಹಿಂ. ಮರಾ. ಬಾಬಾ) + ಅಯ್ಯ೬೧]

ಬಾಬರ (ನಾ). ಒಂದು ಬಗೆಯ ಸಿಹಿಯ ಭಕ್ಷ್ಯ: ನೆಱೆ ಸಣ್ಣಗೋದುವೆಯ ಹಿಟ್ಟು ಸಿಹಿಪಾಲೊಳಗೆ ನುಱುಗುವಂದದಿ ಕಲಸಿ ಹಬ್ಬೆಟ್ಟು ತೋರದೊಳು ಕೊಱೆದ ಕರಟಕೆ ತುಂಬಿ ಪೊಡೆಯುದೊಲು ತುಪ್ಪದೊಳಗಡಲು ಚಿಲುಮುರಿಯಾದುದು ಎಱೆಯುಪ್ಪದಂತೆ ಬೇಯಿಸಲು ಬಾಬರವಾಯ್ತು ಬಱವೊಸರು ಕೆನೆಯನದಱೊಳು ಕಲಸಿ ಪುಂಡಯಾತಱೆಯ ಪಾವುಡವಾಯ್ತು ದೋಸೆಯುಂದದಿನಡಲು ತಾನೆ ಬಾಬ[ಪಾಠಾಂ. ಬಾ]ರ ಮಾದುದು (ಸೂಶಕಾ. ೦-೩೩).

[ ?./ಹಿಂ. ಬಾಬರ್ = ಒಂದು ಬಗೆಯ ಮಿಠಾಯಿ ]

ಬಾಬರಿ (ನಾ). ಒಂದು ಬಗೆಯ ಸಸ್ಯ : "ಕಗ್ಗೊಜಲೆ ಬಾಬರಿ ಕ್ಷುದ್ರ ಪತ್ರಂ" (ಮಂಗರಾ. ೩೯-೨೭). [ ?./ಪಾರ. ಬಾಬಾರೀ = ಕರಿಮೆಣಸು : ಮರಾ. ಬಾಬರೀ = ತೃಣಧಾನ್ಯ]

ಬಾಬಿಂಜಿ 'ಬಾಗುಜಿ' ನೋ.

ಬಾಬ್ತು೧ (ನಾ). ೧. ವಿಷಯ ; ಸಂಗತಿ : ವಿಳಾಸದಾರ ಸಿಗಲಿಲ್ಲ ಎನಿಸುವುದು ಅಷ್ಟೇನೂ ಖರ್ಚಿನ ಬಾಬಲ್ಲ (ಏಕಾಂಗಿ. ೨೦೦): ಅಲ್ಲಿಯವರೆಗೆ ಅದು ಕೇವಲ ಖರ್ಚಿನ ಬಾಬು (ಅಕೋಕ. ೮೯). ೨. ವಸ್ತು; ಪದಾರ್ಥ : ನಮ್ಮ ಶಾಯಿಯವರು ಇನ್ನೂ ಕೆಲವು "ಬಾಬು"ಗಳನ್ನು ಹೆಚ್ಚಾಗಿ ಬೇಡಿದರೂ ಅವುಗಳನ್ನು ಸುಬ್ಬರಾಯರು ಕೊಡಲೊಪ್ಪದ್ದರಿಂದ ಮಾಧವನ ಮದುವೆಯು ನಿಶ್ಚಯವೇ ಆಗಿಹೋಯಿತು (ಕೋಳಿಬು. ೨೨೩). ೩. ವಿಭಾಗ; ಬಾಬತ್ತು : ಈ ವರ್ಷ ಆ ಬಾಬುಗಳಿಂದಲೂ ಹಣ ಬಂದಿಲ್ಲ ಪ್ರಭೂ (೧೦೩. ೦೬೧): ಸೊಸೆಗೆ ಮರದ ಬಾಗಿಣ ಮೊದಲಾದ ಬಾಬುಗಳಿಂದ ಸಿಗುವ ಸಂಭಾವನೆಯ ಲೆಕ್ಕವನ್ನೂ ಆಚಾರ್ಯರು ಹಾಕಿದರು (ಹುಚಕಿ. ೯೯). ೪. ಸುಂಕ; ತೆರಿಗೆ : ಈ ಜನಗಳು . . . ಕಾಣಿಕೆ ಕಡ್ಡಾಯ ಮನೆದೇರಿಗೆ ಮುಂತಾದ ಬಾಬುಗಳನ್ನು ಕೊಡಕೆಲಸವಿಲ್ಲ (ಮೈಪಾದಂ. I, ೦೦೬); ರೈತರನ್ನು ತಗ್ಗಿಸುವ ನಿಮಿತ್ತವಾಗಿಯೂ, ಅರಮನೆಗೆ ಕೂಡಿ ಬರುವಂತೆಯೂ, ಹೆಚ್ಚಾಗಿ ಮನೆದೇರಿಗೆ ಮೊದಲಾದ ೧೯ ಬಾಬುಗಳನ್ನು ನೇಮಿಸಿದರು (ಮೈಪಾದಂ. I, ೦೨೯). ೫. ಪರಿಪಾಠ; ಕ್ರಮ; ವಾಡಿಕೆ : ಜೀರಿಗೆ (ಹೂಗಾರ) ಒಕ್ಕಲಿಗನ ಕಣದಲ್ಲಿ ರಾಶಿಗೆ ಪತ್ರಿ ಹೂದಂಡೆಗಳನ್ನು ಕೊಡುವ ಬಾಬಿದೆ (ಕಶ್ನಪಾ. ೦೩೯). ೬. ರೂಢಿಯಾಗಿ ಕೊಡುವ ಪದಾರ್ಥ; ಮಾಮೂಲು : ತುಂಬುವ ರಾಶಿಯಲ್ಲಿ ತಟ್ಟೆಯ ತುಂಬ ಜೋಳವನ್ನು ಒಕ್ಕಲಿಗನು ಹೂಗಾರನಿಗೆ 'ಬಾಬು' ಎಂದು ಕೊಡುವ ವಾಡಿಕೆಯು ಈಗಲೂ ಇರುವುದು (ಕಶ್ನಪಾ. ೦೩೯); ಹನ್ನೆರಡು ಕಸಬಿನವರೂ ತಮ್ಮ ತಮ್ಮ ಬಾಬಿಗಾಗಿ ಹೊರಗಡೆ ಕಾದಿರುವರು (ಸುವಕಂ. ೩೦).

ಬಾಬುವಾರು = ಆಯಾ ವಿಷಯಗಳ ಪ್ರಕಾರ : ಆರು ಬಾಬುಗಳಲ್ಲಿ ಕ್ರಿಮಿನಲ್ ಕೋರ್ಟ್ ಕಾನೂನಿನ ಅರ್ಥವನ್ನು ಹೇಗೆ ತಿರುಗುಮುರುಗು ಮಾಡಿತ್ತೆಂಬುದನ್ನು . . . ಬಾಬುವಾರಾಗಿ ಅವನು ಸಮರ್ಥಿಸಿದನು (ಕೃಸರು. ೩೩೩). [←ಅರ. ಹಿಂ. ಮರಾ. ಬಾಬ್]

ಬಾಬ್ತು೨, ಬಾಬೂ (ನಾ). (ಸಭ್ಯಗೃಹಸ್ಥ, ಮಹಾಶಯ ಎಂದು ಮುಂತಾಗಿ ಒಬ್ಬ ವ್ಯಕ್ತಿಯನ್ನು ಸೂಚಿಸಲು) ಗೌರವಸೂಚಕವಾಗಿ ಬಳಸುವ ಪದ : ನಯನಜೋರದ ಜಮೀನುದಾರರು ಒಂದಾನೊಂದು ಕಾಲಕ್ಕೆ ಬಾಬು ಎಂಬುದಾಗಿ ವಿಶೇಷ ವಿಖ್ಯಾತರಾಗಿದ್ದರು (ಇಕ್ರಕ. ೦೨೯); ಬಂಗಾಲಿ ಬಾಬುಗಳು ಒಳಗಿದ್ದಾರೆ (ಶಾರಕಿ. ೦೩೩). ಬಾಬೂ : 'ಬಾಬೂಜಿ' ಪರಾ. [←ಹಿಂ. ಮರಾ. ಬಂಗಾಲಿ. ಬಾಬೂ]

ಬಾಬುಗಾರ (ನಾ). ಆಯಾ ವಿಭಾಗದ ಕೆಲಸಕ್ಕೆ ಸಂಬಂಧಪಟ್ಟ ವ್ಯಕ್ತಿ : ಅವನಿಗೆ ಎಲ್ಲ ಆಯಗಾರರೂ, ಬಾಬುಗಾರರೂ ಬರಲೇ ಬೇಕು (ಕಶ್ನಪಾ. ೬೩). [ ಬಾಬ್ತು೧ + — ಗಾರ (< — ಕಾಱ) ]

ಬಾಬುಜಿ, ಬಾಬೂಜಿ (ನಾ). = ಬಾಬ್ತು೨ : ಆ ರಮಣಿಯು ಎದ್ದು ನಿಂತು, "ನಮಸ್ಕಾರ ಬಾಬುಜಿ!" ಎಂದಳು (ಇಕ್ರಕ. ೦೯೩). ಬಾಬೂಜಿ: ಈ ಜನವೆಲ್ಲ ನಿಷ್ಕರುಣಿಗಳು ಬಾಬೂಜಿ (ಶಾರಕಿ. ೬೩).

[ಬಾಬ್ತು೨ + — ಜಿ]

ಬಾಬುದಾರ (ನಾ). = ಬಾಬುಗಾರ : ಪ್ರಿಯಜನರು, ಅತಿಥಿಗಳು, ಪೂಜ್ಯಮಂಡಲಿಯು, ಬಾಬುದಾರರು ಇವರೆಲ್ಲರನ್ನು ಅರಸನು ಸಂತೋಷಪಡಿಸಿದನು (ಕುಳಸೀ. ೯೯); ಬಗೆಬಗೆಯ ಬಾಬುದಾರರು ತಮ್ಮ ತಮ್ಮ ಕರ್ತವ್ಯಗಳಲ್ಲಿ ತಲ್ಲೀನರಾದರು (ಗಂಗಾಚಾ. ೮೮). [ಬಾಬ್ತು೧ + — ದಾರ್೨]

ಬಾಬೂ 'ಬಾಬ್ತು೨' ನೋ.

ಬಾಬೂಜಿ 'ಬಾಬುಜಿ' ನೋ.

ಬಾಬೂನ (ನಾ). ಒಂದು ಬಗೆಯ ಔಷಧೀಸಸ್ಯ : ಬಾದರನ ಬೋಯ್ಯು ಬಾದ್ಯಾನ, ಬಾಬೂನ (ಕುಂಪಾವ್ಯ. ೦೩೩).

[←ಪಾರ. ಬಾಬೂನಹ್ ; ಹಿಂ. ಬಾಬೂನಾ ; ಮರಾ. ಬಾಬುನಾ]

ಬಾಬೆಹುಕುಮತ್ (ನಾ). ಧರ್ಮದರ್ಶಿಗಳ ಸಭೆ : ಸರ್ಕಾರದವರಿಂದ ನಿಯಮಿಸಲ್ಪಟ್ಟ ಧಾರ್ಮಿಕಕಲಹವಿಮರ್ಶನಸಂಘದವರ ರಿಪೋರ್ಟು ಬಾಬೆಹುಕುಮತ್ ಅಂದರೆ ಕೌನ್ಸಿಲ್‌ದವರಿಂದ ಅನುಮೋದಿಸಲ್ಪಟ್ಟು (ಗುರುರು. ೯೩). [ ← ಹಿಂ. ? ]

ಬಾಮ (ನಾ). ಸೊಗಸು ; ವಿಲಾಸ : ಅವರೊಳೊರ್ವಳ್ . . . ತನ್ನೊಂದು ಚೆಡಂಗಿನ ಬಾಮದಿಂ ಬಳ್ಕಿ ಬಾಗಿ ಕುಪ್ಪಸಮಂ ಸಡಿಲ್ಚಿದಳ್ (ಉಪಾಖ್ಯ. ೦೨೩-೦೪) ; ಆ ಸುಶೀಲೆ ಬಾಗಿ ಬಾಮದಿಂ ಬಲ್ಲಿದರ್ಗೆಂದಳ್ (ಅಮ್ರುಕ. ೩೯-೩). [< ಸಂ. ಭಾವ. /ತಮಿ. ವಾಮ; ತುಳು. ಬಾಮ]

ಬಾಮ್ಮಣೆ 'ಬಾನ್ಮಣಿ' ನೋ.

ಬಾಮ್ಮರ (ನಾ). (ಬೇಡಿದುದನ್ನು ಕೊಡಬಲ್ಲುದೆಂದು ಭಾವಿಸಲಾದ) ಸ್ವರ್ಗಲೋಕದ ಒಂದು ಮರ ; ಕಲ್ಪವೃಕ್ಷ : ಏನೆವಂಗಾ ಬಾಂಬಸು ವಿಂದೇನೆವಂಗಾ ಬಾಮ್ಮರಂಗಳಂ ಬರ್ಪುದು (ಅಕ್ರಪು. ೪೦-೦೩) ; ಸಂಕಿನ ಪಾಱುಂಬಳೆಯ ಬಾಮ್ಮರದ ಪಟಯಿಗೆಯ ತಾವರೆಯಂಸದ ಬಜ್ಜರದ ಮೆಯ್ಪರಿವೆತ್ತ ನುಣ್ಗೆಱೆಗಳಿಂದೆಸೆವ ಕೆಂದಳಿರ್ಗಳಮಂ . . . ಕೂರ್ತು ನೋಡುತ್ತಿರ್ದೊಡಂ (ಕಕಕಂ. ೩೯-೪). [ಬಾಂ೨ (< ಬಾನ್೨) + ಮರ೧]

ಬಾಯ್, ಬಾಯಿ, (ನಾ). ೧. ಮನುಷ್ಯರ ಹಾಗೂ ಪ್ರಾಣಿ, ಪಕ್ಷಿಗಳ ಮುಖದಲ್ಲಿ, ಆಹಾರ ಪಾನೀಯಾದಿಗಳನ್ನು ಸೇವಿಸುವುದಕ್ಕೂ ಶಬ್ದದ ಉದ್ಗಾರಗಳಿಗೂ ಸಹಾಯಕವಾಗಿರುವ ಒಂದು ಅವಯವ; ವಕ್ತ್ರ : ತಾಳತರುವಿತತಿಯೊಳ್ ಬೇತಾಳಂಗಳ್ ಮೊಱೆದು ತೆಱೆದು ಬಾಯ್ಗಳ್ನಾ ಪಾತಾಳಬಿಲಂಗಳವೋಲ್ . . . ಕಱಿಯೆ ಭಯಮಯನಾದಂ (ಕಶಚ. ೩-೦೯೩) ; ಪಚ್ಚು ಪರಿಕಲಿಸಿ ಬೆನ್ನಂ ಮುಚ್ಚಿರೆ ಮಾಡಿ ಕಳ್ಳ ಬೆಳ್ಪಟ್ಟಲ್ ಬಾಯೊಳ್ ಚೆಚ್ಚಂತಿರೆ ಸತಿ ಶಶಿಯು ಕಚ್ಚಿ ನೆಲಕ್ಕೀಡಾದ ರಾಹುವಂ ನೆಱೆ ಪೋಲ್ತಲ್ (ಕಾವ್ಯಸಾ. ೯೩೩ ಶೂದ್ರಕ) ; ಪಾತಾಳಗಣಂ ಗಳವೆತ್ತಂ ತಾಳುಗೆವರೆಗಂ ತೆಱೆದ ಬಾಯನನುರಿಸಿರ್ಕಂ (ಅಂಕ್ರ. ೦೨-೬೧). ೨. ಪಾತ್ರೆ, ಚೀಲ ಮೊದಲಾದುವುಗಳ ತೆರೆಯುವ

ಭಾಗ : (ಕ). ೩. ಕೆರೆಯ ತೂಬು, ಬಚ್ಚಲು, ಮೋರಿ ಮೊದಲಾದುವುಗಳ ಹೊರತುದಿ.– ಕಂಡಿ : (ಕ). ೪. ಚರ್ಮವಾದ್ಯದ ಮೇಲುಭಾಗ : (ಕ). ೫. ಹುಣ್ಣು, ಗಾಯ ಮೊದಲಾದುವುಗಳ ಬಿರುಕು.–ತೂತು : ಮೇಲ್ವಾಯ್ದು ಪೊಯ್ದುತ್ತು ಕೈಯೇಱಿಡೆಯುಂ ಬಾಯೇಱಿ ಬಾಯಿಂದೊಡನೆ ರುಧಿರಮುಂ ಕಂಡಮುಂ ಸೂಸುವನ್ನಂ ಸಿಡಿಲೊಬಾಹಶಂಕೆಯುಂ ಪೆಣ್ಪುಲಿ ಪಡೆದು ಪ್ಯಗೀರಕ್ತಸೇವಾನುರಕ್ತಂ (ಶಂಡಶಾ. ೩-೩೫) ; ಏಱ ಬಾಯ್ಗಳ ತಳತ ಖಂಡದ ಸೂಱೆಗೊಂಡವು ಹಿಂದಣಂಬುಗಳು (ಕುಮ್ಯಾರ್ಯ. ೦೪-೩೬). ೬. ಪ್ರವೇಶದ್ವಾರ : ಬಾಗಿಲು : ಹುತ್ತಕ್ಕೆ ಏಸು ಬಾಯಾದರೇನು ಸರ್ಪನಿರ್ಪುದು ಒಂದೇ ಸ್ಥಾನ (ಬಸವ. ೯೩೦) ; ಏಟುವ್ವಾಯ್ ಘೇಬಾಯ್ಗಂದುವ್ ಮಾಡದ ೭ ಮುನ್ನಗದಿರೇ ! (ಅಂತಿಗೂ. ೩-೮೩). ೭. ಚೂರಿ, ಕತ್ತಿ, ಕೊಡಲಿ ಮೊದಲಾದುವುಗಳ ಅಂಚು.–ತುದಿ : ಎನ್ನಯ ಸಂತತಿಗಾಗಿರ್ದ ನಿನ್ನನೆ . . . ಕರವಾಳ ಬಾಯ್ಗುಮಂಬಿನ ಮೊನೆಗಂ ಮಹಾರಥರ ತಿಂತಿಣಿಗಂ ಪಿಡಿದಂತು ನೂಂಕುವೆಂ (ಶಂಕಶಾ. ೦೦-೯೦); ಬೆಲ್ಲದ ಮೋಹಕ್ಕೆ ಸುರಗಿಯ ಬಾಯ ಧಾರೆಯ ನೆಕ್ಕುವಂತಾನುಂ (ರರ್ಹಾಸ್ತು. ೬-೦೭೩); ಜಮದಗ್ನಿರಾಮನು . . . ಪರಶುಗೊಡಲಿಯ ಬಾಯ ಮಸೆವುತ ಬಂದು ಭೂಮನ ದಾಯಿಗರ ಹರೆಗಡಿದು ಹಿಡಿದನು ಕಾರ್ತವೀರ್ಯಾಕನ (ಸಂರಕ. ೨೬-೩೦). ೮. ನುಡಿ ; ಮಾತು ; ವಚನ : ಬಲ್ಲರ ಬಾಯಂ ಪೊಕ್ಕೋದಿ ಕಲ್ಗೆ ಕವಿ ಸಕಲಮುಮಂ (ಅರ್ಥನೇ. ೦-೩೪) ; ಬಾಯಲಿ ಬಲ್ಲಿದನು ನೀನಹೆ ಭಟಾಂಗದ ಮಾತದಂತಿರಲಿ (ಕುಮ್ಯಾರ್ಯ. ೩-೩೩).

ಬಾಯಿ$_1$ : ೧. "ವದನಂ ಮುಖಂ . . . ಆಸ್ಯಂ ಪೋಱ ಬಾಯಯೆನೆ ಕಪೋಳಂ" (ಬುಂಗಣಾ. ೯೩-೦) ; ಒಱಲುವವರರ ಬಾಯ ಕೈಗಳ ಮೊಱೆಯ ತೆಗುಸಿ . . . ನಂದೀಶ್ವರನು ಹೊಕ್ಕನು ಹೊಯ್ದ ದಾನವರ (ಕುಮ್ಯಾ.ಕ. ೭-೨೯) ; ಅಡಸಿ ಗಿರಿಯನು ನುಂಗುವ ವೀರನ ಬಾಯ ಹಿಡಿಯದೆ ಪಣ್ಗಲಗಳನು (ಕಂಡಶ ೦೯-೬೩). ೨. ಅಷ್ಟೊಂದು ಹತ್ತಿ ತುಂಬಿದರೆ ದಿಂಬಿನ ಚೀಲದ ಬಾಯಿ ಹೊಲಿಯುವುದು ಹೇಗೆ ? (ಕೂಶ). 'ಬಾಯಿಕಟ್ಟು$_2$' ಪರಾ. ೪. ವುಷ್ಕರಂ . . . ಡೋಲು, ಮದ್ದಳೆ, ಝಡಾ ಮುಂತಾದ ವಾದ್ಯಗಳ ಬಾಯಿ (ಸಿರ್ಮ್ಯಾಂ. ೯೦೭). ೬. ಅರಮನೆಗೆ ಆರು ಬಾಯಿ (ಗಾದೆ). ೭. ವರದಾನ ಹೃದಯದಲ್ಲಿ ಎರಡು ಬಾಯಿ ಅಲಗನ್ನು ಹಾಕಿ ತಿರುವಿದಂತಾಯಿತು (ಜಮಂತ. ೬). ೮. ಬಿನ್ನಹಕೆ ಬಾಯಿಲ್ಲವಯ್ಯ ಅನಂತ ಅಪರಾಧ ಎನ್ನಲ್ಲಿ ಇರಲಾಗಿ (ಕರಂದ. ೨-೦೫೦ ಕಲ್ಪ) ; ಈ ವಿಷಯವನ್ನು ಸವತಿಯಾದ ಅವಳೊಡನೆ ನಾನೇ ಪ್ರಸ್ತಾಪಿಸಲು ನನಗೆ ಬಾಯಿ ಬಾರದು (ಶಹಾ. ೦೪) ; ಬಾಯಿ ಒಳ್ಳೆಯದಾದರೆ ಊರು ಒಳ್ಳೆಯದು (ಗಾದೆ). ೯. (ಅಲಂ) ಮಾತನಾಡುವ ಚಾತುರ್ಯ ; ವಾಕ್ಚಾತುರ್ಯ : ಬಾಯಿಯುಳ್ಳವನಾದರೆ ಬರದಲ್ಲಿಯಾದರೂ ಬದುಕಿಯಾನು (ಗಾದೆ).

ಬಾಯಂ ಬಡಿ, ಬಾಯ ಬಡಿ = ಇನ್ನೊಬ್ಬರಿಗೆ ಮಾತನಾಡಲು ಅವಕಾಶ ಕೊಡದಂತೆ ಮಾತಾಡು; ವಾದಿಸು : ಮಾದೇವನ ಪೊದ್ದಬಟ್ಟೆಯಂ ತಿಳಿಯದವರ್ ವೇದಗಳೊಳಗುಳ್ಳುದೆಲ್ಲಂ ಮಾದೇವನ ಚರಿತಮೆಂದು ಬಾಯಂ ಬಡಿವರ್ (ಸಶುಕ. ಅಪುಬಂಧ. I, ೩೬೯-೫೦) ; ವೆಱರ ಬೈಗುಳಂ ಸೈರಿಸುವುದರಿಂದೊ ವೆಱರೊಡನೆ ಬಾಯಂ ಬಡಿವುದರಿಂದೋ (ರರ್ಹಾಸ್ತು. ೬-೯೦); ಬಲ್ಲಿದ ನೀನೆಂದು ಬಡವರ ಬಾಯ ಬಡಿಯದಿರಚ್ಚಱಕ (ಶರಂದ. ೦-೦೬೦-೦). ಬಾಯಂ ಬಿಡು, ಬಾಯ ಬಿಡು = ೧. ಪ್ರಲಾಪಿಸು; ಅಸಹಾಯಕತೆಯಿಂದ ಹಲುಬು; ಹಳಹಳಿಸು : ವಿದ್ವಿಷ್ಟವಿದ್ರಾವಣನ ಮೊನೆಯಂಬಿನಂಬೇಱಿಂಗಳ್ಕಿ . . . ಕಿಂಪುರುಷರ್ ಕಾಪುರುಷರಂತೆ ಬಾಯಂ ಬಿಡೆಯುಂ (ಕಂಶಶಾ. ೩-೯೮ ಕ); ಸೇದೆವಟ್ಟು ಬಾಯಂ ಬಿಟ್ಟುಕಾ[ಪಟಾದು] (ಗದಾಯು. ೯-೨೦ ವ); ಆ ಯುವತಿ ಮೃತವಾಗೆ ಮಱುದಿನ ತಾಯಿ ತಂದೆಯರಳುತೊಱಲುತಂ ಬಾಯ ಬಿಡುತಂ ಕೊಂಡು ಬಂದೆಯ್ದುಂದು (ಬಸಪು. ೩೨-೯೨); ಬಾಯ ಬಿಟ್ಟುದು ಸೇನೆ ಕೌರವರಾಯನಾವೆಡೆ ದಳಕೆ ಬಲುಗೈನಾಯಕರು ಕೃಪ ಗುರುಸುತರು ಕೈಗೊಟ್ಟರೇ ಹಗೆಗೆ (ಕುಮ್ಯಾ.ಕ. ೦೨-೨೮). ೨. (ಅಭಿಲಾಷೆ ಪೂರೈಸುವುದನ್ನು) ನಿರೀಕ್ಷಿಸು : ಚಾದಗೆಯಂತಾಕಾಸವನಿಗೆ ಬಾಯಂ ಬಿಡುತ್ತುಂ (ರರ್ಹಾಸ್ತು. ೦-೦೬೦); ಪಾರ್ಥಿವಶರಾಗ್ನಿಯಿಂ . . . ಎಪ್ಪುನುಳುಹೆಂದು ಫಣಿಕುಲಂ ಬಾಯ ಬಿಡಲು (ಕೃಜಿಶಾ. ೨೯-೩೭). ೩. ಬೆರಗಾಗು ; ಆಶ್ಚರ್ಯಪಡು; ದಿಗ್ಭ್ರಾಂತಿ ಹೊಂದು : ಬೆಕ್ಕಸಂಬಟ್ಟು ಬಾಯ ಬಿಟ್ಟರ್ ಭೀಷ್ಮರ್ (ಕಜುದ. ೨೯೦ ಕ್ರಶಿ); ಬಲ ಬಾಯ ಬಿಡೆ ಬಿಗಿದಂಬು ಕಡಿದುದು ಕರ್ಣನಂದನನ (ಕುಮ್ಯಾ.ಕ. ೨೦-೩೩). ೪. ಸ್ಪಷ್ಟವಾಗಿ ನುಡಿ ; ಪ್ರಕಟಪಡಿಸು: ಕಾಯುವಳೆದರು ಅಂತರಂಗವ ಬಾಯ ಬಿಡರು (ನಳಚ. ೩-೨೩). ೫. ಬಿರಿ ; ಸೀಳು ; ಬಿರುಕು ಬಿಡು : ಅರಸ ಕೇಳಾಶ್ಚರ್ಯವನು ಗಜಪುರದೊಳಗೆ ನೆಲ ಬಾಯ ಬಿಟ್ಟುದು (ಕುಮ್ಯಾ.ಸ. ೦೫-೯೦). ಬಾಯ ಕಟ್ಟು = ಮಾತಿಗೆ ಸಿಕ್ಕಿಸು ; ಮಾತಿಗೆ ಕಟ್ಟುಬೀಳಿಸು : ಸೂರುಳಿಸಿ ನೆಱ ಬಾಯ ಕಟ್ಟಿ ಹಣವಂ ಕೊಳಲು ಕಲಿವುದೆಂದೊಬ್ಬ ಕುಂಟಣಿಮಗಳ ಬೋಧಿಸಿದಳು (ಸೋಮಚ. ೨-೯೦). ಬಾಯ ಕಲ್ಲಿ = ದನಗಳಂ ಬೆಳೆಗಳನ್ನು ಮೇಯದಂತೆ ನಿರ್ಬಂಧಿಸುವುದಕ್ಕಾಗಿ ಅವುಗಳ ಬಾಯಿಗೆ ಕಟ್ಟುವ ಹೆಣಿಕೆಯ ಬಲೆ ; ಬಾಯಿಕುಕ್ಕೆ : ದಾಸಧರ್ಮ ಮಾಡಿ ಉಳಿದ ಹುಡುಗರ ಗಾದಿಯ ಕಾತಿಯಿಂದ ನಾಮಿಪ್ಪರೂ ಪಗ್ಗ, ಬಾಯ ಕಲ್ಲಿಗಳನ್ನು ಮಾಡಿದ್ದೆವು (ಸ್ವ.ಕಿತ. ೩೯೦). ಬಾಯ ತುತ್ತು = ಬಾಯಿಗೆ ಸೇರಬೇಕಾದ ಕಬಳ: ಆ ತಾಪಸಾಗ್ರ್ಯನ ಬಾಯ ತುತ್ತಿದನೀ ಪವನಸುತ ತಂದನಱಿಯದೆ (ಕುಮ್ಯಾ.ಕ. ೬೦೩. ೯-೨೨); ತುಡುಗುಣಿಗಳ ವದಿರು ನಭೋಗ್ರಕಿ ಸಿಡಿದು ಹವಿಗೊಂಬಮರನಿಕರದ ಹೆಡಕ ಬಾರಿಸಿ ಬಾಚುತಿರ್ದರು ಬಾಯ ತುತ್ತುಗಳ (ಕೊಶಾ. ೦-೦೦-೮). ಬಾಯ ಬಡಕ, ಬಾಯ ಬಡಿಕ, ಬಾಯ ಬಡುಕ = ಬಡಾಯಿ ಕೊಚ್ಚಿಕೊಳ್ಳುವವನು: ಬಾಯ ಬಡಕ[ಪಾಠಾಂ. ಬಾಯಿಬಡಿಕ]ರು ಬಗುಳಿದೊಡೆ ಪರಿಯಾಯಿತಕೆ ಪಾಸಟಿಯೆ (ಕುಮ್ಯಾ.ಸ. ೯-೪೭); ಬಾಯ ಬಡಿಕರು ಬಂದ ಬಣ್ಣಿಗೆಯೆಸಗಿ ಬಗುಳುವರು (ಕೃಷ್ಣಾಕಾ. ೦೯-೨೯); ಬಾಯ ಬಡುಕಸದೆಂದಿರದೆ ಸಪುರಾಯತದ ನೋಡೆನ್ನ ಭುಜಬಲದಾಯತದ ರಣಕೌಶಲವ ನೀನು (ಕೋಗದು. ೦೪-೨೦). ಬಾಯ ಬಡಾಯಿ = ಜಂಬದ ಮಾತು : ಕೇರಿಯವರ ಮುಂದೆ ವೇಳೆ ಅವೇಳೆಯಲ್ಲಿ ಬರಿಯೆ ಬಾಯ ಬಡಾಯಿ ಹೊಡೆಯುತ್ತಿದ್ದರು (ಪುಕಾರಾ. ೭೦). ಬಾಯ ಬಿಯಗ, ಬಾಯ ಬೀಗ, ಬಾಯ ಬೀಯಗ = ೧. ಮಾತನಾಡದಂತೆ ಮಾಡಿದ ತಡೆ.— ಕಟ್ಟು : ದೇವರ್ಕಳ ಬಾಯ ಬಿಯಗಮಂ ಕಳೆಯಿಸುವೈ (ಅವಂತಿ.೦೪-೩೫). ೨. (ಹರಕೆಯನ್ನು ಹೊತ್ತು) ಬಾಯಿಗೆ ಚುಚ್ಚಿ ಸಿಕೊಳ್ಳುವ ತಂತಿಯ ಸಾಧನ : ಬೇವಿನುಡಿಗೆ ಬಾಯ [ಪಾಠಾಂ. ಯಿ] ಬೀಗದಿಂ ನಿನ್ನಡಿದಾವರೆಗಳಿಗೆಱಗುವೆನು (ಕುಂತಾಕಾಂ. ೨೩-೬೬). ೩. ಮಾತಿನಿಂದ ಹೇಳಲಾಗದುದು; ವಚನಾತೀತವಾದುದು: ನಿಗಮದ ಬಾಯ ಬೀಯಗವೀ ಮುಕುಂದನನಱಿವರಾರು (ಕುಮ್ಯಾ.ಸ. ೯-೯೭); ವೇದ ಶ್ರುತಿಯ ಬಾಯ ಬೀಯಗ . . . ಸಜ್ಜನಸಮಾಧಿಗಳ ಭೇದಕ್ಕೆ ನಿಲುಕದ ಶ್ರೀಕೃಷ್ಣರಾಯನ ಪಾದವ ಕೊರ್ತು ಪೇಳ್ಗತೆಯ (ಪೋಪಶ. ೯-೦). ಬಾಯ ಬೊಬ್ಬೆ = ಕೂಗಾಟ ; ಕೇಕೆ : ನಾಯಕರ ಕಡೆನುಡಿವ ಬೈಗುಳ ಬಾಯ ಬೊಬ್ಬೆಯ ಕೈಯ ಹೊಯ್ಲುಗಳ ದಾಯಗರಲೇ ಎನುತ ಮೂದಲಿಸಿದನು ತಮ್ಮೊಳಗೆ (ಕುಮ್ಯಾ.ಕ. ೨-೦೪) ; ಬಾಯ ಬೊಬ್ಬೆಯ ಬಿರುಬುಗಳಲಡಹಾಯಿದೋಡುವ ನಿಖಿಳಮೃಗಸಮುದಾಯವನು ಸಂಹರಿಸುತಿರ್ದುದು ಶಬರಸಂದೋಹ (ಕೊಶಾ. ೩-೩-೦೫). ಬಾಯಲಿ ಬೆರಳನಿಡು=

(ಶರಣಾಗತಿಯ ಸೂಚಕವಾಗಿ) ಬಾಯಲ್ಲಿ ಬೆರಳನ್ನಿಟ್ಟುಕೊಳ್ಳು : ಕೈಯ ಕೈದುವಾನಳುಹಿ ಬಾಯಲಿ ಬೆರಳನಿಟ್ಟುದು ವೈರಿವ್ರಾಯದಳ (ಕುಮಾ.ದ್ರೋ. ೩-೦೯). **ಬಾಯಿ ಲೆಕ್ಕ** = ಮನಸ್ಸಿನಲ್ಲಿಯೇ ಲೆಕ್ಕ ಮಾಡಿ, ಬಾಯಲ್ಲಿ ಉತ್ತರವನ್ನು ಹೇಳಬಹುದಾದ ಲೆಕ್ಕ ; ಲೇಖನಿ, ಬಳಪ ಮುಂತಾದುವುಗಳ ಸಹಾಯವಿಲ್ಲದೆ ಮಾಡುವ ಲೆಕ್ಕ ; ಮೌಖಿಕವಾದ ಲೆಕ್ಕ : ಕೇಂಬ್ರಿಡ್ಜಿನಲ್ಲಿ ಬಾಯಿ ಲೆಕ್ಕ ಕೇಳಿದ ಹಾಗೆ ರ್‍ಯಾಂಗ್ಲರ್ ಮಹಾಜನರು ನನಗೆ ತಿಳಿಸಿಲ್ಲ (ಗಾಳಿಪ. ೦೬೯). **ಬಾಯಲ್ಲಿ ಅಕ್ಕೀಕಾಳು ಹಾಕಿಕೊಳ್ಳು**=ಆಗಬೇಕಾಗಿದ್ದ ಕೆಲಸವಾಗದೆ ದೀರ್ಘನಿರೀಕ್ಷೆಯಲ್ಲಿ ಇರು : ನಾವೆಲ್ಲರೂ ಮುಂದೇನಾಗುವದೋ ಎಂದು ಬಾಯಲ್ಲಿ ಅಕ್ಕೀಕಾಳು ಹಾಕಿಕೊಂಡು ಕುಳಿತೆವು (ಜೀವಬು. ೯೯). **ಬಾಯಲ್ಲಿ ನೀರೂರಿಸು**=ಆಸೆ ಹುಟ್ಟಿಸು ; ಅಪೇಕ್ಷೆಯನ್ನುಂಟುಮಾಡು : ಅಂಬಾಸಮುದ್ರದ ಶಾಸನ . . . ಬಾಯಲ್ಲಿ ನೀರೂರಿಸುವಂಥ ಭಕ್ಷ್ಯ ಭೋಜ್ಯಗಳನ್ನು ಹೆಸರಿಸುತ್ತದೆ (ಶಾಸನ.೩೬). **ಬಾಯಲ್ಲಿ ನೀರೂರು**=ಅಪೇಕ್ಷೆಯುಂಟಾಗು : ಆ ಕಾಲದಲ್ಲಿ ಕವಿಗಳು ಚಕ್ರವರ್ತಿಗಳ ಜೊತೆ ಕುಳಿತು ಊಟ ಮಾಡುತ್ತಿದ್ದರು. ಅದರ ನೆನಪಾದಾಗಲೆಲ್ಲಾ ಬಾಯಲ್ಲಿ ನೀರೂರುತ್ತದೆ (ಅಕ್ಕಪ. ೯೩). **ಬಾಯಾರೆ** = ೧. ಬಾಯಿಗೆ ತೃಪ್ತಿಯಾಗುವಂತೆ; ಬಾಯಿ ತುಂಬ; ವಚೋಕ್ತಿಯಲಿ ಬಾಯಾರೆ ನುತಿಸಿನುತಿಸಿ (ಜಕ್ಕ. ೬-೨೬) ; ಶಾಸ್ತ್ರಿಗಳೂ ಹಿರಿಯರೂ ಆತನಿಗೆ ಬಾಯಾರೆ ಹುಟಕಿಯಾಡಿದರು (ಗೊರೂ ಸಾ. VIII. ಋಷ್ಯು.). ೨. ಬಾಯಿಬಿಟ್ಟು; ಸ್ಪಷ್ಟವಾಗಿ ; ಖಚಿತವಾಗಿ : ನಾನು ಬಾಯಾರೆ ಕೇಳುವುದಕ್ಕಿಂತ, ಆತ ಸಂತೋಷದಿಂದ ತಾನಾಗಿ ಕೊಡುವುದನ್ನು ಕೊಂಡರೆ ಭೂಷಣ (ಶಾಕುಂತ. ೨೦೦). **ಬಾಯಿ ಕೆಡು**=(ರೋಗ ಮೊದಲಾದುವುಗಳ ಪರಿಣಾಮವಾಗಿ) ನಾಲಗೆಗೆ ರುಚಿ ತಿಳಿಯದಂತಾಗು : ಬಾಯಿ ಕಟ್ಟು ಹೋಗಿ ತಿನ್ನಲು ಏನೂ ಸೇರುವುದಿಲ್ಲ (ಊ). **ಬಾಯಿಗೆ ಬೀಗ**=ಮಾತಿಗೆ ಹಾಕಿದ ತಡೆ,-ಪ್ರತಿಬಂಧ : ಬಾಯಿಗೆ ಬೀಗವಾಯಿತಲ್ಲ ಖಳರ (ವೈಕುಂಠ. ೨-೨೦); ಅವಳ ತಾಯಿ ಎಷ್ಟೋ ಸಲ ಗದ್ದರಿಸಿ ಅವಳ ಬಾಯಿಗೆ ಬೀಗ ಹಾಕುತ್ತಾಳೆ (ಇಕ್ಕೇ. ೬೨). **ಬಾಯಿಗೆ ಬೀಳು** = ೧. ತುತ್ತಾಗು ; ಬಲಿಯಾಗು : ನಾನು . . . ತೋಳಗಳ ಬಾಯಿಗೆ ಬೀಳುತ್ತೇನೆ (ಕಾವ್ಯಸ. ೭); ಬಾಧೆಪಡುವ ಬಾಳಿಗಿಂತ ಬಕನ ಬಾಯಿಗೆ ಬೀಳೋದುತ್ತಮ (ಗಾಳಿ). ೨. ಜನರ ನಿಂದೆಗೆ ಗುರಿಯಾಗು ; ಜನಾಪವಾದಕ್ಕೆ ಒಳಗಾಗು : ಇದ್ದುದನ್ನು ಇದ್ದಂತೆ ಹೇಳಲು ಹೋಗಿ ಅವನು ಎಲ್ಲರ ಬಾಯಿಗೆ ಬೀಳುತ್ತಾನೆ (ಊ). **ಬಾಯಿಗೆ ಮಣ್ಣು ಬೀಳು**=ಏನೂ ಉಳಿಯದಿರು ; ಎಲ್ಲವೂ ಹಾಳಾಗು : ಇನ್ನು ನನ್ನ ಜೀವನದ ಬಾಯಿಗೆ ಮಣ್ಣು ಬಿದ್ದು ಹೋಗುವುದು (ಸಣ್ಣಕ. ೧೦೦). **ಬಾಯಿಗೆ ಮಣ್ಣು ಹಾಕು** = ಪೂರ್ತಿಯಾಗಿ ಗತಿಗೆಡಿಸು ; ನಿರ್ಗತಿಕಸ್ಥಿತಿಗೆ ಇಳಿಸು : ಇದ್ದದ್ದನ್ನೆಲ್ಲಾ ಲೂಟಿ ಮಾಡಿ, ಅವನ ಬಾಯಿಗೆ ಮಣ್ಣುಹಾಕಿದ (ಊ). **ಬಾಯಿಗೆ ಹಾಕು**=ಲಂಚ ಕೊಡು : ಆ ಗುಮಾಸ್ತನ ಬಾಯಿಗೆ ಹಾಕದೆ ಈ ಕೆಲಸ ಆಯಿತು (ಊ). **ಬಾಯಿಯಿಲ್ಲದವ** = ಅಗತ್ಯ ಬಿದ್ದಾಗ ತನ್ನ ಅಭಿಪ್ರಾಯವನ್ನು ತಿಳಿಸಲಾಗದವನು : ಈ ಕಾಲದಲ್ಲಿ ಬಾಯಿಯಿಲ್ಲದವ ಬದುಕಲು ಸಾಧ್ಯವಿಲ್ಲ (ಊ). **ಬಾಯಿ ಹಾಕು** = ೧. ತಿನ್ನುವುದಕ್ಕೆಂದು ಬಾಯಿಯಿಡು : ಗಬಕ್ಕಂತ ಸಿಂಹ ಕರುಳಿಗೆ ಬಾಯಿ ಹಾಕೋಹಾಗೆ ಒಂದೇ ಉಸ್ರಿಗೆ ಆ ಚಿತ್ರ ಎಳಕೊಂಡು . . . ತುಕ್ಡ ತುಕ್ಡ ಮಾಡಿ ಹಾಕಿದ್ಲು (ಚಾಗಿವ. ೪೦) ; ಹಸು ಬಂದು ಸಸಿಗೆ ಬಾಯಿ ಹಾಕಿತು (ಊ). ೨. ಬೇರೆಯವರ ಮಾತಿನಲ್ಲಿ ಮಧ್ಯೆ ಪ್ರವೇಶಿಸು ; ಬೇರೊಬ್ಬರ ಮಾತಿನಲ್ಲಿ ತಲೆ ಹಾಕು,—ತೂರಿಸು : ಬೇರೊಬ್ಬನು ಮಾತಾಡುವಾಗಲೂ ಮಾತಾಡುವ ಅಪೇಕ್ಷೆ ತೋರಿಸುವಾಗಲೂ ನಾವು ನಡುವೆ ಬಾಯಿ ಹಾಕಬಾರದು (ಮುಂಬಯಿ. ೯-೯೯); ಈವರೆಗೆ ತುಟಿ ತೆರೆಯದಿದ್ದ ವೀರಣ್ಣ ಈಗ ನಡುವೆ ಬಾಯಿ ಹಾಕಿದ (ಹಾಹುತ್ತ. ೯೩). **ಬಾಯ್ಗೆವರ್, ಬಾಯಿಗೆ ಬರು, ಬಾಯ್ಗೆ ಬರ್** = ೧. ಮಾತಿನಲ್ಲಿ ಹತೋಟಿಯಿಲ್ಲದಿರು : ಈ ಪಾರ್ವಂಗಕ್ಕಟ ವೆಯ್ಯೊಕೊಂದು ಮರುಳುಂಟಕ್ಕುಂ ಎಂದು ಬಾಯ್ಗೆವಂದುದನೆ ನುಡಿಯೆ (ಪಂಪಭಾ. ೬-೬೮ ವ); ಮಹಾತ್ಮನ ವಚನಕ್ಕುತ್ತರಮಂ ಕುಡಲಾಱದೆ ಬಾಯ್ಗೆವಂದಂತೆ ನುಡಿದಪಂ (ರಾಜಶೇಖ. ೯-೦೬೭) ; ಹಿಂದೆಗೆಳಹುವನಿವನು ಬಾಯಿಗೆ ಬಂದ ಪರಿಯಲಿ (ಕುಮಾ.ಭೀ. ೦-೧೧) ; ಕಾಗೆ ಬಾಯ್ಗೆ ಬಂದುದಂ ಗಟಪಿದೊಡೆ (ಪಂಚತಂ. ೦೯೯-೮೦) ; ದಾಯ್ಗೆ ಬಂದ ತೆಱದಿಂ ಪೆಱರೆಂದೊಡೆ ಕೇಳ್ದು (ಪಂಚಾಮೃ. ೦೩-೬೨). ೨. ಕಂಠಪಾಠವಾಗಿರು ; ಉರುಹೊಡೆದಿರು : ಸಂತರ ಎಲ್ಲ ಗೀತೆಗಳೂ ಬಾಯಿಗೆ ಬರುತ್ತವೆ (ದೂರಪ. ೬೩). ೩. ದಕ್ಕು; ಲಭಿಸು : ಕೈಗೆ ಬಂದದ್ದು ಬಾಯಿಗೆ ಬರಲಿಲ್ಲ (ಗಾದೆ). **ಬಾಯ್ಮಾಡು, ಬಾಯಿ ಮಾಡು**=೧. ಪ್ರತಿಜ್ಞೆ ಮಾಡು ; ಶಪಥಮಾಡು : “ಬಾಯ್ಮಾಡು (ಬಾಯ್ + ಮಾಡು)—ಪ್ರತಿಜ್ಞಾಯಾಂ” (ಕಶಬ್ದಾ); ಅಶ್ವತ್ಥಾಮಂ . . . ಹಸ್ತಿನಪುರದೊಳ್ ಪಾಂಡವರ್ದರ್ಗೆ ಗೆತ್ತುಮಲ್ಲಿಗೆ ನಿಟ್ಟಾಲಿಯಾಗಿ ದಾಟಿಯನಿಟ್ಟು ಮುಟ್ಟಿವಂದು ಬಾಯ್ಮಾಡಿ ಧೃಷ್ಟದ್ಯುಮ್ನ ಶಿಖಂಡಿ ಚೇಕಿತಾನ ಯುಧಾಮನ್ಯೂತ್ತಮೌಜಸರುಕೊಂದು (ಪಂಪಭಾ. ೦೩-೦೦೬ ವ). ೨. ಕೂಗಾಡು ; ಗಲಾಟೆ ಮಾಡು : ಸುಮ್ಮನೆ ಬಾಯಿಮಾಡಿ ಏನಾಗಬೇಕಾಗಿದೆ ? (ಕಥೆ. ೨೦೯). **ಬಾಯ್ಮಾಯ್**= ಮುತ್ತು ; ಚುಂಬನ: ಬಾಯ್ಮಾಯೊಳಾವಟ್ಟಿಟ್ಟೊಂದೊದವಿ ತಂಬುಲಮಂ ಕೊಳಲ್ ಮಱೆದು ನೀನಿರ್ದಂದಮೇಂ (ಅಜಿತ. ೩-೨೩) ; ಹೃದಯಮನಿತ್ತಪನಾ ಸಮಯದೊಳೆನೆ ಬಾಯ್ಮಾಯೊಳಿತ್ತ ತಂಬುಲಮನಲಂ ಪೊದವಲ್ಕೆ ಪರಸಿ ಬೀಟ್ಕೊಳಿಸಿದನೆಂತಾನುಂ ನಿಜಾತ್ಮಜನನಧಿರಾಜಂ (ಕಾದಂಬರಿ. ೩೦೦). [ದೇ. ॥ ತಮಿ. ಕೋತ. ಪಜೆ. ವಾಯ್; ಮಲ. ವಾಯ್, ವಾ ; ತುಳು. ಬಾಯಿ ; ಕೊಡ. ಬಾಯ್; ತೆಲು. ವಾಯಿ; ಕುರುಖ್. ಬಾಈ ; ಬ್ರಾಹುಈ. ಬಾ]

**ಬಾಯಕ್ಕಿ** (ನಾ). ಬಾಯಿಗೆ ರುಚಿಯಾದ ಆಹಾರ; ಮೃಷ್ಟಾನ್ನ (?): ಬಾಯಕ್ಕಿಯ ಬೇಡುವವರೆಲ್ಲರೂ ಬಡವಾಯಿಮಂತರ ನೋವ ಬಲ್ಲರೆ ಹಿ[ಹಾಡು. ಹ]ಸಿವ ವಿಹಂಗ ಪಶುವಿನ ನೋವ ಬಲ್ಲುದೆ (ಜೀವಸಂ. ೩೦೩-೦೯). [ಬಾಯ್ + ಅಕ್ಕಿ]

**ಬಾಯನ, ಬಾಗಿನ, ಬಾಯಿನ** (ನಾ). ಮದುವೆ, ಹಬ್ಬ, ವ್ರತ ಮುಂತಾದ ಶುಭಪ್ರಸಂಗಗಳಲ್ಲಿ ಮುತ್ತೈದೆ, ಬ್ರಾಹ್ಮಣ ಮೊದಲಾದವರಿಗೆ ಕೊಡುವ (ಆಹಾರಪದಾರ್ಥ ಇತ್ಯಾದಿಗಳ) ಕಾಣಿಕೆ : ಉಪಾಯನ : ಬಲಿ ಬಾಯನಂಗಳುಂ ಮಂಗಲತೂರ್ಯಮುಮೆಸೆಯೆ . . . ಗೋಪಕಾಂತೆಯರ್ ನೆರೆದಾಗಳ್ (ಹರಿ. ೩-೨೬); ಸುತನಂ . . . ವಿಜಯಾವತೀಮಹಾಸತಿ ಪಡೆದಳ್ ಸಮಂತಿರದೆ ಬರ್ಪುದು ಬಾಯನಕೆ (ಶಾಂತೀಶ. ೬-೦೦೬); ಮುನಿಕಾಮಿನಿಯರ್ಗೆಂದು ಕಟ್ಟಿದ ಬಾಯನಂಗಳಂ ಮಱೆತೆನಲಾ ! (ರಾಮಾಶ್ವ. ೨೬-೨೩). **ಬಾಗಿನ** : ಹರನರಸಿ ಗೌರಿಗೆ ಸಮರ್ಪಿಸಿ ಹರುಷದಿಂ ಬಾಗಿನವನೀಯೆಂದುಱುವ ವೇದವ್ಯಾಸಮುನಿ ಗಾಂಧಾರಿಗಱುಹಿದನು (ಸಪುರ. ೨೦-೬); ಬಾಗಿನಕ್ಕಾಗಿ ಚಕ್ಕುಲಿ ಉಂಡೆಗಳು ಮುಂತಾದ್ದು ತುಂಬಾ ಇತ್ತು (ಕಾಶೀಕಂ. II. ೭) ; ಅರಮನೆಯಿಂದ ಮೊರದ ಬಾಗಿನ ತೆಗೆಸಿಕೊಂಡು ಬಂದಿದ್ದೇನೆ (ಇಬ್ಬರು. ೬೯). **ಬಾಯಿನ** : ಮಣಿಮಯಭಾಜನಂಗಳೊಳ್ ತಕ್ಕನೆ ತೀವಿದ ಪಂಚರತ್ನದ . . . ಕಪ್ಪುರದ ವಳಿಕಿನ ಬಾಯಿನಂಗಳಂ ದಿಱು (ಅಜಿತ. ೯-೬೪ ವ); ರನ್ನದ ಬಾಯಿನಕ್ಕೆ ಪಲವಂದದ ಚಂದದ ಸೀರೆಗೆನ್ನವರ್ತನ್ನವರೆನ್ನದಿತ್ತು (ಪುಣ್ಯಾ. ೯-೦೦೯) ; ಕೂಡಲಸಂಗಮದೇವರಿಗೆ ಬೇಲಾಳನೆಂಬ ಬಾಯ[ಹಾಡು. ೧]ನವನಿಕ್ಕಿದರೆ ಹೇಳಾ (ಬಸವ. ೦೩೭) ; ಶಾಕಿನಿಯರನು ಕರೆಯಿಸಿ ನಿನ್ನ ಕಯ್ಯಲಿ ಧುರದೊಳಗೆ ಬಾಯನವ ಕೊಡಿಸುವೆನು (ಕುಮಾವ. – ೦೩

೧೬-೯೬). 'ಉಪಾಯನ' ನೋ.

[< ಸಂ. ವಾಯನ. / ಪ್ರಾ. ವಾಯಣ. / ತುಳು. ಬಾಯನ, ವಾಯನ ; ತೆಲು. ವಾಯನ]

**ಬಾಯರು** 'ಬಾಯಾರು₁' ನೋ.

**ಬಾಯಳಿ** 'ಬಾಯಟಿ' ನೋ.

**ಬಾಯಱಿಕೆ** 'ಬಾಯಾಱಿಕೆ' ನೋ.

**ಬಾಯಱು** 'ಬಾಯಾಱು₁' ನೋ.

**ಬಾಯಟಿ**, ಬಾಯಳಿ (ಕ್ರಿ). ೧. ಬಾಯಿಯಿಂಹರಿದು ಹೋಗು, ಸೀಳಿ ಹೋಗು : ಆಯದ ನೀರೊಳಗೆ ತನ್ನನಡಸಿದ ನೆಗಟಂ ಬಾಯಟಿ ವಿನಮಿಸಿಯುಮರೆ ಹೋಯಜ ಬಾಷ್ಪೆಂದು ಹರಿಗನಂ ಗುರು ಪೊಗಟ್ಟಂ (ಪಂಪಭಾ. ೨-೬೦). ೨. ಬಾಯಿ ಸೋಲು ; ಬಾಯಿ ಬಿದ್ದುಹೋಗು: ಸಂದೋಧನ ದೀರ್ಘೋಕ್ತಿಯೊಳಿಂಬಾಗಿರೆ ಬರ್ಖಮದನೆ ಪಲವೆಡೆಗಳೊಳೆಂದುಂ ಬಲ್ಲವರಿಡದಿರ್ಕಾದಂ ಬಾಯಟಿದೂಳ್ಪವೋಲ್ ಕರಂ ವಿರಸತರಂ (ಶಬ್ದಾ. ೨-೨೩) ; ಭಾನುಮತಿ ಬಾಯಟಿದು ಪುಯ್ಯಲಿಡುತುಂ ಬಂದು ಧರ್ಮನಂದನನ ಕಾಲ ಮೇಲೆ ಕವಿದು ಪಟ್ಟು (ಪಂಪಭಾ. ೬-೩೩ ವ) ; ಹಾಹಾರವದಿಂ ಶೂಲಾಗ್ರದೊಳ್ ಬಾಯಟಿದೊಳಟುವಿನಂ ಕೊಲ್ವುದಂ ಕನ್ನೆ ಕಂಡಳ್ (ಸುಕುಮಾ. ೬-೩೫). ೩. ಗೋಳಾಡು ; ದುಃಖಿಸು : ಇಂತಟುಟು ಸಂಸೃತಿಧರ್ಮಮೇಕೆ ಬಾಯಟುವುದದೇಕೆ ಚಿಂತಿಸುವುದೇಕೆ ಪಲುಂಬುವುದೇಕೆ ನೋವುದೋ (ಅಂಜ. ೩-೩೩); ತಟಕೆ . . . ಕಾದಂಬರಿ ಯನುಟಿದೆತ್ತ ಪೋಪೆಯೆಂದು ಬಾಯಟಿದು ಪಳವಿಸುತ್ತಮಿರ್ದಳ್ (ಕಾದಂಬ. ೩೭೬) ; ಗಾಂಗೇಯರ ಮಾತುಗೇಳದಟಿದಂ ಕುರುರಾಜ ನದರ್ಕೆ ದುಃಖದಿಂ ಬಾಯಟಿಯಲ್ಕೆವೇಡ (ಗದಾಯು. ೧೦-೦೨). ಬಾಯಳಿ : ೩. ಕಾವುದೆಂದೊಱಲುತ್ತುಂ ಬಾಯಳಿವ ಮದನನಂ ಕಾತ್ಯಾಯನಿ ದಯೆಯಿಂದೆ ನೋಡಿ ನಯದಿಂ ನುಡಿದಳ್ (ಗಿರಿಜಾ. ೯-೦೬) ; ಒರ್ಮಬಳೆ . . . ಮೊಱೆಯಟ್ಟೊಱಲಿ ಬಾಯಳಿಯುತ್ತಿರ್ದಳೆ (ಶಾಂತಕಂ. ೯-೩೨). ೪. ಕಿರಿಚು; ಬೊಬ್ಬೆ ಹಾಕು : ಸತ್ತ್ಯುತಿಯನು ಒಳಗಱಿಯದೆ ಪೊಱಗಱಿಯದೆ ಕುಕವಿಗಳಿಳಿಕೆಯ್ಯುತಿಹರು ಬಾಯಳಿದು (ಭಾರತಾಸಾ. ೦-೬೭). ೫. ಬಾಯಿಬಿಡು ; ಬಾಯಿ ತೆರೆ : ಆ ಮೃಗನೇತ್ರೆಯು ರೂಪಳವ ಬಣ್ಣಿಸಲು ಬಾಯಳಿದು (ಭಾರತಾಸಾ. ೨೯-೦೦೬) ; ಪೋಯೆಂದು ಬಂದೆಮ್ಮ ಕೊರಳ ತಕ್ಕಿಸಿಕೊಂಡು ಬಾಯಳಿದುಟಿ ಹಲುಬುವರು (ಭರತ. ೬೩-೯೭) ; ಮದಮುಖನೆ ಬಾಯಳಿದು ಪೇಳಲೇಂ ನಮ್ಮಂಗವಂ ಪರಿಕಿಸು (ಕೋಟಿ. ೨೩-೨೪). ೬. (ನಾಚಿಕೆ ಅಥವಾ ಸಂಕೋಚದಿಂದ) ಮಾತಾಡಲಾಗದಿರು ; ಮಾತು ತೋಚದಿರು : ತಲೆಗುತ್ತಿ ಕಡುನಾಣ್ಚಿ . . . ಭೂಪಾದಿಗಳ್ ಬಾಯಳಿವುತಿರಲು (ಚನ್ನಭಾ. ೬-೬೯). [ಬಾಯ್ + ಅಟು₁]

**ಬಾಯಾಚಾರ** (ನಾ). ಹೊರಗಿನ ನಡವಳಿಕೆ : ಬೂಟಾಟಿಕೆ ; ಕಪಟಾಚರಣೆ : ತಾವು ಕುಂಪನಿಗೆ ಬಾಯಾಚಾರ ದೋಸ್ತಾರರಾದ್ದರಿಂದ, ಇದಕ್ಕಿಂತ ಅಧಿಕವಾಗಿ ಬರದು ಕಳುಹತಕ್ಕದಿಲ್ಲವಷ್ಟೆ (ರಾಜೇಂದ್ರ. ೬೭); ತಾವು ನಾವು ದೋಸ್ತಾರರಾದ್ದರಿಂದಾ ಬಾಯಾಚಾರಕ್ಕೆ ಸಲುವಾಗಿ ಬಹಳ ಫಲವಾಗಿ ಇರುವಂಥಾದ್ದು ವರ್ತನೆ ಆಗಿ ಇರಬೇಕು (ರಾಜೇಂದ್ರ. ೦೬೦).

[< ಸಂ. ಬಾಹ್ಯಾಚಾರ]

**ಬಾಯಾಡಿಸು** (ಕ್ರಿ). ಆಸ್ವಾದಿಸು ; ರುಚಿ ನೋಡು : ಸತ್ಯ ಲೋಕದಲಿ ಶ್ರೀದಶರಜಿ ಬಾಯಾಡಿಸಿದರಗ್ಗದ ಧ್ರುವಾದಿಗಳನು (ಜಿಮ್ಮಾ.ಸ. ೬-೩೯); ಬಾಯಾಡಿಸುತ ಬಣ್ಣಿಸುತ ಕೈಗಳ ನೀಡಿ ಬಹುವಿಧಭಕ್ಷ್ಯ ಭೋಜ್ಯಂಗಳನು ಜತರದಲಿ ಕೂಡಿದನು ಗೋಪಙಗೆ ಹರುಷವ ಮಾಡಿದನು (ಹರಿಭಾಗ. ೦೦-೨೨-೨೬); ಚಿರೋಟಿಗಳನ್ನೂ ಹುರಿಗಾಳನ್ನೂ ಶಾರದಮ್ಮನವರು ಎಲ್ಲರಿಗೂ ಹಂಚಿದರು. ಇಂಥ ಸಂದರ್ಭದಲ್ಲಿ ಇವನ್ನು ಬಾಯಾಡಿಸುವುದರಿಂದ ಬಹಳ ಪ್ರಯೋಜನವಿದ್ದಿತು (ಕರ್ಣಾಟಕ. ೦೨೩). [ಬಾಯಾಡು + – ಇಸು₁]

**ಬಾಯಾಡು** (ಕ್ರಿ). ಆಹಾರವನ್ನು ಅಗಿ, — ಜಗಿ : ಬಾಯಾಡಿದರೆ ಕೈಯಾಡೀತು (ಗಾದೆ). 'ಬಾಯಾಡಿಸು' ಪರಾ. [ಬಾಯ್ + ಆಡು₁]

**ಬಾಯಾನ್** (ಕ್ರಿ). ೧. ಬಾಯಿ ನೀಡು ; ಬಾಯೊಡ್ಡು : ಪಕ್ಕಿ ಸೋವ ವರಸ್ತ್ರೀಯರ . . . ತಂಬುಲಕೆ ಬಾಯಾಂಪುಂದದಿಂ ಬಂದು ಪಾಯ್ವುವು ಕೀರಾಳಿಗಳಲ್ಲಿ ಪಾವುರವಧೂಬಿಂಬಾಧರಕ್ಕಾವಗಂ (ಧರ್ಮಾಮೃ. ೨-೨೯). ೨. ಆಸೆ ಪಡು ; ಹಾತೊರೆ : ನಮ್ಮ ಉದಾರಾತಿಥ್ಯಕ್ಕೆ ಬಾಯಾಂತು ಹೊತರುತ್ತಿರುವ ಆ ತಿರಿಕೂಳ ತೆಲುಂಗರೊಡೆಯನಿಗೆ ಉತ್ತರವೇನು (ಮಂತ್ರಶ. ೦೯-೦೯). [ಬಾಯ್ + ಆನ್₁]

**ಬಾಯಾರ್**, ಬಾಯಾರು₁ (ಕ್ರಿ). ೧. ಕೂಗಾಡು ; ಬೊಬ್ಬಾಟ ಮಾಡು ; ಆರ್ಭಟಿಸು : ವರರುಚಿಭಟ್ಟನಂ ಪಲರ್ ದುಷ್ಟರೊಂದಾಗಿ ಪೊಲೆಯನೆಂದು ಗೆಲೆ ಬಾಯಾರ್ವರೆಂದೊಡುಟಿದರಳವಾವುದು (ಪಂಪಶಂ. ೦೯೬-೦೬); ಧರ್ಮಬುದ್ಧಿ ತತ್ಸ್ವರ್ಗಿಡಲ್ಬುಡಿದು ನೀಂ ಗೆಲೆ ಬಾಯಾರ್ದು ಪೋಗಲ್ವಡಿಯೆ ವಿಚಾರಂಗೆಯ್ಯಂ (ಪಂಪಶಂ. ೦೬೦-೯). ೨. ಆಕ್ರಂದಿಸು ; ಪ್ರಲಾಪಿಸು ; ರೋದಿಸು : ಗರಳಭಯದಿಂದೆ ಬಾಯಾರ್ವರುಂ ಚೀರ್ವರುಂ . . . ಚಂದ್ರಚೂಡಂ ಕಂಡನು (ಕಂಜ. ೨೨-೦೬); ನಡೆಗೊಳಲ್ ಕಂಡು ಬಾಯಾರ್ವಳುಂ ಚೀರ್ವಳುಂ . . . ಭರತಾವರಜನಗಲ್ದು ಅಡಿಗಡಿಗೆ ತಿರುತಿರುಗಿ ನೋಡುವಂ ಬಾಡುವಂ (ಕೃಪಾಪಾ. ೦೯-೬೦). ಬಾಯಾರು₁ : ೩. ಬಾಯಿಬಡಿ ; ಅಲ್ಲಗಳೆ : ಬೆಟ್ಟಕ್ಕೆ ಬೇಗೆಯುಕ್ಕಿದನಿವಂ ಸಾಲವುಂ ಕೊಟ್ಟುದಿಲ್ಲೆಂದು ಬಾಯಾರಿದನಿವಂ . . . ಬಟ್ಟೆಯಂ ಬಡಿದು ಬಾಳಿದನಿವಂ (ಕಂಜ. ೩೬-೩೬).

[ಬಾಯ್ + ಆರ್₁]

**ಬಾಯಾರಿಕೆ** 'ಬಾಯಾಱಿಕೆ' ನೋ.

**ಬಾಯಾರು₁** 'ಬಾಯಾರ್' ನೋ.

**ಬಾಯಾರು₂** 'ಬಾಯಾಱು₁' ನೋ.

**ಬಾಯಾಲ್** (ಕ್ರಿ). ಬಾಯಿಗೆ ಬಂದದ್ದು ಆಡು ; ಮನಸ್ವಿಯಾಗಿ ಮಾತನಾಡು : ಕಂಡುದ ನುಡಿದೆನು ಸ್ತುತಿಯೆನ್ನದಿರು ಲೇಸ ಕಂಡು ಬಾಯಾಲ್ವನು ಕವಿಯೇ (ಭರತ. ೨-೬೨). [ಬಾಯ್ + ಆಲ್]

**ಬಾಯಾಳಿ** (ನಾ). ಅತಿಯಾಗಿ ಮಾತನಾಡುವ ವ್ಯಕ್ತಿ: 'ಬಾಯಾಳಿತನ' ಪರಾ. [ದೇ.॥ ತಮಿ. ವಾಯಾಟಿ ; ತುಳು. ಬಾಯಾಳಿ, ಬಾಯಾಡಿ]

**ಬಾಯಾಳಿತನ** (ನಾ). ಅತಿಯಾಗಿ ಮಾತಾಡುವ ಸ್ವಭಾವ : ಅವಳು ಅತಿಕೋಪಸ್ವಭಾವವುಳ್ಳವಳೂ ಬಾಯಾಳಿತನವುಳ್ಳವಳೂ ಆದುದರಿಂದ . . . ಅವಳನ್ನು ಗಯ್ಯಾಳಿಗೌರಿಯೆಂದು ಕರೆಯುತ್ತಿದ್ದರು (ಕಥಾ. ೯೯).

[ಬಾಯಾಳಿ + – ತನ]

**ಬಾಯಾಱಿಕೆ**, ಬಾಯಱಿಕೆ, ಬಾಯಾರಿಕೆ (ನಾ). ೧. ನೀರಿಗಾಗಿ ಬಾಯಿ ಒಣಗುವುದು, — ಗಂಟಲು ಒಣಗುವುದು : ತೃಷೆ ; ನೀರಡಿಕೆ : ದೇಶಾಂತ್ರಿಯಾದವ ತಿಗುಣಿ ಚಿಕ್ಕುಟ ಪಸಿವು ಬಾಯಾಱಿಕೆ ಗಂಜಿದರೆಂತಹುದು (ಲೀಪಶ. ಹ. ೩೬೬-೦೯) ; ಮಂಗಮಗಿಪ ಪರಿಮಳವನಿಕ್ಕಲದು ನಮ್ಮೋದಕಂ ಬಾಯಾಱಿಕೆ[ಪಾಠಾಂ. ಯಱಿಕೆ, ಯಱಿತೆ]ಯಂ ಕೆಡಿಪುದು (ಸುಕುಮಾ. ೨-೯೩). ಬಾಯಱಿಕೆ : ೧. ಬಾಯ್ದೆಱೆಯನೊಲ್ದು ಕರ್ದುಂಕಿ ಕರ್ದುಂಕಿ ಪೀರ್ದು ಪೀರ್ದೊಡನಡಸಿರ್ವ ಬಾಯಱಿಕೆಯಂ ತವಿಪೆಂ ಸವಿ ಪೆಂಪುಗೊಂಬಿನಂ (ಕಥಾ. ೬-೨೦೨). ಬಾಯಾರಿಕೆ : ೧. ತೃಷ್ಣೆಯೆಂದೊಡಂ ದಾಹಮೆಂದೊಡಂ ಬಾಯಾರಿಕೆಯೆಂದೊಡಂ ನೀರಡಿಕೆಯೆಂದರಿವುದು (ಸಶಬ್ದ. ೨೬೨); ಬಹಳ ದೂರ ನಡದು ಬಂದಿದ್ದೀಯೆ. ನಿನಗೆ ಬಾಯಾರಿಕೆಯಾಗಿರಬೇಕು (ಲೀಲಾ. ೦೦) ; ಬಾಯಾರಿಕೆ ಬಂದಾಗ ಬಾವಿ ತೋಡಿದ ಹಾಗೆ (ಗಾದೆ). ೨. ನೀರಡಿಕೆಯನ್ನು ಓಂಗಿಸುವ (ಎಳನೀರು, ಪಾನಕ ಮೊದಲಾದ) ಪಾನೀಯ ಅಥವಾ ಬೆಲ್ಲದೊಡನೆ ಕೊಡುವ

ನೀರು ಇತ್ಯಾದಿ : ನಾರಾಯಣನು . . . ಒಂದು ಲೋಟ ಬಾಯಾರಿಕೆಯನ್ನು ತಾನೇ ತಂದು ಕೊಟ್ಟನು (ತುಂಗಾಮು. ೬೪) ; ಒಂದವರಿಗೆ ಬಾಯಾರಿಕೆ ಕೊಡುವುದು ಬೇಡವೆ? (ದೇವಮಾ. ೧೬೦) ; ಆತ ಒಂದಷ್ಟು ಹೊತ್ತು ಅಲ್ಲೇ ವಿರಮಿಸಿದ. ಬಾಯಾರಿಕೆ ಕೇಳಿದ (ಮೂಕಜ್ಜಿ. ೩೩).
[ಬಾಯಾಱು$_1$ + – ಇಕೆ./ತುಳು. ಬಾಯಾರಿಗೆ]

**ಬಾಯಾಱಿಸು** (ಕ್ರಿ). ಬಯಕೆಯನ್ನು ಹುಟ್ಟಿಸು : ಆತ್ಮೇಶ್ವರನ ದಿಟ್ಟಿಗೆ ರೂಹುಗಾಣಿಸಿ ಬಾಯಾಱಿಸುತೆ ಬಾಣತಿರೂಹಿಂದೆ ಬಂದಳು ಪರಿಶೀಲವೆಗೆ ತೊಟ್ಟಿಲ ಕಟ್ಟುವೆಡೆಗೆ (ನೋಹತ. ೦೬-೯೬). [ಬಾಯಾಱು$_1$ + – ಇಸು$_1$]

**ಬಾಯಾಱು$_1$**, ಬಾಯಱು, ಬಾಯಾರು$_2$ (ಕ್ರಿ). ೧. ಬಾಯಿ ಒಣಗು : ನೀರಡಸು ; ದಾಹವುಂಟಾಗು : ಅರಗಿನ ಪುತ್ತಳಿಯನುರಿ ಕೊಂಡಡೆ ಉದಕ ಬಾಯಾಱಿ ಬಳಲುತ್ತಿದೆ ಅಗಿಯಿಂ ಭೋ ಭಾವಿಯನಗೆಯಿಂ ಭೋ (ಅವತಂ. ೬-೩೦); ಬಾಯಾಱಿತು ಎಂದು ಬಾವಿನೀರಿಗೆ ಪೋದೆ ಬಾವಿಲಿ ಜಲ ಬತ್ತಿ ಬಱಿದಾಯ್ತು (ಶ್ರೀರಂರ. ೪-೬೩-೦). ೨. ಹಂಬಲಿಸು ; ಹಾರೈಸು : ತೀವ್ರವಾಗಿ ಅಪೇಕ್ಷಿಸು : ಚನ್ನಮಲ್ಲಿಕಾರ್ಜುನಯ್ಯ ಬಂದಾನೆಂದು ಬಟ್ಟೆಗಳ ನೋಡಿ ಬಾಯಾಱುತ್ತಿಹೆನು (ಮಹಾದೇ. ಬ. ೧೧೦-೩೨೦) ; ನಾಱು ಜನ್ಮವ ತಿರುತಿರುಗಿ ಬಾಯಾಱಿ ಕಾಮಿಸಲೀತನಂದದ ನೀಱರುಂಟೇ ನಳಿನ ಭವ ನಿರ್ಮಿಸಿದ ಸೃಷ್ಟಿಯಲಿ (ಕೂಡಲ. ೩-೩-೩೬). ೩. ಗಾಬರಿಯಾಗು ; ದಿಗಿಲುಗೊಳ್ಳು : ಬಾಯಾಱಿದರಿ ಕಳ್ವೇಱುಕಾಱನ ಕರುಳ ಹರಹುವೆನು (ಕುವ್ಯಾರ್ತ್ರೋ. ೦೬-೩೦); ಬಾಯಾಱಿದುದು ಜನಕೆ ಲಯ ದೋಱಿದುದು ಜಗಕೆ (ಕರಾ. ೩೦-೪). ೪. ಆಯಾಸಗೊಳ್ಳು; ಬಳಲು : ಮಿಥ್ಯಾದೃಷ್ಟಿಗಳ್ . . . ಕುಚರ್ಚೆಗಳಿಂ ಬಾಯಾರ್ಪೊಡಂ ಸಜ್ಞಾನಮಿಲ್ಲದೆ ದರ್ಶನಮಂ ಪೊರ್ದದೆ ಮೋಕ್ಷಮಂನೈದಲ್ಪಾರದು (ಧರ್ಮಾಮೃ. ೭-೩೨) ; ದೂರದಲ್ಲಿರ್ದನೆಂದು ಆಸು ಬಾಯಾಱಿ ಬಳಲುತ್ತಿರ್ದೆನಯ್ಯ (ಮಹಾದೇ. ೪. ೦೦೦-೨೩೭); ಬಾಯಾಱಿ ಚೀಱಿ ಚಿತ್ರಾಂಗದೆ ಹಲುಬಲು (ಜೈಮಿ. ೨೪-೦). ಬಾಯಱು : ೧. ಒಱತಪಾಱಾತು ಪರಿಣಶರ ಬಾಯಱಿತು ನೀರಡಿಸಿದುದು (ಕುವ್ಯಾರ್ತ್ರೋ. ೦೯-೫೪). ಬಾಯಾರು$_2$ : ೧. ಬಳಲಿ ಬಾಡಿ ಬಾಯಾರಿ ಹಸಿದ ತೋಳನು ಹರಿವ ಹಳ್ಳವನೆ ಸಾರಿ ತೃಷೆಯ ಕಳೆಯಲು ನೀರಿಗಿಳಿಯೆ (ಕುಪ್ಪು. ೦೨-೦) ; ಪ್ರೇಮಲತೆ ಬಾಯಾರಿ ಕಾತರಿಸಿತಾವುದನೊ ತಾನರಿಯದುದ ಬಯಸಿ (ಶಕ್ತ್ಯಾಂಗ. ೭-೦೭೩). ೨. ಯುವತಿ ಪುರುಷನ ಬಯಸಿ ಬಾಯಾರುವದನರಿದುಯುವಳ ಸತ್ಕಾರ್ಯ ತನ್ನಿಂದ ತಡೆದಿದೆಯೆನುತ ರವಿಯಸ್ತಮಯಮಾಗಲು (ನವಮೋ. ೨೬-೭). ೩. ನುಡಿ ನನ್ನಿಯೊಂದೆನಲ್ ಬಡವ ಬಾಯಾರಿದಂ (ಕಾಂಜಿ. ೧೬೦-೩೩೭). ೪. ವೀರವಿಕ್ರಮವಿಜಯರೇದಾಗ ದೈನ್ಯದಲವಾರಚಿಂತೆಯೊಳು ಬಾಯಾರುವರೆ ದೇವ ನೀಂ (ವಿಂಶಾರ. ೪-೦-೨೩). [ ಬಾಯ್ + ಆಱು$_1$ ]

**ಬಾಯಾಱು$_2$**, ಬಾಯಱು (ನಾ). ೧. = ಬಾಯಾಱಿಕೆ ೧: ಬಾಯಾಱಿದ ಪರುಷಪ್ಪನೀರ್ಗುಡಿಯಲು ಮತ್ತು ಬಾಯಾಱು ಹೆಚ್ಚುವಂದದೊಳು (ಧರ್ಮ. ೬೩-೩೯). ಬಾಯರು : ೨. = ಬಾಯಾಱಿಕೆ ೨ : ಮನೆಗೆ ಬಂದು ಬಾಯರು ಕೊಡಿ ಅಂದಾಗ ಬರಿ ನೀರು ಕೊಟ್ಟರೆ ಸೂರಿನ ಮಂಚ ಸಪ್ಪಗೆ ಆಗುತ್ತದೆ (ಮಲೆಮ. ೩೭). ೩. (ಕರಾ) ದನಕರುಗಳಿಗೆ ಕಂಡಿಯಲು ಇಡುವ. ತವಡು ಬೆರಸಿ ಕುದಿಸಿದ ನೀರು : ದನಗಳು ಹಟ್ಟಿಯನ್ನು ಸೇರುತ್ತವೆ . . . ಅವಕ್ಕೆ ಪ್ಯಾಲಿಗೆಯಲ್ಲಿರುವಾಗಲೇ ಅಕ್ಕಚ್ಚು, ಬಾಯರು ಹಾಕಿ. ಬಳಿಕ ಸ್ನಾನ ಮಾಡಿ . . . ಕಾಲುದೀಪ ಉರಿಸಬೇಕು (ಮಲೆಮ. ೧೨). [< ಬಾಯಾಱು$_1$]

**ಬಾಯಿ$_1$** 'ಬಾಯ್' ನೋ.

**ಬಾಯಿ$_2$** (ನಾ). ೧. ಹೆಂಗಸರ ಹೆಸರಿನ ಕೊನೆಯಲ್ಲಿ ಗೌರವಾರ್ಥವಾಗಿ ಸೇರಿಸುವ (ತಾಯಿ ಅಥವಾ ಅಮ್ಮ ಎಂಬರ್ಥದ) ಪದ : ಹಾಗೆಯೇ ಒರಗಿಕೊಂಡ ಕಮಲಾಬಾಯಿಗೆ ಕ್ರಮೇಣ ಎಚ್ಚರಾಗಿತ್ತು (ಸಮುದ್ರ. ೯೬೧). ೨. ಮನೆಯ ಒಡತಿ ; ಯಜಮಾನಿ : ಆಚಾರ್ಯರು ಬಂದ ಮೇಲೆ 'ಬಾಯರು' ಒಬ್ಬರ ಬೇಕೇ ಬೇಕು (ಶ್ರೀರಂಗ. ೧೬೦) ; ಬಾಯಿಯೊ, ರಾಯರು ಎರಡು ಊಟ ಕಳಿಸಿದ್ದಾರೆ (ಕಣ್ಣುಹು. ೨೬). ೩. ಹೆಂಗಸು ; ಸ್ತ್ರೀ : ಮರಾಠರ ಬಾಯಿಯೊಬ್ಬಳನು ಪಾತ್ರ ತಿಕ್ಕಲು ಗೊತ್ತುಮಾಡಿದೆ (ಸ್ವ.ಆತ. ೨೩೩). ೪. ಸಂಗೀತ, ನೃತ್ಯಗಳಿಂದ ಜೀವಿಸುವವಳು ; ಪಾತ್ರದವಳು ; ವೇಶ್ಯೆ : ಇಷ್ಟು ಪ್ರಸಿದ್ಧ 'ಬಾಯಿ' ಯ ಮನೆಯಲ್ಲಿ ಸಂಗೀತಸಾಮಗ್ರಿಯೊಂದೂ ಕಾಣಲಿಲ್ಲ (ಶ್ರೀಕಾಂತ. II, ೧೪೦).
[ ← ಹಿಂ. ಮರಾ. ಬಾಈ ]

**ಬಾಯಿಕ** (ನಾ). ಒಬ್ಬಾತನ ಹೆಸರು : ಅಯದ ಮೆಯ್ಗಲಿ ಬಾಯಿಕ ನೆಮ್ಮ ನೆಗಟ್ತೆಯಂ ಪ್ರಕಟಿಸಿದನ್ ಶ್ರೀದಯಿತನ ಬಾಯಿಕನ ಮನೋದಯಿತೆಗೆ . . . ತಾಮೋದರ್ ತನಯರ್ ಪೇಟಲ್ ಮಾಡುವರಂ ದೋಯಿಲಮ್ಮನೆಮ್ಬರ್ ಪೆಸರಿಂ (ಎಕ. II, ೦೩೯-೨ ; ಸು. ೪೫೦). [ ? ]

**ಬಾಯಿಕಟ್ಟು$_1$** 'ಬಾಯ್ಕಟ್ಟು$_1$' ನೋ.

**ಬಾಯಿಕಟ್ಟು$_2$** 'ಬಾಯ್ಕಟ್ಟು$_2$' ನೋ.

**ಬಾಯಿಕಡಾಣೆ** (ನಾ). ಕುದುರೆಯ ಬಾಯಿಗೆ ಹಾಕುವ ಕಡಿವಾಣ : "ಕವಿಕಾ, ಖಲೀನಃ– ೨ ಬಾಯಿಹಗ್ಗ, ಬಾಯಿಚಿಕ್ಕ, ಲಗಾಂ, ಬಾಯಿಕಡಾಣೆ, ಕಣಿಕೆ" (ಸಿದ್ದಾಂತಿ. ೨೫೦). [ಬಾಯಿ$_1$ (< ಬಾಯ್) + ಕಡಾಣೆ]

**ಬಾಯಿಕಲು** 'ಬಾಯ್ಕಾಲ್' ನೋ.

**ಬಾಯಿಕಲ್ಲಿ** (ನಾ). (ದನಗಳ ಬಾಯಿಗೆ ಕಟ್ಟುವ) ಬಾಯಿಕುಕ್ಕೆ : "(ಕಚ್ಚದಂತೆ, ತಿನ್ನದಂತೆ, ತೋಡದಂತ, ಪ್ರಾಣಿಗಳ ತಲೆಗೆ ಕಟ್ಟುವ) (ಬಾಯಿ)ಕುಕ್ಕೆ, ಬಾಯಿಕಲ್ಲಿ" (Muzzle. ಇಂಕಂ).
[ಬಾಯಿ$_1$ (< ಬಾಯ್) + ಕಲ್ಲಿ$_1$]

**ಬಾಯಿಕಲ್ಲು** 'ಬಾಯ್ಕಾಲ್' ನೋ.

**ಬಾಯಿಕಾಲು** 'ಬಾಯ್ಕಾಲ್' ನೋ.

**ಬಾಯಿಕುಕ್ಕೆ** (ನಾ). = ಬಾಯಿಕಲ್ಲಿ : ಆಡಿಕೊಳ್ಳುವ ಬಾಯಿಗಳಿಗೆ ಬಾಯಿಕುಕ್ಕೆ ಹಾಕುವುದಕ್ಕಾದೀತೆ? (ಶಕುಮ. ೬೬).
[ಬಾಯಿ$_1$ (< ಬಾಯ್) + ಕುಕ್ಕೆ$_1$]

**ಬಾಯಿಕೊಚ್ಚು**, ಬಾಯ್ಕೊರ್ಚು (ಕ್ರಿ). ತನ್ನನ್ನು ತಾನೇ ಹೊಗಳಿಕೊಂಡು ಮಾತಾಡು; ಜಂಬ ಕೊಚ್ಚಿಕೊಳ್ಳು; ಬಡಾಯಿ ಕೊಚ್ಚು: ಸೊಸೆಯನ್ನು ಹೊಟ್ಟೆಯ ಮಗಳಿಗಿಂತ ಹೆಚ್ಚಾಗಿ ನೋಡಿಕೊಂಡಿದ್ದೇನೆ . . . ಎಂದು ಬಾಯಿಕೊಚ್ಚಿಕೊಂಡರು (ಕದ್ಮಕ. ೧೧). **ಬಾಯ್ಕೊರ್ಚು** : ಚಂಬೊನ್, ಕರ್ಬೊನ್, ಬೆಳ್ಳಿ, ಬಂಗಾರಂಗಳನ್, ನಾನಲ್ಲದಾರ್ ತೋರ್ದರಯ್ ಬಱಿದೆ ಬಾಯ್ಕೊರ್ಚುವನನುಬಿಡು ಆರುವುಲ್ಲೆಂದೆ ಜಗೆದಪೆನ್ (ಐದ್ವಕ್ರ. ೨೬-೩೭೦). [ಬಾಯಿ$_1$ (< ಬಾಯ್) + ಕೊಚ್ಚು$_1$]

**ಬಾಯಿಕೊಬ್ಬು** 'ಬಾಯ್ಗೊಬ್ಬು' ನೋ.

**ಬಾಯಿಕೋಲು** 'ಬಾಯ್ಕಾಲ್' ನೋ.

**ಬಾಯಿಗರೆ** (ಕ್ರಿ). ನುಡಿ ; ಧ್ವನಿ ಮಾಡು : ಒರಿದು ರಂಜಿಸುವುದಂತದ ಜೊಲುಗ್ಗಡಿಸುವ ಗೊರವ ಬಂದುದ ಬಾಯಿಗರೆವ ಅರಗಿಳಿ (ಶೀಬಾಸಂ. ೦-೭೪). [ಬಾಯಿ$_1$ (< ಬಾಯ್) + ಕರೆ$_1$]

**ಬಾಯಿಗಾಳೆಗ** 'ಬಾಯ್ಗಾಳೆಗ' ನೋ.

**ಬಾಯಿಗೂಡಿಸು** (ಕ್ರಿ). ಹೊಂದಿಸು ; ಸರಿಗೊಳಿಸು : ಲೆಕ್ಕ ಬಾಯಿಗೂಡಿಸುವ ಬಗೆ ಇವಲ್ಲ (ಬಕ್ಕೆ. ೨೪೦).
[ಬಾಯಿಗೂಡು (< ಬಾಯ್ಗೂಡು) + – ಇಸು$_1$]

**ಬಾಯಿಗೂಡು** 'ಬಾಯ್ಗೂಡು' ನೋ.

**ಬಾಯಿಚಪಲ** (ನಾ). ತಿನ್ನುವ ಬಯಕೆ ; ಜಿಹ್ವಾಚಾಪಲ್ಯ : ಬಾಯಿ ಚಪಲದವರು ಏನಾದರೂ ಮಾಡಿಕೊಂಡು ತಿಂದದ್ದು ಪತ್ತೆಯಾದರೆ ನಂದಾದೀಪದ ಖರ್ಚನ್ನೆಲ್ಲಾ ಅವನೊಬ್ಬನೇ ದಂಡವಾಗಿ ತೆರಬೇಕಾಗಿತ್ತು (ಹುಚ್ಚಿ. ೫೦). [ಬಾಯಿ₁ (< ಬಾಯ್) + ಚಪಲ]

**ಬಾಯಿಚಿಕ್ಕ** (ನಾ). = ಬಾಯಿಕಡಾಣ : "ಕವಿಕಾ, ಖಲೀನಃ — ೨ ಬಾಯಿಹಗ್ಗ, ಬಾಯಿಚಿಕ್ಕ, ಲಗಾಂ, ಬಾಯಿಕಡಾಣ, ಕಂಣಿಕೆ" (ಸಿದ್ಧಾಂತಿ. ೨೫೦). [ಬಾಯಿ₁ (< ಬಾಯ್) + ಚಿಕ್ಕ₂ (< ಸಿಕ್ಕ₁)]

**ಬಾಯಿಚ್ಚಿ** (ನಾ). = ಬಾಯಿಚಪಲ : ಕೊಲ್ಲೆನಯ್ಯಾ ಪ್ರಾಣಿಗಳ ಮೆಲ್ಲೆನಯ್ಯಾ ಬಾಯಿಚ್ಚೆಗೆ (ಬಸವ. ೬೩). [ಬಾಯಿ₁ (< ಬಾಯ್) + ಇಚ್ಚೆ]

**ಬಾಯಿಜಾಳಿಗೆ** (ನಾ). = ಬಾಯಿಕಲ್ಲಿ : ಇವೆಗಳಿಗೆ ಸಚಿತ ಬಾಯಿಜಾಳಿಗೆ ಹಾಕಲಿಕ್ಕೆ ಸುರೂ ಮಾಡ್ಯಾರ! (ಜಾನ. ೬) ; ಎಡಕುಂಟೆ ಹೊಡೆಯುವಾಗ ದನಕ್ಕೆ ಬಾಯಿಜಾಳಿಗೆ ಹಾಕಬೇಡವೆ? (ಅದೇ). [ಬಾಯಿ₁ (< ಬಾಯ್) + ಜಾಳಿಗೆ₁]

**ಬಾಯಿಜ್ವರ** (ನಾ). (ಸಾಮಾನ್ಯವಾಗಿ ಬೇಸಗೆಯಲ್ಲಿ) ದನಗಳಿಗೆ ಬರುವ ಒಂದು ಬಗೆಯ ಬಾಯಿಹುಣ್ಣು : ಈ ಎಮ್ಮೆಗೆ ಒಂದು ಸಲ ಕಾಲುಜ್ವರ ಬಾಯಿಜ್ವರ ಆಯಿತು (ಹೇಮಾ. ೬೪). 'ಕಾಲುಜ್ವರ' ನೋಡಿ. [ಬಾಯಿ₁ (< ಬಾಯ್) + ಜ್ವರ]

**ಬಾಯಿಡಬ್ಬು** (ನಾ). ಮಾತಿನ ಆಡಂಬರ ; ಒಡ್ಡಾಯಿ : ಶೀನಪ್ಪಯ್ಯರ ಹತ್ತಿರ ಅಪಾಟ ರೂಪಾಯಿ ಎಲ್ಲಿಂದ ಬರಬೇಕು? ಸುಮ್ಮನೆ ಬಾಯಿ ಡಬ್ಬಿಗೆ ಹೇಳಿರಬೇಕು (ಹುಲಿಪ. ೦೫೪). [ಬಾಯಿ₁ (< ಬಾಯ್) + ಡಬ್ಬು₄ (< ದಂಬ)]

**ಬಾಯಿತಪ್ಪು₁** (ಕ್ರಿ). ಮಾತಾಡುವಾಗ ಎಚ್ಚರವಿಲ್ಲದಿರು ; ಅಜಾಗರೂಕತೆಯಿಂದ ಬಾಯಿ ಬಿಡು : ಇಂದಿರೆಯು ಒಂದು ದಿನ ... ಬಾಯಿತಪ್ಪಿ "ಇದು ಕಾಲಾದಿಳ್ಳಿಯ ದಕಾಯಿತಿ!" ಎಂದು ಬಿಟ್ಟಳು (ಬಂಕಿಮ. ೦೦೪) ; ನಾನು ಬಾಯಿತಪ್ಪಿ ಒಂದು ಹೇಳುವುದಕ್ಕೆ ಬದಲು ಇನ್ನೊಂದು ಹೇಳಿದ್ದೆ (ಚಾರ್ಗರ. ೬೩). [ಬಾಯಿ₁ (< ಬಾಯ್) + ತಪ್ಪು₁]

**ಬಾಯಿತಪ್ಪು₂** (ನಾ). ಎಚ್ಚರ ತಪ್ಪಿ ಆಡುವ ನುಡಿ ; ಅರಿವಿಲ್ಲದೆ ಹೊರಬರುವ ಮಾತು : (ಶ). [< ಬಾಯಿತಪ್ಪು₁]

**ಬಾಯಿತೀಟೆ** (ನಾ). ಇತರರನ್ನು ದೂರಬೇಕೆಂಬ ಆತುರ,–ಆಡಿಕೊಳ್ಳಬೇಕೆಂಬ ಚಾಪಲ್ಯ : ಈಗಲೆ ನಮ್ಮ ಮೇಲೆ ಕತ್ತಿ ಕಠಾರಿ ಹಿಡಿದು ಎಷ್ಟೋ ಜನ ನಿಂತಿದ್ದಾರೆ. ಅವರ ಬಾಯಿತೀಟೆಗೆ ಗ್ರಾಸ ಒದಗಿಸಿದ ಹಾಗಾಗುತ್ತೆ (ಹಚಿನಾ. ೩೦). [ಬಾಯಿ₁ (< ಬಾಯ್) + ತೀಟೆ (< ತೀಂಟೆ₁)]

**ಬಾಯಿತೆಗೆ** 'ಬಾಯ್ದೆಗೆ' ನೋ.

**ಬಾಯಿತೆರೆ** 'ಬಾಯ್ದೆರೆ₁' ನೋ.

**ಬಾಯಿದುತ್ತು** 'ಬಾಯ್ದುತ್ತು' ನೋ.

**ಬಾಯಿದೆರೆ₁** 'ಬಾಯ್ದೆರೆ₁' ನೋ.

**ಬಾಯಿದೆರೆ₂** 'ಬಾಯ್ದೆರೆ₂' ನೋ.

**ಬಾಯಿಧಾರೆ** 'ಬಾಯ್ದಾರೆ' ನೋ.

**ಬಾಯಿನ** 'ಬಾಯನ' ನೋ.

**ಬಾಯಿನಂಗುಡು** 'ಬಾಯಿನಂಗೊಡು' ನೋ.

**ಬಾಯಿನಂಗೊಡು, ಬಾಗಿನಕೊಡು, ಬಾಯಿನಂಗುಡು** (ಕ್ರಿ). ಬಾಗಿನವನ್ನು ನೀಡು ; ಉಪಾಯನವನ್ನು ಕೊಡು : ಆಗಳಾ ಶಿವದೇವಿ ಮಹಾದೇವಿಯುಂ ಕನ್ಯಕಾಕದಂಬದಂಬಿಕಾನಿಕುರುಂಬಮುಂ ... ತಕ್ಕನೆ ಶೀವಿದ ಕನಕರಜತಭಾಜನಸಮಾಜಮಂ ಭೋಜನಂ ಪೊಗಟೆ ಬಾಯಿನಂಗೊಟ್ಟು (ಜಗನ್ನಾ. ೧೪–೫೩ ಪ) ; ಬಾಯಿನಂಗೊಟ್ಟು ನಾನಾನವರತ್ನಸ್ವರ್ಣ ಮಸ್ತಂಗಳಿನುಳಿಜನಂ ಕೂಡೆ ಸಂಪನ್ನಮಪ್ಪನ್ನಂ (ಶ್ರೀಕೃಷ್ಣ. ೪–೦೩). **ಬಾಗಿನಕೊಡು** : ಮುತ್ತೈದೆಯರಿಗೆ ಬಾಗಿನಕೊಡುವ ಶಾಸ್ತ್ರವನ್ನೂ ಮಾಡಿ ಆಯಿತು (ಕಳು. ೬೩). **ಬಾಯಿನಂಗುಡು** : ಮನಮಂ ಮನದನ್ನನ ಬೆನ್ನನೆ ಪೋಗಿರೆ ತನ್ನ ಬಸನದಿಂದುಪಳೊಳ್ಪಂ ಮನಮುಬಿಡ ಬಳೆಯಿಪ ಬೆಳ್ಳನವಿಂದು ಪಾಟ್ಟಿನೆಗೆ ಬಾಯಿನಂಗುಡುವಂದಂ (ಕಂದರ್ಪ. ೮–೩೯). [ಬಾಯಿನ (< ಬಾಯನ) + ಕೊಡು₁]

**ಬಾಯಿನಂದೀವು** (ಕ್ರಿ). ಉಪಾಯನವನ್ನು ತುಂಬಿ ಸಿದ್ಧಪಡಿಸು ; ಬಾಗಿನವನ್ನು ತುಂಬಿಡು : ರಂಗವಲಿಯಿಕ್ಕುವ ಕಾಳ್ಗಳೊಳ್ಗೆ ಬಾಯಿನಂ ದೀವುವ ... ನಾನಾವಿಧಮಂಗಳಾಚರಣದಕ್ಷೆಯರಿಂ ಪತಿಪತ್ನಿಯರ್ಕಳಿಂ ತೀವಿ ಜವಾವಳೀಕಹೃದಯಾಸ್ಪದವಾಯ್ತು ವಿವಾಹಮಂಟಪಂ (ಕರ್ಣಪ. ೬–೩). [ಬಾಯಿನ (< ಬಾಯನ) + ತೀವು]

**ಬಾಯಿನೀರು** 'ಬಾಯ್ನೀರ್' ನೋ.

**ಬಾಯಿಪಂತ** (ನಾ). ಕೇವಲ ಮಾತಿನ ಜರ್ಬು : ನೋಡನ್ನ ಕೈಚಳಕವ ಬಾಯಿಪಂತವನಾಡುವರಾವಲ್ಲ (ಮೋಹತ. ೪೮–೦೪). [ಬಾಯಿ₁ (< ಬಾಯ್) + ಪಂತ₁]

**ಬಾಯಿಪಾಠ** (ನಾ). ೧. ಉರು ಹೊಡೆಯುವುದು ; ಕಂಠಪಾಠ : ರಂಗನು ಪ್ರಾಥಮಿಕಶಾಲೆಯ ಅಭ್ಯಾಸವನ್ನು ಮುಗಿಸುವ ಹೊತ್ತಿಗೆ ಅವನಿಗೆ ಅನೇಕ ದೇವರ ಸ್ತೋತ್ರಗಳು ಬಾಯಿಪಾಠವಾದವು (ರಂಗಣ್ಣ. ೦೪) ; ಹಸ್ತಪ್ರತಿಗಳನ್ನು ಓದಿ ಓದಿ ಇವನಿಗೆ ಅವು ಬಾಯಿಪಾಠವಾಗಿತ್ತು (ಕನ್ನಸಂ. ೨೬) ; ಬೇಕಾದರೆ ನಿಮ್ಮ ಬಾಯಿಪಾಠ ಪ್ರಕಾಶನಿಗೇ ಒಪ್ಪಿಸಿ (ಹುಲಿಪ. ೦೪೩). ೨. ಉರುಹೊಡೆದು ಕಂಠಗತ ಮಾಡಿಕೊಳ್ಳಬೇಕಾದ ಪದ್ಯ, ಕೋಷ್ಟಕ ಮೊದಲಾದುವು : ವಾಸುದೇವನು ಬೆಳೆಯುತ್ತ ಬಂದ ಹಾಗೆಲ್ಲ ... ಅಕ್ಷರಾಭ್ಯಾಸವಾಯಿತು. ಬಾಯಿಪಾಠಗಳನ್ನು ಬಹುಬೇಗನೆ ಕಲಿತನು (ಶಾರದಾ. ೨೬೦).

**ಬಾಯಿಪಾಠ ಮಾಡು** = ಉರು ಹೊಡೆ ; ಕಂಠಪಾಠ ಮಾಡು : ಇಬ್ಬರಲ್ಲಿ ಯಾರೂ ... ಲಕ್ಷಣಗ್ರಂಥಗಳನ್ನು ಬಾಯಿಪಾಠ ಮಾಡಿ ಪ್ರತಿ ವಿಷಯಕ್ಕೂ ಒಂದು ಶ್ಲೋಕವನ್ನುದಾಹರಿಸುವವರಲ್ಲ (ಗಾನಕ. ೬೮). [ಬಾಯಿ₁ (< ಬಾಯ್) + ಪಾಠ₁]

**ಬಾಯಿಬಡಕ** 'ಬಾಯ್ಬಡಿಕ' ನೋ.

**ಬಾಯಿಬಡಿ** 'ಬಾಯ್ಬಡಿ' ನೋ.

**ಬಾಯಿಬಡಿಕ** 'ಬಾಯ್ಬಡಿಕ' ನೋ.

**ಬಾಯಿಬಡಿಕತನ** 'ಬಾಯ್ಬಡಿಕತನ' ನೋ.

**ಬಾಯಿಬಡುಕ** 'ಬಾಯ್ಬಡಿಕ' ನೋ.

**ಬಾಯಿಬಡುಕಿ** 'ಬಾಯ್ಬಡಿಕಿ' ನೋ.

**ಬಾಯಿಬಿಡು** 'ಬಾಯ್ಬಿಡು' ನೋ.

**ಬಾಯಿಬೀಗ, ಬಾಯ್ಬೀಯ್ಯಗ, ಬಾಯ್ಬಾಗ** (ನಾ). ೧. (ಹರಕೆ ಹೊತ್ತ ಭಕ್ತರು) ಬಾಯಿಗೆ ಚುಚ್ಚಿಸಿಕೊಳ್ಳುವ ತಂತಿಯ ಸಾಧನ : ಬಾಯಿ ಬೀಗ ಅಕ್ಕಸಾಲಿಗನಿಂದ ಮಾಡಿಸಿದ ಸಣ್ಣ ಬೆಳ್ಳಿಯ ಕಡ್ಡಿ. ಚೆಚ್ಚೌಕವಾಗಿರುತ್ತದೆ. ಒಂದು ಕಡೆಯ ಮೊನೆ ತುಂಬಾ ಹರಿತವಾಗಿದ್ದು ಚೂಪಾಗಿರುತ್ತದೆ. ಮತ್ತೊಂದು ಕಡೆ ಒಂದು ತೂತಿರುವುದರಿಂದ ಗುಂಡಗೆ ಮಾಡಿಸಿರುತ್ತದೆ (ಜೋಗಿದೇ. ೪೩) ; ದೇವರಿಗೆ ಬೇವಿನುಡುಗೆ ನಗನಾಣ್ಯ ಮಾಡಿಸಿಕೊಡುವುದಾಗಿ ... ಬಾಯಿಬೀಗ ಚುಚ್ಚಿಸಿಕೊಳ್ಳುವುದಾಗಿ ಹರಕೆ ಕಟ್ಟಿಕೊಳ್ಳುತ್ತಾರೆ (ಜಂಬಂಕ. ೧೩೪) ; ಕೆಲವು ಹೆಂಗಸರು ಬಾಯಿಬೀಗದ ಹರಕೆ ಮಾಡಿಕೊಂಡಿರುತ್ತಾರೆ. ಅಂಥವರು ಬೆಳಗಿನಿಂದ ಉಪವಾಸವಿದ್ದು, ರಂಗದಲ್ಲಿ ಗುಡಿಗೌಡನಿಂದ ಬಾಯಿಬೀಗ ಚುಚ್ಚಿಸಿಕೊಂಡು, ದೇವರ ಹಿಂದೆ ಕೈಯಲ್ಲಿ ಹೊಂಬಾಳೆ ಹಿಡಿದು ಹೋಗುತ್ತಾರೆ (ಪಪ್ಪೂರು. ೩೦).

**ಬಾಯ್ಬಿಯ್ಯಗ** : ೨. (ಅಲಂ) ಬಾಯಿಯ ತಡೆ.—ಹತೋಟಿ : ಸದ್ದು ! ಸಿಂಗಾರಿ ! ಬಾಯ್ಬಿಯ್ಯಗವಿರಲಿ ! (ಬಿಶ್ವ. ೩೯-೦). **ಬಾಯ್ಬಾಗ** : ೧. ಚಿಕ್ಕ ಚಿಕ್ಕ ಹುಡುಗರೂ ಕೂಡ ಬಾಯ್ಬಾಗ ಚುಚ್ಚಿಸಿಕೊಂಡಿದ್ದರು (ಲೂ). [ಬಾಯಿ₁ (< ಬಾಯ್) + ಬೀಗ₁]

**ಬಾಯಿಬೂಟಕ** (ನಾ). ಡಂಭಾಚಾರದ ಮಾತು : ಸಾಟಿಯಿಲ್ಲೀಕೆಗೆ ಜಗತ್ತಿನ ಕೋಟಲೆಯನಪಹರಿಪಳುರೆ ಬಾಯಿಬೂಟಕದ ನುಡಿಯಲ್ಲ ಸತ್ಯವಿದು (ಕಾಶೀಮ. ೦-೧೧೨). [ಬಾಯಿ₁ (<ಬಾಯ್) + ಬೂಟಕ]

**ಬಾಯಿಮಾತು** 'ಬಾಯ್ಮಾತು' ನೋ.

**ಬಾಯಿಮುಚ್ಚು** 'ಬಾಯ್ಮುಚ್ಚು' ನೋ.

**ಬಾಯಿಲೆಕ್ಕ** (ನಾ). ಮನಸ್ಸಿನಲ್ಲಿಯೇ ಬಿಡಿಸಿ, ಬಾಯಿಮಾತಿನಲ್ಲಿಯೇ ಉತ್ತರಿಸಬೇಕಾದ ಗಣಿತಪ್ರಶ್ನೆ,—ಲೆಕ್ಕ : ಗಣಿತ, ಬಾಯಿಲೆಕ್ಕ, ಮುಂತಾದುವುಗಳಲ್ಲಿದರಲ್ಲೂ ಈ ಹುಡುಗಿಯು ಪ್ರಥಮತರಗತಿಯಲ್ಲಿ ತೇರ್ಗಡೆಯಾದಳು (ಲೂ). [ಬಾಯಿ₁ (<ಬಾಯ್) + ಲೆಕ್ಕ₂]

**ಬಾಯಿವಿಡು** 'ಬಾಯ್ವಿಡು' ನೋ.

**ಬಾಯಿವೆಣ್ಣೆ** 'ಬಾಯ್ವೆಣ್ಣೆ' ನೋ.

**ಬಾಯಿಸವಿ** 'ಬಾಯ್ಸವಿ' ನೋ.

**ಬಾಯಿಸು** (ಕ್ರಿ). ಉಬ್ಬುವಂತೆ ಮಾಡು : ಊದಿಸು : ಧನಂಜಯು ವಾಯುವೆಂಬುದು ತಾನು ನಿಕ್ಷೇಪಿಸುವಂತಹ ದೇಹವಾದರೆ ಆ ದೇಹವನ್ನೆಲ್ಲ ಉಕ್ಕಿಸಿ ಬಾಯಿಸಿ ಊದಿಸಿ ಒಡಿಸಿ ಭೌತಿಕಾಗ್ನಿಯ ಕೂಡಿ ಹೋಗುವುದು (ಶತಜ. II. ೯೭) ; ಆ ದಿನ ಹುಸೇನಿ . . . ಸೋಮನ ಕಪಾಳವನ್ನು ಬಾಯಿಸಿದನು (ರಂಗರೋ. ೪೬) ; ಆ ದೇಶಪಾಂಡೆಯ ಕೆನ್ನೆ ಬಾಯಿಸ ಬೇಕಾಗಿತ್ತು (ಹಳ್ಳಿ. ೩೦೩). [ಬಾಯು (<ಬ್ಯಾ) + – ಇಸು₁]

**ಬಾಯಿಹಗ್ಗ** (ನಾ). =ಬಾಯಿಕಡಾಣಿ : "ಕವಿಕಾ, ಖಲೀನಃ — ೨ ಬಾಯಿ ಹಗ್ಗ, ಬಾಯಿಚಿಕ್ಕ, ಲಗಾಂ, ಬಾಯಿಕಡಾಣಿ, ಕಣಿಕೆ" (ಸಿದ್ಧಾಂತಿ. ೨೫೦). [ಬಾಯಿ₁ (<ಬಾಯ್) + ಹಗ್ಗ (<ಪಗ್ಗ)]

**ಬಾಯಿಹುಣ್ಣು** (ನಾ). ಬಾಯಿಬೊಕ್ಕೆ ; ಬಾಯಿಯಲ್ಲಿ ಏಳುವ ಹುಣ್ಣು : ನಿರ್ನಿದ್ರೆ, ನೂತಿ, ಬಾಯಿಹುಣ್ಣು, ಗಂಟಲುಹುಣ್ಣು, ಕಾವುಗಣ್ಣುಗಳಿಗೆ ಇದು ಸಂಜೀವನ (ಐಶಿ. ೯). [ಬಾಯಿ₁ (<ಬಾಯ್) + ಹುಣ್ಣು (<ಪುಣ್)]

**ಬಾಯು** 'ಬ್ಯಾ₁' ನೋ.

**ಬಾಯುಗಿ** (ನಾ). ದಂತಕ್ಷತ (?) : ತೆಱಪಱಿದೋಪನಪ್ಪೊಡೆ ಮೆಯ್ಮಱೆವಪ್ಪು ಸಡಿಲ್ದುದಕ್ಕೆ ಮೆಯ್ಮಱೆವ ಪೊದಟ್ಟ ಬಾಯುಗಿಗೆ ಮೆಯ್ಮಱೆವಂತದು ಮೆಲ್ಲನಾಗೆ ಮೆಯ್ಮಱೆವ . . . ಎಡೆ ಸಾವ ಪುಟ್ಟು ವೆಡೆಯಾದುದವಳ್ಗೆ ರತಾತಿರೇಕದೊಳ್ (ಲೀಲಾವ. ೦೩-೩೦) ; ತವದ ಕಾಮೋದ್ರೇಕದಲಿ ಕೂಡುವ ಸಮುಪ್ರಣಯಿಗಳ ನಿಡುಗಣ್ಗೆವೆಗಳರೆ ಮುಗಿವುತಿರೆ ... ಸವಿವ ಬಾಯುಗಿಯಡಗೆ ಮೈಮಿಗೆ ಬೆವರ ಸೂಳೋಸರಿಪೆ ಕಿಡಪಿದ ಜವಳಿಜಂತ್ರದ ಬೊಂಬೆಯೆನಲೀರ್ವರು ಮಱೆದರೊಡಲ (ಶಾಶ್ವತಾ. ೦೪-೩೭). [ಬಾಯ್ + ಉಗಿ]

**ಬಾಯುಪಚಾರ** (ನಾ). ಕೇವಲ ಬಾಯಿಮಾತಿನ ಮನ್ನಣೆ ; ಹೃತ್ಪೂರ್ವಕವಲ್ಲದ ಗೌರವ ; ಬರಿ ಬಾಯಿಮಾತಿನ ಸತ್ಕಾರ : ಅವರು ಬಾಯುಪಚಾರಕ್ಕಾದರೂ ಬನ್ನಿ ಎಂದು ಕರೆಯುಲಿಲ್ಲ (ಲೂ). [ಬಾಯ್ + ಉಪಚಾರ]

**ಬಾಯೂರಿಸು** (ಕ್ರಿ). ೧. ಬಾಯಲ್ಲಿ ನೀರು ಸಂರಿಸು. ೨. (ಅಲಂ) ಅತಿಯಾಗಿ ಹಂಬಲಿಸು,—ಬಯಸು : ಕೆಲವು ಜನ ಅವಳನ್ನು ವರಿಸಲು ಬಾಯೂರಿಸುತ್ತಿದ್ದರು (ಮಸಳೂ. ೯). [ಬಾಯ್+ಊರಿಸು₁]

**ಬಾಯೆಣಿಕೆ** (ನಾ). ಉದ್ಗಾರ ; ಉದ್ಘೋಷ : ಕಾಯುಗಟ್ಟುತು ಭೀತಿ ಬರುವಿನ ಬಾಯೆಣಿಕೆ ಬಯಲಾಯ್ತು ಜೀವದ ಬೀಯಕಿಪರಣಿದರು (ಕುಮಾರಂ. ೬-೬೦). [ಬಾಯ್ + ಎಣಿಕೆ]

**ಬಾಯೆತ್ತು** (ಕ್ರಿ). (ಮಾತಾಡಲೆಂದು) ಬಾಯಿ ತೆರೆ ; ಬಾಯಿ ಬಿಡು : ಮತ್ತೆಯುಂ ಪರಸಮಯಿಗಳು ಬಾಯೆತ್ತಲಂಜಿಂತೆಂದರು (ಚಿಕಪು. ೫೩-೬೦) ; ಬಾಯೆತ್ತದಂತೆ ನುಡಿವುತೆ ಕಾಯಜರಿವು ಭಕ್ತ ನೆಲ್ಲರಂ ಗೆಲೆ (ವೃಷಭ. ೪೭-೫೩) ; ಕೋಲಾಹಲವ ಸಂತವಿಸಲವಂ ಎನಿತೊ ಸಲ ಬಾಯೆತ್ತ ಮಾತೋದು ಕೇಳಿಸದೆ . . . ಕಲಕಲವೆ ಎದ್ದೆದ್ದು ನಡುವೆ ತವಿವಂದು (ಗೂರ್ಖಾ. ೬-೦೫೦). [ಬಾಯ್ + ಎತ್ತು₁]

**ಬಾಯೆಸಳ್ ?** (ನಾ). ಬಾಯಿ ಹುಣ್ಣು : ಬಿಸುಸುಯ್ಯೆ ಬಾಯ್ ಕರಂ ಕೆಂಪೆಸದಿರ ಬಿಡ ಲೋಳೆ ಸುರಿಯೆ ಬಾಯ(ಎ)ಸಳದನೋಡಿಸುವೊಡೆ ಕಾಗೆಯಾ ಗಱಿಯಿಂ ಬಿಸುನೀರೊಳ್ ಕರ್ಚಿ ತೊಡೆಗೆ ಕಟುಕತ್ರಯವಂ (ಲೋಕೋಪ. ೯-೦೯೯). [ಬಾಯ್ + ಎಸಳ್?]

**ಬಾಯೊದರು** (ಕ್ರಿ). ಕೂಗು ; ಕಿರಿಚು : ವಾನರದಳಂ ಬೆದಱಿ ಬಾಯೊದರಿ ದೆಸೆದೆಸೆಗೆ ಕೆದರಿ(ತ್ರೀರಾಮಾ. ೬೦೩–೦೧೦). [ಬಾಯ್+ಒದರು₂(<ಒದಱು₂)]

**ಬಾಯೊರಸು** (ಕ್ರಿ). ಸ್ಪರ್ಶವನ್ನು ಪಡೆ (?) : ಇಱಿಯದ ವೀರವಂ ಪೊಗಳೆ ಮೆಚ್ಚುವ ರಾಯರ ಗಂಡ ಯಾವ ಸೊಂಪಱಿಯದೆ ಕೀರ್ತಿ ಸರ್ ಬರಿದೆ ಓಗ್ಗುವ ರಾಯರ ಗಂಡವೊಂಮ್ಮೆ ಬಾಯೊರಸದೆ ಪೆಣ್ಗಳಂ ಸೊಬಗರೆಂದವ ರಾಯರ [ಗಂಡ]ನೊದು ಬೊಬ್ಬಿಱಿಉದು ಕೀರ್ತಿ ಡಿಂಡಿಮಮುಂಖಂ ಜಗದೊಳ್ ವಿಜಯಶ್ರೀಂದ್ರನಾ (ಎಳ. XI. ಶಿಕ್ರದು. ೫-೬ ; ?). [ ? ]

**ಬಾಯೊಱೆ** (ಕ್ರಿ). ೧. ಬಾಯಲ್ಲಿ ನೀರು ಸುರಿ : ಆ ಸಿಂಹಂ ಮುಱಿ ಗುತ್ತಂಬಟ್ಟು ಗೋಂಕರ ಕಟ್ಟಿಯಂ ಬಯಸಿ ಬಾಯೊಱೆತು ತನಗನುಚರ ನಪ್ಪುದೊಂದು ನರಿಗೆ ಪೇಟ್ಟುದುಂ (ಹಂಕಹಂ. ೨೬೨–೨೦) ; ಮಿಸುಪ ಪುಳಿಗೆ ಬಾಯೊಱೆತು ಬಾತಂತಿರೆ ತಿಂದು ಕೈಗರ್ಚಿ (ಪುಷ್ಪದಂತ. ೩-೪೬ ಪ). ೨. ಬಯಸು ; ಹಂಬಲಿಸು : ಹಾತೊರೆ : ನವಯೌವನಕ್ಕೆ ರತಿ ಬಾಯೊಱೆಯೆ . . . ಹದಿನಾಱು ಹರೆಯುಮುದಾಗಲ್ (ಹಂಪಿ. ೩-೦೩) ; ಶೃಂಗಾರ ವೀರಕ್ಕೆ ಬಾಯೊಱೆತೀ ತಸ್ಕರಜಾರವೀರವಿಟವೇಶ್ಯಾಕಾಮ್ಯವಂ ಕೇಳ್ದು ಮೆಚ್ಚ್ ಮಱೆವರ್ . . . ಭೂಪರ್ (ರತ್ನಾಕ. ೯೭). [ ಬಾಯ್ + ಒಱೆ₁ ]

**ಬಾಯ್ಕಟ್ಟು₁**, ಬಾಯಿಕಟ್ಟು₁ (ಕ್ರಿ). ೧. ಬಾಯಿಚಪಲವನ್ನು ನಿರೋಧಿಸು ; ಪಥ್ಯ ಮಾಡು ; ಅಪಥ್ಯವಾದ ಆಹಾರವನ್ನು ಸೇವಿಸದೆ ನಿರ್ಬಂಧದಲ್ಲಿರು : ಅವರು ವೈದ್ಯರು ಹೇಳಿದಂತೆಲ್ಲ ಚೆನ್ನಾಗಿ ಬಾಯ್ಕಟ್ಟಿ ಖಾಯಿಲೆಯನ್ನು ಬೇಗ ವಾಸಿಮಾಡಿಕೊಂಡರು (ಲೂ). ೨. ವಾದದಲ್ಲಿ ಎದುರಾಳಿಯನ್ನು ಬಾಯ್ಮುಚ್ಚುವಂತೆ ಮಾಡು ; ನಿರುತ್ತರಗೊಳಿಸು : ಬಾಯ್ಬಡಿ : ಅಣ್ಣೆ ಇಷ್ಟು ಬಾಯ್ಕಟ್ಟಿ ಬಿಟ್ಟ ಮೇಲೆ ಪಾಪ ಅವನೇನು ಮಾಡಿಯಾನು ? (ಲೂ). ೩. ಮಂತ್ರ ಮಾಟಗಳಿಂದ ಮನುಷ್ಯನ ಅಥವಾ ಪ್ರಾಣಿಯ ಬಾಯನ್ನು ತೆರೆಯಲಾಗದಂತೆ ಮಾಡು,—ಮುಚ್ಚಿಸು : (೪). **ಬಾಯಿಕಟ್ಟು₁** : ೨. ನಾನು ಯಾವಾಗಲೂ ಪ್ರಶ್ನಿಸುತ್ತೇನೆ ; ಆಗ ನೀವು ಹೀಗೆ ಹೇಳಿ ನನ್ನ ಬಾಯಿಕಟ್ಟುತ್ತೀರಿ (ರುತಾರಾ. ೨೬) ; ಎಲ್ಲರೂ ಸೇರಿಕೊಂಡರು ತೆನ್ನಾಲಿ ಹೇಳಿದ್ದು ಸುಳ್ಳು ಅಂತ ಬಾಯಿಕಟ್ಟುವುದಕ್ಕೆ (ತಪ್ಪೊ. ೩೯೬). ೪. ಮಾತಾಡಲು ಅವಕಾಶವಿಲ್ಲವಾಗು : ಅಪ್ಪಾಜಿಗೆ ಬಾಯಿಕಟ್ಟಿತು. ಆದರೂ ಕಡೆಯದೊಂದು ಪ್ರಯತ್ನ ಮಾಡಲು ಬಯಸಿದ (ಅರಸ. ೬೪). ೫. ಮಡಕೆ ಅಥವಾ ಪಾತ್ರೆಗಳ ಬಾಯಿಗೆ ಬಟ್ಟೆಯನ್ನು ಕಟ್ಟು : ಮಡಬಟ್ಟೆಯಿಂದ ಮಡಿಕೆಯ ಬಾಯಿಕಟ್ಟಿ, ವಿಭೂತಿಕಟ್ಟು ಹಾಕುತ್ತಾಳೆ (ಪಪ್ಪೂರು. ೪೨). [ಬಾಯ್ + ಕಟ್ಟು₁]

**ಬಾಯ್ಕಟ್ಟು$_2$, ಬಾಯಿಕಟ್ಟು$_2$** (ನಾ). ೧. (ನಾಯಿ, ಎತ್ತು ಮೊದಲಾದ ಪ್ರಾಣಿಗಳಿಗೆ) ಬಾಯಿ ತೆರೆಯಲಾಗದಂತೆ ಮುಖಕ್ಕೆ ಅಳವಡಿಸುವ ಬಂಧನ; ಪ್ರಾಣಿಯ ಬಾಯಿಗೆ ಕಟ್ಟುವ ಕುಕ್ಕೆ.-ಚೀಲ : ಸೆಳಿಗೋಲು ಒಂದಟ್ಟೆಯ ಕಿರುಹು ನಾಯಿಗಳ ಬಾಯ್ಕಟ್ಟು ಒಳಿಯಿಂದಿವು ಮೆಱೆಯೆ ನಡೆದು (ಬಸವು. ೩೦-೪). ೨. ಮಾಟಮಂತ್ರಗಳಿಂದ ಬಾಯಿ ಮುಚ್ಚಿಸುವಿಕೆ.-ಬಾಯಿ ತೆರೆಯದಂತೆ ಮಾಡುವಿಕೆ: (+). ಬಾಯಿಕಟ್ಟು$_2$ : ೩. ಮುಚ್ಚಳದಂತೆ ಪಾತ್ರೆಗಳ ಬಾಯಿಗೆ ಬಿಗಿದ ಬಟ್ಟೆಯ ಕಟ್ಟು : ಎಕ್ಕದ ಮೊಗ್ಗು ೧ ಬಳ್ಳವಂ ಒಂದು ಮಡಕೆಯಲ್ಲಿ ಹಾಕಿ ನೀರು ಹಾಕಿ: ಪಾವಡೆ ಕಟ್ಟಿ ಚೆಳತಿಗೆ ಅಕ್ಕಿಯನ್ನು . . . ರೊಟ್ಟಿ ಮಾಡಿ ಆ ಬಾಯಿಕಟ್ಟಿನ ಮೇಲಿಟ್ಟು ಬೇಯಿಸಿ ತೆಗೆದು (ಸಕವೈ. ೨೦೬). [ಬಾಯ್ + ಕಟ್ಟು$_2$]

**ಬಾಯ್ಕಡಿಗೊಳ್** (ಕ್ರಿ). ಔಡುಗಚ್ಚು ; ಹಲ್ಲುಕಡಿ : ಮಿಗೆ ಮಾತಾಡದಿರೇಟಿಬರ್ ಮಿಡುಕದಿರ್ ಮೇಲ್ವೀಟಿದಿರ್ ಸೊರ್ಕದಿರ್ ನಗದಿರ್ ಬಾಯ್ಕಡಿಗೊಳ್ಳದಿರ್ (ಕಬ್ಬಿಕಾ. ೧೬೬). [ಬಾಯ್ + ಕಡಿ$_1$ + ಕೊಳ್$_1$]

**ಬಾಯ್ಕಲ್** 'ಬಾಯ್ಕಾಲ್' ನೋ.

**ಬಾಯ್ಕಾಲ್, ಬಾಯಿಕಲು, ಬಾಯಿಕಲ್ಲು, ಬಾಯಿಕಾಲು, ಬಾಯಿಕೋಲು, ಬಾಯ್ಕಲ್, ವಾಯ್ಕಾಲು** (ನಾ). ಕಾಲುವೆ ; ನಾಲೆ : ಅನ್ತೆ ಬಸ್ದು ಕಳರಾ ಬಾಯ್ಕಾಲುಳ್ ಕೂಡಿ . . . ಅನ್ತೆ ಬಸ್ದು ತೊಱೆಯುಳ್ ಕೂಡಿತ್ತು (ಪ್ರಕಂ. ೦೯೩೬. ೩೩-೨೪; ಸು. 700 ?). **ಬಾಯಿಕಲು:** ಮೂಡಲು ದಿಬ್ಬ ಬಡಗಲು ಪಳ್ಳ ಪಡುವಲು ಬಾಯಿಕಲು ತೆಂಕಲು ಭಂಡಿವಟ್ಟೆ (ಸೌಇಇ. IX-i. ೦೬೩-೬೯ ; 1099) ; ತೆಂಕಲು ಕಱುಂಬಗದ್ದೆಯ ಬಾಯಿಕಲು (ಸೌಇಇ. IX-i. ೩೯೩-೩೬ ; 1226). **ಬಾಯಿಕಲ್ಲು :** ಪಿರಿಯ ತುಂಬಿನ ಬಾಯಿಕಲ್ಲ ಮೂಡ ದೆಸೆಯ ಮೊದಲೇರಿಯ ಗದ್ದೆ (ಪ್ರಕಂ. ೦೯೩೭. ೦೭-೯೭ ; 1196) ; ತುಂಬಿನ ಬಾಯಿಕಲ್ಲಿಂದು ಪಡುವಲು ಮೇರೆ (ಎಕ. XVI. ತಿಪ್ನಾ. ೬೦-೦೭ ; 1235) ; ಮಿಡಿಚ್ಚಿಯ ಬಾಯಿಕಲ್ಲಿಂ ತೆಂಕಲು ಕೋಡಿಯ ಗೋವಿಂದ ಶಣಂಗಿಗಂ ಮೂಡಲು ಗದ್ದೆ ಮತ್ತರು ೧ (ಸೌಇಇ. IX-1. ೩೬೧-೪೮ ; 1259). **ಬಾಯಿಕಾಲು :** ವರುಶಕ್ಕೆ ಗದ್ಯಾಣಂ ಮೂವತುವನೂಪ್ ಆ ಕೆಱೆಗೆ ಆ ತುಮ್ಬಿಂಗೆ ಆ ಬಾಯಿಕಾಲಿಗೆ . . . ಆ ಮಹಾಜನಂಗಳು ನಡೆಸುತೆ ಬಹರು (ಎಕ. VI, ಕಡೂರು. ೯೨-೦೬ ; 1269 ?). **ಬಾಯಿಕೋಲು :** ಮಚಣನ ಕೆಱೆಯ ತಾಯಿವಳದಿಂದು ಬಡಗಲು ಅಲಕಟಿಗೆ ಹೋದ ಬಾಯಿಕೋಲಿಂ ದೇವಿಹೊಲದ ಕಟ್ಟೊಬಿಯಿಂ ಅಲಕಟ ಪೊಳೆಗೆಱೆಯಿಂ ಮೂಡಲು ಯಿಂತೀ ಚತುಃಸೀಮೆಯ ಪೊಳಗಣ ಭೂಮಿ (ಎಕ. XIV, ಎಳಂದೂ. ೦೬೭_೦೩ ; 1631). **ಬಾಯ್ಕಲ್ :** ಮೂಚಿಸೆಟ್ಟಿಯ ಕೆಱೆಯ ಪಡುವಣ ಬಾಯ್ಕಲ್ಲ ಬಳಿವಿಡಿದು ಹುಣಸೆಯ ಬಾಯ್ಕಲ್ಲಿಂ ತೆಂಕಲು ಗದ್ದೆ ಮತ್ತರು ೨ ಹೊಸಗೆಱೆಯ ಬಾಯ್ಕಲ್ಲಿಂ ಮೂಡಲು ಗದ್ದೆ ಕಮ್ಮ ೬೦೦ (ಸೌಇಇ. IX-i. ೧೪೩-೩೦ ; 1079). **ವಾಯ್ಕಾಲು :** ಮೂಡಲು ಪಳ್ಳ ಪಾಯ್ಕಾಲು (ಕ್ಷಆಸಿ. ೩-೬-೨೯ ; 1088). 'ಕಾಲ್ವಾಯ್' ಪರಾ.

[ಬಾಯ್ + ಕಾಲ್$_2$./ತಮಿ. ವಾಯಕ್ಕಾಲ್ ; ಮಲ. ವಾಯ್ಕಾಲ್]

**ಬಾಯ್ಕುಟುಕು** 'ಬಾಯುಗ್ಗುಟುಕು' ನೋ.

**ಬಾಯ್ಕುಟ್ಟು** 'ಬಾಯುಗ್ಗುಟ್ಟು' ನೋ.

**ಬಾಯ್ಕೇಳ್** (ಕ್ರಿ). ಮಾತು ಕೇಳು ; ಆಜ್ಞಾಧಾರಕನಾಗು ; ವಿಧೇಯನಾಗು : ಆಳುವಮೆಡಮುಱುಸಾಸಿರನುಮಾನ್ ಚಿತ್ರವಾಹನನಾಳುತ್ತುಂ ಬಾಯ್ಕೇಳದಿರೆ ಮುನಿದು ಕೊಲ್ಲಿ ಪಲ್ಲವ ನೊಳಂಬಂ ನೊಳಂಬರಾದಿತ್ಯನನ್ ವೆಸನಲ್ (ಎಕ. VIII. ಸೊರಬ. ೦೦-೩ ; ಸು. 800) ; ಅರಸುಗಳೆಲ್ಲಂ ಬಾಯ್ಕೇಳ್ದರೆಂದುಮಾರಾಂತರಂಗಳ್ಕದುವೆಂದುಂ ಧರಣಿತಳಂ ಕೀರ್ತಿಸೆ (ಆದಿಪು. ೦೪-೪೪) ; ಪರುಣಂ ಬಾಯ್ಕೇಳನೆಂಬೀ ಮುನಿಸನುಮಿಸೆ ಮೇಲೆತ್ತಲೆಂದೀಗಳೆಮ್ಮಂ ಬರವೇಟ್ಟು ದಾನವೇಂದ್ರಂ (ಜಗನ್ನಾಥ. ೦೦-೨೦೩).

**ಬಾಯ್ಕೇಳ್ದೊಂ** = (ಜಲದುರ್ಗ ಮುಂತಾದುವುಗಳನ್ನು) ವಶಪಡಿಸಿಕೊಂಡವನು : ಏಂತಾನುಂ ಸ್ಥಳ ಜಳದುರ್ಗಂ ತವೆ ಬಾಯ್ಕೇಳ್ದೊನೀತನದೆ ದಿಗ್ವಿಜಯಾತ್ಕಂತ್ರೋತ್ಸವಂ (ಶಾಂತಿಪು. ೩-೦೪೦).

[ಬಾಯ್ + ಕೇಳ್]

**ಬಾಯ್ಕೇಳಿಕೆ** (ನಾ). ಬಾಯಲ್ಲಿ ಹೇಳುವ ಮಾತು (?) : ಪರಾಕು ; ಸ್ವಾಗತದ ಮಾತು (?) : ಬಾಳೆಲಗರ್ಡಿ ಓಕದುತಿ ಬಾಯ್ಕೇ[ಶಾಅಂ. ಯೋ]ಳಿಕೆ ಮಾಂದಳಿರ ಕೆಂಪು ದೀವಿಗೆಯೆನೆ ಭೂಪಾಳಂ ಬರೆಶೋಧಿಪ ವನಪಾಳನವೊಲ್ಮುಂದೆ ಬಂದುದುದು ವಸಂತಂ (ಹುಚೋತ. ೪-೨). [ಬಾಯ್ + ಕೇಳಿಕೆ$_1$]

**ಬಾಯ್ಕೇಳಿಸು** (ಕ್ರಿ). ಗೆದ್ದುಕೊಳ್ಳು ; ವಶಪಡಿಸಿಕೊಳ್ಳು ; ತನ್ನ ಆಜ್ಞೆಗೆ ಒಳಪಡಿಸಿಕೊಳ್ಳು : ಆ ಮುನಿರಾಜು ಕರ್ಮಂಗಳಂ ಗಾಳಿಸಿದಂ ಈ ರಾಜರಾಜಂ ಷಟ್ಖಂಡಮಂಡಲಮುಂ ಬಾಯ್ಕೇಳಿಸಿದಂ (ಆದಿಪು. ೬-೨೪ ವ); ಮಾಳವಪತಿ . . . ಲೀಲೆಯೊಳೆ ಪೇರದೊಳೆ ಬಾಯ್ಕೇಳಿಸುವಂ ಗಡ ಸಮಸ್ತವಸುಧಾತಳಮುಂ (ರವರ್ತಮ್ಮ. ೦೦-೨೨೯) ; ರಣಪಥೂಪಲ್ಲಭಂ ದೇಶದೇಶಂ ಗೆಲ್ಲುತದಟಿನಿಂ ಬಾಯ್ಕೇಳಿಸುತೆ, ಚಂಡಜವದಿಂಪಮಿತ್ರಣ್ಗೆ ಸುಗರ್ಗತಿಪು (ಶಬ್ದಾಂಗ. ೬೦-೦೪೪). [ಬಾಯ್ಕೇಳ್ + – ಇಸು$_3$]

**ಬಾಯ್ಕೊಡು** (ಕ್ರಿ). ಬಾಯಿ ಬಿಡು ; ಬಾಯಿ ತೆರೆ : ಬಿಕ್ಕಿ ಬಿಕ್ಕಿ ಅತ್ತಳು ; ಎದ್ದು ಕುಳಿತಳು ; ಬಾಯ್ಕೊಟ್ಟು ಗೋಳಿಟ್ಟಳು (ಒಬ್ಬಿಕಾ. ೬).

[ಬಾಯ್ + ಕೊಡು$_1$]

**ಬಾಯ್ಕೊರ್ಚು** 'ಬಾಯಿಕೊಱ್ಚು' ನೋ.

**ಬಾಯ್ಗಳೆ** (ಕ್ರಿ). ಬಾಯಿ ಬಿಡು; ಬಾಯಿ ತೆರೆ : ಸುಂಗಳಿಂದು ಬಾಯ್ಗಳೆದು ಬರ್ಪನಿರಿದಿರೊಳ್ ಪಲ್ಗಿಱಿಯುತೆ (ಅದ್ಭುತ. ೪೬-೬). [ಬಾಯ್ + ಕಳೆ$_1$]

**ಬಾಯ್ಗಾಳೆಗ, ಬಾಯಿಗಾಳೆಗ** (ನಾ). ಬರಿಯ ಮಾತಿನ ಯುದ್ಧ ; ವಾಕ್ಕಲಹ: ಅಂ ಬಿಲ್ಗಾಳೆಗಮುಂದೇ ಬಗೆದಂ ಬಾಯ್ಗಾಳೆಗಮನೀಗಳಱಿದಂ (ಶಾಂತಿಪು. ೪-೩೦ ವ). **ಬಾಯಿಗಾಳೆಗ :** ಕಕ್ಕ ಮಾಡುವುದು ಮಗನಿಗಾಗುತ್ತಿರಲಿಲ್ಲ, ಮಗನು ಕಕ್ಕನಿಗಾಗುತ್ತಿರಲಿಲ್ಲ. ಯಾವಾಗಲೂ ಬಾಯಿಗಾಳೆಗ ನಡೆದಿರುತಿತ್ತು (ಕ್ರೀಮಾಕ್ರ. ೬). [ಬಾಯ್ + ಕಾಳೆಗ]

**ಬಾಯುಗ್ಗುಟುಕು, ಬಾಯ್ಕುಟುಕು** (ನಾ). ಒಂದು ಸಲ ಬಾಯಿ ತುಂಬ ಹಾಕಿಕೊಳ್ಳುವಷ್ಟು ಆಹಾರ ; ಒಂದು ತುತ್ತು : ಸಲಿಸುವೆಂ ಇವರಸುವ ಬಾಳ ಬಾಯುಗ್ಗುಟುಕೆಂದು (ಜೀರರ. ಹ. ೪೯೩-೨೮). **ಬಾಯ್ಕುಟುಕು :** ಕೊಡು ತಂದೇ, ಇನ್ನೊಂದೇ ಒಂದೇ ಬಾಯ್ಕುಟುಕು (ಅತಳು. ೩-೧೦). [ಬಾಯ್ + ಕುಟುಕು$_2$]

**ಬಾಯುಗ್ಗುಟ್ಟು, ಬಾಯ್ಕುಟ್ಟು** (ಕ್ರಿ). ಹರಟು ; ಗಳಹು: ಪಂಪಾಸನ್ನಿಧಾನದ ಸಮುಖದಲ್ಲಿ ಹಾಗೆ . . . ಆ ಸಲ್ಗೆಯಿಂದ ಬಾಯುಗ್ಗುಟ್ಟಿದಿರಿ । (ಪಟ್ಟಿಕ. ೧೮೪-೦೬). **ಬಾಯ್ಕುಟ್ಟು :** ಪುಟ್ಟುಗುರುಡಂ ಕಾಣ್ಬನೆ ಬಟ್ಟೆಯನವುಳಾಕ್ಷನಂತೆ ಸದ್ದುಲಿಕ್ಕಿಯೆ ಬಾಯ್ಕುಟ್ಟದೆ ಕಾಣ್ಗಂ ಧರ್ಮದ ಬಟ್ಟೆಯ ನೆಱೆ ಕಾಣಲಱಿವ[ಯ]ನಕ್ಕು ಮದಾಂಧಂ (ಅರ್ಥನೇ. ೪-೩೩).

[ಬಾಯ್ + ಕುಟ್ಟು$_1$]

**ಬಾಯುಗ್ಗೂಟ** (ನಾ). ಮುತ್ತಿಡುವಿಕೆ ; ಚುಂಬನ : ಬಾಯುಗ್ಗೂಟದೊಳಟ್ಕಱಿ ಪಡೆದು ಕೂಟದೊಳುಣ್ಮಿದ ಚೆಚ್ಚ ತಟ್ಕೆಯೊಳ್ ಕೂಟಸುಖಂಗಳಂ ಪಡೆದನೇಂ ಚದುರಂ ಗಳ ಬದ್ದೆದಲ್ಲಟಿ (ಕಂಕಥಾ. ೩-೬೨); ಮಸಪನಸುಲಜ್ಜೆಯುಂ ಮಾಣಿಸಿದುದು ಬಾಯುಗ್ಗೂಟದಿಂಪು (ಚಂದ್ರಪು. ೬-೮೩).

[ಬಾಯ್ + ಕೂಟ$_1$]

**ಬಾಯುಗ್ಗಾಡು, ಬಾಯಿಗೂಡು** (ಕ್ರಿ). ೧. ಒಕ್ಕೊರಲಾಗು; ಏಕಕಂಠವಾಗು : ನೋಡಿದರಾನಂದಿಸಿದರು ಪೌರರು ಬಾಯ್ಗೂಡಿ ಬಣ್ಣಿಸಿ

ಪೊಗಳಿದರು (ಕುಂಸಾ. ೬-೦೧೪). ೨. (ಆಯುಧ ಮೊದಲಾದುವುಗಳ) ಬಾಯಿ ಅಥವಾ ಧಾರೆ ಹರಿತವಾಗು,— ಮಸೆದು ತೀಕ್ಷ್ಣವಾಗು : ಬಾಯ್ಗೂಡಿದುದಾ ಕುಸುಮಾಸ್ತ್ರನ ಚಕ್ರಮಿದೆಂಬಿಸಕಮನಾಳ್ದತ್ತು ಪಸದನಂ ದ್ರೌಪದಿಯಾ (ಪಂಭಾ. ೩-೯೭). ೩. ಮುದ್ದಿಸು ; ಚುಂಬಿಸು: ಸಾರ್ಚಿ ಬಾಯ್ಗೂಡಿ ವಿಲಾಸದಿಂ ಕೆಲೆವ ವಾರಿವಂ . . . ಕುಕಿಲ್ವ ಪಿಕಂ ವಿಯೋಗಿಗೇಂ ಮಾಡದೆ ಪೋಕುಮೇ ಮದನನಂಡಲೆಯಂ (ಶಬಕಂ. ೦-೩೨); ಇಲ್ಲಿ ಬಾಯ್ಗೂಡಿದವದಿಲ್ಲಿ ಸರಸಕ್ಕೆಳಸಿ ಕೂಡಿದೆವು (ವಂಕಾಡಾ. ೩-೨-೨೯). ೪. (ಲೆಕ್ಕ ಖರ್ಚು ಮುಂತಾದುವು) ಹೊಂದಾಣಿಕೆಯಾಗು ; ಸರಿದೂಗು : ಇಷ್ಟು ವೆಚ್ಚಗಳು ಬಾಯ್ಗೂಡಿಯೂ ಉಳಿತಾಯವಿತ್ತು (ಶ್ರೀಚೂಕ್ರ. ೨೧೪). ಬಾಯಿಗೂಡು : ೩. ಮಡಿಸಿದೆಲೆಯ ಗಳಿಗೆಯ ಕೆಂಬಲ್ಲುದಿಗಡಸಿ ಬಾಯೊಳು ಬಾಯಿಗೂಡಿ ತುಡುಕುತ್ತ ಸವಿಮುತ್ತ ನಿವಗೀವ ಪುಣ್ಯವ ಪಡೆವುದೆಂದಿಗೆ ನಾನು (ಕೆಂಕಶ. ೯-೦೨೫). ೪. ಖರ್ಚು— ಜಮಾ ಬಾಯಿಗೂಡಿತು (ಬಂಕಶ. I. ೦೭೩). [ಬಾಯ್ + ಕೂಡು$_1$]

ಬಾಯ್ಗಿಡು (ಕ್ರಿ). ೧. ಬಾಯಿ ರುಚಿಯಿಲ್ಲದಾಗು, —ರುಚಿಗೆಡು : (?). ೨. ಕಳವಳಿಸು ; ದುಃಖಿಸು : ಕುತ್ಸಿತರ್ . . . ಪರೀಷಹಂಗಳಡಸಿ ದಂದು ದೆಸೆಗೆಟ್ಟು ಬಾಯ್ಗೆಟ್ಟು ಮಱುಗುತ್ತಿರ್ಪರ್ (ಧರ್ಮಾಮೃ. ೦-೦೭೪). 'ಬಾಯಟಿ' ಪರಾ. ೩. ಕೆಟ್ಟ ಮಾತನ್ನಾಡು ; ದೋಷಾರೋಪಣೆ ಮಾಡು (?) : ಉನ್ಮತ್ತವಪ್ಪ ವಿಶ್ವಾಸಘಾತುಕಂಗೆ ವಂದಿಸಿ ನಿಂದಿಸುವಂಗೆ ಹಿಂದೆ ಮುಂದೆ ಬಂದುದ ಬಾಯ್ಗಿಡುವಂಗೆ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಸಂಧಿಸನವರಿಗೆ (ಮಧೀವ. ೨೬೦-೯೭). [ಬಾಯ್ + ಕೆಡು$_1$]

ಬಾಯ್ಗಿಯ್ (ಕ್ರಿ). ದೊಡ್ಡ ಧ್ವನಿ ಮಾಡು ; ಅಬ್ಬರಿಸು : ವರಾಹ ರೂಪದ ಮೂಕದಾನವಂ . . . ಬಾ[ಯ್ಗಿ]ಯೆ ದಿಗ್ಗಜಂ ಪೆಱಗಿಟ್ಟುವಾಂ [ತ]ರದ ತೆಟ್ಟನೆ ದಾಡೆಗುಟ್ಟೆ ಕಟಲ್ದು ತಾರಗೆಗಳ್ ನಭಂಬೆರಸು ಬಿರ್ದುವು (ಪಂಚಕಾ. ೬-೦೩) ; ಇನ್ನು ನಿಮ್ಮ ಸಟೆಗಳ ಸರಗಳನ್ನು ಪವಣಿಸಿ ಬಾಯ್ಗಿಯ್ದು ಕತೆಗುಟ್ಟಿರಿ (ಶಬ್ಬ. ೩೦-೦೨). [ಬಾಯ್ + ಕೆಯ್$_1$]

ಬಾಯ್ಗೇಡಿ (ನಾ). ಬಾಯಿಗೆ ಬಂದಂತೆ ಮಾತಾಡುವವನು,— ಗಳಹುವವನು : "ಜಲ್ಪಾಕ, ವಾಚಾಲ, ಬಹುಗರ್ಹ್ಯವಾಕ್-ಬಾಯ್ಗೇಡಿ" (ಶಾಕಶಾ. ೬). 'ಬಾಯ್ಗೇಡಿತನ' ಪರಾ. [ಬಾಯ್ + ಕೇಡಿ$_1$]

ಬಾಯ್ಗೇಡಿತನ (ನಾ). ಬಾಯಿತೀಟೆ ; ಬಾಯಿಚಪಲ : ಬಾಯ್ಗೇಡಿ ತನದೊಳೇನೆಂದಾದೊಡಂ ಜರೆದು ಬಯ್ದುಮೇ ಪಟುಭಟರ್ (ಶಲಕ್ಕೆ. ೪೯-೦೭). [ಬಾಯ್ಗೇಡಿ + — ತನ]

ಬಾಯ್ಗೊಬ್ಬು, ಬಾಯಿಕೊಬ್ಬು (ನಾ). ಮಾತಾಡದೆ ಇರಲಾಗದಂತಹ ಚಪಲ : ಬಾಯಿತೀಟೆ : ಬಾಯ್ಗೊಬ್ಬಿನಿಂದಲನ್ಯರನು ಜಱೆಯಲಾಗದು (ತಮ್ಮಣಂ. ೬-೦೭) ; ವಂದಿಗಳ ಬಾಯ್ಗೊಬ್ಬು ಪಿಂದೆ ನಾರಿಯ ರೆಡೆಯೊಳ್ (ಅದ್ಭುತ. ೪೬-೦೦). ಬಾಯಿಕೊಬ್ಬು : ಬಯ್ವ ಜನರು. ಜರಿವ ಜನರು, ಅವರಿಗೇನು, ಬಾಯಿಕೊಬ್ಬು ನೋವ ತಗೆವರೆ ? (ಶಿಶಿಸೋ. ೬೦-೨೦). [ಬಾಯ್ + ಕೊಬ್ಬು$_2$ (<ಕೊರ್ವು$_2$)]

ಬಾಯ್ಗೊಲೆ (ನಾ). ಬಾಯಿಂದ ಕಚ್ಚಿ ಕೊಲ್ಲುವಿಕೆ : ಕಯ್ಗೊಲೆ ಬಾಯ್ಗೊಲೆ . . . ಕೋಲ್ಗೊಲೆಯಂ ಕಲಿವ ಕಡುಬಿನ್ನಣಂಬಡೆದು ಕಟ್ಟಾಳ್ಗಳನೆಬೆತ್ತಿಂತು ಗಜಾರೋಹಣಧುರೀಣರಾದಾ ಧೋರಣರ್ ನೆರೆ ನೆರೆದು (ರಾಜಶೇ. ೬-೦೦ ಪ). [ಬಾಯ್ + ಕೊಲೆ$_2$]

ಬಾಯ್ಗೊಳ್ (ಕ್ರಿ). ೧. ಧ್ವನಿಮಾಡು ; ಕೂಗು : ತಳಿತ ಪಾಲ್ಮರ ನೇಱ ಪಿಂಗಲಿ ಬಳೆದು ಬಾಯ್ಗೊಂಡವು ಸರಾಗದಿನೊಲಿದು ದಂಪತಿ ತಾಱನಿತ್ತವು ಕರಿಯ ಹಕ್ಕಿಗಳು (ಕೂಶಾ. ೦-೬-೬). ೨. ಬಾಯಲ್ಲಿ ಸೇರು; ಬಾಯಿಮಾತಾಗು : ಮಹಾಕವಿಯಾದ ಅವನ ಹೆಸರನ್ನೊಂದಿದ ಆ ನಾಮವು . . . ಮತ್ತಿನವರ ಬಾಯ್ಗೊಂಡು ರೂಢವಾದುದಾಗಿರಬೇಕು (ಶಾಕೋಶ. ೦೩೨). [ಬಾಯ್ + ಕೊಳ್$_1$]

ಬಾಯ್ಚಳಕ (ನಾ). ಮಾತಿನಲ್ಲಿರುವ ಚಾಲಾಕು,— ಜಾಣ್ಮೆ,— ಕೌಶಲ ; ವಾಕ್ಚಾತುರ್ಯ : ಕೈಚಳಕ ಬಾಯ್ಚಳಕದಿಂದ ಸಮಾಜದ ದುಡ್ಡನ್ನು ಹೀರಿ ಸ್ವಾರ್ಥ ಸಾಧಿಸುತ್ತಿರುವ ಶೀಲಭ್ರಷ್ಟರ ಕುಲ. ಯಾವ ಕುಲ ? (ಹುತ್ತಕ್ರ. ೦೪೯). [ಬಾಯ್ + ಚಳಕ$_2$]

ಬಾಯ್ಚು 'ಬಾರ್ಚು' ನೋ.

ಬಾಯ್ಚೆರೆ 'ಬಾಯ್ದೆಱೆ$_1$' ನೋ.

ಬಾಯ್ದಂಬುಲ (ನಾ). ಬಾಯಲ್ಲಿಯ ತಾಂಬೂಲ; ಎಂಜಲು : ನಿನಗೆ ಕಿಂಕರವೆರಡು ಸಂತತಿಯೆನಿಸಲೊಲ್ಲದೆ ನೀನು ದುರಿಯೋಧನನ ಬಾಯ್ದಂಬುಲಕೆ ಕೈಯಾನುವರೆ ಹೇಳು (ಕುವ್ಯಾ. ಉ. ೦೦-೯). [ಬಾಯ್ + ತಂಬುಲ]

ಬಾಯ್ದಣೆ (ಕ್ರಿ). ಬಾಯಿ ಸೋತುಹೋಗು : ಬಾಯ್ದಣೆಯೆ ಬೈಗುಳಿನಲುಭಯದಳ ಕಯ್ದುಗಾಱರು ನೀಗಿದರು ನಿಜಪತಿಯ ಹಣರುಣವ (ಕುವ್ಯಾ. ೦೯-೦೦). [ಬಾಯ್ + ದಣ್$_1$ (< ತಣ್$_1$)]

ಬಾಯ್ದಾರ (ನಾ). ಚೀಲ, ಹಸಿಬೆ ಮೊದಲಾದುವುಗಳ ಬಾಯನ್ನು ಕಟ್ಟುವ ದಾರ : ಚಿನ್ನದ ಚೀಲಕ್ಕೆ ರನ್ನದ ಬಾಯ್ದಾರ (ಜಗೀಶ. ೨೦). [ಬಾಯ್ + ದಾರ$_1$]

ಬಾಯ್ದಾರೆ (ನಾ). ಕತ್ತಿ, ಕುಡುಗೋಲು ಮೊದಲಾದುವುಗಳ ಹರಿತವಾದ ಅಂಚು : "ಬಾಯ್ದಾರೆಗಳೆಂದಸಿಧಾರೆಗಳೊಳ್" (ಶಶಾಶಿ. ೩೯); ಬಾಯ್ದಾರೆ ನಿಲೆ ಕುಮಾರಂ ಪೊಯ್ದೊಡೆ . . . ಪಱಿದುದಾ ವಂಶವನಂ (ಶಂಗಾಮಾ. ೯-೨೩); ಬಾಳ ಬಾಯ್ದಾರೆಯ ಸೋಂಕೆಂದು ಕದಳೀದಳಸ್ಪರ್ಶನಕ್ಕೆ ದರ್ವಂಗೆಟ್ಟೊಪ್ಪಂಗುಂದುತ್ತುಂ (ಗಿಂಶ. ೪-೦೦೯೪). [ಬಾಯ್ + ದಾರೆ$_1$]

ಬಾಯ್ದುಂಬಿಸು (ಕ್ರಿ). ಬಾಯಲ್ಲಿ ಗಿಡಿ, — ತುರುಕು : ಬಿಸಿಯ ಮಳಲಂ ತರಿಸಿ ಬಾಯ್ದುಂಬಿಸಿದವಂ ನಾನು (ಚಕ್ರಫ. ೦೦-೧೯). [ಬಾಯ್ + ತುಂಬಿಸು]

ಬಾಯ್ದುತ್ತು, ಬಾಯಿದುತ್ತು (ನಾ). ಬಾಯಿಗೆ ನೀಡುವ ಆಹಾರ; ಬಲಿ ; ಆಹುತಿ : ಶಸ್ತ್ರಾವಳಿಯ ಬಾಯ್ದುತ್ತುಗಳ ಸೆಳೆಯದಿರೆಂದರುಬ್ಬಿ ನಲಿ (ಕುವ್ಯಾ. ಕ. ೨-೦೪). ಬಾಯಿದುತ್ತು : ಕಾಲನ ಬಾಯಿದುತ್ತಾಗಿ ಸತ್ತು ಹುಟ್ಟುವರೆಲ್ಲ . . . ಎತ್ತ ಬಲ್ಲರು ಲಿಂಗ ಭೋಗೋಪಭೋಗಿ ಶರಣನ ಲಿಂಗಸುಖವ ? (ಷೋಶಸಾ. ೦೩೨ ತೃತ್ಸಾಪ). [ಬಾಯ್ + ತುತ್ತು$_2$]

ಬಾಯ್ದೆಗೆ, ಬಾಯಿತೆಗೆ (ಕ್ರಿ). ೧. ಬಾಯನ್ನು ತೆರೆ ; ಬಾಯಿಬಿಡು : ಸುರಿವ ಖಂಡದ ರಕುತಧಾರೆಗೆ ತರತರದಿ ಬಾಯ್ದೆಗೆದು ಶಾಕಿನಿಯವರ ಸಮೂಹವು ಬಳಿಯಲೈದಿತು ಪಾರ್ಥನಂದನನ (ಕುವ್ಯಾ. ದ್ರೋ. ೬-೪೦) ; ಅಗಣಿತಾತ್ಮಕನೆನಿಪ ಹರಿಚರಿತಗಳನಂತವ ಮುನಿವರನು ಬಾಯ್ದೆಗೆದು ಪೇಳಲು ಶೇಷಗೆಯು ಶ್ರುತಿನಿಕರಕಳವಲ್ಲ (ಹರಿಗ. ೦೦-೬-೨). ೨. ಬಿರಿ; ಬಿರುಕುಬಿಡು : ಅರಮನೆಯೊಳಗೆ ನೆಲ ಬಾಯ್ದೆಗೆದುದು (ಶಾಳ್ಮಶಾ. ೨೦-೩೪). ೩. ಅರಳು : ವಿಕಾಸವಾಗು : ಮುಗಿದು ದಬ್ಬಾಳಿ ಬಾಯ್ದೆಗೆದುದುತ್ಪಲನಿಕರಮಗಲ್ದುದು ರಥಾಂಗಕುಲಂ (ಶಂಕಫ. ೪೯-೨೯). ಬಾಯಿತೆಗೆ : ೪. ಮಾತನಾಡಲು ಅರಂಭಿಸು: ಸಭೆಯಲ್ಲಿ ಆ ಹಿರಿಯರು ಬಾಯಿತೆಗೆದ ಕೂಡಲೆ ಜನಸಂದಣಿ ತನ್ಮಯತೆಯಿಂದ ಆಲಿಸಿತು (ಹಾಡ). [ಬಾಯ್ + ತೆಗೆ$_1$]

ಬಾಯ್ದೆರೆ$_1$ 'ಬಾಯ್ದೆಱೆ$_1$' ನೋ.

ಬಾಯ್ದೆರೆ$_2$ 'ಬಾಯ್ದೆಱೆ$_2$' ನೋ.

**ಬಾಯ್ದೆಱಸು** (ಕ್ರಿ). ೧. ಬಿರಿಯುವಂತೆ ಮಾಡು ; ಬಿರುಕು ಬಿಡುವಂತೆ ಮಾಡು : ಬಳಧಾರಂ ಭೂಮಿಯಂ ಬಾಯ್ದೆಱಸೆ . . . ಪರ್ವಿತ್ತು ಮರವಥವಾನಾ ಸೈನ್ಯಧೂಳೀಕವಿಸ್ರಂ (ಜಗಪ. ೧೩-೦೯). ೨. (ಆಸೆಯಿಂದ) ಬಾಯಿಬಿಡುವಂತೆ ಮಾಡು ; ಹಂಬಲಿಸುವಂತೆ ಮಾಡು : ಗಾಳಿಯೊಳಱಿಗೆ ನಿಲುಕುವವು ಹೊಂಬಾಳೆ ಖಚರೀಜನದ ಕಬರಿಗೆ ಬಾಳೆ ಬಾಯ್ದೆಱೆ[ಱ]ಸುವವು ಬಿರಿವಣ್ಣಿನ ರಸಾವಳಿಗೆ ಬಾಲಕಿನ್ನರಿಯರನು (ಕೊರಕಾ ೩-೩-೦೪). [ಬಾಯ್ + ತೆಱಸು (< ತೆಱೆಯಿಸು)]

**ಬಾಯ್ದೆಱೆ**$_1$, ಬಾಯಿತೆರೆ, ಬಾಯಿದೆಱೆ$_1$, ಬಾಯ್ತೆರೆ, ಬಾಯ್ದೆರೆ$_1$ (ಕ್ರಿ). ೧. ಬಾಯನ್ನು ತೆಗೆ.— ಬಿಚ್ಚು ; ಬಾಯಿಬಿಡು : ಆ ವಿಟ್ಟು ಪೋ ಬಾಯ್ದೆಱೆದತ್ತು (ಶಾಂತಿಪು. ೪-೧೨) ; ನಿಮ್ಮ ಪ್ರಸಾದಕ್ಕಲ್ಲದೆ ಬಾಯ್ದೆಱೆಯೆನಯ್ಯಾ (ಬಸವ. ೪) ; ಮೂಗಿ ಬಾಯ್ದೆಱೆದಳೋ ಮಹಾದೇವ (ಶುವ್ಯಾರ್ಕ್ರೋ. ೫-೨೯೩-೦೦). ೨. ನುಡಿ ; ಮಾತಾಡು : ಮೇನಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್ (ಶಂಕಪಾ. ೭-೫೬) ; ಮತಿವಂತಂಗರ್ದೆದೆಱೆದಿನಲ್ತೆ ಬಾಯ್ದೆಱೆದಾತಂ (ಶಾಂತಿಪು. ೨-೩೬) ; ಬಾಯ್ದೆಱೆಯಲಂಜತು ಸಭೆ (ವಿಕಾಗ. ೪-೪-೦೯). ೩. ಬೇಡಿಕೊಳ್ಳು ; ಅಂಗಲಾಚು ; ಯಾಚಿಸು : ಹುಯ್ಯಲ ಕಂಡು ಬಿರುತೋಡಿ . . . ಬಾಯ್ದೆಱೆವವಂ ರಾಜನೇ ಹಗರಣದ ರಾಜನಲ್ಲದೆ (ಕಂಪು. ೯-೦೨). ೪. ಬಯಸು ; ಹಂಬಲಿಸು : ಪುದಿದುರಿಗಣ್ಣನಾಣೆಯನದೇವೊಗಟ್ಟಿಂ ಮುಗುಳೆಂದು ಮುಟ್ಟಬಾರದು ಬನಮೆಂದು ಬಾಯ್ದೆಱೆಯಬಾರದು ಸಂಪಗೆಯೆಂದು ಸೂಡಬಾರದು (ಕಬ್ಬಿಗ. ೦೯೭) ; ಸುತನ ಬರವಿಗೆ ಬಾಯ್ದೆಱೆದ ತೆಱದಿ ಪರಮುಸತಿಗಾಗುಳೆ ಬಂದುದು (ಜಕಪ. ೩-೨). ೫. ಅರಳು; ವಿಕಾಸವಾಗು : ಮಱುಗಿದವು ಕೋಕ ಕೋಕನದಂಗಳಾಗ ಬಾಯ್ದೆಱೆದುವು ಚಕೋರ ಕೋರಕಕುಮುದರಾಜಿಗಳ್ (ಕೃಪಚಾ. ೨೬-೦೯). **ಬಾಯಿತೆರೆ** : ೧. ರುಕ್ಮಿಣಿಯೂ ಗರ ಬಡಿದವಳಂತೆ ಬಾಯಿ ತೆರೆದುಕೊಂಡು ನೋಡುತ್ತಿದ್ದಳು (ಕರ್ಣಸ. ೨೦೬). ೨. ಭಾವ ಬಾಯಿ ತೆರೆಯುವ ಸ್ಥಿತಿಯಲ್ಲಿರಲಿಲ್ಲ (ಶಾರದಾ. ೯೨). ೩. ಎರಡನೆಯವರಿಗೆ ನಾನು ಎಂದೂ ಬಾಯಿ ತೆರೆದವನಲ್ಲ (ಮುಂಬಯು. ೪-೪೩). ೪. ಪ್ರತಿಯೊಬ್ಬನೂ ಲಂಚಕ್ಕಾಗಿ ಬಾಯಿ ತೆರೆದು ಕೊಂಡಿರುವಾಗ, ನನ್ನೊಬ್ಬನಿಂದ ಲಂಚನಿರ್ಮೂಲನ ಹೇಗೆ ತಾನೆ ಸಾಧ್ಯ? (ಕೃಪಕು. ೩೬೭). **ಬಾಯಿದೆಱೆ**$_1$ : ೧. ಪ್ರಾಣಪದವಾದಿರವಿಗಲ್ಲದೆ ಬಾಯಿದೆಱೆಯದು ಕರಮಸೆವ ಸಿಂಪೋದು ನೆನವುತವಿಃಹುದು ಮಳೆಗಳಿಗೆ (ಜಕಪು. ೫೦-೨೪). **ಬಾಯ್ತೆರೆ** : ೧. ಜಯಸೇನನು ಮಾಧವಿಯೆಂದು ಹೇಳುವುದಕ್ಕೆ ಬಾಯ್ತೆರೆಯುವಷ್ಟರಲ್ಲಿ ಅವಳು . . . ಮಾತಾಡಬಾರದೆಂದು ಸಂಜ್ಞೆ ಮಾಡಿದಳು (ಮಚಿಕಸ. ೯೭) ; ಗಳಗಳನೆ ಬಾಯ್ತೆರೆದು ಶಾಯಿಯಳುತಿಹಳು (ಕಾರೂಶ. ೦೬೩-೩೬೩). ೨. ಸಯ್ಯುರ್ಪುರದೀಗ ನೀಂ ಬಂದಾಗ ನೋಳ್ಪೆಂ ಕಯ್ಯುಡಿಯೊಳಕವಿರ್ಪುದೊಳ್ಕಿತನೆ ಬೀಳ್ಕೊಂಡ ಬಾಯ್ತುರೆಯದೆಯೆ ಕಾಳು (ಕಾಸೂಶ. ೦೯೩-೩೦೩). ೫. ಚೆಂದೆಂಗು ತಲೆದೂಗೆ ಕೆಂದಳಿರ್ ಬಾಯ್ತುರೆಯೆ (ಕಾಸೂಶ. ೬೭-೦೦೩). **ಬಾಯ್ದೆರೆ**$_1$ : ೧. ಬಹುಗುಣಿತ ಜನಗಣದ ಸಂಸ್ತುತಿಯ ಧವಳಧಾರಾಸ್ವಾತಿವರ್ಷಕ್ಕೆ ಬಾಯ್ದೆರೆಯುತೆನ್ನ ಹೃದಯದ ಭಕ್ತಿಶುಕ್ತಿಯಲಿ ಮುತ್ತುಗಳ ರಚಿಸಿ ಕೋದಿಹೆ ವರಣಮಾಲೆಯಂ (ಕಕ್ಕಾಂಗ. ೩೭-೦೦೦೩) ; ಕಟ್ಟಿಳಲ ಬಿಚ್ಚಿ ಕರು ಕರೆಯೆ ಬಾಯ್ದರೆದು (ಕಾಂಪುಶ. ೬೭-೦೦೭). ೨. ದಾರಿಗನು ಬಾಯ್ದರೆಯುವುದರೊಳಗಾಗಿ ಮೂವರು ಸೈನಿಕರೂ, ಸೈನ್ಯಾಧಿಪತಿಯೊಬ್ಬನೂ. . . ಮುಂದೆ ನಿಂತರು (ಮುಕಸ. ೬). ೪. ಕುದಿಯಿಲ್ಲದೆ ಎಸರಿಲ್ಲದೆ ಕಸಂಕಿಗೆ ಬಾಯ್ದರೆದೆವು (ಕಂಪುಮು. ೨೫-೪). [ಬಾಯ್ + ತೆಱೆ$_1$]

**ಬಾಯ್ದೆಱೆ**$_2$, ಬಾಯಿದೆಱೆ$_2$, ಬಾಯ್ದೆರೆ$_2$ (ನಾ). ೧. ಬಾಯನ್ನು ತೆರೆದಿರುವ ಸ್ಥಿತಿ; ತೆರೆದ ಬಾಯಿ : ಲಲನೆ ಮುದ್ದಾಡುತ್ತ ಬಾಯ್ದೆಱೆಯೊಳಗೆ ಕಾಣಲೆ ಸಕಲಭುವನಾವಳಿಯನು (ಜಿಜಾಗ. ೨-೩-೨೩). ೨. ತುಟಿ ; ಅಧರ : ಮಿಸುಗುವ ತನ್ನ ಬಾಯ್ದೆಱೆಯೊಳಲದ ವಣ್ಣನೆ ಮೈಯ ಬಣ್ಣದೊಳ್ ಕೊಸಗನೆ ತನ್ನ ಬಳ್ವಳಿಕೆಯೊಳ್ ಸೆಳೆಗೊಂಬನೆ ಪೋಲ್ತು ನೋಡ ಮಾನಸಯಣಮಲ್ಲಳೀಕೆ (ಅಜಪು. ೦೨-೩೬) ; ಬಾಯ್ದೆಱೆಯುಂ ಧವಳಿಸೆ ನಿಜದಂತಕಾಂತಿಸಂತಾನಂಗಳ್ ಪೂರ್ಣೇಂದುವದನೆ . . . ನೆಱೆನುಡಿದಳ್ (ಮಲ್ಲಿಪು. ೪-೬೬); ಮಾತನಾಡಿದ ಬಾಯ್ದೆಱೆಯ ಚೆಲ್ವನೆ ಕಂಡು ಸೋಕನೀಶ್ವರ ಮನದೊಳಗೆ (ಪ್ರೋಹಕ. ೨೫-೦೪). ೩. ಬಿರುಕು; ಬೀಡೆ : ಎರೆಯ ಭೂಮಿಯ ಬಾಯ್ದೆಱೆ ಧಾನ್ಯಮಾನ್ಯರ ಕರೆವ ಗೋಳಿಗೆ ಗಂಡು ಮೊರೆವ (?) . . . ನಾಮಾಂಕಿತ ವರವೃಕ್ಷ ವಿಪಿನದೊಳಿಹವು (ಸೋಹಕ. ೭-೩). ೪. ಬಾಗಿಲು ; ದ್ವಾರ : 'ಚೆಂಬಾಯ್ದೆಱೆ' ಪರಾ. **ಬಾಯಿದೆಱೆ**$_2$ : ೫. ಬಾಯಿ ; ವದನ ; ಮುಖ : ಬಾಯಿದೆಱೆಯ ನಾಣೆಯಾಯ ತಪ್ಪದ ಗೀತಗಾಯಕಿಯರುಗಳೊಪ್ಪಿದರು (ಪ್ರೋಹಕ. ೦೬-೪೪). **ಬಾಯ್ದೆರೆ**$_2$ : ೧. ಭರದಿಂದ ಯಕ್ಕಲನ ಹೊಕ್ಕಿರಿದು ಕರಡಿ ಬಾಯ್ದರೆಯ ಮುಸುಡಂ ಮುರಿಯಲಿಕ್ಕಿ (ಪವಮೋ. ೦೬-೨೩). ೨. ಮೊನೆಯ ನಗೆ ಬಾಯ್ದರೆಯ ಸೊಂಪ ಬೀರಿದುವು (ಕಾಸೂಶ. ೬೪-೧೨೧). ೬. ಬಾಯಿಮಾತು : ಬರೆಯದೆ ಇರುವ ಬಾಯ್ದರೆಯಾಗಿ ಹರಿದು ಬಂದ ಮತೀಯ ಆಚರಣೆಗಳ ಕಟ್ಟಳೆಗಳು, ಹಾಡುಗಳು, ಗಾದೆಗಳು ಸಹ ಸಹಾಯ ಮಾಡಬಹುದು (ಜಾನಗೀ. ೫೦) ; ನನಗೆ ನಿಮ್ಮ ಆಸ್ತಿಯಿಂದ . . . ತೊಂದರೆಯಿಲ್ಲವೆಂಬುದು ಖಾತ್ರಿಯಾದ ಬಳಿಕ ಮಾತ್ರ ಕೊಟ್ಟೇನು. ಅದು ಬಾಯ್ದರೆ (ಮುಂಗಾರು. ೦೪೪). [ಬಾಯ್ + ತೆಱೆ$_2$]

**ಬಾಯ್ದಾರೆ**, ಬಾಯಿಧಾರೆ, ವಾಯಿಧಾರೆ (ನಾ). = ಬಾಯ್ದಾರೆ : ಕಠೋರದ ಮೊರಹುಗಳ ಬಾಯ್ದಾರೆಗಳ ಕಿಡಿಹೊರಳಿಗಳ ಹೊಗರಂಬು ಹೊಕ್ಕವು ಪಾಂಡುಸೈನ್ಯದಲಿ (ಕುವ್ಯಾರ್ಕ್ರೋ. ೨-೩೩). **ಬಾಯಿಧಾರೆ** : ಈ ಉಭಯದ ತಟಿಗಾಜಿದೆ ಹೊತ್ತು ಹೋರುವ ಮಾತಿನ ಕತ್ತಿಯ ಬಾಯಿಧಾರೆಯ ಘಾಯಕ್ಕೆ ಇನ್ನೇತಱ ಮದ್ದು (ಸೋಳಪವಾ. ೪೪-೦೮೦); ತಳಿತ ಹೊಗರಿನ ಬಾಯಿಧಾರೆಯ ಹೊಳಹುಗಳ ಹೊಗರಂಬು ಕವಿದವು (ಕುವ್ಯಾರ್ಕ್ರೋ. ೫-೦೩). **ವಾಯಿಧಾರೆ** : ಹೊಳೆವ ಕೆಂಗಂಪುಗಳ ಮೂಳೆಯ ಲಲಿತರತ್ನದ ರೋಚಿಗಳ ಗಜಗಲಿಸುವಂಬಿನ ವಾಯಿಧಾರೆಯ ಕಿಡಿಯ . . . ಜ್ವಾಲೆಗಳೆನಲು ಹೊಕ್ಕನು ಮಹಾಹವವ (ಕುವ್ಯಾರ್ಕ್ರೋ. ೫೦. ೨೪೪). [ಬಾಯ್ + ಧಾರೆ]

**ಬಾಯ್ನೀರ್**, ಬಾಯಿನೀರು (ನಾ). ೧. ಬಾಯಲ್ಲಿ ಬರುವ ನೀರು; ಜೊಲ್ಲು ; ಲಾಲಾರಸ : ಏಕಾದಶಿಯೊಳಿವಿಲ್ಲದುದರ್ಕೆ ಬಾಯ್ನೀರೊಱೆತ್ತು ಬಣ್ಣಂಗುಂದುವರ್ (ಕಳಪಂ. ೯-೦೨). **ಬಾಯಿನೀರು** : ೨. ಬಾಯಲ್ಲಿ ನೀರು ಸುರಿಯುವಿಕೆ : ಶ್ವಾಸವು, ಕೆಮ್ಮು, ಬಾಯಿನೀರು . . . ಇನಿತುಂ ಕರ್ಣಿಕ ಸನ್ನಿಪಾತವೆಂದರಿವುದು (ಕಳಪ್ಪ. ೦೬೦). [ಬಾಯ್ + ನೀರ್./ತಮಿ. ವಾಯ್ನೀರ್]

**ಬಾಯ್ನುಡಿ** (ನಾ). ಖರಿಯ ಬಾಯಿಮಾತು ; ಬಾಯಿಬಡಾಯಿ : ನಿನ್ನನ್ನರಂ ಬಾಯ್ನುಡಿಯ ಬೀರರನ್ನೆನಿತೊ ಕಂಡಿಹೆನೊ ನಾಂ (ಕಕ್ಕಾಂಗ. ೭೯-೨೦೬೦). [ಬಾಯ್ + ನುಡಿ$_2$]

**ಬಾಯ್ಪರೆ** ' ಬಾಯ್ಪಱೆ ' ನೋ.

**ಬಾಯ್ಬಡಕ** 'ಬಾಯ್ಬಡಿಕ' ನೋ.

**ಬಾಯ್ಬಡಿ**, ಬಾಯಿಬಡಿ (ಕ್ರಿ). ೧. ಇನ್ನೊಬ್ಬರಿಗೆ ಮಾತಾಡಲು ಅವಕಾಶವಿಲ್ಲದಂತೆ ದಬಾಯಿಸಿ ಮಾತನಾಡು; ಇತರರು ಮಾತನಾಡದಂತೆ ಮಾಡು : ಪೊಡವಿಯೊಡೆತನವೆಮ್ಮದೆಂದು ಬಾಯ್ಬಡಿವರೇ (ಸೌಂದಪು. ೮-೭೭). ೨. ಬಡಾಯಿ ಕೊಚ್ಚಿಕೊಳ್ಳು : ವ್ಯಥಾಭಿಮಾನದಲಿ ಹಣುಕಿ ಬಾಯ್ಬಡಿದೇನಹುದು ಕೈಗುಣವ ತೋಱಿರೆ

(ಕುವ್ಯಾಸ. ೦೦-೩೯). **ಬಾಯಿಬಡಿ :** ೧. ಗುಣ ಮಾತನಾಡಿತು ಹಣ ಬಾಯಿಬಡಿಯಿತು (ಇಂಕಾಶ. ೨೦೩-೨) ; ಗಿರಾಕಿಗಳ ಬಾಯಿ ಬಡಿದ ಹಾಗೆ ಹೆಂಡ್ತಿ ಬಾಯಿಬಡಿಯೋಕೆ ಬರಬೇಡಿ (ಹೇಪುಕೂ. ೬) ; ತಪ್ಪ ಮಾಡುವುದು ಮೇಲೆ ಬಾಯಿಬಡಿಯುವುದು (ಕೂಕಳ. ೩೦).

[ಬಾಯ್+ಬಡಿ$_1$]

**ಬಾಯ್ಬಡಿಕ**, ಬಾಯಿಬಡಕ, ಬಾಯಿಬಡಿಕ, ಬಾಯಿಬಡುಕ, ಬಾಯ್ಬಡಕ (ನಾ). ೧. ಬಡಾಯಿ ಕೊಚ್ಚಿಕೊಳ್ಳುವವನು : ಒತ್ತಿ ನೀನೆನ್ನಂ ಬಲುಹು ಮಾಡುತ್ತ ಕಾಡಲದೆಂತು ಬಹುದಾನೆತ್ತಲ್ಕೆ ನೀನೆತ್ತಲೇತಜ ಮಾತು ಬಾಯ್ಬಡಿಕ (ಜಸಪು. ೯೦-೯೬); ಬಱಿಯ ಬಾಯ್ಬಡಿಕನೇ ಶಿಶುಪಾಲನೀ ಪರಿ ನಡೆವುದೇಕೈ ಹರಿಯೊಡನೆ ಸಮುಚಿಸನ ಬಿಂಕದಲಿ (ಕುವ್ಯಾಸ. ೦೦-೬೮); ಕತ್ತ ಹಿಡಿದೀಗಳೀ ಬಾಯ್ಬಡಿಕನಂ ನೂಂಕು (ಕಬಿಕೃ. ೩೦-೨೩). (ಗು). ೨. (ಇನ್ನೊಬ್ಬರಿಗೆ ಮಾತನಾಡಲು ಅವಕಾಶ ಕೊಡದಂತೆ) ಬಹಳ ಮಾತನಾಡುವ ; ಅತಿಯಾಗಿ ಹರಟುವ : ಕಿಡುವೀ ಪ್ರಪಂಚವಂ ನಿತ್ಯವೆಂದೆಂಬ ಬಾಯ್ಬಡಿಕ ಮೀಮಾಂಸಕಾ ನೀಂ ಸುಮ್ಮನಿರ್ (ಷಡ್ಕಾ. ೦೦-೦೯) ; ಬಾಯ್ಬಡಿಕ ಹೆಂಗುಸ ಕೊಲುವೆನೆನುತುಗ್ಗಡದ ಕೋಪದಲೆತ್ತಿದನು ಖಂಡೆಯವ ನಸುರೇಂದ್ರ (ಕೂಕರಾ. ೩-೩-೩೮). **ಬಾಯಿಬಡಕ :** ೧. ನಾನು ಬಾಯಿ ಬಡಕನಲ್ಲದುದರಿಂದ ಜಗಳವನ್ನು ಬಯಸುವುದಿಲ್ಲ (ಯೋರಚು. ೨೯); ಇದನ್ನು ತಿಳಿದೂ ತಿಳಿದೂ ತಾನು ಅಂಧಶ್ರದ್ಧೆಯ ಬಾಯಿಬಡಕರ ಬಾಲ ವಾಗಬೇಕೇ ? (ಐದ್ಯಾರ. ೬೯); ಬಾಯಿಬಡಕ ಬರದಲ್ಲಿ ಗೆದ್ದ (ಗಾದೆ). **ಬಾಯಿಬಡಿಕ :** ೧. ಹತ್ತಿರಕೆ ಕರೆವರು ಬಾಯಿಬಡಿಕರ ಜಗದ ಭಂಡರನು ಅರಸುಗಳು ದುಶ್ಶೀಲರೆಂಬುದನಱಿಯದೇ ಜಗ (ಕುವ್ಯಾದ್ರೋ. ೦೩-೬) ; ಬಾಯಿಬಡಿಕನಲಾ ವೃಥಾ ರಾಧೇಯ ಮದವೇಕಿನ್ನು . . . ನೀನುಳಿವಾಯತಿಕೆಯಿನ್ನೆಂತು (ಕುವ್ಯಾಶ. ೨೬-೭). ೨. ಆಯತಿ ಹೊನ್ನ ಗಳೇನು ಗಹನವೆಂಬ ಬಾಯಿಬಡಿಕ ತವಸಿಗಳ ತಾಯೆ ನೀ ಕೆಡೆಮೆಟ್ಟು (ಮೋಹತ. ೨೩-೯೬). **ಬಾಯಿಬಡುಕ :** ೧. ರಾಯ ಬಿನ್ನಪವಿದನೊಂದ ಚಿತ್ರೈಸೆನ್ನ ಬಾಯಿಬಡು[ಪಾಠಾಂ. ಡಿ]ಕನೆನ್ನದಿರು (ಕುರಾಜಾಂ. ೦೯-೬೦); ವರ್ಣಾಶ್ರಮಗಳಿಂದ ದೇಶ ಹಾಳಾಯಿತೆಂಬ ಬಾಯಿಬಡುಕರೂ ಬಹಳ (ಕಜು. VIII ಪುಟಸ್ಕಂ). **ಬಾಯ್ಬಡಕ :** ೧. ಮಾತು ಹಡೆಯುವದೆಲ್ಲ, ಮೌನಗರ್ಭದ ಬದುಕು ಬಾಯ್ಬಡಕಗೇನು ಗೊತ್ತು! (ಅಕಳು. ೨೩೯-೦೬); ಅಂಥಾ ಕಥೆಗಳಲ್ಲಿ ಅರ್ಧಕ್ಕರ್ಧ ಸಂಪ್ಕೆ ಊರ ಬಾಯ್ಬಡಕರ ಕಪೋಲ ಕಲ್ಪಿತವೆಂಬುದೇನೂ ಸುಳ್ಳಲ್ಲ (ಒಕ್ಕಉ. ೩೯). ೨. ಕೊನೆಗೆ ಬಾಕ್ಕೀದಾರ, ಇಲ್ಲವೋ ಬಾಯ್ಬಡಕ ಸಾಯ್ಕಲ್‌ಸ್ವಾರ (ಅಕಳು. ೩೪೭-೦೦).

[ಬಾಯ್ + — ಬಡಿಕ$_2$]

**ಬಾಯ್ಬಡಿಕತನ**, ಬಾಯಿಬಡಿಕತನ (ನಾ). ಜಂಬದಿಂದ ದಬಾಯಿಸಿ ಮಾತಾಡುವಿಕೆ ; ಜಂಬಕೊಚ್ಚಿಕೊಳ್ಳುವಿಕೆ : ಘಡ ವಿಕಾರವೆ ನವ್ಮೊಡನೆ ಬಾಯ್ಬಡಿಕತನವೇ ಕುರುಮಹೀಪತಿಯೊಡನೆ ಹುಟ್ಟಿದೆಯಾದ ಕಾರಣ ಬಿಟ್ಟೆವು (ಕುವ್ಯಾಸ. ೦೯-೯೬) ; ಗಂಡುತನವೇನಾಯ್ತು ಹೆ.ಳೆ ಭಂಡ ನೀ ಬಾಯ್ಬಡಿಕತನದಲಿ ತೊಂಡುಗೆಡೆವರೆ (ಕೌಶಿಕಾ. ೨೦-೩೦); ಅವ ನಿನ್ನಿಂದ ಬಾಯಲಿ ಬಲ್ಲಿದನು ಬಾಯ್ಬಡಿಕತನದಲಿ ಬಗುಳಿ ಬಾಲವನು ಕೊಳ್ಳಿಗಿಡಿಯಲಿ ಸುಡಿಸಿಕೊಂಡವ (ಕೂಕರಾ. ೬-೦೦-೩೮). **ಬಾಯಿಬಡಿಕತನ :** ಹಿರಿದು ರಕ್ಷಿಸಿದೊಡತಿಯೆಂದಾನಱಿಯದುಸುರಿದೆ ನಿಮಗಿನಿತು ನಿಷ್ಠುರತೆಯಾದಡೆ ನವಗಿದೇಕೀ ಬಾಯಿಬಡಿಕತನ (ತೊರರಾ. ೨-೦-೩೦). [ಬಾಯ್ಬಡಿಕ+—ತನ]

**ಬಾಯ್ಬಡಿಕಿ**, ಬಾಯಿಬಡುಕಿ (ನಾ). ಇನ್ನೊಬ್ಬರಿಗೆ ಮಾತನಾಡಲು ಅವಕಾಶವಿಲ್ಲದಂತೆ ದಬಾಯಿಸಿ ಮಾತನಾಡುವವಳು : ಕೊಡ ಸಮರ್ಥರೆ ಬೇಡಿದುದ ನೀವ್ ನುಡಿದು ತಪ್ಪುವರಲ್ಲಲೇ ಬಾಯ್ಬಡಿಕಿ ಯಿವಳೆಂದೆನ್ನಿರಲೆ (ತೊರರಾ. ೨-೨-೬). **ಬಾಯಿಬಡುಕಿ :** ರಿಪುರಾಯರಿಗೆ ದಾಸತ್ವವಾಗಲು ಬಾಯಿಬಡುಕಿ[ಪಾಠಾಂ. ಬಾಯ ಬಡಿಕೆ]ಯದಾರೊಡವೆ ಶದ್ದಾಸ ಧನವಲ್ಲ (ಕುವ್ಯಾಸ. ೦೩-೦೨). [ಬಾಯ್ಬಡಿಕ+ — ಇ$_2$]

**ಬಾಯ್ಬಡಿಕೆ** (ನಾ). = ಬಾಯ್ಬಡಿಕಿ : ನಿರ್ಬುದ್ಧಿವಂತೆ ಬಾಯ್ಬಡಿಕೆ . . . ಮಧುಗೋಷ್ಠಿಗೊರ್ಬಳೆಡೆಯಾಡುತಿರೆ ಕಂಡಾ ವಿದೂಷಕಂ ಸರ್ಬವರೊಳೆಲ್ಲರಂ ನಗಿಸುತಿವಳೀಗ ಹಸ್ತಿನಿಯೆಂದುಸಿರ್ದನು (ಕಬಿಕೃ. ೦೦-೨೩) ; ಹೆಣ್ಣೆ ವಾದಿಸಬೇಡ ಬಲ್ಲೆ ಬಾಯ್ಬಡಿಕೆಯೆಂದಳು ಖಿದ್ರು ಪ್ರೀತಿಯಿಂದ (ಕುರಂಗ. ೩-೨೦). [ಬಾಯ್ಬಡಿಕ+ —ಎ$_2$]

**ಬಾಯ್ಬಿಡು** ‘ಬಾಯ್ವಿಡು’ ನೋ.

**ಬಾಯ್ಬಿಯ್ಯಗ** ‘ಬಾಯಿಬೀಗ’ ನೋ.

**ಬಾಯ್ಬೀಗ** ‘ಬಾಯಿಬೀಗ’ ನೋ.

**ಬಾಯ್ಮಱುಕ** (ನಾ). ಅಭಿವ್ಯಕ್ತಿಗೊಳ್ಳುವ ಪ್ರೀತಿ, –ವ್ಯಾಮೋಹ : ಸೂಟ್ಮಡೆದ ಕೂಟಂ ಪಲ್ಲಟಂಬಾಯ್ವ ಬಾಯ್ಮಱುಕಂ ತಾಂಗಿಗಟಲ್ವ ನಾಣಳಿತನಂ . . . ಅಳುಂಬಂ ಕೂಟದೊಳ್ ನಲ್ಲರಾ (ಜೀಪ್ರಕೃ. ೯-೬೮).

[ ಬಾಯ್ + ಮಱುಕ ]

**ಬಾಯ್ಮಾತು** ‘ ಬಾಯ್ವಾತು ’ ನೋ.

**ಬಾಯ್ಮಿಡುಕು** (ಕ್ರಿ). ಧ್ವನಿ ಮಾಡು: ಮಾತಾಡು: ಬಱಿದೆ ಬಾಯ್ಮಿಡು ಕದಿರಿ ಮಱಿವೊಳಡಿಗಡಿಗಬ್ಬರೊಂದಾಗಿ ನುಡಿಯದಿರಿ (ಶಾಂಚಕೃ. ೦-೩೯).

[ಬಾಯ್ + ಮಿಡುಕು$_1$]

**ಬಾಯ್ಮುಚ್ಚು**, ಬಾಯಿಮುಚ್ಚು (ಕ್ರಿ). ೧. ಬಾಯಿ ಬಿಡದಿರು ; ಮಾತಾಡದಿರು ; ತೆಪ್ಪಗಿರು : ಬಾಯ್ಮುಚ್ಚಿರಲ್ ಚೆಲ್ವ ಪೆಣ್ (ಅಕ್ಕಶಾ. ೦೨-೨೩೩). **ಬಾಯಿಮುಚ್ಚು :** ೧. ಹಣ್ಣನ್ನು ತರುವಾಗ ಬಾಯಿಮುಚ್ಚಿಕೊಂಡಿರಬೇಕು ಅನ್ನುತ್ತೀಯಾ ? (ವ:ಕೂಕಿಕ್ಕ. ೦೨೪). ೨. ಬಾಯಿ ಮುಚ್ಚಿಸು ; ಬಾಯನ್ನು ಕಟ್ಟು : ಮಾಯೆ ಎನ್ನ ಕಾಯ ವನ್ನುಪಾಯದಿಂದ ನೋಯಿಸಿ ಬಾಯಿಮುಚ್ಚಿ ಕೊಲ್ಲುತ್ತಾಳೆ ಕಾಯೊ ಲಕ್ಷ್ಮೀಯರಸನೆ (ಪುರಂದ. ೦-೧೬೬ ಕಲ್ಪ೩). [ಬಾಯ್ + ಮುಚ್ಚು$_1$]

**ಬಾಯ್ಮೋಸ** (ನಾ). ಮಾತಿನ ತಪ್ಪು ; **ಉಕ್ತಿದೋಷ :** ಅನಿವರೊಳ್ ವ್ಯವಹರಿಪುದರ್ಕೆನಗೆ ತಿಳಿವಂತೆ ನಿರವಿಸಿ ರಾಯಸವಂ ದಯೆಗೆಯ್ವುದು ಇದಱೊಳೇನಾನುಂ ಕೆಯ್ಮೋಸ ಬಾಯ್ಮೋಸಂಗಳುಳ್ಳೊಡವೊಲ್ಮೆಯಿಂ ಸೈರಿಪುದು (ಜಿಕವಂ. ೨೩-೯). [ಬಾಯ್ + ಮೋಸ]

**ಬಾಯ್ವಲ** (ನಾ). ಮಾತಿನ ಶಕ್ತಿ ; ವಾಗ್ಬಲ : ಚಲವಂ ತೋಳ್ವಲವು ನೃಪಾಳನಳವಂ ನಾವಿನ್ನು[ಟೆ]ನ್ದಯ್ದಿ ಬಾಯ್ವಲದಿಂ ಬಣ್ಣಿಸಧಿರ್ದ್ದ[ಳೆ]ಣ್ಣ (ಕಶಾಶಿ. ೨-೨-೯೦; 1058); ಪಲವುಂ ಮತಂಗಳಂ ಬಾಯ್ವಲದಿಂದಂ ಬಾದುಗೆಯ್ವ ಬಸನದೆ ಮಾಟ್ಪರ್ ಕೆಲಬರದನೊಲುವರೊಲ್ಲರ್ ಪಲರೆಂತುಂ ಮೋಕ್ಷಮಾರ್ಗಮಂ ಜಿನಮತಮಂ (ಸಮಶ. ಅನುಬಂಧ. I, ೩೬೩-೩೬). [ಬಾಯ್ + ಬಲ$_1$]

**ಬಾಯ್ವಸ** (ನಾ). ಬಾಯಿಯ ಉತ್ಕಟವಾದ ಅಪೇಕ್ಷೆ : ಬಾಯ್ವಸವೋಡ ದಂತಡರ ಚುಂಬಿಸೆಯುಂ ಬಗೆದೆಂತು ತಳ್ತೊಡಂ ಮೆಯ್ವಸವೋಡದವ್ಪು ಗಡ ಕಣ್ಬಸವೋಡದಿದೆಂತು ನೋಡೆಯುಂ (ಅರ್ಜವೇ. ೬-೩).

[ಬಾಯ್ + ಪಸ$_1$]

**ಬಾಯ್ವಱಿ**, ಬಾಯ್ಬರೆ (ನಾ). ಬಾಯಿಂದ ಮಾಡುವ ಶಬ್ದ; ಬೊಬ್ಬೆ : ಸುರಿಗೆ ಶುಭುಂಬಂಗತ್ತಿಗೆ ಕರಗಂ ತಲೆವಂಡೆ ಮರುಳ ಬಾಯ್ವಱಿ ಪಱಿಯಾಗಿರ ಕಳದೊಳಱಿಯಲಿರ್ದುವು ನೆರೆದು ನಿಶಾಚರರ ತಕ್ಕಿನೆಕ್ಕತುಳಂಗಳ್ (ಕಾವ್ಯಾವ. ೬೬). **ಬಾಯ್ಬರೆ :** ನಾನಾಶಕುಂತವ್ರಜಂ . . . ಪಾಮರಿಯ ಬಿರುದನಿಗೆ ಕೈಪರೆಗೆ ಬಾಯ್ಬರೆಗೆ ಕಲ್ಗವಣೆಗೊಂದಿನಿತು ಪೆಳರಿ ಗಾರಾಗುತುಂ . . . ತೊಡಗಿದಪವಿನ್ನೊರ್ಮೆ ನೆಲ್ಮೀವಿಗೆ

(ಶಬ್ದಾಂಗ. ೩೩–೦೧೩೦). 'ಕೆಯ್ಪಱಿ' ಪರಾ. [ಬಾಯ್+ಪಱಿ]

**ಬಾಯ್ಪಱಿಗುಟ್ಟು** (ಕ್ರಿ). ಬಾಯಿಂದ ಜೋರಾಗಿ ಶಬ್ದ ಮಾಡು; ಬೊಬ್ಬೆಯಿಡು: ಘಟೋತ್ಕಚನ ತಲೆಯಂತೆ ಮಾರುಳ ಕಾಳೆಗಕ್ಕಾರ್ಪ ಸೂಲದ ತಲೆಗಳಂ ತಮ್ಮಟ್ಟಿಯಾಟಕ್ಕೆ ಬಾಯ್ಪಱ[ಪಾಠಾಂ. ಯ್ಬಿಱ] ಗುಟ್ಟುವ ಸಿಡಿದಲೆಗಳುಮಂ (ಅರ್ಜುನ. ೩–೬೦ ವ). [ಬಾಯ್ಪಱಿ+ಕುಟ್ಟು₁]

**ಬಾಯ್ಮಾತು**, ಬಾಯಿಮಾತು, ಬಾಯ್ಮಾತು (ನಾ). ೧. ಬರಿ ಮಾತು; ಶುಷ್ಕವಾದ ನುಡಿ; ತೋರಿಕೆಯ ಮಾತು: ಈ ಬಾಯ್ಮಾತಿನೊಳೇ ಪಂದವುದಮ್ಮಣ್ಣ ಕಾದುಕೊಳ್ (ಶಂಕರ. ೦೨–೦೬೩). **ಬಾಯಿಮಾತು**: ೧. ನನ್ನ ಕನ್ನಡಾಭಿಮಾನವು ಬರೀ ಬಾಯಿಮಾತಿನಲ್ಲೇ ಉಳಿಯಿತು (ಕಂಗಾಳ್ಕ. II. ಮುಮ್ನುಡಿ). ೨. ಮುಖತಃ ಹೇಳಿದ ಮಾತು; ವ್ಯಕ್ತವಾಗಿ ನುಡಿದ ನುಡಿ: ಬಾಯಿಮಾತಿನ ದಾಯದೊಳು ಶಮಗಾಯಿತೆಂದೇ ಹಂಕರಿಸಿ . . . ತರಣಿಯೊಪಾಯದವರಿಯದವರಿಂಗೊರೆ ಯದಿರು ಮಾಯುಹರ ಚಿತ್ತಾಯ ಘನಗುರುರಾಯ ವಚನವನು (ಗಗಕಾ. ೦೬–೨); ಅವಳ ಬಾಯಿಮಾತಿನಲ್ಲಿ ಅರ್ಥವೊಂದಾದರೆ, ಕಣ್ಣಿನ ಭಾಷೆಯ ಅರ್ಥವೇ ಬೇರೆಯಾಗಿತ್ತು (ಪುತಕು. ೩೨೨). **ಬಾಯ್ಮಾತು**: ೧. ನಾವೀಗ ಬಾಯ್ಮಾತಿನ ಗೌಡಿಕೆಯನ್ನೂ ಸ್ವಪ್ರತಿಷ್ಠೆ ಯನ್ನೂ ಮೆರೆಸುವುದರಲ್ಲಿ ಮುಳುಗಿದ್ದೇವೆ (ಸ್ಮೃತಿಶ. ೩೬೦). [ಬಾಯ್ + ಮಾತು₁]

**ಬಾಯ್ಬಿಡು**, ಬಾಯಿಬಿಡು, ಬಾಯಿವಿಡು, ಬಾಯ್ಬಿಡು (ಕ್ರಿ). ೧. ಬಾಯನ್ನು ತೆರೆ; ಬಾಯಿ ತೆಗೆ: ಕರಿಗಳ್ ಭೀಮಂ ಒಡಿದಡರ್ದೊಡೆ ಬಾಯ್ಬಿಟ್ಟಲ್ಲದಗಾದುವು (ಶಂಶಕಾ. ೨–೩); ನೀಂ ಭಕ್ತಿಯಂ ಮಾಡಿದ್ದೆ ನಿನ್ನಯ ಕೂರ್ಮೆಯಲ್ಲಿತೆನುತಂ ಬಾಯ್ಬಿಟ್ಟು ಪುಯ್ಯಲ್ಟಿದಳ್ (ಕಾದಂಬ. ೬೩೨); ಪೆರ್ಗಿರ್ ಪೇಟಲಂಜಿ ಲಜ್ಜೆಯಿಂ ಮಾಗಿಯ ಕೋಗಿಲೆಯಂತೆ ಬಾಯ್ಬಿಡದೆ (ಧರ್ಮಾಮೃ. ೦–೧೫೬). ೨. ಮಾತನಾಡು; ನುಡಿ: ತಾಯಿ ಮೋರೆಯ ನೋಡಿಯೇನಾದುದೆಂದೊಡಂ ಬಾಯ್ಬಿಡದೆ ಹಾಸನೋಸರಿಸಿ ಮಲಗಿದಳು (ಶಾಂತೀಶ. ೧೩೨–೨೬೨). ೩. ಆಶ್ಚರ್ಯ ಪಡು; ಬೆರಗಾಗು: ಪೋಡಶಯುಕ್ತಿವರ್ಗಿತ್ತುದರ್ಕೆ ಬಾಯ್ಬಿಟ್ಟರೆ ವಿಪ್ರಕೋಟಿ . . . ಯಮನಂದನನೇಂ ಕೊದೆಲ್ಲದಿತ್ತನೋ (ಶಂಶಕಾ. ೬–೪೯). ೪. (ನೋವಿನಿಂದ) ನರಳು; ಚೀರು; ಕಿರಿಚು: ನೊಂದುಂ ಬಾಯ್ಬಿಡದಿನಿಸಪ್ಪೊಡಂ ಪೆಳಱದಳ್ಕದೆ . . . ಬಿಟ್ಟುವರ್ಪ ನೆಲೆಯಿಂ ಕಿಲವುನ್ನದಗಂಧಸೀಧುರಂ (ಶಂಶಕಾ. ೦೦–೪೯); ಪಟ್ಟರ್ಪ ನಾಯ ನಡುವಂ ಮೆಟ್ಟಿ ಕನಲ್ದೊಡನೆ ಮೇಲೆ ಪಾಯ್ದುದು ತಿನೆ ಬಾಯ್ಬಿಟ್ಟು ಲಲಿತಾಂಗನಿಱಿದಂ ಕೆಟ್ಟೆನನ್ನುತ್ತೋಡುವಾತನಂ ಮತ್ತೊರ್ವಂ ತಾಂ ಕಂಡು (ಧರ್ಮಾಮೃ. ೨–೩೬). ೫. ಮೊರಗು; ಸಂಕಟಪಡು; ದುಃಖಿಸು: ಮತಿಗೆಟ್ಟಿರ್ದೆಗುಟ್ಟು ಬಟಲ್ದಟಲ್ದು ಬಾಯ್ಬಿಟ್ಟು ಕುಯೋನಿಯೊಳ್ ತಿರಿದು ಪೋದುವು ಕಾಲಮನಂತಂ (ಸುಕುಮಾ. ೦೦–೬೨); ತಾಯ್ ಸತ್ತ ಶಿಶುವಿನಂತೆ ಬಾಯ್ಬಿಡುತ್ತುಂ (ಧರ್ಮಾಮೃ. ೬–೦೯೯): ಘುಂಡೋದರಿ . . . ಬಸುಱ ಹೊಡೆದಳಲುತ್ತ ಗರುವಿಕೆಗೆಟ್ಟು ಹೊರಳಿ ದಳಕಟ ಬಾಯ್ಬಿಡುತ (ತೊರವೆ. ೩೬–೦). ೬. (ದೈನ್ಯದಿಂದ) ಬೇಡಿಕೊಳ್ಳು; ಯಾಚಿಸು: ಇನಿಸಟ್ಟು ನೋಡಿ ನುಡಿಯೆಂದೆನಿತಂ ತಱಿದಿಂ ಕಪಿಂಜಲಂ ದೆಸೆದೆಸೆಗಂದು ಬಾಯ್ಬಿಡುತಮಿರ್ದುದನಾಲಿಸಿದೆಂ (ಕಾದಂಬ. ೯೦೩); ತಂದೆ ಕರುಣಿಸು ಎಶಾಪವನೆಂದು ಬಾಯ್ಬಿಡುವ ಮಂದಮತಿಗಳಿಗೆ ದೊರಕದ ಲೇಸನೀಯಬೇಕು (ಸಿದ್ಧರಾ. ೦–೨೫); ಗತಿವಿಹೀನೆಗೆ ಕೃಷ್ಣ ನೀನೇ ಗತಿಯೆನುತ ಬಾಯ್ಬಿ[ಪಾಠಾಂ. ಯ್ಬಿ]ತಲು ಲಜ್ಜಾಸ್ಥಿತಿಯನುಳುಹಿದ ದೈವ ನಿಃ ಪ್ಕೈದೋಃಬ್ದೈ ತನಗೆ (ಕುಮಾರ. ೨–೦೩). ೭. ಬಯಸು; ಹಂಬಲಿಸು: ಘನದುಃಖಂಗಳನೆಯ್ದೆ ಮಾಬ್ಬ ವನಿತಾಸೌಖ್ಯಕ್ಕೆ ಬಾಯ್ಬಿಟ್ಟು ದುರ್ಮನುಜಂ ಸಿಕ್ಕಿ ವಿಶೇಷದಿಂದೆ ಬಟಬುಭುಕ್ಷಿರ್ಪಂ ದಲುತ್ತಜ್ಞನೆಂದೆನಿಪಂ ಬಾಯ್ಬಿಡನಂಬುವೆಂಬ ಬಗೆಯಿಂ ಗಾಂಪಂ ಮರೀಚೀಜಲಕ್ಕೆನಸುಂ ಬಾಯ್ಬಿಡುಮಂ ಪರೀಕ್ಷಕನದಕ್ಕಿಂ ತಾದೊಡಂ ಬಾಯ್ಬಿಡಂ (ಶಾರಕು. ೩–೩೯). ೮. ಬಿರಿ; ಬಿರುಕು ಬಿಡು; ಸೀಳು: ನೆಲಂ ಮೊಟಗೆ ಕಂಪಿಸೆ ಬಾಯ್ಬಿಡೆ ಬೆಟ್ಟು ಬೀಟ ಮಂದಿರಮಾಡಿದಟ್ಟಿ ತರ್ಗೆ . . . ಘನಾಗಮದೊಳ್ ಏನಿಂದಿತಂ (ಶಬ್ದಸಾರ. ೪–೬೪). ೯. ಬಿದರು; ಸಿಡಿದುಹೋಗು: ಮಂದರದ ಘಾರಾಘಾರಿಯಲಿ ಬಾಯ್ಬಿಡುವ ಕಡಲಂತೆ ಅರಿವರೂಥಿನಿ ಕಿದಱ ತಳಿತವು (ಕುಮಾರವ್ಯಾ. ೦೨–೧೯). **ಬಾಯಿಬಿಡು**: ೨. ಅವನ ಆಗಿನ ಮನಸ್ಥಿತಿ ಯನ್ನು ಸರಿಯಾಗಿ ಅರಿತವಳ ಹಾಗೆ ತುಂಗಕ್ಕ ಮೆಲ್ಲನೆ ಬಾಯಿ ಬಿಟ್ಟಳು (ಮೂಕಜ. ೯೨); ತಮ್ಮ ಯಜಮಾನ ಬಾಯಿ ಬಿಡುವುದನ್ನೇ ನಿರೀಕ್ಷಿಸುತ್ತ ರೈತರು ಅವನನ್ನೇ ನೋಡುತ್ತಿದ್ದರು (ಪುತಕು. ೨೬೯); ಬಾಯಿ ಬಿಟ್ಟರೆ ಬಣ್ಣಗೇಡು (ಗಾದೆ). ೬. ಪಡೆದೊಡವೆಯ ಧರ್ಮಕೆ ಈಯದವ ಬಾಯಬಿಡುವುದೆ ಪರರಿಗೆ ಸಾಕ್ಷಿ (ತುರಂಗ. ೨–೦೬–೨); ಭ್ರಷ್ಟದೈವಕೆ ಬಾಯಿಬಿಟ್ಟಲ್ಲಿ ಫಲವಿಲ್ಲ (ಸರ್ವಜ್ಞ. ೦೯೩). ೭. ಮುನ್ನೂಱುಮತ್ತು ನಕ್ಷತ್ರಕ್ಕೆ ಬಾಯಿಬಿಟ್ಟುಕೊಂಡಿಪ್ಪುದೆ ಸಿಂಪು ಅದು ಸ್ವಾತಿಗಲ್ಲದೆ ಬಾಯ್ದೆ ಱೆಯದು ಕೇಳು ಕೇಳಾ ತಂದೇ ಎಲ್ಲವಕ್ಕೆ ಬಾಯ ಬಿಟ್ಟರೆ ಶಾನೆಲ್ಲಿಯ ಮುತ್ತಪ್ಪುದೊ (ಬಸವ. ೬೦೯); ಹರಿ ಕೊಟ್ಟ ಕಾಲಕ್ಕೆ ಉಣಲಿಲ್ಲ ಹರಿ ಕೊಡದ ಕಾಲಕ್ಕೆ ಬಾಯಿಬಿಡುವ್ಯಲ್ಲೊ ಪ್ರಾಣಿ (ಪುರಂದ. ೦–೪೬ ಪಲ್ಲವಿ). ೧೦. ಗೌಪ್ಯವಾದುದನ್ನು ಬಯಲು ಮಾಡು,— ರಟ್ಟುಮಾಡು: ಇವನು ತಂದೆ ತಾಯಿ ಬಂಧು ಬಳಗದ ಹೆಸರನ್ನು ಬಾಯಿಬಿಡ (ಪರಿಂದ. II. ೬೫೬). **ಬಾಯಿವಿಡು**: ೧. ತುರಗದಟಂ ಪದಲ್ವಡೆ ಕಡಂಗಿ ಘಟಾವಳಿ ತಾಗಿ ಮತ್ತೆ ನಿತ್ತರಿಸದೆ ಭೀತಿಯಿಂ ಪೆಳಱ ಬಾಯಿವಿಡೆ (ಎಕ. VIII. ಸಾಗರ. ೦೦೯–೨೬; 1042). **ಬಾಯ್ಬಿಡು**: ೧. ಒಡಿವ ಪುಲಿ ಕರಡಿ ಬಾಯ್ಬಿಡುವ ಭೂತಂಗಳಸುಗುಡಿವ ಪಾವುಗಳಟ್ಟಿ ಸುಡುವ ಕಾಳ್ಕಿಚ್ಚು ಳಿಯಗೊತವು (ಕೃಷ್ಣರಾ. ೪–೨೩); ಬಾಯ್ಬಿಟ್ಟು ಹೇಳುವು ದಿಲ್ಲವೇಕೆ, ನಿನಗೀಗ ಬಾಯ್ಗೆ ನೀರು ಬಂದು ಮನ ಸೋತಿದೆಯೆಂದು ? (ಇತ್ಯಾಕ. ೨೬೯). ೫. ಸಂಸ್ಕೃತಿದುಃಖದಿಂದೆ ಬಾಯ್ಬಿಟ್ಟು ಪಲುಂಬುವೆಲ್ಲ ಜನಮಂ ನಡೆ ನೋಡಿ (ಉದ್ಭಟ. ೦೦–೩೪); ಇರುಳು ತಸ್ಕರಬಾಧೆಯಲಿ ಭೂಸುರರು ಬಾಯ್ಬಿಡುತ್ತಿದೆಯಿಂದ್ರಪ್ರಸ್ಥಪುರವರವ (ಕುಮಾರ. ೦೯–೨); ಹೆಂಡಿರುಗಳ ಬಿಟ್ಟೋಡಿದವರ . . . ಗಂಡನ ಬಿಟ್ಟು ಬಾಯ್ಬಿಡುತ್ತಿದಿದ ಹೆಂಗಳಂಡಲೆಗಳನೇವೇಳ್ವೆ (ಶಂಕರ. ೦೦–೫೨). ೬. "ಬಾಯ್ಬಿಡು (ಬಾಯ್+ಬಿಡು)—ದೈನ್ಯೇ" (ಶಮನ); ಬಟ್ಟಲ ಒಡಿದು ಬಾಯ್ಬಿಟ್ಟು ಕೇಳಿದರಿಲ್ಲ ಅಟ್ಟಡವಿಗೆ ಅತ್ತರಿಲ್ಲ (ಪುರಂದ. ದಾ. ೨–೫೨–೩). ೭. ನೀನೊಲ್ದು ಡೇನೊಲ್ಲದಿರ್ದೊಡಮೇಂ ನಾನೆರಡಿಲ್ಲದೊಲ್ದೆ (ಲ್ದೆ) ನದಱಂ ಬೇಱಾರ ಬೇಟಕ್ಕೆ ಬಾಯ್ಬಿಡಲಾಱೆಂ (ಅನಂತ. ೦೦–೯೩). [ಬಾಯ್ + ಬಿಡು₁]

**ಬಾಯ್ಪೂಸು** (ಕ್ರಿ). ೧. ಬಾಯನ್ನು ಸವರು,— ಒರೆಸು. ೨. (ಆಲಂ) ಬಾಯಿ ಮುಕ್ಕಳಿಸು: ಸಮುಕಟ್ಟಱಿಯದೆ ಹರಿಗರ್ಭ ಮೆತ್ತಿ ನಿಂದಿರ್ದ ಯಜ್ಞಮದು ಮೊದಲೊಳ್ ಶಾಸಮರ್ದಮಮರ್ದಿ [ರದೆ] ತಣಿಯುಂಡಮರ್ದಂ ಗೋಮೂತ್ರದಿಂದೆ ಬಾಯ್ಪೂಸಿದವೋಲ್ (ಶಂಶಕಾ. ೬–೯೬) [ಬಾಯ್ + ಪೂಸು₁]

**ಬಾಯ್ವೆಣ್ಣೆ**. ಬಾಯಿವೆಣ್ಣೆ (ನಾ). ನವಜಾತಶಿಶುವಿಗೆ ತಿನ್ನಿಸುವ ಬಜೆ ಮತ್ತು ಬೆಣ್ಣೆಗಳ ಮಿಶ್ರಣ: ಆತನುಂ ಚಂದ್ರಭುಕ್ತನೆಂದು ಪೆಸರನಿಟ್ಟು ಬಾಯ್ವೆಣ್ಣೆಯೊಡನೆ ಕಿಱುಕಿಱುದ ನಂಜನೂಡಿ ಬಟಿಕೆ ಬಳೆದೊಡಾ ಹಾರದೊಳೊಡಲ್ ತಗುಳ್ದೊಂ (ವಡ್ಡಾರಾ. ೦೬೩–೨೮).; ತಿರುತಲೆಯೂರ ಶಿವನ ಪ್ರಸಾದಮಂ ತಂದು ಬಾಯ್ವೆಣ್ಣೆಯುಕ್ತಿದರತಿಸ್ವಾದುಮಂ (ಉದ್ಭಟ.

ಕ. ೨೦-೩) ; ತಂಕರಶಿಸುಗೆ ಪರಮಪ್ರಸಾದದಿಂ ಬಾಯ್ವೆಣ್ಣೆಯಟ್ಟು ವೊಲೆಗೊಟ್ಟು (ಕರ್ಣಾ. ೨-೬೭). **ಬಾಯಿವೆಣ್ಣೆ** : ಊರೊಡೆಯ ಸಾಚರಸರು ಕರುವರ ಕಲ್ಲಗಾವುಂಡಂಗೆ ಬಾಯಿವೆಣ್ಣೆಗೆ ಕೊಟ್ಟ ಮನೆ (ಕೊಲ್ಹಾ. ಶಾ. ೦೩-೫೮ : 1166). [ಬಾಯ್ + ಬೆಣ್ಣೆ]

**ಬಾಯ್ಸೆಸ** (ನಾ). (ರತಿಕ್ರಿಯೆಯಲ್ಲಿ ಮಾಡುವ) ಚುಂಬನ ಮುಂತಾದ ಬಾಯಿಯ ಕೆಲಸ : ಮೆಯ್ಸೆಸದಿಂ ಕೆಯ್ಸೆಸದಿಂ ಬಾಯ್ಸೆಸದಿಂ ಮಂತ್ರ ತಂತ್ರದಿಂದಂ ಸುಖಮಂ ಮೆಯ್ವೆಡೆ ವನಿತೆಗೆ ಪಡೆದಾ ಮೆಯ್ಯೋಗಕ್ಕೆಳಸಿ ಸೋಲ್ಪನೆಟ್ಟನೆವೊಜಂಗಂ (ಕಾವ್ಯಾ.ವ. ೬೭). [ಬಾಯ್ + ಬೆಸ₁]

**ಬಾಯ್ಸೆಟಿ ?** (ನಾ). (?) : ತೋಳ ವಾಯಸದ ಮೊಲದ ಕರಡಿಯಾ ಸೊಲದೊಂದಿರದ ಬೆಂದ ಮೊರಡಿಯಾ ನರಿಯ ಕೋಡಗದ ಗೂಗೆ(ಬೆ) ಯಂದವಂ ಮರೆಯ ಪಾಟ್ಮನೆಯ ಬಾಯ್ಸೆಟಿಯಂದವಂ . . . ವೋಲ್ದೊಡಿಲ್ಲ ಮಟ (ಅಬ್ಧಿಮ. ೬-೧೨). [?]

**ಬಾಯ್ಸನ್ನೆ** (ನಾ). ಬಾಯಿಯ ಸಂಜ್ಞೆ ; ಮುಖದ ಇಂಗಿತ : ಕೈಸನ್ನೆ ಯಿಇದ ಕಾತರದಿಂದ ಪೊಯ್ಸನು ಬಾಯ್ಸನ್ನೆಯಿಂದಾನು ಬೈವೆ ಮೈಸನ್ನೆ ಯಿಂದ ಚಿತ್ರದೊಳೊಡಗೂಡುವೆನ್ಯೆಸರಲನ ಸಮರೂಪ (ಕುಮಾರಾ. ೨೬-೧೧೦). [ಬಾಯ್ + ಸನ್ನೆ]

**ಬಾಯ್ಸವಿ, ಬಾಯಿಸವಿ** (ನಾ). ೧. ಬಾಯಿಗೆ ಸಿಹಿಯಾದುದು,— ಮಧುರವಾದುದು : ಚಾರ ಚೋರ ವೀರರ ಕಥೆಯ ಬಾಯ್ಸವಿಯ ಮಾತುಗಳಂ ಬಟಿಕೆಯ್ವ ಚರ್ಚೆಯಲ್ಲ (ಅಪಂತ. ೦-೩೬). ಬಾಯ್ಸವಿಗೆ ಮೆಯ್ಸವಿ ಕಣ್ಸವಿಯಪ್ಪ ರೂಪು (ಕಮರು. ೬೮ ಪ್ರಕ್ಷಿ). ೨. ಬಾಯಿಗೆ ರುಚಿಯೆನಿಸುವ ಪದಾರ್ಥ; ಪ್ರಿಯಂವಾದ ಖಾದ್ಯವಸ್ತು : ಕಲ್ಲ ಗವಿಯೊಳಗೊಕ್ಕ ಬಾಯ್ಸವಿಯ ನಾಲಗೆಯಿಂದೊಕ್ಕನೆ ಸವಟುತ ಮುಂಗಾರ ವನಿಯೊಳು ವಿಕ್ಕಿರ್ದವಾ ಪುಲಿವಿಂಡು (ಅಪಂತ. ೦೨-೯೦); ಹಸಿವಿಗೆ ಬಾಯ್ಸವಿ ಬೇಡ, ನಿದ್ದೆಗೆ ಹಾಸಿಗೆ ಬೇಡ (ಗಾದೆ). **ಬಾಯಿಸವಿ** : ೨. ಬಾಯಿಸವಿಗೆ ತಿಂದು ನಾಯಿಸಾವು ಸತ್ತ (ಗಾದೆ). [ಬಾಯ್+ಸವಿ₂]

**ಬಾಯ್ಸೋವು** (ನಾ). ಬಾಯಿಗೆ ಸಿಕ್ಕ ಬೇಟೆ,—ಬಲಿ : ಕೋಟಿಕೋಟಿ ಜನ, ವರ್ಷದ ಪೂವು, ತುರುಗಿತು ಜವರಾಯನ ಬಾಯ್‌ಸೋವು! (ಪಾಕಿಸಿ. ೩೩-೧೦೦). [ಬಾಯ್+ಸೋವು₂ (<ಸೋಪು₁)]

**ಬಾರ್₁** (ಕ್ರಿ). ೧. (ಚರ್ಮವನ್ನು) ಸುಲಿ ; ಕೀಳು : ಕಡಿಯಲ್ಗಳೊಗ್ಗಂ ಕರ್ಕಿ ವಂದೊವಲಂ ಬಾರ್ದುಂ ಸಾರ್ದುಂ ನಲಿವ ಕಾಗೆ ಗೂಗೆಗಳುಂ. . . ನರಿ ನಾಯ್ಗಳ್ ಪಗಲುಮಿರುಳುಂ ಕಾವಲಿರ್ದುವು (ರಾಮಾಶ್ವ. ೯೬-೦೬). ೨. ಚರ್ಮವನ್ನು ಸುಲಿದು ತೆಳುವಾದ ಉದ್ದನೆಯ ಪಟ್ಟಿಗಳನ್ನು ತಯಾರಿಸು : "ಬಾರ್—ಚರ್ಮವಲ್ಲೀಕರಣೇ (ಚರ್ಮವನ್ನು ಪಟ್ಟಿಯಾಗಿ ಮಾಡು) ದ್ರುವದ್ರುವ್ಯನಿರ್ಮುಕ್ತೌ (ಸುರಿ)" (ಕವಿಜಿಹ್ವಾ); ಸೇರ್ದಂ, ಬಾರ್ದಂ, ಗೋರ್ದಂ, ನೋರ್ದಂ ತಾನೆಂದೊಡಂ ಗುರೂಪಧೆಯಿನಿತುಂ (ಶಮಂ. ೪೦). ೩. (ಮಣ್ಣನ್ನು) ಅಗೆದು ತೆಗೆ,—ಬಾಚು : ದಂಗೊಂಡೀಡಿಟು ದಾಡಾಚುತುಂ ಕೊಣಕುತುಂ ಬಾರುತ್ತುಮೊಲ್ಗಿಡೋಳಾದರದಿಂ ಮೇದಿಳ ವೊಲ್ಗಳಂ ತೊರೆದು ಪಾಲ್ಗಳ್ ಕೆಚ್ಚಲಿಂದೆಚ್ಚು ಪಾಯ್ವರೆ ಪಟ್ಟಿರ್ದುವು. . . ಕಾಡ್ಮೆರ್ಗಗಳ್ (ಜಗು. ೯-೨೩). ೪. (ನೀರು ಮೊದಲಾದ) ದ್ರವ ವಸ್ತುವನ್ನು ಬಸಿ,— ಸುರಿ : "ಬಾರ್—ಚರ್ಮವಲ್ಲೀಕರಣೇ (ಚರ್ಮ ವನ್ನು ಪಟ್ಟಿಯಾಗಿ ಮಾಡು) ದ್ರುವದ್ರುವ್ಯನಿರ್ಮುಕ್ತೌ (ಸುರಿ)" (ಕವಿಜಿಹ್ವಾ). ೫. ತಲೆಗೂದಲನ್ನು ಹಣಿಗೆಯಿಂದ ಹಿಕ್ಕು,— ಬಾಚು : 'ಬಾರ್ಚು' ಪರಾ.

[ದೇ.॥ ತಮಿ. ವಾರ್, ವಾರು; ಮಲ. ತೆಲು. ವಾರು; ತುಳು. ಬಾರು]

**ಬಾರ್₂**, ಬಾರ್₃, ಬಾರು₁ (ನಾ). ೧. ತೊಗಲು ; ಚರ್ಮ : ಪೀರೊಳ್ ನೀರಿಟುವನಲ್ಲ ಪಂದಿಯ ಬಾರಂ ಕೊಚ್ಚಿದದಟ ನೆತ್ತರೊಳ್ ನೀರಿಜಿ‌ಪಂ (ಸೂಕ್ತಿಸು. ೩-೨೨೬). ೨. ಚರ್ಮದ ಪಟ್ಟಿ : ಸೊಗಯಿ ಪ್ಪೆಳ್ದೊಡೆ ನೋಯೆ ಸೂತ್ರದೆಟಿಪೋಲ್ ನೀಳ್ದಿರ್ದ ಬಾರಂತೆ ತೋರ್ಪು ಗಿಯುಂ ಪುಣ್ಣಿಯಮಾಗಿ ಮಾಡಿ ಬಿದಿ ಮುಂ ಜಂಘಾಪ್ರಮಾಣಕ್ಕೆ ಸೂಳ್ದಿಗೆ ದಂತಿರ್ಪ ಸುಪುವ್ರಣಾವಳಿಗಳಂ ನಲ್ಲಂಗೆ ಕಣ್ಗೆತ್ತುತ್ತುಂ ನಗುತುಂ ಸಾರ್ದು ಸವಂಗವುಂ ಕಳೆಯಿಸುತ್ತಿರ್ಪಾಕೆ ಕಣ್ಗೊಪ್ಪಿದರ್ (ಕಾವ್ಯಾ.ವ. ೬೦೦); ಗೀರ್ವಾಣಮುನಿ ಪೊಜಮುತುತ್ತುಂ ಸಾಣೆಯ ಬಾರಂತೆ ಪೋದ ಕೆಯ್ಯೊಳೆ ಮುಗುಟ್ದಂ (ಅಪಂತ. ೧೩-೨೩). ೩. ಚರ್ಮದ ತೆಳುವಾದ ಪಟ್ಟಿ ಯಿಂದ ಮಾಡಿದ ಬಾಯಿಹಗ್ಗ ; ಲಗಾಮು : ನಕುಳನುಮಂಕವಣೆ ಯುಂ ಬಾಳುಂ ಬಾರುಂ ಚವ್ಮಟಿಗೆಯುಮನೊರ್ವ ಕೀಲಾಳಂ ಪಿಡಿಯಿಸಿ ಕೊಂಡು ಬಂದು ವಿರಾಟನಂ ಕಂಡು (ಪಂಪಭಾ. ೬-೫೯ ವ). **ಬಾರ್₃** : ೪. ಚರ್ಮದ ಹಗ್ಗ,— ವಿಳಿ : ಸುತ್ತಿದ ಮುಪ್ಪುರಿಯ ಬಾರಿ ಕಡ್ಡಣಿಗೆಯ . . . ಕಲಿವೀರ ಬಾಹುಕ ಬರುತ್ತಂ (ಹರಿಶ. ೧೦-೦೬); ನೂಲ ಹರಿಗೆಯ ಹೆಗಲ ಬಾರಿಯ . . . ಛಲದಂಕರಾವುತರೊತ್ತಿ ನೂಕಿದರು (ಕುಮಾರಾ. ೧೬ ೪-೩೬). **ಬಾರು₁** : ೧. ತಳವಾಜನುಟ್ಟ ಸೀರೆಯ ಸುಲಿದ ನಾಜಿ ಹೋದರೆ ಮನೆಯ ಗಂಡ ಬೆನ್ನ ಬಾರನೆತ್ತಿದ (ಬಸವ. ೦೦೦) ; ಬಾಲಬ್ರಹ್ಮಚಾರಿಯ ಬಾರನೆತ್ತಿತ್ತ ಕಂಡೆ (ಅಪಶಂ. ೬೫-೪೨೬) ; ಕರ್ಣನೆ ಕೊರಳ ಬಾರಲಿ ನಿಲುಕಿಸುವೆನೀ ಶರಸಲಾಕೆಗಳ (ಕುಮಾರಾ. ೨೪-೨೬). ೨. ಮಾಸಾಳ್ಗಳ ಬಾರ ಸಂಕಲೆಯ ತೊಡರ ತೋಟಿಯ ಕಠಾರಾಯಿತರ . . . ವೊತ್ತರೊತ್ತರದ ತಿಂಥಿಣಿಯನೊತ್ತರಿಸಿ ಇಟ್ಟಣಿಸಿದ ಕಟ್ಟಣಕ ದಾಸ್ಥಾನದೊಳು (ಏಕಳ. ೬-೨೨) ; ಬಾರ ಸಂಕಲೆ . . . ಕೈಹಾರೆ ಕೊರಂಕುಶದ ಬಿರುದರು ಹೊದ್ದಿದರು ಗಜವ (ಕುಮಾರಾ. ೯-೬೦). ೩. ಉಗ್ರಾಣಗಳಲ್ಲಿ ನೂಲೇಣಿ, ಹೊರಜಿ, ವಿಣಿ, ಬಾರು . . . ಬತ್ತಳಿಕೆ ಗಳ ಎಲ್ಲ ವಿಚಾರವನ್ನು ಬಿಡಿಬಿಡಿಯಾಗಿ ನೋಡುವನು (ಶಪ. ೪೪) ; ಕಡಿವಾಳಕ್ಕೆ ಬಾರಿಲ್ಲದೆ ಇದ್ದುದರಿಂದ . . . ಹುಲ್ಲುಸರವಿಯನ್ನು ಗಂಟು ಹಾಕಿ ಕಟ್ಟಿದರು (ಕಗ. ೯೪). ೫. ಉದ್ದ ; ನೀಳ : (೬). ೬. ಸಾಲು; ಪಂಕ್ತಿ : (೬). ೭. ಚರ್ಮದ ಮೇಲೆ ಪೆಟ್ಟಿನಿಂದಾಗುವ ಪಟ್ಟಿಯಾಕಾರದ ಗುರುತು ; ಬಾಸುಂಡೆ : ಸೊಸೆಯ ಮೈ ಮೇಲಿನ ಬಾರುಗಳನ್ನು ನೋಡಿ ಮಗನನ್ನು ಕರೆದು : "ಕಡಬಿನಂತ ಬಾರು ಏಳುವ ವರೆಗೆ ಬಡಿಯಬೇಕೆ ?" ಎಂದು ಸಿಟ್ಟು ಮಾಡಿದಳು (ಕನ್ನಡಾ. ೬೩).

**ಬಾರಗುಣಿ** = ಬಾರುಕೋಲು : ಬಾರಗುಣಿಯಿಂದ ಅವನ ಬೆನ್ನಿಗೆ ಬಲವಾಗಿ ಏಟುಗಳನ್ನು ಕೊಟ್ಟು ಚಕ್ಕಡಿಯನ್ನು ಹೊಡೆದುಕೊಂಡು ನಡೆದನು (ಕುಲ್ಕರ್ಣಾ. ೯೦). **ಬಾರುಕಾಲವನು** = ಉದ್ದವಾದ ಕಾಲು ಗಳಿರುವವನು ; ದಾಪುಗಾಲು ಇಡುವವನು : "ಊರ್ಧ್ವಜ್ಞುಃ, ಊರ್ಧ್ವಜಾನುಃ—೨ ಉದ್ದವಾದ ಮೊಳಕಾಲುಳ್ಳವನು, ಬಾರುಕಾಲ ವನು" (ಸಿದ್ಧಾಂತಿ. ೦೯೦).

[<ಬಾರ್₁./ತಮಿ. ಮಲ. ವಾರ್; ತುಳು. ಬಾರ; ತೆಲು. ವಾರು]

**ಬಾರ್₃**, ಬಾರು₂ (ನಾ). ೧. ಬಂದೂಕು, ತೋಪು ಮೊದಲಾದುವು ಗಳಿಗೆ ತುಂಬುವ ಸಿಡಿಮದ್ದು : (೬). ೨. ಬಂದೂಕು, ತುಪಾಕಿ ಮೊದಲಾದುವುಗಳನ್ನು ಮದ್ದು ಗುಂಡು ತುಂಬಿಸಿ ಉಡಾಯಿಸಲು ಅಣಿಗೊಳಿಸಿರುವಿಕೆ : ಬಂದೂಕು ಬಾರಾದವು (ಸಳಕ. ೯೦). ೩. ತುಪಾಕಿ ದಳ; ಬಂದೂಕುಸಿಪಾಯಿಗಳ ಪಡೆ : (ಕೃಸಗ. II. ೩೯೩). 'ಬಾರ್ಸಿ ಪಾಯಿ' ಪರಾ. **ಬಾರು₂** : ೧. "ಯಾವುದಾದರೂ ಒಂದಕ್ಕೆ ತುಂಬ ಬೇಕಾದ ಪದಾರ್ಥದ ನಿಯತವಾದ ಮೊತ್ತ (ಮಾ. ಬಂದೂಕಿಗೆ ತುಂಬುವ ಸಿಡಿಮದ್ದು; ಬಂದೂಕಿನ ಬಾರು)" (charge. ೩೯೪೨). ೩. ಬಾರು :- ಬಾರಿನವರ ಸಂಖ್ಯೆಯು . . . ಹೆಚ್ಚಿ ಇಂಗ್ಲೀಷ್‌ಪದ್ಧತಿಯಂತೆ ಕವಾ ಯಿತು ಕ್ರಮದಲ್ಲಿ ಸುಶಿಕ್ಷಿತವಾಗಿತ್ತು (ಮುಹಾಮಂ. II. ೫೦). ೪. ತುಪಾಕಿ

ಮೊದಲಾದುವುಗಳ ಸ್ಫೋಟ : (೩). ೫. ಹೊಗೆಸೊಪ್ಪು 'ತಿನ್ನುವ' ದಕ್ಕೆ ಪೂರ್ವಸಿದ್ಧತೆಯಾಗಿ ಬಾಯಿಗಿಟ್ಟುಕೊಳ್ಳುವ ವೀಳ್ಯದ ಕವಳ: ಚಹಾ–ತಂಬಾಕದ ಬಾರು ಇಲ್ಲದೆ ಅವರಿಗೆ ನಡೆಯುತ್ತಿರಲಿಲ್ಲ (ಬೀಶಹ. II. ೯೦). ೬. ನೋಂದಣಿ ; ದಾಖಲೆ : ' ಬಾರನಿಸಿ ' ಪರಾ.

ಬಾರಕೋತು = ಕಾಲುದಳದ ಯೋಧರ ವಾಸಸ್ಥಾನ,–ಪಾಳೆಯ : (೩). ಬಾರು ಮಾಡು = ೧. ಸಿಡಿಮದ್ದನ್ನು ಬಂದೂಕಿಗೆ ತುಂಬಿ ಉಡಾಯಿಸಲು ಅಣಿಮಾಡು : ತನ್ನ ಬಾರು ಮಾಡಿದ ಬಂದೂಕನ್ನೆತ್ತಿ ಅದರ ಹಣೆಗೆ ಗುರಿ ಇಕ್ಕಿದನು (ಜೀಗಾಹ. ೩). ೨. ವೀಳ್ಯವನ್ನು ಸಿದ್ಧ ಪಡಿಸು,—ಅಣಿ ಮಾಡು : ರಾವಜೀಕಾಕಾ . . . ತಂಬಾಕದ ಬಾರು ಮಾಡುತ್ತ ನಿರ್ಣಾಯಕ ಅಭಿಪ್ರಾಯ ಕೊಟ್ಟರು (ಬೀಶಹ. I. ೬). ೩. (ದಾಖಲೆ) ಪುಸ್ತಕದಲ್ಲಿ ಬರೆದು ಸೇರಿಸು; ನೋಂದುಮಾಡು : (೩). [← ಮರಾ. ಬಾರ್]

ಬಾರ್₄, ಬಾರು₃ (ನಾ). ೧. ಗಟ್ಟಿಯಾಗಿಯೂ ಉದ್ದವಾಗಿಯೂ ಇರುವ ಲೋಹ, ಮರ, ಸಾಬೂನು ಮೊದಲಾದುವುಗಳ ತುಂಡು : ಒಂದು ಬಾರ್ ಸಾಬೂನು ತಂದು ಈ ಬಟ್ಟೆಗಳನ್ನೆಲ್ಲ ಒಗೆಯಬೇಕು (ಕೊಶ). ೨. ಮಾದಕಪಾನೀಯಗಳನ್ನು ಅಥವಾ ಖಾದ್ಯ ವಸ್ತುಗಳನ್ನು ಒದಗಿಸುವ ಸ್ಥಳ; ಪಾನಶಾಲೆ : ಮಧುಪಾನದ ಸಲಕರಣೆಗಳನ್ನಿಡುವು ದಕ್ಕೂ ನಾಲ್ಕು ಜನ ಸ್ನೇಹಿತರು ಸೇರುವುದಕ್ಕೂ ಅನುಕೂಲಿಸುವಂತೆ ಒಂದು ಸಣ್ಣ 'ಬಾರ್' ಏಕೆ ಕಟ್ಟಬಾರದು ? (ಯೋಛಕ್ಕೆ. ೨೯) ; ಒಂದೆರಡು ದಿನದೊಳಗಾಗಿ . . . ಹಡಗಿನ "ಬಾರ್" ನಲ್ಲಿ ಕುಳಿತುಕೊಳ್ಳುವ ಚಟ ಬರುತ್ತದೆ (ಅಪೂಶ. ೦೦). ಬಾರು₃ : ೧. ನನಗೆ ಎರಡು ಬಾರು ಸಾಬೂನು ಬೇಕು (ಕೊಶ). ೩. (ಕಿಟಕಿ, ಬಾಗಿಲು ಮೊದಲಾದುವು ಗಳಲ್ಲಿ ತಡೆಗಾಗಿ ಉಪಯೋಗಿಸುವ) ಕಂಬಿ ; ಸರಳು : ಕಿಟಕಿಗಳಿಗೆ ಉದ್ದುದ್ದವಾಗಿ ಬಾರುಗಳನ್ನು ಅಳವಡಿಸುವುದುಂಟು (ಕೊಶ). [← ಇಂ. Bar]

ಬಾರ್‌ಕಛೇರಿ, ಬಾರಕಚೇರಿ (ನಾ). ಹಿಂದೆ ಮೈಸೂರು ಅರಸರ ಆಡಳಿತಕಾಲದಲ್ಲಿದ್ದ ಹದಿನೆಂಟು ಕಚೇರಿಗಳಲ್ಲಿ ಒಂದು ; ಕಾಲ್ದಳದ ವಿಷಯವನ್ನು ನೋಡಿಕೊಳ್ಳುವ ಕಚೇರಿ : ೧. ದಿವಾನ್‌ಕಛೇರಿ . . . ೧೨. ಬಾರ್‌ಕಛೇರಿ (ಕುಚಾಪಂ. II, ೩೯). ಬಾರಕಚೇರಿ : ಶ್ರೀಮದ್ರಾಜಾಧಿರಾಜ ಕೃಷ್ಣರಾಜಒಡೆಯರವರು ಅವರ ಬಾರಕಚೇರಿ ಬಕ್ಷಿ ಗುಲಾಮ ಮಹಮ್ಮದಖಾನ್ರಿಗೆ ಪುತ್ರ ಪವುತ್ರಪಾರಂಪರ್ಯವಾಗಿ ನಡಿಯುವ ಮ್ಯರಿಗೆ ಕೊಟ ಸರ್ವಮಾನ್ಯವಾದ ನಾಚನಹಳ್ಳಿ ಗ್ರಾಮದ ಯಲ್ಲಿಕಲ್ಲು (ಎಕ. III, ಮೈಸೂರು. ೩೬–೬ ; ಸು. 1828 ?). 'ಅಠಾರಾ ಕಚೇರಿ' ಪರಾ. [ ಬಾರ್₃ + ಕಛೇರಿ (<ಕಚೇರಿ) ]

ಬಾರ₁ (ನಾ). ಬಾಗಿಲು ; ದ್ವಾರ : ದರ ದಾರ ಬಾರಮುಕ್ಕುಂ ಮರದಾ ದ್ವಾರಕ್ಕೆ ಪೂರ್ವದೊಳ್ ತದ್ಭವವಾಗಿರೆ ಸಿರಿಯು ವಂಕ ವಾಣಿಯುಮಿರೆ ಕಂಟಿಯುಮುಚಿತವಿಧಿ ವಿಕಲ್ಪವಿಧಾನಂ (ಕವಿಶ. ೨೯೬) ; ಶ್ರೀದ್ವಾರ__ಸಿರಿಯದರ, ಸಿರಿಯದಾರ, ಸಿರಿಯಬಾರ. ವಕ್ರದ್ವಾರ__ವಂಕದರ, ವಂಕದಾರ, ವಂಕಬಾರ (ಶಮವ. ೨೯೬ ವ್ಯತ್ಯೋ.). 'ದಾರ₂' ಪರಾ. [ < ಪ್ರಾ. ಬಾರ, ವಾರ ; ಹಿಂ. ಬಾರ /ಸಂ. ದ್ವಾರ ]

ಬಾರ₂ (ನಾ). ತೂಕ ; ಭಾರ : "ಬಾರ (ರು)_ಭಾರ" (ಶಬ್ದಕೋ. ೩೦). [ < ಸಂ. ಭಾರ ]

ಬಾರ₃, ಬಾರಹ, ಬಾರಾ (ನಾ). ೧. ಒಂದು ಸಂಖ್ಯೆ ; ಹನ್ನೆರಡು : ಬಾರಹವೆಂಬುದು ದ್ವಾದಶದ ಪ್ರಾಕೃತರೂಪ ; ಬಾರ ಎಂದರೆ ಹದಿನೆರಡು (ಕಳುಪಾ. ೨೬೪). ' ಬಾರಮಾಹೆ ' ಪರಾ. ೨. ಲೆತ್ತದಾಟದಲ್ಲಿ ಬೀಳುವ ಹನ್ನೆರಡರ ಗರ : ದುಗನು ಪಂಚಕ ಬಾರವೆರಡತ್ತಿಗೆಯು ಬೇಡಿ ದಡದಲ್ಲಿ ಬೀಳ್ವುದು ವಿಗಡ ಪುಷ್ಕರ ನೃಪನ ಗೆಲಿದನು ಹಲಗೆಯೊಂದಜಲಿ (ನಳಚ. ೬–೨೯). ಬಾರಹ : ೧. ನಾರಿ ಸಹಿತಾ ಪತಿ ಚರಿಸುವುದು ಬಾರಹ ದ್ವಿಜರಿಂಗೆ ಭೋಜನ ಭೂರಿಭೂಷಣ ವಸನ ತಿಲದ್ರಾನಾದಿ ಸತ್ಕೃತಿಯಾ (ಸಿಶಾಗ. ೬–೦೭–೦೬). ಬಾರಾ : ೧. ನಿನ್ನಂಥ ಬಾರಾ ಹಜಾರ ಮಂದಿನ್ನ ಬಗಲಾಗ ಹಾಕೀನ್ನಾನು (ಶಾಂಜಾಹು. ೬೯). ೩. ಹನ್ನೆರಡು ಘಂಟೆ: ಇದೆಲ್ಲಾ ಉದ್ಯೋಗ ನಡಿಯೋದು ರಾತ್ರಿ ಬಾರಾದಿಂದ ನಸುಕು ಹರಿಯೋ ತನಕ (ಅಶ್ವ. ೨೩೩).

ಬಾರಖೂನ್ ಮಾಫ್, ಬಾರಾಖೂನಿ ಮಾಫ್ = ಎಷ್ಟು ತಪ್ಪು ಮಾಡಿದರೂ ಕ್ಷಮಿಸುವುದು : ತಮ್ಮ ಅನುಗ್ರಹಕ್ಕೆ ಪಾತ್ರರಾದ ವರಿಗೆ 'ಬಾರಖೂನ್ ಮಾಫ್, ಏನು ಉಪಕಾರವನ್ನಾದರೂ ಮಾಡಿ ಕೊಟ್ಟುಬಿಡುವರು (ಕಂಶಿ. ೯೦) ; ಒಮ್ಮೊಮ್ಮೆ ಬಾರಾಖೂನಿ ಮಾಫ್ ಅಂತೂ ಅನಬೇಕಾಗತದ (ಕಶಂಶ. ೩೨). [← ಹಿಂ. ಬಾರಹ್, ಬಾರಾ ; ಮರಾ. ಬಾರಾ]

ಬಾರಂಗಧ್ವಜ (ನಾ). (?) : ಮದನಕೈಯಿದರ ಬೊದಿಗೆಯು ಬಾರಂಗ ಧ್ವಜ ಕದಳಿಗೊನೆ ಕಬರಿದ ಸುಲೋವೆ ಚಿತ್ರದ ಭಿತ್ತಿ ಪುದಿದ ನವರತ್ನಗಳ ದೀಪ್ತಿ (ನಳಚೋ. ೨–೩೦). [ ? + ಧ್ವಜ ]

ಬಾರಂಗಿ (ನಾ). ಒಂದು ಬಗೆಯ ಔಷಧೀಸಸ್ಯ ; ಅಂಗಾರವಲ್ಲಿ ; ಬ್ರಾಹ್ಮಿ : ಬಾದಣಿಸಿದೆಲುಗಳ ಬಾಯೊಳು ಕಾದ ಬಾರಂಗಿಗಳನಳತಿಗೆ ಕೋದು ಪಾಮದೊಳೆಯ್ದೆ ಹಿಡಿದರು ತೈಲಧಾರೆಗಳ (ಕುವ್ಯಾಭೀ. ೩–೪೦) ; ತಡಸಿ ಸುವರ್ಣ ಬಳಿಯು ಬಾರಂಗಿ ಗಿಡವು ಕಗ್ಗಲೆ ಕಂಪು ಪರಿಮಳಯಡು ಗಡಿಗೆ ರಸದಾ ಮಡಗಳು (ಪಂಚಿಂಧಿ. ೬–೦೯). [ < ಸಂ. ಭಾರಂಗೀ ]

ಬಾರಕಚೇರಿ 'ಬಾರ್‌ಕಛೇರಿ' ನೋ.

ಬಾರಗಿರಿ 'ಬಾರ್ಗೀರಿ' ನೋ.

ಬಾರಗೀರ 'ಬಾರ್ಗೀರ್' ನೋ.

ಬಾರಗೀರು 'ಬಾರ್ಗೀರ್' ನೋ.

ಬಾರಗುತ್ತು 'ಬಾರ್ಗುತ್ತ' ನೋ.

ಬಾರಗೆಯ್ (ಕ್ರಿ). (?) : ಕ್ಷೀರ ದಧಿ ಮಧು ಘೃತಂ ಸಿತ ನಾಗರಂ ಮರಿಚ ಜೀರಕಂ ಲವಣವೆ [ ಮ್ಬ ] ಲ್ಲಾ ದಶಾಮೃತಸಾರಪೂರಕಳಸಂ ನಾಲ್ಕು ಕನಕ ಪುಷ್ಪಾನ್ವಿತ ತಮಂಧಕಳಸಂ ಪೀಲಿಯಿಂ ಬಾರಗೆಯ್ವೊಂದಗ್ರಜಲಭರಿತ ಮಾಗೆ ಮಂದಾರಮಂಜರಿವಿಡಿದ ಹದಿಮೂಱು ಕಳಸವಿಂತೀರೊಂಭತಿನ್ನುಳಿದ ವಿಭವವೀ ಪರಿಯಾದ ನೇಮದಿಂ ನಡಸೆಂದಳು (ಸಿಶ್ವಶಾ. ೩–೬). "ಅಂದ ವಾಗಿಸು (?) " (ಸಿಶ್ವಶಾ. ಕೋಶ). [ ? ]

ಬಾರಡ (ನಾ). ಚರ್ಮದ ಪಟ್ಟಿ : "ಕಟ್ಟಿಗೋಲ್ ಬಾರಡಮದಕ್ಕು" (ಶುಂಗಶಾ. ೦೦೨–೩). [ ದೇ. ೩ ತಮಿ. ವಾರಾಟ್ಟೆ ]

ಬಾರಣ (ನಾ). ಆನೆ: ದಾರುದಾರುಣನು ದಾನವಾರಿವಾರಿತಲೋಕನು ಬಾರ ಬಾರಣಮುಂ ನೋಡಾ ಸಾರಸಾರಾಂಬುದಾಭಮಂ (ಕಾಶಾ. ೨–೦೩೨). [ < ಸಂ. ವಾರಣ ]

ಬಾರಣಾಸಿ 'ಬಾರಣಾಸಿ' ನೋ.

ಬಾರಣಾಸಿ, ಬಾಣರಾಸಿ, ಬಾಣಾರಸಿ, ಬಾರಣಸಿ, ಬಾರ್ಣಾಸಿ, ವಾಣರಾಸಿ, ವಾರಣಶಿ, ವಾರಣಾಸಿ (ನಾ). ಗಂಗಾನದೀತೀರದಲ್ಲಿ ರುವ ಪ್ರಸಿದ್ಧವಾದ ಯಾತ್ರಾಸ್ಥಳ; ಕಾಶಿ ಕ್ಷೇತ್ರ; ಇದು ವರುಣಾ ಮತ್ತು ಅಸಿ(ಅಥವಾ ಅಸೀ)ಯೆಂಬ ಎರಡು ನದಿಗಳನ್ನು ಒಳ ಗೊಂಡಿದೆಯೆಂದು ಪ್ರತೀತಿಯಿದೆ : ಇ ದರ್ಮ್ಮಕ್ಕೆ ಬಕ್ರ ಬಪ್ಪೊಂ ಬಾರಣಾಸಿಯುಳ್ ಸಾಸಿರ್ವ್ವರ್ ಪಾರ್ವ್ವರುಂ ಸಾಸಿರಂ ಕವಿಲೆಯಂ ಕೊಂದ ಪಾತಕನಕ್ಕೆ (ಮೈಲಿಂ. ೬೪೭೬, ೩೬–೩೭ ; ಸು. 550) ; ಇದನಟ್ ದುಣ್ಗೋನುಂ ಕೊಣ್ಗೋನುಂ ಪಸುವುಂ ಪಾರ್ವ್ವರುಂ ಕೆಱೆಯುಂ

ಅರವೇಯುಂ ಬಾರಣಾಸಿಯುಮುಮನಟಿದೊಂ (ಎಕ. III, ಶ್ರೀರಂಗ. ೦೯೭-೦೭; ಸು. ೯೦೦ ?). **ಬಾಣರಾಸಿ** : ದುದ್ಧರಸಂ ಮಾಡಿಸಿದ ತೋಟ[3] ಗಟ್ಟಿಯುಂ ಮಾಡಿಕೊಣ್ಡವಂ ಬಾಣರಾಸಿಯಲು ಹಸುವುಂ ಹಾರುವನಂ ಕೊಂದ (ಎಕ. I (R), ೬೨-೩೩; 1096); ಇದನಳಿದಂ ಬಾಣರಾಸಿಯುಮುಮಂ ಕವಿಲೆಯುಮುಮಂ ಲಿಂಗಮಂ ಕಿತ್ತು ಬ್ರಹ್ಮತಿಗೆ ಸನ್ದಂ (ಎಕ. III, ನಂಜನ. ೯೯-೦೦; 1113); ಇದಂ ಕಾಯದೆ ಕಾಯ್ದ ಪಾಪಿಗೆ ಕುರುಕ್ಷೇತ್ರೊಳ್ವಿರ್ಯೆಯೊಳ್ ವಾಣರಾಸಿಯೊಳೇಳ್ಕೋಟಿಮುನೀಂದ್ರರಂ ಕವಿಲೆಯಂ ವೇದಾಢ್ಯರಂ ಕೊನ್ದುದೊನ್ದಯಸಂ ಸಾಗ್ಗುಂ (ಎಕ. II, ೬೩-೯೯; 1118). **ಬಾಣಾರಸಿ**: ಇದನಟಿವಂಗೆ ಕವಿಲೆಯುಂ ಬಾಣಾರಸಿಯುಂ ಅಟಿದ ಪಾತಕಂ (ಎಕ. I (R), ೬೯-೦೦; 10೩೩ಹು ಶಕ). **ಬಾರಣಸಿ**: ಇದನಟಿವೊ ಬಾರಣಸಿಯನಟಿದೊ ಪಾತಕಂ (ಕ೭. II, ೩-೦೯; 859). **ಬಾರ್ಣಾಸಿ** : ಇದನಟಿದೋಂ ಬಾ[ರ್ಣಾ]ಸಿಯುಂ ಕವಿಲೆಯುಮುಮನಟಿದೋಂ (ಎಕ. IV (R), ಕಾಮರಾ. ೬೦-೦೦; ೧೫ನು ಶಕ). **ವಾಣಾರಾಸಿ** : ಈ ಧರ್ಮ್ಮಮನಳಿದಂ ವಾಣಾರಾಸಿ ಕುರುಕ್ಷೇತ್ರದೊಳ್ ಸಾಸಿರಕವಿಲೆಯುಂ ಸಾಸಿರಬ್ರಾಹ್ಮಣರನಳಿದ ಪಂಚ ಮಹಾಪಾತಕನಕ್ಕು (ಎಕ. XIX, ೦೯೬-೨೯; 1079). **ವಾರಣಶಿ** : ಇದಕ್ಕ್ಯಾರಾನುಂ ಪ್ರತಿಬಂಧಕರಾಗಿ ಕಿಡಿಸಿದರಪ್ಪಡೆ ವಾರಣಶಿಯಲು ಕವಿಲೆಯಂ ವಧಿಯಿಸಿದ ದೋಷವುಮನೆಯ್ದುವರು (ಕ೭ಶ. ೩೬-೯೯-೨೦; 1134). **ವಾರಣಾಸಿ** : ಅಟಿದೊನ್ವಾರಣಾಸಿಯೊ ಸಾಸಿರ್ವ್ವಪಾರ್ವ್ವರುಂ ಸಾಸಿರ ಕವಿಲೆಯುಮನ್ಕೊನ್ದ ಪಣ್ಚಮಹಾಪಾತಕನಕ್ಕು (ಎಕ. V (R), ಅರುಮ. ೯೬-೬; ೩೫ಹು ಶಕ); ಗಂಗೆಯೊಳು ಮಿಂದು ಭಾಸುರವಾರಣಾಸಿಯಂ ಹೊಕ್ಕು (ಪಕ್ಷಿಕಾ. ೦೦-೩೩).

[< ಸಂ. ವಾರಣಸೀ, ವಾರಾಣಸೀ, ವಾಣಾರಸೀ, ವರಾಣಸೀ]

**ಬಾರಣೆ** (ನಾ). ಊಟ; ಪಾರಣೆ: ಬಾಯೊಳ್ಳಿಗೆದ ಹಲ್ಲ ನೋಳ್ಪುದೊಂದ ಕ್ಷಣದಿ ನುಂಗಿ ಬಾರಣೆಯ ಸವನಿಸುವೆನು (ಪಾಕಿಗು. ೬೬); ಹುಲಿರಾಯನು ಓಲಸರಿಯ ಬಾರಣೆಗಾಗಿ ಹೊರಟನೆಂಬುದು ಅವರಿಗೆ ಗೊತ್ತಾಯಿತು (ಅರಂ೦. ೨೫); ಪಶುಪಕ್ಷ್ಯಾದಿಗಳನ್ನೂ ನೀವು ಮನುಷ್ಯರು ಶಕ್ತಿಯುಕ್ತಿಗಳಿಂದ ಬಡಿದು ಬಾರಣೆ ಮಾಡುತ್ತೀರಂತೆ (ಹಗಂ. ೯೦). 'ಪಾರಣ್ಣೆ' ನೋ. [← ತುಳು. ಬಾರ್ಣೆ. / ಸಂ. ಪಾರಣಾ]

**ಬಾರದ** (ನಾ). ಒಂದು ಮನೆತನದ ಹೆಸರು: ಇದಕ್ಕೆ ಸಕ್ಕಿ ಮುದಿರ ಬೂವಯ್ಯ ಬೆಳ್ನನ ಕರುಕುಡಿ ಬಾರದರೆಟಿಯುಮ್ಮ ಕೆದಟಿಯುರಯ್ಯಪ (ಎಕ. IV, ಹುಣಸೂ. ೯೨-೦೨; ಸು. 920). [?]

**ಬಾರದಾನ, ಬಾರದಾನು** (ನಾ). ೧. ವ್ಯಾಪಾರದ ಸರಕುಗಳನ್ನು ತುಂಬಲು ಬಳಸುವ ಚೀಲ, ಡಬ್ಬಿ, ಪೀಪಾಯಿ ಮೊದಲಾದುವು: ಬಾರದಾನಗಳನ್ನು ತಿರುಗಿ ಕಳುಹಿಸುವುದಕ್ಕೆ ಬಹಳ ಸಾರಿ ಪತ್ರ ಬರದಿದ್ದು ಇನ್ನೂ ಯಾಕೆ ರವಾನೆ ಮಾಡಲಿಲ್ಲ? (ಮುಂಬಾ. ೭ ಕೃಷ್ಣಾ ಶಕ). ೨. ಗೋಣಿತಟ್ಟು; ಗೋಣಿಚೀಲ: ಹೆಗಲಿಗೊಂದು ಬಾರದಾನ ಒಗೆದುಕೊಂಡು, ದಂಡವಾಣಿಯಾಗಿ ಗೃಹತ್ಯಾಗ ಮಾಡಿದೆವೆಂದರೆ ತೀರಿತು, ಮುರಳಿ ನಮ್ಮ ಗೃಹಾಭಿಗಮನ ಅಪರಾಹ್ನ ಎರಡಕ್ಕೆ (೬೭ಕಹ. II. ೦). **ಬಾರದಾನು** : ೧. ಒಂದೊಂದು ಸಾಮಾನು ಒಂದೊಂದು ವಿಧವಾಗಿ ಕಟ್ಟಿ ಬರುವದರಿಂದ, ಅವೆಲ್ಲವುಗಳ ಬಾರದಾನು ಅಥವಾ ಹೊರಗಿನ ಆವರಣ ಒಂದೇ ತರವಾಗಿರುವದಿಲ್ಲ (ಮುಂಬಾ. ೭).

[← ಪಾರ. ಬಾರ್ದಾನ್; ಹಿಂ. ಬಾರದಾನಾ; ಮರಾ. ಬಾರದಾನ್]

**ಬಾರದಾನು** 'ಬಾರದಾನ' ನೋ.

**ಬಾರದೂರ್** (ನಾ). ಒಂದು ಊರಿನ ಹೆಸರು: ಬಾಣಶರ್ಮ್ಮಣೇ ತೇಗಟ್ಟೂರ್ವ್ವಿಷಯೇ ಬಾರದೂರ್ನ್ನಾಮಗ್ರಾಮಸ್ಸರ್ವ್ವಪರಿಹಾರೋಪೇತ ಉದಕಪೂರ್ವ್ವನ್ದತ್ತಃ (ಕ್ಷು೦೦. ೦೯೯೯, ೦೫-೩೯; ಸು. 725). [? + ಊರ್]

**ಬಾರನಿಸಿ** (ನಾ). ೧. ದಾಖಲೆಗಳನ್ನು ನೋಂದುಮಾಡಿ, ಅದರ ಮೇಲೆ ನೋಂದಿಸಲಾಗಿದೆಯೆಂದು ಬರೆಯುವ ಅಧಿಕಾರಿ; ನೋಂದಣಿಯ ಅಧಿಕಾರಿ: ಹೊರಟು ಹೋಗಲಿದ್ದ ಬಾರನಿಸಿಯಿಂದ ಕಾಗದಪತ್ರಗಳ ಚಾರ್ಜ್ ತೆಗೆದುಕೊಂಡೆ (೨೦೧೫ರ. ೬೯). ೨. ನೋಂದಣಿ ಮಾಡುವ ಕೆಲಸ, - ಹುದ್ದೆ: "ಬಾರನಿಸಿ ಕಾರಕೂನ್" ಸ್ಥಳಕ್ಕೆ ನನ್ನ ನೇಮಕವಾಗಿತ್ತು (೨೦೧೫ರ. ೬೯).

[← ಪಾರ. ಬಾರನಿವಿಶೀ; ಮರಾ. ಬಾರನಿಶೀ, ಬಾರನಿಸೀ, ಬಾರನೀಸ್]

**ಬಾರಮಾಹೆ** (ನಾ). ಹನ್ನೆರಡುತಿಂಗಳು: ಯಾ ನಿರೂಪ ಸ್ವಲಕೆ ತಲಪಿದ ತಾರೀಖಿನಾರಭ್ಯ ಸಾಲ್ಲಿಯಾನಾ ಯೆರಡು ಖಿಸ್ತಿನ ಮೇರ್ರಿಗೆ ಬಾರಮಾಹೆ ಬಜಿನ್ಸ ಕೊಡತಕದು (ಮೈ೨೦. ೦೯೬೯. ೨೬-೦೨; 1830). [ಬಾರ್ + ಮಾಹೆ]

**ಬಾರವಟ್ಟಿಗೆ, ಭಾರವಡ್ಡಿಗೆ** (ನಾ). ಬಾಗಿಲಿನ ಚೌಕಟ್ಟು; ಬಾಗಿಲುವಾಡ: ಬಕುಳದ ಬೋದಿಗೆಗಳಿಂ ಬಂಧುರಕದ ಬಾರವಟ್ಟಿಗೆಗಳಿಂ ಕೇತಕಿಯ ಕಂಟವಲಗೆಗಳಿಂ . . . ಕಂಪಿನ ಕಡಾರವಂುಂ ತಣ್ಪಿನ ತಾಣಮಂ ಮೆರೆಸಿರ್ಪ ಲತಾಮಂಟಪಮಂ ಪೊಕ್ಕು (ಕುಸುಮಾ. ೦೨-೦೩೬ ಪ). **ಭಾರವಡ್ಡಿಗೆ** : ಶ್ರೀರನ್ಗದಂಣ್ನಾಯಕರ ಪಟ್ಟಸಾಹಣಿ ಮಣ್ಡಲಸಾಹಣಿ ಮಾಡಿಸಿದ ಭಾರವಡ್ಡಿಗೆ (ಎಕ. XIV. ಎಳಂದೂ. ೦೬೨-೨; 1243).

[< ಸಂ. ದ್ವಾರಪಟ್ಟಿಕಾ]

**ಬಾರವಿಗೊಂಡ** (ನಾ). ಒಬ್ಬಾತನ ಹೆಸರು: ಶ್ರೀಬಾರವಿಗೊಣ್ಡಂ ನರಸಿಂಘ ಆತನ ಭ × × × ಬಾಜಿಯ ನನ್ದಿವರ್ಮನ ಮಗಂ ಶ್ರೀಮನ್ ಸತ್ಯಮಂಗಲದ ಚೋ × × (ಎಕ. IX. ಹೊಸಕೋ. ೦೦೬-೨; ಸು. 900 ?).

[ಬಾರವಿ$_1$ + ಗೊಂಡ$_1$ (< ಗಾಮುಂಡ)]

**ಬಾರಸ** (ನಾ). ೧. ಹನ್ನೆರಡು: "ಬಾರಸ–ದ್ವಾದಶ–ಹನ್ನೆರಡು" (ಕನ್ನಕೋ. ೩೦). 'ಬಾರಸನಾಮ' ಪರಾ. ೨. ಜನನವಾದ ಹನ್ನೆರಡನೆಯ ದಿನದಂದು ಮಗುವಿಗೆ ಮಾಡುವ ನಾಮಕರಣದ ಉತ್ಸವ: ಬಾಲಂಗೆ ಬಾರಸವ[ಪಾಠಾಂ. ಬಾರಸೆಯ, ದ್ವಾದಶ] ಮಾಡಿ ಕೊಟ್ಟಲೊಳಿಕ್ಕಿ ಏಲೇಶನೆಂದು ನಾಮವ ಕೊಟ್ಟು (ಸಿದ್ಧರಾ. ೯-೨೬). 'ಬಾರಸಂಗೆಯ್' ಪರಾ.

[< ಪ್ರಾ. ಬಾರಸ. / ಹಿಂ. ಬಾರಸ; ಮರಾ. ಬಾರಸಾ. / ಸಂ. ದ್ವಾದಶ]

**ಬಾರಸಂಗೆಯ್** (ಕ್ರಿ). ಹುಟ್ಟಿದ ಹನ್ನೆರಡನೆಯ ದಿನದಂದು ಮಗುವಿಗೆ ನಾಮಕರಣದ ಉತ್ಸವವನ್ನು ಮಾಡು: ಬಾರಸಂಗೆಯ್ದೊಡೆ ಬೋವಂಗೆ ಪಣ ಮೂಱು ತಳಾರಂಗೆ ಪಣ ಮೂಱು (ಕ್ಯ೨೦. ೦೯೬೬. ೨೭-೩೩; 872).

[ಬಾರಸ + ಕೆಯ್$_1$]

**ಬಾರಸನಾಮ** (ನಾ). ದೇಹದ ಮೇಲೆ ಧರಿಸುವ ಹನ್ನೆರಡು ನಾಮ: ಕಿಸುವೊನ್ನ ಬಟ್ಟಗೊಡೆ ಬಾರಸ[ಪಾಠಾಂ. ಭಾರಸ, ಭಾಸುರ]ನಾಮದ ಬೊಟ್ಟು . . . ಬಗೆವುಗೆ ಬಂದನಂದು ಬಲಿಯಲ್ಲಿಗೆ ವಾಮನನಾಗಿ ಕಾಮವಂದಂ (ಅರ್ಜಕ. ೬-೨೩). [ಬಾರಸ + ನಾಮ]

**ಬಾರಸಿ, ಬಾರಸೆ** (ನಾ). ಚಾಂದ್ರಮಾನ ಪಕ್ಷದ ಹನ್ನೆರಡನೆಯ ದಿನ; ದ್ವಾದಶಿ: ಮಾಘಬಹುಳಬಾರಸಿ ವಿಶ್ವಯೋಗದೊಳ್ ತ್ರಿಜ್ಞಾನಧರಂ ಪುಟ್ಟಿ (ಶಾಕುಂತ. ೦೩೩); ವ್ಯಯಸಂವತ್ಸರದ ಪುಷ್ಯದ ಬಹುಳದ ಬಾರಸಿಯ ಕುಜನ ವಾರದೊಳ್ (ಎಕ. VII, ಶಿಕಾರಿ. ೬೬-೨; 1227 ?). **ಬಾರಸೆ** : ಆರಯ್ಯೆ ಬಿದಿಗೆ ಸಪ್ತಮಿ ಬಾರಸೆಯೆಂಬಿವಟಿಳಿಕರ್ಕಸುತ ಕುಜ ದಿನ ಕೃದ್ವಾರಂಗಳುಂ ತ್ರಿಪಾದದ ತಾರೆಗಳುಂ ಕೂಡೆ ತಾಂ ತ್ರಿಪುಷ್ಕರಯೋಗಂ (ಲೋಕೋಪ. ೦-೨೦); ರೇವತಿಯುಗ ಭಾದ್ರಪಾ(ಪ)ದದೆರಡಷ್ಟಮಿ ಭಾರಸೆ ವಾಯುರಿಕ್ಕೆಯಿಂದ್ರತಿಶಯಮಾಗಿ ಗಾಳಿ ಬಿಡೆ ಬೀಸಿದೊಡಾಸಡಿಯುಂದು ಮತ್ತೆ ಭೂಮಿಕಂಪನೆ ನಾಡೆ ಪೆರ್ಮಟಿಗಳಪ್ಪುವು (ಅಕ್ಕಿಸು. ೬-೯೦).

[< ಪ್ರಾ. ಬಾರಸೀ. / ಮರಾ. ಬಾರಶೀ. / ಸಂ. ದ್ವಾದಶೀ]

**ಬಾರಸೆ** 'ಬಾರಸಿ' ನೋ.

**ಬಾರಹ** 'ಬಾರ್₃' ನೋ.

**ಬಾರಹೆ** (ನಾ). ಒಂದು ಬಗೆಯ ಕೊಳಲು : ರಾಗಸಾಗರನೆಂಬ ವಾಸು ಕಾರಂ ಭಾಸುರತೆವಡೆದ ಬಾರಹೆಯೆಂಬ ವಾಸವಂ ಕಳೆದುಕೊಂಡು . . . ಆದಿಗ್ರಾಮ ರಾಗಚ್ಛಾಯೆ ಸುಟ್ಟವಿಯಿಂ ಪುದಿದು ತೋಱಿ (ಶಾಂತೀಶ. ೬-೯೩ ವ). [ ? ]

**ಬಾರಾ** 'ಬಾರ್₃' ನೋ.

**ಬಾರಾಅಲುತೆ** 'ಬಾರಾಬಲೂತಿ' ನೋ.

**ಬಾರಾಂದರವಯ್ಯ** (ನಾ). ಒಬ್ಬಾತನ ಹೆಸರು : ಪೊಂಕುನ್ನದ ಬಾರಾನ್ದರವಯ್ಯ ತಗಡೂರ ಕೆಱೆಯ ಕಾಳೆಗದೊಳೆ ಬಸವಯ್ಯನ ಮುನ್ದೆ ಕಾದಿ ಸತ್ತು ಸಗ್ಗಯದ (ಎಕ. X. ಕೋಲಾರ. ೯೯-೨; ಸು. 950). [? + ಅಯ್ಯ₆₁]

**ಬಾರಾಗೀರ** 'ಬಾರ್ಗೀರ್' ನೋ.

**ಬಾರಾಬಂಗಾಲಿ**, ಬಾರಾಬಂಗಾಳಿ (ನಾ). ೧. "ಮೋಸಗಾರ" (ಶಾಕೋ. ೨೨). ೨. ಮೋಸಗಾರಿಕೆ; ತಂತ್ರಗಾರಿಕೆ : 'ಬಾರಾಬಂಗಾಲಿವಿದ್ಯೆ' ಪರಾ. ೩. "ಜಿಪುಣ, ಜೀನ, ಕೈಬಿಡದವ" (ಕಶಬ್ದ. ೯೨೦). **ಬಾರಾಬಂಗಾಳಿ** : ೨. ಏನೇನೊ 'ಬಾರಾಬಂಗಾಳಿ' ಮಾಡಿ ಹುಡುಗನನ್ನು ಒಪ್ಪಿಸಿಕೊಂಡು ಬಂದಿದ್ದೇನೆ (ಕಳು. ೩೪). ೪. ತೀರ ಮೇಲಿನ ನ್ಯಾಯಸ್ಥಾನ ; ಸುಪ್ರೀಂಕೋರ್ಟು ; ▶ ಈಸ್ಟ್‌ಇಂಡಿಯಾ ಕಂಪನಿಯವರ ಆಡಳಿತಕಾಲದಲ್ಲಿ ಕಲಕತ್ತೆಯ ಸುಪ್ರೀಂಕೋರ್ಟು ಕೊಟ್ಟಕೊನೆಯ ಅಪೀಲ್‌ಕೋರ್ಟಾಗಿತ್ತು. ಹಳ್ಳಿಯ ಪಂಚಾಯತಿ ನ್ಯಾಯಾಲಯದಿಂದ ಈ ಕೋರ್ಟಿನವರೆಗೆ ಹನ್ನೆರಡು ಕೋರ್ಟುಗಳಿದ್ದುವು : ನೀನು ಏನು ಬೇಕಾದರೂ ಮಾಡು, ನಾನು ಬಾರಾಬಂಗಾಳಿ ನೋಡಿ ಬಿಡುತ್ತೇನೆ (ಅದೇ).

[ಬಾರಾ (< ಬಾರ್₃) + ಬಂಗಾಲಿ]

**ಬಾರಾಬಂಗಾಲಿವಿದ್ಯೆ**, ಬಾರಾಬಂಗಾಳಿವಿದ್ಯೆ (ನಾ). ಮೋಸಗಾರಿಕೆ : ಕಪಟವಿದ್ಯೆ : ಅದೇನಾ ಹುಡುಗ 'ಬಾರಾಬಂಗಾಲೀವಿದ್ಯೆ' ಕಲ್ತಿದ್ದನೋ ಏನೋ ದೇವರೇ ಬಲ್ಲ ! (ಜಾಗಿಕ. ೪೬). **ಬಾರಾಬಂಗಾಳಿವಿದ್ಯೆ** : (ಅ).

[ಬಾರಾಬಂಗಾಲಿ + ವಿದ್ಯೆ]

**ಬಾರಾಬಂಗಾಳಿ** 'ಬಾರಾಬಂಗಾಲಿ' ನೋ.

**ಬಾರಾಬಂಗಾಳಿವಿದ್ಯೆ** 'ಬಾರಾಬಂಗಾಲಿವಿದ್ಯೆ' ನೋ.

**ಬಾರಾಬನೂತಿ** 'ಬಾರಾಬಲೂತಿ' ನೋ.

**ಬಾರಾಬನೋತಿ** 'ಬಾರಾಬಲೂತಿ' ನೋ.

**ಬಾರಾಬಲುತೆ** 'ಬಾರಾಬಲೂತಿ' ನೋ.

**ಬಾರಾಬಲೂತಿ**, ಬಾರಾಅಲುತೆ, ಬಾರಾಬನೂತಿ, ಬಾರಾಬನೋತಿ, ಬಾರಾಬಲುತೆ (ನಾ). ಹನ್ನೆರಡು ಜನ ಆಯಂಗಾರರಾದ ಗ್ರಾಮಾಧಿಕಾರಿಗಳು ; ▶ "ಗೌಡ, ಶಾನುಭೋಗ, ಪಂಚಾಂಗಿ, ತಳವಾರ, ತೋಟಿ, ನೀರ್ಗಂಟಿ, ಅಗಸ, ನಾಯಿಂದ, ಕುಂಬಾರ, ಲೋಹರ, ಬಡಗಿ, ಅಗಸಾಲೆ" (ಮೈಗೆ. IV, ೬೬೪). ಈ ಪಟ್ಟಿಯ ಹೆಸರುಗಳಲ್ಲಿ ವ್ಯತ್ಯಾಸವಿರುತ್ತದೆ : ಇನಾಮುದಾರರು ಬಾರಾಬಲೂತಿ ಜನರು ತಮಗೆ ಸರಕಾರದಿಂದ ಜಾರಿಯಾಗಿರುವ ಭೂಮಿ ಅಲ್ಲದೆ ಜಾಸ್ತಿ ಭೂಮಿ . . . ಅನುಭವಿಸುತ್ತ ಇರುವಂಥಾದ್ದು ಸಹ ಚೆನ್ನಾಗಿ ದರಿಯಾಫ್ತು ಮಾಡಿ (ಮಹಾಹಿ. II, ೬೦); ಗ್ರಾಮಗಳಲ್ಲಿ ಸೇಕದಾರ, ಶಾನುಭೋಗ, ಗೌಡ, ಬಾರಾಬಲೂತಿಯವರು ಇವರೆಲ್ಲಾ ಈ ಗಣನಂತೆಯೇ ಇದ್ದರು (ಹಾಕಗಾ. ೫೪). **ಬಾರಾಅಲುತೆ** : "ಬಾರಾಅಲುತೆ-೧೨ : ಗಾಣಿಗ, ವೀಳೆಯದೆಲೆ ಮಾರುವವನು, ಮಗ್ಗಯವನು, ತೋಟಗಾರ, ಜಂಗಮ (ಶಿವಾಲಯದ ಅರ್ಚಕ), ಕಲೆಗಾರ, ಬುಡುಬುಡಿಕೆಯವನು, ಠಕಾರೆಯವನು, ಕುಂಬಾರ, ತಳವಾರ, ಅಕ್ಕಸಾಲೆ, ಚೌಗಲೆ (ಪಟೇಲನ ಕೆಳಗೆ ಕೆಲಸ ಮಾಡುವವನು)" (ಶ್ರೀವತ್ಸ. ೨೯೧). **ಬಾರಾಬನೂತಿ** : ೧೨ ಕೈವಾಡ ಬಾರಾಬನೂತಿ ಸಹ ಯಿಟ್ಟುಕೊಂಡು ದೇವತಾಶೇವೆ ವಗ್ಯರೆ ನಡಶಿಕೊಂಡು ಹೋಗಲುಳ್ಳವರು (ಪ್ರಅಂ. ೦೯೨೯. ೯೬-೨೬ ; 1593). **ಬಾರಾಬನೋತಿ** : ಊರ ಈ ನೌಕರರ ಸಂಖ್ಯೆಯು ಸಾಧಾರಣವಾಗಿ ಹನ್ನೆರಡು ಇರುವದರಿಂದ ಇವರ ಸಂಘಕ್ಕೆ ಬಾರಾಬನೋತಿಯೆನ್ನುವರು (ಕುಕಾರ. ೦೬೦). **ಬಾರಾಬಲುತೆ** : "ಬಾರಾಬಲುತೆ- (i) ನಂಬಿ, ರೆಡ್ಡಿ, ಕರಣ, ಪುರೋಹಿತ, ತಳವಾರ, ಬಡಗಿ, ಕಮ್ಮಾರ, ಕುಂಬಾರ, ಅಗಸ, ಕ್ಷೌರಿಕ, ಹೊಲೆಯ, ಮಾದಿಗ (ಕಣ್ಕ. ೬೯೦). (ii) ಬಡಗಿ, ಕಮ್ಮಾರ, ಹೊಲೆಯ, ಮಾದಿಗ, ಕುಂಬಾರ, ಚಮ್ಮಾರ, ಅಗಸ, ನಾಯಿಂದ, ಪುರೋಹಿತ, ಮುಲ್ಲಾ, ಗೊರವ, ಬೆಸ್ತ" (ಶ್ರೀವತ್ಸ. ೨೯೦).

[ ← ಮರಾ. ಬಾರಾಬಲೂತೀ, ಬಾರಾಬಲುತೇ]

**ಬಾರಾಭಾಯಿ** (ನಾ). (ಆಡಳಿತದ ನಿರ್ವಹಣೆಗಾಗಿ ನೇಮಕವಾದ) ಹನ್ನೆರಡು ಜನ ; ▶ ನಾರಾಯಣರಾವ್‌ಪೇಶ್ವೆಯ ವಧೆಯ ನಂತರ ನಾನಾಫಡಣವೀಸ, ಸಖಾರಾಮಬಾಪೂ ಮೊದಲಾದ ಹನ್ನೆರಡು ಜನ ಮುತ್ಸದ್ದಿಗಳು ರಾಜ್ಯಭಾರ ನಡಸಿದರು. ಇದಕ್ಕೆ 'ಬಾರಾಭಾಯಿ ಕಾರಭಾರ'ವೆಂಬ ಹೆಸರಾಯಿತು : ರಾಜರ ಕಾಟ ಕಾಯಿಗಳು ಹೆಚ್ಚುತ್ತಾ ಬಂದ ಹಾಗೆಲ್ಲಾ ಬಿಗಿಯಾದ ದರಬಾರನ್ನು ನಡಿಸುವುದಕ್ಕೆ ಅಗತ್ಯವಾದ ಏರ್ಪಾಡುಗಳನ್ನು ಮಾಡಿ ಬಾರಾಭಾಯಿಗಳನ್ನು ನೇಮಿಸಿ ಮರಾಟಸಂಸ್ಥಾನವನ್ನು ವಿಸ್ತರಿಸಿ ಉದ್ಧಾರ ಮಾಡಿದವರು ಪೇಷ್ವೆಗಳಲ್ಲವೆ ? (ಶುಉಗ. ೩೦).

[←ಮರಾ. ಬಾರಾಭಾಈ, ಬಾರಭಾಈ]

**ಬಾರಾಮಾರ್ಗ**, ಭಾರಾಮಾರ್ಗ (ನಾ). ೧. ಹೆದ್ದಾರಿ; ರಾಜಮಾರ್ಗ : ಅವರಿಬ್ಬರೂ ಬಾರಾಮಾರ್ಗದ ಮಗ್ಗುಲ ಮಾಲೀಕನ ಕಾಡಿನಲ್ಲಿ . . . ಕುದುರೆಯ ಹಿಂಡನ್ನು ಮೇಯಿಸುವ ಸಲುವಾಗಿ ಅಟ್ಟಿಕೊಂಡು ಹೋಗುತ್ತಿದ್ದರು (ಪುಕಥ ೨೯೩). ೨. "(ಒಂದು ದೇಶದ ಮೂಲಕ ಹಾದು ಹೋಗಲು ತೆರುವ) ಸಾಗಣೆಸುಂಕ, ಹೆದ್ದಾರಿಯ ಸುಂಕ" (ಕಸಂಗ್ರ. ೦೩೨) : ಕಾಕೋಲು ಬುಚಯ್ಯನ ಮಗಿತಾ ಬಾರಾಮಾರ್ಗದ ದುಂಡಿ ಶಿಲದಯನ ಮಗಿತಾ (ಎಕ. X (ಹ), ಕೋಲಾರ. ೨೩೮-೯೮; 1761); ಬಾರಾಮಾರ್ಗದ ವೀರತ್ರ್ಯಯಶೆಟ್ಟರು ಹನಿಕೆ ಚೆನ್ನದೇವರು ಬಗ ದೇವನಹಳ್ಳಿ ನಿರಂಜನಯ್ಯ . . . ಮೊದಲಾದ ೫೬ ದೇಶದ ಬಾರಾಮಾರ್ಗದವರು ಬರಸಿಕೊಟ್ಟ ದಾನದ ವರದಿ ಕ್ರಮ (ಎಕ. IX (ಹ), ಹೊಸಕೋ. ೦೬೬-೨; 1771). **ಭಾರಾಮಾರ್ಗ** : ೨. ಸ್ಥಳ ಮಹಸ್ಥಳದ ಚತುರ್ದೀಕ್ಕು ಐವತ್ತಾರುದೇಶದ ಭಾರಾಮಾರ್ಗ್ಗದ ದೇಶದವರು (ಎಕ. X (ಹ), ಕೋಲಾರ. ೨೩೮-೦೦; 1761). 'ಭಾಟಾಮಾರ್ಗ' ಪರಾ. [ ? + ಮಾರ್ಗ]

**ಬಾರಾಸುಂಕ** (ನಾ). = ಬಾರಾಮಾರ್ಗ ೨ : ಇನ್ನೀ ಧರ್ಮವನುತ್ತರಾಯಣಸಂಕ್ರಾನ್ತಿ ನಿಮಿತ್ತದಿಂ ಕೊಟ್ಟು ಬಾರಾಸುಂಕದ ಭೇಣಿ ಕಾಣಿಕ್ಕೆಡಸದೆ . . . ತಪ್ಪದೆ ಪ್ರತಿಪಾಳಿಸುವರು (ಕಇಅ. ೩೬-೯೯-೦೬; 1134). [ ? + ಸುಂಕ₁]

**ಬಾರಿ₁**, ವಾರಿ₁ (ನಾ). ೧. ಸಲ : ಸರದಿ ; ಸಾರಿ : ಪಶುಗಳ ಮೆಯ್ಯೊಳೆನಿತು ರೋಮಮುಂಟನಿತು ಬಾರಿ ತಾಂ ಕೊಲಿಸಿಕೊಂಬಂ ವೃಥಾ ಪಶುವಧೆಯಂ ಮಾಡಿದವಂ (ಕಂಕಸಂ. ೬೨-೧೬); ಎನಿತು ಬಾರಿ ಪಲಾಯನದ ಸಿರಿ ನಿನಗೆ ಸೇರಿತು (ಕುವ್ಯಾರ್ಕ. ೦೮-೯೩); ಬಲಗೊಂಡನುಜಿ ಮೂಱು ಬಾರಿ ತನ್ನೊಳು ತಾನು ಗೆಲವೇಱಿ ಮುನಿಗೀರ್ವಾಣಿಗೆ ನಲಿದೆಱಗಿದನು (ಜೈಕ. ೩-೩೦). ೨. ಆಹುತಿಯಾಗುವ ಸರದಿ ; ಬಲಿಯಾಗುವ ಪಾಳಿ : ವಾಲಿನ ಬಾರಿಯುಮ್ಮ ಮೇಲೆ ಬಂದುದು (ಕಂಕಥಾ. ೩-೨೩ ವ);

ಅಬ್ಬಾ ನಿಮ್ಮ ಮನೆಗೆ ಬಾರಿ ಬಂದುದು ನಾಳೆ ರಕ್ಕಸನಲ್ಲಿಗಟ್ಟಂ (ಹೀಪಸಂ. ೩೮-೨೩ ಪ); ಎನಗೆ ಬಂದುದು ತಾಯೆ ನಾಳಿನ ದಿನದ ಬಾರಿ (ಕುವ್ಯಾ೦. ೧೧-೦೨). ೩. ಬಲಿ; ಆಹುತಿ : ಅತನಂ ಪವಮಾನಸೂನು ಬಾರಿಯ ನೆವದಿಂ ಪೋಗಿ ಕೀನಾಶಂಗಾಪೋಶನಮನಿತ್ತು ಮತ್ತಂ ಬರೆ (ಹೀಪುಕು. ೯-೩೨ ಪ); ಎಲ್ಲರುಮಿರ್ದು ಮಾಡಿದೊಡೆ ಮಾಡಿದ ಬಾರಿಯ ಸೂಟಿ್ ನಿಯೋಗದಿಂದಲ್ಲಿಯ್ಯುಮಂತೆ ಬಂದು ಬಟಿಕಾ ಮನೆಯಲ್ಲಿಗೆ ಬಂದುದು (ಹೀಪಸಂ. ೩೮-೨೩). ೪. ಬಾಯಿ; ದವಡೆ : ಬೇಟದುಬ್ಬಿದಿಗವನಾಂತ ನಲ್ಲಳ ಮುಖಾಂಬುಜವಂ ನಡೆ ನೋಡಿ ನೋಡಿ ಸಾಯದೆ ಬರ್ದು ಕಾಡಿದಂ ಜವನ ಬಾರಿಯೊಳಂ ಬರ್ದುಕಾಡದಿರ್ಕುಮೇ (ಅಂಪು. ೦೨-೨೫); ಪೆಂಡತಿಯ ಮೂಗನಕಾರಣದಿನರಿವವನಂ ಜವನ ಬಾರಿಗಟ್ಟುವುದೆ ಧರ್ಮಂ (ಶಂಕಸಂ. ೬೮-೯); ಅರಣ್ಯದೊಳ್ ಚರಿಯಿಪ ರೌದ್ರರಾಕ್ಷಸರ ಬಾರಿಗೆ ಬಿಟ್ಟಳೋ ಕಾಂತೆ (ಕುಸುಕಾ. ೧೯-೦೦೯). ೫. ದಾಳಿ; ಆಕ್ರಮಣ; ಲಗ್ಗೆ : ತಳ್ಕಿಜ ಕಳ್ಳರ ಬಾರಿಯೊಳೊಳಗಾಗದೆ ನಿನ್ನ ಬರ್ದುಕಿ ಬಂದಂದ ಮಿದಾರಳವು (ಸುಕುಮಾ. ೬-೨೪); ನೀನಾ ನಿಷ್ಠುರನ ಕೆಯ್ಯೊಳಿರಡಿಲ್ಲದ ಪೇರಾನೆಯ ಬಾರಿಗೆ ಬಿರ್ದಾ ಶ್ವಾನನ ತೆಱದಂತೆ ಬಾಧೆಗೊಳಗಾಗಿರ್ಪೆ (ರಮಾಶ್ವ. ೬-೧೨೦); ಇನನಿದಿರಟ್ಟ ಕಾರ್ಮುಗಿಲ ಬಾರಿಗೆ ಬಿಟ್ಟನೊ ತಳ್ತ ಬಳ್ಳಿಮಿಂಚಿನ ಬಲೆಯಲ್ಲಿ ಸಿಕ್ಕಿದನೊ . . . ಘನಜಳಧಾರೆಯಿಂ ಕರಗಿ ಹೋದನೊ (ಅಪಂಕ್ತಿ. ೯-೦೭). ೬. ಅಧೀನ ; ವಶ ; ಹತೋಟಿ : ಪೊದೆದ ಮಡಿ ಬಟಿಯಂ ಧೂಳಿಯೊಳ್ ಮಾಸಿಯಸಗನ ಬಾರಿಯೊಳ್ ಬಿರ್ದು ನಿಗ್ರಹಕ್ಕೊಳಗಪ್ಪಂತೆ ಚವಳರ್ . . . ದುಃಖಂಬಡುವರ್ (ರಮಾಶ್ವ. ೯-೩೮); ಭೀಮ ಧರಿತ್ರೀಭೃತ್ಸನುಜೆ ನಳನೃಪಂಗೆರ್ದೆದೆತ್ತು ಕರಂ ಚಿತ್ತಭವನ ಬಾರಿಗೆ ಬಂದಳ್ (ದಪುಸ್ವ. ೩-೦). ೭. ಕಪಿಲೆಬಾವಿಯ ಬಳಿ(ನೀರು ಎಳೆಯುವ) ಎತ್ತುಗಳು ಕೆಳಗೆ ಇಳಿಯುವುದಕ್ಕಾಗಿರುವ ಇಳಿಜಾರುಪ್ರದೇಶ : ಮೊಟ್ಟೆಯ ಬಾಯ ಕಡೆಗೆ ಮಣ್ಣು ಭರತಿ ಹಾಕದೆ ಗುಣಗಲ್ಲುಗಳನ್ನು ಅಥವಾ ಗರಸುಮಣ್ಣನ್ನು ಹಾಕಿ . . . ಮೊಟ್ಟೆಯ ಬಾರಿಯನ್ನು ತಯಾರು ಮಾಡಿ ಮೊಟ್ಟೆಯನ್ನು ಸಾಗಿಸಬೇಕು (ಕೃಶಿಕ್ರ. ೦೦೯); ಬಾವಿಗೊಂದು ಹೊಸ ಮೊಟ್ಟೆಯಾಗಿದೆ; ಬಾರಿಯಾಗಿದ (ಬಾಬಂ. ೧೩), ಜೀವ ನೀಗುವ ಆರ್ಭಯಿಂದ ಧಡಧಡನೆ ಬಂದ ಬಸವಂತಿ, ಬಾರಿಯ ಮೇಲಿಂದಲೇ ನೀರಿಗೆ ಧುಮುಕಿದಳು (ಬೀಕಥ. II. ೦೯೯). ೮. ಕಾಮೋದ್ರೇಕ ; ಬೆದೆ : ಪುಗಿಲಂ ಪೋಗು ಬಾರಿಯಂ ಸನ್ನೆಯಂ ನೂಱಾವಮರ್ಚುವ ನಿಲ್ವೆಡೆಯಂ ಬಗೆಯಂ ತೆಗೆಯನಲ್ಲಾಟಮಂ . . . ನೀಂ ಬಲ್ಲೆ ಬೇಂಟೆಕಾಱರೊಳೆಲ್ಲಮಾನೆ ಬಲ್ಲಂ (ಶಂಪಶಾ. ೫-೯೩); ಹಸು ಬಾರಿಗೆ ಬಂದಿದೆ, ಹೋರಿ ಕೊಡಿಸಬೇಕು (ಜಾಪ). ೯. ಕೂಟ ; ಸುರತ : ಆ ಮುದುಪಂ ಗಡ ಕೊಟ್ಟನೊತ್ತಿಯುಂ ಗರಗರನಾಯ್ತು ಬಳ್ಳಿ ಮುದು ಗೂಗೆಯ ಬಾರಿಗೆ ಕೈನೆ ತಾನೆ ಮೃಗರದೆನಗೊತ್ತಿಗೊಟ್ಟ ಸುಖ ಮಾಟ್ಕಿವೆ ವಟ್ಟದನಕ್ಕ ಬಲ್ಲಮೆಂ (ಸೂಕ್ತಿಸು. ೯-೮೨೨) ; ಅವನ ಬಾರಿಯೊಳ್ ಮಗಳ ಮೆಯ್ ಕಳೆಯೇಱುವುದೊಳ್ಳೊಗಂ ಪೊರ್ಗಿರ್ಪುದೋಜೆಯುರ್ಕುವುದು (ಕಳಿ. ೬-೯೬). ವಾರಿ$_1$ : ೧. ವಾರಿ ಇಲ್ಲದ ಸುಂಕ ದಾರಿಗೆ ದಾರಿಯೇ ? (ಗಾದೆ). ೨. ಬಿರುದರ ಗೋವ ವಾರಿಗೆ ತಪ್ಪುವ ಲೆಂಕರ ಗಂಡ (ಎಕ. VII. ಶಿಕಾಂ. ೦೯೯-೮ ; 1161).

ಬಾರಿಬಾರಿ (ದ್ವಿರುಕ್ತಿ) : ಬಾರಿಬಾರಿಗೆ ಪಾತಿವ್ರತ್ಯವ ಬೋಧಿಸಿ ಜಾರೆಗದಱ ನಿಜ ಸೊಗಸೀತ (ಕೆಶಂದ. ೦-೦೫-೦); ಆ ರಣದೊಳೆಂತಿವನ ಸ್ಯಂದನಸಹಸ್ರವಂ ಬಾರಿಬಾರಿಗೆ ಕತ್ತರಿಸಿ ಕೆಡಹಿ ಫಲುಗುಣಂ ಪೂರೈಸಿದಂ ದೇವದತ್ತವಂ (ಕೃಜಶಾ. ೨೫-೩೯) ; ಇಂದ್ರನೂ ಜಯಂತನೂ . . . ಬಾರಿಬಾರಿಗೂ ಸೋತು ಓಡಿ ಹೋಗಲಿಲ್ಲವೆ ? (ಕೃಶಾಉ. ೦೩೬).

[ದೇ.೫ ಕೊಡ. ಬಾರೀ ; ತೆಲು. ಬಾರಿ./ಹಿಂ. ಬಾರ್; ಮರಾ. ಬಾರಿ]

ಬಾರಿ$_2$ ' ಬಾರ್$_2$ ' ನೋ.

ಬಾರಿ$_3$ (ನಾ). ಆನೆಯನ್ನು ಹಿಡಿಯಲು ಮಾಡುವ ಉಪಾಯ : ಗಂಧ ಹಸ್ತಿಯೊಡನೆ ಬಾರಿ [ಪ್ರಾಕೃ. ಚಾಲಿ, ಬಾಳಿ, ಬಾಲಿ, ಬಾವಿ]ಯೊಳ್ ಮೂವತ್ತೆರಡು ಗಜಕ್ರೀಡೆಗಳಿಂದಂ ನೀಡುಂ ಬೇಗಂ ಕ್ರೀಡಿಸಿಯಾನೆಯಂ ಸೇದೆಗೆಡಿಸಿ ತನ್ನ ಬಸಕ್ಕೆ ಮಾಡಿಯೇಱು (ಶಕ್ತಾಶಾ. ೩೯-೦೯) ; ತೋರದೆರೆ ಮುರಿಯ ಮೂಡುವ ವಾರಣಮಂ ಪೋಲ್ಗುಡಿಸಿ ನಿಡುಗೆಯ್ಯಂ ಭಂಡಾರಿಸಿ ಮೆಡಱಿದ ತಳಿಯಂ ಬಾರಿಯುಮಂ ಮುಱೆಯೆ ಪೊಯ್ದು ಪೊಱಮಡು ವಿಭವಂ (ಅರ್ಗಸೇ. ೩-೦೦೩). ' ಕೆಡ್ಡಾ ' ಹೋ. [< ಸಂ. ವಾರೀ]

ಬಾರಿಕ (ನಾ). ೧. ಸರದಿಯನ್ನು ತಿಳಿಸುವವನು : ಬಾಯೊಳೆಂಬ ಬಳ್ಳಮಂ ಬಾರಿಕನಂ ಮಾಡಿ ಪಲಕಾಲು ಸಲುತುಮಿರ್ಪುದಂ (ಶಂಕಸಂ.೫೮-೦೨) ; ಬಾರಿಕಂ ಬಂದು ಪಾರ್ವನಂ ಕಾಣದಬ್ಬಾ ನಿಮ್ಮ ಮಗನ ಮೇಲೆ ಬಾರಿ ಬಂದುದು ನಾಳೆ ರಕ್ಕಸನಲ್ಲಿಗಟ್ಟಂ ಎಂದು ಪೇಟ್ದು ಪೋದಾಗಳ್ (ಹೀಪಸಂ. ೩೮-೨೩ ಪ) ; ಬೊಬ್ಬೆಯಿಂ ಪೇಳ್ದ ಬಾರಿಕನ ನುಡಿಯಂ ಕೇಳ್ದು ತಬ್ಬಿಬ್ಬು ಗೊಂಡು (ಆಕೃಶಾ. ೩೯-೮). ೨. ಗ್ರಾಮದ ಕಾವಲುಗಾರ : ಸಾಸಿರ್ವ್ವರ ಬಾರಿಕಂಗೆ ಮನೆದೆಱೆ (ತಿಎ. ೦೯೯೬, ಹಾವಗರ್ ೨೫೦-೫೬ ; 993) ; ಬಂಟ ಸಾಸಿರ್ವ್ವರ(ರುಂ) ಬಾರಿಕಂಗೆ ಮನೆದೆಱೆ ಬಟ್ಟ ಬೆಸಕೊಳ್ದೆಱೆ ಮೊದಲಾಗೆ ಸರ್ವ್ವಮಾನ್ಯವಾಗೆ ಬಿ[ಟ್ಟ]ರ್ (ಕಇ. II. ೯-೫೩ ; 1072).

[ಬಾರಿ$_1$ + — ಕ$_3$]

ಬಾರಿಕಾರ (ನಾ). ಹಳ್ಳಿಯನ್ನು ಕಾವಲು ಕಾಯುವವನು ; ಗ್ರಾಮದ ಕಾವಲುಗಾರ : ಮನೆಯಲ್ಲಿ ನಿತ್ಯ ಕಸ ಮುಸುರೆಯನ್ನು ಮಾಡುವ ತಳ ವಾರ, ಬಾರಿಕಾರರಿಂದ ಮದುವೆ ಮುಂಜಿಗಳನ್ನು ಮಾಡಿಸುವ ಪುರೋಹಿತರ ವರೆಗೂ . . . ಬೇರೆ ಬೇರೆ ಮನೆತನಗಳಿರುವವು (ಶಕಶಾ. ೦೫೬).

[< ಬಾರಿಕ + — ಕಾರ$_1$ (< — ಕಾಱ)]

ಬಾರಿಕಿ, ಬಾರೀಕಿ (ನಾ). = ಬಾರಿಕಾರ : ಬಾರಿಕಿ_ಈತನು ಗೌಡನ ಅಪ್ಪಣೆ ಯಂತೆ ಹಳ್ಳಿಯಲ್ಲಿ ಮುಸುರೆ ತಿಕ್ಕುವದು, ಹಿಲಾಲು ಹಿಡಿಯುವದು ಮುಂತಾದ ಕೆಲಸ ಮಾಡುವನು (ಕುಶಾರ. ೦೬೨). ಬಾರೀಕಿ : ತೋಟಿ_ ತಳವಾರ, ವೆಟ್ಟಿ, ಬಾರೀಕಿ ಅಥವಾ ಕೋಲುಕಾರನೆಂದು ಹೆಸರುಂಟು (ಗ್ರಾಸ್ಟಾಕ. ೦). [< ಬಾರಿಕ. / ತೆಲು. ಬಾರಿಕವಾಡು]

ಬಾರಿಗುಱಿ (ನಾ). ಬಲಿಯಾಗಿ ಕೊಡುವ ಕುರಿ ; ಆಹುತಿಯಾಗಿ ಕೊಡುವ ಕುರಿ : ಕುತ್ತಮಂ ಕಿಡಿಸುವ ನಿಮಿತ್ತದಿಂ ಚಂಡಿಕೆಗೆ ಓಂಡಮು ನಿಟ್ಟುಂ ಮಾರಿಗೆ ಬಾರಿಗುಱಿಯನಿತ್ತುಂ . . . ಇಂತನೇಕಪ್ರಕಾರಂಗಳಿಂ ರೌದ್ರದೇವತೆಗಳಂ ಪಿಡಿದು ದುರ್ಗತಿದುಃಖದಿಂದಾಳುತ್ತಂ ಮುಟುಗುತ್ತ ಮಿರ್ಪರ್ (ಶಕಾರ. ೯೬೮). [ಬಾರಿ$_1$ + ಕುಱಿ$_3$]

ಬಾರಿಗೆ (ನಾ). ಕಸ ಗುಡಿಸುವ ಸಾಧನ ; ಪೊರಕೆ : ಹನುಮಂತಪ್ಪನು . . . ಅಡುಗೆಮನೆಯನ್ನು ಬಾರಿಗೆಯಿಂದ ಸ್ವಚ್ಛವಾಗಿ ಗುಡಿಸಿದನು (ರಕ್ಕರ್ರ. ೦೦೩). ' ಬೋಹರಿಗೆ ' ಪರಾ. [ ? ]

ಬಾರಿದಿ (ನಾ). ವೇಶ್ಯೆ ; ಸೂಳೆ : ಮೊಳ ಬಟ್ಟೆಗೆ ದೇಹವನ್ನು ಮಾರುವ, ಮಾರಿಕೊಂಡ ಬಾರಿದಿಯಾಗಿದ್ದಾಳೆ (ಒಕಪು. ೨೦೦).

[← ಹಿಂ. ಬಾರತಿಯ. / ಸಂ. ವಾರಸ್ತ್ರೀ]

ಬಾರಿಯಿಕ್ಕು (ಕ್ರಿ). (ಸರದಿಯ ಪ್ರಕಾರ) ಕಾವಲಿಡು ; ಕಾವಲು ಹಾಕು : ಅರಸನಪ್ಪಣೆಯಾಯಬೂರ ಸೀರೆಯನೆಲ್ಲ ಗಿರಿಯಂತೆ ಮಡಿವಳಯ್ಯನ ಮುಂದೆಯೊಟ್ಟುತ್ತೆ ಕರಿ ತುರಗ ರಥ ಪತ್ತಿ ಮುಂತಾದ ಬಹುಬಲವ ಬಾರಿಯಿಕ್ಕುತ್ತ ಭಟರು ಮಾರುಳಸಗ ಭೂಪರಗೆ ನೀನಿದಿರೆ . . . ಎನ್ನಲು (ಪ್ರಭುಶು. ೬-೮೨). [ಬಾರಿ$_1$ + ಇಕ್ಕು]

ಬಾರಿಯಿಡು (ಕ್ರಿ). ಬಲಿಯಾಗಬೇಕಾದ ಪ್ರಾಣಿಯ ಸರದಿಯನ್ನು ಗೊತ್ತುಮಾಡು ; ಸರದಿಯ ಮೇರೆಗೆ ಬಲಿಯನ್ನು ತೆಗೆದಿಡು :

ಫಣಿರಾಜಂ ಬಾರಿಯಿಟ್ಟಟ್ಟಿದೊಡನಾದಿನದಿಂ ಬರ್ಪ ಸರ್ಪಂಗಳಂ ಬಲ್ಕಣೆ ತಾರ್ಕ್ಷ್ಯಂ ಭಕ್ಷಿಸುತ್ತುಂ ಮಳಯಗಿರಿಯೊಳಿರ್ಪಂ ಬಲಂ ಕೇಳಿರೇ (ಶಾಶ್ವ.ಕ. ೧೦೦). [ ಬಾರಿ₁ + ಇಡು₁ ]

**ಬಾರಿಲುಮಕ್ಕಿ** (ನಾ). ಒಂದು ಬಗೆಯ ಭೂಮಿ : ಬಾರಿಲುಮಕ್ಕಿಯ ಗದ್ದೆಗೆ ಇಕ್ಕಿ ಹೊಸ್ತ . . . ಎಳು ಭಿಯದ ಬತ್ತ ಇಂನೂಜಿ ಮೂವತ್ತು ಇಕ್ಕಿದಂ (ಎಕ. ೪. ಹಾಸನ. ೩೯-೧೭ ; ಸು. 1000 ?). [ ? + ಮಕ್ಕಿ₁ ]

**ಬಾರಿಸು₁** (ಕ್ರಿ). ೧. ಚಾವಟಿಯಿಂದ ಹೊಡೆ ; ಚರ್ಮದ ಪಟ್ಟಿಯಿಂದ ಏಟುಕೊಡು : ಆರು ಬಾರಿಪ್ಪೆನಾರಂ ನಿನಗೆಣಿಗಿಪಂ. . .ಬೆಸಸು ಬೆಸಸು (ಅರ್ಜಕಿ. ೬-೬೯) ; ತಾಡುಗುಣಿಗಳವದಿರು ನಭೋಗ್ರಿಕೆ ಸಿಡಿದು ಹವಿ ಗೊಂಬಮರನಿಕರದ ಹೆಡಕ ಬಾರಿಸಿ ಬಾಚುತಿರ್ದರು ಬಾಯ ತುತ್ತುಗಳ (ಕೊಕರಾ. ೧-೧೧-೮). ೨. ಜೋರಾಗಿ ಏಟು ಕೊಡು ; ಬಿಗಿ : ರೋಷ ಗೊಂಡ ಇನ್‌ಸ್ಪೆಕ್ಟರ್ ಅವನ ಕೆನ್ನೆಗಳಿಗೆ ಬಾರಿಸಿದ (ಅಕ್ಕ್ಮಾರ್ಕ. ೦೧೯).
[ ಬಾರ್₂ + — ಇಸು₃. / ತುಳು. ಬರ್ಜು ]

**ಬಾರಿಸು₂** (ಕ್ರಿ). ೧. ನಿರೋಧಿಸು ; ಪ್ರತಿಬಂಧಿಸು : ದೇವತೆಗಳ ಮಾಡಿದಾಹಾರಮಂ ರಿಸಿಯರ್ಗೆ ಚರಿಗೆ ಮಾಡಲಾಗದೆಂದು ಬಾರಿಸಿ (ವಡ್ಡಾರಾ. ೯೦-೨೮); ಕಡುಕೆಯ್ದು ಕೃತಾಂತನಿಂತು ನಿರ್ನೆರಮೆಬ್ಬಿದುಯ್ಯೆ ಬಾರಿಸದೆ ಕೆಮ್ಮನುಪೇಕ್ಷಿಸಿ ನೋಡುತಿರ್ಪರೇ (ಅಂಪು. ೩-೯) ; ಇಷ್ಟರ್ ಬಾರಿಸಿದೊಡಂ ಪಷಾಣದ ದುಷ್ಪರನೊಳಕೊಂಡು ಕಟ್ಟರ ಕಥೆಗಳಂ ಪೇಟ್ವಿಂ (ಸಂತಶಂ. ೦೩೩-೦೨). ೨. ಎಚ್ಚರಿಕೆ ಕೊಡು,—ನೀಡು: ಈ ರೂಪೆಂಬುದು ಭುವನಜನಾರಾಧ್ಯಂ ಚಕ್ರಿಜನನಿಷೇವಿತಮಿದಜ್ಝೊಳ್ ಸಾರದಳಿಪೆಂದು ಪೆಳ್ವನ ಬಾರಿಸಿದುವು ಬಿಡದೆ ಜಡಿದು ವನದೇವತೆಗಳ್ (ಅಂಪು. ೯-೯೩) ; ಅಂದೆನ್ನಂ ನೀಂ ಬಾರಿಸಿದುದು ಸನ್ನಿದವಾಯ್ತುನ್ನಿದರ್ಕೆ ಪೇಟ್ಟೇಗೆಯ್ವೆಂ (ಶಂಕಕಂ. ೬೩-೦೬); ಬಾರಿಪ ನಿಮ್ಮ ತರ್ಜನದಿನೀ ಜನದೊಂದುಲಿ ಮಾಣ್ಗೆ (ಧರ್ಮಪು. ೬-೩೩). ೩. ಪರಿಹರಿಸು ; ನಿವಾರಿಸು : "ಬಾರಿಸೆಂದು ನಿವಾರಿಪುದು" (ಶಬಶಾ. ೭೦-೬೦೦) ; ಚಂದ್ರಾಂಶುಚಂದ್ರಕಾಂತದ್ರವ ಕರ್ಪೂರ ಮೃಣಾಲಾದಿಗಳುಂ ಬಾರಿಸಲಾಜಿವೆ ದಲವನ ದಾಹಜ್ವರಮಂ (ಅಂಪು. ೨-೦೩). ೪. ಹೀಯಾಳಿಸು ; ಧಿಕ್ಕರಿಸು : ಕ್ಷೀರೋದವಾರಿಧಾರಾ ಪೂರದ ಬೆಳ್ಪಿಂಗೆ ಸೆಣಸುವಂತಳಿನತುಹಿನಹಾರದ ಬೆಳ್ಪನೆ ಬಾರಿಸಿ ಪಾಂಡುಕ ಶಿಲಾತಲಂ ಸೊಗಯಿಸುಗುಂ (ಅಂಪು. ೬-೬೯) : ಕೀರ್ತಿ ದಿಗ್ವಳಯಭಿತ್ತಿಯ ನೋವದೆ ಬಾರಿಸಿತ್ತು ಭಾಸುರರುಚಿಯನ್ನೆ ಚನ್ದ್ರಮನ ಚನ್ದ್ರಿಕೆಯಂ (ಎಕ. ೪. ಅರಸೀ. ೦೨೭. ೩೭: 1185); ನೇರಿತೆಳವಾಟಿಗಂಬಮನೋರಂತಿರೆ ನುಣ್ಣುವೆತ್ತು ಸೋಲಿಪ ಬೆಳ್ಪಿಂ ಬಾರಿಸಿ ಸೊಬಗಿಂಗೆತ್ತಿದ ತೋರಣ ಗಂಬಂಬೊಲಿರ್ದುವಾಕೆಯ ತೊಡೆಗಳ್ (ಕಮ್ಮಕಾ. ೭೩). ೫. ಬಿಡು ; ತೊರೆ ; ತ್ಯಜಿಸು : ಬಾರಿಸುತಿಂದ್ರಿಯಜ್ಞಾನವ ಪ್ರಾಣಾಪಹಾರಿಯಾಗಿರ್ದ ಕ್ಷುಧೆಯೊಳು ಸಾರನಿಜಾತ್ಮಭಾವನೆಯೆಂಬಮೃತಾಹಾರವ ಕೊಳುತಿರ್ದ ರೊಲಿದು (ಶಾಂತೀಶ. ೪-೭೩). [< ವಾರಿಸು]

**ಬಾರಿಸ್ಸು** 'ಬಾಜಿಸ್ಸು₂' ನೋ.

**ಬಾರೀಕ** (ಗು). ದಪ್ಪವಾಗಿಲ್ಲದ ; ತೆಳುವಾದ : ತುಂಬುಗಲ್ಲ. ಬಾರೀಕ ಮಾಸೆ. ಭರ್ತಿ ಆಳು (ಹೊಸ್ಕ. ೬೯).
[←ಪಾರ. ಹಿಂ. ಮರಾ. ಬಾರೀಕ್]

**ಬಾರೀಕಿ** 'ಬಾರಿಕಿ' ನೋ.

**ಬಾರು₁** 'ಬಾರ್₂' ನೋ.

**ಬಾರು₂** 'ಬಾರ್₃' ನೋ.

**ಬಾರು₃** 'ಬಾರ್₄' ನೋ.

**ಬಾರುಕೋಲು** 'ಬಾರ್ಕೋಲು' ನೋ.

**ಬಾರುಗಿ** (ಕ್ರಿ). ಚರ್ಮವನ್ನು ಎತ್ತು.—ಸುಲಿ : ಒದೆದುಗುರಿಂದೆ ಬಾರುಗಿದುದೆಯ್ದದೆ ಕುತ್ತಿದಳಟ್ಟಿ ಕಂಟಕೌಘದಿನಳಿ ಪಾಜಿದವ್ವಳಿಸಿ ಕೆಂದಳದಿಂದೊಳಪೊಯ್ದು ಪೊಯ್ದುದೆಯ್ದದೆ . . . ಕಡೆಗಣ್ಣಳಿಂ ಪಡೆದಳೋಪನನೋಪಳನಂಗಯುದ್ಧದೊಳ್ (ಲೀಲಾವ. ೦೩-೨೦).
[ ಬಾರ್₂ + ಉಗಿ₁ ]

**ಬಾರುಗುತ್ತ** 'ಬಾರ್ಗುತ್ತ' ನೋ.

**ಬಾರುಗುತ್ತು** 'ಬಾರ್ಗುತ್ತ' ನೋ.

**ಬಾರುಗೋಲು** 'ಬಾರ್ಕೋಲು' ನೋ.

**ಬಾರುದಾರಿ** (ನಾ). ಚರ್ಮದ ಮೇಲೆ ಬಿದ್ದ ಪೆಟ್ಟಿನ ಗುರುತು; ಬಾಸುಂಡೆ : ಪರಗಯ್ಯನು ಕಟ್ಟಿ ಬಿಜ್ಜನ ಚೇರ ಬಂದನು ಹೆಚ್ಚಿ ಬಡಿಯಲು ಬಾರುದಾರಿಗಳು ಎದ್ದು ಗುರುಗಳ ಬೆನ್ನಿನ ಮೇಲೆ (ಸಂಬಂ. ೩-೨೭). [?]

**ಬಾರುಸಿಪಾಯಿ** 'ಬಾರ್ಸಿಪಾಯಿ' ನೋ.

**ಬಾರುಳಿ** (ನಾ). (?) : ನೋಟ್ಟ ತರಳಲೋಚನವ ಸರಳಾಪಾಂಗಂ ಹರಿಣೀ ಭಾವವಂ ಮನಂಗೊಳಿಸಿ ನಿಜಿದಳಿರ್ದೊಂಗಲಂ ತೆಗೆಯೆ ಬಾ[ಶಾಶಾಂ. ಬಾ]ರುಳಿಯಂ ದನಿಗೆಯ್ದಶೋಕೆಯೊಳ್ ಕಿಜುಮುಗುಳ್ಗೊಂಜಿಯಂ ತಳೆದು ಪೂವಿನ ಬಿಲ್ ನನೆಯಂಬು ಕೆಯ್ಯೊಳಚ್ಚಿಜಿದಿರೆ ಮೇಚಕಚ್ಛವಿಯ ತಾವರೆ ಗಣ್ಣಳ್ ಗಾಳುವಣ್ಣಳೇಂ ಮಚಿಧರೂ ಕೇಳಿಶ್ಶೈಲಶಿಖರಾವಳಿಯೊಳ್ ಶಬರೀವಿಲಾಸವಂ (ಅಸಂಪು. ೬-೦೭). [?]

**ಬಾರೂತ್** 'ಬಾರೂದು' ನೋ.

**ಬಾರೂದು, ಬಾರೂತ್** (ನಾ). ತುಪಾಕಿಗಳಿಗೆ ತುಂಬುವ ಮದ್ದು ; ಸಿಡಿಮದ್ದು : ಮತ್ತೊಂದು ಜಹಜಿನಲ್ಲಿ ಬಾರೂದಿಗೆ ಬೆಂಕಿ ಹತ್ತಿ ಬೆಂದುಹೋಯಿತು (ಶಾಕೇಂದ್ರ. ೦೩೦) ; ಒಂದೆರಡು ಕಡೆ ಪೋಲೀಸು ಠಾಣೆಗಳಿಂದ ಕೋವಿ, ಬಾರೂದುಗಳು ಕಾಣೆಯಾಗಿವೆ (ಗೋಂಡಾರ. ೬).
**ಬಾರೂತ್** : ಬಾರೂತ್ ಜನಗಳು, ಎಂದರೆ . . . ಖಾಸಾಬಾರು, ಕಂದಾಚಾರ ವಗೈರೆ ಜನರಿಗೆ ಸೇರಿಸಿಕೊಂಡು ನಿಂತರು (ಕಕ್ರಶಾ. ೬೯).
[← ಪಾರ. ಹಿಂ. ಮರಾ. ಬಾರೂದ್, ಬಾರೂತ್]

**ಬಾರೆ** 'ಬೋರೆ₂' ನೋ.

**ಬಾರೆತ್ತು** (ಕ್ರಿ). ಚರ್ಮವನ್ನು ಕೀಳು; ತೊಗಲನ್ನು ಸುಲಿ : ಬಾರೆತ್ತಿ ಸೀಳಿಯುಂ ಗುಗ್ಗುಳಂಬೊತ್ತಿಸಿಯುಂ ಅಸಗವೊಯಲ್ವೊಯ್ಕೆಯುಂ (ಅಕಪು. ೧೧-೦೦ ವ) ; ಮಾದಿಗನಂತೆ ಬಾರೆತ್ತುವರ್ ನಾಯಂತೆ ಕಚ್ಚಿ ತಿಗೆವರ್ (ರವರ್ಣಾಮ್ಮ. ೩-೭೩) ; ಮಡದೀ ಹೆಡತಲೆವರಂ ಬಾರೆತ್ತುವುದುಂ ಕೂರಸಿ ಗಳಿಂದೆತ್ತಿ ಕುತ್ತುವುದುಂ (ಶಾಂತೀಶ್ವ. ೯-೦೦೦ ವ).
[ಬಾರ್₂ + ಎತ್ತು₁]

**ಬಾರೇಟು** (ಕ್ರಿ). ಹೊಡೆತದಿಂದ ಚರ್ಮದ ಮೇಲೆ ಬಾಸುಂಡೆ ಬರು : ತೋರಮುಡಿವಿಡಿದು ಕಾಡಿಯಂ ನಾರಂ ಸದೆವಂತೆ ತದೆದು ಬೀಟಿಯ ಕಾಲಿಂ ಬಾರೇಟ್ ಬಿದಿಯನೊದೆದೊಡೆ ಕೇರು ಪೊರಳ್ವಂತೆ ಕಾಲ ಮೇಲೆ ಪೊರಳ್ದಳ್ (ಹುಕೋಶ. ೨-೩೦) ; ಎನಗಿನ್ನಾರಾಸೆಯೊಡೆವಾರ್ತರಣೆಂದಾ ಕಳಕಂಠನಾದ ಬಸಿಜಿಂ ಬಾರೇಟ್ವಿನಂ ಮೋದಿದಳ್ (ಅಸಂಪು. ೦೦-೯೬).
[ಬಾರ್₂ + ಏಟು₁]

**ಬಾರ್ಕೋಲು, ಬಾರುಕೋಲು, ಬಾರುಗೋಲು** (ನಾ). ಚರ್ಮದ ಹೆಣಿಕೆಯುಳ್ಳ ಚಾವಟಿ : ತುದಿಯಲ್ಲಿ ಚರ್ಮದ ಪಟ್ಟಿಗಳನ್ನು ಹೊಂದಿಸಿದ ಚಾವಟಿ ; ಬಾರುಗುಣಿ (ಉಕ) : ಹೇರು ಕಟ್ಟಾಗ ಬಾರ್ಕೋಲ ನಾ ಮರೆತೆ . . . ನಮ್ಮೆತ್ತು ಮುಂದೆ ಮುರ್ಹೋಜ್ಜಿ ತೂಯೊಲ್ಲೊ (ಹಳ್ಳಿಪಾ. ೩೩). **ಬಾರುಕೋಲು** : ಬಂಡಿಕಾರಣ್ಣನ ಬಂಡಾಟ ನೋಡಿರೊ. ಬಾರುಕೋಲವನ ಬಲಗೈಲಿ (ಹಳ್ಳಿಹು. ೯೮); ಬಿರು ಗಾಳಿ ಮೈದುಂಬಿ, ಆಗಸದ ಮೂಲೆಮೂಲೆಯಲಿ ಸಿಡಿಲು ಮಿಂಚಿನ

ಬಾರಕೋಲು ಬೀಸಿ (ಕಿಂಶು. ೯೨-೦೪). **ಬಾರುಗೋಲು :** ಬಂಡಿಗಾರ ತನ್ನ ಬಾರುಗೋಲನ್ನು ನಡುಪಟ್ಟಿಯಲ್ಲಿ ಸಿಕ್ಕಿಸುತ್ತ . . . ನುಡಿದನು (ಕೃಷರು. ೩೬೦). [ಬಾರ್₂+ಕೋಲ್₁ (<ಕೋಲ್₁)]

**ಬಾರ್ಗಿರ್** 'ಬಾರ್ಗೀರ್' ನೋ.

**ಬಾರ್ಗೀರ್,** ಬಾರಗೀರ, ಬಾರಗೀರು, ಬಾರಾಗೀರ, ಬಾರ್ಗಿರ್ (ನಾ). ಕುದುರೆದಳದ ಸಿಪಾಯಿ : ಅಶ್ವಾರೋಹಿಯೋಧ : 'ಬಾರ್ಗೀರ್‌ಕಛೇರಿ' ಪರಾ. **ಬಾರಗೀರ :** ಹತ್ತು ಮಂದಿ ಸಿಲೇದಾರರೂ ನಾಲ್ವತ್ತು ಮಂದಿ ಬಾರಗೀರರೂ ಅವರನ್ನು ಹಿಂಬಾಲಿಸಿದ್ದರು (ಕಪುಂ. ೯೭). **ಬಾರಗೀರು :** ಅರವತ್ತು ಸಾವಿರ ಕುದುರೆಗಳಿಗೆ ಜೀನು ಹಾಕಿ ಸವಾರರು ಏರಿಕೊಂಡು ಯುದ್ಧಕ್ಕೆ ಹೊರಡಲು ಈ ಕ್ಷಣ ಸಿದ್ಧವಾಗಿದಾರೆ. ಬಾರಗೀರು ಸೇರಿ ಇದಕ್ಕೆ ಎರಡರಷ್ಟು ಫೌಜು ಇದೆ (ಮುಸುರ. ೯೯). **ಬಾರಾಗೀರ :** ದರ್ಬಾರದಲ್ಲಿ ಬಾದಶಹನು ನಮ್ಮನ್ನು ಒಬ್ಬ ಬಾರಾಗೀರನಂತೆ ಭಾವಿಸಿ, ದೂರ ನಿಂತುಕೊಳ್ಳುವಂತೆ ಸಂಜ್ಞೆ ಮಾಡಿದನು (ಛತ್ರಶ. ೦೯೨). **ಬಾರ್ಗಿರ್ :** ಇಂಗ್ಲಿಷ್ ಕಂಪೆನಿಕ್ಯಾವಲ್ರಿಯ ಪದ್ಧತಿಯಂತೆ ಏರ್ಪಟ್ಟ ೫೦೦ ಮಂದಿ ಸವಾರರು ಕ್ಲೋಸ್‌ಪೇಟೆಯಲ್ಲಿ ಮೊಕ್ಕಾಂ ಮಾಡಿದ್ದರು. ಇವರಿಗೆ ಬಾರ್ಗಿರ್ ಎಂಬ ಹೆಸರು ಕೊಟ್ಟಿತ್ತು (ಮುಹಾಪು. II. ೯೬). [← ಪಾರ. ಬಾರ್ಗೀರ್ : ಮರಾ. ಬಾರ್ಗೀರ್, ಬಾರಗೀರ್ ; ಹಿಂ. ಬಾರಗೀರ್]

**ಬಾರ್ಗೀರ್‌ಕಛೇರಿ** (ನಾ). ಹಳೆಯ ಮೈಸೂರು ಸರಕಾರದ ಅಠಾರಾ ಕಛೇರಿಗಳಲ್ಲಿ ಒಂದು ; ಅಶ್ವದಳದ ಕಚೇರಿ : ಕಛೇರಿಗಳು—೧. ದಿವಾನ್‌ಕಛೇರಿ. . ೪. ಬಾರ್ಗೀರ್‌ಕಛೇರಿ (ಮುಹಾಪು. II. ೩೬).

[ಬಾರ್ಗೀರ್ + ಕಛೇರಿ(<ಕಚೇರಿ)]

**ಬಾರ್ಗೀರಿ,** ಬಾರಗಿರಿ (ನಾ). ಕುದುರೆ ದಳದ ಕೆಲಸ ; ಅಶ್ವಾರೋಹಿ ಸೈನಿಕರ ವೃತ್ತಿ : ಅಶ್ವಸೇನೆಯಲ್ಲಿ ಬಾರ್ಗೀರಿಯವರೂ ಸಿಲೇದಾರರೂ ಎಂದು ಎರಡು ಬಗೆಯವರಿದ್ದರು (ಛತ್ರಶ. ೦೩೨). **ಬಾರಗಿರಿ :** ಬಾಗಿಲ ಕಂದಾಚಾರದ ಚಾವಡಿ— ಇಲ್ಲಿ ಸವಾರರು, ಬಾರಿನವರು, ಬಾರಗಿರಿಯವರು . . . ಮುಂತಾದವರ ಲೆಕ್ಕವನ್ನು ಬರೆವಂತೆ ಗೊತ್ತುಮಾಡಿದರು (ಮುಹಾಪು. I. ೦೯೭). [← ಮರಾ. ಬಾರಗಿರೀ]

**ಬಾರ್ಗುತ್ತ,** ಬಾರಗುತ್ತು, ಬಾರುಗುತ್ತ, ಬಾರುಗುತ್ತು (ನಾ). ಒಂದು ಬಗೆಯ ಜೂಜು ; ಪಣವೊಡ್ಡಿ ಆಡುವ ಒಂದು ಬಗೆಯ ಆಟ : ನೆತ್ತಂ ಚದುರಂಗಂ ಬಾರ್ಗುತ್ತಂ ಕಡದೊಂಟಿ ಗೊಟ್ಟಿ ಜೂದೆಂಬವ ನಾಡುತ್ತುಮಿರಲಾಗದು (ಸಪುಶ. ೬-೯೦). **ಬಾರಗುತ್ತು :** ವಾರನಾರಿಯ ಕೂತ್ತ . . . ಬಾರಗುತ್ತು ನಿಯೋಗ ಜೂಜಿನ ಧನ ಸುಭಾಷಿತವು ಏಚುಮಾಚು ವಿವಾಹ ರತಿಯುಪಕಾರ ನೆಗಳಿದ ರಾಜಕಾರ್ಯವಿಚಾರನಾ ಹದ ತಪ್ಪಿ ತಪ್ಪುಗುಂ (ಜೀಪಂಶ. ೯-೭೭); ಧೂರ್ತಾಂತರಾತ್ಮಜರು . . . ತಂ ತಮಗೆ ಬಾರಗುತ್ತಾದಿ ಬಹು ಜೂಜುಗಳನಾಡುತಿಹರು (ಪಪಪೂ. ೨-೯೯). **ಬಾರುಗುತ್ತ :** ಲೆತ್ತ ಪಗಡೆ ರಾಯಬೊಗರಿ ಸೊಲ್ಲಿಹ ಬಾರುಗುತ್ತದೊಳ್ಪಿಯ ಸರಿಬೆಸದಿ ವಿತ್ತನಾಶವ ಮಾಡುವ ಜೂದುಗಾಜರ ಮೊತ್ತವಿರ್ದುದು ಮನೆಮನೆಗೆ (ಪೋಹಶ. ೨೦-೨೩). **ಬಾರುಗುತ್ತು :** ಜೇಯ ಜೂಜಿನ ಬಾರುಗುತ್ತಿದು ನಿಮ್ಮ ಚಿತ್ತಕೆ ಬಹಡೆ ಮಾಡುವವು (ಕುಮ್ಯಾಕ. ೯-೬೨); ಹೊಣೆ ಬಾರುಗುತ್ತು ಕಬ್ಬಿನ ಹಣೆದಂ ಒರಿದೊತ್ತೆಗೊಂಬ ಸೂಳೆಯ ಸಂಗಂ ಕ್ಷಣದೊಳ್ ಕೊಲ್ಲದೆ ಮನುಜನ ತೃಣದಿಂ ಕಡೆ ಮಾಡದಿಹವೆ (ಶೀಶಿಶಾ. ೨೯೯). [?]

**ಬಾಚ್ಚು,** ಬಾಚು, ಬಾಯ್ಚು, ಬಾಸ್ಕು (ಕ್ರಿ). ೧. ಎಳೆದುಕೊಳ್ಳು : ಸೆಳೆ ; ಗೋರು : ಅಸುವಂ ತೀರ್ಚಿ ಕೆಲವರ ಮಹಾ ಡೂಂಕಾರದಿಂದಂ ತಳರ್ಚಿ ಕೆಲವರನೊಡನೆ ವಾಶಾಗ್ರದಿಂದಿರದೆ ಬಾರ್ಚಿ ಕೆಲಬರನಿಂತು ಭಂಗವಂ ಮಾಡುತ್ತೈತರುತಿರ್ದನು (ಕಿಂಶು. ೯೯-೦೯). ೨. ಉತ್ಕಟವಾದ ಬಯಕೆಯಿಂದ ತಬ್ಬಿ ಹಿಡಿ,— ಬಾಚಿ ಹಿಡಿ ; ಸೆಳೆದಪ್ಪಿಕೊಳ್ಳು : ಪೆರ್ಚುವೆತ್ತಪರಂಜ್ಯಗಳಶವನಷ್ಟವಿಥಾರ್ಚನೆಯಿಂದ ಸತ್ಕರಿಸಿ ಬಾರ್ಚಿ ಕೈವಿಡಿದನು ಮಾಂದಳಿಂಗೆ ಪಣ್ಣ ಸಾರ್ಚಿದಂತೊಪ್ಪಿತಾ ಥಾವ (ಜಶ. ೦೬-೬೩). ೩. ಒಟ್ಟುಗೂಡಿಸು ; ರಾಶಿಮಾಡು : "ಬಾರ್ಚು—ಪುಂಜೀಕರಣೇ (ರಾಶಿ ಮಾಡು)" (ಕಪುರಾ). ೪. ತಲೆಗೂದಲನ್ನು ಹಣಿಗೆಯಿಂದ ಹಿಕ್ಕು,— ಸಿಕ್ಕು ಬಿಡಿಸಿ ಓರಣಗೊಳಿಸು : ಪಸರಿಸಿ ಪಂದಲೆಯಂ ಮೆಟ್ಟಿಸಿ ವೈರಿಯ ಪಲ್ಲ ಪಣಿಗೆಯಿಂ ಬಾರ್ಚಿ ಪೊದಟ್ಟೊಸಗೆಯಿನವನ ಕರುಳ್ಗಳೆ ಪೊಸಮಾಸಿಗ ಮಾಗೆ ಕೃಷ್ಣೆಯಂ ಮಾಡಿಯಿಸಿದಂ (ಹಂಕಶಾ. ೦೨-೦೩೩); ಮದಿರಾರಸದಿಂದಂ ಬಾರ್ಚಿದರೋ ಪೇಟಿಸಿಸಿ ಪೊಳೆವ ತಲೆದುಡಿಗೆಯ ರನ್ನದಿನೊಸರ್ವ ರಾಗ ರುಚಿಯಂ ಪುದಿದೆಸೆದುದು ಕೇಶಪಾಶವಮಾ ಕಾಮಿನಿಯಾ (ಕಾಜಂಕಾ. ೨೦). **ಬಾಚು :** ೧. ಸಪ್ತಕುಲಪರ್ವತಂಗಳನೋರ್ವೆ ಬಾಚಿಯಂಗೈಯೊಳಾಂತು ಓರಂತೆ ತಿರಿಕಲ್ಲನಾಡುತ . . . ಗಹಗಹಿಸುವಂ ಬಾಲಲೀಲೆಯ ಕುಮಾರಂ (ಶೀಕ್ಕೆಪು. ೩-೨೦-೯೯) ; ನಿದ್ರಾಂಗನೆ ಕರುಣೆ ತೋರಿ ಆಕೆಯನ್ನು ಬಾಚಿ ತಬ್ಬಿದಳು (ಕೂಕಶಿ. ೨೦೦) ; ಜಗದ ಒಲವನೆಲ್ಲ ಬಾಚಿ ಜ್ವಲಿಸುವಳೀ ಜರ್ಬರಾ ! (ಅಶೀ. ೦೬-೩). ೨. ನಯದೊಳ್ಪನೇ ಬಳಸಿ ಕೈಬಾಚಿ ಬಾಚಿದಿರಿ ಬಳಿಗೆ (ಅಮುಕಂ. ೨೨-೦೯). ೪. ಕಲಿಭೀಮ ಮಾಡಿದ ರಹಪನದನೇ ನೆಂಬೆನ್ನೆ ಕೂರಿಹ ಕಠಾರಿಯ ಹಣೆಗೆಯಲಿ ಬಾಚಿದನು ಸಿರಿಮುಡಿಯ (ಕುಮ್ಯಾ. ೨೨-೯೦). ೫. ಕಿತ್ತುಕೊಳ್ಳು ; ದೋಚು : ಭಟನು ನಾನಿರಲುಭಯರಾಯರ ಕಟಕದೊಳಗಿನ್ನಾವನೆಂದುಬ್ಬಟೆಯ ನುಡಿಗಳ ನುಡಿದು ಬಾಚಿದೆ ಕೌರವನ ಧನವ (ಕುಮ್ಯಾವಿ. ೬-೦೯) ; ತುಡುಗುಣಿಗಳವದಿರು . . . ಹುವಿಗೊಂಬಮರನಿಕರದ ಹೆಡಕ ಬಾರಿಸಿ ಬಾಚುತಿರ್ದರು ಬಾಯ ತುತ್ತುಗಳ (ಕೂಕಾ. ೦-೦೦-೮); ನಾನಾ ಪರಿಯಲರಮನೆಯ ರೊಕ್ಕವಂ ತಿಂದು ಹೊಳ್ಳಿಸಿ ಬಾಚಿ ದಕ್ಷಿಣೆಯ ನೆವದೊಳಗೆ (ಕುರಂಗ. ೩೭-೦೯). ೬. ಒಟ್ಟುಗೂಡು ; ಗುಂಪಾಗು : ಈ ಚತುರ್ದಶ ಭುವನಜೀವರ ಸ್ವೋಚಿತವ್ರತಪುಣ್ಯವೆಲ್ಲವು ಬಾಚಿ ಪುಟ್ಟಿತು ಕಾಮಧೇನುವಿನಂಗಮಧ್ಯದಲಿ (ಸಂಭಶ. ೩-೨೬) ; ಕಡಲೆಡೆಯೊಳಿರ್ದ ವಿಗಿಲಾಣಿಮುತ್ತುಗಳ್ ಬಾಚಿ ಬರಲುರ್ವರೆಗೆ ಮಗುಳೊಗುವ ಬಗೆಯೊ . . . ಎನೆ ಬೆಳ್ಸರಿ ಶರತ್ಸಮಯದೊಳ್ ಮೆಚಿದವು (ಪಂರಿಷು. ೨೨-೫೬). **ಬಾಯ್ಚು :** ೪. ಮಾನಿನಿಯರುಂ ಪೊಸೆದು ತಲೆಗರೆದು . . . ಬಾಯ್ಚು ಬೈತಲೆಯ ತೆಗೆದು (ಪಪಪೂ. ೯-೯). **ಬಾಸ್ಕು :** ೨. ಪ್ರಿಯದಿಂ ಬಾಸಿ ಪಿಡಿದೈತಂದು ಕುಳಿತರು ತುಪ್ಪುಳಾಸನದಿ (ಕಶೀಮಾ. ೨೦೬-೩೬).

[ಬಾರ್₁ + — ಚು₁./ತುಳು. ಬರ್ಚು, ಬಾಚು]

**ಬಾರ್ಣಾಸಿ** 'ಬಾರಣಾಸಿ' ನೋ.

**ಬಾರ್ತೆ** 'ಬಾಟ್ತಿ' ನೋ.

**ಬಾರ್ತೆಗಿಡು** 'ಬಾರ್ತೆಗೆಡು' ನೋ.

**ಬಾರ್ತೆಗೆಡು,** ಬಾತೆಗೆಡಂ, ಬಾರ್ತೆಗಿಡು (ಕ್ರಿ). ಅವಮಾನ ಹೊಂದು ; ಹೀಯಾಳಿಕೆಗೊಳಗಾಗು : ಕೊಳದೊಳಗೆ ಪೊಕ್ಕು ಪೊಯ್ಗರೆದೈ ಚೀ ಖಲ್ಕನೆನೆ ಬಾರ್ತೆಗೆಟ್ಟುವಮುಲ್ಕಯಶೋರತ್ನಮೊಂಬುದಂ ಮಾಡುವನೇ (ಗಜಾಷು. ೭-೨೯) ; ದಾನವರುಪಟಳಕೆ ಬಣ್ಣಂಗುಂದಿ ಬಾರ್ತೆಗೆಟ್ಟು ದೂರಿದ ಬರ್ದಿಲರ್ಗೆ ನಾರಾಯಣಂ . . . ಪಡಿನುಡಿದಂ (ರಾಘೂಕ್ಕ. ೦೯-೬). **ಬಾತೆಗೆಡು :** ಯಾಗದಗ್ರದೊಳ್ ಬಾತೆಗೆಟ್ಟಳನು ಪಟ್ಟರಿಸಿ (ಶಿಕೋಶ. ೯-೭೩). **ಬಾರ್ತೆಗಿಡು :** ನಡೆಗಿಡೆ ಕೀರ್ತಿ ಬಾರ್ತೆಗಿಡೆ ಲಕ್ಷ್ಮಿ ಮೊದಲ್ಗಿಡೆ ಮಾನಸಿಕ್ಕೆ ನೇರ್ಪಡುಗಿಡೆ ಸತ್ಯಶೌಚಗುಣಸಂಪದಮೇಳಿದನಾದಂ (ಶಂಕಾಷು. ೯-೯೩). [ಬಾರ್ತೆ (<ಬಾಟ್ತಿ) + ಕೆಡು₁]

**ಬಾರ್ತೆಗೆಯ್** 'ಬಾಟ್ತಿಗೆಯ್' ನೋ.

**ಬಾರ್ಪು** 'ಬಾಪ್ಪು' ನೋ.

**ಬಾರ್ಲಿ** (ನಾ). ಒಂದು ಬಗೆಯ ಧಾನ್ಯ : ಕ್ರಿ.ಪೂ. ೫೦೦೦ರಲ್ಲಿ ಈಜಿಪ್ಟಿನಲ್ಲಿ ಗೋಧಿಯನ್ನೂ ಬಾರ್ಲಿಯನ್ನೂ ಬೆಳೆಯುತ್ತಿದ್ದರು (ಕಿರ್ವಿಜ್ಞಾ. ೩೬೯) ; ಬಾರ್ಲಿ . . . ಇದನ್ನು ಜವೆಗೋದಿ ಎಂದು ಕರೆವುದುಂಟು (ಕಂಕೋ. XII, ೩೮). [←ಇಂ. Barley]

**ಬಾರ್ಶಿಪಾಯಿ,** ಬಾರುಸಿಪಾಯಿ (ನಾ). ತುಪಾಕಿಯನ್ನು ಹಿಡಿದು ಕಾಲ್ನಡಿಗೆಯಿಂದ ಸಾಗುವ ಪದಾತಿ : "ಪದಾತಿಃ, ಪತ್ತಿಃ . . . ಪದಿಕಃ — ೭ ಕಾಲುನಡೆಯ ಭಟರ ಹೆಸರುಗಳು, ಬಾರ್ಸಿಪಾಯಿಗಳು" (ಸಿದ್ಧಾಂತಿ. ೨೩೬). **ಬಾರುಸಿಪಾಯಿ :** ದಳವಾಯಿ ನಂಜರಾಜಅರಸಿನವರ ಅಧಿಕಾರದಲ್ಲಿ ಬಾರುಸಿಪಾಯಿಗಳು ೧,೦೦೦ ಮಂದಿ ಮಾತ್ರ ಕಾಯಮ್ಮಾಗಿದ್ದರು (ಮಕಾಹ. II, ೦೮). [ಬಾರ್³ + ಸಿಪಾಯಿ]

**ಬಾರ್ಹತ** (ನಾ). ಹೆಗ್ಗುಳ್ಳದ ಕಾಯಿ ; ಬೃಹತೀಫಲ : "ಅಶ್ವತ್ಥಂ, ವೈಣವಂ, ಪ್ಲಾಕ್ಷಂ, ನೈಯಗ್ರೋಧಂ, ಐಂಗುದಂ, ಬಾರ್ಹತಂ . . . ಕ್ರಮವಾಗಿ ಅಶ್ವತ್ಥಾದಿ ವೃಕ್ಷಗಳ ಫಲಗಳಿಗೆ ಹೆಸರುಗಳು" (ಸಿದ್ಧಾಂತಿ. ೧೦೩). [ಸಂ.]

**ಬಾರ್ಹಸ್ಪತ್ಯ** (ಗು). ೧. ಬೃಹಸ್ಪತಿಗೆ ಸಂಬಂಧಿಸಿದ. (ನಾ). ೨. ಬೃಹಸ್ಪತಿಯಿಂದ ರಚಿತವಾದ ಶಾಸ್ತ್ರ. ೩. ಬೃಹಸ್ಪತಿಯ ಅನುಯಾಯಿ. ೪. ಕಾಲವನ್ನು ಅಳೆಯುವ ಒಂದು ಬಗೆಯ ಲೆಕ್ಕಾಚಾರ : ಆ ಸಂವತ್ಸರವೇ ಸೌರ ಚಾಂದ್ರ ಬಾರ್ಹಸ್ಪತ್ಯ ನಾಕ್ಷತ್ರ ಸಾವನಭೇದದಿಂದೈದು ತೆಱನಾಗಿರ್ಪುದು (ಶಬ್ದಸಾ. ೩೨೦); ಪರಿ ಇಡಾವತ್ಸರನು . . . ಬಾರ್ಹಸ್ಪತ್ಯ ಸೌರಭ ಚಾಂದ್ರಮಸಾಯೆನಿಸಿ ಇರುತಿಹ (ಹರಿ. ೩-೪೦). ೫. ಅಗ್ನಿ. ೬. [ಜ್ಯೋತಿ] ಒಂದು ನಕ್ಷತ್ರದ ಹೆಸರು ; ಪುಷ್ಯನಕ್ಷತ್ರ. [ಸಂ.]

**ಬಾಲ¹,** ಬಾಳ¹ (ನಾ). ೧. ಪ್ರಾಣಿಗಳ ಹಿಂಭಾಗದಲ್ಲಿ ಗುಹ್ಯಾಂಗವನ್ನು ಮುಚ್ಚುವಂತಿರುವ ಹಾಗು ಅಲುಗಾಡಿಸಬಲ್ಲ ಉದ್ದವಾದ ಚಾಪಟಿಯಂತಹ ಅಂಗ ; ಲಾಂಗೂಲ ; ಪುಚ್ಛ : "ವಾಳಧಿಯು ಲಾಂಗೂಲ ಮನೆ ಬಾಲವೆಸರಕ್ಕು" (ಮಂಗರಾ. ೬೧-೦೩) ; ತೆಗೆದೆಚ್ಚರ್ಜುನನಂಬು ತೀವೆ ತುದಿಯಿಂ ಬಾಲಂಬರಂ . . . ಕೊಂಡುದು (ಶಂಕರಾ. ೬-೦೭) ; ನಾಯ ಬಾಲವಂ ಕಾಸಿ ತಿರ್ದಿದೊಡಂ ಕೊಂಕು ಮಾಣದಹಗೆ (ಶಂಕರಶಂ. ೧೦೩-೨) ; ಹೊನ್ನ ಹುಳವ ಕಂಡು ನರಿ ತನ್ನ ಬಾಲವ ಹುಣ್ಣುಮಾಡಿಕೊಂಡರೆ ಹೋಲಬಹುದೆ (ಬಸವ. ೨೬೭). ೨. ಕೂದಲು. **ದಾಳ¹:** ೧. ವಾಲ—ಬಾಳ (ಶಬ್ದ. ೨೯೬ ಕೃ ಯೋ).

**ಬಾಲ ಅಲ್ಲಾಡಿಸು** = ೧. ಬಾಲವನ್ನು ಅಲುಗಾಡಿಸು : ಅವನನ್ನು ಕಂಡ ಕೂಡಲೇ ಆ ನಾಯಿಯು ಬಾಲ ಅಲ್ಲಾಡಿಸುತ್ತಾ ಅವನ ಬಳಿಗೆ ಬಂದು (ಮುಂಬಯಿ. ೪-೦೦೭). ೨. (ಅಲಂ) ಇನ್ನೊಬ್ಬ ವ್ಯಕ್ತಿಯು ಹೇಳಿದುದಕ್ಕೆಲ್ಲ ಒಪ್ಪಿಗೆ ನೀಡು : ಮುಂದಾಳುಗಳ ಎದುರಿನಲ್ಲಿ ಬಾಲ ಅಲ್ಲಾಡಿಸುತ್ತಿರುವುದೆ ಅವನ ಕಸುಬಿನ ಗುಟ್ಟು (ರೂಢಿ). **ಬಾಲಕೊಳ್ಳಿ**= (ಹನುಮಂತನನ್ನು ನೆನಪಿಸುವ) ಒಂದು ಬಿರುದು : ಪಟಹನುರುವ ಬಾಲಕೊಳ್ಳಿ ಚಬುಕು ಜೇಗಟೆ ಚೋಹ ಜಗಜಾಪು ಚೆಂಡು ನಿಟಿಲದ ನೇತ್ರದ ಬಲುಬಿರುದಿನ ಬಲುಭುಜರಲ್ಲದಿಲ್ಲವವನಿಗೆ (ರಾಮನಾ. ೦೪-೯೨). **ಬಾಲ ಬಡಿ**= ಅನುಗ್ರಹ ಸಂಪಾದನೆಗಾಗಿ ಅನುನಯದಿಂದ ವರ್ತಿಸು. — ಅನುಚರನಂತೆ ನಡೆ : ದೈವವಶದಿಂದ ಒಂದು ವೇಳೆ ಕಾಲೀಪದನು ತನ್ನ ವಶವರ್ತಿಯಾಗಿ ಬಾಲ ಬಡಿಯುತ್ತ ಬಂದಿದ್ದರೆ ಇಂದು ಶೈಲೇಂದ್ರನ ಲಜ್ಜೆಗೆ ಸೀಮೆಯೇ ಇರುತ್ತಿರಲಿಲ್ಲ (ಇಕ್ಷ್ವಕ. ೩೬೯). **ಬಾಲಬಡುಕ** = (ಅಲಂ) ಅನುಚರ ; ಹಿಂಬಾಲಕ; ಅನುಯಾಯಿ : ಆಂಗ್ಲೇಯ ಬಾಲಬಡುಕರಂತಿದ್ದ ರಂಗನಾಥ, ನಾಗೇಂದ್ರ . . . ಮುಂತಾದವರು ಸ್ವರಾಜ್ಯ ಬಂದ ನಂತರ . . . ಶುದ್ಧ ಖಾದಿಧಾರಿಗಳಾದರು (ಹಂಚಿಕೆ. ೯೩). **ಬಾಲ ಬಿಚ್ಚು** = (ಅಲಂ) ಚೇಷ್ಟೆ ಮಾಡು; ಕಿತಾಪತಿ ಮಾಡು : ಇವ ಬಾಲಾ ಬಿಚ್ಚಿದರ ಸಾಕು, ಕೊಯ್ದು ಒಗೀತೀವಿ (ಹುಬ್ಬ್ಳಿ.ಹ. ೬೪). **ಬಾಲ ಮಡಿಚು** = (ಅಲಂ) ಸೋತುಹೋಗು ; ಸುಮ್ಮನಾಗು : ನಾವು ಹೊಗಸರೇ ಇದ್ದುದಾದರೂ ಗೋವಿಂದಯ್ಯ ಬಾಲ ಮಡಿಚಿ ಹೋಗಲಿಲ್ಲವೇ ? (ತ್ಯಾಗಜಾ. ೦೬೦). **ಬಾಲಸುಡುಕ** = ಬಾಲವನ್ನು ಸುಡಿಸಿಕೊಂಡವನು ; ಹನುಮಂತ : ಹೇಳಲೇನದನವನ ವಿಧಿಯನು ಕೇಳಿತಿಲ್ಲವಲಾ ಕಪೀಂದ್ರನ ಪಾಳಿಯವ ಹೊಗಗೊಡದೆ ಕಪಿಪೋತಂಗಳು ಬ್ಬಿಱಿದು ಬಾಲಸುಡುಕನ ತ್ವರಲಾ ಕಟ್ಟಿಯೂಳಿಗವು ನಮಗಾಯ್ತು (ಕೊರವ. ೬-೧೧-೩೯). **ಬಾಲ ಹಿಡಿ** = ಹಿಂಬಾಲಿಸು ; ಅನುಸರಿಸು : ಸುಮ್ಮನೆ ಕಣ್ಣು ಮುಚ್ಚಿಕೊಂಡು ದುರ್ಯೋಧನನ ಬಾಲ ಹಿಡಿದು ಹೋಗುತ್ತ ಪಾಂಡವರನ್ನು ಸದಾ ದ್ವೇಷಿಸುತ್ತಿರುವ ಈ ಕರ್ಣನೊಬ್ಬನೆ ನನ್ನ ಎದೆಗಿಚ್ಚಾಗಿದ್ದಾನೆ (ಶಕಶಾ. ೨೬೦) ; ಗೆದ್ದ ಎತ್ತಿನ ಬಾಲ ಹಿಡಿ (ಗಾದೆ). ☞ ಈ ಉಲ್ಲೇಖದಲ್ಲಿ ಸೂಚಿಸಿರುವ ಎರಡು ಅರ್ಥಗಳೂ ಸಂಸ್ಕೃತಕೋಶಗಳಲ್ಲಿ 'ಬಾಲ' ಉಲ್ಲೇಖಕ್ಕೆ ಇರುವುದಾದರೂ ಇದು 'ವಾಲ' ಎಂಬುದರ ತದ್ಭವವೆಂದು ಪರಿಗಣಿಸಿದೆ.

[<ಸಂ. ವಾಲ]

**ಬಾಲ²,** ಬಾಳ² (ಗು). ೧. ಬಲಿಯದ ; ಎಳಸಾದ : ಬಾಲ ಮೃಣಾಳವಂ ಒಡಿದು ಕೀಲ್ಗವೊಲಶ್ರಮದಿಂ ಮನೋಭವವ್ಯಾಲಗಜೇಂದ್ರ ದಂತಯುಗಳಂಗಳನೇಕಯೊ ಕಿಟ್ಟಿಂ (ಶಂಕರಶ. ೬-೪೦). ೨. ಚಿಕ್ಕ ವಯಸ್ಸಿನ; ಎಳೆಯ: ಬಾಲಜಾಯಿಲನಿಂದ ವೇದವನೋಳಿಯಿಂದೋದಿಸನೆ ಹಾವಿನ ಹಾಳ ಕಲಿದೇವಂ (ಬಸವ. ೩೩-೩೩) ; ಬಾರಯ್ಯ ನಮ್ಮ ಮನೆಗೆ ಬಾಲಗೋಪಾಲ (ಶ್ರೀರಂ. ೩-೦೦೩ ಅವುಪಲ್ಲ). ೩. ಅದೇ ಉದಯವಾಗಿ (ಸೂರ್ಯ ಅಥವಾ ಚಂದ್ರನಂತೆ) ಬೆಳೆಯುತ್ತಿರುವ ; ಏರುತ್ತಿರುವ. ೪. ಬಾಲಿಶವಾದ ; ಹುಡುಗಾಟಿಕೆಯ ; ಮಕ್ಕಳಾಟಿಕೆಯ. ೫. ದಡ್ಡತನದ ; ತಿಳಿಗೇಡಿಯಾದ. (ನಾ). ೬. ಬಲಿಯದುದು ; ಎಳಸಾದುದು : ಮೂಲಕಂ ಬಾಲಂ ದೋಷಹರಮಬಾಲಂ ದೋಷಕರಂ (ಶಾಂತಿಪು. ೮-೦೨೮ ವ). ೭. ಮಗು ; ಶಿಶು : ಆತನುಂ ಬಾಲನಾಕಾಂಕ್ಷೆಗೆಚ್ಚರಿವಡುತ್ತ ಮೌನವಿರೆ (ಶ್ರೀರಾಮ. ೨೦-೩೩೮). ೮. ಹುಡುಗ ; ಬಾಲಕ: "ಬಾಲಃ, ಬಾಲಕಃ—ಈ ೨ ಹುಡುಗಂ" (ಶಾಶ್ವ. ೦೯೭);ನಾನುಂಡುದ್ದದ್ದು ಬಾಲಂಗೆಣಲಿಕ್ಕೆ ಮೇಲಿಟ್ಟು ಮುಚ್ಚಿಡೋ ಎನ್ನ ಗುಡ (ಶ್ರೀರಂ. ೩-೦೩೭-೬). ೯. ಪ್ರಾಣಿಗಳ ಮರಿ ; ಪೋತ. ೧೦. ದಡ್ಡ; ಮೂರ್ಖ. **ಬಾಳ²:** ೧. ಮುತ್ತಿನ ಸೂಸಕಂಗಳಂ ಬಾಳಮೃಣಾಳಮೆಂದೆ ಕರ್ದು ಕಬ್ಬಗೆಗುಂ ಕಳಹಂಸಪೋತಕಂ (ಪಂಪಭಾ. ೨-೬೬). ೭. "ಬಾಳಃ, ಪಾಕಃ, ಅರ್ಭಕಃ . . . ಡಿಂಭಃ — ಈ ೯ ಮಗವು" (ಹಲಾಯು. ೮೩-೩೯೮) ; ಬಾಳನ ಸಾಸಾಪುಟದೊಳ್ ಮೇಳಿಸೆ ದುಗ್ಧೋದಬಿಂದುಸಂದೋಹಂಗಳ್ ಲೀಲೆಯಿನಾಂತುಸಿರ್ದೊಡೆ ಕಡುಗಾಳಿಯ ತಱಗೆಲೆಗಳಂತೆ ಪಾಱಿದ ರಮರರ್ (ಆದಿಪು. ೪-೬೩). ೮. ಬಾಳಂ ನಿಜಾನುಜಂ ರಣಲೋಳಂ ಸಲೆ ದ್ರುಪದನನ್ನದರ್ಜುನನು ತತ್ಕ್ಷಣಸುತನಟ್ಟಿ ಪೋಗಿ ವಿಶಾಳಬಳಂ ಕಾದಿ ಕಟ್ಟಿತಂದೊಪ್ಪಿಸಿದಂ (ಕೇಶಿರಾಜ. ೮-೪೦). ೧೦. "ವೈಧೇಯಃ, ಬಾಲಿಶಃ, ಬಾಲಃ, ಜಡಃ . . . ಮಾತೃಶಾಸಿತಃ — ಈ ೧೧ ಅಱಿಯದವಂ" (ಹಲಾಯು. ೩೬-೦೮೦). [ಸಂ.]

**ಬಾಲಂಗಚ್ಚೆ** 'ಬಾಲಗಚ್ಚೆ' ನೋ.

**ಬಾಲಂಗೋಚಿ,** ಬಾಲಂಗೋಸಿ (ನಾ). ೧. ಗಾಳಿಪಟದ ತಳಕ್ಕೆ ಕಟ್ಟುವ ಉದ್ದವಾದ ಪಟ್ಟಿ ; ಬಾಲಂಗಚ್ಚೆ : ಗಾಳಿಪಟ ಮೇಲೇರಲು ಬಾಲಂಗೋಚಿ ಅಗತ್ಯ (ರೂಢಿ). ೨. ಉದ್ದವಾದ ಪಟ್ಟಿ ; ದೀರ್ಘವಾದ

ಯಾದಿ : ಉದಾಹರಣೆಗಳ ಬಾಲಂಗೋಚಿ ಬೆಳೆಯುತ್ತಲೇ ಹೋಗುತ್ತಿತ್ತು (ಸಾಹಿಲ್. ೪೦೯). **ಬಾಲಂಗೋಸಿ** : ೧. ಬಣ್ಣದ ಕಾಗದ ಬೇಕು . . . ಬದಿರಿನ ಕಡ್ಡಿಗಳು. ಒಂದು ಸಣ್ಣ ಬಾಲಂಗೋಸಿ ಪಟ್ಟು ಅಂಟು ಬೇಕು (ಕಪತ್ತು. ೩-೨೦). [ಬಾಲ₁ + ಗೋಚಿ]

**ಬಾಲಂಗೋಸಿ** 'ಬಾಲಂಗೋಚಿ' ನೋ.

**ಬಾಲಂತಿತನ** 'ಬಾಣಂತಿತನ' ನೋ.

**ಬಾಲಕ**, ಬಾಳಕ₃ (ಗು). ೧. ಎಳೆಯ ವಯಸ್ಸಿನ ; ಶೈಶವಾವಸ್ಥೆಯ: ಚಿಕ್ಕಂದಿನ : 'ಬಾಲಕತನ' ಪರಾ. (ನಾ). ೨. ಮಗು ; ಶಿಶು : "ಶಿಶು ಪೋತ ಬಾಲಕ ಶಾಬ ಡಿಂಬವರ್ಭಕ ಪಾಕವೆನೆ ಪಡೆದ ಕೂಸೆನಿಕ್ಕು" (ವಾಂಗಣ. ೯೧-೮) ; ಬಾಲಕನಮೃತಮೆ ಕೆಯ್ಯುಂ ಕಾಲುಂ ಬಳೆವಂತ ಮಧುರಗಂಭೀರಂ . . . ಎನಿಸಿದಂ ಕಿಱಿಯಂದುಂ (ಶಾಂತಿಪು. ೬-೧೦೬) ; ಬಾಲಕರಿಲ್ಲದ ಬಾಲಿದ್ಮಾತರ ಜನ್ಮ ಬಾಡಿಗಿ ಎತ್ತು ದುಡಿದಂಗ (ಗಡಿ. ೧೦೬). ೩. ಹುಡುಗ ; ಕುಮಾರ : ಕಾಳೆಗದೊಳಂಗೈಸಲವ್ವುದೆ ಬಾಲಕನ ನೂಕಿದಿರಲಾ ನಿವ್ವಾಳುತನವನು ತೋಱಿದಿರಲಾ (ಕುಮಾರವ್ಯಾ. ೯-೨೪). ೪. ಮೂರ್ಖ; ತಿಳಿಗೇಡಿ. **ಬಾಳಕ₃** : ೨. ಅಮೇಧ್ಯದೊಳ್ ಕ್ರೀಡಿಸುವ ಬಾಳಕಂಬೊಲ್ ಕಾಲಮಂ ಬಱಿದೆ ಕಳೆದೆಂ (ವಡ್ಡಾರಾ. ೨೬-೨೪); ಪುಂಡರೀಕನೆಂಬ ಬಾಳಕನಂ ಸಂತಾನಪಾಲನಾರ್ಥಂ ನಿಜಸು (ಅಂಪು. ೯-೮೦ ವ). [ಸಂ.]

**ಬಾಲಕತನ** (ನಾ). ಚಿಕ್ಕಂದು; ಬಾಲ್ಯ : ಬಾಲಕತನದಲ್ಲಿ . . . ಕಾಳಿಯ ಮಡುವ ಕಲಕಿದ ಕಾರಣ ಕಾಲು ನೊಂದಿತೆ ನಿನಗೆ ರಂಗಯ್ಯ (ಪುರಂದ. ೩.೦೦-೩). [ಬಾಲಕ + –ತನ]

**ಬಾಲಕಾಲ**, ಬಾಳಕಾಲ (ನಾ). ಚಿಕ್ಕಂದು; ಬಾಲ್ಯಾವಸ್ಥೆ : ಮೃಗ ಶೃಂಗನೆಂಬೋಂ ತಾಪಸಕುಮಾರನಾತಂ ಬಾಲಕಾಲಪರಿಗ್ರಹೀತತಾಪಸಾ ಚರಣಂ (ಶಾಂತಿಪು. ೬-೯೩ ವ). **ಬಾಳಕಾಲ** : ಮದದಂತಿದಂತದೊಳೆ ಕಟ್ಟಿದ ತೊಟ್ಟಿಲಂ ನಪುದಿಂದಮೇಱೆ[ಸ] ಬಾಳ[ಪಾಠಾಂ. ಬ್ರ]ಕಾಲ ದೊಳ್ ತೊಟ್ಟಿಲಿಗಂ ಗಜಪ್ರಿಯನಪ್ಪುದಂ ಸಲೆ ತೋಱಿದಂ (ಶಂಪರಾ. ೧-೯೩) ; ನಡೆದುದು ಬಾಳ[ಪಾಠಾಂ. ಬ್ರ]ಕಾಲದೊಳೆ ತೊಟ್ಟನಗಂಕದ ಶೌಚವೀಗಳೋಗಡಿಪುದೆ (ಶಂಕರಾ. ೧೦-೯೭). [ಸಂ.]

**ಬಾಲಕಿ**, ಬಾಳಕಿ (ನಾ). ೧. ಹುಡುಗಿ; ಕನ್ಯೆ : ಕೈಯ ಬಟ್ಟಲ ಹಾಲಿಗಂ ತಾಂ ಕೈಯ ನೀಡುತ್ತಿಂಟೆ ಬಾಲಕಿ ಅಯ್ಯನಂ ಬಿಟ್ಟೊದಱಲು (ಜಕತ್ತು. ೦೯-೩೨). ೨. ತರುಣಿ ; ಯುವತಿ : ಗರ್ಭಂ ಬಳೆಯದ ಬಾಲಕಿಯ ಬಸಿಱನರ್ಥಕಮಲ್ತೇ (ಮಲ್ಲಿಪು. ೩-೧೦೦೦); ಬಾಲಕಿಯಲರ್ಗಣ್ಣಾಳ್ ಸಂಲಾಲಿತ ಲಾವಣ್ಯರಸಮಯಾಬ್ಧಾಕರದೊಳ್ ಬಾಳೆಯ ಮೀಂಗಳ ತೆಱದಿಂ ಲೀಲೆ ಯೊಳಂ ಪೊಳೆದು ತಳೆದವತಿಚಪಳತೆಯಂ (ಪಾರಶ್ವ. ೨-೩೦); ನಿಶಾಚರಿಯ ರಲ್ಲವೇ ಸರಕಾಸುರನ ಮನೆಯ ಬಾಲಕಿಯರು (ಕೃಬಂಕಾ. ೨-೩೯). **ಬಾಳಕಿ** : ೨. ಬಾಳಕಿಗಳನಿಚಯನಾಳಂ ಬಾಳಕಿಗಾ ರೋಮರಾಜಿ ರಂಜಿಸುತಿರ್ಕುಂ ನೀಳದ ಕಾಂಚೀಮಧ್ಯದ ನೀಳದ ನೆಗೆದುನ್ಮುಖ ಪ್ರಭಾರೇಖೆಯ ಪೋಲ್ (ಜಗಂ. ೦೦-೨೯); ಉಡೆ ಬಾಳಕಿಯರ ಪಱಿಕ್ಕೆ ದುಡುಕೆಂದಂ ಪಱಿದ ಮುಂಜ . . . ಬದ್ದೆಯರುಡಿಸಿದೊಡುಡಕಲ್ತ ಕೊವರನಭಿನವಮದನಂ (ಅನಂಪು. ೦-೩೬). [ಬಾಲಕ + –ಇ₂]

**ಬಾಲಕೇಲಿ**, ಬ್ಬಾಲಕೇಳಿ, ಬಾಳಕೇಳಿ (ನಾ). ೧. ಮಗುವಿನ ಆಟ; ಬಾಲ ಲೀಲೆ ; ಮಕ್ಕಳಾಟ : (೬). **ಬಾಲಕೇಳಿ** : ೧. ದಾರಕರೂಪದೆ ಜಿನವೃಂದಾರಕನೊಡನೊಡನೆ ಬಾಲಕೇಳಿಗಳಂ ವೃಂದಾರಕರೆ ಮಾಡಿ ದುರಿತ ವಿದಾರಕನ ಮನಕ್ಕೆ ಮಾಡಿದರ್ ಸಂತಸಮಂ (ಆದಿಪು. ೩-೬೨); ಎನಿತ್ತೊಳವು ಬಾಲಕೇಳಿಗಳನಿತಱೊಳಂ ಮುದ್ದುವಡೆದು ಮನೆಯಂಗಣದೊಳ್ ಮನವೊಸೆದಾಡುವ ಮಕ್ಕಳ ವಿನೋದಮಂ ಕಾಣ್ಬ ದಿವಸಮೆಂದಾದ ಪುದೋ (ಸುಕುಮಾ. ೯-೧೧೦). ೨. ಮೂರ್ಖತನದ ನಡವಳಿಕೆ : ನೆಱೆ ಕೇಳಿದೈ ಕೌರವನ ೯ದನದ ಬಾಲಕೇಳಿಗಳ (ಕುಮಾರವ್ಯಾ. ೦-೦). **ಬಾಳಕೇಳಿ** : ೧. ಚೆಲ್ವಿಡಿದಿರ್ದುದು ಬಾಳಕೇಳಿ ಧರ್ಮಾತ್ಮಜನಾ (ಶಂಶಶಾ. ೨-೪); ಸುತ ನಿನ್ನ ಬಾಳಕೇಳಿಯನತಿಮುದದಿಂ ನೋಡಿ ಹರ್ಷಮಂ ತಳೆಯಲ್ ಸಂಸ್ಕೃತ ನೋಂತೆನಿರ್ಲೆಸಲ್ (ನೇಮಿಪು. ೬-೦೯೦). [ಸಂ.]

**ಬಾಲಕೇಳಿ** 'ಬಾಲಕೇಲಿ ' ನೋ.

**ಬಾಲಕ್ಕಿ** (ನಾ). ಉದ್ದವಾದ ಪುಚ್ಛವಿರುವ ಒಂದು ಬಗೆಯ ಪಕ್ಷಿ : ಹಾರುತ್ತಿರುವ ಬಾಲಕ್ಕಿಗಳಿಂದ ಬಾನೆಲ್ಲ ಸುಗ್ಗಿಯ ಸ್ವರ್ಗದಂತೆ ಕಾಣಿಸುತ್ತಿದೆ (೧೧ಬಾ. ೩). [ಬಾಲ₁ + <ಪಕ್ಕಿ]

**ಬಾಲಕ್ರೀಡೆ**, ಬಾಳಕ್ರೀಡೆ (ನಾ). = ಬಾಲಕೇಲಿ ೧ : ಬಾಲಕ್ರೀಡೆಯೆ ಪೂತನಾ ಬಕಮುಖವ್ಯಾಪಾದನಂ (ಪತ್ತ್ವಂ. ೩-೦೦). **ಬಾಳಕ್ರೀಡೆ** : ಬಾಳಕನಾಗಿ ಬಱಿಕ್ಕಾ ಬಾಳಕ್ರೀಡೆಗಳನೆಯ್ದೆ ತೋಱಿ ಸಮಂತಂ ಲೀಳಾ ನಿಧಿ ನಿಜರೂಪಂ ಬಾಳಂ ತಳೆದಿರಲ್ (ನೇಮಿಪು. ೬-೦೯೦). [ಸಂ. ಬಾಲಕ್ರೀಡಾ]

**ಬಾಲಗಚ್ಚೆ**, ಬಾಲಂಗಚ್ಚೆ (ನಾ). ೧. ಹಿಂಭಾಗದಲ್ಲಿಯ ಕಚ್ಚೆ ; ಹಿಂಗಚ್ಚೆ : ಕೆಂದಳಿರ್ಗೊಂಚಲ ಚೆಲ್ಲಣಂ ಪ್ರವಾಳಲತೆಯ ಬಾಲಗಚ್ಚೆ ಬಲ ಕಿಕ್ಕಿದ ಚಂಪಕಮಾಲೆ ಶೋಭೆಯಂ ಬಳೆಯಿಸೆ ನಿಂದ ಸಚ್ಚಣಿಯ ಭಾವಮನಾ ವನೋಜಲ್ಕು ನೋಡಿದಂ (ಲೀಲಾವ. ೧೦-೬೩) ; ಬದ್ದಿಗೆಯ ತೂಂಗಲ್ದೆಗೆದು ಬಿಗಿದೆಬಲ್ಪ ಬಾಲಗಚ್ಚೆಯ ವಿಳಸದ ಸೆಱಗಂ ಸೆಳೆದಳ್ಕಿಱಿಯೆಯುಂ (ಅನಂಪು. ೧೦-೮೫ ವ) ; ಸಕಲರತ್ನರಚನೆಯಿಂ ಸಲ್ಲಲಿತಮಾದ ಚೆಲ್ಲಣದ ಚಿತ್ರಿಸಿದ ಪತಾಕಾಂಚಲದಂತೆ ಪಲ್ಲವದ ಶೋಭೆಯುಂ ಪಳಚ್ಚನೆ ಮೆಱೆವ ಬಾಲಗಚ್ಚೆಯ ಬೆಳ್ಪಂಗಳಂ ಬೀದಿವರಿಯಿಸುವ ಪೊಸಮುತ್ತುಗಳ ಮೊತ್ತದಿಂ . . . ಮಂಡಿತಮಾದ ಮುಂಡನದ ತಂಡದಿಂ (ಶಾಂತೀಶ್ವ. ೬-೯೩ ವ). **ಬಾಲಂಗಚ್ಚೆ** : ೨. ಗಾಳಿಪಟದ ತಳಕ್ಕೆ ಅಳವಡಿಸಿರುವ ಬಾಲದಂತಹ ಬಟ್ಟೆಯ ಅಥವಾ ಹುರಿಯ ತೆಳುವಾದ ಪಟ್ಟಿ : (೬) .೩. (ಅಲಂ) ಯಾವಾಗಲೂ ಹಿಂಬಾಲಿಸಿಕೊಂಡು ಬರುವವನು ; ಅನುಯಾಯಿ; ಹಿಂಬಾಲಕ: ಕೆಲವು ರಾಜಕಾರಣಪಟುಗಳಿಗೆ ಅನೇಕ ಬಾಲಂಗಚ್ಚೆ ಗಳಿರುತ್ತಾರೆ (ರೂಕ). [ಬಾಲ₁ + ಕಚ್ಚೆ]

**ಬಾಲಗೀಸು** (ಕ್ರಿ). ೧. (ಗಾಡಿಗೆ ಹೂಡಿದ ಎತ್ತನ್ನು ವೇಗಗೊಳಿಸಲು) ಬಾಲ ಹಿಡಿದು ಎಳೆದು ತಿರಿಚು ; ಬಾಲವನ್ನು ಮುರಿ. ೨. (ಅಲಂ) ಪ್ರೇರಿಸು ; ಎತ್ತಿ ಕಟ್ಟು ; ಪ್ರಚೋದಿಸು : ಈ ಗಾಣಿಗನ ಎಲುವು ಇಡದ ಹಾಗೆ ಮಾಯಿಸು – ಎಂದು ಬಚ್ಚನ ಬಾಲಗೀಸಿ ಬಿಟ್ಟಿದ್ದೇನೆ ! (ಹಹಕ. ೬೬). [ಬಾಲ₁ + ಕೀಸು₁]

**ಬಾಲಗುರಿ** (ನಾ). (ಬಾಲವು ಉದ್ದವಾಗಿರುವ) ಒಂದು ಬಗೆಯ ಕುರಿ : ದೊರೆ ಸೀಮೆಹಸು, ಬಾಲಗುರಿ, ಸೀಮೆಕುದುರೆ ಮುಂತಾದುವುಗಳನ್ನು ಸಾಕಿದ್ದ . . . ಬಾಲಗುರಿರೊಪ್ಪವೂ ಇತ್ತು (ಸಪ್ಪೂರು. ೩). [ ಬಾಲ₁ + ಕುರಿ₃(<ಕುಱು₃) ]

**ಬಾಲಗ್ರಹ** (ನಾ). ಎಳೆಯ ವಯಸ್ಸಿನ ಮಕ್ಕಳಿಗೆ ಬರುವ ಒಂದು ಬಗೆಯ ಭೀಕರವಾದ ಅಪಸ್ಮಾರರೋಗ ; ಮಕ್ಕಳಿಗೆ ಈ ಬಗೆಯ ಪೀಡೆಯನ್ನುಂಟುಮಾಡುವ ಒಂಬತ್ತು ಬಗೆಯ ಗ್ರಹ ಗಳುಂಟೆಂದು ಭಾವಿಸಲಾಗಿದೆ. "ಸ್ಕಂದ, ಸ್ಕಂದಾಪಸ್ಮಾರ, ಶಕುನೀ ಗ್ರಹ, ಪೂತನಾಗ್ರಹ, ಅಂಧಪೂತನಾಗ್ರಹ, ಶೀತಪೂತನಾ, ರೇವತೀ, ಮುಖಮಂಡಿಕಾಗ್ರಹ, ನೈಗಮಗ್ರಹ (ಸಂಶ್ರುತ. ಸಂ. ೧೬೭)." (ಶ್ರೀಚಕ್ರ. ೨೯೦). [ಸಂ.]

**ಬಾಲಗ್ರಾಸ** (ನಾ). ಎಳೆಯ ಹುಲ್ಲು,—ಮೇವು : ಘರ್ಮಕಾಲಂ ಸಮ ನಿಸಿರೆಯುಮೆತ್ತತ್ತಲುಂ ಬಾಲಗ್ರಾಸಾಳಿಗಳಿಂ ವರ್ಷರ್ತುವೊಲ್ದಿಳ್ಪರ್

ಪೋಲೆಡೆಕಂದಿರ್ದತ್ತು ಪಾನೀಯಪೂರಂ (ಶಿಷ್ಟಕ. ೩-೨.೩೩).

[☞ ಇದು 'ಬಾಲಘಾಸ' ಎಂದಿರಬಹುದೇ ?]

**ಬಾಲಘಾತಿನಿ** (ನಾ). ಮಕ್ಕಳನ್ನು ಕೊಲ್ಲುವವಳು : ಈತನೆ ಗಡ ವಿಷಸ್ತನ್ಯೆಯಾದ ಬಾಲಘಾತಿನಿಯಾದ ಪೂತನಿಯೆಂಬ ರಕ್ಕಸಿಯನೆಡೆಗೆಡಹಿ . . . ನಿಂದಿರ್ಪ ಬೆಡಂಗನು ನೋಡಿರಯ್ಯ (ಕಗಶ. ೬೭). [ಸಂ. ಬಾಲಘಾತಿನೀ]

**ಬಾಲಚಂದ್ರ**, ಬಾಳಚಂದ್ರ (ನಾ). ೧. ಶುಕ್ಲಪಕ್ಷದ ಪ್ರಾರಂಭದಲ್ಲಿ ಕಾಣುವ ಚಂದ್ರ ; ಬಿದಿಗೆಯ ಚಂದ್ರ : ಬಾಲಚಂದ್ರನ ಸೂಡ ದಂದು . . . ನಿಮ್ಮ ನೀವಱಿಯದೆ ಅನಂತಕಾಲವಿರ್ದಿರಂದು (ಅಹಂಕೀ. ೨-೩). **ಬಾಳಚಂದ್ರ** : ೨. (ಜೈನಮುನಿಯಾದ) ಒಬ್ಬ ಕನ್ನಡ ಕವಿಯ ಹೆಸರು : ಅಧ್ಯಾತ್ಮಕಳಾಧರನುಜ್ಜಳಕೀರ್ತಿ ಬಾಳಚಂದ್ರ ಮುನೀಂದ್ರಂ (ಎಕ. II. ೩೪೯-೬೯ ; ಕಾ. 1180) ; ಧರಣೀಚಕ್ರದೊಳತಿ ಚಿತ್ರಂ ಕವಿಚಕ್ರಪ್ರಿಯನೆನಿಸಿ ಬಾಳಚಂದ್ರಂ ನೆಗೞ್ದಂ (ಪಾರ್ಶ್ವಪು. ೦-೬೩). [ಸಂ.]

**ಬಾಲಚಮೂ** (ನಾ). 'ಸ್ಕೌಟ್' ಎಂಬ ದಳ; ಸ್ಕೌಟುದಳ ; ☞ ಶಾಲೆಗಳಲ್ಲಿ ಮಕ್ಕಳಿಗೆ ಪಠ್ಯೇತರವಿಷಯಗಳಲ್ಲಿ ತಿಳಿವಳಿಕೆ ಕೊಡಲು ಪಾಶ್ಚಾತ್ಯದೇಶದಲ್ಲಿ 'ಬಾಡನ್‌ಪಾವೆಲ್' ಎಂಬ ಪ್ರಸಿದ್ಧ ಪುರುಷನಿಂದ ೧೯೧೮ರಲ್ಲಿ ಇದು ಸ್ಥಾಪಿತವಾಯಿತು : ಮಕ್ಕಳ ಜೀವನದಲ್ಲಿ ಪರಿಣಾಮಕಾರಿಯಾಗುವಂತೆ ಶಿಕ್ಷಣವೀಯುವ ಸಂಘಸಂಸ್ಥೆಗಳಲ್ಲಿ . . . ಬಾಲಚಮೂ, ರೆಡ್‌ಕ್ರಾಸ್, ರೋಟರಿ ಸಂಘ, ಯುನೆಸ್ಕೋ ಮುಂತಾದುವು ಪ್ರಧಾನವಾದುವು (ಶಿಕ್ಷರ. ೩೩). [ಸಂ.]

**ಬಾಲಚಾರ** (ನಾ). ಸ್ಕೌಟುದಳಕ್ಕೆ ಸೇರಿದ ಹುಡುಗ : ಅಗ್ರಚಾರ (ಸ್ಕೌಟ್) ಬಾಲಚಾರನಿಗಿಂತ (ಬಾಯ್‌ಸ್ಕೌಟ್) ಭಿನ್ನ (ಕಂಕೋ. I. ೦೬೭); ನಾಣಿ ನಮ್ಮ ಊರಿಗೆ ಒಬ್ಬ ಬಾಲಚಾರ (ಪರ್ಯೂರಿ. ೩೯). [ಸಂ.]

**ಬಾಲಚಿಕ್ಕಿ** 'ಬಾಲಚುಕ್ಕಿ' ನೋ.

**ಬಾಲಚುಕ್ಕಿ** 'ಬಾಲಚುಕ್ಕಿ' ನೋ.

**ಬಾಲಚುಕ್ಕಿ**, ಬಾಲಚಿಕ್ಕಿ, ಬಾಲಚುಕ್ಕಿ (ನಾ). (ಸೌರವ್ಯೂಹದಲ್ಲಿದ್ದು ಆಗೊಮ್ಮೆ ಈಗೊಮ್ಮೆ ಅಡ್ಡವಾಗಿ ಬಂದು ಕಾಣಿಸಿಕೊಳ್ಳುವ) ಬಾಲದಂತೆ ಗುಂಜುಗುಂಜಾದ, ಪ್ರಕಾಶವಾದ ಪಟ್ಟೆಗಳನ್ನುಳ್ಳ ಉಲ್ಕೆ ; ಧೂಮಕೇತು; ☞ ಇದು ಉತ್ಪಾತಸೂಚಕವೆಂಬ ನಂಬಿಕೆಯಿದೆ : ಸೂರ್ಯನೂ, ಸೂರ್ಯನ ಸುತ್ತಲೂ ತಿರುಗುವ ಗ್ರಹಗಳೂ, ಬಾಲಚುಕ್ಕಿಗಳೂ ಇವುಗಳಿಗೆ . . . ಎಂದು ಹೆಸರು (ಭೂಗೋಳ. ೯). **ಬಾಲಚಿಕ್ಕಿ** : ಈಗ ನಾವು ನೋಡುವ ಬಾಲಚಿಕ್ಕಿಗಳ ಸ್ಥಿತಿಯಂತೆ ಆ ಕಾಲದಲ್ಲಿ ಭೂಮಿಯು ಸ್ಥಿತಿಯಿತ್ತೆಂದು ಹೇಳಬಹುದು (ಮುಂಜಾಉ. ೬-೨೯೨). **ಬಾಲಚುಕ್ಕಿ** : ನಭದೊಳಿಳ್ಪೆಡೆವಿಡದೆ ತುಂಬಿದ ವಸುರರುದಯಕೆ ಬಾಲಚುಕ್ಕಿಗಳು (ಕೃಷ್ಣಾಕ. ೨-೨೩) ; ೧೯೧೦ರಲ್ಲಿ ಒಂದು ಬಾಲಚುಕ್ಕಿಯು ಕಾಣಿಸಿತು (ಕಲ್ಪಿಪಾ. ೦೦೦). [ಬಾಲ್೧ + ಚುಕ್ಕಿ೨]

**ಬಾಲಜ್ವರ** (ನಾ). ರೋಗಿಗೆ ಆಗ ತಾನೇ ಪ್ರಾರಂಭವಾಗಿರುವ ಜ್ವರ : ರಾತ್ರಿ . . . ಬೆಳ್ಳುಳ್ಳಿ ಇವುಗಳನ್ನು ಕುಟ್ಟಿ ಅರೆದು ಕೊಡಲು ವಾತದೋಷಜ್ವರ ಮತ್ತು ಬಾಲಜ್ವರ ಸಹ ಪರಿಹಾರವಾಗುವವು (ಸಕವೈ. ೦೦೯). [ಸಂ.]

**ಬಾಲತನ** (ನಾ). ಚಿಕ್ಕಂದು ; ಎಳವೆ : ಬಾಲ್ಯ : ನಿಮಗಾನುಜು ವುದೆನ್ನ ಬಾಲ[ಪಾಠಾಂ. ಲ್ಯ]ತನದಿಂನಂದಾಮುದೆದಾದುದೇ ನಿಮಗಾ ನಂಜದೊಡಂಜಸಲ್ ನೆಱೆವೆನೇ ತ್ರೈಲೋಕ್ಯಮಂ ಯುದ್ಧದೊಳ್ (ಕಂಪಕಾ. ೦೦-೦೩೯); ಬಾಲತನವೇನೂಗಾಯವೆ ಕಟ್ಟಾಳುತನವಾಭರಣ ವವನೀಪಾಲಸುತರಿಗೆ (ಕುಮಾರರಾ. ೩-೪೦). [ಬಾಲ್೧ + -ತನ]

**ಬಾಲತನಯ** (ನಾ). ಒಂದು ಬಗೆಯ ಮರ : ಕಗ್ಗಲಿಮರ ; ಖದಿರ ವೃಕ್ಷ : "ಗಾಯತ್ರೀ, ಬಾಲತನಯಃ, ಖದಿರಃ, ದಂತಧಾವನಃ – ೪ ತರೆಯುದ ಮರದ ಹೆಸರು; ಕಗ್ಗಲೀಮರ" (ಸಿದ್ಧಾಂತ. ೦೨೩). [ಸಂ.]

**ಬಾಲತಪ** (ನಾ). [ಜೈನ] ಶುದ್ಧವಾದ ದರ್ಶನವಿಲ್ಲದೆ, ವ್ಯರ್ಥವಾದ ದೇಹದಂಡನೆಯೊಡನೆ ಆಚರಿಸುವ ತಪಸ್ಸು ; ಮೂರ್ಖತನದ ತಪಸ್ಸು : ಮಿಥ್ಯಾದರ್ಶನೋಪೇತತಪಃ ಬಾಲತಪಂ ನಿಕೃತಿಬಹುಲವ್ರತ ಧಾರಣಂ ಅನುಪಾಯಕಾಯಕ್ಲೇಶಪ್ರಚುರಂ ಎಂಬಿವು ಮೊದಲಾಗೊಡೆಯವು ದೇವಾಯುಷ್ಯಾಸ್ರವಕಾರಣಂಗಳಪ್ಪುವು (ತತ್ತ್ವಸೂ. ೨೩೩). [ಸಂ.]

**ಬಾಲತೆ**, ಬಾಳತೆ (ನಾ). ೧.=ಬಾಲತನ : ಬಾಲತೆಯೊಳ್ ದರ್ಶನಮುಮಂ ಮೇಲೆನಿಸೀ ವ್ರತಮುಮೊಡನೆ ಸಂಭವಿಸಿದುವು (ಧರ್ಮಾಮೃ. ೩-೨೦). **ಬಾಳತೆ** : ೧. ಬಾಳತೆಯಂ ಕಳಿಪಿ ಸುದಂಭೋಳಿಧರಾನತಪದಂ ಕುಮಾರತೆಯಂ ಸಲ್ಲೀಲಾನಿಧಾನನಾಂತಂ . . . ಭಾಸುರರೂಪಂ (ನೇಮಿಪು. ೯-೯). ೨. ಹುಡುಗುತನದ ವರ್ತನೆ ; ಬಾಲಿಶವೃತ್ತಿ : ಪಾಲಿಪುದು ವಿನಯಮಂ ಬಾಳತೆಯನುೞಿವುದಿದನೇಳಿಸದಿರೆಂದು ಸೌಮಿತ್ರಿ ನುಡಿದಂ (ಕುಮುದಾ. ೬-೦೦೬). [ಸಂ. ಬಾಲತಾ]

**ಬಾಲತ್ವ**, ಬಾಳತ್ವ (ನಾ). =ಬಾಲತನ : ಬಾಲತ್ವದೊಳಂ ಗುಣಮಣಿ ಮಾಲಿನಿ ಶಿಶುಸುಜಾತಿ . . . ಜನಪತಿಗೆ ವಿನಯಮವಿನಮಿತ್ರಯಕ್ಕುಂ (ಶಾಂತಿಪು. ೯-೬೭) ; ಬಾಲತ್ವದಿಂದೆಲ್ಲಿಯುಂ ವಿನಯೋಲ್ಲಂಘನಮಾದುದಿಲ್ಲ (ಗದಾಯು. ೩.೭) ; ಬಾಲತ್ವದೊಳಮುದಾತ್ತಗುಣಾಲಯಮೆನಿಸಿದ ತನೂಜಮುಖಚಂದ್ರಮನಂ ಲೀಲೆಯಿನೀಕ್ಷಿಸಿ ದಶರಥನೋಲಾಡಿದನಧಿಕ ರಾಗರಸವಾರಿಧಿಯೊಳ್ (ಕುಂದಾಮಾ. ೩ ೦೩೨). **ಬಾಳತ್ವ** : ಗಗನಕ್ಕೀಡಾಡಿ ವಾಮೇತರಾಯತಹಸ್ತಾಗ್ರದೊಳಾಂತು ತಾಳ್ದಿದುದಱಿಂ ಬಾಳತ್ವದೊಳ್ ಕೋಟಿಕಾಂತಿತಮಾ ಕಲ್ ತಿರಿಕಲ್ ತ್ರಿಪೃಷ್ಠಮಹಿಪಂಗಕ್ಕುಂ ಪೆಱಂಗಕ್ಕುಮೇ (ಶಾಂತಿಪು. ೩-೨೭); ಬಾಳತ್ವದೊಳಂದಗಮುಂ ಬುಳಿಸಿದೀ ಕೃಷ್ಣನಳಿಯನಲ್ಲನೆ ಶೌರ್ಯಾಭೀಳನರತನುಜನಲ್ಲನೆ ಪೇೞಿಮಿದೆಂ ಗಹನಮನಗೆ ಬೆಸಸಿಂ ನೃಪತೀ (ನೇಮಿಪು. ೦೨-೩೩). [ಸಂ.]

**ಬಾಲದುಡಿಗೆ** 'ಬಾಲದೊಡಿಗೆ' ನೋ.

**ಬಾಲದುಡುಗೆ** 'ಬಾಲದೊಡಿಗೆ' ನೋ.

**ಬಾಲದೆರಿಗೆ** 'ಬಾಲದೆಱಿಗೆ' ನೋ.

**ಬಾಲದೆಱಿಗೆ**, ಬಾಲದೆರಿಗೆ (ನಾ). ದನಕರುಗಳ ಮೇಲೆ ಹಾಕುತ್ತಿದ್ದ ತೆರಿಗೆ; ☞ ದನಕರುಗಳ ಗಣನೆಯು ಸಮಯದಲ್ಲಿ, ಬಾಲಗಳ ಎಣಿಕೆಯಿಂದ ಕಾಲ್ನಡೆಯ ಸಂಖ್ಯೆಯನ್ನು ಸೂಚಿಸುವ ಪರಿಪಾಠವಿದ್ದಿರಬಹುದು : ಪಳ್ಳಿಗರ ಜಾತಿದೆಱಿಗೆ ಬಾಲದೆಱಿಗೆ ನಾಮಗಾಣಿಕೆ ಗೋಪಾಲಸ್ವಾಮಿವರ್ತ್ತನೆ ಸುಂಕಕ್ಕೆ ಸಲ್ಲುವ ಪಟ್ಟಡಿಯೇರುಸುಂಕ (ಎಕ. III. ಶ್ರೀರಂಗ ೦೦೦-೧೬೫; 1724). **ಬಾಲದೆರಿಗೆ** : ಈಚಲುಕಂದಾಯ ಬಾಲದೆರಿಗೆ ಹೊರಾದಾಯ ಚರಾದಾಯ . . . ಈ ಸಂಖ್ಯೆಯು ಮಹಾಜನರಿಗೂ ಯಥಾಂಶವಾಗಿ ನಿರ್ವಿವಾದವಾಗಿ ಸಲುವದು (ಎಕ. III, ತಿರುಮ. ೩೩-೦೩೬೮; 1748); ಕುಱಿದೆರಿಗೆ ಬಾಲದೆರಿಗೆ ಹುಲ್ಲುಹಣ (ಮೈಶಾ. ೦೯೩೬. ೨೯-೦೯; 1820). 'ಬಾಲವಣ' ಪರಾ. [ಬಾಲ್೧ + ತೆಱಿಗೆ]

**ಬಾಲದೊಡಿಗೆ**, ಬಾಲದುಡಿಗೆ, ಬಾಲದುಡುಗೆ (ನಾ). ಮಕ್ಕಳಿಗೆ ತೊಡಿಸುವ ಆಭರಣ : ತಾಲಿ ಕಡಗಂ ಜಣ್ಣಸರಮುಂ ತೋಳಬಂದಿ ಯೆನಿಪ್ಪ ಚೆಲ್ವಿನ ಬಾಲದೊಡಿಗೆಗಳ್ . . . ತಂದಪೆವು (ಅಕಪು. ೦೯-೯); ಈತನರ್ಜುನನರಮನೆಯೊಳಭಿಜಾತನೆನಿಪಭಿಮನ್ಯುವನು ಸಂಪ್ರೀತಿಯಿಂ ದಪ್ಪಿದನು ಕೊಟ್ಟನು ಬಾಲದೊಡಿಗೆಗಳ (ಕುಮಾರ. ೨೦ ೦೦). **ಬಾಲದುಡಿಗೆ:** ಆ ಬಾಲಕಂ ಬಾಲದುಡಿಗೆಗಳಂ ತೊಟ್ಟು ನಡೆಗಲ್ತು (ಶಂಕಶಂ. ೦೬೭-೮); ಇಂತು ಸಕಲಸೌಂದರ್ಯಮಂ ಬೀಱುವ ಬಾಲದು [ಪಾಠಾಂ. ದೊ]ಡಿಗೆ

ಪೆಸಸು ಲೀಲೆ ವಿಸ್ಕ್ಕ (ಗಿರಿ. ೩-೮೯ ವ). **ಬಾಲದುಡುಗೆ:** ಜನ್ಮಾಭಿಷೇಕಮಂ ಮಾಡಿ ತದನಂತರಮನೇಕಬಾಲಮದು[ಶಾಶಾಂ. ಡಿ]ಗೆಗಳಂ ತುಡಿಸಿ ತಾಯು ತಂದೆಗೆ ನಂದನನಂ ಕೊಟ್ಟುಮಿಂಡಳಂ . . . ನಿಜನಿವಾಸಕ್ಕೆ ಪೋದಂ (ಪುಣ್ಯಾಸ್ರ. ೦೦-೦೬ ವ). [ಬಾಲ₂ + ತೊಡಿಗೆ (<ತೊಡುಗೆ)]

**ಬಾಲಪಂಡಿತಮರಣ** (ನಾ). [ಜೈನ] ಐದು ಬಗೆಯ ಮರಣಗಳಲ್ಲಿ ಒಂದು; ❊ "ಸಮ್ಯಕ್‌ದರ್ಶನಜ್ಞಾನ, ಏಕದೇಶಚಾರಿತ್ರಗಳನ್ನು ವಶಮಾಡಿಕೊಂಡಿರುವ ದೇಶವ್ರತಿಯ ಮರಣ" (ಕೃವಶಕೋ. ೦೭೩) : ಸಮ್ಯಗ್ದರ್ಶನ ಸಂಯಮಾಸಂಯಮಚಾರಿತ್ರಂಗಳಂ ತನಗೆ ವಶಂಮಾಡಿ ನೆಗಟ್ಟ ಸಂಯತಾಸಂಯತನ ಸಾವು ಬಾಲಪಂಡಿತಮರಣಂ (ವಡ್ಡಾರ. ೩೬೬). [ಸಂ.]

**ಬಾಲಪತ್ರ** (ನಾ). ಕಗ್ಗಲಿಮರ; ಖದಿರವೃಕ್ಷ. [ಸಂ.]

**ಬಾಲಪಾಶ್ಯೆ** (ನಾ). ೧. ಸ್ತ್ರೀಯರು ಬೈತಲೆಗೆ ಧರಿಸುವ ಒಂದು ಬಗೆಯ ಆಭರಣ. ೨. ಒಂದು ಬಗೆಯ ಆಭರಣ ; ಜಡೆಬಿಲ್ಲೆ. [ ಸಂ. ಬಾಲಪಾಶ್ಯಾ ]

**ಬಾಲಪುಳು**, ಬಾಲಹುಳು (ನಾ). ಬಚ್ಚಲು ಹರಿ ಮೊದಲಾದ ಕೊಚ್ಚೆ ಸ್ಥಳಗಳಲ್ಲಿ ಹಾಗೂ ಗೊಂಡಗಟ್ಟಿದ ಅಕ್ಕಿ ಮೊದಲಾದುವುಗಳಲ್ಲಿ ಹರಿದಾಡುವ ಚಿಕ್ಕ ಬಾಲವುಳ್ಳ ಹುಳು : ಪುರಾಣಿಕನೊಡಲುಂ ಬಿಕ್ಕನ ಬಿರಿದುವಾಗಿ ಬಾಲಪುಳುಗಳ ರಾಶಿಯಾಯಿತ್ತು (ಶಶಪು. ೩೭-೫೦). **ಬಾಲಹುಳು :** ಅಪಕಾರವಿಲ್ಲದಿಹಂತಹ ಪುರಾತನರ ಮನೆಯ ಬಚ್ಚಲ ಬಾಲಹುಳುವಾಗಿ ಹುಟ್ಟಿಸಬ್ಯಾ (ಕವಹಾವ. ೩-೩೦) : ಜಾತಿಪೂರ್ವವ ಎತ್ತಿ ನುಡಿಸುವ ಪಾತಕರ ಬಾಯಲ್ಲಿ ಬಾಲಹುಳುಗಳು ಸುರಿಯದ ಮಾಣ್ಬವೆ ಹೇಳಾ (ಅಂದಿ. ೨೦೬-೪೦). [ ಬಾಲ₁ + ಪುಳು (<ಪುೞು) ]

**ಬಾಲಬಂದು**, ಬಾಳಬಂದು (ನಾ). ೧. ಸರಳವಾದುದು : ಸುಲಭ ವಾದುದು : (ಶ). ೨. ಒಂದು ಬಗೆಯ ಲಿಪಿ : ದೇವನಾಗರೀ ಲಿಪಿ. **ಬಾಳಬಂದು :**(ಶ). [←ಮರಾ. ಬಾಳಬಡ, ಬಾಳಬಂಧ]

**ಬಾಲಬಾಲಮರಣ** (ನಾ). [ಜೈನ]ಐದು ಬಗೆಯ ಮರಣಗಳಲ್ಲಿ ಒಂದು ; "ಸಮ್ಯಗ್ದರ್ಶನ, ಜ್ಞಾನ, ಚಾರಿತ್ರ, ತಪಸ್ಸುಗಳೆಂಬ ಆರಾಧನಗಳಲ್ಲಿ ಒಂದೂ ಇಲ್ಲದ ಮಿಥ್ಯಾದೃಷ್ಟಿಯ ಸಾವು" (ಕೃವಶಕೋ. ೦೭೩) : ಬಾಲಬಾಲಮರಣಂ ಬಾಲಮರಣಂ ಬಾಲಪಂಡಿತ ಮರಣಂ ಪಂಡಿತಮರಣಂ ಪಂಡಿತಪಂಡಿತಮರಣಮೆಂದಿಂತು ಪಂಚ ಪ್ರಕಾರ ಮಕ್ಕುಂ . . . ಚತುರ್ವಿಧಾರಾಧನೆಗಳೊಳೊಂದಾರಾಧನೆಯುಮಿಲ್ಲದ ಮಿಥ್ಯಾದೃಷ್ಟಿಯ ಸಾವು ಬಾಲಬಾಲಮರಣಂ (ವಡ್ಡಾರ. ೩೬೬). [ಸಂ.]

**ಬಾಲಬೋಧೆ** (ನಾ). ೧. ಚಿಕ್ಕಮಕ್ಕಳಿಗೆ ಕೊಡುವ ಆರಂಭದ ಪಾಠ. ೨. ಮಕ್ಕಳಿಗೆ ಓದು ಕಲಿಸುವುದಕ್ಕಾಗಿ ಬಳಸುವ ಪ್ರಾಥಮಿಕ ಪುಸ್ತಕ: ಬಾಲಪಾಠದ ಪುಸ್ತಕ: (ಶ). [ಸಂ. ಬಾಲಬೋಧಾ]

**ಬಾಲಬ್ರಹ್ಮಚಾರಿ** (ನಾ). ಚಿಕ್ಕಂದಿನಲ್ಲಿಯೇ ಸಂನ್ಯಾಸವನ್ನು ಸ್ವೀಕರಿಸಿದವನು : ಬಾಲಬ್ರಹ್ಮಚಾರಿಯ ಬಾರನೆತ್ತಿತ್ತ ಕಂಡೆ ಭಕ್ತರೆಲ್ಲರೂ ಸತ್ತು ನೆಲಕಿಕ್ಕಿತ್ತ ಕಂಡೆ (ಅವಚಂ. ೯೩-೯೩೬). [ಸಂ. ಬಾಲಬ್ರಹ್ಮಚಾರಿನ್]

**ಬಾಲಭಾವ** (ನಾ). ಬಾಲ್ಯ ; ಎಳೆತನ : ಆ ಬಾಳಕೇಳಿಗಳ ಬಳಿಯಿಂ ಬಾಲಭಾವಮಂ ಪೆಱಗಿಕ್ಕಿ ಯೌವನಪ್ರಾದುರ್ಭಾವಕ್ಕಿದಿರಾಗಿ (ಶಾಂತಿಪು. ೧೦-೪೦ ವ) ; ಕಳಾಗುಣಂ ಪೊದಟ್ಟಳವಡೆ ಬಾಲಭಾವದೊಳೆ ಭಾವಕಿಯರ್ ಬಳಿವರ್ ನಿರಂತರಂ (ಕಮತ. ೦೭೩ ಪ್ರಕೋ.). [ಸಂ.]

**ಬಾಲಭಾಷಿತ** (ನಾ). ಹುಡುಗುತನದ ಮಾತನಾಡುವವನು: ಅರ್ಥವಿಲ್ಲದ ಮಾತನ್ನಾಡುವವನು : ಬೀಳುಕೊಂಡಿರೇ ಸಾಕು ಭೀಮನು ಬಾಲಭಾಷಿತನಾದನೇ ಭೂಪಾಲ ಕೌರವನೆಂಬೆನೇ ಮೊದಲಿಗನು ಮೂರ್ಖರಿಗೆ (ಕುವ್ಯಾಶೀ. ೦೦-೩೬). [ಸಂ.]

**ಬಾಲಭಾಷೆ** (ನಾ). ೧. ಮಕ್ಕಳ ಮಾತು : ಅಪ್ರಬುದ್ಧವಾದ ಭಾಷೆ : ರಂಗನು . . . ತನ್ನ ಬಾಲಭಾಷೆಯಲ್ಲಿ ಏನೇನೋ ಬರೆದು ಮಹಾದೇವಯ್ಯನವರಿಗೆ ತೋರಿಸಿ ತಿದ್ದಿಸಿಕೊಳ್ಳುತ್ತಿದ್ದನು (ರಂಗಣೋ. ೩೯). ೨. ಪ್ರಾಕೃತ ಭಾಷೆ : ಪ್ರಾಕೃತಭಾಷೆಗೆ ಸಾರಸ್ವತವೆಂತಲೂ ಬಾಲ ಭಾಷೆಯೆಂತಲೂ ಹೆಸರುಗಳುಂಟು (ಮಂತ್ರಂದಿ. ೯-೦೭೩). ೩. (ಅಲಂ) ಬಾಲ್ಯದಲ್ಲಿ ಕಲಿತ ವಿದ್ಯೆ : ಜಾಪದ ಚಾರುವಿದ್ಯೆಯ ನಿಪ್ಪೊಳಜಿ ದುದ ನಿಮಗೆ ತೋಜಿಸುವೆ ಸ್ಮರಿಸುವುದೀ ಬಾಲಭಾಷೆಗೆ ವೈರುಂಧವ ಬಿಡುವುದು (ಕುವ್ಯಾಶೀ. ೬-೩೩). [ಸಂ. ಬಾಲಭಾಷಾ]

**ಬಾಲಮಂಡನ** (ನಾ). = ಬಾಲದೊಡಿಗ : ಭುವನೈಕಮಂಡನನೊಳೇ ನೆಸೆದಿರ್ದುದೂ ಬಾಲಮಂಡನಂ (ಆಜಪು. ೩.೬೦). [ಸಂ.]

**ಬಾಲಮರಣ** (ನಾ). [ಜೈನ]ಐದು ಬಗೆಯ ಮರಣಗಳಲ್ಲಿ ಒಂದು : ಅಜ್ಞಾನ ಅಥವಾ ಅವಿವೇಕದಿಂದ ತಂದುಕೊಳ್ಳುವ ಸಾವು : ಸಮ್ಯಗ್ದರ್ಶನಾರಾಧನೆಯನುಳ್ಳಸಂಯತ ಸಮ್ಯಗ್ದೃಷ್ಟಿಯ ಸಾವು ಬಾಲ ಮರಣಂ (ವಡ್ಡಾರ. ೩೬೬) ; ಯಾವುದೋ ಕ್ಷುದ್ರದೇವತೆಗೆ ಹರಕೆ ಹೊತ್ತು ಉಪವಾಸ ಮಾಡಿ ಸಾಯುವುದು, ವಿಷಪಾನ ಮಾಡಿ ಅಥವಾ ನೀರಲ್ಲಿ ಮುಳುಗಿ ಸಾಯುವುದು, ಇರಿದುಕೊಂಡು ಸಾಯುವುದು—ಇವುಗಳನ್ನು " ಬಾಲಮರಣ "ವೆಂದೂ (ಬಾಲ = ಅಜ್ಞಾನಿ, ಅವಿವೇಕಿ), ಸಲ್ಲೇಖನವನ್ನು " ಪಂಡಿತಮರಣ "ವೆಂದೂ ಕರೆಯುತ್ತಾರೆ (ಕನಾಶ. ೯೨). [ಸಂ.]

**ಬಾಲಮೆಣಸು** (ನಾ). (ತೊಟ್ಟು ಉದ್ದವಾಗಿರುವ) ಒಂದು ಬಗೆಯ ಮೆಣಸು : "ಚವಿಕೆ, ಗಂಧಮೆಣಸು, ಮಾರಮೆಣಸು, ಬಾಲಮೆಣಸು , ಕಪ್ಪರಜನ್ನಿ" (ಸಸ್ಯಕೋ ೦೦೬) : ಕಾಳುಗಳು . . . ಹಸ್ತವಾಗುತ್ತಿದ್ದಂತೆ ಫಲಾವರಣದ ಬುಡ ಅಸಾಧಾರಣವಾಗಿ ಬೆಳೆಯುವುದರಿಂದ ಪ್ರತಿಕಾಳಿಗೂ ಒಂದು ತೊಟ್ಟು (ಬಾಲ) ಹೊರಟಂತೆ ಭಾಸವಾಗುತ್ತದೆ. ಆದ್ದರಿಂದಲೇ ಇದಕ್ಕೆ ಬಾಲಮೆಣಸು ಎಂಬ ಹೆಸರು (ಕಂಕೋ. XII. ೩೩). [ ಬಾಲ₁ + ಮೆಣಸು (<ಮೆಣಸು) ]

**ಬಾಲರಕ್ಷೆ** (ನಾ). ದುಷ್ಟಗ್ರಹ ಅಥವಾ ಭೂತಬಾಧೆಯಾಗದಂತೆ ಮಕ್ಕಳಿಗೆ ಕಟ್ಟುವ ತಾಯಿತ, ದಾರ ಮೊದಲಾದ ಪ್ರತಿಬಂಧಕ ಸಾಧನ. [ಸಂ. ಬಾಲರಕ್ಷಾ]

**ಬಾಲರಸ** (ನಾ). [ವೈದ್ಯಶಾ] (ಮಕ್ಕಳ ಹಳೆಯ ಜ್ವರ, ಕೆಮ್ಮು, ಶೂಲೆ ಇತ್ಯಾದಿಗಳಿಗೆ ಕೊಡುವ ಗಂಧಕ, ಸೋನಾಮುಖಿ ಮುಂತಾದುವುಗಳ ಮಿಶ್ರಣದಿಂದ ತಯಾರಿಸುವ) ಒಂದು ಬಗೆಯ ಔಷಧ : ಮಣಿಶಿಲಾಸಿದ್ಧರಸವು ಸಮವಾಗಿ ಕರಗಿಸಲು ಬಾಲರಸ ವಾಗುವುದು (ಗಂಧಶ್ರ. ೯-೦). [ಸಂ.]

**ಬಾಲರಾಕ್ಷಸ** 'ಬಲರಾಕ್ಷಸಿ' ನೋ.

**ಬಾಲರಾಕ್ಷಸಿ** 'ಬಲರಾಕ್ಷಸಿ' ನೋ.

**ಬಾಲರ್ಷಿ** (ನಾ). ಋಷಿಸತ್ವವುಳ್ಳ ಬಾಲಕ : ನನ್ನೊಳ್ಬೆಗೇಂ ಕಡಮೆ, ಹೇಳವ್ವ, ನಿನ್ನೀ ಬಾಲರ್ಷಿ ಭರತನ ಕೂರ್ಮೆ? (ಶ್ರೀರಾಮಾ. ೩೩-೦೩೬). [ಸಂ.]

**ಬಾಲಲೀಲೆ** (ನಾ). = ಬಾಲಕೇಲಿ : ಶಿಶುವಾಗಿ ಬಾಲಲೀಲೆ ತೋಱಿದೆ (ಪುರಂದ. ೩-೬೯-೩) ; ಕಂದನಾಡುವ ಬಾಲಲೀಲೆಯಂ ನೋಡಿ . . . ಪ್ರೀತಿಯಿಂ ಪಡೆವರ್ (ಕೃಬಾಜ. ೦೯-೨೦). [ಸಂ. ಬಾಲಲೀಲಾ]

**ಬಾಲವ** (ನಾ). [ಜ್ಯೋತಿ] ಹನ್ನೊಂದು ಬಗೆಯ ಕರಣಗಳಲ್ಲಿ ಎರಡನೆಯದು ; ಒಂದು ಬಗೆಯ ಕಾಲಮಾನ : ಬವ ಬಾಲವ ಕೌಲವ ತೈತಿಲ ಗರಜೆ ವಣಿಜೆ ಭದ್ರೆಗಳೆಂಬವೇಳುಂ ಚರಕರಣಂಗಳು . . . ವರ್ತಿಸುತ್ತಿಹವು (ವಿವೇಕ. ೨೬೨) ; ಚರ ಮತ್ತು ಸ್ಥಿರ ಎಂದು ಕರಣ ಎರಡು ವಿಧ. ಬವ ಬಾಲವ ಕೌಲವ ತೈತುಲ ಗರಜೆ ವಣಿಜೆ ಭದ್ರೆ ಈ ಏಳು ಚರಕರಣಗಳು (ಜಾತಕ. ಪಂ. ೩-೩೬೩). 'ನಾಗವ' ಪರಾ. [ಸಂ.]

**ಬಾಲವಂದ, ಬಾಳವಂದ** (ನಾ). ಮಕ್ಕಳಿಗೆ ತೊಡಿಸುವ ಉಡುಪು, ಆಭರಣ ಇತ್ಯಾದಿ ; ಮಕ್ಕಳ ಉಡುಗೆ ತೊಡುಗೆ : ಅರಳೆಲೆಯುತ್ತಿ ಕಾಡುವ್ ಪುಲಿಯುಂಗುರಮ್ . . . ಗೊಂದಳಿಸಿರೆ ಬಾಲವಂದದ ತೆರಳ್ಕೆಯಿ ನಚ್ಚುತನಾದವೊಪ್ಪಿದಂ (ಸೂಕ್ತಿಸು. ೬-೭೩). **ಬಾಳವಂದ** : ಬಾಳವಂದಂಗಳ ನೊಯ್ಕನೆ ತುಡಿಸಿದಾಗಳಾ ಶಿಶು ಜಿನಶಿಶುವೆಂಬಿನಗವೇಂ ಮನಂಗೊಳಿಸಿ ದನೋ (ಸುಕುಮಾ. ೦೦-೩೪) ; ಅರಳೆಲೆ . . . ನೂಪುರಂ ವರವಲಯಂ ಗಳೆಂಬ ಪಲವಂದದ ಚಂದದ ಬಾಳವಂದವೊಪ್ಪಿರೆ ಪಿತೃಮಾತೃಗಳ್ಗೆ ಪಡೆದರ್ ತನಯರ್ ನಯನೋತ್ಸವಂಗಳಂ(ಶಂಕರಾಮು. ೬-೦೪೦).
[ ←ಹಿಂ. ಬಾಲಾಬಂದ./ ಸಂ. ಬಾಲಬಂಧ ]

**ಬಾಲವಕರಣ** (ನಾ). = ಬಾಲವ : ಬಾಲವಕರಣಕ್ಕೆ ವನಂ ಳ ಗಳಿಗೆ ಮೇಲೆ ತ್ಯಾಜ್ಯ (ಛಾಸ್ಕರ. ೬೦-೫). [ಸಂ.]

**ಬಾಲವಣ** (ನಾ). = ಬಾಲದೆಱಗೆ : ಬಾಲವಣಮುಮಾಯಿಲದೆಱ ಗಳುಮನ್ನೆಲದ ನೇಸಱ ಉಳ್ಳನ್ನೆಗ ಬಿಟ್ಟ (ಶಾಸನ. XI–i. ೩೪-೬ ; ೨೫ಹು ೫೪ ೧) ; ಬಾಲವಣಾಂ ಬೇಡುವನೊಂದೆ ಗೊಂದೆಗಂ (ಕವಿರ. ೬೩ ಪ್ರಯೋ).
[ ಬಾಲ$_1$ + ಪಣ$_3$ ]

**ಬಾಲವಣದೆಱ** (ನಾ) = ಬಾಲದೆಱಗೆ: ಚಿಕ್ಕ ಬೆಳಂಗಲಿಯ ಹೊಗೆದೆಱ ಬಾಲವಣದೆಱಯೊಳಗೆ ಎಳ್ಳೇಶ್ವರದೇವರ ನಂದಾದೀವಿಗೆಗೆ ವರುಷ ನಿಬಂಧ್ಧಿಯಾಗಿ ಕೊಟ್ಟ ವ ೨ (ಎಕ. XV. ಹೊಳೆನ. ೯೪-೦೦; 1237).
[ ಬಾಲವಣ + ತೆಱ$^1_3$ ]

**ಬಾಲವತಿ, ಬಾಳವತಿ** (ನಾ). ಹೆರಿಗೆಯಾಗಿ ಇನ್ನೂ ಆರೈಕೆಯನ್ನು ಹೊಂದುತ್ತಿರುವವಳು ; ಬಾಣಂತಿ : ಮಾಡಿದರ್ . . . ಬಾಲವತಿ ಗಂದಭಿಷೇಕವಮಂಗನಾಜನಂ (ಶಾಂತೀಶ್ವ. ೯.೩೨). **ಬಾಳವತಿ** : ಮಾಡಿದರ್ . . . ಬಾಳವತಿಗಂದಭೀಷೇಕಮನಿಂತು ಕಾಂತೆಯರ್ (ಸುಕುಮಾ. ೬-೭೬). 'ಬಾಳಂತಿ' ಪರಾ [ಸಂ. ಬಾಲವಶೀ ]

**ಬಾಲವದ್ದೆ** (ನಾ). ಬಾಲ್ಯಾವಸ್ಥೆಯಲ್ಲಿರುವವನು ; ಹಸುಮಗು (?): ಬಾಲವದ್ದೆಯಂ ಕೂಸಂ ಸಿಸುವನವ್ವಕ್ಕನಂ ವಿಸುಟ್ಟಿಂತು ತವಂಬಟ್ಟ ಪಾಪ ಕರ್ಮ ದಯೆಯಿಲ್ಲದೊಂ ನಿಷ್ಕರುಣಿ ಎಂದು ಬಯ್ದರ್ (ವಡ್ಡಾರಾ. ೯೩-೦೦); ಮಗನೆ ನೀನೆನ್ನಂ ಕೂಸನ್ನೆ ಟಾ[ಪಾಠಾಂ. ಳ]ವದ್ದೆ . . . ಪಶ್ಚಾ ತ್ಕಾಲದೊಳ್ ತಪಂಬಡುವುದೆಂದೊಡೆ (ವಡ್ಡಾರಾ. ೧೧೦೩-೬). "ಮಂಗಳ ಕರನಾದ ಬಾಲಕ ?" (ವಡ್ಡಾರಾ. ಟಿಪ್ಪಣಿ. ೨೯೭). [ಬಾಲ್ಯ + ? ]

**ಬಾಲವಧ** (ನಾ). ಮಕ್ಕಳ ಕೊಲೆ ; ಶಿಶುಹತ್ಯೆ : ದೊರೆಕೊಂಡುದು ನಿನಗೆ ಪಾತಕಂ ಬಾಲವಧಂ (ಗದಾಯು. ೯-೩೪). [ ಸಂ. ]

**ಬಾಲವಿಧವೆ** (ನಾ). ಚಿಕ್ಕವಯಸ್ಸಿನಲ್ಲಿಯೇ ಗಂಡನನ್ನು ಕಳೆದುಕೊಂಡ ವಳು : ಹೀಗೆಯೇ ಇನ್ನೊಬ್ಬ ಬಾಲವಿಧವೆಯಿದ್ದಳು (ಹುಮಾಂ. ೬೩).
[ ಸಂ. ಬಾಲವಿಧವಾ ]

**ಬಾಲವೂರು, ಬಾಳವೂರು** (ನಾ). ಒಂದು ಊರಿನ ಹೆಸರು ; ಈಗಿನ ಧಾರವಾಡಜಿಲ್ಲೆಯ ಹಾನಗಲ್ಲು ತಾಲ್ಲೂಕಿನ ಬಾಳೂರು : ಪಾನು ಜ್ಜಲ್ ಕಿಱುವಳ್ಳಿ ಬಾಲವೂರು . . . ಗ್ರಾಮಂಗಳ್ ವರ್ಧ್ಯೇ (ಎಇ. VIII, ೨೭ : 758). **ಬಾಳವೂರು** : ಬಾಳವೂರು ಇತ್ಯೇತೇಷಾಂ ಗ್ರಾಮಾಣಾಂ (ಎಇ. ೯. ೨೦೧-೬೩; 757). [ ? + ಊರು$_3$ (<ಊರ್) ]

**ಬಾಲಶಯ್ಯೆ** (ನಾ). (ಮಗುವನ್ನು ಮಲಗಿಸುವ) ತೊಟ್ಟಿಲು : "ಶೈಶವಿ ಬಾಲಶಯ್ಯೆಯೆನೆ ತೊಟ್ಟಲಕ್ಕುಂ" (ಮಂಗರಾ. ೬೦-೦೬).
[ ಸಂ. ಬಾಲಶಯ್ಯಾ ]

**ಬಾಲಶಿವಮೌಳಿ** (ನಾ). ಬಾಲಚಂದ್ರನನ್ನು ತಲೆಯಲ್ಲಿ ಧರಿಸಿದವನು : ಶಿವ : ಪ್ರಮಥರಱಿಯದೆ . . . ಅದ್ರಿಜೆಱಿಯದೆ ಬಾಲಶಿವಮೌಳಿ ಕ್ಷಮೆ ಯಾಳಿದು . . . ಭಕ್ತ್ಯೈಕಭಾವದ ಸಮತೆಯೊಳಿದಿಬ್ಬರನು ಮಡಗಿದ ಬೆಡಗು ಲೇಸಾಯ್ತು (ಚಿಕ್ಕ. ೩೬-೯೦); ನಿಮ್ಮ ನೆಱ ಕಟ್ಟಾಡಿದರ ಬಾಯ್ ಹುಳುವುದೆಂದನು ಬಾಲಶಿವಮೌಳಿ (ಶಿವಪ್ರಾ. ೦೬-೨೫).
[ ಸಂ. ಬಾಲಶಶಿವಮೌಲಿನ್ ]

**ಬಾಲಶಿಕ್ಷೆ** (ನಾ). ಚಿಕ್ಕ ಮಕ್ಕಳ ಶಿಕ್ಷಣ ; ಬಾಲಕರಿಗೆ ಕೊಡುವ ವಿದ್ಯಾ ಭ್ಯಾಸ : ಬಾಲಶಿಕ್ಷೆಗಂ ವಿನ್ಯಾಸದ ವಕ್ಖಾಣಕ್ಕಂ ವೃತ್ತಿಯ ಭೂಮಿಯೊಳಗೆ ಬಿಟ್ಟ ಭಟ್ಟವೃತ್ತಿಯೊಂದು (ಶಾಸನ. XX. ೯೩-೬೦ ; ೧). [ಸಂ. ಬಾಲಶಿಕ್ಷಾ]

**ಬಾಲಸಂಗಡ** (ನಾ). ೧. ಕುಸ್ತಿಯ ಒಂದು ಪೇಚು; ವಲ್ಲಯುದ್ಧದ ಒಂದು ವರಸೆ. ೨. ಕತ್ತಿವರಸೆಯಲ್ಲಿ ಒಂದು ಬಗೆ : ಬಾಲಕರೊಡನೆ ಕೂಡಿದಂಥಾ ಗೋಣಿಯದಕ್ಕೆ ಬಾಲಸಂಗಡಯೆಂಬ ಹೆಸರು (ಅರ್ಜುಜಿ. ೨-೪೦).
[ ←ಹಿಂ. ಬಾಲಸಂಗಾಡಾ, ಬಾಲಸಿಂಗಡಾ ; ಮರಾ. ಬಾಳಸಾಂಗಾಡಾ ]

**ಬಾಲಸನ್ಯಾಸಿ** (ನಾ). ಚಿಕ್ಕವಯಸ್ಸಿನಲ್ಲಿಯೇ ಸಂನ್ಯಾಸಿಯಾದವನು : ಉಡುಪಿಯಲ್ಲಿ ಬಾಲಕೃಷ್ಣನ ಪ್ರತಿಷ್ಠೆಯೂ ಬಾಲಸನ್ಯಾಸಿಗಳ ಪೂಜಾ ಪದ್ಧತಿಯೂ . . . ಭಕ್ತಿಯ ಸಾಕ್ಷಿಯಲ್ಲದೆ ಬೇರೆ ಅಲ್ಲ (ಶಾಕರ. ೨೯೬) ; ಬಾಲಸನ್ಯಾಸಿ ಕಟ್ಟಿರೆ ಖೂಳನಾಯಿಗಿಂತ ಕಡೆ (ಗಾದೆ).
[ <ಸಂ. ಬಾಲಸಂನ್ಯಾಸಿನ್ ]

**ಬಾಲಸರ** (ನಾ). ಗಾಳಿಪಟಕ್ಕೆ ಕಟ್ಟುವ ಉದ್ದವಾದ ಪಟ್ಟಿ : ಬಾಲಂ ಗಚ್ಚೆ ; ಬಾಲಂಗೋಸಿ : ಪಟ ಬಾಲಸರ ಕೂಡಿದ್ದರೇನು ಸೂತ್ರ ಕಿಂಚಿತ್ತು ತಪ್ಪಿದಡೆ ಅದು ಖೇಚರತ್ವದಲ್ಲಿ ಅಡಲಜೀಯದು (ಶೂನ್ಯಸಂ. ೩೬-೦೩೬) ; ಪಟದೊಳಗಣ ಬಾಲಸರಕ್ಕೆ ಪ್ರತಿಸೂತ್ರ ನೇಣುಂಟೆ (ವಚನಶಾ. ೨೬೪-೨೦). [ ಬಾಲ$_1$ + ಸರ$_3$ ]

**ಬಾಲಹುಳು** 'ಬಾಲಪುಳು' ನೋ.

**ಬಾಲಳಿ** (ನಾ). ಎಳೆಯ ದುಂಬಿ ; ಮರಿದುಂಬಿ : 'ಬಾಲಳಿಗುರುಳು' ಪರಾ. [ಸಂ. ಬಾಲಲಿ]

**ಬಾಲಳಿಗುರುಳು** (ನಾ). ಮರಿದುಂಬಿಯಂತೆ ಕಪ್ಪಾಗಿರುವ ಕೂದಲು : ಸುಳಿಗುರುಳವರುಂಗುರಗುರುಳವರು ಬಾಲಳಿಗುರುಳವರು . . . ಆ ಕುವರಿಯ ಬಳಿವಿಡಿದ್ಯದಿತೊಗ್ಗಿನಲಿ (ಮೋಹನ. ೨೯-೦೦).
[ ಬಾಲಳಿ+ಕುರುಳು$_1$ (<ಕುರುಳ್$_1$) ]

**ಬಾಲಾಖಾನೆ** (ನಾ). ಉಪ್ಪರಿಗೆ ; ಮೇಲ್ಮಾಡ ; ಮಹಡಿ : ಅರಮನೆ ಯೊಳಕ್ಕೆ . . . ಎಡಪಾರ್ಶ್ವದ ಬಾಲಾಖಾನೆಯಲ್ಲಿ ಮಹಾರಾಜರವರು ನವರತ್ನಾಲಂಕೃತವಾದ ದಂತದ ಸಿಂಹಾಸನದ ಮೇಲೆ ಮುಹೂರ್ತ ಮಾಡಿಸಿದ್ದರು (ಮಹಾವಂ. II. ೩೩). [←ಪಾರ. ಹಿಂ. ಬಾಲಾಖಾನಾ]

**ಬಾಲಾಟ** (ನಾ). ಮಗುವಿನ ಆಟ ; ಬಾಲಕೇಳಿ : ಬಲು ಪರಿ ಒಂಟೊಂದು ಬಾಲಾಟದಲಿ ನಲಿದು ಒಲಿಮೆಯಿಂದಲಿ ನೋಡ ಬಂದ ಯೌವನಸ್ತ್ರೀಯರ ನಿಲಿಯ ಬಿಡಿಸಿ (ವಸ್ತುಗು. ೧೪-೩). [ಬಾಲ್ಯ+ಆಟ]

**ಬಾಲಾತಪ, ಬಾಳಾತಪ** (ನಾ). ೧. ಆಗ ತಾನೆ ಉದಯವಾದ ಸೂರ್ಯನ ಬೆಳಕು ; ಎಳೆಬಿಸಿಲು; ಬಲಿಯದಿರುವ ಬಿಸಿಲು : ಹರಿ ಚಂದನವಿಚ್ಛುರಿತಾಂಗರಾಗನತಿರುಚಿರಹಾರನೇನೆಸೆದನೊ ನಿರ್ಝರಮುಂ ಬಾಲಾತಪಮುಂ ಬೆರಸಿರ್ದದ್ರೀಂದ್ರನಂತೆ ಪಾಂಡ್ಯನೃಪೇಂದ್ರಂ (ಶಾಂತಿಪು. ೫-೦೩೮) ; ಪೆಣ್ದುಂಬಿಗಳ್ಪಾಯ್ದು ಪುಷ್ಪರಸಾಸಾರದ ತುಂತುರ್ಜಿಂದೆಱೆ ನಾಂದಾಂದೋಳಿತಾಶೋಕಮಂಜರಿಯಂ ಸಾರ್ವುವು ಪಲ್ಲವೋಲ್ಲಸಿತಮುಂ ಬಾಲಾತಪಭ್ರಾಂತಿಯಿಂ (ಜಲ್ಲಿಪು. ೨-೩೬). **ಬಾಳಾತಪ** : ೧. ಪಾತ್ತ್ರೂರ್ವಳ ಲೋಚನಕುಮುದಂ ಮುಗಿದುವು ಕುಮುದಿನಿಗಳ್ ಬಾಳಾ ತಪಕ್ಕೆ ಮೊಗವಿಸುವುದವೋಲ್ (ಜಲ್ಲಿಪು. ೬-೦೨೪). ೨. ಕಿರುಪ್ರಕಾಶ ; ಮಂದಕಾಂತಿ : ಅರಿಕೇಸರಿಯ ಪಾದತಳಂಗಳಿಗೆಱಗಿದರಿನರಪಾಲರ ಮಕುಟಮಾಣಿಕ್ಯಮರೀಚಿಜಾಲಬಾಳಾತಪಂಗಳನಲಿದು ಕೆಂಕಮಾದಂತಾದುವು (ಪಂಪಭಾ. ೨-೩೯ ವ). [ಸಂ.]

**ಬಾಲಾಭ್ಯಾಸ** (ನಾ). ಚಿಕ್ಕವಯಸ್ಸಿನಲ್ಲಿ ಮಾಡುವ ಸಾಧನೆ : ಬಾಲಾಭ್ಯಾಸವ ಮಾಡಹೋದರೆ ಎನ್ನ ಸುರಿಗೆ ಎನ್ನ ನಟ್ಟಿತ್ತು ಎಂತಯ್ಯಾ ಕಲಿಯೊಡನೆ ಶ್ರವವ ಮಾಡುವೆನು (ಬಸವ. ೬೨೪). 'ಬಾಲಸಂಗಡ' ಪರಾ. [ಸಂ.]

**ಬಾಲಾರಿಷ್ಟ** (ನಾ). = ಬಾಲಗ್ರಹ. [ಸಂ.]

**ಬಾಲಾರ್ಕ, ಬಾಳಾರ್ಕ** (ನಾ). ಆದೇ ತಾನೆ ಹುಟ್ಟಿದ ಸೂರ್ಯ; ಉದಯರವಿ : ತದಂಗನಾಂಕತಲದೊಳ್ ಬಾಲಾರ್ಕನಂ ಪೋಲ್ತು ಭಾಸುರ ತೇಜೋಧಿಕನಪ್ಪ ಬಾಲನನೊಱಲ್ದಟ್ಟಿಕರ್ತು ನೋಡುತ್ತಮಿರ್ದರುಮಂ ಮಾಱಮೆ . . . ಬಲಗೊಂಡು (ಅಂಕ. ೬-೪೪); ದಿನದೇವಿ ತಾಂ ಬಾಲಾರ್ಕಕಲಶದೀವಂಬಿಡಿದು ಹೊತ್ತರೆಯ ಹೊಸ್ತಿಲಂ ದಾಂಟುತಿರೆ, ಸೇರ್ದುದಾ ತೇರಯೋಧ್ಯೆಯ ನಾಡಿನೆಲ್ಲೆಯಂ (ಶ್ರೀರಾಮಾ. ೯೬-೪೯೬). **ಬಾಳಾರ್ಕ** : ವೇಲೆಯ ತಮಾಳವನಮಂ ಕಾಳಿದ ಕಟ್ಟಲೆಯ ಗೆತ್ತು ಮುತ್ತಿರ್ದುವಕ್ಕುಂ ಬಾಳಾರ್ಕಬಿಂಬಶತಂ (ಮಲ್ಲಿ. ೦೬-೧೨೬). [ಸಂ.]

**ಬಾಲಾಶೋಕ** (ನಾ). ೧. ಎಳೆಯ ಅಶೋಕವೃಕ್ಷ. ೨. ತರುಣಿಯರಿಗುಂಟಾಗುವ ದುಃಖ ; ಯುವತಿಯರಿಗಾಗುವ ಶೋಕ : ೧, ೨ : ಬಾಲಾಶೋಕಂ ವಿಗ್ರಹಲೀಲೆ ರಜೋವಿಕೃತಿ . . . ಇಲ್ಲ ಬನದೊಳ್ಳಲ್ಲದೆ ಜನದೊಳ್ (ಕೃಷ್ಣ. ೩-೨೮).
[ಸಂ. (ಬಾಲ+ಅಶೋಕ : ಬಾಲಾ+ಶೋಕ)]

**ಬಾಲಾಸು** (ನಾ). ಭಾರ ಹೇರುವುದಕ್ಕೆ ಮುಂಚೆ ಎತ್ತು, ಕುದುರೆ ಮುಂತಾದುವುಗಳ ಬೆನ್ನಿನ ಮೇಲೆ ಹಾಕುವ ಬಟ್ಟೆಯ ತಡಿ : ಒಳ್ಳೆ ಒಳ್ಳೆ ಎತ್ತುಗಳ ತರಾಸು ಮಾಡಿಸಿ ಕವುದಿ, ಗೋಣಿ, ಬಿಗಿ, ಬಾಲಾಸು ಸಹಾ ತಯಾರು ಮಾಡಿಸಿ . . . ಹುಲ್ಲು ನೀರು ಇದ್ದಲ್ಲಿಗೆ ಚರಾಯಿಗೆ ಕೂಡಿಸಿದರು (ರಾಜೇಂದ್ರ. ೭೭). [←ಪಾರ. ಬಾಲಾಸ್]

**ಬಾಲಿಕೆ, ಬಾಳಿಕೆ** (ನಾ). ೧. ಹುಡುಗಿ ; ಬಾಲಕಿ : ಬಾಲಿಕೆ[ಪಾಠಾಂ. ಲಕಿ]ಮುಗ್ಧೆ ತಕ್ಕುದೆಜುಯಳ್ ವಲರಂ ಪೆಱಗಿಕ್ಕಿ ಸೂಡಿದಳ್ ಮಾಲೆಯಂ (ಶಂಖಾವಾ. ೩-೯೭). ೨. ಚಿಕ್ಕ ಗಾತ್ರದ ಏಲಕ್ಕಿ. ೩. ಉಸುಕು ; ಮರಳು. ೪. ಶ್ರೇಷ್ಠವಾದ ನೆಲ್ಲಿಯ ಮರ : ರಾಯನೆಲ್ಲಿ ; ಅರನೆಲ್ಲಿ (?) : "ಅರನೆಲ್ಲಿ ಬಾಲಿಕೆ[ಪಾಠಾಂ. ಲಕಿ]ಯನಿಕ್ಕು" (ಮಂಗರಾ. ೩೭-೦೪). **ಬಾಳಿಕೆ** : ೧. ಸಿಖಂಡಿಯು ಕೇಳಿ ನಮ್ಮಾ ಮಾನ ಹೋಗುವುದೆನುತ ರಾತ್ರಿಯಲಿ ಆಲಯುವ ಬೀಳ್ಕೊಂಡು ಗಹ್ವರದೊಳು ವನಕ್ಕೆ ತರಲು ತುಂಬುರು ಬಾಳಿಕೆಯ ಕಂಡಂದು ದುಗುಡವಿದೇನು ಹೇಳೆಂದ (ಸಂಭವ. ೦೩-೬೦). [ಸಂ. ಬಾಲಿಕಾ]

**ಬಾಲಿಶ** (ಗು). ೧. ಮಗುವಿಗೆ ಸಂಬಂಧಿಸಿದ ; ಶಿಶುಸಹಜವಾದ ; ಬಾಲಸ್ವಭಾವದ. ೨. ದಡ್ಡತನದ ; ಜ್ಞಾನಹೀನವಾದ : ಹೀಗೆ ಸ್ಥಿರವಾಗಿ ಬಂದ ಬಾಲಿಶ ಭಾವನೆಗಳ ಪುಂಜವಾದ ಅಂತಃಕರಣವು ವ್ಯಕ್ತಿ ವ್ಯಕ್ತಿಗೂ . . . ಕಾಲಕಾಲಕ್ಕೂ ಬೇರೆಯಾಗುತ್ತದೆ (ವಿಚಾರ. ೩೦) ; ಮೊದಲು ಅರಿವು, ವಿಚಾರಶಕ್ತಿ ಎಂಬುದೇ ಇಲ್ಲ. ಕೇವಲ ಬಾಲಿಶ ಕಲ್ಪನೆ ; ಒರಟು ತರ್ಕ (ಅಕ್ಷರ. XXIX ಪ್ರಸ್ತಾವನೆ). ೩. ಎಚ್ಚರಗೇಡಿಯಾದ ; ಅಜಾಗರೂಕತನದ. ೪. ಮಕ್ಕಳಾಟಿಕೆಯ ; ಹುಡುಗುತನದ. (ನಾ). ೫. ಮಗು ; ಶಿಶು : "ಮಗುವಿನಲ್ಲಿಯುಂ ಬಾಲಿಶನೆಂಬುದು" (ಪಂಪಾಭಾ. ೦೩೪-೨೦) ; "ಬಾಲನೊಳ್ ಬಾಲಿಶನೆಂದೆಂಬುದು" (ಮಂಗರಾ. ೧೪೦-೦೦). ೬. ಮೂಢ ; ತಿಳಿಗೇಡಿ ; ಮೂರ್ಖ : ಅಜ್ಞಜನಂಗಳ್ ಬಾಲಿಶರೆಂದಜಿತರ್ ಪೇಳ್ಗುಂ (ಶಿಶು.ಕೃ. ೧-೪-೦೩೪) ; ಬಾಲಿಶರ ನುಡಿಗಳಿಂ ಮರುಳಾಗಿ ಸಂತತಿಯ ಕಾಲವಶಗೆಯ್ಯಲೇಂ ಜೀಯ (ಪಂಚತಂ. ೬-೪-೨೦) ; ಬಾಲ ಬಾಲಿಶರು ಗುರುಪೀಠಗಳನೇರಿದರು (ಹುಚೋರ. ೩೪-೨೨). ೭. ಹುಡುಗಾಟ ; ಮಕ್ಕಳಾಟ : ಎನ್ನ ಮೋಹನ್ನ ಪೊನ್ನ ಪಿಳಿಕಿನ ಕೋಲ ಬಾಲಿಶವಂ ನೋಡು (ರಾಘವಾಂಕ. ೦೩೦-೧೨). ೮. ದಿಂಬು ; ಮೆತ್ತೆ. [ಸಂ.]

**ಬಾಲಿಶತೆ** (ನಾ). ದಡ್ಡತನ ; ಮೂಢತೆ : ಜಗತಿಯುದ್ದಂಡ ರಣಪಂಡಿತ ಸುರೇಂದ್ರಸುತನಿಗೆ ಸಿಲುಕಿದೀ ರಾಜ್ಯ ತನಗೆಂತಡಸಿತೆಂಬ ಬಗೆಯನರಿಯದೆ ಪೋದ ಬಾಲಿಶತೆಗೊಳಗಾದನುಪಕೃತಿಯನೆಣಿಸದಾದ (ಜೈಮಿನಿ. ೪-೦೪-೬). [ಸಂ. ಬಾಲಿಶತಾ]

**ಬಾಲಿಶತ್ವ** (ನಾ). = ಬಾಲಿಶತೆ : ಎಲೆ ಮೂಢ ಬಾಲಿಶತ್ವದ ನುಡಿಗಳು ಮನ ಬಂದ ತೆರದೊಳುಸುರಿದೆ (ಶಂಕರಾ. ೬-೨೬-೬೬). [ಸಂ.]

**ಬಾಲು** (ನಾ). ರಬ್ಬರು, ಪ್ಲಾಸ್ಟಿಕ್ಕು ಮುಂತಾದುವುಗಳಿಂದ ಮಾಡಿದ ಆಟದ ಗುಂಡನೆಯ ವಸ್ತು ; ಚೆಂಡು : ಬಾಲು ನಮ್ಮ ಗೋಲಿನ ಒಳಗೆ ಬಂದು ಬಿದ್ದಿತ್ತು (ಶಾಲೆಮ. ೭೭). [← ಇಂ. ball]

**ಬಾಲೆ, ಬಾಳೆ** (ನಾ). ೧. (ಹದಿನಾರುವರ್ಷದ ಒಳಗಿನ) ಹುಡುಗಿ : ವಯಸವಿಭೇದದಿಂ ಬಾಲೆ ಯೌವನೆ ಪ್ರೌಢೆ ಲೋಲೈಯೆಂದೀತು ಧರಿತ್ರಿಯೊಳಪ್ಪರ್ ನಾಲ್ವರ್ ಕಾಂತೆಯರ್ (ಮದನ. ೬-೦) : ಸಲೆ ಬಳಿಸ ವಿರಾಜಿಜಲಿ ಬಾಲೆ (ಜಗ. ೩-೪). ೨. ಯುವತಿ ; ತರುಣಿ : ಬಾಲೆಗೆ ಗುಣಕಾಂತಿ ವಯೋಲೀಲೆಗೆ ವಿನಯಪ್ರಧಾನಗುಣಗಣಗೆಣೆ ಭೂಪಾಲಂ (ಶಾಂತಿಪು. ೩-೦೩೩); ಬಾಲೆಯ ಕಡೆಗಣ್ಣೋಟವೆ ಸಾಲದೆ ನನೆಗಣೆಗಳೇವುವು (ಶಂಬಾಖಾ. ೩-೪೪); ಕೇಳೆಲೆ ಬಾಲೆ ! ಬಾಲೇಂದು ಘಾಲೆ ! (ರಾಘವಾಂಕ. ೬-೦). ೩. ಮಗು ; ಶಿಶು : ಬಾಲೇನ ತೊಟ್ಟಲಿಗೆ ಮಲಗಿಸಕ್ಕ ಮುಂಚೆ, ಮೈಗೆ ಎಣ್ಣೆ ಹಚ್ಚಿದ ಆಂತಾ ಕಾಣ್ತದೆ (ಮಲೆಮ. ೪೬೦). ೪. ಒಂದು ಬಗೆಯ ಮಲ್ಲಿಗೆ. ೫. ಒಂದು ಬಗೆಯ ಸಸ್ಯ : "ಬಾಲೆ, ಸೊಟಗೆ, ಸೋಟಿಗೆ" (ಸಸ್ಯ.ಕೋ. ೯೯); ಸೊಟಗೆ, ಬಾಲೆ (ವೈದ್ಯಸಿಂ. ೫೮-೧೦೬೩). ೬. ಸಣ್ಣ ಗಾತ್ರದ ಏಲಕ್ಕಿ. ೭. ಅರಿಸಿನ. ೮. ತೆಂಗಿನ ಕಾಯಿ. **ಬಾಳೆ** : ೨. ಕೇಳಿರ ಕಂಕಭಟ್ಟನೆ ಯುಧಿಷ್ಠಿರನಾ ವಲಲಂ ವೃಕೋದರಂ ಬಾಳೆಯರಂ ಪಲಾಡಿಪ ಬೃಹಂದಳೆ ಫಲ್ಗುಣಂ (ಶಂಭವ. ೯-೬); ತೋಳ ನಖವ್ರಣಕೆಱ ೧[ದ] ಬಾಳೆಗಳ ನೋಟ್ಟ ಬಾಳೆ ಕಣ್ಣೀನೆಂಬಾಳೋಳವನೊಡರಿಸಿ ಸಲೆ ನೃಪಮಾಳೆಗೆ ಪಡೆದಳ್ ಮೃಗಾಕ್ಷಿ ಪರಿಸಂಭ್ರಮಮಂ (ಶಾಂತಿಪು. ೮-೯೩).
[ಸಂ. ಬಾಲಾ]

**ಬಾಲೆಮರ** (ನಾ). ಒಂದು ಬಗೆಯ ಮರ : "ಬಾಲೆಮರ, ಮಲ್ಲಲಿ, ಅಬನಾಸ, ಕರೀಮರ" (ಸಸ್ಯ.ಕೋ. ೩೦); (ವೈದ್ಯಸಿಂ. ೫೦-೩೯೯). [ಬಾಲೆ+ಮರ]

**ಬಾಲೆವೆಣ್ಣು** (ನಾ). = ಬಾಲೆ ೨ : ತೋಳೊಳೊಪ್ಪುವ ಸರ ತಾತಿ ಹೊಂಬಳೆಗಳ ಬಾಲೆವೆಣ್ಣುಗಳ್ಳೆದಿದರು (ಶಂಕರ. ೨೦-೦೬).
**ಬಾಲೆವೆಂಗಳು** (ಬಹುವ): ಹೊಸಹರೆಯದ ಹೊಮ್ಮಿನ ಬಾಲೆವೆಂಗಳು ಜಸವಡೆದೆಸೆದರೆನೆಂಬೆ (ಶಂಸಂ. ೨೪-೪೦). [ಬಾಲೆ+ಪೆಣ್ಣು(<ಪೆಣ್)]

**ಬಾಲೇಂದು** (ನಾ). = ಬಾಲಚಂದ್ರ ೧ : ಕೇಳೆಲೆ ಬಾಲೆ ! ಬಾಲೇಂದು ಘಾಲೆ ! (ರಾಘವಾಂಕ. ೬-೦). [ಸಂ.]

**ಬಾಲೇಂದುಗೆಱೆ** (ನಾ). [ಕಾಮಶಾ] ಬಾಲಚಂದ್ರನ ಆಕಾರದ ನಖಕ್ಷತದ ಗುರುತು ; ಅರ್ಧಚಂದ್ರಾಕೃತಿಯ ನಖಕ್ಷತದ ಗುರುತು : ಒಪಳ ಗುರುಕುಚಯುಗಳವ ಪುಂಡ್ರೇಕ್ಷುಚಾಪ ಕಣ್ಗಟ್ಟು ನಿಟ್ಟಿಸಲು ಸ್ಥಾಪನವಡೆದಿರ್ದ ಬಾಲೇಂದುಗೆಱೆ ಸುಸ್ವರೂಪವಾಗಿರ್ದುದೇನೆಂಬೆ (ಸೋಹಕ. ೦೬-೩೦). [ಬಾಲೇಂದು + ಗೆಱೆ]

**ಬಾಲೇಂದುಧರ** (ನಾ). ಬಾಲಚಂದ್ರನನ್ನು ಧರಿಸಿದವನು ; ಶಿವ : ಅಕ್ಕಱಿಂ ಬಾಲೇಂದುಧರನೊಳು ಪೊಕ್ಕು ಪೊಕ್ಕಲರ್ದಲರ್ದು ಕೂಡುತ ಸೊಕ್ಕಿ ತಲ್ಲಿಂಗದೊಳಗಿಂತು ವಿಲೀನನಾಗಿರ್ದು (ಚತು. ೩೩-೪). [ಸಂ.]

**ಬಾಲೇಯ** (ಗು). ೧. ಬಲಿ ಕೊಡಲು ಯೋಗ್ಯವಾದ. ೨. ಮಕ್ಕಳಿಗೆ ಯೋಗ್ಯವಾದ, – ಉಚಿತವಾದ. ೩. ಕೋಮಲವಾದ ; ಮೃದು

ವಾದ. (ನಾ). ೪. ಕತ್ತೆ: "ಬಾಲೇಯಮಗ್ರಾ ಗರ್ದಭಂ ಚಕ್ರೀವತ್ಸರಂ ರಾಸಭಮಂ ಕತ್ತೆಯಕ್ಕುಂ" (ಮಂಗರಾ. ೩೩-೬). [ಸಂ.]

**ಬಾಲೇಯಶಾಕ** (ನಾ). ಒಂದು ಬಗೆಯ ಸಸ್ಯ: "ಹಂಚಿಕಾ . . . ಬಾಲೇಯಶಾಕಃ, ಬರ್ಬರೀ, ವಂದಕಃ — ಈ ಭಾರಂಗೀ ಹೆಸರುಗಳು" (ಸಿದ್ಧಾಂತಿ. ೦೩೨). [ಸಂ.]

**ಬಾಲೋತ್ತರ** (ನಾ). "ಬಾಲಿಶನುಡಿ. ಹುಡುಗತನದ ಮಾತು" (ಸೋಮೇಶ್ವರ.ಶ. ೬೦೬): ಹಸಿವ ಕೊಂದೆನೆಂದು ಘೃತ ಹಾಲು ಸಕ್ಕರೆ ಹಣ್ಣುಕಾಯಿ ಮುಂತಾದ ಫಲಾಹಾರವ ಕೊಂಡು ಫಲಕ್ಕೆ ಬಾರಿವೆಂಬ ಬಾಲೋತ್ತರವ ನುಡಿದು ಬಾಲಹರಾದವೆಂಬ ಗೆಲ್ಲಗೂಳಿಗಳು ಕೇಳಿರೋ (ಸೋಮೇಶ್ವರ. ೩೭-೨೪೯). [ಸಂ.]

**ಬಾಲ್ಕನಿ** (ನಾ). ೧. ಮನೆಯ ಗೋಡೆಯಿಂದ ಮುಂಚಾಚಿಕೊಂಡು, ಕಂಬಗಳ ಆಧಾರದಿಂದ ನಿಂತಿರುವ (ಕಟಕಟೆಯುಳ್ಳ) ಭಾಗ: ರಾಮಕೃಷ್ಣ ಹಾಗು ಜಾನಕಿಯರು ತಮ್ಮ ಕೋಣೆಯ ಹೊರಗಿನ ಬಾಲ್ಕನಿಗೆ ಬರುವಾಗ ಅತ್ಯಂತ ಉಲ್ಲಾಸಿತ ಮನಃಸ್ಥಿತಿಯಲ್ಲಿದ್ದರು (ಅಕೋಲ. ೦೨೬): ರೇಣು ಅಲ್ಲಿಂದ ಮೇಲಕ್ಕೆದ್ದು ಬಾಲ್ಕನಿಯೆಡೆಗೆ ಸರಿದುಹೋದಳು (ಹೇಮುಂತ. ೨೯೩). ೨. ಚಿತ್ರಮಂದಿರ ಅಥವಾ ನಾಟ್ಯಮಂದಿರಗಳಲ್ಲಿ ಪ್ರೇಕ್ಷಕರು ಕುಳಿತುಕೊಳ್ಳುವುದಕ್ಕಾಗಿ ನಿರ್ಮಿಸಿದ ಮೇಲಟ್ಟದ ಪ್ರದೇಶ: ಶ್ರೀಧರ ಬಾಲ್ಕನಿಗೆ ತಾನೇ ಟಿಕೇಟು ತೆಗೆದ (ದೂರದೃ. ೦೦೬).

[←ಇಂ. Balcony]

**ಬಾಲ್ದಿ** 'ಬಾದಲಿ₁' ನೋ.

**ಬಾಲ್ಯ** (ನಾ). ೧. ಚಿಕ್ಕಂದು; ಎಳವೆ; ಶೈಶವ: ಚಕ್ರಿಗೆ ಬಾಲ್ಯಕ್ಕನು ರೂಪಕ್ರಮವಾಯ್ತೆನಿಸಿ ಮುಕ್ತಿನುಡಿವಣಿಯಸಗುಂ (ಜಗಂ. ೩-೯೬); ಹುಟ್ಟಿದ ಒಂದು ವರ್ಷ ತೊಡಗಿ ಹದಿನಾರು ವರ್ಷ ಪರ್ಯಂತಕ್ಕೂ ಬಾಲ್ಯವೆನಿಸಿಕೊಂಬುದು (ಸಕ್ಕ. ೦೩). ೨. ಹುಡುಗುತನದ ಅವಿವೇಕ: ಮೂರ್ಖತನ. ೩. ವಿನಯ; ನಮ್ರತೆ. [ಸಂ.]

**ಬಾಲ್ಯವಿನೋದ** (ನಾ). =ಬಾಲಕೇಲಿ ೧: ಭುವದೀಯಮನೋಹರಬಾಲ್ಯ ವಿನೋದಾಮೃತದೊಳಿಯ್ದೆ ತೀವಿದ ಮತ್ಸ್ವಾಂತವನಿಂತೀ ವಿಪದಿಂ ಶೀವುವುದೇ ಶ್ರೀವತ್ಸವತ್ಸವತ್ಸಾ (ಜಗಂ. ೩-೮೨). [ಸಂ.]

**ಬಾಲ್ಯವಿವಾಹ** (ನಾ). ಎಳೆಯ ವಯಸ್ಸಿನಲ್ಲಿ ಮಾಡುವ ಮದುವೆ; ವಯಸ್ಸಿಗೆ ಬರುವ ಮುನ್ನವೇ ಮಾಡುವ ಮದುವೆ: ಹಿಂದೆ ಬಾಲ್ಯವಿವಾಹಗಳು ನಡೆಯುತ್ತಿರಲಿಲ್ಲ (ಕಾರದ. ೩೯೦); ಬಾಲ್ಯವಿವಾಹ ಒಳ್ಳೆಯದಲ್ಲ (ಒತಲು. ೬೪). [ಸಂ.]

**ಬಾಲ್ಯಾವಸ್ಥೆ** (ನಾ). ೧. ಚಿಕ್ಕಂದು; ಬಾಲ್ಯಕಾಲ: ಬಾಲ್ಯಾವಸ್ಥೆಯ ಪ್ರಾರಂಭದ ಹೊತ್ತಿಗೆ ಜ್ಞಾಪಕಶಕ್ತಿ ತಕ್ಕಮಟ್ಟಿಗೆ ಬೆಳೆದಿರುತ್ತದೆ (ಶಂಕರಾ. XII, ೬೬). ೨. ಪ್ರಾರಂಭದ ಹಂತ,-ಸ್ಥಿತಿ: ಈ ಸಂಘದ ಕಾರ್ಯಯೋಜನೆಗಳು ಇನ್ನೂ ಬಾಲ್ಯಾವಸ್ಥೆಯಲ್ಲಿವೆ (ಜೂಕಿ).

[ಸಂ. ಬಾಲ್ಯಾವಸ್ಥಾ]

**ಬಾವ** 'ಭಾವ₁' ನೋ.

**ಬಾವಂಚಿ** 'ಬಾಗುಚಿ' ನೋ.

**ಬಾವಂಜಿ** 'ಬಾಗುಚಿ' ನೋ.

**ಬಾವಂತಿ** 'ಭವಂತಿ' ನೋ.

**ಬಾವಟೆ** 'ಬಾವುಟ' ನೋ.

**ಬಾವಡಿ** (ನಾ). ಸೋಪಾನವುಳ್ಳ ಅಗಲವಾದ ಬಾವಿ; ಹೊಕ್ಕರಣೆ; ಪುಷ್ಕರಿಣಿ: 'ಬಾವಡಿದಸವಂದ' ಪರಾ.

[ ←ಹಿಂ. ಮರಾ. ಬಾವಡೀ, ಬಾವಲೀ ]

**ಬಾವಡಿದಸವಂದ** (ನಾ). "ಬಾವಿ, ಕೊಳ ಮುಂತಾದವನ್ನು ಅಗೆಯಿಸುವ ಹಾಗು ಅವುಗಳನ್ನು ನಡೆಸಿಕೊಂಡು ಹೋಗುವ ಕಾರ್ಯಕ್ಕಾಗಿ ಕೊಡಲಾಗುತ್ತಿದ್ದ ದ್ರವ್ಯಾದಾಯ" (ಕಸಂಗ್ರಾ. ೬೨). 'ದಶಬಂಧ' ಪರಾ. [ ಬಾವಡಿ + ದಸವಂದ (<ದಶವಂಧ) ]

**ಬಾವಡೆ** (ನಾ). ಮಣ್ಣಿನ ಮುಚ್ಚಳ: ಶಿವಣ್ಣ ಒಂದು ಬಾವಡೆಯಲ್ಲಿ ಗಂಜಿಯನ್ನು ಎತ್ತಿಕೊಂಡು ಹೊರಗೆ ಬರುತ್ತಾನೆ (ತೊಡಗು. ೬೨).

[ ←ತುಳು. ಬಾವಡೆ ]

**ಬಾವಣಯ್ಯ** (ನಾ). ಒಬ್ಬಾತನ ಹೆಸರು: ಬರೆದಂ ಬಾವಣಯ್ಯಂ (ಎಇ. I. ೨೬-೮೭; ೯೪೪). [ ? + ಅಯ್ಯ₁ ]

**ಬಾವಣಿಕೆ** (ನಾ). ಆದರ; ಗೌರವ: ಬಾವಣಿಕೆಯಿಲ್ಲದ ನಂಟರ ಮನೆಗೆ ಹೋಗಬಾರದು (ಜೂಕಿ). [< ಭಾವ್ಯ]

**ಬಾವಣಿಸು** (ಕ್ರಿ). ಆದರಿಸು; ಗೌರವಿಸು: ಇಂಕರನಾದರೂ ಬಾವಣಿಸ ಬೇಕಲ್ಲ ನನ್ನ ಮಾತಾ? (ಸಣ್ಣಮು. ೦೭). [ಬಾವಣಿಕೆ + -ಇಸು]

**ಬಾವನಂಟ** (ನಾ). ಸೋದರಿಯ ಗಂಡ; ಭಾವ: ಬಾವನಂಟ ಬಂದಾಗಲೂ ಹಾಲು ಚೆಲ್ಲೋದು ಬಿಡಲಿಲ್ಲ (ಗಾದೆ).

[ಬಾವ (< ಭಾವ₁) + ನಂಟ]

**ಬಾವನ್ನ₁** (ನಾ). ಒಂದು ಸಂಖ್ಯೆ; ಐವತ್ತೆರಡು: ಶಿಳಿವುದಱುತಾಂ ಬಕಿಯ ಬಾವನ್ನಾದಿ ಸಂಜ್ಞೆಯಿಂದೆನುತಲಾಕೃತಿಯುಗದೊಳು . . . ಅವ ರ್ಗಳು ಯೋಚಿಸಲು ಬಾವನ್ನ ತತ್ಕಳಾರೂಪರಹರೌ (ಶೀಕ್ಷು. ೭-೬-೦೭). ಬಾವನ್ನಮೂರ್ತಿ = ಶಿವನ ಐವತ್ತೆರಡು ಮೂರ್ತಿಗಳು: ಸೃಷ್ಟಿಗಳ ಸವಿಸ್ತರದ ಬಾವನ್ನಮೂರ್ತಿಗಳ ಭೇದಮಂ ನಂಜುಂಡಮೂರ್ತಿ ನೋಡೆ ವಿವರಿಸಿದನಾ ಹಲಗೆಯಾರ್ಯನು (ಶೀಕ್ಷು. ೦-೬-೯೯). P ಸಾದಾಖ್ಯಗಳು ೫, ಶಿವನ ಅಷ್ಟತನುವಿನ ಅಧಿದೈವಗಳು ೮, ಶಿವನ ಲೀಲಾ ಮೂರ್ತಿಗಳು ೨೫, ರುದ್ರರು ೧೧, ಅವಯವಮೂರ್ತಿಗಳು ೩-ಹೀಗೆ ೫೨ ಕಲೆಗಳು ಅಥವಾ ಮೂರ್ತಿಕಲೆಗಳೆಂದು ವೀಶೈವ. ೧-೬-೪೪ರಲ್ಲಿ ಹೇಳಿದೆ. ಬಾವನ್ನರು = "ಬುದ್ಧಿಶಾಲಿಗಳು, ವೀರರು" (ಶಿವರ. ಕೋಶ. ೪೯೩): ಕಣ್ಣಾರೆ ಕಂಡೆ ನಾ . . . ಅಘಪರರೂಪಾಗಿ ಅಗಣಿತವಹ ಘನಮಹಿಮಾರನು ಜಗಗೊಳ್ಳದೆ ಬಾವನ್ನರ ಸಂಗವನೊಗೆದು ಈಡಾಡುವ ಓಜೆಮಂತರನು (ಶಿವರ. ೦೫೩-೬೬೫); "ಐವತ್ತೆರಡು ಅಕ್ಷರಗಳು" (ಶಿವರ. ವ್ಯಾಖ್ಯಾ. ೯೨೬).

[ < ಪ್ರಾ. ಬಾವನ್ನ. ಬಾವಣ್ಣ. / ಹಿಂ. ಬಾವನ: ಮರಾ. ಬಾವನ. ಬಾವನ್ನ]

**ಬಾವನ್ನ₂** (ನಾ). (ಉತ್ತಮಬಗೆಯ) ಚಂದನ: ಶ್ರೀಗಂಧ: "ಸಿರಿಕಂಡಮೆಂದುಂ, ಬಾವನ್ನಮೆಂದುಂ ಮಲಯಜಂ" (ಕಶಾ. ೩೦-೬೦); ಬಾವನ್ನದ ವೃಕ್ಷ ಊರೊಳಗಿದ್ದಡೇನು ಅಡವಿಯೊಳಗಿದ್ದಡೇನು ಪರಿಮಳ ವೊಂದೆ (ಶಿವ. ೯೬-೦೦೬); ಜಾತಿಬಾವನ್ನದಲಿ ಸರ್ಪದ ಭೀತಿ ಸತ್ಪುರುಷರಿಗೆ ದುರ್ಜನಭೀತಿ (ಶುಭಾ. ೬-೯೯).

[ ← ಮರಾ. ಬಾವನ್ನ. ಬಾಪನ. ಬಾವನಾ]

**ಬಾವನ್ನವೀರ** (ನಾ). ೧. ಐವತ್ತೆರಡು ಸಂಖ್ಯೆಗಳಿರುವ ದೇವತೆಗಳ ಒಂದು ಗುಂಪು,-ದೇವತಾಸಮೂಹ. ೨. ಮಹಾವೀರ; ಪರಾಕ್ರಮಿ: ಅಷ್ಟಾದಶಪಟ್ಟಣಾಧಿಷ್ಠಿತ ಪಂಚಮಟ್ಟಗಾದಿ ಬಾವನ್ನ ವೀರಂ ಶಾಸನಪಟ್ಟಸಾಲಿಗಸಮಯಮುದಿತಲಲಾಟಪಟ್ಟಂ ವೈರಿಘರಟ್ಟಂ (ಸೌಇ. IX-i. ೭೮-೬೨; 1045); ಐಂದೊರೆಯರ್ಸ್ಸೇಡಿಂಬದ ನಾಡೆಯ ಬಾವನ್ನವೀರರೊಳ್ಪಚ್ಚರದಿಂ ಕಾದುವನಾರ್ (ಶಾಇ. ೬೭-೪-೩೩; 12ನೆಯ ಶತ); ಬಾವನ್ನವೀರ ಕಂಸನ ಕಡುಗ್ಗೆಗೇಳಿದಾ ವಸುಧಾಮಂಡಲದ ಚಾವಡ ಚಾವಡಿಯೊಳಗುಳ್ಳ ವೀರಭಟಾವಳಿ ಬಂದು ಸೇರಿದುದು (ನೇಮಿಸಂ. ೦೯-೨).

[← ಹಿಂ. ಬಾವನಬೀರ; ಮರಾ. ಬಾವನ್ನವೀರ ]

**ಬಾವರಿ** (ನಾ). [ಜೈನ] (ದುಂಬಿಯು ಮಧುವಿನ ಸಂಗ್ರಹಕ್ಕಾಗಿ ಹೂಗಳನ್ನು ಹುಡುಕಿಕೊಂಡು ಸುತ್ತುವಂತೆ) ಜೈನಮುನಿಗಳು ಭಿಕ್ಷೆಗಾಗಿ ಶ್ರಾವಕರ ಮನೆಗಳನ್ನು ಕುರಿತು ಹೋಗುವುದು ; ಚರಿಗೆ ಹೋಗುವುದು: ಮಾಧುಕರಿ : ಜಿನಮುನಿಚರ್ಯಾಯೋಗ್ಯಮಲ್ಲದ ಕಾಲದೊಳ್ ಭ್ರಾ[ಬಾ]ವರಿಯಂ ನೋಡಿ ತಾಂ ಭೋಜನಮಂ ಮಾಡ್ದು ಕಾಲಾತಿಕ್ರಮಮುಮಂ (ಕಕ್ಕ್ಯ.ಶ್ರ.೨೯೯) ; ಜನಮೆ ಜನಕ್ಕೆ ಬಾವರಿಗೆ ಬಂದವೋಲಾಮುದು ತಂಡತಂಡದಿಂ . . . ಸಾಧುಜನಸಂಗಮವಾಗಮುನಪ್ರಪಂಚದೊಳ್ (ಅಜಿಂತಿ. ೩-೩೧) : ಅರಸನನುಜ್ಞೆಯಿಂದರಸಿ . . . ಯತಿಗಳ್ಗೆ ನವೋಸ್ತು ಗೆಯ್ದು ಬಾವರಿಯನೊಡರ್ಚವೇಟ್ಕುಮೆನೆ (ಧ್ರುಪ್ರಾ. ೯-೬).

[ < ಸಂ. ಭ್ರಾಮರೀ ]

**ಬಾವರಿಗೊಡು** (ಕ್ರಿ). ಚರಿಗೆಗಾಗಿ ಹೊರಡು ; ಮಾಧುಕರಿವೃತ್ತಿ ಮಾಡು: ಆ ಸುರವಂದಿತ ಕೈಯಿತ್ತಿ ನಾನಾದೇಶಗಳಲ್ಲಿ ವಿಹರಿಸಿ ಕೌಶಂಬಿ ಪುರಕೆ ಭ್ರಾ[ಬಾ]ವ[ಪಾಠಾಂ. ಭವಾ]ರಿಗೊಟ್ಟು ವೃಷಭದತ್ತಸೆಟ್ಟಿ ಮನೆಯೊಳಗಿರ್ದ (ಪರ್ಶ. ೧೧-೬೩). [ಬಾವರಿ + ಕೊಡು₁]

**ಬಾವರಿಯಿಡು** (ಕ್ರಿ). = ಬಾವರಿಗೊಡು : ಸಾಗರದತ್ತಮುನಿಗಳು ಲೋಕಮಂದ್ಯರು ಭಿಕ್ಷೆಗೆಂದು ಆ ಕೇರಿಯೊಳು ಬಾವರಿಯಿಡಲ್ (ಜೀವಂಧರ. ೬-೨೦). [ಬಾವರಿ + ಇಡು₁]

**ಬಾವರಿವುಗು** (ಕ್ರಿ). = ಬಾವರಿಗೊಡು : ನಿಮ್ಮ ತಂದೆವಿರ್ . . . ಪೊಟಲೊಳಗೆ ಚರಿಗೆವೊಕ್ಕು. ಬಾವರಿವುಗುತ್ತು?[ಪಾಠಾಂ. ತಿರಿಯುತ್ತುಂ, ತಿರುಗುತ್ತುಂ] ಬಂದು ನಿಮ್ಮ ಮನೆಯಂ ಪೊಕ್ಕು ಪೂಜಿಮುಟ್ಟು ಪೋದರ್ (ವಡ್ಡಾರಾ. ೪೬-೨೯). [ಬಾವರಿ + ಪುಗು (< ಪೊಗು)]

**ಬಾವಲ್** 'ವಾವಲ್' ನೋ.

**ಬಾವಲಿ₁** 'ವಾವಲ್' ನೋ.

**ಭಾವಲಿ₂** 'ಬಾವುಲಿ₂' ನೋ.

**ಬಾವಲಿ₃** (ನಾ). ಒಂದು ಬಗೆಯ ತೆರಿಗೆ : ಹರುಗೋಲ ಹಣ ಬಾವಲಿ ಬಿಂಾಡ . . . ಸರ್ವಬಾಧ ಪರಿಹಾರಕ್ಕೆ ಗದ್ಯಾಣ ಗ ೧೧ ವರಹ (ಮೈಆರ್. ೧೯೩೯, ೨೭-೨೨; 1430). [?]

**ಬಾವಲು** 'ವಾವಲ್' ನೋ.

**ಬಾವಾ** (ನಾ). ಊರೂರು ಅಲೆಯುವ ಜಟಾಧಾರಿಯಾದ ಜೋಗಿ.– ಬೈರಾಗಿ : ಈ ಬುಕಗಳ ಉಪಯೋಗವನ್ನು ಭಿಕ್ಷುಕರು ಬಾವಾ ಬೈರಾಗಿಗಳು ಇನ್ನೂ ಮಾಡಿಕೊಳ್ಳುತ್ತಾರೆ (ಹಮ್ಮಿ. ೯) ; ಮುಂದ ಹೋಗುವಾಗ ಒಬ್ಬ ಬಾವಾ ಭೆಟ್ಟಿ ಆದನಂತ (ಅಡಾ. ೬೬). [←ಮರಾ. ಬಾವಾ]

**ಬಾವಾಜಿ** (ನಾ). = ಬಾವಾ : ನಾನು ಅನೇಕ ಸಲ . . . ಭಿಕ್ಷುಕರನ್ನು ಬಾವಾಜಿಗಳನ್ನು ನೋಡಿದ್ದೇನೆ (ಗ್ರಾಗು ೬೩): ಬಾವಾಜಿಗಳಂತೆ ಜಟಾಧಾರಿಯಾದೆನು (ಇಂಕುಮು. ೬೨). [←ಮರಾ. ಬಾವಾಜೀ]

**ಬಾವಿ, ಭಾವಿ₁, ವಾವಿ₁** (ನಾ). ಭೂಮಿಯ ಒಳಗಿರುವ ನೀರನ್ನು ತೆಗೆದುಕೊಳ್ಳುವುದಕ್ಕಾಗಿ ಅಗೆದು ಮಾಡಿದ ಕೂಪ : "ಅಂಧುಃ, ಕೂಪಃ—ಈ ೨ ಬಾವಿ" (ಹಲಾಯು. ೨೧೩-೬೨) ; ನೀರಂ ತರಲ್ಕೆಂದು ಬಾವಿಗಪೋದಾಕೆಯಂ ಕಂಡರಸನೆಲೆ ಕೂಸೆ ನೀರಂ ಕುಡಿಯಲೆೞಿಯಾ ಎಂದೊಡೆ (ವಡ್ಡಾರಾ. ೧೧೦-೨೩) ; ರಸರಸದ ಬಾವಿ ಮನೆಮನೆಗೆ ಬೇಱ ಕಿಸುಗಲ್ಗಳ ರಜದ ಕಣಿವೆರಸು ತೋಱ (ಶಂಕರಾ. ೯-೦೦); ಮಱಗಾಲ ಮುಂಟೆಂದು ತಪ್ಪಿದ ಜೋಯಿಸಂ ಬಾವಿಯ ನೀರನಡಕ ನೀರ್ವೊಯ್ದಂ (ಶಂತಕು. ೦೨೬-೨). **ಭಾವಿ₁** : ಅನುರಾಧ ಭಾನು . . . ಉತ್ತರೆಯೆಂಬ ನಿತಱೊಳಂ ವಿಧಿಯಿಂ ವರುಣನನರ್ಚಿಸಿ ಭಾವಿ ತೋಡೆ ಶುಭಮಂ ಮಾಳ್ಕುಂ (ಲೋಕೋಪ. ೩-೨); ಎಲ್ಲೆಡೆಯೊಳಂ . . . ಮಱ ಸುರಿದೊಡಂ ನೀರ್ ಪೊಣ್ಮಿಲ್ಲದ ಸ್ಥಾನಮಂ ಪರಿಹರಿಸಿ ಬಂದು ತೋಱ ಕೆಱ ಭಾವಿಗಳೊಳ್ ತೀವುವಂತೆ (ರಕ್ಷಾಪ್ಯ. ೬-೧೨೬). **ವಾವಿ₁** : ವಾವಿಯಂ ಬಡಗ ತೋಂಟ ೧ (ಕೌಇಇ. IX–i, ೨೦೦-೨೦ ; 1125).

**ಬಾವಿ ಮುಟ್ಟುವದು** = ಬಾಣಂತಿಯು ಹತ್ತು ದಿನ ಕಳೆದ ಮೇಲೆ ಮೈಲಿಗೆಯನ್ನು ಕಳೆಯುವುದಕ್ಕಾಗಿ. ಊರಿನ ಬಾವಿಯ ಕಟ್ಟೆಯ ಬಳಿಗೆ ಹೋಗಿ ಗಂಗೆಯ ಪೂಜೆ ಮಾಡುವುದು : "ಹಡೆದ ಮೇಲೆ ಬಾಣತಿಯು ಗಂಗೆಯ ಪೂಜಿಸುವದು" (ಜಾನಕೋ. ೨೨). **ಬಾವಿ ಮೆಟ್ಟುವದು** = ಬಾವಿ ಮುಟ್ಟುವುದು: "ಹಡೆದ ಮೇಲೆ ಬಾಣತಿಯು ಗಂಗೆಯ ಪೂಜಿಸುವದು" (ಜಾನಕೋ. ೨೨). 'ಪ್ರೊಟಿ ಮೆಟ್ಟು' ಪರಾ. [<ಸಂ. ವಾಪಿ]

**ಬಾವಿಗಪ್ಪು** (ನಾ). (ಆನೆಯನ್ನು ಹಿಡಿಯಲು ತೋಡುವ) ಆಳವಾದ ಕುಳಿ ; ಬಾವಿಯಂತಹ ಹಳ್ಳ : ತೆರದ ಬಿಂಬಾಧರದ ನೃಪಮತಿಯ ಗಜಗತಿಗೆ ಸತಿಯಗವ ಬಾವಿಗಪ್ಪಿನ ಕಾವಿಮಣ್ಣಾಗೆ (ಶ್ರೀನಾಪು. ೬೮-೪೯೬).

[ಬಾವಿ + ಕಪ್ಪು₃]

**ಬಾವಿಗೆ** (ನಾ). = ಬಾವಿ : 'ಪಟಿವಾವಿಗೆ' ಪರಾ. [<ಸಂ. ವಾಪಿಕಾ]

**ಬಾವಿದೋಡು** (ಕ್ರಿ). ಬಾವಿಯನ್ನು ಅಗೆ : ಕಿಚ್ಚಿಟ್ಟ ಬಱಕ ನಂದಿಸಲಚ್ಚಿಗದ ಬಾವಿದೋಡುವಂತಿರೆ ಕಣ್ಣಂ ಮುಚ್ಚಿ ಜಪಿಯಿಸುವ ರಾಘವ ನೆಚ್ಚಂಬಿಂ ಕಾಯಲಾರ್ಪುವೇ ದೇವತೆಗಳ್ (ಪಂಪರಾ. ೦೪-೦೦೦).

[ಬಾವಿ + ತೋಡು₁]

**ಬಾವು** (ನಾ). ೧. (ಪೆಟ್ಟು, ಖಾಯಿಲೆ ಮುಂತಾದುವುಗಳಿಂದ ಉಂಟಾಗುವ) ಊತ : ಉಬ್ಬು ; ಶೋಫ : ತಗರಂ ಕೊಕ್ಕಳಿ . . . ಹರಿದ್ರಾದ್ವಂದ್ವಮಾ ಪೇಟ್ಟ ಮರ್ದುಗಳಂ ಪುತ್ತಿಸ ಮಣ್ಣುಮಂ ಕದಡಿ ಕಾಸಿಟ್ಟಿಯ್ದೆ ಪೊಯ್ಯಾವ ಬಾವುಗಳುಂ ತೀರ್ಚುಗುಂ (ಲೋಕೋಪ. ೯-೨೪೦); ನೊಸಲ ಬಿಸಿಗಣ್ಣನೇಱದು ಶಿವಲಿಂಗವಂ ಮುಸುಕಿ ಬೆಳೆದುತ್ತಮಾಂಗ ಮಸು ಬಾವೆಂ[ಪಾಠಾಂ. ಹೆಂ]ದು . . . ರಂಕಿಸಿ ನೋಡಲವಮ್ಮದೊಯ್ಯನೆ ದೂರದಿಂದೆ ದೀವಿಗೆವಿಡಿದು ದಿಟ್ಟಿಸಿವರು (ಸಿದ್ಧರಾ. ೨-೪). ೨. ಹುಣ್ಣು ; ಕುರು : ವ್ರಣ : ಪಿಡಿಯದು ದೋಷಮಿಲ್ಲದತಿನಿರ್ಮಲಮಪ್ಪೆಡೆಯಂ ಜಲೂಕನೋಣಡಿಸದೆ ಬಾವು ತರ್ದು ತುಱಮುಳ್ಳ ತ್ರಿದೋಷದ ಹಾಣಮಂ ಕರಂ ಪಿಡಿವುದು (ಜೀವಸಂ. ಕಾ. ೦. ೨೩೯-೦೧); ನಾರುಬೇಳೆಸೊಪ್ಪು, ಎಕ್ಕೆಯ ತಿಗುಡು, ನವಣೆಅಕ್ಕಿ ಇವಂ ಅಕ್ಕಿಗಚ್ಚಿನಲ್ಲಿ ಅರೆದು ಪೂಸೆ ಬಾವು ಮಾಣ್ಗುಂ (ಖಗೇ.ಚಿ. ೬೬). 'ಬಾಮ್ಮು' ಪರಾ. [ಬ್ಬಾ₁ + – ವು]

**ಬಾವುಂಜಿಗೆ** 'ಬಾವುಜಿಗೆ' ನೋ.

**ಬಾವುಗ** (ನಾ). ಗಂಡುಬೆಕ್ಕು ; ಗಡವಬೆಕ್ಕು : ಬಲುಕಾಲ ಮುದ್ದಿಸಿ ಕಲಿಸಿ ಮಾತುಗಳ ಗಿಳಿಯ ಸಾಕಿ ಬಾವುಗಗೆ ಒಪ್ಪಿಸುವುದು (ಭೂಲಿಂದ. ೯-೦೯೩-೯) ; ಮುಳಿಗೆ ಹಂದರ ಹೊಲ್ಲ ಗಿಳಿಗೆ ಬಾವುಗ ಹೊಲ್ಲ (ಸರ್ವಜ್ಞ. ೦೪೧೬).

[ದೇ.॥ ತೆಲು. ಬಾವುರು, ಬಾವುರುಗಾಂಡು, ಬಾವುರುಗಾಡು, ಬಾವುರು ಪಿಲ್ಲಿ, ಬಾವುರಂಬಿಲ್ಲಿ ; ಪರ್ಜಿ. ಬಾಮ್ಮಿ ; ಕೂಇ. ಬಾಂಡಿ, ಬಾಂಲ್ಲಿ ; ಮರಾ. ಬಾವಗಾ]

**ಬಾವುಜಿ** 'ಬಾಗುಜಿ' ನೋ.

**ಬಾವುಜಿಗೆ, ಬಾವುಂಜಿಗೆ. ಬಾಹುಜಿಗೆ** (ನಾ). ಒಂದು ಬಗೆಯ ಸಸ್ಯ : ಕಾಡುಜೀರಿಗೆ : "ವಾಕುಚೀ—ಸೋಮವಲ್ಲಿ. ಬಾವುಜಿಗೆ" (೬ಶಂ. ೦೩೦); ಅವಿಸಳಿಯೊಳ್ ಚಗಚ್ಚೆಯ ಬಾವುಜಿಗೆಯ ಬಿತ್ತನಲ್ಲಿ ನಿಶಗಂಧಕಮೆಂಬೀ ವಸ್ತುವನರೆದೊಂದಿರೆ ಲೇವಿ(ಪಿ)ಸಿದೊಡೆ ಚಿಬ್ಬನುರ್ಬು ಪರ್ಬದೆ ಕಿಡುಗುಂ (ಲೋಕೋಪ. ೯-೦೦೨) ; ರಜನಿ.ಸುದಾರ್ವಿ ಬಾವುಜಿಗೆ ಬೇವಿನ ಬಿತ್ತು . . . ನಿಜದೆ ಸಮಾನಮಾಗರೆದು ಲೇಪಿಸೆ . . . ಉಗ್ರವಿಷಂ ಪರೆಗುಂ (ಖಪುದ. ೦೪-೦೪). **ಬಾವುಂಜಿಗೆ** : "ಅವಲ್ಗುಜಃ, ಸೋಮರಾಜೀ . . . ಪೂತಿಫಲೀ—ಈ ೮ ಬಾವುಂಜಿಗೆ" (ಪಾಶರಾ. ೦೦೯). **ಬಾಹುಜಿಗೆ** :

"ಅವಲ್ಗುಜ : . . . ಪೂತಿಫಲೀ—ಈ ಬಾಹುಜಿಗೆಯ ಪೆಸರುಗಳು" (ಕಿದ್ಯಾಂತ. ೦೪೩). [ < ಬಾವುಜಿ ]

**ಬಾವುಟ**. ಬಾವಟೆ. ಬಾವುಟೆ (ನಾ). ಧ್ವಜ : ಪತಾಕೆ ; ನಿಶಾನೆ : ಏರಿಸಿ, ಹಾರಿಸಿ ಕನ್ನಡದ ಬಾವುಟ (ಕನ್ನಡಾ. viii ಕೃಷ್ಣಾ.೭೫) : ಎತ್ತಿ ಕಟ್ಟಿದ ಬಾವುಟಗಳು ಪಟಪಟನೆ ಹಾರುತ್ತಿದ್ದವು (ಕಹಾಕ. ೦೬). **ಬಾವಟೆ** : ಭಾರಿಂಗಾಳಿಯ ಬಾವಟೆ ಹಾರೆ, ವೋಳಗಿಸಿ ಮಿಂಚು ಬೆಳಗಿಸಿ, ತೇರ ನಡೆಯಿಸಿ ಸರಿವೆನ್ನ (ಕಚಕ್ರ. ೩೦-೧೧). **ಬಾವುಟೆ** : ಎದುರಿಗೆ ನೋಡು ರಾಠೋರ ಸೇನಾಪತಿಯ ಕೆಂಪುಬಾವುಟೆಯೂ ಕಾಣುತ್ತದೆ (ಕರ್ಣಾಟಕೂ. ೪೦)· [ ← ಮರಾ. ಬಾವಟಾ. ಬಾವಹಟಾ, ಬಾಹುಟಾ]

**ಬಾವುಟೆ** 'ಬಾವುಟ' ನೋ.

**ಬಾವುದಿವಸ** (ನಾ). "ಬಲಿ ಕೊಡುವ ದಿವಸ—ವ್ರತದ ಪಾರಣೆ ದಿನ" (ಶಾಪಸಂ. ಕೋಶ) : ಅಷ್ಟೋಪವಾಸಸಮರ್ಥಾಷ್ಟಮಿಯೆಂಬಿನ ವಷ್ಟಮಿಯ ಬಾ[ಪಾಠಾಂ. ನಾ]ವುದಿವಸಮಂ ನೋಂತೀವೆ ಜ್ಯೇಷ್ಠಪುತ್ರಕನೆ ಬಿಸುಡಿದಂ (ಶಾಪಸಂ. ೨೩೨-೩೨). [ಬಾವು₁ + ದಿವಸ]

**ಬಾವುದೇವಸ** (ನಾ). = ಬಾವುದಿವಸ : ನಾಳೆ ಬಾವುದೇವಸ[ಪಾಠಾಂ. ಬಾವದಿವಸ, ಬಾಯುದೇವಸ, ಬಾಉದೇವಸ]ದೊಳ್ ದೇವತೆಗೆ ಪರಕೆಗುಡುವ ಮಿಾತನನಿಂದಿನ ದೆವಸಂ ಕಾದಿರ್ (ಶಾಪಸಂ. ೫೬-೩೬೫). [ಬಾವು₁ + ದೇವಸ]

**ಬಾವುಲಿ₁** 'ವಾವಲ್' ನೋ.

**ಬಾವುಲಿ₂**, ಬಾವಲಿ₂, ಬಾಹುಲಿ (ನಾ). ೧. ಕಾಲಿನ ಒಂದು ಆಭರಣ ; ಕಾಲ್ಗಡಗ ; ಪೆಂಡೆಯ : ಪಗಲ ಕೈದೀವಿಗೆಯ ಕಾಲ ಹಾಹೆಯ ವೊತ್ತದ ಬಾವುಲಿಯ ಮಾಲೆದೊಡರ ಮಾಸಾಳ್ಗಳ ಮಂತಣದೊಳಂ (೧೦ಳ. ೨-೦೦೩ ವ) ; ಚರಣದ ತೊಡರ ಮೊಳಗಿನ ಬಾವುಲಿಗಳಲಿ ಘಣಘಣಧ್ವನಿಯ ನಿಡಿಯೊಡಲ . . . ದಾನವನವನಿ ಹಜ್ಜೆಗೆ ನೆಗ್ಗಲೈತಂದ (ಕುಮಾವ್ಯಾ. ೦೩-೪೧) : ಕಾಲಲಿ ಕಿರುಗೆಜ್ಜೆ ನೀಲದ ಬಾವುಲಿ (ಪುರಂದರ. ೦-೦೧೦-೩). ೨. ಕಿವಿಯ ಒಂದು ಆಭರಣ; ಕಿವಿಯ ಹಾಲೆಯ ಮೇಲುಭಾಗದಲ್ಲಿ ನೇತಾಡುವಂತೆ ಇಟ್ಟುಕೊಳ್ಳುವ ಮುತ್ತು, ಹರಳುಗಳನ್ನು ಜೋಡಿಸಿದ ಉಂಗುರದಂತಿರುವ ಚಿನ್ನದ ಆಭರಣ : ಮೌಕ್ತಿಕಗಳ ಮುಡಿವಲೆ ಮೆಱೆವ ಬಾವುಲಿಯ ನಿಡುಗುರುಳಿನ ಮುತ್ತಿನ ಕುಚ್ಚಿನಿಂದ ಬಲ್ಪೆಡಗಾಗಿ ಮೆಱೆವರರ್ತಿಯಲಿ (ಕಂಕಣ. ೨೪-೯೨) : ಕಿವಿಯೊಳ್ ಮಾತನಾಡುವವೆಂಬಂತೆ ನವಿಲು ಗಿಣಿ ಬಾವುಲಿಗಳನ್ನಿಟ್ಟು (ಶಾಗಿಂಂ. ೨೦೦-೬) : ಕಿವಿಯಲ್ಲಿ ಹರಳು ಮುತ್ತಿನ ಬಾವುಲಿ (ತಿರುಗು. ೬೩). **ಬಾವಲಿ₂** : ೨. ಕಿವಿಯಲ್ಲಿ ಹರಳಿನ ಬಾವಲಿ, ಹಣೆಯ ಮೇಲೆ ತಿಲಕ (ಕಂಂಹಿಂ. ೦೫೨) ; ಬಲಗಿವಿಯಲ್ಲಿ ಮುತ್ತು ಕಳಚಿಹೋದ ಬಾವಲಿಯ ಚಿನ್ನದ ಉಂಗುರವೊಂದು ತೂಗಾಡುತ್ತಿತ್ತು (ಆಸಕ. ೨೬). **ಬಾಹುಲಿ** : ೨. ಥಳಥಳಿಸುವ ಬಾಹುಲಿ . . . ಕಂಕಣದಿಂದ ಬಲುಸೊಬಗಾಂತನರ್ತಿಯಲಿ (ಕಂಕಣ. ೨೩-೬೧).

[ದೇ.೩ ತಮಿ. ಪಾವಿಲಿ; ತುಳು. ಬಾವಲಿ, ಬಾವೊಲಿ; ತೆಲು. ಬಾವಿಲಿ./ ಸಂ. ಬಾಲೀ]

**ಬಾವುಲಿಗಾಱ** (ನಾ). ಬಿರುದಿನ ಕಾಲ್ಗಡಗವನ್ನು ತೊಟ್ಟವನು ; ಬಿರುದಾಂಕಿತನಾದ ವೀರ : ಹಿಣಿಲ ಬಾವುಲಿಗಾಱರಾವಡೆ ಭಾಷೆಯತಿಬಳರು (ಕುಮಾವ್ಯಾ. ೪-೩೯). [ಬಾವುಲಿ₂ + — ಕಾಱ]

**ಬಾವುಲು** 'ವಾವಲ್' ನೋ.

**ಬಾವೆಮಣ್ಣು** (ನಾ). ಒಂದು ಬಗೆಯ ಮೆದುವಾದ ಮಣ್ಣು : ಅಗೆವ ಎಲ್ಲ ಕಡೆಗಳಲ್ಲೂ ಕಲ್ಲುಗಳಿರಲಿಲ್ಲ. ಕೆಲವು ಕಡೆ ಬಾವೆಮಣ್ಣು (ಬಾಳಿ. ೮೨). [ ← ತುಳು. ಬಾವಮಣ್]

**ಬಾಶಿಗ** 'ಬಾಸಿಗ' ನೋ.

**ಬಾಷೀಕಾಗದ** (ನಾ). (ಛಾಪಾಕಾಗದವಲ್ಲದ) ಸಾದಾಕಾಗದ : ಅಸಲು ಚಂಗಡಿ ಸಹ ಸಂತೆಂದು ಒಳ್ಳೇ ಬಾಷೀಕಾಗದದಲ್ಲಿ ರಶೀತಿ ಬರೆದು . . . ಕಳುಹಿಸಿಬಿಟ್ಟನು (ಕಥಾಸಂ. IV, ೯೩).

[ಬಾಷೀ₀ + ಕಾಗದ. / ತುಳು. ಬಾಶಿಕಾಗಜಿ]

**ಬಾಷ್ಕಳ₁** (ನಾ). ೧. ಋಗ್ವೇದದ ಒಂದು ಶಾಖೆ. ೨. ಶತೋಪನಿಷತ್ತುಗಳಲ್ಲಿ ಒಂದು : ಶ್ರೀರುದ್ರಬೃಹದಾರಣ್ಯಕ . . . ಬಾಷ್ಕಳ [ಪಾಠಾಂ. ಭಾಷ್ಕಳ, ಭಾಸ್ಕಳ] . . . ಮೊದಲಾದವೇ ಉಪನಿಷತ್ತುಗಳು (ಎಪೀಕ. ೫).

[ಸಂ. ಬಾಷ್ಕಲ]

**ಬಾಷ್ಕಳ₂** (ನಾ). ೧. ಸುಳ್ಳು; ಹುಸಿ ; ಅಸತ್ಯ : ಪತಿ ವಿಸರ್ಜಿಸಿದಾಕೆ ಗಾವುದಿನ್ನಧಿಕಾರ ಮೃತಿಯೆ ನಿಷ್ಕೃತಿ ಮಗನೆ ಬಾಷ್ಕಳವೆ ಕೇಳ್ ವೇಸುನಿ ಹುತವಹನನಲ್ಲಿಟ್ಟರವ್ವದೆಲೆ ಕಡೆಯಾಣೆಯಂತಿದಂ ಗ್ರಹಿಸು ನೀನು (ಹರಿಚ. ೧೬-೦೬). ೨. ನಡತೆಯಲ್ಲಿ ಅಥವಾ ಮಾತಿನಲ್ಲಿ ಹಿಡಿತವಿಲ್ಲದಿರುವುದು ; ಸ್ವೈರವೃತ್ತಿ ; ಸ್ವಚ್ಛಂದವರ್ತನೆ. ೩. ಅಸಭ್ಯತೆ : ಎಂಥ ಬಾಷ್ಕಳ ಮಾತಾಡತೀ ನಿಂಗೀ. ಜನಲಜ್ಜಾ ನಿನಗ ಎಳ್ಳಷ್ಟೂ ಇಲ್ಲಲ್ಲಾ (ಕಥ್ಯ. ೨೦೬). ೪. ಅಪ್ರಾಮಾಣಿಕನಾದವನು : ಏನವಾ ರಾಮಾಚಾರಿ, ನೀ ಏನು ಬರೇ ಬಾಷ್ಕಳ ಕಾಣತೀದಿ (ತಿರುಗು. ೯೭). [← ಮರಾ. ಬಾಷ್ಕಲ, ಬಾಷ್ಕಳ, ಬಾಸ್ಕಳ]

**ಬಾಷ್ಕಳಂಗೆಯ್** (ಕ್ರಿ). ಅಸಂಬದ್ಧವಾಗಿ ಮಾತನಾಡು ; ಗಳಹು : ಕೇಳಲೆ ನಿರೀಶ್ವರ ಸಾಂಖ್ಯವಾದಿ ನೀಂ ಮತ್ತತ್ವದಿಂ ಭಾಷ್ಕಳಂಗೆಯ್ವುದಿರ್ (ಆದಾಕ. ೩-೬-೦೨). [ಬಾಷ್ಕಳ₂ + ಕೆಯ್₁]

**ಬಾಷ್ಕಳಗೆಡೆ** (ಕ್ರಿ). = ಬಾಷ್ಕಳಂಗೆಯ್ : ಎಲ್ಲಾ ಜಾತಿಗೂ ನಾವೇ ಮಿಗಿಲೆಂದು . . . ಬಳ್ಳಿಟ್ಟು ಬಾಷ್ಕಳಗೆಟೆವುತ್ತಿಪ್ಪಿರಿ ನೋಡಾ (ಸರ್ವರ. ೦೬೩-೮೨೯) ; ಮನೆಯಲಿ ಸೂಳೆಯರ ಮುಂದೊದಱ ಬಾಷ್ಕಳಗೆಡೆವ ಬಂದೀಗ ಕೋಲನಿಕ್ಕದೆ ಗಾಯವಡೆಯದ ಕಾಲುವೇಗವ ತೋಱದೊಡೆ ನಿನ್ನೋಲಗದೊಳೆಂತಕಟ ನಾಚದೆ ಕುಳ್ಳಿತಿಹೆಯೆಂದ (ಕುಮಾವ್ಯಾ.ವಿ. ೬-೨೯) : ವೀರಭದ್ರೇಶ್ವರನ ಬೋಧೆಯಂ ಕೇಳದಾ ನಾರಸಿಂಹಂ ಕೊಬ್ಬಿ ಭಾ [ಬಾ] ಷ್ಕಳಂಗೆಡೆದು . . . ಜಱೆವುತ್ತಿರ್ದಂ (ವೀಕೃತ. ೩-೫-೨೯). [ಬಾಷ್ಕಳ₂+ಕೆಡೆ₂]

**ಬಾಷ್ಪ** (ನಾ). ನಂಜು ; ವಿಷ : ಗಾಯ ಬಾಷ್ಪವೇರಿ ತುಂಬಾ ನೋವಾಗಿದೆ (ಕೂತಿ). [← ತೆಲು. ಬಾಸಟ. / ಮರಾ. ಬಾಸಟ, ಬಾಸೂಟ]

**ಬಾಷ್ಪ** (ನಾ). ೧. ಕಣ್ಣೀರು ; ಅಶ್ರು : "ಅಶ್ರು, ಬಾ(ಷ್ಪಂ)ಷ್ಪಂ, ರೋದನ, ನಯನಜಳಂ, ಅಸ್ರಂ—ಈ ೫ ಕಣ್ಣ ನೀರ್" (ಕರಾಹು. ೬೬-೩೬೫) ; ಕುಚಾಂತರದೊಳ್ ಕೋಗೊಂಡು ಮೋಹವಲ್ಲಿಗೆ ಬಿದಿ ತಿರ್ದಿಸುತ್ತಿಸಿದ ನೀರ್ಗೆಣೆಯಾದುದು ಬಾಷ್ಪಮೋಚಳಾ (ಶಾಂತಿಪು. ೮-೯೨) ; ಕ್ಷಣದೊಳೊದಗುವ ಬಾಷ್ಪಲುಳಿತೇಕ್ಷಣನು ಬಂದನು ಮನೆಗೆ (ಕುಮಾವ್ಯಾ.ಆ. ೩-೨೫). ೨. ಹಬೆ ; ಆವಿ : ಹವೆಯೊಳಗೆ ತೊಯ್ದ ವಸ್ತ್ರಗಳನ್ನು ಬಿಟ್ಟು ಹರವಿದರೆ, ಅವುಗಳಲ್ಲಿಯ ನೀರು ಬಾಷ್ಪರೂಪದಿಂದ ಹಾರಿ ಹೋಗಿ ವಸ್ತ್ರಗಳು ಒಣಗುತ್ತವೆ (ಕುಂಂಹಿಯ. ೩-೦೩೬). ೩. ಒಂದು ಬಗೆಯ ಸಸ್ಯ. [ಸಂ.]

**ಬಾಷ್ಪಜಲ** (ನಾ). ಕಣ್ಣೀರು : ಅಕ್ಷಿಗಳ್ ಬಾಷ್ಪಜಲಪ್ರಶಮಿತರಾಚಿಗಳ್ (ಜಗಂ. ೩-೯೬). [ಸಂ.]

**ಬಾಷ್ಪವಾರಿ** (ನಾ). = ಬಾಷ್ಪಜಲ : ಅನವರತಬಾಷ್ಪವಾರಿಧಾರಾಪೂರ ಪರಿವಾರಿತಪಲ್ಲವನೇತ್ರೆಯುಂ (ಗದಾಯು. ೧-೫೩ ವ) ; ವಿಲೋಲಲೋಚನೆಯಕಟ ನೆನೆದಳು ಬಾಷ್ಪವಾರಿಯಲಿ (ಕುಮಾವ್ಯಾ.ಆ. ೩-೩೪). [ಸಂ.]

**ಬಾಸ** (ನಾ). ಒಬ್ಬಾತನ ಹೆಸರು : ಶ್ರೀ ಬಾಸ (ಎಳ. II. ೪೨೨ ; ಸು. 1000) ; ಶ್ರೀ ಬಾಸನ್ನನ ದಣ್ಣೆ (ಎಳ. II, ೪೩೩-೦ ; ಸು. 1000). 'ಬಾಸಬೆ' ಪರಾ. [?]

**ಬಾಸಂತಿ** (ನಾ). ಒಂದು ಬಗೆಯ ಮಲ್ಲಿಗೆ : ವಾಸಂತಿ : ವಾಸಂತೀ – ಬಾಸಂತಿ (ಕಮರ. ೨೩೬ ಶ್ರಮೂ.) ; ಉಪವನದಲಾಡುತ ಬಾಲೆಯರು ಬಾಸಂತಿ ಮರುಗ ತಮಾಲ ಮಾಲತಿ ಮಲ್ಲಿಗೆಗಳ ಮನೋಜ್ಞ ಸೌರಭದ ಲೋಲಭೃಂಗಾವಳಿಯ ಗೀತವನಾಲಿಸುತ (ಕಿರಾಗ. ೯-೨೦-೦೩).

[<ಸಂ. ವಾಸಂತೀ]

**ಬಾಸಂಬಳ್ಳಿ** (ನಾ). ಒಂದು ಊರಿನ ಹೆಸರು: ಪಡುವಣ ತೊರೆವಳ್ಳಿಯ ಬಾಸಂಬಳ್ಳಿಯೂರ ಮುನ್ನಣ ಕಟಿಯೊಳಿಸಾರ್ಬ್ಬ ನಮ್ಮಸ್ಮಮಣ್ಣೀವ ಭೋಗಂ ಬಿಟ್ಟಂ (ಎಕ. III, ಮೈಸೂರು. ೩೬-೦೩ ; ಸು. ೧೧೦೯).

[ಬಾಸ + ಪಳ್ಳಿ$_1$]

**ಬಾಸಗವುಂಡ** 'ಬಾಸಗಾವುಂಡ' ನೋ.

**ಬಾಸಗಾವುಂಡ,** ಬಾಸಗವುಂಡ (ನಾ). ಒಬ್ಬಾತನ ಹೆಸರು: ಉಚ್ಚಂಗಿಯ ಕೋಟೆಗೆ ರಾಜಾದಿತ್ಯನ ಕಾಳೆಗಕೆ ಚಣ್ಣಡ ಬಾಸಗಾವುಣ್ಡನ್ಗೆ ಕೊಟ್ಟ ಕೊಡನ್ಗೆ (ಎಕ. XV, ಬೇಲೂರು. ೩೦೬-೬ ; 971). **ಬಾಸಗವುಂಡ** : ಉರ್ಬ್ಬಿವಳ್ಳಿಯ ಬಾಸಗವುಣ್ಡನ ಬಿಟ್ಟಗವುಣ್ಡನ ಮಗಂ ಬಿಟ್ಟಯಣ್ಣ (ಎಕ. VI, ಕಳಸ. ೩೬-೬; 1012). [ಬಾಸ+ಗಾವುಂಡ (<ಗಾವುಂಡ)]

**ಬಾಸಟ** (ನಾ). (ಆಯುಧಗಳನ್ನು ಹರಿತಗೊಳಿಸುವುದರಿಂದುಂಟಾದ) ಹೊಳಪು : ಕಾಂತಿ : ಕಂತು ಒಡಿದ ಖಡ್ಗಕೆ ಬಾಸಟವೇಱುವಂತೆ ಜವ್ವನವೇಱಿದಳು (ಶ್ರೀಪಾ. ೩-೪೦); ಆ ತನುಜಾತೆಗೆಣ್ಣಯನೊತ್ತಿಸಿದಳು ಶ್ರೀಕಿಯಿಂದಂಗಭವನ ಪುಷ್ಪಬಾಣಕ್ಕೆ ಒತ್ತು ಬಾಸಟಮಿಕ್ಕುವಂತೆ (ಜೀವಂಧರ. ೨೩-೨೨೩) ; ಸ್ಮರಗಜಕುತ್ತುಮವುದವೇಱುವವೊಲ್ ಸುರಭಿಶರಕೆ ಬಾಸಟವೇಱುವವೊಲು ಹರಿಣಧರಗೆ ಹದಿನಾಱು ಕಲೆಗಳೇಱುವವೊಲ್ ... ವಿದ್ಯಾಧರರಾಯನ ಮಿಸುಕುವ ರೂಪಿಗೆ ಹೊಸಹರೆಯಂ ಬಂದುದು (ಜಯುಸಾ. ೦೩-೭).  [?]

**ಬಾಸಟವಿಡು** (ಕ್ರಿ). ಮಸೆದು ಕಾಂತಿಗೊಳಿಸು: ಅಂಗೋದ್ಭವನೆಂಬ ಮಹಾಸಾಹಸಿಗಂಗೊಲಿದು ರತಿ ಬಾಸಟವಿಟ್ಟಲರ್ಗಯ್ದಂ ಕುಡುವಂತೆ (ಜಯುಸಾ. ೦೪-೨೨).  [ಬಾಸಟ+ಇಡು$_1$]

**ಬಾಸಣ,** ಬಾಸಣೆ (ನಾ). ೧. ಹೊದಿಕೆ ; ಮುಸುಕು : ಆಚ್ಛಾದನ : ಚರಣದ ಧೂಳಿ ಬಾಂದೊಱೆಗೆ ಬಾಸಣವಾಗಿರೆ . . . ಅದ್ಭುತಮಾಹವ ಭೂಮಿಗಪ್ಪಿನಂ (ಗಂಕ. ೬-೬೬): ಪಂಚರಂಗದ ಚೂಣಿಕೆ, ಬಿಳಿಯ ಬಟ್ಟೆಯ ಬಾಸಣ . . . ರತ್ನಾವಳಿಗಳಿಂದ ಮಂಟಪ ಸುಂದರವಾಗಿ ರಾರಾಜಿಸುತ್ತಿತ್ತು (ಗೀತ. ೦೨೩). ೨. ಯಾವುದಾದರೂ ವಸ್ತುವನ್ನು ಒಳಗೊಳ್ಳುವ ಸಂಪುಟ ; "ಬುಟ್ಟಿ ; ಪೆಟ್ಟಿಗೆ ; ಪಾತ್ರೆ" (ಶ್ರಕಣ್ಣ). ೩. ಜ್ಞಾನ ; "ತಿಳಿವಳಿಕೆ" (ಶ್ರಕಣ್ಣ). **ಬಾಸಣೆ** : ೧. "ಬಾಸಣೆಯೆನೆ ಮುಸುಕಿ [ಪಾಠಾಂ. ಮಾಸಣೆಯೆನೆ ಮಿಸುಕಿ]ದರ್ಥಂ" (ಕಶಬ್ದ. ೬೦); ತೊಳಲ್ವ ಮಂಜಿನ ತಪ್ಪಲೊಳಗೆ ತನ್ನೊಡಲ ಮಾರೆಗೊಳಿಪ ಹೂವುಲ್ಲುಗಳ ಬಾಸಣೆಯೊಳು ಸುಳುಹು ಕಾಣಿಸದಿರ ತಿಳುವ ಬಣ್ಣದ ಚಲ್ಲ ತಳಿವ ಮಿಸುನಿಯ ಮಿಂಚುಹುಳುವೊ ನೀನು ? (ಗಿರಿಂ. ೬-೩೭).

[<ಸಂ. ವಾಸನ./ಪ್ರಾ. ವಾಸಣ./ಹಿಂ. ಮರಾ. ಬಾಸನ ; ಗುಜ. ವಾಸಣಾ]

**ಬಾಸಣೆ** 'ಬಾಸಣ' ನೋ.

**ಬಾಸಣಿಗೆ$_1$** 'ಬಾಚಣಿಗೆ' ನೋ.

**ಬಾಸಣಿಗೆ$_2$** (ನಾ). ಹೊದಿಕೆ ; ಆಚ್ಛಾದನ ; ಮುಸುಕು : ಪೊಸಮುತ್ತಿನ ಬಾಸಣಿಗೆಯೊಳ್ ಬಾಸಣಿಸಿದ ಬಿರಿಮುಗುಳ್ಗಳೊಳ್ (ಶಂಶಪಾ. ೩-೩ ವ) ; ಇರ್ವುಪೊರೆದ ಮುಗುಳದ ಬಾಸಣಿ[ಪಾಠಾಂ. ಣ]ಗೆಯುಂ ಕಳೆದು (ಕಾರಂಗ. ೦೬೮) ; ಸ್ಮರನಲರ್ವಿಲ್ಲ ಬಾಸಣಿ[ಪಾಠಾಂ. ಬಾಣಸಿ]ಗೆಯುಂ ಕಳೆವಂತೆ ಮುಸುಂಕನೋಸರಿಸೆ (ಲೀಲಾವ. ೦೩-೦೨).  [< ಬಾಸಣ]

**ಬಾಸಣಿಗೆಗಳೆ** (ಕ್ರಿ). ಮುಸುಕನ್ನು ಓಸರಿಸು: ಗರ್ವಣಿಗೆಯನ್ನು ತೆಗೆ : ಶಂಖಮುಂ ಬಾಸಣಿಗೆಗಳೆದು . . . ವಿಶ್ವಮಾರ್ಜಾಲಂಗೆ ಕೊಟ್ಟು (ಶಂಶಪಾ. ೬-೩ ವ).  [ಬಾಸಣಿಗೆ$_2$+ಕಳೆ$_1$]

**ಬಾಸಣಿಸು$_1$** 'ಬಾಚಣಿಸು$_1$' ನೋ.

**ಬಾಸಣಿಸು$_2$,** ಬಾಚಣಿಸು$_2$ (ಕ್ರಿ). ೧. ಆವೃತವಾಗು : ಆ ಸಭೆಯು ಮನೋಜ್ಞದ ಸಿಂಹಾಸನವುಮುಮನೊಡನೆ ಬೆಳಗೆ ಬೆಳಗಿಂದೆ ಜಗಂ ಬಾಸಣಿಸಿ ದುದೆನೆ ಸಕಲಸುರಾಸುರಪತಿಯುರದೊಳೆಸೆದುದಿಂದ್ರಚ್ಛಂದಂ (ಅಜಿತ. ೯-೭). ೨. ಹೊದಿಸು ; ಮುಚ್ಚು : ಕರಡಿಯ ತೊವಲಂ ಕಾಡಿಗೆಯೊಳರ್ದಿ ವಿಧಾತ್ರಂ ಲೋಕಮಂ ಬಾಸಣಿಸಿದನೆಂಬಂತಪ್ಪ ಕತ್ತಲೆಯೊಳ್ (ಧರ್ಮಾಮೃ. ೦೨-೨೦). ೩. ಆವರಿಸು ; ಹಬ್ಬು : ಆ ಸುಗಂಧಕಪದುಮಪರಿಮಳ ಬಾಸಣಿಸಿತೀ ಜನಮನೋವಿನ್ಯಾಸವನು (ಕುಮ್ಯಾ. ೧೦-೩). ೪. ಧರಿಸು ; ತೊಟ್ಟುಕೊಳ್ಳು : ಎಕ್ಕಡವ ಬಾಸಣಿಸಿ ಪದತಳಕೆ ಶೀತಸುವಾಸವನು ತೆಗೆದುಟ್ಟು . . . ಎಲೆಮನೆಯ ಹೊಱವಂಟನಾ ರಾಮ (ತೊರರಾ. ೩-೬-೩೪). ೫. ರಕ್ಷಿಸು ; ಕಾಪಾಡು : ಸ್ಥಾಣುಗಾದಿಯು ಹಳೆಪುರಾಣಕಸೆ ಪ್ರಾಣವಂ ಬಾಸಣಿಸಲಱಿಯುದ ಹೂಣಿಗರು ಜಾಣರುಗಳಧವನೊಳಗಲದವಿರಳರು (ಶಾಸಂಕ. ೯-೦೦). **ಬಾಚಣಿಸು$_2$** : ೨. ಕರಿಮೊಗಂ ಸುಂಡಲದಿಂ ಸ್ತನ್ಯಪಾನಂಗೈವುತಿರಲ್ . . . ಸೆರಗ ಬಾಚಣಿಸಿಪಗಜೆ ಸಲಹಾ (ವಚನೋ. ೬-೨).  [ಬಾಸಣ + – ಇಸು$_3$]

**ಬಾಸಬೆ** (ನಾ). ಒಬ್ಬಾಕೆಯ ಹೆಸರು : ತಾಮ್ಮಱಿದ ಕದಮ್ಬಸಗ್ಗಳದ ಬಾಸಬೆಗಾದನೇಂ ಪುತ್ರಸುತ್ತುಮನ್ನರದಿಕೆ ನೋನ್ತು ಮೂಱುದಿಸಮಂ ಸುರನಾಗಿದನಿನ್ತು ರಾಚಯಂ (ಎಕ. XV, ಹೊಳೆನ. ೬೭-೦೦ ; ಸು. 950).

[ ಬಾಸ + ಅಬೆ (<ಅಬ್ಬೆ$_1$ ) ]

**ಬಾಸರ$_1$** 'ವಾಸರ$_1$' ನೋ.

**ಬಾಸರ$_2$** (ಗು). ೧. ಬಿಳಿಚಿಕೊಂಡ ; ಪೇಲವವಾದ : ಮಿಡಿದು ವಾಯ್ದುಪುದಳ್ಪೆರ್ದ ಬತ್ತಿ ತೊಂಡೆವಾಯ್ ಬಾಸರವರ್ಣಮಾಯ್ತು (ಅನಂತ. ೯-೦೦). ೨. ಮ್ಲಾನವಾದ ; ನಿಸ್ತೇಜವಾದ : ಕಿದಱಿದ ಕೇಶಬಂಧದ ಮಲಿನದೇಹದ ಬಾಸರದ ಶಶಿಮುಖದ ಸೂಸುವ ಸುಯ್ಲ ಸಂದಣಿಯ ಬೇಸಱಿನ ಬೆಡಂಗಿನಲಿ (ಕಿರಾಗ. ೯-೦೩-೩೭). (ನಾ). ೩. ಕಾಂತಿ ; ಮೆರುಗು; ಶೋಭೆ : ಮೃದುಪದಪಂಕಜಂ ನಡೆದು ಕೆಂಪು ಮರಲ್ದು ನಿಜಾರುಣಾಂಶು ಪಾಸಿದ ದುಗುಲಕ್ಕೆ ಬಾಸರದ ಮಾಸರಮಂ ಕುಡೆ ಬಂದ ಯೋಗಿರೂಪದ ನಿಧಿಯುಂ (ಅನಂತಪು. ೯-೦೩) ; ಒಪ್ಪುವ ಯಜ್ಞಸೂತ್ರಕಂ ಕಿವಿಯ ತೊಳಂಚಿಯುಟ್ಟುಡೆಯ ಬಾಸರಮಿಕ್ಕಿದ ದರ್ಭೆ ಶೋಭಿಪತ್ತು ವಿರಳಕೂರ್ಚಂ . . . ಒಪ್ಪೆ (ಸುಕುಮಾ. ೦೦-೬೭). ೪. ಶುಭ್ರವಸ್ತ್ರ : ಉಟ್ಟ ಬಾಸರದ ಬಂಬಲ್ ದೊಳ್ಳು ಚೆಲ್ವಾಗೆ ಸಂಭಿನ್ನಶ್ರೋತ್ರ ಧರಾಮರಂ ನೃಪತಿಗಾಶೀರ್ವಾದವಂ ಮಾಡಿದಂ (ಶಾಂತೀಶ್ವ. ೨-೪೯): ಉಟ್ಟ ಬಾಸರ ಬಳಲುಗಚ್ಚೆಯನಟ್ಟಹಾಸದ ಜನದ ನಗೆಗಳ ನಟ್ಟವಿಗ ನೋಸರಿಸಿ ಸಭೆಯಲಿ ಮೆಲ್ಲನೈತಂದ (ಕುಮ್ಯಾ. ೦೩-೦೩). [<ಸಂ. ಭಾಸ್ವರ]

**ಬಾಸಳು** 'ಬಾಸುಂಟಿ' ನೋ.

**ಬಾಸಾಳೆ** 'ಬಾಸಂಟಿ' ನೋ.

**ಬಾಸಾಳು** 'ಬಾಸಂಟಿ' ನೋ.

**ಬಾಸಿಂಗ** 'ಬಾಸಿಗ' ನೋ.

**ಬಾಸಿಕಾಱ** (ನಾ). ದೇವಸ್ಥಾನದ ಪರಿಚಾರಕ (?) : ಬೀಹಳಿಯರೆನಿ ಬರಾವಡಂ ಮಿಯುಲು ವಿ ೧೧೦ ಬಾಸಿಕಾಱಂ ವ ೧ × × × (ಶಾಇಇ. XV, ೩೬-೦೦ ; 1148).  [ ಬಾಸಿ$_2$ + — ಕಾಱ ]

**ಬಾಸಿಕೆ** (ನಾ). (?) : ಸೂಸುವ ಕಣ್ಣ ಕೆಂಪು ಪೊಸಬಾಸುಟಿ ಮೈ ಜಡೆ ಬಿಟ್ಟ ಮಂಡೆ . . . ಕಿಱುಲಜ್ಜೆ ತೊದಳ್ನುಡಿ ದೋರೆವಲ್ಲು ಕೈ ಬಾಸಿಕೆ

ಕೊಪ್ಪು ಮುಂದಲೆ ಕಱುಗಿದ ಕೆಂದುಟಿಯೊಪ್ಪಿ ಬರ್ಪ ಸಂತೋಷದ ಲೇಸು ಪಾಷಣಸಿತಾ ಕವಿರಾಜಕಲಾವಿಲಾಸನಾ (ಕಾವ್ಯಸಾ. ಛಲ. ೨೪೫). [?]

**ಬಾಸಿಗ**, ಬಾಷಿಗ, ಬಾಸಿಂಗ (ನಾ). ೧. (ಹೂವಿನ) ಮಾಲೆ, _ದಂಡೆ : "ಬಾಸಿಗವೋದು ಪೂವಮಾಲೆ" (ಶಶಾ. ೬೩-೪೦೩) ; ಸೂಡಿದ ಪಾರಿಜಾತದ ನಮೇರುವ ಬಾಸಿಗಮೊಯ್ಯನೊಯ್ಯನಿರ್ಪೂಱಿಡಿದುದು (ಆದಿಪು. ೩-೩) ; ಕಟ್ಟಿಯುಮೇನೊ ಮಾಲೆಗಾಱನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೆ (ಅನಂಪು. ೦-೪೩) ; ಪಂದಲೆಯೊಂದು ಬಾಸಿಗಂ ನೆತ್ತರ ತಳ್ತ ಬಲ್ಲುಲಿಯ ಬಂದಿಗೆ . . . ಇಪ್ಪೊಂದಿ ನಿಲೆ ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಸಾ. ೫೩೩). ೨. ವಿವಾಹಸಮಯದಲ್ಲಿ ವಧೂವರರ ಹಣೆಗೆ ಕಟ್ಟುವುದಕ್ಕಾಗಿ (ಚಿನ್ನ, ಮುತ್ತು, ರತ್ನಗಳಿಂದ ಅಥವಾ ಕಾಗದ, ಬೆಂಡುಗಳಿಂದ) ರಚಿಸಿದ, ಎಡಬಲಕ್ಕೆ ಗೊಂಚಲುಗಳನ್ನುಳ್ಳ ಒಂದು ಬಗೆಯ ಅಲಂಕಾರಸಾಧನ : ಪೊಳೆವ ಬಾಸಿಗಕೆ ಹದಿನಾಱು ದಂಡೆ (ಅವಶಂ. ೨೪೬-೦೩೦೪); ಶರಣರ ಪಾದಂಗಳೇ ತೊಂಡಿಲ ಬಾಸಿಗವೆನಗೆ (ಮಹಾದೇ. ಬ. ೩೭-೬೮) ; ಮಗ ಸೊಸೆಗೆ . . . ಸಿಂಗರಗೆಯ್ದು ರನ್ನದ ಬಾಸಿಗವನು ಕಟ್ಟಿದರು (ಸೋಹಶ. ೦೩-೬೪). **ಬಾಷಿಗ** : ೨. ಬಣ್ಣದ ಸೊಡರು ಮೊಟ್ಟೆಕ್ಕಿಗಳ ಗೂಡೆಯ ಸಡಗರದ ಪುತ್ಥಳಿಯ ವಿರಚಿತ ರತುನಬಾಷಿಗದ . . . ಗುಥಾಕ್ಷತೆಯಗಿಲುಗಳೆಸೆದವು (ಶಂಕರಾ. ೪೬-೩೦). **ಬಾಸಿಂಗ** : ೧. ಮಿಂದು ದಳಿಂಬ ಮಾನುಟ್ಟುಂ ಚಂದನವಂ ಪೂಸಿ . . . ನವಕುಸುಮದಾಕೃತದಿಂದಂ ಬಾಸಿಂಗವ ನಿಮಿರಿ ಕಟ್ಟಿದ ಬಟ್ಟೆಕಂ (ಅಭ್ಯು. ೯-೨೫); ಅದಟುಳ್ಳ ಭಟರು ಸೂಡುತ ಬಾಸಿಂಗ ಡೌಡೆ ಚೀಗಟೆ ದನಿಮಾಡಿಸುತ್ತಿದಿದರು (ಸೋಹಶ. ೩೩-೩೪). ೨. ಆಗಮೋಕ್ತಿಯಲಿ ಬಾಸಿಂಗವ ಸೂಡಿದರ್ . . . ಪರಮ ಶೋಭನದಿಂದೆ ಮದುವೆಯಾಂ ಮಾಡಿದರ್ (ಸೋಹಶ. ೪೨-೬೨); ಆಸೆಯಿಲ್ಲದ ದೋಸೆ ಮಿಸೆಯಿಲ್ಲದ ಮೋಱೆ ಬಾಸಿಂಗವಿರದ ಮದುವೆ ಇವು ಮೂಱು ಹೇಸಿ ಕಾಣಯ್ಯ (ಸರ್ವಜ್ಞ. ೦೯೬೨).

**ಬಾಸಿಂಗಬಲ**=ಬಾಸಿಂಗವನ್ನು ಕಟ್ಟುವ ಯೋಗ : ಮದುವೆಯ ಯೋಗ : ಬಾಸಿಂಗಬಲ ಬರಲು ಬಾಸೆ ಕೊಡುವೆನು ತಂಗಿ (ಕನ್ನಜಾ. ೬೯). 'ಕಂಕಣಬಲ' ಪರಾ.

[ದೇ.॥ ತಮಿ. ವಾಚಿಕ್ಕೈ; ತುಳು. ಬಾಸಿಂಗ, ಬಾಶಿಂಗ, ಭಾಷಿಂಗ ; ತೆಲು. ಬಾಸಿಕ./ಮರಾ. ಬಾಶಿಂಗ, ಬಾಸಿಂಗ ]

**ಬಾಸಿಗಂಗಟ್ಟು** (ಕ್ರಿ). ೧. ಹೂವಮಾಲೆಯಂನ್ನು ಹೆಣೆ ; ಹೂದಂಡೆಯನ್ನು ಕಟ್ಟು : ಬಾಸಿಗಂಗಟ್ಟುವನಂತು ಕಟ್ಟುವುದು ಕಬ್ಬಮನುಬ್ಬಿನ ಮಾಗೆ ಕಬ್ಬಿಗಂ (ಶಬ್ದಾಶ. ೦-೬೨). ೨. ಮದುವೆಯ ಕಾಲದಲ್ಲಿ ಬಾಸಿಗವನ್ನು ಧರಿಸಂ : ಬಾಸಿಗಂಗಟ್ಟಿದ ಶೀರ್ಷದಿಂದೆಱಗಿದಂ ವಸುದೇವಂ (ಜಗಪು. ೨-೩೦) ; ಮುತ್ತಿನ ಬಾಸಿಗಂಗಟ್ಟಿ ನಂದಿಯಂ ವೃಡನೇಱಿದಂ (ಶಂಪು. ೩೬-೪). [ ಬಾಸಿಗ + ಕಟ್ಟು$_1$ ]

**ಬಾಸಿಗಹುವ್ವು** 'ಬಾಸಿಗಹೂ' ನೋ.

**ಬಾಸಿಗಹೂ**, ಬಾಸಿಗಹುವ್ವು (ನಾ). ಮಾಲೆಯಾಗಿ ಕಟ್ಟಿದ ಹೂವು ; ಹೂವಿನ ಹಾರ : ಶ್ರೀಗೊಮ್ಮಟದೇವರ ನಿತ್ಯಾರ್ಚ್ಚನೆಗೆ ೨೦ ಬಾಸಿಗ ಹೂವಿಂಗೆ ಶ್ರೀಮನ್ಮಹಾಮಣ್ಡಳಾಚಾರ್ಯ್ಯರು . . . ಕೊಟ್ಟ ದತ್ತಿ (ಎಕ. II. ೨೪೬-೩; 1196 ?). **ಬಾಸಿಗಹುವ್ವು**: ೩ ಮರಿಯಾದೆಯಲು ಕುನ್ದವೆ ೬ ಬಾಸಿಗಹುವ್ವನಿಕ್ಕುವರು (ಎಕ. II. ೨೪೩-೦೪; 1274 ?).

[ ಬಾಸಿಗ + ಹೂ$_2$ (< ಪೂ$_2$) ]

**ಬಾಸು$_1$** (ಕ್ರಿ). ಮಲವಿಸರ್ಜನೆ ಮಾಡು : "ಬಾಸು — ಪುರೀಷೋತ್ಸರ್ಗೇ" (ಕಶಬ್ದಾ) ; ಬಾಸುತಂ ಹೇಸುತಂ ಮೂಸುತಂ (ಜಗಪು. ೩೫-೦೫); ಲವಂ . . . ಮೂಸಿಯುಂ ಬಾಸಿಯುಂ ಮೇದುಂ ಪಾಯ್ದುಂ ವನವಮಂ ಮನಮಂತುಟಾಱೆ ಪುಡಿಗುಟ್ಟಿ ಕಿಚಿಕಿಲ್ಚ ಪಯಮಂ ದಿಟ್ಟಿಸಿ (ರಾಮಾಶ್ವ. ೨೫೨-೧೦).

[ದೇ.॥ ತಮಿ. ಪಾಚನ = ಭೇದಿ; ತೆಲು. ಪಾಸನ = ಮಲವಿಸರ್ಜನೆ]

**ಬಾಸು$_2$** 'ಬಾರ್ಚು' ನೋ.

**ಬಾಸುಂಡೆ** 'ಬಾಸುಟಿ್' ನೋ.

**ಬಾಸುಂದಿ**, ಬಾಸುಂದೆ (ನಾ). ಹಾಲನ್ನು ಗಟ್ಟಿಯಾಗುವಂತೆ ಕುದಿಸಿ ಅದರಲ್ಲಿ ಸಕ್ಕರೆ, ಬಾದಾಮಿ, ದ್ರಾಕ್ಷಿ ಮೊದಲಾದುವುಗಳನ್ನು ಬೆರಸಿ ಮಾಡುವ ಮಂದದ್ರವವಾದ ಒಂದು ಬಗೆಯ ತಿನಿಸಂ : ಮನೆಯಲ್ಲಿ ತಾನೇ ನಿಂತು ಬಾಸುಂದಿ ಪೂರಿ ಅಡಿಗೆ ಮಾಡಿ ಕಮಲೆಯ ಬಯಕೆಯೂಟ ಆರಂಭಿಸಿದಳು (ಕತಾಕ. ೦೦೦); ಕರ್ನಾಟಕ ಕ್ಲಬ್ಬಿನಲ್ಲಿ ಇಂದು "ಬಾಸುಂದೀ ಪುರೀ"ಯಿತ್ತು (ಕಮಜೀ. ೧೦೦). **ಬಾಸುಂದೆ** : ಕಾರ್ಯದರ್ಶಿಯು . . . "ಬಾಸುಂದೆ, ಪುರಿ" ಯಾಗಬೇಕೆಂದು ನಿರ್ಣಯಿಸಿದ್ದನು (ಕಮಜೀ. ೦೦೦).

[← ಮರಾ. ಬಾಸುಂದೀ. ಬಾಸುದೀ. ಬಾಸೋಂದೀ]

**ಬಾಸುಂದೆ** 'ಬಾಸುಂದಿ' ನೋ.

**ಬಾಸುಗಿ** 'ವಾಸುಗಿ' ನೋ.

**ಬಾಸುರಕಬ್ಬು** (ನಾ). ಒಂದು ಬಗೆಯ ಕಬ್ಬು : "ಇಕ್ಷ್ವಾಕಿ :— ಬಾಸುರಕಬ್ಬು. ಹೆಗ್ಗಬ್ಬು. ಈಶ್ವರಿ" (೬ತಥ. ೦೩).

[ ಬಾಸುರ$_0$ + ಕಬ್ಬು$_2$ (< ಕರ್ಪು$_1$) ]

**ಬಾಸುರಿಕೋಡು** (ನಾ). ಒಂದು ಊರಿನ ಹೆಸರಂ : ಬಾಸುರಿಕೋಡು ಇಂಗಳಸರ ಬಾಗೆವಾಡಿ ಸಾಮಳವಾಡಿಗೆ ಒಡ್ಡವೊಡಿಗೆ ಮಧ್ಯವತ್ತಿ[F] ಟಿಪ್ಪರಗೆನಾಮಗ್ರಮೋ . . . ದತ್ತಿ (ಸೌಇಇ. XI-i, ೯-೦೬; 862). [ ? ]

**ಬಾಸುಳ್** 'ಬಾಸುಟಿ್' ನೋ.

**ಬಾಸುಳ** 'ಬಾಸುಟಿ್' ನೋ.

**ಬಾಸುಳಿ** 'ಬಾಸುಟಿ್' ನೋ.

**ಬಾಸುಳು** 'ಬಾಸುಟಿ್' ನೋ.

**ಬಾಸುಳುವಡೆ** (ಕ್ರಿ). ಮೈ ಮೇಲೆ ಬಾಸುಂಡೆಗಳನ್ನು ಬರಿಸಿಕೊಳ್ಳು : ಬಳೆಮ ಮುಱಿಯಂ ತೋಳೊಳಗೆ ನೆಲಮೊಲೆಗಳಲಿ ಕೊರಳಲಿ ಬರೆದು ಬಾಸುಳುವಡೆದು ಮುಸುಕಿಟ್ಟು ಮಲಗಿದಳರಸ ಕೇಳು (ಶಾಲ್ಯಭಾ. ೨೯-೧೯).

[ ಬಾಸುಳು (< ಬಾಸುಟಿ್) + ಪಡೆ$_1$ ]

**ಬಾಸುಳಿ** 'ಬಾಸುಟಿ್' ನೋ.

**ಬಾಸುಳೇಳು** 'ಬಾಸುಟೇಟಿ್' ನೋ.

**ಬಾಸುಟಿ್**, ಬಾಸಳು, ಬಾಸಾಳ, ಬಾಸಾಳು, ಬಾಸುಂಡೆ, ಬಾಸುಳ್, ಬಾಸುಳ, ಬಾಸುಳಿ, ಬಾಸುಳಂ, ಬಾಸುಳಿ (ನಾ). ಗೀರಿದ ಅಥವಾ ಹೊಡೆದ ಪೆಟ್ಟಿನಿಂದ ಚರ್ಮದ ಮೇಲೆ ಉದ್ದವಾಗಿ ಉಬ್ಬಿಕೊಳ್ಳುವ ಗುರುತಂ : ವಿಳಿರ್ವಸಿಯ ಪಸಿಯ ಪೊಸಮಾಸುಟ ಕರರುಹರೇಖೆ ತುಱುಗಿ ರತನಾಟ್ಯಪರಿಸ್ಫಳಿತಕ್ಕೆ ಮುಳಿದು ದಂಪತಿಗಳ ನಂಗಜನಟನ ಸೆಳೆವ ಬಾಸುಟನಿಳಿಕಂ (ಆದಿಪು. ೦೨-೦೫) ; ಎಲ್ಲರ ಮೆಯ್ಗಳೊಳಂ ತಳುವಿಲ್ಲದೆ ಬಾಸುಟ್ಗಳೊಗೆಯೆ (ರಮಾಕಪ್ರು. ೩-೨೦೩); ವಿರಹ ದಿನಟಿಲ್ಲು ಬಸವಟಿದು ಪೋದೆ ತನ್ನುರದೊಳ್ ಬಾಸುಟ ತಳ್ಪು ಶೋಕ ಶಿಖಿಯಂ ಕಟಲ್ಚೆಲಂಮೊಟ್ಟಿದಸುಗೆದಳಿರು ಪೋಲ್ಕುಂ (ಕಾವ್ಯಾವ. ೨೦೦). **ಬಾಸಳು** : ಬಾಳೆಯ ಸುಳಿಯ ಕಟ್ಟಿಗೆಕೋಲೊಳವ ಹೊಯ್ದುನೇಳೇಳು ಮೂಲೆಗೋಡಾಡಿ ಆ ಲೇಸುವೆಂಗಳ ಮೈಗೆ ಬಾಸಳು ಪುಷ್ಪಮಾಲೆಯಂ ತೆದ್ದುವಾಕ್ಷಣವೆ (ಛಶ. ೪೯-೬೪) ; ಒಡತಂದೊಡನನಿಬರಾಕ್ಷಣ ನೋಡದೆಡಬಲಗಳನು ದೈತ್ಯರ ತ್ರಾಡನೆಯ ಬಾಸಳಿನ ತಲೆಬೋಳರುಗಳ ಯೇರಿನಲಿ (ಶಂಕರಾ. ೪೦-೪೪) ; ಬೆತ್ತದೇಟಿಗೆ ಭಾಸಳು ಎದ್ದಿದ್ದುವು (ಕೂಶಕಾ. ೨೯).

**ಬಾಸಾಳ :** ಪಂಡಿತನಿಗೆ ತನ್ನ ಕೆನ್ನೆಯ ಮೇಲೆ ಮೂಡಿದ ಬಾಸಾಳದ ನೆನಪಾಯಿತು (ಸಪಚು. ೧೨೦೬) ; ಅವಳ ಬೆನ್ನು ಗಲ್ಲಗಳ ಮೇಲೆ ಬೆತ್ತದ ಬಾಸಾಳಗಳು ಮೂಡಿದ್ದುವು (ದೇಶಬಾ. ೦೩). **ಬಾಸಾಳು :** ಸಿಕ್ಕವರ ಬೆನ್ನಿಗೆ ಬಾಸಾಳು (ಪಾಶಂ. ೩೪) ; ಕೈಕಾಲುಗಳ ಮೇಲೆ ಬಾಸಾಳು ಮೂಡಿದ್ದಲ್ಲದೆ ಅವನ ಹಣೆಯಿಂದ ರಕ್ತವು ಸುರಿಯತೊಡಗಿತು (ಸಪಚು. ೨೩). **ಬಾಸುಂಡೆ :** ಬಾಸುಂಡೆ ಬರುವಂತೆ ಸೆಳೆದ (ಅಕಳು. ೦೯೭-೦೦) ; ನೀವು ಈ ಅರಿಯದ ಕಂದನಿಗೆ ಬಾಸುಂಡೆ ಬೀಳುವಂತೆ ಹೊಡೆದಿದ್ದೀರಿ (ಕಂದನ. ೯೬). **ಬಾಸುಳ್ :** ನೋಡಯ್ಯ ಮಗನೆ ಎನ್ನಯ್ಯ ಮಯ್ಯ ಬಾಸುಳಂ (ಪಾಶಚ. ೦೬೭-೨೩) ; ಬಾಸುಳಂ ತೋರದಂದದಿ ಬೆರಳ್ಗೊಡೆತವಂ ಕೊಡು (ಬಂಗಾರಾ. ೩-೨-೪೦). **ಬಾಸುಳ :** ನೊಂದನೆಂದು ಮಯೂರನ ಸಂತೈಸಿ ಬಾಸುಳವ ನೋಡುವ ನೆವದಿಂದ ಕುಪ್ಪಸವ ಕಳೆದು ನೋಳ್ಪಾಗ ಮಯೂರನ ಮೈ ಸುವರ್ಣವಾಗಿರೆ (ಕೈರಸೂ. I, ೯೩). **ಬಾಸುಳಿ :** ಏರಿಕಾಲಚೋಳನಾಳ್ಗಳ ಭರದಿಂದಂ ಹೊಡೆದೊಡಿಲ್ಲ ಬಾಸುಳಿಯೆಂದುಂ (ಕೈರಥ. ೦೩-೨೮). **ಬಾಸುಳು :** ತಟಿದ ಬಾಸುಳ ಬರಿಯ ಮುಸುಂಬುದ ನೊಣದ ಹುಣ್ಣುಗಳ . . . ಕುಙುಹನಡಗಿಸಿಕೊಂಡು ಹಸ್ತದ ನಿಟಿಗೆಯಲಿ ನೆಟ ಸುಳಿದನಾ ಪ್ರಭುಲಿಂಗ ಲೀಲೆಯಲಿ (ಪ್ರಭುಲೀ. ೨೨-೪೯). **ಬಾಸುಳೆ :** ಮಯೂರನಂ ನರಪ ತಾನೆಸದು ಬಾಸುಳೆಯ ನೋಡುವ ನೆವದಿ ಶರೀರಮಂ ಪರಿಕಿಸೆ ಸುವರ್ಣದಂತಿರಲು (ಕೌರಶಾ. ೨-೪೦) ; ಬೆತ್ತದಿಂ ಬಡಿಯೆ, ಬಾಸುಳೆಗಳಂ . . . ನೆತ್ತರೊಡಮೂಡಿದೊಡಮವನೊಂದು ಮಾತನೆತ್ತಿಲ್ಲ! (ಗೂರ್ಖ್ಯೋಕ್ತಿ ೭೬-೨೪೮).

[ದೇ.೫ / ಪ್ರಾ. ಭಾಸುಂಡ = ಹೊರಸೆಳೆಯುವುದು]

**ಬಾಸುಟೀಟಿಟ್,** ಬಾಸುಳೇಳು (ಕ್ರಿ). ಮೈಮೇಲೆ ಬಾಸುಂಡೆಯೇಳು.— ಬಾರೇಳು : ಮೈ ಬಾಸುಟೀಟ್ವನ್ನೆಗಂ ಪಟಿದತ್ತಕ್ಕಟ ಪೊಕ್ಕು ಕೇದಗೆಯ ಪುಗೊಳ್ಳುಕ್ಕೆ (ಸೂಕ್ತಿಸು. ೦೦-೬೦). **ಬಾಸುಳೇಳು :** ಹೊಯ್ಲಿನ ಬಿಙುಸಿನಲಿ ಬಾಸುಳೆದ್ದಾ ತನುಗಳಂ ನಸುಮುಟ್ಟಿ ನೋಡುತ ಹೆದಱುತ್ತೋಡುತ್ತ (ಬಸವ. ೫೫-೦೦) ; ಅರಿದು ನೆತ್ತರಗಾಣದಲಗಿದು ನೆಟ ಬಿಗಿಯೆ ಮೈ ಬಾಸುಳೇಳದ ಹುರಿ ಬಲಿದ ನೇಣ್ ಸೋಂಕಿದೊಡ ಹೊಗೆ ಮುಸಗದೆದೆಗಿಚ್ಚು (ಕುಮ್ಮಾರ. ೩-೦೦). [ಬಾಸುಟ್ + ಏಟ್$_1$]

**ಬಾಸೆ$_1$** (ನಾ). ಎದೆಯ ಮಧ್ಯಭಾಗದಿಂದ ಹೊಕ್ಕುಳ ಮೇಲು ಭಾಗದ ವರೆಗೆ ರೇಖಾಕೃತಿಯಾಗಿರುವ ತೆಳುಕೂದಲಿನ ಸಾಲು.— ರೋಮರಾಜಿ : "ನಾಭಿಯು ರೋಮ ಬಾಸೆಯೆನಿಸಿಕ್ಕು" (ಶುಂಗರಾ. ೯೯-೫); ಆಕೆಯ ಬಾಸೆಗಳುಂ ಪಗೆವರ ಬಾಬ್ಬಾಸೆಗಳುಮೊಡನೊಡನಸಿಯವಾದುವು (ಶಂಶಶಾ. ೦-೦೪೦ ಪ); ಭ್ರೂಲತೆಯ ಬಿಲುಗಳ ಕಟಾಕ್ಷದ ಕೋಲ ಹೊದೆಗಳ ಬಾಸೆಗಳ ಕರವಾಳಗಳ . . . ಮನ್ಮಥನಾಳು ನಡೆದುದು ದ್ರೌಪದಿಯ ದಂಡಿಗೆಯ ಬಳಸಿನಲಿ (ಕುಮ್ಮಾ.ಕ. ೦೩-೩೪).

**ಬಾಸೆ$_2$,** ಭಾಸೆ (ನಾ). ೧. ಜನರು ತಮ್ಮ ಅಭಿಪ್ರಾಯವನ್ನು ಇತರರಿಗೆ ತಿಳಿಸಲು ಉಪಯೋಗಿಸುವ ಪದಪ್ರಯೋಗ ; ಭಾಷೆ : "ಬಾಸೆಯೆ ಭಾಷೆ" (ಕಶಾಂ. ೬೪); ಭಾಷಾ-ಬಾಸೆ (ಶಮುದ. ೨೩೫ ಪ್ರಯೋ). ೨. ಕನ್ನಡ, ತಮಿಳು ಇತ್ಯಾದಿ ಬೇರೆಬೇರೆ ಮಾತು,—ವಾಙ್ಮಯ : ಆತನನಾಕೆಗಳ್ ಬಾಸೆಯೊಳಿಂತೆಂದರ್ (ಶಂಶಶಾ. ೪-೯೫ ಪ); ಕೆಲದೊಳಿರ್ದ ವಿದಗ್ಧಸೌಂದರಿಯೆಂಬ ವಿಳಾಸಿನಿ ಅರಸಿಯ ಮನಮನಱಿದು ಆಕೆಯ ಬಾಸೆಯೊಳಿಂತೆಂದಳ್ (ಲಮ್ಮೀಕ್ಕು. ೪-೦೯೯). ೩. ಆಣೆ; ಶಪಥ; ಪ್ರತಿಜ್ಞೆ: ದೇವಿ ತನ್ನಯ ತನುವಂ ನಿಲೆ ಪಿಡಿವ ಬಾಸೆಯಂ ಮಾಡುಗುವೋ (ಕಾತಂಉ. ೬೬೯). ೪. ವಚನ; ವಾಗ್ದಾನ : ಬಾಸೆಯಂ ಬೇಡಿ ನಾನರಚುವಂದೆನ್ನ ಕಯ್ಯೊಳಾರ್ವಾಗಸಿಟ್ಟರೀ ಗಿರಿಕೆಯನ್ನ? (ಗಿಳಿಂ. ೩೦-೫). **ಭಾಸೆ$_2$** ೪. ಒಲ್ದು ಮಾಟ್ಕೆಯಿಂ ಭಾಸಯನಿತ್ತು ಪುಚ್ಚುಳಿವರಲ್ಲದೆ ಭಾಸೆಯನುದ್ಧರಿಪ್ಪರೇ (ಎಕ. V, ಬೇಲೂರು. ೦೦೨-೦೦೨; ಸು. 1220 ?).

**ಬಾಸೆಯ ಕೊಡು** = ಮಾತು ಕೊಡು; ವಚನ ಕೊಡು; ಭಾಷೆ ನೀಡು : ಪೂಸರಳಿಂದೆ ಶಿವನ ತಟ್ಟನೆ ತಾಗಲಿಕ್ಕುವೆನೆಂದು ಬಾಸೆಯ ಕೊಟ್ಟ ಮನ್ಮಥ ಜೀವನಿಗೆ (ಶೋಶಕ. ೩-೬೦). **ಭಾಸೆಗೆ ತಪ್ಪು**=ಆಡಿದ ಮಾತನ್ನು ನಡೆಸದಿರು; ಕೊಟ್ಟ ಮಾತಿಗೆ ತಪ್ಪು; ಭಾಷೆಗೆ ತಪ್ಪು: ಭಾಸೆಗೆ ತಪ್ಪುವಂಕದ ನೆಗಟ್ತೆಯ ಲೆಂಕರ ಗಂಡಂ (ಎಕ. V, ಬೇಲೂರು. ೦೦೨-೦೦೨; ಸು. 1220 ?). [<ಸಂ. ಭಾಷಾ]

**ಬಾಸೆಗೆಡು** (ಕ್ರಿ). ಕೊಟ್ಟ ಮಾತಿಗೆ ತಪ್ಪು; ವಚನಭ್ರಷ್ಟನಾಗು : × × × ಬಾಸೆಗೆಟ್ಟೊಡೆ × × × (ಶಾಶಾ. IX—i. ೨೨-೦೦; 923). [ಬಾಸೆ$_2$ + ಕೆಡು$_1$]

**ಬಾಸೆಗೊಡು** (ಕ್ರಿ). ವಚನ ಕೊಡು; ಮಾತು ಕೊಡು : ಎಲೆ ತುಕ ನೀನಾಪನನೀ ಲಲನೆಗೆ ಪತಿಂಯೆಂದು ತರ್ಪೆಯಾತನೆ ನಿನ್ನುಜ್ಜಲಸಖಿಗೆ ಭರ್ತೃವೆಂದೆನರೊಲವಿಂದಂ ಬಾಸೆಗೊಟ್ಟು ಕಟುಪಿವರೆನ್ನಂ (ಉದ್ಭಟ. ೩-೦೨೨); ಸುಭುಜಂ ಪಗೆರಾಯರಂ ಕೊಲ್ವೆನೆಂಬಾಸೆಯಿಂ ಬಾಸೆಗೊಟ್ಟು ತನ್ನ ಪಡೆಯಂ ಕೊಂಚೆಗಟ್ಟಿನ ಕೋಟೆಯಂತೆ ಸಮೆದು (ಕಾವ್ಯಾಕ್ಕ. ೯೪-೨೬). [ಬಾಸೆ$_2$ + ಕೊಡು$_1$]

**ಬಾಸೆದೋಱು** (ಕ್ರಿ). ಮಾತಾಡು; ಧ್ವನಿ ಮಾಡು : ಆ ಶಶಿಮುಖಿ ಮಾಗಿಯ ಕೋಗಿಲಂದದಿ ಬಾಸೆದೋಱದೆ ಸುಮ್ಮನಿರಲು (ಜ್ಞಾನಸ. ೨-೬೪). [ಬಾಸೆ$_2$ + ತೋಱು]

**ಬಾಸೆಯಿಲಿ** (ನಾ). ಸುಳ್ಳು ಹೇಳುವ ವ್ಯಕ್ತಿ : ಮೋಸಮನೀವ ಬಾಸೆಯಿಲಿಗಳ್ ದ್ರವಿಡಾಂಗನೆಯರ್ (ತಕಶ. ೩-೦೬೩). [ಬಾಸೆ$_2$+—ಇಲಿ$_3$]

**ಬಾಸೆವಕ್ಕಿ** (ನಾ). ಮಾತನ್ನಾಡುವ ಹಕ್ಕಿ ; ಗಿಳಿ: ಮೊರೆವ ಕುಕಿಲ್ದ ಪಾಡುವ ಬಾಸೆವಕ್ಕಿಗಳ ಗಜಬಜದಿಂ . . . ತಪೋವನವೊಂದು ಕಣ್ಗೊಳಿಸಲೊಡಂ (ಕಾವ್ಯಾಕ್ಕ. ೬೪-೬). [ಬಾಸೆ$_2$ + ಪಕ್ಕಿ]

**ಬಾಸೆವತ್ತ್ರಳೆ** (ನಾ). ಆಶ್ವಾಸನೆಯ ಪತ್ರ ; ಸಹಾಯದ ವಾಗ್ದಾನ ಕೊಡುವ ಪತ್ರ : ಇದು ನಿಶ್ಚಿತಂ ಇನಿತಱಿಳವರುಪಟಳಕ್ಕೆ ಬೆಚ್ಚ ವೆಮ್ಮಂ ನಚ್ಚಿರ್ಪುದು — ಎಂದನಿಬರುಂ ಕಳುಪಿದ ಬಾಸೆವತ್ತಳೆಗಳನಿತ್ತು ಬಿನ್ನವಿಪುದುಂ (ತಕಪಂ. ೯೩-೫) ; ಈ ಬಾಸೆವತ್ತ್ರಳೆಯು . . . ಕಾಕತೀಯರ ಫಲಸಿದ್ಧಿಯಾಗಿ. ನಮಗೆ ಬಹಳಮಟ್ಟಿಗೆ ಉಪಕಾರವಾಗುವುದು (ಪಟ್ಟಿಂ. ೬೩-೦೬). [ಬಾಸೆ$_2$ + ಪತ್ತ್ರಳೆ$_1$]

**ಬಾಸೆವಾಲ** (ನಾ). ರೋಮಮಯವಾದ ಬಾಲ (?) : ಶೇಷಕಾಯದ ನಿಡಿದ ನಿಳಿಕೆಯ ದೀರ್ಘತರ ಬಾಸೆವಾಲಂ ಮಿಳಿರೆ ನೇತ್ರತ್ರಯಂಗಳೊಂದೇ ಸಮಯದಿಂ ವಿಸ್ಫುಲಿಂಗಂಗಳ ಸೂಸುತಿರೆ ದಿವ್ಯಶಾರಭರೂಪದಿಂ ಬಾಸಂಗಳಿಗೆ ಭಯಭ್ರಾಂತಿಯಂ ತಳೆದು . . . ದುಷ್ಟನರಕೇಸರಿ ಗಗನದೊಳಿರೆ ಮೇಗಣ್ಕೆ ಜಿಗಿದು ಪಕ್ಷಂಗಳಿಂದಪ್ಪಳಿಸಿದಂ (ಕಾಶಕ.೦೪-೦೦).[ಬಾಸೆ$_1$+ಬಾಲ$_1$]

**ಬಾಸೆವೆಣ್,** ಬಾಸೆವೆಣ್ಣು (ನಾ). ವಾಗ್ದೇವತೆ ; ಸರಸ್ವತಿ : "ನುಡಿವೆಣ್, ಬಾಸೆವಣ್ . . . ಸಾರದೆ, ಸರಸತಿ — ಈ ೬ ಸರಸ್ವತಿಗೆ ಪೆಸರ್"(ಕಶಾ. ೪೬-೦೬); ಬಾಸೆವೆಣ್ಣೊಂದೊಲ್ಮೆದಾಳ್ದಿ ವಾಕ್ಸಿದ್ಧಿಯಂ ಪಡೆದು ನಿನ್ನಂ . . . ರತಿಯಂ ನೂರ್ಮಡಿ ಮಿಗಿಲೆನಿಸಿ ಬಣ್ಣಿಪೆಂ (ಕಾವ್ಯಾಕ್ಕ. ೬೮-೨). **ಬಾಸೆವೆಣ್ಣು :** "ನಿರುತಂ ತಾಂ ಬಾಸೆವೆಣ್ಣು ಶಾರದೆಯಕ್ಕುಂ" (ಕಶಕಂ. ೩೦).

**ಬಾಸೆವೆಣ್ಣನಿಯ**=ಸರಸ್ವತಿಯ ಪತಿ ; ಬ್ರಹ್ಮ : "ಪೊಂಬೊಡೆಯಂ . . . ಬಾಸೆವೆಣ್ಣನಿಯ . . . ಬ್ರಹ್ಮಗೆಸೆವ ನಾಮಂ" (ಕಶ್ಮ್ಯ. ೯) ; ಬಾಸೆವೆಣ್ಣನಿಯ ಕೇಳ್ ಭೂಸುರರ ಸಲಹುವರೆ ವಾಸಿಯಿಂದುದಯಿಸುವೆ ವಸುಮತಿಯೊಳು (ಬಂಗಾರಾ.೦-೨-೦೬). [ಬಾಸೆ$_2$ + ಪೆಣ್]

**ಬಾಸೆವೆಣ್ಣು** 'ಬಾಸೆವೆಣ್' ನೋ.

**ಬಾಸೆಹೀನ** (ನಾ). ಕೊಟ್ಟ ಮಾತಿಗೆ ತಪ್ಪುವವನು : ವಚನಭ್ರಷ್ಟ : ಬಾಸೆಹೀನನ ಹೆಣವನೀಶನಿವಾಸದೊಳಗಿರಿಸುವುದನುಚಿತಂ (ಬಸವ. ೨೮-೨೧). [ಬಾಸ್ಕೆ + ಹೀನ]

**ಬಾಸ್ಮಿಮಲ್ಲಿಗೆ** (ನಾ). ಮಲ್ಲಿಗೆಯಲ್ಲಿ ಒಂದು ಬಗೆ ; ಕಸ್ತೂರಿಮಲ್ಲಿಗೆ : ಬಾಸ್ಮಿಮಲ್ಲಿಗೆ, ಕಸ್ತೂರಿಮಲ್ಲಿಗೆ (ವೈಶಿಗ. ೯೬-೯೭೭). 'ಬಾಸಂತಿ' ಪರಾ. [ಬಾಸ್ಮಿ೦ + ಮಲ್ಲಿಗೆ]

**ಬಾಹ** 'ವರ್' ಪರಾ.

**ಬಾಹಟ** (ನಾ). ೧. ಒಬ್ಬ ಪ್ರಾಚೀನವೈದ್ಯನ ಹೆಸರು. ೨. ಆ ವ್ಯಕ್ತಿಯು ಬರೆದ ವೈದ್ಯಗ್ರಂಥ: "ಅಷ್ಟಾಂಗಹೃದಯವೆಂಬ ವೈದ್ಯಗ್ರಂಥ" (ಪದ್ಮಾಕಾ. ಟಿಪ್ಪಣಿ) : ಸಾವಾಂದ್ರಿಕಂ. . .ಬಾಹಟಂ[ಕಾಹಾಂಲಂ] ಸುಸ್ರುತಂ ಕ್ಷಾರಪಾನೀಯಂ ಮೊದಲಾಗೊಡೆಯ ನರವೈದ್ಯಂಗಳುಂ . . . ನೆಟೆಯೆ ಕಲ್ಪಿಸಿ (ಪದ್ಮಾಕಾ. ೯-೦). ೩. ವೈದ್ಯಶಾಸ್ತ್ರ : ನ್ಯಾಯ ವೈಶೇಷಿಕ . . . ಬಾಹಟ . . . ಧರ್ಮ ವೇದಾಂತ ಸಿದ್ಧಾಂತಗಳಲ್ಲಿ . . . ಸದ್ಯುಕ್ತಿನಿರೂಪಕರಾದ ವಾದಿಗಳಿಂ (ಐಜೀಚ. ೨೨೬): ಮಾನವರಿಗೊಂದೆಣೆಸಲಪ್ಪದನೂನವಿಲ್ಲದ ಬಾಹಟದ ಸಂಜ್ಞಾನಿಬಂಧನ ಪೀಟಿಕೆಯನು ಕರ್ನಾಟಕ ಭಾಷೆಯಲಿ (ಐಜೀಚ. ೦೩-೩೨). ೪. [ಸಂಗೀತ] (?) : ಗತಿ ಸಂಗತಿ ವಡೆಯ ಗಮಕಂ ಗಾರವಂಬಡೆಯ ಗಹಗಹಿಕೆ ಗೊಂಡಂ ಗೊಂಡಿ ಚಡಂ ಬಾಹಟಂ ಲಾಲಂಗಿ ತನ್ನೆವಣೆ ನಿಸ್ಸರಡೆ ರಂಗರಕ್ತಿ ಬೇಗವಣೆತು ತರಹರಂ ಸುಳಿವೊಟ್ಟಜೆ ದಾಳವಾಳಂ ಪದಿಪ್ಪೊಡೆ ಕೊಂಕು ಕಪ್ಪುಣೆ ಪೆಸರಂ ಬೆಡಂಗು ವಡೆದು ಬಾಡುತ್ತಿರೆಯುಂ (ಕಾಂತೀಶ. ೦೭-೬೬ ಪ). [ಸಂ.]

**ಬಾಹಣ** (ನಾ). ಬರುವಿಕೆ ; ಆಗಮನ : ಫೆಗ್ಗಳವಾಗಿಹ ತತ್ತ್ವ ಗ್ರಂಥವ ಹೇಳಿ ವಸ್ತುವಾಗಿ ಪರದು ಹೇಗೆ ಬೊಗ್ಗುವಡಟ ಮಾಡಬಾಹಣ ವಲ್ಲದೆ ಬೊಗ್ಗು ಕಟ್ಟಗೆಯಾಗದಾಗ್ (ಕಡಾಕೋ. ೯೯-೫) ; ಅದು ಹೋಪಣ ಬಾಹಣಿಲ್ಲವಮ್ಮಾ (ಶಡಾಪ ೬೬-೯) : ಸೊಗಸಿನಾಟಕೆ ವಗಲೆಯಿರುಳೆ ಪೋಗಿ ಬಾಹಣವಾಗಿರುತಿಪ್ಪಾ (ಕಕ್ಕೋಳ. ೬-೭).

[< ಬರ್ (< ವರ್) + – ಅಣ]

**ಬಾಹತ್ತರ** (ನಾ). ಒಂದು ಸಂಖ್ಯೆ : ಎಪ್ಪತ್ತೆರಡು : ಸೋಮನಾಥಲಿಂಗ ನಿಮಗೆನ್ನ ಕಾಯ ಮುಂತಾಗಿ ಬಾಹತ್ತರ ಡಿಂಗರಿಗರಯ್ಯ (ವಚಸಂ. ೨೫೩-೯೫).

**ಬಾಹತ್ತರನಿಯೋಗ**, **ಬಹತ್ತರನಿಯೋಗ** = ರಾಜ, ರಾಣಿಯರಿಗೆ ಎಪ್ಪತ್ತೆರಡು ಬಗೆಯ ಸೇವೆ ಮಾಡುವವರ ಸಮೂಹ : ಅಲ್ಲಿಗಲ್ಲಿಗೆ ಗುಜುಗುಜುಗೊಂಡು . . . ಮಾಜುಗುವ ಬಾಹತ್ತರನಿಯೋಗದಧಿಕಾರಿಗಳುಮಂ (ಕರ್ಣಕಪ. ೫-೯ ಪ); ದರ್ಪಣದ ಹಡಪದ ಶಂಖದ ಬಿಂಕದ ಬಾಹತ್ತರನಿಯೋಗಂ (ಶಂಶಿಕ. ೯-೦೭); ಭೂವರಂ ಬಹತ್ತರನಿಯೋಗವನು ಪುರಜನವಲ್ಲಮಂ ಬರಿಸಿ ಇಂತೆಂದನು (ಸಪ್ತಾಕ್ಷ. ೨-೯೦). **ಬಾಹತ್ತರನಿಯೋಗಾಧಿಪತಿ**, **ಬಾಹತರಿನಿಯೋಗಾಧಿಪತಿ** = ರಾಜ, ರಾಣಿಯರ ಎಪ್ಪತ್ತೆರಡು ಬಗೆಯ ಸೇವಾಕಾರ್ಯಗಳಿಗೆ ನಿಯಮಿತರಾದ ಗುಂಪಿನ ಪ್ರತಿಯೊಬ್ಬ ವ್ಯಕ್ತಿ : ಸರ್ವಾಧಿಕಾರಿ ಸೇನಾಧಿಪತಿ ಬಾಹತ್ತರ ನಿಯೋಗಾಧಿಪತಿ ಸಕಳಲಕ್ಷ್ಮೀಪತಿ (ಶಾಕಾಇ. IX-i. ೩೧೭-೯; 122?) : ಪರಮವಿಶ್ವಾಸಿ ಬಾಹತರಿನಿಯೋಗಾಧಿಪತಿ ನಿಯೋಗಯೋಗಂಧರನಂ (ಎಕ.XVI. ಶಕ್ಕಾಶಾ. ೬೦-೦೧; 1235). **ಬಾಹತ್ತರನಿಯೋಗಿ** = ಬಾಹತ್ತರ ನಿಯೋಗಾಧಿಪತಿ : ಚಾಳುಕ್ಯಚಕ್ರೇಶ್ವರಕಟಕ ಬಾಹತ್ತರನಿಯೋಗಿ ನಿವಾಹಾರಾಧ್ಯನುಂ (ಎಇ. XV. ೮೦-೧೯ ; 1060); ಮಕ್ಕಳ ದೆಸೆಯವರನೋಲಗಿಸುವರ ಬಾಹತ್ತರನಿಯೋಗಿಗಳ ನಂಬುವುದುಚಿತವೇ (ಶಬ್ದಾಕ. ೯-೩೫).

[< ಪ್ರಾ. ಬಾಹತ್ತರ./ಸಂ. ದ್ವಿಸಪ್ತತಿ./ಹಿಂ. ಬಹತ್ತರ್ : ಮರಾ. ಬಹಾತ್ತರ್, ಬಾಹತ್ತರ್]

**ಬಾಹತ್ತರನಿಯೋಗ** 'ಬಾಹತ್ತರ' ಪರಾ.

**ಬಾಹಪ್ಪಳಿಸು** (ಕ್ರಿ). ತೋಳುಗಳನ್ನು ಚಪ್ಪರಿಸು : ಸೆಡ್ಡುಹೊಡೆ : ಬಾಹಾಸ್ಫಾಲನಮಾಡು : ಮಲೆತು ನಿಂದು ಅಖ್ಖಡದೊಳ್ ಪೊಕ್ಕು ಬಾಹಪ್ಪಳಿಸಿ ಬಲ್ಪುಡೋಜಿಸಿದ ಮಲ್ಲನನುರ್ಬಿತ್ತೊಯ್ದುನೊಳಪೊಕ್ಕು (ಗಂಗ. ೨-೦೦೫ ಪ) ; ಒಲಿದು ಮುದದಲಿ ಭೀಮ ಬಾಹಪ್ಪಳಿಸಿದನು (ಶಬ್ದಾಕ. ೦೦-೨೦); ಗಾಢಮುಷ್ಟಿಯೊಳೌಕಿ ಬಿಡದಲ್ಲಾಡಿಸಿದನಾ ಧನುವ ನದು ಕೈಗೂಡದಿರೆ ಕೈದೆಗೆದು ಬಾಹಪ್ಪಳಿಸಿ ಬೊಬ್ಬಿಟ್ಟೀದ (ಕೊಕು೦. ೦-೦೫-೦೬). [ಬಾಹು೦ + ಅಪ್ಪಳಿಸು]

**ಬಾಹರಪುಟ** (ನಾ). (?) : ಬತ್ತೀಸಕಡಿಯ ಬಾಹರವುಟದ ಗುಳಪದ ಕಣಂಗಳ ಕುಳಿಶದಳ (ಅನಂತ. ೦೯-೬ ಪ). [?]

**ಬಾಹಲ್ಯ** (ನಾ). ಅಗಲ ; ವಿಸ್ತಾರ : ತ್ರಿಭುವನಭವನಕಳಶಾಯಮಾನಮುಂ ಯೋಜನದ್ವಿತಯಾಂತ್ಯಬಾಹಲ್ಯಮುಮಷ್ಟಯೋಜನಮಧ್ಯಬಾಹಲ್ಯಮುಂ . . . ಸ್ಫಾಟಿಕಶಿಲಾತಲದ ಮೇಗರ್ಧಯೋಜನಬಾಹಲ್ಯದಿಂ ಘನೋದಧಿಯಿರ್ಕುಂ (ಸುಕುಮಾ. ೦೦-೭೫ ಪ); ಸೀಮಂತಕಾಭಿಧಾನೇಂದ್ರಕಂ ಕ್ರೋಶೈಕಬಾಹಲ್ಯಂ . . . ತತ್ಪ್ರಕೀರ್ಣಕನಿಕರಂ ತದುಭಯಬಹಲ ಕಲಿತಸಂಖ್ಯಾಬಾಹಲ್ಯಂ (ಶಬ್ದಸ್ಮ. ೦೨೦). [ಸಂ.]

**ಬಾಹಾಬಲ** (ನಾ). ತೋಳ್ಬಲ; ಭುಜಶಕ್ತಿ: ವಲರಾ ವಂಶಜರವನೀತಲವಂ ಪಾಳಿಸಿದರ[ಳ]ವಿನದಟಿನ ಬಾಹಾಬಲದ ಕಲಿತನದ ಚಾಗದ ನೆಲೆಯ[ನಿಸಿ] ದುದಾರವೀರಗುಣಗಣನಿಳಯರ್ (ಕಾವಿ. ೨-೨-೦೬ ; 1058). [ಸಂ.]

**ಬಾಹಾವಿಹೀನತ್ವ** (ನಾ). ತೋಳುಗಳಿಲ್ಲದಿರುವಿಕೆ ; ಭುಜಗಳಿಲ್ಲದಿರುವಿಕೆ : ವಿಚಾರವಿಲ್ಲದುದಲಿಯಲ್ ಬಾಹಾವಿಹೀನತ್ವದಾಯಾಸಂ ಬಂದುದು (ಜಾವಶ. ೨೯). [ಸಂ.]

**ಬಾಹಾಸ್ಫಾಲನ**, **ಬಾಹಾಸ್ಫಾಳನ** (ನಾ). (ಕದನಕ್ಕೆ ಸಿದ್ಧವಾಗಿರುವುದನ್ನು ಸೂಚಿಸಲು) ತೋಳುಗಳನ್ನು ಚಪ್ಪರಿಸುವುದು ; ಸೆಡ್ಡು ಹೊಡೆಯುವುದು : ಕುವರನ ಬಾಹಾಸ್ಫಾಲನರವಮುರ್ಬಿಸೆಯಗಿದು ಪಾಡಿಬಿಡದೊದಱುತ್ತಿರ್ದವೊಲಾದುದು ತದ್ಗಹ್ವರನಿವಹಪ್ರಭವಾತಿಭೀಷಣಂ ಪ್ರತಿಘೋಷಂ (ಶಂರ್ಪ್ರಕ. ೫-೬೭). **ಬಾಹಾಸ್ಫಾಳನ** : 'ಬಾಹಾಸ್ಫಾಳನಂಗೆಯ್' ಪರಾ. [ಸಂ.]

**ಬಾಹಾಸ್ಫಾಲನಂಗೆಯ್**, **ಬಾಹಾಸ್ಫಾಳನಂಗೆಯ್** (ಕ್ರಿ). ತೋಳುಗಳನ್ನು ಚಪ್ಪರಿಸಿಕೊಳ್ಳು ; ಭುಜಗಳನ್ನು ತಟ್ಟಿಕೊಳ್ಳು : ಸಂತಸದೆ; ಬಾಹಾಸ್ಫಾಲನಂಗೆಯ್ದು ದಿಗ್ವಲಯಂ ಮಾರ್ದನಿಯಿಟ್ಟಪೋಲ್ ಗಜಱಿದು ಚಾಳುಕ್ಯಕಂಠೀರವಂ (ಗದಾಯು. ೬-೯೭) ; ಓರೊರ್ವರುದೀರ್ಣರೋಷಾವೇಶಪರುಷಪಾಟಲಿತಕಟಾಕ್ಷದಿನದರೆ ನೋಡಿ ಬಾಹಾಸ್ಫಾಲನಂಗೆಯ್ದು ಲೊಡನೆ (ಕಥಾಂ. ೯-೬೦ ಪ). **ಬಾಹಾಸ್ಫಾಳನಂಗೆಯ್** : ಅಲ್ಲಿ ಪರಿಪರಿದಾಡಿ ಮುಂತೆ ಬಾಹಾಸ್ಫಾಳನಂಗೆಯ್ದು ಕುಣಿದಾಡಿ (ಬಸಕ. ೯-೪೦).

[ಬಾಹಾಸ್ಫಾಲನ + ಕೆಯ್$_1$]

**ಬಾಹಾಸ್ಫಾಳನ** 'ಬಾಹಾಸ್ಫಾಲನ' ನೋ.

**ಬಾಹಾಸ್ಫಾಳನಂಗೆಯ್** 'ಬಾಹಾಸ್ಫಾಲನಂಗೆಯ್' ನೋ.

**ಬಾಹಿ** (ನಾ). ದೇವಸ್ಥಾನದ ಹೊರಗಿನ ಪರಿಚಾರಕರಲ್ಲಿ ಒಬ್ಬ : ಬಾಣಸದ ಅಪ್ಪಣೆ ಐದಕ್ಕಂ ಗದ್ಯಾಣಂ ಇಪ್ಪತ್ತು ಬಾಹಿಯವರು ಐದಕ್ಕಂ ಗದ್ಯಾಣಂ ಇಪ್ಪತ್ತು ಮಾಲೆಗಾಱರು ಹತ್ತೂ ಅರ್ಧಕ್ಕಂ ಗದ್ಯಾಣಂ ನಾಲ್ವತ್ತ ಎರಡು (ಎಕ. III. ತಿರುಮ. ೯೭-೯೩ ; 1270). [?]

**ಬಾಹಿಗೆ** (ನಾ). ಹೊರಭಾಗ : ಹೊರವಲಯ : ಪೊಱಲಂ ಪೊಱಮಟ್ಟು ಪುರದ ಬಾಹಿಗೆಯನೆಯ್ದುವಾಗಳ್ ಗಾಂಗೇಯದ್ರೋಣಕೃಪವಿದುರಾದಿಗಳ್ ಕೊಂತಿವೆರಸೆಯ್ದೆವಂದು (ಪಂಪಭಾ. ೭-೨೦ ಪ). [< ಸಂ. ಬಾಹೀಕ]

**ಬಾಹಿತ್ಥ** (ನಾ). ಆನೆಯ ಕುಂಭಸ್ಥಳದ ಕೆಳಗಿನ ಹಣೆಯ ಪ್ರದೇಶ : ಕರವುಂ ಸಂ[ಜೋ]ಗಮುಂ ಕುಂಭಮನುರವಣೆಯುಂ ಗ್ರಾಹಮುಂ ಕರ್ಣ

ಜಾಲಾಂತರವುಂ ನಿರ್ಯಾಣವುಂ . . . ಪುಷ್ಕರವುಂ ಬಾಹಿಸ್ತ [ತ್ರ] ಮುಂ ಲೋಚನಘಟವುಂ ಸ್ನಿಗ್ಧಕಾಂತವುಂ ಕೂಡೆ ತೀರೀ ಶರಸಂಘಾತಂಗಳುಚ್ಚು ಸೈರ ಕಿಪೆದು ವಿಧಾನೀಕಂ (ವರ್ಧಮಾ. ೪-೬೯).

[<ಸಂ. ವಾಹಿತ್ಥ. /ಪ ಸಾಸ್ಕೃತದಲ್ಲಿ 'ವಾಹಿಸ್ಥ' ಎಂಬ ಶಬ್ದರೂಪವೂ ಇರಬಹುದೆಂದು ಕೋಶಗಳಲ್ಲಿ ಹೇಳಿದೆ]

**ಬಾಹಿತ್ರ** 'ಬಹಿತ್ರ' ನೋ.

**ಬಾಹಿರ** (ಗು). ೧. ಹೊರಭಾಗಕ್ಕೆ ಸೇರಿದ. ೨. ಹೊರದೂಡಲಾದ; ಬಹಿಷ್ಕೃತವಾದ. (ನಾ). ೩. ಹೊರಭಾಗ ; ಪೊರವಲಯ : ಬಹಿಃಪ್ರದೇಶ : ಕಟ್ಟಿದ ಮುಟ್ಟು ಬಾಹಿಂಗೆ ಕಿಟ್ಟೊಡವಂದುದು (ಚಂದ್ರ.ಕ. ೯-೯೨) ; ಬಾಹಿರದ ಪಾಳ್ದೇಗುಲದೊಳಗೆ ಸಾವಿರ ಸೊಡರು ಗಳನೆತ್ತಿ ಭಜಿಸುವ ಸೇವಮಾತಂಗೆ (ಬಸವ.ಪು. ೩೦-೩೪). ೪. ಹೊರತಾದುದು; ಸಂಬಂಧವಿಲ್ಲದುದು : ಅತೀತವಾದುದು : ಆ ತಪ್ಪುಶೀರ್ಮಾನ ವೇನೆಂದರೆ. ಭಾರತದ ಪ್ರಾಚೀನ ತತ್ತ್ವಜ್ಞಾನ ಬೌದ್ಧಿಕತತ್ತ್ವಜ್ಞಾನಕ್ಕೆ ಬಾಹಿರ ವೆಂಬುದು (ತತ್ತ್ವಜ್ಞಾ. ೯) ; ಪುಣ್ಯಪಾಪಗಳಿಂದ ಬಾಹಿರವಾದ ... ಬ್ರಹ್ಮವೆ ನಿನ್ನ ಗಮ್ಯ (ಪಚನ. I, ೩೪೧). ೫. ಅಯೋಗ್ಯವಾದುದುಂ : ಬಾಹಿರವ ಕಳೆದು ಎಡನಾಣ್ಯವನುಳಿದು ಹಲವು ನಾಣ್ಯವ ಕಳೆದು ಸಲುವ ನಾಣ್ಯವ ಹಿಡಿದು ನೋಡುವನಯ್ಯಾ (ಶಿವ. ೨೬-೭೭). ೬. ಅನರ್ಹ : ಅಯೋಗ್ಯ: ಭರತವಂಶದ ಬಾಹಿರರು ನಿಮ್ಮರಸುಗಳು (ಕುಮಾ.ಭಾ. ೬-೧೨) ; ಕ್ಷಿತಿಗೆ ಬಾಹಿರನಾದೆನ್ನ ಜೀವಿತವ ಹಿಡಿದಿರಲಾಱೆನು (ಕೌಶಿಕ. ೨೨-೬೪). ೭. ಕ್ಷುದ್ರ : ಅಲ್ಪ : ಹೀನ : ವಚನಿಸಿ ಮಾವದಿಹ ಬಾಹಿರರು ನಾವಲ್ಲ (ಕುಮಾ.ದ್ರೋ. ೧-೯೦) ; ಅಂತಕನ ಬಱ ಘಲ್ಲಣೆಗೆ ಬೆದಱುವರ ಬಾಹಿರರಂತೆ ಮರಣದಲಿ (ಶಿಭಾಗ. ೨-೦-೨೮). [ಸಂ.]

**ಬಾಹಿರಂಗ** (ಗು). ೧. ಪೊರಭಾಗಕ್ಕೆ ಸಂಬಂಧಿಸಿದ ; ಬಾಹ್ಯದ ; ಬಹಿರಂಗದ. (ನಾ). ೨. ಹೊರಗೆ ಕಾಣುವಂಥದು : ರಾಕ್ಷಸರ ವಧೆಗಾ ಸುಲಭ ತನ್ನಿಚ್ಛೆಯಲ್ಲಿ ಜನಿಸಿಯೆ ನಳಿನನಾಭನು ಬಾಹಿರಂಗದ ರೂಪ ಧರಿಸುವನು (ಶಿಭಾಗ. ೧೧-೩೬-೬೭). ೩. (ಅಲಂ) ತೋರಿಕೆ ; ಆಡಂಬರ : ಮೋಹಮುಳ್ಳೊಡೆ ತಪ್ತತೈಲಪೂರಿತ ಘನಕಟಾಹದೊಳ್ಕಡಬ ಸುವನೇ ತಂದೆ ತನಯನಂ ಬಾಹಿರಂಗದ ಶೋಕವೊಂದು ಜಜಿಯದೆ ಲೋಕಂ (ಕೃ.ಖಂಡ. ೦೪-೩೬). [ಸಂ.]

**ಬಾಹಿರಗಿತ್ತಿ** (ನಾ). ವೇಶ್ಯೆ : ಸೂಳೆ : ಕೃತ್ರಿಮದ ರೂಪುಗಳು ಬಾಹಿರಗಿತ್ತಿಯರು (ಬಸವ. ೯೦.೩೩). [ಬಾಹಿರ + — ಗಿತ್ತಿ]

**ಬಾಹಿರತನ** (ನಾ). ಅಯೋಗ್ಯತನ : ನಿನಗೆ ಸಾರಥಿಯಾದ ಬಾಹಿರತನವೇ ತಾನದು ಸಾಲದೇ (ಕುಮಾ.ಕ. ೯-೩೭). [ಬಾಹಿರ + — ತನ]

**ಬಾಹಿರವಟ್ಟ** (ನಾ). ಹೊರಗಿನವರ ನಾಣ್ಯ ವಿನಿಮಯಕ್ಕಾಗಿ ಕೊಡ ಬೇಕಾದ ಸೋಡಿ : ಪಟ್ಟಣದೊಳು ಜನ ಕೊಟ್ಟ ಹಣವನೆಡೆವಟ್ಟ ಬಾಹಿರ ವಟ್ಟವೆಂದು ದಿಟ್ಟತನದೆ ಪೆಸರಿಟ್ಟು ವಟ್ಟವ ಕೊಂಬ ಸೆಟ್ಟಿಗಳಿರುತಿಹರಲ್ಲಿ (ಶಂಕರ. ೩-೩೩). [ಬಾಹಿರ + ವಟ್ಟ]

**ಬಾಹಿರಸುಂಕ** (ನಾ). ಒಂದು ಬಗೆಯ ತೆರಿಗೆ : ಮಾಜಲಿ × × ಕೊಳಲಿ ಬಾಹಿರಸುಂಕವಿಲ್ಲ (ಶಾಸ. XX, ೨೦೩-೦೦ ; ೧). [ಬಾಹಿರ + ಸುಂಕ$_1$]

**ಬಾಹಿರಾತ್ಮ** (ನಾ). ನೀಚವ್ಯಕ್ತಿ ; ದುಷ್ಟಾತ್ಮ : ಬಾಹಿರಾತ್ಮರು ಗೌಳತಾಪಸರೊಡಗೂಡು ಹುಗದಹಗೆ ಶಿವಗೇಹದಲಿ ಹಗಲೆಯ್ದಿ ಕಾವಲನಿರಿಸಿ . . . ಬಾಗಿಲ ಕದವನುಜ ಮೋಹಿ ಬೀಯಗವಿಕ್ಕಿಯುನಿಬರು ಗಹಗಪಿಸಿ ನಗುತ (ಬಸವ.ಪು. ೩೩-೩೬). [ಸಂ. ಬಾಹಿರಾತ್ಮನ್]

**ಬಾಹು$_1$**, **ಬಾಕು$_1$** (ನಾ). ೧. (ಪೆಟ್ಟು, ಖಾಯಿಲೆ ಮೊದಲಾದುವು ಗಳಿಂದ ಉಂಟಾಗುವ) ಊತ ; ಉಬ್ಬು ; ಶೋಫ : "ಶೋಫಃ . ಶ್ವಯಥುಃ — ಈ ೨ ಬಾ(ವು) ಹು" (ಹಲಾ.ನಿ. ೯೬-೪೪೬) ; ಮರುಳ ಮನ್ನಣೆಯಂತೆ ಬಾಹಿನ ಮೊಳ್ಳಿನಂತೆ ಸೂಳೆಯ ಕರೆಪದಂತೆ . . . ಕಡೆ ಬೊಳ್ ಪೇಸುವಪಥಮುಮಾಶೋಭೆಯುಮಾಗದೆ ಪೋಗದು (ವರ್ಧಮಾ. ೬-೧೨೨) ; ತೊಱೆಗಣಗಿಲೆಗಳನೊಂದಿರೆ ಮುಱುಗಿಸಿ ಕಟಿಯಿಂದಮಂತವು ಕಟ್ಟಲೊಡಂ ನೆಱೆಯುಡುಗುಂ ಬಾಹು ವಿಷಂ ಪಱಿಪಡಗುಂ (ಚಿಕಿತ್ಸ. ೦೬-೭೦). ೨. ಹುಣ್ಣು : ವ್ರಣ : ವೇದವತಿಯ ಮೊಗ ದೊಳೊಂದು ಬಾಹು ಪುಟ್ಟೆ ಪೊಲ್ಲರಲ್ಲದರಂ ಪೊಲ್ಲರೆಂದು ನುಡಿದೊಡೀ ಬಾಹಾದುದೆಂದೆಲ್ಲರ್ಗಂ ತಿಳಿಯ ಪೇಟ್ಟು (ಶಂಂತಾ. ೦೬-೬೬ ವ).

**ಬಾಕು**, : ೧. ಮಂಡಲವಿತರ್ಕ್ಕ ಆರುವೇಗ. ಅದರಲ್ಲಿ ಮೊದಲ ವೇಗ ಮುಖ ದಲ್ಲಿಯು ದೇಹದಲ್ಲಿಯು ಹಳದಿವರ್ಣವನು ಮೈಯಲ್ಲಿ ಬಾಕನು ಉಂಟು ಮಾಡುವದು (ಅಶ್ವ. ೯-೩) ; ನತುಮಳೆಗಾಲದಲ್ಲಿ ಚಂದ್ರಯ್ಯಗೌಡರ ಮೈಗೆ ಬಾಕು ಬಂದಿತು (ಕಾನೂರು. ೩೪೩). 'ಬಾವು' ಪರಾ.

[ಬಾ$_1$ + — ಹು$_2$ (< — ವು$_2$)]

**ಬಾಹು$_2$** (ನಾ). ೧. ತೋಳು ; ಭುಜ : "ದೋರ್ಬಾಹು ಭುಜವೆನಲು ತೋಳಿಂಗೆ ನಾಮಂ" (ಚಂಗರಾ. ೬೩-೬) ; ದಿಕ್ಕರಿಕರಾನುಕಾರಿಗಳಪ್ಪ ಬಾಹುಗಳಿಂದಮೋರೊರ್ವರಂ ತೆಗೆದಪ್ಪಿ (ಶಂ.ಶಬ್ದ. ೯-೩೩೪); ಖಳನ ಬಾಹುವ ನೊದೆದು ತುಱುಬಿಗೆ ನಿಲುಕಿ ಕುಸುಬಿದನು (ಕುಮಾ.ಭಾ. ೨೨-೩೩). ೨. ಹನ್ನೆರಡುಅಂಗುಲದ ಒಂದು (ಉದ್ದಳತೆಯ) ಪ್ರಮಾಣ. ೩. [ಜ್ಯೋತಿ] ಆರ್ದ್ರಾನಕ್ಷತ್ರ. ೪. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : ಯಮ ನಯನ ಕರ್ಣ ಕರ ಪದ . . . ಬಾಹು ಕಿವಿಗಳೆರಡಱ ನಾಮಂ (ಪ್ರ.ಪ್ರಾ. ೯-೨). ೫. [ರೇಖಾಗ]ರೇಖಾಕೃತಿಗಳ ಹೊರಮೈಯನ್ನು ರಚಿಸುವ ರೇಖೆ : ಭುಜರೇಖೆ : ಎರಡು ತ್ರಿಭುಜಗಳ ಕೋಣಗಳು ಪರಸ್ಪರ ಸಮವಾಗಿದ್ದರೆ, ಅವುಗಳ ಪರಸ್ಪರ ಬಾಹುಗಳು ಒಂದೇ ಪ್ರಮಾಣದಲ್ಲಿರುತ್ತವೆ (ಗಣಿತ. ೦೯). [ಸಂ.]

**ಬಾಹುಗಡಿ** (ನಾ). ಮುರಿದ ತೋಳು ; ತುಂಡಾದ ತೋಳು : ಕಂಧರ ಗಡಿ ಬಾಹುಗಡಿ ಹಸ್ತಗಡಿ ನೀರಂದದ ನಡುತೊಡೆಗಡಿಯ ವೃಂದಾರಕ ವಿರೋಧಿಗಳು ಬಿದ್ದರು ಕಾಮನಂದನನಬಾಣಗಳಿಂದ (ತೊರವೆ. ೩೬-೨೨).

[ಬಾಹು$_2$ + ಕಡಿ$_3$]

**ಬಾಹುಗತ್ತರಿ** (ನಾ). ಮಲ್ಲಯುದ್ಧದ ಒಂದು ಪಟ್ಟು ; ತೋಳು ಗಳಿಂದ ಪಟ್ಟಿಗೆ ಸಿಕ್ಕಿಸಿ ಹಿಡಿಯುವುದು : ತಾಡಿಸಿ ಪಿಡಿದು ತೊಡೆಗಳಂ ನಡುವಂ ಚೂರ್ಕ್ಕರಿಸಿ ಬಾಹುಗತ್ತರಿಯಿಂ ಗಳವನೊತ್ತುವುದುಂ (ಮಾನಸೋ. ೬-೬೬ ವ). [ಬಾಹು$_2$ + ಕತ್ತರಿ$_2$]

**ಬಾಹುಜ** (ನಾ). ೧. ಕ್ಷತ್ರಿಯ ; ಪಾರ್ಥಿವ ; ಪ ವಿಷ್ಣುವಿನ ತೋಳಿನಿಂದ ಕ್ಷತ್ರಿಯರು ಹುಟ್ಟಿದರೆಂಬ ಪೌರಾಣಿಕನಂಬಿಕೆಯಿದೆ : ಕಾದಿ ಸಾವುದು ಮೇಣು ರಿಪುಭಟನಾದವನ ನೆತ್ತಿಯಲಿ ಸಬಳವ ಕೋದು ಕೊಂಬುದು ನೆಲನನಿದು ಬಾಹುಜರ ಮಕ್ಕಳಿಗೆ (ಕುಮಾ.ಶ. ೦-೯) ; ವೈಹಾಳಿಯನುಱಿದು ಬಾಹುಜನಿವಹಂ ಬೀಡಂ ಪುಗುತರೆಯುಂ (ರಾಮಾಶ್ವ. ೨೨-೦೬) ; ಕಾದುವುದು ಬಾಹುಜರ ಧರ್ಮ (ನಾಗಂ. ೩೯-೦೩). ೨. ಗಿಳಿ. [ಸಂ.]

**ಬಾಹುಜಗೆ** 'ಬಾವುಜಗೆ' ನೋ.

**ಬಾಹುತಳ** (ನಾ). ಕುಸ್ತಿಯ ಒಂದು ವರಸೆ ; ಎದುರಾಳಿಯನ್ನು ತೋಳಿನ ಒಳಗೆ ಸಿಕ್ಕಿಸಿಕೊಳ್ಳುವುದು,— ಹಿಡಿಯುವುದು : ಭುಜಗ ಬಂಧಂ ತೋರಹಸ್ತಂ ಶಿರೋವಳಯಂ ಬಾಹುತಳಂ ಚಮತ್ಕರಿಸೆ ನಾನಾಕೌಶಲಂದೋಱಿದರ್ (ಶಶಿಶಂ. ೯-೬೪ ವ). [ಸಂ. ಬಾಹುತಲ]

**ಬಾಹುದಣೆ** (ನಾ). ಮಲ್ಲಯುದ್ಧದ ಒಂದು ಪಟ್ಟು,— ವರಸೆ : ಪಾಸಗೆ ವನ್ನಿಮುಟ್ಟಿ ಚಟ್ಟು ಸಿರಣವಟ್ಟಿ ಬಾಹುದಣೆ ಖಮ್ಮರಿ ಕತ್ತರಿ . . . ಎನಿಪ್ಪ ಜೆಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (?) (ಚಂದ್ರ.ಕ. ೩-೬೬) ;

ತಿರುಣಿ ಕುಳಾಡೆ ಬಾಹುಗ್[ದ]ಣೆ ಸುಭಾಹುಡೆ . . . ಪಟ್ಟಿಕತ್ತರೆಗಳೆ ನಿಪ್ಪ ಪಟ್ಟಿಗರ ಬಿನ್ನಣವೊಪ್ಪೆ ಕಡಂಗಿ ಕಾದಿದರ್ (ಶ್ರೀಪುರಾ. ೨೬-೦೬). 'ದಣಾವಟ್ಟಿ' ಪರಾ. [ಬಾಹು₂ + ದೆಕ್ಕೆ]

**ಬಾಹುದೆಕ್ಕೆ** (ನಾ). ತೋಳಿನ ತೆಕ್ಕೆ ; ಬಾಹುಬಂಧನ : ಭರತೇಶ . . . ಶ್ರೀಹಂಸಾಥಯೆಂದೊಡನೆದ್ದು ಕುಳಿತನಾ ಬಾಹುದೆಕ್ಕೆಯ ಪಟ್ಟದರಸಿ ಆ ಹೊತ್ತಿನೊಳೆ ರಾಯನಳುವ ಕನಸ ಕಂಡು ದೇಹ ಕಂಪಿಸುತಿರ್ದಳೊಡನೆ (ಭರತ. ೬೩-೦೦). [ಬಾಹು₂ + ತೆಕ್ಕೆ₁ (<ತಟ್ಟ್)]

**ಬಾಹುಪುರಿ** 'ಬಾಪುರಿ' ನೋ.

**ಬಾಹುಪೂರ** (ನಾ). ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ; ಕೇಯೂರ : "ಬಾಹುರಿಕೆಯೆನಲ್ಕೆ ಬಾಹುಪೂರಕೆ [ಶಾಕಂ. ರಕ್ಷೆಗೆ] ನಾಮಂ" (ಶಾಕಂ. ೩೩); ಒಂದುಗೆಯ ಬಾಹುಪೂರಮುಮಂ ದಾಡಿಮಿಬೀಜದ ಕರ್ಣಾವತಂಸಮುಂ . . . ಎಂಗೆ ಸೊಗಸಂ ಮೂಡಿಸೆ (ಗಿರಿಜಾ. ೬-೦೦ ವ); ಸಲ್ಲಲಿತಕಾಂತಿಯ ಕಳಲ್ದುವ ಭುಜಗಳಿಂದುರಗಬಾಹು ಪೂರಗಳಿಂದಲವಿರತಂ ವಿಶ್ವತೋಬಾಹು ಸಿಂಹಾಸನಾಗ್ರದೊಳು ಕಣ್ಗೊಳಿಸಿರ್ದನು (ಪಂಪಭಾ. ೩-೮). [ಸಂ.]

**ಬಾಹುಪೂರಕ** (ನಾ). = ಬಾಹುಪೂರ : ಒದವಿದ ನವ್ಯಲತಾಮಧ್ಯದ ಕುಸುಮಮಾಲೆಯೊಳೆ ಮೊರೆವ ಮಜ್ಜುದುಂಬಿಗಳು ಮುದದಿಂ ಕೀಲಿಪವೋಲ್ ನೀಲದ ರವೆಯುದ ಬಾಹುಪೂರಕಂಗಳನಿತ್ತರ್ (ಗಿರಿಜಾ. ೧೦-೩೬); ಶ್ರೀವಧು ಮುತ್ತಿನೆಕ್ಕಸರದಂತುರದೊಳ್ ನಲಿವಂತು ವಿಕ್ರಮಶ್ರೀವಧು ಬಾಹುಪೂರಕದವೋಲ್ ಭುಜದೊಳ್ ಸಲಿವಂತು . . . ಪಾಲಿಸಿದನುರ್ವರೆಯಂ ಕಲಿ ಸೋಯಿಬಲ್ಲಹಂ (ಎಕ. VI. ಕಡೂರು. ೦೨-೨; 1233). [ಸಂ.]

**ಬಾಹುಪೂರಯ**(ನಾ). = ಬಾಹುಪೂರ : "ಕೇಯೂರವೆನೆ ಬಾಹುಪೂರಯ ಮೆಚ್ಚು" (ಮಂಗರಾ. ೦೦೦-೩೬); ಬಾಹುಪೂರಯಮುಮಂ ತೋಳ್ಗೆ ಕೈಕೊಳಿಸಿ (ಲಕರ. ೬-೦೮); ಪದಕದ ಬಾಹುಪೂರಯುದ ತೊಳತೊಳಗುವೆಳ ಮಾಣಿಕದ ಕರ್ಣಪೂರದ ಮಕಾಮುದ್ರಿಕೆಗಳ್ . . . ಸೊಬಗನಡಿಯಿಟ್ಟನ ಪ್ರತಿಮನವನೀಸನು (ಚಿಕದೇ. ೪-೨). [<ಸಂ. ಬಾಹುಪೂರಕ]

**ಬಾಹುಬಲ** (ನಾ). ತೋಳಿನ ಬಲ ; ಭುಜಶಕ್ತಿ : ಬಾಹುಬಲವಿಲ್ಲದ ರಾಜಪುತ್ರನಂತೆ ತಕ್ಕುಗೆಟ್ಟು (ಶಾಂತಿಪು. ೪-೪೦ ವ); ಬಾಹುಬಲ ಬಲವಲ್ಲ ದೈವದ್ರೋಹಿಗಳಿಗೆ (ಕುಮಾ.ಭಾ. ೦೩-೦೮) ; ಭರತಖಂಡದ ಆಧುನಿಕ ದುರ್ಗತಿಗೆ ಪ್ರಧಾನಕಾರಣ ಬಾಹುಬಲದ ಅಭಾವ (ಒಂಕೆನು.೪೬೬). [ಸಂ.]

**ಬಾಹುಬಲಿ** (ನಾ). ೧. ಬಾಹುಬಲವುಳ್ಳವನು. ೨. ಆದಿತೀರ್ಥಂಕರನ ಎರಡನೆಯ ಮಗ : ಇಂತಾದೊಡೆಮಗೆ ಬಾಹುಬಲಿಯ ಸಮರಸಂಘಟ್ಟ ದೋಹಳಮಿದು ದರಿದ್ರಂಗೆ ಹೀನಗರ್ಭದೋಹಳದಂತಾದುದು (ಆದಿಪು. ೦೪-೨೦೨ ವ). [ಸಂ. ಬಾಹುಬಲಿನ್]

**ಬಾಹುಬಳೆ** (ನಾ). = ಬಾಹುಪೂರ : ಬಾಹುವಳಯ – ಬಾಹುಬಳೆ (ಕಬಮ. ೨೪೯ ಪ್ರಯೋ). [<ಸಂ. ಬಾಹುವಲಯ]

**ಬಾಹುಮುರಿ** (ನಾ). = ಬಾಹುಪೂರ : ಶರೀರಕ್ಕೆ ಆನಂದಕರವಾಗಿ . . . ಅರಸುಗಳ ಮನಸ್ಸೆಂಬ ಸಮುದ್ರಕ್ಕೆ ಕಿರಣೋಪಾದಿಯಲ್ಲಿ ಪ್ರಕಾಶಿಸುವುದೇ ಬಾಹುಮುರಿಯ ಗುಣಗಳು (ಸಕಶ್ಯ. ೩೪) ; ಪೂರ್ವದ ಕವಿಗಳು . . . ರಾಜರು ಧರಿಸುವ ಕಿರೀಟ, ಭುಜಕೀರ್ತಿ, ಎದೆಹಾರ, ಬಾಹುಮುರಿ . . . ಮಂಜೂರಿ ಮುಂತಾದುವುಗಳನ್ನೂ ಬಣ್ಣಿಸಿರುವರು (ಹುಚ್ಚ್ಯಕ. ೬೩). [ಬಾಹು₂ + ಮುರಿ₁ (< ಮುರಿವು)]

**ಬಾಹುಮೂಲ** (ನಾ). ಕಂಕುಳು ; ಬಗಲು : "ಕಕ್ಷಂ, ಬಾಹುಮೂಲಂ– ಈ ೨ ಕೌಂಕುಳು" (ಕಲಾಮು. ೬೬-೩೬೦) ; ಎಮೆಯಿಕ್ಕದೆ ನೋಡುವ ನರರಮರರ ಕಣ್ಗಳೊಳಗಂಗರಾಜನ ಬಯಿಸ್ತಟ್ಟವರ್ದಂ ಕೊಳೆ ತಳಿದು ನಾಭಿಮೂಲಮುಮಂ ಬಾಹುಮೂಲಮುಮಂ ಸುರವಧುವಾ (ಅಂಕೃ. ೯-೩೫) ; ಒಂದು ಸರಸಿಯ ತಡಿಯಲಳವಡೆ ನಿಂದು ಸಂವರಿಸಿದನು ಗದೆಯನು ಬಾಹುಮೂಲದಲಿ (ಕುಮಾ.ಗ. ೪-೭). [ಸಂ.]

**ಬಾಹುರಕೆ** 'ಬಾಹುರಕ್ಕೆ' ನೋ.

**ಬಾಹುರಕ್ಕೆ**, ಬಾಹುರಕೆ (ನಾ). ೧. ಯೋಧರು ತೋಳಿಗೆ ರಕ್ಷಣೆಯಾಗಿರಲೆಂದು ತೊಡುವ ಕವಚ ; ಭುಜತ್ರಾಣ : ಗುರು ಕವಚಂ ಕರ್ಣಂ ಬಾಹುರಕ್ಕೆ ಸುರಸಿಂಧುನಂದನಂ ಸೀಸಕಂ (ಗದಾಯು. ೨-೩೬) ; ಎಕ್ಕತುಳಕ್ಕೆಜೀವ ವೈರಿ ಸಿನ್ನಿಕ್ಕಿದ ವಜ್ರದಮುಪ್ಪರಕೆ ಸಿಂಸಕವೊನ್ನಿದ ಬಾಹುರಕ್ಕೆ ತಾವಕ್ಕಟ ತಾಯ ಉಟ್ಟ ನಿಜ ಬಿಟ್ಟ ಸಿರಂ ಮುಗಿದಿರ್ದ್ದ ಕಯ್ ಸಮುನ್ನಿಕ್ಕಿದ ಕೈದು ಹೊಕ್ಕ ಜಳ . . . ಆಜಿಯೊಳ್ (ಎಕ. VI. ಕಡೂರು. ೩೬-೩೯ ; 1130) ; ನುಗ್ಗಾದ ಗುಳವನು ಬಿರಿದ ಸೀಸಕ ಬಾಹುರಕ್ಕೆಯ ಮುಚ್ಚಿದ ಬಲ್ಲೆಹದ ಅರೆಗಡಿದ ಬಿಲ್ಲುಗಳ . . . ಮುಕ್ಕಾದ ಕೈದುವ ತರಿಸಿ ಕಳುಹಿಸುತಿರ್ದನತಿರಥಸದಲಿ ಕಲಿದ್ರೋಣ (ಕುಮಾ.ದ್ರೋ. ೦೩-೦೬). ೨. ಆನೆಯ ಎರಡು ಪಕ್ಕಗಳಿಗೂ ರಕ್ಷೆಯಾಗಿ ಕಟ್ಟುವ ರಂಚೆ ; ಪಕ್ಕರಕ್ಕೆ: ಮದಜಳದ ಕವಡಂ ಕದರಿ ಕೆದಲುವ ಕರ್ಣಚಾಮರದ ಕತ್ತಲೆಸಿರ್ದಿನ ಬಾಹ[ಹು]ರಕ್ಕೆಯುಃ (ಆಹಂಪು. ೧೯-೬ ವ). ☞ ಇದು 'ಪಕ್ಕರಕ್ಕೆ' ಎಂಬ ಶಬ್ದ ಮತ್ತು ಅರ್ಥಗಳ ಸಾಮ್ಯದಿಂದ ಆದ ಪ್ರಯೋಗವಿರಬಹುದು. **ಬಾಹುರಕೆ**: ೧. ಕರತುಷ್ಟಿರದ ಲಿವರು ವೋಚಿಯ ತಿರುಹೆ ನನೆದವು ಬಾಹುರಕೆ ಹಕ್ಕರಿಕೆ ಹಲ್ಲಣ ಜೋಡು ಸೀಸಕ ಛತ್ರ ಚಮರಿಗಳು (ಕುಮಾ.ದ್ರೋ. ೩-೪೦). ☞ ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪವಿರಬಹುದು. [<ಸಂ. ಬಾಹುರಕ್ಷಾ]

**ಬಾಹುರಕ್ಷೆ** (ನಾ). = ಬಾಹುರಕ್ಕೆ ೧ : ಜೋಡು ಸೀಸಕ ಬಾಹುರಕ್ಷೆಗಳ ಮುರುಹಿ ಬಿಗಿದನು . . . ರಥವೇಜಿದನು ಕಲಿದ್ರೋಣ (ಕುಮಾ.ದ್ರೋ. ೪-೦೩) ; ವೀರಪಟ್ಟದ ಬಾಹುರಕ್ಷೆಗಳಿಂದ ಖಳಸಸೆದ (ಕೌಶಿಕಾ. ೪೦-೨). [ಸಂ. ಬಾಹುರಕ್ಷಾ]

**ಬಾಹುರಿ** 'ಬಾಪುರಿ' ನೋ.

**ಬಾಹುರಿಕೆ** (ನಾ). ಬಾಹುಪೂರ : ಕೇಯೂರ : "ಬಾಹುರಿಕೆಯೆನಲ್ಕೆ ಬಾಹುಪೂರಕೆ [ಶಾಕಂ. ರಕ್ಷೆಗೆ] ನಾಮಂ" (ಶಾಕಂ. ೩೩). [< ಬಾಹುರಿ]

**ಬಾಹುಲ** (ಗು). ೧. ಅನೇಕವಾದ ; ಅಧಿಕವಾದ. (ನಾ). ೨. ಹೆಚ್ಚಳ ; ಆಧಿಕ್ಯ ; ವಿಪುಲತೆ. ೩. ಕಾರ್ತೀಕಮಾಸ. ೪. ಬಾಹುರಕ್ಷೆ. ೫. ಅಗ್ನಿ. [ಸಂ.]

**ಬಾಹುಲಿ** 'ಬಾವುಲಿ₂' ನೋ.

**ಬಾಹುಲೇಯ** (ನಾ). ಕಾರ್ತಿಕೇಯ ; ಸ್ಕಂದ. [ಸಂ.]

**ಬಾಹುಲ್ಯ**, ಬಾಹುಳ್ಯ (ನಾ). ೧. ಹೇರಳ ; ಆಧಿಕ್ಯ. ೨. ಮಹತ್ತ್ವವುಳ್ಳದು ; ಘನವಾದುದು : ಕೃತಿ ಬಾಹುಲ್ಯವುಪ್ಪುದೆಂದವ ಬುಧರು ಬಲ್ಲಂತನೇಕರೊರೆದಿಹರು (ಕೃ.ಕೃ.೭. ೧.೨೨). ೩. ವಿಸ್ತಾರ : ಚಿತ್ರೆಯೆಂಬ ಧಾತ್ರಿ ಮೊದಲ್ಗೊಂಡು ಕೆಂಗಶೀತಸಹಸ್ರೋತ್ತರಲಕ್ಷಯೋಜನಬಾಹುಲ್ಯಮನಾಂತು ರತ್ನಪ್ರಭೆಯೆಂಬ ಪೃಥ್ವಿಯಿರ್ಕುಂ (ಸುಕುಮಾ. ೦೦-೪೦ ವ). **ಬಾಹುಳ್ಯ**: ೧. ಸಂಗ್ರಹಣದ ಬಾಹುಳ್ಯ ನಮ್ಮ ಶಕ್ತಿಗೆ ಮೀರಿದುದೆನ್ನಿಸಿತು (ಹಸುಪೂ. ೦೦೩). [ಸಂ.]

**ಬಾಹುವಳನ** (ನಾ). ತೋಳುಗಳ ಚಲನೆ : ಅಕಿಯಾರ ನವವಿಧ ಬಾಹುವಳನದಿಂದೆಲಲತೆಯ ಬಳ್ಕಿ ಬಳಸಿದಂತೆಯುಂ . . . ಅತಿಮನೋಹರಮಾಗೆ (ಪಂಪ್ರಪು. ೧೨-೧೯೪ ವ). [ಸಂ. ಬಾಹುವಲನ]

**ಬಾಹುವಳಯ** (ನಾ). = ಬಾಹುಪೂರ : ಬಾಹುವಳಯ – ಬಾಹುಬಳೆ (ಕಬಮ. ೨೪೯ ಪ್ರಯೋ). [ಸಂ. ಬಾಹುವಲಯ]

**ಬಾಹುವಿಕ್ರಾಂತ** (ನಾ). ತೋಳಿನ ಬಲ ; ಬಾಹುಬಲ : ಚಳುಕ್ಯರುನ್ನತಿ

ಯದಾಗ್ಗ್ರಂ ಬಣ್ಣಸಲ್ಪಾರದೆಂಬಿನೆಗಂ . . . ಭೂತಳಮನಾಳ್ದರ್ಬಾಹು ವಿಕ್ರಾಂತದಿಂ (ಕಇಅ. ೨-೨-೨೬ ; 1053) ; ಪತಿಗೇಕಚ್ಛತ್ರದುನ್ಬಾಳಿಸನೆ ಪಸು[ಧೆ]ಯುಂ ಬಾಹುವಿಕ್ರಾಂತದಿಂ ಬಾಳಿತ ಚೋಳಂ (ಕಇಅ. ೪-೨-೦೩೦ ; 1058). [ ಸಂ. ]

**ಬಾಹುವಿಕ್ಷೇಪ** (ನಾ). =ಬಾಹುವಳನ : ಮೂಪತ್ತೆರಡುಂ ತೆಱದ ಚಾರಿ ಚಾರಿಸ ತವೊಳ್ ಪತ್ತಿಸಿದುವು ದೃಷ್ಟಿಗಳಂ ಪತ್ತುಂ ತೆಱನೆನಿಪ ಬಾಹುವಿಕ್ಷೇಪಂಗಳ್ (ಮಲ್ಲಿಪು. ೬-೩೦). [ಸಂ.]

**ಬಾಹುವೀರ** (ನಾ). ತೋಳಿನ ಬಲದಿಂದ ಶೂರನೆನಿಸುವವನು ; ಭುಜ ಬಲಶಾಲಿ: ಕ್ಷತ್ರಿಯನು ಬಾಹುವೀರ, ವಚನವೀರನಲ್ಲ (ವಚಶಾ. ೬೮). [ಸಂ.]

**ಬಾಹುಳ್ಯ** 'ಬಾಹುಲ್ಯ' ನೋ.

**ಬಾಹೆ** (ನಾ). ೧. ಹೊರಭಾಗ ; ಹೊರವಲಯ : ಕೊಂದು ದನುಜನ ಪೆಣನ ಬಂಡಿಯ ಹಿಂದೆ ಬಂಧಿಸಿ ಪುರದ ಬಾಹೆಗೆ ತಂದುಬಿಟ್ಟನು (ಕುವ್ಯಾಕ. ೧೦-೩೯) ; ಅರಸ ಪುರದ ಬಾಹೆಯೊಳಿರೆ ಜೀವಂಧರ ಪರಸೇನೆಯ ತಱಿದು ತುಱುವಿಂಡ ತಾನೊರ್ವನೆ ತಿರುಪುವನೆಂದಿರದೆ ನೆನೆದನೆದೆಯೊಳಗೆ (ಜೀವಂಸಾಂ. ೧೩-೨೯) ; ನಿಜ ಚತುರಂಗವನು ನೆರಹಿದನು ನೃಪನಾ ಪುರದ ಬಾಹೆಯಲಿ (ಉರಶಾ. ೬-೩೩). ೨. ಬದಿ ; ಮಗ್ಗುಲು ; ಪಾರ್ಶ್ವ: ತನ್ನಿಳಯವ ನ್ನೊಳಪುಗುವ ಕಾಂತೆಯರ ಹಂತಿಯೆಸೆಯುತ್ತು ಬಸದಿಯ ಬಾಹೆಬಾಹೆ ಗಳೊಳು (ಸೋಮಕು. ೪-೪೨) ; ತುರಗವ್ರೈಸಾವಿರಸಹಿತ ಮೋಹರಿಸಿ ಸಿಂದನು ಶಕುನಿ ಥಟ್ಟನೆ ಬಲದ ಬಾಹೆಯಲಿ (ಕುವ್ಯಾಗ. ೦-೪) ; ತನ್ನಯ ಬೆರಲ ಮಣಿಮುದ್ರಿಕೆಯ ತೆಗೆದಂಬುರುಹಮುಖಿ ಸುತಗಿಟ್ಟು ತೂಲಗಿ ದಳೊಂದು ಬಾಹೆಯಲಿ (ಜೀವಂಕ. ೫-೩೪). [< ಸಂ. ಬಾಹ್ಯ]

**ಬಾಹ್ಯ** (ಗು). ೧. ಹೊರಗಿನ ; ಹೊರಗಡೆ ಇರುವ : ಬಾಹ್ಯಾಭ್ಯಂತರ ಪರಿಗ್ರಹಂಗಳಂ ತೊಱೆದು ದ್ವಾದಶವಿಧಮಪ್ಪ ತಪದೊಳ್ ನೆಗಟ್ದು (ವಡ್ಡಾರಾ. ೧-೯). ೨. (ಊರಿನ ಅಥವಾ ಪ್ರದೇಶದ) ಹೊರಗಿರುವ ; ಹೊರಭಾಗದಲ್ಲಿರುವ. ೩. ಬಹಿಷ್ಕೃತವಾದ : ಹೊರದೂಡಿದ ; ನಿಷಿದ್ಧವಾದ. (ನಾ). ೪. ಹೊರಭಾಗ : ಹೊರವಲಯ : ಭರಧಿ ನಂದಿಗ್ರಾಮ ಬಾಹ್ಯದಲುರಿವ ದಳ್ಳುರಿಗಂಡು ಚಿಂತೆಯ ತಾಳ್ದ ಹನುಮಂತ (ತೊರಾಂ. ೪೪-೩೫). ೫. ಹೊರಗಡೆ ; ಬಹಿರಂಗ : ಒಳಗೆ ಪೊಳೆದನು ಬಾಹ್ಯದಲಿ ಪ್ರಜ್ವಲಿಸಿದನು (ಕುವ್ಯಾಉ. ೯-೬೪) ; ಬಿಡು ಬಾಹ್ಯದೊಳು ಡಂಭವ (ಕೈಶವ. ೬೨-೭ ಪಲ್ಲವಿ). ೬. ಹೊರಗಿನದು ; ಬಹಿರಂಗಕ್ಕೆ ಸಂಬಂಧಿಸಿದುದು : ಬಾಹ್ಯವಾದ ಉಪಪ್ಲವ ಒದಗಿದಾಗ ಕೌಟಿಲ್ಯಾದಿ ನೀತಿಜ್ಞರು ರಾಜರಿಗೆ ಮಾರ್ಗದರ್ಶಿಗಳಾಗಿದ್ದಾರೆ (ಪುಕ್ಷ್ಯಾರ. ೧೦೬ ಗಾ೨೪). ೭. ಹೊರಗಿನವನು ; ಅಪರಿಚಿತ ; ಹೊಸಬ. [ಸಂ.]

**ಬಾಹ್ಯತಪ** (ನಾ). [ಜೈನ] ದೇಹವನ್ನು ದಂಡಿಸಿ ಕರ್ಮನಿರ್ಜರೆಯನ್ನು ಸಾಧಿಸುವ ತಪಸ್ಸು : ಅಂತು ಬಾಹ್ಯತಪದೊಳಸಹ್ಯಮಾನಸಾಹಸನಾಗಿ ಮತ್ತಮುತ್ತರತಪದೊಳುತ್ತರೋತ್ತರಂ ನೆಗಟ್ದು (ಸುಕುಮಾ. ೪-೦೪ ವ) ; ಅನಶನ ಅವಮೋದರ್ಯ ವೃತ್ತಿಪರಿಸಂಖ್ಯಾನ ರಸಪರಿತ್ಯಾಗ ವಿವಿಕ್ತಶಯ್ಯಾಸನ ಕಾಯಕ್ಲೇಶ ಎಂಬಿವಾಱುಂ ಬಾಹ್ಯತಪಂಗಳು (ಚಸಾರ. ೩೬೬). [ಸಂ.]

**ಬಾಹ್ಯದರ್ಶನ** (ನಾ). ಹೊರಗಿನ ನೋಟ ; ಹೊರಗಣ್ಣಿಗೆ ಗೋಚರ ವಾಗುವ ದೃಶ್ಯ : ಭಯಾಕುಳೆ . . . ಬಾಹ್ಯದರ್ಶನಕ್ಕಲಸಿದಳೆಂಬಿನಂ ಮುಗಿಯೆ ಕಣ್ಮಲರ್ಗಳ್ ನಸುಮುಚ್ಚಿಪೋಗಿ ತಣ್ಣೆಲರಲೆಪಿಂದೆ ಮೂರ್ಛೆ ದಿಳಿದಳ್ (ಸಂಗಾಮಾ. ೯-೦೦೦). [ಸಂ.]

**ಬಾಹ್ಯಪ್ರದರ್ಶನ** (ನಾ). ಹೊರಗೆ ಗೋಚರವಾಗುವಂತೆ ಮಾಡುವಿಕೆ; ಪ್ರಕಟವಾಗಿ ತೋರ್ಪಡಿಸುವಿಕೆ: ಒಳಿತಿಗೆ ಬಾಹ್ಯಪ್ರದರ್ಶನಯೋಗ್ಯ ವಾದ ಶಕ್ತಿಯಿಲ್ಲವಾದರೂ ಆಂತರಿಕಶಕ್ತಿಯಿದೆಯೆಂದು ಸಮಾಧಾನಪಟ್ಟು ಕೊಳ್ಳಬಹುದು (ಜಿದ್ಯಕ್ರಿ. LXVII ೩೬೩೪). [ ಸಂ. ]

**ಬಾಹ್ಯಪ್ರಪಂಚ** (ನಾ). ಹೊರಜಗತ್ತು : ಹಿಮಬೂಳಂ ಯಮಕೋಪ ಲೀಲನುಪಸರ್ಗಂಗೆಯ್ಕೆ ಬಾಹ್ಯಪ್ರಪಂಚಮನಾತ್ಮಾಶ್ರಿತಮಂ ಬಿಸುಟ್ಟಿರೆ (ಶಾಂತಿಪು. ೯-೨೩). [ ಸಂ. ]

**ಬಾಹ್ಯಪ್ರಮಾಣ** (ನಾ). ಹೊರಗಿನ ಆಧಾರ; ಬೇರೆಯ ಪ್ರಮಾಣ : ಬಾಹ್ಯಪ್ರಮಾಣಗಳಿಂದ ಆಂಡಯ್ಯನ ಕಾಲಪರಿಮಿತಿಯು . . . ೧೨೬೩ ಎಂದಂತಾಯಿತು (ಸಾಚಿಸ. ೦೬೩). [ ಸಂ. ]

**ಬಾಹ್ಯಮತಿ** (ನಾ). ಇಂದ್ರಿಯಗೋಚರವಿಷಯಗಳಲ್ಲಿರುವ ಆಸಕ್ತಿ : ಅನಘನೊಳ್ ನಿರವಸ್ಥನೊಳೊಡವರೆದು ಬಾಹ್ಯಮತಿಯಱಿತಿರ್ದಂ (ಕಬಿಕಂ. ೨-೨೦೩). [ ಸಂ. ]

**ಬಾಹ್ಯರತ** (ನಾ). [ಕಾಮಶಾ] ಸಂಭೋಗಕ್ಕೆ ಪೂರ್ವಭಾವಿಯಾಗಿ ಕಾಮೋದ್ದೀಪನಕ್ಕಾಗಿ ನಡೆಸುವ ನಖಕ್ಷತ, ದಂತಕ್ಷತ, ಆಲಿಂಗನ, ಚುಂಬನಾದಿ ಕ್ರಿಯೆ : ಆಲಿಂಗನ ಚುಂಬನ ದಂತಕ್ಷತ ತಾಡನ ಚಪೇಟನ ಆಕರ್ಷಣ ಮರ್ದನ ಮೊದಲಾದ ಕೃತ್ಯಗಳೆಂಬ ಬಾಹ್ಯರತಮಂ ತಿಳಿದು ಸುರತಮಂ ಮಾಳ್ಪುದು (ಕಾಮಶಾ. ೨೨೦); ಈ ಉಭಯರತದೊಳು ಬಾಹ್ಯರತ ಮೊದಲು ಮಾಡಬೇಕು ಆ ಬಾಹ್ಯರತದೊಳು ಆಲಿಂಗನ ಮೊದಲು ಮಾಡಬೇಕು (ಕಾಕುಶಾ. ೨೨೦). [ ಸಂ. ]

**ಬಾಹ್ಯವ್ಯಾಪಾರ** (ನಾ). (ದೇಹದ) ಹೊರಗಿನ ಚಟುವಟಿಕೆ : ನಿದ್ದೆಯ ಹೊತ್ತಾಯಿತೆಂದರೆ ಶರೀರದ ಬಾಹ್ಯವ್ಯಾಪಾರಗಳು ಮೆಲ್ಲನೆ ನಿಲ್ಲುತ್ತವೆ (ಮುಂಬಯಿ. ೪-೧೩೦). [ ಸಂ. ]

**ಬಾಹ್ಯಶೌಚ** (ನಾ). ದೇಹದ ಹೊರಭಾಗದ ಶುದ್ಧಿ; ಬಹಿರಂಗಶುದ್ಧಿ: ಮೃತ್ತಿಕಾಜಲಾದಿಗಳಿಂದ ಶರೀರದ ಮಲವಂ ನಿವೃತ್ತಿಸುವುದರ ಪೆಸರು ಬಾಹ್ಯಶೌಚವೆನಿಸುವುದು (ಮುಮುಕ್ಷುದ್ವಿತೀಯಸೋಪಾನ) ಮೃಜ್ಜಲ ದಿಂದಾ ಮಾಡೋಣ ಯಿದು ಬಾಹ್ಯಶೌಚವು (ಉಶ್ಯಸ್ಯ. ೨೨-೨). [ಸಂ.]

**ಬಾಹ್ಯಸಂಭಾವ್ಯತೆ** (ನಾ). ಗ್ರಂಥಸಂಪಾದನೆಯಲ್ಲಿ ಕವಿಪಾಠವು ಅಕ್ಷರ ಭ್ರಾಂತಿ ಇತ್ಯಾದಿ ವಿಧಾನಗಳಿಂದ ಹೀಗೆಯೇ ಕೆಟ್ಟಿದೆ ಎಂಬುದನ್ನು ಸ್ಪಷ್ಟವಾಗಿ ತೋರಿಸುವಿಕೆ : ಯೋಜಿತಪಾಠಾಂತರವು . . . ಇತರ ಪಾಠಾಂತರಗಳೊಡನೆ ಸಾಂಪ್ರದಾಯಿಕ ಅಥವಾ ಪರಂಪರಾಗತಪಾಠದಲ್ಲಿ ಉಳಿದಿರುವಂಥದಾಗಿದ್ದರೆ ನಮ್ಮ ಊಹಾಪಾಠಕ್ಕೆ ಅಂತಸ್ಸಂಭಾವ್ಯತೆ ಮತ್ತು ಬಾಹ್ಯಸಂಭಾವ್ಯತೆ (Extrinsic probability) ಈ ಎರಡರ ಬೆಂಬಲವೂ ಇದೆಯೆಂದು ಹೇಳಬಹುದು (ಭಾರಕ. ೬೫). [ಸಂ. ಬಾಹ್ಯಸಂಭಾವ್ಯತಾ]

**ಬಾಹ್ಯಸೌಂದರ್ಯ** (ನಾ). ಹೊರನೋಟಕ್ಕೆ ಕಾಣುವ ಚೆಲುವು : ಮಾನವನು ಸತ್ಯದ ಕಡೆಗೆ ಗಮನಿಸದೆ ಕೇವಲ ಬಾಹ್ಯಸೌಂದರ್ಯಕ್ಕೆ ದಾಸನಾಗಿ ಅದರ ವ್ಯಾಮೋಹದಿಂದ ನರಳುತ್ತಿರುವನು (ಕಕ್ತಿ. ೧). [ ಸಂ. ]

**ಬಾಹ್ಯಸ್ಥ** (ಗು). ೧. ಹೊರಗಿರುವ. (ನಾ). ೨. ಹೊರಗೆ ಇರುವುದು; ಹೊರಗೆ ಗೋಚರವಾದುದು: ತೀರ ಬಾಹ್ಯಸ್ಥವೂ ವ್ಯಕ್ತವೂ ಗಾಢವೂ ಆದ . . . ಆಂಗ್ಲಕಾವ್ಯಗಳನ್ನು ವಿವೇಚಿಸಿದ್ದಾರೆ (ನವ್ಯಕಾ. ೦೦೬). [ಸಂ.]

**ಬಾಹ್ಯಾರ್ಥಸಿದ್ಧಿ** (ನಾ). ಪ್ರಕೃತಕ್ಕೆ ಸಂಬಂಧಪಡದ ಅರ್ಥವನ್ನು ಉಂಟುಮಾಡುವುದು, –ವ್ಯಕ್ತಪಡಿಸುವುದು : ವಿಜ್ಞಾನವ್ಯತಿರಿಕ್ತ ಸಾಧನವಾಕ್ಯೋಪನ್ಯಾಸದಿಂ ಸಾಧಿಸುವೊಡಾ ವಾಕ್ಯಮೆ ಬಹಿರರ್ಥ ಮಪ್ಪುದಱಿಂ ಬಾಹ್ಯಾರ್ಥಸಿದ್ಧಿಯಕ್ಕುಂ (ಆದಿಪು. ೨-೦೦ ವ). [ಸಂ.]

**ಬಾಹ್ಯಾಳಿ** (ನಾ). ಕುದುರೆಗಳನ್ನು ಓಡಾಡಿಸುವ ಸ್ಥಳ: ಕುದುರೆ ಸವಾರಿಯ ಮೈದಾನ, – ಬಯಲು : ಸಂಚಾರಿತತುರಗಪರಿಮಳ ಗ್ರಾಹ್ಯಾಳಿಗಳೆನಿಪ ಬಾಹ್ಯಾಳಿಗಳುಂ ಅನುದಿನವಿನೋದಿತಾನೇಕಕರಿಗಳೆನಿಸು ವಾನೆವಱಿಗಳುಂ . . . ತನಗನೂನಶೋಭೆಯುಂ ಪಡೆಯೆ (ಧರ್ಮಪು. ೯-೨೨ ವ). 'ವೈಹಾಳಿ' ಪರಾ. [ <ಸಂ. ವಾಹ್ಯಾಲೀ ]

**ಬಾಹ್ಯೋಪಕರಣ** (ನಾ). ಹೊರಗಿನ ಸಾಧನ: ಕೃಷ್ಣಶುಕ್ಲಮುಂತಲು ಅಭ್ಯಂತರೋಪಕರಣಮಕ್ಕುಂ ಅಕ್ಷಿಪತ್ರಪಕ್ಷ್ಮದ್ವಯಾದಿ ಬಾಹ್ಯೋಪಕರಣಂ (ಕರ್ನ್ಕ. ೯೬). [ಸಂ.]

**ಬಾಹ್ಯೋಪವನ** (ನಾ). (ಊರಿನ) ಹೊರವಲಯದಲ್ಲಿರುವ ತೋಟ: ಹಯವರಸಮಾರೂಢನಾಗಿ . . . ಬಾಹ್ಯೋಪವನಕೆ ಬರಲು (ಕೃಷ್ಣಚ. ೨೯-೧೪). [ಸಂ.]

**ಬಾಹ್ಲಿಕ** (ನಾ). ೧. ಒಂದು ದೇಶದ ಹೆಸರು: ದ್ರವಿಳ ಕಾಶ್ಮೀರ ಬಾಹ್ಲಿಕ ಭೋಟಭೂ ಕಾಂಬೋಜ . . . ಕೇರಳಮುಖಾಪಾರದೇಶಂ ಗಳೊಳೆಸೆವ ಜಂಗಮವು ಭಕ್ತಾಳಿ (ಬಸವ. ೬-೧೯). ೨. ಆ ದೇಶದ ರಾಜ ಮತ್ತು ಪ್ರಜೆ: ಬಾಹ್ಲಿಕ ಶೂರಸೇನ ಕಳಿಂಗ ಸಲಿ ಗಾಂಧಾರ . . . ದಂತವಕ್ರರು ಬಂದರೊಗ್ಗಿನಲಿ (ಕುಮಾ.ಸ. ೬-೩). ೩. ಆ ದೇಶದ ಕುದುರೆ. ೪. ಕುಂಕುಮಕೇಸರಿ. ೫. ಇಂಗು. [ಸಂ.]

**ಬಾಹ್ಲೀಕ** (ನಾ). ೧.=ಬಾಹ್ಲಿಕ ೧: ಲಾಳಚೋಳವರಾಳಯವಬಂಗಾಳ ಬಾಹ್ಲೀಕ . . . ನಿಷಧ ವಿದರ್ಭಧರಣೀಪಾಲಸಂತತಿ ಸಂದಣಿಸಿದುದು ಸಾಕೇತನಗರಿಯಲಿ (ತೊರವ. ೦-೬-೦೬). ೨.=ಬಾಹ್ಲಿಕ ೨: ಬಾಹ್ಲೀಕ ಸ್ವಾಂತ ಕುಂತ ಪರಾಕು (ಹರಿಕಂ. ೩-೦ ವ). ೩.=ಬಾಹ್ಲಿಕ ೩: ಬಿಸಕಾಂಭೋಜಕ ಬಾಹ್ಲೀಕ ಸೈಂಧವಾರಟ್ಟ ತೃತಿಲಂ ವಾನೇಯಂ ಪೆಸರ ಕ್ಷೇತ್ರದ ಹಯಕಾ ಪೆಸರೆ ಪೆಸರ್ (ಅಶ್ವಶಾ. ೬-೭೬). ೪. = ಬಾಹ್ಲಿಕ ೪: "ಕುಂಕುಮಂ, ಕಾಶ್ಮೀರಜನ್ಮ, ಅಗ್ನಿಶಿಖಂ, ವರಂ, ಬಾಹ್ಲೀಕಂ . . . ಚಂದನಂ—೧೧ ಕುಂಕುಮದ ಹುವ್ವಿನ ಹೆಸರುಗಳು, ಕುಂಕುಮಕೇಸರಿ" (ನಿಘಂ.ಶಿ. ೨೦೩). ೫. = ಬಾಹ್ಲಿಕ ೫: "ಸಹಸ್ರವೇದಿ, ಜತುಕಂ, ಬಾಹ್ಲೀಕಂ, ಹಿಂಗು, ರಾಮಠಂ—೫ ಹಿಂಗು, ಇಂಗಿನ ಪೆಸರುಗಳು" (ನಿಘಂ.ಶಿ. ೨೬೫). [ಸಂ.]

**ಬಾಳ್**₁ 'ಬಾಟ್₁' ನೋ.

**ಬಾಳ್**₂ 'ಬಾಟ್₃' ನೋ.

**ಬಾಳ್**₃, ಬಾಳ₁, ಬಾಳಿ, ಬಾಳು₃ (ನಾ). ೧. ಕತ್ತಿ: ಖಡ್ಗ: ಬಾಳಾ ಮೇಲ್ಮಿಖ ಮೇಲೆ ಸರ್ಪ್ಪದ ಮಹಾದನ್ತಾಗ್ರದುಳ್ಸಲ್ಲೆಪೋಲ್ ಸಾಲಾಮ್ಬ್ಯಾಲ ತಪೋಗ್ರದಿನ್ತು ನಡದೊಂ ನೂಱಿಂಟ್ಟುಸಂವತ್ಸರಂ . . . ಪೆಗ್ಗೋರಪಂ ಸಮಾಧಿ ನೆಱೆದೊನ್ (ಎಕ. II, ೨೨-೦; ಕ್ರಿ. 700); ನಾಗಗುಟ್ಟರಸರ್ . . . ಬಾಳಂ ಕಿಟ್ಟು ನಡದು ಪಲರನಿಱಿದು ಸತ್ತೊಡೆ (ಎಕ. X. ಕೋಲಾರ. ೨೦೦-೦೦; ಕ್ರಿ. 890 ?); ಮಸೆದುದು ಮದನನ ಬಾಳ್ (ಶಂಕರ. ೩-೯೭). ೨. ಉಳುಮೆ; ವ್ಯವಸಾಯ: 'ಇರ್ವಾಳ್' ಪರಾ. ೩. ನೇಗಿಲಿನ ಗುಳ. ಬಾಳ್ಳ: ೪. ಕಾಳಗ; ಯುದ್ಧ; ಕದನ: ಶ್ರೀ ಜುದ್ದನ್ . . . ಊರೊಳ್ವಲ್ಲಹನಾ ಬಾಳದುಳಿಱಿದು ವಿಟ್ಟೋನ್ (ಎಕ. XVI. ತುಮಕೂ. ೯೦-೨; ಕ್ರಿ. 780); ಬಲ್ಲವರಸರ ಬಾಳದುಳ್ . . . ಬಾಗೆಯ ಪೆಱಿದು ವಿಟ್ಟುನ್ (ಎಕ. XVI. ತುಮಕೂ. ೯೩-೪; ಕ್ರಿ. 780). ಬಾಳ: ೪. ಬಾಗೆಯೂರ ಬಲ್ಲಹನೇಱಿ ನೊಳ್ಳಿಯಾನ್ ವೈರಾಳ್ ಸಮಪದ ರುಳ್ ಕೊಪುಳವೂರ ಬಾಳಿಯೊಳ್ ಪೊಣ್ಣದಿಕ್ಕಿಜ್ಜಯ ತಮ್ಮುಳಿ ಪಡೆ ಯುಳಱಿದು ಸತ್ತನ್ (ಎಕ. XVI. ತುಮಕೂ. ೯೨-೧೦; ಕ್ರಿ. 780). ಬಾಳು₃: ೧. ಸಂಗನ ಶರಣರ ಭಕ್ತಿ ಬಾಳ ಬಾಯ ಧಾರೆ (ಬಸವ. ೨೦೦); ಬಾಳ ಬಾಚಿದಳವಳಿನಗೆ ಗೋನಾಳಿಗೊಡ್ಡಿದ ಬಂದಿಯಲಿ ತುದಿ ನಾಲಗೆಗೆ ನರಸುಕ್ಕನಿಕ್ಕಿದಳವಳು ತನಗೆ (ತೊರವ. ೨-೨-೩೮); ತೋಳ ನೀಡಿದಳು ಮನ್ಮಥನೊಱೆಯಿಂದುರ್ಚಿ ಬಾಳ ನೀಡಿದನೊಯ್ಯಂಬಂತೆ (ಭರತ. ೦೨-೬೬).

**ಬಾಳ್ವಾಳ್** (ದ್ವಿರುಕ್ತಿ): ಬಾಳ್ವಾಳ್ಗಳ ಘಟ್ಟಣೆಯೊಳ್ ಬಳ್ವಳ ಬಳಿ ದೊಗದು ನೆಗೆವ ಕಿಡಿಗಳ ಬಂಬಲ್ಗಳ್ಸಿರಸು ಪೊಳೆದು ನೆಗೆದುದು ಬಾಳ್ವೊಗೆ (ಶಂಕರ. ೧೦-೪೧). ಬಾಳಬಟ್ಟು = (?): ಅತನ ಕಲದೊಳ್ ಬಾಳ ಬಟ್ಟುಂ [ಪಾಠಾಂ. ಬಾಳಪಟಂ] ತೂಂತಿಟ್ಟಂತೆ ಸಂದಣಿಸಿ ನಿಂದ ಗೋಪ ಕುಮಾರರಣಿಯ ನಡುವೆ ಪೊನ್ನ ರಥಮನೇಱಿ ನಿಂದಾತನೆನ್ನ ತಮ್ಮಂ ಕೃತವರ್ಮಂ (ಶಂಕರ. ೦೦-೩೭ ವ). ಬಾಳವಣ್ಣ, ಬಾಳ ಬಣ್ಣ=(ತೊಳೆದ) ಕತ್ತಿಯ ಬಣ್ಣ: ನೀಲಿಬಣ್ಣ: ತೊಡರ್ದರ್ಮರ್ದ ಬಾಳವಣ್ಣದ ತುಡುಗೆ ಪಳಂಚಲೆವ ಪಂಚಜಡೆ ನೊಸಲೊಳೊಡಂಬಡುವರಳೆಲೆಯಿಪಱಿಂ ಚೆಲ್ವಿಡಿದಿರ್ದುದು ಬಾಳಕೇಳಿ ಧರ್ಮಾತ್ಮಜನಾ (ಶಂಕರ. ೨-೯); ಪುಳಿ ಯೊಳ್ ಕರ್ಚಿದ ಬಾಳ ಬಣ್ಣಮನೆ ಪೋಲ್ವಾಕಾಶಂ (ಶಂಕರ. ೬-೬೦). ಬಾಳುಗತ್ತಿ = ಉದ್ದವಾದ ಕತ್ತಿ; ನೀಳವಾದ ಖಡ್ಗ: ಜಾಡಿಯ ಹರಿಗೆ ಸಿಂಗಾಡಿ ಕಠಾರಿ ನೀಡುವ ಬಾಳುಗತ್ತಿಗಳ ಪಾಡುಪಂಥದ ಸುಭಟರು ಕೋಟೆಯುನಾಗ ರೂಢಿಯೊಳಗೆ ಕಾದಿಹರು (ಕಂಸವ. ೦೦-೧೧೬). ☞ ಇದು ಒಂದೇ ಅರ್ಥದ ಎರಡು ಶಬ್ದಗಳು ಸೇರಿ ಆಗಿರುವ ರೂಪ. ಕೊಡವ ಭಾಷೆಯಲ್ಲಿ 'ಬಾಳಿಕತ್ತಿ' ಶಬ್ದಕ್ಕೆ 'ಉದ್ದವಾದ ಕತ್ತಿ' ಎಂಬರ್ಥವಿದೆ.

[ದೇ.॥ ತಮಿ. ಮಲ. ಕೋತ. ವಾಳ್; ತುಳು. ಬಾಳು; ತೆಲು. ವಾಲು]

**ಬಾಳ**₁ 'ಬಾಳ್₃' ನೋ.

**ಬಾಳ**₂, ಬಾಳು₄ (ನಾ). ಒಂದು ಬಗೆಯ ಸಂಗಂಧದ ಬೇರು: ಮುಡಿವಾಳ; ಲಾಮಂಚ: "ಬಾಳಮೆಂದುಂ ಲಾಮಂಚಂ" (ಕಶಬ್ದ. ೩೯-೦೬೯); ಕುಳಿರ್ಪ ಬಾಳದ ಬೇರ್ಗಳ ಕೇರ್ಗಳಿಂ . . . ಒಪ್ಪಿ ತೋರ್ಪ ಜಲಮಂಟಪದಲ್ಲಿಗೆ ಬಂದನಾ ನೃಪಂ (ಅಭಿನವ. ೧೩೬); ಬಾಳದ ಕಂಪು ಬಾಳ್ವನುಗುವಾಜಿಡಿಯಾಜಿಪಿ ಹಂಸೆ ಹಿಂಸ . . . ಬಾಲಿಕಗಾದುದೀ ವಿರಹ ದಿಂದೆ (ಉದ್ಭಟ. ೭-೩೬). 'ಬಾಳವೇರ್' ಪರಾ. ಬಾಳು₄: ಬಾಳು ಜವಾಜಿ ಕುಂಕುಮಕೇಸರಿ ಅಡಕೆಯ ಹೇರು ಮೆಣ್ಣಸ ಭಾರ . . . ಮುನ್ನಾದ ಸಮುಸ್ತಬೆಪಹಾರಕೆ (ಎಕ. XII, ಶಿರಾ. ೭೬-೧೯; 1370). 'ಕರಿಯ ಬಾಳ', 'ಮುಡಿವಾಳ' ಹೋ. ☞ ಸಂಸ್ಕೃತದ 'ಬಾಲ' ಶಬ್ದಕ್ಕೆ ಮೇಲೆ ಸೂಚಿಸಿರುವ ಅರ್ಥವು ಕೋಶಗಳಲ್ಲಿ ಸಿಗುವು ದಾದರೂ ಇದನ್ನು ದೇಶ್ಯಶಬ್ದವೆಂದು ಪರಿಗಣಿಸಲಾಗಿರುವುದ ರಿಂದ 'ಬಾಲ' ಉಲ್ಲೇಖವ ಜೊತೆಯಲ್ಲಿ ಇದನ್ನು ಪರ್ಯಾಯ ಪದವಾಗಿ ಕೊಟ್ಟಿಲ್ಲ.

**ಬಾಳ**₃ (ನಾ). ಹಣೆ; ನೊಸಲು: "ಬಾಳ—ಭಾಲ=ಹಣೆ" (ಕರ್ನ್ಕೋ. ೬೦); ಒಪ್ಪಿದುದೆನಸುಂ ಕಂದರ್ಪನ ವಿಮಳರುಚಿವಿಶಾಲಂ ಬಾಳಂ (ಕುಸುಮಾ. ೭ ೦೦೩); 'ಬಾಳದೊಳೆಸೆವ ಮುತ್ತಿನ ಬೊಟ್ಟ ತಳೆದಿಹ ಸೀಲಾ ಳಕಿಯರೊಪ್ಪಿದರು (ಕುಮಾ. ೬-೦೦೩). [<ಸಂ. ಭಾಲ]

**ಬಾಳ**₄ 'ಬಾಲ₁' ನೋ.

**ಬಾಳ**₅ 'ಬಾಲ₂' ನೋ.

**ಬಾಳಂಗೆಣಸೆ** (ನಾ) ಒಂದು ಬಗೆಯ ಸಸ್ಯ: ಬಾಗುಂಜಿಬೀಜ, ಗೀರು ಗೊಟ್ಟೆ, ಬಾಳಂಗೆಣಸೆ ಇವು ಸರಿಯಾಗಿ ತೂಗಿಕೊಂಡು . . . ಚೂರ್ಣವಂ ಮಾಡಿ ಜೇನುತುಪ್ಪದಲ್ಲಿ ಗ ಮಾರು ತೂಕವನ್ನು ಕಲಸಿ ಕೊಡುವುದು (ಜೀವ್ರಿ. ೯೦). [?]

**ಬಾಳಂತಪಣ** (ನಾ). ೧. ಹೆರಿಗೆ; ಪ್ರಸೂತಿ: ಫಲ್ಗೂಬಾಯಿ ಕಮಲೆ ಯನ್ನು ಮುಂಬಯಿಗೆ ಆಮಂತ್ರಿಸುತ್ತ . . . ದವಾಖಾನೆಯಲ್ಲಿಯೇ ಬಾಳಂತಪಣ ಮಾಡಿಸಿಕೊಳ್ಳಲು ಸಲಹೆಯಿತ್ತಳು (ಶ್ರೀಹಾರ. ೧೪೨). ೨. ಬಾಣಂತಿಗೆ ಮಾಡುವ ಶುಶ್ರೂಷೆ: ಬಾಣಂತನ.

[ ← ಮರಾ. ಬಾಳಂತಪಣ ]

**ಬಾಳಂತಿ**, ಬಾಣಂತಿ, ಬಾಣತಿ (ನಾ). ಹೆರಿಗೆಯಾಗಿ ಇನ್ನೂ ಆರೈಕೆ ಯನ್ನು ಹೊಂದುತ್ತಿರುವವಳು; ಹಡೆದವಳು; ಪ್ರಸೂತೆ:

ಬಾಳಂತಿಗೆ ಮಂತ್ರಪೂರ್ವಕಮುಂ ಸುಖೋಷ್ಣಮುಮಪ್ಪ ಜಲಂಗಳಂ ಮಿಾಯಲೆಱೆದು (ಕಾವ್ಯಂಪು. ೮೧). ಬಾಣಂತಿ : "ಪ್ರಸೂತೆಯೆನೆ ಬಾಣಂತಿ ಯುಕ್ಕು" (ಮಂಗರಾ. ೮೧-೮): ಕಳಮಾಕ್ಷತಚೂರ್ಣಂ ಪೋಲ್ ನೆಲಗುಂಬಳ ಮಿಂಚಱೊಳೊಂದನೆರ್ವೆಯು ಪಾಲಿಂ ಕಲಸಿ ಕುಡಿಯಿಸುಗೆ ತೊರೆ(ಱ)ಗುಂ ಪೊಲೆಗಳ್ ಬಾಣಂ(ಳಂ)ತಿಗೆಚ್ಚು ಬಾಲ್ ಪಾಯ್ವಿನೆಗಂ (ಕರ್ಣಾಕೋಶ. ೯-೧೮೨); ಬಾಣಂತಿಯೆಂಬೋ ಬಗೆಯ ನೀನಱಿತು ಬಾರೆಂದು ಕರೆವೋಪಮಚಿತವೆ ರಂಗ (ತುರಂತ. ೩-೪೩ ಪಲ್ಲವಿ): ಗೌರಿ ಚೊಚ್ಚಿಲು ಬಾಣಂತಿ (ಮಂಗಳಾಮು. ೨೩). ಬಾಣತಿ: ಬಸುಱ ಬಾಣತಿ ಕುಮಾರಿ ಕೊಡಗೂಸೆಂಬವರ ಹಿಡಿದು ತಿಂಬ . . . ಕೇತಯ್ಯಗಳೆಂಬ ನೂಜುಮಡಕೆಗೆ ನಮ್ಮ ಕೂಡಲ ಸಂಗಮದೇವ ಶರಣೆಂಬುದೊಂದು ದಡಿ ಸಾಲದೆ (ಬಸವ. ೩೩೬); ಎರಡೆಡೆ ಯೊಳೋಲಗವೆಂತು ನಿನಗಳವಡುವುದಿದು ಬಾಣತಿಯು ಸೂಳೆಯು ಪಡಪಿ ನಂದದಲಿ (ಬಸವು. ೩೩-೦೨); ಕೂಸುಳ್ಳ ಸೂಳೆಗೆ ಹೇಸದೊತ್ತೆಯ ಕೊಟ್ಟು ಕೂಸತ್ತು ಸಲ್ಲ ಬೇಸತ್ತು ಬಾಣತಿಯು ವೀಸಕ್ಕು ಬೇಡ (ಸರ್ವಜ್ಞ. ೧೪೦೬).

[ದೇ.॥ ಮಲ. ವಣ್ಣ ; ತುಳು. ಬಾಣಂತಿ ; ತೆಲು. ಬಾಲಿಂತ. ಬಾಲೆಂತ./ ಸಂ. ಬಾಲವತೀ./ಮರಾ. ಬಾಳಂತ, ಬಾಳಂತೀಣ]

ಬಾಳಂಬಾಕಂತಿ (ನಾ). ಒಬ್ಬಾಕೆಯ ಹೆಸರು : ನವಿಲೂರ ಗಣದ ಬಾಳಂಬಾಕನ್ನಿಯರ ಮಗಳ್ ವಿಜಕ್ಕಂ ಪರೋಕ್ಷವಿನಯಂಗೆಯ್ದು ಕಲ್ಲ ನಿರಿಸಿದಳ್ (ಎಕ. VI. ಕಡೂರು. ೧೩೯-೮೩; 961). [ಬಾಳಂಬ್ಯಾ$_0$+ಕಂತಿ$_2$]

ಬಾಳಕ$_1$ 'ಬಾಟುಕ' ನೋ.

ಬಾಳಕ$_2$ (ನಾ).=ಬಾಳ್$_2$ : "ಹ್ರೀಬೇರಂ, ಬಾಳಕಂ, ಜಳಂ — ಈ ೩ ಕರಿಯ ಬಾಳಂ" (ಹಲಾಯು. ೧೧೨-೩೬೪): ಮಗಧ ಕತ್ತುರಿಯಿಂ ಮಳಯೋತ್ಥ ಚಂದನಂ ಲಾಳನ ಬಾಳಕಂ ನೆಱೆಯಿಮೆಂದು ಚರರ್ ಸಲೆ ಬಿನ್ನಪಂಗಳಂ ಕೇಳಸುತಿರ್ಪರೋಲಗದೊಳಂ ವಿಭು ಸಂಕಮದೇವಭೂಪನಾ (ಎಕ. VII, ಶಿಕಾರಿ. ೯೬-೧೫; 1179; ಶಾಸಪದ್ಯ. ೬೦೦ ನೋ). [<ಬಾಳ್$_5$]

ಬಾಳಕ$_3$ 'ಬಾಲಕ' ನೋ.

ಬಾಳಕಾಲ 'ಬಾಲಕಾಲ' ನೋ.

ಬಾಳಕಿ 'ಬಾಲಕಿ' ನೋ.

ಬಾಳಕೇಳಿ 'ಬಾಲಕೇಲಿ' ನೋ.

ಬಾಳಕ್ರೀಡೆ 'ಬಾಲಕ್ರೀಡೆ' ನೋ.

ಬಾಳಗಟ್ಟು 'ಬಾಳ್ಗಟ್ಟು' ನೋ.

ಬಾಳಚ (ನಾ). ಒಬ್ಬಾತನ ಹೆಸರು : ಬಾಚಿಗಾವುಣ್ಡ ಕಂಭಯ್ಯನು ಕಳ್ಳವುಣಾಯೂರ ಮಹಾಜನಮುಂ ಗೊಗಿಯವೂರದ ಬಾಳಚನು . . . ಸಾಕ್ಷಿ (ಎಕ. XI. ಚಿತ್ರದು. ೩೦-೨೨; ೯೬೪). [?]

ಬಾಳಚಂದ್ರ 'ಬಾಲಚಂದ್ರ' ನೋ.

ಬಾಳಣೆ 'ಬಾಣಲಿ' ನೋ.

ಬಾಳತೆ 'ಬಾಲತೆ' ನೋ.

ಬಾಳತ್ವ 'ಬಾಲತ್ವ' ನೋ.

ಬಾಳನಯನ (ನಾ). ೧. ಹಣೆಯಲ್ಲಿ ಇರುವ ಕಣ್ಣು. ೨. ಹಣೆಯಲ್ಲಿ ಕಣ್ಣುಳ್ಳವನು; ಭಾಳನೇತ್ರ : ಶಿವ : ಬಾಳನಯನನದೇನು ಕಾರಣ ಹೇಳಿದನು ಋತುಪರ್ಣಗರುಹುವದೆಂದು ಈ ಕಥೆಯ (ಕಂಬಳಾ. ೩-೩೭). [< ಸಂ. ಭಾಲನಯನ]

ಬಾಳಪರ್ಣ (ನಾ). ಲವಂಗ : "ಬಾ[ಕಾಕಾಂ. ಭಾ, ೮೬]ಳಪರ್ಣಂ ಲವಂಗ ಮೆನಿಕ್ಕುಂ" (ಮಂಗರಾ. ೪೨-೪೦). [?]

ಬಾಳಬಂದು 'ಬಾಲಬಂದು' ನೋ.

ಬಾಳ ಬಟ್ಟು 'ಬಾಳ್$_3$' ಪರಾ.

ಬಾಳ ಬಣ್ಣ 'ಬಾಳ್$_3$' ಪರಾ.

ಬಾಳಮತಿ (ನಾ). ಹುಡುಗುಬುದ್ಧಿಯುಳ್ಳವನು; ಅವಿವೇಕಿ: ಮೂರ್ಖ : ಆ ಕೊಳನನಂ ಬಾಳಮತಿ ಪುರುಷರತ್ನದ ಪೇಳಿಗೆಯುಂ ಮುಚ್ಚುವಂತೆ ಮುಚ್ಚಿದನಗದಿಂ(ಶಾಂತಿಪು. ೬-೫೦). [ಸಂ. ಬಾಲಮತಿ]

ಬಾಳವೃತಿ (ನಾ). ತಿಳಿವಳಿಕೆಯಿಲ್ಲದೆ, ಬಾಲಿಶಬುದ್ಧಿಯಿಂದ ತಂದು ಕೊಂಡ ಮರಣ.—ಸಾವು : ಅತಿವಯನಾಗಿ ಬಾಳವೃತಿಯಿಂದಟ್ ದಂದಿನ ಮೂರ್ಖವೃತ್ತಿ ಪಂಡಿತಮೃತಿಯಿಂದವಲ್ಲದದು ನೀಗದು ಪೊಗೆನಗೆ (ಶಾಂತಿಪು. ೭-೪೦). [ಸಂ. ಬಾಲಮೃತಿ]

ಬಾಳರ (ನಾ). ಗರಗಸದ ಹಲ್ಲುಗಳನ್ನು ಹರಿತಗೊಳಿಸಲು ಬಳಸುವ, ಎರಡು ಅಲಗುಳ್ಳ ಅರ : ಗಾಳದ ಡೊಂಕಿಯುಗ್ರಮನೆ ಬಾಳರನಿಂ ಪಿಡಿವರ್ಪಾವರ್ಪವುಂ ಜಾಳಿಸಿ ಜಾಲಮುಂ ಬಿಸಿಲೊಳಿಕ್ಕುವ ಬೆಂಕೆ ಯೊಳೊಡ್ಡಿ ಕಾಸಿ ಕೂಡಾಳಿಸಿ ಸೆಂದುಕೋಲನುಡಿಗಟ್ಟುವ ಕೆಂಗಣ್ಣಿಯಂ ಸಲಾಳಿಯೊಳ್ ಪೋಳಿಸಿ ಸುತ್ತುತಿರ್ಪ ಶಬರರ್ಕಳಿನಿಂತೆಸೆದತ್ತು ಪಕ್ಕಣಂ (ಶಾಂತೀಶ. ೩-೭೪). [←ತಮಿ. ವಾಳರಮ್]

ಬಾಳರಾಕ್ಷ 'ಬಲರಾಕ್ಷಸ' ನೋ.

ಬಾಳಲಿ 'ಬಾಣಲಿ' ನೋ.

ಬಾಳವಂದ 'ಬಾಲವಂದ' ನೋ.

ಬಾಳವಚ್ಚ (ನಾ). = ಬಾಲವಂದ: ರಕ್ಮಿವಣಿ ಪುಲಿಯುಗುರ್ . . . ಪೊಕ್ಕಳಗಾಡಿಗೆ ಜಕ್ಷ ಸೊಡರ್ವಕ್ಕಿನ ಬೊಟ್ಟೆಂಬ ಬಾಳವಚ್ಚದಿನೆಸೆವ (ಪುಷ್ಪಪು. ೪-೪೪). [ಬಾಳ್$_5$ (= ಬಾಲ್$_2$) + ಪಚ್ಚ$_2$]

ಬಾಳವಣ್ಣ 'ಬಾಳ್$_3$' ಪರಾ.

ಬಾಳವತಿ 'ಬಾಲವತಿ' ನೋ.

ಬಾಳವಾಳಿಗೆ (ನಾ). ಒಂದು ಬಗೆಯ ತೆರಿಗೆ : ಮನೆವಾರ್ತೆ ಹಣ ಕಾಹು ಕಾಣಿಕೆ ಕಡಾಯ ಬಾಳವಾಳಿಗೆ ಉಡುಗರೆ ಉಲುಪ ಮನೆದೆರೆ ಅಳಿಲು ಅನ್ಯಾಯ ಮುಂತಾದ ಸರ್ವಬಾಧೆಯು (ದ.ಕ.ಶಾ. ೧೯೩೯, ೫೮-೨೪; 1435). [?]

ಬಾಳವಿದ್ಯೆ (ನಾ). ಬಾಲ್ಯದಲ್ಲಿ ಕಲಿತ ವಿದ್ಯೆ: ಎಷ್ಟು ಕಂಡುಂ ಕೇಳ್ದು ಮಱಯದ ವಸ್ತುಗಳಲ್ಲ ಗಾಂಧರ್ವಮೆಂಬುದೆಷ್ಟು ಬಾಳವಿದ್ಯೆಯುದ ಜೆಓಳಿಮ್ಮಂ ರಂಜಿಸುವನ್ನರ್ ಪ್ರೌಢರಿಲ್ಲ (ಶಾಂತಿಪು. ೨-೨೦ ವ). [ಸಂ. ಬಾಲವಿದ್ಯಾ]

ಬಾಳವೂರು 'ಬಾಲವೂರು' ನೋ.

ಬಾಳವೇರ್ (ನಾ). ಬಾಳದ ಬೇರು ; ಲಾಮಂಚದ ಬೇರು: ಕೆಂದಳಿರ ಪಂದರೊಳಗಣ ಬಾಳವೇರ ಈರ್ಗಟ್ಟಿನೋವರಿಯೊಳಗೆ (ಚಂದ್ರಪ್ರಪು. ೯-೬೩). [ಬಾಳ್$_5$ + ಬೇರ್$_1$]

ಬಾಳಾಂಬಕ (ನಾ).=ಬಾಳನಯನ ೨: ಬಾಳಾಂಬಕನ ಭಕ್ತನಾಗಿ ಭಕ್ತಿಯು ತಾಳಲಱಯನೆಂದಡೆ ಅದು ಬಾಲನ ಚಿತ್ತದ ಲೀಲೆಯಂತೆ (ಸೋಮೇಶಶ. ೨೪-೯೮). [< ಸಂ. ಭಾಲಾಂಬಕ]

ಬಾಳಾಕ್ಷ (ನಾ). = ಬಾಳನಯನ ೨: ಪಾಲು ಸಕ್ಕರೆ ತುಪ್ಪ ಹಾಲನ್ನ ಸವಿದಂತೆ ಬಾಳಾಕ್ಷ ಪೇಳ್ದಾನು (ಕಂಠ. ೩-೦೦). [< ಸಂ. ಭಾಲಾಕ್ಷ]

ಬಾಳಾತಪ 'ಬಾಲಾತಪ' ನೋ.

ಬಾಳಾಯಿ (ನಾ). ಒಂದು ಬಗೆಯ ಮರ ; ತುವ್ರಿಮರ: ಬಾಳಾಯಿ (ತುವ್ರಿ) . . . ಇದರ ಕಟ್ಟಿಗೆಯು ಗಟ್ಟಿ, ಜಿಗುಟುಳ್ಳದ್ದು, ತಾಳಿಯುಳ್ಳದ್ದು ; ಆದಾಗ್ಯೂ ಇದಕ್ಕೆ ಬಹಳ ಬೆಲೆ ಬರುವದಿಲ್ಲ. ಘನಪೂಟಿನ ತೂಕ ೫೦ ರಿಂದ ೭೦ ಪೌಂಡುಗಳ ವರೆಗೆ. ಇದರ ಹಣ್ಣು ಗಳನ್ನು ಜನರು ಪ್ರೀತಿಯಿಂದ ತಿನ್ನುವರು (ಕಶಾಗ. ೪೪). [?]

ಬಾಳಾರ್ಕ 'ಬಾಲಾರ್ಕ' ನೋ.

ಬಾಳಾಳ್ (ನಾ). ಖಡ್ಗವಿದ್ಯೆಯನ್ನು ಬಲ್ಲವನು ; ಪರಾಕ್ರಮಿ :

ಸಿಂಗದೀಶ್ವರ್‌ಬ್ಬಾಳಾಳ್ ಅರಟ್ಟೇತೀರಾರ್ ಕೂಡಲೂರ್ ಆಳಿ (ಪ್ರ.ಅಂ. ೦೯೦೬. ೦೩-೪; ಸ. 726). [ಬಾಳ್$_3$ + ಆಳ್$_3$]

**ಬಾಳಿ** 'ಬಾಳ್$_3$' ನೋ.

**ಬಾಳಿಕೆ$_1$** 'ಬಾಟ್ಕಿ' ನೋ.

**ಬಾಳಿಕೆ$_2$** 'ಬಾಲಿಕೆ' ನೋ.

**ಬಾಳಿಸು** 'ಬಾಟಿಸು' ನೋ.

**ಬಾಳು$_1$** 'ಬಾಟ್$_1$' ನೋ.

**ಬಾಳು$_2$** 'ಬಾಟ್$_3$' ನೋ.

**ಬಾಳು$_3$** 'ಬಾಳ್$_3$' ನೋ.

**ಬಾಳು$_4$** 'ಬಾಳ್$_2$' ನೋ.

**ಬಾಳುಕ** 'ಬಾಟುಕ' ನೋ.

**ಬಾಳುಗುಳಿ** 'ಬಾಟ್ಗುಳಿ' ನೋ.

**ಬಾಳುಗೇಡಿ** (ನಾ). ಜೀವನವನ್ನು ಹಾಳುಮಾಡುವವನು ; ಬದುಕನ್ನು ಕೆಡಿಸುವವನು : ನೆಟ್ಟನೆಲ ಧೃತರಾಷ್ಟ್ರನೃಪ ನೀನಿಟ್ಟು ಕಿಚ್ಚಿದು ಪಾಪಿ ಮಗನನು ಹುಟ್ಟಿದಂದೇ ಬಿಸುಡದಾದೆವು ಬಾಳುಗೇಡಿಯನು (ಕುಮ್ಯಾ. ೯-೯೯). [ಬಾಳು$_2$ (< ಬಾಟ್$_3$) + ಕೇಡಿ$_1$]

**ಬಾಳುಗೇಡು** (ನಾ). ಬದುಕಿಗೆ ಕೇಡು ತರುವಂತಹುದು ; ಜೀವನವನ್ನು ಹಾಳುಮಾಡುವಂತಹುದು : ಆಳುಕೂಳುಗಳ ಮೇಳವಿಲ್ಲದ ಮನೆಯು ಬಾಳುಗೇಡು (ಸರ್ವಜ್ಞ. ೦೧೯೯). [ಬಾಳು$_2$ (<ಬಾಟ್$_3$) + ಕೇಡು]

**ಬಾಳುಡಿ** (ನಾ). ಖಡ್ಗದ ತುಂಡು; ಕತ್ತಿಯ ತುಂಡು: ನೆಣದೊಳ್ಗೆ ಸಟ್ಟೊಳ್ ಜಗಿಲ್ತುಗುರ್ವಡರೆ ನಿರಂತರಂ ಪೊಳೆವ ಬಾಳುಡಿ ಸುಯ್ದು ನವವ್ರಣಂಗಳೊಳ್ ಪೊಡರೆ ಪೊದಟ್ದುದದ್ಭುತಭಯಾನಕಮಾಹವರಂಗ ಭೂಮಿಯೊಳ್ (ಶಂಕಪು. ೦೦-೫೯) ; ಬಾಳುಡಿ ಪಾಱಿ ಬೀೞೆ ಪಗಲುಳ್ಳದ ಪೋಲ್ . . . ಭಯಂಕರಮಾಯ್ತು ತುರುಗಸಂಗರಂ (ಶಂರಾಮಾ. ೦೩-೬೩). [ಬಾಳ್$_3$ + ಉಡಿ$_2$]

**ಬಾಳುತ್ತಾರ** (ನಾ). ಉಂಬಳಿಯಾಗಿ ಕೊಟ್ಟ ಭೂಮಿ: ಯಾಗ ಉತ್ತಾರವ ಕೊಟ್ಟ ಭೂಮಿ ಸಹ ಬಾಳುತ್ತಾರವಾಗಿ ವಿಂಗಡಿಸಿ ಕೊಡ ಹೇಳಿ (ಎಕ. IX (೩), ಕಂಗಳೂ. ೦೫೦-೪ ; ಸ. 1700). [ ಬಾಳು$_2$ (<ಬಾಟ್$_3$) + ಉತ್ತಾರ ]

**ಬಾಳುದಲೆ** 'ಬಾಟ್ದಲೆ' ನೋ.

**ಬಾಳುದಲೆವಿಡಿ** ' ಬಾಟ್ದಲೆವಿಡಿ ' ನೋ.

**ಬಾಳುಬೆ** 'ಬಾದುಬ್ಬೆ' ನೋ.

**ಬಾಳುಮನೆ** 'ಬಾಟ್ಮನೆ' ನೋ.

**ಬಾಳುವೆ** 'ಬಾಟ್ವೆ' ನೋ.

**ಬಾಳೆ$_1$** 'ಬಾಟಿ$_1$' ನೋ.

**ಬಾಳೆ$_2$** (ನಾ). ಒಂದು ಬಗೆಯ ಉದ್ದವಾಗಿರುವ ಮೀನು : ಪೇಟ್ದಿನಿಸನಾಂ ಮಗುಟ್ದಾಗಳೆ ಸೂಸಿ ಕಣ್ಣಾ ನೀರೊಡನೊಡನುಣ್ಮೆ ಕುಂಕುಮದೊರ್ದಿದ ಬಾಳೆಗಳನ್ನವಾಗಿ ಕೆಂಪಡರ್ದಲರ್ಗಣ್ಗಳಿಂದುಗುಟ್ದು ನೋಡಿದುದಂ ನೆನೆವೇಂ ಮೃಗಾಕ್ಷಿಯಾ (ಅಂಪು. ೦೨-೨೪); ಬಾಲಕಿಯುಲರ್ಗಣ್ಗಳ್ . . . ಬಾಳೆಯು ಮೀಂಗಳ ತೆಱದಿಂ ಲೀಲೆಯೊಳೇಂ ಪೊಳೆದು ತಳೆದವತಿಚಪಳತೆಯಂ (ಪಾರ್ಶ್ವಪು. ೨-೩೦) ; ತೊಡೆಯುಮೆಸೆವಕ್ಷಿಯುಂ ಬಾಳೆಯುಂ ಬಾಳೆಯುಂ ನಡುವುಂ ಸುವಾಣಿಯುಂ ಹರಿಯುಮಂ ಹರಿಯುಮಂ ಬಿಡದೆ ಪೋಲ್ತಿರೆ ಮೆಱೆವ ಕಾಂತೆಯರ್ . . . ಸೊಗಯಿಸಿದರು (ಕೃಬಿಕಾ. ೬-೨೩). [ದೇ. ‖ ತಮಿ. ವಾಳೈ; ಮಲ. ವಾಳ; ತುಳು. ಬಾಲೆ; ಕೊಡ. ಬಾಳ್; ತೆಲು. ವಾಲುಗ, ವಾಲುವ]

**ಬಾಳೆ$_3$** 'ಬಾಲೆ' ನೋ.

**ಬಾಳೆಕಂಬ** 'ಬಾಳೆಗಂಬ' ನೋ.

**ಬಾಳೆಕೊನೆ** 'ಬಾಳೆಗೊನೆ' ನೋ.

**ಬಾಳೆಗಂಬ**, ಬಾಳೆಕಂಬ (ನಾ). ಬಾಳೆಗಿಡದ ತಾಳು.—ಕಾಂಡ : ತಾವರೆಯಲ್ಲಿ ತಾರೆ ಜನನಂಬಡೆದಂದು ನಗೇಂದ್ರಮೂಲದೊಳ್ ಭಾವಿಸೆ ಬಾಳೆಗಂಬಮೊಗೆದಂದು ಲತಾಗ್ರದೊಳದ್ರಿ ಪುಟ್ಟಿದಂದು . . . ಸತಿಯಂಗಮನಾಂ ಪೊಗಳಲ್ಕೆ ಸಾಲ್ದವೆಂ (ರಾಜಶೇ. ೬-೨೬). **ಬಾಳೆಕಂಬ** : ಚಪ್ಪರ ಕಟ್ಟುವುದಕ್ಕೆ ಇನ್ನೂ ಎರಡು ದೊಡ್ಡ ಬಾಳೆಕಂಬಗಳನ್ನು ತರಬೇಕು (ಕೂಪು). [ಬಾಳೆ$_1$ (<ಬಾಟಿ$_1$) + ಕಂಬ$_1$ (<ಕಂಭ)]

**ಬಾಳೆಗಣ್** (ನಾ). ಮೀನಿನ ಆಕಾರದ ಕಣ್ಣು : ಚಂಚತ್ಕಾಂಚನಾಬ್ದಾಸ್ಯ ಮಂಡಳವಿಂಬಾಗಿರೆ ಬಾಳೆಗಣ್ಪೊಳೆಯೆ . . . ಸರಿದ್ವಧು ರಥಾಂಗೋರೋಜೆ ಕಣ್ಗೊಪ್ಪಿದಳ್ (ಕೃಕಪು. ೪-೬) ; ಪೊಳೆದೊಪ್ಪೆ ಬಾಳೆಗಣ್ ಬಿಸಜಮುಖಿ ಮರುಚ್ಚಲಿತವಮೋಂದೆ (ಕಂಕಂ. ೨-೩೩). [ಬಾಳೆ$_2$ + ಕಣ್]

**ಬಾಳೆಗೊನೆ**, ಬಾಳೆಕೊನೆ (ನಾ). ಬಾಳೆಯಕಾಯಿ ಅಥವಾ ಹಣ್ಣುಗಳ ಗೊಂಚಲು : ಜವರ, ನಿಂಗ, ಜೋಗಿ ಮುಂತಾದವರು ಕಾಯಿ, ಕೋಳಿ, ಬಾಳೆಗೊನೆಗಳನ್ನು ಹೇಳದೆ ಕೇಳದೆ ಚಾವಡಿಗೆ ತಂದು ಒಪ್ಪಿಸುತ್ತಾರೆ (ನಮ್ಮೂರು. ೧೯೬). **ಬಾಳೆಕೊನೆ** : ಬಾಳೆಕೊನೆ ತರಾಕೆ ಹೇಳಿದಾರೇನು ನಿಸ್ಮ ಸಾಹುಕಾರರು ? (ಮಲೆಮ. ೨೮೬). [ಬಾಳೆ$_1$ (<ಬಾಟಿ$_1$) + ಗೊನೆ$_3$ (< ಗೊಲೆ$_2$)]

**ಬಾಳೆದೊಡೆ** (ನಾ). ಬಾಳೆಕಂಬದಂತೆ ದುಂಡಗೆ, ನುಣುಪಾಗಿ ಇರುವ ತೊಡೆ : ಪಸುಗೆಳಿಪಾತಿನ ಬಾಳೆದೊಡೆಯ ಬಣ್ಣಗಾಲ . . . ನೀಱೆಯು ನಪಲಾವಣ್ಯದ ಸಿರಿಯನದೇನಂ ಬಣ್ಣಿಪೆನು (ಅಹುಕಾ. ೬-೬೩); ಪೇರೆದೆ ಹೊನ್ನ ಸೆಳೆನಡು ಬಾಳೆದೊಡೆ ಮೆಱೆದೆನ್ನರಂ ಸೋಲಿಸುವ ಜವ್ವನವಾಂತನಾಕುವರ (ತಾಳ್ಮರಾ. ೪-೬): ಬಾಳೆದೊಡೆಯ ಕೊನಬುಗಾತಿಯುಳ ಕೊಸರಿ ರಂಗಾಯೆಂಬ ವನಿತೆ ತಾ ವಶವಪ್ಪಳೆಂದೊ (ಕಕನಾಂ. ೨೨-೧೦). [ಬಾಳೆ$_1$ (<ಬಾಟಿ$_1$) + ತೊಡೆ$_2$]

**ಬಾಳೆಮೀನ್**, ಬಾಳೆಮೀನು (ನಾ). = ಬಾಳೆ$_2$: ಅದನೊಂದು ಬಾಳೆಮೀನ್ನುಂಗಿ ಗರ್ಭಮಂ ತಾಳ್ದಿದೊಡೆ (ಶಂಕಪು. ೦-೬೩ ವ); ಕಣ್ಣನೀರಿಟದುವು ಬಾಳೆಮೀನ್ ಜಲಮನಟ್ಟಿಸಲಾಱದೆ ಕಾಱುವಂತೆವೋಲ್ (ಕಾವ್ಯಸಾ. ೬೦೦). **ಬಾಳೆಮೀನು** : ಸೂಳೆ ಸೂತ್ರದ ನೇಣು ಗಾಳವಾಕೆಯ ಮೊಗವು ಮೇಳಯ್ಸುವವಳು ಸಲೆ ಬೆಂಡು ಮಿಂಡ ತಾ ಬಾಳೆಮೀನು (ಸರ್ವಜ್ಞ. ೦೯೯೪). [ಬಾಳೆ$_2$ + ಮೀನ್$_2$.‖ತಮಿ. ವಾಳ್ಮೀನ್; ತುಳು. ಬಾಲೆಮೀನ್]

**ಬಾಳೆಮೀನು** ' ಬಾಳೆಮೀನ್ ' ನೋ.

**ಬಾಳೆಲೆ** ' ಬಾಟಿಲೆ ' ನೋ.

**ಬಾಳೆವಣ್** ' ಬಾಟಿವಣ್ ' ನೋ.

**ಬಾಳೆವಸುಳೆ** (ನಾ). ಬಾಳೆಮೀನಿನ ಮರಿ : ಬಾಳೆವಸುಳೆದಿಟ್ಟಿಯು ಬಂಧಕಿಯರ ಜಾಳಂ ನಡೆತಂದುದು (ಅಹುಕಾ. ೦೩-೬೯). [ಬಾಳೆ$_2$ + ಪಸುಳೆ]

**ಬಾಳೆಹಣ್ಣು** ' ಬಾಟಿವಣ್ ' ನೋ.

**ಬಾಳ್ಕಟ್ಟು** ' ಬಾಳ್ಗಟ್ಟು ' ನೋ.

**ಬಾಳ್ಕೆ** ' ಬಾಟ್ಕೆ ' ನೋ.

**ಬಾಳ್ಗನಸು** (ನಾ). (ಆಲಂ) ಜೀವನದಲ್ಲಿ ಒಳ್ಳೆಯದನ್ನು ಬಯಸಿ ಕಲ್ಪಿಸಿಕೊಂಡಿರುವ ಬದುಕಿನ ಭವಿಷ್ಯ: ಹಿಂದಾವ ಮುದಿಯ ನೆಯ್ . . . ಸುಖದಮಾಗಿರ್ದತ್ತೊ ತಾನದೆ ಇಂದು ಸೂಡಿನೊಲ್, ಕೆಟ್ಟಾಸೆ ಬೀಡಿನೊಲ್, ಬಾಳ್ಗನಸುಗಳೆಲ್ಲ ಕೊನೆಯ ಸುಡುಗಾಡಿನೊಲ್ ಕಾಣುತಿರೆ (ಶ್ರೀರಾಮಾ. ೦೦೧-೦೬೦). [ಬಾಳ್$_2$ (< ಬಾಟ್$_3$) + ಕನಸು]

**ಬಾಳ್ಗರ್ಚು** 'ಬಾಳ್ಗಟ್ಟು' ನೋ.

**ಬಾಳ್ಗರ್ಚುಗೊಡು** 'ಬಾಳ್ಗಟ್ಟುಗೊಡು' ನೋ.

**ಬಾಳ್ಗಟ್ಟು**, ಬಾಳಗಟ್ಟು, ಬಾಳ್ಕಟ್ಟು, ಬಾಳ್ಗರ್ಚು, ವಾಳ್ಗಟ್ಟು (ನಾ). ಯುದ್ಧದಲ್ಲಿ ಪರಾಕ್ರಮವನ್ನು ತೋರಿದುದಕ್ಕಾಗಿ ಯುದ್ಧಾಂತ್ಯದಲ್ಲಿ ವೀರನ ಕತ್ತಿಯನ್ನು ತೊಳೆದು, ಕೊಡುವ ಮಾನ್ಯ: ಕೇಕಯ ಪಲ್ಲವರಂ ಕಾದಿಜೀದು ವೆತ್ತಜಯನಾ ವಿಜಆರಸನ್ಗೆ ಬಾಳ್ಗಟ್ಟು ಪಲ್ಮಡಿಉ ಮೂಲಪಳ್ಳಿಉಂ ಕೊಟ್ಟಾರ್ (ಪ್ರಕಂ. ೦೯೬೬, ೧೬-೦೨ : ಸು. 460); ಬಾಳ್ಗಟ್ಟು ಕೊಟ್ಟೊದು ಅಯ್ಯಂ . . . ಕಟನಿ (ಎಕ. XVI, ತುಮಕೂ. ೯೪-೯ : ಸು. 780); ಅವರ ಮಾವು ತಿವು ಪೊದೆಯಮಾದವಾಡಿಯ ಬಾಳ್ಗಟ್ಟು ಕೊಟ್ಟೊ (ಪ್ರಕಂ. ೧೯೬೦, ೯೯-೯ ; ಸು. 886). **ಬಾಳಗಟ್ಟು** : ನಾಗಗುಟ್ಟರಸಂ ತಮ್ಮ ಏಱಿದ ಕುದುರೆಯುಮ್ಮಗುಟಿ ಅಟ್ಟಿ ಬಾಳಂ ಕಿಟ್ಟು ನಡದು ಪಲರಸಿಱಿದು ಸತ್ತೊಡೆ ಬೆಳ್ವಪ್ಪುರವಿ ಮಾ×ಬಾಳಗಟ್ಟು ಆಗೆ ಕೊಟ್ಟೊದು (ಎಕ. X, ಕೋಲಾರ. ೨೦೦-೦೩ : ಸು. 890 ?). **ಬಾಳ್ಕಟ್ಟು**: ಬಲಮಾನ್ವಾಳ್ದಿ ಎಱಿದು ಬಿಟ್ಟರ್ ಬಿಟಿಟ್ಟೊಡೆ ಮೆಚ್ಚಿ ಲಕುನ್ದಮಾ ಬಾಳ್ಗಟ್ಟು ಕೊಟ್ಟ (ಎಕ. X (೩), ಶಾಗೀಶ. ೬೬-೯ ; 820). **ಬಾಳ್ಗರ್ಚು** : 'ಬಾಳ್ಗರ್ಚುಗೊಡು' ಪರಾ. **ವಾಳ್ಗಟ್ಟು** : ಶಾನ್ತಸೂರೂ ಎರೆಡಿಯೂರುಳುಂ ವನ್ದು ತೂಮ್ಬುಕಟನಿಯುಂ ಅವರ ಮನೆಯುಂ ವಾಳ್ಗಟ್ಟುಂ ಪ್ರಸಾದಙ್ಗೆಯ್ದಾರ್ (ಎಕ. X, ಮುಳಬಾ. ೨೩೩-೦೨ : ಸು. 750) ; ಮೂಱುಕೊಡೆ ಅಣ್ಣಿಯರ್ಪಣ್ಣಾನೂರಾ ಏಱಿನುಳ್ಳಿಱಿದು ಬಜ್ಜಾರ್ ಕ[ನ್ನ]ರಸರುಳ್ ಇದರ್ಕೆ ಚಿವಾನ ಕಳನಿ ವಾಳ್ಗಟ್ಟು ಕೊಟ್ಟೊದು ರೋಣವೊಡೆಯೊಗೆ ಕೊಟ್ಟರ್ (ಎಕ. XVI, ತುಮಕೂ. ೬೬-೩; ?).

[ಬಾಳ್$_3$ + ಕಟ್ಟು]

**ಬಾಳ್ಗಟ್ಟುಗೊಡು**, ಬಾಳ್ಗರ್ಚುಗೊಡು (ಕ್ರಿ). ಯುದ್ಧದಲ್ಲಿ ಶೌರ್ಯವನ್ನು ತೋರಿದುದಕ್ಕಾಗಿ ಮಾನ್ಯವಾಗಿ ಭೂಮಿಯನ್ನು ಕೊಡು ; ನೆತ್ತರುಕೊಡುಗೆಯನ್ನು ಕೊಡು : ಆತಂಗೆ ಬಾಣವಿದ್ಯಾಧರಂ ಮೆಚ್ಚಿ ಬಾಳ್ಗಟ್ಟುಗೊಟ್ಟುದು (ಶಾಇ. IX-i, ೪-೦೦; ಸು. 9 ನೆಯ ಶತ). **ಬಾಳ್ಗರ್ಚುಗೊಡು** : ನೀತಿಮಾರ್ಗ್ಗ ಪೆರ್ಮ್ಮಾನಡಿಗಳು ನೊಲಬಪ್ಪಾಧಿರಾಜರು ಸೂರೂರಂ ಬಾಳ್ಗರ್ಚುಗೊಟ್ಟರ್ (ಎಕ. X, ಕೋಲಾರ. ೭೯-೦೩ ; ಸು. 890). [ಬಾಳ್ಗಟ್ಟು + ಕೊಡು$_1$]

**ಬಾಳ್ಗೀಟ್** (ಕ್ರಿ). ಖಡ್ಗವನ್ನು ಹಿರಿ ; ಕತ್ತಿಯನ್ನು ಒರೆಯಿಂದ ಕೀಳು : ಸಂಗ್ರಾಮವಿದ್ಯಾನ್ವಿತರ್ × × × ಯಂ ಪತಿ ಕೋಗಿಯೂರ ಜಯಮಲ್ಲೊಳ್ಬಾಳ್ಗಿಟ್ಟುಕೊಣ್ಡಿದ್ದುದಂ (ಎಕ. XIV, ಎಡತೊ. ೩೦-೯; ಸು. 900) ; ಅನಿಬರುಂ ಬಾಳ್ಗಿಟ್ಟು[ಶಾಕಾಂ. ತ್ತು] ಮೇಲ್ವಾಯ್ದೊಡರ್ಬಿಸೆ ತಿಣ್ಣಂ ತೆಗೆದರ್ಧಚಂದ್ರಶರದಿಂ ಸೂಟ್ ಸೂಟಿರೊಳ್ಚ್ಯಾಗಳ್ಚರ್ಚಿಸಿದಂತಿರ್ದುದುರುಳ್ದ ಕೌರವಶಿರಃಪದ್ಮಂಗಳಿಂ ಕೊಳ್ಗುಳಂ (ಶಂತಪಾ. ೦೨-೦೯೩); ಬಾಳ್ಗಿತ್ತು ಮತ್ಸರದಿಂ ಸಾರ್ಚಿದರಂ ಪಡಲ್ವಡಿಸಿ (ಆತಪು. ೦-೩೬).

[ಬಾಳ್$_3$ + ಕೀಟ್$_1$]

**ಬಾಳ್ಗುಡತೆ** (ನಾ). (ರಾಜರು ಧರಿಸುತ್ತಿದ್ದ) ಅಧಿಕಾರಸೂಚಕವಾದ ಅಂಗಿ : ತೊಟ್ಟ ಮಹಾರಾಜಮುದ್ರೆಯ ಬಾಳ್ಗುಡುತೆಗೂ, ಹಿಡಿದ ವೀರದಣ್ಡನ ಕಯ್ಯುವಿಗೂ ಕಟ್ಟೀಕವವು ಜಕ್ಕುಳಿಕೆಯು ಅಪವಾನವು ಅಡಸಿ ಮುಸಗುವಂತೆ-ನೀವು ಕುಬುದ್ಧಿಯನೆಣಿಸಿ (ಚಿಟ್ಟೀ. ೨೦೯-೦೪).

[ಬಾಳ್$_2$ (< ಬಾಟ್$_3$) + ಕುಡುತೆ$_2$ (< ಕುಡತಿ)]

**ಬಾಳ್ಗುಳಿ** 'ಬಾಟ್ಗುಳಿ' ನೋ.

**ಬಾಳ್ಗೆಡು** (ಕ್ರಿ). ಜೀವನವನ್ನು ಹಾಳುಮಾಡಿಕೊಳ್ಳು : ಕೆಟ್ಟೆವೋ ! ಕಂಗೆಟ್ಟೆವೋ ! ಮನೆಗೆಟ್ಟೆವೋ ! ಬಾಳ್ಗೆಟ್ಟೆವೋ ! (ಶ್ರೀರಾಮಾ. ೭೦೪-೦೨೦).

[ಬಾಳ್$_2$ (< ಬಾಟ್$_3$) + ಕೆಡು$_1$]

**ಬಾಳ್ಗೆಳೆಯ** (ನಾ). ಬಾಳಿನುದ್ದಕ್ಕೂ ಸ್ನೇಹಿತನಾಗಿರುವವನು : ವತ್ಸ ! ಕಾಣದು ಕಣ್ಣೆ ! ಬಗೆಗೆ ಸುಳಿದಿದೆ ಬರವು ಬಾಳ್ಗೆಳೆಯನೊರ್ವನಾ ! (ಶ್ರೀರಾಮಾ. ೨೬೬-೯೭). [ಬಾಳ್$_2$ (< ಬಾಟ್$_3$) + ಕೆಳೆಯ]

**ಬಾಳ್ಗೊಲೆ** (ನಾ). ಜೀವಹಾನಿ : ಪ್ರಾಣಹತ್ಯೆ : ಗಳಹದಿರು ಕೆಲಬಲದ ಹಂಗಿಸ ಬಳಕೆಯೇ ಘಡ ಸೂತಸುತ ಬಾಳ್ಗೊಲೆಯ ಬಾಹಿರ ಬಿಸುಗ ಬೆದಱಿಸಿ ಬಱಿದೆ ಬೆಜೆತೆಯಲ (ಕುಪ್ಪಾಕ. ೧೧-೨೩) : ನಿರ್ಜನ ನಿಶಾವೇಳೆಯಲಿ ಚಿತ್ರೆ, ಕ್ಷಾತ್ರಕುಲರವಣಿ. ಬಾಳ್ಗೊಲೆಗುಜ್ಜುಗಂಗೈದು . . . ಶಶಿತಾರೆಗಳಿಗೆ ಬಿನ್ನೈಸಿದಳ್ ಕೈಮುಗಿದು (ಚಿತ್ರಾಂಗ. ೬೩-೦೬೯೩).

[ಬಾಳ್$_2$ (< ಬಾಟ್$_3$) + ಕೊಲೆ$_2$]

**ಬಾಳ್ತರ** (ನಾ). ತಾಳಿಕೆ : ಬಾಳಿಕೆ : ಬೆತ್ತದ ಸಂದೂಕ ನೂರುವರ್ಷ ಬಾಳ್ತರ ಬರುತ್ತದೆ (ಕುಂಕಕ್ಕ. ೦೬೩). [← ತುಳು. ಬಾಳ್ತರ]

**ಬಾಳ್ತಿ** 'ಬಾಟ್ತಿ' ನೋ.

**ಬಾಳ್ತಿಗ** (ನಾ). ಮನೆವಾರ್ತೆಗಾರ : ನಮ್ಮಯ ಮನೋವಿಧಾನಗಳನ್ನು ನವಗೆ ಕೈಗೂಡಿಸಿ ಕುಡುವುದು . . . ನಿಮ್ಮಂತಹ ಕುಲಕ್ರಮಾಯುಕ್ತವಾದ ಸ್ವಧರ್ಮನಿಷ್ಠೆಯ ಬಲ್ಲ ಬಾಳ್ತಿಗರಿಗೆ ಬಿರುದಾಗಿದೆ (ಚಿಟ್ಟೀ. ೧೯೯-೦೭). [ಬಾಳ್ತಿ (< ಬಾಟ್ತಿ) + —ಗ$_2$]

**ಬಾಳ್ತಿಗೆಯ್** 'ಬಾಟ್ತಿಗೆಯ್' ನೋ.

**ಬಾಳ್ದಲೆ** 'ಬಾಟ್ದಲೆ' ನೋ.

**ಬಾಳ್ದಲೆಗೊಳ್** 'ಬಾಟ್ದಲೆಗೊಳ್' ನೋ.

**ಬಾಳ್ದಲೆವಿಡಿ** 'ಬಾಟ್ದಲೆವಿಡಿ' ನೋ.

**ಬಾಳ್ದುದಿ** (ನಾ). ಖಡ್ಗದ ಮೊನೆ ; ಕತ್ತಿಯ ತುದಿ : ಬಾಳ್ದುದಿ ಪೊಲಿರ್ಪ ನಖದಿಂ ಸೀಳ್ದಸುರನ ಕುಕ್ಷಿಯಂ . . . ಬೇಳ್ದಂ ನಿಜವಿಕ್ರಮಾಗ್ನಿಯೊಳ್ ನರಸಿಂಹಂ (ಅಪ್ಪಾಕೃ. ೦-೩-೨೩೦). [ಬಾಳ್$_3$ + ತುದಿ]

**ಬಾಳ್ಬೀಟ್** (ಕ್ರಿ). (ಅಲಂ) ಶತ್ರುವಿನ ಖಡ್ಗಕ್ಕೆ ಸಿಕ್ಕಿ ಸಾಯು : ತುಱುವನಿಕ್ಕಿಸಿ ರಣದೊಳ್ಬಾಳ್ಬಿಟ್ಟೊ ಸುಗತಿಯ ಪಡೆದನ್ (ಎಕ. VIII, ಸೊರಬ. ೨೦೯-೦೯ ; 965). [ಬಾಳ್$_3$ + ಬೀಟ್$_1$]

**ಬಾಳ್ಮೆ** 'ಬಾಟ್ಮೆ' ನೋ.

**ಬಾಳ್ಮೊದಲ್** 'ಬಾಟ್ಮೊದಲ್' ನೋ.

**ಬಾಳ್ಮೊನೆ** (ನಾ). = ಬಾಳ್ದುದಿ : ಬಾಳ್ಮೊನೆ : ವಾಳ್ಮನೆ (ಶಮದ. ೬೩ ಕ್ರಿಯೋ); ದಾದಿ ಬಟಿ ಪಸುಳೆಯನ್ ಬಾಳ್ಮೊನೆಗೆ ಚರ್ಚಿದನ್ (ಆಕ್ಕಾಕ್ಕಾ. ೩-೯೬). [ಬಾಳ್$_3$ + ಮೊನೆ]

**ಬಾಳ್ವಂದರ** 'ಬಾಟ್ವಂದರ್' ನೋ.

**ಬಾಳ್ವನೆ** 'ಬಾಟ್ವನೆ' ನೋ.

**ಬಾಳ್ವಲ** (ನಾ). ಖಡ್ಗಬಲ ; ಆಯುಧಬಲ : ಪರವಿಗ್ರಹದ ಮೇಲಣ ತೋಳ್ವಲಮುಮಾಂ ನಿಜವಿಗ್ರಹದ ಮೇಲಣ ಬಾಳ್ವಲಮುಮೋಸರಿಸದೆ ಸುತ್ತಿಱಿದ ಮುತ್ತಿದ ಬೀಡಂ ತೆಗೆಯಿಸಿ ಮುಗುಟ್ದು ಬರ್ಪಾಗಳ್ (ಅಪಾಕ್ಕ. ೦೨-೨೭ ಪ) ; ಆಳ್ವಲದ ತೋಳ್ವಲದ ಬಾಳ್ವಲದ ಗರ್ವದಿಂದುರ್ವಿ ಮಾಱೆತ್ತ ಗರ್ವಿತೋರ್ವೀಶಬಳಮನೆಟ್ಟಟ್ಟೆ (ಪುಷ್ಪಕ. ೩-೩೦ ಪ). [ಬಾಳ್$_3$+ಬಲ್$_3$]

**ಬಾಳ್ವಲಿ** (ನಾ). ಪ್ರಾಣದ ಬಲಿದಾನ,—ಆಹುತಿ : 'ಬಾಳ್ವಲಿಗುಡು' ಪರಾ. [ಬಾಳ್$_2$ (< ಬಾಟ್$_3$) + ಬಲಿ$_3$]

**ಬಾಳ್ವಲಿಗುಡು** (ಕ್ರಿ). ಪ್ರಾಣವನ್ನು ಆಹುತಿ ಕೊಡು,–ಬಲಿಯಾಗಿ ಅರ್ಪಿಸು : ಈ ನಮ್ಮ ನಾಯಕರ ಶರಭಾವತಾರದ ಪ್ರಚಣ್ಡಮೂರ್ತಿಗೆ ಬಾಳ್ವಲಿಗುಡಬೇಕು (ಮುಂತ್ರಕ. ೯೯-೨೩).

[ಬಾಳ್ವಲಿ + ಕುಡು$_1$ (< ಕೊಡು$_1$)]

**ಬಾಳ್ವಿಕೆ** 'ಬಾಟ್ಕಿ' ನೋ.

**ಬಾಳ್ವಡಿ$_1$** (ಕ್ರಿ). ಜೀವಧಾರಣೆ ಮಾಡು ; ಬದುಕು : ಮತ್ತೊಂತೊ

ಬಾಳ್ವಡಿದು ಬಂದರೊಡಗೂಡಿ (ಕಾಂಪು. ೯೬-೧೪೪).

[ ಬಾಳ್₃ (< ಬಾಟ್₃) + ಪಡಿ₁ ]

**ಬಾಳ್ವಡಿ₂** (ಕ್ರಿ). ೧. ಕತ್ತಿಯನ್ನು ಹಿಡಿ ; ಖಡ್ಗವನ್ನು ಹಿಡಿ. ೨. (ಆಲಂ) ಯುದ್ಧಮಾಡು ; ಸೆಣಸು : ಬಾಳ್ವಡಿದಾರ್ ಬಾಟ್ಪಪ್ಪರಾತ ನಿದಿರೊಳ್ ಪಗೆವರ್ (ಕಣ್ಣಿ. ೯೪). [ ಬಾಳ್₃ + ಪಡಿ₁ ]

**ಬಾಳ್ವೀಡು** (ನಾ). ಬಾಳುವ ಮನೆ ; ಮೂಲಾಶ್ರಯ ; ನೆಲೆವನೆ: ಸಿಂಹಪುರ ಕಂತುವಿನ ನೆಲೆವೀಡು ಸೊಬಗಿನ ಸಂತತಿಯು ಕಾಯ್ವಾಡು ಲಕ್ಷ್ಮಿಯ ಸಂತಸದ ಬಾಳ್ವೀಡೆನಿಸಿ ಶೋಭಿಪುದು ಸೊಬಗಾಗಿ (ನಾಕ್ಮಿರಾ. ೩-೦). [ ಬಾಳ್₁ (< ಬಾಟ್₁) + ಬೀಡು₂ ]

**ಬಾಳ್ವೆ** 'ಬಾಟ್ವೆ' ನೋ.

**ಬಾಳ್ವೆಗೆಡಿಸು** (ಕ್ರಿ). ಬಾಳುಗೇಡು ಮಾಡು ; ಬದುಕನ್ನು ಹಾಳು ಮಾಡು : ಇದಿರಾದರಂ ಬಾಳ್ವೆಗೆಡಿಸುತ್ತಸುಂಗೊಂಬನೀ ಬ್ರಹ್ಮಾಂಡಮು ಪೋಳ್ವಂ (ಕಲಪು. ೩೦-೦೦). [ಬಾಳ್ವೆ (< ಬಾಟ್ವೆ) + ಕೆಡಿಸು₁]

**ಬಾಳ್ವಿಣ** 'ಬಾಟ್ವಿಣ' ನೋ.

**ಬಾಳ್ವೆಳೆ** (ನಾ). (ಹೊಲಗದ್ದೆಗಳ) ಬೆಳೆಯುತ್ತಿರುವ ಪೈರು ; ಹಸುರಾಗಿರುವ ಬೆಳೆ: ಬೆಳ್ವೊಳಗಿನ ಬಾಳ್ವೆಳೆಯಂ ತಳ್ವದೆ ಬಾಂಬೊಲದೊಳರುಣಕರ ಶಿಖಿಶಿಖೆ ಪಾಳೆಳ್ವಿಸಮುಳುರ್ದಾಬಿ ಚಿಂತೆಯನಾಳ್ವಂತೆಪೊರ್ದೋಪಧೀಶ್ವರಂ ಕಳೆಗೆಟ್ಟಂ (ಲಾಕೆಶೀ. ೦೨-೧೩). [ಬಾಳ್₁ (< ಬಾಟ್₁) + ಬೆಳೆ₂]

**ಬಾಳ್ವೇಲಿ** 'ಬಾಟ್ವೇಲಿ' ನೋ.

**ಬಾಳ್ವೊಗರ್** (ನಾ). ಕತ್ತಿಯ ಹೊಳಪು, —ಕಾಂತಿ : ಧರಣೀರಕ್ಷಣ ಮಂತ್ರಾಕ್ಷರಮಂ ವಿದ್ವಿಷ್ಟಸೈನ್ಯಮಾರಣಮಂತ್ರಾಕ್ಷರಮಂ ಪೊನ್ನೊರೆಯಿಂದಂ ಬರೆದಂತಾ ನೃಪನ ತೋಳ ಬಾಳ್ವೊಗರಸೆಗುಂ (ಪಲ್ಲಕು. ೩-೦೩).

[ಬಾಳ್₃ + ಪೊಗರ್]

**ಬಾಳ್ವೊಗು** (ಕ್ರಿ). ವೈವಾಹಿಕಜೀವನವನ್ನು ಮೊದಲು ಮಾಡು ; ಸಾಂಸಾರಿಕಜೀವನವನ್ನು ಪ್ರಾರಂಭಿಸು : ಮದುವೆಯಾಗು : ಪಳೆಯ ರೋಗಕ್ಕೌಷಧಂಗೊಳಲ್ ನವರೋಗಮೊಲಿದು ಬಂದಂತೆ ಮೊದಲಾಣ್ಮನೊಳ್ಲಂದೊರ್ವ ಬಲವಂತನಂ ಬಯಸಿ ಬಾಳ್ವೊಗಲ್ ಬಡಿವ ಗಂಡಂ ದೊರೆಕಿದಂತೆ (ಕಂಪು. ೩೩-೭). [ಬಾಳ್₂ (< ಬಾಟ್₃) + ಪೊಗು]

**ಬಾಳ್ವೊಗೆ** (ನಾ). ಕತ್ತಿಗಳು ಪರಸ್ಪರ ತಾಗಿದಾಗ ಅವುಗಳ ಘರ್ಷಣೆಯಿಂದ ಹೊರಡುವ ಹೊಗೆ : ಬಾಳ್ವಾಳ್ಗಳ ಘಟ್ಟಣೆಯೊಳ್ ಬಳ್ವಳಬೆಳೆದೊಗೆದು ನೆಗೆದ ಕಿಡಿಗಳ ಬಂಬಲ್ಗಳ್ವೆರಸು ಪೊಳೆದು ನೆಗೆದುದು ಬಾಳ್ವೊಗೆ [ಕಾರ ಮುಗಿಲ್] ಬಳ್ವಿಮಿಂ[ಚಿನಿಂದು]ಳ್ಳುವವೋಲ್ (ಶಂಶಶಾ. ೧೦-೫೪). [ಬಾಳ್₃ + ಪೊಗೆ₂]

**ಬಾಜಿಸೊಬ್ಬೆ** (ನಾ). ಬೆಳೆಯುವ ಪೊದೆ, ಕಂಟಿ ಮೊದಲಾದುವುಗಳಿಂದ ರಚಿಸಿದ ಬೇಲಿ : ಉತ್ತರಸ್ಯಾನ್ ದಿಶಿ ಬಾಜಿಸೊಬ್ಬೆ (ಪ್ರಕಿಂ. ೦೯೪೯, ೬೦-೯೬ ; ೭೭೨).

[ಇದು 'ಬಾಚಿಸೊಬ್ಬೆ' ಎಂಬುದರ ಅಪಲಿಖಿತವಿರಬಹುದು]

**ಬಾಟ್₁**, ಬಾಳ್₁, ಬಾಳು₁ (ಕ್ರಿ). ಬದ್ದು₁, ಬರ್ದು₂, ಬಳ್ದು, ಬಟ್ದು (ಭೂತರೂಪ). ೧. ಬದುಕು; ಜೀವಿಸು : ಪತ್ರಿ ಪ್ರವಾದಫಲಕಮನತ್ಯುಗ್ರಗ್ರಾಹನಿವಹಸಂಕ್ಷೋಭಿತದೊಳ್ ಮತ್ತೀ ರತ್ನಾಕರದೊಳ್ ಪುತ್ರಿಕೆಯನೆ ಬಟ್ದಳಿಂತು ಬಾಟ್ವುದೆ ಚೋದ್ಯಂ (ಕಪಿಂ. ೨-೬೭); ಅರಾತಿಗಳ್ಗಳ್ಳಿ ತನ್ನ ಕುಲವುಂ ಚಲವುಂ ದೊರೆಯುಂ ಕಿಡೆ ಬಾಟ್ವಂ ಗಂಡರೂಪಿನೊಳ್ ಗಂಡನಲ್ಲು ಪೆಂಡತಿಯ ವಲಂ (ಅಂಕೀ. ೦೨-೯೩) ; ಸಮಸಂದತನ್ನ ಸಂತತಿಗೆ ಮಕ್ಕಳುಳ್ಳೊಡೆ ಬಟ್ದು ಬಾಟ್ವೆಳ್ [ಕ್ಷಿ]ತಿಯೊಳ್ ಸಮಸಂದೆಸೆಗುಮೆ ಸಂತತಿಗೆ ಮಕ್ಕಳಿಲ್ಲದಲ್ ಬರ್ದುದೇಂ ಬಾಟದುದೇಂ (ಸುಕುಷಾ. ೯-೦೦೪) ; ಸುಖದಿಂ ಅನುಭವಿಸಿಕೊಂಡು ಸರ್ವಮಾನ್ಯವಾಗಿ ಬದ್ದು ಬಹಿರಿ (ಪ್ರಕಿಂ. ೦೯೨೪, ೬೦-೨೩ ; ೧೬೪೦). ೨. ಹೊಟ್ಟೆ ಹೊರೆ: ಉದರನಿರ್ವಾಹ ಮಾಡು ; ಉಪಜೀವನ ನಡೆಸು : ಜೀವಿತಮಂ ಕೊಂಡು ಬಾಟ್ವಿನೆಂಬವಂ ಪ್ರಾಣಮಂ ಕುಡಲ್ವೇಟ್ಕುಂ (ಶಂತಕಂ. ೩೨-೦೦). ೩. ನೆಮ್ಮದಿಯಾಗಿರು ; ಸುಖದಿಂದ ಜೀವಿಸು; ಸಂತುಷ್ಟವಾಗಿರು: ಬತ್ಕಲೆಗರ ಮಾತುಗೇಳದಿರು ಬಾಟ್ವೆನವಿಂದ್ರಿಯವರ್ಗದಿಚ್ಛೆಯಂ ಸಲಿಸಿ . . . ಬಿಚ್ಚತಂ ನಲಿವುದು (ಅಂಪು. ೨-೯) ; ನಾಲಿಗುಳ್ಳನೆ ಬಾಟ್ಗುಂ (ಲಾಕಾಕೊ. ೨೦ ಪ್ರದೋ); ಬಾಟ್ವ ಮನೆಗೊಂದು ಬಗುಳ್ವುದು ಬೇಟ್ಕು ಮೆನ್ನಿರೆ? (ಅಸಂಪು. ೦-೯೦). ೪. ಒಕ್ಕಲಾಗು ; ನೆಲಸು ; ವಾಸಮಾಡು : "ಬಟ್ದಂ (ಬಾಟ್ದಂ)=ಜೀವಿಸಿದಂ ; ಒಕ್ಕಲಾದಂ" (ಶಮದ. ಕಂ. ೦) ; ಬಸಿಗೂರುಳ್ಬಾಟ್ವ ಪ್ರಜೆಗೆಲ್ಲಂ ಕೊಟ್ಟೊಪುದು ಕಟ್ಟಾಣೆ ಮರ್ಯಾದಿ ಕಾರಾಳ್ಗೆಗೊಟ್ಟಾರ್ (ಎ೯. IX (ಶ), ಮಾಗಡ. ೦೨೯-೯ ; ಸು. ೯೦೦). ೫. (ಆನೆಯನ್ನು) ನೆಲೆಯಾಗಿ ನಿಲ್ಲಿಸು: 'ಬಾಟಿಸು', 'ಬಾಟ್ಗಂಬ' ಪರಾ.

**ಬಾಟ್₁**: ೧. ಕವಿಮ್ಮ ಕುಪುತ್ರಾತ್ಮಿಜದಲನೊಲೆಯುಸ್ಸು ಮುಗ್ಗಿ ಬಳ್ವಂ ನಿತಾಂತಂ ಕಿಡೆವಲ್ಲಿಂ ಮುನ್ನ . . . ರಕ್ಷಿಪ್ಪದೆನ್ನಂ (ಕಣ್ಣಕ. ೩೬); ಮೋಹನರೂಪನೆ ನಿನ್ನ ಬಿಟ್ಟೇಪರಿಯಲಿ ಬಾಳ್ವೆ ಜೀಯ (ಮೋಹಕ. ೬-೦೬). ೩. ಸಪ್ತಋಷಿಗಳ್ ನುಡಿದಾಪ್ತವಚನಂ ಕರ್ಣರಸಾಯನಮಾಗೆ ಗಿರಿರಾಜಂ ಕೇಳ್ದು ಬಾಳ್ದು ಸಂದಣಿಸಿದ ಪುಳಕದಿಂ ದಳವೇಜ್ (ಗಿಂಕ. ೦೦-೨೬ ವ). ೬. ಬಾಳುವೆಮಾಡು ; ಒಗೆತನಮಾಡು ; ದಾಂಪತ್ಯಜೀವನವನ್ನು ನಡೆಸು : ವನಿತೆ ನಿನ್ನಂ ಬಾಳಲೀಯೆವು ಮನೆಯೊಳಿರದೇಡಿಗ ಹೊಜಿವಡು ನಿನಗೆ ನಾವಂಜುವೆವು (ಅಸಪು. ೩೨-೨೦). **ಬಾಳು₁**: ೧. ಬಾಣಾತ್ಮಸಂಭವೆಯಿಲ್ಲದಾನೊರ್ವ ಬಾಳೆನು (ಮೋಪಕ. ೩೯-೨೩). ೩. ತಾ ಬಾಳಲಾಜದೆ ವಿಧಿಯ ಬೈದನೆಂಬ ನಾಣ್ನುಡಿಯಾಯಿತ್ತಲ್ಲ ಬಸವಣ್ಣ (ಕೂಸ್ಮಕಂ. ೦೦೬-೬೭) ; ಆಯುವಂತನೆ ಬಾಳು ದನುಜನಿಕಾಯಮಸ್ತಕಶೂಲ ಬಾಳೆನು ತಾಯತಾಂಬಕ ಹರಸೆ ಮಾರುತಿ ಪದಕ ವಿವರಿಸಿದ (ಕೌಶಿಂಕ. ೯೩-೩); ಸೊಕ್ಕಾನೆ ಸಿಂಗದೊಳ್ ಕದನವ ಕಟ್ಟಿಕೊಂಡೊಕ್ಕಲಾಗಿರ್ದು ಬಾಳುವುದೇ (ಮೋಹಕ. ೩೩-೨೯). ೬. ಎಳೆವಣ್ಣೆಳ್ ಕೃತಿಗೆಳೆ ತಮ್ಮನಿಯರನೆಳೆವ ಯೊಳಳವುಗಡಿಸದೆ ಬೆಳಿಸಂದು ಬಾಳುವರು (ಹಂಪಿ. ೦-೩೩). ೭. ಬೆಲೆಯಾಗು ; ಬೆಲೆ ತರು : ಸಂತೆಯಲ್ಲಿ ಒಂದು ರೂಪಾಯಿ ಬಾಳುವ ಜೋಡು ಶ್ರೀಮಂತನ ಮೂಲಕವಾಗಿ ಎರಡು ರೂಪಾಯಿ ಬಾಳೀತೆಂಬುವ ಹಾಗಲ್ಲ (ಮುಂಹು. ೩-೦೨೦).

ಬರ್ದಂ, ಬರ್ದೊಂ = ಬದುಕಿದವನು ; ಬಾಳಿದವನು : ಬರ್ದರೊಳಾನೆ ಬ[ರ್ದಂ] [ಶಾಕಂ. ರ್ದಂ] (ಶಂಶಶಾ. ೯-೬೩) ; ಕಲ್ಲೆರ್ದೆತನದಿಂ ದೆನ್ನಂತು ಬರ್ದನಾವನುಮೊಳನೇ (ಗದಾಯು. ೩-೨೬) ; ಶಾಂತಮನುತಾಪಮನಾಜಿಸಿತಂ[ದುದಂ]ದು ಬರ್ದೊಂ ಪರೆದಿರ್ದವೋಲ್ ಮುನಿಗೆ ಕಲ್ಲೆಲೆ ಬಲ್ಲೆಲೆಯಂ ನಿದಾಘದೊಳ್ (ಶಾಂತಿಪು. ೯-೦೦೬).

[ದೇ. II ತಮಿ. ವಾಟ್; ಮಲ. ವಾಟು; ತುಳು. ಬಾಳು; ಕೋತ. ವಾಳ್]

**ಬಾಟ್₂** (ಕ್ರಿ). ೧. ಸೀಳು ; ಹೋಳು ಮಾಡು : ಕರಗಸಂಗಳಿಂದಂ ಮರನಂ ಪೋಟ್ವಂತೆ ಕಯ್ಯಂ ಕಾಲನಗಲ್ಚಿ ಪಿಡಿದಡಸಿ ಕಟ್ಟಿಯುದ್ದಂ ಬಡಿಮ ಬಾಟ್ವುದುಂ (ಪಕ್ಕಾರಾ. ೦೨೭-೦೩). ೨. (?) : ಬಾಟುಕಂ—ಸೀಳ್ದೊಣಗಿ ಬಾಟ್ದ ಶಾಕಂ (... ಕಂ. ೦).

**ಬಾಟ್₃**, ಬಾಳ್₂, ಬಾಳು₂ (ನಾ). ೧. ಬದುಕು ; ಇರವು ; ಜೀವನ : ಅವುದು ನಿನ್ನ... ಗಮೆಮ್ಮ ಬಾಟಿಸಿತೆ ನೀನಿಂತಿರ್ದೊಡಾವಾಸಿಯೋ (ಅಂಪು. ೩-೨೩) ; ... ದ ಶಂಕಾತಂಕದ ಸುತ್ತಿನೊಳಗುಟ್ಟದುಚಿ ನವೆವ ಬಾಟುಂ ಬಾಟೇ (ಪೀಕಾಪು. ೦೩-೩೪) ; ನೀನೆಂತೊ ಮಾಜಿಪೆಯೊಳ್ ಪಜಿರೊಡನುಸಿರ್ದು ಗುಟ್ಟಂ ಬಿಟ್ಟೊಡೆಮ್ಮನ್ನರ ಬಾಟ್ ಪಾಟಕ್ಕುಂ (ಶಾಮಾಕ. ೦೦೬-೦೭). ೨. ನೆಮ್ಮದಿ

ಯಾದ ಬದುಕು; ಸುಖಜೀವನ: ಪಜೆಪಟ್ಟ ಪಗೆವರಂ ನೆಱೆ ಪಱಿವಡಲಣಿಮಿಾಱುವವರನವರ್ಗಳ ಬಾಳ್ಗೊಳ್ ನಿಜಾಸಿರ್ ಬಗೆದ್ಯ (ಕಂಪಭಾ. ೯-೯೩); ನೆಲನ ಈ ಗೆಂಟಟಿಡೆಗೆ, ಬಟ್ಟಿಯಿರದ ಬಾಳ್ರದ ಸಿದಿಯದೀ ಪಾಲ್ಗೆ ವೆಟ್ಟದೆವು ಬಂದು ಕಟ್ಟಕಡೆಗೆ (ಐದ್ವಕ್ರ. ೦-೦). ೩. ದಾಂಪತ್ಯಜೀವನ; ಸಂಸಾರ: ಸ್ನೇಹವಿಲ್ಲದ ಕೋಡುಂ ಮೋಹವಿಲ್ಲದ ಬಾಳುಂ ಭಕ್ತಿಯಿಲ್ಲದ ಕೊಂಡಾಟಮುಂ ಶಕ್ತಿಯಿಲ್ಲದ ಸೆಣಸುಂ. . . ಒಪ್ಪಲಾರ್ಕುಮೆ (ಧರ್ಮಾಮೃ. ೦-೬೩). ೪. ಜೀವನಾಂತ; ಜೀವಿತ: ಶಸ್ತ್ರಂಗಳಂ ಬಲ್ಲೊಂಗಂ ಮಂತ್ರಿಪದವಿಯುಂ ಬಾಳುಮಂ ಪ್ರತಿಪತ್ತಿಯುಮಂ ಕೊಟ್ಟುದಂ ಕೇಳ್ದು (ವಡ್ಡಾರಾ. ೨-೨೩). ೫. ಜೀವ; ಪ್ರಾಣ: 'ಬಾಳ್ಗೆಣ' ಪರಾ. ೬. (ಜೀವಿತಕ್ಕಾಗಿ) ಕೊಡುವ ಭೂಮಿ: ಗಾಡಿಯೆಮ್ಮನಾ ಬಾಳುಂ ಪ್ರತಿಪಾಲಿಸಿ ನಿಲೆ ಪಡೆದೊಂ (ಎಕ. VII. ೨೦೩-೦೪;874). ೭. ಹಸಂರಿನಿಂದ ಕೂಡಿದುದು; ಹಸುರಾದುದು: 'ಬಾಳ್ಗೊಂಪ' ಪರಾ. ೮. ಹಸಿಯಾದುದು; ತೇವವುಳ್ಳದು: 'ಬಾಳ್ಗೆಣ' ಪರಾ. ಬಾಳ್$_2$: ೧. 'ಪುದುವಾಳ್ಕೆ' ಪರಾ. ೫. 'ಬಾಳ್ಗೊಗ್ಗಲೆ' ಪರಾ. ಬಾಳು$_3$: ೧. ಬಾಳ ನೋಡಕಟಕಟ ಎನಗಿದು ಬಾಳ (ಜಕಳ. ೯೩-೯೦); ಸೇವಾಪರನ ಬಾಳು ನಿರರ್ಥವವನಿಯಲಿ (ಜೈಮಿನಿ. ೯-೪೯); ಉತ್ತಮಮಾನವನ ಬಾಳೂ ಬದುಕೂ ಇರಬೇಕು ನದಿಗಳಂತೆ (ಕಬಂ. ೦೭). ೩. ಬಾಳಿಲ್ಲದವಳ [ಓ]ಲೆಯುಂತಾಯಿತ್ತೆನಗೆ (ಚಾಪ. ೨೯೬); ನನ್ನ ಬಾಳು ತಪ್ಪಿಸಿದ ನನ್ನ ಗಂಡನ ವಂಶದ ಹೆಣ್ಣುಮಕ್ಕಳು ಚೆನ್ನಾಗಿ ಬಾಳದೆ ಇರಲಿ (ಬಿಳಿ. ೨೨). ೬. ಹಿತ್ತಿಲ ಕೇರಿಯ ಉತ್ತರೇಶ್ವರದೇವರ ಬಾಳೊಳು ಹೂದೋಟದಿಂ ಪಡುವಲು (ಕಾಇಇ. IX-i. ೩೭೦-೨೩; 1269); ಅನ್ತ್ರ ಮಾೂ ೧೨ ಹ ೨೦ ಗದೆಯೂ ಆ ಬಾಳಿಂಗೆ ಬಂದ ತೋಟ ಮನೆಯೂ (ಸೌಇಇ. XI-ii. ೪೦೭-೨೬; 1364); ಧರಣಿದೇವಂಗಳು ಧನಿಯರ ಕಯ್ಯಲು ಧಾರಾಪೂರ್ವಕವಾಗಿ ಕೊಂಡ ಬಾಳಿನ ವಿವರ (ಕಾಇಇ. IX-ii. ೪೦೭-೫; 1366).

**ಬಾಳದಿರಿಕೆ** = ಭಿಕ್ಷೆಯನ್ನು ಬೇಡಿ ಜೀವಿಸುವಿಕೆ, –ಬದುಕುವಿಕೆ: ಏಳುಧರಣಿಯನಾಳುವರಸನಂ ಪೊಲೆಯನಿಗೆಯಾಳುಮಾಡಿದ ಪಂಚನರ ಸಾರ್ವಭೌಮನಿಗೆ ಬಾಳದಿರಿಕೆಯನಿತ್ತ ಶಂಭುಲಿಂಗೈಕ್ಯರೊಳು ಕೀಲಿಸಿದ ಪ್ರಾರಬ್ಧಭೋಗನೀತಿಯನು (ಕೃಶಂ. ೩-೦೦-೩). **ಬಾಳು ಮಾಡು** = ದಾಂಪತ್ಯಜೀವನವನ್ನು ನಡೆಸು; ಬಾಳುವೆ ಮಾಡು: ನೋಡು. ನೀನಿನ್ನೂ ಹುಡುಗಿ, ಅದರಲ್ಲೂ ಗಂಡನ ಮನೇಲಿ ಸುಖವಾಗಿ ಬಾಳು ಮಾಡ್ತಾ ಇರೋಳು (ಹಾಗಿ. ೭). [<ಬಾಳ್$_1$]

**ಬಾಳಗಾವುಂಡ** (ನಾ). ಒಬ್ಬಾತನ ಹೆಸರು: ಬಾಳಗಾವುಣ್ಡ ಕಂಭಯ್ಯನು ಕಳ್ಳವುಣಾಯಿಯೂರ ಮಹಾಜನಮುಂ (ಎಕ. XI. ಹತ್ರದು. ೫೦-೨೦; 968). [ಬಾಳು$_0$ + ಗಾವುಂಡ (< ಗಾಮುಂಡ)]

**ಬಾಳಿಕೆ** 'ಬಾಳ್ಕೆ' ನೋ.

**ಬಾಳಿಗೆ** 'ಬಾಳ್ಕೆ' ನೋ.

**ಬಾಳಿಮೆ** 'ಬಾಳ್ಮೆ' ನೋ.

**ಬಾಳಿಸು**, ಬಾಳಿಸು (ಕ್ರಿ). ೧. ಬದುಕಿಸು; ಉಜ್ಜೀವಿಸು: ರಸ[ಂ] ತೀವ ಮೆಯ್ಗೆ ತಕ್ಕ ಪ್ರತೀಕಾರದ ಮರ್ದುಗಳಂ ಮಾಡಿಯಾತನಂ ಬಾಳಿಸಿ ಕಟುಪಿದಂ (ಶಬ್ದಾರಾ. ೦೩೭-೦೯); ಎನ್ನಿಂ ಮುನ್ನಮೆನ್ನ ಮಗಂ ಸತ್ತನಾತನಂ ಬಾಳಿಸಲ್ವೇಟ್ಕುಂ (ಚಾವುಂಪು. ೪-೭). ೨. ಸಲಹು ಕಾಪಾಡು: ಅರುಮಂ ಶಂತಮಮ್ಮ ಭವ್ಯಮೆ ಬಾಳಿಸಲುಂ (ಶಂಕೂ. ೩-೦೩ ಪ). ೩. ಜೀವನವನ್ನು ಸಾಗಿಸಲು ಅವಕಾಶ ಮಾಡಿಕೊಡು; ಬಾಳಲು ಅನುಕೂಲ ಮಾಡಿ ಕೊಡು: ಅಯ್ವರುಮನಸ್ಪಯ್ದಟ್ ಯೂರೊಳೆ ಬಾಳಿಸು (ಶಂಕಿಶಾ.೦೨-೪೮); ಪೆರ್ಗ್ಗಡೆ ಮಾಚಯ್ಯ ಮಾಪ್ಪಲದ ಗಾವುಣ್ಡ ಗಜೆಯ ಮೆಟ್ಟಿಟ್ಟಡೆ ಬಾಳಿಸಿದ ಸ್ಥಿತಿಕ್ರಮಮಾವುದೆನ್ದೊಡೆ (ಎಕ. IV (R). ಹಾಮಹಾ. ೦೩೯-೯; 965). ೪. (ಆನೆಯನ್ನು) ನೆಲೆಯಾಗಿ ನಿಲ್ಲುವಂತೆ ಮಾಡು: ನೀಳ್ದ ತೋಳ್ ಮೆಱೆವುವು ಪೇರುರದೊಳ್ ನೆಲಸಿದ ಲಕ್ಷ್ಮೀಕರಿಣಿಗೆ ಬಾಳಿಸಿದ ರನ್ನದಮಳ್ಗಂಬದವೋಲ್ (ಹುಕೋಮ. ೨-೬).

**ಬಾಳಿಸು**: ೩. ನೀವು ಪ್ರೀತಿಯಿಂದ ನನ್ನನ್ನು ಬಾಳಿಸುವುದು ನನಗೆ ಬೇಕು (ಶಬ್ದಾ. ೨೦೨). [ಬಾಳ್$_1$ + –ಇಸು$_3$]

**ಬಾಳುಕ**, ಬಾಳಕ$_1$, ಬಾಳುಕ (ನಾ). ಸಂಡಗೆಯಂತೆ ಕರಿದು ನಂಜಿಕೊಳ್ಳಲೂ ಅಗತ್ಯ ಬಿದ್ದಾಗ ತರಕಾರಿಯಂತೆ ಬಳಸಲೂ ಅನುಕೂಲವಾಗುವಂತೆ ಸೀಳಿ ಅಥವಾ ಹೆಚ್ಚಿ, ಉಪ್ಪು ಬೆರಸಿ ಒಣಗಿಸಿದ ಮೆಣಸಿನಕಾಯಿ, ತರಕಾರಿ ಮೊದಲಾದುವು: "ಬಾಳುಕಂ = ಸೀಳ್ದೊಣಗಿ ಬಾಳ್ದ ಶಾಕಂ" (ಕಪಿಜ. ಕಂ. ೦). **ಬಾಳಕ$_1$**: ನೊರೆಸಂಡಗೆಯನು ಹುರಿಸಂಡಗೆಯನು ಬಾಳಕವನು ತಪ್ಪದೆಲ್ಲಾ ಸಾಧನವನು ಸಂಪರಿಸಿ ತಂದು (ಸಿದ್ಧರಾ. ೬-೩೨); ಪರಿಪರಿಯುಪ್ಪಿನಕಾಯಿ ಹಪ್ಪಳ ಸವಿವೆರಸಿದ ಬಾಳಕವ . . . ತರುಣೆಯರೆಡೆಮಾಡಿದರು (ಕೆಂಪಾಪ. ೬-೪೯); ಪಡುವಲಕಾಯಿ, ಬದನೆಕಾಯಿ, ಅವರೆಕಾಯಿ, ಹಾಗಲಕಾಯಿ ಇತ್ಯಾದಿ ತರಕಾರಿಗಳ "ಬಾಳಕ" ಮಾಡಿಟ್ಟುಕೊಂಡರೆ ಬೇಕಾದಾಗ ಕರಿದು ಊಟದ ಸಮಯದಲ್ಲಿ ಉಪಯೋಗಿಸಬಹುದು (ಅತುಹಾ. ೦೦೩). 'ಬಾಳ್ಕೆ$_2$' ಹೋ. **ಬಾಳುಕ**: ಉಪ್ಪಿನಕಾಯ್ ಪಳಿದ್ಯ ಕಚ್ಚರಿ ಬಾಳುಕಂಗಳೊಪ್ಪುವ ಪಕ್ವಫಲ ರಸಾಯನದ ಸೀಕರಣೆಗಳನು . . . ಉಣ ನೀಡಿಸಿದನಾ ಮಹಾಚರಕೊಲ್ಲು ಚೆನ್ನಬಸವೇಶ ನಂದು (ಕಪಿಶ. ೩-೬೦); ರಸರಸಾಯನ ಸಾರ್ಗಳುಪ್ಪುಗಾಯ್ಬಾಳುಕಂ ಕಸುಕಚ್ಚಡಿ ಪಾಲ್ಗೊಸರ್ಗಳಿವು ಬಗೆಗೊಳಿಸಿ ಪೊಸತೆನಿಸಿರಲ್ಪವಿದನಚ್ಯುತಂ (ಕೃಚಾ. ೬-೯೪); ಸಂಡಗೆಯ ಬಾಳುಕಗಳಂ ಕಲಸೋಗರಂಗಳನು . . . ನೈವೇದ್ಯಮುಂ ಮಾರ್ತಂಡಕೋಟಿಪ್ರಭೆಯ ಬೆಳಗುವಗರ್ಪಿಸಿದರೊಲಿದು (ಕಂಕಲಾ. ೨-೬೦).

**ಬಾಳುಕಮಾಗು** = (ಅಲಂ) (ಚಿಂತೆಯಿಂದ) ಸತ್ತ್ವಹೀನವಾಗು; ಬೆಂಡಾಗು: ಒಂಭತ್ತುತಿಂಗಳ್ ಬಕ್ತಿ ಬಾಳುಕಮಾಗಿ ಪೊತ್ತ ಬೇನೆಯುಂ ಸತ್ತ ಬೇನೆಯುಮುಮಂ ನೀಗಲಾಟಂ (ಅರಪೇ. ೭-೩೩ ಪ). [ದೇ. ॥ ತುಳು. ಬಾಳಕ, ಬಾಳುಗ]

**ಬಾಳ್**, ಬಾಳೆ$_1$ (ನಾ). ಅಗಲ ಹಾಗೂ ಉದ್ದವಿರುವ ಎಲೆಗಳಿದ್ದು, ಒಂದು ದಂಟಿಗೆ ಒಂದೇ ಗೊನೆ ಬಿಡುವ ಒಂದು ಬಗೆಯ ಹಣ್ಣಿನ ಗಿಡ; ಕದಳಿ: "ರಂಭಾ ಮೋಚ ಕದಳಿಯೆನಲು ಬಾಳಿಯಕ್ಕುಂ" (ಚುಂಗಿಧಾ. ೩೪-೯); ಭೀಮಸೇನಂ . . . ಬಾಳೆಯ ಬೆಳ್ಳನಪ್ಪ ಬನಮಂ ಕಾಡಾನೆ ಪೊಯ್ದಂತೆ ಪೊಯ್ದುನಿಸುಂ ಮಾಣದೆ ನೀಚಕೀಚಕನಿಕಾಯಧ್ವಂಸನಂ ಮಾಡಿದಂ (ಶಂಕಭಾ. ೯-೬೦); ಬಾಳೆಯ ವಣ್ಣದೊಂದು ರುಚಿ ನೇಟಿಲ ವಣ್ಣೊಳಗುಂಟೆ (ಧರ್ಮಾಮೃ. ೯-೦೨೭). **ಬಾಳೆ$_1$**: ಬಾಳೆ ತೊಟ್ಟುಪಟ್ಟು ಬ್ರಹ್ಮದೇಯಂ ಕೊಟ್ಟೋದು (ಎಕ. X. ಕೋಲಾರ. ೨೪೦-೫; ಕು. 800 ?); ಕಬ್ಬು ಬಾಳೆ ಹಲಸು ನಾರಿವಾಳಕ್ಕ ಸಿಹಿನೀರನೆಱೆದವರಾರಯ್ಯ (ಮಹಾದೇ. ೩. ೦೦-೩); ನಿನ್ನ ಬಟ್ಟದೊಡೆಗೆ ಬಾಳೆ ಬಹಿಷ್ಕಾರಂ (ಶಂಬಿಶ. ೦೯-೦೬).

**ಬಾಳೆಕಂದು** = ಬಾಳೆಯ ಸಸಿ: ಕಂಬ ತರುವುದು ಎಂದರೆ ಒಂದು ಬಾಳೆಕಂದು ಕಡಿದು ಅದನ್ನು ತೊಳೆದು ಪೂಜೆ ಮಾಡಿ . . . ಅದಕ್ಕೆ ಹೊಂಬಾಳೆ ಸಮೇತ ಕಟ್ಟುವುದು (ಜಪ್ಪೂಕು. ೯೩). **ಬಾಳೆಕಾಯಿ** = ೧. ಬಾಳೆಗಿಡದ ಕಾಯಿ; ಪಕ್ವವಾಗದ ಬಾಳೆಹಣ್ಣು: ಬಾಳೆಕಾಯಿಯ ಪಲ್ಯ ಎಂದರೆ ನನಗೆ ಇಷ್ಟ (ರೂಹಿ). ೨. (ಸೀರೆಯನ್ನು ಉಡುವಾಗ) ನಿರಿಗೆಗಳನ್ನು ಬಾಳೆಕಾಯಿಯ ಆಕಾರದಲ್ಲಿ ಮೇಲಕ್ಕೆ ತಿರುವಿ, ಸೊಂಟದಲ್ಲಿ ಮಡಿಸಿ ಸಿಕ್ಕಿಸಿದ ಸೀರೆಯ ಅಂಚು:

ಬಾಳೇಕಾಯಿಯಲ್ಲಿ ಸಿಕ್ಕಿಸಿಟ್ಟುಕೊಂಡಿದ್ದ ದುಡ್ಡು ಭದ್ರವಾಗಿಯೇ ಇದೆ (ಕೂಕಿ). ೩. (ಉಕ) ಬಾಳೆಯ ಹಣ್ಣು: ಪೇಟೆಗೆ ಹೋಗಿ ಬೇಗನೆ ದೇವರ ಪೂಜೆಗೆ ನಾಲ್ಕು ಬಾಳೆಕಾಯಿ ತೆಗೆದುಕೊಂಡು ಬಾ (ಕೂಕಿ). ಬಾಳೆ ದಿಂಡು = ಬಾಳೆ ಗಿಡದ ಕಾಂಡದ ಒಳಭಾಗ: ಬಾಳೆದಿಂಡನ್ನು ಅಡಿಗೆಗೆ ಉಪಯೋಗಿಸುತ್ತಾರೆ (ಕೂಕಿ). ಬಾಳೆಪಟ್ಟೆ = ಬಾಳೆಕಂಬದ ತೊಗಟೆ,— ಸಿಪ್ಪೆ: ಫಲಗಳ ವೃಕ್ಷಗಳ ಬಿತ್ತಗಳಂ ಚೆನ್ನಾಗಿ ಕಳಿತ ಬಾಳೆಹಣ್ಣುಗಳಿಂದಾ ಬಾಳೆನಾರುಗಳಿಗೆ ಲೇಪವಂ ಮಾಡಿ ಆ ಪಟ್ಟೆಗಳಲ್ಲಿರಿಸಿ ಮೇಲುಗಡೆ ಬಾಳೆಪಟ್ಟೆಗಳಂ ಮುಚ್ಚಿ (ಸೌಗಂ. ೪೨೬-೦೦).

[ದೇ. ॥ ತಮಿ. ವಾೞೈ; ಮಲ. ವಾೞ; ತುಳು. ಕೊಡ. ಬಾಳೆ]

**ಬಾೞೆಪಣ್** 'ಬಾೞೆವಣ್' ನೋ.

**ಬಾೞೆಲೆ,** ಬಳ್ಳಿ₂, ಬಾಳೆಲೆ (ನಾ). ಬಾಳೆಯ ಗಿಡದ ಎಲೆ; ಕದಳೀ ಪತ್ರ: ಬಾೞೆಲೆಯುಂ ತಿಂದು ಪಣ್ಣಂ ತಿಂದೆನೆಂಬಂತೆ (ರರ್ಹಾಮ್ಯ. ೦೪-೦೧೦); ಪಚ್ಚನೆ ಬೆಳೆದ ಬಾೞೆಲೆಯೆ ಪೊಸಕಾವಣವಾಗೆ . . . ಸಮೆ ದೊಂದೋಲಗದ ಶಾಲೆಯೊಳ್ (ರಾಜಶೇ. ೫೬-೨೫). **ಬಳ್ಳಿ₂**: ಅಣ್ಣಯ್ಯಾ ಬಳ್ಳಿ ಹಾಕಿದ್ದಾರೆ, ಉಣ್ಣಕ್ಕೆ ಬರಬೇಕಂತೆ (ಕಾಸೂರು. ೬೨೬); ಸಾಲಾಗಿ ಬಳ್ಳಿ ಹಾಕಿದ್ದರು ಒಳಗೆ (ಶ್ರಕ್ಷ. ೧೩೦). **ಬಾಳೆಲೆ**: ತುಪ್ಪ ಮಜ್ಜಿಗೆ ಬಾಳೆಲೆ ತಾಂಬೂಲ ಮುಂತಾಗಿ (ಕೊಂಕಣ. ೧೯೯೦. ಕಮುಟಿ. ೦೦೩-೨೬; 1476); ಒಪ್ಪಿರೆ ಬಾಳೆಲೆಯಲ್ಲಿ ಭಕ್ಷ್ಯಭೋಜ್ಯಾದಿಗಳಂ ಗಡಣಿಸಿ . . . ದೇವರಾರೋಗಿಪುದೆಂದೊಡನುಸಿರ್ದು ಕೆಯ್ಮುಗಿದಳೊಲ್ದು ಡುಪತಿಮುಖಿ (ವೃ.ಕಂ.೩೬-೨೫); ಬಾಲಕರಿಲ್ಲದ ಬಾಲಿದ್ಯಾತರ ಜನ್ಮ . . . ಬಾಳೆಲೆಯ ಹಾಸ್ಯುಂಡು ಬೀಸಿ ಒಗೆದಂಗ (ಗರತಿ. ೦೦೬). [ಬಾೞ್ + ಎಲೆ₁]

**ಬಾೞೆವಣ್,** ಬಾಳೆವಣ್, ಬಾಳೆಹಣ್ಣು, ಬಾೞೆಪಣ್ (ನಾ). ಬಾಳೆಯ ಹಣ್ಣು; ಕದಳೀಫಲ: 'ನಲ್ವಾೞೆವಣ್' ಪರಾ. **ಬಾಳೆವಣ್**: ವನಪಾಲಂ ಕಾಣ್ಕೆಗೈದಂ ವಿಚಕಿಲದರಲಂ ಪಚ್ಚೆಯಂ ಬಾಳೆವಣ್ಣೊಳ್ಗೊನೆಯುಂ (ರಾಜಶೇ. ೦೦-೨). **ಬಾಳೆಹಣ್ಣು**: ಬಾಳೆಹಣ್ಣು, ತುಪ್ಪ ಮುಂತಾದುವುಗಳನ್ನು ಸೇರಿಸಿ ಮಾಡಿದ ಬೂಪ ತಟ್ಟೆಯಲ್ಲಿರುತ್ತದೆ (ಪಪ್ಪೂರು. ೯೯); ಬಾಳೆಹಣ್ಣು ತಿನ್ನು ಬಾರೋ ಎಂದರೆ ಸುಲಿದು ಇಟ್ಟಿದ್ದೀಯಾ ಎಂದ (ಗಾದೆ). **ಬಾೞೆಪಣ್**: ಬಾೞೆಪಣ್ಗೆನಿದಪ್ಪುದೆಂತು ಸಹಜಂ ಸಕ್ಕರೆಗೆ ಸಿಹಿಯಾಗಿರ್ಪುದೆಂತು ಸಹಜಂ . . . ಅಂತೆ . . . ಭಕ್ತಿಯುಂ ಸಹಜವಾಗಿರ್ಕುಂ (ರರ್ಹಾಮ್ಯ. ೪-೪೦).

[ಬಾೞ್ + ಪಣ್₃]

**ಬಾೞೊಟ್ಟಿ,** ವಾೞೊಟ್ಟಿ (ನಾ). ಬೆಳೆಯುವ ಪೊದೆ, ಕಂಟಿ ಮೊದಲಾದುವುಗಳಿಂದ ರಚಿಸಿದ ಬೇಲಿ; ಹಸುರುಬೇಲಿ: ಅಂತೆ ಪಂದು ಮಂಜಳ್‌ತೊಣೆಎ ಬಾೞೊಟ್ಟಿಎ ಸಂದು (ವ್ಯ.ಕಂ. ೦೯೨೬. ೦೦೬-೯೯; 726). **ವಾೞೊಟ್ಟಿ**: ಅಂತೆ ಬಂದು ಬಾಣ್ಸಿಗಾರ್ಲಕುಪ್ಪೆಯ ವಾೞೊಟ್ಟಿಯ ಸಂದು ಪಾದರಿಯಾಳ್ ಕೂಡಿತ್ತು ಸೀಮೆ (ವ್ಯ.ಕಂ. ೦೯೨೬. ೦೦೬-೩೦; ಹು. 726). [ ಬಾೞ್₁ + ಒಟ್ಟಿ (< ಒಟ್ಟಿ) ]

**ಬಾೞ್ಕೆ,** ಬಾಳಿಕೆ₁, ಬಾಳ್ಕೆ, ಬಾಳ್ವಿಕೆ, ಬಾೞಿಕೆ, ಬಾೞಿಗೆ (ನಾ). ೧. ಬದುಕು; ಜೀವನ: ಅಂಧನಾದನಾರ್ ಶರಣೆನಗೆನ್ನ ಬಾೞ್ಕೆಯೆ ನಿರರ್ಥಕಂ (ಕಾದಂಪೂ. ೯೦೨); ಸತ್ತೊಡೆ ಪುಟ್ಟರೆ ತನಗಿದೇಕೆ ಬಾೞ್ಕೆಯ ಮೋಹಂ (ರರ್ಹಾಮ್ಯ. ೪-೩೦); ಪಾಪಪುಣ್ಯಾದಜೀವಿಂದಿರದಾತನ ಬಾೞ್ಕೆ ನಿಷ್ಫಲಂ (ಜಕಳು. ೦೪-೨೫). ೨. ಉಸಿರು; ಜೀವ; ಪ್ರಾಣ: ಶಾರದಂಗಳ ಜಸದೇೞ್ಗೆ ಲಕ್ಷ್ಮಿಯ ಮುಗುಳ್ನಗೆ ಜೊನ್ನದ ಬಾೞ್ಕೆ ರತ್ನಸಂಕುಳ ದಧಿದೈವಮೆಂದೆಸೆದುದುಜ್ಜ್ವಳವೌಕ್ತಿಕಹಾರಮಂಡಲಂ (ಕಾದಂಕಾ. ೦೦೬); ಒಕ್ಕನಿನಿಯಂ ತನ್ನಿಕ್ಕೆಯುಂ ಬ್ಬಾೞ್ಕೆಯುಂ (ಅರ್ಜನೀ. ೩-೬೦). ೩. ಜೀವನಕ್ಕೆ ಹಿತವಾದುದು; ಪ್ರಯೋಜನವುಳ್ಳುದು: ಪದಿನೆಂಟುಂ ದೋಸವುಂ ಪೊರ್ದದಾಡಿದ ಮಾತಲ್ಲರ ಬಾೞ್ಕೆಯುಪ್ಪಜೀವಿನೊಳ್ ಮೂಲೋಕಮಂ ಕಾಣ್ಬ . . . ಅರುಹಂತಂ ನಲ್ಮೆಯಿಂ ಮಾೞ್ಕೆ ಬೇಡಿಮದುದಂ ತನ್ನಜಪಟ್ಟಿರ್ಗೆ (ಅಧ್ಮಾ. ೩೯೯). ೪. ಬದುಕಿನ ಅವಧಿ; ಸಮಗ್ರಆಯುಷ್ಯ: ಅನಿಮಿದವಂತಿ 'ಮೂಳಪಮಾಳ್ವ ವೃಷಭಾಂಕನೃಪನ ಬಾೞ್ಕೆಯ ಸಿರಿಯಾತನ ದಿವಸದ ಭೋಗದನಿತಿಲ್ಲನೆ ಪರದನ ಹಿರಿಯ ಸಿರಿಯೆನಜೀಯೆಂ ಪೊಗಟಲ್ (ಸುಕುಮಾ. ೯-೬೩).

**ಬಾಳಿಕೆ₁**: ೧. ಮೇಲನಜೀಯದ ನೃಪನ ಬಾಳಿಕೆ ಗಾಳಿಗೊಡ್ಡಿದ ಸೊಡರು (ಕುಮ್ಯಾ.ಸ. ೦-೩೦); ಮಾನವಿಲ್ಲದ ಬಾಳಿಕೆಗಿಂತ ಸಾವು ಲೇಸು (ಮುಂಬಹು. ೪-೦೯೦). ೪. ಹೂಸಕದ ಶೌರಿಯದ ಬಾಳಿಕೆಯೇಸು ದಿನವೈ (ಕುಮ್ಯಾದ್ರೋ. ೬-೨೦); ತನುವಿದು ತಾವಾರಸಬ್ಬಾಧವನ ಬಾಳಿಕೆ ತನಕ ಶಾಶ್ವತವೆ (ಕೊರಡ. ೩-೬-೩೪). ೫. ಗೃಹಸ್ಥಜೀವನ; ದಾಂಪತ್ಯ ಜೀವನ: ಸತಿಸುತಕೂಟ ಭಯವೆಂದು ಬಾಳಿಕೆಯನತಿಗಳೆದು ಮರಳಿಯು ಬೋಳು ಮಂಡೆಯ ಕೀರ್ತಿಗೋಸುಗ ಕೋಳುಹೋದನೆ ರಾಮನು (ಕ್ರಕುರು. ೦೩-೩). ೬. ಹೆಚ್ಚು ಕಾಲ ಕೆಡದೆ ಇರುವಿಕೆ; ಚೆನ್ನಾಗಿ ಉಳಿಯುವಿಕೆ: ತಾಳಿಕೆ: ಅಡುಗೆಮನೆಯ ಸಲಕರಣೆಗಳು . . , ಒಳ್ಳೆಯ ತರಗತಿಯವುಗಳಾಗಿರಬೇಕು. ಇವುಗಳಿಗೆ ಕ್ರಯ ಹೆಚ್ಚಾದರೂ ಹೆಚ್ಚು ಕಾಲ ಬಾಳಿಕೆ ಬರುತ್ತವೆ (ಅಡುಗೆ. ೩೨); ರೆಯಾನ್‌ಬಟ್ಟೆ . . . ಇದು ತಕ್ಕಮಟ್ಟಿಗೆ ಬಾಳಿಕೆ ಬರುತ್ತದೆ (ಗೃಹ. ೬೧). ೭. ದತ್ತಿ ಕೊಟ್ಟ ಜಮೀನು; ಮಾನ್ಯದ ಭೂಮಿ: ಹರಿಯತು ಲೋಕ ಬೆಟ್ಟಂಬ ಬಾಳಿಕೆಯನು ಬಾಳಿ ಬಂದಲ್ಲಿ ಅಲ್ಲಿಯ ತೆರು [ಸಿ]ದ್ದಾಯ ಬಡ್ಡಿ ವಾಸಿ ಹೊಂನು ಭತ್ತವನು ಕಾಲಕಾಲಕೆ ನಡಸತೀರದೆ ಬಿರಲಾಗಿ (ಕಾಇ. IX—ii, ೯೬೦-೦೨; 1465); ಮುಂದಕ್ಕೆ ನಿಂಮ ಬಾಳಿಕೆಯಲು ಪಟ್ಟಲಬಿದ ಕಾರು ಬತು ಬಳ್ಳ ೩೦ (ಕಾಇ. IX—ii, ೯೬೦-೦೬; 465). **ಬಾಳ್ಕೆ**: ೨. ವಿರೋಧಿಯ ಬಾಳ್ಕೆ ತನ್ನದೆ ಮುಪ್ಪದನೆನೆ ಪೆರ್ಮೆಯಿಂ ತಳೆದನೋ ನೃಪರೊಳ್ ನೃಪತ್ಯಲಶಾಸ್ತ್ರಂ (ಎಕ. VIII. ಸಾಗರ. ೦೩೯-೦೩; 1159). ೪. ಜವನುಮಾತನ ಬಾಳ್ಕೆಯ ಲೆಕ್ಕದೋಲೆಯಂ ತೊಡದು ಬಿಸುಟ್ಟನೆಂದಜೀವುದು (ಕಾಇ. IX—i, ೨೯೬-೩೦; 1177). ೫. ದುಗುಡದಿ ಬಾಳ್ವ ಗೃಹಸ್ಥರ ಬಾಳ್ಕೆಯ ನಗುವಂತೆ ನಗುತ ನಡೆದರು (ಅಡ. ೨೦-೩೩); ಬಿಟ್ಟನೆ ರಘುಶ್ರೇಷ್ಠ ನೆನ್ನನು . . . ನೆಗಳ್ದ ಬಾಳ್ಕೆಗೆ ಸಂಚಕಾರವಂ ಕೊಟ್ಟನೆ (ಕ್ರಮಿಚಂ. ೦೯-೦೬). **ಬಾಳ್ವಿಕೆ**: ೧. ಛೀ ನನ್ನ ಬಾಳ್ವಿಕೆಯ, ಛೀ ನನ್ನ ಚೆಲ್ವಿಕೆಯ (ಕೃಷ್ಣಾಕು. ೨-೨೦).'ಅಳ್ವಿಕೆ' ಹೋ. **ಬಾೞಿಕೆ**: ೧. "ಜೀವನ ಮೆನಲು ಬಾೞಿಕೆ" (ಶಂಗಾ. ೦೦೨-೦). **ಬಾೞಿಗೆ**: ೭. ಜಡ್ಡೂರಾಳ್ಗೆ ಯೆಬ್ಬೆತ್ತರ್ಕ್ಕಂ ಬಳ್ಳಿಗಾಮೆಯ ಬಾೞಿಗೆ ಸಹಿತ ನಾಲ್ಕಾಪುಣ್ಣುಗೆಯ್ಯೆ (ವ್ಯ.ಕಂ. ೦೯೨೯, ೬೩-೬; 984). [ಬಾೞ್₁ + —ಕೆ]

**ಬಾೞ್ಗೊಡು** (ಕ್ರಿ). ಉಪಜೀವನಕ್ಕಾಗಿ ಭೂಮಿಯನ್ನು ದಾನವಾಗಿ ಕೊಡು,—ವೃತ್ತಿಯನ್ನು ಕಲ್ಪಿಸು: ಕರಣಗ್ರಾಮಮನೀ ಮಾವರಕ್ಕೆ ಮಧು ಬಾೞ್ಗೊಟ್ಟು ಕಿಸುವಲಗೆಗಳಿಂ ಬರೆದಿತ್ತಿದ ಶಾಸನಕೇಂ ದೊರೆಯಾದುವೊ ಸೊನೆಯ ಪನಿ ಪಗಿಲ್ತೆಳದಳಿರ್ಗಳ್ (ಮಲ್ಲಿಕ. ೬-೩೦).

[ ಬಾೞ್ಕೆ +.ಕೊಡು₁ ]

**ಬಾೞ್ಗಂಬ** (ನಾ). ಆನೆಯನ್ನು ನೆಲೆಯಾಗಿ ಕಟ್ಟಲು ಕಂಬದಂತೆ ಉಪಯೋಗಿಸುವ ಮರ; ಆಲಾನಸ್ತಂಭ: ಅಂಬುಜಸೂತ್ರ ಮೆಂಬ ಪೆಣೆದಾವಣಿಯುಂ ಪಡಿದಾವಲೆಂಬ ಬಾೞ್ಗಂಬಮನೊತ್ತಿ ಕಿಟ್ಟು . . . ಸೋವುದು ಸವಿಾರಣವಾರಣಂ (ಕಾವ್ಯಾ.ಶ. ೬೦೯); ಆ ಮಹಾಮದೇಭಂ . . . ಬೀಡಿಂಗೋರ್ಗಾಪುದರದಿ ಬಾೞ್ಗಂಬದೊಳ್ ಸೆಡೆಗೆಯ್ದುವಿರ್ದೊಂದುದಿವಸಂ ಕ್ರೋಧಿನಿಯೆಂಬ ಸಪ್ತಮದಾವಸ್ಥೆಯಿಂದಾದ ಮನದ ಮಸಕದಿನಸವಸದೆ ನೆಲದ ನಾಲಗುಂ ಕೀೞ್ವಂತೆ

ಬಾಟ್ಗುಂಬವುಂ ಕಿಟ್ಟು (ಚಂದ್ರ ಪು. ೯-೦೦೦ ವ); ಅವಳ . . . ನುಣ್ಣೊಡೆಯೆಂಬ ಪೊಂಬಾಟ್ಟಿಯು ಬಾಟ್ಗುಂಬವುಲರ್ಗಣ್ಣಿಯನೆಂಬ ಸೋರ್ಕಾನೆಯುಂ ತೊಲಗಲೀಯದೆ ನಿಲಿಸೆಯುಂ (ಕಬ್ಬಿಗ. ೦೨೩).

[ ಬಾಟ್$_1$ + ಕಂಬ$_1$ ( < ಕಂಭ) ]

**ಬಾಟ್ಗುಡಿ** (ನಾ). (ಅಲಂ) ಚಲಿಸುತ್ತಿರುವ ಕುಡಿ ; ಚಂಚಲವಾದ ಚಿಗುರು: ಬಳ್ಳಿವ ಬಹುಳಹಿಂಸಾವಿಷವುವಿಷವಲ್ಲಿಯು ಬಳೆದ ಬಾಟ್ಗುಡಿಯೆನೆ ಬೆಡಂಗುವಡೆದ ಲೋಳಲಾಂಗೂಲಲತೆಯೊಳಂ . . . ಭಯಂಕರ ಮಾಡುದುದು (ಪರೇಶ. ೦೦-೩ ವ). [ ಬಾಟ್$_3$ + ಕುಡಿ$_2$ ]

**ಬಾಟ್ಗುದಿ** (ನಾ). ಜೀವಂತವಾಗಿ ಅನುಭವಿಸುವ ಅತಿಯಾದ ಹಿಂಸೆ ; ಪ್ರಾಣಸಂಕಟ : ತೋ[ಕೋ]ಳ್ಗುದಿ ಬಾಟ್ಗುದಿಯಾಗಿ ಬೇವ ದಳ್ಳುರಿಗಳ ಮಾಲೆಗೊಂಡ ಬೆಳಗಿಂ ಬೆಳಗಾಯ್ತೆರಡುಂಬಲಂಗಳೊಳ್ (ಅನಂಪು. ೦೦-೯೬). [ ಬಾಟ್$_3$ + ಕುದಿ$_3$ ]

**ಬಾಟ್ಗುಳಿ**, ಬಾಳುಗುಳಿ, ಬಾಳ್ಗುಳಿ (ನಾ). ಒಂದು ಊರಿನ ಹೆಸರು : ಬಾಟ್ಗುಳಿಯೂರ ಬೊಜಜ್ಜಿಗೇಶ್ವರದೇವರ ಪಟ್ಟದಭೂಮಿ ಎಡೆಯೊಳೆ ರಾಶಿಕವಾಗಿಟ್ಟೊಡೆ ಬಿಡಿಸಿ (ಎಕ. IV (R), ಕಾಮಚಾ. ೧೦೯-೬; 10ನೆಯ ಶತ). **ಬಾಳುಗುಳಿ** : ಬಾಳುಗುಳಿಯ ಮಹಾಜನ ಅಯ್ಯದಿಂಬರುಂ ಉಭಯಸಮ್ಮತದೊಳಿಟ್ಟು ಬಳಿಯರ ಬಾದವ್ವೃಗೆ ಬೂದಗೂಟನಿತ್ತೂರ್ (ಸೌಇಇ. IX—i, ೩೯-೭; ಸು. 10ನೆಯ ಶತ). **ಬಾಳ್ಗುಳಿ** : ಬಾಳ್ಗುಳಿಯಯೂರೊಡೆಯಂ ಪಶುಪತಿಭಟ್ಟಜಿಗ್ಗೆ ಬಾಬನ್ದಿಯ ಸಂಬನ್ಧದ ರಾಜದ್ರವ್ಯಮೂದುದೆಲ್ಲವಂ ಬಿಟ್ಟರ್ (ಸೌಇಇ. IX—i, ೬೬-೦೦ ; 956) ; ಶ್ರೀಮತುಹರಿಶ್ಚಂದ್ರ ದತ್ತಿಯ ಮಹಾಗ್ರಹಾರಂ ಬಾಳ್ಗುಳಿಯೂರೊಡೆಯ ಪ್ರಮುಖವಿಶೇಷಮಹಾಜನಂ ( ಸೌಇಇ. IX-i, ೨೩೩-೦೯ ; 1143 ) ; ಶ್ರೀವೀರಬಲ್ಲಾಳದೇವರು ಶ್ರೀಮತುಹರಿಶ್ಚಂದ್ರ ದತ್ತಿಯಗ್ರಹಾರ ಬಾಳ್ಗುಳಿಯ ನೆಲೆವೀಡಿನೊಳು . . . ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರ್ದು (ಸೌಇಇ. IX-i, ೩೦೯-೩೨ ; 1193).

[ಬಾಟ್$_3$ + ಕುಟ್ಟು]

**ಬಾಟ್ಜೊಂಪ** (ನಾ). (ಹಸುರಾದ) ಬಳ್ಳಿಗಳ ಮಂಟಪ; ಲತಾಕುಂಜ : ಮನಮೊಲ್ದಾತನ ಗಾಡಿಯುಂ ದರವುರಂಗಂಡಾಕೆಗಳ್ ಪೂವಿನಂಬಿನ ಕೋಲ್ಗಂ . . . ಬಾಟ್ಜೊಂಪಕ್ಕವೊಂದೊಂದೆ ತಣ್ಣನಿಯೊಳ್ ಕೋಡಿಸುತಿರ್ಪ ಬಿಜ್ಜಣಗೆಗಂ ಪಕ್ಕಾಗದೇಂ ಪೋಪರೇ (ಅಂಪು. ೦-೬೩); ಬಾಟ್ಜೊಂಪವೋ ಕೋಗಿಲೆ ಗಿಳಿಯೋ ಕಂಡಿರೆ ಪೇಟಿಮೆವ್ಯ ಪತಿಯುಂ (ಸುಕುಮಾ. ೧೨-೨೦); ಅಸುಕೆಯು ಕೇದಲಿಗಳ ಬಾಟ್ಜೊಂಪಂ ಪಸರಿಸಿ ಪಡೆದುದು ಚಿತ್ತದಲಂಪಂ (ಅನಂಪು. ೦೦-೦೮ ಕಳೆ). [ಬಾಟ್$_3$ + ಜೊಂಪ$_2$]

**ಬಾಟ್ತಿ**, ಬಾತೆ, ಬಾರ್ತೆ, ಬಾಳ್ತಿ, ವಾಟ್ತಿ (ನಾ). ೧. ಬದುಕು ; ಬಾಳುವೆ ; ಜೀವನ : ಸ್ಮೈಪನೊತ್ತಂಬರಂ ಪೊಗರ್ವೆತ್ತಂಗದ ಸಿಂಗರಂ ಸೊಗುಸುನೊಪ್ಪಂ ಬಾಟ್ತಿಯೊಂದೇಟ್ಟರಂ ಮಿಗುತೇಂ ಬಂದಪುವು ( ಕಳಾ. ೬-೨೩೮ ) ; ಪಗೆದೊರೆಗಳುಮೊಂದಿದರಾ ಬರ್ದಿಲನಾಡ ಬಾಟ್ತಿಯ ಸಿರಿಯಂ (ಅಕ್ರಶ. ೦೭-೦೩). ೨. ಉಪಯೋಗ ; ಪ್ರಯೋಜನ : "ಬಾಟ್ತಿ ಪ್ರಯೋಜನಂ" (ಕಮದ. ಶಂ. ೦) ; ಕಿಡುಗುಮೆ ರಾಜ್ಯಂ ರಾಜ್ಯದ ತೊಡರ್ಪದೇವಾಟ್ತಿ (ಶಂಕರಾ. ೦-೬೨); ದೃಷ್ಟವ್ಯ ದರ್ಶನಫಲ ಲೋಚನಮೆಂಬಂತೆ ನೋಡುವುದೆ ಬಾಟ್ತಿ (ಶಾಂತೀ. ೯-೬೬ ಕ) : ನಾಲಗೆಯುಮಂ ನಲ್ಲನುಮನೊಲ್ಲದ ಪಣ್ಣ ಸವಿಯುಂ ಪೆಣ್ಣ ರೂಪುಮೇಂ ಬಾಟ್ತಿ (ಅರ್ಗಳ. ೩-೦೦ ವ). ೩. ಇಷ್ಟವಾದುದು ; ಬೇಕಾದುದು ; ಬಯಸಿದುದು : ಎಮಗೆ ಮರ್ದು ಬಾಟ್ತಿಯುಪ್ಪೊಡೆಮಗಾಮೆ ಮರ್ದಂ ಬಲ್ಲೆವೆಮಗದು ಬಾಟ್ತಿಯಲ್ತು (ವಡ್ಡಾರಾ. ೬೯-೨೮) ; ನಿಮಗೆ ಬಾಟ್ತಿಯುಪ್ಪುದಂ ಬೇಡಿಕೊಳ್ಳಿಂ (ಶಂಕರಾ. ೩-೬೦ ವ). ೪. ಉಪಯುಕ್ತವಾದುದು ; ತಕ್ಕುದು ; ಯೋಗ್ಯವಾದುದು : "ಬಾಟ್ತಿಯೆನೆ ಯೋಗ್ಯಂ" (ಸಂಕಲಪ. ೨) ; ಎಮಗೊಂದು ಪೇಟು ಮಣ್ಣು ಬಾಟ್ತಿಯಾಗೆ ತರಿಸಿಕೊಂಡೆವೀಯಾಟಿದ ಮಣ್ಣೆಮಗೆ ಬಾಟ್ತಿಯಲ್ತು ನಿಮ್ಮ ನಿಮ್ಮ ತಂದ ಮಣ್ಣಂ ಕೊಂಡು ಪೋಗಿಂ (ವಡ್ಡಾರಾ. ೦೬೮-೯) : ಈ ವ್ರತಂ ನಮಗೆ ಬಾಟ್ತಿಯಲ್ಲಿದೆ ಬಿಡುವುದು (ಶೀಬಿಕೆ. ೯-೦೬ ವ). ೫. ಯೋಗ್ಯನಾದವನು ; ತಕ್ಕಹನು : ಅರಸಿಯರ್ಕಳಿಲ್ಲಂ . . . ನುಡಿವ ಮಾತುಗಳಂ ಜಿನದತ್ತೆ ಕೇಳ್ದು ಕಿನಿಸಿ ಇನ್ನಾತನೆನಗೆ ಬಾಟ್ತಿಯಲ್ಲನೆಂದು ತನ್ನ ಮಾಡದಿಂ ಪೊಱಮಟ್ಟು . . . ಪೋಗಿರ್ದೋಳ್ (ವಡ್ಡಾರಾ. ೦೦೦-೨೩). ೬. ಕೆಲಸ ; ಕಾರ್ಯ ; ಉದ್ಯೋಗ : ಬಾಟ್ತಿಯುಳ್ಳೊಡೆ ನೀನೆ ಬರ್ಪಂತುಟಾದುದ ಪೇಟ ನೀಂ ಬಟಿಯಟ್ಟಲಾಗದೆ (ಶಂಕರಾ. ೧೨-೯೯) ; ಬಸನದ ಬಾಟ್ತಿಗಪ್ಪೆಡೆಗಳಿಲ್ಲದೆ ನಲ್ಲರ್ . . . ಮನದೊಳ್ಕೊಟಲ್ಲಮಿಸುವರ್ಬನದೊಳ್ ಕೃತಕಾಚಲಂಗಳಂ (ಜಗ್ಗಿ. ೨-೬೩) ; ಏಬಾಟ್ತಿಗೆ ಬಂದರಿಲ್ಲಿಗಿವ ರೆಂದಾರಯ್ವಂ (ಶೀಬಿಪು. ೦-೬೭). ೭. ಅಗತ್ಯ ; ಅವಶ್ಯಕತೆ : ಎಂದಾನುಂ ನಿನಗೆ ಬಾಟ್ತಿ [ಶಾಕಾಂ. ತೆ]ಯಾದುದೆನ್ನಂ ನೆನೆವುದು (ವಡ್ಡಾರಾ. ೦೩೯-೦೧). **ಬಾತೆ** : ೧. 'ಬಾತೆಗೇಡಿ' ಪರಾ. ೨. ಸಿಂಗದ ನಡು ಮುಟಿಯಲಾ ಸಿಂಗವೇನು ಬಾತೆ ಸುಂಡಿಲು ಮುಱದರೆ ಗಜವೇನು ಬಾತೆ (ಬಸವ. ೬೬೪) ; ದಯವಿಲ್ಲದವನ ಭಕ್ತಿ ಏತಕ್ಕೆ ಬಾತೆ (ಗಣಶಾ. ೦೬೦-೩) ; ಹಣವೇನು ಬಾತೆ ನಿನ್ನಯ ಗುಣವೆಂಬುದು ಮಣಿಹಾರವಾಗೆನ್ನ ಮನವ ಕ್ಷಣದಲಿ ಬೀಱುಗೊಂಡುದು (ಶಂನಮ. ೬-೦೬೯). ೩. ನಿನ್ನ ಧನಗಿನವೇನಗೆ ಬಾತೆಯು ಎನ್ನ ಸೊಬಗಂ ನೋಳ್ಪೆಯಾದಡೆ ಹೊನ್ನನೀಗಳೆ ಬಿತ್ತಿಸುವೆನೇ ಬೀದಿಬೀದಿಯಲಿ (ಬಸಪು. ೨೮-೦೯). ೪. ಮಕ್ಕಳನು ಪಡೆವಡೆ ಸುನೀತಿಗೆ ತಕ್ಕುದಲ್ಲದೆ ಒಡಲ ಕೇಡಿನ ಮಕ್ಕಳೇತಕೆ ಬಾತೆ (ಜಭಾಗ. ೪-೯-೩೩). **ಬಾರ್ತೆ** : ೨. ನೀನೀ ಸಾಮ್ರಾಜ್ಯಮನಾವಗಂ ಕೈಕೊಳ್ವುದೆನಗಿದೇನುಂ ಬಾರ್ತೆಯಲ್ಲ (ಶಾಪುಂಪು. ೯೯) ; ಧರ್ಮಾರ್ಥಂಗಳಿಗೆ ಶಾಸ್ತ್ರಂ ಬಾರ್ತೆ ಕಾಮಕ್ಕೆ ಶಾಸ್ತ್ರಂ ನಿಃಪ್ರಯೋಜನಂ (ಶುರಚ. ೦-೩೯ ವ) ; ಪರಿವಾರವಿಲ್ಲದ ರಾಯನ ಸಿರಿಯು ದೇಶಕ್ಕೆ ಬಾರ್ತೆ (ಜಕೋಪು. ೧೯-೩೭). ೪. ಅಂಲ್ದಿರೆ ಕೊರಗಿ ದುಸ್ಸಹ ವಿರಹಶಯನರಚನೆಗೆ ಬಾರ್ತೆಯಾಗಲಾಱೆಂದಗಿದು ಮೆಯ್ವಗೆದವೆಂಬಂತೆ ಶಾವರೆಗಳ್ ಮುಗಿಯೆ (ಕಾದಂಶಾ. ೩೬೩) ; ಹರದನ ಬಡ್ಡಿಗೊಟ್ಟೊಡವೆ ರಾಜಕುಮಾರನ ತೇಜದೇಟ್ಗೆ . . . ಚಿನ್ನಪೊಂಗರ ಕುಡಿಮುಂಚಿಜಂಗುನಿಡುಬಯ್ಸಾಲೆ ಬಾರ್ತೆಯೆ (ಅನಂಪು. ೯-೯೯). ೫. ಮಣಿಗೆ ಪಂದರಂ ಕಾಯುದೆ ನೀಳ್ದೊರವಿದ ಜಸಮನುಪಾರ್ಜಿಸದಧಮನದೇತರ್ಕೆ ಬಾರ್ತೆ (ಅವಿಪು. ೦೨-೯೬) ; ಭಕ್ತಿಯಿಲ್ಲದವನೇತರ್ಕಂ ಬಾರ್ತೆಯಲ್ಲಂ (ಶಂಕರಾಂ. ೯೨-೨೦). ೬. ಬೆಸನಂ ಪಾರ್ವುವು ಮಂತ್ರದೇವತೆಗಳಾದೇಬಾರ್ತೆಗಂ ಬೇಗಮಾಗಸದೊಳ್ ಪಿದ್ದೆಗಳೆಯ್ದೆ ಬರ್ಪುವು (ಅಂಪು. ೦-೬೯). ೭. ಆಂ ಪದ್ಮನಗರದೊಳಿರ್ಪೆಂ ನೀಮೆತ್ತಾನುಂ ಬಾರ್ತೆಯುಪ್ಪೊಡಲ್ಲಿಗೆ ಬನ್ನಿಂ (ಶಂಕರಾಂ. ೦೦೦-೦). ೮. ಬದುಕಿನ ಕ್ಲೇಶ ; ಜೀವನದ ಜಂಜಾಟ : ವಿಪಿನೋಲ್ಲಂಘನ ಸಿಂಧುಯಾನ ನಗಕೂಟಾರೋಹಣ ಕ್ಲೇಶಮಂತ್ರ ಪದಧ್ಯಾನ ಬಿಲಪ್ರವೇಶರಸವಾದಾಯಾಸದೊಳ್ ಬಾರ್ತೆ ತೀರ್ದಪುದೇ (ಅಂಪು. ೦೬-೭). **ಬಾಳ್ತಿ** : ೧. ಬಾಳ್ತಿಯೊಳ್ ಸಲ್ಪೆಯೆನೆ ತೊನೆಯುತಿವೆ ಚೆಲ್ವಂ (ಕಾಯಂಕ. ೭೦-೦೨೩). ೨. ಕಾಡ ಕಾಪಿನವರ್ಗೆ ದೂರಿದೊಡೆ ಬಾಳ್ತಿಯೇಂ (ಕಾಯಂಕ. ೯೯-೭೨). **ವಾಟ್ತಿ** : ೯. ಸುದ್ದಿ ; ಸಮಾಚಾರ : 'ವಾಟ್ತಿಗೊಳ್' ಪರಾ.

**ಬಾತೆಗೆ ಬರು** = ಉಪಯೋಗವಾಗು : ಬಾತೆಗೆ ಬಾರದ ವಸ್ತು ಬಹಳಿದ್ದರೇನು (ಕೃಕಂಠ. ೩-೦೯೩ ಕಲ್ಲಿಂ). **ಬಾರ್ತೆ ಮಾಡು** = ಬಯಸು ;

ಇಷ್ಟಪಡು : ಪುದ್ಗಳಮನೆ ಪಾಟಿಸುವರ್ . . . ಪುದ್ಗಳಮಂ ಬಾರ್ತೆ ಮಾಡಿ ಪೊರೆಯರ್ ಜೈನರ್ (ಸಮಷ. ೬-೩೦). ಬಾೞ್ತಿಯಾಗು = ಬಾತ್ರೆಗೆ ಬರು : ಅರಸುಗೆಯ್ವಾತಂಗೊತಪ್ಪಸುಂ ಬಾೞ್ತಿಯಾಗದನಿಲ್ಲಂ (ಶಂತಕಂ. ೩೯-೦೦). [ಬಾೞ್$_1$ + — ತ್ತಿ]

**ಬಾೞ್ತಿಗೆಯ್**, **ಬಾರ್ತೆಗೆಯ್**, **ಬಾಳ್ತಿಗೆಯ್** (ಕ್ರಿ). ೧. ಬಯಸು ; ಇಷ್ಟಪಡು : ಇಂದುಗತಿಯಂತೆ ರಾಜ್ಯಮನೊರ್ದರ್ಕಂ ಬಾೞ್ತಿಗೆಯ್ಕು ದಾವನೂ ತೊೞ್ದಂ ಮಂದರಧೈರ್ಯಂ ನೃಪಂ (ಶಂಠಾಪು. ೬-೨೯). ೨. ಲೆಕ್ಕಿಸು ; ಗಮನಿಸು : ಗಣನೆಗೆ ತರು : ಅರ್ಣವಮೇಖಲೆಯುಂ ಧರಿತ್ರಿಯುಂ ಬಗೆಯನೆ ಬಾೞ್ತಿಗೆಯ್ಕನೆ ಜರತ್ತೃಣಲಾಘವಮೆಂದೆ ರಾಘವಂ (ಶಂರಾಪು. ೬-೦೦೨) ; ಅರಮನೆಯುಂ ವಧೂವಿತತಿಯುಂ ಸುತ್ತರಂ ಪರಿವಾರಮುಂ . . . ಬಾೞ್ತಿಗೆಯಂದಾ ಮಹಿಪಂ ಪೊಱಮಟ್ಟಂ (ಶಂಕ್ರಪು. ೨-೩೬). **ಬಾರ್ತೆಗೆಯ್** : ೨. ಶ್ರುತಮುಂ ಕಯ್ಕೊಳ್ಳಾಚಾರಮನವ ಧರಿಸಲ್ ಸತ್ಯಮಂ ಬಾರ್ತೆಗೆಯ್ಕಲ್ . . . ಸಿರಿಯನಱಿವುತಂ ಬಣ್ಣಪಂ ಗಾಂಪನಸ್ತ್ರೀ (ಕಾದಂಪು. ೫೯೮) : ಈ ರಾಜೇಂದ್ರಸೌಂದರ್ಯಮೆ ನೆರಮುೞಳೆಚಿತ್ತಸಮ್ಮೋಹನಕ್ಕಾಪುದುಮಿಂ ಪೇೞೇಪುದೆಂದು . . . ಪುಂಸ್ಕೋಕಿಲಾಲಾಪಮುಮಲಿವಲರಂ ಬಾರ್ತೆಗೆಯ್ಯಂ ಮನೋಜಂ (ವುಲ್ಲಪು. ೩-೨೯) ; ಬಗೆಯುವ ಬಾರ್ತೆ[ಪಾಠಾಂ. ೞ್ತಿ]ಗೆಯ್ಕುದೊಲವಂ ಪ್ರತಿಪಾಳಿಸ ದಾಳದೋರ್ಪ ಬಲ್ಮೆಗೆ ಬೆಸವಿರ್ಪ . . . ಅಂಗನೆಗೆ ಕೂರ್ತಮನಗ್ಗದ ಕಟ್ಟಿಯಲ್ಲನೇ (ಪಾರ್ಶ್ವಪು. ೦೦-೬೯). **ಬಾಳ್ತಿಗೆಯ್** : ೧. ನಿಸ್ಸವ ರೊಲ್ದುಂಡುಳುಪಿರ್ದ ಶ್ವಪಮನಗುಂಟೆಂದುಮಾ ಶೇಪಮುಂ ಸವಿದಾನಂದ ಮನಾಳ್ದು ಮಿಕ್ಕ ಸುಖಮೊಂದಂ ಬಾಳ್ತಿಗೆಯ್ಯಂ (ವೃಷಪು. ೬-೦೩). [ಬಾೞ್ತಿ + ಕೆಯ್$_1$]

**ಬಾೞ್ದಲೆ**. ಬಾಳುದಲೆ, ಬಾಳ್ದಲೆ (ನಾ). ೧. ಜೀವಂತವಾಗಿ ಸಿಕ್ಕಿರುವ ಸೆರೆ : ಮಲೆಪರ್ ಮಂಡಳಿಕರ್ ಕಱುಂಬರದಟರ್ ವೀರರ್ಕಳುಂ ತಮ್ಮ ಬಾೞ್ದಲೆಯುಂ ಬೇಡಿದ ವಸ್ತುವಾಹನಮುಮಂ ಮುಂದಿಟ್ಟು ಮೂವಿಟ್ಟ ಬೊಕ್ಕಲಪ್ಪೊಲಿಂ ಬೆಸಕೆಯ್ಕೆ ಸಂತಮಿರುತುಂ ಕುಂತೀಸುತರ್ ತಮ್ಮ ತೋಳ್ವಲಮಂ ನಚ್ಚಿರೆ (ಶಂಪಭಾ. ೯-೦೦) ; ಪೋ ಬಾೞ್ದಲೆಯಿಂದೊಪ್ಪುವನೇ ಬಗೆಯಿಂ ನೀರೊಳಿರ್ದೊಡಂತುಂ ಕೊಲ್ಲೆಂ (ಶಂಪುಪು. ೦೨-೦೫೩); ಪಂಧುವಿನ ಕುಮಾರಂ ಹಿರಣ್ಯನಾಭಂ ಬಲದೇವನ ಮಱಿಯಂ ಪ್ರೊಕ್ಕುೞೆವ್ವನುಪಾತನ ಬಾೞ್ದಲೆವೆರಸು ಬಂದು ವಸುದೇವನ ಪಾದಾರವಿಂದಕ್ಕೆ ತಾಳಧ್ವಜನುಂ ತಾರ್ಕ್ಷ್ಯಧ್ವಜನುಂ ಪೊಡಮಟ್ಟು (ಶುಹಾಸೇ. ೬-೩೯. ವ). **ಬಾಳುದಲೆ** : ೧. ಬಾಳುದಲೆಗಳನರಿದು ಹೋಮವ ಬೆಳಗುವೆನು (ಶೀಪಿಮ. ೨-೨೬). ೨. ಆಗ ತಾನೆ ಕತ್ತರಿಸಿ ಹಸಿರಕ್ತವನ್ನು ಸುರಿಸುತ್ತಿರುವ ತಲೆ ; ಹಸಿತಲೆ ; ಪಂದಲೆ : ಬಾಳುದಲೆಸಹಿತ ನಡೆತಂದು ಭೃತ್ಯಂ ತಿರವ ಚೋಳರಾಯನ ಬಲದ ಕೈಗೆ ಕುಡೆ (ಭ್ರಪಜಂ. ೯-೩೦); ತಲೆಯು ತರಹೇಳಂತಗನ ಬಾಳ್ದಲೆಯು ತರಹೇಳ ಜನನತಳಕೆ ನಿಲಿಸಪೇಳಪುರೇಂದ್ರನಗರವನು (ಕೊರಂಪ. ೬-೨-೧೦) ; ಆ ಪರಿಯಜನಸುರೇಂದ್ರಾದ್ಯರು ಬಾಳ್ದಲೆಗಳಂ ಕೋಲಬೆಸುಳಿದವರ ಪೊಡೆಗಳಂ ಸೀಳ್ದು ಕಪ್ಪವಂ (ಶಬಪು. ೩೧-೧೯). **ಬಾಳ್ದಲೆ** : ೧. ಬಲವ ಮುಱಿದು ಕಲುಗೊಟೆಯು ನೃಪನ ಬಾಳ್ದಲೆಯು ಖಂಡಿಸಿದುದನಱಿಯು (ಶಂಸಪ. ೮೬-೧೩೬). [ಬಾೞ್$_1$ + ತಲೆ$_1$]

**ಬಾೞ್ದಲೆಗೊಳ್**, ಬಾಳ್ದಲೆಗೊಳ್ (ಕ್ರಿ). ಜೀವಂತವಾಗಿ ಸೆರೆ ಹಿಡಿ : ಕೈದುಪಾಡು : ರಘುವೀರಂ ಲಕ್ಷ್ಮಣಂ ರಾಷ್ಟ್ರಕಂಟಕನಂ ಬಾೞ್ದಲೆಗೊಂಡನುದ್ದಸಿಘಮುಂ ಪಂಚಾನನಂ . . . ಮಾಕೊರ್ಂಡು ಕೊಂಡುಯ್ವವೋಲ್ (ಶಂರಾಪು. ೬-೬೨). **ಬಾಳ್ದಲೆಗೊಳ್** : ಚಟ್ಟನಂ ಮುತ್ತಿ ಬಾಳ್ದಲೆಗೊಂಡು (ಮುಂಶಾ. XI, ೨೩೦-೦೯ ; 1060) ; ವಿಕ್ರಮ ಭೂಪಂ . . . ಅನ್ಯ ಭೂ(ಮಿ)ಪರಂ ಬಾಳ್ವೆರಸೆಯ್ದು ಬಾಳ್ವೆರಸು ಬಾಳ್ದಲೆಗೊಣ್ಡನ್ (ಎಕ. XI, ದಾವಣ. ೩-೭ ; 1121); ಬಲರಾಮನನು ಬಾಳ್ದಲೆಗೊಂಡವನ ಕರತಳದ ಹಲಾಯುಧಸಹಿತ ಛಲದಂಕ ಕೇಳ್ವನ್ನ ತರಿಗೆಯು ಹಳ್ಳಿಯೊಳುಳುವೊಕ್ಕಲ ಮಾಡುವೆವು (ಶೀಪಿಸಂ. ೨೬-೬೯). [ಬಾೞ್ದಲೆ + ಕೊಳ್$_1$]

**ಬಾೞ್ದಲೆದರ್** (ಕ್ರಿ). ಜೀವಂತವಾಗಿ ಸೆರೆಹಿಡಿದು ತರು : ಇಂದ್ರನ ಮಗನಪ್ಪ ಜಯಂತನನಿಂದ್ರಜಿತ್ಕುಮಾರಂ ಬಾೞ್ದಲೆದಂದೀಯೆ ರಾವಣ ನಭಯಘೋಷಣೆಯುಂ ಮಾಡಿಸಿ (ಶಂರಾಪು. ೦೦-೨೦೦ ವ); ಚಕ್ರಧರಂ . . . ಧುರದೊಳ್ ಬಾೞ್ದಲೆದಂವಂಬರಚರರಂ ಕರೆದು ಪೋಟ್ದು ಪೇೞ್ದುದು ಗೆಯ್ದುಂತಿರೆ ಕೊಟ್ಟು ದಕ್ಷಿಣಶ್ರೇಣಿರಾಜ್ಯಮಂ ಕೞಿಪಿದಂ (ಪರ್ಶಪು. ೬-೬೯). [ಬಾೞ್ದಲೆ + ತರ್]

**ಬಾೞ್ದಲೆವಿಡಿ**, ಬಾಳುವಲೆವಿಡಿ, ಬಾಳ್ದಲೆವಿಡಿ (ಕ್ರಿ). = ಬಾೞ್ದಲೆಗೊಳ್ : ಪೞಿಯುಂ ಬೀರದಿನಾ ಗೊರವನೆಯ್ದಿ ಬಾೞ್ದಲೆವಿಡಿದಂ (ಕಶ್ಯಕಾ. ೦೯೯) : ದೆಸೆಗೆ ಬಿಟ್ಟಾ ರಾಯರ ಬಾೞ್ದಲೆವಿಡಿದುಂ ಜಯಕಾಂತೆಗೆ ತೊೞ್ತಿರಂ ಮಾಡುತುಂ (ರಾಪಾಶ್ಚ. ೯೯-೦೬). **ಬಾಳುದಲೆವಿಡಿ**: ದೇವಗುಹೇಶ್ವರನ ಬಾಳುದಲೆವಿಡಿದ (ಅವತಂ. ೬೬-೩೬೩). **ಬಾಳ್ದಲೆವಿಡಿ** : ಕಪಂಪನಗ್ನಿಯನಟ್ಟಿ ಬಾಳ್ದಲೆವಿಡಿವಭಯಘೋಷಣೆಯ ಮಾಡಿಸಿದೊಡನೆ ತತ್ಪತ್ತನವ ಪೊಕ್ಕು (ಸಾಳ್ವಭಾ. ೨೬-೩೦). [ಬಾೞ್ದಲೆ + ಪಿಡಿ$_1$]

**ಬಾೞ್ದಾಣ** (ನಾ). ಬದುಕುವ ಸ್ಥಳ : ವಾಸಸ್ಥಳ : ನೀರ್ಗಂಡಿ. ಒರ್ಗಲಿ. ಕೊಟ್ಟಗಟ್ಟ. ಬಾೞ್ದಾಣಾ (ಶಬ್ದಾಮ. ೯೦ ಸ್ಕ್ವದೋ). [ಬಾೞ್$_1$ + ತಾಣ]

**ಬಾೞ್ನೆಣ** (ನಾ). ದೇಹದಿಂದ ಆದೇ ತಾನೆ ಹೊರಬಿದ್ದ ನೆಣ ; ಹಸಿಯ ಕೊಬ್ಬು : ಕರುಳ್ವಿಣಿಲ ಪೊದಟ್ಟುರುಂಡದಡಕಿಲ್ ನರದುರ್ಬಿ ಕಪಾಲದೊಳ್ ಬಾೞ್ನೆಣದೆಡೆ ಖಂಡದಿಂಡೆ ಬಿಸುನೆತ್ತರ ಪೆರ್ಬೊನಲರ್ಬಿ ಸಲ್ಕೆ ಮಾರ್ಗಣಾಗಣಘಾತದಿಂ ಕವಿಸಿದಂ ವಿರೋಧಿಸೈನ್ಯಮಂ (ಜಗಪ. ೬-೫೯) [ಬಾೞ್$_3$ + ನೆಣ]

**ಬಾೞ್ಕೆ**, ಬಾಳ್ಕೆ, ಬಾೞ್ವೆ (ನಾ). ೧. ಬದುಕು ; ಜೀವನ : ಅನಟೆವು ಬಾೞ್ಕೆಗಳೆಡೆಯೊಳ್ ನಿಂದಿರ್ಪೆಂ (ಶಿತ್ರಗೋ. ೨೬-೨೦). **ಬಾಳ್ಕೆ** : ೧. ಅವ ಕೀರ್ತಿಯುಂ ಪೊತ್ತು ಮೃತಜೀವರಂಧದೊಳ್ದಾವಿರ್ದ ಬಾಳ್ಕೆಯಂ ಸುಡಲಿ (ಸುರಂಗ. ೬೯-೬) ; ಕಯ್ಯಾರಿಸಿದ ಬಿರುದಾವಳಿಯ ಸಮ್ಮೋಹನಕ್ಕೆ ನೀನೇ ಕರಗಿ, ಬೇರೊಂದಚ್ಚಿನ ಬಾಳ್ಕೆಗೆ ಮಾರ್ಪಡುವುದೆ, ಶ್ರೀಮನ್ಮಹಾಶಯ? (ಚಲ್ಲಿ. ೨೦೯-೦೨) ; ಅರ್ಥಹೀನಂ ಬಾಳ್ಕೆ ಒಲುಮೆಯಿಲ್ಲದಿರೆ (ಶಕ್ರಾಂಗ. ೬೬-೦೬೯೨). **ಬಾೞ್ವೆ** : ೨. ವೃತ್ತಿ : ಅರಸನಾತಂಗಾದಮಾನು ಮೊಸೆದು ತಂದೆಯ ಬಾೞ್ದಗ್ಗಳ ಬಾೞ್ವೆಯುಂ[ಪಾಠಾಂ. ಬಾಳಂ,ದ ಬಾಳಂ] ಮಾಡಿದಂ (ವಡ್ಡಾರಾ. ೦೬೩-೨). [ಬಾೞ್$_1$ + — ವೆ$_1$]

**ಬಾೞ್ಮೊದಲ್**, **ಬಾಳ್ಮೊದಲ್** (ನಾ). ೧. (ಬದುಕಿಗೆ) ಬಂಡವಾಳವಾದುದು; ಮೂಲಧನವಾದುದು : ಮದುವೆಗಿದು ಪೆತ್ತ ಮಕ್ಕಳಿಗಿದು ಬಾೞ್ಮೊದಲೆನ್ನದುಳ್ಳುದಂ ಸವಣರ್ಗಿಕ್ಕಿದವಂ (ಸಮಷ. ೩-೯೬). ೨. ಬದುಕಿಗೆ ಆಧಾರವಾದುದು; ಜೀವನಸರ್ವಸ್ವ : ಅದು ಸುಖದೊಂದು ಪಿಂಡಮದು ಪುಣ್ಯದ ಪುಂಜಮದಂಗಜಂಗೆ ಬಾೞ್ಮೊದಲದು ಚಿತ್ರಜಂಗೆ ಕುಲದೈವಂ (ಅಂಶು. ೨-೬೯); ಕವಿಗಳ್ಗಿದು ಕೆಯ್ಗನ್ನಡಿ ಕವಿತೆಗೆ ಬಾೞ್ಮೊದಲುದಾತ್ತವಾಗ್ದೇವತೆಗುದ್ಭವಹೇತು (ಕಾವ್ಯಾಶ. ೯); ಬಿದಿ ಮೇರೆದಪ್ಪಿ ನಿಷ್ಕರುಣದೆ ನಿಮ್ಮ ಬಾೞ್ಮೊದಲನಕ್ಕಟ ವಂಚಿಸಿ ಕೊಂಡು ಪೋದನೇ (ಶರ್ವಪು. ೯-೭೦). ೩. ತವರು ; ನೆಲೆವೀಡು ; ಮೂಲಾಶ್ರಯ : ಒದವಿದ ಕೋಟಲೆಗಳ ಬಾೞ್ಮೊದಲೆನಿಸಿದ . . . ನನ್ನೀಪೊಡಲಂ ನಿಲಿಸಿದುದರ್ಕೇನಾನುಮೊಂದು ನೆಪಮುಸಿರ್ದಪ್ಪೆ (ಕಾದಂಪು. ೯೩೩): ಅದು

ಪಿರಿದು ಸಿರಿಯ ಬಾಟ್ಮೊದಲದು ಟಾಗವ ಭೋಗದಾಗರಂ (ಯಶೋ. ೦-೩೩). ಬಾಳ್ಮೊದಲ್ : ೨. ಪುರು[ಷಾ]ರ್ತ್ಥವ ನೆಲೆ ಸತ್ವದ ಕರು ಪರಹಿತಲಕ್ಷ್ಮಿಗಿಕ್ಕೆದಾಣಂ ಸೌಚಾಚಾರದ ಬಾಳ್ಮೊದಲೆಂಬದೆ. ನರನೆಂಬುದು ಸಿಂ[ಗನ]ಣುಗನಂ ಶೋಭನನ (ಶಾಸ. XX. ೩೩-೩೭; 1118).

[ಬಾಟ್₃ + ಮೊದಲ್₁./ತವಿ. ವಾಟ್ಮುತರ್=ದೇವರು, ಸೃಷ್ಟಿಕರ್ತ]

**ಬಾಟ್ಮೊಸರ್** (ನಾ). (ಒಗ್ಗರಣೆ ಹಾಕಿದ) ಗಟ್ಟಿಮೊಸರು : ಇದು ಬಾಟ್ಮೊಸರಿದು ಕಟಲಿಂತಿದು ರುಚಿವೆತ್ತಿರ್ದ ಪಾನಮಿದು ಮಜ್ಜಿಗೆ ತಾನಿದು ಶಿಖರಿಣಿಯೆನುತುಂ ತಿಂಬದೀಬಿ ತಂದೆಡೆದರಬಲೆಯರ್ ಸಿರ್ಪುಗಳಿಂ (ಸುಕುಮಾ. ೦೦-೩೧); ಸಮೆದೆಂ ಮೊಸರಂ ಬಾಟ್ಮೊಸರುಮನಾಂ ಘನವಾಗಿ ತಂದೆಂ (ಅರ್ಜನ. ೬-೬೩). [ಬಾಟ್₃ + ಮೊಸರ್]

**ಬಾಟ್ವಂದರ್**, ಬಾಳ್ವಂದರ (ನಾ) – ಬಾಟ್ಮೊಂಪ : ಕಾಯ್ಪು ಬಳ್ಳಿ ಗೊಂಗಿನ ಪಸುರ್ವಂದರುಮಂ ಪಣ್ತು ಮಧುರದ್ರಾಕ್ಷೆಯು ಬಾಟ್ವಂದರು ಪಾಸಿಕ್ಕೊಲದೊಳಿಕ್ಕಿಸಿ (ಅರ್ಜನ. ೩-೨೦ ವ). ಬಾಳ್ವಂದರ : ಕೆಂದಳಿರ ತುಱುಗಲಿಂದೊಪ್ಪಂಬೆತ್ತ ಚಾಲಸಹಕಾರದ ಬಾಳ್ವಂದರಂಗಳೊಳ್ . . . ಪಳುಕಿನ ವೇದಿಕೆಯೊಳ್ಳಿಂದು (ಜಾಗಳು. ೨-೨೩ ವ). [ಬಾಟ್₃+ಪಂದರ್]

**ಬಾಟ್ಪಣ** (ನಾ). ಜೀವಂತವಾಗಿರುವ ಧನ,– ಸಂಪತ್ತು : ಎನ್ನ ಕೊಂಡಾಟದ ಬಾಟ್ಪಣಮೆ ! (ರಾಮಾಶ್ವ. ೪೪-೦೦). [ಬಾಟ್₃ + ಪಣ್]

**ಬಾಟ್ಮನೆ**, ಬಾಳುಮನೆ, ಬಾಳ್ವನೆ(ನಾ). ತವರುಮನೆ; ಮೂಲಾಶ್ರಯ: ಕನರ್ಗೊನರಿರ್ಕೆ ನುಣ್ದೊಳರ ಬಾಟ್ಮನೆ ಕೆದರಿರ್ಪ ಬೀಡು . . . ನಸು ದೋರೆವಣ್ಣ ತಾಯ್ಮನೆ ಪೊಸವಣ್ಣ ಗೊತ್ತಿವಿನೆ ಕಣ್ಣಸದಿರ್ದುದಪ್ಪೊಂದು ಮಾವುರಂ (ಕಲ್ಯಾ. ೦೦೦); ಪಾರ್ವರ ಬಂಚಿದಜನ ಬಾಟ್ಮನೆಯೆಂಬೊಂದು ನೆಗಟ್ತಿಗಡರ್ವಾಗಿ ಸಂದ ಅಹಿಚ್ಚತ್ರಪುರವರದ ರಾಯನ ಮನ್ನಣೆಯ ಬಿರ್ದಂ ಕೈಕೊಂಡು (ರಾಮಾಶ್ವ. ೬೩-೨೩). ಬಾಳುಮನೆ: ಖೂಳನೆಂಬೆನೆ ಸಕಲ ಕಲೆಗಳ ಬಾಳುಮನೆ ಗಡ ನಿನ್ನ ಬುದ್ಧಿ ವಿಶಾಲವಾತಿ ನೀನೆಂಬೆನೇ ಜಗದಜ್ಞ ರಧಿದೈವ (ಕುಮ್ಮಾ. ೦೩-೬೩). ಬಾಳ್ವನೆ : ನೆಲವೆಣ್ ಪೋಚಬಳಸನ್ನೆಟ್ಟನೆ ಪಡೆದವರ್ಗೀಪೊರ್ ಪಾಲ್ಗೊಬ್ಬನದ ತನೆ ಸುಜನರ ಬಾಳ್ವನೆ ಕಳವಾನ ನಿಡಿದೆನೆಯಸಗುಂ (ಉದ್ಭಟ. ೨-೨೩). [ಬಾಟ್₃ + ಮನೆ]

**ಬಾಟ್ವೆ**, ಬಾಳುವೆ, ಬಾಳ್ವೆ (ನಾ). ೧. ಜೀವನ ; ಬದುಕು : ಉಱಿದಿರ್ವಂತೆಮಗಾವ ಗರ್ವವಿಱಯಲ್ವೇಡೆಮ್ಮನೆಮ್ಮುಳ್ಳದಂ ನೆಱೆ ಕೊಂಡೆಮ್ಮಯ ಬಾಟ್ವೆಯೊಳ್ ನಿಱಿಸುವಂ ನೀಂ (ಶಂಕರಾ ೬-೩೦); ಅವಱ ಬಾಟ್ವೆ ಇಂದಿನದಲ್ಲ, ನಿನ್ನೆಯದುಮಲ್ಲ, ಎಂದೆಂದಿನದು (ಅಂತಗೂ. ೨೦-೪೪೦). ಬಾಳುವೆ : ೧. ತುಪ್ಪದ ಸವಿಗ ಅಲಗ ನೆಕ್ಕುವ ಸೊಣಗ ನಂತೆ ಎನ್ನ ಬಾಳುವೆ (ಬಸವ. ೩೩); ಅರ್ಥವಿಲ್ಲದ ಸಿರಿಯ ಸಡಗರ ಅರ್ಥ ಯಿಲ್ಲದ ಬಾಳುವೆಗಳಿವನರ್ಥಪಾರುಪರೆ (ಕುಮ್ಮಾ.ಉ. ೪-೩೬) : ಬಾಳುವೆಯು ಗೂಡೊಳಿಹ ತತ್ತಿಯಿದನೆಂದು ಮೃತ್ಯು ತಾನಿಕ್ಕಿ ಮೆಯ್ಯಗ್ಗರಿಯುತೆನಗಿರುವೆ ? (ಗೀತಾಂ. ೩೦-೦). ೨. ಸಂಸಾರ; ದಾಂಪತ್ಯಜೀವನ : ಐದು ಮಾನವ ಕುಟ್ಟಿ ಒಂದು ಮಾನವ ಮಾಡು ಕಂಡಾ ಮದವಳಿಗೆ ಇದು ನಮ್ಮ ಬಾಳುವೆ ಮದವಳಿಗೆ (ಜಾನ. ೬೬೬) ; ಅವಳು . . . ಮತ್ತೆ ಕೈ ಹಿಡಿದವನ ಕೂಡ ಬಾಳುವೆ ಮಾಡಹತ್ತುವಳು (ಕನ್ನಡ. ೦೨೩). ೩. ಜೀವಮಾನ ; ಆಯುಷ್ಯ : ಬದುಕಿನ ಅವಧಿ : ಏಸು ದಿನಸವೀ ಜಗದ ಬಾಳುವ (ಕುಮ್ಮಾ. ೦೪-೩೨). ೪. ಅಭಿವೃದ್ಧಿ : ಕಾನನದಡವಿಯಲ್ಲಿ ಕಿಚ್ಚು ಬಾ[ಶಾಕ. ಬ]ಳುವೆಯಾಗಿ ಎಕ್ಕೊಡ ಒಱಲುವ ಬಳ್ಳುವಿನಂತಿಪ್ಪರಯ್ಯಾ ಮಾನುಜರು ನರವಿಂಧ್ಯದೊಳಗೆ (ಬಸವ. ೨೨೬) ; ಕೇಳದಳು ಹರುಷದಲಿ ಪುತ್ರಕರೇಳಿಗೆಯ ಮುತ್ತೈದೆತನದಲಿ ಬಾಳುವೆಯ ಕೈಕೊಂಡೆನೆಂದಳು ನಗುತ ಗಾಂಧಾರಿ (ಕಂಶಶ. ೨೦-೬). ಬಾಳ್ವೆ : ೧. ಏನಾದೊಡೇನೋ ಮಕ್ಕಳ ಹಡೆಯದರ ಬಾಳ್ವೆ ಹೆಣಕೆ ಸರಿ (ಸಮ್ಯ. ೩-೯); ಸಕಲ ಪ್ರಾಣಿಗಳ ಪ್ರಯತ್ನವು ಬಾಳ್ವೆಗಾಗಿ, ಸಾವಿಗಾಗಿಯಲ್ಲ (ಜೀವಾತ್ಮ. ೨೮೪). ೩. "ಆಯುಸ್ = ಆಯುಷ್ಯಂ, ಬಾಳ್ವೆ" (ಶಾಶಕ. ೦೦೪).

ಬಾಳುವೆ ಮಾಡು, ಬಾಳ್ವೆಮಾಡು = ದಾಂಪತ್ಯಜೀವನ ನಡೆಸು ; ಒಕ್ಕತನ ಮಾಡು : ಇಂಥವರೊಡನೆ ತಾನು ಇಲ್ಲಿಯವರೆಗೆ ಹೇಗೆ ಬಾಳುವೆ ಮಾಡಿಕೊಂಡು ಬಂದೆಯೆಂದು ಅವಳೇ ಆಶ್ಚರ್ಯ ಪಟ್ಟಳು (ಹಳ್ಳಿಹಾ. ೪೦); ಯಾರೊಡನಾದರು ಬಾಳುವೆ ಮಾಡುವೆನಳಿವೆಣ್ಣೆನೊಡನಾಟ ಬೇಡ (ಇಂತಾಶ. ೨೦೨-೯೬) ; ಗಂಡನ ಮನೆಯಲ್ಲಿ ಆರು ತಿಂಗಳ ಕಾಲ ಬಾಳ್ವೆ ಮಾಡಿದ ಗಂಗತ್ತೆಯನ್ನು 'ಆಟ' ತಿಂಗಳಲ್ಲಿ ತವರುಮನೆಯವರು ಪದ್ಧತಿಯಂತೆ ಕರೆದೊಯ್ದರು (ಒಡ್ಡಿಣಾ. ೦). [ಬಾಟ್₁ + —ವೆ]

**ಬಾಟ್ವಿಣ**, ಬಾಳ್ವಿಣ (ನಾ). ಜೀವವಿದ್ದರೂ ಸತ್ತಂತಿರುವ ವ್ಯಕ್ತಿ ; ಜೀವಚ್ಛವ : ಪಂದಲೆಯೋಳದೋರಣದ ಸೀಯದರಂ ಪೊಸ ದೂವೆ ದೂಪ ತೂಗುಂದಲೆ ಬಾಟ್ವಿಣಂ ಪೊಡರ ಬಳ್ಳುವ ಸಮ್ಮನ ಸೂಲಿವಾಲ ದೊಳ್ ಸಂದಣಿಯಾಗಿ ನೇಲ್ದ ಪೆಣನೊಂದಿರ ನಿಂದುರಿಯುಯ್ಯಲೇಱೆ ಕೈರಂದಱಿಯಲ್ಕೆ ಮಾಡಿದಡೆ ಮಂಚಿಕೆ ಮಿಂಚಿದುದಾ ಶ್ಮಶಾನದೊಳ್ (ಕಾವ್ಯಾ.ಶ. ೩೬) ; ವಿಜಯಸಪುರೀಶನಂ ಬಾಟ್ವಿಣನೆಂಬಿನಂ ಪಿಡಿದು ಕೆಯ್ಸೆಱೆ ಗೊಂಡುಱೆ ಪಾಡುಸಂತದಿಂ ಬಾಟ್ವಿನಭೇದ್ಯವಿಕ್ರಮನೆನಲ್ ಮೆಱೆವಂ ಚಿಕದೇವಭೂವರಂ (ಗೀತಗೊ. ೬೩-೦೪). ಬಾಳ್ವಿಣ : ಕಂಗೆಟ್ಟು ಬಾಯ್ಬಿಟ್ಟು ಕಲುವಾರನಾಗಿ ಕಂಡು ಮತಿಗೆಟ್ಟು ದೆಸೆಗೆಟ್ಟು ಬಾಳ್ವಿಣನಾಗಿ (ಕವಿ.ಶ. ರ. ೦೪೬-೦೪) ; ಬದುಕಲೆಳಸಿದರಿಂತು ಬಾಳ್ವಿಣಗಳಾಗಿ ! (ಚಕ್ರಸ್ಕ. ೦೩). [ಬಾಟ್₁ + ಪೆಣ]

**ಬಾಟ್ವೇಲಿ**, ಬಾಳ್ವೇಲಿ (ನಾ). = ಬಾಟ್ಕೋಟೆ : ಪೂತ ಚೂತವನಮೆ ಬಾಟ್ವೇಲಿಯಾಗೆ . . . ಅಶೋಕೋದ್ಯಾನಮಧ್ಯದೊಳ್ (ಶಾಂತಿ. ೪-೯೩ ವ) ; ಆ ವನಕ್ಕಿಕ್ಕಿದ ಬಾಟ್ವೇಲಿಯಂತೆ . . . ನವ ಫಲಂಗಳಂ ನೆಱೆದೊಪ್ಪುವ ಮಾತುಲುಂಗದ ಪೊದಱುಗಳುಮಂ (ಶಂಕರಂ. ೦೦೬-೦೨) ; ನಂದನಕ್ಕೆ ಬಾಟ್ವೇಲಿಯಾದ ಕೇದಗೆಯ ಬನದ ಬಳಸಿನೊಳಗೆ ಶಿವನೆರವಣ್ಣನಂ ಹರಿಯ ಹಾದರವಬ್ಬ ಜನೊಲ್ದು ಲಜ್ಜೆ ಹುಟ್ಟಿ ನನೆವಿಲ್ಲ ಬಲ್ಲಹನ ಶೌರ್ಯಮಂ (ಶಿವಂಕ. ೦-೪೦ ವ). ಬಾಳ್ವೇಲಿ : ಕಂಜಾಸ್ತನ ವನದುರ್ಗದಂತಾಯ್ತುಪರಂಜಗೇದಗೆಯ ಬಾಳ್ವೇಲಿ (ಶ್ರೀಶಾಂ. ೦-೬೪); ಸುತ್ತಿದ ಜಲಖಾತಿ ಮಿಸುನಿಗೇದಗೆಯ ಚೆಲ್ವೆತ್ತ ಬಾಳ್ವೇಲಿ (ಜಾಗಳು. ೨-೩೨). [ಬಾಟ್₁ + ಬೇಲಿ]

**ಬಾಟ್ಸಬ** (ನಾ). = ಬಾಟ್ವಿಣ : ಎಲೆಲೆ ಸಮ್ಮಂಗುಂದಿದ ಪುಶ್ಚಲಿಯ ಬಾಟ್ಸಬಮೆ ! (ರಾಮಾಶ್ವ. ೦೦೨-೦೩). [ಬಾಟ್₁ + ಸಬ (<ಶಬ)]

**ಬಿಂ**, ಬಿಮ್ಮು₂ (ನಾ). ಶೂನ್ಯತೆಯನ್ನು ಸೂಚಿಸುವ ಒಂದು ಅನುಕರಣಶಬ್ದ : (೯). ಬಿಮ್ಮು₂ : ಒಂದೆ ನಿಮಿಷದ ಆಯು ಮಾರುಚಣವೆ ಕತ್ತಲೆಯು ಬಿಮ್ಮೆಂಬ ಕತ್ತಲೆಯು (ಕಾವಿಸೋ. ೬೦-೯). 'ಬಿಮ್ಮುಗಟ್ಟು' ಪರಾ.

ಬಿಂಬೆಂದಿರ್ = ನಿರ್ಜನವಾಗಿರು ; ಬಿಕೋ ಎನ್ನು : ಬಿಂಬಿಮ್ಮೆಂಬ ಪೇರಡವಿಯಂ ಸೋಡಿ ಜಳಜಮುಖಿ ನಾಡೆಯುಂ ತಲ್ಲಣದಿಂ ಭೋರೆಂದು ಸುಯ್ಯು (ಧರ್ಮನಾಥ. ೩-೩೩).

**ಬಿಂಕ₁** (ನಾ). ೧. ಗರ್ವ ; ಜಂಬ ; ಸೊಕ್ಕು : "ವಕ್ಕಿವಂ, ಬಿಂಕಂ . . . ಆದಟು — ಈ ೭ ಗರ್ವಂ" (ಕಶಶಾ. ೩೬-೨೪೦) ; ಆ ದ್ರುಪದಜೆಯೊಳ್ ನೆರೆದೊಸಗೆಗೆ ತಮ್ಮ ಬೀರಮಂ ಬಿಂಕಮುಮಂ ತೆಱವು ತಲ್ಲಣಿಯುಮೆಂದರಿಕೇಸರಿಗಾಗಳಿವರ್ಪೊಲ್ ಬೆನ್ನಿತ್ತರ್ (ಶಂಕರಾ. ೩-೬೨) ; ಬೇಡಿದ ಶರಣರ್ಗಿಲ್ಲೆನ್ನದೀವೆನೆಂಬ ಗೀತದೊಳಗಣ ಬಿಂಕದ ಬಿರುದಂ ಕೇಳ್ದು ನಿನ್ನೊಳೊಂದಂ ಬೇಡಿ ಬಂದೆಂ (ಬಸವ. ೦೨-೪೬) ; ಕಡಲು ಪರಿವರುಣಾಂಬುಜಲಧಿಗೆ ಬಡಿಸಿದವು ಬಿಂಕವನು ಶಿವಶಿವ ನುಡಿವ ಕವಿ

ಯಾರಿನ್ನು ಪಾರ್ಥಕುಮಾರನಾಹವವ (ಕುಮಾ.ಭಾ. ೩-೬). ೨. ಠೀವಿ; ಗತ್ತು: ಗಾಂಭೀರ್ಯ: ಬಿಂಕದಿಂ ಬಲಗೆಲದೊಳ್ ನೆಗಟ್ದವಡೆದಿರ್ಪರಸಂಚೆಯ ಪಿಂಡು (ಕಬ್ಬಿಗ. ೧೨೮): ಆವ ಬಿಂಕವೋ ಎಡಗಾಲಗದ್ದುಗೆಯ ಮೇಲೊರಿವಿ ಪಾಡಿದು . . . ಠೀವಿಯೊಳೆಸೆದನಾ ರಾಯ (ಶರಶ. ೧-೪೦). ೩. ಹೆಮ್ಮೆ; ಸ್ವಾಭಿಮಾನ: ಬಿಡೆ ನಿನ್ನ ಪಾದವ ಬಿಂಕವಿನ್ನೇಕೊ ಕೊಡು ಮನದಿಷ್ಟವ ಕೋಪವಿದೇಕೊ (ಪುರಂದ. ೧-೨೩ ಕಲ್ಯಾ): ಲಂಕಾದುರ್ಗಕೆ ಸರಿಯೆಂದಾಪುರದ ಬಿಂಕದ ಕೊಂಡಾಡುತಿಹರು (ಕಂಸವ. ೦೬-೭೨); ಗಂಡನ ಬಿಂಕ ಹೆಂಡತಿಯ ವೈಸ್ತವನ್ನೇ ಬಯಸುತ್ತದೆ (ಮುಕ್ತಾನ. ೨೯). ೪. ಬೂಟಾಟಿಕೆ; ಡಂಭಾಚಾರ: ಬಾಯ ಬಿಂಕದ ಸವಿನುಡಿಯನಾ ರಾಯರಾಡಿದರಲ್ಲಿ (ನಳಚ. ೩-೬೦): ನಾವು ಯೋಧರು, ನೋವನ್ನೂ ಸಹಿಸಬಲ್ಲೆವು, ಸಂತೋಷವನ್ನೂ ಸಹಿಸಬಲ್ಲೆವು. ಈ ಎರಡೂ ನಿಮಗೆ ಸಾಧ್ಯವಿಲ್ಲ. ಇದೊಂದು ಬಿಂಕ (ಕಾಂತಕು. ೬೯). ೫. ಆಡಂಬರ: ಡೌಲು: ಪಾತ್ರ್ಯವು ರಣಧೂಳಿಯಾನನ ಬಿಂಕದೆ ಬೀಳ್ಕೊಟ್ಟನಾಗ (ಕಂಸವ. ೦೦-೯). ೬. ಒಯ್ಯಾರ; ಬೆಡಗು; ಬಿನ್ನಾಣ: ಸ್ಮರಸಂಜೀವನ ಕೃಷ್ಣೆ ಪೂಮುಡಿದಳ್ . . . ಆ ಬಿಂಕವಮಾ ತರಳಾಪಾಂಗವಿಲಾಸಂ . . . ಎಂ ಮನಂಗೊಳಿಸಿತೋ ಚಾಳುಕ್ಯಕಂದರ್ಪನಾ (ಗದಾಯು. ೬-೩೦); ನಳಿತೋಳ್ಗಳ್ ಮುತ್ತಿನ ಸರಿಗೆಯನಾಂತಸೆಯೆ ಕಾಂತೆ ಬಿಂಕದುನಾಂತಳ್ (ಜಗಾ. ೨೦-೧೦೬): ನಿನ್ನ ನಡೆವ ಬಿಂಕವ ಗಾಡಿಯುಮಂ . . . ಆ ನಿನ್ನ ಕಿಱುನಗೆಯ ಬಗೆಯುಮಂ ಕಂಡು ಸೋಲ್ತು ಮೆಚ್ಚಿದೆನಲ್ತೆ! (ರಾಜಶೇ. ೩೬-೯). ೭. ಸೊಬಗು: ವಿಲಾಸ: ಸೊಗಸು: ಶ್ರೀವತ್ಸಾಂಕನ ಸುಲಲಿತಯಾನದ ಬಿಂಕವನನುಕರಿಸಿ ತೋಱುತಿರ್ದಳದೊರ್ಪಳ್ (ಜಗಾ. ೩-೨೦): ನಿಡುಹುರ್ಬಿಗಂ ಕರ್ವಿಲ್ಲ ಬಿಂಕಮಂ ಸುಂಕಮಿಕ್ಕಿದಂತೆ . . . ಶೃಂಗಾರಕ್ಕೆ ಸೀಮೆಯಾಗಿಪ್ಪಳ್ (ಪುಣ್ಯಾಸ್ರ. ೨-೩೨ ವ); ಬಿಂಕದಿಂದಲಿ ಕೊಳಲೂದುತ್ತ ಪಾಡುತ್ತ ಪಂಕಜಾಕ್ಷನು ಬಂದ ಕಾಣಿರೇನೆ (ಪುರಂದ. ೧-೦೯೦-೩). ೮. ಹಿರಿಮೆ; ಮೇಲ್ಮೆ: ಅತಿಶಯತೆ: ಶಂಕರಂಗೆ ಸಕಲ ಪುಷ್ಪನಾದಿ ಪೂಜೆಯುಂ ನಿಮಿರ್ಚ ಬಿಂಕದಿಂದೆ ಕನಕರತ್ನರಾಶಿಗಳನೆ ಪತ್ತೆ ಸಾರ್ಚ (ಮಹಲಿ.ಹ. ೨೨೦-೦೦); ಅರಸನಭ್ಯುದಯವನು ಭೀಮನ ಧರಧುರವನರ್ಜುನನ ಬಿಂಕವನು ... ಕಂಡೆದೆ ಬಿರಿದುದು (ಕುಮಾ.ಭಾ. ೦೨-೩೯): ಸಾಸಿರದೆ ಬಿಂಕದ ಕರಿ ಹತ್ತು ಕೂಡಿದ ಬಲುಪಾಜನಂಕುಶಖಾನ ತೋಱಿದನು (ಕಂಸವ. ೦೦-೯೩). ೯. ಸಾಹಸ: ಪರಾಕ್ರಮ; ದಿಟ್ಟತನ: ಬಿಂಕದಿಂದ ಸಿಯೋ ಜಡಿದು (ಶತಕ. ೦೬-೦೮); ಮನ್ನಣೆಯ ಬಿಲ್ಲ ಗುರುವಿನ ಬಿಂಕ ಬಯಲಾಯ್ತಲ್ಲಿಯೆಂಬಪಕೀರ್ತಿ ಹೋಱುವುದು (ಕುಮಾ.ಭಾ. ೦೪-೦೦). ೧೦. ಅಟ್ಟಹಾಸ; ಆಟೋಪ: ಧರಾಧೀಶರಾಗಳ್ ಪೊಣರಲ್ ರಾಜೇಂದ್ರ ಹಮ್ಮೀರನ ತುರಗಿಯಿಂ ಮುತ್ತಿದರ್ ಬಿಂಕದಿಂದಂ (ಹರಿ.ಕ. ೩-೫). ೧೧. ಜಂಬದ ಮಾತು; ಹೆಮ್ಮೆಯ ನುಡಿ: ಧನವ ಕೊಟ್ಟೆನು ತನುವ ಕೊಟ್ಟೆನು ಮನವ ಕೊಟ್ಟೆನು ಕೊಟ್ಟೆನೆಂಬೀ ಬಿನುಗು ಬಿಂಕವ ನಾಡಲಾ ಧನ ತನು ಮನಂಗಳನು ನಿನಗೆ ಕೊಟ್ಟವರಾರು (ಶ್ರಕುಂ. ೦೬-೯೯). ೧೨. ಶಸ್ತ್ರಪ್ರಯೋಗದಲ್ಲಿ ಒಂದು ರೀತಿ,–ಬಗೆ: ಬಿಂಕಂ ಧ್ರುವಮರೀಚ್ಯಾಲೀಢಮಾಕೀರ್ಣತೆ ... ಬೆಡಂಗೆಂದೆನಿಪನಿತಱ ವೈಚಿತ್ರ್ಯದಿಂ ತಾನೆ ಶಸ್ತ್ರಾಗಮಶಿಕ್ಷಾಚಾರ್ಯನೆಂಬೊಂದೆಸಕದಿನೆಸೆದಂ ನಾಡೆ ಕಂದರ್ಪದೇವಂ (ಕುಸುಮಾ. ೬-೬೯). 'ಬಿಗಿ₁' ಪರಾ.

[ದೇ. ‖ ತುಳು. ತೆಲು. ಬಿಂಕ]

**ಬಿಂಕ₃** 'ಬಿಂಗ₁' ನೋ.

**ಬಿಂಕಂಗುಂದು** (ಕ್ರಿ). ಶಕ್ತಿಯು ಕುಂದು: ಪರಾಕ್ರಮವು ಕಡಮೆಯಾಗು: ಬಾನ್ಪಟ್ಟೆಯೊಳ್ ಬಿಱುವಿಸಲ್ ಬೆಸ್ನೆ ಸಾಡೆ ಬಿಂಕಂಗುಂದಿ ಬಳಲ್ದು ಬರ್ಪ ಗರುಡದಂಪತಿಗೆ ತಂಪಂ ಪರಪಲೆಂದು ... ರಾಜಪ ಪರ್ಣಪಾಳಿಯನೇಳ್ಗಿವೆತ್ತ ತಾಳಭೂರುಹದಿಂ ... ಮಹಾಗಹನಮೊಪ್ಪಿರ್ದುದು (ಕಹಂ. ೩-೩೫ ವ). [ಬಿಂಕ₁ + ಕುಂದು₁]

**ಬಿಂಕಂಗೆಡಿಸು** (ಕ್ರಿ). ಗರ್ವವು ನಾಶವಾಗುವಂತೆ ಮಾಡು; ಅಹಂಕಾರವನ್ನು ತಗ್ಗಿಸು: ಬಿದಿಗವೆಱೆಯ ಬಿಂಕಂಗೆಡಿಪಧರಂ ... ಒಪ್ಪಿದುವಾಸತಿಗೆ (ಜಹುಣ. ೨-೬). [ಬಿಂಕಂಗೆಡು + – ಇಸು₂]

**ಬಿಂಕಂಗೆಡು** (ಕ್ರಿ). ಗರ್ವವು ನಾಶವಾಗು; ದರ್ಪವು ಅಳಿದುಹೋಗು: ಅಹಂಕಾರವಡಗು: ಪೊಡವೀಶಬ್ರೀತಿಯಿಂದಂ ಸೆಡವರಡಗುವ ಕ್ರೀಡೆಯವಕ್ರೀಯಂಕಿ ಬಿಂಕಂಗೆಡುವರ್ (ಎಕ. XI. ಶತ್ರದು. ೩-೮೬ 1366). [ಬಿಂಕ₁ + ಕೆಡು₁]

**ಬಿಂಕಂಬಡೆ** (ಕ್ರಿ). ಸ್ವಾಭಿಮಾನದಿಂದ ಕೂಡಿರು: ಅತ್ಯಂತ ಚತುರಚಿತ್ರಕನೊರ್ವಂ ಬಿಂಕಂಬಡೆದೈತಂದು ಕಂತುನಿಭಂಗಭಿವಂದಿಸಿ (ಜಹುಣ. ೩-೯). [ಬಿಂಕ₁ + ಪಡೆ₁]

**ಬಿಂಕಂಬೆಱು** (ಕ್ರಿ). ೧. ವಿಲಾಸದಿಂದ ಕೂಡಿರು: ಸೊಗಸನ್ನು ಹೊಂದಿರು: ಬಿಂಕಂಬೆತ್ತಸೆವಂಚೆಯುಂ ಸಂಕುಳಮುಂ ತೊಂಡುಗೆಡವಶುಕಶಾರಿಕೆಯುಂ ಸೊಂಕಿ ಬಲವಂದು ತೀಡುವ ತೆಂಕಣಗಾಳಿಯುಮಿವೇಂ ಮನಂಗೊಳಿಸಿದುವೋ (ಕಾವ್ಯಾವ. ೦೮); ಬಿಂಕಂಬೆತ್ತಿರೆ ಪಸ್ಸನಕುಸುಮಾಂಕುರದೊಳ್ ಬಾಹುಶಾಖೆಯೊಳ್ ದಿವಿಜನಟೀಸಂಕುಳಮಂದವನುಗತಿಯಿಂದಂ ಕುರಶಾಖಾಭಿನಯಮನೇಂ ತೋಱಿದುದೋ (ಚಂದ್ರಪ್ರ. ೧೨-೦೯೨); ಬಿಂಕಂಬೆತ್ತರ ಮಕ್ಕಳ ತಂಪದ ಮಂತ್ರಿಗಳ ಗೊಂದಣದತಿಚತುರಕವೀಂದ್ರರ ಬಲುಸಂದಣಿಯೊಳು . . . ಓಲಗವಿರ್ದಂ ಜಯಭೂವರನು (ಜಹುಣ. ೩-೦). ೨. ಉಬ್ಬು: ಸಡಗರಿಸು: ಉತ್ಸಾಹಿಸು: ಬಿಂಕಂಬೆತ್ತುಱುಚೆಂದಾಡುತ್ತಂ ಆಡುವ ಗುಂಪಯ್ಯನ ಪೊಸನೃತ್ಯಂ (ಕಂಜಾ. ೦೪೦-೨೯). ೩. ಗರ್ವಿಸು: ಜಂಬಪಡು: (೬). [ಬಿಂಕ₁+ಪೆಱು₁]

**ಬಿಂಕಕಾತಿ** 'ಬಿಂಕಗಾತಿ' ನೋ.

**ಬಿಂಕಕಾರ್ತಿ** 'ಬಿಂಕಗಾರ್ತಿ' ನೋ.

**ಬಿಂಕಕಾಱ** (ನಾ). ಅಹಂಕಾರಿ: ಗರ್ವಿಷ್ಠ: ಬರುದಿನ ಬಿಂಕಕಾಱರ ಪಾಸಿಗರ ನಲ್ಲೆ ನಿಸುವಲ್ಲಮನೆಂಬ ಪೆಸರೆನಗೆ (ಶ್ರಕುಂ. ೩-೦೩). [ಬಿಂಕ₁ + – ಕಾಱ]

**ಬಿಂಕಗಾತಿ, ಬಿಂಕಕಾತಿ** (ನಾ). ೧. ಒಯ್ಯಾರಿ; ಬಿನ್ನಾಣಗಿತ್ತಿ: ಕನ್ನಡಗಿಂಡಿ ಬಿಜ್ಜಣಗೆಗಳ ಪಿಡಿದೂಳಿಗಗೈವ ಬಿಂಕಗಾತಿಯರಾ ಪೊಡವಿಯಾಣ್ಮನ ಪೊದ್ದಿಹರು (ಹಂಬ. ೦-೦೩); ಗುರುವ ನೋಟದ ಬಿಂಕಗಾತಿ . . . ಸೋಗೆಗಣ್ಣುಗಳಿಂದ ಕರೆದಳಾ ಕಾಮುಕರರಸಿ (ಶ್ರೀಂಕಶ. ೩-೦೦). **ಬಿಂಕಕಾತಿ:** ೧. ಕರಜಾಣ ನಿನ್ನೋವೆನೆಂದು ಸಿರಿವೆಣ್ಣು ಕಿವಿ ಸಾರ್ದು ಸೂಚಿಸುತ್ತೋಳ್ಸೈಸಿ ಬರೆ ಬಂದಳಾ ಬಿಂಕಕಾತಿ (ಶಶಶ. ೭೯-೦೦೯). ೨. ಸೊಕ್ಕಿನವಳು; ಗರ್ವದ ಹೆಂಗಸು: (೬). [ಬಿಂಕ₁ + – ಕಾತಿ₁]

**ಬಿಂಕಗಾರ್ತಿ, ಬಿಂಕಕಾರ್ತಿ** (ನಾ). = ಬಿಂಕಗಾತಿ ೧: ನಲವಿಂದಮೊಡನೊಡನಡಿಯಿಟ್ಟರ್ ನೆರೆದು ಬಿಂಕಗಾರ್ತಿಯರರೆಬರ್ (ಕಬ್ಬಿಗ. ೯೩); ನಡೆಯ ಬೆಡಗಿನ ಬಿಂಕಗಾರ್ತಿ[ಪಾಠಾಂ. ಕಾತಿ]ಯರ್ . . . ನಡೆತಂದರು (ಶಂಪ್ರ. ೯೩-೩೩). **ಬಿಂಕಕಾರ್ತಿ:** ಬಿಂಕಕಾರ್ತಿಯರಲ್ಲಿ ಕಡುಗಾಡಿವೆತ್ತಿರುತಿಹರು (ಶಂರಾಸಾಂ. ೩-೩೫); ಜೆಡೆಯ ಗೊಂಡೆಯ ಬಿಗಿದೊತ್ತಿ ಕಟ್ಟಿದ ಜವದಾಡೆ ಚಿತ್ರಕೆಳಸಿ ಬಿಂಕಕಾ[ಪಾಠಾಂ. ಗಾ]ರ್ತಿ ಬಿಬ್ಬಿಯರವ ನೊತ್ತಿನೊಳೆಯ್ದಂದರಂದು (ಶಂರಾಸಾಂ. ೧೮-೦೯). [ಬಿಂಕ₁ + – ಕಾಱ + – ತಿ₁ (< – ಇತ್ತಿ)]

**ಬಿಂಕಣ** 'ಬಿಜ್ಜಣ' ನೋ.

**ಬಿಂಕಣಗಿವಿ, ಬಿಂಕಣ್ಣಿವಿ** (ನಾ). ಬೀಸಣಿಗೆಯಂತೆ ದೊಡ್ಡದಾಗಿರುವ ಕಿವಿ: 'ಬಿಂಕಣಗಿವಿಯ' ಪರಾ. **ಬಿಂಕಣಿಗಿವಿ:** ಒರ್ವನೆಯ ಬಿಂಕಣ

ಗಿವಿಯ ಮೂಗೊಂಕುಮಾೂಗಿನ ಪೇರೊಡಲ ಇಲಿದೇರ ಬೆಸಕ ! ಇದೆ ಮಣಿಮಂ (ರಾಮಾಶ್ವ. ೯೯-೨೦). 'ಬಿಂಕಣಗಿವಿಯ' ಪಠಾ.
[ ಬಿಂಕಣ (<ಬಿಜ್ಜಣ) + ಕಿವಿ₃ ]

**ಬಿಂಕಣಗಿವಿಯ,** ಬಿಂಕಣ್ಣಗಿವಿಯ (ನಾ). ಬೀಸಣಿಗೆಯಂತೆ ದೊಡ್ಡ ದೊಡ್ಡ ಕಿವಿಗಳುಳ್ಳವನು; ಗಣಪತಿ : "ಕರಿಮೊಗಂ . . . ಬಿಂಕಣ [ ಪಾಠಾಂ. ಣ ]ಗಿವಿಯಂ, ತಂದೆಯು ತಂದೆಯಿಲ್ಲದವಂ — ಈ ೭ ವಿನಾಯಕಂಗೆ ಪೆಸರ್" (ಕಠಶಾ. ೯೭-೯); "ಬಿಜ್ಜವಳಂ . . . ಬಿಂಕಣಗಿವಿಯನು ಮೂಷಕದೇರನೆನೆ ವಿನಾಯಕನ ನಾಮಂ" (ಕಬ್ಬಿಗ. ೩).
**ಬಿಂಕಣಗಿವಿಯ :** ಬಿಂಕಣಗಿವಿಯನೆ ಪಾಲಿಪುದಂಕುಶಧರ ದಯದಿ (ಕುಮಾರ. ೦). [ ಬಿಂಕಣಗಿವಿ + -ಅ₇ ]

**ಬಿಂಕಣಿ** 'ಬಿಜ್ಜಣ' ನೋ.

**ಬಿಂಕಣಿಗಿವಿ** 'ಬಿಂಕಣಗಿವಿ' ನೋ.

**ಬಿಂಕಣಿಗಿವಿಯ** 'ಬಿಂಕಣಗಿವಿಯ' ನೋ.

**ಬಿಂಕಣೆ** (ನಾ). ಒಯ್ಯಾರ ; ಒನಪು : ತೊಟ್ಟ ಸಿಂಗಾರದ ಕೊಂಕು ಬಿಂಕಣೆ ರಸ ತೊಟ್ಟಿಡುವಂತೆ ಲಾವಣ್ಯ ಮುಟ್ಟಿ ಕಂದುವ ಮೈಯ ಪೇಗಳಿದ್ದರು (ಛಠ. ೦೨-೬೦). [ ಬಿಂಕ₁ + — ಅಣೆ₄ ]

**ಬಿಂಕತನ** (ನಾ). ಗರ್ವ; ಸೊಕ್ಕು: ಬೇಡಿದರೆ ಕೊಡದಿಹಗೆ ಕಡುಬಿಂಕತನವೇಕೆ ಪಾಡಲಱಿಯದವಂಗೆ ಪ್ರೌಢತನವೇಕೆ (ಪುರಂದ. ೨-೬೨-೦).
[ ಬಿಂಕ₁ + —ತನ ]

**ಬಿಂಕಪಡು** (ಕ್ರಿ). ಗರ್ವಿಸು; ಅಹಂಕಾರ ಪಡು; ಸೊಕ್ಕು : ಇತರ ಬಂಧುಜನರೂ ಸೇನಾಪತಿಗಳೂ ತಮ್ಮಿಂದಲೇ ಈ ದ್ವಾರಕೆಯು ಉಳಿದಿರುವುದೆಂದು ಬಿಂಕಪಡುವರು (ಶೀತಿಶಂ. XV. ೦೬). [ಬಿಂಕ₁+ಪಡು₁]

**ಬಿಂಕೆಯ** (ನಾ). ಒಬ್ಬಾತನ ಹೆಸರು : ಕನ್ನರವಲ್ಲಹಂ ಪೃಥುವೀ ರಾಜ್ಯಂಗೆಯ್ಯೆ ಬಿಂಕೆಯ ನಾಡಾಳೆ (ಎಕ. VIII. ಸೊರಬ. ೭೭-೬; ೨೪೦).
[ಶ ಇದು 'ಬಂಕೆಯ' ಎಂಬುದರ ಅಪಲಿಖಿತವಿರಬಹುದು].

**ಬಿಂಗ₁,** ಬಿಂಕ₂, ಬಿಂಗು (ನಾ). ೧. ಒಂದು ಬಗೆಯ ದೊಡ್ಡ ಜಾತಿಯ ತುಂಬಿ ; ಭ್ರಮರ : "ಆಱಡಿಯಲರ್ವಕ್ಕಿ . . . ಬಿಂಗ ಬಂಡುಣಿಯೆಲರುಣಿಯು ಪಱಮೆ ಚಿತ್ರವಿಹಗಕ್ಕೆ ನಾಮಂ" (ಕಬ್ಬಿಗ. ೨೯); ಭೃಂಗ- ಬಿಂಗ ; ಭೃಂಗಾರ — ಬಿಂಗಾರ (ಶಮದ. ೨೬೯ ಪ್ರಯೋ). ೨. ಒಂದು ಬಗೆಯ ಖನಿಜ ; ಕಾಗೆಬಂಗಾರ; ಅಭ್ರಕ : ಜಲವಿಹಗಾವಳಿ ಜಲಚರಜಾಲಂ ನೆಱೆ ಚಿತ್ರಿಸೆ ಜಳಕನಿಸವ ತೆಳುವಳುಕಿನ ಬಿಂಗದ ಮೇಲ್ಪಟ್ಟೊಪ್ಪಿದುದು (ಅಜಿತ. ೯-೬) ; ಬಿಂಗದ ಕುಪ್ಪಿಗೆಗಿಳಿವ ಕುಂಕುಮದ ನಿರಂಗದಿ ತಾಂಬೂಲರಸವ ನುಂಗುವಾಗಿದಿರಿಗೆ ತೋಱುವುದರಸನ ನುಂಗೊರಳೇನ ಚಣ್ಣಿಪೆನು (ಛಠ. ೭-೩೩); ಬುದ್ಧಿಯೆನಿಸುವ ಕರಣವನು ಭವಸಿದ್ಧವಾಗಿಹುದಾತ್ಮನಡಿಯೊಳಗಿರ್ದು ತೋಱುತ ಬಯಲೊಳೆಸೆಯುವ ಬಿಂಗದಂದದಲಿ (ಅಷ್ಟಕ. ೭-೯). ೩. ಒಂದು ಬಗೆಯ ಬಳ್ಳಿ : "ಪಱಮೆಯೊಳಗಭ್ರಕದೊಳಂ ಲತೆಯೊಳಂ ಬಿಂಗ" (ಕಬ್ಬಿಗ. ೮೪). ಬಿಂಕ₂: ೨. ಫಿರಂಗಿಶೂಲೆಗೆ : — ರಸ, ಗಂಧಕ ... ಗೇರ ಹರಳ ಕುಟ್ಟಿ ಬೀಜವ ತೆಗೆದು ಬಿಂಕದ ಹಾಗೆ ಕಾಸಿ (ವೈದ್ಯಶಿ. ೬೪): ಅದರಲ್ಲಿ ಬಿಂಕದ (Mica) ಹುಡಿಗಳು, ಕೆಲವು ಬೆಣಚು(Felspar)ಗಲ್ಲು ಇವೆಲ್ಲ ಥಳಿಸುವುವು (ಪಾಂಕೃ. I. ೦೯೭): ಇದು ಒಂದು ಕರಡಿಯಂತಿದ್ದು. ಒಳಗಡೆಯಲ್ಲಿ ಎರಡು ರಬ್ಬರ್ ಬಳೆಗಳ ನಡುವೆ ಸೆಳೆದು ಹಿಡಿಯಲ್ಪಟ್ಟ ಒಂದು ಬಿಂಕದ ಪರೆಯಿಂದ ಕೂಡಿರುತ್ತದೆ (ವಿದ್ಯಾಶಿ. ೨). ಬಿಂಗು : ೨. "ಬಿಂಗು (ಗ)—ಭೃಂಗ = ಅಭ್ರಕ" (ಶಬ್ದಕೋ. ೩೦); ಇಂಗು ಕರ್ಪೂರವಕ್ಕು ಬಿಂಗು ಬಜ್ಜರವಕ್ಕು . . . ಕರ್ಮತಾ ಹಿಂಗುವ ದಿನಕೆ (ಸರ್ವಜ್ಞ ೯೯೨). [<ಸಂ. ಭೃಂಗ]

**ಬಿಂಗ₂** (ನಾ). ದೋಷ; ಕುಂದು; ಹುಳುಕು.

ಬಿಂಗ ಬಿಡಿಸು=ಹುಳುಕನ್ನು ಹೊರಹಾಕು, —ಹೊರಪಡಿಸು : ತಂಗಿಯಾದರೂ ನಮಗೆ ಅನುಕೂಲಳಿದ್ದರೆ ಆ ಗೋವಿಂದನ ಬಿಂಗ ಬಿಡಿಸುತ್ತಿದ್ದೆ (ರತ್ನಕ್ರ. ೨೯೨). [←ಮರಾ. ಬಿಂಗ]

**ಬಿಂಗೆಕ್ಕೆ** (ನಾ). ಅಭ್ರಕದಂತೆ ನುಣುಪಾದ ಕಪೋಲ, —ಕೆನ್ನೆ : ಬಿಲ್ಪುರ್ಬಿನ ಬಿಂಗೆಕ್ಕೆಯ ಬಿಂಬಾಧರದ . . . ಬಾಲೆಯೊರ್ವಳ್ . . . ಬರುತುಮಿರ್ದಳ್ (ರಾಮಾಶ್ವ. ೯೮-೨೨). [ಬಿಂಗ₁+ಕೆಕ್ಕೆ]

**ಬಿಂಗರ** 'ಬಂಗಾರ' ನೋ.

**ಬಿಂಗಳಿ** (ನಾ). ದುಂಬಿಯ ಜಾತಿಗೆ ಸೇರಿದ ಒಂದು ಬಗೆಯ ಹುಳು; ಜೀರುಂಡೆ : "ಬಿಂಗಳಿ = ಭೃಂಗಾರೀ=ಜೀರುಂಡೆ" (ಶಬ್ದಕೋ. ೩೦).
[<ಸಂ. ಭೃಂಗಾರೀ]

**ಬಿಂಗಾರ** 'ಬಂಗಾರ' ನೋ.

**ಬಿಂಗಾರಿ₁** (ನಾ). ಜಂಬಗಾತಿ ; ಅಹಂಕಾರಿ ; ಸೊಕ್ಕಿನವಳು : ಹ್ಯಾಗೆ ಹೊಂಟಳು ನೋಡು ಬಿಂಗಾರಿ (ರಂಗಕೊ. ೭೪).
[< ಬಿಂಕ₁. / ತುಳು. ಬಿಂಗಾರಿ. ಬಿಂಗಿರಿ, ಬಿಂಗ್ರಿ=ದುರಭಿಮಾನವುಳ್ಳ]

**ಬಿಂಗಾರಿ₂** 'ಬಂಗಾರ' ನೋ.

**ಬಿಂಗಿ** (ನಾ). ೧. ಶಿವನ ಪ್ರಮಥಗಣಗಳಲ್ಲಿ ಒಬ್ಬ; ಭೃಂಗಿ : ಬಿಂಗಿಯು ಕುಣಿತಮನೀಕ್ಷಿಸಿಯಂಗನೆ ನಗೆಯುಂಗುಳ್ವ ತಚ್ಚರ್ಮಕಂಪದ ಕಂಪಿಂಗೆಳಸಿ ಮುಡಿಗೆ ಮುಸುಱಿದ ಭೃಂಗಂಗಳ್ ನೆಗೆದ ಪೀಲಿಗೊಡೆಯೆನೆ ತೋರ್ಕುಂ (ರಹ. ೨-೯೭) ; ೮೦ಗಳ ಮುಚ್ಚಿ ತಱಿವುತ ಬಿಂಗಿಯಂತಾಡುವ ಕಂಥೆಯ ಜೋಗಿಣಿಯಂಗದಾಟವೆ ನಮ್ಮ ನೃತ್ಯ (ಛಠ. ೦೪-೩೨). ೨. (ಅಲಂ) ನಿರ್ಗತಿಕವ್ಯಕ್ತಿ ; ದರಿದ್ರ : ಅವನೂ ಬಿಂಗಿಯಂತೆ ಬರಿಗೈಯಲ್ಲಿ ಬಂದು ನಿಂತು ಅವಳ ಸ್ನೇಹಭಿಕ್ಷೆಗೆ ಕೈ ಚಾಚಿರಲಿಲ್ಲ (ರೂಪಕ ೬೦) ; ನಾನು ಭೂಷಣವಾಗಿರುತೀನಿ ನೀನು ಹೀಗೆ ಕೋರಿ ಸುತ್ತಿಕೊಂಡು ಬಿಂಗಿಯ ಹಾಗೆ ನಿಂತಿರು (ರಾಗಿಣಿ. ೯೦). ೩. ಹುಚ್ಚ ; ಮರುಳ : ಬಂಗಾಳದರಸೀತ ನೋಡೆಂದರೀಕ್ಷಿಸಿ ಮುಂಗಡೆಗೆಯ್ದಿದಳೊಡನೆ ಸಿಂಗಾರ ಮುಱುಕು ವಿಡಾಯ ಹಾಱಿತು ಹೊಸಬಿಂಗಿಯುತಿರ್ದನಾ ನೃಪತಿ (ಛಠ. ೩೩-೯೯) ; ಏ ಬಿಂಗಿ, ನಾನು ಯಾರು ಅಂತ ಮಾಡಿದ್ದೀ ? ನಿನ್ನ ಅಜ್ಜಿ ಇದ್ದಳಲ್ಲ ? ಅವಳು ನನ್ನ ತಂಗಿ (ಮರಹು. ೯೬೩). [< ಸಂ. ಭೃಂಗಿನ್]

**ಬಿಂಗು** 'ಬಿಂಗ₁' ನೋ.

**ಬಿಂಗುಂಡು** 'ಬಿಣ್ಗುಂಡು' ನೋ.

**ಬಿಂಗುಂಡುಗೊಳ್** (ಕ್ರಿ). ಭಾರವಾದ ಗುಂಡಿಗೆ ಸಿಕ್ಕಿಕೊಳ್ಳು : ಬೆಂ[ಬಿಂ]ಗುಂಡುಗೊಂಡ ಗಂಡಗತ್ತರಿಯ ಸಂಸರ್ಗದರ್ಗಳವುನಮರೆ ಸಾರ್ಚಿಯುಂ (ಶಿಶ್ನಶ. ೭-೬೪ ವ). [ಬಿಂಗುಂಡು(<ಬಿಣ್ಗುಂಡು)+ಕೊಳ್₁]

**ಬಿಂಗುಸುಬು** (ನಾ). ಅಭ್ರಕದ ಪುಡಿಯಿಂದ ಕೂಡಿದ ಮರಳು, —ಉಸುಕು : ನನಸು ಕನಸುಗಳ ದರ್ಶನವನೇಂ ತರಲಾರೆ, ಬಿಂಗುಸುಬು ಬಂಗಾರದಿರವನೊರೆವಂತೆ ? (ಗೀಐಂ. ೨೬-೨೦).
[ ಬಿಂಗು (<ಬಿಂಗ₁) + ಉಸುಬು (< ಉಸುಕು) ]

**ಬಿಂಗೆ** (ನಾ). ( ? ) : ಕಂಪಿಸಿದನಡಿಗಡಿಗೆ ತಲ್ಲಣಿಸಿ ಕುರುನೃಪತಿಯು ಬಿಂಗೆಯಾಗಿರುತಿರಲ್ಗರ್ವಗಿರಿ ಜರಿದು ರಕ್ತಂಗಳೆನ್ನೊಸರುತಿರೆ ದ್ರೋಣ ಕೌರವರಾಯನಿಂಗಿತವನರಿದು . . . ಇಲ್ಲಿ ನೀವಿದ್ದೇನು ಫಲವೆನಲು (ಕುರುಂಡ. ೩೦-೦೪). [?]

**ಬೀಜ** (ನಾ). ೧. ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಾನ್, ಋಕ್ಷವಾನ್, ವಿಂಧ್ಯ ಮತ್ತು ಪಾರಿಯಾತ್ರ ಎಂಬ ಏಳು ಕುಲ ಪರ್ವತಗಳಲ್ಲಿ ಒಂದು ; ಉತ್ತರ ಹಿಂದೂಸ್ಥಾನ ಮತ್ತು ದಖನ್ನಿನ ಮಧ್ಯದಲ್ಲಿರುವ ನೀಳವಾದ ಪರ್ವತಗಳ ಸಾಲು ; ವಿಂಧ್ಯ : "ಬೀಜಪನೆ ವಿಂಧ್ಯಂ" (ಕಬ್ಬಿಗ. ೩೯) ; ಬೀಜವದವಿಯೊಳಗೆಲ್ಲಂ ನಂಜಿನ

ಮಟಿಗೊಂಡು ಬಿಟ್ಟ ತೆಱನಾಯ್ತು (ಕಾದಂಪೂ. ೧೬.೨) ; ಮುಂದಿರ್ಪುದು ಬಂಜವಡವಿ ಪಸುಳೆಮಕ್ಕಳ್ಬೆರ್ ಸಹಿತಂ . . . ಪರ್ವತಕ್ಕೆ ಪೋಪ ಸಂಬಂಧಮೇನೆನೆ (ಪುಣ್ಯಾಸ್ರ. ೧೨-೩೨ ವ). ೨. ಕಾಡು; ಅಡವಿ : ಅರಣ್ಯ: "ಪಟುವೆಂದುಂ ಬಂಜವೆಂದುಂ ಅಡವಿ" (ಕಶಾಸಾ. ೩೦-೬೧) ; ಅಲ್ಲಿ ನೆರೆದ ಪೆರ್ವಡೆ ಪಯಣಂಬೋಪಾಗಳೆಯಿಕ್ಕುವ ಬಂಜವೆ ನಡೆವಂತೆ ಧನುರ್ಬಲಂ ನಡೆಯೆ (ಬಂಹಕಾ. ೧೧-೬೨ ವ) ; ನೇಸಱವೆಳಗಿಗೆ ವೆಜ್ಜಗೊಡದೆ ಬೆಳೆದಿರಲಾ ಬಂಜಂ ಭೀಕರತರಮಾಯ್ತು (ಶಕುಸಾ. ೧೫-೨೧) ; ನಂಜಿಡಿದ ಭರಣಿಯುಂತೋ ಮಹಾವಾಯಿಗಳ ಬಂಜದಂತೋಯೆಂಬಯೂಹೆಗಳವಡದಂತೆ ಕಂಜೋದ್ಭವಾಂಡವೊಪ್ಪಿರ್ದುದೇಂ ಸಾಂದ್ರಾಂಧಕಾರದೊಳ್ (ನೇಮಿಪು. ೪೬-೧೯). ೩. (ಅಲಂ) ಸಮೂಹ; ರಾಶಿ ; ಒಟ್ಟಿಲು : ನೆಲಂ ಬೆಸಲೆಯಾದಂತೆ ಬರ್ಪ ಬೇಡವಡೆ ರಸೆಯಿನೊಗೆವಸುರರ ಪಡೆಯಂತೆಯುಂ . . . ನಡೆವ ನಂಜನ ಬಂಜದಂತೆಯುಂ . . . ಅಗುರ್ವುಮಾದ್ಭುತಮುಮಾದುದು (ಶಂಬಪುಷ. ೯-೩೪ ವ).

ಬಂಜದೋಜ = ಅಗಸ್ತ್ಯ : ☞ ವಿಂಧ್ಯಪರ್ವತವು ಮೇರುವಿನ ಔನ್ನತ್ಯದೊಂದಿಗೆ ಸ್ಪರ್ಧಿಸಿ ಮೇಲೇರಿದಂತೆಲ್ಲ ಭೂಮಿಯ ಸಮತೂಕವು ತಪ್ಪಿತು. ಆಗ ದೇವತೆಗಳ ಪ್ರಾರ್ಥನೆಯಂತೆ ಅಗಸ್ತ್ಯನು ದಕ್ಷಿಣಕ್ಕೆ ಬಂದಾಗ ವಿಂಧ್ಯವು ಗೌರವದಿಂದ ಅವನಿಗೆ ಮಣಿಯಿತು ಮತ್ತು ಅಗಸ್ತ್ಯನ ಮಾತಿನಂತೆ ಹಾಗೆಯೇ ಬೆಳೆಯದೆ ಉಳಿಯಿತು. ಹೀಗಾಗಿ ಅಗಸ್ತ್ಯನು ವಿಂಧ್ಯಪರ್ವತದ ಗುರುವಾದನು ಎಂಬ ಪೌರಾಣಿಕ ಕಥೆ ಇದೆ : ರಾಜಪರಮೇಶ್ವರಂಗೆ ಬೆಳ್ಳಗೆಯೊಳ್ ಬಂಜದೋಜ ನೋಜೆಯಿಂ . . . ಪಡಿನುಡಿದಂ (ರಾಜಶೇಖ. ೧೪-೨). [<ಸಂ. ವಿಂಧ್ಯ]

**ಬಂಜಾಡಿ** (ನಾ). ಒಂದು ಬಗೆಯ ತೆರಿಗೆ ( ? ) : ಕುಡುಕೂರ ಗ್ರಾಮದ ಒಳಗೆ ಅಂಣಪ[ಶ್ವಾ]ರನು ಸ(ಂ)ಮ್ಮ ಅರಮನೆಗೆ ತೆಱುವ ಬಂಜಾಡಿಯ ಅಧಿವಾಸದ ಒಳಗೆ ತಂನ ಹದಿಮೊದಲು ಅಪ್ಪಣೆಯ ಬಗೆಯಿಂದ ಕಾಟಿಗ ೫೫ (ಶಾಇಇ. IX–ii. ೪೬೧-೧೪; 1467). [ ? ]

**ಬಂಡಿಗ** (ನಾ). ಒಂದು ಬಗೆಯ ಸಸ್ಯ: "ಅರುಣಮೂಲಮೆನೆ ಬಂಡಿಗ ವಕ್ಕ" (ಪಂಗರಾ. ೩೩-೧೪) ; ವರಮಿಂದ್ರವಾರುಣಿಯ ಬೇರ್ ವರತರವೂ ಬಂಡಿ(ದಿ)ಗಂ . . . ಪರಿಪರಿಕುಂ ವಿಷದುರುವ ಪುಣ್ಗಳಂ ತತ್‌ಕ್ಷಣದಿಂ (ಖಮರ. ೧೬-೧೦೧). [<ಸಂ. ಭಂಡಕ]

**ಬಂಡಿವಾಲ** 'ಬಂಡಿವಾಳ' ನೋ.

**ಬಂಡಿವಾಳ**, ಪಿಂಡಿವಳ, ಪಿಂಡಿವಾಳ, ಬಿಂಡಿವಾಲ (ನಾ). ಒಂದು ಬಗೆಯ ಆಯುಧ; ಈಟಿ : ಮಧ್ಯಮನಿಷಾದಿಗಳ್ ಮಧ್ಯಮನಿಷಾದಿಗಳೊಳಸಿ ಮುಸಲ ಕಣೆಯ ಕಂಪನ ಮುಸುಂಡಿ ಬಂಡಿವಾಳ . . . ಪಾಶಾಂಕುಶಾದಿ ಶಸ್ತ್ರಾಸ್ತ್ರಂಗಳೊಳೆಚ್ಚುಮಿಟ್ಟುಮಿಱಿದುಂ ಪೊಯ್ದು ಮತಿಭಯಂಕರಾಕಾರಮಾಗಿ ಕಾದುವಾಗಳ್ (ಶಂಕಾಪುಷ. ೧೩-೬೬ ವ) ; ಪಟಳದಲಿ ಗದೆಯಲಿ ಬಂಡಿವಾಳ[ಶಾಹಾಂ. ಲ]ದಲಿ ಪರಿಪರಿಯ ಚಿತ್ರದ ಚಮತ್ಕೃತಿ ಕರವ ತೋಱಿಸಿದನು (ಕುಮ್ಯಾಭಾ. ೬-೨೧). **ಪಿಂಡಿವಳ** : ಚಕ್ರ ಪರಶು ಪಿಂಡಿವಳಂ ಪೇರ್ವಾಳು . . . ಘಳಕಂಬಿಡಿದಮರರ್ ನೆರೆದುದು (ವೀರೇಶ. ೩೫-೩೦). **ಪಿಂಡಿವಾಳ** : "ಯಷ್ಟಿಃ, ಪಟ್ಟಿಶಕಃ . . . ಪಿಂಡಿವಾಳಃ, ಗದಾದಂಡಃ, ಚಕ್ರಂ — ಇವು ಮೊದಲಾಗುಳ್ಳುವು ಕೆಯ್ದುಗಳ ಭೇದಂಗಳ್" (ಶಠಾಹು. ೬೬-೩೨೨) ; ಪಿಡಿ ಬಿಡಿ ಕಟ್ಟು ಸೂಂಕು . . . ಗಾಣದೊಳ್ ಪಿಟಿ ಪಿಸುಳ್ದರೆ [ಪೋ]ಟಿಸು ಪಿಂಡಿವಾಳದೊಳ್ (ಶುಕಪುಷ. ೬-೩೨) ; ವಿಡುಗ ತೋಮರ ಪರಶುಗಳ ಕಕ್ಕಡೆಯ ಕುಂತದ ಪಿಂಡಿವಾಳದ ಕಡುಗಲಿಗಳುಱೆ ಮುಗ್ಗಿದರು ತಗ್ಗಿದುದು ಯಮಲೋಕ (ಕುಮ್ಯಾಭಾ. ೯-೩೬). **ಬಿಂಡಿವಾಲ** : ಶೂಲ ಭಪರುಗ ಬಿಂಡಿವಾಲಗಳಿಂದೆ (ಕೂಳ್ಗಿವಿಷ. ೪೪-೬). [ <ಸಂ. ಭಿಂದಿವಾಲ]

**ಬಂದ** (ನಾ). ೧. ಗುಂಪು ; ಸಮೂಹ : "ಬಂಬಲ್, ತುಱುಗಲ್, ವಂಗಡಂ, ಗಡಣಂ, ಮೊಗ್ಗರಂ, ಬಂದಂ . . . ಗೊಂದಣೆ (ಉಂದಲ್) — ಈ ೪೦ ಸಮೂಹಂ" (ಕಶಸಾ. ೫೬-೨೨೩) ; ಅಸಂಗಸ ಬೇಂಟೆಯ ಬಂದದಂದದಿಂ ಬರೆ ಪೊಸಸುಗ್ಗಿ ಕೆಯ್ಗಟಿಯೆ ಕಣ್ಗೆಸೆದಿರ್ದುವು ನಂದನಾಳಿಗಳ್ (ಶಾಂತಿಪು. ೬-೦೨೪) ; ಬಂದವ ಹಱಿದು ನಿಂದು ಹಾಡಿರೋ ಚಣಿತಿಯರಿರಾ (ಸರ್ವಾ. ೪೮-೨೫೩) ; ಜೇನೆಯ್ಗಳಂ ತರ್ಪುದಕ್ಕೆ ಪೊಗೆಗೊಂಡು ಪೊಱಮಡುವ ಬೇಡರ ಬಂದಮೊಪ್ಪಿತಾ ಪೆಕ್ಕಣದೊಳು (ಸಮ್ಯಕೌ. ೧೧-೨೬). ೨. ಒಟ್ಟಿಲು : ರಾಶಿ ; ಮೊತ್ತ : ದೆಸೆದೆಸೆಯ ಕಟ್ಟಲೆಯ ಬಂದಮೊಂದುಗೂಡಿ ಗುಂಡುಗೊಂಡು . . . ಬಾಂದಳಮನೇಱಿ ಪೋಪುವೆನೆ (ರಾಜಶೇಖ. ೬೨-೦೨).
[ < ಸಂ. ಬೃಂದ. / ತೆಲು. ಬಂದ ]

**ಬಂದಂಗೊಳ್** (ಕ್ರಿ). ಒಟ್ಟಾಗು ; ಕೂಡು ; ಸೇರು : ಬಂದಂಗೊಂಡಿಹ ಕಾಳ್ಕೆ ಮಾರಿಕಣವೇ ಜಾತಂಗಳೆಲ್ಲಲ್ಲಿಯುಂ ಸಂದೊಳ್ಪಚ್ಚದ ಪಾಂಗನಾತ್ತು ಪರಿಗುಂ (ಪ್ರಸೂಮಾ. ೦-೪೮). [ ಬಂದ + ಕೊಳ್[1] ]

**ಬಂದಣಿಕೆ** ' ಬಂದಣಿಕೆ ' ನೋ.

**ಬಂದರೆ**, ಬಂದಾರಿ (ನಾ). ಒಂದು ಬಗೆಯ ಮರ : ಬಂದರೆ ಬೀಜವನ್ನು ನೀರಲ್ಲರೆದು ತೆಗೆದುಕೊಳ್ಳಲು ಮೂಲವ್ಯಾಧಿಯ ರಕ್ತ ನಿಂತು ಗುಣಮಕ್ಕುಂ (ಸಕಸ್ಯ. ೨೬೬). **ಬಂದಾರಿ** : ದೊಡ್ಡತೊಪ್ಪಮರ, ದೊಡ್ಡಮರ, ಬೀದಾರಿಮರ, ದಲ್ಲಿಮರ, ಬಟ್ಟಗ (ಪ್ರಾಶಿನಿ. ೪೫-೬೬೩). [?]

**ಬಂದಲಿ**, ಬಂದಿಲು (ನಾ). ಚಿಕ್ಕ ಮಕ್ಕಳ ಮುಂಗೈಗೆ ತೊಡಿಸುವ ಒಂದು ಬಗೆಯ ಆಭರಣ : ಗೋದಕ್ಕ ಕೂಸಿಗೆ ಬಂಗಾರದ ಬಂದಲಿ, ಜರದ ಕುಂಚಿಗೆ ಎಲ್ಲಾ ತಂದಿದ್ದರು (ವೃಶಿ. ೨೦೦) ; ದತ್ತೂನ ಬಂದಲಿ ಮುರಿಸಿ ಟಿಳಕರಿಗೆ ಎರಡು ತೊಲೆಯ ಉಂಗುರ ಮಾಡಿಸಿದ್ದ (ಸ್ವಕೀಶ. ೧೬೪). **ಬಂದಿಲು** : ತರುಣಂಗೆ ಬಂದಿಲರಳೆಲೆ ಗೆಜ್ಜೆ . . . ಪೊತ್ತುಳ ಘಂಟೆ ಮೊದಲಾದ ಮಣಿದೊಡಗಳ ಹರುಷದಿನಲಂಕರಿಸಿ (ರಾಶಶ. ೨-೪೬); ಬಂದಿಲರಳೆಲೆ ಗೆಜ್ಜೆಯನ್ನು ... ವಜ್ರವೈಡೂರ್ಯಮುದ್ರೆಗಳ ಬೆರಳ್ಗಳಿಗರ್ಪಿಸಿ (ಸಪಮೋ. ೦೨-೦೬). [← ಮರಾ. ಬಂದಲೀ, ಬಂದಲೇ, ಬಂದುಲೇ]

**ಬಂದಲು** (ನಾ). ಒಂದು ಬಗೆಯ ಹೂವು: ದೇವರಿಗಾಗಿ ಒಂದು ಬಂದಲನ್ನು ಕೊಯ್ಯಬಹುದು (ಚಾಳ್ಕಿಕ. ೬೨). 'ಬಂದಿಗೆ' ಪರಾ. [?]

**ಬಂದಾರಿ** 'ಬಂದರೆ' ನೋ.

**ಬಂದಿ** (ನಾ). ಒಂದು ಬಗೆಯ ಆಭರಣ : ಮಕ್ಕಳ ಬಯಸಿ . . . ಹರಿಗೆ ಪಟ್ಟದ ಹರಕೆ ತೊಟ್ಟಿಲ ಹರಕೆ ಬಂದಿಯ ಹರಕೆವಿಡಿದಿಹರರಸಿ ಕೌಸಲೆದೇವಿ ಕೈಕೆ ಸುಮಿತ್ರೆಯರು (ಕೌಶಾ. ೦-೩೩); ಕೆಂದ ಪೀತಾಂಬರವ ಸುಧ ಉಟ್ಟಿರುವಳು ಅಂದಮುಡಿಗೆ ಮುತ್ತಿನ ಸೂಂಡಿಲ ಬೈತಲ ಬಂದಿ ಬಿಜವರ ಬಲು ಚೆಂದ (ಸಿದ್ಧಕೃ. ೧೯-೬೦).

[ ?. / ತೆಲು. ಬಂದೀ = ಮುಂದಲೆಯ ಆಭರಣ. / ಹಿಂ. ಮರಾ. ಬಂದೀ = ಕೆನ್ನೆಸರಪಳಿ]

**ಬಂದಿಗ** (ನಾ). ಗುಂಪಿನಲ್ಲಿರುವ ಕ್ಷುದ್ರದೇವತೆ (?) : ಕೆಮ್ಮುಗಿದೇಕೆ ನಾಡ ಪಲವಂದದ ನಂದಿದ ಬಂದಿಗರ್ಕಳಂ ನೀಮ್ಮರುಳಾಗಿ ದೇವರಿವರೆನ್ನ ವರಂ ಮಿಕೆಗೆಟ್ಟು ನಿನ್ನನೇಕಮ್ಮ ತೊಳಲ್ವಿದಪ್ಪೆ ಭವಕಾನನದೊಳ್ ಗೊಪ್ಪಟದೇವನಂ ನೆನೆಯ ನೀಗುವೆ ಜಾತಿಜರಾದಿದುಃಖಮಂ (ಎಇ. II. ೨೪೯-೯೦; ಶ. 1180). 'ವೃಂದಾರಕ' ಹೋ. [ಬಂದ + –ಇಗ]

**ಬಂದಿಗ** (ನಾ). ೧. ಬಾವಿಯಿಂದ ನೀರನ್ನು ಸೇದಲು ಮತ್ತು ಸೊಂಟದಲ್ಲಿಟ್ಟುಕೊಂಡು ಹೊರಲು ಅನುಕೂಲವಾದ ಸಣ್ಣ ಕಂಠವುಳ್ಳ, ಗುಂಡನೆಯ ಲೋಹದ ಪಾತ್ರೆ ; ಕೊಡಪಾನ ; ಕೊಡ : ಬೆಳಕಿನಿಂದಗ್ಘವಣೆಯಂ ಕಂಗೊಳಿಸಿ ತುಂಬಿದ ಹೊನ್ನ ಬಂದಿಗೆಗಳನಿರಿಸಿ

ಲಲಿತಾಂಗಿ . . . ಧೂಪಾರತಿಯನೀಯೆ (ರಸಪ್ರ. ೧೨-೩೪); ಪಂದಲೆಯೊಂದು ಬಾಸಿಗಂ ನೆತ್ತರ ತಳ್ತ ಬಲ್ದಲೆಯ ಬಂದಿಗೆ ಪಾವುಗೆ ಪಂಚಮಸ್ವನಂ ಚಿತ್ತದ ಕೋಲಿವೊಂದಿ ನಿಲೆ ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಅನ್ನಸಾ. ೩೩೩); ತಾರಕ್ಕ ಬಿಂದಿಗೆ ನಾ ನೀರಿಗ್ಹೋಗುವೆ ತಾರೇ ಬಿಂದಿಗೆಯು ಬಿಂದಿಗೆ ಒಡೆದರೆ ಒಂದೇ ಕಾಸು ತಾರೇ ಬಿಂದಿಗೆಯ (ಜಾಸಂ. ೧-೯೯ ಪಲ್ಲವಿ). ೨. ಗುಂಡನೆಯ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ ಮತ್ತು ಅದರ ಹೂವು: ಸುಗಂಧರಾಜ ಕನಕಾಂಬರಿ ಬಂದಿಗೆ ನಾಗಲಿಂಗಪುಷ್ಪ ನೀಲಾಂಬರಿ . . . ಸೂರ್ಯಕಾಂತಿ ಪುಷ್ಪಗಳು (ಸಿದ್ಧಪು. ೨೪-೯೦).

[ದೇ. ॥ ಮಲ. ವಿನ್ನ; ತುಳು. ಬಂದಿ = ಸಣ್ಣ ಮಣ್ಣಿನ ಮಡಕೆ; ತೆಲು. ಬಂದಿಯು, ಬಿಂದೆ. / ಮರಾ. ಬಿಂದಗಾ]

**ಬಂದಿಲು** 'ಬಿಂದಲಿ' ನೋ.

**ಬಂದಿಸು** (ಕ್ರಿ). ಸೊನ್ನೆಯಿಡು ; ಬಿಂದುವಿನ ಗುರುತುಮಾಡು: ಬರೆದು ಕುಂಡಲಿಚಕ್ರಮಂ . . . ನಿಜೇಷ್ಟಗೃಹದೆಡೆಗೆ ಪೇಟಿಡ್ಡಿಗಳಂ ಬಿಂದಿಸಿ ಪೇಟಡೆ ತರದಿ ರೇಖೆಯನಂತವು ಸರಿಯಾಗಿ ಸರಿಗಳೆವುದು (ಜಾತಕ. ೧೧-೨). [ಬಿಂದು + — ಇಸು]

**ಬಿಂದು** (ನಾ). ೧. (ಯಾವುದಾದರೂ ದ್ರವದ) ಹನಿ : ತೊಟ್ಟು : "ಬಿಂದುವೆನೆ ಸುರಿವ ಹನಿಯಕ್ಕು" (ಜಾಗರಾ. ೧೨೪-೦೫); ಅಱಿದಡೆ ತಾವರೆಯೆಲೆಯ ಬಿಂದುವಿನಂತೆ ಅಂಗಲೇಪವಿಲ್ಲದೆ ಗುಹೇಶ್ವರಲಿಂಗ ವನಱಿಯಬೇಕು (ಅವಸಂ. ೨೬೩-೦೨೦೦); ಹಿಂಡುಹಿಂಡಾಗಿ ನೊಣಗಳು ಬಂದು . . . ಪಾಯಸದ ಬಿಂದುಗಳನ್ನು ನಿರಾತಂಕವಾಗಿ ಹೀರಿದ ದೃಶ್ಯವನ್ನು ವಿಸ್ಮಿತನೇತ್ರಗಳಿಂದ ನಾನು ನೋಡಿದ್ದು ಇಂದಿಗೂ ನೆನಪಿದೆ (ವಂಟರು. ೪೩). ೨. ಚುಕ್ಕೆ; ಬೊಟ್ಟು: ಹಣೆಯಲ್ಲಿ ಚಂದ್ರಕುಂಕುಮಬಿಂದುವನ್ನಿಟ್ಟು (ಕನ್ನಾಂಗ. ೧೪-೩೦೪); ಬಿಂದು ವಿಸರಗಳನುವು ವಂಕು ಸರಲಗಳನುವು ಚಿಂದ ಕಣ್ಣಿಗೆ ವರ್ಣವಿವಿಧಗಳನುವು (ಮಂಕುತಿ. ೪೬೬). ೩. ಗುರುತು ; ಚಿಹ್ನೆ. ೪. ಆನೆಯ ಮೈಮೇಲಿನ ಬಿಳಿಯ ಮಚ್ಚೆ. — ಚಿಬ್ಬು : "ಬಿಂದು, ಪದ್ಮಕಂ — ಈ ೨ ಚಿಬ್ಬು" (ಕಬಾಯು. ೩೭-೬೬); ಸೂಕ್ಷ್ಮಬಿಂದುಱುಚಿ[ರ]ನುಂ ಕಾಳಂಗವನಸಂಭೂತನುಮನೇಕಲಕ್ಷಣೋಪೇತನುಮಪ್ಪ ತ್ರಿಭುವನಾಭರಣಮೆಂಬಾನೆಗಂ . . . ತ್ರಿಭುವನತಿಲಕಮೆಂಬ ಕುದುರೆಗಂ ಪಟ್ಟಂಗಟ್ಟಿ (ಕಂಶಶಾ. ೦೪-೨೦ ಪ). ೫. ಶುಕ್ಲ ; ವೀರ್ಯ ; ರೇತಸ್ಸು : ಬಾಯೆ ಭಗವಾಗಿ ಕೈಯ ಇಂದ್ರಿಯವಾಗಿ ಹಾಕುವ ತುತ್ತುಗಳೆಲ್ಲಾ ಬಿಂದು ಕಾಣಿರೋ (ಅವಸಂ. ೦೦೩-೪೬೯) ; ಬಿಂದುವೂ ಮೂತ್ರವೂ ಒಂದೆ ನಾಳದಿ ಬಿಕ್ಕು ಒಂದ ಬಟ್ಟೊಂದ ತಡೆದಿಹರೆ ಪರಬೊಮ್ಮಮದು ತಾನಕ್ಕು (ಸರ್ವಜ್ಞ. ೩೩೬). ೬. ಹುಟ್ಟಿದ ಮಕ್ಕಳನ್ನು ಕಳೆದುಕೊಂಡಿರುವವಳು ; ಮಕ್ಕಳಿಲ್ಲದಿರುವವಳು : "ನಶ್ಯತ್ಪ್ರಸೂತಿಃ, ಬಿಂದುಃ — ಈ ೨ ಮಕ್ಕಳ್ ಬಾಬದವಳ್" (ಕಬಾಯು. ೬೦-೩೩೪) ; "ಮಕ್ಕಳುಱಿ ಸಾವ ಸತಿ ಬಿಂದುವಕ್ಕು" (ಜಾಗರಾ. ೮೪-೩). ೭. ಹುಬ್ಬುಗಳ ನಡುವಿನ ಜಾಗ, ಎಡೆ. ೮. [ವ್ಯಾಕ] (ಯೋಗವಾಹಗಳಲ್ಲಿ ಒಂದಾದ) ಅನುಸ್ವಾರದ ಚಿಹ್ನೆಯಿಂದ ಗುರುತಿಸುವ ವರ್ಣ : ಅನುಸ್ವಾರ : ಸೊನ್ನೆ : ಬಿಂದು ವಿಸರ್ಗಂ ವ್ಯಂಜನಮೊಂದಿದ ದತ್ವಕ್ಕರಂ ಪದಾಂತ್ಯಂ ದೀರ್ಘಂ ಬಂದೊಡಱಿ ವನಜಮುಖಿ ಗುರುವೆಂದು (ಛಂದೋಂಬು. ೧-೩೩); ಬಿಂದುವಿನೊಂದು ಶೋಭೆ ತಲೆಕಟ್ಟಿನ ಪೊರ್ಕುಳ ಚೆಲ್ವು . . . ವಿಸರ್ಗದೊಳ್ಪೊಂದಿರಲಕ್ಕರಕ್ಕೆ ಬರೆವಂ . . . ಮಾದಿರಾಜವಿಬುಧಂ (ಪುಶ್ಕಪು. ೦೪-೩೪); ಬಿಂದುವನುಸ್ವಾರಂ ತಾನೆಂದಕ್ಕುಂ ಸೊನ್ನೆ ಮುತ್ತುಪೂಳಃ ವೃತ್ತತೆಯಿಂ ಸಂದಿರ್ಪುದು (ಶಮಂ. ೧೧). ೯. [ಕಾವ್ಯಮಿ] ನಾಟಕದ ಕಥಾವಿನ್ಯಾಸದಲ್ಲಿ ಗೌಣವಾಗಿದ್ದ ಘಟನೆಯೊಂದು ಒಮ್ಮೆಲೇ ಪ್ರಾಮುಖ್ಯವನ್ನು ಪಡೆಯುವುದು : ಬೀಜಂ ಬಿಂದು ಪತಾಕೆ ಪ್ರಕರಿ ಕಾರ್ಯಮೆನೆ ಪಂಚವಿಧಂ ನಿಪುಣಕವಿರಚನೆಯೊಳ್ ಸಪ್ರಪಂಚದಿಂದೊಂದಿ ತೋಱುಗುಂ ಸಂಧ್ಯಂಗಂ (ಕಾವ್ಯಾವ. ೯೩೬). ೧೦. [ಕಾಮಶಾ] ದಂತಕ್ಷತಗಳಲ್ಲಿ ಒಂದು ; ನಲ್ಲಳ ತುಟಿಗಳ ಮೇಲೆ ಒತ್ತಿದ ನಲ್ಲನ ಹಲ್ಲಿನ ಗುರುತು : 'ಬಿಂದುಮಾಲೆ' ಪರಾ. ೧೧. [ತತ್ತ್ವಶಾ] ಪ್ರಪಂಚದ ಸೃಷ್ಟಿಗೆ ಕಾರಣವಾದ ನಾದ, ಬಿಂದು ಮತ್ತು ಕಳೆಗಳೆಂಬ ಮೂರು ಅವಸ್ಥೆಗಳಲ್ಲಿ ಎರಡನೆಯದು: ಬಿಂದುವಿನೊಳಗೆ ನಾದ ಹೊಂದಿರ್ದ ಭೇದವನು . . . ಲೋಕದ ಸಂದೇಹಿಗಳೆತ್ತ ಬಲ್ಲರೈ (ಬೇರಾವ. ೬೩-೦೩೨) ; ಈ ಪಟ್ಟಸ್ಥಲಂ ತಪ್ಪೊಳೆರಡೆರಡು ಕೂಡುತ ಮೂಱು ತೆಱನಾಗಿ ಕಳೆ ನಾದ ಪರಬಿಂದುವೆಂದು ಭೇದಿಸಿದಾದಿದೇಶಿಕನ ಚರಣಾಂಬುಜಕ್ಕೆ ಶರಣು (ಅನುಭಂ. ೩೦-೦೯) ; ತನು ನಾದಂ ಗುರು ಲಿಂಗಂ ಮನಮುಂ ಪರ ಬಿಂದು (ಹರಿಸ್ವಾ. ೩-೩೪). ೧೨. [ವೀಶೈ] ಮೂರು ತತ್ತ್ವಗಳಲ್ಲಿ ಒಂದಾದ ಪಾಶದ ಐದು ವಿಭಾಗಗಳಲ್ಲಿ ಒಂದು: ಶೈವ ಸಿದ್ಧಾಂತದಲ್ಲಿ ಪಾಶವು ಐದು ವಿಧವಾಗಿದೆಯೆಂಬ ವಿವರಣೆ ಇದೆ. ಮಲ, ರೋಧಶಕ್ತಿ, ಕರ್ಮ, ಮಾಯಾ, ಬಿಂದು ಅಥವಾ ಮಹಾಮಾಯ ಎಂಬಿವೇ ಪಾಶದ ವಿಭಾಗಗಳು (ಕಾಶತ. ೨೮೦). [ಸಂ.]

**ಬಿಂದುಕ** (ನಾ). [ಚಿತ್ರಶಾ] ಚಿತ್ರಗಳಿಗೆ ಬಣ್ಣ ಹಾಕುವ ಅನಿಲಕ, ಪತ್ರಕ, ಬಿಂದುಕ, ಧೂಮ್ರಾವರ್ತಕ, ಉದ್ವರ್ತನ ಮತ್ತು ಚಿತ್ರ ಪ್ರವರ್ತನಗಳೆಂಬ ಆರು ಬಗೆಯ ಕ್ರಮಗಳಲ್ಲಿ ಒಂದು : ಅನಿಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತಕಮುದ್ವರ್ತನಂ ಚಿತ್ರಪ್ರವರ್ತನಮೆಂಬಾಱುಂ ತೆಱದಣ್ಕೆಯುಮಂ . . . ಪಂಭಾವಿಸಿ ನೋಡಿ (ಮಲ್ಲಿಕಾ. ೨-೯೨). [ಸಂ.]

**ಬಿಂದುಗಳೆ** (ಕ್ರಿ). ದ್ರವಿಸುವಂತೆ ಮಾಡು ; ಕರಗುವಂತೆ ಮಾಡು (?): ತೀವಿದಮೃತಮಂ ತುಳುಂಕಿಡು ಚಂದ್ರಿಕೆಯಂ ಬಿಂದುಗಳೆದಂ . . . ಎಸುತೆ ಭೋಂಕನೆ ಸಂಕಿಲಿಯನಕ್ಕಲಚರ ಮನೆಗೊಯ್ವರ್ (ನೇಂಚ. ೦೨-೬೨). [ ಬಿಂದು + ಕಳೆ$_{1}$ ]

**ಬಿಂದುಚಕ್ರ** (ನಾ). [ವೀಶೈ] ಚಕ್ರವು ರಥವನ್ನು ನಡೆಸುವಂತೆ ಪ್ರಪಂಚದ ವ್ಯವಹಾರವು ನಡೆಯುವುದಕ್ಕೆ ಕಾರಣವಾದ ಶಿವಶಕ್ತಿ : ಕಾಲಚಕ್ರ ಕರ್ಮಚಕ್ರ ನಾದಚಕ್ರ ಬಿಂದುಚಕ್ರದೊಳಗೆ ಹುಟ್ಟದ ಯೋನಿಯಿಲ್ಲ ಮುಟ್ಟದ ನೆಲನಿಲ್ಲ (ತಪ್ಪತ. ೪. ೩೩೪-೦೦೩೨). [ಸಂ.]

**ಬಿಂದುಚ್ಯುತಕ** (ನಾ). [ಕಾವ್ಯಮಿ] ಇರುವ ಬಿಂದುವನ್ನು ಬಿಡುವುದೂ ಇರಬೇಕಾದ ಬಿಂದುವನ್ನು ಸೇರಿಸುವುದೂ ಸಾಧ್ಯವಾಗುವ ಒಂದು ಪ್ರಹೇಳಿಕೆಯ ಪ್ರಕಾರ: ಸೊಗಯಿಸುಗುವಿಂದ್ರನೀಲಮಣಿಸನ್ನಿಭದೊಳ್ ವಿಗೆ ಜಳನಿಧಿಯೊಳಗುದಿತದಿಂದಿರದವೋಲ್ಸೊಗದತ್ತಿಧವಳಮೂರ್ತಿಗೆ ಘನ ವಳಯಸದಗ್ದ ಗಗನದೊಳುಟಿಮಟೀದು ವಿಶಾಲಿಕಾಶಾವಳೆಯಂ (ಬಿಂದು ಚ್ಯುತಕಂ) (ಕಲಾ. ೨-೦೯೬). [ ಸಂ. ]

**ಬಿಂದುಚ್ಯುತಿ** (ನಾ). = ಬಿಂದುಚ್ಯುತಕ : ಪೇಟಿಸ್ಸಿಂ . . . ಅ ವರ್ಣ ವ್ಯತ್ಯಯಮಂ ಬಿಂದುಚ್ಯುತಿಯಂ ಭಾವಿಸಿದೊರ್ನುಡಿಯಂ (ಕಲಾ. ೨-೦೯೨). [ ಸಂ. ]

**ಬಿಂದುಜ** (ನಾ). (ನೀರಿನ) ಹನಿಯಿಂದ ಹುಟ್ಟಿದುದು : ಅಂಡಜ ಪಿಂಡಜ ಬಿಂದುಜ (ಜರಾಯುಜ) ಉದಯವಾಗದುದು . . . ಪರಾಪರ ವಸ್ತು ನೀನೊಬ್ಬನೇ ಇದ್ದೆಯಯ್ಯಾ (ಶಿಶ್ಶೀ. ೭-೨೦). [ ಸಂ. ]

**ಬಿಂದುಪಾಶ** (ನಾ) — ಬಿಂದು ೧೨: ಆ ಷಟ್ಪದಾರ್ಥನ್ನ ಪಶುಬಂಧಲಕ್ಷಣಮುಳ್ಳುದಾಗಿ ಪಶುಕೋಟಿಯಂ ಜಿಡದೆ ವ್ಯಾಪಿಸಿ ಶಿವಾಧೀನಮಾಗಿ ಮಲಪಾಶ ಮಾಯಾಪಾಶ ಕರ್ಮಪಾಶ ಬಿಂದುಪಾಶ ತಿರೋಧಾನಪಾಶವೆಂದು ಪಂಚಪ್ರಕಾರಮಾಗಿರ್ಪುದು (ಅವೀಶ. ೧೬೩) [ ಸಂ. ]

**ಬಿಂದುಮಂತ** (ನಾ). ೧. ಹನಿಗಳಿಂದ ಕೂಡಿದುದು. ೨. [ವ್ಯಾಕ] ಅನುಸ್ವಾರಸಹಿತವಾದುದು : ಆ ಸಮುಚಿತಬಿಂದುಸ್ಥಿತಿ ಬಿಂದುಮಂತ ಶಬ್ದಕ್ಕೆ ಬಿಂದುಲೋಪಂ ಬಹುಳಂ (ಶಮದ. ೨೬೩). [ಸಂ. ಬಿಂದುಮತ್]

**ಬಿಂದುಮತಿ** (ನಾ). [ಕಾವ್ಯವಿ] ಬಿಂದು ಪದ್ಯದಲ್ಲಿ ಇರುವ ಪ್ರಸಕ್ತವಾದ ಅರ್ಥವನ್ನು ಸೂಚಿಸುವಲ್ಲಿ ಬಿಂದುವನ್ನು ಅಧಿಕವಾಗಿ ಉಪಯೋಗಿಸಿ ಚಮತ್ಕಾರದಿಂದ ರಚಿಸುವ ಪದ್ಯ : ಒಂದು ಬಗೆಯ ಒಗಟಿನ ಪದ್ಯ. [ಸಂ.]

**ಬಿಂದುಮಾಧವ** (ನಾ). ವಿಷ್ಣುವಿನ ಹೆಸರುಗಳಲ್ಲಿ ಒಂದು : P ಕಾಶೀಕ್ಷೇತ್ರದಲ್ಲಿ ನೆಲೆಸಿರುವ ವಿಷ್ಣು: ಬಿಂದುಮಾಧವನ ಘಟ್ಟಕ್ಕೆ ಹೋಗುವೆ ತಾರೇ ಬಿಂದಿಗೆಯ (ಕ್ರಿಣಂತ. ೧-೯೯-೩); ವಿಶ್ವೇಶ್ವರ . . . ಬಿಂದುಮಾಧವ ಮುಂತಾದ ಎಲ್ಲ ದೇವರುಗಳ ದರ್ಶನವಾಯಿತು (ಗಂಯಾಯಿ. ೮). [ಸಂ.]

**ಬಿಂದುಮಾಲೆ** (ನಾ). = ಬಿಂದು ೧೦ : ವೃತ್ತಪಾಗಿರೆ ತುಟಿಯನೊತ್ತಲದೆಯಧರವಣಿ ಚಿತ್ರಭವಗೃಹ ನಿಟಿಲಕಕ್ಷದಲ್ಲಿ ತಕ್ಕೆಸೆಯೆ ಪಲ್ಲಜ್ಜೆ ಮತ್ತುಗುರೊಳೆಳೆಯಲದು ಚಿತ್ರರವ ಮಣಿವಾಲೆ ಬಿಂದುಮಾಲೆ (ಜಸವ. ೬-೬೦). [ಸಂ. ಬಿಂದುಮಾಲಾ]

**ಬಿಂದುವಿಡು** (ಕ್ರಿ). ಹನಿಯಿಡು ; ತೊಟ್ಟಿಕ್ಕು ; ಒಸರು : ತಮಾಲಪಲ್ಲವಮಂ ಪಿಡಿದು ತನ್ನ ಬಿಂದುವಿಡುವ ಮೊಗದ ಬೆಮರಂ ಬೀಸುವಂತೆ ಯುಮಿರ್ದರ್ಳ್ (ಕಾದಂಬ. ೯೦) : ಬಿಂದುವಿಡುವಿಂದೂಪಳಪಳಪುತ್ರಿಕೆಗಳಿಂ ಕೆಂಪಿಡುವ ಕಂಕೆಲ್ಲಿಯ ಪಲ್ಲವಾಸ್ತರಣಂಗಳಿಂ . . . ಹಿಮಗೃಹಮಂ ಸಮೆದು (ಕುಸುಮಾ. ೧೩-೯೬ ವ). [ಬಿಂದು + ಇಡು]

**ಬಿಂಪು** 'ಬಿಣ್ಪು' ನೋ.

**ಬಿಂಬ** (ನಾ). ೧. ಸೂರ್ಯ ಅಥವಾ ಚಂದ್ರನ ಸುತ್ತಲೂ ಇರುವ ಪ್ರಭಾವಲಯ, — ಪರಿವೇಷ : " ಮಂಡಲಂ, ಬಿಂಬಂ — ಈ ಎರಡು ಚಂದ್ರಮಂಡಲದ ಪೆಸರ್ " (ಶಬ್ದಮಣಿ. ೬-೯೯) ; ಬಿಂಬದಧಿದೈವವರ್ಕನ ಬಿಂಬದೆ ತಳರ್ದಿಟಿದುದಿಂತಿದದ್ಭುತವಸುರೇಗಂಬಿನವಿನಬಿಂಬದ ದೆಸೆಯಿಂ ಬಂದಿಳಿಗಿಟಿದನಮಲಕಾಂತಿಮುನೀಂದ್ರಂ (ಜಗಂ. ೩ ೩೨); ಬಿಂಬದೊಳಗಿರ್ಪ ಜಿನಪತಿಬಿಂಬಕ್ಕೆಳೆಯಿಂದೆ ಪೆರ್ಚೆ ಕಣ್ಣಿಂಜಲ್ಲಿಂದ್ರಂ ಬಗಿದ ಪೊನ್ನ ಕಾಹಳೆಯೆಂಬನಪೊಸದಂ ಮೃಗಾಂಕನರ್ಧೋದಯದೊಳ್ (ಅಸಂಪು. ೬-೫೦). ೨. ಮಂಡಲಾಕಾರವಾದುದು ; ವೃತ್ತತೆಯನ್ನುಳ್ಳದು. ೩. ಪ್ರತಿರೂಪ ; ಪ್ರತಿಚ್ಛಾಯೆ ; ಪಡಿನೆಳಲು : ಅದಱ ಪರಾರ್ಧ್ಯನೀಲಮಣಿಕುಟ್ಟಿಮಭೂತಳದರ್ಪಣೈಕಬಿಂಬದೊಳಹಮಿಂದ್ರದಿವ್ಯತನು ಬಿಂಬಿಸೆ ರೂಪಿದು ಬಿಂಬಮಿಂತಿದೆಂಬುದನಱಿಯಲ್ಕೆ ಬಾರದು (ಶಾಂತಿಕೃ. ೯-೧೨೨). ೪. ಕನ್ನಡಿ ; ದರ್ಪಣ. ೫. ವಿಗ್ರಹ ; ಮೂರ್ತಿ ; ಪ್ರತಿಮೆ : ಕಂಬದಿನೊ ಬಿಂಬದಿನೊ ಮೋಕ್ಷವವರಿಂಗಾಯ್ತು ಸಿಂಬಳದಿ ನೊಣ ನೀನು (ಮಂಕುತ. ೯೬೩); ಬಿಂಬದೊಳಗಮಿತಸತ್ತ್ವ ಪಿಡಿದಿಡುವ ಭಕ್ತಿಯಿಂಬು ಕಿಂಚಿನ್ಮತಿಗೆ (ಮಂಕುತ. ೯೯೦). ೬. ಒಂದು ಬಗೆಯ ಬಳ್ಳಿ ಮತ್ತು ಅದರ ಹಣ್ಣು ; ತೊಂಡೆ: "ಬಿಂಬ ತೊಂಡೆಯಕ್ಕುಂ" (ಶಬ್ದಗು. ೩೬-೨೫); ಬಿಂಬದ ಪಕ್ವವಾದ ಫಳವೆಂಬಿನವಿಾ ಜಗದಲಿ ಚೆಲ್ವನಾಲಂಬಿಸಿದತ್ತು ಮಾನಿನಿಯ ಸಾರವನಿಪ್ಪಧರಂ (ಶಾಕ. ೨-೯೬). ೭. ಓತಿಕೇತ. ೮. ಕಾಮನ ಬಿಲ್ಲು. ೯. ಕಿರಣ; ರಶ್ಮಿ. ೧೦. ಗಗನ; ಆಕಾಶ. ೧೧. ಮಳೆ; ವೃಷ್ಟಿ. ೧೨. ಬಟ್ಟೆ; ವಸ್ತ್ರ " ಅಂಬರಂ ವೃಷ್ಟಿ ಸುವೃತ್ತ ಬಿಂಬಕೆ ನಭಂ ಪ್ರತಿರೂಪ ಮಯೂಖಮಿಂದ್ರಚಾಪಾಷ್ಪಕಮಿಂತು ಬಿಂಬಮೆನಿಸಿರ್ಕುಂ" (ನಾನಾರ. ೭೦). ೧೩. ಇಪ್ಪತ್ತೆಂಟು ಶೈವಾಗಮಗಳಲ್ಲಿ ಒಂದು : ಕಾಮಿಕ, ಯೋಗಜ . . . ಚಂದ್ರಜ್ಞಾನ, ಬಿಂಬ . . . ವಾತುಲಗಳೆಂಬ ಇಪ್ಪತ್ತೆಂಟು ಶಿವಾಗಮಗಳು (ಶಾರದ. ೬೨). 'ಬಿಂಬಾಗಮ' ಪರಾ. [ಸಂ.]

**ಬಿಂಬಕಲ್ಪನೆ** (ನಾ). ಮಾತಿನಿಂದ ಹೊಳೆಯುವ ಚಿತ್ರವನ್ನು ಮನಸ್ಸಿನಲ್ಲಿ ಸೃಷ್ಟಿಸಿಕೊಳ್ಳುವುದು : ಮಕ್ಕಳ ಬಿಂಬಕಲ್ಪನೆಯ ರೀತಿಯಲ್ಲೂ ಭಿನ್ನತೆ ಕಾಣಬಹುದು . . . ಕೆಲವರಿಗೆ ಸ್ಥಾವರರೂಪದ ಬಿಂಬಕಲ್ಪನೆಯಲ್ಲಿ ಚತುರತೆಯಿದ್ದರೆ ಮತ್ತೆ ಕೆಲವರಿಗೆ ಚಲನ ಬಿಂಬಕಲ್ಪನೆಯಲ್ಲಿ ಹೆಚ್ಚಿನ ಚಾತುರ್ಯವಿರುತ್ತದೆ (ಶಿಕ್ಷರ. ೯೯). [ಸಂ. ಬಿಂಬಕಲ್ಪನಾ]

**ಬಿಂಬಗ್ರಾಹಕ** (ನಾ). ಪ್ರತಿಚ್ಛಾಯೆಯನ್ನು ಬಿಂಬಿಸುವ ಯಂತ್ರ ಸಲಕರಣೆ : ಛಾಯಾಗ್ರಾಹಿ ; ಕ್ಯಾಮೆರಾ : ಅವೆ . . . ಬಿಂಬಗ್ರಾಹಕಗಳಲ್ಲಿ (ಕ್ಯಾಮರಾ) ಮುಖ್ಯ ಸುಧಾರಣೆಗಳನ್ನು ಮಾಡಿದುದಲ್ಲದೆ . . . ಕೂಲಂಕಷಶೋಧನೆ ನಡೆಸಿದ (ಕವಿಕೋ. I. ೩೬೯). [ಸಂ.]

**ಬಿಂಬಗ್ರಾಹಿ** (ನಾ). = ಬಿಂಬಗ್ರಾಹಕ : ವಿಮಾನಗಳಲ್ಲಿ ಬಿಂಬಗ್ರಾಹಿಗಳನ್ನು (ಕ್ಯಾಮರ) ಕೊಂಡೊಯ್ದು ಅಂತರಿಕ್ಷದಿಂದ ಒಂದು ಭೂಪ್ರದೇಶದ ಛಾಯಾಚಿತ್ರಗಳನ್ನು ಪಡೆದು . . . ನಕ್ಷೆಯನ್ನು (ಟಾಪೋಗ್ರಫಿಕ್ ಮ್ಯಾಪ್) ತಯಾರಿಸಬಹುದು (ಕವಿಕೋ. I, ೦೧೦). [ಸಂ. ಬಿಂಬಗ್ರಾಹಿನ್]

**ಬಿಂಬಪ್ರತಿಬಿಂಬಭಾವ** (ನಾ). ೧. ಬಿಂಬಕ್ಕೂ ಪ್ರತಿಬಿಂಬಕ್ಕೂ ಇರುವ ಪರಸ್ಪರಸಂಬಂಧ : ಈ ಸಂಬಂಧವನ್ನು ದೃಗ್ದೃಶ್ಯಭಾವ, ಬಿಂಬಪ್ರತಿಬಿಂಬಭಾವ, ವ್ಯಂಗ್ಯ ವ್ಯಂಜಕಭಾವ. ಭೋಗ್ಯಭೋಕ್ತೃಭಾವವೆಂದು ಬುದ್ಧ್ಯಾರೋಹಕ್ಕಾಗಿ. ಮನಸ್ಸಿಗೆ ಮನವಟ್ಟಾಗುವುದಕ್ಕಾಗಿ ನಿರೂಪಿಸಿರುವರು (ಬಿಡಿಹಾ. ೧೦೨). ೨. [ಕಾವ್ಯವಿ] "ಪರಸ್ಪರ ಸಾದೃಶ್ಯದಿಂದ ಅಭಿನ್ನವೆಂದು ಹೇಳಬಹುದಾದ ಭಿನ್ನಭಿನ್ನ ಧರ್ಮಗಳನ್ನು ಉಪಮಾನೋಪಮೇಯಗಳಲ್ಲಿ ಬೇರೆ ಬೇರೆಯಾಗಿ ಗ್ರಹಿಸಿರುವುದಕ್ಕೆ 'ಬಿಂಬಪ್ರತಿಬಿಂಬಭಾವ' ವೆಂದು ಪ್ರತೀತಿ " (ಕೃಬಿ. ೨೩೭ ಅಡಿ). [ಸಂ.]

**ಬಿಂಬಫಲ**, ಬಿಂಬಫಳ (ನಾ). ತೊಂಡೆಹಣ್ಣು : ಬಿಂಬಫಲಾಧರಂ ಪವಳಮಂ . . . ಪೋಲ್ತಿರೆ (ಧರ್ಮಾಮೃ. ೬-೩೦೯) ; ಬಿಂಬಫಲೋಪಮಾನಾಧರದನಚ್ಛದಮಂ ನಸುಗಚ್ಚಿ (ಸೂಕ್ತಿಸು. ೭-೭೯) ; ಬಿಂಬಫಲಮಂ ಸಮಂತಧರವೆಂದು . . . ಪಂಬಲಿಸಿ ಮಮ್ಮಲ ಮಱುಗುತಿರ್ದನು (ಗುರುಚ. ೧೦-೩೩). **ಬಿಂಬಫಳ** : ಬಿಂಬಫಳರುಚಿಯಂ ಬಗೆಯದರುಣಾಧರೋನ್ನತಿಯು . . . ಕಂಬುಕಂಧರೆಯರು ನೆರೆದರು (ಪಶುಪ. ೩-೨೩) ; ಬಿಂಬಫಳಮಂ ಕಂಡ ರಾಜಶುಕಿಯಂತೆ ಬಿಂಬಾಧರಮಂ ಕರ್ದುಂಕಿ (ರಾಜಶೇ. ೧೧-೦೧೧ ವ). [ಸಂ.]

**ಬಿಂಬಫಳ** 'ಬಿಂಬಫಲ' ನೋ.

**ಬಿಂಬಲಿ** 'ಬಿಳಿಂಬಿ' ನೋ.

**ಬಿಂಬಾಗಮ** (ನಾ). ಇಪ್ಪತ್ತೆಂಟು ಶೈವಾಗಮಗಳಲ್ಲಿ ಒಂದು : ಆ ಸಿದ್ಧಾಂತಭೇದಂಗಳಾವುವೆಂದೊಡೆ ೧. ಕಾಮಿಕಾಗಮ ೨. ಯೋಗಜಾಗಮ . . . ೨೦. ಬಿಂಬಾಗಮ . . . ೨೮. ವಾತೂಲಾಗಮವೆಂಬವೇ ಇಪ್ಪತ್ತೆಂಟು ದಿವ್ಯಾಗಮಂಗಳಕ್ಕು (ಶಿವೀಕ. ೬೩). [ಸಂ.]

**ಬಿಂಬಾಧರ** (ನಾ). ತೊಂಡೆಯ ಹಣ್ಣಿನಂತೆ ಕೆಂಪಾಗಿರುವ ತುಟಿ : ಪುಳಿಜೊಳೆದ ಪವಳದ ಬಟ್ಟೆನಂತೆ ಸೊಗಯಿಸುವ ಸಂಸಾರಸಾರೋದಯನ ಬಿಂಬಾಧರಮಂ ಸಂಗರಾಗರಸಮುರುಳಿಯಂತಾದುದು (ಶಂಪು. ೨-೩೯ ವ) : ಮೆಱೆವ ರತುನಾವಳಿಯ ಬಿಂಬಾಧರಮಯೂಖವಲಿ . . . ಒಪ್ಪಿದಳು ದೇವಿ (ಕೌಶಿ. ೨-೩). [ಸಂ.]

**ಬಿಂಬಾಧರೆ** (ನಾ). ತೊಂಡೆಯ ಹಣ್ಣಿನಂತೆ ಕೆಂಪಾದ ತುಟಿಯುಳ್ಳವಳು : ಬಿಂಬಾಧರೆಯರ್ ಮಂದಲರಂಬಂ ಕತ್ತುರಿಯ ನಾಣೆಯಿಕ್ಕುವ ತೆಱದಿಂದಂಬುಜವಳದ್ಯ ಕಾಂಬಿಕದಂಬಿಕೆಗೀಜನಮನೆಚ್ಚಿದರ್ (ಗೀಕ. ೧೦-೯೦) ; ರಾಜಶುಕಸಲ್ಲಾಪಾಂಗಶೃಂಗಾರೆ ಭಾಸುರಬಿಂಬಾಧರೆ (ಹರಿಶ್ಚ. ೨-೬೨). [ಸಂ. ಬಿಂಬಾಧರಾ]

**ಬಿಂಬಿ** (ನಾ). (?) : ಸಲೆ ನಿಲೆ ಪೂವು ಪೂವು . . . ಗಿಳಿವಿಂಡು ಬಂಡು ಕೋಗಿಲೆ ಗೊಲೆ ತುಂಬಿ ಬಿಂಬಿ ಸುಟುಗೇರದಗೆ ಚಾದಗೆ ಕಂಪು ಸೊಂಪ ಗುಂದಲೆಯೆನೆ ರಮ್ಯಮಾ ವಿಷಯದುರ್ಗಗಳ್ ಸಂದನವೃಂದವೆತ್ತಲುಂ (ಧರ್ಮಾ. ೨-೨೩). [ ? ]

**ಬಿಂಬಿತ** (ಗು). ಪ್ರತಿಫಲಿತವಾದ ; ಪ್ರತಿರೂಪವುಂಟಾದ : ಮತ್ತುಂ ರತ್ನಪ್ರತಿಬಿಂಬಬಿಂಬಿತಮಣಿದೀಪಪ್ರತಿಬಿಂಬದಂತಾಸಂ . . . ತನ್ನ ಬೆಳಗೆ ಬೆಳಗಾಗೆ ಶುದ್ಧಗರ್ಭಾವಾಸದೊಳ್ ಜಿನಾರ್ಭಕಂ ಬಳೆಯೆ(ಶಾಂತಿಪು. ೯-೨೦೯ ವ); ಶಿತಿಕಂಠನಾಮಪೂರಿತವಾಕ್ಯಶ್ರುತನಿರೀಕ್ಷಿತನಯನ ಮಣಿ ಮುಕುರಮಧ್ಯಬಿಂಬಿತವದನಂ (ಶಶಿಕಾ. ೯-೩೮). [ ಸಂ. ]

**ಬಿಂಬಿಸು** (ಕ್ರಿ). ೧. ಪ್ರತಿರೂಪವನ್ನು ತೋರಿಸು ; ಪ್ರತಿಫಲಿಸು : ಅದಱಿಪರಾರ್ಧ್ಯ ನೀಲಮಣಿಕುಟ್ಟಿಮಭೂತಳದರ್ಪಣೈಕಬಿಂಬದೊಳೆಹಮಿಂದ್ರ ದಿವ್ಯತನು ಬಿಂಬಿಸೆ ರೂಪಿದು ಬಿಂಬಮಿಂತಿದೆಂಬುದನಱಿಯಲ್ಕೆ ಬಾರದು (ಶಾಂತಿಪು. ೯-೦೨೨); ಕರ್ಣೋತ್ಪಲಂಗಳ್ ಕಪೋಲಬಿಂಬಗಳೊಳ್ ಬಿಂಬಿಸೆಯುಂ (ಶಾರಂಪು. ೬೭) ; ಬಿಂಬಿಸುವ ಶಶಿಬಿಂಬದಿಂ ಪ್ರತಿಬಿಂಬಿಸುವ ಮುಖಬಿಂಬದರ್ಪಣ (ಶಶಿಪು. ೫-೨೩). ೨. ಸ್ಪಷ್ಟವಾಗಿ ತಿಳಿಯುವಂತೆ ಮಾಡು : ವಿಶದೀಕರಿಸು : ವಿವರಿಸು : ಶೇಷಪ್ಪ . . . ತಾನೀಗ ನಡೆದಿರುವುದು ಕೇವಲ ಗೌಡಿತಿಯ ಕಲ್ಯಾಣಕ್ಕಾಗಿ ಎಂಬುದನ್ನು ಬಿಂಬಿಸಿದ (ಗ್ರಾಮಾಯ. ೩೪೩); ಈ ಮಾತನ್ನು ಹೇಗಾದರೂ ಮಾಡಿ ಶೈಲೇಂದ್ರನಿಗೆ ಬಿಂಬಿಸದಿದ್ದುದಾದರೆ ಕಾಳೀಪದನ ಮಾನ ಹಗುರಾಗುತ್ತಿತ್ತು (ಇಪ್ಪತ್ತ. ೩೯೩). ೩. ತೋರಿಸು ; ಪ್ರಕಟಿಸು : ಅವರ ಹೃದಯದ ವಿಶಾಲ ಮಾರ್ಗವನ್ನು ಬಿಂಬಿಸುವದೇ ಈ ತಿರುಗಾಟದ ಅರ್ಥವಾಗಿದೆ (ರಂಗರೊ. ೬೦); ಕೃಪೆಯನು ಬಿಂಬಿಸಿ, ಬಾಳನು ತುಂಬಿಸಿ. ತೋಟದೊಳರಳಿದ ಹೂ ತಾನಾದುದು ಶ್ರೀಮದ್‌ಭಗವದ್ಗೀತೆ (ಅನಿಕೇ. ೩೨-೦೯). ೪. ತೋರು; ಕಾಣು; ಪ್ರಕಟವಾಗು : ಲಜ್ಜೆ ಬಿಂಬಿಸೆ ಲಾವಣ್ಯದೊಳೊಯ್ಯನೆ ಪಜ್ಜೆಯಿಡುವುದು ಭಾವೆಯರು (ಹರಿಶ. ೮-೩೭). [ಬಿಂಬ + — ಇಸು]

**ಬಿಂಬೋಷ್ಠ** (ನಾ). = ಬಿಂಬಾಧರ : ಅಬ್ಜಪತ್ರಾಕ್ಷಿಯ ಸವರತಿಸರ್ವಸ್ವ ಬಿಂಬೋಷ್ಠಮಮಂ ಮುದ್ರಿಪುಡುವೈ ರೋಲಂಬ ನೀನೇ ಕೃತಿ ನಿಜವರ ಸುತ್ತಾಮೃಣಾ ಕಟ್ಟಿವೆಲ್ತೇ (ಶಾಕುಂತ. ೦೦-೨೯). [ಸಂ.]

**ಬಿಂಬೋಷ್ಠಿ** (ನಾ). = ಬಿಂಬಾಧರೆ. [ಸಂ. ಬಿಂಬೋಷ್ಠೀ]

**ಬಿಂಬೋಷ್ಠೆ** (ನಾ). = ಬಿಂಬಾಧರೆ : ಈ ಬಿಂಬೋಷ್ಠೆಯಂ ಸರ್ವದಷ್ಟೆಯ ನೆನಗೆ ಮದುವೆಮಾಟ್ಟಿರಪ್ಪುಡೆ ನಾಳೆ ನೇಸಮಾರ್ಪಡದ ಮುನ್ನಮೆ ವಿವಾಹಹಾರಂ ಮಾಡಿದಪ್ಪೆಂ (ಸುಕುಮಾ. ೬-೮ ವ). [ಸಂ. ಬಿಂಬೋಷ್ಠಾ]

**ಬಿಂಬ್ಲಿ** 'ಬಿಳಿಂಬಿ' ನೋ.

**ಬಿಕ್** (ನಾ). ಒಂದು ಅನುಕರಣಶಬ್ದ : ಬಿಕ್ಕಂ ಕಂಡಿಲಿಯಿಂತಿರೆ . . . ಮಾರ್ಕೊಳ್ಳದೆ ಮಾರ್ನುಡಿಯದೆ ಬಿಕ್ಕೆನ್ನದೆ ಮಿಡುಕದಿರ್ದರ್ (ಸುಕುಮಾ. ೨-೨೦).

**ಬಿಕನಾಶಿ** 'ಬಿಕನಾಸಿ' ನೋ.

**ಬಿಕನಾಸಿ, ಬಿಕನಾಶಿ** (ಗು). ೧. ಅಲ್ಪವಾದ ; ಕ್ಷುದ್ರವಾದ : ಅವಳು ಆ ಒಂದು ಬಿಕನಾಸಿ ಎಂಟಾಣೆಯ ತುಂಡು ಕದ್ದಳು ಅಂತ ಗೊಜ್ಜು ಗೊಡಸಾರು ತಿನ್ನುವ ಗತಿಗೆ ಬಂದುಬಿಡಿತ್ತಾ ಅನ್ನುತ್ತೀಯೇನೇ (ವರದಾ. I, ೩೨೦). (ನಾ). ೨. ತಿರುಪೆಯಿಂದ ಬದುಕುವ ವ್ಯಕ್ತಿ ; ಭಿಕ್ಷುಕ : ಉಳಿದ ಭಕ್ತರೆಲ್ಲ ಬೇಡುವುದಕ್ಕೇ ಹುಟ್ಟಿದ ಬಡ ಬಿಕನಾಸಿಗಳು (ಕರಿಕ. ೧೨೦); ಇವನಾರೊ ಸಂನ್ಯಾಸಿ, ಅತ್ತೊಬ್ಬ ಬಿಕನಾಸಿ (ಗಂಗಾತ. ೬೦-೦). ೩. ಅಲ್ಪವ್ಯಕ್ತಿ; ಕ್ಷುದ್ರವ್ಯಕ್ತಿ; ಹೀನವ್ಯಕ್ತಿ : ಮಡಿ ಮಡಿ ಮಡಿಯೆಂದು ಮೂರ್ಮಾರು ಹಾಱುತಿ ಮಡಿಯಲ್ಲಿ ಬಂತೆ ಬಿಕನಾಸಿ (ಪುರಂದ. ೦-೦೦೫ ೫೨೬); ಆ ಬಿಕನಾಸಿಯು ಮನೆಗೆ ! ನನ್ನ ಮುಂದೆ ಲಕ್ಷವರಹ ಸುರಿದರೂ ಅವಳ ಮನೆಗೆ ನಾನು ಕಾಲಿಕ್ಕುವುದಿಲ್ಲ (ಮಹಾಗ. ೮೩). ೪. ಲೋಭದಿಂದ ಕೂಡಿದ ವ್ಯಕ್ತಿ ; ಕೃಪಣ : ಬಿಕನಾಸಿಗಳ್ಗೆ ಫಲಿಸುವುದೆ ನಿರತಿಶಯ ದಾನಶೌಂಡನ ಭಜನೆ (ಕೊಟ್ಟೂರು. ೪-೬). **ಬಿಕನಾಶಿ** : ೨. ಕಂಟ ದಿಕ್ಕಿಲ್ಲದ ಬಡವ, ಮನೆ_ಮಾರು ತೊರೆದ ಬಿಕನಾಶಿ (ಗ್ರಾಮಾಯ. ೨೦೦). ೩. ಆ ಮೈಸೂರು ಬಿಕನಾಶಿಯ ಸಹವಾಸ ಅವಳಿಗಿನ್ನೂ ಸಾಕಾಗಿಲ್ಲವೇನು ? (ರೂಪಸ. ೦೩೨).

[< ಸಂ. ಭಿಕ್ಷಾಶಿನ್. / ತುಳು. ಬಿಕ್ಕನಾಸಿ. ಬಿಕ್ಕೇಸಿ ; ತೆಲು. ಬಿಕಾಸಿ]

**ಬಿಕರಿ, ಬಿಕ್ರಿ** (ನಾ). ಮಾರಾಟ ; ವಿಕ್ರಯ : ಸಕಲಿಮಾಲುಗಳು ಬಿಕರಿಗೆ ಬರುತ್ತಿವೆ (ಕೆಟಕೋ. I, ೩೫೦); ಅಂಟುರೋಗದಿಂದ ಮೃತಪಟ್ಟ ದನಗಳನ್ನು . . . ಚರ್ಮದ ಆಶೆಗಾಗಿ ಬಿಕರಿ ಮಾಡುತ್ತಾರೆ (ಗ್ರಾಮಾಕ. ೦೨೦). **ಬಿಕ್ರಿ**: ಅವರ ಮನೆ ಬಿಕ್ರಿಗೆ ಬಂದಿದೆ (ರೂ).

[← ಹಿಂ. ಬಿಕರೀ, ಬಿಕ್ರೀ; ಮರಾ. ವಿಕರೀ, ವಿಕರಾ. / ಸಂ. ವಿಕ್ರಯ]

**ಬಿಕರಿದಾರ, ಬಿಕ್ರಿದಾರ** (ನಾ). ಮಾರಾಟ ಮಾಡುವವನು ; ವ್ಯಾಪಾರಿ : (*). **ಬಿಕ್ರಿದಾರ** : ಕೊಂಬಿನ ಊದುವ ಕಡೆಗೆ ಅಂಗ್ಯೆಯೊತ್ತಿ ಅದರ ಬಾಯಿಯನ್ನು ಅಂಗಡಿ ಬಿಕ್ರಿದಾರನಿಗೆ ಒಡ್ಡುವರು (ಕಂಪಿ. ೩೯).

[ಬಿಕರಿ + — ದಾರ್]

**ಬಿಕಾರಿ, ಭಿಕಾರಿ** (ನಾ). ೧. ಭಿಕ್ಷೆ ಬೇಡುವವನು; ತಿರುಕ : ಮುನೀಶ್ವರನ ಪರಭಾಗಮುಂ ಸುಕಾಶಲಂ ಕಂಡವರಾರೆಂದು ಬೆಸಗೊಳೆ ಸಹದೇವಿಯೆಂದಳಾ ತನೊರ್ವ ಬಿ[ಶಾಕಾಂ. ಭಿ]ಕಾರಿಯನೇನಂ ಬೆಸಗೊಂಡಪೆಯೆನೆ (ಪುಣ್ಯಾಸ್ರ. ೬-೧೦ ವ) : ಅಱುಂಬದ ಡುಬಿಗನಂ ಬಿಕಾರಿಯುಂ ಬೆಸನಿಗನಂ . . . ಕಸಗಳೆದಿತ್ತು ಮನ್ನಿಪರಮಕ್ಕಳ ಪಟ್ಟಿಕ್ಕೆಗೆ ತಂದು ಸೊರ್ಕಿಸಾ (ಕಳಿಪ. ೬-೦೦೯) ; ಹೊಟ್ಟೆಗಿಲ್ಲದ ಬಿಕಾರಿಗಳು ಹೊಟ್ಟೆಗಾಗಿ ತರತರನಾಗಿ ಅಂಗ ಲಾಚಿಕೊಳ್ಳುವರು (ಶಿಶಾಕ. ೩). **ಭಿಕಾರಿ** : ೨. ಗತಿಯಿಲ್ಲದವನು ; ನಿರ್ಗತಿಕ : ಇದ್ದ ಬಿದ್ದ ಮಕ್ಕಳನ್ನೆಲ್ಲಾ ಕಳೆದುಕೊಂಡು ಭಿಕಾರಿಗಳಾದ ನಿನ್ನ ಅನಾಥ ತಾಯಿ ತಂದೆಗಳನ್ನು ನೆನೆಸಿಕೊಂಡರೆ ಸಂಕಟವಾಗುತ್ತದೆ (ವಚಶಾ. ೩೦೭) : ನಾನು ಭಿಕಾರಿ, ದುಡಿಮೆಯಿಲ್ಲದ ಭಿಕಾರಿ . . . ಬಡತನದ ಭೂತ ಬಡಿದ ಭಿಕಾರಿ (ಮುಂಗಾರು. ೩೦). (ಗು). ೩. ಕೀಳಾದ ; ತುಚ್ಛವಾದ : ಜಕಣಿಯು ಜಲದೇವರು ಮೊದಲಾದ ಭಿಕಾರಿದೈವಗಳ ಪೂಜಿಸದವರು (ಪುರಂದ. ೦-೦೯೫-೩).

[< ಪ್ರಾ. ಭಿಖಾರಿ. / ಸಂ. ಭಿಕ್ಷಾಚಾರಿನ್. / ಹಿಂ. ಭಿಕಾರೀ, ಭಿಖಾರೀ. / ಮರಾ. ಭಿಕಾರೀ]

**ಬಿಕಾರಿತನ** (ನಾ). ಬಡತನ; ದಾರಿದ್ರ್ಯ; ಕಂಗಾಲುತನ : (*).

[ಬಿಕಾರಿ + — ತನ]

**ಬಿಕೋ** (ನಾ). (ಶೂನ್ಯತೆಯನ್ನು ಸೂಚಿಸುವ) ಒಂದು ಅನುಕರಣ ಶಬ್ದ : ತೊಟ್ಟಿಲಿಲ್ಲದೆ ಕೊಟಡಿ ಬಿಕೋ ಅಂತ ಕಾಣುತ್ತದೆಯಲ್ಲ ! (ಮಹಾಗ. ೨೫೦).

**ಬಿಕೋ ಎನಿಸು**=ಶೂನ್ಯವಾಗಿ ತೋರು ; ಬರಿದಾಗಿರು ; ಖಾಲಿ ಯಾಗಿ ಕಾಣಿಸು : ಮಗ ಸೊಸೆಯರು ಇಲ್ಲದೇ . . . ಅವರ ಮನಸ್ಸಿಗೆ ಬಿಕೋ ಎನಿಸುತ್ತಿತ್ತು (ಶಾಂಶಿ. ೦೨೩). **ಬಿಕೋ ಎನ್ನು**=ಬಿಕೋ ಎನಿಸು : ನಿರ್ಜೀವವಾಗಿ ಬಿಕೋ ಎನ್ನುತ್ತಿರುವ ಈ ಊರನ್ನು ನೋಡಲಾರೆ (ವಚಶಾ. ೩೬೦).

**ಬಿಕ್ಕ₁** (ನಾ). (ಸುಮಾರು ಹತ್ತುವರ್ಷ ವಯಸ್ಸಿನ) ಆನೆಯ ಮರಿ : ಹರಿಣರಿಪುಗೆ ಬಿಕ್ಕಪೋತಕಳಭಕುಳಮಾರಣಕೋಳಾಹಳಮಾನೆದಿಂಬಂಗಾಮೆ ದೆವಳಿಗೆಯುಂಬಂತಕ್ಕುಂ (ಶಾಂತಿಪು. ೩-೩೬ ವ); ಅಪಹಸಿತ ಬಿಕ್ಕಪೋತಕಳಭಜ[ ವ ]ನಕಲಾ್ಯಣಯೂಥತರಪ್ರಾಯಗಜಯೂಥಕೋಳಾಹಳಾರಾವದೊಳ್ (ವರ್ಧಮಾ. ೫-೬೨ ವ). [< ಸಂ. ವಿಕ್ಕ]

**ಬಿಕ್ಕ₂** (ನಾ). ಒಂದು ಅಳತೆಯ ಪ್ರಮಾಣ (?) : ಹಂನೆಅಪು ೧೨ ಬಿಕ್ಕ ಹುಣಸೆಯಲ್ಲಿ (ಇಎ. ೧೮೮೭, ಹಾನಗಲ್ ೨೨೮-೨೯;೧). [?]

**ಬಿಕ್ಕಟ್ಟು** 'ಬಿಗಿಗಟ್ಟು' ನೋ.

**ಬಿಕ್ಕಡಿಸು** 'ಬಿಕ್ಕುಳಿಸು' ನೋ.

**ಬಿಕ್ಕನೆ** (ಅ). ತಟ್ಟನೆ; ಸರಕ್ಕನೆ : ಭಕ್ತ ವಿರಕ್ತರೆಂದು ಆತ್ಮತೇಜಕ್ಕೆ ಬಿಕ್ಕನೇಱ ಬರಿವೃತ್ತ ಇಂತೀ ಕೆಟ್ಟ ಕೇಡ ನೋಡಿ . . . ರಾಜೇಶ್ವರ ಲಿಂಗವು . . . ಅಂಜ ನಷ್ಟವಾಗಿ ಹೋದ (ಸರ್ವಶ. ೦೨೦-೬೨೦); ಬಿಕ್ಕನೆ ನೆಱ ಬರಿದರು . . . ಶೋಕೋದ್ರೇಕವರವಶರು (ಶಾಸಂಕ. ೬-೩೨); ಭೂವಿ ಬಿಕ್ಕನೆ ಸೀಳಿತು: ಕೂರ್ಮನ ಬೆನ್ನು ಹೋಳಿಗೆವಡದುದು ಬಲುಬಿಸಿಲೊಂದು ಚಡಾಳಿಕೆ ಜಗವ ಭಂಗಿಸಿತು (ಕೋಡಿಕ. ೦೯-೪೬.

ಬಿಕ್ಕಬಿಕ್ಕನೆ (ದ್ವಿರುಕ್ತಿ) : ಸವಿಸವಿದು ಬಿಕ್ಕಬಿಕ್ಕನ ಸವಿನೋಡಿನ್ನಾಣೆ ಯೆಂದು ರಕ್ಕಸಿಗವುದಂ ಸವಿದೋಱ ನೆತ್ತರೆಲ್ಲಂ ತವೆ ಮುಳಿಸಿಂದವನ ಕರುಳ ಪಿಣಿಲಂ ನೆಣಿದಂ (ಶಂಶಕಾ. ೦೨-೦೩೮). ಬಿಕ್ಕನೆ ಬಿರಿ, ಬಿಕ್ಕಬಿರಿ, ಬಿಗ್ಗಬಿರಿ=ತಟ್ಟನೆ ಸೀಳು,—ಒಡೆ : ವೃಕೋದರಂ . . . ಡೊಕ್ಕನೆ ಸುರಿಗೆಯೊಳುರಮಂ ಬಿಕ್ಕನೆ ಬಿರಿಯಿಱದು (ಶಂಶಶಾ. ೦೨-೦೩೩) ; ನಮ್ಮ ಕೂಡಲಸಂಗಮದೇವನಲ್ಲದೆ ಪರದೈವಂಗಳು ಮನಕ್ಕೆ ಬಂದುವೆ ಬಿಕ್ಕನೆ ಬಿರಿವ ದೈವಂಗಳು (ಬಸವ. ೩೬೨) ; ಕೋಪದಲಿ ಪವನಜ ಖಳನ ನೆತ್ತಿ ಬಿಕ್ಕಬಿರಿಯೊಲು ತಿವಿಯ (ಕಾಂಡಕ. ೯೩-೦೨) ; ಅಗ್ಗ ಸೂರೆ ಅನ್ನವೆಂದು ಬಿಗ್ಗಬಿರಿಯ ಉಂಡಳು (ಗಾದೆ). [ಬಿಕ್ + — ಅನೆ₁]

**ಬಿಕ್ಕಲ** (ನಾ). ಮಾತನ್ನಾಡುವಾಗ ತೊದಲುವವನು; ಉಗ್ಗ: ಅವನು ಬಿಕ್ಕಲ. ಅವನ ಮಾತುಗಳನ್ನು ಅರ್ಥ ಮಾಡಿಕೊಳ್ಳಲು ಕಷ್ಟ ವಾಗುತ್ತದೆ (ರೂಢಿ). [ಬಿಕ್ಕಲು (<ಬಿಕ್ಕುಳು) + — ಅ₁]

**ಬಿಕ್ಕಲಂ, ಬಿಕ್ಲಂ** (ನಾ). ಓದು, ಬರಹವನ್ನು ತಿಳಿಯದವರಿಗೆ ಬೇರೆ ಯಾವರು ಪತ್ರ ಇತ್ಯಾದಿಗಳಲ್ಲಿ ಬರೆದುಕೊಟ್ಟ ಬರಹ, — ಒಕ್ಕಣೆ : 'ಬಿಕ್ಕಲಂದಾರ' ಪರಾ. ಬಿಕ್ಲಂ : ಆ ಹಳ್ಳಿಯಲ್ಲಿ ಅತನೇ ಹಳ್ಳಿಗರಿಗೆ ವ್ಯವಹಾರಗಳನ್ನು ನಡೆಸಲು ಬಿಕ್ಲಂಗಳನ್ನು ಬರೆದು ಕೊಡುವ ವಾಡಿಕೆ (ರೂಢಿ). [←ಪಾರ. ಮರಾ. ಬಿಕಲಂ]

**ಬಿಕ್ಕಲಂದಾರ** (ನಾ). ಓದು, ಬರಹ ಬಾರದವರಿಗೆ ಪತ್ರ ಇತ್ಯಾದಿ ಗಳನ್ನು ಬರೆದು ಕೊಡುವವನು : ಈ ಪತ್ರದ ಬಿಕ್ಕಲಂದಾರರು ಚೆನ್ನಾಗಿ ಬರೆದಿದ್ದಾರೆ (ರೂಢಿ). [ಬಿಕ್ಕಲಂ + — ದಾರ₄]

**ಬಿಕ್ಕಲು** 'ಬಿಕ್ಕುಳು' ನೋ.

**ಬಿಕ್ಕಳಿಕೆ** 'ಬಿಕ್ಕುಳಿಕೆ' ನೋ.

**ಬಿಕ್ಕಳಿಸು** 'ಬಿಕ್ಕುಳಿಸು' ನೋ.

**ಬಿಕ್ಕಳು** 'ಬಿಕ್ಕುಳು' ನೋ.

**ಬಿಕ್ಕಿ** (ನಾ). ಒಬ್ಬಾತನ ಹೆಸರು : ಕಳ್ಳವುಣಸೆಯ ರಟ್ಟನು ಬಿಕ್ಕಿಯು . . . ಸಾಕ್ಷಿ (ಎಕ. XI, ಚಕ್ರರು. ೬೪-೨೩; ೯೬೮) ; ಕುಪ್ಪಯ್ಯನುಂ ಚನ್ನನುಂ ಬಿಕ್ಕಿಯುಂ ತಮುತ್ತ ಮೂವರುಂ ಕಲ್ಲ ನಿಱಸಿದರ್ (ಎಕ. VIII, ಸೊರಬ. ೪೩೪-೬ ; 973). [?]

**ಬಿಕ್ಕಿಗ₁** (ನಾ). ಮಾವುತ : ಪಿತ್ತಾಧಿಕನಂತೆ ಬೀಸೆಸುತ್ತುಂ ಬಿಕ್ಕಿಗನಂತೆ ತಿವಿಯೆನುತ್ತುಂ (ಧರ್ಮಾಮೃ. ೨-೬೦). [ಬಿಕ್ಕು₁ + — ಇಗ]

**ಬಿಕ್ಕಿಗ₂** (ನಾ). (?) : ಮನ ಮಾಡಿ ಬಿಕ್ಕಿಗನ ಮೊಗವ ನೋಡಿದನು, ಆ ಹೊತ್ತಿಗೆಯೊಳೊಂದೋದ ನೋಡಿದನು (ಕಗದ್ಯ. ೬೪). [?]

**ಬಿಕ್ಕಿಗಿಡ** (ನಾ). ಒಂದು ಬಗೆಯ ಸಸ್ಯ : ಬಿಕ್ಕಿಗಿಡ, ದಿಕಾಮಲಿ, ಕಂಬಿಮೇಣ (ವೃಕಿಗಿ. ೩೭-೬೬೦). [ಬಿಕ್ಕಿ₂ + ಗಿಡ (<ಗಿಡು)]

**ಬಿಕ್ಕಿಯಣ್ಣ, ಬಿಕ್ಕಿಯಣ** (ನಾ). ಒಬ್ಬಾತನ ಹೆಸರು: ಅತಂಗೆ ಬಿಕ್ಕಿಯಣ್ಣಂ ಮಾತೆ[ಗೆ] ಸತ್ಪುತ್ರಂ(ಎಕ. XI, ಚಕ್ರರು. ೬೪-೯ ; ೨೬೮).

**ಬಿಕ್ಕಿಯಣ** : ಶ್ರೀಮತ್ ದಿಲೀಪರಸ ಪೃಥಿವೀರಾಜ್ಯಂಗೆಯ್ಯುತ್ತಿರ ಚೊಕ್ಕಯ್ಯಜ್ಞಂ ಆಚಬ್ಬೆಗಂ ಪುಟ್ಟಿದಂ ಬಿಕ್ಕಿಯಣಂ(ಎಕ. XII, ಶಿರಾ. ೩೩-೩ ; ೨೬೨). [ಬಿಕ್ಕಿ + ಅಣ್ಣ₁]

**ಬಿಕ್ಕಿರಾಣಕ** (ನಾ). ಒಬ್ಬಾತನ ಹೆಸರು : ಶ್ರೀ ಬಿಕ್ಕಿರಾಣಕೇನ ಪುರಿಕರ ನಗರೇ ಶ್ರೀಶಂಖಜಿನಾಲಯಾಂತರ್ವರ್ತ್ತಿಯತ್ಕಾರಿತಂ (ಇ೦ಇ. XX, ೩-೨೬ ; 723). [ಬಿಕ್ಕಿ + ರಾಣಕ₁]

**ಬಿಕ್ಕಿರು** (ನಾ). ಸೊಳ್ಳೆ; ಮಶಕ : ಲಿಖಿತದುರ್ಗಾಸ್ತೋತ್ರಪಟ್ಟಿಕಾವ್ರಾತದಿಂ ತರೆದೂಗಿ ಬಿಕ್ಕಿರಿನವೊಲ್ಮೊರೆವ ಗೀತದಿಂ (ಕಾದಂಬರಿ. ೨೬೦).

[ಈ ಇದು 'ಚಿಕ್ಕಡು' ಎಂಬುದರ ಅಪಲಿಖಿತವಿರಬಹುದು]

**ಬಿಕ್ಕಿಸು** (ಕ್ರಿ). (ದುಃಖಾತಿರೇಕದಿಂದ) ಗದ್ಗದಧ್ವನಿಯನ್ನು ಹೊರ ಡಿಸು ; ಬಿಕ್ಕಳಿಸು : ಸೀರೆಯ ಸೆರಗನ್ನು ಮುಖದ ಮೇಲೆ ಸರಿಸಿ ಕೊಂಡು ಮತ್ತೆ ಬಿಕ್ಕಿಸಲಾರಂಭಿಸಿದಳು (ಶಂಸಂ. ೩೩).

[ಬಿಕ್ಕು₁ + — ಇಸು₃]

**ಬಿಕ್ಕು₁** (ಕ್ರಿ). ೧. ಶ್ವಾಸಾಂಗಗಳು ಅನೈಚ್ಛಿಕವಾಗಿ ಇದ್ದಕಿದ್ದಂತೆ ಸಂಕೋಚಗೊಂಡು, ಶ್ವಾಸದ್ವಾರವು ಥಟ್ಟನೆ ಮುಚ್ಚಿಕೊಂಡಾಗ ಗಂಟಲಿನಲ್ಲಿ ಒಂದು ಬಗೆಯ ವಿಲಕ್ಷಣವಾದ ಶಬ್ದವುಂಟಾಗು ; ಬಿಕ್ಕುಳಿಕೆಯುಂಟಾಗು ; ಬಿಕ್ಕಳಿಸು : ಕೆಲರ್ ಕುದುಗುಳಿರಕ್ಕಸರ್ ಬಿಸುಗೆಗಳ್ವೆರಸುಗ್ರಮಹಾಗಜಂಗಳಂ ಚದುರ್ಗಿಡೆ ನುಂಗಿ ಬಿಕ್ಕಿ ಕುಡಿದರ್ ಬಿಸುನೆತ್ತರ ಕಾಟ್ಟುರಂಗಳಂ (ಶಂಶಪಾ. ೦೨-೮) ; ಜನಂ . . . ಬಿಕ್ಕುವ ತೇಂಕುವ ತೇಗುವ ಕಂಟಳಿಸುವಖಿಳವಿಕೃತಿಗೆ ಸಲ್ಲಂ (ಪುಷ್ಪ. ೦೨-೬೯). ೨. (ದುಃಖ, ಭಯ ಅಥವಾ ಸಂತೋಷಾತಿರೇಕಗಳಿಂದ) ಮಾತು ತಡವರಿಸು ; (ಭಾವಾತಿರೇಕದಿಂದ) ಗದ್ಗದಿಸು : ಬಿನ್ನಪಂಗೆಯ್ವ ಪೊಕ್ಕಲಿಗನಂತೆ ಬಿಕ್ಕುತ್ತುಂ (ಧರ್ಮಾಮೃ. ೦-೦೯೯) ; ಅಬಲೆ . . . ಗದ್ಗದ ಸ್ವನದಿಂ ಬಿಕ್ಕುತುಮಿಕ್ಕದಳ್ ಬಿಡದೆ ಭೋರೆಂಬಾತ ಬಾಷ್ಪಾಂಬುವಂ (ಕುಸುಮಾ. ೦೩-೯೭) ; ಬಿಕ್ಕಿದನು ಬಿರಿಬಿರಿದು ಸರೆಗಳು ಮುಕ್ಕುಱಿಕಿದವು ಕೊರಳ ಹೃದಯದೊಳೊಕ್ಕಲಿಕ್ಕಿತು ಶೋಕಪಾವಕವಾ ನೃಪಾನುಜನ (ಕುಮಾ.ಭ. ೨೦-೩೩). ೩. ಮೇಲುಸಿರು ಬಿಡು ; ಏದುಸಿರು ಬಿಡು : "ಬಿಕ್ಕು—ಉಚ್ಛ್ವಾಸೇ, ಮಾಂಸಭೇದೇ ಚ"(ಕವಿಮಾ); ನಯನಜಲಂಗಳನ್ನು ವೊಡೆ ಬಿಕ್ಕುವೊಡಂ ತನು ಸೇದೆಗೆಟ್ಟು ಬೆಂಕೆಯನೊಳಗೊಳ್ವೊಡಂ ಜ್ವರಿತನೆಂದಱದು . . . ಉಪಯೋಗಿಸಿದಂದು ಮುಟ್ಟುಗಂ (ಕೋಕೋಶ. ೯-೨೦೩) ; ಬಿಱಸಿನಲಿ ಖಳ ತಿವಿದೊಡಂಗದ ಬಿರಿದು ಬಿಕ್ಕಿದ ಬಿದ್ದನಾಕ್ಷಣ ಮರಳಿ ಚೇತರಿಸುತ್ತ . . . ತಿವಿದನು (ಕೌಶಿಂ ೩೬-೪೦) ; ಹೊಕ್ಕುದಾ ಸಮಯದಲಿ ಸುಂಡಿಲ ಸೆಕ್ಕುಗಳ ಖಂಡೆಯವ ಗಜವಳ ಬಿಕ್ಕುಳಿಕೆ ಬೆರಸಿದುದು ರಣರಥರಾಜಿ (ಕೂರಾ. ೩-೬-೧೩). ೪. (ಉಸಿರು ಬಿಡುವಾಗ) ಅಳ್ಳೆಯು ಹೊಡೆದುಕೊಳ್ಳು : ಬಿರಿದೆ ಬಿಕ್ಕುವಳ್ಳೆ . . . ಬಿಗಿದ ಗಂಟಲಿನ ಮುಕ್ಕುಳಿಸಿದಕ್ಕಿಗಳೆಸೆವ ಸತಿಯಳಲು ಸೀಗೆ ಯೊಳಗಣ ಬಾಳೆಗೆಣೆಯಾದುದು (ಹಶಕಾ. ೦೨-೦೩). ೫. ಹೊರ ಹೊಮ್ಮು; ಹೊರಸೂಸು ; ಪ್ರಕಟಗೊಳ್ಳು : ಪೊರಳ್ವ ಪೆಣದಿಃ ಬಿಡೆ ಬಿಕ್ಕುವ ಮಸ್ತಕೌಘದಿಂ ಕೆದಱದ ಮಾಂಸದಿಂದೆ . . . ಜವನುಂಡು ಕಾಱದವೊಲಿರ್ದುದು ಮಾರ್ಗಮದೆತ್ತ ನೋಟ್ಪೊಡಂ (೮೮ಶಾವ. ೬-೬); ಮೃಗಶಿಶಿರೆಯ ಮುಳಿಯಂತೆ—ದೈವೇಚ್ಛೆಗೆರಗಿ ಹುಗಿದ ಚಿಂತೆಯು ಹೊರಗೆ ಬಿಕ್ಕಿದುದು ಕರಗಿ (ಕಂಪು. ೩೩-೯). ೬. (ಬಾಣ ಮುಂತಾದುವನ್ನು) ಪ್ರಯೋಗಿಸು : ರಿಪುಗಳನ್ನೊರೆಸಿ ಕೂರ್ಗಣೆಗಳ ಬಿಕ್ಕಿ ರಣಮುಡಲಕೆ ಚತುರಂಗಸೇನೆಯೊಳ್ ಪೊಕ್ಕು (ತುರಂಗ. ೩೦-೨). ೭. ಚೆಲ್ಲು ; ತೂರು : ಕಡಿಕಡಿದು ಕೆದಹಿದರ್ ಕುರಿಕೋಳಲಕ್ಕಮಂ ಬಿಕ್ಕಿದರ್ ಬೂದಿಯಂ (ಶ್ರೀಶಾಮಾ. ೬೬೦-೨೪೦); ನಿನ್ನನ್ನು ನನ್ನ ಕತ್ತಿಯ ಒಂದೇ ಪೆಟ್ಟಿಗೆ ತುಂಡರಿಸಿ

ರಣಹದ್ದುಗಳಿಗೆ ಬಿಕ್ಕುತ್ತಿದ್ದ (ಶ್ರೀಣಾಯ. ೩೫೬). ೮. ಪ್ರಕಟಪಡಿಸು : ವ್ಯಕ್ತಪಡಿಸು : ಸೊಕ್ಕು ಕೌರವಕುನ್ನಿ ನಮ್ಮೊಳಗೆ ಪೌರುಷವ ಬಿಕ್ಕಿದನೆ (ಕುರಂಗ. ೩೬-೨೭). ೯. ಹೊಡೆ ; ಬಡಿ : ಸದೆದು ದಾಡೆಯ ತಿರುಹಿ ಕಿತ್ತನು ಬಿಕ್ಕಿದನು ಬಿಮುವಿನಲಿ ಬಲುಗದೆಯ (ಕುವ್ಯಾಗ. ೧-೫೬). ೧೦. ಧ್ವಂಸಗೊಳಿಸು ; ನಾಶಪಡಿಸು : ಆಹವದೊಳೆವೊಡನೆ ಕಕ್ಕಸವನು ಮಾಡಿದೊಡವರನು ಯುವೆಯಿಕ್ಕದ ಮುನ್ನ ಬಿಕ್ಕುವೆವು (ತ್ರಿಕಸಾಂ. ೦೩-೦೬೩). ೧೧. (ಮಾತನ್ನಾಡುವಾಗ) ತೊದಲು,– ಉಗ್ಗು : ಅವನು ಮಾತನಾಡುವಾಗ ತುಂಬ ಬಿಕ್ಕುತ್ತಾನೆ (ರೂಢಿ).

ಬಿಕ್ಕಿ ಬಿಕ್ಕಿ ಅಳು=ಗದ್ಗದಿಸುತ್ತ ಅಳು : ಐದು ವರ್ಷದ ಕೂಸಂ ನಿಚ್ಚಣಿ ಎಂಬ ದೇವತೆ ಒಡಿದೊಡಾ ಕೂಸು . . . ಬಿಕ್ಕಿ ಬಿಕ್ಕಿ ಅಳುಗು (ಶಾಂತಿ. ೦೩೨-೦೩) ; ಕೃಷ್ಣರಾಯರು . . . ಬಿಕ್ಕಿ ಬಿಕ್ಕಿ ಅಳುತ್ತ ಕಡೆಗೆ ಮುಖವನ್ನು ತಿರುಗಿಸಿಕೊಂಡರು (ಮಹಾಗ. ೨೩೨) ; ಬಿಕ್ಕಿ ಬಿಕ್ಕಿ ಅತ್ತರೆ ಬೀಸುವ ಕಲ್ಲು ತಿರುಗೀತೇ ? (ಗಾದೆ).

[ದೇ. ॥ ತಮಿ. ಮಲ. ವಿಕ್ಕು ; ತುಳು. ಬಿಕ್ಕು ; ಕೊಡ. ಬಿಕ್ಕ್; ತೆಲು. ವೆಕ್ಕು ; ಕುರುಖ್. ಬೆಕ್ಕಾ]

ಬಿಕ್ಕು$_2$, ಬಿಕ್ಕ್ (ನಾ). ೧. ಶ್ವಾಸಾಂಗಗಳು ಅಸ್ವೇಚ್ಛಿಕವಾಗಿ ಇದ್ದಕ್ಕಿದ್ದಂತೆ ಸಂಕೋಚಗೊಂಡು ಶ್ವಾಸದ್ವಾರವು ಥಟ್ಟನೆ ಮುಚ್ಚಿಕೊಂಡಾಗ, ಗಂಟಲಿನಲ್ಲಿ ಹುಟ್ಟುವ ಒಂದು ಬಗೆಯ ವಿಲಕ್ಷಣ ಶಬ್ದ; ಬಿಕ್ಕಳು : ಇಕ್ಕುತಿರ್ಪುಸಿರ್ ತಡೆದೊಡಮಿಲ್ಲ ಬಿಕ್ಕು ಬಿಡದೊತ್ತಿದೊಡಂ ತಳ್ಸಂದೊಡಿಲ್ಲ . . . ಇಂತು ಕೆಟ್ಟುಪೋಪೊಡಲಿದಕೇಕೆ ಕಾವು (ಶಂಶಾಕ. ೩೩-೬೩); ವಾಯು ಕ್ಷೀಣವಾದರೆ ಗುರುತು, ದೇಹದಲ್ಲಿ ಬಳಲಿಕೆ . . . ಶ್ಲೇಷ್ಮ ಹೆಚ್ಚುವದು ; ಬಿಕ್ಕು ಉಟಾಗಿಹುದು (ವೃಕ್ಷಸಾ. I. ೨೪). ೨. (ದುಃಖ, ಅಳು, ಭಯ, ಸಂತೋಷಾತಿರೇಕಗಳಿಂದ) ಧ್ವನಿಯಲ್ಲುಂಟಾಗುವ ನಡುಕ ; ಗದ್ಗದ : ತನ್ನೊಳಗೆ ತೆಕ್ಕನೆ ಕೀವಿ ತೆರೆ ಮಸಗುವ ಶೋಕರಸಮುರ್ಕಿ . . . ವಿಕ್ಕು ನೆಗೆವ ಬಿಕ್ಕಿನೊಳ್ ಬೆರಸಿ (೧೦೪. ೯-೭೭ ವ); ಇರೆ ಕಂಡು ಸುವಿವೇಕಗುರುವ ಪುಳಕಂಗಳುಬ್ಬರಿಸಿ . . . ಬಿ[ಹಾಣಂ. ವಿ]ಕ್ಕು ವಿಕ್ಕು . . . ಸೈಗೆಡದನು (ಮಮೋಲಿ. ೦-೩೨); ಬಿಕ್ಕು ಬಿಕ್ಕನೆ ತೋಟಿ ಇಕ್ಕುವಳು ಕಣ್ಣೀರ (ಸರ್ವಜ್ಞ. ೦೯೨೪). ೩. ದುಃಖ ; ಸಂಕಟ : ಗುಣವಂತಿಯು . . . ಕಳವಳವನ್ನು ಜಯಂತನು ಸಂಪೂರ್ಣ ಅರಿತನು. ಆದರೆ ಅದಕ್ಕೆ ಅನುಕೂಲವಾಗಿ ಮಾತಾಡಿ ಇನ್ನಷ್ಟು ಬಿಕ್ಕು ತಂದುಕೊಡುವುದು ಬೇಡಾಯಿತು (ಜಯಂತ. ೩೨೬). ೪. ತೊದಲು ; ಉಗ್ಗು : ಅವನಿಗೆ ಬಿಕ್ಕು ಇರುವುದರಿಂದ ಮಾತನ್ನಾಡಲು ಕಷ್ಟಪಡಬೇಕಾಗುತ್ತದೆ (ರೂಢಿ). ಬಿಕ್ಕ್: ೧. ಬರಿಗಂಡಂ ಓಡಲೇಜಿ ರೋಮವುಡಿದಿರ್ಬನ್ನಾಗೆ ಮುಂಗಾಲಗಲ್ತರೆ ಬಿಕ್ಕ್ವೆ . . . ಪೆರ್ನೊರೆ ಸೂಸುತ್ತಿರೆ ಭೀಕರಂ ಸೊಗಯಿಸಿತ್ತುತ್ಕ್ರೀಕರಂ ಸೂಕರಂ (ಕಂದ್ರಕು. ೩-೬೦).

[<ಬಿಕ್ಕು$_1$/ತಮಿ. ವಿಕ್ಕು; ಮಲ. ವಿಕ್ಕು, ವಿಕ್ಕಮ್ ; ತುಳು. ಬಿಕ್ಕ್]

ಬಿಕ್ಕು$_3$ (ನಾ). ಮಾಂಸ ; ಅಡಗು : "ಬಿಕ್ಕು-ಉಚ್ಛ್ವಾಸೇ, ಮಾಂಸ ಭೇದೇಚ" (ಕಮುರಾ) ; ಚೋಳನ ಕಾರಡಗಿಂಗೆ ವಂಗಭೂಪಾಳನ ಬಿಕ್ಕುಗಂಧ್ರ ನೃಪಾಳನ ಮೂಳೆಗೆ ಕಾಯ್ದು ಖಿಳ್ಗವಾಕಾಳಿಯಡುತ್ತುರ್ಪ ನಿಳ್ಕುವಳು ನಾಲಗೆಯಂ ನರಸಿಂಗಭೂಪನ (ಎಕ. IV (R), ಹುಣಸೂ. ೩೪-೦೭; 1162); ಅಗುರ್ಬಿಪ ಬಿಕ್ಕಿನಿಂದಮೊಟ್ಟಿದ ನೊದಿಂ . . . ಕಿತ್ತುತಿರ್ಪ ಖಂಡದೆ ಜವನುಂಡು ಕಾಟಿದಪ್ಪೊಲಿರ್ದುದು ಮಾರ್ಗಮಾದೆತ್ತ ನೋಟಿಪ್ಪುಡಂ (೮೧೩ಾವ. ೬-೬) ; ಮೂಳೆ ಬಿಕ್ಕುಗಳ ಸಂದಣಿ . . . ಕಾಳಿಜಗಳೆಕ್ಕೆಕ್ಕೆ ತದ್ರಣರಂಗದೆಲ್ಲೆಡೆಯೊಳಂ ಕೀವೆ ಬಲವೆರಳ್ ಪೂಣ್ದರ್ಪವು (ಕಂಕೃ. ೪೯-೫೬). [ದೇ. ॥ ತಮಿ. ವಿಟಕ್ಕು. /ಸಂ.ವೃಕ್ಕ, ವೃಕ್ಕಾ]

ಬಿಕ್ಕು$_4$, ಬಿಚ್ಚು$_3$ (ನಾ). ೧. ಬೌದ್ಧಸಂನ್ಯಾಸಿ : ತಕ್ಷಶಿಲಾನಗರದಲ್ಲಿ ಮಹಾಯಾನಪಂಥದ ಬೌದ್ಧಬಿಕ್ಕುಗಳು ನೆಲೆಸಿಕೊಂಡು ತಮ್ಮ ಮತವನ್ನು ಬೋಧಿಸತೊಡಗಿದರು (ಶಾಂಕ್ರ. II. ೬೦೩). ಬಿಚ್ಚು$_3$ : ೨. ಸಂನ್ಯಾಸಿ ; ಭಿಕ್ಷು : " ಬಿಚ್ಚುವೆನಲ್ಕೆ ಭಿಕ್ಷು " (ಕರ್ಣಾಪ. ೫೩): ಭಿಕ್ಷು-ಬಿಚ್ಚು (ಶಮದ. ೨೭೨ ತ್ರಯೋ). [<ಪ್ರಾ. ಭಿಕ್ಖು./ಸಂ. ಭಿಕ್ಷು]

ಬಿಕ್ಕುಂದನಿ (ನಾ). ನಡುಗುವ ಧ್ವನಿ ; ಗದ್ಗದ : ಸಿಂಗಾರವ್ವ :— (ಎದ್ದು ಹೋಗಿ . . . ನಸೆದಿಟ್ಟಯ ಬಿಕ್ಕುಂದನಿಯಿಂದ) (ಶಲ್ಯ. ೯೭-೨೦). [ಬಿಕ್ಕು$_1$ + ದನಿ$_1$]

ಬಿಕ್ಕುಳಿಕು ' ಬಿಕ್ಕುಳಿಕೆ ' ನೋ.

ಬಿಕ್ಕುಳಿಕೆ, ಬಿಕ್ಕಳಿಕೆ, ಬಿಕ್ಕುಳಿಕು (ನಾ). ೧. ಶ್ವಾಸದ್ವಾರವು ಥಟ್ಟನೆ ಮುಚ್ಚಿಕೊಂಡಾಗ ಗಂಟಲಿನಲ್ಲಿ ಹುಟ್ಟುವ ಒಂದು ಬಗೆಯ ವಿಲಕ್ಷಣವಾದ ಶಬ್ದ ; ಬಿಕ್ಕುಳು : ನಿವಿರ್ಚಿ ಬಿಕ್ಕುಳಿಕೆ ಮೆಯ್ ಮುಯ್ವಾಗೆ ಕಂಪಕ್ಕೆ ದಲ್ ಜುರುರಾಯಂ ಗದೆವೊಯ್ಲು ನಿಂದಿಳೆಗೆ ಬಟ್ಟಂ ಬೆಟ್ಟು ಬಿಟ್ಟಂದದಿಂ (ರಸರ. ೪-೦೯೦). ಬಿಕ್ಕಳಿಕೆ : ೧. ಹಿಕ್ಕೆಯ ಬಾಷ್ಪವುದೆಂತೆನೆ ಬಿಕ್ಕಳಿಕೆಗಳಕ್ಕುವಕ್ಷಿಯೊಳ್ ತಿವಿರಂ ತುಂಬಿರ್ಕುಂ (ಖವುದ. ೧೩-೪೦) ; ದವನ, ಜೀರಿಗೆ, ಶುಂಠಿ ಇವಂ ಜೇನು ತುಪ್ಪದಿಂದ ಅರೆದು ಕೊಳ್ಳಲು ಬಿಕ್ಕಳಿಕೆ ಮಾಣ್ಗುಂ (ಖಪ್ನಿ. ೦೩೦) ; ಓಮುವನ್ನು ಸುಟ್ಟು ಮಸಿಯನ್ನು ಸಕ್ಕರೆಯೊಡನೆ ಕಲಸಿ ಕೊಟ್ಟರೆ ವಾಂತಿ ಬಿಕ್ಕಳಿಕೆ ನಿಲ್ಲುವುದು (ಸಕಪ್ಪ. ೫೦ ೪೪೭). ೨. (ದುಃಖ, ಅಳು, ಸಂತೋಷ, ಭಯ ಮುಂತಾದುವುಗಳಿಂದ) ಧ್ವನಿಯಲ್ಲುಂಟಾಗುವ ನಡುಕ.–ಗದ್ಗದ: ಅದನ್ನು ನೆನಸಿಕೊಂಡ ಯಶೋದೆಗೆ ಪುನಃ ಬಿಕ್ಕಳಿಕೆ ಆರಂಭವಾಯಿತು (ವಾತ್ಸಲ್ಯ. ೦೦) ; ಅವಳ ಅಳು ನಿಂತಿತ್ತು ; ಬಿಕ್ಕಳಿಕೆ ಮಾತ್ರ ನಿಂತಿರಲಿಲ್ಲ (ಹುಸರು. ೦೦೦). ಬಿಕ್ಕುಳಿಕು : ೨. ಧರ್ಮಜನು ತಂದೆ ನಿನಗಿಂತಧಿಕದುಃಖವ ತಂದೊದಗಿಸಿದೆ ಎನ್ನನೀಗಲೆ ಕೊಂದು ಕರುಣಿಸೆನುತ ಬಿಕ್ಕುಳಿಕಿನಲಿಯಳಲಿದನು (ತಿಪ್ಪುಸ್ತ್ರೀ. ೨-೪೩). [ಬಿಕ್ಕುಳು + –ಇಕೆ]

ಬಿಕ್ಕುಳಿಸು, ಬಿಕ್ಕಡಿಸು, ಬಿಕ್ಕಳಿಸು (ಕ್ರಿ). ೧. ಶ್ವಾಸದ್ವಾರವು ಥಟ್ಟನೆ ಮುಚ್ಚಿಕೊಂಡಾಗ ಗಂಟಲಿನಲ್ಲಿ ಒಂದು ಬಗೆಯ ವಿಲಕ್ಷಣಶಬ್ದವುಂಟಾಗು ; ಬಿಕ್ಕು : ಕೂಕಿಡುವ ಕುಕಿಲ್ವ ಬಿಕ್ಕುಳಿವ ತೇಗುವ ತನ್ನ ತೊಡಂಕದೆಯ್ದೆ ನೂರ್ಪುಡಿ ಮವದೊಳ್ ಪಳಂಚಲೆಯೆ ಡಕ್ಕೆಯೊಳಟ್ಕಜವಾಗೆಯಾಡಿದಳ್ (ಪಂಪಭಾ. ೪-೯೦). ೨. (ದುಃಖ, ಭಯ, ಸಂತೋಷಾತಿರೇಕಗಳಿಂದ) ಮಾತು ತಡವರಿಸು.– ಗದ್ಗದಿಸು : ಸಿಕ್ಕಿದ ನಲ್ಲಳು ಮುನಿದ ನಲ್ಲನ ಮುಂದೆ ಬಿಕ್ಕುಳಿಸುತ ನುಡಿವಂತೆ ಲೆಕ್ಕ ಟವಣೆಯಾಗಿ ಕೊರಳು ಕುಣಿದು ದನಿಯಿಕ್ಕುವ ರಾಗ ರಂಜಿಸಿತು. (ಭರತ. ೫-೬೩). ೩. ಕಾರು ; ಕಕ್ಕು : " ಬಿಕ್ಕುಳಿಸು – ಉದ್ಗಾರೇ " (ಕಮುರಾ). ಬಿಕ್ಕಡಿಸು: ೨. ಚಿಕ್ಕೋರು ಸುಮ್ಮನೆ ಬಿಕ್ಕಡಿಸಿಕೊಂಡು ಬಿಕ್ಕಡಿಸಿಕೊಂಡು ಅಳ್ತಾರೇ ಇದ್ರು (ಶಂಗಾಳ್ಕ. ೫೨೯). ಬಿಕ್ಕಳಿಸು : ೨. ರಂಗನು ಬಿಕ್ಕಳಿಸುತ್ತ ನಡೆದ ಸಂಗತಿಯನ್ನೆಲ್ಲ ವಿವರಿಸಿದನು (ರಂಗರೋ. ೪೦) ; ಪರದೆಯ ಹಿಂದೆ ಮತ್ತೆ ಬಿಕ್ಕಳಿಸುವ ಶಬ್ದ ಕೇಳಿಸಿತು (ಝಾರಾಣಿ. ೦೦೪).
[ಬಿಕ್ಕುಳು + – ಇಸು$_3$]

ಬಿಕ್ಕುಳು, ಬಿಕ್ಕಲು, ಬಿಕ್ಕಳು (ನಾ). ೧. ಶ್ವಾಸದ್ವಾರವು ಥಟ್ಟನೆ ಮುಚ್ಚಿಕೊಂಡಾಗ ಗಂಟಲಿನಲ್ಲಿ ಉಂಟಾಗುವ ಒಂದು ಬಗೆಯ ವಿಲಕ್ಷಣಶಬ್ದ; ಬಿಕ್ಕುಳಿಕೆ : ಕವುಳು . . . ಶುಂಠಿ ಹಿಪ್ಪಲಿ ಇವ ಚೂರ್ಣವ ಮಾಡಿ ಬೇಲದ ಹಣ್ಣಿನ ರಸದಲ್ಲಿ ಅರೆದು ಗುಳಿಗೆಯ ಮಾಡೆ ಬಿಕ್ಕುಳು ಪೋಕುಂ (ಖಪ್ನಿ. ೦೩೪). ೨. (ದುಃಖ, ಸಂತೋಷ, ಕೋಪ, ಭಯ, ಮುಂತಾದುವುಗಳಿಂದ) ಧ್ವನಿಯಲ್ಲುಂಟಾಗುವ ನಡುಕ.— ಗದ್ಗದ : ಎತ್ತಿ ಹಾಯ್ವುವ ಕೊರಳ ಬಿಕ್ಕುಳ ಕಿತ್ತುವಧರದ

ರೋಷದಲಿ ಹೊಗೆ ಸುತ್ತಿದುರಿವಾತ್ತುಗಳ ಸೂಸಿನರವನಿಪನ ಮೇಲೆ (ಕುವ್ಯಾಕ. ೯-೦೯) ; ನಿವಿಷಾಶ್ವರಕುಲಲಲಾಮನು . . . ಇಳಿವ ಕಂಬನಿಗಳಲಿ ಕಂಪಿತಗಳದ ಬಿಕ್ಕುಳಿಕೆಯಲಿ ಮಕ್ಕಳನು ಕೈವರ್ತಿಸಿ ಕಕುತ್ಸ್ಥಾನ್ವಯನ ಬೀಳ್ಕೊಂಡ (ತೊರರಾ. ೧-೦೭-೨) ; ಉಕ್ಕಿದುದು ಮೇಲುಸಿರು ಕಂಠದ ಬಿಕ್ಕುಳಿನ ಭೀತಿಯುಲಿ ತನ್ನೊಂದಕ್ಕರಿನ ಮನದೊಳಗೆ ರಾಮನ ನೆನೆದನಾ ಹನುಮ (ವ್ಯಕಾರಾ. ೩-೭೯). ೩. ಪ್ರಾಣ ಹೋಗುವ ಸಮಯದಲ್ಲಿ ಗಂಟಲಿನಲ್ಲಿ ಉಂಟಾಗುವ ಗದ್ಗದ: ಈ ಐದು ಬಿಕ್ಕುಳುಗಳು ಮುಪ್ಪಿನವರಿಗೂ ಬಹಳವಾಗಿ ಸ್ತ್ರೀಸಂಗವುಳ್ಳವರಿಗೂ ವ್ಯಾಧಿಯಿಂದ ಕ್ಷಯಿಸಿದ ದೇಹದವರಿಗೂ . . . ಮರಣಕ್ಕೆ ಕಾರಣವಾಗಿ ಕಾಣಿಸಿಕೊಂಬುದು (ಸಳವ್ಯ. ೨೧೦). 'ಬಿಕ್ಕುಳುರೋಗ' ಪರಾ. ಬಿಕ್ಕಲು: ೩. ಶ್ಲೇಷ್ಮದಿಂದ ತಡೆಯಲ್ಪಟ್ಟ ಪ್ರಾಣವಾಯು . . . ಐದು ಪ್ರಕಾರವಾದ ಬಿಕ್ಕಲುಗಳ ಉಂಟುಮಾಡುವವದು (ವೈದ್ಯಸಾ. I. ೦೩೩). ೪. ಉಗ್ಗು; ತೊದಲು: ಶೀಪಣ್ಣನವರಿಗೆ . . . ಹಾಡಲು ಬಹಳ ಉತ್ಸಾಹ; ಆದರೆ ಬಿಕ್ಕಲು. ಹಾಡಲು ಸಾಧ್ಯವಿಲ್ಲದೆ ಬಹುವಾಗಿ ನೊಂದುಕೊಳ್ಳುತ್ತಿದ್ದರು (ಸಂಗೀತಂ. ೨೬೯). ಬಿಕ್ಕಳು: ೧. ಚಂದನಾದಿಚೂರ್ಣ . . . ಮೆಲ್ಲಲು ತೃಷೆ. ಛರ್ದಿ. ಬಿಕ್ಕಳು, ಪಿತ್ತ, ಭ್ರಮೆ, ಅರೋಚಕ ಇವು ಗುಣ (ವೈದ್ಯಾ. ೨೬). ೨. ಉಕ್ಕುವುದಳಲದನೊಯ್ಯನಾಜಿಸುವನು ಬಿಕ್ಕಳು ಬಹುದ ಸಿಲ್ಗಿಸುವ (ಶರಶ.೦೭-೦೯).

[ದೇ. ತಮಿ. ವಿಕ್ಕುಳ್, ವಿಕ್ಕಲ್, ವಿಕ್ಕಿಳ್ ; ತೆಲು. ವೆಕ್ಕಿಲಿ, ಎಕ್ಕಿಲಿ]

**ಬಿಕ್ಕುಳುಬೇನೆ** (ನಾ). ಉಸಿರಾಟದ ತೊಂದರೆಯಿಂದ ಅಧಿಕವಾಗಿ ಬಿಕ್ಕಳಿಕೆ ಉಂಟಾಗುವ ಒಂದು ಬಗೆಯ ರೋಗ : ಶೀನು ಬಿಕ್ಕುಳು ಬೇನೆ ನಾನಾಹಾನಿ ಬಳಿಕುದ್ಗಾರಗಳು ಏನೇನೊ ವೈಕಾರಗಳುದಾಸದ ವಾಯುವಿನ ಧರ್ಮ (ಗಗತಾ. ೯-೬೯). [ಬಿಕ್ಕುಳು + ಬೇನೆ]

**ಬಿಕ್ಕುಳುರೋಗ** (ನಾ). = ಬಿಕ್ಕುಳುಬೇನೆ: ಐದು ತೆರನಾದ ಬಿಕ್ಕುಳು ರೋಗದಲ್ಲಿ ಕ್ಷುದ್ರ, ಅನ್ನಜ ಎಂಬೆರಡು ವಿಧವಾದ ಬಿಕ್ಕುಳುರೋಗವೆ ಅಸಾಧ್ಯವಾಗಿ ಪ್ರಾಣವನಪಹರಿಸುತ್ತ ಇಹುದು (ಸಳವ್ಯ. ೨೧೦).

[ಬಿಕ್ಕುಳು + ರೋಗ]

**ಬಿಕ್ಕೆ$_1$** 'ಬಿಟಿಕ್ಕೆ' ನೋ.

**ಬಿಕ್ಕೆ$_2$, ಬಿಚ್ಚೆ** (ನಾ). ತಿರುಪೆ ; ಭಿಕ್ಷೆ : "ಬಿಕ್ಕೆ ಭಿಕ್ಷೆಯೆ" (ಶಬ್ದಮ. ೬೨) ; ಜತತನದ ಬೇನೆಯನು ರಾಗದಿಂ ಪಾಡಿ ಜೋಡುಕೈಗಳ ವನೌನದ್ಯನ್ಯದಿಂ ನೀಡಿ ಬೇಡಿದನು ಬಿಕ್ಕೆಯನು (ಕಗರ್ನ್ಯ. ೭೯) ; ಭಕ್ತ ಬೇಡಲು ಬಿಕ್ಕೆ ಇತ್ತ ತೆರನಾದುದೌ ! (ತಲಿಖಿ. ೪೯). ಬಿಚ್ಚೆ : 'ಬಿಚ್ಚೆಕಾರ' ಪರಾ.

ಬಿಕ್ಕೆ ಬೇಡು = ಯಾಚಿಸು ; ಭಿಕ್ಷೆಯನ್ನು ಕೇಳು ; ತಿರಿ : ಬ್ರಿಟಿಶರಲ್ಲಿ ಸ್ವರಾಜ್ಯದ ಬಿಕ್ಕೆ ಬೇಡಲು, ನಾವು . . . ವರ್ಣಾಶ್ರಮವನ್ನು ನಾಶ ಮಾಡಬೇಕೆ ? (ಯುಕ್ಸಕ್ರ. ೯೩); ಹೀಗೆ ಸ್ವಾರ್ಥ ಬಿಟ್ಟು ಧರ್ಮಾತ್ಮನಾದರೆ ನಾಳೆ ಬಿಕ್ಕೆ ಬೇಡಬೇಕಾದೀತು (ಕುರುಕಾ. ೧೩೮). [<ಸಂ. ಭಿಕ್ಷಾ]

**ಬಿಕ್ಕೆಯಣ** 'ಬಿಕ್ಕೆಯಣ್ಣ' ನೋ.

**ಬಿಕ್ರಿ** 'ಬಿಕರಿ' ನೋ.

**ಬಿಕ್ರಿದಾರ** 'ಬಿಕರಿದಾರ' ನೋ.

**ಬಿಕ್ಲಂ** 'ಬಿಕ್ಕಲಂ' ನೋ.

**ಬಿಗಡ$_1$** 'ಬೇಗಡ್ಡ' ನೋ.

**ಬಿಗಡ$_2$** (ನಾ). ಕಷ್ಟ ; ತೊಂದರೆ ; ಕೇಡು : ಇವರಿಗೆ ಬಿಗಡಾವ ಮಾಡಿ ಲಡಾಯಿಗೆ ನಿಲ್ಲಬೇಕು (ಮರಠ. ೨೦-೦೩).

[← ಹಿಂ. ಬಿಗಾಡ್ ; ಮರಾ. ಬಿಗಡ, ಬಿಗಾಡ, ಬಿಘಡ, ಬಿಘಾಡ]

**ಬಿಗಡಾಯಿಸು, ಬಿಗಡಿಸು, ಬಿಘಡಾಯಿಸು** (ಕ್ರಿ). ೧. ಹದಗೆಡು ; ಕೆಟ್ಟುಹೋಗು : ಇನ್ನು ಮುಂದು ಸಲ್ಲಾ ಬಿಗಡಾಯಿಸಿದರೆ . . . ನಮ್ಮ ದವಲತ್ತನ್ನು ಮುಳುಗಿಸಿಬಿಟ್ಟಾರು (ರಾಜೇಂದ್ರ. ೦೦೨) ; ಶ್ರೀನೃಪ್ಪದೇವರಾಯನ ಆಳ್ವಿಕೆಯ ಅನಂತರದಲ್ಲಿ ರಾಜಕೀಯಪರಿಸ್ಥಿತಿ ತುಂಬಾ ಬಿಗಡಾಯಿಸಿತ್ತು ! (ಹೇಮಕೂ. ೦೦೯). ೨. ಬಿಗಿಯಾಗು ; ಗಡುಸಾಗು : ಫಳುಜು ಜಮೀಯತ್ತು ಆಯಿತು ಜಿರಪುಲಿದವರು ಬಿಗಡಾಯಿಸಿಕೊಂಡೆ ಪೋಗಿಯಿದ್ದರು (ಮರಠ. ೭೯-೯) ; ಚೀಂಕ್ರನ ಧ್ವನಿ ಬಿಗಡಾಯಿಸಿತು (ಮರಿಮ. ೪೭೩). ಬಿಗಡಿಸು : ೩. ಕೆರಳಿಸು; ಕೋಪಗೊಳಿಸು: ಭಾಗಾನಗರದವರ ಬಗೆಯ (?) ಪೆದೂರ ಲಿಂಗಪ್ಪಂ ಬಿಗಡಿಸಿ ಬಂದಿರಲು (ಕಳವ್ಯ. ೯-೦೯). ಬಿಘಡಾಯಿಸು : ೧. ನಮ್ಮ ಕುಟುಂಬದ ಪ್ರಕೃತಿ ಬಿಘಡಾಯಿಸೇದ (ಸಮಚೀ. ೯೩).

[ಬಿಗಡ್ಡಾ ( ಕ್ರಿ ← ಹಿಂ. ಬಿಗಡನಾ ; ಮರಾ. ಬಿಗಡಣೇ, ಬಿಘಡಣೇ) + –ಇಸು$_3$]

**ಬಿಗಡಿಸು** 'ಬಿಗಡಾಯಿಸು' ನೋ.

**ಬಗಿ$_1$** (ಕ್ರಿ). ೧. (ಹಗ್ಗ, ಸರಪಳಿ ಮುಂತಾದುವುಗಳಿಂದ) ಕಟ್ಟು,– ಬಂಧಿಸು : "ಬಗಿ—ಬಂಧನೇ, ಹಯುಪರಿಕರೇ ಚ" (ಶಮಂಣ) ; ಹಗಲುಗಳನಿಕ್ಕಿ ಬಿಗಿದಡೆ ನಾಯ ಬಾಲವದು ಬಳಿಕ ನೀಳಕೆ ಸಸಿನವಹುದೇ (ಬಸಪು. ೬೦-೯೩) ; ಮುತ್ತಿನ ಗದ್ದುಗೆ ಗರುಡನ ಹೆಗಲಿನೊಳೆತ್ತಿಸಿ ಬಿಗಿದು ಹಬ್ಬಣಿಸಿ ಅತ್ಯಂತ ಸೌಖ್ಯವ ಮಾಡಿ ಸಂತಸದಿಂದೆ ಪತ್ತಿದ ಶ್ರೀಕೃಷ್ಣರಾಯ (ವಪೀಹತ. ೩೬-೩೭) ; ಡೊಳುಹೊಟ್ಟೆಗೆ ನಾಗರ ಬಿಗಿದವನೇ . . . ದಯಮಾಡಯ್ಯಾ ದಂತಾಯುಧನೇ (ಗಹೇಶ.೦-೦೨). ೨. ಭದ್ರಪಡಿಸು ; ಸಡಿಲವಾಗದಂತೆ ಮಾಡು ; ಅಳ್ಳಕವಾಗಿಲ್ಲದಂತೆ ಮಾಡು : ಗುಲ್ಮದಂತೊತ್ತುವರ್ ಪೊಜಿತ್ತಜನಂತೆ ಬಿಗಿದು ಕಟ್ಟುವರ್ (ರರ್ಮಾಕು. ೩-೭೩) ; ವಿಜಯವೀಣೆಯುಂ ಕೊಂಡು . . . ತಂತ್ರಿಯಂ ಬಿಗಿದುರದೊಳ್ ಸಾರ್ಚಿ (ಶಂಕಂ. ೨-೩೦ ವ); ಬಿಗಿದ ಬೀಯಗ ಬದ್ದರದ ಬಂಡಿಗಳು (ಕುವ್ಯಾಕ. ೦೭-೨೧). ೩. ಅವಕಾಶವಿಲ್ಲದಂತೆ ಒತ್ತಿ ಹಿಡಿದಿರು,– ಅಮುಕಿ ಹಿಡಿದಿರು ; ಸಡಿಲವಾಗಿಲ್ಲದಿರು ; ಹತ್ತಿರವಾಗಿರು : ಈ ಪ್ರಿಯಂವದೆಯು ಬಿಗಿಯಾಗಿ ಕಟ್ಟಿದ ವಲ್ಕಲದಿಂದ ನನ್ನ ಎದೆಯು ಬಿಗಿಯುತ್ತಿರುವುದು (ಶಾಕುಂತ. ೯-೬) ; ಈ ಅಂಗಿ ಮಗುವಿಗೆ ಬಿಗಿಯುತ್ತದೆ; ಹಾತಲಾಗುವುದಿಲ್ಲ (ರಜಾ). ೪. ವಸ್ತ್ರ ಮುಂತಾದುವನ್ನು ಉಡಲು ಭದ್ರವಾಗಿ ಕಟ್ಟು,– ಬಂಧಿಸು : ಸಪುರ ಬೆಳೆದಂ ಬಿಗಿದುಡಿಸಿ ಬೆಳಗುವ ದುಕೂಲಮಂ ಪೊದಯಿಸಿ (ಸಂಚರ. ೦೦-೯೩) ; ಕಂಸರಸುಮಕ್ಕಳ್ಗಿಲ್ಲಮುಡಲುಂ ತುಡ[ಲುಮ]ಟ್ಟಿ ನಂದಂಗಂ ಕೃಷ್ಣಂಗಮುಣ್ಪು ಪುಟ್ಟಿ ಕಲಿಗಂಟಿಕ್ಕಿ ತೆರಳ್ತಿ ಬಿಗಿದುಟ್ಟು ಪೊಯಿಕಯ್ಯ ನೆಂಬಂತಿರ್ದಂ (ಶಂಕಂ. ೩-೯೭ ವ); ಬಿಗಿದ ಗಂಡುಡಿಗೆಯಲಿ . . . ಸಸುನಗೆ ಮೊಗದ ನೊಂಪಿನಲಾಹವಕ್ಕನುವಾದನಭಿಮನ್ಯು (ಕುವ್ಯಾದ್ರೋ. ೯-೯೯). ೫. ಹೊಂದಿಸು ; ಅಳವಡಿಸು : ಬಿಗಿದ ಸಾರಂಗದ ಮೇಲ್ಗಟ್ಟಿನೊಳಂ ಮಾಂಗಾಯ ಫಲಾವಳಿಗಳೊಳಂ . . . ಎಸೆವ ಮಂಜುಪಂಗಳ ನಡುವಣ ಪದ್ಮರಾಗದ ಪಟ್ಟವಣೆಯೊಳ್ ನಿಲಿಸಿದ ಕಾಮದೇವನಸತಿಪ್ರೀತಿಯಿಂದರ್ಚಿಸಿ (ಕಾರಂಣ. ೬೫೦) ; ಬಿಗಿದ ರತ್ನದ ಮುಗಿಲ ಹೊಸಕ್ಕಿದುಗಳ ಮಿಂಚಿನ . . . ತನಿಹೊಗರಿಜಿದು ಪರಬಲದ ಕಡುವೇಸಗೆಗೆ ಕವಿದುದು ರಾಜಹಂಸಪುಕರಪೋನರಿಸೆ (ಕುವ್ಯಾದ್ರೋ. ೦.೯೩) ; ಬಿಗಿದ ಬಂಗಾರಿಗಳ ಮಿಸುನಿಯ ಜಗಲಿಗಳ . . . ವಿಲಾಸದಲಿ ಸೊಗಸಿತಾ ಮಂಟಪ (ತೊರರಾ. ೦-೦೩-೬). ೬. ರಚಿಸು ; ನಿರ್ಮಿಸು : ಸಳನು ರಿಪುಸಂಹಾರ ಕಾಲಾನಳನು ಕಾರುಣ್ಯದಲಿ ಬಿಗಿದನು ಜಲನಿಧಿಗೆ ಸೇತುವನು (ತೊರರಾ. ೬-೩ ಸೂಚನ) ; ಲೋಲಲೋಚನೆ ಬಳಲಿದುದ ಕಾಣುತ ವನಪಾಲರು ಪಕ್ಷಪಾತದಲಿ ಬಾಲೇಂದುಕಾಂತಸೋಪಾನದ ಬಿಗಿದ ವಿಶಾಲಸರಸಿಯ ತೋಜಿದರು (ವೋಹತ. ೯-೯೦). ೭. ಕೂಡು ; ಸೇರು : ಬಿಗಿದ

ಹುಬ್ಬಿನ ಭೀಮ ಹೊಕ್ಕನು ಗದೆಯ ತಿರುಗಿಸುತ (ಕುಭಾರತ್ರೀ. ೨-೬೨) : ಕರ ನಡುಗೆ ಮೈ ಬಲಿಯೆ ಹುಬ್ಬುಗಳುಬ್ಬಿ ಬಗಿಯೆ . . . ವೀರಾವೇಶದಲಿ ಮಸಗಿದನು ಕಲಿಭೀಮ (ಕುವ್ಯಾಕ. ೦೨-೦೦). ೮. ಕೂಡಿಸು ; ಸೇರಿಸು : ಹುಬ್ಬುಗಳನುಬ್ಬಿ ಬಗಿದೌಡನೊಡೆಯೊತ್ತಿ . . . ಹೊಂಗಿದನಧಿಕರೋಷದಲಿ (ಕುವ್ಯಾದ್ರೋ. ೦೯-೦೩) ; ರಘುಗರ್ಭುಗಿಸುದುದಾ ಉಭಯಕಾವೇರಿಯ ಬಗಿದೊಪ್ಪುತಿಹ ದಿವ್ಯಸೇತು (ಕಂಸಪ. ೩-೬೦). ೯. ಗಾಢವಾಗು ; ಗಟ್ಟಿಯಾಗು ; ಬಲವಾಗು : ನಿನ್ನಿಂದಂ ಕೊಲೆಸತ್ತುವಟಿ ಕೋಟ್ಯಳ ನಾದಮಾನುಂ ಬಗಿದಪ್ಪಿಕೊಂಡು ಸತ್ತುದರ್ಕಿದು ಕಾರಣಂ (ವಡ್ಡಾರಾ. ೩೯-೦೬) ; ಬಗಿದವಾರ್ದಿರ್ದ ತೋಳ್ ಸಡಿಲೆ ಜೋಲೆ ಮೊಗಂ . . . ಮಜಸೊೞ್ದಿದಂದದೊಳೆ ಜೋಲ್ದ ನಿಜೇಶನನಾ ಲತಾಂಗಿ ತೊಟ್ಟಗೆ ಕೊಳೆ ನೋಡಿ (ಹಂಕರ. ೨-೦೯) ; ಇಲ್ಲೀಗ ಕಂಡೆನಾದಡೆ ಚರಣದಲ್ಲಿ ದೊಪ್ಪನೆ ಬಿದ್ದು ಬಗಿದು ತಕ್ಕೈಸಿ . . . ತಲ್ಲೀಯವಪ್ಪೆನು (ಸಿದ್ಧರಾ. ೨-೩೩). ೧೦. ಬಿರುಸಾಗು ; ಕಠಿಣತೆಯನ್ನು ಹೊಂದು : ಕೇಳಂಗನೆ ನಿನ್ನ ಬೀಗಿ ಬಗಿದಿರ್ದ ಕುಚದ್ವಯಮಧ್ಯದಲ್ಲಿ ತಾಂ ಪಿಂಗದೆ ನಟ್ಟು ದಿಟ್ಟಿಯನವಂ ಕಿಟಿಲೆಂದನುಗೆಯ್ದು ತೂಗಿದಂ (ಅಚಿತ. ೦೨-೦೩) ; ಬಗಿದೊಗೆವ ಕುಚದ್ವಂದ್ವವಿಂತಾಗವೇಡಾ ನಳಿತೋಳಿಂತಾಗವೇಡಾ (ಗರಾಚು. ೬-೬೦) : ಬಗಿದುತ್ತುಂಗಕುಚಂ ಕದಕ್ಕದಿಸೆ ಹಾರಂ ತೂಗೆ (ಜಗಹ. ೦೦-೦೦೦). ೧೧. ಆವರಿಸು ; ಕವಿ ; ಮುಸುಕು : ಧಾರುಣಿಯೊಳುತ್ಪಾತ ಬಗಿದುದು (ಕುವ್ಯಾಸ. ೦೩-೯೨) ; ಕತ್ತಲೆ ಬಗಿದುದವನೀತಳವ ಪೆಟ್ಟಿಗೆ ಮುಚ್ಚಿದಂದದಲಿ (ತೊರ. ೩-೯೩). ೧೨. ಕವಿಯುವಂತೆ ಮಾಡು ; ಮುಚ್ಚು : ಭೀಮಸೇನನ ತಟುಬಿ ನಿಂದನು ಭೀಷ್ಮ ಬಗಿದನು ಸರಳಲಂಬರವ (ಕುವ್ಯಾಭೀ. ೬-೩). ೧೩. ಮುಚ್ಚಿಕೊಳ್ಳು : ಮೇಲುಗಾಣದ ಪಾರ್ಥನೆಂಬೀ ಕಾಳುಮೂಳನ ವಿಧಿಯನೇವರಿವೇಳುವೆನು ಹರಿಯೆನುತ ಕಂಗಳನೆವೆಗಳಲಿ ಬಗಿದ (ಕುವ್ಯಾಭೀ. ೩-೬೦) ; ರಾತ್ರಿಯೆಲ್ಲಾ ನಿದ್ರೆ ಬರದೆ ಈಗ ಕಣ್ಣು ಬಗಿಯುತ್ತಾ ಇದೆ (ಕೂಹ). ೧೪. ಕುಂದಣಿಸು ; ಕೆಚ್ಚು : ಬಗಿದ ಮರಕತಮಣಿಯ ನೆಲಗಟ್ಟುಗಳ . . . ಲೋವೆಗಳ ಕಾಂತಿಯ ಲಳಿಯ ಲಹರಿಯೊಳೆದ್ದನವರಾರಿ (ಕುವ್ಯಾಸ. ೩-೨೯) ; ಪಳುಕಿನಬಿಯಲಿ ಬಗಿದ ಬೀದಿಯ ನೆಲನ ನಿಳಯಶ್ರೇಣಿಗಳ ನುಜ್ವಲಿಪ ಚಂದ್ರೋಪಲದ ಘನಸೋಪಾನಪಂಗ್ತಿಗಳ . . . ಪಸರದಿನೆಸೆದುದಾ ಪುರ (ಕೂರಾ. ೦-೯-೦೯). ೧೫. ಸಿದ್ಧಪಡಿಸು ; ಸಜ್ಜುಗೊಳಿಸು : ತವದೊಣೆಗಳಂ ಬಗಿದು ಗಾಂಡೀವವನೇಱಿಸಿ ನೀವಿ ಜೇವೊಡೆದು (ಹಂಪಾ. ೬-೩೬ ಠ); ಶಿವನ ಬೇಡಿದ ಶರವ ತೆಗೆ ಗಾಂಡಿವವ ಬಗಿ . . ಬವರಕೇಳೇಳು (ಕುವ್ಯಾದ್ರೋ. ೯-೨೩). ೧೬. ಉಸಿರು ಅಥವಾ ಸ್ವರವು ಸಹಜವಾಗಿ ಹೊರಬರದಂತೆ ಕಂಠವು ಉಬ್ಬಿ ಕಟ್ಟಿಕೊಳ್ಳು,– ಅಡ್ಡಿ ಹೊಂದು : ಒಗುವ ಕಂಬನಿಗಳಲಿ ಕಂಠವ ಬಗಿದ ಸೆರೆಗಳ ಸೇದು ವಕ್ಕೆಯ ವಿಗತಪರಿತೋಷಿತನು ಪಾವನತರರಿಗಿಂತೆಂದ (ಕೂರಾ. ೦-೪-೬) : ಗೆಳೆಯರು ಬಗಿದ ಕಂಠದಿಂದಲೇ ಅವರನ್ನು ಬೀಳ್ಕೊಟ್ಟರು (ಕೂಹ). ೧೭. ನಿರೋಧಗೊಳಿಸು ; ಅಂಕೆಯಲ್ಲಿಟ್ಟುಕೊಳ್ಳು ; ಹಿಡಿತದಲ್ಲಿರಿಸು : ಆತ್ಮನಂ ಭೇದಿಸಿ ಪ್ರಾಣವಾಯು ನಾಡಿಗಳನಱಿತು ಹಿಡಿವ ಭೇದವಂ ತಿಳಿದು ತೆಗೆವ ಬಗಿವ ಸಂಚವಂ ಕಂಡು . . . ಆತ್ಮಲಿಂಗದಲ್ಲಿ ಸಂಯೋಗವ ಮಾಡುವುದಾತ್ಮಯೋಗ (ಅರವ. ೨೯-೬೬) ; ಪ್ರತ್ಯಾಹಾರ:, ಉಪಾದಾನಂ . . . ಇಂದ್ರಿಯಗಳನ್ನು ಹಿಂದಿರುಗಿಸಿ ನಿಗ್ರಹಿಸುವಿಕೆ, ಆಶೆಯನ್ನು ಬಿಡದೆ ಬಗಿದು ಹಿಡಿಯುವಿಕೆ (ಸಿದ್ಧಾಂತ. ೩೬೦) ; ಹುಲ್ಗರಿಯ ಬಳವಿಗೆಯು ಬಗಿದುಸಿರೂಳಾಲಿಸುತ . . . ಎಲೆ ಅಹಂಭಾವ, ನಿಷ್ಕಪರಿವೆಯು ಇಲ್ಲದಂದದೊಳು ತೊಲಗುತಿಹುದಿಲ್ಲಲಾ ನಿನ್ನ ಹೇವ (ಕುರಿವೇ. ೩೩-೦). ೧೮. ಹೊಡೆ ; ಬಡಿ ; ಥಳಿಸು : ಎಲ್ಲಿ ಸಿಕ್ಕಿದರಲ್ಲಿ ಬಗಿವರು . . . ಒಡನೆಗೆವರು ನಿಂದು ಕಾದುವರು (ಮೋಹತ. ೧೨-೮೬) : ಅವನಕ್ಕ ಅವನನ್ನು ಎಳೆದು ಹಾಕಿ ನಾಲ್ಕು ಚೆನ್ನಾಗಿ ಬಗಿದರಂತೆ (ಹೊಸಕ್ಕ. ೦೦೯). ೧೯. (ಹೊಟ್ಟೆ ಬಿರಿಯುವಂತೆ) ತುಂಬು,– ಭರ್ತಿಯಾಗು : ತನ್ನ ಉದರಂ ಬಗಿಯೆ ಗಬ್ಬನೆ ತೇಗುತಂ (ಅಸಪ. ೨೩-೩೦). ೨೦. ಸೆಟೆದುಕೊಳ್ಳು ; ಸೆಡೆ : ಬಗಿದ ನರಗಳ ತೆಱೆದ ನೊರೆವಾಯ ಉಱುಗಿ ಬಾಗಿದ ಶಿರದ . . . ಹೇಸಿಕೆಯು ನಾತವಧಿಕಭಯಂಕರವು (ಅಸಪ. ೯೬-೩೬) ; ಬಗಿದ ಸರಂಗಳುಬ್ಬರಿಪ ಬಲ್ಪಸಿಱ್ . . . ನಾತವಂ ನೆಗಳ್ವ ತದಂಗಕಾರ್ದೆಱಗಿ ಘುಮ್ಮೆನುತೋಡುವ ಮಕ್ಷಿಕಾಳಿಗಳ್ (ನ್ಯಪಹ. ೩೦-೩೩). ೨೧. ಸೆಳೆತದಿಂದ ಕೂಡಿರು ; ಎಳೆತವನ್ನು ಹೊಂದಿರು : ಗಾಯ ಒಣಗುತ್ತಾ ಬಂದಿರುವುದರಿಂದ ಬಗಿಯುತ್ತಿದೆ (ಕೂಹ): ಅನಾರೋಗ್ಯದಿಂದ ಮೈ ಬಗಿಯುತ್ತಿದೆ (ಕೂಹ). ☞ ಈ ಪದವು ಅನೇಕ ಶಬ್ದಗಳ ಮುಂದೆ ಸೇರಿ ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾ. 'ಏಟು ಬಗಿ, ಭಾಷಣ ಬಗಿ' ಇತ್ಯಾದಿ.

**ಬಗಿಬಗಿ** (ದ್ವಿರುಕ್ತಿ) : ಅಚಲಿತಭಕ್ತನು . . . ಹೊಳೆಚಿ ತಂದಾಸೆಕ್ಕೆಗಳನೊಳಗೊಳಗೆ ಶೋಧಿಸಿ ತನ್ನ ಕಂಬಿಯ ನೆಲಹಿನಿತ್ತರದಲ್ಲಿ ಸುತ್ತಲಾಸೆಕ್ಕೆ ಬಗಿಬಗಿದು (ಅಸಪ. ೯೩-೨೩) ; ಬಗಸೆಗೈಗಳಲಿ ನೀರ್ವಿಡಿದು ಶ್ರೀರಂಗೇಶ ಸೊಗಸುಗಾತಿಯರ ಮೇಲಿಡಲು ಒಗುವ ನೀರ್ವೊಱಪ್ಪು ಸ್ಯರಿಸದೆ ಶ್ರೀಹರಿಯನು ಬಗಿಬಗಿದಪ್ಪಿದರಾಗ (ಕುಪಹ. ೩೩-೦೨೩). **ಬಗಿದುಕೊಳ್, ಬಗಿದುಕೊಳ್ಳು** = ೧. ಭದ್ರವಾಗಿ ಕಟ್ಟಿಕೊಳ್ಳು : ತನ್ನ ತೊಟ್ಟ ದಿವ್ಯಾಭರಣಂಗಳೆಲ್ಲವಂ ಕಳೆದು ದಿವ್ಯಶರಧಿಗಳು ಬಗಿದುಕೊಂಡು (ಹಂಪಾ. ೪-೦೨ ಪ). ೨. ಬಿಗುಮಾನವಾಗಿರು : ಬಿಗಿಯಲ್ಲಿರು : ಇವತ್ತು ಹೀಗೆ ಯಾಕೆ ಬಗಿದುಕೊಂಡಿದ್ದೀಯೆ ಶಾಂತಾ ? (ಮೂರುದಾ. ೦೬೯) ; ಅವನೊಮ್ಮೆ ತನ್ನ ಮುಖ ನೋಡಿದರೆ ಸಾಕು . . . ಬಗಿದುಕೊಂಡ ಮುಖ ಹಸನ್ಮುಖವಾಗುತ್ತದೆ (ಕುಸುಗಂ. ೦೬೦). **ಬಗಿದು ಬರು** = ಗಂಟಲಿನ ಸೆರೆಗಳು ಉಬ್ಬು ; ಗದ್ಗದವಾಗು : ಕಂಠವು ಬಗಿದು ಬಂತು. ಮುಂದೆ ಮಾತು ಹೊರಡದಾಯಿತು. (ದಿಂಡ್. ೦೯).

[ದೇ.॥ ತಮಿ. ಪಿಕಿ ; ತುಳು. ಬಗಿ ; ತೆಲು. ಬಗಿಯು]

**ಬಗಿ$_2$** (ನಾ). ೧. ಭದ್ರವಾಗಿರುವಿಕೆ ; ಗಟ್ಟಿಯಾಗಿರುವಿಕೆ : ಅವರ ಹಾಸಿಗೆಯ ಗಂಟು ಬಗಿಯಾಗಿದೆ (ಕೂಹ). ೨. ಬಲವಾಗಿರುವಿಕೆ ; ದುರ್ಬಲವಲ್ಲದಿರುವಿಕೆ : ಬಾವಿಯಿಂದ ನೀರು ಸೇದುವ ಹಗ್ಗ ಬಗಿಯಾಗಿರಬೇಕು (ಕೂಹ). ೩. ಸಡಿಲತೆಯಿಲ್ಲದಿರುವಿಕೆ ; ಅಳ್ಳಕವಾಗಿಲ್ಲದಿರುವಿಕೆ : ನಿಱಿಯ ಬಗಿ ಪೈಸರಿಸೆ ಪೆಣ್ಮಾಂಚದಂಚಿದುಪ್ಪುಳ್ಯಾಸಿಗೆಳೆ ದೊಯ್ದೊಳಿನಿಯನಂ ಬಲ್ಪಿನಿಂದೆ (ಕೃಪಿಜಾ. ೧೦-೦೯) ; ದೊಡ್ಡಪ್ಪನು ತೊಟ್ಟುಕೊಂಡ ಅಂಗಿಯು ಅವನ ಮೈಗೆ ಬಹಳ ಬಗಿಯಾಗುತ್ತಿತ್ತು (ಮುಂಬಯಿ. ೪-೬೯). ೪. ಮಜಬೂತಾದುದು : ಅವರ ಮನೆಯ ಬಾಗಿಲು ಬಗಿಯಾಗಿದೆ (ಕೂಹ). ೫. ಕಟ್ಟುಪಾಡು ; ಭದ್ರತೆ ; ವ್ಯವಸ್ಥೆ : ಲಂಚ ಕಡಮೆಯಾಗಬೇಕಾದರೆ ಆಡಳಿತದಲ್ಲಿ ಬಗಿ ಮತ್ತು ದರ್ಪ ಹೆಚ್ಚಾಗಿರಬೇಕು (ಹಂಪಹಂ. ೦೬೩). ೬. ಕಟ್ಟುನಿಟ್ಟು ; ಬಿಗುವು : ಆ ಮಾತಿನಲ್ಲಿ ಬಗಿಯಿರದೆ ಸರಳಪ್ರಸನ್ನತೆ ಇದ್ದುದನ್ನು ಅರಿತು ಕೊಂಡು (ಚಕಂಪಾ. ೦೯) ; ಅವರ ಸ್ವಭಾವ ಬಗಿ. ಆದರೆ ಹೃದಯ ವಿಶಾಲವಾದದ್ದು (ಕುಕು. ೧೯೯). ೭. ಕಷ್ಟ ; ಕಠಿಣ ; ಜಟಿಲ : ಈ ಭಾವಸಂವೇದನೆಯೋ ಭ್ರಮೆಯೋ ಆ ಬುದ್ಧಿವಾದವೇ ಭ್ರಮೆಯೋ ಎಂಬುದನ್ನು ಹೇಳುವುದು ಬಗಿ (ಸಾಹಿ. ೦೦೯) ; ವೀಣಾ ಬಾರಿಸಲಿಕ್ಕೆ . . . "ರೂಢೀ ಮಾಡಿದರ, ಅಷ್ಟೇನೂ ಬಗೀ ಅಲ್ಲ" (ಗಂಗಾಸಾ. ೯೯). ೮. ಮನಸ್ಸು ಬಿಚ್ಚಿ ಮಾತನಾಡದಿರುವುದು ; ಬಿಗುಮಾನ :

ಹುಡುಗರ ಹತ್ತಿರ ಅವನು ಬಹಳ ಬಿಗಿಯಾಗಿರುತ್ತಿದ್ದ (ಕಾರಕು. ೨೦೬); ಆಚೆ ಬಂದಾಗಿನಿಂದ ಮನೆಗೆ ಹೋಗುವವರೆಗೂ ಬಹಳ ಬಿಗಿಯಲ್ಲೇ ಇದ್ದರು (ಅದೇ). ೯. ಕುದುರೆ, ಎತ್ತು ಮುಂತಾದ ಪ್ರಾಣಿಗಳ ಜೀನನ್ನು ಭದ್ರಪಡಿಸಲು ಅವುಗಳ ಒಡಲಿಗೆ ಕಟ್ಟುವ ಚರ್ಮದ ಪಟ್ಟಿ; ತಂಗುಪಟ್ಟಿ: "ಕಾಮಕರದೊಳೆಟ್ಟಿನ ಪಟ್ಟಿಯಲ್ಲಿ ಬಂಧನದೊಳಂ ದೊರೆಕೊಳ್ಗು ಬಿಗಿಯೆಂಬ ಶಬ್ದವು" (ಕರ್ಣಾಟ. ೬೨).೧೦. ಎರಡುತೋಳು ಗಳಲ್ಲಿ ಹಿಡಿಯಬಹುದಾದಷ್ಟು ಸೊಪ್ಪು, ಹುಲ್ಲು ಇತ್ಯಾದಿಗಳ ಕಟ್ಟು.—ಹೊರೆ: ಒಂದು ಬಿಗಿ ಹುಲ್ಲು ಕೊಡು (ಅದೇ). ೧೧. ಕುಸ್ತಿಯ ಒಂದು ವರಸೆ; ಮಲ್ಲಯುದ್ಧದ ಒಂದು ಪಟ್ಟು: ಬಿಡದೆ ಬಿಗಿಗಳ ಬಿಡಿಸಿ ಕಳಚುವರೊಡನೆ . . . ಬಿನ್ನಣ ಬಿಡಿಕೆಗಳ ಬಂಧದಲಿ ಹಣಗಿ ದರುಭಯಪಟುಭಟರು (ಅಂತಿಕಾ. ೦೬-೨೦). ೧೨. [ಸಂಗೀತ] ತಂತೀ ವಾದ್ಯದಲ್ಲಿ ನಾದವನ್ನು ಹೆಚ್ಚಿಸುವ ಆರುಬಗೆಯ ಸಾಧನಗಳಲ್ಲಿ ಒಂದು: ಬಿರಟೆ ಚಿಕ್ಕು ಸನ್ನೆ ಬಿಗಿ ಜಬ್ಬು ಜೀವಾಳವೆಂಬಾಱು ಬಗೆಯಾದ ನಾದಕಟ್ಟುಗಳಿಂ ತಂತ್ರಿಗಳಿಂ ಪರಿಸಿ (ಶಿವತ. ೨೪೬).

ಬಿಗಿಬಂದು=ಭದ್ರವಾದ ಕಟ್ಟುಪಾಡು; ಸುವ್ಯವಸ್ಥೆ: ತೊಗರೆಯ ತೊಗೆ ಲೇಸು ತಿಗುರಿಗೆ ಮೊಳೆ ಲೇಸು . . . ದೊರೆಗಳಿಗೆ ಬಿಗಿಬಂದು ಲೇಸು (ಸರ್ವಜ್ಞ. ೬೨೨). ಬಿಗಿಬಂದು ಮಾಡು=ಭದ್ರವಾಗಿ ಅಳವಡಿಸು; ಭದ್ರಪಡಿಸು: ರಂಧ್ರಗಳಲ್ಲಿ ಕಬ್ಬಿಣದ ಸಲಿಯು ಹಾಯ್ದು ಹೋಗಿ ಪತ್ರಗಳನ್ನೆಲ್ಲ ಸೂಚಿಯು ಕಪಚಿಕ್ಕಿ ಬಿಗಿಬಂದು ಮಾಡಲು ಬರುವಂತೆ ಒಂದು ಬಗೆಯ ಯಾಂತ್ರಿಕವ್ಯವಸ್ಥೆಯಿರುತ್ತದೆ (ಗ್ರಂಥಾಂ. ೪೪). ಬಿಗಿ ಮಾಡು = ಭದ್ರಗೊಳಿಸು: ಹೀಗೆ ಬಿಗಿ ಮಾಡಿದ ನಂತರ ಅಕ್ಷರ ಮತ್ತು ಪಡಿಯಚ್ಚುಗಳ ಮುಖಭಾಗವನ್ನು ಕುಂಚ(Brush)ದಿಂದ ಚೊಕ್ಕಟಗೊಳಿಸಬೇಕು (ಮುದ್ರಣ. ೩೭). [< ಬಿಗಿ₁./ ತಮಿಳು. ತೆಲು. ಬಿಗಿ]

**ಬಿಗಿಕಟ್ಟು** 'ಬಿಗಿಗಟ್ಟು' ನೋ.

**ಬಿಗಿಕಲ್ಲು** (ನಾ). ಕಮಾನಿನ ಕಟ್ಟಡವನ್ನು ಮೇಲುಭಾಗದಲ್ಲಿ ಸೇರಿಸುವ ಕಲ್ಲು; ನೆತ್ತಿಗಲ್ಲು: (ಶಿಸಂಗ್ರ. ೩೦). [ಬಿಗಿ₁+ಕಲ್ಲು (<ಕಲ್₃)]

**ಬಿಗಿಗಟ್ಟು**, ಬಿಕ್ಕಟ್ಟು, ಬಿಗಿಕಟ್ಟು (ನಾ). ೧. ಕಟ್ಟುಪಾಡು; ಬಿಗಿಯಾದ ನಿಯಮ.—ಅಂಕೆ: ತಮ್ಮ ನಾಡನ್ನು ಒಂದು ಬಿಗಿಗಟ್ಟನಲ್ಲಿ ಇಟ್ಟುಕೊಂಡು ಬಾಳುತ್ತಿದ್ದ ತಮಿಳರ ಬೇರಿಗೇ ಬಿಸಿನೀರನ್ನು ಎರೆದು . . . ಜಯಭೇರಿಗಳನ್ನು ಬಾರಿಸಿದರು (ಸಕಥ. ೦೬೨). ಬಿಕ್ಕಟ್ಟು: ೨. ಭದ್ರವಾದ ಕಟ್ಟು.—ಬಂಧನ: ಬಿಕ್ಕಟ್ಟಿದು ಬಿಕ್ಕಟ್ಟು ಚೌಕಟ್ಟಿನ ಗುಟ್ಟು (ಕರಳು. ೪೦೩-೦೨). ೩. ಕಷ್ಟ; ತೊಂದರೆ: ಆ ಗುಡ್ಡದ ಮೇಲಿಂದ ಆಚೆ ಕಡೆಗೆ ಹೋಗಬೇಕಾದರೆ, ಜೀವಕ್ಕೆ ಅಪಾಯಪಡಿಸುವಂಥ ಬಿಕ್ಕಟ್ಟಿನ ಘಟ್ಟಗಳುಂಟು (ಮುಂಬಯಿ. ೩-೦೬); ಹರಿಕುಲಿಶನಿಗೆ ಬಿಕ್ಕಟ್ಟಿನ ಪರಿಸ್ಥಿತಿ ಯೊದಗಿತು (ಕುಹಕ. ೦೦೦). ೪. ಸಂದಿಗ್ಧಪರಿಸ್ಥಿತಿ; ಇಕ್ಕಟ್ಟು: ಚಾರುಪೊನ್ನೇರನು . . . ರಾಷ್ಟ್ರಕೂಟಸಾಮ್ರಾಜ್ಯದಲ್ಲಿ ಬಿಕ್ಕಟ್ಟು ತಲೆದೋರಿದಾಗ ತನ್ನ ನಿಷ್ಠೆಯನ್ನು ತಲಕಾಡುಗಂಗರ ಕಡೆಗೆ ಸರಿಸಿದನು (ಪೊನ್ನಂ. ೨೬); ಇಂಥ ಬಿಕ್ಕಟ್ಟಿನಲ್ಲಿ ಧೈರ್ಯದಿಂದ ನೀವು ಇದ್ದೀರಲ್ಲ! (ಶಿದಾಹ. ೬೩). ಬಿಗಿಕಟ್ಟು: ೫. ಸಾಹಿತ್ಯಿಕರಚನೆಗಳಲ್ಲಿ ಇರುವ ಗಾಢವಾದ ಸಂಬಂಧ, — ಹೊಂದಾಣಿಕೆ: ಇವುಗಳಲ್ಲಿ ಬಿಗಿಕಟ್ಟೂ ಇಲ್ಲ, ಹೊಸತನವೂ ಇಲ್ಲ (ಹಾಹಿ. ೬): ಈ ಪ್ರಸ್ತಾರದ ಮತ್ತು ಲಯದ ಬಿಗಿಕಟ್ಟಿಲ್ಲದೆ ಕೀರ್ತನೆಗಳು ಸಹಜಮನೋಹರವಾದ ಗೇಯತೆಯನ್ನು ಪಡೆದುದು ಹರಿದಾಸಸಾಹಿತ್ಯದ ವೈಶಿಷ್ಟ್ಯವೆಂದು ತೋರುತ್ತದೆ (ಕಹಾ. ೨೪೬). [ಬಿಗಿ₂ + ಕಟ್ಟು₁. / ಮರಾ. ಬಕಟ]

**ಬಿಗಿಗೊಳಿಸು** (ಕ್ರಿ). ೧. ಎಳೆದು ಭದ್ರಗೊಳಿಸು; ಬಿಗಿಮಾಡು: ನಿರೂಪಣೆ . . . ಒಂದು ಎಳೆಯಿಂದ ಇನ್ನೊಂದು ಎಳೆಯನ್ನು ಬಿಗಿಗೊಳಿಸುವ ಹೆಣಿಕೆಯ ರೀತಿಯಂತೆ . . . ನಡೆಯುತ್ತದೆ (ಹೊಸಕ. ೨೪೨). ೨. ಬಂದೋಬಸ್ತು ಮಾಡು; ಕಟ್ಟುನಿಟ್ಟಾಗಿರುವಂತೆ ಮಾಡು: ಸಿಂಹಾಸನವನ್ನೇರಿದ ಕೂಡಲೇ ಆಡಳಿತವನ್ನು ಬಿಗಿಗೊಳಿಸಿ ಸಮಸ್ತ ಅಧಿಕಾರವನ್ನು ತನ್ನಲ್ಲಿ ಕೇಂದ್ರೀಕರಿಸಿಕೊಂಡನು (ಕೃರೀತ. ,೪). [ಬಿಗಿ₂ + ಕೊಳ್₁ + — ಇಸು₃]

**ಬಿಗಿತ** (ನಾ). ೧. ಕಟ್ಟಿದುದು; ಕಟ್ಟು: ಬೇಕಾದಾಗ ಸುಲಭವಾಗಿ ಈ ಬಿಗಿತವನ್ನು ಸಡಿಲಿಸಿ ಬೇರೆ ಪತ್ರಗಳನ್ನು . . . ಸೇರಿಸಿಕೊಳ್ಳಲು ಬರುವಂತೆ ಇರುತ್ತದೆ (ಗ್ರಂಥಾಂ. ೪೪). ೨. ಗಟ್ಟಿ; ಭದ್ರ: ಕರವು(ವು)ಡಿ ಸಾಸಿವೆ ಲೋಯಿಸರದ ತಿರುಳೆಂಬವನಿಟ್ಟಡಸಿ ಬಿಗಿತಾಗಿ ಕಟ್ಟಲ್ ನಿಡುಪೊಂಗುದಿದಿರ್ದ ಕೆಯ್ಗ ಭಂಗಂಬಡುಗುಂ (ಕಾಳಿಕಾಹ. ೯-೩೩). ೩. ಗಟ್ಟಿಯಾಗಿ ಕಟ್ಟುವಿಕೆ; ಭದ್ರಗೊಳಿಸುವಿಕೆ: ಬಿಗಿತಂ ಬಿಗಿತಂಗಳ್ (ಶಬ್ದಾ.ಸು. ೩೩೪ ಕ್ರಿಯೋ); ಉಪನಾಹಃ, ನಿಬಂಧನಂ—೨ ವೀಣೆಯ ತಂತಿ ಕಟ್ಟುವ ಬಾಯಿಗೂ ಬಿರಡೆಗಳಿಗೂ ಕಟ್ಟಿನ ಬಿಗಿತಕ್ಕೂ ಹೆಸರುಗಳು (ನಿಘಂಟು. ೩೯). ೪. ಎಳೆತ; ಸೆಳೆತ: ಬೆನ್ನು ಬಿಗಿತದಿಂದ ಯಾವ ಕೆಲಸವನ್ನೂ ಮಾಡಲಾಗಲಿಲ್ಲ (ಅದೇ). ೫. ಹೊಡೆತ; ಪೆಟ್ಟು; ಏಟು: ಅವರು ಎರಡು ಬಿಗಿತ ಬಿಗಿದು ಹುಡುಗನನ್ನು ಕರೆತಂದರು (ಅದೇ). [ಬಿಗಿ₁ + — ತ₂]

**ಬಿಗಿತರ್ಬು** (ಕ್ರಿ). ಗಾಢವಾಗಿ ಆಲಿಂಗಿಸು; ಬಿಗಿಯಾಗಿ ಅಪ್ಪು: ತೊಳ್ತಾಕಿ ಬಿಗಿತರ್ಬಿ ಮಗುವನೊತ್ತಿಟ್ಟದರ ಬಾಯಲ್ಲಿ ಸೇರ್ದ ಮಣ್ ಗಟ್ಟಿಯಂ ತೆಗೆವಂತೆ (ಶಾಂಪು. ೩-೪೬). [ಬಿಗಿ₁+ತರ್ಬು₁ (<ತಬ್ಬು₁)]

**ಬಿಗಿನೇಣು** (ನಾ). ಕಟ್ಟುವ ಹಗ್ಗ: ವಿಗಡದ ಪುಲಿ ಕರಡಿಗಳ ಬಿಗಿನೇಣ ಪಱಿದು ಕಾದುವ ವೀರರ ಮೊತ್ತ ಸೊಗಸ ಬೀಱುದುದೋಲಗದೆ (ಶಂಪಾ. ೨೦-೯೬). [ಬಿಗಿ₁ + ನೇಣು (< ನೇಣ್₁)]

**ಬಿಗಿಪಡಿಸು** (ಕ್ರಿ). ಭದ್ರಗೊಳಿಸು: ಜೋಡಿಸಿದ ಮೊಳೆಗಳ ಕರಡುಪ್ರತಿಯನ್ನು ತಗೆದು . . . ಮುದ್ರಣಕ್ಕೆ ಅಣಿ ಮಾಡುವಂತೆ ಚೇಸ್‌ನಲ್ಲಿ ಬಿಗಿಪಡಿಸಬೇಕು (ಮುದ್ರಣ. ೫೬). [ಬಿಗಿ₂ + ಪಡು₁ + — ಇಸು₃]

**ಬಿಗಿಪು** (ನಾ). ೧. ಬಂಧನ; ಬಿಗಿತ; ಕಟ್ಟು: ಕರ್ಮಬಂಧದ ಬಿಗಿಪೊಯ್ಯನೊಯ್ಯನೆ ಸಡಿಲ್ದಿರೆ (ಅಂತ್ಯ. ೬-೭); ಪದಮಲರ್ಗಳಂದದಿಂ ಬಂಧದ ಬಿಗಿಪಿನೊಳೊಂದಿ ನಿಲೆ ಸಮುಜ್ವಳಕಾಂತಿ (ಪರ್ವಪು. ೦-೦೦); ತೋಳ ಬಿಗಿಪ್ಪೊಂದಿರೆ ಕೋಡುತಳಂಗಳಂ ಸಮಂತೊಡನೊಡನಪ್ಪಿದರ್ ಭರದ ಕಾಳಸಯಂತಿರೆ ತಮ್ಮೊಳಿರ್ವರುಂ (ಕಾವ್ಯಸಾ. ೬೩೬). ೨. ದೃಢತೆ; ದಾರ್ಢ್ಯ; ಗಟ್ಟಿತನ: ಬಿಗಿಪು ಸಡಿಲ್ದು ಪಲ್ಗಳಿಸುಂ ಚಲಿಸುತ್ತಿದೆ ಮೆಯ್ಯ ನುಣ್ಪೊವಲ್ . . . ಸುರ್ಕುತಿದೆ (ಶಶಿ. ೬-೨೪೪). ೩. ಬಿರುಸು; ಕರ್ಕಶತೆ: ಬಿಗಿಪಿಂ ಬಿಣ್ಪೊಲೆ ಪೊಂಗಿ ಪೊಣ್ಮಿದೊಡಂ (ಶಶಿ. ೬-೨೩೬). [ಬಿಗಿ₁ + — ಪು₂]

**ಬಿಗಿಮುಷ್ಟಿ** (ನಾ). (ಆಲಂ) ಭದ್ರವಾದ ಹಿಡಿತ; ಬಿಗಿಯಾದ ಹತೋಟಿ: ಈ ಬಿಗಿಮುಷ್ಟಿಯಲ್ಲಿರುವ ಮೈಸೂರು ಭದ್ರವಾಗಿಯೇ ಉಳಿಯುವುದು (ಚಾಂಕಿ. ೦೪). [ಬಿಗಿ₂ + ಮುಷ್ಟಿ₂]

**ಬಿಗಿಮೊಗ** (ನಾ). ಬಿಗಿದುಕೊಂಡಿರುವ ಮುಖ: ಅರುಣತವೆತ್ತ ಮೆಯ್ಯುಗಿ ಮೊಗು . . . ಚಿತ್ರಿತವೇತ್ರದಂಡವೊಪ್ಪಿರೆ ಸಹವಾಸಿಗಳ್ ತಳರ್ದರಾತ್ತ ನಿಯೋಗನಿವಿಷ್ಟನಿಶ್ಚಿತರ್ (ಶಾಂತೀಶ್ವ. ೦೩-೯೯). [ಬಿಗಿ₁ + ಮೊಗ]

**ಬಿಗಿಮೊಳೆ** (ನಾ). ೧. (ಕೀಲನ್ನು) ಭದ್ರಪಡಿಸುವ ಮೊಳೆ.—ಆಣಿ: ಗುಡಿಯೊಡೆಯುಂಗೆ ಕಂಭವೊಂದು ಬಿಗಿಮೊಳೆಯೆಂಟು ಕಂಭಕ್ಕೆ ಕಟ್ಟಿದ ಆಧಾರದಾರವೈದು (ಮನಸುಗುಂ. ೪. ೩೩೦-೩೭). ೨. "ಹಡಗುಕಟ್ಟಡದಲ್ಲಿ ಉಪಯೋಗಿಸುವ ಒಂದು ತೆರದ ಬಿಗಿಮೊಳೆ" (Dump. ಇಂಕಾ). [ಬಿಗಿ₁ + ಮೊಳೆ₂]

**ಬಿಗಿಯಪ್ಪು** (ಕ್ರಿ). ಗಾಢವಾಗಿ ಆಲಿಂಗಿಸು. _ ತಬ್ಬು : ಕಳಿದುವು ಮೆಯ್ಯ ಸುಯ್ಯ ಪದವೆಂಕೆಗಳಂ ಬಿಗಿಯಪ್ಪಿದಪ್ಪುಗಳ್ (ಶಂಶಚಾ. ೩-೨೬); ಬಾ ಸುತನೆಯನುತ ತೆಗೆದು ಬಿಗಿಯಪ್ಪಿ (ಕದ್ರಣಾ. ೩-೦೬) ; ಹಸುಳೆ ಯದಟನ ನುಡಿಯ ಕೇಳಿದು ನಸುನಗುತ ಧರ್ಮಜನು ಘನಪೌರುಷವು ನಿನಗುಂಟೆಂದು ಕಂದನ ತೆಗೆದು ಬಿಗಿಯಪ್ಪಿ (ಕುಮ್ಯಾರ್ದ್ರೋ. ೯-೩೬).

**ಬಿಗಿಯಪ್ಪಿಕೊಳ್** = ಬಿಗಿಯಪ್ಪು : ನೀಜನ ಕರ ಬಿಗಿಯಪ್ಪಿಕೊಂಟೆನು ದೆಪ್ಪಂತೆ (ಕಂಷಾ. ೯-೧೦೬). [ಬಿಗಿ$_1$ + ಅಪ್ಪು$_1$]

**ಬಿಗಿಯಿಸು**, ಬಿಗಿಸು (ಕ್ರಿ). ೧. ಕಟ್ಟು ; ಬಂಧಿಸು : ತ್ರಿಗುಣಿಸಿ ನಯನವಿಭೂಷಾಂಶುಗಳಲಗಿನ ರುಚಿಯನಲಗನೆರಡುಂ ಕೈಯೊಳ್ ತ್ರಿಗುಣಿಸಿ ಚಿತ್ರಂಬಡೆದಳ್ ಬಿಗಿಯೆ ಕುಚಂ ಬಿಗಿಯಿಪಂತು ಕಂತುಗೆ ದೋಣೆಯಂ (ಜಗು. ೩-೧೬). **ಬಿಗಿಸು** : ೨. ಕಟ್ಟಿಸು ; ಬಂಧಿಸು ವಂತೆ ಮಾಡು : ಕಳ್ಳರಿರ್ಕ್ಕೆಗಳಂ ಬಿಗಿಸಿ ತೊದಲಂ ನುಡಿಸಿ ಸುಳ್ಳು ನಾಲಗೆಯು ನಡುಗಿಸುತರವನೆರಗುಂ (ಖಾಚರಿ. ೭೭-೦೯೦). ೩. ನಿರ್ಮಿಸು ; ರಚಿಸು ; ಕಲ್ಪಿಸು : ನಗರದುಪಕಂಠದಲಿ ಕೋಟೆಯ ಬಿಗಿದು ಬಿಡಿಸಿದನಧ್ವರಕೆ ಸಲುವಗಣಿತಾಖಿಳವಸ್ತುಗಳ ನೆರಹಿದನು ನರನಾಥ (ಕೊರಾ. ೦-೭-೯). ೪. ಕುದುರೆಗೆ ತಂಗುಪಟ್ಟಿಯನ್ನು ಕಟ್ಟಿ ಸಿದ್ಧಪಡಿಸು : ಚಂದ್ರಹಾಸಂ . . . ಬಳಿಕ ಬಿಗಿಸಿ ನಿಜವಾಜಿಯಂ ಬಂದಡರ್ದನು (ಕೈಜಾ. ೩೦-೯೨). ೫. ಹೊಡೆಸು ; ಥಳಿಸುವಂತೆ ಮಾಡು : ಅವನಿಗೆ ನಾಲ್ಕು ಬಿಗಿಸಿದರೆ ಸರಿ ಹೋಗುತ್ತಾನೆ (ಕೂಉ).

**ಬಿಗಿಸಿಕೊಳ್ಳು** = ೧. ಕಟ್ಟಿಸಿಕೊಳ್ಳು : ಕಾಳಗದೊಳೆಲ್ಲರನಿಕ್ಕಿ ಪಟ್ಟುವ ಬಿಗಿಸಿಕೊಂಡವರಲ್ಲವೇ (ಕುಮ್ಯಾ. ೬-೯೯). ೨. ಹೊಡೆಸಿಕೊಳ್ಳು; ಪೆಟ್ಟು ತಿನ್ನು : ನೀನು ಹೀಗೆ ಒಂದೇ ಸಮನೆ ಹಠ ಹಿಡಿದರೆ ಚೆನ್ನಾಗಿ ಬಿಗಿಸಿಕೊಳ್ಳುತ್ತೀಯೇ (ಕೂಉ). [ಬಿಗಿ$_1$ + —ಇಸು$_1$]

**ಬಿಗಿಯುಡುಪು** (ನಾ). ಸಡಿಲವಾಗಿಲ್ಲದಿರುವ ತೊಡುಗೆ ; ಮೈಗೆ ಅಂಟಿಕೊಂಡಿರುವ ಉಡುಗೆ : ಬೇಸಿಗೆಯಲ್ಲಿ ಬಿಗಿಯುಡುಪುಗಳನ್ನು ಧರಿಸಿದರೆ ತುಂಬ ಸೆಕೆಯಾಗುತ್ತದೆ (ಕೂಉ). [ಬಿಗಿ$_1$ + ಉಡುಪು]

**ಬಿಗಿಯುಡೆ** (ನಾ). = ಬಿಗಿಯುಡುಪು : ಅವಳು . . . ರೇಷ್ಮೆಯ ಬಿಗಿಯುಡೆಯನ್ನು ಧರಿಸಿದ್ದಳು (ಕ್ಷಪಕು. ೯೨೦). [ಬಿಗಿ$_1$ + ಉಡೆ$_1$]

**ಬಿಗಿವಡು** (ಕ್ರಿ). ಕಟ್ಟಲ್ಪಡು ; ಜೋಡಣೆಯಾಗು : ಬಲಗಡೆಗಾಗಿ ಬಾಗಿ ಬಿಗಿವಟ್ಟುಜಟ್ ಬಟ್ಟಿತೆಂಬಿನವುಲ್ಲರ ಸರಂಗಳೊತ್ತರಿಸೆ (ಅಳಾ. ೩-೭). [ಬಿಗಿ$_2$ + ಪಡು$_1$]

**ಬಿಗಿವಡೆ** (ಕ್ರಿ). ೧. ಬಂಧನಕ್ಕೊಳಗಾಗು ; ಸೆರೆ ಸಿಕ್ಕು ; ಕಟ್ಟುಬೀಳು : ಅಡವಿಯಲಿ ಫಣಿಭೋಗದಲಿ ಬಿಗಿವಡೆದು ಬಳಲಿದ ಭೀಮಸೇನನ ಬಿಡಿಸಿದನು ಯಮಸೂನು ಧರ್ಮಕಥಾಪ್ರಸಂಗದಲಿ (ಕುಮ್ಯಾ. ೦೬ ಸೂಚನೆ); ರಾವಣಸುತನಿನುಜಭವಾಸ್ತ್ರದಲಿ ಬಿಗಿವಡೆದನಾ ಹನುಮ (ಕೊರಾ. ೩-೭ ಸೂಚನೆ). ೨. ಅಳವಡಿಕೆಯಾಗು ; ಹೊಂದಿಕೊಂಡಿರು : ಮುಂಗುರುಳೊಳು ಬಿಗಿವಡೆದಿಹ ಮಣಿಯ ಕುಚ್ಚುಗಳ . . . ಕಡುಚೆಲುವೆಯರೆಸೆದಿಹರು (ಕಂಷಾ. ೬-೦೦೯). ೩. ಉಬ್ಬು; ಗರ್ವಿಸು : ದೊರೆಕೊಂಡ ಪೊಸ ಸೊಗದ ಸುಗ್ಗಿಯ ಸುರ್ಗಿನೊಳ್ ಬಿಗಿವಡೆದಗ್ಗದ ಸಗ್ಗದ ಜೋಸೆಯ ರೊಂದು ನೆರವಿಯೊಳ್ ದೇಸಿಯಿಂ ಬೆರೆದಾಗಳುಂ ಬನದಿಸುತ್ತ (ಶಾಮಾಶ್ಮ. ೦೩೭-೦೭). ೪. ಕಠಿಣವಾಗು; ದೃಢವಾಗು : ಸತ್ಕೋಮಲಾಂಗಿಯ ಪೇರುರದಿ ಹೇಮಾಬ್ಜಮುಕುಳಸ್ತನ ಬಿಗಿವಡೆದಿರೆ ಭ್ರಾಮಕ ಗೊಂಡು ವೀಕ್ಷಿಸಿದ (ವೋಹಚ. ೦೭-೩೭). [ಬಿಗಿ$_2$ + ಪಡೆ$_1$]

**ಬಿಗಿವಾತು** (ನಾ). ಗಂಭೀರವಾದ ಮಾತು : ಬಿಗಿವಾತು ಮೆಲ್ವಾತು ನಗೆವಾತು . . . ಸೊಗವಾತುಗಳಿಂದ ಸೊಗಸ ಕಿವಿಗೆ ಸೂಸುವುದು (ಅಳಾ. ೬-೦೩೭ ಸಾಂಗತ್ಯ). [ಬಿಗಿ$_2$ + ಮಾತು$_1$]

**ಬಿಗಿವಿಡಿ**, ಬಿಗಿಹಿಡಿ (ಕ್ರಿ). ೧. ತಡೆ; ನಿಗ್ರಹಿಸು; ಹತೋಟಿಯಲ್ಲಿಟ್ಟುಕೊಳ್ಳು : ನೀನದಕವಿರವೇಟ್ಯುಂ ; ಸಿಡಿಲ್ದುಗುವ ಸೊರ್ಕನುಡಿ ಬಿಗಿವಿಡಿಯವೇಟ್ಯುಂ (ಐಕ್ಯಕ್ರ. ೦೬-೩೫೨). **ಬಿಗಿಹಿಡಿ** : ೧. ಪರರ ರೀತಿಗೆ ಹರಿವ ಮನವನ್ನು ಬಿಗಿಹಿಡಿದು . . . ವರಸನಾತನಧರ್ಮವೇ ಮಾನ್ಯವೆಂದದನು ಧರಿಸಿ ತರೆಯಲ್ಲಿ ಮರೆಯದೆ ಪೂರ್ವಿಕರನು (ಕಷ್ಣು. ೦೩-೪) ; ಅವಳು ಉಕ್ಕಿ ಬರುತ್ತಿದ್ದ ನಗುವನ್ನು ಪ್ರಯಾಸದಿಂದ ಬಿಗಿಹಿಡಿದಳು (ಕ್ಷಪಕು. ೩೨೨). ೨. ಗಟ್ಟಿಯಾಗಿ ಹಿಡಿದುಕೊಳ್ಳು : ಭದ್ರವಾಗಿ ಹಿಡಿ : ಈ ಕುದುರೆಯೇರಿ, ಲಗಾಮು ಬಿಗಿಹಿಡಿದು ಸವಾರಿ ಮಾಡುವುದಷ್ಟು ಸುಲಭವಲ್ಲ (ಕಂಕು. ೩೦-೨೦).

**ಬಿಗಿ ಹಿಡಿದುಕೊಳ್ಳು** = ಅಂಕೆಯಲ್ಲಿಡು; ಹಿಡಿತಕ್ಕೆ ತರು : ಅವಳು . . . ಮನಸ್ಸನ್ನು ಬಿಗಿ ಹಿಡಿದುಕೊಂಡು ರೋಗಿಯ ಪರೀಕ್ಷೆ ಮಾಡ ಹೊರಟಳು (ಕುಂಕುಮ. ೬೯). [ಬಿಗಿ$_1$ + ಪಿಡಿ$_1$]

**ಬಿಗಿವೊಂದು** (ಕ್ರಿ). ಬಿಗಿಕಟ್ಟಿನಿಂದ ಕೂಡಿರು ; ಬಿಗಿಯಾದ ಬಂಧವನ್ನು ಹೊಂದು : ಅಚ್ಚಗನ್ನಡಂ ಬಿಗಿವೊಂದಿರೆ ಕಟ್ಟಿಗರ ಕಾವನೊಲವಿಂದೊರೆದೆಂ (ಕಮ್ಮಕಾ. ೦೬). [ಬಿಗಿ$_2$ + ಒಂದು$_1$]

**ಬಿಗಿಸು** 'ಬಿಗಿಯಿಸು' ನೋ.

**ಬಿಗಿಹಿಡಿ** 'ಬಿಗಿವಿಡಿ' ನೋ.

**ಬಿಗು** 'ಬಗುವು' ನೋ.

**ಬಿಗುಗಟ್ಟು** (ನಾ). ಬಲವಾದ ಕಟ್ಟು; ಬಿಗಿಯಾದ ಬಂಧನ : ಜಗದ ಜಂಜಡದ ಕವಡುಮಾಯೆಯ ಬಿಗುಗಟ್ಟಂ ಕಟ್ಟುವಡೆದಾಂ . . . ಬಲ್ಲಿದರ ನೆರೆಯ ಮಾಜಿಯು ನೆರವಂ ಪಾರುತುಮಿರ್ಪೊಡಾದೆಂ (ರಾಷ್ಟ್ರಾಶ್ಮ. ೧೧೯-೬). 'ಬಿಗಿಗಟ್ಟು' ಪರಾ. [ಬಿಗು (<ಬಿಗುವು) + ಕಟ್ಟು$_1$]

**ಬಿಗುಡು** (ನಾ). ಬೇನೆ ; ನೋವು : ಉಪ್ಪುನೀರಂ ದಿನಂಪ್ರತಿ ಪಾಕತನದಿಂದ ತಪ್ಪದೇ ಹೀರಿದಾ ತಲೆಬಿಗುಡು ಗಗನದೊಳಗೊಪ್ಪದಿಂ ಪರಿವ ದೇವಾಪಗೆಯ ಮಧುರತರವಾರಿಯ ಹೀರಿ ಹೀರಿ ಚಪ್ಪರಿಸಿವಲ್ಲದೇ ಹೋಗದೆಂದೆನುತುಮಾ ನೆಪ್ಪಿಂಗೆ ತದ್ವನಧಿಯಿಂದ ವಡಬಾಗ್ನಿಯೇ ಉಪ್ಪರಿಸಿ ನೆಗೆವಂತೆ ಉಷ್ಣಕಿರಣಂ ಮೂಡಿ ನೆಗೆದುದಂಬರತಳಕ್ಕೆ (ಸಮ್ಮಕಾ. ೦೨-೯). 'ಬಿಗಡ್ಡ' ಪರಾ. [ಬಿಗು (< ಬಿಗುವು) + — ಡು$_1$]

**ಬಿಗುನಡೆ** (ನಾ). ಕುದುರೆಯ ಒಂದು ಬಗೆಯ ನಡಗೆ : "ರೇಚಿತಂ— ಬಿಗುನಡೆ, ಜಾರುನಡಿಕೆ, ನೀಡುನಡಿಕೆ" (ಸಿದ್ಧಾಂ೬. ೨೫೦). [ಬಿಗು$_1$+ನಡೆ$_1$]

**ಬಿಗುಪು**, ಬಿಗುಹು (ನಾ). ೧. ಭದ್ರವಾದ ಜೋಡಣೆ ; ಬಿಗಿಯಾದ ಸೇರುವೆ : ಕೂಪಕಂಭಂ ಮುಜಿಯೆ ಬಂಧಂ ಬಿರಿಯೆ ರಣಂ ಮುಜಿಯೆ ಕೀಲ್ ಕಟಲೆ ಬಿಗುಪು ಬಿಟಲೆ . . . ನಾವಿಕಾಜನವಿರ್ದೆಗೆಟ್ಟು ಬಾಯ್ಬಿಟ್ಟು ಸುಯ್ದು (ಕಂಷಾ. ೯-೦೯ ವ); ಇಸೆ ಬಗೆಯನುರ್ಚಿ ಧೈರ್ಯದ ಬೆಸುಗೆಯ ಬಿಗುಪಂ ಸಡಿಲ್ಚಿ (ಕೃಷಾ. ೨೯-೨೦). ೨. ದೃಢತೆ ; ಬಿರುಸುತನ : ಭವಪಾಶದ ಪುದಿದ ಬಲ್ಕಟ್ಟು ಸಡಿಲುವ ತೆಜದಿ ಸಡಿಲಲಂಗದ ಬಿಗುಪು ಗರ್ಭಿಣಿಗೆ ನವಮಾಸ ಪೂರ್ಣವಾದುದು (ಶಾಚಂ. ೩-೫೬). ೩. ಶಿಸ್ತು : ಕತ್ತಿತ್ತಿಕೊಂಡು ಸಿಪಾಯಿಗಳಂತೆ ಬಿಗುಪಿನಿಂದ ನಡೆಯುತ್ತಿದ್ದರು (ಕಕ್ಕಕ. ೦೯). ೪. ಗರ್ವ; ಠೀವಿ; ದರ್ಪ : ದುರ್ಬಲಂ ನಿನ್ನ ಒಳ್ಪೊಜಿಪು ಇಲ್ಲಿ. ಏತಕೆನೆ, ಬೇರಿಕಾರಯ್ಕೆಯಿಲ್ಲದ ಬಜಿಬಗೆಯು ಬಿಗುಪೊಂದೆ ವ್ಯರ್ಥಂ (ಐಕ್ಯಕ್ರ. ೩೯-೦೦೭೩). ೫. ರಭಸ; ಜೋರು : ಬಲ್ಲು ಲೇಸು ಗೆಲವರಿದೆಂಬಂತೆ ಬಿಗುಪು ಲೇಸು ಕಳನ ಮೇಗಿರಿದೆಂಬಂತೆ (ಧರ್ಮಾಮೃ. ೬-೬೦); ಕಾಳಗವೇ ಜೀವಾಳವಾಗಿರುವ ಬಯಲಾಟದಲ್ಲಿ, ಬಯಲಿನಲ್ಲಿ ಕುಳಿತು, ಬಡಿದು ರೂಢಿಯಾದ ಈ ವಾದ್ಯಕಾರರ ಕೈಗೆ ಬಿಗುಪು ಹೆಚ್ಚು ; ಅಬ್ಬರ ಹೆಚ್ಚು (ಯಕ್ಷಂ. ೯೦). **ಬಿಗುಹು** : ೧. ವಾನರರು ಹೊಜಿಲೆಡೆಗೆಡೆಗೆ ಜಜಿವಾ ಮಣ್ಣ ಬೆಟ್ಟಂಗಳ ಬಿಗುಹದೆನಿತು

(ಜಸ್ತು. ೦೯-೭೦) : ನಾಗಂಗಳ ಬಿಗುಹು ಸಡಿಲಿತು ಧರಣಿ ನೆಗ್ಗಿತು (ಕುಮ್ಮಾಮ್ರೂ. ೬-೫೫) : ಉಗುರುಸೋಂಕಿನಲಬುಜಜಾಂಡದ ಬಿಗುಹು ಬಿಡುವುದು (ತೊರಣಾ. ೬-೯-೧೦). ೨. ಆರು ಮರುಳಾಗರು ವಧೂಟಿಯ ತೋರವೊಲೆಗಳ ಬಿಗುಹನೀಕ್ಷಿಸಿ (ಜಸ್ತು. ೪೦-೬); ತಳಿತ ರೋಮದ ತೋಳ ಬಿಗುಹಿನ ಕಲಿಗಳಿದ್ದುದು ಕಲಿತ ಘನ ರೌದ್ರಾತಿರೇಕದಲಿ (ತೊರಣಾ. ೬-೦೦-೬). ೩. ಪಿಸುಣಿಗರ ಒಂದು ವರಿ ವಾರವ ದರ್ಬಾರಿನ ಸುತ್ತಲೂ ಅದರ ಬಿಗುಹನ್ನು ಶಿಥಿಲ ಮಾಡಲು ಹೋರಾಡುತ್ತಿದೆ (ತೊರಣಾ. ೬೩). ೪. ಬಿಗುಹಿನೊಳ್ ಕಲಕಲಬರಂ. . . ಮೃದಗುಹಿನೊಳ್ ಕಲಕಲಬರಂ ಮಾರುಳ್ಮಾಡುತೀಶ್ವರನಡಿಯಿಡುತ್ತಿರ್ದನು (ಕಂತು. ೦೯-೬೫) ; ಬಿಗುಹ ಬಿಡಿಸುವೆನಿಂದಿನಾಜಿಯೆ ೞಳ್ನೇಸು ಮೃದಗೆಯ ದಿರು (ಕುರಂ. ೬೩-೭೯). ೫. ಕರತಳದ ಬಿಗುಹಿಗೆ ಕುಲಮಹೀಧರ ಕಳಲಿದವು (ತೊರಣಾ. ೬-೩-೦೩). ೬. ಬಿಗುಮಾನ ; ಬಿಂಕ : ಮುಸುಡ ಬಿಗುಹಿನ ಸೆಳೆದಡಾಯುಧ ಹೊಸಪರಿಯ ಬಿರುದುಗಳ ಗಜರಥವಿಸರ ಮಧ್ಯದಲೆಂಟುಸಾವಿರರಥಿಕರೌಂಕಿದರು (ಕುಮ್ಮಾಮ್ರೂ. ೦-೩೬); ದೇಸಾಯ ಕೊಪ್ಪರೇ ಕಿಟ್ಟಿಯನ್ನು ಬಿಗುಹಿನ ಆದರದಿಂದ ಸ್ವಾಗತಿಸಿದರು (ಗಂಘೂಟು. ೯). ೭. ಜೊತೆ ; ಸಂಬಂಧ : ಹೊಗಳುಭಟ್ಟರ ಸಾಲ ಕೈದೀವಿಗೆಯ ಕಹಳಾರವದ ಅಗ್ಗಿಯ ಬಿಗುಹಿನಲಿ ಕುರುರಾಯ ಬಂದನು ರಾಜಮಂದಿರಕೆ (ಕುಮ್ಮಾ. ೫-೩). ೮. ಸೆಳೆತ ; ಹಿಡಿತ ; ವಶ : ಮೇಲುಸುರ ಬಿಕ್ಕುಳಿನ ಬಿಗುಹಿನ ತಾಳಿಗೆಯ . . . ನರನಾಥ ತಗೆದಪ್ಪಿದನು ಫಲುಗುಣನ (ಕುಮ್ಮಾ. ೦೬-೦); ಅನ್ಯವರು ಮೃದಗವರುಲ್ಕಾಪಾತಭೀತಿಯ ಬಿಗುಹಿನಲಿ ಬಹಳಪ್ರತಾಪವದೆಂತೂ ದಶರಥನ (ತೊರಣಾ. ೦-೩-೨೩); ಶೋಕದ ಬಿಗುಹಿನಲಿ ಚಂದಾದ ಮಾತೆಯ ನಗೆಮೊಗದಿ ನಗಿಸುತ್ತಲೊಡಬಡಿಸಿದನು ಶೋಕವನು (ಕೃಷ್ಣಾ. ೬-೨೬). ೯. ಕುದುರೆಯ ಜೀನನ್ನು ಬಿಗಿಗೊಳಿಸಲು ಸೊಂಟಕ್ಕೆ ಕಟ್ಟುವ ಪಟ್ಟಿ ; ತಂಗುಪಟ್ಟಿ : ಬಿಗುಹನೇಱ [ಜಾಣಂ. ಬಿಗಿದು ಕಿತ್ತಿ]ಸಿ ಹಯಗಳನು ಚಿಂಬಿಗಳ ಹಮ್ಮಿಪರಾನೆಯಲಿ (ಕಳಕ. ೯-೩೬). ೧೦. ಆಲಿಂಗನ ; ಅಪ್ಪುಗೆ : ಬೆಸುಗೆ ಬಿಗುಹುಳು ಕೊತ್ತುಲಿಗಳ ರುಷದ ಪಸರುವನಱಿಯಬಾರದು ವಿಗಡವಿಟರುಗಳ (ಕುಮ್ಮಾ. ೦೩-೨೫). [ಬಿಗು + — ಪು]

**ಬಿಗುಹೇರು** 'ಬಿಗುವೇಱು' ನೋ.

**ಬಿಗುಹೇಱು**, ಬಿಗುವೇರು, ಬಿಗುಹೇರು, ಬಿಗುಹೇಱು (ಕ್ರಿ). ೧. ಬಿಗಿಯಾಗು ; ಹಿಡಿದುಕೊಳ್ಳು : ಮೊಗುರಿದೋಱ ವಿಾಱ ನವಿರುಂ ಸೆರೆಗಳ್ ಬಿಗುವೇಱ (ಜಳಂ. ೦-೯೯). ೨. ಗಾಢವಾಗು ; ತೀವ್ರವಾಗು : ಅಪ್ಪರದೊರ್ಮೆಗೊರ್ಮೆ ಮತ್ತಂ ಬಿಗುವೇಱುತಿರ್ಪುದು (ಸಂಪ್ರತ್ತು. ೬-೫೯); ಸಂದರ್ಭದೊಳ್ ಕ್ರಮದಿಂ ಬಿಗುವೇಱ ಬರ್ಪುದುಂ ಕ್ರಮದಿಂದಿಱ ತರ್ಪುದುಂ ಸಮಾಧಿಯೆನಿಪುದು (ಅತ್ರಿ. ೯-೦೪). **ಬಿಗುಹೇರು** : ೩. ಕಾಠಿಣ್ಯವನ್ನು ಪಡೆ ; ಕರ್ಕಶತೆಯನ್ನು ಹೊಂದು : ದಿನದಿನಕ್ಕೆ ಬಲಿಯಲುದರಂ ತಂಗಕುಚ ಬಿಗುವೇರಿದವು ಅಕ್ಷಿ ಜಡನಾದವು (ಕರ್ಣಾ. ೦-೯). **ಬಿಗುಹೇರು** : ೨. ಸೇರುವೆಯ ಸನ್ನಾಹದಿಂ ಬಿಗುಹೇರಿ ಮೊಳಗುವ ಮೊಳಗುಗಳ ವಿಸ್ತಾರದಿಂ ಬಲುನೇರದಿಂ ಕಾಣಿಸಿತು ಪರ್ವರಾತ್ರು (ಕಾಶೀ. ೩೩-೯೦). ೪. ಗರ್ವಿಸು ; ಸೊಕ್ಕೇರು : ಬಿಗುಹೇರಿ ದ್ಯುಮಂದಿರು ನಿಲ್ಲಲಾಗದು ಮನಸ್ಸು ತೆಗೆದ ಹಾಗೆಲ್ಲ ಮಾತುಗಳಾಡಲಾಗದೀಪಗೆಯಿಂದ (ಕೃಷ್ಣ. ೯-೯). **ಬಿಗುಹೇಱು** : ೨. ಖತಿ ಬಿಗುಹೇಱ ಹಲುಹಲುದಿನುತ ಕಂಗಳಲುರಿಯನುಗುಳುತ . . . ಜನಪತಿಯ ಹಣೆಯೊಡೆಯಲಿಡ (ಕುಮ್ಮಾ. ೯-೦೯) ; ನಗೆನುಡಿ ನೋಟ ಸರಸಗುಣದೊಳು ಹೊತ್ತುದೆಗೆವಾಗ ಲೊಬ್ಬರೊಬ್ಬರಿಗೆ ಬಿಗುಹೇಱುತಿದ್ದುದು ತವಕ (ಕರಕ. ೦೦-೬೩). ೩. ಬಿಡೆಯವಿಲ್ಲದ ಕುಚ ಬಿಗುಹೇಱ ರತಿಕಾಲವಡೆದ ಪುಷ್ಪಿಣಿಯರೊಪ್ಪಿದರು (ಮೋಹಕ. ೦೯ ೩೨) ; ನೀರೊಳು ನನೆದಾಗ ಬಿಗಿಹೇಱ ವೃತ್ತಾಕಾರದೊಳುನ್ಮುಖವಡೆದು ಬಾರುತರದ ಮೊಲೆ ಮೆಱದುವು ಮೇಲಕ್ಕೆ ಪಾಱುವ ಕೋಕಗಳಂತೆ (ಕಂವಹಿ. ೨೩ ೦೩೨). ೫. ಉಬ್ಬು ; ಉತ್ಸಾಹಿಸು : ಬೊಬ್ಬಿಱತದಲಿ ಬಾಹುವ್ಪಳಿಸಿ ಬಿಗಿಹೇಱದನು ಹನುಮ (ತೊರಣಾ. ೩-೪-೨) ; ತನುವ ಸಗ್ರಂಥದೊಳಿರಿಸಿ ನಿರ್ವಾಣವ ವಿನುತಾತ್ಮ ನೊಡಗೂಡಿ ನೋಡಿ ಜನಿಸಿದ ಸುಖದಿಂದ ಪರಿಪೂರ್ಣನಾಗಿ ಬಿಮ್ಮನೆ ಬಿಗುಹೇಱರ್ದನಾಗ. (ಧರ್ಮ. ೦೯-೬೧). [ಬಿಗು ಪು+ಏಱು$_1$ (< ಏಱ್$_1$)]

**ಬಿಗುಮಾನ** (ನಾ). ಮನಸ್ಸು ಬಿಚ್ಚಿ ಮಾತನಾಡದಿರುವಿಕೆ ; ಅತಿಯಾದ ಸ್ವಾಭಿಮಾನ ; ದೊಡ್ಡಸ್ತಿಕೆ : ಮಾನ್ಯರಾದವರನ್ನು ಬಿಗುಮಾನ ಬಿಟ್ಟು ಗೌರವಿಸಬೇಕು (ಕಕಣ. ೩೩೪) ; ಪ್ರಾಣೇಶಾಚಾರ್ಯರಿಗೆ ಉತ್ತರ ಹೊಳೆಯಿತು. ಆದರೆ ಹೇಳಲು ಬಿಗುಮಾನ (ಸಂಸ್ಕಾರ. ೧೦೩) ; ಸಿರಿವಂತಿಕೆಯ ಬಿಗುಮಾನವೂ ಪರಂಪರಾಗತವಾದುದೇನೋ ! (ಅರೋಠಿ. ೪೩). [ದೇ.॥ ತೆಲು. ಬಿಗುವಾನ, ಬಿಗಿವಾನ]

**ಬಿಗುಮೊಗ** (ನಾ). ಪ್ರಸನ್ನತೆಯಿಲ್ಲದ ಮುಖ ; ಕೋಪದಿಂದ ಕೂಡಿದ ಮುಖ : ಆ ಕಟ್ಟಾನೆ ಘೋರನೆ ಬಿಟ್ಟ ಕಣು ಬಿಗುಮೊಗದಿನಿದಿರಾಯ್ತು (ಹಾಳ್ಕು. ೦೩-೦೩). 'ಬಿಗಿಮೊಗ' ಪರಾ.

[ಬಿಗು (< ಬಿಗುವು) + ಮೊಗ]

**ಬಿಗುರ್$_1$**, ಬಿಗುರು$_1$ (ಕ್ರಿ). ಬಿಗುರ್ತ(ಭೂತಕೃ). ಬಿಗುರ್ತರ್ (ಭೂತನ್ಯೂ). ಬಿಗುರ್ಪ, ಬಿಗುರ್ವ (ವರ್ತಕೃ). ೧. ಹೆದರು ; ಅಂಜು ; ಭಯಪಡು : "ಬಿಗುರ್–ಭಯೇ" (ಶಮಣಿ) ; ತಕ್ಕಿನ ಕುಂಭಸಂಭವ ನದೀಜ ಕೃತವ್ರಮುಖಪ್ರವೀರರಕ್ಕೆಕ್ಕೆಯಿನೊರ್ವರೊರ್ವರೆ ಬಿಗುರ್ತಿರ ದಾಂತು ನಿಶಾತಬಾಣಜಾಲಕ್ಕೆ ಸಿಡಿಲ್ದು ಜೋಲ್ದು ಸೆರಗಂ ಬಗೆದೋಡಿದರ್ (ಪಂಪಭಾ. ೮-೦೦೪): ಕಂಠೀರವರವಮಂ ಕೇಳಲೊಡನೆ ಬೆಳ್ಪಾಗಿ ಬಿಗುರ್ತರ್ ರಾಗಮಳಿದು (ಗಂಧ. ೧-೦೨೬ ವ) ; ದಿಕ್ಕುದಿಕ್ಕಿಂಗೆ ಪರಿದು ಬಲಮನಿತುಂ ಬಱದಾದುದಂ ಕಂಡು ಬೆರ್ಚಿ ಬಿಗುರ್ತರ್ (ಅಳಿ. ೨-೧೧೩). ೨. ಕುಗ್ಗು ; ಕುಸಿ ; ಸೊರಗು : ತಮ್ಮನನಾಗಳಂಬರವರೇಶ್ವರಕನ್ನೆಗೆ ಕಾಪುವೇಟ ತಮ್ಮಮ್ಮನದೊಳ್ ಬಿಗುರ್ತರ್ (ಶಾಂತಿ. ೯-೨) ; ಬಲಭಾರಕ್ಕೆ ಬಿಗುರ್ತರ್ ಸುಯ್ಯೆ ಫಣಿರಾಜಂ (ಪಂಪಭಾ. ೯-೩೪) ; ಇಂತ್ರಸಮಾಸ್ಮವ್ಯಥೆಯಿಂ ಬಿಗುರ್ತಬಲೆ ಮೆಯ್ಯಿಕ್ಕಿರ್ದಳಾ ಶಯ್ಯೆಯೊಳ್ (ಕುಸುಮ. ೦೩-೧೦೬). ೩. ಗರ್ವಿಸು ; ಸೊಕ್ಕು ; ಕೊಬ್ಬು : ಬಿಗುರ್ತೀ ಕೌರವರ್ ಕೂಡೆ ನೂರ್ವರುಮಂ ಕೊಲ್ವೆಂ (ಪಂಪಭಾ. ೭-೮೩) ; ಪಿರಿದೊಂದಜ್ಞಾನದಿಂ ಯೌವನವಿಕಳತೆ ಮೈದೋಱ . . . ತತ್ಕರಣಕ್ಕಾಳಾಗಿ ಹಾಳಾಗುತೆ ಬಱದೊಱವೋದೆಂ ಬಳಲ್ದೆಂ ಬಿಗುರ್ತೆಂ (ರನ್ನಕ. ೩). ೪. ಎದುರು ನಿಲ್ಲು ; ವಿರೋಧವನ್ನು ವ್ಯಕ್ತಪಡಿಸು : ವಿರೋಧಿಸು : ಚಕ್ರಿಗೆ ಬಿಗುರ್ವ ಮಂಡಲಮೊಳವೇ (ಪರ್ಶ್ವ. ೯-೬೯); ಬಿಗುರ್ತೆಯ್ತಂದೊಡಂ ಕೋಪದಿಂ ಕೊಲಲಕ್ಕುಂ ಗೆಲಲಕ್ಕುಂ (ಅಕಸಂ. ೨೨೪-೪೦). ೫. ಬಾಡು ; ಮ್ಲಾನವಾಗು : ಕಣ್ಣ ನೀರಡಿಗಡಿಗುಣ್ಮೆ ಪಾಯ್ತರೆ ಮುಖೇಂದು ಬಿಗುರ್ತಿರೆ (ಆದಿ. ೬-೨೨೧); ಮಧುಕರಧ್ವನಿಯಿನಲರ್ವಿಲ್ಲ ಜೇವೊಡೆಯ ರವವೆಂದು ಕಿವಿಯಿತ್ತು ಕೇಳಲುಮ್ಮಳಿಸಿ ತಮ್ಮೊಳ್ ಬಿಗುರ್ವ ಬಿರಯಿಗಳು (ಕೃಷ್ಣ. ೨-೩೯ ವ). ೬. ಆಶ್ಚರ್ಯಪಡು ; ದಿಗ್ಭ್ರಾಂತವಾಗು : ಪಕ್ಕಿ ಸೋವವರ ಸ್ತ್ರೀಯರ ಸೀಯನಪ್ಪ ನುಡಿಯಂ ಕೇಳ್ದಾಗಳಂತಾತ್ಮಗರ್ವವನೀಡಾಡಿ ಬಿಗುರ್ತರ್ ತಂಬುಲಕೆ ಬಾಯಾಂಪಂದದಿಂ ಬಂದು ಪಾಯ್ದುವು ಕೀರಾಳಿಗಳಲ್ಲಿ ಪಾಮರ ವಧೂಬಿಂಬಾಧರಕ್ಕಾವಗಂ (ಕರ್ಣಾ. ೨-೭೯). **ಬಿಗುರು$_1$** : ೪. ಅಕ್ಕಾಜಿಯದೇವಗೆಯೊಳ್ ಬಿಗಿದಪ್ಪುವಳೋ ಬಿಗುರದೆ ಮೊಗವಿಟ್ಟು ಮೊಗದೆ ಮುದ್ದಾಡುವಳೋ (ಕಳಿ. ೬-೨೩೯) ; ಬಗೆಯೊಳ್ಬಲ್ಪು ಕಟಲ್ದೊಡಂ

. . . ಮೆಯ್ಯುಂ ಪಾರಂಬರ್ದೋಡಂ ಬಿಗುರುತ್ತೀಸಳವೊಂದಿ ನಿಂದಳವ ಚಾರಂ ಬರ್ಪುದೆಂದಾರ್ಪಿನಿಂ (ಶಶಿಶಿ. ೬-೨೩೦). 'ಬೆಗಡು₁', 'ಬೆಗಟು₁' ಪರಾ.

**ಬಿಗುರ್₂**, ಬಿಗುರು₂ (ನಾ). ೧. ಭಯ ; ಅಂಜಿಕೆ ; ಹೆದರಿಕೆ : "ಅಗುರ್ವು, ಬಿಗುರ್, ಬೆಗರ್ . . . ಅದಿರ್ಪು – ಈ ೧೧ ಭಯಂ" (ಕಶಸಾ. ೩೬–೨೨೪). ೨. ಆಶ್ಚರ್ಯ ; ಬೆರಗು : (೩). ೩. ಭಯಂಕರ ವಾದುದು : (೩). ಬಿಗುರು₂ : ೧. ಚೋದ್ಯಮೋಂ–ಬಿಗುರ ಬೀರದ ಬೀರಮೊ ? ಒಲ್ಲ ಬಿಜ್ಜೆಯೊ ? (೧೪೦೦. ೩೨–೬) ; ಬಿಗುರಿಂದ ಬಾಯ್ಬಿಗಿದು ಗಾಳಿ ಬೀಸುವಳು (ಕಾಂಡಕೆ. ೦೬೦–೩೩೩). ೨. "ಬಿಗುರೆನಲ್ ಬೆರಗು" (ಕಶರ. ೭೯). ೩. 'ಬಿಗುರುಗಂಡೆಯ' ಪರಾ. [<ಬಿಗುರ್₁]

**ಬಿಗುರಿಸು** (ಕ್ರಿ). ಅಂಜಿಸು; ಹೆದರಿಸು ; ಭಯಗೊಳಿಸು : ಬಿಗುರಿಪ ವಹ್ನಿಜ್ವಾಲಾಖ್ಯಗತಿಗಿವರೀ ಸಲ್ಗುಂ (ವಿಶ್ವಕೃ. ೬–೧೯೭) ; ರವಿತನಯನ ದೂತರಾಂದೊಡಂ ಬಿಗುರಿಸಲಣ್ಮಪರೆ (ವಿಶ್ವಕೃ. ೧೧–೯೩).

[ಬಿಗುರ್₁ + – ಇಸು₃]

**ಬಿಗುರು₁** 'ಬಿಗುರ್₁' ನೋ.

**ಬಿಗುರು₂** 'ಬಿಗುರ್₂' ನೋ.

**ಬಿಗುರುಗಂಡೆಯ** (ನಾ). ಭಯಂಕರವಾದ ಕತ್ತಿ; ರೌದ್ರವಾದ ಖಡ್ಗ: ಬಿಗುರುಗಂಡೆಯು ಪಚ್ಚ ರನ್ನವಾಹಾರ ಪದು ಬೆಗಡು ನಗೆ ವೈಶ್ವನರ ವಿಂದ ಸುಮು ಕಸ್ತೂರಿಯೊಗುವಿಗೆಯೊಳಾಂತು ಸುರಿಗಿಯ ಪುಚ್ಛಕಾಗ್ರ ದೊಳಗಿಹನೆಂಬರಶಿಬುರ್ಧರಳು (ಶ್ರಶುಕೃ. ೦–೩೮).

[ಬಿಗುರು₂ (<ಬಿಗುರ್₂) + ಕಂಡೆಯ₁ (< ಖಂಡೆಯ₂)]

**ಬಿಗುರೇಟ್** (ಕ್ರಿ). ಹೆದರಿಕೆಯಿಂದ ಕೂಡು ; ಅಂಜು : ಬಿಗುರೆಟ್ಟ ಬಗೆಯಿಂತು ಬಗೆಗುಂ (ಅತ್ತಕೃ. ೧೧–೨೨೩). [ಬಿಗುರ್₂+ ಏಟ್₁]

**ಬಿಗುರ್ತ** 'ಬಿಗುರ್₁' ಪರಾ.

**ಬಿಗುರ್ತು** 'ಬಿಗುರ್₁' ಪರಾ.

**ಬಿಗುರ್ಪ** 'ಬಿಗುರ್₁' ಪರಾ.

**ಬಿಗುರ್ಪಿಟ್** (ಕ್ರಿ). ಉಬ್ಬರವು ಕಡಮೆಯಾಗು ; ಮದವಿಳಿ : ಪೊಸವಸಲಾದ ಪೆಣ್ಗಳ ಜವ್ವನದ ಬಿಗುರ್ಪಿಟ್ಟದು ತಿಳಿವಂತೆ ತೋಚಿ ಮೆಡಿಗುರ್ಕಿನುಬ್ಬರಮಡಂಗಿ ತಿಳಿದುದು (ರಾಜಶೇಕ್ಕ. ೯೩–೪).

[ಬಿಗುರ್ಪು+ಇಟ್]

**ಬಿಗುರ್ಪು** (ನಾ). ೧. ಭಯ; ಅಂಜಿಕೆ : ದೇವ ನಿನ್ನ ಧಾಟಿಯೊಳ್ಪರಾಟಿ ಗಳ್ಬಿಗುರ್ಪಿನಿಂ . . . ಅಳ್ಕಿ (ಅಕ್ಷ೩. ೨೬–೨). ೨. ತೀವ್ರತೆ; ಆಧಿಕ್ಯ ; ಹೆಚ್ಚಳ : ರಾವಣಾರಿ ಬಾಗುಬಿಟ್ಟೊಂದು ಬಿಗುರ್ಪಿಂ ತಲೆ ತಿಣ್ಣಮಾಗೆ . . . ಲಕ್ಷ್ಮಣನಂ ಕರೆದು (ರಾಮಾಶ್ಯ. ೨೬–೩). ೩. ಸೊಕ್ಕು ; ಮದ : 'ಬಿಗುರ್ಪಿಟ್' ಪರಾ. ೩ 'ಬಿಗಿಪು' ಶಬ್ದರೂಪದ ಸಾಮ್ಯದಿಂದ ಈ ರೂಪವನ್ನು ಮಾಡಿರುವ ಸಾಧ್ಯತೆಯಿದೆ. [ಬಿಗುರ್₁+ –ಪು]

**ಬಿಗುರ್ಪುಗೊಳ್** (ಕ್ರಿ). ಹೆದರು; ಭಯಪಡು : (ಪಿಂದಿರುಗಿ ನೋಡಿ ಬಿಗುರ್ಪುಗೊಂಡು) (ಧಿತ್ರಗೋ. ೨೨–೦೭). [ಬಿಗುರ್ಪು+ ಕೊಳ್₁]

**ಬಿಗುರ್ವ** 'ಬಿಗುರ್₁' ಪರಾ.

**ಬಿಗುರ್ವರಿಜ** (ನಾ). ಭಯಂಕರವಾದ ರೂಪವುಳ್ಳವನು ; ಭೈರವ : "ತೇಟಿಟ್ಟೀರಂ, ಬಿಗುರ್ವರಿಜಂ – ಈ ೨ ಭೈರವಂಗೆ ಪೆಸರ್" (ಕಶಸಾ. ೪೭–೬); ಬಿಗುರ್ವರಿಜಂ, ಹಳಿಗಂ, ಕೊಂಡಂ, ಗುಳಿಕಂ ಮೊದಲಪ್ಪ ಭೂತ ವೇತಾಳುಗಳ ಮರುಳ್ವಡೆವೆರಸು . . . ನಡೆತಂದು (ರಾಜಶೇಕ್ಕ. ೦೩೦–೦೭).

[ಬಿಗುರ್₂ + ಪರಿಜು + – ಅ₇]

**ಬಿಗುರ್ವು** (ನಾ). ೧. ಭಯ ; ಹೆದರಿಕೆ: "ಮಲ್ಲಬು ಬೆಜ್ಜರ ಬೆಬ್ಬಳ ತಲ್ಲಟ ಬಿಗುರ್ವಗುರ್ವದಿರ್ಪು . . . ಭಯನಾಮ" (ಕಶಳಿಂ. ೦೦೬) ; ವಿಧುಂತುದಂ ಸವಿಪಾವರ್ತಿಯಾದೊಡಂ ದಿನಕರಂ ಬಿಗುರ್ವನಾನಲ್ಲಿ (ಪರಶು. ೦೦೪–೩). ೨. ಬೆರಗು ; ಆಶ್ಚರ್ಯ : "ಬಿಕ್ಕುಡಿ ಬಿಗುರ್ವಗುರ್ವು ಬೆಬ್ಬಳ . . . ಮಲ್ಲಟಿಯೆನಲ್ಕೆ ಬೆಡಗಪ್ಪ ಭಾವಂ" (ಕಶ್ಬಶ್ಲ. ೪೦).

[ಬಿಗುರ್₁ + – ವು]

**ಬಿಗುವು**, ಬಿಗು (ನಾ). ೧. ಬಿಗಿಯಾದ ಕಟ್ಟು, – ಬಂಧನ : ಎಲುವಿನ ಪಂಜರ ನರಗಳ ಬಿಗುವು ತೊಗಲಿನ ಹೊದ್ದಿಕೆ (ಕೃಕಂತ. ೦.೦೬೦–೩); ಬಂಧನಂಗಳ ಬಿಗುವು[ಪಾಠಾಂ. ಹು] ಬಿಡೆ(ಶಂತಿ. ೪೭–೩೦). ೨. ಬಿಗಿ ; ಹಿಡಿತ ; ಹತೋಟಿ : ತನ್ನ ರಾಜಮಂಡಲದಲ್ಲಿಯೂ ಬಿಗುವು ತಪ್ಪಿಹೋಗಿದೆ (ಶ್ರೀರಾಮ. ೩೦೦) ; ಗೋವಿಂದಮಾಸ್ತರರ ಬಿಗುವಿಲ್ಲದ ಆಡಳಿತವೇ ಅದಕ್ಕೆ ಕಾರಣ (ಕಾಕೀಂ. ೦೦). ೩. ಗತ್ತು ; ಠೀವಿ ; ಬಿಂಕ : ಬಂಧು ಬಂದರೆ ಎನ್ನ ಬಿಗುವ ಬಿಂಕವ ತೋಚಿ ಬಂದೋಡ್ಯರ್ನ್ನೆ ಎನ್ನ ಬೇಕೆಂದು ಕೋಚಿದೆ (ಪುರಂದ. ೨–೯–೦) : ಬಲವಂತನೆಂಬೊ ವೆಗ್ಗಳ ಗರ್ವಿಕೆಯೊ ಸಕಲಲೋಕ ನಿನ್ನ ವಶವೆಂಬೊ ಬಿಗ[ಗು]ವೊ (ಮೋಕ್ಷಂ. ೨೦–೦) ; ರಾಯರು ಬಿಗುವಿನಿಂದ ಉತ್ತರ ಕೊಟ್ಟರು (ಸವಿಜ. ೪೦). ೪. ಬಿಗಿಯಾದ ಬಂಧ, – ರಚನೆ : ಅವರ ಹಾಡುಗಳಲ್ಲಿ ಅಲ್ಲಲ್ಲಿ ಅಶ್ಲೀಲಪ್ರಯೋಗಗಳು ಕಂಡುಬಂದರೂ . . . ತುಚ್ಛಶೃಂಗಾರವೆಂದು ನಿರಾಕರಿಸಕೂಡದು. ಹಾಗಾದರೆ ಆ ಹಾಡಿನ ಬಿಗುವೆ ಸಡಿಲಾಗುವುದು (ಕನ್ನಪ. ೯೩). ಬಿಗು : ೧. ಬಿಗು ಹಿಂದುಗಡೆಯಿಂದ [ಪಾಠಾಂ. ಬಿಗುಹಿಂದ ಗದೆಯಿಂದ] ಸಡಿಲಿಸಲು ಸಡಿಲದಿರೆ ಬಿಗುಹೇರಿ ಭೀಮ ಮಂದರಗಿರಿಗೆ ಸರ್ಪನಾ ತೆಗೆನೇಣದೆಂಬ ಮಾರಿಯಾದೆಯುಲಿ ಬಿಗುಹತ್ತಿ ಕಣ್ಣಾಲಿ ಮೇಲ್ಸಿಕ್ಕಿತು (ಕುರಂಗ. ೩೦–೩೦). ೫. ಬಿಗಿಯಾದ ಸೇರುವೆ : ಕುಲಾಚಲಾದ್ರಿಗಳ ಬಿಗು ಸಡಿಲೆ ರಣಭೇರಿಗಳೊಳ್ಗಿದುವು (ಕುಶಂಗ. ೬೩–೦). ೬. ವ್ಯಗ್ರತೆ ; ಅಪ್ರಸನ್ನತೆ ; ಕೋಪ : 'ಬಿಗುಮೊಗ' ಪರಾ.

[ದೇ. ॥ ತಮಿ. ಪಿಕು, ಪಿಕುವು ; ತುಳು. ತೆಲು. ಬಿಗು, ಬಿಗುವು]

**ಬಿಗುವುಗುಂದು** (ಕ್ರಿ). ದರ್ಪವಿಲ್ಲದಾಗು ; ಠೀವಿಯನ್ನು ಕಳೆದು ಕೊಳ್ಳು : ದುಗುಡದಿಂ ಬಂದು ಪೊಕ್ಕನು ಬೀಡ ಬಲ್ಲಾಳ ಬಿಗುವು [ಪಾಠಾಂ. ಹು]ಗುಂದಿದ ಬಿಂಕದೊಳು (ಕುಶಾಶಾ. ೦೩–೦೫೩).

[ಬಿಗುವು + ಕುಂದು₁]

**ಬಿಗುಹಡಗು** (ಕ್ರಿ). ತೀವ್ರತೆಯು ಕುಗ್ಗು : ರಣದೇಳುವೆಯ ಬಿಗುಹಡಗಿದ ಪೊಲನಿಬರು ತವತವಗೆ ನಾಚಿದರು ಕೋಲಾಹಳೆ ಪವನಜನ (ಕಾಶ್ಯ. ೩೩–೦). [ಬಿಗುಹು (<ಬಿಗುವು) + ಅಡಗು₁ (<ಅಡಂಗು₁)]

**ಬಿಗುಹತ್ತು** (ಕ್ರಿ). ಬಂಧನವು ತೀವ್ರವಾಗು : ಬಿಗು ಹಿಂದುಗಡೆಯಿಂದ ಸಡಿಲಿಸಲು ಸಡಲದಿರೆ . . . ಬಿಗುಹತ್ತಿ ಕಣ್ಣಾಲಿ ಮೇಲ್ಸಿಕ್ಕಿತು (ಕುರಂಗ. ೩೦–೩೦). [ಬಿಗು (< ಬಿಗುವು) + ಹತ್ತು₁ (< ಪತ್ತು₁)]

**ಬಿಗುಹಿಕ್ಕು** (ಕ್ರಿ). ಬಿಗಿಮಾಡು ; ಗಟ್ಟಿಗೊಳಿಸು : ಕಂಬಳದ ಕಾಯ ಮೇಲಣ ಹಸುರ ಕೆತ್ತಿ ಹಲ್ಲೆಯ ಮಾಡಿ ಕುಯಿದು ಬಾವಡೆಯಿಂದವೊತ್ತಿ ನೀರಂ ಹಿಂಡಿ ಕಟ್ಟಿ ಬಿಗುಹಿಕ್ಕಿ (ಸೂಶಶಾ. ೩–೩೦).

[ಬಿಗುಹು (<ಬಿಗುವು) + ಇಕ್ಕು]

**ಬಿಗುಹು** 'ಬಿಗುವು' ನೋ.

**ಬಿಗುಹುಕಾಱ** (ನಾ). ದರ್ಪವುಳ್ಳವನು ; ಗರ್ವಿಷ್ಠ : ಬೆಳ್ಳುಡಿಯಿಂದ ಬಿಗುಹುಕಾಱರ ಬಲ್ಮೆಯಿಂದ ಬಗೆಗಾಱರನೆದೆಗೆಡಿಸುವರಲ್ಲಿಯ ಬಗಳೆ ಗಂಗಳ ಬಾಳಿಯರು (ಉಶಾಶಾ. ೪–೦೦೫).

[ಬಿಗುಹು (< ಬಿಗುವು) + – ಕಾಱ]

**ಬಿಗುಹುಗುಂದು** (ಕ್ರಿ). ದೃಢತೆಯನ್ನು ಕಳೆದುಕೊಳ್ಳು ; ಕಾಠಿಣ್ಯ ವಿಲ್ಲದಿರು : ಹೊಯ್ವಳ್ಳಿ ಬಿಗುಹುಗುಂದಿದ ಕುಚಂ ಬೆಳರ್ತ ಮುಖ (ಪಶಶಾ. ४–३३). [ಬಿಗುಹು (< ಬಿಗುವು) + ಕುಂದು₁]

**ಬಿಗುಹುಗೊಳ್** (ಕ್ರಿ). ಬಿಗಿದುಕೊಳ್ಳು ; ಸೇರು ; ಒಂದಾಗು : ಕುಡಿಮೀಸೆಗಳು ಕೌಟಿದವಂಗ ಕಾಹೇಱದುದು ಕಡುಹಿನಲಿ ಬಿಗುಹುಗೊಂಡುಪ್ಪರಿಸಿದವು ಹುಬ್ಬುಗಳು (ಕೊರಣಾ. ೨-೩-೬).
[ಬಿಗುಹು (< ಬಿಗುಪು) + ಕೊಳ್$_1$]

**ಬಿಗುಹೇರು** 'ಬಿಗುಪೇಱು' ನೋ.

**ಬಿಗುಹೇಱು** 'ಬಿಗುಪೇಱು' ನೋ.

**ಬಿಘಡಾಯಿಸು** 'ಬಿಗಡಾಯಿಸು' ನೋ.

**ಬಿಘಾ** 'ಬಿಘೆ' ನೋ.

**ಬಿಘೆ**, ಬಿಘಾ (ನಾ). (ಇಪ್ಪತ್ತೈದು ಗುಂಟೆಗಳಿಂದಾದ) ಜಮೀನಿನ ಒಂದು ಅಳತೆ : ೧ ಬಿಘೆಯೆಂದರೆ ಸುಮಾರು ೧ ⅔ ಯಿಂದ ೧⅔ ಯೆಕರು ಆಗುತ್ತದೆ (ಕಣಾಗ. ೨೯೦) ; ಒಂದು ಬಿಘೆಯಲ್ಲಿ ಸರಾಸರಿ ಎಷ್ಟು ಉತ್ಪತ್ತಿಯಾಗುತ್ತದೆಂಬುದನ್ನು ಗೊತ್ತುಮಾಡುವುದು (ಅಕ್ಬರ. ೦೨೩) : ತಮ್ಮ ಭೂಮಿ ಹೋದರೆ ಎಷ್ಟು ಹೋದೀತು ? ಇನ್ನೂರು ಬಿಘೆಗಳಿಗಿಂತ ಹೆಚ್ಚು ಹೋಗಲಿಕ್ಕಿಲ್ಲ (ಕೋಡಶಿ. ೨೦೩). **ಬಿಘಾ** : ಅವನು . . . ನೂರು ಬಿಘಾ ಭೂಮಿಯನ್ನೂ 'ಮುಲ್ಲಾಜಮಾಸ್ಟ್' ಎಂಬ ಬಿರುದನ್ನೂ ಪಡೆದನು (ಡಾಂಟಿ. ೩). [←ಮರಾ. ಬಿಘಾ ; ಹಿಂ. ಬೀಘಾ]

**ಬಿಚವಾ**, ಬಿಚ್ವ (ನಾ). ಒಂದು ಬಗೆಯ ಔಷಧಪದಾರ್ಥ: ಸೂರ್ತಿವಣದ ಮೇಲೆ ಕಮ್ಮತ್ತು ಆಗತಕ್ಕ ಜೀನಸುಗಳು. ೧. ಅಕ್ಕಲಖಾರ . . . ೧೬. ಬಿಚವಾ (ನಿರಗುಂಡಿ) (ಮುಂಬಯಿ. ೦೨೨). **ಬಿಚ್ವ**: ಬಿಚ್ವ . . . ಬೀಜಬುಂದ (ಸೂರ್ತಿ ಚವಾಳ ಮಣ) (ಮುಂಬಯಿ. ೦೬೭). [?]

**ಬಿಚಾಣೆ** 'ಬಿಚಾನ' ನೋ.

**ಬಿಚಾನ**, ಬಿಚಾಣೆ, ಬಿಛಾನಾ (ನಾ). ಹಾಸುಗೆ, ಚಾಪೆ ಮುಂತಾದ ಹಾಸುವ ಸಾಧನ : (೧). **ಬಿಚಾಣೆ** : ಹಾಸಲಿಕ್ಕೆ ಒಂದು ಬಿಚಾಣೆ, ಹೊದೆಯಲಿಕ್ಕೆ ಒಂದು ಚಾದರ — ಇಷ್ಟಿದ್ದರೆ ಸಾವಿರ ಊರು ತಿರುಗೇವು (ಜಾಪ). **ಬಿಛಾನಾ** : ನಡೇರಿ, ಎತ್ರಿ ಬಿಛಾನಾ (ಕಟೂರ. ೦೩).
[←ಪಾರ. ಬಿಛಾನ್; ಹಿಂ. ಬಿಚಾನಾ; ಮರಾ. ಬಿಛಾನಾ, ಬಿಛೋನಾ ; ಬಂಗಾಲಿ. ಬಿಚಾನ್ ; ಒರಿಯಾ. ಬಿಚಾಣ]

**ಬಿಚಾಯಿತ** 'ಬಿಛಾಯತ' ನೋ.

**ಬಿಚಿಗದವ್ವಸೆಟ್ಟಿ** (ನಾ). ಒಬ್ಬಾತನ ಹೆಸರು : ಶ್ರೀಗೊಗ್ಗಿಯ ಮನೆ ಮಗತಿ ಬಿಚಿಗದವ್ವಸೆಟ್ಟಿ ಉತ್ತಮಗಳ್ಳಂ ಕೃ(ಮ)ದೊಳೆ ನಿಲೆ (ಎಕ. III. ಮೈಸೂರು. ೯೩-೨ ; ಸು. ೯೯೧ ೯). [? + ಸೆಟ್ಟಿ]

**ಬಿಚುವಾ**, ಬಿಚ್ಚುವ, ಬೀಚ್ವಾ (ನಾ). ಚೇಳಿನಾಕಾರದ ಒಂದು ಬಗೆಯ ಕತ್ತಿ : ಒಂದೊಂದು ಜನಕ್ಕೆ ಬಾರುಬಂದೂಕು ಒಂದು . . . ಬಿಚುವಾ ಒಂದು, ಈ ನೋರೆ ಎರಡುಜನಕ್ಕೂ ಜಂಗಿಸಾಮಾನು ಕೊಟ್ಟು (ರಾಕೇಂದ್ರ. ೦೦೩). **ಬಿಚ್ಚುವ** : ತೋಳಿನಲ್ಲಿ ಹುಡುಕಿ ನೋಡಿದ್ದರೆ ಚೇಳಿನ ಹಾಗೆ ಬಾಗಿಕೊಂಡಿದ್ದ ಒಂದು ಬಿಚ್ಚುವ ಎಂಬ ಕಠಾರಿ ಸಿಕ್ಕುತ್ತಿತ್ತು (ಶಾರಕೀ. ೩೬). **ಬಿಚ್ವಾ** : ಶಿವಾಜಿಯು . . . ಅಂಗಿಯ ಬಲತೋಳಿನೊಳಗೆ ಬಿಚ್ವಾ ಎಂಬಾಯುಧವನ್ನು ಬಚ್ಚಿಟ್ಟುಕೊಂಡು . . . ಅಫ್ಜುಲ್‌ಖಾನನನ್ನು ನೋಡುವುದಕ್ಕೆ ಹೊರಟನು (ಛತ್ರಶಿ. ೬೬).
[←ಮರಾ. ಬಿಚವಾ ; ಹಿಂ. ಬಿಛುಆ. /ಪ್ರಾ. ವಿಚ್ಚುಅ =ಚೇಳು]

**ಬಿಚ್ಚಂಡ** 'ಬಿಚ್ಚಂದ' ನೋ.

**ಬಿಚ್ಚಂದ**, ಬಿಚ್ಚಂಡ (ನಾ). ಬಹುಮಹಡಿಗಳುಳ್ಳ ಮಹಲು, ಅರಮನೆ ಮುಂತಾದುವು : "ಬಿಚ್ಚಂದ(ಡ) — ವಿಚ್ಛಂದ — ಮುಖಮಂಟಪಗಳ ಸೌಧ ; ಮಂತ್ರಾಲಯ" (ಶಬ್ದಕೋ. ೩೦) : ವಿಚ್ಛಂದ — ಬಿಚ್ಚಂದ (ಕಮುದ. ೨೩೬ ಪ್ರಯೋ). **ಬಿಚ್ಚಂಡ** : ದತ್ವಕ್ಕೆ ದತ್ವಂ — ವಿಚ್ಛಂದ — ಬಿಚ್ಚಂಡ (ಕಮುದ. ೨೩೬ ಪ್ರಯೋ). [< ಸಂ. ವಿಚ್ಛಂದ]

**ಬಿಚ್ಚಡಿ** (ನಾ). ದಾಪುಗಾಲು ; ದೊಡ್ಡ ಹೆಜ್ಜೆ (?) : ಕುಂಟನ ವೊಲು ಕೊಂಕಡಿಗಳನಿಡುತಂ ತುಂಟನ ವೊಲು ಬಿ[ಶಾಶಂ. ಬೆ]ಚ್ಚಡಿಗಳನಿಡುತಂ ಹೆಳವನವೊಲು ಮೊಳಕಾಲಿಕ್ಕುತ್ತಂ (ಶ೦ಗೇರ. ೦೯-೨೭).
[ಬಿಚ್ಚು$_{1?}$ + ಅಡಿ$_1$]

**ಬಿಚ್ಚಣಿಗೆ** (ನಾ). ಸ್ವಚ್ಛಂದವಾದ ಅಭಿನಯ. — ಹಾವಭಾವ : ಪಾಠಕರ ಸಘಾಟದಿಂ ನಚ್ಚಣಿಗರ ಬಿಚ್ಚಣಿಗೆಯಿಂ ಗಾಣರ ಗಮಕದಿಂ . . . ಮಹೋನ್ನತವೈಭವಮನೊಳಕೊಂಡುದ್ಭಟರಾಜೇಂದ್ರಚಂದ್ರಮ ನೋಲಗಂ ವಿರಾಜಿಸುತ್ತಿರ್ದುದು (ಉದ್ಭಟ. ೨-೦೬ ವ). [< ಬಿಚ್ಚು$_3$]

**ಬಿಚ್ಚತ** (ನಾ). ೧. ವಿಸ್ತಾರ ; ಹರಹು ; ವಿಶದ : ಓಹಿಲದೇವಂ ನಲವಿಂ ಮಱಿಚಂದರಹಚ್ಚನನೊಚ್ಚತ ಮಚ್ಚಿದ ಬಿಚ್ಚತದಿಂ ತುತಿಸೆ (ಶಾದ್ವರೇ. ೩-೩೯) ; ಶ್ರೀಪಾದಕ್ಕೆ ಸಮಕ್ಷದಲ್ಲಿ ಬಿಚ್ಚತವಾಗಿ ಬಿನ್ನಯಿಸಿಕೊಳ್ಳುವೆನು (ಮಂತ್ರಶ. ೦೨೩-೨೨). ೨. ಅಧಿಕವಾದುದು ; ಹೆಚ್ಚು : (೧). ೩. ಅನಿರ್ಬಂಧ ; ಸ್ವೇಚ್ಛೆ : ಅಚ್ಚರಕನ್ನೆಯರೊಳ್ ಸರಾಗದಿಂ ಬಿಚ್ಚತವಾಗಿ ಕೂಡಿ ಸುಖಿಮಿರ್ಪರನಿಂದಿತದೇವಲೋಕದೊಳ್ (ಶೀವಸಂ. ೯೯-೦೦). ೪. ನೆಮ್ಮದಿಯುಳ್ಳವನು ; ಸುಖಿ : ಅಂತು ಜನಮೆಲ್ಲಂ ಪಗಲ ತಾವರೆಯಂತೆ ಬಿಚ್ಚತರಾಗಿ . . . ಶೃಂಗಾರ ಮಾಡುವುದುಂ (ರಪರ್ಷಾಪು. ೬-೨೦೩). [< ಸಂ. ವಿಸ್ತೃತ]

**ಬಿಚ್ಚತಂ** (ಅ). ೧. ಸ್ವೇಚ್ಛೆಯಾಗಿ ; ಅನಿರ್ಬಂಧಿತವಾಗಿ : ಬಾಲ್ಯದ ಮಿಂದ್ರಿಯವರ್ಗದಿಚ್ಚೆಯಂ ಸಲಿಸಿ ಬಸಂತದೊಳ್ ಕಳಿಕಿರ್ಗಡಿದ ಕೋಗಿಲೆಯಂತೆ ಬಿಚ್ಚತಂ ನಲಿವುದು (ಅಂಕು. ೨-೯); ಪರಮೋತ್ಸವದಿಂ ಪಱಿಗುಟ್ಟಿ ಬಿಚ್ಚತಂ ಕುಣಿದುವು ಭೂತಕೋಟಿ (ಶಂರಾಮಾ. ೦೦-೧೯೯); ಬಿಚ್ಚತಂ ನಲಿವ ಮದಕಳಾಪಿಗಳ ಮೊತ್ತಮಂ ಚಿತ್ರಜನ ವಿಚಿತ್ರಫಲಕಾಯತವೃಜದೊಂದಾತಂಕಮನೊಂದುತಂ (ಶುಕುಸುಮಾ. ೦೨-೦೩೬ ವ). ೨. ಸುಲಭವಾಗಿ ; ನಿರಾತಂಕವಾಗಿ ; ಸರಾಗವಾಗಿ : ಮುಂ ಮಹಿಯೆಲ್ಲಮಂ ಶಿಶಿರರಾಜನೆ ಬಿಚ್ಚತಮಾಳ್ದಂ (ಶಂಕರಾ. ೫-೩೦); ಬಿಚ್ಚತಂ ಬತ್ತೀಸಕೋಟಿ ಸಮುಚ್ಚಯದ ಧನವನು ಗಳಿಸಿದನು (ಶಾಕ್ಮರಾ. ೦೬-೯೩). ೩. ಅಧಿಕವಾಗಿ; ಯಥೇಚ್ಛವಾಗಿ : ಹರಿನ್ಮಣಿಮರೀಚಿಮೇಚಕಿತಸ್ಸನು ಭಾಗಂಗಳೊಳ್ ಕುರಂಗತತಿ ಬಿಚ್ಚತಂ ಪಸಲೆಗೆತ್ತು ಕಾರ್ದಾಸೆಯಿಂ ನಿರರ್ಥ ಜನಿತಶ್ರಮಂ ಬಳ[ಲು]ಕದ[ವ]ಲ್ಲಿಯುಮಂ ಪುಲ್ಲುಮಂ ಗಿರೀಂದ್ರದೊಳ[ಗ]ಲ್ಲಿ ಮೇಯ[ವು] ಹರಿನ್ಮಣಿಭ್ರಾಂತಿಯಿಂ (ಪರ್ವಮಾ. ೫-೫೬) ; ಕರೀಂದ್ರೋತ್ಕರಂ . . . ಚಿತ್ರದೊಳಾದ ಮೋಹಮುಚ್ಚುದಿರೆ ಬಿಚ್ಚತಂ ಕಡುಪನೊಲ್ಲದೆ ನಿಂದುದದೊಂದು ತಾಣದೊಳ್ (ಮಲ್ಲಿಕಿ. ೦೦-೬೮) ; ಧೂಮಸಂಪಾದಿತ ಕಾಳಿಮಾಂಕಿತ ನಭಸ್ಥಳಮೆಂದುವಿದೆಂದು ಬಿಚ್ಚತಂ ಮೇದಿನಿ ಮೆಚ್ಚಿ ಬಣ್ಣಿಪುದು ಪೊಂಬೊಳಲಂ (ಶಾಸನ. XV. ೬೩-೦೨ ; 1180). ೪. ನೆಮ್ಮದಿಯಾಗಿ ; ಸುಮ್ಮನೆ : ಬಿಚ್ಚತಮಿರ್ದು ಕಣ್ಣಾ ಮಸಮೋಡುಮಿನಂ ಸಲೆ ನೀನೆ ನೋಡ (ಶಾಬ್ದಾ. ೧೯೯). ೫. ಗಟ್ಟಿಯಾಗಿ ; ಗಾಢವಾಗಿ : ನಿಜೇಶನಂಕದಿನೀಶನ ಕಾಂತ ಚಿಟ್ಟರಮೆರ್ದು ಬಿಚ್ಚತಮಪ್ಪಿದಳ್ (ಅನಂಪು. ೨-೯೯). [< ಬಿಚ್ಚತ]

**ಬಿಚ್ಚತಿಕೆ**, ಬಿಚ್ಚತಿಕ್ಕೆ, ಬಿಚ್ಚತಿಗೆ (ನಾ). ೧. ವಿಸ್ತಾರ ; ವ್ಯಾಪ್ತಿ ; ಹರವು ; ವೈಶಾಲ್ಯ : (೧). ೨. ನೆಮ್ಮದಿ ; ಸಮಾಧಾನ : ಪಗಲಂದಿರುಳಾದೊಡೆ ರಾಜ್ಯಮಾದವೊಲ್ ಪರ್ಚಿ ಮನಕ್ಕೆ ಬಿಚ್ಚತಿಕೆವಂದಿರೆ (ಶಂಕರಾ. ೬-೬೩) ; ಆತನ ತನುಜಾತರಪ್ರಮಿತಶಾಸ್ತ್ರ ವಿಶಾರದರಾದೊರಕ್ಕುಮೆಂಬಿನಿತನೆ ಮೆಚ್ಚಿ ಬಿಚ್ಚತಿಕೆಯಿಂ ಪರಿಭಾವಿಸದೀ ದುರಾತ್ಮ ದುರ್ಜನರ್ಗೆ ನಿಕೃಷ್ಟದುಷ್ಟರಿವರ್ಗಾನೊಸೆದಿತ್ತನುದಾತ್ತ ವೃತ್ತಿಯಂ (ಸುಕುಮಾ. ೨-೨೬). ೩. ಅಡ್ಡಿಯಿಲ್ಲದಿರುವುದು ; ನಿರಾತಂಕ: "ವಿಶ್ರಂಭಃ—ಬಿಚ್ಚತಿಕೆ" (ಅಭಿವಾ. ೨೬-೦೦). ೪. ಅತಿಶಯತೆ ; ಹೆಚ್ಚುಗಾರಿಕೆ : ನೆಱಿಯ ನೆಗರ್ತ್ತಿವೆತ್ತುದು ನಿಯೋಗಮುಗುಂದಲೆಯಾಯ್ತು

ತೇಜ ಮಬ್ಬಿಱಿದುದು ಮಿಕ್ಕ ಬಿಚ್ಚತಿಕೆಸ × ವವಮಾದುದು (ಕಾ. v. ೦೯-೩೬ ; 1099). ೫. ಸಲಿಗೆ ; ಆಪ್ತತೆ : ಜಲಜಾತಾಕ್ಷನೊಳಾಕೆ ಬಿಚ್ಚತಿಕೆಯಂ ಮಾಡಲ್ ಬೞಿಕ್ಕಂ ಕಳಾನಿಲಯಂ ಮಾಡಿದನೊಲ್ದು ಚುಂಬನ ಪರಿಷ್ವಂಗಪ್ರಪಂಚಂಗಳಂ (ಜಗಸಿ. ೧೦-೦೯೦). ಬಿಚ್ಚತಿಕ್ಕೆ : ೩. ಅಮಾತ್ಯರಂ ಕರೆದು . . . ಭೂಮಂಡಳಮಂ ಪಚ್ಚು ಬಿಚ್ಚತಿಕ್ಕೆಯಿನಾಳ್ವಂತವರಂ ನಿಯೋಜಿಸಿ (ವೀಚರಿತ್ರೆ. ೩-೧೩ ವ) ; ಬಾಯ್ಗೆ ಪಂದಂದದೊಳೆಂದೊಡೆಂದು ದನೊಡಂಬಡಿಪಿಚ್ಚೆಯ ಬಿಚ್ಚತಿಕ್ಕೆ . . . ಇಂಗೊರಲ ಮೆಲ್ಲುಲಿಯೊಪ್ಪಿದುದು (ಕಂದರ್ಪ. ೬-೬೬). ೪. ಮಸೆವುದು ಮಾಸಲಿರ್ದ ಪಬವೇಟ ಮನಿಚ್ಚೆಯ ಬಿಚ್ಚತಿಕ್ಕೆಯುಂ ಪೊಸಯಿಪುದು (ಚಾಂತಿಪು. ೬-೯೦). ೬. ಹೃದಯವೈಶಾಲ್ಯ ; ಧಾರಾಳತನ : ಆನೊಂದು ಬೇಡಿದಪೆಂ ನೀನದನೆನಗೀವುದಣ್ಣ. . . ಮೋಸಂಗೊಂಡಿರದೆ ಬಿಚ್ಚತಿಕ್ಕೆಯೊಳಿನಿಸಂ (ಧರ್ಮಾಮೃ. ೨-೦೬೬). ಬಿಚ್ಚತಿಗೆ : ೪. ಅಂತು ಮುಟ್ಟ ಮೂಡಲಿಸಿ ಪೆಟ್ಟನಿಂದೆಚ್ಚ ಬಿಚ್ಚತಿಗೆ[ಪಾಠಾಂ. ರಿಕೆ]ಗೊಚ್ಚತಂ ಕೆಳರ್ದು (ಅನಂತ. ೦೯-೦೬ ವ). [ಬಿಚ್ಚತ + — ಇಕೆ]

ಬಿಚ್ಚತಿಕ್ಕೆ 'ಬಿಚ್ಚತಿಕೆ' ನೋ.

ಬಿಚ್ಚತಿಗ (ನಾ). ಶ್ರೇಷ್ಠನಾದ ವ್ಯಕ್ತಿ : ಚೆಚ್ಚರಿಗಂ ಪರಿವಾಯಂ ತುಚ್ಛಳನತ್ಯುಗ್ರಕೋಪ ಮೂರ್ಖಿಂ ಕಿಸಱಿಕೊಕ್ಕಿಚ್ಚುವನೆನಿಪ ಖಳನುಂ ಬಿಚ್ಚತಿ[ಪಾಠಾಂ. ರಿ]ಗನೆನಿಕ್ಕುಮೊಂದಿ ಜೈನರ ಕೆಲದೊಳ್ (ಸಮಚ. ೬-೦೦೬). [ಬಿಚ್ಚತ + — ಇಗ]

ಬಿಚ್ಚತಿಗೆ 'ಬಿಚ್ಚತಿಕೆ' ನೋ.

ಬಿಚ್ಚನೆ (ಅ). ೧. ಅಗಲವಾಗಿ ; ವಿಶಾಲವಾಗಿ ; ದೊಡ್ಡದಾಗಿ : ಆತಂ ಕ್ರೋಧಾನಲದಿನೆನ್ನನುರಿಪುವಂತು ಕೆಚ್ಚನಾಗೆ ಬಿಚ್ಚನೆ ಬಿಟ್ಟ ದಿಟ್ಟಿಗಳಿಂ ನೋಡಿ (ಕಾಪಂ.ಉ. ೦೦೨); ಬಿಸುನೆತ್ತರನೆತ್ತಂ ಸೂಸು ವಂತ ಬಿಚ್ಚನೆ ಬಿಟ್ಟಿರ್ದೆರಡಂ ಕಣ್ಗಳೊಳವರೊರ್ವರನೊರ್ವರ್ಸರ್ಗಂಗುವಂತೆ ನೋಡಿದರೆನಸುಂ (ಗದಾಯು. ೬-೪); ಬಿಚ್ಚನೆ ಬಿಟ್ಟ ದಿಟ್ಟ ಸಿಡಿಲಂ ಕೀಲ್ಮಾಡೆ ಬಂದೆಯ್ದಿ. . . ತಾಗಿದುವದ್ಭುತಸ್ವನಿತಮೆಂಬನ್ನಂ ಬೃಹದ್ಬೃಂಹಿತಂ (ಶಂರಾಪವಾ. ೦೩-೬೬). ೨. ತಟ್ಟನೆ; ಕೂಡಲೆ : ಎನೆವೀ ಬ್ರಹಾಂಡಮಂ ಬಿಚ್ಚನೆ ಬಿರಿಯಿಸುತುಂ ವಾರ್ಧಿಯಂ ಕೂಡೆ ತುಳ್ಕಾಡಿಸುತುಂ . . . ಪರ್ವಿತ್ತುಗುರ್ವಿಂ ತಳೆದೊಗೆದ ಗಂಭೀರಭೇರೀನಿನಾದಂ (ಶಾಂತೀಶ್ವ. ೬೩-೩೪). ೩. ರಭಸವಾಗಿ ; ವೇಗವಾಗಿ : (*). [<ಬಿಚ್ಚತ + —ಅನೆ]

ಬಿಚ್ಚಲರ್ (ನಾ). ಅರಳಿದ ಹೂವು : ಮಕರಂದಮಂ ಭ್ರಮರಾವಳಿಗೆ ಪಾಜದೊಲಿದಿತ್ತು ಮೆಱಿವ ಬೆಳ್ದಾವರೆಯ ಬಿಚ್ಚಲರ್ಗಳ ಪರ್ಚ ನೋಡು (ಶೃಂಚರಿ. ೩-೩೯). [ಬಿಚ್ಚು₁ (<ಬಿರ್ಚು) + ಅಲರ್₁]

ಬಿಚ್ಚಳ₁, ಬಿಚ್ಚಳೆ (ನಾ). ಹರಹು; ವಿಸ್ತಾರ; ವೈಶಾಲ್ಯ : "ಬಿಚ್ಚಳ ಮುಮೆನಲ್ ವಿಸ್ತರಾರ್ಥಮಕ್ಕುಂ" (ಶಬಕಂ. ೦೯೩). 'ಬಿಚ್ಚಳಿಸು' ಪರಾ. ಬಿಚ್ಚಳೆ : ನರನೆಚ್ಚ ಕೆಂಗಣೆಗೋಲ ಬಿ[ಪಾಠಾಂ. ಬ]ಚ್ಚಳೆಯ ಪೊಸಮಸೆಯ ನಿಚ್ಚಳದ ನಿಡುಸರಲ್ವೆಚ್ಚಿದವು . . . ಕೊಚ್ಚಿದವು ಪರಬಲವನು (ಕೈಶಂಚರಿ. ೦೩-೦೬). [<ಬಿತ್ತರ./ಸಂ. ವಿಸ್ತರ]

ಬಿಚ್ಚಳ₂ 'ಬಿಜ್ಜಣ' ನೋ.

ಬಿಚ್ಚಳಿಕೆ (ನಾ). ೧. ಹರಹು ; ವೈಶಾಲ್ಯ : "ಬಿಚ್ಚಳಿಕೆಯಿಂದು ವಿಸ್ತಾರಮಕ್ಕುಂ" (ಶಬ್ದಕ. ೦೬) ; "ಬಿತ್ತರಮೆನಲ್ ಬಿಚ್ಚಳಿಕೆಯೆನಲು ವಿಸ್ತಾರಮಕ್ಕು" (ಶಬ. ೬೦). ೨. ಧಾರಾಳತನ ; ಹೃದಯವೈಶಾಲ್ಯ: ದಾನಧರ್ಮಾನುರಾಗಮುಂ ಬಿಚ್ಚಳಿಕೆಯುಂ ಪಾಪಕ್ಕಂ ಪಱಿಗಮುಂಜು ವುದುಂ . . . ಅಖಂಡಿತಚಾರಿತ್ರರಾಗಿ ನೆಗೞ್ವುದುಂ ತಪೋಭಾವನೆಯುಂ ಮೆಂದಿವಱಿಂ ಸಾತಾವೇದನೀಯಾಸ್ರವಮಕ್ಕುಂ(ಶಚಾರ. ೯೯). ೩. ನೆಮ್ಮದಿ; ಸಮಾಧಾನ : ಅನುನಯದಿಂ ಬಿಚ್ಚಳಿಕೆವೆರಸಿ ಮನದೊಳ್ ಮೆಚ್ಚಿ ಮಹೇಶ್ವರನನಲ್ಲಿ ಚಿನ್ನಿಸುತಿಪ್ಪಂ(ಇಕ. XX. ೬೯-೬; ೪ನೆಯ ೫೫). ೪. ಹರಡಿರುವುದು ; ಚೆದರಿರುವುದು : (*). [ಬಿಚ್ಚಳ₁ + — ಇಕೆ]

ಬಿಚ್ಚಳಿಕೆಗೆಯ್ (ಕ್ರಿ). ವಿಸ್ತಾರವಾಗಿ ನಿರೂಪಿಸು : ಸೌಂದರ್ಯ ಶಾಲಿತನಯಂಗೆ ನೃಪಂ ಯುವರಾಜಪಟ್ಟಮಿತ್ತುಸುಭವಮಂ ಬಿಚ್ಚಳಿಕೆ ಗೆಯ್ದುದುಜಿತಂ ತನುಜಾ (ಕಮಪೂ. ೦೨-೯೬). [ಬಿಚ್ಚಳಿಕೆ + ಕೆಯ್₁]

ಬಿಚ್ಚಳಿಸು (ಕ್ರಿ). ೧. ಹಬ್ಬು : ಹರಡು ; ಪಸರಿಸು : ಸ್ಫುರಿತ ಕಮನೀಯಂಗಳಾಗಿ ಬೆಳತಿಗೆಬೆಳಗನಿರದೆಂಟುದೆಸೆಗಳೊಳ್ ಬಿಚ್ಚಳಿಸಿ ಥಳಥಳಿಸುತಿರಲ್ (ಅರಾಕ. ೯-೩-೯) ; ಸೌದಾಮಿನಿಯು ಕರೆಗೆಱಿದ ಪ್ರತುಮೆಯಂದದೊಳಗಜೆಯುಚ್ಚರಿಯು ಬಿಚ್ಚಳಿಸುತಿಸೆದಳಾಗ (ಪಂಪಿಮಾ. ೬-೩). ೨. ವಿಸ್ತಾರಗೊಳಿಸು; ವ್ಯಾಪಿಸುವಂತೆ ಮಾಡು : ನಿಚ್ಚಲುಂ ಬಿಚ್ಚಳಿಸಲ್ ವಿಖ್ಯಾತನಾದಂ (ಚೊಂಕಕಾ. ೦೯೩೬, ೦೪೯ ೯೬ರ ೧೦-೦೩; ೯). ೩. ಅತಿಶಯಗೊಳಿಸು; ದೊಡ್ಡದು ಮಾಡು : ತಮ್ಮ ಪಂಡಿತಿಕ್ಕೆ ಯನಱಿಪಿದೊಡೆ ಸಭೆಯೊಳಿರ್ದ ಪಂಡಿತಜನಮೆಲ್ಲಂ ಮೆಚ್ಚಿ ಬಿಚ್ಚಳಿಸಿ ಪೊಗೞ್ವೊಡೆ (ವಡ್ಡಾರಾ. ೯-೨೬) ; ಸಭಾಸದರ್ ಮೆಚ್ಚಿ ಬಿಚ್ಚಳಿಸಿ ಪೊಗೞ್ವಿನಂ (ಸುಕುಮಾ. ೬-೩೬ ವ). ೪. ಬಿತ್ತರಿಸು; ವಿಶದೀಕರಿಸು; ವಿವರಿಸು : ನಾಯಿಕಾನಿಕುರುಂಬಮುಮಂತವರ ತೆಱನನುಱಿ ಬಿಚ್ಚಳಿಪೆಂ (ರಸರ. ೩-೭೦ ಸೂತ್ರ) ; ನಿಗಮಾಗಮಪುರಾಣವಾಣಿಗಳಿಂ ಸಹಜಸಿದ್ಧಶಿವಾಧಿಕ್ಯಮಂ ಬಿಚ್ಚಳಿಸುತ್ತುಂ (ವೃಷಭ. ೩೬-೦೩೨ ವ). ೫. ಅಧಿಕವಾಗಿ ಹೊಗಳು.— ಪ್ರಶಂಸಿಸು: ಆತಂಗೆ ಮೆಚ್ಚಿ ಬಿಚ್ಚಳಿಸಿ ತನ್ನಂಗಚಿತ್ರಮುಮಂ ಕೆಲವು ಬಾಬುಮಂ ಕೊಟ್ಟು (ವಡ್ಡಾರಾ. ೦೬೨-೬); ತದನಂತರಮೇ ಲೋಕಾಂತಿಕಾಮರವೃಂದಂ ಬಂದು ಬಿಚ್ಚಳಿಸಲೊಡಂ ವಜ್ರಕ್ಕೆ ಬಳಮಿತ್ತಂತೆ ವಜ್ರಸೇನಮಹಾರಾಜಂ . . . ತಪಂಗೊಂಡಂ (ಆದಿಪು. ೬-೨೩ ವ); ಸುರರಂಬರದೊಳ್ ತಗುಳ್ದು ಬಿಚ್ಚಳಿಸೆ ನದೀಜನುಚ್ಚಳಿಸೆ ಕಾದಿದನೇಂ ಕಲಿಯೋ ಗುಣಾರ್ಣವಂ (ಪಂಪಭಾ. ೧೦-೯೩). ೬. ಹೆಚ್ಚಾಗು ; ಅಧಿಕಗೊಳ್ಳು : ಪೊರೆವ ಪೆಣ್ದುಂಬಿಯ ಬಿಚ್ಚಳಿಪ ಪರಭೃತದ ಕಳಕಳದೊಳೆ ಮಸುಳ್ದುದು ದಿವಿಜಯುಗಲಕಲಕಲ ನಿಸದಂ (ಆದಿಪು. ೬-೯೯); ಸಾಹಸಂ ಬಿಚ್ಚಳಿಸಲು ಕೊಡಲಿಯಿಂ ಖಂಡಿಸಿದನಾತನ ಶಿರಸ್ಸನು (ಅರಾಕ. ೨-೨-೨೦). ೭. ಸಂತೋಷಪಡು; ಹರ್ಷಗೊಳ್ಳು: ತಳಿರ್ತಳಮಾವು ಮಾವಿನಂಕುರವುನೆ ಕರ್ಚಿ ಬಿಚ್ಚಳಿಪ ಕೋಗಿಲೆ ಕಂಪನವುಂಕಿ ಪೊತ್ತು ನಿತ್ತರಿಪೆರಲೆಂಬವೇವುವೊ (ಶಂಕಥಾ. ೫-೦೦); ನಡುವ ಸರಲ್ ಸರಲ್ಗೊಳೆ . . . ಮೆಯ್ಗೊಣರ್ಚುವ ಮಹಾರಥರಾಜಿಯೊಳಂತ ಗುರ್ವಿನಚ್ಚುಡಿದಿರೆ ಕಾದಿ ಬಿಚ್ಚಳಿಸಿದರ್ ಬಿಸುನೆತ್ತರ ಸುಟ್ಟುರೆ ಸೂಸುವನ್ನೆಗಂ (ಪಂಪಭಾ. ೧೦-೦೦೪). ೮. ಶೋಭಿಸು; ಪ್ರಕಾಶಿಸು; ಹೊಳೆ: ನಚ್ಚಣೆಯರನು ನೋಡುತ್ತಿರ್ದರೆ ಬಿಚ್ಚಳಿಪ ಚೆಂಬೊನ್ನ ಸೊಬಗಿನ ಸ್ವಚ್ಛವಾದಾ ಸಿದ್ಧಮಂಡಪಮೆಯ್ದಿ (ಪಾಶ್ವ್ಕಥಾ. ೯-೩೨).
[ ಬಿಚ್ಚಳ₁ + — ಇಸು₃ ]

ಬಿಚ್ಚಳೆ 'ಬಿಚ್ಚಳ₁' ನೋ.

ಬಿಚ್ಚಾಲೆ 'ಬಿಚ್ಚೋಲೆ' ನೋ.

ಬಿಚ್ಚಾಳು (ನಾ). ಸ್ವಾತಂತ್ರ್ಯವುಳ್ಳವನು ; ಬಿಡುಗಡೆ ಹೊಂದಿದವನು: ಚನ್ನವಮ್ಮಾಜಿಯುಂ ಪಾಳೋಚಿಸಿ ತಮ್ಮ ರಾಷ್ಟ್ರಕಾಗಿಯವಂ ಬಿಚ್ಚಾಳಾಗಿ ಪೋದುದಹುದಾವಾಳುತಿರ್ಬಳೆಯೊಳ್ಳಿವೆಂದರುಹಿಸಿದಳ್ (ಕಳಪ್ಪ. ೯-೬೯).
[ ಬಿಚ್ಚು₂ + ಆಳು₃ (<ಆಳ್₃) ]

ಬಿಚ್ಚಿಸು 'ಬಿರ್ಚಿಸು' ನೋ.

ಬಿಚ್ಚು₁ 'ಬಿರ್ಚು' ನೋ.

ಬಿಚ್ಚು₂ (ನಾ). ೧. ಸಡಿಲವಾಗುವಿಕೆ : (*). ೨. ಸಡಿಲಗೊಂಡುದು : (*). ೩. ಸರಳತೆ : 'ಬಿಚ್ಚುಗನ್ನಡ' ಪರಾ. ೪. ವಿರಳಗೊಳಿಸುವ

ಸಾಧನ : ಮುಚ್ಚರಿಸುವರ ಬಿಚ್ಚು ಕುಜನರ ಬೆಚ್ಚು ಶಾಂತಿಯು ಹೆಚ್ಚು ಧೂರ್ತರ ಕೊಚ್ಚು ಕಲಿತನದಚ್ಚು ಸುಖಿಕಣೆ ಮುಚ್ಚುಮುಜೆಯಿಲ್ಲ (ಚಕ್ರವು. ೨೮-೪೮) ; ಜಾರರ ಚೋರರ ಬಿಚ್ಚು ಸಂತತಂ ಕುವಲಯದ ಮನೋವಿಲಾಸದ ಮುಚ್ಚು (ಶಬರೋ. ೦೬-೨೪). (ಗು). ೫. ಬಿಡಿಯಾದ ; ಚಿಲ್ಲರೆಯಾದ : 'ಬಿಚ್ಚುರೊಕ್ಕ' ಪರಾ. [<ಬಿಚ್ಚು$_1$]

**ಬಿಚ್ಚು$_3$** 'ಬಿಕ್ಕು$_4$' ನೋ.

**ಬಿಚ್ಚು$_4$** 'ಬಿಜ್ಜು$_2$' ನೋ.

**ಬಿಚ್ಚುಕಣ್ಣು** 'ಬಿಚ್ಚುಗಣ್' ನೋ.

**ಬಿಚ್ಚುಕತ್ತಿ** 'ಬಿಚ್ಚುಗತ್ತಿ' ನೋ.

**ಬಿಚ್ಚುಗಣ್**, ಬಿಚ್ಚುಕಣ್ಣು, ಬಿಚ್ಚುಗಣ್ಣು (ನಾ). ಅಗಲವಾಗಿ ತೆರೆದಿರುವ ಕಣ್ಣು : ಎಚ್ಚು ಹಾಯ್ದಂಬುಗಳು ಭೂತದ ಬಿಚ್ಚುಗಂಗಳ ಕೊಂಡದುರಿಯಲಿ ಬಚ್ಚಿಸಿದ ಗಜ ಸ್ವೇದು ಸೀಕರಿಯೋಗಿ ನಿಮಿಷದಲಿ (ಕುಮಾ.ಗ. ೯-೦೬) ; ಅನಿಲಜನ ಕರಪುಟದಿ ಮಿರುಗುತಿರ್ದಪತಂಸಮಂ ಬಿಚ್ಚುಗಣ್ಣಳಿಂ ನೋಡುತಿರ್ದು (ಶ್ರೀರಾಕೃ. ೫೨೩-೬೦೫). **ಬಿಚ್ಚುಕಣ್ಣು**: ಅವಳನ್ನು ಬಿಚ್ಚುಕಣ್ಣಿನಿಂದ ನೋಡುತ್ತ . . . ಎಂದಳು (ರಾಂಶ್. ೦೦೦). **ಬಿಚ್ಚುಗಣ್ಣು**: ನೀರಲುಗಿ . . . ಸಾವಿನಲ್ಲಿ ತೆರೆದ ಬಿಳಿಯ ಬಿಚ್ಚುಗಣ್ಣು, ಪಾಚಿಯು ಮೂಲಕ ಕಂಡಿತು (ಹೊಸಕ್ಕಿ. ೦೬೯).

[ಬಿಚ್ಚು$_1$ (<ಬಿರ್ಚು) + ಕಣ್]

**ಬಿಚ್ಚುಗಣ್ಣು** 'ಬಿಚ್ಚುಗಣ್' ನೋ.

**ಬಿಚ್ಚುಗತ್ತಿ**, ಬಿಚ್ಚುಕತ್ತಿ (ನಾ). ಒರೆಯಿಂದ ಹೊರತೆಗೆದ ಕತ್ತಿ ; ಹಿರಿದ ಕತ್ತಿ : ಹಂಗಿ ಬಿಚ್ಚುಗತ್ತಿಯು ಹೊಳೆವ ಕಟಯು ಮುಂಡುಗಳ ಬಲಗಳ ಮಧ್ಯದೆ ಸರ್ವಸಂಭ್ರಮದೊಳು ಮಳೆಯಾಳವವನೀಶ ಬಂದ (ಕಂಪಾಹ. ೨೦-೬೩) ; ಬಿಚ್ಚುಗತ್ತಿಪಹರೆಯವರು ಬಲುಜಾಗರೂಕತೆಯಿಂದ ಕಾವಲು ಕಾಯುತ್ತಿದ್ದಾರೆ (ರಾಂಶ್. ೯). **ಬಿಚ್ಚುಕತ್ತಿ** : ಬಿಚ್ಚುಕತ್ತಿಗಳಂ ಪಿಡಿದು (ಸೌಗಂಧಿ. ೨೩೨-೦೦) ; ಅಪ್ಪಭಟರು . . . ಬಿಚ್ಚುಕತ್ತಿಗಳನ್ನು ಹಿಡುಕೊಂಡು ನಿನ್ನ ಸುತ್ತಲು ಸಡೆದು ಬರುವರೆ ? (ಕೃಪಾಸ. ೦೦) ; ಬಿಚ್ಚುಕತ್ತಿಗಳನ್ನು ಕೈಲಿ ಹಿಡಿದು ಮುಂದೆ ನುಗ್ಗಿದರು (ರಾಜಸೂ. ೫೯).

[ಬಿಚ್ಚು$_1$ (<ಬಿರ್ಚು) + ಕತ್ತಿ]

**ಬಿಚ್ಚುಗನ್ನಡ** (ನಾ). ಸರಳವಾದ ಕನ್ನಡ : ತಿಳಿಗನ್ನಡ : ಒಮ್ಮೆ ಕಂಡನೆಂದರೆ ಆಗ ಆಗುವ ಆನಂದವನ್ನು ಬಿಚ್ಚುಗನ್ನಡದಲ್ಲಿ ಬಣ್ಣಿಸಿದ ವಚನಗಳನ್ನು ನೋಡಿ ! (ಶಕ್ತಸು. I. ೦೬೩). [ಬಿಚ್ಚು$_2$ + ಕನ್ನಡ$_1$]

**ಬಿಚ್ಚುಗಯ್ದು** (ನಾ). ಒರೆಯಿಂದ ಸೆಳೆದ ಆಯುಧ : ಮಲ್ಲರಾಜನನ್ನು ಬೆನ್ನಟ್ಟಿ ಬಂದ ಬಿಚ್ಚುಗಯ್ದುಗಳ ತನ್ನವರನ್ನು ಕೆಯ್ಸನ್ನೆಯಿಂದ ಹಿಂದಕ್ಕೆ ಕಳಿಹಿಬಿಡುವನು (ಬಿಕುಗಂ. ೪೯-೦೯).

[ಬಿಚ್ಚು$_1$ (<ಬಿರ್ಚು) + ಕಯ್ದು (<ಕೆಯ್ದು)]

**ಬಿಚ್ಚುಜಡೆ** (ನಾ). ಬಿಚ್ಚಿಕೊಂಡಿರುವ ಜಟೆ ; ಹರಡಿಕೊಂಡಿರುವ ಜಟೆ : ಮೆಚ್ಚಿದನು ಮದನಾರಿ ಹೋಪುದ ಕಿಚ್ಚು ತುಡುಕದ ಮುನ್ನ ತೆಗೆದನು ಬಿಚ್ಚುಜಡೆಗಳ ಜಹ್ನುಸುತೆಯಲಿ ನಾದಿದಸು ಘಟನ (ಕುಮಾ.ಗ. ೯-೨೬). [ಬಿಚ್ಚು$_1$ (<ಬಿರ್ಚು) + ಜಡೆ$_1$]

**ಬಿಚ್ಚುನುಡಿ** (ನಾ). ಮುಚ್ಚುಮರೆಯಿಲ್ಲದ ಮಾತು ; ಸ್ಪಷ್ಟವಾದ ನುಡಿ ; ನೇರವಾದ ಮಾತು : ಅವರ ಬಿಚ್ಚುನುಡಿಗಳನ್ನು ನಾನು ಪ್ರೀತಿಸಿದೆ (ಹಾಳೂರು. ೯೯) ; 'ಎನ್ನ ತಪ್ಪು ಅನಂತಕೋಟಿ ; ನಿಮ್ಮ ಸೈರಣೆಗೆ ಲೆಕ್ಕವಿಲ್ಲಾ !' ಎಂಬ ಬಿಚ್ಚುನುಡಿ (ಸಾಹಿಕಂ. ೩).

[ಬಿಚ್ಚು$_1$ (<ಬಿರ್ಚು) + ನುಡಿ$_2$]

**ಬಿಚ್ಚುಪೇಣಿ** (ನಾ). ಒಂದು ಬಗೆಯ ಸಿಹಿತಿಂಡಿ : ಬೆಂದುದಂ ಪಿಡಿದು ತೆಗೆದಿರಿಸಿಯುತ್ತಮದ ಸಕ್ಕರೆಯನದು ಪದರ್ಗಳೊಳು ತುಂಬಲದು ಬಿಚ್ಚುಪೇಣಿಯಾಯ್ತು (ಸೂಪಶಾ. ೦-೯೯). [ಬಿಚ್ಚು ? + ಫೇಣಿ]

**ಬಿಚ್ಚುಫಿರಂಗಿ** (ನಾ). "ದೊರೆಯು ಸಂಗಡ ತೆಗೆದುಕೊಂಡು ಹೋಗುವ ಆಯುಧ" (ಕಕ್ಕಪಾ. ೨ ಅಕಬಂ೦ರ) : ಓಬಳ್ಣನಾಯಕನಿಗೆ ಪಟ್ಟವಾಯಿತು. ಇವನಿಗೆ ಬಿಚ್ಚುಫಿರಂಗಿ ಹಿಡಿಸಿದವರು (ಕಕ್ಕಪಾ. ೦೬).

[ಬಿಚ್ಚು ? + ಫಿರಂಗಿ]

**ಬಿಚ್ಚುಫೇಣಿ** (ನಾ). = ಬಿಚ್ಚುಪೇಣಿ : ಈಪೋಪಾದಿಯಲ್ಲಿ ಎಲ್ಲ ಫೇಣಿಗಳನೂ ಅಟ್ಟು ಇರಿಸಿ ಎಲ್ಲ ಪದರಿನೊಳಗೆ ಸಕ್ಕರೆಯ ತುಂಬಿ ತಳಿವುದು. ಇದರ ಹೆಸರು ಬಿಚ್ಚುಫೇಣಿ ಎನಿಸಿಕೊಂಬುದು (ಸೂಪಶಾ. ೦-೯೯ ಅಡಿಟಿ). [ಬಿಚ್ಚು ? + ಫೇಣಿ]

**ಬಿಚ್ಚುಮನಸ್ಸು** (ನಾ). ಮುಚ್ಚುಮರೆಯಿಲ್ಲದ ಹೃದಯ ; ತೆರೆದ ಮನಸ್ಸು : ಪದ್ಮಾಕರ ಬಿಚ್ಚುಮನಸ್ಸಿನಿಂದ ಮಾತನಾಡತೊಡಗಿದ (ಕಕ್ಕಗೋ. ೨೨) ; ಒಬ್ಬರನ್ನೊಬ್ಬರು ಬಿಚ್ಚುಮನಸ್ಸಿನಿಂದ ಮೆಚ್ಚಿಕೊಂಡುದು ಜನರಿಗೆ ಮಹದಾನಂದವಾಯಿತು (ಸಂಗೀತ. ೩೦).

[ಬಿಚ್ಚು$_1$ (<ಬಿರ್ಚು) + ಮನಸ್ಸು]

**ಬಿಚ್ಚುಮಾತು** (ನಾ). = ಬಿಚ್ಚುನುಡಿ : ನಿನ್ನ ಬಿಚ್ಚುಮಾತನ್ನು ನಾನು ಮೆಚ್ಚುತ್ತೇನೆ (ದೂರಶ. ೦೦೩) ; ಇದನ್ನು ಬಿಚ್ಚುಮಾತಿನಿಂದ ಶ್ರೀಮದಾನಂದತೀರ್ಥರು . . . ಉಪದೇಶಿಸಿದ್ದಾರೆ (ಶಾರೆದ. ೨೬೧).

[ಬಿಚ್ಚು$_1$ (<ಬಿರ್ಚು) + ಮಾತು$_1$]

**ಬಿಚ್ಚುಮೊಗ್ಗೆ** (ನಾ). ಅರಳಿದ ಮೊಗ್ಗು : ಹೌದು ಧಣಿಯ, ನಾ ಬಿಚ್ಚುಮೊಗ್ಗೆ, ನನಗಿಲ್ಲ ಸೆರಗುಮುಚ್ಚು (ಮುತ್ತಕಂ. ೨೯-೩).

[ಬಿಚ್ಚು$_1$ (<ಬಿರ್ಚು) + ಮೊಗ್ಗೆ]

**ಬಿಚ್ಚುರಥಿಕ** (ನಾ). ಏಕಾಕಿಯಾಗಿ ಕಾದಬಲ್ಲ ರಥಿಕ : ಹೆಚ್ಚಿ ವೀರಾವೇಶದಲಿ ಬಹ ಬಿಚ್ಚುರಥಿಕರನಾಯ್ದು ಧೈರ್ಯದ ಕಚ್ಚುಮುಜೆವನು (ಕುಮಾ.ಕ. ೦೩-೨೨). [ಬಿಚ್ಚು$_2$ + ರಥಿಕ]

**ಬಿಚ್ಚುರೊಕ್ಕ** (ನಾ). ಚಿಲ್ಲರೆ ಹಣ ; ಪುಡಿಗಾಸು : ಬಿಚ್ಚುರೊಕ್ಕ ಇರಲಿಲ್ಲ. ಗುಮಾಸ್ತ ರೂಪಾಯಿ ಮುರಿಸಿಕೊಂಡು ಬರಲು ಹೋದ (ಶ್ರೀತಾಕ್ರ. ೦೪೬). [ಬಿಚ್ಚು$_2$ + ರೊಕ್ಕ]

**ಬಿಚ್ಚುವ** (ನಾ). ಸಂನ್ಯಾಸಿ ; ಭಿಕ್ಷುಕ : ಒರ್ವ ರಸವಾದಕನೆಂಬ ಬಿಚ್ಚುವಂ [ಶಾಪಾಂ. ಭಿಕ್ಷುಕಂ] . . . ಎಂದೊಡೆ (ವಡ್ಡಾರಾ. ೦೪೬-೦೦); ಆ ಬಿಚ್ಚುವಂ . . . ತನ್ನೊಳವಧಾರಿಸಿ (ಸುಕುಮಾ. ೩-೬ ವ).

[< ಸಂ. ಭಿಕ್ಷುಕ]

**ಬಿಚ್ಚೂರಿಗೆ** (ನಾ). ಒಂದು ಬಗೆಯ ಭಕ್ಷ್ಯ : ಮಂಡಗೆ ಪೇಣಿ ನಲ್ಸೈದ ಲಡ್ಡುಗೆಯ ಬಿಚ್ಚೂರಿಗೆಗಳಂ ಬಡ್ಡಣಿಸಿದರಂಗನೆಯರು (ಪುರೇಪು. ೦೬-೨೪) ; ಗಾರಿಗೆ ಲಡ್ಡುಗೆ ಬೇಸೂರಿಗೆ ಬಿಚ್ಚೂರಿಗೆ . . . ಮಧು ಸಕ್ಕರೆಗಳ ಸಾರಂಗಳ ಸುಳಿವಾಳೆಯ ದೊನ್ನೆಯೊಳಾರೈದೆರೆದರ್ಸವಿಗಾತಿಯರ್ (ಪುರೇಪು. ೦೯-೩೬).

[ಬಿಚ್ಚು ? + ಹೂರಿಗೆ (<ಪೂರಿಗೆ)]

**ಬಿಚ್ಚಿ** 'ಬಿಕ್ಕಿ$_2$' ನೋ.

**ಬಿಚ್ಚಿಕಾರ** (ನಾ). ಭಿಕ್ಷುಕ ; ತಿರುಪೆಯವನು : ಈ ಬಿಚ್ಚಿಕಾರ ಭಿಕಾರಿ ರಾಯ . . . ಕೊಸವ . . . ವೃದ್ಧಜಂಬುಕ (ಮುಂಕ್ಸಶ. ೦೦೦-೦೯).

[ಬಿಚ್ಚಿ (< ಬಿಕ್ಕಿ$_2$) + –ಕಾರ$_1$ (< –ಕಾಱ) / ತಮಿ. ಪಿಚ್ಚೈಕ್ಕಾರನ್]

**ಬಿಚ್ಚೋಗರ** (ನಾ). (ಹೂವಿನಂತೆ) ಉದುರುದುರಾಗಿರುವ ಅನ್ನ ; ಮುದ್ದೆಯಾಗಿಲ್ಲದ ಅನ್ನ : ಮಲ್ಲಿಗೆಯರಳಂತೆ ಬಿಚ್ಚೋಗರ ಮೊಸರು . . . ರಸರಸಾಯನವ ಚಪ್ಪರಿದು ನೀರ್ಮಜ್ಜಿಗೆ ಹಸಗೆಯ್ಯಿರಲೀಂಟದರು (ಪೋಹತ. ೩-೫೬). [ಬಿಚ್ಚು$_1$ (<ಬಿರ್ಚು) + ಓಗರ]

**ಬಿಚ್ಚೋಲೆ**, ಬಿಚ್ವಾಲೆ (ನಾ). (ಮುತ್ತೈದೆಯರು) ಕಿವಿಗೆ ಆಭರಣವಂತೆ ಧರಿಸುವ ತಾಳೆಗರಿಯ ಸುರುಳಿ : ಬಿಚ್ಚೋಲೆ ಹರಿಹು ಹೆಜ

ತಿಲಕಂ ಕಂಗಳಸಲಸದೆ ಕೇದಗೆವೂಗಳೊಳೆತ್ತಂ ಮಾಡಿ ತೊಟ್ಟಿರಬಲೆಯರೆಲ್ಲಂ (ಸೂಕ್ತಿಸು. ೦೦-೩೦); ಮಣಿನ ಬಿಚ್ಚೋಲೆಗಳ ಬಣ್ಣದ ಪೊನ್ನ ನೂಲಂಗಳ ಗಿಂಗಳೇ ಫಲವಾದುವಾ ಸುರಕರಿಯ ನೋಂಪಿಯ ದಾನಕೆ (ಸಂಶಶ. ೨೦-೨೦); ತಾನೆ ಐರದಾಳಿಯ ಬಿಚ್ಚೋಲೆಯ ಚಂದವಸದ . . . ಕರುಡವಂ ಕೈಯೊಳ್ಕೊಂಡು (ರಾಮಾಕ್ಕ. ೨೯-೦೬). ಬಿಚ್ಚಾಲೆ : ಶ್ರೀರಂಗವ್ಮನು ಆಭರಣಗಳನ್ನೆಲ್ಲಾ ಪರಿತ್ಯಜಿಸಿ ಅರಿಶಿನ ಕುಂಕುಮವನ್ನು ಇಟ್ಟುಕೊಂಡು ಬಿಚ್ಚಾಲೆಯನ್ನು ಧರಿಸಿಕೊಂಡು . . . ಹೇಳಿ ಕಳುಹಿಸಿದಳು (ಶ್ರೀರಾಯ. ೩೭೦); ಮದುವೆಯಾಗಿದ್ದರೆ. ಹೆಂಡತಿಯು ಅರಿಶಿನಕುಂಕುಮ ಬಳೆ ಬಿಚ್ಚಾಲೆಯನ್ನು ತೆಗೆಸುತ್ತಿದ್ದರು (ದೂರಸ. ೨೬೯).

**ಬಿಚ್ಚೋಲೆ ಗೌರವ್ಮ, ಬಿಚ್ಚೋಲೆಯ ಗೌರವ್ಮ** = ಯಾವ ಆಭರಣಗಳನ್ನೂ ಹಾಕಿಕೊಂಡಿರದ ಬಡವುತ್ತೈದೆ : ಅವಳು ಬಿಚ್ಚೋಲೆ ಗೌರವ್ಮನಂತೆ ಮದುವೆಮನೆಗೆ ಹೊರಟಿದ್ದಳು (ರೂಶಿ); ತಾಯಿಯ ಜಂಬ ಆಡಂಬರಗಳನ್ನೇ ಅರಿಯದ ಬಳೆ ಬಿಚ್ಚೋಲೆಯ ಗೌರವ್ಮ (ದೂರಸ. ೯೩).

[ಬಿಚ್ಚು$_1$ (<ಬಿರ್ಚು) + ಓಲೆ . / ತುಳು. ಬಿಚ್ಚೋಲೆ]

**ಬಿಚ್ಚ್ಬ** ‘ ಬಿಚುವಾ ’ ನೋ.

**ಬಿಚ್ವ** ‘ಬಿಚುವಾ’ ನೋ.

**ಬಿಚ್ವಾ** ‘ಬಿಚುವಾ’ ನೋ.

**ಬಿಛಾನಾ** ‘ಬಿಚಾನ’ ನೋ.

**ಬಿಛಾಯತ, ಬಿಚಾಯಿತ, ಬಿಛಾಯಿತ** (ನಾ). ದಲ್ಲಾಳಿ ; ಕಮಿಷನ್ ಏಜೆಂಟ್ : ಇಲ್ಲಿ ಲೋಕಬಂದ ಜೀನಸಗಳ ಒಡವೆ ಬಹಳ, ಅಂತ ನಮ್ಮ ಬಿಛಾಯತರು ಇದು ಧ್ಯಾನದಲ್ಲಿ ತಂದು (ಮುಂಬವ್ಯಾ. ೩೦). **ಬಿಚಾಯಿತ :** ಪರವೂರಿಂದ ಬಂದ ಬಿಚಾಯಿತರು ಊರಿನೊಳಗಿನ . . . ಅಂಬೋಣ ಏನಿರುವದು ಇದನ್ನು ಕೇಳಿಕೊಂಡು ಅದರಂತೆ ವ್ಯವಸ್ಥೆಯನ್ನು ಮಾಡುವದು (ಮುಂಬವ್ಯಾ. ೨೯೦). **ಬಿಛಾಯಿತ :** ಈ ಮಾಹಿತಿಯು ಬಿಛಾಯಿತರಿಗೆ ಬಹು ಅಗತ್ಯ ಇರತಕ್ಕದ್ದು (ಮುಂಬವ್ಯಾ. ೨೯).

[← ಮರಾ. ಬಿಛಾಯತ್, ಬಿಛಾಇತೀ, ಬಿಛಾಯತೀ]

**ಬಿಛಾಯಿತ** ‘ ಬಿಛಾಯತ ’ ನೋ.

**ಬಿಜ** ‘ಬಿಜಯ’ ನೋ.

**ಬಿಜಆ** (ನಾ). ಒಬ್ಬಾಕೆಯ ಹೆಸರು : ಪೊಳಲಿನಾಡುಳ್ಕೊಟಿಯೂರು ಬರಗೂರು ಬಿಜಆ ಮಾದೇವಿಯಾಳುತ್ತಿರೆ (ಎಕ. XII. ಶಿರಾ. ೨೯-೩೬; ಸು. ೪೦೦). [< ಸಂ. ವಿಜಯಾ]

**ಬಿಜಯ, ಬಿಜ** (ನಾ). ೧. ವಿಜಯ ; ಗೆಲುವು : “ಬಿಜಯ (ಬಿಜ)— ವಿಜಯ=ಗೆಲುವು” (ತದ್ಭಕೋ. ೩೦). ೨. ಪ್ರಯಾಣ ಮಾಡಿ ಬರುವುದು ; ಆಗಮನ ; ಬರವು : ಮಾಡುವುದು: ನೀವ್ ಬಿಜಯವಲ್ಲಿಗೆ (ಸಂಶಶ. ೦೬-೩೦) ; ವರದರಾಜದೇವರ ತೇಕಲ ಪಟ್ಟಣಕೆ ಬಿಜಯಂ ಮಾಡ್ಸಿಕೊಂಡು (ಎಕ. X (S). ಮುಳಬಾ. ೩-೦೬; 1430). ೩. ತೆರಳುವಿಕೆ; ಹೊರಡುವಿಕೆ ; ನಿರ್ಗಮನ : ಬಿಜಯಮೆಸಗಲಿಕೆಮಗಾಜ್ಞೆಯೀಂ (ಶರಚು. ೩-೦೩). ☞ ಇದು ಸಾಮಾನ್ಯವಾಗಿ ರಾಜರು, ಗುರುಗಳು, ಹಿರಿಯರು ಮುಂತಾದವರ ಆಗಮನ. ನಿರ್ಗಮನಗಳಿಗೆ ಅನ್ವಯಿಸುವ ಗೌರವಸೂಚಕವಾದ ಶಬ್ದ. ೪. (?) : ಆ ಊರ ಬಿಜಯರು ಕಂಮಾಜರು ಅಗಸಾಲೆಯರು ನಾಯಿಂದರು (ಎಕ. IV (H). ಎಳಂದೂ. ೦೩೪-೯ ; ೧೩ನೆಯ ಶತ).ಬಿಜ : ೧. ಮೇಲಿನ ‘ತದ್ಭಕೋ’ ಪ್ರಯೋಗವನ್ನು ನೋಡಿ.

**ಬಿಜಯ ಮಾಡಿಸು, ಬಿಜ ಮಾಡಿಸು** = ೧. ಬರುವಂತೆ ಮಾಡು; ಕರೆತರು : ಸರಸ್ವತೀಮಂದಿರದೊಳಗೆ ಅವರನ್ನು ಬಿಜಯ ಮಾಡಿಸು (ಶರೀವ. ೦೦೩) ; ಆಗ ಹುಜೂರ್‌ಸವಾರಿ ಬಿಜಯ ಮಾಡಿಸುವುದೆಂದರೆ ಬಹಳ ದೊಡ್ಡ ಉತ್ಸವ (ಕೆಂಪ. ೩೯). ೨. (ಉತ್ಸವದಲ್ಲಿ ದೇವರ ವಿಗ್ರಹ ಮುಂತಾದುವುಗಳಂತೆ) ತೆಗೆದುಕೊಂಡು ಹೋಗು ; ಸಾಗಿಸಿಕೊಂಡು ಹೋಗು ; ಒಯ್ಯು : ಆ ಶ್ವೇತವರಾಹಸ್ವಾಮಿಯ ಪ್ರತಿಮೆಯನ್ನು ಬಿಜ ಮಾಡಿಸಿಕೊಂಡು ಶ್ರೀರಂಗಪಟ್ಟಣವನ್ನು ಸೇರಿದರು (೬ಶಕ. ೯೯); ಛತ್ರಕ್ಕೆ ಈಶ್ವರದೇವರ ಉತ್ಸವಮೂರ್ತಿಯನ್ನು ಬಿಜ ಮಾಡಿಸಿಕೊಂಡು ಹೋದರು (ಗುರುದಾ. ೦೩೧). ೩. ಬರು ; ಆಗಮಿಸು : ಭರತಪ್ರಭುಗಳ ಸವಾರಿ ಬಿಜ ಮಾಡಿಸುತ್ತಿದೆ (ಹುಟ್ಟಿಹ. ೦೬೨) ; ಮಹಾರಾಣಿಯವರು . . . ಕೈಸಾಲೆಗೆ ಬಿಜ ಮಾಡಿಸಿದರು (ಕೃಷ್ಣರ. ೬). **ಬಿಜಯ ಮಾಡು, ಬಿಜ ಮಾಡು** = ೧. ದಯಮಾಡು ; ಬರು ; ಆಗಮಿಸು : ಈಯಟವಿಯಲಿ ದುಷ್ಟಮೃಗಸಮುದಾಯವಿದೆ . . . ಬೇಂಟೆಗೆ ಬಿಜಯ ಮಾಡು (ತೊರರಾ. ೩-೩-೬) ; ದ್ವಿಜತಿಲಕ . . . ನಿಜಶಿಷ್ಯನಂ ಕೂಡಿಕೊಂಡು ಮಾಖಮಂಟಪಕೆ ಬಿಜಯ ಮಾಡಿದ ಕಜ್ಜಮಾವುದು (ಕೃಂಾಕಾ. ೨೬-೩೨) ; ನಿಜವಾಗಿ ತೆರಳ ಬೇಕಾಯಿತಾದಡೆ ಜೀಯ ಬಿಜ ಮಾಡಿ ಬೆನ್ನಾಂತುಕೊಂಬೆ (ಕೋಹಕ.೩೬-೩೬); ಶ್ರೀ ಜ್ಞಾನಸಂಬಂಧರನ್ನು ಮನೆಗೆ ಬಿಜ ಮಾಡುವಂತೆ ಮಾಡಿರಿ (ಪುರಾಂ. ೦೬೦). ೨. ತೆರಳು ; ನಿರ್ಗಮಿಸು ; ಹೊರಡು : ನಿಮ್ಮ ಪದ ದರುಶನದಿ ಧನ್ಯನು ಬಿಜಯ ಮಾಡುವುದೆನುತ ಕಂದೆಱೆದೀಕ್ಷಿಸಿದನಂದುಭಯಸೈನಿಕವ (ಕುವ್ಯಾದ್ರೋ. ೦೮-೬೦); ನಿರುತದಾರೋಗಣೆಯ ಮಾಡಿಯೆ ಮರಳಿ ಬಿಜ ಮಾಡು (ಸಂಶಶ. ೨೬-೧೩) ; ಆಶ್ಚರ್ಯವನು ತೋರುವೆ ಬಂದಿರಾದರೆಯೆನಲು ಬಿಜ ಮಾಡೆಂದು ಮುನಿಪನ ಕೂಡೆ ಹೊಱಮಟರು ಕುಮಾರಕರು (ಕೌಶಿರಾ. ೦-೯೬). ೩. ಆರಂಭವಾಗು ; ಮೊದಲಾಗು : ಈ ಸೂತ್ರಸಮುದಾಯ ಮತ್ತು ಇದರೊಂದಿಗೆ ಉಪನಿಷತ್ತುಗಳು ಮತ್ತು ಭಗವದ್ಗೀತೆ ಈ ಮೂರೂ ಸೇರಿ ವೇದಾಂತಶಾಸ್ತ್ರದ ಆಧಾರಶಿಲೆಯೆನಿಸಿದೆ. ವೇದಾಂತವು ಬಿಜ ಮಾಡುವುದು ಇಲ್ಲಿಂದಲೇ (ಶಾರದ. ೨೩೦).

[< ಸಂ. ವಿಜಯ]

**ಬಿಜಯಂಗೆಯ್, ಬಿಜಯಂಗೆಯಿ, ಬಿಜಯಂಗೈ, ಬಿಜಯಂಗೈಯಿ** (ಕ್ರಿ). ೧. ಬರು ; ದಯಮಾಡು ; ಆಗಮಿಸು ; ಚಿತ್ತೈಸು : ಘಟ್ಟರಾ ಕಿತ್ತಯ್ಯಂಗಳನೆಮ್ಮಲ್ಲಿಗೊಡಗೊಂಡು ಬಂದು ಚರಿಗೆದೋಱು ನೀಮುಂ ಬಿಜಯಂಗೆಯ್ಯಮೆನೆ (ವಡ್ಡಾರಾ. ೬೦-೦೩) ; ನಿಮ್ಮಯ್ಯಂ ಧೃತರಾಷ್ಟ್ರನ ಬೆಸದಲ್ ಮುನ್ನಮೆ ಮಾಡಮಂ ಸಮೆದಿಟ್ಟನಲ್ಲಿಗೆ ಬಿಜಯಂಗೆಯ್ಯಂ (ಪಂಪಭಾ. ೩-೨ ವ) ; ಎಲೆ ದೇವಾ ಭೀಷ್ಮರಿತ್ತಲಿರ್ದಪರಿತ್ತ ಬಿಜಯಂಗೆಯ್ಯಂ (ಗದಾಯು. ೩-೩೬ ವ). ೨. ಹೊರಡು ; ತೆರಳು ; ನಿರ್ಗಮಿಸು ; ಹೋಗು : ಎಮ್ಮ ಪಾಸಿದ ಚಿತ್ರಪಟವೆಂಬ ಬಲೆಯೊಳ್ ನಿಮ್ಮಂತಪ್ಪ ಬೆಳ್ಮೆಗಂಗಳಾಗಳೆ ತೊಡರ್ಗುಮಸಿರದೆ ಬಿಜಯಂಗೆಯ್ಯಂ (ಆದಿಪು. ೩-೬೯ ವ) ; ದೇವ ನೀಮಿಂ ತಡೆಯದೆ ಬಿಜಯಂಗೆಯ್ವುದೌಚಿತ್ಯಂ (ಕುಸುಮಾ. ೯-೦೦೩) ; ವಿಮಳವ್ಯೋಮಕೇಶನು ನಗುತ ಬಿಜಯಂಗೆಯ್ಯಲನುವಾದ (ಕುಶ್ಯಾಕ. ೭-೧೦). ೩. ಇರು ; ವಿರಾಜಿಸು : ಇಂತು ಬಂದು . . . ಗಿರಿಜೆ ಭರದಿಂ ಗಿರಿರಾಜನ ತೊಡೆಯ ಮೇಲೆ ಬಿಜಯಂಗೆಯ್ದಳ್ (ಗಿರಿಕ. ೪-೯೯). **ಬಿಜಯಂಗೆಯಿ :** ೧. ಆ ಶಂಕರಪ್ರತಿಮಾನ ಸಹಿತಭಯಂಕರಂ ಬಿಜಯಂಗೆಯಿದನಿಂದು (ಚತು. ೩೦-೬). **ಬಿಜಯಂಗೈ:** ೧. ಸಿರಿಸರಸ್ವತಿವೆರಸಿ ಗಿರಿಜೆ ಬಿಜಯಂಗೈದಳು (ಸಿದ್ಧರಾ. ೦-೩೩) ; ಕರುಣಿ ಬಿಜಯಂಗೈದು ಮೃತ್ಯುವಿಸುರಿವ ಗಂಟಲೊಳಿಳಿವ ತನ್ನನು ಬರಸೆಳೆದನಂದಮಳಮಾರ್ಕಂಡೇಯಮುನಿ ನುಡಿದ (ಕುವ್ಯಾಕ. ೧೯-೦೬); ನೀವು ಬಿಜಯಂಗೈವಡಧಿಕೃತಪಾವನರಲೇ (ತೊರರಾ. ೦-೩ ೩೦). ೨. ಹರಂ ಕರುಣದಿಂ ನೋಡಿ ಬಸವನ ಚಿತ್ತದೊಳ್ ಪೊಕ್ಕು . . . ನೆಲಂ ಮೆಚ್ಚಿ ಮೆಱೆದಪೆಂ ಎಂದು ಬೆಸಸಿ ನಿಜಲಿಂಗಕ್ಕೆ ಬಿಜಯಂಗೈವುದುಂ (ಬಸರ. ೨-೬೨); ಹರನ ಕರುಣದ ಹದನನೀತಂಗೊರೆದು ಶತರುದ್ರೀಯಮನು ವಿಸ್ತರಿಸಿ ಬಿಜಯಂ

ಗೈದನಾ ಮುನಿಪತಿ ನಿಜಾಶ್ರಮಕೆ (ಶಾಬ್ದಪ್ರೋ. ೦೯-೩೪). ಬಿಜಯಂಗೈಯಿ : ೨. ನಮಗೆ ನಿಮಗಿನ್ನಾವ ಜಂಜಡ ಬೇಡ ತಪದ ಫಲಾವಳಿಯೆ ಸಾಕಿನ್ನು ಬಿಜಯಂಗೈಯಿ ನೀವು (ಕೊರಠಾ. ೦-೦೭-೦೭). [ಬಿಜಯ + ಕೆಯ್₁]

**ಬಿಜಯಂಗೆಯಿ** 'ಬಿಜಯಂಗೆಯ್' ನೋ.

**ಬಿಜಯಂಗೆಯಿಸು** 'ಬಿಜಯಂಗೆಯ್ಸು' ನೋ.

**ಬಿಜಯಂಗೆಯ್ಸು**, ಬಿಜಯಂಗೆಯಿಸು, ಬಿಜಯಂಗೈಯಿಸು, ಬಿಜಯಂಗೈಸು (ಕ್ರಿ). ೧. ಕರೆದು ತರು ; ಬರುವಂತೆ ಮಾಡು : ಜಂಗಮವ ಕಂಡು ಗೃಹಕ್ಕೆ ಬಿಜಯಂಗೆಯ್ಸಿ ತಂದು (ಚನ್ನವ. ೪. ೩೪-೩೪); ಅವರ್ಗಳನೀಗ ಬಿಜಯಂಗೆಯ್ಸಿ ತಹೆ (ಬಸಪು. ೬-೪೨) ; ಅರಸನನುಜರು ಸಹಿತ ಮುನಿಮುಖ್ಯರನು ಕಂಡಿದಿರೆದ್ದು ಚರಣದೊಳೆಱಗಿ ಬಿಜಯಂಗೆಯ್ಸಿ ತಂದನು ತಳರ ಮಂಟಪಕೆ (ನಳಚ. ೦-೦೦). ೨. ಒಳಹೊಗುವಂತೆ ಮಾಡು; ಪ್ರವೇಶಿಸುವಂತೆ ಮಾಡು : ಪಾರ್ವತಿಯಂ ಪರ್ವತರಾಜಂ ಪುಷ್ಪಕದೊಳ್ ಬಿಜಯಂಗೆಯ್ಸಿ ತಾನುಂ ಕುಳ್ಳಿರ್ದು (ಗಿಂಕ. ೫-೦೨ ವ) ; ಸಜ್ಜಾಮಂದಿರಕೆ ಸಡಗರಿಸಿ ಮಾಯೆಯುನಲ್ಲಮನನೊಲಿಸಿ ತಂದು ಬಿಜಯಂಗೆಯ್ಸಿದರು ಬಳಿಕಿಂದುಮುಖಿಯರು (ಪ್ರಭುಲಿಂ. ೫-೯೯). ಬಿಜಯಂಗೆಯಿಸು : ೧. ಖುಚಿಕುಮಾರನಂ . . . ಒಲವಿನಿಂ ಬಿಜಯಂಗೆಯಿಸಿ ಕರೆತಂದು (ಅಧ್ಯಾತ್ಮ. ೨-೩೨ ವ) ; ದಯಾಳುವಂ ಬಿಜಯಂಗೆಯಿಸಿ ತಂದೊಳಗೆ ಕುಳ್ಳಿರಿಸಿ (ಬಸಪು. ೫೨-೪). ಬಿಜಯಂಗೈಯಿಸು : ೧. ಸೌಂದರಮತಿಯಂ . . . ಒಯ್ಯನೆ ಕನಕಾಂದೋಳನದೊಳ್ ಬಿಜಯಂಗೈಯಿಸಿಕೊಂಡೆಟ್ಟಿಂದುವಪವನಮಂ ಪೊಕ್ಕು (ಅಧ್ಯಾತ್ಮ. ೬-೩೩ ವ). ಬಿಜಯಂಗೈಸು : ೧. ಹರಿಯ ಬಿಜಯಂಗೈಸಿ ತಂದಸುರರಸು ಭಂಗಿಸಿ ಯಜ್ಞಕರ್ಮವ ಧರಿಸಿ ಸುಖಿಯಹೆನು (ಕೌಶಿಕಾ. ೦-೩೮) ; ಬಂದನತಿಹರುಷದಲಿ ಮುನಿಕುಲವೃಂದದೊಡನೈತರಲು ರಘುಕುಲನಂದು ಬಿಜಯಂಗೈಸಿ ತಂದನು ರಾಜಮಂದಿರಕೆ (ರಾಮಾಶ. ೩೪-೦೨೭). ೨. ಮತ್ಸ್ಯದೇವರಸೊಯ್ಯಂ ಗಂಗೆಯಲಿ ಒಯ್ದು ಬಿಜಯಂಗೈಸೆ ಗುಗ್ಗುಳನ್ನದೆ ತುಂಬಿದನೊಂದು ರೂಪಿಲಿ (ಸಂಶಕ. ೪-೬). [ಬಿಜಯ + ಕೆಯ್ಸು₁]

**ಬಿಜಯಂಗೈ** 'ಬಿಜಯಂಗೆಯ್' ನೋ.

**ಬಿಜಯಂಗೈಯಿ** 'ಬಿಜಯಂಗೆಯ್' ನೋ.

**ಬಿಜಯಂಗೈಯಿಸು** 'ಬಿಜಯಂಗೆಯ್ಸು' ನೋ.

**ಬಿಜಯಂಗೈಸು** 'ಬಿಜಯಂಗೆಯ್ಸು' ನೋ.

**ಬಿಜಯಿತ**, ಬಿಜಯಿತ್ತ, ಬಿಜಯ್ತ, ಬಿದಿಯಾಯ್ತ, ಬಿದೆಯಿತ್ತ, ಬೆಜಯಿತ್ತ (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಬಿಜಯಿತನು ಮರಿಯಸೆಯೊಳ್ ಭಗವತಿಯಂ ಪದಿಷ್ಠೆಗೆಯ್ಸಿದೊಡ (ಪ್ರಕಂ. ೦೯೩೪. ೩೮-೦ ; ಶಿಸಖ ೫೫). ಬಿಜಯಿತ್ತ : 'ಬಿಜಯಿತ್ತಯ್ಯ' ಪರಾ. ಬಿಜಯ್ತ : ಗವಟಿಬಿಜಯ್ತನ ನಟ್ಟ ಬೆಲ್ಲಪಾತ್ರದ ಮರಂಗಳ್ (ಎಕ. III (R), ತಂಶಿಸ. ೩೩೪-೦೫ ; ಶು. 10ಶತು ೫೫). ಬಿದಿಯಾಯ್ತ : ಬಿದಿಯಾಯ್ತ ತುಱುವ ನಿಕ್ಕಿಸಿ ಕಾದು ಸತ್ತು ದಿವನೇಱಿದಂ (ಎಕ. II, ೩೯೪-೯; 884 ?). ಬಿದೆಯಿತ್ತ: ಪೆರ್ಬಟ್ಟಿಕೈಂ ಬಿದಿರೂರ ಅಗ್ಗಳವಿಳಿವಲ್ಲಿ ಅಂಕಕೆ ಕಾದಿದ ಬಿದೆಯಿತ್ತ ಸತ್ತನ್ (ಎಕ. X, ಶ್ರೀನಿವಾ. ೨೭-೨೪; 870). ಬೆಜಯಿತ್ತ : ಬೆಜ[ಯಿ]ತ್ತನ್ . . . ಆನೆಯುಳ್ ಕುದುರೆಯುಳ್ ತಾಗಿ ಪಲರನಿಱಿದು ಸತ್ತೊಡೆ (ಎಕ. X, ಮುಳಬಾ. ೨೨೬-೬; ಶು. 890 ?). [< ವಿಜಯಾದಿತ್ಯ]

**ಬಿಜಯಿತಗಾವುಂಡ** (ನಾ). ಒಬ್ಬಾತನ ಹೆಸರು : ಇದಕ್ಕೆ ಸಾಕ್ಷಿ . . . ಬಿಜಯಿತಗಾವುಣ್ಡನುಂ ಬನ್ನಗಾವುಣ್ಡನುಂ (ಎಕ. XI, ಹೊಳಲ್ಕೆ. ೩೦-೦೦ ; ೯೦೪) ; ಬಿಜಯಿತಗಾವುಣ್ಡನ ಮಗಂ ಅಮ್ಮಡಿಗಾವುಣ್ಡಂ (ಪ್ರಕಂ. ೦೯೩೦. ೯೩-೫; ೯೯೪). [ಬಿಜಯಿತ + ಗಾವುಂಡ ( < ಗಾಮುಂಡ)]

**ಬಿಜಯಿತಮಂಗಲ** (ನಾ). ಒಂದು ಸ್ಥಳದ ಹೆಸರು : ಶ್ರೀಮನ್ನೊಳಮ್ಬಾಧಿರಾಜರ್ ಪೃಥಿವೀರಾಜ್ಯಂಗೆಯ್ಯುತ್ತಿರೆ ಜೋಟ ಬಿಜಯಿತಮಂಗಲದ ನೊಟಮ್ಬನ ದಣ್ಣಾಂ ಕಾದು ಪೆಜ್ಜಿಟಿಯೊಳ್ನೊಟಮ್ಬರಸ ಕಾದಿ ಸತ್ತಂ (ಎಕ. IX, ಹೊಸಕೋ. ೯೭-೬; ಶು. 980 ?). [ಬಿಜಯಿತ + ಮಂಗಲ]

**ಬಿಜಯಿತಾಚಾರಿ** (ನಾ). ಒಬ್ಬಾತನ ಹೆಸರು : ಬೆಸಂಗೆಯ್ದೊಂ ಕೊಯತೂರ ಬಿಜಯಿತಾಚಾರಿಯ ಮಗಂ ವಿಕ್ರಮಾದಿತ್ಯಂ (ಎಕ. X, ಮಾಲೂರು. ೦೦೬-೯; ಶು. 950). [ಬಿಜಯಿತ + ಆಚಾರಿ]

**ಬಿಜಯಿತ್ತ** 'ಬಿಜಯಿತ' ನೋ.

**ಬಿಜಯಿತ್ತಯ್ಯ** (ನಾ). ಒಬ್ಬಾತನ ಹೆಸರು : ಶ್ರೀ ಬಿಜಯಿತ್ತಯ್ಯಂ ಮಾದಾಮುತ್ತರಸರಾ ಪೊಟಲಮ್ಮನಾ ಮೇಗಿಟ್ಟು (ಎಕ. X, ಶ್ರೀನಿವಾ. ೪೦-೦; ಶು. 900). [ ಬಿಜಯಿತ್ತ (< ಬಿಜಯಿತ) + ಅಯ್ಯ₁]

**ಬಿಜಯಿಸು** (ಕ್ರಿ). ಬರು; ಆಗಮಿಸು; ದಯಮಾಡು : ಲಂಕೇಶ್ವರಂ ಶ್ರಮನಿವಾರಣಾರ್ಥಂ ಪುರಕೆ ಬಿಜಯಿಸಿದನು (ಶ್ರೀರಾಮಪು. ೬೦೦-೨೩೪); ಲಕ್ಷ್ಮೀ, ಪಡಸಾಲೆಯಿಂದ ದೇವರ ಮನೆಗೆ ಬಿಜಯಿಸಿದ ಭಾಸವಾಯಿತು (ಲೀಕಕ. II. ೧೪೦). [ಬಿಜಯ + — ಇಸು₁]

**ಬಿಜಯ್ತ** 'ಬಿಜಯಿತ' ನೋ.

**ಬಿಜಲಿ** (ನಾ). ೧. ಮಿಂಚು; ವಿದ್ಯುತ್ತು : ಈ ನಿನ್ನ ಹುತಾಗೆಯಂತೂ ಕೇವಲ ಬಿಜಲಿಯಾಗಿದ್ದಾಳೆ — ಬಿಜಲಿ (ಹಂಸಾ. ೪೮). ೨. ವಿದ್ಯುದ್ದೀಪ: ಅದು ಸಂಜೆಗೆ ಬಿಜಲಿಗಳನ್ನು ಹಚ್ಚಿದಾಗ ಆಟದ ಚಪ್ಪರ . . . ಒಳ್ಳೆ ಸಿಂಗಾರವಾಗಿ ಕಾಣುತ್ತಿದ್ದಿತು (ಪುನರ್ಜ. ೦೩೭).

[ ← ಹಿಂ. ಮರಾ. ಬಿಜಲೀ. / ಪ್ರಾ. ವಿಜ್ಜುಲಿಯಾ]

**ಬಿಜವರ** (ನಾ). ಒಂದು ಬಗೆಯ ಆಭರಣ : ಕೆಂದ ಪೀತಾಂಬರವ ಸಂಧಿ ಉಟ್ಟಿರುವಳು ಅಂದವಾಗುಡಿಗೆ ಮುತ್ತಿನ ಸೊಂಡಿಲ ಬೈತಲ ಬಂದಿ ಬಿಜವರ ಬಲುಚೆಂದ (ಸಿರ್ಕೃ. ೦೯-೬೦).

[ ← ಮರಾ. ಬಿಜವರಾ, ಬಿಜೋರಾ]

**ಬಿಜಾಗರಿ** (ನಾ). ತಿರುಗಣೆ; ತಿರುಪುಮೊಳೆ ; ಕೀಲು : ಅದರ ಮೇಲೆ ತಲೆಯ ಹಿಂದೆ ಮುಂದೆ ಮಣಿಯುವ ಹಾಗೆ (ಬಿಜಾಗರಿಯಂತೆ) ಕೂಡ್ರಿಸಲ್ಪಟ್ಟದೆ (ಜೀವಶಾಸ್ತ್ರ. ೬-೩೦೨); ಬಿಜಾಗರಿಯನ್ನು ಟೆಲಿಗ್ರಾಫ್ ಸುತ್ತಿನ ತಂತಿಗೆ ಜೋಡಿಸಿರುತ್ತಾರೆ (ಬಿಕ್ಕಾವಿ. ೨೩); ಬೀಗ, ಬಿಜಾಗರಿ, ಅರ, ಕೊಡತಿ ಮೊದಲಾದ ಸಾವಿರಾರು ಸಲಕರಣೆಗಳಿದ್ದುವು (ಅಪೂಕ. ೬೭).

[← ಮರಾ. ಬಿಜಾಗರೀ, ಬಿಜಾಗರೇ. / ತುಳು. ಬಿಜಾಗ್ರಿ, ಬಿಜಾಕ್ರಿ, ಬಿಜಿಗ್ರಿ]

**ಬಿಜಿಕ್**, ಬಿಝಿಕ್ (ನಾ). ಒಂದು ಬಗೆಯ ಇಸ್ಪೀಟು ಆಟ ; ಇಬ್ಬರು ಅಥವಾ ನಾಲ್ವರು ಸೇರಿ ಆಡುವ ಆಟ; ಕಪ್ಪುರಾಣಿ ಮತ್ತು ಕೆಂಪು ರಾಜರನ್ನು ಸೇರಿಸಿ ಅಂಕಗಳನ್ನು ಆಡುವ ಆಟ : ಗಂಜೀಫ ಆಡೂ ಹಾಂಗಿಲ್ಲಾ, ಬಿಜಿಕ್ ಆಡೂ ಹಾಂಗಿಲ್ಲಾ (ತಿರುಗು. ೪೫); ಮಧ್ಯಾಹ್ನಕ್ಕ ಬಿಜಿಕ್ಕಿಗೆ ಬರತೀವಲ್ಲೋ ? (ತಿರುಗು. ೪೫). ಬಿಝಿಕ್ : ನಿನಗೆ ಬಿಝಿಕ್ ಬರುವುದೋ (ಗಾಳಿಕ. ೦೯) ; ಈ ಮಿತ್ರರನ್ನು ಕರೆದುಕೊಂಡು ಎರಡನೇ ಕೋಣೆಯಲ್ಲಿ ಬಿಝಿಕ್ ಆಡಲಿಕ್ಕೆ ಹೋಗುತ್ತೇನೆ (ಮೋಹಿನೀ. ೫೪). [← ಮರಾ. ಬಿಜಿಕ್, ಬಿಝಿಕ್./ಇಂ. Bezique]

**ಬಿಜಿಲು** (ಗು). ಗಜಿಬಿಜಿ : ದೊಳ್ಳ ಹೆಬ್ಬಾಗಿಲಲ್ಲಿ ಕಾಣಿಸಿಕೊಂಡು ಬಿಜಿಲು ಬಿಜಿಲು ಮಾತಿನಲ್ಲಿ "ಅಂವಿನ್ನೂ ಬಂದಿಲ್ಲಂತೆ" ಎಂದನು (ಮರಳಿಮ. ೩೭೬).

[?]

**ಬಿಜ್ಜ₁** (ನಾ). ಒಬ್ಬಾತನ ಹೆಸರು : ಸತ್ಯಳ್ಗಿ ಎಟ್ಟಿತ್ತಜಿಯೊ[ಳ್] ಬಿಜ್ಜಂ ನಾಟ್ಬೂ[ವು]ಣ್ಡುಗೆಯೆ (ಸೌಇಇ. XX, ೦೩-೦೦; ೯೦೪); ಮುಂ ಬಿಜ್ಜನಂ [ಪಾಠಾಂ. ವಜ್ರಿಯಂ ?] ಕಾದರಿಗನುಟಾದರಂ ಕಾವುದೇಂ ಚೋದ್ಯ

ಮಾಯ್ತೇ (ಶಂಶಠ. ೦೦-೬೦); P " ಬಿಜ್ಜನಂ=ವಿಜಯಾದಿತ್ಯನೆಂಬ ರಾಜನನ್ನು " (ಶಂಶಠ. ೪೦೦).

ಬಿಜ್ಜನ ಬಂಟ=ಒಂದು ಬಿರುದು : ಬಲಪದನಿನ್ರಿಪತಿ ನಿಷ್ಕಂಟಂ ಬಿಜ್ಜನ ಬಂಟಂ (ಎಕ. VIII. ಸಾಗ. ೦೦೯-೦೦: 1042). [<ಬಿಜಯ]

**ಬಿಜ್ಜ₂, ಬೆಜ್ಜ₂** (ನಾ). ಒಂದು ಬಗೆಯ ತೆರಿಗೆ : ಬೆಳುದಂಡ ಎಸೆ ಒಸಗೆ ಬಿಜ್ಜ ಬಿಡಾರವತ್ತ್ಯಗಾಯಿ ಮೊದಲಾಗಿ ಆಉದೂ ಸಲ್ಲ ಸರ್ವಮಾನ್ಯವಾಗಿ (ಕಇ. I, ೩೯-೩; 1483 ?); ತುಳುವದ ಶಾಸನಗಳಲ್ಲಿ ಬರುವ ತೆರುವಣಗಳು: ತೆರು. . . ಒಸಗೆ, ಬಿಜ್ಜ, ಬಿಡಾರ (ತುಳುಚಾ. ೨೬೦). **ಬೆಜ್ಜ₂**: ಆ ಮಳಲೂರ ಪಟ್ಟಣದ ಹೊಜಿಕೇರಿಗೆ ಸಲುವ ಬೆಜ್ಜನೂ (ಎಕ. IX (S). ಹಳ್ಳಿ. ೦೫೨-೦೦; 1535 ?). [ ? ]

**ಬಿಜ್ಜಣ, ಬಿಂಕಣ, ಬಿಂಕಣೆ, ಬಿಚ್ಚೆಳ್ಳ₂, ಬಿಜ್ಜಣೆ, ಬಿಜ್ಜಲ, ಬಿಜ್ಜಳ, ಬೀಜನ, ವಿಜ್ಜನ** (ನಾ). ಬೀಸಣಿಗೆ; ವೀಜನ; ಪಂಕ : "ಬಿಜ್ಜಣವೆನ ಲಾಲವಟ್ಟಂ" (ಶಶಬ. ೦೫೨); ಹಿಮಾನಿಲನಿಂ ನಿವಿರುವ ಪೊಂಬಾಚೆಯ ಸುಟಿಯೆಲೆಯ ಬಿಜ್ಜಣಂಗಳಿಂ . . . ಹಿಮಗೃಹವಂ ಸಮೆದು (ಕುಸುಮಾ. ೦೩-೪೬ ವ); ಸೊಗಸಿ ತಂಗಾಳಿಗೊರೆವೆಲೆಯಿಂದೆ ಬಿಜ್ಜಣವೆಸಗಿ . . . ಬಾಳೆಗಳ್ ಮೆಚಿದುವು (ಶಬ್ದಾ. ೮-೩೫). **ಬಿಂಕಣ** : "ಬಿಂಕಣ (ಣೆ)— ವ್ಯಜನ" (ಕರ್ನಾಕೋ. ೬೦). 'ಬಿಂಕಣಗಿವಿಯ' ಪರಾ. P 'ಬಿಂಕಣ' ಶಬ್ದಕ್ಕೆ ಬೇರೆಯ ವ್ಯುತ್ಪತ್ತಿ ಸಾಧ್ಯವಿದೆಯೆ ಎಂಬುದು ಪರಿಶೀಲನಾರ್ಹ. **ಬಿಂಕಣೆ** : 'ಬಿಂಕಣಗಿವಿ' ಪರಾ. **ಬಿಚ್ಚೆಳ್ಳ₂** : ಸೂಚಿಜುದೊಯ್ಯನೊಯ್ಯನೆ ಮಹೀಧರನಂದನರೊಲ್ದು ಬೀಸುವಾ ಬಾಳದ ಪೊಚ್ಚ ಬಿಚ್ಚಳದ ತಂಬೆಲರಿಂಬಿಗೆ ಮೆಯ್ಯನಿತ್ತು . . . ಉದ್ಭಟದೇವನೊಪ್ಪಿದಂ (ಉದ್ಭಟ. ೨-೦೦೩). **ಬಿಜ್ಜಣೆ** : ಅನಂತಮೆನಿಪ್ಪ ವೃತ್ತವದನದ ಲಕ್ಷ್ಮಿಯಿತ್ತಿ ಕೈನೀಡಿ ಬೀಸುತ್ತಲಿಹ ಬಿಜ್ಜಣೆಯ ಪೊತ್ತಮೊಂಬಂತಿರ್ದುದು (ರಾಜ್ಯಾಂಗ. ೩-೬). **ಬಿಜ್ಜಲ** : ಚೂರ್ಣ ಹಿಮಕಾಂಬೂಲ ಪರ್ಣ ಪೂಗಂಗುಡುವೆಲರ್ ನಯದ ಬಿಜ್ಜಲದ ವರ್ಣನೆಯ ಸಖಿಯರೊಳು ಮಾರ್ನಡೆದಳರಸಿ (ಶಾಪಕಾಂ. ೯-೨೦). **ಬಿಜ್ಜಳ** : ಬಿಜ್ಜಳ ಹಡಪ ಚಾಮರ ಗಿಂಡಿ ಕಳಾಂಜಿ . . . ಮುಕುರ ಬಾಚಣಿಗೆಯ ಕಜ್ಜದರೊಳಗಿರ್ದರು ಸುತ್ತ (ಸೂಂಶೋ. ೨೩-೨೬); ಉಗಂಧದಣ್ಣಗೆ ಬಿಜ್ಜಳದೆಲರಿಗೆ ಪರಿಮಳಿಸುವ ಪನ್ನೀರ್ಗೆ ಒರಿದು ಬಯಸುತವರ್ನಿರ್ವರೆಸೆದರಾಗ (ಕಂಶರ. ೦೦-೫೨). **ಬೀಜನ**: ಹಿಮರೋಚಿಯ ತಣ್ಣರ್ದಿಗಳ್ಗೆ ಶೀತಶೀತಳಿಕೆಯ ಬೀಜನಕ್ಕೆ ಗುಜಿಯಾಯ್ತು [ವಿ]ಯೋಗಿಜನಂ ಬಸಂತದೊಳ್ (ಪರ್ಶಶಾ. ೦೦-೪೪). **ವಿಜ್ಜನ** : 'ವಿಜ್ಜನಸತಿ' ಪರಾ.

ಬಿಜ್ಜಣದೂಳಿಗ =ಬೀಸಣಿಗೆ ಹಿಡಿದು ಬೀಸುವ ಸೇವೆ, _ಊಳಿಗ : ಅಂಗವರ್ಧನದ ಬಿಜ್ಜಣದೂಳಿಗದಂತ ಭೃತ್ಯರಂದಂಚಿತ ಚಿಕ್ಕದೇವನರ ನಾಯಕನಾ ಸಭೆಯೊಳ್ ವಿರಾಜಿಸಂ (ಚಿದಶಂ. ೨-೬೩).

[< ಸಂ. ವೀಜನ./ ಪ್ರಾ. ವಿಜ್ಜ=ಗಾಳಿ ಹಾಕುವುದು,_ಬೀಸುವುದು]

**ಬಿಜ್ಜಣಂದಳೆ** (ಕ್ರಿ). ಬೀಸಣಿಗೆಯನ್ನು ಹಿಡಿ: ಹಸ್ತಕಂಜದಿಂ ಕರದಾಜಿ ಬಿಜ್ಜಣಂದಳೆದು ಬೀಸಿ ಮುದಂಬಡೆ (ಬಿಷ್ಣುಪು. ೩-೬-೬೦). [ಬಿಜ್ಜಣ+ತಳೆ₁]

**ಬಿಜ್ಜಣವಿಕ್ಕು, ಬಿಜ್ಜಳವಿಕ್ಕು** (ಕ್ರಿ). (ಬೀಸಣಿಗೆಯಿಂದ ಬೀಸುವಂತೆ) ಗಾಳಿ ಹಾಕು : ಗಾಳಿ ಬೀಸು : ಗಜಿಗೆದಜಿ ಕೊಡೆವಿಡಿದು ನಿಂದುವು ಬಿಸಿಲ್ಗೆ ನವಿಲೆಚಿಕೆಯಂ ಬೀಸಿ ಬಿಜ್ಜಣವಿಕ್ಕಿತಂಚೆ (ಕೃಷ್ಣಕಾ. ೨೬-೩೬); ಆ ಪಾಂಥದೊಳು ಮಂದಾನಿಲಂ ಕುಳಿರಾಂತು ಬಿಜ್ಜಣವಿಕ್ಕಿದುದು (ಕಂಶರ. ೨-೦೯). **ಬಿಜ್ಜಳವಿಕ್ಕು**: ಬಳಲಿದಗೆಸವ ಗಜಿಯಿಂದ ಬಿಜ್ಜಳವಿಕ್ಕಿದಪುವು ಶಿಖಿವಿಸರಂ (ಪಂಪಶಾ. ೨೦-೨೬). [ಬಿಜ್ಜಣ + ಇಕ್ಕು]

**ಬಿಜ್ಜಣೆ** 'ಬಿಜ್ಜಣ' ನೋ.

**ಬಿಜ್ಜಣಿಗ** (ನಾ). ಬೀಸಣಿಗೆಯಿಂದ ಗಾಳಿ ಹಾಕುವವನು,— ಬೀಸುವವನು : ಹಡಪದವರಂ ಬಿಜ್ಜಣಿ[ಗಾಶಾಂ. ೪]ಗರನಾ ಕಳಾಂಜಿ ವಿಡಿವರಂ . . . ಎಳೆವಕ್ಕಳ ಕಡುವಿಲಾಸದೊಳಮರ್ಚಿಸಿ ಕೊಟ್ಟು (ಶಂಶಪು. ೩-೯೩). [ಬಿಜ್ಜಣ + — ಇಗ]

**ಬಿಜ್ಜಣಿಗೆ, ಬಿಜ್ಜಳಿಗೆ, ವಿಜ್ಜಣಿಗೆ** (ನಾ). = ಬಿಜ್ಜಣ : "ಬಿಜ್ಜಣಿಗೆ, ಆಲವಟ್ಟಂ — ಈ ೨ ತಾಲವೃಂತಂ" (ಶಶಬ. ೬೨-೬೫೨) : ಪೊಸ ತಳಿರ್ಗಳ ಬಿಜ್ಜಣಿಗೆಯನೆಸೆವೆಲರ್ಗಳಿನೊಗೆವ ಘರ್ಮಜಲವಂ ಪಿರ್ದಾಜಿಸಿದುವು . . . ಲತಾಂಗಿಯರ್ಗೆ (ಅಂಶಪು. ೦೦-೬೫); ಅಂತು ಕಂತು ಸಂತಾಪಕ್ಕೆ ಪಕ್ಕಾಗಿ . . . ಬೀಸುವ ಕುಜುಮೆಯ ಬಿಜ್ಜಣಿಗೆಯೊಳಂ ಪಾಸುವ ಬಾಳಪ್ರವಾಳತಳ್ಪತಳದೊಳಂ . . . ಶಿಶಿರೋಪಚಾರಚಾತುರತ್ವಂ ಮೆಚಿಯೆ (ಅನಂತಪು. ೦೦-೨೯ ವ). **ಬಿಜ್ಜಳಿಗೆ** : ಅಹಿಗಳಂ ಸಂತೈಸಿ ಬಿಜ್ಜಳಿಗೆಯಾ ಮೇಲೆ ಬೀಸುತ್ತಲುರಣಿಸನಿತ್ತು ಸಂತೈಸಿ (ಜೀಕೃಪು. ೭-೩-೦); ವಿಳಿರ್ವರಳದಳಿರ್ದೊಂಗಲ ಬಿಜ್ಜಳಿಗೆಯ . . . ಎಲರಿಂ ಕುಳಿರ್ದುದು ಮೆಯುಚ್ ಬನದೊಳೊಯ್ಯನಾ ಅರವಂಗನಾ (ಕಶ್ಯಾಪು. ೬೩ ವ್ಯಾಖ್ಯಾ). **ವಿಜ್ಜಣಿಗೆ** : ಸೊರಗುವವೆಗೆಯ ತಿಳಿದಳವಳಿದು ವಿಜ್ಜಣಿಗೆ ಬೀಸಿದುದು ನಿನಗೆ ವಿಗೆ ಬೇಸಜಾದುದಕಟಾ (ಶಳಕ. ೪೯). 'ಬಿಜ್ಜಣ', 'ಬೀಸಣಿಗೆ' ಪರಾ. [ < ಸಂ. ವ್ಯಜನಕ. / ತುಳು. ಬಿಜ್ಜಣಿಗೆ]

**ಬಿಜ್ಜಣಿಸು** (ಕ್ರಿ). (ಬೀಸಣಿಗೆಯಂತೆ) ಅತ್ತಿತ್ತ ಒಲೆದಾಡು,— ತೂಗಾಡು : ಕುಕ್ಕಿದಡುಗುರಳಿ ಬಿಜ್ಜಣಿಪ ಲಂಘನೆಗುದಯಗಿರಿಗಸ್ವಾದ್ರಿ ದಡದಡಿಪ . . . ಸಿಂಗಣಕಗಳನರ್ಬುದವನತಿಬಲ ತಾರ ತೋಜಿಸಿದ (ಹೂರಠಾ. ೯-೬-೨೩). [ಬಿಜ್ಜಣ + — ಇಸು]

**ಬಿಜ್ಜಲ** 'ಬಿಜ್ಜಣ' ನೋ.

**ಬಿಜ್ಜವಳ** 'ಬಿಜ್ಜವಳ₁' ನೋ.

**ಬಿಜ್ಜಳ** 'ಬಿಜ್ಜಣ' ನೋ.

**ಬಿಜ್ಜಳವಿಕ್ಕು** 'ಬಿಜ್ಜಣವಿಕ್ಕು' ನೋ.

**ಬಿಜ್ಜಳಿಗೆ** 'ಬಿಜ್ಜಣಿಗೆ' ನೋ.

**ಬಿಜ್ಜಾದರ, ಬಿಜ್ಜೋದರ, ವಿಜ್ಜಧರ** (ನಾ). ೧. ದೇವತೆ; ವಿದ್ಯಾಧರ: ಆ ಡಂಗುರದನಿಗೇಳಿ ಬಿಜ್ಜಾದರನಾಡ ನರೇಂದ್ರನಂದನರು . . . ಗತಿ ಯುದ್ಧವ ಮಾಡುವೆವೆಂದೆಯ್ದಿದರು (ಜೀಬಸಂ. ೩-೩೩). **ಬಿಜ್ಜೋದರ**: ೧. "ಅಮರ್ದಣಿಸಂಗಳ್ . . . ಬಿಜ್ಜೋದರರ್ . . . (ಬೋಳೆಯರ್) — ಈ ೯ ದೇವರ್ಕಳ ಪೆಸರ್" (ಶಶಬ. ೯೬-೧೯); ವಿದ್ಯಾಧರ–ಬಿಜ್ಜೋದರ (ಶಮುದ. ೨೩೯ ಪ್ರಯೋ); ನರರ ಬಿಜ್ಜೋದರರ ಸುರರ ಮುನಿವರರ ಮನದಬಲುರಿ ಒರಿದಾಗ (ರಾಮಾಶ್ವ. ೦೨-೦೬). **ವಿಜ್ಜಧರ** : ೨. ಒಬ್ಬಾತನ ಹೆಸರು : ಶ್ರೀಮದುಗ್ಗಮರರ ಪೊ ಇತ್ತರ್ ವಿಜ್ಜಧರರ ದೇಗುಲ (ಎಕ. VI. ಕಂಣೆ. ೬೦-೨; ಸು. 750). [ < ಸಂ. ವಿದ್ಯಾಧರ]

**ಬಿಜ್ಜಾದರಿ, ಬಿಜ್ಜೋದರಿ** (ನಾ). ವಿದ್ಯಾಧರ ಸ್ತ್ರೀ; ಹೆಣ್ಣುದೇವತೆ : ಆದರದಿಂ ಪುಣ್ಯನಿಧಿ ನಿನ್ನ ಕಂಡು ಬಿಜ್ಜಾದರಿಗೀಗಳೆಯ್ದಿದವು (ಶ್ರೀಪಾಂ. ೩-೩). **ಬಿಜ್ಜೋದರಿ** : "ಬಿಜ್ಜೋದರಿಯರೆ ವಿದ್ಯಾಧರಿಯರ್" (ಶಶಬ. ೬೯) ; ಮುಗಿಲೆಡೆಯೊಳೆಡೆವಿಡದಡೆಯಾಡಿ ಬಟಲ್ದ ಬಿಜ್ಜೋದರಿಯರ್ಕಳಪಟ್ಟಿಗೆದಾಣಮೆಂಬಂತಸೆವನೀರ್ಗಳಂ ಪೊತ್ತಾಗಸದೆಡೆಗಡರ್ವ ಚೆಂದೆಗಿನ ಮರಂಗಳೊಳಂ (ಶಬ್ದಾ. ೬೦); ಇಲ್ಲಿ ಹುಟ್ಟಲುಬಹುದು ಗಂಗೆಯು ಇಲ್ಲಿ ಬಿಜ್ಜೋದರಿಯು (ಪ್ರಾಷಪ. ೨೦-೬). [<ಸಂ. ವಿದ್ಯಾಧರೀ]

**ಬಿಜ್ಜು₁** (ನಾ). (ಅತಿಯಾಗಿ ತಿನ್ನುವ) ಒಂದು ಬಗೆಯ ಪಕ್ಷಿ : ವಾರಿವ ಕೌಡೆ ಬಿಜ್ಜು ಹೊಂಗಟಿ ಚಕ್ರಾಯುಧ ಗಿಡುಗ ಗೀಜಗನಾ ಗಿಳಿ ಕಾಡ ಗುಬ್ಬಿಗಳ್ ಬರುತಿರೆ (ಶಪ್ಪಕಾ. ೬-೨೦೩); ಪಕ್ಷಿಗಳ ಗೂಡು ಗುಂಪುಗಳ ಗುಯರ್ಮಾಡುವ ಗಿಡುಗ ಲಗಡು ಬಿಜ್ಜುಗಳಂ (ಶ್ರೀಗಂಂ. ೨೦-೬).
[ದೇ. ೩ ಕೋಶ. ವಿಜ್]

**ಬಿಜ್ಜು₃, ಬಿಚ್ಚು₄** (ನಾ). ೧. ಸಿಡಿಲು ; ಕೂಸು ಉಣ್ಣುತ್ತಿರಲಾಗಿ ಆಕಾಶದ ಬಿಜ್ಜು ಹೊಯಿದಿತ್ತು . . . ಆ ಬಿಜ್ಜು ಹೊಟ್ಟೆಗೆಯ್ದದೆ ಅಪ್ಪ ಅಪ್ಪೆ ಎನ್ನುತ್ತಿದ್ದಿತ್ತು (ಪುಪುಗಂ. ೪. ೨೫೨-೨೯). ೨. (ಅಲಂ) ಹಾನಿ ಕೇಡು: ಎಲ್ಲರಿಗಿಂತಲೂ ಹೆಚ್ಚಾಗಿ ತಾವು ಮೇಲಕ್ಕೆ ಏರಬೇಕೆಂದು ಯತ್ನ ಮಾಡುವಾಗ, ಏನೋ ಒಂದು ಬಿಜ್ಜು ಬಿಡಿದು ಅವರು ಕೆಳಕ್ಕೆ ಬೀಳುತಾರೆ (ಸುಕುಶ. ೨೬೩). **ಬಿಚ್ಚು₄** : ೧. ಚತ್ತಾರನೆ ಒಂದು ಸಿಡಿಲು ಬಿಡಿಯಿತು . . . ಆ ಅಧಿಕಾರಿಯು ತಾನೇ ಆ ಸ್ಥಳಕ್ಕೆ ಬಂದು ನೋಡಿ ಬಿಚ್ಚು ಬಿಡಿದು ಆ ಹಗರಣವೆಲ್ಲಾ ಆಯಿತೆಂದು ನಿಷ್ಕರ್ಷೆ ಮಾಡಿಕೊಂಡು (ಅದೂಟಿ. ೦೬೯).

[<ಪ್ರಾ. ವಿಜ್ಜು, ವಿಜ್ಜುಆ./ಹಿಂ. ಬಿಜ್ಜು; ಮರಾ. ವೀಜ್; ಪಂಜಾಬಿ. ಬಿಜ್ಜ; ಸಿಂಧಿ. ವಿಜು]

**ಬಿಜ್ಜೆ, ವಿದ್ದೆ** (ನಾ). ೧. ತಿಳಿವಳಿಕೆ : ಜ್ಞಾನ : ವಿದ್ವತ್ತು : "ಬಿಜ್ಜೆಯೆಂದು ವಿದ್ಯಂ" (ಕಶಶಾ. ೩೬-೨೯೦); ಉದ್ಯೋಗ—ಉಜ್ಜುಗ; ವಿದ್ಯಾ—ಬಿಜ್ಜೆ (ಕಶಬ. ೨೫೯ ಕ್ರಿಯೋ); ಬಿನಯದ ಬಿತ್ತು ಬಿನ್ನಣದ ಪೆರ್ಮೊಳೆ ಬಿಜ್ಜೆಯ ಬೇರ್ . . . ಅನುವಾತುವನ್ನು ಬಿಣ್ಣೊನೆಯೆನೆ ಚಿಕ್ಕದೇವ ನೆಸೆದಂ (ಅಕ್ರತಿ. ೦೩-೨೦). ೨. ಕಲಿಕೆ; ವಿದ್ಯೆ; ಶಿಕ್ಷಣ: ಸುಗಜಾಶ್ವರೋಹಣ ಭರವಿರಿಂಚಿಯೆನಿಪ್ಪ ಬಿಜ್ಜೆಯ ಕಲಿತನಾ ಕುವರ (ಸಾಳ್ವಭಾ. ೯-೩); ಕಲಿತ ಬಿಜ್ಜೆಯ ಬಲ್ಲರಿಗೆ ಕೇಳಿಪುದ್ಯೆಸೆ (ಹರಿಶ. ೦-೨೯). ೩. ಜಾಣ್ಮೆ; ಪ್ರೌಢಿಮೆ ; ಚಾತುರ್ಯ ; ಕೌಶಲ : ಅಲರುವಿಲ್ಲನ ಬಿಜ್ಜೆಯೊಬ್ಬಗ್ಗಲದ ಬಿನ್ನಣ ಸವೆದ ನರಪುತ್ಥಳಿಗಳೆನಿಸಿದರಾಂತು ನಿಂದಖಳಾವನೀಶ್ವರರು(ಸಾಳ್ವಭಾ. ೪೦-೬೩); ಭಿಗುರ ಬೀರಿದ ಬೀರವೊ ? ಬಲ್ಲ ಬಿಜ್ಜೆಯೊ (ಗಿರಿಜಾ. ೩೨-೬). ೪. [ಜೈನ] ದೇಹವನ್ನು ಮಾರ್ಪಾಟುಗೊಳಿಸುವ ಶಕ್ತಿ ; ವೈಕುರ್ವಣವಿದ್ಯೆ : ದೇವಕೋಟಿಗಳ ಬಿಜ್ಜೆಗಳೊಳ್ ತೊಡರ್ದೇಕೆ ಪೋವನೀ ದೊರೆಯುನನಾಳ್ದನಂ ಪಡೆವುಪಾಯಮುಮದಾವುದೊ ಜನ್ಮಜನ್ಮದೊಳ್ (ಆದಿಪು. ೯-೬೩) ; ನಾಲ್ಕುಂ ತೆಱದ ಪುಸಿವಡೆಯಂ ಬಿಜ್ಜೆಯಿಂ ಪುಟ್ಟಿಸಿ (ಕಬ್ಬಿಗಕ. ೦೯೬). **ವಿದ್ದೆ** : ೧. "ವಿದ್ದೆ—ವಿದ್ಯಾ" (ಶಬ್ದಮಣಿ. ೪೦); ಒದವೋವದೊಱುದ ವಿದ್ದೆ ಸಲ್ಲದ ಚದುರ್ ಸಜೆ ಕಲ್ಲದ ಕಲ್ಪಿ (ಹಂಪಭಾ. ೯-೯೩); ಶ್ರೀಗೆ ವಿಜಯಕ್ಕೆ ವಿದ್ದೆಗೆ ಜಾಗಕ್ಕದಟಂಗೆ ಜಸಕೆ ವೆಂಪಿಂಗಿನಿತಕ್ಕಾಗರಂ (ಎಕ. II, ೦೪೩-೬೯; ೯೮೨) ; ಅವರವರುಗಳ ವಿದ್ದೆಯ ನೋಡಿ ಮೆಚ್ಚಿ ಸದ್ವಿಪರದಿಂದುಮುಗೊಱುತ್ತು (ಪ್ರೀಹತ. ೦೯-೦೬). ೨. ಗುರುಗಳೆನಗಂ ಭಾರದ್ವಾಜಂಗದೊರ್ವರೆ ವಿದ್ದೆಯೊಳ್ ಪುರುಡು ಪಿರಿದುಂಟು (ಹಂಪಭಾ. ೦೨-೦೯); ತದಂಬಿಕೆ ಲಸನ್ನೈರಾಗ್ಯ ಸಂಯುಕ್ತೆ ಸಂಜಾತಾನಂದದಿನಿತ್ತು ವಿದ್ದೆಗಳನಾ ಘಿಃಷ್ಮಂಗೆ (ಜೀಮಿಭಾ. ೩-೨೨). [<ಪ್ರಾ. ವಿಜ್ಜಾ./ಸಂ. ವಿದ್ಯಾ]

**ಬಿಜ್ಜೆಗ** (ನಾ). ೧. ವಿದ್ವಾಂಸ ; ಪಂಡಿತ : 'ಬೇದಬಿಜ್ಜೆಗ' ಪರಾ. ೨. ಚತುರ ; ಕುಶಲ ; ಜಾಣ : ಸರಭಸದಿಂದೆರ್ಬ್ಬಲದ ಬಿಲ್ವಡೆಯೊಳ್ ಸಲೆ ಬಲ್ಲ ಬಿಜ್ಜೆಗರ್ ಸುರತನಪುತ್ರಕೊಳ್ಳ . . . ಬೇಗಮದೇತಟೊ (ಶಾಂತೀಶ್ವ. ೬-೬೬). [ಬಿಜ್ಜೆ + —ಗ್ಗ]

**ಬಿಜ್ಜೆಗಲ್, ಬಿಜ್ಜೆಗಲಿ** (ಕ್ರಿ). ವಿದ್ಯೆಯನ್ನು ಕಲಿ ; ಶಿಕ್ಷಣವನ್ನು ಹೊಂದು : ಆವಗಂ ಬಿಜ್ಜೆಗಲ್ವುದುಂ ಬಿನಯಂದೋರ್ಪುದುಂ . . . ಜಯಮುಮಂ ಸಂಪಾದಿಪುದುಂ ಮೊದಲಾದೊಳ್ಳೆಯ್ತುದೊಳೆ ಪೊತ್ತುಗಳೆಯುತ್ತ (ಚಾವು. ೩-೦೯). **ಬಿಜ್ಜೆಗಲಿ** : ಪಿರಿಯರ ಮಗಳೆಂದು ಬಿಜ್ಜೆಗಲಿತನೆಂದು . . . ಬೆಱೆಯವನುಸರಿಸುವುದಾತ್ಮವಲ್ಲಭನ (ಹರಿ. ೩-೪೦).

[ಬಿಜ್ಜೆ + ಕಲ್₁]

**ಬಿಜ್ಜೆಗಲಿ** 'ಬಿಜ್ಜೆಗಲ್' ನೋ.

**ಬಿಜ್ಜೆಗಲಿಸು** (ಕ್ರಿ). ಶಿಕ್ಷಣ ಕೊಡು ; ವಿದ್ಯೆಯನ್ನು ಹೇಳಿ ಕೊಡು : ನಿನಗೆ ಬಿಜ್ಜೆಗಲಿಸಿದ ಬೊಜ್ಜು ಹಾರುವ, ಆ ಗಾಲವ, ಹಾಳಾಗಿ ಹೋಗಲಿ ! (ತಂತ್ರಸ. ೪೦-೦೯). [ಬಿಜ್ಜೆಗಲ್ + —ಇಸು]

**ಬಿಜ್ಜೆಗುಱುಹು** (ನಾ). ವಿದ್ಯೆಯ ಗುರುತು.— ಚಿಹ್ನೆ : ಗುತ್ತಿಗೆವಿಡಿದಂತೆ ನೆಱೆ ಸಾಧಿಸಿದಱುಪತ್ತುನಾಲುಕು ಬಿಜ್ಜೆಗುಱುಹ ಪ್ರತ್ಯಕ್ಷಚಾತುರ್ಯತೆಯರ ಪರಿಕೆಯ ನೋಡು ಚಿತ್ತಯಿಸೆಂದರಂಗನಗೆ (ಪ್ರೋಹತ. ೧೬-೦೦).

[ಬಿಜ್ಜೆ + ಕುಱುಹು (<ಕುಱುಪು)]

**ಬಿಜ್ಜೆವರು** (ನಾ). ಒಂದು ಊರಿನ ಹೆಸರು : ಬನ್ನಗಾವುಣ್ಣನುಂ ಕೋಳ್ಳಮ್ಮಗಾವುಣ್ಣನುಂ ಗಾವುಣ್ಣ ಗಣ್ಣಯ್ಯನುಂ ಬಿಜ್ಜೆವರುಮಯಿನ್ದ ಮಯ್ಯನೆಜೆಯಮ್ಮನುಂ (ಎಕ. XI, ಹೊಳಲ್ಕೆ. ೪೦-೦೧; ೯೬೪).

[☞ ಇದು 'ಬಿಜ್ಜೆವರ' ಎಂದಿರಬಹುದೆ ?]

**ಬಿಜ್ಜೆವಳ, ಬಿಜ್ಜವಳ** (ನಾ). ೧. ವಿದ್ಯಾವಂತ : ಪಂಡಿತ : ವಿದ್ವಾಂಸ : ಸರಸತಿಯುಡಿದರ್ಗೆ ತಲೆದುಡುಗೆಯೆನೆ ಪೆಸರ್ವಡೆವ ಬಿಜ್ಜೆವಳನಿಂ ಸಮೆದ ಕಾವಪ ಗಲ್ಲಂ ಮೆಱೆಯುತಿರ್ಪುದು (ಕಬ್ಬಿಗಕ. ೩೯೯); ಪೊಜಣಗಿ ತೋಪುಗಳೊಳಂ ಬಿಜ್ಜೆವಳರ ನೆರವಿಗಳೊಳಂ . . . ತವ್ಯಾ ಚಾರರಂ ನೆಲೆಗೊಳಿಸಿ (ಧಾರಶಾಂ. ೪೩೩-೭೦); ನಾನಾ ನಾಡುಗಳಿಂದೆ ಬಿಜ್ಜೆವಳರುಂ ಕೃಗೈಯ್ದು ದೊಳ್ವಾಣರುಂ ತೇನಂತೇನಮೆ ಬಂದು ಬೀಡುಗೊಳುತಂ (ಪ್ರಸೂಪು. ೦-೪೯). ೨. ವಿದ್ಯೆಯ ಅಧಿದೇವತೆ ; ಗಣಪತಿ : "ಕರಿಮೊಗಂ, ಇಲಿದೇರಂ, ಎಡರ್ಗೇಡಿ, ಬಿಜ್ಜೆವಳಂ . . . ತಂದೆಯು ತಂದೆಯಿಲ್ಲದವಂ ಈ ೭ ವಿನಾಯಕಂಗೆ ಪೆಸರ್" (ಕಶಶಾ. ೧೬-೪). **ಬಿಜ್ಜವಳ**: ೨. "ಬಿಂಕಣ ಗಿವಿಯನೆನೆ ಬಿಜ್ಜವಳನೆಸಲ್ ವಿಘ್ನೇಶಗಭಿಧಾನವು" (ಕಶಕ. ೮೦).

[ಬಿಜ್ಜೆ + —ವಳ]

**ಬಿಜ್ಜೆವಳ್ತಿ** (ನಾ). ವಿದ್ಯಾವತಿ ; ಪಂಡಿತೆ : ಕಿರಿದು ಪೊರ್ಗ್ಗೇ ನೆಲದೊಳಾಂ ಬಿಜ್ಜೆವಳ್ತಿಯೆನಿಸುದರ್ಕೆ . . . ಮೆಚ್ಚಂ ಪಡೆಯದಿರ್ದೊಡಮಗೆ ಪೆಸರ್ವಾಸಿಯಿಲ್ಲಂ (ಪುಣ್ಯಾಶ. ೬-೦೯).

[ಬಿಜ್ಜೆವಳ+<—ಇತಿ (<—ಇತ್ತಿ)]

**ಬಿಜ್ಜೆವೆಣ್ಣು** (ನಾ). ವಿದ್ಯೆಯ ಅಧಿದೇವತೆ ; ಸರಸ್ವತಿ : "ಬಾಣಿ ಬಿಜ್ಜೆವೆಣ್ಣುಂ ಬಾಸೆವೆಣ್ಣು ಸರಸತಿಯುಮೆನೆ ವಾಣಿಯಕ್ಕುಂ" (ಕಬ್ಬಿಗ. ೯). [ಬಿಜ್ಜೆ+ವೆಣ್ಣು (<ಪೆಣ್)]

**ಬಿಜ್ಜೋದರ** 'ಬಿಜ್ಜಾದರ' ನೋ.

**ಬಿಜ್ಜೋದರಿ** 'ಬಿಜ್ಜಾದರಿ' ನೋ.

**ಬಿಜಿಯಿಕ್** 'ಬಿಜಿಕ್' ನೋ.

**ಬಿಟಿ** 'ಬಿಟ್ಟಿ₁' ನೋ.

**ಬಿಟಿ** 'ಬಿಟ್ಟಿ₂' ನೋ.

**ಬಿಟೋಜ** (ನಾ). ಒಬ್ಬಾತನ ಹೆಸರು : ಕಲಿವಿಟ್ಟಯ್ಯನ ಲಿಖಿತ ಬಿಟೋಜನ ಸಿಲಾಶಾಸನ (ಪ್ರಸಂ. ೦೯೨೯, ೭೪-೦೩; ೯೬೪).

[<ಬಿಟ್ಟು₂+ಓಜ₁ (<ಒಜ್ಝಾ)]

**ಬಿಟ್ಟ** 'ಬಿಡು₁' ಪರಾ.

**ಬಿಟ್ಟವು** (ನಾ). ಬಿಗಿ; ದಾರ್ಢ್ಯ ; ಅಡವು (?) : ಸಜಿಗೊಂಡ ಪೆರ್ಬುಸಿಱ್ ಬಿಟ್ಟವುಗಟ್ಟಿ ತೋಳ್ ತೊಡೆ ತೆರಳ್ದ ಮೊಗಂ ನೆರೆ ಮತ್ತೆ ಮಾಣಿಕೇ ಬಿಟ್ಟಿಯ ಚಿಕ್ಕಣಿಕ್ಕೆ ಪೊಸ ಬರ್ಬರ ಸೂಳೆಯರಾಳಗೊಂಬುದಂ (ಸೂಕ್ತಿಸು. ೬-೩೬೪). [?]

**ಬಿಟ್ಟರಸ** (ನಾ). ಒಬ್ಬಾತನ ಹೆಸರು : ಸಿಡಿಯನೂರ ಗಾವಿಗಗೆಯ್ತು ಮಿದೊ ಊರ ಬಿಟ್ಟರ[ಸ] ರ[ಸ]ಪಟಗೆಯ ಗಂಗರ ಕಾಳೆ × × × (ಶಾಇಾ. XX. ೦೦-೯; ೮ ಶತ. ಕಕ). [ಬಿಟ್ಟು₂+ಅರಸ₁]

**ಬಿಟ್ಟಿ₁, ಬಿಟಿ, ಬಿಟಿ, ಬಿಟ್ಟೆ** (ನಾ). ೧. ಸಂಬಳವಿಲ್ಲದೆ ಮಾಡುವ ಕೆಲಸ ; ಪುಕ್ಕಟೆ ಕೆಲಸ : ನಾಡ ಗಾದೆಯ ಬಿಟ್ಟಿಯಿಂದ ಕಟಕವ ಕಂಡೆನೆಂಬು

ದೆನಗಾಯ್ತೆನುತ್ತೆಱಗಿದಂ ಭೂನಾಥನು (ತಕಾ. ೩-೮೪); ಪಂಪಾಕ್ಷೇತ್ರಮಂ ಕಾಣ್ಬುದನಂತತಪಃಫಲವಿಲ್ಲದೆ ಸಮನಿಸದು ನೀಂ ಬಟ್ಟೆಯಿಂ ಬಂದು ಕಟಕಮಂ ಕಂಡ ತೆಱನಾಯ್ತು (ಅರ್ಕ್ರಪಿ. ೩-೩೨ ವ): ಬೆಸಸುತಂ ತವೆ ಬಟ್ಟಿಯಂ ಮಾಡಿಸಿಕೊಳುತ ಬಡಕಲಸವಂ ಸಂತಸದಿ ಮಾಡಿಸಿ ಮಾಡಿ ಬದುಕುವವು (ಶಕಪು. ೨೩-೦೮). 'ಮಾರುವಿಟ್ಟಿ' ಪರಾ. ೨. ಕೆಲಸ; ಕಾರ್ಯ; ವೃತ್ತಿ : ಅಷ್ಟವಿಧಾರ್ಚನೆ ಷೋಡಶೋಪಚಾರವನು ಅರಸಱಿಯದ ಬಟ್ಟೆಯ ಮಾಡುವೆನು (ಶಕಪ. ೩೭೯); ಎನ್ನ ಮಾಬ್ಬ ಬದಗೇಂ ಪೆಱತಾದುದೆ ಬೇಡ ಕೆಮ್ಮಗಂ ಮನೆಗುಸುಟೆಕೆ ತನ್ನ ಸುಖಕಲ್ಲದೆ ಕೇಳಿಕೆಯಾರ ಬಟ್ಟೆಯೋ (ಲೀಲಾವ. ೨-೧೧೪); ಕಾಯಕ ಯಾವುದಾದರೇನು ? ಶಿವನ ಬಟ್ಟೆಯೆಂದು ಮಾಡುವ ಮಾಟವೆಲ್ಲ ಕಾಯಕ (ತುಂಗಕ. ೬). ೩. ಪುಕ್ಕಟೆ ; ಉಚಿತ : ಸಿಟ್ಟು ಸೆಡವಿಲ್ಲದೆಯೆ ಬಟ್ಟೆ ದುಡಿದವ ಕೋಣ (ಅಕಲು. ೩೪೭-೬) ; ಈ ಮನೆ ೧೮,೦೦೦ ಕ್ಕೆ ಮುಗಿದರೆ ಬಟ್ಟೆ ಆದ ಹಾಗೆ (ಹೋರಪು. ೨೯) ; ಚಟ್ಟಿದಿನ ಬಟ್ಟೆಗೂ ಹೋಗಬೇಡ (ಗಾದೆ). ೪. ವ್ಯರ್ಥವಾದುದು; ನಿರುಪಯುಕ್ತವಾದುದು : 'ಬಟ್ಟೆವೇಟ್' ಪರಾ. ೫. ಒಂದು ಬಗೆಯ ಸುಂಕ: ನೀರಲುಣಿಸುಂಕಂ ಬಿಟ್ಟಿ ಮೊದಲಾಗಿ ಎಲ್ಲವಂ ಬಿಟ್ಟೋವರ್ (ಶಾಇಶ. XI-i, ೦೩-೩; 873) ; ನಕರಕ್ಕಂ ಮಹಾಜನಕ್ಕಂ ಗಾವುಣ್ಡಗಳ್ಗಂ ಪೆಱ್ಗಡೆಮಟಸ್ಥಾನಕ್ಕಂ ಬಿಟ್ಟಿಯಿಲ್ಲ (ಶಾಇಶ. IX-1, ೬೭-೪೩ ; 992). ಬಿಟಿ : ೫. ಮನೆವಣ ಸೊಲಗೆ ಬಿಟಿಯನ್ನಿಷ್ಟು ಸರ್ವಮಾನ್ಯವಾಗಿ ಸ್ವರುಚಿಯಿನ್ದ ಕೊಟ್ಟರು (ಎಕ. 1, ೩೦-೯; ಸು. 13ಶತು ೮೪) ; ಹಳದು ಹೊಸ್ತು ಗ್ರಾಮ ವೆಚ ಬಿಟಿ ಬಿರಾಡ ಸೊಲ್ಲಗ ಆಉದೂಯಿಲ್ಲ (ಎಕ. X, ಕುಂಲಗಾ. ೦೬೨-೦೩; 1496). ಬಟೆ : ೫. ಏರುಗಾಣಿಕೆ ಕಾಣಿಕೆ . . . ಬಿಟಿ ಮೊದಲಾಗಿ ಎಲ್ಲವನು ಸರ್ವಮಾನ್ಯವಾಗಿ ಬಿಟ್ಟೆಉ (ಎಕ. IX, ಹೊಸಕೋ. ೯-೦೦; 1581). ಬಟ್ಟೆ : ೫. ಜೋಲಕಾರುಣ್ಯ ಜೆಡೆದೆರ್ಲ್ ೯ ಪ ೩ ೧೧ ಬಿಟ್ಟಿಯು ಭು ೧೮ಕ್ಕಂ ಗ ೨ ಎತ್ತಿಲು ಪುತ್ರರ ವ.ಶ (ಎಕ. XVI, ಶಕ್ಕಪು. ೬೧-೨೦; 1330).

ಬಟ್ಟಿಗಂಟು = ಯಾವ ಬಗೆಯ ಶ್ರಮವೂ ಇಲ್ಲದೆ ದೊರೆತ ಹಣ; ಪುಕ್ಕಟೆಯಾಗಿ ಲಭ್ಯವಾದ ದುಡ್ಡು : ಬಟ್ಟಿಗಂಟು ಸಿಕ್ಕಿದರೆ ತೆಗೆದುಕೊಳ್ಳುವುದು ಸರಿಯೇ ? (ಬಳ). ಬಟ್ಟಿಬೇಗಾರಿ = ಯಾವ ಪ್ರತಿಫಲವೂ ಇಲ್ಲದೆ, ಪುಕ್ಕಟೆಯಾಗಿ ಮಾಡುವ ಕೆಲಸ : ಬಲವಂತದಿಂದ ಬಟ್ಟಿಬೇಗಾರಿಯಲ್ಲಿ ಹೊಲಗದ್ದೆಗಳ ಮಾಡಿಸಿಕೊಂಡು ಯಿದ್ದಾಗ್ಯೂ (ಕುಹಾಕಂ. II, ೩೪) ; ಹೆಣ್ಣುಗಂಡು ಆದಿಯಾಗಿ ಇವರ ಅರಮನೆಯಲ್ಲಿ ಬಟ್ಟಿಬೇಗಾರಿ ಚಾಕರಿಯನ್ನು ಮಾಡಿ ಮಾಡಿ ಮುಪ್ಪಾಗುತ್ತಾ ಇದ್ದರು (ಸುಕುಕ. ೦); ಧನಿಯರ ಬೇಸಾಯ ಬಟ್ಟಿಬೇಗಾರಿ ಇದ್ದದ್ದೇ (ಚಿಕ್ಕೀ. ೩೩). ಬಟ್ಟಿಯ ಮಾನಿಸ = ಹಣ ಪಡೆಯದೆ ಕೆಲಸಮಾಡುವವನು ; ಬಿಟ್ಟಿಯಾಳು : ಪ್ರಕಾಶಾಪ್ರಕಾಶರೂಪಂಗಳಾದ ತೇರಾನೆಕುದುರೆಕಾಲಾಳ್ಗಳುಂ ಬಟ್ಟಿಯ ಮಾನಿಸರುಂ ಗೂಢಚರರುಂ (ಕಾಲಕಾಂ. ೩೬೬-೩೯). ಬಟ್ಟಿಹಣ = ಬಟ್ಟಿಗಂಟು : ಸುಲಭವಾಗಿ ಸಂಪಾದಿಸಿದ ಬಿಟ್ಟಿಹಣದ ಮಾಲೀಕತ್ವವನ್ನು ಸೂಚಿಸುವ ದುಂದುವೈಭವ ಆ ವಾತಾವರಣದಲ್ಲಿ ತುಂಬಿ ತುಳುಕುತ್ತಿತ್ತು (ಭುಸಕು. ೨೦೦). [< ಪ್ರಾ. ವಿಟ್ಠಿ./ ಸಂ. ವಿಷ್ಟಿ]

ಬಟ್ಟಿ₂ 'ಬಿಟ್ಟು₂' ನೋ.

ಬಟ್ಟಿಕೂಳು 'ಬಟ್ಟಿಗೂಳು' ನೋ.

ಬಟ್ಟಿಕೆಲಸ 'ಬಟ್ಟಿಗೆಲಸ' ನೋ.

ಬಟ್ಟಿಗ (ನಾ). ೧. ಒಬ್ಬಾತನ ಹೆಸರು : ನರಸಿಂಘಲಮ್ಮ × × × ಳಥುಙ್ಗಮರಾ ಬಟ್ಟಿಗ ಗೋನಾಥನಾ[ಗುಟಿ]ಪೋತ ಬಮ್ಮ (ಶಾಇಶ. XI-i, ೦೪-೦೬; 869) ; ಬಿಟ್ಟಿಗ ಸಟ್ಟವುಣ್ಣುಗೆಯ್ಯೆ (ಎಕ. VIII, ಸೊರಬ. ೨೦೨-೩; 966). ೨. ಹೊಯ್ಸಳರ ಒಬ್ಬ ಪ್ರಸಿದ್ಧರಾಜನ ಹೆಸರು ; ವಿಷ್ಣುವರ್ಧನ : ವೀರಾರಿನೃಪಾಳರಂ ಬಂಗಿಸಿದಂ ಮೂಱುವಿಟ್ಟಿಗಂ ಬಿಟ್ಟಿಗಂ (ಎಕ. VIII (R), ಹಾಸನ. ೦೫೬-೨೩ ; ?).

[ಬಟ್ಟಿ₂ (< ಬಿಟ್ಟು₂) + – ಗ₂]

ಬಟ್ಟಿಗೂಳು, ಬಟ್ಟಿಕೂಳು (ನಾ). ಪುಕ್ಕಟೆಯಾಗಿ ಲಭ್ಯವಾಗುವ ಆಹಾರ : ಅರಮನೆಯ ಬಟ್ಟಿಗೂಳಿಂದ ಕೊಬ್ಬಿ ಉಬ್ಬಿದ ತನ್ನ ಊಳಿಗದವರಿಗೆ ಸಶ್ರಮದ ಕಾರ್ಯಕಲಾಪಗಳು ಸ್ವಲ್ಪಮಟ್ಟಿಗಾದರೂ ಅಳವಡಿಕೆಯಾಗಿ (ಕಟ್ಟಿಾ. ೦೬೯-೩). ಬಟ್ಟಿಕೂಳು : ಅಷ್ಟೈಶ್ವರ್ಯವು ವೃಷ್ಟಾನ್ನವಿರುತಿರೆ ಬಟ್ಟಿಕೂಳನು ತಿನ್ನಲ್ಯಾಕಯ್ಯ (ಹಾನಗೀ. ೩೬); ತವ್ಮು ಮನೆಯಲ್ಲಿ ಬಟ್ಟಿಕೂಳು ಉಣ್ಣಬೇಕು, ಹುಡುಗನಿಗೆ ಪಾಠ ಹೇಳಿಕೊಂಡಿರಲಿ ಎಂಬ ಭಾವನೆಯೂ ಇರಲಿಲ್ಲ (ಮರೆ. ೯೨).

[ಬಟ್ಟಿ₁ + ಕೂಳು₂ (< ಕೂಟ್₁)]

ಬಟ್ಟಿಗೆಯ್, ಬಟ್ಟಿಗೈ, ಬಟ್ಟಿಗೆಯ್ (ಕ್ರಿ). ಪ್ರತಿಫಲವಿಲ್ಲದೆ ಸೇವೆ ಮಾಡು; ಬಿಟ್ಟಿಯಾದ ಕೆಲಸಮಾಡು : ಉಜ್ವಲವೀರಶ್ರೈವಭಕ್ತಂ ಬಟ್ಟಿಗೆಯ್ಯದಿರೆ ತಳುವದಾತನ ಸೊಸ್ನಲಿಗೆಯಿಂದೆ ಪೋಗೆಂದು ಸಿದ್ಧರಾಮಯ್ಯ ನುಡಿಯೆ (ಹಾಸೋಪು. ೦೦-೨೯). ಬಟ್ಟಿಗೈ : ಅಷ್ಟದಿಕ್ಪಾಲಕರು ದನುಜಗೆ ಬಟ್ಟಿಗೈವುದ ಕಂಡನಂಗವ (ಕಾಶಿಾ. ೧೬-೦೩). ಬಟ್ಟಿಗೆಯ್ : ಅನ್ತಪರಮಂಡಳಿಕರೆಲ್ಲ ತಂತಮ್ಮ ವಸ್ತುವಾಹನಂಗಳಂ ಕೊಟ್ಟು ಕಂದು × × ಬಟ್ಟಿಗೆಯ್ಯುತ್ತಮಿರೆ (ಶಾಇಶ. XX, ೯೯-೨೩; 1076). [ಬಟ್ಟಿ₁ + ಕೆಯ್₁]

ಬಟ್ಟಿಗೆಯ್ಮೆ (ನಾ). ಪ್ರತಿಫಲವಿಲ್ಲದ ಊಳಿಗ ; ಪುಕ್ಕಟೆ ಕೆಲಸ : ಆವಗಂ ಜಗಮನೊಗಯಿಪ ಬಟ್ಟಿಗೆಯ್ಮೆ ಇವಳೊಲ್ದು ನಿಟ್ಟಿಪ ದಿಟ್ಟಿಯಿಂ ಸಫಲಮೆಂದೆನಿಸಿರ್ಕುಂ (ತಕಶು. ೦೦೯-೦೮).

[ಬಟ್ಟಿ₁ + ಗೆಯ್ಮೆ (< ಕೈಮೆ₁)]

ಬಟ್ಟಿಗೆಲಸ, ಬಟ್ಟಿಕೆಲಸ (ನಾ). = ಬಟ್ಟಿಗೆಯ್ಮೆ : ಹಿಂದೆ ನಿನ್ನೊಳು ಪುಟ್ಟಿದುದು ಮೊದಲಿಂದುತನಕೊಂದಡಕೆ ಹಂಗಿನೊಳೊಂದೆನುಸಿಕನೆ ನಿನ್ನ ನಾಸೋಲೈಸಿದೆನು ಹೊದ್ದಿ ಕುಂದದಲಸದೆ ಬಟ್ಟಿಗೆಲಸಕೆ ಸಂದು ಮಾಡುತ್ತಿರ್ದಡೆ (ಬಸಪು. ೬೦-೩೭). ಬಟ್ಟಿಕೆಲಸ : ಸಂಸ್ಥಾನದಲ್ಲಿ ಬಟ್ಟಿಕೆಲಸ ಮಾಡಿದರೂ ಅದಕ್ಕೆ ಸರಿಯಾದ ರಿಯಾಯತಿಯು ದೊರಕುತ್ತಿದ್ದಿತು (ಸುಹಾಶ. ೦೩೦). [ಬಟ್ಟಿ₁ + ಕೆಲಸ]

ಬಟ್ಟಿಗೈ 'ಬಟ್ಟಿಗೆಯ್' ನೋ.

ಬಟ್ಟಿದೇವ (ನಾ). ಹೊಯ್ಸಳರ ಒಬ್ಬ ಪ್ರಸಿದ್ಧರಾಜನ ಹೆಸರು : ವಿಷ್ಣುವರ್ಧನ : ಸಕವರ್ಷ ೧೦೦೭ ಯುವಸಂವಚ್ಛರದ ಸೋಮವಾರ ಸಂಕ್ರಾಂತಿಯಲು ಬಟ್ಟಿದೇವ . . . ಬ್ರಹ್ಮೇಶ್ವರವ ವರ್ಗ್ಗ ಬಟ್ಟಿಗದ್ದೆ ಕಣ್ಡುಗ ೧೫ (ಎಕ. VI (R), ಕೃಷ್ಣರಾ. ೩೬-೬; 1095); ಮಹಾಮಣ್ಡಳೇಶ್ವರ ಪೊಯ್ಸಳ ಬಟ್ಟಿದೇವನ ದಣ್ನಾಯಕ (ಎಕ. VII, ಶಿಕಾರಿ. ೦೨-೩ ; 1120).

[ಬಟ್ಟಿ₂ (< ಬಿಟ್ಟು₂) + ದೇವ]

ಬಟ್ಟಿಬೆಸ 'ಬಟ್ಟಿವೆಸ' ನೋ.

ಬಟ್ಟಿಬೆಸಕೆಯ್ 'ಬಟ್ಟಿವೆಸಗೆಯ್' ನೋ.

ಬಟ್ಟಿಬೆಸನ 'ಬಟ್ಟಿವೆಸ' ನೋ.

ಬಟ್ಟಿಯಾಳ್, ಬಟ್ಟಿಯಾಳು (ನಾ). ಸಂಬಳವಿಲ್ಲದೆ ದುಡಿಯುವವನು; ಪುಕ್ಕಟೆಯಾಗಿ ಕೆಲಸ ಮಾಡುವವನು : ಓ! ಬಟ್ಟಿಯಾಳ್ಗಳಂ ಬಟ್ಟಂತಾಗದೆ! ಎಂತೀತಂಗಳ್ ಪೋಗಲಾರ್ಪರ್ (ರಾಮಾಶ್ವ. ೦೦೬-೨೩). ಬಟ್ಟಿಯಾಳು : ಬಟ್ಟಿಯಾಳು ಆದರೆ ಹಟ್ಟಿ ಕಟ್ಟಬಾರದೇ ? (ಗಾದೆ).

[ಬಟ್ಟಿ₁ + ಆಳ್₃]

ಬಟ್ಟಿಯಾಳು 'ಬಟ್ಟಿಯಾಳ್' ನೋ.

ಬಟ್ಟಿಯೆಸಗು (ಕ್ರಿ). ಪ್ರತಿಫಲವಿಲ್ಲದೆ ದುಡಿ,-ಕೆಲಸ ಮಾಡು: ತಪವಾಲಿಂ ಘೃತದಿಂ ಕರುಳೆನಸುಂ ಬಾಲ್ಯದೊಳೆ ನಾಂದುದಿಲ್ಲದಱಿಂ ತಾನೆನಿತು

ತಿರಿದುಂಡೊಡಂ ಪಸಿವನುಗಿಡದಿರೆ ಬಸಿರ್ಗೆ ಬಿಟ್ಟಿಯೆಸಗಿವನಲ್ತೆ (ವ್ಯಕಂ. ೯-೦೦೬). [ಬಿಟ್ಟಿ₁ + ಎಸಗು₁]

**ಬಿಟ್ಟವಿಡಿ**, **ಬಿಟ್ಟಿಹಿಡಿ** (ಕ್ರಿ). ಸಂಭಾವನೆಯಿಲ್ಲದೆ ಒತ್ತಾಯದಿಂದ ಕೆಲಸ ಮಾಡಿಸು ; ಪುಕ್ಕಟೆಯಾಗಿ ದುಡಿಸಿಕೊಳ್ಳು: ಭೂತದಯಾರಹಿತ ನೀ ಬಿಟ್ಟವಿಡಿವುದು ಯೋಗ್ಯವಲ್ಲ (ತಿಶಾಗ. ೩-೭-೪೦). **ಬಿಟ್ಟಿಹಿಡಿ** : ನಮ್ಮನ್ನು ಬಿಟ್ಟಿಹಿಡಿದು ನಮ್ಮ ಕೈಲಿ ಈ ತೋಟದಲ್ಲೆಲ್ಲ ಅಗತೆ ಮಾಡಿ ಸುತ್ತಾರಂತೆ (ಘಟ್ಟಿರ. ೨೦). [ಬಿಟ್ಟಿ₁ + ಪಿಡಿ₁]

**ಬಿಟ್ಟವೆಸ**, **ಬಿಟ್ಟಿಬೆಸ**, **ಬಿಟ್ಟಿಬೆಸನ** (ನಾ). = ಬಿಟ್ಟಿಗೆಯ್ಮೆ : ಪೊಲೆಯರುಂ ವಸಾದಿಗರುಂ ಕೀಲಿಗರುಮೆನಿಸಿ ಬಿಟ್ಟವೆಸಂಗಳಂ ಮಾಡಿ (ಪಂಪಾ. ೨೬೩). **ಬಿಟ್ಟಿಬೆಸ** : ಗಂಗಸಿದ್ದಾಯ ಹೊಱಗಾಗಿ ಆಯ ದಾಯ ಬಿಟ್ಟಿಬೆಸ ಹಡುವವರ್ಗೆಂಗೆ ಪರಿಹಾರವಂ ಬಿಟ್ಟ (ಎಕ. I, ೮೭–೦೩ : 1175); ಬಿಟ್ಟಿಬೆಸ . . . ಇದು ದೈಹಿಕಶ್ರಮರೂಪವಾದ ತೆರಿಗೆ (ಶಶಾಂ. ೧೦೦). **ಬಿಟ್ಟಿಬೆಸನ** : ಎಲ್ಲ ಮಾನ್ಯಂಗಳಂ ಭಕ್ತರ್ಗೆ ಸಾರ್ಚುತುಂ ಬಿಟ್ಟಿಬೆಸನಂ ಶಿವನ ಭಕ್ತರ್ಗೆ ಮಾಡುತುಂ (ಇಳಲ. ೮೮. ೧೯–೦೩). [ಬಿಟ್ಟಿ₁ + ಬೆಸ₁]

**ಬಿಟ್ಟವೆಸಗೆಯ್**, **ಬಿಟ್ಟಿಬೆಸಕೆಯ್** (ಕ್ರಿ). ಸಂಭಾವನೆಯಿಲ್ಲದೆ ದುಡಿ ; ಪುಕ್ಕಟೆಕೆಲಸ ಮಾಡು : ಜೀಯೆನುತನುದಿನವಮ್ಮೆ ಬಿಟ್ಟವೆಸಗೆಯ್ವುದ ಬೆಟ್ಟಗರಿಲ್ಲ (ಎಕ. XI. ದಾವಣ. ೮೫–೯ : 1143). **ಬಿಟ್ಟಿಬೆಸಕೆಯ್** : ಘೋಷಾಕಾರಸಂಗ್ರಹಾಕರಗೋಪ್ರಜಂಗಳಾಮಾನವನಾಳ್ದ ತೆಱಗೊಳ್ವ ಬಿಟ್ಟಿಬೆಸಕೆಯಿಸಿಕೊಳ್ವ ಭೋಗಿಪ ನಿಯೋಗಂಗಳಾವಮನಿಂತು ಮಾಡಿ (ಅಂಪು. ೯-೬೩ ವ). [ಬಿಟ್ಟವೆಸ + ಕೆಯ್₁]

**ಬಿಟ್ಟವೇೞ್**, **ಬಿಟ್ಟಿಹೇಳು** (ಕ್ರಿ). ೧. ವ್ಯರ್ಥವಾದುದನ್ನು ಹೇಳು : ಕೆಲಸಕ್ಕೆ ಬಾರದುದನ್ನು ನಿರೂಪಿಸು, — ತಿಳಿಸು : ಕಾವ್ಯ ಲಕ್ಷಣದೊಳೊಳ್ಳಿಪಟ್ಟರೆ ವೇಟ್ಟುದಲ್ಲದೇಕಾರಣವಯ್ಯ ಕೆಮ್ಮಗಿರಲಾಗದೆ ಕಬ್ಬ[ವ] ಬಿಟ್ಟವೇ[ಟ್ಟು]ದೇ (ಅಂಶಂ. ೦-೦೦). **ಬಿಟ್ಟಿಹೇಳು** : ೨. ಕೆಲಸಕ್ಕೆ ನಿಯಮಿಸು, — ಗೊತ್ತುಪಡಿಸು : ಲಿಂಗಕ್ಕೆ ಇಲ್ಲೆಂಬ ಜಂಗಮಕ್ಕೆ ಇಲ್ಲೆಂಬ ಬಂದ ಪುರಾತರಿಗೆ ಇಲ್ಲೆಂಬ ಸಾವಾಗ ದೇಹವ ದೇಗುಲಕ್ಕೊಯ್ಯೆಂಬ ದೇವರಿಗೆ ಹಣ ಬಿಟ್ಟಹೇಳಿತ್ತ (ಬಸವ. ೨೨೨). [ಬಿಟ್ಟಿ₁ + ಪೇೞ್]

**ಬಿಟ್ಟವೊಱು** (ಕ್ರಿ). ಪುಕ್ಕಟೆಯಾಗಿ ಕಾರ್ಯಭಾರವನ್ನು ಹೊರು,— ವಹಿಸಿಕೊಳ್ಳು : ರಾಜ್ಯಭಾರವಂ ಬಿಟ್ಟವೊತ್ತವಂ ಕಲ್ಲ ಭಾರವ ನೀಡಾಡುವಂತೀಡಾಡಿ (ರಘುಚ. ೯-೬೨). [ಬಿಟ್ಟಿ₁ + ಪೊಱು]

**ಬಿಟ್ಟವೋಗು** (ಕ್ರಿ). ಪುಕ್ಕಟೆಕೆಲಸಕ್ಕೆ ಹೋಗು : ಎಲ್ಲವನ್ನು ಬಿನ್ನವಿಸಿ ಪಟ್ಟಾದೆ:ಪಾರ್ಥರವ ಸೋದಿಸಿಂದೇ ಹೋಗಿ ನಾಳೆ ಬಹುದೆನಲವರು ಮೇದಿನಿಯ ನಾಣ್ಣುಡಿಯ ವಾರಣಸಿಯ ಬಿಟ್ಟವೋದರೆಂದೆಂಬುದೆನ ಗಾಯ್ತೊಂದು ಹರುಷ ಮಿಗಲಾ ಪುರಕ್ಕೈತಂದರು (ಸಿದ್ಧರಾ. ೯-೦೬). [ಬಿಟ್ಟಿ₁ + ಪೋಗು₁ (< ಪೋ₁)]

**ಬಿಟ್ಟಿಹಿಡಿ** 'ಬಿಟ್ಟವಿಡಿ' ನೋ.

**ಬಿಟ್ಟಿಹೇಳು** 'ಬಿಟ್ಟವೇೞ್' ನೋ.

**ಬಿಟ್ಟು₁** 'ಬಿಡ್ಡು₁' ಪರಾ.

**ಬಿಟ್ಟು₂**, **ಬಿಟ್ಟಿ₂**, **ವಿಟ್ಟು**, **ವಿನ್ನು** (ನಾ). ೧. ಒಬ್ಬಾತನ ಹೆಸರು : ವಂಶಿಗ ಬಿಟ್ಟು ಕೃತಂ (ಇಅ. IX, ೬೪–೪೦ ; ೯ ಶತು ೬೩). **ಬಿಟ್ಟಿ₂** : ೧. 'ಬಿಟ್ಟಿಗ', 'ಬಿಟ್ಟಿದೇವ' ಪರಾ. **ವಿಟ್ಟು** : ೨. ತ್ರಿಮೂರ್ತಿಗಳಲ್ಲಿ ಒಬ್ಬ; ವಿಷ್ಣು : "ವಿಟ್ಟು - ವಿಷ್ಣು" (ಶಾಶಕೋ. ೪೦) ; ವಿಟ್ಟುವುಂ ಬ್ರಹ್ಮನುಂ ಕಣ್ತಲೆಗಳಂ ಶಿವಗೆ ಕೊಟ್ಟು ಡಿಂಗರಿಗರಾದವರವಸೀಶಂಗೆ ಪಡಿಗಟ್ಟುವರೆ (ಕಂಕು. ೩೨-೨೪). **ವಿನ್ನು** : ೨. "ವಿನ್ನು—ವಿಷ್ಣು" (ಗುಂಕೋ. ೦೪೦); ಜನ್ಮಾಂತರದೆ ಮಾಡಿದ ನನ್ನ ದುಷ್ಕರ್ಮಾನುಸಾರವೆ ವಿನ್ನುವಿನ ಸುತನೀಗ ಪೊಸದಾದ ಶಸಯನಂ ಮಾಡಿ ಸನ್ನುತಾಂಗಿಯನೊಯ್ದು . . . ಸವುಕೌಶಲ್ಯವನೆ ತೋರಿಸಿದನು (ರಘಮಂ. ೯-೯೬). [<ಸಂ. ವಿಷ್ಣು]

**ಬಿಟ್ಟುಳಿ** (ನಾ). (?) : ಅವುರೆ ಮಾಡಿದ ಬಿಟ್ಟುಳಿಯ ಕಕ್ಕುಂಬ ತೊಡಂಬೆಯ ಮೂಡಿಗೆಯ ಕವಳಿಕೆಯ ಕಂಡಪಟಂಗಳುಮಂ ಪಲವು ತೆಱದ ಪಲವುಂ ಪೊಱಿಯಾಗಿ ಕಟ್ಟಿದ ಬಲೆಗಳುಮಂ . . . ಆಳವಿಯೊಳ್ ಕೂಡಿ ನಡೆಯುತ್ತೆಟ್ಟು ಬೇಂಟೆವಸದನಾಗೊಂಡು (ಶಂಶಕಾ. ೩-೯೭ ವ). [?]

**ಬಿಟ್ಟೆ** 'ಬಿಟ್ಟಿ₁' ನೋ.

**ಬಿಟ್ಟೆಗೆಯ್** 'ಬಿಟ್ಟಿಗೆಯ್' ನೋ.

**ಬಿಟ್ಟೇಱು**, **ಬಿಟ್ಟೇಱು₂** (ನಾ). (ಕೈಯಿಂದ ದೂರದವರೆಗೆ ಎಸೆಯುವ) ಉದ್ದವಾದ ಈಟಿ ; ಎಸೆಯೀಟಿ : "ಬಿಟ್ಟೇಱು ಮೊದಲಾದುದು ಕಯ್ಯಿಂ ಬಿಡಲ್ಪಡುವುದು ಪಾಣಿ(ಕರ)ಮುಕ್ತಮೆಂಬುದು" (ಹಕಾಯು. ೬೬-೪೦೭) ; ವೀರದೊಳ್ ಕೂಡಿ ಪರಿಗೆಯುಂ ಬಿಟ್ಟೇಱುಂ ಬೆರಸಿರ್ಪಂತೆ (ರಘುಚ. ೦೧-೨) ; ಬಿಟ್ಟೇಱುಟ್ಟಿ ಸಖಂ ಚಕ್ರ ಪರಶು . . . ಫಳಕಂಬಿಡಿದವುರರ್ ನೆರೆದುದು (ಶೇಠೀಕ. ೨-೪೦); ಇಟ್ಟಿ ಸಲ್ಲಿಹ ಸಬಳ ಬಿಟ್ಟೇಱಟ್ಟಿಗಳ ಮಳೆ ಸಾದಿದವು ಕಾದಿದರು ಚೂಣಿಯಲಿ (ಕುಪ್ರಾಕ. ೦೯-೦೦); ಈಟಿಯಲಿ ಬಿಟ್ಟೇಱಿನಲಿ ಹೊಗುವ ಹರಿಕದಂಬವ ಹೊಡೆವುತಿಱುವುತ ಜರಿಯಗೆಡಹಿದರು (ಕೂಕಾಂ. ೬-೦೦-೦೦). **ಬೆಟ್ಟೇಱು₂** : ಬಾಚಿಯಿಂ ತಡಂಗಡಿದುಂ ಕೊಂತದಿಂ ತಗುಳ್ಚಿಱಿದುಂ ಖಡ್ಗದಿಂ ಪೂಣಿಸಿ ಪೊಯ್ದುಂ ಬಿಟ್ಟೇಱುಗಳಿಂ ಪರಿತಂದಿಟ್ಟುಂ . . . ಸೈರಿಸಲಾಱದೆ (ರಘುಚ. ೩-೭೩).

ಬಿಜ್ಜಲ ಬಿಟ್ಟೇಱು, ಬಿಜ್ಜಬಿಟ್ಟೇಱು= (?) : "ಬಿಜ್ಜಲ ಬಿಟ್ಟೇಱು= ಹಿರಿಯ ಬಿಟ್ಟೇಱು" (ಕಮುದ. ಶಂ. ೨); "ಬಿಜ್ಜ[ಶಾಕಾಂ. ಜ್ಜ] ಬಿಟ್ಟೇಱೆಂದು ಹಿರಿಯ ಬಿಟ್ಟೇಱೆನಿಕ್ಕುಂ" (ಕವ್ಯಕ್ಕೆ. ೯೯).

[ದೇ.॥ ತಮಿ. ವಿಟ್ಟೇಱು, ವೆಟ್ಟೇಱು ; ಮಲ. ವಿಟ್ಟೇಱು]

**ಬಿಟ್ಟೇಱುಕಾಱ** (ನಾ). ಉದ್ದವಾದ ಈಟಿಯನ್ನು ಹಿಡಿದಿರುವವನು : ಐಶ್ವರ್ಯಮದಮೆಂಬ ಬಿಟ್ಟೇಱುಕಾಱವೆರಸು ಬಲಮದಮೆಂಬ ಕಟ್ಟಿಗೆ ಕಾಱವೆರಸು . . . ನಿಲ್ಲದಲ್ಲಿಯುಂ ಬೆನ್ನಟ್ಟ ತಗುಳ್ದು (ರಘುಚ. ೦೦-೮೭ ಅಂತತ್ತ) ; ನಿಗಳಂಕಮಲ್ಲಂ ಭುಜಬಳವೀರಂ ಕೊಟ್ಟೋಜುವ ಬಿಟ್ಟೇಱು ಕಾಱರ ಗಣ್ಡಂ (ಎಕ. VI, ಕಡೂರು. ೩೪-೨೦ ; 1148).

[ಬಿಟ್ಟೇಱು + —ಕಾಱ]

**ಬಿಡ** (ನಾ). ಒಂದು ಬಗೆಯ ಉಪ್ಪು ; ದೋಣೆಯುಪ್ಪು : "ವಾಕ್ಯಂ, ಬಿಡಂ . . . ತೊಳೆದು ಕಾಯಿಸಿ ತೆಗೆದ ಉಪ್ಪು, ದೋಣೆಉಪ್ಪು ಮತ್ತು ಪೆಟ್ಲುಪ್ಪು ಮುಂತಾದ ಅಡಿಗೆಯುಳಿಸಿದ ಕೃತ್ರಿಮಲವಣಕ್ಕೂ ಬಿಡಾಲವಣಕ್ಕೂ ಪೆಸರುಗಳು" (ಸಿದ್ಧಾಂಕಿ. ೨೪೬); ಸುರದಾರು ಸೈಂಧವಂ ಜಳಧರಂ ಬಿಡಂ ಬೀಜಲಕ್ಕಿ ಸದ್ಯಃಕ್ಷಾರಂ ಸುರಭಿಜಳಮೆಣ್ಣೆಯೆಂಬಿವನಿರದಟ್ಟಿಱಿ ನಸ್ಯಮಂ ಕಚಿಲ್ಗಂ ಸೆಂಬಂ (ಲೋಕೋಪ. ೯-೨೨೪). [ಸಂ.]

**ಬಿಡಕಿ** (ನಾ). ಗಳಹುವವಳು ; ಜಗಳಗಂಟಿ ; ಗಯ್ಯಾಳಿ : ಮಗಳಿಗೆ ದುಂಡಕಿಯ ಕಟಕಟಿ ಬಲು ಜೋರ ನಿನ್ನಂಥ ಬಿಡಕಿಗೆ ಹೆಣ್ಣಲ್ಲಕಿಗೆ ಹೆಣ್ಣಲ್ಲಶಿಗೆ (ಜನಗೀ. ೯೨) ; ಕೆಲವರು ಬಿಡಕಿಯರು ಮಾತ್ರ 'ಅಯ್ಯೋ . . . ಮದಲಿಂಗಿತ್ತಿಯೋ ಸೋಬಾನೆ ಹೇಳ್ತಾರೆಯೋ ತುಂಬಿದ ಸಭೆಯಾಗೆ' ಎಂದು ಮೂತಿ ತಿರುವಿದರು (ಕಳಮ. ೩೯). [< ಬಿಡು₁]

**ಬಿಡತ** (ನಾ). [ಸಂಗೀತ] ಮೃದಂಗವನ್ನು ಬಾರಿಸುವಾಗ ಎರಡು ಹೊಡೆತಗಳ ನಡುವೆ ಇರುವ ಅವಧಿ, — ಕಾಲಮಾನ : ಚಮತ್ಕಾರ ಲಾಗು ಪಿಡಿತ ಬಿಡಿ[ದ]ತಗಳ ವೋಹನವನ್ನು ತೋಱ ನುಡಿಸಿದ ಮಾರ್ದಂಗಿಕನು (ಗೋಪಕೀ. ೭-೦೬). [<ಬಿಡು₁ + —ತ₂]

**ಬಿಡತಿ** 'ಬಿಡದಿ' ನೋ.

**ಬಿಡದಿ**, **ಬಿಡತಿ** (ನಾ). ೧. ಅತಿಥಿಗಳ ಬಿಡಾರಕ್ಕೆಂದು ತೆರವು

ಮಾಡಿರುವ ಮನೆ ; ಬಿಡಾರ : ಮಡದಿ ನಿಃಯೆನ್ನ ಪಡನೆ ಬಾಯೆಂದು ನಡದಾರು ಖಳನಾ ಬಡದಿಗೆ (ವಾಲಿಕೀ. ೬೩-೧೭) : ಯುಧಿಷ್ಠಿರನು . . . ಬಿಡದಿಯಲ್ಲಿ ತಂಗಿ ಶ್ರಮಪರಿಹಾರ ಮಾಡಿಕೊಂಡ (ಕ್ಷ್ಮಿಕಥಿ. ೧೨೦). ೨. ತಂಗುವಿಕೆ ; ವೊಕ್ಕಾಮು ; ವಾಸ್ತವ್ಯ : ನಮ್ಮ ಬಿಡದಿಗೆ ಬೇರೆ ಮನೆಯನ್ನು ಏರ್ಪಾಟು ಮಾಡಿರಬೇಕು (ಶಾಂತ್ರಿ. ೬೩). ಬಿಡತಿ : ೧. ನಮ್ಮನ್ನು ನಿಜವಾದ ಆದರದಿಂದ ಸತ್ಕರಿಸಿ, ಅವನ ಭಾರಿ ಹೊಸ ತೊಟ್ಟಿಮನೆಯಲ್ಲಿನ ಮುಖ್ಯಭಾಗವನ್ನು ನಮಗೆ ಬಿಡತಿ ಮಾಡಿ ಕೊಟ್ಟ (ಕಂಷ. ೩೩೪).

ಬಿಡದಿ ಬಿಡು = ಬಿಡಾರ ಹೂಡು; ತಂಗು : ಸುಲ್ತಾನರು ಚಿತ್ರದುರ್ಗದಲ್ಲಿಯೇ ಬಿಡದಿ ಬಿಟ್ಟಿದ್ದರು (ದೌಂಶ್. ೨೦೪) ; ಎಲ್ಲರೂ ಬಿಡದಿ ಬಿಟ್ಟಿದ್ದ ಮನೆಗೆ ಪ್ರಯಾಣ ಮಾಡಿದರು (ಷುಂಠಾಶ. ೦೩೪). ಬಿಡದಿ ಮನೆ, ಬಿಡದಿಯ ಮನೆ = (ಮದುವೆ ಮೊದಲಾದ ಸಂದರ್ಭಗಳಲ್ಲಿ) ಅತಿಥಿಗಳ (ವಿಶೇಷವಾಗಿ ಬೀಗರ) ಬಿಡಾರಕ್ಕಾಗಿ ತೆರವು ಮಾಡಿರುವ ಮನೆ: ಬಿಡದಿಮನೆಯಲ್ಲಿ ಸರಿಯಾದ ವ್ಯವಸ್ಥೆಯಿಲ್ಲ (ಷುಕ್ರಾಶ. ೬೭) ; ಲಲನೆ ಲಕುಮಿಯು ಸಹಿತ ವೇಂಕಟನಿಲಯನನ್ನೈದಿಸುತ ಬಿಡದಿಯ ಮನೆಯೊಳಿಳಿಸಿದನು (ಅಕಾರಿ. ೧೩-೪೪) ; ಬಿಡದಿಯ ಮನೆಯಲ್ಲಿ ಇವನ ಅತ್ತೆ ಮತ್ತು ಇವನ ತಾಯಿಯವರು ಮಾತನಾಡುತ್ತಿದ್ದುದು (ಅಂಗಾಜಾ. ೧೭).

[<ಬಿಡು₁ + — ದಿ./ತಮಿ. ಮಲ. ವಿಟುತಿ ; ತೆಲು. ವಿಡಿದಿ]

**ಬಡದಿವುಳಿಗ** (ನಾ). ಬಿಡಾರದಲ್ಲಿ ಸಲ್ಲಿಸುವ ಸೇವೆ,— ಊಳಿಗ : ಬಡದಿವುಳಿಗದ ಲಿಂಗಣ ಮಡಿವುಳಿಗದ ದೊಡ್ಡಯ (ಎಕ. XIV. ಗುಂಡ್ಲುಪೇ. ೦೪೬-೩೩ ; 1087). [ಬಡದಿ + <ಊಳಿಗ]

**ಬಡಯ₁** 'ಬಿಡೆಯ'₁ ನೋ.

**ಬಡಯ₂** 'ಬಿಡೆಯ₂' ನೋ.

**ಬಡಯ₃** 'ವಿಡಾಯ' ನೋ.

**ಬಡಲವಣ** (ನಾ). ಒಂದು ಬಗೆಯ ಉಪ್ಪು ; ದೋಣೆಯುಪ್ಪು : "ಕೃತ್ರಿಮಕಂ – ಬಿಡಲವಣ" (೬ಶಂ. ೩೬). [ಸಂ.]

**ಬಿಡವೆ** (ನಾ). ಬಿರುಕು ; ಸೀಳು ; ಸಂದು : ಕಲ್ಲ ಬಿಡವೆಯೊಳಿರ್ದ ಪಣವಿನಂತೆ ಸಿಡಿಲೊಳಗಿರ್ದ ಸಕ್ಕರೆಯಂತೆ (ಧರ್ಮಾಮೃ. ೦೩-೦೩೩).

[ದೇ.॥ ತಮಿ. ವಿಟವು, ವಿಟಪ್ಪು ; ಮಲ. ವಿಟವು]

**ಬಿಡವೆಳಗು** (ನಾ). ಹೊರಹೊಮ್ಮುವ ಕಾಂತಿ,— ಪ್ರಭೆ : ಎಡೆಯಾಡುವಬಲೆಯರಡರುಬಿಚತಳದನು ಪಡೆದು ನೀಲದ ನೆಲನಂಗುರ ಬಿಡವೆಳಗಿಂದಲರಾಗಿ ನೋಡುವರಕ್ಷಿಗೊಡರಿಪುದದುವೆ ಸತ್ಕಲವ (ಅರಕ. ೩-೪೪).

[? + ಬೆಳಗು₂]

**ಬಡಾಡಿ** 'ಬೀಡಾಡಿ' ನೋ.

**ಬಡಾಡಿಗ** (ನಾ). ಕೀಳಾದ ವ್ಯಕ್ತಿ; ಹೀನವಾದ ವ್ಯಕ್ತಿ: ಹಾದರದೆ ಮುಂಪುಗೊಂಡಾ ಬಿಡಾಡಿಗ ವೆಣ್ಗಳಾದರದೆ ಕಂಥಾಕಮಂಡಲುಗಳಂ ಬಳಿಯ ಸೀರೆಯಂ ಧರಿಸಿಕೊಂಡು (ಮಹಾಂಶೀ. ೦೩-೩೩).

[ಬಿಡಾಡಿ (< ಬೀಡಾಡಿ) + — ಗ]

**ಬಡಾಯ** 'ವಿಡಾಯ' ನೋ.

**ಬಡಾರ** 'ಬೀಡಾರ' ನೋ.

**ಬಿಡಾರುವಾರ, ಬಿಡಾರ್ವರ** (ನಾ). ಚರ ಹಾಗೂ ಸ್ಥಿರ ಆಸ್ತಿಗಳನ್ನು ಭೋಗಕ್ಕೆ ಪಡೆಯುವುದು, — ವಾರಕ್ಕೆ ಮಾಡಿಕೊಳ್ಳುವುದು : ಹದಿನಾರು ಹಾನೆ ಗದೆಯನು ಬಿಡಾರುವಾರವಾಗಿಯಿರಿಸಿ (ಕ್ನಾಇ. ೦೪೩೦, ಕಂಪಾಪುರ. ೬೬೩-೬೩; 1467) ; ಆ ಜಂನಕೆ ಉಂಟಾದ ಸೀಮೆ ಸಾಮ್ಯ ಯಿಪ್ಪನೂ ಬಿಡಾರುವಾರವಾಗಿ ಮಾಡಿಕೊಂಡು ದುಗ್ಗಣ ಸೆಟಿಯರು ಕೊಟ್ಟ ಅರ್ಥ ಕಾಟಿ ಗ ೭೫೦ (ಕ್ನಾಇ. IX-ii, ೪೬೩-೪೩ ; 1472) ; ಈ ದಪುರದ ಗ್ರಾಮಿನ ಆಣಉಡುಪರು ಕೊಟ್ಟ ಬಿಡಾರುವಾರದ ಪತ್ರದ ಕ್ರಮವೆಂತೆಂದರೆ (ಕ್ನಾಇ. IX-ii, ೬೩೩-೦೩ ; 1554). **ಬಿಡಾರ್ವರ** : ತೊಳಹನ ಕಯ್ಯಲೂ ಬಿ[ಡಾ]ರ್ವ್ವರ ಮಾಗ ಒಡಿವ [ಸುಗೆ] ಜಿತುವ ಬಿದಿರ ಗದ್ದೆಯು ಮೇಲಿಕ್ಕಿದ ಪಾಣ್ಣಗದ್ಯಾಣಂ (ಕ್ನಾಇ. VII. ೩೬೦-೦೪ ; 1140). [<ಬಿಡಾರ + ಅರುವಾರ]

**ಬಿಡಾರ್ವರ** 'ಬಿಡಾರುವಾರ' ನೋ.

**ಬಿಡಾಲ, ಬಿಡಾಳ** (ನಾ). ೧. ಬೆಕ್ಕು; ಮಾರ್ಜಾಲ : "ಮಾರ್ಜಾಲಂ ಬಿಡಾಲಂ . . . ಓತುವೆನೆ ಬೆಕ್ಕೆನಿಕ್ಕುಂ" (ಪಂಗಣ. ೪೪-೦೦); ಆ ಶಾಗೆ ಸತ್ತು ಬಿಡಾಲನಾದುದಾ ಬಿಡಾಲಂ ಮುನ್ನಿನ ಕುಕ್ಕುಟನಂ ತಿಂದುದು (ಶಂಶಪಾ. ೦೩-೩೬ ಪ). ೨. ಕಣ್ಣುಗುಡ್ಡೆ. **ಬಿಡಾಳ** : ೧. ಬಿಡಾಳಕ್ಕಂ ಪಾಲ ಶಾಪನಿತ್ತವೊಲಾಯ್ತು (ಶಾಕ್ಕಿರ್ಶ. ೩-೦೦೩). [ಸಂ.]

**ಬಿಡಾಳ** 'ಬಿಡಾಲ' ನೋ.

**ಬಿಡಿ, ಬಿಡು₃** (ನಾ). ೧. ಒಂದು; ಒಂಟಿಯಾದುದು : 'ಬಿಡಿತನ', 'ಬಿಡಿಮುತ್ತು' ಪರಾ. ೨. ಪ್ರತ್ಯೇಕವಾದುದು; ಭಿನ್ನವಾದುದು; ಬೇರೆಯಾದುದು : ಚರಣಕಾಂಡಂಗಳ್ಗೆ ಬಿರಿಮುಗುಳ ಬಿಡಿಗಳಿಟ್ಟಳವಾದ ಪಾಯುವಟ್ಟಂಗಳನವರ್ಚಿಯುಂ (ಶಾಂತೀಕ್ಕಿ. ೩-೦೨೬ ಪ); ಆಯ್ದುಕೊಂಡರೆ ಸಾಕು ಸಾವಿರ ಬಿಡಿಗಳಲೊಬ್ಬೊಬ್ಬರೊಂದೊಂದರಂತೆ ಸಂತೋಷಪಡುವನು (ಇಂಕಾಶ. ೬೦-೪೦). ೩. ಒಂದು ಊರಿನ ಹೆಸರು : ಅನ್ನಿಯ ಸುಗ್ಗಯ್ಯನು ಬಿಡಿ ಪೊನ್ನಯ್ಯನುಂ ಅಲ್ಲಮ್ಮನುಂ ಐಯ್ಯರಜೋಗನುಂ ಇನ್ನಿನಿಬರುಂ ಸಾಕ್ಷಿಯಾಗೆ ಕೊಟ್ಟರ್ (ಎಕ. XI.ಕೋಕ್ಕಿ. ೩೦-೦೩; 964). **ಬಿಡು₃** : ೨. 'ಬಿಡುಗೆಲಸ', 'ಬಿಡುಮುತ್ತು' 'ಬಿಡುವೆಸರ್', 'ಬಿಡುವೊನ್' ಪರಾ.

**ಬಿಡಿಬಿಡಿ** (ದ್ವಿರುಕ್ತಿ): ಬಿಡಿಬಿಡಿಯಾದ ಹಾಳೆಗಳನ್ನು ಒಟ್ಟಿಗೆ ಸೇರಿಸಿ ಕಟ್ಟಿದು (ಊ). [ದೇ.॥ ತಮಿ. ವಿಟ; ಮಲ. ವಿಡು ; ತೆಲು. ವಿಡಿ]

**ಬಿಡಿಕಸಬಿ** (ನಾ). ಪ್ರತ್ಯೇಕವಾಗಿ ಕೆಲಸ ಮಾಡುವ ವ್ಯಕ್ತಿ : ಕೈಗಾರಿಕೆಗಳನ್ನೆಲ್ಲ ಬಿಡಿಕಸಬಿಗಳ ಅಡ್ಡಕಸಬಿಗಳ "ಕೈ" ತಪ್ಪಿಸಿ ದೊಡ್ಡ ಪ್ರಮಾಣದಲ್ಲಿ ಅದೇ ಕಸಬಿಗಳನ್ನು ಕೂಲಿಗೆ ಇಟ್ಟು ನಡೆಯಿಸಬಾರದೇಕೆ ? (ಮೂವಾರ. ೯೭). [ಬಿಡಿ + ಕಸಬಿ₂]

**ಬಿಡಿಕಾರು** (ನಾ). ಪ್ರತ್ಯೇಕವಾಗಿ ಮಳೆಯ ನೀರಿನಿಂದ ತೆಗೆದ ಫಸಲು (?) : ಉಳುಕೊಳುವ ಭೂಮಿಯಲು [ಬ]ಯಲು ಬಿತ್ತು ಬಿಡಕೀಡು ಮು ೫೦ ××× [ದ್ದ] ಬಿಡಿಕಾರು ಮೂ ೨ (ಕ್ನಾಇ. ೦೯೩೯, ಕುಂಗಳಶರು. ೪೬೦-೦೩; 1329). [ ಬಿಡಿ + ಕಾರು₂ (< ಕಾರ್₂) ]

**ಬಿಡಿಕಾಸು** 'ಬಿಡಿಗಾಸು' ನೋ.

**ಬಿಡಿಕೆ** (ನಾ). ೧. ಬಿಡಬೇಕಾದುದು; ತ್ಯಾಜ್ಯ : ಒಂದು ಹೇಳಿಕೆಯಲ್ಲಿ ಅತ್ಯುಕ್ತಿಗಾಗಿ ಬಿಡಬೇಕಾದ ಭಾಗ; ಬಿಡಿಕೆ ; ಕಳೆತ ; ತ್ಯಾಜ್ಯಾಂಶ (Discount. ೩೦೪೩). ೨. ಬೇರೆಯಾಗುವುದು; ಬೇರ್ಪಡುವುದು. ೩. ಜಟ್ಟಿಕಾಳಗದಲ್ಲಿ ಒಂದು ಫಟ್ಟು,— ವರಸೆ : ಬಿಡದೆ ಬಿಗಿಗಳ ಬಿಡಿಸಿ ಕಳಚುವರು . . . ಅಡಿಮುಗುಚಿಯುಪ್ಪರಿಸಿ ಬಿನ್ನಣ ಬಿಡಿಕೆಗಳ ಬಂಧದಲಿ ಹೊಣಗಿದರುಭಯಪಟುಭಟರು (ಅಂಬಿಅ. ೦೩-೨೦).

[ಬಿಡು₁ + — ಇಕೆ]

**ಬಿಡಿಗಮ್ಮಟ** (ನಾ). ಪ್ರತ್ಯೇಕವಾದ ಕೆಲಸಕ್ಕೆ ಗೊತ್ತುಮಾಡಿರುವ ಟಂಕಸಾಲೆ (?) : ಉಣ್ಣಿಗೆಯ ಕಮ್ಮಟದಲು ತಿಂಗಳಿಗೆ ಸ ಒನ್ದು ಬಿಡಿಗಮ್ಮಟದಲು ತಿಂಗಳಿಗೆ ಹ ೧ (ಎಕ. XII. ಶಿರಾ. ೩೬-೨೦; ಸು. 1040).

[ಬಿಡಿ + ಕಮ್ಮಟ]

**ಬಿಡಿಗಾಸು, ಬಿಡಿಕಾಸು** (ನಾ). ೧. (ಹಿಂದೆ ಬಳಕೆಯಲ್ಲಿದ್ದ) ತಾಮ್ರದಿಂದ ಮಾಡಿದ ಒಂದು ಅತಿ ಸಣ್ಣ ನಾಣ್ಯ; ಚಿಕ್ಕಾಸು.

೨. ಚಿಲ್ಲರೆಹಣ; ಪುಡಿಗಾಸು : ರಸೀತಿ ಕೊಡದೇ ಇದ್ದರೆ ಒಂದು ಬಿಡಿಗಾಸು ಬಿಚ್ಚಲು ಅವನು ಸಿದ್ಧನಿರಲಿಲ್ಲ (ಪ್ರಾರ್ಗಣ. ೬೯); ಅವರು ಕೊಡುವ ನಾಲ್ಕು ಬಿಡಿಗಾಸುಗಳ ಮೇಲೆ ಅವನು ಬದುಕಬೇಕಿತ್ತು (ಬಿಚಿಕಾ. ೩೩). ಬಿಡಿಕಾಸು : ೨. ಕೆಲಸ ಮಾಡಿ ರೂಪಾಯಿ ಸಂಪಾದಿಸಬಹುದಾದ ಕಡೆ ಕೆಲಸ ಮಾಡದೆ ಬಿಡಿಕಾಸು ಬಂದರೂ ಅವನಿಗೆ ತೃಪ್ತಿ (ಹೋಟಕು. ೬೩). [ಬಿಡಿ + ಕಾಸು₂]

**ಬಿಡಿಗಾಳು** (ನಾ). ಒಂದಕ್ಕೊಂದು ಅಂಟಿಕೊಂಡಿರದೆ ಬೇರೆಬೇರೆ ಯಾಗಿರುವ ಕಾಳು : ಬಿಡಿಗಾಳು ಬದ್ಧ; ಇಡಿಹಣ್ಣು ಸಿದ್ಧ, ಬಯಲಲ್ಲಿ ಇರುವ ಬುದ್ಧ (ಅಳಸು. ೧೨೭-೯). [ಬಿಡಿ + ಕಾಳು₂ (< ಕಾಟ್ಟ್₂)]

**ಬಿಡಿತನ** (ನಾ). ಏಕಾಂತತೆ; ಒಂಟಿತನ : ಬಿಡಿತನದ ಬಿಕ್ಕಟ್ಟಿನಲ್ಲಿ ಇಡಿತನದ ಒಕ್ಕಟ್ಟು ಹುಟ್ಟಿಸುವ ಹುಟ್ಟೀ ಬಳಗ (ಕಿಕಾಮು. ೬೩). [ಬಿಡಿ + – ತನ]

**ಬಿಡಿತೆ** 'ಬಿದುತೆ' ನೋ.

**ಬಿಡಿದರ** (ನಾ). ಸಗಟುಮಾರಾಟದವರಿಂದ ಪದಾರ್ಥಗಳನ್ನು ತಂದು ಬಿಡಿಬಿಡಿಯಾಗಿ ಮಾರುವಾಗ ಹಾಕುವ ಬೆಲೆ : ಬಿಡಿದರದ ಅಂಗಡಿಯ ಮಾತು ಬೇರೆ, ಈ ಅಂಗಡಿಕಾರನು ತನ್ನ ಸರಕುಗಳನ್ನು ದೊರಕಿಸುವುದು ಇಡಿಯ ದರದ ಅಂಗಡಿಗಳಿಂದ . . . ಪೂರೈಸುವದು – ಪುಡಿಗಿರಾಕಿಗಳಿಗೆ (ತಕ್ಕಿ. ೨೨). [ಬಿಡಿ + ದರ₃]

**ಬಿಡಿದಳ** (ನಾ). ಒಂದಕ್ಕೊಂದು ಸೇರಿಕೊಂಡಿರದೆ ವಿರಳವಾಗಿರುವ ಪಕಳೆ : ಹೂವುಗಳು ಬಿಡಿದಳಗಳಿಂದ ಕೂಡಿದ್ದರೆ ಅವುಗಳನ್ನು ಬಿಡಿದಳದ ಹೂವುಗಳೆಂದು (Polypetalous) ಕರೆಯುತ್ತಾರೆ (ಸಸ್ಯಶಾ. ೩೭). [ಬಿಡಿ + ದಳ₂ (= ದಲ)]

**ಬಿಡಿದಿವಸ** (ನಾ). ಯಾವ ಬಗೆಯ ಉತ್ಸವವಾಗಲಿ, ವಿಶೇಷವಾಗಲಿ ಇಲ್ಲದ ದಿನ : ಉಡುಪಿ ಶ್ರೀಕೃಷ್ಣನ್ನ ಬಿಡಿದಿವಸದಾಗ ತೋರಿಸಿದಿರಿ (ಹರಿಶ್ಚಂದ. ೨೨). [ಬಿಡಿ + ದಿವಸ]

**ಬಿಡಿನುಡಿ** (ನಾ). ಪ್ರತಿಯೊಂದು ವಚನವೂ ಬೇರೆ ಬೇರೆಯಾಗಿಯೆ ಉಪಯೋಗವಾಗುವಂತೆ ರಚಿತವಾಗಿರುವ ಪದ, ವಚನ ಇತ್ಯಾದಿ: ಬಿಡಿನುಡಿಯ ಬಂಟ, ಸತ್ಯವಾದಿ, ಸರ್ವಜ್ಞಕವಿಗೆ ಗಂಗಪ್ಪ ಮನಸೋತಿ ದ್ದಾರೆ (ಜಾಜಿಚು. ೦೫೩). [ಬಿಡಿ + ನುಡಿ₂]

**ಬಿಡಿಬಿಲ್** (ನಾ). ಒಂದು ಬಗೆಯ ಜೂಜಾಟ : ನೆತ್ತ ಚದುರಂಗ ಪಗಡೆಯು ಚಿತ್ರಾಯಂಬೈದುದಾಯು ಬಿಡಿಬಿಲ್ ಸೊಗಯಿಸುತ್ತಮ ರಾದರು ಆಡಲ್ಬಿತ್ತರೆಯುಹ ಭಂಗ ಬಪ್ಪನೆಂಬುದು ಪುಸಿಯೇಂ (ಜೀಶಾ. ೬೦೦). [ ? ]

**ಬಿಡಿಬೇಸಟ** (ನಾ). ಅನಾದರ; ಅಲಕ್ಷ್ಯ; ಉದಾಸೀನ : ಸೊರ್ಕಿ ನರ್ಕಿನ ಬಿಡಿಬೇಸಟಂ ನೆರೆಯೊಳ್ಪವರ್ಣಣದೊಳ್ಪ ಮುನಿಗಳು ಲೆಕ್ಕಿಸದೆ ತಕ್ಕಟಿದು ಮುಕ್ಕುಳಿಸಿ ಜಕ್ಕುಳಿಸಿದಂ (ರಾಮಾಶ್ವ. ೦೪೭-೨೦). [ಬಿಡಿ + ಬೇಸಟು₂]

**ಬಿಡಿಮುತ್ತು**, ಬಿಡುಮುತ್ತು (ನಾ). ಪೋಣಿಸದೆ ಬಿಡಿಯಾಗಿರುವ ಮುತ್ತು; ಒಂಟಿಮುತ್ತು : ಕ್ಷೀರಸಾಗರದಲ್ಲಿ ನಿರುತ ಬಿಡುಮುತ್ತಿ ನಕ್ಷತ್ರೆಯ ಸುರಿಸಿದಪೋಲು (ಪಶಪೋ. ೦೦-೫೫). ಬಿಡುಮುತ್ತು: ಕಡೆಯಿಕ್ಕಿದ ಬಿಡುಮುತ್ತಿನ ಪೊಡರ್ದುಣ್ಮುವ ಬೆಳಗು ಪೊಳೆವ ದುಗುಲದ ಪಸಯೊಳ್ ತೊಡರ್ದಿರೆ ಪೆಚಿತಲ್ಲಿದೆ ಪಾಲ್ಗಡಲೆನಿಸಿದುದು (ಅಂತ್ಯ. ೯-೦೬); ಕಾವಿಲ್ಲದ ಕರ್ನೆಯ್ದಿಲ ಪೂವಿಂ ಬಿಡುಮುತ್ತು ಬಿಡದೆ ಬಿಡುತಂದಪುವೆಂಬೀ ವಿಸ್ಮಯಮುಮಂ ಮಾಡಿದುವಾ ವನಿತೆಯ ನೀಳ್ದ ಕಣ್ಗಳುಂ ಕಣ್ಬನಿಯುಂ (ಬುಕ್ಕಿತ. ೪-೦೩); ಬಿಡುಮುತ್ತಿನ ಮಣಿಗದ್ದುಗೆಯೊಳಾಗ ಕಡುನೀಟಿ ಕಣ್ಗೊಪ್ಪಿದಳು (ಶ್ರೀಶಾಂ. ೨-೦೯). [ಬಿಡಿ + ಮುತ್ತು₃]

**ಬಿಡಿಮೊಳೆ** (ನಾ). (ಮುದ್ರಣದಲ್ಲಿ ಬಳಸುವ) ಬಿಡಿಬಿಡಿಯಾದ ಮೊಳೆ, –ಅಚ್ಚು : ಸರ್ವಸಮರ್ಪಕವಾಗಿ ಬಿಡಿಮೊಳೆಗಳಿಂದ ಮುದ್ರಿಸು ವುದನ್ನು ಕಂಡುಹಿಡಿದವನು ಗೂಟೆನ್ಬರ್ಗ್ (ಮುದ್ರಣ. ೯). [ಬಿಡಿ+ಮೊಳೆ₅]

**ಬಿಡಿಯ₁** 'ಬಿಡೆಯ₁' ನೋ.

**ಬಿಡಿಯ₂** 'ವಿಡಾಯ' ನೋ.

**ಬಿಡಿಯುತ್ತರ** (ನಾ). ಸಂಬಂಧವಿಲ್ಲದ ಮಾತು; ಅಸಂಬದ್ಧವಾದ ಮಾತು : ದಾನವೇಶ ರೋಷದಿಂ ಬಿಡಿಯವಿಲ್ಲದೆ ಸಭಾಂತರದಿ ಬಿಡಿ ಯುತ್ತರವ ನುಡಿಯಬಹುದೇ (ಪದಪುೋ. ೨೭-೬೩). [ಬಿಡಿ + ಉತ್ತರ]

**ಬಿಡಿಸರಳು** (ನಾ). ಒಂದೊಂದಾಗಿ ಬಿಟ್ಟ ಅನೇಕಬಾಣಗಳ ವರ್ಗ : ಕಡುಗಿ ನೂಕುವ ಕದನರಾಗಿಗಳೊಡನೆ ಕಾದುವ ಪಾರ್ಥತನಯನ ಬಿಡಿ ಸರಳು ಬೀಜಿದವು ರಮಣಿರನವರವಧುಗಳಿಗೆ (ಜಯಿಮಿನ್ಯ. ೫-೬೭). [ಬಿಡಿ + ಸರಳು₁ (< ಸರಲ್₁)]

**ಬಿಡಿಸು**, ವಿಡಿಸು (ಕ್ರಿ). ೧. ಕಳಚು; ಸಡಿಲಿಸು; ಕಳೆ : ನಿನ್ನ ಪಿಡ ಗೆಯ್ದ[ಟ್ಟ]ಂ ಶರದಿಂ ಬಿಡಿಸಿದನಲ್ಲದೆ ಸರಿತ್ಸುತಂ ಬಸ್ಸವಿನ್ನವೆಂಬುವು ಮೊಳವೇ (ಪಂಪಭಾ. ೬-೫೩); ವಕುಳದ್ರುಮಕಂ ಮಾಲತಿಗಂ ಮದುವೆ ಮಾಡಿದೆಂ ಬಿಡಿಸವರ್ಕೆ ನೀಂ ಕಂಕಣಮಂ (ಕಾದಂಪ. ೫೯೩); ಈ ಕಟ್ಟುಗಳಂ ಬೇಗಂ ಬಿಡಿಸೆಂದು [ಪಾಠಂ. ಬಿಡೆಂದು] ಬಿಡಿಸಿಕೊಂಡು ಪೋದಳ್ (ಪಂಪಶಾಂ. ೬೬-೦೪). ೨. ಹೋಗಲಾಡಿಸು; ನಿವಾರಿಸು: ನುಡಿಸಿದನೆನ್ನಂ ನಲ್ಲಂ ಬಿಡಿಸಿ ದನೆನ್ನಂತರಂಗದನುತಾಪಮಂ (ಕಬಿರಾ. ೩-೨೫೫); ನಂಬದುದಂ ನಂಬಿಸಲುಂ ನಂಬಿದುದಂ ಬಿಡಿಸಲುಂ . . . ಬಲ್ಲೆಂ (ಪಂಪಶಾ. ೩-೯೬ ಬ); ಎನ್ನ ಸುತ್ತಿದ ಮಾಯಾಪ್ರಪಂಚವ ಬಿಡಿಸಾ ನಿಮ್ಮ ಧರ್ಮ (ಬಸವಾರೀ. ಅ. ೦೯-೨೯); ಎನ್ನ ಗರ್ವಾಂಧಕಾರವ ಬಿಡಿಸಿ ರಕ್ಷಿಸು (ಪ್ರಭುಲಿಂ. ೨-೯ ಕಲ್ಲಿ). ೩. ಬಿಡುಗಡೆ ಮಾಡು; ವಿಮೋಚನೆಗೊಳಿಸು; ಬಂಧಮುಕ್ತನನ್ನಾಗಿ ಮಾಡು : ಅಂತಪ್ಪೊಡೆ ನಿನ್ನಂ ಕಾವ ಗಂಧರ್ವರೆ ಬಿಡಿಸುಗೆ ಪೋಗೆಂದು ಪೊಯ್ದಂ ದುರಾತ್ಮಂ (ಪಂಪಭಾ. ೯-೭೦); ಈ ಕರುಣಿ ಸಾವಿರಹೊನ್ನನಾದಡೆ ಕೊಟ್ಟು ಕುಜೀಯಂ ಬಿಡಿಸದಿರನು (ಬಸಶು. ೨೮-೦೭); ಖೂಳ ಬಿಡಿಸಾ ಭೀಮಸೇನನ ತೋಳುವಲೆಯೊಳಿ ಸಿಕ್ಕಿದನು ಭೂಪಾಲನು (ಜಯಿಮಿನಿ. ೦೩-೪೪). ೪. ಅಗಲಿಸು; ಬೇರ್ಪಡಿಸು; ಪ್ರತ್ಯೇಕಿಸು : ಬಿಡಿಸಿ ಭುಜಂಗಿಯ ತಟ್ಟಂ ಪಿಡಿದುಯ್ವಂತೆಳೆಯು ಮಲಯಜಾತಮನಳಿಪಿಂ ತೊವರ್ದಾ ಖಚರಿಯ ತಟ್ಟಂ ಬಿಡಿಸಿ ನೃಪಾತ್ಮಜನನೊರ್ವನುಯ್ದಂ ಖಚರಂ (ಅರ್ಜುನ. ೬-೯); ಬಲಿದ ಮುಳಿಸಂ ತಿಳುಹಲಿಕೆಯುಮ್ಮಳಿಯಿಯಲ್ಲಿನು ತಾತ್ಮಜನ ಕೈಗಳನೆರಡನೊಯ್ಯನೆ ಬಿಡಿಸಿ (ಬಸಶು. ೪೭-೨೩). ೫. ತೆಗೆದು ಹಾಕು; ವಜಾ ಮಾಡು : "ನಿಮ್ಮ ಆಗಸನನ್ನು ಬಿಡಿಸಿ ನೋಡಿರಿ" ಎಂದು ನಾನು ಸಲಹೆ ಮಾಡಿದೆ (ದೀಪ್ತ. ೨೬). ೬. ಕೀಳು; ಕಿತ್ತು ಹಾಕು : ಬಿಜುಗಾಳಿಂಗೆ ಕೆದಜುರ್ಪಸಿಯ ಹೂಗಳನು ಬಿಡಿಸದೆ . . . ನವಪರಿಮಳದ ಬಿರಿಮುಗುಳ್ಗಳನವಿಕಳಾತ್ಮನು ಸೆಜ್ಜೆದುಂಬಲು ತವಕದಿಂ ತವೆ ಕೊಯ್ದುಕೊಂಪು (ಬಸಶು. ೨೨-೯); ಅದನ್ನು ಬಿಡಿಸಿ, ತಂದು ಆರಿಸಿ ಕಾಳು ಬೇರೆ ಮಾಡುತ್ತಾರೆ (ಮುಂಜಿಯ. ೪-೨೭). ೭. ಕತ್ತರಿಸು; ಕಡಿ; ಭೇದಿಸು: ದುರುಳ ನುಡಿದನ ನಾಲಗೆಯ ನಿಡುಸೆಳೆಯ ಬಿಡಿಸುವೆ (ಜಯಿಮಿನಿ. ೦೨-೪೦); ನಿನ್ನ ಗಂಟಲ ಬಳಿಯ ಬಿಡಿಸುವ ಮೃತ್ಯುವಿದೆ ನೋಡಿತ್ತ ತಿರುಗು (ಕೊರಿಕಾ. ೦-೦೦-೦೩); ಮುಳಿದು ಕೊಂಡೊಯ್ದೊಡೆ ಜವನ ಗಂಟಲ ಬಳಿಯ ಬಿಡಿಸುವೆನು (ಸಾಸಿಶಾ. ೨೭-೨೨). ೮. ಲೆಕ್ಕ, ಒಗಟು ಮುಂತಾದುವುಗಳಲ್ಲಿಯ ಸಮಸ್ಯೆಗೆ ಉತ್ತರವನ್ನು ಕಂಡುಹಿಡಿ,– ಸಮಸ್ಯೆಯನ್ನು ಬಗೆಹರಿಸು : ನೀವಿಕ್ಕಿದ ತೊಡಕ ಬಿಡಿಸಬಾರದು ನೀ ಬಿಡಿಸಿದ ತೊಡಕನಿಕ್ಕಬಾರದು (ಸಿದ್ಧ. ಶ. ವ. ೦೦೬-೫೫೫); ಸಮಗಿದರಿಂದರಿದು ನಮ್ಮೊಳವಲ್ಲ ಆಸುರದ ತೊಡಕಿದಂ ಬಿಡಿಸ ಬಲ್ಲವರಿಲ್ಲ (ತಿರುಶ. ದೀ. ೨೯-೮);

ಪರೀಕ್ಷೆಯಲ್ಲಿ ಎಲ್ಲ ವಿಷಯಗಳನ್ನು ಚೆನ್ನಾಗಿ ಬಿಡಿಸಿದ್ದನು (ಅಧುಂಕ. ೬೬). ೯. (ಹಾಸುಗೆ, ಚಾಪೆ, ಬಟ್ಟೆ ಮೊದಲಾದುವನ್ನು) ಹಾಸು; ಹರಡು; ಹರವು: ಹಂಸಾವಳಿ ಗಜಾವಳಿ ಮೊದಲಾದ ಪಟ್ಟಾವಳಿಯ ದಿಂಡುಗಳಂ ತರಿಸಿ [ಚಿ]ಂದದೊಳಿರಿಸಿ ತರತರದಿಂ ಬಿಡಿಸಿ (ಬಸವ. ೬-೦೩); ಬಿಡಿಸುತ್ತುಂ ಬೆಳ್ಪಿರವಂ . . . ಸಡಿಲಿಸು ಘಾಸವಮನೆನುತುಗ್ಗಡದಿಂ ಮುತ್ತಿನದುಡು ಪುಲ್ಲೆಯಂ ಭಿಲ್ಲಾಘಂ (ಉದ್ಭಟ. ೨-೬೦). ೧೦. (ಚಿತ್ರ, ರಂಗವಲ್ಲಿ ಮುಂತಾದುವುಗಳನ್ನು) ಬರೆ; ರೇಖಿಸು; ಚಿತ್ರಿಸು: ಆಗಿನ ಕಾಲದಲ್ಲಿ ಚೀನಿಯರು . . . ಹೂ, ಹಕ್ಕಿ, ನಿಸರ್ಗದ ದೃಶ್ಯ ಮೊದಲಾದುವನ್ನು ಬಿಡಿಸುತಿದ್ದರು (ಚಾಂಕ್ರ. II. ೬೬೦); ಚಿತ್ರ ಬಿಡಿಸುವುದು ಮಕ್ಕಳಿಗೆ ಬಹು ಪ್ರಿಯವಾದ ಒಂದು ಹವ್ಯಾಸ (ಕಂಕೋ. VII. ೩೯೩). ೧೧. ಕೊರೆ; ಕಂಡರಿಸು; ಕೆತ್ತು: ಅಲ್ಲಿ ನಿತ್ಯಮಹ ಮೆಂಬುದು . . . ಭಕ್ತಿಪೂರ್ವಕದಿಂ ಶಾಸನಂ ಬಿಡಿಸುವುದುಂ ಮುನಿಜನಂಗಳಂ ಪೂಜಿಸುವುದುಮಪಕ್ಕುಂ (ಆದಿಪು. ೦೨-೦ ವ); ಇಷ್ಟನ್ನೂ ಅಭಿನ್ನಕಲ್ಲಿನಲ್ಲಿ ಕೆತ್ತಿ ಸುತ್ತಲೂ ಅಂಚಿನಲ್ಲಿ ಪ್ರಭಾವಳಿ ಬಿಡಿಸಿದೆ (ಕೋಶರು. ೯). ೧೨. (ಅತಿಥಿಗಳು) ಬೀಡು ಬಿಡುವಂತೆ ಮಾಡು; ತಂಗಲು ಅನುವು ಮಾಡಿಕೊಡು; ವಸತಿಗೊಳಿಸು: ಗಂಗಾಸಿಂಧುಮಧ್ಯಕ್ಷಿತಿ ಪತಿಗಳುಮಿಾ ಠಾಣದೊಳ್ ಬಂದು ಕಾಣ್ಬರ್ ಪಲರೆಂದೆಂತಲ್ಲಿ ಚೆಲ್ವಾಗಿರೆ ಬಿಡಿಸಿದನುರ್ವೀಶ್ವರಂ ತನ್ನ ಬೀಡಂ (ಆದಿಪು. ೦೩-೨೦); ಅರಮನೆಯೊಳ ವರವರ ಹವಣಱಿದರಸುಗಳ ನೆಱೆ ಬಿಡಿಸಿ ವಾಣಿಜವರಸು ನಾಂದೀಮುಖದ ಬಳಿಕೊಂದಿಸಿದನೊಲವಿನಲಿ (ಜೈಮಂ. ೭-೪೪); ಪೊಡೆಸು ಭೇರಿಯನಿಂದೆ ನಡೆಸು ಮತ್ಸ್ಯನಮಂ ಬಿಡಿಸು ಪಾಳೆಯವನು (ಕರ್ಣಪು. ೪೭-೨೨). ೧೩. ನೆಲೆಗೊಳಿಸು; ಇರಿಸು; ಇಡು: ಅಲ್ಲಿ ಜಲಕೇಳಿಯಾಡುವ ಗಾಡಿಕಾರ್ತಿಯರುಂ ಕಾಡಲೆಂದೊಳ್ಳಿಗಳಂ ತಂದು ಬಿಡಿಸಿಯವರ್ಕೆ ಪಾಲನೆಱೆದು ಸಡೆಪುತಿರ್ಪನ್ನೆಗಂ (ಶಂಕಶಂ. ೧೨೩-೦೯); ಆ ಸುರನರ ಭುಜಂಗಮರಿತ್ತ . . . ವಸ್ತುಗಳ ಸರಯುವಿನ ತೀರದಲಿ ಯೋಜನವೆರಡ ಱಳತೆಯ ವಿಶ್ವಕರ್ಮೋದ್ಧರಣರಮ್ಯಾಗಾರದಲಿ ಬಿಡಿಸಿದನು ಭೂಪಾಲ (ತೊರರಾ. ೦-೭-೩). ೧೪. ಸಂಬಂಧವನ್ನು ಕಳೆದುಕೊಳ್ಳು; ಅಗಲು: ಅರಸನುಮಂ ಸ್ವಜನಪರಿಜನಬಂಧುವರ್ಗಮುಮಂ ಬಿಡಿಸಿ ಶ್ರೀವರ್ಮಾರೆಂಬಾಚಾರ್ಯರ ವಕ್ಕದೆ ದೀಕ್ಷೆಯಂ ಕೈಕೊಂಡು (ವಡ್ಡಾರಾ. ೬೪-೨೯); ಎನ್ನ ಪಂಬಲನಿದಂ ಬಿಸುಡಿಂ ಬಿಡಿಮೆಂದು ಖೇಚರಂ ಬಿಡಿಸಿದನಾಪ್ಪರಂ ಬಿಡಿಸು ವಂತಿರೆ ಮೋಹದ ಬಳ್ಳಿವಳ್ಳಿಯಂ (ಆದಿಪು. ೨-೩೦); ಗಂಧರ್ವರಾಜನಂದನೆಯುಂ ತನ್ನನೆಂತಾನುಂ ಬಿಡಿಸಿ ಬೀಟ್ಕೊಂಡು ನಿಜಸ್ಕಂಧಾವಾರಕ್ಕೆ ಪೋಗಲೆಂದು ತದೀಯಭವನಮಂ ಪೊಱಮಟ್ಟು (ಕಾದಂಸಂ. ೨೩೩). ೧೫. ಸಡಿಲಗೊಳಿಸು; ಸುಗಮವಾಗಿಸು: ಕೈದುಕಾಱರ ಬಿಗುಹು ಘನ ನೀ ಹೊಯ್ದು ಮೊದಲಲಿ ಬಿಡಿಸು ಬಳಿಕಾವೈದಿ ನಿನ್ನನು ಕೂಡಿಕೊಂಬೆವು (ಕುಮಾರವ್ಯಾ. ೪-೪೪); ಮಾಧವನ ಸಮ್ಮುಖದ ಬಿಡಿಸುವ ಸುದಂಡಧಾರಿಗಳ ವೊಲಿದುಗ್ಗಡಿಸಲು (ವವಪೋ. ೦೦-೦೩). ೧೬. (ಸಿನಿಮಾ, ನಾಟಕ ಮುಂತಾದುವಕ್ಕೆ) ಪುಕ್ಕಟೆಯಾಗಿ ಪ್ರವೇಶಿಸಲು ಅವಕಾಶವಾಗುವಂತೆ ಮಾಡು: ಇವತ್ತು ನಮ್ಮನ್ನು ಬಿಡಿಸುತ್ತೀರಾ ನಾಟಕಕ್ಕೆ? (ಪಾಪೋ. ೦೬೨). ೧೭. ನೀಡು; ಕೊಡು: ಬಿಳಿಯಕ್ಕಿಯುಂ ಸೊಲ್ಲಗೆಯುಂ ಬಿಟ್ಟಿಯುನ್ನುಪ್ಪಮುಮನೆಲ್ಲಾ ಕಾಲಕ್ಕಂ ಸರ್ವ್ವಬಾಧಾಪರಿಹಾರಮಾಗಿ ಬಿಡಿಸಿದರ್ (ಎಕ. III, ಶ್ರೀರಂಗ. ೦೪೭-೦೪; ಸು. ೧೦೦೧); ಶ್ರೀಪುತ್ತ[ದ್ರ]ಬ್ಬರಸಿಯುತ್ರ್ಪಮ್ಮ ಬಸದಿಗೆ ದಾನಸಾಲೆಗೆ ಬಿಡಿಸೆ (ಕೌಶಾ. XI—i, ೩೯-೭; ೯೫೦). ೧೮. ಚಿತ್ರಿಸಿ, ಕಸೂತಿಮಾಡು: ಕೌಶೇಯ — ತೆರಳೆಯ ಹುಬು ಮುಕುಲಾಕಾರದಿಂದ ಮಾಡಿದುದ ಬಿಡಿಸಿ ನೆಯ್ದ ಸೀರೆ (ತಾಪಶಾ. ೬) ಬಿಡಿಸು: ೧೭. ಇಗ್ಗಲಿಯೂರಾ ಗವತೆಯ ಎಡಿಸಿದರ್ (ಪ್ರ್ಯಅಂ. ೦೪೬೦. ೫೦-೯; ೧೨ನೆಯ ಶತ).

ಬಿಡಿಸಿ ನೋಡು = ವಿಶ್ಲೇಷಿಸು; ವಿವರವಾಗಿ ಪರಿಶೀಲಿಸು: ಅದರ ಇತಿಹಾಸವನ್ನು ನೋಡುವುದಕ್ಕೆ ಮುಂಚೆ ನಿಟ್ಶೂರನ್ನು ಬಿಡಿಸಿ ನೋಡುವ (ಅಟ್ಟೂಶಾಂ. ೨). [ಬಿಡು₁ + – ಇಸು₁]

ಬಿಡಿಹೂ, ಬಿಡಿಹೂವು (ನಾ). ಮಾಲೆಯಾಗಿ ಕಟ್ಟದಿರುವ ಹೂವು; ಪ್ರತ್ಯೇಕಪ್ರತ್ಯೇಕವಾಗಿರುವ ಹೂವು: ಸ್ವಲ್ಪ ಬಿಡಿಹೂಗಳನ್ನು ಬೇರೆ ತೆಗೆದಿಡು (ಕೂಶ). ಬಿಡಿಹೂವು: ಬಿಡಿಹೂವಾದರೂ ಮುಡಿಗೆ ಮುಡಿದುಕೊಳ್ಳಬಾರದೇ? (ಗ್ರಾಮ.) [ಬಿಡಿ + ಹೂ₂ (<ಪೂ₂)]

ಬಿಡಿಹೂವು 'ಬಿಡಿಹೂ' ನೋ.

ಬಿಡಿಹೋರೆ (ನಾ). ಒಬ್ಬನೇ ಮಾಡುವ ಕೆಲಸ, –ವೃತ್ತಿ, –ಕಸಬು: ಕೈಕಸುಬುಗಾರರು ತಮ್ಮ ಬಿಡಿಹೋರೆಗಳನ್ನು ಬಿಟ್ಟು ಕಾರಖಾನೆ, ಗಿರಣಿ ಮುಂತಾದ ಪ್ರಚಂಡಸಂಘಟನೆಯ ಒಳಕೀಲುಗಳಾಗಿ ದುಡಿಯತೊಡಗುವರು (ಮಾವಾರ. ೧೦೦). [ಬಿಡಿ + ಹೋರೆ₁]

ಬಿಡು₁, ಎಡು (ಕ್ರಿ). ಬಿಟ್ಟ, ವಿಟ್ಟ₁ (ಭೂತಕೃ). ಬಿಟ್ಟು₁ (ಭೂತನ್ಯೂ). ೧. ತೊರೆ; ತ್ಯಜಿಸು: ಪರಲೋಕವಿಲ್ಲದಂದು ತಲ್ಲೋಕಸುಖಾನುಭಾವನಾಪೇಕ್ಷೆಯನ್ನೆಹಿಕಸುಖಮಿಮುಖನಾಗಿ ಶರೀರಾರ್ಥವ್ಯಯಂ ಮಾಡುವಾತಂ ಕಯ್ಯದಂ ಬಿಟ್ಟು ಕಾಲದರ್ಕೆಱಗುವಾತನಂ ಪೋಲ್ಕುಂ (ಆದಿಪು. ೨-೯ ವ); ಪಗೆ ಸಮಿಾಪವಾದೆಡೆಯಲ್ಲಿರಲಾಗದು ಯುದ್ಧಂ ಮಾಡಲಾಗದು ಆ ದೇಶಮಂ ಬಿಟ್ಟು ಪೋಪುದು (ಶಂಕಶಂ. ೩೯-೨೩); ಪದ್ಮವ್ಯೂಹದಲಿ ಹೊಕ್ಕಾಳು ಮರಳಿದಡಸ್ತ್ರವಿದ್ಯಾಭಾಳಲೋಚನನೆಂಬ ಬಿರುದನು ಬಿಟ್ಟೆ ನಾನು (ಕುಮಾರವ್ಯಾ. ೪-೯). ೨. ಅಡ್ಡಿಯಿಲ್ಲದಿರು; ತಡೆಯಿಲ್ಲದಿರು: ಎಲೆಲೆ ದೊರೆ ಸಿಕ್ಕಿದನು ಸಿಕ್ಕಿದನಳಿದುದೋ ದ್ರೌಪದಿಯ ಸಿರಿಯೆಂಬುಲುಹ ಕೇಳುತ ಪಾರ್ಥ ಬಂದನು ಬಿಟ್ಟ ಸೂಠಿಯಲಿ (ಕುಮಾರವ್ಯಾ. ೨-೩). ೩. ಕಟ್ಟಿನಿಂದ ಸಡಿಲಗೊಳಿಸು; ಹಿಡಿತದಿಂದ ಕಳಚು; ವಿಮೋಚನೆಗೊಳಿಸು; ಬಿಡುಗಡೆ ಮಾಡು: "ಬಿಡು-ವಿಮೋಚನೇ" (ಶಮಂಧಾ); ಒಂದಂ ಕ್ರಿಯಾವಿಶೇಷಣಮಂ ದೊರೆಕೊಳಿಸಯ್ಯು ಪೇಟದಡೆಕೊಳಿ ಪೆಱತಂ ಸಂಧಿಸಿ ಪೇಟ್ದೊಡೆ ಕೃತಿಯೊಳಗೊಂದಿರದೆದೆದಕ್ಕೆ ಬಿಟ್ಟ ಕಱುವಂ ಪೋಲ್ಗುಂ (ಕಾಂಪಾ. ೨-೯); ಕೊಂದೊಡೇ ವಂದಪುದೆಂದು ದುರ್ಯೋಧನನಲ್ಲಿಗೆ ಪೋಗೆಂದು ಆಟ್ಟಿದ ಕಟ್ಟುಗಳಂ ಬಿಟ್ಟು ಕಳೆದೊಡೆ ಜಯದ್ರಥಂ ಸಿಗ್ಗಾಗಿ (ಪಂಪಭಾ. ೭-೩೨ ವ); ತಂಗಿನ ಪೊಸ ನೇಣಿಂದಮಿದಿಂಗಳ್ಪರಮಡಸಿ ಕಱಿಯಂ ಕಟ್ಟಿದೊಡಂ ತಾಂ ಗತ ಬಿಟ್ಟೊಡೆ ಮತ್ತಂ ಪಿಂಗದು ಡೊಂಕೆಂಬ ನಾಯ ಬಾಲದ ತೆಱದಿಂ (ಧರ್ಮಾಮೃ. ೨-೬೨). ೪. ಕಳಚಿಕೊಳ್ಳು; ಬೇರೆಯಾಗು; ಉಚ್ಚು; ಸಡಿಲವಾಗು: ಮಾಯಾ ಪಾಶ ಹಿಂಗಿ ಮನದ ಗಂಟು ಬಿಡದನ್ನಕ್ಕ ಕೂಡಲಸಂಗಮದೇವನೆಂತೊಲಿವನಯ್ಯಾ (ಬಸವ. ೨೦೨); ಹೊಗರುಗೆಟ್ಟುದು ಕುಮುದ ಕಮಳದ ಬಿಗುಹು ಬಿಟ್ಟುದು ಚಕ್ರವಾಕದ ತಗಹು ಕೆಟ್ಟುದು ಹೇಳಿಸಲು ರಂಜಿಸಿತು ದೀಪಾಳಿ (ಕುಮಾರವ್ಯಾ. ೦೩-೪೪). ೫. (ಉಸಿರು ಮುಂತಾದುವನ್ನು) ಹೊರಹಾಕು; ಸೂಸು; ಹೊರಹೊಮ್ಮಿಸು: ನಾಸಿಕದಿ ಬಿಡುವಾನಿಲಂ ರೇಚಕ ಮೆನಿಕ್ಕು (ಪ್ರಭುಲಿ. ೦೬-೦೪); ಕುಲಶೈಲಂಗಳಾಸಱಿಂ ಕಂದರದ ಮೊಗದಿಂದೆ ಬಿಡುವ ಬಿಸುಸುಯ್ಯೆಲರ್ ಬಂದಪುದೆನಲ್ಕೆ ಝಳದಿಂ ಬಿಡದೆ ಬೀಸುತಿರ್ದುದು ಗಾಳಿ ಬೇಸಗೆಯೊಳು (ಕೃಷರಾ. ೦೩-೩). ೬. (ನಾಯಿಯನ್ನು) ಮೇಲೆ ನುಗ್ಗಿಸು, – ಛೂ ಬಿಡು: ಸೀಳ್ನಾಯ್ಗಳಂ ಬಿಡು ಕೋಲಂತುಡು (ಕಾದಂಪೂ. ೦೬೦); ಒಂದು ಮೊಲಕ್ಕೆ ನಾಯನೊಂಬತ್ತ ಬಿಟ್ಟಂತೆ ಎನ್ನ ಬಿಡು ತನ್ನ ಬಿಡೆಂಬುದು ಕಾಯವಿಕಾರ (ಬಸವ. ೩೬). ೭. ತೆಗೆ; ತೆರೆ; ಅಗಲಿಸು: ಅಂತು ಕಾದೆ ವಿದ್ವಿಷ್ಟವಿದ್ರಾವಣನ ಮೊನೆಯುಂಬಿನಂಬೇಱಂಗಳ್ಕೆ . . . ಕಿಂಪುರುಷರ್ ಕಾಪುರುಷರಂತೆ ಬಾಯಂ ಬಿಡೆಯುಂ

(ಶಂಶಾ. ೩-೬೬ ವ) ; ಬಿಡುಗುಂ ಬಾಯುಂ ನೆಲದೊಳ್ ಪಡುಗುಂ . . . ವಸುಭೂತಿ ಧೈರ್ಯವಿಲ್ಲದೆ ಮನದೊಳ್ (ರಮಾಣಿಪ್ಪು. ೦-೦೫೭): ಬಿಟ್ಟ ಕಣ್ಣು ಬಿಗಿದ ಹುಬ್ಬು ಬ್ರಹ್ಮರಂಧ್ರದಲ್ಲಿ ಕಟ್ಟು ಗುಡಿಯು ಕೂಡಲಸಂಗಮದೇವ ಹಿಡಿವಡೆದ (ಬಸವ. ೬೧೪). ೮. ವಾಹನ . ಕುದುರೆ ಮುಂತಾದುವನ್ನು ಓಡಿಸು._ನಡೆಸು : ತನ್ನ ಸಂಗಡದವರುಂ ಪರಿಗ್ರಹಮುಮೆಯ್ತರಲಾಱದೆ ಪಿಂದೆ ನಿಲ್ವಿನಂ ಕಡುಬಿನೊಳಂದು ಬಿಟ್ಟನತಿಶೀಘ್ರದೆ ವಾಜಿಯನಾ ನೃಪೋತ್ತಮಂ (ಕಾದಂಪೂ. ೬೨೦); ನೀನಾ ಪಶುವಂ ಬಿಡುವ ಪೊಡೆವ ಕಳಕಳಮಂ ಕೇಳ್ದು ಪಾರ್ವನೆಟ್ಟೆತ್ತೊಡೆಸ್ಸ ಕಾರ್ಯಂ ಕಿಡುಗುಂ (ಕಂತಕಂ. ೨೪೭-೧೪): ಬಿಡು ರಥವನಾ ದ್ರೋಣನಿದಿರಲಿ (ಕುವ್ಯಾದ್ರೋ. ೨-೩೩). ೯. (ಬಾಣ. ಈಟಿ ಮುಂತಾದುವನ್ನು) ಎಸೆ ; ಹಾಕು ; ಪ್ರಯೋಗಿಸು : ಮತ್ತಮಲ್ಲಿ ಬಡಿವುದುಂ ಬಿಡುವುದುಂ ಚಾಪವಿದ್ಯೆಯೊಳ್ (ಎಇ. XIII, ೩೩೨-೪೦ ; ೯೨೪) ; ದೊಣೆಯಿಂದಂ ತೆಗೆವಾಗಳೊಂದು ತುಡುವಾಗಳ್ಪತ್ತು ಬಾಣಂ ಧನುರ್ಗುಣದಿಂದಂ ಬಿಡುವಲ್ಲಿ ನೂಱು (ಗದಾಯು. ೩-೩) ; ತುಡುವಾಗಳೊಂದು ಬಿಲ್ಲಿಂ ಬಿಡುವಾಗಳು ಲಕ್ಕ . . . ಅಪ್ಪುವು ಗಡ ಪಾರ್ಥನ ಬಾಣವೆಂಬರ್ (ಸವುಶ. ೦೦-೦೬೦). ೧೦. ಉಳಿ ; ಹೊರತು ಪಡಿಸು : ಭಟ್ಟರೆ ಕೇಳಿಂ ನಿಮ್ಮಂ ಬಿಟ್ಟು ಕಲಕರ್ಣಲಜರೊಳರೆ (ಧರ್ಮಾಮೃ. ೦-೦೨೦) ; ಹರನಿಂದುರ್ವಿಗೆ ದೈವವೇ ಕಿರಣಕಿಂದುಂ ಬಿಟ್ಟು ಸೊಂಪುಂಟೆ (ಸೋಮೇಶ. ೬). ೧೧. ನಿರ್ಲಕ್ಷಿಸು ; ಗಣಿಸದಿರು : ಈ ನಡುಗುವುವಲ್ಲವೇ ತೊಡೆ ನಿತಂಬದ ಬಿಣ್ಪಿನೊಳೇವುದಕ್ಕ ಪೋ ಬಿಡು ಕಟಿಸೂತ್ರಮಂ(ಶಂಶಾ. ೩-೯೬): ಗುಣದೋಷಮನಱಿದವಱೊಳ್ಗುಣಮಂ ಕೈಕೊಂಡು ದೋಷಮಂ ನೆಱೆ ಬಿಡುವಾ ಗುಣವಂತನ ಮುಂದೋದಗೆ (ಸಮುಶ. ೦-೬೩). ೧೨. ಬಿಡಾರ ಹಾಕು ; ತಂಗು ; ನೆಲಸು ; ವಸತಿ ಮಾಡು : ಮಹಾರಾಜರು[ಂ] ಬಾಣರಸರುಂ . . . ಸಮಸ್ತಬಲಂ ಬೆಱಸಿ ಬಿಟ್ಟೊಡೆ (ಎಇ. XXIV. ೦೯೧-೮ ; ಸಂ. 886) ; ಅರಾನುಂ ಬಿಟ್ಟೆ ಪೋಪರ್ ಬೀಡಂ ಬಿಟ್ಟಿರ್ದರ್ ನಿಱಿಸುವರ್ (ಪಮ್ಪಾರಾ. ೯೯-೩): ಹರಿಗನಾ ಕುರುಕ್ಷೇತ್ರದೊಳಂತೇನುಂ ಮಾಣದ ಬಿಟ್ಟುದನಾ ಸೆಗಲ್ದ ಸುಯೋಧನಂಗೆ ಚರರಱಿಪುವುದುಂ (ಶಂಶಾ. ೧೦-೧) ; ಎಲ್ಲಿಯುಂ ದುರ್ಯೋಧನನನಱಿಸಿ ಕಾಣದೆ ವಿಸ್ಮಯಂಬಟ್ಟವನ ಬಿಟ್ಟ ಬೀಡಿಂಗೆ ನಿಟ್ಟುರಿಗೊಂಡು (ಗದಾಯು. ೬-೨೬ ವ). ೧೩. ಅವಕಾಶ ಕೊಡು ; ಆಸ್ಪದ ಮಾಡಿಕೊಡು : ತನ್ನ ಪ್ರಕೃತಿ ಬಿಡದಿರಲ್ ಅಱಕೆಯೇನಂ ಮಾಡುವುದು (ಶಂಕಶಂ. ೦೬-೨) ; ಆವರವರ ಸ್ವಸ್ಥಾನಂಗಳ ಸಲುಗೆಯನಱಿದು ಬಿಡುತ್ತಿದ್ದ ಕೂಡಲಸಂಗಮದೇವರಲ್ಲಿ ಬಸವಣ್ಣನ ಕಾಲವೇಳೆಯನಱಿದು (ಸರ್ವಶ. ೬೦-೪೫೩). ೧೪. ಕೊಡು ; ನೀಡು : ಕಿಟ್ಟಾಗನದೇವಕೆ ಎಲ್ಲಮಾನ್ಸರ್ವಪರಿಹಾರಂ ಬಿಟ್ಟ (ಎಕ. VI, ಕೊಪ್ಪ. ೩೬-೭ : 676?) ; ಪುನ್ನಾಡಱುಸಾಸಿರಕ್ಕ ಎಱೆಯರ್ ಸೆಲಕ್ಕಿ ಸೊಲ್ಲಗೆ ಬಿಟ್ಟು (ಎಕ. III, ಶಂಶವ. ೨೭-೩ ; ಸಂ. 810) ; ನೈಷ್ಠಿಕತಪೋಧನಗ್ಗರ್ಂ ಬಿಟ್ಟಮತ್ತರ್ ೪ (ಶಾಇಇ. XI-i, ೦೦೦-೦೫; 1064). ೧೫. ಸುರಿಸು; ಚೆಲ್ಲು: ಮಿಡಿದೊಡೆ ತನಿಗ[ರ್ವ] ರಸಂ ಬಿಡುವುವು (ಶಂಶಾ. ೦-೫೬); ಬಿಟ್ಟೆಸೆದುದು ಪೊಱವಾಱಂ ಮುಟ್ಟದ ತರುಣೀಸುಗಂಧಕೇಶಂ ತೆಗೆದಿಂ ಕಟ್ಟಿದಪರೆಂದು ಬಾಷ್ಪಂ ಬಿಟ್ಟೊಡನೆ ಬಿಲ್ಲಿಲ್ದ ಪಟ್ಟುಪೋಲಳಿರವದಿಂ (ಲೀಲಾವ. ೦೪-೦೩). ೧೬. ಸುರಿ ; ಹುಯ್ಯು : ಎರಕಕ್ಕ ಬಿಟ್ಟ ಕರುವಿನಂತೆ ಮಱುಗುತ್ತುಂ(ಧರ್ಮಾಮೃ. ೦-೦೬೨); ಖಡುಗವತ್ತೆಪಾಯ್ದಗಳಲಡುವುದ್ದಡಸಿದರು ಸೂಕರನ ತುಪ್ಪವ ತೊಡೆದರಿಱಿದೇಱಿನೊಳು ಬಿಟ್ಟರು ತೈಲಧಾರೆಗಳ (ಕುವ್ಯಾಭೀ. ೩-೪೨). ೧೭. ಚಿತ್ರಿಸು ; ಬರೆ : ಹೆಂಗಸರು ಮನೆ ಮುಂದೆ . . . ಆಕರ್ಷಕವಾಗಿ ರಂಗೋಲಿ ಬಿಡುತ್ತಾರೆ (ಬೋಳರೇ. ೨೩). ೧೮. ಶಿಲೆಯಲ್ಲಿ ಕೆತ್ತಿಸಿ ದಾನಮಾಡು : ಜಿನಗೃಹಂಗಳ್ಗೆ ತನ್ನ ಮನೆಯಿಂ ಗಂಧಪುಷ್ಪಾಕ್ಷತಾದಿಗಳನುಯ್ವುದುಂ . . . ಶಾಸನಂಗಳಂ ಬಿಡುವುದುಂ ಮುನಿಜನಂಗಳಂ ಪೂಜಿಸುವುದುಂ ಚತುರ್ಮುಖಮೆಂಬುದು (ಶಾಪುಂಪು. ೨೦೦). ೧೯. ಹೋಗಲು ಅನುಮತಿಸು ; ಬೀಳ್ಕೊಡು ; ನಿರೂಪ ಕೊಡು : ಎನ್ನ ಪಂಬಲನಿದಂ ಬಿಸುಡಿಂ ಬಿಡಿಮೆಂದು ಪೇೞರಂ ಬಿಡಿಸಿದನಾಪ್ತರು ಬಿಡಿಸುವಂತಿರೆ ಮೋಹದ ಬಳ್ವಳ್ಳಿಯುಂ (ಆದಿಪು. ೨-೫೦): ಬಹುಕಳಾಳಾಪಂಗಳಂ ಕಲ್ತು ಬರ್ಪಮೋಘಂ ಬಿಡಿಮೆಂಬುದುಂ (ಸುಕುಮಾ. ೨-೩೫). ೨೦. ಗಳಹು ; ಆಡು ; ನುಡಿ : ತೊಟ್ಟ ಜೋಹಕೆ ತಕ್ಕ ನುಡಿಗಳ ಬಿಟ್ಟಪಲ್ಲದೆ ನಿಮ್ಮ ರಾಯನ ಕಟ್ಟಳಾಪ್ತವೆ (ಕುವ್ಯಾದ್ರೋ. ೨-೫೨). 'ಬಿಡಕಿ' ಪರಾ. ೨೧. ಕೆಳಕ್ಕೆ ಇಳಿಬಿಡು: ನೇತಾಡುವಂತೆ ಮಾಡು ; ಜೋಲಾಡಿಸು : ಮಾಯುರಥಂ ಪ್ರಭಾವತಿವೆರಸು ಸಿದ್ಧಕೂಟಚೈತ್ಯಾಲಯದ ಮುಂದಿರ್ದು ಬಿಟ್ಟ ಮಾಲೆಯುಂ ನೆಲಂ ಮುಟ್ಟಲೀಯದೆ ಮೇರುವಂ ತ್ರಿಪ್ರದಕ್ಷಿಣಂಗೆಯ್ದು ಕೊಳಲಾಱದೆ (ಶಾಪುಂಪು. ೬೪) : ಬಿಡೋ . . . ಪರದೇನಾ (ರಾಘಂಕ. ೭೪). ೨೨. ಕ್ಷಮಿಸು : ಕಕ್ಕಸದಿಂ ಕಾದಿ ಹಿಪ್ಪೆಮಟ್ಟಿ ಗಜಮಱೆವೊಕ್ಕಡೆ ಬಿಡನೆಂದ ನಗುತ (ಮೋಹತ. ೩೪-೩೬). ೨೩. ಹಾಸು ; ಹರಡು : ಒಂದು ಹರಿಣ ತನ್ನಯ ಪರಿಸ್ಪಂದಸಹಿತೆಯಿದ್ದಂತಿರೆ ಪರಿಪರಿಪ ಕಾಳ್ಕಿಚ್ಚು ಮುಂದುಗಡೆ . . . ಬಿಟ್ಟ ಬೆಳ್ಪಾರಬಲೆಯೆಡಗಡೆ . . . ಈ ಅನುವರವನು ಮಾಣಪರಿಲ್ಲ (ಸಪ್ಮಕಾ. ೨-೪೭). ೨೪. ತೊಡಗಿಸು ; ಆರಂಭಮಾಡಿಸು : ನಾಲ್ಕು ಆಳುಗಳನ್ನು ಈ ಕೆಲಸಕ್ಕೆ ಬಿಟ್ಟರೆ ಬೇಗ ಮುಗಿಸಬಹುದು (ಕೂಶ). ೨೫. (ಸಾಲದಲ್ಲಿ ಅಥವಾ ವ್ಯಾಪಾರ ಮಾಡುವಾಗ ವಸ್ತುಗಳ ಬೆಲೆಯಲ್ಲಿ) ರಿಯಾಯಿತಿ ತೋರಿಸು ; ಸೋಡಿ ಕೊಡು : ಸಾವಿರಾರುರೂಪಾಯಿಗಳ ವ್ಯಾಪಾರ ಮಾಡಿರುವಾಗ ಹತ್ತು ರೂಪಾಯಿಯೂ ಬಿಡುವುದಿಲ್ಲವೆಂದರೆ ಹೇಗೆ ? (ಕೂಶ).

**ವಿಡು** : ೧. ವಿದ್ರುಮಾಧರ ಶಾನ್ತಿಸೇನಮುನೀಶನಾಕ್ಕೆಯಿ ವೆಳ್ಗೊಳಅದ್ರಿ ಮೇಲಶನಾದಿ ವಿಟ್ಟಪುನರ್ಭವಕ್ಕೆಱೆ ಆಗಿ (ಎಕ. II, ೩೦-೪ ; ಸಂ. 650). ೭.ಕೆಬಲೆನಾಡ ಬೆಳತೂರ ಪಡುವಣದೆಸೆಯ ಮೊಱಡಿಯೊಳ್ಪಿರಿಯ ಪನ್ನಿಗೆ ವಿಟ್ಟೊಡೆ ಪನ್ದಿಯುಂ ನಾಯುಮೊಡಸತ್ತುವು (ಎಕ. III, ಮಂಡ್ಯ. ೪೦-೦೦; 950). ೧೪. ಸಟ್ಟಿಬಜ್ಗದರ್ ವಿಜಾರಸರುಂ ಪಲ್ಲಡಿಗೆ ಕುಱುವಿಟ್ಟಡಿಪಿಟ್ಟಾರ್ ಅದಾನಳಿವೊನ್ಗೆ ಮಹಾಪಾತಕಮ್ (ಪ್ಮಆಂ. ೦೯೩೬, ೦೬-೦೫ : ಸಂ. 450) ; ಅನುಜೊ ಇನ್ದು ಕನಲ್ಗೊಳಿ ನನ್ದಿಯಾಲರಾ ವಿಟ್ಟದು ಪಡೆವೈಲಾಮು ಅವಾಸಪಾಲುಂ (ಎಕ. VI, ಚಿಕ್ಕಮ. ೫೦.೩ : ಸಂ. 480 ?) ; ಶಿವಮಾರಂ ಪ್ರಿಥುವೀರಾಜ್ಯಂಕೆಯ ವೆಡಿರುನ್ ಸ್ವರ್ಗಗ್ತ್ರಿಱೆಯ ಮರಿಯಾಡಿ ಕೊಟ್ಟಾನ್ ಸೇಬೆಗೆ ವಿಟ್ಟಾರ್ (ಎಕ. IV (R), ತಗ್ಗ ಡ. ೧೫೭-೪ : ಸಂ.700).

**ಬಿಟ್ಟ ಬಾಯಿ**. **ಬಿಟ್ಟ ವಾಯ್** = (ಆಶ್ಚರ್ಯ.ಭಯ ಮುಂತಾದಂವುಗಳಿಂದ) ತೆರೆದ ಬಾಯಿ : ಭಗವಂತನ ಮಹಿಮೆಯನ್ನು ದಾಸರು ಹೃದಯಂಗಮವಾಗಿ ವರ್ಣಿಸುತ್ತಲಿದ್ದಾಗ ನೆಟ್ಟ ಕಣ್ಣು ಬಿಟ್ಟ ಬಾಯೂ ಆಗಿ ಜನರು ಕೇಳುತ್ತಲಿದ್ದರು (ರಾಶಾಪ. ೨೫೨); ಬಿಟ್ಟ ವಾಯಬ್ ಬಿಟ್ಟಂತಿರೆ ಬಂದಾಕ ಪೊಕ್ಕಳಿರದರಮನೆಯಂ (ಶಾಂತಿಪು. ೪-೦೦೩). **ಬಿಟ್ಟಾಡಿಕೊಳು** = ಮನಸ್ಸಿಯಾಗಿ ನಿಂದಿಸು ; ಮನ ಬಂದಂತೆ ತೆಗಳು : ಬಿಟ್ಟಾಡಿಕೊಳುವ ವೈರಿಯ ಮನೆ ಮುಂದೆ ಬಿಚ್ಚುಗತ್ತ್ಯಾಗಿ ಪೊಳೆದೇನು (ಹಮುಶ. ೨೨-೧೨). **ಬಿಟ್ಟಿಕ್ಕು** = ಮೇಲೆ ನುಗ್ಗುವಂತೆ ಮಾಡು ; ಚೋದಿಸಂ : ವಿರೋಧಿಸಾಧನಘಟಾಳಿಯನೋಡಿಸಲಾಗಳಾರ್ದು ಬಿಟ್ಟಿಕ್ಕಿದರುಗ್ರಸಿಂಧುರಘಟಾವಳಿಯಂ ಮುಳಿಸಿಂ ನಿಷಾದಿಗಳ್ (ಶಂಶಾ. ೧೦-೯೨) : ಅಣ್ದಿಭಮಂ ಕೀಱಿ ಬಿಟ್ಟಿಕ್ಕಿ (ಶಾಂತಿಪು. ೫-೫೬). **ಬಿಟ್ಟು ಕೊಡು** = ೧. ತೊರೆ ; ತ್ಯಜಿಸು ; ಬಿಟ್ಟುಬಿಡು : ಅವನ್ನು ಬೇಗ ಬಿಟ್ಟುಕೊಟ್ಟು . . . ಹೊಸಸಮಾಜದೊಂದಿಗೆ, ಬಾಳಿನೊಂದಿಗೆ ಬೆರೆಯಬೇಕು (ಹೊಸಕ. ೨೬೪) ; ಬ್ರಿಟಿಶ್

ಸರಕಾರವು ದಯಪಾಲಿಸಿದ 'ಸರ್' ಪದವಿಯನ್ನು ಠಾಕೂರರು ಬಿಟ್ಟು ಕೊಟ್ಟರು (ರವೀಂ. ೬೬). ೨. ನೀಡು ; ಕೊಡು ; ದಾನಮಾಡು : ಅಯ್ಯಪವಂಗಳದ ಪೂರ್ವ್ವಮರ್ಯ್ಯಾದೆಯು ಬಳನಂ ಬಿಟ್ಟು ಕೊಟ್ಟಂ (ಎಕ. XI. ಹಿಂಹಯೂ. ೧-೨೬ ; 975) ; ಕೂಚಿಭಟ್ಟಾರರ ಕಾಲನ್ ಕರ್ಚ್ಚಿ ಧಾರೆಯನೆಱೆದು ಬಿಟ್ಟು ಕೊಟ್ಟರ್ (ಎಕ. IV. ಕಾವಹಾ. ೦೬-೦೭ ; ಸು. 1000 ?) ; ಶ್ರೀಸ್ವಯಂಭುಸೋಮೇಶ್ವರದೇವರ್ಗ್ಗೆ ಧಾರಾಪೂರ್ವ್ವಕಂ ಮಾಡಿ ಬಿಟ್ಟು ಕೊಟ್ಟರ್ (ಸೌಇಇ. XX. ೯೯-೬೨ ; 1076 ?) ; ರಾಜ್ಯವನ್ನು ಈಗಾಗಲೇ ಬಿಟ್ಟುಕೊಟ್ಟಿದ್ದೇನೆ (ಪಶಖ. ೪). ೩. ಹೋಗಲು ಅಪ್ಪಣೆ ಕೊಡು : ಬೀಳ್ಕೊಡು : ನನಗೆ ತಪಸ್ಸಿನ ಮೇಲೆ ಮನಸ್ಸಾಗಿದೆ . . . ನನ್ನನ್ನು ಬಿಟ್ಟುಕೊಡಿ (ಪಶಖ. ೬೬೯). ೪. ಓಡಿಸು; ಹರಿಯ ಬಿಡು: ಮನಸ್ಸನ್ನು ಲಂಗು ಲಗಾಮಿಲ್ಲದ ಕುದುರೆಯಂತೆ ಬಿಟ್ಟುಕೊಟ್ಟು . . ಆಡಂಬರದ ಆಟಗಳನ್ನು ಕಟ್ಟುತ್ತೇವೆ (ವಾರಾಕ್ಕ. ೦೦೭). ೫. ಉಳಿಸು ; ಇರಗೊಡು : ಈ ರಾಜರು ಬಿಟ್ಟುಕೊಟ್ಟಿರುವುದರಿಂದ ನಾನು ಬದುಕಿದ್ದೇನೆಯೋ? (ಪಶಖ. ೯೪). ೬. ಮನಸ್ಸಿನಲ್ಲಿರುವ ವಿಷಯವನ್ನು ಬಹಿರಂಗಗೊಳಿಸು,— ರಟ್ಟುಮಾಡು: ನಾನೆಲ್ಲ ಗುಟ್ಟನ್ನು ಅವನಿಗೆ ಬಿಟ್ಟು ಕೊಟ್ಟೆ (ಅಂಹೂ. ೩೯). ೭. ಪಕ್ಷದಿಂದ ಹೊರತುಮಾಡು: ಪಕ್ಷ ವಹಿಸದಿರು : ಜೀವದ ಗೆಳೆಯನಲ್ಲವೇ —ಒಬ್ಬರಿಗೊಬ್ಬರು ಬಿಟ್ಟು ಕೊಡುವವರಲ್ಲ (ಪೂರುದಾ. ೦೯೦). ಬಿಟ್ಟು ಬಿಡು = ೧. ತೊರೆ; ತ್ಯಜಿಸು : ಅವನು ಅದನ್ನು ಅಡವಿಗೆ ಒಯ್ದು ಬಿಟ್ಟು ಬರಬೇಕೆಂದು ನಿಶ್ಚಯಿಸಿ ಅದರ ಸರ್ಪಳೀ ಬಿಚ್ಚಿಹೋದನು (ಪುಂಂಹು. ೨-೨೦). ೨. ಗಣನೆಗೆ ತೆಗೆದುಕೊಳ್ಳದಿರು; ಕಡೆಗಣಿಸು: ಆ ವಿಷಯವನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಬಿಟ್ಟುಬಿಡು (ಲೂಶಿ). ಬಿಟ್ಟು ಹೋಗು = ೧. (ಒಂದು ಸ್ಥಳದಿಂದ) ನಿರ್ಗಮಿಸು ; ಹೊರಡು : ನಿನಗೆ ಇಲ್ಲಿರಲು ಇಷ್ಟವಿಲ್ಲದಿದ್ದರೆ ಬಿಟ್ಟು ಹೋಗಬಹುದು (ಲೂಶಿ). ೨. ಇಲ್ಲವಾಗು : ಸ್ವರದ ಮುಂದೆ ಸ್ವರವು ಬಂದರೆ ಸಾಮಾನ್ಯವಾಗಿ ಹಿಂದಿನ ಸ್ವರವು ಬಿಟ್ಟು ಹೋಗುತ್ತದೆ (ಷರ್ಕ್ಯವ. ೦೭). ಬಿಡಬೀಸು = ಕಡೆಗಣಿಸು ; ತಿರಸ್ಕರಿಸು ; ಬಿಟ್ಟು ಬಿಡು : ಎನ್ನ ಬಿಡಬೀಸದಿರು ಕಂಡಾ ಲಿಂಗವೇ (ಶಿವಗೀ. ೩೬-೦೭೬); ಬಿಡಬೀಸದಿರು . . . ಕಡೆಗೆ ಸದ್ಗುರುವೆ (ರೇಣ್ವಕೋ. ೯. ೦೯-೨೯). ☞ ಈ ಧಾತುವು ಹಲವು ಶಬ್ದಗಳ ಜೊತೆಗೂಡಿ ವಿಶಿಷ್ಟವಾದ ಧಾತುವಾಗಿ ವಿಧವಿಧವಾದ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಉದಾ. ಕಾಯಿಬಿಡು, ಕೈಬಿಡು, ಮನೆಬಿಡು, ಹಾದಿಬಿಡು, ಹೂಬಿಡು ಇತ್ಯಾದಿ. [ದೇ.॥ ತಮಿ. ಮಲ. ವಿಟು; ತುಳು. ಬುಡು; ತೆ... ವಿಡು; ಗೊಂಡಿ. ವಿರ್ಸಾನ; ಬ್ರಾಹೂಈ. ಬಿಟ್ಟಿಂಗ್]

**ಬಿಡು₂** 'ಬಿಡುವು' ನೋ.

**ಬಿಡು₃** 'ಬಿಡಿ' ನೋ.

**ಬಿಡು₄** (ಅ). 'ಛೆ' ಎಂಬರ್ಥದಲ್ಲಿ ನಿಪಾತಾವ್ಯಯದಂತೆ ಬಳಸುವ ಒಂದು ಶಬ್ದ: ಕಲಿತನದಿಂದಂ ಲೋಗರ್ ಪುಲಿಯಂ ಪಿಡಿದೊಡಮದೇಂ ಬಿಡೆಂಬರ್ (ರರ್ಹಾತ್ತು. ೦-೦೭೬); ಬಿಡು ಮರೀಚಿಯ ತೊಱೆಗೆ ಹಱು ಗೋಲಿಡುವವರುಂಟೇ (ಕುವ್ಯಾದ್ರೋ. ೯-೩೮). [ < ಬಿಡು₁]

**ಬಿಡುಕುಳ** (ನಾ). ಪ್ರತ್ಯೇಕವಾಗಿರಿಸಿದ ಜಾತಿ ; ಬೇರೆಯಾಗಿರಿಸಿದ ಕುಲ : ಹರಿಜನರ ಚೋಮ, ಪಾತಿರ ಅವ್ವ ಮತ್ತು ಮೋದರ ಮುದ್ದ ಮೊದಲಾದವರಂತೆ ತಾನೂ ಬಿಡುಕುಳದ ಮಗನಂತಿದ್ದಾನೆ ! (ಮಸಕೂ. ೦೦). [ಬಿಡು₂ ( < ಬಿಡುವು) + ಕುಳ್ಯ (= ಕುಲ)]

**ಬಿಡುಗಂಡಿ** (ನಾ). ಕೆರೆ, ಕಟ್ಟೆ ಮುಂತಾದುವುಗಳಲ್ಲಿ ನೀರು ಹೊರಹೋಗುವುದಕ್ಕಾಗಿ ಮಾಡಿರುವ ಕಂಡಿ ; ತೂಬು : ಸಸಿನವಹ ಕೊತ್ತಳದ ಸಾಲಿನ ನುಸುಳುಗಂಡಿಯ ಮುರುಹುಗಳ ಮುಂದೆಸೆವ ಕಲು ಮುಳುಮೇಲಿ ಬಿಡುಗಂಡಿಗಳನೀಕ್ಷಿಸಿದ (ಪ್ರಾಕಾ. ೨-೦೩); ನಾಲೆಯಲ್ಲಿ ಬರುವ ಹೆಚ್ಚು ನೀರನ್ನು ಹೊರಕ್ಕೆ ಸಾಗಿಸುವ ಬಿಡುಗಂಡಿಗಳು ಎರಡು ವಿಧವಾಗಿವೆ (ಶಿಲ್ಪಶಾ. ೩೯೦). [ಬಿಡು₁ + ಕಂಡಿ₁]

**ಬಿಡುಗಟ್ಟು** (ನಾ). (ಕರಾ) ಸಾಲದ ಹಣದ ಮೇಲೆ ಸಮಯಕ್ಕೆ ಸರಿಯಾಗಿ ತೀರಿಸದೆ ಇದ್ದಾಗ ಹೆಚ್ಚಾಗಿ ಪಡೆಯುವ ಬಡ್ಡಿ ; ದುಬಾರಿ ಬಡ್ಡಿ : (ಕಸಂಗ್ರಾ. ೦೭೬). [ಬಿಡು₂ ( < ಬಿಡುವು) + ಕಟ್ಟು₂]

**ಬಿಡುಗಡೆ** (ನಾ). ೧. ಬಂಧನದಿಂದ ಪಾರಾಗುವಿಕೆ ; ವಿಮೋಚನೆ : ಆ ಉಭಯದ ಬಿಡುಗಡೆಯನಱಿದು ಅಡಗಿಯಲ್ಲದೆ ಸ್ವಯಂಭುವಲ್ಲ (ಸೋಕವಶ. ೨-೩) ; ಕರುಣೆಯ ಸ್ಪರ್ಶವಿಲ್ಲದ ಕಟ್ಟಳೆಯ ಪ್ರಭುತ್ವಕ್ಕೆ ನಾನು ಒಳಗಾದರೆ ಕರ್ಮದಿಂದ ನಮಗೆ ಬಿಡುಗಡೆ ಎಂದೂ ಸಾಧ್ಯವಿಲ್ಲ (ಚಕ್ರಸ್ವಾ. ೩೩೭). ೨. ಮೋಕ್ಷ ; ಕೈವಲ್ಯ ; ಮುಕ್ತಿ : ಕಡೆಯಿಲ್ಲ ಮೊದಲಿಲ್ಲ ತಡೆ ಬಿಡುಗಡೆಯಿಲ್ಲ (ಶರಣೋ. ೯-೬-೬) ; ಮೋಕ್ಷವೆಂದರೆ ಬಿಡುಗಡೆಗೆ ಹೆಸರು (ಶರಶ. ೬೨-೯). ೩. ಸ್ವಾತಂತ್ರ್ಯ ; ಸ್ವತಂತ್ರತೆ : ಮುಂದೆಯುದು ತೋರುವುದು ಬಿಡುಗಡೆಯ ಹಬ್ಬದಲಿ ! (ಕಾಂತಾ. ೬-೪). ೪. ಅಂತ್ಯ ; ಕೊನೆ ; ಮುಕ್ತಾಯ : ನಡುಹೊಳೆಯ ಹಱಿಗೋಲ ಮೂಲೆಯ ಕಡಿದಿರಾದರೆ ನಮ್ಮ ಪುಣ್ಯದ ಬಿಡುಗಡೆಯ ಕಾಲವು (ಕುವ್ಯಾದ್ರೋ. ೯-೩).

[ ಬಿಡು₁ + ಕಡೆ₃ ]

**ಬಿಡುಗಣ್**, ಬಿಡುಗಣ್ಣು (ನಾ). ೧. (ಅಗಲವಾಗಿ) ತೆರೆದ ಕಣ್ಣು ; ಬಿಟ್ಟ ಕಣ್ಣು: ಬಿಡುಗಣ್ ಬಿಡುವಾಯತ್ . . . ಅಱುಗೆಱೆಯಂಬವು ಪಡೆಯುವು ಬಂದುವನುದಂತವೃತ್ತಿಯನಾಳ್ದಂ (ಕಶುದ. ೦೭೦) ; ಬಾಯ್ಗಳಂ ಬಿಡುವ ಬಿಡುಗಂಗಳ ಸುಜಾಣೆಯರ್ ಸಲೆ ದಶಾವಸ್ಥೆಯೊಳ್ ಕಣ್ಗೆಸದರು (ಕಂಪು. ೦೯-೨೦). ೨. (ಆಲಂ) ದಿವ್ಯದೃಷ್ಟಿ: ಗಿಡಿದ ಕತ್ತಲೆಯ ಗುಹೆಯೊಳಡಗಿರ್ದರಾ ಅಸುರರ್ ಕೀಳ್ದರಾ ವಾಟಪಂ ಪಲ್ಮೊರೆದು. ಕಣ್ಣರಿಯೆ ಕಂಡರಾ ಬಿಡುಗಣ್ಣ ಬೆಳಕನ್ (ಹೊಂಗಳು. ೩೭-೦೦). **ಬಿಡುಗಣ್ಣು** : ೧. ಮೊಗದ ಹೊಗರವಗಡಿಸೆ ಸುಯಿಲಲಿ ಹೊಗೆಯು ಹೊದೆಯಂಕುರಿಸೆ ಬಿಡುಗಣ್ಣುಗಳೊಳೊಕ್ಕುದು ಕಂಪು ಸೊಂಪಡಗಿತು ಮಾಖಿಸ್ನೇಹ (ಕುವ್ಯಾದ್ರೋ. ೬-೨೦) ; ಶಾಂತೆಯೂ . . . ಕುಳಿತುಕೊಂಡು ಬಿಡುಗಣ್ಣುಗಳಿಂದ ಮನೆಯ ನಾಲ್ಕು ಮೂಲೆಗಳನ್ನೂ ನೋಡುತ್ತಿದ್ದಳು (ಶಂತಿ. ೪೬). ೩. ರೆಪ್ಪೆ ಹೊಡೆಯದಿರುವ ಕಣ್ಣು ; ಅನಿಮಿಷನೇತ್ರ : ದೇವತೆಗಳು . . . ಬೆವರಿಲ್ಲದ ಮೈ, ಬಿಡುಗಣ್ಣು, ಬಾಡದ ಮಾಲಿಕೆ, ಭೂಮಿಯನ್ನು ಮುಟ್ಟದಿರುವುದು, ಈ ದೇವತೆಗಳ ವಿಶೇಷಚಿಹ್ನೆಗಳನ್ನು ತೋರಿದರು (ಪಶಖ. ೦೪೦). 'ಬಿಡುಗಣ್ಣ' ಪರಾ. [ ಬಿಡು₁ + ಕಣ್ ]

**ಬಿಡುಗಣೆ** (ನಾ). ನಡುವೆ ಬಿಡುವಿಲ್ಲದಂತೆ ಪ್ರಯೋಗಿಸುವ ಬಾಣ ; ಏಕಪ್ರಕಾರವಾಗಿ ತೊಡುವ ಕಣೆ : ಮಡಬಗೌತಣವಿಕ್ಕುವರೆ ಕಡಲೊಡೆಯಗಹುದು ಸಮರ್ಥನಲ್ಲಾ ಬಿಡುಗಣೆಯ ಬೀಱುವರೆ ಕಟಕಾಚಾರ್ಯನು (ಕುವ್ಯಾದ್ರೋ. ೬-೦೯). [ಬಿಡು₂ (<ಬಿಡುವು) + ಕಣೆ₁]

**ಬಿಡುಗಣ್ಣ** (ನಾ). ೧. ತೆರೆದ ಕಣ್ಣುಳ್ಳವನು ; ಅಗಲವಾಗಿ ಕಣ್ಣು ಬಿಟ್ಟಿರುವವನು : ಪೊಂಜೊಡರು ತೂಗಿದೊಲು ನೆಲ ಬಾನ ತಳ್ಳೆಯುಲಿ ನೇಸರನು ಬಿಡುಗಣ್ಣನಾಗುತ್ತಿರಲು . . . ಸ್ವರ್ಣಮಂದಿರದ ಛಾಯೆಯೊಲು ಬೆಟ್ಟ ಕಾನು ಗಂಭೀರಗುಂಭದಲಿ ಮೈದುಂಬಿ ನಿಂತಿಹವು (ಕಾತೀ. ೦-೩). ೨. ರೆಪ್ಪೆ ಬಡಿಯದಿರುವವನು ; ಬಿಟ್ಟ ಕಣ್ಣುಳ್ಳವನು ; ದೇವತೆ : "ಗಾಳಿವಟ್ಟೆಗರ್ . . . ಬಿಡುಗಣ್ಣರೆನೆ ನಿರ್ಜರರ್ಗಮರ್ದ ನಾಮಮಕ್ಕುಂ" (ಶಬ್ದಮ. ೦೦೦) ; ಬೇಡುವರನು ಮನ್ನಿಪ ಬಿಡುಗಣ್ಣರ ನಾಡೆಱೆಯನ ಮಗನಂತೆ ಗಾಡಿವಡೆದ ರೂಪಿನ ಗರುವನ ನೀನೋಡು ಕಳಿಂಗನನಬಲೆ (ಜಮಂಶಾ. ೦೦-೬೯).

**ಬಿಡುಗಣ್ಣರೆಱೆಯ** = ದೇವತೆಗಳ ಒಡೆಯ ; ಶಿವ : ಬಿಡುಗಣ್ಣ

ರಜಿ೯ಯಂ ವಿಶ್ವನಾಥಂ ಪ್ರಸನ್ನನಾದಂ ಭಕ್ತರುಘೆಯುಘೆಯೆನೆ (ಶರ್ವ್ರಾ. ೬-೩೫). [ಬಿಡುಗಣ್ + –ಅ₇]

**ಬಿಡುಗಣ್ಣು** 'ಬಿಡುಗಣ್' ನೋ.

**ಬಿಡುಗಯ್**, ಬಿಡುಗೈ (ನಾ). ತೆರೆದ ಕೈ ; ಮುಕ್ತಹಸ್ತ : ಮಹತ್ಕಾರ್ಯಕ್ಕೆ ಉಜ್ಜುಗಿಸಲೆಡೆಗೊಳ್ಳುವ ಸಾಹಸಾತ್ಮನು ಇಂತಹ ಕೋಟಿ ಸಾಧನಗಳನ್ನು ಬಿಡುಗಯ್ಯಿಂದ ಸೂಸಿ ವ್ಯವಸಾಯ ಮಾಡಬೇಕು (ಶಂಕ್ರಕ. ೨೬-೦೦). **ಬಿಡುಗೈ** : ಸಾಹಿತ್ಯ ಸಂಗೀತಗಳಿಗೂ ಬೇಕಾದಷ್ಟು ಬಿಡುಗೈ ಉತ್ತೇಜನ ದೊರೆಯುತ್ತಿತ್ತು (ಕಂಗಶಾ. ೨೦೭).
[ ಬಿಡು₁ + ಕಯ್₂ (<ಕೆಯ್₂) ]

**ಬಿಡುಗಾವಲಿ** (ನಾ). ೧. (ಗದ್ದೆ, ತೋಟ ಮೊದಲಾದುವುಗಳಿಗೆ) ನೀರು ಹರಿಯಲು ಮಾಡಿರುವ ತೋಡು ; ಕಾಲುವೆ : ಗದ್ದೆಯ ನೆಲ್ಲಿಗೆ ಕೆರೆಯ ನೀರು . . . ಬೇಕಾದಾಗ ಬಿಡುಗಾವಲಿಯಿಂದ ಬಿಡುವ ದುಂಟು. ಬಿಡುಗಾವಲಿನೀರಿನ ಭೂಮಿಯಾದರೆ ಪ್ರತಿವರ್ಷಕ್ಕೆ ಎರಡು ಸಾರೆ ನೆಲ್ಲು ಬೆಳೆಯಾಗುವದು (ಕೃಷಿಶ್ರ. ೫೪).
[ಬಿಡು₁ + ಕಾವಲಿ₃ (<ಕಾಲ್ವಾಯ್)]

**ಬಿಡುಗಿವಿ** (ನಾ). ಆಭರಣವಿಲ್ಲದೆ ಬರಿದಾಗಿರುವ ಕಿವಿ ; ಬರಿಗಿವಿ : ಬಿಡುಗಿವಿ ಮಿಂಚುವೆತ್ತ ಸುಲಿಪಲ್ ಕುಣಿದಾಡುವ ಕುಂತಳಂ ನೊಸಲ್ಪಿಡಿದ ಬೆಮರ್ (ಸೂಕ್ತಿಸು. ೩-೨೦೦). [ಬಿಡು₂ (<ಬಿಡುವು) + ಕಿವಿ₃]

**ಬಿಡುಗು** (ನಾ). ಎರಚುವಿಕೆ ; ಇರಿಸಿಲು ; ಎರಚಲು : ಮಿಂಚಿನ ಕಡುಗು ಕತ್ತಿಯ ಬೆಡಗು ಮಳೆನೀರ್ ಕರಿಕರಾಯತದೀ ಬಿಡುಗು (ಕೃಕರ್ಣಾ. ೨-೬೮). [ಬಿಡು₁ + ?]

**ಬಿಡುಗುರುಳು** (ನಾ). ಬಿಚ್ಚಿರುವ ಕೂದಲು ; ಕೆದರಿದ ಕೇಶ : ತುರುಬು ಜಡೆಯೊಳು ಬಿಡುಗುರುಳು ಇವೆಲ್ಲವೂ ರುದ್ರನ ಅಡಿವೆಜ್ಜೆಯ ಕುರುಹು (ಸರ್ವಶ. ೦೨೫-೬೬೭); ಮೊಗದೊಳ್ ಮುಸುರ್ವ ಬಿಡುಗುರುಳ ಬೆನ್ನೊಳ್ ನಟ್ಟ ಸರಳ ತಬ್ಬಿಬ್ಬೆಸೆವ ನಡೆನುಡಿಗಳ . . . ಸರ್ವದಿಕ್ಪಾಲರೋಟಂ ಗಾಣುತಜನಾಗ್ರಹಂದಾಳ್ದನು (ಕಂಪು. ೪೪-೨೪).
[ಬಿಡು₁ + ಕುರುಳು₁ (<ಕುರುಳ್₁)]

**ಬಿಡುಗುಜಾತನ** (ನಾ). ಮಂದೆಯನ್ನು ಬಿಟ್ಟು ಒಂಟಿಯಾಗಿ ಹೋಗುವ ಕುರಿಯ ನಡವಳಿಕೆ : ಹಾ ನುಡಿಯದಿರು ನಿಲು ಬಿತಾ ಮಹನೀನ ಬೆಸಸಿದುದಕೆ ಹಸಾದವು ನೀನು ನಡೆ ಪಾಳೆಯಕೆ ಬಿಡುಗುಜಾತನವ ಮಾಣೆಯುಲ ಮೌನವಮುದ್ರೆಯ ಹಿಡಿ (ಕುಮ್ಮಾರ. ೦೦-೩೭). [ಬಿಡು₁ + ಕುಜಾತನ]

**ಬಿಡುಗೂದಲು** (ನಾ). = ಬಿಡುಗುರುಳು : ಆಕೆಯ . . . ಬಿಡುಗೂದಲನ್ನು ಚಿತ್ರಿಸಿದ ಬಗೆ, ಅವುಗಳನ್ನು ಹೊಂಬಣ್ಣದಿಂದ ಮಿನುಗಿಸಿದ ಬಗೆ ಈತನ ಕಲಾನೈಪುಣ್ಯವನ್ನು ಎತ್ತಿ ತೋರಿಸುತ್ತವೆ (ಅಪೂಕ. ೨೯೩).
[ಬಿಡು₁ + ಕೂದಲು (<ಕೂಂದಲ್)]

**ಬಿಡುಗೆ** (ನಾ). ೧. ತ್ಯಜಿಸುವುದು ; ದೂರ ಮಾಡುವುದು : "ತ್ಯಜನಂ . . . ತ್ಯಕ್ತಿಃ, ಈ ೫ ಬಿಡುಗೆ" (ಕಾಕಶ. ೬೮). ೨. ಬಿಡುಗಡೆ ; ವಿಸರ್ಜನೆ : "ಮುಚ–ಪ್ರಮೋಚನೇ, ಬಿಡುಗೆಯೊಳ್" (ಕಾಕಶ. ೨೬೭); ಹಿಪ್ಪಲಿ . . . ಏಲಕ್ಕಿ, ಸೈಂಧವ ಇವುಗಳ ಚೂರ್ಣಿಸಿ ಜೇನುತುಪ್ಪ, ಸಕ್ಕರೆವೆರಸಿ ನಾಭಿಯಿಂದ ಕೆಳಕ್ಕೆ ಲೇಪಂಗೈಯಲು ಜಲ, ಮಲ ಬಿಡುಗೆ (ವೈದ್ಯಸಾ. I, ೪೮೦). ೩. ನಿವಾರಣೆ : "ಪರಿಹಾರಃ–ಬಿಡುಗೆ" (ಕಾಕಶ. ೦೩೭). ೪. (ಬರಬೇಕಾದ ಹಣದಲ್ಲಿ ತೋರಿಸುವ) ರಿಯಾಯಿತಿ : ನೋಡಿ: ಎತ್ತಿನ ವ್ಯಾಪಾರದಲ್ಲಿ ಎಷ್ಟು ಬಿಡುಗೆ ಬಿಟ್ಟುಕೊಟ್ಟರು? (ಜೂ). ೫. ನಿರೂಪ ; ಅಪ್ಪಣೆ : 'ಬಿಡುಗೆಗೊಡು' ಪರಾ.೬. ಅವಕಾಶ ; ಆಸ್ಪದ : 'ಬಿಡುಗೆವಡು' ಪರಾ. [ಬಿಡು₁ + –ಗೆ]

**ಬಿಡುಗೆಗುಡು** 'ಬಿಡುಗೆಗೊಡು' ನೋ.

**ಬಿಡುಗೆಗೊಡು**, ಬಿಡುಗೆಗುಡು (ಕ್ರಿ). ೧. ಹೋಗಲು ಅನುಮತಿ ಕೊಡು, – ಅವಕಾಶಕೊಡು ; ಬೀಳ್ಕೊಡು : ಕೆಡುವ ದೇಹವನಿನ್ನು ತಪದಲ್ಲಿ ವೆಚ್ಚಿಸಿ ಕೆಡದ ಸಿದ್ಧಿಯ ಮಾಳ್ಪೆನದಕೆ ಬಿಡುಗೆಗೊಡೆಂದು ಸಾಷ್ಟಾಂಗವೆರಗಿದವನು ಪೊಡವೀಶನೆದೆ ದಿಗಿಲೆನಲು (ಜೈಶ. ೩೦-೮೩); ಸರ್ವರಿಗೆ ಕೈವೀಸಿ ಬಿಡುಗೆಗೊಟ್ಟರವುನೆಯೊಳಗೆ ತಾ ಹೊಕ್ಕನಾ ಕಡು ಗಾಡಿಕಾಣಿಸು (ಜಕಶ. ೬೨-೮೮). **ಬಿಡುಗೆಗುಡು** : ೨. ಬಿಡುಗಡೆಯನ್ನು ಮಾಡು ; ವಿಮೋಚನೆಗೊಳಿಸು ; ಬಿಟ್ಟು ಬಿಡು : (ಕಟ್ಟುವಟ್ಟವನಿಗೆ ಬಿಡುಗೆಗುಡುವವನು) (ಶಬ್ದಮ. ೦೦೩-೭). [ಬಿಡುಗೆ + ಕೊಡು₁]

**ಬಿಡುಗೆಗೊಳ್** (ಕ್ರಿ). ಹೊರಡಲು ನಿರೂಪ ತೆಗೆದುಕೊಳ್ಳು ; ಬೀಳ್ಕೊಳ್ಳು : ಬಿಡುಗೆಗೊಂಡರು ವೃದ್ಧವ್ರತಿಕರು ಭರತೇಶನಡಿಗಳಿಗೆರಗಿ ಭಕ್ತಿಯೊಳು (ಭರತ. ೦೬-೦೨೪). [ಬಿಡುಗೆ + ಕೊಳ್₁]

**ಬಿಡುಗೆಗೊಳಿಸು** (ಕ್ರಿ). ಬಂಧನದಿಂದ ಹೊರಹಾಕು ; ಸೆರೆಯಿಂದ ಹೊರಗೆ ಕಳಿಸು : ಆ ವೃದ್ಧ ವೇಂಕಟಾದ್ರಿನಾಯಕನನ್ನು ಕಾರಾಗೃಹದಿಂದ ಬಿಡುಗೆಗೊಳಿಸುವ ಸನ್ನಾಹದಲ್ಲಿ ಈ ದುರ್ದ್ರೋಹನದ ಚಿನ್ನೆಗಳನ್ನೆಲ್ಲ ಮರೆಯುವೆನು (ಸುಗುಗಂ. ೦೦೭-೦೪). [ಬಿಡುಗೆಗೊಳ್ + –ಇಸು₃]

**ಬಿಡುಗೆಚ್ಚಲು** (ನಾ). ಹಾಲಿನಿಂದ ತುಂಬಿರುವ ಕೆಚ್ಚಲು ; ತೂರೆದ ಕೆಚ್ಚಲು : ಈ ಉಷೆ ನರ್ತಕಿ ಚಿತ್ರಾಂಬರಧಾರಿ ಬಿಡುಗೆಚ್ಚಲ ಧೇನು ವಿನೊಲು ಎದೆ ತೋರಿ . . . ಬರುವಳು ಲೋಕಕೆ ಜ್ಯೋತಿಯನೆರೆದು ! (ಸೌಂದ. ೯೭) [ಬಿಡು₁ + ಕೆಚ್ಚಲು (<ಕೆಚ್ಚಲ್)]

**ಬಿಡುಗೆಲಸ** (ನಾ). ಬಿಡಿಯಾದ ಕೆಲಸ ; ಪ್ರತ್ಯೇಕವಾದ ಕೆಲಸ : ತೊಡರಿಸಿ ಪೊಸದಳಿರ್ದೋಂಬೆದೋರಣಗಳ ನಡೆಮಡಿಗಳನಳವಡಿಸಿ ಬಿಡುಗೆಲಸದ ಪೆಣ್ಗಳೆಡೆಯಾಡದಿರಿವಿನ್ನಡೆಯುವೊಂದವರನಟ್ಟುವುದು (ಶಕಶಿ. ೬-೩೫ ಸಾಂಗತ್ಯ). [ಬಿಡು₃ (<ಬಿಡಿ) + ಕೆಲಸ]

**ಬಿಡುಗೆವಡು** (ಕ್ರಿ). ಅವಕಾಶ ಹೊಂದು ; ಆಸ್ಪದವನ್ನು ಪಡೆ : ಅರಸಿಯರೆಲ್ಲರು ಮುಂಬಿವಾಗಿ ಚಿಂತಿಸುತಿರಲು ಎಡೆನೆರೆಹಾಯ್ದು ಪಾಟಿಯ ರಾಣಿಯೊರ್ವಳು ಬಿಡುಗೆವಟ್ಟಂತು ನುಡಿದಳು (ಭರತ. ೫೪-೬೨).
[ಬಿಡುಗೆ + ಪಡು₁]

**ಬಿಡುಗೇಶ** (ನಾ). = ಬಿಡುಗುರುಳು : ಹಾಸಿ ಹರಹಿದ ತೋಳುಗಳ . . . ಬಿಡುಗೇಶದನುಜನ ಕಂಡು ದೊಪ್ಪನೆ ಕೆಡೆವನವನಿಯಲಿ (ಕೂರಶಾ. ೬-೪೭-೭೭); ಸಿಖಿ ಗರಿಯ ಗೆದರ್ದಂತೆ ಬಿಡುಗೇಶದೋನೆ ಮನೆಯೊಕ್ಕು ಬರೆ ಕಾಣುತ್ತಲಿ (ಪವಮಾ. ೨೬-೩೨). [ಬಿಡು₁ + ಕೇಶ]

**ಬಿಡುಗೈ** 'ಬಿಡುಗಯ್' ನೋ.

**ಬಿಡುಗೊಡೆ** (ನಾ). ದಾನವಾಗಿ ಬಿಟ್ಟು ಕೊಟ್ಟುದು ; ಕೊಡುಗೆ : ಪಳಥ ಬಿಡುಗೊಡೆಯಾಗಿ ಬಿಟ್ಟ ಗ ೨೧೪ ಪ ೬ (ಎಕ. VI, ಕಡೂರು. ೪೯-೩೩ ; 1291). [ಬಿಡು₁ + ಕೊಡೆ₃]

**ಬಿಡುಗೊಳ್** (ಕ್ರಿ). ಬಿಡುಗಡೆ ಹೊಂದು ; ವಿಮೋಚನೆಗೊಳ್ಳು : ಚೆನ್ನೆಯ ಕಂಠಾಲಿಂಗನದಿಂ ನೆಜ ಬಿಡುಗೊಂಡು ಪೊರಳ್ವ ತಾರಾವಳಿಯಿಂದೇಂ ನೇಹದ ಸಂತೃಕುಂ ತನ್ನಪೊಲಿರ್ಪನ್ನ ತನುವನೊಳ್ಗೆ ಕದಿಯ ಪೋಲ್ (ಬಿಕ್ರಗೋ. ೫೪-೮೦). [ಬಿಡು₂ (<ಬಿಡುವು) + ಕೊಳ್₁]

**ಬಿಡುಜಡೆ** (ನಾ). ತುರುಬು ಕಟ್ಟದೆ ಇಳಿಬಿಟ್ಟಿರುವ ಹೆರಳು,– ಜಡೆ : ಬಿಡುಜಡೆಯ ಬಿದುಮೊಗದ ಬಿಂದೆಸಳ್ಗಣ್ಣ ಬಿಲ್ಪುರ್ಬಿನ . . . ಬೆಡಂಗಿನ ಬಾಲೆಯೊರ್ವಳ್ . . . ಬರುತುಮಿರ್ದಳ್ (ರಾಮಾಕ್ಷ. ೪೮-೨೦).
[ಬಿಡು₁ + ಜಡೆ₁]

**ಬಿಡುತರ್** (ಕ್ರಿ). ೧. ವಿಮೋಚನೆಯಾಗು ; ಬಿಡುಗಡೆ ಹೊಂದು : ನವನಿರ್ಯತ್ನಹಕಾರವಾರಿ ಮದವಂ ತತ್ಪಲ್ಲವಂ ಕರ್ಣಪಲ್ಲವಮಂ . . .

ಎಯ್ದೆ ಪೋಲೆ ಬಿಡುತಂದುಗುರ್ದಿಪಂ ಬಂದು ತಾಂಗುವುದೆಂಬಂದೆಳಮಾವಿನೊಳ್ ದ್ವಿಪಪುಗೆತ್ತೇಂ ಸೊರ್ಕಾರ್ ಸ್ವೈರಿರ್ಕುವೋ (ಶಾಂತಿಪು. ೯-೧೪೨) ; ವಿನತಾತ್ಮಜನಂ ಕಂಡಂ ವಿನತಾತ್ಮಜನಿಂದೆ ನಾಗಪಾಶಂ ಬಿಡುತಂದನಿರುದ್ಧನಾಗಿ ಮುಂದಿರ್ದನಿರುದ್ಧನನಾಗಳ್ಚಜಿಂ ಪ್ರದ್ಯುಮ್ನಂ (ಜಗನ್ನಾ. ೧೮-೬೦). ೨. ಬಿಚ್ಚಿಹೋಗು ; ಕಳಚಿಕೊಳ್ಳು : ಕಚಬಂಧಂ ಬಿಡುತಂದು ನೀವಿ ಶಿಥಿಲತ್ವಂಬೆತ್ತು . . . ಕನ್ನೆಸೆಯ ಬಂದರ್ . . . ಕಾಂತೆಯರ್ (ಜಗ. ೦೪-೬೫) ; ಮುಡಿ ಬಿಡುತಂದು ಸೂಸೆ ಮುಗುಳಂ (ರಾಜಶೇ. ೬-೧೧). ೩. ಹೊರಸೂಸು ; ಹೊರಚೆಲ್ಲು : ಪರಚಕ್ರಭೂಪರಟ್ಟಿದ ಕರಿಗಳ್ ಬಿಡುತರ್ಪ ಮದದ ಪೊನಲಿಂದೆತ್ತಂ ನರಲೋಕಚಂದ್ರನಾ ಮಂದಿರದೊಳಗೆಲ್ಲ ಕಾಲವುಮಂ ಕೆಸಱಕ್ಕುಂ (ಕಬ್ಬಿಗ. ೬-೦೬೨) ; ಬಿಡದೆ ಬಿಡುತರ್ಪ ಸಹಕಾರದ ಸೊನೆಯ ಸೋನೆಯೊಳಂ . . . ವಾಡುವವೆ ಣ್ದುಂಬಿಯ ಮಂದ್ರನಾದದಿಂ ಶ್ರುತಿಸುಭಗವಾಗೆ (ಮಲ್ಲಿಕಿ. ೩-೦೦೦) ; ತಂಗೊಳದ ಬಿಡುತರ್ಪ ಪುಷ್ಪವಾಸನೆಯಿಂದ ಪಥಶ್ರಮವಡಗಿಪ್ಪುವೇನ ಬಣ್ಣಿಸುವೆ (ಕಂಪರಾ. ೩-೦೦೯)

[ಬಿಡು$_1$ + ತರ್]

**ಬಿಡುತೆ**, ಬಿಡಿತೆ (ನಾ). ೧. ಬಿಡುಗಡೆ; ಬಂಧನರಾಹಿತ್ಯ; ಸ್ವಾತಂತ್ರ್ಯ: ನಲವಿನಸಿನ ಕೊಲೆ ಬಿಡುತೆ ಬಿತ್ತಿತ್ತು (ಜಾತಕ. ೨೨-೩೦೫). 'ಬಿಡುತೆಗೊಳ್ಳು', 'ಬಿಡುತೆಯಾನ್' ಪರಾ. ೨. ಅವಕಾಶ ; ಅಸ್ಪದ : ಲಂಘನೆಲಾಗು ಬಿಡುತಗಳ ಬಿಡುಬಿನಿಂ ಕುಡಿಮಿಂಚು ಪೊಡವಿಯೊಳು ಕುಡಿದೋಱಿತು (ಚಳಸ. ೪೫) ; ಕಾರ್ಯಕರ್ತಮಂಡಲಿ ಮೊದಲಾದ ಕೆಲವು ಅಧಿಕಾರ ಸ್ಥಾನಗಳಲ್ಲಿ ಒಂದು ವರ್ಷ ಅಥವಾ ಒಂದು ಸಾರಿ ಇದ್ದವರು ಪುನಃ ಇರಬೇಕಾದುದಿಲ್ಲವೆಂಬ ಬಿಡುತೆಯು ಏರ್ಪಾಟೂ ಇತ್ತು (ಸೋಕ್ರಟ. ೦೩). **ಬಿಡಿತೆ** : ೩. (ಬಾಣ ಮುಂತಾದುವನ್ನು) ಬಿಡುವಿಕೆ ; ಪ್ರಯೋಗಿಸುವಿಕೆ ; ಎಸೆತ : ಸರಳಿನ ಬಿಡಿತ ಬಿನ್ನಣಗಳನು ತೋರುವೆವು (ಅಂಬಿಕಾ. ೩೦-೦೩). ೪. ಸ್ವಚ್ಛಂದತೆ ; ಸ್ವೇಚ್ಛೆ : ಸೊಲ್ಲಿನ ಹಿಡಿತ ಬಿಡಿತಗಳೆಲ್ಲ ತ್ರ್ಯಜಗದೊಡೆಯ ತಾ ಬಲ್ಲ (ಗಗಕಾ. ೨-೧೯).

[ಬಿಡು$_1$ + — ತ್ತೆ$_2$]

**ಬಿಡುತೆಗೊಳ್ಳು** (ಕ್ರಿ). ಬಿಡುಗಡೆ ಹೊಂದು ; ಮುಕ್ತಿಯನ್ನು ಪಡೆ : ಏಕಣ್ಣ ಕೆಳರಿಪಿರ್, ಇದೆ ತಾನೆ ಮೇಲೆ ಮೇಲೊತ್ತಿ ಬರ್ಪ ಬಲಿಂದೆ ಬಿಡುತೆ ಗೊಂಡಿದ್ದಳನ್ ? (ಅಕ್ಕನ್ನಾ. ೩೨-೬೦೭); ದೋಣಿ ಹೊರಟುನಿಂತಿದೆ ಎಂಬ ಮಾತು ಬಿಡುತೆಗೊಂಡ ಚೇತನದ ನಿಲುವನ್ನು ಧ್ವನಿಸುತ್ತದೆ (ಕಂಠೀ. ೨೩೨). [ಬಿಡುತೆ + ಕೊಳ್ಳು$_1$ (<ಕೊಳ್$_1$)]

**ಬಿಡುತೆಯಾನ್** (ಕ್ರಿ). = ಬಿಡುತೆಗೊಳ್ಳು : ಕೇಡಿಂದೆ ನಾನ್ ಬಿಡುತೆಯಾಂತುದೋ ಪೆರ್ನಲಿವು (ಅಂತಿಗೂ. ೨೦-೯೨೨). [ಬಿಡುತೆ + ಆನ್$_1$]

**ಬಿಡುತೆವೆಱು** (ಕ್ರಿ). = ಬಿಡುತೆಗೊಳ್ಳು : ರಾಣಿಯ ಕಯ್ಯೊಳ್ಪಿಂದಿಗೆ ಸಿಲ್ಕಿ ಪುಣ್ಯದಿಂದಮಾಂ ಬಿಡುತೆವೆತ್ತು ಈ ಕಣ್ಣಾಳಿಂದಮೆ ನಿನ್ನಂ ನೋಡಿದೆಂ (ಬಿತ್ರಗೋ. ೩೩-೦೩). [ಬಿಡುತೆ + ಪೆಱು$_1$]

**ಬಿಡುದಂಬುಲ** (ನಾ). (ನಿರ್ದಿಷ್ಟವ್ಯಕ್ತಿಗಾಗಿ) ಮೀಸಲಾಗಿಟ್ಟ ತಾಂಬೂಲ : ಪಲತೆಱದ ತೊಡುಗೆ ಬಿಡುದಂಬುಲಮೊಳ್ಪಿಣೆಸುಗಳನೆಯ್ದೆ ಸಲಿಸುಗೆ ಕೂರ್ತಂತಲಸದೆ ಸಂಭೋಗದೊಳಂ ಪಲವುಂ ಬನದದೊಳವರ್ಗೆ ಕಳೆವುದುಃ ಪೊತ್ತಂ (ಮುಕ. ೮-೬೩). [ಬಿಡು$_1$ + ತಂಬುಲ]

**ಬಿಡುದಲೆ** (ನಾ). ಕೂದಲು ಕೆದರಿದ ತಲೆ ; ಬಿಟ್ಟ ಮಂಡೆ : ಬಿಡುದಲೆಯ ಬಿಟ್ಟ ಬಾಯ್ಗಳ ಬಱತ ಬಸುಱ . . . ಭೂತವೇತಾಳಪಡೆ ಸುತ್ತಿ ಮುತ್ತಿ ಬೊಬ್ಬಿಟ್ಟು ಝಳಿಂಕಿಸಿದವು (ಜಕಾ. ೦೨-೩೨) ; ಬಿಡುದಲೆಯ ಬಸಿವೇಱುಗಳ ಶೋಣಿತದ ನರಳುವಾರೋಹಕರ . . . ಭಂಗವನೇನ ನೆಂಬೆನು (ಕುಮಾರವ್ಯಾ. ೦೮-೩೯). [ಬಿಡು$_1$ + ತಲೆ$_1$]

**ಬಿಡುದಾಣ** (ನಾ). ಇಳಿದುಕೊಳ್ಳುವ ಸ್ಥಳ ; ತಂಗುದಾಣ ; ಬಿಡಾರ : ಮಂಗಳಿವೇಡಂ ಬಿಡುದಾಣಂ ತನಗೆನೆ ಜಸಮಂ ತಾಳ್ದಿದಂ ಕೃಷ್ಣರಾಜಂ (ಶಾಇಇ. XX. ೦೩೩-೦೬; 1067) ; ಪಾಂಡುಪುತ್ರರಲ್ಲಿಂದೆಟ್ಟು ತಮ್ಮ ಬಿಡುದಾಣಕ್ಕೆ ಪೋಪುದುಂ (ಮಹಾಶೇ. ೧೦-೧೯ ವ); ಬಿಡುದಾಣವನೇಯಬ್ . . . ಪಡೆವಳನಂ ಕಳುಪಿದಳ್ ನಿತಂಬಿನಿ ಕಡುಪಿಂ (ನಳಶಂ. ೭೦೩).

[ಬಿಡು$_1$ + ತಾಣ]

**ಬಿಡುದಾರ** (ನಾ). ಬರಿದಾದ ದಾರ ; ಮಣಿ ಕಳಚಿದ ಎಳೆ : ಮುಡಿದ ಜಾನಕಿ ರತುನವಿಲ್ಲದೇ ಮೈಯೊಂದು ಬಿಡುದಾರವಾಯ್ತಲ್ಲೊ ತಮ್ಮಾ (ಜಾರ್ನಗು. ೬೬). [ಬಿಡು$_2$ (< ಬಿಡುವು) + ದಾರ$_1$]

**ಬಿಡುದೇವಸ್ವ** (ನಾ). ದೇವಾಲಯಕ್ಕೆ ದತ್ತಿಯಾಗಿ ನೀಡಿದ ಆಸ್ತಿ; ದೇವರ ಸೇವೆ ನಡೆಸುವುದಕ್ಕಾಗಿ ಮಾಡಿದ ದಾನ : ಯಿಾ ಧರ್ಮಕೆ ಧಾರೆಯನೆಱದು ಆಚಂದ್ರಾರ್ಕಸ್ಥಾಯಿಯಾಗಿ ಬಿಡುದೇವಸ್ವವಾಗಿ ಸರ್ವಮಾನ್ಯವಾಗಿ ಕೊಟ್ಟೆವಾಗಿ ಸುಖದಿಂ ಭೋಗಿಸೂದು (ಶಾಇಇ. IX-ii, ೪೩೦-೦೭; 1447); ಆ ದೇವರಿಂಗೆ ನಡವ ಅಂಗರಂಗ ನೈವೇದ್ಯ ಮುಂತಾದ ಧರ್ಮಗಳಿಗೆ ಬಿಡುದೇವಸ್ವವಾಗಿ ಕ್ಷೇತ್ರಂಗಳ ಬಿ[ಟ್ಟು] (ಕಇ. III-i, ೬-೦೩; 1527). [ಬಿಡು$_1$ + ದೇವಸ್ವ]

**ಬಿಡುನಾಯ್** (ನಾ). ಸ್ವೇಚ್ಛೆಯಾಗಿ ತಿರುಗುವ ನಾಯಿ ; ಬೀದಿನಾಯಿ : ಕೊರಲೊಳ್ ಕಟ್ಟಿದ ಮಾಲೆಯ ಸಿರಿಖಂಡದ ತಳ್ಕಿನೊಂದು ಬಿಡುನಾಯ್ಬರ ಸಾದರದಿಂದನರ್ಘ್ಯಮಣಿವಿಷ್ಟರದೊಳ್ ಕುಳ್ಳಿರ್ದು ಸರುಗನುಣೆ ಕಂಡು ದಱಿಂ ಪ್ರತಿಹೀನರ್. . . ಅತಿಕಷ್ಟರಪ್ಪರವನಿಯೊಳತಿಥಿಗಳಿನ್ನನ್ನದಾನಮುಂ ಕುದುಮೆಡೆಯೊಳ್ (ಅಂಪು. ೦೫-೪೨). [ಬಿಡು$_2$ (<ಬಿಡುವು) + ನಾಯ್]

**ಬಿಡುನುಡಿ** (ನಾ). ಅಡ್ಡಿಯಿಲ್ಲದ ಮಾತು ; ತಡೆಯಿಲ್ಲದ ಮಾತು : ಮತ್ತೋರ್ವರ್ ಪುರುಡಿನಿಂ ಪುಟ್ಟಿದ ಮುಳಿಸಂ ತಿಳಿಪಲೊಡರಿಸಿದ ವಲ್ಲಭಂಗೆಡಗುಡದ ಬಿಡುನುಡಿಯಂ ನುಡಿದು (ಶಂಕ್ರ ಪು. ೬-೬೬ ವ): ಬಿಡುನುಡಿಗಳ ಬಿತ್ತರಿಸುವ ಬಿಡದೆ ಕಾದುವ ಗಂಡ ಪಿಂಡಿರನೇತಕ ವಡೆದನಕಟ ಪದ್ಮಭವನು (ಹರಿಶ. ೬-೯): ಸೊರ್ಕಿಂ ಗಟಪುವರಗಿಳಿಯ ಬಿಡುನುಡಿಯ ಭಂಗಿಯಂತೆ, ಕರ್ಣರಸಾಯನಮಾಗೆ ಶ್ರೀರಾಮನಂ ಪಾಡಿ ಪೊಗಳ್ವ ಗಾಯಕಸಂದೋಹದಿಂ . . . ಕೇರಿಗಳ್ ಸೊಗಯಿಸೆ (ರಾಮಾಶ್ವ. ೨೩-೦೩).

[ಬಿಡು$_2$ (<ಬಿಡುವು) + ನುಡಿ$_2$]

**ಬಿಡುಪಡು** 'ಬಿಡುವಡು' ನೋ.

**ಬಿಡುಬಿಸಿಲು** (ನಾ). ತಡೆಯಿಲ್ಲದ ಬಿಸಿಲು : ಒಂದು ಬೀಜವ ಬಿತ್ತಿದಡೆ ಮೂರು ಫಲವಾಯಿತ್ತು . . . ಅದು ಬಿಡುಬಿಸಿಲಿನಲ್ಲಿ ಒಣಗ ಪಡಿಪುಷ್ಪಕ್ಕೆ ಮೂಗಳವಾಯಿತ್ತು (ಪ್ರಾಂಶಾ. ೨೦೭-೬೭೧).

[ ಬಿಡು$_2$ ( < ಬಿಡುವು ) + ಬಿಸಿಲು ( < ಬಿಸಿಲ್ ) ]

**ಬಿಡುಬೀಸು** (ನಾ). ೧. ನಿರ್ಬಂಧವಿಲ್ಲದುದು ; ಯಾವ ಕಟ್ಟಿಗೂ ಒಳಪಡದುದು ; ಸ್ವಚ್ಛಂದವಾದುದು : ಆ ಸ್ವಾತಂತ್ರ್ಯದಲ್ಲಿ ನಮ್ಮ ಮನಸ್ಸು ಬಿಡುಬೀಸಾಗಿತ್ತು (ಹಿಂದಿರ. II, ೯೦). ೨. ವಿಶಾಲವಾದುದು; ವಿಸ್ತಾರವಾದುದು ; ಹರವು : ನಮ್ಮ ಮನೆ ಬಿಡುಬೀಸಾಗಿದೆ (ರಾಮಾಸ. ೬೫); ಅವಳು . . . ಕೋಣೆಯ ಬಿಡುಬೀಸಾದ ಸ್ಥಳದಲ್ಲಿ ಅತ್ತಿಂದಿತ್ತ ಇತ್ತಿಂದತ್ತ ಸುತ್ತಾಡುತ್ತಿದ್ದಳು (ಕ್ರುಸರು. ೦೯೩).

[ಬಿಡು$_2$ (<ಬಿಡುವು) + ಬೀಸು$_2$]

**ಬಿಡುಬು** (ನಾ). [ನಾಟ್ಯ]ಒಂದು ಭಂಗಿ (?): ಅಡಿದೊಡರ್ವನಿದು ಜಡೆಯ ನಡುಬಳಸಿಯನುಗೊಳಿಸಿ ಜಡಿವವೋಲೆಯನೊಡಂಬಡಿಸಿ ಒಡನೆ ಲಂಘನೆಲಾಗು ಬಿಡುತಗಳ ಬಿಡುಬಿನಿಂ ಕುಡಿಮಿಂಚು ಪೊಡವಿಯೊಳು ಕುಡಿದೋಱಿತು (ಚಳಸ. ೪೫). [ ? ]

**ಬಿಡುಮಂಡೆ** (ನಾ). = ಬಿಡುದಲೆ : ಹಸುರುಮೈ ಹಾವಿನಾಭರಣ ಬಿಡುಮಂಡೆ . . . ಕೆಂಪಿನ ಪುಷ್ಪಸರವೊಪ್ಪುವಾ ಹೊಸ ಏಱಮ

ಯಮದೂತಿ . . . ಅಜಿತೆಯೆಂಬೆಂಟು ಹೆಸರೆಸೆವ ದೇವಾಂಗನೆಯರು (ಸಿದ್ಧರಾ. ೪-೬) ; ತರಹರಿಕೆ ಕೈಗೂಡದವನೀಶ್ವರನು ಕೌಸಲೆಸಹಿತ ಬಳಲುವ ಶಿರದ ಬಿಡುಮಂಡೆಗಳ . . . ಕಟ್ಟಳಲಿಕೆಯಲ್ಲೈದಿದನವನಿಜಾಪತಿಯು (ತೊರರಾ. ೨-೩-೩೩); ಅರು ಅಳುಪಿದವರುಗಳು . . . ತೆಂಕಮುಖವಾಗಿ ಬಿಡುಮಂಡೆಯಲ್ಲಿ ಸುರಾಪಾನವಂ ಸೇವಿಸಿ ಹೋದವನ ಪಾಪಕೆ ಹೋಹರು (ಎಕ. XI. ಪಾವಗ. ೦೦೬-೨೬; 1528). [ಬಿಡು$_1$ + ಮಂಡೆ]

**ಬಿಡುಮಂದಿ** (ನಾ). ಕೆಲಸಕ್ಕೆ ತೊಡಗಿಸಿದ ಜನ ; ಕೆಲಸಕ್ಕೆ ಬಿಟ್ಟ ಜನ : ಕರದ ಕುಡುಗೋಲು ತಡಿಕೆ ಮಕ್ಕರಿ ಸಹ ಬಹ ಕಾವಮಾಟದ ಬಿಡುಮಂದಿಗೆ ಲೆಕ್ಕವಿಲ್ಲ (ಕಂಸಾ. ೦೦-೪೦). [ಬಿಡು$_1$ + ಮಂದಿ$_1$]

**ಬಿಡುಮಿದುಳ್** (ನಾ). (ತಲೆಯಿಂದ) ಹೊರಚೆಲ್ಲಿದ ಮಿದುಳು : ಬಿಡುಮಿದುಳ ರಾಸಿಗಳ ರಚನೆಯು ರಾಜಹಂಸೆಗಳ . . . ಸರಸಿಯ ನಡುವ ನಲಿನಲಿದಾಡುತ್ತಿರ್ದುದು ಭೀಮವನದಂತಿ (ಕುಮಾ.ರಾ. ೦೨-೨೬) ; ಬಿಡುಮಿದುಳ ಜೊಂಡಿನಿಂ ನಡುತೊಡೆಯ ತುಂಡಿನಿಂ ಪೊಡೆಗೆಡೆದು ಬೀಳ್ದರಿಂ ನೆತ್ತರಿನೊಳಾಳ್ದರಿಂ ರಣಧರಣಿ ಕಣ್ಗೆಸೆದುದು (ಕಂತ. ೩೮-೩೪) ; ಬಿಡುಮಿದುಳ ತುಂಡದಿಂ ತಂಡದಿಂ ರುಂಡದಿಂ ಮುಂಡದಿಂ . . . ಎಡೆವಿಡದೆ ಸತ್ತರಿಂದಿಡಿದಿರ್ದುದು (ಕೈ.ಖಚಾ. ೦೨-೪೪). [ಬಿಡು$_1$ + ಮಿದುಳ್]

**ಬಿಡುಮುಡಿ** (ನಾ). ೧. ತುರುಬು ಕಟ್ಟದಿರುವ ಕೂದಲು ; ಬಿಚ್ಚಿರುವ ತಲೆಗೂದಲು : ಸ್ಮರಕೃತಕಾಚಲಶಿಖರಾಂತರಲತೆ ಮೇಲ್ವಾಯ್ದುದೆಂದು ಸೋಗೆಯ ಬಣ್ಪಂ ಧರೆಗೆಳಗುವಂತದೊರ್ವಳ್ ವರಾಂಗಿ ಬಿಡುಮುಡಿಯಿನೆಸೆದು ಪಿಡಿಯಿಂದಿಟ್ಟಿದಳ್ (ಜಗಚ. ೦೪-೩೮) ; ನಿಕ್ಕುವಂ ಪೆಣ್ಣೆ ಇವಳ್. ಸರಸಕಮಲಮೆ ಮೊಗಂ: ವಿಾನೆ ಕಣ್; ಪಾವಸೆ ಬಿಡುಮುಡಿ (ರಾಜಶೇ. ೬-೦೦). ೨. ಕೆದರಿದ ತಲೆ ; ಓರಣವಾಗಿ ಬಾಚದಿರುವ ಕೂದಲು : ಬಿಡುಮುಡಿಯ ಸುರಿವ ಕಂಬನಿವೊನಲ . . . ಮಡದಿಯುರ ದನಿಯನಾಲಿಸಿ ಪರ್ಣಶಾಲೆಯಿಂ ಪೊಱಮಟ್ಟನು (ಹರಿಚ. ೬-೨೬) ; ಒಡನೆ ಬಂದರು ಕಂಬನಿಯ ಬಿಡುಮುಡಿಯ ಹಾಹಾರವದ ರಭಸದ ನಡೆಯಲಖಿಳವಿಲಾಸಿನಿಯರು ಸಹಸ್ರಸಂಖ್ಯೆಯಲಿ (ಕುಮಾ.ಸ. ೦೪-೬೪). ೩. ಸಡಿಲವಾಗಿ ಹಾಕಿದ ತುರುಬು ಅಥವಾ ಜಡೆ : "ಬಿಡುಮುಡಿ=ತುದಿಯಲ್ಲಿ ಮಾತ್ರ ಗಂಟುಹಾಕಿರುವ ಕೂದಲು" (ಶ್ರಕಶ). [ಬಿಡು$_1$ + ಮುಡಿ$_3$]

**ಬಿಡುಮುತ್ತು** 'ಬಿಡಿಮುತ್ತು' ನೋ.

**ಬಿಡುರಥ** (ನಾ). ಹರಿಯುವ ರಥ ; ಮುನ್ನುಗ್ಗುವ ತೇರು : ತುಡುಕುವಾನೆಯನೀಸಿನಲಿ ಖುರವಿಡುವ ಕುದುರೆಯನೊತ್ತಿ ಹಾಯ್ಸುವ ಬಿಡುರಥವ ತಲೆವರಿಗೆಯಲಿ ತವಕಿಸುವ ಕಾಲಾಳ ಕಡಿದನಂಬಿನೊಳಾ ಗಜವನಾ ಕಡುಹಯವನಾ ರಥವನಾ ವಂಗಡದ ಕಾಲಾಳುಗಳನೊಂದು ವಿಘಳಿಗೆ ಮಾತ್ರದಲಿ (ಕುಮಾ.ಕ. ೦೩-೨೩) ; ಅಶ್ವವನಶ್ವದಿಂದಪ್ಪಳಿಸುತೊಡ ಹಾಯ್ದು ಬಿಡುರಥವ ರಥದಿಂದ ಹೊಯ್ದುಬ್ಬಿ ಹುಡಿಗೆದಱುತಱಿಯುಟ್ಟಿ ಸದೆದನು (ತೊರರಾ. ೩-೬-೦೯). [ಬಿಡು$_1$ + ರಥ]

**ಬಿಡುರನ್ನ** (ನಾ). ಬಿಡಿಯಾದ ರತ್ನ : ಕಡೆಗರ್ಘ್ಯಶಾಂತಿಧಾರೆಯ ಮಾಡಿ ವಿಸುನಿಪೂ ಬಿಡುರನ್ನಗಳ ವೃಷ್ಟಿಮಾಡೆ (ಶರಕ. ೩೯-೨೪). [ಬಿಡು$_3$ (<ಬಿಡಿ) + ರನ್ನ (<ರತುನ)]

**ಬಿಡುಲವಣ** (ನಾ). ಒಂದು ಬಗೆಯ ಕ್ಷಾರ ; ಡೊಣೆಯುಪ್ಪು : ಒಡಲೊಡವಿ ಬಾತು ತ್ರೋರ್ಪೊಡೆ . . . ಆಡಿನ ಪಾಲಂ ಬಿಡುಲವಣ ಮುಮಂ ಕರಿಜು ತೊವರಿಯಶನಮೆ ಪಥ್ಯಂ (ರೋಕೋಶ. ೯-೦೬೪); ಬಿಡುಲವಣ ಜೀರಕ ಚವ್ಯಲವಣ ಸಂವರ್ಚಕಮುವ್ಯಂತಂ ಶ್ಲೇಷ್ಮವಾತ ಶೂಲಾಪಹರಂ (ಅಕ್ಕಶಾ. ೦೦-೦೦). [< ಬಿಡಲವಣ]

**ಬಿಡುವಕ್ಕಲು** (ನಾ). ಪ್ರತಿಯೊಂದು ಒಕ್ಕಲು ; ಪ್ರತ್ಯೇಕವಾದ ಒಕ್ಕಲು : ತಳವಾರ ಮುಖಾಂತ್ರ ಬಾಹ ಬಿಡುವಕ್ಕಲ ತೆರು (ಎಕ. VII, ಶಿಮೊ. ೩-೨೬ ; 1671). [ಬಿಡು$_3$ (<ಬಿಡಿ) + <ಒಕ್ಕಲು$_2$]

**ಬಿಡುವಡು**, ಬಿಡುಪಡು (ಕ್ರಿ). ಬಿಡುಗಡೆಯನ್ನು ಹೊಂದು; ಸ್ವತಂತ್ರವಾಗು; ಮುಕ್ತವಾಗು : ಜನಕಂ ತನ್ನ ಪುಣ್ಯದೊಳದ್ಧಮಂ ಧಾರೆಯನೆಱೆವುದುಂ ಪಾಪಿಗಳ್ಗೆಲ್ಲರ್ ಬಿಗಿವಟ್ಟ ನರಕಬಾಧೆಯಿಂ ಬಿಡುವಟ್ಟು . . . ಬರ್ದಿಲರ ನಾಡಂ ಪುಗುತಂದರ್ (ರಾಮಾಶ್ವ. ೦೦೬-೬). **ಬಿಡುಪಡು** : ಬಿಡುಪಟ್ಟ ನೊಸಲ ನುಣ್ಗುರುಳ ಸಾಲಿಂದೊಂದು ಬೆಡಗಾಗಿ ನಿಂದಿರ್ದ ರಾಗ (ಶರತ. ೦೪-೦೨). [ಬಿಡು$_2$ (<ಬಿಡುವು) + ಪಡು$_1$]

**ಬಿಡುವಡೆ** (ಕ್ರಿ). = ಬಿಡುವಡು : ಅಣೆಗಟ್ಟನಲ್ಲಿ ತುಂಬಿ ತುಳುಕುವ ಜೀವನಪ್ರವಾಹವು ಕಡೆಯಲ್ಲಿ ಬಿಡು(ಮೋಕ್ಷ)ವಡೆದು ಹರಿದು ಸಾಗರದಲ್ಲಿ ಸಂಗಮವಡೆದು ಶಾಂತವಾಗುತ್ತಿದೆ (ಪಾಡೋಜ. ೩೩೪).

[ಬಿಡು$_2$ (<ಬಿಡುವು) + ಪಡೆ$_1$]

**ಬಿಡುವನಿ** (ನಾ). ಸುರಿಯುತ್ತಿರುವ ಕಂಬನಿ,— ಕಣ್ಣೀರು : ಒಡನೆ ಕಳುಹುತ ಬಂದನಾ ನೆಲದೊಡೆಯನನುಜರುಸಹಿತ ನಯನದಿ ಬಿಡುವನಿಯು ಸಾಲಿನಲಿ ನನೆದರು ಬಂದು ಕಿಱಿದೆಡೆಯ (ಕುಮಾ.ರಾ. ೪-೩೩); ಹರಿನಂದನನ ಲಲನೆಯ ಲೋಚನದ ಬಿಡುವನಿಯನಂಶುಕದಗ್ರದಿಂದೊರಸಿದನು (ತೊರರಾ. ೪-೩-೨೬). [ಬಿಡು$_1$ + ಪನಿ$_2$]

**ಬಿಡುವನೆ** (ನಾ). ಇಳಿದುಕೊಂಡಿರುವ ಮನೆ ; ಬಿಡಾರ : ಮಹಾರಾಜನು . . . ಆ ವೇಶ್ಯೆಯ ಬಿಡುವನೆಗೆ ಎರಡುಸಾರಿ ಬಿಜಯ ಮಾಡಿದ್ದನು (ಕುಂತ್ರಕ. ೦೪೦-೦೬). [ಬಿಡು$_1$ + ಮನೆ]

**ಬಿಡುವಯಣ** (ನಾ). ಪ್ರಯಾಣಮಧ್ಯದಲ್ಲಿ ತಂಗುವಿಕೆ ; ಉಪ್ಪಯಣ : ಬಟ್ಟ ಪಯಣದೊಳು ಬಿಡುವಯಣಮಿಲ್ಲದ ದಾಳಿಯಿಟ್ಟು (ಸಮ್ಯಕ್ತ್ವ. ೨-೦೦). [ಬಿಡು$_1$ + ಪಯಣ]

**ಬಿಡುವರಿ** (ನಾ). ಸ್ವೇಚ್ಛೆಯಾಗಿ ನುಗ್ಗುವುದು ; ಅಡೆತಡೆಯಿಲ್ಲದೆ ಸಾಗುವುದು : ಗಿಡುವುರನ ಸೆಳೆಸೆಳೆದು ಬಿಸುಡುತ ಬಿಡುವರಿಯ ಬೀದಿಗಳಲಟ್ಟಿದವು . . . ಕಪಿಪಡೆಯ ಕೊಂದವು ಕೋಟಿಸಂಖ್ಯೆಯಲಾ ಮದೇಭಚಯ (ತೊರರಾ. ೬-೨೦-೩). [ಬಿಡು$_2$ (<ಬಿಡುವು) + ಪರಿ$_3$]

**ಬಿಡುವಲೆ** (ನಾ). ಒಂದು ಬಗೆಯ ಬಲೆ ; ಅಗಲವಾಗಿ ಹಾಸುವಂಥ ಬಲೆ : ಬಿಡುವ[ಪಾಠಾಂ. ವ]ಲೆ ಸೊರ್ಕುವರ್ದುದ ಪದವಿಲ್ . . . ಗಿಡಗ ಮೆಯ್ಪಿಪ್ಪವ ಪಿಡಿದು ಬೇಂಟೆಗೆ ಸಂದ ಪುಳಿಂದರಯ್ದುದರ್ (ರಾಜಶೇ. ೩-೩೨); ನಿಡುವಲೆ ಸಾಲ್ವಲೆ ಬಿಡುವಲೆಗಳನಿಪ್ಪುವೆಸೆದುವಾ ಬೇಂಟೆಗರೊಳ್ (ಕಬಕಂ. ೩-೨೪). [ಬಿಡು$_1$ + ಬಲೆ$_1$]

**ಬಿಡುವಾಯ್**, ಬಿಡುವಾಯಿ (ನಾ). ಅಗಲವಾಗಿ ತೆರೆದ ಬಾಯಿ : ಬಿಡುವಾಯ್ ತುಡುಕೊದರಱುಗೆಱೆಯೆಂಬಿವು ಪಡೆಯವು ಬಿಂದುವನನುದಂತವೃತ್ತಿಯನಾಳ್ದಂ (ಕಶರ. ೦೬೦) ; ಹೆಬ್ಬಲ್ಲ ಬಿಡುವಾಯ ಜೋಲ್ವ ಕೆನ್ನಾಲಗೆಯ ಗಬ್ಬಿನಾಯ್ಗಳ ಹಾಸನುಗಿದು ಬಿಡ ಪಂದಿಗಳನಬ್ಬರಿಸಿ ತುಡುಕಿದುವು (ಕೈ.ಖಚಾ. ೨೮-೪೬). **ಬಿಡುವಾಯಿ** : ಬ್ರಹ್ಮಹತ್ಯೆ ಕಾರಿರೊಡಲಿಂ ತಾಂ ಬಿಡುವಾಯಿಯಿಂ ಕಪ್ಪರವಂ ಪಿಡಿದೊಡನೊಡನೆಯ್ದಿ ಸುರಪನಂ ಪೀಡಿಪುದು (ಹಾಲಾಸ್ಯ. ೦-೨-೨೩). [ಬಿಡು$_1$ + ಬಾಯ್]

**ಬಿಡುವಾಯಿ** 'ಬಿಡುವಾಯ್' ನೋ.

**ಬಿಡುವಾರು** (ನಾ). ಬೇಟೆಯ ಒಂದು ಸಾಧನ (?) : ಪೆರ್ಬಲೆ ಬಿಡುವಾರು ಗೋಡುವಲೆಯೆಂಬಿನಿತಂ ಪೊಱಗಟ್ಟ ಕಾನನಸ್ಥಲದೊಳಗಲ್ದು ತೋಹುವಿಡಿದೊಡ್ಡಿದರೆಯ್ದೆ ಪುಳಿಂದನಾಯಕರ್ (ರಶಖ. ೨-೦೦೩). [?]

**ಬಿಡುವೀಳೆಯ** (ನಾ). = ಬಿಡುದಂಬುಲ : 'ಬಿಡುವೀಳೆಯದಂಬುಲ' ಪರಾ. [ಬಿಡು$_1$ + ವೀಳೆಯ]

**ಬಿಡುವೀಳೆಯದಂಬುಲ** (ನಾ). =ಬಿಡುದಂಬುಲ : ನಿಡುಸುಯ್ವುಳ್ಳ ಧಾಳಿಯ ಜಳಕೆ ಜೆಂದುಟರಸಪೂಡನೆ ಬಿಜೆತ್ತುದು ಕರ್ಪುರದ ಬಿಡುವೀಳೆಯದಂಬುಲ ವಿರಹಾಗ್ನಿಗೆ ಪುಡಿವಟ್ಟುದೇನ ಬಣ್ಣಿಸುವೆ (ಶಂಪರಿ. ೯-೧೭೨).
[ಬಿಡುವೀಳೆಯ+ತಂಬುಲ]

**ಬಿಡುವು**, ಬಿಡ್ವು (ನಾ). ೧. ವಿರಾಮ; ವಿಶ್ರಾಂತಿ : ಗುರುಗಳ ಪರಿಚರ್ಯೆಯನ್ನು ಯಥಾವಿಧಿಯಾಗಿ ಮಾಡಿ ಮುಗಿಸಿದನಂತರವೇ ಅವನಿಗೆ ಬಿಡುವು ಸಿಕ್ಕುತ್ತಿತ್ತು (ಶಾಡಿಶ. ೪೦೦); ಬಿಡುವನು ಕೊಟ್ಟಂಥ ಹೊಲದೊಳು ಬೆಳೆದರೆ ಹುಲುಸಾಗಿ ಬಲಿವುದು ಕಾಳು (ಇಂತಾಶ. ೧೧೦-೯೩); ಆಫೀಸಿನಲ್ಲಿ ಬಿಡುವಿಲ್ಲದ ಕೆಲಸ (ಮಗವಂ. ೦೩೪). ೨. ರಜೆ ; ಸೂಟಿ : ಅವರು ಈ ಮೂರು ಬಿಡುವಿನ ದಿನಗಳನ್ನು ಬಹು ಸುಖವಾಗಿ ಕಳೆಯಲಿದ್ದರು (ಅಪೂರ್ವ. ೦೨೬) ; ನನ್ನ ಬಿಡುವು ಇನ್ನೆರಡು ವಾರವಿದೆ (೧೦ಬಾ. ೫); ಈ ದಿನ ಶಾಲೆಗೆ ಬಿಡುವು (೪ಶತ. ೩-೦). ೩. ಅಂತರ ; ಅವಕಾಶ ; ಆಸ್ಪದ : ಪಿಡಿವ ಜವನಿಕೆಯ ಮಜೆಯೊಳ್ ಕುಡುಮಿಂಚಿನ ಬಳ್ಳಿ ಮುಗಿಲ ತೆಳ್ಳೂರಿಯೊಳ್ ಕಣ್ಗೆಡಜುವೊಲಡರೆ ತೋರ್ದುವು ತೊಡವಿನ ಬಿಡುವುಂ ಬಿಡೌಜನಂಗಚ್ಚವಿಯುಂ (ಅಸಂಘ. ೩-೯೯); ಬವರಸವೆಯದ ತೇಜಿಗಳ ಬಲು ಜವವು ಜಾಜಿದೆ ಬಿಡುವ ತಿವಿದರೆ ಸವಗವುಚ್ಚಳಿಸುವವು (ಕುವ್ಯಾ.ಉ. ೪-೬೬) : ಕಾರ್ಯಭಾರವು ಬಹಳವಾಗಿದ್ದುದರಿಂದ ಇತ್ತ ಕಡೆ ಬರಲು ಬಿಡುವೇ ಸಿಕ್ಕಲಿಲ್ಲ (ಅಶಿ. ೦೬೩). ೪. ಮನೆಗಳಿಲ್ಲದ ವಿಶಾಲವಾದ ಪ್ರದೇಶ ; ಬಯಲು : ಮಂದಿರ ಪ್ರಾಕಾರ ಸೋಪಾನದೊಳು ಕುಳಿತು ಪಡುವ ಬಿಡುವಿನ ಸೊಗಕು ಮಿಗಿಲ ಕಾಣೆ (ಮಶಿಲೀ. ೧೬-೯). ೫. ಸುರಿಯುವಿಕೆ : ಧಾರೆಯೆರೆಯುವಿಕೆ : ವಿದೂರಜಂಗಳ ಕೊಡಂಗಳ ಬಿಡುವಿನಿಂ ಘೃತಾಭಿಷೇಕಮನತಿ ಸಂತೃಸುವಂತೆಯುಂ . . . ಅಭಿನಯಿಸುತ್ತುಂ (ಅಸಂಘ. ೩-೬೦ ವ). **ಬಿಡ್ವು**$_2$ : ೧. ಈಚೀಚೆಗೆ ಬಿಡು ಸಿಗೋದೇ ಅಪರೂಪವಾಗಿದೆ (ಲೂ). ೬. ಬಿಡುಗಡೆ : ಅನಿರ್ಬಂಧತೆ : 'ಬಿಡುವಡು', 'ಬಿಡುವಡೆ' ಪರಾ. ೭. ಸ್ವಚ್ಛಂದತೆ : ಸ್ವೇಚ್ಛೆ : 'ಬಿಡುನಾಯ್', 'ಬಿಡುಸೂಳೆ' ಪರಾ. ೧೮. ಬರಿದು ; ಖಾಲಿ ; ಜೋಳು : 'ಬಿಡುಗಿವಿ'. 'ಬಿಡುದಾರ' ಪರಾ. ೯. ದಾನ : ಕೊಡುಗೆ (?) : ಚೊಕ್ಕನಾಥದೇವರಿಗೆ ಸಲುವಂತಾ ದಿನಕಟ್ಟಲೆಯುಲು ಕರಡಿಯ ವಳಿಯ ಚತುಸೀಮೆಯೊಳಗಾದ ಬಿಡುಗಳಿಗೆ ಸಲುವ ಗ್ರಾಮ ೧ ಜ ಮಗ್ಗದೇಜ[3] (ಎಕ. IX (ನ). ನೆಂಗಳೂ. ೦೬೨-೩: 1408).

ಬಿಡುವಾಗು = ಅವಕಾಶವುಂಟಾಗು : ಆಸ್ಪದವಾಗು : ಇನ್ನು ಮನಸನ ಬೀಯುಗಕೆ ಬಿಡು [ಶಾಜಾಂ. ಡ]ವಾಸ್ತಿ ನಿನಗಲೆ ರಸಿಜ (ತೊರಲಾ. ೯-೩-೧೩).
[ಬಿಡು$_1$ + – ವು./ಮಲ. ವಿಟ; ತೆಲು. ಬಿಡುವು]

**ಬಿಡುವುಗೊಳ್** (ಕ್ರಿ). ಸ್ವತಂತ್ರನಾಗಿರು; ಯಾವ ಕಟ್ಟಿಗೂ ಸಿಕ್ಕದಿರು : ವಿನ್ನ ಪಕ್ಷಧರ ಚತುಷ್ಪಾದಿಯಿದು . . . ಪಾಯ್ದುದುಂ. ಮನೆಯೊಳಗವಿಬಗೊತ್ತಿನೊಳ್ ಬಗೆಯೊಸೆದು ಬಿಡುವುಗೊಂಡಪುದು (ಬಿಧೃಶ್ರ. ೨೨-೯೩೬).
[ಬಿಡುವು + ಕೊಳ್$_1$]

**ಬಿಡುವೆಣ್**, ಬಿಡುವೆಣ್ಣು (ನಾ). (ಯಾವುದಾದರೂ ಸೇವೆಗಾಗಿ) ವಿಾಸಲಾಗಿ ಕೊಟ್ಟ ಯುವತಿ ; ಸಖಿ : ಕೊಡುವ ಪಾಡಕ್ಕಂ ಜೀವಧನಂಗಳ್ಗಂ ಬಿಡುವೆಣ್ಗಂ ಲೆಕ್ಕಮಿಲ್ಲೆನಿಸಿ ರಾಗಂಗಿಡದೆ ಕೊಂಡಾಡಿದುಂ ಬಲ್ಲಹನಜೆಯೆ ಗುಣಾರ್ಣವಂ ಕವಿತಾಗುಣಾರ್ಣವನಂ (ಪಂಪಭಾ. ೧೪-೫೫) ; ವಿಾಟಾವ ರೂಪು ಜವ್ವನ ಬಿಡುವೆಣ್ಗಳೊಳ್ ಬೇಟವ ಮಾಳ್ಪುದನ್ಯಾಯ ಕೂಟಕೆ ತರಣಿ ಬಂದರೆ ವೃದ್ಧನೆಂಪು ಕವಾಟವ ಮುಗಿದುದಂಭೋಜ (ಪೋಚಶ. ೦೩-೬); ಬಿಸವಕ್ಕಂಗಣಮಂ ಸಾರುವ ಬಿಡುವೆಣ್ಗಳ್ ಪಿಂಗದೆ ಪಸಗಿ ನಡೆವ ಬೆಸವೆಣ್ಗಳ್ . . . ಮನೆವೆಣ್ಗಳ್ ಸೊಗಸಿದುದಾವುದಯದೊಳು (ಜಯಕಾ. ೦೨-೦೩). **ಬಿಡುವೆಣ್ಣು** : ಬಿಡುವೆಣ್ಣುಗಳ ನಿಳಯವೆನಿಸಿ ಮೆಜೆದಿಹುದಾ ದುರ್ಗದ ಕಲಕಲರವ ರಾಜವೀಥಿ (ಕುಂಸಾಂ. ೪-೦೦೬); ಬಿಡುವೆಣ್ಣು ಬೆಲೆವೆಣ್ಣು ಬೆಸವೆಣ್ಣುಗಳ ಮಂಗಡವಾ ಪುರದೊಳೊಪ್ಪಿದುದು (ರಾಮುಖ. ೩-೯೬); ಬೆಲೆವೆಣ್ಣು ಬೆಸವೆಣ್ಣು ಮನೆವೆಣ್ಣು ಬಿಡುವೆಣ್ಣು . . . ಭೂಲುಲನೇಶನ ನೋಡಿದರು (ಗೊವ್ಯಶ. ೦-೬೩).
[ಬಿಡು$_1$+ಪೆಣ್]

**ಬಿಡುವೆಣ್ಣು** 'ಬಿಡುವೆಣ್' ನೋ.

**ಬಿಡುವೆಸರ್** (ನಾ). ಬೇರೆಯ ಹೆಸರು ; ಪರ್ಯಾಯನಾಮ : ಒಡವುಟ್ಟಿದ ಕೌಸ್ತುಭವಣಿಯೊಡನಿರಲಾಗದು ಬಿಟ್ಟು ವಿಷ್ಣುವಿನುರವಂ ಬಿಡುವೆಸರ್ಗೆ ಪದ್ಮನಾಭನ ಬೆಡಂಗಿನುರದಲ್ಲಿ ಲಕ್ಷ್ಮಿ ಸಲೆ ನೆಲಸಿರ್ದಳ್ (ಅರ್ದಸೇ. ೧-೯೨).
[ಬಿಡು$_3$ (<ಬಿಡಿ) + ಪೆಸರ್]

**ಬಿಡುವೊನ್** (ನಾ). ಹಂಚಲು ಅನುಕೂಲವಾದ ಬಿಡಿಯಾದ ನಾಣ್ಯ.–ಹೊನ್ನು : ಅರ್ಥಿಸಂತತಿಗೀಯಲ್ ಬಿಡುವೊನ್ನುಮನಾಳ್ಗಟ್ಟುವ ತೊಡರೊಳ್ ತೊಡರ್ದಿರ್ದರರಸುಮಕ್ಕಳ್ ಕೆಲಬರ್ (ಶಂಪಶಾ. ೧೦-೩೬).
[ಬಿಡು$_3$ (<ಬಿಡಿ) + ಪೊನ್]

**ಬಿಡುಸೂಳೆ** (ನಾ). ಒಬ್ಬನಿಂದ ಪರಿತ್ಯಕ್ತಳಾಗಿ ಸ್ವೇಚ್ಛೆಯಾಗಿ ಬಾಳುವ ಸೂಳೆ.—ವೇಶ್ಯೆ: ಈಗ ಒಬ್ಬರ ಸೂಳೆ ಇನ್ನು ಅವರು ಬಿಟ್ಟರೆ ಬಿಡುಸೂಳೆಯಾಗಿ ಕಂಡವರನ್ನೆಲ್ಲ ಮೋಹಿಸಬೇಕೇ ? (ಹಳ್ಳಿಹಾ. ೨೪): ಈ ಹಾದಿ ಬಿಟ್ಟವರನ್ನು ಸಾಮಾನ್ಯವಾಗಿ 'ಬಿಡುಸೂಳೆ'ಯರೆಂದು ಊರಲ್ಲಿ ಕರೆಯುತ್ತಾರೆ (ಹುಮುಂ. ೭೯) ; ನಾಳೆ ಎರಡು ಹೊತ್ತಿನ ಅನ್ನಕ್ಕೆ ತೊಂದರೆಯಾಗಿ ಮಗಳು ಬಿಡುಸೂಳೆಯಾಗಿ ಬಾಳುವುದು ಅವಳಿಗೆ ಇಷ್ಟವಿಲ್ಲ (ದೇವಹಂ. ೯೬).
[ಬಿಡು$_1$ + ಸೂಳೆ$_1$]

**ಬಿಡುಹ** (ನಾ). ತ್ಯಜಿಸುವಿಕೆ ; ತೊರೆಯುವಿಕೆ : ಆವಂಗದಿಂ ಧನ ಬರಲು ಬಿಡುಹವೆ ನಿರಾಶತ್ವ (ಶಿವಗೀ. ೫೭-೨೬೪).
[ಬಿಡು$_1$+ – ಪ$_2$ (< – ಪ್ಪ)]

**ಬಿಡುಹು** (ನಾ). ಬಿಡುಗಡೆ ; ಅನಿರ್ಬಂಧತೆ : ತುಡುಕುವಂಕುಶದಿಂದ ಮುನ್ನಿಳೆಯೊಡೆಯ ಗಜ ಗಾಢಿಸಿದವರಸರ ಬಿಡುಹು ತಪದೆಡಗಲುಸಜಗೆದುವು ವಿಗಡ ಪಾಯದಳ (ಕುವ್ಯಾಉ. ೨-೨).
[ಬಿಡು$_1$ + – ಹು$_2$ (< – ಪು$_2$) ./ ತೆಲು. ವಿಡುಪು]

**ಬಿಡೆ**$_1$ (ನಾ). (ಕರಾ) ಹಣ್ಣಿನ ಒಳಭಾಗದ ಒಂದೊಂದು ಖಂಡ ; ತೊಳೆ : ಹಲಸಿನ ಹಣ್ಣಿನ ಬಿಡೆಗಳನ್ನು ಜೇನುತುಪ್ಪದಲ್ಲಿ ಅದ್ದಿಯದ್ದಿ ಯಥೇಷ್ಟವಾಗಿ ತಿಂದು ತೇಗಿದನು (ಗಂಗಾವ. ೨೦). [< ಬಿಡಿ ? ]

**ಬಿಡೆ**$_2$ (ಅ). ೧. ವಿಶೇಷವಾಗಿ ; ಅತಿಶಯವಾಗಿ : ಕಪಿಂಜಳಂ ಬಾಯಬಾಯದಬ್ರಹ್ಮಣ್ಯಮೆಂದು ಬಿಡೆ ಪುಯ್ಯಲ್ಲಲ್ (ಕಾದಂಪೂ. ೪೦೬) ; ಬಿಡೆ ಬಗ್ಗಿಸೆ ಮಧುವಿಕಾರಿ ಕೋಗಿಲೆ ಕಿಸುಗಣ್ಣುವೆ ನೀಂ ವಿಜಾತಿಯೊಳ್ಗಿನಮುಟೇ (ಮಲ್ಲಿಪು. ೩-೬೯) ; ಮಿಗೆ ಮುನ್ನಂ ಕಂಡವೋಲಿರ್ಪುದು . . . ಈ ಪಾದಂ ಬಿಡೆ ಪೊರವೀ ತುಂಬಿ (ಕಬ್ಬಿಗಾ. ೦೦೬). ೨. ರಭಸವಾಗಿ ; ಶೀಘ್ರವಾಗಿ ; ಜೋರಾಗಿ : ಒಡನೆ ಕಾಳಗ ಬಯಿಸಿದ ಘೋಟಬಿಯಲರ್ಪ್ಪ ಜಪಿಂಗೆ ಮಾರ್ಬಲಂ ಬಿಡೆ ಕಡಿಕಯ್ದಾ ನೂಂಕಿ ಕಿಡೆ (ಎಕ. II. ೧೪೬-೭ ; ಶಾ. ೪೪೦). ೩. ನಿಸ್ಸಂದೇಹವಾಗಿ ; ನಿಜವಾಗಿ ; ಖಂಡಿತವಾಗಿ ; ಸ್ಪಷ್ಟವಾಗಿ : ಎರಡನೆಯ ಪುರವಾಥನಯೆನಿಸುವ ವಸಿಷ್ಠ ಮುನಿಪನ ಮೊಮ್ಮನು ಬಿಡೆ ಪರಾಶರನು ನಾನು (ಹಕೋಶ. ೩-೬೩). ☞ ಈ ಅವ್ಯಯವು ಅನೇಕ ಕ್ರಿಯಾಪದಗಳೊಡನೆ ಸೇರಿ ಅನೇಕ ಅರ್ಥಗಳನ್ನು ಕೊಡುತ್ತದೆ. [< ಬಿಡು$_1$?]

**ಬಿಡೆಯ**$_1$, ಬಿಡಯ$_1$ (ನಾ). ೧. ಬಿಡುವು ; ಅವಕಾಶ ; ಪುರುಸೊತ್ತು: ನಿಮ್ಮ ವನದೊಳಗಕೆ ಬಿಡೆಯವ ಕಾಣೆನು (ಕುವ್ಯಾಕ. ೧೩-೨೬) ; ಜಗತಿ ನಿಮ್ಮಡಿವಿಡಿಯಲಲ್ಲಿಯ ಬಿಡೆಯ ಮಾಯೆಯ ಸಡಿಕಿನೊಳು ಸಿಲುಕಿ (ಮುರೀಪು. ೨೭-೪). ೨. ಎಡೆ ; ಅಂತರ : ಬಿಡೆಯವಿಲ್ಲದ ಕುಚ ಬಿಗುಹೇಜಿ

ರುತುಕಾಲವಡೆದ ಪುಷ್ಪಿಣಿಯರೊಪ್ಪಿದರು (ವೀಹಕ. ೦೬-೩೨). **ಬಿಡಯ್ಯ₁ :** ೨. ನಿನ್ನಾತ್ಮನೊಡಲುಗೊಂಡಿರ್ಪ ತನಕ್ಕೆಕ್ಕವದಕೆ ಬಿಡಯುವೆಂತಲ್ಲದಱ ನೋಡಲುವಾಧಿಕದಳಿವ ವಡೆಯಬೇಕು (ಶುಕಸೋ. ೬-೯೭). ೩. ವಿರಾಮ; ವಿಶ್ರಾಂತಿ : ಬಿಡಯವಿಲ್ಲದ ಹೊನ್ನಂಡಗಾಡಿಯರು ಬೆಂಗಡೆಯ ಸಾರಿದರು ರುಕ್ಮಿಣಿಯ (ಪೋಹಕ. ೦೯-೭೦). ೪. ತಣಿವು ; ತೃಪ್ತಿ : ದಣಿಯದಾತನ ಬೆರಳು ನಾರಾಯಣರವದ ವೀಣೆಯಲಿ ಹೃದಯಾಂಗಣದ ಸೀಮೆಗೆ ಬಿಡಯ ವಾಗದು ಕೃಷ್ಣವದ ಕೇಳಿ (ಕುವ್ಯಾಕ. ೦-೨೯). [< ಬಿಡುವು]

**ಬಿಡೆಯ್ಯ₂**, ಬಿಡಯ್ಯ, ಬಿಡಿಯು, ಭಿಡಿಯು, ಭಿಡೆ, ಭಿಡೆಯ (ನಾ). ೧. ದಾಕ್ಷಿಣ್ಯ; ಸಂಕೋಚ : ನೀನೇ ಕೆಣಕಿದವನೇ ಶಿವಶಿವಾ ರಾವಣತನೂಭವ ನೆಂಬ ಬಿಡೆಯುಕೆ ಸ್ಥಿರಿಸಿದೆನ್ನಸೆ (ಕೋಕಕಾ. ೬-೦೯-೮) ; ಅವನೊಬ್ಬಗೆ ಚಿತ್ತ ದಲಿ ವರರ ಠಾವೆನಿಪ್ಪಾ ಬಿಡೆಯುವಿಲ್ಲ (ಕಕಆಗ ೦೦-೩-೦೨) ; ಬಿಡೆಯುವಿದೇ ತರ್ಕೀ ಪರಿ ಕುಡುವಂದದೆ ಕೊಟ್ಟೊಡಾನೆ ಕೋಬವನುಸಿರಾ (ಕಕಂ. ೬-೩೩). **ಬಿಡಯ್ಯ :** ೧. "ಬಿಡಯುವೆನಲ್ ದಾಕ್ಷಿಣ್ಯಂ" (ಕಕಚಂ. ೨೦೨) ; ಕಡು ಜಾಣಂ ಕಲೆಯೊಳ್ ಸಮಂತು ಕುಶಲಂ ಸಂಗೀತಸಾಹಿತ್ಯದೊಳ್ . . . ಅಂ ಬಿಡಯುಕ್ಕೆನ್ನನಿದಂ ದರೆಲ್ಲರುಸಿರ್ವರ್ ಶ್ರೀ 'ಚಿಕ್ಕದೇವೇಂದ್ರನೊಳ್ (ಚಿತ್ರಗೋ. ೩-೭). **ಬಿಡಿಯ :** ೨. ಲಜ್ಜೆ; ನಾಚಿಕೆ : ದಾನವೇಶ ರೋಷದಿಂ ಬಿಡಿಯವಿಲ್ಲದೆ ಸಭಾಂತರದಿ ಬಿಡಿಯುಯುತ್ತರವ ನುಡಿಯುಜಹುದೆ (ಜಜಮೋ. ೨೭-೬೬). **ಭಿಡಿಯ :** ೧. ಭಿಡಿಯಾ ಸಲ್ಲದು ಎನಗೆ ಕೊಡದ ವ್ಯಾಲೆ ತೀ ಬಡಿವಾರವೇನು ಭಯುಬಡುವ ನಾನಲ್ಲ (ಮೋಕ್ಷಂ. ೨೦-೩). ೩. ಪ್ರೀತಿ ; ಪ್ರೇಮ : ಅವಳ ಮುಂದೆನ್ನಾ ಭಿಡಿಯಾವಿಟ್ಟಾನೆ ಮರ್ಯಾ ಗಳಾಡಿ ಬಿಟ್ಟಾನೆ (ಕ್ರೀಕೃಶಾ. ೨೪). **ಭಿಡೆ :** ೧. ಇವರು ಭಿಡೆ ವ್ಯಕ್ತಪಡಿಸಿ ದಾಗ . . . ಬಲವಂತಗೊಳಿಸಿದ (ಹುಚಿರುಡ. ೬) ; ಗಾಬರಿಯ ದನಿಯಲ್ಲಿ ನುಡಿದರು ಬರಿಯೇ ಭಿಡೆಗಾಗಿ (ಅಶೋಕಿ. ೦೫೦); ನಿನಗೆ ಭಿಡೆ ಅನಿಸದಿದ್ರ . . . ಬೋಲೀ ಖಾಲೀ ಮಾಡಿಸಿಕೊಡತೀನಿ (ಗೀತುಗ. ೯). ೨. ಮಾಯಾ ಪಾಶ ಬಗುಹೇಟ್ ಮಜುಗಿದನು ಭಿಡೆಯನು ಮಜಿದನು (ಕೌಶಿಂ. ೬-೨೦). **ಭಿಡೆಯ :** ೧. ರಾಯರು ಅಕ್ಕನ ಭಿಡೆಯಕ್ಕೊಳಗಾದರು (ಕಕಂ. ೩೬೮); ಅನಾಥಬ್ರಾಹ್ಮಣನ ಭಿಡೆಯ ಯಾತಕೆ (ಕವಾಗಿ. ೩೦೦).

ಭಿಡೆ ಬಿರಸತ್ತು = ದಯೆ ಮತ್ತು ದಾಕ್ಷಿಣ್ಯ : ಪೆಜತ್ತಾಯರಿಗೆ ಭಿಡೆ_ಬಿರ ಸತ್ತಿಲ್ಲವೆಂದು ನನಗೆ ಖಾತ್ರಿಯಾಯಿತು (ಗಂಗಾಕ. ೦೧). ಭಿಡೆ ಮುರವತ್ತು = ಭಿಡೆ ಬಿರಸತ್ತು : ಯಾವ ಭಿಡೆ_ಮುರವತ್ತುಗಳಿಗೆ ಒಳಗಾಗುವುದಿಲ್ಲ (೦೦ಕ. ೨) ; ನಿನ್ನ ಭಿಡೆ_ಮುರವತ್ತುಗಳನ್ನು ಅಡ್ಡ ಹಾಕಿ ನಮ್ಮನ್ನು ಬಿಡಿಸುವುದಾದರೆ . . . ಹೇಳುವೆವು (ಇಂದುಕು. ೩೩).

[ < ಪ್ರಾ. ವಿಡ್ಡಾ./ಸಂ. ವ್ರೀಡಾ./ತುಳು. ಬಿಡೆ ]

**ಬಿಡೆಯ್ಯ₃** 'ವಿಡಾಯು' ನೋ.

**ಬಿಡೆಯಂಬಡೆ** (ಕ್ರಿ). ಸೊಗಸನ್ನು ಪಡೆ ; ಶೋಭಿಸು : ಕುಡಿದು ಕೊರಲ್ವರಮುವಾರ್ದಂ ಕಡುಬಿಡೆಯಂಬಡೆದು ನಡೆವ ಪೊಸಬೆಳ್ಮುಗಿಲಂತಡಿ ಯಿಡುವಳ್ (ಕಕಂ. ೯-೮). [ಬಿಡೆಯ್ಯ₃ (< ವಿಡಾಯ) + ಪಡೆ₁]

**ಬಿಡೋಜ** (ನಾ). ಇಂದ್ರ; ದೇವೇಂದ್ರ : ರೇವಂತನ ರೇಖೆಯುಂ ಬಿಡೋಜನೋಜೆಯನೀಶ್ವರನ ದಕ್ಷತನಮುಂ ತನ್ನೊಳಳವಡಿಸಿ (ಕುಶ್ಯಾಸ್ರ. ೬-೩೦ ಪ). [ < ಸಂ. ಬಿಡೌಜಸ್ ]

**ಬಿಡೌಜ** (ನಾ). = ಬಿಡೋಜ : " ಪುರುಹೂತಂ. . .ಬಿಡೌಜಂ ಕೌಶಿಕಂ ಹರಿ ಪಾಕಶಾಸನಂ . . . ತುರಾಷಾಡ್ಮರುತ್ವಾನೆನಲ್ಕೆ ಸುತ್ರಾಮನಕ್ಕುಂ" (ಶುಂಗರಾ. ೦೨-೦) ; ವಿಭವಜತಬಿಡೌಜಂ ರೇಚಕಾಂತಾಮನೋಜಂ (ಶುದಂ. ೦-೦೩) ; ಕುಡಲಱಿಯಂ ನಿಮಗೆಂತುಂ ಬಿಡೌಜನಾ ಪಾರಿಜಾತ ಕುಜಮಂ (ಜಗಂ. ೦೩-೨೭). [ ಸಂ. ಬಿಡೌಜಸ್ ]

**ಬಿಡೌಜವಧು** (ನಾ). ದೇವೇಂದ್ರನ ಹೆಂಡತಿ ; ಶಚೀದೇವಿ : ಆಗಳ್ ಬಿಡೌಜವಧು ವಿಧುಮುಖಿ ನೂರ್ಮಡಿಸಿದ ಹರ್ಷೋತ್ಕರ್ಷತೆಗೆಡೆಯಾಗಿ ಮರಾಳಯಾನದಿಂ ಪೊಱಮಟ್ಟಳ್ (ಚೀಖಶು. ೬-೦೦೩). [ಸಂ.ಬಿಡೌಜವಧೂ]

**ಬಿಡೌಜಸ** (ನಾ). = ಬಿಡೋಜ.

ಬಿಡೌಜಸರ್ (ಬಹುವ) = ಇಂದ್ರನ ಕಡೆಯವರು; ದೇವತೆಗಳು: ನೇಷೆಯದಿಂದಿಱದಿತ್ತಿ ನಿಜೌಜಮನೆ ಬಿಡೌಜಸರ್ಗೆ ತೋರ್ಪಂತಸುಹೃದ್ರಾಜ ಯನೆ ವಾಜಿವಾಹಕರಾಜಿ ಮಹಾಜಿಯೊಳ್ ತಳರ್ದುದದ್ಭುತಮೊಗೆಯಲ್ (ರಾಜಕ. ೬-೬೩). [ ಸಂ. ಬಿಡೌಜಸ್ ]

**ಬಿಣ್**, ಬಿಂ (ಸಪೂರೂ). ಬಿಣ್ಣಿತು ಎಂಬ ನಾಮಪಾಚಕಕ್ಕೆ ಸಮಾಸ ಗಳಲ್ಲಿ ಬರುವ ಆದೇಶರೂಪ : 'ಬಿಣ್ಗೆಚ್ಚಲ್', 'ಬಿಣ್ಪು' ಪರಾ. ಬಿಂ : 'ಬಿಂಗುಂಡು', 'ಬಿಂಪು' ಪರಾ. [ < ಬಿಣ್ಣಿತು ]

**ಬಿಣಕು** (ನಾ). (?) : ಫಣಗಳನು ಹೊಲೆವೀರಬಾಹುವು ಬಿಣಕುಗಳ ಮಾಡಿ ಥರಥರದ ಚೇಷ್ಟೆಗಳ ತೋರಿಸಿ ಪುರದ ವೀಧಿಯೊಳಾಗ ಬಂದನು (ಜಹುಕ. ೦೦೩). [ ? ].

**ಬಿಣಮ್ಮ** (ನಾ). ಒಬ್ಬಾತನ ಹೆಸರು : ಶ್ರೀಧರಜೌವೀರಪುತ್ರಸ್ಯ ಬಿಣಮ್ಮದ್ವೇದಿ (ಇಆ. XVIII, ೩೬೭-೦೬; ಕಶಿದು ಕಕ). [ ? + ಅಮ್ಮ₁ ]

**ಬಿಣಯಿತ** (ನಾ). ಒಬ್ಬಾತನ ಹೆಸರು : ಶ್ರೀದಸಮಮ್ಮರಸರ ಮಗ ಬಿಣಯಿತನಾಳೆ (ಎಕ. XI. ಜಗಳ. ೦೩-೦ ; ಸು. 1010 ?).

[ ✎ ಇದು 'ವಿನಯಾದಿತ್ಯ' ಎಂಬುದರಿಂದ ಬಂದಿರಬಹುದು]

**ಬಿಣೆಕೆ** (ನಾ). ಒಂದು ಬಗೆಯ ಸಸ್ಯ : "ಬಿಣೆಕೆ ಬಲವತಿಯಕ್ಕು" (ಮುಂಗರಾ. ೯೨-೩೭). [ ? ]

**ಬಿಣಲು** 'ಬೀಳಿಲ್' ನೋ.

**ಬಿಣ್ಗುಂಡು**, ಬಿಂಗುಂಡು (ನಾ). ಬಂದರಿನಲ್ಲಿ ಹಡಗನ್ನು ನಿಲ್ಲಿಸುವುದ ಕ್ಕಾಗಿ ಹಡಗಿಗೆ ಸೇರಿದಂತೆ ಇಳಿಬಿಡುವ ದಪ್ಪವಾದ ಕಬ್ಬಿಣದ ಗುಂಡು ; ಲಂಗರು : ಅಂತು ಬಿಣ್ಗುಂ[ಕಾಚಾಂ. ಬಿಂಗುಂ, ಬೀಟ್ಗುಂ] ಡಿಕ್ಕಿದ ಬಹಿತ್ರದಂತೆ ಅಲ್ಲಿಂ ತಳರದೆ ನಿಂತ ತನ್ನ ರಥಮುಂ ಕಂಡು (ಅಂತ್ರ. ೦೨-೬೩ ಪ) ; ಆ ಭುವನತ್ರಯವಿಜಯಿಯಪ್ಪ ರೂಪಾತಿಶಯ ದೊಡನಮಳ್ಪಲೆದಂತೆ ಬಳೆದ ನಿಸರ್ಗ ಶೌಚಾದಿಗುಣಂಗಳಿಂ ಬಿಣ್ಗುಂಡಿಕ್ಕಿದ ಭೃತ್ಯನುಮುಮಂ . . . ಪೋಲ್ತು (ಕಾಂಶಿಶು. ೦೦-೯೨ ಪ). **ಬಿಂಗುಂಡು :** ಭೃತ್ಯರ್ಕ್ಕೆ ಬಿಂ [ ಬಿಂ ] ಗುಂಡನಿಕ್ಕಿದಂತಿರಬೇಕು ಹಿರಿಯರು (ಅವಕಂ. ೬೯-೩೩೩). 'ಬೀಟ್ಗುಂಡು' ಪರಾ. [ ಬಿಣ್ (< ಬಿಣ್ಣಿತು) + ಗುಂಡು ]

**ಬಿಣ್ಗುಂದು** (ಕ್ರಿ). ಗರ್ವವು ಇಳಿ; ಸೋಲು : ಮೂದಲಿಸಿ ನುಡಿಯಲಾಗಿ ಬಿಣ್ಗುಂದಿ ತಿರುಗಿ ಶಿವನಂ ಪತ್ರುವಂ ಬೇಡೆ (ಕೇಶಪು. ೯-೯೦). [ ಬಿಣ್ ( < ಬಿಣ್ಣಿತು) + ಕುಂದು₁ ]

**ಬಿಣ್ಗೆಚ್ಚಲ್** (ನಾ). ಹಾಲು ತುಂಬಿ ದಪ್ಪಪುಷ್ಟವಾಗಿರುವ ಕೆಚ್ಚಲು: ಬಿಣ್ಗೆಚ್ಚಲಿಕ್ಕಿ ಕೊಡವಾಲ್ಗಱೆಯದಾವಿಲ್ಲ ನುಣ್ಣಾಡಿವತ್ತಿರದ ಪಶುಪಕ್ಷಿ ವ್ಯಾಗಮಿಲ್ಲ ಕಣ್ಗೊಳಿಪ ರಾಮರಾಜ್ಯದೊಳ್ (ಕೃಬಿಕಾ. ೦೬-೦೩). [ಬಿಣ್ (<ಬಿಣ್ಣಿತು) + ಕೆಚ್ಚಲ್]

**ಬಿಣ್ಗೊನರ್** (ನಾ). ದಪ್ಪವಾದ ಚಿಗುರು,-ಕುಡಿ : 'ಬಿಣ್ಗೊನರ್ಗಿಱು' ಪರಾ. [ಬಿಣ್ (< ಬಿಣ್ಣಿತು) + ಕೊನರ್₁]

**ಬಿಣ್ಗೊನರ್ಗಿಱು** (ಕ್ರಿ). ಗಟ್ಟಿಯಾಗಿರುವ ಚಿಗುರೆಂದು ಭಾವಿಸಂ,-ಭ್ರಮಿಸಂ : ಪಣ್ಗೆತ್ತು ಸವಿದುಟಿಯ ಬಿಣ್ಗೊನರ್ಗೆತ್ತು ಬೆರಳ್ಗಳ ಸೋವುವ ಪೆಣ್ಗಳಂ ಬಗೆಯದಾ ನುಣ್ಗಿಳಿಗಳಸೆವವು (ಗುರುಚ. ೨-೦೩). [ಬಿಣ್ಗೊನರ್ + ಗಿಱು]

**ಬಿಣ್ಗೊನೆ** 'ಬಿಣ್ಗೊಲೆ' ನೋ.

**ಬಿಣ್ಗೊಲೆ**, ಬಿಣ್ಗೊನೆ (ನಾ). ಹೂವು, ಹಣ್ಣುಗಳಿಂದ ತುಂಬಿರುವ ಗೊನೆ ; ದೊಡ್ಡ ಗೊಂಚಲು ; ದಪ್ಪವಾದ ಗೊನೆ : ತೂಗಿ

ಬ[ಪಾಠಾಂ. ಪ]ಣ್ಗೊಲೆಯಿಂ ಬಳ್ಳುವ ಕೌಂಗು ಕಾಯ್ದುಡುಗಲಂ ಪೇಱರ್ದ ಚೆಂದೆಂಗು . . . ಎಸೆಗುಂ ವಿದ್ಯಾಧರೋದ್ಯಾನದೊಳ್ (ಆದಿಪು. ೦-೬೬) ; ಬಣ್ಗೊಲೆ[ಪಾಠಾಂ. ನೆ]ಯಿಂ ತೂಗಿ ತೊಸೆವ ಕೌಂಗು ತನ್ನತ್ತಣ್ಗೆ ಬರೆ ತಗೆವ ತಱದಿಂ ಕಣ್ಗೊಳಿಸಿದುದೆಳಸಿ ನಾಗಲತೆ ದಾಂಗುಡಿಯಿಂ (ಕಾವ್ಯಾಶ. ೨೦೬). ಬಣ್ಗೊನೆ : ಕುದುರೆಯ ಪಂದಿಯ ಎಪ್ಪೆಯೊಳೊದವಿದ ಕರ್ಬಿಂದೆ ಸೂಜಿಯಿಂ ಕಾಸಿ ಬಲ್ಕದಱೊಳ್ ಬಾಟಿಯ ಗೊನೆ ಪುಟ್ಟಿದೆಡೆಯನೆಱ ದೂಱ ಪಿರಿಯ ಬಣ್ಗೊನೆಯಕ್ಕುಂ (ಲೋಕೋಪ. ೬-೨೬) ; ಬಣ್ಗೊನೆ ಗಳನ್ನೊನೆದಾಡುವ ಕೌಂಗು ಬೇಗ್ಗಳನ್ನುಱುಗಿರೆ ಕಾಯ್ತು ಬಕ್ಕ (ಎಕ. XI, ದಾವಣ. ೩೫-೩೭ ; ಸು. 1160) ; ಪಣ್ಗಾಯ್ತ್ ತೀವಿದ ಬಾಟಿಯ ಬಣ್ಗೊನೆ . . . ಪಥಿಕರ ಕಣ್ಗೊಳ್ಪಂ ಪನಸ ಬಯಕೆಯಂ ಪುಟ್ಟಿಸುಗುಂ (ಚಂದ್ರಪ್ರ. ೦-೦೦೬). [ಬಣ್ ( < ಬಣ್ಣಿತು ) + ಗೊಲೆ$_2$]

ಬಣ್ಣಿತು, ಬಣ್ಣಿತ್ತು (ನಾ). ೧. ಹೊರೆ ; ಭಾರ ; ತೂಕ : "ಭಾರಕೆ ಬಿಣ್ಪು ಬಣ್ಣಿತಕ್ಕು" (ಕಲ್ಯಾ. ೬೨) ; ಲಲನೆಯರ್ಗಂಗರಾಗವಾದು ದುರ್ವಹಂ . . . ಕಣ್ಮಲರ್ಗೆ ಕಾಡಿಗೆ ಬಣ್ಣಿತು ಪಾದಪಂಕಜ ಕ್ಕಲತೆಗೆ ಭಾರಮೆಂದೊಡಱಯಂ ಪೊಗೞಲ್ ಸುಕುಮಾರವೃತ್ತಿಯಂ (ಕಾದಂಪೂ. ೦೦೦೬) ; ತನುಲೇಖೆಗೆ ಚಂದನದಣ್ಪು ಬಣ್ಣಿತೆಂಬಲಸಪದಕ್ಕ ಲಕ್ತಕರಸಂ ಪೊಱೆಯೆಂಬನಿತೊಂದು ಚಿತ್ರಮಾ ಲಲನೆಗೆ ದೇವಕೀವನಿತೆ ಗಾದುದು ನಿರ್ಭರಪೂರ್ಣಗರ್ಭದೊಳ್ (ಜಗಪು. ೨-೯೯) ; ಬಣ್ಣಿತೇನೆಮಗೆ ನಿಮಗೆ ಬಂಧುತನದೊಂದು ಬಣ್ಣಗೆಯಿರಲಿ (ಶಬರ. ೩೫-೯೬). ೨. ದೊಡ್ಡದು ; ಗಾತ್ರವಾದುದು ; ಭಾರಿಯಾದುದು : ಬಣ್ಣಿತು ಕೊನೆ, ಬಣ್ಗೊನೆ (ಶಬ್ದಾಮ. ೩೩೪ ಪ್ರಯೋ). ಬಣ್ಣಿತ್ತು : ೧. ತನ್ನ ಕಯ್ಯ ಕಳಶವಂ ಬಳ್ಳಿಯೊಳ್ ಕಟ್ಟಿ ನೀರಂ ತೆಗೆವಾಗಳದು ಪುಲಿ ಪಿಡಿದು ನೇಲ್ವುದುಮದು ಕಯ್ಗೆ ಬಣ್ಣಿತ್ತಾದೊಡದಂ ನೋೞ್ಪೆ ನೆಂದು . . . ತೆಗೆಯೆ (ಶಂಕರಂ. ೦೦೯-೪) ; ನುಣ್ಣಿತ್ತು ; ತಣ್ಣಿತ್ತು ; ಬಣ್ಣಿತ್ತು (ಶಬ್ದರ. ೬೬ ಪ್ರಯೋ). ೨. ಬಣ್ಣಿತ್ತಾದಲಱೊಂಪದ ಕಂಪಂ ಹಣ್ಣ ಹದುಳದಿಂದಾಂತಳಸುತ್ತುಂ . . . ಸುಳಿಗೆಲರಾ ಬನದೊಳ್ (ಅದ್ಭುರಾ. ೨-೨೦).

ಬಣ್ಣಿತಂಬಡೆ = ಘನತೆಯನ್ನು ಹೊಂದು ; ಗೌರವಾಸ್ಪದವಾಗಿರು : ಬಣ್ಣಿತಂಬಡೆದ ಭವ್ಯೋತ್ತಮರ್ ಕಡು ಮುನಿದು ಬಣ್ಣಗೆಡಿಸುವರೆ ತಮ್ಮ ವರೊಂದುವೇಳೆಯೊಳ್ತಪ್ಪುಮಾತಂ ನುಡಿದೊಡೆ (ಸಮ್ಯಕ್ತ್ವ. ೦೦-೫೫). ಬಣ್ಣದಂ = ಘನತೆಯುಳ್ಳವನು : ಲಘುಪಾತ್ರನಾಗಿ ಕಾಗೆಯ ಕೊರ ಲೊಳ್ಕಟ್ಟಿದೊಡ ಪಾಱುವಪನುಂ ನೆಟ್ಟನೆ ಬಣ್ಣದನೆನಿಕ್ಕುಮಾರ್ಹತದಿಂದಂ (ಸಮುಶ. ೦೫-೩೫) ; ಗಾರುಡಮೊಂದನೆ ಕಲ್ಲದನ್ನೆವರೆಗಂ ಜನಕೆಲ್ಲಂ ವಿದ್ಯೆ ಯಿಂದೆ ಬಣ್ಣದನಲ್ಲಂ (ಧರ್ಮಾಮೃ. ೦೨-೦೦೫).

ಬಣ್ಣಿತ್ತು 'ಬಣ್ಣಿತು' ನೋ.

ಬಣ್ದೊಡೆ (ನಾ). ದಪ್ಪವಾದ ತೊಡೆ ; ತೋರವಾದ ಊರು : ಬಣ್ದೊಡೆಯ ಬಡವಾಸೆಯ ಬಳ್ನಡುವಿನ . . . ಬೆಡಂಗಿನ ಬಾಲೆ ಯೊರ್ವಳ್ . . . ಬರುತುಮಿರ್ದಳ್ (ರಾಮಾಶ್ವ. ೯೬-೨೩) ; ಬಿಡಯದೆ ಕಂಭವೇಱ ಬಱಕ್ಕೆ ಬಿಗಿವಂತಿರೆ ಸುತ್ತಿ ಪಾಯ್ವ ಬಣ್ದೊಡೆಗಳನುರ್ಬಿ ಪೆರ್ಬೆಣೆಯ ಪೋಲ್ ಬೆಣೆಗೊಂಡು ಪೊದಟ್ಟ ತೋಳ್ಗಳಿಂ . . . ಜಟ್ಟಿಗರ್ ಗರುಡಿಗೋವಳನೀ ನೃಪನೆಂದು ವಂದಿಪರ್ (ಕಳಾ. ೪-೦೩೬).

[ಬಣ್ ( < ಬಣ್ಣಿತು) + ತೊಡೆ$_2$]

ಬಿಣ್ನುಡಿ (ನಾ). ಕೆಚ್ಚಿನ ಮಾತು ; ವೀರೋಕ್ತಿ : ನೀಮೆ ಬಿಲ್ಲಾಳ ಬಲ್ಲಾಳರಪ್ಪನಂ ಮೊನೆಯೊಳೆ ಹಯಮಂ ಕೊಳ್ವುದು ರಾಮನಂ ತೋಱದೆ ಸಂಧಿಗೊಂದೆಂ ಬಿಣ್ನುಡಿಗೆ ಬೆಱಗಾಗೆಂ (ರಾಮಾಶ್ವ. ೦೯೩-೦೩).

[ಬಿಣ್ (·< ಬಣ್ಣಿತು) + ನುಡಿ$_2$]

ಬಿಣ್ಪಡರು (ಕ್ರಿ). ದೊಡ್ಡದಾಗು : ಬೆಳೆ ; ವೃದ್ಧಿಸು : ತಿಣ್ಣವೊಲೆ ಬಿಣ್ಪಡರೆ ಕಾಲ್ಪಿಂದಗಶಿಗಲಸೆ . . . ಪೊಸಗಾಡಿಪೆತ್ತಿರ್ದಳೀ ವಣ್ಣಿಸುವೆಸು (ಕ್ಷಿಲಿಪಾ. ೧೬-೩೪). [ ಬಿಣ್ಪು + ಅಡರು$_1$ ( < ಅಡರ್) ]

ಬಿಣ್ಪಾರಿ (ನಾ). ಪ್ರಾಣಿಗಳು ಬೇಟೆಗೆ ಗಾಢವಾಗಿ ಸಿಕ್ಕಿ ಬೀಳುವ ಜಾಗ.– ಪ್ರದೇಶ : ಹರಿಣೀಲೋಚನೆ ದೀವದಾ ಹರಿಣನೇಂ ಪೆರ್ಗಾಡಿದೀ ಬೀಡು ಬಿಣ್ಪಾರಿಗಳ್ನೀಣ್ಪಾರಿ ಶಂಬರಾರಿ ಶಬರಂ ಪುಲ್ಲಂಬು ಕೆಲ್ಲಂಬು ಮದ್ವಿರ ಹಾವಸ್ಥಿತಿ ಗೋರಿಗೋರಗೆಯನಿಪ್ಪಂತಾದುದು (ಅವಂಪು. ೧೦-೪೨).

[ಬಿಣ್ ( < ಬಣ್ಣಿತು) + ಪರಿ$_3$]

ಬಿಣ್ಪು, ಬಿಂಪು (ನಾ). ೧. ಭಾರ ; ಒಜ್ಜೆ ; ತೂಕ : "ಬಿಣ್ಪೆಂದಪಂ, ತಿಣ್ಣಮೆಂದಪಂ ಭಾರಂ" (ಕೆಶಾ. ೬೯-೫೬೬) ; ಎಣಿಕೆಗಳುಂಬಮುಂ ಪಿರಿದುಮಾದ ಪದಾತಿವರೂಥವಾಜಿವಾರಣಬಲದಿಂದಮಿರ್ಪುಡಿಸೆ ಧಾತ್ರಿಯ ಬಿಣ್ಪಿನಗೆಂದಿನಂದವಲ್ಕಣಕಮಿದೆಂದು . . . ಬೇಸಱಂ ತಿಣುಕಿದನಾನಲುಮ್ಮಳಿಸಿ ಶೇಷನಶೇಷಮಹೀವಿಭಾಗಮಂ (ಶಂಕಳ. ೯-೯೯); ನಡು ನಡುಗೆ ಬಗಿದೊಗೆದ ಪಯೋಧರೆಯ ಬಿಣ್ಪಿನಿಂ . . . ಬೆಳ್ಪಸೆಯ ಕರಮೆಸೆದರಬಲೆಯರ್ (ಅಶಪು. ೪-೬ ಅಳ). ೨. ದೊಡ್ಡ ಗಾತ್ರ, – ಆಕಾರ : ಸ್ತನದ ಬಿಣ್ಪನೆ ನೋಡಿ ಮನಮಿಕ್ಕುವರ್ ವಿಟರ್ ಕನಕಪಂಕಜದ ಬಿರಿಮುಗುಳ ನನೆ ನೋಡಿ ಮನಮಿಕ್ಕುವಂತೆ ಮಱದುಂಬಿ (ಉತ್ಕಲಿ. ೦೦-೯೪). ೩. ದೃಢವಾದುದು ; ಮಜಬೂತಾದಂದು: ಗಟ್ಟಿಯಾದುದು : (ಕ). ೪. ಅತಿಶಯ ; ಆಧಿಕ್ಯ: ಹೆಚ್ಚಳ: ಭೂತಳ (ಲ)ಸತಿಗೊಳ್ಪನಾಳ್ದ ನವಮೆಃಖಳೆಯೆಂಬ ಸಮುದ್ರದಂತೆ ಕೊಂಡಲಿ ಗೆಱೆಯೊಪ್ಪ ತೋಱುವುದೆನೆ ಬಿಣ್ಪನೊಳಾವರಿಸಿರ್ದ ಪೆಂಪಿನೊಳ್ (ಎಕ. XIII, ೩೩೦-೩೪ ; 929) ; ನಿನ್ನ ಪೆಂಪಿನ ಬಿಣ್ಪಂಗದಾರ್ ಮರುಳ್ಗೆ ಳಸರ್ (ಕಾದಂಪ. ೦೦೦) ; ಈಗಳಾತನ ಪುರುಷಾರ್ಥದ ಪುರುಳುಂ . . . ಪರಾಕ್ರಮದ ಬಿಣ್ಪುಂ ಕರತಳಾಮಳಕವಾಗಿರ್ದಪ್ಪುದು (ಶಂಕರಂ. ೯೫-೨೦). ೫. ವೈಭವ ; ಆಡಂಬರ : ತನ್ಮಹಾರುದ್ರಗಣಭರಮನೀ ನಾಳ್ಗಳರಸುಗಳ ಬಿಣ್ಪಂ ಶಿವನ ಸಭೆಯಲ್ಲದಾವ ಲೋಕಂದಳೆದೊಡಂ ಮುಳ್ಗಿ ಬೀಳವೆ ಸಕಲ ದಿಗ್ಗಜಂಗಳ್ (ಚಂಪು. ೨೯-೩೩). ೬. ಹಿರಿಮೆ ; ಮಹತ್ತ್ವ ; ಗುರುತ್ವ : ಮುಂದಣ ಕಜ್ಜದ ಬಿಣ್ಪುಮನಱದುಭೋರುಹ ನಾಭಂ ಶುಂಭದಂಭೋಧರಧ್ವನಿಯಿನಿಂತೆಂದು (ಶಂಶಾ. ೬-೨೨ ಕ); ಕಂಡಿಹೆಯಾ ಈ ಸೂಕ್ಷ್ಮವ ಈ ಭವ್ಯತೆ ಬಿಣ್ಪ (ಕರುಶ್ರಾ. ೬೯-೦೬). ೭. ಘನತೆ ; ಗೌರವ ; ದೊಡ್ಡಸ್ತಿಕೆ : ಇಂದುಗುಪಶಾಂತತೆ ಮೇರುಗೆ ಬಿಣ್ಪು ತನ್ನದೊಂದಿರವಿನೊಳಾದುವೆಂಬಿನಮುದಾರಗುಣಪ್ರಕರಂಗಳಿಂದ ಳಂಕರಿಪ ನಿಜಪ್ರಭಾವಮಹಿಮೋನ್ನತಿಯಿಂದೆಸೆದಂ ಮುನೀಶ್ವರಂ (ಕಾದಂಪೂ. ೨೯೩); ನೀವಪ್ಪೊಡೆ ಪೆಂಪಿನೊಳಂ ಬಿಣ್ಪಿನೊಳಂ ಸಾಹಸದೊಳಂ ಮರುತಂಗೆ ಪಿರಿಯರ್ (ಶಂಕರಂ. ೨೫೯-೦೪) ; ಸಲೆ ಮೆಱವುದಿಂತು ಹಿಮವನ್ನಗೇಂದ್ರಂ ಪೂರ್ವಜಲಧಿ ಪಶ್ಚಿಮವಾರ್ಧಿಗಳ ಕೂಡಿಕೊಂಡು ನಿರ್ಮಲಶಿವನ ಮಾವ ನೆನಿಸುವ ಬಿಣ್ಪಿನಿಂದೆಸೆವುದು (ಕಾವಕಂ. ೨-೨). ೮. [ಛಂದ] ಉಚ್ಚಾ ರಣೆಗೆ ಎರಡು ಹ್ರಸ್ವಾಕ್ಷರಗಳಷ್ಟು ಕಾಲವನ್ನು ತೆಗೆದುಕೊಳ್ಳುವ ಸ್ವರ ; ದೀರ್ಘಾಕ್ಷರ ; ಗುರು : "ಕೊಂಕು ಬಿಣ್ಪಸೆ ಗುರುವಲಾ" (ಶಬ್ದಮಂ. ೫೬) ; ಬರೆ ವಕ್ರಂ ಶಿಖಿಯೊಂದು ಕೊಂಕುಕಡೆಯಿಂದಾ ಮಾರುತಂ ವ್ಯೋಮವೊಪ್ಪಿರೆ ಬಿಣ್ಪಂತೆರಡಾದಿಯೊಳ್ (ಛಂದೋಂಬು. ೦-೩೬). ಬಿಂಪು: ೪. ಕೆಂಪ ಕಾಱದವಾಲಿಗಳು ಮೈ ಕಂಪಿಸಿದುದದ್ದಿಗಡಿಗೆ ರೋಷದ ಬಿಂಪಿನೊಳು ತಗ್ಗಿದನು ಗುಟಕ್ಕಿದನು ಹುಬ್ಬುಗಳ (ಕುವ್ಯಾಶೀ. ೬-೨೬). ೫. × × × ಪುರಿ ಪೆಂಪಿನಲು ಧರಣಿ ಬಿಂಪಿನಲು ಜಳರಾಸಿ ಗುಂಪಿನಲು × × ದೇವನಂತಿಪ್ಪರ್ × × × (ಎಕ. XV, ೩೯-೫೦ ; 1148). ೯. ಗಾಢತೆ ; ತೀವ್ರತೆ : 'ರ್ಘೂಂಪಿಸುವ ಸಿರಿವೊಗದ . . . ನಿಜ

ರಾಜತೇಜದ ವಿಪುಳವೇದಸಿಯು ಬಿಂಪಗಿದ ಬೇಸಱಿನ ತುಱುಗಿದ ತಂಪಿನ ಗ್ಗಳಿಕೆಯ ವಿಘಾತಿಯಂ ರ್ಪೊಂಪಿನಲಿ ಹುದುಗಿದ ಪುಹೋಶನ ಕಂಡನಾ ಪಾರ್ಥ (ಕುಮ್ಮಾ.ಕ. ೧೬-೩) : ಕುಸುಮಸೌರಭಸಾಂದ್ರದಿಕ್ತಟದ ಬಿಂಪು ದುರ್ಧರವಾಯಿತು (ಶಿಶಾಗ. ೧೦-೩-೩೩). [ಬಿಣ್ + — ಪು]

**ಬಿಣ್ಪುಗೊಳ್** (ಕ್ರಿ). ಅಧಿಕವಾಗು ; ಹೆಚ್ಚಾಗು : ತೀವ್ರವಾಗು : ಜನಿಯಿಸಿದತ್ತು ಚಿತ್ರವಾತಿದೇವಿಗೆ ಗರ್ಭಮದಿಂತು ನಾಡೆಯುಂ . . . ಜನಿ[ಯಿಸೆ] ಬಿಣ್ಪುಗೊಂಡಲಸಮಾ ನಿಜಸಿರ್ಮಳಚಿತ್ತವೃತ್ತಿಯೊಳ್ (ಕುಸುಮಾ. ೦೨-೨೩). [ಬಿಣ್ಪು + ಕೊಳ್$_1$]

**ಬಿಣ್ಪುವೆಱು** (ಕ್ರಿ). ಭಾರವಾಗು : ತರೆ ವಾಸಗಿ ಬಾಷ್ಪಜಳಮೊತ್ತರಿಸೆ ಮೊದಲ್ ನಾಂದು ಬಿಣ್ಪುವೆತ್ತಮೊದೊಱೆಯುಂ ಭರದಿಂ ತಾಂಗಿ ನಿಜಾದ್ರ್ಯಂ ತರಂಗಭರಮುಂ ನಿವೇದಿಪಂತೀಕ್ಷಿಸಿದಂ (ವರ್ಧಪು. ೯-೮೭). [ಬಿಣ್ಪು+ಪೆಱು$_1$]

**ಬಿಣ್ಪೇಱು** (ಕ್ರಿ). ೧. ಭಾರವಾಗು ; ತೂಕದಿಂದ ಕೂಡಿರು : ನನೆಯಂ ಪೂಗೊಂಚಲಂ ಪೊತ್ತು ನಟ್ಟನೆ ಬಿಣ್ಪೇ[ಶಾಕಾಂ. ೪೬]ಱಿದ ಬಳ್ಳಿಗೊಂಬು . . . ಚೆಲ್ವಾದುದಿವಮ್ಮಾವಿನೊಳ್ (ಕಮ್ಮಕಾ. ೬೨). ೨. ಹೆಚ್ಚಾಗು ; ಅಧಿಕಗೊಳ್ಳು : ಆಳೀಜನಂ ಮಾಟ್ಟ ಶಿಶಿರೋಪಚಾರದ ತಣ್ಪಿಂಗೆ ಬಿಣ್ಪೇಱುವ ವಿರಹಾಗ್ನಿಯಿಂದಂ ಕಂದಿ ಕುಂದಿ (ಅಮೃತ. ೭-೩೦ ವ). ೩. (ಅಲಂ) ಸಡಗರಿಸು : ಉತ್ಸಾಹಗೊಳ್ಳು : ವಿದ್ವಜ್ಜನಂ ನೆರೆದಿಂಪೇಱೆ ನೆಗಟ್ದ ಬೀರವಡೆಗಳ್ ಬಿಣ್ಪೇಱೆ . . . ಪಟ್ಟವಣೆಯುಂ ತಾನೇಱಿದಂ ಸದ್ಗುಣಾಕರಂ (ಕಕಾ. ೨-೫೩).
[ಬಿಣ್ಪು + ಏಱು$_1$ (< ಏಱ್$_1$)]

**ಬಿಣ್ಪೊಱೆ** (ನಾ). ಭಾರವಾದ ಹೊರೆ ; ತೂಕವಾದ ಹೊರೆ : ಕೂಸಿನ ತಲೆಯೊಳ್ ಬಿಣ್ಪೊಱೆಯನಿಟ್ಟವೋಲಸುಖಕರಂ (ಕಾ.ರಾ. ೨-೭) ; ನಟ್ಟ ಕೊರ್ಗಣೆಯು ಬಿಣ್ಪೊಱೆಯಿಂದೆ ಬಟಿಲ್ದಂ . . . ಸಿಂಧುಜಂ (ಪಂಕರಾ. ೧೧-೯೩) : ಇಂತೀ ದುಃಖದ ಬಿಣ್ಪೊಱೆಗಾನಲ್ ಪೆಗಲನ್, ಓ ಸ್ವಾಸ್ ಎನ್ನಯ ತಪ್ಪೇನ್ (ಬಿಕ್ಕಸ್ರ. ೩೦-೬೩೦). [ಬಿಣ್ (< ಬಿಣ್ಣಿತು) + ಪೊಱೆ]

**ಬಿಣ್ಪಡು** (ಕ್ರಿ). ದೊಡ್ಡದಾಗು ; ಗಾತ್ರವಾಗಿ ಬೆಳೆ : ಪಣಗಿಟ್ಟು ಪೊಂಬೊಟ್ಟನೆಡೆಗಟ್ಟಿಯಾ ದಿಟ್ಟೆ ಬಿಣ್ಪಟ್ಟ ಮೊಲೆಗೆ ತೊಟ್ಟುಡಿಗೆ ಪಟ್ಟೆ ನೆಱಿದುಟ್ಟುಕೊಂಡೊಟ್ಟಜದ ಪಟ್ಟಣಗರಿಟ್ಟೆಡೆಯು ಬಟ್ಟೆಯಂ ಮೆಟ್ಟಿ ಬರೆ(ಶ್ರೀಮಪು. ೯-೯). [ಬಿಣ್(< ಬಿಣ್ಣಿತು) + ಪಡು$_1$]

**ಬಿಣ್ಮಾಣಿಕ** (ನಾ). ದೊಡ್ಡದಾಗಿರುವ ಮಾಣಿಕ್ಯ: 'ಬಿಣ್ಮಾಣಿಕವಡೆ' ಪರಾ. [ಬಿಣ್ (< ಬಿಣ್ಣಿತು) + ಮಾಣಿಕ]

**ಬಿಣ್ಮಾಣಿಕವಡೆ** (ಕ್ರಿ). ದೊಡ್ಡದಾದ ಮಾಣಿಕ್ಯವನ್ನು ಹೊಂದು : ಮುಱಿದುಂಬಿಗಳ್ ಪಂಚವಾದ ನುಣ್ಚರಕ್ಕೆ ಬಿಣ್ಮಾಣಿಕ[ಕ]ವಡದ ನೂಪುರಕಲಾಪ ತುಲಾಕೋಟಿಮಂಜರಿಕಾಪುಂಜಸಿಂಜಾನದೊಳಂ (ಅಸಂಪು. ೩-೯೩ ವ). [ಬಿಣ್ಮಾಣಿಕ + ಪಡೆ$_1$]

**ಬಿಣ್ಮಾಲೆ** (ನಾ). ದೊಡ್ಡ ಹಾರ; ಭಾರವಾದ ಹಾರ : ಗೋಣ್ಮೊದಲ ನೆಲುದಲೆಯು ಬಿಣ್ಮಾಲೆಗಳ್ಗತ್ತ ತಣ್ಮೆಯ್ಯಮೆಟ್ಟಮುಗಳಿಣ್ಮಸೆನಿಸಿದ ಸ್ಮರನ ಮಣ್ಮಾಡಿದುಱೆ ಸೊಕ್ಕು ಪೊಣ್ಮಿದಾನೆಯು ಸೀಳ್ದು ಜಾಣ್ಮೆಱೆವ ನೀಕ್ಷಿಸಿದನು (ಪಂಪವಾ. ೦೬-೦೩). [ಬಿಣ್ (< ಬಿಣ್ಣಿತು) + ಮಾಲೆ]

**ಬಿಣ್ಮೊಲೆ** (ನಾ). ದೊಡ್ಡ ಮೊಲೆ; ಥೋರವಾದ ಸ್ತನ : ಬಿಣ್ಮೊಲೆಯು ಮಿಗೆ ಬಟ್ಟಮೊಲೆಯು ತಂಗಾಯ್ಮೊಲೆಯು ಸುಣ್ಮೊಲೆಯು . . . ವೈಸಿಕದೊಳುಣ್ಮುವ ಗುಣಾಂಗಳ ಮಹಾಪ್ರೌಢವನಿತೆಯರ್ ಕಣ್ಗೆಸೆವರಲ್ಲಿಗಲ್ಲಿ (ಕಬಿಪು. ೦೦-೨೦) : ಮೇಲುದಂ ಬಿಣ್ಮೊಲೆಗಳನೋಸರಿಸೆ ನಿಜಾಂಬು ಬಿಗಿ ಪ್ರಸರಿಸೆ ಪೆಣ್ಮಂಚವಂಚಿಮಪ್ಪಳ್ಳಾಸಿಗಳೆದೊಯ್ದು ಳನಿಯುನಂ ಬಲ್ಪಿನಿಂದ (ಕ್ವಬಾ. ೦೦-೦೯). [ಬಿಣ್ (< ಬಿಣ್ಣಿತು) + ಮೊಲೆ$_1$]

**ಬಿತ್ತ** 'ಬಿಟ್ಟು' ನೋ.

**ಬಿತ್ತಣ**, ಬಿತ್ತನೆ. ಬಿತ್ತಾಣ (ನಾ). ೧. ಬೀಜವನ್ನು ಭೂಮಿಯಲ್ಲಿ ಬಿತ್ತುವಿಕೆ : [ಕೆಯ್ಮೊಳ್] ಪದಂಬಡೆವಂತೆ ಬಿತ್ತಣದಂತೆ ಸಸಿಯಂತೆ (ರಮಣಪು. ೧೨-೨೯). ೨. ಬೀಜ : ಬಿತ್ತ : ಕುಂಬಳದ ಹಣ್ಣಿನ ತೊಕ್ಕು ಒಳಗಣ ನುಡ್ಡು ಬಿತ್ತಣಗಳ ಸಹ ತೆಗೆದು (ಸಕಪ್ಪ. ೨೨೩). **ಬಿತ್ತನೆ** : ೧. ಭೂಮಿಯನ್ನು ಸಮ ಮಾಡಿದ ನಂತರವೇ ಬಿತ್ತನೆ ಮಾಡಬೇಕು (ವ್ಯವಸ. ೨೦) : ಮಳೆಯಿಲ್ಲದೆ ಬಿತ್ತನೆಯು ಕಾಲ ಮುಗಿಯಿತು (ಜಾತಾ. ೩೯). **ಬಿತ್ತಾಣ** : ೧. ಈ ಪುರವಲಿ ಗೌಡು ಭೂಮಿ ಆಬಂದು ದಿನದ ಬಿತ್ತಾಣ ಈ ದೇವರಿಗೆ ಸೋತ್ರವ ತೆತ್ತುಕೊಮ್ಬರು (ಎಕ. XI. ಚಿತ್ರದು. ೩-೩೬; 1356). [ಬಿತ್ತು$_1$ + — ಅಣ]

**ಬಿತ್ತನೆ** 'ಬಿತ್ತಣ' ನೋ.

**ಬಿತ್ತರ**, ವಿತ್ತರ (ನಾ). ೧ ವಿಸ್ತಾರ : ಹರಹು ; ವ್ಯಾಪ್ತಿ : "ಬಿತ್ತರ ಮೆಸಲ್ . . . ವಿಸ್ತಾರಮಕ್ಕುಂ" (ಕಶ. ೮೦) ; ಸಂಪತ್ತಿನ ಬಿತ್ತರದೆತ್ತಿವ ಮುತ್ತಿನ ಮಂಡವಿಗೆ ಪೊಬಲ ಮನೆಗಳೊಳೆಲ್ಲಂ (ಶಂಕಚಾ. ೩-೨) : ಈ ಕಾವ್ಯಮಂ ಬಿತ್ತರದಿಂ ತಾನೊಲ್ದು ಪೇಳ್ದಂ ಶಿವಕವಿ ಹರದೇವಂ (೧೧೦ಕ. ೦-೩೩). ೨. ಅತಿಶಯತೆ ; ಹೆಚ್ಚಳ ; ಆಧಿಕ್ಯ : 'ಬಿತ್ತರಂಬಡೆ'. 'ಬಿತ್ತರಿಕೆ' ಪರಾ. ೩. ಪೀಠ ; ಆಸನ : 'ಬಿತ್ತರಂಗೆಯ್' ಪರಾ. ೪. ಒಯ್ಯಾರ ; ಬೆಡಗು : 'ಬಿತ್ತರಿಸು' ಪರಾ. **ವಿತ್ತರ** : ೧. ಅರಸಿಯರ ಸುಕುಮಾರಕರನಾದರಿಸಿ ಮಧುರರಸೋಕ್ತಿಯುಲಿ ವಿತ್ತರದ ನುಡಿಗಳ ನುಡಿದು (ಕುಮ್ಮಾ.ಕ. ೬೦೩-೦೭-೯೩).[< ಸಂ. ವಿಸ್ತರ./ಪ್ರಾ.ವಿತ್ಥರ]

**ಬಿತ್ತರಂಗೆಯ್** (ಕ್ರಿ). ೧. ವಿವರವಾಗಿ ಹೇಳು.— ನಿರೂಪಿಸು : ಮೃಡನಿಂತು ಬಿತ್ತರಂಗೆಯ್ಯು ರುದ್ರಾಕ್ಷೆಯಂ ತೊಡಿಸಲು (ಶಾಂತಪು. ೬-೩೮). ೨. ಆಸನವಾಗು ; ಪೀಠವಾಗು : ಯೋಗಾಭ್ಯಾಸಂಗೆಯ್ವ ಯೋಗೀಂದ್ರ ಬೃಂದಕ್ಕೆ ಯೋಗಾಸನವಾಗಿ ಸುತ್ತುಗೊಂಡು ಬಿತ್ತರಂಗೆಯ್ವಂತಿರ್ದ ಭೋಗೀಂದ್ರವೃಂದಮುಮಂ (ಪಂಕಶಂ. ೦೦೯-೯). [ಬಿತ್ತರ + ಕೆಯ್$_1$]

**ಬಿತ್ತರಂಗೊಳಿಸು** (ಕ್ರಿ). ವಿವರವಾಗಿ ನಿರೂಪಿಸು ; ವಿಶದೀಕರಿಸು : ರಹಸ್ಯಮನಾದೊಡಂ ತಮ್ಮ ಮನದೊಳ್ಮರೆಮಾಜದೆ ಬಯಲ್ಗೆಯ್ದು ಬಿತ್ತರಂಗೊಳಿಸಲಿ ಎಂದು ಶಾಪಮನಿತ್ತು (ಶಾರಶಾಂ. ೨೨-೬); ನಿಗಮಾಂತಾರ್ಥವ ಬಿತ್ತರಂಗೊಳಿಸುವ ಗ್ರಂಥಂಗಳಂ (ಮ್ಯಸೂಪು. ೦-೧೩).
[ಬಿತ್ತರ + ಕೊಳ್$_1$ + — ಇಸು$_3$]

**ಬಿತ್ತರಂಬಡೆ**. ಬಿತ್ತರವಡೆ (ಕ್ರಿ). ೧. ವಿಸ್ತಾರವನ್ನು ಹೊಂದು: ದೊಡ್ಡದಾಗು : ಧವಳತೆಯನಾಂತ ಮುಗಿಲ ಮೊತ್ತಮೊತ್ತಲುಂ ಬಿತ್ತರಂಬಡೆಯೆ (ಶಾರಪು. ೯-೬೬ ವ) : ತಳೆಗುಂ ತೋರ್ಕೆಯು ಬಿತ್ತರಂಬಡೆದು ಬಿತ್ತಿತ್ತಂಬವೋಲಿರ್ದ ಪೆರ್ಬೊರ್ಳೆ (ಶಾಸಂತ. ೦೦೧-೧೬೦). ೨. ಅತಿಶಯವಾಗು; ಶ್ರೇಷ್ಠತೆಯನ್ನು ಪಡೆ : ಸಂಪಗೆಯ ಮುಗುಳನಗೆಗಳಿಂ ತೆತ್ತಿಸಿ ಬಿತ್ತರಂಬಡೆದ ಜವಳಿವಡಿಗಳೊಳಂ (ಚಂದ್ರಪು. ೭-೯೩ ವ): ಸೂಳಱಿದೇಱುವ ಸುತ್ತೇಱುವ ಬಿತ್ತರಂಬಡೆದ ವಾಹಳಿತನದೊಳ್ (ರಾಜಶೇ. ೬-೦೦ ವ). **ಬಿತ್ತರವಡೆ** : ೧. ಬಿತ್ತರವಡೆವೀ ಪಟ್ಟಣದೊಳಗೊರ್ವನುತ್ತಮನಾಯಕನಿಹನು (ಕಂಸಂ. ೯-೪೩). ೨. ವ್ರತದೇಳ್ಗೆಯಿಂತು ಬಿತ್ತರವಡೆದುದೊ ಎನೆ ಸತಿಯರು ಜಸವಡೆದಿಹರು (ಹರಿಬ. ೨-೦೯). [ಬಿತ್ತರ + ಪಡೆ$_1$]

**ಬಿತ್ತರಂಬೆಱು**. ಬಿತ್ತರವೆಱು (ಕ್ರಿ). ೧. = ಬಿತ್ತರಂಬಡೆ ೧ : ಕಟ್ಟಲೆಯ ಕಾರಾಗಾರದಂತೆ ಬಿತ್ತರಂಬೆತ್ತು ಬೆಳ್ಚತಂ ಪರ್ವಿದ ತವನಿಳ ಮಾಳಾಪರಂಪರೆಗಳುಂ (ಚಂದ್ರಪು. ೦-೦೦೩ ವ). **ಬಿತ್ತರವೆಱು** : ೨. = ಬಿತ್ತರಂಬಡೆ ೨ : ನವೀನಚೀನದಿಂ ಬಿತ್ತರವೆತ್ತ ಮೇಲ್ಗುಡಿ . . .ವಿರಾಜಿತಮಾಯ್ತು ವಿವಾಹಗೇಹದೇಳ್ (ರಾಜಶೇ. ೬-೨). [ಬಿತ್ತರ + ಪೆಱು$_1$]

**ಬಿತ್ತರವಡೆ** 'ಬಿತ್ತರಂಬಡೆ' ನೋ.

**ಬಿತ್ತರವೆಱು** 'ಬಿತ್ತರಂಬೆಱು' ನೋ.

**ಬಿತ್ತರಿ$_1$** (ನಾ). ಗದ್ದುಗೆ ; ಸಿಂಹಾಸನ : "ಪಟ್ಟವಣೆಯೆಂದುಂ, ಬಿತ್ತರಿಯೆಂದುಂ ಸಿಂಹಾಸನಂ" (ಶಬಾ. ೬೦-೩೨೩): ಅಬ್ಬದೆಳೆಯಲೆಗಳ ಬಿತ್ತರಿಗಳೊಳರಸಿಯರ್ ನೆವ್ಮಿ (ಶಾಂತಿಪು. ೮-೩): ಈ ಪಟ್ಟದ ಬಿತ್ತರಿಯನ್ನು ನೀನು ಆರೋಹಣ ಮಾಡಬೇಕು (ಚೆನ್ನಿ ಅ. ೧೦೦-೦೦).

[< ಬಿತ್ತರ]

**ಬಿತ್ತರಿ$_2$** (ನಾ). ಬೆಡಗುಗಾತಿ; ಒಯ್ಯಾರಿ : ಬಿ[ಶಾತಾಂ. ಭಿ]ತ್ತರಿಯುರಿದೆ ಗತ್ತರಿಯರಾ ಪೊತ್ತು ಹಾದರಗಿತ್ತಿಯರು ಪ್ರಹೃಷ್ಟಕಾತಿಯರು (ಬಸಪು. ೪೦-೩೩) ; ಕೆಲರು ಬಿತ್ತರಿಯರು ಅತ್ರೆಮಾವಂದಿರಂ ಮರೆಯಿಸಿ (ಸೌಗಂ೦. ೦೮೩-೩).  [ಬಿತ್ತರ + — ಇ$_2$./ತೆಲು. ಬಿತ್ತರಿ]

**ಬಿತ್ತರಿಕೆ** (ನಾ). ೧. ವಿಸ್ತಾರವಾದ ನಿರೂಪಣೆ : ಸಂಚಿದೊಳ್ ಸುಸಂಚನೆನಿಸಿ ಕರಂಗಳ ಬಹುರೇಖೆಯು ಚಾರಣೆಯು ಧಿಕ್ಕವಣೆಯು ನೇವಣೆ ಬೊಲ್ಲವಣೆಯು ಬೆಡಂಗು ಬಿತ್ತರಿಕೆಯುಂ ಬೀಜಾ ಬಾಜಿಸುತ್ತಿರೆಯುಂ (ಶಾಂತೀಶ್ವ. ೬-೯೩ ವ). ೨. ಅತಿಶಯ ; ಆಧಿಕ್ಯ ; ಹೆಚ್ಚುಗಾರಿಕೆ : ತನ್ನುರವಮನುರ್ಚಿದೊಡಚ್ಚರಿದಟ್ಟನೆಚ್ಚ ಬಿತ್ತ[ಶಾತಂ. ಚ್ಚ]ರಿಕೆಗಮಾ ತೆಜಂ ಮುರಿದ ದಂತಿಗಪ್ಪಾ ವನದೊಳ್ ವನೇಚರಂ (ಸುಕುಸು. ೩-೦೫೩).

[ಬಿತ್ತರ + — ಇಕೆ]

**ಬಿತ್ತರಿಗೆ$_1$** (ನಾ). ಪೀಠ ; ಆಸನ : "ಬಿತ್ತರಿಗೆ—ವಿತರ್ದಿಕಾ = ವಿಷ್ಟರ" (ಕರ್ನಾಕೋ. ೩೦); ಬೊಂದರಿಗೆ ಪಚ್ಚಿಯ ಬಿತ್ತರಿಗೆ ಕರಂ ಪೆರ್ಚುವ ಮಹಿಮೆ ಯನೆಯ್ದೆ ನಿವಿರ್ಚೆ (ಪಂಪಭಾ. ೦೯-೨೪); ಬಿತ್ತರದ ಬಿತ್ತರಿಗೆಯೊಳೊತ್ತರದ ಗಾಡಿಯಿನೊಪ್ಪಿರ್ದ ರಾಮಂ . . . ಪೇಟಿಂದೊಡೆ (ರಾಮಾಶ್ವ. ೦೯೨-೮).

[<ಸಂ. ವಿತರ್ದಿಕಾ]

**ಬಿತ್ತರಿಗೆ$_2$** (ನಾ). ಒಂದು ಬಗೆಯ ಸಸ್ಯ : (ವೃಕಿಶಿ. ೨೦-೩೬೦).

[?]

**ಬಿತ್ತರಿತನ** (ನಾ). ಒಯ್ಯಾರ; ಬೆಡಗು : ಏಳೇ ಸಾಕು ನಿನ್ನ ಬಿತ್ತರಿತನ (ಮಾಮುಂ. ೦೯೬).  [ಬಿತ್ತರಿ$_2$ + — ತನ]

**ಬಿತ್ತರಿಸು** (ಕ್ರಿ). ೧. ವಿಸ್ತರಿಸು ; ಹರಡು : "ಬಿತ್ತರಿಸು—ವಿಸ್ತಾರೇ" (ಕವಿರಾ) ; ಅದೆಜಿಂದೆನ್ನ ರಾಜ್ಯೋದಯಮಂ ಬಿತ್ತರಿಸುತ್ತಿರ್ಕು (ಅಜಿಪು. ೦೨-೩) : ಪರಿಮಳಮನೆಣ್ದೆಸೆಗೆ ಬಿತ್ತರಿಸುವ ನನೆಗಣೆಗಳಿಂದೆ ಗಿರಿಪತಿತನಯಾ ವಿರಹಾತಪಮೊಗೆಯುಲ್ (ಗಿರಿಶ. ೬-೬೦) ; ಅನಂತಸತ್ತ್ವ . . . ಬಿತ್ತರಿಸುತಿಹುದು ಹೊಸಹೊಸತನವನೆಡೆವಿಡದೆ ನಿತ್ಯನಿತ್ಯವು (ಕುಂಸಂಕ. ೯೨). ೨. ವಿವರಿಸು; ನಿರೂಪಿಸು: ಕೇಳ್ವಂಗೆ ಬಿತ್ತರಿಪಂಗಾದ ಮಳುಂಬವಲ್ತೆ ಭಗವಜ್ಜನ್ಮಾಭಿಷೇಕೋತ್ಸವಂ (ಆದಿಪು. ೬-೧೦೦); ನೀವೆ ತೃಣವರೇನೆಂದು ನಿಮ್ಮಭಿಧಾನವೇನಹುದು ಬಿತ್ತರಿಸಿ ಹೇಳು (ಕುವ್ಯಾಸ. ೩-೩೦); ಮುನ್ನಂ ಶೇಷಂ ವಾತ್ಸ್ಯಾಯನಂಗೆ ಪೇಟ್ದನವನೆಯ ನಿನಗೆ ಬಿತ್ತರಿಪೆಂ (ರಾಮಾಶ್ವ. ೩.೦೦). ೩. ಹಿರಿಮೆಯನ್ನು ಪಡೆ : ಇತ್ತಲಾ ಸಭೆಯೊಳಗೆ ಸಿಂಹಾಸನದ ಮೇಲೆ ಬಿತ್ತರಿಪ ಕನಕಮಣಿ ಭದ್ರಾಸನದ ಮೇಲೆ ಸಕಲನೃಪ ರಾಜಪುತ್ರರ ನಡುವೆಯೊಪ್ಪಿದಂ (ಶಂಶರ. ೩-೯೬). ೪. ಸಿದ್ಧಪಡಿಸು ; ಅಣಿಮಾಡು; ಲವಲವಿಕೆಯುಂ ಪರಿಯಣಮುಂ ಬಿತ್ತರಿಸಲುಂ . . . ಪೇಟ್ದುವಾಗಳ್ (ಆದಿಪು. ೬-೨೦ ವ); ಬಿತ್ತರಿಸಲ್ಕವೇಟ್ದಾ ಪರೂಥೋತ್ಕರಮುಂ ಬಲಿದೊಡ್ಡವೇಟ್ ಪದಾತಿಯುಂ (ಕಾವ್ಯಾವ. ೪೦೩). ೫. ವ್ಯಕ್ತವಾಗು; ಗೋಚರಿಸು: ತತ್ಕಪೋಲದೊಳ್ಬಿತ್ತರಿಸಿದುವು ಕೊನರ್ತ ಬೆವರ ಬಿಂದುಗಳಾಗಳ್ (ಕಾದಂಪೂ. ೭೫೭). ೬. ಕೊಂಡಾಡು ; ಕೀರ್ತಿಸು : ಹರಿ ಹರ ಹಿರಣ್ಯಗರ್ಬ್ಬರನುರವಣೆಯಿಂ ಗೆಲ್ದ ಕಾಮನಂ ದೀಪ್ತತಪೋಭರದಿನ್ದುರಿಪಿದರನೆ ಬಿತ್ತರಿಸದರಾರ್ ವೀರಣನ್ದಿಸ್ವದ್ಧಾನ್ತಿಕರ್ಪ (ಎಕ. II. ೦೯೦-೦೬೩; 1145).  [ಬಿತ್ತರ + — ಇಸು$_3$]

**ಬಿತ್ತಲಂಡೆ** 'ಬಿತ್ತಲಟ್ಟಿ' ನೋ.

**ಬಿತ್ತಲಟ್ಟಿ**, **ಬಿತ್ತಲಂಡೆ** (ನಾ). ಒಂದು ಬಗೆಯ ತೆರಿಗೆ (?): ಕೆಱೆಯ ಕೆಬಗೆ ತಲೆರಾಸಿಯಲಿ ಬಿತ್ತಲಟ್ಟಿಯುಂ ಖಣ್ಣಗಗಟ್ಟಿಯುಂ ಕೆಱೆಗೆ ಸಲ್ಗು (ಸೌಇಇ. IX- i, ೨೭_೩: 10ನೆಯ ಶತ). **ಬಿತ್ತಲಂಡೆ** : ಕಲ್ಲಳೂರ ಕೆಱೆಯ ಕೆಱಗುಟ್ಟ ಬಿತ್ತಲಣ್ಡೆಯುಂ ಕೆಱೆಗೆ ಇಕ್ಕದನ್ದು ವಾರಣಾಸಿಯುಂ ಕವಿಲೆಯು ಮನಳಿದ ಪಾಪಕ್ಕೆ ಸಲ್ವಂ (ಸೌಇಇ. IX-i, ೩೯-೮ ; 10ನೆಯ ಶತ).  [?]

**ಬಿತ್ತವಟ್ಟ** 'ಬಿತ್ತುವಟ್ಟ' ನೋ.

**ಬಿತ್ತಾಣ** 'ಬಿತ್ತಣ' ನೋ.

**ಬಿತ್ತಿ** (ನಾ). ಗೋಡೆ : "ಬಿತ್ತಿ — ಭಿತ್ತಿ = ಗೋಡೆ" (ಕರ್ನಾಕೋ. ೩೦): ಬಿತ್ತಿಯೊಳಂದಂಬಡೆವಂತಾ ಬಚ್ಚಿಸಿದ ಬಣ್ಣಂಗಳಂ . . . ನೋಡಿ (ಕಳ್ಳಶಾ. ೬೩) : ಭರ್ಗಸಖನ ಬಂಡಾರದ ನವರತ್ನವರ್ಗದ ಬಿತ್ತಿಗಳಿಂದ ದೀರ್ಘವಡೆದು ದಿವ್ಯಕಾಂತಿಯು ಬೀಱುತ ದುರ್ಗಾಮಂಟಪವಿದ್ದುದು (ಕಂಪಿಪ. ೬-೩೩).  [< ಸಂ. ಭಿತ್ತಿ]

**ಬಿತ್ತಿಕೆ**, **ಬಿತ್ತಿಗೆ$_1$** (ನಾ). =ಬಿತ್ತಣ ೧ : ಮಾಟಕೂಟವೆಂಬ ಹೊಲದಲ್ಲಿ ಪಾಪ ಪುಣ್ಯವೆಂಬ ಬೀಜದ ಬಿತ್ತಿಕೆಲ್ಲ ತಂಗಾಲಕ್ಕೆ ಬೆಳೆದು ಮಳೆಗಾಲಕ್ಕೆ ತಗ್ಗಿ ಹೊಲದ ಒಳಹರಿಯಲ್ಲಿ ಜಲ ನಿಂದು ಹೋಯಿತ್ತು (ಷೋಳಶಾ. ೦೦೯-೪೦೩) ; ಗೋದಿಯ ಬಿತ್ತಿಕೆಯಕ್ಕಿಂತಲೂ ಸ್ವಲ್ಪ ಅಗಲವಾಗಿ ನಾಲ್ಕು ಬೆರಳು ಅಂತರಕ್ಕೊಂದು ಬೀಜ ಬೀಳುವಂತೆ ಬಿತ್ತಬೇಕು (ಕೃಷಿಶ್ರ. ೯೨). **ಬಿತ್ತಿಗೆ$_1$** : ಬಿತ್ತಿಗೆಯ ಬಿತ್ತೊಂದುಳಿಯದಂತೆ ಬಂಧುರವಾಗಿ ನಾಂಟ ಕಂಗೊಳಿಸುತಿರ್ದವು (ಮುಲ್ಲಶ. ೦೨-೦೦) ; ನವಬೀಜದ ಹೊಸ ಬಿತ್ತಿಗೆಗಾಗಿ ಬಿಡಬೇಕು, ಹೊಲ ಬಿಡಬೇಕು (ಹೃದಕ. ೩೩-೩) ; ಒಂದು ಹಳ್ಳಿ ಬೆಳೆದರೆ ಹತ್ತು ಹಳ್ಳಿಗಳಲ್ಲಿ ಬಿತ್ತಿಗೆಯಾಗುತ್ತಿರಲಿಲ್ಲ (ಮತೃಪ. ೩).

[ಬಿತ್ತು$_1$ + — ಇಕೆ]

**ಬಿತ್ತಿಕ್ಕು** (ಕ್ರಿ). ಬೀಜವನ್ನು ಎರಚು ; ಕಾಳುಗಳನ್ನು ಬಿತ್ತು : ತೆತ್ತೀಸಕೋಟಿ ನಿರ್ಜರರು ಮುತ್ತಿನ ತ್ಯಾಗವ ಕೊಟ್ಟಂತೆಯೊಲಿಕಲ್ ಬಿತ್ತಿಕ್ಕ ಬಿರ್ದುರ್ದುರ್ವಿಯಲಿ (ಷೋಹಕ. ೪-೩೮).

[ಬಿತ್ತು$_2$ (< ಬಿಟ್ಟು) + ಇಕ್ಕು]

**ಬಿತ್ತಿಗ** 'ಬಿತ್ತಗ' ನೋ.

**ಬಿತ್ತಿಗಪೇಣ್** ' ಬಿತ್ತಗವೇಣ್ ' ನೋ.

**ಬಿತ್ತಿಗವೇಣ್** ' ಬಿತ್ತಗವೇಣ್ ' ನೋ.

**ಬಿತ್ತಿಗೆ$_1$** 'ಬಿತ್ತಿಕೆ' ನೋ.

**ಬಿತ್ತಿಗೆ$_2$** (ನಾ). ಪ್ರೌಢೆ ; ಚದುರೆ : ಒರ್ವ ಬಿತ್ತಿಗೆಯುಂ ನಿಟ್ಟಿಸಿ ನೀರಡಿಕೆಯುಂ ತೀರ್ಚ ತೆಱನಾವುದೆಂದು ಬೆಸಗೊಳಲ್ (ಶಠಕ. ೦೦೩-೩).

[ಬಿತ್ತಿಗ (< ಬಿತ್ತಗ) + — ಎ$_2$]

**ಬಿತ್ತಿಸು** (ಕ್ರಿ). ಬೀಜವನ್ನು ನಾಟಿಸು : ಕೇತಿದೇವನು ಸಸಿನೆ ಬಿತ್ತಿಸಿ ಸಾಲು ಸಾವಿರವಾಗಿ ಬೆಳೆದನಲಾ (ಬಸಪು. ೬೦-೦೯) : ಅರಿನೃಪರನು ಕೊಂದು ಪುರವ ಪಾಳ್ಗೈದಾಗ ಹರಳ ಬಿತ್ತಿಸಿದರೇನೆಂಬೆ (ಕಂಪಿಪ. ೩-೦೬).

[ಬಿತ್ತು$_1$ + — ಇಸು$_1$]

**ಬಿತ್ತು$_1$**, **ವಿತ್ತು$_1$** (ಕ್ರಿ). ೧. ಬೀಜ ಹಾಕು; ಬೀಜಾವಾಪ ಮಾಡು : "ಬಿತ್ತು—ಬೀಜಸ್ಥಾಪನೇ, ಬೀಜೇ ಚ" (ಕವಿರಾ) ; ಸುಕ್ಷೇತ್ರಮಲ್ಲದ ನೆಲದೊಳ್ ಬಿತ್ತಿದ ಫಲಮಂ(ಮುಂ) ಬಿತ್ತೆಂದುಂ ಫಲಮಾಗಲಾಱವು (ಕಾಪುಂಕ. ೦೩೬); ಹೊಳ್ಳ ಬಿತ್ತಿ ಫಲವನಱಸುವಂತೆ (ಮುಹಾರೇ. ೪. ೩೬.೦೯೦); ಹುರಿದು ಬಿತ್ತಿದ ಬೀಜ ಮೊಳೆವುದೆ (ಭರತ. ೨-೩೩). ೨. ಪ್ರಕಟಪಡಿಸು; ಹರಡು : ಸತ್ಕೀರ್ತಿಯಂ ಧರೆಯೊಳ್ ಬಿತ್ತುವಗಡ್ಡದುಡ್ಡು ಜಱ ವರ್ಗಿಪ್ಪಾರ್ಥದಾನಂಗಳುಂ . . . ಈಕ್ಷಿಸಲ್ ದೊರೆಗಳ್ಗೆತ್ತಣ ನೀತಿಯ್ದೈ (ಸೋಮೇಶ. ೬೦); ಚರ್ಮಭಸ್ತ್ರಿಕೆಯನೊಂದಂ ಚೆಂದಮಪ್ಪಂತೆ ನಿರ್ಮಿಸಿದೆಂ ಲಕ್ಷ ಸುವರ್ಣಮಂ ಕಱೆವುದೆಂಬಾ ಸುದ್ದಿಯಂ ಬಿತ್ತಿದೆಂ (ಧಕಾ. ೬-೦೩೬);

**ಬಿತ್ತು₁ :** ೧. ಒಕ್ಕಲು ಸಂಸ್ಕೃತಿಯಲ್ಲಿನಾ ವಿತ್ತಿದಲ್ಲಿ ಬೆಳೆಯಾದ ಕೆಡುಗೆ (ಎಕ. VII. ಶಿಕಾ೦. ೦೩೪-೦೭ : ೧೧೬). [ದೇ.॥ ತಮಿ. ವಿತ್ತು. ವಿತ್ತು ; ಮಲ. ವಿತ್ತ ; ತೊದ. ಪಿತ್ ; ಕೊಡ ಬಿತ್ತ್ ; ತುಳು. ಬಿತ್ತು, ಬುತ್ತು; ತೆಲು. ವಿತ್ತು; ಕೋಲಾ. ನಾಯ್ಕಿ. ಪರ್ಜಿ. ಗದಬ. ಎತ್]

**ಬಿತ್ತು₂** 'ಬಿಟ್ಟಿ' ನೋ.

**ಬಿತ್ತುಕಟ್ಟು** (ನಾ). ಕೆರೆಯ ಜೀರ್ಣೋದ್ಧಾರಕ್ಕಾಗಿ ಬಿಟ್ಟ ಭೂಮಿ ಮೊದಲಾದುವನ್ನು ಮತ್ತು ಅವುಗಳ ಆದಾಯವನ್ನು ಬಿಟ್ಟುಕೊಡುವುದು : ತಿರುವಯ್ಯನ ಮಗಂ ಚನ್ನಸೇಕರಂ ಮಣ್ಣಿಗಲ್ಲ ಕೆಱೆಗೆ ಬಿತ್ತುಕಟ್ಟ ಬಿಟ್ಟಂ(ಎಕ. X. ಮುಳಬಾ. ೧೯೬-೯: ಸು. ೧೧೦); ಬಂಗವಾಡಿಯ ಕೆಱೆಗೆ ಬಿತ್ತು ಕಟ್ಟು ಬಿಟ್ಟುದು (ಎಕ. X, ಕೋಲಾರ. ೨೮೮-೩೩: ಸು. ೧೧೦); ಶ್ರೀವತ್ಸಭಟ್ಟರ್ಯಂ ಬಿದಿರೂರನಾಳುತ್ತಿರ್ದು ಕೆಱೆಗೆ ಬಿತ್ತುಕಟ್ಟಂ ಬಿಟ್ಟ (ಎಕ. X. ಮುಳಬಾ. ೦೨೬-೦೬; 961). 'ಬಿತ್ತುವಟ್ಟ' ಪರಾ. [ಬಿತ್ತು₂ (<ಬಿಟ್ಟು) + ಕಟ್ಟು₂]

**ಬಿತ್ತುಗಟ್ಟಣೆ** (ನಾ). = ಬಿತ್ತುಕಟ್ಟು : ಆಸಂದಿಯ ಬಯ್ಯುಳದ ಬಿತ್ತುಗಟ್ಟಣೆಯ ಗ ೧ ವ ಕೊಟ (ಮೈಆ. ೦೯೩೭. ೩೦-೨೩ ; 1162) ; ಬಿತ್ತುವಾಟವೆಂದೂ. ಬಿತ್ತುಕಟ್ಟೆಂದೂ. ಬಿತ್ತುಗಟ್ಟಣೆಯೆಂದೂ ಕೆಲವೆಡೆಗಳಲ್ಲಿ ಕರೆದಿರುವರು (ಸಂಭಾನ. ೨೦೦). [ಬಿತ್ತು₂ (<ಬಿಟ್ಟು) + ಕಟ್ಟು₁ + –ಅಣೆ]

**ಬಿತ್ತುಪಾಟ** 'ಬಿತ್ತುವಟ್ಟ' ನೋ.

**ಬಿತ್ತುಬೀಜ** (ನಾ). ಬಿತ್ತುವ ಬೀಜ ; ಬೀಜವರಿ : ನಾಲ್ಕುಮೂಡೆ ಬಿತ್ತುಬೀಜದ ಗದೆಯನು × × ಕಾಣಿಕೆ ಕಡ್ಡಾಯ ಅಉುದೂಯಿಲ್ಲ (ಕಾಇಶಾ. IX-ii. ೪೨೩-೦೩; 1401). [ಬಿತ್ತು₁ + ಬೀಜ]

**ಬಿತ್ತುಬೀಟಿ್** (ನಾ). ಬೀಜವನ್ನು ಬಿತ್ತುವ ಭೂಮಿ : ಬಿತ್ತುಬೀಟ ಮೂಗೊಳ ಗಟ್ಟಿಯುಂ ಮೂಗೊಟ ಪಾಳಂ ಬಿಟ್ಟರ್ (ಎಕ. X, ಶಿಂತಾಮ. ೧೩೩-೩; ಸು. 1000). [ಬಿತ್ತು₁+ಬೀಟ್₂ (<ಬೀಡು₂)]

**ಬಿತ್ತುವಟ್ಟ,** ಬಿತ್ತವಟ್ಟ, ಬಿತ್ತುಪಾಟ, ಬಿತ್ತುವಾಟ (ನಾ). = ಬಿತ್ತುಕಟ್ಟು : ಪ "ಬಿತ್ತುವಟ್ಟವೆಂದರೆ ಕೆರೆಯ ಹಿಂದಿನ ತರೀ ಜಮೀನಿನಲ್ಲಿ ಬಿತ್ತು ಅಥವಾ ಬೀಜವರಿಯ ಮೇಲೆ ವಟ್ಟ ಎಂದರೆ ಪಾಲು ಎಂದರ್ಥ" (ಸಂಭಾನ. ೨೦೦) : ಮೂಡಣ ಕೆಱೆಯಂ ಕಟ್ಟಿಸಿ ಮೂಱು ಕೆಱೆಯ ಬಿತ್ತುವಟ್ಟವಂ ಪಡೆದಂ (ಎಕ. IX. ಹಂಗಳೂ. ೭೮-೬ : ಸು. ೫೨೦) ; ಉಱುವಮ್ಮಾಜಸವು ವರುಣಾಶಿವಭಟಾರರುವಿಟ್ಟು ಕೆಱೆಗೆ ಬಿತ್ತುವಟ್ಟ ಕೊಟ್ಟು (ಕಾಇಶಾ. IX-i. ೨೯-೩೯ ; ೧೩೦) ; ಊರೊಕ್ಕಲು ಒಬ್ಬೊಬ್ಬನೂ ಒಂದು ಕೊಳಗ ಬಿತ್ತುವರಿಗೆ ಒಂದು ಪಡಿ ನೆಲ್ಲನ್ನು ಬಿತ್ತುವಟ್ಟವಾಗಿ ಕೊಡಬೇಕೆಂಬ ಆಣತಿ ಕಳೆದ ವರುಷ ಶಾಸನವಾಯಿತು (ಸಪಶಾ. ೦೬೬) ; ಊರಿನ ಜನ ಸೇರಿ ಕೆರೆಗಾಗಿ ಒಂದು ಜಮೀನನ್ನು ಬಿಡುತ್ತಿದ್ದರು. ಬಹುಶಃ ಇದನ್ನೇ ಬಿತ್ತುವಾಟ ಅಥವಾ ಬಿತ್ತುವಟ್ಟ ಎಂದು ಶಾಸನಗಳಲ್ಲಿ ಕರೆದಿರುವುದು (ಕಶಾಂ. ೧೩೯). **ಬಿತ್ತವಟ್ಟ :** ಹೊಲದವರೆಯ ನೆಟ್ಟು ಸೊಡಗೆಯ ಸುಲಿವಲ್ಲಿ ತಳಲು ಬಲಿದು ಒಡೆದುದಿಲ್ಲ ಬಿತ್ತವಟ್ಟಕ್ಕೆ ಮೊದಲೆ ಕೊಳೆ ಹೋಯಿತ್ತು (ಸೋಮೇಶಶ. ೨೬೩-೬೦೭) ; ಬಿತ್ತಿದ ಬೆಳೆಯ ಪೃಥ್ವಿ ನುಂಗಿದಾಗ ಬಿತ್ತ[ಪಾಠಾಂ. ಬಿತ್ತಿದ]ವಟ್ಟ ಎಂತಪ್ಪುದೊ (ಗುತ್ಪವಚಂ. ೨೦೩-೭) : ಹೊತ್ತ ಕೋಗವ ಇಳೆಹುವರಿಲ್ಲ ಸದ್ದೆಗೆ ಮೂಱು ಕವೆ ಪೊಂದೆ ಬಿತ್ತವಟ್ಟ ಮೊರಕ್ಕ ಮೂಱು ಗೋಟು (ಕಲ್ಯಾಣಾಂ. ೦೦೨-೭). **ಬಿತ್ತುಪಾಟ :** ಪನ್ನಿರ್ಕಣ್ಣುಗ ಮಣ್ಣು ಬಡಗ ದಡಿಯ ಬಿತ್ತುಪಾಟವುಮಂ ಕೊಟ್ಟರ್ (ಎಕ. XII, ಶಿರಾ. ೯-೪೦ : 1072). **ಬಿತ್ತುವಾಟ :** ಚಿಕ್ಕಪ್ಪ ಕೆಱೆಯುನ್ ಕಟ್ಟಿಸಿ ನಾಲ್ಕಳವೆಯ ಭಾಗಂ ಬಿತ್ತುವಾಟಂ ಕೆಱೆಗೆ ಕುಡುವುದು (ಎಕ. XI. ಹಿರಿಯೂ. ೩೩-೭; ಸು. ೮೯೦); ಕೆಱೆಯ ಬಿತ್ತುವಾಟನುಂ ಕೆಱೆಗೆ ಕೊಡದುಣ್ಬವನುಪಾಪಸ್ತೆ (ಮೈಆ. ೧೯೩೬. ೭೭-೦೦ ; ೧೧೧೫) ; ದುರಸ್ತು ಮಾಡಿಸಲು ಬಿಟ್ಟುಕೊಡುತ್ತಿದ್ದ ಭೂಮಿಯನ್ನೇ 'ಬಿತ್ತುವಾಟ' ಎಂದು ಶಾಸನಗಳು ಕರೆದಿರುವುದು (ಕಶಾಂ. ೩೭೬). [ಬಿತ್ತು₂ (<ಬಿಟ್ಟು) + ಪಟ್ಟು₂]

**ಬಿತ್ತುವರಿ** (ನಾ). ಒಂದು ನಿರ್ದಿಷ್ಟ ಅಳತೆಯ ಜಮೀನಿಗೆ ಬಿತ್ತಲು ಬೇಕಾಗುವಷ್ಟು ಬೀಜದ ಪ್ರಮಾಣ : ಊರೊಕ್ಕಲು ಒಬ್ಬೊಬ್ಬನೂ ಒಂದು ಕೊಳಗದ ಬಿತ್ತುವರಿಗೆ ಒಂದು ಪಡಿ ನೆಲ್ಲನ್ನು ಬಿತ್ತುವಟ್ಟವಾಗಿ ಕೊಡಬೇಕೆಂಬ ಆಣತಿ ಕಳೆದ ವರುಷ ಶಾಸನವಾಯಿತು (ಸಪಶಾ. ೦೬೬). [ಪ 'ಇದು ಬೀಜವರಿ' ಎಂಬ ಶಬ್ದಸಾಮ್ಯದಿಂದ ಆದ ರೂಪ]

**ಬಿತ್ತುವಾಟ** 'ಬಿತ್ತುವಟ್ಟ' ನೋ.

**ಬಿತ್ತುಹ** (ನಾ). ಬಿತ್ತುವಿಕೆ : ನೆಲದಲ್ಲಿ ತಾವರೆಯಂ ಬಿತ್ತುವಮಂ . . . ಕುರುಡಂಗೆ ಕನ್ನಡಿಯಂ ತೊಱುಹುಮಂ (ಶಂಕಚಂ. ೧೩೬-೯). [ಬಿತ್ತು₁ + –ಹ₂(< –ಪ₂)]

**ಬಿತ್ತಿಗ,** ಬಿತ್ತಿಗ (ನಾ). ೧. ಪಂಡಿತ ; ಬಲ್ಲಿದ ; ವಿದ್ವಾಂಸ : "ಬಿತ್ತಿಗಂ–ಪ್ರೌಢಃ" (ಕಬಿಠ. ಶ. ೨) : ಬಿತ್ತವೇಱುದರೆ ಶರೀರರೋಧನಗೆಯ್ದನು ಬಿತ್ತಿಗರಿಳೆಯೊಳೆಹುತೆ ಒತ್ತಿದ ಮದವ ಪೆಂಗಳೊಳಾಡಿ ಕಳೆದು ರಾಜೋತ್ತಮನಿಪನಾತ್ಮನೊಳಗೆ (ಶಠಕ. ೦೦-೦೨೯) ; ಬಿತ್ತಿಗರೊಳ್ ಬಿಜ್ಜೆಯ ಸೌತರ್ದೆವುಗೆ ಕಲ್ಪರನಿತ್ತು ತಿಳಿವು ಪೊಣ್ಮುಗುವುವರೊಳ್(ಚಂಚಪುಂ. ೩-೨೯೬). ೨. ನಿಪುಣ ; ಚತುರ: ಕಂಗಱಯ ಮೊನೆಯಂಬುಗಳ್ ಕಣ್ಣಿಡಱಿಯಿಸಿದವು ಪೊಣರ್ವ ಬಿಲ್ಲ ಕದುಬಿತ್ತಿಗರಂ (ಶಂಕಶಂ. ೦೦-೬೩). **ಬಿತ್ತಿಗ :** ೨. ಮಾರ್ಮಲೆದು ಬಿಲ್ಲ ಬಿತ್ತಿಗರೊರ್ವೊರ್ವರಲಿಪ ಕಣೆಗಳರ್ಚಿ ಪೋದುವು ನೆಱಸಂ (ಶಂರಾಪಾ. ೦೩-೪೦) : ಶರಾಳಿಯಂ ಕಱವರಾಪಪದೊಳ್ ಕದು ಬಿಲ್ಲ ಬಿತ್ತಿಗರ್ (ಉದ್ಧರ. ೪-೭೬). [ಬಿತ್ತ₀ (ಪ ← ತಮಿ. ವಿತ್ತಕ = ವಿದ್ಯೆ) + –ಗ₂]

**ಬಿತ್ತಿಗವೆಣ್.** ಬಿತ್ತಿಗವೆಣ್. ಬಿತ್ತಿಗವೆಣ್ (ನಾ). ಪ್ರೌಢೆಯಾದ ಹೆಣ್ಣು ; ಜಾಣೆ ; ಚತುರೆ : "ಬಿತ್ತಿಗವೆಣ್ಣೆಂದು ಪ್ರೌಢೆ" (ಕಶಠಾ. ೬೨-೩೭೪) : "ಬಿತ್ತಿಗವೆಣ್ಣನೆ ಪ್ರೌಢಗೆ" (ಕಶಕಂ. ೦೬೩). **ಬಿತ್ತಿಗವೆಣ್ :** ಗಣಿಕೆ ಬಿತ್ತಿಗವೆಣ್ಣೊಳೊರ್ವಳತಿ ಸ್ನೇಹದಿಂದ್ಯೆತರುತ (ರುಕ್ಮಾಂಗ. ೩-೪೦). **ಬಿತ್ತಿಗವೆಣ್ :** "ಬಿತ್ತಿಗವೆಣ್ಣಿನಲ್ ಪ್ರೌಢ" (ಕಶ್ಯಕ. ೨೭) : "ಬಿತ್ತಿಗವೆಣ್ಣನಲ್ ಪ್ರೌಢೆಯುಂ" (ಕಶಠ. ೭೬). [ಬಿತ್ತಿಗ + ಪೆಣ್]

**ಬಿತ್ತೋಣ** (ನಾ). ಬಿತ್ತನೆ ಮಾಡುವಿಕೆ ; ಬಿತ್ತುವಿಕೆ : ಒಂದು ವರ್ಷ ಹದ ತಪ್ಪಿ ಬಿತ್ತೋಣವರಿಂದಾಗಲಿ ಅಥವಾ ಮಳೆಯು ಹೆಚ್ಚು ಕಡಿಮೆಯಾಗುವದರಿಂದಾಗಲಿ . . . ಒಂದು ವರ್ಷ ಬೆಳೆಯದೆ ಹೋದರೆ ಆ ಪದಾರ್ಥಗಳು ನಮ್ಮ ದೇಶದಲ್ಲಿ ಆಗುವುದಿಲ್ಲವೆಂದು ಬಿಟ್ಟು ಬಿಡಲಾಗದು (ಕೃಷಿಶ. ೩೦). [ಬಿತ್ತು₁ + – ಓಣ]

**ಬಿದಣ** (ನಾ). (?) : ವ್ಯಾಧಿಯೊಳು ನೊಂದು ನಡು ಬಗ್ಗಿ ಕಣ್ಣಾಳ ಮುಚ್ಚಿ ಹಾದಿಗಾಣದರು ಹಿರಿಯರೆಯಲ್ಲು ಹಿರಿಯಳೆಮ್ಮಕ್ಕ ಮಾಪದೇವಿಯೆಸುತಂ ಮೇದಿನಿಯೊಳೆಬಿದಣಗೊಂಡು ಕರಪುರಿ ಹೆಚ್ಚಿ (ಶ್ರಬೆಚ. ೬. ೭೬). [?]

**ಬಿದಾಗಿ** (ನಾ). ಬೀಳ್ಕೊಡುವಾಗ ಕೊಡುವ ಕಾಣಿಕೆ, ಸಂಭಾವನೆ : ಸಲ್ಲ ತಕ್ಕ 'ಬಿದಾಗಿ'ಯ ಆಸೆಯನ್ನು ತೊರೆದು ದಾರಿ ಸಿಕ್ಕತ್ತ ಕಾಲಿಗೆ ಬುದ್ಧಿ ಹೇಳಿದರು (ಗ್ರಾಮಾಯ. ೩೬). [← ಹಿಂ. ಬಿದಾಈ ; ಮರಾ. ಬಿದಾಗೀ, ಬಿದಾಈ]

**ಬಿದಾನಂದ,** ಬಿದಾನದ (ನಾ). ತಿಳಿವಳಿಕೆ ಪತ್ರ ; ನೋಟೀಸು : ಮೈಸೂರ ಬಿದಾನಂದ ಮದ್ದಗಿರಿ ಕಸಬೆ ಬೆಟ್ಟದ ಹಿಂದೆ ಸುತ್ತು ಅಡವಿ ಗಿಡಾ ಕಡದು ಸಾಗುವಳಿ ಮಾಡುವ ಬಗ್ಗೆ . . . ಸರಕಾರಕ್ಕೆ ಹಣಾ ಸಂದಾಯ ಮಾಡುತ್ತಾ (ಮೈಆ. ೦೯೨೯. ೯೪-೯ ; 1813). **ಬಿದಾನದ :**

ನಗರ ಸರಕಾರ ದಾರೂಲರಿಯಾಸತ ಪ್ಯೆಯಿಶೂರು ಬದಾನದದ್ದರಿವಿಲ್ಲ ತಾಲೋಕ ಮಜಕೂರ ಪೈಕಿ (ಪ್ಮೆಅಂ. ೦೪೩೪. ೩೨-೩ ; 1812).

[← ಪಾರ. ಬದಾನಂದ್; ಮರಾ. ಬದಾನಂದ್, ಬದಾನದ್]

**ಬದಾನದ** 'ಬದಾನಂದ' ನೋ.

**ಬದಿ** (ನಾ). ೧. ಸೃಷ್ಟಿಕರ್ತ ; ಬ್ರಹ್ಮ: "ಅಂಚೆದೇರಂ, ನುಡಿವೆಣ್ಣನಿಯಂ. ಪೊಂಬಸಿಱಂ. ಬದಿ . . . ತಾವರೆವಸೆಯಂ— ಈ ೭ ಬ್ರಹ್ಮಂಗೆ ಪೆಸರ್" (ಕಕಾ. ೯೮-೦೫) ; ಸೌಂದರಿಯರ ಗಾಡಿಗಳೊಳಗೊಂದೊಂದನೆ ನೆಱಪಿ ಮಾಡಿದಂ ಬದಿ (ಅಂಕೃ. ೨-೩೬) ; ಪುಟ್ಟಿಸಿದನದೇಕಯೊ ಬದಿ (ಪುಶೃಪು. ೦-೩೧) ; ತಾರಕನುಪಟಳವನು ಬದಿಯೊಳು ಸುರರು ಬಿನ್ನೈಸೆ (ಪೋಹಕ. ೩-೩). ೨. ಅದೃಷ್ಟ ; ಹಣೆಬರಹ : ಕಿರಾತಂ ಬೇಸತ್ತು . . . ಬದಿಯಂ ಬಯ್ದು ತನ್ನ ಮನೆಗೆ ಮಗುಳ್ದಂ (ಶಂಕಶಂ. ೨೯೦-೦೬) ; ಇದು ಬದಿಯ ಕುಶಲತೆಯ . . . ಬೆಳ್ಳಸವನುರುಳಿಸುವ ಕಾಲನೆಂಬುವ ವಿಲಯರುದ್ರು ನೊಲಿದಲೆಯುಹಿಹ ಕಟ್ಟುನಿಯ ಸುಡುಗಾಡು ! (ಕರಕಾ. ೨೯-೮).

**ಬದಿಯ ತೇರು**=ಬ್ರಹ್ಮನ ವಾಹನ; ಹಂಸ: "ಬದಿಯ ತೇರುಮಂಚಿಯೆಂದು ಹಂಸಾಖ್ಯಮದಕ್ಕುಂ" (ಅಪ್ಮಕ್ಕ. ೯). [<ಸಂ. ವಿಧಿ]

**ಬದಿಗ** (ನಾ). ೧. ಅದೃಷ್ಟಶಾಲಿ : ಗ ಪ್ರತ್ಯಯಕ್ಕೆ . . . ಬದಿಗಂ, ಸಟೆಗಂ (ಕಮದ. ೨೦೦ ವೃಯೋ). ೨. ಒಬ್ಬಾತನ ಹೆಸರು : ಶ್ರೀಮತ್ ರೂವಾರಿ ಬದಿಗಯಾ ಕಮ್ಮಟದ ಸೂಳೇರಿದ ಮುಟ್ಟಿದರ ಮೆಯಿ ಜಾಯಿಲೆ ಪೆಱಗಗಿನ್ (ಎಕ. II, ೩೦೬; ಸು. 950). [ಬದಿ +—ಗ$_2$]

**ಬದಿಗೆ**, **ಬದಿಯೆ** (ನಾ). ಪಕ್ಷದ ಎರಡನೆಯ ದಿನ ; ದ್ವಿತೀಯೆ : "ಬದಿಗೆಯೆನಲ್ಕೆ ದ್ವಿತೀಯಾಖ್ಯೆ" (ಕಕರ. ೬೯); ಗರ್ಭಾವತರಣಾ ಆಷಾಢ ಬಹುಲಬದಿಗೆಯುತ್ತರಾಷಾಢಾನಕ್ಷತ್ರದ ಬೆಳಗಪ್ಪ ಜಾವದೊಳ್ (ಅಂಕೃ. ೬-೩೨ ವ) ; ಶುಕ್ಲಪಕ್ಷದೊಳ್ ಬದಿಗೆಯೊಳಾದಿವಾಸರದೊಳ್ . . . ವೃಶ್ಚಿಕಲಗ್ನದೊಳರ್ಕಜಾಂಶಮಾದುದು ಕವಿರತ್ನನಂದನನ ರಾಯನ ಜಾತಕಮುತ್ತರೋತ್ತರಂ (ಅಅಕೃ. ೦೨-೩೩). **ಬದಿಯೆ** : ಭಾದ್ರಪದ ಬಹುಳ ಬದಿಯ (ಎಇ.VI, ೨೩೯-೬ ; 975) ; ಜೇಷ್ಟ ಸುದ್ದ ಬದಿಯೆ (ಕಇ. II. ೬-೨೨ ; 1030).

**ಬದಿಗೆಚಂದ್ರ**, **ಬದಿಗೆಯ ಚಂದ್ರ** = ವೃದ್ಧಿಯಾಗುತ್ತಿರುವ ಚಂದ್ರ; ಶುಕ್ಲಪಕ್ಷದ ಚಂದ್ರ : ಬದಿಗೆಚಂದ್ರ ಬಂದ ನೋಡು ದೀಪ ಹಚ್ಚಿದಂತೆ ಜೋಡು (ಅಕಉ. ೨೬೯-೦); ಆತನುಂ ಬದಿಗೆಯ ಚಂದ್ರನಂತೆ ಕ್ರಮಕ್ರಮದಿಂ ಸುಖದಿಂ ಬೆಳೆದು (ವಕ್ಕಾರಾ. ೭೩-೦೯) ; ಬದಿಗೆಯ ಚಂದ್ರ [ಶಾಕಂ. ದ್ರುಮ]ನಂತಭಿವೃದ್ಧಿಯನೆಯ್ದಿ ಶೈಶವಂ ಪತ್ತುವಿಡಲ್ (ಪುಕ್ಕಾಸ್ರ. ೬-೨೧ ವ). [< ಪ್ರಾ. ಬೀಆ, ಬದಿಯ. /ಸಂ. ದ್ವಿತೀಯಾ]

**ಬದಿಗೆದಿಂಗಳ್** (ನಾ). ವೃದ್ಧಿಯಾಗುತ್ತಿರುವ ಚಂದ್ರ ; ಶುಕ್ಲಪಕ್ಷದ ಚಂದ್ರ : ಸಭಾಕ್ಕರವಕುತೂಹಲಕೆ ಬದಿಗೆದಿಂಗಳ್ ನಗೆಯ ಜೊನ್ನಮಂ ಸಿಂಚಿಸುತ, ಮಿಡಿಯತೊಡಗಿದನಿಂತು ತನ್ನುಸಿರ್ತೇನೆಯಂ (ಶ್ರೀರಾಮ. ೩೬೪-೩೨೩). [ಬದಿಗೆ + ತಿಂಗಳ್]

**ಬದಿಗೆವೆಱ್** (ನಾ). = ಬದಿಗೆದಿಂಗಳ್ : ಬದಿಗೆವೆಱೆಯ ಬಿಂಕಂಗಿಡಿ ಪಧರಂ . . . ಒಪ್ಪಿದುವಾ ಸತಿಗೆ (ಜಡುಕಾ. ೨-೮) ; ಬದಿಗೆವೆಱೆಯಂ ನಾಣ್ಚಿಸುವ ಕೋರೆದಾಡೆಗಳ್ (ರಾಕಕ. ೦೪-೮). [ಬದಿಗೆ + ಪೆಱ್]

**ಬದಿವಾಳ್ಕೆ** (ನಾ). ವಿಧಿಯ ಕೆಲಸ; ಅದೃಷ್ಟದ ಕೈವಾಡ : ಬದಿವಾಳ್ಕೆಯೊಳ್ಪಿತಕ್ಕುಂ (ಶ್ರೀರಾಮ. ೪೩೦-೨೪೩).

[ಬದಿ + ಮಾಳ್ಕೆ (< ಮಾಟ್ಕೆ)]

**ಬದಿಯಣ್ಣ** (ನಾ). ಒಬ್ಬಾತನ ಹೆಸರು : ಕೊನಗೌಡ ಬದಿಯಣ್ಣ . . . ಏಳುತ್ತ ಒಡೆ (ಎಕ. VIII. ಸೊರಬ. ೪೩೬-೩; 972). [ಬದಿ + ಅಣ್ಣ$_1$]

**ಬದಿಯಮ್ಮ** (ನಾ). ಒಬ್ಬಾತನ ಹೆಸರು : ಮಗಂ ಬದಿಯಮ್ಮಂ ಕುಪ್ಪಳೂರ ಮಹಾಜನಕ್ಕೆ ಗೋಸಹಸ್ರಕೆ ಪೊನ್ನ ಕೊಟ್ಟು (ಎಕ. VIII. ಸೊರಬ. ೨೪೮-೧ ; ಸು. 950 ?). [ಬದಿ + ಅಮ್ಮ$_1$]

**ಬದಿಯಾಯ್ತ** 'ಬಿಜಯಿತ್ತ' ನೋ.

**ಬದಿಯೆ** 'ಬದಿಗೆ' ನೋ.

**ಬದಿರ್**$_1$, **ಬದಿರು**$_1$, **ಬದುರ್**, **ಬದುರು** (ಕ್ರಿ). ೧. ಕೆದರು ; ಚೆದರು; ಹರಡು : "ಬದಿರ್–ವಿಕೀರ್ಣೇ (ಚೆದರು–ಹರಡು), ವೇಣೌ ಚ" (ಕಮರ); ದರಿಗಳಂ ಕೋಡೊಳ್ ಕುತ್ತಿಯೆತ್ತಿ ಬದಿರ್ದೀಡಾಡುತಿರ್ದು (ಶಂಕಶಂ. ೪೬-೦) ; ಬದಿರ್ದೀಡಾಡಿ ಕೆಲಂಬರಂ ಕಲಬರಂ ಸಿಟ್ಟಲ್ಕು ನುರ್ಗಾಗೆ ಕಾಯ್ದೊದೆದು . . . ಕೊಂದಂ ಮರುನ್ನಂದನಂ (ಶಂರಾಶಶಾ. ೦೦-೦೯೩). ೨. ಕೊಡಹು ; ಒದರು ; ರಭಾಡಿಸು : ಕಯ್ಯುಂ ಬಾಯುಂ ಬೆಂದೊಡೆ ಮೆಯ್ಯನದಿರ್ದು ಕೈಯಂ ಬದಿರ್ದವನಂ ಕಂಡು ನಕ್ಕಿಂತೆಂದಳ್ (ವಡ್ಡಾರಾ. ೦೬೮-೨೦) ; ಭೀಮಸೇನಂ ತನ್ನ ತಲೆಯೊಳಂ ಮೆಯ್ಯೊಳಂ ಕರಗಿ ಸುರಿವರಗಿನುರಿಯ ಬಂಬಲ್ಗಳಂ ಪೊಸೆದು ಬದಿರ್ದು ಕಳೆದು (ಶಂಪಶಾ. ೩-೬ ವ) ; ಶುನಕಂ ಕಡಂಗಿ ವಕ್ರಿಸೆ . . . ಕರ್ಣಮಂ ಬದಿರೆ ತಾನೆ ಪರಾಜಯಮಕ್ಕುಮಾಜಿಯೊಳ್ (ಲೋಕೋಪಕ. ೦೨-೨೦). ೩. ಅದಿರು ; ನಡುಗು ; ಕಂಪಿಸು : ಬದಿರ್ದವರಿನರರ ಹೃದಯಂ (ಎಕ. VII, ಶಿಕಮೊ. ೩೬-೨೮ ; 1125). ೪. ಚೆಲ್ಲು ; ತುಳುಕು : ಅರೆಗೊಡ ತುಳುಕುವುದಲ್ಲದೆ ತುಂಬಿದ ಸಿರಿಗೊಡ ಬದಿರ್ವುದೆ (ಧರಚ. ೬೦-೬೬). ೫. ಎಸೆ ; ಎರಚು: ಹದನಱಿದೆಸರಿಟ್ಟೊಯ್ಯನೆ ಮೃದುವಹ್ನಿಯನೆಸಗಿ ಪದೆದೆಸರ್ ಕಾಯಲ್ ನಿಲ್ಲದೆಯಕ್ಕಿಯೆರಡನೊಲೆಯೊಳ್ ಬದಿರ್ದೆಸರೊಳ್ ಪೊಯ್ದೊಳಕ್ಕಿಯಂ ಸತಿಯಾಗಳ್ (ರಕಸು. ೦೨-೦೨೦). ೬. ಒಗೆ ; ಬಿಸಾಡು : ಮಚ್ಚರಂ ದೋರ್ಪ್ವ ಸಾಮಂತರನಾಟಂದೊತ್ತಿಗೆ ಗೋಣಾ ನುಲಿದು ಬದಿರ್ವ ಮಾಕಾಳಿ ಸಾವನ್ತಕೇತಂ (ಎಕ. VI. ತಂ೯೪. ೪೨-೩೩; 1206). ೭. ನುಡಿಸು; ಮಿಡಿ ; ಮಿಟಾಟು : ವೀಣೆಯಂ ಬದಿರ್ದು ಮೃದುಸ್ವನ ನೆಗಟ$^3$ (ಕಾವ್ಯಸಾ. ಖಿಲ. ೨೩೬). ೮. ಇಲ್ಲವಾಗು ; ನಾಶವಾಗು : ಬದಿರ್ದುದು ಬಿಂಕಂ ಬೀತುದು ಪರಿ ಪೈಸರವೋದುದು ಪೆಂಪು (ಜಿರುಕಾ. ೩-೩೨). **ಬದಿರು**$_1$ : ೧. ಬದಿರಿದುವು ಮಕುಟ ತಾಗಿ ತಾರಕೆಗಳು . . . ನಮ್ಮ ಕೂಡಲಸಂಗಮದೇವನಿಂದು ನಾಟ್ಯವನಾಡೆ (ಬಸವ. ೩೯೦); ತಪ್ಪದೆ ಜಲಚರನಿಕರ ಬದಿರೆ ಮೇಲಕುಪ್ಪರಿಸುವ ಜಲಬಿಂದು ಚಿಪ್ಪಿಂದ ಲೊಡೆದು ಸಿಡಿವ ಮುತ್ತುಗಳೆನಲೊಪ್ಪಿದುದರಿರಮ್ಮವಾಗಿ (ಕಂಸಂ. ೩-೯೩). ೨. ಕುದುರೆ ಕಂಬನಿಯಿಕ್ಕಿದವು ಮೈ ಬದಿರಿದವು ದಂತಿಗಳು (ಕುವ್ಯಾಪ. ೦೦-೦೬); ಕಾಲ ಹುಡಿಯನು ಬದಿರಿ ಬಿಸುಡುವವೋಲು ಸಕಲವನೊದೆದು ನಡೆದನು (ಜಭಾಗ. ೪೦೦-೦೨). ೩. ಬಟ್ಟಕಂತುಕದಿಂದೆ ಬಲ್ಮೊಲೆ ಬದಿರು ವಂತಿಟ್ಟಾಡಿದುದು ಸುಖನಿವಹ (ಸೋಹಕ. ೦೪-೬೬). ೯. (ಅಲಂ) ವಿನಯದಿಂದಿರು ; ನಮ್ರವಾಗಿರು : ಬದಿರಲಂದಣವಕ್ಕು ಬದಿರೆ ಸತ್ತಿಗೆಯಕ್ಕು ಬದಿರಲ್ಲಿ ಗುಡಿಯು ಗೂಡಾರವಕ್ಕು ಬದಿರಲ್ಲಿ ಸಕಲ ಸಂಪದವೆಲ್ಲವು ಬದಿರದವರ ಮೆಚ್ಚ. ನಮ್ಮ ಕೂಡಲಸಂಗಮದೇವ (ಬಸವ. ೨೨೦): ಬದಿರೆ ಅಂದಣವಕ್ಕು ಬದಿರೆ ಸತ್ತಿಗೆಯಕ್ಕು ಬದಿರಿಂದ ಸಕಲ ಪದವಕ್ಕು ಲೋಕದೊಳು ಬದಿರದವ ಕೆಟ್ಟ (ಸರ್ವಜ್ಞ. ೬೬೯). **ಬದುರ್** : ೧೦. ಕಟ್ಟನ್ನು ಬಿಚ್ಚು ; ಕಟ್ಟನ್ನು ಸಡಿಲಿಸು : "ಬದುರ್ – ಅಶ್ಲಥೀ ಲಾಯಾಂ" (ಶಮಧಾ). ೧೧. ಕೀಳು ; ಉತ್ಪಾಟಿಸು : ಕೆಲರಂ ಕಿತ್ತಿರ್ಕಿ ಬೇರಂ ಬಿದುದ್ದುರ್ ಕೆಲರನತ್ಯುಗ್ರಸಂಗ್ರಾಮದೊಳು ಬಾಳ್ದಲೆಗೊಂಡು (ಎಕ. II. ೦೪೨-೨೦; 1123). **ಬದುರು** : ೨. ಶಿರವ ಬದುರಿ ಮಹಾ ದುರಾಗ್ರಹಬುದ್ಧಿಯಲಿ ಬಂದನು ನಿಜಾಲಯಕೆ (ಕಂಭಶ. ೭೩-೨೦); ಕಾಗೆ . . . ಪಕ್ಕವ ಬದುರೆ ನೀರ್ವನಿಯು ಲಿಂಗಶಿರಭಾಗದೊಳು ಬೀಳಲು (ಗುರುಚಾ. ೩-೬೦); ಮರುತಸುತ ಕ್ರೋಧದಿಂದೌಡೊತ್ತುತ ಬದುರುತಂ

ಬಾಲವಮಂ ಭೂತಳಕೆ ಧುಮ್ಮಿಕ್ಕಿ ಸದೆದು ಗಜರಥತುರಗಕಾಲಾಳು ಗಳನೆಲ್ಲನೊದೆದೆಮನ ಸದನಕಂ ಕಳುಪುತಿರ್ದನು (ವಂಶಾಂ. ೩-೧೭-೧೩). ೩. ಸುರಗಿರಿ ವಜ್ರಹತಿಯಲಿ ಬಿದುರಿ ಬೀಳುವವೊಲು (ಸಭಾಗ. ೧೦-೩೬-೩೦): ದಿಕ್ಕರಿ ಕಮಠರೆದೆ ಬಿದುರೆ ಮುರಸೂಧರನ ಪಾರ್ಥನ ವಳದ ಚೂಣಿಯು ಸಮರ ರಂಜಿಸಿತು (ಲೋಗಡು. ೨೦ ಸ.೩೩೪). ೫. ಅಕ್ಷತೆ ಫಲಗಳ ಬಿದುರಿದ ರವರು ನಲ್ಮೆಯೊಳು (ಜ್ಞಾಸಕ. ೩೬-೯೯). ೧೨. ಬಿಡು; ತ್ಯಜಿಸು: ಕಡಿವಡೆದು ರಥಿಕರು ಬಿದುರಿದರು ಜೀವವನು (ಸಭಾಗ. ೧೦-೩೬-೧೯).

[ದೇ.॥ ತಮಿ. ವಿಶಿರ್; ಮಲ. ವಿತರು; ತುಳು. ಬಿದುರ್, ಬಿದುರು]

**ಬದಿರ್₂**, **ಬದಿರು₂** (ನಾ). ೧. ಉಷ್ಣ ಹಾಗೂ ಉಪೋಷ್ಣವಲಯ ಗಳಲ್ಲಿ ಸ್ವಾಭಾವಿಕವಾಗಿ ಮರದ ರೀತಿಯಲ್ಲಿ ಬೆಳೆಯುವ ಹುಲ್ಲು ಜಾತಿಯ ಸಸ್ಯ ; ವಂಶವೆಂಬ ಸಸ್ಯ: "ತ್ವಚಿಸಾರಃ, ಚಪಃ, ವಂಶಃ, ವೇಣುಃ, ತ್ವಕ್ಸಾರಃ, ಮಸ್ಕರಃ – ಈ ೬ ಬಿದಿರ್" (ಶಬ್ದಾಮು. ೩೯-೩೦); ಬಿದಿರ ಸಿಡಿಂಬಿನ ಪೊದಟ್ಟೊಳಗೆ ಮಱೆದೊಱಗಿದ ಮೃಗರಾಜನಂತೆ (ಪಂಪಭಾ. ೧೦-೩೦ ವ). ೨. ಗಳು; ಗಳೆ : ಮಿಳಿಯ ಬಿದಿರ ಮೇಗೆಱೆಯಾಕಾಶ ದೊಳಾಡುವ ವಿದ್ಯಾಧರ ಲಂಗಿಗರ ಮನೆಯೊಳ್ ಪೆಣ್ಣಾತ್ತಿಯಾಗಿ ಪುಟ್ಟಿ (ವಡ್ಡಾರಾ. ೬-೨೬). **ಬದಿರು₂**: ೧. "ವಂಶಃ, ತ್ವಕ್ಸಾರಃ . . . ವೇಣುಃ, ಮಸ್ಕರಃ, ತೇಜಸಃ – ಈ ೯ ಬದಿರು" (ಹಲಾಯು. ೧೦೨); ಬೆತ್ತ ಬಿದಿರಿಡ ದಡಸಿ ಬೆಳೆದ ಮೆಳೆಗಳ ನಡುವೆ . . . ನಿಂದೆಯೊ (ಸಿದ್ಧರಾ. ೨-೬೦); ಕಬ್ಬಿಗರ್ಗೊದುಗಬ್ಬವ ಹಾಡುಗಬ್ಬವ ಕಬ್ಬದೊಳೊರೆವರಿವೆರಡು ಕಬ್ಬನಂತಿರ ಬೇಕು ಬದಿರಂತೆ ರಚಿಸಲೇಕಬ್ಬ ಹೇಳೆಲೆ ಸರಸ್ವತಿಯ (ಶರಶ. ೦-೬); ಬದಿರಡವಿರುಜಂಗಲ್ ಮುಸುಕಿದ ಆ ದಿವ್ಯಚೂಡನದ್ರುಮಗಳೆನೆ . . . ನಿಮ್ಮ ಶ್ರೀಪಾದಭಕ್ತರ್ ದುರಿತಮುಕ್ತರಿಪ್ಪರ್ (ಚೆಂಪು. ೩-೦೩).

ಬದಿರ ಲಳಿಗೆ=ಬಿದಿರಿನ ಅಂಡೆ : ಬದಿರ ಲಳಿಗೆಯುಲಗ್ಗ್ಯಪಣಯ ತಂದು . . . ಲಿಂಗವ ಸಿಂಗಾರವ ಮಾಡಿ ನೋಡುವದೆಂದು ದೊರೆಕೊಂಬುವುದೋ ಎನಗೆ (ಸಳಚ. II. ೬೦೬–೭೯೯).

[ದೇ.॥ ತಮಿ. ವೆತಿರ್, ವೆತಿರಿ, ವಯಿರ್; ತುಳು. ಬೆದ್ರ್; ತೆಲು. ವೆದುರು; ಕೋಲಾ. ವೆದುರ್; ಪರ್ಜಿ. ವೆದ್ರ; ಗಡಬ. ವೆದಿರ್, ವೆದ್ರ; ಗೊಂಡಿ. ವೆದುರಿ, ವೆದೂರ್; ಕೊಂಡ. ದೇರ್; ಕುವಿ. ದೇರು]

**ಬದಿರಕ್ಕಿ** (ನಾ). ಬಿದಿರಿನ ಸಸ್ಯದಲ್ಲಿ ಉತ್ಪತ್ತಿಯಾಗುವ ಕಾಳು,– ಬೀಜ : ಶೀತಳಶಶಿಕಾಂತದಿಂ ಸಮೆದೊರಲ್ಗಳೊಳಂ ಬದಿರಕ್ಕಿಯುಕ್ಕಿ (೧೮ಳ. ೦-೦೨೩) ; ಬದಿರಕ್ಕಿಯೋಗರವೊಲಿದೊಡುಡುವಿನ ತುಪ್ಪವುಂಟಲ್ಲಿ (ಬಸಪು. ೦೬–೧೬); ಬಿದಿರಕ್ಕಿಯಿನಿಜೇನುತುಪ್ಪ ಕರ್ಜೂರ ದ್ರಾಕ್ಷೆ ಬದರಿ ಮುಂತಾದ ಸತ್ಫಲವ . . . ತಂದು ಇದಿರಿಕ್ಕಿದರು ಮೇಲ್ಮೇಲೆ (ಪೋಹಚ. ೦೯-೬೩); ಬಿದಿರಕ್ಕಿ ದೇಹಕ್ಕೆ ಉಷ್ಣ ಎಂದು ಹಿಂದಣ ಕಾಲದವರು ಉಪಯೋಗಿಸಲು ಅಂಜಿರಲಾರರು (ಸ್ವಸ್ಥಪೊ. ೨೪೦). [ಬದಿರ್₂+ಅಕ್ಕಿ₁]

**ಬದಿರಿಸು** (ಕ್ರಿ). ೧. ಕೊಡಹು ; ಝಾಡಿಸು : ಕೂಸರ್ವಡಿದ ಕೋ ಎನುತಲೊಂದೆ ತಿರುಪಿನೊಳು ಬದಿ [ಪಾಠಾಂ. ದು]ರಿಸಿ ಬಿಟ್ಟು ನಿಂದು ನಿರುಪಾಧಿಕಜ್ಯೋತಿಯಂತೆಸದಧಿಕ ಪದವಡೆದು (ಲಿಖಿಸಂ. ೩೬-೨) : ಕಲಹಕ್ಕಿ ಕಾಲ್ಮೆದರಿ ಗರಿಯ ಪಸರಿಸಿ ತಮ್ಮ ತಲೆಯ ಬದಿರಿಸಿ . . . ಕಲಹಂಸ ಕಂಗೆಸೆದಿರ್ದವು (ವಿವಪೊ. ೯-೩೨). ೨. ಉದುರಿಸು ; ಎರಚು : ಭಸಿತ ವನು ತೆಗೆದು ಕಂಗೊಳಿಸುತವನಿಯೊಳು ಬದಿರಿಸಲ್ (ಸಿದ್ಧೇಶು. ೬-೨೬).

[ಬದಿರ್₁ + –ಇಸು₃]

**ಬದಿರು₁** 'ಬದಿರ್₁' ನೋ.

**ಬದಿರು₂** 'ಬದಿರ್₂' ನೋ.

**ಬದಿರುಪ್ಪು** (ನಾ). ಬಿದಿರಿನ ಪೊಳ್ಳುಬೊಂಬಿನೊಳಗೆ ಸಂಗ್ರಹ ವಾಗುವ ಒಂದು ಬಗೆಯ ಹರಳು ; P "ಹರಳಿನ ರೀತಿಯ ಬದಿರುಪ್ಪು (ಟ್ಯಾಬಷಿಯರ್) ಔಷಧಿಯಾಗಿಯೂ ರಾಸಾಯನಿಕ ಕ್ರಿಯೆಗಳಲ್ಲಿ ವೇಗವರ್ಧಕವಾಗಿಯೂ ಬಳಕೆಯಾಗುತ್ತದೆ" (ಕವಿಕೋ. XII. ೦೨೦) : "ವಂಶಜಾ – ಬದಿರುಪ್ಪು" (ಬಿಷ. ೧೨೬).

[ಬದಿರು₂ (<ಬದಿರ್₂) + ಉಪ್ಪು₁]

**ಬದಿರುಮೆಳೆ** (ನಾ). ದಟ್ಟವಾಗಿ ಬೆಳೆದ ಬಿದಿರಿನ ಪೊದೆ.– ಪೊದರು : ಬದಿರುಮೆಳೆ ಧಗಧಗಿಸೆ ಘನಹಬ್ಬಿದಿರು ಛಟಿಛಟಿರೆನಲು (ವಳಚ. ೬-೬); ದಟ್ಟಯಿಸಿ ಬೆಳೆದಿರ್ದ ಬದಿರುಮೆಳೆ ಪವನಸಂಘರ್ಷಣೆಗೆ ಛೀಂಕರಿಸಲಿಳ ವೇತಪೋಲ್ ಪಿಕಟರವಗೈದು ಕಂಪಿಸಿತು ಕಾಂತಾರವಮಾ ಕೀಚಕಧ್ವನಿಗೆ ! (ಕಶ್ಯಾಂಗ. ೩೦-೦೪೧೦). [ಬದಿರು₂ (<ಬದಿರ್₂) + ಮೆಳೆ₁]

**ಬದಿರುಲಳಿಗೆ** (ನಾ). ಬಿದಿರಿನ ಅಂಡೆ : ಬೊಂಬಿನಿಂದ ಮಾಡಿದ ಪಾತ್ರೆ : ಜೇನುತುಪ್ಪದ ಗಡಿಗೆಗಳನ್ನು ಬದಿರುಲಳಿಗೆಗಳಲ್ಲಿ ತುಂಬಿದ್ದ ಮುತ್ತಿನ ಪುಣೆಗಳನ್ನು ತಂದು (ಶಿಶರ. ೯೯-೩).

[ಬದಿರು₂ (<ಬದಿರ್₂) + ಲಳಿಗೆ (<ನಳಿಗೆ)]

**ಬದಿರುವಳ್ಳಿ** 'ಬದಿರ್ವಳ್ಳಿ' ನೋ.

**ಬದಿರೂರ್** (ನಾ). ಒಂದು ಊರಿನ ಹೆಸರು ; P ಶಿವಮೊಗ್ಗ ಜಿಲ್ಲೆಯ ಈಗಿನ ಬಿದನೂರು : ಪೆರ್ಬಟ್ಟಕ್ಕಂ ಬದಿರೂರ ಅಗ್ಗಳ ಮಿಳಿವಲ್ಲಿ (ಎಕ. X, ಶ್ರೀನಿವಾ. ೨೬-೨೨ ; ಸು. 870) ; ಬದಿರೂರಲು ಬೂತುಗನಂ ಪೊನ್ನಿಗಂ ಕಾದಿ ಸತ್ತು ಸ್ವರ್ಗ್ಗದಲಿಟ್ಟ (ಎಕ. XII, ತುರ್ವಗಿ. ೭೨-೦೬ ; ಸು. 950) ; ಬದಿರೂರಂ ಬೆದೆಗೆಡಿಸಿ . . . ಇರ್ಕೇರಿಯ ನೊಕ್ಕಲಿಕ್ಕಿ (ಕಕಶ. ೩-೨೬). [ಬದಿರ್₂ + ಊರ್]

**ಬದಿರೆಲೆ** (ನಾ). ೧. ವಂಶವೆಂಬ ಸಸ್ಯದ ಎಲೆ ; ಬಿದಿರಿನ ಗರಿ : ಬದಿರೆಲೆಯೊಳ್ ರಸಮುನಱಸುವ ಕಳ್ಳಿಯ ಪಾಲೊಳ್ ಬೆಣ್ಣೆಯನಱಸುವ (ಧರ್ಮಾಮೃ. ೦೨-೨೪) ; ಬದಿರೆಲೆಯ ಮೆಲಿದರೆ ಮೆಲಿದಂತಲ್ಲದೆ ರಸವನು ಹಡೆಯಲು ಬಾರದು (ಬಸವ. ೩೩೪). ೨. ಬಿದಿರಿನ ಗರಿಯ ಆಕಾರದ ಬಾಣ : ಹಿಳಿಕು ಕವಲಂಬು ಬೋಳೆವಿದಿರೆಲೆ . . . ಸವಿಪಾಯನೆಂಬ ನಾನಾ ಸರಳನು ಸೆಳೆದು (ಸೋಮಪಚ. ೩-೨೬) : ದೊರೆವಡೆದ ಕಣಗಿಲ ಪುಳುಂಬವು ಶರದಿ ಬಿ[ಪಾಠಾಂ. ವಿ]ದಿರೆಲೆ ಶರಧಿಯಂ ತಳ್ತಿರಿಸಿದಾ ಬತ್ತಳಿಕೆಗಳು ನೆರೆದಿರ್ದುವವರಲ್ಲಿ (ಸಾಳ್ವಭಾ. ೩-೦೯). [ಬದಿರ್₂ + ಎಲೆ₁]

**ಬದಿರ್ಕಲ್** (ನಾ). ಒಂದು ಊರಿನ ಹೆಸರು : ಕರಿಕನಾಡ ಬದಿರ್ಕಲ್ಲಾಳ್ದ ಕುಕ್ಕರ ಪಾಳಿಕ್ಕಾಱನಾಡಿಯರ್ ತುರಿದು (ಎಕ. IX, ಚಂಗಳೂ. ೩೬-೩ ; ಸು. 750). [ಬದಿರ್₂ + ಕಲ್₃]

**ಬದಿರ್ಕೆ** (ನಾ). ಎರಚುವಿಕೆ : ಅದಿರ್ಕೆ, ಬದಿರ್ಕೆ, ಪೊಣರ್ಕೆ (ಶಬ್ದಾನು. ೩೩೬ ಪ್ರಯೋ). [ಬದಿರ್₁ + –ಕೆ]

**ಬದಿರ್ಚು** (ಕ್ರಿ). ೧. ಹರಡು ; ಕೆದರು : ಎರಲಲೆಪಿಂದಿಪಟ್ಟಿಸುವ ನೆಯ್ದಿಲಂ . . . ಬದಿರ್ಚಿ ದಳಂಗಳಂ ತೆಱಂದಿರಿದುದು ಚಕ್ರವಕ್ಕಿ (ಅಪಂಪು. ೬-೬೦); ನುಡಿಯಾಗರವಂ ಬದಿರ್ಚಿದೈ! (೧೯೦೦. ೩೦-೩). ೨. ಕೊಡಹು; ಝಾಡಿಸು : ಎಱಂಕೆಗಳಂ ಬದಿರ್ಚಿಕೊಂಡು ತಾಮ್ರತುಂಡಂ ಕಣ್ದೆಱೆದು . . . ಅಗ್ರಭಾಗದೊಳ್ಮನಂಗೊಳಿಪವನಿವಸನಾಲೋಕನಂಗೆಯ್ದು (ಕಾದ್ಮಟಿ. ೩-೨ ವ) ; ಎಱಕೆಗಳೊಳ್ ಪೊದಟ್ಟ ಪನಿಪುಲ್ಲ ಪಯಃಕಣಮಂ ಬದಿರ್ಚಿ (ಕಾಂತೀಶ್ವ. ೦೦-೯೬) ; ತುಂತುಱನುದಿರ್ಚಿತು ಸಾರಸಂ ಸಲಿಲದೊಳ್ನನೆದ ಪಕ್ಕಂಗಳಂ ಬದಿರ್ಚಿ (ಕ್ಯಖಿಕಾ. ೨೬-೩೬). ೩. ಬಿಚ್ಚು; ಕಳಚು : "ಬದಿರ್ಚು–ರಥವಿಮೋಚನೇ, (ಬಂಡಿಯಿಂದ ಕುದುರೆ ಮೊದಲಾದುವನ್ನು ಬಿಚ್ಚು, ಹರಡು)" (ಕಮಿರಾ) ; ಮೋಹಪಾಶದ ತೊಡರಂ ಬದಿರ್ಚಿ ದೆಸೆಯಂತುಮವರಂ ನಿಜಕೀರ್ತಿಯಂ ನಿರ್ವಿರ್ಚಿದಂ (ಶಂರಾಮಾ. ೨-೨೬). ೪. ತೆರೆ ; ಅಗಲಿಸು : ಮುಂದಿರ್ದ ಕಣ್ಣಮೆಯುಂ ಬದಿರ್ಚಿ ನೋಡೆಮ್ಮಂ (ರಾಮಾಶ್ವ. ೬೦-೬). [ಬದಿರ್₁ + –ಚು₁]

**ಬದಿರ್ವಟ್ಟಿ** (ನಾ). ಬಿದಿರಿನ ಸೀಳಿನಿಂದ ಹೆಣೆದು ಮಾಡಿದ ತಡಿಕೆ : ಬದಿರ್ವಟ್ಟಿ, ಪೊಗರ್ವಟ್ಟಿ (ಶಮರ. ೯೩ ಶ್ರಯೋ). [ ಬದಿರ್₂ + ತಟ್ಟಿ₁ ]

**ಬದಿರ್ಮುತ್ತು** (ನಾ). ಬಿದಿರಿನಲ್ಲಿ ಸಿಗುತ್ತದೆ ಎಂದು ನಂಬಲಾದ ಒಂದು ಬಗೆಯ ಮುತ್ತು ; ೭ ಆನೆ, ಸರ್ಪ, ಮೀನು, ಕಾಡು ಹಂದಿ, ಕಪ್ಪೆಚಿಪ್ಪು, ಶಂಖ, ಮೋಡ ಹಾಗೂ ಬಿದಿರುಗಳಲ್ಲಿ ಮುತ್ತು ಸಿಗುತ್ತದೆಯೆಂಬ ಕವಿಸಮಯವಿದೆ: ತೋರಬದಿರ್ಮುತ್ತಿನ ನವಹಾರದ ಕಿಂದೆಳೆರ್ಗಳುಡೆಯ ವನಚರಿಯೊರ್ವಳ್ . . . ನವಸಂಧ್ಯಾ ರಾಗದೊಳೆಸೆವ ನಿಶೆಯನನುಕರಿಸಿರ್ದಳ್ (ಜಗಂ. ೯೬–೦೮).
[ ಬದಿರ್₂ + ಮುತ್ತು₃ ]

**ಬದಿರ್ವಳ** (ನಾ). ಬಿದಿರಿನ ಕೆಲಸ ಮಾಡುವವನು ; ಮೇದಾರ : ಕದಿರ್ವಳಂ, ಬದಿರ್ವಳಂ (ಶಬ್ದ. ಮ. ೭೩ ಶ್ರಯೋ). [ಬದಿರ್₂ + – ವಳ]

**ಬದಿರ್ವಳ್ಳಿ**, ಬದಿರುವಳ್ಳಿ (ನಾ). ಒಂದು ಊರಿನ ಹೆಸರು : ಬೀರವುರವುಮಂ ಬದಿರ್ವಳ್ಳಿಯುಮನೊನ್ದೊ ಅಗ್ರಹಾರಂ ಮಾಡಿ(ಎಕ. XI, ಚಿತ್ರದು. ೩೦–೦೬ ; ೯೬೮). ಬದಿರುವಳ್ಳಿ : ಶ್ರೀಮತ್ಕನ್ನಯ್ಯ ಚಿಂತ್ರ ವಳ್ಳಿಯುಮಂ ಪೆರ್ಬ್ಬಾಳುಮಂ ಬದಿರುವಳ್ಳಿಯುಮ × × × ರದೊಳ್ ಕೊಣ್ದು (ಎಕ. XI, ಚಿತ್ರದು. ೯೯–೯೦ ; ೯೪೭). [ ಬದಿರ್₂ + ವಳ್ಳಿ₁ ]

**ಬದಿರ್ಹಕ** (ನಾ). ಒಂದು ಊರಿನ ಹೆಸರು : ಬದಿರ್ಹಕದ ಪಿರಿಗಾವುಣ್ದ ನೆಕ್ಕಲವನ್ದಿಯ್ಯನಿಜೀದು ಪನ್ದಿ ಸತ್ತಿಂಬಟ್ಟಿಯುಂ ತಾಂ ಸತ್ತಂ (ಎಕ. XV, ಕೋಲ. ೦೨೮–೦; 970). [ ? ]

**ಬದಿವಸ** (ನಾ). ವಿಧಿಯ ವಶದಲ್ಲಿರುವುದು ; ದೈವಾಧೀನ : ಬದಿವಸದಿಂದೆ ಪುಟ್ಟುವುದು ಪುಟ್ಟಸುವಂ ಬದಿ (ಶಂಕಕಾ. ೦೨–೦೬೨).
[< ಸಂ. ವಿಧಿವಶ]

**ಬದು₁**, ವಿದು₁ (ನಾ). ೧. ಚಂದ್ರ ; ಇಂದು : "ಜೊನ್ನೊಡಲಂ . . . ಬಿದು . . . ಕಟ್ಟಿಲೆವಣಿ, ತಿಂಗಳ್ – ಈ ೨೦ ಚಂದ್ರನ ಪೆಸರ್" (ಕಕಾಅ. ೯೬–೨೩); ಮದನಂಗೆ ಜಯಮಕ್ಕೆ ಮಧುಗೆ ಸಂಪದಮಕ್ಕೆ ಬಿದುವೆಗದಿರಿಂತು ನೆಲಸಿರ್ಕೆ (ಶಾಧ್ಯಶ. ೦೦–೯೭); ಬಿದುಗೆಜಿವ ರಾಹುವಿನ ಮಾಳ್ಕೆಯಿಂ ರಥವ ಬಳಿಗೊದಗಿ ಪಿಡಿದಪ್ಪಳೆಸೆ (ಕಂಠೀ. ೨೮–೩೦). ೨. ತ್ರಿಮೂರ್ತಿಗಳಲ್ಲಿ ಒಬ್ಬ; ವಿಷ್ಣು : ಬಿದಿಯನುಮಂ, ಬಿದುವನುಮಂ ಪಾಸಟಿಗೆಯ್ವನಲ್ಲಂ (ಅದ್ಭುತ. ೯೩–೨). ವಿದು₁ : ೧. "ನೆಯ್ದಿಲ್ಗೆಳೆಯಂ ವಿದು ಬೆಳ್ಗದಿರಂ" (ಕರ್ಣಾಅ. ೩೯). ೨. "ಸಿರಿಯರಸಂ . . . ಪರ್ದುದೇರ ವಿದು ಕಾರೊಡಲನಲರ್ಪೊಡೆಯ ಕಾವನಯ್ಯಂ ಬಿಟ್ಟುಗೆಯ್ವುಗಯ್ಯಂ ಭಾವಿಸ್" (ಕಾವ್ಯಮಂ. ೬). [ < ಸಂ. ವಿಧು]

**ಬದು₂** (ನಾ). ೧. ಆನೆಯ ಕುಂಭಸ್ಥಳದ ಮಧ್ಯಭಾಗ : "ಬಿದು – ವಿದು = ಆನೆಯ ಗಂಡದ ನಡು" (ಕಕಾಅ. ..); ಬಡಿಗೊಳೆ ಬಿದು ಬಿಬ್ಬರಬಿರಿದೊಡನಾಗೆ ಪೊಸಮುತ್ತು (ಶಂಕಕಾ. ೧೧–೦೦೩); ಅಮರೇಂದ್ರೋ ತ್ತುಂಗಮಾತಂಗದ ಬಿದುವಿನ ಮುಕ್ತಾಳಿಯಿಂಬಾದ ಮಂಜೂಷಮಿದು (ಜಗಂ. ೬–೨೯). ೨. ಕುದುರೆಯ ಕಿವಿಯ ಹೊರಭಾಗ : ಉದಯಿಪ ಸುಚೀಗಳ್ ತುರಗದ ಬಿದುಸಂಸ್ಥಾನಕದೊಳರ್ಥಹಾನಿಯನವು ಮಾಡದೆ ಮಾಣವು (ಅಶ್ವಶಾ. ೯–೨೦); ಕಿವಿಯ ಪೊಜಗಣ್ದೆ ಬಿದುವೆಂಬ ಪೆಸರಕ್ಕುಂ (ಅಶ್ವಶಾ. ಪುಟ. ೪೮–೬). [ < ಸಂ. ವಿದು]

**ಬದುಗದಿರ್** (ನಾ). ಚಂದ್ರಕಿರಣ : ಬಿದುಗದಿರಿಂತು ನೆಲಸಿರ್ಕೆ ರತಿಗೆ ಸಂಪದವೆಂದು ತೊಳಗದಿರುತಿರ್ಕೆ (ರಾಜಶೇ. ೦೦–೯೯).[ಬಿದು₁+ಕದಿರ್₂]

**ಬದುಗಲ್**, ಬಿದುಗಲ್ಲು (ನಾ). ಚಂದ್ರನ ಕಾಂತಿಯಿಂದ ದ್ರವಿಸುವುದೆಂದು ನಂಬಲಾಗಿರುವ ಶಿಲೆ ; ಚಂದ್ರಕಾಂತಶಿಲೆ : ಸದಲಂಕಾರ ನೃಪೇಂದ್ರನುಂ ವಿತತರೋಚಿರ್ಗಾತ್ರನಂ ಮಿತ್ರನಂ ಬಿದುಗಲ್ಗನ್ನಡಿಯಂ . . . ಸ್ವಪ್ನದ ಕಂಡಳಾ ಮಧುಕಳಾಶ್ರೀಸಾಂದ್ರನಂ ಚಂದ್ರನಂ (ರಾಜಶೇ. ೯–೨೦) ; ಬಿದುಗಲ್ನೆಲದೊಳುಂ ಬಾಡುತಿರ್ಪ ತಳಿರಡಿ ನಡೆಯೆ ಕಾನಪಥದೊಳೆಂತಪ್ಪದವನಿಸುತೆಗೆ (ಶ್ರೀರಾಮಾ. ೦೬–೭೩). ಬಿದುಗಲ್ಲು : ಜೊನ್ನದೊಂದು ಪುತ್ತಟಿಪುವೊಲೊಪ್ಪವೆತ್ತ ಬಿದುಗಲ್ಲಿನ ಬೊಂಬೆಯು ಪಾಂಗಿನಂತೆ (ಕೃಷ್ಣಾ. ೬೦) ; ತಳತಳನೆ ಪೊಳೆದು ಚಿತ್ರರಂಬಡೆದ ಬಿದುಗಲ್ಲ ಸುತ್ತಣ ಮೆಟ್ಟಡಿಯಿಂ . . . ಕೊಳಂ ಪಗಲ್ವೆಣ್ಣ ಕೈಪಿಡಿಯಿಯಂತಿರೆ ಸೊಗಯಿಸಿದತ್ತು (ರಾಜಾಶ್ವ. ೩೨–೦೮). [ಬಿದು₁ + ಕಲ್₃]

**ಬದುಗಲ್ಲು** 'ಬಿದುಗಲ್' ನೋ.

**ಬದುಮೊಗ** (ನಾ). ಚಂದ್ರನಂಥ ಮುಖ ; ಬಿಡುಜಡೆಯ ಬಿದುಮೊಗದ ಬಿದೆಸಳ್ಗಣ್ಣ . . . ಬೆಡಂಗಿನ ಬಾಲೆಯೊರ್ವಳ್ . . . ಬರುತುಮಿರ್ದಳ್ (ರಾಜಾಶ್ವ. ೯೮–೨೦). [ಬಿದು₁ + ಮೊಗ]

**ಬದುರ್** 'ಬಿದಿರ್₁' ನೋ.

**ಬದುರ** (ನಾ). ಸಿಡಿಲು; ಅಶನಿ: ಕದನಕ್ರೀಡಾವಿನೋದನುದ್ಧತದರ್ಪ್ಪಾ ಬಿದುರ ಪರಾಕ್ರಮನಾದಂ ವಿದಿತಗುಣಂ ಮಲ್ಲಿದೇವಂ (ಎಕ. XI, ದಾವಣ. ೯೩–೩೩; 1164); ಬಿದುರ ಹತಿಯಿಂ ಶೈಲಮೊಡೆವವೊಲ್ (ಶಂಕಾಅ. ೦–೦೯–೩೩). [<ಸಂ. ಭಿದುರ]

**ಬದುರಾಳ್ಗೆ** (ನಾ). ಒಂದು ಪ್ರದೇಶದ ಹೆಸರು : ಬಿಟ್ಟಿಗಂ ಬಿದುರಾಳ್ಗೆ ಎಟ್ಟತ್ತರ್ಕ್ಕವಾಟ್ ನಾಟ್ಗಾವುಣ್ದುಗೆಯ್ಯೆ (ಎಕ. VIII, ಸೊರಬ. ೩೩೦–೯; 967). [ ? ]

**ಬದುರು** 'ಬಿದಿರ್₁' ನೋ.

**ಬದೆಯಿತ್ತ** 'ಬಿಜಯಿತ' ನೋ.

**ಬದ್ದ** 'ಬೀಟಿರ್₁' ಪರಾ.

**ಬದ್ದ₂** (ನಾ). ೧. ಕೊರೆದುದು ; ತೂತು ; ರಂಧ್ರ : "ಬಿದ್ದ–ವಿದ್ದ = ತೂತು, ತೂತಾದ" (ಅಭ್ಯಕೋ. ೩೦). ೨. ಗಾಯ ; ಪೆಟ್ಟು ; ವ್ರಣ : 'ಬಿಜುಬಿದ್ದಂಬೋಗು' ಪರಾ. ೩. ಬಿಂಬ ; ಆಕೃತಿ : ಕರುಣದ ಕರುವೋ ಕಾರ್ಶ್ಯದ ಚಿಟ್ಟವೊ ವಿರಹದ ಬಿದ್ದವೊ ದುಃಖದ ಮೂರ್ತಿಯೋ (ಕುಮುದಾ. ೯–೯೬). [<ಸಂ. ವಿದ್ಧ]

**ಬದ್ದಣ** 'ಬಿರ್ದಿನ' ನೋ.

**ಬದ್ದಣಂಬೇಳು** (ಕ್ರಿ). ಔತಣಕ್ಕೆ ಕರೆ ; ಊಟಕ್ಕೆ ಆಹ್ವಾನಿಸು : ವೈತಾಪಿಯು ಸುರನಿವಹಮುನಿಚಯಕೆ ಬಿದ್ದಣಂಬೇಳೆಯತಿಭರದನಿಲವಲನ ಕೊಂದಾ ಮಾಂಸವಿಕ್ಕಿ ಚೆಚ್ಚರದಿನವರುಂಡ ಬಳಿಕಿಲವಲಾ ಎನಲು (ಶಾಕಶಾಕು. ೯–೪೦). [ ಬಿದ್ದಣ (< ಬಿರ್ದಿನ) +ಪೇಳು (<ಪೇಟ್) ]

**ಬದ್ದಿ** 'ಬಿರ್ದಿ' ನೋ.

**ಬದ್ದಿಕ್ಕಿಸು** (ಕ್ರಿ). ಔತಣ ಮಾಡಿಸು : ಕಡುಹಿತನೊಲು ತೊಡಗಿಸಿ ನೆಚಿ ಬಿದ್ದಿಕ್ಕಿಸುವೆನಿದಕ್ಕೆಸುತಯ್ದಿದನೀಶನ ಸಭಗಿತ್ತಲ್ ಮುನಿಪತಿನಾರದನು (ಶೀಲೀಕ. ೦–೩೩). [ಬಿದ್ದು₂ (<ಬಿರ್ದು₁)+ಇಕ್ಕಿಸು₁]

**ಬದ್ದಿಕ್ಕು** 'ಬಿರ್ದಿಕ್ಕು' ನೋ.

**ಬದ್ದಿನ** 'ಬಿರ್ದಿನ' ನೋ.

**ಬದ್ದಿನಂಗೆಯ್** (ಕ್ರಿ). = ಬಿದ್ದಿಕ್ಕಿಸು : ಬಿಶದಿನಿಸು ನಲುಗಂಪಿನಿಂಪು ಸೊಂಪಿಂ ತುಂಬಲರ ಬಿದ್ದಿನಂಗೆಯ್ದು (ಶಾಧ್ಯಶ. ೬–೩೯).
[ ಬಿದ್ದಿನ (<ಬಿರ್ದಿನ)+ಕೆಯ್₁ ]

**ಬದ್ದು₁** 'ಬೀಟ್₁' ಪರಾ.

**ಬದ್ದು₂** 'ಬಿರ್ದು₁' ನೋ.

**ಬದ್ದೂಟ** 'ಬಿರ್ದೂಟ' ನೋ.

**ಬಿನ್–** (ಉಪ). ಇಲ್ಲದುದು ಎಂಬ ಅರ್ಥವನ್ನು ಕೊಡುವ ಒಂದು ಉಪಸರ್ಗ: 'ಬಿನ್‌ಪಗಾರಿರಜೆ', 'ಬಿನ್‌ಪುಕಾರ್' ಪರಾ.
[← ಹಿಂ. ಮರಾ. ಬಿನ್ =ಇಲ್ಲವಾದ, ಹೊರತಾದ]

**ಬಿನ್‌ಪಗಾರಿರಜೆ** (ನಾ). ಸಂಬಳರಹಿತವಾದ ರಜೆ : ಬಿನ್‌ಪಗಾರಿ ರಜೆಯ ಬಗ್ಗೆ ವಿಚಾರ ಮಾಡುವೆನು (ಸ್ವೃಚಿ. ೦೦೦).
[ಬಿನ್ — + ಪಗಾರಿ + ರಜೆ(<ರಜಾ)]

**ಬಿನ್‌ಪುಕಾರ್** (ಅ). ಯಾವ ದೂರೂ ಇಲ್ಲದೆ : ಕೆಲಸ ಸಲೀಸಾಗಿ ಬಿನ್‌ಪುಕಾರ್ ನಡೆದು ಹೋಗುತ್ತೆ (ಕಂಠ. ೨೯೬).
[ ಬಿನ್ —+ಪುಕಾರ್$_{0}$ (<ಪುಕಾರು) ]

**ಬಿನಎತ್ತಿಅಬ್ಬೆ** (ನಾ). ಒಬ್ಬಾಕೆಯ ಹೆಸರು : ಮಾರಕ್ಕಅರಸರ್ ಬನವಾಸಿ ನಾಡಾ ಬಿನಎತ್ತಿಅಬ್ಬೆ ಊರಾಳೆ (ಸೌಇಇ. XX. ೦೦-೨; ೪ನಯ ೪೪).
[ < ವಿನಯಾದಿತ್ಯ + ಅಬ್ಬೆ$_{1}$ ]

**ಬಿನದ** (ನಾ) ೧. ವಿನೋದ ; ತಮಾಷೆ : "ಬಿನದಂ ವಿನೋದದೊಳ್" (ಕರ್ಣಾ. ೦೬): ಗೌರೀಪತಿಯ ಬಿನದಕ್ಕೆ ಭೂಭೃತ್ಸುತೆ ಬೇಡಿತಿಯಾದ ತೆಱನನನುಕರಿಸಿರ್ದಳ್ (ಕಾದಂಪು. ೯೦). ೨. ಆಟ ; ವಿಹಾರ ; ಕ್ರೀಡೆ : ಬೇಂಟೆಯೆ ಬಿನದಂಗಳೆರಸಲ್ಕೇ (ಶಂಕಿಕಾ. ೩-೯೭). 'ಬಿನದವೆಟ್ಟು' ಪರಾ. ೩. ಸಂತೋಷ; ಆನಂದ: 'ಬಿನದಂಬಡೆ' ಪರಾ. [< ಸಂ. ವಿನೋದ]

**ಬಿನದಂಬಡೆ** (ಕ್ರಿ). ಸಂತೋಷಗೊಳ್ಳು ಆನಂದಿಸು : ತುಂಗಮೃದಂಗ ಮಂಗಳರವಂ . . . ಶಂಖನಿನದಂ ಬಿನದಂಬಡೆದಿರ್ದ ಭಕ್ತಲೋಕಂಗಳ ಕಂಗಳಂಗವಿಸೆ ಸಂಗಳಿಸಿರ್ಪುವು ಲಿಂಗಗೇಹದೊಳ್ (ರಾಜಶೇ. ೨-೦೨೬).
[ ಬಿನದ + ಪಡೆ$_{1}$ ]

**ಬಿನದಗೊಳು** (ಕ್ರಿ). = ಬಿನದಂಬಡೆ : ಭವಲೀಲೆಯುದ್ವೀಕ್ಷಣಗವಾಕ್ಷ . . . ನಿರುಕಿಸುತ ಬಿನದಗೊಳೆ ಸರ್ವಪಕ್ಷ (ಪುರದೇ. ೯೯-೦೦).
[ ಬಿನದ + ಕೊಳು (< ಕೊಳ್$_{1}$) ]

**ಬಿನದವಡಿಸು** (ಕ್ರಿ). ಸಂತೋಷಗೊಳಿಸು ; ಆನಂದಿಸುವಂತೆ ಮಾಡು : ಮಾಯೆ ಬೊಮ್ಮನ ಬಿನದವಡಿಸಿ ನಮ್ಮಾ ಜಗವ ಕಾಯುವಳು ತನ್ನಿಚ್ಛೆ (ಮುಂಕಾಶ. ೦೯೬). [ ಬಿನದ + ಪಡಿಸು ]

**ಬಿನದವಾಡು** (ಕ್ರಿ). ಕ್ರೀಡಿಸು ; ವಿಹರಿಸು : ಮನದ ಬನದಲಿ ಬಿನದ ವಾಡಿದೆ ತನ್ನ ತಿಳಿಯದೆ ತಾನು (ಅರಳು. ೦೯-೬). [ಬಿನದ+ಆಡು$_{1}$]

**ಬಿನದವೆಟ್ಟು** (ನಾ). ವಿಹಾರಕ್ಕಾಗಿ ರಚಿಸಿದ ಕೃತಕವಾದ ಬೆಟ್ಟ : ಕ್ರೀಡಾಶೈಲ : ಬಾವಿ ಕೊಳಂ ಬಿನದವೆಟ್ಟುಗಳ್ ನೆರೆದಿರ್ಕುಂ (ಶಬಂ. ೩-೦೨೨). [ ಬಿನದ + ಬೆಟ್ಟು$_{2}$ (<ಬೆಟ್ಟ) ]

**ಬಿನದವೇಂಟೆ** (ನಾ). ವಿನೋದಕ್ಕಾಗಿ ಮಾಡುವ ಬೇಟೆ : ಮೆರೆದುವಾ ಕುಂಭಕರ್ಣನ ಬಿನದವೇಂಟೆಯ ಕವರ್ತೆಗಳ್, ತೋರುಮನೆಯಲ್ಲಿ! (ಶ್ರೀರಾಮಾ. ೯೩೩-೨೬೮). [ಬಿನದ + ಬೇಂಟೆ ]

**ಬಿನದಸಾಲೆ** (ನಾ). ವಿಹಾರಶಾಲೆ ; ಕ್ರೀಡಾಮಂದಿರ : ಓಲಗಸಾಲೆ ಮಂತಣಸಾಲೆ ನಾಟಕಸಾಲೆ ಬಿನದಸಾಲೆ . . . ಸುಚಿತ್ರಸಾಲೆಗಳೊಳಱಿಸಿದಳಾ ಲೋಲಲೋಚನೆ ರಾಮನನು (ಕುರಾಸಾಂ. ೪೪-೯೨).
[ ಬಿನದ + ಸಾಲೆ$_{4}$ ]

**ಬಿನದಿ** (ನಾ). ವಿನೋದಪ್ರಿಯನಾದವನು : ಜಗಳವಾಡಿಸಿ . . . ನಗುತಲಿರುವನು ನೋಡಿ ; ಪರಬೊಮ್ಮನೇಂ ಬಿನದಿ ! (ಮುಂಕಾಶ. ೦೬೨) ; ತರುಣ ತರುಣಿಯರು ಮಾಡದಲ್ಲಿರುವ ಬಿನದಿಗಳ ಜತೆಯಲ್ಲಿ ಸೇರುತ್ತಾರೆ (ಕಂಪರ. ೦೫೭). [ ಬಿನದ + — ಇ$_{3}$ ]

**ಬಿನದಿಸು** (ಕ್ರಿ). ಆನಂದಿಸು ; ಸಂತೋಷಪಡು : ಪಾರಿವಂಗಳೊಳ್ಬಿನದಿಪ ಸರಸಯುವತಿಯರಿಂ (ಅಕ್ಕಲ. ೧-೬೯ ವ) ; ಬಿನದಿಪ ಹಸುಳೆ ಜವಾದಿಯ ಮಿಗಗಳನನುರಾಗದಿ ನೋಡುತ ಬಿಜಯಂಗೈವನಿತಱೊಳು (ಶಯಾಕಾ. ೯-೨) ; ಮಾತೆಯ ಪಕ್ಷಪುಟವ ಸೇರುವ ತೊದಲ್ವಾತ ನುಡಿದು ಬಿನದಿಸುವ . . . ಗಿಳಿವಱಿಗಳ ರೀತಿಯ ಕಂಡಳಾ ಕಾಂತೆ (ಕಂಪಾ. ೯-೯೭). [ ಬಿನದ + — ಇಸು$_{3}$ ]

**ಬಿನದೆ** (ನಾ). ವಿನೋದಿಸುವವಳು : ವಿನೋದಪ್ರಿಯೆ : ಕಾಡ ಬಂದವರಲ್ಲ ನೋಡಬಂದೆವು . . . ಎಂದು ಮಾತಾಡಿದರಾ ಬಿನದೆಯರು (ಕರಕ. ೯೨-೦೭). [ ಬಿನದ + — ಎ$_{2}$ ]

**ಬಿನಮಿತ** (ನಾ). ಒಬ್ಬಾತನ ಹೆಸರು : ಎಱೆಯ ಪೆರ್ಮಾಡಿಯ ಸಾನ್ತರಾಪಪನ ಮಗಪ್ಪಿನವಿತನ ಮಗಂ . . . ಪುರದೊಳೊಳ್ಗಣ್ಣಾಂ (ಎಕ. VII, ಶಿಕಾ. ೨೮೯-೩; 902). [ ? ]

**ಬಿನಮ್ಮ** 'ಬಿನಾಮ್ಮ' ನೋ.

**ಬಿನಯ** (ನಾ). ೧. ವಿನಯ : ನಮ್ರತೆ : ಬಿನಯದ ಬಿತ್ತು ಬಿನ್ನಣದ ಪೆರ್ಮೊಳೆ (ಅಕ್ರಿ. ೦೩-೨೦) ; ಬಿನಯಂ ಬೇರ್ವರಿಜಾಂತುದೋ (ಶಬಂ. ೩-೦೦೪). ೨. ಪ್ರೇಮ; ಪ್ರೀತಿ (?): "ಬಿನಯಂ ಪ್ರೇಮಂ" (ಕರ್ಣಾ. ೯೦). [< ಸಂ. ವಿನಯ]

**ಬಿನಸು** (ನಾ). ಹಾನಿ ; ನಷ್ಟ : ತನಗಾಪ್ತರೆನಿಸಿ ಚಿರಕಾಲದಿಂದಾಶ್ರೈಸಿ ಮನಸು ಮರ್ಮಗಳರಿತ ಜನರು ಸುಕ್ಷೇಮಕರವನು ಪೇಳ್ವರಲ್ಲದನ್ಯವ ನುಸುರರೆಂಬ ನಂಬುಗೆಯ ದೃಢತೆಗೈದು ಬಿನಸು ತೋರದ ತೆರದಿ ರಾಜಾರ್ಥಕೋಣಯಂ ತೋರದಂತೆ (ವಂಕಾರಾ. ೬-೦೩-೭).
[ <ಸಂ. ವಿನಾಶ./ಮರಾ. ಬಿನಸಣೇ, ಬಿನಾಸಣೇ = ನಷ್ಟವನ್ನುಂಟು ಮಾಡು ]

**ಬಿನಾಕಳಿ** (ನಾ). ಒಂದು ಊರಿನ ಹೆಸರು : ಕುಟುವರುಂ ಬಿನಾಕಳಿ ಊರುಗ್ಗಾಮುಣ್ಡುಗೆಯ (ಎಕ. VIII, ಸೊರಬ. ೯೭೬-೯ : 972). [?]

**ಬಿನಾಮಿ** 'ಬೇನಾಮಿ' ನೋ.

**ಬಿನಾಮಿಾ** 'ಬೇನಾಮಿ' ನೋ.

**ಬಿನಾಮೆ** 'ಬೇನಾಮಿ' ನೋ.

**ಬಿನಾಮ್ಮ, ಬಿನಮ್ಮ** (ನಾ). ಒಬ್ಬಾತನ ಹೆಸರು : ಶ್ರೀಪುರುಷಮಹಾರಾಜರ್ ಪೃಥುವೀರಾಜ್ಯಂಗೆಯೆ ಕೆಸುಗೊಳಮೊಡೆಯ ಬಿನಾಮ್ಮಂಗೆ ಧಣ್ಣಗವಾಡಿಯಂ ಬ್ರಹ್ಮಾದೇಯಂಗೊಟ್ಟಂ (ಎಕ. IV, ಹೆಗ್ಗಡ. ೯-೩ ; ಸು 760). **ಬಿನಮ್ಮ** : ಸಮುಳಜ್ಜದ ಮೆಣ್ಡೆಗಾವುಣ್ಡನು ಬೆಳ್ಗೊಟಲ ಬಿನಮ್ಮನು (ಎಕ. V, ಚನ್ನರಾ. ೨೩೦-೦೯ ; ಸು. 925). [? + ಅಮ್ಮ$_{1}$]

**ಬಿನುಂಗು, ಬಿನುಗು$_{2}$** (ನಾ). ಒಂದು ಬಗೆಯ ತೆರಿಗೆ : ನಗರದ ಪಶುವತ್ತಿಗಳಪ್ಪ ಬಿನುಂಗಿನೊಳ್ಪೇಸವಂ ೧೦ ಮಾನ್ಯ ಸಾಮ್ಯದೊಳ್ಪಣ ೧ (ಎಕ. VII, ಶಿಕಾ. ೯೯-೩೩ ; 1094). **ಬಿನುಗು$_{2}$** : ಅಯ್ದು ಬಿನುಗು ಮೂವತ್ತು × × × ರರಸ ಕೊಟ್ಟ ಬಿನುಗು (ಮೈಆ. ೦೯೩೦. ೬೬-೦೩ ; 1300) ; ಆಡ ತೆಱೆ ಕುಂಬಾರುದೆಱೆ ಬಿನುಗು ಬೆಸಒಕ್ಕಲು ತಗಡೂರ ಸ್ಥಳಕ್ಕೆ ಸಲುವ ಸುಂಕ (ಮೈಆ. ೧೯೯೬, ೦೯-೨೦ ; 1488). [ ? ]

**ಬಿನುಗ** (ನಾ). ಅಲ್ಪವ್ಯಕ್ತಿ ; ಕ್ಷುದ್ರವ್ಯಕ್ತಿ : ಮದ ಮತ್ಸರವ ಬಿಡದೆ ಕುದಿದು ಕೋಟಲೆಗೊಂಬ ಬಿನುಗರನೊಲ್ಲ ನಮ್ಮ ಬಸವಪ್ರಿಯ ಕೂಡಲ ಚೆನ್ನಬಸವಣ್ಣ (ವಚಸಂ. ೬೯೯-೦೯೯) ; ಬಿನುಗರವರವರಂಗದಲಿ ಕೈಮನವ ಖಂಡಿಸಿ ಸಕಲರಿಪುಸಾಧನವನೊಬ್ಬನೆ ಕರ್ಣ ಗೆಲಿದನು (ಕುವ್ಯಾಕ. ೦೦-೩) ; ಡಂಬಕರ್ಬಿನುಗರು ಕಡೆಯ ಕಾಲಕೆ ಪೂಜೆಗೊಂಬರೊಳ್ಳಿದನುಂಬರು (ಕರಕ. ೬೦-೩೯). [ ಬಿನುಗು$_{1}$ + — ಅ$_{7}$ ]

**ಬಿನುಗಾಟ** (ನಾ). ಅಲ್ಪತನ ; ಕ್ಷುಲ್ಲಕತನ : ಮನುಜರ ಗುಣ ತನಗೊಂದೂ ಬಿಡದೆ ಘನವನಱಿವೆನೆಂಬ ಬಿನುಗಾಟದ ಮಾತೇಕೆ (ಸೋಳ್ಸಾ. ೬೬-೩೦೦). [ ಬಿನುಗು$_{1}$ + ಆಟ ]

**ಬಿನುಗು$_{1}$** (ನಾ). ೧. ಹೀನವ್ಯಕ್ತಿ ; ಕ್ಷುದ್ರವ್ಯಕ್ತಿ ; ಅಲ್ಪವ್ಯಕ್ತಿ : ಅನಿಮಿಷಗತಿಯೆಂಬ ದನುಜನಾಯಕ ವಿಶ್ವ ಬಿನುಗುಗಳನು ಮುಟ್ಟೆನೆಂದು ವನಜನಾಭನು ಮೊದಲಾದ ದೇವರ್ಕಳು ಕನಗಾಹುತಿಯೆನುತಿಹನು (ತ್ರಿಕುಸಾಂ. ೩-೩೯); ಕಟ್ಟಿತುರಿ ದೆಸೆ ಸಾಲ್ಕಱಲಿ ಬೆಸ್ನಟ್ಟಿ ಹೊಯ್ದುದು

ಬಿನುಗರಳ (ಕುವ್ಯಾ೪. ೭-೪೦). ೨. ಬಡವ; ದರಿದ್ರನಾದವನು: ಬಿನುಗಂ ನಂಬಿ ತಿಱುವೊಕ್ಕಲಂ ಕಳೆವ ಪ್ರಭುವುಮಂ (ರರ್ಷಾಮ್ಮ. ೬-೩೦). (ಗು). ೩. ಅಲ್ಪವಾದ; ಕ್ಷುದ್ರವಾದ: ಇಂತೀ ಬಿನುಗುವಮಾನವನ . . . ಹೀನಯೋನಿಯಲ್ಲಿ ಬರಿಸದೆ ಮಾಣ್ಬನೆ (ಚನ್ನವ. ೪. ೧೩-೨೦೧); ಹಾರುವ ನಿನಗೆ ಬಿನುಗುಭೀಮಾರ್ಜುನರ ಪರಿಯಂತೇಕೆ (ಕುವ್ಯಾದ್ರೋ. ೧-೩೩).

ಬಿನುಗುಬಿಚ್ಚಟಿ, ಬಿನುಗುಬಿಕ್ಕಟಿ, ಬಿನುಗುಬಿಚ್ಚಟ = ಅಲ್ಪವ್ಯಕ್ತಿ; ಕ್ಷುದ್ರಮನುಷ್ಯ: ಆಳು ನಡೆದುದು ಮುಂಗುಡಿಯ ಹರಿಥಾಳಿ ನೂಕಿ ಹಿರಣ್ಯನಗರಿಯ ಮೂಲೆಗೈದಿತು ಹೊಯ್ದರಲ್ಲಿಯ ಬಿನುಗುಬಿಚ್ಚಟಿಯ (ಕುವ್ಯಾ೪. ೧೨-೦೩); ಧನಿಕದೊರೆಗಳ ಬಿನುಗುಬಿಚ್ಚಟಿಯು ಹಲವುಜಾತದ ವರ್ಣಭೇದದ ಹೊಲಲ ಜನದ ಸಮಸ್ತಭುವನಾವಳಿಯ ಭರಭಾರವನು ಹೊಱಿಸಿದನಗ್ನಿದೇವರಿಗೆ (ಕೂರಣ. ೩-೬-೩೩); ಭಟರು ... ಮುಕ್ಕುರಿಕಿಯಿರಿದಿರಿದು ಕೊಂದರಗಣಿತ ಬಲವ ಬಿನುಗುಬಿಕ್ಕಟಿಜನಗಳ (ತುರಂಗ. ೪೩-೯); ಒರ್ವರ ಸುಳುವ ಕಾಣೆನು ಬಿನುಗುಬಿಚ್ಚಟರಲ್ಲದೀ ಪುರಿಗೆ (ಅತ್ಯ೪. ೦೦-೩೩).

[ದೇ. ೩ ತೆಲು. ಬಿಲುಗು = ಕಪಟವಾದ]

ಬಿನುಗು₂ 'ಬಿನುಂಗು' ನೋ.

ಬಿನುಗುತನ (ನಾ). ನೀಚತನ; ಕ್ಷುಲ್ಲಕತನ: ಷಟ್ಕರ್ಮದಿಂ ಬಾಳ್ವ ಬಿನುಗುತನಗಳನುಳಿದು . . . ಸರ್ವಾವಧಾನದಿಂ ಚರಿಪನೆ ಸಿರಾಭಾರಿ ವೀರಶೈವಂ (ಶಾಸೋಪು. ೦೨-೩೬); ಬಿನುಗುತನದಿಂದಖಿಳವಿಷಯಗಳನುಂಡು ಅನುವರಿಯದ ಜ್ಞಾನದೊಳಗೆ ಬಳಿಸಂದು (ಚನ್ನ೪. ೩೩-೦).

[ಬಿನುಗು₁ + — ತನ]

ಬಿನೆಯ (ನಾ). (?): ಅರೀಹಳಿಯ ಬಿನೆಯ ಗ ೯೮೦ ಯಾ ಧಂರ್ಮಾಗಳಿಗೆ ಆವನಾನೊಬನು ನಡವದೆ ಇದವನು ಗೋಉ ಭ್ರಾಂಹ್ಮರನು ವಾರಣಾಸಿಯಲಿ ಕೊಂದ ಪಾಪವ ಪೊಯಿದುವನು (ಎಕ. XI. ಹೊಳಲ್ಕೆ. ೦೦೩-೨೦; 1566). [ ? ]

ಬಿನ್ನ 'ಬಿನ್ನಪ' ನೋ.

ಬಿನ್ನಗೆ (ಅ). ೧. ನೀರವವಾಗಿ; ಮೌನವಾಗಿ; ಸುಮ್ಮನೆ: "ಜೋಕ್ಕಟಂ, ಬಿನ್ನನೆ, ಬಿನ್ನಗೆ — ಈ ೩ ಸುಮ್ಮನೆಯೆಂಬರ್ಥಂ" (ಶಶಾ. ೩೬-೨೬೩); ಮಗನಟಲೊಂದು ಭೂಪತಿಯ ತಮ್ಮನೊಳಾದಟಲೊಂದು ನೊಂದು ಬಿನ್ನಗೆ ಮೊಗದಿಂದೆ ಕುಂದಿ ಘನಕೇತನನಿರ್ದಟಲೊಂದು (ಶಂಕಶಾ. ೦೨-೦೭೦). ೨. ಬರಿದಾಗಿ; ಬಿಕೋ ಎಂದು: ಉರಮೇಕೆ ಹಾರಮುಣಿಮಂಜರಿಯಿಲ್ಲದೆ ಬಿನ್ನಗಿರ್ದುದು (ಶಂಕಶಾ. ೯-೬೨); ಮಂದರಗಿರಿ ಬಿನ್ನಗಾಯ್ತು ಮದುವೆ ಪೋದ ಮಂದಿರವೊ ಎಂಬಂತೆ (ಶಂಕೃಶಾ. ೨೯-೦೩೬). ೩. ಖಿನ್ನವಾಗಿ; ಖೇದದಿಂದಿರುವಂತೆ: ಬೇನೆಗಳೊಳ್ ಮೊಗಂಗಳಂ ಬಿನ್ನಗೆ ಮಾಡದಿರ್ದರಳ ವಚ್ಚರಿಯಾಗೆ ಕೆಲರ್ ಮಹಾರಥರ್ (ಶಂಕಶಾ. ೦೦-೩); ಇನ್ನಱುದಿಂಗಳುಂಟಿನೆ ನಿಜಾಯು ಸುರಪ್ರಕರಂ ಮೊಗಂಗಳಂ ಬಿನ್ನಗೆ ಮಾಡೆಯುಂ (ಶಾಂತಿಪು. ೭-೭೯). [? + — ಅಗೆ]

ಬಿನ್ನಣ 'ಬಿನ್ನಾಣ' ನೋ.

ಬಿನ್ನಣಂದೋಱು, ಬಿನ್ನಣದೋಱು (ಕ್ರಿ). ಕೌಶಲ್ಯವನ್ನು ತೋರು; ಚಾತುರ್ಯವನ್ನು ತೋರಿಸು: ಸುತ್ತಿ ಬಳಸಿ ಮೊನೆದೋಱುವ ಬಿರುದಿನಂಕಮನುರವಣಿಸಿ ಪತ್ತಿ ಪೊರಳ್ಚಿ ಕೊಳ್ವ ಬಿನ್ನಣಂದೋರ್ಪ ಗನ್ನದಂಕಮಂ ಬಿಡಿಸಿ (ಗಿಂಶ. ೨-೧೦೩ ವ). ಬಿನ್ನಣದೋಱು: ಬಲ್ಲ ಬಿನ್ನಣದೋಱಿದನು ನೃಪತಿ (ಶಾಸ್ತ್ರಾ. ೬-೭೦).

[ಬಿನ್ನಣ (< ಬಿನ್ನಾಣ) + ತೋಱು]

ಬಿನ್ನಣಂಬಡೆ, ಬಿನ್ನಣವಡೆ (ಕ್ರಿ). ಕೌಶಲ್ಯವನ್ನು ಪಡೆ: ನೈಪುಣ್ಯವನ್ನು ಹೊಂದು: ಪೊಳ್ತಂ ಸನ್ನೆಯುಂ ಜಾತಿಯುಂ ಜವಂಗೆಡದಜೀವ ಬಿನ್ನಣಂಬಡೆದ ಬೇಡರೊಡವರೆ (ರಾಜಶೇ. ೩-೦೦ ವ). ಬಿನ್ನಣವಡೆ: ಭರತಕ್ಷೇತ್ರವಿಜಯಾರ್ಧಾಚಲದಕ್ಷಿಣದೊಳು ವಿದ್ಯಾಧರಜನಾಡುಯೊಳಿನೆ... ದುದು ಸರಸಿಜನನಾಗನ ಕೈಮಾಟಕೆ ಕಡುವಿರಿದಿಂ ಬಿನ್ನಣವಡೆದು (ಜಟಾ. ೧-೩೯). [ ಬಿನ್ನಣ (< ಬಿನ್ನಾಣ) + ಪಡೆ₁ ]

ಬಿನ್ನಣಕಾತಿ (ನಾ). ಒಯ್ಯಾರ ಮಾಡುವವಳು; ಬೆಡಗುಗಾತಿ: ಅಣಿಮಾದಿಸಿದ್ಧಿದೇವಿಯರೊಡನೆಯ್ದೆ ಬಿನ್ನಣಕಾತಿ ಬಾದಳಾ ದೇವಿ (ಚತ. ೭೩-೦೦೬). [ ಬಿನ್ನಣ (< ಬಿನ್ನಾಣ) + — ಕಾತಿ₂ ]

ಬಿನ್ನಣಗವಿ (ನಾ). ಚಮತ್ಕಾರಗಳಿಂದ ಕೂಡಿದ ಕಾವ್ಯವನ್ನು ರಚಿಸುವವನು; ಕುಶಲನಾದ ಕವಿ: ಗತಪ್ರತ್ಯಾಗತಾದಿ ಸಂಧಾನ ಮುರಜಬಂಧಾದಿಗಳಂ ಮಾಳ್ಪ ಬಿನ್ನಣಗವಿಯುಂ (ಶೀಶಿವಾ. ೩೦-೭).

[ ಬಿನ್ನಣ (< ಬಿನ್ನಾಣ) + ಕವಿ₁]

ಬಿನ್ನಣಗಾರ್ತಿ (ನಾ). = ಬಿನ್ನಣಕಾತಿ: ಕಂಬುಕಂಠದ ಕರಿಗತಿಯ ಬಿಂಬಾಧರದ ಬಿನ್ನ[ ಪಾಠಾಂ. ನ್ನಾ ]ಣಗಾರ್ತಿಯರವಲಂಬಿಸಿ ಕೊಳನ ತಡಿಯೊಳು (ಜೀವಂಧಂ. ೦೬-೩೬).

[ ಬಿನ್ನಣ (< ಬಿನ್ನಾಣ) + — ಕಾಱ + — ತಿ₁ (< — ಇತ್ತಿ)]

ಬಿನ್ನಣದೋಱು 'ಬಿನ್ನಣಂದೋಱು' ನೋ.

ಬಿನ್ನಣವಡೆ 'ಬಿನ್ನಣಂಬಡೆ' ನೋ.

ಬಿನ್ನಣೆ 'ಬಿನ್ನಾಣ₂' ನೋ.

ಬಿನ್ನಣೆಗ 'ಬಿನ್ನಾಣಿಗ' ನೋ.

ಬಿನ್ನಣೆಗೆ (ನಾ). ಕೌಶಲ; ಚಮತ್ಕಾರ: ಗಗನದಿಂದಲೊ ಗಗನದರುಗಿಂದಲೊ ಪೊಗೆವೆ ತುಂಬೆದೆಯು ಮುಂಬಗದಿಲ್ಲದಿಹ ಬಿನ್ನಣಿಗೆಯುಗುವುದಾರ ಗಾಯನದ ರ್‍ಘುರಿಯಂ (ಗೀಕಂ. ೯-೭). [ < ಬಿನ್ನಾಣ ]

ಬಿನ್ನಣಿಸು 'ಬಿನ್ನಾಣಿಸು' ನೋ.

ಬಿನ್ನಣೆ (ನಾ). ಜಂಬ; ಹೆಮ್ಮೆ: ನಿನ್ನ ಮಗನ ಬಾಧ ಬಲು ಘನವಾಗಿದೆ ಇನ್ನೆಷ್ಟು ಕಾಲ ತಾಳುವೆ ಗೋಪಿ ಬಿನ್ನಣೆಯನು ಬಿಡು ಬಲು ದುಷ್ಟನು ಕೇಳೆ (ಪುರಂದ. ೩-೨೦೬-೦). [ಬಿನ್ನಣ (<ಬಿನ್ನಾಣ)+_ಎ₄]

ಬಿನ್ನತಿ (ನಾ). ನಿವೇದನೆ: ವಿಜ್ಞಾಪನೆ: ಅರಿಕೆ: 'ಬಿನ್ನತಿಗೆಯ್' ಪರಾ. 'ವಿನಂತಿ' ಹೋ.

[<ಪ್ರಾ. ವಿನ್ನತ್ತಿ, ವಿಣ್ಣತ್ತಿ./ಹಿಂ. ಬಿನತಿ./ಸಂ. ವಿಜ್ಞಪ್ತಿ]

ಬಿನ್ನತಿಗೆಯ್ (ಕ್ರಿ). ವಿಜ್ಞಾಪನೆ ಮಾಡು; ಬಿನ್ನವಿಸು: ಆನುಮೊಂದು ಬಿನ್ನತಿಗೆಯ್ವಂ (ಜಯುಕಾ. ೩-೭೩); ಭಕ್ತಿಯಿಂ ಬಿನ್ನತಿಗೆಯ್ವನಾಪುದು (ಚಶಂ. ೩.೭೬); ಅಪ್ರತಿಮಂ ಯಾದವಗಿರಿಯೊಡೆಯನಡಿಗೆ ಬಿನ್ನತಿಗೆಯ್ದಂ (ಚಶಂ. ೦೩). [ಬಿನ್ನತಿ + ಕೆಯ್₁]

ಬಿನ್ನತಿವತ್ತಳೆ (ನಾ). ಅರಿಕೆಯ ಓಲೆ; ವಿಜ್ಞಾಪನಾಪತ್ರ: ಬಿನ್ನವತ್ತಳೆ: ಈ ಬಿನ್ನತಿವತ್ತಳೆಗೆ ಮಹಾಸನ್ನಿಧಾನದ ಸಮುಖದ ಅವಸರದ ಆಜ್ಞಾಪನ (ಮುಂಕ್ರಶ. ೦೨೭-೦೦). [ಬಿನ್ನತಿ + ಪತ್ತಳೆ₁]

ಬಿನ್ನನೆ (ಅ). ೧. ಮೌನವಾಗಿ; ನೀರವವಾಗಿ: "ಜೋಕ್ಕಟಂ, ಬಿನ್ನನೆ, ಬಿನ್ನಗೆ – ಈ ೩ ಸುಮ್ಮನೆಯೆಂಬರ್ಥಂ" (ಶಶಾ. ೩೬-೨೬೩); ಎನ್ನಂ ಬೆಂಕೊಂಡು ಕಾದಲುಂ ಬಂದೀಗಳ್ ಬಿನ್ನನೆ ಮೊಗದಿಂ ಬೇರಲ್ ಬಿನ್ನತ್ತುದನಿನಿಸು ನೋಡ (ಶಂಕಶಾ. ೩-೭೩); ಲಕ್ಷ್ಮಣನುಂ ಬಿನ್ನನೆ; ಬಿನ್ನನೆ ನಡೆದಂ (ರಾಮಾಶ್ವ. ೩೩-೧೭). ೨. ಚಿಂತೆಯಿಂದ ಕೂಡಿ; ಖಿನ್ನವಾಗಿ: ಪರಿಚ್ಛೇದಿಸಿ ನುಡಿದೊಡೆ ಬಿನ್ನನೆ ಮೊಗಂ ಮಾಡಿ (ವಡ್ಡಾರಾ. ೬೦-೦೦); ಎಮ್ಮಣುಗದಮ್ಮನಿಲ್ಲದೆ ಬಿನ್ನನೆ ಸಾಮ್ರಾಜ್ಯಮಿನಿತುಮಾದೇಶಮುಮತ್ಯುನ್ನತಿಯಲ್ತು (ಅಂಪು. ೧೯-೬೨); ಚರಣ ಬಿನ್ನಪದಿಂ ಬಿನ್ನನೆ ಮೊಗಮಂ ಮಾಡಿ (ಸುಕುಮಾ. ೭-೯ ವ).

ಬಿನ್ನನಿರ್, ಬಿನ್ನನಿರು = ೧. ಸುಮ್ಮನೆ ಇರು; ಮೌನವಾಗಿರು; ನೀರವವಾಗಿರು: ನಾಣ್ಚಿ ತಲೆಯಂ ಬಾಗಿ ಬಿನ್ನನಿರೆಯುಂ

(ಅಂಜನಾ. ೯-೩೯ ವ) : ಅಭಿಮಾನದಿಂದಮೋ ಸೋರ್ಕಿಂದಮೋ ನಾನ್ ಬಿನ್ನನಿರ್ದಪೆನೆಂದು ಬಗೆಯಲಿಂ (ಅಭಿಶ್ರ. ೨೯-೯೯೬) ; ಕೆಲರು ಪೀಣೆಯ ನುಡಿಸಿ ಕುವರಿಯನೊಲಿಸಲಱಿಯದೆ ಬಿನ್ನನಿರೆ (ಸಾಳ್ವಭಾ. ೯-೬). ೨. ಖಿನ್ನವಾಗಿರು ; ಚಿಂತೆಯಿಂದಿರು : ತನ್ನಗಲ್ಕೆಗೆ ಬಿನ್ನನಿರ್ಪಂತೆ ಬಿನ್ನನಾಗಿರ್ಪ ವಿಮಾನದ ಮಣಿಕುಟ್ಟಿಮಭೂಮಿಗಳುಂ (ಅನಂಪು. ೩-೩ ವ); ಮಾಸಿ ತಾಱಿದ ಕುರುಳ್ಗಳುಂ ತನ್ನ ಬಿನ್ನನಿರ್ದ ಮೊಗದಿಂ ತವಿಲ್ದಿರೆ ವಿಲಾಸಮುಂ ಮುಂದೆ ಕಂಡನಲ್ಲಿ ಕಮಳಾಕ್ಷಿಯಂ (ಗದಾಯು.೯-೩). ೩. ಬೆಕೋ ಎನ್ನು; ಬಣಗುಂದು ; ಬಿನ್ನನಿರ್ದುದು ಸುರಶೈಲಮದೊಂದು ಮದುವೆಗಳಿಪಿದ ಮನೆವೊಲ್ (ಅನಂಪು. ೬-೧೦೮). [ ? + — ಅನ್[1]]

**ಬಿನ್ನಪ**. ಬಿನ್ನ, ಬಿನ್ನಹ, ಬಿನ್ನಾಯ್ಯ[1], ವಿನ್ನಪ, ವಿನ್ನಪ್ಪ (ನಾ). ೧. ಅರಿಕೆ ; ವಿಜ್ಞಾಪನೆ ; ಮನವಿ ; ವಿನಂತಿ : ದೇವ ಬಿನ್ನಪಂ (ಕಂಕಥಾ. ೩-೯೯); ಆಲಿಸನ್ನ ಬಿನ್ನಪವ ಲಾಲಿಸನ್ನ ಬಿನ್ನಪವ (ಮುಹಾರೀ. ೫. ೩೬-೮೦); ಬಿನ್ನಪವ ಕೇಳದರಸಿನೋಲಗದಿಂದ ಸಂನ್ಯಾಸ ಲೇಸು (ಸರ್ವಜ್ಞ. ೬೩೩). **ಬಿನ್ನ** : ೨. [ವೀಶೈ] ಜಂಗಮರನ್ನು ಊಟಕ್ಕೆ ಆಹ್ವಾನಿಸುವುದು : ನಿಮ್ಮನ್ನೇ ದೇವ್ರಾಂತ ತಿಳ್ಕೊಳ್ಳ ಹೇವಿ. ಬಿನ್ನ ಬಿಡುಗಡೆ ಎಲ್ಲಾನು ನೀವೇ ತೀರಿಸ್ಬೇಕು (ಕುಬ್ಬಿಕಾ. ೧೯೩). **ಬಿನ್ನಹ** : ೧. ಕಿಂಕರನಾಗಿ ಬಿನ್ನಹವ ಮಾಡುವ ಸದ್ಭಕ್ತರ ತೋಱಯ್ಯಾ (ಬಸವ. ೯೯೯) ; ಬಿನ್ನಹವ ಕೇಳ್ಳೆ ಕೃಷ್ಣ (ಕುಮ್ಯಾರಿ. ೩-೬); ಬಿನ್ನಹಕೆ ಬಾಯಿಲ್ಲವಯ್ಯ (ಶೂನ್ಯಸಂ. ೨-೦೫೦ ಹಲ್ಗಿ). **ಬಿನ್ನಾಯ್ಯ[1]** : ೨. ಊರಿನ ಒಂದು ಬಿನ್ನಾಯದ ನೆವ ಮಾಡಿಕೊಂಡು . . . ಊರು ಬಿಟ್ಟು ಕೆಲ ತಿಂಗಳು ಅಸ್ತಂಗತರಾದರು (ಗ್ರಾಮಾಯ. ೨೦). **ವಿನ್ನಪ** : ೧. ‘ವಿನ್ನಪಂಗೆಯ್’ ಪರಾ. **ವಿನ್ನಪ್ಪ** : ೧. ‘ವಿನ್ನಪ್ಪಂಗೆಯ್’ ಪರಾ. [<ಪ್ರಾ. ವಿನ್ನಪ್ಪ, ವಿಣ್ಣಪ್ಪ, ವಿನ್ನವ. / ತಮಿ. ವಿಣ್ಣಪ್ಪ ; ತುಳು. ಬಿನ್ನಯ, ಬಿನ್ನಹ; ತೆಲು. ವಿನ್ನಪ. / ಸಂ. ವಿಜ್ಞಾಪನ]

**ಬಿನ್ನಪಂಗೆಯ್**. ಬಿನ್ನಪಂಗೈ, ಬಿನ್ನಹಗೆಯ್, ಬಿನ್ನಹಗೈ, ವಿನ್ನಪಂಗೆಯ್, ವಿನ್ನಪ್ಪಂಕೆಯ್[1], ವಿನ್ನಪ್ಪಂಗೆಯ್ (ಕ್ರಿ). ಅರಿಕೆ ಮಾಡಿಕೊಳ್ಳು; ವಿಜ್ಞಾಪನೆ ಮಾಡು : ಮಂತ್ರಿಯರಸುಗಿಂತೆಂದು ಬಿನ್ನಪಂಗೆಯ್ದಂ (ಶಬ್ದಾರಾ. ೪೦-೦೩); ಕುರುಕುಳಗಗನಮೃಗಧರಂ ಬಂದನೆಂದು ಬಿನ್ನಪಂಗೆಯ್ವುದುಂ (ಕಂಕಥಾ. ೦೩-೬೩ ವ); ಬಗೆಯಱಿವು ಬಿನ್ನಪಂಗೆಯ್ದು (ಶಬ್ದಮ. ೦೩೦). **ಬಿನ್ನಪಂಗೈ** : ವಿರಚಿತಾಂಜಲಿಪುಟಘಟಿತಕರನಿಂತೆಂದು ಬಿನ್ನಪಂಗೈದಂ (ಶಾಂತಿಪು. ೨-೦೯ ವ); ಹಂಪೆಯ ಹರಿಹರಂ ಬಿನ್ನಪಂಗೈದಂ [ಪಾಠಾಂ. ಗೆಯ್ದಂ] (ಗಿರಿಜಾ. ಕಲಾಗರಗಂಧ. ೩). **ಬಿನ್ನಹಗೆಯ್** : ಸುರಿವ ಕಂಬನಿಯಿಂದೆ ಬಿನ್ನಹಗೆಯ್ದಳು (ಮೋಹನ. ೯-೩೦). **ಬಿನ್ನಹಗೈ** : ಎನ್ನ ಮೆಲ್ನುಡಿಯ ನಿವಾರಿಸದೇಡೆಂದು ಬಿನ್ನಹಗೈದಳು (ಮೋಹನ. ೦೦-೨೫). **ವಿನ್ನಪಂಗೆಯ್** : ಆ ಗ್ರಾಮದ ಪ್ರಜೆಗಳೆಲ್ಲಂ ಸುಖವಿರೆ ಪುಣ್ಯಂ ನಿನಗಕ್ಕುಮೆನ್ನು ವಿನ್ನಪಂಗೆಯ್ದಡೆ (ಮೈಶಾ. ೦೯೩೦. ೬೬-೯೨ : 1080). **ವಿನ್ನಪ್ಪಂಕೆಯ್[1]** : ತಟಿಕ್ಕಾಡಾ ಯಿಪ್ಪರ್ತ್ತಯ್ವರ್ಕ್ಕಂ ಸಿನ್ದರಸರುಂ ದೇವಸತ್ತಿಅರಸರುಂ ಮನಸಿಜರುಂ ವಿನ್ನಪ್ಪಂಕೆಯೆ (ಎಕ. III. ತಿರು. ೦-೬ ; 728). **ವಿನ್ನಪ್ಪಂಗೆಯ್** : ಎಱಿಯಿತಿಯಡಿಗಳ್ಪ್ರಸಾದಂಗೆಯ್ತ್ತ ಪೂರ್ವಾವತಾರಬಾಣರಾಜಱ್ಗ್ × ನ್ನಾರಂ ವಿನ್ನಪ್ಪಂಗೆಯ್ದೊಡೆ ಅಡಿಗಳಾ ಪ್ರಸಾದಂಗೆಯ್ದನ್ತೆ ಸಲ್ಗೆನ್ದರ್ (ಸೌಇಇ. IX-1. ೪೬-೦೦ ; ಸು. ೩ನೆಯ ಶಶ). [ಬಿನ್ನಪ + ಕೆಯ್[1]]

**ಬಿನ್ನಪಂಗೈ** ‘ಬಿನ್ನಪಂಗೆಯ್’ ನೋ.

**ಬಿನ್ನಯಿಸು** ‘ಬಿನ್ನವಿಸು’ ನೋ.

**ಬಿನ್ನಯ್ಸು** ‘ಬಿನ್ನವಿಸು’ ನೋ.

**ಬಿನ್ನವತ್ತ್ರಲೆ** ‘ಬಿನ್ನವತ್ತ್ರಳೆ’ ನೋ.

**ಬಿನ್ನವತ್ತ್ರಳೆ**. ಬಿನ್ನವತ್ತ್ರಲೆ (ನಾ). ೧. (ರಾಜ, ಅಧಿಕಾರಿ ಮೊದಲಾದವರಿಗೆ ಒಪ್ಪಿಸುವ) ಅರಿಕೆಯ ಓಲೆ ; ಮನವಿಪತ್ರ ; ವಿಜ್ಞಾಪನಾ ಪತ್ರ : ಕನಡಸಂಧಿವಿಗ್ರಹಿ ಬಿಂನವತ್ತ್ರಳೆಯ ಪ[ದ್ಮ][ರ]ಸಸಂ (ಶಾಇಇ. XI-i, ೫೦-೨೫ ; 1188); ಚರಣಕಾನತನಾಗಿ ಕೊಟ್ಟನು ಬಿನ್ನವತ್ತ್ರಳೆಯ (ತೊರವೆ. ೦-೦೬-೨); ದುರಗಲಿ ದಳವಾಯಿಯೊಡೆಯನ ಬಳಿಗಾಗ ಬರೆಸಿದ ಬಿನ್ನವತ್ತ್ರಳೆಯ (ಕಂನವ. ೦೬-೦೬೩). ೨. ಸನ್ಮಾನಪತ್ರ ; ಮಾನ ಪತ್ರ : ಪುರಪ್ರಮುಖರು ಹಲವರು ಸೇರಿ ದಾದಾಭಾಯಿಗೆ ಬಿನ್ನವತ್ತ್ರಳೆಯನ್ನೂ ನಿಧಿಯನ್ನೂ ಅರ್ಪಿಸಬೇಕೆಂದು ನಿರ್ಧರಿಸಿದರು (ದಾದಾಭಾ. ೯೯). **ಬಿನ್ನವತ್ತ್ರಲೆ** : ೧. ಬಿನ್ನವತ್ತ್ರಲೆಯಂ ತಂದಿರೆ ತೋಱಮೆಂದು ನುಡಿವುದುಂ (ಕಾರಂತಾ. ೬೩೬) ; ಕಳುಹಿದ ಬಿನ್ನವತ್ತ್ರಲೆ ಚಂದದುಡುಗೊಱೆಗಳನು ಕಟ್ಟಿಸಿ . . . ತಾ ಮುದದಿಂದಲೈದುವ ಹದನ ತನ್ನಯ ತಂದೆಗಱುಹೆಂದಟ್ಟ ನಡೆತರುತಿರ್ದ (ಸಕಕ್ಕು. ೦೨-೯೩) ; ಪಾಂಡ್ಯರಾಜನಿಗೆ ಬಿನ್ನವತ್ತ್ರಲೆಯಲ್ಲಿ ಬರೆದು ಮಧುರಾಪುರಕ್ಕೆ ಕಳುಹಿಸಿದನು (ಕಂಕ. ೫೯). [ಬಿನ್ನ (<ಬಿನ್ನಪ) + ಪತ್ತ್ರಳೆ[1]. / ತುಳು. ಬಿನ್ನತ್ರಲೆ]

**ಬಿನ್ನವಿಸು**. ಬಿನ್ನಯಿಸು, ಬಿನ್ನಯ್ಸು, ಬಿನ್ನೈಸು (ಕ್ರಿ). ಅರಿಕೆ ಮಾಡಿಕೊಳ್ಳು ; ವಿನಂತಿಸು ; ವಿಜ್ಞಾಪಿಸು : ಕೇಳ ಬಿನ್ನವಿಸುವೆನೆನ್ನ ಕಂಡುದನೆ (ಕಂಕಥಾ. ೬-೪೦); ದೇವ ಕೈಕೊಂಡು ಕಾವುದು ನೀನೆಂದು ಸುರಾಳಿ ಬಿನ್ನವಿಸೆ (ಭರ್ಮಾಕ್ಕು. ೦-೨೦೦); ತಪ್ಪದೆ ಬಿನ್ನವಿಸಿದನು ಮಾದ್ರರಾಜಂಗೆ (ಕುವ್ಯಾಕ. ೫-೦೮). **ಬಿನ್ನಯಿಸು** : ಹರಭಕ್ತನಂ ಪದುಳದಿಂದೆ ಕಳುಪಿದೆನೆಂದನು ಬಿನ್ನಯಿಸೆ (ಸೀಂರ. ದೇ. ೩೩-೭) ; ವಿನಯದಲಿ ಬಿನ್ನಯಿಸೆ ಕೃಪನೆಂದನು (ಕುವ್ಯಾರೀ. ೨-೩೯) ; ಎನ್ನ ಬಿನ್ನಪವ ಲಾಲಿಪುದೆಂದು ಸುಗುಣಾಂಗೆ ಬಿನ್ನಯಿಸಿದಳು (ಮೋಹನ. ೯-೨೩). **ಬಿನ್ನಯ್ಸು** : ಬಿನ್ನಯ್ಸಿದಂ ಸುರರೆಲ್ಲ ಚೋದ್ಯಮೆನೆ (ಕಬ್ಬಿಗ. ದೇ. ೦೫೦-೨); ಮಣೆಯೊಳ್ಕಿದ್ದ್ ಳಿಟ್ಟು ಬಿನ್ನಯ್ಸಿದಂ (ಕಂಪು. ೩-೯). **ಬಿನ್ನೈಸು** : ಎಲ್ಲರ್ಗೆ ಕೊಟ್ಟೆನೆಂದಭವಂಗೆ ಬಿನ್ನೈಸೆ (ಬಸವ. ೦-೯೫): ಸಾತ್ಯಕಿ . . . ಉತ್ತಮಾಂಗಕೆ ಕರಯುಗವ ಚಾಚುತ್ತ ಬಿನ್ನೈಸಿದ ಧನುರ್ಧರಪಾಲನೇತ್ರಂಗೆ (ಕುವ್ಯಾದ್ರೋ. ೦೦-೯); ಸನ್ನಿಧಿಯಲಿ ಬಿನ್ನೈಸಿದೆವು (ಸುಂದ್ರಾಕಾಂ. ೫೦). [<ಬಿನ್ನಪ + — ಇಸು[2]]

**ಬಿನ್ನಹ**. ‘ಬಿನ್ನಪ’ ನೋ.

**ಬಿನ್ನಹಗೆಯ್** ‘ಬಿನ್ನಪಂಗೆಯ್’ ನೋ.

**ಬಿನ್ನಹಗೈ** ‘ಬಿನ್ನಪಂಗೆಯ್’ ನೋ.

**ಬಿನ್ನಾಣ**, ಬಿನ್ನಣ, ಬಿನ್ನಾಯ್ಯ[2], ವಿಂದಾಣ, ವಿನ್ನಾಣ (ನಾ). ೧. ವಿಶೇಷವಾದ ಜ್ಞಾನ ; ಗಾಢವಾದ ತಿಳಿವಳಿಕೆ : ಬಂದು ನಿಂದನಂ ಕಂಡು ವಿರಾಟಂ ನಿನ್ನ ಬಿನ್ನಾಣಮೇನೆಂದು ಬೆಸಗೊಳೆ (ಕಂಕಥಾ. ೯-೩೩ ವ); ಎನ್ನೊಡಲೂ ಅಲ್ಲ ನಿನ್ನೊಡಲೂ ಅಲ್ಲ ಅದು ನೀ ಮಾಡಿದ ಜಗದ ಬಿನ್ನಾಣದೊಡಲು ಕಾಣಾ ರಾಮನಾಥ (ದೇರಾವ. ೦೬-೨೯); ಪನ್ನಗಧರ ಕೊಟ್ಟ ಬಿನ್ನಾಣದಿಂದ ಸ್ತುತಿಗೈದು ಪೊಗಳುವೆ (ಸರ್ವಜ್ಞ. ೨೮). ೨. ಕೌಶಲ್ಯ ; ನೈಪುಣ್ಯ ; ಚಾತುರ್ಯ ; ಜಾಣ್ಮೆ : ಬೆಡಗು ಬಿನ್ನಾ [ಪಾಠಾಂ. ನ್ನ]ಣಮೆಂಬುದೇನೋ (ಬಸವ. ೬೬); ಬಾಣಾವಳಿಯ ಬಿನ್ನಾಣವನು ತೋಱಿದನು (ಸಂಕಶ. ೦೬-೭೦) ; ಎನ್ನೊಡಲೊಳಗೆ ತೋಱಿ ತೋಱಿ ಅಡಗುವ ನಿಮ್ಮ ಬೆಡಗು ಬಿನ್ನಾಣವನೆನಗೆ ತಿಳಿಯಬಾರದು (ಅಬಂಕೀ. ೨೯೦-೬೫). ೩. ಚಮತ್ಕಾರದಿಂದ ದೊರಕಿದುದು ; ಕೌಶಲದಿಂದ ಲಭ್ಯವಾದುದು : ತನ್ನಂತೆ ಪಲರ ಬಗೆದಡೆ ಕೈಲಾಸ ಬಿನ್ನಾಣವಕ್ಕು (ಸರ್ವಜ್ಞ. ೬೦೩). ೪. ಅಂದ ; ಸೊಬಗು : ಪಚ್ಚೆಯ ಪಾಸುಗಲ್ಲ ಬಿನ್ನಾಣದಿನಿಂದ್ರನೀಲಮಣಿವೇದಿಕೆಯಿಂ . . . ಬಗೆಗೆ ಕೌತುಕಮಾಯ್ತು ವಿವಾಹಮಂಟಪಂ (ಉತ್ತಲಿ. ೬-೯). ೫. ಒನಪು ; ಒಯ್ಯಾರ :

ಹೆದರುವೆನು ನಾ ನಿನ್ನ ಬಿನ್ನಾಣಕೆಲೆ ಹೆಣ್ಣೆ (ತಂ೧೯೪. ೫೯-೧). ೬. ವಿನೋದ ; ಹಾಸ್ಯ ; ಗೇಲಿ : ಬಾಣ ನಿಷ್ಫಲವಾದುದವಮರರ ಶ್ರೇಣಿಗಳು ಕೈಮುಟ್ಟಿ ನಗೆ ಬಿನ್ನಾಣವಾದುದು ದನುಜ ಕೈಗುಂದಿದನು ನಿಮಿಷದಲಿ (ಕೌಶಿಕಾ. ೨೨-೪). ಬಿನ್ನಣ : ೧. ತನ್ನ ಬಿನ್ನಣವಮಂ ನೆರೆದ ನೆರವಿಗೆ ಮೆರೆಯಲ್ವೇಡಿ (ಪಣ್ನಾ. ೦೨೦-೦೬); ಶಿವಭಕ್ತರೆಲ್ಲರು ಶೂನ್ಯಸಿಂಹಾಸನದ ಗುರುವಿನ ಬಿನ್ನಣಕೆ ಬೆಜಗಾಗುತಿರ್ದರು (ಶೂನ್ಯ. ೨೩-೩). ೨. ನೆಗಟ್ದುದು ಬಲ್ಲ ಬಿನ್ನಣಮಿಳಾವಳಯಕ್ಕೆ ಸಮಸ್ತಧಾತ್ರಿ ಕೆಯ್ಯಾಗಿವುದು ನಿಮ್ಮದೊಂದೆ ಪೆಸರ್ಗೇಳ್ದೊಡೆ (ಶಂಕಶಾ. ೦೩-೩೬); ಅಱಿಯಮೆ ಬಿಲ್ಲ ಬಿನ್ನಣಕೆ ಗಾಂಡಿವಿಯಲ್ಲು ಪಿನಾಕಪಾಣಿಯುಂ ನೆಱಿಯನಿದಿರ್ಚಿ ನಿಮ್ಮೊಡನೆ ಕಾದಿ ಗೆಲಲ್ (ಗದಾಯು. ೪-೯೯): ಪಿರಿದುಂ ಬಿನ್ನಣದಿಂದೆ ನಿರ್ಮಿಸಿದ ನಾನಾಚಿತ್ರಸತ್ಪುತ್ರಿಕೋತ್ಕರಗವಮಂ ತೆತ್ತಿಸಿ (ಶಾರಚ. ೪-೬೨). ೪. ಬಿನ್ನಣದ ಮನೆ ಕಟ್ಟಿ ಕೋಟಿಕೊತ್ತಳವಿಕ್ಕಿ (ಪುರಂದ. ೦-೦೩೨-೨). ೬. ಬಿನ್ನಣದಿ ವಿಗೆಯೋರೆನೋಟಡ ಕಣ್ಣೆನಿಂದೀಕ್ಷಿಸಿದಳೆಂದಾಡಿದರು ಕೆಲಕೆಲರು (ವಕಶ. ೩-೬೦). ೭. ಹೆಚ್ಚುಗಾರಿಕೆ; ಅತಿಶಯ : ಎನ್ನಟ್ಟಡುಗೆಯನುಂಡೊಡೆ ಬಿನ್ನಣವೇನರಸ ನರೆಗಳಾಗವು (ಶಂಕಶಾ. ೬-೩೪); ಇನ್ನಿಪ್ಪುವುಮಿ ತೆಱದಿಂ ಬಿನ್ನಣವೇಂ . ಕಂದಲಕ್ಷಣಂ ಕಮಲಮುಖೀ (ಛಂದೋಂಬು. ೪-೨೩೨ ಅತಿಕರ). ೮. ಭ್ರಮೆ ; ಭ್ರಾಂತಿ : ಮುನ್ನಿಲ್ಲದುದಂ ಪಡೆವನೆ ಬಿನ್ನಣ ಮಾಕಾಶದಲ್ಲಿ ಪೂವಡೆವಂದಂ (ಸಮುಕ. ೦೦-೨೦). ಬಿನ್ನಾಯ್ಯ : ೨. ಬಿಲ್ಲ ನಾಯಕರು ದೇವ ರಘುರಾಮರ ಹೊಗಳುವ ಭಟರು ಬಿನ್ನಾಯು ದಿಂದೊಪ್ಪುತಿಹರು (ಕರ್ಣಾಕ. ೨೬೮). ವಿಂದಾಣ : ೯. ಮಲ್ಲಯುದ್ಧದ ಒಂದು ವರಸೆ,– ಪಟ್ಟು : ವಿಂದಾಣಕೆ ಮೈಗೊಡುವನು ಡೊಕ್ಕರದಿಂದ ಹಾಕಿದೊಡುರುಳುವವನು . . . ಮುಕುಂದನದೇಂ ವೈಸಿಕನೊ (ವೀಚಿಂಸಂ ೦೬-೧೨೩); ಸಂದ ಕೊಕ್ಕಸ ಗುಂಡು . . . ಚೀಣ ಪಟ್ಟಸು ಮೆಂದೆನಿಪ ವಿಂದಾಣದಲಿ ಕಾದಿದರು ಜಟ್ಟಿಗಳು (ಸಾಳ್ವಭಾ. ೨೨-೬೨). ವಿನ್ನಾಣ : ೧೦. [ಕಾಮಶಾ] ಸುರತದ ಒಂದು ಬಗೆ, – ರೀತಿ : ನಸುಸಡಿಲಿದ ತಕ್ಕೆಯ ವಿನ್ನಾಣದಿನಸಮಾಯುಧನ್ನವನೀಕ್ಷಿಸುತಿರೆ ಭರವಸದಿಂ ಮೋಹನಮಲ್ಲಗಲಹವಮಂ ಮಾಡಿದರಾ ಪ್ರಿಯರು (ಶಮುಕಾ. ೬-೫೦).

[ < ಪ್ರಾ. ವಿನ್ನಾಣ. ವಿಣ್ಣಾಣ; / ತಮಿ. ವಿಣ್ಣಾಣ; ತೆಲು. ವಿನ್ನಾಣ. /ಸಂ. ವಿಜ್ಞಾನ]

ಬಿನ್ನಾಣಗಿತ್ತಿ (ನಾ). ಒಯ್ಯಾರಿ; ಬೆಡಗುಗಾತಿ : ಫೋಟೋ ತೆಗಿಸಿ ಕೊಳ್ಳಲಿಕ್ಕೆ ಹೋಗಿದ್ದಳೇ ಈ ಬಿನ್ನಾಣಗಿತ್ತೀ? (ಕುಪುರುಡಾ. ೯೯); ಇನ್ನು ಕೆಲವರು ಬಿನ್ನಾಣಗಿತ್ತಿ ಎಂದರು(ಅಬೋಡೇ. ೦೬೩); ಮನಸ್ಸು . . . ಒಬ್ಬ ಬಿನ್ನಾಣಗಿತ್ತಿಯನ್ನು ಆರಾಧಿಸಲೆಳಸಿತು (ಶಾಂತ. ೩೬).

[ ಬಿನ್ನಾಣ + – ಗಿತ್ತಿ]

ಬಿನ್ನಾಣವತಿ (ನಾ). = ಬಿನ್ನಾಣಗಿತ್ತಿ : ಬಿನ್ನಾಣವತಿಯ ಕಿಸರದ ಚೆನ್ನೆಯ . . . ನೆರೆವುದಿನ್ನೆಂತೊ (ಕಕಹಾಂ. ೨೬-೩೬).

[ ಬಿನ್ನಾಣ + – ವತಿ ]

ಬಿನ್ನಾಣೆ (ನಾ). – ಬಿನ್ನಾಣಗಿತ್ತಿ : ಬಿನ್ನಾಣ, ಸೊಕ್ಕೆಲ್ಲ ಇಳಿಯುವುದು ನಾಳೆ ! (ತಂರ್ರತ. ೯೯-೩); ಕೊಂಕುನೋಟದೊಳೆನ್ನನೇತಕೆ ಕೊಲ್ಲುವೆ ಬಿನ್ನಾಣೆ (ತಂಜಾತ. ೦೯೬-೦೬). [ ಬಿನ್ನಾಣ + –ಇ ]

ಬಿನಾಣಿ, ಬಿನ್ನಣಿ, ವಿನ್ನಾಣಿ (ನಾ). ೧. ಜಾಣ; ಚತುರ : ಜಗದ ಬಿನ್ನಾಣಿಯು ತೊಡಕ ಬಿಡಿಸಬಾರದು (ಅಶತ. ೬೨೪); ಪ್ರೌಢಿಯೊಳೆಂತಪ್ಪ ರುಮಂ ಮೆಚ್ಚದೆ ಕಡುಬಿನ್ನಾ[ಶಾಶಾಂ. ಸ್ವಿ]ಣಿಯುಪ್ಪ ಪಱಿಯುಂಗೊಸೆ ದೊಡೆ -(ಬಂಪಹಾ. ೩-೦೫): ಸಮಜೋಳಿ ಜೋಡಿಯಿಯುಂ ಕಾದಿದರ್ ಬಲ್ಲ ಬಿನ್ನಾಣಿಗಳ್ (ಕಂತ್ರ. ೩೯-೦೦). ೨. ಕುಶಲಕಾರ್ಯಗಳಲ್ಲಿ ನೈಪುಣ್ಯ ವುಳ್ಳವನು; ಕರಕುಶಲಿ : ಸೂತ್ರಧಾರಿ ಶ್ರೀಗುಂಡನ್ ಅನಿವಾರಿತಾಚಾರಿಗೆ ಮೂಮೆ ಪೆರ್ಜ್ಜಿಸಿವುಪಟ್ಟಮು ತ್ರಿಭುವನಾಚಾರಿಯೆಂದು ಪೆಸರಿತ್ತು ಪ್ರಸಾದಂಗೆಯ್ದಾ ಪೃ(ಪೃ)ಥಿ(ಥ)ವಿಯಾ ಬಿನ್ನಾಣಿಗಳಾ ಬಳ್ಳಿಗವಾರ್ತ್ತೆ ಇಲ್ಲ (ಇಶಿ. X. ೦೬೪-೬: ೬೫ಯ ೬೪); ದೇಗುಲಮಂ ಬೆಸಗೆಯ್ದ ಬಿನ್ನಾಣಿ ಪ್ಪೊಲ್ಲಮಂಗೆ ಪನ್ನೆರಡು ಮತ್ತರ್ (ಎಇ. IV. ೩೬೯-೩೬; 975); ಹಲವು ಚಿತ್ರವ ಬರೆದನವೞೋಳಿಹನೆ ಅಳವಟ್ಟ ಕೆಲಸಂಗಳೊಳಗಿಹನೆ ಬಿನ್ನಾಣಿ (ಶಿಬಗೀ. ೩೪-೦೫೬). ಬಿನ್ನಣಿ : ೧. ಬಲ್ಲಾಳಪ್ಪ ಬಿಲ್ಲ ಬಿನ್ನಣಿಯಿದಿರ ರೂಪನೆತ್ತಲೀಯದೊಂದೆ ಕೋಲಿಂದಿಸುವಂತೆ (ಶಂಕಶಂ. ೦೨೬-೦೬). ವಿನ್ನಾಣಿ : ೨. ಸೂತ್ರಧಾರಿಗೆ ಮೂಮೆ ಪೆರ್ಜ್ಜಿಸಿವುಗೆಯ್ದು ಬಟಿಕ್ಕೆ ಈ ವಿಷಯದ ವಿನ್ನಾಣಿಗಳಾ ಬಳ್ಳಿಗವರ್ತ್ತೆಯನುಟಿಪಿದ ಆಚಾರಿಯ ಪೆಸರಿವನಜುಮಿ (ಇಶಿ. X, ೦೬೫-೬: ೬ನೆಯ ೬೫).

[ ಬಿನ್ನಾಣ + – ಇ. /ಪ್ರಾ. ವಿಣ್ಣಾಣಿ. / ತೆಲು. ವಿನ್ನಾಣಿ ]

ಬಿನ್ನಾಣಿಗ, ಬಿನ್ನಣಿಗ (ನಾ). ಚತುರ; ನಿಪುಣ : ಪ್ರಾಣ ಕೊರಳಲಿ ನಿಲಲು ರಣಬಿನ್ನಾಣಿಗರು ಜವಗುಂದೆ (ಕುವ್ಯಾಶಿ. ೬೦೩. ೫-೬೫). ಬಿನ್ನಣಿಗ : ಎಚ್ಚಾಡಿದರ್ ಬಿಲ್ಲ ಬಿನ್ನಣಿಗರಂದು (ತಂಕೃ. ೧೬-೪೪): ಬಿಜ್ಜೆಯೊಳ್ ಬಿನ್ನಣಿಗರನಾಗಿಸಿ . . . ಬಿಲ್ಲಾಱಿಕೆಯೊಳ್ ಬಲ್ಲಿಗಲಿ ಗಳನೆಸಗಿ, ಪಾಟವಪೂಟವುಪ್ಪಂತು ಕಲಿಸಲೊಡಂ (ರಾಶಕಾಕ್ಕ. ೦೫೦-೦೧).

[ಬಿನ್ನಾಣ + – ಇಗ ]

ಬಿನ್ನಾಣಿಸು, ಬಿನ್ನಣಿಸಂ (ಕ್ರಿ). ೧. ಚಾತುರ್ಯವನ್ನು ತೋರು; ಕುಶಲತೆಯನ್ನು ತೋರಿಸು : ತನ್ನ ಮಾಂತ್ರಿಯ ಕೈಗೆ ಕೊಟ್ಟು ನಿವಾಳಿಯ ಬಿನ್ನಾಣಿಸಿದನಕಂಪಾಂಕಾ(ಕಕತ. ೩೬-೩೬). ೨. ಚಾತುರ್ಯ ದಿಂದ ಹೇಳು; ಕುಶಲತೆಯಿಂದ ನಿರೂಪಿಸು : ನೀವೊಮ್ಮೆ ದೇವನ ಮುನ್ನ ಕಂಡಿದ್ದುದರಿಂದ ಬಿನ್ನಾಣಿಸಿದಿರದು ನಮಗೆ ಕಂಡಂತಾಯ್ತು (ಶಕಕ. ೬೬-೦೬೬); ಮುನ್ನಿನ ಪಾಂಡವವರಸುತಕಥನವ ಬಿನ್ನಾಣಿಸುವೆ ಧರೆಯೊಳಗೆ (ಕುಕುಶಾಂ. ೦೦). ೩. ಮಲ್ಲಯುದ್ಧದ ಪಟ್ಟು ಹಾಕು : ಹುಗುವರು ಪೊಕ್ಕು ಹೋರುವರು ಬಿನ್ನಾಣಿಸಿ ಬಗಿವರು ಕೈ ಕಾಲ ಬೆರಲ ಸಿಗಿವರು ಸಿಕ್ಕಿದರಾಯನ್ನಲೊಲ್ಲದೆ ಸಗುಣಾತ್ಮಕರು ಕಾದಿದರು (ಸೋಹಕ. ೩೬-೩೬). ಬಿನ್ನಣಿಸು : ೧. ಲಸದ್ಭಿತ್ತಿಯೊಳಾ ಚಿತ್ರ ಪಟದೊಳೊಪ್ಪುವ ನವಬಾಲಿಕೆಯ ಅದ್ಭುತಮಪ್ಪ ವಿಲಾಸಶ್ರೀಯುಂ . . . ಅತಿಚತುರಂ ಬಿನ್ನಣಿಸುತ ಬರೆದಂ (ಜಯುಕಾ. ೩-೦೩). ೪. ಕೌಶಲ್ಯದಿಂದ ರಚಿಸಂ : ಮುನ್ನಮಿಶಾಲಯದೊಳಗೆ ಚಿತ್ರರಥನೆಂಬವಂ ನಿಖಿಲವರ್ಣ ಕದ ಚಿತ್ರಮಂ ಬಿನದದಿಂ ಬಿನ್ನಣಿಸೆ (ಪದ್ಮಾ. ೦೦-೦೪೩).

[ಬಿನ್ನಾಣ + – ಇಸು]

ಬಿನ್ನಾಯ್ಯ, ' ಬಿನ್ನಪ ' ನೋ.

ಬಿನ್ನಾಯ್ಯ ' ಬಿನ್ನಾಣ ' ನೋ.

ಬಿನ್ನೈಸು ' ಬಿನ್ನವಿಸು ' ನೋ.

ಬಿಪ್ಪಂಡ (ನಾ). ಪಕ್ಷಿಗಳ ಕೂಗು,–ಕಲರವ : "ಬಗ್ಗು, ಬಿಪ್ಪಂಡಂ, ಬೆಜ್ಜ, ಚಪ್ಪರಣ–ಈ ೪ ಜಂಕಣ" (ಕಶಶಾ. ೩೬-೨೩೬); ಪಪ್ಪುಕಂ, ಕಪ್ಪಡಿ, ಬಿಪ್ಪಂಡಂ, ಉಪ್ಪಂಡಂ (ಶಮದ. ೩೬ ಕ್ರಿಯೋ); " ವ್ಯರ್ಥ" (ಶಮದ. ಪ. ೪೬ ಕ್ರಿಯೋ). [ ? ]

ಬಿಪ್ಪಂಡಿಸು (ಕ್ರಿ). (ಅಲಂ) ದೂಷಿಸಂ ; ದೂರು : ಮತಿಯಂ ಬಿಪ್ಪಂಡಿಪಳ್ ಲಕ್ಷಣಮನೆನಸಳೌದಾರ್ಯಮಂ ಚಿಂತಿಸಳ್ (ಕಾರಂಪು. ೫೪೬); ಈ ನಡೆನುಡಿವಳಿಗಳಿಂದ ಜಂಕಿಸಿ ಬಿಪ್ಪಂಡಿಸಿ ನಮ್ಮನ್ನೊದೆದು, ಹುಚ್ಚಡಸು ವಂತೆ ಹೀಗೆ ಕುಣಿಯಿಸಿ (ಮಂತ್ರಕ. ೦೬೦-೦೪). [ಬಿಪ್ಪಂಡ + – ಇಸು]

ಬಿಬೀಚಣ (ನಾ). ರಾವಣನ ಸಹೋದರ ; ವಿಭೀಷಣ : ಸುಸೇಣಂ, ಬಿಬೀಚಣಂ ಮುಂತಪ್ಪ ಬೀರರ ಕೂಟಮುಂ (ಅದ್ಭುತ. ೪೬-೦೪).

[<ಸಂ. ವಿಭೀಷಣ]

**ಬಬ್ಬಚ್ಚ** (ನಾ). ೧. ಅಸಹ್ಯ : 'ಬಬ್ಬಚ್ಚಿ' ಪರಾ. ೨. (ಅಲಂ) ನಿವಾರಣೆ ; ಪರಿಹಾರ : 'ಬಬ್ಬಚ್ಚಿಸು' ಪರಾ. ೩. ನಿಷ್ಫಲ; ವ್ಯರ್ಥ: 'ಬಬ್ಬಚ್ಚಗೊಳಿಸು' ಪರಾ. [<ಸಂ. ಬೀಭತ್ಸ]

**ಬಬ್ಬಚ್ಚಗೊಳಿಸು** (ಕ್ರಿ). ನಿಷ್ಫಲಗೊಳಿಸು ; ವ್ಯರ್ಥಮಾಡು : ಮೆಟ್ಟಿದನೊ ಅಹಿತನ್ನ ಶರ ಬಬ್ಬಚ್ಚಗೊಳಿಸಿದಕೀಗಲುರುಗಾಸ್ತ್ರಚ್ಚವೆನು ತಡೆಯೆಂದು ಬಿಡಲು (ಕರಾಭಾ. ೩೨೪-೯೬). [ಬಬ್ಬಚ್ಚ+ಕೊಳ್$_1$+—ಇಸು$_1$]

**ಬಬ್ಬಚ್ಚಿಸು** (ಕ್ರಿ). ನಿವಾರಿಸು; ಹೋಗಲಾಡಿಸು : ತುಚ್ಛರಾಗುವರಂದು ಮಿಗಿಲ ಭೂಭುಜರು ಮುಂದೆಚ್ಚರದೋರ್ದಲ್ಲೆ ವಿಜಯಾಧಿನಾಥ ಬಬ್ಬಚ್ಚಿಸದಲಿರಲ್ (ಶಬಸು. ೬-೩೦); ಆ ವ್ಯಸನವನು ಬಬ್ಬಚ್ಚಿಸಲು ತಿಳಿಹಾಗುದಲ್ಲಾಗೆನೆ ವಿಭೀಷಣನು (ತರಾಮಾ. ೯೩೯-೨೦). [ಬಬ್ಬಚ್ಚ + — ಇಸು$_1$]

**ಬಬ್ಬಚ್ಚು** (ನಾ). ಅಸಹ್ಯಕರವಾಗಿರುವುದು : ಬೇರಸಗಿತಿಂಬವನಿಸುರರಿರವೀ ರಣಕೆ ಬಬ್ಬಚ್ಚು . . . ಎಂದೊದರೆ ಕಹಳೆಗಳು (ಕಕುಶಾ. ೨೩-೦೦). [< ಸಂ. ಬೀಭತ್ಸು]

**ಬಬ್ಬಚ್ಚೆ** (ನಾ). ಅಸಹ್ಯವನ್ನುಂಟುಮಾಡುವವಳು ; ಅಸಹ್ಯಕರಳಾದ ವಳಂ : ಮೆಟ್ಟಿದನುಕೂಲೆಯರ ಸಂಗ ಸುಖವುಂಗ ಬಬ್ಬಚ್ಚೆಯರ ಬಲಾತ್ಕಾರ ಸೋಂಟವುಂ ಬೇಟವನು ಮೆಚ್ಚುವದೆ (ಶಬಸು. ೨೬-೧೪). [ಬಬ್ಬಚ್ಚ + — ಎ$_2$]

**ಬಬ್ಬನೆ** (ಅ). ಅತಿಶಯವಾಗಿ ; ಅಧಿಕವಾಗಿ : ಬೆಬ್ಬನೆ ಬೆಜಿತು ಬಬ್ಬನೆ ಬೀಗಿ ಅಹಂಕಾರಭರಿತನಾಗಿಪ್ಪವನ ಮನೆಯ ಲಿಂಗಸನುಮತರು ಹೊಗರು (ಸಕವ. II. ೩೩೦-೯); ಸಂತೋಷಂ ಸರ್ವಾಂಗದೊಳು ತೀವಿ ಬಬ್ಬನೆ ಬರಿದಬ್ಬರಿಸುತ್ತ (ಸಂಶಿಶ. ೬-೩೪); ಓಹಿಲದೇವಂ ಕೊಬ್ಬುತ್ತುರ್ಬುತ್ತಂ ಬಬ್ಬನೆ ಬೀಗಿ (ಉದ್ಭಟೀ. ೩-೯೩). [ಬಬ್$_0$ + — ಅನೆ$_1$]

**ಬಬ್ಬಿ** 'ಬೀಬಿ' ನೋ.

**ಬಬ್ಬಿನಂ** (ಅ). ಕೂಡಲೆ : ಮತ್ತಾಂಗನಿಕಾಯಂ ಬಬ್ಬಿನಂ ಬೆಕ್ಕನೆ ಬರಿದಪುದು (ಸುಕುಮಾ. ೪-೦೦).

**ಬಬ್ಬುರಿವಲ್** 'ಬರ್ಬು' ಪರಾ.

**ಬಬ್ಬೋಕ** (ನಾ). ೧. [ಕಾವ್ಯಮೀ] ಸ್ತ್ರೀಯ ದಶವಿಧಶೃಂಗಾರ ಭಾವಗಳಲ್ಲಿ ಒಂದು ; ಲೀಲಾ, ವಿಲಾಸ, ವಿಚ್ಛಿತ್ತಿ, ವಿಭ್ರಮ, ಕಿಲಕಿಂಚಿತ, ಮೊಟ್ಟಾಯಿತ, ಕುಟ್ಟಮಿತ, ಬಿಬ್ಬೋಕ, ಲಲಿತ ಮತ್ತು ವಿಹೃತ ಎಂಬ ಹೆಣ್ಣಿನ ಹತ್ತು ಸ್ವಭಾವಜನ್ಯ ಅಲಂಕಾರಗಳಲ್ಲಿ ಒಂದು ; ಗರ್ವದಿಂದ ಉಂಟಾಗುವ ಅನಾದರ : "ಬಿಬ್ಬೋಕ ಮೆಂದೊಡೆ ಕಾಂತನ ಕೂಟಂಗಳಲ್ಲಿ ಗರ್ವದಿಂದಿಹ ಅನಾದರಣಂಗಳು" (ಶಾಕಲಾ. ೯೬); ಲಲಿತವಿಲಾಸಬಿಬ್ಬೋಕವಿಭ್ರಮಗುಣ ಕಿಲಕಿಂಚಿತಲೀಲೆಗಳು ತೊಲಗದೆ ಸಲೆ ನೆಲಸಿಹವಾ ಕೇರಿಯ ಬೆಲೆವೆಣ್ಣಗಳೊಳಗೆ (ಕರಾಚಾಸಾಂ. ೪-೦೦೬). ೨. ಹುಸಿಮುನಿಸಂ; ಹುಸಿಕೋಪ ; ಉಳ್ಳುಡೆಯಂ ಮೆಲ್ಲನೆ ಲೀಲೆಯಿಂ ಸೆಳೆದೊಡನ್ನಂ ಸಸ್ಪೃಹಂ ಕೊಳ್ವೆನ್ನೆಲ್ ಕಡಗಣ್ಣಿಂದಮೆ ಕೋಂಕುವಳ್ ಸಹಜವಿಾ ಬಿಬ್ಬೋಕಮೆನ್ನಾಕೆಯಾ (ಲೀಲಾವ. ೨-೦೦೫) ; ಸೌಂದರಿ . . . ಬಿಬ್ಬೋಕಂ ಕುಡಿವರಿಯಲ್ ನಿಬ್ಬೆಗದೆ ನಿನಗಕಾರಣಂ ಹಸನಮಡೆಂದಳ್ (ಅದ್ಭುತಿ. ೦೦-೨೩). [ಸಂ].

**ಬಭೀಷಿಕೆ** (ನಾ). ಅಂಜಿಕೆ; ಭಯ : ಉತ್ಪ್ರರಜತಾವದಾತಲೋಹ ಪುತ್ರಿಕಾನಂದ ಲಾಕ್ಷಾಹಿಂಗುಲಿ ಕವಾಟಲಕಮರ್ಧಕರವಾಳಚಾಲನಪ್ರಕಟಿತ ಭಟಬಿಭೀಷಿಕಾಡಂಬರಂ (ಆದಿಪು. ೦೩-೯೩ ವ); ಅಂತೆ ವೇಷದಲಿ ಮತವೇಮ ಕಾಣಾವ ಬಭೀಷಿಕೆಯ ನಿಜವಾಗಿ ಮತವೆನ್ನಬಾರದಲೆ ಅದು ಬಿಭೀಷಿಕೆ ಯೆಂದು ತೋರುವುದು ನಿಜವಾದ ಮತಕೆ ಬೆಲಿ ತಂದಂತೆ (ವವರಾ. II, ೯೦). [ಸಂ. ಬಭೀಷಿಕಾ]

**ಬಮ್ಮಗೆ$_1$** (ಅ). ೧. ಬಿಗಿಯಾಗಿ ; ಬಲವಾಗಿ : ಗಟ್ಟಿಯಾಗಿ ಒಮ್ಮೆ ಯುಂಡವ ತ್ಯಾಗಿ ಇಮ್ಮೆಯುಂಡವ ಭೋಗಿ ಬಮ್ಮಗುಂಡವ ನೆಜ್ ರೋಗಿ (ಸರ್ವಜ್ಞ. ೨೦೨೩); ಹಾಗೆಲ್ಲ ಬಮ್ಮಗೆ ಉಂಡು ತೇಗಬೇಕಾದರ . . . ಉಡುಪಿಗೇನೆ ಹೋಗಬೇಕು (ಪುರಪು. ೯೯) ; ಬೊಪ್ಪಣ . . . ಮಹಾ ರಾಣಿಯ ಕಾಲುಗಳನ್ನು ಬಮ್ಮಗೆ ಹಿಡಿದು, ಅದರ ಮೇಲೆ ತನ್ನ ತಲೆ ಯನ್ನಿಟ್ಟ (ಕಾಂತೀರಾ. ೧೮೪). [ಬಿಮ್ಮು$_1$ + — ಆಗೆ$_1$./ತುಳು. ಬಮ್ಮಗೆ]

**ಬಮ್ಮಗೆ$_2$** (ಅ). ಮೌನವಾಗಿ; ಸುಮ್ಮನೆ : ಬೊಮ್ಮವನು ಅಜಿದಿಹರ ಬಮ್ಮಗಿದ್ದಿರಬೇಕು (ಸರ್ವಜ್ಞ. ೯೩೪); ಬಿರುಸು ಲಲ್ಲೆ ಮಣ್ಣಿಗಾಯ್ತು ಬಮ್ಮಗುಳಿದಳು (ಶರಾಪ. ೨೪-೬); ನಿಲ್ಲೀಂದ ಹಾಗಾಗಿ, ಅಲ್ಲಿ ನಿಂತಿರೊ, ಜಾಣ ಹೊರಟಾಗ ಕೇಳಿದರ ಬಮ್ಮಗಿಹರು (ಮುಕಾಹಿ. ೨೬). [ಬಿಮ್ಮು$_2$ (< ಬಿಂ) + — ಆಗೆ$_1$]

**ಬಮ್ಮನಸೆ, ಬಮ್ಮನಿಸೆ** (ನಾ). ಬಸಿರಿ ; ಗರ್ಭಿಣಿ : ಹೆಣ್ಣು ಬಮ್ಮನಸೆ ಯಾಗಿ, ಒಡವೆಗಳು ಹೊರೆಯಾದಾಗಲೂ ಅವುಗಳ ಚಾಪಲ್ಯ ಹಿಂಗುವುದಿಲ್ಲ (ಪಂಜಾಂಕಿ. ೦೨೮) ; ಅಬ್ಬಬ್ಬ . . . ಎಂದು ಬಮ್ಮನಸೆ ಅಬ್ಬರಿಸಿದಳು (ಹೂಸರು. ೨೪೮). ಬಮ್ಮನಿಸೆ : ಬಿಮ್ಮನಿಸೆ ಆಗಿಬಿಟ್ಟಳು (ವಷ್ಟಮ್ಮರು. ೨೪೮). [<ಬಿಣ್ + < ಮಾನಸೆ]

**ಬಮ್ಮನಿಸೆ** 'ಬಮ್ಮನಸೆ' ನೋ.

**ಬಮ್ಮನೆ$_1$** (ಅ). ೧. ವೇಗವಾಗಿ : ಶೀಘ್ರವಾಗಿ ; ರಭಸವಾಗಿ : "ಬಮ್ಮನೆ ಗಮ್ಮನೆ ವಹಿಲಂ" (ಕಕಜ. ೯೦); ಈ ಪರಿಯಂ ಕೇಳಿಪುದುಂ ಪಡೆವಳರೆಲ್ಲರ್ ದಿಮ್ಮನೆಟ್ಟು ಬಮ್ಮನೈತಂದು (ರಾವಪಾಕ್ಷ. ೦೪೬-೧): ಹೆಮ್ಮೆಯ ಮುಗಿಲಿಗೆ ಬಿರುಗಾಳಿಯಿದೋ ಬಮ್ಮನೆ ಬೀಸುವುದು ನೋಡಿ (ಪರಿಣಾ. I, ೪೪೩). ೨. ಬಲವಾಗಿ ; ಗಟ್ಟಿಯಾಗಿ ; ಬಿಗಿಯಾಗಿ : ಬಾಯಲ್ಲಿ ತುತ್ತನಿಕ್ಕಲೊಲ್ಲದೆ ಬಮ್ಮನೆ ಬಾಯುಂ ಮುಚ್ಚಿಕೊಳಲು (ಧರ್ಮಪ್ಯಾ. ೧೦-೨೦೮). [ಬಿಮ್ಮು$_1$+—ಅನೆ$_1$./ತುಳು. ಬಮ್ಮನೆ]

**ಬಮ್ಮನೆ$_2$** (ಅ). ೧. ಬಿಕೋ ಎನ್ನುವಂತೆ ; ಬಣಗುಟ್ಟುವಂತೆ : ಬಮ್ಮನೆಯಾಗಿ ಮದುವೆಗಳುಪಿದ ಮನೆಮುಂದದಿನಿರ್ದುದು (ಅತಿಪು. ೬ ೯೦). ೨. ಸುಮ್ಮನೆ ; ತೆಪ್ಪಗೆ : ಪ್ರಭುವು ಅವರ ಯಾವ ಮಾತುಕತೆಗಳಲ್ಲಿಯೂ ಭಾಗವಹಿಸಲಿಲ್ಲ. ಬಮ್ಮನೆ ಕುಳಿತನು (ಪಟ್ಟಹೂ. ೨೬). [ಬಿಮ್ಮು$_2$ (<ಬಿಂ) + — ಅನೆ$_1$]

**ಬಮ್ಮಿಸು** (ಕ್ರಿ). ಅಹಂಕಾರಪಡು ; ಗರ್ವಿಸು : ಪೂವಸಿಜ ಪೂವಿಲ್ಲ ಮೊದಲಹ ಜೀವಿಗಳ್ಬಿಮ್ಮಿಸಿದೊಡಸದಳ ದೇವನಲ್ತೆ ಕೇಳ್ವಂ ಜವಗಟ್ಟ ಮುಂಗಥೆಯ (ಷರೀಪು. ೩-೨). [ಬಿಮ್ಮು$_1$+—ಇಸು$_1$]

**ಬಮ್ಮು$_1$** (ನಾ). ೧. ದೊಡ್ಡತನ ; ಘನತೆ ; ಹಿರಿಮೆ : ಬಲ್ಲವರ ಬೆಸ ಗೊಂಡರೆ ಎನ್ನ ಬಿಮ್ಮು ಕೆಟ್ಟಿಹುದೆಂದು ಮೆಲ್ಲನೆ ಪ್ರಸಂಗದಿಂದ ತಿಳಿದು ನೋಡುವೆ (ಬಸವ. ೬೬೬); ಭಕುತಿಯ ಬಿಮ್ಮಿನಲಿ ಬೀಸಾಡಿದನು ಪದವಲಿ ಕಳೇವರವ (ಶಿಶಾಂಗ. ೯-೬-೯೦). ೨. ಗರ್ವ ; ಅಹಂಕಾರ : ನಗುವುದು ನುಡಿವುದು ಶಿವಭಕ್ತರೊಡನೆ ಸುಮ್ಮಾನ ಹಮ್ಮು ಬಿಮ್ಮಾಗಿರ ಲೇಕಯ್ಯ (ಬಸವ. ೨೯೨); ಬಿಮ್ಮು ಬೀಸರಹುದೆ ನಿಮ್ಮ ಸೊಮ್ಮಿನವರಿಗೆ (ಕುಮ್ಮಾರಾ. ೮-೩೩). ೩. ಬಿಗುಹು ; ಬಿಗಿತ : ಪ್ರಾರಬ್ಧಕರ್ಮದ ಬಿಮ್ಮು ತೀರಲು . . . ಸುಖಿಯಹನು (ಅಮ್ಮಶ. ೬-೫೨) ; ಇತ್ತ ರವಿರಶ್ಮಿಗಳ ಬಿಮ್ಮು ಸಡಿಲುತ್ತಿರ್ದುದು ನೋಡಿ (ಶುಸಂಗ. ೩೬-೦೮); ಈ ಪ್ರಸಂಗದಿಂದ ಹಿಂದಿನ ಹತ್ತಿಪ್ಪತ್ತು ದಿನಗಳ ಬಿಮ್ಮು ಒಮ್ಮೆಲೆ ಬಿಟ್ಟು ಬಯಲಾಯಿತು (ಕಾಳಂಗ. ೦೦). 'ಬಿಮ್ಮಗೆ' ಪರಾ. [ದೇ.॥ ತಮಿ. ವಿಮ್ಮು = ಭಾರ, ಹೊರೆ]

**ಬಮ್ಮು$_2$** 'ಬಿಂ' ನೋ.

**ಬಮ್ಮುಗಟ್** (ಕ್ರಿ). ಬಿಕೋ ಎನ್ನು ; ಬಣಗುಡು : ಪಾ[ಟ]

ದಾಟಿದ ಮುದ್ದಿನ ಬಿದ್ದಿನ ವಿಳಾಸಿನೀಜನದ ಬನದವಿಲ್ಲದೆ ಬಿಮ್ಮುಗಟಿ ಯುತ್ತಿರ್ದವಿನಾಣೆಗಳ ಬಾಗಿಲ್ಕೆತ್ತಂತೆ ಬಿನ್ನನಾಗಿ (ಪರ್ವತಾ. ೩-೯ ವ). [ಬಿಮ್ಮು$_2$(<ಬಿಂ) + ಕಡಿ$_1$]

**ಬಿಮ್ಮಗಿಡು** 'ಬಿಮ್ಮುಗೆಡು' ನೋ.

**ಬಿಮ್ಮಗೆಡು**, ಬಿಮ್ಮುಗಿಡು (ಕ್ರಿ). ಅಹಂಕಾರವಿಲ್ಲವಾಗು ; ಗರ್ವ ನಾಶವಾಗು : ಗರಳವಂ ಕೊರಳ ಹೊಱಗಿಟ್ಟುಕೊಂಡಾ ಹೆಮ್ಮೆ ಬಿಮ್ಮು ಗೆಡುತಿರೆ (ಸಿದ್ಧರಾ. ೩-೦೬); ನಿಮ್ಮ ಶರಣಂಬೊಕ್ಕವೆನುತಂ ಬಿಮ್ಮುಗೆಟ್ಟ ಪ್ಪಾಂಗದಿಂ ಪೊಡವಡುತ ನಸು ಸಾರ್ದು (ಚಕ್ರವು. ೩೬-೪೩). **ಬಿಮ್ಮುಗಿಡು** : ಪೊಣರ್ದರಿಳೆ ಕಮಠಫಣಿರಾಜಾಳಿ ಬಿಮ್ಮುಗಿಡಲಲ್ಲಿ ಮಱಿದುದು ಭಾವು ಚತುರವೈಹಾಳಿ ಹರ್ಷದ ಭಡಾಳಿ (ಧಾವಹಾಂ. ೬-೧೨). [ಬಿಮ್ಮು$_1$+ಕೆಡು$_1$]

**ಬಿಮ್ಮೆನ್ನಿಸು** (ಕ್ರಿ). ಬಿಕೋ ಎನ್ನಿಸು ; ಬಣಗುಟ್ಟು : ಏನು ಸೊಗಸು ಈ ಶರತ್ಕಾಲ . . . ಇಷ್ಟಾದರೂ ಏಕೋ ಬಿಮ್ಮೆನ್ನಿಸುತ್ತದೆ (ದಾಕ್ಷಯ. ೪೨). [ಬಿಮ್ಮು$_2$ (<ಬಿಂ) + ಎನ್ನಿಸು (<ಎನಿಸು$_1$)

**ಬಿಯ**, ಬಿಯ್ಯ, ಬೀಯ್ಯ, ಬೆಯ, ಬ್ರಯ, ವೆಯ, ವ್ರಯ (ನಾ). ೧. ಖರ್ಚು ; ವೆಚ್ಚ ; ಪುಟ್ಟಿದಂದಿವಂಗಿದು ಬಿಯಮೊಳ್ಪಿವಂಗಿದು ವಿನೋದಮಿವಂಗಿದು ಸಾವ ಪಾಂಗು (ಶಂಶಭಾ. ೦೨-೦೬೨); ಚಾರುದತ್ತಂ ಬಿಯಕ್ಕೆ ತಕ್ಕುದಂ ಬೇಡಿದನೆನೆ (ಜೀವಂಧ. ೯-೩೩ವ). 'ಉಪಬಿಯ' ಪರಾ. ೨. ದಾನ; ಕೊಡುಗೆ : ಬಿಯಮುಂ ಪರಾಕ್ರಮಮುಮೊಪ್ಪಿರೆ ತನ್ನೊಡ ವುಟ್ಟಿದರ್ ಸಮಂತ್ರೊಡವರೆ ವಾರಣಾವತಮನೆಯ್ದಿದನವ್ವನ ಗಂಧ ವಾರಣಂ (ಪಂಪಭಾ. ೨-೯೮); ಜನಕೆಲ್ಲಮಿವಾವ ಸೂಸುವ ಕುಡುವೀಡಾಡುವ ವಸ್ತುಗಳೀಂದೆಡಱೋಡುವಿನಂ ಪಿರಿದನಿತ್ತು ಬಿಯಮಂ ಮೆಱೆದಳ್ (ಸುಕುಮಾ. ೦೦-೯೨). ೩. ಅಳಿವು ; ನಾಶ : ಹರಣದ ಬಿಯಕೊಂದಿನಿಸು ಮನೆನಿಸದ ದೊರೆಗಲಿಗಳ್ ಬಿನದಕೆ ನಡೆವಂದದಿ ಹರಿಸಂ ಪಿಗೆ ನಡೆತಂದರ್ (ಜಗನ್ನಾ. ೬-೨೪). ೪. [ಗಣಿತ] ಭಾಗಿಸಿ ಉಳಿದ ಶೇಷ : ಧನಂ ತದವಾಪಂ ನಗಸಂಗುಣ ಫಣಿಹೃತಂ ಶೇಷಂ ಬಿಯಂ (ಲೋಕೋಪ. ೩-೨೦) ; ಧನವಂ ಏಱಱಿಂ ಗುಣಿಸಿ ಎಂಟಱಿಂ ಭಾಗಿಸಲ್ ಉಟಿದ ಶೇಷಂ ಬಿಯಂ (ಲೋಕೋಪ. ೩-೨೦ ಟೀ). **ಬಿಯ್ಯ** : ೩. ಮಾರಿಯ ಮನೆ ಬಿಯ್ಯದ ಕಣಜಂ ಮತ್ತಾ ರಾಜಕೃತಾಂತನ ಬಳಕೆಯ ಭಂಡಾರಂ . . . ತಾವೆನಲಾ ದಾರುಣತರಸಂಗ್ರಾಮಧರಾತಳಮತಿಭೀಕರಮಾಯ್ತು (ಜಗನ್ನಾ. ೬-೨೦). **ಬೀಯ್ಯ** : ೧. ಪಡದೊಡಮೆಯಂ ಮೂಱು ಭಾಗಂಗೆ ಯ್ದೊಂದು ಭಾಗಮಂ ಧರ್ಮಕ್ಕೆ ಮತ್ತೊಂದು ಭಾಗಮಂ ಮನೆಯ ಬೀಯಕ್ಕೆ . . ಸಂವಿಭಾಗಂಗೆಯ್ದು (ಧರ್ಮಾಮೃ. ೨೦೬); ಆಯಕ್ಕೆ ಬೀಯ ಸರಿ ಮೇಲೆ ಭಂಡಾರಕ್ಕೆ ರಾಯರಿಕ್ಕಿದ ಕಪ್ಪ ತಾವುಪಾರ್ಜಿಸಿದರ್ಥ (ರಾಜಶೇ. ೩೦-೪೦); ಆಯ ಬೀಯವನವಳೊಡನಾಳೋಚಿಸಿ ಕೈಯಡಕದೊಳಿರಿಸುವುದು (ಹಂಸ. ೬-೬೨). ೨. ಬೀರಕೆ ಬೀಯಕ್ಕಱಿವ ಬೆಡಂಗನೊಳಾರ್ದೊರೆ ನೆಱೆ ತೋಕರ್ವ ಶತ್ರುಜನಕಮರ್ಥಿಜನಕ್ಕಂ (ಗದಾಯು. ೦-೦೬) ; ಜನಕಂ ಬೀಯದ ಚಾಗದ ಪೆರ್ಮೆಯಂ ಮೆಱೆವುದಂ (ಶಂಕರಾಶಾ. ೩-೦೪೦ ವ); ನಯದ ಬೀಯದ ಚಾಗದುಪಭೋಗದೆಸಕದೊಳಂ . . . ಅತಿ ಮನೋ ಹಾರಿಯಪ್ಪ ಸೂಱೆಗೇರಿಗಾಸನ್ನವಾದ ವಿಪಣಿವೀಧಿಯೊಳ್ (ಧರ್ಮಾಮೃ. ೨-೭೭ ವ). ೩. ಜೀವದ ಬೀಯಕಿವರಂಜಿದರು ನೆನೆದರು ಮನೆಯ ರಾಣಿಯರ (ಕುಮಾರರಾ. ೯-೩೦) ; ವಾಯುಸೂತ್ರದಲಿಂದು ರವಿ ಚಕ್ರಾಯುಧಂಗಳು ತಿರುಗುತಿರ್ದೊಡೆ ಬೀಯವಹವವ ನಿಲಿಸಲಱಿಯದ ಭವಿಗಳಾಯುಷ್ಯ (ಶ್ರೀಕುಂ. ೬-೬೨). ೫. ವೆಚ್ಚಕ್ಕೆ ಆಧಾರವಾದ ದ್ರವ್ಯ : ಧನ : ಪೊಂದರುತಿರೆ ಗಂಡಂ ಸಾಯೆಂದಡೆ ಬೀಯೆಂದು ಪೇಱೊಡಂ ಮಾಡುವರಂತೊಂದು ದಿನ ಬೀಯ[ಹಾಕಾಂ. ವಿನಯ]ಮಿಲ್ಲದೊಡಂದಾ ಗಳ್ಮಾತುಗೇಳರ್ (ಸಮಚ. ೩-೦೦೦) ; ▶ ಈ ಶಬ್ದವು 'ಬೀ' ಎಂಬ ಧಾತುವಿಗೆ ಸಂಬಂಧಪಟ್ಟಿರಬಹುದೇ ಎಂಬುದು ಪರಿಶೀಲನಾರ್ಹ ವಾಗಿದೆ. **ಬೆಯ** : ೧. ಇಂತೀ ದೇವದಾನವಸ್ಥಳಂಗಳ ಆಯಕ್ಕೆ ಬೆಯ ಸರಿ (ಎಕ III, ತಿರುಮ. ೯೬-೬೪ ; 1270). ೬. (?) : ಭಟ್ಟವೃತ್ತರ್ ಸಾಸಿರ್ವ್ವರು ಒಲೆಯ ಅಯ್ನೂರ್ವ್ವರು ಬೆಯ ಮೂನೂರ್ವ್ವರು . . . ಧರ್ಮನಿಮಿತ್ತ ಕೊಟ್ಟ ಸ್ಥಿತಿಯ ಕ್ರಮ (ಎಕ. XVI, ತುಮಕೂ. ೩೧-೬:೯೦). **ಬ್ರಯ** : ೧. 'ಧರ್ಮಬ್ರಯ' ಪರಾ. ೭. (ಯಾವುದಾದರೂ ಖರ್ಚು, ವೆಚ್ಚಗಳಿಗಾಗಿ ವಸೂಲು ಮಾಡುತ್ತಿದ್ದ) ಒಂದು ಬಗೆಯ ತೆರಿಗೆ : 'ಮಳಬ್ರಯ' ಪರಾ. **ವೆಯ** : ೧. ನರನೊಂದು ವೆವಹಾರ ಕೆರಡಾಯವೆಯ ಲೆಕ್ಕ ಹೊರಗಣನುಭೋಗಕೊಂದೊಳನೀಕಿಗೊಂದು (ಪಂಚತಂ. ೬೬೪). **ವ್ರಯ** : ೧. ಇನ್ನನಿತುಂ ನಿತ್ಯವ್ರಯವಾಗಿ ನಡೆವುದು (ಶ್ರೀಉ. ೩-೬-೪೦ ; 1088). 'ಧರ್ಮವ್ರಯ' ಪರಾ.

[<ಸಂ. ವ್ಯಯ./ಪ್ರಾ. ವಯ, ವಿಅ]

**ಬಿಯಂಗೆಯ್**, ಬಿಯ್ಯಂಗೆಯ್, ಬೀಯಂಗೆಯ್ (ಕ್ರಿ). ೧. ವೆಚ್ಚ ಮಾಡು ; ಖರ್ಚುಮಾಡು : ತವದಾಯುಷ್ಯದ ಕುಂದದಂದದ ಬಿಯಂ ಗೆಯ್ದುಂ ಪವಣ್ಗೋಱದುದ್ಯವದೇ ನೋಱತನಿಪ್ಪ ರೂಪಿನ ಮನಂಗೊಂ ಡಿರ್ಪ ಲಾವಣ್ಯದೊಪ್ಪುವ ನೇಪಥ್ಯದವರ್ಕೆ ನಿಲ್ಲವನಿಮೇಚಂದ್ರಾದಿಗಳ್ಗಂ ದೊಡಾರ್ಗಿವು ನಿಲ್ಕುಂ (ಶಾಂತಿಪು. ೭-೬) ; ಸಿರಿಯಂ ತಕ್ಕಲ್ಲಿಗನ್ನಿತ್ತನ ತೆಱದೆ ಬಿಯಂಗೆಯ್ಕಲ್ (ಎಕ. III, ಮಂಡ್ಯ. ೦೨೨-೪೨ ; 1236). **ಬಿಯ್ಯಂಗೆಯ್** : ೧. ಪೂರ್ವೋಪಾರ್ಜಿತಪುಣ್ಯದಿಂ ಧನಂಬಡೆದ ಗೃಹಸ್ಥಂ ನಿರರ್ಥಕಂ ಬಿಯ್ಯಂಗೆಯ್ಯದೆ . . . ಸ್ವಸಮಯಿಗಳ್ಗೆ ಕೊಟ್ಟೊಡಕ್ಷಯದಾನಮಕ್ಕುಂ (ಕಹಾರ. ೩೨೨). **ಬೀಯಂಗೆಯ್** : ೧. ಬೇಟ್ಟರ್ಥಮನಾರ್ಜಿಸಿ ಬೀಯಂಗೆಯ್ದು ಧನಮಿತ್ರನುಮಾನುಂ ಸುಖದಿನಿರೆ (ದಶಕು. ೬-೦೩೪ ವ). ೨. ದಾನ ಮಾಡು ; ಕೊಡುಗೆ ನೀಡು : ನಿಧಿಗಳೊಳಿರ್ದೊಡಮೆಯಂ ಬೀಯಂಗೆಯ್ದು . . . ಅಹಮಿಂದ್ರನಾದೊ (ಧರ್ಮಾಮೃ. ೨೬೯) ; ಪೇರಾನೆಗಳ ತೇರ್ಗಳ ವಂಗಡಮಂ ತಂಡತಂಡದಿಂ ಬೀಯಂಗೆಯ್ವರಸುಮಕ್ಕಳ ಮುಂದೋದಿ ಮೆಚ್ಚಂ ಕೊಳ್ವಕ್ಕರಿಗರ್ಬ್ಬರ ದೊಳಂ (ಕಬ್ಬಿಗ. ೪೪) ; ಇನಿತಜನರತ್ನಮಂ ನಚ್ಚಿ ನಿಜಾಲಯದರ್ಥ ಮಲ್ಲಮಂ ಬೀಯಂಗೆಯ್ದನಸುಂ ದರಿದ್ರೆಯಾದಳ್ (ದಶಕು. ೬-೨೦೬).

[ಬಿಯ + ಕೆಯ್$_1$]

**ಬಿಯಕಾರ್ತಿ** (ನಾ). ಬೆಲೆವೆಣ್ಣು ; ಗಣಿಕೆ ; ವೇಶ್ಯೆ : ಕಣ್ಗೆಸೆದರ್ . . . ಲೀಲೆಯಿನಾಂತು ನಿಂದ ಬಿಯಕಾ[ಹಾಕಾಂ. ಗು]ರ್ತಿಯರಗ್ಗದ ಗಾಡಿ ಕಾರ್ತಿಯರ್ (ಪಾರ್ಶ್ವಪು. ೦೨-೯).

[ಬಿಯಕಾಱ + – ತಿ$_1$ (< – ಇತ್ತಿ)]

**ಬಿಯಕಾಱ**, ಬೀಯಕಾಱ (ನಾ). ಹೆಚ್ಚಾಗಿ ಖರ್ಚುಮಾಡುವವನು ; ದುಂದುಗಾರ : "ಬಿಯಕಾಱರ್ ವ್ಯಯಶೀಲರೊಳ್" (ಕರ್ನಾಟ. ೬೩) ; ನಯವಿದನೊಪ್ಪುವ ಬಿಯಕಾಱನೊಳ್ಪದ ಪ್ರಿಯುತಮನಾಗೆ ತನ್ನ ಮುನ್ನೋಂತ ನೋಂಪಿಯ ಫಲವೆಸೆ ಬೆಲೆವೆಣ್ಣೆ (ಸೂಕ್ತಿಸು. ೬-೩೯೪). **ಬೀಯಕಾಱ** : ಬೀಯಕಾಱನಂ ಬಿಟ್ಟು ಬೇಂಟಗಾಱನಂ ಕರವ ಸೂಳೆಯುಮಂ (ಧರ್ಮಾಮೃ. ೬-೩೦). [ಬಿಯ + – ಕಾಱ]

**ಬಿಯಗ$_1$** 'ಬೀಗ$_1$' ನೋ.

**ಬಿಯಗ$_2$**, ಬಿಯ್ಯಗ$_2$, ಬೀಗ$_2$, ಬೀಗ್ಯ$_2$, ಬೀಯಗ$_2$ (ನಾ). ೧. ಮದುವೆ ಯಿಂದ ಪರಸ್ಪರ ಸಂಬಂಧವನ್ನು ಬೆಳೆಸಿದವನು ; ಅಳಿಯನ ಅಥವಾ ಸೊಸೆಯ ತಂದೆ : ಬಿ[ಹಾಕಾಂ. ಬೀ]ಯಗನನ್ನುಱಿಂ ತಟ್ಟಿಯಿಸಿ (ಧರ್ಮಾಮೃ. ೩-೯೩ ವ) ; ಅಂತಹ ಶ್ರೀಮತಿಯನ್ನು [illegible] ಮಡದಿಯಾಗಬೇಕಾದರೆ ಬಿಯಗರಿಗೆ ಸಮನೆನಿಸಿಕೊಳ್ಳುವಷ್ಟು . . . ಸೇರಿಸಬೇಕು (ಕವೀ. ೨). 'ಬಿಯಗತನ' ಪರಾ. **ಬಿಯ್ಯಗ$_2$** : ೧. ರುದ್ರದೇವ ಮಹಾದೇವ

ರಿಬ್ಬರೂ ಬಿಯ್ಯಗರಯ್ಯಾ ಒಬ್ಬರು ಹೆಣ್ಣಿನವರು ಒಬ್ಬರು ಗಂಡಿನವರು (ಸರ್ವಜ್ಞ. ೨೯-೧೬೪) ; ಬಿ[ಶಾಕಾಂ· ಬೀ]ಯ್ಯಗನಾದ ಜನಕನು ನಿಮಗೆ ಮತ್ತೇನು ಪಾಳೆಯವ ನೀನಿದಿರುಗೊಳ್ಳೆನೆ (ಕೌಶಿಕಾ. ೨-೩೩); ಏಚಲದೇವಿ ಬಿಯ್ಯಗನನ್ನು ಸಂತೋಷದಿಂದ ನೋಡುವುದಾಗಿ ಹೇಳಿ ಕಳುಹಿಸಿದಳು (ಸವತಿ. ೬೨). **ಬೀಗ₁** : ೧. ನಿನ್ನ ಸತಿ ಸುತರ ಒಡಹುಟ್ಟಿದ ಬಂಧುಗಳು ಸ್ನೇಹಿತರು ಬೀಗರು . . . ಸಕಲರು ಅಳಿದು ಹೋಗುವದು ನೋಡುತ್ತಿದ್ದಿ (ವಕಶಾ. I, ೨೪೯-೨೩); ಬೀಗರುಂಬುವ ದಿನದಿ ಯೋಗಿ ಭಿಕ್ಷಕೆ ಬರಲು ಬೀಗರಿಗೆ ನೀಡಿ ಯೋಗಿಗಿಲ್ಲೆಂದವಗೆ ಕಾಗೆಯು ಜನುಮ (ಸರ್ವಜ್ಞ. ೬೩೨) ; ಜೋಯಿಸರು ಹಾರಿ ಬಂದು ಬೀಗರ ಕಿವಿಯಲ್ಲಿ ಏನೋ ಪಿಸುಮಾತಾಡಿ . . . ಎಂದರು (ಹುಟ್ಟಿಹ. ೦೦). **ಬೀಯ್ಯ** : ೨. ಭಾವಮ್ಮೈದುನ : ನರನ ಬೀಯನೆ ಕೇಳು ವಿಜಯವಿಠ್ಠಲ ಇದಕ್ಕೆ ಕರುಣ ಮಾಡುವ ದೇವರ ದೇವನು ನೀನೆ (ಪೋಕ್ಷರೀ. ೬೩-೩). **ಬೀಯಗ₂** : ೧. ಮಗನೆ ನೀಂ ಐಪ್ವಾಶಿ ದಿವಸ ದೊಳ್ಳೈದಾಙ ಸೂಳುಂಡಲ್ಲದೆ ನಿಲಲಾಜ್ ಬೀಯ[ಶಾಕಾಂ. ಬಿಯ, ಬಿಯ್ಯ] ಗರ ಮನೆಯೊಳಿದಂ ಕಂಡೊಡೆ ಮರುಳಾಡುವರದಱಿಂ ಕಿಱಿದಾಗಿ ಯುಣ್ಬುದು (ರರ್ಮಾಶ. ೯-೨೩ ವ) ; ನೃಪಾಲ ಮದುವೆಯ ಮನೆಗೆ ರಾಯರ ಥಾಳಿ ಬಿದ್ದಿನವಾಯ್ತು ನಡೆ ಸಂತೈಸು ಬೀಯಗರ (ಕುವ್ಯಾಕ· ೦೩-೯೭); ತಾಯೊಂದೆಸೆ ಮಕ್ಕಳೊಂದೆಸೆ ಕೊಟ್ಟಿಹ ಬೀಯಗರೊಂದೆಸ ಯಾಗಿ . . . ಹೊಕ್ಕರಾಯಾಸಗೊಂಡು ಹೆಮ್ಮಾಲೆಯ (ಕಂಶಶ. ೦೦-೯೭). ೩. = ಬಿಯಗತನ : ಕನಕಪುರದ ಜಯಭೂಭುಜ . . . ನಿಮ್ಮೆಡೆಗೆ ಬೀಯಗಮನೆ ತವಗಾದುದರಿಂದೆಮ್ಮನೊಯ್ಯಾರ ವಿಗೆ ಕಳುಹಿದನು (ನಾಗಕು. ೩-೯೩); ಹರಿಕುಲಪಾಲಕರು ಶೌರೀಪುರವ ಪರಿಪಾಲಿಪರು ಪಮ ಗಲ್ಲಿ ಬೀಯಗವುಂಟು (ಜನಕಾ. ೩-೦೨).

**ಬೀಗರೌತಣ** = ಸಾಮಾನ್ಯವಾಗಿ ಮದುವೆಯ ಮಾರನೆಯ ದಿನ ವರನ ಕಡೆಯವರು ವಧುವಿನ ಕಡೆಯವರಿಗಾಗಿ ಏರ್ಪಡಿಸುವ ಔತಣ : ಬೀಗರೌತಣ ಬಹಳ ವಿಜೃಂಭಣೆಯಿಂದ ನಡೆಯಿತು (ಬೂ೨). **ಬೀಯ ಬಿಜ್ಜರು**=ಮದುವೆಯಿಂದ ಪರಸ್ಪರ ಸಂಬಂಧ ಬೆಳೆಸಿದವರು; ಬೀಗರು: ತಾಯಿ ಮಕ್ಕಳು ಸೊಸೆ ಒಂದೆಯಾದರೆ ಮದುವೆ ಬೀಯಾ ಬಿಜ್ಜರ ಗೋತ್ರಭೇದವ್ಯಾಕೊ (ಐಶಾಸು. ೩೯-೦). ▶ ಇದು ಒಂದು ಕೊಡುನುಡಿ. [ದೇ. ॥ ತುಳು. ಬೀಗೆ ; ತೆಲು. ವಿಯ್ಯ]

**ಬಿಯಗತನ**, ಬೀಗತನ, ಬೀಯಗತನ (ನಾ). ಮಕ್ಕಳ ಮದುವೆಯಿಂದ ಪರಸ್ಪರ ಉಂಟಾದ ಸಂಬಂಧ; ನಂಟಸ್ತಿಕೆ : ಪುಣ್ಯವಶದಿಂದಿನ ಕುಲೇಂದ್ರನ ಬಿಯಗತನವಿದು ನುತ್ಯಮೆನಿಪುದಲಾ (ಶಾಪುಪು. ೦-೯-೯೬). **ಬೀಗತನ** : ಬೀಗತನ ಮಾಡಿದ ಮೇಲೆ ಅವನ ಪರಿಚಯವಿಲ್ಲದ ಭಾಗವೇ ಇರಲಿಲ್ಲ ಆ ವಿಜಯನಗರದಲ್ಲಿ (ಕೇಪುಳಕೊ. ೬೪), ಇಲ್ಲಿಯ ಮುಸ್ಲಿಂರು ಪಾಕಿಸ್ತಾನಿ ಮುಸಲ್ಮಾನರೊಡನೆ ಬೀಗತನ ಬೆಳೆಸುವುದು ಪರರಾಷ್ಟ್ರ ದೊಡನೆ ಸಂಬಂಧಮಾಡಿದಂತೆ (ಹುಕ್ಕಕ್ರ. ೦೬೨). **ಬೀಯಗತನ** : ಬೀಯಗ ತನದೆ ಆಳವಾಡಿದಿರಿ ಮಕ್ಕಿತನಲಗೋಲಿಂದೆ ಭಾಳಾಕ್ಷ ತಪಗೆಟ್ಟನಱಿಯ (ಪೋಚಶತ. ೩೩-೯೩) : ಜನಕರ ಕಾಲದೊಳ್ನಡೆದ ಬೀಯಗತನ ತನುಜ ರೊಳ್ಕೆಡಬಾರದು (ಕಕಶ. ೩೩-೯೪). [ ಬಿಯಗ₁ + – ತನ ]

**ಬಿಯದ** ' ಬ್ಯಾದ ' ನೋ.

**ಬಿಯದವೆಣ್** (ನಾ). ಬೇಡರ ಹೆಣ್ಣು ; ಶಬರಿ : ಬಿಂಕದ ಬೆಡಂಗಿನ ಬಿಯದವೆಣ್ಣಳೊಡನೆ ಸಂಭ್ರಮಾಡಂಬರಂ ಮಿಗೆ ಬಂದ ಗಿರಿತನೂಜೆ ವೆರಸು ಕಿರಾತಮಹೇಶ್ವರಂ . . . ನಡೆತಂದನ್ (ಕಐಕಂ. ೩-೨೦ ವ).

[ಬಿಯದ ( < ಬ್ಯಾದ) + ಪೆಣ್]

**ಬಿಯದಿ₁** (ನಾ). = ಬಿಯದವೆಣ್ : ಬೆಳತಿಗೆಗಣ್ಣ ಬಲ್ಮೊಲೆಯ ತೊಳಪ ಗಲ್ಲದ ತೋರ ಪೊಱಪಾಱ ಬಿಯದಿಯರೆಳಸಿ ನೋಡಿದರು ಭೂವರನ (ಶ್ರೀಕಾಂ. ೬-೫೦). [ಬಿಯದ ( < ಬ್ಯಾದ) + – ಇ₂]

**ಬಿಯದಿ₂** ' ಬ್ಯಾದಿ ' ನೋ.

**ಬಿಯಸ** (ನಾ). ವ್ಯಾಸಮಹರ್ಷಿ : "ಬಿಯಸ – ವ್ಯಾಸ = ಋಷಿ" (ಕಶ್ಯಕೋ. ೫೦) ; ಬಿಯಸಗೊಲಿದು ಸನತ್ಕುಮಾರನು ನಯದ ಗಸ್ತ್ರೀಶಾದಿಲಿಂಗೋದಯವನಾ ಮಹಿಮೆಯನೊರೆಯಲು (ಶಾವೇಪು. ೯೯ ಕಲ್ಲ೬). [< ಸಂ. ವ್ಯಾಸ]

**ಬಿಯಸಂಗ** (ನಾ). ಅಭ್ಯಾಸ ; ವ್ಯಾಸಂಗ : ವ್ಯಾಸಂಗ _ ಬಿಯಸಂಗ (ಕಪುದ. ೨೩೯ ಶ್ರಯೋ). [< ಸಂ. ವ್ಯಾಸಂಗ]

**ಬಿಯಳ** ' ಬ್ಯಾಲ ' ನೋ.

**ಬಿಯಳಗಾವುಂಡ** (ನಾ). ಒಬ್ಬಾತನ ಹೆಸರು : ಇದಕ್ಕೆ ಸಾಕ್ಷಿ ಶಾನ್ತಿ ಭಟ್ಟಾರರುಂ ಉತ್ತಮರಾಸಿಭಟ್ಟಾರರುಂ ಬಿಯಳಗಾವುಣ್ಡನುಂ (ಎಕ. XI, ಹೊಳಲ್ಕೆ. ೩೦-೦೦ ; ೯೬೬ ).

[ಬಿಯಳ (< ಬ್ಯಾಲ) + ಗಾವುಂಡ (< ಗಾಮುಂಡ)]

**ಬಿಯಳಚೋರ** (ನಾ). ಒಬ್ಬಾತನ ಹೆಸರು : ಬಿಯಳಚೋರ ತನ × ತುಱುಗೊಳೊಳ್ . . . ಸತ್ತ (ಎಕ. IX (೩), ಕಾನಕಾ. ೦೪೦-೯ ; ೯೦೦). [ಬಿಯಳ (<ಬ್ಯಾಲ) + ಚೋರ₁ ]

**ಬಿಯಳಮ್ಮ** (ನಾ). ಒಬ್ಬಾತನ ಹೆಸರು : ಕಿಱುವುಣಸೆಯ ಬಿಯಳಮ್ಮ ನ×ಗ ಪಡೆವಳ್ಳ ಅರಿಗನು ಎಱಿಯುಬ್ಬೆಯಂ . . . ಅಬ್ಯನ್ತರಸಿದ್ಧಿ ಪಡೆದರ್ (ಎಕ. VIII, ಸೊರಬ. ೩೦೦-೩ ; ೯೩೩).

[ಬಿಯಳ (<ಬ್ಯಾಲ) + ಅಮ್ಮ₁]

**ಬಿಯಳಯ್ಯ** (ನಾ). ಒಬ್ಬಾತನ ಹೆಸರು : ಬಿಯಳಯ್ಯ ಮಗ ಚಟ್ಟಯ್ಯನಳಿಯ ಕನ್ನಯ್ಯ (ಎಕ. VIII, ಸೊರಬ. ೯೩೩-೬ ; 972).

[ಬಿಯಳ (<ಬ್ಯಾಲ) + ಅಯ್ಯ₁]

**ಬಿಯ್ಯ** ' ಬಿಯ ' ನೋ.

**ಬಿಯ್ಯಂಗೆಯ್** ' ಬಿಯಂಗೆಯ್ ' ನೋ.

**ಬಿಯ್ಯಗ₁** ' ಬೀಗ₁ ' ನೋ.

**ಬಿಯ್ಯಗ₂** ' ಬಿಯಗ₂ ' ನೋ.

**ಬಿಯ್ಯದ** ' ಬ್ಯಾದ ' ನೋ.

**ಬಿರಂಜಿ** (ನಾ). (ಅಕ್ಕಿಯಿಂದ ತಯಾರಿಸುವ) ಒಂದು ಬಗೆಯ ತಿನಿಸು : ಅಮ್ಮ ಬಿರಂಜೀ ಮಾಡತೀನಿ ಅಂತಿದ್ದಳು, ಕಳಿಸಿಕೊಡತೀನಿ. ಬಿರಂಜಿ ಅಂದರೇನು ಮತ್ತ ? . ಅನ್ನ . . . ಇದು ಬರಿ ಬೆಣ್ಣ್ಯಾಗ ಬೇಯುತ್ತೈತಿ (ಶಾಪಂ. ೫೬). [←ಪಾರ. ಬಿರಿಂಜ್./ತೆಲು. ಬಿರಂಜಿ]

**ಬಿರಟು** ' ಬಿರಡೆ₂ ' ನೋ.

**ಬಿರಟೆ** ' ಬಿರಡೆ₁ ' ನೋ.

**ಬಿರಡಿ** ' ಬಿರಡೆ₂ ' ನೋ.

**ಬಿರಡೆ₁**, ಬಿರಟೆ, ಬಿರುಡೆ (ನಾ). ೧. (ಸೀಸೆ, ಮೊದಲಾದುವು ಗಳಿಗೆ ಅಳವಡಿಸುವ) ಮುಚ್ಚಳ ; ತಿರುಪು ; ಬೂಚು (ಉಕ) : ಪದ್ಮಜಂ ಪದೆದಿಟ್ಟ ಪವಳದಂಕುರದ ಬಿರಡೆಗಳೊ ಲಾವಣ್ಯದ ಶಲಾಕೆಗಳ ತೆಱದ ಚರಣಾಂಗುಲಿಗಳೊಪ್ಪಿದುವವಮೋಘದಿಂ ಶ್ರೀ ಪಾರ್ವತೀದೇವಿಯ (ಪ್ರಂದಶ. ೯-೦೦) ; ತೌಟಿಗೆಯ ಮೇಲೆ ನೀರು ತುಂಬಿದ ಗಾಜು ಬಿರಡೆಯ ಸೀಸೆಯೂ ಬೆಂಕಿಪೆಟ್ಟಿಗೆಯೂ . . . ಇದ್ದುವು (ಕೃಪಸು. ೨೬೩). ೨. ವೀಣೆ, ತಂಬೂರಿಗಳ ತಂತಿಯನ್ನು ಬಿಗಿಗೊಳಿಸಲು ಅಳವಡಿಸಿರುವ ಸಾಧನ, – ಕೀಲು : ಬಿರಡೆಯನ್ನು ನುಲಿದು ಎಳೆತವನ್ನು ಹೆಚ್ಚಿಸಿದರೆ ಸ್ಥಾಯಿಯು ಏರುವುದು (ಕೌತಂ. ೦೪೨) ; ಈ ವ್ಯಾಳೀತಲೆಗೆ ನಾಲ್ಕು ಬಿರಡೆಗಳಿವೆ (ಸಂಗೀತಂ. ೦೦೨). ೩. ಅಂಗಿ ಮೊದಲಾದ ಉಡುಪಿನ

ಗುಂಡಿ : ಕೋಟಿನ ಬಿರಡೆಗಳನ್ನು ಬಿಚ್ಚಿ, ಬೆವರಿನಿಂದ ಒಣಗಿ ಹೋದ ಶರ್ಟ್ ಒಣಗುವುದಕ್ಕೆ ಅವಕಾಶ ಮಾಡಿಕೊಟ್ಟೆ (ಕೆಂಡುಟ. ೬೩). **ಬಿರಟೆ:** ೧. ತೊಗಟೆಯಿಂದ ಬಿರಟೆ ತಯಾರಾಗುತ್ತದೆ (ಕಪಕೋ. I. ೬೬೦) ; ಅದರ ಬಾಯಿಗೆ ಬಿರಟೆಯಂತೆ ಇಡಬೇಕಾದ ಹತ್ತಿ ಎಲ್ಲವನ್ನೂ ಶುದ್ಧ ಪಡಿಸಿಕೊ (ಹೊಸಕ. ೭) ; ಅಷ್ಟು ವಾಸನೆ ಸಹಿಸಲಾಗದಿದ್ದರೆ ಮೂಗಿಗೆ ಬಿರಟೆ ಹಾಕಿಕೊಳ್ಳಿ (ಹಸುಹೂ. ೦೬). **ಬಿರುಡೆ :** ೧. ಜಂತದಲಿ ಹೊಂಗರಡಿಗೆಗಡದು ಕರ್ವಣಿಯ ಬಿರುಡೆಯ ಬಿಗಿದಿಟ್ಟನೆಂಬಂತೆ ಬಲ್ಮೊಲೆ ಯೆರಡರ ಮೊಗವು ತೋಱಿದುವು (ಪೋಹಚ. ೨೩-೨೩) ; ಕಲಧೌತಂಗಳ ಭರಣಿಗಳ ಬಾಯ್ಗುರಿಸಿದಿಂದ್ರನೀಲದ ಮಣಿಯ ಬಿರುಡೆಗಳೊ ಪೇಳೆನಲ್ ಸ್ತನಚೂಚುಕದ ಕಪ್ಪು ಕರಮೊಪ್ಪಲೊಪ್ಪಿದಳ್ (ಶಂಖ. ೯-೦೯). ೨. ನಖಗಳಿಂ ಬಿರುಡೆಯಂ ಪಿಡಿದೌಂಕಿಯೊಡರ್ಚೆ ಮೇಳವಂ (ಶಳ೭. ೬-೨೨೨). ೩. ಕತ್ತರಿಸಿತು ಬಾಸು ಬಿರುಡೆಯ ಶಕ್ತಿಗಳುತ್ತರಿಸಲು ಜೋಡು ಜರಿದು ಬಿತ್ತರಿಸಿದುವಾಂಬುಗಳು ಮೆಯ್ಗೊಳು ಬಿಸುನೆತ್ತರ ಬಸವಂತಗೊಳಿಸಿ (ಜೋಪಕ. ೩೯-೩೨) ; ಚಿನ್ನದ ಬಿರುಡೆಯ ನೇಜೆಯದಳಟರ ಸನ್ನಾಹದ ಜಹವಾರ (ಕೆಂಪರ. ೨೫-೫೦).

[ದೇ.॥ ತಮಿ. ಪಿರಟ್ಟೈ ; ತೆಲು. ಬಿರಡ, ಬಿರಡಾ]

**ಬರಡೆ₃**, ಬಿರಟು, ಬಿರಡಿ (ನಾ). ಒಂದು ಬಗೆಯ ಸಸ್ಯ : ಹೆರಳೆ ಬಿರಡೆ ಬೇವು ಹಾಲೆ ತಳೆ . . . ಮೊದಲಾದ ಗಗನವಂ ತುಡುಕುವ ವೃಕ್ಷಂಗಳ್ (ಶಾಗಂಂ. ೩೯-೫). **ಬಿರಟು :** ಬಿರಟು, ಸೀಸಬಿರಟುಮರ (ವೃಕಿಗ. ೩೯-೦೬೬) ; ಬಿರಟು, ಪಾದರು, ನೆಲವೆಂಬು (ಚಮ್ಮುವಾ. ೨೩೯). **ಬಿರಡಿ :** ಶಿಸ್ಸು, ಬಿರಡಿ, ಶಿಷ್ಯಭಾಗೆ, ಬಿಂಡಿ, ಇರಗುಂಡಿಮಾವು (ವೃಕಿಗ. ೨೮-೫೫೨).

[?]

**ಬರದ** (ನಾ.) ಒಂದು ವಂಶದ ಹೆಸರು : ಸನ್ನಿಗಾಳಾ ಪುಟ್ಟರುಂ ಬಳ್ಳವರುಂ ಪಸುಂಗಾಯ ಕಟುಪ್ಪಾತರು ಬಿರದರಂ (ಎಕ XVI. ಗುಬ್ಬಿ. ೬೩-೬೮ ; 733).

[?]

**ಬರಬಿರ** (ನಾ). ಒಂದು ಅನುಕರಣ ಶಬ್ದ : 'ಬಿರಬಿರನೆ' ಪರಾ.

**ಬರಬಿರನೆ** (ಅ). ವೇಗವಾಗಿ ; ಶೀಘ್ರವಾಗಿ : ಶರಧಿಯೊಳ್ ಬಿರಬಿರನೆ ಮಂದರ ತಿರುಗಲಾಗ ಧಳಂಧಳಧ್ವನಿ ಮೊರೆಯಲು (ಅವಂಚ. ೧-೨೨-೯) ; ಪೋಗಬೇಕು ಅಂತ ಎರಡು ದಿನ ಹೊರಟರು. ನಾನೇ ತಡೆದೆ . . . ಎಂದು ಬಿರಬಿರನೆ ಹೇಳಿದಳು (ಪುಕೋಚಂ. ೩೦). [ಬಿರಬಿರ + — ಅನೆ₁]

**ಬರಯ**, ಬಿರಹ (ನಾ). ಅಗಲಿಕೆ ; ವಿರಹ : "ಬಿರಯುಮನೆ ವಿರಹಮಕ್ಕುಂ" (ಕಶಶ. ೧೨೬). 'ಬಿರಯಿ' ಪರಾ. **ಬಿರಹ :** "ಬಿರಹಂ ಕೂಟದಗಲ್ಕೆಯಲ್ಲಿ" (ಕರ್ಣಾಪ. ೬೬): ಬಿರಹದ ಬೆಂಕೆಯಿಂ ಬೆಂದು ಕಡುಹುಂವಸಂಬೋದರಮರಿಯರ್ (ಕಂಪು. ೦೯-೯೩).

[<ಸಂ. ವಿರಹ]

**ಬರಯಿ** (ನಾ). ಅಗಲಿಕೆಯನ್ನು ಹೊಂದಿದವನು ; ವಿಯೋಗ ಹೊಂದಿದವನು ; ವಿರಹಿ : "ವಿಯೋಗಿಯೊಳ್ ಬಿರಯಿಯೆನಲ್" (ಕರ್ಣಾಪ. ೯೩) ; ನಂದನಂಗಳೊಳ್ ಸುಟ್ಟಿವ ಬಿರಯಿಯಿಂ ಕಂಪು ಕಣ್ಮಲಿಯೆ ಪೂತ ಸುರಯಿಯಿಂ (ಶಂಶಚ. ೬-೨೨) ; ಮದನಾನಲನ ಕರ್ಪೂಗೆಯಿದೆನಿಸಿ ಬಿರಯಿಗಳ ಕಣ್ಗೆಳೊಳು ಕಣ್ಪನಿಯನೊರವಿಸೆಯುಂ (ಪರ್ವು. ೬-೨೯ ಪ) ; ಮಲ್ಲಿಗೆಗಳೇಂ ಬಿರಿದುವೋ ಬಿರಯಿಯೆರ್ದೆ ಬಿರಿವ ಮಾಳ್ಕೆಯಿಂದಾ ಬಸಂತದ ಮೊದಲೊಳು (ಕಂಪು. ೯೫-೦೬).

[<ಸಂ. ವಿರಹಿನ್]

**ಬರಯಿಸು** (ಕ್ರಿ). ಅಗಲಿಕೆಯನ್ನು ಅನುಭವಿಸು ; ವಿರಹವನ್ನು ಹೊಂದು : ಬಿರಯಿಸಿ ಬೇಟದೊಳ್ ಬಿರಿವ ನಲ್ಲರಗಲ್ದು ಕನಲ್ದೊನಲ್ದು ನಲ್ಲರ ದೆಸೆಯಿಂದಮಟ್ಟಿವರೆ (ಶಂಶಚ. ೯-೦೨೦) ; ಕಮಳಪತ್ರಚಯ ಮೆನಿತನಿತುಂ ಕೊರಗುವಿನಂ ಬಿಸುಸುಯ್ದೀಂ ಬಿರಯಿಸಿದುವೊ ಚಕ್ರವಾಕ ಮಿಥುನವಮಿರುಳೊಳ್ (ಕಾವ್ಯಾಪ. ೬೫೯) ; ಬಿರ[ಹಾಕಾ. ರಿ]ಯಿಸಿ ಬೇಂಟ

ದೊಳ್ ಮನಮದಾಟಿಸೆಯುಂ ಮನಮಿಾಯದಿರ್ದುಮಂತಿರದೆ ಬಿಚ್ಚಿಕ್ಕವಾ ಏಳಲ ಲಲ್ಲೆಗೆ ತಾನೊಳಗಾದಳ್ (ಪಾರ್ಶ್ವನಾ. ೩-೧೦೦). [ಬಿರಯ+ —ಇಸು₃]

**ಬರವ** (ನಾ). (?) : ಭಂಡಾರಿಯ ಬಾವಿನ ಬಿರವದಲು ಭತ ಮೂ ೧೦ (ಶಾಶಾಂ. ೦೯೩೦, ಮುಂಗಳೂರು. ೩೯೯-೫೦ ; 1353). [?]

**ಬರಸ** (ನಾ). ರಸಹೀನತೆ ; ಅಸುಖ ; ಖರತೆ ಬಾಸಿಂಗ ಕಟ್ಟಿ ಸರಸದಲಿ ಮೆರೆಸಲು ಹರುಷದ ಸೊಬಗು ತೀಳದಡೆ ಅದು ತಾನು ಬಿರಸದ ದಡ್ಡಿಗೆ ಮರಳುವುದು (ಕಾಡ್ಗೋಕ್ಷ. ೭-೪೦-೨೦). [< ಸಂ. ವಿರಸ]

**ಬರಹ** 'ಬಿರಯ' ನೋ.

**ಬರಾಡ** 'ಬೀಡಾರ' ನೋ.

**ಬರಾಡಿಸು**, ವಿರಾಡಿಸು (ಕ್ರಿ). (ಭೂಮಿಯ ಮೇಲೆ) ಸುಂಕ ಹಾಕು ; ತೆರಿಗೆ ಹಾಕು : ಗದೆ ಸಹವಾಗಿ ಬಿರಾಡಿಸಿ ಗದೆಯ ಮೇಲೆ (ಶಾಶಾಂ. ೦೯೩೯, ಶೃಂಗೇರಿ. ೦೩೬-೦೯ ; 1419). **ವಿರಾಡಿಸು :** ನಿಮ್ಮ ದಸವಂದದ ಗದೆ ಸಹವಾಗಿ ವಿರಾಡಿಸಿ ಗದೆಯ ಮೇಲೆ ರೊಕ ಭತ್ತವನೂ ವರಿಯನಿಕಿ ಎತ್ತಿ ಕೆಜಿಯನು ಕಟಿಸುವೆವು (ಎಕ. X. ಮುಳಬಾ. ೦೬೨-೦೯ ; 1496).

[ಬಿರಾಡ (< ಬೀಡಾರ) + — ಇಸು₃]

**ಬರಾಡು** 'ಬೀಡಾರ' ನೋ.

**ಬರಾದರಿ** (ನಾ). ಸೈನ್ಯದಲ್ಲಿ ಒಂದು ಭಾಗ ; ಒಂದು ನಿರ್ದಿಷ್ಟವಾದ ಸಂಖ್ಯೆಯಿರುವ ಕುದುರೆಯ ಸೇನೆ ; ಽ "ಬಿರಾದರಿ — ಕುದುರೆ ಸೇನೆಯ ಒಂದು ಭಾಗ, ಸವಾರ ಕಚೇರಿ ಇಲಾಖೆಯಲ್ಲಿ ಬಿರಾದರಿಗೆ ಇರಬೇಕಾದ ಕುದುರೆ ಸಂಖ್ಯೆಯನ್ನು ಗೊತ್ತುಮಾಡಿದಾರ" (ಚಿತ್ರಶಾ. ಅಮುಖಂರ. ೨) : ಖಾಸಾ ಬಿರಾದರಿ . . . ಖಾಸಾಬಾರು, ಕಂದಾಚಾರ ವಗ್ಯೆರೆ ಜನರಿಗೆ ಸೇರಿಸಿಕೊಂಡು ನಿಂತರು (ಚಿತ್ರಶಾ. ೬೩) ; ಪೇಶ್ವೆ ಶ್ರೀಮಂತ ಬಾಜೀರಾಯರನ್ನು ಕೈಸೆರೆ ಹಿಡಿದ ಬಿರಾದರಿಯಲ್ಲಿ ನಾನು ಸೇರಿದ್ದೆ (ಮುಟುಗ. ೦೬೬).

[←ಪಾರ. ಹಿಂ. ಮರಾ. ಬಿರಾದರೀ = ಬಂಧುವರ್ಗ ; ಬಳಗ]

**ಬರಿ₁** (ಕ್ರಿ). ಬಿರಿದ (ಭೂತಕೃ), ಬಿರಿದು (ಭೂತನ್ಯೂ). ೧. ಒಡೆ ; ಬಿರುಕುಂಟಾಗು ; ಹಿಸಿದು ಹೋಗು : " ಬಿರಿ — ಸ್ಫುಟನೇ " (ಶಮಣ) ; ಭರದಿಂದಂ ದಂತದೊಳ್ ತಾಟಿಸಿದೊಡೆ ವಿಜಯಾರ್ಧಾಚಳಂ ತೊಟ್ಟನಾಗಳ್ ಬಿರಿದತ್ತು (ಆದಿಪು. ೦೩-೩೬); ಒತ್ತಂಬದಿಂ ಬರ್ಪ ಕೆಮ್ಮಿಂ ಬಿರಿಯಲ್ವೆಟ್ಟಂಗಳ್ (ಕಾಪಂಭೂ. ೦೬೩) ; ಬೆಳೆದು ಬೀಗಿ ತವಿಸ್ಸಿಂ ತಾವೆ ಬಿರಿದು ಬಿರಿವಟ್ಟು ಸುರಿವ ದಾಳಿಂಬದ ವಣ್ಗಳ ತನಿರಸದ ಪರಿವೊನಲ ಪರಿಸೀರಾಗೆ (ಶಂಶಚ. ೦೦೬-೦೩). ೨. (ಹೂವು) ಅರಳು ; ವಿಕಾಸವಾಗು : ಬಿರಿದೊಂದು ಮುಗುಳ ಕಂಪಿನೊಳೆ ಮೊಗಂಗಿಡುವುವು ತುಂಬಿಗಳ್ (ಶಂಶಚ. ೦-೩೬) : ಅಂಗಜಾತನ ಪುಷ್ಪಶರ ಬಿರಿದಪುವೆಂದು ಹೊಂಗಟ್ಟುಗಳ ಬಿಗಿದಂತೆ . . . ಉಂಗುರಗಳನಿಕ್ಕಿದರು (ಪೋಹಚ. ೨೩-೯೨). 'ನಸುಬಿರಿ' ಪರಾ.

ಬಿಬ್ಬರಿ ಬಿರಿ, ಬಿಬ್ಬರಂಬಿರಿ, ಬಿಬ್ಬರಬಿರಿ (ದ್ವಿರುಕ್ತಿ) : ಕರಿ ಮಕರಂಗಳ ಕರ್ಯೋಱನೊಳ್ ಬಿಬ್ಬರಿ[ಪಾಠಾಂ. ಬಿಬ್ಬರಿ, ಬಿಬ್ಬರಿ]ಬಿರಿದೊಡೆದ ಮುಕ್ತಾಪುಟೋದರಂಗಳೊಳಗಣಿಂದಮುಚ್ಚಳಿಸಿದ ತಾರಾತರಳಮುಕ್ತಾಫಳಂಗಳುಮಂ (ಆದಿಪು. ೦೨-೬೯ ಪ) ; ಬಿಸಿಲೊಳೆ ಬಿಬ್ಬರಂ ಬಿರಿವ ಮುಸ್ತಕ ಮುಕ್ತಿಕೆಯಿಂದೆ ಮುತ್ತು ಎಂದೆಸೆ ಕವಿತೇದೊಡಾಂತಿರುತೆ . . . ಪುಷ್ಕರವನೆತ್ತಿದುದಾದು ನಭಕ್ಕದೊಂದಿಭಂ (ಕಂಪ್ರಪು. ೯-೬೫) ; ಬಡಿಗೊಳೆ ಬಿಡು ಬಿಬ್ಬರ ಬಿರಿದೊಡನುಗೆ ಪೊಸಮುತ್ತು ಕೋಡನುಱಿ ಮದೇಭಂ ಕೆಡೆದುವು (ಶಂಶಚ. ೦೦-೦೦೩) ; ಉರುಮುವದಿಂದಂ ಬಿಬ್ಬರ ಬಿರಿಪಂತಿರೆ ಬಿರಿದುವೆಂದು ಮಲ್ಲಿಗೆ ವನದೊಳ್ (ಪೇಪುಂ. ೦೩-೦೪). **ಬಿಬ್ಬರಿವಲ್** = ಸಂದು ಬಿಟ್ಟಿರುವ ಹಲ್ಲು : ಪಱಿದಲೆ ಕುಟಿನೊಸಲಗೆಗಳ್ . . .

ಬಬ್ಬರಿ[ಪಾಠಾಂ. ಬ]ವರ್ ಕುಸಿಗೊರಲ್ (ಹುಕೋಕ. ೨-೩೮).
[ದೇ. II ತಮಿ. ವಿರಿ; ಮಲ. ತೆಲು. ವಿರಿಯು; ತುಳು. ಬಿರಿ, ಬಿರಿಯು]

**ಬರಿ₂** (ನಾ). ೧. ಬಿರುಕು : ಸೀಳು : ಮಣ್ಣಿನ ಬರಿ[ಪಾಠಾಂ. ರೆ]ಯು ತೆಱನಂತೆ ಬಲ್ಲತನವಿಲ್ಲದವನ ಅನುಭಾವಕೂಟ ಕಲ್ಲಿನ ಹೋಟೆಯಂತ (ಗುರ್ತು ಹುಂ. ೪. ೨೦೬-೩೬). 'ಕೋಟೆವಿರಿ', 'ಬಿರಿವಡು' ಪರಾ. ೨. ತಡೆ; ನಿಯಂತ್ರಣ : ತಿಮ್ಮಪ್ಪಯ್ಯ ಒಮ್ಮೆ ಬಾಯಿ ತೆರೆದರೆಂದರೆ ಅದಕ್ಕೆ ಬರಿಯೇ ಇಲ್ಲ (ಸರಸ. ೯). ೩. ಕಠಿಣ ; ಕಷ್ಟ ; ಬಿಗಿ : ನಿಮಗೆ ಅದೇನು ಬರಿಯಲ್ಲ, ಆದರೆ ಅದನ್ನು ಒಪ್ಪುವುದೇ ಬರಿ (ಅರಗಿ. ೧೦೦) ; ಒಬ್ಬರ ಮನಸ ಸಂಬಾಳಿಸೋದಂದರ ಭಾಳ ಬರೀ ಐತಿ (ಹಿಸರ್ಗ. ೦೬೩): ಸಂಸಾರವನ್ನು ಸರಿಯಾಗಿ ಮಾಡಿಕೊಂಡು ಹೋಗುವುದು ಅವನಿಗೆ ಬರಿಯಾಯಿತು (ಕಸಿಂಹಾ. ೦೦). ೪. ಒಂದು ಬಗೆಯ ಆಯುಧ : ಹಾರೆ ಬರಿ ಕೊಜಡು ಪೆಟಲ ತಿರುಗಣೆ ಬೀಸುವಲ ತಳಿಯ ಮರದ ಗೊಂದಣದ ಸಂವರಣೆಯಿಂದಾ ಕೋಂಟೆ ಕಣ್ಗೊಪ್ಪಿತು (ಸಪ್ತುಕಾ. ೬-೨೮). ೫. ಚಲಿಸುತ್ತಿರುವ ಯಂತ್ರವನ್ನು ನಿಲ್ಲಿಸಲು ಅಥವಾ ಅದರ ವೇಗವನ್ನು ಕಡಮೆ ಮಾಡಿ ಮುಂದೆ ಬೇಕಾಗಿರುವಷ್ಟು ಹೊತ್ತು ನಿಶ್ಚಲವಾಗಿಟ್ಟಿರಲು ಬಳಸುವ ವೇಗನಿರೋಧಕಸಾಧನ ; ಬ್ರೇಕು : "ಚಕ್ರದ ಚಲನೆಯನ್ನು ತಡೆಯಲು ಉಪಯೋಗಿಸುವ ಸಲಕರಣೆ ; ಬರಿ ; ತಡೆ" (Brake. ೨೦೪೨) ; ರೈಲುಬಂಡಿಗಳಲ್ಲಿನ ಪ್ರತಿಚಕ್ರಕ್ಕೂ ಬರಿ(brake) ಯನ್ನು ಒತ್ತಲು ಇವನ್ನೇ ಉಪಯೋಗಿಸುವರು (ಶಾಂಶ್ರ. I. ೦೬೭): ಕೆಲವು ಬಂಡಿಗಳಲ್ಲಿ ನಿರ್ವಾತ ಬರಿಗಳ ಬದಲಿಗೆ ವಾಯುಸಂಕೋಚನೆಯ ಬರಿಗಳಿವೆ (ಎಕ್ಕಾಂ. ೫೦). ೬. ಅಗಳಿ ; ಚಿಲಕ : ಮನೆಬಾಗಿಲು ಮುಚ್ಚಿ ಬರಿ ಕಟ್ಟಿಬಿಟ್ಟು ಊರು ಮುಂದಕ್ಕೆ ಹೊರಟು ಹೋದನು (ಕಹಾಸು. IV. ೩೨). [< ಬರಿ₁]

**ಬರಿ₃** 'ಬಿಱು₂' ನೋ.

**ಬರಿಕಂಡ** (ನಾ). ಸೀಳಿಹೋದ ಮಾಂಸ : ಸೇರ್ವಲ್ಲಿ ಕನ್ನೆತ್ತರುಂ ಬರಿಕಂಡಂಗಳೆ ಬೀಟಲ್ (ಕಂಕಲಾ. ೯-೩೩). [ಬರಿ₁ + ಕಂಡ₁]

**ಬರಿಕಿ** 'ಪರಿಕಿ₁' ನೋ.

**ಬರಿಕು**. ಬರುಕು (ನಾ). ೧. ಒಡಕು ; ಸೀಳು : ಪುದಿದ ತನಿವಣ್ಣ ಬರಿಕಿಂದುದಿರ್ದತ್ತಂ ರಾಸಿಯಾದ ಬಟ್ಟುಗಳಿಂ (ಕಬ್ಬಿಕಾ. ೦೦೯). **ಬಿರುಕು** : ೧. ರಸದಾಳಿಂಬದ ಪಣ್ಣ ಬತ್ತು ಬಿರುಕಿಂ ತೋರ್ಪಂತೆ (ಸೂಕ್ತಿಸು. ೧೦ ೦೦೩) ; ಹೋಳಾದ ಕವಚವ ಹೊಲಿಸಿದರು ಬಾಹುರಕ ಸವಗದ ಬಿರುಕ ಬೆಸಸಿದರು (ಕುಮ್ಮಾಂ. ೫-೩೬). ೨. (ಅಲಂ) ವೈಮನಸ್ಯ ; ಮಾನಸಿಕ ಒಡಕು : ಪಂತಕುಟುಂಬದಲ್ಲಿ ಮೂಡಿದ ಬಿರುಕು, ಈ ಒಂದು ಸಣ್ಣ ಮಾತಿನಿಂದಾಗಿ ಊರು ತುಂಬ ಹರಡುವುದು ಬೇಡ (ಜಂಕಹ. II. ೯).
ಬಿರುಕು ಬಿಡು=೧. ಸೀಳಿಹೋಗು : ನೆಲ ಕಿತ್ತು ಹೋಗಿದೆ. ಗೋಡೆಗಳು ಬಿರುಕು ಬಿಟ್ಟಿವೆ (ರಂಗಕ. ೦೦೦). ೨. (ಅಲಂ) ವೈಮನಸ್ಯ ಬರು : ಒಡಕುಂಟಾಗು : ತಪ್ಪುತಿಳುವಳಿಕೆಯಿಂದ ಆಪ್ತಸ್ನೇಹಿತರಿಬ್ಬರ ವಿಶ್ವಾಸದಲ್ಲಿ ಬಿರುಕುಬಿಟ್ಟಿತು (ಜೂಡ). [< ಬರಿ₁./ತುಳು. ಬಿರ್ಕ್]

**ಬರಿಕುಂಟೆ** (ನಾ). ಬಂಡಿಯ ಓಟವನ್ನು ನಿಯಂತ್ರಣ ಮಾಡುವ ಸಾಧನ ; ಗಾಡಿಯ ಓಟವನ್ನು ನಿಯಂತ್ರಿಸುವ ತಡೆಮರ : ಇಳುಕಲಲಿ ಬರಿಕುಂಟೆಯೊತ್ತಿ ಮುಲುಕಿತು ಕುಲುಕಿ . . . ಮೂರುಕು ಬಂಡಿ (ತಂತಿಮು. ೨೮-೧೦). [ಬರಿ₂ + ಕುಂಟೆ₄]

**ಬರಿಗಲ್ಲು** 'ಬಿಱುಗಲ್' ನೋ.

**ಬರಿಗಳಿಕೆ** (ನಾ). ಅರಳುತ್ತಿರುವ ಮೊಗ್ಗು : ಕುರುವಕದಂಕುರಮುನದಱ ಬರಿಗಳಿಕೆಯುಮಂ . . . ತಾವರೆಯೆಲೆವಟ್ಟಲ್ಗಳೊಳಮೊಟ್ಟೆ ಕಟ್ಟಿ (ಅಜಿತಪು. ೦೩-೩೬ ವ). [ಬರಿ₁ + ಕಳಿಕೆ₁ (=ಕಲಿಕೆ)]

**ಬರಿನನೆ** (ನಾ). ಅರಳುತ್ತಿರುವ ಮೊಗ್ಗು : ಬರಿನನೆ ನಾರು ಬೀರದೇ ? (ಗಿರಿಜಾ. ೨೮-೩೯). [ಬರಿ₁ + ನನೆ₃]

**ಬರಿಬರಿ** (ನಾ). ಒಂದು ಅನುಕರಣಶಬ್ದ : ದೂತರು ಬರಿಬರಿ ನೋಡುತ ಭರದೊಳು ಚಾಪದ ಸರಳಿನೊಳೂಗೆಯುತ ಹರಣವ ಕಳೆಯುತಲಿ (ಹಮಚ. ೦೭); ಆ ತರುಣ ಬರಿಬರಿ ನೋಡುತ್ತಲೇ ಇದ್ದಳು (ಹಿರೋಚ. ೦೬೭) ; ಭುವನದ ಭಾಗ್ಯವು ಬರಿಬರಿ ಬಿದಾಗ ಕವಿ ರಚಿಪನು ತನ್ನ ಕೃತಿಯ (ಜಂಕಾಕ. ೬೬-೦೭).

**ಬರಿಮುಗುಳ್**, ಬರಿಮುಂಗುಳು (ನಾ). ಅರಳುತ್ತಿರುವ ಮೊಗ್ಗು : ತಳಿರ ನಿಱುದಳಿರ ಮುಗುಳ ಬರಿಮುಗುಳ ಮಿಡಿಯ ಕಿಱುಮಿಡಿಯ ಬಲ್ಮಿಡಿಗಳೊಳಱಿ (ಶಂಕರಾ. ೫-೩ ವ) ; ಇರವಂತಿಯೊಳ್ ಪೊಱಪ ಬರಿಮುಗುಳ್ಗಳಂ ಕೊಂಡು (ರಸಕ. ೩-೨೨) ; ಸುರಯಿಯ ಬರಿಮುಗುಳು ಮನದಱ ಪೂವುಮಂ . . . ತಾವರೆಯೆಲೆವಟ್ಟಲ್ಗಳೊಳಮೊಟ್ಟೆ ಕಟ್ಟಿ (ಅಜಿತಪು. ೦೩-೩೬ ವ) . **ಬರಿಮುಗುಳು** : ತಳಿತಿಹ ಬರಿಮುಗುಳನೀಕ್ಷಿಸುವ ಮಱಿ ದುಂಬಿಗಳ ಮೇಳವದ . . . ಪಕ್ಷಿಮೃಗಕುಲವೆರಸಿ ಪೊಱದಿವು ಬನದ ಸುತ್ತಲು (ಕುಮ್ಮಾಂ. ೩-೨); ನಸುನಗುವೊಲು ಬರಿಮುಗುಳ ಶೃಂಗಾರದ ಮಲ್ಲಿಗೆಯಿಹುವು (ಕಂಪಪ. ೭-೩೦). [ಬರಿ₁ + ಮುಗುಳ್₂]

**ಬರಿಮುಗುಳು** 'ಬರಿಮುಗುಳ್' ನೋ.

**ಬರಿಮೊಗ್ಗೆ** (ನಾ). = ಬರಿಮುಗುಳ್ : ಚಂಪಕದ ಬರಿಮೊಗ್ಗೆಯ ತುದಿಗಮೃತದ ಘುಟಿಕೆಯನಿರಿಸಿದವೊಲು (ಜಯಚಾ. ೫-೯); ಸಾಂಗದಿಂ ಮಿಸಲಾಗಿರ್ದ ಬರಿಮೊಗ್ಗೆಯ ನವಿಂಗಳಿಂದರಿಯದೆಯುತಿಸಾವಧಾನದಿಂದ . . . ತಿರುವುತಲಿರ್ದರು (ಶವಮೋ. ೨೪-೩೭). [ಬರಿ₁ + ಮೊಗ್ಗೆ₁]

**ಬರಿಯಾನಿ**, ಬಿರ್ಯಾನಿ (ನಾ). ಮಾಂಸಮಿಶ್ರಿತವಾದ ಒಂದು ಬಗೆಯ ಕಲಸನ್ನ : ಕೋಳಿ ಮರಿಯ ಮಾಂಸ ಅಥವಾ ಸಿಗಡಿಮೀನುಗಳಿಂದಲೂ ಇದೇ ರೀತಿ ಬರಿಯಾನಿ ತಯಾರಿಸಬಹುದು (ಅಡುಗೆ. ೯೯). **ಬಿರ್ಯಾನಿ** : ಬಿರ್ಯಾನಿಯನ್ನು ತಯಾರಿಸುವ ವಿಧಾನವನ್ನು ಆ ಪುಸ್ತಕದಲ್ಲಿ ಹೇಳಿದೆ (ಜೂಡ). [← ಪಾರ. ಬಿರ್ಯಾನ್ = ಬೇಯಿಸಿದ ಅಥವಾ ಹುರಿದ ; ಹಿಂ. ಬಿರಿಯಾನೀ; ಮರಾ. ಬಿರಿಯಾಣೀ, ಬಿರ್ಯಾಣೀ]

**ಬರಿಯಿಕ್ಕು** (ಕ್ರಿ). ತಡೆ ಹಾಕು ; ನಿಯಂತ್ರಿಸು : ಪಂತಿಪಂತಿಯ ಪೊಂಜುಗಳ ಕೆಂಜೊಡರ್ವೆಳಗು ತನ್ನನೆಣ್ಣೆಸಯಿಂದಮಾವರಿಸುವಂತೆ ಪೋಲ್ ಬರಿಯಿಕ್ಕಿದನು ತನ್ನಂಘ್ರಿಶೀಘ್ರತೆಗೆ (ಶ್ರೀರಾಮಪ. ೬೦೩-೬೦). [ಬರಿ₂ + ಇಕ್ಕು]

**ಬರಿಯಿಸು**, ಬಿರಿಸು₁ (ಕ್ರಿ). ೧. ಸೀಳು ; ಹೋಳು ಮಾಡು : ಅಭೀಳ ನಿಸ್ಸಾಳನಾದಂ ನೆಱೆ ವಿಕ್ಕಂಭೋಜಗರ್ಭಾಂಡಮನೆ ಬರಿ[ಪಾಠಾಂ. ರ] ಯಿಸುತ್ತಿರ್ಪಿನಂ ಬೇಗದಿಂ ತಾಂ ಪೊಱಮಟ್ಟಂ (ಕುಸುಮಾ. ೯-೯೨). ೨. ಅರಳಿಸು : ವಿಕಾಸಗೊಳಿಸು : ಸುರಯಿಯ ಬರಿಮುಗುಳೊಳು ರವದಳಿಪತಿ ಬರಿ[ಪಾಠಾಂ. ರ]ಯಿಸೆ (ಅರನೀ. ೬-೮). **ಬಿರಿಸು₁** : ೧. ವಿರಹಿಗಳೆದೆ...ನು ಬಿರಿಸುವ ಮಳೆಮೋಡ ಗಗನದೊಳಿದ್ದಿದೆ ನೋಡ (ಜಂಕಾಕ. ೯-೯೦). ೨. ಕೇಳದೆ ಹೋದರು ತಾವರೆಹೂವನು ತಾನಾಗಿ ರವಿ ಬಿರಿಸುವನು (ಜಂಕಾಕ. ೦೦೬-೦೯). [ಬರಿ₁ + ಇಸು₃]

**ಬರಿಯೂರ್** (ನಾ). ಒಂದು ಊರಿನ ಹೆಸರು : ಮಹೇಸ್ವರಮ್ ಅಜಯತ್ ಬರಿಯೂರ್ ಸುಱೂರ್ ಅನ್ಮತ್ರ ಸಾಮಿಯರಕೇ (ಶ್ರಾಶಂ. ೦೯೨೦. ೦೦-೩೬; ೨೬೭). [? + ಊರ್]

**ಬರಿವಡು** (ಕ್ರಿ). ಬಿರುಕು ಬಿಡು ; ಸೀಳಿಹೋಗು : ಬೆಳೆದು ಬೀಗಿ ತಮ್ಮಿಂ ತಾವೆ ಬಿರಿದು ಬಿಱಿವಟ್ಟು ಸುರಿವ ದಾಳಿಂಬದ ಪಣ್ಗಳ ತನಿರಸದ ಪಱಪೊನಲ ಪರಿನೀರಾಗೆ (ಶಂಕರಂ. ೧೦೭-೦೫). [ಬರಿ₂ + ಪಡು₁]

**ಬರಿವಣ್ಣು** (ನಾ). (ಚೆನ್ನಾಗಿ ಮಾಗಿ) ಸೀಳಿದ ಹಣ್ಣು ; ಬಿರಿದ ಹಣ್ಣು :

